

# ಕನ್ನಡ ಚಲನಚಿತ್ರ ಇತಿಹಾಸ

ಸಂಪುಟ ೧


ಡಾ. ವಿಜಯಾ

ಎಂ.ಬಿ.ಸಿಂಗ್

ವಿ.ಎನ್. ಸುಬ್ಬರಾವ್





ಪ್ರಸಾರಾಂಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ





**ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ**

೨೮, ಕ್ರೆಸೆಂಟ್ ರಸ್ತೆ,

ಬೆಂಗಳೂರು



Kannada Chalanachitra Itihasa : Vol - 1
A History of Kannada Cinema

Edited By
Dr. Vijaya
M.B. Singh
V. N. Subba Rao
for Karnataka Film Chamber of Commerce

Published by
Publication Division, Prasaranga
Kannada University, Hampi
Vidyaranya - 583 276

Pages : xvi + 64 + 756

Price : Rs. 1000-00 (Incl. 2 Vol.)

First Impression : 2001



ಆರ್ಥಿಕ ನೆರವು
ಕರ್ನಾಟಕ ಸರ್ಕಾರ

ಪ್ರಕಾಶಕರು
ಪ್ರಕಟಣ ವಿಭಾಗ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬೆಲೆ ರೂ. ೧೦೦೦-೦೦ (ಎರಡು ಸಂಪುಟಗಳು ಸೇರಿ)

ಮುಖಪುಟಗಳ ವಿನ್ಯಾಸ
ಚಂದ್ರನಾಥ ಆಚಾರ್ಯ

ವರ್ಣ ಪುಟ ವಿನ್ಯಾಸ
ಯು.ಟಿ. ಸುರೇಶ್

ಕಪ್ಪು ಬಿಳುಪು ಚಿತ್ರ ಸಂಸ್ಕರಣ
ವಿಶ್ವನಾಥ್ ಶೆಟ್ಟಿಗಾರ್



ಗಣಕಯಂತ್ರ ಅಕ್ಷರ ವಿನ್ಯಾಸ
ಎಸ್. ಎಸ್. ಸುರೇಶ್‌ಕುಮಾರ್, ಜಿ. ಮಧುಸೂದನ್, ವಿಶ್ವನಾಥ್. ಕೆ.

ಮುದ್ರಣ
ಪ್ರಗತಿ ಪ್ರಿಂಟ್ ಕಮ್ಯುನಿಕೇಶನ್ಸ್, ಬೆಂಗಳೂರು. ✆ 98450-62303



# ಇತಿಹಾಸದ ಪುಟಗಳಲ್ಲಿ....

೩೩೪೦ ಸಂದರ್ಭೋಚಿತ ಛಾಯಾಚಿತ್ರಗಳು (೩೧೮೯ ಕಪ್ಪು ಬಿಳುಪು, ೧೨೫ ವರ್ಣಚಿತ್ರಗಳು, ೨೬ ರೇಖಾ ಚಿತ್ರಗಳು - ೨ ಸಂಪುಟಗಳೂ ಸೇರಿ)

## ಸಂಪುಟ -೨ ರಲ್ಲಿ




# ಮುನ್ನಡೆಯಲು ಮಾರ್ಗದರ್ಶಿ

ಚಲನಚಿತ್ರ ಎನ್ನುವ ಹೆಸರೇ ಯುವಜನಾಂಗಗಳ ಮನಸ್ಸಿನಲ್ಲಿ ಹರ್ಷದ ಕನಸಿನ ಅಲೆಗಳನ್ನು ಏಳಿಸುತ್ತದೆ. ಉಳಿದೆಲ್ಲ ಮನರಂಜನೆಯ ಮಾಧ್ಯಮಗಳಿಗಿಂತ ಅದ್ಭುತ ವೇಗದಲ್ಲಿ ಮತ್ತು ಪ್ರಮಾಣದಲ್ಲಿ ಜನರ ಮನಸ್ಸನ್ನು ಅಪಹರಿಸಿದ ಪ್ರಬಲ ಮತ್ತು ಪರಿಣಾಮಕಾರಿ ಮಾಧ್ಯಮ ಇದು ಎನ್ನುವುದರಲ್ಲಿ ಸಂಶಯವಿಲ್ಲ. ಮೊದಮೊದಲು ಕೇವಲ ಮನರಂಜನೆಯ ಮಾಧ್ಯಮವಾಗಿ ರೂಪಗೊಂಡ ಈ ಕಲೆ, ಕಾಲಾಂತರದಲ್ಲಿ ಸಂಸ್ಕೃತಿ ಪ್ರಸಾರದ ಶಕ್ತಿಯುತ ಹಾಗೂ ಪ್ರಭಾವಯುತ ಮಾಧ್ಯಮವಾಗಿ, ಜೀವನ ಮೌಲ್ಯವನ್ನು ಮನಸ್ಸಿನೊಳಗೆ ನೆಡುವ ಹಾಗೂ ಪಸರಿಸುವ ಮಾಧ್ಯಮವಾಗಿ ಬೆಳೆಯುತ್ತ ಬಂತು. ಪ್ರಾಕೃತಿಕ ಸೌಂದರ್ಯ, ಕಲಾತ್ಮಕ ಸೌಂದರ್ಯ, ಸಾಹಿತ್ಯ, ಸಂಗೀತ, ಭಾಷೆ, ಕಲ್ಪನೆಗಳ ಸುವರ್ಣ ನೇಯ್ಗೆಯಾಗಿ ಮೂರ್ಪಟ್ಟು ಮನರಂಜನಾ ಲೋಕದಲ್ಲಿ ಒಂದು ಪವಾಡವನ್ನೇ ಮಾಡಿತು ಎಂದರೆ ಅಚ್ಚರಿಯಿಲ್ಲ. ಆದರೆ, ಯಾವುದೇ ಒಂದು ಕಲೆ ಆತ್ಮಸಂತೋಷಕ್ಕಾಗಿ ಮನೋಭಾವನೆಗಳ ಸಶಕ್ತ ಅಭಿವ್ಯಕ್ತಿಗಾಗಿ, ಜನಮಾನಸದ ಮೇಲೆ ಪ್ರಭಾವವನ್ನು ಬೀರುವ ಮೌಲಿಕ ಶಕ್ತಿಯಾಗಿ ಆವಿರ್ಭವಿಸಿದರೂ ಅದು ಬಹುಬೇಗನೇ ಕಲಾವಲಯವನ್ನು ದಾಟಿ ವಾಣಿಜ್ಯ ವಲಯವನ್ನು ಪ್ರವೇಶಿಸುವುದು ಇತಿಹಾಸವಾಗಿಬಿಟ್ಟಿದೆ. ಜ್ಞಾನ-ತಂತ್ರಜ್ಞಾನಗಳ, ಹೊಸ ಹೊಸ ಆವಿಷ್ಕಾರಗಳು ರೂಪುಗೊಂಡಂತೆಲ್ಲ ಇದರ ರೂಪ, ಸ್ವರೂಪ, ಉದ್ದೇಶ ಮತ್ತು ಪರಿಣಾಮಗಳು ವಿಧವಿಧವಾಗಿ ವಿಕಾಸಹೊಂದುತ್ತ ಹೋಗುತ್ತವೆ. ಹಾಗೆಯೇ ಚಲನಚಿತ್ರ ಕೂಡ ಇಂದು ಕೇವಲ ಮನರಂಜನೆಯ ಕಲೆಯಾಗಿ ಉಳಿಯದೆ ವೃತ್ತಿಯಾಗಿ, ಪ್ರವೃತ್ತಿಯಾಗಿ, ಸಂಸ್ಕೃತಿ ಪ್ರಸಾರಕ ತಂತ್ರವಾಗಿ, ಉದ್ಯಮವಾಗಿ, ಬೆಳೆಯುತ್ತಾ ತನ್ನ ಬೆಳವಣಿಗೆಯ ಹಾದಿಯಲ್ಲಿ ಶಿಖರಗಳಂತೆಯೇ ಕಮರಿಗಳನ್ನು ಸೃಷ್ಟಿಸುತ್ತ, ಮೌಲ್ಯ ಪ್ರಸಾರದಂತೆಯೇ ಅಪಮೌಲ್ಯ ಪ್ರಸಾರಕ್ಕೂ ಎಡೆಗೊಟ್ಟು ಸಾಗುತ್ತಿರುವುದು ದಿನನಿತ್ಯದ ಸಂಗತಿಯಾಗಿದೆ. ಭಾರತದ ಮುಂಬೈ, ಅಂತರರಾಷ್ಟ್ರೀಯ ಜಗತ್ತಿನ ಖ್ಯಾತ ಚಲನಚಿತ್ರ ನೆಲೆ ಹಾಲಿವುಡ್ - ಈ ಕಲೆ ಏರಿದ ಎತ್ತರಗಳನ್ನು ವ್ಯಾಪಿಸಿದ ವಿಸ್ತಾರಗಳನ್ನು ಕ್ರಮಿಸಿದ ನೇರ-ವಕ್ರ ಪಥಗಳನ್ನು ಪ್ರತಿನಿಧಿಸುತ್ತವೆ. ಭಾರತದಲ್ಲಿ ಚಲನಚಿತ್ರದ ಉಗಮ ಆರಂಭಗೊಂಡ ಸಮಯದಲ್ಲಿಯೇ ಹೆಚ್ಚು ಕಡಿಮೆ ಆರಂಭವಾದ ಕನ್ನಡ ಚಲನಚಿತ್ರ ಈಗ ಏಳು ದಶಕಗಳ ಸುದೀರ್ಘ ಕಾಲವನ್ನು ಕ್ರಮಿಸಿ ಮುಂದುವರಿಯುತ್ತಿದೆ. ಮೂಕಚಿತ್ರಗಳ ಕಾಲದಿಂದಲೂ ಕನ್ನಡ ಚಲನಚಿತ್ರ ರಂಗ ಅದರ ಸಾಹಿತ್ಯ, ಸಂಸ್ಕೃತಿ ಪ್ರಸಾರ, ತಾಂತ್ರಿಕ ಆವಿಷ್ಕಾರ, ಅಭಿನಯ ಮಹೋನ್ನತಿ ಮತ್ತು ಪ್ರಯೋಗಗಳಲ್ಲಿ ತನ್ನದೇ ಆದ ರೋಚಕ ಇತಿಹಾಸವನ್ನು ನಿರ್ಮಿಸಿದೆ. ಹಲವು ಸಂದರ್ಭಗಳಲ್ಲಿ ವಿಶಾಲ ನೆಲೆಯ ಚಲನಚಿತ್ರ ರಂಗಗಳಿಗೂ ಸ್ಪರ್ಧೆ ಕೊಡುವ ರೀತಿಯಲ್ಲಿ ಅತ್ಯುತ್ತಮ ಕಲಾಕೃತಿಗಳನ್ನು ಸೃಷ್ಟಿಸಿ ಭಾರತದ ಮತ್ತು ಅಂತರರಾಷ್ಟ್ರೀಯ ಗಮನ-ಗೌರವಗಳನ್ನು ಗಂಭೀರವಾಗಿ ಸೆಳೆದುಕೊಂಡು ತನ್ನ ವಿಶಿಷ್ಟ ಹೆಜ್ಜೆ ಗುರುತುಗಳನ್ನು ಮೂಡಿಸಿದೆ.

ಮನರಂಜನೆ ಮತ್ತು ಜ್ಞಾನ ಸಾಧನೆಗಳ ಸಂಯುಕ್ತ ಸಂಗಮವಾದ ಪುಸ್ತಕ ಪ್ರಪಂಚವನ್ನು, ತನ್ನ ತಾಂತ್ರಿಕ ಪವಾಡಗಳಿಂದ ಕೇವಲ ಧ್ವನಿಯ ಮೂಲಕವೇ ಜನರ ಮನ-ಮನೆಗಳನ್ನು ಹೊಕ್ಕ ಬಾನುಲಿಯನ್ನು ಹಾಗೂ ಹಳ್ಳಿ ಪಟ್ಟಣಗಳೆನ್ನದೆ ಏಕಪ್ರಕಾರವಾಗಿ ಜನರ ಮನಸ್ಸನ್ನು ಮುದಗೊಳಿಸಿ ಅವರ ನೋವುಗಳನ್ನು ನೀಗಿಸುತ್ತಿದ್ದ ರಂಗಭೂಮಿಯನ್ನು ಬಹುಮಟ್ಟಿಗೆ ಹಿಂದೆ ಸರಿಸಿ ಈ ಚಲನಚಿತ್ರ ತನ್ನ ಸವೇಗವಾದ ದಿಟ್ಟ ಹಾಗೂ ದೃಢ ಹೆಜ್ಜೆಗಳನ್ನು ಇಟ್ಟು ಧಾವಿಸುತ್ತಿದೆ. ಮೊದಮೊದಲು ಚಿತ್ರಮಂದಿರಗಳನ್ನು ಆಶ್ರಯಿಸುತ್ತಿದ್ದ ಈ ಕಲೆ ದೂರದರ್ಶನದ ಮೂಲಕ ಪಟ್ಟಣಗಳನ್ನು ಮಾತ್ರವಲ್ಲದೆ ಹಳ್ಳಿಗಳ ಮನೆಗಳನ್ನೂ ಪ್ರವೇಶಿಸಿ ಅವರ ಜೀವನಕ್ರಮದ ಮೇಲೆ, ಮನೋಧರ್ಮದ ಮೇಲೆ, ರುಚಿ-ಅಭಿರುಚಿಗಳ ಮೇಲೆ ತೀವ್ರವಾದ ಪ್ರಭಾವವನ್ನು ಬೀರುತ್ತಿದೆ.

ಮಾತು, ಗೀತ, ಸಂಗೀತ, ಸೌಂದರ್ಯ, ಅಭಿನಯ, ಕನಸು, ಕಲ್ಪನೆ, ಮೌಲಿಕ ಸಂದೇಶ, ಜೀವನ ಮೌಲ್ಯ ಪ್ರಸಾರಗಳ ಅದ್ಭುತ ಸಂಗಮವಾದ ಈ ಚಲನಚಿತ್ರ ಕಲೆ ಎಳಬರಿಂದ ಹಳಬರವರೆಗೂ ಪ್ರಿಯವೆನಿಸಿರುವ ಅಪೂರ್ವ ಕಲೆ. ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಆದ ಶೋಧನೆ, ಸಂಶೋಧನೆ, ಪ್ರಯೋಗ, ಆಂದೋಲನಗಳು, ಮನುಷ್ಯನ ವಿವಿಧ ವಿಸ್ತಾರ-ಅನುಭವ ಆಲೋಚನೆಗಳು ಈ ಮಾಧ್ಯಮದಲ್ಲಿ ಹರಳುಗಟ್ಟಿ ಜನಮನವನ್ನು ಸ್ಪಂದಿಸುತ್ತ ಬಂದಿವೆ. ಮೊದಮೊದಲು ಜನಪದ ಮತ್ತು ಪೌರಾಣಿಕ ಲೋಕಗಳನ್ನು ಬಿಂಬಿಸುತ್ತ ಜನರ ಭಕ್ತಿ, ಧಾರ್ಮಿಕ ಪ್ರಜ್ಞೆ, ಕಲ್ಪನಾ ವಿಲಾಸ ಹಾಗೂ ಸಾಂಸ್ಕೃತಿಕ ಅನುಭವಗಳಿಗೆ ರೂಪುಕೊಟ್ಟ ಈ ಕಲೆ ಬರಬರುತ್ತ ಸಾಮಾಜಿಕ, ಐತಿಹಾಸಿಕ, ಸಮಸ್ಯಾತ್ಮಕ ಕಥನಾಂಶಗಳನ್ನು ತನ್ನ ಒಡಲಲ್ಲಿ ಧಾರಣ ಮಾಡಿಕೊಂಡು ಬೆಳೆಯುತ್ತ ಬಂದಿದೆ. ಕಥಾರಚಕ, ಗೀತರಚಕ, ಸಂಭಾಷಣಾಕಾರ, ಸಂಗೀತ ನಿರ್ದೇಶಕ, ಛಾಯಾಗ್ರಾಹಕ, ಶಬ್ದಗ್ರಾಹಕ, ನೆಳಲು ಬೆಳಕಿನ ಸಂಯೋಜಕ, ಕಲಾನಿರ್ದೇಶಕ, ನಟ-ನಟಿ, ಗಾಯಕ-ಗಾಯಕಿ ಇವರೆಲ್ಲರನ್ನೂ ನಿಯಂತ್ರಿಸಿ ಇದಕ್ಕೊಂದು ಸಹ್ಯವಾದ ಸುಂದರವಾದ ವಿಶಿಷ್ಟವಾದ ಕಲಾರೂಪವನ್ನು ಕೊಟ್ಟು ಜೀವ ತುಂಬುವ ನಿರ್ದೇಶಕ - ಇವರೆಲ್ಲರ ಸಮಷ್ಟಿ ಪ್ರತಿಭೆ ಮತ್ತು ದುಡಿಮೆಯ ಫಲವಾಗಿ ಕಲಾಕೃತಿಯಾಗಿ ಅವತರಿಸುವ ಈ ಚಲನಚಿತ್ರ ಅತ್ಯಂತ ಪ್ರಭಾವಿಯಾದ ಮಾಧ್ಯಮವಾಗಿ ರೂಪುಗೊಂಡಿದೆ.

ಕನ್ನಡದಲ್ಲಿ ೭೦ ವರ್ಷಗಳ ಸಾಧನಾಪಥವನ್ನು ಉಜ್ವಲವಾಗಿ ನಿರ್ಮಿಸಿರುವ ಚಲನಚಿತ್ರ ಇತಿಹಾಸ ಕನ್ನಡ ನಾಡಿನ ಅಭಿಮಾನದ ಇತಿಹಾಸವೂ ಹೌದು. ಈ ಕ್ಷೇತ್ರದಲ್ಲಿ ನಡೆದಿರುವ ಪ್ರಯತ್ನ ಮತ್ತು ಪ್ರಯೋಗಗಳು ಕೂಡ ಕನ್ನಡಿಗರ ಕಲಾಸಾಧನೆಯ ಒಂದು ಭಾಗ. ಮೇಲೆ ಹೇಳಿದ ಚಲನಚಿತ್ರ ನಿರ್ಮಾಣ ಶಿಲ್ಪಿಗಳ ಜೊತೆಗೆ ಚಿತ್ರ ವಿತರಕ, ಚಿತ್ರ ಪ್ರದರ್ಶಕ, ಚಿತ್ರ ಪ್ರಚಾರಕ, ಚಿತ್ರ ವಿಮರ್ಶಕ ಮತ್ತು ಇವರೆಲ್ಲರ ಸಾಧನೆಗಳನ್ನು ತನ್ನ ಅನುಭವದ ಮತ್ತು ಮೌಲ್ಯ ಪ್ರಜ್ಞೆಯ ತಕ್ಕಡಿಯಲ್ಲಿಟ್ಟು ತೂಗುವ ಪ್ರೇಕ್ಷಕ - ಇವರೆಲ್ಲರೂ ಇವರ ಸಫಲ-ವಿಫಲ ಚರಿತ್ರೆಯಲ್ಲಿ ಭಾಗಿಗಳು. ಇಂತಹ ರೋಚಕ ಇತಿಹಾಸವನ್ನು ವಸ್ತುನಿಷ್ಠವಾಗಿ ದಾಖಲಿಸುವ, ವಿಶ್ಲೇಷಿಸುವ, ವಿಮರ್ಶಿಸುವ ಪೂರ್ಣ ಪ್ರಮಾಣದ ಪ್ರಯತ್ನ ಇದುವರೆಗೆ ಆಗಿರಲಿಲ್ಲವೆನ್ನಬಹುದು. ಬಹು ಹಿಂದೆ ದಾವಣಗೆರೆಯಿಂದ ಪ್ರಕಟವಾದ ಚಲನಚಿತ್ರ ಕಲೆ, ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ 'ಕನ್ನಡ ಸಿನಿಮಾ ; ಇತಿಹಾಸದ ಪುಟಗಳಲ್ಲಿ' ಕೃತಿಗಳು ಈ ಕೊರತೆಯನ್ನು ತುಂಬಿಕೊಡಲು ಪ್ರಾಮಾಣಿಕವಾದ ಪ್ರಯತ್ನವನ್ನು ನಡೆಸಿದ್ದರೂ ಸಮಗ್ರ ಎನಿಸಲಿಲ್ಲ. ಈ ದೃಷ್ಟಿಯಿಂದ ಪ್ರಸ್ತುತ ಪ್ರಕಟವಾಗುತ್ತಿರುವ ಕನ್ನಡ ಚಲನಚಿತ್ರ ಇತಿಹಾಸ ಈ ಕ್ಷೇತ್ರದ ಸಂಪೂರ್ಣವೂ ವಿಶದವೂ ಮತ್ತು ಮಾಹಿತಿಪೂರ್ಣವೂ ಆದ ಮಹತ್ ಪ್ರಯತ್ನ. ಈ ಕ್ಷೇತ್ರದಲ್ಲಿ ಕನ್ನಡಿಗರು ಕನ್ನಡೇತರರು ಕೂಡಿಯೇ ಸಮನ್ವಯ ಭಾವದಿಂದ ಮಾಡಿದ ಸಾಧನೆಗಳ ವರ್ಣಮಯ ವಿವರ ಇಲ್ಲಿ ಆಕರ್ಷಕವಾಗಿ ಬಿಚ್ಚಿಕೊಂಡಿದೆ.

ಯಾವುದೇ ವಿಷಯದಲ್ಲಿ ಸರ್ವಸಮಗ್ರವಾದ ಚರಿತ್ರೆಯನ್ನು ಕಟ್ಟಿಕೊಡುವುದು ಸುಲಭದ ಮಾತಲ್ಲ. ಸಂಪಾದಕರಾದವರಿಗೆ ಆ ಕ್ಷೇತ್ರದ ಸಮಗ್ರ ಮುಖಗಳ ಪರಿಚಯವಿರಬೇಕು. ಆ ಕ್ಷೇತ್ರದಲ್ಲಿ ಆಳಕ್ಕಿಳಿದು ವಿಸ್ತಾರಕ್ಕೆ ನಡೆದು ಸಾಮಗ್ರಿಯನ್ನು ಸಂಗ್ರಹಿಸುವ ವಿಶೇಷ ಶೋಧಕ ದೃಷ್ಟಿ ಇರಬೇಕು, ಶೋಧಿತ ಸಾಮಗ್ರಿಯನ್ನು ಸಂಗ್ರಹಿಸುವ ಜಾಣ್ಮೆಯ ಜೊತೆಗೆ ಅದನ್ನು ಇತಿಹಾಸಕ್ಕೆ ಮತ್ತು ವಸ್ತುಸ್ಥಿತಿಗೆ ವಿರುದ್ಧವಾಗದ ಹಾಗೆ ಕ್ರಮಬದ್ಧವಾಗಿ ಜೋಡಿಸುವ ಪರಿಣತಿ ಬೇಕು. ಈ ಜೋಡಿಸುವ ಕೌಶಲದ ಜೊತೆಗೆ ಅದನ್ನು ಆಕರ್ಷಕವಾಗಿ, ಆಕಳಿಕೆಗೆ ಎಡೆಗೊಡದಂತೆ, ಕುತೂಹಲ ಕೆರಳಿಸುವಂತೆ ನಿರೂಪಿಸುವ ವಿಶೇಷ ಕೌಶಲ ಬೇಕು. ಇದರ ಜೊತೆಗೆ ಸಾಂದರ್ಭಿಕವಾಗಿ ಚಿತ್ರದ ವಿವಿಧಾಂಗಗಳನ್ನು ವಿಮರ್ಶೆ, ವಿಶ್ಲೇಷಣೆ ಮತ್ತು ವ್ಯಾಖ್ಯಾನಗಳಿಗೆ ಒಳಪಡಿಸುವ ಸಾಮರ್ಥ್ಯವಿರಬೇಕು. ಹೀಗೆ ಮಾಡುವಾಗ ಕೂಡ ವಸ್ತುಸ್ಥಿತಿಯ ದೃಷ್ಟಿ ಮತ್ತು ಪೂರ್ವಗ್ರಹ ರಹಿತವಾದ ಸಮತೋಲನ ದೃಷ್ಟಿ ಇರಬೇಕು. ಬಳಸುವ ಭಾಷೆ ಸರಳ, ಸುಭಗವಾಗಿದ್ದು ಓದುಗರ ಮನಸ್ಸಿಗೆ ಮುಟ್ಟುವಂತಿರಬೇಕು. ಇಂತಹ ಎಲ್ಲ ಇತ್ಯಾತ್ಮಕ ಗುಣಗಳು ಒಟ್ಟಿಗೆ ಮೇಳೈಸುವುದು ಅಪರೂಪದ ಸಂಗತಿ. ಅದರಲ್ಲೂ ಯಾವುದೇ ವಿಷಯ ಮತ್ತು ಕ್ಷೇತ್ರದ ಬಗ್ಗೆ ಕಾಲಕಾಲಕ್ಕೆ ದಾಖಲೀಕರಣ ಮಾಡುವ ಸಂಶೋಧಕ ಮತ್ತು ಐತಿಹಾಸಿಕ ಪ್ರಜ್ಞೆ ಕಡಿಮೆ ಇರುವ ಈ ನಾಡಿನ ಸಂದರ್ಭದಲ್ಲಿ ಕೃತಿಯ ಮೈದುಂಬಿಗೆ, 'ಸರ್ವಾಂಗ ಸೌಂದರ್ಯದ' ಸತ್ಯಸೌಧಕ್ಕೆ ಧಕ್ಕೆ ಬಾರದ ಹಾಗೆ ಚರಿತ್ರೆಯನ್ನು ಕಟ್ಟಿಕೊಡುವುದು ಪರಮ ಕಷ್ಟಕರ. ನಮ್ಮಲ್ಲಿ ತಯಾರಾಗಿರುವ ಕನ್ನಡ ಚಲನಚಿತ್ರಗಳ ಸಂಖ್ಯೆಗೆ ಹೋಲಿಸಿದರೆ ಬಹಳಷ್ಟು ಚಿತ್ರಗಳ ಬಗ್ಗೆ ಪೂರ್ಣ ವಿವರಗಳು ದೊರೆಯುವುದೇ ಇಲ್ಲ. ಸಾಹಿತ್ಯ ಕೃತಿಯೊಂದು ಪ್ರಕಟವಾದಾಗ ಅದರ ಬಗ್ಗೆ ಮುನ್ನುಡಿ, ಹಿನ್ನುಡಿ ಇರುವಂತೆ, ಚರ್ಚೆ, ವಿಮರ್ಶೆ, ವಿಶ್ಲೇಷಣೆ ನಡೆಯುವಂತೆ ಚಲನಚಿತ್ರಗಳ ಬಗ್ಗೆ ನಡೆಯುತ್ತಿರುವುದು ತುಂಬಾ ಕಡಿಮೆ. ಸಾಹಿತ್ಯ ಕೃತಿಯಂತೆ ಇದನ್ನೊಂದು ಕಲಾಕೃತಿ ಎಂದು ಭಾವಿಸಿ ಗಂಭೀರವಾದ ಗಮನ ಈ ಕಡೆಗೆ ಹರಿಸದಿರುವ ನಿಸ್ಸೀಮ ನಿರ್ಲಕ್ಷ್ಯ ನಮ್ಮದು. ಅಷ್ಟೇ ಅಲ್ಲ ಚಿತ್ರವೊಂದರ ಕಥೆಯ ಬಗ್ಗೆ, ಸಂಭಾಷಣೆಯ ಬಗ್ಗೆ, ಹಾಡುಗಳ ಬಗ್ಗೆ, ಸಂಗೀತದ ಬಗ್ಗೆ, ಛಾಯಾಗ್ರಹಣದ ಬಗ್ಗೆ, ಅಭಿನಯದ ಬಗ್ಗೆ, ಕಲಾನಿರ್ದೇಶನದ ಬಗ್ಗೆ, ವಿವರವಾದ ತಜ್ಞ ಪ್ರಜ್ಞೆಯ ಚರ್ಚೆಗಳು ನಮ್ಮಲ್ಲಿ ನಡೆಯುವುದೇ ಇಲ್ಲ. ಇಲ್ಲಿನ ಸಾಹಿತ್ಯ-ಸಂಗೀತಗಳ ಬಗ್ಗೆ, ಅದರ ಗುಣಮಟ್ಟ ಮತ್ತು ವೈವಿಧ್ಯದ ಬಗ್ಗೆ ಗಂಭೀರವಾದ ಸಂಶೋಧನಾ ಪ್ರಬಂಧಗಳು ರಚನೆಯಾಗುತ್ತಿಲ್ಲ. ಇಂತಹ ಬಂಜರು ಸ್ಥಿತಿಯಲ್ಲಿ ಈ ಕೃತಿಯ ಸಂಪಾದಕರು ತಮ್ಮ ಕಾಲ, ಶ್ರಮ, ಬುದ್ಧಿಮತ್ತೆಗಳನ್ನೆಲ್ಲ ಎರಕಹೊಯ್ದು ಕನ್ನಡ ಚಲನಚಿತ್ರ ಲೋಕದ ವರ್ಣಮಯ ಇತಿಹಾಸವನ್ನು ಈ ಮೂಲಕ ಕಟ್ಟಿಕೊಟ್ಟಿದ್ದಾರೆ. ಈ ಚರಿತ್ರೆಯ ಓದಿನ ಮೂಲಕ ಕನ್ನಡ ಚಲನಚಿತ್ರ ಕ್ಷೇತ್ರದ ಗತ ಇತಿಹಾಸ ನಮ್ಮ ಮುಂದೆ ಆಕರ್ಷಕವಾಗಿ ತೆರೆದುಕೊಳ್ಳುತ್ತದೆ. ನಮ್ಮ ಚಲನಚಿತ್ರ ಪ್ರಪಂಚ ತನ್ನ ಎಲ್ಲ ಸೀಮಿತ ಸಂಪನ್ಮೂಲಗಳ ನಡುವೆ ಸಾಧಿಸಿದ ಎತ್ತರಗಳನ್ನು, ಉಂಡ ಸೋಲುಗಳನ್ನು, ಅವುಗಳ ಸ್ವರೂಪ ಮತ್ತು ಕಾರಣಗಳನ್ನು ಇದು ವಿವರವಾಗಿ ಬಿಡಿಸಿ ತೋರಿಸುತ್ತದೆ. ಇದರಿಂದಾಗಿ ನಮ್ಮ ತಪ್ಪು ಹೆಜ್ಜೆಗಳನ್ನು ತಿದ್ದಿಕೊಂಡು, ಹಿರಿಯ ಸಾಧನೆಗಳ ಆದರ್ಶಗಳ ಬೆಳಕಿನಲ್ಲಿ ಮುಂದೆ ನಡೆಯಲು ಮತ್ತು ಇದಕ್ಕಿಂತ ಮಹತ್ತರವಾದ ಎತ್ತರಗಳನ್ನು ಮುಟ್ಟುವ ಸತ್‌ಪ್ರೇರಣೆ ಪಡೆಯಲು ಇದು ನಿಸ್ಸಂದೇಹವಾಗಿ ನೆರವಾಗುತ್ತದೆ ಎಂಬ ಅಭಿಪ್ರಾಯ ನನ್ನದು. ಇಂತಹ ಗುಣಪಥದತ್ತ ಮತ್ತು ಮಹತ್ವದ ಗುರಿಗಳತ್ತ ನಮ್ಮನ್ನು ಕೊಂಡೊಯ್ಯಲು ಇದು ನೆರವಾಗಲಿ ಎಂಬುದು ನನ್ನ ಬಯಕೆ.

ಚಲನಚಿತ್ರಗಳ ವೈವಿಧ್ಯಮಯ ಮತ್ತು ವೈಭವಯುತ ಇತಿಹಾಸದ ಬಗ್ಗೆ ಭಾರತದ ಇತರ ಭಾಷೆಗಳಲ್ಲಿ ಇಷ್ಟು ವಿಸ್ತಾರವೂ ಸೂಕ್ಷ್ಮವೂ ವಿವರಪೂರ್ಣವೂ ಆದ ಅಧ್ಯಯನ ನಡೆದಿರುವುದು ಕಡಿಮೆ. ಇಲ್ಲವೆಂದರೂ ನಡೆಯುತ್ತದೆ. ಕನ್ನಡ ಚಲನಚಿತ್ರ ಲೋಕದ ಅಂತರಂಗ ಬಹಿರಂಗಗಳಿಗೆ ಆಕಾರ ನೀಡಿದ ಈ ಕೃತಿಯ ಸಂಪಾದಕರಾದ ಡಾ। ವಿಜಯಾ, ಶ್ರೀ ಎಂ.ಬಿ.ಸಿಂಗ್, ಶ್ರೀ ವಿ.ಎನ್.ಸುಬ್ಬರಾವ್, ಸಂಪಾದಕ ಮಂಡಳಿ ಹಾಗೂ ವಿಷಯ ತಜ್ಞರ ಸತತ ಪರಿಶ್ರಮವನ್ನು, ಉತ್ಸಾಹಶೀಲತೆಯನ್ನು, ಅನನ್ಯ ಕ್ರಿಯಾಶಕ್ತಿಯನ್ನು, ಇತಿಹಾಸದ ಪ್ರಜ್ಞೆಯನ್ನು ಮತ್ತು ಸಮರ್ಪಣಾ ಮಡಿಮೆಯನ್ನು ನಾನು ಕೃತಜ್ಞತೆಯಿಂದ ನೆನೆಯುತ್ತೇನೆ. ಈ ಕೃತಿ ಹೊರಬರಲು ಡಾ। ವಿಜಯಾ ಅವರು ವಹಿಸಿದ ಅಪರಿಮಿತ ಆಸಕ್ತಿ, ಶ್ರದ್ಧೆ, ಶ್ರಮಗಳು ವಿಶೇಷ ಉಲ್ಲೇಖಕ್ಕೆ ಪಾತ್ರವಾಗಿವೆ. ಇಂತಹ ಒಂದು ವಿಶಿಷ್ಟ ಆಕರ ಗ್ರಂಥವನ್ನು ಪ್ರಕಟಿಸಲು ಕನ್ನಡ ವಿಶ್ವವಿದ್ಯಾಲಯಕ್ಕೆ ನೆರವಾದ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಗೆ ಮತ್ತು ಅದರ ಕರ್ತವ್ಯಶೀಲ ಅಧ್ಯಕ್ಷ ಶ್ರೀ ಕೆ.ಸಿ.ಎನ್.ಚಂದ್ರಶೇಖರ್ ಅವರಿಗೆ, ಇಂತಹ ಕೃತಿಯ ಪ್ರಕಟಣೆಗೆ ಆರ್ಥಿಕ ನೆರವು ನೀಡಿ ನಮ್ಮ ಸಹಾಯಕ್ಕೆ ಧಾವಿಸಿದ ವಾರ್ತಾ ಇಲಾಖೆಯ ಸಂಸ್ಕೃತಿಪ್ರಿಯ ಸಚಿವರಾದ ಮಾನ್ಯ ಶ್ರೀ ಬಿ.ಕೆ.ಚಂದ್ರಶೇಖರ್ ಅವರಿಗೆ, ನಿರ್ದೇಶಕರಾದ ಡಾ। ಡಿ.ವಿ.ಗುರುಪ್ರಸಾದ್ ಅವರಿಗೆ, ಬಣ್ಣದ ಲೋಕದ ವರ್ಣ ವರ್ಣದ ಈ ಕೃತಿಯನ್ನು ತುಂಬ ಸುಂದರವಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ ಪ್ರಗತಿ ಪ್ರಿಂಟ್ ಕಮ್ಯುನಿಕೇಶನ್‌ನ ಶ್ರೀ ಶ್ರೀನಿವಾಸ್ ಅವರಿಗೆ ವಿಶ್ವವಿದ್ಯಾಲಯದ ಪರವಾಗಿ ಹಾರ್ದಿಕ ಧನ್ಯವಾದಗಳು ಸಲ್ಲುತ್ತವೆ.

- ಡಾ। ಎಚ್.ಜೆ.ಲಕ್ಕಪ್ಪಗೌಡ
ಕುಲಪತಿಗಳು



## ಇದು ಆರಂಭ ಮಾತ್ರ...

ಚಲಿಸುವ ಚಿತ್ರಗಳು ಲ್ಯೂಮಿಯೇರ್ ಸಹೋದರರ ಅದ್ಭುತ ಶೋಧ. ಮೂಕಿಯಾಗಿ ಹುಟ್ಟಿದ ಚಲಿಸುವ ಚಿತ್ರಗಳೇ ನಂತರದ ವರ್ಷಗಳಲ್ಲಿ ಮಾತು ಪಡೆದು ವಾಕ್ಚಿತ್ರವಾಗಿ ವಿಶ್ವದೆಲ್ಲೆಡೆ ವ್ಯಾಪಿಸಿತು. ವಿಶ್ವ ಚಿತ್ರೋದ್ಯಮ ಈಗಾಗಲೇ ತನ್ನ ಶತಮಾನೋತ್ಸವವನ್ನು ಪೂರೈಸಿದೆ. ಅಂತೆಯೇ ನಮ್ಮ ಕನ್ನಡ ಚಿತ್ರರಂಗವೂ ಇದೀಗ ಅರುವತ್ತೇಳನೆಯ ವರ್ಷದಲ್ಲಿ ಸಾಗಿದೆ.

ವಿಶ್ವದ ಎಲ್ಲ ರಾಷ್ಟ್ರಗಳಲ್ಲಿಯೂ, ಆಯಾ ರಾಷ್ಟ್ರಗಳ ಭಾಷೆಗಳಲ್ಲಿ ಚಲನಚಿತ್ರ ನಿರ್ಮಾಣವಾಗುತ್ತಿದೆ. ಭಾರತದಲ್ಲಿಯೂ ಎಲ್ಲ ಭಾಷೆಗಳಲ್ಲಿ ಹಾಗೂ ಉಪಭಾಷೆಗಳಲ್ಲಿ ಚಲನಚಿತ್ರಗಳು ತಯಾರಾಗುತ್ತಿವೆ. ಚಲನಚಿತ್ರ ನಿರ್ಮಾಣದಲ್ಲಿ ಭಾರತ ಇಂದು ಅಧಿಕ ಸಂಖ್ಯೆಯಲ್ಲಿ ಚಲನಚಿತ್ರಗಳನ್ನು ತಯಾರಿಸಿದ್ದು, ವಿಶ್ವದಲ್ಲಿಯೇ ಅತಿ ಹೆಚ್ಚು ಚಿತ್ರಗಳನ್ನು ನಿರ್ಮಿಸುತ್ತಿರುವ ರಾಷ್ಟ್ರಗಳ ಸಾಲಿನಲ್ಲಿ ಎರಡನೆಯದೆನಿಸಿದೆ. ಭಾರತೀಯ ಚಿತ್ರೋದ್ಯಮ ಹಲವು ಭಾಷೆಗಳ ಚಿತ್ರಗಳ ಸೃಷ್ಟಿಯಲ್ಲಿ ತೊಡಗಿದ್ದು, ತನ್ನದೇ ಆದ ಅನೇಕ ಭಾಷೆಗಳ ಇತಿಹಾಸವನ್ನು ಹೊಂದಿದೆ. ಆಯಾ ಭಾಷೆಗಳ ಚಲನಚಿತ್ರಗಳ ಇತಿಹಾಸ ಆಯಾ ಭಾಷೆಗಳಲ್ಲಿಯೇ ದಾಖಲಾಗಿದೆ. ಆದರೇ ಕನ್ನಡ ಚಿತ್ರರಂಗದ ಇತಿಹಾಸ ಕನ್ನಡ ಭಾಷೆಯಲ್ಲಿ ಸಮಗ್ರವಾಗಿ, ವ್ಯವಸ್ಥಿತ ರೀತಿಯಲ್ಲಿ ದಾಖಲಾಗಿಲ್ಲ. ಮುಂದಿನ ಪೀಳಿಗೆಗೆ ಅಧ್ಯಯನ ನಡೆಸಲು ಮಾಹಿತಿಗಳನ್ನು ಒದಗಿಸುವ ನಿಟ್ಟಿನಲ್ಲಿ ಅಗತ್ಯವಾದ ಆಕರ ಗ್ರಂಥವೊಂದನ್ನು ಕನ್ನಡದಲ್ಲಿ ಸಿದ್ಧಪಡಿಸುವ ಪ್ರಯತ್ನಗಳು ಹಲವು ಬಾರಿ ನಡೆದಿವೆಯಾದರೂ, ಸಂಪೂರ್ಣವಾಗಿ ಸಫಲಗೊಳ್ಳಲಿಲ್ಲ. ಮೂಲತಃ ಉದ್ಯಮದಲ್ಲಿನ ಪ್ರತಿ ಹೆಜ್ಜೆಯನ್ನು ದಾಖಲಿಸಿಡುವ ಪರಿಪಾಠವೇ ಬೆಳೆದಿಲ್ಲದಿರುವುದೇ ಅದಕ್ಕೆ ಕಾರಣ ಆಗಿದೆ. ಕಲವರು ಶಕ್ತಿಮೀರಿ ಉದ್ಯಮದ ಹೆಜ್ಜೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಇನ್ನು ಕೆಲವರು ವೈಯಕ್ತಿಕವಾಗಿ ದಾಖಲಿಸಿಕೊಳ್ಳುವ ನಿಟ್ಟಿನಲ್ಲಿ ನಡೆದಿದ್ದಾರೆ. ಈ ಬಗ್ಗೆ ಉದ್ಯಮದಲ್ಲಿ ಆಸಕ್ತಿ ಇದ್ದರೂ ಅನಿವಾರ್ಯ ಕಾರಣಗಳಿಂದಾಗಿ ಪ್ರಯತ್ನಗಳು ಅರ್ಧದಲ್ಲೇ ನಿಲ್ಲುತ್ತಿದ್ದವು. ಈ ನಿಟ್ಟಿನಲ್ಲಿ ಸಂಕ್ಷಿಪ್ತವಾಗಿ ಇತಿಹಾಸವನ್ನು ತೆರೆದಿಡುವ ಕೆಲವೇ ಪ್ರಯತ್ನಗಳು ಮಾತ್ರ ಆಗಿವೆ ಎಂದು ಹೇಳಬಹುದು.

ಕನ್ನಡದ ಪ್ರಸಿದ್ಧ ಸಾಹಿತಿಗಳ ಕಥೆ-ಕಾದಂಬರಿಗಳನ್ನು, ಖ್ಯಾತ ಕವಿಗಳ ಕವನಗಳನ್ನು ಚಲನಚಿತ್ರಗಳಲ್ಲಿ ಅಳವಡಿಸಿಕೊಂಡು ಚಲನಚಿತ್ರೋದ್ಯಮ ತನ್ನ ಗೌರವವನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಸಾಹಿತಿಗಳು - ಕವಿಗಳಿಗೂ ಗೌರವ ಮತ್ತು ಪ್ರಚಾರವನ್ನು ಸೃಷ್ಟಿಸಿಕೊಟ್ಟಿದೆ. ಆದರೂ ಕನ್ನಡ ಸಾರಸ್ವತ ಲೋಕ ಚಲನಚಿತ್ರ ಸಾಹಿತ್ಯವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳದೆ ದೂರವಾಗಿಯೇ ಇಟ್ಟುಕೊಂಡು ಬಂದಿರುವುದು ವಿಷಾದನೀಯ. ರಾಜ್ಯ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಉದ್ಯಮದ ಸಹಯೋಗದಲ್ಲಿ ಚಲನಚಿತ್ರ ಸಾಹಿತ್ಯ ಕುರಿತಂತೆ ಗೋಷ್ಠಿಯನ್ನು ವ್ಯವಸ್ಥೆ ಮಾಡಿಕೊಡಬೇಕೆಂದು 'ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ' ಹಲವು ಬಾರಿ ಮನವಿಗಳನ್ನು ಮಾಡಿದ್ದರೂ ಅದು ಕಾರ್ಯರೂಪಗೊಳ್ಳಲಿಲ್ಲ. ಆ ಅಂತರ ಹತ್ತಿರವಾಗಲಿಲ್ಲ. ಹಿರಿಯ ಚಲನಚಿತ್ರ ಪತ್ರಕರ್ತರು ಹಾಗೂ ಚಲನಚಿತ್ರೋದ್ಯಮಿಗಳ ಯೋಜನೆಯಂತೆ ವಾಣಿಜ್ಯ ಮಂಡಳಿಯು ಈ ಹಿಂದೆ ಕನ್ನಡ ಚಲನಚಿತ್ರ ಸಾಹಿತ್ಯ ಕಮ್ಮಟವನ್ನು ಹಮ್ಮಿಕೊಂಡು ಆ ದಿಸೆಯಲ್ಲಿ ಯಶಸ್ವಿಯಾಯಿತು.

ಆರಂಭದಿಂದ - ೨೦೦೦ನೇ ವರ್ಷ ಪೂರ್ತ ಕನ್ನಡ ಚಿತ್ರೋದ್ಯಮ ಕುರಿತಂತೆ ಸಾಧ್ಯವಾದಷ್ಟೂ ಸಮಗ್ರವಾಗಿ ಇತಿಹಾಸವನ್ನು ದಾಖಲಿಸಿಡಬೇಕೆಂಬ ಮಹದುದ್ದೇಶ ಹೊತ್ತ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ 'ಕನ್ನಡ ಚಲನಚಿತ್ರ ಇತಿಹಾಸ' ಸಂಗ್ರಹಿಸುವ ಕಾರ್ಯ ನಡೆಸಿ ಗ್ರಂಥ ರೂಪದಲ್ಲಿ ಪ್ರಕಟಿಸುವ ಕಾರ್ಯಕ್ಕೆ ಕೈ ಹಾಕಿತು. ವಾಣಿಜ್ಯ ಮಂಡಳಿಯ ಈ ಪ್ರಯತ್ನದ ಬಗ್ಗೆ ಆಸಕ್ತಿ ತಳೆದ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಪ್ರಕಟಣೆಯ ಹೊರೆಹೊರಲು ಮುಂದೆ ಬಂದಿತು. ಈ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಲಯದ ಹಿಂದಿನ ಕುಲಪತಿಗಳಾದ ಡಾ। ಎಂ.ಎಂ. ಕಲ್ಬುರ್ಗಿ ಮತ್ತು ರಿಜಿಸ್ಟ್ರಾರ್ ಶ್ರೀ ಮಲ್ಲೇಪುರಂ ಜಿ. ವೆಂಕಟೇಶ್ ಅವರು ತೋರಿದ ಆಸಕ್ತಿ - ನೀಡಿದ ಸಹಾಯವನ್ನು ಸದಾ ನೆನೆಯುತ್ತೇನೆ. ಹಾಗೆಯೇ ಈಗಿನ ಕುಲಪತಿಗಳಾದ ಡಾ। ಲಕ್ಕಪ್ಪಗೌಡ ಮತ್ತು ರಿಜಿಸ್ಟ್ರಾರ್ ಡಾ। ಕೆ. ವಿ. ನಾರಾಯಣ್ ಅವರು ಅಧಿಕ ಉತ್ಸಾಹದಿಂದ ನಮ್ಮನ್ನು ಪ್ರೋತ್ಸಾಹಿಸಿ ಗ್ರಂಥ ಪ್ರಕಟಣೆಯ ಬಗ್ಗೆ ತೋರಿದ ಸಹಕಾರಕ್ಕಾಗಿ ಉದ್ಯಮದ ಪರವಾಗಿ ಕೃತಜ್ಞತೆಗಳು.

ಈ ಇತಿಹಾಸ ಗ್ರಂಥಕ್ಕಾಗಿ ಮಾಹಿತಿಗಳ ಸಂಗ್ರಹಣೆ, ಲೇಖನಗಳನ್ನು ಸಿದ್ಧಪಡಿಸಿ ಪರಿಷ್ಕರಿಸುವುದು ಮುಂತಾದ ಕಾರ್ಯಗಳೆಲ್ಲವನ್ನೂ ಎಂಟು - ಹತ್ತು ತಿಂಗಳುಗಳಲ್ಲಿ ಮುಗಿಸಿ ಮುದ್ರಣಕ್ಕೆ ಸಿದ್ಧಪಡಿಸುವ ಗುರಿ ಹೊತ್ತು ಉತ್ಸಾಹದಿಂದಲೇ

ಕೆಲಸ ಆರಂಭವಾಯಿತು. ಆದರೇ ಈ ಉತ್ಸಾಹ ಬಹುಕಾಲ ಉಳಿಯಲಿಲ್ಲ. ಒಪ್ಪಿಕೊಂಡವರು ತಮ್ಮ ತಮ್ಮ ಜವಾಬ್ದಾರಿ ಹೊರುವಲ್ಲಿ ನಿರುತ್ಸಾಹ ತೋರಿದರು. ಗ್ರಂಥಕ್ಕೆ ಅಗತ್ಯ ಮಾಹಿತಿಗಳನ್ನು ಒದಗಿಸಿಕೊಡುವಲ್ಲಿಯೂ ಉದ್ಯಮದವರಿಂದ ಸೂಕ್ತ ಪ್ರತಿಕ್ರಿಯೆ ಬರಲಿಲ್ಲ ; ಆಸಕ್ತಿಯೂ ನಿರೀಕ್ಷಿಸಿದಷ್ಟು ಇರಲಿಲ್ಲ. ಹಾಗಾಗಿ ಈ ಗ್ರಂಥವನ್ನು ಇಷ್ಟರಮಟ್ಟಿಗೆ ಸಿದ್ಧ ಪಡಿಸಲು ಸುಮಾರು ಒಂದೂವರೆ ವರ್ಷಕ್ಕೂ ಹೆಚ್ಚು ಕಾಲ ತೆಗೆದುಕೊಂಡಿತು. ಹೆಚ್ಚು ಸಮಯದಿಂದಾಗಿ ಖರ್ಚು ಸಹ ಮೂರು ಪಟ್ಟು ಹೆಚ್ಚಾಯಿತು. ಮಾಹಿತಿಗಳನ್ನು ಹುಡುಕಿ ತಂದು ದಾಖಲಿಸುವ ಕಾರ್ಯದಲ್ಲಿ, ಮಾಹಿತಿಗಳು ಸರಿಯಾಗಿ ಸಿಗದೆ ವಿಳಂಬವಾಯಿತು. ಅರುವತ್ತೇಳು ವರ್ಷಗಳ ಕನ್ನಡ ಚಿತ್ರರಂಗದ ಇತಿಹಾಸವನ್ನು ಸಮಗ್ರವಾಗಿ ಅಲ್ಲದಿದ್ದರೂ ಅತ್ಯಧಿಕ ಮಾಹಿತಿಗಳೊಂದಿಗೆ ದಾಖಲಿಸಿರುವ ಪ್ರಯತ್ನವಾದ ಈ 'ಕನ್ನಡ ಚಲನಚಿತ್ರ ಇತಿಹಾಸ'ವನ್ನು ಅಧ್ಯಯನ ಶೀಲ ಓದುಗರ ಮಡಿಲಿಗಿಡುತ್ತಿದ್ದೇವೆ. ಇದೇ ಪರಿಪೂರ್ಣ-ಸಮಗ್ರ ಅಲ್ಲ. ಇತಿಹಾಸವನ್ನು ದಾಖಲಿಸುವ ಕಾರ್ಯ ಇಲ್ಲಿಗೇ ನಿಲ್ಲುವುದಿಲ್ಲ. ಮುಂದುವರೆಯುತ್ತದೆ. ೨೦೦೦ ವರ್ಷದ ನಂತರದ ವರ್ಷಗಳಲ್ಲಿನ ಕನ್ನಡ ಚಲನಚಿತ್ರ ಇತಿಹಾಸವನ್ನು ದಾಖಲಿಸುವ ಕೆಲಸವನ್ನು ವಾಣಿಜ್ಯ ಮಂಡಳಿಯು ಮುಂದುವರಿಸಲಿದೆ. ಅಲ್ಲದೆ ಈ ಗ್ರಂಥದಲ್ಲಿ ಅನಿವಾರ್ಯ ಕಾರಣಗಳಿಂದ ಬಿಟ್ಟು ಹೋಗಿರಬಹುದಾದ, ಸಿಕ್ಕದೆ ಹೋಗಿದ್ದು ನಂತರದಲ್ಲಿ ದೊರೆಯಬಹುದಾದ ಮಾಹಿತಿಗಳನ್ನು ಈ ಗ್ರಂಥದ ಮರು ಮುದ್ರಣ ಸಂದರ್ಭದಲ್ಲಿ ದಾಖಲಿಸಲಾಗುವುದು.

ಹಿರಿಯ ಪತ್ರಕರ್ತರುಗಳಾದ ಶ್ರೀಮತಿ ಡಾ। ವಿಜಯಾ ಶ್ರೀ ಎಂ. ಬಿ. ಸಿಂಗ್ ಮತ್ತು ಶ್ರೀ ವಿ. ಎನ್. ಸುಬ್ಬರಾವ್ ಅವರು ಸಂಪಾದಕರುಗಳಾಗಿ ಈ ಗ್ರಂಥವನ್ನು ಸಿದ್ಧಪಡಿಸುವಲ್ಲಿ ಅಪಾರ ಶ್ರಮ ವಹಿಸಿದ್ದಾರೆ. ಡಾ। ವಿಜಯಾ ಅವರಂತೂ ಆರೋಗ್ಯವನ್ನು ಲೆಕ್ಕಿಸದೆ, ಆರ್ಥಿಕ ನಷ್ಟವನ್ನೂ ಗಮನಿಸದೆ ಅಹರ್ನಿಶಿ ದುಡಿದಿದ್ದಾರೆ. ಅವರ ಅವಿರತ ಪರಿಶ್ರಮ ಅಭಿನಂದನಾರ್ಹ. ಸಂಪಾದಕ ಮಂಡಳಿಯಲ್ಲಿರುವವರೂ ನಿಸ್ಪೃಹತೆಯಿಂದ ದುಡಿದಿದ್ದಾರೆ. ಅವರೆಲ್ಲರಿಗೂ ವಾಣಿಜ್ಯ ಮಂಡಳಿಯ ಪರವಾಗಿ ಕೃತಜ್ಞತೆಗಳು.

ಈ ಗ್ರಂಥಕ್ಕೆ ತಗುಲುವ ವೆಚ್ಚವನ್ನು ಸರಿದೂಗಿಸುವ ನಿಟ್ಟಿನಲ್ಲಿ ಹಾಗೂ ಕಾಲ ವಿಳಂಬವನ್ನು ಮನ್ನಿಸಿ ಎಲ್ಲ ಬಗೆಯಿಂದಲೂ ಸಹಕರಿಸಿರುವ ವಾಣಿಜ್ಯ ಮಂಡಳಿಯ ನನ್ನ ಆತ್ಮೀಯ ಪದಾಧಿಕಾರಿಗಳಿಗೂ, ಕಾರ್ಯಕಾರಿ ಸಮಿತಿಯ ಸದಸ್ಯರಿಗೂ ನನ್ನ ಕೃತಜ್ಞತೆಗಳು.

ಈ ಗ್ರಂಥಕ್ಕಾಗಿ ಹೆಚ್ಚಿನ ಸಂಪನ್ಮೂಲ-ದಾಖಲೆಗಳನ್ನು ಒದಗಿಸಿಕೊಟ್ಟ ಶ್ರೀ ಹೆಚ್. ಎನ್. ಮಾರುತಿ, ಶ್ರೀ ಸಾ.ರಾ.ಗೋವಿಂದು ಅವರಿಗೆ ನನ್ನ ಕೃತಜ್ಞತೆಗಳು.

ಈ ಗ್ರಂಥ ಸಂಪಾದನೆಯ ಸಂದರ್ಭದಲ್ಲಿ ದಿನನಿತ್ಯದ ಕಾರ್ಯಕಲಾಪಗಳ ಪರಿವೀಕ್ಷಣೆಯಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಅಗತ್ಯ ಸಲಹೆ-ಸಹಕಾರಗಳನ್ನು ನೀಡಿದ ಹಿರಿಯರಾದ ಶ್ರೀ ಆರ್. ಲಕ್ಷ್ಮಣ್ ಮತ್ತು ಶ್ರೀ ಕೆ.ವಿ. ಗುಪ್ತ ಅವರ ನೆರವನ್ನು ಸದಾ ಸ್ಮರಿಸುತ್ತೇನೆ.

ಈ ಬೃಹತ್ ಗ್ರಂಥದ ಸಂಪಾದನಾ ಕಾರ್ಯದಲ್ಲಿ ಸಹಕರಿಸಿದವರು, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನೆರವಾದವರು ಅನೇಕ ಮಂದಿ ಆತ್ಮೀಯರು. ಅವರೆಲ್ಲರಿಗೂ ವಾಣಿಜ್ಯ ಮಂಡಲಿಯ ಪರವಾಗಿಯೂ, ವೈಯಕ್ತಿಕವಾಗಿಯೂ ಕೃತಜ್ಞತೆಗಳನ್ನರ್ಪಿಸುತ್ತೇನೆ.

ಕೆ.ಸಿ.ಎನ್. ಚಂದ್ರಶೇಖರ್

ಅಧ್ಯಕ್ಷರು

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ

ಬೆಂಗಳೂರು

ದಿನಾಂಕ : ೩೦-೧೦-೨೦೦೧

# ಸಾಂಸ್ಕೃತಿಕ ದಾಖಲೆಯ ಹಾದಿಯಲ್ಲಿ...

ಗುಟನ್ ಬರ್ಗ್‌ನ ಮುದ್ರಣಾಲಯದಿಂದಾರಂಭಿಸಿ ಈ ಹೊತ್ತಿನ ಹತ್ತಾರು ಬಗೆಯ ಎಲೆಕ್ಟ್ರಾನಿಕ್ ಮಾಧ್ಯಮಗಳವರೆಗೆ ಸಂಪರ್ಕ ಕ್ಷೇತ್ರದಲ್ಲಿ ಮಹಾ ಕ್ರಾಂತಿಯೇ ಆಗಿದೆ. ಮಾನವ ಸಂಸ್ಕೃತಿ ವಿವಿಧ ಕಲೆಗಳಲ್ಲಿ ಹರಳುಗಟ್ಟಿಕೊಂಡಿದೆ. ಚಲನಚಿತ್ರ ಅಂಥ ವಿವಿಧ ಕಲೆಗಳ ಸಂಗಮ. ಶಾಬ್ದಿಕ ವಿವರಗಳ ನೆರವಿಲ್ಲದೆಯೂ ಭಾವಗಳನ್ನು ಧರಿಸಬಲ್ಲುದು; ಸಂವಹನ ಸಾಧ್ಯವಾಗಿಸಬಲ್ಲುದು.

ಸಿನಿಮಾದ ಸಾಧನೆ ಬೇರೆಲ್ಲ ಸಂಸ್ಕೃತಿ ಪ್ರಸಾರ ಮಾಧ್ಯಮಗಳನ್ನು ಸರಿಗಟ್ಟುವಷ್ಟು ಮುಖ್ಯವಾದುದು. 'ಇದೊಂದು ಅಗ್ಗದ ಮನೋರಂಜನೆ, ಬದುಕಿನ ಗಂಭೀರ ಮುಖದೊಡನೆ ಇದಕ್ಕೆ ಯಾವ ಸಂಬಂಧವೂ ಇಲ್ಲ ಎಂಬ ಕೆಲವರ ನಂಬಿಕೆಗಳನ್ನು ಹುಸಿಯಾಗಿಸಿದೆ'. ಮನುಷ್ಯ ಮನುಷ್ಯರ ಮಧ್ಯೆ, ವಿವಿಧ ಸಂಸ್ಕೃತಿಗಳ ಮಧ್ಯೆ ಸಂಪರ್ಕ ಕಲ್ಪಿಸುವ ಹೊಸ ಭಾಷೆಯಾಗಿ ಸಿನಿಮಾದ ಸಾಧನೆ ಅನನ್ಯ. ಇಂಥದೊಂದು ಮಾಧ್ಯಮ ಉದ್ಯಮದ ಹಾಗೆ ಬೆಳೆದಿದೆ. ಸಹಸ್ರಾರು ವೃತ್ತಿ-ಉಪ ವೃತ್ತಿಗಳಿಗೆ, ಆ ಮೂಲಕ ಲಕ್ಷಾಂತರ ಜೀವಗಳ ತುತ್ತಿನ ಚೀಲ ತುಂಬುವುದಕ್ಕೆ ನೆರವಾಗಿದೆ. ಈ ಕ್ಷೇತ್ರದಲ್ಲಿ ಕಲಿಕೆ, ಸಾಧ್ಯತೆಯ ಬಳಕೆಯ ಸಲುವಾಗಿ ಹಲವರು ಜೀವಮಾನವನ್ನೇ ತೇದುಕೊಂಡಿದ್ದಾರೆ. ಇತಿಹಾಸ ಪ್ರಜ್ಞೆಯಿಲ್ಲದವರ ಕೈಯಲ್ಲಿ ಸಿಕ್ಕಿಕೊಂಡುದರ ಫಲವಾಗಿ ಮುಖ್ಯ ಸಂಗತಿಗಳು ಎಲ್ಲೆಲ್ಲೋ ಚೆದುರಿವೆ, ಚೆಲ್ಲಾಡಿ ಹೋಗಿವೆ. ಅವನ್ನೆಲ್ಲಾ ಕೂಡಿಸುವ, ಇಂತಾಯಿತೆಂದು ಹೇಳುವ ಕೆಲಸ ಈಗ ಆಗದಿದ್ದರೆ ಮುಂದೆಂದೂ ಸಾಧ್ಯವಾಗಲಾರದು. ಖಚಿತ ಮಾಹಿತಿ ಸಂಗ್ರಹ ಮರಳಿನಲ್ಲಿ ಸೂಜಿಯನ್ನು ಹುಡುಕುವಂತೆ ಎಂಬುದು ಅರ್ಥವಾಗಿದೆ. ಮುಂದಿನ ಪೀಳಿಗೆಗೆ ನಿನ್ನೆಯ ಶ್ರಮ-ಸಾಧನೆಯನ್ನು ತಿಳಿಸುವುದು, ಇದೊಂದು ದಾಖಲಿಸಬೇಕಾದ ಸಂಸ್ಕೃತಿ ಎಂದು ತಿಳಿಸಿಕೊಡುವ ಪ್ರಾಥಮಿಕ ಪ್ರಯತ್ನವಾದರೂ ಆಗಲಿ ಎಂಬ ಹಂಬಲ ಈ 'ಚಲನಚಿತ್ರ ಇತಿಹಾಸ' ಸಂಪುಟಗಳಿಗೆ ಮೂಲ ಪ್ರೇರಣೆ. ಇಂಥ ಆಶಯ ಹೊತ್ತು ಸಿದ್ಧ ಪಡಿಸಲಾದ ಕನ್ನಡ ಚಲನಚಿತ್ರ ಇತಿಹಾಸ ಸಂಪುಟಗಳನ್ನು ನಿಮ್ಮ ಕೈಯಲ್ಲಿಡುತ್ತಿದ್ದೇವೆ. ಈ ಹಂತಕ್ಕೆ ಬರುವುದರ ಹಿಂದೆ ಈ ಇತಿಹಾಸಕ್ಕೇ ಒಂದು ಇತಿಹಾಸವಿದೆ; ಹಲವು ಬಾರಿ ಅರ್ಧಕ್ಕೇ ನಿಂತುಹೋದ ಪ್ರತ್ಯಕ್ಷ, ಅಪ್ರತ್ಯಕ್ಷ ಪ್ರಯತ್ನಗಳ ಪರಿಶ್ರಮವಿದೆ. ಕನ್ನಡ ಚಲನಚಿತ್ರ ಪತ್ರಕರ್ತರ ಬಹುದಿನಗಳ ಕನಸು ಕನ್ನಡ ಚಲನಚಿತ್ರ ಇತಿಹಾಸ. ಕನ್ನಡ ಚಲನಚಿತ್ರ ಪತ್ರಕರ್ತರ ಪರಿಷತ್ತು ಕೆಲವು ವರ್ಷಗಳ ಹಿಂದೆಯೇ ಈ ಯೋಜನೆ ಕೈಗೆತ್ತಿಕೊಂಡು ಮದರಾಸು-ಮೈಸೂರುಗಳಲ್ಲಿದ್ದ ಚಿತ್ರರಂಗದ ಹಿರಿಯರನ್ನು ಸಂದರ್ಶಿಸಿ, ಧ್ವನಿಮುದ್ರಿಸಿಕೊಂಡಿತ್ತು.

ಎರಡನೆಯ ಬಾರಿ ರಾಜ್ಯ ಸರ್ಕಾರವೂ ದನಿಗೂಡಿಸಿ ಪತ್ರಕರ್ತರ ಪರಿಷತ್ತಿಗೇ ಈ ಜವಾಬ್ದಾರಿ ವಹಿಸಿ, ಹತ್ತು ಸಾವಿರ ರೂಪಾಯಿಗಳನ್ನು ಮುಂಗಡವಾಗಿ ಕೊಟ್ಟಿತು. ಆಗ ಚಲನಚಿತ್ರ ಪತ್ರಕರ್ತರ ಪರಿಷತ್ತಿನ ಅಧ್ಯಕ್ಷರಾಗಿದ್ದ ಆರ್. ನರಸಿಂಹ ಅವರು ಸಂಪಾದಕ ಮಂಡಳಿ ರಚಿಸಿ, ಗ್ರಂಥದ ರೂಪುರೇಷೆಯನ್ನು ಸಿದ್ಧಮಾಡಿ, ಮುದ್ರಣದ ವ್ಯವಸ್ಥೆಯವರೆಗೂ ಮುನ್ನಡೆದರು. ಕಾರಣಾಂತರಗಳಿಂದ ಸ್ಥಗಿತಗೊಂಡರೂ ಪುನಃ ಪತ್ರಕರ್ತರ ಪರಿಷತ್ತೇ ಕಾರ್ಯ ಮುಂದುವರಿಸಿ ಮಾಹಿತಿ ಸಂಗ್ರಹಿಸಲಾರಂಭಿಸಿತು. ಸುಚಿತ್ರ ಚಿತ್ರ ಸಮಾಜ ತನ್ನ ಬೆಳ್ಳಿ ಹಬ್ಬದ ನೆನಪಿಗೆ ಚಲನಚಿತ್ರ ಇತಿಹಾಸ ಗ್ರಂಥ ಪ್ರಕಟಿಸಲು ಪ್ರಯತ್ನಿಸಿತ್ತು. ರಾಜ್ಯ ಚಲನಚಿತ್ರ ಭಂಡಾರವೂ ಒಮ್ಮೆ ಪ್ರಯತ್ನಿಸಿತು. ಡಾ। ಚಂದ್ರಶೇಖರ ಕಂಬಾರ ಅವರು ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾಗ ಇಂಥದೊಂದು ಯೋಜನೆ ಮೊಳಕೆಯೊಡೆದಿತ್ತು. ಹಿರಿಯ ಪತ್ರಕರ್ತ ಎಂ.ಬಿ.ಸಿಂಗ್ ಅವರು ಒಂದು ಯೋಜನೆ ಸಿದ್ಧ ಮಾಡಿಕೊಟ್ಟಿದ್ದರು, ಕೆಲಸ ಮುಂದುವರಿಯಲಿಲ್ಲ. ಚಲನಚಿತ್ರ ವಾಣಿಜ್ಯ ಮಂಡಳಿ ಕಾರ್ಯಾರಂಭ ಮಾಡಿ ಕೊಂಚ ಕೆಲಸಗಳೂ ಆದವು. ಈ ಎಲ್ಲ ಪ್ರಯತ್ನಗಳಲ್ಲೂ ಸಮಗ್ರ ಇತಿಹಾಸ ಗ್ರಂಥ ಪ್ರಕಟವಾಗಲಿಲ್ಲ. ಆದರೆ ಕನ್ನಡ ಚಲನಚಿತ್ರ ಸುವರ್ಣ ಮಹೋತ್ಸವ, ಚಲನಚಿತ್ರ ವಾಣಿಜ್ಯ ಮಂಡಳಿಯ ಸುವರ್ಣ ಮಹೋತ್ಸವ, ಬೆಂಗಳೂರಿನಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ಸಂದರ್ಭಗಳಲ್ಲಿ ಹೊರತಂದ ಪುಸ್ತಿಕೆಗಳು ಇವೆಲ್ಲವೂ ಆವರೆಗೆ ಇತಿಹಾಸಕ್ಕಾಗಿ ಸಂಗ್ರಹಿಸಿದ ಅನೇಕ ವಿಷಯಗಳಿಗೆ ಒಂದು ರೂಪುಕೊಡುವ ಘಟ್ಟಗಳೇ ಆಗಿದ್ದವು. ಇಂದಿಗೂ ಅವು ಆಕರ ಗ್ರಂಥಗಳೇ. ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿರುವ

ಪತ್ರಕರ್ತ ಗಂಗಾಧರ ಮೊದಲಿಯಾರ್ ಅವರು ಸಿದ್ಧಪಡಿಸಿದ 'ಕನ್ನಡ ಸಿನಿಮಾ; ಇತಿಹಾಸದ ಪುಟಗಳಲ್ಲಿ' ಗ್ರಂಥ ಕೂಡಾ ಅಂಥದೇ ಒಂದು ಏಕವ್ಯಕ್ತಿ ಸಾಹಸವಾಗಿದೆ. ಇವೆಲ್ಲದರ ಹಿಂದೆ ಕನ್ನಡ ಚಲನಚಿತ್ರ ಇತಿಹಾಸವನ್ನು ದಾಖಲಾಗಿಸುವ ಬಗ್ಗೆ ಇರುವ ಕಾಳಜಿ, ಪ್ರೀತಿಗಳು ಕೆಲಸಮಾಡಿವೆ. ಈ ಎಲ್ಲ ಸಂದರ್ಭಗಳಲ್ಲೂ ಇಂಥ ಗ್ರಂಥವೊಂದರ ಸಿದ್ಧತೆ ಬೇಡುವ ಅತಿ ಹೆಚ್ಚು ಸಮಯ, ಜನಶಕ್ತಿ ಲಭ್ಯವಿರಲಿಲ್ಲ. ಈ ಹೊತ್ತೂ ಸ್ಥಿತಿ ಅದಕ್ಕಿಂತ ಭಿನ್ನವಾಗಿಲ್ಲ. ಈ ಸಂಪುಟಗಳ ಸಿದ್ಧತೆಗಾಗಿ ನಾವು ವ್ಯಯ ಮಾಡಿದ ೨೨ ತಿಂಗಳುಗಳು ಎಷ್ಟು ಮಾತ್ರಕ್ಕೂ ಸಾಲದು ಎನ್ನಿಸುತ್ತಿದೆ. ಮೇಲು ನೋಟಕ್ಕೆ ಸಾಧ್ಯ-ಸುಲಭ ಅನ್ನಿಸಿದರೂ ಬಗೆದಷ್ಟೂ ಆಳಕ್ಕೆ ಇಳಿವ, ಮೊಗೆದಷ್ಟೂ ಬೊಗಸೆ ತುಂಬುವ ಸಂಗತಿಗಳಿಗೆ ಅಂತ್ಯವೇ ಇಲ್ಲ. ಒಂದು ಮತ್ತೊಂದರ ಜಾಡು ತೋರಿಸುತ್ತ ಪಿಗ್ಗಿಕೊಳ್ಳಲು ಕಾರಣವಾಗುತ್ತದೆ, ಜೂಟಾಟವಾಡಿಸುತ್ತದೆ. ಇಷ್ಟಾದರೂ ಅಧಿಕೃತತೆಯ ಬಗ್ಗೆ ಸಂದೇಹಗಳು ಹೆಚ್ಚುತ್ತಲೇ ಇವೆ. ಮುದ್ರಣಕ್ಕೆ ಹೋಗುತ್ತಿರುವ ಕೊನೆಯ ಕ್ಷಣದಲ್ಲೂ ಮಾಹಿತಿಗಳು ಸಿಗುತ್ತಿವೆ. ಮರುಮುದ್ರಣದಲ್ಲಿ ಪರಿಷ್ಕರಿಸಿ ಎಲ್ಲವನ್ನು ಸೇರಿಸುವುದೊಂದೇ ನಮಗಿರುವ ದಾರಿ. ಗ್ರಂಥವನ್ನು ಪರಾಮರ್ಶಿಸುವ ಹಿರಿಯರು ಎಲ್ಲೇ ಇದ್ದರೂ ಸರಿಕಂಡ ಮಾಹಿತಿಗಳನ್ನು ಬರೆದು ತಿಳಿಸಿದರೆ ಪರಿಷ್ಕರಣೆಗೆ ಅನುಕೂಲ. ನಮ್ಮ ಓಡಾಟ, ಅವರಿವರ ನೆನಪುಗಳ ಕೆದಕಾಟ, ಈ ಎಲ್ಲ ಪ್ರಯತ್ನಗಳನ್ನೂ ಬೆಂಬಲಿಸಿ ನೆನಪುಗಳನ್ನೆಲ್ಲ ದಾಖಲೆಗೆ ಒದಗಿಸಿದ ಹಿರಿಯರನೇಕರು ಇಂದು ನಮ್ಮೊಂದಿಗಿಲ್ಲ. ಅವರೆಲ್ಲರ ಹರಕೆ ನಮ್ಮ ಜೊತೆಗಿದೆ. ಇಂಥದೊಂದು ಮಹತ್ಕಾರ್ಯಕ್ಕೆ ಆ ಸದಾಶಯವೇ ಬೆಂಬಲ.

ಹಂಪಿಯ ಕನ್ನಡ ವಿಶ್ವವಿದ್ಯಾಲಯವು ದೇಸೀ ಅಧ್ಯಯನ ವಿಭಾಗವನ್ನು ಪ್ರಾರಂಭಿಸಿತು. ವಿಚಾರ ಸಂಕಿರಣವೊಂದರಲ್ಲಿ 'ಕನ್ನಡ ಚಲನಚಿತ್ರಗಳಲ್ಲಿ ದೇಸೀಯತೆ' ಒಂದು ವಿಷಯ. ಅವರಿವರ ಮಧ್ಯೆ ಬದುಕುತ್ತ ಅಸ್ತಿತ್ವಕ್ಕಾಗಿ, ಅಸ್ಮಿತೆಗಾಗಿ ತಡಕಾಡಿದ ಕನ್ನಡ ಚಿತ್ರರಂಗ ಆಗಲೂ ದೇಸೀಯವಾದವನ್ನು ಕಟ್ಟಿಕೊಡಲು ಪಟ್ಟ ಪಾಡು-ಹಾಡುಗಳು ನಿಜಕ್ಕೂ ಕುತೂಹಲ ತರುವಂಥವು. ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳು "ಇಷ್ಟು ಆಸಕ್ತಿಕರ ಸಂಗತಿಗಳು ದಾಖಲಾಗಬೇಕು. ಚಲನಚಿತ್ರ ಇತಿಹಾಸವನ್ನು ಸಿದ್ಧಪಡಿಸಿದರೆ ಪ್ರಕಟಿಸುವ ಹೊಣೆ ವಿಶ್ವವಿದ್ಯಾಲಯ ಹೊರುತ್ತದೆ" ಎಂದರು. ಮೇಲಿಂದ ಮೇಲೆ ನೆನಪಿಸಿ, ಒತ್ತಡ ತಂದರು. ಇದನ್ನೆಲ್ಲ ಚಲನಚಿತ್ರ ವಾಣಿಜ್ಯ ಮಂಡಳಿಯ ಗಮನಕ್ಕೆ ತಂದಾಗ ಅಧ್ಯಕ್ಷ ಕೆ.ಸಿ.ಎನ್. ಚಂದ್ರಶೇಖರ್ ಅವರು ಇದನ್ನು ತುಂಬಾ ಗಂಭೀರವಾಗಿ ಪರಿಗಣಿಸಿದರು. ಕಾರ್ಯಕಾರಿ ಸಮಿತಿ, ಉದ್ಯಮದ ಹಿರಿಯರೊಂದಿಗೆ ಸಮಾಲೋಚಿಸಿ ಅವರೆಲ್ಲರ ಸಲಹೆ-ಒಪ್ಪಿಗೆ ಪಡೆದು ಕಾರ್ಯಾರಂಭ ಮಾಡಿಯೇ ಬಿಟ್ಟರು. ಅವರು ಪುನಃ ಈ ಹೊಣೆಯನ್ನು ಪತ್ರಕರ್ತರ ಮಡಿಲಿಗೇ ಹಾಕಿದರು.

ಈ ಸಲುವಾಗಿ 'ಕನ್ನಡ ಚಲನಚಿತ್ರೋದ್ಯಮ ಸಹಕಾರ ಸಂಘ'ದ ಕಚೇರಿಯಲ್ಲಿ ಸ್ಥಳಾವಕಾಶ ಮಾಡಿ, ಸೌಲಭ್ಯಗಳನ್ನೆಲ್ಲ ಒದಗಿಸಲಾಯಿತು. ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳು ಪುಟ ವಿನ್ಯಾಸ, ಚಿತ್ರಗಳ ಆಯ್ಕೆ ಮೊದಲ್ಗೊಂಡು ಎಲ್ಲವನ್ನೂ ನಿರ್ವಹಿಸಿಕೊಡಬೇಕೆಂದೂ ಈ ವಿಷಯದಲ್ಲಿ ಹೆಚ್ಚು ಪರಿಚಯ ತಮಗಿಲ್ಲವೆಂದೂ ತಿಳಿಸಿದಾಗ ಆ ಎಲ್ಲ ಜವಾಬ್ದಾರಿಯನ್ನೂ ವಾಣಿಜ್ಯ ಮಂಡಳಿಯೇ ವಹಿಸಿಕೊಳ್ಳಬೇಕಾಯಿತು. ಗಣಕಯಂತ್ರ, ಕೆ.ವಿ.ವಿ. ಹೇಳಿದ ಅಕ್ಷರಗಳು, ಸ್ಕ್ಯಾನಿಂಗ್ ಸೌಲಭ್ಯ ಎಲ್ಲವನ್ನು-ಅದಕ್ಕೆ ತಗಲುವ ವೆಚ್ಚವನ್ನೂ ಲೆಕ್ಕಿಸದೆ-ವಾಣಿಜ್ಯ ಮಂಡಳಿ ಒದಗಿಸಿತು. ಕೆ.ಸಿ.ಎನ್. ಚಂದ್ರಶೇಖರ್ ಅವರು ಸಿದ್ಧವಾದ ಲೇಖನಗಳನ್ನು ಹಿರಿಯರಾದ ಆರ್. ಲಕ್ಷ್ಮಣ್, ಕೆ.ವಿ.ಗುಪ್ತ ಅವರುಗಳು ಒಪ್ಪಿದರೆ ಆಯಿತು, ನಾವು ನೋಡುವ ಅಗತ್ಯವಿಲ್ಲ ಎಂದರು. ಎಂದೂ ನಮ್ಮ ಕೆಲಸಗಳಲ್ಲಿ ಹಸ್ತಕ್ಷೇಪ ಮಾಡದಿರುವ ಸೌಜನ್ಯ ತೋರಿದರು. ನಮ್ಮ ಎಲ್ಲ ಅಗತ್ಯಗಳನ್ನು ಪೂರೈಸಲು ಎಚ್.ಎನ್. ಮಾರುತಿ ಅವರನ್ನು, ಓಡಾಟ ಹಾಗೂ ಕೆಲವು ಮಾಹಿತಿ ಸಂಗ್ರಹಗಳಿಗೆ ನೆರವಾಗಲು ಥಾಮಸ್ ಡಿ'ಸೋಜಾ ಅವರನ್ನು ಪ್ರಾರ್ಥಿಸಿಕೊಂಡಾಗ ಅವರುಗಳು ತುಂಬು ಪ್ರೀತಿಯಿಂದ ಆ ಕಾರ್ಯವನ್ನು ನಿರ್ವಹಿಸಿದರು. ಎಲ್ಲಿಯವರೆಗೆ ಬಂತು? ಯಾವಾಗ ಮುಗಿಸುತ್ತೀರಿ? ಎಂದು ವಿಚಾರಿಸುತ್ತಾ ಆಗ-ಈಗ ಭೇಟಿ ಕೊಟ್ಟು ಕಾರ್ಯವಿಧಾನವನ್ನು ಪರಿವೀಕ್ಷಿಸಿದ ಕಾರ್ಯಕಾರಿ ಸಮಿತಿ, ವಾಣಿಜ್ಯ ಮಂಡಳಿಯ ಸಿಬ್ಬಂದಿ ಈ ಕೆಲಸವನ್ನು ಮತ್ತಷ್ಟು ಶ್ರದ್ಧೆಯಿಂದ ನಿರ್ವಹಿಸಲು ನಮಗೆ ಪ್ರೇರಣೆಯಾದವು.

ಹೊರ ಜಗತ್ತು ಪರಿಭಾವಿಸುವ ಗ್ಲಾಮರ್, ಧನಗಳಿಕೆಯ ಕ್ಷೇತ್ರ ಎಂಬುದಕ್ಕಿಂತ ಭಿನ್ನವಾದ ಹಲವು ಸ್ತರಗಳಿರುವ ಸಂಕೀರ್ಣ ಕಲೆ ಸಿನಿಮಾ. ಇದನ್ನು ಕಟ್ಟುವ ಕಾರ್ಯದಲ್ಲಿ ಎದುರಾಗುವ, ಏರ್ಪಡುವ ತೊಡಕುಗಳನ್ನು ಸಹಿಸಿ ಬೇಯುತ್ತ, ಬಳಲುತ್ತ ಕನ್ನಡ ಸಂಸ್ಕೃತಿಯನ್ನು ಹೊಸ ಮಾಧ್ಯಮದಲ್ಲಿ ಹಿಡಿದಿಡಲು ಹೆಣಗಿದ ಮಹನೀಯರನ್ನು ನೆನೆಯುವುದು, ಅವರು ನಡೆದು ಬಂದ ಹಾದಿಯನ್ನು ಗುರುತಿಸುವುದು, ಅಭಿವ್ಯಕ್ತಿ ಮಾಧ್ಯಮದ ಎಲ್ಲ ಸಾಧ್ಯತೆಗಳನ್ನೂ ದುಡಿಸಿಕೊಳ್ಳಬಯಸುವ ಮನಸ್ಸುಗಳೆಲ್ಲ ಗಂಭೀರವಾಗಿ ಪರಿಗಣಿಸಬೇಕಾದ ಮಾಧ್ಯಮ ಸಿನಿಮಾ ಎಂದು ಸಾಬೀತುಮಾಡುವುದು, ಮುಂದಿನ ಪೀಳಿಗೆಯವರಿಗೆ ಅಧ್ಯಯನಕ್ಕೆ ಅನುಕೂಲವಾಗುವಂತೆ ವಿಷಯಗಳನ್ನು ಜೋಡಿಸುವುದು, ಅದಕ್ಕಾಗಿ ಸಾಧ್ಯವಾದಷ್ಟೂ ಸಮಗ್ರವಾಗಿ ಮಾಹಿತಿಯನ್ನು ಸಂಗ್ರಹಿಸಿ ದಾಖಲಿಸುವುದು ಈ ಗ್ರಂಥ ಸಿದ್ಧತೆಯ ಹಿಂದೆ ಇದ್ದ ಆಶಯ.

ಈ ಹಿನ್ನೆಲೆಯಲ್ಲಿ ನಡೆದ ಕಾರ್ಯವನ್ನು, ವ್ಯಕ್ತಿಗಳ ಸಾಧನೆಯನ್ನು ವಸ್ತುನಿಷ್ಠವಾಗಿ, ಒಂದು ಅರ್ಥದಲ್ಲಿ ನಿರ್ಲಿಪ್ತವಾಗಿ ದಾಖಲಿಸಬೇಕು, ಚಿತ್ರಮಾಧ್ಯಮಕ್ಕೆ ಸಂಬಂಧ ಪಡದ ಯಾವುದೇ ವೈಯಕ್ತಿಕ ವಿಚಾರಗಳನ್ನೂ ಚರ್ಚೆಯ ವ್ಯಾಪ್ತಿಗೆ ಒಳಪಡಿಸಬಾರದು. ಚಲನಚಿತ್ರಗಳ ವಿಮರ್ಶೆಗಿಂತ ಅವು ಸಿದ್ಧವಾಗುವುದರ ಹಿಂದೆ ಇದ್ದ ಪ್ರೇರಣೆ-ಪ್ರಯಾಸಗಳ ವಿವರಗಳಿಗೆ ಆದ್ಯತೆ ಇರಬೇಕು. ತಾಂತ್ರಿಕತೆಯ ಬೆಳವಣಿಗೆ, ವ್ಯಾವಹಾರಿಕ ಸಂಗತಿಗಳು, ರಾಷ್ಟ್ರ-ರಾಜ್ಯ ಮಟ್ಟದ ಸಾಮಾಜಿಕ, ರಾಜಕೀಯ ಬದಲಾವಣೆಗಳನ್ನು ಮಾಧ್ಯಮ ಯಾವ ಪ್ರಮಾಣದಲ್ಲಿ ತನ್ನ ತೆಕ್ಕೆಗೆ ತೆಗೆದುಕೊಂಡಿದೆ, ವಸ್ತುವಿನ ಆಯ್ಕೆ-ನಿರೂಪಣಾವಿಧಾನ ಬೇರೆ ಬೇರೆ ಕಾಲಘಟ್ಟದಲ್ಲಿ ಪಡೆದುಕೊಳ್ಳುತ್ತ ಬಂದ ಸ್ವರೂಪಗಳೇನು, ಇವೇ ಮೊದಲಾದ ಅಂಶಗಳನ್ನು

ಕೇಂದ್ರವಾಗಿಟ್ಟುಕೊಂಡು ಇವುಗಳ ನಡುವೆ ಸೃಜನಶೀಲ ಮನಸ್ಸುಗಳು ಹೇಗೆ ಕೆಲಸಮಾಡಿವೆ ಎಂಬುದನ್ನು ಲೇಖನಗಳು ಒಳಗೊಳ್ಳಬೇಕೆಂದು ತೀರ್ಮಾನಿಸಲಾಯಿತು.

ಈ ಹಿನ್ನೆಲೆಯಲ್ಲಿ ಚಿತ್ರಮಾಧ್ಯಮದಲ್ಲಿ ಗಂಭೀರವಾಗಿ ತೊಡಗಿಕೊಂಡು, ಒಂದು ಪ್ರಬಲ ಸಾಂಸ್ಕೃತಿಕ ಅಭಿವ್ಯಕ್ತಿ ಮಾಧ್ಯಮವಾಗಿ ಅದನ್ನು ರೂಪಿಸುವಲ್ಲಿ ಶ್ರಮಿಸಿದ ಹಿರಿಯ ಪತ್ರಕರ್ತರೊಂದಿಗೆ ಚರ್ಚಿಸಲಾಯಿತು. ಅವರುಗಳ ಅನುಮೋದನೆ-ಸಲಹೆಯಂತೆ ಸಂಪಾದಕರು, ಸಂಪಾದಕ ಮಂಡಳಿಗಳನ್ನು ರಚಿಸಲಾಯಿತು. ಚಲನಚಿತ್ರ ವಾಣಿಜ್ಯ ಮಂಡಳಿಯ ಸೂಚನೆಯಂತೆ ಉದ್ಯಮದ ಪರವಾಗಿ ಚಿತ್ರೋದ್ಯಮದ ಹಿರಿಯ ನಿರ್ಮಾಪಕರು, ಒಂದೊಮ್ಮೆ ಚಲನಚಿತ್ರ ಪತ್ರಕರ್ತರೂ ಆಗಿದ್ದ ಆರ್. ಲಕ್ಷ್ಮಣ್ ಅವರನ್ನು ಸಂಪಾದಕ ಮಂಡಳಿಯಲ್ಲಿದ್ದು ಮಾರ್ಗದರ್ಶನ ಮಾಡಲು ಒಪ್ಪಿಸಲಾಯಿತು. ವಿಷಯ-ಲೇಖನಗಳನ್ನು ವಿಂಗಡಿಸಿಕೊಂಡು ಟಿಪ್ಪಣಿ ಮಾಡುತ್ತ ಹೋದಂತೆ ಗ್ರಂಥದ ಸ್ಥೂಲ ರೂಪವೊಂದು ಆಕಾರ ಪಡೆಯತೊಡಗಿತು.

ಚಲನಚಿತ್ರ ಅಥವಾ ಚಲಿಸುವ ಚಿತ್ರ ಅಂದರೇನು; ಈ ಆವಿಷ್ಕಾರದ ಹಿಂದಿನ ಕ್ರತುಶಕ್ತಿ ಪಸೆಂಥಮು, ಭಾರತಕ್ಕೆ, ಅಲ್ಲಿಂದ ಪ್ರಾದೇಶಿಕ ನೆಲೆಗಳಿಗೆ ಈ ಮಾಧ್ಯಮ ಹೇಗೆ ಹರಿದು ಬಂತು, ಕನ್ನಡದಲ್ಲಿ ಈ ಮಾಧ್ಯಮದ ಸ್ವೀಕಾರ ಕುರಿತು ಆಯಾ ಸಂದರ್ಭ, ಜನಸಂಖ್ಯೆ, ವಲಸಿಗರು, ಪರಿಸರ, ಇನ್ನಿತರ ಉದ್ಯಮಗಳು, ನೆರೆ ರಾಜ್ಯಗಳಲ್ಲಿ ಚಿತ್ರರಂಗ ಮೊದಲಾದ ಹತ್ತಾರು ಅಂಶಗಳನ್ನು ಪರಿಗಣಿಸಿ ಹೋಲಿಸುತ್ತ ಒಂದು ತಳಹದಿಯಾಗುವಂಥ ಲೇಖನವಾಗಿ 'ಪ್ರವೇಶ' ಲೇಖನವನ್ನು ರೂಪಿಸಿಕೊಳ್ಳಲಾಯಿತು.

ಕರ್ನಾಟಕದ ಹವಾಮಾನ ಅನೇಕರನ್ನು ಆಕರ್ಷಿಸಿದೆ. ಹಾಗೇ ಮೂಕೀ ಚಿತ್ರಗಳ ನಿರ್ಮಾಪಕರು ಕರ್ನಾಟಕವನ್ನು ಚಿತ್ರ ತಯಾರಿಕಾ ಕೇಂದ್ರ ಮಾಡಿಕೊಂಡರು. ಅಲ್ಲಿ ನಮ್ಮ ಕಲಾವಿದರೂ ತೊಡಗಿಕೊಂಡರು; ನಮ್ಮ ನಿರ್ಮಾಪಕರೂ ಬಂದರು. ಈ ಎಲ್ಲ ವಿವರಗಳ ಜೊತೆಗೆ ಮೂಕಿ ಚಿತ್ರಗಳು ಹೇಗೆ ತಯಾರಾದವು, ಹೇಗೆ ಪ್ರದರ್ಶಿತಗೊಂಡವು ಎಂಬೆಲ್ಲ ಅಂಶಗಳಿರುವಂಥ 'ಮೂಕಿ ಚಿತ್ರ ಜಗತ್ತು' ಲೇಖನವನ್ನು ರೂಪಿಸಿಕೊಳ್ಳಲಾಯಿತು.

ವಾಕ್ಚಿತ್ರದ ಆವಿಷ್ಕಾರ ೨೦ನೇ ಶತಮಾನದ ವಿಸ್ಮಯಾದ್ಭುತ. ಹಂತಹಂತವಾಗಿ ರೂಪುಗೊಳ್ಳುತ್ತಲೇ ತನ್ನ ಅಸ್ತಿತ್ವವನ್ನು ಸ್ಥಾಪಿಸುವ ಅಗತ್ಯವಿತ್ತು. ಕನ್ನಡ ಸಂದರ್ಭವಂತೂ ನೆರೆಯವರಿಗೆ ಹೋಲಿಸಿದರೆ ಅನಾಥವೂ ವರಪುಟ್ಟವೂ ಆಗುತ್ತಲೇ ತನ್ನ ನೆಲದ ಸಂಸ್ಕೃತಿ-ವೈಶಿಷ್ಟ್ಯಗಳನ್ನು ಉಳಿಸಿಕೊಳ್ಳಬೇಕಾಗಿತ್ತು. ಅದೊಂದು ಹೋರಾಟ. ಇಂಥ ಹೊತ್ತಿನಲ್ಲಿ ಮೊದಲ ೧೫ ವರ್ಷಗಳಲ್ಲಿ ಕೇವಲ ೨೭ ಚಿತ್ರಗಳು ಸಿದ್ಧವಾದವು. ಆದರೆ ಹೊಸ ಅಭಿವ್ಯಕ್ತಿ ಮಾಧ್ಯಮವೊಂದು ಅರಳಿ, ಆಪ್ತವಾಗುತ್ತಿರುವಾಗಲೇ ಎರಡನೇ ಮಹಾಯುದ್ಧ, ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮೊದಲಾದ ಹತ್ತಾರು ತಲ್ಲಣಗಳನ್ನು ಉಡಿಯಲ್ಲಿಟ್ಟುಕೊಳ್ಳಬೇಕಾಗಿತ್ತು. ಆ ಬೇಯುವ ಬಗೆ, ಧರಿಸುವ ತಾಳ್ಮೆ, ಸಿದ್ಧಿಯ ತಹತಹಿಕೆ, ಸೃಜನಶೀಲ ಅಭಿವ್ಯಕ್ತಿಗಾಗಿ ತುಡಿಯುವ ಮನಸ್ಸುಗಳೇ ಚಿತ್ರ ಮಾಧ್ಯಮ ಒಂದು ಉದ್ಯಮವಾಗಲು ನೆರವಿಗೆ ಬಂದಿವೆ; ಎಲ್ಲ ಸಮಸ್ಯೆಗಳನ್ನೂ ನುಂಗಿಕೊಳ್ಳುತ್ತ ತಡೆಯೊಡ್ಡುಗಳನ್ನೇ ಚಿಮ್ಮುಹಲಗೆಯಾಗಿಸಿಕೊಂಡು ಆಕಾರ ಪಡೆದ ಬಗೆಯನ್ನು ೧೯೩೪ ರಿಂದ ೫೦ರ ವರೆಗಿನ ಅವಧಿಯಲ್ಲಿ ಗುರುತಿಸಲಾಗಿದೆ. ಅಲ್ಲಿಂದ ಮುಂದೆ ೨೦೦೦ನೇ ಇಸವಿಯವರೆಗೆ ಒಂದೊಂದು ದಶಕವಾಗಿ ವಿಭಾಗಿಸಿಕೊಂಡು ಐದು ಲೇಖನಗಳ ಮಿತಿಯಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಸಾಧ್ಯವಾದಷ್ಟೂ ಪ್ರತಿಯೊಂದು ಪ್ರಯತ್ನವನ್ನೂ ದಾಖಲಿಸುವ, ಧರಿಸುವ ಶಕ್ತಿ ಇದ್ದ ಕಡೆ ಕೊಂಚ ವಿಶ್ಲೇಷಣೆಯನ್ನೂ ನಿರ್ವಹಿಸುವ ಹಾಗೂ ಆಯಾ ಸಂದರ್ಭದ ರಾಷ್ಟ್ರ-ರಾಜ್ಯ ಮಟ್ಟದ ಮುಖ್ಯ ಘಟನೆಗಳ ಹಿನ್ನೆಲೆಯಲ್ಲಿ ಸಂಗತಿಗಳನ್ನು ನೋಡುವ ಪ್ರಯತ್ನ ಮಾಡಲಾಗಿದೆ. ಇದಿಷ್ಟು ೪೯೭ ಪುಟಗಳ ಚಲನಚಿತ್ರ ಇತಿಹಾಸದಲ್ಲಿ ಅಡಕಗೊಳಿಸಲಾದ ವಿಷಯಗಳು.

ಹಲವು ಕಲೆಗಳ ಸಹಯೋಗದೊಂದಿಗೆ ಒಂದು ಆಕಾರ ಪಡೆದುಕೊಳ್ಳುತ್ತದೆ ಸಿನಿಮಾ. ಅದು ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡ, ಅವಕ್ಕವೇ ಸ್ವತಂತ್ರವಾದರೂ ಸಿನಿಮಾದಲ್ಲಿ ಒಂದು ಪೂರಕ ಅಂಶವಾಗಿ ಕೆಲಸ ಮಾಡುವ ಹಲವು ಕಲೆಗಳಿವೆ. ಚಿತ್ರಮಾಧ್ಯಮದ ಬೆಳವಣಿಗೆಯ ಜೊತೆಜೊತೆಗೇ ಈ ಕಲೆಗಳು ಕೂಡಾ ಸಿನಿಮಾ ಮಾಧ್ಯಮದ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಳ್ಳುತ್ತ ತಮ್ಮದೇ ಆದ ಇತಿಹಾಸವನ್ನು ಕಟ್ಟಿಕೊಳ್ಳುತ್ತಿರುತ್ತವೆ. ಇಂಥ ಕಲೆಗಳು ಹಾಗೂ ತಾಂತ್ರಿಕತೆ, ಅವುಗಳ ಸಾಧ್ಯತೆ-ಬೆಳವಣಿಗೆ-ಹೊಸ ಆವಿಷ್ಕಾರಗಳೂ ಸೃಜನಶೀಲವಾಗಿ ಬೆಳೆದು ಬರುತ್ತಿವೆ. ಇವನ್ನೆಲ್ಲ ಪ್ರತ್ಯೇಕವಾಗಿ ಗುರುತಿಸುವುದು ಮತ್ತು ಈ ಕುರಿತಂತೆ ಇರುವ ಶಿಕ್ಷಣದ ಸ್ವರೂಪ, ಚಲನಚಿತ್ರ ವಾಣಿಜ್ಯ ಮಂಡಳಿ, ಸರ್ಕಾರದ ನೆರವು-ನಿಲುವು, ಚಿತ್ರಮಂದಿರಗಳು, ಸೆನ್ಸಾರ್, ಒಂದು ಪರ್ಯಾಯ ವ್ಯವಸ್ಥೆಯಂತಿರುವ ಅರ್ಥಸಂಗತಿಗಳೇ ಮೊದಲಾದವು ಅವಕ್ಕವೇ ಒಂದೊಂದು ಪ್ರತ್ಯೇಕ ಗ್ರಂಥಕ್ಕಾಗುವಷ್ಟು ಗಂಭೀರವಾದ ವಿಷಯಗಳು. ಇವುಗಳನ್ನು ಕುರಿತು ಸ್ಥೂಲವಾಗಿಯಾದರೂ ವಿವರಿಸುವ ಪ್ರಯತ್ನವಾಗಿ ಇಪ್ಪತ್ತೈದು ಬಿಡಿ ಲೇಖನಗಳನ್ನಾಗಿ ವಿಂಗಡಿಸಿಕೊಂಡು ಲೇಖನಗಳನ್ನು ಸಿದ್ಧಪಡಿಸಲಾಯಿತು. ಒಂದೊಂದು ಕ್ಷೇತ್ರದಲ್ಲಿ ಪ್ರತಿರೋಧಗಳ ನಡುವೆ ಮನೆ-ಮಠ ಮಾರಿಕೊಂಡಾದರೂ ಸೈ ಎಂದು ಸುಗ್ಗಿ ಮಾಧ್ಯಮಕ್ಕೆ ದುಡಿದ ಅನೇಕ ಮಹನೀಯರಿದ್ದಾರೆ. ಹಿರಿಯ-ಕಿರಿಯ ಎಂಬ ಭೇದ ಮಾಡದೆ ಸಾಧ್ಯವಾದಷ್ಟೂ ಜನರ ಕಿರುಪರಿಚಯವನ್ನು ಕೊಡುವ ಪ್ರಯತ್ನ 'ಪ್ರತಿಭಾ ಸಂಪದ'. ಇದುವರೆಗೆ ತೆರೆಕಂಡ ಚಿತ್ರಗಳು, ಆ ಚಿತ್ರಗಳಲ್ಲಿ ವಿವಿಧ ರೀತಿಯಲ್ಲಿ ತೊಡಗಿಕೊಂಡ ಪ್ರತಿಭಾವಂತರನ್ನು ಗುರುತಿಸುವ, ಚಿತ್ರದ ವಿಶೇಷ, ಕಥಾ ಸಾರಾಂಶವನ್ನು ಒಳಗೊಂಡಂತೆ ಆಯ್ದ ೨೮ ಶಾಖೆಗಳಲ್ಲಿ ವಿವರಗಳನ್ನು ಕೊಡುವ ಪ್ರಯತ್ನ 'ಚಿತ್ರ ಸಂಪದ' ಮಾಲೆಯದು. ಕೆಲವು ಮುಖ್ಯ ಸಂಗತಿಗಳನ್ನು 'ಅನುಬಂಧ'ಗಳಲ್ಲಿ ಕೊಡಲಾಗಿದೆ. ಗ್ರಂಥದ ಗಾತ್ರದಿಂದಾಗಿ ಓದುಗರಿಗೆ ತೊಂದರೆಯಾಗದಿರಲೆಂದು ಎರಡು ಸಂಪುಟಗಳಲ್ಲಿ ವಿಭಾಗಿಸಿಕೊಂಡು. ಒಂದು ಮತ್ತೊಂದಕ್ಕೆ ಪೂರಕ ಹಾಗೂ ಪೂರ್ಣವೂ ಆಗಿರುವಂತೆ ಲೇಖನಗಳನ್ನು ಎರಡೂ ಸಂಪುಟಗಳಲ್ಲಿ ಹಂಚಿಕೊಳ್ಳಲಾಗಿದೆ.

ಇತಿಹಾಸದ ಪುಟಗಳಿಗೆ ಮಾತ್ರ ಪದ ಸೂಚಿಯನ್ನು ಕೊಟ್ಟು, ಉಳಿದ ಲೇಖನಗಳು ಆಯಾ ವಿಷಯದ ತಲೆಬರಹದಡಿ ಬರುವುದರಿಂದ ಸೂಚಿಯ ಅಗತ್ಯವಿಲ್ಲವೆಂದು ಕೈಬಿಡಲಾಯಿತು. ಇಲ್ಲಿ ಪುಟಗಳ ಮಿತಿಯೂ ಒಂದು ಮುಖ್ಯ ಕಾರಣವಾಗಿತ್ತು.

ಆಯಾ ವರ್ಷ ತೆರೆಕಂಡ ಒಟ್ಟು ಚಿತ್ರಗಳು, ಅವುಗಳಲ್ಲಿ ಎಷ್ಟೇ ಮುಖ್ಯ-ಅಮುಖ್ಯ ಅನ್ನಿಸಿದರೂ ಚಿತ್ರಗಳಿಗಾಗಿ ಪ್ರಾಮಾಣಿಕವಾಗಿ ಶ್ರಮಿಸಿದವರನ್ನು ಗುರುತಿಸಬೇಕೆಂಬ ಕಾರಣಕ್ಕಾಗಿ ಸಾಧ್ಯವಾದಷ್ಟೂ ಎಲ್ಲ ಚಿತ್ರಗಳ ಬಗೆಗೂ ಪ್ರಸ್ತಾಪವಿರಬೇಕು, ಹೆಚ್ಚು ಮಾತುಗಳನ್ನು ಧರಿಸಬಲ್ಲ ಶಕ್ತ ಚಿತ್ರಗಳಾದಾಗ ಸಹಜವಾಗಿಯೇ ನಾಲ್ಕು ಮಾತು ಹೇಳುವುದು ಅಗತ್ಯ. ಒಟ್ಟಾರೆ ಚಲನಚಿತ್ರ ಇತಿಹಾಸದಲ್ಲಿ ಸೇರಬೇಕೆಂದು ಭಾವಿಸುವ ಎಲ್ಲ ಘಟನೆಗಳು, ಯಂತ್ರೋಪಕರಣಗಳು, ಸರ್ಕಾರ ಮತ್ತು ಆಯಾ ಸಂದರ್ಭದ ಸಾಮಾಜಿಕ ರಾಜಕೀಯ ಪಲ್ಲಟಗಳು, ಅವು ಎಷ್ಟರಮಟ್ಟಿಗೆ ಚಿತ್ರಗಳಲ್ಲಿ ಅಭಿನೀತಗೊಂಡಿವೆ ಮುಂತಾದ ಹತ್ತಾರು ಅಂಶಗಳನ್ನು ದಶಕಗಳ ಲೇಖನದಲ್ಲಿ ದಾಖಲಿಸಲೇ ಬೇಕೆಂದು ನಿರ್ಧರಿಸಿದ್ದರಿಂದ ಈ ಲೇಖನಗಳನ್ನು ಸಂಪಾದಕ ಮಂಡಳಿಯೇ ಸಿದ್ಧಪಡಿಸಬೇಕೆಂದೂ ಲೇಖನಗಳು ಸಿದ್ಧವಾದ ಮೇಲೆ ಅವುಗಳಲ್ಲಿ ಏಕಸೂತ್ರತೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ಸಂಪಾದಕ ಮಂಡಳಿಯಲ್ಲೇ ಒಬ್ಬರು ಅವನ್ನು ಪುನಾರಚಿಸಬೇಕೆಂದೂ ತೀರ್ಮಾನಿಸಿದೆವು. ಬಿಡಿಲೇಖನಗಳಿಗೆ ಸಂಬಂಧಿಸಿದಂತೆ ಅವುಗಳಲ್ಲಿ ಪ್ರಸ್ತಾಪವಾಗಬೇಕೆಂದು ಬಯಸುವ ಅಂಶಗಳನ್ನು ಟಿಪ್ಪಣಿ ರೂಪದಲ್ಲಿ ಸಿದ್ಧಪಡಿಸಿ ಆ ಲೇಖನಗಳಿಗೆ ಅವರ ಅನುಭವ, ಅಧ್ಯಯನದ ಜೊತೆಗೇ ಗಮನಿಸಬಹುದಾದ ಗ್ರಂಥಗಳು, ಲೇಖನಗಳು ಹಾಗೂ ಸಂದರ್ಶಿಸಬಹುದಾದ ಮಹನೀಯರನ್ನೂ ಸೂಚಿಸಿ ವಿಷಯತಜ್ಞರಿಗೆ ಲೇಖನ ರಚಿಸಿಕೊಡಲು ಕೋರಲಾಯಿತು. ಬಹುತೇಕ ಪತ್ರಕರ್ತರಿಗೇ ಈ ಲೇಖನಗಳನ್ನು ರಚಿಸಲು ಪ್ರಾರ್ಥಿಸಿದ್ದರೂ ಕೆಲವು ತಾಂತ್ರಿಕ ವಿಷಯಗಳ ಲೇಖನಗಳಿಗಾಗಿ ಆಯಾ ವಿಭಾಗದಲ್ಲಿ ಪರಿಣತರಾದವರನ್ನು ಕೋರಲಾಯಿತು.

ಏನೆಷ್ಟೇ ಅಧ್ಯಯನ-ಅಭ್ಯಾಸ ಮಾಡಿ ಸಿದ್ಧವಾದರೂ ಆ ಕ್ಷೇತ್ರದಲ್ಲಿ ದುಡಿಯುತ್ತಲೇ ಕಲೆಗೆ ಕಳಸವಿಟ್ಟ ಮಹನೀಯರ ನೆನಪುಗಳು 'ನಿಜ'ವನ್ನು ಹೊರಗೆಡವುತ್ತವೆ ಎಂಬ ಕಾರಣಕ್ಕಾಗಿ ವಿಷಯ ತಜ್ಞರೂ ಹಿರಿಯರೂ ಇರುವ ಒಂದು ಸಮಿತಿ ರಚಿಸಿ ಸಿದ್ಧವಾದ ಲೇಖನಗಳನ್ನು ಓದಿ ಸಲಹೆ-ಸೂಚನೆ ನೀಡಬೇಕೆಂದು ಕೋರಿದೆವು. ಚಿತ್ರೋದ್ಯಮದ ಹಿರಿಯರು, ನಿರ್ದೇಶಕರು, ತಂತ್ರಜ್ಞರು, ವಿಮರ್ಶಕರುಗಳನ್ನೊಳಗೊಂಡ ಹನ್ನೆರಡು ಮಂದಿ ಈ ಸಮಿತಿಯಲ್ಲಿದ್ದರು. ಸಿದ್ಧವಾದ ಲೇಖನಗಳನ್ನು ಈ ತಜ್ಞರ ಸಮಿತಿಯು ಪರಿಶೀಲಿಸಿ ಸೂಕ್ತ ತಿದ್ದುಪಡಿ ಮಾಡಿ, ಕೆಲವೊಮ್ಮೆ ನಮ್ಮನ್ನೇ ಕರೆಸಿಕೊಂಡು - ಕಚೇರಿಗೇ ಬಂದು - ಚರ್ಚೆ ಮಾಡಿತು. ಅವರು ಸೂಚಿಸಿದ ಅಂಶಗಳನ್ನು ಹಿರಿಯರಾದ ಆರ್. ಲಕ್ಷ್ಮಣ್, ಕೆ.ವಿ. ಗುಪ್ತ ಅವರ ಗಮನಕ್ಕೆ ತಂದು ಖಚಿತಪಡಿಸಿಕೊಂಡ ಮೇಲೆ ಲೇಖನದಲ್ಲಿ ಸೇರ್ಪಡೆ ಮಾಡಲಾಗಿದೆ. ಇದು ಒಂದರ್ಥದಲ್ಲಿ ಸಂಪಾದಕರ ಆತಂಕವನ್ನು ಕಡಿಮೆ ಮಾಡಿತು ಮತ್ತು ಲೇಖನಗಳಲ್ಲಿ ಮಂಡಿತವಾದ ವಿಷಯಗಳಿಗೆ ಅಧಿಕೃತತೆಯನ್ನು ತಂದುಕೊಟ್ಟಿತು.

ಇಷ್ಟೆಲ್ಲ ಸಿದ್ಧತೆ ಇದ್ದಾಗಲೂ ಒಂದೆರಡು ವಿಷಯಗಳ ಬಗ್ಗೆ ನಮ್ಮಲ್ಲಿ ಸಂದೇಹಗಳಿದ್ದವು. ಮುಖ್ಯವಾಗಿ 'ನಿರ್ದೇಶಕ' - 'ನಿರ್ಮಾಪಕ' ಶೀರ್ಷಿಕೆಯಡಿ ಲೇಖನಗಳಿರಬೇಕೇ ಎಂಬುದು ಜಿಜ್ಞಾಸೆಯ ಸಂಗತಿಯಾಗಿತ್ತು. ಪ್ರತಿಯೊಂದು ಕ್ರಿಯೆಯ ಹಿಂದೆ ನಿರ್ದೇಶಕ-ನಿರ್ಮಾಪಕ ಇರುತ್ತಾರೆ. ಅವರದು ಪ್ರತ್ಯೇಕವಾಗಿಡುವಂಥ ಬಂಧವಲ್ಲ. ಇಲ್ಲಿಯ ಸೃಷ್ಟಿಕ್ರಿಯೆಗೆ, ಅರ್ಥ ಸಂಗತಿಗೆಲ್ಲ ಅವರೇ ಸೂತ್ರಧಾರರು. ಅದ್ದರಿಂದ ಪ್ರತ್ಯೇಕಿಸಿ ಲೇಖನ ಬರೆಯುವ ಅಗತ್ಯವಿಲ್ಲ ಎಂದು ಹಿರಿಯರು ಅಭಿಪ್ರಾಯ ಪಟ್ಟರು. ಬೇರೆ ಬೇರೆ ಲೇಖನಗಳಲ್ಲಿ ಮುಖ್ಯವಾಗಿ ಇತಿಹಾಸ ವಿಭಾಗ, ಸಾಹಿತ್ಯ-ಸಂಕಲನ ಮೊದಲಾದ ಲೇಖನಗಳಲ್ಲಿ ನಿರ್ಮಾಪಕ, ನಿರ್ದೇಶಕರುಗಳ ಶೈಲಿ ಕುರಿತು ವಿಸ್ತಾರವಾಗಿ ಪ್ರಸ್ತಾಪ ಮಾಡಲಾಗಿದೆ.

ಇದೇ ರೀತಿಯಲ್ಲಿ 'ಹೊಸ ಅಲೆ' ಸಿನಿಮಾ ಕುರಿತಂತೆಯೂ ಚರ್ಚೆಯಾಯಿತು. ಒಂದು ಕಾಲಘಟ್ಟದಲ್ಲಿ ಗಂಭೀರವಾದ ಕೆಲಸಗಳಾಗಿದ್ದರೂ ಈ ಬಗೆಯ ಚಿತ್ರಗಳಿಗಿದ್ದ ಹಲವು ಹೆಸರುಗಳ ಗೊಂದಲ, ಕಾಲಕಾಲಕ್ಕೆ ಬದಲಾಗುತ್ತ ಒಂದರೊಳಗೊಂದು ಮಿಳಿತವಾಗಿ ಹೋದ ಬಗೆ ಎಲ್ಲವನ್ನು ಗಮನಿಸುವಾಗ ಈ ಬಗೆಯ ಪ್ರತ್ಯೇಕ ವಿಭಜನೆಯೇ ಸಲ್ಲ ಎಂಬ ತೀರ್ಮಾನಕ್ಕೆ ಬರಬೇಕಾಯಿತು. ಅದರೆ ಮುನ್ನುಡಿ, ದಶಕಗಳ ಲೇಖನ, ಸಾಹಿತ್ಯ ಲೇಖನಗಳಲ್ಲಿ ಆ ಬಗ್ಗೆ ಹೆಚ್ಚಿನ ಚರ್ಚೆಗೆ ಅವಕಾಶ ಕಲ್ಪಿಸಲಾಯಿತು.

ಪೂರ್ಣ ವರ್ಣದಲ್ಲಿ ಮುದ್ರಿಸುವ ಅಗತ್ಯವಿಲ್ಲ ಅನ್ನಿಸಿದ್ದರಿಂದ ಆಯಾ ದಶಕದ ಗಮನಾರ್ಹ ಚಿತ್ರಗಳ ಕೆಲವು ಸ್ಥಿರ ಚಿತ್ರಗಳನ್ನು ಪ್ರತ್ಯೇಕವಾಗಿ ೬೪ ಪುಟಗಳಲ್ಲಿ ವಿಂಗಡಿಸಿ ಸಂದರ್ಭಾನುಸಾರ ಹೊಂದಿಸಲಾಗಿದೆ. ಮುಖಪುಟದಲ್ಲಿ ಕೂಡಾ ಸಾಧ್ಯವಾದಷ್ಟು ಮೈಲಿಗಲ್ಲೆನಿಸಿದಂಥ ಚಿತ್ರಗಳ ಸ್ಥಿರ ಚಿತ್ರಗಳನ್ನೇ ಬಳಸಿಕೊಳ್ಳಲಾಗಿದೆ. ಚಿತ್ರರಂಗದಲ್ಲಿ ನಿರ್ಮಾಪಕನಿಂದ ನೀರು ಕೊಡುವ ಹುಡುಗನವರೆಗೆ ಎಲ್ಲರೂ ಮುಖ್ಯರಾದ್ದರಿಂದ ವ್ಯಕ್ತಿ ವೈಭವವೆನಿಸಿ ತರತಮಭಾವ ಬರಬಾರದೆಂದು ಈ ತೀರ್ಮಾನ ತೆಗೆದುಕೊಳ್ಳಲಾಗಿದೆ. ರಕ್ಷಾಪುಟಗಳ ಒಳಪುಟಗಳಲ್ಲಿ ವಿಶೇಷ-ಅಪರೂಪ ಅನ್ನಿಸುವಂಥ ಆಯ್ದ ಕೆಲವು ಚಿತ್ರಗಳನ್ನು ಬಳಸಿದ್ದೇವೆ. ಇಷ್ಟೆಲ್ಲ ಮಾಡಿದಾಗಲೂ ಕಾರ್ಮಿಕ ವಿಭಾಗದ ಹಗಲಿರುಳೆನ್ನದೆ ದುಡಿಯುತ್ತಿರುವ - ಹೆಸರಾಗದ ಅಸಂಖ್ಯಾತ ಸಂಗಾತಿಗಳನ್ನು ಗುರುತಿಸಲು ಆಗಲಿಲ್ಲವೆಂಬ ವ್ಯಥೆಯಿದೆ. ಅಂಥ ಅಂಶಗಳನ್ನು ವಿವರವಾಗಿ ದಾಖಲಿಸಲು ಸಾಧ್ಯವಾಗುವಂಥ ಅವಕಾಶಗಳು ಬರಲಿ.ಇವಿಷ್ಟು ನಾವು ರೂಪಿಸಿಕೊಂಡ ಗ್ರಂಥ ಸ್ವರೂಪ, ವಿಷಯ ನಿರೂಪಿಸಿರುವ ವಿಧಾನವಾದರೆ ಇವುಗಳ ಸಿದ್ಧತೆಯಲ್ಲಿ ಎದುರಾದ ತೊಡಕುಗಳು, ಮಾಹಿತಿ ಸಂಗ್ರಹಿಸುವಾಗಿನ ಸಮಸ್ಯೆಗಳು, ಒಪ್ಪಂದಗಳಿಗೆ ಬರಬೇಕಾದ ಅನಿವಾರ್ಯಗಳದ್ದು ಮತ್ತೊಂದೇ ಕಥೆ.

ಉದ್ಯಮದ ಹಿರಿಯರು, ತಂತ್ರಜ್ಞರು, ಚಿಂತಕರುಗಳನ್ನೊಳಗೊಂಡ ಮೂರು ನಾಲ್ಕು ಸಭೆ ನಡೆಸಿ ಹಲವು ವಿಷಯಗಳನ್ನು ಮುಂದಿಟ್ಟು ಚರ್ಚೆ, ಹೋಲಿಕೆ, ವ್ಯಾಖ್ಯಾನಗಳ ಮೂಲಕ ಹೂತು ಹೋಗಿದ್ದ ಅನೇಕ ವಿಷಯಗಳು ಹೊರಬರುವಂತೆ ಮಾಡಿ ಗ್ರಂಥಕ್ಕೆ ಅಮೂಲ್ಯ ವಿಷಯಗಳನ್ನು ಒದಗಿಸಿದವರು ಈ ಚರ್ಚೆಯ ನೇತೃತ್ವ ವಹಿಸಿದ್ದ ಗಿರೀಶ್ ಕಾಸರವಳ್ಳಿ.

ಅಗತ್ಯ ಬಿದ್ದಾಗೆಲ್ಲ ಖುದ್ದಾಗಿ ಬಂದು ಚರ್ಚೆ, ಸಂವಾದಗಳನ್ನು ನಿರ್ವಹಿಸಿ ಸಂದೇಹಗಳನ್ನು ಪರಿಹರಿಸಿದ ಹಿರಿಯ ನಿರ್ದೇಶಕರು, ಛಾಯಾಗ್ರಾಹಕರು, ಚಲನಚಿತ್ರ ಸಾಹಿತ್ಯ-ಸಂಗೀತ ತಜ್ಞರು ನಮಗೆ ಬಹಳಷ್ಟು ಮಾಹಿತಿ ಒದಗಿಸಿದ್ದಾರೆ. ಇಷ್ಟಾದರೂ ನೆನಪುಗಳು ಮಸುಕಾಗುತ್ತಿವೆ, ಅನೇಕ ವಿರೋಧಾಭಾಸಗಳಿವೆ, ಒಂದೇ ಕೆಲಸಕ್ಕೆ ಹಲವರು ವಾರಸುದಾರರೆನ್ನುತ್ತಿದ್ದಾರೆ ಅನ್ನಿಸಿದಾಗೆಲ್ಲ ವಿಷಯಗಳನ್ನು ಮತ್ತೆ ಮತ್ತೆ ಒರೆಗೆ ಹಚ್ಚಬೇಕಾಗಿ ಬಂದಿತು. ಬಹುತೇಕ ನಮಗೆ ಆಧಾರವಾದದ್ದು ಹಳೆಯ ಪತ್ರಿಕೆಗಳು-ಹಿರಿಯರ ಸಂದರ್ಶನಗಳು. ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ದೊರೆತ ೧೮೦೦ ರಿಂದ ೧೯೩೩ರವರೆಗಿನ ಬ್ರಿಟಿಷರು ನಿರ್ವಹಿಸುತ್ತಿದ್ದ ವೃತ್ತಾಂತ ಪತ್ರಿಕಾ, ರಂಗಭೂಮಿ ಪತ್ರಿಕೆ, ಕತೆಗಾರ, ಕಥಾವಳಿ ಮತ್ತು ವಾಕ್ಚಿತ್ರ, ಚಿತ್ರಸಮಾಚಾರ, ಚಿತ್ರಗುಪ್ತ, ಗೋಕುಲ ಮೊದಲಾದ ಪತ್ರಿಕೆಗಳು ಬಹಳಷ್ಟು ನೆರವಿಗೆ ಬಂದಿವೆ. ಕನ್ನಡ ಚಿತ್ರಗಳು ಮದರಾಸಿನಲ್ಲಿ ಕೆಲಸವಾಗುತ್ತಿದ್ದಾಗ ಚಲನಚಿತ್ರ ಪತ್ರಿಕಾಪ್ರಕಟಣೆಯೂ ಮೌನವಾದ ಒಂದು ಅವಧಿಯ ಮಾಹಿತಿಯನ್ನಂತೂ ಸಂಗ್ರಹಿಸುವುದು ತುಂಬಾ ಪ್ರಯಾಸವೆನ್ನಿಸಿತು. ಆ ದಿನಗಳಲ್ಲಿ ಉದ್ಯಮದಲ್ಲಿ ತೊಡಗಿದ್ದ ಹಲವರು ಈಗ ಇಲ್ಲ; ಇರುವ ಕೆಲವರಿಗೆ ಎಲ್ಲವೂ ನೆನಪಿಲ್ಲ. ಇಂಥ ಕಠಿಣತಮ ಪರೀಕ್ಷೆಗಳನ್ನು ದಾಟಿಕೊಂಡು ಬರವಣಿಗೆಗೆ ಸಿದ್ಧವಾಗುವುದು ಎಂದರೆ ಬಹಳಷ್ಟು ಕಾಲಾವಧಿಯನ್ನು ಬೇಡುವುದು ಎಂದೇ ಅರ್ಥ. ಹೀಗಾಗಿ ಲೇಖನಗಳು ಗೊತ್ತಾದ ಅವಧಿಯೊಳಗೆ ಸಿಗಲಿಲ್ಲ. ಅವು ಸಿಕ್ಕಮೇಲೂ ಮತ್ತೆಮತ್ತೆ ಲಭ್ಯವಾಗುತ್ತಿದ್ದ ಹೊಸ ಮಾಹಿತಿಗಳನ್ನು ತುಂಬಿಕೊಳ್ಳುತ್ತಲೇ ಹೋಗಬೇಕಾದ ಅನಿವಾರ್ಯಗಳು. ಈ ಚಟುವಟಿಕೆಯ ನಡುವೆ ಯಾರಾದರೊಬ್ಬರು ಲೇಖನಗಳನ್ನು ಪುನಾರಚಿಸುವ ಯೋಜನೆ ಕಾರ್ಯಗತವಾಗಲಿಲ್ಲ. ಏಕರೂಪತೆಗಿಂತ ಮಿಗಿಲಾಗಿ ಮಾಹಿತಿಗಳ ಅಳವಡಿಕೆ ಮತ್ತು ಸರಳ ನಿರೂಪಣೆಗೆ ಆದ್ಯತೆ ಕೊಡಲಾಯಿತು. ಕೆಲವು ಕಡೆ ವಿಷಯಗಳ ಪುನರಾವರ್ತನೆ ಅನಿವಾರ್ಯವಾಯಿತು. ಆದರೂ ಲೇಖನಗಳನ್ನು ಓದಿದ ವಿಷಯತಜ್ಞರ ಸಮಿತಿಯ ಸಕಾರಾತ್ಮಕ ಪ್ರತಿಕ್ರಿಯೆ ಆ ಮಟ್ಟಿಗೆ ಸಫಲರಾಗಿದ್ದೇವೆ ಎಂಬ ಸಮಾಧಾನ ಕೊಟ್ಟಿದೆ.

ಲೇಖನಗಳಿಗೂ ಮೊದಲು ಎಲ್ಲ ಚಿತ್ರಗಳ ಬಗ್ಗೆ ಸಮಗ್ರ ಮಾಹಿತಿ ದೊರಕುವ 'ಚಿತ್ರಸಂಪದ' ಸಿದ್ಧವಾಗಬೇಕಿತ್ತು. ನಾವು ಎಷ್ಟೇ ಸಾಹಸ ಮಾಡಿದರೂ ಆ ಕಾರ್ಯ ಸಾಧಿತವಾಗಲಿಲ್ಲ. ದೀರ್ಘಕಾಲಾವಧಿ ತೆಗೆದುಕೊಂಡರೂ ಕೊನೆತನಕ ಆ ವಿಭಾಗದ ಹೊಟ್ಟೆ ತುಂಬಿಸಲು ಆಗಲಿಲ್ಲ. ಡಬ್ ಆದ ಚಿತ್ರಗಳು, ಲೈಂಗಿಕ ವಿಜ್ಞಾನವನ್ನು ಬೋಧಿಸುವ ಚಿತ್ರಗಳನ್ನು ಕೈಬಿಟ್ಟು ತೆರೆಕಂಡ ಎಲ್ಲ ಚಿತ್ರಗಳ ಬಗ್ಗೆ ಮಾಹಿತಿ ಹೊಂದಿಸುವ ಪ್ರಯತ್ನ ಮಾಡಿದೆವು. ಮದರಾಸು, ಬೆಂಗಳೂರು ಸೆನ್ಸಾರ್ ಕಚೇರಿಗಳು, ಸಂಸ್ಕರಣ ಘಟಕಗಳಲ್ಲಿ ಸಿಗುವ ದಾಖಲೆಗಳು, ಪತ್ರಿಕಾವಿಮರ್ಶೆಗಳನ್ನು, ಪುಣೆ ಮತ್ತು ಬೆಂಗಳೂರಿನ ಚಲನಚಿತ್ರ ಭಂಡಾರಗಳಲ್ಲಿ ದೊರೆತ ಮಾಹಿತಿಗಳನ್ನು ಆಧರಿಸಿ ಒಟ್ಟು ೨೦೪೫ ಚಿತ್ರಗಳನ್ನು ಪರಿಗಣಿಸಿ, ಸಾಧ್ಯವಾದಷ್ಟೂ ವಿವರಗಳನ್ನು ಕೊಡುವ ಪ್ರಯತ್ನ ಮಾಡಿದೆವು. ಹಾಗೂ ಯಾವುದಾದರೂ ಚಿತ್ರ ನಮ್ಮ ಗಮನಕ್ಕೆ ಬರದೇ ಬಿಟ್ಟು ಹೋಗಿರಬಹುದೇ ಎಂಬ ಆತಂಕ ಇದ್ದೇ ಇದೆ. ಪ್ರಶಸ್ತಿ ಇತ್ಯಾದಿ ಗೌರವಕ್ಕೆ ಪಾತ್ರವಾಗಿ, ತೆರೆಗೆ ಬರದೆ ಉಳಿದ ಕೆಲವು ಚಿತ್ರಗಳ ಬಗ್ಗೆ ಲೇಖನಗಳಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ.

ಕೊಂಕಣಿ, ಕೊಡವ, ತುಳು ಮೊದಲಾದ ಉಪಭಾಷಾ ಚಿತ್ರಗಳ ಬಗ್ಗೆ ಪ್ರತ್ಯೇಕ ಲೇಖನವನ್ನೇ ಸಿದ್ಧಪಡಿಸಲಾಯಿತು. ಅದೇ ರೀತಿ ಮಕ್ಕಳ ಚಿತ್ರಗಳ ಬಗ್ಗೆ, ಪ್ರಾಣಿಗಳ ಬಳಕೆಯ ಬಗ್ಗೆ ಪ್ರತ್ಯೇಕ ಲೇಖನಗಳನ್ನು ಮಾಡಲಾಗಿದೆ.

ಅಲ್ಲಿ-ಇಲ್ಲಿ ಸಿಗುವ ವಿಡಿಯೋ ಕೆಸೆಟ್‌ಗಳಲ್ಲಿ ಶೀರ್ಷಿಕೆಗಳಿರುವುದಿಲ್ಲ, ಎಲ್ಲ ಚಿತ್ರಗಳ ಗೀತೆಗಳೂ ರಿಕಾರ್ಡ್ ಆಗಿರುವುದಿಲ್ಲ, ರಿಕಾರ್ಡ್ ಆದ ಕೆಲವು ಗೀತೆಗಳು ಚಿತ್ರದಲ್ಲಿರುವುದಿಲ್ಲ. ಸೆನ್ಸಾರ್ ಮಂಡಳಿಯಲ್ಲೂ ನಾವು ಬಯಸುವಷ್ಟು ಮಾಹಿತಿ ಇಲ್ಲ - ಹೆಕ್ಕಿ ತೆಗೆಯುವುದೂ ಸುಲಭವಾಗಿರಲಿಲ್ಲ. ಸಹಾಯಧನ, ಗುಣಮಟ್ಟ, ಪ್ರಶಸ್ತಿಗಳಿಗಾಗಿ ಬಂದ ಫಿಲಂ ಯೂನಿಟ್‌ನಲ್ಲಿದ್ದ ಫೈಲುಗಳಲ್ಲೂ ಗೊಂದಲಗಳಿದ್ದವು. ಪುಣೆಯ ಚಿತ್ರಭಂಡಾರದಲ್ಲೂ ಎಲ್ಲ ಮಾಹಿತಿಗಳಿಲ್ಲ. ಆಕಾಶವಾಣಿಯಲ್ಲೂ ಎಲ್ಲ ಹಾಡುಗಳು ಸಿಗುವಂತಿಲ್ಲ. ನಟರು, ನಿರ್ದೇಶಕರಿಗೆ ನೆನಪಿಲ್ಲ. ನಿರ್ಮಾಪಕರು 'ಹಲವರು ಕೆಲಸ ಮಾಡಿರುತ್ತಾರೆ, ಬದಲಾಗಿರುತ್ತಾರೆ. ಇಂಥವರೇ ಎಂದು ಹೇಳಲು ಸಾಧ್ಯವಿಲ್ಲ' ಎಂದದ್ದುಂಟು. ಅನೇಕ ವಿಷಯಗಳಲ್ಲಿ ಉದ್ಯಮ ಇನ್ನಷ್ಟು ಸ್ಪಂದಿಸಬಹುದಿತ್ತು ಅನ್ನಿಸಿದೆ. ಏನಾದರೂ ಕೊರತೆ, ಬಿಟ್ಟು ಹೋಯಿತು ಅನ್ನಿಸಿದರೆ ಅದಕ್ಕೆ ಚಿತ್ರೋದ್ಯಮವೇ ಹೊಣೆ, ನಮ್ಮ ಪ್ರಾರ್ಥನೆಗಳಿಗೆ ಸ್ಪಂದಿಸಲಿಲ್ಲ, ದಿವ್ಯ ನಿರ್ಲಕ್ಷ್ಯ ತೋರಿತು ಎಂದು ಹೇಳಬೇಕಾಗಿದೆ. ಇನ್ನು ಮುಂದಿನ ದಿನಗಳಲ್ಲಿ ಯಾರಾದರೂ ಆಸಕ್ತಿ ವಹಿಸಿ ಮಾಹಿತಿ ಸಂಗ್ರಹಿಸಲು ಸಾಧ್ಯವಾದರೆ ಅದು ಕನ್ನಡ ಚಿತ್ರರಂಗದ ಭಾಗ್ಯವಾದೀತು.

ಲಕ್ಷಗಳು-ಕೋಟಿಗಳನ್ನು ಖರ್ಚುಮಾಡಿ ಚಿತ್ರ ನಿರ್ಮಿಸಿದ ನಿರ್ಮಾಪಕ ಚಿತ್ರವನ್ನು ಪರಭಾರೆ ಮಾಡಿ ಕೈಕೊಡವಿಕೊಂಡು ಬಿಡುವುದರಿಂದ, ನಿರ್ದೇಶಕರಿಗೆ ಯಾವ ಸ್ವಾಮ್ಯವೂ ಇಲ್ಲದ್ದರಿಂದ ಪರದೇಶಿಯಾಗಿ ಅವರಿವರ ಕೈಯಲ್ಲಿ ಅರಳಲು ಹೋಗಿ ಮೂಲೆಗುಂಪಾಗುವ ಚಿತ್ರಗಳ ಪ್ರಿಂಟ್‌ಗಳು ಚರಿತ್ರೆಗೆ ಮಾಹಿತಿ ಒದಗಿಸುವುದೆಂತು? ಮೂಲೆಗುಂಪಾದ್ದನ್ನೆಲ್ಲ ಆಯ್ದು ನಾಲ್ಕು ಕಾಸಿಗೆ ಟಿ.ವಿ.ಚಾನಲ್‌ಗಳಿಗೆ ಕೆಲವರು ಮಾರಿದ್ದರು. ಆ ಚಾನಲ್‌ಗಳಿಂದ ಕೊಂಚವಾದರೂ ಮಾಹಿತಿಗಳು ದೊರೆತವು. ತಯಾರಾದ ಪ್ರತಿಯೊಂದು ಚಿತ್ರವೂ ಚರ್ಚೆಗೆ ಬಂದಿಲ್ಲವೆಂದರೆ ಮಾಹಿತಿಗಳ ಅಭಾವ, ನಮಗೆದುರಾದ ಅಸಹಾಯಕತೆ ಎಂದಷ್ಟೇ ಹೇಳಬಹುದು. ಇಂದಿಗೂ ಅಮೆರಿಕ, ಬ್ರಿಟನ್‌ಗಳಲ್ಲಿ ಎಂಥ ಮಾಹಿತಿ ಬೇಕಾದರೂ, ಪೋಸ್ಟರ್‌ಗಳೂ ಸಹ ಸಿಗುವಂಥ ವ್ಯವಸ್ಥೆ ಇದೆ. ನಮ್ಮಲ್ಲಿ ಮುಖ್ಯವಾಗಿ ಈ ಮಾಧ್ಯಮದ ಬಗ್ಗೆ ಗೌರವವಿಲ್ಲ. ಅಕಾಡೆಮಿಕ್ ವಲಯಕ್ಕೆ ಬೇಡ; ಉದ್ಯಮದವರಿಗೆ ಒಂದು ಸರಕು. ಸಂಗ್ರಹಿಸಿಟ್ಟಿರುವ ಕೆಲವರಿಗೆ ಕೊಡುವ ಮನಸ್ಸಿಲ್ಲ. ಸರ್ಕಾರದ ಚಲನಚಿತ್ರ ಭಂಡಾರ ಬರಿದಾಗಿದೆ; ಲೂಟಿಯಾಗಿದೆ. ಒಟ್ಟಾರೆ ಚಿತ್ರ ಚರಿತ್ರೆಗಾಗಿ ನಡೆದ ಕ್ಷೇತ್ರಕಾರ್ಯದ ಪರಿಣಾಮವೆಂದರೆ ಹಳೆಯ ರಿಕಾರ್ಡ್‌ಗಳು, ಧೂಳು ಹಿಡಿದ ಫೈಲುಗಳು ಕೊಡವಿಕೊಂಡೆದ್ದು ಅಲೆಮಾರಿನಲ್ಲಿ ನೀಟಾಗಿ ಕೂತದ್ದು.

ಬಿಡಿ ಲೇಖನಗಳ ಸಿದ್ಧತೆಯಲ್ಲೂ ಅನೇಕ ತೊಂದರೆಗಳು ಎದುರಾದವು. ಕೆಲವು ಲೇಖನಗಳಿಗೆ ಮೂರು ನಾಲ್ಕು ಲೇಖನಗಳಲ್ಲಿದ್ದ ಉತ್ತಮಾಂಶಗಳನ್ನೆಲ್ಲ ಆಯ್ದು ಒಂದು ರೂಪ ಕೊಡುವಂತಾಯಿತು. ಕೆಲವು ಲೇಖನಗಳನ್ನು ಅತೃಪ್ತಿಯ ನಡುವೆಯೇ ಒಂದು ರೂಪಕ್ಕೆ ತರುವ ಪ್ರಯತ್ನ ಮಾಡಲಾಗಿದೆ.

ಅಡಕವಾದ ಲೇಖನಗಳಲ್ಲಿ ಕೆಲವು ಕಡೆ ಇಂಗ್ಲಿಷ್ ಶಬ್ದಗಳ ಬಳಕೆ ಆಗಿದೆ. ತತ್ಸಮಾನ ಕನ್ನಡ ಪದಗಳನ್ನು ಬಳಸಿದಾಗ ಲೇಖಕರು ಅವರ ಪರಿಕಲ್ಪನೆಗೆ ಹತ್ತಿರವಾದ ಅರ್ಥ ಧ್ವನಿಸುವುದಿಲ್ಲ ಎಂದಿದ್ದರಿಂದ ಅವರ ಕೋರಿಕೆಯಂತೆ ಇಂಗ್ಲಿಷ್ ಪದಗಳನ್ನು ಉಳಿಸಿಕೊಂಡೆವು. ಹಾಗೆಯೇ ಬಹುಮತಕ್ಕೆ ಆದ್ಯತೆ ಕೊಟ್ಟು ಕೆಲವು ಪ್ರಯೋಗಗಳನ್ನು ಉಳಿಸಿಕೊಳ್ಳಲಾಗಿದೆ. ಮುಖ್ಯವಾಗಿ ಈ ಗ್ರಂಥ ಸಿದ್ಧತೆಯಲ್ಲಿ ಭಾಷಾ ಪಾಂಡಿತ್ಯಕ್ಕಿಂತ ಸರಳ ಗ್ರಹಿಕೆಗೇ ಆದ್ಯತೆ ಎಂಬ ಮೂಲ ಸೂತ್ರವೊಂದು ಎಲ್ಲ ಸಂದರ್ಭದಲ್ಲೂ ಕೆಲಸ ಮಾಡಿದೆ.

ಕೆಲವೊಮ್ಮೆ ನಾವು ಬಯಸುವಂಥ ಸ್ಥಿರ ಚಿತ್ರಗಳು ಸಿಗಲಿಲ್ಲ. ಉದಾಹರಣೆಗೆ ಅಭಿನಯ. ಕಲಾವಿದರ ಭಾವಾಭಿನಯ ವ್ಯಕ್ತವಾಗುವಂಥ ಚಿತ್ರಗಳು ಸಿಗುವುದೇ ಕಷ್ಟ. ಇರುವುದರಲ್ಲಿ ಹೊಂದಿಸಿಕೊಂಡಿದ್ದೇವೆ. ಕೆಲವರ ಚಿತ್ರಗಳು ಇಲ್ಲವಾಗಿದ್ದರೆ ಸೂಕ್ತವಾದ ಚಿತ್ರಗಳು ಲಭಿಸಿಲ್ಲವೆಂದಷ್ಟೇ ಸಹೃದಯರು ಭಾವಿಸಬೇಕು.

'ಪ್ರತಿಭಾ ಸಂಪದ' ವಿಭಾಗದಲ್ಲೂ ಸಮಗ್ರ ಮಾಹಿತಿ ಸಿಗುವುದಿಲ್ಲ. ಹಿರಿಯರಾದ ಆರ್. ಲಕ್ಷ್ಮಣ್, ಕೆ.ವಿ. ಗುಪ್ತ, ಶ್ರೀಕೃಪಾ ಅವರುಗಳು ನೆನಪಿನಿಂದ ಹೇಳಿದ ಮಾಹಿತಿಗಳನ್ನೇ ಆಧರಿಸಿ ಕಿರುಪರಿಚಯ ಸಿದ್ಧಪಡಿಸಲಾಗಿದೆ. ಇನ್ನೂ ಹಲವರ ಬಗ್ಗೆ ಮಾಹಿತಿ ಇಲ್ಲವೆಂಬ ಕೊರತೆ ನಮಗೆ. ಇನ್ನು ಮುಂದೆ ಇಂಥ ಕಾರ್ಯದಲ್ಲಿ ತೊಡಗುವವರಿಗೆ ಸಮಸ್ಯೆಗಳು ಯಾವ ಸ್ವರೂಪದಲ್ಲಿ ಎದುರಾಗುತ್ತವೆ ಎಂಬುದು ತಿಳಿದಿರಲಿ, ನಿವಾರಣೋಪಾಯದ ಜೊತೆಗೇ ಕಾರ್ಯಾರಂಭ ಮಾಡಲಿ ಎಂಬ ಕಾರಣಕ್ಕೆ ಇಷ್ಟು ಸುದೀರ್ಘ ವಿವರಗಳನ್ನು ಕೊಡಬೇಕಾಯಿತು. ಗ್ರಂಥವನ್ನು ಗಮನಿಸಿದ ಯಾರೇ ಆಗಲೀ ಯಾವುದೇ ಮಾಹಿತಿ ಇದ್ದರೂ ಚಲನಚಿತ್ರ ವಾಣಿಜ್ಯ ಮಂಡಳಿಗೆ ಬರೆದು ತಿಳಿಸಿದರೆ ಎಲ್ಲವನ್ನು ಸಂಗ್ರಹಿಸಿ ಮರುಮುದ್ರಣದಲ್ಲಿ ಸೇರಿಸಲಾಗುತ್ತದೆ.

ನಮ್ಮ ಜೊತೆಗೆ ಹಗಲಿರುಳೂ ಇದ್ದು ಸಹಕರಿಸಿದ ಆರ್. ಲಕ್ಷ್ಮಣ್ ಅವರ ನೆನಪುಗಳ ಭಂಡಾರವನ್ನೆಲ್ಲ ಕೆದರಿದ್ದೇವೆ. ಕೇಳಿದ ಚಿತ್ರಗಳು, ಮಾಹಿತಿಯನ್ನು ಒದಗಿಸದೆ ಧೋರಣೆ ತೋರಿದವರನ್ನು ದಬಾಯಿಸಿ ಮಾಹಿತಿ ತರಿಸಿಕೊಟ್ಟಿದ್ದಾರೆ. 'ನನ್ನ ನೆನಪುಗಳು ಮಾಸುತ್ತಿವೆ. ಯಾವ ಮುಖ್ಯ ವಿಷಯ-ವ್ಯಕ್ತಿಗಳು ಬಿಟ್ಟು ಹೋಗುತ್ತವೊ' ಎಂಬ ಆತಂಕದಲ್ಲೇ ಮತ್ತೆ ಮತ್ತೆ ಲೇಖನಗಳನ್ನು ಓದಿ ತಿದ್ದುಪಡಿ ಹೇಳಿದ್ದಾರೆ.

ಉದ್ಯಮದ ವ್ಯಾವಹಾರಿಕ ವಿಷಯಗಳು, ಸರ್ಕಾರದ ನಿಲುವುಗಳೇ ಮೊದಲಾದ ಹತ್ತಾರು ಅಂಶಗಳನ್ನು ಬಲ್ಲವರು ಕೆ.ವಿ. ಗುಪ್ತ. ಅಂಥದೇ ಇನ್ನೊಂದು ದಾಖಲೆಗಳ ಕಣಜ ಕೆ.ಎಸ್.ಎಲ್. ಸ್ವಾಮಿ (ರವೀ) ಅವರು. ಹಿರಿಯ ನಿರ್ದೇಶಕ - ನಿರ್ಮಾಪಕ ಸಿದ್ಧಲಿಂಗಯ್ಯನವರು ತಮ್ಮ ನೆನಪಿನ ಹಗೇವಿನಿಂದ ಮಾಹಿತಿಗಳನ್ನು ಹೆಕ್ಕಿಕೊಟ್ಟು, ಸಿದ್ಧವಾದ ಪ್ರತಿಲೇಖನಗಳನ್ನು ನಾವಿರುವಲ್ಲಿಗೇ ಬಂದು ಪರಿಶೀಲಿಸಿ ಸೂಕ್ತ ಸಲಹೆ ನೀಡಿದ್ದಾರೆ. ಇವರೆಲ್ಲರ ಚರ್ಚೆ - ಮಥನಗಳಿಂದ ಹೊರಟ ಹೂರಣವನ್ನು ಎತ್ತಿಕೊಂಡು ಒಂದು ರೂಪ ಕೊಟ್ಟಿತು ಸಂಪಾದಕ ಮಂಡಳಿ. ತಾಂತ್ರಿಕ ಕಾರಣಗಳಿಗಾಗಿ ಸಂಪಾದಕರು - ಸಂಪಾದಕ ಮಂಡಳಿ ಎಂದೆಲ್ಲ ಗುರುತಿಸಿಕೊಂಡರೂ ಒಳಗಿನವರು-ಹೊರಗಿನವರು ಎನ್ನದೆ ಎಲ್ಲರೂ ಸಹಕರಿಸಿದ್ದಾರೆ.

ಚಿತ್ರೋದ್ಯಮವನ್ನು ಹತ್ತಿರದಿಂದ ಬಲ್ಲ ಹಿರಿಯ ಪತ್ರಿಕೋದ್ಯಮಿ ಪಿ.ಜಿ.ಶ್ರೀನಿವಾಸಮೂರ್ತಿಯವರು ದಶಕದ ಲೇಖನಗಳಲ್ಲದೆ ಈ ಗ್ರಂಥದ ಹಲವು ಬಿಡಿ ಲೇಖನಗಳನ್ನು ಪುನರ್ರಚಿಸಿದ್ದಾರೆ. 'ಚಿತ್ರಸಂಪದ' ಸಿದ್ಧಪಡಿಸುವಲ್ಲಿ, ಕೆಲವೊಮ್ಮೆ ಕರಡು ತಿದ್ದಲು, ಎಲ್ಲ ಲೇಖನಗಳನ್ನೂ ಓದಿ ಸಂಭವನೀಯ ತಪ್ಪುಗಳನ್ನೆಲ್ಲ ಸರಿಪಡಿಸಿ ಮಾರ್ಗದರ್ಶನ ಮಾಡಿದ್ದಾರೆ.

ಶ್ರೀ ಕೃಪಾ 'ತಾಯಿನಾಡು' ಪತ್ರಿಕಾ ಸಂಪಾದಕ ಬಳಗದಲ್ಲಿದ್ದವರು. ಲಾವಣ್ಯ, ರೂಪಲೇಖಾ, ಚಿತ್ರಜ್ಯೋತಿ ಮೊದಲಾದ ಚಲನಚಿತ್ರ ಪತ್ರಿಕೆಗಳಿಗೆ ಕೆಲಸ ಮಾಡಿದವರು, ಸಾಹಿತಿ. ಚಲನಚಿತ್ರಗಳಿಗೂ ಸಂಭಾಷಣೆ, ಗೀತರಚನೆ, ಸಹನಿರ್ದೇಶನಾದಿ ಎಲ್ಲ ವಿಭಾಗಗಳಲ್ಲೂ ಶ್ರಮಿಸಿದವರು. ಉದ್ಯಮದ ಒಳಗೇ ಇದ್ದು ಮೂಲೆಮೂಲೆಯನ್ನು ಕಂಡವರು. ಶ್ರೀಕೃಪಾ ಬಂದ ಮೇಲೆ ನಮ್ಮ ಕೆಲಸ ತುಂಬ ಸುಲಭವಾಯಿತು. ಅವರು ಪತ್ರಕರ್ತ - ಉದ್ಯಮದ ಒಳಗಿನ ವ್ಯಕ್ತಿ. ಅವರ ಬುದ್ಧಿ - ಬರಹಗಳ ನೆರವು. ಅವರ ಸಂಗ್ರಹದಲ್ಲಿದ್ದ ಅಪರೂಪದ ಚಿತ್ರಗಳು, ಹಾಡಿನ ಪುಸ್ತಕಗಳು ಎಲ್ಲವೂ ಸರಿಯಾದ ಸಮಯಕ್ಕೆ ದೊರೆತು, ಅವರಿಂದ ದೊಡ್ಡ ಉಪಕಾರವೇ ಆಗಿದೆ. ಶ್ರೀಕೃಪಾ ಈ ಸಂಪುಟಗಳ ಹಲವು ಲೇಖನಗಳನ್ನು ಬರೆದಿದ್ದಾರೆ, ಪುನರ್ರಚಿದ್ದಾರೆ. ಇಂಥ ಸಹೃದಯಿ - ಸಜ್ಜನರ ನೆರವಿಲ್ಲದಿದ್ದರೆ ಈ ಸಂಪುಟಗಳನ್ನು ಸಿದ್ಧ ಮಾಡಲು ಮತ್ತಷ್ಟು ದೀರ್ಘ ಸಮಯ ಹಿಡಿಯುತ್ತಿತ್ತು. 'ಇದಕ್ಕೊಳ್ಳಿ ಇದಕೊಳ್ಳಿ' ಎನ್ನುತ್ತ ತಮ್ಮ ಎಲ್ಲ ಸಂಗ್ರಹವನ್ನೂ ಕೊಟ್ಟು, ಪ್ರಾರಂಭದಲ್ಲೇ ಕೆಲವು ಲೇಖನಗಳನ್ನು ಸಿದ್ಧಪಡಿಸಿದ ಎಂ.ವಿ. ರಾಮಕೃಷ್ಣಯ್ಯನವರನ್ನು ಎಷ್ಟು ನೆನೆದರೂ ಸಾಲದು. ಅನಾರೋಗ್ಯವಿಲ್ಲದಿದ್ದರೆ ಅವರೇ ಎಲ್ಲವನ್ನೂ ನಿರ್ವಹಿಸಿ ಬಿಡುತ್ತಿದ್ದರು. ಅವರೊಂದು ಚಲಿಸುವ ಚಲನಚಿತ್ರ ಭಂಡಾರ. ಪತ್ರಕರ್ತ-ಸಾಹಿತಿ ರುಕ್ಕೋಜಿರಾವ್ ಕೆಲವು ತಿಂಗಳುಗಳ ಕಾಲ ಕಚೇರಿಯಲ್ಲೇ ಕೂತು ಬರೆದರು, ಮಾಹಿತಿ ಸಂಗ್ರಹಿಸಿದರು, ಟಿಪ್ಪಣಿಗಳನ್ನು ಸಿದ್ಧ ಮಾಡಿದರು. ಲೇಖನ ಬರೆದುದಲ್ಲದೆ ಸಿದ್ಧವಾದ ಲೇಖನಗಳನ್ನೆಲ್ಲ ದಿನಗಟ್ಟಲೆ ಕೂತು ಓದಿ ಅನಗತ್ಯವಾಗಿ ಸೇರಿಹೋದ ಕೆಲವು ಶಬ್ದಗಳು, ಪ್ರತ್ಯಯಗಳನ್ನು ತೆಗೆದು ಒಂದು ಸ್ವರೂಪ ಕೊಟ್ಟವರು ಪತ್ರಕರ್ತ ಡಾ. ಸಿ. ಸೀತಾರಾಂ. ನಮ್ಮ ಪಡಿಪಾಟಲನ್ನು ಗ್ರಹಿಸಿ ಲೇಖನಗಳನ್ನು ಬರೆದು, ನಮಗಾಗಿ ಸರ್ಕಾರದ ಉಗ್ರಾಣಗಳನ್ನೆಲ್ಲ ತಡಕಿ ಮಾಹಿತಿ ಸಂಗ್ರಹಿಸಿ, ಪುಣೆಯ ಚಲನಚಿತ್ರ ಭಂಡಾರಕ್ಕೂ ಹೋಗಿ ವಿಷಯ ಸಂಗ್ರಹಣೆ ಮಾಡಿ, ತಮ್ಮ ಬಳಿ ಇದ್ದ ಎಲ್ಲ ಚಿತ್ರಗಳು, ಆಕರ

ಗ್ರಂಥಗಳನ್ನು ಒದಗಿಸಿ ಸರ್ವವಿಧದಲ್ಲೂ ನೆರವಾದವರು ಸಂಕಲನಕಾರ - ನಿರ್ದೇಶಕ ಉಮೇಶ್ ಕುಲಕರ್ಣಿ. ಕೆಲವು ಮುಖ್ಯವಾದ ಲೇಖನಗಳನ್ನು ರಚಿಸಿದ್ದಲ್ಲದೆ ನಾವು ಪ್ರಾರ್ಥಿಸಿದಾಗಲ್ಲ ಬೇಸರ ಮಾಡಿಕೊಳ್ಳದೆ ಹಲವು ಲೇಖನಗಳನ್ನು ಪುನರ್ರಚಿಸಿಕೊಟ್ಟ ಪತ್ರಕರ್ತರಾದ ಎನ್.ಎಸ್. ಶ್ರೀಧರ ಮೂರ್ತಿ ಮತ್ತು ಚಂದ್ರ ಬಾರ್ಕೂರು, ಬಿಡುವಿಲ್ಲದ ದಿನ ಪತ್ರಿಕೆಯ ಕೆಲಸಗಳ ಮಧ್ಯೆ ನಮಗಾಗಿ ತಹತಹಿಸಿದವರು ಗಂಗಾಧರ ಮೊದಲಿಯಾರ್ ಮತ್ತು ಬಾ.ನಾ. ಸುಬ್ರಹ್ಮಣ್ಯ. ಇವರೆಲ್ಲ ನಮ್ಮ ಜೊತೆಗಿದ್ದಾರೆ ಎಂದು ಹೇಳಲು ಸಂತೋಷವಾಗುತ್ತದೆ. ಈ ಸಂಪುಟಗಳಿಗೆ ಲೇಖನಗಳನ್ನು ಬರೆದವರು, ಪೂರಕ ಸಾಹಿತ್ಯ ಒದಗಿಸಿದವರು, ಎಲ್ಲ ವಿಧದಲ್ಲಿ ನೆರವಾದ ಉದ್ಯಮದ ಬಂಧುಗಳಿಗೆ ನಾವು ಕೃತಜ್ಞರಾಗಿದ್ದೇವೆ.

ಕಾರಣಾಂತರದಿಂದ ಮುಂದೆ ಹೋದ ವಿದೇಶ ಪ್ರಯಾಣದ ಕಾರಣ ದೊರೆತ ಬಿಡುವನ್ನು ನಮಗೆ ಮೀಸಲಿಟ್ಟು ಕ್ರಮೇಣ ಇವರಲ್ಲಿ ಮುಳುಗಿ ಹೋದವರು ರೊನಾಲ್ಡ್ ಶಶಿರಾಜ್, ಸಾವಿರಾರು ಚಿತ್ರಕಥೆಗಳು, ಪರಿಚಯಗಳು, ಪದಸೂಚಿಗಾಗಿ ಶ್ರಮಿಸಿದವರು ಕಂಪ್ಯೂಟರ್ ಇಂಜಿನಿಯರ್ - ಲೇಖಕ ಎಸ್. ರುದ್ರಯ್ಯ. ಎಷ್ಟು ಕೆಲಸವಾದರೂ, ನೂರು ಬಾರಿ ತಿದ್ದಿ, ಮರುವಿನ್ಯಾಸ - ಸೇರ್ಪಡೆಗಳ ಕಿರುಕುಳಕೊಟ್ಟರೂ ಬೇಸರಿಸದೆ ಹಗಲಿರುಳೂ ಕೆಲಸ ಮಾಡಿದ ಅಕ್ಷರವಿನ್ಯಾಸಕಾರ ಸುರೇಶ್‌ಕುಮಾರ್, ವಿಶ್ವನಾಥ್ ಮತ್ತು ಅತ್ಯಂತ ಸಂದಿಗ್ಧವಲ್ಲಿದ್ದಾಗ ನೆರವಿಗೆ ಬಂದ ಕಿರಿಯ ಮಿತ್ರ ಜಿ. ಮಧುಸೂದನ್ ಅವರುಗಳನ್ನು ಪ್ರೀತಿಯಿಂದ ನೆನೆಯುತ್ತೇವೆ. ಹಲವರು ಬಂದರು-ಕೆಲಸಗಳು ಸಿಕ್ಕು ಹೊರಗೆ ಹೋದರು - ಏನಾಯಿತು ಎಂದು ವಿಚಾರಿಸುವ ವಿಶ್ವಾಸ ತೋರಿದರು. ಚಿತ್ರಗಳು, ವ್ಯಕ್ತಿ ಪರಿಚಯಗಳ ನೆರವು ಕೊಟ್ಟ ಚಿಕ್ಕ ಸುರೇಶ್, ಕರ್ನಾಟಕ ಚಲನಚಿತ್ರೋದ್ಯಮ ಸಹಕಾರ ಸಂಘದ ಸಿಬ್ಬಂದಿಯಾದರೂ ನಮಗಾಗಿ ಮುಫತ್ ಕೆಲಸ ಮಾಡಿದ ಪ್ರೀತಿಯ ಹುಡುಗರಾದ ಬಿ. ಹೆಚ್. ವೇಣುಗೋಪಾಲ್, ಜಿ. ಎ. ಅನಿಲ್‌ಕುಮಾರ್, ಚಲನಚಿತ್ರ ವಾಣಿಜ್ಯ ಮಂಡಳಿಯ ಸಿಬ್ಬಂದಿ ವಿಶೇಷವಾಗಿ ವೀರಭದ್ರ, ಜಯರಾಮ್, ಪ್ರಕಾಶ್, ವಾಸು ಇವರುಗಳಿಗೆ ನಾವು ಕೃತಜ್ಞರಾಗಿದ್ದೇವೆ.ಗ್ರಂಥಕ್ಕೆ ನೆರವಾದ ಉದ್ಯಮದ ಎಲ್ಲರಿಗೂ ನಮ್ಮ ನಮನಗಳು. ಸಂಪುಟಗಳಿಗೆ ರಕ್ಷಾಪುಟ ವಿನ್ಯಾಸ ಮಾಡಿದ ಕಲಾವಿದ ಚಂದ್ರನಾಥ ಆಚಾರ್ಯ ಮತ್ತು ಒಳಪುಟಗಳಲ್ಲಿ ಅಡಕವಾಗಿರುವ ವರ್ಣಪುಟಗಳ ವಿನ್ಯಾಸ ನಿರ್ವಹಿಸಿದ ಯು.ಟಿ. ಸುರೇಶ್‌ರಿಗೆ ನಮ್ಮ ನೆನಕೆಗಳು.

ಇಷ್ಟು ವಿಸ್ತಾರವಾದ ಕನ್ನಡ ಚಲನಚಿತ್ರ ಇತಿಹಾಸ ಸಂಪುಟಗಳು ಸಿದ್ಧವಾಗಲು ಅಪಾರ ಶ್ರದ್ಧೆ - ಆಸಕ್ತಿ ತೋರಿಸಿದ ಕೆ.ಸಿ.ಎನ್. ಚಂದ್ರಶೇಖರ್ ಮತ್ತು ವಾಣಿಜ್ಯ ಮಂಡಳಿಯ ಎಲ್ಲ ಪದಾಧಿಕಾರಿಗಳಿಗೆ ಇಂಥ ಮಹಾತ್ಕಾರ್ಯದಲ್ಲಿ ಭಾಗಿಯಾಗಲು ನಮಗೆ ಅವಕಾಶ ಮಾಡಿದ್ದಕ್ಕಾಗಿ ವಂದಿಸುತ್ತೇವೆ. ಗ್ರಂಥ ಅಚ್ಚಾಗುತ್ತಿರುವಾಗ ಚಲನಚಿತ್ರ ವಾಣಿಜ್ಯ ಮಂಡಳಿಗೆ ಹೊಸದಾಗಿ ಚುನಾಯಿತ ಆಡಳಿತ ಮಂಡಳಿ ಬಂದಿತು. ಆಗಲೂ ನಮಗೆ ಒಂದಿಷ್ಟೂ ತೊಡಕಾಗದ ಹಾಗೆ ನೋಡಿಕೊಂಡ - ಪ್ರೀತ್ಯಾದರಗಳನ್ನು ತೋರಿದ ಅಧ್ಯಕ್ಷ ತಲ್ಲಂ ನಂಜುಂಡಶೆಟ್ಟರಿಗೆ ಮತ್ತು ಎಲ್ಲ ಪದಾಧಿಕಾರಿಗಳಿಗೆ ಎಷ್ಟು ಕೃತಜ್ಞತೆ ಹೇಳಿದರೂ ಸಾಲದು.

ಇದೇ ರೀತಿ ಈ ಸಂಪುಟಗಳ ಯೋಜನೆ ರೂಪಿಸಿ ಕಾರ್ಯಾರಂಭ ಮಾಡಿಸಿದ ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ. ಕಲಬುರ್ಗಿಯವರು ಆಗಿನ ಪ್ರಸಾರಾಂಗದ ನಿರ್ದೇಶಕರಾಗಿದ್ದ ಶ್ರೀ ನಾವುಡ ಅವರೊಂದಿಗೆ ನಮ್ಮ ಸ್ಥಳಕ್ಕೇ ಬಂದು ಸಿದ್ಧವಾಗುತ್ತಿದ್ದ ಲೇಖನಗಳನ್ನು ಪರಾಮರ್ಶಿಸಿ, ಮೆಚ್ಚುಗೆಯ ಮಾತಾಡಿ ಹುರಿದುಂಬಿಸಿದರು. ಸಂಪುಟಗಳು ಸಿದ್ಧವಾಗುವ ಮೊದಲೇ ಅವರು ನಿವೃತ್ತರಾಗಿ ಲಕ್ಕಪ್ಪಗೌಡರು ಕುಲಪತಿಗಳಾಗಿ ಬಂದರು. ಗೌಡರಿಗೆ ಚಿತ್ರರಂಗ-ವಾಣಿಜ್ಯ ಮಂಡಳಿ ತೀರಾ ಹೊರಗಿನದಲ್ಲ. ಅವರು ಇಮ್ಮಡಿ ಉತ್ಸಾಹ ತೋರಿಸಿ ಈ ಕಾರ್ಯವನ್ನು ಮುನ್ನಡೆಸಿದ್ದಾರೆ. ಅದು ಅವರ ದೊಡ್ಡ ಗುಣ. ಕುಲಸಚಿವ ಮಲ್ಲೇಪುರಂ ಜಿ. ವೆಂಕಟೇಶ್‌ಅವರ ಅವಧಿಯಲ್ಲಿ ಪ್ರಾರಂಭವಾದ ಕೆಲಸವನ್ನು ಕುಲ ಸಚಿವ ಕೆ.ವಿ.ನಾರಾಯಣ್ ಅಷ್ಟೇ ಪ್ರೀತಿಯಿಂದ ಪೂರೈಸಿದ್ದಾರೆ. ಅವರಿಗೆ ಮತ್ತು ಪ್ರಸಾರಾಂಗದ ಸುಜ್ಞಾನ ಮೂರ್ತಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ನಮ್ಮ ತೊಂದರೆಗಳನ್ನೆಲ್ಲ ಸಹಿಸಿ, ವಿನ್ಯಾಸಗೊಂಡಿದ್ದ ಪುಟಗಳನ್ನೊಯ್ದು ಸೊಗಸಾಗಿ ಅಚ್ಚು ಮಾಡಿಕೊಟ್ಟ ಪ್ರಗತಿ ಪ್ರಿಂಟ್ ಕಮ್ಯೂನಿಕೇಶನ್ ಶ್ರೀನಿವಾಸ್ ಅವರಿಗೆ, ಮುದ್ರಣಾಲಯದ ಸಿಬ್ಬಂದಿ ಮಹೇಶ್ ಮತ್ತು ಇತರರಿಗೆ ಕೃತಜ್ಞತೆಗಳು.

ಮಾತು ಮುಗಿಸುವ ಮುನ್ನ ಒಂದೆರಡು ಗಮನಿಸಬೇಕಾದ ಸಂಗತಿಗಳನ್ನು ಹೇಳಬೇಕಾಗಿದೆ. ಮೊದಲನೆಯ ಸಂಪುಟದ ಪುಟ ೨೫ರಲ್ಲಿ 'ಹಿಸ್ ಲವ್ ಅಫೇರ್' ಶೀರ್ಷಿಕೆ ಇರುವ ಚಿತ್ರವಿದೆ. ಚಿತ್ರವನ್ನು ಒದಗಿಸಿದವರು ಅಧಿಕೃತವೆಂದು ಕೊಟ್ಟ, ಮಾಹಿತಿಯನ್ನು ಆಧರಿಸಿದೆವು. ಪುಟಗಳು ಅಚ್ಚಾದ ಮೇಲೆ ನೋಡಿದ ಮತ್ತೊಬ್ಬ ಮಹನೀಯರು ಈ ಚಿತ್ರ ನಾಟಕದ್ದಿರಬೇಕು ಎಂದು ಸಂದೇಹದಿಂದಲೇ ಹೇಳಿದ್ದಾರೆ. ಹೀಗಾಗಿ ಸ್ಪಷ್ಟತೆ ಇಲ್ಲವಾಗಿದೆ. ಖಚಿತ ಮಾಹಿತಿ ಲಭಿಸಿದರೆ ಸ್ವಾಗತ.

ನಮ್ಮ ಕಚೇರಿಯ ಗಣಕ ಯಂತ್ರದಲ್ಲಿ ಸಿದ್ಧವಾದ ಪುಟಗಳನ್ನು ಮುದ್ರಕರು ಫ್ಲಾಪಿಗಳಲ್ಲಿ ಕೊಂಡೊಯ್ದು ಅವರ ಯಂತ್ರಗಳಿಗೆ ಜೋಡಿಸಿ ಮುದ್ರಿಸುವ ಹಂತದಲ್ಲಿ ಕೆಲವು ತಾಂತ್ರಿಕ ದೋಷಗಳು ತಲೆದೋರಿವೆ. ಪ್ರಾರಂಭದ ನೂರಿನ್ನೂರು ಪುಟಗಳಲ್ಲಿ ಕೆಲವೆಡೆ ಪದಚ್ಛೇದಗಳು ಮೂಡಿ ಬಿಟ್ಟಿವೆ. ಮರು ಮುದ್ರಣದ ಅಪಾರ ವೆಚ್ಚವನ್ನು ಗಮನದಲ್ಲಿಟ್ಟು ಓದಿಗೆ- ಅರ್ಥಕ್ಕೆ ಭಂಗ ಬರುವುದಿಲ್ಲ ಎಂಬ ಕಾರಣಕ್ಕೆ ಹಾಗೇ ಉಳಿಸಿಕೊಳ್ಳಬೇಕಾಯಿತು. ಸಹೃದಯಿ ಓದುಗರು ಸಹಕರಿಸಬೇಕಾಗಿ ಪ್ರಾರ್ಥನೆ.

- ಸಂಪಾದಕರು




# ಭಾಗ್ಯದ ಲಕ್ಷ್ಮೀ ಬಾರಮ್ಮ

ಪಾಶ್ಚಾತ್ಯ ದೇಶಗಳಲ್ಲಿ ಮಧ್ಯಯುಗ ಕಳೆದು ವಿಜ್ಞಾನಯುಗ ಆರಂಭವಾಯಿತು. ಮನುಷ್ಯನ ಅನೇಕ ಕನಸುಗಳು ನನಸಾದವು. ಹೊಸ ಅದ್ಭುತ ಸಾಧನಗಳು ದೊರೆತವು. ಆ ಸಾಧನೆಗಳೇ ಮತ್ತೆ ಗರಿಗೆದರಿದ ಕನಸುಗಳನ್ನು ನನಸಾಗಿಸುವ ಮೂಲ ಸಾಧನಗಳಾದವು. ಈ ಪ್ರಕ್ರಿಯೆ ಇಂದಿಗೂ ನಿರಂತರವಾಗಿ ನಡೆದಿದೆ.

ಕ್ರಿ.ಶ. ೧೭೫೦ರ ನಂತರ ಪಾಶ್ಚಾತ್ಯ ದೇಶಗಳಲ್ಲಿ ಕಂಡುಹಿಡಿಯಲಾದ ಅನೇಕ ಸಂಶೋಧನೆಗಳು ಆ ದೇಶಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿಗತಿಗಳನ್ನೇ ಪರಿವರ್ತನೆಗೊಳಿಸಿದವು. ಅವುಗಳ ಪ್ರಭಾವ ವಿಶ್ವವ್ಯಾಪಿಯಾಯಿತು.

ಕ್ರಿ.ಶ. ೧೭೫೦ರ ವೇಳೆಗೆ ನಡೆದ ಕೈಗಾರಿಕಾ ಕ್ರಾಂತಿ ಇಂಗ್ಲೆಂಡಿನ ಹತ್ತಿ ಕೈಗಾರಿಕೆಗೆ ಸೀಮಿತ. ಗೃಹ ಕೈಗಾರಿಕೆಯಾಗಿದ್ದ ಕೈಮಗ್ಗದ ನೇಯ್ಗೆ, ಕಾರ್ಖಾನೆಗಳಿಗೆ ವರ್ಗಾವಣೆಯಾಯಿತು. ಮಿಲ್ಲುಗಳ ಆರಂಭದೊಡನೆ ಕಾರ್ಮಿಕ ವರ್ಗ, ಬಂಡವಾಳಶಾಹಿ ವರ್ಗಗಳು ಏರ್ಪಟ್ಟವು. ಕಾರ್ಖಾನೆ ಸಂಸ್ಕೃತಿಯ ಫಲವಾಗಿ ಸಾಮೂಹಿಕ ಉತ್ಪಾದನೆಯ ವಸ್ತುಗಳು ಅಗ್ಗವಾದವು. ಜನಸಾಮಾನ್ಯರ ಜೀವನ ಸ್ಥಿತಿಯಲ್ಲಿ ಸ್ವಲ್ಪ ಸುಧಾರಣೆಯೂ ಕಂಡುಬಂದಿತು.

ಇದೇ ಅವಧಿಯಲ್ಲಿ ಹಬೆ ಯಂತ್ರದ ಶೋಧದ ಪರಿಣಾಮವಾಗಿ ಜನರ ಹಾಗೂ ಸರಕು ಸಾಗಾಣಿಕೆಗೆ ರೈಲು ಮಾರ್ಗದ ಸೌಲಭ್ಯ ಒದಗಿ, ನದಿ-ಜಲಮೂಲಗಳಿಗೆ ಹೊಂದಿಕೊಂಡಿದ್ದ ನಗರಗಳು, ಒಳನಾಡಿನಲ್ಲೂ ಬೆಳೆಯತೊಡಗಿದವು.

ಎರಡನೆಯ ಕೈಗಾರಿಕಾ ಕ್ರಾಂತಿ ಮತ್ತಷ್ಟು ಪರಿಣಾಮಕಾರಿ. ಆರೋಗ್ಯ, ಆಡಳಿತ, ಆರ್ಥಿಕ, ಸಾಮಾಜಿಕ ವಲಯಗಳಲ್ಲಿ ಮಹತ್ವದ ಸುಧಾರಣೆಗಳಾದವು. ಕಲೆ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಇದರ ದಿಟ್ಟ ಪ್ರಭಾವ ಕಂಡುಬಂದಿತು. ವಿಜ್ಞಾನಿ ಮೈಕೇಲ್ ಫ್ಯಾರಡೆ ವಿದ್ಯುಚ್ಛಕ್ತಿ ಉತ್ಪಾದಿಸುವ ವಿಧಾನ ಕಂಡುಹಿಡಿದ. ಮನೆ ಬೆಳಗಿತು. ಜೀವನ ಬೆಳಗಿತು. ವಿದ್ಯುತ್ ಚಾಲಿತ ಯಂತ್ರಗಳು ಸಿದ್ಧವಾದವು. ಮನೆ, ಬೀದಿ ದೀಪ, ಟೆಲಿಫೋನ್, ಟೆಲಿಗ್ರಾಫ್ ಇವೆಲ್ಲಕ್ಕೂ ಮೂಲ ಪ್ರೇರಣೆಯಾಯಿತು ವಿದ್ಯುತ್.

ವಿಜ್ಞಾನ ಕ್ಷೇತ್ರದಲ್ಲಿ ದೀರ್ಘ ಪರಿಣಾಮ ಬೀರಬಲ್ಲ ಸಂಶೋಧನೆಗಳಾದವು. ಮೇರಿಕ್ಯೂರಿ ಕಂಡುಹಿಡಿದ ಅಣು ವಿಕಿರಣ ಶಕ್ತಿಮೂಲ, ಮುಂದೆ ಅಣು ವಿದ್ಯುತ್ ಶಕ್ತಿ, ಅಣುಬಾಂಬ್ ನಿರ್ಮಾಣಕ್ಕೆ ನಾಂದಿಯಾಯಿತು. ೭೦,೦೦೦ ಸಂಯುಕ್ತ ರಾಸಾಯನಿಕಗಳ ವಿಭಜನೆಯಾಗಿ ಅವುಗಳ ಮೂಲ ಸ್ವರೂಪ ನಿರ್ಧಾರವಾಯಿತು. ಇವುಗಳ ಫಲಶ್ರುತಿ : ಪೋರ್ಟ್‌ಲ್ಯಾಂಡ್ ಸಿಮೆಂಟ್, ವಲ್ಕನೈಜ್ಡ್ ರಬ್ಬರ್, ರಾಸಾಯನಿಕ ಬಣ್ಣಗಳು, ಪೆಟ್ರೋಲಿಯಂ ಉತ್ಪನ್ನಗಳು, ಪೆಟ್ರೋಲನ್ನು ಇಂಧನವಾಗಿ ಬಳಸುವ ಮೋಟಾರು ವಾಹನಗಳು ಅಸ್ತಿತ್ವಕ್ಕೆ ಬಂದವು; ಸಾರಿಗೆ ವಿಸ್ತರಣೆಗೆ ಹೊಸ ತಂತ್ರ ಜ್ಞಾನ ಲಭಿಸಿತು. ರೈಟ್ ಸೋದರರ ಕಿಟ್ಟಿಹಾಕ್ ವಿಮಾನದ ಹಾರಾಟ ವೈಮಾನಿಕ ಕೈಗಾರಿಕೆಗೆ ಬುನಾದಿಯಾಯಿತು. ವಿವಿಧ ರೋಗನಿರೋಧಕ ಲಸಿಕೆಗಳ ಶೋಧ ನಡೆಯಿತು. ಎಕ್ಸ್‌ರೇಗಳು ರೋಗಲಕ್ಷಣಗಳನ್ನು ನಿರ್ಣಯಿಸಲು ವೈದ್ಯರಿಗೆ ಅಮೂಲ್ಯ ಸಾಧನಗಳಾದವು. ಭೌತಶಾಸ್ತ್ರದಲ್ಲೂ ಗಣನೀಯ ಮೂಲಭೂತ ಸಂಶೋಧನೆಗಳಾದವು. ವಿಜ್ಞಾನಯುಗದ ಆರಂಭ ದಿನಗಳ ದೀರ್ಘ ಪರಿಣಾಮಕಾರಿಯಾದ ಶೋಧನೆಗಳ ಪಟ್ಟಿ ಇಷ್ಟಕ್ಕೇ ಮುಗಿಯದು. ಅವುಗಳ ಸಂಖ್ಯೆ ಅಪಾರ.

ಈ ವೈಜ್ಞಾನಿಕ ಸಂಶೋಧನೆಗಳ ಫಲವಾಗಿ ಮೂಡಿಬಂದ ರೇಡಿಯೋ ಒಂದು ಸಮೂಹ ಸಂಪರ್ಕ ಮಾಧ್ಯಮವಾಯಿತು. ಸುಧಾರಿತ ಯಂತ್ರ ತಂತ್ರಜ್ಞಾನಗಳಿಂದ ಮುದ್ರಣ ಕ್ಷೇತ್ರದಲ್ಲಿ ಆದ ಬೆಳವಣಿಗೆಗಳಿಂದ ಪುಸ್ತಕ, ವೃತ್ತ ಪತ್ರಿಕೆಗಳು ಹೆಚ್ಚು ಶಕ್ತಿಗೊಂಡವು. ಪ್ರಬಲ ಸಮೂಹ ಮಾಧ್ಯಮಗಳಾಗಿ ವಿಕಾಸಗೊಂಡವು. ಕೈಗಾರಿಕಾ ಕ್ರಾಂತಿಯ ಹಾಗೂ ವೈಜ್ಞಾನಿಕ ಯುಗದ ಗಣನೀಯ ಕೊಡುಗೆ ಸಿನಿಮಾ. ಸಾಹಿತ್ಯ, ಶಿಲ್ಪಕಲೆ, ಚಿತ್ರಕಲೆ, ಸಂಗೀತ ಕಲೆ, ನೃತ್ಯಕಲೆ ಇವೇ ಮೊದಲಾದ ಕಲೆಗಳ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನದ ಕೂಸಾಗಿ ಹುಟ್ಟಿತು ಸಿನಿಮಾ. ಶತಮಾನದಷ್ಟು ಹಿಂದೆ ಹುಟ್ಟಿದ ಈ ಕೂಸು, ಈಗ ವಿಶ್ವದ ಪ್ರಮುಖ ಸಂಪರ್ಕ ಮಾಧ್ಯಮವಾಗಿದೆ. ಹುಟ್ಟಿದ ಅತ್ಯಲ್ಪ ಅವಧಿಯಲ್ಲಿ ಅದು ಮನರಂಜನೆಯ ಪ್ರಚಂಡ ಮಾಧ್ಯಮವಾಗಿ ಪ್ರಪಂಚದಾದ್ಯಂತ ಹರಡಿತು. ಬಂಡವಾಳ ಹೂಡಿಕೆಯಲ್ಲಿ ಹಾಗೂ ಗಳಿಕೆಯಲ್ಲಿ ಇಂದು ಪ್ರಪಂಚದ ಪ್ರಮುಖ ಉದ್ಯಮಗಳಲ್ಲಿ ಒಂದಾಗಿದೆ.

ಯಾವ ವೈಜ್ಞಾನಿಕ ಹಾಗೂ ಯಾಂತ್ರಿಕ ಸಾಧನಗಳೂ ಸಿನಿಮಾದಷ್ಟು ವೇಗವಾಗಿ ಇಡೀ ಜಗತ್ತನ್ನು ಆವರಿಸಿಕೊಳ್ಳಲಿಲ್ಲ. ಇಂತಹ ಸರ್ವವ್ಯಾಪಿ ಸಿನಿಮಾದ ಜನಕ ಯಾರು? ಅದರ ಹುಟ್ಟು ಹೇಗೆ ?

ಈತನೇ ಜನಕನೆಂದು ಯಾರೊಬ್ಬನನ್ನು ನಿರ್ದೇಶಿಸಲು ಸಾಧ್ಯವಿಲ್ಲ. ಹಲವಾರು ದೇಶಗಳ ಹಲವಾರು ವಿಜ್ಞಾನಿಗಳ ಶೋಧನೆ, ಪ್ರಯೋಗಗಳು ಸಮ್ಮಿಲನಗೊಂಡು ಸಿನಿಮಾ ಹುಟ್ಟಿಕೊಂಡಿತು. ಈಗಿರುವಂತೆ ಸಿನಿಮಾ ಮನರಂಜನೆಯ ಪ್ರಚಂಡ ಮಾಧ್ಯಮವಾಗಬೇಕೆಂಬ ಏಕೈಕ ಉದ್ದೇಶದಿಂದ ಈ ಮಾಧ್ಯಮವನ್ನು ಅವರು ಸೃಷ್ಟಿಸಲಿಲ್ಲ, ಆ ಕಲ್ಪನೆಯೂ ಅವರಿಗೆ ಇರಲಿಲ್ಲ.

ಅವರ ಆಸಕ್ತಿ, ಸ್ತಬ್ಧ ದೃಶ್ಯವನ್ನು ದಾಖಲಿಸುವುದು. ಚಲನೆಯನ್ನು ದಾಖಲಿಸಿ ಪ್ರದರ್ಶಿಸುವುದು. ಈ ಕುತೂಹಲವನ್ನು ತಣಿಸಲು ಆ ವಿಜ್ಞಾನಿಗಳು ಶತಮಾನಗಳ



(ಚಿತ್ರ ೧) ಚಿತ್ರ ಚಲನೆಯ ಭ್ರಮೆ ಮೂಡಿಸುವ ಆಟಿಕೆ - ಫೆನಾಕಿಸ್ಟೋಸ್ಕೋಪ್



(ಚಿತ್ರ ೨) ಇ.ಜೆ.ಮಾರಿಯ - ಫೋಟೊಗ್ರಾಫಿಕ್ ರಿವಾಲ್ವರ್‌ನ ಮಾದರಿ - ಚಲನಚಿತ್ರಗ್ರಾಹಿಯ ಕಲ್ಪನೆಗೆ ಪ್ರೇರಣೆ ನೀಡಿದ ಶೋಧನೆ

ಕಾಲ ಶ್ರಮಿಸಿದರು. ಕೆಲವು ಶೋಧನೆಗಳು, ಪ್ರಯೋಗಗಳು ನೇರವಾಗಿ ಸಿನಿಮಾಕ್ಕೆ ಸಂಬಂಧಿಸಿದುದಲ್ಲ. ಆದರೂ ಆ ಪ್ರಯೋಗಗಳಿಂದ ಪ್ರಾಪ್ತವಾದ ಜ್ಞಾನವನ್ನು ಸಿನಿಮಾಕ್ಕೆ ಸಂಬಂಧಪಟ್ಟ ಯಂತ್ರಗಳಲ್ಲಿ ಅಳವಡಿಸಿಕೊಳ್ಳಲಾಯಿತು.

ಜರ್ಮನಿಯ ಪಾದ್ರಿ ಅಥನಾಸಿಯಸ್ ಕ್ರಿಷರ್ (Athanasius Kricher) ಕ್ರಿ.ಶ. ೧೬೪೬ರಲ್ಲಿ ಚಿತ್ರಗ್ರಾಹಿ ಹಾಗೂ ಮಾಯಾಲಾಂದ್ರದ ಸೂತ್ರಗಳನ್ನು ಚರ್ಚಿಸಿದ್ದ. ನಾಲ್ಕು ಬದಿಯಲ್ಲಿ ಮುಚ್ಚಿರುವ ಪೆಟ್ಟಿಗೆಯ ಮುಂದಿರುವ ಸ್ತಬ್ಧ ಚಿತ್ರದ ಬಿಂಬ, ಪೆಟ್ಟಿಗೆಯ ಮುಂಭಾಗದಲ್ಲಿರುವ ಸಣ್ಣ ರಂಧ್ರದ ಮೂಲಕ ಹಾದು ಪೆಟ್ಟಿಗೆಯ ಒಳ ಭಾಗದ ಹಿಂಬದಿಯ ಪಟ್ಟಿಕೆಯ ಮೇಲೆ ಪ್ರತಿ ಬಿಂಬಿಸುವುದೆಂದು ಹೇಳಿದ್ದ. 'ಕ್ಯಾಮರಾ ಅಬಸ್ಕ್ಯೂರ' (ಅಥವಾ ಪಿನ್‌ಹೋಲ್ ಕ್ಯಾಮರಾ) ತತ್ವವನ್ನು ಪ್ರತಿಪಾದಿಸಿದ್ದ.

ಚಿಕ್ಕದೊಂದು ರಂಧ್ರದ ಮೂಲಕ ಕತ್ತಲು ಕೋಣೆಯಲ್ಲಿ ಚಿತ್ರಗಳನ್ನು ಮೂಡಿಸಬಹುದೆಂಬ ಕಲ್ಪನೆ, ಮಸೂರಗಳನ್ನು ಬಳಸಿ ದೃಶ್ಯಗಳನ್ನು ಸೆರೆ ಹಿಡಿಯಬಹುದಾದ ಚಿತ್ರಗ್ರಾಹಕ, ಮುಂದೆ ಮಾಯಾಲಾಂದ್ರದ ವಿನ್ಯಾಸಕ್ಕೆ ಪ್ರೇರಣೆ ನೀಡಿತು.

ಸಿಲ್ವರ್ ನೈಟ್ರೈಟ್ (ಬೆಳ್ಳಿಯ ಸಂಯುಕ್ತ) ಮೇಲೆ ಬೆಳಕು ಬಿದ್ದಾಗ ಅದು ಕಪ್ಪಾಗುತ್ತಿತ್ತು. ಬೆಳಕಿನ ಸಾಂದ್ರತೆಗೆ ಅನುಗುಣವಾಗಿ ಕಪ್ಪು ಕಣಗಳಾಗಿ ಪರಿವರ್ತನೆ ಹೊಂದುತ್ತಿತ್ತು. ಬೆಳಕು ಬೀಳದೆ ಇದ್ದ ಭಾಗದಲ್ಲಿದ್ದ ಮೂಲಬೆಳ್ಳಿಯನ್ನು ರಾಸಾಯನಿಕ ಬಳಸಿ ಕರಗಿಸಿ, ಪ್ರತ್ಯೇಕಿಸಿ ಕಪ್ಪು ರಾಸಾಯನಿಕ ಕಣಗಳನ್ನು ಉಳಿಸಿಕೊಳ್ಳಬಹುದೆಂಬುದನ್ನು ಟಾಮ್ ವೆಡ್ಜ್‌ವುಡ್ ಮತ್ತು ಜಾನ್ ಹರ್ಷೆಲ್ ಪ್ರತಿಪಾದಿಸಿದರು (೧೮೦೨). ಸಿಲ್ವರ್ ನೈಟ್ರೇಟ್ ಆಧಾರಿತ ರಾಸಾಯನಿಕ ದ್ರಾವಣವನ್ನು ಗಾಜಿನ ಹಲಗೆ ಮೇಲೆ ಹರಡಿ, ಕ್ಯಾಮರಾದಲ್ಲಿ ಇಟ್ಟು, ಅದರ ಮೇಲೆ ದೃಶ್ಯದ ಬಿಂಬವನ್ನು ಸೆರೆಹಿಡಿದಾಗ ದೃಶ್ಯದಲ್ಲಿರುವ ಬೆಳ್ಳಗಿರುವ ಭಾಗ ಕಪ್ಪಗೂ ಕಪ್ಪಗಿರುವ ಭಾಗ ಬಿಳುಪಾಗಿಯೂ ಬರುತ್ತಿತ್ತು. ಈ ನೆಗೆಟಿವ್ ಚಿತ್ರದಿಂದ ಪ್ರತಿಚಿತ್ರ ತಯಾರಿಸಿದಾಗ ಸ್ವಾಭಾವಿಕವಾದ ಚಿತ್ರ ದೊರೆಯುತ್ತಿತ್ತು.

೧೯ನೇ ಶತಮಾನದಲ್ಲಿ ಮಾಯಾಲಾಂದ್ರ ರೂಪುಗೊಂಡಿತು. ೧೮೨೨ರಲ್ಲಿ ಜೋಸೆಫ್ ನೈಸ್‌ಫೋರ್ ನೀಪ್ಸೆ (Joseph Nicephore Niepce) ಎಂಬಾತ ಗಾಜಿನ ಫಿಲ್ಮ್ ಬಳಸಿ ಕಿಟಕಿಯಿಂದ ಕಾಣುವ ನೋಟವೊಂದನ್ನು ದಾಖಲಿಸಿದ. ಗಾಜಿನ ಫಿಲ್ಮ್ ಮೇಲೆ ಚಿತ್ರ ಮೂಡಲು ಎಂಟು ತಾಸುಗಳು ಬೇಕಾಯಿತು. ಇದೇ ಮೊದಲು ದಾಖಲಿಸಲಾದ ಸ್ತಬ್ಧ ಚಿತ್ರ - ಫೋಟೊಗ್ರಾಫ್.

ಮಾನವನ ಕಣ್ಣು ಒಂದು ವಸ್ತುವನ್ನು ನೋಡುತ್ತಿದ್ದಂತೆ, ಅದನ್ನು ಅವನ ದೃಷ್ಟಿಯ ಪರಿಮಿತಿಯಿಂದ ಸರಿಸಿದ ಮೇಲೂ ಅದು ಸೆಕೆಂಡಿನ ಕಾಲು ಭಾಗದಷ್ಟು ಕಾಲ ಕಣ್ಣಿನಲ್ಲಿ ಉಳಿದುಕೊಂಡಿರುತ್ತದೆ. ಈ ವೈಕಲ್ಯವನ್ನು ಮೊದಲು ಗುರುತಿಸಿದವನು ಐಸಾಕ್ ನ್ಯೂಟನ್ ಎಂಬ ಐರೋಪ್ಯ ವಿಜ್ಞಾನಿ.

ನ್ಯೂಟನ್, ಸೂರ್ಯನ ಬಿಂಬವನ್ನು ಕನ್ನಡಿಯಲ್ಲಿ ನೋಡಿ, ಕನ್ನಡಿಯನ್ನು ಬದಿಗೆ ಸರಿಸಿ ಕತ್ತಲ ಕೋಣೆಯಲ್ಲಿ ಕೂತಾಗಲೂ ಆತನ ದೃಷ್ಟಿಯಲ್ಲಿ ಸೂರ್ಯನ ಬಿಂಬ ಕೆಲಕಾಲ ಕಾಣುತ್ತಲೇ ಇರುವುದನ್ನು ಗಮನಿಸಿದ. ನ್ಯೂಟನ್ನನ ಈ ಶೋಧ ಶರೀರ ವಿಜ್ಞಾನಿಗಳನ್ನು ಆಕರ್ಷಿಸಿತು. ಅವರು ಈ ಬಗೆಗೆ ಮತ್ತಷ್ಟು ಶೋಧ ನಡೆಸಿ ಒಂದು ಸಿದ್ಧಾಂತ ಮಂಡಿಸಿದರು. ಮಾನವನ ಕಣ್ಣಿನಲ್ಲಿ ಇರುವುದು ಬಿಂಬ. ಅದರ ಅರಿವು ಇರುವುದು ಮನುಷ್ಯನ ಮೆದುಳಿನಲ್ಲಿ, ಮುಖ್ಯವಾಗಿ ಮೆದುಳಿನ ಗ್ರಹಣಶಕ್ತಿಯಲ್ಲಿ ಎಂದು ನಿರ್ಣಯಿಸಿದರು. ದೃಷ್ಟಿಯ ಈ ನ್ಯೂನತೆಯನ್ನು, ದೃಷ್ಟಿ ಶೇಷ (ಪರ್‌ಸಿಸ್ಟೆನ್ಸ್ ಆಫ್ ವಿಷನ್) ಎಂದು ವ್ಯಾಖ್ಯಾನಿಸಿದರು.

ಕಂಡ ಚಿತ್ರವನ್ನು ಅತಿ ಸ್ವಲ್ಪಕಾಲ ಕಣ್ಣು ಉಳಿಸಿಕೊಳ್ಳಬಲ್ಲದೆಂಬ ಈ ಅಂಶವೇ ಇಂದಿನ ಚಲನಚಿತ್ರ ತಂತ್ರಜ್ಞಾನಕ್ಕೆ ಮೂಲಾಧಾರ.

ದೃಷ್ಟಿಯ ಸಾತತ್ಯವನ್ನು ಪ್ರತಿಪಾದಿಸಲು ಹಲವಾರು ವಿಜ್ಞಾನಿಗಳು ಹಲವಾರು ಉಪಕರಣಗಳನ್ನು ತಯಾರಿಸಿದರು. ಫ್ಯಾರಡೆ, ರೋಜೆಟ್, ಪ್ಯಾರಿಸ್, ಸ್ಟಾಂಫೆಲ್, ಹಾರ್ನರ್ ಮೊದಲಾದವರು ಅವಿರತ ದೃಷ್ಟಿಯ ತತ್ವದ ಆಧಾರದ ಮೇಲೆ ಚಿತ್ರಗಳ ಚಲನೆಯ ಭ್ರಮೆ ಮೂಡಿಸುವ ಉಪಕರಣಗಳನ್ನು ತಯಾರಿಸಿದರು. ಇವು ಆಟಿಕೆಗಳಾಗಿ ಜನರನ್ನು ಆಕರ್ಷಿಸಿದವು.

ದೃಷ್ಟಿಯ ಸಾತತ್ಯವನ್ನು ನಿರೂಪಿಸಲು ನಿರಂತರವಾಗಿ ಶ್ರಮಿಸಿದವರಲ್ಲಿ ಬೆಲ್ಜಿಯಂನ ಜೋಸೆಫ್ ಪ್ಲೇಟೊ (Joseph Plateau) ಒಬ್ಬ. ಇಪ್ಪತ್ತೆಂಟರ ಈ ತರುಣ ವಿಜ್ಞಾನಿ ಪ್ರಯೋಗಕ್ಕಾಗಿ ತನ್ನನ್ನೇ ಒಡ್ಡಿಕೊಂಡ. ಬರಿಗಣ್ಣಿನಲ್ಲಿ ಸೂರ್ಯನನ್ನೇ ದಿಟ್ಟಿಸಿ ನೋಡಿ ಕಣ್ಣುಗಳನ್ನೇ ಕಳೆದುಕೊಳ್ಳುವ ಸ್ಥಿತಿಗೆ ಬಂದ. ಕೆಲವು ತಿಂಗಳ ನಂತರ ಕಣ್ಣುಗಳು ಸುಧಾರಿಸಿದವು. ಆತ ತನ್ನ ೪೦ನೇ ವಯಸ್ಸಿನಲ್ಲಿ ಅಂಧನಾದ. ಕಣ್ಣು ಹೋದರೂ ಆತ ಛಲ ಬಿಡಲಿಲ್ಲ. ಆತ ನಿರ್ಮಿಸಿದ ಫೆನಾಕಿಸ್ಟೋಸ್ಕೋಪ್ (Phenakistoscope) ಚಿತ್ರಗಳ ಚಲನೆಯ ಭ್ರಮೆ ಮೂಡಿಸುವ ಸಾಧನವಾಗಿತ್ತು. ಪ್ಲೇಟೊ ಆರಂಭದಲ್ಲಿ ತಿರುಗು ಚಕ್ರದ ಮೇಲೆ ಈ ಚಲನೆಯ ವಿವಿಧ ಹಂತಗಳನ್ನು ನಿರೂಪಿಸುವ ರೇಖಾ ಚಿತ್ರಗಳನ್ನು ಅಂಟಿಸಿದ್ದ. ಅನಂತರ ಛಾಯಚಿತ್ರಗಳನ್ನು ಅಂಟಿಸಿದ. ಛಾಯಚಿತ್ರಗಳನ್ನು ತೆರೆಯ ಮೇಲೆ ಪ್ರಕ್ಷೇಪಣೆ ಮಾಡುವ ಕಲ್ಪನೆ ಕೂಡ ಆತನದೇ. (ನೋಡಿ ಚಿತ್ರ - ೧)

೧೮೪೧ರಲ್ಲಿ ಹೆನ್ರಿ ಫಾಕ್ಸ್ ಟಾಲ್‌ಬಾಟ್ (Henry Fox Talbot) ನೆಗೆಟಿವ್‌ಗಾಗಿ ಗಾಜಿನ ಸ್ಥಾನದಲ್ಲಿ ಕಾಗದದ ಬಳಕೆ ಉತ್ತಮವೆಂಬುದನ್ನು ಸಾಧಿಸಿ ತೋರಿಸಿದ.



(ಚಿತ್ರ ೨-ಎ) ವ್ಯಕ್ತಿಯೊಬ್ಬ ನಿಧಾನವಾಗಿ ನಡೆಯುತ್ತಿದ್ದಾಗ ಫೋಟೋಗ್ರಾಫಿಕ್ ರಿವಾಲ್ವರ್ ಬಳಸಿ ದಾಖಲಿಸಿದ ಚಿತ್ರಗಳ ಪಟ್ಟಿಕೆ



(ಚಿತ್ರ ೨-ಬಿ) ಚಲನೆಯ ದಾಖಲೆ : ಬೆಕ್ಕಿನ ಓಟ - ಎಡ್ವರ್ಡ್ ಮಯ್‌ಬ್ರಿಡ್ಜ್ ಚಿತ್ರ



(ಚಿತ್ರ ೪) ದೃಶ್ಯವೊಂದರ ಛಾಯಾಚಿತ್ರವನ್ನು ಮೊದಲ ಬಾರಿಗೆ ದಾಖಲಿಸಿದ ಜೋಸೆಫ್ ನೈಸ್‌ಫೋರ್ ನೀಪ್ಸೆ

ಹಾಗೆಯೇ ಮಾಯಾಲಾಂದ್ರದ ಮೂಲಕ ಚಿತ್ರಗಳನ್ನು ಪ್ರಕ್ಷೇಪಣ ಮಾಡಲು ಗಾಜಿನ ಸ್ಲೈಡ್‌ಗಳನ್ನು ತಯಾರಿಸಿದ.

ಸಿನಿಮಾ ಕ್ಷೇತ್ರಕ್ಕೆ ಸಂಬಂಧಿಸದೆ ಹೋದರೂ ಸಿನಿಮಾ ಕ್ಷೇತ್ರಕ್ಕೆ ಅತ್ಯಂತ ಉಪಯುಕ್ತವಾದ ತಂತ್ರಜ್ಞಾನ ಲಭ್ಯವಾದುದು ಹೊಲಿಗೆ ಯಂತ್ರದಿಂದ. ಹೊಲಿಗೆ ಯಂತ್ರದ ಇಂಟರ್‌ಮಿಟೆಂಟ್ ಮೆಕ್ಯಾನಿಸಮ್ ಲ್ಯುಮಿಯೆರ್‌ನ ಸಿನಿಮಾಟೊಗ್ರಾಫಿಯ ಒಂದು ಮುಖ್ಯ ಅಂಗವಾಯಿತು.

ಕ್ಯಾಲಿಫೋರ್ನಿಯ ಪ್ರಾಂತ್ಯದ ಗೌರ್ನರ್ ಲೇಲ್ಯಾಂಡ್ ಸ್ಟ್ಯಾನ್‌ಫೋರ್ಡ್, ಛಾಯಾಗ್ರಾಹಕ ಎಡ್‌ವರ್ಡ್ ಮಯ್‌ಬ್ರಿಡ್ಜ್ (Eadweard Muybridge)ನಿಗೆ ಕುದುರೆ ತನ್ನ ಓಟದ ಯಾವುದಾದರೂ ಒಂದು ಕ್ಷಣದಲ್ಲಿ ನಾಲ್ಕು ಕಾಲುಗಳನ್ನು ನೆಲದ ಮೇಲೆ ಊರದೆ ಭೂಮಿಯಿಂದ ಮೇಲೆ ಇರುವುದೇ ಎಂಬುದನ್ನು ನಿರೂಪಿಸಲು ಛಾಯಾ ಚಿತ್ರಗಳ ಸಾಕ್ಷ್ಯಾಧಾರ ಒದಗಿಸಲು ಸಾಧ್ಯವೆ ಎಂದು ಆದೇಶಿಸಿದ. ಸ್ಟಾನ್‌ಫೋರ್ಡ್ ತನ್ನ ಗೆಳೆಯನೊಂದಿಗೆ ಪಣ ಕಟ್ಟಿದ್ದ.

ಮಯ್‌ಬ್ರಿಡ್ಜ್ ಒಂದು ವರ್ಷ ಹೆಣಗಿದ. ಆತ ರೈಲ್ವೆ ಎಂಜಿನಿಯರ್ ಆಗಿದ್ದ ತನ್ನ ಗೆಳೆಯ ಜಾನ್ ಐಸಾಕ್ ಸಹಕಾರದೊಡನೆ ಒಂದು ಪ್ರಯೋಗಕ್ಕೆ ಸಿದ್ಧನಾದ. ಕುದುರೆ ಓಡುವ ಹಾದಿಗೆ ಸಮಾನಾಂತರವಾಗಿ ಸೂರ್ಯನಿಗೆ ಎದಿರಾಗಿರುವಂತೆ ದೊಡ್ಡ ತೆರೆ ಕಟ್ಟಿದ. ತೆರೆಯ ಮೇಲೆ ಗ್ರಾಫ್‌ನಂತೆ ಗೆರೆಗಳನ್ನು ರಚಿಸಿದ. ಕುದುರೆ ಓಟದ ಹಾದಿಯ ಇನ್ನೊಂದು ಬದಿಯಲ್ಲಿ ೨೪ ಕ್ಯಾಮರಾಗಳನ್ನು ಸಾಲಾಗಿ ಜೋಡಿಸಿದ. ಪ್ರತಿಯೊಂದು ಕ್ಯಾಮರಾದ ಷಟರ್‌ಗೆ ದಾರವನ್ನು ಕಟ್ಟಿ, ಅದನ್ನು ಕುದುರೆ ಓಡುವ ಹಾದಿಗೆ ಅಡ್ಡವಾಗಿ ಕಟ್ಟಿದ. ಕುದುರೆ ತನ್ನ ಓಟದಲ್ಲಿ ದಾರವನ್ನು ಎಡವಿದಾಗ, ದಾರ ಕ್ಯಾಮರಾದ ಷಟರ್ ಚಲಿಸುವಂತೆ ಮಾಡುತ್ತಿತ್ತು. ಹಾಗೆ ತೆಗೆಯಲಾದ ಚಿತ್ರಗಳಲ್ಲಿ ಒಂದು ಚಿತ್ರದಲ್ಲಿ ಕುದುರೆಯ ನಾಲ್ಕು ಕಾಲುಗಳೂ ನೆಲಕ್ಕೆ ತಾಕದೆ ಮೇಲೆ ಎದ್ದಿದ್ದವು. ಸ್ಟಾನ್‌ಫೋರ್ಡ್ ಪಣ ಗೆದ್ದ.

ಪ್ರಯೋಗ ಅಷ್ಟಕ್ಕೇ ಮುಗಿಯಲಿಲ್ಲ. ಸ್ಟಾನ್‌ಫೋರ್ಡ್ ಮತ್ತು ಮಯ್‌ಬ್ರಿಡ್ಜ್ ಕುದುರೆಯ ಓಟದ ವಿವಿಧ ಹಂತಗಳ ಚಿತ್ರಗಳನ್ನು ನೋಡಿ ಉತ್ಸುಕರಾದರು. ಇದೇ ರೀತಿಯಲ್ಲಿ ಹಲವಾರು ಚಲನೆಯ ಚಿತ್ರಗಳನ್ನು ದಾಖಲಿಸಿದರು. ಆ ಚಿತ್ರಗಳನ್ನು 'ಅನಿಮಲ್ ಲೋಕೋಮೋಷನ್' ಎಂಬ ಶೀರ್ಷಿಕೆ ಕೊಟ್ಟು ಪತ್ರಿಕೆಗಳಲ್ಲಿ ಪ್ರಕಟಿಸಿದರು. ಜನರ ಪ್ರೋತ್ಸಾಹದಾಯಕ ಪ್ರತಿಕ್ರಿಯೆ ಗಮನಿಸಿ, ಅವನ್ನೆಲ್ಲಾ ಪುಸ್ತಕ ರೂಪದಲ್ಲೂ ಅವರು ಪ್ರಕಟಿಸಿದರು.

ಮಯ್‌ಬ್ರಿಡ್ಜ್ ತೆಗೆದ ಚಿತ್ರಗಳನ್ನು ನೋಡಿ ಪ್ಯಾರಿಸ್‌ನ ಡಾ|ಇ.ಜೆ.ಮಾರಿ (Dr. E.J.Marey) ಪ್ರಭಾವಿತನಾದ. ಆತನೂ ಈ ದಿಸೆಯಲ್ಲಿ ಪ್ರಯೋಗಗಳನ್ನು ನಡೆಸಲು ಸಿದ್ಧನಾದ. ಕುದುರೆಗಳಾದರೋ ಅವು ನಿಶ್ಚಿತವಾದ ಹಾದಿಯಲ್ಲಿ ನೇರವಾಗಿ ಓಡುತ್ತವೆ. ವಕ್ರಗತಿಯಲ್ಲಿ ಹಾರುವ ಹಕ್ಕಿಗಳ ಹಾರಾಟವನ್ನು ಚಿತ್ರಿಸುವುದು ಹೇಗೆ ? ಮಯ್‌ಬ್ರಿಡ್ಜ್‌ನ ತಂತ್ರಜ್ಞಾನವನ್ನು ಅನುಸರಿಸಲು ಸಾಧ್ಯವಿಲ್ಲ. ಆಗ ಅವನ ನೆರವಿಗೆ ಬಂದವನು ಜೂಲ್ ಜಾನ್‌ಸೆನ್ (Jules Jansen). ಇವನು ಡಾ|ಮಾರಿಯ ಗೆಳೆಯ. ೧೮೭೪ರಲ್ಲಿ ಸೂರ್ಯನ ಮುಂದೆ ಹಾದು ಹೋದ ಶುಕ್ರಗ್ರಹದ ಛಾಯಾಚಿತ್ರ ತೆಗೆಯಲು ಒಂದು ವಿಶೇಷ ಕ್ಯಾಮರಾ ರೂಪಿಸಿದ್ದ. ೭೦ ಸೆಕೆಂಡಿಗೆ ಒಂದರಂತೆ ಶುಕ್ರಗ್ರಹದ ಛಾಯಾಚಿತ್ರಗಳನ್ನು ತೆಗೆದಿದ್ದ. ಅದೊಂದು ರಿವಾಲ್ವರ್‌ನಂತಹ ಸಾಧನ. ಅದೇ ರಿವಾಲ್ವರ್ ಕ್ಯಾಮರಾ ಬಳಸಿ ತಿರುಗುಚಕ್ರದ ಮೇಲೆ ಹಾರುವ ಹಕ್ಕಿಗಳ ೧೨ ಚಿತ್ರಗಳನ್ನು ಡಾ|ಮಾರಿ ದಾಖಲಿಸಿದ. ಫಲಿತಾಂಶದಿಂದ ಉತ್ತೇಜಿತನಾದ ಡಾ|ಮಾರಿ ರಿವಾಲ್ವರ್ ಮಾದರಿಯ ಕ್ಯಾಮರಾ ಸುಧಾರಿಸುವಲ್ಲಿ ಆಸಕ್ತನಾದ. ಜಿಲೆಟಿನ್ ಪ್ಲೇಟ್‌ಗಳ ಬದಲು ಕಾಗದದ ಫಿಲ್ಮ್‌ರೋಲ್ ಬಳಸಿದ. ಈ ಸುಧಾರಣೆಯಿಂದ ೭೦ ಸೆಕೆಂಡಿಗೆ ಒಂದು ಚಿತ್ರ ತೆಗೆಯಬಲ್ಲ ಕ್ಯಾಮರಾದಲ್ಲಿ ಸೆಕೆಂಡಿಗೆ ೧೦೦ ಚಿತ್ರಗಳನ್ನು ತೆಗೆಯಲು ಸಾಧ್ಯವಾಯಿತು. ಮುಂದೆ ಮತ್ತಷ್ಟು ಸುಧಾರಣೆ ಮಾಡಿದ. ಕ್ಯಾಮರಾ ಪೆಟ್ಟಿಗೆ ಆಕಾರ ತಾಳಿತು. ಇಂಟರ್‌ಮಿಟೆಂಟ್ ಮೆಕಾನಿಸಮ್ (Intermittent Mechanism) ಅಳವಡಿಸಿದ. ಇದು ಡಾ|ಮಾರಿಯ ಕ್ರೊನೋಫೋಟೊಗ್ರಾಫಿಯಾಗಿ ಸಿನಿಕ್ಯಾಮರಾದ ಪೂರ್ವಜನೆನಿಸಿತು.

ಡಾ|ಮಾರಿಗೆ ಸಿನಿಮಾದಲ್ಲಿ ಆಸಕ್ತಿ ಇರಲಿಲ್ಲ. ಆತ ಶರೀರ ವಿಜ್ಞಾನಿ. ೧೮೯೪ರಲ್ಲಿ ಆತ ಪ್ರಕಟಿಸಿದ ತನ್ನ ಗ್ರಂಥ 'ಲ ಮೂವ್‌ಮೆಂಟ್' (Le Mouvement) ಕ್ರೋನೋಫೋಟೊಗ್ರಾಫಿಯಿಂದ ಹೃದಯ ಹಾಗೂ ರಕ್ತನಾಳಗಳ ರೋಗ ನಿದಾನಕ್ಕೆ ನೆರವಾಯಿತೆಂದು ಹೇಳಿದ್ದಾನೆ. ಈತನದು ಸಿನಿಮಾ ಬೆಳವಣಿಗೆಗೆ ಪರೋಕ್ಷವಾದ ಕೊಡುಗೆ. ಎಮಿಲಿ ರೇನಾಡ್ (Emile Reynaud) ತಾನು ೧೮೭೭ರಲ್ಲಿ ರೂಪಿಸಿದ ಪ್ರಾಕ್ಸಿನೋಸ್ಕೋಪ್ ಆಟಿಕೆಯನ್ನು ಅಭಿವೃದ್ಧಿ ಪಡಿಸಲು ನಿರಂತರವಾಗಿ ಶ್ರಮಿಸುತ್ತಿದ್ದ. ಪ್ರಾಕ್ಸಿನೋಸ್ಕೋಪ್‌ಗೆ ಮಾಯಾ ಲಾಂದ್ರದ ತಂತ್ರಜ್ಞಾನವನ್ನು ಜೋಡಿಸಿದ. ಚಲನೆಯ ವಿವಿಧ ಹಂತಗಳನ್ನು ನಿರೂಪಿಸುವ ಕೈ ಬರಹದ ಚಿತ್ರಗಳ ಪಟ್ಟಿಕೆಯನ್ನು ಸಿದ್ಧಪಡಿಸಿ, ಪ್ರಪ್ರಥಮ ಚಲನಚಿತ್ರದ ಸಾರ್ವಜನಿಕ ಪ್ರದರ್ಶನವನ್ನು ಏರ್ಪಡಿಸಿದ (೧೮೯೨). ಚಿತ್ರದ ಚಲನೆ ಮಂದಗತಿಯದಾಗಿತ್ತು. ಓಟವೂ ಸರಾಗವಾಗಿರಲಿಲ್ಲ, ಕುಲುಕಾಡುತ್ತಿತ್ತು.

ವಿದ್ಯುತ್ ಬಲ್ಬ್, ಫೋನೋಗ್ರಾಫ್‌ಗಳನ್ನು ರೂಪಿಸಿದ ಅಮೆರಿಕಾದ ವಿಜ್ಞಾನಿ ಥಾಮಸ್ ಆಲ್ವ ಎಡಿಸನ್ ಚಲಿಸುವ ಚಿತ್ರಗಳನ್ನು ತಯಾರಿಸುವ ಹಾಗೂ ಅದನ್ನು ಪ್ರದರ್ಶಿಸುವ ಯಂತ್ರಗಳನ್ನು ರೂಪಿಸಲು ಸಂಕಲ್ಪಿಸಿದ.

ಈಗಾಗಲೇ ಆತ ಫೋನೋಗ್ರಾಫ್ ರೂಪಿಸಿದ್ದ. ಫೋನೋಗ್ರಾಫ್ ಕೊಳವೆಗಳ ಮೇಲೆ ಸಣ್ಣ ಸಣ್ಣ ಚಿತ್ರಗಳನ್ನು ಮೂಡಿಸುವ ಅವನ ಕಲ್ಪನೆಗೆ ಯಶಸ್ಸು ದೊರೆಯಲಿಲ್ಲ.



(ಚಿತ್ರ ೫) ಚಲನಚಿತ್ರದ ಹುಟ್ಟು : ಹಾದಿಬದಿಯ ದೊಂಬರಾಟದ ಕಲಾವಿದ ಫ್ರೆಡ್ ಆಟ್ ಎಂಬಾತ ಚಲನಚಿತ್ರಗ್ರಾಹಿಯ ಮುಂದೆ ನಾಟಕೀಯವಾಗಿ ಸೀನಿದ. ಇದೇ ಚಲನಚಿತ್ರದ ಮೊದಲ ಪಟ್ಟಿಕೆ. ಈ 'ಸೀನು' ಸಾಂಕ್ರಾಮಿಕವಾಗಿ ಅಮೆರಿಕ, ಯುರೋಪ್‌ಗಳಿಗೆ ಹಬ್ಬಿತು. ಸ್ಥಿರಚಿತ್ರಗಳನ್ನು ಚಲನಚಿತ್ರವಾಗಿ ರೂಪಿಸುವ ತಂತ್ರ ವಿಕಾಸವಾಯಿತು. ಚಲನಚಿತ್ರಗಳನ್ನು ನೋಡಿ ಜನರು ಬೆರಗಾದರು

ಆರಂಭದ ದಿನಗಳಲ್ಲಿ ಛಾಯಾಗ್ರಹಣಕ್ಕೆ ರಾಸಾಯನಿಕ ಲೇಪಿತ ಗಾಜಿನ ಹಲಗೆಗಳನ್ನು ಬಳಸುತ್ತಿದ್ದರು. ಆಮೇಲೆ ಗಾಜಿನ ಸ್ಥಾನದಲ್ಲಿ ಕಾಗದದ ಬಳಕೆ ಬಂದಿತು. ಚಲನಚಿತ್ರದ ಅವಶ್ಯಕತೆ ಪೂರೈಸಲು ಕಾಗದದ ಬದಲು ಸೆಲ್ಯುಲಾಯಿಡ್ ಬಳಸುವಂತೆ ಹ್ಯಾನಿಬಾಲ್ ಗುಡ್‌ವಿನ್ 'ಕೊಡಕ್' ಸಂಸ್ಥೆಯ ಜಾರ್ಜ್ ಈಸ್ಟ್‌ಮನ್‌ಗೆ ನೀಡಿದ ಸಲಹೆ ಅತ್ಯಮೂಲ್ಯವಾಗಿತ್ತು. ಅದರಂತೆ ಕಚ್ಚಾಫಿಲ್ಮ್‌ಗೆ ಸೆಲ್ಯುಲಾಯಿಡ್ ಬಳಸಲು ಈಸ್ಟ್‌ಮನ್ ೧೮೮೮ರಲ್ಲಿ ಆರಂಭಿಸಿದ. ೧೮೮೮ರ ವೇಳೆಗೆ ಕ್ಯಾಮರಾ, ಫಿಲ್ಮ್, ಪ್ರೊಜೆಕ್ಟರ್‌ಗಳ ರೂಪರೇಷೆ ಸ್ಪಷ್ಟವಾಗತೊಡಗಿತ್ತು. ಅಮೆರಿಕ ಮತ್ತು ಯುರೋಪಿನಲ್ಲಿ ಸಂಶೋಧಕರ ನಡುವೆ ಬಿರುಸಿನ ಪೈಪೋಟಿಯೇ ನಡೆದಿತ್ತು.

ಮೊಟ್ಟಮೊದಲ ಚಲನಚಿತ್ರ ತಯಾರಿಸಿ ಪ್ರದರ್ಶಿಸಿದ ಕೀರ್ತಿ ವಿಲಿಯಂ ಫ್ರೀಸಿಗ್ರೀನ್‌ಗೆ ಸಲ್ಲುತ್ತದೆ. ಆತ ತಯಾರಿಸಿದ್ದು ಕೆಲವೇ ಕೆಲವು ಸೆಕೆಂಡ್‌ಗಳ ಕಾಲ ಪ್ರದರ್ಶಿಸಬಹುದಾದ ಒಂದು ತುಂಡು ಫಿಲಂ. ೧೮೯೪ರ ಜನವರಿಯ ಚಳಿಗಾಲದ ರಾತ್ರಿಯಲ್ಲಿ ಆತ ತಾನು ಪ್ರದರ್ಶಿಸಬಹುದಾದ ತುಂಡು ಫಿಲಂ ಸಿದ್ಧಪಡಿಸುವಲ್ಲಿ ಯಶಸ್ವಿಯಾದ; ಚಿತ್ರ ನೋಡಿ ಪುಳಕಿತನಾದ. ಬೀದಿಯಲ್ಲಿ ಹೋಗುತ್ತಿದ್ದ ಪೊಲೀಸ್ ಅಧಿಕಾರಿಯನ್ನು ಒಳಗೆ ಕರೆದು ಚಲಿಸುವ ಚಿತ್ರವನ್ನು ಪ್ರದರ್ಶಿಸಿ, ತನ್ನ ಸಂತೋಷವನ್ನು ಅವನೊಂದಿಗೆ ಹಂಚಿಕೊಂಡ.



(ಚಿತ್ರ ೬) ಎಡಿಸನ್ ರೂಪಿಸಿದ 'ಕಿನಿಟೊಸ್ಕೋಪ್'. ಒಮ್ಮೆ ಒಬ್ಬರೇ ವೀಕ್ಷಿಸಬಹುದಾಗಿದ್ದ ಚಲನಚಿತ್ರ ವ್ಯವಸ್ಥೆ

ಮಾರಿಯಾ, ಥಾಮಸ್ ಅಲ್ವಾ ಎಡಿಸನ್, ಲ್ಯೂಮಿಯೇರ್ ಇವರೇ ಮೊದಲಾದವರಿಗೆ ಫ್ರೀಸಿಗ್ರೀನ್ ತಯಾರಿಸಿದ ತುಂಡು ಫಿಲಂ ದಾರಿದೀಪವಾಯಿತು.

ಎಡಿಸನ್ ಪ್ಯಾರಿಸ್‌ಗೆ ಹೋಗಿ ಮಾರಿಯ ಕ್ರೋನೋಫೋಟೊಗ್ರಾಫಿ ಕ್ಯಾಮರಾ ನೋಡಿ ಮರಳಿದ ಮೇಲೆ ತನ್ನ ಸಹಾಯಕ ಡಬ್ಲ್ಯೂ.ಕೆ.ಎಲ್.ಡಿಕನ್‌ಸನ್ ನೆರವಿನೊಡನೆ ಕಿನಿಟೊಗ್ರಾಫ್ ಚಿತ್ರಗ್ರಾಹಿ ಹಾಗೂ ಚಿತ್ರಗಳನ್ನು ಪ್ರದರ್ಶಿಸಲು 'ಕಿನಿಟೊಸ್ಕೋಪ್' ರೂಪಿಸಿದ.

೧೮೯೩, ಫ್ರೆಡ್‌ಆಟ್ ಎಂಬ ಕಲಾವಿದ ಕಿನಿಟೊಗ್ರಾಫ್ ಮುಂದೆ ನಾಟಕೀಯವಾಗಿ ಸೀನಿದ. ಹೀಗೆ ಹಾದಿ ಬದಿಯ ದೊಂಬರಾಟದ, ಅಪ್ರಸಿದ್ಧನಾದ ಅಮೆರಿಕದ ಕಲಾವಿದ ಚಲನಚಿತ್ರ ಇತಿಹಾಸದಲ್ಲಿ ಮೊದಲ ನಟನಾಗಿ ಅಮರನಾದ. (ಚಿತ್ರ ೫ ನೋಡಿ)

ಕಿನಿಟೊಗ್ರಾಫ್‌ನಲ್ಲಿ ಈಸ್ಟ್‌ಮನ್ ಅವರ ಸೆಲ್ಯುಲಾಯಿಡ್ ಫಿಲ್ಮ್ ಬಳಸಿ ಚಿತ್ರ ತಯಾರಿಸಲು ವೆಸ್ಟ್ ಆರೆಂಜ್‌ನಲ್ಲಿದ್ದ ತನ್ನ ಪ್ರಯೋಗಾಲಯದ ಬಳಿಯೇ ಒಂದು ಪುಟ್ಟ ಸ್ಟುಡಿಯೋವನ್ನು ಎಡಿಸನ್ ನಿರ್ಮಿಸಿದ. ಅದು 'ಬ್ಲ್ಯಾಕ್ ಮರಿಯಾ' (Black Maria) ಎಂದು ಪ್ರಸಿದ್ಧವಾಯಿತು. ೧೮೯೪ರ ವೇಳೆಗೆ ಕಿನಿಟೊಸ್ಕೋಪ್ ಮಾರುಕಟ್ಟೆಗೆ ಬಂದವು. ಈ ಯಂತ್ರದಲ್ಲಿ ಫ್ರೆಡ್‌ಆಟ್ ನಾಟಕೀಯವಾಗಿ ಸೀನುವುದು, ಖ್ಯಾತ ಸ್ಯಾಂಡೊ ತನ್ನ ಎದೆಯನ್ನು ಉಬ್ಬಿಸುವುದು, ಇದೇ ಮೊದಲಾದ ಸ್ವಾರಸ್ಯಕರವಾದ ಕಿರು ಚಲನಚಿತ್ರಗಳನ್ನು ನೋಡಬಹುದಾಗಿತ್ತು. ಕಿನಿಟೊಸ್ಕೋಪ್‌ನ ಮಿತಿಯೆಂದರೆ, ಅವು ಚಿತ್ರಗಳನ್ನು ತೆರೆಯ ಮೇಲೆ ಪ್ರದರ್ಶಿಸುತ್ತಿರಲಿಲ್ಲ; ಒಂದು ಇಣುಕು ಕಿಂಡಿಯ ಮೂಲಕ ಚಲನಚಿತ್ರಗಳನ್ನು ನೋಡಬಹುದಾಗಿತ್ತು. ಅದೂ ಒಮ್ಮೆಗೆ ಒಬ್ಬರು ಮಾತ್ರ. ಆರಂಭದಲ್ಲಿ ಅಮೆರಿಕಾದಲ್ಲಿ ಮಾತ್ರವಲ್ಲ, ಬೇರೆ ದೇಶಗಳಲ್ಲೂ ಕಿನಿಟೊಸ್ಕೋಪ್ ಜನರನ್ನು ಆಕರ್ಷಿಸಿತು.

ಎಡಿಸನ್ ಸಂಶೋಧನೆಗ ಮಿತಿ ಇರಬಹುದು. ಆದರೆ ಆತ ಸಿನಿಮಾ ಜಗತ್ತಿಗೆ ಕೊಟ್ಟ ಕಾಣಿಕೆ ಅಮೂಲ್ಯವಾದುದು. ಎಡಿಸನ್ ತನ್ನ ಸಂಶೋಧನೆಗೆ ಜಗತ್ತಿನಾದ್ಯಂತ ಪೇಟೆಂಟ್ ಮಾಡಿಸಿರಲಿಲ್ಲ. ಜನರಲ್ಲಿ ಸಿನಿಮಾ ಬಗೆಗೆ ಕುತೂಹಲ ಬೇಗ ನಶಿಸಿ ಹೋಗಬಹುದೆಂದು ಆತ ನಂಬಿದ್ದೇ ಅದಕ್ಕೆ ಕಾರಣ. ಚಲನಚಿತ್ರ ತಂತ್ರಗಾರಿಕೆಗೆ ಸಂಬಂಧಪಟ್ಟಂತೆ ಅನೇಕ ಜಟಿಲ ಸಮಸ್ಯೆಗಳನ್ನು ಆತ ಬಿಡಿಸಿದ್ದ. ಆದರಿಂದ ಮುಂದಿನ ಸಂಶೋಧಕರಿಗೆ ಹಾದಿ ಸುಗಮವಾಯಿತು.

ಆತನ ಒಂದು ನಿರ್ದಿಷ್ಟ ಕೊಡುಗೆಯೆಂದರೆ, ಚಿತ್ರಣಕ್ಕೆ ೩೫ ಎಂ.ಎಂ. ಫಿಲ್ಮ್ ಬಳಸಿದ್ದು. ಎಲ್ಲ ಸಂಶೋಧಕರೂ ಅದೇ ಆಕಾರದ ಫಿಲ್ಮನ್ನೇ ತಮ್ಮ ಯಂತ್ರಸಾಧನಗಳಲ್ಲಿ ಬಳಸಲಾರಂಭಿಸಿದರು. ಈ ಆಕಾರ ಅಂತರರಾಷ್ಟ್ರೀಯವಾಗಿ ಮಾನ್ಯವಾಯಿತು. ಚಿತ್ರಗ್ರಾಹಿ ಹಾಗೂ ಚಿತ್ರ ಪ್ರದರ್ಶನ ಯಂತ್ರಗಳು ಯಾವುದೇ ಇರಬಹುದು, ಆದರೆ ಒಂದೇ ಆಕಾರದ ಫಿಲ್ಮ್ ಬಳಕೆಯಿಂದ ಚಿತ್ರಗಳ ಸಾರ್ವತ್ರಿಕ ಪ್ರದರ್ಶನ ಸಾಧ್ಯವಾಯಿತು. ಒಂದು ದೇಶದಲ್ಲಿ ತಯಾರಾದ ಚಿತ್ರ ಇನ್ನೊಂದು ದೇಶದಲ್ಲಿ ಪ್ರದರ್ಶಿಸಲು ಅನುಕೂಲವಾಯಿತು.

ಎಡಿಸನ್ ಇಣುಕು ಕಿಂಡಿಯ ಕಿನಿಟೊಸ್ಕೋಪ್ ಮಾರುಕಟ್ಟೆಗೆ ಬಂದಮೇಲೆ ಎಲ್ಲ ಸಂಶೋಧಕರೂ ಚುರುಕಾದರು. ೧೮೯೫-೧೮೯೬, ಎಲ್ಲ ಸಂಶೋಧಕರ ನಡುವೆ ತೀವ್ರ ಸ್ಪರ್ಧೆ ನಡೆದಿತ್ತು. ಅಂತಿಮವಾಗಿ ಸ್ಪರ್ಧಾಕಣದಲ್ಲಿ ಇದ್ದವರೆಂದರೆ ಫ್ರಾನ್ಸ್‌ನಲ್ಲಿ ಒಗ್ಯೂಸ್ಟ್ ಮತ್ತು ಲೂಯಿ ಲ್ಯುಮಿಯೆರ್ (Auguste & Louis Lumeiers) ಅವರ ಸಿನಿಮಾಟೊಗ್ರಾಫಿ, ಜರ್ಮನಿಯ ಮಾಕ್ಸ್ ಮತ್ತು ಎಮಿಲ್ ಸ್ಕಲೆಡನೋಸ್ಕಿ (Max & Emil Skaldanowski) ಅವರ ಬಯೊಸ್ಕೋಪ್, ಇಂಗ್ಲೆಂಡಿನಲ್ಲಿ ರಾಬರ್ಟ್‌ಪಾಲ್‌ನ ಬಯೊಸ್ಕೋಪ್, ಅಮೆರಿಕಾದಲ್ಲಿ ಥಾಮಸ್ ಆರ್ಮಾಟ್‌ನ ವಿಟಾಸ್ಕೋಪ್. ಇವರೆಲ್ಲರಿಗಿಂತ ವಿಶಿಷ್ಟವಾದುದು ಲೂಯಿ ಸೋದರರ ಸಿನಿಮಾಟೊಗ್ರಾಫಿ ಯಂತ್ರ.

## ಸಿನಿಮಾದ ರಂಗ ಪ್ರವೇಶ

೧೮೯೫ರ ಡಿಸೆಂಬರ್ ೨೮, ಇದು ಸಿನಿಮಾ ವಾಣಿಜ್ಯ ಯುಗಕ್ಕೆ ಕಾಲಿಟ್ಟ ದಿನವೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಅದಕ್ಕೆ ಕಾರಣಕರ್ತರು ಫ್ರಾನ್ಸಿನ ಲ್ಯುಮಿಯೆರ್ ಸಹೋದರರು.

ಒಗ್ಯೂಸ್ಟ್ ಲ್ಯುಮಿಯೆರ್ ಮತ್ತು ಲೂಯಿ ಲ್ಯುಮಿಯೆರ್ (Auguste & Louis Lumiere) ಫ್ರಾನ್ಸಿನ ಲಿಯಾನ್ (Lyon) ನಗರದ ಖ್ಯಾತ ಚಿತ್ರಕಲಾವಿದ ಆಂಟ್ವಾನ್ ಲ್ಯುಮಿಯೆರ್‌ನ ಮಕ್ಕಳು. ಈ ಸೋದರರಿಬ್ಬರಿಗೂ ವಿಜ್ಞಾನದಲ್ಲಿ, ತಂತ್ರಜ್ಞಾನದಲ್ಲಿ ಆಸಕ್ತಿ. ಅನಾರೋಗ್ಯದ ಕಾರಣ ಓದುತ್ತಿದ್ದ ತಾಂತ್ರಿಕ ಶಾಲೆ ಬಿಟ್ಟರು.

ಆಗ ತಾನೆ ಹುಟ್ಟಿಕೊಂಡ ಛಾಯಾಗ್ರಹಣ ಜನರ ಆಸಕ್ತಿ ಕೆರಳಿಸಿತ್ತು. ಛಾಯಾಗ್ರಹಣ ವಸ್ತುಗಳ ಬೇಡಿಕೆ ಹೆಚ್ಚುತ್ತಿತ್ತು. ಅಂಟ್ವಾನ್ ತನ್ನ ಕಲೆಯನ್ನು ಬದಿಗಿಟ್ಟು ಲಾಭದಾಯಕವಾಗಿದ್ದ ಛಾಯಾಗ್ರಹಣ ಸಂಬಂಧ ವಸ್ತುಗಳ ತಯಾರಿಕೆ ಹಾಗೂ ಮಾರಾಟದಲ್ಲಿ ತೊಡಗಿದ್ದ. ಲೂಯಿ ತಂದೆ ತಯಾರಿಸುತ್ತಿದ್ದ ಹಾಗೂ ಮಾರಾಟ ಮಾಡುತ್ತಿದ್ದ ಛಾಯಾಚಿತ್ರಕ್ಕೆ ಅಗತ್ಯವಾದ ವಸ್ತುಗಳಿಗೆ ಸಂಬಂಧಿಸಿದಂತೆ ಪ್ರಯೋಗಗಳನ್ನು ನಡೆಸುತ್ತಿದ್ದ. ಆತ ೧೮೮೧ರಲ್ಲಿ ಛಾಯಾಚಿತ್ರದ ಬೆಳವಣಿಗೆಗೆ ಸಹಾಯಕವಾದ 'ಡ್ರೈಪ್ಲೇಟ್' ಕಂಡುಹಿಡಿದ. ಆಗ ಆವನಿಗೆ ೧೭ ವರ್ಷ. ಡ್ರೈಪ್ಲೇಟ್‌ಗೆ ಬೇಡಿಕೆ ಹೆಚ್ಚಾದ ಕಾರಣ ಆಂಟ್ವಾನ್ ಅದನ್ನು ತಯಾರಿಸಲು ಒಂದು ಕಾರ್ಖಾನೆಯನ್ನೇ ಆರಂಭಿಸಬೇಕಾಯಿತು.

ಪ್ಯಾರಿಸ್‌ನಲ್ಲಿ ಕಿನಿಟೊಸ್ಕೋಪ್‌ನ ಪ್ರದರ್ಶನ ಏರ್ಪಟ್ಟಿತ್ತು. ಆಂಟ್ವಾನ್ ಆಮಂತ್ರಿತನಾಗಿದ್ದ. ಪ್ರದರ್ಶನ ನೋಡಿ ಉತ್ಸುಕನಾದ. ಮನೆಗೆ ಬಂದ ಮೇಲೆ ತನ್ನ ಮಗನಿಗೆ ಕಿನಿಟೊಸ್ಕೋಪ್‌ನಲ್ಲಿ ಪ್ರದರ್ಶನಕ್ಕೆ ಬಳಸಲಾಗುತ್ತಿದ್ದ ಫಿಲ್ಮ್ ಪಟ್ಟಿಕೆಯನ್ನು ಕೊಟ್ಟು ''ನೋಡು ನೀನು ಇದನ್ನು ಮಾಡಬೇಕು. ಎಡಿಸನ್ ಇದನ್ನು ದುಬಾರಿ ಬೆಲೆಗೆ ಮಾರುತ್ತಿದ್ದಾನೆ. ಕಿನಿಟೊಸ್ಕೋಪ್‌ನ ಸ್ಥಳೀಯ ಪ್ರತಿನಿಧಿಗಳು ಫ್ರಾನ್ಸಿನಲ್ಲಿ ಕಡಿಮೆ ವೆಚ್ಚದಲ್ಲಿ ಚಿತ್ರ ತಯಾರಿಸಬೇಕೆಂದಿದ್ದಾರೆ'' ಎಂದ. ಲ್ಯುಮಿಯೆರ್ ಸಹೋದರರಿಬ್ಬರು ತಂದೆಯ ಆದೇಶವನ್ನು ಸವಾಲಾಗಿ ಸ್ವೀಕರಿಸಿದರು. ಮೊದಲು ಇಣುಕು ಕಿಂಡಿಯಲ್ಲಿ ಚಲನಚಿತ್ರ ನೋಡಬಹುದಾದ ಕಿನಿಟೊಸ್ಕೋಪ್‌ನ ಇತಿಮಿತಿಗಳೇನು, ಸಮಸ್ಯೆಗಳೇನು ಎಂಬುದನ್ನು ಪರಿಶೀಲಿಸಿದರು. ಅವರು ಗುರುತಿಸಿದ ಎರಡು ಮುಖ್ಯ ಕೊರತೆಗಳಲ್ಲಿ ಮೊದಲನೆಯದು ಕಿನಿಟೊಗ್ರಾಫ್, ಎಡಿಸನ್ ರೂಪಿಸಿದ್ದ ಈ ಕ್ಯಾಮರಾ ಭಾರಿಗಾತ್ರದ ಉಪಕರಣ. ಸ್ಟುಡಿಯೋದಿಂದ ಹೊರಗೆ ಉಪಯೋಗಿಸಲು ಸಾಧ್ಯವಿಲ್ಲದಂತಹುದು. ಇನ್ನೊಂದು, ವೀಕ್ಷಣೆಗೆ ಬಳಸುವ ಕಿನಿಟೊಸ್ಕೋಪ್‌ನ ವಿನ್ಯಾಸ, ಒಮ್ಮೆಗೆ ಒಬ್ಬನೇ ವೀಕ್ಷಿಸಲು ಸಾಧ್ಯವಾಗುವಂತಹ ಉಪಕರಣ ಅದು.

೧೮೯೫ರ ವರ್ಷಾರಂಭದ ವೇಳೆಗೆ ಲ್ಯುಮಿಯೆರ್ ಸಹೋದರರು ತಮ್ಮದೇ ಆದ ಯಂತ್ರಸಾಧನವನ್ನು ರೂಪಿಸಿದರು. ಛಾಯಾಗ್ರಹಣ, ಮುದ್ರಣ ಮತ್ತು ಪ್ರೇಕ್ಷಣ ಈ ಮೂರು ಕಾರ್ಯವನ್ನು ಒಟ್ಟಿಗೆ ನಿರ್ವಹಿಸುವಂತಹ ಸಾಧನ. ಎಲ್ಲೆಂದರಲ್ಲಿ ಕೊಂಡೊಯ್ಯಬಹುದಾದ ಯಂತ್ರ. ಕೇವಲ ೫ ಕೆ.ಜಿ. ತೂಕ. ಈ ಕ್ಯಾಮರಾ, ಪ್ರಿಂಟರ್, ಪ್ರೊಜೆಕ್ಟರ್‌ನ ಸಂಯುಕ್ತ ತಂತ್ರಜ್ಞಾನಕ್ಕೆ ಸಿನಿಮಾಟೊಗ್ರಾಫಿ (Cinematographe) ಎಂದು ನಾಮಕರಣ ಮಾಡಿದರು. ೧೮೯೫ರ ಫೆಬ್ರವರಿ ೧೩ರಂದು ಪೇಟೆಂಟ್ ಕೂಡ ಪಡೆದರು. ಫ್ರಾನ್ಸ್‌ನಲ್ಲಿ ಮಾತ್ರವಲ್ಲ, ಬೇರೆ ದೇಶಗಳಲ್ಲೂ ಪೇಟೆಂಟ್ ಪಡೆದರು. ಲ್ಯುಮಿಯೆರ್ ಸಹೋದರರು ತಮ್ಮ ಸಂಶೋಧನೆಯನ್ನು ರಹಸ್ಯವಾಗಿ ಇಟ್ಟಿದ್ದರು. ಸಾರ್ವಜನಿಕ ಪ್ರತಿಕ್ರಿಯೆ ಅರಿಯಲು ಆಯ್ಕೆ ಮಾಡಿದ ಆಮಂತ್ರಿತರಿಗಾಗಿ ಖಾಸಗಿ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದರು.

ಈ ಖಾಸಗಿ ಪ್ರದರ್ಶನಗಳಲ್ಲಿ ದೊರೆತ ಪ್ರತಿಕ್ರಿಯೆ ಅವರಿಗೆ ಉತ್ತೇಜನಕರವಾಗಿತ್ತು. ತಮ್ಮ ಸಂಶೋಧನೆ ಜನಪ್ರಿಯವಾಗುವುದೆಂಬುದರಲ್ಲಿ ಅವರಿಗೆ ಪೂರ್ಣ ವಿಶ್ವಾಸವಿತ್ತು. ಜೊತೆಗೆ ಬೇರೆ ಸಂಶೋಧಕರ ಯಂತ್ರಸಾಧನಗಳು ಯಾವ ಗಳಿಗೆಯಲ್ಲಾದರೂ ಮಾರುಕಟ್ಟೆ ಪ್ರವೇಶಿಸಬಹುದೆಂಬ ಆತಂಕವೂ ಇತ್ತು. ಲ್ಯುಮಿಯೆರ್ ಸಹೋದರರು ಮೊದಲು ೫೦ ಕಿರು ಚಿತ್ರಗಳನ್ನು ಸಿದ್ಧಪಡಿಸಿದರು. ಅನಂತರ ಛಾಯಾಗ್ರಾಹಕರ ಒಂದು ಪಡೆಯನ್ನು ಸಿದ್ಧಗೊಳಿಸಿದರು. ಅವರಿಗೆ ಸಿನಿಮಾಟೊಗ್ರಾಫಿ ಯಂತ್ರದಿಂದ ಚಲನಚಿತ್ರಗಳನ್ನು ಚಿತ್ರಿಸುವುದರ ಜೊತೆಗೆ ಅವುಗಳನ್ನು ಪ್ರದರ್ಶಿಸಲೂ ತರಬೇತಿ ನೀಡಿದರು. ಅವರಿಗೆ ಅಗತ್ಯವಾದಷ್ಟು ಸಂಖ್ಯೆಯ ಯಂತ್ರಗಳೂ ಸಿದ್ಧವಾದವು.

೧೮೯೫ರ ಡಿಸೆಂಬರ್ ೨೮ರಂದು ಪ್ಯಾರಿಸ್ಸಿನ ಬೂಲ್ವಾ ಡೆ ಕ್ಯಾಪ್ಸುಸಿ (Boulevard Des Capucines) ಭವನದ ಸಿಂಗಾರವಾದ ನೆಲಮಾಳಿಗೆಯಲ್ಲಿ ಪ್ರದರ್ಶನಕ್ಕೆ ವ್ಯವಸ್ಥೆ ಮಾಡಿದ್ದರು. ಪ್ರವೇಶ ಧನ ಒಂದು ಫ್ರಾಂಕ್. ವಿಶ್ವ ಚಲನಚಿತ್ರ ಇತಿಹಾಸದಲ್ಲಿ ಸ್ಮರಣೀಯ ದಿನವಾದ ಅಂದು, ದುಡ್ಡು ಕೊಟ್ಟು ಬಂದ ಪ್ರೇಕ್ಷಕರಿಗಾಗಿ ಒಟ್ಟು ೯ ಚಿತ್ರಗಳನ್ನು ಪ್ರದರ್ಶಿಸಿದ್ದರು. ಚಲನಚಿತ್ರದ ಬಗೆಗೆ ಜನರ ಕುತೂಹಲ, ಆಸಕ್ತಿ ಬೇಗ ಕುಂದಬಹುದೆಂದು ಲ್ಯುಮಿಯೆರ್ ಸೋದರರ ಲೆಕ್ಕಾಚಾರ. ಬೇರೆಯವರ ಸಂಶೋಧನೆಗಳು ಮಾರುಕಟ್ಟೆಗೆ ಬರುವ ಮೊದಲೇ ಮಾರುಕಟ್ಟೆಯ ಪೂರ್ಣ ಲಾಭ ಪಡೆಯಬೇಕೆಂಬುದು ಅವರ ಹವಣಿಕೆ. ತಾವು ತರಬೇತಿ ನೀಡಿದ ತಂತ್ರಜ್ಞರನ್ನು ಯುರೋಪ್, ಅಮೆರಿಕ, ರಷ್ಯ, ಆಸ್ಟ್ರೇಲಿಯಾ ದೇಶಗಳಿಗೆ ಕಳುಹಿಸಲು ತಡಮಾಡಲಿಲ್ಲ. ಈ ತಂತ್ರಜ್ಞರು ಹೋದೆಡೆಯಲ್ಲೆಲ್ಲಾ ಸಾಕ್ಷ್ಯ ಚಿತ್ರಗಳನ್ನು ಚಿತ್ರೀಕರಿಸಬೇಕು ಮತ್ತು ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸಿ ಹಣ ಗಳಿಸಬೇಕು. ಅವರಿಗೆ ಕಟ್ಟುನಿಟ್ಟಾಗಿ ಪಾಲಿಸಬೇಕಾಗಿದ್ದ ಇನ್ನೊಂದು ಆದೇಶವನ್ನು ನೀಡಿದ್ದರು : ''ಚೆಲುವೆಯರಾದ ಹೆಣ್ಣುಗಳೂ ಸೇರಿದಂತೆ ಯಾರ ಮುಂದೆಯೂ ಯಂತ್ರದ ಬಗೆಗೆ ಬಾಯಿ ಬಿಡಬಾರದು''.

ಲಂಡನ್ನಿನಲ್ಲಿ ಫೆಬ್ರವರಿ ೧೭ರಂದು, ಏಪ್ರಿಲ್‌ನಲ್ಲಿ ವಿಯೆನ್ನಾ ಮತ್ತು ಜಿನೀವಾದಲ್ಲಿ, ಜೂನ್‌ನಲ್ಲಿ ಮ್ಯಾಡ್ರಿಡ್ ಮತ್ತು ನ್ಯೂಯಾರ್ಕ್‌ಗಳಲ್ಲಿ ಪ್ರದರ್ಶನಗಳು ಆರಂಭವಾದವು. ನ್ಯೂಯಾರ್ಕ್ ನಗರವೊಂದಕ್ಕೇ ೨೧ ಮಂದಿ ಆಪರೇಟರ್‌ಗಳನ್ನು ಕಳುಹಿಸಿದ್ದರೂ ಅಲ್ಲಿನ ಬೇಡಿಕೆಯನ್ನು ಪೂರೈಸಲಾಗಲಿಲ್ಲ ಎನ್ನುವುದು ಲ್ಯುಮಿಯೆರ್ ಸೋದರರ ಸಿನಿಮಾಟೊಗ್ರಾಫಿಗೆ ವಿಶ್ವದಾದ್ಯಂತ ದೊರೆತ ಉತ್ಸಾಹದಾಯಕ ಪ್ರೋತ್ಸಾಹಕ್ಕೆ ನಿದರ್ಶನ.

ಈಜಿಪ್ಟ್, ಜಪಾನ್, ಆಸ್ಟ್ರೇಲಿಯಾದಲ್ಲಿ ಜನ ಉತ್ಸಾಹದಿಂದ ಸ್ವಾಗತಿಸಿದರು. ಎಡಿಸನ್‌ನ ಕಿನಿಟೊಸ್ಕೋಪ್‌ನಲ್ಲಿ ಜನರ ಆಸಕ್ತಿ ಕಡಿಮೆಯಾಯಿತು. ಅದರ ಮಾರಾಟದ ಹಕ್ಕನ್ನು ಪಡೆದವರು ಭಾರಿ ನಷ್ಟವನ್ನು ಅನುಭವಿಸಬೇಕಾಯಿತು.

೧೮೯೬ರ ಜುಲೈ ೭ರಂದು ರಷ್ಯಾದ ಝಾರ್ ಚಕ್ರವರ್ತಿ ಮತ್ತು ಆತನ ಪರಿವಾರದವರಿಗಾಗಿಯೇ ಒಂದು ವಿಶೇಷ ಪ್ರದರ್ಶನ ನಡೆಯಿತು. ಅದೇ ದಿನದಂದೇ ಲ್ಯುಮಿಯೆರ್ ಸೋದರರ ಚಲನಚಿತ್ರಗಳ ಪ್ರದರ್ಶನ ಮುಂಬಯಿನಲ್ಲಿ ಆರಂಭವಾಯಿತು.

ಲ್ಯುಮಿಯೆರ್ ಪ್ರದರ್ಶನದಲ್ಲಿದ್ದ ಚಿತ್ರಗಳೆಲ್ಲಾ ಒಂದೆರಡು ನಿಮಿಷಗಳ ಸಾಕ್ಷ್ಯ ಚಿತ್ರಗಳು. ನಿಲ್ದಾಣದಲ್ಲಿ ರೈಲು ಬಂದು ನಿಲ್ಲುವುದು, ಕೆಲಸಗಾರರು ಗೋಡೆ ಉರುಳಿಸುವುದು, ವಿಲಾಸಿ ಸ್ತ್ರೀ-ಪುರುಷರ ವಾಹನ ವಿಹಾರ, ಕೆಲಸಗಾರರು ಕಾರ್ಖಾನೆಯಿಂದ ಮನೆಗೆ ಹೋಗುವುದು, ಇದೇ ಮಾದರಿಯ ಚಟುವಟಿಕೆಗಳ ಚಿತ್ರ.

ಜಾದೂಗಾರ ಜಾರ್ಜ್‌ಮೆಲೆಗೆ ಈ ದಾಖಲು ಚಿತ್ರಗಳಲ್ಲಿ ಜಾದೂ ಚಮತ್ಕಾರವನ್ನು ಮಿಲನ ಮಾಡಿ ಕುತೂಹಲ ಕೆರಳಿಸುವ ಚಿತ್ರಗಳನ್ನು ನಿರ್ಮಿಸುವ ತವಕ.

ಲ್ಯುಮಿಯೆರ್ ಸಹೋದರರಲ್ಲಿ ಒಬ್ಬನನ್ನು ಭೇಟಿಯಾಗಿ ತನ್ನ ಆಶಯ ತಿಳಿಸಿದ. ಆಗ ಆತನಿಗೆ ದೊರೆತ ಉತ್ತರ ''ಅಯ್ಯಾ ತರುಣ, ನನ್ನ ಸಂಶೋಧನೆ ಮಾರಾಟಕ್ಕೆ ಇಲ್ಲ. ಇದನ್ನು ನಂಬಿ ಹಾಳಾಗಬೇಡ. ಸದ್ಯಕ್ಕೆ ಇದು ಕೇವಲ ವೈಜ್ಞಾನಿಕ ಕುತೂಹಲವಾಗಿ ಲಾಭ ಮಾಡುತ್ತಿರಬಹುದು. ಆದರೆ ಇದಕ್ಕೆ ವ್ಯಾಪಾರಿ ಭವಿಷ್ಯ ಇಲ್ಲ'' ಎಂದು ಆತನ ಉತ್ಸಾಹಕ್ಕೆ ತಣ್ಣೀರೆರಚಿದ.

ಲ್ಯುಮಿಯೆರ್ ಸೋದರರಿಗೆ ಸಿನಿಮಾ, ಮನರಂಜನೆಯ ಪ್ರಚಂಡ ಮಾಧ್ಯಮವಾಗಿ ವಿಕಾಸಗೊಳ್ಳುವುದೆಂಬ ಕಲ್ಪನೆಯೇ ಆಗ ಇರಲಿಲ್ಲ.

ಜಾರ್ಜ್‌ಮೆಲೆ ನಿರಾಶನಾಗಲಿಲ್ಲ. ಲಂಡನ್ನಿಗೆ ಹೋಗಿ ರಾಬರ್ಟ್ ಪಾಲ್‌ನನ್ನು ಭೇಟಿ ಮಾಡಿ, ವ್ಯವಹಾರ ಕುದುರಿಸಿದ. ಅನೇಕ ಚಮತ್ಕಾರಿಕ ಚಿತ್ರಗಳನ್ನು ನಿರ್ಮಿಸಿದ. ಅದಕ್ಕೆ ಅಗತ್ಯವಾದ ರೀತಿಯಲ್ಲಿ ಸಿನಿಮಾವನ್ನು ದುಡಿಸಿಕೊಳ್ಳಲು ಅಗತ್ಯವಾದ ತಂತ್ರಗಾರಿಕೆಯನ್ನು ಹುಡುಕಿಕೊಂಡ. ಚಮತ್ಕಾರಿಕ ಚಿತ್ರಗಳ ಜನಕನಾದ ಆತ ಜೂಲ್ಸ್ ವರ್ನೆಯ ಕಟ್ಟು ಕತೆಯ ಆಧಾರದ ಮೇಲೆ ರೂಪಿಸಿದ 'ವಾಯೇಜ್ ಟು ಮೂನ್' (೧೯೦೨) ಇಂದಿಗೂ ಕುತೂಹಲಕಾರಿ ಚಿತ್ರ.

## ಭಾರತದಲ್ಲಿ

ಇಪ್ಪತ್ತನೆಯ ಶತಮಾನಕ್ಕೆ ನಾಲ್ಕು ವರ್ಷಗಳಿರುವಂತೆ ತಾನು ಜಗತ್ತಿನಲ್ಲಿ ಕಣ್ಣು ಬಿಟ್ಟ ಆರು ತಿಂಗಳ ಒಳಗಾಗಿಯೇ ಸಿನಿಮಾ ಭಾರತಕ್ಕೆ ಬಂದಿತು.

ಲ್ಯುಮಿಯೆರ್ ಪ್ರತಿನಿಧಿ ಮಾರಿಸ್ ಸೆಸ್ಟಿಯರ್ (Maurice Sestiar) ೧೮೯೬ನೇ ಜುಲೈ ೭ರಂದು ಮುಂಬಯಿಯ ಗೇಟ್‌ವೇ ಆಫ್ ಇಂಡಿಯಾಗೆ ಹೋಗುವಲ್ಲಿದ್ದ (ಕಾಲಾಫೋಡಾ ಪ್ರದೇಶ. ಈಗಿನ ಜಹಾಂಗೀರ್ ಆರ್ಟ್ ಗ್ಯಾಲರಿ ಮುಂದೆ) ಪ್ರಸಿದ್ಧ ವಾಟ್ಸನ್ ಹೋಟೆಲಿನಲ್ಲಿ (ಎಸ್‌ಪ್ಲನೇಡ್ ಹೋಟೆಲ್) ಭಾರತದಲ್ಲಿನ ಮೊದಲ ಪ್ರದರ್ಶನ ನೀಡಿದ. ದಿನಕ್ಕೆ ನಾಲ್ಕು ಪ್ರದರ್ಶನಗಳು. ಪ್ರವೇಶ ಧನ ಒಂದು ರೂಪಾಯಿ. ಮುಂಗಾರಿನ ಮಳೆ ಜನರ ಉತ್ಸಾಹ ತಗ್ಗಿಸಲಿಲ್ಲ. ಪ್ರದರ್ಶಿಸಲಾದ ಚಿತ್ರಗಳು - 'ಎಂಟ್ರಿ ಆಫ್ ಸಿನಿಮಾಟೊಗ್ರಾಫಿ', 'ಆರೈವಲ್ ಆಫ್ ಎ ಟ್ರೈನ್', 'ಎ ಡೆಮಾಲಿಷನ್', 'ಲೀವಿಂಗ್ ದಿ ಫ್ಯಾಕ್ಟರಿ', 'ಲೇಡೀಸ್ ಅಂಡ್ ಸೋಲ್ಜರ್ಸ್ ಆನ್ ದಿ ವೀಲ್ಸ್'. ಎಲ್ಲ ಪ್ಯಾರಿಸ್‌ನಲ್ಲಿ ಮೊದಲ ಸಾರ್ವಜನಿಕ ಪ್ರದರ್ಶನಕ್ಕೆ ಆಯ್ದ ಕಿರು ಚಿತ್ರಗಳೇ.

ಒಂದು ವಾರದ ನಂತರ ನಾವೆಲ್ಟಿ ಥಿಯೇಟರಿನಲ್ಲಿ (ರಂಗಮಂದಿರ) ಪ್ರದರ್ಶನಕ್ಕೆ ವ್ಯವಸ್ಥೆ ಮಾಡಲಾಯಿತು. ಇದುವರೆಗೆ ಪ್ರದರ್ಶಿಸುತ್ತಿದ್ದ ಕಾರ್ಯಕ್ರಮಗಳ ಜೊತೆಗೆ ಇನ್ನಷ್ಟು ಹೊಸ ಕಾರ್ಯಕ್ರಮಗಳನ್ನು ಸೇರಿಸಲಾಯಿತು. ಟಿಕೆಟ್ಟಿನ ದರ ಎಂಟು ಆಣೆಯಿಂದ ಎರಡು ರೂಪಾಯಿಯವರೆಗೆ ಇತ್ತು. ಮುಂದಿನ ಆಸನಗಳಿಗೆ ಹೆಚ್ಚಿನ ದರ, ಹಿಂದಿನ ಆಸನಗಳಿಗೆ ಕಡಿಮೆ, ರಂಗಮಂದಿರದ ವ್ಯವಸ್ಥೆಯ ಹಾಗೆಯೇ. ಚಲನಚಿತ್ರಗಳನ್ನು ನೋಡಿ ಜನ ಬೆರಗಾದರು. ಮುಂದಿನ ೩೫ ದಿನಗಳೂ ಹೌಸ್‌ಫುಲ್.

ಲ್ಯುಮಿಯೆರ್ ಸೋದರರು ಮೊದಲೇ ನಿರೀಕ್ಷಿಸಿದ್ದಂತೆ ಕ್ರಮೇಣ ಸ್ಟುವರ್ಟ್‌ನ ವಿಟಾಗ್ರಾಫ್, ಮೋಟಾಸ್ಕೋಪ್, ಆಂಡರ್ಸನ್ಸ್‌ಸ್ಕೊಫ್‌ಗ್ರಾಫ್ ಮೊದಲಾದ ಸಂಸ್ಥೆಗಳ ಸಿನಿಮಾಗಳು ವಿಳಂಬವಾಗಿ ರಂಗಪ್ರವೇಶ ಮಾಡಿದವು. ಆಟದ ಮೈದಾನಗಳಲ್ಲಿ ನಿರ್ಮಿಸಲಾದ ಗುಡಾರಗಳಲ್ಲಿ, ಇಲ್ಲವೆ ಲಭ್ಯವಿದ್ದ ನಾಟಕ ಮಂದಿರಗಳಲ್ಲಿ, ಇಲ್ಲವೆ ಹೋಟೇಲುಗಳಲ್ಲಿ ಅವುಗಳ ಪ್ರದರ್ಶನ ನಡೆಯುತ್ತಿದ್ದವು.

ಲ್ಯುಮಿಯೆರ್ ಸೋದರರ ಚಿತ್ರಗಳನ್ನು ನೋಡಿದವರಲ್ಲಿ ಒಬ್ಬರು ಹರಿಶ್ಚಂದ್ರ ಸಖಾರಾವ್ ಭಾಟ್‌ವಡೇಕರ್ (ಮುಂದೆ ಅವರನ್ನು ಜನರು ಪ್ರೀತಿಯಿಂದ 'ಸಾವೇದಾದಾ' ಎಂದು ಕರೆದರು). ಸಾವೇದಾದಾ ವೃತ್ತಿಪರ ಛಾಯಾಗ್ರಾಹಕರು. ಕೆನಡಿ ಬ್ರಿಡ್ಜ್ ಬಳಿ ಅವರ ಸ್ಟುಡಿಯೋ ಇತ್ತು. ಅಲ್ಲಿ ಛಾಯಾಚಿತ್ರ ಸಾಮಗ್ರಿಗಳ ಮಾರಾಟ ಮಾಡುತ್ತಿದ್ದರು. ಅವರ ವ್ಯಾಪಾರಿ ಬುದ್ಧಿ ಚುರುಕಾಯಿತು. ವಿಳಂಬ ಮಾಡದೆ ಪ್ರೊಜೆಕ್ಟರ್ ಮತ್ತು ಕೆಲವು ಕಿರುಚಿತ್ರಗಳನ್ನು ಕೊಂಡರು. ಶ್ರೀಮಂತರ ಮನೆಯಲ್ಲಿ ಅವುಗಳ ಖಾಸಗಿ ಪ್ರದರ್ಶನ ಏರ್ಪಡಿಸುತ್ತಿದ್ದರು.

ಕುಲೀನ ಸ್ತ್ರೀಯರು, ಸಾರ್ವಜನಿಕ ಸ್ಥಳಗಳಲ್ಲಿ ನಡೆಯುತ್ತಿದ್ದ ಸಿನಿಮಾದಂತಹ ಪ್ರದರ್ಶನಗಳನ್ನು ನೋಡುವುದು ಸಭ್ಯತೆಯ ಲಕ್ಷಣವಲ್ಲವೆಂದು ಪರಿಗಣಿಸಲಾಗುತ್ತಿದ್ದ ದಿನಗಳವು. ಶ್ರೀಮಂತ ವರ್ಗದ ಈ ಮಹಿಳೆಯರಿಗೂ ಸಿನಿಮಾ ನೋಡುವ ಕುತೂಹಲ. ಸಿನಿಮಾ ಪ್ರದರ್ಶನ ಏರ್ಪಡಿಸುತ್ತಿದ್ದ ಏಕೈಕ ಭಾರತೀಯರಾದ ಸಾವೇದಾದ ಅವರ ಸಂಚಾರಿ ಸಿನಿಮಾ ಈ ವರ್ಗದವರ ಸೇವೆಗೆ ಸದಾ ಸಿದ್ಧವಿರುತ್ತಿತ್ತು. ದಾದಾ ಅವರಿಗೆ ಕೈ ತುಂಬಾ ಕಾಸು.

ಸಿನಿಮಾದಲ್ಲಿ ಭಾರತೀಯ ಹಿನ್ನೆಲೆಯ ಚಿತ್ರಗಳು ಬರಲಾರಂಭಿಸಿದವು. ಅವೆಲ್ಲ ಹೊರಗಿನಿಂದ ಬಂದ ಛಾಯಾಗ್ರಾಹಕರು ಚಿತ್ರಿಸಿದ್ದು - ಅಂದಿನ ಸಿನೆಮಾಕ್ಕೆ ಅಗತ್ಯವಾದ ಕಿರು ಚಿತ್ರಗಳ ತಯಾರಿಕೆಯು ಲಾಭದಾಯಕವೆಂಬುದನ್ನು ಸಾವೇದಾದಾ ಮನಗಂಡರು. ಕ್ಯಾಮರಾ, ಪ್ರಿಂಟರ್, ಪ್ರೊಜೆಕ್ಟರಾಗಿ ಕೆಲಸ ಮಾಡುವ ಲ್ಯುಮಿಯೆರ್ ಅವರ ಉಪಕರಣವನ್ನು ಕೊಳ್ಳುವುದು ಅವರ ಶಕ್ತಿಗೆ ಮೀರಿದ್ದು. ೨೧ ಗಿನಿ ಬೆಲೆಯ ಲಂಡನ್ನಿನ ರಿಲೇ ಸೋದರರ ತಯಾರಿಕೆಯ ಕ್ಯಾಮರಾ ಕೊಂಡರು.

೧೮೯೭ರ ವರ್ಷಾಂತ್ಯದಲ್ಲಿ ಕ್ಯಾಮರಾ ಕೈ ಸೇರಿತು. ಮೊದಲು ಚಿತ್ರೀಕರಿಸಿದ್ದು ಸ್ಥಳೀಯ ಪೈಲ್ವಾನರ ಕುಸ್ತಿ ಪಂದ್ಯ ಮತ್ತು ಕೋತಿಗಳಿಗೆ ಸರ್ಕಸ್ ತಯಾರಿ. ಚಿತ್ರಿಸಿದ ಫಿಲ್ಮನ್ನು ಸಂಸ್ಕರಿಸಲು ಲಂಡನ್ನಿಗೆ ಕಳುಹಿಸಬೇಕಾಯಿತು.



(ಚಿತ್ರ ೬) ಲ್ಯುಮಿಯೆರ್ ಸಹೋದರರ ಆರಂಭದ ಚಿತ್ರಪ್ರದರ್ಶಕ

ಸಾವೇದಾದಾ ಅವರಿಗೆ ಉದ್ಯಮದಲ್ಲಿ ಯಶಸ್ಸು ದೊರೆಯಿತು. ಅನಂತರ ಅವರು ಲ್ಯುಮಿಯೆರ್ ಸಿನಿಮಾಟೋಗ್ರಾಫಿ ಉಪಕರಣ ಕೊಂಡು ಮೊದಲು ಚಿತ್ರಿಸಿದ್ದು ಒಂದು ಸ್ಮರಣೀಯ ಸಾಕ್ಷ್ಯಚಿತ್ರ. ಸರ್ ಎಂ.ವಿ.ಭಾವನಾಗರಿ ಅವರ ಸ್ವದೇಶಾಗಮನದ ಕಾರ್ಯಕ್ರಮ. ಅಪಾಲೊ ಬಂದರಿನಲ್ಲಿ ಅವರ ಸ್ವಾಗತ ಹಾಗೂ ಖೋಜಾ ಸಮಾಜದವರಿಂದ ಅವರಿಗೆ ಸತ್ಕಾರದ ಕಾರ್ಯಕ್ರಮ. ಅನಂತರ ರ್‍ಯಾಂಗ್ಲರ್ ಪರಾಂಜಪೆ ಅವರ ಸ್ವದೇಶಾಗಮನದ ಸಾಕ್ಷ್ಯಚಿತ್ರ. ಸಾವೇದಾದಾ ಅವರು ದಿನಂಪ್ರತಿ ನಡೆವ ಸಭೆ ಸಮಾರಂಭ ಮತ್ತಿತರ ಸ್ವಾರಸ್ಯಕರ ಚಟುವಟಿಕೆಗಳನ್ನು ಚಿತ್ರಿಸಿ, ಸಂಸ್ಕರಿಸಿ ಪ್ರದರ್ಶಿಸುವುದನ್ನು ಕರಗತ ಮಾಡಿಕೊಂಡರು, ಜನಮನ್ನಣೆ ಪಡೆದರು.

ಸಾವೇದಾದಾ ಅವರ ಸಾಹಸ ಪ್ರವೃತ್ತಿ, ಕಲೆಗಾರಿಕೆಯನ್ನು ಮೆಚ್ಚಿದ ನ್ಯಾಯಾಧೀಶ ಜಾನ್‌ಮೂರ್ ಮದರಾಸಿನಲ್ಲಿ ಸಾವೇದಾದಾ ಅವರ ಚಿತ್ರಗಳ ಪ್ರದರ್ಶನಕ್ಕೆ ವ್ಯವಸ್ಥೆ ಮಾಡಿದ. ಈ ಪ್ರದರ್ಶನ ನೋಡಿ ಪ್ರಭಾವಿತರಾದವರಲ್ಲಿ ಮದರಾಸಿನ ಆರ್.ವೆಂಕಯ್ಯ ಅವರು ಒಬ್ಬರು. ಅವರು ತಮ್ಮ ಮಗ ಆರ್.ಪ್ರಕಾಶನನ್ನು ಜರ್ಮನಿಗೆ ತರಬೇತಿ ಪಡೆಯಲು ಕಳುಹಿಸಿದರು. ಆರ್.ಪ್ರಕಾಶ್ ಖ್ಯಾತ ನಿರ್ದೇಶಕ ಸಿಸಿಲ್ ಬಿ ಡಿಮಿಲಿ ಅವರ ಸಹಾಯಕನಾಗಿ ದುಡಿದು ಅನುಭವ ಗಳಿಸಿ ಹಿಂದಿರುಗಿದ. ಭಾರತಕ್ಕೆ ಮರಳಿದ ಮೇಲೆ ಆತ 'ಭೀಷ್ಮ ಪ್ರತಿಜ್ಞಾ' (೧೯೨೧) ಚಿತ್ರ ತಯಾರಿಸಿದ.

ಸಾವೇದಾದಾ ಅವರ ಚಿತ್ರಣ ಕೌಶಲದಿಂದ ಪ್ರಭಾವಿತರಾದ ಬ್ರಿಟಿಷರು ಸಾವೇದಾದಾರನ್ನು ದೆಹಲಿಗೆ ಆಮಂತ್ರಿಸಿದರು. ಅಲ್ಲಿ ಅವರು ೧೯೦೩ರ ಫೆಬ್ರವರಿ / ಮಾರ್ಚ್ ತಿಂಗಳಲ್ಲಿ ನಡೆದ ವೈಸ್‌ರಾಯ್ ಲಾರ್ಡ್ ಕರ್ಜನ್‌ನ ದೆಹಲಿ ದರ್ಬಾರನ್ನು ಚಿತ್ರಿಸಿ ಮೆಚ್ಚುಗೆ ಪಡೆದರು.

ಸಾವೇದಾದಾ ಅವರು ಶ್ರೀಕೃಷ್ಣನ ಕುರಿತಾದ ಕಥಾಚಿತ್ರವನ್ನು ತಯಾರಿಸಲು ಸಂಕಲ್ಪಿಸಿದ್ದರು. ಅವರ ಯೋಜನೆಯಲ್ಲಿ ಬಲಗೈ ಬಂಟನಾಗಿ ದುಡಿಯಬೇಕಾಗಿದ್ದ ಅವರ ತಮ್ಮ ರಾಮಕೃಷ್ಣ ಅಕಾಲ ಮೃತ್ಯುವಿಗೀಡಾದ. ಈ ಆಘಾತದಿಂದ ಸಾವೇದಾದಾ ಸಿನಿಕ್ಯಾಮರಾ ಮುಟ್ಟಲಿಲ್ಲ. ಅದನ್ನು ೨೦೦ ರೂಪಾಯಿಗೆ ಮಾರಿಬಿಟ್ಟರು. ಮತ್ತೆ ಸಿನಿಮಾ ಉದ್ಯಮದಲ್ಲಿ ತೊಡಗಲೇ ಇಲ್ಲ. ಅವರು ಪುನಃ ಕಾಣಿಸಿಕೊಂಡಿದ್ದು ೧೯೫೬ರಲ್ಲಿ ಭಾರತೀಯ ವಾಕ್ಚಲನ ಚಿತ್ರದ ಬೆಳ್ಳಿಹಬ್ಬದ ಸಮಾರಂಭದಲ್ಲಿ.

ಕಾರೊನೇಷನ್ ಸಿನಿಮಾದ ಮ್ಯಾನೇಜರಾಗಿದ್ದ ಎಸ್.ಎನ್.ಪಾಟಣಕರ್ ಅವರು ತಮ್ಮ ಇಬ್ಬರು ಸಹೋದ್ಯೋಗಿಗಳಾದ ವಿ.ಪಿ.ಧಾರ್‌ಕರ್ ಮತ್ತು ಎ.ಪಿ.ಕರಂದೀಕರ್ ಅವರ ನೆರವಿನಿಂದ ಸಾವೇದಾದಾ ಅವರಂತೆಯೇ ಸುದ್ದಿ ಚಿತ್ರಗಳನ್ನು ತಯಾರಿಸ ತೊಡಗಿದರು. ೧೯೧೧ರಲ್ಲಿ ದೆಹಲಿಯಲ್ಲಿ ನಡೆದ ಐದನೆ ಜಾರ್ಜ್ ಚಕ್ರವರ್ತಿಯ ದೆಹಲಿ ದರ್ಬಾರ್‌ನ ಚಿತ್ರೀಕರಣ ನಡೆಸಿದರು.

ಅನಂತರ ಪಾಟಣಕರ್ ಯೂನಿಯನ್ ಎಂಬ ಸಂಸ್ಥೆ ಸ್ಥಾಪಿಸಿ 'ಸತಿ ಸಾವಿತ್ರಿ' ಕಥಾಚಿತ್ರ ನಿರ್ಮಾಣಕ್ಕೆ ತೊಡಗಿದರು. ಚಿತ್ರೀಕರಣ ಮುಗಿಯಿತು. ಏನೋ ಅಳುಕು, ಚಿತ್ರವನ್ನು ಸಂಸ್ಕರಿಸಿ ನೋಡಿದರೆ ಫಿಲ್ಮ್ ಕಪ್ಪಾಗಿ ಹೋಗಿತ್ತು.

## ತೊಟ್ಟಿಲು ತೂಗಿದ ಕೈಗಳು

ಮುಂಬಯಿಗೆ ಕಾಲಿಟ್ಟ ಸಿನಿಮಾ ಬ್ರಿಟಿಷ್ ಇಂಡಿಯಾದ ರಾಜಧಾನಿಯಾಗಿದ್ದ ಕಲ್ಕತ್ತಾ ಹಾಗೂ ಮದರಾಸಿಗೂ ಕಾಲಿಡಲು ತಡವಾಗಲಿಲ್ಲ.

ಕಲ್ಕತ್ತಾದಲ್ಲಿ ಹೀರಾಲಾಲ್ ಸೇನ್ ೧೮೯೮ರಲ್ಲೇ ಕ್ಯಾಮರಾ ಕೊಂಡ. ಕಲ್ಕತ್ತಾದ ಕ್ಲಾಸಿಕ್ ಥಿಯೇಟರ್‌ನಲ್ಲಿ ಅಭಿನಯಿಸಲಾಗುತ್ತಿದ್ದ ನಾಟಕಗಳ ಭಾಗಗಳನ್ನು ಚಿತ್ರಿಸಿ, ಇತರ ನಾಟಕ ಮಂದಿರಗಳಲ್ಲಿ ಸಹ ಆಕರ್ಷಣೆಯಾಗಿ ಪ್ರದರ್ಶಿಸುತ್ತಿದ್ದ. ಜೊತೆಗೆ ಸುದ್ದಿ ಚಿತ್ರಗಳನ್ನು ತೆಗೆಯುತ್ತಿದ್ದ.

ಮುಂಬಯಿನಿಂದ ಕಲ್ಕತ್ತಾಗೆ ಹೋಗಿ ರಂಗಭೂಮಿಯಲ್ಲಿ ಸಕ್ರಿಯವಾಗಿ ಪಾತ್ರವಹಿಸುತ್ತಿದ್ದ ಜಮಶೇಟ್‌ಜಿ ಫ್ರೇಮ್‌ಜಿ ಮದನ್ ಮದ್ಯ, ಔಷಧಿ, ಆಹಾರ ಪದಾರ್ಥಗಳ ಆಮದು ವ್ಯಾಪಾರದಲ್ಲಿ ತೊಡಗಿದ್ದ. ವಿಮಾ ಉದ್ಯಮದ ಸಂಪರ್ಕ ಕೂಡಾ ಇಟ್ಟುಕೊಂಡಿದ್ದ. ಪಾಥೆ ಕಂಪೆನಿಯ ಸಂಪರ್ಕ ಬೆಳೆಸಿ ಬಯಾಸ್ಕೋಪ್ ಪ್ರದರ್ಶನ ನಡೆಸಲು ಸಿದ್ಧನಾದ. ಮೊದಲು ಮೈದಾನದಲ್ಲಿ ಗುಡಾರ ಹಾಕಿ ಚಿತ್ರ ಪ್ರದರ್ಶನ ನಡೆಸಿದ. ವ್ಯಾಪಾರ ಕುದುರಿದ ಕಾರಣ ತನ್ನ ಕಾರ್ಯಕ್ಷೇತ್ರ ವಿಸ್ತರಿಸಿದ. ಚಿತ್ರ ತಯಾರಿಕೆ, ಹಂಚಿಕೆ, ಪ್ರದರ್ಶನ ಮೂರು ಕ್ಷೇತ್ರಗಳಲ್ಲೂ ಸಾರ್ವಭೌಮನಾಗಿ ಮೆರೆದ. ಆತನ ವ್ಯಾಪಾರ ವಹಿವಾಟು ಬರ್ಮಾ ಮತ್ತು ಸಿಂಹಳಕ್ಕೂ ವಿಸ್ತರಿಸಿತ್ತು. ೧೯೧೯ರಿಂದ ೧೯೩೧ರ ಅವಧಿಯಲ್ಲಿ ಮದನ್ ಥಿಯೇಟರ್ಸ್ ೮೨ ಸಿನಿಮಾಗಳನ್ನು

ನಿರ್ಮಿಸಿತು. ಮದನ್ ಕಲ್ಕತ್ತಾದಲ್ಲಿ ಎಲ್‌ಫಿನ್‌ಸ್ಟನ್ ಪಿಕ್ಚರ್ ಪ್ಯಾಲೆಸ್ ಕಟ್ಟಿದ (೧೯೦೭). ಇದೇ ಭಾರತದ ಮೊದಲ ಚಿತ್ರಮಂದಿರ. ಮುಂದಿನ ಒಂದು ದಶಕದಲ್ಲಿ ಆವನು ೩೭ ಚಿತ್ರಮಂದಿರಗಳನ್ನು ನಿರ್ಮಿಸಿದ್ದ.

ಅಬ್ದುಲ್ಲಾ ಯುಸೂಫ್ ಅಲಿ ೧೯೦೧ರಿಂದ ೧೯೦೭ರವರೆಗೆ ಸಂಚಾರಿ ಸಿನಿಮ ಪ್ರದರ್ಶಕನಾಗಿ ಸಿಂಗಾಪುರ್, ಸುಮಾತ್ರ, ಜಾವ, ಬರ್ಮ, ಸಿಲೋನ್‌ನಲ್ಲಿ ಸಂಚಾರ ಮಾಡಿದ. ಆನಂತರ ೧೯೦೮ರಿಂದ ೧೯೧೪ರವರೆಗೆ ಅತನ ಚಟುವಟಿಕೆ ಭಾರತಕ್ಕೆ ಮಾತ್ರ ಸೀಮಿತವಾಗಿತ್ತು.

ಯುಸೂಫ್ ಆಲಿ ಮುಂಬಯಿನ ರೆಡ್‌ಲೈಟ್ ಪ್ರದೇಶದಲ್ಲಿದ್ದ ಅಲೆಕ್ಸಾಂಡ್ರಾ ಸಿನಿಮಾದ ಪಾಲುದಾರನಾದ (೧೯೧೪). ನಂತರ ಮೆಜೆಸ್ಟಿಕ್ ಚಿತ್ರಮಂದಿರ ಕಟ್ಟಿದ. ಪ್ರಥಮ ವಾಕ್ಚಿತ್ರ 'ಆಲಂ ಆರಾ' ತೆರೆ ಕಂಡದ್ದು ಇದೇ ಚಿತ್ರಮಂದಿರದಲ್ಲಿ.

ಭಾರತದಲ್ಲಿ ಸಿನಿಮಾ ಪ್ರದರ್ಶನದ ಆರಂಭ ದಿನಗಳ ಸಿರಿ ಬೆಳೆಯ, ಸುಗ್ಗಿಯ ಪೂರ್ಣ ಲಾಭ ಪಡೆದ ಪ್ರಮುಖ ಉದ್ಯಮಶೀಲರಲ್ಲಿ ಈ ಮೂವರು ಅತಿ ಮುಖ್ಯರು.

ಆರಂಭದ ದಿನಗಳಲ್ಲಿ ವಿಶ್ವದಾದ್ಯಂತ ಪ್ರದರ್ಶಿಸಲಾಗುತ್ತಿದ್ದ, ಪಾಶ್ಚಾತ್ಯ ದೇಶಗಳಲ್ಲಿ ತಯಾರಾಗುತ್ತಿದ್ದ ಚಿತ್ರಗಳ ಉದ್ದ ೬೦-೭೫ ಅಡಿಗಳು. ಅವೆಲ್ಲ ಪ್ರಚಲಿತ ಘಟನೆಗಳ ಸಾಕ್ಷ್ಯಚಿತ್ರಗಳಾಗಿರುತ್ತಿದ್ದವು. ಇಲ್ಲವೆ ಶಿಕ್ಷಣ ರೂಪದ ಪ್ರವಾಸಿ ತಾಣಗಳ ಚಿತ್ರಗಳಾಗಿರುತ್ತಿದ್ದವು. ಚಿತ್ರಗಳನ್ನು ತೆಗೆಯುವುದರಲ್ಲಿ ಛಾಯಾಗ್ರಾಹಕರು ವಿಶೇಷ ಆಸಕ್ತಿ ವಹಿಸುತ್ತಿದ್ದರು. ಚಿತ್ರಗಳು ಸುಂದರವಾಗಿಯೂ ಕಲಾತ್ಮಕವಾಗಿಯೂ ಇರುತ್ತಿದ್ದವು. ಆವು ಇಂದಿಗೂ ತಮ್ಮ ಆಕರ್ಷಣೆಯನ್ನು ಉಳಿಸಿಕೊಂಡಿವೆ.

ನಟರು, ವಾಹನಗಳು ಹಿಂದೆ ಮುಂದೆ ವಿವಿಧ ಗತಿಯಲ್ಲಿ ಚಲಿಸುವ ಹಾಗೂ ಇದ್ದಕ್ಕಿದ್ದ ಹಾಗೆ ಅದೃಶ್ಯವಾಗುವ, ಇಲ್ಲವೆ ಪ್ರತ್ಯಕ್ಷವಾಗುವ ಚಮತ್ಕಾರಿಕೆಯೂ ಇರುತ್ತಿತ್ತು. ಏಕತಾನತೆ ಇರುವ ಇಂತಹ ಚಿತ್ರಗಳು ಬೇಗನೆ ಆಕರ್ಷಣೆ ಕಳೆದುಕೊಳ್ಳುವುದೆಂಬ ಭೀತಿ ಕಾಡುತ್ತಿತ್ತು. ಜನರಲ್ಲಿ ಸಿನಿಮಾದ ಕುತೂಹಲವನ್ನು ಉಳಿಸಿ ಬೆಳೆಸಿಕೊಳ್ಳುವ ಕಡೆ ಚಿತ್ರ ತಯಾರಕರು ತಮ್ಮ ಗಮನ ಹರಿಸಿದರು. ಚಿತ್ರಗಳ ಉದ್ದ ಹೆಚ್ಚಾಗಬೇಕು. ಉದ್ದ ಹೆಚ್ಚಾದಂತೆ ಅವುಗಳು ಆಕರ್ಷಣೀಯವಾಗಲು ಅವುಗಳಲ್ಲಿ ಸತ್ವಯುತವಾದ ಕಥನ ಇರಬೇಕೆಂಬ ಆಲೋಚನೆ ಕಥಾ ರೂಪದ ಚಿತ್ರಗಳಿಗೆ ಪ್ರೇರಣೆ ನೀಡಿತು. ಅಮೆರಿಕ, ಬ್ರಿಟನ್, ಫ್ರಾನ್ಸ್, ಇಟಲಿ, ಡೆನ್ಮಾರ್ಕ್ ಎಲ್ಲೆಡೆ ಇದಕ್ಕೆ ಚಾಲನೆ ದೊರೆಯಿತು.

ಈ ಚಿಂತನೆಯ ಫಲವಾಗಿ ಅನೇಕ ಕಥಾ ಚಿತ್ರಗಳು ಹುಟ್ಟಿದವು. ಮೆಲೆ ಎಂಬಾತ ಸಿನಿಮಾಕ್ಕೆ ಹೊಸ ಆಯಾಮ ಕೊಟ್ಟ. ಸಿನಿಮಾ ಕೇವಲ ವಾಸ್ತವಿಕ ದಾಖಲೆಯಲ್ಲ, ಅದರಲ್ಲಿ ಚಮತ್ಕಾರಗಳ ಹೊಸ ಸೃಷ್ಟಿಯನ್ನು ಮೂಡಿಸಲು ಸಾಧ್ಯ ಎನ್ನುವುದನ್ನೂ ತೋರಿಸಿಕೊಟ್ಟ. 'ವಾಯೆಜ್ ಟು ಮೂನ್', 'ಬಿವಿಚ್ಡ್ ಇನ್', 'ವಾಯೆಜ್ ಅಕ್ರಾಸ್ ಇಂಪಾಸಿಬಲ್' ಇವೇ ಮೊದಲಾದ ಕಲ್ಪನಾ ಜಗತ್ತಿನ ಬೆಡಗಿನ ಚಿತ್ರಗಳನ್ನು ಆವನು ನೀಡಿದ. ಹೊಸ ಶೈಲಿಯ ಚಿತ್ರಗಳ ಹರಿಕಾರನಾದ.



(ಚಿತ್ರ ೮) ಒಗ್ಯೂಸ್ಟ್ ಮತ್ತು ಲೂಯಿ ಲ್ಯುಮಿಯೆರ್

ಅಮೆರಿಕಾದ ಎಡ್ವಿನ್ ಪೋರ್ಟರ್ ನಿರ್ದೇಶನದ 'ದ ಗ್ರೇಟ್ ಟ್ರೇನ್ ರಾಬರಿ' (೧೯೦೩) ರೈಲು ದರೋಡೆ ಆಧಾರವಾಗುಳ್ಳ ಒಂದು ಪುಟ್ಟ ಕಥಾಚಿತ್ರ. ಇವು ಅಂದಿನ ದಿನಗಳ ಕೆಲವು ಉಲ್ಲೇಖನೀಯ ಚಿತ್ರಗಳು.

ಫ್ರಾನ್ಸ್‌ನ ಕೊಹ್ಲ್ ಪ್ರಪ್ರಥಮ ಕಾರ್ಟೂನ್ ಚಿತ್ರ ತಯಾರಿಸಿದ. ಇಂಗ್ಲೆಂಡಿನಲ್ಲಿ ಕಂಡು ಹಿಡಿದ ತ್ರಿವರ್ಣ ಚಿತ್ರಗಳನ್ನು ನಿರ್ಮಿಸುವ ತಂತ್ರಗಾರಿಕೆ ಚಿತ್ರಗಳ ಪ್ರೇಕ್ಷಣೀಯತೆಯನ್ನು ಹೆಚ್ಚಿಸಲು ನೆರವಾಯಿತು. ಈ ಮೊದಲು ಕೈಯಿಂದ ಬಣ್ಣ ಹಚ್ಚಲಾಗುತ್ತಿತ್ತು. ಸಿನಿಮಾ ಆಕರ್ಷಣೆಯನ್ನು ಸ್ಥಿರಗೊಳಿಸಲು ಆರಂಭ ಕಾಲದಲ್ಲಿ ನಡೆದ ಕೆಲವು ಪ್ರಯತ್ನಗಳು ಇವು.

ಭಾಷೆಯ ಅಂಕುಶವಿಲ್ಲದ ಸಿನಿಮಾ, ಪ್ರಪಂಚದ ಎಲ್ಲೆಡೆ ಪ್ರದರ್ಶನವಾಗುವ ಮನರಂಜನ ಮಾಧ್ಯಮವಾಗಿ ವಿಕಾಸವಾಗತೊಡಗಿತು. ವಿಶ್ವದ ಮೊದಲ ಮಹಾಯುದ್ಧ (೧೯೧೪) ಅರಂಭವಾಗುವ ವೇಳೆಗೆ ಪ್ರಪಂಚದಾದ್ಯಂತ ಇದ್ದ ಪ್ರದರ್ಶನ ಮಂದಿರಗಳ ಸಂಖ್ಯೆ ೬೦,೦೦೦. ಅದರಲ್ಲಿ ಕಾಲು ಭಾಗದಷ್ಟು ಚಿತ್ರಮಂದಿರಗಳು ಅಮೆರಿಕಾ ಒಂದರಲ್ಲೇ ಇದ್ದವು. ಪ್ರಪಂಚದ ಮಹಾ ಉದ್ಯಮಗಳಲ್ಲಿ ಸಿನಿಮಾ ಮೂರನೆ ಸ್ಥಾನ ಪಡೆದಿತ್ತು. ಆದರೆ ಆ ಕಾಲದಲ್ಲಿ, ಭಾರತದಲ್ಲಿ ಇದ್ದ ಚಿತ್ರಮಂದಿರಗಳ ಸಂಖ್ಯೆ ೪೦ ಮಾತ್ರ.

ಭಾರತಕ್ಕೆ ಸಿನಿಮಾ ೧೮೯೬ರ ವೇಳೆಗೆ ಕಾಲಿಟ್ಟರೂ ಇಲ್ಲಿ ಕೆಲವು ಸಾಕ್ಷ್ಯಚಿತ್ರಗಳು ಮತ್ತು ಸುದ್ದಿಚಿತ್ರಗಳ ತಯಾರಿಕೆ ಬಿಟ್ಟರೆ, ಬೇರೆ ಯಾವುದೇ ಚಟುವಟಿಕೆ ಇರಲಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಕಥಾರೂಪದ ಚಿತ್ರಗಳಿಗೆ ಅಗತ್ಯವಾದ ಭೂಮಿಕೆ ಸಿದ್ಧವಾಗುತ್ತಿತ್ತು. ಚಿತ್ರ ನಿರ್ಮಿತಿಯ ವಿಧಿ ವಿಧಾನಗಳನ್ನು ಅಲ್ಲಿನ ಪ್ರಯೋಗಶೀಲರು ರೂಪಿಸಿ ಇಂದಿಗೂ ಪ್ರಸ್ತುತವೆನಿಸಿದ ಸಿನಿಮಾದ ವ್ಯಾಕರಣವನ್ನು ಸೃಷ್ಟಿಸಿದ್ದರು. ಆ ಸೂತ್ರಗಳಂತೆ ರೂಪಿಸಿದ್ದ ಕೃತಿಗಳೂ ಕಣ್ಮುಂದೆ ಇದ್ದವು.

ಆದರೆ ಸಿನಿಮಾ ಭಾರತದಲ್ಲಿ ಕಾಲೂರಿದ ೧೫ ವರ್ಷಗಳಾದ ಮೇಲೂ ಕಥಾರೂಪದ ಚಿತ್ರ ನಿರ್ಮಾಣಕ್ಕೆ ಯಾವೊಂದು ಪ್ರಯತ್ನವೂ ನಡೆಯಲಿಲ್ಲ. ಭಾರತದ ಮೊದಲ ಕಥಾಚಿತ್ರ ತೆರೆ ಕಂಡದ್ದು ೧೯೧೩ರಲ್ಲಿ.

ಆದರೆ ೧೯೧೮ರ ನಂತರ ಪರಿಸ್ಥಿತಿಯೇ ಬದಲಾಯಿತು. ಚಿತ್ರಮಂದಿರಗಳ ಸಂಖ್ಯೆ ೪೦ ಇದ್ದದ್ದು ೯೮ಕ್ಕೇರಿತು. ನಿರ್ಮಾಣವಾದ ಚಿತ್ರಗಳ ಸಂಖ್ಯೆ ಎರಡರಿಂದ ಎಂಟಕ್ಕೆ ಏರಿತು. ಅಲ್ಲಿಂದ ಗರಿಗೆದರಿದ ನಿರ್ಮಾಣ ಉತ್ಸಾಹಕ್ಕೆ ಅಡೆ ತಡೆಯೇ ಇಲ್ಲವಾಯಿತು.

ಇಂದಿನವರೆಗೆ ಭಾರತ ಸುಮಾರು ೨೯,೦೦೦ಕ್ಕೂ ಹೆಚ್ಚು ಕಥಾಚಿತ್ರಗಳನ್ನೂ, ಸಾವಿರಾರು ಸಾಕ್ಷ್ಯಚಿತ್ರಗಳನ್ನೂ ಜಗತ್ತಿಗೆ ನೀಡಿದೆ. ಈ ಸಿರಿ ಬೆಳೆಗೆ ಮೂಲ ಪ್ರೇರಣೆ ಮಹಾರಾಷ್ಟ್ರದ - ಮುಂಬಯಿ ಚಿತ್ರರಂಗದ ಆದಿ ಪುರುಷರು.

ಭಾರತೀಯ ಸಿನಿಮಾದ ಹಾಗೂ ಪ್ರಾದೇಶಿಕ ಸಿನಿಮಾದ, ಮುಖ್ಯವಾಗಿ ದಕ್ಷಿಣ ಭಾರತದ ಪ್ರಾದೇಶಿಕ ಭಾಷೆಗಳ ಚಲನಚಿತ್ರಗಳ ಬೆಳವಣಿಗೆಯ ವಿಕಾಸಕ್ಕೆ ಅಗತ್ಯವಾದ ತಂತ್ರಜ್ಞರ ತಂತ್ರ ವಿಧಾನಗಳು ವಿಕಾಸಗೊಂಡಿದ್ದು ಮಹಾರಾಷ್ಟ್ರದಲ್ಲೇ/ಮುಂಬಯಿಯಲ್ಲೇ. ಮಹಾರಾಷ್ಟ್ರ ಭಾರತ ಚಿತ್ರೋದ್ಯಮದ ತೊಟ್ಟಿಲು (Maharashtra is the cradle of Indian cinema). ಭಾರತದಲ್ಲಿ ಸಿನಿಮಾದ ಆರಂಭದ ದಿನಗಳ ಅವಲೋಕನ ಈ ದೃಷ್ಟಿಯಿಂದ ಪ್ರಸ್ತುತ.

ಮುಂಬಯಿನಲ್ಲಿ ೧೯೧೩ರಲ್ಲಿ ಪ್ರಥಮ ಕಥಾಚಿತ್ರ ತಯಾರಾಯಿತು. ಅಂದರೆ ಸಿನಿಮಾ ಭಾರತಕ್ಕೆ ಬಂದ ೧೭ ವರ್ಷಗಳ ನಂತರ. ದಕ್ಷಿಣ ಭಾರತದಲ್ಲಿ ತಯಾರಾದ ಮೊದಲ ಚಿತ್ರ 'ಕೀಚಕವಧಾ' (೧೯೧೭). ಈ ಪೌರಾಣಿಕ ಚಿತ್ರವನ್ನು ಮೋಟಾರು ವಾಹನಗಳ ಬಿಡಿ ಭಾಗಗಳ ವ್ಯಾಪಾರಿ ಆರ್.ನಟರಾಜ ಮೊದಲಿಯಾರ್, ಮದರಾಸಿನ ಮಿಲ್ಲರ್ಸ್ ರೋಡ್‌ನಲ್ಲಿದ್ದ ಇಂಡಿಯನ್ ಫಿಲಂ ಕಂಪೆನಿಯ ಸ್ಟುಡಿಯೋದಲ್ಲಿ ತಯಾರಿಸಿದರು.



(ಚಿತ್ರ ೯) ಭಾರತದ ಮೊದಲ ಚಲನಚಿತ್ರ - 'ರಾಜಾ ಹರಿಶ್ಚಂದ್ರ'. ೩,೭೦೦ ಅಡಿಗಳಷ್ಟು ಉದ್ದದ ಈ ಚಲನಚಿತ್ರ ೧೯೧೩ರ ಮೇ ೩ರಂದು ಮುಂಬೈನಲ್ಲಿ ತೆರೆಕಂಡಿತು.

## ಶಾಸ್ತ್ರಿಗಳ ಸಿನಿಮಾ ಹುಚ್ಚು

ಧುಂಡಿರಾಜ್ ಗೋವಿಂದ ಫಾಲ್ಕೆಯವರು ವೈದಿಕ ಮನೆತನದಲ್ಲಿ ಹುಟ್ಟಿದ ವ್ಯಕ್ತಿ. ಸಿನಿಮಾಕ್ಕೆ ಯಾವುದೇ ರೀತಿಯ ಸಂಬಂಧವಿಲ್ಲದ ವ್ಯಕ್ತಿ. ಅವರು ಭಾರತೀಯ ಸಿನಿಮಾದ ಜನಕರಾದರು. ಪಾಶ್ಚಾತ್ಯ ದೇಶಗಳಲ್ಲಿ ಸಿದ್ಧವಾಗಿ ಬಂದ ನಮ್ಮ ಸಂಸ್ಕೃತಿಗೆ ಸಂಪೂರ್ಣ ಪರಕೀಯವೆನಿಸುವ ಕಥಾಚಿತ್ರಗಳನ್ನು ಅನಿವಾರ್ಯವಾಗಿ ಮನರಂಜನೆಗಾಗಿ ನೋಡುತ್ತಿದ್ದ ಭಾರತೀಯ ಪ್ರೇಕ್ಷಕರಿಗೆ, ಭಾರತೀಯ ಪುರಾಣೇತಿಹಾಸದಿಂದ ಆಯ್ದ ಕಥಾವಸ್ತುಗಳನ್ನು ಆಧರಿಸಿದ ಚಿತ್ರಗಳನ್ನು ನೀಡಿದರು. ಭಾರತೀಯ ಸಿನಿಮಾಕ್ಕೆ ಶ್ರೀಕಾರ ಹಾಕಿದರು.

ಧುಂಡಿರಾಜ್ ಗೋವಿಂದ ಫಾಲ್ಕೆ (ದಾದಾ ಫಾಲ್ಕೆ ಎಂದೇ ಪ್ರಸಿದ್ಧರು) ನಾಸಿಕ್ ಬಳಿಯ ತ್ರಯಂಬಕೇಶ್ವರ ಪಟ್ಟಣದ ವೈದಿಕ ಮನೆತನದಲ್ಲಿ ೧೮೭೦ರ ಏಪ್ರಿಲ್ ೩೦ರಂದು ಹುಟ್ಟಿದರು. ಆರಂಭದಲ್ಲಿ ವೈದಿಕ ಸಂಪ್ರದಾಯದಂತೆ ಸಂಸ್ಕೃತ ಶಾಸ್ತ್ರಾಧ್ಯಯನ ನಡೆಯಿತು. ತಂದೆ ದಾಜಿಶಾಸ್ತ್ರಿ ಫಾಲ್ಕೆ, ಮುಂಬಯಿನ ವಿಲ್ಸನ್ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿ ಸೇರಿದಾಗ ಕುಟುಂಬ ಮುಂಬಯಿಗೆ ತೆರಳಿತು. ದಾದಾ ಫಾಲ್ಕೆ ಜೆ.ಜೆ. ಕಲಾಶಾಲೆಯಲ್ಲಿ, ಅನಂತರ ಬರೋಡದಲ್ಲಿ ಕಲಾ ಶಿಕ್ಷಣ ಪಡೆದರು. ಜೊತೆಯಲ್ಲೇ ಛಾಯಾಗ್ರಹಣದಲ್ಲೂ ತರಬೇತಿ ದೊರಯಿತು. ಸಂಗೀತ, ಅಭಿನಯ, ಶಿಲ್ಪಕಲೆ, ಯಕ್ಷಿಣಿಯಲ್ಲೂ ಅವರಿಗೆ ಪರಿಶ್ರಮವಿತ್ತು. ಜರ್ಮನಿಗೆ ಹೋಗಿ ವರ್ಣ ಮುದ್ರಣದಲ್ಲೂ ತರಬೇತಿ ಪಡೆದು ಪ್ರಸಿದ್ಧ ಮುದ್ರಣಾಲಯದಲ್ಲಿ ದುಡಿಯುತ್ತಿದ್ದರು. ಅವರ ಸೃಜನಶೀಲ ಮನೋವೃತ್ತಿಗೆ ಮುದ್ರಣಾಲಯ ಸೂಕ್ತ ಸ್ಥಳವಾಗಿರಲಿಲ್ಲ.

೧೯೧೦ರ ಡಿಸೆಂಬರ್ ೧೦, ಅದೊಂದು ಮಹತ್ವದ ದಿನ. ಮುಂಬಯಿನ ಪಿಕ್ಚರ್ ಪ್ಯಾಲೆಸ್‌ನಲ್ಲಿ ದಾದಾ ಫಾಲ್ಕೆ ಸಿನಿಮಾ ನೋಡಲು ಹೋದರು. ಅಂದು ಅಲ್ಲಿ ಪ್ರದರ್ಶಿತವಾಗುತ್ತಿದ್ದದ್ದು 'ದಿ ಲೈಫ್ ಆಫ್ ಕ್ರೈಸ್ಟ್' ಎಂಬ ಚಿತ್ರ. ಶ್ರೀಕೃಷ್ಣನ ಲೀಲಾ ವಿನೋದಗಳ ಆಧಾರದ ಮೇಲೆ ಚಿತ್ರ ನಿರ್ಮಿಸಿದರೆ ಹೇಗೆ ? ಎಂದು ಚಿಂತಿಸುತ್ತಾ ಮನೆ ಸೇರಿದರು. ಮಡದಿಯೊಡನೆ ಮತ್ತೊಮ್ಮೆ ಚಿತ್ರ ನೋಡಿದರು. ಚಿತ್ರ ಪ್ರದರ್ಶನ ಮುಗಿಯುವಷ್ಟರಲ್ಲಿ ಸರಸ್ವತಿ (ಕಾಕಿ ಫಾಲ್ಕೆ)ಗೆ ಗಂಡನ ಮನದಾಳದ ಆಸೆ ಏನೆಂದು ಮನದಟ್ಟಾಯಿತು.

ಇಂಗ್ಲೆಂಡಿನ ಚಲನಚಿತ್ರ ನಿರ್ಮಾತೃ ಸಿಸಿಲ್ ಹೆಪ್‌ವರ್ತ್ ಬರೆದಿದ್ದ 'ಎ ಬಿ ಸಿ ಆಫ್ ಸಿನಿಮಾಟೊಗ್ರಾಫಿ' ಎಂಬ ಪುಸ್ತಕ ಕೊಂಡು ತಂದು ಅಧ್ಯಯನ ಮಾಡಿದರು.

ಫಾಲ್ಕೆ ಅವರಲ್ಲಿ ಸಿನಿಮಾಕ್ಕೆ ಅಗತ್ಯವಾದ ಎಲ್ಲ ಅರ್ಹತೆಗಳು ಇದ್ದವು. ಆದರೆ ಅವರಲ್ಲಿದ್ದ ಏಕೈಕ ಕೊರತೆ ಬಂಡವಾಳ. ಅದೇ ಜೀವನದ ಕೊನೆಗಳಿಗೆಯವರೆಗೂ ಅವರನ್ನು ಕಾಡಿದ ಮಹಾ ಸಮಸ್ಯೆ.

ಸಿನಿಮಾಕ್ಕೆ ಅಗತ್ಯವಾದ ಸಾಹಿತ್ಯ ರೂಪಿಸುವುದು ಏನೂ ಕಷ್ಟವಿಲ್ಲ. ಸಿನಿಮಾ ಚಿತ್ರಣಕ್ಕೆ ಅಗತ್ಯವಾದ ಕ್ಯಾಮರಾ ಬೇಕು, ಪ್ರಿಂಟರ್ ಬೇಕು, ಫಿಲಂ ಬೇಕು, ಬಲ್ಲವರಿಂದ ಮಾಹಿತಿ ಪಡೆಯಬೇಕು. ಅದಕ್ಕಾಗಿ ವಿದೇಶಕ್ಕೆ ಹೋಗಿ ಬರಬೇಕು, ಮತ್ತೆ ಇಲ್ಲಿ ಚಿತ್ರಣಕ್ಕೆ ಹಣ ಬೇಕು, ಇಷ್ಟಕ್ಕೆಲ್ಲಾ ಹಣ ಎಲ್ಲಿಂದ ತರುವುದು ? ಸದಾ ಇದೇ ಚಿಂತೆ.

ಸಿನಿಮಾ ಮಾಡಬೇಕೆನ್ನುವ ದಾದಾ ಫಾಲ್ಕೆ ಅವರ ಪರದಾಟವನ್ನು ನೋಡಿದ ಅವರ ಮಿತ್ರರು ಫಾಲ್ಕೆ ಅವರಿಗೆ ಹುಚ್ಚು ಹಿಡಿದಿದೆ ಎಂದು ಭಾವಿಸಿದರು. ಅವರನ್ನು ಹುಚ್ಚಾಸ್ಪತ್ರೆಗೆ ಸೇರಿಸಬೇಕೆನ್ನುವ ಮಾತನ್ನೂ ಕೆಲವರು ಆಡಿದರು. ಈ ಶ್ರೀಕೃಷ್ಣನ ಹುಚ್ಚ, ಸಿನಿಮಾ ಹುಚ್ಚ ಇವೆಲ್ಲವುಗಳಿಗೆ ಧೃತಿಗೆಡಲಿಲ್ಲ. ಅವರ ಆಪ್ತಮಿತ್ರ ಯಶವಂತ ಘನಶ್ಯಾಮ ನಾಡಕರ್ಣಿಯವರಿಗೆ ತಮ್ಮ ಮಿತ್ರನ ಹುಚ್ಚುತನದಲ್ಲಿ ಪೂರ್ಣ ವಿಶ್ವಾಸವಿತ್ತು. ದಾದಾ ಫಾಲ್ಕೆ ತಮ್ಮ ಜೀವವಿಮೆ ಮೇಲೆ ಸಾಲ ಪಡೆದರು. ಕಾಕಿ ಫಾಲ್ಕೆ ಅವರ ಆಭರಣಗಳ ಆಧಾರದ ಮೇಲೆ ಸ್ವಲ್ಪ ಬಂಡವಾಳವೂ ಕೂಡಿತು. ತಮ್ಮ ಸಾಮರ್ಥ್ಯದ ಪ್ರಶ್ನೆ ಎದ್ದಾಗ ಬಂಡವಾಳ ಹೂಡುವವರ ಸಮಾಧಾನಕ್ಕಾಗಿ ಒಂದು ಕಿರು ಚಿತ್ರವನ್ನು ನಿರ್ಮಿಸಲು ಸಿದ್ಧತೆ ನಡೆಸಿದರು. ಮಣ್ಣಿನ ಪಾತ್ರೆಯಲ್ಲಿ ಕಾಳು ನೆಟ್ಟರು. ಅದರ ಮುಂದೆ ತಾವು ಆಮದು ಮಾಡಿದ್ದ ಸಿನಿಕ್ಯಾಮರಾವನ್ನು ಸ್ಟ್ಯಾಂಡ್ ಹಾಕಿ ನಿಲ್ಲಿಸಿದರು. ೪೫ ದಿನಗಳ ಅವಧಿಯಲ್ಲಿ ಸ್ವಲ್ಪ ಸ್ವಲ್ಪವಾಗಿ ಗಿಡದ ಬೆಳವಣಿಗೆಯನ್ನು ಚಿತ್ರಿಸಿದರು. ೨೦೦ ಅಡಿಗಳ ಉದ್ದದ ಚಿತ್ರ ಸಿದ್ಧವಾಯಿತು. ಹಲವು ಮಿತ್ರರ ಸಮ್ಮುಖದಲ್ಲಿ ಪ್ರದರ್ಶನ ನಡೆಯಿತು. ಕಾಳು ಮೊಳೆತು ಚಿಗುರೊಡೆದು ಕಾಯಿ ಬಿಟ್ಟಿದ್ದನ್ನು ನೋಡಿ ಬೆರಗಾದರು. ಕಾಲಚ್ಯುತಿ ನಿಯತವೇಳಾ (Time Lapse) ಚಿತ್ರಣ ಕ್ರಮದಲ್ಲಿ ಸಿದ್ಧವಾದ ಈ ಕಿರುಚಿತ್ರ ಭಾರತೀಯ ಚಲನಚಿತ್ರ ಇತಿಹಾಸದಲ್ಲಿ 'ದಿ ಗ್ರೋತ್ ಆಫ್ ಪೀ ಪ್ಲಾಂಟ್', 'ಫ್ರಂ ಪೀ ನಟ್ ಟು ಪ್ಲಾಂಟ್' ಎಂದು ದಾಖಲಾಗಿದೆ.

ದಾದಾ ಫಾಲ್ಕೆ ಇಂಗ್ಲೆಂಡಿಗೆ ಹೋದರು. ಲಂಡನ್ನಿನ ಬಯಾಸ್ಕೋಪ್ ಪತ್ರಿಕೆಯ ಸಂಪಾದಕರಾದ ಕ್ಯಾಬರೋನ್ ಗೆಳೆತನ ಸಂಪಾದಿಸಿ, ಅವರ ಸಹಾಯದಿಂದ ಉತ್ತಮವಾದ ಕ್ಯಾಮರಾ, ಪ್ರಿಂಟರ್, ಪರ್ಫೊರೇಟರ್ ಮತ್ತು ಫಿಲ್ಮನ್ನು ಕೊಂಡರು. ಅದೇ ಪತ್ರಕರ್ತರ ನೆರವಿನಿಂದ ಖ್ಯಾತ ನಿರ್ಮಾತೃ ಸಿಸಿಲ್ ಹೆಪ್‌ವರ್ತ್ ಅವರ ಪರಿಚಯ ಆಯಿತು. ಈ ಖ್ಯಾತ ನಿರ್ಮಾತೃ, ಫಾಲ್ಕೆ ಅವರಿಗೆ ಚಿತ್ರ ನಿರ್ಮಾಣದ ತಂತ್ರದ ಬಗೆಗೆ ಎರಡು ವಾರಗಳ ತರಬೇತಿ ನೀಡಿದರು. ಪೂರ್ಣ ಆತ್ಮವಿಶ್ವಾಸದೊಂದಿಗೆ ಭಾರತಕ್ಕೆ ಮರಳಿದ ಕೂಡಲೇ ಕಾರ್ಯಪ್ರವೃತ್ತರಾದರು.

ಶ್ರೀ ಕೃಷ್ಣನ ಚಿತ್ರದ ಬದಲು ಸರಳವೂ, ಸರ್ವ ಜನಪ್ರಿಯವೂ ಆದ ಹರಿಶ್ಚಂದ್ರನ ಕತೆಯನ್ನೇ ಆರಿಸಿದರು. ಅಲ್ಲಿಂದ ಮತ್ತೆ ಸಮಸ್ಯೆಗಳ ಸರಮಾಲೆಯೇ ಆರಂಭವಾಯಿತು.

ಮೊದಲು ಎದುರಾದದ್ದೇ ಸ್ತ್ರೀ ಪಾತ್ರಗಳ ಸಮಸ್ಯೆ. ಸ್ತ್ರೀ ಪಾತ್ರಧಾರಿಗಳಿಗಾಗಿ ನೀಡಿದ ಜಾಹಿರಾತು ಪ್ರಯೋಜನವಾಗಲಿಲ್ಲ. ಸಿನಿಮಾದಲ್ಲಿ ಪಾತ್ರ ವಹಿಸಲು ವೇಶ್ಯೆಯರೂ ನಿರಾಕರಿಸಿದರು. ಹೋಟೆಲಿನಲ್ಲಿ ಕೆಲಸ ಮಾಡುತ್ತಿದ್ದ ಯುವಕನೊಬ್ಬ ಕಣ್ಣಿಗೆ ಬಿದ್ದ. ತಾರಾಮತಿ ಪಾತ್ರಕ್ಕೆ ಈತ ಸರಿಹೋಗಬಹುದೆನಿಸಿತು. ತಿಂಗಳಿಗೆ ೧೦ ರೂಪಾಯಿ ಸಂಬಳದ ಮೇಲೆ ಕೆಲಸ ಮಾಡುತ್ತಿದ್ದ ಅಣ್ಣಾ ಹರಿ ಸಾಳುಂಕೆಯನ್ನು ೧೫ ರೂಪಾಯಿ ವೇತನದ ಮೇಲೆ ಗೊತ್ತು ಮಾಡಿಕೊಂಡರು. ಹರಿಶ್ಚಂದ್ರನ ಪಾತ್ರಕ್ಕೆ ಡಿ.ಡಿ.ದಬಕೆ ಆಯ್ಕೆಯಾದರು. ಫಾಲ್ಕೆ ಅವರ ಮಗ ಬಾಲಚಂದ್ರನೇ ರೋಹಿತನಾದ. ೧೯೧೨ರ ಮುಂಗಾರು ಮಳೆಗಾಲ ಕಳೆದ ಮೇಲೆ ಫಾಲ್ಕೆಯವರಿಗೆ ಬಿಡುವಿಲ್ಲದ ಕೆಲಸ. ಚಿತ್ರಕತೆ ಬರೆಯಬೇಕು, ನಟರಿಗೆ ಅಭಿನಯದ ತರಬೇತಿ ನೀಡಬೇಕು, ಸೆಟ್‌ಗಳ ನಿರ್ಮಾಣದ ಮೇಲ್ವಿಚಾರಣೆ, ಹಗಲು ಚಿತ್ರೀಕರಣ, ರಾತ್ರಿ ಅದರ ಸಂಸ್ಕರಣ, ಮುದ್ರಣ, ಅನಂತರ ಅದರ ಸಂಕಲನ ಎಲ್ಲವನ್ನೂ ಅವರೊಬ್ಬರೇ ಮಾಡಬೇಕು. ಈ ವಿಭಾಗದಲ್ಲಿ ಕೆಲಸ ಮಾಡಲು ಯಾರಿಗೂ ಪರಿಶ್ರಮವಿರಲಿಲ್ಲವಲ್ಲ.

ಆರು ತಿಂಗಳ ಶ್ರಮದ ಫಲವಾಗಿ ೩,೭೦೦ ಅಡಿ ಉದ್ದದ ಚಿತ್ರ ತಯಾರಾಯಿತು. ಭಾರತದ ಪ್ರಥಮ ಸ್ವದೇಶಿ ಚಲನಚಿತ್ರ 'ರಾಜಾ ಹರಿಶ್ಚಂದ್ರ'ವನ್ನು ೧೯೧೩ರ ಮೇ ೩ರಂದು ಮುಂಬಯಿನ ಕಾರೊನೇಶನ್ ಸಿನಿಮಾದಲ್ಲಿ ತೆರೆ ಕಾಣಿಸಿ ಭಾರತೀಯ ಚಲನ ಚಿತ್ರೋದ್ಯಮದಲ್ಲಿ ಹೊಸ ಶಕೆಯನ್ನು ಆರಂಭಿಸಿದರು. 'ರಾಜಾ ಹರಿಶ್ಚಂದ್ರ' ಹಾಗೂ ಅವರು ಮುಂದಿನ ದಿನಗಳಲ್ಲಿ ನಿರ್ಮಿಸಿದ ಚಿತ್ರಗಳು, ಅವುಗಳು ಗಳಿಸಿದ ಹಣ ಜನರಲ್ಲಿ ಕೆರಳಿಸಿದ ಆಸಕ್ತಿ, ಉತ್ಸಾಹ, ಅನೇಕ ಸಾಹಸಿಗಳನ್ನು, ಬಂಡವಾಳ ಹೂಡಿಕೆದಾರರನ್ನು ಆಕರ್ಷಿಸಿತು ಎನ್ನುವುದು ಇತಿಹಾಸ.



(ಚಿತ್ರ ೧೦) ದಾದಾ ಸಾಹೇಬ್ ಫಾಲ್ಕೆ

(ಜನನ : ೩೦-೪-೧೮೭೦, ಮರಣ : ೧೬-೨-೧೯೪೪)

ಆರಂಭದಲ್ಲಿ ಭಾರತೀಯನೊಬ್ಬ ಸಿನಿಮಾ ನಿರ್ಮಿಸಿದ ಎಂದರೆ ಜನ ನಂಬಲೇ ಇಲ್ಲ. ಚಿತ್ರದ ಜಾಹಿರಾತಿನ ಕೊನೆಯಲ್ಲಿ 'ಪ್ರವೇಶ ಧನ ಎರಡು ಪಟ್ಟು' ಎಂದು ಹಾಕಿದ್ದೇ ಪ್ರಮಾದವಾಯಿತು. ಎರಡು ಆಣೆ ಕೊಟ್ಟು, ನಾಲ್ಕು ತಾಸುಗಳ ಸಂಗೀತಮಯ ನಾಟಕ ನೋಡುತ್ತಿದ್ದ ಜನರಿಗೆ ನಾಲ್ಕಾಣೆ ಕೊಟ್ಟು ೪೦ ನಿಮಿಷಗಳ ಸಿನಿಮಾ ನೋಡಿ ಎಂದರೆ ಹೇಗೆ ?

ಫಾಲ್ಕೆ ಅವರು ಜನರನ್ನು ಆಕರ್ಷಿಸಲು ವಿಶೇಷ ಕಾರ್ಯತಂತ್ರ ರೂಪಿಸಬೇಕಾಯಿತು. ಆರಂಭದ ದಿನಗಳಲ್ಲಿ ಆಂಗ್ಲ ಹೆಣ್ಣುಗಳ ನಾಟ್ಯ ಪ್ರದರ್ಶನದ ಆಮಿಷ ನೀಡಿದರು. ಮುಂಬಯಿ ಹೊರಗೆ ಪ್ರದರ್ಶನ ನಡೆದಾಗ '೫೦,೦೦೦ ಸ್ತಬ್ಧ ಚಿತ್ರಗಳು, ಅವನ್ನು ಜೋಡಿಸಿದರೆ ಎರಡು ಮೈಲು ಉದ್ದ' ಎಂದು ಜಾಹಿರಾತಿನಲ್ಲಿ ಬರೆದು ಚಿತ್ರ ದೊಡ್ಡದು ಎಂದು ಭ್ರಮೆ ಮೂಡಿಸಲು ಪ್ರಯತ್ನಿಸಿದರು. ಅಂತೂ ಜನರು ಬಂದರು, ನೋಡಿದರು, ಮೆಚ್ಚಿದರು. ದೇವಾಧಿದೇವತೆಗಳನ್ನು ತೆರೆಯ ಮೇಲೆ ನೋಡಿ ಪುಲಕಿತರಾದರು.

'ರಾಜಾ ಹರಿಶ್ಚಂದ್ರ' ತೆರೆಕಂಡ ಮೇಲೆ ಫಾಲ್ಕೆ ತಮ್ಮ ಪತ್ನಿ ಹಾಗೂ ಐದು ಮಕ್ಕಳ ಜೊತೆ ನಾಸಿಕ್‌ಗೆ ತೆರಳಿದರು. ಚಲನ ಚಿತ್ರದ ಕಾರ್ಯ ನಿರ್ವಹಿಸಲು ಅವರಿಗೆ ಪ್ರಶಾಂತ ವಾತಾವರಣ ಬೇಕಾಗಿತ್ತು. ಮೂರು ಅಂತಸ್ತಿನ ಕಟ್ಟಡದಲ್ಲಿ ಫಾಲ್ಕೆ ಕುಟುಂಬದವರಿಗಲ್ಲದೆ, ಸಂಸ್ಥೆಯಲ್ಲಿ ಕೆಲಸ ಮಾಡುವವರಿಗೆಲ್ಲಾ ಅಲ್ಲೇ ಆಶ್ರಯ. ಕೆಲಸ ಹೆಚ್ಚಿದಂತೆ ಹೊಸಬರು ಸೇರಿದರು. ಒಂದು ಘಟ್ಟದಲ್ಲಿ ಅಲ್ಲಿ ೧೦೦ಕ್ಕೂ ಹೆಚ್ಚು ಮಂದಿ ಇದ್ದರು.

ಕುಟುಂಬದವರು, ಕೆಲಸಗಾರರು ಎಂಬ ಭೇದವಿಲ್ಲದೆ ಎಲ್ಲರೂ ಎಲ್ಲ ಕೆಲಸ ಮಾಡಬೇಕು. ಮೂರು ಅಂತಸ್ತಿನ ಕಟ್ಟಡದಲ್ಲಿ ಜನರಿಗ ವಸತಿ ಸಾಲದೆ ಹೋದಾಗ

ನೆರೆಯ ಕಟ್ಟಡಗಳಲ್ಲಿ ಅವರಿಗೆ ಬಿಡಾರದ ವ್ಯವಸ್ಥೆ. ಕ್ಯಾಮರಾಗೆ ಫಿಲ್ಮ್ ತುಂಬುವುದು, ಚಿತ್ರೀಕರಣದ ನಂತರ ಫಿಲ್ಮ್ ತೆಗೆದು ಸಂಸ್ಕರಿಸುವುದು ಕಾಕಿ ಫಾಲ್ಕೆ ಅವರ ಜವಾಬ್ದಾರಿ. ಲ್ಯಾಬೊರೇಟರಿಯು ಅಡಿಗೆ ಮನೆಯ ಒಂದು ಭಾಗದಲ್ಲಿತ್ತು. ಲ್ಯಾಬೊರೇಟರಿಯಲ್ಲಿ ದುಡಿಯುವುದರ ಜೊತೆಗೆ ಅಡಿಗೆ ಮನೆ ಮೇಲ್ವಿಚಾರಣೆ ಬೇರೆ ಕಾಕಿ ಫಾಲ್ಕೆ ಅವರಿಗೆ. ಅವಿಭಕ್ತ ಕುಟುಂಬದಂತೆ ಬದುಕು. ಈ ಜೀವನ ಕ್ರಮ ಇತರ ಚಿತ್ರ ನಿರ್ಮಾಣ ಸಂಸ್ಥೆಗಳಿಗೆ ಮೇಲ್ಪಂಕ್ತಿಯಾಯಿತು.

ಫಾಲ್ಕೆ ಅವರು ಕೆಲಸದಲ್ಲಿ ಕಟ್ಟು ನಿಟ್ಟು. ಎಲ್ಲವೂ ಪೂರ್ವನಿಶ್ಚಿತ ಕಾರ್ಯಕ್ರಮದಂತೆಯೇ ನಡೆಯಬೇಕು. ನಿಯಮ ಉಲ್ಲಂಘನೆಗೆ ಕ್ಷಮೆ ಇಲ್ಲ. ತಕ್ಷಣ ಕೆಲಸದಿಂದ ಬರ್ತರ್ಫ್.

ಚಿತ್ರದ ಬಗ್ಗೆ, ಚಿತ್ರಣ ವಿಧಾನಗಳ ಬಗ್ಗೆ ಫಾಲ್ಕೆ ತಮ್ಮ ಕೆಲಸಗಾರರೊಡನೆ ಮತ್ತು ಕುಟುಂಬದ ಸದಸ್ಯರೊಡನೆ ಚರ್ಚಿಸುತ್ತಿದ್ದರು. ಸಮಸ್ಯೆಗಳನ್ನು ಮುಂದೊಡ್ಡಿ, ಅವರ ಸಲಹೆ ಕೇಳುತ್ತಿದ್ದರು.

ಫಾಲ್ಕೆ ಅವರ ಚಿತ್ರಗಳು ಈಗ ಇಲ್ಲ. ಅವರು ತೆಗೆದ ಚಿತ್ರಗಳ ಕೆಲವು ತುಣುಕುಗಳು ಈಗ ಲಭ್ಯವಿವೆ. ಅವುಗಳನ್ನು ನೋಡಿದರೆ ಫಾಲ್ಕೆಯವರು ತಾಂತ್ರಿಕ ಪರಿಪೂರ್ಣತೆಗೆ ನೀಡುತ್ತಿದ್ದ ಮಹತ್ವದ ಅರಿವಾಗುತ್ತದೆ. ಪ್ರತಿಯೊಂದು ಫ್ರೇಮೂ ಕಲಾತ್ಮಕವಾಗಿರುವಂತೆ ನೋಡಿಕೊಳ್ಳುತ್ತಿದ್ದರು. ವಿಶೇಷ ಪರಿಣಾಮ ಬೀರುವ ಅದ್ಭುತ ಸನ್ನಿವೇಶಗಳ ಚಿತ್ರಣ ತಾಂತ್ರಿಕ ದೃಷ್ಟಿಯಿಂದಲೂ ಪರಿಷ್ಕಾರವಾಗಿರುತ್ತಿತ್ತು. ಫ್ರಾನ್ಸಿನ ನಿರ್ದೇಶಕ ಜಾರ್ಜ್ ಮೆಲೆ ಅವರಂತೆ ಫಾಲ್ಕೆ ಅವರಿಗೆ ಯಕ್ಷಿಣಿ ಗೊತ್ತಿತ್ತು. ಹಾಗೆಂದು ಅದ್ಭುತ ದೃಶ್ಯಗಳನ್ನು ಮೆಲೆ ಅವರ ಹಾಗೆ ಕಲ್ಪನಾ ರಾಜ್ಯಕ್ಕೆ ಕೊಂಡೊಯ್ಯಲಿಲ್ಲ. ಫಾಲ್ಕೆ ಅವರು ತಮ್ಮ ಚಿತ್ರಗಳಲ್ಲಿ ಅವಶ್ಯಕತೆಗೆ ಅನುಗುಣವಾಗಿ ಬಣ್ಣದ ಶೃಂಗಾರ ಮಾಡಿದರು. ಲಂಕಾದಹನದ ಬೆಂಕಿಯ ಪ್ರಖರತೆಯ ನಿರೂಪಣೆಗೆ ಇಡೀ ಭಾಗಕ್ಕೆ ಕೆಂಪು ಹಾಗೂ ಸಮುದ್ರ ಅಥವಾ ಜಲರಾಶಿಯ ಭಾಗಗಳಿಗೆ ನೀಲ ವರ್ಣವಾಗಿರುವಂತೆ ಆ ಭಾಗದ ಫಿಲ್ಮನ್ನು ಸಂಸ್ಕರಣ ಕಾಲದಲ್ಲಿ ರಾಸಾಯನಿಕಗಳನ್ನು ಬಳಸಿ ವರ್ಣಮಯವನ್ನಾಗಿ ಮಾಡುತ್ತಿದ್ದರು (Toning). ವಿಶೇಷ ಕಡೆಗಳಲ್ಲಿ ಕುಂಚ ಬಳಸಿ ಪ್ರತಿ ಫ್ರೇಮನ್ನು ಚಿತ್ರಿಸಿ, ಇಡೀ ದೃಶ್ಯ ಭಾಗವನ್ನು ವರ್ಣಮಯವನ್ನಾಗಿ (Tinting) ಮಾಡುತ್ತಿದ್ದರು.

ಸಿನಿಮಾದಲ್ಲಿ ಮಹಿಳೆಯರು ಪಾತ್ರ ವಹಿಸುವುದು ಹೇಯವೆಂಬ ಭಾವನೆಯನ್ನು ತೊಲಗಿಸಲು ತಮ್ಮ ಮನೆಯ ಹೆಣ್ಣು ಮಕ್ಕಳನ್ನೇ ಚಿತ್ರದಲ್ಲಿ ಅಭಿನಯಿಸಲು ಆಯ್ಕೆ ಮಾಡಿದರು. ಕೆಲವು ಮಹಿಳಾ ಕಲಾವಿದರನ್ನು ಅಭಿನಯಿಸಲು ಪ್ರೇರೇಪಿಸಿದರು. ಇದರಿಂದ ಮಹಿಳೆಯರು ಧೈರ್ಯವಾಗಿ ಮುಂದೆ ಬಂದು ಚಿತ್ರದಲ್ಲಿ ಅಭಿನಯಿಸುವಂತಾಯಿತು.

ತಮ್ಮ ಕಾರ್ಯಕ್ಷೇತ್ರ ವಿಸ್ತರಿಸಲು ಹಾಗೂ ಸ್ಟುಡಿಯೋವನ್ನು ಅಭಿವೃದ್ಧಿ ಪಡಿಸಲು ಬಂಡವಾಳ ಬೇಕಾಯಿತು. ಅದಕ್ಕಾಗಿ 'ಹಿಂದೂಸ್ಥಾನ್ ಫಿಲಂ ಕಂಪನಿ' ಎಂಬ ಪಾಲುದಾರಿಕೆ ಸಂಸ್ಥೆ ಸ್ಥಾಪಿಸಿದರು. ಅದರಲ್ಲಿ 'ರಾಜಾ ಹರಿಶ್ಚಂದ್ರ' ಚಿತ್ರ ತಯಾರಿಸಲು ಆರಂಭಿಸಿದ್ದ 'ಫಾಲ್ಕೆ ಫಿಲಂಸ್' ಸಂಸ್ಥೆಯನ್ನು ವಿಲೀನಗೊಳಿಸಿದರು. ಆ ಸಂಸ್ಥೆಯ ಹೆಸರಲ್ಲಿ ತಯಾರಾದ 'ರಾಜಾ ಹರಿಶ್ಚಂದ್ರ', 'ಮೋಹಿನಿ ಭಸ್ಮಾಸುರ', 'ಸತ್ಯವಾನ್ ಸಾವಿತ್ರಿ', 'ಲಂಕಾ ದಹನ' ಈ ನಾಲ್ಕು ಚಿತ್ರಗಳೂ ಹೊಸ ಸಂಸ್ಥೆಯ ಸ್ವಾಮ್ಯಕ್ಕೆ ಸೇರಿದವು.

ಹಣ ಕಾಸಿನ ಮುಗ್ಗಟ್ಟು ಕಡಿಮೆ ಆದ ಕಾರಣ ಅವರು ತಮ್ಮ ಬಹು ದಿನಗಳ ಕನಸಾದ 'ಶ್ರೀಕೃಷ್ಣ ಜನ್ಮ' ಚಿತ್ರ ತಯಾರಿಸಿದರು. ೫,೫೦೦ ಅಡಿಗಳಷ್ಟು ದೊಡ್ಡದಾದ ಚಿತ್ರಕ್ಕೆ ಉತ್ತಮ ಪ್ರತಿಕ್ರಿಯೆ ಸಿಕ್ಕಿತು. 'ಶ್ರೀಕೃಷ್ಣ ಜನ್ಮ'ದ ನಂತರ 'ಕಾಲಿಯ ಮರ್ದನ್' ಚಿತ್ರಿಸಿದರು. ಅದಕ್ಕೂ ಉತ್ತಮ ಪ್ರತಿಕ್ರಿಯೆಯೇ. ಕಥಾ ಚಿತ್ರಗಳು, ಕಿರು ಚಿತ್ರಗಳ ತಯಾರಿಕೆ ಜೊತೆಯಲ್ಲೇ ನಾಸಿಕ್‌ನಲ್ಲಿದ್ದ ಸ್ಟುಡಿಯೋವನ್ನು ಆಧುನಿಕ ಮಾದರಿ ಸ್ಟುಡಿಯೋವನ್ನಾಗಿ ರೂಪಿಸಿದರು. ಆ ಸ್ಟುಡಿಯೋದಲ್ಲಿ ಒಳಾವರಣ, ಹೊರಾಂಗಣ ಚಿತ್ರಣಕ್ಕೆ ಸೌಲಭ್ಯವಿತ್ತು. ಉದ್ಯಾನವನ, ಗರಡಿ ಮನೆ, ಕತ್ತಿವರಸೆ, ಮತ್ತು ಕ್ರೀಡಾಂಗಣಗಳು, ಗ್ರಂಥಾಲಯ ಮತ್ತು ಪುಟ್ಟ ಮೃಗಾಲಯವೂ ಇದ್ದವು. ಸದಾ ವೈದ್ಯಕೀಯ ನೆರವು ಲಭ್ಯವಿತ್ತು. ಫ್ಯಾಕ್ಟರಿಯಂತೆ ಕೆಲಸ. ಆದರೆ ಸ್ಟುಡಿಯೋ ಒಂದು ಸಂತೃಪ್ತ ಕುಟುಂಬದಂತೆ ಇದ್ದಿತ್ತು. ಅವು ಫಾಲ್ಕೆ ಅವರಿಗೆ ಅತ್ಯಂತ ಸಂತಸ ತಂದ ದಿನಗಳು. ಆದರೆ ಈ ಸಂತೋಷ ಅವರ ಪಾಲಿಗೆ ಬಹುಕಾಲ ಉಳಿಯಲಿಲ್ಲ. ಪಾಲುಗಾರರಲ್ಲಿ ಭಿನ್ನಾಭಿಪ್ರಾಯ ಹುಟ್ಟಿತು. ೧೯೧೯ರಲ್ಲಿ ಫಾಲ್ಕೆ ಬೇಸತ್ತು ಪಾಲುಗಾರಿಕೆ ತ್ಯಜಿಸಿ ಕಾಶಿಗೆ ಹೊರಟು ಹೋದರು. ಆದರೆ ಮತ್ತೆ ಫಾಲ್ಕೆ ಅವರ ಮನವೊಲಿಸಿ ಕರೆತರಲಾಯಿತು. ಫಾಲ್ಕೆ ಅವರು ಹಿಂದೂಸ್ಥಾನ್ ಫಿಲಂ ಕಂಪೆನಿಗೆ ಮರಳಿದರೂ ಅವರ ಮನಸ್ಸಿಗೆ ಉತ್ಸಾಹ ಇರಲಿಲ್ಲ. ಪಾಲುದಾರರು ಅವರಿಗೆ ಪೂರ್ಣ ಸ್ವಾತಂತ್ರ್ಯ ನೀಡಲಿಲ್ಲ. ಅನೇಕ ಕಟ್ಟು ಪಾಡುಗಳು, ಸೃಜನಶೀಲ ಫಾಲ್ಕೆಗೆ ಉಸಿರುಗಟ್ಟುವ ವಾತಾವರಣ. ಆ ಸ್ಥಿತಿಯಲ್ಲಿಯೇ ಕೆಲವು ಚಿತ್ರಗಳನ್ನು ನಿರ್ದೇಶಿಸಿದರು. ಫಾಲ್ಕೆ ಅವರು ಹಿಂದೂಸ್ಥಾನ್ ಸಂಸ್ಥೆಗೆ ನಿರ್ಮಿಸಿದ ಕೊನೆಯ ಚಿತ್ರ 'ಸೇತು ಬಂಧನ್' (೧೯೩೨) ತಯಾರಿಕೆಯ ನಂತರ ಶಬ್ದದ ಜೋಡಣೆಯಾಗಿ ೧೯೩೪ರಲ್ಲಿ ತೆರೆಕಂಡಿತು. ಫಾಲ್ಕೆ ಚಿತ್ರೋದ್ಯಮವನ್ನು ತ್ಯಜಿಸಿ ವಿಶ್ರಾಂತಿ ಜೀವನ ನಡೆಸುವ ಸಂಕಲ್ಪ ಮಾಡಿದರು.

ಫಾಲ್ಕೆ ಬದುಕಿನಲ್ಲಿ ಸಹಸ್ರಾರು ರೂಪಾಯಿ ಗಳಿಸಿದ್ದರು. ಆದರೆ ಅವರ ಜೀವನ ಸಂಧ್ಯೆಯಲ್ಲಿ ಅವರು ಬರಿಗೈ ದಾಸ. ಹೊಟ್ಟೆಪಾಡಿಗಾಗಿ ಅವರು ತಾವು ರೂಪಿಸಿದ್ದ ತಂತ್ರಜ್ಞಾನದಿಂದ ಎನಾಮಲ್ ಬೋರ್ಡ್ ತಯಾರಿಸಿ ಮಾರಾಟ ಮಾಡಲು ಪ್ರಯತ್ನಿಸಿ ವಿಫಲರಾದರು.

೧೯೩೭ರಲ್ಲಿ ಕೊಲ್ಹಾಪುರ ಸಿನಿಟೋನ್ ಅವರಿಗಾಗಿ ಹಿಂದಿ ಮತ್ತು ಮರಾಠಿ ಭಾಷೆಯಲ್ಲಿ 'ಗಂಗಾವತರಣ' ಚಿತ್ರ ನಿರ್ಮಿಸಿದರು. ಆ ವೇಳೆಗೆ ಅದೃಷ್ಟ ಲಕ್ಷ್ಮಿ ಅವರನ್ನು ತೊರೆದಿದ್ದಳು. ಆದರೂ ಲಕ್ನೋ ಮತ್ತು ರಾಜಮಹೇಂದ್ರಿಯಿಂದ ಚಿತ್ರಗಳನ್ನು ನಿರ್ದೇಶಿಸಲು ಕರೆ ಬಂದವು. ಅಷ್ಟು ದೂರ ಹೋಗಿ ಚಿತ್ರ ನಿರ್ಮಿಸುವ ಚೈತನ್ಯ ಅವರಿಗೆ ಇರಲಿಲ್ಲ. ದಾರಿದ್ರ್ಯ, ಅನಾರೋಗ್ಯದ ಸುಳಿಯಲ್ಲಿ ತೊಳಲುತ್ತಿದ್ದ ದಾದಾ ಅವರನ್ನು ಚಿತ್ರರಂಗ ಮರೆತೇಬಿಟ್ಟಿತು. ಚಿತ್ರರಂಗಕ್ಕೆ ಗೊತ್ತಿರುವುದು ಒಂದೇ - 'ಗೆದ್ದ ಎತ್ತಿನ ಬಾಲ ಹಿಡಿಯುವುದು'.

ಆರಂಭದ ದಿನಗಳಲ್ಲಿ ಮೂರು ಯಶಸ್ವಿ ಚಿತ್ರಗಳ ತಯಾರಿಕೆಯ ನಂತರ ಕೈಯಿಂದ ಚಾಲನೆ ಮಾಡುವ ಯಂತ್ರೋಪಕರಣಗಳ ಬದಲು ಸ್ವಯಂಚಾಲಿತ ಆಧುನಿಕ ಯಂತ್ರಗಳನ್ನು ತರಲೆಂದು ಇಂಗ್ಲೆಂಡಿಗೆ ಹೋಗಿದರು. ಅವರೆಗೆ ತಯಾರಿಸಿದ್ದ ಚಿತ್ರಗಳನ್ನು ಜೊತೆಯಲ್ಲೇ ತೆಗೆದುಕೊಂಡು ಹೋಗಿದ್ದರು. ಆ ಚಿತ್ರಗಳ ತಾಂತ್ರಿಕ ಕೌಶಲವನ್ನು ಮೆಚ್ಚಿದ ಬ್ರಿಟನ್ನಿನ ಚಿತ್ರ ನಿರ್ಮಾಪಕರು, ಬ್ರಿಟನ್ನಿನಲ್ಲೇ ನಿಂತು ಚಿತ್ರ ತಯಾರಿಸಲು ಆಮಂತ್ರಣ ನೀಡಿದರು. ತಿಂಗಳಿಗೆ ೩೦೦ ಪೌಂಡ್ ವೇತನ, ಜೊತೆಗೆ ಬರುವ ಲಾಭದಲ್ಲಿ ಶೇ. ೨೦ರಷ್ಟು ಪಾಲುಗಾರಿಕೆ ಕೊಡುವುದಾಗಿ ಹೇಳಿದರು. ಲೋಕಮಾನ್ಯ ತಿಲಕರ 'ಸ್ವದೇಶಿ ಚಳವಳಿ'ಯಿಂದ ಪ್ರಭಾವಿತರಾಗಿದ್ದ ಫಾಲ್ಕೆಯವರು ಬ್ರಿಟಿಷರು ಒಡ್ಡಿದ ಆಮಿಷವನ್ನು ನಿರಾಕರಿಸಿ ಭಾರತಕ್ಕೆ ಮರಳಿದರು. ಈ ದೇಶಭಕ್ತ, ಕಲಾಭಕ್ತ ೧೯೪೪ರ ಫೆಬ್ರವರಿ ೧೬ರಂದು ವಿಧಿವಶರಾದರು.

ಹಿಂದೂಸ್ಥಾನ್ ಫಿಲಂ ಕಂಪೆನಿ ೧೯೧೭ರಿಂದ ೧೯೩೨ರವರೆಗೆ ೯೭ ಕಥಾಚಿತ್ರಗಳನ್ನು ಮತ್ತು ೨೬ ಕಿರುಚಿತ್ರಗಳನ್ನು ತಯಾರಿಸಿತು. ಅದರಲ್ಲಿ ಸುಮಾರು ೪೫ ಕಥಾಚಿತ್ರಗಳು, ೧೬ ಕಿರುಚಿತ್ರಗಳು ಫಾಲ್ಕೆ ಅವರ ಕೊಡುಗೆ. ಉಳಿದವು ಅವರ ಶಿಷ್ಯರ ಕೃತಿಗಳು.



(ಚಿತ್ರ ೧೧) ಭಾರತದ ಪ್ರಥಮ ಬಾಲನಟ - ಮಂದಾಕಿನಿ ಫಾಲ್ಕೆ 'ಕಾಲಿಯ ಮರ್ದನ್' (೧೯೧೯) ಚಿತ್ರದಲ್ಲಿ

### ೧೯೧೩ - ಸ್ಮರಣೀಯ ವರ್ಷ

ಗುರುದೇವ ರವೀಂದ್ರನಾಥ ಠಾಕೂರರು ಸಾಹಿತ್ಯ ವಿಭಾಗದ ನೊಬೆಲ್ ಪ್ರಶಸ್ತಿ ಸ್ವೀಕರಿಸಿ ವಿಶ್ವಮಾನ್ಯರಾದರು. ಅಮೆರಿಕಾದಲ್ಲಿ ಗದರ್ ಕ್ರಾಂತಿಕಾರಿ ಸಂಘಟನೆ ಸ್ಥಾಪನೆ. ಈ ಅನಿವಾಸಿ ಭಾರತೀಯರ ಗುರಿ - ಭಾರತದಿಂದ ಬ್ರಿಟಿಷರ ಉಚ್ಚಾಟನೆಗಾಗಿ ರಕ್ತಕ್ರಾಂತಿ. ಸಿಮ್ಲಾದಲ್ಲಿ ಭಾರತದ ಮೊದಲ ಟೆಲಿಫೋನ್ ವ್ಯವಸ್ಥೆ ಆರಂಭ.

ಇತಿಹಾಸದಲ್ಲಿ ದಾಖಲಾದ ಇನ್ನೊಂದು ಮಹತ್ವದ ಘಟನೆ, ಭಾರತೀಯ ಕಥಾ ಚಲನಚಿತ್ರದ ಪ್ರಥಮ ಸಾರ್ವಜನಿಕ ಪ್ರದರ್ಶನ - ಮುಂಬಯಿನ ಕಾರೊನೇಷನ್ ಥಿಯೇಟರಿನಲ್ಲಿ - ೧೯೧೩ರ ಮೇ ೩ರಂದು. ಅಂದಿನಿಂದ ಭಾರತೀಯ ಚಲನ ಚಿತ್ರೋದ್ಯಮದ ಇತಿಹಾಸದ ಕಾಲಗಣನೆ ಆರಂಭ. ಈ ಐತಿಹಾಸಿಕ ಘಟನೆಗೆ ಕಾರಣವಾದ ಚಿತ್ರ : 'ರಾಜಾ ಹರಿಶ್ಚಂದ್ರ'. ಈ ಸಂಪೂರ್ಣ ಸ್ವದೇಶಿ ಚಿತ್ರದ ರೂವಾರಿ ಧುಂಡಿರಾಜ್ ಗೋವಿಂದ ಫಾಲ್ಕೆ. ಜನ ಪ್ರೀತ್ಯಾದರಗಳಿಂದ ಅಣ್ಣನ ಸ್ಥಾನದಲ್ಲಿಟ್ಟು ಅವರನ್ನು ಕರೆಯುತ್ತಿದ್ದುದು 'ದಾದಾ ಫಾಲ್ಕೆ' ಎಂದು.

ಫಾಲ್ಕೆ ಅವರ ಚಿತ್ರಗಳಿಂದ ಸ್ಫೂರ್ತಿ ಪಡೆದು ಚಿತ್ರ ನಿರ್ಮಾಣ ರಂಗಕ್ಕೆ ಇಳಿದವರಲ್ಲಿ ವಣಕುದುರೆ ಶಾಂತಾರಾಮರ ಸೋದರ ಸಂಬಂಧಿ ಬಾಬೂರಾವ್ ಪೆಯಿಂಟರ್ ಗಮನಾರ್ಹ ವ್ಯಕ್ತಿ. ರಂಗಭೂಮಿಗೆ ಅಗತ್ಯವಾದ ಪರದೆ, ಸೀನರಿಗಳನ್ನು ಬರೆಯುತ್ತಿದ್ದ (ಪೆಯಿಂಟರ್ ಹೆಸರು ಬರಲು ಅದೇ ಕಾರಣ) ಬಾಬೂರಾವ್ ತಮ್ಮ ಕಲಾವೃತ್ತಿಯ ಜೊತೆಗೆ ಕೊಲ್ಹಾಪುರದಲ್ಲಿ ಚಲನಚಿತ್ರ ಪ್ರದರ್ಶಕರಾಗಿಯೂ ಇದ್ದರು.

ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಆಸಕ್ತಿ, ತಿಳಿವಳಿಕೆ ಇದ್ದ ಬಾಬೂರಾವ್ ಹಳೆಯ ಪ್ರೊಜೆಕ್ಟರ್ ಕೊಂಡು ತಂದು ಅದನ್ನು ಕ್ಯಾಮರಾ ಆಗಿ ಪರಿವರ್ತಿಸಿ ಚಲನಚಿತ್ರ ತಯಾರಿಕೆಗೆ ಸಿದ್ಧರಾದರು. ಖ್ಯಾತ ಗಾಯಕಿ ತಾನಿಬಾಯಿ ಕಾಗಿಲ್ಕರ್ ನೀಡಿದ ೧೫ ಸಾವಿರ ರೂಪಾಯಿ ಮೂಲ ಬಂಡವಾಳದಿಂದ 'ಮಹಾರಾಷ್ಟ್ರ ಫಿಲಂ ಕಂಪನಿ' ಸಂಸ್ಥೆ ಸ್ಥಾಪಿಸಿದರು. 'ಕೀಚಕವಧಾ' ನಾಟಕದ ವಸ್ತುವಿನ ಆಧಾರದ ಮೇಲೆ ಚಿತ್ರ ನಿರ್ಮಿಸಲು ಸಿದ್ಧತೆ ನಡೆಸಿದರು. ಬ್ರಿಟಿಷ್ ಸರಕಾರ ಆಕ್ಷೇಪಾರ್ಹ ಭಾಗಗಳಿವೆಯೆಂದು ಅದನ್ನು ನಿಷೇಧಿಸಿತು. ಬಾಬೂರಾವ್ ಅದೇ ನಾಟಕ ವಸ್ತುವನ್ನು 'ಸೈರಂಧ್ರಿ' (೧೯೧೯) ಎಂದು ಹೆಸರು ಬದಲಿಸಿ ಚಿತ್ರ ತಯಾರಿಸಿದರು. ಚಿತ್ರಕ್ಕೆ ಅಭೂತಪೂರ್ವ ಯಶಸ್ಸು ದೊರೆಯಿತು. 'ಸೈರಂಧ್ರಿ'ಯಲ್ಲಿ ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ಪರೋಕ್ಷ ಪ್ರತಿಭಟನೆಯಿತ್ತು. ಸಿನಿಮಾ ಮಾಧ್ಯಮವನ್ನು ರಾಜಕೀಯ ಜಾಗೃತಿಗಾಗಿ ಬಳಸಿದ್ದನ್ನು ಮೆಚ್ಚಿದ ಲೋಕಮಾನ್ಯ ತಿಲಕ್ ಅವರು ಬಾಬೂರಾವ್ ಪೆಯಿಂಟರ್‌ಗೆ 'ಸಿನಿಮಾ ಕೇಸರಿ' ಎಂದು ಬಿರುದು ನೀಡಿ ಗೌರವಿಸಿದರು.

ಬಾಬೂರಾವ್ ಪೆಯಿಂಟರ್ ಅವರ 'ಮಹಾರಾಷ್ಟ್ರ ಫಿಲಂ ಕಂಪನಿ' ಚಿತ್ರರಂಗಕ್ಕೆ ಚಲನಚಿತ್ರಗಳನ್ನು ಮಾತ್ರವಲ್ಲ, ಚಿತ್ರರಂಗದ ವಿವಿಧ ವಲಯಗಳಲ್ಲಿ ತರಬೇತಿ ಪಡೆದ ೨೦೦ಕ್ಕೂ ಹೆಚ್ಚು ಮಂದಿ ತಂತ್ರಜ್ಞರನ್ನು ನೀಡಿತು.

ಹಿಂದಿ ಮತ್ತು ಮರಾಠಿ ಚಿತ್ರರಂಗದಲ್ಲಿ ಸ್ಮರಣೀಯ ಕಲಾಕೃತಿಗಳನ್ನು ರೂಪಿಸಿದ ವಿ.ಶಾಂತಾರಾಮ್ (ನಟ/ನಿರ್ಮಾತೃ/ನಿರ್ದೇಶಕ), ನಾರಾಯಣ ಹರಿ ಅಪ್ಟೆ ಮತ್ತು ನಾನಾ ಸಾಹೇಬ್ ಸರಪೋತದಾರ್ (ಲೇಖಕರು), ಕೆ.ಪಿ.ಭಾವೆ (ನಿರ್ದೇಶನ), ವಿ.ದಾಮ್ಲೆ, ಎಸ್.ಫತೇಲಾಲ್ ಮೊದಲಾದ ಖ್ಯಾತನಾಮರೆಲ್ಲ ಪೆಯಿಂಟರ್ ಅವರ ಗರಡಿಯಲ್ಲೇ ತಯಾರಾದವರು. ಬಾಬೂರಾವ್ ಅವರ ಈ ಶಿಷ್ಯ ವರ್ಗವೇ ಮುಂದೆ ಪ್ರಖ್ಯಾತವಾದ ಪ್ರಭಾತ್ ಸಂಸ್ಥೆ, ರಾಜಕಮಲ್ ಕಲಾಮಂದಿರಗಳ ಮೂಲ ಪುರುಷರು.

ಸಂಗೀತ ವಾದ್ಯಗಳ ವ್ಯಾಪಾರಿ ಕುಟುಂಬದಲ್ಲಿ ೧೮೮೫ರಲ್ಲಿ ಹುಟ್ಟಿದ ಅರ್ದೇಶಿರ್ ಇರಾನಿ ಪಾಶ್ಚಾತ್ಯ ಚಲನಚಿತ್ರಗಳ ಹಂಚಿಕೆದಾರರಾಗಿ ಅನಂತರ ಸಿನಿಮಾ ಮಂದಿರಗಳನ್ನು ಕಟ್ಟಿದರು. ಪ್ರದರ್ಶನ ಕ್ಷೇತ್ರದಲ್ಲಿ ಬಂದ ಲಾಭವನ್ನು ಚಿತ್ರ ತಯಾರಿಕೆಯಲ್ಲಿ ಹೂಡಿದರು. ೧೯೨೬ರಲ್ಲಿ ಇಂಪೀರಿಯಲ್ ಫಿಲಂ ಕಂಪನಿ ಸ್ಥಾಪಿಸಿ ಅಸಂಖ್ಯ ಮೂಕ ಚಿತ್ರಗಳನ್ನು ಹಾಗೂ ಭಾರತದ ಪ್ರಥಮ ಶಬ್ದ ಚಿತ್ರ 'ಆಲಂ ಆರಾ' (ಪ್ರದರ್ಶನ : ೧೯೩೧ರ ಮಾರ್ಚ್ ೧೪) ನಿರ್ಮಿಸಿದ ಹೆಗ್ಗಳಿಕೆ ಇವರದು. ಭಾರತೀಯ ಚಿತ್ರರಂಗದ ಬೆಳವಣಿಗೆಯಲ್ಲಿ ಇಂಪೀರಿಯಲ್ ಸಂಸ್ಥೆಯ ಪಾತ್ರ ಹಿರಿದು. ಇಂಪೀರಿಯಲ್ ಸಂಸ್ಥೆ ಅನೇಕ ಪ್ರತಿಭಾವಂತರನ್ನು ಭಾರತೀಯ ಚಿತ್ರರಂಗಕ್ಕೆ ನೀಡಿದೆ. ತಾರೆಯರಾದ ಜುಬೇದಾ, ಡಿ.ಬಿಲ್ಮೋರಿಯಾ, ಜಾಲ್ ಮರ್ಚೆಂಟ್, ಜಿಲ್ಲೋಬಾಯಿ, ಯಾಕೂಬ್, ಎರ್ಮೆಲೈನ್, ಮುಬಾರಕ್, ನಿರ್ದೇಶಕರಾದ ಮೆಹಬೂಬ್, ಎ.ಆರ್.ಕರ್ದಾರ್, ಬಿ.ಪಿ.ಮಿಶ್ರ, ಕೆ.ಪಿ.ಭಾವೆ, ಆರ್.ಎಸ್.ಚೌಧುರಿ ಇವರೆಲ್ಲಾ ಇಂಪೀರಿಯಲ್ ಕೊಡುಗೆಗಳು.

ಪ್ರಥಮ ತೆಲುಗು, ತಮಿಳು ವಾಕ್ಚಿತ್ರಗಳನ್ನು ನಿರ್ದೇಶಿಸಿದ ಎಚ್.ಎಂ.ರೆಡ್ಡಿ ಇಂಪೀರಿಯಲ್‌ನಲ್ಲಿ ಅರ್ದೇಶಿರ್ ಇರಾನಿಯವರ ಜೊತೆ ಸಹಾಯಕ ನಿರ್ದೇಶಕರಾಗಿದ್ದರು.

ತೆಲುಗು, ತಮಿಳು, ಹಿಂದಿ ಚಿತ್ರಗಳ ನಿರ್ಮಾತೃ/ನಿರ್ದೇಶಕ/ಸ್ಟುಡಿಯೋ ಮಾಲೀಕ/ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ವಿಜೇತ ಎಲ್.ವಿ.ಪ್ರಸಾದ್ ಇಂಪೀರಿಯಲ್‌ನಲ್ಲಿ ೩೦ ರೂಪಾಯಿ ವೇತನದ ಮೇಲೆ ಸ್ಟುಡಿಯೋ ಸಹಾಯಕರಾಗಿ ತಮ್ಮ ಸಿನಿಮಾ ಜೀವನ ಆರಂಭಿಸಿದರು.

ಸಾಮಾಜಿಕ ಚಿತ್ರಗಳ ಹರಿಕಾರನೆನಿಸಿದ ಚಂದೂಲಾಲ್ ಷಾ ಮತ್ತು ಗೋಹರ್ ಅವರ ದಾದರ್‌ನಲ್ಲಿದ್ದ ರಣಜಿತ್ ಸಂಸ್ಥೆ ೧೦೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ಮಿಸಿತು. ಒಂದು ಘಟ್ಟದಲ್ಲಿ ಆ ಸಂಸ್ಥೆಯಲ್ಲಿ ವೇತನ ಪಡೆಯುತ್ತಿದ್ದ ಕಲಾವಿದರು, ತಂತ್ರಜ್ಞರು ಮತ್ತು ಇತರೆ ನೌಕರರ ಸಂಖ್ಯೆ ೩೦೦ಕ್ಕೂ ಹೆಚ್ಚಿತ್ತು.

ಜರ್ಮನಿಯಲ್ಲಿ ತರಬೇತಿ ಪಡೆದು ಬಂದ ಹಿಮಾಂಶುರಾಯ್ ಮತ್ತು ದೇವಿಕಾರಾಣಿ ದಂಪತಿಗಳು ಸ್ಥಾಪಿಸಿದ ಬಾಂಬೆ ಟಾಕೀಸಿನಲ್ಲಿ ಜರ್ಮನಿಯ ಅನೇಕ ತಂತ್ರಜ್ಞರು ಕೆಲಸ ಮಾಡುತ್ತಿದ್ದರು. ಅನೇಕ ಸ್ಮರಣೀಯ ಚಿತ್ರಗಳನ್ನು ನಿರ್ಮಿಸಿದ ಬಾಂಬೆ ಟಾಕೀಸ್ ಭಾರತೀಯ ಚಿತ್ರರಂಗಕ್ಕೆ ಅತ್ಯಗತ್ಯವಾಗಿದ್ದ ತಂತ್ರಜ್ಞರಿಗೆ ತರಬೇತಿಯನ್ನು ನೀಡುವ ಕೇಂದ್ರವೂ ಆಗಿತ್ತು.

ಮುಂಬಯಿ, ನಾಸಿಕ್, ಕೊಲ್ಹಾಪುರ, ಪುಣೆ ಮೊದಲಾದ ಕಡೆ ಹರಡಿ ಹೋಗಿದ್ದ ನಿರ್ಮಾಣ ಕೇಂದ್ರಗಳು, ಚಿತ್ರರಂಗದ ಆರಂಭದ ದಿನಗಳಲ್ಲಿ ಅಗತ್ಯವಾದ ಕಲಾವಿದರು ಹಾಗೂ ತಂತ್ರಜ್ಞರನ್ನು ರೂಪಿಸಿದವು.

ಮಹಾರಾಷ್ಟ್ರ ಬಿಟ್ಟರೆ ಚಿತ್ರ ತಯಾರಿಕೆಯ ಎರಡನೆ ಕೇಂದ್ರ ಕಲ್ಕತ್ತ. 'ಬಯಾಸ್ಕೋಪ್'ನ್ನು ಟೆಂಟ್ ಸಿನಿಮಾದಲ್ಲಿ ಪ್ರದರ್ಶಿಸುವ ಮೂಲಕ ಚಿತ್ರರಂಗಕ್ಕೆ ಇಳಿದು, ನಂತರ ಚಿತ್ರ ತಯಾರಕರಾಗಿ ೧೯೩೧ರ ವೇಳೆಗೆ ೧೨೬ ಚಿತ್ರ ಮಂದಿರಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡ ಜೆ.ಎಫ್.ಮದನ್ ಆರಂಭ ಕಾಲದಲ್ಲಿ ಸಿನಿಮಾ ಬೆಳವಣಿಗೆಗೆ ನೀಡಿದ ಕೊಡುಗೆ ಅಮೂಲ್ಯವಾದುದು.

ಮದನ್ ಸಂಸ್ಥೆ ೮೭ಕ್ಕೂ ಹೆಚ್ಚು ಮೂಕಿ ಚಿತ್ರಗಳನ್ನು ನಿರ್ಮಿಸಿತು. ಮುಂಬಯಿನಲ್ಲಿ ಪ್ರಥಮ ವಾಕ್ಚಿತ್ರ 'ಆಲಂ ಆರಾ' ಪ್ರದರ್ಶನ ಆರಂಭವಾದ ದಿನದಂದೇ ಮದನ್ ಸಂಸ್ಥೆ ತಯಾರಿಸಿದ ಕಿರು ವಾಕ್ಚಿತ್ರಗಳು ತೆರೆಕಂಡವು. ಸಿ.ವಿ.ರಾಮನ್ನರ ಭಾಷಣ, ಕಾಳಿದಾಸನ ಕೃತಿವಾಚನ, ಶಿವಾಲಯದಲ್ಲಿ ಶಿವಸ್ತುತಿ, ರಂಗಗೀತೆಗಳು ಇವೇ ಮೊದಲಾದ ೩೧ ಸಂಗೀತ ಪ್ರಧಾನ ಕಿರು ವಾಕ್ಚಿತ್ರಗಳನ್ನು ತೆರೆಗೆ ತಂದಿತು.

ಮದನ್ ಸಂಸ್ಥೆ, ಛಾಯಾಗ್ರಾಹಕ ಹೀರಾಲಾಲ್ ಸೇನ್, ಬಂಗಾಳ ಲೇಖಕ/ನಟ ಧೀರೇನ್ ಗಂಗೂಲಿ, ದೇವಕಿ ಬೋಸ್, ಬಿ.ಎನ್.ಸರಕಾರ್, ಪಿ.ಸಿ.ಬರುವಾ ಸೇರಿ ಸ್ಥಾಪಿಸಿದ 'ನ್ಯೂ ಥಿಯೇಟರ್ಸ್, ಈಸ್ಟ್ ಇಂಡಿಯಾ ಕಂಪನಿ, ಅರೋರಾ, ಕಾಳಿ, ರಾಧಾ ಫಿಲಂಸ್ ಇವೇ ಮೊದಲಾದ ಸಂಸ್ಥೆಗಳು ಬಂಗಾಳಿ, ಒರಿಯಾಗಳಲ್ಲದೆ ಹಿಂದಿ, ತಮಿಳು, ತೆಲುಗು ಚಿತ್ರರಂಗದ ಅವಶ್ಯಕತೆಗಳನ್ನೂ ಆರಂಭಿಕ ದಿನಗಳಲ್ಲಿ ಪೂರೈಸುತ್ತಿದ್ದವು.

ಭಾರತೀಯ ಚಿತ್ರರಂಗದ ತಂತ್ರಜ್ಞರಲ್ಲಿ ಬಹು ಮಂದಿ ತಮಗೆ ತಾವೇ ಗುರುವಾದರು. ನೋಡಿ ಕಲಿತರು. ಕಲಿತದ್ದನ್ನು ಪ್ರಯೋಗಿಸಿ ಅನುಭವ ಪಡೆದರು. ಒಂದು ದೀಪ ಮತ್ತೊಂದನ್ನು ಬೆಳಗಿತು. ವಿದೇಶಗಳಲ್ಲಿ ತರಬೇತಿ ಪಡೆದು ಬಂದವರು ಕೈ ಬೆರಳೆಣಿಕೆಯಷ್ಟು. ಮೋಹನ್ ಭವನಾನಿ, ಎಜ್ರಾಮಿರ್, ಕೆ.ಪಿ.ಭಾವೆ, ಪಿ.ಸಿ.ಬರುವಾ, ಹರಿಭಾಯಿ ಆರ್.ದೇಸಾಯಿ, ಹಿಮಾಂಶುರಾಯ್, ದೇವಿಕಾ ರಾಣಿ, ಆರ್.ಪ್ರಕಾಶ್, ಈ ಪಟ್ಟಿಯಲ್ಲಿ ದಾದಾ ಫಾಲ್ಕೆ ಅವರ ಹೆಸರನ್ನೂ ಸೇರಿಸಬಹುದು.

### ಕೈ ಕಟ್ಟಿ ಕುಳಿತ ಕನ್ನಡಿಗ ; ಕಳೆದುಕೊಂಡ ಚಿನ್ನದಂತಹ ಅವಕಾಶ

ಬೆಂಗಳೂರು ಕೋಟೆ ಬದಿಯಲ್ಲಿರುವ ಎಸ್.ಎಲ್.ಎನ್. ಸಂಸ್ಥೆಯ ವಿದ್ಯಾಶಾಲೆಗಳಿಗಾಗಿ ೧೯೦೫ರಲ್ಲಿ ನಿರ್ಮಾಣವಾದ ದೊಡ್ಡಣ್ಣ ಹಾಲ್‌ನ ಒಂದು ಭಾಗ ಪ್ಯಾರಮೌಂಟ್ ಚಿತ್ರಮಂದಿರವಾಗಿ ಪರಿವರ್ತಿತಗೊಂಡಿತು. ಇದೇ ಬೆಂಗಳೂರಿನ ಮೊದಲ ಚಿತ್ರಮಂದಿರ.

ಅದು ಚಲನಚಿತ್ರಕ್ಕೆ ಕನ್ನಡದ ನಂಟಿನ ಆರಂಭವೂ ಹೌದು. ಭಾರತದ ಪ್ರಥಮ ಕಥಾಚಿತ್ರ ದಾದಾ ಫಾಲ್ಕೆ ಅವರ 'ರಾಜಾ ಹರಿಶ್ಚಂದ್ರ' (೧೯೧೩) ನಂತರ ಕನ್ನಡ ನೆಲದಲ್ಲಿ ಚಲನಚಿತ್ರದ ನಿರ್ಮಾಣ ಚಟುವಟಿಕೆಗಳು ಆರಂಭವಾಗಲು ೧೬ ವರ್ಷಗಳ ದೀರ್ಘಕಾಲವೇ ಬೇಕಾಯಿತು.

ಚಲನಚಿತ್ರ ನಿರ್ಮಾಣ ಚಟುವಟಿಕೆ ಇಲ್ಲವಾದರೂ ಬೆಂಗಳೂರು ಇಡೀ ದಕ್ಷಿಣ ಭಾರತಕ್ಕೆ ಚಲನಚಿತ್ರ ವಿತರಣಾ ಕೇಂದ್ರವಾಗಿ ಬೆಳೆದಿತ್ತು. ಮದರಾಸು, ವಿಜಯವಾಡ, ತಿರುಚಿನಾಪಳ್ಳಿ ಮುಂತಾದ ಪ್ರದೇಶಗಳಿಗೆ ಮಾತ್ರವಲ್ಲದೆ ಸಿಲೋನಿಗೂ ಬೆಂಗಳೂರಿನಿಂದಲೇ ಚಲನಚಿತ್ರಗಳನ್ನು ಪೂರೈಸಲಾಗುತ್ತಿತ್ತು.

ಬೆಂಗಳೂರಿನ ಸೆಲೆಕ್ಟ್ ಪಿಕ್ಚರ್ಸ್ ಸರ್ಕ್ಯೂಟ್ ಚಲನಚಿತ್ರ ವಿತರಣೆ ಹಾಗೂ ಪ್ರದರ್ಶನ ಸಂಸ್ಥೆಯ ಅಂಬಾಲಾಲ್ ಪಟೇಲ್ ಮತ್ತು ಚಿಮನ್‌ಲಾಲ್ ದೇಸಾಯಿ ಅವರು ಮುಂಬಯಿನ ಅರ್ದೇಶಿರ್ ಇರಾನಿ ಅವರ ಪಾಲುಗಾರಿಕೆಯಲ್ಲಿ 'ಸಾಗರ್ ಫಿಲಂಸ್ ಕಂಪನಿ' ಎಂಬ ಸ್ಟುಡಿಯೋವನ್ನು ಮುಂಬಯಿನಲ್ಲಿ ಆರಂಭಿಸಿ ಚಿತ್ರ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದರು. ಪಟೇಲ್ ಅವರು ತಮ್ಮ ಬೆಂಗಳೂರಿನ ಚಿತ್ರಮಂದಿರದಲ್ಲಿ ಪ್ರದರ್ಶಕನಾಗಿ ಕೆಲಸ ಮಾಡುತ್ತಿದ್ದ ಸರ್ವೋತ್ತಮ ಬಾದಾಮಿ ಅವರನ್ನು ಮುಂಬಯಿನಲ್ಲಿ ಚಿತ್ರನಿರ್ಮಾಣ ನಿರ್ದೇಶನ ಕಾರ್ಯಕ್ಕೆ ನಿಯೋಜಿಸಿದ್ದರು.

ಆ ದಿನಗಳಲ್ಲಿ ಬೆಂಗಳೂರಿನ ಹವಾಗುಣ ಹಿತಕರವಾಗಿತ್ತು. ಬೇಸಿಗೆಯ ಗರಿಷ್ಠ ಉಷ್ಣಾಂಶ ೩೩.೨° ಸೆಂಟಿಗ್ರೇಡ್. ಚಳಿಗಾಲದ ಕನಿಷ್ಠ ಉಷ್ಣಾಂಶ ೧೧.೨° ಸೆಂಟಿಗ್ರೇಡ್. ಬೇಸಿಗೆ ಮತ್ತು ಚಳಿಗಾಲದಲ್ಲಿ ಹವೆ ಹೆಚ್ಚು ವ್ಯತ್ಯಾಸವಾಗುತ್ತಿರಲಿಲ್ಲ. ಬೇಸಿಗೆಯಲ್ಲಿ ಬಿಸಿಲು ತೀಕ್ಷ್ಣವಾದರೂ, ರಾತ್ರಿ ತಂಪು ಹವೆ. ಇಂತಹ ಹಿತಕರ ಹವಾಮಾನ ಮುಂಬಯಿನ ನಿರ್ಮಾತೃ ಹರಿಭಾಯಿ ದೇಸಾಯಿ ಅವರನ್ನು ಆಕರ್ಷಿಸಿತು. ಅವರು ತಮ್ಮ ಗೆಳೆಯರೊಡಗೂಡಿ ಬೆಂಗಳೂರಿನಲ್ಲಿ ೧೯೨೯ರ ಜುಲೈ ೨೨ರಂದು ಸೂರ್ಯ ಫಿಲಂ ಕಂಪನಿ ಆರಂಭಿಸಿ ಚಿತ್ರಗಳನ್ನು ತಯಾರಿಸತೊಡಗಿದರು. ಮುಂಬಯಿನಿಂದ ಕಲಾವಿದರು, ತಂತ್ರಜ್ಞರು ಬರುತ್ತಿದ್ದರೂ ಸ್ಥಳೀಯ ಪ್ರತಿಭೆಗಳಿಗೂ ಆದ್ಯತೆ ನೀಡುತ್ತಿದ್ದರು. ಲಕ್ಷ್ಮೀಬಾಯಿ, ಕಮಲಾಬಾಯಿ, ಅನ್ನಪೂರ್ಣಮ್ಮ ಇವರೆಲ್ಲಾ ಸೂರ್ಯ ಸಂಸ್ಥೆಯ 'ನಕ್ಷತ್ರ'ಗಳು. ಉತ್ತಮ ಚಿತ್ರಗಳನ್ನು ತಯಾರಿಸುವ ಸಂಸ್ಥೆಯಾಗಿ ಬೆಳೆದ ಸೂರ್ಯ ಫಿಲಂ ಕಂಪನಿ ೧೯೩೩ರವರೆಗೆ ೩೮ ಚಿತ್ರಗಳನ್ನು ನಿರ್ಮಿಸಿತು.

ಮೈಸೂರಿನ ಸುಪ್ರಸಿದ್ಧ 'ಖೆಡ್ಡಾ' ಹಾಗೂ ದಸರಾ ಸಾಕ್ಷ್ಯಚಿತ್ರಗಳನ್ನು ತಯಾರಿಸಲು ಬಂದಿದ್ದ ಮೋಹನ್ ದಯಾರಾಮ ಭವನಾನಿ ಅವರು ಮೈಸೂರಿನ ಸಾಹಿತಿಗಳ, ಕಲಾವಿದರ ಸಂಪರ್ಕದಿಂದ ಪ್ರಭಾವಿತರಾಗಿ ಶೂದ್ರಕನ 'ಮೃಚ್ಛಕಟಿಕಾ' ನಾಟಕವನ್ನು ಆಧರಿಸಿ ತಯಾರಿಸಿದ 'ವಸಂತಸೇನಾ' (೧೯೩೧) ಒಂದು ವಿಶಿಷ್ಟ ಚಿತ್ರ. ದ.ಕೃ.ಭಾರದ್ವಾಜ್, ಟಿ.ಪಿ.ಕೈಲಾಸಂ, ಕಲಾತಜ್ಞರಾದ ಜಿ.ವೆಂಕಟಾಚಲಮ್, ನೃತ್ಯಾಂಗನೆ ಪಣಾಕ್ಷಿ ರಾಮರಾವ್, ನೃತ್ಯಗುರು ಜಟ್ಟಿತಾಯಮ್ಮ ಕಮಲಾದೇವಿ ಚಟ್ಟೋಪಾಧ್ಯಾಯ, ಜೇಮ್ಸ್ ಕಸಿನ್ಸ್ - ಆಗಿನ ಕಾಲದ ಬುದ್ಧಿಜೀವಿಗಳ, ಕಲಾವಿದರ ಅಪೂರ್ವ ಸಂಗಮ 'ವಸಂತಸೇನೆ'ಯ ಹಿರಿಮೆ. ಚಲನಚಿತ್ರ ಮಾಧ್ಯಮದಲ್ಲಿ ಶಿವರಾಮ ಕಾರಂತರೂ ಸಹಜವಾಗಿ ಆಸಕ್ತರಾಗಿದ್ದರು. 'ಭೂತರಾಜ್ಯ', 'ಡೊಮಿಂಗೊ' ಎಂಬ ಎರಡು ಚಿತ್ರಗಳು ಅವರ ನಿರ್ದೇಶನದಲ್ಲಿ ರೂಪುಗೊಂಡವು.

ಕನ್ನಡ ಚಿತ್ರೋದ್ಯಮದ ಆದ್ಯ ಪ್ರವರ್ತಕರೆಂದರೆ ಗುಬ್ಬಿವೀರಣ್ಣನವರು. ಕರ್ನಾಟಕ ಫಿಲಂಸ್ ಕಾರ್ಪೊರೇಷನ್ ಹೆಸರಿನಲ್ಲಿ ಲಿಮಿಟೆಡ್ ಕಂಪನಿಯೊಂದನ್ನು ಆರಂಭಿಸಿ ಸ್ಟುಡಿಯೊ ಸಲಕರಣೆಗಳನ್ನು ಕೊಂಡು ತಂದು 'ಸಾಂಗ್ ಆಫ್ ಲೈಫ್' (೧೯೩೦), 'ಹಿಸ್ ಲವ್ ಅಫೇರ್ಸ್' (೧೯೩೧) ಮತ್ತು 'ಹರಿಮಾಯ' (೧೯೩೨) ಚಿತ್ರಗಳನ್ನು ತಯಾರಿಸಿದರು.

ಮದರಾಸಿನ ಆರ್.ನಟರಾಜ ಮೊದಲಿಯಾರ್ ಅವರ 'ಇಂಡಿಯನ್ ಫಿಲಂ ಕಂಪನಿ' (೧೯೧೬) ಎಂಬ ಚಿತ್ರ ನಿರ್ಮಾಣ ಸಂಸ್ಥೆ ಆರಂಭಿಸಿ ತಯಾರಿಸಿದ 'ಕೀಚಕ ವಧಾ' ದಕ್ಷಿಣ ಭಾರತದಲ್ಲಿ ತಯಾರಾದ ಮೊದಲ ಚಿತ್ರ. ಇಂಡಿಯನ್ ಫಿಲಂ ಕಂಪನಿಯ ಸಂಸ್ಕರಣ ಘಟಕ (ಲ್ಯಾಬೊರೇಟರಿ) ಕಾರ್ಯ ನಿರ್ವಹಿಸುತ್ತಿದ್ದದ್ದು ಬೆಂಗಳೂರಿನಲ್ಲಿ ಎಂಬುದು ಗಮನಾರ್ಹ.

ಮೂಕಿ ಚಿತ್ರಗಳ ಯುಗದ ಅಂತಿಮ ದಿನಗಳಲ್ಲಿ ಆರಂಭವಾದ ಚಲನಚಿತ್ರಕ್ಕೆ ಸಂಬಂಧಪಟ್ಟ ಚಟುವಟಿಕೆ, ಬುದ್ಧಿಜೀವಿಗಳ ಸಹಭಾಗಿತ್ವ, ನಿರ್ಮಾಣ ಪರಿಣತಿ, ಪ್ರಾಥಮಿಕ ಸೌಲಭ್ಯ, ಭಾರತದ ಇತರ ನಗರಗಳಲ್ಲಿ ಕಾಣಸಿಗದ, ಚಿತ್ರೋದ್ಯಮಕ್ಕೆ ಹಿತಕರವಾದ ವಾತಾವರಣ ಇವೆಲ್ಲಾ ವಾಕ್ಚಿತ್ರ ಯುಗವನ್ನು ಸ್ವಾಗತಿಸಲು ಬೆಂಗಳೂರಿನಲ್ಲಿ ಸಜ್ಜಾಗಿದ್ದವು. ಪ್ರಪಂಚದ ಪ್ರಥಮ ವಾಕ್ಚಿತ್ರ ಅಲ್ ಜಾನ್ಸನ್‌ನ 'ದಿ ಜಾಜ್ ಸಿಂಗರ್' (The Jazz Singer), ೧೯೨೭ರ ಅಕ್ಟೋಬರ್ ೬ರಂದು ನ್ಯೂಯಾರ್ಕ್‌ನಲ್ಲಿ ಪ್ರದರ್ಶಿತವಾಯಿತು. ಮದನ್ ಸಂಸ್ಥೆಯವರು ಕಲ್ಕತ್ತಾದಲ್ಲಿ ೧೯೨೯ರಲ್ಲಿ ಪ್ರದರ್ಶಿಸಿದ 'ದಿ ಮೆಲೊಡಿ ಆಫ್ ಲವ್' (The Melody of Love) ಭಾರತದಲ್ಲಿ ತೆರೆಕಂಡ ಪ್ರಥಮ ವಾಕ್ಚಿತ್ರ.

ವಾಕ್ಚಿತ್ರಗಳ ಬಗೆಗೆ ವಿದೇಶಗಳಿಂದ ವರದಿಗಳನ್ನು ಓದಿಯೇ ಕಂಗಾಲಾಗಿದ್ದ, ಮೂಕಚಿತ್ರಗಳನ್ನು ತಯಾರಿಸುತ್ತಿದ್ದ ಭಾರತೀಯ ನಿರ್ಮಾಪಕರು, ಭಾರತದಲ್ಲಿ ವಿದೇಶಿ ವಾಕ್ಚಿತ್ರಗಳು ಪ್ರದರ್ಶಿತವಾದ ಮೇಲೆ ದಿಕ್ಕೆಟ್ಟರು. ವ್ಯವಹಾರ ಕುಶಲಿಗಳು ಹೊಸ ಸವಾಲನ್ನು ಎದುರಿಸಲು ಸಿದ್ಧರಾದರು. ಉಳಿದವರು ಕಣದಿಂದ ಹಿಂದೆ ಸರಿಯ ತೊಡಗಿದರು. ಕಾರಣ ನಿರ್ಮಾಣ, ಪ್ರದರ್ಶನದ ತಂತ್ರಜ್ಞಾನದಲ್ಲಿ ಆದ ಬದಲಾವಣೆ. ಆ ಸಂಬಂಧದಲ್ಲಿ ಹೂಡಬೇಕಾಗಿ ಬಂದ ಬಂಡವಾಳದ ಹೊರೆ, ಭಾರತದ ಪ್ರಥಮ ವಾಕ್ಚಿತ್ರ 'ಆಲಂ ಆರಾ' ೧೯೩೧ರ ಮಾರ್ಚ್ ೧೪ರಂದು ತೆರೆಕಂಡ ಮೇಲೆ ಭಾರತೀಯ ನಿರ್ಮಾಪಕರಿಗೆ ವಸ್ತು ಸ್ಥಿತಿಯ ನೈಜರೂಪದ ಅರಿವಾಯಿತು.

ಮೂಕ ಚಿತ್ರಗಳಿಗೆ ಮಾರುಕಟ್ಟೆ ವಿಶ್ವವ್ಯಾಪಿ. ಆದರೆ ವಾಕ್ಚಿತ್ರಗಳು ಭಾಷಾ ಅಭಿವ್ಯಕ್ತಿಗೊಂದು ಮಾಧ್ಯಮವಾದರೂ ಅವು ಭಾಷೆಯ ಕಬಂಧ ಬಾಹುವಿನಲ್ಲಿ ಬಂದಿಯಾದವು. ಸೀಮಿತ ಮಾರುಕಟ್ಟೆ ಇರುವ ಭಾಷಾ ಪ್ರದೇಶಗಳಲ್ಲಿನ ಚಲನಚಿತ್ರ ಉದ್ಯಮಗಳು ತತ್ತರಿಸಿದವು.

ಭಾರತದಲ್ಲಿ ವಾಕ್ಚಿತ್ರಗಳ ರಂಗ ಪ್ರವೇಶಕ್ಕೆ ಮುನ್ನ ಇದ್ದ ಚಲನಚಿತ್ರ ನಿರ್ಮಾಣ ಕೇಂದ್ರಗಳು ನಾಲ್ಕು. ಈ ನಾಲ್ಕು ಕೇಂದ್ರಗಳಲ್ಲಿ ೧೯೧೩ರಿಂದ ೧೯೩೪ರಲ್ಲಿ ನಿರ್ಮಾಣಗೊಂಡ ಮೂಕ ಚಿತ್ರಗಳ ಒಟ್ಟು ಸಂಖ್ಯೆ ೧೩೩೧. ಮೂಕ ಯುಗದ ಕಾಲದಲ್ಲಿ ಚಿತ್ರ ತಯಾರಿಕೆಯಲ್ಲಿ ಅಗ್ರಸ್ಥಾನ ಪಡೆದಿದ್ದದ್ದು ಮುಂಬಯಿ (ಮಹಾರಾಷ್ಟ್ರದ ನಾಸಿಕ್, ಪುಣೆ, ಕೊಲ್ಹಾಪುರದಲ್ಲೂ ಚಿತ್ರಗಳ ತಯಾರಿಕೆ ಬಿರುಸಿನಿಂದ ಸಾಗಿತ್ತು). ಭಾರತದಲ್ಲಿ ತಯಾರಾದ ಮೂಕಚಿತ್ರಗಳಲ್ಲಿ ಶೇ. ೮೦ರಷ್ಟು ಚಿತ್ರಗಳು ತಯಾರಾದದ್ದು ಇಲ್ಲೇ. ಬಂಗಾಳಿ ಹೊರತಾಗಿ ತಮಿಳು, ತೆಲುಗು, ಗುಜರಾತಿ, ಕನ್ನಡ ಭಾಷೆಯ ಪ್ರಥಮ ವಾಕ್ಚಲನ ಚಿತ್ರಗಳು ಮಹಾರಾಷ್ಟ್ರದಲ್ಲೇ ತಯಾರಾದವೆಂಬುದು ಗಮನೀಯ. ಮರಾಠಿ ಭಾಷಾ ವಲಯದಲ್ಲಿ ಸಹಜವಾಗಿ ಆ ಪ್ರದೇಶದ ಜನ ಮರಾಠಿ ಭಾಷೆಯ ಚಿತ್ರ ತಯಾರಿಸುತ್ತಾರೆ. ಆಗಿನ ಕಾಲದ (೧೯೩೦) ಲಭ್ಯವಿರುವ ಅಂಕಿ ಅಂಶಗಳ ಪ್ರಕಾರ ಮರಾಠಿ ಭಾಷೆ ಮಾತಾಡುವ ಜನಸಂಖ್ಯೆ ೨೧ ದಶಲಕ್ಷ. ಮಹಾರಾಷ್ಟ್ರ ಬಿಟ್ಟು ಭಾರತದ ಇತರ ಭಾಗಗಳಲ್ಲಿ ಆ ಚಿತ್ರಗಳಿಗೆ ಮಾರುಕಟ್ಟೆ ಇರದು. ಬರ್ಮ, ಸಿಲೋನ್ ಮಾರುಕಟ್ಟೆಯೂ ಕೈ ತಪ್ಪುತ್ತದೆ.

ಬಂಗಾಳಿ ಭಾಷಾ ಪ್ರಾಂತ್ಯದಲ್ಲಿನ ಕಲ್ಕತ್ತ ಚಿತ್ರತಯಾರಿಕೆಯ ಎರಡನೆ ಪ್ರಮುಖ ಕೇಂದ್ರ. ಭಾರತದ ಈಶಾನ್ಯ ಭಾಗದಲ್ಲಿರುವ ಬಂಗಾಳಿ ಭಾಷೆ ಮಾತನಾಡುವವರ ಸಂಖ್ಯೆ ೫೩ ದಶಲಕ್ಷ (ಈಗಿನ ಬಾಂಗ್ಲಾದೇಶ ಸೇರಿ). ಆದರೆ ಬಂಗಾಳಿ ಭಾಷೆಯಲ್ಲಿ ತಯಾರಾದ ಚಿತ್ರಗಳಿಗೆ ಉತ್ತರ ಭಾರತ, ಮಧ್ಯ ಭಾರತ, ದಕ್ಷಿಣ ಭಾರತ, ಸಿಲೋನ್, ಬರ್ಮಾ ದೇಶದಲ್ಲಿ ಪುರಸ್ಕಾರ ಸಿಗದು.

ಮೂರನೆ ಕೇಂದ್ರ ಮದರಾಸು. ದ್ರಾವಿಡ ಭಾಷೆಯಾದ ತಮಿಳು ಮಾತನಾಡುವವರ ಸಂಖ್ಯೆ ೨೦ ದಶಲಕ್ಷ. ಮಹಾರಾಷ್ಟ್ರ, ಬಂಗಾಳ, ಉತ್ತರ ಭಾರತ, ಮಧ್ಯ ಭಾರತ ಈ ಭಾಷಾ ವಲಯಗಳಲ್ಲಿ ತಮಿಳು ಚಿತ್ರಗಳಿಗೆ ಪುರಸ್ಕಾರ ದೊರೆಯದು. ಆದರೆ ಸಿಲೋನ್, ಮಲೆಯ, ದಕ್ಷಿಣ ಆಫ್ರಿಕಾದ ಮಾರುಕಟ್ಟೆ ಅದಕ್ಕೆ ಲಭ್ಯ.

ನಾಲ್ಕನೆ ಚಿತ್ರ ತಯಾರಿಕಾ ಕೇಂದ್ರವಾದ ಬೆಂಗಳೂರು, ಕನ್ನಡ ಮಾತಾಡುವವರ ಸಂಖ್ಯೆ ೧೧ ದಶಲಕ್ಷ. ಚಿತ್ರ ನಿರ್ಮಾಣ ಸೌಲಭ್ಯವಿದೆ. ದಕ್ಷಿಣ ಭಾರತದಲ್ಲಿ ಚಲನಚಿತ್ರಗಳ ವಿತರಣೆಯ ಜಾಲ ಹೊಂದಿದೆ. ಹಲವಾರು ತಂತ್ರಜ್ಞರು, ಕಲಾವಿದರು ಮುಂಬಯಿ ಮೊದಲಾದ ನಿರ್ಮಾಣ ಕೇಂದ್ರದಲ್ಲಿ ದುಡಿಯುತ್ತಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ಚಿತ್ರೋದ್ಯಮಕ್ಕೆ ಅನುಕೂಲವಾದಂತಹ ಹಿತಕರವಾದ ವಾತಾವರಣ ಲಭ್ಯ. ಇಲ್ಲಿನ ಬುದ್ಧಿಜೀವಿಗಳು ಚಲನಚಿತ್ರೋದ್ಯಮದಲ್ಲಿ ಆಸಕ್ತಿ ವಹಿಸಿದ್ದು ಇನ್ನೊಂದು ವಿಶೇಷ. ದಕ್ಷಿಣದ ಇನ್ನೊಂದು ಪ್ರಮುಖ ಭಾಷೆ ತೆಲುಗು. ನಿಜಾಮರ ಪ್ರಭುತ್ವಕ್ಕೆ ಒಳಪಟ್ಟ ಹೈದರಾಬಾದ್‌ನಲ್ಲಿ ಉರ್ದು ಆಡಳಿತ ಭಾಷೆ ಆಗಿದ್ದರೂ ಅದು ತೆಲುಗು ಭಾಷಾ ಪ್ರಧಾನ ರಾಜ್ಯ. ೨೮ ದಶಲಕ್ಷ ತೆಲುಗು ಭಾಷಾ ಜನರಿರುವ ಪ್ರದೇಶ. ಇಲ್ಲಿ ಚಿತ್ರನಿರ್ಮಾಣ ಚಟುವಟಿಕೆ ಇರಲೇ ಇಲ್ಲ.

ಬಂಗಾಳದ ಪ್ರತಿಭಾವಂತ ನಟ/ಲೇಖಕ ಧೀರೇಂದ್ರನಾಥ ಗಂಗೂಲಿ ೧೯೨೨ರಲ್ಲೇ ನಿಜಾಮರ ಕೃಪಾಶ್ರಯದಲ್ಲಿ 'ಲೋಟಸ್ ಫಿಲಂ ಕಂಪನಿ' ಹೆಸರಿನಲ್ಲಿ ಸ್ಟುಡಿಯೋ ಆರಂಭಿಸಿದ. ಚಿತ್ರಗಳನ್ನು ತಯಾರಿಸಿದ. ಹೈದರಾಬಾದಿನಲ್ಲಿ ಎರಡು ಚಿತ್ರಮಂದಿರಗಳೂ ಅವನ ಆಡಳಿತಕ್ಕೆ ಒಳಪಟ್ಟಿದ್ದವು. ಆದರೆ ೧೯೨೪ರಲ್ಲಿ ಮುಂಬಯಿನಲ್ಲಿ ತಯಾರಾದ 'ರಜಿಯಾ ಬೇಗಂ' ಎಂಬ ಚಿತ್ರವನ್ನು ಪ್ರದರ್ಶಿಸಿದ. ಮುಸ್ಲಿಂ ರಾಣಿಯೊಬ್ಬಳು ತನ್ನ ಹಿಂದೂ ಪ್ರಜೆಯಲ್ಲಿ ಅನುರಕ್ತಳಾಗುವ ಚಾರಿತ್ರಿಕ

ಕಥಾವಸ್ತು. ಆಗ ಹಿಂದೂ-ಮುಸ್ಲಿಂ ಅಂತಃಕಲಹಗಳ ಕಾಲ. ಚಿತ್ರಕ್ಕೆ ಮುಸ್ಲಿಮರ ಆಕ್ಷೇಪಣೆ, ನಿಜಾಮರ ಫರ್ಮಾನಿನಂತೆ ರಾತ್ರೋರಾತ್ರಿ ಗಂಗೂಲಿ ಹೈದರಾಬಾದು ಬಿಡಬೇಕಾಯಿತು. ಅವನ ಜೊತೆಯಲ್ಲೇ ಚಿತ್ರೋದ್ಯಮವೂ ಗಡಿ ಪಾರಾಯಿತು. ಮತ್ತೆ ಅದು ಹೈದರಾಬಾದಿಗೆ ಮರಳಲು ಮೂರು ದಶಕಗಳೇ ಬೇಕಾದವು.

ಉತ್ತರ ಭಾರತ ಮತ್ತು ಮಧ್ಯಭಾರತ ಭಾರತದ ಹೃದಯ ಪ್ರದೇಶ. ಈ ಹಿಂದಿ ವಲಯದಲ್ಲಿ ಹಿಂದಿ ಭಾಷೆ ಮಾತಾಡುವವರು ೧೪೦ ದಶಲಕ್ಷ ಮಂದಿ. ಆದರೆ ಹಿಂದಿ ವಲಯದಲ್ಲಿ ಚಿತ್ರ ನಿರ್ಮಾಣ ಕೇಂದ್ರವೇ ಇರಲಿಲ್ಲ. ಪಂಜಾಬಿ ೧೪ ದಶಲಕ್ಷ, ಗುಜರಾತಿ ೧೧ ದಶಲಕ್ಷ, ಮಲಯಾಳಂ ೯ ದಶಲಕ್ಷ, ಕಾಶ್ಮೀರಿ ೧೦ ಲಕ್ಷ; ಒರಿಯಾ ೨೦ ಲಕ್ಷ, ಅಸ್ಸಾಮಿ ೨೦ ಲಕ್ಷ ಜನಸಂಖ್ಯೆ ಇರುವ ಇತರ ಭಾಷಾ ಪ್ರದೇಶಗಳು. ಗುಜರಾತಿ ಮತ್ತು ಮಲಯಾಳಂ ಈ ಎರಡು ಭಾಷೆಗಳನ್ನು ಬಿಟ್ಟರೆ ಉಳಿದ ಭಾಷೆಗಳಿಗೆ ಸಿನಿಮಾ ಗಾಳಿ ಬೀಸಿರಲಿಲ್ಲ.

ಹಿಂದಿ, ತೆಲುಗು, ಗುಜರಾತಿ, ಮಲಯಾಳಂ ಚಿತ್ರ ತಯಾರಿಕಾ ಸೌಲಭ್ಯವಿಲ್ಲದ ಪ್ರದೇಶಗಳು. ಅಲ್ಲೇ ಚಿತ್ರೋದ್ಯಮ ಬೆಳೆಯಬೇಕು, ಇಲ್ಲವೆ ಆ ಭಾಷಾ ಚಿತ್ರಗಳನ್ನು ತಯಾರಿಸಿ ಆ ಪ್ರದೇಶಗಳ ಮಾರುಕಟ್ಟೆಯನ್ನು ಪ್ರವೇಶಿಸಲು ಯಾರಿಗಾದರೂ ಮುಕ್ತ ಅವಕಾಶ. ಮುಂಬಯಿ, ಮದರಾಸು, ಬೆಂಗಳೂರು, ಕಲ್ಕತ್ತಾ ಇವರಲ್ಲಿ ಯಾರು ಬೇಕಾದರೂ ಆ ಭಾಷಾ ಪ್ರದೇಶಗಳ ಮೇಲೆ ಪ್ರಭುತ್ವ ಸ್ಥಾಪಿಸಲು ಮುಕ್ತ ಅವಕಾಶ. ಆದರೆ ಆರಂಭದ ಸ್ಪರ್ಧೆಯಲ್ಲಿ ಗೆದ್ದದ್ದು ಮುಂಬಯಿ ಮತ್ತು ಕಲ್ಕತ್ತ. ಮುಂಬಯಿ ಸಹಜವಾಗಿ ಮರಾಠಿ ಕೇಂದ್ರ. ಪಾರ್ಸಿ ಜನರು ಆರಂಭಿಕ ಚಲನಚಿತ್ರ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಆದರೆ ನಗರದಲ್ಲಿ ಹಿಂದಿಯ ಸಾಹಚರ್ಯವೂ ಇತ್ತು. ಮರಾಠಿ ಚಿತ್ರಗಳ ಜೊತೆಗೆ ಹಿಂದಿ ಚಿತ್ರಗಳೂ ಸಿದ್ಧವಾದವು. ಪ್ರಭಾತ್, ಕೊಹಿನೂರ್, ವಾಡಿಯಾ, ರಣಜಿತ್, ಬಾಂಬೆ ಟಾಕೀಸ್ ಮೊದಲಾದ ಸಂಸ್ಥೆಗಳು ನೀಡಿದ ಹಿಂದಿ ಚಿತ್ರಗಳು ಇಂದಿಗೂ ಸ್ಮರಣೀಯ.

ಕಲ್ಕತ್ತಾದಲ್ಲಿ ಬಂಗಾಳ ಚಿತ್ರದ ಜೊತೆಯಲ್ಲೇ ಹಿಂದಿ ಚಿತ್ರಗಳ ತಯಾರಿಕೆ ಆರಂಭವಾಯಿತು. ಸುಸಜ್ಜಿತವಾದ ಸ್ಟುಡಿಯೋವನ್ನು ಮದನ್ ಸಂಸ್ಥೆ ಹೊಂದಿತ್ತು. 'ಆಲಂ ಆರಾ'ಕ್ಕೆ ಮುನ್ನವೇ 'ಶಿರೀನ್ ಫರಾದ್' ಎಂಬ ಒಂದು ಉತ್ತಮ ಸಂಗೀತ ಪ್ರಧಾನ ಚಿತ್ರ ಬಿಡುಗಡೆಗೆ ಪ್ರಯತ್ನಿಸಿತ್ತು. ಆದರೆ ಅದು 'ಆಲಂ ಆರಾ' ನಂತರ ತೆರೆಗೆ ಬಂದು, ಅತ್ಯಂತ ಜನಪ್ರಿಯವಾಯಿತು.

ಬಿ.ಎನ್.ಸರ್ಕಾರ್, ಪಿ.ಸಿ.ಬರುವಾ, ದೇವಕಿ ಬೋಸ್ ಮೊದಲಾದ ಪ್ರತಿಭಾವಂತರು ನ್ಯೂಥಿಯೇಟರ್ಸ್ ಲಾಂಛನದಲ್ಲಿ ನೀಡಿದ 'ಚಂಡಿದಾಸ್' (೧೯೩೨), 'ಪೂರ್ಣ ಭಗತ್' (೧೯೩೩), 'ದೇವದಾಸ್' (೧೯೩೫), 'ಪ್ರೆಸಿಡೆಂಟ್' (೧೯೩೭) ಇವೇ ಮೊದಲಾದ ಆರಂಭ ಕಾಲದ ಚಿತ್ರಗಳು ಭಾರತದ ಚಿತ್ರದ ಇತಿಹಾಸದಲ್ಲಿ ಗಣನೀಯ ಸ್ಥಾನ ಗಳಿಸಿವೆ. ಸೈಗಾಲರ ಹಾಡುಗಾರಿಕೆ, ನಟನೆಯ ಶೈಲಿಯಿಂದ ಅವರು ಆ ಕಾಲಕ್ಕೆ ದಂತಕಥೆಯಾದರು.

ಒಂದೇ ಕಥಾ ವಸ್ತು, ಎರಡು ಭಾಷೆಗೆ ಏಕಕಾಲದಲ್ಲಿ ಚಿತ್ರಣ. ಅವಶ್ಯವೆನಿಸಿದರೆ ಒಂದಿಬ್ಬರು ನಟರು ಬದಲಾಗುತ್ತಿದ್ದರು. ವೆಚ್ಚ ಕಡಿಮೆ ಮಾಡಿ, ಉತ್ತಮ ಮೌಲ್ಯದ ಚಿತ್ರಗಳನ್ನು ನೀಡುವ ಇಂತಹ ಪ್ರಯತ್ನಗಳು ಮುಂಬಯಿ, ಕಲ್ಕತ್ತಾದಲ್ಲಿ ಆರಂಭವಾದವು. ಈ ವಿಧಾನ ಯಶಸ್ವಿಯಾಗಿ ಕಂಡುಬಂದ ಕಾರಣ ದಕ್ಷಿಣದವರೂ ಮುಂದೆ ಅದನ್ನೇ ಅನುಸರಿಸಿ ಯಶಸ್ವಿಯಾದ ನಿದರ್ಶನಗಳಿವೆ.

ಭಾಷಾ ಚಿತ್ರ ತಯಾರಿಕೆಯಲ್ಲಿ ತಮಿಳು ಮತ್ತು ತೆಲುಗು ನಾಡಿನವರು ಹಿಂದೆ ಬೀಳಲಿಲ್ಲ. ಮದರಾಸಿನಲ್ಲಿ ವಾಕ್ಚಿತ್ರಗಳ ತಯಾರಿಕೆಗೆ ಸೌಲಭ್ಯವಿಲ್ಲದ ಕಾರಣ ನಿರ್ಮಾತೃಗಳು ಇಡೀ ತಂಡದೊಡನೆ ಮಹಾರಾಷ್ಟ್ರಕ್ಕೆ ಇಲ್ಲವೆ ಕಲ್ಕತ್ತಾಗೆ ಹೋಗಿ ಬಿಡಾರ ಹೂಡಿ ಒಂದೇ ನಿಟ್ಟಿನಲ್ಲಿ ಚಿತ್ರೀಕರಣ ನಡೆಸಿ ಹಿಂದೆ ಬರುತ್ತಿದ್ದರು. ಹೀಗಾಗಿ ಭಾರತದ ಮೊದಲ ವಾಕ್ಚಲನಚಿತ್ರ ಬಿಡುಗಡೆಯಾದ ವರ್ಷದಲ್ಲೆ ತೆಲುಗು ಭಾಷೆಯ 'ಭಕ್ತ ಪ್ರಹ್ಲಾದ' (೧೯೩೧) ಮತ್ತು ತಮಿಳು ಭಾಷೆಯ 'ಕಾಳಿದಾಸ' (೧೯೩೧) ಮುಂಬಯಿನಲ್ಲಿ ಸಿದ್ಧವಾಗಿ ಪ್ರದರ್ಶಿಸಲ್ಪಟ್ಟವು. ಮದ್ರಾಸಿನಿಂದ ಕೆಲವರು ತಮಿಳು, ತೆಲುಗು ನಿರ್ಮಾಪಕರು ಕಲ್ಕತ್ತಾಗೆ ಹೋಗಿ ಅಲ್ಲಿನ ಸ್ಟುಡಿಯೋಗಳನ್ನೇ ತಿಂಗಳ ಲೆಕ್ಕದಲ್ಲಿ ಬಾಡಿಗೆಗೆ ಪಡೆದು ಚಿತ್ರ ತಯಾರಿಸಿದರು. ಹೀಗ ಕಲ್ಕತ್ತಾಗೆ ಚಿತ್ರಯಾತ್ರೆ ನಡೆಸಿ, ಚಿತ್ರ ನಿರ್ಮಿಸಿ ಯಶಸ್ವಿಯಾದವರಲ್ಲಿ ಟಿ.ಆರ್.ಸುಂದರಂ ಹಾಗೂ ಕೆ.ಸುಬ್ರಹ್ಮಣ್ಯಂ ಪ್ರಮುಖರು. ಚಿತ್ರಯಾತ್ರೆಗೆ ಪರ್ಯಾಯವಾಗಿ ಸುಂದರಂ ಅವರು ಸೇಲಂನಲ್ಲಿ ಮಾಡರ್ನ್ ಸ್ಟುಡಿಯೋ ಸ್ಥಾಪಿಸಿದರು.



(ಚಿತ್ರ ೧೨) ಸ್ವಾತಂತ್ರ್ಯಪೂರ್ವ ಭಾರತದ ಭಾಷಾ ಸ್ವರೂಪ

ಮದರಾಸಿನಲ್ಲಿ ಕೆಲವು ಚಲನಚಿತ್ರ ನಿರ್ಮಾಪಕರು ಕೆ.ಸುಬ್ರಹ್ಮಣ್ಯಂ ನೇತೃತ್ವದಲ್ಲಿ ಸಂಘಟಿತರಾಗಿ ಮೋಷನ್ ಪಿಕ್ಚರ್ ಪ್ರೊಡ್ಯೂಸರ್ಸ್ ಕಂಬೈನ್ಸ್ ಹೆಸರಿನಲ್ಲಿ ಸ್ಟುಡಿಯೋ ಸ್ಥಾಪಿಸಿದರು.

ಆರಂಭದ ಚಿತ್ರಗಳ ಯಶಸ್ಸು ೧೯೩೫-೩೭ರ ಅವಧಿಯಲ್ಲಿ ತಮಿಳು ನಾಡಿನಲ್ಲಿ ಸ್ಟುಡಿಯೋಗಳ ನಿರ್ಮಾಣ ಚಟುವಟಿಕೆಗೆ ಪ್ರೇರಣೆ ನೀಡಿತು. ಪರಾವಲಂಬನೆ ತಪ್ಪಿತ್ತು. ಚಿತ್ರೋದ್ಯಮಶೀಲರ ನಾಡಾದ ಮದರಾಸು ಪ್ರಾಂತ್ಯ ೧೯೪೦ರ ವೇಳೆಗೆ ತಮಿಳು, ತೆಲುಗು, ಮಲೆಯಾಳಂ, ಕನ್ನಡ ಚಿತ್ರಗಳ ತಯಾರಿಕಾ ಕೇಂದ್ರವಾಗಿ ಬೆಳೆಯಿತು. ಸ್ಟುಡಿಯೋಗಳ ನಿರ್ಮಾಣದಲ್ಲಿ ತಮಿಳರು ಮಾತ್ರವಲ್ಲ, ತೆಲುಗಿನವರೂ ಪ್ರಮುಖ ಪಾತ್ರ ವಹಿಸಿದರು ದಕ್ಷಿಣ ಭಾಷಾ ಚಿತ್ರಗಳ ನಿರ್ಮಾಣದ ಜೊತೆಗೆ ಹಿಂದಿ ಚಿತ್ರರಂಗಕ್ಕೂ ಲಗ್ಗೆ ಹಾಕಿದರು.

### ವಾಕ್ಚಿತ್ರದ ಮೊದಲ ದಶಕದ ಸಿರಿ ಬೆಳೆ ಕನ್ನಡಿಗರ ಸಾಧನೆಗೆ ಕೈ ಗನ್ನಡಿ

೧೯೩೧ - ೪೦

| ಭಾಷೆ | ೧೯೩೧ | ೧೯೩೨ | ೧೯೩೩ | ೧೯೩೪ | ೧೯೩೫ | ೧೯೩೬ | ೧೯೩೭ | ೧೯೩೮ | ೧೯೩೯ | ೧೯೪೦ |
|---|---|---|---|---|---|---|---|---|---|---|
| ಕನ್ನಡ | - | - | | ೨ | ೧ | ೨ | ೨ | - | - | - |
| ತಮಿಳು | ೧ | ೪ | ೭ | ೧೪ | ೩೮ | ೩೮ | ೩೭ | ೩೯ | ೩೫ | ೩೬ |
| ತೆಲುಗು | ೧ | ೩ | ೫ | ೩ | ೭ | ೧೨ | ೧೦ | ೧೦ | ೧೨ | ೧೪ |
| ಮರಾಠಿ | | ೮ | ೬ | ೧೧ | ೯ | ೬ | ೧೧ | ೧೪ | ೧೨ | ೧೦ |
| ಬಂಗಾಳಿ | ೪ | ೫ | ೯ | ೧೦ | ೧೯ | ೨೦ | ೧೬ | ೧೯ | ೧೬ | ೧೬ |
| ಹಿಂದಿ | ೨೩ | ೬೧ | ೭೫ | ೧೨೧ | ೧೫೪ | ೧೩೫ | ೧೦೨ | ೮೮ | ೮೦ | ೮೫ |

ಪ್ರಥಮ ತೆಲುಗು ಭಾಷಾ ಚಿತ್ರ 'ಭಕ್ತ ಪ್ರಹ್ಲಾದ' ಮತ್ತು ಪ್ರಥಮ ತಮಿಳು ಭಾಷಾ ಚಿತ್ರ 'ಕಾಳಿದಾಸ' ಇವೆರಡು ಚಿತ್ರಗಳನ್ನು ನಿರ್ದೇಶಿಸಿದವರು ಎಚ್.ಎಂ.ರೆಡ್ಡಿ. ಮಹಾರಾಷ್ಟ್ರದಲ್ಲಿ ಚಿತ್ರಿಸಲಾದ ಚಿತ್ರಗಳು ೧೯೩೧ರಲ್ಲೇ ತೆರೆಕಂಡವು.[೧]

೧. ಹೆಚ್.ಎಂ.ರೆಡ್ಡಿಯವರ ಜನನ, ವಿದ್ಯಾಭ್ಯಾಸ, ಪೊಲೀಸ್ ಉದ್ಯೋಗ ಬೆಂಗಳೂರಿನಲ್ಲೆ. ಭಾವ ಬಿ.ವಿ.ರಾಜು ಕರೆ ಮೇರೆಗೆ ಮುಂಬೈಗೆ ಪ್ರಯಾಣ. ಬಿ.ಪಿ.ಮಿಶ್ರಾ ಅವರ ಸಹಾಯಕ. ಇಂಪೀರಿಯಲ್ ಫಿಲಂ ಕಂಪನಿಯಲ್ಲಿ ಚಿತ್ರ ತಯಾರಿಕೆ ಅನುಭವ.

ಆವರೆ ಕನ್ನಡದ ಪ್ರಥಮ ಭಾಷಾ ಚಿತ್ರಗಳಾದ 'ಭಕ್ತ ಧ್ರುವ' ಚಿತ್ರವನ್ನು ಮಹಾರಾಷ್ಟ್ರದ ಪಿ.ವೈ.ಅಲ್ಟೇಕರ್[೧] ನಿರ್ದೇಶಿಸಿದರು ಮತ್ತು ವೈ.ವಿ.ರಾವ್ 'ಸತಿ ಸುಲೋಚನಾ' ನಿರ್ದೇಶಿಸಿದರು.

ಕನ್ನಡಿಗನೊಬ್ಬ ಪ್ರಥಮ ತಮಿಳು, ತೆಲುಗು ಭಾಷಾ ಚಿತ್ರಗಳನ್ನು ನಿರ್ದೇಶಿಸಿದರೆ ಕನ್ನಡದ ಮೊದಲ ಎರಡು ಚಿತ್ರಗಳನ್ನು ನಿರ್ದೇಶಿಸಲು ನೆರೆಯ ರಾಜ್ಯಗಳ ಇಬ್ಬರು ನಿರ್ದೇಶಕರು ಬರಬೇಕಾಯಿತು. ಇದಕ್ಕಾಗಿ ಮತ್ತೆ ಮೂರು ವರ್ಷ ಕಾಯಬೇಕಾಯಿತು, ಎಂತಹ ವಿಪರ್ಯಾಸ.

ಭಾರತದ ಚಿತ್ರೋದ್ಯಮದ ಬೆಳವಣಿಗೆಯಲ್ಲಿ ಬೆಂಗಳೂರು ಪ್ರಮುಖ ಪಾತ್ರ ವಹಿಸಬಹುದಾಗಿದ್ದ ಒಂದು ಸ್ವರ್ಣ ಅವಕಾಶ ಕೈ ತಪ್ಪಿತು. ಆದಕ್ಕೆ ಕಾರಣ ಕನ್ನಡ ಉದ್ಯಮಿಗಳು ಕೈ ಕಟ್ಟಿ ಕುಳಿತದ್ದು ಮಾತ್ರವಲ್ಲ, ಕಣ್ಮುಚ್ಚಿ ಕುಳಿತದ್ದು ಕೂಡ.

## ರಾಜ್ಯ ಒಂದು, ಭಾಷೆಗಳು ಅನೇಕ

'ಭಕ್ತ ಧ್ರುವ' ಮತ್ತು 'ಸತಿ ಸುಲೋಚನಾ' ಈ ಎರಡು ಚಲನಚಿತ್ರಗಳಿಗೆ ಬಂಡವಾಳ ಹೂಡಿದವರೂ ಕನ್ನಡೇತರರೇ. ಅದೂ ನೆರೆಯ ಭಾಷೆಗಳಾದ ತೆಲುಗು, ತಮಿಳು ಚಿತ್ರಗಳು ತೆರೆಕಂಡ ಮೂರು ವರ್ಷಗಳ ನಂತರ. ಮುಂಬಯಿನಲ್ಲಿದ್ದ ಸಾಗರ್ ಫಿಲಂಸ್ ಸಂಸ್ಥೆಯು ಹಿಂದಿ, ತೆಲುಗು, ತಮಿಳು ಚಿತ್ರ ನಿರ್ಮಾಣದಲ್ಲಿ ತೊಡಗಿತ್ತು. ಕನ್ನಡ ಬಲ್ಲ ನಿರ್ದೇಶಕ ಸರ್ವೋತ್ತಮ ಬಾದಾಮಿ ಆ ಸಂಸ್ಥೆಯಲ್ಲಿದ್ದರು. ಸಾಗರ್ ಫಿಲಂಸ್ ಪಾಲುದಾರರು ಬೆಂಗಳೂರು ನಗರದಲ್ಲಿ ಪ್ರತಿಷ್ಠಿತ ಚಿತ್ರಮಂದಿರಗಳನ್ನು ನಡೆಸುತ್ತಿದ್ದರು. ದಕ್ಷಿಣದ ಪ್ರಮುಖ ಚಿತ್ರದ ಹಂಚಿಕೆದಾರರೂ ಆಗಿದ್ದರು (ಸೆಲೆಕ್ಟ್ ಪಿಕ್ಚರ್ಸ್ ಸರ್ಕ್ಯೂಟ್, ಸೆಲೆಕ್ಟ್ ಸಿನಿಮಾ). ಇವರೇಕೆ ಆಸಕ್ತಿ ವಹಿಸಲಿಲ್ಲ? ಕನ್ನಡ ಉದ್ಯಮ ವ್ಯಾವಹಾರಿಕವಲ್ಲ ಎಂದು ಕೈ ಬಿಟ್ಟರೆ, ಇಲ್ಲವೆ ಅನ್ಯಭಾಷಾ ಚಿತ್ರಗಳು ಹೆಚ್ಚು ಲಾಭದಾಯಕವೆಂಬ ಮನೋಭಾವವೇ ? ಕರ್ನಾಟಕ ವಿವಿಧ ಭಾಷೆಗಳ ಸಂಸ್ಕೃತಿಗಳ ಸಂಗಮ ಕ್ಷೇತ್ರ (ಹಾಗೆಂದು ನಾವು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ). ಈ ಹೆಗ್ಗಳಿಕೆಯೇ ಕನ್ನಡಕ್ಕೆ ಕುಠಾರಪ್ರಾಯವಾಯಿತು. ವಿವಿಧ ಭಾಷೆ ಸಂಸ್ಕೃತಿಗಳ ಸಂಗಮ ಹೇಗಾಯಿತೆಂಬುದನ್ನು ತಿಳಿಯಲು ಇತಿಹಾಸದ ಪುಟಗಳನ್ನು ತಿರುವಬೇಕು.

ಪ್ರಾಚೀನ ಕಾಲದಲ್ಲಿ ಕನ್ನಡ ಆಡುಭಾಷೆಯಾಗಿದ್ದ ನಾಡಿನ ವಿಸ್ತೀರ್ಣ ಎಷ್ಟಿತ್ತು ಎಂಬುದು ಸರಿಯಾಗಿ ಗುರುತಿಸಲು ಸಾಧ್ಯವಿಲ್ಲ. ಕವಿರಾಜಮಾರ್ಗದ ಪ್ರಕಾರ ಕನ್ನಡ ನಾಡು ಎಂಬುದು ದಕ್ಷಿಣದ ಕಾವೇರಿಯಿಂದ ಉತ್ತರದ ಗೋದಾವರಿಯವರೆಗೆ ಇದ್ದ ನಾಡು. ಇತಿಹಾಸ ಕಾಲದಲ್ಲಿ ಕರ್ನಾಟಕ ದೇಶ ವಿವಿಧ ರಾಜವಂಶಗಳ ಆಳ್ವಿಕೆಗೆ ಒಳಪಟ್ಟಿತ್ತು. ಆದರೂ ಸಾಂಸ್ಕೃತಿಕವಾಗಿಯೂ ರಾಜಕೀಯವಾಗಿಯೂ ಅಖಂಡವಾಗಿತ್ತು. ಉತ್ತರದಲ್ಲಿ ಬಹಮನಿ ಸುಲ್ತಾನರ ರಾಜ್ಯ. ದಕ್ಷಿಣದಲ್ಲಿ ವಿಜಯನಗರ ರಾಜ್ಯ ಸ್ಥಾಪನೆಯಾದಾಗ ಸ್ವಲ್ಪ ಮಟ್ಟಿನ ಭಿನ್ನತೆ ಕಾಣಿಸಿಕೊಂಡು ಮುಂದೆ ಟಿಪ್ಪುವಿನ ಪತನವಾಗಿ ಭಾರತದಲ್ಲಿ ಬ್ರಿಟಿಷರ ಆಡಳಿತ ಸ್ಥಿರಗೊಂಡಾಗ ಕರ್ನಾಟಕ ಮತ್ತಷ್ಟು ಛಿದ್ರವಾಯಿತು. ೨೨ ಆಡಳಿತಗಳ ಅಡಿಯಲ್ಲಿ ಹಂಚಿ ಹೋಯಿತು.

## ಏಕೀಕರಣ ಚಳವಳಿ

ಸುಮಾರು ೧೯೩೫ರಿಂದ ೧೯೫೬ರವರೆಗಿನ ಕಾಲದಲ್ಲಿ ಭಾರತದ ರಾಜಕೀಯ ರಂಗದಲ್ಲಿ ಕಾಲಿಟ್ಟ ಕರ್ನಾಟಕದ ಕಾರ್ಯಕರ್ತರು ಎರಡು ಕನಸುಗಳನ್ನು ಕಂಡರು, ಎರಡು ಲಕ್ಷ್ಯಗಳನ್ನು ಮುಂದಿಟ್ಟುಕೊಂಡರು, ಒಂದು ಭಾರತದ ಸ್ವಾತಂತ್ರ್ಯ; ಇನ್ನೊಂದು ಕರ್ನಾಟಕದ ಏಕೀಕರಣ. ವಾಸ್ತವವಾಗಿ ಕನ್ನಡ ಭಾಷಿಕರಾದ ಜನ ೨೨ ಆಡಳಿತಗಳಲ್ಲಿ ಹಂಚಿ ಹೋಗಿದ್ದರು. ಅದು ಹೀಗೆ :

೧. ಮೈಸೂರು ಸಂಸ್ಥಾನ.
೨. ಮದ್ರಾಸ್ ಪ್ರಾಂತದ ಬಳ್ಳಾರಿ, ದಕ್ಷಿಣ ಕನ್ನಡ, ನೀಲಗಿರಿ ಜಿಲ್ಲೆಗಳು ಹಾಗೂ ಕೊಳ್ಳೇಗಾಲ, ಕೃಷ್ಣಗಿರಿ, ಹೊಸೂರು, ಮಡಕಶಿರಾ ತಾಲೂಕುಗಳು ಮತ್ತು ತಾಳವಾಡಿ ಫಿರ್ಕಾ.
೩. ಮುಂಬಯಿ ಪ್ರಾಂತದ ಉತ್ತರ ಕನ್ನಡ, ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳು ಹಾಗೂ ದಕ್ಷಿಣ ಸೊಲ್ಲಾಪುರ, ಉತ್ತರ ಸೊಲ್ಲಾಪುರ, ಮಂಗಳವೇಡೆ ತಾಲ್ಲೂಕುಗಳು.
೪. ಕೊಡಗು.
೫. ಹೈದರಾಬಾದ್ ಸಂಸ್ಥಾನದ ಕಲ್ಬುರ್ಗಿ, ಬೀದರ್, ರಾಯಚೂರು ಜಿಲ್ಲೆಗಳು.
೬. ರಾಯದುರ್ಗ ಸಂಸ್ಥಾನ.
೭. ಸಾಂಗ್ಲಿ ಸಂಸ್ಥಾನ.
೮. ಮೀರಜ್ ಸಂಸ್ಥಾನ.
೯. ಕಿರಿಯ ಮೀರಜ್ (ಬುಧಗಾಂವ್)
೧೦. ಕುರುಂದವಾಡ (ಹಿರಿದು) ಸಂಸ್ಥಾನ.
೧೧. ಕುರುಂದವಾಡ (ಕಿರಿಯ ಮಡಗಾಂವ್)
೧೨. ಜಮಖಂಡಿ ಸಂಸ್ಥಾನ.
೧೩. ಮುಧೋಳ ಸಂಸ್ಥಾನ
೧೪. ಜತ್ ಸಂಸ್ಥಾನ.
೧೫. ಅಕ್ಕಲಕೋಟೆ ಸಂಸ್ಥಾನ.
೧೬. ಔಂಧ್ ಸಂಸ್ಥಾನಕ್ಕೆ ಸೇರಿದ ಗುಣದಾಳು.
೧೭. ಕೊಲ್ಲಾಪುರ ಸಂಸ್ಥಾನಕ್ಕೆ ಸೇರಿದ ರಾಯಬಾಗ್, ತೊರಗಲ್ಲು ಮತ್ತು ಕಟಕೋಳ.
೧೮. ಸೊಂಡೂರು ಸಂಸ್ಥಾನ.
೧೯. ಸವಣೂರು ಸಂಸ್ಥಾನ.
೨೦. ಕಂಟೋನ್ಮೆಂಟ್ ಕರ್ನಾಟಕ (ಬೆಳಗಾವಿ, ಬೆಂಗಳೂರು, ಬಳ್ಳಾರಿಗಳ ಕೇಂದ್ರ ಸರಕಾರಕ್ಕೆ ಸೇರಿದ ಮೂರು ಕಂಟೋನ್ಮೆಂಟುಗಳು).

೧೯೧೨ರಲ್ಲಿ ಬಿಹಾರ, ಒರಿಸ್ಸಾ ಮತ್ತು ಅಸ್ಸಾಂ ಪ್ರಾಂತಗಳನ್ನು ಭಾಷಾವಾರು ತತ್ವದಂತೆ ರಚಿಸಿದಾಗ ಹಾಗೂ ವಿಭಕ್ತ ಬಂಗಾಳವನ್ನು ಒಂದುಗೂಡಿಸಿದಾಗ, ಕನ್ನಡ ಭಾಷಿಕ ಜನರದೂ ಒಂದು ಪ್ರತ್ಯೇಕ ಪ್ರಾಂತವಿರಬೇಕೆಂಬ ಭಾವನೆ ಬಲವಾಗುತ್ತ ಸಾಗಿತ್ತು.

ಬೇರೆ ಬೇರೆ ಆಡಳಿತಗಳಿಗೆ ಒಳಪಟ್ಟ ಕನ್ನಡಿಗರ ಸ್ಥಿತಿ ದಯನೀಯವಾಗಿತ್ತು. ಮುಂಬಯಿ ಪ್ರಾಂತದಲ್ಲಿದ್ದ ಕನ್ನಡ ಪ್ರದೇಶಗಳಲ್ಲಿ ದೀರ್ಘಕಾಲ ಮರಾಠಿಯೇ ಆಡಳಿತ ಭಾಷೆಯೂ ಶಿಕ್ಷಣ ಮಾಧ್ಯಮವೂ ಆಗಿತ್ತು. ಡೆಪ್ಯುಟಿ ಚನ್ನಬಸವಪ್ಪನವರಂಥ ಶಿಕ್ಷಣ ತಜ್ಞರು ಇದರ ವಿರುದ್ಧ ಸೆಣಸಿ ಕನ್ನಡ ಮಾಧ್ಯಮವನ್ನು ತರಬೇಕಾಯಿತು. ಕನ್ನಡ ಭಾಷಿಕರೇ ಇರುವ ಜಮಖಂಡಿ, ಮುಧೋಳ ಮುಂತಾದ ಸಂಸ್ಥಾನಗಳಲ್ಲಿ ಅರಸರು ಮರಾಠಿಗರಾಗಿದ್ದುದರಿಂದ ಮರಾಠಿಯೇ ಆಡಳಿತ ಭಾಷೆಯಾಗಿ ಕನ್ನಡವು ಸಾರ್ವಜನಿಕ ಕ್ಷೇತ್ರದಿಂದ ಮಾಯವಾಗುವ ಸ್ಥಿತಿ ಇತ್ತು. ಜತ್, ಅಕ್ಕಲಕೋಟ, ಸಾಂಗ್ಲಿಯಂಥ ಕನ್ನಡ ಸಂಸ್ಥಾನಗಳಲ್ಲಿ ಮುಂದೆ ಕನ್ನಡ ಕೇವಲ ಆಡುಮಾತಾಗಿ ಇಂದು ಮರಾಠಿಗಳ ಅಕ್ರಮಣವನ್ನು ಎದುರಿಸುತ್ತಾ ಬಂದಿದೆ. ಹಾಗೆಯೇ ಅದನ್ನು ಮೈಗೂಡಿಸಿಕೊಂಡಿದೆ.

ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿದ್ದ ಯಲಹಂಕ ನಾಡಿನ ಮೊದಲನೆ ಕೆಂಪೇಗೌಡ ತನ್ನ ಚಕ್ರವರ್ತಿಯ ಅನುಮತಿ ಪಡೆದು ೧೫೩೭ರಲ್ಲಿ ಬೆಂಗಳೂರನ್ನು ಸ್ಥಾಪಿಸಿ, ಸುತ್ತಲೂ ಮಣ್ಣಿನ ಕೋಟೆ ಕಟ್ಟಿಸಿದ. ಅದರ ಅರ್ಥಿಕಾಭಿವೃದ್ಧಿಗಾಗಿ ಪೇಟೆಗಳನ್ನು ನಿರ್ಮಿಸಿ ತನ್ನ ರಾಜಧಾನಿಯನ್ನು ಬೆಂಗಳೂರಿಗೆ ವರ್ಗಾಯಿಸಿ ರಾಜ್ಯ ವಿಸ್ತರಿಸಿದ. ಬಿಜಾಪುರದ ಸುಲ್ತಾನರ ದಂಡನಾಯಕ ರಣದುಲ್ಲಾಖಾನ್ ಬೆಂಗಳೂರನ್ನು ವಶಪಡಿಸಿಕೊಂಡ. ಬಿಜಾಪುರ ಸುಲ್ತಾನ, ಬೆಂಗಳೂರು ಮತ್ತು ನೆರೆಯ ಪ್ರದೇಶಗಳನ್ನು ದಂಡಯಾತ್ರೆಯಲ್ಲಿ ಭಾಗಿಯಾಗಿದ್ದ ಶಹಾಜಿಗೆ ಜಹಗೀರಾಗಿ ಕೊಟ್ಟ (೧೬೪೮). ಶಿವಾಜಿಯ ನಿಧನಾನಂತರ ಶಿವಾಜಿಯ ಮಗ ಸಂಭಾಜಿಯ ಸೈನ್ಯವನ್ನು ಮುಘಲ್ ಚಕ್ರವರ್ತಿಯ ಸೇನಾಧಿಪತಿ ಖಾಸಿಂಖಾನ್ ಸೋಲಿಸಿ, ಬೆಂಗಳೂರನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡ. ಆಮೇಲೆ ಅದನ್ನು ಮೂರು ಲಕ್ಷ ರೂಪಾಯಿಗೆ ಚಿಕ್ಕ ದೇವರಾಜರಿಗೆ

---

೧. ಪಾರ್ಶ್ವನಾಥ ಅಲ್ಟೇಕರ್ ಜೈನ ವಂಶೀಯರು. ಮನೆ ಮಾತು ಕನ್ನಡ. ಹುಟ್ಟಿದ್ದು ಕೊಲ್ಹಾಪುರ. ಓದಿದ್ದು ಕೊಲ್ಹಾಪುರ ಹಾಗೂ ಸಾಂಗ್ಲಿಯ ವಿಲ್ಲಿಂಗ್‌ಡನ್ ಕಾಲೇಜಿನಲ್ಲಿ. ವಿದ್ಯಾರ್ಥಿಯಾಗಿದ್ದಾಗಿನಿಂದಲೇ ರಂಗಭೂಮಿಯತ್ತ ಸೆಳೆತ. ಪದವೀಧರರಾದ ಮೇಲೆ ಅಭಿನಯವನ್ನೇ ಜೀವನ ವೃತ್ತಿಯಾಗಿ ಅವಲಂಬಿಸಿದರು. ಚಲನಚಿತ್ರಗಳಲ್ಲಿ ಮುಖ್ಯ ಪಾತ್ರಗಳನ್ನು ಅಭಿನಯಿಸುವುದರ ಜೊತೆಯಲ್ಲಿ ಚಿತ್ರ ನಿರ್ಮಾಣ ತಂತ್ರದಲ್ಲಿ ಪರಿಶ್ರಮ ಪಡೆದರು. ಅಭಿನಯದ ಜೊತೆಗೆ ಚಿತ್ರಗಳನ್ನು ನಿರ್ದೇಶಿಸಿದರು. ಶಬ್ದ ಚಿತ್ರಗಳು ಬಂದ ಮೇಲೆ ಅವರು ನಿರ್ದೇಶಿಸಿದ ಎರಡನೆ ಚಿತ್ರ ಕನ್ನಡದ 'ಭಕ್ತ ಧ್ರುವ'. ಚಿತ್ರರಂಗದಲ್ಲಿ ಯಶಸ್ವಿಯಾದರೂ ರಂಗಭೂಮಿಯ ಒಲವು ಕಡಿಮೆ ಆಗಲಿಲ್ಲ. 'ನಾಟ್ಯ ಮನ್ವಂತರ' ಸಂಸ್ಥೆ ಆರಂಭಿಸಿ ಹಲವಾರು ನಟ-ನಟಿಯರಿಗೆ ತರಬೇತಿ ನೀಡಿದರು. ''ಕನ್ನಡ ನಾಟಕಗಳಿಂದ ಪ್ರೇರೇಪಣೆ ಪಡೆದು ಕಳೆದ ಶತಮಾನದಲ್ಲಿ ಮರಾಠಿ ನಾಟಕಗಳ ಜನನವಾಯಿತು'' ಎಂದು ಬೆಂಗಳೂರಿಗೆ ಬಂದಿದ್ದಾಗ ನೀಡಿದ ಸಂದರ್ಶನದಲ್ಲಿ ಪ್ರತಿಪಾದಿಸಿದರು. ವಾಕ್ಚಿತ್ರ, ಫೆಬ್ರವರಿ ೧೯೪೫.

ಮಾರಿದ (೧೬೯೦). ಚಿಕ್ಕ ದೇವರಾಜರು ಬೆಂಗಳೂರಿನ ಮಹತ್ವವನ್ನು ಮನಗಂಡು ಬೆಂಗಳೂರನ್ನು ಒಂದು ಭದ್ರ ನೆಲೆಯಾಗಿ ಅಭಿವೃದ್ಧಿಪಡಿಸಿದರು. ೧೭೫೯ರಲ್ಲಿ ಬೆಂಗಳೂರು ಹೈದರಾಲಿಗೆ ಜಹಗೀರಾಗಿ ದೊರೆಯಿತು. ಹೈದರಾಲಿ ಕಲ್ಲಿನ ಕೋಟೆ ಕಟ್ಟಿಸಿ ಅದನ್ನು ಭದ್ರಪಡಿಸಿದ. ಕಾರ್ನ್‌ವಾಲೀಸ್ ೧೭೯೧ರಲ್ಲಿ ಬೆಂಗಳೂರನ್ನು ತನ್ನ ವಶಪಡಿಸಿಕೊಂಡು, ಟಿಪ್ಪುವಿನ ಪತನಾನಂತರ ಅದನ್ನು ಮೈಸೂರು ರಾಜಮನೆತನಕ್ಕೆ ಕೊಟ್ಟ. ಬೆಂಗಳೂರಿನ ಉತ್ತಮ ವಾತಾವರಣ ಕಂಡು ಆಲಸೂರು ಪ್ರದೇಶವನ್ನು ಬ್ರಿಟಿಷ್ ಸೈನ್ಯನೆಲೆಯಾಗಿ ಬೆಳೆಸಿದ. ಹೀಗೆ ೧೮೦೯ರಲ್ಲಿ ದಂಡು ಪ್ರದೇಶ (ಕಂಟೋನ್ಮೆಂಟ್) ಅಸ್ತಿತ್ವಕ್ಕೆ ಬಂದು ಆ ಪ್ರದೇಶ ನೇರವಾಗಿ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. ೧೮೩೧ರಲ್ಲಿ ಬ್ರಿಟಿಷರು ಮೈಸೂರನ್ನು ತಮ್ಮ ನೇರ ಆಡಳಿತಕ್ಕೆ ವಶಪಡಿಸಿಕೊಂಡರು. ಆಡಳಿತದ ಮುಖ್ಯ ಕೇಂದ್ರವಾದಾಗ ಬೆಂಗಳೂರು ಬೆಳೆಯಲಾರಂಭಿಸಿತು. ವ್ಯಾಪಾರ, ಉದ್ಯೋಗಾವಕಾಶಗಳು ಹೆಚ್ಚಾದುದರಿಂದ ವಲಸೆ ಬಂದವರು ನೆರೆರಾಜ್ಯದವರು. ೫೦ ವರ್ಷಗಳ ತಮ್ಮ ಆಳ್ವಿಕೆಯಲ್ಲಿ ಬ್ರಿಟಿಷರು ಕನ್ನಡೇತರರನ್ನೇ ಪ್ರೋತ್ಸಾಹಿಸಿದರು.

೧೮೮೧ರ ಮಾರ್ಚ್‌ನಲ್ಲಿ ಸಂಸ್ಥಾನದ ಆಡಳಿತ ಮತ್ತೆ ರಾಜವಂಶದ ವಶಕ್ಕೆ ಬಂದು ಬ್ರಿಟಿಷರ ನೇರ ಆಡಳಿತ ಕೊನೆಗೊಂಡಿತು. ಕಂಟೋನ್ಮೆಂಟ್ ಪ್ರದೇಶ ಅವರ ಸ್ವಾಧೀನದಲ್ಲೇ ಉಳಿಯಿತು. ಪೂರ್ಣ ಆಂಗ್ಲಮಯ, ಆಂಗ್ಲೋ ಇಂಡಿಯನ್‌ಮಯವಾದ ಪ್ರತ್ಯೇಕ ರಾಜ್ಯವಾಯಿತು. ಬೆಂಗಳೂರು ಎರಡು ಹೋಳಾಗಿ ಬೆಳೆಯಿತು. ೧೮೯೧ರ ಜನಗಣತಿಯಂತೆ ಬೆಂಗಳೂರು ನಗರ ಪ್ರದೇಶದ ಜನಸಂಖ್ಯೆ ೮೦,೨೮೫. ದಂಡು ಪ್ರದೇಶದ ಜನಸಂಖ್ಯೆ ೧,೦೦,೦೮೧. ನಗರ ಪ್ರದೇಶಕ್ಕಿಂತ ೨೦,೦೦೦ ಅಧಿಕ ಕನ್ನಡೇತರರು. ಮುಂದೆ ಬೃಹತ್ ಉದ್ಯಮಗಳು, ಪೂರಕ ಉದ್ಯಮಗಳು ಬೆಳೆದಂತೆ ನೆರೆಯ ರಾಜ್ಯಗಳಿಂದ ಮಾತ್ರವಲ್ಲ, ಭಾರತದ ನಾನಾ ಭಾಗಗಳಿಂದ ಜನ ವಲಸೆ ಬರಲಾರಂಭಿಸಿದರು.

ಔದ್ಯಮಿಕ ಪ್ರಗತಿಯಲ್ಲಿ ಕನ್ನಡಿಗರು ಆಸಕ್ತಿ ವಹಿಸಿದ್ದು ಕಡಿಮೆ. ಬೆಂಗಳೂರಿನಲ್ಲಿ ವಸತಿ ಗೃಹಗಳೇ ಇರಲಿಲ್ಲ. ಕೆ.ಟಿ.ಅಪ್ಪಣ್ಣನವರು ಬೆಂಗಳೂರಿನಲ್ಲಿ ಮೊದಲ ವಸತಿಗೃಹ (ಮಾಡರ್ನ್ ಹಿಂದೂ ಹೋಟೆಲ್) ಆರಂಭಿಸಿದ್ದು ದಿವಾನರಾಗಿದ್ದ ಸರ್ ಎಂ.ವಿಶ್ವೇಶ್ವರಯ್ಯನವರ ಪ್ರಚೋದನೆ, ಒತ್ತಾಸೆಯಿಂದಲೇ ಎಂಬುದು ಕನ್ನಡಿಗರ ಮನೋಧರ್ಮಕ್ಕೆ ಕೈಗನ್ನಡಿ. ಹೊರನಾಡಿನಿಂದ ಬಂದವರನ್ನೆಲ್ಲಾ ಸ್ವಾಗತಿಸಿ, ಅವರಲ್ಲಿ ಬೆರೆತು, ಅವರ ಭಾಷೆ ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡರು. ಆದರೆ ಹೊರ ನಾಡಿನಿಂದ ಬಂದವರು ಇಲ್ಲಿನ ಮುಖ್ಯ ವಾಹಿನಿಯಲ್ಲಿ ಬೆರೆಯಲಿಲ್ಲ. ತಾವು ಬೆಳೆದರು, ತಮ್ಮ ಕುಟುಂಬ, ಪರಿವಾರದವರನ್ನು ಬೆಳೆಸಿದರು. ಆದರೆ ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡರು. ದೇಹ ಇಲ್ಲಿ, ಹೃದಯ ಅಲ್ಲಿ. ಅಧಿಕಾರಿಯಾಗಿರಲಿ, ಮನೆ ಕಟ್ಟುವ ಗಾರೆಯವನಾಗಲಿ ಈ ಮಾತು ಎಲ್ಲರಿಗೂ ಅನ್ವಯ.

'ಬೆಂಗಳೂರಿನವರಿಗೆ ಆರೇಳು ಭಾಷೆಗಳು ತಿಳಿಯುತ್ತವೆ. ಆದರೆ ಅವನ್ನೆಲ್ಲ ಸೇರಿಸಿ ಮಾತಾಡಬಲ್ಲರೆ ವಿನಃ ಬೇರೆಯಾಗಿ ಅಲ್ಲ' - ಬೆಂಗಳೂರಿನ ಕನ್ನಡಿಗರ ಬಗೆಗೆ ಪ್ರಚಲಿತವಿರುವ ಇಂತಹ ಜೋಕುಗಳು ಅನೇಕ. ಇದು ಕೇವಲ ಕುಹಕವಲ್ಲ, ಅವರ ಕನ್ನಡವೂ ಹಾಗೆಯೇ ಇರುತ್ತದೆ.

ಜನಸಂಖ್ಯೆ ಏರುತ್ತಿದೆ. ಅದೇ ಅನುಪಾತದಲ್ಲಿ ಕನ್ನಡ ಭಾಷಿಗರ ಸಂಖ್ಯೆ ಇಳಿಯುತ್ತಿದೆ.

ಮೂವತ್ತರ ದಶಕದಲ್ಲಿ, ಭಾಷಾ ಚಲನಚಿತ್ರಗಳ ಆರಂಭ ದಿನಗಳಲ್ಲಿ ಬೆಂಗಳೂರಿನಲ್ಲಿದ್ದ ಎಂಟು ಚಿತ್ರಮಂದಿರಗಳಲ್ಲಿ ಮೂರು ದಂಡಿನ ಪ್ರದೇಶದಲ್ಲಿದ್ದವು. ಇಲ್ಲಿ ಎರಡು ಚಿತ್ರಮಂದಿರಗಳು ಇಂಗ್ಲಿಷ್‌ಗೆ ಮೀಸಲು. ಇನ್ನೊಂದು ಹಿಂದಿ ಇಲ್ಲವೇ ತಮಿಳು.

ನಗರ ಪ್ರದೇಶದಲ್ಲಿದ್ದ ಐದು ಚಿತ್ರಮಂದಿರಗಳಲ್ಲಿ ಹಿಂದಿ, ತಮಿಳು, ತೆಲುಗು ಚಿತ್ರಗಳು ಪ್ರದರ್ಶಿತವಾಗುತ್ತಿದ್ದವು. ೧೯೩೪ರಿಂದ ೧೯೫೦ರವರೆಗ ತೆರೆಕಂಡದ್ದು ೨೭ ಕನ್ನಡ ಚಿತ್ರಗಳಾದ ಕಾರಣ ಕನ್ನಡ ಚಿತ್ರಕ್ಕೆ ಮೀಸಲಾದ ಚಿತ್ರಮಂದಿರ ಎನ್ನುವ ಪ್ರಶ್ನೆಯೇ ಏಳುವುದಿಲ್ಲ. ಮನರಂಜನೆ ಬಯಸಿದ ಕನ್ನಡಿಗನೂ ಬೇರೆ ಭಾಷೆಯ ಚಿತ್ರಗಳನ್ನು ನೋಡಿ ತಣಿಯಬೇಕಾಗಿತ್ತು, ಅನ್ಯ ಮಾರ್ಗವಿರಲಿಲ್ಲ.

ರಾಜಧಾನಿಯಲ್ಲೇ ಕನ್ನಡ ಅತಂತ್ರ, ಪರಭಾಷಾ ಪ್ರಾಂತ್ಯಗಳಲ್ಲಿನ ಕನ್ನಡಿಗರ ಭಾಷಾ ಒಲವು ಹೇಗೆ ಎಂಬುದರ ಅರಿವಿಲ್ಲ. ಮೈಸೂರು ಸಂಸ್ಥಾನದ ಒಂಬತ್ತು ಜಿಲ್ಲೆಗಳನ್ನು ಅವಲಂಬಿಸಿ ಚಿತ್ರ ಮಾಡಬೇಕು. ತಮಿಳು, ತೆಲುಗುಗಳಿಗೆ ಇಂತಹ ಸೀಮಿತ ಮಾರುಕಟ್ಟೆಯ ಪರಿಸ್ಥಿತಿ ಇಲ್ಲ. ಕನ್ನಡಕ್ಕಿಂತ ವಿಸ್ತಾರವಾದ ಹಾಗೂ ವಿಶ್ವಾಸ ಇಡಬಹುದಾದಂತಹ ಮಾರುಕಟ್ಟೆ. ಹಣ ಹೂಡುವವನಿಗೆ ಅಧಿಕ ಲಾಭದ ಮೇಲೆ ಕಣ್ಣು ಸಹಜ. ತೆಲುಗು, ತಮಿಳು ಚಿತ್ರಗಳಿಗೆ ಕನ್ನಡ ನಾಡಿನಲ್ಲೂ ಪ್ರೋತ್ಸಾಹ ಸಿಕ್ಕುವ ಭರವಸೆ ಇರುವಾಗ ಕನ್ನಡ ಚಿತ್ರ ಯಾರಿಗೆ ಬೇಕು ?

ಭಾಷಾ ಚಲನಚಿತ್ರಗಳ ತಯಾರಿಕೆ ಆರಂಭವಾದ ನಂತರ ಕನ್ನಡ ಭಾಷಾ ಚಿತ್ರಗಳ ತಯಾರಿಕೆಯಲ್ಲಿ ಹಣ ಹೂಡಲು ಜನ ಮುಂದಾದರು. ಕನ್ನಡಿಗರಲ್ಲ, ಅನ್ಯ ಭಾಷೆಯ ಮಂದಿಗೆ ಕನ್ನಡ ನೆಲದ ಮೇಲಿನ ಅಭಿಮಾನ ಇರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಆದರೆ ಆರಂಭದ ದಿನಗಳಲ್ಲಿ ಬಂದ ಭಾಷಾ ಚಿತ್ರಗಳು ಎಷ್ಟೇ ಕಳಪೆಯಾಗಿದ್ದರೂ ವ್ಯಾಪಾರಿ ದೃಷ್ಟಿಯಿಂದ ಯಶಸ್ವಿಯಾಗಿದ್ದವು. ಈ ಭರವಸೆ ಅನ್ಯ ಭಾಷಿಗರನ್ನು ಕನ್ನಡ ಚಿತ್ರಗಳಲ್ಲಿ ಹಣ ಹೂಡಲು ಪ್ರೇರೇಪಿಸಿರಬಹುದು. ಆರಂಭದ ಕನ್ನಡ ಚಿತ್ರವನ್ನು ಜನರು ಉತ್ಸಾಹದಿಂದ ಬರಮಾಡಿಕೊಂಡ ರೀತಿಯನ್ನು ನೋಡಿದರೆ ಹಣ ಹೂಡಿದವರು ನಿರಾಶರಾಗಲಿಲ್ಲವೆಂದೇ ಹೇಳಬೇಕು (ಅಧಿಕೃತ ಅಂಕಿ ಅಂಶಗಳು ಲಭ್ಯವಿಲ್ಲ).

ಮೈಸೂರಿನಲ್ಲಿ ನವಜ್ಯೋತಿ ಸ್ಟುಡಿಯೋಸ್ ಆರಂಭ (೧೯೪೬)ವಾದಾಗಿನಿಂದ ಮೊದಲುಗೊಂಡು ೧೯೬೦ರ ಅವಧಿಯಲ್ಲಿ ಕನ್ನಡ ಚಲನಚಿತ್ರ ನಿರ್ಮಾಣಕ್ಕೆ ಚಾಲನೆ ದೊರೆಯಿತು. ಕನ್ನಡ ಮಾರುಕಟ್ಟೆಯ ವ್ಯಾಪ್ತಿಯನ್ನು ಅರ್ಥಮಾಡಿಕೊಂಡಿದ್ದ ಕೆಲವರು ಮಿತವ್ಯಯದ ಚಿತ್ರಗಳನ್ನು ತಯಾರಿಸಿದರು. ದ್ವಿಭಾಷಾ ಚಿತ್ರ ತಯಾರಿಕೆಯ ನಂಟು ಇದ್ದ ನಿರ್ಮಾಪಕರು ಸ್ವಲ್ಪ ಉದಾರ ವೆಚ್ಚದಲ್ಲಿ ಉತ್ತಮ ಚಿತ್ರಗಳನ್ನು ನೀಡಿದರು. ೧೯೩೪-೫೦ರ ಅವಧಿಯಲ್ಲಿ ೨೭ ಚಿತ್ರಗಳು ತೆರೆ ಕಂಡಿದ್ದು, ೧೯೫೧-೬೦ರ ಅವಧಿಯಲ್ಲಿ ೭೫ ಚಿತ್ರಗಳು ತೆರೆ ಕಂಡವು. ಹೆಚ್ಚಿನ ಬಂಡವಾಳ ಹೂಡಿಕೆ ಕನ್ನಡಿಗರದ್ದೆ ಎಂಬುದು ಗಮನೀಯ. ೧೯೫೬ರ ನವಂಬರ್ ೧ರಂದು ಹರಿದು ಹಂಚಿಹೋಗಿದ್ದ ಕನ್ನಡ ನಾಡು ಒಂದೇ ಆಡಳಿತಕ್ಕೆ ಒಳಪಟ್ಟಿತ್ತು. ಕನ್ನಡ ನಾಡಿನ ಏಕೀಕರಣದ ಪ್ರಭಾವವೂ ಸ್ವಲ್ಪ ಮಟ್ಟಿಗೆ ಚಿತ್ರರಂಗದ ಮೇಲೆ ಬೀರಿರಲು ಸಾಧ್ಯ.

೧೯೯೧ರ ಜನಗಣತಿಯ ವರದಿಯಂತೆ ಕನ್ನಡ ನಾಡಿನ ಭಾಷಾ ಸ್ವರೂಪದ ಅವಲೋಕನ ಇಲ್ಲಿ ಅಪ್ರಸ್ತುತವಾಗಲಾರದು.

ಕನ್ನಡ ಮಾತೆ ಬಹು ಭಾಷಾಮಯಿ. ೨೬ ಪ್ರಮುಖ ಜೀವಂತ ಭಾಷೆಗಳು. ಒಟ್ಟು ಜನಸಂಖ್ಯೆಯಲ್ಲಿ ಶೇ.೦.೦೧ಕ್ಕಿಂತ ಕಡಿಮೆ ಇರುವ ಭಾಷೆಗಳನ್ನು ಗಣನೆಗೆ ತೆಗೆದುಕೊಂಡಿಲ್ಲ. ಕನ್ನಡವಲ್ಲದೆ ಕನ್ನಡ ನಾಡಿನ ಇತರ ಮುಖ್ಯ ಭಾಷೆಗಳ ವಿವರಕ್ಕೆ ಪಟ್ಟಿ ನೋಡಿ. (ಪುಟ ೧೬)

### ಕರ್ನಾಟಕ ಜನಸಂಖ್ಯಾ ವಿವರ

ವಿಸ್ತೀರ್ಣ: ೧,೯೧,೭೯೧ ಚ.ಕಿ.ಮೀ.
೫ ಲಕ್ಷಕ್ಕಿಂತ ಹೆಚ್ಚು ಜನರಿರುವ ಮಹಾನಗರಗಳ ಸಂಖ್ಯೆ - ೩
೧ ಲಕ್ಷದಿಂದ ೫ ಲಕ್ಷ ಜನರಿರುವ ನಗರಗಳು - ೧೭
೫೦ ಸಾವಿರದಿಂದ ೧ ಲಕ್ಷದವರೆಗೆ ಜನರು ಇರುವ ನಗರಗಳು - ೨೧
೨೦ರಿಂದ ೫೦ ಸಾವಿರ ಜನಸಂಖ್ಯೆ ಇರುವ ಪಟ್ಟಣಗಳು ೯೨
೧೦ರಿಂದ ೨೦ ಸಾವಿರ ಜನಸಂಖ್ಯೆ ಇರುವ ಪಟ್ಟಣಗಳು - ೭೯
೫ರಿಂದ ೧೦ ಸಾವಿರ ಜನಸಂಖ್ಯೆ ಇರುವ ಪಟ್ಟಣಗಳು - ೪೩
೫ ಸಾವಿರಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಪಟ್ಟಣಗಳು - ೨೬
ಜನ ವಸತಿ ಇರುವ ಹಳ್ಳಿಗಳ ಸಂಖ್ಯೆ - ೨೭,೦೬೬

### ನೆಲಸಲೆಂದು ಬಂದವರು

ಕೈಗಾರಿಕಾಭಿವೃದ್ಧಿ ತೀವ್ರ ಗತಿಯಲ್ಲಿ ನಡೆಯುತ್ತಿರುವ ಕರ್ನಾಟಕಕ್ಕೆ, ಮುಖ್ಯವಾಗಿ ಬೆಂಗಳೂರಿಗೆ ಹೊರ ರಾಜ್ಯಗಳಿಂದ ವಲಸೆ ಬರುವವರ ಸಂಖ್ಯೆ ಹೆಚ್ಚುತ್ತಿದೆ. ೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕಕ್ಕೆ ಹೊರ ರಾಜ್ಯಗಳಿಂದ ವಲಸೆ ಬಂದವರ ಸಂಖ್ಯೆ ೧೬,೫೩,೩೪೪. ಅವರಲ್ಲಿ ೭,೧೯,೩೨೨ ಪುರುಷರು ಮತ್ತು ೯,೩೪,೦೨೨ ಮಹಿಳೆಯರು. ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಯಲ್ಲಿ ವಲಸೆ ಬಂದವರ ಸಂಖ್ಯೆ ೫,೭೩,೩೧೮.

೨೦೦೧ರ ಜನಗಣತಿಯಂತೆ ಜನಸಂಖ್ಯೆ ಏರಿಕೆ ಪ್ರಮಾಣ ಹೆಚ್ಚಾಗಿರುವುದು ಬೆಂಗಳೂರಿನಲ್ಲಿಯೇ. ಬೆಂಗಳೂರು ಜಿಲ್ಲೆಯ ಜನಸಂಖ್ಯೆ ೧೯೯೧ರ ಜನಗಣತಿ ಪ್ರಕಾರ ೪೮,೩೯,೧೬೨ ಇದ್ದಿದ್ದು ೨೦೦೧ರ ಜನಗಣತಿ ಪ್ರಕಾರ ೬೫,೨೩,೧೧೦ಕ್ಕೆ ಏರಿದೆ.

| ಕರ್ನಾಟಕದಲ್ಲಿನ ಭಾಷಾ ವೈವಿಧ್ಯ (ಮಾತೃ ಭಾಷೆಗಳು - ೧೯೯೧ರ ಜನಗಣತಿಯಂತೆ, ಅವರೋಹಣ ಕ್ರಮದಲ್ಲಿ) | | |
|---|---|---|
| ಭಾಷೆಗಳು | ಜನಸಂಖ್ಯೆ | ಒಟ್ಟು ಜನಸಂಖ್ಯೆಯ ಶೇಖಡವಾರು |
| ೧. ಕನ್ನಡ | ೨,೯೭,೭೫,೩೭೪ | ೬೬.೨೦೦ |
| ೨. ಉರ್ದು | ೪೪,೭೦,೬೪೫ | ೯.೯೪೦ |
| ೩. ತೆಲುಗು | ೩೩,೨೧,೦೮೯ | ೭.೩೮೦ |
| ೪. ತಮಿಳು | ೧೭,೨೪,೩೪೯ | ೩.೮೩೦ |
| ೫. ಮರಾಠಿ | ೧೬,೩೯,೧೬೩ | ೩.೬೪೦ |
| ೬. ತುಳು | ೧೩,೭೭,೮೧೦ | ೩.೦೬೦ |
| ೭. ಮಲಯಾಳಂ | ೭,೩೩,೫೯೬ | ೧.೬೩೦ |
| ೮. ಕೊಂಕಣಿ | ೭,೦೦,೨೭೪ | ೧.೫೬೦ |
| ೯. ಲಮಾಣಿ/ಲಂಬಾಡಿ | ೫,೪೭,೭೯೭ | ೧.೨೨೦ |
| ೧೦. ಹಿಂದಿ | ೨,೭೦,೨೮೦ | ೦.೬೦೦ |
| ೧೧. ಕೊಡವ | ೯೬,೨೯೧ | ೦.೨೧೦ |
| ೧೨. ಗುಜರಾತಿ | ೪೩,೮೪೯ | ೦.೧೦೦ |
| ೧೩. ಮಾರ್ವಾಡಿ | ೩೦,೮೨೧ | ೦.೦೭೦ |
| ೧೪. ಟಿಬೆಟಿಯನ್ | ೨೩,೧೮೨ | ೦.೦೫೦ |
| ೧೫. ಬಂಗಾಳಿ | ೨೦,೯೨೬ | ೦.೦೫೦ |
| ೧೬. ಯಾರವಾ | ೧೭,೨೮೬ | ೦.೦೪೦ |
| ೧೭. ಇಂಗ್ಲಿಷ್ | ೧೫,೬೭೫ | ೦.೦೪೦ |
| ೧೮. ಪಂಜಾಬಿ | ೧೩,೭೯೭ | ೦.೦೩೦ |
| ೧೯. ಸಿಂಧಿ | ೧೨,೭೩೬ | ೦.೦೩೦ |
| ೨೦. ರಾಜಾಸ್ಥಾನಿ | ೧೦,೭೨೩ | ೦.೦೨೦ |
| ೨೧. ಒರಿಯಾ | ೪,೮೮೯ | ೦.೦೧೦ |
| ೨೨. ನೇಪಾಳಿ | ೪,೭೦೨ | ೦.೦೧೦ |
| ೨೩. ಬಂಜಾರಿ | ೩,೯೩೨ | ೦.೦೧೦ |
| ೨೪. ವಡಾರಿ | ೩,೭೨೨ | ೦.೦೧೦ |
| ೨೫. ಅರಾಬಿಕ್ | ೨,೮೭೫ | ೦.೦೧೦ |
| ೨೬. ಸೌರಾಷ್ಟ್ರ | ೨,೨೩೫ | ೦.೦೧೦ |
| ಅನ್ಯಭಾಷಾ ಜನಸಂಖ್ಯೆ | ೧,೦೯,೧೮೩ | ೦.೨೪೦ |
| ಒಟ್ಟು ಸಂಖ್ಯೆ | ೪೪,೯೭೭,೨೦೧ | ೧೦೦.೦೦೦ |

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜನಸಂಖ್ಯೆ ೧೬,೭೩,೧೯೪ನಿಂದ ೧೮,೭೭,೪೧೬ ಹೆಚ್ಚಿದೆ. ರಾಜ್ಯದ ಜನಸಂಖ್ಯೆ ಏರಿಕೆ ವಾರ್ಷಿಕ ಶೇ. ೨.೧ ಇದ್ದದ್ದು ೨೦೦೧ರ ಜನಗಣತಿ ಪ್ರಕಾರ ಒಂದು ದಶಕದಲ್ಲಿ ವಾರ್ಷಿಕ ಶೇ. ೧.೭ಕ್ಕೆ ಇಳಿದಿದೆ. ಆದರೆ, ರಾಜ್ಯದ ಜನಸಂಖ್ಯೆ ಏರಿಕೆ ಪ್ರಮಾಣ ಅತ್ಯಂತ ಹೆಚ್ಚಾಗಿ ಏರಿರುವುದು ಬೆಂಗಳೂರು ಜಿಲ್ಲೆಯಲ್ಲಿ. ಇಲ್ಲಿ ವಾರ್ಷಿಕ ಏರಿಕೆ ಪ್ರಮಾಣ ಶೇ. ೩.೪೦. ಮಾಹಿತಿ ತಂತ್ರಜ್ಞಾನ, ಕೈಗಾರಿಕೆಗಳ ಬೆಳವಣಿಗೆ, ಕಟ್ಟಡ ನಿರ್ಮಾಣ ಇತ್ಯಾದಿಗಳು ಸೃಷ್ಟಿಸಿರುವ ಉದ್ಯೋಗಾವಕಾಶಗಳು. ಈ ಜನಸಂಖ್ಯೆ ಬೆಳವಣಿಗೆಗೆ ಕಾರಣ. ವಲಸೆ ಬಂದವರಲ್ಲಿ ಎಂದಿನಂತೆ ಹೊರಗಿನವರೇ ಹೆಚ್ಚಿರುವ ಸಾಧ್ಯತೆ ಇದೆ. ಜನಗಣತಿ ವರದಿ ಪೂರ್ಣ ಬಂದ ಮೇಲೆ ಚಿತ್ರ ಸ್ಪಷ್ಟವಾಗುತ್ತದೆ.

ಬೃಹನ್ನಗರ ಬೆಂಗಳೂರಿನಲ್ಲಿರುವ ೧೦೧ ಚಿತ್ರಮಂದಿರಗಳಲ್ಲಿ ಕನ್ನಡಕ್ಕೆ ಮೀಸಲಾದ ಚಿತ್ರಮಂದಿರಗಳು ೨೦. ಸಣ್ಣ ಪಟ್ಟಣಗಳಿಂದ ಬರುವ ವರಮಾನ ಗೌಣ. ಮೈಸೂರು ರಾಜ್ಯ ಬಿಟ್ಟರೆ ಕನ್ನಡ ಚಿತ್ರಗಳಿಗೆ ಬೇರೆ ಮಾರುಕಟ್ಟೆಯೇ ಇಲ್ಲ. ಮದರಾಸು, ಮುಂಬಯಿ, ದೆಹಲಿಯಲ್ಲಿ ಕನ್ನಡಿಗರು ಅಧಿಕ ಸಂಖ್ಯೆಯಲ್ಲಿದ್ದಾರೆ. ಆದರೆ ಅಲ್ಲಿ ಲಾಭದಾಯಕವಾಗಿ ಕನ್ನಡ ಚಿತ್ರ ಪ್ರದರ್ಶನ ನಡೆಸುವುದು ಸಾಧ್ಯವಿಲ್ಲ.

ತಮಿಳು ಚಿತ್ರಕ್ಕೆ ಬೆಂಗಳೂರು ನಗರದಲ್ಲಿ ಅಗ್ರ ತಾಂಬೂಲ. ತಮಿಳು ನಾಡಿನ ಗಡಿಗೆ ಹೊಂದಿಕೊಂಡಿರುವ ಚಾಮರಾಜನಗರ, ಯಳಂದೂರು, ಕೊಳ್ಳೆಗಾಲದಲ್ಲಿ ತಮಿಳು ಚಿತ್ರಗಳನ್ನು ಅಲ್ಲಿ ಅಧಿಕ ಸಂಖ್ಯೆಯಲ್ಲಿರುವ ತಮಿಳರು ಮಾತ್ರವಲ್ಲ, ಕನ್ನಡಿಗರಿಗೂ ನೋಡಿ ಅಭ್ಯಾಸವಾಗಿದೆ. ಹಾಗೆಯೇ ಇಂದೂ ಆಸಕ್ತಿಯಿಂದಲೇ ನೋಡುತ್ತಾರೆ. ಹಾಗೆಯೇ ಕೆ.ಜಿ.ಎಫ್. ಸಹ ತಮಿಳು ಚಿತ್ರಗಳ ಇನ್ನೊಂದು ಪ್ರಧಾನ ಕೇಂದ್ರ.

ಬೆಂಗಳೂರು, ಕೋಲಾರ, ಚಿಂತಾಮಣಿ, ಚಿಕ್ಕಬಳ್ಳಾಪುರ, ಪಾವಗಡ ಹಾಗೂ ಬಳ್ಳಾರಿ ಜಿಲ್ಲೆಯಲ್ಲಿ ತೆಲುಗು ಭಾಷೆಯ ಚಿತ್ರಗಳು ಜನಪ್ರಿಯ.

ಕರ್ನಾಟಕದಲ್ಲಿ ಹಿಂದಿ ಭಾಷಾ ಸಂಖ್ಯಾತರು ಕಡಿಮೆ ಇದ್ದರೂ (ಶೇ.೦.೬೦) ಇದು ಹಿಂದಿ ಭಾಷೆಯ ಚಿತ್ರಗಳ ಮುಖ್ಯ ಕೇಂದ್ರ. ಮುಂಬಯಿ ಪ್ರಾಂತ್ಯದ ಒಂದು ಭಾಗವಾಗಿ ಶತಮಾನಗಳ ಕಾಲ ಉಳಿದಿದ್ದ ಹುಬ್ಬಳ್ಳಿ, ಬೆಳಗಾವಿ, ಬಿಜಾಪುರ ಜಿಲ್ಲೆಗಳೂ, ಹೈದರಾಬಾದ್ ಸಂಸ್ಥಾನದಲ್ಲಿದ್ದ ಬೀದರ್, ಗುಲ್ಬರ್ಗಾ ಜಿಲ್ಲೆಗಳಲ್ಲಿಯೂ ಹಿಂದಿ ಚಿತ್ರಗಳನ್ನು ನೋಡಲು ಜನರು ಆಸಕ್ತರು. ಉರ್ದು ಮಾತೃಭಾಷೆಯಾಗಿರುವವರ ಸಂಖ್ಯೆ ಒಟ್ಟು ಜನಸಂಖ್ಯೆಯ ಶೇ.೯.೯೪೦ರಷ್ಟು ಇದ್ದಾರೆ. ಇವರು ಪ್ರತಿ ಜಿಲ್ಲೆಯಲ್ಲಿಯೂ ಹರಡಿದ್ದಾರೆ. ಇವರ ಆಯ್ಕೆ ಸಹಜವಾಗಿ ಹಿಂದಿ ಚಿತ್ರಗಳೇ.

ಕನ್ನಡ ನಿರ್ಮಾಪಕನಿಗೆ ಸಂದಿಗ್ಧ; ಅದೇ ಅವನ ಪ್ರಧಾನ ಸಮಸ್ಯೆ ಕೂಡಾ.

೧೯೯೧ರ ಜನಗಣತಿಯ ವರದಿಯಂತೆ ಕನ್ನಡ ಭಾಷೆ ಮಾತಾಡುವವರು ಒಟ್ಟು ಜನಸಂಖ್ಯೆಯಲ್ಲಿ ಶೇ.೬೬.೨೦ರಷ್ಟು ಎಂಬುದನ್ನು ಮರೆಯುವಂತಿಲ್ಲ. ನಗರ ಪ್ರದೇಶ ಬಿಟ್ಟು ಪಟ್ಟಣ ಗ್ರಾಮಾಂತರ ಪ್ರದೇಶದಲ್ಲಿನ ಜನರ ಆರ್ಥಿಕ ಸ್ಥಿತಿ ಮನರಂಜನೆಗಾಗಿ ಉದಾರವಾಗಿ ವೆಚ್ಚ ಮಾಡುವಂತಹ ಸ್ಥಿತಿಯಲ್ಲಿ ಇಲ್ಲ ಎನ್ನುವುದು ಒಂದು ಮುಖ್ಯ ವಿಚಾರ. ಇದು ಕನ್ನಡ ಚಿತ್ರೋದ್ಯಮಕ್ಕೆ ಇರುವ ಮಾರುಕಟ್ಟೆಯ ಇತಿಮಿತಿಯ ಸ್ವರೂಪ.

ಮಾರುಕಟ್ಟೆ ಹಾಕಿರುವ ಲಕ್ಷ್ಮಣ ರೇಖೆಯನ್ನು ದಾಟಿ, ಅನ್ಯ ಭಾಷೆಗಳ ಚಿತ್ರಗಳೊಡನೆ ಸ್ಪರ್ಧೆ ನಡೆಸಲು ಅಧಿಕ ವೆಚ್ಚ ಮಾಡಿ ಅದ್ದೂರಿಯಾಗಿ ಚಿತ್ರ ನಿರ್ಮಿಸಿದವರಲ್ಲಿ ಬಹು ಮಂದಿ ಕೈ ಸುಟ್ಟುಕೊಂಡಿದ್ದಾರೆ. ಹಾಗೆ ದ್ವಿಭಾಷಾ ಚಿತ್ರಗಳನ್ನು ನಿರ್ಮಿಸಿದವರಲ್ಲಿ ಯಶಸ್ಸು ಕಂಡವರೇ ಹೆಚ್ಚು. ಶ್ರೀಮಂತವಾಗಿ ಚಿತ್ರಿಸಿದ ಹಿಂದಿ, ತೆಲುಗು, ತಮಿಳು ಚಿತ್ರ ನೋಡುವ ಅಭ್ಯಾಸ ಇರುವ ಕನ್ನಡ ಪ್ರೇಕ್ಷಕನ ಮೆಚ್ಚುಗೆ ಗಳಿಸಬೇಕಾದರೆ ಕನ್ನಡ ಚಿತ್ರವೂ ಶ್ರೀಮಂತವಾಗಿರಬೇಕೆಂದು ಅತ ಬಯಸುತ್ತಾನೆ. ನಿರ್ಮಾಪಕನ ಇತಿಮಿತಿ ಬಗೆಗೆ ಅತ ತಲೆ ಕೆಡಿಸಿಕೊಳ್ಳುವುದಿಲ್ಲ. ೧೯೯೭-೨೦೦೦ ವರ್ಷದ ಅವಧಿಯಲ್ಲಿ ತೆರೆಕಂಡ ಚಲನಚಿತ್ರಗಳ ಗಳಿಕೆ ಕನ್ನಡ ವೀಕ್ಷಿಸುವ ಪ್ರೇಕ್ಷಕ ವರ್ಗ ಹೆಚ್ಚುತ್ತಿರುವುದಕ್ಕೆ ನಿದರ್ಶನ.

### ಮರಳಿ ಮನೆಗೆ ಬರಲು ಆಮಿಷ

ಎರಡನೆ ಮಹಾಯುದ್ಧದ ಕಾಲದಲ್ಲಿ ಬ್ರಿಟಿಷರ ಅವಶ್ಯಕತೆ ಪೂರೈಸಲು, ಸ್ವಾತಂತ್ರ್ಯಾ ನಂತರ ದೇಶದ ಅಗತ್ಯಗಳನ್ನು ಪೂರೈಸಲು ಕೆಲವು ಭಾರಿ ಕೈಗಾರಿಕೆಗಳ ಸ್ಥಾಪನೆಗೆ ಚಾಲನೆ ನಡೆಯಿತು.

ಆಧುನಿಕ ಯುದ್ಧ ವಿಮಾನಗಳು ಮತ್ತು ಹೆಲಿಕಾಪ್ಟರ್‌ಗಳನ್ನು ತಯಾರಿಸುವ ಕಾರ್ಖಾನೆ ಸ್ಥಾಪನೆಯಾಯಿತು. ಯಂತ್ರಗಳನ್ನು ತಯಾರಿಸುವ ಮಾತೃಯಂತ್ರಗಳ ಕಾರ್ಖಾನೆ ಹುಟ್ಟಿತು. ದೇಶಕ್ಕೆಲ್ಲಾ ಅಗತ್ಯವಾದ ಟೆಲಿಫೋನ್‌ಗಳನ್ನು, ಟೆಲಿಫೋನ್ ಎಕ್ಸ್‌ಚೇಂಜ್‌ಗಳನ್ನು ನಿರ್ಮಿಸುವ ಕಾರ್ಖಾನೆ ಅಸ್ತಿತ್ವಕ್ಕೆ ಬಂದಿತು. ಇಂತಹ ಬೃಹತ್ ಉದ್ಯಮಗಳ ಅವಶ್ಯಕತೆಗಳನ್ನು ಪೂರೈಸಲು ಅನೇಕ ಉಪ ಕಾರ್ಖಾನೆಗಳು, ಆ ಉಪ ಕಾರ್ಖಾನೆಗಳಿಗಾಗಿ ಏಷ್ಯಾದಲ್ಲೇ ಅತಿ ದೊಡ್ಡದಾದ ಕೈಗಾರಿಕಾ ವಸಾಹತು ಸಿದ್ಧವಾಯಿತು. ಕೇಂದ್ರ ಸರಕಾರದ, ರಾಜ್ಯ ಸರಕಾರದ ಬೊಕ್ಕಸದಿಂದಲೂ ಮುಂಬಯಿ, ಕಲ್ಕತ್ತೆಯ ಭಾರಿ ಉದ್ಯಮಿಗಳ ತಿಜೋರಿಯಿಂದಲೂ ಬಂಡವಾಳ ಹರಿದು ಬಂದಿತು ಕರ್ನಾಟಕಕ್ಕೆ.

ಆದರೆ ಜನಸಾಮಾನ್ಯರಿಗೆ ಅತಿ ಕಡಿಮೆ ವೆಚ್ಚದಲ್ಲಿ ಲಭ್ಯವಾಗುವ ಮನರಂಜನೆಯಾದ ಸಿನಿಮಾ ನಿರ್ಮಾಣಕ್ಕೆ ಅಗತ್ಯವಾದ ಸುಸಜ್ಜಿತ ಸ್ಟುಡಿಯೋಗಳನ್ನು, ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸ್ಥಳೀಯರಾಗಲಿ ಹಾಗೂ ಹೊರಗಿನ ಉದ್ಯಮಿಗಳಾಗಲಿ ಯಾರೂ ಗಮನ ಹರಿಸಲಿಲ್ಲ.

ಶಬ್ದ ಚಿತ್ರಗಳ ತಯಾರಿಕೆ ಆರಂಭವಾದೊಡನೆ ತೆಲುಗು, ತಮಿಳು ಭಾಷಾ ಚಿತ್ರೋದ್ಯಮಿಗಳು ಮುಂಬಯಿ, ಕಲ್ಕತ್ತಾ ಯಾತ್ರೆಗಳನ್ನು ನಿಲ್ಲಿಸಿ, ತಮಿಳು ನಾಡಿನಲ್ಲಿ ಮುಖ್ಯವಾಗಿ ಮದರಾಸಿನಲ್ಲಿ (ಈಗಿನ ಚೆನ್ನೈ) ಸುಸಜ್ಜಿತ ಸ್ಟುಡಿಯೋಗಳನ್ನು ಆರಂಭಿಸಿದರು. ಚಿತ್ರಗಳನ್ನು ಅಲ್ಲೇ ತಯಾರಿಸಿದರು. ಗಳಿಸಿದ್ದನ್ನು ಮತ್ತೆ ಉದ್ಯಮದಲ್ಲಿ

ಮಾಡಿದರು. ಚಿತ್ರೋದ್ಯಮಕ್ಕೆ ಅಗತ್ಯವಾದ ಇನ್ನಷ್ಟು ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿ ಪಡಿಸಿದರು. ಮದರಾಸು ದಕ್ಷಿಣ ಭಾರತದ 'ಹಾಲಿವುಡ್' ಆಗಿ ಬೆಳೆಯಿತು. ತೆಲುಗು, ತಮಿಳು ಚಿತ್ರಗಳಲ್ಲದೆ ಕನ್ನಡ, ಮಲೆಯಾಳಂ ಮತ್ತು ಹಿಂದಿ ಚಿತ್ರಗಳಿಗೆ ಆಶ್ರಯ ನೀಡಿತು.

ಗುಬ್ಬಿ ವೀರಣ್ಣನವರು ಮೂಕ ಚಿತ್ರಗಳನ್ನು ನಿರ್ಮಿಸಲು ಸ್ಟುಡಿಯೋ ಸ್ಥಾಪಿಸಿ ಕೈಸುಟ್ಟುಕೊಂಡಿದ್ದ ನೆನಪು ಹಚ್ಚ ಹಸಿರಾಗಿದ್ದಾಗಲೇ ಮೈಸೂರಿನಲ್ಲಿ ಸ್ಟುಡಿಯೋ ಸ್ಥಾಪನೆಗೆ ಪ್ರಯತ್ನಗಳು ನಡೆದವು. ಕನ್ನಡ ಚಿತ್ರಗಳ ತಯಾರಿಕೆಯ ಆರಂಭದ ದಿನಗಳಲ್ಲಿ ವಿ.ತಿಮ್ಮಯ್ಯ ಮೈಸೂರು ಸೌಂಡ್ ಸ್ಟುಡಿಯೋ ಆರಂಭಿಸಿದರು (೧೯೩೬). 'ರಾಜಸೂಯ ಯಾಗ' (೧೯೩೭) ಕನ್ನಡ ಚಿತ್ರವಲ್ಲದೆ ಒಂದೆರಡು ತಮಿಳು ಚಿತ್ರಗಳೂ ಇಲ್ಲಿ ಚಿತ್ರಿತವಾದವು. ಸ್ಟುಡಿಯೋ ಮುಚ್ಚಿಹೋಯಿತು.

ಸಾರಿಗೆ ಉದ್ಯಮಿ ಜಿ.ಆರ್.ರಾಮಯ್ಯ ಮೈಸೂರಿನಲ್ಲಿ ನವಜ್ಯೋತಿ ಸ್ಟುಡಿಯೋ ಆರಂಭಿಸಿದರು (೧೯೪೬). ಬಿರುಸಿನ ಚಟುವಟಿಕೆಯ ನಂತರ ನವಜ್ಯೋತಿ ನಂದಿತು. ಉದ್ಯಮಿ ಎಂ.ಎಸ್.ಬಸವರಾಜಯ್ಯ ಪ್ರೀಮಿಯರ್ ಸ್ಟುಡಿಯೋ (೧೯೫೪) ಆರಂಭಿಸಿ, ಸ್ವತಃ 'ಸ್ತ್ರೀ ರತ್ನ' (೧೯೫೫)ವನ್ನು ನಿರ್ಮಿಸಿದರು. ಕನ್ನಡ, ಇಂಗ್ಲಿಷ್, ಮಲೆಯಾಳಂ, ತಮಿಳು ಚಿತ್ರಗಳ ಚಿತ್ರಣ ಕಾರ್ಯ ನಡೆಯಿತು. ಕ್ರಮೇಣ ಚಟುವಟಿಕೆ ಕಡಿಮೆ ಆಯಿತು. ಕನ್ನಡ ನಾಡಿನಲ್ಲಿ ಚಿತ್ರೋದ್ಯಮ ಬೆಳೆಯಬೇಕಾದರೆ ಸಹಾಯಧನ ನೀಡಬೇಕೆಂದು ಕರೆ ನೀಡಿದವರಲ್ಲಿ ಬಸವರಾಜಯ್ಯ ಮೊದಲಿಗರು. ಸ್ಟುಡಿಯೋ ಇನ್ನೂ ಬದುಕಿದೆ. ಸ್ಟುಡಿಯೋದ ಬಹುಭಾಗ ಹೊಟೇಲ್ ಹಾಗೂ ದಾಸ್ತಾನು ಮಳಿಗೆಯಾಗಿ ಪರಿವರ್ತನೆಗೊಂಡಿದೆ.

ಅರವತ್ತರ ದಶಕದಿಂದೀಚೆಗೆ ಬೆಂಗಳೂರಿನಲ್ಲಿ ಮತ್ತೆ ಸ್ಟುಡಿಯೋ ಸ್ಥಾಪನೆಯ ಪ್ರಯತ್ನಗಳು ನಡೆದವು. ಚಿತ್ರದುರ್ಗದ ಗಣಿ ಮಾಲೀಕ ಡಾ| ರಾಮದಾಸ್ ಸರ್ಜಾಪುರ ರಸ್ತೆಯಲ್ಲಿ ಆರಂಭಿಸಿದ ಓಂಕಾರ್ ಸ್ಟುಡಿಯೋಸ್ ಬಹುಬೇಗ ಕಣ್ಣುಮುಚ್ಚಿತು. ಗುಬ್ಬಿ ವೀರಣ್ಣ, ಟಿ.ಎಸ್.ಕರಿಬಸವಯ್ಯ ಮತ್ತು ರಾಜಕಾರಣಿ ಕೆ.ವಿ.ಶಂಕರೇಗೌಡ ಷೇರು ಸಂಗ್ರಹಣೆಯ ಮೂಲಕ ಸ್ಥಾಪಿಸಿದ ಶ್ರೀ ಕಂಠೀರವ ಸ್ಟುಡಿಯೋ ೧೯೭೦ರಲ್ಲಿ ಗೊರಗೊಂಟೇಪಾಳ್ಯದಲ್ಲಿ ಆರಂಭವಾಗಿ, ನಂತರ ಸರ್ಕಾರದ ವಶಕ್ಕೆ ಬಂದು ಈಗ ಕುಟುಕ ಜೀವದೊಂದಿಗೆ ಉಳಿದಿದೆ. ನೂರು ರೂ.ಗಳ ಅನ್‌ಡಿಮ್ಯಾಂಡ್ ಮೂಲಕ ನಿಧಿ ಸಂಗ್ರಹದ ಮೂಲಕ ಕೆಂಗೇರಿ ಬಳಿ ಹಾಸ್ಯನಟ ಟಿ.ಎನ್.ಬಾಲಕೃಷ್ಣ ಆರಂಭಿಸಿದ ಅಭಿಮಾನ್ ಸ್ಟುಡಿಯೋ ಪ್ರಗತಿ ಸಾಧಿಸಲಾಗಿಲ್ಲ. ರಾಜಕಾರಣಿ ದಯಾನಂದ ಸಾಗರ್, ಈಗ ಅವರ ಶಿಕ್ಷಣ ಸಂಸ್ಥೆಗಳಿರುವ ಪ್ರದೇಶದಲ್ಲಿ ಆರಂಭಿಸಿದ ಸುಜಾತ ಸ್ಟುಡಿಯೋ ತೀರಾ ಅಲ್ಪಾಯುಷಿಯಾಯಿತು. ಕೊಯಮತ್ತೂರಿನ ಪಕ್ಷಿರಾಜಾ ಸ್ಟುಡಿಯೋವಿನ ಎಸ್.ಎಂ.ಶ್ರೀರಾಮುಲುನಾಯ್ಡು ಅವರು ನಗರದ ಹೃದಯ ಭಾಗದಲ್ಲಿ ಆರಂಭಿಸಿದ ಚಾಮುಂಡೇಶ್ವರಿ ಸ್ಟುಡಿಯೋ ಈಗ ಸಂಕಲನ, ಧ್ವನಿಮುದ್ರಣ ಕೇಂದ್ರವಾಗಿ ಉಳಿದಿದೆ. ನಿರ್ಮಾಪಕ ಎ.ಎಲ್.ಅಬ್ಬಾಯಿನಾಯ್ಡು ಚಿಕ್ಕಕಲಸಂದ್ರದಲ್ಲಿ ಸ್ಥಾಪಿಸಿದ ಮಧು ಆರ್ಟ್ ಸ್ಟುಡಿಯೋ ಕುಂಟುತ್ತಾ ನಡೆದಿದೆ.

ಕನ್ನಡ ಚಿತ್ರಕ್ಕೆ ಸಂಬಂಧಪಟ್ಟ ಕಲಾವಿದರು, ತಂತ್ರಜ್ಞರೆಲ್ಲ ಮದರಾಸಿನಲ್ಲಿ ಬಿಡಾರ ಹೂಡಿದ್ದರು. ಮೈಸೂರಿನಲ್ಲಿ ಚಿತ್ರೀಕರಣವೆಂದರೆ ಸಂಬಂಧಪಟ್ಟವರನ್ನೆಲ್ಲಾ ಮೈಸೂರಿಗೆ ಕರೆತರಬೇಕು. ಅವರಿಗೆ ವಸತಿ ಕಲ್ಪಿಸಬೇಕು. ಊಟೋಪಚಾರ ವ್ಯವಸ್ಥೆಯಾಗಬೇಕು. ಅವರಿಗೆಲ್ಲಾ ಪ್ರಯಾಣ ವೆಚ್ಚ ನೀಡಬೇಕು. ಇವೆಲ್ಲ ತಯಾರಿಕೆ ವೆಚ್ಚ ಏರಲು ಕಾರಣ.

ಹಾಡುಗಳ ಧ್ವನಿಮುದ್ರಣ, ರಿ ರೆಕಾರ್ಡಿಂಗ್, ಸೆನ್ಸಾರ್-ಪ್ರಚಾರ ಸಾಧನಗಳು ಇವೆಲ್ಲಕ್ಕೂ ಮದರಾಸನ್ನೇ ಆಶ್ರಯಿಸಬೇಕಾಗಿತ್ತು. ಎಲ್ಲ ಸೌಲಭ್ಯಗಳೂ ಒಂದೆಡೆ ಸಿಗುವಾಗ ಮೈಸೂರು ಉತ್ಸಾಹದಾಯಕವಾಗಿರುತ್ತಿರಲಿಲ್ಲ.

ಕನ್ನಡದ ಚಿತ್ರಗಳ ಮಾರುಕಟ್ಟೆಯ ಇತಿಮಿತಿಗಳು ಕನ್ನಡ ಚಿತ್ರ ನಿರ್ಮಾಪಕನ ಕೈ ಕಟ್ಟಿಹಾಕಿದ್ದವು. ಮಿತವ್ಯಯ ಅವನ ಬೀಜಮಂತ್ರವಾಗಿತ್ತು. ಮದರಾಸಿನ ಸ್ಟುಡಿಯೋಗಳಲ್ಲಿ ರಾತ್ರಿ ಪಾಳಿಯಾದರೆ ರಿಯಾಯತಿ ದರ. ಕನ್ನಡ ಚಿತ್ರ ನಿರ್ಮಾಪಕರು ರಾತ್ರಿ ಪಾಳಿಯಲ್ಲಿ ಕೆಲಸ ಮಾಡಲು ಬಯಸುತ್ತಿದ್ದರು. ತೆಲುಗು, ತಮಿಳು ಚಿತ್ರಗಳಿಗಾಗಿ ಹಾಕಿದ್ದ ಸೆಟ್‌ಗಳನ್ನೇ ಅಲ್ಪ ಸ್ವಲ್ಪ ಬದಲಾವಣೆ ಮಾಡಿ ಚಿತ್ರೀಕರಣ ನಡೆಸುತ್ತಿದ್ದರು. ಸೆಟ್ ಹಾಕಿದ ನಿರ್ಮಾಪಕನಿಗೆ ಇಲ್ಲವೆ ಸ್ಟುಡಿಯೋಗೆ ಸಾಂಕೇತಿಕವಾಗಿ ಬಾಡಿಗೆ ನೀಡಿ ಹಣ ಉಳಿತಾಯ ಮಾಡುತ್ತಿದ್ದರು. ಹೊರಾಂಗಣ ಚಿತ್ರಣ ಮದರಾಸಿನ ಹೊರವಲಯದಲ್ಲಿ ನಡೆದು ಹೋಗುತ್ತಿತ್ತು. ಮುಖ್ಯ ಪಾತ್ರಧಾರಿಗಳನ್ನು ಬಿಟ್ಟರೆ ಉಳಿದ ಸಣ್ಣಪುಟ್ಟ ಪಾತ್ರಗಳಲ್ಲಿ, ಗುಂಪುದೃಶ್ಯಗಳಲ್ಲಿ ಮದರಾಸಿನಲ್ಲಿ ಸಿಗುವ ಸಹ ಕಲಾವಿದರೇ ಕಾಣಿಸಿಕೊಳ್ಳುತ್ತಿದ್ದರು. ತಮಿಳು ತೊಟ್ಟಿಲಿನಲ್ಲಿ ತೆಲುಗು ಜೋಗುಳ ಆಲಿಸುತ್ತಾ ಬೆಳೆಯುತ್ತಿದ್ದ ಕನ್ನಡ ಕಂದ. ಕನ್ನಡ ಚಿತ್ರಗಳಲ್ಲಿ ಶ್ರೀಗಂಧದ ಕಂಪಿರುತ್ತಿರಲಿಲ್ಲ. 'ಮಲೆನಾಡಿನ ತೆಂಗುಗಳು, ಬಾಳೆಗಳು ತೋಳ ಬೀಸಿ' ಕರೆಯುತ್ತಿರಲಿಲ್ಲ. ಬಟ್ಟ ಬಯಲಲ್ಲಿ ತಾಟನುಂಗುವಿನ ಒಂಟಿ ಸಾಲುಮರಗಳ ಹಾದಿಯಲ್ಲಿ ಕೋಡಂಬಾಕಂನ ಪಳನಿವೇಲು ದಂಪತಿಗಳ ಎತ್ತಿನಗಾಡಿಯಲ್ಲಿ ಸಾಗುತ್ತಿರುವ ನೋಟ ಸಿಗುತ್ತಿತ್ತು. ಕನ್ನಡ ಚಿತ್ರದಲ್ಲಿ ನೆರೆ ನಾಡಿನ ಛಾಯೆ ದಟ್ಟವಾಗಿ ಕಾಣುತ್ತಿತ್ತು. ಚಿತ್ರೋದ್ಯಮ ಕನ್ನಡ ನಾಡಿನಲ್ಲಿ ನೆಲೆಸಬೇಕು, ಬೆಳೆಯಬೇಕೆಂಬುದು ಚಿತ್ರೋದ್ಯಮಿಗಳ ಆಶಯ. ಅದಕ್ಕೆ ಆಮಿಷ ನೀಡುವುದು ಅನಿವಾರ್ಯವೆನ್ನುವುದು ಸರಕಾರಕ್ಕೆ ಮನದಟ್ಟಾಯಿತು. ಕನ್ನಡ ನಾಡಿನಲ್ಲಿ ಕಪ್ಪು-ಬಿಳುಪು ಚಲನ ಚಿತ್ರಕ್ಕೆ ರೂ. ೫೦,೦೦೦ ಸಹಾಯ ಧನ, ವರ್ಣ ಚಿತ್ರಕ್ಕೆ ಒಂದು ಲಕ್ಷ ರೂಪಾಯಿ ಪ್ರೋತ್ಸಾಹ ಧನ ನೀಡುವ ಯೋಜನೆ ಪ್ರಕಟಿಸಿತು (೧೯೬೬). ಅಂದಿನ ಹಣಕಾಸು ಮಂತ್ರಿಗಳಾದ ರಾಮಕೃಷ್ಣ ಹೆಗಡೆ ಅವರು ೧೯೬೬-೬೭ರ ಬಜೆಟ್‌ನಲ್ಲಿ ಮನರಂಜನೆ ತೆರಿಗೆ ಮೇಲೆ ಸಣ್ಣ ಸರ್‌ಚಾರ್ಜ್ ವಿಧಿಸಿ, ಆ ಹಣವನ್ನು ಚಿತ್ರೋದ್ಯಮದ ಅಭಿವೃದ್ಧಿಗೆ ವಿನಿಯೋಗಿಸುವುದಾಗಿ ಶಾಸನ ಸಭೆಯಲ್ಲಿ ತಿಳಿಸಿದ್ದರು. ಮುಂದಿನ ದಿನಗಳಲ್ಲಿ ಸರ್‌ಚಾರ್ಜ್ ಏರಿಕೆಯಾಗುತ್ತಾ ಹೋಯಿತು. ಆದರೆ ಆ ಮೂಲದಿಂದ ಬಂದ ಹಣ ಸಚಿವರು ನೀಡಿದ್ದ ಆಶ್ವಾಸನೆಯಂತೆ ಉದ್ಯಮಕ್ಕೆ ಹರಿದು ಬರಲಿಲ್ಲ. ಸಹಾಯಧನದ ಆಮಿಷದ ನಂತರ ಕನ್ನಡ ನಾಡಿನಲ್ಲಿ ತಯಾರಾದ ಕನ್ನಡ ಚಿತ್ರಗಳಿಗೆ ಶೇ.೫೦ರಷ್ಟು ಮನರಂಜನೆ ತೆರಿಗೆ ವಿನಾಯಿತಿಯನ್ನು ನೀಡಿತು. ಭಾರತದ ಚಲನಚಿತ್ರ ನೀತಿ ಬೇರೆ ಬೇರೆ ರಾಜ್ಯಗಳಿಗೆ ಮೇಲ್ಪಂಕ್ತಿಯಾಯಿತು. ತೆಲುಗು ಚಿತ್ರೋದ್ಯಮ ಮದರಾಸಿನಿಂದ ವಲಸೆ ಬರುವಂತೆ ಮಾಡಲು ಸಹಾಯ ಧನ ಯೋಜನೆಯನ್ನು ಜಾರಿಗೆ ತರುವಲ್ಲಿ ಆಂಧ್ರ ಸರ್ಕಾರ ವಿಳಂಬ ಮಾಡಲೇ ಇಲ್ಲ. ಕನ್ನಡ ನಾಡಿಗಿಂತ ಹೆಚ್ಚು ಉತ್ಸಾಹದಿಂದ ಯೋಜನೆಗಳನ್ನು ಜಾರಿಗೆ ತಂದು ಯಶಸ್ವಿಯಾಯಿತು.

ಸಹಾಯ ಧನ ಯೋಜನೆ ಕನ್ನಡ ಮಾತ್ರವಲ್ಲ, ಪರಭಾಷಾ ನಿರ್ಮಾಪಕರ ಮೇಲೂ ಪ್ರಭಾವ ಬೀರಿತು. ಕನ್ನಡವಲ್ಲದೆ ತೆಲುಗು, ತಮಿಳು, ಮಲೆಯಾಳಂ, ಹಿಂದಿ, ಇಂಗ್ಲಿಷ್ ಮತ್ತು ಉಪಭಾಷೆಗಳಾದ ತುಳು, ಕೊಂಕಣಿಯಲ್ಲೂ ಚಿತ್ರಗಳು ಕರ್ನಾಟಕದಲ್ಲಿ ನಿರ್ಮಾಣಗೊಂಡವು. ೧೯೮೩ರಲ್ಲಿ ಮನರಂಜನಾ ತೆರಿಗೆಯಲ್ಲಿ ಶೆ.೫೦ರಷ್ಟು ತೆರಿಗೆ ರಿಯಾಯಿತಿ ನೀಡಿದ ಕಾರಣ ಪ್ರವೇಶ ದರ ಕಡಿಮೆಯಾಗಿ ಕನ್ನಡ ಚಿತ್ರ ನೋಡುವ ಪ್ರೇಕ್ಷಕರ ಸಂಖ್ಯೆ ಹೆಚ್ಚಿತು. ಚಿತ್ರ ತಯಾರಿಕೆ ವೆಚ್ಚ ಏರಿತೆಂದು ಸಹಾಯಧನ ಪ್ರಮಾಣದಲ್ಲೂ ಏರಿಕೆಯಾಯಿತು. ೧೯೯೩ರಲ್ಲಿ ವರ್ಣ ಚಿತ್ರಗಳಿಗೆ ರೂ.೪ ಲಕ್ಷ, ಕಪ್ಪು ಬಿಳುಪು ಚಿತ್ರಗಳಿಗೆ ೨.೫ ಲಕ್ಷ ಸಹಾಯಧನ ನಿಗದಿ ಪಡಿಸಲಾಯಿತು. ಕಲಾತ್ಮಕ ಚಿತ್ರಗಳಿಗೆ ೧ ಲಕ್ಷ ರೂಪಾಯಿ ಹೆಚ್ಚುವರಿ ಸಹಾಯಧನವನ್ನು ನೀಡಲು ಆರಂಭಿಸಲಾಯಿತು.

ಸಹಾಯಧನ ನೀಡಿಕೆಯಿಂದ ಚಿತ್ರ ನಿರ್ಮಾಣಕ್ಕೆ ಉತ್ತೇಜನ ದೊರೆಯಿತು. ಹೆಚ್ಚು ಹೆಚ್ಚು ಚಿತ್ರಗಳು ತಯಾರಾಗತೊಡಗಿದವು. ತೆರಿಗೆ ವಿನಾಯ್ತಿಯಿಂದ ಚಿತ್ರ ನೋಡುವವರ ಸಂಖ್ಯೆ ಹೆಚ್ಚಿತು. ಆದರೆ ಪ್ರದರ್ಶನ ವಲಯ ಹಾಗೂ ಚಿತ್ರ ಉದ್ಯಮಕ್ಕೆ ಸಂಬಂಧಪಟ್ಟ ಇತರ ಮೂಲಭೂತ ಸೌಕರ್ಯಗಳ ಬೆಳವಣಿಗೆ ಆಶಾದಾಯಕವಾಗಿರಲಿಲ್ಲ. ಚಲನಚಿತ್ರ ನಿರ್ಮಾಣ ಕ್ಷೇತ್ರದಲ್ಲೂ ಕೆಲವು ಅಹಿತಕರವಾದ ಬೆಳವಣಿಗೆಗಳು ಕಂಡುಬಂದವು. ಅನಧಿಕೃತ ವೀಡಿಯೋ ಕ್ಯಾಸೆಟ್‌ಗಳ ಪಿಡುಗು ಹೆಚ್ಚಾಗತೊಡಗಿತು. ಟೆಲಿವಿಷನ್ ಆಗಮನ, ಮನೆ ಬಾಗಿಲಿಗೆ ಬಂದ ಕೇಬಲ್ ಟೆಲಿವಿಷನ್ ಸಂಪರ್ಕ ವ್ಯವಸ್ಥೆ - ಇವುಗಳು ಒಡ್ಡಿದ ಸವಾಲೆನ್ನೆದುರಿಸಲು ಚಿತ್ರ ನಿರ್ಮಾಪಕರು ಚಿತ್ರದ ಪ್ರೇಕ್ಷಣೀಯತೆಯನ್ನು ಹೆಚ್ಚಿಸಲು ಅನೇಕ ಮಾರ್ಗಗಳನ್ನು ಹೆಚ್ಚಿಸಿದರು. ಭಾರಿ ವೆಚ್ಚದ ಸೆಟ್‌ಗಳನ್ನು ಹಾಕಿ ದೃಶ್ಯಗಳು ರಮಣೀಯವಾಗಿಯೂ, ಶ್ರೀಮಂತವಾಗಿಯೂ ಇರುವಂತೆ ಮಾಡಿದರು. ಜೊತೆಗೆ ಲೈಂಗಿಕತೆ, ಹಿಂಸೆ, ಪ್ರತೀಕಾರಗಳ ವೈಭವೀಕರಣಕ್ಕೆ ಪ್ರಾಧಾನ್ಯ ನೀಡತೊಡಗಿದರು. ಅಶ್ಲೀಲ ನೃತ್ಯ, ಸಂಭಾಷಣೆಗಳಿಗೂ ಕೊರತೆ ಇರಲಿಲ್ಲ. ವಿಸ್ತೃತ ಮಾರುಕಟ್ಟೆಯ ಬೆಂಬಲ ಇರುವ ಹಿಂದಿ, ತಮಿಳು, ತೆಲುಗು ಚಿತ್ರರಂಗದವರು ಪ್ರೇಕ್ಷಕರ ಮೇಲೆ ಹಿಡಿತ ಸಾಧಿಸಲು ಹಣದ ಹೊಳೆ ಹರಿಸಲು ಹಿಂಜರಿಯುತ್ತಿರಲಿಲ್ಲ. ಅವರನ್ನು ಅನುಸರಿಸಲು ಹೋದ ಕನ್ನಡ ಚಿತ್ರ ನಿರ್ಮಾಪಕರು ಕೈ ಸುಟ್ಟುಕೊಂಡರು.

ಕನ್ನಡೇತರ ಭಾಷೆಯಲ್ಲಿ ತಯಾರಾದ ಯಶಸ್ವಿ ಚಿತ್ರಗಳ ಕನ್ನಡ ಭಾಷಾಂತರಗಳ ಪುನರ್ ಸೃಷ್ಟಿಯು ಹೆಚ್ಚಾಗತೊಡಗಿತು. ಸಹಾಯಧನದ ಆಸೆಗಾಗಿ ಕೀಳುಮಟ್ಟದ ಚಿತ್ರಗಳ ಪುನರ್ ನಿರ್ಮಾಣದ ಪಿಡುಗು ಕಾಡತೊಡಗಿತು. ಹಾಗೆಯೇ ಸೃಜನಶೀಲತೆಗೂ

ಕಡಿವಾಣ ಬೀಳತೊಡಗಿದಾಗ ಪುನರ್ ನಿರ್ಮಾಣದ (ರೀಮೇಕ್) ಚಿತ್ರಗಳಿಗೆ ತೆರಿಗೆ ವಿನಾಯ್ತಿಯನ್ನು ಮತ್ತು ಸಹಾಯಧನ ನೀಡುವುದನ್ನು ನಿಲ್ಲಿಸಲಾಯಿತು.

ಟೆಲಿವಿಷನ್ ಅಕ್ರಮಣವನ್ನೆದುರಿಸಲು ಹುಟ್ಟಿಕೊಂಡ ಲೈಂಗಿಕ ಮತ್ತು ಹಿಂಸಾಚಾರ ಸಂಸ್ಕೃತಿಯ ವೈಭವೀಕರಣಕ್ಕೂ ಸಹಾಯಧನದ ಪುರಸ್ಕಾರ ನೀಡುವ ಬಗೆಗೆ ವಿರೋಧ ವ್ಯಕ್ತಪಟ್ಟಿತು. ಗುಣಾತ್ಮಕ ಚಿತ್ರಗಳನ್ನು ಮಾತ್ರ ಪುರಸ್ಕರಿಸಬೇಕೆಂಬ ಮಾತುಗಳು ಶಾಸನ ಸಭೆಗಳಲ್ಲಿ, ನಾನಾ ವೇದಿಕೆಗಳಲ್ಲಿ ಕೇಳಿಬರತೊಡಗಿದವು. ಸಹಾಯಧನ ನಿರಂತರ ಬೇಡ, ಅದಕ್ಕೂ ಕಾಲಮಿತಿ ಇರಬೇಕೆಂಬುವವರೂ ಹುಟ್ಟಿಕೊಂಡರು. ಮನರಂಜನೆ ತೆರಿಗೆ ಭಾರತದಲ್ಲೇ ಅತ್ಯಧಿಕ (ಶೇ.೧೧೦), ಅದರಿಂದ ಉದ್ಯಮದ ಬೆಳವಣಿಗೆಗೆ ಅಡಚಣೆ ಎಂದು ಚಿತ್ರೋದ್ಯಮದವರ ಕೊರಗು. ಮನರಂಜನೆಯ ಸಾಧನವಾದ ಚಿತ್ರಗಳನ್ನು ಪ್ರದರ್ಶಿಸುವ ಚಿತ್ರಮಂದಿರಗಳಿಗೆ ದುಬಾರಿ ವಿದ್ಯುತ್ ದರ ವಿಧಿಸುವುದು ಸಾಧುವೇ ಎಂದು ಪ್ರಶ್ನಿಸತೊಡಗಿದರು.

ಪತ್ರಕರ್ತ ಕೆ.ಎಸ್.ನಾರಾಯಣಸ್ವಾಮಿ, ನಿರ್ದೇಶಕ ಎನ್.ಲಕ್ಷ್ಮೀನಾರಾಯಣ್ ಮತ್ತು ಪ್ರದರ್ಶಕ ನಿರ್ಮಾತೃ ಭಕ್ತವತ್ಸಲ ಅವರ ನೇತೃತ್ವದಲ್ಲಿ ರೂಪುಗೊಂಡ ಮೂರು ಸಮಿತಿಗಳು ಸಬ್ಸಿಡಿ, ಪ್ರದರ್ಶನ ಮತ್ತು ಮೂಲ ಸೌಲಭ್ಯಗಳ ಬಗ್ಗೆ ಅಧ್ಯಯನ ಮಾಡಿ ಸಲ್ಲಿಸಿದ ವರದಿ ಕಡತದಲ್ಲಿಯೇ ಉಳಿಯಿತು.

ಚಿತ್ರೋದ್ಯಮದ ಪ್ರಚಲಿತ ಸಮಸ್ಯೆಗಳನ್ನು ಅಧ್ಯಯನಮಾಡಿ ವರದಿ ಸಲ್ಲಿಸಲು ಹಿರಿಯ ಪತ್ರಕರ್ತ ವಿ.ಎನ್.ಸುಬ್ಬರಾವ್ ಅಧ್ಯಕ್ಷತೆಯಲ್ಲಿ ಪ್ರಾತಿನಿಧಿಕವಾದ ಸಮಿತಿಯೊಂದನ್ನು ಸರ್ಕಾರ ರಚಿಸಿತು (೧೯೯೩).

ಈ ಸಮಿತಿ ಮುಂಬಯಿ, ಹೈದರಾಬಾದ್, ಚೆನ್ನೈ, ತಿರುವನಂತಪುರಗಳಿಗೆ ಭೇಟಿ ನೀಡಿ, ಅಲ್ಲಿನ ಉದ್ಯಮದ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿತು. ಸ್ಥಳೀಯ ಉದ್ಯಮಿಗಳನ್ನು, ಪತ್ರಕರ್ತರನ್ನು ಭೇಟಿಮಾಡಿ ಅಭಿಪ್ರಾಯ ಸಂಗ್ರಹ ಮಾಡಿತು. ಉದ್ಯಮದ ಪ್ರಮುಖ ಸಮಸ್ಯೆಯನ್ನು ಗುರುತಿಸಿ ಅದಕ್ಕೆ ಪರಿಹಾರೋಪಾಯಗಳನ್ನು ಸೂಚಿಸಿ ೧೯೯೪ರ ಮಾರ್ಚ್ ೧ರಂದು ವರದಿ ಸಲ್ಲಿಸಿತು. ಚಲನಚಿತ್ರ ನಿರ್ಮಾಣ, ಪ್ರದರ್ಶನ, ತೆರಿಗೆ ನೀತಿ, ಧನಸಹಾಯ ಯೋಜನೆಗಳಿಗೆ ಸಂಬಂಧಪಟ್ಟಂತೆ ಸಮಿತಿ ಹಲವಾರು ಶಿಫಾರಸುಗಳನ್ನು ಮಾಡಿತು. ಸರಕಾರ ಕೆಲವು ಶಿಫಾರಸುಗಳನ್ನು, ಮುಖ್ಯವಾಗಿ ಧನಸಹಾಯಕ್ಕೆ ಸಂಬಂಧಪಟ್ಟ ಶಿಫಾರಸುಗಳನ್ನು ಸುಧಾರಣೆಗಳೊಂದಿಗೆ ಜಾರಿಗೆ ತಂದಿತು.

'ಗುಣಾತ್ಮಕ ಚಿತ್ರಗಳಿಗೆ ಮಾತ್ರ ಸಹಾಯ ಧನ' ಇದು ೧೯೯೬ರ ಏಪ್ರಿಲ್ ೧ರಿಂದ ಜಾರಿಗೆ ಬಂದ ಸಹಾಯಧನ ನೀತಿಯ ಮೂಲ ಮಂತ್ರ.

ಕನ್ನಡ ಮತ್ತು ಕೊಂಕಣಿ, ತುಳು, ಕೊಡವ ಮತ್ತು ಲಂಬಾಣಿ ಈ ನಾಲ್ಕು ಉಪಭಾಷೆಗಳು ಸೇರಿದಂತೆ ೨೦ ಗುಣಾತ್ಮಕ ಚಿತ್ರಗಳಿಗೆ ಮಾತ್ರ ಸಹಾಯಧನ. ಕನ್ನಡಕ್ಕೆ ೧೦ ಲಕ್ಷ ಸಹಾಯಧನ, ಉಪಭಾಷೆಗಳಿಗೆ ೫ ಲಕ್ಷ ರೂಪಾಯಿ.

ಚಲನಚಿತ್ರ, ಸಂಗೀತ, ಕಲೆ, ಸಾಹಿತ್ಯ ಕ್ಷೇತ್ರದಲ್ಲಿ ಅಸಕ್ತಿ, ಅಭಿರುಚಿ ಉಳ್ಳ ಸರ್ಕಾರೇತರ ವ್ಯಕ್ತಿಯ ಅಧ್ಯಕ್ಷತೆಯಲ್ಲಿ ರಚಿತವಾಗುವ ಪರಿಣಿತರ ಸಮಿತಿಯು ಸಹಾಯಧನಕ್ಕಾಗಿ ಅರ್ಹವಾದ ಚಿತ್ರಗಳನ್ನು ಆಯ್ಕೆ ಮಾಡುತ್ತದೆ.

ಸೃಜನಶೀಲತೆಗೆ ಪ್ರಚೋದನೆ ನೀಡಲು ಸರಕಾರ ಇನ್ನೊಂದು ಯೋಜನೆ ರೂಪಿಸಿತು : ರಾಷ್ಟ್ರ ಮಟ್ಟದಲ್ಲಿ ಪ್ರಶಸ್ತಿ ಪಡೆದ ಕನ್ನಡದ ಹಾಗೂ ಕನ್ನಡದ ಪ್ರಾದೇಶಿಕ ಉಪಭಾಷೆಯ ಚಿತ್ರಗಳಿಗೆ, ಚಿತ್ರ ಕಲಾವಿದರಿಗೆ, ತಂತ್ರಜ್ಞರಿಗೆ ಅವರು ರಾಷ್ಟ್ರ ಪುರಸ್ಕಾರವಾಗಿ ಪಡೆದ ಹಣಕ್ಕೆ ಸಮ ಪ್ರಮಾಣದಲ್ಲಿ ನಗದು ಪುರಸ್ಕಾರ ನೀಡುವ ಯೋಜನೆ ೧೯೯೬ರ ಆರ್ಥಿಕ ವರ್ಷದಿಂದ ಜಾರಿಗೆ ಬಂದಿತು.

ರಾಷ್ಟ್ರ ಮಟ್ಟದಲ್ಲಿ ಪ್ರಶಸ್ತಿ ಪಡೆದ ಚಿತ್ರಗಳನ್ನು ಅನ್ಯಭಾಷೆಗಳಿಗೆ ಡಬ್ ಮಾಡಲು ಕರ್ನಾಟಕ ಸರಕಾರ ೬,೦೦೦ ರೂಪಾಯಿಗಳ ಸಹಾಯಧನ, ಹಾಗೆಯೇ ರಾಷ್ಟ್ರಮಟ್ಟದಲ್ಲಿ ಪುರಸ್ಕೃತವಾದ ಎಲ್ಲಾ ಭಾಷೆಯ ಚಿತ್ರಗಳಿಗೆ ಆರು ತಿಂಗಳ ಮಟ್ಟಿಗೆ ಮನರಂಜನೆ ತೆರಿಗೆ ವಿನಾಯಿತಿ ಸೌಲಭ್ಯ ನೀಡಲಿದೆ. ಈ ರೀತಿ ತೆರಿಗೆ ಸೌಲಭ್ಯ ನೀಡುವುದರಲ್ಲಿ ಕರ್ನಾಟಕ ರಾಜ್ಯವೇ ಪ್ರಥಮ.

ಪ್ರದರ್ಶನ ವಲಯ, ಮೂಲಭೂತ ಸೌಕರ್ಯ ಕಲ್ಪಿಸುವ ವಲಯಗಳಿಗೂ ಸರಕಾರ ಸಹಾಯಧನ ನೀಡುವ ಯೋಜನೆ ಜಾರಿಗೆ ತಂದಿತು. ಹೊಸ ಚಿತ್ರಮಂದಿರಗಳನ್ನು (ಬೆಂಗಳೂರು ಮಹಾನಗರ ಪ್ರದೇಶವನ್ನು ಹೊರತುಪಡಿಸಿ) ನಿರ್ಮಿಸಲು ಚಿತ್ರಮಂದಿರದ ನಿರ್ಮಾಣ ವೆಚ್ಚದಲ್ಲಿ ಶೇ.೧೦ರಷ್ಟು ಅಥವಾ ರೂ. ಐದು ಲಕ್ಷಕ್ಕೆ ಮೀರದಷ್ಟು ಸಹಾಯಧನ ನೀಡುವುದಾಗಿ ಪ್ರಕಟಿಸಿತು. ಮೂಲಭೂತ ಸೌಕರ್ಯ ಒದಗಿಸುವ ಇತರ ಚಿತ್ರ ಉದ್ಯಮಿಗಳಿಗೂ ಈ ಸಹಾಯಧನ ಯೋಜನೆ ಅನ್ವಯವಾಯಿತು. ಜೊತೆಗೆ ಮೂರು ವರ್ಷಗಳ ಕಾಲ ಈ ಚಿತ್ರಮಂದಿರಗಳಲ್ಲಿ ಪ್ರದರ್ಶಿತವಾಗುವ ಎಲ್ಲ ಚಿತ್ರಗಳಿಗೂ ಮನರಂಜನೆ ತೆರಿಗೆ ವಿನಾಯ್ತಿ ನೀಡಿ ಹೊಸ ಚಿತ್ರಮಂದಿರಗಳ ಆರ್ಥಿಕ ಸ್ಥಿರತೆಗೆ ಪೋಷಕವಾಯಿತು.

## ಚಿತ್ರಮಂದಿರಗಳ ಸಮಸ್ಯೆ

ಚಿತ್ರಮಂದಿರಗಳ ನಿರ್ಮಾಣಕ್ಕೆ ಉತ್ತೇಜನ ನೀಡಲು ಐದು ಲಕ್ಷ ರೂಪಾಯಿಗಳವರೆಗೆ ಸಹಾಯಧನವನ್ನು ನೀಡುವ ಉಪಕ್ರಮವನ್ನು ಉದ್ಯಮ ಸ್ವಾಗತಿಸಿತು. ಕರ್ನಾಟಕದಲ್ಲಿ ಸುಮಾರು ೧,೨೦೦ ಚಿತ್ರಮಂದಿರಗಳಿದ್ದವು. ಕನ್ನಡವಲ್ಲದೆ ಇಂಗ್ಲಿಷ್, ಹಿಂದಿ, ತಮಿಳು, ತೆಲುಗು ಚಿತ್ರಗಳೂ ಇವುಗಳಲ್ಲೇ ತೆರೆ ಕಾಣಬೇಕು. (ಆಂಧ್ರದಲ್ಲಿ ೨,೮೦೦, ತಮಿಳು ನಾಡಿನಲ್ಲಿ ೨,೪೦೦ ಚಿತ್ರಮಂದಿರಗಳು). ಅವುಗಳಲ್ಲಿ ೬೦೦ ಚಿತ್ರಮಂದಿರಗಳು ಖಾಯಂ ಚಿತ್ರಮಂದಿರಗಳು. ಉಳಿದವು ಸಂಚಾರಿ ಚಲನಚಿತ್ರಮಂದಿರಗಳ ವರ್ಗಕ್ಕೆ ಸೇರಿದವು. ಖಾಯಂ ಚಿತ್ರಮಂದಿರಗಳಲ್ಲಿ ೧೦೦ ಚಿತ್ರಮಂದಿರಗಳು ಬೆಂಗಳೂರಿನಲ್ಲಿಯೇ ಇದ್ದವು. ಇನ್ನುಳಿದ ೨೦೦ ಚಿತ್ರಮಂದಿರಗಳು ರಾಜ್ಯದ ಮಹಾನಗರಗಳಲ್ಲಿ, ಜಿಲ್ಲಾ ಕೇಂದ್ರಗಳಲ್ಲಿ. ಮಿಕ್ಕ ೩೦೦ ಚಿತ್ರಮಂದಿರಗಳು ರಾಜ್ಯದ ನಾನಾ ಪಟ್ಟಣಗಳಲ್ಲಿ. ಈ ಚಿತ್ರಮಂದಿರಗಳೆಲ್ಲಾ ವ್ಯಾಪಾರಿ ಚಲನಚಿತ್ರಗಳ ಅವಶ್ಯಕತೆಗೆ ಅನುಗುಣವಾಗಿ ನಿರ್ಮಿತವಾದವು. ಕಡಿಮೆ ವೆಚ್ಚದಲ್ಲಿ ಪ್ರಾಥಮಿಕ ಸೌಲಭ್ಯಗಳೆಲ್ಲಾ ಇರುವ ಕಿರು ಚಿತ್ರಮಂದಿರಗಳ ನಿರ್ಮಾಣಕ್ಕೆ ಆದ್ಯತೆ ನೀಡಬೇಕು. ಹಾಗಾದರೆ ಚಿತ್ರಮಂದಿರಗಳಲ್ಲಿ ವ್ಯಾಪಾರಿ ಚಲನಚಿತ್ರಗಳಿಗೆ ಮಾತ್ರ ಆದ್ಯತೆ ನೀಡುವ ಪ್ರವೃತ್ತಿ ಹೋಗುತ್ತದೆ. ಎಲ್ಲ ಬಗೆಯ ಚಿತ್ರಗಳ ಪ್ರದರ್ಶನಕ್ಕೆ ಸಮಾನಾವಕಾಶ ದೊರೆಯುವಂತಾಗುತ್ತದೆ. ರಾಷ್ಟ್ರ ಪ್ರಶಸ್ತಿ, ರಾಜ್ಯ ಪ್ರಶಸ್ತಿ ಪಡೆದು ಇನ್ನೂ ತೆರೆ ಕಾಣದೆ ಇರುವ 'ಗಂಗವ್ವ ಗಂಗಾಮಾಯಿ' (ಪ್ರಥಮ ಅತ್ಯುತ್ತಮ ಚಿತ್ರ, ೧೯೯೪-೯೫) ಮತ್ತು 'ಕ್ರೌರ್ಯ' (ದ್ವಿತೀಯ ಅತ್ಯುತ್ತಮ ಚಿತ್ರ, ೧೯೯೫-೯೬) ಇಂತಹ ಚಿತ್ರಗಳಿಗೆ ಮುಕ್ತಿ ಸಿಗುತ್ತದೆ. ಚಿತ್ರ ಮಂದಿರಗಳ ನಿರ್ಮಾಣಕ್ಕೆ ರಹದಾರಿ ಪಡೆಯಲು ಈಗಿನ ವ್ಯವಸ್ಥೆಯಲ್ಲಿ ಹರಸಾಹಸ ಪಡಬೇಕು. ಒಂದಲ್ಲ ಹತ್ತಾರು ಕಚೇರಿಗಳ ಬಾಗಿಲು ಕಾಯಬೇಕು. ಒಂದೆರಡು ತಿಂಗಳಲ್ಲಿ ಅಗುವ ಕೆಲಸವಲ್ಲ, ವರ್ಷಗಳೇ ಬೇಕು. ಸುರಕ್ಷತಾ ನಿಬಂಧನೆಗಳನ್ನು ಸಡಿಲಿಸಬೇಕೆಂದಿಲ್ಲ, ರಹದಾರಿ ನೀಡುವ ಕ್ರಮ ಸರಳವಾಗಬೇಕು. ಸುಮಾರು ೫೦೦-೬೦೦ ಜನ ಕೂಡಬಹುದಾದ ಜನತಾ ಚಿತ್ರಮಂದಿರಗಳಾದರೆ ಮಿತ ಬಂಡವಾಳದಲ್ಲಿ ನಿರ್ಮಾಣವಾದ ಚಿತ್ರಗಳು ಹಾಗೂ ಕಲಾತ್ಮಕ ಚಿತ್ರಗಳು ಆಸಕ್ತ ಪ್ರೇಕ್ಷಕರನ್ನು ತಲುಪಲು ಸಹಾಯಕವಾಗುತ್ತದೆ. ದುಬಾರಿ ಬಾಡಿಗೆ ತೆತ್ತು ಚಿತ್ರಗಳನ್ನು ಪ್ರದರ್ಶಿಸಬೇಕಾಗಿರುವ ಇಂದಿನ ಪರಿಸ್ಥಿತಿ ಬದಲಾಗಬೇಕೆಂದರೆ ಕನ್ನಡ ಚಿತ್ರಮಂದಿರಗಳ ಸಂಖ್ಯೆ ಬೆಳೆಯಬೇಕು.

ಆಂಧ್ರ, ತಮಿಳುನಾಡುಗಳು ಹೊಸ ಚಿತ್ರಮಂದಿರಗಳ ನಿರ್ಮಾಣಕ್ಕೆ ಆದ್ಯತೆ ಮೇಲೆ ಪ್ರೋತ್ಸಾಹ ನೀಡುತ್ತಿವೆ. ಅಂತೆಯೇ ಕರ್ನಾಟಕ ಚಲನಚಿತ್ರ ಅಭಿವೃದ್ಧಿ ನಿಗಮ ಹೊಸ ಚಿತ್ರಮಂದಿರಗಳ ನಿರ್ಮಾಣಕ್ಕೆ ಆದ್ಯತೆ ನೀಡಬೇಕು. ೨೦ ವರ್ಷಗಳ ಹಿಂದೆ ಅದು ಚಿತ್ರಮಂದಿರಗಳ ನಿರ್ಮಾಣಕ್ಕೆ ಹಣ ನೀಡಿ ಕೈ ಸುಟ್ಟುಕೊಂಡುದಕ್ಕೆ ಅದರ ಕಾರ್ಯನೀತಿಯಲ್ಲಿನ ದೋಷವೇ ಕಾರಣ.

ಕರ್ನಾಟಕದಲ್ಲಿ ಕನ್ನಡ ಸಿನಿಮಾ ಬೆಳೆಯಬೇಕಾದರೆ ನಿರ್ಮಾಣ ವಲಯದ ಅಭಿವೃದ್ಧಿಯೊಂದೇ ಸಾಲದು, ಪ್ರದರ್ಶನ ವಲಯವೂ ಬೆಳೆಯಬೇಕು. ಹೆಚ್ಚು ಹೆಚ್ಚು ಚಿತ್ರಮಂದಿರಗಳಾಗಬೇಕು. ಸಿನಿಮಾ ನೋಡುವುದು ಹೊರೆಯಾಗಬಾರದು.

ಜನಸಾಮಾನ್ಯರಿಗೆ ಅತ್ಯಲ್ಪ ವೆಚ್ಚದಲ್ಲಿ ದೊರೆಯುವ ಮನರಂಜನೆ ಸಿನಿಮಾ. ಅದರ ಮೇಲೆ ಮನರಂಜನೆ ತೆರಿಗೆಯ ಅಧಿಕ ಹೊರೆ ಬೇಡ ಎಂದು ಡಾ। ಶಿವರಾಮ ಕಾರಂತರ ಸಮಿತಿಯಿಂದ ಹಿಡಿದು ಇತ್ತೀಚಿನ ವಿ.ಎನ್.ಸುಬ್ಬರಾವ್ ಸಮಿತಿ ಕೂಡ ಪ್ರತಿಪಾದಿಸಿದೆ. ಮುಂದೆ ರಚಿತವಾಗಬಹುದಾದ ಸಮಿತಿಗಳೂ ಇದೇ ಶಿಫಾರಸ್ಸನ್ನು ಮಾಡುವುದು ಬೇಡ.

## ಪ್ರತಿಭಾ ಪುರಸ್ಕಾರ

ನೆರೆ ರಾಜ್ಯದಲ್ಲಿ ತಳ ಊರಿದ್ದ ಕನ್ನಡ ಚಿತ್ರೋದ್ಯಮ ಕನ್ನಡ ನಾಡಿನಲ್ಲಿ ವಲಸೆ ಬರಲೆಂದು ಸರಕಾರ ಸಹಾಯಧನ ಯೋಜನೆಯನ್ನು ಜಾರಿಗೆ ತಂದಿತು. ಅದೇ ವರ್ಷ (೧೯೬೭) ನಿರ್ದೇಶಕರು, ನಿರ್ಮಾತೃಗಳು, ಕಲಾವಿದರು, ತಂತ್ರಜ್ಞರಲ್ಲಿ ಸೃಜನಶೀಲತೆಯನ್ನು ಪ್ರಚೋದಿಸಲು ಹಾಗೂ ಸದಭಿರುಚಿಯ ಚಿತ್ರಗಳು ನಿರ್ಮಾಣವಾಗಲೆಂಬ ಆಶಯದೊಡನೆ ರಾಜ್ಯ ಪ್ರಶಸ್ತಿಯನ್ನು, ನಗದು ಪುರಸ್ಕಾರವನ್ನು

ನೀಡುತ್ತಾ ಬಂದಿವೆ. ಮೊದಲ ವರ್ಷ ಕೇವಲ ಅತ್ಯುತ್ತಮ ಚಿತ್ರಗಳಿಗಾಗಿ ಮೂರು ಪ್ರಶಸ್ತಿಗಳನ್ನು ನೀಡುವುದಾಗಿ ಪ್ರಕಟಿಸಿತು. ಈಗ ಒಟ್ಟು ೨೫ ಪ್ರಶಸ್ತಿಗಳನ್ನು ನೀಡಲಾಗುತ್ತಿದೆ. ಸದಭಿರುಚಿಯ ಉತ್ತಮ ತಾಂತ್ರಿಕ ಗುಣಮಟ್ಟದ ಚಿತ್ರಗಳ ತಯಾರಿಕೆಗೆ ಪ್ರೇರಣೆ ನೀಡಿರುವ ಈ ಪ್ರಶಸ್ತಿಗಳು ಉದ್ಯಮವನ್ನು ಸ್ಥಿರಗೊಳಿಸುವುದರಲ್ಲಿ ಸಹಾಯಕವಾಗಿವೆ.

ಕನ್ನಡ ಚಿತ್ರೋದ್ಯಮದ ಸರ್ವತೋಮುಖ ಅಭಿವೃದ್ಧಿಗೆ ಕಾರಣಕರ್ತರಾದ ಒಬ್ಬ ಮಹನೀಯರನ್ನು ಗುರುತಿಸಿ ಅವರಿಗೆ ಡಾ। ರಾಜಕುಮಾರ್ ಪ್ರಶಸ್ತಿಯನ್ನು ನೀಡಲಾಗುತ್ತದೆ (ಮೊದಲು ಗುಬ್ಬಿವೀರಣ್ಣ ಪ್ರಶಸ್ತಿ ಎಂದು ಕರೆಯಲಾಗುತ್ತಿತ್ತು). ಪ್ರಶಸ್ತಿ ಆರಂಭವಾದ ವರ್ಷ (೧೯೯೨-೯೩) ಈ ಪ್ರಶಸ್ತಿ ರಾಜಕುಮಾರ್ ಅವರಿಗೆ ನೀಡಲಾಯಿತು. (ಈಗ ಗುಬ್ಬಿ ವೀರಣ್ಣ ಪ್ರಶಸ್ತಿ ರಂಗಭೂಮಿಗೆ ಮೀಸಲಾಗಿದೆ.) ಆದರೆ ಚಲನಚಿತ್ರದ ಸರ್ವಾಂಗೀಣ ಅಭಿವೃದ್ಧಿಯಲ್ಲಿ ತೊಡಗಿಕೊಂಡವರಿಗೆ ಡಾ।ರಾಜಕುಮಾರ್ ಪ್ರಶಸ್ತಿ ಕೊಡಲಾಗುತ್ತಿದೆ (೧ ಲಕ್ಷ ರೂ.).

## ಸಹಕಾರ ಹಸ್ತ

ಕನ್ನಡ ಸಿನಿಮಾದ ಆರಂಭದ ದಿನಗಳಿಂದಲೂ ಕನ್ನಡ ನಾಡಿನ ಪತ್ರಿಕೆಗಳು ಈ ಉದ್ಯಮದ ಚಟುವಟಿಕೆಗಳನ್ನು ಆಗಿಂದಾಗ್ಗೆ ದಾಖಲು ಮಾಡಿವೆ. ಶತಮಾನದ ಆದಿ ಭಾಗದಲ್ಲಿ ಮೈಸೂರಿನಿಂದ ಪ್ರಕಟವಾಗುತ್ತಿದ್ದ 'ವೃತ್ತಾಂತ ಪತ್ರಿಕೆ'ಯಲ್ಲಿಯೂ ಸಿನಿಮಾಕ್ಕೆ ಸಂಬಂಧಪಟ್ಟ ಸುದ್ದಿಗಳು ಅಚ್ಚಾಗಿವೆ. ದ.ಕೃ.ಭಾರದ್ವಾಜರ ಹಾಗೂ ಅ.ನ.ಕೃಷ್ಣರಾಯರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ರಂಗಭೂಮಿ' ಸಾಂಪ್ರದಾಯಿಕ ಪ್ರದರ್ಶನ ಕಲೆಗಳಿಗೆ ಮೀಸಲಾದ ಪತ್ರಿಕೆ. ಅದರಲ್ಲೂ ಸಹ ಸಿನಿಮಾಕ್ಕೆ ಸಂಬಂಧಪಟ್ಟಂತೆ ವೈಚಾರಿಕ ಲೇಖನಗಳು ಪ್ರಕಟವಾಗುತ್ತಿದ್ದವು. ಶಬ್ದ ಚಿತ್ರಗಳು ಬಂದಮೇಲೆ ಚಲನಚಿತ್ರಕ್ಕೆ ಮೀಸಲಾದ ಕನ್ನಡ ಮಾಸಪತ್ರಿಕೆಗಳು ಹುಟ್ಟಿಕೊಂಡವು. ಚಿತ್ರಗಳ ವಿತರಕರು, ನಿರ್ಮಾಪಕರು, ತಮ್ಮ ಜಾಹಿರಾತು ಏಜೆಂಟರ ಮೂಲಕ ಕಳುಹಿಸಿದ ಸುದ್ದಿಗಳು, ಪಡಿಯಚ್ಚುಗಳು, ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ಇಂಗ್ಲಿಷ್‌ನಲ್ಲಿ ಪ್ರಕಟವಾದ ಸುದ್ದಿಗಳು, ಹೊರನಾಡಿನಿಂದ ಬಂದ ಹಂಚಿಕೆದಾರರ ಹಾಗೂ ಪ್ರದರ್ಶಕರ ಹಿತಾಸಕ್ತಿ ಇರುವ ಚಲನಚಿತ್ರಗಳಿಗೆ ಸಂಬಂಧಪಟ್ಟವು ಎಂಬುದು ಗಮನೀಯ. ಪತ್ರಿಕೆಯ ಕಾರ್ಯಾಲಯಕ್ಕೆ ಬಂದು ಸಂಪಾದಕರನ್ನು ಭೇಟಿಯಾದ ತಾರೆಯರ, ನಿರ್ಮಾತೃ, ನಿರ್ದೇಶಕರ ಕುರಿತಾದ ಬರಹಗಳಿಗೆ ಹೆಚ್ಚಿನ ಪ್ರಾಮುಖ್ಯ ಇರುತ್ತಿತ್ತು.

ಹೊಸ ದಿನಪತ್ರಿಕೆಗಳು ಹುಟ್ಟಿದವು. ಮುದ್ರಣ ತಂತ್ರಜ್ಞಾನದಲ್ಲಿ ಸುಧಾರಣೆಗಳಾದವು. ಹೊಸ ಪೀಳಿಗೆಯ ಪತ್ರಕರ್ತರ ಆಗಮನವಾಯಿತು. ಪತ್ರಿಕೆಗಳು ಹೆಚ್ಚಾದಂತೆ ಸ್ಪರ್ಧೆಯೂ ಹೆಚ್ಚಿತು. ಪತ್ರಿಕೆಗಳ ಆಕರ್ಷಣೆ ಹೆಚ್ಚಿಸಲು ಹೊಸ ಅಂಕಣಗಳು ಹುಟ್ಟಿದವು. ಹಾಗೆಯೇ ದಿನಪತ್ರಿಕೆಗಳಲ್ಲಿ ಸಿನಿಮಾ ಅಂಕಣವೂ ಕಾಣಿಸಿಕೊಂಡಿತು. ಹೊಸ ಪೀಳಿಗೆಯ ಪತ್ರಕರ್ತರು ಸಿನಿಮಾ ಮಂದಿ ತಮ್ಮ ಮೇಜಿನ ಬಳಿಗೆ ಬರಲು ಕಾಯಲಿಲ್ಲ. ಅವರು ಇದ್ದಲ್ಲಿಗೇ ಹೋದರು. ಮನರಂಜನೆಗಾಗಿ ಅನಿವಾರ್ಯವಾಗಿ ಅನ್ಯಭಾಷಾ ಚಿತ್ರಗಳನ್ನೇ ನೋಡುತ್ತಿದ್ದ ಕನ್ನಡ ಜನರಿಗೆ ಕನ್ನಡ ಚಿತ್ರಗಳ ಬಗೆಗೆ ಅರಿವು ಮೂಡಿಸುವಲ್ಲಿ ನೆರವಾದರು. ಕನ್ನಡ ಚಿತ್ರಗಳ ಬಗೆಗೆ ರಚನಾತ್ಮಕ ವಿಮರ್ಶೆಗಳನ್ನು ಬರೆದು ಚಿತ್ರೋದ್ಯಮವನ್ನು ಪ್ರೋತ್ಸಾಹಿಸಿದರು. ಕನ್ನಡ ಚಿತ್ರೋದ್ಯಮದ ಸರ್ವತೋಮುಖ ಬೆಳವಣಿಗೆಯಾಗಬೇಕೆಂದರೆ ಉದ್ಯಮ ಕನ್ನಡ ನಾಡಿನಲ್ಲಿ ಸ್ಥಿರವಾಗಿ ನೆಲೆಸಬೇಕೆಂಬುದನ್ನು ಮನಗಂಡ ಪತ್ರಕರ್ತರು ಆ ದಿಸೆಯಲ್ಲಿ ಜನಾಭಿಪ್ರಾಯ ರೂಪಿಸಲು ಕಂಕಣಬದ್ಧರಾದರು.

'ಡಬ್ಬಿಂಗ್'ಚಿತ್ರಗಳ ಮಾರಿಬೇನೆ ಕನ್ನಡ ಚಿತ್ರೋದ್ಯಮವನ್ನು ಕಬಳಿಸಲೆತ್ನಿಸಿದಾಗ ಅದರ ವಿರುದ್ಧ ಸಮರ ಸಾರಿದವರು ಕನ್ನಡ ಪತ್ರಕರ್ತರು. ಕನ್ನಡ ಚಿತ್ರೋದ್ಯಮ ಮದರಾಸಿನಿಂದ ಕರ್ನಾಟಕಕ್ಕೆ ವಲಸೆ ಬರುವಂತೆ ಪ್ರೇರೇಪಿಸಲು 'ಸಬ್ಸಿಡಿ' ನೀಡುವುದರ ಅಗತ್ಯವನ್ನು ಸರಕಾರಕ್ಕೆ ಮನದಟ್ಟು ಮಾಡಿಕೊಡುವುದರಲ್ಲಿ ಕನ್ನಡ ಪತ್ರಿಕೆಗಳ ಪಾತ್ರ ಹಿರಿದು. ವರದಾ ನದಿ ಪ್ರವಾಹ ಸಂತ್ರಸ್ತರ ಪರಿಹಾರ ನಿಧಿ ಸಂಗ್ರಹ (೧೯೬೧) ಯೋಜನೆ ಪ್ರಜಾವಾಣಿ ಗುಂಪಿನ ಪತ್ರಿಕೆಗಳ ಕಲ್ಪನೆಯಾದರೂ ಅವರು ಕನ್ನಡ ನಾಡಿನ ಎಲ್ಲ ಪತ್ರಿಕೆಗಳ, ಪತ್ರಕರ್ತರ, ಚಿತ್ರೋದ್ಯಮದ ಹಾಗೂ ಸರಕಾರದ ನೆರವಿನಿಂದ ಸಂಘಟಿಸಿದ 'ಚಲನಚಿತ್ರ ತಾರೆಯರ ನಿಧಿ ಸಂಗ್ರಹ ಪ್ರವಾಸ' ಕನ್ನಡ ಜನರ ಮತ್ತು ತಾರೆಯರ ನಡುವಣ ಸ್ನೇಹ ಸೇತುವಾಯಿತು. ತಾರೆಯರ ವರ್ಚಸ್ಸು ಬೆಳೆಯಿತು. ಸೊರಗಿ ಹೋಗಿದ್ದ ಕನ್ನಡ ಚಿತ್ರೋದ್ಯಮಕ್ಕೆ ನವಚೇತನ ನೀಡಿತು.

ಕನ್ನಡ ಶಿಕ್ಷಣ ಮಾಧ್ಯಮ ಕುರಿತಂತೆ ಆರಂಭವಾದ ಗೋಕಾಕ್ ಚಳವಳಿಗೆ ರಾಜಕುಮಾರ್ ನೇತೃತ್ವದಲ್ಲಿ ಕನ್ನಡ ಚಿತ್ರ ಕಲಾವಿದರೂ ಸೇರಿ ನಡೆಸಿದ ಆಂದೋಲನ ಕನ್ನಡ ಭಾಷಾಭಿವೃದ್ಧಿಗೆ ನೆರವಾದುದಲ್ಲದೆ ಕನ್ನಡ ಚಿತ್ರೋದ್ಯಮದ ಸ್ಥಿರತೆಗೆ ಅದು ಬುನಾದಿಯಾಯಿತು. ಈ ಭಾಷಾ ಚಳವಳಿಗೆ ಬೆಂಬಲವಾಗಿ ನಿಂತ ಪತ್ರಿಕೆಗಳ ಪಾತ್ರ ಚಿತ್ರೋದ್ಯಮದ ವರ್ಚಸ್ಸಿನ ವೃದ್ಧಿಗೆ ನೆರವಾಯಿತು ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಕನ್ನಡ ಚಿತ್ರೋದ್ಯಮದ ಬೆಳವಣಿಗೆಯಲ್ಲಿ ಕನ್ನಡ ಪತ್ರಿಕೆಗಳ ಪಾತ್ರ ಹಿರಿದು. ದುರ್ದಿನಗಳಲ್ಲಿ ಚಿತ್ರೋದ್ಯಮದ ಕೈ ಹಿಡಿದು ನಡೆಸಿದರು, ಮಾರ್ಗದರ್ಶನ ಮಾಡಿದರು. ಸದಭಿರುಚಿಯ ಚಿತ್ರಗಳ ನಿರ್ಮಾಣಕ್ಕೆ ಪ್ರೋತ್ಸಾಹ ನೀಡಿದರು. ಸಾಧನೆಗಳನ್ನು ಗುರುತಿಸಿ, ತಮ್ಮ ಕೈನಿಂದ ಹಣ ವೆಚ್ಚಮಾಡಿ ಸನ್ಮಾನಿಸಿದರು. ಜಾಗೃತಿ ಮೂಡಿಸಲು ವಿಚಾರ ಸಂಕಿರಣ ನಡೆಸಿದರು. ಉದ್ಭವವಾದ ಸಮಸ್ಯೆಗಳಿಗೆ ಸರಕಾರ ಸ್ಪಂದಿಸಲು ನೆರವಾದರು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಭಾರತದಲ್ಲೇ ವಿಶಿಷ್ಟವಾದುದು. ಭಾರತದ ಎಲ್ಲ ಭಾಷೆಯ ಚಿತ್ರಗಳಿಗೂ ಕನ್ನಡ ನಾಡಿನಲ್ಲಿ ಮಾರುಕಟ್ಟೆಯಿದೆ. ಕನ್ನಡ ಭಾಷಾ ಚಿತ್ರಗಳ ಹಿತಾಸಕ್ತಿಯನ್ನು ಕಾಪಾಡುವುದರ ಜೊತೆಗೆ ವಿವಿಧ ಭಾಷೆಗಳ ಚಿತ್ರಗಳನ್ನು ಬೆಳೆಸುವ ಹೊಣೆಗಾರಿಕೆ ಕರ್ನಾಟಕದ ಚಲನಚಿತ್ರ ಮಂಡಳಿಯ ಮೇಲಿದೆ. ಚಲನಚಿತ್ರ ಮಂಡಳಿಯಲ್ಲಿನ ಸದಸ್ಯತ್ವದ ಸ್ವರೂಪವೂ ವೈವಿಧ್ಯಮಯ. ಚಿತ್ರ ನಿರ್ಮಾಪಕರು, ಹಂಚಿಕೆದಾರರು, ಪ್ರದರ್ಶಕರು, ಸ್ಟುಡಿಯೋ ಮಾಲೀಕರು, ಚಿತ್ರೋದ್ಯಮಕ್ಕೆ ಅಗತ್ಯವಾದ ಇತರ ಸೌಲಭ್ಯ ಕಲ್ಪಿಸಿಕೊಡುವ ಉದ್ಯಮಗಳವರು ಇದರ ಸದಸ್ಯರು. ಹೀಗೆ ವೈವಿಧ್ಯಮಯ ಹಿತಾಸಕ್ತಿಗಳನ್ನು ಕಾಪಾಡುವ ಗುರುತರವಾದ ಹೊಣೆ ವಾಣಿಜ್ಯ ಮಂಡಳಿಯ ಮೇಲಿದೆ. ಅದನ್ನು ಪ್ರಜಾಪ್ರಭುತ್ವ ರೀತಿಯಲ್ಲಿ ನಿರ್ವಹಿಸುತ್ತಿದೆ. ವಿವಿಧ ಹಿತಾಸಕ್ತಿಯುಳ್ಳ ಪರಸ್ಪರರ ನಡುವೆ ಉದ್ಭವಿಸುವ ವಿವಾದಗಳೂ ನ್ಯಾಯಾಲಯದ ಮೆಟ್ಟಿಲು ಹತ್ತುವುದಿಲ್ಲ. ಎಲ್ಲ ವಿವಾದಗಳು ಪರಸ್ಪರ ಸಮಾಲೋಚನೆ, ಸಂಧಾನಗಳ ಮೂಲಕ ಮಂಡಳಿಯ ನೇತೃತ್ವದಲ್ಲಿ ಬಗೆಹರಿಯುತ್ತವೆ. ಈ ಬಗೆಯ ಸ್ವಯಂ ನಿಯಂತ್ರಣ ಯೋಜನೆ ಕರ್ನಾಟಕಕ್ಕೇ ವಿಶಿಷ್ಟವಾದುದು. ೧೯೭೩ರಲ್ಲಿ ಈ ಯೋಜನೆ ಜಾರಿಗೆ ಬಂದಂದಿನಿಂದ ವಿವಾದಗಳೆಲ್ಲ ತೃಪ್ತಿಕರವಾಗಿ ಇತ್ಯರ್ಥವಾಗಿ ಉದ್ಯಮದಲ್ಲಿ ಮಧುರ ಬಾಂಧವ್ಯ ಬೆಳೆದಿದೆ.

ಉದ್ಯಮದಲ್ಲಿನ ಎಲ್ಲ ಅಂಗಗಳೂ ಒಂದೇ ವೇದಿಕೆಯಲ್ಲಿರುವ ಕಾರಣ ಮಂಡಳಿ ಉದ್ಯಮದ ಮುಖವಾಣಿಯಾಗಿ ವ್ಯವಹರಿಸಲು ಶಕ್ಯವಾಗಿದೆ. ಸರಕಾರದಿಂದ ಉದ್ಯಮದ ಪ್ರಗತಿಗೆ ಅಗತ್ಯವಾದ ಸವಲತ್ತುಗಳನ್ನು ಗಳಿಸಲು ಸಹಾಯಕವಾಗಿದೆ. ಕನ್ನಡನಾಡಿನಲ್ಲಿ ಚಿತ್ರೋದ್ಯಮದ ಬೆಳವಣಿಗೆಗೆ ಅಗತ್ಯವಾಗಿದ್ದ ಸಹಾಯಧನ ಯೋಜನೆ, ರಾಜ್ಯ ಪ್ರಶಸ್ತಿ, ತೆರಿಗೆ ವಿನಾಯಿತಿ ಯೋಜನೆಗಳನ್ನು ಜಾರಿಗೆ ತರುವಲ್ಲಿ ಈ ಮಂಡಳಿ ಪ್ರಮುಖ ಪಾತ್ರ ವಹಿಸಿದೆ. ಬೆಂಗಳೂರಿನಲ್ಲಿ ಸೆನ್ಸಾರ್ ಮಂಡಳಿಯ ಪ್ರಾದೇಶಿಕ ಕಛೇರಿ ಆರಂಭವಾಗಲು ವಾಣಿಜ್ಯ ಮಂಡಳಿಯ ಪರಿಶ್ರಮವೇ ಕಾರಣ.

ಭಾರತದಲ್ಲೇ ಅತ್ಯಂತ ಹೆಚ್ಚಿನಿಸಿರುವ ಮನರಂಜನಾ ತೆರಿಗೆಯ ದರವನ್ನು ಇಳಿಸಲು ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಥಿಯೇಟರುಗಳ ನಿರ್ಮಾಣವಾಗುವಂತಾಗಲು ನಿಯಮಗಳ ಸರಳೀಕರಣಕ್ಕಾಗಿ ಸರಕಾರದ ಮನವೊಲಿಸಲು ವಾಣಿಜ್ಯ ಮಂಡಳಿ ಸತತವಾಗಿ ಪ್ರಯತ್ನಿಸಿತು.

ಪ್ರಾದೇಶಿಕ ಚಿತ್ರಗಳನ್ನು ವಿದೇಶಿ ಮಾರುಕಟ್ಟೆಗೆ ಮಾರಾಟಮಾಡಲು ಮೊಟ್ಟ ಮೊದಲಿಗೆ ಪ್ರಯತ್ನಿಸಿದ್ದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ. ದೆಹಲಿಯಲ್ಲಿ ನಡೆದ ಅಂತರರಾಷ್ಟ್ರೀಯ ಚಲನ ಚಿತ್ರೋತ್ಸವದಲ್ಲಿ (೧೯೭೭) ಕನ್ನಡ ಚಿತ್ರಗಳ ಬಗ್ಗೆ, ವಿದೇಶಿ ಪ್ರತಿನಿಧಿಗಳಿಗೆ ಮಾಹಿತಿ ಒದಗಿಸಲು ಮಳಿಗೆಯೊಂದನ್ನು ಆರಂಭಿಸಿತು. ಇದು ಭಾರತದ ಇತರ ಭಾಷಾ ವಾಣಿಜ್ಯ ಮಂಡಳಿಗಳಿಗೆ ಮೇಲ್ಪಂಕ್ತಿಯಾಯಿತು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಬಹುಭಾಷಾ ಚಿತ್ರಗಳ ಮಂಡಳಿಯಾದರೂ ಅದು ಸ್ಥಳೀಯ ಭಾಷಾ ಉದ್ಯಮಕ್ಕೆ ಆದ್ಯತೆ ನೀಡಿದೆ. ಅವರ ಪ್ರಗತಿಗೆ ಕಂಕಣ ಬದ್ಧವಾಗಿದೆ.

## ಸರಕಾರದ ಸಹಕಾರ

ಕನ್ನಡ ಚಿತ್ರೋದ್ಯಮದ ಬಗೆಗೆ ಕರ್ನಾಟಕ ಸರಕಾರ ಆರಂಭದಿಂದಲೂ ಆಸಕ್ತಿ ವಹಿಸಿದೆ. ಸಹಾಯಧನ ಯೋಜನೆ, ರಾಜ್ಯದಲ್ಲಿ ತಯಾರಾದ ಚಲನಚಿತ್ರಗಳಿಗೆ ಮನರಂಜನೆ ತೆರಿಗೆ ವಿನಾಯಿತಿ, ರಾಜ್ಯ ಪುರಸ್ಕಾರ ಇವೇ ಮೊದಲಾದ ಉತ್ತೇಜನಕರ

ಕನ್ನಡ ಚಿತ್ರೋದ್ಯಮಕ್ಕೆ ಸ್ಥಿರತೆ ಘನತೆ ತಂದ ತ್ರಿಮೂರ್ತಿಗಳು



ಗುಬ್ಬಿ ವೀರಣ್ಣ



ಶಂಕರ್‌ಸಿಂಗ್



ರಾಜಕುಮಾರ್

ಕಾರ್ಯಕ್ರಮಗಳು ಕನ್ನಡ ಚಿತ್ರೋದ್ಯಮದ ಪುರೋಭಿವೃದ್ಧಿಗೆ ಕಾರಣವಾಗಿವೆ. ಆರಂಭದಲ್ಲಿ ಅದು ನೀಡಿದ ಉದಾರವಾದ ನೆರವು ಚಿತ್ರೋದ್ಯಮದ ಸ್ಥಿರತೆಗೆ ನೆರವಾಯಿತು. ಇಂದು ಗುಣಾತ್ಮಕ ಚಿತ್ರಗಳ ನಿರ್ಮಾಣಕ್ಕೆ ಪ್ರಚೋದನೆ ನೀಡುವಂತ ಸಹಾಯಧನ ಯೋಜನೆ ರೂಪಿಸಿದೆ.

ಹಿತರಕ್ಷಣೆಗೆ ಕಂಕಣಬದ್ಧವಾದ ಪತ್ರಿಕೋದ್ಯಮ, ಪುರೋಭಿವೃದ್ಧಿ ಬಯಸುವ ಚಲನಚಿತ್ರ ವಾಣಿಜ್ಯ ಮಂಡಳಿ, ಉತ್ಕರ್ಷಕ್ಕೆ ನೆರವು ನೀಡಲು ಸಿದ್ಧವಿರುವ ಸರಕಾರ, ಕನ್ನಡ ಚಿತ್ರೋದ್ಯಮದ ಸರ್ವಾಂಗೀಣ ಅಭಿವೃದ್ಧಿಗೆ ಅಗತ್ಯವಾದ ಭೂಮಿಕೆ, ಭಾರತದ ಬೇರೆ ಯಾವ ಭಾಷಾ ಚಿತ್ರಗಳಿಗೂ ಲಭ್ಯವಿಲ್ಲದಂತಹ ವಾತಾವರಣ. ಇದು ಕನ್ನಡ ಚಿತ್ರೋದ್ಯಮದ ಸುಕೃತ.

## ಉದ್ಯಮದ ವಿಕಾಸ

ಕನ್ನಡ ಚಲನಚಿತ್ರೋದ್ಯಮಕ್ಕೆ ಆಧಾರ ಶಿಲೆ ಇಟ್ಟವರು ಗುಬ್ಬಿ ವೀರಣ್ಣನವರು. ಸ್ಟುಡಿಯೋ ಸ್ಥಾಪಿಸಿ, ಮೂಕಚಿತ್ರಗಳನ್ನು ನಿರ್ಮಿಸಿದರು; ರಂಗಭೂಮಿಯಲ್ಲಿ ಗಳಿಸಿದ್ದನ್ನು ಚಿತ್ರರಂಗದಲ್ಲಿ ಕಳೆದರು. ಆದರೂ ಧೃತಿಗೆಡದೆ ಆರಂಭದ ದಿನಗಳಲ್ಲಿ ಉತ್ತಮ ಕನ್ನಡ ವಾಕ್ಚಿತ್ರಗಳನ್ನು ನಿರ್ಮಿಸಿದರು, ಚಿತ್ರಮಂದಿರಗಳನ್ನು ಕಟ್ಟಿದರು, ಹಲವಾರು ನಟರನ್ನು ಚಿತ್ರರಂಗಕ್ಕೆ ಪರಿಚಯಿಸಿದರು. ಅವರು ಆರಂಭಿಸಿದ ಚಲನಚಿತ್ರ ನಿರ್ಮಾಣ, ವಿತರಣೆಗಾಗಿ ಸ್ಥಾಪಿಸಿದ ಲಿಮಿಟೆಡ್ ಕಂಪನಿ ಇಂದಿಗೂ ಚಿರಂಜೀವಿ.

ಕನ್ನಡ ಚಿತ್ರಗಳ ತಯಾರಿಕೆಯೇ ಇಲ್ಲದಂತಹ ಪರಿಸ್ಥಿತಿ. ಮಾರುಕಟ್ಟೆಯಲ್ಲಿ ಸಮೃದ್ಧವಾಗಿ ಲಭ್ಯವಿದ್ದ ಹಿಂದಿ, ತಮಿಳು, ತೆಲುಗು ಚಿತ್ರಗಳನ್ನೇ ಕನ್ನಡ ಪ್ರೇಕ್ಷಕ ನೋಡಬೇಕಾದ ಅನಿವಾರ್ಯ ಸನ್ನಿವೇಶ. ಸತತವಾಗಿ ಐಂಕ್ಕೂ ಹೆಚ್ಚು ಚಿತ್ರಗಳನ್ನು ನಿರ್ಮಿಸಿ ಕನ್ನಡ ಪ್ರೇಕ್ಷಕರನ್ನು ಹಿಡಿದಿಟ್ಟವರು, ಅಭಿರುಚಿ ಬೆಳೆಸಿದವರು ಮಹಾತ್ಮಾ ಪಿಕ್ಚರ್ಸ್‌ನ ಶಂಕರ್‌ಸಿಂಗ್. ಕನ್ನಡ ಚಿತ್ರೋದ್ಯಮಕ್ಕೆ ಸ್ಥಿರತೆಯನ್ನು ತಂದುಕೊಟ್ಟರು.

ಕನ್ನಡದ ಸಂಸ್ಕೃತಿಯ ಕೇಂದ್ರವಾಗಿ ಬೆಳೆದವರು ರಾಜಕುಮಾರ್. ತಮ್ಮ ಈ ವರ್ಚಸ್ಸಿಗೆ ಚ್ಯುತಿ ಬಾರದಂಥ ಪಾತ್ರಗಳನ್ನೇ ನಿರ್ವಹಿಸಿದರು. ಮುಂದೆ ಅವರ ಕುಟುಂಬದ ಸಂಸ್ಥೆಗಳು ನಿರ್ಮಿಸಿದ ಚಿತ್ರಗಳು ಉತ್ತಮ ನಿರ್ಮಾಣ ಅಂಶಗಳಿಂದ ಕೂಡಿದ್ದು, ಸುಕುಟುಂಬ ಪರಿವಾರಸಮೇತ ಮುಜುಗರವಿಲ್ಲದೆ ನೋಡಬಹುದಾದ ಚಿತ್ರಗಳು. ರಾಜಕುಮಾರ್ ಕನ್ನಡ ಚಿತ್ರಗಳಿಗೆ ಘನತೆಯನ್ನು ತಂದಿತ್ತರು.

ಹೊಸ ಚಿಂತನೆಯ ಹರಿಕಾರರಾಗಿ ಬಂದ ಪುಟ್ಟಣ್ಣ ಕಣಗಾಲ್, ಸಿದ್ಧಲಿಂಗಯ್ಯ, ದೊರೆ ಭಗವಾನ್, ಕೆ.ವಿ.ಜಯರಾಂ, ಎಂ.ಆರ್.ವಿಠಲ್ ಇವರುಗಳು ಜನಪ್ರಿಯ ಅಂಶಗಳನ್ನು ಹಾಗೂ ಚಿತ್ರಮಾಧ್ಯಮದ ಸಾಧ್ಯತೆಯನ್ನು ಬಳಸಿ, ಕನ್ನಡ ಚಿತ್ರಗಳ ಪ್ರೇಕ್ಷಣೀಯತೆ ಹೆಚ್ಚಿಸಲು ಕಾರಣರಾದರು.

ಲಕ್ಷ್ಮೀನಾರಾಯಣ್, ಪಟ್ಟಾಭಿರಾಮರೆಡ್ಡಿ, ಗಿರೀಶ್ ಕಾಸರವಳ್ಳಿ, ಲಂಕೇಶ್, ನಾಗಾಭರಣ, ಬಿ.ವಿ.ಕಾರಂತ್, ಗಿರೀಶ್ ಕಾರ್ನಾಡ್, ಎಂ.ಎಸ್.ಸತ್ಯು, ಪ್ರೇಮಾಕಾರಂತ್ ನಿರ್ಮಿಸಿದ ಸಾಮಾಜಿಕ ಕಾಳಜಿಯ, ರಾಜಕೀಯ ಹಿನ್ನೆಲೆಯ ವಿಶಿಷ್ಟ ಚಿತ್ರಗಳು ಕನ್ನಡ ಚಿತ್ರರಂಗಕ್ಕೆ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಾನ್ಯತೆಯನ್ನು ತಂದುಕೊಟ್ಟಿವು.

ಕನ್ನಡ ವಾಣಿಜ್ಯ ಚಲನಚಿತ್ರಗಳ ಬೆಳವಣಿಗೆಯೂ ಗಣನೀಯ. ಸೋದರ ಭಾಷಾ ಚಿತ್ರಗಳೊಡನೆ ಸ್ಪರ್ಧೆಗೆ ಇಳಿದಿರುವ ಚಿತ್ರೋದ್ಯಮ, ನೆರೆಯ ಭಾಷಾ ಚಿತ್ರಗಳ ಪ್ರಭಾವಲಯದಲ್ಲಿ ಸಿಕ್ಕಿಬಿದಿರುವುದೂ ಸ್ಪಷ್ಟವಾಗುತ್ತದೆ.

## ಕನ್ನಡ ಚಿತ್ರಗಳ ನಿರ್ಮಾಣ ವೆಚ್ಚ

೧೯೩೪-೪೦ರ ಅವಧಿಯಲ್ಲಿ ಕನ್ನಡ ಚಿತ್ರಕ್ಕಾಗಿ ಮಾಡುತ್ತಿದ್ದ ವೆಚ್ಚ ೨೦,೦೦೦ದಿಂದ ೪೦,೦೦೦ ರೂಪಾಯಿ. ೧೯೪೧-೫೦ರಲ್ಲಿ ೫೦,೦೦೦ದಿಂದ ೭೫,೦೦೦ ರೂಪಾಯಿ. ೧೯೫೧-೬೦ರಲ್ಲಿ ಒಂದು ಲಕ್ಷದಿಂದ ಎರಡು ಲಕ್ಷ ರೂಪಾಯಿ. ೧೯೯೧-೨೦೦೦ದ ವೇಳೆಗೆ ೪೫ ಲಕ್ಷದಿಂದ ಒಂದು ಕೋಟಿ ರೂಪಾಯಿಗೂ ಮೇಲ್ಪಟ್ಟು.

ವಾಹಿನಿ ಅವರ 'ಮಾಯಾಬಜಾರ್' ಕನ್ನಡಕ್ಕೆ ಡಬ್ ಆದ ಚಿತ್ರ. ತೆಲುಗು, ಕನ್ನಡ ಅವತರಣಿಕೆ ಎರಡೂ ಕರ್ನಾಟಕದಲ್ಲಿ ತೆರೆಕಂಡವು. ಕನ್ನಡ ರೂಪಾಂತರ ಸುಮಾರು ಏಳು ಲಕ್ಷ ರೂಪಾಯಿ ಲಾಭ ಗಳಿಸಿತೆಂದು ವಿತರಕರಾಗಿದ್ದ ಕೆ.ವಿ.ಗುಪ್ತ ಹೇಳುತ್ತಾರೆ.

೨೦೦೦ ವರ್ಷಾಂತ್ಯದಲ್ಲಿ ತೆರೆಕಂಡ 'ಯಜಮಾನ' ಚಿತ್ರ ಬಾಕ್ಸ್ ಆಫೀಸ್ ಗಳಿಕೆಯಲ್ಲಿ ಹೊಸ ದಾಖಲೆ ಸ್ಥಾಪಿಸಿದ್ದು ವರ್ಷ ಮುಗಿದರೂ ಅದರ ಜನಪ್ರಿಯತೆ ಕುಗ್ಗಿರಲಿಲ್ಲ. ವರ್ಷಾಂತ್ಯದ ವೇಳೆಗೇ ಅದು ಹೂಡಿದ ಬಂಡವಾಳದ ಮೂರರಷ್ಟು (ಸುಮಾರು ೩ ಕೋಟಿ) ಲಾಭ ಗಳಿಸಿತ್ತು. ಗಳಿಕೆಯಲ್ಲಿ ಹೊಸ ದಾಖಲೆಯನ್ನು ಸ್ಥಾಪಿಸುವ ಆಶಾಭಾವನೆ ಉದ್ಯಮ ವಲಯಗಳು ವ್ಯಕ್ತಪಡಿಸಿದ್ದವು. 'ಯಜಮಾನ' ರೀಮೇಕ್ ಚಿತ್ರ. ನೆರೆಯ ಭಾಷೆಯ ಯಶಸ್ವಿ ಚಿತ್ರಗಳ ಪುನರ್ ಸೃಷ್ಟಿಕಾರ್ಯ ಹೆಚ್ಚುತ್ತಿರುವುದು ಗಮನೀಯ. 'ಯಜಮಾನ' ನಮ್ಮ ಮಾರುಕಟ್ಟೆಯ ವ್ಯಾಪ್ತಿ ವಿಸ್ತರಿಸಿದೆ ಎಂಬುದಕ್ಕೆ ದಿಕ್ಸೂಚಿ.

೧೯೯೧-೨೦೦೦ ದಶಕದ ಚಿತ್ರಗಳ ಅವಲೋಕನ ಮಾಡಿದರೆ, ಕನ್ನಡ ಜನಸಾಮಾನ್ಯರ ಒಲವು, ಅಭಿರುಚಿ, ವಾಣಿಜ್ಯ ಚಿತ್ರಗಳ ನಿರ್ಮಾಪಕರ ಆಸಕ್ತಿ, ನಿಲುವು ಎತ್ತ ಸಾಗುತ್ತಿವೆ ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ನಿದರ್ಶನವಾಗಿ 'ಓಂ'(೧೯೯೫), 'ಜನುಮದ ಜೋಡಿ' (೧೯೯೬), 'ಉಪೇಂದ್ರ' (೧೯೯೯), 'ಎ.ಕೆ.47' (೧೯೯೯), 'ಪ್ರೀತ್ಸೇ' (೨೦೦೦) ಮತ್ತು 'ಯಜಮಾನ' (೨೦೦೦) ಚಿತ್ರಗಳನ್ನು ನೋಡಬಹುದು.

'ಜನುಮದ ಜೋಡಿ' ಜನಪದ ಸಂಸ್ಕೃತಿಯ ಅಂಶಗಳನ್ನು ಒಳಗೊಂಡ ಸಂಗೀತ ಪ್ರಧಾನ, ಪ್ರೇಮಕಥಾನಕ, ಉತ್ತಮ ತಾಂತ್ರಿಕ ಗುಣವುಳ್ಳ ಚಿತ್ರ. 'ಓಂ' ಹಿಂಸೆಯ ಉತ್ಪ್ರೇಕ್ಷೆ ಮತ್ತು ವೈಭವೀಕರಣ. 'ಎ.ಕೆ.47' ಭಯೋತ್ಪಾದನೆ ಸಾಮಾನ್ಯ ಜನರ ಜೀವನದ ಮೇಲೆ ಬೀರುವ ಭೀಕರ ಪರಿಣಾಮಗಳನ್ನು ಹಿಂಸೆಯ ನೆರವಿನಿಂದಲೇ ಪ್ರಭಾವಶಾಲಿಯಾಗಿ ನಿರೂಪಿಸಿದ ಚಿತ್ರ. 'ಪ್ರೀತ್ಸೇ' ವಿಕೃತ ಮನಸ್ಸಿನ ಅತಿ ಭಾವುಕತೆಯೇ ಮುಖ್ಯರಂಜನಾಂಶವುಳ್ಳ, ಸಂಗೀತ-ನೃತ್ಯಗಳ ಅಬ್ಬರವಿರುವ ಚಿತ್ರ. 'ಯಜಮಾನ' ಹೆಸರೇ ಸೂಚಿಸುವಂತೆ ಕೌಟುಂಬಿಕ ಘಟನಾವಳಿಗಳಿಂದ ಕೂಡಿದ, ಉತ್ತಮ ಅಭಿನಯ ಹಾಗೂ ನಿರ್ಮಾಣ ಗುಣಗಳಿಂದ ಕೂಡಿದ ಚಿತ್ರ. 'ಮುನ್ನುಡಿ' 'ಮತದಾನ' ಈ ಚಿತ್ರಗಳು ನಮ್ಮ ನಿರ್ಮಾಪಕರ ಸಾಮಾಜಿಕ ಬದ್ಧತೆಗೆ ನಿದರ್ಶನ.

ಈ ಚಿತ್ರಗಳ ಯಶಸ್ಸು, ಮುಂದಿನ ನಿರ್ಮಾಣಗಳಿಗೆ ಪ್ರೇರಕಶಕ್ತಿಯಾದರೆ ಆಶ್ಚರ್ಯವಿಲ್ಲ.

ಕನ್ನಡಿಗರು, ಸಿನಿಮಾ ನೋಡಿ ಸಿನಿಮಾಗಳನ್ನು ಮಾಡಲು ಕಲಿತರು. ನಾಟಕಗಳನ್ನು ನೋಡಿ ಅವುಗಳನ್ನೇ ಸಿನಿಮಾ ಮಾಡಿದರು. ಅನ್ಯಭಾಷಾ ಚಿತ್ರಗಳನ್ನು ನೋಡಿ ಅನುಕರಣೆ ಮಾಡಿದರು. ಆದರೆ ಬದುಕನ್ನು ನೋಡಿ ಚಿತ್ರಗಳನ್ನು ಮಾಡುವುದನ್ನು ಕಲಿಯಲಿಲ್ಲ. ಇತ್ತೀಚಿಗಂತೂ ಕನ್ನಡ ಚಿತ್ರಗಳಲ್ಲಿನ ಅತ್ಯಂತ ದೊಡ್ಡ ಕೊರತೆಯೆಂದರೆ ಮಣ್ಣಿನ ವಾಸನೆ.




# ಮಾತಿಲ್ಲದ ಚಿತ್ರಮಂಟಪ

ಈ ಶತಮಾನದ ಪವಾಡ ವಿಶ್ವ ವಿಸ್ಮಯ,
ಆಳೆತ್ತರದ ಜೀವಂತ ಚಿತ್ರಗಳ ಪ್ರದರ್ಶನ
ಲ್ಯುಮಿಯೆರ್ ಸಹೋದರರ
'ಸಿನಿಮಾಟೊಗ್ರಾಫಿ'.
ಪ್ರದರ್ಶನ ಸ್ಥಳ :
ವಾಟ್ಸನ್ ಹೋಟೆಲಿನಲ್ಲಿ.
ಇಂದು ರಾತ್ರಿ (೭ನೇ ತಾರೀಖು)
**ಪ್ರದರ್ಶನದ ವಿವರ ಕೆಳಗಿನಂತಿದೆ :**
(೧) ಸಿನಿಮಾಟೊಗ್ರಾಫಿ ಪರಿಚಯ.
(೨) ರೈಲಿನ ಆಗಮನ.
(೩) ಸಮುದ್ರ ಸ್ನಾನ.
(೪) ಕಟ್ಟಡ ಉರುಳಿಸುವುದು.
(೫) ಕಾರ್ಖಾನೆಯಿಂದ ನಿರ್ಗಮನ.
(೬) ರಮಣಿಯರ-ಯೋಧರ ವಾಹನ ವಿಹಾರ.
ಮನರಂಜನೆಯ ಸಮಯ : ಸಂಜೆ ೬, ೭, ರಾತ್ರಿ ೯ ಮತ್ತು
೧೦ ಗಂಟೆಗೆ.
**ಪ್ರವೇಶ ಒಂದು ರೂಪಾಯಿ**

**೧೮೯೬** ರ ಜುಲೈ ೭ ಮುಂಬಯಿ 'ಟೈಂಸ್ ಆಫ್ ಇಂಡಿಯಾ' ಪತ್ರಿಕೆಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಪ್ರಕಟವಾದ ಜಾಹಿರಾತು ಭಾರತದಲ್ಲಿ ಚಲನಚಿತ್ರ ಉದ್ಯಮ ಕಾಲಿಟ್ಟಿರುವುದನ್ನು ಅಧಿಕೃತವಾಗಿ ದಾಖಲಿಸಿತು.

ಚಲನಚಿತ್ರವನ್ನು ಭಾರತಕ್ಕೆ ಪರಿಚಯಿಸಲೆಂದು ಬಂದ ಲ್ಯುಮಿಯೆರ್ ಸಂಸ್ಥೆಯ ಪ್ರತಿನಿಧಿ ೧೮೯೬ರ ಜುಲೈ ೧೪ರಿಂದ ಈ ಚಲನಚಿತ್ರಗಳ ಪ್ರದರ್ಶನವನ್ನು ಮುಂಬಯಿನ ನಾವೆಲ್ಟಿ ಥಿಯೇಟರಿನಲ್ಲಿ ವ್ಯವಸ್ಥೆಗೊಳಿಸಿದ. ಚಲನಚಿತ್ರಗಳನ್ನು ನೋಡಿ ಜನ ಮೆಚ್ಚಿದರು. ಜನರ ಆಕರ್ಷಣೆ ಹೆಚ್ಚಿಸಲು ಪ್ರದರ್ಶನವ ಕಾರ್ಯಕ್ರಮಗಳೂ ಬದಲಾದವು. ಘೋಷಾ ಸ್ತ್ರೀಯರಿಗಾಗಿ ಪ್ರತ್ಯೇಕ ಆಸನ ವ್ಯವಸ್ಥೆಯೂ ಏರ್ಪಾಡಾಯಿತು.

ಲ್ಯುಮಿಯೆರ್ ಸಂಸ್ಥೆಯ 'ಸಿನಿಮಾಟೊಗ್ರಾಫಿ' ಪ್ರದರ್ಶನವನ್ನು ಹಿಂಬಾಲಿಸಿ ಪಾಶ್ಚಿಮಾತ್ಯ ದೇಶಗಳಲ್ಲಿ ರೂಪುಗೊಂಡ ಇತರ ಚಲನಚಿತ್ರಗ್ರಾಹಿ ಹಾಗೂ ಪ್ರದರ್ಶಕ ಯಂತ್ರಗಳು ಬಂದವು. ಹೊಸ ತಂತ್ರಜ್ಞಾನಕ್ಕೆ ಜನರಿಂದ ದೊರೆತ ಉತ್ಸಾಹದಾಯಕ ಪ್ರತಿಕ್ರಿಯೆ ಅನೇಕ ಭಾರತೀಯ ಉದ್ಯಮಶೀಲರನ್ನು ಆಕರ್ಷಿಸಿತು. ಆರಂಭದಲ್ಲಿ ಸಂಚಾರಿ ಸಿನಿಮಾಗಳು, ಅನಂತರ ಪಟ್ಟಣಗಳಲ್ಲಿ ಖಾಯಂ ಪ್ರದರ್ಶನ ಮಂದಿರಗಳೂ ಆರಂಭವಾದವು. ಹಾಗೆಯೇ ನಿರ್ಮಾಣ ಚಟುವಟಿಕೆಗಳು ಬೆಳೆದವು. ಕಲ್ಕತ್ತೆಯಲ್ಲಿ ತಯಾರಾದ 'ಫ್ಲವರ್ ಆಫ್ ಪರ್ಶಿಯಾ' ಕಿರುಚಿತ್ರ ಕಲ್ಕತ್ತೆಯ ಸ್ಟಾರ್ ಚಿತ್ರಮಂದಿರದಲ್ಲಿ ೧೮೯೮ರ ಫೆಬ್ರವರಿ ೯ರಂದು ತೆರೆ ಕಂಡಿತು.

ಕಲ್ಕತ್ತೆಯ ಹೀರಾಲಾಲ್ ಸೇನ್ ಮತ್ತು ಆತನ ಸೋದರ ಮೋತಿಲಾಲ್ ಸೇನ್ ಲಂಡನ್ನಿನಿಂದ 'ಬಯಾಸ್ಕೋಪ್ ಸಿನಿಮಾಟೊಗ್ರಾಫ್' ಯಂತ್ರ ಆಮದು ಮಾಡಿಕೊಂಡರು. ಕಲ್ಕತ್ತೆಯ 'ಕ್ಲಾಸಿಕ್ ಥಿಯೇಟರ್' ರಂಗಮಂದಿರದಲ್ಲಿ ಆರಂಭದಲ್ಲಿ ಆಮದು ಮಾಡಿದ ಚಲನಚಿತ್ರಗಳನ್ನು ಪ್ರದರ್ಶಿಸಿದರು. ಅನಂತರ ರಾಯಲ್ ಬಯಾಸ್ಕೋಪ್ ಕಂಪನಿ ಸ್ಥಾಪಿಸಿ ಒರಿಸ್ಸಾ, ಬಿಹಾರ, ಬಂಗಾಳದಲ್ಲಿ ಚಲನಚಿತ್ರಗಳ ಪ್ರದರ್ಶನಕ್ಕೆ ವ್ಯವಸ್ಥೆ ಮಾಡಿದರು.

ಮುಂಬಯಿನ ಹರಿಶ್ಚಂದ್ರ ಸಖಾರಾಮ್ ಭಾಟ್‌ವಡೇಕರ್ (ಸಾವೇದಾದಾ) ಇಂಗ್ಲೆಂಡಿನಿಂದ ಕ್ಯಾಮರಾ ಆಮದು ಮಾಡಿಕೊಂಡು ಆಗಿನ ಕಾಲದ ಪ್ರಸಿದ್ಧ ಕುಸ್ತಿ ಪಟುಗಳಾಗಿದ್ದ ಪುಂಡಲೀಕ ದಾದಾ ಮತ್ತು ಕೃಷ್ಣಾಸ್ವಾಮಿ ಅವರ ಕುಸ್ತಿ ಪಂದ್ಯ, ಮಂಗನಿಗೆ ಸರ್ಕಸ್ ಶಿಕ್ಷಣ (೧೯೦೦) ಎರಡು ಕಿರುಚಿತ್ರಗಳನ್ನು ಚಿತ್ರಿಸಿದರು. ಇವು ಭಾರತದ ಪ್ರಥಮ ದೇಶಿ ಕಿರುಚಿತ್ರಗಳಾದವು. ರ್‍ಯಾಂಗ್ಲರ್ ಆರ್.ಪಿ.ಪರಾಂಜಪೆ ಅವರ ಸ್ವದೇಶಾಗಮನವನ್ನು (೧೯೦೧) ಸಾಕ್ಷ್ಯ ಚಿತ್ರ ಸಿದ್ಧಪಡಿಸಿ ಪ್ರದರ್ಶಿಸಿದರು. ಇದೇ ಸಮಯದಲ್ಲಿ ಹೀರಾಲಾಲ್ ಸೇನ್ ಕಲ್ಕತ್ತೆಯ ಕ್ಲಾಸಿಕ್ ಥಿಯೇಟರ್‌ನಲ್ಲಿ ಪ್ರದರ್ಶನವಾಗುತ್ತಿದ್ದ ನಾಟಕಗಳನ್ನು ರಂಗದ ಮೇಲೆ ಅಭಿನಯಿಸುತ್ತಿರುವ ಕಾಲದಲ್ಲೇ ಚಿತ್ರಿಸಿ ಅನಂತರ ಅವುಗಳನ್ನು ಅದೇ ಚಿತ್ರ ಮಂದಿರದಲ್ಲಿ ಪ್ರದರ್ಶಿಸಿದರು (೧೯೦೧).

ಜೆ.ಎಫ್.ಮದನ್ ಫ್ರಾನ್ಸಿನ ಪಾಥೆ ಕಂಪೆನಿಯಿಂದ ಉಪಕರಣಗಳನ್ನು ಆಮದು ಮಾಡಿಕೊಂಡು ಕಲ್ಕತ್ತೆಯ ಮೈದಾನದಲ್ಲಿ 'ಬಯಾಸ್ಕೋಪ್ ಸಿನಿಮಾ' ಎಂಬ ಟೆಂಟ್ ಸಿನಿಮಾ ಆರಂಭಿಸಿದರು (೧೯೦೨). ಹೀರಾಲಾಲ್ ಸೇನ್ ಅಂದಿನ ಖ್ಯಾತ ನಾಟಕಕಾರ ಅಮರಾನಾಥ ದತ್ತ ಅವರ ಬೆಂಬಲದೊಂದಿಗೆ 'ಬಂಕಿಮ್ ಚಂದರ್ ರೆ ಸೀತಾರಾಮ್', 'ಅಲಿಬಾಬಾ', 'ಭ್ರಮರ್', 'ಬುದ್ಧದೇವ' ಮೊದಲಾದ ನಾಟಕಗಳನ್ನು ಚಿತ್ರಿಸಿದರು. ಈ ನಾಟಕಗಳಲ್ಲಿ ಅಮರದತ್, ಎನ್.ಸಿ.ಬಸು, ಕುಸುಮಕುಮಾರಿ ಮೊದಲಾದ ಖ್ಯಾತ ನಟರು ಹಾಗೂ ಕ್ಲಾಸಿಕ್ ಥಿಯೇಟರ್‌ನಲ್ಲಿ ಪಾತ್ರವಹಿಸುತ್ತಿದ್ದ ಇತರ ನಟರು ಭಾಗವಹಿಸಿದ್ದರು. ನಾಟಕದ ಈ ಸಾಕ್ಷ್ಯಚಿತ್ರಗಳು ಕ್ಲಾಸಿಕ್ ಥಿಯೇಟರ್‌ನಲ್ಲಿ ಪ್ರದರ್ಶಿತವಾದವು. ಅವು ಅತ್ಯಂತ ಜನಪ್ರಿಯವೂ ಆದವು. ಸೇನ್ ಅವರು

NEW ADVERTISEMENTS.

THE MARVEL OF THE CENTURY.
THE WONDER OF THE WORLD.
LIVING PHOTOGRAPHIC PICTURES
IN
LIFE-SIZED REPRODUCTIONS
BY
Messrs. LUMIERE BROTHERS.
CINEMATOGRAPHE.
A FEW EXHIBITIONS WILL BE GIVEN
AT
WATSON'S HOTEL
TO-NIGHT (7TH instant).
PROGRAMME will be as under:
1. Entry of Cinematographe.
2. Arrival of a Train.
3. The Sea Bath.
4. A Demolition
5. Leaving the Factory
6. Ladies and Soldiers on Wheels.
The Entertainment will take place at 6, 7, 9, and 10 p.m.
ADMISSION ONE RUPEE.

(ಚಿತ್ರ ೧) ಭಾರತದ ಚಲನಚಿತ್ರ ಪ್ರದರ್ಶನದ ಪ್ರಪ್ರಥಮ ಜಾಹಿರಾತು. ಮುಂಬೈನ ಟೈಂಸ್ ಆಫ್ ಇಂಡಿಯಾ ಪತ್ರಿಕೆಯ ೧೮೯೬ರ ಜುಲೈ ೭ರ ಸಂಚಿಕೆಯಲ್ಲಿ ಪ್ರಕಟವಾಯಿತು.

‘ಜಬಾಕುಸುಮ್ ಹೇರ್ ಆಯಿಲ್’ ಮತ್ತು ಎಡ್ವರ್ಡ್ ಮಲೇರಿಯಾ ರೋಗಾಪಹಾರಿ ಔಷಧದ ಜಾಹಿರಾತು ಚಿತ್ರಗಳನ್ನು ತಯಾರಿಸಿದರು. ಪ್ರಾಯಶಃ ಇದು ಪ್ರಥಮ ಜಾಹೀರಾತು ಚಿತ್ರ (೧೯೦೩).

ಮುಂಬಯಿನಲ್ಲಿ ಮಣೇಕ್ ಡಿ ಸೆಟ್ನಾ ಟೂರಿಂಗ್ ಸಿನಿಮಾ ಕಂಪನಿ ಹೆಸರಿನಲ್ಲಿ ಮೈದಾನದಲ್ಲಿ ಸಂಚಾರಿ ಸಿನಿಮಾ ಪ್ರದರ್ಶನ ವ್ಯವಸ್ಥೆಗೊಳಿಸಿದ್ದರು. ಅಲ್ಲಿ ಪ್ರದರ್ಶಿತವಾದ ‘ಲೈಫ್ ಆಫ್ ಕ್ರೈಸ್ಟ್’ ಚಿತ್ರ ಮುಂಬಯಿನಲ್ಲಿ ಜನಪ್ರಿಯವಾಯಿತು (೧೯೦೪).

ಬಂಗಾಳ ವಿಭಜನೆ ವಿರುದ್ಧ ರಾಜಕಾರಣಿ ಸುರೇಂದ್ರನಾಥ್ ಸೇನ್ ಸಂಘಟಿಸಿದ ಪ್ರತಿಭಟನಾ ಚಳವಳಿಯನ್ನು ಜ್ಯೋತಿಷ್ ಸರಕಾರ್ ದಾಖಲಿಸಿದರು. ಇದು ಭಾರತದ ಪ್ರಥಮ ರಾಜಕೀಯ ಸಾಕ್ಷ್ಯಚಿತ್ರ(೧೯೦೫).

ಜೆ.ಎಫ್.ಮದನ್ ಕಲ್ಕತ್ತೆಯಲ್ಲಿ ನಿರ್ಮಿಸಿದ ಎಲ್ಫಿನ್‌ಸ್ಟನ್ ಪಿಕ್ಚರ್ ಪ್ಯಾಲೆಸ್ ಭಾರತದಲ್ಲಿ ಭಾರತೀಯರಿಂದಲೇ ನಿರ್ಮಿತವಾದ ಮೊದಲ ಚಿತ್ರಮಂದಿರ (೧೯೦೭). ಮದನ್ ದೆಹಲಿಯಲ್ಲೂ ಎಲ್ಫಿನ್‌ಸ್ಟನ್ ಪಿಕ್ಚರ್ ಪ್ಯಾಲೆಸ್ ನಿರ್ಮಿಸಿದರು (೧೯೧೩). ಮುಂದೆ ೧೯೩೧ರ ವೇಳೆಗೆ ಅವರ ಹತೋಟಿಯಲ್ಲಿದ್ದ ಚಿತ್ರಮಂದಿರಗಳ ಸಂಖ್ಯೆ ೧೨೭.

ನಾನಾಭಾಯಿ ಗೋವಿಂದಚಿತ್ರೆ ಮತ್ತು ಪುರುಷೋತ್ತಮ್ ರಾಜಾರಾಮ್ ಟಿಪ್ನಿಸ್ ಇವರಿಬ್ಬರು ಜಾನ್ಸನ್ ಎಂಬ ವಿದೇಶಿ ಛಾಯಾಚಿತ್ರಗಾರನ ನೆರವು ಪಡೆದು ರಾಮಚಂದ್ರ ತೋರ್ಣೆ ನಿರ್ದೇಶನದಲ್ಲಿ ಎಂಟು ಸಾವಿರ ಅಡಿ ಉದ್ದದ ‘ಪುಂಡಲೀಕ’ ಚಿತ್ರ ನಿರ್ಮಿಸಿದರು. ಶ್ರೀಪಾದ ಸಂಗೀತ ಮಂಡಲಿ ಎಂಬ ವೃತ್ತಿಪರ ಸಂಸ್ಥೆ ಅಭಿನಯಿಸುತ್ತಿದ್ದ ‘ಪುಂಡಲೀಕ’ ನಾಟಕದ ತದ್ರೂಪವಾದ ಈ ಚಿತ್ರ, ಕಾರೊನೇಷನ್ ಚಿತ್ರಮಂದಿರದಲ್ಲಿ ೧೯೧೨ರ ಮೇ ೧೮ರಂದು ತೆರೆ ಕಂಡಿತು.

೧೯೧೩ರ ಮೇ ೩ - ದಾದಾ ಸಾಹೇಬ್ ಫಾಲ್ಕೆ ಅವರ ‘ರಾಜಾ ಹರಿಶ್ಚಂದ್ರ’ ಕಾರೋನೇಷನ್ ಸಿನಿಮಾದಲ್ಲಿ ತೆರೆ ಕಂಡಿತು. ಭಾರತ ಕಥಾಚಿತ್ರಗಳ ತಯಾರಿಕೆಯ ಯುಗದ ಆರಂಭ. ‘ರಾಜಾ ಹರಿಶ್ಚಂದ್ರ’ (ವಿವರಗಳಿಗೆ ನೋಡಿ, ಪುಟ ೮) ಕ್ಕೆ ದೊರೆತ ಯಶಸ್ಸು ಹಲವಾರು ಸಾಹಸಿ ಉದ್ಯಮಿಗಳಿಗೆ ಪ್ರೇರಣೆ ನೀಡಿತು. ಚಿತ್ರ ತಯಾರಿಕೆ ಹುಚ್ಚು ಸರ್ವವ್ಯಾಪಿಯಾಯಿತು.

ಭಾರತೀಯ ಪ್ರೇಕ್ಷಕರ ಅಭಿರುಚಿಯ ಮೇಲೆ ಹಾಗೂ ದೇಶೀಯ ಚಿತ್ರ ತಯಾರಕರ ಮೇಲೆ ಅಮೆರಿಕಾದ ಚಿತ್ರಗಳು ದಟ್ಟ ಪ್ರಭಾವ ಬೀರಿದವು. ಫಾಲ್ಕೆಯವರ ‘ರಾಜಾ ಹರಿಶ್ಚಂದ್ರ’ ತೆರೆಕಂಡ ನಂತರ ಮಹಾರಾಷ್ಟ್ರದ ನಾಸಿಕ್, ಕೊಲ್ಹಾಪುರ, ಪುಣೆ, ಮುಂಬಯಿಗಳಲ್ಲಿ, ಕಲ್ಕತ್ತಾ, ಮದ್ರಾಸ್, ಬೆಂಗಳೂರುಗಳಲ್ಲಿ ಹಲವಾರು ಸಂಸ್ಥೆಗಳು ಚಿತ್ರ ತಯಾರಿಕೆಯಲ್ಲಿ ತೊಡಗಿದವು. ಅವುಗಳಲ್ಲಿ ಹೆಚ್ಚಿನವು ಮೊದಲನೆ ಮಹಾಯುದ್ಧಾನಂತರದ ದಿನಗಳಲ್ಲೇ ಆರಂಭವಾದವು.

ಧುಂಡಿರಾಜ ಗೋವಿಂದಫಾಲ್ಕೆ ಮುಂಬಯಿನಲ್ಲಿ ‘ರಾಜಾ ಹರಿಶ್ಚಂದ್ರ’ ಚಿತ್ರಿಸಿದ ಮೇಲೆ ನಾಸಿಕ್‌ಗೆ ತೆರಳಿ ಅಲ್ಲಿ ಸ್ಟುಡಿಯೋ ಆರಂಭಿಸಿದರು. ‘ಸತ್ಯವಾನ್ ಸಾವಿತ್ರಿ’, ‘ಭಸ್ಮಾಸುರ ಮೋಹಿನಿ’(೧೯೩೦),‘ಲಂಕಾದಹನ’ಚಿತ್ರಗಳನ್ನು ನಿರ್ಮಿಸಿದರು. ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಉತ್ತಮ ಚಿತ್ರಗಳನ್ನು ನಿರ್ಮಿಸುವುದು ಅವರ ಹಂಬಲ. ಅಗತ್ಯವಾದ ಹಣವನ್ನು ಕ್ರೋಡೀಕರಿಸಲು ಕೆಲವು ಮಂದಿ ಕೈಗಾರಿಕೋದ್ಯಮಿಗಳನ್ನು ಪಾಲುಗಾರರನ್ನಾಗಿ ಸೇರಿಸಿಕೊಂಡು ‘ಹಿಂದೂಸ್ಥಾನ್ ಫಿಲಂ ಕಂಪನಿ’ ಸ್ಥಾಪಿಸಿದರು. ಸ್ಟುಡಿಯೋ ಕೆಲಸಗಾರರೆಲ್ಲ ಅವಿಭಕ್ತ ಕುಟುಂಬದವರಂತೆ ನಡೆದುಕೊಳ್ಳುತ್ತಿದ್ದರು

ಫಾಲ್ಕೆಯವರು ಹುಟ್ಟು ಹಾಕಿದ ಹಿಂದೂಸ್ಥಾನ್ ಫಿಲಂ ಕಂಪನಿಯ ಕೊಡುಗೆ ೯೫ ಚಿತ್ರಗಳು ಮತ್ತು ೨೬ ಕಿರು ಚಿತ್ರಗಳು. ಹಿಂದೂಸ್ಥಾನ್ ಫಿಲಂ ಕಂಪನಿ ಮೂಕಿ ಯುಗದ ಆರಂಭದಿಂದ ಶಬ್ದಚಿತ್ರಗಳ ತಯಾರಿಕೆ ಆರಂಭವಾಗುವವರೆಗೆ ಅಸ್ತಿತ್ವದಲ್ಲಿತ್ತು. ಅವರ ಕೊನೆಯ ಚಿತ್ರ ‘ಸೇತು ಬಂಧನ್’(೧೯೩೨). ಅದಕ್ಕೆ ಚಿತ್ರಣಾನಂತರ ಶಬ್ದ ಜೋಡಣೆ ಮಾಡಲಾಗಿತ್ತು.

ಬಾಬೂರಾವ್ ಪೆಯಿಂಟರ್ ಅವರು ಸಂಘಟಿಸಿದ ಕೊಲ್ಹಾಪುರದ ‘ಮಹಾರಾಷ್ಟ್ರ ಫಿಲಂ ಕಂಪನಿ’ (೧೯೧೮) ಮರಾಠಿ ಮತ್ತು ಹಿಂದಿ ಸಿನಿಮಾ ಕ್ಷೇತ್ರದ ದಿಗ್ಗಜರಿಗೆ ಜನ್ಮ ನೀಡಿದ ಸಂಸ್ಥೆ. ಶಾಂತಾರಾಂ, ಫತೇಲಾಲ್, ದಾಮ್ಲೆ ಮೊದಲಾದ ಖ್ಯಾತನಾಮರೆಲ್ಲ ಬಾಬೂರಾವ್ ಪೆಯಿಂಟರ್ ಮಾರ್ಗದರ್ಶನದಲ್ಲಿ ಬೆಳೆದವರು. ‘ಸೈರಂಧ್ರಿ’, ‘ಸಾವ್ಕಾರಿಪಾಶ’, ‘ಸಿಂಹಗಡ’ ಮೊದಲಾದ ಸ್ಮರಣೀಯ ಚಿತ್ರಗಳು ಸೇರಿದಂತೆ ೨೫ ಚಿತ್ರಗಳು ಈ ಸಂಸ್ಥೆಯಿಂದ ಹೊರಬಂದವು.

ದ್ವಾರಕಾದಾಸ್ ಸಂಪತ್ ಅವರ ‘ಕೊಹಿನೂರ್ ಫಿಲಂ ಕಂಪನಿ’ (೧೯೧೯), ಜುಬೇದಿಯಾ, ಫತ್ಮಾ, ಚಂದೂಲಾಲ್ ಷಾ, ನಂದಲಾಲ್ ಜಸ್ವಂತ್ ಲಾಲ್, ಎಂ.ಭವನಾನಿ ಇವರನ್ನು ಬೆಳೆಸಿದ ಸಂಸ್ಥೆ. ‘ಟೆಲಿಫೋನ್ ಗರ್ಲ್’, ‘ಗುಣಸುಂದರಿ’, ‘ಸಿನಿಮಾ ಕ್ವೀನ್’, ‘ಕಾಲಾ ನಾಗ್’ ಸೇರಿದಂತೆ ೯೬ ಚಿತ್ರಗಳನ್ನು ಈ ಸಂಸ್ಥೆ ನಿರ್ಮಿಸಿತು.

ಚಿತ್ರಮಂದಿರಗಳ ಸಾಮ್ರಾಟನೆನಿಸಿದ ಜೆ.ಎಫ್.ಮದನ್ ಸ್ಥಾಪಿಸಿದ ಮದನ್ ಥಿಯೇಟರ್ಸ್ ೧೯೧೯ರಿಂದ ಚಿತ್ರ ನಿರ್ಮಾಣದಲ್ಲಿ ತೊಡಗಿತು. ಮೊದಲ ಚಿತ್ರ ‘ಬಿಲ್ವ ಮಂಗಲ್’. ೧೯೩೧ರವರೆಗೆ ಅದು ಅತ್ಯುತ್ತಮ ಗುಣಮಟ್ಟದ ೮೭ ಮೂಕಚಿತ್ರಗಳನ್ನು ತಯಾರಿಸಿತು.

ಮೆಜೆಸ್ಟಿಕ್ ಫಿಲಂ ಕಂಪನಿ (೧೯೨೪), ರಾಯಲ್ ಆರ್ಟ್ಸ್ ಸ್ಟುಡಿಯೋ (೧೯೨೫)ದಲ್ಲಿ ಕ್ರಮವಾಗಿ ೯ ಮತ್ತು ೨೨ ಚಿತ್ರಗಳನ್ನು ನಿರ್ಮಿಸಿದ ನಂತರ ಆರ್ದೇಶಿರ್ ಇರಾನಿಯವರು ಇಂಪೀರಿಯಲ್ ಫಿಲಂ ಕಂಪನಿ ಆರಂಭಿಸಿದರು (೧೯೨೬). ಮೊದಲ ವರ್ಷ (೧೯೨೭)ದಲ್ಲೇ ೧೩ ಚಿತ್ರಗಳನ್ನು ಸಾಲಾಗಿ ಚಿತ್ರಿಸಿದರು. ೧೯೩೧ರವರೆಗೆ ಅವರು ೬೦ ಚಿತ್ರಗಳನ್ನು ನಿರ್ಮಿಸಿದರು. ‘ಡ್ಯಾನ್ಸಿಂಗ್ ಗರ್ಲ್’, ‘ವೈಲ್ಡ್ ಕ್ಯಾಟ್ ಆಫ್ ಬಾಂಬೆ’, ‘ಅಲಿಬಾಬ’, ‘ಅನಾರ್ಕಲಿ’, ‘ಮಾಧುರಿ’, ‘ಪಂಜಾಬ್ ಮೆಯಿಲ್’ ಇವು ಆ ಸಂಸ್ಥೆಯ ಜನಪ್ರಿಯ ಚಿತ್ರಗಳು. ಜುಬೇದಿಯ, ಎರ್ಮಿಲೈನ್, ಸುಲೋಚನಾ, ಜಿಲ್ಲೋಬಾಯಿ, ಜಾಲ್ ಮರ್ಚೆಂಟ್, ಯಾಕೂಬ್, ಮುಬಾರಕ್ ಮೊದಲಾದ ಖ್ಯಾತ ಕಲಾವಿದರು ಮತ್ತು ಮೆಹಬೂಬ್, ಎ.ಆರ್.ಕರ್ದಾರ್, ಬಿ.ಪಿ.ಮಿಶ್ರಾ, ಕೆ.ಪಿ.ಭಾವೆ, ಆರ್.ಎಸ್.ಚೌಧರಿ, ಎಲ್.ವಿ.ಪ್ರಸಾದ್, ಎಚ್.ಎಂ.ರೆಡ್ಡಿ ಮೊದಲಾದ ನಿರ್ದೇಶಕರು ಇಂಪೀರಿಯಲ್ ಗರಡಿಯಲ್ಲಿ ತರಬೇತಿ ಪಡೆದವರು.

ಸೃಜನಶೀಲ ಲೇಖಕ ನಿರ್ಮಾತೃ ಧಿರೇನ್ ಗಂಗೂಲಿ, ಎಸ್.ಸಿ.ಲಹರಿ, ಪಿ.ಬಿ.ದತ್ತ, ಜೆ.ಜಿ.ಸರ್ಕಾರ್ ಈ ಮಿತ್ರರು ಕೂಡಿ ಸ್ಥಾಪಿಸಿದ ಕಲ್ಕತ್ತೆಯ ಇಂಡೋ ಬ್ರಿಟಿಷ್ ಫಿಲಂ ಕಂಪನಿ (೧೯೨೧) ಸೃಜಿಸಿದ್ದು ಎರಡೇ ಚಿತ್ರಗಳಾದರೂ ಅವು ಗಣನೀಯವಾದವು. ‘ಇಂಗ್ಲೆಂಡ್ ರಿಟರ್ನ್ಡ್’ (೧೯೨೧) ಎಂಬ ವಿಡಂಬನಾತ್ಮಕ ಚಿತ್ರ, ‘ಯಶೋದಾ ನಂದನ’ ಇವೆರೆಡು ಚಿತ್ರಗಳು ಬಂಗಾಳ ಚಿತ್ರೋದ್ಯಮದಲ್ಲಿ ಗಣನೀಯವೆನಿಸಿದವು.

ಭೋಗಿಲಾಲ್ ದವೆ ಮತ್ತು ನಾನಾಭಾಯ್ ಕೂಡಿ ಆರಂಭಿಸಿದ ಮುಂಬಯಿನ ‘ಶಾರದಾ ಫಿಲಂ ಕಂಪನಿ’ (೧೯೨೫) ಭಾಲ್ಜಿ ಪೆಂಡಾರ್ಕರ್‌ರವರ ನಿರ್ದೇಶನದಲ್ಲಿ ನೀಡಿದ ‘ಬಾಜಿರಾವ್ ಮಸ್ತಾನಿ’ ಒಂದು ಉತ್ತಮ ಕಲಾಕೃತಿ. ಆದರೆ ಈ ಸಂಸ್ಥೆ ಚಲನಚಿತ್ರದಲ್ಲಿ ಮಾರಾಮಾರಿ ಹಾಗೂ ಢಿಶುಂ ಢಿಶುಂ ಸಂಸ್ಕೃತಿಗೆ ನಾಂದಿ ಹಾಡಿತು. ಶಾರದಾ ಫಿಲಂ ಕಂಪನಿ ೧೯೨೫ರಿಂದ ೧೯೩೦ರವರೆಗೆ ೭೮ ಚಿತ್ರಗಳನ್ನು ತಯಾರಿಸಿತು.

ಹರಿಭಾಯ್ ಆರ್.ದೇಸಾಯ್ ಮತ್ತು ಸೇಠ್ ರಣಛೋಡ್‌ದಾಸ್ ಅವರು ಸೇರಿ ಆರಂಭಿಸಿದ ‘ಲಕ್ಷ್ಮಿ ಪಿಕ್ಚರ್ಸ್’ ತನ್ನ ಜೀವಿತದ ಎರಡು ವರ್ಷಗಳ ಅವಧಿಯಲ್ಲಿ ೧೦ ಚಿತ್ರಗಳನ್ನು ತಯಾರಿಸಿತು. ಈ ಸಂಸ್ಥೆಯ ಮಹತ್ವದ ಕೊಡುಗೆ ಎಂದರೆ ರಣಜಿತ್ ಕಂಪನಿ ಸ್ಥಾಪಿಸಿದ ಪ್ರತಿಭಾನ್ವಿತ ಲೇಖಕ/ನಿರ್ದೇಶಕ/ನಿರ್ಮಾಪಕ ಚಂದೂಲಾಲ್ ಷಾ ಮತ್ತು ಪಾಂಡುರಂಗ ನಾಯಕ್.

ಇವು ಮುಂಬಯಿ, ಕಲ್ಕತ್ತಾಗಳಲ್ಲಿ ಕಾರ್ಯ ನಿರ್ವಹಿಸಿದ ಕೆಲವು ಪ್ರಮುಖ ಸಂಸ್ಥೆಗಳು. ಇವುಗಳಲ್ಲದೆ ೧೦ರಿಂದ ೧೫ ಚಿತ್ರಗಳನ್ನು ತಯಾರಿಸಿದ ಇನ್ನೂ ಹಲವಾರು ಸಂಸ್ಥೆಗಳೂ ಇದ್ದವು.

## ದಕ್ಷಿಣ ಭಾರತಕ್ಕೆ ಕಾಲಿಟ್ಟ ಉದ್ಯಮ

ದಕ್ಷಿಣ ಭಾರತದಲ್ಲಿ ಸಿನಿಮಾ ಸಂಸ್ಕೃತಿ ಹರಡಲು ವಿಳಂಬವೇನೂ ಆಗಲಿಲ್ಲ. ರಾಮನಾಡ್ ಕುಟುಂಬಕ್ಕೆ ಸೇರಿದ ಪಾಂಡಿ ದುರೈಸ್ವಾಮಿ ತೇವರ್ ಎಂಬ ಜಮೀನ್ದಾರರು ಛಾಯಾಚಿತ್ರದ ಪ್ರದರ್ಶನಗಳನ್ನು ಏರ್ಪಡಿಸುವುದರಲ್ಲಿ ಮೊದಲಿಗರು (೧೮೯೭). ಚಿತ್ರ ಪ್ರದರ್ಶಕಕ್ಕೆ (Projector) ವಿದ್ಯುತ್ ಆರ್ಕ್‌ಗೆ ಬದಲಾಗಿ ಅನಿಲ ದೀಪವನ್ನು ಬಳಸಿದ್ದರು. ಅದೇ ವರ್ಷ ಎಂ.ಎಡ್ವರ್ಡ್ ಎಂಬ ವಿದೇಶೀಯ ಮದರಾಸಿನ ವಿಕ್ಟೋರಿಯ ಪಬ್ಲಿಕ್ ಹಾಲ್‌ನಲ್ಲಿ ಚಲನಚಿತ್ರಗಳನ್ನು ಮೊದಲ ಬಾರಿಗೆ ಪ್ರದರ್ಶಿಸಿದ. ಜೋನ್ ಬಯಾಸ್ಕೋಪ್ ಎಂಬ ಸಂಚಾರಿ ಸಿನಿಮಾ ಆ ವೇಳೆಗೆ ಅಲ್ಲಲ್ಲಿ ಚಿತ್ರಗಳ

ಪ್ರದರ್ಶನ ನೀಡುತ್ತಿತ್ತು. ಮೇಜರ್ ವಾರ್‌ವಿಕ್ ಮದರಾಸಿನ ಮೌಂಟ್ ರೋಡ್ (ಈಗಿನ ಅಣ್ಣಾ ಸಾಲೈ) ನಲ್ಲಿ ನಿರ್ಮಿಸಿದ 'ಎಲೆಕ್ಟ್ರಿಕ್ ಥಿಯೇಟರ್' ದಕ್ಷಿಣದ ಪ್ರಥಮ ಚಿತ್ರಮಂದಿರವಾಯಿತು (೧೯೦೦). ಕೊಹೆನ್ ಎಂಬ ವಿದೇಶೀ ಪ್ರಜೆ ಮೌಂಟ್ ರೋಡ್‌ನಲ್ಲಿ ನಿರ್ಮಿಸಿದ ಲಿರಿಕ್ ಸಿನಿಮಾ (೧೯೦೨) ಎರಡನೇ ಚಿತ್ರಮಂದಿರ.

ಡ್ಯೂಪಾಂಟ್ ಎಂಬ ಫ್ರೆಂಚ್ ಪ್ರಜೆ 'ಲೈಫ್ ಆಫ್ ಕ್ರೈಸ್ಟ್' ಚಿತ್ರದೊಂದಿಗೆ ಮದರಾಸಿಗೆ ಬಂದಿದ್ದ. ಅಸ್ವಸ್ಥನಾದ ಕಾರಣ ಚಿತ್ರದ ಪ್ರದರ್ಶನಕ್ಕೆ ವ್ಯವಸ್ಥೆ ಮಾಡಲು ಚೈತನ್ಯವಿಲ್ಲವಾಯಿತು. ಚಿತ್ರವನ್ನೇ ಮಾರಲು ಪ್ರಯತ್ನಿಸಿದ. ಸ್ವಾಮಿಕಣ್ಣು ವಿನ್ಸೆಂಟ್ ಎಂಬ ರೈಲ್ವೆ ಉದ್ಯೋಗಿ ಈ ಚಿತ್ರವನ್ನು ಕೊಂಡರು. ಕೆಲಸಕ್ಕೆ ರಾಜಿನಾಮೆ ನೀಡಿ ಎಡಿಸನ್ ಸಿನಿಮಾಟೊಗ್ರಾಫಿ ಹೆಸರಿನಲ್ಲಿ ಸಂಚಾರಿ ಸಿನಿಮಾ ನಡೆಸಿದರು - 'ಕ್ರೊನೋ ಮೆಗಾಫೋನ್', ('ಗ್ರಾಮಫೋನ್' ಜೊತೆಯಲ್ಲಿ ಕೂಡಿಕೊಂಡಿದ್ದ ಪ್ರೊಜೆಕ್ಟರ್) ಬಳಕೆಗೆ ಬಂದಾಗ ಅವನ್ನೂ ಕೊಂಡು ಎಡಿಸನ್ಸ್ ಗ್ರಾಂಡ್ ಸಿನಿ ಮೆಗಾಫೋನ್ ಹೆಸರಿನಲ್ಲಿ ಸಂಚಾರಿ ಸಿನಿಮಾ ಪ್ರದರ್ಶನ ನಡೆಸಿದರು. ಮದರಾಸಿನ ಎಸ್‌ಪ್ಲೆನೆಡ್ ಮೈದಾನವಲ್ಲಿ ಖಾಯಂ ಪ್ರದರ್ಶನ ಆರಂಭಿಸಿದರು (೧೯೦೯). ಬ್ರಿಟನ್, ಮತ್ತು ಐರೋಪ್ಯ ದೇಶಗಳಿಂದ ಚಿತ್ರಗಳನ್ನು ಆಮದು ಮಾಡಿಕೊಂಡು ಸಂಚಾರಿ ಸಿನಿಮಾ ನಡೆಸಿ ಹಣ ಗಳಿಸಿದರು. ಕೊಯಮತ್ತೂರಿನಲ್ಲಿ ಚಲನಚಿತ್ರ ಮಂದಿರ 'ವೆರೈಟಿ ಹಾಲ್' ನಿರ್ಮಿಸಿದರು (೧೯೧೪).

ರಘುಪತಿ ವೆಂಕಯ್ಯ[೧] ಮೂಲತಃ ಆಂಧ್ರದ ಮಚಲಿಪಟ್ಟಣದವರು. ಮದರಾಸಿನಲ್ಲಿ ನೆಲಸಿ ಛಾಯಾಚಿತ್ರ ವೃತ್ತಿಯಲ್ಲಿದ್ದವರು. ಮಿಸ್ ಕ್ರೇವನ್ ಎಂಬ ಬ್ರಿಟಿಷ್ ಮಹಿಳೆ ಕ್ರೋನೊ ಮೆಗಾಫೋನ್ ಸಿನಿಮಾ ಪ್ರದರ್ಶನ ಯಂತ್ರವನ್ನು ಇಂಗ್ಲೆಂಡಿನಿಂದ ತನ್ನೊಡನೆ ತಂದಿದ್ದಳು. ಅದರ ಪ್ರದರ್ಶನವನ್ನು ಆಮಂತ್ರಿತರಿಗಾಗಿ ಏರ್ಪಡಿಸಿದ್ದಳು (೧೯೦೧). ವೆಂಕಯ್ಯ ಆಸಕ್ತರಾದರು. ಕ್ರೋನೋ ಮೆಗಾಫೋನ್ ಉಪಕರಣ ಆಮದು ಮಾಡಿ ಅವರು ಚಲನಚಿತ್ರ ಪ್ರದರ್ಶಕರಾದರು. ಸಂಚಾರಿ ಚಿತ್ರಮಂದಿರಗಳನ್ನು ನಡೆಸಿ ಯಶಸ್ವಿಯಾದರು. ಆ ದಿನಗಳಲ್ಲಿ ವಿನ್ಸೆಂಟ್ ಮತ್ತು ವೆಂಕಯ್ಯ ತಮ್ಮ ಚಟುವಟಿಕೆಗಳನ್ನು ಪ್ರದರ್ಶನ ಕ್ಷೇತ್ರಕ್ಕೆ ಮೀಸಲಾಗಿಟ್ಟರು. ಆದರೆ ಚಿತ್ರ ನಿರ್ಮಾಣಕ್ಕೆ ಚಾಲನೆ ನೀಡಿದವರು ಮೋಟಾರು ಬಿಡಿಭಾಗಗಳ ವ್ಯಾಪಾರಿಯಾಗಿದ್ದ ಆರ್.ನಟರಾಜ ಮೊದಲಿಯಾರ್. ಇವರನ್ನು ದಕ್ಷಿಣದ ಫಾಲ್ಕೆ ಎಂದು ಗುರುತಿಸುತ್ತಾರೆ. ನಟರಾಜ ಮೊದಲಿಯಾರ್ ತಮ್ಮ ಮಿತ್ರ ಎಸ್.ಎಂ.ಧರ್ಮಲಿಂಗಂ ಅವರ ಜೊತೆಗೂಡಿ ಇಂಡಿಯನ್ ಫಿಲಂ ಕಂಪನಿ ಸ್ಥಾಪಿಸಿದರು. ಅವರು ತಯಾರಿಸಿದ ಮೊದಲ ಚಿತ್ರ 'ಕೀಚಕ ವಧಾ'. ಇದು ದಕ್ಷಿಣ ಭಾರತದಲ್ಲಿ ತಯಾರಾದ ಮೊದಲ ಚಿತ್ರ (೧೯೧೬, ಪ್ರದರ್ಶನ ೧೯೧೭). ಚಿತ್ರ ನಿರ್ಮಾಣಕ್ಕೆ ಮುನ್ನ ನಟರಾಜ ಮೊದಲಿಯಾರ್ ಪುಣೆ, ಮುಂಬಯಿಗಳಿಗೆ ಹೋಗಿ ಅಲ್ಲಿ ಚಿತ್ರ ತಯಾರಿಕೆಯಲ್ಲಿ ಸ್ವಲ್ಪ ಮಟ್ಟಿನ ತರಬೇತಿಯನ್ನು ಪಡೆದು ಬಂದಿದ್ದರು. 'ಕೀಚಕ ವಧಾ' ಚಿತ್ರದ ಒಂದು ಪ್ರತಿ ಅಮೆರಿಕಾದ ರಾಚೆಸ್ಟರ್‌ನಲ್ಲಿರುವ ಈಸ್ಟ್‌ಮನ್ ಸಂಗ್ರಹಾಲಯದಲ್ಲಿ ಇದೆ. ಇಂಡಿಯನ್ ಫಿಲಂ ಕಂಪನಿ ೧೯೨೩ರವರೆಗೆ ಜೀವಿತವಾಗಿದ್ದು ಆರು ಚಿತ್ರಗಳನ್ನು ತಯಾರಿಸಿತು. ಈ ಸ್ಟುಡಿಯೋದ ಲ್ಯಾಬೊರೇಟರಿ ಬೆಂಗಳೂರಿನಲ್ಲಿತ್ತು. ಆರ್.ವೆಂಕಯ್ಯ ಕಾರ್ಯಕ್ಷೇತ್ರವನ್ನು ಕೇವಲ ಚಿತ್ರಪ್ರದರ್ಶನಕ್ಕೆ ಸೀಮಿತಗೊಳಿಸಲಿಲ್ಲ. ತಮ್ಮ ಮಗ ಆರ್.ಪ್ರಕಾಶನನ್ನು ಚಿತ್ರ ನಿರ್ಮಾಣದಲ್ಲಿ ಪರಿಶ್ರಮ ಪಡೆಯಲು ವಿದೇಶಕ್ಕೆ ಕಳುಹಿಸಿದರು. ಪ್ರಕಾಶ್ ಮೊದಲು ಲಂಡನ್ನಿನ ಬಾರ್ಕರ್ ಮೋಷನ್ ಪಿಕ್ಚರ್ ಸ್ಟುಡಿಯೋದಲ್ಲಿ ತರಬೇತಿ ಪಡೆದು, ನಂತರ ಹಾಲಿವುಡ್‌ಗೆ ತೆರಳಿ ಅಲ್ಲಿ ಗ್ರಿಫಿತ್ ಮತ್ತು ಸಿಸಿಲ್ ಬಿ.ಡಿಮಿಲಿ ಅವರ ಸಹಾಯಕರಾಗಿದ್ದು ಅನುಭವ ಗಳಿಸಿ ಹಿಂದಿರುಗಿದರು. ವೆಂಕಯ್ಯ ಮತ್ತು ಪ್ರಕಾಶ್ ಜೊತೆಗೂಡಿ 'ಸ್ಟಾರ್ ಆಫ್ ದಿ ಈಸ್ಟ್ ಫಿಲಂ ಕಂಪನಿ' ಹೆಸರಿನಲ್ಲಿ ಮದರಾಸಿನಲ್ಲಿ ಸ್ಟುಡಿಯೋ ಸ್ಥಾಪಿಸಿದರು. 'ಭೀಷ್ಮ ಪ್ರತಿಜ್ಞಾ' (೧೯೨೧) ಅಲ್ಲಿ ತಯಾರಾದ ಮೊದಲ ಚಿತ್ರ. ಇದು ಅತ್ಯಂತ ಯಶಸ್ವಿಯಾಯಿತು. ಇದರ ನಂತರ ಅಲ್ಲಿ ನಾಲ್ಕು ಚಿತ್ರಗಳು ತಯಾರಾದವು. ವೆಂಕಯ್ಯನವರು ಮದರಾಸಿನಲ್ಲಿ ಮೂರು, ಮಧುರೈನಲ್ಲಿ ಒಂದು ಚಿತ್ರಮಂದಿರ ಆರಂಭಿಸಿದರು.

ಛಾಯಾಗ್ರಾಹಕರು ಹಾಗೂ ತಂತ್ರಜ್ಞರಾಗಿದ್ದ ಪ್ರಕಾಶ್ ಚಿತ್ರಗಳ ಹಂಚಿಕೆದಾರರಾಗಿದ್ದ ಎ.ನಾರಾಯಣ್ ಅವರೊಡಗೂಡಿ ಜನರಲ್ ಪಿಕ್ಚರ್ಸ್ ಕಾರ್ಪೊರೇಷನ್ ಸ್ಥಾಪಿಸಿ ಹಲವಾರು ಯಶಸ್ವಿ ಚಿತ್ರಗಳನ್ನು ತಯಾರಿಸಿದರು. 'ಲೈಲಾ ಸ್ಟಾರ್ ಆಫ್ ಮಂಗ್ರೇಲಿಯಾ' (೧೯೩೧) ಎಂಬ ಚಿತ್ರ ದೇಶ ವಿದೇಶಗಳಲ್ಲಿ ಅತ್ಯಂತ ಜನಪ್ರಿಯವಾದ ಚಿತ್ರ. ಅದರಲ್ಲಿ ಹಲವಾರು ಮುಕ್ತ ಚುಂಬನದ ದೃಶ್ಯಗಳಿದ್ದವು. ನಾರಾಯಣ್ ಮತ್ತು ಪ್ರಕಾಶ್ ದಕ್ಷಿಣ ಭಾರತದಲ್ಲಿ ಅನೇಕ ತಂತ್ರಜ್ಞರಿಗೆ ತರಬೇತಿ ನೀಡಿ ಚಿತ್ರರಂಗದ ಪ್ರಗತಿಗೆ ಕಾರಣರಾದರು.

PUNDLIK-PUNDLIK

that Popular Hindu Drama. Almost half the Bombay Hindu population has seen it last week and we want the other half to do so before a change of programme takes place. Also see our

NEW SCREAMING COMICS.

Don't fail to come to-night and bring your friends.

CORONATION CINEMATOGRAPH.

SANDHURST ROAD, GIRGAUM.

(ಚಿತ್ರ ೨) ಟೈಂಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಪ್ರಕಟವಾದ 'ಪುಂಡಲೀಕ' ಚಿತ್ರದ ಜಾಹಿರಾತು. ಫಾಲ್ಕೆ ಅವರ 'ರಾಜಾ ಹರಿಶ್ಚಂದ್ರ' ತೆರೆಕಾಣುವುದಕ್ಕೆ ಒಂದು ವರ್ಷ ಮೊದಲೇ ತೆರೆಕಂಡಿದ್ದರೂ ಅದನ್ನು ಭಾರತದ ಮೊದಲ ಚಿತ್ರವೆಂದು ಪರಿಗಣಿಸಿಲ್ಲ.

೧೯೨೭ರ ವೇಳೆಗೆ ಮದರಾಸಿನಲ್ಲಿ ಚಿತ್ರನಿರ್ಮಾಣ ಕಾರ್ಯ ಸಂಪೂರ್ಣವಾಗಿ ನಿಂತು ಹೋಗಿತ್ತೆಂದು ಹೇಳಬೇಕು. ಟಿ.ರಂಗಾಚಾರಿಯರ್ ಅಧ್ಯಕ್ಷತೆಯಲ್ಲಿ ನೇಮಕವಾಗಿದ್ದ ಚಲನಚಿತ್ರ ವಿಚಾರಣಾ ಸಮಿತಿ ತನ್ನ ವರದಿಯಲ್ಲಿ ೧೯೨೮ರಲ್ಲಿ ಮುಂಬಯಿನಲ್ಲಿ ೧೫, ಬಂಗಾಳದಲ್ಲಿ ೪ ಚಲನಚಿತ್ರ ನಿರ್ಮಾಣ ಸಂಸ್ಥೆಗಳು ಇದ್ದವೆಂದು ಮದರಾಸಿನಲ್ಲಿ ನಿರ್ಮಾಣ ಚಟುವಟಿಕೆ ಇರಲಿಲ್ಲವೆಂದು ದಾಖಲಿಸಿದೆ.

ಮದ್ರಾಸ್‌ನಲ್ಲಿ ೧೯೨೯-೩೧ರ ಅವಧಿಯಲ್ಲಿ ಸಣ್ಣ ಪ್ರಮಾಣದಲ್ಲಿ ನಿರ್ಮಾಣ ಚಟುವಟಿಕೆಗಳು ಕಂಡುಬಂದವು. ಮೊದಲ ತಮಿಳು ವಾಕ್ಚಿತ್ರ 'ಕಾಳಿದಾಸ', ಹಾಗೂ ತೆಲುಗಿನ ಪ್ರಥಮ ವಾಕ್ಚಿತ್ರ 'ಭಕ್ತ ಪ್ರಹ್ಲಾದ' ಮುಂಬಯಿನಲ್ಲಿ ತಯಾರಾದವು (೧೯೩೧). ಆದರೆ ತಮಿಳು, ತೆಲುಗು ಚಿತ್ರೋದ್ಯಮಿಗಳು ಜಾಗೃತರಾದರು. ಉದ್ಯಮಿ ಎ.ನಾರಾಯಣ್ ಶ್ರೀನಿವಾಸ್ ಸಿನಿಟೋನ್ (೧೯೩೪) ಆರಂಭಿಸಿದರು. ದಕ್ಷಿಣದಲ್ಲಿ ತಯಾರಾದ ಮೊದಲ ಶಬ್ದಚಿತ್ರ 'ಶ್ರೀನಿವಾಸ ಕಲ್ಯಾಣ' (ತಮಿಳು, ೧೯೩೪).

## ಶ್ರೀಗಂಧದ ನಾಡಿನಲ್ಲಿ ಸಿನಿಮಾ

ಭಾರತದಲ್ಲಿ ಮೂಕಚಿತ್ರಗಳ ಪ್ರದರ್ಶನವಾದ ೯ ವರ್ಷಗಳ ನಂತರ ಬೆಂಗಳೂರಿನಲ್ಲಿ ಸ್ಥಳೀಯ ಉದ್ಯಮಿಗಳು ಬಂಡವಾಳ ಹೂಡಿ ಆರಂಭಿಸಿದ ಪ್ರಥಮ ಚಿತ್ರಮಂದಿರ ಪ್ಯಾರಮೌಂಟ್. ಇಲ್ಲೇ ಕನ್ನಡದ ಪ್ರಥಮ ವಾಕ್ಚಲನಚಿತ್ರ 'ಸತಿ ಸುಲೋಚನಾ' ತೆರೆ ಕಂಡದ್ದು. ೭೦ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದ ಚಿತ್ರಮಂದಿರ ಇದ್ದ ಸ್ಥಳದಲ್ಲೇ ಈಗ ಎರಡು ಅವಳಿ ಚಿತ್ರಮಂದಿರಗಳು ತಲೆ ಎತ್ತಿವೆ. ಭಾರತದಲ್ಲಿ ಮೂಕಿ ಚಿತ್ರಗಳ ಪ್ರದರ್ಶನದ ೨೩ ವರ್ಷಗಳ ನಂತರ ಬೆಂಗಳೂರಿನಲ್ಲಿ ಚಲನಚಿತ್ರಕ್ಕೆ ಸಂಬಂಧಪಟ್ಟಂತೆ ವಾಣಿಜ್ಯ ಚಟುವಟಿಕೆಗಳು ಚುರುಕುಗೊಂಡವು. ಚಲನಚಿತ್ರಗಳ ವಿತರಣೆಯಲ್ಲಿ ದಕ್ಷಿಣ ಭಾರತಕ್ಕೆ ಕೇಂದ್ರವಾಗಿ ಬೆಂಗಳೂರು ಬೆಳೆಯತೊಡಗಿತು. ವಾಕ್ಚಿತ್ರ ಯುಗ ಆರಂಭವಾದ ಮೇಲೂ ಅದು ಕೆಲಕಾಲ ದಕ್ಷಿಣ ಭಾರತವಲ್ಲದೆ ಸಿಂಹಳಕ್ಕೂ ಚಲನಚಿತ್ರಗಳನ್ನು ಪೂರೈಸುತ್ತಿತ್ತು.

೧. ರಘುಪತಿ ವೆಂಕಯ್ಯ ಚಿತ್ರ ಪ್ರದರ್ಶನ, ಚಿತ್ರ ನಿರ್ಮಾಣ, ಸ್ಟುಡಿಯೋ ಸ್ಥಾಪನೆ ಮಾಡಿದ ಪ್ರಥಮ ತೆಲುಗು ಉದ್ಯಮಿಯೆಂದು ಗುರುತಿಸಿ ಆಂಧ್ರ ಸರ್ಕಾರ 'ರಘುಪತಿ ವೆಂಕಯ್ಯ ಪ್ರಶಸ್ತಿ'ಯನ್ನು ನೀಡುತ್ತಿದೆ (೧೯೮೦). ಈ ಪ್ರಶಸ್ತಿ ಪಡೆದ ಪ್ರಥಮ ತೆಲುಗು ಉದ್ಯಮಿ - ಎಲ್.ವಿ.ಪ್ರಸಾದ್.



(ಚಿತ್ರ ೩) ಗುಬ್ಬಿ ವೀರಣ್ಣ

ಚಿತ್ರ ನಿರ್ಮಾಣಕ್ಕೆ ಚಾಲನೆ ದೊರೆತಿದ್ದು ೧೯೨೪ರಲ್ಲಿ. ವೃತ್ತಿ ನಾಟಕರಂಗದ ಪಿತಾಮಹರೆನಿಸಿದ್ದ ಗುಬ್ಬಿ ವೀರಣ್ಣನವರು ಮೂಕ ಚಿತ್ರಗಳನ್ನು ತಯಾರಿಸಲು ಪ್ರಯತ್ನಿಸಿದರು. ಪ್ರಯತ್ನ ಫಲಕಾರಿಯಾಗಲಿಲ್ಲ. ಮುಂದಿನ ಮೂರು ವರ್ಷಗಳ ಕಾಲ ಯಾವುದೇ ಚಟುವಟಿಕೆ ನಡೆಯಲಿಲ್ಲ. ನಂತರ ಮಿಂಚಿನ ವೇಗದಲ್ಲಿ ನಡೆದ ಬೆಳವಣಿಗೆಗಳು ಇಡೀ ಭಾರತದ ಗಮನ ಸೆಳೆದವು.

ಕನ್ನಡ ಸಾಹಿತ್ಯ ಕ್ಷೇತ್ರದ ದಿಗ್ಗಜರು, ಕಲಾ ವಿಮರ್ಶಕರು, ನೃತ್ಯ ಕಲಾವಿದರು, ವಿದೇಶದಲ್ಲಿ ತರಬೇತಿ ಪಡೆದು ಬಂದ ಸದಭಿರುಚಿಯ ನಿರ್ದೇಶಕರು, ತಂತ್ರಜ್ಞರು, ಹವ್ಯಾಸಿ ಹಾಗೂ ವೃತ್ತಿ ರಂಗಭೂಮಿಯ ಖ್ಯಾತ ನಾಮರಾದವರು ಚಿತ್ರ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬೆಂಗಳೂರನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಂಡರು. ೧೯೨೯-೩೧ರ ಅವಧಿಯಲ್ಲಿ ಅವರು ತಯಾರಿಸಿದ ಸುಮಾರು ೪೫ ಚಿತ್ರಗಳು ಕನ್ನಡ ನಾಡಿನಲ್ಲಿ ಚಿತ್ರೋದ್ಯಮದ ಭವಿಷ್ಯದ ಬಗೆಗೆ ಆಶಾಭಾವನೆ ಮೂಡಿಸಿದವು. ಇವಕ್ಕೆ ಕಾರಣಕರ್ತರಾದ ವ್ಯಕ್ತಿಗಳೆಂದರೆ -ಗುಬ್ಬಿ ವೀರಣ್ಣ, ಸೂರ್ಯ ಫಿಲಂ ಕಂಪನಿಯ ಹರಿಭಾಯಿ ಆರ್.ದೇಸಾಯಿ ಮತ್ತು ಅಜಂತಾ ಫಿಲಂಸ್‌ನ ಎಂ.ಭವನಾನಿ ಮತ್ತು ಶಿವರಾಮಕಾರಂತ.

## ಗುಬ್ಬಿ ವೀರಣ್ಣ : ಚಿತ್ರ ಜಗತ್ತು

ಗುಬ್ಬಿ ವೀರಣ್ಣನವರು ಮೂಲತಃ ವೃತ್ತಿ ನಾಟಕ ಕಂಪನಿಯವರು. ಪ್ರಯೋಗಶೀಲರು. ಕನ್ನಡ ವೃತ್ತಿ ರಂಗಭೂಮಿಗೆ ಹೊಸ ಆಯಾಮವನ್ನು ಕಲ್ಪಿಸಿ, ಅದಕ್ಕೆ ಮಾನ್ಯತೆಯನ್ನು ತಂದುಕೊಡಲು ದುಡಿದವರು. ನಾಟಕವೆಂದರೆ ಗುಬ್ಬಿ ವೀರಣ್ಣನವರು ಎಂದು ಕರ್ನಾಟದಲ್ಲಿ ಮಾತ್ರವಲ್ಲ ನೆರೆ ರಾಜ್ಯಗಳಾದ ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿ ಕೂಡ ಖ್ಯಾತರಾಗಿದ್ದರು.

ಚಲನಚಿತ್ರಗಳ ಬಗ್ಗೆ ಜನರು ತೋರುತ್ತಿದ್ದ ಆಸಕ್ತಿಯನ್ನು ಗಮನಿಸಿದ ಅವರು ತಾವು ಅಭಿನಯಿಸುತ್ತಿದ್ದ 'ಭಕ್ತ ಕಬೀರ್' ನಾಟಕವನ್ನೇ ದಾಖಲಿಸುವ ಒಂದು ಪ್ರಯೋಗವನ್ನು ೧೯೨೪ರಲ್ಲಿ ನಡೆಸಿದವರು. ನಾಟಕದ ಕಂಪನಿ ತರೀಕೆರೆಯಲ್ಲಿ ಬಿಡಾರ ಹೂಡಿದ್ದಾಗ ಬೆಳಗಿನ ಹೊತ್ತು ಬಯಲಲ್ಲಿ, ಕಾಡು-ಮೇಡುಗಳಲ್ಲಿ 'ಭಕ್ತ ಕಬೀರ್' ನಾಟಕದ ದೃಶ್ಯಗಳನ್ನು ಚಿತ್ರಿಸುತ್ತಿದ್ದರು. ನಾಟಕದಲ್ಲಿ ಭಕ್ತ ಕಬೀರನ ಪಾತ್ರವನ್ನು ಸಿ.ಬಿ.ಮಲ್ಲಪ್ಪ ನಿರ್ವಹಿಸುತ್ತಿದ್ದರು. ಚಿತ್ರದಲ್ಲೂ ಅವರು ಅದೇ ಪಾತ್ರದಲ್ಲಿ ಕಾಣಿಸಿಕೊಂಡರು. ಆದರೆ ಆ ಚಿತ್ರ ಪೂರ್ತಿಯಾಗಲೇ ಇಲ್ಲ. ಭಾರಿ ಮಳೆಯ ಕಾರಣ ನಾಟಕ ಮಂದಿರ ಕೊಚ್ಚಿಕೊಂಡು ಹೋದದ್ದರಿಂದ ಚಿತ್ರೀಕರಣ ನಿಂತಿತು. ಕಲ್ಕತ್ತೆಯಲ್ಲಿ ಹೀರಾಲಾಲ್ ಸೇನ್ ಅವರು (೧೯೦೩), ಮುಂಬಯಿನಲ್ಲಿ ಎಸ್.ಎನ್.ಪಾಟಣಕರ್ ಮತ್ತು ರಾಮಚಂದ್ರ ತೋರ್ನೆಯವರು ನಾಟಕಗಳನ್ನು ಚಿತ್ರರೂಪದಲ್ಲಿ ದಾಖಲಿಸಿ (೧೯೧೨) ಪ್ರದರ್ಶಿಸಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು.

ಈ ಘಟನೆಯಿಂದ ವೀರಣ್ಣನವರು ವಿಚಲಿತರಾಗಲಿಲ್ಲ. ಚಿತ್ರರಂಗದ ಸಂಪರ್ಕ ತೊರೆಯಲಿಲ್ಲ. ಸಾಹಸಿ ವೀರಣ್ಣನವರು ಚಿತ್ರರಂಗದಲ್ಲಿ ಆಸಕ್ತರಾದರು. ಸಾಹಿತಿ ದೇವುಡು ನರಸಿಂಹಶಾಸ್ತ್ರಿಗಳು ಮತ್ತು ಓರಿಯಂಟಲ್ ಬ್ಯಾಂಕಿನ ಶ್ರೀನಿವಾಸಮೂರ್ತಿ ಈ ಬಾರಿ ವೀರಣ್ಣನವರ ಜೊತೆಗಿದ್ದರು. ಕರ್ನಾಟಕ ಫಿಲಂಸ್ ಕಾರ್ಪೊರೇಷನ್ ಅಸ್ತಿತ್ವಕ್ಕೆ ಬಂದಿತು. ಅದರಲ್ಲಿ ವೀರಣ್ಣನವರು ರೂ.೨೫೦೦ ಮೂಲ ಬಂಡವಾಳವನ್ನಾಗಿ ಹೂಡಿದರು. ಹಾಸನ ಮತ್ತು ಸಕಲೇಶಪುರದಲ್ಲಿ ಗುಬ್ಬಿ ಕಂಪನಿ ಕ್ಯಾಂಪ್ ಮಾಡಿದ್ದಾಗ ವೀರಣ್ಣನವರು ತಮ್ಮ ಪ್ರಭಾವವನ್ನು ಬಳಸಿ ಸಿನಿಮಾ ಕಂಪನಿಯ ಷೇರುಗಳನ್ನು ಮಾರಾಟ ಮಾಡಿದರು. ತಮ್ಮ ಅಭಿಮಾನಿಗಳು ಪರಿಚಯಸ್ಥರಾದ ಕಾಫಿ ಪ್ಲಾಂಟರುಗಳಿಗೆ ಸುಮಾರು ನಲವತ್ತು ಸಾವಿರ ರೂಪಾಯಿಯಷ್ಟು ಷೇರುಗಳನ್ನು ಮಾರಿದರು.

ಎ.ವಿ.ಅಯ್ಯಂಗಾರ್, ಬಿ.ಪುಟ್ಟಸ್ವಾಮಯ್ಯ ಮತ್ತು ಕೃಷ್ಣರಾಯರು ಕಂಪನಿಯ ಡೈರೆಕ್ಟರುಗಳಾಗಿದ್ದರು. ವೀರಣ್ಣನವರು, ದೇವುಡು ನರಸಿಂಹಶಾಸ್ತ್ರಿ ಮತ್ತು ಶ್ರೀನಿವಾಸಮೂರ್ತಿ ಮ್ಯಾನೇಜಿಂಗ್ ಡೈರೆಕ್ಟರುಗಳಾಗಿ ನೇಮಕಗೊಂಡರು. ಸ್ಟುಡಿಯೋಗೆ ಅಗತ್ಯವಾದ ಸಲಕರಣೆಯನ್ನು ಆ ವೇಳೆಗೆ ಮುಚ್ಚಿ ಹೋಗಿದ್ದ ಮದರಾಸಿನ ವೇಲ್ ಪಿಕ್ಚರ್ಸ್ ಸ್ಟುಡಿಯೋದಿಂದ ಮತ್ತು ಮುಂಬಯಿಯಲ್ಲಿ ಇನ್ನೊಂದು ಹಳೆಯ ಸ್ಟುಡಿಯೋ ಮುಚ್ಚಿ ಹೋದಾಗ ಅದರ ಹಳೆಯ ಸಲಕರಣೆಯನ್ನು ಕೊಂಡು ತಂದರು. ಬೆಂಗಳೂರಿನ ಮಲ್ಲೇಶ್ವರಂ ಬಡಾವಣೆಯಲ್ಲಿ ಹೆಚ್.ವಿ.ನಂಜುಂಡಯ್ಯನವರಿಗೆ ಸೇರಿದ ಬಂಗಲೆಯೊಂದನ್ನು ತಿಂಗಳೊಂದಕ್ಕೆ ಸುಮಾರು ರೂ.೨೫೦.೦೦ ಬಾಡಿಗೆಗೆ ಪಡೆದು ಅದರಲ್ಲಿ ಸ್ಟುಡಿಯೋ ಮತ್ತು ಲ್ಯಾಬೋರೇಟರಿಗಳನ್ನು ಸ್ಥಾಪಿಸಿದರು.



(ಚಿತ್ರ ೪) 'ಹಿಸ್ ಲವ್ ಅಫೇರ್' ಮೂಕಚಿತ್ರದಲ್ಲಿ ಜಿ.ಹೆಚ್.ವೀರಣ್ಣ ಮತ್ತು ಜಯಮ್ಮ

ಆಗಿನ್ನೂ ತಂತ್ರಜ್ಞಾನ ಅಷ್ಟಾಗಿ ಬೆಳೆದಿರಲಿಲ್ಲ. ಕಬ್ಬಿಣದ ಕೊಳವೆಗಳನ್ನು ನೆಲದಲ್ಲಿ ಹೂಳಿ ಅವುಗಳ ಮೇಲೆ ಹಂದರವನ್ನು ರಚಿಸಿ, ಡೇರೆಯನ್ನು ಹರಡಲಾಗುತ್ತಿತ್ತು. ಬೆಳಕು ಬೇಕೆಂದಾಗ ಮೇಲೆ ಹರಡಿದ್ದ ಡೇರೆಗಳನ್ನು ಪಕ್ಕಕ್ಕೆ ಸರಿಸಿಕೊಂಡು ಚಿತ್ರೀಕರಣ ನಡೆಸಲಾಗುತ್ತಿತ್ತು. ವಿದ್ಯುತ್ ದೀಪಗಳನ್ನು ಬಳಸುವ ಪದ್ಧತಿಯೂ ಜಾರಿಗೆ ಬಂದಿರಲಿಲ್ಲ. ಕನ್ನಡಿಗಳನ್ನಿಟ್ಟು ಕಲಾವಿದರ ಮೇಲೆ ಬೆಳಕು ಪ್ರತಿಫಲಿಸುವಂತೆ ಮಾಡುತ್ತಿದ್ದರು. ಕನ್ನಡಿಗಳಿಂದ ಪ್ರತಿಫಲಿತವಾದ ಬಿಸಿಲಿನ ಝಳಕ್ಕೆ ಕಲಾವಿದರು ಕಣ್ಣು ಬಿಡಲಾಗದೆ ಕಷ್ಟ ಪಡುತ್ತಿದ್ದರು. ಬಂಗಲೆಯ ಒಳ ಕೋಣೆಗಳನ್ನು ಡಾರ್ಕ್ ರೂಂಗಳನ್ನಾಗಿ ಪರಿವರ್ತಿಸಿ ಚಿತ್ರೀಕರಣ ಮಾಡಲ್ಪಟ್ಟ ಫಿಲಂ ಅನ್ನು ಸಂಸ್ಕರಿಸಲು ಮತ್ತು ಪ್ರಿಂಟ್‌ಗಳನ್ನು ಸಿದ್ಧಪಡಿಸಲು ಉಪಯೋಗಿಸುತ್ತಿದ್ದರು.

ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಷನ್ ಎಂದೂ ವೃತ್ತಿನಿಷ್ಠ ಸಂಸ್ಥೆಯಾಗಿ ಬೆಳೆಯಲೇ ಇಲ್ಲ. ಮೊದಲಿನಿಂದಲೂ ಅಲ್ಲಿ ಗೊಂದಲ ತುಂಬಿ ತುಳುಕಾಡುತ್ತಿತ್ತು. ವೀರಣ್ಣನವರು ಮಾತ್ರ ಮ್ಯಾನೇಜಿಂಗ್ ಡೈರೆಕ್ಟರಾಗಿದ್ದರೇ ಹೊರತು ಈ ಹೊಸ ತಂತ್ರಜ್ಞಾನದ ಪರಿಚಯವಿರಲಿಲ್ಲ. ದೇವುಡು ಅವರು ಸಾಹಿತ್ಯ ಮತ್ತು ಅಭಿನಯ ಕಲೆಯಲ್ಲಿ ಪಳಗಿದವರೇ ಹೊರತು ತಂತ್ರಜ್ಞಾನದಲ್ಲಲ್ಲ. ಶ್ರೀನಿವಾಸ ಮೂರ್ತಿಯವರಿಗೆ ಬ್ಯಾಂಕಿಂಗ್ ವ್ಯವಹಾರ ತಿಳಿದಿತ್ತು. ಚಿತ್ರ ತಯಾರಿಕೆ ಮತ್ತು ಅದಕ್ಕೆ ಸಂಬಂಧಿಸಿದ ವ್ಯವಹಾರಗಳು ಗೊತ್ತಿರಲಿಲ್ಲ. ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಷನ್ ಒಟ್ಟು ಮೂರು ಮೂಕಿ ಚಿತ್ರಗಳನ್ನು ತಯಾರಿಸಿತು. 'ಸಾಂಗ್ ಆಫ್ ಲೈಫ್' (೧೯೩೦), 'ಹಿಸ್ ಲವ್ ಅಫೇರ್' (೧೯೩೧), ಮತ್ತು 'ಹರಿಮಾಯ' (೧೯೩೨).

'ಸಾಂಗ್ ಆಫ್ ಲೈಫ್', ಇದು ದೇವುಡು ಅವರ 'ಕಳ್ಳರ ಕೂಟ' ನೀಳ್ಗತೆಯ ಆಧಾರವಾಗಿ ತಯಾರಾದ ಚಿತ್ರ. ಇದು ಪ್ರಕಟಿತ ಕನ್ನಡ ಕಥೆಯೊಂದರ ಆಧಾರವಾಗಿ ತಯಾರಾದ ಮೊಟ್ಟ ಮೊದಲ ಚಿತ್ರ ಎಂಬ ಹೆಗ್ಗಳಿಕೆಗೂ ಪಾತ್ರವಾಗುತ್ತದೆ. ಈ ಚಿತ್ರವನ್ನು ನಿರ್ದೇಶಿಸಿದವರು ಮುಂಬಯಿಯ ಜಿ.ಪಿ.ಪವಾರ್. ಪಾತ್ರ ವರ್ಗದಲ್ಲಿ ಅಂಬು, ಲಲಿತಾ ಪವಾರ್ ಮುಂತಾದವರಿದ್ದರು. ಮೂಕಿ ಚಿತ್ರಗಳಲ್ಲಿ ಭಾಷೆಯೇ ಇಲ್ಲ. ಆದರೂ ಕನ್ನಡ ನೆಲದಲ್ಲಿ ತಯಾರಾದ ಚಿತ್ರವಾದ್ದರಿಂದ ಕನ್ನಡದ್ದು ಎನಿಸಿಕೊಳ್ಳುತ್ತದೆ. ಎಲ್ಲ ಮೂಕಿ ಚಿತ್ರಗಳಿಗೂ ಅನ್ಯಭಾಷಾ ಪ್ರದೇಶದಲ್ಲಿ ಪ್ರದರ್ಶಿಸುವ ದೃಷ್ಟಿಯಿಂದ ಚಿತ್ರಗಳಿಗೆ ಹಿಂದಿ ಹಾಗೂ ಇಂಗ್ಲಿಷ್ ಭಾಷೆಯ ಹೆಸರಿಡುವುದು ವಾಡಿಕೆಯಾಗಿತ್ತು.

'ಹಿಸ್ ಲವ್ ಅಫೇರ್' ಎಂ.ವಿ.ಸುಬ್ಬಯ್ಯ ನಾಯ್ಡು, ಬಿ.ಜಯಮ್ಮ ನಾಯಕ-ನಾಯಕಿಯರಾಗಿ ಕಾಣಿಸಿಕೊಂಡ ಚಿತ್ರ. ಜಿ.ಹೆಚ್.ವೀರಣ್ಣ, ಹೆಚ್.ಎಲ್.ಎನ್.ಸಿಂಹ, ಜಿ.ಸುಂದರಮ್ಮ, ಚಂದ್ರಮ್ಮ ಪ್ರಮುಖ ಪಾತ್ರಗಳಲ್ಲಿದ್ದರು. ಬೆಲ್ಜಿಯಂನ ಅಲ್‌ಗೊ (Algoet) ಈ ಚಿತ್ರವನ್ನು ನಿರ್ದೇಶಿಸಿದರು. ಮಲ್ಲೇಶ್ವರ ಬಡಾವಣೆ, ಶ್ರೀರಂಗಪಟ್ಟಣಗಳಲ್ಲಿ ಹೊರಾಂಗಣ ಚಿತ್ರೀಕರಣ ನಡೆಯಿತು.

'ಹರಿಮಾಯಾ'[೧] ಮಹಾಭಾರತದಲ್ಲಿ ಬರುವ ಶ್ಯಮಂತಕೋಪಾಖ್ಯಾನದ ಆಧಾರದಿಂದ ತಯಾರಾದ ಪೌರಾಣಿಕ ಚಿತ್ರ. ಮೂಕಿ ಚಿತ್ರಗಳ ಕಾಲದಲ್ಲಿ, ಜಾನಪದ, ಪೌರಾಣಿಕ ಮತ್ತು ಸಾಹಸ ಪ್ರಧಾನ ಚಿತ್ರಗಳೇ ಹೆಚ್ಚು ತಯಾರಾಗುತ್ತಿದ್ದವು. ವೈ.ವಿ.ರಾವ್ ಈ ಚಿತ್ರದ ನಿರ್ದೇಶಕರು. ಅಲ್‌ಗೊ ತಾಂತ್ರಿಕ ಸಲಹೆಗಾರರಾಗಿದ್ದರು. ನಿರ್ದೇಶಕ ವೈ.ವಿ.ರಾವ್ ಅವರೇ ಪ್ರಧಾನ ಪಾತ್ರಧಾರಿ ಕೃಷ್ಣನ ಪಾತ್ರದಲ್ಲಿ ಕಾಣಿಸಿಕೊಂಡರು. ಅವರ ಪತ್ನಿ ರಾಜಮ್ಮ ಸತ್ಯಭಾಮೆಯಾಗಿಯೂ ಬಿ.ಜಯಮ್ಮ ಜಾಂಬವತಿಯಾಗಿಯೂ ಅಭಿನಯಿಸಿದ್ದರು. ಶಿವಗಂಗೆ ಬೆಟ್ಟದ ಸುತ್ತಮುತ್ತಲಿನ ಪ್ರದೇಶದಲ್ಲಿ ಈ ಚಿತ್ರದ ಹೊರಾಂಗಣ ಚಿತ್ರೀಕರಣ ನಡೆಸಲಾಯಿತು.

ಬೆಳಗಿನಿಂದ ಸಂಜೆಯವರೆಗೆ ಮಲ್ಲೇಶ್ವರದ ಹೆಚ್.ವಿ.ನಂಜುಂಡಯ್ಯನವರ ಮನೆಯಲ್ಲಿ ಬಿಡುವಿಲ್ಲದ ಚಿತ್ರೀಕರಣ, ಸಂಜೆ ಶಿವಾನಂದ ಥಿಯೇಟರಿನಲ್ಲಿ ನಾಟಕದಲ್ಲಿ ಭಾಗವಹಿಸುವುದು. ಹೀಗೆ ಬಿಡುವಿಲ್ಲದ ಕಾರ್ಯಕ್ರಮವಾಗಿತ್ತು. ಮೂಕಿ ಚಿತ್ರಗಳನ್ನು ನಿರ್ಮಿಸಿದ್ದಾಯಿತು. ಆದರೆ ಅವರಿಂದ ಹಣ ಬರಲಿಲ್ಲ, ಕೀರ್ತಿ ಬರಲಿಲ್ಲ. ಅದು ವೀರಣ್ಣನವರ ಸಾಹಸ ಪ್ರವೃತ್ತಿಗೆ ಸವಾಲಾದವು. ಅವರಿಗೆ ಸಮಸ್ಯೆಗಳನ್ನು, ಸಂಕಷ್ಟಗಳನ್ನು ತಂದೊಡ್ಡಿದವು.

ಈ ಚಿತ್ರಗಳು ತಯಾರಾಗುವ ವೇಳೆಗೆ ಪ್ರಪಂಚವನ್ನೇ ಆವರಿಸಿಕೊಂಡು ಅಲುಗಾಡಿಸಿದ ೧೯೩೦-೩೧ರ ಆರ್ಥಿಕ ಮುಗ್ಗಟ್ಟಿನ ಪರಿಣಾಮವಾಗಿ ನಾಟಕ ಕಂಪನಿಗಳ ಗಳಿಕೆಯು ಇಳಿಮುಖವಾಗಿ ನಿರ್ವಾಹವಿಲ್ಲದೆ ಸಂಚಾರ ಹೊರಡಬೇಕಾಯಿತು. ವೀರಣ್ಣನವರು ಬೆಂಗಳೂರಿನಿಂದ ಬೇರೆ ಊರುಗಳಿಗೆ ಕಂಪನಿಯನ್ನು ಕೊಂಡೊಯ್ದಾಗ ಇಲ್ಲಿ ಫಿಲಂ ಕಂಪನಿಯ ವ್ಯವಹಾರಗಳನ್ನು ನೋಡಿಕೊಳ್ಳುವವರಿಲ್ಲದಂತಾಯಿತು. ಚಿತ್ರಗಳನ್ನು ಹಂಚಿಕೆಗೆ ಪಡೆದಿದ್ದವರೂ ಸರಿಯಾಗಿ ಲೆಕ್ಕ ಪತ್ರಗಳನ್ನಿಡದೆ ಅನ್ಯಾಯ ಮಾಡಿದರು. ಕಂಪನಿಯ ಉಳಿದ ಡೈರೆಕ್ಟರುಗಳೂ ಸಹ ಈ ವ್ಯವಹಾರಗಳ ಮೇಲೆ ಸರಿಯಾಗಿ ನಿಗಾ ಇಡದ ಪ್ರಯುಕ್ತ ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಷನ್ ನಷ್ಟವನ್ನನುಭವಿಸಿತು. ಇಲ್ಲಿ ಕಂಪನಿಯ ವ್ಯವಹಾರಗಳನ್ನು ನಿರ್ವಹಿಸುತ್ತಿದ್ದ ದೇವುಡು ನರಸಿಂಹಶಾಸ್ತ್ರಿಗಳು ಫಿಲಂ ಕಂಪನಿಯ ನಟ-ನಟಿಯರಿಗೂ, ಕೆಲಸಗಾರರಿಗೂ ಸಂಬಳ ಕೊಡಲಾಗದೆ ಹೆದರಿ ಬಳ್ಳಾರಿಯಲ್ಲಿದ್ದ ನಾಟಕದ ಕಂಪನಿಗೆ ಹೋಗಿ ಮ್ಯಾನೇಜರ್ ಆಗಿ ಕೆಲಸ ನೋಡಿಕೊಳ್ಳತೊಡಗಿದರು. ಏಳೆಂಟು ತಿಂಗಳು ಸಂಚಾರ ಮಾಡಿಕೊಂಡು ಬೆಂಗಳೂರಿಗೆ ವಾಪಾಸಾಗುವ ವೇಳೆಗೆ ಫಿಲಂ ಕಂಪನಿಯ ಹೊರೆ ಹೆಚ್ಚಿ ತಲೆ ಮೇಲೆ ಕುಳಿತಿತ್ತು. ಪರಿಸ್ಥಿತಿಯ ಗಂಭೀರ ಸ್ವರೂಪದ ಚಿತ್ರ ವೀರಣ್ಣನವರ ಮಾತುಗಳಲ್ಲಿ :

''ನಾನೂ ಸಹ, ನನ್ನ ಜವಾಬ್ದಾರಿ ಕಂಪನಿಯ ಮೇಲೆ ಎಷ್ಟಿದೆಯೆಂಬುದು ಗೊತ್ತಾಗದೆ ಉದಾಸೀನದಿಂದ ಉಪೇಕ್ಷೆ ಮಾಡಿದೆ. ಅದರೂ 'ಮೈ ಛೋಡೇತೋ ಭೀ ಮೇರೆ ಕಂಬಲ್ ನಹೀ ಛೋಡ್ತಾ' ಎನ್ನುವ ಗಾದೆಯಂತೆ ಫಿಲಂ ಕಂಪನಿಯ ಜವಾಬ್ದಾರಿ ನನ್ನನ್ನು ಬಿಟ್ಟು ಕೊಡಲಿಲ್ಲ. ಆಗ ನನಗೆ ತುಂಬಾ ಗಾಬರಿಯಾಗಿ ದಿಕ್ಕೇ ತೋಚದಂತಾಗಿ ಕಂಪನಿಯ ಜವಾಬ್ದಾರಿ ನನಗೆ ಎಷ್ಟರ ಮಟ್ಟಿಗೆ ಇದೆಯೆಂಬುದನ್ನು ತಿಳಿದು



(ಚಿತ್ರ ೫) 'ಸಾಂಗ್ ಆಫ್ ಲೈಫ್' ಚಿತ್ರದಲ್ಲಿ ಲಲಿತಾ ಪವಾರ್, ಜಿ.ಪಿ.ಪವಾರ್ ಮತ್ತು ಹೆಚ್.ಎಲ್.ಎನ್.ಸಿಂಹ

೧. ಸರ್ಕಾರಿ ದಾಖಲೆಯಲ್ಲಿ 'ಹರಿಮಾಯ' ತಯಾರಕರ ಹೆಸರು 'ಮೈಸೂರು ಪಿಕ್ಚರ್ಸ್ ಕಾರ್ಪೊರೇಷನ್' ಬೆಂಗಳೂರು, ಎಂದಿದೆ.



(ಚಿತ್ರ ೬) 'ಹರಿಮಾಯಾ' ಚಿತ್ರದಲ್ಲಿ ನಟ-ನಿರ್ದೇಶಕ ವೈ.ವಿ.ರಾವ್ (ಕೃಷ್ಣನ ಪಾತ್ರದಲ್ಲಿ)

ದಿಗ್ಭ್ರಾಂತನಾದೆ. ಕಂಪನಿಯ ನಟ-ನಟಿಯರಿಗೆ, ಕೆಲಸಗಾರರಿಗೆ ಕೊಡಬೇಕಾಗಿದ್ದ ಸಂಬಳಸಾರಿಗೆ, ಎರಡು ವರ್ಷದ ಮನೆ ಬಾಡಿಗೆ ಎಲ್ಲಾ ನಿಂತು ಹೋಗಿ ಜನಗಳಲ್ಲಿ ನಮ್ಮ ಫಿಲಂ ಕಂಪನಿಯ ವಿಚಾರ ಅಪಹಾಸ್ಯಕ್ಕೆ ಕಾರಣವಾಯಿತು. ಅಲ್ಲದೆ ಶ್ರೀನಿವಾಸಮೂರ್ತಿಗಳು ನಡೆಸುತ್ತಿದ್ದ ಓರಿಯಂಟಲ್ ಬ್ಯಾಂಕು ಕೂಡಾ ನಿಂತುಹೋಯಿತು. ಆಗ ಅವರು ಕೂಡ ನಿರಾಧಾರವಾಗಿ ಕೈ ಕಳಚಿಕೊಂಡರು. ಆಗ ನಾನೊಬ್ಬನೇ 'ಅನಿಷ್ಟಕ್ಕೆ ಶನೀಶ್ವರ ಗುರಿ' ಎಂಬಂತೆ ಈ ಆಘಾತಕ್ಕೆ ಸಿಕ್ಕಿಕೊಂಡೆ. ಬೆಳಗಾದರೆ ನಟ-ನಟಿಯರ ಕಾಟ, ಕೆಲಸಗಾರರ ಸಂಬಳದ ಕಾಟ, ಮನೆ ಬಾಡಿಗೆ ಬಾಬ್ತಿನ ಕಾಟ, ಕೊಡಕ್ ಫಿಲಂನವರ ಕಾಟ, ಸಾಲದುದಕ್ಕೆ ಎರಡು ಕಂಪನಿಯ ನೂರ ಐವತ್ತು ಜನಗಳ ಕಾಟ. ಇಷ್ಟು ಕಾಟಗಳ ದೆಸೆಯಿಂದಾಗಿ ನಾನು ಪೇಟೆಯಲ್ಲಿ ತಿರುಗಾಡಲೂ ಅವಕಾಶವಿಲ್ಲದೆ ಸೂರ್ಯ ರಶ್ಮಿಯೇ ನನ್ನ ಮೇಲೆ ಬೀಳದಂತೆ ಮನೆಯಲ್ಲಿಯೇ ಕುಳಿತುಕೊಂಡು ರಾತ್ರಿ ಕಾಲದಲ್ಲಿ ಮಾತ್ರ ಥಿಯೇಟರಿಗೆ ಬಂದು ಪಾತ್ರ ಮಾಡುತ್ತಲಿದ್ದೆ. ಫಿಲಂ ಕಂಪನಿಯ ವಿಚಾರ ಪ್ರತಿಯೊಬ್ಬರಿಗೂ ಗೊತ್ತಾಗುತ್ತಾ ಬಂತು. ಪ್ರತಿಯೊಬ್ಬರಿಗೂ ಸಂಬಳ-ಸಾರಿಗೆ ಕೊಡಲಾಗದಿದ್ದರೂ ಊಟಕ್ಕಾದರೂ ಏರ್ಪಾಡು ಮಾಡಬೇಕಾಯಿತು. ಆಗ ಫಿಲಂ ಕಂಪನಿಯವರಿಗೂ ನಾಟಕ ಕಂಪನಿಯಲ್ಲೇ ಊಟಕ್ಕೆ ಏರ್ಪಾಡು ಮಾಡಿ ಕೆಲವು ದಿನಗಳು ಮಾತ್ರ ಕಳೆದೆ. ಅಷ್ಟರೊಳಗೆ ನಮ್ಮ ಸ್ಥಿತಿಗತಿಗಳು ಮನೆಯ ಮಾಲೀಕರಿಗೆ ಗೊತ್ತಾಗಿ ಐದು ಸಾವಿರ ರೂಪಾಯಿಗಳಿಗೆ (೫,೦೦೦) ದಾವಾ ಹಾಕಲಾಯಿತು. ಹಾಗಾದರೂ ನಾನು ಮರ್ಯಾದೆಗೆ ಹೆದರಿ ಕೋರ್ಟ್‌ಗೆ ಹೋಗಲಿಲ್ಲ. ಎಕ್ಸ್‌ಪಾರ್ಟೆ ಡಿಕ್ರಿಯಾಯಿತು. ಹೀಗೆ ಕೆಲವು ದಿನಗಳಾದ ನಂತರ ಎಲ್ಲಾ ಜನಗಳ ಬಾಯಲ್ಲಿಯೂ 'ವೀರಣ್ಣನವರು ತರ್ಲೆ ವ್ಯಕ್ತಿಯಾದರು; ಇನ್ನೇನು ಮೇಲೆ ಏಳುವಂತಿಲ್ಲ . ಹನ್ನೆರಡಾಣೆ ಚೀಟಿಯನ್ನು ಈವತ್ತೋ ನಾಳೆಯೋ ತಗೊಳ್ತಾರೆ. ಇನ್‌ಸಾಲ್‌ವೆನ್ಸಿಗೆ ಅರ್ಜಿ ಹಾಕುತ್ತಾರೆ. (ಪಾಪರ್ ಚೀಟಿ ತೆಗೆದು ಕೊಳ್ಳುತ್ತಾರೆ)' ಎಂಬ ಕೂಗು ಜನಜನಿತವಾಗಿ ಈ ಮಾತು ನನ್ನ ಕಿವಿಗೂ ತಾಕಿತು.''

ಆಗ ಸ್ವಾಭಿಮಾನಿಯಾದ ವೀರಣ್ಣನವರ ಮಾನಸಿಕ ಸ್ಥಿತಿ ಹೇಗಿದ್ದಿರಬಹುದು ಎಂಬುದನ್ನು ಊಹಿಸುವುದು ಕಷ್ಟವಲ್ಲ.

''ಒಂದೊಂದು ಸಾರಿ ವಿಷಪಾನದಿಂದ ಆತ್ಮಹತ್ಯೆಯ ಯೋಚನೆ ಸದಾ ನನ್ನ ಕಣ್ಣ ಮುಂದೆ ಹಾದು ಹೋಗುತ್ತಿತ್ತು. ರಾತ್ರಿ ಕಳೆದು ಬೆಳಗಾಯಿತೆಂದರೆ ಸಾಲಗಾರರ ಹಾಡೇ ಹೇಳತೀರದಂತಾಯಿತು. ಆಗ ಬಾಲ ಕಲಾವಿವರ್ಧಿನಿಯನ್ನು ನಿಲ್ಲಿಸಲು ಸಹಾ ಯೋಚಿಸಿದೆ. ನಿಲ್ಲಿಸಿದರೆ ಜನಗಳಿಗೆ ಮತ್ತಷ್ಟು ಸಂದೇಹ, ಕಳವಳಕ್ಕೆ ಕಾರಣವಾಗಬಹುದೆಂದು ಕೊನೆಗೆ 'ಧೈರ್ಯಂ ಸರ್ವತ್ರ ಸಾಧನಂ' ಎಂದು ಧೈರ್ಯ ಮಾಡಿ ನಮ್ಮ ಹೆಂಗಸರ ಬಳಿಯಿದ್ದ ಡಾಬುಗಳನ್ನೂ, ಕಾಸಿನ ಸರ, ಬಳೆಗಳನ್ನೂ ಮಾರಿದ್ದೂ ಅಲ್ಲದೆ ನನಗೆ ಮಹಾಜನಗಳಿಂದ ಬಂದಿದ್ದ ಮೆಡಲ್‌ಗಳನ್ನೂ ಅಡವಿಟ್ಟು ಮೂರು ಸಾವಿರ ರೂಪಾಯಿ ತಂದು, ಮತ್ತು ಮುಲ್ತಾನಿ ಸೇಟುಗಳು ನಾಲ್ಕು ಜನರುಗಳಲ್ಲಿ ಎರಡು ಸಾವಿರ ರೂಪಾಯಿನಂತೆ ಎಂಟು ಸಾವಿರ ರೂಪಾಯಿಗಳನ್ನು ತಂದು ಫಿಲಂ ಕಂಪನಿಯ ನಟ-ನಟಿಯರಿಗೂ, ನೌಕರರಿಗೂ ಕೊಡಬೇಕಾಗಿದ್ದ ಸಂಬಳವನ್ನು ಕೊಟ್ಟು ಅರ್ಧ ಹಿಂಸೆ ಕಡಿಮೆ ಮಾಡಿಕೊಂಡೆ. ಇನ್ನು ಮನೆ ಮಾಲೀಕರ ಹತ್ತಿರ ಹೋಗಿ ಅವರನ್ನು ಒಡಂಬಡಿಸಿ ಬಾಡಿಗೆ ಬಾಬ್ತಿನಲ್ಲಿ• ಚಿಲ್ಲರೆಯಾಗಿ ಮೂರು ಸಾವಿರ ರೂಪಾಯಿಗಳನ್ನಿತ್ತು, ''ನಿಮಗೆ ಕೊಡಬೇಕಾದ ಐದು ಸಾವಿರ ಚಿಲ್ಲರೆ ರೂಪಾಯಿಗಳಲ್ಲಿ ಇಷ್ಟನ್ನು ತೆಗೆದುಕೊಳ್ಳಿ. ಉಳಿದಿದ್ದನ್ನು ಕೆಲವೇ ದಿನಗಳಲ್ಲಿ ಕೊಟ್ಟು ಬಿಡುತ್ತೇನೆ'' - ಎಂದು ಹೇಳಿ ಅದನ್ನೂ ಕಂತಿನ ಮೂಲಕ ಮುಟ್ಟಿಸಿ ಬಿಟ್ಟೆ. ಅಲ್ಲಿಗೆ ನಾನು ನಿರರ್ಗಳವಾಗಿ ಉಸಿರು ಬಿಡುವಂತಾಯಿತಾದರೂ ಕೊಡಕ್ ಫಿಲಂ ಕಂಪನಿಗೆ ಕೊಡಬೇಕಾದ ಹಣ, ಇತರೆ ಚಿಲ್ಲರೆ ಸಾಲಗಳನ್ನೆಲ್ಲಾ ಕೊಟ್ಟು ಫಿಲಂ ಕಂಪನಿಯನ್ನು ನಾನೇ ವಹಿಸಿಕೊಂಡುದಾಯ್ತು. ಇಷ್ಟಕ್ಕೆ ಸುಮಾರು ಒಂದು ಲಕ್ಷ ರೂಪಾಯಿ ಸಾಲವಾಯಿತು''.

ಚಿತ್ರ ತಯಾರಿಕೆ ವೀರಣ್ಣನವರ ಪಾಲಿಗೆ ಕೆಟ್ಟ ಕನಸಾಯಿತು. ಆದರೆ ಅವರು ಧೃತಿಗೆಡಲಿಲ್ಲ. ಆ ವೇಳೆಗಾಗಲೇ ವಾಕ್ಚಿತ್ರಗಳ ಯುಗಾರಂಭವಾಗಿತ್ತು. ನಾಟಕದ ಜೊತೆಯಲ್ಲಿಯೇ ಸಿನಿಮಾ ಮಾಧ್ಯಮದಲ್ಲಿ ಕೃಷಿ ಮಾಡಿದರು, ಯಶಸ್ಸು ಗಳಿಸಿದರು.

'ಸದಾರಮೆ' (೧೯೩೫) ಕನ್ನಡದಲ್ಲಿ ತೆರೆಕಂಡ ಮೂರನೆ ಚಿತ್ರ. ನಾಟಕದಷ್ಟೇ ಜನಪ್ರಿಯವಾಯಿತು. ಗುಬ್ಬಿ ಸಂಸ್ಥೆಯ ಆಶ್ರಯದಲ್ಲಿ ಹಾಗೂ ಇತರ ನಿರ್ಮಾಣ ಸಂಸ್ಥೆಗಳ ನೆರವಿನಿಂದ ಅವರು 'ಸುಭದ್ರ' (೧೯೪೧), 'ಜೀವನ ನಾಟಕ' (೧೯೪೨), 'ಹೇಮರೆಡ್ಡಿ ಮಲ್ಲಮ್ಮ' (೧೯೪೫), 'ಗುಣಸಾಗರಿ' (೧೯೫೩), 'ಬೇಡರ ಕಣ್ಣಪ್ಪ' (೧೯೫೪) ಮೊದಲಾದ ಚಿತ್ರಗಳನ್ನು ನಿರ್ಮಿಸಿ ಕನ್ನಡ ಚಿತ್ರೋದ್ಯಮಕ್ಕೆ ಅಪೂರ್ವ ಕಾಣಿಕೆ ನೀಡಿದ್ದಾರೆ.

ಪ್ರದರ್ಶನ ಕ್ಷೇತ್ರದಲ್ಲೂ ಅವರು ಯಶಸ್ವಿ. ಬೆಂಗಳೂರಿನಲ್ಲಿ ಶಿವಾನಂದ (ಈಗಿನ ಮೂವಿಲ್ಯಾಂಡ್), ಸೆಲೆಕ್ಟ್ (ಗೀತಾ), ಸಾಗರ್ ಚಿತ್ರಮಂದಿರಗಳನ್ನು ಮತ್ತು ತುಮಕೂರಿನಲ್ಲಿ ಪ್ರಸನ್ನ, ತಿಪಟೂರಿನಲ್ಲಿ ವಿನೋದ ಚಿತ್ರಮಂದಿರಗಳನ್ನು ವಾಕ್ಚಲನ ಚಿತ್ರದ ಆರಂಭದ ದಿನಗಳಲ್ಲೇ ನಿರ್ಮಿಸಿದ್ದರೆನ್ನುವುದು ಗಮನೀಯ.

ಕರ್ನಾಟಕ ಫಿಲಂಸ್ ಚಲನಚಿತ್ರಗಳ ನಿರ್ಮಾಣ, ಹಂಚಿಕೆ ಕಾರ್ಯ ನಿರ್ವಹಣೆಗಾಗಿ ಸ್ಥಾಪಿತವಾದ ಪಬ್ಲಿಕ್ ಲಿಮಿಟೆಡ್ ಕಂಪನಿ. ಇದು ವೀರಣ್ಣನವರ ಕಲ್ಪನೆಯ ಕೂಸು. ನಟ ರಾಜಕುಮಾರ್ ಸೇರಿದಂತೆ ಜಿ.ವಿ.ಅಯ್ಯರ್, ಬಾಲಕೃಷ್ಣ, ನರಸಿಂಹರಾಜು, ಬಿ.ವಿ.ಕಾರಂತ್ ಕನ್ನಡ ಚಿತ್ರರಂಗದ ಅನೇಕ ಖ್ಯಾತನಾಮರು ಗುಬ್ಬಿ ಕಂಪನಿಯಲ್ಲಿ ಅರಳಿದವರು.

ಚಿತ್ರೋದ್ಯಮಕ್ಕೆ ವೀರಣ್ಣನವರು ನೀಡಿದ ವಿಶಿಷ್ಟ ಕೊಡುಗೆಯನ್ನು ಗಮನಿಸಿ ಕರ್ನಾಟಕ ಸರ್ಕಾರ ಒಂದು ಲಕ್ಷ ರೂಪಾಯಿ ಗೌರವ ಧನವಿರುವ ಗುಬ್ಬಿ ವೀರಣ್ಣ ಪ್ರಶಸ್ತಿ ಸ್ಥಾಪಿಸಿದೆ. ಚಲನಚಿತ್ರರಂಗದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದವರಿಗಾಗಿ ಮೀಸಲಾಗಿದ್ದ ಈ ಪ್ರಶಸ್ತಿಯು ಈಗ ರಂಗಭೂಮಿಯ ಕ್ಷೇತ್ರದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದವರಿಗೆ ಮೀಸಲಾಗಿದೆ.



(ಚಿತ್ರ ೭) ಪ್ರಯೋಗಶೀಲ ಶಿವರಾಮಕಾರಂತ

## ಸಾಹಸಿ ಸಾಹಿತಿ

ಉದ್ದಾಮ ಸಾಹಿತಿಗಳೂ ಮುಂದೆ ಜ್ಞಾನಪೀಠ ಪ್ರಶಸ್ತಿ ವಿಜೇತರೂ ಆದ ಕೆ.ಶಿವರಾಮ ಕಾರಂತರಿಗೆ ಚಲನಚಿತ್ರ ಮನರಂಜನೆ ಮೂಲಕ ಅರಿವು ಮೂಡಿಸುವ ಮಾಧ್ಯಮವಾಗಿ ಆಸಕ್ತಿ

(ಚಿತ್ರ ೮) 'ವಸಂತಸೇನಾ' ಚಿತ್ರದ ವಿವಿಧ ದೃಶ್ಯಗಳನ್ನೊಳಗೊಂಡ ಪ್ರಚಾರ ಮಡಿಕೆ ಪತ್ರ. ಕೆಳಭಾಗದ ಚಿತ್ರಗಳಲ್ಲಿ - ಜೆ.ಕೆ.ನಂದಾ (ಚಾರುದತ್ತ), ವಿಶಾಕ್ಷಿರಾಮರಾವ್ (ವಸಂತಸೇನಾ), ಕೈಲಾಸಂ (ಶಕಾರ).



ಮೂಡಿಸಿತ್ತು. ಹಲವು ವಿಧದ ಪ್ರಚಾರ ಕೈಗೊಂಡ ಕಾರಂತರು ಗ್ರಾಮೀಣ ಜನತೆಗೆ ಹೈನುಗಾರಿಕೆ, ಕೋಳಿ ಸಾಕಣೆ, ಕೃಷಿ ಇತ್ಯಾದಿಗಳ ಬಗ್ಗೆ ತಿಳಿವಳಿಕೆ ಕೊಡಲು ಪ್ರಯತ್ನಿಸಿದ್ದರು. ಬರ್ಲಿನ್‌ನಲ್ಲಿದ್ದ ತಮ್ಮ ಗೆಳೆಯ ಆಚಾರ್ಯ ಎಂಬುವವರಿಂದ ರಷ್ಯಾದ ಶೈಕ್ಷಣಿಕ ಚಿತ್ರಗಳ ವಿವರಗಳನ್ನು ತರಿಸಿಕೊಂಡ ಕಾರಂತರು ರಷ್ಯಾದಿಂದ ಚಿತ್ರ ನಿರ್ದೇಶನದ ವಿವರಗಳನ್ನು ತರಿಸಿ ಓದಿದರು. ಖ್ಯಾತ ನಿರ್ದೇಶಕ ಪುಡೋವ್ಕಿನ್‌ನ 'ಫಿಲಂ ಟೆಕ್ನಿಕ್' ಗ್ರಂಥ ಮತ್ತು ಐಸೆನ್‌ಸ್ಟೈನ್‌ನ ಕೃತಿಗಳನ್ನು ಅಭ್ಯಾಸ ಮಾಡಿದರು.

ಒಂದಿಷ್ಟು ಹಣ ಹೊಂಚಿಕೊಂಡು ಒಂದು ಸಿನಿಕ್ಯಾಮರಾ ಕೊಂಡರು. ಕಾರಂತರಿಗೆ ಮೂವೀ ಕ್ಯಾಮರಾದ ಕೆಲಸ ತುಂಬಾ ಕಷ್ಟವೇನೂ ಆಗಿರಲಿಲ್ಲ. ಅಸ್ಪೃಶ್ಯತೆಯ ಬಗ್ಗೆ ಒಂದು ಚಿತ್ರಕಥೆ ಬರೆದರು. ಕೆಲವು ಸ್ನೇಹಿತರನ್ನು ಅಭಿನಯಿಸಲು ಹೇಳಿ ಚಿತ್ರ ತೆಗೆದರು. ಫಿಲ್ಮನ್ನು ಸಂಸ್ಕರಿಸಿ ಮುಂಬಯಿಗೆ ಮುದ್ರಣಕ್ಕೆ ಕಳಿಸಿದರು. ಚಿತ್ರ ತೆರೆಯ ಮೇಲೆ ಮೂಡಿದಾಗ ಹೆದ್ದುಂಬಿಗಳ ಹಿಂಡು ಹಾರಿದಂತೆ ಕಾಣುತ್ತಿತ್ತಂತೆ. ಅದನ್ನು ಮರು ಚಿತ್ರಿಸಿ ಮುಂಬಯಿಗೆ ಕಳಿಸಿ, ಮುದ್ರಿಸಿ, ಜೋಡಿಸಿ ತಂದರಂತೆ. ಈ ಚಿತ್ರದ ಹೆಸರು 'ಡೊಮಿಂಗೊ'. ಈ ಪ್ರಯತ್ನದಲ್ಲಿ ಒದಗಿದ ತೊಡಕುಗಳನ್ನು ನಿವಾರಿಸಿಕೊಳ್ಳಲು ಅವರಿಗೆ ಇನ್ನೂ ಹೆಚ್ಚು ಕಲಿಯಬೇಕು ಎನ್ನಿಸಿತು. ಕಾರಂತರು ಮುಂಬಯಿಗೆ ತೆರಳಿದರು. ಅಲ್ಲಿ ಕೊಡಕ್ ಕಂಪನಿಯ ಮ್ಯಾನೇಜರ್ ಪೀಟರ್ ಹಾಗೂ ಫಿಲ್ಮ್ ಡಿವಿಜನ್ನಿನ ಸೇನ್ ಜೆನಿತ್ ಎಂಬುವವರ ನೆರವಿನಿಂದ ಫಿಲ್ಮ್ ಪ್ರೋಸೆಸಿಂಗ್ ಕಲಿತರು. ಸ್ಟಾಂಡರ್ಡ್ ಲ್ಯಾಬೊರೇಟರೀಸ್‌ನಲ್ಲಿ ಕೆಲವು ತಿಂಗಳುಗಳ ಕಾಲ ಇದ್ದರು. ಬೆಳ್ತಂಗಡಿಯಲ್ಲಿ ನಡೆದ ಮಕ್ಕಳ ಕೂಟದಲ್ಲಿ ಚಿತ್ರ ಪ್ರದರ್ಶಿಸಲು ಪ್ರಯತ್ನಿಸಿದರು. ಆದರೆ ಮುಂಬಯಿಯಿಂದ ಸಾಗಿಸುವಾಗ ಚಿತ್ರದ ಪ್ರಿಂಟ್ ಕೊಂಚ ಹಾಳಾಗಿತ್ತು. ಚಿತ್ರ ಪ್ರದರ್ಶಿಸಲು ಆಗಲಿಲ್ಲ.

ಇಷ್ಟಾದರೂ ಕಾರಂತರಿಗೆ ಕಥಾಚಿತ್ರ ಮಾಡುವ ಹಂಬಲ ದೂರವಾಗಲಿಲ್ಲ. ಬಿಡುವಾದಾಗೆಲ್ಲ ಚಿತ್ರಕಥೆಗಳನ್ನು ಬರೆದಿಟ್ಟರು. ಹೆಚ್ಚಿನ ದೃಶ್ಯಗಳು, ಕಲಾವಿದರು ಇದ್ದರೆ ಹೆಚ್ಚು ಹಣ ಬೇಕು ಎಂಬ ಚಿಂತೆ. ಆದರೂ ಫ್ಯಾಂಟಸಿಯಂಥ ಕಥಾಭಾಗ ಇರುವ 'ಭೂತರಾಜ್ಯ' ಕೈಗೆತ್ತಿಕೊಂಡು ನಾಲ್ಕಾರು ರಂಗನಟರನ್ನು ಸೇರಿಸಿಕೊಂಡು ಕೆಲಸ ಪ್ರಾರಂಭಿಸಿದರು. ಅವರೇ ನಟ, ನಿರ್ದೇಶಕ ಮತ್ತು ಛಾಯಾಗ್ರಾಹಕ. ಸ್ವತಃ ಸ್ಟಿಲ್ ಕ್ಯಾಮರಾ ಅದರಿಂದ ಅವರು ಎಲ್ಲ ಸಿದ್ಧ ಮಾಡಿಟ್ಟು ಅಭಿನಯಿಸಲು ಪ್ರಾರಂಭಿಸಿದಾಗ ಗುಂಡಿಯೊತ್ತಲು ಒಬ್ಬ ಮಿತ್ರನಿಗೆ ಹೇಳಿಕೊಟ್ಟರು. ಪುತ್ತೂರಿನಲ್ಲಿ ಸೆಟ್ ಹಾಕಿ ಒಳಾಂಗಣ ಭಾಗಗಳನ್ನು ಚಿತ್ರಿಸಿಕೊಂಡರು. ಚಿತ್ರ ತೆಗೆದ ಹಾಗೆ ಮುಂಬಯಿಗೆ ಫಿಲ್ಮ್ ರೋಲ್‌ಗಳನ್ನು ಕಳಿಸಿ ಅವು ಸರಿಯಾಗಿವೆಯೇ ಎಂಬುದಕ್ಕೆ ತಂತಿ ಮೂಲಕ ಉತ್ತರ ತರಿಸಿಕೊಳ್ಳುತ್ತಿದ್ದರು. ಚಿತ್ರೀಕರಣ ಮುಗಿಸಿಕೊಂಡು ತಾವೇ ಹೋಗಿ ಮುಂಬಯಿನಲ್ಲಿ ಒಂದೆರಡು ತಿಂಗಳವರೆಗೆ ಕೂತು ಎಡಿಟಿಂಗ್ ಸಹ ಮಾಡಿದರು. ಸುಮಾರು ಎಂಟು ಸಾವಿರ ಅಡಿ ಉದ್ದದ ಚಿತ್ರ ಸಿದ್ಧವಾಗಿತ್ತು. ಛಾಯಾಗ್ರಹಣ ಇತ್ಯಾದಿ ಚೆನ್ನಾಗಿತ್ತಾದರೂ ಕತೆಯೇ ತೀರಾ ದುರ್ಬಲವಾಗಿತ್ತೆನ್ನಿಸಿತಂತೆ. ಮತ್ತೂ ಅದರ ಮೇಲೆ ಹಣ ತೊಡಗಿಸುವುದು ಸಾಧ್ಯವಿರಲಿಲ್ಲ. ಅಲ್ಲಿಯವರೆಗೆ ಮೂರೂವರೆ ಸಾವಿರ ರೂಪಾಯಿಗಳು ಖರ್ಚಾಗಿದ್ದವು.

ಈ ಚಿತ್ರಕ್ಕೆ ಕಲ್ಕತ್ತೆಯ ಗಿರಾಕಿಯೊಬ್ಬ ಸಿಕ್ಕಿದನಂತೆ. ಆದರೆ ಅದೇ ಸಮಯಕ್ಕೆ ಮುಂಬಯಿಯಲ್ಲಿ ಮೊದಲ ವಾಕ್ಚಿತ್ರ 'ಆಲಂ ಆರಾ' ತೆರೆ ಕಂಡಿದರಿಂದ ಮೂಕಿ ಚಿತ್ರಗಳಿಗೆ ಬೇಡಿಕೆ ಕಡಿಮೆ ಆಯಿತು. ಕಾರಂತರು ನಿರಾಶೆಯಿಂದ ಹಿಂತಿರುಗಿದರು. ಮಂಗಳೂರಿನಲ್ಲಿ ಚಿತ್ರ ಪ್ರದರ್ಶನ ಮಾಡಿದ್ದೂ ಆಯಿತು. ಆದರೆ ಅದುವರೆಗೆ ಚಿತ್ರವೆಂದರೆ ಪೌರಾಣಿಕ ಕಥಾನಕಗಳೇ ಆಗಿದ್ದರಿಂದ ಜನ ಬಯಸುವ ದೇವತೆಗಳೇ ಇರದ ಚಿತ್ರ ಆ ಜನರಿಗೆ ಹಿಡಿಸಲಿಲ್ಲ. ಗೆಳೆಯನೊಬ್ಬ ತನ್ನ ನೃತ್ಯ ತಂಡದ ಜೊತೆ ಈ ಚಿತ್ರವನ್ನೂ ಕೊಂಡೊಯ್ಯುತ್ತ ಊರೂರಿನಲ್ಲಿ ಒಂದು ವರ್ಷದ ಕಾಲ ಪ್ರದರ್ಶನ ನೀಡಿದ. ಆತನಿಗೆ ಕೊಟ್ಟ ಮುಂಗಡ ಹಣವೂ ಬರಲಿಲ್ಲ. ಆತ ಪ್ರದರ್ಶನದಿಂದ ಸಂಪಾದಿಸಿರಬಹುದಾದ ಹಣವೂ ಇವರಿಗೆ ಬರಲಿಲ್ಲ. ಅನಂತರ ಚಿತ್ರವನ್ನು ದೆಹಲಿಯ ವಿತರಕನೊಬ್ಬ ಕೊಂಡು ಹೋದ. ಆತನ ಸುದ್ದಿಯೇ ಇಲ್ಲ. ದೆಹಲಿಗೆ ಹೋಗಿ ವಿಚಾರಿಸಿದರೆ ಈ ಚಿತ್ರವನ್ನೇ ಆತ ಯಾರಲ್ಲೋ ಅಡವಿಟ್ಟಿದ್ದನಂತೆ. ಕಾರಂತರು ಆ ಹಣವನ್ನು ಕೊಟ್ಟು ಚಿತ್ರವನ್ನು ಬಿಡಿಸಿ ತಂದರು.

### ವಸಂತಸೇನಾ

ಮತ್ತೊಂದು ಗಮನಾರ್ಹ ವ್ಯಕ್ತಿಕ ಸಾಧನೆಯೆಂದರೆ ಶೂದ್ರಕನ 'ಮೃಚ್ಛಕಟಿಕ' ಸಂಸ್ಕೃತ ನಾಟಕವನ್ನು ಆಧರಿಸಿದ 'ವಸಂತಸೇನಾ' (೧೯೪೧) ಚಿತ್ರದ ತಯಾರಿಕೆ. ಈ ಚಿತ್ರವನ್ನು ತಯಾರಿಸಿದವರು ಮುಂಬಯಿನ ಮೋಹನ್ ಭವನಾನಿ. ಇವರು (ಚಿತ್ರ ತಯಾರಿಕೆಯಲ್ಲಿ) ಜರ್ಮನಿಯಲ್ಲಿ ತರಬೇತಿ ಪಡೆದಿದ್ದರು. ಬೆಂಗಳೂರಿಗೆ ಬರುವ ಮೊದಲು ಅವರು ಮುಂಬಯಿಯ ಕೋಹಿನೂರು ಫಿಲಂ ಕಂಪನಿ ಮತ್ತು ಇಂಪೀರಿಯಲ್ ಫಿಲಂ ಕಂಪನಿಗಳಿಗಾಗಿ ಚಿತ್ರಗಳನ್ನು ನಿರ್ದೇಶಿಸುತ್ತಿದ್ದರು. ಭವನಾನಿ ೧೯೨೮ರಲ್ಲಿ ಬ್ರಿಟಿಷ್ ಪ್ರಜೆಯಾದ ಚಾರ್ಲ್ಸ್ ಮರ್ರೆ ಎಂಬುವರೊಡನೆ ಮೈಸೂರು ದಸರಾ ನೋಡಲು ಬಂದಿದ್ದರು. ಅವರಿಗೆ ಮೈಸೂರು ದಸರಾ ಅದ್ದೂರಿ ಮೆರವಣಿಗೆ ಆಕರ್ಷಣೆಯಾಯಿತು. ಆ ಮೆರವಣಿಗೆಯ ಬಗ್ಗೆ ಎರಡು ರೀಲು ಸಾಕ್ಷ್ಯಚಿತ್ರವನ್ನು ತಯಾರಿಸಿದರು. ಮೈಸೂರು ಅರಮನೆಯವರು ಅವರ ಈ ಪ್ರಯತ್ನವನ್ನು ಮೆಚ್ಚಿದರು. ಅರಮನೆಗೂ ಭವನಾನಿಯವರಿಗೂ ನಂಟು ಬೆಳೆಯಿತು. ಅವರು ಅನಂತರ ಆನೆಗಳನ್ನು ಸೆರೆ ಹಿಡಿಯುವ ಖೆಡ್ಡಾ ಬಗ್ಗೆ ಒಂದು ಸಾಕ್ಷ್ಯ ಚಿತ್ರವನ್ನು ತಯಾರಿಸಿದರು. ಮೈಸೂರಿನ ಈ ಅನುಭವ ಅವರಿಗೆ ಒಂದು ಕಥಾಚಿತ್ರವನ್ನು ಮಾಡಲು ಪ್ರೇರೇಪಿಸಿತು. ಟಿ.ಪಿ.ಕೈಲಾಸಂ ಅವರ ಸಂಪರ್ಕ ಬೆಳೆಯಿತು. ಕೈಲಾಸಂ ಅವರು ಶೂದ್ರಕನ ನಾಟಕ 'ಮೃಚ್ಛ ಕಟಿಕ' ಚಿತ್ರಿಸಲು ಸೂಚಿಸಿದರು.

ಆ ದಿನಗಳಲ್ಲಿ ಚಿತ್ರ ತಯಾರಿಕೆ ಕೇವಲ ಹಣ ಮಾಡುವ ಗುರಿಯನ್ನು ಹೊಂದಿತ್ತು. ಆಗ ತಯಾರಾಗುತ್ತಿದ್ದುದು ಬರೀ ಹೊಡೆದಾಟ ಬಡಿದಾಟದ ಚಿತ್ರಗಳು, ಪುರಾಣ ಕಥೆಗಳು, ಅದ್ಭುತ ಮನರಂಜನೆಗಳು ಮಾತ್ರ. ಅವು ಬಹುತೇಕ ಒರಟು ಚಿತ್ರಗಳಾಗಿರುತ್ತಿದ್ದವು. ಅವುಗಳಲ್ಲಿ ಕಲೆ ಮತ್ತು ಸದಭಿರುಚಿ ಇರುತ್ತಿರಲಿಲ್ಲ. ಆದರೆ 'ವಸಂತಸೇನಾ' ಇದಕ್ಕೆ ಒಂದು ಅಪವಾದವಾಗಿತ್ತು. ಭವನಾನಿ ಓರ್ವ ಸುಸಂಸ್ಕೃತ ವ್ಯಕ್ತಿಯಾಗಿದ್ದರು. ಕೇವಲ ಕುಸ್ತಿ ಮಾಡುವ ಜಟ್ಟಿಗಳು ನಟಿಸುತ್ತಿದ್ದ ಕಾಲದಲ್ಲಿ ಆತ ಪದವೀಧರರನ್ನು ಮಾತ್ರ ಚಿತ್ರದಲ್ಲಿ ನಟಿಸಲು ಆಯ್ಕೆ ಮಾಡಿದ್ದರು. ಡಾ||ಎಂ.ಶಿವರಾಂ ಹೇಳುವಂತೆ ''ನನ್ನನ್ನೂ ಪಾತ್ರ ವರ್ಗಕ್ಕೆ ಆಯ್ಕೆ ಮಾಡಿದ್ದರು. ಪುಣೆಯ ಓರ್ವ ಕಲಾವಿದೆಯೊಡನೆ ಒಂದೆರಡು ದಿನಗಳ ಅಭ್ಯಾಸ ಸಹ ನಡೆದಿತ್ತು. ಆದರೆ ಕೈಲಾಸಂ ಅವರು ನನ್ನ ಅಭಿನಯದ ಕನಸಿಗೆ ಕಲ್ಲು ಹಾಕಿದರು''. ಕೈಲಾಸಂ ಉದ್ದೇಶ ಶಿವರಾಂ ತನ್ನ ವೈದ್ಯಕೀಯ ಶಿಕ್ಷಣವನ್ನು ಮುಗಿಸಿ ಡಾಕ್ಟರ್ ಆಗಬೇಕೆನ್ನುವುದಿತ್ತು. ಆದರಿಂದ ''ಶಿವರಾಂ ಇದ್ದರೆ ನಾನು ಬರುವುದಿಲ್ಲ.'' ಎಂದು ಪಟ್ಟು ಹಿಡಿದರಂತೆ. ಭವನಾನಿಗೆ ಕೈಲಾಸಂ ಅವರನ್ನು ಬಿಟ್ಟು ಕೊಡಲು ಇಷ್ಟವಿರಲಿಲ್ಲ. ಆದ್ದರಿಂದ ಅಂತಿಮವಾಗಿ ಶಿವರಾಂ ಅವರನ್ನು ಕೈಬಿಟ್ಟರು.

ಕೈಲಾಸಂ ಮತ್ತು ಭವನಾನಿ ಇಬ್ಬರೂ ಸೇರಿ ಅಂದಿನ ಹಿರಿಯ ಕಲಾ ವಿಮರ್ಶಕರಾದ ಜಿ.ವೆಂಕಟಾಚಲಂ ಅವರ ಸೇವೆಯನ್ನು ಪಡೆಯುವಲ್ಲಿ ಯಶಸ್ವಿಯಾದರು. ವೆಂಕಟಾಚಲಂ ಅಜಂತಾ ಗುಹಾಂತರ ಕಲೆಗಳ ಬಗ್ಗೆ ಪರಿಣಿತರಾಗಿದರು. ವಸಂತಸೇನಾ ಕಥೆಯು ಇದೇ ಕಾಲಮಾನಕ್ಕೆ ಸೇರಿದ್ದೆಂದು ಹೇಳಲಾಗುತ್ತದೆ. ಆದ್ದರಿಂದ ವೆಂಕಟಾಚಲಂ ಅವರ ಆಯ್ಕೆ ಅತ್ಯಂತ ಸೂಕ್ತವಾದುದು. ವೆಂಕಟಾಚಲಂ ಅವರು ಈಗಿನ ರಿಚ್ಮಂಡ್ ರಸ್ತೆಯಲ್ಲಿರುವ ದಿಲ್‌ಖುಶ್ ಬಂಗಲೆಯ ಆವರಣದಲ್ಲಿ ಚಿತ್ರಕ್ಕೆ ಅಗತ್ಯವಾದ ಸೆಟ್ಟುಗಳನ್ನು ನಿರ್ಮಿಸಿದರು. ಅವರೇ ಚಿತ್ರಕ್ಕೆ ಬೇಕಾಗುವ ವೇಷ-ಭೂಷಣಗಳನ್ನು ಸಿದ್ಧಪಡಿಸಿದರು.

ಚಿತ್ರೀಕರಣಕ್ಕೆ ಬೆಲ್ ಮತ್ತು ಹೊವೆಲ್ ಕ್ಯಾಮರಾವನ್ನು ಬಳಸಲಾಗಿತ್ತು. ಜರ್ಮನಿಯ ವೈಲಿ ಎಂಬ ತಂತ್ರಜ್ಞ ಛಾಯಾಗ್ರಹಣವನ್ನು ನಿರ್ವಹಿಸಿದ. ಮೈಸೂರು ಸಾಂಪ್ರದಾಯದ ಭರತನಾಟ್ಯ ಶೈಲಿಯ ನಾಟ್ಯಗುರು ಜಟ್ಟಿ ತಾಯಮ್ಮ ಈ ಚಿತ್ರದ ನೃತ್ಯಗಳನ್ನು ಸಂಯೋಜಿಸಿದ್ದರು. ಐರ್ಲೆಂಡಿನ ಕವಿ ಜೇಮ್ಸ್ ಎಚ್.ಕಸಿನ್ಸ್ ಈ ಚಿತ್ರದ ವ್ಯಾಖ್ಯಾನವನ್ನು ಬರೆದಿದರು. ಪ್ರೊ|ವಿ.ಸೀತಾರಾಮಯ್ಯ ಮತ್ತು ವಿ.ವೆಂಕೋಬರಾವ್ ಅವರು ಸಲಹೆಗಾರರಾಗಿದ್ದರು.

ಚಿತ್ರದ ಹೆಚ್ಚುಗಾರಿಕೆಯೆಂದರೆ ಅದರ ತಾರಾಗಣ. ಆಗಿನ ಕಾಲದ ಪ್ರಜ್ಞಾಶಾಲಿಗಳು ಎನಿಸಿಕೊಂಡವರೆಲ್ಲಾ ಚಿತ್ರದಲ್ಲಿ ಅಭಿನಯಿಸಿದರು. ಹವ್ಯಾಸಿ ನಾಟಕ ರಂಗಕ್ಕೆ ತಿರುವನ್ನು ಕೊಟ್ಟ ಟಿ.ಪಿ.ಕೈಲಾಸಂ ಅವರೇ ಶಕಾರನ ಪಾತ್ರವನ್ನು ವಹಿಸಬೇಕೆಂಬುದು ಭವನಾನಿ ಉದ್ದೇಶವಾಗಿತ್ತು. ಅದರಂತೆ ಅವರು ಯಶಸ್ವಿಯಾದರು. ನಾಟಕ ಹಾಗೂ ನೃತ್ಯ ರಂಗದ ಅನುಭವವಿದ್ದ ವಿಶಾಕ್ಷಿ ರಾಮರಾವ್ ವಸಂತಸೇನೆ ಪಾತ್ರವನ್ನು ವಹಿಸಿದರು. ಹಿಂದಿ ಚಿತ್ರಗಳನ್ನು ನಿರ್ದೇಶಿಸಿದ ಜೆ.ಕೆ.ನಂದಾ ಚಾರುದತ್ತನ ಪಾತ್ರವನ್ನು ವಹಿಸಿದರು. ಮನಶ್ಶಾಸ್ತ್ರ ಪ್ರಾಧ್ಯಾಪಕರಾದ ಡಾ|ಎನ್.ಎಸ್.ನಾರಾಯಣಶಾಸ್ತ್ರಿ ಅವರು ದೊರ ಪಾಲಕನ ಪಾತ್ರವನ್ನು ನಿರ್ವಹಿಸಿದರು. ಕಮಲಾದೇವಿ ಚಟ್ಟೋಪಾಧ್ಯಾಯ, ನಳಿನಿ ತಾರ್ಕುಡ್, ಬಿ.ಎಸ್.ರಾಮರಾವ್, ಎ.ಸೀತಾರಾಂ (ಕತ್ತಗಾರ ಆನಂದ), ಡಾ|ಡಿ.ಕೆ.ಭಾರದ್ವಾಜ್, ಬಿ.ಕೃಷ್ಣ ಮೊದಲಾದವರು ಚಿತ್ರದ ಪ್ರಮುಖ ಪಾತ್ರಧಾರಿಗಳಾಗಿದರು.



(ಚಿತ್ರ ೧೦) ಲಕ್ಷ್ಮೀಬಾಯಿ - 'ಸೂರ್ಯ ನಕ್ಷತ್ರ'

ಚಿತ್ರದ ಒಳಾಂಗಣ ಚಿತ್ರೀಕರಣ ದಿಲ್‌ಖುಷ್ ಬಂಗಲೆಯಲ್ಲಿ ನಿರ್ಮಿಸಿದ ಸೆಟ್ಟುಗಳಲ್ಲಿ ನಡೆಯಿತು. ಬೇಲೂರು, ಹಳೇಬೀಡು, ಶ್ರವಣ ಬೆಳಗೊಳ ದೇವಸ್ಥಾನಗಳ ಹಿನ್ನೆಲೆಯಲ್ಲಿ ಹೊರಾಂಗಣ ಚಿತ್ರೀಕರಣ ನಡೆಯಿತು. ಶ್ರೀರಂಗಪಟ್ಟಣದ ಟಿಪ್ಪು ಅರಮನೆಯಲ್ಲಿ ಚಿತ್ರೀಕರಿಸಲು ಭವನಾನಿಗೆ ಅನುಮತಿ ಸಿಕ್ಕಿತು. ಮೈಸೂರಿನ ಉದ್ಯಾನವನಗಳಲ್ಲಿ ವ್ಯಾಪಕವಾದ ಚಿತ್ರೀಕರಣ ನಡೆದಿತ್ತು. ಚಿತ್ರತಂಡ ರಾಮೇಶ್ವರ, ಮಧುರೈ ಮುಂತಾದ ಸ್ಥಳಗಳಿಗೂ ಭೇಟಿಯಿತ್ತು ಚಿತ್ರೀಕರಣ ನಡೆಸಿತೆಂದು ಹೇಳಲಾಗಿದೆ. 'ವಸಂತಸೇನಾ' ಚಿತ್ರದ ಉದ್ದ ಸುಮಾರು ೮,೦೦೦ ಅಡಿಗಳು. ಆಗಿನ ಕಾಲದಲ್ಲಿ ಈ ಚಿತ್ರ ತಯಾರಿಕೆಗೆ ಒಂದು ಲಕ್ಷ ರೂಪಾಯಿ ವೆಚ್ಚವಾಯಿತೆಂದು ಹೇಳಲಾಗಿದೆ. ಈ ಚಿತ್ರದ ಇನ್ನೊಂದು ವಿಶೇಷವೆಂದರೆ ಕಪ್ಪು-ಬಿಳುಪು ಚಿತ್ರದ ಪ್ರಿಂಟುಗಳನ್ನು ಜರ್ಮನಿಗೆ ಕೊಂಡೊಯ್ದು ಅಲ್ಲಿನ ಯು.ಎಫ್.ಎ ಸ್ಟುಡಿಯೋದಲ್ಲಿ ಬಣ್ಣ ಬಳಿಯಲಾಯಿತೆಂದು ಹೇಳಲಾಗಿದೆ. ಈ ಬಣ್ಣದ ಚಿತ್ರವನ್ನು ಭಾರತದಾದ್ಯಂತ ಬಿಡುಗಡೆ ಮಾಡಲಾಗಿತ್ತು. ಆ ದಿನಗಳಲ್ಲಿ ಬಣ್ಣದ ಚಿತ್ರವನ್ನು ನೋಡುವುದು ಒಂದು ವಿಶಿಷ್ಟ ಅನುಭವವಾಗಿತ್ತು. ಈ ಚಿತ್ರವನ್ನು ಒಂದು ಕಲಾತ್ಮಕ ಚಿತ್ರವೆಂದು ಹೇಳಲಾಗಿತ್ತು. ಐದು ವರ್ಷಗಳಲ್ಲಿ ಈ ಚಿತ್ರವು ಐದು ಲಕ್ಷ ರೂಪಾಯಿಗಳನ್ನು ಗಳಿಸಿತೆಂದು ಅಂದಾಜು. ಬೆಂಗಳೂರಿನ ಈಗಿನ ಮಹಾತ್ಮಾ ಗಾಂಧಿ ರಸ್ತೆಯ (ಸೌತ್ ಪೆರೇಡ್) ಎಂಪೈರ್ ಥಿಯೇಟರಿನಲ್ಲಿ ಈ ಚಿತ್ರವು ಬಿಡುಗಡೆಯಾಗಿ ಮೂರು ವಾರಗಳ ಪ್ರದರ್ಶನ ಕಂಡಿತು. ಆ ಮೂಲಕ 'ವಸಂತಸೇನಾ' ಭಾರತೀಯ ಮೂಕಿ ಚಿತ್ರರಂಗದ ಇತಿಹಾಸದ ಒಂದು ಸುವರ್ಣಾಧ್ಯಾಯವಾಗಿದೆ.

'ದೇಶೀಯ ಚಲನಚಿತ್ರ' ಲೇಖನದಲ್ಲಿ ಭವನಾನಿಯವರ ಈ 'ವಸಂತಸೇನಾ'ದ ಬಗ್ಗೆ ಪ್ರಸ್ತಾಪಿಸಿರುವ ಶಿವರಾಮಕಾರಂತರು, ಬೌದ್ಧ ಯುಗಕ್ಕಿಂತ ಪೂರ್ವಕಾಲದ ಕಥೆಗೆ ಆಧುನಿಕ ಉಡುಗೆ, ವಿದ್ಯುತ್ ದೀಪಗಳನ್ನು ಬಳಸಿದ್ದನ್ನು ಟೀಕಿಸುತ್ತಾರೆ. ಮೈಸೂರು ಅರಮನೆಯ ಮಹಾದ್ವಾರ ಚೆನ್ನಾಗಿದೆಯೆಂದು ಸೇರಿಸುವುದು, ಶ್ರೀರಂಗಪಟ್ಟಣದ ಟಿಪ್ಪೂವಿನ ಅರಮನೆಯ ಗೋಡೆಯ ಮೇಲಿರುವ ಭುಜಗಳ ಮೇಲೆ ಕೋವಿ ಇರಿಸಿದ ಸಿಪಾಯಿಗಳ ಸಾಲನ್ನಾಗಲಿ ಸೇರಿಸಿರುವುದು ಕಥೆ ನಡೆದ ಕಾಲದ ದೃಷ್ಟಿಯಿಂದ ಆಭಾಸಕರ ಎಂದು ವಿಶ್ಲೇಷಿಸುವ ಕಾರಂತರು ಅಜಂತಾದ ಅರೆನಗ್ನ ಚಿತ್ರಗಳಲ್ಲಿ ಕಾಣಬರುವ ವೇಷಭೂಷಣಗಳನ್ನು ವಸಂತಸೇನೆ ಮದನಿಕೆಯರಿಗೆ ಬಳಸಿರುವುದನ್ನು ಕಾಲದ ಕಲ್ಪನೆಯಿಲ್ಲದ ಅಸೂಕ್ಷ್ಮತೆಗೆ ಉದಾಹರಣೆಯಾಗಿ ಕೊಡುತ್ತಾರೆ. ಈ ಚಿತ್ರದಲ್ಲಿ ಪಾತ್ರ ವಹಿಸಿದ್ದ ಕಮಲಾದೇವಿ ಚಟ್ಟೋಪಾಧ್ಯಾಯ ಆ ಬಗೆಯ ಉಡುಗೆ ತೊಡಲು ಒಪ್ಪದೇ ಹೋದ್ದರಿಂದ ಆಕೆಗೆ ಬೇರೆಯದೇ ವಸ್ತ್ರಾಲಂಕಾರ ಮಾಡಿದರ ಹಿನ್ನೆಲೆಯಲ್ಲಿ ಅಜಂತಾದ ಅಲಂಕಾರವೇಕಿಲ್ಲ ಎಂದು ಪ್ರಶ್ನಿಸುತ್ತಾರೆ. ಈ ಎಲ್ಲಾ ಮಾತುಗಳನ್ನು ಕಾರಂತರು ವಸಂತಸೇನಾ ಸ್ಥಿರಚಿತ್ರಗಳನ್ನು ಆಧರಿಸಿ ಪ್ರಶ್ನಿಸುತ್ತಾರೆ ಎಂಬುದು ಗಮನಿಸಬೇಕಾದ ಸಂಗತಿ.

## ಪಶ್ಚಿಮ ಘಟ್ಟದಿಂದ ಮೂಡಿಬಂದ ಸೂರ್ಯ

ಮುಂಬಯಿನಲ್ಲಿ ಲಕ್ಷ್ಮೀ ಫಿಲಂ ಕಂಪೆನಿಯನ್ನು ನಡೆಸುತ್ತಿದ್ದ ಹರಿಭಾಯ್ ಆರ್.ದೇಸಾಯ್ ಚಲನಚಿತ್ರ ಹಂಚಿಕೆದಾರರಾಗಿದ್ದ ಪುರುಷೋತ್ತಮ ದಾಸ್ ವಿ.ವೇದ್ ಅವರೊಡಗೂಡಿ ಬೆಂಗಳೂರಿನಲ್ಲಿ ಸೂರ್ಯ ಫಿಲಂ ಕಂಪನಿ ಆರಂಭಿಸಿದರು. ಹಿತಕರವಾದ ವಾತಾವರಣ, ಸುಂದರ ಪರಿಸರ ಅವರು ಬೆಂಗಳೂರಿನಲ್ಲಿ ತಮ್ಮ ನಿರ್ಮಾಣ ಚಟುವಟಿಕೆ ಆರಂಭಿಸಲು ಮುಖ್ಯ ಪ್ರಚೋದನೆಯಾಯಿತು. ಪಶ್ಚಿಮ ಘಟ್ಟದಿಂದ ಬಂದ 'ಸೂರ್ಯ' ಮುಂದಿನ ನಾಲ್ಕು ವರ್ಷಗಳಲ್ಲಿ ೩೯ ಮೂಕಚಿತ್ರಗಳನ್ನು ತಯಾರಿಸಿ ಬೆಂಗಳೂರಿನಲ್ಲಿ ಸಿನಿಮಾ ಸಂಸ್ಕೃತಿಯ ಬೆಳವಣಿಗೆಗೆ ಬುನಾದಿ ಹಾಕಿತು. ಸ್ಥಳೀಯ ಕಲಾಪ್ರತಿಭೆಗಳನ್ನು ಗುರುತಿಸಿ ಪೋಷಿಸಿತು. ತಂತ್ರಜ್ಞರನ್ನು ಹುಟ್ಟುಹಾಕಿತು.

ಬೆಂಗಳೂರಿನ ಕನ್ನಿಂಗ್‌ಹ್ಯಾಂ ರಸ್ತೆಯ್ಲಲಿರುವ ದಿವಾನ್ ಮಿರ್ಜಾ ಅವರಿಗೆ ಸೇರಿದ ದೊಡ್ಡ ಬಂಗಲೆಯಲ್ಲಿ ಸ್ಟುಡಿಯೋ ಸ್ಥಾಪನೆಯಾಗಿತ್ತು. ಮಲ್ಲೇಶ್ವರದಲ್ಲಿ ಸಿ.ವಿ.ರಾಮನ್ ಬಂಗಲೆಯ ಸಮೀಪದಲ್ಲಿ ಇದರ ಸಂಸ್ಕರಣಾಗಾರವೂ ಇತ್ತು. ಈ ಸಂಸ್ಥೆಯು ಇತರ ಫಿಲಂ ಕಂಪನಿಗಳಿಗಿಂತ ಶಿಸ್ತು ಬದ್ಧವಾಗಿ ನಡೆಯುತ್ತಿತ್ತು. ಇದರ ಕಥಾ ವಿಭಾಗವು ವಿಸ್ತಾರವಾಗಿದ್ದು ಸಂಸ್ಥೆ ತಯಾರಿಸುವ ಎಲ್ಲಾ ಬಗೆಯ ಚಿತ್ರಗಳಿಗಾಗಿ ಚಿತ್ರಕತೆಯನ್ನು ಒದಗಿಸುತ್ತಿತ್ತು. ನಾನಾಭಾಯ್ ದೇಸಾಯ್ ಕಥಾವಿಭಾಗದ ಮುಖ್ಯಸ್ಥರಾಗಿದ್ದರು. ಅಂದಿನ ಅತ್ಯುತ್ತಮ ಛಾಯಾಗ್ರಾಹಕರೆನಿಸಿದ್ದ ವಿಷ್ಣು ಸಾವಂತ್ ಛಾಯಾಗ್ರಹಣ ವಿಭಾಗದ ಮುಖ್ಯಸ್ಥರಾಗಿದ್ದರು. ಮಹಮದ್ ಎ.ರೆಹಮಾನ್

ಸಂಸ್ಕರಣಾಗಾರದ ಉಸ್ತುವಾರಿ ವಹಿಸಿದ್ದರು. ಮುಂದೆ ಎ.ವಿ.ಎಂ. ಅವರಿಗೆ 'ಲೈಫ್' (ವಾಳ್ಕೈ) ನಿರ್ದೇಶಿಸಿದ ಎಂ.ವಿ.ರಾಮನ್ ಚಿತ್ರ ಸಂಕಲನಕಾರರಾಗಿದ್ದರು. ಮಾಲೀಕರಾದ ಹರಿಭಾಯ್ ಆರ್.ದೇಸಾಯ್, ಪರುಶುರಾಂ ಚವ್ಹಾಣ್, ಜಿ.ಪಿ.ಪವಾರ್, ಸುಂದರರಾವ್ ನಾಡಕರ್ಣಿ, ಬಾಬುರಾವ್ ಮೊದಲಾದವರು ನಿರ್ದೇಶಕರಾಗಿದ್ದರು. ಸೂರ್ಯ ಕಂಪನಿಯ ಚಿತ್ರಗಳು ಉತ್ತಮ ಗುಣಮಟ್ಟದ್ದಾಗಿದ್ದವು, ಅವು ಹೆಚ್ಚಿನ ಬೆಲೆಗೂ ಮಾರಾಟವಾಗುತ್ತಿದ್ದವು.

ಬೆಂಗಳೂರಿನ ಲಕ್ಷ್ಮೀಬಾಯಿ (ಲಕ್ಷ್ಮಿ), ಆಕೆಯ ಸೋದರಿ ಕಮಲಾಬಾಯಿ, ಅನ್ನಪೂರ್ಣ ಇವರುಗಳು ಸೂರ್ಯ ಕಂಪನಿಯ ಮೂಲಕ ಬೆಳಕಿಗೆ ಬಂದ ಕಲಾವಿದರು. ಲಕ್ಷ್ಮೀಬಾಯಿ 'ಸೂರ್ಯ ಸ್ಟಾರ್' ಎಂದೇ ಪ್ರಸಿದ್ಧರಾಗಿದ್ದರು. ಜಿಲ್ಲೋಬಾಯಿ, ಸುಲ್ತಾನ, ರೋಹಿಣಿ, ಬೇಬಿ ಗಾರ್ಬೊ, ಜೇಬುನ್ನಿಸಾ ಮೊದಲಾದ ನಟಿಯರು, ಗಣಪತ್ ಬಾಕ್ರೆ ಮತ್ತು ಅಫ್ಘಾನಿಸ್ಥಾನದ ಅಬ್ದುಲ್ ರೆಹಮಾನ್ ಬಾಬು, ಸೂರ್ಯ ಫಿಲಂ ಕಂಪನಿಯಲ್ಲಿ ಮೂಕ ಚಿತ್ರಗಳ ನಾಯಕರಾಗಿ ಅಭಿನಯಿಸುತ್ತಿದ್ದರು. ಬಾಬು, ದ್ರುಪದ್ ರಾಯ್, ಮನ್ಸೂರ್, ಮನೋಹರ ಗಡೆ, ಅಂಕಲೇಸರಿಯ ಮೊದಲಾದ ಖಾಯಂ ನಟರೂ ಇದ್ದರು. ಸ್ಥಳೀಯ ಪ್ರತಿಭೆಗಳಿಗೆ ಆದ್ಯತೆ. ಅಗತ್ಯ ಬಿದ್ದರೆ ಮುಂಬಯಿ, ಪುಣೆಗಳಲ್ಲಿದ್ದ ಕಲಾವಿದರಿಗೆ ಆಮಂತ್ರಣ. ಕನ್ನಡ ಚಿತ್ರರಂಗದ ಖ್ಯಾತ ನಿರ್ದೇಶಕ ಎಂ.ಆರ್.ವಿಠಲ್ ಚಿತ್ರರಂಗಕ್ಕೆ ಪ್ರವೇಶಿಸಲು ಮನೆಯ ಪಕ್ಕದಲ್ಲೇ ಇದ್ದ ಸೂರ್ಯ ಫಿಲಂ ಕಂಪನಿಯ ಸಹಚರ್ಯವೇ ಕಾರಣ.

ಕನ್ನಡ ನೆಲದಲ್ಲಿ ೧೯೨೯-೩೨ರ ಅವಧಿಯಲ್ಲಿನ ಚಿತ್ರ ಚಟುವಟಿಕೆಗಳು ಸಾಂಸ್ಕೃತಿಕವಾಗಿ, ಐತಿಹಾಸಿಕವಾಗಿ ಮಹತ್ವದ್ದೆನಿಸಿವೆ. ಆ ದಿನಗಳಲ್ಲಿ ನಿರ್ಮಾಣಗೊಂಡ ಚಲನಚಿತ್ರಗಳಲ್ಲಿ ಸಂಪರ್ಕ ಹೊಂದಿದ್ದ ನಟರು, ತಂತ್ರಜ್ಞರು ದಾಖಲಿಸಿರುವ ಅಂಶಗಳು ಅಂದಿನ ದಿನಗಳ ವಾತಾವರಣ, ಕಾರ್ಯ ವಿಧಾನಗಳ ಮೇಲೆ ಬೆಳಕು ಚೆಲ್ಲಿವೆ.

"ಸೂರ್ಯ ಫಿಲಂ ಕಂಪನಿ ಆರಂಭವಾಗಿದ್ದ ಆ ದಿನಗಳಲ್ಲಿ ನಾನು ಬರೀ ಕಾಲೇಜು ಹುಡುಗ. ಪಕ್ಕದಲ್ಲೇ ಇದ್ದರಲ್ಲಾ ಗೆಳೆಯರಾದೆವು. ಸಂಜೆಯಾದರೆ ಲ್ಯಾಬ್‌ನಲ್ಲಿ ಕುಳಿತು ಕೆಲಸಮಾಡೋದು. ಎಲ್ಲಾ ತಿಳಿದು ಕೊಳ್ಳುವ ಬಯಕೆ ಆಗ" - ಎಂದು ಎಂ.ಆರ್.ವಿಠಲ್ ಅಂದಿನ ದಿನವನ್ನು ನೆನಪು ಮಾಡಿಕೊಳ್ಳುತ್ತಾರೆ.

"ಮೇಕಪ್‌ಗಾಗಿ ವೈಟ್ ಲೆಡ್ ವ್ಯಾಸಿಲಿನ್, ರೆಡ್ ಕಲರ್‌ಗಳ ಮಿಶ್ರಣವನ್ನು ಉಪಯೋಗಿಸುತ್ತಿದ್ದರು. ಚಿತ್ರ ತಯಾರಿಕಾ ವಿಧಾನವೂ ಶಿಸ್ತು ಬದ್ಧವಾಗಿರುತ್ತಿತ್ತು."

"ಬೆಂಗಳೂರಿನ ದಂಡು ಪ್ರದೇಶದ ಕನ್ನಿಂಗ್ ಹ್ಯಾಂ ರಸ್ತೆಯ್ಲಲಿರುವ ಬೃಹತ್ ಬಂಗಲೆಯಲ್ಲಿ ಸ್ಟುಡಿಯೋ ರೂಪ ತಾಳಿತ್ತು. ಮಾಡು ಇಲ್ಲದ ಫ್ಲೋರ್. ಸೂರ್ಯನ ಬಿಸಿಲಿನಲ್ಲಿ ಚಿತ್ರೀಕರಣ. ಮೂಕಿ ಚಿತ್ರಗಳು ಹೆಚ್ಚಾಗಿ ಹೊರಾಂಗಣದಲ್ಲೇ ತಯಾರಾಗುತ್ತಿದ್ದವು.

"ಆಗೆಲ್ಲಾ ಚಿತ್ರಗಳು ೯-೧೦ ದಿನಗಳಲ್ಲಿ ಆಗಿ ಹೋಗುತ್ತಿತ್ತು. ೬ ಸಾವಿರದಿಂದ ೭ ಸಾವಿರ ಅಡಿಗಿಂತ ಹೆಚ್ಚು ಉದ್ದ ಇರುತ್ತಿರಲಿಲ್ಲ. ನಾನು ಮದರಾಸಿನಲ್ಲಿ ನೋಡಿದ ಚಿತ್ರ ೯ ಸಾವಿರ ಅಡಿ ಇತ್ತು.



(ಚಿತ್ರ ೧೦) ಕಮಲಾಬಾಯಿ

"ಸ್ಟುಡಿಯೋದಲ್ಲಿ ಇದ್ದದ್ದು ವಿಲಿಯನ್‌ಸನ್ ಕ್ಯಾಮರಾ. ಹ್ಯಾಂಡ್ ಪ್ರೋಸಸ್ ಆಗ್ತಿತ್ತು. ಇಂಗ್ಲಿಷ್ ಅಥವಾ ಹಿಂದಿಯಲ್ಲಿ ಸಬ್ ಟೈಟಲ್ಲಾಗಿ ಬರುತ್ತಿತ್ತು. ಇಲ್ಲಿಯವರು, ಅತ್ತ ಕಡೆಯವರು ಕಲಾವಿದರಿದ್ದರು. ತಂತ್ರಜ್ಞರು ಮಾತ್ರ ಅತ್ತ ಕಡೆಯಿಂದ ವಿಶೇಷವಾಗಿ ಬರೋರು. ಭವನಾನಿ ಜರ್ಮನಿಯಿಂದ ತಂತ್ರಜ್ಞರನ್ನು ಕರೆತಂದಿದರು."

ಚಿತ್ರ ನಿರ್ಮಾಪಕರಿಗ ಮೈಸೂರಿನ ಮೇಲ ವಿಶೇಷ ಆಕರ್ಷಣೆ. "ಈ (ಮೈಸೂರಿನ) ವಾತಾವರಣ ಅನುಕೂಲ ಅಂತ ಎಲ್ಲಾ ಇಲ್ಲಿಗೇ ಬರೋರು. ಬೆಂಗಳೂರು, ಮೈಸೂರು ಅಂದ್ರ ಅಂಥ ಪ್ರೀತಿ. ಜೊತೆಗೆ ವಿಶೇಷ ಅಂದ್ರೆ ಆ ದಿನಗಳಲ್ಲಿ ಬುದ್ಧಿ ಜೀವಿಗಳು, ಲೇಖಕರು ಕಾಳಜಿ (ಚಿತ್ರರಂಗದಲ್ಲಿ) ವಹಿಸಿದ್ದು. ಲಾಲ್‌ಬಾಗಿನ ಒಂದು ಭಾಗದಲ್ಲಿ ಸೂರ್ಯ ಫಿಲಂ ಕಂಪನಿ ಚಿತ್ರದ ಕೆಲಸ. ಇನ್ನೊಂದು ಕಡೆ ಭವನಾನಿ ಅವರ 'ಮೃಚ್ಛಕಟಿಕ' ನಡೀತಿತ್ತು. ಆಗಲೇ ಅದರಲ್ಲಿ ಪಾತ್ರವಹಿಸಿದ ಕೈಲಾಸಂ ಅವರನ್ನು ಕಂಡದ್ದು ಮರೆಯಲಾಗದಂತಹ ನೆನಪು".

ಸೂರ್ಯ ಫಿಲಂ ಕಂಪನಿ ತಯಾರಿಸಿದ ಚಿತ್ರಗಳಲ್ಲಿ ಹೆಚ್ಚಿನವು ಜಾನಪದ (Costume) ಚಿತ್ರಗಳು., ಚಾರಿತ್ರಿಕ, ಪೌರಾಣಿಕ, ಸಾಮಾಜಿಕ ಚಿತ್ರಗಳು. 'ಪ್ರಿನ್ಸ್ ಇಂಡೀಡ್' (೧೯೩೦) ಚಿತ್ರದಲ್ಲಿ ಪ್ರಾಣಿಗಳೂ ಕಾಣಿಸಿಕೊಂಡಿವೆ. ತಾರಾಗಣದಲ್ಲಿ ಲಕ್ಷ್ಮಿ, ಬಾಬು ಅವರ ಜೊತೆಗೆ ಮಾಕಿ (ಕೋತಿ), ಕೆಲಿ (ಚಿರತೆ), ಟಿಪ್ಪು (ನಾಯಿ) ಇವುಗಳನ್ನು ಪಾತ್ರಧಾರಿಗಳ ಪಟ್ಟಿಯಲ್ಲಿ ನಮೂದಿಸಲಾಗಿದೆ. ಈ ಚಿತ್ರದ ನಿರ್ದೇಶಕರು ಕೆ.ಜೋಷಿ. ಮುಂಬಯಿಯಲ್ಲಿ ಶಬ್ದ ಚಿತ್ರಗಳ ತಯಾರಿಕೆ ತ್ವರಿತಗತಿಯಲ್ಲಿ ಮುಂದುವರೆದ ಕಾರಣ ಹರಿಭಾಯ್ ದೇಸಾಯ್ ೧೯೩೨ರಲ್ಲಿ ತಮ್ಮ ಬೆಂಗಳೂರಿನ ಚಟುವಟಿಕೆಯನ್ನು ಅಂತ್ಯಗೊಳಿಸಿ ಮುಂಬಯಿಗೆ ತೆರಳಿದರು.

ಚಿತ್ರಗಳ ವಿತರಣೆಗೆ ಸರಿಯಾದ ವ್ಯವಸ್ಥೆ ಇರಲಿಲ್ಲ. ಆಯಾ ಕಂಪನಿಗಳು ತಮ್ಮದೇ ಆದ ಏಜೆಂಟರ ಮೂಲಕ ತಮ್ಮ ಚಿತ್ರಗಳನ್ನು ಮಾರಾಟ ಮಾಡುವ ಅಥವಾ ವಿತರಣೆ ಮಾಡುವ ಪದ್ಧತಿಯನ್ನು ಅನುಸರಿಸುತ್ತಿದ್ದವು. ಭಾರಿ ಕಂಪನಿಗಳಿಗೆ ಇದರಿಂದ ಏನೂ ತೊಂದರೆಯಾಗುತ್ತಿರಲಿಲ್ಲ. ಸಣ್ಣ-ಪುಟ್ಟ ಕಂಪನಿಗಳು ತಮ್ಮ ಚಿತ್ರಗಳನ್ನು ಮಾರಾಟ ಮಾಡಲು ಪರದಾಡಬೇಕಾಗುತ್ತಿತ್ತು. ಸೂರ್ಯ ಫಿಲಂ ಕಂಪನಿ ಚಿತ್ರಗಳಿಗೆ ಮಾರುಕಟ್ಟೆ ಸದಾ ಸಿದ್ಧವಾಗಿರುತ್ತಿತ್ತು. ಒಟ್ಟಾರೆ ಸೂರ್ಯ ಸಂಸ್ಥೆಯ ಚಿತ್ರಗಳು ವಿದೇಶದಲ್ಲೂ ಮಾರಾಟವಾದವು. ಕಂಪನಿಯ ಚಿತ್ರಗಳು ಉಳಿದ ಕಂಪನಿ ಚಿತ್ರಗಳಿಗಿಂತ ಹೆಚ್ಚಿನ ಬೆಲೆಯಲ್ಲಿ ಮಾರಾಟವಾಗುತ್ತಿದ್ದವು. ವೈಯಕ್ತಿಕ ನಿರ್ಮಾಪಕರಿಗಂತೂ ಈ ಸಮಸ್ಯೆ ಹೇಳತೀರದು. ಶಿವರಾಮಕಾರಂತರು ತಮ್ಮ ಚಿತ್ರಗಳನ್ನು ವಿತರಿಸಲು ಪರದಾಡಿದ್ದಾರೆ. ಅವರಿಗೆ ತಮ್ಮ ಚಿತ್ರಗಳ ಹಣ ಬರಲೇ ಇಲ್ಲ. ಕಡೆಗೆ ಅವರ ಚಿತ್ರಗಳು ಕಳೆದೂ ಹೋದವು. ಮುಖ್ಯವಾಗಿ ಭವನಾನಿ ಅವರಿಗೆ ವಿದೇಶದ ಸಂಪರ್ಕವಿತ್ತು. ಚಿತ್ರಗಳನ್ನು ಸಂಸ್ಕರಿಸಲು ವಿದೇಶಕ್ಕೇ ಹೋದುದುಂಟು. ಹಾಗೆ ಹೋದಾಗ ಚಿತ್ರದ ಪ್ರಿಂಟ್ ಅನ್ನು ತೋರಿಸಿದರು ಎಂಬ ಪತ್ರಿಕಾ ವರದಿಗಳು ಇವೆ.

ಮೂಕಿ ಚಿತ್ರಗಳ ಯುಗ ಮುಗಿದು ಟಾಕಿ ಚಿತ್ರಗಳು ಬಂದ ಮೇಲೂ ಮೂಕಿ ಚಿತ್ರಗಳ ಬೇಡಿಕೆ ಇಳಿಮುಖವಾಗಿರಲಿಲ್ಲ. ಕೆಲವೊಮ್ಮೆ ಟಾಕಿ ಚಿತ್ರಗಳ ಜತೆಯಲ್ಲಿಯೇ ಈ ಮೂಕಿ ಚಿತ್ರಗಳ ಪ್ರದರ್ಶನವೂ ನಡೆಯುತ್ತಿತ್ತು. ಹೆಚ್ಚಿನ ಸಂಖ್ಯೆಯಲ್ಲಿ ಟಾಕಿ ಚಿತ್ರಗಳು ತಯಾರಾಗಿ ಎಲ್ಲಾ ಚಿತ್ರಮಂದಿರಗಳಿಗೂ ಪೂರೈಕೆ ಆಗುವವರೆಗೆ ಮೂಕಿ ಚಿತ್ರಗಳ ಪ್ರದರ್ಶನ ಅನಿವಾರ್ಯವಾಗಿತ್ತು. ಸಾಗರ್ ಚಿತ್ರಮಂದಿರದ ಪ್ರಾರಂಭೋತ್ಸವಕ್ಕೆ ಹಿಂದಿ ಭಾಷೆಯ 'ಡಾಕ್ಟರ್' ಚಿತ್ರವನ್ನು ಪ್ರದರ್ಶಿಸಲಾಯಿತು. ಅದರ ಜೊತೆಗೆ ಗುಬ್ಬಿ ವೀರಣ್ಣನವರು ತಯಾರಿಸಿದ 'ಹಿಸ್ ಲವ್ ಅಫೇರ್' ಮೂಕಿ ಚಿತ್ರದ ಪ್ರದರ್ಶನವೂ ಆಯಿತೆಂದು ವೀರಣ್ಣನವರು ಹೇಳಿದ್ದಾರೆ.

ಮೂಕಿ ಚಿತ್ರಗಳ ಕಾಲದಲ್ಲಿ ಒಂದು ಕಂಪನಿಯು ಬೇರೊಂದು ಕಂಪನಿಗಾಗಿ ಚಿತ್ರಗಳನ್ನು ತಯಾರಿಸಿದ ಉದಾಹರಣೆಗಳೂ ಉಂಟು. ಸೂರ್ಯ ಫಿಲಂ ಕಂಪನಿ ಹೈದರಾಬಾದಿನ ಸಂಸ್ಥೆಯೊಂದಕ್ಕೆ ಚಿತ್ರ ತಯಾರಿಸಿಕೊಟ್ಟಿದೆ. ಹಾಗೆಯೇ ಅನೇಕ ಸಂಸ್ಥೆಗಳು ಬೇರೆಯವರಿಗಾಗಿ ಚಿತ್ರಗಳನ್ನು ತಯಾರಿಸಿಕೊಡುವ ಪದ್ಧತಿ ಜಾರಿಯಲ್ಲಿತ್ತು.

### ಕನ್ನಡ ನೆಲದಲ್ಲಿ ಮೈದಳೆದ ಮೂಕ ಚಿತ್ರಗಳು

ಸೂರ್ಯ ಫಿಲಂ ಕೊಡುಗೆ.

೧೯೨೯

ರಾಜ ಹೃದಯ (ಹಾರ್ಟ್ ಆಫ್ ದಿ ಕಿಂಗ್) : ಜಾನಪದ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್. ತಾರಾಗಣ: ಗಣಪತ್ ಬಾಕ್ರೆ, ಲಕ್ಷ್ಮಿ (ಲಕ್ಷ್ಮೀಬಾಯಿ), ರ್ಘುನ್‌ಜರಾವ್ ಪವಾರ್, ಕೆ.ರಂಗರಾವ್, ಜಗನ್ನಾಥ್, ರೋಷನ್, ಮನೋಹರ್



(ಚಿತ್ರ ೧೧) ಜಮದಗ್ನಿ - 'ಸೂರ್ಯಕಂಪನಿ'ಯ ನಟ-ನಿರ್ದೇಶಕ.



(ಚಿತ್ರ ೧೨) 'ವಸಂತಸೇನಾ' ದೃಶ್ಯಾವಳಿ. ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ದಾ.ಕೃ.ಭಾರದ್ವಾಜರ ಮಗ ಹರೀಂದ್ರ, ಜೆ.ಕೆ.ನಂದಾ, ಟಿ.ಪಿ.ಕೈಲಾಸಂ, ಏಣಾಕ್ಷಿರಾಮರಾವ್ ಇವರುಗಳನ್ನು ಕಾಣಬಹುದು.



ಛಾಯ್ಸ್ ಆಫ್ ಎ ಬ್ರೈಡ್ : ಸಾಹಸ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಬಾಚು, ಗಣಪತ್ ಬಾಕ್ರೆ, ಲಕ್ಷ್ಮಿ, ರೋಷನ್, ಪವಾರ್

೧೯೩೦

ಎ ಪ್ರಿನ್ಸ್ ಇಂಡೀಡ್ : ಜಾನಪದ. ನಿರ್ದೇಶನ : ಕೆ.ಜೋಷಿ, ತಾರಾಗಣ: ಬಾಚು, ಲಕ್ಷ್ಮಿ, ಸುಲೇಮಾನ್, ಮಾಸ್ಟರ್, ದ್ರುಪದ್ ಭಟ್, ಮಾಕಿ (ಕೋತಿ), ಕೆಲಿ (ಚಿರತೆ), ಟಿಪ್ಪು (ನಾಯಿ)

ರಾಜದೂತ್ (ಬೆಗ್ಗರ್ ಮೀಟ್ಸ್ ಬೆಗ್ಗರ್) : ಜಾನಪದ. ನಿರ್ದೇಶನ : ಹರಿಭಾಯಿ ಆರ್.ದೇಸಾಯಿ, ತಾರಾಗಣ : ಜೇಬುನ್ನೀಸಾ, ಬಾಚು

ದೈವಿ ಖಡ್ಗ (ಡಿವೈನ್ ಸೇಬರ್) : ಚಾರಿತ್ರಿಕ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಲಕ್ಷ್ಮಿ, ಗಣಪತ್ ಬಾಕ್ರೆ, ಪವಾರ್, ಪಟೇಲ್

ಚೌಹಾನಿ ತಲ್‌ವಾರ್ (ಫೈಟಿಂಗ್ ಕವಲಿಯರ್) : ನಿರ್ದೇಶನ : ಹರಿಭಾಯ್ ದೇಸಾಯ್, ತಾರಾಗಣ : ಗಣಪತ್ ಬಾಕ್ರೆ, ಜೇನಾ, ಪಟೇಲ್, ರೋಷನ್

ಚಾಬೂಕ್‌ನೆ ಚಮ್‌ಕಾರಿ (ಫ್ಲಾಗ್ಡ್ ಇನ್ ಟು ಲವ್) : ಜಾನಪದ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಜಿಲ್ಲೋ, ಬಾಚು, ಜೇಬು

ರಾಧೆ ಶ್ಯಾಮ್ : ಪೌರಾಣಿಕ. ನಿರ್ದೇಶನ : ಮಧುಸೂಧನ್ ಸಾಮ್ರಾಟ್ ಮತ್ತು ಚೌಹಾನ್, ತಾರಾಗಣ : ಲಕ್ಷ್ಮೀ, ಕಮಲಾ, ಬಾಚು, ರಂಗರಾವ್

ಕಾಳಿಕಾ ನೊ ಕೋಪ್ (ರಾಯಲ್ ಸ್ಯಾವೇಜ್) : ಜಾನಪದ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಗಣಪತ್ ಬಾಕ್ರೆ, ಲಕ್ಷ್ಮಿ, ರೋಷನ್, ಬೇಬಿ ಗಾರ್ಜೊ

ರಾಜ್ ಪ್ರಪಂಚ್ (ಸ್ಟೇಟ್ ಇಂಟ್ರೀಗ್ಸ್) : ಜಾನಪದ, ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಲಕ್ಷ್ಮಿ, ಧ್ರುಪದ್, ಪಟೇಲ್, ಮನ್ಸೂರ್, ಮನಹರ್, ಗಡೇ, ಸರಸ್ವತಿ

ಸೂರ್ಯಪ್ರಭಾ : ಜಾನಪದ, ತಾರಾಗಣ : ಜೇಬುನ್ನೀಸಾ, ಧ್ರುಪದ್ ಭಟ್, ರಂಗರಾವ್

ಧೂಮಕೇತು (ಕಾಮೆಟ್): ಸಾಹಸ, ನಿರ್ದೇಶನ : ಸುಂದರರಾವ್ ನಾಡಕರ್ಣಿ, ತಾರಾಗಣ : ಬಾಚು, ಲಕ್ಷ್ಮಿ, ಸುಲ್ತಾನ, ಗಡೇ

ಸಿತಮ್‌ಗರ್ ( ದಿ ಟೈರಂಟ್): ನಿರ್ದೇಶನ : ಹರಿಭಾಯಿ ಆರ್.ದೇಸಾಯಿ, ತಾರಾಗಣ : ಗಣಪತ್ ಬಾಕ್ರೆ, ಲಕ್ಷ್ಮಿ, ಶಾರದಾ, ಬಾಚು, ಧ್ರುಪದ್, ರೋಷನ್

೧೯೩೧

ಇಂತೆಕಾಮ್ (ಡೆಟ್ಸ್ ಆಫ್ ಆನರ್): ಸಾಮಾಜಿಕ. ನಿರ್ದೇಶನ : ಹರಿಭಾಯ್ ದೇಸಾಯ್, ತಾರಾಗಣ : ಬೇಬಿ ಗಾರ್ಜೊ, ಜಮದಗ್ನಿ, ಪಟೇಲ್, ವಾಮನ ರಾವ್, ಗಡೆ, ರೋಷನಾರ

ಫೌಲಾದಿ ಫರ್ಮಾನ್ (ಫಿಯಟ್ಸ್ ಆಫ್ ಸ್ಟೀಲ್): ಜಾನಪದ. ನಿರ್ದೇಶನ : ಬಾಬುರಾವ್, ತಾರಾಗಣ : ಲಕ್ಷ್ಮಿ, ಜೇನಾ, ವಾಮನರಾವ್, ಪವಾರ್, ಬಾಬೂರಾವ್, ಬಿ.ಗಡೆ, ಬಾಚು

ವಫಾದಾರಿ (ಫಿಡಲಿಟಿ) : ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ: ಬೇಬಿ ಗಾರ್ಜೊ, ಜೇನಾ, ಮನೋಹರ್, ವಾಮನರಾವ್, ಪಟೇಲ್ ಪವಾರ್, ಪೀಟರ್ಸ್

ಜಿಂದಗಿ ಕಾ ಜುವಾ (ಗ್ಯಾಂಬಲ್ ಆಫ್ ಲೈಫ್): ನಿರ್ದೇಶನ : ಬಾಬೂರಾವ್ ಮತ್ತು ಸುಂದರರಾವ್, ತಾರಾಗಣ : ಲಕ್ಷ್ಮಿ, ಜೇನಾ, ರೋಷನ್, ಗಣಪತ್ ಬಾಕ್ರೆ, ವಾಮನರಾವ್, ಬೇಬಿ ಗಾರ್ಜೊ, ಪಟೇಲ್, ದಾಸ್

ಬಾಜ್ ಬಹಾದ್ದೂರ್ (ಹಾಕ್): ಸಾಹಸ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಲಕ್ಷ್ಮಿ, ಪವಾರ್, ಬಾಚು, ಬಿ.ಗಡೆ, ಮನ್ಸೂರ್, ವಾಮನರಾವ್, ಝುನ್‌ಜರಾವ್

ಕಿಂಗ್ ಆಫ್ ಹಾರ್ಟ್ಸ್ (ವಿವರಗಳಿಲ್ಲ)

ಇಷ್ಕ್ ನೊ ಅನ್ಜಾಮ್ (ಕಿಂಗ್‌ಡಂ ಆಫ್ ಲವ್): ಸಾಮಾಜಿಕ. ನಿರ್ದೇಶನ : ಬಾಬುರಾವ್ ಮತ್ತು ಸುಂದರರಾವ್, ತಾರಾಗಣ : ಗಣಪತ್ ಬಾಕ್ರೆ, ಲಕ್ಷ್ಮಿ, ಗಡೇ, ಪವಾರ್



(ಚಿತ್ರ ೧೩) 'ಹಿಸ್ ಲವ್ ಅಫೇರ್' ಚಿತ್ರದಲ್ಲಿ ಹಚ್.ಎಲ್.ಎಸ್.ಸಿಂಹ ಮತ್ತು ಗುಬ್ಬಿವೀರಣ್ಣ

ಕಿಶೋರಿ : ಸಾಮಾಜಿಕ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ: ಲಕ್ಷ್ಮಿ, ಗಣಪತ್ ಬಾಕ್ರೆ, ಬಾಬು, ಗಡೇ

ಲಾ ಬ್ರೇಕರ್ಸ್ : ಜಾನಪದ. ನಿರ್ದೇಶನ : ಬಾಬುರಾವ್ ಮತ್ತು ಸುಂದರರಾವ್, ತಾರಾಗಣ : ಬಾಬು, ಜೀನಾ, ಪಟೇಲ್, ಪವಾರ್, ಗಡೆ, ಬಾಕ್ರೆ, ಜಮದಗ್ನಿ, ವಾಮನರಾವ್

ಕುರ್ಬಾನಿ (ಮಾರ್ಟಿರ್): ಜಾನಪದ. ನಿರ್ದೇಶನ : ಬಾಬುರಾವ್ ಮತ್ತು ಸುಂದರರಾವ್, ತಾರಾಗಣ: ವಿಲ್ಮಾ, ಗಾರ್ಜೊ, ಜೀನಾ, ಬಾಕ್ರೆ, ಗಡೆ, ವಾಮನರಾವ್, ಪಟೇಲ್, ಜಮದಗ್ನಿ

ಆಸಿರ್-ಎ-ಹಿರ್ಸ್ (ನೆಮಿಸಿಸ್ ಆಫ್ ಲಸ್ಟ್): ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಬೇಬಿ ಗಾರ್ಜೊ, ಜೀನಾ, ಜಮದಗ್ನಿ, ಗಡೆ, ಮನೋಹರ್, ಘಟನಾಯ್, ಪವಾರ್, ಪಟೇಲ್

ರಣಧೀರ್ (ಡಾಂಟ್‌ಲೆಸ್): ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಲಕ್ಷ್ಮಿ, ಬಾಕ್ರೆ, ರಂಗರಾವ್, ರೋಷನ್

ತೀರ್-ಎ-ಕಾತಿಲ್ (ರೆಡ್ ಆರ್ಚರ್): ಸಾಹಸ. ನಿರ್ದೇಶನ : ಸುಂದರರಾವ್, ತಾರಾಗಣ : ಜೀನಾ, ಬಾಬು, ಗಡೆ, ಪಟೇಲ್, ಪವಾರ್

ಕಸೌಟಿ (ಸುಪ್ರೀಂ ಟ್ರಸ್ಟ್): ಜಾನಪದ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಬಾಬು, ಜೀನಾ, ಪಟೇಲ್, ವಾಮನರಾವ್, ರೋಷನ್

ವಿಜಯಧ್ವನಿ (ಟಾಕ್ಸಿನ್ ಆಫ್ ಡೆತ್): ಸಾಹಸ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ: ಗಣಪತ್ ಬಾಕ್ರೆ, ಜೀನಾ, ಲಕ್ಷ್ಮಿ, ಪವಾರ್, ಪಟೇಲ್, ಗಡೆ, ರೋಷನ್

ವಿಕರಾಲ್ ವರೂ (ವೈಲ್ಡ್ ಉಲ್ಫ್): ಜಾನಪದ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಬೇಬಿ ಗಾರ್ಜೊ, ಜೀನಾ, ಗೋವರ್ಧನ್, ವಾಮನರಾವ್, ಪವಾರ್, ಪಟೇಲ್

೧೯೩೨

ಛೋಟಾ ಚೋರ್ : ಸಾಹಸ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಜೆನಾ, ಬಾಬು, ರೋಷನ್, ದಾಸ್, ಸುಲ್ತಾನ, ಬೇಬಿ ಒಬ್ರಾಗ್

ಇನ್ ಶ್ಯಾಕಲ್ಸ್ : ನಿರ್ದೇಶನ : ಹರಿಭಾಯ್ ಆರ್.ದೇಸಾಯ್

ಕ್ಯಾಬಾತ್ : ನಿರ್ದೇಶನ : ಹರಿಭಾಯ್ ಆರ್.ದೇಸಾಯ್

ರಾಜಾಧಿರಾಜ್ (ದಿ ಆಮ್ನಿ ಪೊಟೆಂಟ್): ಜಾನಪದ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಬೇಬಿ ಗಾರ್ಜೊ, ಜೆನಾ, ರೋಷನ್, ಬಾಬು, ದಾಸ, ಜಮದಗ್ನಿ, ಮುನ್ಷಿ, ನಾಗಿನ್, ಗಣಪತ್ ಬಾಕ್ರೆ

ಶೇರ್ ದಿಲ್ (ಡ್ಯಾಷಿಂಗ್ ಡೆವಿಲ್): ಸಾಹಸ. ನಿರ್ದೇಶನ : ಹರಿಭಾಯ್ ದೇಸಾಯ್, ತಾರಾಗಣ : ಬೇಬಿ ಗಾರ್ಜೊ, ಜೆನಾ, ಜಮದಗ್ನಿ, ಪಟೇಲ್, ಪವಾರ್, ರೋಷನ್, ಬಾಬು, ಗಣಪತ್ ಬಾಕ್ರೆ

ಆಸಿಯಾ ಸಿತಾರಾ (ಸ್ಟಾರ್ ಆಫ್ ಏಷ್ಯಾ): ಜಾನಪದ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಬೇಬಿ ಗಾರ್ಜೊ, ಜೆನಾ, ಜಮದಗ್ನಿ, ವಾಮನರಾವ್, ಪಟೇಲ್, ದಾಸ್, ಬಾಬು

ಸ್ತ್ರೀ ಶಕ್ತಿ (ದಿ ಸೂಪರ್ ಸೆಕ್ಸ್): ಸಾಮಾಜಿಕ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಜಮದಗ್ನಿ, ಜೆನಾ, ಬೇಬಿ ಗಾರ್ಜೊ, ಗಣಪತ್ ಬಾಕ್ರೆ, ರೋಷನ್, ದಾಸ್

ದಿಲೇ ದಿಲಾರ್ (ಸ್ಟಂಟ್ ಕಿಂಗ್): ಸಾಹಸ. ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಜೆನಾ, ರೋಷನ್, ದಾಸ್, ಬೇಬಿ ಗಾರ್ಜೊ, ಬಾಬು

೧೯೩೩

ಭಾಗ್ಯ ಚಕ್ರ (ವ್ಹೀಲ್ ಆಫ್ ಫೇಟ್): ನಿರ್ದೇಶನ : ಹರಿಭಾಯ್ ಆರ್.ದೇಸಾಯ್, ತಾರಾಗಣ : ಅಂಕಲೇಸರಿ, ಜೆನಾ, ಜಾಲ್, ದಾಸ್, ರೋಹಿಣಿ, ಜಮದಗ್ನಿ

ಲಾ ಪರವ್ಹಾ (ದಿ ಅನ್ ಡಾಂಟೆಡ್) : ನಿರ್ದೇಶನ : ಹರಿಭಾಯ್ ಆರ್.ದೇಸಾಯ್

**ಇತರ ಸಂಸ್ಥೆಗಳು :**

ಸಾಂಗ್ ಆಫ್ ಲೈಫ್ (೧೯೩೦) : ನಿರ್ಮಾಪಕರು : ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಷನ್, ನಿರ್ದೇಶನ : ಜಿ.ಪಿ.ಪವಾರ್, ತಾರಾಗಣ : ಅಂಬು (ಲಲಿತಾ ಪವಾರ್), ಜಿ.ಹೆಚ್.ವೀರಣ್ಣ

ಜಾಲಿಮ್ ಜುಲೇಖಾ (೧೯೩೦) : ಫ್ಯಾಂಟಸಿ. ನಿರ್ಮಾಪಕರು : ಸೂರ್ಯ ಪ್ರಕಾಶ್ ಫಿಲಂ ಕಂ., ಡಾ||ಅಲ್ವಾರೊ, ಬೆಂಗಳೂರು. ತಾರಾಗಣ : ಫತ್ಮಾ, ಅಲ್ವಾರೊ

ಹಿಸ್ ಲವ್ ಅಫೇರ್ಸ್ (೧೯೩೧) : ಸಾಮಾಜಿಕ. ನಿರ್ಮಾಣ : ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಷನ್, ತಾರಾಗಣ : ಹೆಚ್.ಎಲ್.ಎನ್.ಸಿಂಹ, ಜಿ.ಹೆಚ್.ವೀರಣ್ಣ

ಸೋರ್ಡ್ ಆಫ್ ಅಲ್ಲಾ (೧೯೩೧) : ಸಾಮಾಜಿಕ. ನಿರ್ಮಾಣ : ಸೂರ್ಯ ಪ್ರಕಾಶ್ ಫಿಲಂ ಕಂ., ಬೆಂಗಳೂರು

ಡಿಸ್ಕಾರ್ಡ್ ಡೆಡ್ ಲವ್ (೧೯೩೧) : ಸಾಮಾಜಿಕ. ನಿರ್ಮಾಣ : ಸೂರ್ಯ ಪ್ರಕಾಶ್ ಫಿಲಂ ಕಂ., ಬೆಂಗಳೂರು

ಕಿಂಗ್ ಆಫ್ ಹಾರ್ಟ್ಸ್ (೧೯೩೧) : ನಿರ್ಮಾಣ : ಸೂರ್ಯ ಪ್ರಕಾಶ್ ಫಿಲಂ ಕಂ., ಬೆಂಗಳೂರು

ವಸಂತ ಸೇನಾ (ಮೃಚ್ಛಕಟಿಕಾ - ೧೯೩೧) : ಕ್ಲಾಸಿಕಲ್. ನಿರ್ಮಾಣ : ಇಂಡಿಯನ್ ಆರ್ಟ್ ಪ್ರೊಡಕ್ಷನ್ಸ್ ಮುಂಬಯಿ. ನಿರ್ದೇಶನ : ಎಂ.ಭವನಾನಿ, ತಾರಾಗಣ : ಕಮಲಾದೇವಿ ಚಟ್ಟೋಪಾಧ್ಯಾಯ, ಪಣಾಕ್ಷಿರಾಮರಾವ್, ಕುಮಾರ್ ಚಟ್ಟೋಪಾಧ್ಯಾಯ, ಬಿ.ಕೃಷ್ಣ, ಶಕುಂತಲಾ, ನಳಿನಿ ತಾರ್ಕುಡ್, ಜೆ.ಕೆ.ನಂದಾ, ಡಾ|ಡಿ.ಕೆ.ಭಾರದ್ವಾಜ್, ಟಿ.ಪಿ.ಕೈಲಾಸಂ, ಡಾ|ಎನ್.ಎಸ್.ನಾರಾಯಣಶಾಸ್ತ್ರಿ, ಎ.ಸೀತಾರಾಂ

ಹರಿಮಾಯ (೧೯೩೨) : ಪೌರಾಣಿಕ. ನಿರ್ಮಾಣ : ಮೈಸೂರು ಪಿಕ್ಚರ್ಸ್ ಕಾರ್ಪೊರೇಷನ್, ಬೆಂಗಳೂರು. ನಿರ್ದೇಶನ : ವೈ.ವಿ.ರಾವ್, ತಾರಾಗಣ : ರಾಜಮ್ಮ, ಜಿ.ಹೆಚ್.ವೀರಣ್ಣ, ಬಿ.ಜಯಮ್ಮ, ವೈ.ವಿ.ರಾವ್

ಖೂನ್ ಕ ಬದಲಾ (ಅವೇಜಿಂಗ್ ಬ್ಲಡ್ - ೧೯೩೩) : ನಿರ್ಮಾಣ : ರಮೇಶ್ ಫಿಲಂ ಕಂ., ಬೆಂಗಳೂರು. ತಾರಾಗಣ : ಗಣಪತ್ ಬಾಕ್ರೆ, ಲಕ್ಷ್ಮಿ

ಭೂತ ರಾಜ್ಯ (ಡೆವಿಲ್ಸ್ ಲ್ಯಾಂಡ್ - ೧೯೩೧) : ಥ್ರಿಲ್ಲರ್. ನಿರ್ಮಾಣ : ಉಷಾ ಪಿಕ್ಚರ್ಸ್, ಬೆಂಗಳೂರು. ನಿರ್ದೇಶನ : ಶಿವರಾಮ ಕಾರಂತ.

## ಮೂಕಿಜಗತ್ತು ಹೇಗಿತ್ತು ?

ಚಲನಚಿತ್ರ ಸೃಜನಶೀಲತೆಗೆ ವಿಪುಲ ಅವಕಾಶ ನೀಡುವ ಹೊಸ ಮಾಧ್ಯಮವಾದರೂ ಭಾರತೀಯ ನಿರ್ಮಾಪಕರು ಆ ದಿನಗಳಲ್ಲಿ ರಂಗಭೂಮಿಯ ಪ್ರಭಾವಲಯದಿಂದ ಕಳಚಿಕೊಂಡು ಹೊರಬರಲು ಸಾಧ್ಯವಾಗಲೇ ಇಲ್ಲ. ಪಾಶ್ಚಿಮಾತ್ಯ ಚಿತ್ರನಿರ್ಮಾಪಕರು, ನಿರ್ದೇಶಕರು ಆರಂಭದಲ್ಲಿ ರಂಗಭೂಮಿಯಿಂದ ಪ್ರಭಾವಿತರಾದರೂ ಅವರ ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸಿದರು. ಚಿತ್ರಗಳ ಕಥಾವಸ್ತುವಿನಲ್ಲಿ ವೈವಿಧ್ಯ ಕಂಡು ಬಂದಿತು.

ಭಾರತದಲ್ಲಿ ಚಿತ್ರೋದ್ಯಮ ಆರಂಭವಾದದ್ದು, ಬೆಳೆದದ್ದು ಸಾವಿತ್ರಿ, ಪುಂಡಲೀಕ, ಹರಿಶ್ಚಂದ್ರ, ಭಸ್ಮಾಸುರ ಮೋಹಿನಿ, ಲಂಕಾದಹನ, ಶ್ರೀಕೃಷ್ಣರ ಸುತ್ತಮುತ್ತ. ಮೂಕಿ ಚಿತ್ರಗಳ ಕಾಲದಲ್ಲೇ 'ರಾಜಾ ಹರಿಶ್ಚಂದ್ರ'ನ ಸತ್ಯನಿಷ್ಠೆ ಸಾರುವ ಕಥೆ ಆಧಾರಿತ ಚಿತ್ರಗಳು ಐದು ಬಾರಿ ಸೃಷ್ಟಿಯಾದವು. ಶ್ರೀಕೃಷ್ಣ ಜನ್ಮ ಒಂದಲ್ಲ ಹಲವಾರು ಬಾರಿ ಸೃಷ್ಟಿಯಾಯಿತು. ಪೌರಾಣಿಕಕ್ಕೆ ಮೊದಲ ಆದ್ಯತೆ. ಅನಂತರ ಜಾನಪದ, ಚಾರಿತ್ರಿಕ ಚಿತ್ರಗಳು. ಇವುಗಳ ಜೊತೆಗೆ ಅಮೆರಿಕಾದ ಕೌಬಾಯ್ ಸಂಸ್ಕೃತಿಯ ಪ್ರಭಾವ ಇರುವ ದೇಶೀ ಮಾರಾಮಾರಿ ಚಿತ್ರಗಳು, ಕೊನೆಯ ಸ್ಥಾನ ಸಾಮಾಜಿಕ ಚಿತ್ರಗಳಿಗೆ. ೧೯೧೩ರಿಂದ ೧೯೩೪ರ ವರೆಗೆ ಭಾರತದಲ್ಲಿ ಹುಟ್ಟಿಕೊಂಡ ೨೧೭ ನಿರ್ಮಾಣ ಸಂಸ್ಥೆಗಳು ತಯಾರಿಸಿದ ೧೩೦೬ ಮೂಕಚಿತ್ರಗಳ ಪಟ್ಟಿಯನ್ನು ನೋಡಿದರೆ ಈ ಅಂಶ ಸ್ಪಷ್ಟಪಡುತ್ತದೆ.

### ಮೊದಲ ದಶಕ - ಮೊದಲ ಹೆಜ್ಜೆ

ಭಾರತದ ಮೊದಲ ದೇಶಿ ಚಿತ್ರ 'ರಾಜಾ ಹರಿಶ್ಚಂದ್ರ' (೧೯೧೩). ಆದಾದನಂತರ ಮುಂದಿನ ನಾಲ್ಕು ವರ್ಷಗಳು ಚಿತ್ರರಂಗದಲ್ಲಿ ಹೆಚ್ಚಿನ ಚಟುವಟಿಕೆ ಇರಲಿಲ್ಲ. ೧೯೧೮ರವರೆಗೆ ತಯಾರಾದ ಚಿತ್ರಗಳು ೧೦. ಅದರಲ್ಲಿ ಫಾಲ್ಕೆ ತಯಾರಿಸಿದ ಮೊದಲ ಚಿತ್ರದ ಹೊಸ ಸಂಸ್ಕರಣವೂ ಸೇರಿದೆ. ೧೯೧೮ರ ನಂತರ ಚಿತ್ರರಂಗಕ್ಕೆ ಹಣದ ಹೊಳೆ ಹರಿದು ಬಂತು. ನಿರ್ಮಾಣಕಾರ್ಯ ತೀವ್ರಗತಿಯಲ್ಲಿ ಸಾಗಿತು. ದಾದಾ ಫಾಲ್ಕೆ ತಯಾರಿಸಿದ 'ಲಂಕಾ ದಹನ' (೧೯೧೭) ಚಿತ್ರಕ್ಕೆ ದೊರೆತ ಯಶಸ್ಸು ಒಂದು ಮುಖ್ಯ ಕಾರಣ. 'ಲಂಕಾ ದಹನ' ಮುಂಬೈನ ವೆಸ್ಟ್‌ಎಂಡ್ ಚಿತ್ರಮಂದಿರದಲ್ಲಿ ತೆರೆ ಕಂಡಿತು. ಜನರ ಒತ್ತಾಯದ ಮೇರೆಗೆ ದಿನವೂ ನಾಲ್ಕು ಪ್ರದರ್ಶನ ಇದ್ದದ್ದು ಐದಾಯಿತು. ಹತ್ತು ದಿನಗಳಲ್ಲಿ ಈ ಚಿತ್ರ ಗಳಿಸಿದ್ದು ೩೫,೦೦೦ ರೂಪಾಯಿ. ಪ್ರದರ್ಶನವಾದ ಕಡೆಯಲ್ಲೆಲ್ಲಾ ಅದ್ಭುತ ಯಶಸ್ಸು. ಮದರಾಸಿನಲ್ಲಿ ಆ ಚಿತ್ರದ ಒಂದು ದಿನದ ಗಳಿಕೆ ಸಾಗಿಸಲು ಎತ್ತಿನ ಬಂಡಿ ಬೇಕಾಯಿತು.

ಮುಂದಿನ ಮೂರು ವರ್ಷಗಳಲ್ಲಿ ಕನ್ನಡ ನೆಲದಲ್ಲಿ ಮೈದಳೆದ ಏಳು ನಿರ್ಮಾಣ ಸಂಸ್ಥೆಗಳ ಆಶ್ರಯದಲ್ಲಿ ೪೮ ಚಿತ್ರಗಳು ತಯಾರಾದವು. ಅವುಗಳಲ್ಲಿ ಬಹುಪಾಲು ಪೌರಾಣಿಕ, ಚಾರಿತ್ರಿಕ, ಜಾನಪದ ಚಿತ್ರಗಳು. ವೃತ್ತಿಪರ ರಂಗಭೂಮಿಯ ಸಂಸ್ಕೃತಿಯಲ್ಲಿ ಬೆಳೆದ ವೀರಣ್ಣ ತಯಾರಿಸಿದ್ದು ಮೂರೇಮೂರು ಮೂಕ ಚಿತ್ರಗಳಾದರೂ ಅವುಗಳಲ್ಲಿ ಎರಡು ಸಾಮಾಜಿಕ.

ಚಿತ್ರ ತಯಾರಿಕಾ ವಿಧಿ-ವಿಧಾನಗಳು, ಚಿತ್ರಗಳ ವಿತರಣೆ, ಪ್ರದರ್ಶನ ವ್ಯವಸ್ಥೆ ಕನ್ನಡ ನಾಡಿನಲ್ಲಿ ಭಾರತದ ಇತರ ಭಾಗಗಳಿಗಿಂತ ಭಿನ್ನವಾಗಿರಲಿಲ್ಲ. ಜನರ ಅಭಿರುಚಿ, ಪ್ರತಿಕ್ರಿಯೆ ಕೂಡ. ಆರಂಭ ಕಾಲದ ಮೂಕ ಚಿತ್ರಗಳು ಇಂದು ಲಭ್ಯವಿಲ್ಲ. ದಾಖಲೆಗಾಗಿ ಸಂಗ್ರಹಿಸಿ ಇಡಬೇಕೆಂಬ ಕಲ್ಪನೆಯೂ ಆಗಿನವರಿಗೆ ಇರಲಿಲ್ಲ. ಅಲ್ಲಿಲ್ಲಿ ಅಳಿದುಳಿದಿರುವ ಕೆಲವು ಚಿತ್ರದ ತುಣುಕುಗಳು ಮಾತ್ರ ಲಭ್ಯವಿವೆ. ೧೯೧೩-೧೯೩೪ರವರೆಗೆ ಮೂಕಚಿತ್ರ ಪ್ರಪಂಚದ ಕೈಗನ್ನಡಿ ಎಂದರೆ ಸೆನ್ಸಾರ್ ದಾಖಲೆಗಳು ಹಾಗೂ ದಿವಾನ್ ಬಹಾದ್ದೂರ್ ಟಿ.ರಂಗಾಚಾರಿಯರ್ ಅವರ 'ದಿ ಇಂಡಿಯನ್ ಸಿನಿಮಾಟೊಗ್ರಾಫ್' ವರದಿ'.[1] ಮೂಕ ಚಿತ್ರಗಳ ನಿರ್ಮಾಣದಲ್ಲಿ ಭಾಗಿಯಾಗಿದ್ದ ಕಲಾವಿದರು ತಂತ್ರಜ್ಞರ ಸಂದರ್ಶನಗಳು, ಪ್ರೇಕ್ಷಕರ ನೆನಪಿನ ಬರಹಗಳು ಇದಕ್ಕೆ ಪೂರಕ.

ಮೂಕ ಚಿತ್ರಗಳ ಕಾಲದಲ್ಲಿ ಕೆಲವು ಸಣ್ಣ-ಪುಟ್ಟ ಸಂಸ್ಥೆಗಳನ್ನು ಬಿಟ್ಟರೆ, ಹಿರಿಯ ಸಂಸ್ಥೆಗಳೆಲ್ಲಾ ಚಿತ್ರನಿರ್ಮಾಣಕ್ಕಾಗಿ ಸ್ವಂತ ಸ್ಟುಡಿಯೋ, ಹಾಗೂ ಚಿತ್ರ ಸಂಸ್ಕರಣ, ಮುದ್ರಣ, ಎಡಿಟಿಂಗ್ ವಿಭಾಗಗಳನ್ನು ಹೊಂದಿದ್ದವು. ಯಾವುದಕ್ಕೂ ಪರಾವಲಂಬನೆಯ ಅಗತ್ಯ ಇರಲಿಲ್ಲ. ಚಿತ್ರ ನಿರ್ಮಾಣಕ್ಕೆ ಅಗತ್ಯವಾದ ಪರಿಕರಗಳು, ಅಲಂಕರಣ ಸಾಮಗ್ರಿಗಳು, ಪ್ರಾಣಿಗಳು ಆಗಿನ ಸ್ಟುಡಿಯೋ ಸಂಗ್ರಹದಲ್ಲಿ ಇರುತ್ತಿದ್ದವು.

ಸ್ಟುಡಿಯೋ ನಿರ್ವಹಣೆಗೆ ಅಗತ್ಯವಾದ ಸಿಬ್ಬಂದಿ, ತಂತ್ರಜ್ಞರು, ಸಹ ಕಲಾವಿದರು, ನಟರು ಎಲ್ಲರೂ ಮಾಸಿಕ ವೇತನದ ಮೇಲೆ ನೇಮಕ. ಏನಿಲ್ಲವೆಂದರೂ ಪ್ರತಿಯೊಂದು ಸ್ಟುಡಿಯೋದಲ್ಲೂ ಹೀಗೆ ಮಾಸಿಕ ವೇತನದ ಮೇಲೆ ನೇಮಕಗೊಂಡವರ ಸಂಖ್ಯೆ ೨೦೦ಕ್ಕಿಂತಲೂ ಅಧಿಕವಾಗಿ ಇರುತ್ತಿತ್ತು. ಸ್ಟುಡಿಯೋಗಳು 'ಫ್ಯಾಕ್ಟರಿ'ಯಂತೆ ಕೆಲಸ ನಿರ್ವಹಿಸುತ್ತಿದ್ದವು. ದಾದಾ ಫಾಲ್ಕೆ ನಾಸಿಕ್‌ನಲ್ಲಿ ತಮ್ಮ ಸ್ಟುಡಿಯೋವನ್ನು ಅವಿಭಕ್ತ ಕುಟುಂಬದಂತೆ ವ್ಯವಸ್ಥೆಗೊಳಿಸಿದ್ದರು. ಮುಂದೆ ಅದು ಕೆಲವು ಸಂಸ್ಥೆಗಳಿಗೆ ಮಾದರಿ ಆಯಿತು. ಅವಿಭಕ್ತ ಕುಟುಂಬದ ಮಾದರಿಯಲ್ಲಿ ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿದ್ದ 'ಬಾಂಬೆ ಟಾಕೀಸ್' (ಹಿಮಾಂಶು ರಾಯ್, ದೇವಿಕಾರಾಣಿ ಸ್ಥಾಪಿಸಿದ ಸಂಸ್ಥೆ) ನೊಂದಿಗೆ ಸಹಜೀವನ, ಸಹ ಬಾಳ್ವೆಯ ಪರಂಪರೆ ಅಳಿಯಿತು.

ಸ್ಟುಡಿಯೋದಲ್ಲಿ ಖಾಯಂ ನೌಕರರ ವೇತನ ಅಚ್ಚರಿ ಹುಟ್ಟಿಸುವಂತಿತ್ತು. ಸೂಪರ್ ಅಥವ ಎಕ್ಸ್‌ಟ್ರಾ ಅಥವ ಸಹಾಯಕನಿಗೆ ತಿಂಗಳಿಗೆ ರೂ.೩೦ರಿಂದ ಆರಂಭಿಸಿ, ೫೦ ರೂ.ವರೆಗೆ ಮಾಸಿಕ ವೇತನ. ತಾರೆಯರಿಗೆ ರೂ.೨೫೦ರಿಂದ ರೂ.೫೦೦ರವರೆಗೆ. ತಾರೆ ಸುಲ್ತಾನಗೆ ರೂ.೧೦೦೦ ವೇತನ ಎಂದಾಗ ಉದ್ಯಮದವರು ಹುಬ್ಬೇರಿಸಿದರು. 'ಎಕ್ಸ್‌ಟ್ರಾ' ಅಥವ 'ಸೂಪರ್' ಸ್ಟುಡಿಯೋದಲ್ಲಿ ಯಾವ ಕೆಲಸಕ್ಕೂ ಸಿದ್ಧನಾಗಿರಬೇಕಾಗಿತ್ತು. ಗುಂಪು ದೃಶ್ಯಗಳಲ್ಲಿ ಭಾಗವಹಿಸಲು ಅಗತ್ಯವಾದ ವೇಷ ಹಾಕಿಕೊಂಡು ಕರೆಗಾಗಿ ಕಾದು ನಿಂತಿರಬೇಕಾಗಿತ್ತು.

ತೆಲುಗು, ತಮಿಳು, ಕನ್ನಡ, ಹಿಂದಿ ಚಿತ್ರಗಳ ನಿರ್ಮಾತೃ, ಮುಂದೆ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಪುರಸ್ಕೃತ ಎಲ್.ವಿ.ಪ್ರಸಾದ್ ಮುಂಬೈನ ಇಂಪೀರಿಯಲ್ ಸಂಸ್ಥೆ ನಿರ್ಮಿಸಿದ ಭಾರತದ ಮೊದಲ ಶಬ್ದ ಚಿತ್ರ 'ಆಲಂ ಆರಾ' (೧೯೩೧) ದಲ್ಲಿ ಒಂದು ಪಾತ್ರ ನಿರ್ವಹಿಸಿದ್ದರು. ಪ್ರಸಾದ್ ಅವರಿಗೆ ಈ ಐತಿಹಾಸಿಕ ಚಿತ್ರದಲ್ಲಿ ಅಭಿನಯಿಸಿದ್ದಕ್ಕೆ ಇಂಪೀರಿಯಲ್ ಸಂಸ್ಥೆಯ ಚಿತ್ರಗಳಲ್ಲಿ ಚೌಕಿದಾರ್ ಹಾಗೂ ಪಂಡಿತನಾಗಿ ಪಾತ್ರ ವಹಿಸಿದ್ದಕ್ಕೆ ದೊರೆತ ಮಾಸಿಕ ವೇತನ ರೂ.೩೦.

ಸೂರ್ಯ ಫಿಲಂ ಕಂಪನಿಯಲ್ಲಿ ನಾಯಕಿಯಾಗಿ ಅಭಿನಯಿಸಿದ ಲಕ್ಷ್ಮೀಬಾಯಿ ಮಾಸಿಕ ವೇತನ ರೂ.೨೫೦. ರಾಜಕಪೂರ್ ಬಾಂಬೆ ಟಾಕೀಸ್‌ನಲ್ಲಿ ಜನರಲ್ ಅಸಿಸ್ಟೆಂಟ್ ಆಗಿ ದುಡಿಯುತ್ತಿದ್ದ. 'ಹಮಾರಿ ಬಾತ್' (೧೯೪೩) ನಲ್ಲಿ ಆಫೀಸ್ ಬಾಯ್ ಪಾತ್ರ ವಹಿಸಿದ್ದ. ಆತನ ಮಾಸಿಕ ವೇತನ ರೂ.೨೫೦.

ಆಗಿನ ತಾರೆಯರಿಗೆ ಅಭಿನಯ ಕೌಶಲ ಮಾತ್ರ ಸಾಲದಾಗಿತ್ತು. ''ಮೂಕಿ ಚಿತ್ರಗಳ ಕಾಲದಲ್ಲಿ ಡ್ಯೂಪ್‌ಗಳನ್ನು ಬಳಸುತ್ತಿರಲಿಲ್ಲ. ಎಲ್ಲವನ್ನೂ ಕಲಾವಿದರೇ ನೇರವಾಗಿ

---

೧. ರಂಗಾಚಾರಿ ಸಮಿತಿ ವರದಿ : ಮೊದಲನೇ ಮಹಾಯುದ್ಧ ಕಾಲದಲ್ಲಿ ಬ್ರಿಟನ್ ಸೇರಿದಂತೆ ಐರೋಪ್ಯ ರಾಜ್ಯಗಳಲ್ಲಿ ಚಲನಚಿತ್ರ ತಯಾರಿಕೆ ಸ್ಥಗಿತವಾಯಿತು. ಯುರೋಪಿನ ಖ್ಯಾತನಾಮರಾದ ಚಿತ್ರ ನಿರ್ಮಾಪಕರು ಅಮೆರಿಕಾದಲ್ಲಿ ಆಶ್ರಯ ಪಡೆದರು. ಅಮೆರಿಕಾದ ಚಿತ್ರ ನಿರ್ಮಾಣ ಸಂಸ್ಥೆಗಳು ಬ್ರಿಟನ್ ಮತ್ತು ಯುರೋಪ್ ರಾಷ್ಟ್ರಗಳಿಗೆ ಅಗತ್ಯವಾದ ಚಿತ್ರಗಳನ್ನು ಸೃಷ್ಟಿಸಿದವು. ಜೊತೆಗೆ ಪ್ರದರ್ಶನ ವ್ಯವಸ್ಥೆಯನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡವು. ಯುದ್ಧದ ನಂತರ ಬ್ರಿಟನ್ನಿನಲ್ಲಿ ತಯಾರಾದ ಚಿತ್ರಗಳಿಗೆ ಬ್ರಿಟನ್ನಿನಲ್ಲೇ ಪ್ರದರ್ಶನಾವಕಾಶವಿಲ್ಲದಂತಹ ಪರಿಸ್ಥಿತಿ ಉಂಟಾದಾಗ ಅಲ್ಲಿ ೧೯೨೭ರಲ್ಲಿ ಸ್ಥಳೀಯ ನಿರ್ಮಾಣಗಳ ಕಡ್ಡಾಯ ಪ್ರದರ್ಶನವನ್ನು ಜಾರಿಗೊಳಿಸಿ ಶಾಸನ ಮಾಡಲಾಯಿತು. ಭಾರತದಲ್ಲೂ ಅಮೆರಿಕಾ ಚಿತ್ರ ಸಂಸ್ಥೆಗಳು ಸ್ಥಳೀಯ ಚಿತ್ರೋದ್ಯಮದೊಡನೆ ಸ್ಪರ್ಧೆಗೆ ಇಳಿದು ಪ್ರದರ್ಶನ ವ್ಯವಸ್ಥೆಯನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳತೊಡಗಿದವು.

ಭಾರತದಲ್ಲಿ ತಯಾರಾದ ಚಿತ್ರಗಳು ಮಾರುಕಟ್ಟೆಯಲ್ಲಿ ಕನಿಷ್ಠ ೨೦,೦೦೦ ರೂಪಾಯಿ ಗಳಿಸ ಬೇಕಾಗುತ್ತಿತ್ತು. ಆದರೆ ಅಮೆರಿಕಾ ಚಿತ್ರ ತಯಾರಕರು ತಮ್ಮ ಚಿತ್ರಗಳ ಸ್ವಾಮ್ಯವನ್ನು ರೂ.೨೦೦೦ಕ್ಕೆ ಕೊಡಲು ಸಿದ್ಧರಿದ್ದರು. ಹೀಗಾಗಿ ಬ್ರಿಟನ್ನಿನ ಚಿತ್ರಗಳಿಗೂ ಭಾರತದಲ್ಲಿ ಪ್ರದರ್ಶನಾವಕಾಶವಿಲ್ಲವಾಯಿತು. ಬ್ರಿಟಿಷ್ ಚಿತ್ರಗಳ ಹಿತರಕ್ಷಣೆಯು ಮೂಲ ಉದ್ದೇಶವಾಗಿದ್ದರೂ, ಭಾರತೀಯ ಚಿತ್ರೋದ್ಯಮದ ಹಾಗೂ ಬ್ರಿಟಿಷ್ ಸಾಮ್ರಾಜ್ಯದ ಚಲನಚಿತ್ರಗಳ ಸಮಸ್ಯೆಗಳನ್ನು ಅಧ್ಯಯನ ಮಾಡುವ ಉದ್ದೇಶವೆಂದು ಬ್ರಿಟಿಷ್ ಸರಕಾರ ಮದರಾಸಿನ ವಕೀಲರಾದ ದಿವಾನ್ ಬಹಾದ್ದೂರ್ ಟಿ.ರಂಗಾಚಾರಿಯರ್ ನೇತೃತ್ವದಲ್ಲಿ ಭಾರತೀಯ ಚಲನಚಿತ್ರ ಸಮಿತಿ (Indian Cinematograph Committee) ರಚಿಸಿತು (ಅಕ್ಟೋಬರ್ ೬, ೧೯೨೭). ಬ್ರಿಟಿಷರು ಮತ್ತು ಭಾರತೀಯರಿಂದ ಕೂಡಿದ ಸಮಿತಿ, ಚಲನಚಿತ್ರ ತಯಾರಿಕಾ ಕೇಂದ್ರಗಳಿಗೆ ಭೇಟಿ ಕೊಟ್ಟು, ಚಿತ್ರೋದ್ಯಮಿಗಳನ್ನು ಹಾಗೂ ಸಾರ್ವಜನಿಕರನ್ನು ಸಂದರ್ಶಿಸಿ, ಪ್ರಶ್ನಾವಳಿಗಳ ಮೂಲಕ ವಿಷಯ ಸಂಗ್ರಹಣೆ ಮಾಡಿತು. ಎಂಟು ತಿಂಗಳ ಅವಧಿಯಲ್ಲಿ ವರದಿ ಸಲ್ಲಿಸಿತು (ಮೇ ೧೯೨೮). ಶಿಫಾರಸುಗಳನ್ನು ಒಳಗೊಂಡ ಸಮಿತಿಯ ವರದಿಯ ಒಂದು ಸಂಪುಟ ಮತ್ತು ಅದು ಸಂಗ್ರಹಿಸಿದ ಸಾಕ್ಷ್ಯಗಳನ್ನೆಲ್ಲಾ ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಲಾಗಿದೆ. ಇದೊಂದು ಅಪೂರ್ವ ದಾಖಲೆ. ಭಾರತೀಯ ಚಿತ್ರೋದ್ಯಮದ ಆರಂಭ ದಿನಗಳ ನುಡಿ ಚಿತ್ರ, ಈ ದಾಖಲೆಗಳು. ಚಿತ್ರೋದ್ಯಮದ ಬಗೆಗೆ ನೀಡಿರುವ ಕೆಲವು ವಿವರಗಳಿಗೆ ಈ ದಾಖಲೆಗಳೇ ಆಧಾರ.

ಮಾಡಬೇಕಾಗುತ್ತಿತ್ತು. ಆದ್ದರಿಂದಲೇ ಜಟ್ಟಿಗಳು, ಕುಸ್ತಿಪಟುಗಳು ನಾಯಕನಟರಾಗಿ ಅಭಿನಯಿಸುತ್ತಿದ್ದರು. ನಟಿಯರೂ ಎಲ್ಲ ಬಗೆಯ ಪಾತ್ರಗಳನ್ನು ಅಭಿನಯಿಸಬೇಕಾಗುತ್ತಿತ್ತು. ಬಿ.ಜಯಮ್ಮನವರು ತಮ್ಮ 'ಹಿಸ್ ಲವ್ ಅಫೇರ್' ಚಿತ್ರದ ಅನುಭವವನ್ನು ಹೇಳುತ್ತಾ ''ನೂಲೇಣಿಯಿಂದ ನಾಯಕಿ ಮಹಡಿಯಿಂದ ಕೆಳಗಿಳಿಯುವ ದೃಶ್ಯಕ್ಕಾಗಿ ನಾನು ಇಳಿದೆ, ಕಾಲಿನಲ್ಲೆಲ್ಲಾ ರಕ್ತ ಬರುತ್ತಿತ್ತು. ಹಾಗೆಯೇ ಸೈಕಲ್ ಸವಾರಿ ಮಾಡಲೂ ಕಲಿಯಬೇಕಾಯಿತು. ಶ್ರೀರಂಗಪಟ್ಟಣದಲ್ಲಿ ನದಿಯಲ್ಲಿ ಧುಮುಕುವ ದೃಶ್ಯಕ್ಕಾಗಿ ಈಜು ಬರದಿದ್ದರೂ ನೀರಿಗೆ ಬಿದ್ದು ಪ್ರಾಣಾಪಾಯವನ್ನು ಎದುರಿಸಬೇಕಾಯಿತು'' ಎಂದು ಹೇಳಿದ್ದಾರೆ. ಇದೇ ರೀತಿ ಎಲ್ಲಾ ಕಲಾವಿದರೂ ಅನ್ಯರ ನೆರವಿಲ್ಲದೆ ಎಲ್ಲ ಸಾಹಸ ದೃಶ್ಯಗಳನ್ನು ಅಭಿನಯಿಸಬೇಕಾಗಿತ್ತು.

ಇದೇ ಅಂಶವನ್ನು ಲಕ್ಷ್ಮೀಬಾಯಿಯವರು ಸಮರ್ಥಿಸಿದ್ದಾರೆ : ''ಈಗಿನಂತೆ ಆಗ ಅಭಿನಯ ಸುಲಭವಾಗಿರಲಿಲ್ಲ. ಅಂದು ತಯಾರಾಗುತ್ತಿದ್ದ ಚಿತ್ರಗಳೆಲ್ಲಾ ಹೊಡೆದಾಟ, ಬಡಿದಾಟ, ಸ್ಟಂಟ್ ಚಿತ್ರಗಳೇ ಆಗಿದ್ದವು. ನಟನೇ ಆಗಲಿ, ನಟಿಯೇ ಆಗಲಿ ಕುದುರೆ



(ಚಿತ್ರ ೧೪) ತಾರೆಯರಿಗೆ ಅಭಿನಯ ಕೌಶಲ್ಯ ಇದ್ದರೆ ಸಾಲದು. ಸೈಕಲ್ ಸವಾರಿ, ಕುದುರೆ ಸವಾರಿ ಜೊತೆಗೆ ಸಾಹಸಗಳನ್ನು ಮಾಡುವುದನ್ನು ಕಲಿಯುವುದು ಅನಿವಾರ್ಯ. 'ಹಿಸ್ ಲವ್ ಅಫೇರ್' ಚಿತ್ರದಲ್ಲಿ ಆಕಸ್ಮಿಕ ಸನ್ನಿವೇಶದಲ್ಲಿ ಬಿ.ಜಯಮ್ಮ ಮತ್ತು ಹೆಚ್.ಎಲ್.ಎನ್.ಸಿಂಹ

ಸವಾರಿ, ಈಜು, ಮರ ಹತ್ತುವುದು, ಬಿಲ್ಲು-ಬಾಣ ಬಿಡುವುದನ್ನೂ ಕಲಿಯಬೇಕಾಗಿತ್ತು. ಇವುಗಳೆಲ್ಲವನ್ನು ಶ್ರಮಪಟ್ಟು ಕಲಿತೆ. ಎಲ್ಲ ಪಾತ್ರಗಳನ್ನು ಶ್ರದ್ಧೆಯಿಂದ ಅಭಿನಯಿಸ ತೊಡಗಿದೆ. ಎಲ್ಲರೂ ನನ್ನ ಅಭಿನಯ ಮೆಚ್ಚಿದರು. ಮಾಲೀಕರು ನನ್ನ ಅಭಿನಯಕ್ಕೆ ತಲೆದೂಗಿದರು. ಒಪ್ಪಂದ ಸಿದ್ಧವಾಯಿತು. ತಿಂಗಳೊಂದಕ್ಕೆ ರೂ.೨೫೦ ಸಂಭಾವನೆ'' ಇದು 'ಸೂರ್ಯ ಸ್ಟಾರ್' ಆಗಿ ಮಿಂಚಿದ ಲಕ್ಷ್ಮೀಬಾಯಿ ಆತ್ಮಕಥನ. ಇದು ಆಗಿನ ಕಾಲದ ತಾರೆಯರಿಗೆ ಇರಬೇಕಾಗಿದ್ದ ಅರ್ಹತೆ ಬಗ್ಗೆ ಬೆಳಕು ಚೆಲ್ಲುತ್ತದೆ. ಲಕ್ಷ್ಮೀಬಾಯಿ ಮೊದಲ ಚಿತ್ರ 'ರಾಜ ಹೃದಯ' (೧೯೨೯) ಸೇರಿದಂತೆ ಸೂರ್ಯ ಫಿಲಂ ಕಂಪನಿಯ ೧೮ ಚಿತ್ರಗಳಲ್ಲಿ ಅವರ ಹೆಸರಿನ ಉಲ್ಲೇಖವಿದೆ.

ತಾರೆಯರು ಮೇಕಪ್‌ಗಾಗಿ ವೈಟ್‌ಲೆಡ್, ವ್ಯಾಸಿಲಿನ್, ರೆಡ್ ಕಲರ್‌ಗಳ ಮಿಶ್ರಣವನ್ನು ಉಪಯೋಗಿಸುತ್ತಿದ್ದರು.

''ಚಿತ್ರ ತಯಾರಿಕಾ ವಿಧಾನವೂ ಶಿಸ್ತುಬದ್ಧವಾಗಿರುತ್ತಿತ್ತು. ಚಿತ್ರಕ್ಕೆ ಸಂಬಂಧಪಟ್ಟ ನಟ-ನಟಿಯರನ್ನೆಲ್ಲಾ ಕೂಡಿಸಿಕೊಂಡು ಕಥೆಯನ್ನು ಹೇಳುತ್ತಿದ್ದರು. ಅನಂತರ ಪಾತ್ರಧಾರಿಗಳು ವಹಿಸಬೇಕಾಗಿದ್ದ ಪಾತ್ರವನ್ನು ವಿವರಿಸುತ್ತಿದ್ದರು. ನಟ-ನಟಿಯರಿಗೆಲ್ಲಾ ಅವರವರ ಪಾತ್ರಗಳು ಮನದಟ್ಟಾದ ಮೇಲೆ ಚಿತ್ರೀಕರಣ ಪ್ರಾರಂಭಿಸುತ್ತಿದ್ದರು.

ಸ್ಟುಡಿಯೋ ಸರಳ ವ್ಯವಸ್ಥೆಯಾಗಿತ್ತು. ವಿಶಾಲ ಬಯಲಿರುವ ಬಂಗಲೆಗಳನ್ನೇ ಸ್ಟುಡಿಯೋಗಳಿಗಾಗಿ ಆಯ್ಕೆ ಮಾಡಲಾಗುತ್ತಿತ್ತು. ಕಟ್ಟಡವನ್ನು ಫಿಲಂ ಸಂಸ್ಕರಣ, ಮುದ್ರಣ ಇತ್ಯಾದಿ ಕಾರ್ಯಗಳಿಗೆ ಬಳಸಲಾಗುತ್ತಿತ್ತು. ಕಟ್ಟಡದ ಹೊರಗೆ ಬಯಲಲ್ಲಿ ಮಾಡು ಇಲ್ಲದ ನಾಲ್ಕು ಗೋಡೆಗಳು. ಇಟ್ಟಿಗೆ, ತಡಿಕೆ ಇಲ್ಲ ಟಿನ್, ತಗಡುಗಳನ್ನು ಬಳಸಿ ನಿರ್ಮಿತ ಫ್ಲೋರ್. ಸರಳವಾದ ವ್ಯವಸ್ಥೆ. ಬಿಸಿಲಿನ ಅವಶ್ಯಕತೆಗೆ ಅನುಗುಣವಾಗಿ ಸರಿಸಬಹುದಾದ ಟೆಂಟ್ ಬಟ್ಟೆ ಹೊದಿಕೆ. ಬಿಸಿಲಿದ್ದಾಗಲೇ ಚಿತ್ರಣವಾದ ಕಾರಣ ಚಿತ್ರೀಕರಣ ಚಟುವಟಿಕೆಯೆಲ್ಲಾ ಬೆಳಿಗ್ಗೆ ಆರಿಂದ ಮಧ್ಯಾಹ್ನ ೩ ಗಂಟೆಯವರೆಗೆ ಮಾತ್ರ ನಡೆಯುತ್ತಿತ್ತು. ವಿದ್ಯುತ್ ದೀಪಗಳನ್ನು ಬಳಸುವುದು ಪ್ರಚಾರದಲ್ಲಿ ಇರಲಿಲ್ಲ. ಚಿತ್ರದ ಹೆಚ್ಚು ಭಾಗ ಹೊರಾಂಗಣದಲ್ಲೇ ಚಿತ್ರಿತವಾಗುತ್ತಿತ್ತು.

ಗುಬ್ಬಿ ವೀರಣ್ಣನವರು ಹಗಲು ಚಿತ್ರೀಕರಣ ನಡೆಸುತ್ತಿದ್ದರೆ, ಸಂಜೆ ಬೆಂಗಳೂರಿನ ಶಿವಾನಂದ ಥಿಯೇಟರ್‌ನಲ್ಲಿ ನಾಟಕ ನಡೆಸುತ್ತಿರುವುದಾಗಿ ಅವರ ಆತ್ಮಕಥನದಲ್ಲಿ ಹೇಳಿದ್ದಾರೆ.

ಚಿತ್ರೀಕರಿಸಿದ ಫಿಲ್ಮಿನ ಸಂಸ್ಕರಣಕ್ಕೆ ಯಾಂತ್ರಿಕ ಸೌಲಭ್ಯ ಇರಲಿಲ್ಲ. ಭಾರತೀಯರು ತಮ್ಮದೇ ವಿಧಾನ ರೂಪಿಸಿಕೊಂಡಿದ್ದರು. ಷೂಟಿಂಗ್ ಆದ ಮೇಲೆ ಲ್ಯಾಬೊರೇಟರಿಯಲ್ಲಿ ಸಂಸ್ಕರಣ ನಡೆಯುತ್ತಿತ್ತು. ಅದಕ್ಕೆ ಈಗಿನಂತೆ ಸ್ವತಃಸ್ಥಲಿ

ವಿಕಾಸಗೊಂಡ ಭಾರತೀಯ ಚಲನ ಚಿತ್ರೋದ್ಯಮದ ಮೊದಲ ಒಂದು ದಶಕದ (೧೯೧೮-೧೯೨೮) ಚಿತ್ರ.

| | ೧೯೧೮ | ೧೯೨೮ |
|---|---|---|
| ಭಾರತದ ಜನಸಂಖ್ಯೆ | ೨೪.೮೩ ಕೋಟಿ | ಅಂದಾಜು ೨೭ ಕೋಟಿ |
| ಚಲನಚಿತ್ರ ಉದ್ಯಮದಲ್ಲಿ ತೊಡಗಿರುವವರು | ೧೫೦೦ | ೯೦೦೦ |
| ಉದ್ಯಮದಲ್ಲಿ ಬಂಡವಾಳ ಹೂಡಿಕೆ | ೭ ಲಕ್ಷ ರೂ. | ರೂ. ೨.೫೦ ಕೋಟಿ |
| ಸ್ಟುಡಿಯೋಗಳ ಸಂಖ್ಯೆ | ೧ (ನಾಸಿಕ್) | ೨೨ |
| ಲ್ಯಾಬೊರೇಟರಿಗಳು (ಅವೈಜ್ಞಾನಿಕ) | ೭ | ೨೧ |
| ವಾರ್ಷಿಕ ಬಂಡವಾಳ ಹೂಡಿಕೆ | ೧ ಲಕ್ಷ ರೂ. | ೧೫ ಲಕ್ಷ |
| ಒಂದು ಚಲನಚಿತ್ರದ ನಿರ್ಮಾಣ ವೆಚ್ಚ | ರೂ. ೧೦-೧೫ ಸಾವಿರ | ೧೫ರಿಂದ ೨೦ ಸಾವಿರ ರೂ. |
| ಚಿತ್ರ ತಯಾರಿಕಾ ಸಂಸ್ಥೆಗಳು | ೮ | ೨೧ |
| ಕಥಾ ಚಿತ್ರದ ಸರಾಸರಿ ಉದ್ದ | ೫೫೦೦ ಅಡಿ | ೭೦೦೦ ಅಡಿ |
| ಪ್ರದರ್ಶನಕ್ಕೆ ಬಿಡುಗಡೆ ಮಾಡುತ್ತಿದ್ದ ಪ್ರಿಂಟುಗಳ ಸಂಖ್ಯೆ | ೧ | ೩ |
| ಚಿತ್ರ ನಿರ್ಮಾಣ ಕೇಂದ್ರಗಳು | ಮುಂಬೈ, ನಾಸಿಕ್, ಕಲ್ಕತ್ತ ಕೊಲ್ಹಾಪುರ, ಮದ್ರಾಸ್ | ಮುಂಬೈ, ಕಲ್ಕತ್ತಾ, ಲಾಹೋರ್, ರಾಜ್‌ಕೋಟ್, ಕೊಲ್ಹಾಪುರ್, ಬರೋಡ, ನಾಸಿಕ್, ಇಂದೋರ್. |
| ಪ್ರದರ್ಶನ ವಲಯ : | | |
| ಖಾಯಂ ಚಿತ್ರ ಮಂದಿರಗಳು | | ೩೪೦ ಖಾಯಂ |
| ಸಂಚಾರಿ ಚಿತ್ರ ಮಂದಿರಗಳು | ಎರಡೂ ಸೇರಿ ೯೮ | ೩೭೭ ಸಂಚಾರಿ<br>೩೬ ತಾತ್ಕಾಲಿಕ |
| | ಒಟ್ಟು | ೭೦೩ |
| ಚಿತ್ರಮಂದಿರದಲ್ಲಿ ಲಭ್ಯವಿದ್ದ ಸೀಟುಗಳು | ಸುಮಾರು ೫೦,೦೦೦ (೪೦೦೦ ಮಂದಿಗೆ ೧ ಸೀಟು) | ೨,೫೭,೦೦೦ (೧೦೫೦ ಮಂದಿಗೆ ೧ ಸೀಟು) |
| ವಿತರಣಾ ವಲಯ : | ಭಾರತೀಯ ನಿರ್ಮಾಪಕರು ತಾವೇ ಚಿತ್ರಗಳ ಹಂಚಿಕೆ ಮಾಡುತ್ತಿದ್ದರು, ಇಲ್ಲವೇ ಏಜೆಂಟರ ಪ್ರತಿನಿಧಿಗಳ ಮೂಲಕ ವಿತರಣೆ ಮಾಡುತ್ತಿದ್ದರು. | ಭಾರತೀಯ ನಿರ್ಮಾಪಕರು ತಾವೇ ಇಲ್ಲವೇ ತಮ್ಮ ಪ್ರತಿನಿಧಿಗಳ ಮೂಲಕ ಇಲ್ಲವೇ ವಿತರಣಾ ಸಂಸ್ಥೆಗಳ ಮೂಲಕ ಚಿತ್ರಗಳನ್ನು ಬಿಡುಗಡೆ ಮಾಡುತ್ತಿದ್ದರು. ವಿದೇಶದ ಚಿತ್ರಗಳನ್ನು ಆಮದು ಮಾಡಲಾಗುತ್ತಿತ್ತು. ಕಲ್ಕತ್ತೆಯಲ್ಲಿ ಮದನ್ ಥಿಯೇಟರ್ಸ್ ಮತ್ತು ಗ್ಲೋಬ್ ಥಿಯೇಟರ್ಸ್, ಮುಂಬೈನಲ್ಲಿ ಯೂನಿವರ್ಸಲ್ ಪಿಕ್ಚರ್ಸ್ ಕಾರ್ಪೊರೇಷನ್ ಮತ್ತು ಪಾಥೆ ಇಂಡಿಯಾ ಲಿ., |

ಕರ್ನಾಟದಲ್ಲಿ ಬಿರುಸಿನಿಂದ ಚಿತ್ರ ತಯಾರಿಕೆ ಆರಂಭವಾದದ್ದು ೧೯೨೮-೨೯ರ ಅವಧಿಯಲ್ಲಿ.



(ಚಿತ್ರ ೧೫) ಮಡಿವಂತಿಕೆಯ ಚುಂಬನ - ಎಡಿಸನ್ ತಯಾರಿಸಿದ 'ದಿ ಕಿಸ್' ಚಿತ್ರದ ಒಂದು ದೃಶ್ಯ. ಭಾರತದಲ್ಲಿ ಇಂತಹ ದೃಶ್ಯಗಳು ತೆರೆಯ ಮೇಲೆ ಬಂದಾಗ ಪ್ರೇಕ್ಷಕ ವರ್ಗದಲ್ಲಿದ್ದ ಸ್ತ್ರೀಯರು ಕತ್ತನ್ನು ಬೇರೆಡೆಗೆ ತಿರುಗಿಸಿ ಮುಖದ ಮೇಲೆ ಸೆರಗನ್ನು ಸರಿಸುತ್ತಿದ್ದರಂತೆ.

ಯಂತ್ರಗಳು ಇರಲಿಲ್ಲ. ಅದಕ್ಕೂ ನಮ್ಮವರು ದೇಶಿ ವಿಧಾನಗಳನ್ನು ರೂಪಿಸಿಕೊಳ್ಳುತ್ತಿದ್ದರು. ಹೆಚ್ಚಾಗಿ ರಾತ್ರಿ ವೇಳೆಯಲ್ಲಿ ಸಂಸ್ಕರಣ ನಡೆಯುತ್ತಿತ್ತು. ದೊಡ್ಡದಾದ ಮರದ ಪಟ್ಟಿಗಳ ಚೌಕಟ್ಟಿಗೆ ಫಿಲ್ಮ್ ಸುತ್ತಿ ಅದನ್ನು ರಾಸಾಯನಿಕ ದ್ರಾವಣ ತುಂಬಿದ ತಟ್ಟೆಗಳಲ್ಲಿ ಅದ್ದಿ ಸಂಸ್ಕರಿಸುತ್ತಿದ್ದರು. ಇದು ಮದರಾಸಿನಲ್ಲಿ ಅನುಸರಿಸುತ್ತಿದ್ದ ವಿಧಾನ.

ಕೈಯಲ್ಲಿ ಸಂಸ್ಕರಣ ನಡೆಸುವವರು ಬೇಸಿಗೆಯಲ್ಲಿ ಸ್ವಲ್ಪ ಎಚ್ಚರ ತಪ್ಪಿದರೆ ಗಟ್ಟಿಗೊಂಡ ಫಿಲ್ಮ್ ಪೂರ ಬೆರಳುಗಳಿಗೆ ಅಂಟಿಕೊಂಡು ಚಿತ್ರಿಸಿದ್ದೆಲ್ಲಾ ಹಾಳಾಗುತ್ತಿತ್ತೆಂದು ತಂತ್ರಜ್ಞನೊಬ್ಬ ಹೇಳಿದ್ದಾನೆ. ಆರಂಭದಲ್ಲಿ ಕೈನಲ್ಲಿ ತಿರುಗಿಸುವ ಕ್ಯಾಮರಾಗಳು, ಅನಂತರ ಸುಧಾರಿಸಿದ ಸ್ವತಃಶ್ಚಲಿ ಕ್ಯಾಮರಗಳು ಬಳಕೆಗೆ ಬಂದವು.

ಚಿತ್ರಮಂದಿರಗಳಲ್ಲಿ ೩-೪ ವರ್ಗಗಳು ಇರುತ್ತಿದ್ದವು. ಎರಡು ಆಣೆಯಿಂದ ಎರಡು ರೂಪಾಯಿವರೆಗೆ. ಎರಡಾಣೆಗೆ ನೆಲ. ನಗರ ಪ್ರದೇಶದಲ್ಲಿ ಗರಿಷ್ಠ ದರ ಮೂರು ರೂಪಾಯಿ ಬಾಕ್ಸ್ ಅಥವಾ ಸೋಫಾ ಸೀಟಿನ ಆಸನ ವ್ಯವಸ್ಥೆಗೆ. ಕೆಲವು ಚಿತ್ರಮಂದಿರಗಳಲ್ಲಿ ನೆಲದ ಮೇಲೆ ಕುಳಿತು ನೋಡುವ ತರಗತಿಗೆ ಪ್ರವೇಶ ಧನ ಒಂದಾಣೆ ಇತ್ತು. ಇವು ಭಾರತದಾದ್ಯಂತ ಜಾರಿಯಲ್ಲಿದ್ದ ದರಗಳು. ಪ್ರಮುಖ ನಗರಗಳಲ್ಲಿ ಇಟ್ಟಿಗೆ ಗಾರೆಗಳಿಂದ ಮಾಡಿದ ಕಟ್ಟಡಗಳು ಕಂಡು ಬಂದರೆ, ಅನೇಕ ಕಡೆ ಟೆಂಟ್‌ನ್ನು, ಬಿದಿರಿನ ತಡಿಕೆಗಳ ಗೂಡು. ಬಹಳಷ್ಟು ಚಿತ್ರಮಂದಿರಗಳ ಒಳ ವಾತಾವರಣ ಜಿಗುಪ್ಸೆ ಹುಟ್ಟಿಸುವಂಥದು. ಹೊರ ವಾತಾವರಣವೂ ಅಷ್ಟೇ. ಕುರ್ಚಿ ಬೆಂಚುಗಳಲ್ಲಿ ತಿಗಣೆ ಕಾಟ ಸರ್ವೇ ಸಾಮಾನ್ಯ.

ಭಾರತದಲ್ಲಿ ತಯಾರಾಗುವ ಚಿತ್ರಗಳಿಗೆ ಮೂರು-ನಾಲ್ಕು ದೇಶೀಯ ಭಾಷೆಗಳಲ್ಲಿ ಶೀರ್ಷಿಕೆಗಳನ್ನು ಅಳವಡಿಸಲಾಗುತ್ತಿತ್ತು. ಉತ್ತರ ಭಾರತದಲ್ಲಿ ಪ್ರದರ್ಶನವಾಗುವ ಚಿತ್ರಗಳಲ್ಲಿ ಹಿಂದಿ, ಗುಜರಾತಿ, ಉರ್ದು ಶೀರ್ಷಿಕೆ ಇರುತ್ತಿತ್ತು. ದಕ್ಷಿಣದಲ್ಲಿ ಪ್ರದರ್ಶನವಾಗುವ ಚಿತ್ರಗಳಿಗೆ ತಮಿಳು, ತೆಲುಗು ಶೀರ್ಷಿಕೆಗಳನ್ನು ಅಳವಡಿಸಲಾಗುತ್ತಿತ್ತು. ಮೈಸೂರಿನಲ್ಲಿ ಪ್ರದರ್ಶನವಾಗುವ ಚಿತ್ರದ ಒಂದೊಂದು ದೃಶ್ಯಕ್ಕೂ ಕನ್ನಡದಲ್ಲಿ ಸಬ್‌ಟೈಟಲ್ ತೋರಿಸುತ್ತಿದ್ದರು. ಇದರಿಂದ ಚಿತ್ರ ವೀಕ್ಷಿಸುವವರಿಗೆ ಚಿತ್ರದ ಬಗ್ಗೆ ಆಸಕ್ತಿ ಹುಟ್ಟುತ್ತಿತ್ತು.

ಸ್ತ್ರೀಯರಿಗಾಗಿ ಪ್ರತ್ಯೇಕ ಆಸನ ವ್ಯವಸ್ಥೆ ಇರುತ್ತಿತ್ತು. ಚುಂಬನ ದೃಶ್ಯ ಬಂದಾಗ ಮುಖದ ಮೇಲೆ ಸೆರಗಿನ ಮುಸುಕನ್ನು ಸರಿಸಿ, ಕತ್ತನ್ನು ತೆರೆಯಿಂದ ಬೇರೆ ದಿಕ್ಕಿಗೆ ತಿರುಗಿಸುತ್ತಿದ್ದರು. ಘೋಷಾ ಸ್ತ್ರೀಯರು ಚಿತ್ರ ನೋಡಲು ಬರುವುದು ಅತಿ ವಿರಳವಾಗಿತ್ತು. ಆರಂಭದ ದಿನಗಳಲ್ಲಿ ಕುಲೀನ ಸ್ತ್ರೀಯರು ಚಿತ್ರಮಂದಿರಗಳಿಗೆ ಹೋಗುವುದು ನಿಷೇಧವಿತ್ತು.

ಓದು ಬಾರದವರಿಗಾಗಿ ಚಿತ್ರ ಪ್ರದರ್ಶನ ಕಾಲದಲ್ಲಿ ಕಥಾ ಸಂದರ್ಭ ತಿಳಿಸಲು ಕಥಾ ನಿರೂಪಕರನ್ನು ನೇಮಿಸಿಕೊಳ್ಳುತ್ತಿದ್ದರು. ಈ ಕಥಾ ನಿರೂಪಕರು ಭಾರತೀಯ ಚಿತ್ರಗಳಿಗೆ ಮಾತ್ರವಲ್ಲ, ಆಮದಾದ ಚಿತ್ರಗಳಿಗೂ ನಿರೂಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಅವರಿಗೆ ತಿಂಗಳಿಗೆ ೩೦ ರೂಪಾಯಿ ವೇತನ ನೀಡಲಾಗುತ್ತಿತ್ತೆಂದು ಚಿತ್ರಮಂದಿರದ ಒಬ್ಬ ಮಾಲೀಕ ರಂಗಾಚಾರಿಯರ್ ಸಮಿತಿ ಮುಂದೆ ನೀಡಿದ ಸಾಕ್ಷ್ಯದಲ್ಲಿ ತಿಳಿಸಿದ್ದಾನೆ.

ಚಿತ್ರ ನಡೆಯುವಾಗ ತೆರೆಯ ಮುಂದಿನ ಕುಳಿಯಲ್ಲಿ (ರಂಗಭೂಮಿಯಲ್ಲಿದ್ದಂತೆ) ಇಲ್ಲವೆ ತೆರೆಯ ಪಕ್ಕದಲ್ಲಿ ಕುಳಿತ ವಾದ್ಯ ವೃಂದದವರು ಚಿತ್ರದ ಸಂದರ್ಭ ಸ್ವಾರಸ್ಯವನ್ನು ಹೆಚ್ಚಿಸಲು ಸಹಾಯಕವಾದ ನಾದ ಸಂಯೋಜನೆ ಮಾಡುತ್ತಿದ್ದರು. ಈ ವಾದ್ಯಗೋಷ್ಠಿಯವರು ಸ್ಥಳೀಯವಾಗಿ ಪ್ರಸಿದ್ಧರಾದ ವಾದ್ಯ ವಿದ್ವಾಂಸರೂ ಆಗಿರುತ್ತಿದ್ದರು. ಕಲ್ಕತ್ತೆಯ ಮದನ್ ಥಿಯೇಟರ್ಸ್‌ನವರು ತಮ್ಮ ಸಂಸ್ಥೆಯ ಅಧೀನದಲ್ಲಿದ್ದ ಗ್ರಾಮಾಂತರ ಪ್ರದೇಶದ ಚಿತ್ರಮಂದಿರದಲ್ಲಿ ರೂ. ೬೫,೦೦೦ ವೆಚ್ಚದಲ್ಲಿ 'ವರ್ಲಿಟ್ಜರ್ ಪೈಪ್ ಆರ್ಗನ್' ಸ್ಥಾಪಿಸುವುದಾಗಿ ರಂಗಾಚಾರಿ ಸಮಿತಿಗೆ ತಿಳಿಸಿರುವುದು ಮೂಕ ಚಿತ್ರದ ಕಾಲದಲ್ಲಿ ಹಿನ್ನೆಲೆ ವಾದ್ಯಗೋಷ್ಠಿಗೆ ಇದ್ದ ಮಹತ್ವಕ್ಕೆ ಹಾಗೂ ಆ ದಿನಗಳಲ್ಲಿ ಚಲನ ಚಿತ್ರಗಳಿಗೆ ಜನಸಾಮಾನ್ಯರ ಪ್ರೋತ್ಸಾಹಕ್ಕೆ ನಿದರ್ಶನ.

ಮೂಕಿ ದಿನಗಳಲ್ಲಿ ಚಿತ್ರಮಂದಿರಗಳಿಗೆ ಭಾರತದಲ್ಲಿ ತಯಾರಾದ ಚಿತ್ರಗಳ ಬೇಡಿಕೆ ಇತ್ತು. ಆದರೆ ಅವು ಅಲಭ್ಯ, ಜೊತೆಗೆ ದುಬಾರಿ. ಬ್ರಿಟನ್, ಅಮೆರಿಕದ ಚಿತ್ರಗಳು ಭಾರತದಲ್ಲಿ ತಯಾರಾದ ಚಿತ್ರಗಳಿಗಿಂತ ಕಡಿಮೆ ಬೆಲೆಯಲ್ಲಿ ಸಿಗುತ್ತಿದ್ದವು. ಆದರೆ ಚಿತ್ರಗಳು ದೇಶೀ ಚಿತ್ರಗಳಷ್ಟು ಜನರನ್ನು ಆಕರ್ಷಿಸುವುದಿಲ್ಲ ಎಂದು ಪ್ರದರ್ಶಕರು ರಂಗಾಚಾರಿಯರ್ ಸಮಿತಿಗೆ ದೂರಿದ್ದರು.

ಜಾನಪದ, ಚಾರಿತ್ರಿಕ, ಪೌರಾಣಿಕ ಚಿತ್ರಗಳಿಗೆ ಮನ್ನಣೆ ಇದ್ದರೂ ಕೆಲವು ಪ್ರಯೋಗಶೀಲರು ಸಾಮಾಜಿಕ ಚಿತ್ರಗಳನ್ನು ನಿರ್ಮಿಸಿದರು. ಮುಂಬೈನಲ್ಲಿ ಚಂದೂಲಾಲ್ ಷಾ ಅವರು ಸಾಮಾಜಿಕ ನೀತಿಬೋಧಕ ಚಿತ್ರಗಳ ನಿರ್ಮಾಣಕ್ಕೆ ನಾಂದಿ ಹಾಡಿದರು. ಅವರು ನಿರ್ಮಿಸಿದ 'ಗುಣಸುಂದರಿ' (೧೯೨೭) ಜನಪ್ರಿಯವಾಯಿತು. ಗಂಡಸರು ಪಥಭ್ರಷ್ಟರಾಗಲು ಮಡದಿಯರೇ ಕಾರಣವೆನ್ನುವುದನ್ನು ಸರಸವಾಗಿ ಚಿತ್ರಿಸಲಾದ ಚಿತ್ರ. ಚಂದೂಲಾಲ್ ಷಾ 'ಗುಣಸುಂದರಿ' ತಾರೆ ಗೋಹರ್ ಜೊತೆಗೂಡಿ ರಣಜಿತ್ ಸಂಸ್ಥೆ ಆರಂಭಿಸಿ ಅನೇಕ ಸಾಮಾಜಿಕ ಹಾಗೂ ಚಾರಿತ್ರಿಕ ಹಾಗೂ ಭಕ್ತಿಪ್ರಧಾನ ಚಿತ್ರಗಳನ್ನು ನಿರ್ಮಿಸಿದರು.

ಕಲ್ಕತ್ತೆಯಲ್ಲಿ ಧೀರೇಂದ್ರನಾಥ್ ಗಂಗೂಲಿ ನಿರ್ಮಿಸಿದ ಚಿತ್ರ 'ಇಂಗ್ಲೆಂಡ್ ರಿಟರ್ನ್‌ಡ್' ಒಂದು ವಿಡಂಬನಾತ್ಮಕ, ಸಾಮಾಜಿಕ, ಆರ್ಥಿಕ ದೃಷ್ಟಿಯಿಂದಲೂ ಯಶಸ್ವಿ.




(ಚಿತ್ರ ೧೬) ಮೂಕಿಯುಗದ ಕಾಲದಲ್ಲಿ ಪ್ರದರ್ಶನ ಅಂತ್ಯವಾಯಿತೆಂದು ಸೂಚಿಸಲು ಬಳಸುತ್ತಿದ್ದ ವಾಕ್ಯಫಲಕ.

ಮೂಕಿ ಕಾಲದಲ್ಲಿ ಅತ್ಯಂತ ಜನಪ್ರಿಯವಾದ ಚಿತ್ರವೆಂದರೆ ಡೊಗ್ಲಾಸ್ ಫೇರ್ ಬ್ಯಾಂಕ್ಸ್ ಅಭಿನಯದ 'ಥೀಫ್ ಆಫ್ ಬಾಗ್ದಾದ್'. ಚಾರ್ಲಿ ಚಾಪ್ಲಿನ್, ಬಸ್ಟರ್ ಕೀಟನ್, ಹೆರಾಲ್ಡ್ ಲಾಯ್ಡ್ ಹಾಸ್ಯ ಚಿತ್ರಗಳು, ಹಿಚಕಾಕ್ ಅವರ ರೋಚಕ ಚಿತ್ರಗಳು, ಸಿಸಿಲ್ ಬಿ ಡಿಮಿಲಿ ವೈಭವೋಪೇತ ಪೌರಾಣಿಕ ಚಿತ್ರಗಳು ಜನರ ಆಕರ್ಷಣೆ ಆಗಿದ್ದವು.

ಭಾರತೀಯ ಮೂಕ ಚಿತ್ರಗಳು ಹೇಗಿದ್ದವು ? ಕನ್ನಡ ನಿಘಂಟುಕಾರ ಹಿರಿಯ ವಿದ್ವಾಂಸ ಡಾ||ಜಿ.ವೆಂಕಟಸುಬ್ಬಯ್ಯ ಅವರ ಮಾತುಗಳಲ್ಲಿ : ''ಮೂಕಿ ಚಿತ್ರವೆಂಬ ಹೆಸರು ಪ್ರಚಾರಕ್ಕೆ ಬಂದುದೇ ಟಾಕಿ ಚಿತ್ರ ಬಂದ ಮೇಲೆ. ಅದಕ್ಕೂ ಮುಂಚೆ ಆ ಚಿತ್ರಗಳನ್ನೆಲ್ಲ ಬಯಾಸ್ಕೋಪ್ ಎಂದು ಕರೆಯುತ್ತಿದ್ದರು. ಮೂಕಿ ಚಿತ್ರಗಳಲ್ಲಿ ಪುರಾಣದ ಕಥೆಗಳಿಗೆ ಅದರಲ್ಲಿಯೂ ನಾಟಕ ರಂಗಗಳಲ್ಲಿ ಕೀರ್ತಿಯನ್ನು ಗಳಿಸಿದ್ದ ಕಥೆಗಾರರಿಗೆ ಪ್ರಾಧಾನ್ಯವಿತ್ತು. ಮೈಸೂರಿನಲ್ಲಿ ಸುಮಾರು ೧೯೨೦ರ ಹಿಂದೆ ಮುಂದೆ ಒಂದೆರಡು ಚಿತ್ರಮಂದಿರಗಳಿದ್ದವು. ಈಗಿನ ದಾಸಪ್ರಕಾಶ್ ಹೋಟೆಲ್ ಇರುವ ಸ್ಥಳದ ಬಳಿ ಒಲಂಪಿಯಾ ಎಂಬ ಚಿತ್ರಮಂದಿರವಿತ್ತು. ಅದರಲ್ಲಿ ನಾನು ಮೂರು-ನಾಲ್ಕು ಚಿತ್ರಗಳನ್ನು ನೋಡಿದ ನೆನಪಿದೆ. ಈ ಪುರಾಣ ಕಥೆಗಳ ಹೆಸರನ್ನು ಕೇಳಿದ ನಮ್ಮ ತಾಯಿಯ ತಾಯಿ ಈ ಚಿತ್ರವನ್ನು ನೋಡಬೇಕೆಂದು ಆಸೆ ಪಟ್ಟರು. ಅವರನ್ನು 'ಭಕ್ತ ಪ್ರಹ್ಲಾದ', 'ರಾಜಸೂಯಯಾಗ' ಚಿತ್ರಗಳಿಗೆ ಕರೆದುಕೊಂಡು ಹೋದ ನೆನಪಿದೆ. 'ಭಕ್ತ ಪ್ರಹ್ಲಾದ' ಚಿತ್ರದಲ್ಲಿ ಪ್ರಹ್ಲಾದನಿಗೆ ನೀಡುತ್ತಿದ್ದ ಹಿಂಸೆ, ಆನೆಯಿಂದ ತುಳಿಸಲು ಕ್ರಮ ಕೈಗೊಳ್ಳುವುದು, ಆಮೇಲೆ ಕಂಬದಿಂದ ನರಸಿಂಹ ಹೊರಬರುವ ಅದ್ಭುತ ಚಿತ್ರ, ಇನ್ನೂ ನೆನಪಿರುವ ಭಾಗಗಳು. ರಾಜಸೂಯ ಯಾಗದಲ್ಲಿ ಭೀಮ ಜರಾಸಂಧನೊಡನೆ ಯುದ್ಧ ಮಾಡಿ ಅವನನ್ನು ಎರಡು ಹೋಳು ಮಾಡಿ ಬಿಸುಡುತ್ತಿದ್ದರೂ ಆ ಚೂರುಗಳು ಮತ್ತೆ ಕೂಡಿಕೊಂಡು ಮತ್ತೆ ಯುದ್ಧಕ್ಕೆ ನಿಲ್ಲುತ್ತಿದ್ದುದು ಕಣ್ಣಿಗೆ ಕಟ್ಟುವ ಹಾಗೆ ನೆನಪಿದೆ. 'ಸುಭದ್ರಾ ಹರಣ' ಎಂಬುದು ಮತ್ತೊಂದು ನೆನಪು. ವಿವರ ಮರೆತಿದೆ. ಆಗಿನ ಕಾಲದಲ್ಲಿ ಚಿತ್ರದ ಮೇಲುಭಾಗದಲ್ಲಿಯೋ, ಕೆಳಭಾಗದಲ್ಲಿಯೋ ಸಂಭಾಷಣೆಗಳನ್ನು ಕನ್ನಡದಲ್ಲಿ ಬರೆದ ಹಾಗೆ ತೋರಿಸುತ್ತಿದ್ದರು. ಜನಸಂದಣಿ ಸದಾ ಇತ್ತು''.

ವೆಂಕಟಸುಬ್ಬಯ್ಯನವರ ತಾಯಿಯ ತಾಯಿ ಮಡಿ ಹೆಂಗಸು. ಅವರ ತಂದೆ ಪುರಾಣ ಪ್ರವಚನಕಾರರಾದ ಕಾರಣ ಮೊಮ್ಮಗನ ವರ್ಣನೆ ಕೇಳಿ ಪೌರಾಣಿಕ ಚಿತ್ರಗಳನ್ನು ನೋಡಲು ಹೋದರು. ಚಲನಚಿತ್ರ ನೋಡಿ ಅಚ್ಚರಿ ಪಟ್ಟರು. ಆದರೆ ತಮ್ಮ ತಂದೆಯವರ ಪ್ರವಚನದಷ್ಟು ಸ್ವಾರಸ್ಯವಾಗಿರಲಿಲ್ಲವೆಂದೂ ಅಭಿಪ್ರಾಯಪಟ್ಟರು.

ಮೂಕ ಚಿತ್ರಗಳ ಪ್ರೇಕ್ಷಣೀಯತೆ ಹೆಚ್ಚಿಸಲು ಕನ್ನಡ ನಾಡಿನ ಪ್ರದರ್ಶಕರು ಹೊಸ ಹೊಸ ಪ್ರಯೋಗಗಳನ್ನು ನಡೆಸಿದರು. ಮೈಸೂರು ನಗರದ ಮೊದಲ ಮೂಕ ಚಿತ್ರಮಂದರ ಐ.ಎಸ್. ಸಿನಿಮಾ (ಇಸ್ಮಾಯಿಲ್ ಷರೀಫ್ ಸಿನಿಮಾ) ಆಡಳಿತ ಬದಲಾವಣೆಯೊಂದಿಗೆ ಅದು 'ಒಲಂಪಿಯಾ' ಆಯಿತು. ೧೯೨೫ರಲ್ಲಿ ಆರಂಭವಾದ ಈ ಚಿತ್ರಮಂದಿರ ಚಿತ್ರ ಪ್ರದರ್ಶನ ಕಾಲದಲ್ಲಿಸಂದರ್ಭೋಚಿತ ಹಿನ್ನಲೆ ಸಂಗೀತಕ್ಕೆ ವ್ಯವಸ್ಥೆ ಮಾಡಿತು. ತೆರೆ ಮುಂದೆ ಕುಳಿತ ಷೇಕ್ ಪೀರ್ ಮತ್ತು ಅಬ್ದುಲ್ ವಹಾಬ್ ಅವರು ತಮ್ಮ ಹಾರ್ಮೋನಿಯಂ ಮತ್ತು ತಬಲ ಈ ಎರಡೇ ವಾದ್ಯಗಳಿಂದ ತೆರೆಯ ಮೇಲೆ ಮೂಡಿದ ದೃಶ್ಯಗಳಿಗೆ ನೀಡುತ್ತಿದ್ದ ನಾದ ಸಂಯೋಜನೆ ಜನಾಕರ್ಷಣೆಯನ್ನು ಹೆಚ್ಚಿಸಲು ಬಹಳ ಸಹಾಯಕವಾಗಿತ್ತು ಎಂದು ಮೈಸೂರಿನ ಪತ್ರಕರ್ತ ಪಿ.ಎಂ.ರಾಜನ್ ಹೇಳುತ್ತಾರೆ. ಮೈಸೂರಿನಲ್ಲಿ ೧೯೨೭ರಲ್ಲಿ ಆರಂಭವಾದ 'ಕೃಷ್ಣ ಸಿನಿಮಾ'ದಲ್ಲಿ ಅದರ ಮಾಲೀಕರು ಕಥಾಸಂದರ್ಭದ ವಿವರಣೆ ನೀಡುವ ನಿರೂಪಕರನ್ನು ಏರ್ಪಡಿಸಿದ್ದರು. ಹುಣಸೂರು ಕೃಷ್ಣಮೂರ್ತಿಗಳು ಕೆಲ ಕಾಲ ಕಥಾ ನಿರೂಪಕರಾಗಿ ಕೆಲಸ ಮಾಡಿದರು. ಉಡುಪಿಯ ಪತ್ರಕರ್ತ ಸತೀಶ್ ಮಲ್ಯ ಅವರು ಕರಾವಳಿಯ ಪ್ರದೇಶದಲ್ಲಿನ ಮೂಕಿ ಚಿತ್ರಗಳ ಕಾಲವನ್ನು ಹೀಗೆ ಚಿತ್ರಿಸುತ್ತಾರೆ : ''ಬೇರೆ ಕಡೆ ಟೆಂಟ್ ಥಿಯೇಟರ್‌ಗಳೆಂದರೆ ಬಟ್ಟೆಗಳ ಡೇರೆಗಳೇ ಆಗಿದ್ದವು. ಆದರೆ ಕರಾವಳಿ ಜಿಲ್ಲೆಗಳಾದ ಉಡುಪಿ, ಮಂಗಳೂರು ಈ ಭಾಗಗಳಲ್ಲಿ ಹೆಣೆದ ತೆಂಗಿನ ಸೋಗೆಗಳನ್ನು ಬಳಸಿ ನಿರ್ಮಿಸಿದ ಥಿಯೇಟರ್‌ಗಳನ್ನೇ ಟೂರಿಂಗ್ ಥಿಯೇಟರ್‌ಗಳೆಂದೂ, ಟೆಂಟ್ ಥಿಯೇಟರ್‌ಗಳೆಂದು ಕರೆಯುತ್ತಿದ್ದರು.

''ಅಂದಿನ ಟೆಂಟ್ ಥಿಯೇಟರ್‌ಗಳಲ್ಲಿ ಕೆಲವೊಂದು ಜನಪ್ರಿಯ ಚಿತ್ರಗಳನ್ನು ಮತ್ತಷ್ಟು ಜನಪ್ರಿಯಗೊಳಿಸಲು ಚಿತ್ರದ ವಿವಿಧ ಸನ್ನಿವೇಶಕ್ಕೆ ಅನುಗುಣವಾಗಿ ಸ್ಥಳೀಯ ನಾಟಕಕಾರರಿಂದ ಬರೆಸಲ್ಪಟ್ಟ ಸಂಭಾಷಣೆಗಳನ್ನು ತೆರೆಯ ಮರೆಯಲ್ಲಿ ನಿಂತ ವ್ಯಕ್ತಿಗಳಿಂದ ಧ್ವನಿವರ್ಧಕದಲ್ಲಿ ಹೇಳಿಸುವ ವ್ಯವಸ್ಥೆ ಮಾಡಲಾಗುತ್ತಿತ್ತು. ಇದರಿಂದ ಚಿತ್ರ ನೋಡುವವರಿಗೆ ತಾವು ನಿಜಕ್ಕೂ ವಾಕ್ಚಿತ್ರಗಳನ್ನೇ ನೋಡುತ್ತಿದ್ದೇವೆಂದು ಭ್ರಮೆ ಮೂಡುತ್ತಿತ್ತು. ಕೆಲವೊಮ್ಮೆ ಮುಂಬಯಿ, ಕಾಶ್ಮೀರದ ಕಡೆಯಿಂದ ಬರುವ ನೃತ್ಯ ತಂಡಗಳಿಂದ ಆಕರ್ಷಕವೆನಿಸುವ ನೃತ್ಯಗಳನ್ನೂ ಏರ್ಪಡಿಸಲಾಗುತ್ತಿತ್ತು. ಅಂಥ ದೃಶ್ಯಗಳು ಎಷ್ಟೊಂದು ಸಹಜವಾಗಿರುತ್ತಿದ್ದುವೆಂದರೆ, ಸಿನಿಮಾ ನೋಡಲು ಬಂದ ಜನರಿಗೆ ಈ ನೃತ್ಯಗಳೂ ಸಿನಿಮಾದ ಒಂದು ಭಾಗವೆಂಬ ಭ್ರಮೆ ಮೂಡಿಸುತ್ತಿದ್ದವು.''

ಉತ್ತರ ಕನ್ನಡ ಜಿಲ್ಲೆಗೆ ಚಲನಚಿತ್ರ ಕಾಲಿಟ್ಟದ್ದು ೧೯೪೨ರಷ್ಟು ತಡವಾಗಿ ಎನ್ನುತ್ತಾರೆ ಹೊನ್ನಾವರದ ಪತ್ರಕರ್ತ ದಿನೇಶ್ ಹೆಗ್ಗಡೆ. ಚಲನಚಿತ್ರದ ಪುರ ಪ್ರವೇಶಕ್ಕೆ ಮುನ್ನ ಅಲ್ಲಿನ ಪರಿಸ್ಥಿತಿಯೇ ಈ ವಿಳಂಬಕ್ಕೆ ಕಾರಣ. ಸಾಂಸ್ಕೃತಿಕ ಚಟುವಟಿಕೆಗಳು ಕೇವಲ ಸಿರಿವಂತರಿಗೆ, ಅಂದಿನ ವ್ಯವಸ್ಥೆಯಲ್ಲಿ ಅಕ್ಷರ ಪಂಡಿತರಿಗೆ ಮಾತ್ರ ಮನರಂಜನೆ, ವಿನೋದಗಳು ಸೀಮಿತವಾಗಿತ್ತು. ದೇವಾಲಯಗಳೇ ಅಂದಿನ ಸಾಂಸ್ಕೃತಿಕ ಕೇಂದ್ರ. ಮಡಿವಂತರು ಆರಾಧನೆ, ಹರಿಕತೆ, ಕೀರ್ತನೆ, ಪುರಾಣ ಶ್ರವಣಗಳ ಇತಿ-ಮಿತಿಯಲ್ಲೇ ತೃಪ್ತರಾಗಿರುತ್ತಿದ್ದರು. ಅವಿಭಕ್ತ ಕುಟುಂಬಗಳು ಬಹು ಸಂಖ್ಯೆಯಲ್ಲಿದ್ದ ಜಿಲ್ಲೆಯಲ್ಲಿ ಸಮೂಹ ಮನರಂಜನೆಯೆಂದರೆ ಗ್ರಾಮದೇವತೆಗಳ ಹಬ್ಬ, ಜಾತ್ರೆಗಳ ಸಮಯದ ಯಕ್ಷಗಾನ ಹಾಗೂ ನಾಟಕ/ಸರ್ಕಸ್ ಕಂಪೆನಿಗಳು ಬಂದರೆ ಜಾತ್ರೆಗೆ ವಿಶೇಷ ಕಳೆ. ಆ ದಿನಗಳಲ್ಲಿ ಸಿನಿಮಾ ಇಂದಿನಷ್ಟು ಜನಪ್ರಿಯವಾಗಿರಲಿಲ್ಲ. ದೂರದ ಪಟ್ಟಣಗಳಿಗೆ ಹೋಗಿ ಸಿನಿಮಾ ನೋಡುವುದು ಕೃಷಿ ಕಾಯಕದ ಅವಿದ್ಯಾವಂತರಿಗೆ ಕನಸಿನ ಮಾತಾಗಿತ್ತು. ಸಿನಿಮಾ ವೀಕ್ಷಣೆಯೆಂದರೆ ಧರ್ಮಬಾಹಿರವೆಂದು ಪರಿಗಣಿಸಲಾಗುತ್ತಿತ್ತು. ಹಿರಿಯರ ಕಟ್ಟುಪಾಡುಗಳಿಗೆ ಹೆದರುವ ತರುಣರು ತಪ್ಪೆಸಗಿದವರಂತೆ, ಗುಟ್ಟಾಗಿ ಪೇಟೆ ಪಟ್ಟಣಗಳಿಗೆ ಹೋಗಿ ವೀಕ್ಷಿಸಿ, ಸ್ನೇಹಿತರಲ್ಲಿ ಮಾತ್ರ ಸಂತಸ ಹಂಚಿಕೊಳ್ಳುವ ಪರ್ವಕಾಲ. ಇಂತಹ ಜಿಲ್ಲೆಗೆ ಸಿನಿಮಾ ಪರಿಚಯ ಮಾಡಿಸಿದ ಶ್ರೇಯಸ್ಸು ನರಹರಿರಾಯರದು.

ಮೂಕಿ ಯುಗದ ಕಾಲದಲ್ಲಿ ಚಿತ್ರ ಪ್ರದರ್ಶನ 'ಅಂತ್ಯ'ವಾಯಿತೆಂದು ಸೂಚಿಸಲು ಹಲವು ವಿಧಾನಗಳನ್ನು ಅನುಸರಿಸುತ್ತಿದ್ದರು. 'ಫಿನಿಸ್' (FINIS) ಎಂಬ ಬರಹ ತೆರೆಯ ಮೇಲೆ ಕಾಣಿಸಿಕೊಳ್ಳುತ್ತಿತ್ತು. ಇಲ್ಲವೆ ವೃದ್ಧನ ಬೋಳು ತಲೆಯ ಮೇಲಿನ 'ಗುಡ್‌ನೈಟ್' (Good Night) ಎಂಬ ಬರಹ ಆ ವಿದೇಶಿ ಚಿತ್ರದ ಮಂಗಳ ವಾಕ್ಯವಾಗಿರುತ್ತಿತ್ತು.

ಭಾರತದ ಮೊದಲ ಚಲನಚಿತ್ರ ಫಾಲ್ಕೆ ಅವರ 'ರಾಜಾ ಹರಿಶ್ಚಂದ್ರ'ದ ಅಂತಿಮ ಸ್ಥಿರ ಚಿತ್ರ ಹೀಗಿತ್ತು : ಹಿನ್ನೆಲೆಯಲ್ಲಿ ಭಾರತ ಭೂಪಟ ಅದರ ಮೇಲೆ ನಮೂದಾದ ಗುಡ್‌ನೈಟ್ ಇಂಗ್ಲಿಷ್‌ನಲ್ಲಿ, ನಮಸ್ಕಾರ್ ಹಿಂದಿಯಲ್ಲಿ. ಭಾರತೀಯ ವಿಧಾನದಲ್ಲಿ ವಿದಾಯ.

* * *

## ಮುಖ್ಯ ಮಂತ್ರಿಗಳು - ಸಿನಿಮಾ

ಕರ್ನಾಟಕ ಮುಖ್ಯ ಮಂತ್ರಿಗಳಲ್ಲಿ ದೇವರಾಜ ಅರಸ್ ಅವರಿಗೆ ಚಲನಚಿತ್ರದ ನಿಕಟ ಸಂಪರ್ಕವಿತ್ತು. ಅವರ ಸೋದರ ಕೆಂಪರಾಜ ಅರಸ್, ಚಿತ್ರ ನಟ, ನಿರ್ಮಾಪಕ, ನಿರ್ದೇಶಕರಾಗಿದ್ದರು. ಮುಖ್ಯಮಂತ್ರಿ ಗುಂಡೂರಾಯರಿಗೆ ಸಿನಿಮಾ ನೋಡುವ ಚಟ. ಒಮ್ಮೊಮ್ಮೆ ಮದರಾಸಿನಿಂದಲೂ ಚಿತ್ರಗಳನ್ನು ತರಿಸಿ ನೋಡುತ್ತಿದ್ದರು. ಶ್ರೀ ವೀರಪ್ಪ ಮೊಯಿಲಿ ಅವರು ಬರೆದ ಕಾದಂಬರಿ ಚಿತ್ರಿತವಾಗಿದೆ. ಶ್ರೀ ರಾಮಕೃಷ್ಣ ಹೆಗಡೆಯವರು ನಟರಾಗಿ ತೆರೆಯ ಮೇಲೆ ಕಾಣಿಸಿಕೊಂಡಿದ್ದಾರ.

## ದಕ್ಷಿಣದ ಮಹಿಳೆಯರು

ಕನ್ನಡದ ಮೊದಲ ಮಹಿಳಾ ನಿರ್ಮಾಪಕಿ ಎಂ.ವಿ.ರಾಜಮ್ಮ. ಚಿತ್ರ : ರಾಧಾರಮಣ

ತೆಲುಗು ಚಿತ್ರದ ಮೊದಲ ನಿರ್ಮಾಪಕಿ ದಾಸರಿ ಕೋಟಿರತ್ನಂ. ಆಕೆ ತಯಾರಿಸಿದ ಚಿತ್ರ 'ಅನುಸೂಯ' ೩೦ರ ದಶಕದ ಆದಿ ಭಾಗದಲ್ಲಿ ಕಲ್ಕತ್ತೆಯಲ್ಲಿ ತಯಾರಾಯಿತು.

ಟಿ.ಪಿ.ರಾಜಲಕ್ಷ್ಮಿ, ತಮಿಳು ನಾಡಿನ ಪ್ರಥಮ ನಿರ್ದೇಶಕಿ. ಆಕೆ ನಿರ್ದೇಶಿಸಿದ ಮೊದಲ ಚಿತ್ರ 'ಮಿಸ್ ಕಮಲ'.

## ಮೈಸೂರಿನ ಸಾಬೂ

'ಜಂಗಲ್ ಬಾಯ್' - ಅಲೆಕ್ಸಾಂಡರ್ ಕೋರ್ಡಾ ಅವರು ಹಾಲಿವುಡ್‌ನಲ್ಲಿ ತಯಾರಿಸಿದ ಚಿತ್ರ. ಇದರ ಮುಖ್ಯ ಪಾತ್ರಧಾರಿ ಸಾಬೂ. ಆತ ಮೈಸೂರು ಅರಮನೆಯ ಮಾವುತನ ಮಗ. ಸಾಬೂ ಅನೇಕ ಅರಣ್ಯ ಚಿತ್ರಗಳಲ್ಲಿ ಪಾತ್ರ ವಹಿಸಿ ಅಂತರರಾಷ್ಟ್ರೀಯ ಖ್ಯಾತಿಗಳಿಸಿದ. ಅಮೆರಿಕದ ಮಹಿಳೆಯೊಬ್ಬಳನ್ನು ಮದುವೆಯಾಗಿ ಅಮೆರಿಕದಲ್ಲಿ ನೆಲಸಿದ.



(ಚಿತ್ರ ೧) ಕನ್ನಡ ವಾಕ್ಚಲನಚಿತ್ರಯುಗ ಆರಂಭಿಸಿದ 'ಸತಿ ಸುಲೋಚನಾ' ಚಿತ್ರದಲ್ಲಿ ಇಂದ್ರಜಿತು ಪಾತ್ರದಲ್ಲಿ ಎಂ.ವಿ.ಸುಬ್ಬಯ್ಯನಾಯ್ಡು.

೧೯೩೪ - ೫೦

# ಆರಂಭದ ಅಸ್ಥಿರ ಹೆಜ್ಜೆಗಳು

ಪ್ರಾದೇಶಿಕವಾಗಿ ಚಲನಚಿತ್ರರಂಗ ತನ್ನ ಸ್ಥಾನವನ್ನು ಪಡೆದುಕೊಂಡ ಬಗೆಯನ್ನು ಚಲನಚಿತ್ರದಂಥ ಇಪ್ಪತ್ತನೇ ಶತಮಾನದ ಅದ್ಭುತ ವೈಜ್ಞಾನಿಕ ಮಾಧ್ಯಮದ ಹುಟ್ಟು, ಬೆಳವಣಿಗೆಯ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ ಮಾಡಿದೆವು. ಇನ್ನು ಮುಂದೆ ಕನ್ನಡ ವಾಕ್ಚಿತ್ರ ಯುಗದ ಇತಿಹಾಸವನ್ನು ಸಾಧ್ಯವಾದಷ್ಟೂ ಅಧಿಕೃತವಾಗಿಯೇ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಕನ್ನಡದಲ್ಲಿ ಇದುವರೆಗೆ - ೧೯೩೪ರಿಂದ ೨೦೦೦ದವರೆಗೆ - ಸೆನ್ಸಾರ್ ಆಗಿ ತೆರೆಕಂಡ ಚಿತ್ರಗಳು ೨೧೭೨. ಇವುಗಳಲ್ಲಿ ಡಬ್ ಆದ ಚಿತ್ರಗಳು ೪೦, ಉಪಭಾಷಾ ಚಿತ್ರಗಳು ೫೫, ಲೈಂಗಿಕ ಶಿಕ್ಷಣದ ಹಣೆಪಟ್ಟಿಯಲ್ಲಿ ಬಂದಿರುವ ಚಿತ್ರಗಳು ೩೩ ಎಂದು ಗುರುತಿಸಲಾಗಿದೆ. ಆದ್ದರಿಂದ ಕನ್ನಡದ ಒಟ್ಟು ಚಿತ್ರಗಳು ೨೦೪೪ ಎಂದು ಪರಿಗಣಿಸಿದ್ದೇವೆ. ಕಾರಣಾಂತರದಿಂದ ಸೆನ್ಸಾರ್ ಆಗಿಯೂ ತೆರೆಗೆ ಬಾರದೆ ಉಳಿದ ಕೆಲವು ಚಿತ್ರಗಳನ್ನು ಚರ್ಚೆಯ ವ್ಯಾಪ್ತಿಯಲ್ಲಿ ತೆಗೆದುಕೊಂಡಿದ್ದೇವೆ.

ಈ ಮಾರ್ಗವನ್ನು ಒಂದು ಬಂಧದಲ್ಲಿ ಕೊಂಡೊಯ್ಯುವ ಸಲುವಾಗಿ ಕೆಲವು ದಶಕಗಳಾಗಿ ವಿಭಾಗಿಸಿಕೊಳ್ಳಲಾಗಿದೆ. ೧೯೩೪ರಲ್ಲಿ ಪ್ರಾರಂಭವಾದ ಕನ್ನಡ ವಾಕ್ಚಿತ್ರ ಪರಂಪರೆ ಆರಂಭದ ದಿನಗಳಲ್ಲಿ ಸಂಖ್ಯೆಯ ದೃಷ್ಟಿಯಿಂದ ಅತ್ಯಂತ ಕಡಿಮೆ ಮತ್ತು ಎರಡನೇ ಪ್ರಪಂಚ ಯುದ್ಧದ ಕಾರಣವಾಗಿ ಒಂದು ಹಂತದಲ್ಲಿ ಸ್ಥಗಿತಗೊಂಡದ್ದೂ ಉಂಟು. ಈ ಕಾರಣದಿಂದಾಗಿ ಈ ಪ್ರಾರಂಭದ ಚಿತ್ರನಿರ್ಮಾಣವನ್ನು ೧೯೩೪ರಿಂದ ೧೯೫೦ರವರೆಗಿನ ಒಂದು ಹಂತವಾಗಿ ಪರಿಗಣಿಸಿ ಈ ಅಧ್ಯಾಯವನ್ನು ರಚಿಸಲಾಗಿದೆ. ಈ ಅವಧಿಯಲ್ಲಿ ತೆರೆಕಂಡ ಚಿತ್ರಗಳು ಕೇವಲ ೨೭. ಆ ಕುರಿತ ವಿಶ್ಲೇಷಣೆ ಇಲ್ಲಿದೆ.

ಭಾರತದ ಮೊದಲ ವಾಕ್ಚಿತ್ರ 'ಆಲಂ ಆರಾ' ೧೯೩೧ರಲ್ಲಿ ತೆರೆಕಂಡಿತು. ಅದೇ ಸರಿಸುಮಾರಿಗೆ ತಮಿಳು, ತೆಲುಗಿನಲ್ಲಿ ವಾಕ್ಚಿತ್ರಗಳು ಸಿದ್ಧವಾದವು. ಕನ್ನಡಕ್ಕೆ ಮಾತ್ರ ಮೂರು ವರ್ಷಗಳಷ್ಟು ಕಾಲ ಕಾಯಬೇಕಾಯಿತು. ಮೊದಲೇ ಪ್ರಾರಂಭವಾದರೂ 'ಭಕ್ತಧ್ರುವ' ತೆರೆ ಕಾಣಲು ತಡವಾಯಿತು. 'ಸತಿ ಸುಲೋಚನಾ' (೧೯೩೪) ತೆರೆಗೆ ಬಂದ ಪ್ರಥಮ ವಾಕ್ಚಿತ್ರವೆಂಬ ಹೆಗ್ಗಳಿಕೆ ಪಡೆಯಿತು. 'ಸತಿ ಸುಲೋಚನಾ', 'ಭಕ್ತ ಧ್ರುವ'ಗಳು ''ಮಾತನಾಡಿ'' ಇತಿಹಾಸ ಸೃಷ್ಟಿಸಿದವು.

ಇತರ ಪ್ರದೇಶಗಳಿಗೆ ಹೋಲಿಸಿದಾಗ ಈ ಎರಡು ಮೂರು ವರ್ಷಗಳ ವಿಳಂಬವಾದುದು ಏಕೆ ಎಂದು ಯೋಚಿಸಿದರೆ ಕೆಲವು ಗಂಭೀರವಾದ ಕಾರಣಗಳು ಗೋಚರಿಸುತ್ತವೆ. ಮುಖ್ಯವಾಗಿ ಮುಂಬಯಿ, ಮದರಾಸು, ಕಲ್ಕತ್ತೆ ಮೊದಲಾದವು ರೇವು ಪಟ್ಟಣಗಳು. ಇಂಥಲ್ಲಿ ಯಾವುದೇ ಉದ್ದಿಮೆಯ ಆರಂಭ ಪ್ರಯಾಸದ ಸಂಗತಿಯಲ್ಲ. ಅತ್ಯಂತ ತೀಕ್ಷ್ಣವಾದ ಹವಾಮಾನ ಇರುವ ಪ್ರದೇಶದಲ್ಲಿ ಜನಜೀವನ ಚಟುವಟಿಕೆಯಿಂದ ಕೂಡಿರುತ್ತದೆ. ಹೀಗಾಗಿ ದಕ್ಷಿಣ ಭಾರತದಲ್ಲಿ ಮದರಾಸು ಚಿತ್ರ ತಯಾರಿಕಾ ಕೇಂದ್ರವೇ ಆಯಿತು. ಮೂಲ ಸೌಲಭ್ಯಗಳು, ಸ್ಟುಡಿಯೋಗಳು ಇದಕ್ಕೆ ಪೂರಕವಾಗಿ ಬೇಕಾದ ಪೌಲ್ಟರ್, ಬಡಗಿಯೇ ಮೊದಲಾದ ಎಲ್ಲ ಇತರ ಕಸುಬುದಾರರಿಗೂ ಒಂದು ವೃತ್ತಿಪರ ಬದುಕಿಗೆ ನೆರವಾಗುವಂಥ ಅವಕಾಶವೂ ಸಿಕ್ಕಿದ್ದರಿಂದ ಅವೆಲ್ಲವೂ ಹಿರಿ-ಕಿರಿ ಉದ್ಯಮಗಳಾಗಿಯೇ ರೂಪುಗೊಂಡವು. ಇಂದಿಗೂ ಮದರಾಸಿನಲ್ಲಿ ಚಿತ್ರೋದ್ಯಮ ನೆಲೆಗೊಂಡಿರುವ ರೀತಿಯಲ್ಲಿ ದಕ್ಷಿಣದ ಬೇರಾವ ರಾಜ್ಯದಲ್ಲೂ ಆಗಿಲ್ಲ. ಹೈದರಾಬಾದಿನ ರಾಮೋಜಿರಾವ್ ಫಿಲಂ ಸಿಟಿ ಒಂದು ಇದಕ್ಕೆ ಅಪವಾದವಿರಬಹುದು. ಆದರೂ ಇವೆಲ್ಲ ಎಷ್ಟು ಸಮಯ ತೆಗೆದುಕೊಂಡಿವೆ ಎಂಬುದನ್ನು ಪರಿಗಣಿಸಿದಾಗ ಮದರಾಸಿನದೇ ಮೇಲುಗೈ.

ಕನ್ನಡದ ಸಂದರ್ಭದಲ್ಲಿಯಂತೂ ಇನ್ನೂ ಹಲವು ಗಮನಿಸಬೇಕಾದ ಸಂಗತಿಗಳಿವೆ. ಆ ದಿನಗಳಲ್ಲಿ ಕನ್ನಡ ಮಾತನಾಡುವ ಪ್ರದೇಶಗಳು ಹರಿದು ಹಂಚಿಹೋಗಿದ್ದವು. ಈಗ 'ಉತ್ತರ ಕರ್ನಾಟಕ' ಎಂದು ಕರೆಯುತ್ತಿರುವ ಪ್ರದೇಶವು ಮುಂಬಯಿ ಪ್ರಾಂತ್ಯದಲ್ಲೂ, 'ದಕ್ಷಿಣ ಕನ್ನಡ' ಪ್ರದೇಶವು ಮದರಾಸು ಪ್ರಾಂತ್ಯದಲ್ಲೂ, ಮತ್ತೆ ಕೆಲವು ಪ್ರದೇಶಗಳು ಹೈದರಾಬಾದ್ ಹಾಗೂ ಈಗಿನ ಕೇರಳ ರಾಜ್ಯದಲ್ಲೂ ಸೇರಿ ಹೋಗಿದ್ದವು. ಉಳಿದಂತೆ ಕನ್ನಡ ಮಾತಾಡುವ ಪ್ರದೇಶವೆಂದರೆ ಹಳೆಯ ಮೈಸೂರು ರಾಜ್ಯ ಮಾತ್ರ ಎಂಬಂತಾಗಿತ್ತು. ಚಲನಚಿತ್ರೋದ್ಯಮವನ್ನು ಗಂಭೀರವಾಗಿ ಪರಿಗಣಿಸಿ, ಅದನ್ನೊಂದು ಕೈಗಾರಿಕೆಯಾಗಿ ಪರಿಭಾವಿಸಿ ಬಂಡವಾಳ ಹೂಡುವ ಜನರು ಇರಲಿಲ್ಲ. ಹಳೆಯ ಮೈಸೂರಿನಲ್ಲಿ ಕೆಲವು ಶ್ರೀಮಂತರಿದ್ದರು. ಅವರಾರೂ ಪ್ರಾರಂಭದಲ್ಲೇ ಅಷ್ಟು ಸುಲಭದಲ್ಲಿ ಚಲನಚಿತ್ರ ತಯಾರಿಕೆಯತ್ತ ಮನಸ್ಸು ಮಾಡಲಿಲ್ಲ. ಚಲನಚಿತ್ರದ ಬಗ್ಗೆ ಅಂಥ ಪ್ರೀತ್ಯಾದರವೂ ಇಲ್ಲ ಅಥವಾ ಅದನ್ನೊಂದು ಮಾಧ್ಯಮವಾಗಿ ಗುರುತಿಸಿ ತೋರಬಹುದಾಗಿದ್ದ ಕನಿಷ್ಠ ಪ್ರಮಾಣದ ಗೌರವವನ್ನೂ ತೋರಲಿಲ್ಲ. ಈ ಹೊತ್ತಿಗೆ ಮೂಕಿ ಚಿತ್ರಗಳು ಪ್ರದರ್ಶನಗೊಳ್ಳುತ್ತಿದ್ದವು. ಗುಬ್ಬಿ ವೀರಣ್ಣನವರು ಮೂಕಿಚಿತ್ರಗಳನ್ನೂ ತಯಾರಿಸಿದ್ದರು. ಚಿತ್ರಗಳನ್ನು ಪ್ರದರ್ಶಿಸಲು ಚಿತ್ರಮಂದಿರಗಳಿದ್ದವು. ಆ ಚಿತ್ರಮಂದಿರಗಳಲ್ಲಿ ಬಹುತೇಕ ವಿದೇಶಿ ಚಿತ್ರಗಳು ಪ್ರದರ್ಶಿತವಾಗುತ್ತಿದ್ದವು. ಆ ಚಿತ್ರಗಳಲ್ಲಿ ಜನರಂಜನೆ ಮತ್ತು ಆಯಾ ದೇಶದ ಜನ ಜೀವನದ ಹಿನ್ನೆಲೆಯಲ್ಲಿ ಚಿತ್ರಿತವಾಗಿರುತ್ತಿದ್ದ ಅನೇಕ ದೃಶ್ಯಗಳು - ಮುಖ್ಯವಾಗಿ ಚುಂಬನ ದೃಶ್ಯ, ಉಡುಗೆ - ಇತ್ಯಾದಿ ನಮ್ಮ ಸಂದರ್ಭಕ್ಕೆ ಸ್ವೈರ, ಸ್ವಚ್ಛಂದ ಅನ್ನಿಸಿದ್ದರೆ ಕೇವಲ ಸಹಜ. ನಮ್ಮಲ್ಲಿ ತಯಾರಾಗುತ್ತಿದ್ದ ಚಿತ್ರಗಳು ಈ ಚಿತ್ರಗಳೊಂದಿಗೆ ಸ್ಪರ್ಧಿಸಬೇಕಾಗಿತ್ತಾದ್ದರಿಂದ ಇಲ್ಲಿಯೂ ಅಲ್ಪ ಸ್ವಲ್ಪ ಅಂಥ ದೃಶ್ಯಗಳು ಸೇರುವುದು ಅನಿವಾರ್ಯವಾಗಿರಬಹುದು. ಇವೆಲ್ಲ ಒಂದು ವರ್ಗದ ಜನರಿಗೆ ಕೀಳು ರಂಜನೆಯಾಗಿ ಕಂಡಿದ್ದರೆ ಆಶ್ಚರ್ಯವಿಲ್ಲ. ಹೀಗಾಗಿ ಚಲನಚಿತ್ರ ತನ್ನ ಪ್ರಾರಂಭದ ದಿನಗಳಲ್ಲೇ ಒಂದು ಬಗೆಯ ಗುಮಾನಿಯಿಂದಲೇ ಒಪ್ಪಿತವಾದ ಮಾಧ್ಯಮವಾಯಿತು. ಇನ್ನಿತರ ಪ್ರಕಾರಗಳಾದ ನೃತ್ಯ, ನಾಟಕಗಳೂ ಪ್ರಾರಂಭದಲ್ಲಿ ಇಂಥ ಸ್ಥಿತಿಯಿಂದ ಹೊರತೇನಲ್ಲ. ಆದರೆ ಚಿತ್ರಮಾಧ್ಯಮಕ್ಕೆ ಭಾರತೀಯ ಪರಂಪರೆಯೂ ಇಲ್ಲ, ಅದೊಂದು ಹೊಸ ಆವಿಷ್ಕಾರ. ಒಂದು ಬಗೆಯ ದೂರತ್ವವನ್ನು ಸಹಿಸಿಕೊಂಡೇ ತನ್ನ ಸ್ಥಾನವನ್ನು ಕಂಡುಕೊಳ್ಳಬೇಕಾಯಿತು. ಹಲವು ವರ್ಷಗಳು ಸಂದು ಹೋದರೂ ಈ ಆಕ್ಷೇಪದಿಂದ ಚಿತ್ರಮಾಧ್ಯಮ ಪೂರ್ತಿಯಾಗಿ ಬಿಡಿಸಿಕೊಳ್ಳಲು ಆಗಿಲ್ಲ. ಆದರೂ ಅದರ ಅತ್ಯಂತ ಪ್ರಬಲವಾದ ಸಂವಹನ ಶಕ್ತಿಯೇ ಅದನ್ನು 'ಚಿರಂಜೀವಿ'ಯಾಗಿಸಿದೆ.

ಪ್ರಾರಂಭದಲ್ಲಿ ಮೂಕಿ ಚಿತ್ರಗಳು ಬರುತ್ತಿದ್ದವಷ್ಟೆ. ಅವುಗಳನ್ನು ಪ್ರದರ್ಶಿಸುತ್ತಿದ್ದ ಚಿತ್ರಮಂದಿರಗಳೇ ಮಾತನಾಡುವ ಚಿತ್ರಗಳನ್ನೂ ಪ್ರದರ್ಶಿಸಬೇಕು. ಒಮ್ಮೆಲೇ ಪುಂಖಾನುಪುಂಖವಾಗಿ ಮಾತನಾಡುವ ಚಿತ್ರಗಳೇನೂ ಸಿದ್ಧವಾಗಲಿಲ್ಲ. ಮೂಕಿ

ಚಿತ್ರಗಳ ವೇಗಕ್ಕೂ ಟಾಕಿ ಚಿತ್ರಗಳ ವೇಗಕ್ಕೂ ವ್ಯತ್ಯಾಸವಿದೆ. ಆದರಿಂದಾಗಿ ಮಾತು, ದೃಶ್ಯಗಳನ್ನು ಜೋಡಿಸುವಾಗ ವ್ಯತ್ಯಾಸವಾಗುತ್ತದೆ. ಚಿತ್ರಮಂದಿರಗಳೂ ತಾಂತ್ರಿಕವಾಗಿ ಸಿದ್ಧವಾಗಬೇಕಿತ್ತು. ಜೊತೆಗೆ ಟಾಕಿ ಚಿತ್ರಗಳಿಗೆ ಅಗತ್ಯವಾದ ಸೌಂಡ್‌ಬಾಕ್ಸ್ ಇತ್ಯಾದಿ ಪರಿಕರಗಳನ್ನು ಅಳವಡಿಸಬೇಕಿತ್ತು. ಇನ್ನೂ ಅನೇಕ ರೀತಿಗಳಲ್ಲಿ ಸಜ್ಜಾಗಬೇಕಾಗಿದ್ದ ಕಾರಣ, ಅದಕ್ಕೆಲ್ಲ ಬಂಡವಾಳ ತೊಡಗಿಸಬೇಕಾಗಿತ್ತಾದ್ದರಿಂದ 'ವಾಕ್ಚಿತ್ರ'ಗಳನ್ನು ಪ್ರದರ್ಶಕ ಪ್ರೀತಿಯಿಂದ ಸ್ವಾಗತಿಸಲಿಲ್ಲ. ಆತನ ಪ್ರತಿರೋಧವನ್ನು ಎದುರಿಸಿ ಆತನನ್ನೇ ಅನುನಯಿಸುತ್ತ ವಾಕ್ಚಿತ್ರ ನಿಲ್ಲಬೇಕಾಗಿತ್ತು. ಬೇಡಿಕೆ ಹೆಚ್ಚಿದ್ದ ಕಡೆಗೇ ವ್ಯಾಪಾರಿ ಒಲಿಯುವುದು ಅನಿವಾರ್ಯವೆಂಬಂತೆ ಚಿತ್ರಮಂದಿರಗಳೂ ಇದಕ್ಕೆ ಹೊಂದಿಕೊಂಡವು. ಕ್ರಮೇಣ ಮೂಕಿ ಚಿತ್ರಗಳು ಹಿಂದೆ ಸರಿದು ಟಾಕಿ ಚಿತ್ರಗಳು ಆ ಸ್ಥಳವನ್ನು ಆಕ್ರಮಿಸಿದವು.

ಆದರೆ ಇದರಿಂದಾಗಿ ಕೆಲವು ಗಂಭೀರವಾದ ಸಮಸ್ಯೆಗಳೂ ತಲೆದೋರಿದವು. ಆದುವರೆಗೆ ಮೂಕಿಚಿತ್ರಗಳಲ್ಲಿ ಅಭಿನಯಿಸುತ್ತಿದ್ದ ಕಲಾವಿದರನೇಕರಿಗೆ ಕೆಲಸವಿಲ್ಲವಾಯಿತು. ಟಾಕಿ ಚಿತ್ರಗಳಲ್ಲಿ ಕಲಾವಿದನಿಗೆ ಕಂಠ ಚೆನ್ನಾಗಿರಬೇಕು, ಸಂಭಾಷಣೆಯನ್ನು ಸರಿಯಾದ ಪರಿಳಿತಗಳೊಂದಿಗೆ ಹೇಳಬೇಕು, ಅರ್ಥಾತ್ ಮಾತೇ ಅಭಿನಯವೂ ಆಗಬೇಕು. ಅತಿ ದೀರ್ಘ ಸಂಭಾಷಣೆಗಳನ್ನು ನೆನಪಿನಲ್ಲಿಟ್ಟು ಹೇಳುವ ಸಾಮರ್ಥ್ಯ, ಮಾತಿಗೆ ತಕ್ಕ ಭಾವ ಪ್ರದರ್ಶನ ಬೇಕಿತ್ತು. ಇದಲ್ಲದೆ ನಟರೇ ಗಾಯಕರೂ ಆಗಬೇಕಿತ್ತು. ಮೂಕಿ ಚಿತ್ರಗಳ ನಟರೆಲ್ಲರೂ ಇಷ್ಟು ಸಮರ್ಥರಾಗಿರಲಿಲ್ಲ. ಒಂದೆರಡು ಅಪವಾದಗಳಿರಬಹುದಾದರೂ ಅನೇಕರು ಕೆಲಸವಿಲ್ಲದೆ ಹಿಂದೆ ಸರಿದರು. ಬಹುತೇಕ ರಂಗಭೂಮಿಯ ನಟ-ನಟಿಯರು ಚಿತ್ರರಂಗಕ್ಕೆ ವಲಸೆ ಬಂದರು. ಇಡೀ ಚಲನಚಿತ್ರ ವಾತಾವರಣ ಒಮ್ಮೆಲೇ ಬದಲಾಗಿತ್ತು.

ಟಾಕಿ ಚಿತ್ರಗಳು ಪ್ರಾರಂಭವಾದ ಮೇಲೆ ಕಥೆ ಹೇಳುವ ರೀತಿ, ಸಂಭಾಷಣೆ, ಹಾಡುಗಳ ಉಪಯೋಗ ಎಲ್ಲವೂ ಒಂದೊಂದು ಪ್ರಯೋಗವೇ ಎಂಬಂತೆ ಬಳಕೆಯಾಗತೊಡಗಿದವು. ಚಿತ್ರದಲ್ಲಿ ಯಾರು ಪಾತ್ರ ವಹಿಸುತ್ತಾರೆ ಎನ್ನುವುದು ಮುಖ್ಯವಾಗಿರಲಿಲ್ಲ. ಎಂಥ ಕಥಾಭಾಗ ಆಯ್ದುಕೊಳ್ಳುತ್ತಾರೆಂಬುದು ಮುಖ್ಯವಾಗಿತ್ತು. ಬಹುತೇಕ ಪೌರಾಣಿಕ ವಸ್ತುವನ್ನೇ ಆಯ್ದರು. ನೇರವಾಗಿ ರಾಮಾಯಣ-ಮಹಾಭಾರತ ಮಹಾಕಾವ್ಯಗಳನ್ನೇ ತೆಗೆದುಕೊಳ್ಳದೆ ಅವುಗಳ ಗರ್ಭದಲ್ಲಿರುವ ಉಪಕಥೆಗಳನ್ನು ಚಲನಚಿತ್ರಕ್ಕೆ ವಸ್ತುವಾಗಿಸಿಕೊಂಡರು. ಹೀಗೆ ಮಾಡುವುದರ ಹಿಂದೆ ಕೆಲವು ಕಾರಣಗಳನ್ನು ಊಹಿಸಬಹುದಾಗಿದೆ. ಉಪಕಥೆಗಳನ್ನು ವಿಸ್ತರಿಸಿ ವ್ಯಾಖ್ಯಾನಿಸಿಕೊಳ್ಳುವ ಸ್ವಾತಂತ್ರ್ಯ ವಹಿಸಬಹುದು. ಮತ್ತು ಆ ಕಥೆಗಳೆಲ್ಲವೂ ಸ್ಥೂಲವಾಗಿ ಜನರಿಗೆ ತಿಳಿದಿರಬಹುದಾದರೂ ಹೆಚ್ಚು ವಿವರಗಳ ಜೊತೆಗಲ್ಲ. ರಾಮಾಯಣ, ಮಹಾಭಾರತದಂಥ ನೇರ ವಸ್ತುವಾದರೆ ಹೆಚ್ಚಿನ ಬದಲಾವಣೆಗೆ ಅವಕಾಶ ಇರುವುದಿಲ್ಲ. ವಿಸ್ತರಣೆ, ಆ ಮೂಲಕ ಚಮತ್ಕಾರಗಳನ್ನು ತೋರುವುದು ಇಂಥ ವಸ್ತುವಿನ ಆಯ್ಕೆಗೆ ಕಾರಣವಾಗಿರಬಹುದು. ಅಲ್ಲಿಯವರೆಗೆ ಮೂಕಿ ಚಿತ್ರಗಳಲ್ಲಿ ಕೂಡಾ ಸಾಹಸ, ಸರ್ಕಸ್, ಚಮತ್ಕಾರಗಳನ್ನು ನೋಡಿ ಅಭ್ಯಾಸವಾಗಿದ್ದ ಪ್ರೇಕ್ಷಕನಿಗೆ ಕೊಂಚ 'ಅತಿ'ಯಾದ ಅಭಿನಯ, ಅಬ್ಬರದ ಮಾತುಗಾರಿಕೆ, ಅದೃಶ್ಯ-ಪ್ರತ್ಯಕ್ಷ ಇತ್ಯಾದಿಗಳ ಚಮತ್ಕಾರ ಎಲ್ಲವನ್ನೂ ಸೇರಿಸಿ ಸಾಮಾಜಿಕವಾಗಿ ಒಪ್ಪಿತವಾದ ಪಾತಿವ್ರತ್ಯ, ಭಕ್ತಿ, ಸತ್ಯಪ್ರಿಯತೆ ಮೊದಲಾದ ಮೌಲ್ಯಗಳನ್ನು ಹೇಳುವಂತೆ ಕಥೆಯನ್ನು ಹೊಂದಿಸುವ ಪ್ರಯತ್ನಗಳಾಗಿವೆ ಎನ್ನಬಹುದು.

ಸಾಮಾನ್ಯವಾಗಿ ವೃತ್ತಿರಂಗಭೂಮಿಯಲ್ಲೂ ಇಂಥ ವಸ್ತು ಇರುವ ನಾಟಕ ಪ್ರಯೋಗವೇ ಯಶಸ್ವಿ ಆಗುತ್ತಿತ್ತು. ರಾಮಾಯಣ-ಮಹಾಭಾರತದ ಅತಿ ದೀರ್ಘ ಕಥಾ ಭಾಗಕ್ಕಿಂತ ಉಪಕಥೆಗಳನ್ನು ರಚಿಸಿ ಹೇಳುತ್ತಿದ್ದ ವಿಧಾನವೇ ಹೆಚ್ಚಾಗಿ ಚಲಾವಣೆಯಲ್ಲಿತ್ತು. ಕೀರ್ತಿನಾಥ ಕುರ್ತಕೋಟಿಯವರು ಒಂದೆಡೆ ''...ಕಂಪನಿ ನಾಟಕಗಳಲ್ಲಿ ಪೌರಾಣಿಕತೆ ಕೇವಲ ಪ್ರೇಕ್ಷಕರ ಭಕ್ತಿ ಭಾವಗಳಿಗೆ ಆಹಾರವನ್ನೊದಗಿಸಲು ಮಾತ್ರ ಬರುತ್ತದೆ. ಆದ್ದರಿಂದ ಅಲ್ಲಿ ಸಂವಿಧಾನಕ್ಕಿಂತ ಅದ್ಭುತ ಚಮತ್ಕಾರಗಳಿಗೆ ಮಹತ್ವ ಹೆಚ್ಚಾಗುತ್ತದೆ...'' ಎನ್ನುತ್ತಾರೆ. ಈ ಮಾತು ಚಲನಚಿತ್ರಗಳಿಗೂ ಅನ್ವಯಿಸುತ್ತದೆ. ಹೀಗಾಗಿ ಅಂಥ ನಾಟಕ ನಿರೂಪಣೆಯೇ ಚಲನಚಿತ್ರಗಳಿಗೂ ಆಧಾರವಾಗಬೇಕಾಯಿತು. ಇಂಥ ನಿರೂಪಣೆಯನ್ನು ನಿರ್ವಹಿಸ ಬಲ್ಲ ಸಾಹಿತಿಗಳೂ ಬೇಕಾಗಿತ್ತು. ಹೀಗಾಗಿ ಅಂದಿನ ರಂಗಭೂಮಿಯ ನಕ್ಷತ್ರಗಳೇ ಚಲನಚಿತ್ರಕ್ಕೂ ಅನಿವಾರ್ಯವಾದರು. ಅಂತೆಯೇ ಬೆಳ್ಳಾವೆ ನರಹರಿಶಾಸ್ತ್ರಿಗಳು, ಆರ್.ನಾಗೇಂದ್ರರಾಯರಂಥವರು ಚಿತ್ರಸಾಹಿತ್ಯದಿಂದ ಹಿಡಿದು ಇನ್ನೂ ಅನೇಕ ಅಂಶಗಳಿಗೆ ಮೊದಲಿಗರೂ ಆದರು.

''...ನಾಟಕದಲ್ಲಿ ಒಂದೊಂದು ದೃಶ್ಯ ಕಾಲು ಗಂಟೆ, ನಲವತ್ತು ನಿಮಿಷ ನಡೆಯುತ್ತಿದ್ದು, ನಡುವೆ ಸಂಗೀತ ಕಚೇರಿಯೇ ಇರುತ್ತಿದ್ದುದೂ ಉಂಟು. ಚಲನಚಿತ್ರದಲ್ಲಿ ಅದು ಅಸಾಧ್ಯ. ಆದ್ದರಿಂದ ದೃಶ್ಯಗಳನ್ನು ಹೆಚ್ಚೆಂದರೆ ಒಂದು, ಒಂದೂವರೆ ನಿಮಿಷ ಮಾತ್ರ ಇಟ್ಟುಕೊಳ್ಳಲು ನಿರ್ಣಯಿಸಲಾಯಿತು. ಅಂಥ ಚಿಕ್ಕ ದೃಶ್ಯಗಳು ಮತ್ತು ಐದಾರು ನಿಮಿಷ ಮೀರದ ಹಾಡುಗಳನ್ನು ಅಳವಡಿಸಿ ಚಿತ್ರನಾಟಕ ರಚಿಸಿದರು. ಕಾಡಿನ ಪರದೆ, ಬೀದಿಯ ಸೀನರಿಗಳ ಎದುರು ನಡೆಯುತ್ತಿದ್ದ ನಾಟಕದ ದೃಶ್ಯಗಳನ್ನು ನೈಜ ವಾತಾವರಣದ ಹೊರಾಂಗಣದಲ್ಲಿ ತೋರುವ ಸೌಲಭ್ಯ ಸಿಕ್ಕಿದ್ದರಿಂದ ಅಂಥ ದೃಶ್ಯಗಳು ಹೆಚ್ಚಾಗಿ ಬರುವಂತೆ ನಿರೂಪಿಸಿದರು. ತಾಂತ್ರಿಕ ಚಮತ್ಕಾರವುಳ್ಳ ಪ್ರತ್ಯಕ್ಷವಾಗುವ, ಅಂತರ್ಧಾನವಾಗುವ ಸನ್ನಿವೇಶಗಳಿಗೆ ಹೆಚ್ಚು ಅವಕಾಶ ಮಾಡಿಕೊಳ್ಳುತ್ತಿದ್ದರು. ಆದರೂ ಆರಂಭ ಕಾಲದಲ್ಲಿ ಕಥೆ ಹೇಳುವಿಕೆ, ಸಂಗೀತದ ಜೋಡಣೆಗಳಲ್ಲಿ ನಾಟಕದ ಪ್ರಭಾವ ಅತಿ ಎನ್ನಿಸುವಷ್ಟು ಇರುತ್ತಿತ್ತು. ಪಾತ್ರಗಳ ಭಾಷೆಯೂ ನಾಟಕದ ಹಾಗೆಯೇ ಗ್ರಾಂಥಿಕ ಅನ್ನಿಸುವಂತೆ ಇದ್ದವು. ಸಾಮಾನ್ಯವಾಗಿ ಪೌರಾಣಿಕ ಕಥೆ ಅಥವಾ ಪುರಾಣದ ಜನಜನಿತ ಕಥೆಗಳು ಚಲನಚಿತ್ರವಾಗಿ ಮೂಡಿ ಬಂದವು. ಕಥೆಯನ್ನೂ ನಾಟಕದಂತೆಯೇ ಚಿಕ್ಕ ಚಿಕ್ಕ ದೃಶ್ಯಗಳಲ್ಲಿ ಹೇಳುತ್ತ, ಆಗಾಗ ಅದನ್ನು ಪರಿಷ್ಕರಿಸುತ್ತ ಚಿತ್ರನಾಟಕ ರಚನೆಯಲ್ಲಿ ಹೊಸ ದಾರಿ ನಿರ್ಮಿಸಿಕೊಂಡದ್ದು ಮುಂದಿನವರಿಗೆ ಮಾರ್ಗದರ್ಶನವೂ ಆಯಿತು...'' ಎಂದು ಖ್ಯಾತ ಚಿತ್ರಸಾಹಿತಿ ಎಂ.ನರೇಂದ್ರಬಾಬು ಸಂದರ್ಶನವೊಂದರಲ್ಲಿ ವಿವರಿಸುತ್ತಾರೆ.

ಚಲನಚಿತ್ರರಂಗ ತನ್ನ ಪ್ರಯಾಣದ ಉದ್ದಕ್ಕೂ ಇಂಥ ಅನೇಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಲೇ ಮುಂದುವರಿಯಿತು. ಮೊದಲು ಕ್ರಿಯೆ, ಅಲ್ಲಿ ಆಗಿರುವ ತಪ್ಪುಗಳನ್ನು ತಿದ್ದಿಕೊಂಡು ಮತ್ತೊಂದು ಕ್ರಿಯೆ, ಹೀಗೆ ಬಂದರ ಹಿಂದೊಂದರಂತೆ ಸಾಗಿ ಬಂದ ಕನ್ನಡ ಚಿತ್ರರಂಗದ ಸುದೀರ್ಘ ಪಥವಿದು.

ಒಂದಾದ ಮೇಲೊಂದರಂತೆ ತೆರೆ ಕಾಣುತ್ತಿದ್ದ ಹಿಂದಿ, ತಮಿಳು ಹಾಗೂ ತೆಲುಗು ಚಿತ್ರಗಳನ್ನೇ ನೋಡುತ್ತಿದ್ದ ಕನ್ನಡದ ಪ್ರೇಕ್ಷಕನಿಗೆ ತಮ್ಮದೇ ಆದ ಕನ್ನಡ ಭಾಷೆಯಲ್ಲಿ ಮಾತನಾಡುವ ಚಿತ್ರವನ್ನು ಕಾಣುವ ಅಪೇಕ್ಷೆ ಉಂಟಾಗಿರಲೂ ಬಹುದು. ಆ ವೇಳೆಗಾಗಲೇ ತಮಿಳಿನ 'ಪಾರಿಜಾತ ಪುಷ್ಪಾಪಹರಣಂ' ಮತ್ತು 'ಕೋವಲನ್' ಚಿತ್ರಗಳಲ್ಲಿ ಹಾಗೂ ಒಂದು ತೆಲುಗು ಚಿತ್ರದಲ್ಲಿ ನಮ್ಮವರೇ ಆದ ಆರ್.ನಾಗೇಂದ್ರರಾಯರು ನಟಿಸಿದ್ದರು. ಮುಂಬಯಿನಲ್ಲಿ ಅವರ ಹೆಸರು ಪರಿಚಿತವಾಗಿತ್ತು. ಪ್ರತಿಯೊಂದರಲ್ಲೂ ಹೊಸತನ್ನು ತರುವ ಸಾಹಸಿ ಆರ್.ನಾಗೇಂದ್ರರಾಯರು ಆ ವೇಳೆಗಾಗಲೇ ರಂಗಭೂಮಿಯಲ್ಲಿ ಸಾಕಷ್ಟು ಪ್ರಯೋಗ ಮಾಡಿ ಗೆದ್ದಿದ್ದರು. ಸ್ವತಃ ಉತ್ತಮ ಬರಹಗಾರ, ನಟ, ಗಾಯಕ. ಅವರು ಕನ್ನಡದಲ್ಲಿ ಒಂದು ಚಿತ್ರ ತಯಾರಿಸಿ ಎಂದು 'ಆಲಂ ಆರಾ' ಚಿತ್ರದ ನಿರ್ಮಾಪಕ ಅರ್ದೇಶಿರ್ ಇರಾನಿಯವರ ಮನವೊಲಿಸಲು ಪ್ರಯತ್ನಿಸಿದರು. ಅವರೇಕೋ ಇತ್ತ ಒಲಿಯಲಿಲ್ಲ. ಮೈಸೂರಿಗೆ ಹಿಂತಿರುಗಿ ಮಂಡಿ, ರೇಷ್ಮೆ ವ್ಯಾಪಾರಿಗಳೊಂದಿಗೆ, ಚಿತ್ರಮಂದಿರಗಳ ಮಾಲೀಕರೊಂದಿಗೆ ಕನ್ನಡ ಚಿತ್ರ ನಿರ್ಮಿಸುವ ಬಗ್ಗೆ ಪ್ರಸ್ತಾಪಿಸಿದರು. ಯಾರೂ ಮುಂದೆ ಬರಲಿಲ್ಲ. ರಾಯರು ಬೇಸತ್ತು ಮಿತ್ರ ಎಂ.ವಿ.ಸುಬ್ಬಯ್ಯನಾಯ್ಡು ಅವರೊಂದಿಗೆ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿಯನ್ನು ಸ್ಥಾಪಿಸಿ ನಾಟಕ ಪ್ರದರ್ಶನಗಳತ್ತ ಗಮನ ಹರಿಸಿದರು. ಆ ವೇಳೆಗಾಗಲೇ ಅವರಿಗಿದ್ದ ಚಿತ್ರರಂಗದ ಅನುಭವ ರಂಗಭೂಮಿಯಲ್ಲಿ ಹೊಸ ಆವಿಷ್ಕಾರಗಳಿಗೆ ಅನುವು ಮಾಡಿಕೊಟ್ಟಿತು. ಆ ದಿನಗಳಲ್ಲಿ ರಾಯರ ರಂಗ ಪ್ರಯೋಗಗಳಲ್ಲಿ ಕೂಡಾ ಬೆಳಕುವಿನ್ಯಾಸ, ದೃಶ್ಯ ಸಂಯೋಜನೆ, ರಂಗಸ್ಥಳವಿನ್ಯಾಸ ಇತ್ಯಾದಿಗಳು ವಿನೂತನವೆನ್ನಿಸಿದ್ದವು. ಅನೇಕ ಮೊದಲುಗಳಿಗೆ, ಪ್ರಯೋಗಗಳಿಗೆ ರಾಯರು ಕಾರಣರಾದರು. ಇಲ್ಲೆಲ್ಲ ಅವರಿಗೆ ನೆರವಾದದ್ದು ಅಮೆರಿಕೆಯಿಂದ ತರಿಸಿ ಅಧ್ಯಯನ ಮಾಡಿದ್ದ 'ಸ್ಟೇಜ್ ಲೈಟಿಂಗ್' ಇತ್ಯಾದಿ ಗ್ರಂಥಗಳು. ಅವರು ಕನ್ನಡ ಚಿತ್ರ ತಯಾರಿಸುವ ಬಗ್ಗೆ ಯೋಚಿಸುತ್ತಲೇ ಇದ್ದರು.

ಮೂಕಿ ಚಿತ್ರಗಳ ಕಾಲದಲ್ಲೇ ಗುಬ್ಬಿ ವೀರಣ್ಣನವರು ಚಿತ್ರ ನಿರ್ಮಿಸುವ ಸಾಹಸ ಮಾಡಿದ್ದಾರೆ. ಟಿ.ಪಿ.ಕೈಲಾಸಂ, ದೇವುಡು ನರಸಿಂಹಶಾಸ್ತ್ರಿಗಳಂಥವರು ಚಲನಚಿತ್ರದಲ್ಲಿ ಪಾಲ್ಗೊಂಡಿದ್ದರು. ಈ ಹೊತ್ತಿಗಾಗಲೇ ತೆಲುಗಿನಲ್ಲಿ 'ಭಕ್ತ ಪ್ರಹ್ಲಾದ' (೧೯೩೧), ತಮಿಳಿನಲ್ಲಿ 'ಕಾಳಿದಾಸ' (೧೯೩೧), ಮರಾಠಿಯಲ್ಲಿ 'ಅಯೋಧ್ಯಾಚ ರಾಜ' (೧೯೩೨), ಗುಜರಾತಿಯಲ್ಲಿ 'ನರಸೀ ಮೆಹತಾ' (೧೯೩೨) ಚಿತ್ರಗಳು ತಯಾರಾಗಿದ್ದವು. ಆದರೂ ಕನ್ನಡ ವಾಕ್ಚಿತ್ರವೊಂದನ್ನು ನಿರ್ಮಿಸಲು ಸಾಧ್ಯವಾಗಲಿಲ್ಲವಲ್ಲ ಎನ್ನುವ ಕೊರಗು ನಾಗೇಂದ್ರರಾಯರನ್ನು ಕಾಡಿತ್ತು.



(ಚಿತ್ರ ೨) 'ಸತಿ ಸುಲೋಚನಾ' ಸೃಷ್ಟಿಕರ್ತರು.
ಕುಳಿತಿರುವವರು (ಎರಡನೆಯ ಸಾಲು) ಎಡದಿಂದ ಬಲಕ್ಕೆ : ಬೆಳ್ಳಾವೆ ನರಹರಿಶಾಸ್ತ್ರಿಗಳು (ಚಿತ್ರದ ಸಾಹಿತಿ), ಆರ್.ನಾಗೇಂದ್ರರಾಯರು (ರಾವಣ ಪಾತ್ರಧಾರಿ), ರತನ್‌ಚಂದ್, ಸಿ.ಟಿ.ಸೀತಾರಾಮಶೆಟ್ಟಿ (ಸೌತ್ ಇಂಡಿಯಾ ಮೂವಿಟೋನ್ ಚಿತ್ರಸಂಸ್ಥೆಯ ಮೇಲ್ವಿಚಾರಕರು), ಚಿತ್ರದ ನಿರ್ಮಾಪಕ ಭೂರ್‌ಮಲ್ ಚಮನ್‌ಮಲ್‌ಜಿ (ಪೇಟ ಧರಿಸಿರುವವರು), ನಿರ್ದೇಶಕ ವೈ.ವಿ.ರಾವ್ (ಕೈ ಕಟ್ಟಿ ಕುಳಿತಿರುವವರು), ಪ್ರಧಾನ ಪಾತ್ರಧಾರಿ ಎಂ.ವಿ.ಸುಬ್ಬಯ್ಯನಾಯ್ಡು (ಕೊನೆಯಲ್ಲಿರುವವರು), ಕುಳಿತಿರುವವರು : ನಾಲ್ಕನೆಯವರು ಲಕ್ಷ್ಮೀಬಾಯಿ (ಮಂಡೋದರಿ), ತ್ರಿಪುರಾಂಬ (ಸುಲೋಚನಾ), ರಾಜಂ (ವೈ.ವಿ.ರಾಯರ ಪತ್ನಿ), ಕೊನೆಯಲ್ಲಿರುವವರು ಲಕ್ಷ್ಮೀಬಾಯಿಯವರ ಸೋದರಿ ಕಮಲಾಬಾಯಿ.

ಇಂಥ ಸಂದರ್ಭದಲ್ಲಿ ಮಾರ್ವಾಡಿ ವರ್ತಕರಾದ ಬೆಂಗಳೂರಿನ ಪಾತ್ರೆ ವ್ಯಾಪಾರಿಗಳಾದ ಷಾ ಚಮನ್‌ಮಲ್ ಮತ್ತು ಷಾ ಭೂರ್‌ಮಲ್ ಚಮನ್‌ಮಲ್‌ಜಿ ಇತ್ತ ಮನಸ್ಸು ಮಾಡಿದ್ದು, ಅವರು ನಾಗೇಂದ್ರರಾಯರನ್ನೇ ಹುಡುಕಿಕೊಂಡು ಬಂದದ್ದು ಮರುಭೂಮಿಯಲ್ಲಿ ಓಯಸಿಸ್‌ನಂತೆ ಆಯಿತು. ಅವರ ಆಪ್ತಮಿತ್ರರ ಸಲಹೆಯಂತೆ ೧೯೩೨ರಲ್ಲಿ 'ಸೌತ್ ಇಂಡಿಯಾ ಮೂವಿಟೋನ್' ಎಂಬ ಸಂಸ್ಥೆ ಪ್ರಾರಂಭಿಸಿದರು, ಸೀತಾರಾಮ ಶೆಟ್ಟಿಯವರ ಮೂಲಕ ನಾಗೇಂದ್ರರಾಯರನ್ನು ಸಂಪರ್ಕಿಸಿದರು. ರಾಯರಿಗೆ ಇದು ಹಿಗ್ಗಿನ ಸಂಗತಿಯಾದರೂ ನಾಟಕದ ಕಂಪನಿಯನ್ನು ಪಾಲುದಾರಿಕೆಯಲ್ಲಿ ಆರಂಭಿಸಿದ್ದರಿಂದಾಗಿ ತಮ್ಮ ಪಾಲುದಾರರಾಗಿದ್ದ ಸುಬ್ಬಯ್ಯನಾಯ್ಡು ಹೊಸ ವ್ಯವಹಾರಕ್ಕೆ ಒಪ್ಪಿಗೆ ಕೊಡುತ್ತಾರೋ ಇಲ್ಲವೋ ಎಂಬ ಆತಂಕವಿತ್ತು. ಷಾಂಗಾಜಿ ''ನೀವಿಬ್ಬರೂ ಚಿತ್ರದಲ್ಲಿ ಅಭಿನಯಿಸಿ'' ಎಂದಾಗ ಸಂತೋಷದಿಂದ ಸುಬ್ಬಯ್ಯನಾಯ್ಡು ಅವರಿಗೆ ಎಲ್ಲವನ್ನೂ ವಿವರಿಸಿ ಒಪ್ಪಿಸಿದರು.

ಅವರು ಆಯ್ದುಕೊಂಡ ಕಥೆ ಪುರಾಣದ್ದು. ರಾವಣಾಸುರ, ಅವನ ಮಗ ಇಂದ್ರಜಿತು ಮತ್ತು ಇಂದ್ರಜಿತುವಿನ ಹೆಂಡತಿ ಸುಲೋಚನಾಳ ಸುತ್ತ ಹೆಣೆದ ಕಥೆ. ಚಿತ್ರಕ್ಕೆ 'ಸತಿ ಸುಲೋಚನಾ' ಎಂಬ ಹೆಸರೂ ಇಟ್ಟು, ಹಿಂದೆ 'ಹರಿಮಾಯಾ' ಚಿತ್ರ ನಿರ್ದೇಶಿಸಿದ್ದ ವೈ.ವಿ.ರಾವ್ ಅವರನ್ನು ನಿರ್ದೇಶಿಸಲು ಗೊತ್ತು ಮಾಡಿದರು. ರಾವಣನಾಗಿ ನಾಗೇಂದ್ರರಾಯರು, ಇಂದ್ರಜಿತು ಪಾತ್ರದಲ್ಲಿ ಎಂ.ವಿ.ಸುಬ್ಬಯ್ಯನಾಯ್ಡು ಮತ್ತು ಮಂಡೋದರಿಯ ಪಾತ್ರಕ್ಕೆ ಸೂರ್ಯ ಫಿಲಂ ಕಂಪನಿಯ 'ಸ್ಟಾರ್' ಎಂದು ಹೆಸರಾಗಿದ್ದ ಲಕ್ಷ್ಮೀಬಾಯಿ ಅವರನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಸುಲೋಚನಾ ಪಾತ್ರಕ್ಕೆ ಗಾಯಕಿ/ನಟಿ ತ್ರಿಪುರಾಂಬಾ ಅವರನ್ನು ಆಯ್ಕೆ ಮಾಡಲಾಯಿತು. ಸುಲೋಚನಾ ಪಾತ್ರವನ್ನು ಲಕ್ಷ್ಮೀಬಾಯಿಯವರೇ ಮಾಡಬೇಕಿತ್ತು. ತ್ರಿಪುರಾಂಬಾ ನಾಯಕಿಯ ಪಾತ್ರವನ್ನೇ ತಮಗೆ ಕೊಡಬೇಕೆಂದಾಗ, ಲಕ್ಷ್ಮೀಬಾಯಿಯವರ ಮನವೊಲಿಸಿ ಅವರಿಗೆ ಮಂಡೋದರಿ ಪಾತ್ರ ಕೊಟ್ಟರು. ಸುಬ್ಬಯ್ಯನಾಯ್ಡು ಮೇಲಿನ ಗೌರವದಿಂದ ಲಕ್ಷ್ಮೀಬಾಯಿ ಆ ಪಾತ್ರ ಒಪ್ಪಿಕೊಂಡರು. ಚಿತ್ರಕಥೆ, ಸಂಭಾಷಣೆ, ಹಾಡುಗಳನ್ನು ರಚಿಸಲು ಸಾಹಿತಿ/ನಾಟಕಕಾರ ಬೆಳ್ಳಾವೆ ನರಹರಿಶಾಸ್ತ್ರಿ ಅವರನ್ನು ಕೇಳಲಾಯಿತು. ಶಾಸ್ತ್ರಿಗಳು ಸಂಸ್ಕೃತ ಪಂಡಿತರು. ವೃತ್ತಿನಾಟಕ ಸಂಸ್ಥೆಗಳು ಬಹುತೇಕ ಪೌರಾಣಿಕ ಕಥಾವಸ್ತುವನ್ನೇ ಅವಲಂಬಿಸಿದ್ದರಿಂದ ಶಾಸ್ತ್ರಿಗಳು ಪೌರಾಣಿಕ ನಾಟಕಗಳನ್ನು ಬರೆದು ಪ್ರಸಿದ್ಧರಾಗಿದ್ದರು. ಆದ್ದರಿಂದ ಅವರೇ 'ಸತಿ ಸುಲೋಚನಾ'ದ ಸಾಹಿತ್ಯಕಾರ್ಯ ನಿರ್ವಹಿಸಲು ಅರ್ಹರಾಗಿದ್ದರು. ರಂಗಭೂಮಿಗಾಗಿ, ಅದರಲ್ಲೂ ಗುಬ್ಬಿ ಕಂಪನಿಗಾಗಿ ಶ್ರೀಕೃಷ್ಣಲೀಲಾ, ಶ್ರೀಕೃಷ್ಣ ಗಾರುಡಿ, ಸದಾರಮೆ, ಭಕ್ತ ಕಬೀರ್ ದಾಸ್, ಶ್ರೀಕೃಷ್ಣ ಪಾರಿಜಾತ ಮೊದಲಾದ ನಾಟಕಗಳನ್ನು ಬರೆದಿದ್ದ ಶಾಸ್ತ್ರಿಗಳಿಗೆ 'ಸತಿ ಸುಲೋಚನಾ'ದಂಥ ಪೌರಾಣಿಕ ವಸ್ತುವನ್ನು ಬೇಕಾದ ವಿನ್ಯಾಸಕ್ಕೆ ಹೊಂದಿಸುವುದು ಕಷ್ಟವಾಗಲಿಲ್ಲ. ಹೀಗೆ ಶಾಸ್ತ್ರಿಗಳು ಚಿತ್ರರಂಗದ ಪ್ರಥಮ ಸಾಹಿತಿಯೂ ಆದರು. 'ಸತಿ ಸುಲೋಚನಾ' ಒಂದು ಯಶಸ್ವಿ ಚಿತ್ರ. ಅನಂತರ ಶಾಸ್ತ್ರಿಗಳಿಗೆ ಬಹು ಬೇಡಿಕೆಯೂ ಇತ್ತು. ಆ ಮಟ್ಟಿಗೆ ಅವರು ಕನ್ನಡ ಚಿತ್ರ ಸಾಹಿತಿಗಳಿಗೆ ಕುಲಪುರೋಹಿತರು.

ನಾಗೇಂದ್ರರಾಯರು ಮೈಸೂರು ವಾಸುದೇವಾಚಾರ್ಯರ ಬಳಿ ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿದ್ದವರು. ರಂಗಭೂಮಿಯಲ್ಲಿ ತಮ್ಮ ಗಾಯನಕ್ಕಾಗಿಯೂ ಪ್ರಸಿದ್ಧರಾಗಿದ್ದರು. ಹೀಗಾಗಿ 'ಸತಿ ಸುಲೋಚನಾ' ಚಿತ್ರಕ್ಕೆ ಅವರೇ ಸಂಗೀತ ನಿರ್ದೇಶಿಸಲಿ ಎಂದು ತೀರ್ಮಾನಿಸಲಾಯಿತು. ನಾಗೇಂದ್ರರಾಯರಿಗೆ ಸಂಗೀತ ನಿರ್ದೇಶನದಲ್ಲಿ ತಾಂತ್ರಿಕ ನೆರವು ನೀಡಲು ಹೆಚ್.ಆರ್.ಪದ್ಮನಾಭಶಾಸ್ತ್ರಿಗಳನ್ನು ಗೊತ್ತುಮಾಡಿಕೊಳ್ಳಲಾಯಿತು. ಪದ್ಮನಾಭಶಾಸ್ತ್ರಿಗಳಿಗೆ ದಕ್ಷಿಣದ ಹಲವು ಚಿತ್ರಗಳ ಸಂಗೀತ ವಿಭಾಗದಲ್ಲಿ ಕೆಲಸ ಮಾಡಿದ ಅನುಭವವಿತ್ತು. ೧೯೩೩ನೇ ಡಿಸೆಂಬರ್‌ನಲ್ಲಿ ವೈ.ವಿ.ರಾವ್ ಮತ್ತು ನಾಗೇಂದ್ರರಾಯರ ನೇತೃತ್ವದಲ್ಲಿ 'ಸತಿ ಸುಲೋಚನಾ' ವಾಕ್ಚಿತ್ರದ ತಂಡ ಮೀರಜ್ ಮೂಲಕ ಕೊಲ್ಹಾಪುರಕ್ಕೆ ಹೋಗುವ ರೈಲುಗಾಡಿಯಲ್ಲಿ ಪ್ರಯಾಣ ಬೆಳೆಸಿತು. ಕೊಲ್ಹಾಪುರದ ಛತ್ರಪತಿ ಸಿನಿಟೋನ್‌ನಲ್ಲಿ ಚಿತ್ರೀಕರಣ ನಡೆಯಿತು.

ಜಯವಾಣಿ ಫಿಲಂಸ್ ಲಾಂಛನದಲ್ಲಿ 'ಭಕ್ತ ಧ್ರುವ' ಮುಂಬಯಿಯ ಅಜಂತ ಸ್ಟುಡಿಯೋದಲ್ಲಿ ಚಿತ್ರೀಕರಣ ಪ್ರಾರಂಭಿಸಿತ್ತು. ನಿರ್ಮಾಣ ಕಾರ್ಯ ಕೊಂಚ ನಿಧಾನವಾಯಿತು. 'ಸತಿ ಸುಲೋಚನಾ' ಮೊದಲು ತೆರೆಗೆ ಬಂತು.

ಆ ದಿನಗಳಲ್ಲಿ ಚಿತ್ರೀಕರಣಕ್ಕೆ ವಿದ್ಯುದ್ದೀಪಗಳ ಬಳಕೆ ಪ್ರಾರಂಭವಾಗಿರಲಿಲ್ಲ. ಅಗತ್ಯ ಇರುವಷ್ಟು ವಿದ್ಯುತ್ ಸರಬರಾಜೂ ಇರಲಿಲ್ಲ. ಅಲ್ಲದೆ ಆಗ ಚಿತ್ರೀಕರಣಕ್ಕೆ ಬಳಸುತ್ತಿದ್ದ ನೆಗೆಟಿವ್ ಫಿಲಂ ವಿದ್ಯುತ್ ದೀಪಗಳ ಪ್ರಖರತೆಗೆ ಪ್ರತಿಕ್ರಿಯಿಸುವಷ್ಟು ಸೂಕ್ಷ್ಮವಾಗಿರಲಿಲ್ಲ. ಈ ಹಿಂದೆ ಮೂಕಿ ಚಿತ್ರಗಳ ತಯಾರಿಕೆಯಲ್ಲಿ ಮಾಡಿದ ಹಾಗೇ ಬಿಸಿಲಿಗೆ ಪ್ರತಿಫಲನ ಫಲಕಗಳನ್ನು ಒಡ್ಡಿ ಆ ಬೆಳಕಿನಲ್ಲಿ ಚಿತ್ರೀಕರಣ ನಡೆಸಬೇಕಾಗಿತ್ತು. ಚಲಿಸುವ ಸೂರ್ಯನಿಗೆ ಸರಿಯಾಗಿ ಬೃಹತ್ ಕನ್ನಡಿಗಳನ್ನು ಹೊತ್ತು ಜರುಗಿಸುತ್ತಿದ್ದರು.

'ಸತಿ ಸುಲೋಚನಾ'ದ ಚಿತ್ರೀಕರಣ ಸುಮಾರು ಎರಡು ತಿಂಗಳ ಕಾಲ ಹಿಡಿಯಿತು. ನಿರ್ಮಾಣಕ್ಕೆ ಸುಮಾರು ೪೦,೦೦೦ ರೂಪಾಯಿಗಳಷ್ಟು ವೆಚ್ಚವಾಯಿತೆಂದು ಹೇಳಲಾಗಿದೆ. ಚಿತ್ರದಲ್ಲಿಯ ಯುದ್ಧದ ದೃಶ್ಯಗಳಿಗೆ ಮೂರು ಕ್ಯಾಮರಾಗಳನ್ನು ಮತ್ತು ನೂರಾರು ಮಂದಿ ಸಹಕಲಾವಿದರನ್ನು ಬಳಸಿದ್ದರು. ಇನ್ನೂ ಹಿನ್ನೆಲೆ ಗಾಯನ ಪದ್ಧತಿ ಇರಲಿಲ್ಲ. ನಟ-ನಟಿಯರೇ ಹಾಡಿಕೊಂಡು ಅಭಿನಯಿಸಬೇಕಾಗಿತ್ತು. ಹಾಗೆ ಹಾಡಿದ ಮೊದಲ ಗಾಯಕಿ ಲಕ್ಷ್ಮೀಬಾಯಿ. ಆಕೆಯ ಮಾತುಗಳಲ್ಲಿ ಹೇಳುವುದಾದರೆ: ''...ಮುಖ್ಯ ಪಾತ್ರಗಳಲ್ಲಿದ್ದ ನಾನು, ತ್ರಿಪುರಾಂಬ, ಸುಬ್ಬಯ್ಯನಾಯ್ಡು, ನಾಗೇಂದ್ರರಾಯರು ಎಲ್ಲಾ ಹಾಡಿದೆವು. ಎಲ್ಲರಿಗೂ ಹಾಡುಗಾರಿಕೆ ಗೊತ್ತಿತ್ತು. ಆದ್ದರಿಂದ ಸುಲಭವಾಯಿತು. ಈಗಿನಂತೆ ಮೊದಲೇ ಹಾಡುಗಳನ್ನು ಧ್ವನಿ ಮುದ್ರಿಸಿಕೊಳ್ಳುವ ಸೌಲಭ್ಯಗಳಿರಲಿಲ್ಲ. ಹಾಡುತ್ತಲೇ ಅಭಿನಯಿಸಬೇಕಿತ್ತು. ಕಲಾವಿದರ ತಲೆಯ ಮೇಲೆ ಸ್ವಲ್ಪ ಎತ್ತರದಲ್ಲಿ, ಕ್ಯಾಮರಾದ ವ್ಯಾಪ್ತಿಯಿಂದ ಕೊಂಚ ಹೊರಗೆ ಮೈಕ್ ಕಟ್ಟಿರುತ್ತಿದ್ದರು. ಹಾಡುವವರು ಮೈಕ್ ಅನ್ನು ನೋಡಬಾರದು. ಅತ್ತ ಗಮನ ಹರಿಸದೇ ಹಾಡಬೇಕು. ಜೊತೆಗೆ ಅಭಿನಯಿಸಬೇಕು. ಕೊಂಚ ಕಷ್ಟವೇ ಆಗುತ್ತಿತ್ತು....''

ಲಕ್ಷ್ಮೀಬಾಯಿ ಹಾಡಿದ ಮೊದಲ ಗೀತೆ 'ಭಲೆ ಭಲೆ ಪಾರ್ವತಿ ಬಲು ಚತುರೆ..'. ಇದು ಕನ್ನಡ ಚಿತ್ರರಂಗದ ಮೊದಲ ಹಾಡು ಮತ್ತು ಆ ದಿನಗಳಲ್ಲಿ ಅತ್ಯಂತ ಜನಪ್ರಿಯವಾಗಿದ್ದ ಹಾಡು.

ಈ ಚಿತ್ರದಲ್ಲಿ ಸುಲೋಚನಾಳ ಪಾತ್ರ ತ್ರಿಪುರಾಂಬ ನಿರ್ವಹಿಸಿದ್ದರು. ತ್ರಿಪುರಾಂಬ ಸುಂದರಿ. ಶರೀರ, ಶಾರೀರ ಎರಡೂ ಚೆನ್ನ. ರಂಗಭೂಮಿಯಲ್ಲಿ ಒಳ್ಳೆಯ ಹೆಸರು ಮಾಡಿದ್ದರು. ಈ ಚಿತ್ರದಲ್ಲಿ ಹದಿನಾರಕ್ಕೂ ಹೆಚ್ಚು ಹಾಡುಗಳಿದ್ದವು. ಲಕ್ಷ್ಮೀಬಾಯಿ, ತ್ರಿಪುರಾಂಬ, ಸುಬ್ಬಯ್ಯನಾಯ್ಡು, ಎಸ್.ಕೆ.ಪದ್ಮಾದೇವಿ ಮೊದಲಾದವರು ಹಾಡಿದ್ದರು.

ತ್ರಿಪುರಾಂಬ ಒಳ್ಳೆಯ ಗಾಯಕಿ, ಸುಂದರಿ ಎಂಬ ಕಾರಣಕ್ಕೆ ರಂಗದ ಮೇಲೆ ಹೆಸರಾದವರು. ಅಭಿನಯದ ದೃಷ್ಟಿಯಿಂದ ಅಂಥ ಪ್ರತಿಭಾವಂತೆಯೇನಲ್ಲ. ಆಗಿನ ಚಲನಚಿತ್ರದಲ್ಲಂತೂ ಅಭಿನಯ ತುಂಬ ಮುಖ್ಯ. ಕ್ಲೋಸಪ್‌ಗಳೂ ಇರುತ್ತವಾದ್ದರಿಂದ ಆಕೆ ಬಹಳ ಕಷ್ಟ ಪಡಬೇಕಾಯಿತು. ಒಂದು ಪ್ರಸಂಗ ಹೀಗಿದೆ :

ಇಂದ್ರಜಿತುವಿನ ಮರಣ, ಆತನ ಹೆಂಡತಿ ಸುಲೋಚನಾ ಪ್ರಲಾಪಿಸುವ ಸನ್ನಿವೇಶ. ತ್ರಿಪುರಾಂಬ ಸುಲೋಚನೆಯ ಪಾತ್ರದಲ್ಲಿದ್ದರು. ಎಷ್ಟು ಪ್ರಯತ್ನಿಸಿದರೂ ಕಣ್ಣೀರು ಬರಲಿಲ್ಲ. ಕಡೆಗೆ ನಿರ್ದೇಶಕ ವೈ.ವಿ.ರಾಯರು ಆಕೆಯ ರೆಪ್ಪೆಗೆ ಹಸಿ ಮೆಣಸಿನಕಾಯಿ ಉಜ್ಜಿದರು. ಕಣ್ಣುಗಳು ಕೆಂಪಾದವು. ಆದರೆ ಕಣ್ಣೀರು ಬರಲಿಲ್ಲ. ಕಡೆಗೆ ಕೆನ್ನೆಗಳ ಮೇಲೆ ನೀರು ಚಿಮುಕಿಸಿ, ಕಣ್ಣೀರಿನ ಎಫೆಕ್ಟ್ ತಂದರು.

ಆಗ ನಾಟಕದ ಕಂಪನಿ ಮನೆ ಸುಬೇದಾರ್ ಛತ್ರಂ ರೋಡಿನಲ್ಲಿ ಕಪಾಲಿ ಚಿತ್ರಮಂದಿರಕ್ಕೆ ನೆರೆಯಲ್ಲಿರುವ ಅನಂತಾಶ್ರಮದ ಎದುರಿಗಿದ್ದ ಮನೆಯೇ ಆಗಿತ್ತು. ಪ್ರತಿದಿನ ಆ ಮನೆಯಲ್ಲಿ 'ಸತಿ ಸುಲೋಚನಾ' ಚಿತ್ರದ ಸಲುವಾಗಿ ಅಭ್ಯಾಸ ಮಾಡುತ್ತಿದ್ದರು. ಹೀಗೆ ಸಿದ್ಧತೆ ಮಾಡಿಕೊಂಡೇ ಕೊಲ್ಹಾಪುರಕ್ಕೆ ಹೊರಟದ್ದು. ಯುದ್ಧದ ದೃಶ್ಯದ ಸಿದ್ಧತೆಯೇ ಒಂದು ರೋಚಕಕಥೆ. ದೊಡ್ಡ ಮೈದಾನದಲ್ಲಿ ಜನವೋ ಜನ. ಚಿತ್ರೀಕರಣಕ್ಕೆ ಹೆಚ್ಚು ಜನರು ಬೇಕಾದ್ದರಿಂದ ಕೊಲ್ಹಾಪುರಕ್ಕೆ ಸುತ್ತಮುತ್ತಲ ಹಳ್ಳಿಗಳಲ್ಲೆಲ್ಲ ಚಿತ್ರೀಕರಣ ನೋಡಲು ಬಯಸುವವರು ದೊಡ್ಡ ಮೈದಾನದ ಬಳಿ ಬರಬಹುದೆಂದು ಡಂಗುರ ಹೊಡೆಸಿದ್ದರಿಂದಾಗಿ ಜನಸಂದಣಿ ಸೇರಿತ್ತು. ಗೋಣಿ ಚೀಲದಲ್ಲಿ ಉಡುಪುಗಳನ್ನು ಹೊಲಿಸಲಾಗಿತ್ತು. ರಾವಣನ ಸೈನ್ಯ ಹಾಗೂ ರಾಮನ ಕಪಿ ಸೈನ್ಯದ ಉಡುಪುಗಳಿಗೆ ಬೇರೆ ಬೇರೆ ಬಣ್ಣ ಬಳಿದಿದ್ದರು. ಚಿತ್ರ ಕಪ್ಪು-ಬಿಳುಪಿನದ್ದಾದರೂ ಚಿತ್ರೀಕರಣದಲ್ಲಿ ಗೊಂದಲವಾಗದಿರಲು ಈ ಬಣ್ಣಗಳ ಬಳಕೆಯಾಗಿದ್ದಿರಬಹುದು.

ಈ ಚಿತ್ರದಲ್ಲಿ ನಿರ್ದೇಶಕ ವೈ.ವಿ.ರಾವ್ ಲಕ್ಷ್ಮಣನ ಪಾತ್ರ ವಹಿಸಿದ್ದರು. ಯುದ್ಧ ಸನ್ನಿವೇಶದಲ್ಲಿ ಒಂದೆಡೆ ಕಪಿಸೈನ್ಯದ ನೇತೃತ್ವ ವಹಿಸಿದ್ದ ಲಕ್ಷ್ಮಣ ಪಾತ್ರಧಾರಿ ವೈ.ವಿ.ರಾವ್, ಇನ್ನೊಂದೆಡೆ ರಾಕ್ಷಸಸೈನ್ಯದ ನೇತೃತ್ವ ವಹಿಸಿದ್ದ ಇಂದ್ರಜಿತುವಿನ ಪಾತ್ರಧಾರಿ ಸುಬ್ಬಯ್ಯನಾಯ್ಡು. ಎರಡು ಕುದುರೆಗಳನ್ನು ಕಟ್ಟಿದ್ದ ಅಲಂಕೃತವಾದ ರಥದ ಮೇಲೆ ನಾಯ್ಡುರವರು ನಿಂತಿದ್ದರು. ಹಿಂದೆ ರಾಕ್ಷಸ ಸೈನ್ಯ. ವೈ.ವಿ.ರಾವ್ ನಾಯ್ಡುರವರಿಗೆ''...'ಸ್ಟಾರ್ಟ್' ಅಂದ ಕೂಡಲೇ ರಥವನ್ನು ವೇಗವಾಗಿ ಈ ಕಡೆಯಿಂದ ಆ ಕಡೆಯ ಮೈದಾನದ ಕೊನೆಯವರೆಗೆ ಓಡಿಸಿ, ದಾರಿಯಲ್ಲಿ ಅಡ್ಡ ಬರುವವರನ್ನು ಹೊಡೆಯೋ ಹಾಗೆ ಮಾಡಿ'' ಎಂದು ಹೇಳಿದರು.

'ಸ್ಟಾರ್ಟ್' ಅಂದ ಕೂಡಲೇ ನಾಯ್ಡುರವರು ಕುದುರೆಗಳಿಗೆ ಚಾಟಿ ಏಟು ಕೊಟ್ಟರು. ಕುದುರೆಗಳು ವೇಗವಾಗಿ ಓಡತೊಡಗಿದವು. ಹಿಂದಿನಿಂದ ರಾಕ್ಷಸ ಸೈನ್ಯ ಜಯಕಾರ ಹಾಕುತ್ತಾ ಓಡತೊಡಗಿತು. ಅತ್ತ ಕಡೆಯಿಂದ ಕಪಿ ಸೈನ್ಯ ನುಗ್ಗಿ ಬರುತ್ತಿದೆ. ನಾಯ್ಡು ತಮ್ಮ ಸೈನ್ಯಕ್ಕೆ ಹುರಿದುಂಬಿಸುವಂತೆ ಕೂಗಿದರು. ಕುದುರೆಗಳು ಈ ಕೂಗಿಗೆ ಬೆದರಿ ಮತ್ತಷ್ಟು ಜೋರಾಗಿ ಓಡತೊಡಗಿದವು. ಕಪಿಸೈನ್ಯ ಸಮೀಪಿಸಿತು. ಕುದುರೆಗಳನ್ನು ತಡೆದು ನಿಲ್ಲಿಸಲು ಸಾಧ್ಯವಾಗಲಿಲ್ಲ. ಅದರ ವೇಗವನ್ನು ಕಂಡು ಜನ ಹೆದರಿ, ದಿಕ್ಕಾಪಾಲಾಗಿ ಓಡತೊಡಗಿದರು. ಇಂದ್ರಜಿತುವಿನ ರಥ ಸೈನ್ಯವನ್ನು ಸೀಳಿಕೊಂಡು ಹೊರಟುಹೋಯಿತು. ಎದುರಿಗೆ ಇದ್ದ ಕಪಿಸೈನ್ಯ ದಿಕ್ಕಾಪಾಲಾಗಿ ಓಡುತ್ತಿದ್ದರೆ ಹಿಂದಿನಿಂದ ಬಂದ ರಾಕ್ಷಸಸೈನ್ಯ ಅಟ್ಟಿಸಿಕೊಂಡು ಬರುತ್ತಿದೆ. ಕೆಲವರು ನಿಂತು ಕಾದಾಡಿದರೆ, ಗಾಬರಿ ಆದವರು ಓಡುತ್ತಲೇ ಇದ್ದರು. ಕೆಲವರಿಗೆ ರಥದಿಂದ ಗಾಯವಾಗಿ ಕೆಳಗೆ ಬಿದ್ದರು. ಅಂತೂ ಚಿತ್ರೀಕರಣ ನಡೆಯಿತು. ಇಂಥ ಆಕಸ್ಮಿಕಗಳು ಆ ದಿನಗಳಲ್ಲಿ ಅನಿವಾರ್ಯವಾಗಿದ್ದವು. ಹದಿನಾರು ಸಾವಿರ ಅಡಿ ಉದ್ದದ 'ಸತಿ ಸುಲೋಚನಾ' ಚಿತ್ರ ಪೂರ್ತಿಯಾಯಿತು. ತೆರೆಗೂ ಬಂತು. ಅದೊಂದು ಅಭೂತಪೂರ್ವ ಸ್ವಾಗತ, ಸಂತೃಪ್ತಿಯ ಕ್ಷಣ.

ಬೆಂಗಳೂರಿನ ಸಿಟಿ ಮಾರ್ಕೆಟ್ ಎದುರು ೧೯೦೫ರಲ್ಲಿ ನಿರ್ಮಾಣವಾದ ದೊಡ್ಡಣ್ಣ ಹಾಲ್ ನಂತರದಲ್ಲಿ ಬೆಂಗಳೂರಿನ ಪ್ರಥಮ ಚಿತ್ರಮಂದಿರವಾಗಿ ಮಾರ್ಪಟ್ಟ ಪ್ಯಾರಾಮೌಂಟ್‌ನಲ್ಲಿ ೧೯೩೪ರ ಮಾರ್ಚ್ ತಿಂಗಳ ೩ನೇ ತಾರೀಖು 'ಸತಿ ಸುಲೋಚನಾ' ಬಿಡುಗಡೆಯಾಯಿತು.



(ಚಿತ್ರ ೩) 'ಸತಿ ಸುಲೋಚನಾ' ಚಿತ್ರದಲ್ಲಿ ರಾವಣನ ಪಾತ್ರದಲ್ಲಿ ಆರ್.ನಾಗೇಂದ್ರರಾಯರು.

## ಕನ್ನಡದ ಮೊದಲ ವಾಕ್ಚಿತ್ರ ನಿರ್ಮಾಪಕರು



(ಚಿತ್ರ ೪) ಷಾ ಚಮನ್‌ಮಲ್ ಡುಂಗಾಜಿ        ಷಾ ಭೂರ್‌ಮಲ್ ಚಮನ್‌ಮಲ್‌ಜಿ

ಷಾ ಚಮನ್‌ಮಲ್ ಡುಂಗಾಜಿ ಕನ್ನಡದ ಮೊದಲ ವಾಕ್ಚಿತ್ರ ನಿರ್ಮಾಪಕರು. ಅವರು ಮೂಲತಃ ರಾಜಸ್ಥಾನದವರು. ವ್ಯಾಪಾರಕ್ಕಾಗಿ ೧೯೦೩ರಲ್ಲಿ ಬೆಂಗಳೂರಿಗೆ ಬಂದು ಚಿಕ್ಕ ಪೇಟೆಯಲ್ಲಿ ಪಾತ್ರೆಗಳ ವ್ಯಾಪಾರ ಶುರು ಮಾಡಿದರು.

ಚಮನ್‌ಮಲ್ ಡುಂಗಾಜಿ ೧೯೧೮ರಲ್ಲಿ ಚಿಕ್ಕಪೇಟೆಯ ಆದಿನಾಥ ಜೈನಶ್ವೇತಾಂಬರ ದೇವಸ್ಥಾನದ ಸ್ಥಾಪಕರು. ಖುದ್ದಾಗಿ ನಿಂತು ದೇವಸ್ಥಾನದ ಕೆಲಸ ಶುರು ಮಾಡಿದಂದಿನಿಂದ ತಮ್ಮ ಜೀವಮಾನ ಪರ್ಯಂತ ಜೈನಶ್ವೇತಾಂಬರ ಸಂಘಕ್ಕೆ ಅಧ್ಯಕ್ಷರಾಗಿದ್ದರು. ೧೯೨೮ರಲ್ಲಿ ವಿಶ್ವೇಶ್ವರಪುರಂನಲ್ಲಿ ಶ್ರೀಜೈನಶ್ವೇತಾಂಬರ ದೇವಸ್ಥಾನವನ್ನು ಕಟ್ಟಿಸಿ ಮೂರ್ತಿಪ್ರತಿಷ್ಠೆ ಮಾಡಿಸಿದರು. ಬೆಂಗಳೂರು ಪ್ರಾಣಿದಯಾ ಪ್ರಚಾರಕ ಸಂಘದ ಅಧ್ಯಕ್ಷರಾಗಿದ್ದರು. ಆ ದಿನಗಳಲ್ಲಿ ಕರಗದ ಉತ್ಸವದ ಸಮಯದಲ್ಲಿ ನಗರ್ತಪೇಟೆಯ ರಸ್ತೆಯಲ್ಲಿ ಮೂಕಪ್ರಾಣಿಗಳ ಬಲಿಯಾಗುತ್ತಿತ್ತು. ಡುಂಗಾಜಿ ಮತ್ತು ಸರ್ ಕೆ.ಪಿ.ಪುಟ್ಟಣ್ಣಶೆಟ್ಟರು ಅದರ ವಿರುದ್ಧ ಪ್ರಚಾರ ಮಾಡಿ ರಸ್ತೆಯಲ್ಲಿ ಆಗುತ್ತಿದ್ದ ಪ್ರಾಣಿಬಲಿಯನ್ನು ಪೂರ್ತಿಯಾಗಿ ನಿಲ್ಲಿಸಿ, ನೂರಾರು ಪಶುಗಳಿಗೆ ಜೀವದಾನ ಮಾಡಿಸಿದರು.

ಆಗ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರೊಂದಿಗೆ ಸರ್ ಕೆ.ಪಿ.ಪುಟ್ಟಣ್ಣ ಶೆಟ್ಟರು ಹಾಗೂ ಷಾ ಚಮನ್‌ಮಲ್ ಅವರಿಗೆ ನಿಕಟ ಸ್ನೇಹಸಂಪರ್ಕವಿತ್ತು. ಚಮನ್‌ಮಲ್ ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳಿಗೆ ಸಹಾಯ ಮಾಡಲು ಮುಂದಾಗುತ್ತಿದ್ದರು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕಾಮರ್ಸ್‌ನಲ್ಲಿ ಉತ್ತಮವಾಗಿ ಉತ್ತೀರ್ಣರಾದವರಿಗೆ ಷಾ ಚಮನ್‌ಮಲ್ ಅವರ ಪರವಾಗಿ ೧೯೨೫ರಿಂದ ಪ್ರತಿ ವರ್ಷ ಗೋಲ್ಡ್ ಮೆಡಲ್ ಕೊಡಲಾಗುತ್ತಿತ್ತು.

೧೯೨೯ರಲ್ಲಿ ಶ್ರೀ ಸೌತ್ ಇಂಡಿಯಾ ಫಿಲ್ಮ್ ಕಂಪನಿ ಹೆಸರಿನಲ್ಲಿ ಡಿಸ್ಟ್ರಿಬ್ಯೂಷನ್ ಆಫೀಸ್ ಪ್ರಾರಂಭಿಸಿ ೫೦-೬೦ ಮೂಕಿ ಚಿತ್ರಗಳನ್ನು ವಿತರಣೆ ಮಾಡುತ್ತಿದ್ದರು.

ವಾಕ್ಚಿತ್ರಗಳ ಯುಗ ಪ್ರಾರಂಭವಾದಾಗ "ನಾವು ಮೈಸೂರು ದೇಶದಲ್ಲಿ ಇದ್ದೇವೆ. ಇಲ್ಲಿನ ಮಾತೃಭಾಷೆಯಾದ ಕನ್ನಡದಲ್ಲಿ ಯಾಕೆ ಚಿತ್ರ ತಯಾರಿಸಬಾರದು" ಎಂದು ಯೋಚಿಸಿದರು. ಆದುದರಿಂದ ೧೯೩೩ರಲ್ಲಿ ಸೌತ್ ಇಂಡಿಯಾ ಮೂವಿಟೋನ್ ಸಂಸ್ಥೆಯನ್ನು ಸ್ಥಾಪಿಸಿ ಕನ್ನಡದ ಪ್ರಥಮ ವಾಕ್ಚಿತ್ರ 'ಸತಿ ಸುಲೋಚನಾ' ತಯಾರಿಸಿದರು. ೧೯೩೫ರಲ್ಲಿ ಅವರು ನಿಧನರಾದರು. ಆನಂತರ ಅವರ ಪುತ್ರ ಭೂರ್‌ಮಲ್ ಚಮನ್‌ಮಲ್‌ಜಿ ಅವರೇ ಚಿತ್ರವಿತರಣೆ ಮಾಡುತ್ತಿದ್ದರು.

'ಸತಿ ಸುಲೋಚನಾ' ಚಿತ್ರ ತಯಾರಿಸುವಾಗ ಮೊದಲನೆಯ ಮಂಗಳಾಚರಣದಲ್ಲಿ ದೇವರಿಗೂ, ಗುರುಗಳಿಗೂ ಮತ್ತು ಮೈಸೂರು ಮಹಾರಾಜರಿಗೂ ಭಕ್ತಿ ಸೂಚಿಸಿದ್ದರು. ಮಂಗಳಾಚರಣದ ಸಾಲುಗಳು ಹೀಗಿದ್ದವು :

"ದೇವ ಗುರುಗಳೆಮಗೆ ಕೊಡಲಿ ದಿವ್ಯ ಶುಭವನ್ನು  
ಪರಮ ಜೈನ ಸಿದ್ಧ ಅರಹಂತವರು ನಮ್ಮ ಆನಕ  
ಗುರುವು ಬೋಧಕ ಜಿನ, ಮುನಿಪದ ನಿಶವು  
ಮಂಗಳಾತ್ಮಕ ಪಂಚಪರಮೇಷ್ಠಿಗಣವೆಲ್ಲಾ,  
ಶ್ರೀ ವಸುಧಾನಂದಶ್ರೀಕೃಷ್ಣ ನರೇಂದ್ರ ಮಹೇಂದ್ರ  
ವಿಲಸಿತ ವಿಧ ವಿಧ ವಿಭವ ಸುವಿಲಾಸ ವಿಕಾಸ  
ವಿನುತ ಭರಣ ಪರಮ ಕರುಣ ॥ (ಶ್ರೀವಸುಧಾನಂದ)

ಅನಂತರ ಚಮನ್‌ಮಲ್ ಡುಂಗಾಜಿ ಅವರ ಮೊಮ್ಮಕ್ಕಳು ಸಿ.ಬಿ.ಸೋಗರಾಜ್‌ಜೈನ್, ರತನ್‌ಚಂದ್ ಮತ್ತು ಪುಷ್ಪಕುಮಾರ್ ಅವರುಗಳು ತಮ್ಮ ಸಂಸ್ಥೆಗಳನ್ನು, ವ್ಯಾಪಾರವನ್ನು ಮುಂದುವರೆಸಿದರು.

''....ಚಿತ್ರದ ಹಾಡುಗಳು ತುಂಬಾ ಜನಪ್ರಿಯವಾದಾಗ ನನಗಾದ ಹೆಮ್ಮೆ ಅಷ್ಟಿಷ್ಟಲ್ಲ. ಈಗಿನ ಅಗಾಧ ತಾಂತ್ರಿಕ ಪ್ರಗತಿಯ ಮುಂದೆ 'ಸತಿ ಸುಲೋಚನಾ' ಚಿತ್ರ ರಂಗಭೂಮಿಯ ಮೇಲಿನ ಒಂದು ನಾಟಕದಂತೆ ಕಾಣಬಹುದು. ಆದರೆ ಆ ಚಿತ್ರಕ್ಕೆ ಆಗ ವೈಭವದ ಸ್ವಾಗತ ಸಿಕ್ಕಿತು...'' ಎಂದು ಆರ್.ನಾಗೇಂದ್ರರಾಯರು ವಾಕ್ಚಿತ್ರ ಸುವರ್ಣ ಸಂಚಿಕೆಯಲ್ಲಿ ಬರೆಯುತ್ತಾರೆ.

ಆರು ವಾರಗಳ ಕಾಲ ಸತತವಾಗಿ 'ಹೌಸ್ ಫುಲ್' ಆಗಿ ನಡೆದು ಅದೊಂದು ಪ್ರಥಮಗಳ ದಾಖಲೆಯೇ ಆಯಿತು. ಸುತ್ತ ಮುತ್ತಲ ಹಳ್ಳಿಗಳಿಂದ ಎತ್ತಿನ ಬಂಡಿಗಳಲ್ಲಿ ಜನ ಜಾತ್ರೆಯ ಹಾಗೆ ಬರುತ್ತಿದ್ದರು. ಚಿತ್ರ ನೋಡಿ ಅದೇ ದಿನ ತಮ್ಮ ಊರಿಗೆ ಹಿಂದಿರುಗಲಾಗದವರಿಗಾಗಿ ಥಿಯೇಟರ್‌ನವರೇ ದೊಡ್ಡಣ್ಣ ಛತ್ರದಲ್ಲಿ ವಸತಿಯ ಏರ್ಪಾಟೂ ಮಾಡಿದ್ದರು.

ಚಿತ್ರಮಂದಿರದಲ್ಲಿ ಮೊದಲ ವಾಕ್ಚಿತ್ರ ಪ್ರಾರಂಭವಾಯಿತು. ಜನರು ಮಾತು, ಹಾಡು, ಯುದ್ಧ, ಚಮತ್ಕಾರ ನೋಡನೋಡುತ್ತಾ ತನ್ಮಯರಾದರು. ಚಿತ್ರದ ಕಥಾಭಾಗವೂ ನವೀನವಾಗಿತ್ತು. ಪ್ರೇಕ್ಷಕರಲ್ಲಿ ಭಾವೋತ್ಕರ್ಷ ಉಂಟಾಗುವ ಹಾಗೆ ದೃಶ್ಯಗಳನ್ನು ಸಂಯೋಜಿಸಲಾಗಿತ್ತು. ಮುಖ್ಯವಾಗಿ ಅಭಿನಯ, ಅದರ ನಾಟಕೀಯ ಗುಣಗಳಿಂದಾಗಿ ಪ್ರೇಕ್ಷಕರನ್ನು ಆಕರ್ಷಿಸಿತ್ತು. ಅದೊಂದು ಬಗೆಯ ತಾದಾತ್ಮ್ಯ.

ದಶಕಂಠ ರಾವಣನ ಸೊಸೆ ಸುಲೋಚನೆಗೆ ರಾಮ-ರಾವಣರ ಯುದ್ಧವನ್ನು ನಿಲ್ಲಿಸಿ, ರಾಮನ ಪತ್ನಿ ಸೀತೆಗೆ ಒಳ್ಳೆಯದನ್ನು ಮಾಡಬೇಕೆಂಬ ಹಂಬಲ. ಪತಿ ಇಂದ್ರಜಿತುವಿಗೆ ಇದು ಒಪ್ಪಿಗೆಯಿಲ್ಲ. ಆತನು ಶಕ್ತಿವಶೀಕರಣಯಾಗವನ್ನು ಮಾಡಿ ಅದ್ಭುತ ಶಕ್ತಿಯನ್ನು ಗಳಿಸುತ್ತಾನೆ. ಯುದ್ಧದಲ್ಲಿ ಲಕ್ಷ್ಮಣ ಮೂರ್ಛೆಗೊಂಡಾಗ ಜಾಂಬವಂತನ ಸಲಹೆಯಂತೆ ಹನುಮಂತ ಹಿಮಾಲಯಕ್ಕೆ ತೆರಳಿ ವೃಷಭ ಮತ್ತು ಕೈಲಾಸ ಪರ್ವತಗಳಲ್ಲಿ ಥಳಥಳನೆ ಹೊಳೆಯುತ್ತಿದ್ದ ಮೃತ್ಯುಸಂಜೀವಿನಿ, ವಿಶಲ್ಯಕರಣೆ, ಸುವರ್ಣಕರಣೆ ಮತ್ತು ಸಂಧಾನಕರಣೆ ಎಂಬ ನಾಲ್ಕು ಮೂಲಿಕೆಗಳನ್ನು ತಂದ ಮೇಲೆ ಮೂರ್ಛೆ ತಿಳಿದೇಳುವಂತೆ ಮಾಡಲಾಗುತ್ತದೆ. ಸಹಸ್ರಾರು ವಾನರರನ್ನು ಬದುಕಿಸುತ್ತಾರೆ. ಇಂದ್ರಜಿತು ಮಾಯಾಸೀತೆಯನ್ನು ನಿರ್ಮಾಣ ಮಾಡಿ ರಾಮ-ಲಕ್ಷ್ಮಣರ ಎದುರಿಗೇ ಕೊಲ್ಲುತ್ತಾನೆ. ವಿಭೀಷಣನಿಂದ ಅದು 'ಮಾಯಾಸೀತೆ' ಎಂದು ತಿಳಿದಾಗ ಲಕ್ಷ್ಮಣ ರೋಷದಿಂದ ಯುದ್ಧಕ್ಕೆ ಹೊರಟು ಇಂದ್ರಜಿತುವನ್ನು ಕೊಲ್ಲುವ ಪ್ರಯತ್ನ ಮಾಡುತ್ತಾನೆ. ಅವನ ಅದ್ಭುತಶಕ್ತಿಯ ರಹಸ್ಯ ತಿಳಿದು ಅವನ ತಲೆಯು ನೆಲಕ್ಕೆ ಸೋಕದೆ ಸುಲೋಚನೆಯ ಜೋಗಸೆಯಲ್ಲಿ ಬೀಳುವಂತೆ ಮಾಡಿದಾಗ ಇಂದ್ರಜಿತು ಸಾಯುತ್ತಾನೆ. ಸುಲೋಚನೆ ಪತಿಯ ರುಂಡದ ಜೊತೆ ದೇಹವನ್ನು ಪಡೆದುಕೊಂಡು ಸಹಗಮನ ಮಾಡುತ್ತಾಳೆ. ಇದು ಕಥಾಭಾಗ. ಆದರೆ ಯಾವುದೇ ತಾಂತ್ರಿಕ ಸೌಲಭ್ಯವಿಲ್ಲದ ಆ ದಿನಗಳಲ್ಲಿ ಇಂದ್ರಜಿತುವಿನ ತಲೆಯನ್ನು ಸುಲೋಚನೆಯ ಜೋಗಸೆಯಲ್ಲಿ ಬೀಳುವ ಹಾಗೆ ಹೊಂದಿಸುವುದೇ ಕಷ್ಟವಾಯಿತೆಂದೂ ಆ ಕಾಲಕ್ಕೆ ಅದೇ ಬಹು ಪ್ರಯಾಸದಿಂದ ಹೊಂದಿಸಿದ ಟ್ರಿಕ್‌ಶಾಟ್ ಎಂದೂ ಹಿರಿಯರು ಹೇಳುತ್ತಾರೆ. ಈ ಮಾತನ್ನು ಆ ಚಿತ್ರದ ಕಲಾವಿದ ಎಸ್.ಕೆ.ಪದ್ಮಾದೇವಿ ಅವರು ಅನುಮೋದಿಸುತ್ತಾರೆ. ಪ್ರಯಾಸದಿಂದ, ಆದರೆ ಅತ್ಯಂತ ಶ್ರದ್ಧೆಯಿಂದ ತಯಾರಾದ 'ಸತಿ ಸುಲೋಚನಾ' ತೆರೆಯ ಮೇಲೆ ಬಂತು.

ಚಿತ್ರವನ್ನು ವೀಕ್ಷಿಸುತ್ತಿದ್ದ ಪ್ರೇಕ್ಷಕರು ಸುಲೋಚನೆಯ ದುಃಖದಲ್ಲಿ ತಾವೂ ಭಾಗಿಗಳಾಗಿ ಬಿಕ್ಕಿ ಬಿಕ್ಕಿ ಅಳುವುದನ್ನು ಕಂಡವರಿದ್ದಾರೆ. ಅಂಥ ಭಾವುಕತೆಯನ್ನು ನಿರ್ಮಿಸಿತ್ತು ಮೊದಲ ವಾಕ್ಚಿತ್ರ.

ಕನ್ನಡ ಚಿತ್ರರಂಗ ಪರಭಾಷಾ ನೆಲೆ, ಜನರನ್ನೇ ನಿರಂತರವಾಗಿ ಅವಲಂಬಿಸುತ್ತಾ ಬಂದಿತು. ಕನ್ನಡದ ಮೊದಲ ವಾಕ್ಚಿತ್ರ ನಿರ್ಮಿಸಲು ಮಾರ್ವಾಡಿಯೊಬ್ಬರು ಬಂದರೆ, ನಿರ್ದೇಶಿಸಿದವರು ತೆಲುಗಿನವರು, ತಯಾರಾದದ್ದೂ ಮಹಾರಾಷ್ಟ್ರದ ಕೊಲ್ಹಾಪುರದಲ್ಲಿ.

ಈ ಹಿಂದೆಯೇ ಹೇಳಿದ ಹಾಗೆ ರೇವುಪಟ್ಟಣಗಳಲ್ಲಿ ಸಹಜವಾಗಿಯೇ ಉದ್ಯಮಗಳು ಬೇರು ಬಿಡುತ್ತವೆ ಎಂಬ ಮಾತನ್ನೇ ಆಧಾರವಾಗಿಟ್ಟುಕೊಂಡರೂ ಎಷ್ಟು ಕಾಲ ಈ ಅವಲಂಬನೆ ಎಂಬ ಪ್ರಶ್ನೆಗೆ ಉತ್ತರ ಸುಲಭವಿಲ್ಲ. ಈ ಅವಲಂಬನೆಗೆ ಕನ್ನಡ ನಾಡಿನಲ್ಲಿ ಚಿತ್ರ ತಯಾರಿಕೆಗೆ ಸಾಕಷ್ಟು ಸೌಲಭ್ಯವಿಲ್ಲದಿದ್ದುದು ಮತ್ತು ಕಚ್ಚಾಫಿಲಂನಿಂದ ಹಿಡಿದು ರಿಕಾರ್ಡಿಂಗ್, ರೀ-ರಿಕಾರ್ಡಿಂಗ್, ಪ್ರೋಸೆಸಿಂಗ್, ಎಡಿಟಿಂಗ್, ಪ್ರಿಂಟ್‌ಗಳ ತಯಾರಿಕೆ ಇದೆಲ್ಲಕ್ಕೂ ಮದರಾಸನ್ನೇ ಅವಲಂಬಿಸಿದವು. ಆನಂತರ ಸೆನ್ಸಾರ್ ಸಹ ಅಲ್ಲೇ ಆಗಬೇಕಾಗಿತ್ತು. ಇಂಥ ಹಲವು ಸಮಸ್ಯೆಗಳು ತೆಲುಗು, ಮಲೆಯಾಳಂ ಚಿತ್ರೋದ್ಯಮಗಳಿಗೂ ಇದ್ದವು.

ಕನ್ನಡವಲ್ಲಂತೂ ರಂಗಭೂಮಿಗೆ ಸಿಕ್ಕ ಮನ್ನಣೆ ಚಿತ್ರರಂಗಕ್ಕೆ ಸಿಗಲಿಲ್ಲ. ಹೊರಗಿನವರು ಹಣ ತೊಡಗಿಸಿದರೂ ಚಿತ್ರರಂಗದಲ್ಲಿ ಪ್ರಗತಿಯಾಗಲಿಲ್ಲ. ಸ್ಥಳೀಯ ಪ್ರತಿಭೆಗಳಾಗಿ ತಂತ್ರಜ್ಞರು ಮೂಡಿಬರುವುದಕ್ಕೇ ಸಾಕಷ್ಟು ಕಾಲ ತೆಗೆದುಕೊಂಡಿತು. ಚಿತ್ರರಂಗ ಮೊದಲಿನಿಂದಲೂ ಅದಾವುದೋ ನಿಗೂಢತೆಯನ್ನು ಪಾಲಿಸಿಕೊಂಡು ಬಂತು. ತಂತ್ರದ ವಿಚಾರದಿಂದಾರಂಭಿಸಿ ವ್ಯವಹಾರವೇ ಮುಂತಾದ ಎಲ್ಲ ವಿಷಯಗಳಲ್ಲೂ ಅನ್ಯರಿಗೆ ತಿಳಿಯದ ಹಾಗೆ ನಿರ್ವಹಿಸುವ ಪ್ರವೃತ್ತಿಯೊಂದು ಬೆಳೆದು ಬಂದಿತ್ತು. ಪ್ರಚಾರ ಇತ್ಯಾದಿಗಳೆಲ್ಲ ತೀರಾ ಮೇಲ್‌ಸ್ತರದವು. ಇಂಥ ನಿಗೂಢತೆಯ ಅಗತ್ಯ ರಂಗಭೂಮಿಗೆ ಇಲ್ಲ. ಸಿನಿಮಾದಲ್ಲಿ ಕೂಡಾ ಈ ಪ್ರಮಾಣದ ನಿಗೂಢತೆ ಬೇಕಾಗಿರಲಿಲ್ಲ. ಆದರೆ ಪ್ರಾರಂಭಕ್ಕೆ ಚಮತ್ಕಾರಗಳ ವಿವರ ತಿಳಿದರೆ ಜನರ ಕುತೂಹಲ ಕಡಿಮೆ ಆಗುತ್ತದೆಂಬ ಆತಂಕವಿರಬಹುದು. ಈಗ ಅವೆಲ್ಲ ರಹಸ್ಯವಾಗಿ ಉಳಿದಿಲ್ಲ. ಆದರೆ ಚಿತ್ರೀಕರಣದ ಒಳಗಿನ ಎಷ್ಟೋ ಅಂಶಗಳು ಹೊರಗೆ ಬರುತ್ತಿಲ್ಲ. ಮುಖ್ಯವಾಗಿ ಇದೊಂದು ಹಲವು ಕಲೆಗಳು ಮತ್ತು ತಂತ್ರ ಸೇರಿಕೊಂಡ ಸಂಕೀರ್ಣ ಕಲೆ. ಮೊದ ಮೊದಲ ಚಿತ್ರಗಳಲ್ಲಿ ಕೇವಲ ಕುತೂಹಲ, ಹೊಸತನವನ್ನೇ ಬಳಸಿಕೊಳ್ಳುವ ಸಡಗರದಲ್ಲಿ ಹೊರಗಿನವರನ್ನು ತೊಡಗಿಸಿಕೊಂಡಿರಬಹುದು. ಆದರೆ ಚಲನಚಿತ್ರ ತಯಾರಿಸಿದವನನ್ನೇ ಕೈಬಿಟ್ಟು ಹೋಗಿಬಿಡುತ್ತದೆ. ಚಿತ್ರ ತಯಾರಾದ ಮೇಲೆ ವಿತರಕ, ಪ್ರದರ್ಶಕ ಇತ್ಯಾದಿ ಹಲವು ಹಂತಗಳಲ್ಲಿ ಸಂಚರಿಸುತ್ತದೆ. ವಾಣಿಜ್ಯ ಕಾರಣಗಳಿಗಾಗಿ ನಿರ್ಮಾಪಕನ ಕೈ ಬದಲಾಯಿಸಿ ಅದವನ ಕೂಸು ಎಂಬ ಸಂಗತಿಯೇ ಮರೆತು ಬಿಡುವ ಹಾಗೆ ಯಾರ್‍ಯಾರ ಉಡಿಯಲ್ಲೋ ಆಡುತ್ತದೆ. ಹಣ ಹಾಕಿದವನಿಗೆ ಹಿಂತಿರುಗುವ ಯಾವ ಭರವಸೆಯೂ ಇಲ್ಲ. ಒಂದು ಜೂಜಿನ ಹಾಗೆ ಬಂದರುಂಟು, ಇಲ್ಲದಿದ್ದರೆ ಇಲ್ಲ. ಇಂಥದೊಂದು ವ್ಯವಸ್ಥೆಯಲ್ಲಿ ಅದನ್ನೇ ನೆಚ್ಚಿಕೊಂಡು ಶ್ರಮಿಸುವುದು ಸುಲಭವಲ್ಲ. ಕನ್ನಡ ಚಿತ್ರಗಳು ಬಹುಕಾಲ ಚಿತ್ರಮಂದಿರಗಳಿಲ್ಲದೆ ಪರದಾಡಿದವು. ಇಂಥ ಅನೇಕ ಸಮಸ್ಯೆಗಳು ಸಾರ್ವಕಾಲಿಕವೋ ಎನ್ನುವಂತೆ ಬೆಳೆದು ಬರುತ್ತಿವೆ. ಇಂಥ ಕಾರಣಗಳಿಗಾಗೇ ಹೊರಗಿನವರು ಹಣ ತೊಡಗಿಸಿದಾಗಲೂ ಚಿತ್ರರಂಗ ಪ್ರಗತಿ ಕಾಣಲಿಲ್ಲ, ಅಥವಾ ಹಾಗೆ ಹಣ ತೊಡಗಿಸಿದ ಎಷ್ಟು ಜನ ಪುನಃ ಚಿತ್ರ ನಿರ್ಮಿಸಿದರು, ಏಕೆ ಅಂಥ ನಿರಾಸಕ್ತಿ ಎಂಬುದಕ್ಕೆ ಚಿತ್ರರಂಗದ ಆರ್ಥಿಕ ವ್ಯವಸ್ಥೆಯೂ ಮುಖ್ಯ ಕಾರಣ. ರಂಗಭೂಮಿಯಲ್ಲಿ ಮಾಲೀಕನ ಕೈಜಾರಿ ಹೋಗಿಬಿಡುವ ಸಂಭವಗಳಿಲ್ಲ. ಅಲ್ಲಿಯ ಕಷ್ಟ-ನಷ್ಟಗಳ ರೀತಿಯೇ ಬೇರೆ. ಹೀಗಾಗಿ ನಾಟಕರಂಗದಲ್ಲಿ ಆದ ಪ್ರಗತಿ ಚಿತ್ರರಂಗದಲ್ಲಿ ಏಕೆ ಆಗಲಿಲ್ಲ, ಅದೂ ಹೊರಗಿನವರು ಬಂಡವಾಳ ಹೂಡಿದಾಗ ಎಂಬುದರ ವಿಶ್ಲೇಷಣೆ ಸುಲಭದಲ್ಲಿ ನಿಲುಕುವಂಥದ್ದಲ್ಲ. ಎಲ್ಲದರ ನಡುವೆ ಕುಪ್ಪಳಿಸಿಯೋ, ತೆವಳಿಯೋ ಜೀವಂತವಾಗಿರುವುದು, ತನ್ನದೇ ಆದ ರೀತಿಯಲ್ಲಿ ತಾಂತ್ರಿಕತೆಯನ್ನು ಅಳವಡಿಸಿಕೊಳ್ಳುತ್ತ ಅನ್ಯಭಾಷೀಯರ ಪೈಪೋಟಿಯನ್ನು ಎದುರಿಸುತ್ತಾ ಬಂದದ್ದು ತಳ್ಳಿಹಾಕುವಂಥ ಸಂಗತಿಯಲ್ಲ.



(ಚಿತ್ರ ೬) ನಿರ್ದೇಶಕ ವಿ.ವೈ.ಅಲ್ಟೇಕರ್

‘ಸತಿ ಸುಲೋಚನಾ’ ತೆರೆಕಂಡ ಕೆಲವೇ ದಿನಗಳ ನಂತರ ‘ಭಕ್ತಧ್ರುವ’ ಬಿಡುಗಡೆಯಾಯಿತು. ‘ಭಕ್ತಧ್ರುವ’ ಅಥವಾ ‘ಧ್ರುವಕುಮಾರ’ ಎಂಬ ಹೆಸರಿನ ಚಿತ್ರ. ಮದರಾಸಿನ ಡಾ.ಯು.ಆರ್.ನಾರಾಯಣರಾವ್ ಮತ್ತು ಯು.ಎಲ್.ವ್ಯಾಸರಾವ್ ಅವರು ಒಂದು ಕನ್ನಡ ಚಿತ್ರ ತಯಾರಿಸುವ ಯೋಜನೆ ಹಾಕಿದರು. ಆಗ ಕನ್ನಡ ನಾಡಿನಲ್ಲಿ ಮಾತ್ರವಲ್ಲ, ನೆರೆಯ ತಮಿಳುನಾಡಿನಲ್ಲಿ ತಮ್ಮ ರಂಗಭೂಮಿಯ ಯಶಸ್ಸನ್ನು ಸಾಧಿಸಿ ತೋರಿಸಿದ್ದ ಎ.ವಿ.ವರದಾಚಾರ್ಯರು ನಿಧನರಾಗಿ ಕೆಲವೇ ಸಮಯವಾಗಿತ್ತು. ವರದಾಚಾರ್ಯರ ಸೋದರಸೊಸೆ ಟಿ.ಕನಕಲಕ್ಷ್ಮಮ್ಮ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪದವಿ ಪಡೆದ ಮೊದಲ ಮಹಿಳೆ. ಎಡಿನ್‌ಬರೋ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಭಾಷಾಧ್ಯಯನ ಮಾಡಿ ಸ್ನಾತಕೋತ್ತರಪದವಿ ಪಡೆದು ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದರು. ಆಕೆಗೆ ವರದಾಚಾರ್ಯರ ನೆನಪಿಗಾಗಿ ಏನಾದರೊಂದು ಸ್ಮಾರಕ ನಿರ್ಮಿಸುವ ಅಪೇಕ್ಷೆ. ಆಚಾರ್ಯರ ಶಿಷ್ಯರು, ಮಿತ್ರರು ಇದಕ್ಕಾಗಿ ನಿಧಿ ಸಂಗ್ರಹಣೆ ಮಾಡಬೇಕೆಂದು ಆಲೋಚಿಸಿದರು. ಆ ಹಣದಿಂದ ಒಂದು ಚಿತ್ರ ತಯಾರಿಸಿ ಅದರಿಂದ ಬರುವ ಹಣವನ್ನು ಈ ನಿಧಿಗೆ ಕೊಡಬೇಕೆಂಬ ಉದ್ದೇಶವನ್ನು ಹೊಂದಿದ್ದರು. ಆ ಹೊತ್ತಿನಲ್ಲಿ ಮದರಾಸಿನ ನಾರಾಯಣರಾವ್ ಮತ್ತು ವ್ಯಾಸರಾವ್ ಅವರ ಪ್ರತಿನಿಧಿ ಶ್ರೀರಾಮ ಮೋಟಾರ್‍ಸ್‌ನ ಪಿ.ಶ್ರೀನಿವಾಸರಾಯರು ಕನಕಲಕ್ಷ್ಮಮ್ಮನವರನ್ನು ಭೇಟಿಯಾಗಿ ಚಲನಚಿತ್ರನಿರ್ಮಾಣದ ಯೋಜನೆಯನ್ನು ವಿವರಿಸಿ ಈ ಚಿತ್ರದಿಂದ ಬರುವ ಗಳಿಕೆಯನ್ನು ಸ್ಮಾರಕ ನಿಧಿಗೆ ಸೇರಿಸಲು ಅಭ್ಯಂತರವಿಲ್ಲವೆಂದು ಹೇಳಿದರು. ಕನಕಲಕ್ಷ್ಮಮ್ಮನವರಿಗೆ ಇದು ಒಪ್ಪಿಗೆಯಾಯಿತು. ಹೀಗೆ ಜಯವಾಣಿ ಟಾಕೀಸ್ ಲಾಂಛನದಲ್ಲಿ ಧ್ರುವಕುಮಾರನ ಚರಿತ್ರೆಯನ್ನು ಚಿತ್ರಿಸಲು ನಿರ್ಧರಿಸಲಾಯಿತು.

ಧ್ರುವನ ಕಥೆ ಸಹಜವಾಗಿ ಎಲ್ಲರಿಗೂ ಪರಿಚಿತವಾದದ್ದು. ಹರಿಭಕ್ತಿ ಮತ್ತು ಬಾಲಕನೇ ಪ್ರಧಾನವಾದದ್ದು ಇತ್ಯಾದಿ ಅಂಶಗಳು ಜನರಿಗೂ ಆಪ್ತವಾಗುವಂಥವು.

ಧ್ರುವಕುಮಾರನ ಪಾತ್ರಕ್ಕೆ ಆಯ್ಕೆಯಾದ ಬಾಲಕ ಮಾಸ್ಟರ್ ಮುತ್ತು ವರದಾಚಾರ್ಯರ ಮೊಮ್ಮಗ. ವರದಾಚಾರ್ಯರ ಇನ್ನೊಬ್ಬ ಮೊಮ್ಮಗ ಆರು ವರ್ಷದ ತಾರಾನಾಥ್ ಮತ್ತು ಹಾರ್ಮೋನಿಯಂ ಮಾಸ್ಟರ್ ಶೇಷಗಿರಿರಾಯರ ಮಗ



(ಚಿತ್ರ ೫) ‘ಭಕ್ತಧ್ರುವ’ ಚಿತ್ರದಲ್ಲಿ ಜಿ.ನಾಗೇಶರಾಯರು ಮತ್ತು ಟಿ.ದ್ವಾರಕನಾಥ್



(ಚಿತ್ರ ೭) 'ಭಕ್ತಧ್ರುವ' ಚಿತ್ರದಲ್ಲಿ ಸುನೀತಿಯಾಗಿ ಟಿ.ಕನಕಲಕ್ಷ್ಮಮ್ಮ ಮತ್ತು ಧ್ರುವನಾಗಿ ಮಾ।ಮುತ್ತು

ನಾರಾಯಣ ಇವರುಗಳು ಧ್ರುವಕುಮಾರನ ಸಹಪಾಠಿಗಳಾಗಿ ಆಯ್ಕೆಯಾದವರು. ಟಿ.ಕನಕಲಕ್ಷ್ಮಮ್ಮ ಸುನೀತಿಯಾಗಿ, ಅವರ ಬಂಧುಗಳಾದ ಲಕ್ಷ್ಮಮ್ಮ ಸುರುಚಿಯಾಗಿ ಮತ್ತು ಮುಂದೆ ಸೌಂಡ್ ಇಂಜಿನಿಯರ್ ಹಾಗೂ ಚಲನಚಿತ್ರ ನಿರ್ದೇಶಕ, ನಿರ್ಮಾಪಕರಾಗಿ ಹೆಸರು ಗಳಿಸಿದ ಟಿ.ದ್ವಾರಕಾನಾಥ್ ನಾರದನಾಗಿ ಪಾತ್ರ ನಿರ್ವಹಿಸಲು ಆಯ್ಕೆಯಾದವರು. ವರದಾಚಾರ್ಯರ ಶಿಷ್ಯರಾದ ಜಿ.ನಾಗೇಶರಾಯರು ಉತ್ತಾನಪಾದರಾಯನಾಗಿ, ಮರಿರಾವ್ ಅವರು ಕಪಿಂಜಲನಾಗಿ ಪಾತ್ರ ವಹಿಸಿದರು. ಹಾರ್ಮೋನಿಯಂ ಶೇಷಗಿರಿರಾಯರು ಸಂಗೀತ ನಿರ್ದೇಶಕರಾದರು. ಆರ್ಕೆಸ್ಟ್ರಾ ಇರಲಿಲ್ಲ. ಲೆಗ್‌ಹಾರ್ಮೋನಿಯಂ ನುಡಿಸಿದರು. ಇವರಿಗೆ ತಬಲಾ ಸಾಥಿಯಾದವರು ಕಿಟ್ಟಣ್ಣ. ಟಿ.ಸುನಂದಮ್ಮ, ದೇವುಡು ನರಸಿಂಹಶಾಸ್ತ್ರಿ, ಸೀತಾರಾಂ, ಹೆಚ್.ಎಸ್.ಕೃಷ್ಣಸ್ವಾಮಿ ಇವರೇ ಮೊದಲಾದ ಪ್ರಮುಖರು 'ಧ್ರುವಕುಮಾರ' ಚಿತ್ರಣ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ವೃತ್ತಿಪರ ಹಾಗೂ ಹವ್ಯಾಸಿ ರಂಗಭೂಮಿಯಲ್ಲಿ ಆಸಕ್ತರಾದ ಸುಸಂಸ್ಕೃತರ ಒಂದು ಅಪೂರ್ವ ಸಮಾಗಮ.

ಚಿತ್ರದ ನಿರ್ದೇಶಕರಾದ ಪಾರ್ಶ್ವನಾಥ ಅಲ್ಟೇಕರ್ ಚಿತ್ರರಂಗ ಹಾಗೂ ರಂಗಭೂಮಿಯಲ್ಲಿ ದುಡಿಯುತ್ತಿದ್ದವರು, ಕನ್ನಡದ ನಂಟು ಇದ್ದ ವೃತ್ತಿಪರ ವ್ಯಕ್ತಿ.

ಧ್ರುವಕುಮಾರನ ಪಾತ್ರ ವಹಿಸಿದ ಮಾಸ್ಟರ್ ಮುತ್ತು ಮುಂದೆ ಮೈಸೂರಿನ ಕೇಂದ್ರ ಆಹಾರ ವಿಜ್ಞಾನ ಸಂಸ್ಥೆಯಲ್ಲಿ ಸಹನಿರ್ದೇಶಕರಾಗಿದರು. 'ಧ್ರುವಕುಮಾರ' ಚಿತ್ರದ ಬಗ್ಗೆ ಅವರು ಹೀಗೆನ್ನುತ್ತಾರೆ : "ಹಾರ್ಮೋನಿಯಂ ಮಾಸ್ಟರ್ ಶೇಷಗಿರಿರಾಯರ ಬೆಂಗಳೂರಿನ ಮನೆಯಲ್ಲಿ ದಿನವೂ ಶಿಸ್ತುಬದ್ಧವಾಗಿ ತಾಲೀಮು ನಡೆಯುತ್ತಿತ್ತು. ಮೂರು ತಿಂಗಳ ಸಿದ್ಧತೆ ಆದ ಮೇಲೆ ನಾವೆಲ್ಲ ಮುಂಬಯಿಗೆ ತೆರಳಿದೆವು. ಅಜಂತಾ ಸಿನಿಟೋನ್ ('ವಸಂತಸೇನಾ' ನಿರ್ಮಿಸಿದ ಭವನಾನಿ ಅವರ ಸ್ಟುಡಿಯೋ)ನಲ್ಲಿ ಚಿತ್ರಣ ಕಾರ್ಯ ಆರಂಭವಾಯಿತು. ಚಿತ್ರ ಸಿದ್ಧವಾಗಲು ಮೂರು ತಿಂಗಳು ಹಿಡಿಯಿತು. ದಾದರ್‌ನಲ್ಲಿ ನಮ್ಮ ಬಿಡಾರ.

"ದೃಶ್ಯಗಳ ಚಿತ್ರಣ, ಸಂಭಾಷಣೆಗಳು ಹಾಗೂ ಹಾಡುಗಳ ಧ್ವನಿಮುದ್ರಣ ಒಟ್ಟಿಗೇ ನಡೆಯುತ್ತಿತ್ತು. ಮೈಕನ್ನು ಹೂ ಕುಂಡಗಳ ಮರೆಯಲ್ಲಿ ಹುದುಗಿಸಿ ಇಟ್ಟಿರುತ್ತಿದ್ದರು. ಅದರತ್ತ ನೋಡುತ್ತಲೇ ಮಾತನಾಡಬೇಕಾಗುತ್ತಿತ್ತು, ಗೀತೆಗಳನ್ನೂ ಹಾಡಬೇಕಾಗುತ್ತಿತ್ತು.

"ಅಲ್ಟೇಕರ್ ಅವರು ಶಿಸ್ತಿನ ವ್ಯಕ್ತಿ. ನಾಗೇಶರಾಯರು ಒಮ್ಮೆ 'ದೇವಿ ಬಾ...' ಎಂದು ಆರಂಭವಾಗುವ ಸಂಭಾಷಣೆಯನ್ನು ಸರಿಯಾಗಿ ಹೇಳಲಿಲ್ಲ. ಅದು ತೃಪ್ತಿಕರವಾಗಿ ಮೂಡಿಬರಲು ೧೦-೧೫ ಬಾರಿ ಅವರಿಂದ ಹೇಳಿಸಿದರು ನಿರ್ದೇಶಕರು.

"ಅಲ್ಟೇಕರ್ ಅವರ ಕನ್ನಡವೂ ನಮಗೆ ತಮಾಷೆಯಾಗಿ ಕಾಣುತ್ತಿತ್ತು. ರಾಜ್ಯಾಭಿಷೇಕದ ಚಿತ್ರೀಕರಣ ಸಮಯದಲ್ಲಿ ಬಾಲಸಹಜ ಕುತೂಹಲದಿಂದ ಅತ್ತಿತ್ತ ನೋಡುತ್ತಿದ್ದೆ. ಆಗ ಅವರು 'ಮುತ್ತಣ್ಣ, ಸ್ವಲ್ಪ ದಿನ ಹಾಗೇ ಕುಳಿತಿರು, ಅಲುಗಾಡಬೇಡ...' ಎಂದು ಹೇಳುತ್ತಿದ್ದುದ್ದು ಹಾಗೂ ಸ್ವಲ್ಪ ನಗುಮುಖವನ್ನು ತೋರಿಸು ಎಂದು ಹೇಳಲು 'ನೆಗಾಡು, ಮುತ್ತಣ್ಣ ನೆಗಾಡು' ಎಂದು ಹೇಳುತ್ತಿದುದನ್ನು ಕೇಳಲು ಬಹು ಮೋಜಾಗಿರುತ್ತಿತ್ತು" ಎಂದು ನೆನಪಿಸಿಕೊಂಡು ಈಗಲೂ ನಗುತ್ತಾರೆ ಮುತ್ತು.

ತಪಸ್ಸಿಗೆ ಕುಳಿತ ಧ್ರುವಕುಮಾರನ ಸುತ್ತ ಹುಲಿ ಪ್ರದಕ್ಷಿಣೆ ಹಾಕಿ, ಮುಖದ ಬಳಿಗೆ ತನ್ನ ಮೂತಿಯನ್ನು ಚಾಚುವ ದೃಶ್ಯ ಪ್ರೇಕ್ಷಕರನ್ನು ಭಯಭೀತಗೊಳಿಸಿದರೂ ಅದರ ಚಿತ್ರಣ ಬಹಳ ಸರಳವಾಗಿ ನಡೆಯಿತು ಎನ್ನುತ್ತಾರೆ ಮುತ್ತು.

"ನಾನು ತಪಸ್ಸಿಗೆ ಕುಳಿತಂತೆ ಕಾಣುವ ೫-೬ ಪ್ರತಿಮೆಗಳನ್ನು ನಿರ್ದೇಶಕರು ಸಿದ್ಧಪಡಿಸಿದರು. ಪ್ರಾಣಿ ಸಂಗ್ರಹಾಲಯದ ಬೇಲಿ ಹಾಕಿದ ಭದ್ರವಾದ ಆವರಣದಲ್ಲಿ ಪ್ರತಿಮೆಯನ್ನಿಟ್ಟರು. ಹುಲಿಯನ್ನು ಒಳಗೆ ಬಿಟ್ಟಾಗ ಮೊದಲ ಬಾರಿಗೆ ಹುಲಿ ಆ ಪ್ರತಿಮೆಯನ್ನು ಕಚ್ಚಿ ನಾಶ ಮಾಡಿತು. ಎರಡನೆಯ ಸಾರಿಯೂ ಹುಲಿಯ ಕೋಪ ಶಮನವಾಗಲಿಲ್ಲ. ಮೂರನೆ ಬಾರಿ ಹುಲಿ ಪ್ರತಿಮೆಗೆ ಒಂದು ಸುತ್ತು ಹಾಕಿತು. ಪ್ರತಿಮೆಯ ಮುಖದವರೆಗೆ ತನ್ನ ಮೂತಿ ಚಾಚಿತು. ನಿರ್ದೇಶಕರಿಗೆ ಅದ್ಭುತವಾದ ಶಾಟ್ ಸಿಕ್ಕಿತು. ಶಿಕಾರಿಗಳ, ಶ್ರೀಮಂತರ ಮನೆಗಳಲ್ಲಿ ಸಾಮಾನ್ಯವಾಗಿ ಕಾಣಬರುವ ಹುಲಿಯ ಪ್ರತಿಕೃತಿಯೊಂದನ್ನು ತಂದು ಅದರ ಮೂತಿಯನ್ನು ನನ್ನ ಮುಖವನ್ನು ಒಟ್ಟಿಗೆ

ಚಿತ್ರಿಸಿದರು. ಆ ಚಿತ್ರಿಕೆಗೆ ಘರ್ಜನೆಯ ಶಬ್ದಜೋಡಣೆಯಿಂದ ದೃಶ್ಯದಲ್ಲಿ ನೈಜತೆ ಮೂಡಿ ಬರುವಂತೆ ಮಾಡಿದರು. ದೃಶ್ಯ ನಿರೀಕ್ಷಿತ ಪರಿಣಾಮ ಬೀರಿತು. ಆದರೆ ನನಗೆ ನಿರ್ದೇಶಕರ ಕಟ್ಟಪ್ಪಣೆ: 'ಚಿತ್ರೀಕರಣದ ರಹಸ್ಯವನ್ನು ಬಯಲು ಮಾಡಬಾರದು' ಎಂದು. ಅವರು ಹೇಳಿದಂತೆಯೇ ಮಾಡಿದೆ. ಚಿತ್ರ ನೋಡಿದ ಸಹಪಾಠಿಗಳು, ಶಿಕ್ಷಕರು, ಬಂಧುಗಳು 'ಹುಲಿ ನಿನ್ನ ಹತ್ತಿರ ಬಂದಾಗ ಹೆದರಿಕೆ ಆಗಲಿಲ್ಲವಾ, ಮುತ್ತಣ್ಣ' ಎಂದು ಕೇಳುವವರೇ. ಆದರೆ ನಾನು ಮೌನ. ಎಲ್ಲರೂ ನನ್ನ ಧೈರ್ಯವನ್ನು ಮೆಚ್ಚಿದರು, ಪ್ರಶಂಸಿಸಿದರು.''



(ಚಿತ್ರ ೮) 'ಭಕ್ತ ಧ್ರುವ' ಚಿತ್ರದಲ್ಲಿ ಮರಿರಾವ್

'ಧ್ರುವಕುಮಾರ'ದ ಆರಂಭವೇ ಹಾಡಿನ ಮೂಲಕ. ಶೀರ್ಷಿಕೆ ಜೊತೆಗೆ ನೇಪಥ್ಯದಲ್ಲಿನ ಶ್ರಾವ್ಯವಾದ ಗೀತೆ:

ಜಯ ಜಯವಾಗಲಿ ಶ್ರೀ ಜಯವಾಣಿ
ರಮೆಯುಮೆವಾಣಿಯು ಒಸಗೆಯ ತರಲಿ
ಶಾಮಸುಂದರ ಸುಕುಮಾರ ದಯೆಯಿಂ
ಭೂಮಿಯೊಳೆಲ್ಲಾ ಮೆರೆದು ವಿರಾಜಿಸು.

ಮುತ್ತು ಅವರು ಹೇಳುವಂತೆ ಚಿತ್ರದಲ್ಲಿ ಸುಮಾರು ಹದಿನೈದು ಹಾಡುಗಳು ಇದ್ದವು. ''ನಾನು ಮೂರು ಹಾಡು ಹಾಡಿದೆ. ಸುನೀತಿಗೆ ಧ್ರುವಕುಮಾರ ಕೇಳುವ 'ನಾರಾಯಣನ ತೋರಿಸು ಮಾತೆ...', ನಾರಾಯಣನನ್ನು ಧ್ರುವಕುಮಾರ ಪ್ರಾರ್ಥಿಸುವ 'ನಿನ್ನ ಸಹಾಯವ ನೀಡು, ಬೇಡುತಿಹೆನು...' ಮತ್ತು 'ದೇವಾ ಮರೆಯಾದೆಯಾ.....' ಈ ಹಾಡುಗಳನ್ನು ಮುತ್ತು ಅವರು ಇನ್ನೂ ನೆನಪಿಸಿಕೊಳ್ಳುತ್ತಾರೆ. 'ಧ್ರುವಕುಮಾರ'ದ ಎಲ್ಲ ಪಾತ್ರಗಳ ಹಾಡುಗಳೂ ಕಂಠಪಾಠವಾಗಿವೆ. ಆಗಾಗ ಮನೆಯಲ್ಲಿ ರಾಗಬದ್ಧವಾಗಿ ಹಾಡುತ್ತಾರೆ.

ಮರಿರಾಯರು (ಕಪಿಂಜಲ) ಮತ್ತು ಮುತ್ತು (ಧ್ರುವ) ಹಾಡುವ ಒಂದು ಸ್ವಾರಸ್ಯವಾದ ಯುಗಳಗೀತೆ ಹೀಗಿತ್ತು :

ಕಪಿಂಜಲ : ಆಡಿರೋ ಆಡುವಿರಾ ಬೇಡಿದುದ ನೀಡುವಿರಾ ಸೈರೆಭಲ
ಧ್ರುವ : ಬೇಡಿಹವನದಕೆ ಆಡುವೆವೆಂತೈ ನೀಡುವೆವೈ
ಕಪಿಂಜಲ : ಹೂರಣ ಕಡುಬು, ಪೂರಿ ಚಕ್ಕುಲಿ
ಲಾಡು ಹಲ್ವಾ ಮಿಠಾಯ್
ಕಾರದ ದೋಸೈ, ತುಪ್ಪದ ದೋಸೈ
ಮಸಾಲೆ ದೋಸೆ, ಅಂಬೋಡೆ
ಫದರಾ ಫೇಣಿ, ಮೋತಿಚೂರ್
ಒಭಟ್ ಉಪ್ಪೇರಿಗಳ ತಾ ॥
ಧ್ರುವ : ತೋರಿಸೈ ಭಲಾರೆಪೂರ ಧೀರನೀಗ ಆಡಿಪುದು
ಕಪಿಂಜಲ : ಸೈಭಲ ಬೇಡುವೆನಾ
ಧ್ರುವ : ಧೀರ ನೀನಿದಕೆ ಸರಿ
ಕಪಿಂಜಲ : ಬೇಡಿದುದು ಎನ್ನ ಪರಿ
ಧ್ರುವ : ಧೀರ ನಿನಗದು ಸರಿ

ಜಿ.ನಾಗೇಶರಾಯರು, ಕನಕಲಕ್ಷ್ಮಮ್ಮ, ದ್ವಾರಕಾನಾಥ್ ಇವರೆಲ್ಲರೂ ಚಿತ್ರದಲ್ಲಿ ಹಾಡಿದ್ದಾರೆ.

'ಧ್ರುವಕುಮಾರ'ನ ಚಿತ್ರಕ್ಕೆ ಸಂಬಂಧಪಟ್ಟಂತೆ ಅಭ್ಯಾಸ ಹಾಗೂ ಚಿತ್ರೀಕರಣಕ್ಕೆ ಒಟ್ಟು ಆರು ತಿಂಗಳು ಬೇಕಾದವು. ಆರು ತಿಂಗಳ ಕಾಲ ಶಾಲೆಗೆ ಹೋಗಲಾಗಲಿಲ್ಲ. ಮುತ್ತು ಆಗ ಓದುತ್ತಿದ್ದುದು ಬೆಂಗಳೂರಿನ ವಿಶ್ವೇಶ್ವರಪುರದ ಪ್ರೈಮರಿ ಶಾಲೆಯಲ್ಲಿ. ಮುಖ್ಯೋಪಾಧ್ಯಾಯರು ಮುತ್ತುವನ್ನು ತಮ್ಮ ಆಫೀಸಿಗೆ ಕರೆಸಿ ''ನೀನು ಫೇಲ್ ಆಗಿದ್ದೀಯಾ, ಏನು ಮಾಡುತ್ತೀ ?'' ಎಂದು ಕೇಳಿದರಂತೆ. ಮೂರನೆ ತರಗತಿ ಬಾಲಕನಿಗೆ ಹೇಳಲು ತೋಚಲಿಲ್ಲ. ಅವನಿಗೆ ವಿಶೇಷ ಪರೀಕ್ಷೆ ಮಾಡುವುದಾಗಿ ಹೇಳಿ ಹೆಡ್ಮಾಸ್ಟರು ಕೇಳಿದ ಪ್ರಶ್ನೆ : ''ಎಲ್ಲಿ, ಧ್ರುವಕುಮಾರನ ಹಾಡುಗಳನ್ನು ಹಾಡು.'' ಅಧ್ಯಾಪಕರ ಅಪೇಕ್ಷೆಯಂತೆ ಚಲನಚಿತ್ರದ ಮೂರು ಹಾಡುಗಳನ್ನು ಹಾಡಿದ ಮುತ್ತು ಪರೀಕ್ಷೆಯಲ್ಲಿ ಪಾಸ್, ಮುಂದಿನ ತರಗತಿಗೆ ಪ್ರಮೋಷನ್. 'ಧ್ರುವಕುಮಾರ'ದ ಹಾಡುಗಳ ಜನಪ್ರಿಯತೆಗೆ ಇದೊಂದು ನಿದರ್ಶನ ಎನ್ನುತ್ತಾರೆ ಮುತ್ತು.

ನಿರ್ಮಾಪಕರು ಪಾತ್ರಧಾರಿಗಳಿಗೆಲ್ಲಾ ಸಂಭಾವನೆ ನೀಡಿದರು. ಕನ್ನಡದ ಮೊಟ್ಟಮೊದಲನೆಯ ನಾಯಕ ಪಾತ್ರಧಾರಿ ಬಾಲನಟನಿಗೆ ದೊರೆತ ಸಂಭಾವನೆ ರೂ.೫೦೦/- ಆ ಕಾಲಕ್ಕೆ ಅದೊಂದು ದೊಡ್ಡ ನಿಧಿ. ಟಿ.ಕನಕಲಕ್ಷ್ಮಮ್ಮ ನಿರ್ಮಾಪಕರು ನೀಡಿದ ವೈಯಕ್ತಿಕ ಸಂಭಾವನೆ ನಿರಾಕರಿಸಿದರು. ವರದಾಚಾರ್ ಮೆಮೋರಿಯಲ್‌ಗಾಗಿ ಚಿತ್ರದಿಂದ ರಾಯಧನ ಅಪೇಕ್ಷಿಸಿದರು. ನಿರ್ಮಾಪಕರು ನಿರಾಕರಿಸಿದಾಗ ವಿವಾದ ಕೋರ್ಟಿಗೆ ಹೋಯಿತು. ೧೯೩೫ರಲ್ಲಿ ಕನಕಲಕ್ಷ್ಮಮ್ಮನವರ ಅಕಾಲಿಕ ಮರಣದ ಕಾರಣ ವಿವಾದಕ್ಕೆ ತೆರೆ ಬಿತ್ತು. ಇದು ಕನ್ನಡ ಚಲನಚಿತ್ರಕ್ಕೆ ಸಂಬಂಧಪಟ್ಟ ಮೊದಲ ವಿವಾದವೆನ್ನಬಹುದು.

'ಭಕ್ತ ಧ್ರುವ' ಅಥವಾ 'ಧ್ರುವಕುಮಾರ' ಚಿತ್ರ 'ಸತಿ ಸುಲೋಚನಾ'ಕ್ಕೆ ಮೊದಲು ಸಿದ್ಧವಾಯಿತು. ಆದರೆ ಅದು ತೆರೆಯ ಮೇಲೆ ರಾರಾಜಿಸಿದ ಮೊದಲ ಚಿತ್ರವಾಗಲಿಲ್ಲ. ಸೆಲೆಕ್ಟ್ ಪಿಕ್ಚರ್ಸ್ ಸರ್ಕ್ಯೂಟ್‌ನವರು ಚಿತ್ರದ ವಿತರಕರು. ಬೆಂಗಳೂರಿನ ಸೆಲೆಕ್ಟ್ ಚಿತ್ರಮಂದಿರದಲ್ಲಿ 'ಧ್ರುವಕುಮಾರ' ತೆರೆಕಂಡಿತು. ಅದು ಸುಮಾರು ಮೂರು ತಿಂಗಳ ಕಾಲ ನಡೆಯಿತೆಂದು ಮುತ್ತು ಹೇಳುತ್ತಾರೆ. ಚಿತ್ರದ ಪ್ರಥಮ ಪ್ರದರ್ಶನ ಕಾಲದಲ್ಲಿ ಸೆಲೆಕ್ಟ್ ಪಿಕ್ಚರ್ಸ್‌ನ ಅಂಬಾಲಾಲ್ ಪಟೇಲರು ಕಲಾವಿದರಿಗೆ ಹಾರ ಹಾಕಿ ಸ್ಮರಣಿಕೆಗಳನ್ನು ಕೊಟ್ಟು ಗೌರವಿಸಿದರು. ಬಾಲನಟ ಮುತ್ತುವಿಗಾಗಿ ಚಿನ್ನದ ಸರವಿದ್ದ ಮೆಡಲನ್ನು ನೀಡಿ ಆಶೀರ್ವದಿಸಿದರು. ಆ ಚಿನ್ನದ ನೆನಪಿನ ಕಾಣಿಕೆ ಮುತ್ತು ಅವರ ಸಂಗ್ರಹದಲ್ಲಿ ಇನ್ನೂ ಇದೆ.

ಮುಂಬೈನಲ್ಲಿ ಚಿತ್ರಣ ಮುಗಿದ ಮೇಲೆ 'ಧ್ರುವಕುಮಾರ'ದ ಸಂಭಾಷಣೆ ಮತ್ತು ಹಾಡುಗಳ ಧ್ವನಿಮುದ್ರಿಕೆಯನ್ನು ಕೊಲಂಬಿಯಾ ಸಂಸ್ಥೆ ಸಿದ್ಧಪಡಿಸಿತು. ಆ ಧ್ವನಿಮುದ್ರಿಕೆಗಳ ಚಿತ್ರ ನಾಟಕವೂ ಜನಪ್ರಿಯವಾಯಿತು.



(ಚಿತ್ರ ೯) 'ಭಕ್ತಧ್ರುವ' ಚಿತ್ರದಲ್ಲಿ ಸುರುಚಿಯಾಗಿ ಲಕ್ಷ್ಮಮ್ಮ ಮತ್ತು ಮಾ।ಮುತ್ತು.

‘ಧ್ರುವಕುಮಾರ’ ಜನಪ್ರಿಯವಾಯಿತು. ಧ್ರುವಕುಮಾರನ ಪಾತ್ರವೂ ಜನಪ್ರಿಯವಾಯಿತು. ನಿರ್ಮಾತೃಗಳೊಬ್ಬರು ‘ಕೃಷ್ಣಲೀಲಾ’ ಚಿತ್ರ ತಯಾರಿಸಲು ಉದ್ದೇಶಿಸಿ ಕೃಷ್ಣನ ಪಾತ್ರಕ್ಕೆ ಮುತ್ತು ಅವರನ್ನು ನೇಮಿಸಿಕೊಳ್ಳಲು ಉದ್ದೇಶಿಸಿದರು. ಆದರೆ ಮುತ್ತು ಅವರ ತಂದೆ ಪ್ರೊ.ಯಾಮುನಾಚಾರ್ ಬಾಲಕನ ವಿದ್ಯಾಭ್ಯಾಸಕ್ಕೆ ತೊಂದರೆ ಆಗುವುದೆಂದು ಹೇಳಿ ಬಂದ ಅವಕಾಶವನ್ನು ನಿರಾಕರಿಸಿದರು.

ಚಿತ್ರ ಕೆಂಪೇಗೌಡ ವೃತ್ತದಲ್ಲಿದ್ದ ಸೆಲೆಕ್ಟ್ ಚಿತ್ರಮಂದಿರದಲ್ಲಿ ತೆರೆ ಕಂಡಿತು. (ಅದೇ ಮುಂದೆ ಗೀತಾ ಚಿತ್ರಮಂದಿರವಾಯಿತು. ೧೯೮೫ರಲ್ಲಿ ಅದನ್ನು ಒಡೆದು ಹಾಕಿದರು. ಅಲಂಕಾರ್, ಪ್ರಭಾತ್, ಸ್ವಸ್ತಿಕ್, ಮಿನರ್ವ, ಭಾರತ್, ಶಿವಾಜಿ ಮೊದಲಾದ ಚಿತ್ರಮಂದಿರಗಳು ಕುಸಿದು ವಾಣಿಜ್ಯಸಂಕೀರ್ಣಗಳು ತಲೆ ಎತ್ತಿದವು.) ‘ಧ್ರುವಕುಮಾರ’ ಚಿತ್ರ ತೆರೆಕಂಡಾಗ ದೃಶ್ಯವೊಂದರಲ್ಲಿ ಧ್ರುವ ತಪಸ್ಸಿಗೆ ಕುಳಿತಿದ್ದಾನೆ. ಹುಲಿಯೊಂದು ಬರುತ್ತದೆ. ಘರ್ಜಿಸುತ್ತದೆ. ಪ್ರೇಕ್ಷಕರು ನಿಜವೆಂದೇ ಭಾವಿಸಿ ಭಯದಿಂದ ಕಿರುಚಿವರು, ಚಿತ್ರಮಂದಿರದಿಂದ ಓಡಿಹೋದರು. ಚಲನಚಿತ್ರದ ಬಗ್ಗೆ ಏನೊಂದು ಕಲ್ಪನೆಯೂ ಇಲ್ಲದ ಪ್ರೇಕ್ಷಕ ಎಲ್ಲವನ್ನೂ ನೈಜವೆಂದೇ ಸ್ವೀಕರಿಸುತ್ತಿದ್ದ, ಪ್ರತಿಕ್ರಿಯಿಸುತ್ತಿದ್ದ.

ಪ್ರಾರಂಭದ ದಿನಗಳಲ್ಲಿ ಅಥವಾ ಇತ್ತೀಚಿನವರೆಗೂ ಚಿತ್ರದ ಇಂಥ ದೃಶ್ಯಗಳು ತುಂಬಾ ಕುತೂಹಲಕಾರಿ ಆಗಿದ್ದವು. ಪ್ರೇಕ್ಷಕನಿಗೆ ಅದೊಂದು ಬಗೆಯ ರೋಮಾಂಚನವಿತ್ತು. ಈಚೆಗೆ ಎಲ್ಲ ರಹಸ್ಯಗಳೂ ಬೆಳಕಿಗೆ ಬಂದಿವೆ. ಚಿತ್ರವೊಂದರ ಅಸಾಮಾನ್ಯ ಅನ್ನಿಸುವಂಥ ಸಾಹಸ, ಹೊಡೆದಾಟದಂಥ ಚಿತ್ರಿಕೆಗಳಿದ್ದಾಗ ಎಳೆಯರೂ ಕೂಡಾ ಅದು ನಿಜವಲ್ಲ, ಡ್ಯೂಪ್ ಅಂತಲೋ, ಎಲ್ಲವೂ ಕಂಪ್ಯೂಟರ್‌ನ ಚಮತ್ಕಾರ ಅಂತಲೋ ಹೇಳಿ ಬಿಡುತ್ತಾರೆ. ಈ ತಲೆಮಾರಿನವರು ಆ ಮಟ್ಟಿಗೆ ಒಂದು ವಿಸ್ಮಯ, ಅದ್ಭುತವಂಥ ಅನುಭವದಿಂದ ವಂಚಿತರಾಗಿದ್ದಾರೆ.

ಆ ದಿನಗಳಲ್ಲಿ ಕನ್ನಡ ಚಿತ್ರಗಳ ಪ್ರದರ್ಶನವೂ ತೀರಾ ಸುಲಭದ ಸಂಗತಿಯಾಗಿರಲಿಲ್ಲ. ಟಿ.ಕೆ.ಆರ್.ತೋಪಯ್ಯ ಎಂಬುವವರು ೧೯೩೪ರಲ್ಲಿ ಪ್ರಥಮವಾಗಿ ಮಾರುತಿ ಎಂಬ ಸಂಚಾರಿ ಚಿತ್ರಮಂದಿರ ಪ್ರಾರಂಭಿಸಿದರು. ರಾಜ್ಯದ ಪ್ರತಿಯೊಂದು ಜಿಲ್ಲೆಗೂ ಕನ್ನಡ ಚಿತ್ರ ಕೊಂಡೊಯ್ದರು. ೧೯೬೦ರವರೆಗೂ ಈ ಚಿತ್ರಮಂದಿರ ಇತ್ತು. ಇದೇ ಅವಧಿಯಲ್ಲಿ ಮಲೆಯಾಳಿಯೊಬ್ಬರ ಮಾಲೀಕತ್ವದ ಬೇಬಿ ಟೂರಿಂಗ್ ಮತ್ತು ಬೋಸ್ ಟೂರಿಂಗ್ ಟಾಕೀಸ್‌ಗಳೂ ರಾಜ್ಯದಲ್ಲಿ ಇದ್ದವು.



(ಚಿತ್ರ ೧೧) ‘ಭಕ್ತಧ್ರುವ’ ಚಿತ್ರದಲ್ಲಿ ತಪಸ್ಸಿಗೆ ಹೊರಟ ಧ್ರುವಕುಮಾರನಿಗೆ (ಮುತ್ತು) ನಾರದರ (ದ್ವಾರಕಾನಾಥ್) ಮಾರ್ಗದರ್ಶನ.



(ಚಿತ್ರ ೧೦) ‘ಭಕ್ತಧ್ರುವ’ ಚಿತ್ರದಲ್ಲಿ ಮಾ।ಮುತ್ತು

ಒಂದೇ ವರ್ಷದಲ್ಲಿ ಎರಡು ವಾಕ್ಚಿತ್ರಗಳು ಬಿಡುಗಡೆಯಾದವು. ಅತ್ಯಂತ ಉತ್ಸಾಹದಿಂದಲೇ ಇವುಗಳನ್ನು ಬರಮಾಡಿಕೊಳ್ಳಲಾಗಿತ್ತು. ಈ ಹಿನ್ನೆಲೆಯಲ್ಲಿ ಒಂದರ ಹಿಂದೊಂದರಂತೆ ಕನ್ನಡ ಚಿತ್ರಗಳು ತೆರೆ ಕಂಡುಬಿಡಬಹುದೆಂಬ ನಿರೀಕ್ಷೆಯೂ ಇತ್ತು. ಆದರೆ ಅಂಥ ಯಾವುದೂ ಸಂಭವಿಸಲಿಲ್ಲ. ಪುಂಖಾನುಪುಂಖವಾಗಿ ತೆರೆಗೆ ಬಂದದ್ದು ತಮಿಳು, ತೆಲುಗು, ಹಿಂದಿ ಚಿತ್ರಗಳು. ಕನ್ನಡ ಚಿತ್ರ ತಯಾರಿಸಲು ಯಾವ ನಿರ್ಮಾಪಕರೂ ಮುಂದಾಗಲಿಲ್ಲ. ನಾಗೇಂದ್ರರಾಯರು ರಂಗಭೂಮಿಗೆ ಮರಳಿದರು. ವೈ.ವಿ.ರಾವ್ ತಮಿಳು, ತೆಲುಗು ಚಿತ್ರಗಳನ್ನು ನಿರ್ದೇಶಿಸಲು ಹೊರಟರು. ಅಲ್ಲಿಯೇ ರುಕ್ಮಿಣಿದೇವಿ ಎಂಬ ಕಲಾವಿದೆಯನ್ನು ವಿವಾಹವಾದರು. ಇವರ ಮಗಳು ಲಕ್ಷ್ಮಿ ನಾಲ್ಕು ಭಾಷೆಗಳಲ್ಲಿ ಜನಪ್ರಿಯ ತಾರೆಯಾಗಿ ಬೆಳಗಿದರು, ಶ್ರೇಷ್ಠ ಅಭಿನೇತ್ರಿ ಎಂದು ಮನ್ನಣೆ ಗಳಿಸಿದರು.

ಚಿತ್ರರಂಗದ ಇತಿಹಾಸದ ಉದ್ದಕ್ಕೂ ಒಂದು ಮುಖ್ಯ ಸಂಗತಿಯನ್ನು ಮರೆಯುವ ಹಾಗಿಲ್ಲ. ಬಹುತೇಕ ಭಾರತೀಯ ಭಾಷಾಚಿತ್ರಗಳೆಲ್ಲವೂ ರಂಗಭೂಮಿಯ ನಾಟಕಗಳನ್ನೇ ಆಧರಿಸಿ ತಯಾರಾದವು. ಸಿದ್ಧ ಕಥಾವಸ್ತು, ಅಭಿನಯ ಕಲೆಯಲ್ಲಿ ಪರಿಣತರಾಗಿದ್ದ ಕಲಾವಿದರು, ವೃತ್ತಿರಂಗದಲ್ಲಿ ಬಳಕೆಯಾಗುತ್ತಿದ್ದ ಸಂಗೀತವನ್ನೇ ಚಿತ್ರಕ್ಕೆ ಅಳವಡಿಸಿಕೊಂಡರು. ಕನ್ನಡ ರಂಗಭೂಮಿಯೇ ಮೂಲದಲ್ಲಿ ಪ್ರೇರಣೆಯಾಗಿ ಮಹಾರಾಷ್ಟ್ರ ರಂಗಭೂಮಿ ಬಂದಿತೆಂದು ಇತಿಹಾಸ ಹೇಳಿದರೂ ಮಹಾರಾಷ್ಟ್ರ ರಂಗಭೂಮಿ ಪ್ರಬಲವಾಗಿ ಬೆಳೆದು ರಂಗಭೂಮಿಯ ಪ್ರಭಾವ, ಕೊಡುಗೆ ಚಿತ್ರರಂಗಕ್ಕೆ ಅತಿ ಹೆಚ್ಚೆನಿಸುವಷ್ಟೇ ಆಗಿದೆ. ನಮ್ಮ ವೃತ್ತಿರಂಗಭೂಮಿಯೂ ಬಹುತೇಕ ಮಹಾರಾಷ್ಟ್ರದಿಂದ ಪ್ರಭಾವಿತಗೊಂಡಿತ್ತು. ಮಹಾರಾಷ್ಟ್ರ ರಂಗಭೂಮಿಯಲ್ಲಿ



(ಚಿತ್ರ ೧೨) 'ಸದಾರಮೆ' ಚಿತ್ರದಲ್ಲಿ ಕೆ.ಅಶ್ವತ್ಥಮ್ಮ ಮತ್ತು ಮುರಾರಾಚಾರ್

ಹೆಚ್ಚಿನಂಶ ಶಾಸ್ತ್ರೀಯ ಸಂಗೀತವೇ ಇದ್ದುದರಿಂದ ನಮ್ಮ ರಂಗಗೀತೆಗಳೂ ಹಾಗೇ ಇದ್ದವು. ಅವೇ ಚಿತ್ರಗಳಲ್ಲೂ ಕಾಣಿಸಿಕೊಂಡವು. ಪ್ರಾರಂಭದ ಹಲವಾರು ವರ್ಷಗಳ ಕಾಲ ರಂಗನಾಟಕ, ರಂಗಸಂಗೀತ ಮತ್ತು ರಂಗಕಲಾವಿದರೇ ಚಿತ್ರದಲ್ಲೂ ಇದ್ದರು. ಈ ಪರಂಪರೆ ಆಧುನಿಕಕಾಲದಲ್ಲೂ ಮುಂದುವರಿದೇ ಇದೆ. ೧೯೯೦-೨೦೦೦ದಲ್ಲಿ ಕೂಡಾ ಹೆಚ್ಚಿನವರು ಹವ್ಯಾಸಿ, ವೃತ್ತಿರಂಗಭೂಮಿಯಿಂದ ಬಂದಿರುವುದನ್ನು ಕಾಣಬಹುದು. ಪ್ರಾರಂಭದ ಹಂತದಲ್ಲಿ ಚಿತ್ರೀಕರಣ, ಸಂಭಾಷಣೆ, ಅಭಿನಯ ಎಲ್ಲವೂ ರಂಗನಾಟಕದ ಶೈಲಿಯಲ್ಲೇ ಇದ್ದವು. ಚಿತ್ರರಂಗ ತನ್ನದೇ ಆದ ಶೈಲಿಯನ್ನು ರೂಢಿಸಿಕೊಳ್ಳಲು ಕೂಡಾ ಅನೇಕ ವರ್ಷಗಳೇ ಬೇಕಾದವು. ಚಿತ್ರಮಾಧ್ಯಮ ಒಂದು ಸ್ವರೂಪ ಪಡೆದುಕೊಳ್ಳುವವರೆಗೆ ಅದಕ್ಕೆ ರಂಗಭೂಮಿ ಅನಿವಾರ್ಯವಾಯಿತು.

ಮೂಕಿಚಿತ್ರಗಳ ಕಾಲದಲ್ಲೇ ಚಿತ್ರತಯಾರಿಕೆಗೆ ಇಳಿದ ಮಹಾಸಾಹಸಿ ಗುಬ್ಬಿ ವೀರಣ್ಣನವರು ರಂಗಭೂಮಿಯ ಗಳಿಕೆಯನ್ನೆಲ್ಲಾ ಚಿತ್ರರಂಗದಲ್ಲಿ ತೊಡಗಿಸಿ, ಸ್ವಂತ ಸ್ಟುಡಿಯೋ ಸ್ಥಾಪಿಸಿದರು. ನಿಜವಾದ ಅರ್ಥದಲ್ಲಿ ಇವರು ಚಿತ್ರರಂಗದ ಮೂಲ ಪುರುಷರು. ವಾಕ್ಚಿತ್ರಗಳು ಅಡಿ ಇಟ್ಟಾಗ ವೀರಣ್ಣನವರ ಕುತೂಹಲ ಮತ್ತೆ ಇತ್ತ ಹರಿಯಿತು. ಆ ದಿನಗಳಲ್ಲಿ ಅವರ ಕಂಪನಿಯ ಜನಪ್ರಿಯ ನಾಟಕವಾಗಿದ್ದ 'ಸದಾರಮೆ' ಜಾನಪದಕಥಾವಸ್ತುವುಳ್ಳದ್ದು. ಅದನ್ನು ತೆರೆಗೆ ತರುವ ಪ್ರಯತ್ನ ಮಾಡಿದರು. (ಆ ನಾಟಕದಲ್ಲಿ ಸ್ವತಃ ವೀರಣ್ಣನವರೇ ಆದಿಮೂರ್ತಿ ಹಾಗೂ ಕಳ್ಳನ ಪಾತ್ರವನ್ನು ಸೊಗಸಾಗಿ ನಿರ್ವಹಿಸುತ್ತಿದ್ದರು.) ಕೊಯಮತ್ತೂರಿನ ಷಣ್ಮುಗಂ ಚೆಟ್ಟಿಯಾರರೊಂದಿಗೆ ಮಾತನಾಡಿ ಒಪ್ಪಿಸಿದರು. ವೀರಣ್ಣನವರಿಗೆ ಅಂಥ ಸಾಮರ್ಥ್ಯವೂ ಇತ್ತು. ಶಕುಂತಲಾ ಫಿಲ್ಮ್ ಲಾಂಛನದಲ್ಲಿ 'ಸದಾರಮೆ' ತೆರೆಗೆ ತರುವುದೆಂದು ತೀರ್ಮಾನಿಸಿದರು. ರಂಗಕಲಾವಿದ ಡಿ.ಮುರಾರಾಚಾರ್ (ಒಂದು ಕಾಲಕ್ಕೆ ಸ್ತ್ರೀಪಾತ್ರಕ್ಕೆ ಖ್ಯಾತಿ) ನಾಯಕನ ಪಾತ್ರಕ್ಕೂ, ಉತ್ತಮ ಗಾಯಕಿ/ನಟಿ ಕೆ.ಅಶ್ವತ್ಥಮ್ಮನವರು ನಾಯಕಿಯ ಪಾತ್ರಕ್ಕೂ ಗೊತ್ತಾದರು. ಅಶ್ವತ್ಥಮ್ಮನವರು ಹಾಡಿದ ಗ್ರಾಮಫೋನ್ ರಿಕಾರ್ಡ್‌ಗಳು ಆ ಕಾಲಕ್ಕೆ ಕನ್ನಡ ನಾಡಿನಲ್ಲಷ್ಟೇ ಅಲ್ಲ, ನೆರೆಯ ತಮಿಳು, ತೆಲುಗಿನಲ್ಲೂ ಅತ್ಯಂತ ಜನಪ್ರಿಯವಾಗಿದ್ದವು. 'ಹಾ ಪ್ರಿಯಾ ಪ್ರಶಾಂತ ಹೃದಯಾ...' ಎಂಬ ಗೀತೆಯಂತೂ ಎಲ್ಲರ ನಾಲಿಗೆಯ ಮೇಲೆ ನರ್ತಿಸುತ್ತಿತ್ತು.[೧] ಈ ಚಿತ್ರದಲ್ಲಿ ಬಿ.ಜಯಮ್ಮನವರಿಗೂ ಒಂದು ಮುಖ್ಯ ಪಾತ್ರವಿತ್ತು. ಜಯಮ್ಮನವರು ವೀರಣ್ಣನವರು ತಯಾರಿಸಿದ ಮೂಕಿ ಚಿತ್ರಗಳಲ್ಲೂ ಅಭಿನಯಿಸಿದ್ದರು. ಅನಂತರ ಆಕೆ ಕನ್ನಡ, ತೆಲುಗು, ತಮಿಳು ಚಿತ್ರಗಳ ಜನಪ್ರಿಯ ತಾರೆಯಾದರು.

'ಸದಾರಮೆ' ಚಿತ್ರದಲ್ಲಿಯೂ ನಾಟಕದಲ್ಲಿಯ ಹಾಗೇ ಆದಿಮೂರ್ತಿ, ಕಳ್ಳನ ಪಾತ್ರಗಳನ್ನು ಗುಬ್ಬಿ ವೀರಣ್ಣನವರೇ ನಿರ್ವಹಿಸಿದರು. 'ಸದಾರಮೆ' ಮುಂಬಯಿನ ಸೆಂಟ್ರಲ್ ಸ್ಟುಡಿಯೋದಲ್ಲಿ ಚಿತ್ರೀಕರಣವಾಯಿತು. ಚಿತ್ರವನ್ನು ತಮಿಳಿನ ರಾಜಾ ಚಂದ್ರಶೇಖರ್ ನಿರ್ದೇಶಿಸಿದರು. ಈ ಚಿತ್ರದ ಸಂಭಾಷಣೆ, ಹಾಡುಗಳನ್ನು ಬೆಳ್ಳಾವೆ ನರಹರಿಶಾಸ್ತ್ರಿ ರಚಿಸಿದರು. ಸಂಗೀತ ನಿರ್ದೇಶಿಸಿದವರು 'ಪಾಪಣ್ಣ' ಎಂದೇ ಪರಿಚಿತರಾಗಿದ್ದ ವೆಂಕಟರಾಮಯ್ಯ. ಚಿತ್ರ ಸಿದ್ಧವಾಗಲು ಸುಮಾರು ನಾಲ್ಕೈದು ತಿಂಗಳುಗಳೇ ಆದವು. ಈ ಚಿತ್ರದಲ್ಲಿ ಅಶ್ವತ್ಥಮ್ಮ ಹಾಡಿದ್ದ 'ಭಂಗಿ ಆನಂದವೇನೆಂಬೆ ಲೋಕದಿ ನಾನಿಂದು ಸೇದುವೆ ಮೋದದಿ...' ಎಂಬ ಹಾಡು ಅತ್ಯಂತ ಜನಪ್ರಿಯವಾಗಿತ್ತು. ೧೯೩೫ರಲ್ಲಿ 'ಸದಾರಮೆ' ಒಂದೇ ಕನ್ನಡ ಚಿತ್ರ ಸಿದ್ಧವಾದದ್ದು. ನಾಡಿನಾದ್ಯಂತ ಬಿಡುಗಡೆಯಾಯಿತು, ಯಶಸ್ವಿಯಾಯಿತು. ವೀರಣ್ಣನವರು ಕೆಂಪೇಗೌಡ ರಸ್ತೆಯಲ್ಲಿ ಸಾಗರ್ ಟಾಕೀಸನ್ನು ಕಟ್ಟಿಸಿದರು. ಅದರ ಉದ್ಘಾಟನೆಯೂ ೧೯೩೫ರಲ್ಲೇ ಆಯಿತು.

'ಸದಾರಮೆ'ಯ ವಸ್ತು, ಮುಖ್ಯವಾಗಿ ಅಭಿನಯಕ್ಕಿರುವ ಅವಕಾಶ, ಸ್ವಾರಸ್ಯಕರ ಸನ್ನಿವೇಶಗಳು, ಹಾಸ್ಯ ಇತ್ಯಾದಿಗಳಿಂದಾಗಿ ಯಾವ ಕಾಲಕ್ಕೂ ಸಲ್ಲುತ್ತದೆ. ಇತ್ತೀಚಿನವರೆಗೂ ಹೊಸ ಹೊಸ ರೀತಿಯಲ್ಲಿ ಪುನರ್ರಚಿಸಿಕೊಂಡು ಕೂಡಾ ನಾಟಕವನ್ನಾಡಿದ್ದಾರೆ. ಎಲ್ಲ ಬಗೆಯ ಪ್ರೇಕ್ಷಕರನ್ನು ರಂಜಿಸುವಂಥ ನಾಟಕ 'ಸದಾರಮೆ'. ಗುಬ್ಬಿ ವೀರಣ್ಣನವರೇ ಪುನಃ ೧೯೫೬ರಲ್ಲಿ ಈ ಚಿತ್ರವನ್ನು ತಯಾರಿಸಿದ್ದರು. ಹಿಂದಿನ 'ಸದಾರಮೆ'ಯನ್ನೇ ಬಹಳಷ್ಟು ಮಂದಿ ಪದೇ ಪದೇ ನೆನಪು ಮಾಡಿಕೊಳ್ಳುತ್ತಾರೆ. ಚಿತ್ರ ನಿರ್ಮಾಣದ ತಾಂತ್ರಿಕ ವಿಭಾಗದ ಓನಾಮವೂ ತಿಳಿಯದ, ಕನ್ನಡದ ತಂತ್ರಜ್ಞರಂತೂ ಇಲ್ಲವೇ ಇಲ್ಲ ಎನ್ನಬಹುದು. ಈ ದಿನಗಳಲ್ಲಿ ತೆರೆಗೆ ಬಂದ 'ಸದಾರಮೆ' ಕೂಡಾ ರಂಗನಾಟಕದ ಹಾಗೇ ಇತ್ತು. ಆದರೂ ಜನ ಪ್ರೀತಿಯಿಂದ ಬರಮಾಡಿಕೊಂಡರು.

೧೯೩೬ರಲ್ಲಿ 'ಸಂಸಾರನೌಕ' ತೆರೆಕಂಡಿತು. ಇದು ಕನ್ನಡದ ಪ್ರಥಮ ಸಾಮಾಜಿಕ ಚಿತ್ರ. ದಕ್ಷಿಣ ಭಾರತದ ಪ್ರಥಮ ಸಾಮಾಜಿಕ ಚಿತ್ರ. ಹೆಚ್.ಎಲ್.ಎನ್.ಸಿಂಹ ಕನ್ನಡ ರಂಗಭೂಮಿಯ ಪ್ರಸಿದ್ಧ ವ್ಯಕ್ತಿ. ಬಾಲ್ಯದಿಂದಲೂ ಅಭಿನಯ ಕಲೆಯಲ್ಲಿ ಆಸಕ್ತಿ ಇದ್ದವರು. ಅವರು ಹೈಸ್ಕೂಲಿನಲ್ಲಿ ಓದುತ್ತಿದ್ದಾಗಲೇ ಶಾಲೆಯ ಪ್ರೇಯರ್‌ಹಾಲ್‌ನಲ್ಲಿ ಕುಳಿತು 'ಡೆಸ್ಟಿನಿ ರೂಲ್ಸ್ ಹ್ಯುಮ್ಯಾನಿಟಿ' (Destiny Rules Humanity) ಆಂಗ್ಲ ನಾಟಕವನ್ನು ಬರೆದು ಅದೇ ದಿನ ಅಭ್ಯಾಸ ಮಾಡಿ ಅಭಿನಯಿಸಿದ್ದರು. ಆಗ ಅವರ ಜೊತೆಗೆ ಮಹಮದ್ ಪೀರ್ ಒಂದು ಪಾತ್ರವನ್ನು ನಿರ್ವಹಿಸಿದ್ದರು. ಮುಂದೆ ಸಿಂಹ ಭಾರತ ಜನಮನೋಲ್ಲಾಸಿನಿ ಕಂಪನಿ ಸೇರಿದರು. ರಂಗದ ಮೇಲೆ ಪೌರಾಣಿಕ ನಾಟಕಗಳು, ಒಮ್ಮೊಮ್ಮೆ ಐತಿಹಾಸಿಕ ನಾಟಕಗಳು ಮಾತ್ರ ಪ್ರಯೋಗವಾಗುತ್ತಿದ್ದ ಆ ದಿನಗಳಲ್ಲೇ ಸಮಕಾಲೀನ ಸಾಮಾಜಿಕ ವಸ್ತುವನ್ನು ರಂಗಕ್ಕೆ ತರುವ ಅಪೇಕ್ಷೆ ಇತ್ತು. ಅವರು ಸಿ.ಬಿ.ಮಲ್ಲಪ್ಪನವರ ಕಂಪನಿ, ಗುಬ್ಬಿ ಕಂಪನಿಗಳಲ್ಲೂ ಇದ್ದರು. ವೀರಣ್ಣನವರು ತಯಾರಿಸಿದ 'ಹಿಸ್ ಲವ್ ಅಫೇರ್ಸ್' ಮೂಕಿ ಚಿತ್ರದಲ್ಲಿ ಅಭಿನಯಿಸಿದ್ದರು. ಆ ಚಿತ್ರದ ನಿರ್ದೇಶಕ ಜಿ.ಎ.ಅಲ್‌ಗೊ ಅವರಿಗೆ ಸಹಾಯಕ ನಿರ್ದೇಶಕರೂ ಆಗಿದ್ದುದರಿಂದ ಚಲನಚಿತ್ರ ತಯಾರಿಕೆಯ ಪರಿಚಯವೂ ಇತ್ತು. ಪೀರ್ ಅವರ ಸ್ವಂತ ಕಂಪನಿ ಚಂದ್ರಕಲಾ ನಾಟಕ ಮಂಡಳಿಯಲ್ಲಿದ್ದಾಗ 'ಷಹಜಹಾನ್' ನಾಟಕದಲ್ಲಿ ಷಹಜಹಾನನಾಗಿ ಅಭಿನಯಿಸಿ ಜನಪ್ರಿಯರಾಗಿದ್ದರು. ಪೀರ್‌ಸಾಹೇಬರಿಗೂ ಪೌರಾಣಿಕ ಇತ್ಯಾದಿ ಒಂದೇ ಜಾಡಿನ ನಾಟಕಗಳಿಗಿಂತ ಭಿನ್ನವಾಗಿ ಸಮಾಜದ ಅನ್ಯಾಯಗಳನ್ನು ಬಯಲಿಗೆಳೆಯುವಂಥ ಸಾಮಾಜಿಕ ನಾಟಕಗಳನ್ನಾಡುವ ಅಪೇಕ್ಷೆ ಮೂಡಿದಾಗ ಸಿಂಹ ಅವರ ಆಲೋಚನೆಗೆ ಜೀವ ಬಂದಂತಾಯಿತು. ಹೀಗೆ 'ಸಂಸಾರನೌಕ' ಸಾಮಾಜಿಕ ನಾಟಕ ಹುಟ್ಟಿತು. ಮೂರು ತಿಂಗಳ ಕಾಲ ಸತತವಾಗಿ ಈ ನಾಟಕದ ಯಶಸ್ವಿ ಪ್ರದರ್ಶನ ಮಾಡಿದ್ದರು.

ಮುಂದೆ ಸಿಂಹ ತಮ್ಮದೇ ಆದ 'ಸಿಂಹಾಸ್ ಸೆಲೆಕ್ಟ್ ಆರ್ಟಿಸ್ಟ್' ನಾಟಕ ಕಂಪನಿ ಪ್ರಾರಂಭಿಸಿದರು. 'ಸಂಸಾರ ನೌಕ', 'ಅಬ್ಬಾ ಆ ಹುಡುಗಿ', 'ಗಂಡ್ ಹರಾಜ್' ಮುಂತಾದ ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸುತ್ತಿದ್ದರು.

ಸಿಂಹ ರಂಗಭೂಮಿಯಲ್ಲೇ ಹೊಸತನಕ್ಕಾಗಿ ಹಂಬಲಿಸಿದವರು. ಆದರು 'ಸಂಸಾರನೌಕ' ನಾಟಕ ಸಿದ್ಧ ಮಾಡಿದಾಗ ಇದ್ದ ರಂಗವಾತಾವರಣ ಮತ್ತು ಆ ನಾಟಕ ಕುರಿತು ಅ.ನ.ಕೃಷ್ಣರಾಯರು "...ಕನ್ನಡ ನಾಟ್ಯ ಪ್ರಪಂಚದಲ್ಲಿ ಸಾಮಾಜಿಕ ನಾಟಕಕ್ಕೆ

೧. ಅಶ್ವತ್ಥಮ್ಮನವರ ಅಭಿನಯ ಗಾಯನ ಅತ್ಯಂತ ಜನಪ್ರಿಯವಾದವು. ವೈ.ವಿ.ರಾವ್ ನಿರ್ದೇಶಿಸಿದ ತಮಿಳು ಚಿತ್ರ 'ಚಿಂತಾಮಣಿ'ಯಿಂದಾಗಿ ಆಕೆ ತಮಿಳುನಾಡಿನಲ್ಲಿ ಅಪಾರ ಬೇಡಿಕೆಯ ನಟಿಯಾದರು. ತಮಿಳುನಾಡಿನ ಸೇಲಂನಲ್ಲಿ ಆಕೆಯ ಅಭಿನಯದ ಚಿತ್ರ ೨೦೦ ದಿನ ಪ್ರದರ್ಶನವಾಯಿತು ಮತ್ತು ಆ ಚಿತ್ರಮಂದಿರಕ್ಕೆ 'ಚಿಂತಾಮಣಿ' ಎಂದೇ ಬದಲಿಸಿದ ಹೆಸರಿಟ್ಟರು. ಅನಂತರ ಆಕೆ ಸುಂದರರಾವ್ ನಾಡಕರ್ಣಿಯವರ 'ಸಂತ ಸಕ್ಕೂಬಾಯಿ'ಯಲ್ಲಿ ಅಭಿನಯಿಸಿದ್ದರು. ಅತಿ ಚಿಕ್ಕ ಪ್ರಾಯದಲ್ಲೇ ನಿಧನರಾದ ಅಶ್ವತ್ಥಮ್ಮ ಅಭಿನಯಿಸಿದ್ದು ಮೂರು ಚಿತ್ರಗಳಲ್ಲಿ.

ಇನ್ನೂ ಸ್ಥಾನ ಏರ್ಪಟ್ಟಿಲ್ಲ. ಸಣ್ಣ ಸಭೆ, ವಿನೋದಕೂಟಗಳಿಗೆ ಮಾತ್ರ ಇವು ಉಪಯೋಗ ಎಂದು ಭಾವಿಸಿವೆ. ಸಾಮಾಜಿಕ ನಾಟಕಗಳನ್ನು ಬರೆಯುವುದು ಕಷ್ಟ. ಬರೆದ ಮೇಲೆ ಜನರಂಜನವಾಗುವಂತೆ ಆಡಿಸುವುದು ಇನ್ನೂ ಕಷ್ಟ.

''ನಂಜನಗೂಡಿನ ಹೆಚ್.ಎಲ್.ಎನ್.ಸಿಂಹ ಅವರು ರಚಿಸಿರುವ 'ಸಂಸಾರನೌಕ' ನಾಟಕ ಅವರು ಈ ಪ್ರಥಮ ಪ್ರಯತ್ನದಲ್ಲಿ ಕನ್ನಡ ರಂಗಭೂಮಿಯ ಇತಿಹಾಸವನ್ನು ಒಂದೆರಡು ಅಡಿಗಳಾದರೂ ಮುಂದೆ ತೆಗೆದುಕೊಂಡು ಹೋಗಿದ್ದಾರೆ... ಮತ್ತು ನಾಟಕದಲ್ಲಿ ನೂರು ದೋಷಗಳಿದ್ದರೂ ಇದು ನೋಟಕ್ಕೂ, ಮನ್ನಣೆಗೂ ಅರ್ಹವಾದ ಪ್ರಯತ್ನವೆನ್ನುವುದರಲ್ಲಿ ಸಂದೇಹವಿಲ್ಲ. ಕನ್ನಡ ರಂಗಭೂಮಿಯ ಭಾವಿ ಸುದಿನಗಳು ಈ ಪ್ರಯತ್ನದಿಂದ ಹತ್ತಿರ ಹತ್ತಿರವಾಗುತ್ತಿವೆ...'' ಎನ್ನುತ್ತಾರೆ.

ರಂಗಭೂಮಿ-ಚಿತ್ರರಂಗಗಳ ಪ್ರಯೋಗದಲ್ಲಿ ಸದಾ ತೊಡಗಿಸಿಕೊಂಡ ದೇವುಡು ಅವರು ಕೂಡಾ ರಾಯರ ಮಾತನ್ನು ಸಮರ್ಥಿಸುತ್ತಾರೆ. ('ರಂಗಭೂಮಿ' ಪತ್ರಿಕೆಯಲ್ಲಿ)

ನಾಟಕ ಪ್ರದರ್ಶಿತವಾದೆಡೆಯಲ್ಲೆಲ್ಲ ಜಯಭೇರಿಯೇ. ಮದರಾಸಿನ 'ಸೌಂದರ್ಯ ಮಹಲ್'ನಲ್ಲಿ ನಾಟಕಪ್ರದರ್ಶನವನ್ನು 'ನಾರದರ್' ಪತ್ರಿಕೆಯ ಸಂಪಾದಕರಾಗಿದ್ದ ಶ್ರೀನಿವಾಸರಾವ್ ಹಾಗೂ ವಾಣಿಜ್ಯೋದ್ಯಮಿ ನಂಜಪ್ಪ ಚೆಟ್ಟಿಯಾರ್ ಅವರು ನೋಡಿದರು. ಚೆಟ್ಟಿಯಾರ್ ಅವರಿಗೆ ಇದನ್ನೇಕೆ ಚಲನಚಿತ್ರವಾಗಿ ಚಿತ್ರಿಸಬಾರದು ಅನ್ನಿಸಿತು. ಅವರು ತಮ್ಮ ದೇವಿಫಿಲಂಸ್ ಲಾಂಛನದಲ್ಲಿ ಚಿತ್ರ ತಯಾರಿಸಲು ನಿರ್ಧರಿಸಿದರು. ಸಿಂಹ ಅವರೇ ನಿರ್ದೇಶಿಸಲಿ ಎಂದರು. ನಾಟಕದಲ್ಲಿ ಪಾತ್ರ ವಹಿಸಿದ್ದವರನ್ನೇ ಚಿತ್ರದಲ್ಲೂ ಅಭಿನಯಿಸಲು ಆಯ್ಕೆ ಮಾಡಿಕೊಂಡರು. ಈ ಆಯ್ಕೆಯ ಜವಾಬ್ದಾರಿ ಹೊತ್ತವರು ಮಹಮದ್ ಪೀರ್. ನಂಜಪ್ಪ ಚೆಟ್ಟಿಯಾರ್ ಅವರ ಸೋದರ ಕೆ.ರಾಜಗೋಪಾಲ ಚೆಟ್ಟಿಯಾರ್‌ರವರು ನಿರ್ಮಾಣದ ನೇತೃತ್ವ ವಹಿಸಿಕೊಂಡರು. ವಾದ್ಯ ಸಂಗೀತಗಾರರಾಗಿದ್ದ ಶರ್ಮ ಬ್ರದರ್ಸ್ ಅವರ ಸಹಯೋಗದಲ್ಲಿ ಎಸ್.ನಾಗರಾಜರಾವ್ ಸಂಗೀತ ನೀಡಿದರು. ಚಿತ್ರದಲ್ಲಿ ೨೩ ಹಾಡುಗಳಿದ್ದವು. ಕಲಾವಿದರೇ ಹಾಡಿದ್ದಾರೆ. ಅಂದಿನ ಖ್ಯಾತ ವಿದ್ವಾಂಸ ಎಂ.ಎಂ.ದಂಡಪಾಣಿ ದೇಶಿಕರ್ ಅವರು ಕಲ್ಯಾಣಿರಾಗದಲ್ಲಿ ಹಾಡಿರುವ ಹಾಡೊಂದನ್ನು ದುಃಖ ಜಿಗುಪ್ಸೆಯಿಂದ ತಲ್ಲಣಿಸುವ ನಾಯಕ (ಸುಂದರ) ಪಾತ್ರದ ಮೇಲೆ ಚಿತ್ರಿಸಲಾಗಿದೆ. ಕಾಂಭೋಜಿ, ಸಾರಂಗ, ಮೋಹಿನಿ, ದೇಶಿ, ಭೈರವಿ, ಮಧ್ಯಮಾವತಿ ಮುಂತಾದ ರಾಗಗಳನ್ನು ಬಳಸಲಾಗಿದೆ. ಸುಂದರನ ಪಾತ್ರದಲ್ಲಿ ಬಿ.ಆರ್.ಪಂತುಲು, ಸರಳೆಯಾಗಿ ಎಂ.ವಿ.ರಾಜಮ್ಮ ನಾಯಕ-ನಾಯಕಿಯಾಗಿ ಅಭಿನಯಿಸಿದ್ದಾರೆ. ಸುಶೀಲೆಯಾಗಿ ಎಸ್.ಕೆ.ಪದ್ಮ, ಗಿರಿಜೆಯಾಗಿ ಸರೋಜಮ್ಮ, ಮಾಧೂವಾಗಿ ಎಂ.ಎಸ್.ಮಾಧವರಾವ್, ಡಿಕ್ಕಿ ಪಾತ್ರದಲ್ಲಿ ಎಂ.ಮಾಧವರಾವ್, ಬ್ಯಾರಿಸ್ಟರ್ ಪಾತ್ರದಲ್ಲಿ ಹೆಚ್.ಆರ್.ಹನುಮಂತರಾವ್ ಮತ್ತು ಹೆಚ್.ಕೃಷ್ಣಮೂರ್ತಿ, ಜಿ.ಟಿ.ಬಾಲಕೃಷ್ಣರಾವ್ ಹಾಗೂ ಸ್ವತಃ ಸಿಂಹ ಅವರೇ ಒಂದು ಪಾತ್ರದಲ್ಲಿ ಅಭಿನಯಿಸಿದ್ದರು.

'ಸಂಸಾರನೌಕ' ಚಿತ್ರದ ಬಗ್ಗೆ ಆ ಚಿತ್ರದ ಪಾತ್ರಧಾರಿ ಎಸ್.ಕೆ.ಪದ್ಮ ಹೀಗೆ ಹೇಳುತ್ತಾರೆ : ''...ನಾನು ಹಿಂದೆ ಕಾಮಿನಿಯ ಪಾತ್ರ ಮಾಡಿದ್ದನ್ನು ನೋಡಿದ್ದ ಪಂತುಲು



'ಸಂಸಾರನೌಕ' ಚಿತ್ರದಲ್ಲಿ (ಚಿತ್ರ ೧೩) ಎ.ಸರೋಜಮ್ಮ, (ಚಿತ್ರ ೧೪) ಎಸ್.ಕೆ.ಪದ್ಮಾದೇವಿ



(ಚಿತ್ರ ೧೫) 'ಸಂಸಾರನೌಕ' ಚಿತ್ರದಲ್ಲಿ ಬಿ.ಆರ್.ಪಂತುಲು ಮತ್ತು ಎಂ.ವಿ.ರಾಜಮ್ಮ

ನನ್ನನ್ನೇ ನಾಯಕಿಯಾಗಿ ಆರಿಸಿದ್ದರು. ಮದರಾಸಿನಲ್ಲಿ ಚಿತ್ರೀಕರಣ ನಡೀತಿತ್ತು. ಆ ಚಿತ್ರದಲ್ಲಿ ನಾಲ್ಕು ಹಾಡುಗಳನ್ನು ನಾನೇ ಹಾಡಿದೆ. ಒಂದನ್ನು ವೀಣೆ ನುಡಿಸಿಕೊಂಡು ಹಾಡಿದ್ದೆ,

ಸಖಿಯೇ । ಲಾಲಿಸೀಗಲೇ
ಸುಖದಿಂ ಮಲಗಿರೇ
ಸಖಿಯೇ ನಡೆದಚ್ಚರಿಯಾ
। ಲಾಲಿಸೀಗಲೇ ।

''....'ಸಂಸಾರನೌಕ'ದಲ್ಲಿ ಒಂದು ಲವ್ ಸೀನ್ ಇತ್ತು. ವಿಕಾರವೇನೂ ಅಲ್ಲ, ಹಾಡು ಹಾಡುತ್ತಾ ಕೈ ಕೈ ಹಿಡಿದುಕೊಳ್ಳೋದು ಅಷ್ಟೇ. ಅದಕ್ಕೂ ನನಗೆ ಹಿಂಜರಿಕೆ. ಪಂತುಲು, ಸಿಂಹ ಎಲ್ಲಾ ನನ್ನನ್ನು ಒಪ್ಪಿಸಲು ಪ್ರಯತ್ನ ಪಟ್ಟರೂ ಆಗಲಿಲ್ಲ. ಕೊನೆಗೆ ಎಂ.ವಿ.ರಾಜಮ್ಮನಿಗೆ ಆ ಪಾತ್ರ ಕೊಟ್ಟರು. ಅವಳಿಗೆ ಮೊದಲ ಸಾಂಸಾರಿಕ ಚಿತ್ರದ ನಾಯಕಿ ಅಂತ ಜನಪ್ರಿಯತೆ ಬಂತು. ರಾಜಮ್ಮನಿಗೆ ನಾಯಕಿ ಅಂತ ಪ್ರಚಾರ ಸಿಕ್ಕಿತು. ಆದರೆ ನನ್ನದು ದುರಂತ ಪಾತ್ರವಾದ್ದರಿಂದ ಜನರ ಮನಸ್ಸಿನಲ್ಲಿ ಉಳಿದುಬಿಟ್ಟಿತು.''

''...'ಸಂಸಾರನೌಕ' ಚಿತ್ರದ ನಿರ್ಮಾಪಕರು ಮೊದಲು ಗಿರಿಜೆಯ ಪಾತ್ರಕ್ಕೆ ನನ್ನನ್ನು ಆಹ್ವಾನಿಸಿದರು. ಆದರೆ ಚಿತ್ರದಲ್ಲಿ ನಾನು ಹೇಳಿದ ಸಂಭಾಷಣೆಯ ವೈಖರಿಗೆ ಮೆಚ್ಚಿ ಪ್ರಮುಖ ನಾಯಕಿ ಸರಳೆಯ ಪಾತ್ರಕ್ಕೆ ನನ್ನನ್ನು ಆಯ್ಕೆ ಮಾಡಿದರು'' ಎನ್ನುತ್ತಾರೆ ರಾಜಮ್ಮ.

ಈ ಚಿತ್ರ ಮದರಾಸಿನ ವೇಲ್ ಪಿಕ್ಚರ್ಸ್ ಸ್ಟುಡಿಯೋದಲ್ಲಿ ತಯಾರಾಯಿತು. ಟೆಲಾಂಗ್ ಎಂಬುವವರು ಛಾಯಾಗ್ರಾಹಕರು. ೧೯೩೬ರ ಆಗಸ್ಟ್ ೨೭ರಂದು ಚಿತ್ರ ಬೆಂಗಳೂರಿನ ಸಾಗರ್, ಮೈಸೂರಿನ ಒಲಂಪಿಯಾ ಟಾಕೀಸ್‌ನಲ್ಲಿ ಬಿಡುಗಡೆಯಾಯಿತು. ಹದಿನಾರು ಸಾವಿರ ಅಡಿ ಉದ್ದದ ಚಿತ್ರ, ನಿರ್ಮಾಣ ವೆಚ್ಚ ೨೨,೦೦೦ ರೂಪಾಯಿ. ಈ ಯಶಸ್ವಿ ಚಿತ್ರ ಗಳಿಸಿದ್ದು ಎರಡೂವರೆ ಲಕ್ಷ ರೂಪಾಯಿಗಳಿಗೂ ಹೆಚ್ಚು. ಈ ಚಿತ್ರವನ್ನು 'ನಾರದರ್' ಪತ್ರಿಕೆಯ ಸಂಪಾದಕ ಶ್ರೀನಿವಾಸರಾವ್ ತಮಿಳಿನಲ್ಲಿ ತಯಾರಿಸಿ ಯಶಸ್ವಿಯಾದರು. ತೆಲುಗಿನಲ್ಲೂ ಮೆಚ್ಚುಗೆ ಪಡೆಯಿತು.

'ಸಂಸಾರನೌಕ'ದ ಕಥಾವಸ್ತುವೇ ಭಿನ್ನವಾಗಿತ್ತು. ಶ್ರೀಮಂತಿಕೆ ಯಾವಾಗಲೂ ಸರಳ ಪ್ರಣಯವನ್ನು ತಿರಸ್ಕರಿಸುತ್ತದೆ. ಶಕುನಿಯಂಥ ಜನ ನೆಟ್ಟಗಿರುವುದನ್ನೆಲ್ಲ ಸೊಟ್ಟ ಮಾಡುತ್ತಿರುತ್ತಾರೆ. ಸತ್ಯನಿಷ್ಠೆಗಾಗಿ ಬದುಕುವ ಜನರಿಗೆ ನಿರಂತರವಾಗಿ ಕಷ್ಟ-ಕೋಟಲೆಗಳು ಬರುತ್ತವೆ. ಕೊನೆಯವರೆಗೆ ಹೋರಾಡುವುದು, ಅಂತಿಮವಾಗಿ 'ಸುಖ' ಇದ್ದೇ ಇದೆ. ಆದರೆ ಆ ಹಂತ ತಲುಪುವ ಹೊತ್ತಿಗೆ ಕೊಲೆ, ಸಾವು, ನೋವು, ತ್ಯಾಗ, ವಿಫಲಪ್ರೇಮದಂಥ ಸಂಗತಿಗಳನೇಕವು ಬದುಕನ್ನು ವಿಘಟಿಸುತ್ತಲೇ ಇರುತ್ತವೆ ಎಂದು ಹೇಳುವ ಮಧ್ಯಮವರ್ಗದ ಕೌಟುಂಬಿಕಕಥಾನಕ. ರಂಗಭೂಮಿಯ ಹಾಗೇ ತೆರೆಯ ಮೇಲೂ ಯಶಸ್ವಿಯಾಯಿತು. ಸಿಂಹ ಅವರಿಗೆ ಭಾರಿ ಹೆಸರು ತಂದ 'ಸಂಸಾರನೌಕ' ದಕ್ಷಿಣಭಾರತ ಚಿತ್ರೋದ್ಯಮದ ಇತಿಹಾಸದಲ್ಲೇ ಒಂದು ಮಹತ್ವದ ತಿರುವು ತಂದ ಚಿತ್ರ. ಈ ಚಿತ್ರದ ಬಗ್ಗೆ ಉತ್ತಮ ಪತ್ರಿಕಾವಿಮರ್ಶೆಗಳೂ ಬಂದಿದ್ದವು. ಪ್ರಾರಂಭದಿಂದಲೂ ಸವಿವರವಾಗಿ 'ಸಂಡೇ ಟೈಮ್ಸ್' ವಾರಪತ್ರಿಕೆಯಲ್ಲಿ ಬರೆದು ಪ್ರಚಾರ ಕೊಟ್ಟವರು ಕನ್ನಡಿಗರಾದ ಎಂ.ವಿ.ಕಾಮತ್. ಅವರು ಆ ಪತ್ರಿಕೆಗೆ ಆಗ ಸಂಪಾದಕರಾಗಿದ್ದರು.

೧೯೩೫ರಲ್ಲಿ 'ಸದಾರಮೆ' ಒಂದೇ ಚಿತ್ರ ಬಿಡುಗಡೆಯಾದರೆ, ೧೯೩೬ರಲ್ಲಿ 'ಸಂಸಾರ ನೌಕ' ಒಂದೇ ತೆರೆ ಕಂಡಿತು.

ಈ ಅವಧಿಯಲ್ಲಿ (೧೯೩೬) ಪ್ರಪಂಚದ, ಭಾರತದ ಅತ್ಯುತ್ತಮ ಚಿತ್ರಗಳು ತೆರೆಕಂಡಿದ್ದವು. ಅವೇನೂ ಕನ್ನಡನಾಡಿಗೆ ಅಪರಿಚಿತವಲ್ಲ. ಪುಣೆಯ ಪ್ರಭಾತ್ ಕಂಪನಿಯವರ 'ಅಮರ ಜ್ಯೋತಿ', ಬಾಂಬೆ ಟಾಕೀಸ್‌ನವರ 'ಅಛೂತ್‌ಕನ್ಯಾ' ತೆರೆಕಂಡಿತ್ತು. ಶೇಕ್ಸ್‌ಪಿಯರ್‌ನ 'ಮಿಡ್ ಸಮ್ಮರ್ ನೈಟ್ಸ್ ಡ್ರೀಮ್', ಲೂಯಿ ಪಾಶ್ಚರನ ಜೀವನವನ್ನು ಕುರಿತ ಚಿತ್ರ, ಚಾಪ್ಲಿನ್ನನ 'ಮಾಡರನ್ ಟೈಂಸ್' ಮೊದಲಾದ ಮಹತ್ವದ ಚಿತ್ರಗಳು ತೆರೆಕಂಡಿದ್ದವು. ಯಾವ ಸೌಲಭ್ಯವೂ ಇಲ್ಲದ ಅಥವಾ ತಂತ್ರಜ್ಞಾನದ ತಿಳಿವಳಿಕೆ ಇಲ್ಲದ ಕನ್ನಡ ಚಿತ್ರರಂಗ ಇನ್ನೂ ಅಂಬೆಗಾಲು ಇಡುವಷ್ಟೂ ಬೆಳೆದಿರಲಿಲ್ಲವಾಗಿ ಯಾವ ಶ್ರೇಷ್ಠ ಚಿತ್ರಗಳೂ ನಮಗೆ ಸ್ಫೂರ್ತಿಯಾಗುವ ಸಾಧ್ಯತೆಯೇ ಇರಲಿಲ್ಲ.

೧೯೩೬ನೇ ಜೂನ್ ತಿಂಗಳಲ್ಲಿ ಮತ್ತೊಂದು ಮಹತ್ವದ ಘಟನೆ ಸಂಭವಿಸಿತು. ಬೆಂಗಳೂರಿನ ಮಲ್ಲೇಶ್ವರಂ ಬಡಾವಣೆಯಲ್ಲಿ ಸಾಹುಕಾರ್ ತಿಮ್ಮಯ್ಯನವರು ಮೈಸೂರು ಸೌಂಡ್ ಸ್ಟುಡಿಯೋ ಸ್ಥಾಪಿಸಿದರು. ಆ ಕಾಲಕ್ಕೆ ಎಪ್ಪತ್ತೈದು ಸಾವಿರ ರೂಪಾಯಿಗಳಷ್ಟು ವೆಚ್ಚವಾಗಿತ್ತು. ತಿಮ್ಮಯ್ಯನವರು ಮೈಸೂರಿನಲ್ಲಿ ಅಪೆರಾ, ಕೃಷ್ಣಾ ಟಾಕೀಸ್‌ಗಳನ್ನು, ತಮಿಳುನಾಡಿನ ವೆಲ್ಲೂರಿನಲ್ಲಿ ಆಪೆರಾ ಎಂಬ ಚಿತ್ರಮಂದಿರವನ್ನು ನಡೆಸುತ್ತಿದ್ದರು. ಸಾರಿಗೆ ಬಸ್‌ಗಳ ಮಾಲೀಕರೂ ಆಗಿದ್ದರು.



ದಕ್ಷಿಣದ ಪ್ರಥಮ ಸಾಮಾಜಿಕ ಚಿತ್ರದ ರೂವಾರಿಗಳು
(ಚಿತ್ರ ೧೬) ಹೆಚ್.ಎಲ್.ಎನ್.ಸಿಂಹ. (ಚಿತ್ರ ೧೭) ಕೆ.ರಾಜಗೋಪಾಲಚೆಟ್ಟಿಯಾರ್

ಅವರು 'ಭಕ್ತಧ್ರುವ'ದಲ್ಲಿ ಅಭಿನಯಿಸಿದ್ದ ಕನಕಲಕ್ಷ್ಮಮ್ಮನವರ ನೆರವಿನಿಂದ ಆಕೆಯ ಸೋದರ ಟಿ.ದ್ವಾರಕಾನಾಥರನ್ನು ಸಂಪರ್ಕಿಸಿದರು. ಟಿ.ದ್ವಾರಕಾನಾಥ್ ಮದರಾಸಿನಲ್ಲಿ ವಿಜಯಾ ಸಿನಿ ಲ್ಯಾಬೊರೇಟರೀಸ್ ಎಂಬ ಸಂಸ್ಥೆಯನ್ನು ನಡೆಸುತ್ತಿದ್ದರು. ಅವರು ಮೊದಲು ಮುಂಬಯಿನಲ್ಲಿ ಸಾಗರ್ ಫಿಲಂ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದರು. ಮದರಾಸಿಗೆ ಹಿಂದಿರುಗಿ 'ಪ್ರೇಮವಿಜಯಂ' ತೆಲುಗು ಚಿತ್ರವನ್ನು ನಿರ್ದೇಶಿಸಿ ಮದರಾಸಿನಲ್ಲೇ ನೆಲೆಸಿದ್ದರು. ದ್ವಾರಕಾನಾಥರಿಗೆ ತಮ್ಮ ತಾಯ್ನಾಡಿಗೆ ಮರಳಿ ಕೆಲಸ ಮಾಡುವ ಒಲವೂ ಇದ್ದುದರಿಂದ ತಿಮ್ಮಯ್ಯನವರ ಕೋರಿಕೆ ಮನ್ನಿಸಿ ಬೆಂಗಳೂರಿಗೆ ಬಂದರು. ಅವರು ಧ್ವನಿಗ್ರಹಣ ತಜ್ಞರೂ ಆಗಿದ್ದುದರಿಂದ ಸ್ಟುಡಿಯೋ ನಿರ್ಮಿಸಲು ಎಲ್ಲ ನೆರವನ್ನೂ ಕೊಟ್ಟರು ಮತ್ತು ಮೇಲ್ವಿಚಾರಣೆಯನ್ನು ನಿರ್ವಹಿಸಲು ಒಪ್ಪಿದರು. ಆ ಸ್ಟುಡಿಯೋದಲ್ಲಿ ಒಂದು ಬೆಲ್ ಅಂಡ್ ಹೊವೆಲ್ ಕ್ಯಾಮರಾ, ಆಡಿಯೋ ಕಾಮೆಕ್ಸ್ ಜರ್ಮನ್ ರೆಕಾರ್ಡಿಂಗ್ ಉಪಕರಣ, ಪ್ರಿಂಟಿಂಗ್ ಮೆಷಿನ್, ಕೈನಿಂದ ನಡೆಸುವ ಲ್ಯಾಬೊರೇಟರಿ ಮತ್ತು ಚಿತ್ರೀಕರಣಕ್ಕೆ ಒಂದು ಫ್ಲೋರ್ ಇತ್ತು. ಹಗಲು, ರಾತ್ರಿ ಎರಡೂ ವೇಳೆ ಚಿತ್ರೀಕರಣಕ್ಕೆ ಅನುಕೂಲವಾಗುವಂತೆ ಛಾವಣಿ ಹೊದಿಸಿದ ಫ್ಲೋರ್ ಒಂದನ್ನು ನಿರ್ಮಿಸಿದ್ದರು.

ಈ ಸಂಸ್ಥೆ ತಯಾರಿಸಿದ ಚಿತ್ರ 'ರಾಜಸೂಯ ಯಾಗ' ಸಂಪೂರ್ಣವಾಗಿ ಸ್ಥಳೀಯವಾಗಿಯೇ ತಯಾರಾದ ಪ್ರಥಮ ವಾಕ್ಚಿತ್ರ. ರಂಗಭೂಮಿಯ ಆಂದಿನ ಹೆಸರಾಂತ ಕಲಾವಿದರಾದ ಕೆ.ಆರ್.ಸೀತಾರಾಂ, ಕೆ.ವಿ.ಅಚ್ಯುತರಾವ್, ಚಾಮುಂಡೇಶ್ವರಿ ಕಂಪನಿಯ ಪ್ರಮುಖ ನಟರಾಗಿದ್ದ ಬಸವರಾಜ್ ಸಹೋದರರು, ಹೆಚ್.ಆರ್.ಹನುಮಂತರಾವ್, ನಾರಾಯಣಸ್ವಾಮಿ, ಆಸ್ಥಾನ ವಿದ್ವಾನ್ ಎಂ.ಎಸ್.ಚಂದ್ರಶೇಖರಯ್ಯ, ವಿ.ಎಸ್.ಸುಬ್ಬಯ್ಯ, ಬಿ.ಜಯಮ್ಮ, ಗುಲಾಬಿ ಮುಂತಾದವರು ಅಭಿನಯಿಸಿದರು. ಟಿ.ದ್ವಾರಕಾನಾಥರೇ ಚಿತ್ರವನ್ನು ನಿರ್ದೇಶಿಸಿದ್ದರು. ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಸಾಹಿತ್ಯ ವಿಭಾಗವನ್ನು ನೋಡಿಕೊಂಡರು. ಹೆಚ್.ಆರ್.ಪದ್ಮನಾಭಶಾಸ್ತ್ರಿಗಳು ಸಂಗೀತ ನಿರ್ದೇಶಕರು. ಎಂ.ವಿ.ರಾಮನ್ ಅವರ ಸಂಕಲನವಿತ್ತು (ರಾಮನ್ ಅವರು ಅನಂತರ ತಮಿಳಿನ ಪ್ರಸಿದ್ಧ ನಿರ್ದೇಶಕರಾದರು). ಈ ಚಿತ್ರದ ತಯಾರಿಕೆಗೆ ಮೂವತ್ತು ಸಾವಿರ ರೂಪಾಯಿಗಳಷ್ಟನ್ನು ವೆಚ್ಚ ಮಾಡಲಾಯಿತು. ಸುಮಾರು ಐವತ್ತು ಸಾವಿರ ಅಡಿಗಳಷ್ಟು ಕಚ್ಚಾ ಫಿಲಂ ಬಳಕೆಯಾಗಿತ್ತು. ಸಂಕಲಿಸಿದ ಅಂತಿಮ ಪ್ರತಿ ಹದಿನಾಲ್ಕು ಸಾವಿರ ಅಡಿಯಷ್ಟಿತ್ತು. ಹದಿನೆಂಟು ಹಾಡುಗಳಿದ್ದವು. ಮೂರು ಪ್ರತಿಗಳನ್ನು ತೆಗೆಯಲಾಯಿತು. ೧೯೩೭ರಲ್ಲಿ ಬೆಂಗಳೂರು ಮತ್ತು ಮೈಸೂರಿನಲ್ಲಿ ಬಿಡುಗಡೆಯಾಯಿತು. ಒಂದು ಲಕ್ಷಕ್ಕೂ ಹೆಚ್ಚು ಹಣ ಲಭಿಸಿದ್ದರಿಂದ ನಿರ್ಮಾಪಕರಿಗೆ ಲಾಭವೇ ಆಯಿತು. ಆದರೂ ಈ ಚಿತ್ರದ ಬಗ್ಗೆ ಒಳ್ಳೆಯ ವಿಮರ್ಶೆ ಬರಲಿಲ್ಲ. "ಚಿತ್ರವು ಸಹನೀಯವಾಗಿಲ್ಲ. ಅನೇಕ ವಿಷಯಗಳಲ್ಲಿ ಅಸಹ್ಯವಾಗಿದೆ. ವಿಮರ್ಶನಾ ದೃಷ್ಟಿಯಿಂದ ನೋಡಿದರೆ ಈ ಚಿತ್ರ ಕೇವಲ ಹಿಂದುಳಿದಿದೆ.." ಎನ್ನುತ್ತದೆ ಮಾರ್ಚ್ ೧೯೩೭ನೇ 'ರಂಗಭೂಮಿ' ಪತ್ರಿಕೆಯಲ್ಲಿ ಪ್ರಕಟವಾದ ವಿಮರ್ಶೆ.

'ನವೀನ ನಿರುಪಮಾ' ತಮಿಳು ಚಿತ್ರವನ್ನು ತಿಮ್ಮಯ್ಯನವರೇ ನಿರ್ಮಿಸಿದರು. ಅವರೇ ಅದರ ನಿರ್ದೇಶಕರಾಗಿದ್ದರು ಮತ್ತು ಚೌಧುರಿ ಎಂಬ ಹೆಸರಿನಲ್ಲಿ ನಾಯಕನಾಗಿ ಅಭಿನಯಿಸಿದರು. ಇಲ್ಲಿಯೇ ಮಡುಕಿದರು ಅನ್ನಿಸುತ್ತದೆ. ಕನ್ನಡ ಚಿತ್ರ ನಿರ್ಮಾಣಕ್ಕೆ ಇದ್ದ ಒಂದು ಸ್ಟುಡಿಯೋ ಸಹ ಮತ್ತಷ್ಟು ಕಾಲ ಜೀವಿಸಲಾಗದ ಸ್ಥಿತಿಗೆ ಬಂದು, ಮೂರನೆಯ ಚಿತ್ರದ ಸಿದ್ಧತೆಯಲ್ಲಿರುವಾಗಲೇ ಮುಚ್ಚಿಹೋಯಿತು.

೧೯೩೭ರಲ್ಲಿ ಮೂರು ಚಿತ್ರಗಳು ಮಾತ್ರ ಸಿದ್ಧವಾದವು. ಅವು 'ಚಿರಂಜೀವಿ'[1], 'ಪುರಂದರದಾಸ', 'ರಾಜಸೂಯಯಾಗ'.

ಕರ್ನಾಟಕ ಸಂಗೀತಕ್ಕೆ ಪಿತಾಮಹರೆನಿಸಿದ ದಾಸವರೇಣ್ಯ ಪುರಂದರದಾಸರನ್ನು ಕುರಿತ ಚಿತ್ರಕ್ಕೆ ಕನ್ನಡ ರಂಗಭೂಮಿಯಲ್ಲಿ ಭಕ್ತಿರಸ ಪ್ರಧಾನ ನಾಟಕವೆಂದು ಪ್ರಸಿದ್ಧವಾಗಿದ್ದ 'ಪುರಂದರದಾಸರು' ನಾಟಕವೇ ಆಧಾರ. 'ಸಂಸಾರ ನೌಕ' ಚಿತ್ರವನ್ನು ತಯಾರಿಸಿದ ದೇವಿ ಫಿಲಂಸ್‌ನವರೇ ಇದನ್ನು ನಿರ್ಮಿಸಿದರು. ಚಿತ್ರದಲ್ಲಿ ತ್ರಿಪುರಾಂಬ, ಬಾಲಕೃಷ್ಣರಾವ್, ಎಸ್.ಆರ್.ವಾಸುದೇವರಾವ್, ಬಿ.ಕೃಷ್ಣಸ್ವಾಮಿ ಅಯ್ಯಂಗಾರ್,

೧. ಇದುವರೆಗೆ 'ಚಿರಂಜೀವಿ' ೧೯೩೬ರಲ್ಲಿ ತೆರೆ ಕಂಡದ್ದೆಂದು ತಪ್ಪು ದಾಖಲೆಗಳಾಗಿವೆ.

ದೇವಿ ಪಾತ್ರವಹಿಸಿದ್ದರು. ಬೆಳ್ಳಾವೆ ನರಹರಿಶಾಸ್ತ್ರಿ ಸಾಹಿತ್ಯವಿಭಾಗ ನಿರ್ವಹಿಸಿದ್ದರು. ಬಿ.ಚವ್ಹಾಣ್ ನಿರ್ದೇಶಕರು. ಚಿತ್ರ ಅಂಥ ಯಶಸ್ವೀ ಅನ್ನಿಸಲಿಲ್ಲ. ಸೇಲಂನವರಾದ ನಿರ್ಮಾಣ ನಿರ್ವಾಹಕ ರಾಜಗೋಪಾಲ ಚೆಟ್ಟಿ ಅವರಿಗೆ ಕನ್ನಡದಲ್ಲಿ ಪ್ರೀತಿ. ಮನೆಯಲ್ಲೂ ತಮಿಳು ಮಿಶ್ರಿತ ಕನ್ನಡ ಮಾತನಾಡುತ್ತಿದ್ದರಂತೆ. 'ಸಂಸಾರನೌಕ', 'ಪುರಂದರದಾಸರು' ಚಿತ್ರ ನಿರ್ಮಿಸಲು ಅವರ ಕನ್ನಡದ ಬಗೆಗಿನ ಅಭಿಮಾನವೇ ಕಾರಣ. ಆದರೆ ಮತ್ತೆ ಚಿತ್ರ ತಯಾರಿಸಲಾಗದಂಥ ಸೋಲನ್ನು ಕೊಟ್ಟಿತ್ತು 'ಪುರಂದರದಾಸ'. ಒಬ್ಬ ಸಹೃದಯಿ ನಿರ್ಮಾಪಕ ಹೀಗೆ ಕರಗಿ ಹೋದ.

ಮೈಸೂರಿನ ಅರಸರು ಜರ್ಮನಿಗೆ ಹೋಗಿದ್ದಾಗ ಪರಿಚಯವಾದ ಅಲ್ಲಿಯ ಫಿಲಂ ಕಂಪನಿಯೊಂದು ಮೈಸೂರಿಗೆ ಬಂದು ಇಲ್ಲಿಯ ಅರಣ್ಯಗಳ, ಉದಯಪುರ ಅರಮನೆಯ ಚಿತ್ರಗಳನ್ನು ಚಿತ್ರಿಸಿಕೊಂಡಿತು. ಮೈಸೂರು ಸಂಸ್ಥಾನದಲ್ಲೇ ಮೂರು ವಾರಗಳ ಕಾಲ ಇದ್ದು ಚಿತ್ರೀಕರಣ ಕೆಲಸ ಮುಗಿಸಿತ್ತು. ಮೈಸೂರು ಆರೋಗ್ಯ ಇಲಾಖೆಯವರು ಆರೋಗ್ಯ ಮಾಹಿತಿ ಇರುವ ಸಾಕ್ಷ್ಯಚಿತ್ರಗಳನ್ನು ತಯಾರಿಸಿ ಪ್ರದರ್ಶಿಸುವ ಮೂಲಕ ಈ ಮಾಧ್ಯಮವನ್ನು ಸಮರ್ಥವಾಗಿ ಬಳಸಿಕೊಂಡರೆಂದೂ, ಆವನಿಜಾತ್ರೆ, ಮುಳಬಾಗಿಲು, ನಂಗಲಿ, ಬೇತಮಂಗಲ, ಚಿನ್ನದಗಣಿ, ಮೇಲುಕೋಟೆ ಜಾತ್ರೆ, ಬಸರಾಳು, ಬೆಂಗಳೂರು ಸಿಟಿ ಮೊದಲಾದೆಡೆ ಸಂಚರಿಸುತ್ತಿದ್ದರು - ಎಂದು 'ವೃತ್ತಾಂತ ಪತ್ರಿಕೆ' ೧೯೩೭ರ ಮಾರ್ಚ್ ೧೧ರಲ್ಲಿ ವರದಿ ಮಾಡಿತ್ತು.

ಇದೇ ಅವಧಿಯಲ್ಲಿ ದೇವಿಕಾರಾಣಿ ಅಭಿನಯದ ಹಿಂದಿ ಚಿತ್ರ 'ಅಛೂತ್ ಕನ್ಯಾ' ಪ್ಯಾರಾಮೌಂಟ್ ಚಿತ್ರಮಂದಿರದಲ್ಲಿ ತೆರೆಕಂಡಿತು. ಆಕೆಯನ್ನು ಗ್ರೇಟಾಗಾರ್ಬೋಳಿಗೆ ಹೋಲಿಸಿ ಪತ್ರಿಕೆಗಳು ಕೊಂಡಾಡಿದವು. ಅದೇ ಹೊತ್ತಿನಲ್ಲಿ ಮೆಜೆಸ್ಟಿಕ್ ಚಿತ್ರಮಂದಿರದಲ್ಲಿ ತೆರೆಕಂಡು ಜನಮೆಚ್ಚುಗೆ ಪಡೆದ ಇನ್ನೊಂದು ಚಿತ್ರ



(ಚಿತ್ರ ೧೮) ಕನ್ನಡದ ಹಳೆಯ ವಾಕ್ಚಿತ್ರ 'ರಾಜಸೂಯ ಯಾಗ'. ಬೆಂಗಳೂರಿನಲ್ಲಿದ್ದ ಮೈಸೂರು ಸೌಂಡ್ ಸ್ಟುಡಿಯೋಸ್‌ನಲ್ಲಿ ಚಿತ್ರದ ಚಿತ್ರಣಕ್ಕಾಗಿ ನಿರ್ಮಿಸಲಾದ ಅರಮನೆ ಸೆಟ್‌ನಲ್ಲಿ ಚಲನಚಿತ್ರ ನಿರ್ಮಾಣದಲ್ಲಿ ತೊಡಗಿದ್ದವರ ಒಂದು ಸ್ನೇಹ ಕೂಟ. ಚಿತ್ರದ ಎಡ ತುದಿಯ ಮೇಜಿನ ಮುಂದೆ ಕುಳಿತಿರುವವರು ಸ್ಟುಡಿಯೋ ಮಾಲಿಕ ಎ.ತಿಮ್ಮಯ್ಯ ಮತ್ತು ನಿರ್ದೇಶಕ ಟಿ.ದ್ವಾರಕಾನಾಥ್. ಇಂದ್ರಪ್ರಸ್ಥದಲ್ಲಿ ಪಾಂಡವರಿಗಾಗಿ ಅರಮನೆಯನ್ನು ನಿರ್ಮಿಸುವಂತೆ ಕೃಷ್ಣನು ಮಯನಿಗೆ ಆದೇಶಿಸುತ್ತಾನೆ. ಖಾಂಡವದಹನ ಕಾಲದಲ್ಲಿ ತನ್ನನ್ನು ಕಾಪಾಡಿದುದಕ್ಕೆ ಮಯನು ವಿಶ್ವಕರ್ಮನೊಡಗೂಡಿ ಪಾಂಡವರಿಗಾಗಿ ಲೋಕೋತ್ತರವಾದ ಸೌಧವನ್ನು ನಿರ್ಮಿಸುತ್ತಾನೆ. ಈ ಮಂದಿರ ಕೌತುಕಪೂರ್ಣವಾದುದು. ಈ ಮಂದಿರದಲ್ಲಿ ಕಾಣುವುದೆಲ್ಲ ಮಿಥ್ಯೆ. ದ್ವಾರವೆಂದು ಹೋದರೆ ಅಲ್ಲಿ ಗೋಡೆ, ನೆಲವೆಂದು ಕಾಲಿಟ್ಟರೆ ನೀರಿನ ಹೊಂಡ. ರಾಜಸೂಯ ಯಾಗಕ್ಕೆ ಬಂದ ದುರ್ಯೋಧನ ಈ ಮಾಯಾಸೌಧದಲ್ಲಿ ನೆಲವೆಂದು ಭ್ರಮಿಸಿ ನೀರಿನ ಹೊಂಡದಲ್ಲಿ ಬೀಳುತ್ತಾನೆ. ಅದನ್ನು ಕಂಡ ದ್ರೌಪದಿ ದುರ್ಯೋಧನನನ್ನು ಕುರುಡನ ಮಗನೆಂದು ಛೇಡಿಸುತ್ತಾಳೆ. ದುರ್ಯೋಧನ ಕೆರಳುತ್ತಾನೆ. ಮಹಾಭಾರತದಲ್ಲಿ ನಡೆವ ದ್ರೌಪದಿ ವಸ್ತ್ರಾಪಹರಣ ಪ್ರಸಂಗ ಇತ್ಯಾದಿಗಳಿಗೂ ಇದೇ ಕಾರಣವಾಗುತ್ತದೆ. ದುರ್ಯೋಧನ ನೆಲವೆಂದು ಭ್ರಮಿಸಿ ಬೀಳುವ ನೀರಿನ ಹೊಂಡವನ್ನು ಸೆಟ್‌ನಲ್ಲಿ ಕಾಣಬಹುದು.



(ಚಿತ್ರ ೧೯) 'ಚಿರಂಜೀವಿ' ಚಿತ್ರದಲ್ಲಿ ಬಸವರಾಜ್ ಮನ್ಸೂರ್, ಮಳವಳ್ಳಿ ಸುಂದರಮ್ಮ, ದೇವುಡು ನರಸಿಂಹಶಾಸ್ತ್ರಿ, ಮಾ|ನಾರಾಯಣ

'ಅಮರಜ್ಯೋತಿ'. ಇವೆರಡೂ ಬೇರೆ ಭಾಷೆಯವೇ ಆದರೂ ಅವು ಹೇಳುತ್ತಿದ್ದ ಸಂದೇಶಗಳು ಮುಖ್ಯವೆನಿಸಿದವು.

೧೯೩೬ರಲ್ಲೇ ಕರ್ನಾಟಕ ಟಾಕೀಸ್ ಧಾರವಾಡ ಇವರು ದೇವುಡು ಅವರಿಂದ ರಚಿತವಾದ 'ಮಾರ್ಕಂಡೇಯ' ನಾಟಕವನ್ನು 'ಚಿರಂಜೀವಿ' ಎಂಬ ಹೆಸರಿನಲ್ಲಿ ಚಲನಚಿತ್ರ ತೆಗೆಯುವರೆಂಬ ಸುದ್ದಿ ಇತ್ತು. ೧೯೩೭ರಲ್ಲಿ 'ಚಿರಂಜೀವಿ' ತೆರೆಗೆ ಬಂತು. ಕರ್ನಾಟಕ ಟಾಕೀಸ್ ಅನ್ನು ಕ್ಯಾನರೀಸ್ ಟಾಕೀಸ್ ಎಂತಲೂ ಕರೆಯುತ್ತಾರೆ. 'ಚಿರಂಜೀವಿ' ಅಥವಾ 'ಭಕ್ತ ಮಾರ್ಕಂಡೇಯ' ಉತ್ತರ ಕರ್ನಾಟಕದವರು ತಯಾರಿಸಿದ ಮೊದಲ ಕನ್ನಡ ಚಿತ್ರ. ವಿ.ಎ.ಮುಧೋಳ್ಕರ್ ನಿರ್ಮಾಪಕರು. ದೇವುಡು ನರಸಿಂಹಶಾಸ್ತ್ರಿ ಈ ಚಿತ್ರವನ್ನು ಚೊಕ್ಕವಾಗಿ ರೂಪಿಸಲು ತುಂಬ ಶ್ರಮವಹಿಸಿದರು. ಸ್ವತಃ ದೇವುಡು ಅವರೇ ಮೃಕಂಡು ಮುನಿಯ ಪಾತ್ರವನ್ನು ಅಭಿನಯಿಸಿದರು. ಸುಪ್ರಸಿದ್ಧ ಹಿಂದೂಸ್ತಾನಿ ಗಾಯಕ ಬಸವರಾಜ ಮನ್ಸೂರ್, ಅಮೀರ್‌ಬಾಯಿ ಕರ್ನಾಟಕಿ, ಆರ್.ಎಸ್.ಮೂರ್ತಿ, ಶಾರದಾ ಮುಂತಾದವರು ಅಭಿನಯಿಸಿದ್ದರು. ಪ್ರಸಿದ್ಧ ಸಾಹಿತಿ/ರಾಜಕೀಯದಲ್ಲೂ ಧುರೀಣರಾಗಿದ್ದ ಮುದವೀಡು ಕೃಷ್ಣರಾಯರು ಕೋಣನ ಮೇಲೆ ಕುಳಿತು ಯಮನ ಪಾತ್ರದಲ್ಲಿ ಅರ್ಭಟಿಸಿ, ಪಾಶವನ್ನು ಬೀಸಿದ್ದು ಆ ದಿನಗಳಲ್ಲಿ ವಿಶೇಷವೇ ಅನ್ನಿಸಿತ್ತು. ಹಾರ್ಮೋನಿಯಂ ಶೇಷಗಿರಿರಾಯರ ಸಂಗೀತ ನಿರ್ದೇಶನ. ಬಹುತೇಕ ಎಲ್ಲ ಗೀತೆಗಳೂ ಶಾಸ್ತ್ರೀಯವಾಗೇ ಇದ್ದವು. ಅಂಥ ಸಂಗೀತವನ್ನು ಒಪ್ಪಿಕೊಳ್ಳುವ ಪ್ರೇಕ್ಷಕರೂ ಇದ್ದರು. ತುಂಬ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಒಂದು ದೃಶ್ಯದಲ್ಲಿ ನಾಯಕಿಯ ಹಿಂದೆ, ಇನ್ನೊಮ್ಮೆ ಮುಂಭಾಗದಲ್ಲಿ ಚರಕಾ ಇದೆ. ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ಕನ್ನಡ ಚಿತ್ರವೊಂದು ಹೀಗೆ ಚರಕಾವನ್ನು ತಂದಿದ್ದು ಗಮನಾರ್ಹ. ದೇವುಡು, ಮುದವೀಡರು ತೊಡಗಿಕೊಂಡದ್ದೂ ಇದಕ್ಕೆ ಕಾರಣವಾಗಿರಬಹುದು.

ಈ ಚಿತ್ರದಲ್ಲಿ ಶೇಷಗಿರಿರಾಯರ ಮಗ ನಾರಾಯಣ ಮಾರ್ಕಂಡೇಯನ ಪಾತ್ರದಲ್ಲಿ ಸೊಗಸಾಗಿ ಅಭಿನಯಿಸಿದ್ದರು. ಗೀತೆಗಳನ್ನೂ ಹಾಡಿದ್ದರು. "...ವಾದ್ಯಗೋಷ್ಠಿಯವರು ಟ್ರಾಲಿಯಲ್ಲಿ ಕುಳಿತು ನುಡಿಸಬೇಕು. ಪಾತ್ರಧಾರಿಗಳು ಹಾಡುವಾಗ ಟ್ರಾಲಿಯ ಮುಂದೆ ಹೋಗಿ ನಿಲ್ಲಬೇಕು. ಬಹುತೇಕ ಚಿತ್ರದ ಕಥಾನಿರೂಪಣೆ, ನಿರ್ದೇಶನ ಶೈಲಿ ಎಲ್ಲ ರಂಗಭೂಮಿಯ ಛಾಯೆ, ಮರುರೂಪಗಳಾಗಿದ್ದವು..." ಎಂದಿದ್ದಾರೆ ಸಂಗೀತ ನಿರ್ದೇಶಕ ಹಾರ್ಮೋನಿಯಂ ಶೇಷಗಿರಿರಾಯರು (ಸಂದರ್ಶನ). ಪುಣೆಯ ಸರಸ್ವತಿ ಸಿನಿಟೋನ್‌ನಲ್ಲಿ ನಾಲ್ಕು ತಿಂಗಳ ಕಾಲ ಚಿತ್ರೀಕರಣ ನಡೆಯಿತು. ಈ ಚಿತ್ರದ ನಿರ್ದೇಶಕರು ಕೆ.ಪಿ.ಭಾವೆ. ಛಾಯಾಗ್ರಾಹಕರು ಪುರೋಹಿತ್.

೧೯೩೭ರ ಜೂನ್ ತಿಂಗಳಲ್ಲಿ ಈ ಚಿತ್ರ ಬೆಂಗಳೂರಿನ ಮೆಜೆಸ್ಟಿಕ್ ಚಿತ್ರಮಂದಿರದಲ್ಲಿ ತೆರೆಕಂಡಿತು, ಸಾಧಾರಣ ಎನಿಸಿಕೊಂಡಿತು. ಸರ್ ಸಿ.ವಿ.ರಾಮನ್, ಸರ್ ಕೆ.ಪಿ.ಪುಟ್ಟಣ್ಣಚೆಟ್ಟಿ, ಬಿ.ಎಂ.ಶ್ರೀಕಂಠಯ್ಯ ಮೊದಲಾದ ಗಣ್ಯರು ಈ ಚಿತ್ರವನ್ನು ವೀಕ್ಷಿಸಿ ಮಳವಳ್ಳಿ ಸುಂದರಮ್ಮನವರ ಪಾತ್ರನಿರ್ವಹಣೆಯನ್ನು ಪ್ರಶಂಸಿಸಿದ್ದರು. ಬಿ.ಎಂ.ಶ್ರೀಕಂಠಯ್ಯ ಅವರು ಸುಂದರಮ್ಮನವರಿಗೆ ಸ್ವರ್ಣಪದಕ ನೀಡಿ ಗೌರವಿಸಿದರು.

ಕನ್ನಡ ಚಿತ್ರಗಳು ಇನ್ನೂ ಹೆಚ್ಚು ಹೆಚ್ಚು ಬರಬಹುದೆನ್ನುವ ನಿರೀಕ್ಷೆಯಲ್ಲಿರುವಾಗಲೇ ಯುದ್ಧದ ಸುದ್ದಿ ಬಂತು. ಇಲ್ಲಿಂದ ಮುಂದೆ ಬರೀ ಸಮಸ್ಯೆಗಳೇ ಎದುರಾದವು.

ಈ ಅವಧಿಯಲ್ಲಿ ನೆರೆ ಹೊರೆಯಲ್ಲಿ ಕೆಲವು ಮುಖ್ಯ ಸಂಗತಿಗಳು ಘಟಿಸಿದವು. ೧೯೩೮ರಲ್ಲಿ ದಿ ಸೌತ್ ಇಂಡಿಯನ್ ಫಿಲಂ ಚೇಂಬರ್ ಆಫ್ ಕಾಮರ್ಸ್ ಮತ್ತು ಇಂಡಿಯನ್ ಮೋಷನ್ ಪಿಕ್ಚರ್ಸ್ ಡಿಸ್ಟ್ರಿಬ್ಯೂಟರ್ಸ್ ಅಸೋಸಿಯೇಷನ್ (IMPDA) ಪ್ರಾರಂಭವಾದವು.

ಇದೇ ವರ್ಷ ಭಾರತೀಯ ಚಲನಚಿತ್ರೋದ್ಯಮದ ಬೆಳ್ಳಿಹಬ್ಬವನ್ನು ಆಚರಿಸಲಾಯಿತು. ಇದು ಸಾಮಾನ್ಯವಾಗಿ ಫಾಲ್ಕೆ ಅವರ 'ರಾಜಾ ಹರಿಶ್ಚಂದ್ರ' ತೆರ ಕಂಡ ದಿನದಿಂದ ಗುರುತಿಸಲಾಗುತ್ತದೆ. ಇದೇ ಅವಧಿಯಲ್ಲಿ ಫಿಲಂ ಅಡ್ವೈಸರಿ ಬೋರ್ಡ್ ಪ್ರಾಯೋಜಿಸಿದ ವಾಡಿಯಾ ಮೂವಿಟೋನ್ ಅವರಿಂದ ಸ್ಕ್ರೀನ್ ಗೆಜೆಟ್ ಪ್ರಾರಂಭವಾಯಿತು. ಈ ಗೆಜೆಟ್‌ಗಾಗಿ ಪಿ.ವಿ.ಪಾಥೆ ಅವರು ಹರಿಪುರ ಕಾಂಗ್ರೆಸ್ ಬಗ್ಗೆ ಮೂರು ರೀಲಿನ ಸಾಕ್ಷ್ಯ ಚಿತ್ರ ತಯಾರಿಸಿದರು.

೧೯೩೯ರಲ್ಲಿ ಬ್ರಿಟಿಷ್ ಸರ್ಕಾರ 'ಭಾರತದ ಹೆಸರಿನಲ್ಲಿ' ಜರ್ಮನಿಯ ವಿರುದ್ಧ ಯುದ್ಧವನ್ನು ಘೋಷಿಸಿತು. ದ್ವಿತೀಯಪ್ರಪಂಚ ಯುದ್ಧದ ಕಾವು ದೇಶವಾದ್ಯಂತ ಹರಡಿತು. ಮಾರನೆಯ ವರ್ಷ (೧೯೪೦) ಕಚ್ಚಾ ಫಿಲಂ ಬಳಕೆಯನ್ನು ನಿಯಂತ್ರಿಸಲು ಸರ್ಕಾರ ಚಲನಚಿತ್ರ ಸಲಹಾ ಮಂಡಳಿ (Film Advisory Board) ರಚಿಸಿ ಅದಕ್ಕೆ ಕಚ್ಚಾ ಫಿಲಂ ವಿತರಣೆ ಇತ್ಯಾದಿಗಳ ಬಗೆಗೆ ಪೂರ್ಣ ಅಧಿಕಾರ ನೀಡಿತು.

ಈ ಮಧ್ಯೆ ಜವಹರಲಾಲ್ ನೆಹರೂ ಅವರು ಬ್ರಿಟಿಷ್ ಸರ್ಕಾರದ ಯುದ್ಧ ಘೋಷಣೆಯ ಬಗ್ಗೆ ತೀವ್ರವಾಗಿ ಪ್ರತಿಭಟಿಸಿದರು (೧೯೪೦). ಅವರು "ಫ್ಯಾಸಿಸಂ ಹಾಗೂ ವಸಾಹತುಶಾಹಿ ಎರಡನ್ನೂ ವಿರೋಧಿಸುತ್ತೇವೆ" ಎಂದರು, ಮತ್ತು ಸ್ವತಂತ್ರ ಭಾರತದ ಪರಿಕಲ್ಪನೆಯನ್ನು ಮತ್ತೆ ಉಚ್ಚರಿಸಿ ಬ್ರಿಟಿಷ್ ಸರ್ಕಾರದ ಅತಿ ವ್ಯಾಪ್ತಿಯ ಧೋರಣೆಯನ್ನು ಖಂಡಿಸಿದರು. ಈ ಹಿನ್ನೆಲೆಯಲ್ಲಿ ಭಾರತೀಯ ಚಿತ್ರೋದ್ಯಮ ಕೆಲವು ಸಮಸ್ಯೆಗಳನ್ನು ಎದುರಿಸುವುದು ಅನಿವಾರ್ಯವಾಯಿತು. ಸ್ವಾತಂತ್ರ್ಯ ಚಳವಳಿಯನ್ನು ನೇರವಾಗಿ ಅಥವಾ ಪರೋಕ್ಷವಾಗಿ ಮಾತುಗಳಿಂದಾಗಲಿ, ಚಿತ್ರಗಳಿಂದಾಗಲಿ ಬೆಂಬಲಿಸುವಂಥ ಚಲನಚಿತ್ರಗಳ ಮೇಲೆ ಸೆನ್ಸಾರ್‌ಷಿಪ್ ಅನ್ನು ತೀವ್ರಗೊಳಿಸಲಾಯಿತು. ಇದೇ ವರ್ಷ ಆಕಾಶವಾಣಿಯಲ್ಲಿ ಹಾರ್ಮೋನಿಯಂ ಬಹಿಷ್ಕರಿಸಲಾಯಿತು. ಪುನಃ ಚಲಾವಣೆಗೆ ಬರಲು ಕೆಲವು ದಶಕಗಳೇ ಬೇಕಾದವು.

ಯುದ್ಧದ ಕಾವು, ಸ್ವಾತಂತ್ರ್ಯ ಚಳವಳಿಯ ಬಿಸಿ ಹೆಚ್ಚಿದಂತೆ ಸುಭಾಷ್ ಚಂದ್ರ ಬೋಸರು ಗೃಹಬಂಧನದಿಂದ ತಪ್ಪಿಸಿಕೊಂಡು ಜರ್ಮನಿಗೆ ಹೋಗಿ ಹಿಟ್ಲರನನ್ನೇ ಭೇಟಿ ಮಾಡಿದರು. ಆಗ್ನೇಯ ಏಷ್ಯಾದಲ್ಲಿ ಸೇನೆಯೊಂದನ್ನು ಸಂಘಟಿಸುವ ಬೋಸರ ಪ್ರಯತ್ನವನ್ನು ಹಿಟ್ಲರ್ ಅನುಮೋದಿಸಿದ. ಈ ಸಮಯದಲ್ಲೇ ಭಾರತಕ್ಕೆ ಸರ್ ಸ್ಟಾಫರ್ಡ್‌ಕ್ರಿಪ್ಸ್ ಭೇಟಿ ಇತ್ತರು. ಯುದ್ಧದ ನಂತರ ಭಾರತಕ್ಕೆ ಸ್ವಾತಂತ್ರ್ಯ ನೀಡುವುದಾಗಿ ಭರವಸೆ ನೀಡಿದರು. ಆದರೆ ಈ ಯೋಜನೆಯಲ್ಲಿ ರಾಷ್ಟ್ರ ವಿಭಜನೆಯ ಅಂಶವೂ ಸೇರಿತ್ತು. ಕಾಂಗ್ರೆಸ್ ಅದನ್ನು ತಿರಸ್ಕರಿಸಿತು. ೧೯೪೨ರ ಆಗಸ್ಟ್‌ನಲ್ಲಿ 'ಕ್ವಿಟ್ ಇಂಡಿಯಾ' ಚಳವಳಿಯನ್ನು ಘೋಷಿಸಲಾಯಿತು. ಯುದ್ಧ ಮುಗಿದು ಮೂರು ವರ್ಷಗಳ ನಂತರ ವಿ.ಶಾಂತಾರಾಂ ರಾಜಕಮಲ್ ಕಲಾಮಂದಿರ ಸ್ಟುಡಿಯೋ ಸ್ಥಾಪಿಸಿ 'ಡಾ|ಕೊಟ್ನಿಸ್‌ಕಿ ಅಮರ್ ಕಹಾನಿ' ಚಿತ್ರ ತೆಗೆದರು. ತಮಿಳಿನಲ್ಲಿಯೂ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ, ದೇಶಪ್ರೇಮವನ್ನು ಪ್ರಚೋದಿಸುವ ಚಿತ್ರಗಳು ತಯಾರಾದವು. ಕನ್ನಡದಲ್ಲಿ ಇಂಥ ಪ್ರಯತ್ನಗಳೇ ಆಗಲಿಲ್ಲ. ಇದಕ್ಕೆ ಕಾರಣಗಳು ಹಲವು. ಮುಖ್ಯವಾಗಿ ಸ್ವಾತಂತ್ರ್ಯ ಚಳವಳಿಯ ತೀವ್ರತೆಯೇ ತುಂಬ ಭಿನ್ನವಾದುದಾಗಿತ್ತು. ಗಾಂಧೀಜಿಯವರ ಪ್ರಭಾವ ಇತ್ತು, ಖಾದಿ ಪ್ರಚಾರ, ಅಸ್ಪೃಶ್ಯತೆಯ ನಿವಾರಣೆ, ಪಾನನಿರೋಧ ಇವೇ ಮೊದಲಾದ ಅಂಶಗಳನ್ನು ಗಂಭೀರವಾಗಿ ಪರಿಗಣಿಸಲಾಯಿತು. 'ಕರನಿರಾಕರಣೆ'ಯಂಥ ವಿಚಾರಗಳಲ್ಲಿ ವಿಶೇಷವಾದ ಆಸಕ್ತಿ ಇತ್ತು. ಬಹುತೇಕ ಒಂದೊಂದು ಪ್ರದೇಶದಲ್ಲಿ ಪ್ರತ್ಯೇಕವಾಗಿ, ಅಂದರೆ ಕೆಲವು ಉತ್ತರ ಕರ್ನಾಟಕಕ್ಕೆ, ಕೆಲವು ಕರಾವಳಿ ಪ್ರದೇಶಕ್ಕೆ ಹೆಚ್ಚು ಮುಖ್ಯವಾದವು. ಮೈಸೂರು ಪ್ರಾಂತ್ಯದಲ್ಲಿ ಚಳವಳಿಯ ಕಾವು ಆ ಪ್ರಮಾಣದಲ್ಲಿ ಇರಲಿಲ್ಲವೆಂದೇ ಹೇಳಬಹುದು. ಶಿವಪುರ ಸತ್ಯಾಗ್ರಹ, ಈಸೂರಿನ



(ಚಿತ್ರ ೨೦) 'ಚಿರಂಜೀವಿ' ಚಿತ್ರದ ನಿರ್ಮಾಪಕ ವಿ.ಎ.ಮುಧೋಳ್ಕರ್



(ಚಿತ್ರ ೨೧) 'ಸುಭದ್ರ' ಚಿತ್ರದಲ್ಲಿ ಬಿ.ಜಯಮ್ಮ, ಸಿ.ಹೊನ್ನಪ್ಪ ಭಾಗವತರ್ .

ಪ್ರಣಯ, ಹಾಸ್ಯ, ಯುದ್ಧ, ಚಾತುರ್ಯ, ಭಕ್ತಿ ಮೊದಲಾದ ಎಲ್ಲ ಅಂಶಗಳೂ ಇದ್ದವು. ಇದನ್ನು ಚಲನಚಿತ್ರವಾಗಿ ಸಿದ್ಧಪಡಿಸುವ ಪ್ರಯತ್ನದಲ್ಲಿ ವೀರಣ್ಣನವರು ನಾಟಕದ ಕಂಪನಿಯನ್ನು ತಮ್ಮ ಅಳಿಯಂದಿರಿಗೆ ವಹಿಸಿ ಚಿತ್ರೀಕರಣಕ್ಕಾಗಿ ಪುಣೆಗೆ ತೆರಳಿದರು. ಪ್ರಸಿದ್ಧ ಕಾದಂಬರಿಕಾರ-ನಾಟಕಕಾರ ಬಿ.ಪುಟ್ಟಸ್ವಾಮಯ್ಯ 'ಸುಭದ್ರಾ' ನಾಟಕವನ್ನು ಆಧರಿಸಿ ಈ ಚಿತ್ರದ ಕಥಾ ಹಂದರವನ್ನು ಸಿದ್ಧ ಮಾಡಿದರು. ಗೀತೆಗಳನ್ನೂ ಅವರೇ ರಚಿಸಿದರು. ತೆಲುಗಿನವರಾದ ಪಿ.ಪುಲ್ಲಯ್ಯನವರ ನಿರ್ದೇಶನವೆಂದು ಗೊತ್ತಾಯಿತು. ಪುಲ್ಲಯ್ಯ ಹಾಗೂ ಪುಟ್ಟಸ್ವಾಮಯ್ಯ ಕುತೂಹಲ ಕೆರಳಿಸುವಂತಹ ಚಿತ್ರನಾಟಕ, ಸಂಭಾಷಣೆ ಸಿದ್ಧ ಮಾಡಿದರು.

ಸಿ.ಹೊನ್ನಪ್ಪ ಭಾಗವತರು ಅರ್ಜುನನಾಗಿ, ಬಿ.ಜಯಮ್ಮ ಸುಭದ್ರೆಯಾಗಿ, ವೀರಣ್ಣನವರೇ ಹಾಸ್ಯ ಪಾತ್ರದ ಬ್ರಾಹ್ಮಣನಾಗಿ, ವಾಸುದೇವ ಗಿರಿಮಾಜಿ ಶ್ರೀಕೃಷ್ಣನಾಗಿ, ಬೇಲೂರು ರಾಘವೇಂದ್ರರಾಯರು ಬಲರಾಮನಾಗಿ, ಬಿ.ದೇವೇಂದ್ರಪ್ಪ ನಾರದನಾಗಿ ಗೊತ್ತಾದರು. ಇನ್ನು ಕೆಲವು ಪಾತ್ರಗಳಿಗೆ ಡಿ.ಜಯರಾಯರು, ಉತ್ತರ ಕರ್ನಾಟಕದ ಪ್ರಸಿದ್ಧ ರಂಗನಟಿಯಾದ ಗಂಗೂಬಾಯಿ ಗುಳೇದ ಗುಡ್ಡ,[1] ಗಂಗೂಬಾಯಿ ಗೋಕಾಕ್ ಮತ್ತು ವೀರಣ್ಣನವರ ಮಗಳು ಜಿ.ವಿ.ಮಾಲತಮ್ಮ ಮೊದಲಾದವರು ಗೊತ್ತಾದರು. ಚಿತ್ರಕ್ಕೆ ಪದ್ಮನಾಭಶಾಸ್ತ್ರಿ ಅವರ ಸಂಗೀತವಿತ್ತು. ಗೀತೆಗಳ ರಾಗ ಸಂಯೋಜನೆಯನ್ನು ಬಿ.ದೇವೇಂದ್ರಪ್ಪ ನಿರ್ವಹಿಸಿದರು. ಪುಣೆಯಲ್ಲಿ ಈ ಚಿತ್ರದ ಮುಹೂರ್ತಕ್ಕೆ ಬಂದಿದ್ದ ವಿ.ಶಾಂತಾರಾಂ ಕ್ಯಾಮರಾ ಸ್ವಿಚ್ ಆನ್ ಮಾಡಿದ್ದರು. ಹನ್ನೊಂದು ತಿಂಗಳ ಕಾಲ ಸತತವಾಗಿ ಚಿತ್ರೀಕರಿಸಲಾಯಿತು. ಸುಮಾರು ಒಂದು ಲಕ್ಷ ರೂಪಾಯಿಗಳಷ್ಟು ಖರ್ಚಾಯಿತು.

೧೯೪೧ರಲ್ಲಿ ಮೈಸೂರು ಚಾಮುಂಡೇಶ್ವರಿ ಚಿತ್ರಮಂದಿರದಲ್ಲಿ ಬಿಡುಗಡೆಯಾಗಿ ಯಶಸ್ವಿ ಚಿತ್ರ ಎನಿಸಿಕೊಂಡಿತು. ವೀರಣ್ಣನವರಿಗೆ ಅತಿಯಾದ ಲಾಭವಿಲ್ಲ. ಅಸಲಿಗೆ

ಪ್ರಕರಣ, ವಿದುರಾಶ್ವತ್ಥದ ಗೋಲಿಬಾರ್‌ನಂಥ ಬೆರಳೆಣಿಕೆಯಷ್ಟು ಪ್ರಕರಣಗಳನ್ನು ಹೆಸರಿಸಬಹುದಾಗಿದೆ. ಕೊನೆತನಕ ಇವರ ಬೇಡಿಕೆ ಜವಾಬ್ದಾರಿ ಸರ್ಕಾರವನ್ನು ಬಯಸುವಲ್ಲಿಗೇ ನಿಂತಿತ್ತು. 'ಮೈಸೂರು ಅರಸರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರ' ಎಂಬುದೇ ಮುಖ್ಯವಾದ ಬೇಡಿಕೆ. ವಿದುರಾಶ್ವತ್ಥದ ಪ್ರಕರಣದಲ್ಲಿ ಕೂಡಾ 'ಯು' ಆಕಾರವಲ್ಲಿದ್ದ ಸ್ತಂಭವನ್ನು ನೆಟ್ಟು ಒಂದೆಡೆ ಗಂಡಭೇರುಂಡವಿರುವ ಧ್ವಜ, ಇನ್ನೊಂದೆಡೆ ಚರಕ ಇರುವ ಕಾಂಗ್ರೆಸ್ ಧ್ವಜ ಹಾರಿಸಲಾಗಿತ್ತು.

ಯುದ್ಧದ ಪರಿಣಾಮದಿಂದಾಗಿ ಚಿತ್ರಗಳಿಗೆ ಕಚ್ಚಾಫಿಲಂ ಸಿಗುತ್ತಿರಲಿಲ್ಲ. ಚಿತ್ರೀಕರಣವೂ ಸಾಧ್ಯವಿರಲಿಲ್ಲ. ಮದರಾಸಿನಲ್ಲಿದ್ದವರಂತೂ ರಾತ್ರಿ ವೇಳೆ ದೀಪಗಳನ್ನು ಕೂಡಾ ಹಚ್ಚುವಂತಿರಲಿಲ್ಲ. ಯಾವಾಗ ಬೇಕಾದರೂ ವಿಮಾನ ಸೂಚನೆ ಬರಬಹುದು. ದೀಪಗಳು ಉರಿದರೆ ಶತ್ರುವಿಗೆ ಸುಳಿವು ದೊರೆತು ಧ್ವಂಸಗೊಳಿಸಬಹುದು ಇತ್ಯಾದಿ ಕಾರಣಗಳು. ಇಂಥ ಕಾರಣಗಳಿಂದಾಗಿ ಮದರಾಸಿನಲ್ಲಿದ್ದವರನೇಕರು ಕರ್ನಾಟಕಕ್ಕೆ ಹಿಂದಿರುಗಿದ್ದೂ ಉಂಟು. ಇಲ್ಲಿಯೂ 'ಬ್ಲಾಕ್ ಔಟ್' ಇತ್ತು. ಮದರಾಸಿನಷ್ಟು ಆತಂಕವಿರಲಿಲ್ಲ.

ಫಿಲಂ ಅಡ್ವೈಸರಿ ಬೋರ್ಡ್‌ನವರು ಪರ್ಮಿಟ್ ಕೊಟ್ಟು ಕಚ್ಚಾ ಫಿಲಂ ಹಂಚಿಕೆ ಮಾಡಿದರೆ ಮಾತ್ರ ಚಿತ್ರ ತಯಾರಿಕೆ. ಅವರಿಗೆ ಅರ್ಜಿ ಸಲ್ಲಿಸಿ ಕ್ಯೂ ನಿಂತವರೆಷ್ಟೋ ಮಂದಿ. ಅದರಲ್ಲೂ ಅತಿ ಹೆಚ್ಚು ಚಿತ್ರ ತಯಾರಿಸುವವರು ಇತ್ಯಾದಿ ಮಾನದಂಡ ಅನುಸರಿಸಿ ಅವರೇ ತೀರ್ಮಾನಿಸಿ ಹಂಚುತ್ತಿದ್ದರು. ಆ ಅಬ್ಬರದ ಮುಂದೆ ಕನ್ನಡ ಚಿತ್ರಗಳಿಗೆಲ್ಲಿ ಸ್ಥಾನ ? ಅಲ್ಲದೆ ಮುಂದಾಲೋಚನೆಯಿಂದ ಕಚ್ಚಾ ಫಿಲಂ ಬೇಕೆಂದು ಅರ್ಜಿ ಹಾಕಿದವರೂ ಇಲ್ಲ. ಹೀಗಾಗಿ ೧೯೩೮ರಿಂದ ೧೯೪೧ರವರೆಗೆ ಚಿತ್ರಗಳಿಲ್ಲ. ಸಿನಿಮಾ ನಿರ್ಮಾಪಕರೆಂದು ಗುರುತಿಸಲಾಗಿದ್ದು, ಆ ಅರ್ಹತೆ ಮೇಲೆ ಫಿಲಂ ಪಡೆದು ಗುಬ್ಬಿವೀರಣ್ಣನವರು ೧೯೪೧ರಲ್ಲಿ ಪೌರಾಣಿಕ ಚಿತ್ರ ತಯಾರಿಸಲು ನಿರ್ಧರಿಸಿದರು. ಅವರ ಕಂಪನಿಯಲ್ಲಿ 'ಸಂಗೀತ ಸುಭದ್ರ' ನಾಟಕ ತುಂಬಾ ಜನಪ್ರಿಯವಾಗಿತ್ತು. ಹೆಸರೇ ಹೇಳುವಂತೆ ಸಂಗೀತ ಪ್ರಧಾನವಾಗಿತ್ತು. ಶ್ರೀಕೃಷ್ಣನ ತಂಗಿ ಸುಭದ್ರೆಯನ್ನು ಅರ್ಜುನ ವಿವಾಹವಾಗುವ ಕಥೆ. ವಿವಾಹಕ್ಕೆ ಸಮ್ಮತಿಸದ ಬಲರಾಮನನ್ನು ವಂಚಿಸಲು ಸನ್ಯಾಸಿ ವೇಷದಲ್ಲಿ ಬಂದು ಮರುಳು ಮಾಡಿ ಸುಭದ್ರೆಯನ್ನು ಅಪಹರಿಸುವ ಪ್ರಸಂಗ. ಕಥೆಯಲ್ಲಿ



(ಚಿತ್ರ ೨೨) 'ಸುಭದ್ರ' ಚಿತ್ರದಲ್ಲಿ ಗೋಕಾಕ ಗಂಗೂಬಾಯಿ, ವಾಸುದೇವ ಗಿರಿಮಾಜಿ,
ಗಂಗೂಬಾಯಿ ಗುಳೇದಗುಡ್ಡ.

---

೧.ಗಂಗೂಬಾಯಿ ಗುಳೇದ ಗುಡ್ಡ ಖ್ಯಾತ ರಂಗಕಲಾವಿದೆ. ೧೯೧೫ರಿಂದ ೨೮ರವರೆಗೆ ವಾಮನರಾವ್ ಮಾಸ್ತರರ ಕಂಪನಿಯಲ್ಲಿದ್ದರು. 'ಸಂಗೀತ ಸುಧಾ', 'ಕರ್ನಾಟಕ ಕೋಗಿಲೆ' ಬಿರುದಿತ್ತು. ಅವರದೇ 'ಶ್ರೀಕೃಷ್ಣ ನಾಟಕ ಕಂಪನಿ' ಇತ್ತು. ಗುಬ್ಬಿ-ಬಾಲಾಜಿ ಸಂಸ್ಥೆಯ 'ಸುಭದ್ರಾ'ದಲ್ಲಿ ರುಕ್ಮಿಣಿಯ ಪಾತ್ರವೇ ಕೊನೆಯದಾಗಿದೆ. ೧೮-೧೨-೪೧ರಂದು ಗಾನರತ್ನ ಗಂಗೂಬಾಯಿ ಗುಳೇದಗುಡ್ಡ ಅವರ ನಿಧನರಾದರು.

ಮೋಸವಾಗಲಿಲ್ಲ. ಬಿ.ಜಯಮ್ಮನವರ ಪಾತ್ರ ಬಹು ಮನ್ನಣೆ ಗಳಿಸಿತು. ಆಕೆಗೆ ತಮಿಳು, ತೆಲುಗು ಚಿತ್ರಗಳಲ್ಲಿ ಹೆಚ್ಚು ಅವಕಾಶಗಳೂ ದೊರೆತವು.

'ಸತಿ ಸುಲೋಚನಾ' ನಂತರ ಆರ್.ನಾಗೇಂದ್ರರಾಯರು ಕನ್ನಡ ಚಿತ್ರಗಳಿಗೆ ಬಂದೇ ಇರಲಿಲ್ಲ. ಹೆಚ್ಚಾಗಿ ತಮಿಳು, ತೆಲುಗು ಚಿತ್ರಗಳಲ್ಲೇ ಅಭಿನಯಿಸುತ್ತಿದ್ದರು. ಅವರೊಳಗೆ ಕನ್ನಡ ಚಿತ್ರ ತಯಾರಿಸುವ ಆಪೇಕ್ಷೆಯೊಂದು ಆಗ-ಈಗ ಕಾಡುತ್ತಲೇ ಇದ್ದಿರಬೇಕು. ಪ್ರಸಿದ್ಧ ನಿರ್ಮಾಪಕ ಎ.ವಿ.ಮೇಯಪ್ಪ ಚೆಟ್ಟಿಯಾರ್ ಅವರೊಂದಿಗೆ ಕನ್ನಡ ಚಿತ್ರ ನಿರ್ಮಿಸುವ ಬಗ್ಗೆ ಪ್ರಸ್ತಾಪಿಸಿದರು. ಅವರು "ಅರ್ಧ ಹಣ ನೀವು ತೊಡಗಿಸಿ, ಇನ್ನರ್ಧ ನಾನು ಹಾಕುತ್ತೇನೆ" ಎಂದರು. ನಾಗೇಂದ್ರರಾಯರು ಮೈಸೂರಿಗೆ ಬಂದು ಇಲ್ಲಿಯ ವಾಣಿಜ್ಯೋದ್ಯಮಿಗಳಾಗಿದ್ದ ನಾಗರಾಜಶೆಟ್ಟಿ ಮತ್ತು ರಾಮಚಂದ್ರರಾವ್ ಅವರೊಂದಿಗೆ ಮಾತನಾಡಿದರು. ಅವರು ಐವತ್ತು ಸಾವಿರ ರೂಪಾಯಿ ಬಂಡವಾಳ ತೊಡಗಿಸಲು ಸಿದ್ಧಮಾಡಿದರು. ಮೇಯಪ್ಪ ಚೆಟ್ಟಿಯಾರ್ ತಮ್ಮ ಪ್ರಗತಿ ಪಿಕ್ಚರ್ಸ್ ಲಾಂಛನದಲ್ಲಿ ಚಿತ್ರ ತಯಾರಿಸಲು ಒಪ್ಪಿದರು.

ಮದರಾಸಿನಲ್ಲಿ ಅಡ್ಮಿರಾಲಿಟಿ ಭವನವನ್ನು ತಿಂಗಳಿಗೆ ೨೫೦ ರೂ. ಬಾಡಿಗೆಗೆ ತೆಗೆದುಕೊಂಡು ಚೆಟ್ಟಿಯಾರರು ಸ್ಟುಡಿಯೋ ಮಾಡಿಕೊಂಡಿದ್ದರು (ಆ ಬಂಗಲೆಯನ್ನು 'ಭೂತ ಬಂಗಲೆ' ಎಂತಲೂ ಹೇಳುತ್ತಿದ್ದರು). ಇದು ವಿಜಯನಗರದ ಮಹಾರಾಜರಿಗೆ ಸೇರಿದ್ದ ಬಂಗಲೆ.[1] ಇಲ್ಲಿಯೇ ಚಿತ್ರೀಕರಣ ನಡೆಯಿತು. ಮೇಯಪ್ಪನ್ ಚಿತ್ರವನ್ನು ನಿರ್ದೇಶಿಸಲು ಜಿ.ರಾಮಯ್ಯರ್ ಶಿರೂರ್ ಎಂಬುವವರನ್ನು ಗೊತ್ತು ಮಾಡಿದರು. ಆತನಿಗೆ ಕನ್ನಡವೇ ತಿಳಿಯದು.

ಚಿತ್ರಕ್ಕೆ ಆಯ್ದುದು ಶೂದ್ರಕನ 'ಮೃಚ್ಛಕಟಿಕಾ' ನಾಟಕದ ಕಥಾವಸ್ತುವನ್ನು. ೧೯೩೦ರಲ್ಲಿ ಇದೇ ವಸ್ತು ಮೂಕಿ ಚಿತ್ರವಾಗಿ ತಯಾರಾಗಿತ್ತು. ಅದನ್ನು 'ವಸಂತಸೇನಾ' ಎಂದೇ ಹೆಸರಿಸಿದ್ದರು. ೧೯೪೧ರಲ್ಲಿ ತಯಾರಾದ ಚಿತ್ರವೂ 'ವಸಂತಸೇನಾ'. ಆದರೆ ಈ 'ವಸಂತಸೇನಾ' ಕೂಡಾ ಬಹಳಷ್ಟು ಕಾರಣಗಳಿಗಾಗಿ ತುಂಬ ಮುಖ್ಯವೆನಿಸಿದ ಚಿತ್ರ. ಸಂಸ್ಕೃತ ನಾಟಕವನ್ನು ಆಧರಿಸಿಯೇ ನಾಗೇಂದ್ರರಾಯರು ಚಿತ್ರಕಥೆ ರಚಿಸಿದರು. ಹಾಡುಗಳ ರಚನೆಯೂ ಅವರದೇ. ರಾಮಯ್ಯರ್ ಹೆಸರಿಗಷ್ಟೇ ನಿರ್ದೇಶಕ. ಎಲ್ಲವೂ ರಾಯರದೇ ಜವಾಬ್ದಾರಿಯಾಗಿತ್ತು. ಇದೇ ಹೊತ್ತಿಗೆ ಇದೇ ಕಥೆಯನ್ನಾಧರಿಸಿ ಹಿಂದಿಯಲ್ಲೊಂದು ಚಿತ್ರ ಸಿದ್ಧವಾಗುತ್ತಿತ್ತು. ಹಿಂದೀ ಚಿತ್ರದ ಶ್ರೀಮಂತಿಕೆ, ಪೈಪೋಟಿಗಳ ಎದುರು ಕನ್ನಡ ಚಿತ್ರ ನಿಲ್ಲುವುದು ಸಾಧ್ಯವೇ ಎಂದು ಅಂಜಿದ ರಾಯರು ಅದಕ್ಕಿಂತ ಮೊದಲು ಕನ್ನಡ 'ವಸಂತಸೇನಾ' ತೆರೆಗೆ ಬಂದರೆ ಅಪಾಯವಾಗಲಾರದು ಎಂದು ಭಾವಿಸಿ ತ್ವರೆ ಮಾಡಿದರು. ಆದರೆ ಮೇಯಪ್ಪನ್, ಸುಂದರರಾವ್ ನಾಡಕರ್ಣಿ ಅವರ ನಿರ್ದೇಶನದಲ್ಲಿ ತಮಿಳು ಚಿತ್ರವೊಂದನ್ನು ತಯಾರಿಸುತ್ತಿದ್ದುದರಿಂದ ಈ ಕನ್ನಡ ಚಿತ್ರದ ಬಗ್ಗೆ ಕೊಂಚ ಉಪೇಕ್ಷೆ ಮಾಡಿದರು. ಇದೇ ಹೊತ್ತಿಗೆ ಅವರ ಪ್ರಗತಿ ಸ್ಟುಡಿಯೋದಲ್ಲಿದ್ದ ಧ್ವನಿಗ್ರಾಹಕ ಸಿ.ಇ.ಬ್ರಿಗ್ಸ್ ಅಲ್ಲಿಯ ಕೆಲಸ ಬಿಟ್ಟು ಎಸ್.ಎಸ್.ವಾಸನ್ ಅವರ ಜೆಮಿನಿ ಸ್ಟುಡಿಯೋ ಸೇರಿದರು. ಆ ಹೊತ್ತಿಗೆ ಅವರು ಧ್ವನಿ ಮುದ್ರಿಸಿದ್ದ 'ವಸಂತಸೇನಾ' ಹಾಡುಗಳೂ ತೃಪ್ತಿಕರವಾಗಿರಲಿಲ್ಲ. ಮತ್ತೆ ಮುದ್ರಿಸಲು ಧ್ವನಿಗ್ರಾಹಕರೂ ಇಲ್ಲ. ಏನು ಮಾಡಬೇಕೆಂಬ ಚಿಂತೆ ಕಾಡಿತು ರಾಯರನ್ನು. ಸಾಲದ್ದಕ್ಕೆ ಚಿತ್ರೀಕರಣ ನಿಲ್ಲಿಸಿದ್ದೀರಿ, ನಾವು ಸೆಟ್‌ಗಳನ್ನು ತೆಗೆದುಬಿಡುತ್ತೇವೆಂದು ಸ್ಟುಡಿಯೋ ನಿರ್ವಾಹಕರು ಆಕ್ಷೇಪಿಸತೊಡಗಿದರು.



(ಚಿತ್ರ ೨೩) 'ವಸಂತಸೇನ' ವಾಕ್ಚಿತ್ರದಲ್ಲಿ ಶಕಾರನಾಗಿ ಆರ್.ನಾಗೇಂದ್ರರಾಯರು.

ರಾಯರಿಗೆ ಪೇಚಾಟವೇ. ಆದರೆ ಚಿತ್ರ ತೆಗೆಯುವ ವಿಧಾನದ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿದ್ದರು. ಸ್ವತಃ ನಟನಾದರೂ ಅನೇಕ ಇತರ ಅಂಶಗಳನ್ನು ಸೂಕ್ಷ್ಮವಾಗಿ ನೋಡಿ ಕಲಿತಿದ್ದರು. ರಾಯರು ಎದೆಗುಂದದೆ ಈಗಾಗಲೇ ಧ್ವನಿಮುದ್ರಿತ ಹಾಡುಗಳನ್ನೇ ಇಟ್ಟುಕೊಂಡು ಚಿತ್ರೀಕರಣ ಮಾಡೋಣವೆಂದಾಗ ರಾಮಯ್ಯರ್ ಸಾಧ್ಯವೇ ಇಲ್ಲ ಎಂದರು. ಅವರಿಗೆ ಅನಂತರ ಹಾಡುಗಳನ್ನು ಧ್ವನಿಮುದ್ರಿಸಿ ಅಳವಡಿಸುವುದು ಸಾಧ್ಯ ಎಂಬ ನಂಬಿಕೆ ಇರಲಿಲ್ಲ. ಈ ವೇಳೆಗೆ ಪ್ರಗತಿಗೆ ಹೊಸದಾಗಿ ಧ್ವನಿಗ್ರಾಹಕನಾಗಿ ಬಂದ ಎ.ಎಸ್.ರಾಘವನ್ ನಾಗೇಂದ್ರರಾಯರ ಆಲೋಚನೆಯನ್ನು ಒಪ್ಪಿ 'ಸಾಧ್ಯವಿದೆ' ಎಂದರು. ಈ ಹೊತ್ತಿಗೆ ಹಿನ್ನೆಲೆ ಗಾಯನ ಪದ್ಧತಿ ಬೆಳಕಿಗೆ ಬಂದಿತ್ತು. ಈ ತಂತ್ರವನ್ನು ಇನ್ನಷ್ಟು ಪರಿಷ್ಕರಿಸಿ, ಹಾಡುಗಳನ್ನು ಪ್ರತ್ಯೇಕವಾಗಿ ಧ್ವನಿ ಮುದ್ರಿಸಿ ಅಳವಡಿಸಬಹುದೆಂಬ ಆಲೋಚನೆಗೆ ಬೆಂಬಲ ಕಡೆಗೂ ಸಿಕ್ಕಿತು. ಹೀಗೆ ಹೊಸದೊಂದು ತಾಂತ್ರಿಕತೆಯ ಆವಿಷ್ಕಾರವೇ ಆದಂತಾಯಿತು. ಅನೇಕ ಮೊದಲುಗಳಲ್ಲಿ ಈ ಧ್ವನಿಗ್ರಹಣವೂ ಒಂದು ವಿಶೇಷ ಪ್ರಯೋಗವೇ ಆಗಿದೆ.

ಈ ಚಿತ್ರದಲ್ಲಿ ನಾಗೇಂದ್ರರಾಯರು ಶಕಾರನ ಪಾತ್ರದಲ್ಲೂ, ಸುಬ್ಬಯ್ಯ ನಾಯ್ಡು ಚಾರುದತ್ತನಾಗಿಯೂ, ಲಕ್ಷ್ಮೀಬಾಯಿ ವಸಂತಸೇನೆಯಾಗಿಯೂ ಅಭಿನಯಿಸಿದರು. ಕಮಲಾಬಾಯಿ, ಎಸ್.ಕೆ.ಪದ್ಮಾ ಮೊದಲಾದವರೂ ಅಭಿನಯಿಸಿದರು. ಖ್ಯಾತ ಗಾಯಕ ಪಿ.ಕಾಳಿಂಗರಾಯರು ಜೈನ ಸನ್ಯಾಸಿಯ ಪಾತ್ರದಲ್ಲಿ ಕಾಣಿಸಿಕೊಂಡರು. ರಂಗನಟ ಜಿ.ವಿ.ಕೃಷ್ಣಮೂರ್ತಿ ಮೈತ್ರೇಯನ ಪಾತ್ರದಲ್ಲಿದ್ದರು. ನಾಗೇಂದ್ರರಾಯರ ಶಕಾರನ ಹಾಸ್ಯಪಾತ್ರ ರಸಿಕರಿಗೆ ಪ್ರಿಯವಾವಾಯಿತು. ಸಂಭಾಷಣೆ-ಆಂಗಿಕಾಭಿನಯಗಳಿಗೆ ಅವರು ಕೊಟ್ಟ ಆದ್ಯತೆ ಗಮನ ಸೆಳೆದಿತ್ತು. ಚಿತ್ರದಲ್ಲಿ ಅವರ ನಡಿಗೆಯೇ ನಗೆಯುಕ್ಕಿಸುವಂತಿತ್ತು. 'ಅತಿ... ಮುದದಲಿ ನಲಿವ ಸತಿ-ಪತಿಗಳ ತೆರದಲಿ ನಾವೀಗ...' ಎಂಬ ಗೀತೆ ಹಾಗೂ ಲಕ್ಷ್ಮೀಬಾಯಿ ಹಾಡಿದ 'ಇದೇ ಮಹಾ ಸುದಿನ', 'ಭಲೆ ಭಲೆ ಜೂಜುಗಾರನೂ...' ಹಾಡುಗಳು ಅತ್ಯಂತ ಜನಪ್ರಿಯವಾಗಿದ್ದವು. ಶಕಾರನ ಪಾತ್ರದಲ್ಲಿ ನಾಗೇಂದ್ರರಾಯರು ಹಾಡಿದ 'ಕತ್ತೆಗಳು ನಾಯಿಗಳು ನನ್ನ ಹಾಡನು ಕೇಳೀ...' ಹಾಡು ಕೂಡಾ ಎಲ್ಲರೂ ಗುನುಗುನಿಸುವಂತಿತ್ತು. ಈ ಚಿತ್ರದ ಸಂಗೀತ ನಿರ್ದೇಶಕರು ಆರ್.ನಾಗೇಂದ್ರರಾಯರೇ. ನಾಲ್ಕು ಹಾಡುಗಳಿಗೆ ಪಿ.ಕಾಳಿಂಗರಾಯರು ರಾಗ ಸಂಯೋಜಿಸಿದ್ದರು. ಅವರೇ ಎರಡು ಗೀತೆ ಹಾಡಿದ್ದರು. ಸುಬ್ಬಯ್ಯ ನಾಯ್ಡು, ಎಸ್.ಕೆ.ಪದ್ಮಾದೇವಿ ಸಹ ಹಾಡಿದ್ದರು.

"'ವಸಂತಸೇನಾ' ಚಿತ್ರದಲ್ಲಿ ನನ್ನದು ಸಖಿಯ ಪಾತ್ರ. ನನಗೊಂದು ಹಾಡಿತ್ತು ಅದರಲ್ಲಿ. ಅದನ್ನು, ಜೊತೆಗೆ ಚಾರುದತ್ತನ ಹೆಂಡತಿಯ ಪಾತ್ರದ ಹಾಡನ್ನೂ ನಾನೇ ಹಾಡಿದ್ದೆ" ಎನ್ನುತ್ತಾರೆ ಎಸ್.ಕೆ.ಪದ್ಮಾದೇವಿ. ಈ ಚಿತ್ರದ ಮೇಕಪ್‌ಗಾಗಿ ಮುಂಬಯಿನಿಂದ ಕುಮಾರ್ ಎಂಬ ಪ್ರಸಾಧನ ತಜ್ಞರನ್ನು ಕರೆಸಲಾಗಿತ್ತು. ಚಿತ್ರದ ಕೆಲವು ದೃಶ್ಯಗಳಿಗೆ ಕೈಯಲ್ಲೇ ಪೈಂಟ್ ಮಾಡಿ ವರ್ಣಮಯ ಮಾಡಿದ್ದರು.

ಚಿತ್ರ ತೆರೆಗೆ ಬಂತು, ಯಶಸ್ವಿಯೂ ಆಯಿತು. ಮೇಯಪ್ಪ ಚೆಟ್ಟಿಯಾರ್ ಮತ್ತು ಮೈಸೂರಿನ ನಿರ್ಮಾಪಕರಿಗೆ ತೊಡಗಿಸಿದ್ದ ಹಣ ಹಿಂತಿರುಗಿಸಿದ ಮೇಲೆ ನಾಗೇಂದ್ರರಾಯರಿಗೆ ಏನೂ ಉಳಿದಿರಲಿಲ್ಲ. ಆರ್ಥಿಕ ಸಮಸ್ಯೆಗಳಿಂದ ಬಿಡುಗಡೆ ಆಗಲಿಲ್ಲ. ಆದರೂ ಅವರಿಗೆ ಉತ್ತಮ ಚಿತ್ರವೊಂದನ್ನು ತಯಾರಿಸಿದ ತೃಪ್ತಿ ಇತ್ತು.

'ವಸಂತಸೇನಾ' ಬಗ್ಗೆ ಪತ್ರಿಕಾ ವಿಮರ್ಶೆಗಳು ಉತ್ತಮವಾಗಿ ಬಂದವು.

೧. ಅನಂತರ ಆ ಕಟ್ಟಡದಲ್ಲಿ ವಸತಿ ಸಮುಚ್ಚಯಗಳು, ಅಡ್ಮಿರಾಲಿಟಿ ಹೋಟೇಲ್‌ಗಳಾದವು.

ಸಾಹಿತ್ಯ ಪರಿಷತ್ ಪತ್ರಿಕೆ 'ಕನ್ನಡ ನುಡಿ'ಯಲ್ಲಿ ಸುದೀರ್ಘ ವಿಮರ್ಶೆ ಪ್ರಕಟವಾಯಿತು (ಡಿಸೆಂಬರ್ ೧೯೪೧). ಚಿತ್ರದ ಹಾಡುಗಳ ಬಗ್ಗೆ ಪತ್ರಿಕೆ ''...ಕೆಲವು ಹಾಡುಗಳ ಧಾಟಿಯು ಹಿಂದಿ, ತೆಲುಗು ಚಿತ್ರಗೀತೆಗಳ ಅನುಕರಣೆಯಂತಿದೆ. ಕನ್ನಡ ವಾಕ್ಚಿತ್ರಗಳು ಸಂಗೀತದಲ್ಲಿ ತಮ್ಮದೇ ಆದ ವೈಶಿಷ್ಟ್ಯ ತೋರಲು ಪ್ರಯತ್ನಿಸಬೇಕು...'' ಎನ್ನುತ್ತದೆ.

ಪಾತ್ರಧಾರಿಗಳ ಅಭಿನಯವನ್ನು, ಹಾಸ್ಯಕಲಾ ಕೌಶಲವನ್ನು, ಛಾಯಾಗ್ರಹಣ. ಕಾರ್ಡಿಂಗ್ ಅನ್ನು ಮೆಚ್ಚಿ 'ಕತೆಗಾರ' ಪತ್ರಿಕೆಯಲ್ಲಿ ವಿಮರ್ಶಿಸಲಾಗಿತ್ತು.

ವಾಕ್ಚಿತ್ರ ಪರಂಪರೆ ಪ್ರಾರಂಭವಾದ ಮೇಲೆ ಅದುವರೆಗೆ ಬಂದ ಎಲ್ಲ ಚಿತ್ರಗಳಿಗಿಂತ ವಸ್ತು, ನಿರೂಪಣೆ, ಸಂಗೀತ, ತಾಂತ್ರಿಕತೆ ಎಲ್ಲ ದೃಷ್ಟಿಯಿಂದ 'ವಸಂತಸೇನಾ' ಅತ್ಯುತ್ತಮ ಎಂದೂ ಹೇಳಲಾಗಿದೆ. ಚಿತ್ರ ಮೊದಲು ಮೈಸೂರಿನಲ್ಲಿ ಬಿಡುಗಡೆಯಾಯಿತು. ಅನಂತರ ಬೆಂಗಳೂರಿನ ಸಾಗರ್ ಚಿತ್ರಮಂದಿರದಲ್ಲಿ ಬಿಡುಗಡೆಯಾಯಿತು.

'ವಸಂತಸೇನಾ' ಚಿತ್ರಗಳು ಹಲವು. ಪ್ರಾರಂಭದ ಮೂಕಿ ಚಿತ್ರ, ಅನಂತರ ರಾಜಾ ಸ್ಯಾಂಡೋ (೧೯೩೬) ತಯಾರಿಸಿದ ಚಿತ್ರ 'ವಸಂತಸೇನಾ'ದಲ್ಲಿ ಎಸ್.ಎಸ್.ಕೃಷ್ಣನ್ ಮತ್ತು ಟಿ.ಎ.ಮಧುರಂ ತಾರಾಗಣವಿತ್ತು (ಚಿತ್ರದ ನಂತರ ಆ ಜೋಡಿಯ ವಿವಾಹವಾಯಿತು.). ಮತ್ತೊಂದು ಕನ್ನಡದ ವಾಕ್ಚಿತ್ರ 'ವಸಂತಸೇನಾ'. ಅದರ ಜೊತೆಗೇ ಬಂದ ಹಿಂದಿಯ 'ವಸಂತಸೇನಾ' ಯಶಸ್ವಿಯಾಗಲಿಲ್ಲ. ದಕ್ಷಿಣಭಾರತದ ಚಲನಚಿತ್ರ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದು ಕನ್ನಡದ 'ವಸಂತಸೇನಾ'[1] ಮಾತ್ರ.



(ಚಿತ್ರ ೨೫) 'ವಸಂತಸೇನಾ' ಚಿತ್ರದಲ್ಲಿ ಎಸ್.ಕೆ.ಪದ್ಮಾದೇವಿ ಮತ್ತು ಲಕ್ಷ್ಮೀಬಾಯಿ

ವಾಕ್ಚಿತ್ರ ಯುಗ ಪ್ರಾರಂಭವಾದ ದಿನಗಳಲ್ಲಿ ಸಹಜವಾಗಿಯೇ ಪೌರಾಣಿಕ, ಜಾನಪದ ಕಥೆಗಳು, ಯಶಸ್ವಿ ರಂಗನಾಟಕಗಳು ಚಿತ್ರಗಳಿಗೆ ಮೂಲ ದ್ರವ್ಯವಾದವು. ಸಮಕಾಲೀನ ಸಮಾಜವನ್ನು, ಸಮಸ್ಯೆಗಳನ್ನು ಬಿಂಬಿಸುವ ಪ್ರಯತ್ನಗಳು ಆಗಿರಲಿಲ್ಲ. ಇದಕ್ಕೆ ಹಾಕಿದ ಹಣ ಹಿಂತಿರುಗದಿದ್ದರೆ ಎಂಬ ಭೀತಿಯೇ ಕಾರಣವಿರಬಹುದು. ಧೈರ್ಯ ಮಾಡಿದವರು ಹೆಚ್.ಎಲ್.ಎನ್.ಸಿಂಹ. ಜನಪ್ರಿಯ ನಾಟಕವೇ ಆಧಾರವಾದರೂ 'ಸಂಸಾರನೌಕ' ಒಂದು ಸಾಂಸಾರಿಕ ಕಥಾವಸ್ತುವಾಗಿತ್ತು.



(ಚಿತ್ರ ೨೪) 'ಜೀವನ ನಾಟಕ' ತಂಡ. ಕುಳಿತಿರುವವರು ಕೆಂಪರಾಜ ಅರಸ್, ಸಂಗೀತ ನಿರ್ದೇಶಕ ಎನ್.ವೆಂಕಟರಾಮಯ್ಯ, ನಿರ್ಮಾಪಕ ಗುಬ್ಬಿ ವೀರಣ್ಣ, ಚಿತ್ರ ನಿರ್ದೇಶಕ ವಹಾಬ್ ಕಾಶ್ಮೀರಿ. ಹಿಂದಿನ ಸಾಲಿನಲ್ಲಿ ನಡುವಿನಲ್ಲಿ ನಿಂತಿರುವವರು ಶೇಷಗಿರಿರಾಯರು.

ಅನಂತರವೂ ಯಾರೂ ಇತ್ತ ಮನ ಮಾಡಲಿಲ್ಲ. ಆರು ವರ್ಷಗಳ ಕಾಲ ಸಾಮಾಜಿಕ ಚಿತ್ರಗಳಿಗಾಗಿ ಕಾಯಬೇಕಾಯಿತು. ಮತ್ತೆ ಸಾಹಸ ಮಾಡಿದವರು ಗುಬ್ಬಿ ವೀರಣ್ಣನವರೇ. ಈ ಸಂದರ್ಭದಲ್ಲಿ ಅ.ನ.ಕೃಷ್ಣರಾಯರು ಪ್ರಧಾನ ಪಾತ್ರವಹಿಸಿ ವೀರಣ್ಣನವರನ್ನು ಪ್ರೇರೇಪಿಸಿದರು. ವರದಾಚಾರ್ಯರ ನಾಟಕಗಳನ್ನು ನೋಡುತ್ತಿದ್ದ ಕಾಲದಿಂದಲೂ ಸಾಮಾಜಿಕ ಸಮಸ್ಯೆಯುಳ್ಳ ನಾಟಕಗಳನ್ನು ಪ್ರದರ್ಶಿಸಬೇಕೆಂದು ಅ.ನ.ಕೃ. ಒತ್ತಾಯಿಸುತ್ತಿದ್ದರು. ಅವರೇ 'ಮದುವೆಯೋ ಮನೆ ಹಾಳೋ' ಎಂಬ ಸಾಮಾಜಿಕ ನಾಟಕವನ್ನೂ ರಚಿಸಿದ್ದರು. ಪ್ರಸಿದ್ಧ ಕಾದಂಬರಿಕಾರ, ಚಿಂತಕರಾಗಿದ್ದ ಕೃಷ್ಣರಾಯರ ಮಾತಿಗೆ ಒಪ್ಪಿ ಸಾಮಾಜಿಕ ಚಿತ್ರವೊಂದನ್ನು ತಯಾರಿಸಲು ವೀರಣ್ಣನವರು ಸಿದ್ಧತೆ ಮಾಡಿಕೊಂಡರು. ಅ.ನ.ಕೃ ಅವರೇ ಚಿತ್ರಕಥೆ, ಸಂಭಾಷಣೆಗಳನ್ನು ಬರೆದರು. ಬಿ.ಪುಟ್ಟಸ್ವಾಮಯ್ಯನವರು ಗೀತೆಗಳನ್ನು ರಚಿಸಿದರು. ಚಿತ್ರಕ್ಕೆ 'ಜೀವನ ನಾಟಕ' ಎಂದು ಹೆಸರು ಕೊಡಲಾಯಿತು.

ಗುಬ್ಬಿ ಫಿಲಂಸ್ ಲಾಂಛನದಲ್ಲಿ ತಯಾರಾದ ಚಿತ್ರ 'ಜೀವನ ನಾಟಕ'. ಉತ್ತರ ಭಾರತದಿಂದ ವಹಾಬ್ ಕಾಶ್ಮೀರಿ ಎಂಬುವವರನ್ನು ನಿರ್ದೇಶನಕ್ಕೆಂದು ಕರೆಸಲಾಗಿತ್ತು. ವಹಾಬ್ ಕಾಶ್ಮೀರಿಯವರು ಕಲ್ಕತ್ತಾದ ನ್ಯೂ ಥಿಯೇಟರ್ಸ್‌ನಲ್ಲಿ ಸಹಾಯಕರಾಗಿ ಕೆಲಸ ಮಾಡಿ ಅನುಭವ ಪಡೆದಿದ್ದರು. ಉತ್ತಮ ಮಾತುಗಾರರಾಗಿದ್ದರು.

ಈ ಚಿತ್ರದ ನಾಯಕನ ಪಾತ್ರಕ್ಕೆ ಡಿ.ಕೆಂಪರಾಜ ಅರಸು[2] ಅವರನ್ನು ಆಯ್ಕೆ ಮಾಡಲಾಯಿತು. ಚೆಲುವು, ನೀಳವಾದ ಆಕಾರವುಳ್ಳ ಆತನಿಗೆ ನಾಯಕನಾಗುವ ಎಲ್ಲ ಅರ್ಹತೆಗಳೂ ಇದ್ದವು. ನಾಯಕಿಯ ಪಾತ್ರಕ್ಕೆ ಹುಬ್ಬಳ್ಳಿಯ ಹುಡುಗಿ ಶಾಂತಾ ಹುಬ್ಳೀಕರ್‌ರನ್ನು ಗೊತ್ತುಮಾಡಲಾಯಿತು. ಈಕೆ ವಿ.ಶಾಂತಾರಾಮರ 'ಆದ್ಮಿ' ಚಿತ್ರದಲ್ಲಿ ಅಭಿನಯಿಸಿ ಹೆಸರಾಗಿದ್ದ ತಾರೆ. 'ಜೀವನ ನಾಟಕ'ದಲ್ಲಿ ಬಿ.ಜಯಮ್ಮನವರಿಗೆ ಖಳನಾಯಕಿಯ ಪಾತ್ರ, ವೀರಣ್ಣನವರು, ಎಂ.ಜಿ.ಮರಿರಾಯರು, ರಂಗಭೂಮಿಯಲ್ಲಿ ಶಕಾರನ ಪಾತ್ರದಿಂದ ಖ್ಯಾತರಾಗಿದ್ದ ಬಸವರಾಜಪ್ಪ, ಮೋಹನ್ ಕುಮಾರಿ ಮತ್ತು ಮೈಸೂರು ಅರಮನೆಯಲ್ಲಿ ಕೆಲಸದಲ್ಲಿದ್ದ ಎಂಟು ಅಡಿ ಎತ್ತರದ ಮನುಷ್ಯ ಹಾಗೂ ಖಾಸ್ ಬಂಗ್ಲೆಯ (ಮೃಗಾಲಯ) ಮೂರು ಅಡಿ ಎತ್ತರದ ಕುಳ್ಳ ವ್ಯಕ್ತಿ ಈ ಚಿತ್ರದ ಪಾತ್ರಧಾರಿಗಳು. ಸಿಂಗಾನಲ್ಲೂರು ಪುಟ್ಟಸ್ವಾಮಯ್ಯನವರು ಒಂದು ಚಿಕ್ಕ ಪಾತ್ರದಲ್ಲಿ ಅಭಿನಯಿಸಿದ್ದರು. ಯಕ್ಷಗಾನದಲ್ಲಿರುವಂಥ ಒಂದು ಪಾತ್ರವನ್ನೇ ಅವರಿಗಾಗಿ ರಚಿಸಲಾಗಿತ್ತು.

೧. ಈ ಚಿತ್ರದ ಪ್ರಿಂಟ್ ಪುಣೆಯ ಚಲನಚಿತ್ರ ಭಂಡಾರದಲ್ಲಿ ಲಭ್ಯವಿದೆ.

೨. ಕೆಂಪರಾಜ್ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಡಿ.ದೇವರಾಜ ಅರಸರ ಸಹೋದರ. ಮೊದಲಿನಿಂದಲೂ ಚಿತ್ರರಂಗದಲ್ಲಿ ಒಲವಿತ್ತು. ಅರಸು ಮನೆತನದಲ್ಲಿ ಇಂಥದನ್ನೆಲ್ಲ ಒಪ್ಪುತ್ತಿರಲಿಲ್ಲ. ಚಿತ್ರರಂಗ ಮರ್ಯಾದಸ್ಥರಿಗಲ್ಲ ಎಂಬ ಭಾವನೆಯಿದ್ದ ಕಾಲ ಅದು. ಕೆಂಪರಾಜರು ಹಲವು ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದರು. ಕೆಲ ಕಾಲ ಕರ್ನಾಟಕ ಚಲನಚಿತ್ರ ಅಭಿವೃದ್ಧಿ ನಿಗಮದ ಅಧ್ಯಕ್ಷರೂ ಆಗಿದ್ದರು.

'ಜೀವನ ನಾಟಕ'ವನ್ನು ಕೊಯಮುತ್ತೂರಿನ ಸೆಂಟ್ರಲ್ ಸ್ಟುಡಿಯೋದಲ್ಲಿ ಚಿತ್ರೀಕರಿಸಲಾಯಿತು. ಆಗಿನ ಪದ್ಧತಿಯಂತೆ ಕಲಾವಿದರಿಗೆಲ್ಲ ಇಡೀ ಚಿತ್ರಕಥೆಯನ್ನು ಓದಿ ಹೇಳಬೇಕು. ಪ್ರತಿದಿನ ತಾಲೀಮು ನಡೆಸಬೇಕು ಎಂಬುದಾಗಿತ್ತು. ಈ ತಾಲೀಮಿಗೆ ಆಗಲೇ 'ತಾರೆ'ಯಾಗಿದ್ದ ಶಾಂತಾ ಹುಬ್ಳೀಕರ್ ಬರುತ್ತಿರಲಿಲ್ಲ. ಹೊಸ ನಟ ಕೆಂಪರಾಜರ ಬಗ್ಗೆ ತಾತ್ಸಾರ ಭಾವನೆ. ಸಾಮಾನ್ಯವಾಗಿ ಎಲ್ಲ ಕಲಾವಿದರೂ ಒಂದೇ ಕಡೆ ವಾಸಿಸುತ್ತಿದ್ದರು. ಶಾಂತಾ ತನಗೆ ಮತ್ತು ತನ್ನ ಗಂಡನಿಗಾಗಿ ಪ್ರತ್ಯೇಕ ವಸತಿಯನ್ನು ಕೊಡಿರೆಂದು ಒತ್ತಾಯಿಸಿದರು. ವೀರಣ್ಣನವರಿಗೆ ಇದೊಂದು ಪೇಚಿನ ಸಂಗತಿಯೇ ಆಯಿತು. ಆಕೆ ಹುಬ್ಬಳ್ಳಿಯವರೇ ಆದರೂ ಕನ್ನಡ ಚೆನ್ನಾಗಿ ಬರುತ್ತಿರಲಿಲ್ಲ. ಆಕೆ ಆಡುತ್ತಿದ್ದ ಕನ್ನಡ ಈ ಕಥೆ ನಡೆಯುವ ವಾತಾವರಣಕ್ಕೆ ಸರಿ ಹೊಂದುತ್ತಿರಲಿಲ್ಲ. ವೀರಣ್ಣನವರು ಗತ್ಯಂತರವಿಲ್ಲದೆ ಆಕೆಗೆ ಕನ್ನಡ ಉಚ್ಚಾರಣೆ ಕಲಿಸಿಕೊಡಿ ಎಂದು ಅ.ನ.ಕೃ ಅವರಲ್ಲಿ ಪ್ರಾರ್ಥಿಸಿದರು. ರಿಹರ್ಸಲ್‌ಗೆ ಬರದೆ, ಸಹಕಲಾವಿದರ ಬಗ್ಗೆ ಅಗೌರವ ತೋರುತ್ತಾ ಪ್ರಭಾತ್ ಕಲಾವಿದೆ ಎಂಬ 'ಅಹಂ'ನಿಂದ ಮೆರೆವ ಆಕೆಗೆ ಸಾಹಿತಿಯಾದ ತಾನು ಮಣಿಯಬೇಕೆ ? ಇದು ಸಾಹಿತ್ಯಕ್ಕಾಗುವ ಅಪಮಾನವಲ್ಲವೆ ಎಂದು ವಾದಿಸಿದರೂ ವೀರಣ್ಣನವರ ಬಗೆಗಿದ್ದ ಸ್ನೇಹಕ್ಕಾಗಿ ಒಪ್ಪಿದ ಅ.ನ.ಕೃ ಆಕೆಗೆ ಸಂಭಾಷಣೆ ಕಲಿಸಲು ಪ್ರಯತ್ನಿಸಿದರು. ನಿರ್ದೇಶಕ ವಹಾಬ್ ಕಾಶ್ಮೀರಿ ಅವರಿಗೂ ಕನ್ನಡ ಬರದು. ಅವರಿಗಾಗಿ ದೇವನಾಗರಿ ಲಿಪಿಯಲ್ಲಿ ಅ.ನ.ಕೃಷ್ಣರಾಯರು ಸಾಹಿತ್ಯ ಸಿದ್ಧಪಡಿಸುತ್ತಿದ್ದರು.

ಸೋಹನಲಾಲ್ ಮತ್ತು ಇಂದ್ರಾಣಿ ದೇವಿ ನಿರ್ವಹಿಸಿದ್ದರು. ಸಂಗೀತ ನಿರ್ದೇಶಕರು ಎಸ್.ವಿ.ವೆಂಕಟರಾಮನ್. ಪ್ರಾರಂಭದಲ್ಲಿ ಹಾರ್ಮೋನಿಯಂ ಶೇಷಗಿರಿರಾಯರು, ರಾಮಯ್ಯರ್ ಶಿರೂರ್ ಸಹ ಸಂಗೀತ ವಿಭಾಗದಲ್ಲಿ ಶ್ರಮಿಸಿದರೆಂದೂ, ನಿರ್ದೇಶಕರೊಂದಿಗೆ ಯಾವುದೋ ಕಾರಣದಿಂದ ಮುಜುಗರಗೊಂಡು ಹಿಂತೆಗೆದುಕೊಂಡರೆಂದೂ ಅವರ ಬದಲಿಗೆ ಎಸ್.ವಿ.ವೆಂಕಟರಾಮನ್ ಸಂಗೀತ ನಿರ್ದೇಶಿಸಿದರೆಂದೂ ತಿಳಿದು ಬರುತ್ತದೆ. ಚಲನಚಿತ್ರದ ಜಾಹಿರಾತು, ವಿಮರ್ಶೆಗಳಲ್ಲಿ ವೆಂಕಟರಾಮನ್ ಹೆಸರೇ ಇರುವುದರಿಂದ ಅದನ್ನೇ ಅಧಿಕೃತವೆಂದು ಪರಿಗಣಿಸಬಹುದಾಗಿದೆ. ಈ ಚಿತ್ರಕ್ಕಾಗಿ ಕೆಲವು ಹೊರಾಂಗಣ ದೃಶ್ಯಗಳನ್ನು ಚಿತ್ರಿಸಿದರು. ಮೈಸೂರಿನ ಬೃಂದಾವನ್ ಗಾರ್ಡನ್ಸ್‌ನಲ್ಲಿ ಆ ಕಾಲಕ್ಕೆ ದಿನಕ್ಕೆ ೨೫೦ ರೂ. ನಂತೆ ಚಿತ್ರೀಕರಣ ಮಾಡುವವರಿಂದ ಶುಲ್ಕ ವಸೂಲಿ ಮಾಡಲಾಗುತ್ತಿತ್ತು. ಅಲ್ಲಿಯೂ ಚಿತ್ರೀಕರಿಸಿದ್ದೇವೆ ಎಂದು ಚಿತ್ರ ತಂಡದವರೊಬ್ಬರು ಹೇಳಿದ ದಾಖಲೆಯಿದೆ. ಈ ಚಿತ್ರಕ್ಕೆ ಸುಮಾರು ಒಂದು ಲಕ್ಷ ರೂಪಾಯಿ ಖರ್ಚಾಯಿತೆನ್ನಲಾಗಿದೆ.

೧೯೪೨ರ ಅಕ್ಟೋಬರ್ ತಿಂಗಳಲ್ಲಿ ಚಿತ್ರ ತೆರೆಕಂಡಿತು. "...'ಜೀವನವೇ ನಾಟಕ, ನಾಟಕವೇ ಜೀವನ' ಎಂಬ ತತ್ವವನ್ನು ಪ್ರತಿಪಾದಿಸುವ ಗುಬ್ಬಿ ಫಿಲಂಸ್‌ನವರ ಕನ್ನಡ ಭಾಷೆಯ ಉತ್ತಮ ಸಾಮಾಜಿಕ ಚಿತ್ರ, ರಸಮಯ ಗೀತೆಗಳು, ಓಜಸ್ವಿ ಸಂಭಾಷಣೆ, ಭಾವಪೂರ್ಣ ಅಭಿನಯ..." ಎಂಬ ಜಾಹಿರಾತುಗಳ ಅಬ್ಬರದಲ್ಲಿ ಮೈಸೂರಿನ ರಣಜಿತ್, ದಾವಣಗೆರೆಯ ವಿನೋದ, ಚಿತ್ರದುರ್ಗದ ಶಂಕರ್ ಟಾಕೀಸ್ ಮತ್ತು ಹುಬ್ಬಳ್ಳಿ, ಧಾರವಾಡ, ಬೆಳಗಾವಿಗಳಲ್ಲಿ ಪ್ರದರ್ಶಿತವಾಯಿತು. ಅನಂತರ ಡಿಸೆಂಬರ್ ತಿಂಗಳ ವೇಳೆಗೆ ಬೆಂಗಳೂರಿನ ಸಾಗರ್ ಟಾಕೀಸಿನಲ್ಲಿ ಬಿಡುಗಡೆಯಾಯಿತು.



(ಚಿತ್ರ ೨೬) 'ಜೀವನ ನಾಟಕ' ಚಿತ್ರದಲ್ಲಿ ಶಾಂತ ಹುಬ್ಳೀಕರ್, ಕೆಂಪರಾಜ ಅರಸು, ಬಿ.ಜಯಮ್ಮ

ವೀರಣ್ಣನವರಿಗೂ ಚಿತ್ರರಂಗದ ಚಮತ್ಕಾರದ ಮೋಜನ್ನು ಬಿಟ್ಟು ಕೊಡುವುದು ಸಾಧ್ಯವಾಗಿರಲಿಲ್ಲ. ಆ ಕಾಲದ ಪತ್ರಿಕೆಗಳು ಈ ಮಾತನ್ನು ಪ್ರಶ್ನೋತ್ತರಗಳಲ್ಲಿ, ಪುಟ್ಟ ಪುಟ್ಟ ಹೇಳಿಕೆಗಳಲ್ಲಿ ವಿಡಂಬಿಸಿವೆ. 'ಜೀವನ ನಾಟಕ'ದಲ್ಲಿ ಸಹ ಅತಿ ಹೆಚ್ಚು ದೃಶ್ಯಗಳಲ್ಲಿ ತಾವು ಇರಲೇಬೇಕೆಂದು ಒತ್ತಾಯಿಸುತ್ತಿದ್ದರು. ಅ.ನ.ಕೃ ಅವರಿಗೆ ಪದೇ ಪದೇ ಚಿತ್ರನಾಟಕವನ್ನು ತಿದ್ದಿ ಬರೆಯಬೇಕಾಗಿ ಬರುತ್ತಿತ್ತು. ಇಂಥ ಕಾರಣಗಳಿಗಾಗಿ ಇನ್ನೂ ಕೆಲವು ಭಾಗದ ಚಿತ್ರೀಕರಣ ಬಾಕಿ ಇದ್ದಾಗಲೇ ಅ.ನ.ಕೃ. ಹೊರಟು ಹೋದರೆಂದೂ, ಅನಂತರದ ಭಾಗಗಳನ್ನು ನಿರ್ವಹಿಸಿದವರು ಪುಟ್ಟಸ್ವಾಮಯ್ಯನವರೆಂದೂ ಪತ್ರಿಕಾ ವರದಿಗಳಿಂದ ತಿಳಿದು ಬರುತ್ತದೆ. ಅ.ನ.ಕೃಷ್ಣರಾಯರೇ ಹೇಳಿದ ಮಾತುಗಳಲ್ಲಿ ಈ ಅಂಶ ಉಲ್ಲೇಖವಾಗಿಲ್ಲ, ಸೌಜನ್ಯವಿರಬೇಕು.

ಶಾಂತಾ ಹುಬ್ಳೀಕರ್‌ಗೆ ಸನ್ನಿವೇಶವೊಂದರಲ್ಲಿ 'ವಿವಾಹ' ಎಂಬ ಪದವನ್ನು ಉಚ್ಚರಿಸಲು ಬರಲಿಲ್ಲ. ಸುಮಾರು ಹದಿನೇಳು ಟೇಕ್‌ಗಳಾಗಿ ನಿರ್ದೇಶಕರು ಸಹನೆ ಕಳೆದುಕೊಂಡರು. ಶಾಂತಾ ಹುಬ್ಳೀಕರ್ ಅ.ನ.ಕೃಷ್ಣರಾಯರ ಬಳಿ ದಯಮಾಡಿ ಈ ಪದವನ್ನು ಬದಲಾಯಿಸಿಕೊಡಿ ಎಂದು ಬಹುವಾಗಿ ಪ್ರಾರ್ಥಿಸಿದರು. ಕಡೆಗೆ ಆ ಪದವನ್ನು 'ಮದುವೆ' ಎಂದು ಬದಲಾಯಿಸಿದುದಾಗಿ ಅ.ನ.ಕೃ.ರವರೇ ಒಂದೆಡೆ ಬರೆದಿದ್ದಾರೆ.

ಇಡೀ ಚಿತ್ರೀಕರಣ ಸುಮಾರು ಒಂದು ವರ್ಷ ಕಾಲ ಹಿಡಿಯಿತು. ವೀರಣ್ಣನವರ ವೆಚ್ಚವೂ ಏರಿತ್ತು. ಅ.ನ.ಕೃಷ್ಣರಾಯರ ಸಾಹಿತ್ಯಿಕ ಕೆಲಸಗಳಿಗೂ ತೊಡಕಾಯಿತು. ಒಂದು ಜಾಹಿರಾತಿನ ಪ್ರಕಾರ ಚಿತ್ರದಲ್ಲಿ ಶಾಂತಾ ಹುಬ್ಳೀಕರ್, ಜಯಮ್ಮ, ರಾಜಮ್ಮ, ಪಿ.ಸುನಂದಮ್ಮ, ಮೋಹನಕುಮಾರಿ, ಕಮಲಮ್ಮ, ಕಮಲಾಬಾಯಿ, ಜಿ.ಹೆಚ್.ವೀರಣ್ಣ, ಕೆಂಪರಾಜ್, ಬಸವರಾಜಪ್ಪ, ಸುಂದರಿಬಾಯಿ, ಶಾರದಮ್ಮ, ಬೇಬಿ ವಿಜಯ, ಮರಿರಾವ್, ಮಹಾಬಲರಾವ್, ಕೃಷ್ಣಮೂರ್ತಿ, ಬಿ.ಹನುಮಂತಯ್ಯ, ರಾಜು, ರಾಧಾಕೃಷ್ಣ, ಎಂ.ಸಿ.ವೀರ್ ಮೊದಲಾದವರು ಅಭಿನಯಿಸಿದ್ದರೆಂದು ತಿಳಿದು ಬರುತ್ತದೆ. ಭಾರಿ ದಂಡು ಅನ್ನಬಹುದು. ಚಿತ್ರದಲ್ಲಿರುವ ಶಿವತಾಂಡವ ನೃತ್ಯವನ್ನು

ಈ ಎಲ್ಲ ಸಂಗತಿಗಳನ್ನು ನೋಡಿದಾಗ ಒಂದೆರಡು ಅಂಶಗಳು ಸ್ಪಷ್ಟವಾಗುತ್ತವೆ. ಮೊದಲನೆಯದು ಮಾಲೀಕರು ತಾವೇ ಅಭಿನಯಿಸುವ ಚಟಕ್ಕೆ ಬಲಿಯಾಗಿ ಚಿತ್ರನಾಟಕವನ್ನು ಹದಗೆಡಿಸಿದ್ದು, ಅಂಜಿಕೆಯಿಂದಲೇ ಚಿತ್ರಾಂತರಂಗಕ್ಕೆ ಬರತೊಡಗಿದ್ದ ಸಾಹಿತಿಗಳು, ಬುದ್ಧಿವಂತರೊಂದಿಗೆ ಮನಸ್ತಾಪ ಮಾಡಿಕೊಂಡು ಹಿಂತಿರುಗಿ ಹೋಗುವಂತೆ ಮಾಡಿದ್ದು, ಒಂದೇ ಕತೆಗಾಗಿ ಬಡಿದಾಡಿ ಇಬ್ಬರು ಒಂದೇ ಕಥೆ ಆಧರಿಸಿ ಚಿತ್ರ ಮಾಡುವುದು ಮುಂತಾದ ಅಂಶಗಳೂ ಸಹ ನಮ್ಮ ಚಿತ್ರೋದ್ಯಮ ಭದ್ರವಾದ ತಳಪಾಯ ಹಾಕಿಕೊಂಡು ಬೆಳೆಯಬಹುದಾಗಿದ್ದ ಅವಕಾಶದಿಂದ ವಂಚಿತವಾಗಲು ಕಾರಣವಾದವು. ಮತ್ತೊಂದು ಮುಖ್ಯ ಸಂಗತಿಯೆಂದರೆ ಚಿತ್ರಗಳು ಈಗಿನ ಹಾಗೆ ಬೆಂಗಳೂರಿನ ಕೆಂಪೇಗೌಡ ರಸ್ತೆಯ ಚಿತ್ರಮಂದಿರಕ್ಕೆ ಕಾಯದೆ ಬೇರೆ ಜಿಲ್ಲೆಗಳಲ್ಲಿ ಬಿಡುಗಡೆಯಾಗುತ್ತಿದ್ದವು ಎಂಬುದು.

'ಜೀವನ ನಾಟಕ' ಚಿತ್ರ ತಯಾರಿಸುವ ಸಮಯದಲ್ಲೇ ವೀರಣ್ಣನವರು ಬೆಂಗಳೂರಿನಲ್ಲಿ ಸ್ಟುಡಿಯೋ ಸ್ಥಾಪಿಸಲು ಯೋಜಿಸಿದ್ದರು. ಯುದ್ಧದ ಸಮಯದಲ್ಲಿ ಆಗತ್ಯ ಉಪಕರಣಗಳ ಆಮದು ಸಾಧ್ಯವಾಗಲಿಲ್ಲ. ಕಡೆಗೆ ಒಂದು ವಿತರಣಾ ಸಂಸ್ಥೆ ಆರಂಭಿಸಿದರು.

ಇದೇ ೧೯೪೨ರಲ್ಲೇ ಮತ್ತೊಂದು ಚಿತ್ರ 'ಭಕ್ತ ಪ್ರಹ್ಲಾದ' ತಯಾರಾಯಿತು. ಕಲ್ಯಾಣಿ ಲಾಂಛನದಲ್ಲಿ ಮದರಾಸಿನ ನ್ಯೂಟೋನ್ ಸ್ಟುಡಿಯೋದಲ್ಲಿ ಚಿತ್ರೀಕರಿಸಲಾಯಿತು. ಬೆಳ್ಳಾವೆ ನರಹರಿ ಶಾಸ್ತ್ರಿಗಳು ಸಂಭಾಷಣೆ, ಹಾಡುಗಳನ್ನು ರಚಿಸಿದರು. ಕೆ.ಸುಬ್ರಹ್ಮಣ್ಯಂ ಈ ಚಿತ್ರದ ನಿರ್ದೇಶಕರು. ಅವರಿಗೆ ಕಾರ್ಯ ಬಾಹುಳ್ಯವಿತ್ತು. ಬಹುತೇಕ ಜವಾಬ್ದಾರಿ ನಿರ್ವಹಿಸಿದವರು ಅವರ ಸಹಾಯಕರಾಗಿದ್ದ ಸಿ.ಎಸ್.ವಿ.ಅಯ್ಯರ್. ಚಿತ್ರದ ಜಾಹಿರಾತಿನಲ್ಲಿ ಇಬ್ಬರ ಹೆಸರನ್ನೂ ಹಾಕಿದ್ದಾರೆ. ಎಂ.ವಿ.ರಾಜಮ್ಮ, ಕುಮಾರಿ ಚಂದ್ರಮ್ಮ, ಎಂ.ವಿ.ಶ್ರೀನಿವಾಸಮೂರ್ತಿ, ಕೆ.ಅಚ್ಯುತರಾವ್, ಶೇಷಾಚಾರ್ ಮೊದಲಾದ ರಂಗಕಲಾವಿದರುಗಳ ಅಭಿನಯವಿತ್ತು. ಚಿತ್ರದ ಪೂರ್ಣ ಹಕ್ಕನ್ನು 'ದಿ ಮೈಸೂರು ಫಿಲಂ ಕಾರ್ಪೋರೇಷನ್' ಸಂಸ್ಥೆ ಪಡೆದುಕೊಂಡಿತ್ತು. ಸಂಸ್ಥೆಯ ಮಾಲೀಕರಾದ ಎ.ಎಸ್.ಹುಸೇನ್ ಅವರು ಮೂಲತಃ ಗಂಧದಕಡ್ಡಿ ತಯಾರಕರು. ಚಿತ್ರ ಅಂಥ ಯಶಸ್ಸನ್ನೇನೂ ಕಾಣಲಿಲ್ಲ. ತೀರಾ ಸಾಧಾರಣ ಎನ್ನಲಾಗಿದೆ. ಇದರಿಂದ ಮೈಸೂರು ಫಿಲಂ ಕಾರ್ಪೋರೇಷನ್ನಿನ ಮಾಲೀಕರಾದ ಎ.ಎಸ್.ಹುಸೇನ್ ಅವರು ತೆಲುಗಿನ ಹೆಸರಾಂತ ನಾಯಕನಟ ಚಿತ್ತೂರು ವಿ.ನಾಗಯ್ಯ ಅವರ ಸಹಯೋಗದಲ್ಲಿ 'ಭಕ್ತ ಕನಕದಾಸ' ಕನ್ನಡ ಚಿತ್ರ ತಯಾರಿಸುವ ಯೋಜನೆಯನ್ನು ಕೈ ಬಿಡಬೇಕಾಯಿತು.

ಇದೇ ಸಂದರ್ಭದಲ್ಲಿ ಮೈಸೂರಿನಲ್ಲಿ ಸ್ಟುಡಿಯೋ ಒಂದನ್ನು ಪ್ರಾರಂಭಿಸುವ ಪ್ರಯತ್ನ ನಡೆಯಿತು. ದಕ್ಷಿಣ ಭಾರತ ಚಿತ್ರರಂಗದ ಪಿತಾಮಹ ಎಂದು ಹೆಸರಾಗಿದ್ದ ಪ್ರಥಮ ತೆಲುಗು, ತಮಿಳು ವಾಕ್ಚಿತ್ರಗಳನ್ನು ನಿರ್ದೇಶಿಸಿದ್ದ ಮೂಲತಃ ಕನ್ನಡದವರಾದ ಹೆಚ್.ಎಂ.ರೆಡ್ಡಿ ಮತ್ತು ಅವರ ಮಿತ್ರರು ಸ್ಟುಡಿಯೋ ಯೋಜನೆಯ ಹಿಂದೆ ಇದ್ದರು. ಮೈಸೂರಿನ ಪ್ರೀಮಿಯರ್ ಸ್ಟುಡಿಯೋ ಇರುವ ಸ್ಥಳದಲ್ಲೇ ೧೯೪೨ರಲ್ಲಿ ಪ್ರಾರಂಭವಾಯಿತು ಮೈಸೂರು ಮೂವಿಟೋನ್ ಸ್ಟುಡಿಯೋಸ್. ಹೆಚ್.ಎಂ.ರೆಡ್ಡಿಯವರಿಗೆ ಮುಂಬಯಿಯ ಶಾಲಿಮಾರ್ ಚಿತ್ರಸಂಸ್ಥೆಯೊಟ್ಟಿಗಿದ್ದ ಸ್ನೇಹದ ಕಾರಣ ಈ ಸ್ಟುಡಿಯೋದಲ್ಲಿ ಪ್ರಾರಂಭವಾದ ಮೊದಲ ಚಿತ್ರವೇ ಹಿಂದಿಯದಾಯಿತು. ಕನ್ನಡಿಗರ ಬಂಡವಾಳದಿಂದ ಆರಂಭವಾದ ಸ್ಟುಡಿಯೋ ಹಿಂದಿ ಚಿತ್ರ ತಯಾರಿಸಬೇಕಾಯಿತೆ ಎಂಬ ಆಕ್ಷೇಪವನ್ನು ಎದುರಿಸಬೇಕಾಯಿತು. ಆದರೆ ಸ್ಥಳೀಯ ಉದ್ಯಮ ಇನ್ನೂ ಚೇತರಿಸಿಕೊಂಡಿರಲಿಲ್ಲ. ಯುದ್ಧದ ಪರಿಣಾಮವಾಗಿ ಕಚ್ಚಾಫಿಲಂ ಸಿಗುತ್ತಿರಲಿಲ್ಲ. ಚಿತ್ರಗಳ ಕೆಲಸವೇ ಇಲ್ಲದಾಗ ಸ್ಟುಡಿಯೋ ಮಾಡುವುದೇನನ್ನು? ವಿಧಿಯಿಲ್ಲದೆ ಮುಚ್ಚಿತು.



(ಚಿತ್ರ ೨೭) 'ಜೀವನ ನಾಟಕ' ಚಿತ್ರದಲ್ಲಿ ವೀರಣ್ಣ, ಬಸವರಾಜಪ್ಪ, ಮೋಹನ್‌ಕುಮಾರಿ ಮತ್ತು ಮಳವಳ್ಳಿ ಸುಂದರಮ್ಮ

"ಹೆಚ್.ಎಂ.ರೆಡ್ಡಿಯವರು ಮೈಸೂರು ಮೂವಿಟೋನ್ ಸಂಸ್ಥೆಯ ಸೂತ್ರಧಾರಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟರೆಂದೂ, ಅವರ ಅಧಿಕಾರಾವಧಿಯಲ್ಲಿ ದೀರ್ಘ ಪ್ರವಾಸ ಮಾಡಿ ರೋಹಿಣಿ ಚಿತ್ರ ಸಂಸ್ಥೆಯ ಹೆಸರಿನಲ್ಲಿ ಲೈಸೆನ್ಸ್ ಪಡೆದು, ಪುಣೆಯಲ್ಲಿ ಚಿತ್ರ ನಿರ್ಮಿಸಬಲ್ಲ ನಿರ್ಮಾಪಕರನ್ನು ಹುಡುಕುತ್ತಿದ್ದಾರೆ" ಎಂದೂ 'ವಾಕ್ಚಿತ್ರ' ೧೯೪೪ರಲ್ಲಿ ವರದಿ ಮಾಡಿತು.

ಇದೇ ಅವಧಿಯಲ್ಲಿ ಬಿ.ಎಸ್.ರಂಗಾ ವಿಕ್ರಂ ಲ್ಯಾಬೊರೇಟರಿ ಪ್ರಾರಂಭಿಸಿದರು. ಪ್ರಭಾತ್ ಚಿತ್ರಮಂದಿರದ ಮಾಲೀಕರಾದ ಜಯಂತಿಲಾಲ್ ಠಾಕೂರ್ ಮತ್ತು ಆ ಕಾಲದ ಪ್ರಸಿದ್ಧ ವಿತರಕರಾಗಿದ್ದ ಜಿ.ಎಸ್.ತಲ್ಲಂ ಅವರೂ ಭಾಗಸ್ಥರಾದರು. ಮದರಾಸಿನಲ್ಲಿ ಇನ್ನೂ ಉತ್ತಮ ಲ್ಯಾಬ್‌ಗಳು ಇರಲಿಲ್ಲವಾದ್ದರಿಂದ ಬೆಂಗಳೂರಿನ ವಿಕ್ರಂ ಲ್ಯಾಬ್‌ಗೆ ತಮಿಳು, ತೆಲುಗು ಚಿತ್ರಗಳು ಪ್ರೋಸೆಸಿಂಗ್ ಮತ್ತು ಪ್ರಿಂಟಿಂಗ್ ಸಲುವಾಗಿ ಬಂದವು. ಸ್ಥಳೀಯವಾಗಿ ಕೆಲಸಗಳಿಲ್ಲ, ಮದರಾಸಿನಿಂದ ಚಿತ್ರಗಳನ್ನು ಇಲ್ಲಿಗೆ ತಂದು ಮತ್ತೆ ಮದರಾಸಿಗೆ ಕಳಿಸುವ ಬದಲು ಮದರಾಸಿನಲ್ಲೇ ಲ್ಯಾಬ್ ಹಾಕುವುದು ಉತ್ತಮವೆನ್ನಿಸಿ ಮದರಾಸಿಗೇ ಸ್ಥಳಾಂತರಿಸಿದರು.

ದ್ವಿತೀಯ ಮಹಾಯುದ್ಧ ೧೯೩೯ರಿಂದ ೧೯೪೫ರವರೆಗೆ ನಡೆಯಿತಷ್ಟೆ. ಯುದ್ಧದ ಸಮಯದಲ್ಲಿ ಆಹಾರ, ವಸ್ತ್ರ, ಪೆಟ್ರೋಲ್‌ಗಳಂತೆಯೇ ಕಚ್ಚಾಫಿಲಂ ಕೊರತೆಯೂ ಬಹಳವಿತ್ತು. ನೈಟ್ರೇಟ್ ಲಭ್ಯವಿರಲಿಲ್ಲ. ನಮಗೆ ಫಿಲ್ಮ್ ಜರ್ಮನಿಯಿಂದ ಆಮದಾಗುತ್ತಿತ್ತು. ಯುದ್ಧದ ಸಂದರ್ಭದಲ್ಲಿ ಅಲ್ಲಿಂದ ನಮಗೆ ಆಮದಾಗುವ ಹಾಗೇ ಇಲ್ಲ. ಜಪಾನ್, ಜರ್ಮನಿ, ಅಮೆರಿಕಾಗಳಿಗೇ ಸಾಕಷ್ಟು ಸರಬರಾಜಿರಲಿಲ್ಲ. ಇನ್ನು ಭಾರತಕ್ಕೆ ಬರುವ ಮಾತೆಲ್ಲಿ ? ಅಗ್ಫಾ ಕಂಪನಿ ನಿಂತುಹೋಗಿತ್ತು. ಅಮೆರಿಕಾದ ಕೊಡಕ್ ಫಿಲಂಗೆ ಬೇಡಿಕೆ ಇತ್ತು.

ಸುಮಾರು ೧೯೫೫ರವರೆಗೆ ಅಂದರೆ ಜರ್ಮನಿಯಲ್ಲಿ ಫಿಲಂ ತಯಾರಿಕಾ ಕಂಪನಿ ಪ್ರಾರಂಭ ಆಗುವವರೆಗೆ ಈ ಪಡಿಪಾಟಲು ತಪ್ಪಲಿಲ್ಲ.

"...ಮದರಾಸಿನಲ್ಲಿ ಕಚ್ಚಾ ಫಿಲಂ ಅಭಾವ ಈಗ ಬಹಳವಾಗಿದೆ. ಇಲ್ಲಿನ ಅನೇಕ ಸ್ಟುಡಿಯೋಗಳವರು ತಮ್ಮ ಕೆಲಸಗಾರರನೇಕರನ್ನು ಕೆಲಸದಿಂದ ತೆಗೆದು ಹಾಕಿರುವುದಾಗಿ ವದಂತಿಯಿದೆ. ಸ್ಟುಡಿಯೋ ಪಡೆದವರಿಗೆ ಮಾತ್ರ ಕಚ್ಚಾ ಫಿಲಂ ಕೊಡಲಾಗುವುದೆಂದು ಸರ್ಕಾರದವರು ಮಾಡಿರುವ ನಿರ್ಣಯವು ಅನೇಕಾನೇಕ ಸ್ವತಂತ್ರ ನಿರ್ಮಾಪಕರಿಗೆ ಕಣ್ಣು-ಕಣ್ಣು ಬಿಡುವ ಪ್ರಸಂಗ ತಂದೊಡ್ಡಿದೆ. ಈಗ ಇಲ್ಲಿ ತಯಾರಾಗುತ್ತಿರುವ ಅನೇಕ ಚಿತ್ರಗಳು ಮುಗಿಯುತ್ತವೆಯೇ ಎಂಬ ಸಂಶಯ ಕೂಡ ಬಲವಾಗುತ್ತಿದೆ. ಕೆಲವು ಗುಪ್ತ ಸ್ಥಳಗಳಲ್ಲೂ ಒಂದಕ್ಕೆರಡರಷ್ಟೇನು, ಹತ್ತರಷ್ಟು ಕೊಟ್ಟರೂ ಕಚ್ಚಾ ಫಿಲಂ ಸಿಗುವುದು ದುರ್ಲಭವಾಗಿದೆ..." ಎಂದು 'ಚಿತ್ರ ಸಮಾಚಾರ್' ಪತ್ರಿಕೆಯು ವರದಿ ಮಾಡಿದೆ.

ಇಂಥ ಸಂದರ್ಭದಲ್ಲಿ ಕನ್ನಡ ಚಿತ್ರ ತಯಾರಿಸುವ ಉತ್ಸಾಹವೇ ಯಾರಿಗೂ ಇರಲಿಲ್ಲ. ಹಾಗೊಂದು ವೇಳೆ ಚಿತ್ರ ತಯಾರಿಸಬೇಕೆಂದರೆ ಯಾವುದಾದರೊಂದು ಸ್ಟುಡಿಯೋದ ಸಹಕಾರ ಅಥವಾ ಪಾಲುದಾರಿಕೆಯಲ್ಲಿ ಚಿತ್ರ ತಯಾರಿಸಬೇಕಿತ್ತು. ಏಕೆಂದರೆ ಅವರಿಗೆ ಮಾತ್ರ ಪರ್ಮಿಟ್ ಇರುತ್ತಿತ್ತು, ಕಚ್ಚಾ ಫಿಲಂ ಸಿಗುತ್ತಿತ್ತು.

ಇದಲ್ಲದೆ ಇಂಡಿಯಾ (ಬ್ರಿಟಿಷ್) ಸರ್ಕಾರ ಮತ್ತೊಂದು ನಿಯಮವನ್ನು ಮಾಡಿತು. ಫಿಲಂನ ಮಿತವ್ಯಯದ ದೃಷ್ಟಿಯಿಂದ ಚಿತ್ರಗಳ ಉದ್ದಕ್ಕೇ ಕಡಿವಾಣ ಹಾಕಿತು. ಒಂದು ಚಿತ್ರ ನಿರ್ಮಾಣಕ್ಕೆ ನೆಗೆಟಿವ್ ಕೋಟಾ ೪೪,೦೦೦ ಅಡಿ ಮಾತ್ರ. ಚಿತ್ರದ ಉದ್ದ ೧೧,೦೦೦ ಅಡಿ ಮೀರಕೂಡದು. ಅಲ್ಲದೆ ಚಿತ್ರ ನಿರ್ಮಿಸುವ ಮುನ್ನ ದೆಹಲಿಯಿಂದ ಲೈಸೆನ್ಸ್ ಪಡೆಯಬೇಕಿತ್ತು. ಇವೆಲ್ಲ ಕಾರಣಗಳಿಂದ ದಕ್ಷಿಣಭಾರತದಲ್ಲೇ ಚಿತ್ರ ನಿರ್ಮಾಣ ಕುಂಠಿತವಾಗಿತ್ತು. ಇನ್ನು ಕನ್ನಡ ಚಿತ್ರಗಳ ಸ್ಥಿತಿ ಅಧೋಗತಿಯೇ ಆಯಿತು. ೧೯೪೧, ೪೨ ರಲ್ಲಿ ತಲಾ ಎರಡೆರಡು ಚಿತ್ರಗಳು ತಯಾರಾದದ್ದೇ ಅತ್ಯಂತ ಪ್ರಯಾಸದಿಂದ. ಈ ಎಲ್ಲ ನಿರ್ಬಂಧ, ಮಿತಿಗಳ ನಡುವೆಯೇ ಸೃಜನಶೀಲತೆ ಹೊಸಮಾರ್ಗಗಳನ್ನು ಹುಡುಕಿಕೊಳ್ಳುತ್ತದೆ. ಉದಾಹರಣೆಗೆ, ವಿ.ಶಾಂತಾರಾಂ ಚಿತ್ರದ



(ಚಿತ್ರ ೨೮) 'ಹರಿಶ್ಚಂದ್ರ' ಚಿತ್ರದಲ್ಲಿ ವಿಶ್ವಾಮಿತ್ರನಾಗಿ ಆರ್.ನಾಗೇಂದ್ರರಾಯರು.

ಉದ್ದ ಇಷ್ಟೇ ಇರಬೇಕೆಂಬ ನಿಯಮ ಬಂದಾಗ ಶೀರ್ಷಿಕೆಯ ಭಾಗವನ್ನು ಸ್ಲೈಡ್‌ಗಳಲ್ಲಿ ಸಿದ್ಧ ಮಾಡಿದರು. ಚಿತ್ರದ ಪ್ರಿಂಟ್ ಜೊತೆ ಸ್ಲೈಡ್‌ಗಳನ್ನು ಕಳುಹಿಸುತ್ತಿದ್ದರು. ಈ ಶೀರ್ಷಿಕೆಗಳಿಗಾಗಿ ಬಳಸುತ್ತಿದ್ದ ಮುನ್ನೂರು ಅಡಿಗಳಷ್ಟು ಫಿಲಂ ಉಳಿತಾಯವಾಗುತ್ತಿತ್ತು. ಅದು ಕಥಾನಿರೂಪಣೆಗೆ ಬಳಸುವಂತಾಯಿತು. ಈ ವಿಧಾನವನ್ನು ಕನ್ನಡ ಚಿತ್ರರಂಗವೂ ಬಳಸಿಕೊಂಡ ಬಗ್ಗೆ ಮಾಹಿತಿ ದೊರೆತಿಲ್ಲ.

೧೯೪೩ರಲ್ಲಿ 'ಇನ್‌ಫರ್ಮೇಶನ್ ಫಿಲಂಸ್ ಆಫ್ ಇಂಡಿಯಾ' ಪ್ರಾರಂಭವಾಯಿತು. ಡಿಫೆನ್ಸ್ ಆಫ್ ಇಂಡಿಯಾ ಕಾಯಿದೆ ಪ್ರಕಾರ ಕಡ್ಡಾಯವಾಗಿ ಕಿರುಚಿತ್ರಗಳನ್ನು ತೋರಿಸಬೇಕಿತ್ತು.

ಚಿತ್ರದ ಉದ್ದ ೧೧,೦೦೦ ಅಡಿ. ಟ್ರೈಲರ್‌ಗಳ ಉದ್ದ ೪೦೦ ಅಡಿ ಇರಬೇಕೆಂಬ ಇಂಡಿಯಾಸರ್ಕಾರದ ಆಜ್ಞೆಯು ೧೯೪೨ನೇ ಮೇ ತಿಂಗಳಿನಿಂದ ಜಾರಿಗೆ ಬಂತು. ಇಂಗ್ಲೆಂಡ್, ಅಮೆರಿಕಾಗಳಿಂದ ಕಚ್ಚಾಫಿಲಂ ಸರಿಯಾಗಿ ಬರುತ್ತಿರಲಿಲ್ಲ ಎಂಬುದು ಇದಕ್ಕೆ ಮುಖ್ಯ ಕಾರಣ. ಆದರೆ ತಮ್ಮ ಪ್ರಕಟಣೆ - ಪ್ರಚಾರದ ಉದ್ದೇಶಕ್ಕಾಗಿ ಫೀಚರ್ ಫಿಲಂಗಳ ಜೊತೆ ಯುದ್ಧದ ಚಿತ್ರಗಳನ್ನು ಪ್ರದರ್ಶಿಸುತ್ತಿದ್ದರು.

ಈ ನಿಯಮದಿಂದಾಗಿ ದಕ್ಷಿಣಭಾರತ ಚಿತ್ರರಂಗ ವಿಚಿತ್ರ ಸಮಸ್ಯೆಗಳನ್ನೆದುರಿಸಬೇಕಾಯಿತು. ವೃತ್ತಿ ರಂಗಭೂಮಿಯ ನಾಟಕಗಳನ್ನು ಆಧರಿಸಿದ ಚಿತ್ರಗಳನ್ನು ತಯಾರಿಸುತ್ತಿದ್ದುದರಿಂದ ಮತ್ತು ಪ್ರೇಕ್ಷಕರು ಅಷ್ಟೇ ರಂಜನೆಯನ್ನು ನಿರೀಕ್ಷಿಸುವುದರಿಂದ ತುಸು ದೀರ್ಘ ಅವಧಿಯ ಚಿತ್ರಗಳನ್ನೇ ತೆಗೆಯುವುದು ಅಭ್ಯಾಸವಾಗಿತ್ತು. ಮೂಕಿಚಿತ್ರಗಳ ಕಾಲದಲ್ಲೇ ಕಡಿಮೆ ಅವಧಿಯ ಚಿತ್ರಗಳನ್ನು ಪ್ರಾರಂಭದ ದಿನಗಳಲ್ಲಿ ಪ್ರದರ್ಶಿಸಿ ವ್ಯತಿರಿಕ್ತವಾದ ಪ್ರತಿಕ್ರಿಯೆ ಪಡೆದಿದ್ದ ಅನುಭವವೂ ಇತ್ತು. ಹೀಗಾಗಿ ನಮ್ಮ ಚಿತ್ರಗಳು ಹದಿನೆಂಟು ಸಾವಿರ ಅಡಿಗಳಿಗಿಂತ ಕಡಿಮೆ ಇರಲೇ ಇಲ್ಲ. ಈ ಉದ್ದದ ಚಿತ್ರಕ್ಕೆ ಒಂದರಿಂದ ಎರಡು ಲಕ್ಷದವರೆಗೆ ಖರ್ಚಾಗುತ್ತಿತ್ತು. ಹಾಕಿದ ಬಂಡವಾಳ ೩-೪ ವರ್ಷ ಕಾದರೂ ಹಿಂತಿರುಗುವುದು ಕಷ್ಟವಿತ್ತು. ಹೀಗಾಗಿ ಹೊಸ ಚಿತ್ರ ನಿರ್ಮಾಣದ ಪ್ರಯತ್ನಗಳು ಅಲ್ಲೇ ಸ್ಥಗಿತವಾಗುತ್ತಿದ್ದವು. ಈ ಹಿನ್ನೆಲೆಯಲ್ಲಿ ಸರ್ಕಾರದ ಆಜ್ಞೆ, ಚಿತ್ರದ ಉದ್ದಕ್ಕೆ ಹಾಕಿದ ಮಿತಿಯಿಂದ ಅನುಕೂಲವೇ ಆಯಿತು ಎಂದ ಬುದ್ಧಿ ಜೀವಿಗಳ ತರ್ಕವೂ ಇತ್ತು.

ನೆಗೆಟಿವ್, ಪಾಸಿಟಿವ್‌ಗಳ ದುಬಾರಿ ಬೆಲೆ, ನಟ-ನಟಿಯರ ಸಂಬಳ ಮತ್ತು ಸ್ಟುಡಿಯೋ ಬಾಡಿಗೆ, ಇತ್ಯಾದಿಗಳಲ್ಲಿ ಮಿತವ್ಯಯವಾಗುತ್ತದೆ ಎಂಬುದು ಅವರ ಲೆಕ್ಕಾಚಾರ.

೧೮ ಸಾವಿರ ಅಡಿ ಉದ್ದದ ಚಿತ್ರ ಮಾಡಿ ೩೦ ಹಾಡು, ೩-೪ ಕಂದಪದ್ಯ, ೫-೬ ನೃತ್ಯ ಸೇರಿಸುತ್ತಿದ್ದರು. ಉದಾಹರಣೆಗೆ 'ಸತಿ ಅನುಸೂಯಾ'ದಲ್ಲಿ ೪೦ ಹಾಡು, 'ಮಾಯಾಬಜಾರ್'ನಲ್ಲಿ ೩೪ ಹಾಡು, 'ಲವ-ಕುಶ'ದಲ್ಲಿ ೩೩ ಹಾಡು, 'ಲಂಕಾದಹನ'ದಲ್ಲಿ ೩೭ ಹಾಡು, 'ಪ್ರಹ್ಲಾದ'ದಲ್ಲಿ ೪೦ ಹಾಡುಗಳು ಇದ್ದವು.

ಹೀಗೆ ಅನಗತ್ಯವಾದುದನ್ನು ಸೇರಿಸಿ ಉದ್ದ ಹೆಚ್ಚಿಸುವ ಆಭಾಸ ತಪ್ಪಿ ಎಷ್ಟು ಬೇಕೋ ಅಷ್ಟನ್ನು ಚಿತ್ರಿಸುವುದು ಸಾಧ್ಯವಾದರೆ ಸಮಯವೂ ಉಳಿಯುತ್ತದೆ, ನಿಜಕ್ಕೂ ಇದೊಂದು ಒಳ್ಳೆಯ ಬೆಳವಣಿಗೆ ಎಂದವು ಪತ್ರಿಕೆಗಳು.

ಚಿತ್ರಗಳಲ್ಲಿ ಸಾಮಾಜಿಕ ಅಂಶಗಳು ಬಂದವು ಎಂಬುದರ ಹಿಂದೆ ಚಿತ್ರ ನಿರ್ಮಾಪಕರ ಸಾಮಾಜಿಕ ಕಾಳಜಿ ಇತ್ತೆಂದೇನೂ ಭಾವಿಸಬೇಕಾಗಿಲ್ಲ. ಕಚ್ಚಾ ಫಿಲಂ ಅಭಾವ, ಉದ್ದಕ್ಕೆ ಮಿತಿ ಇದ್ದುದರಿಂದ ಪೌರಾಣಿಕ, ಜನಪದಗಳನ್ನು ಈ ಮಿತಿಯಲ್ಲಿ ಚಿತ್ರಿಸುವುದು ಕಷ್ಟವಾದ್ದರಿಂದ ನೀತಿದಾಯಕ, ನಿತ್ಯ ಜೀವನದ ಕಥಾನಕಗಳನ್ನು ಚಿತ್ರಿಸುವುದು ವಿಹಿತವೆಂದು ತೋರಿತು. ಜಾನಪದ, ಪೌರಾಣಿಕ ಚಿತ್ರಗಳಿಗೆ ೩-೪ ಲಕ್ಷಗಳಾದರೂ ಬೇಕು. ಕೌಟುಂಬಿಕಚಿತ್ರಕ್ಕೆ ಅದರ ಅರ್ಧವೂ ಬೇಕಿಲ್ಲ ಎಂಬ ಜಾಣತನ ಕೆಲಸ ಮಾಡಿತು. ಸಾಮಾನ್ಯವಾಗಿ ಕಾಸ್ಟ್ಯೂಮ್ ಸಿನಿಮಾಗಳಾದರೆ ಉಡುಪು ಇತ್ಯಾದಿ ಖರ್ಚು ಇರುತ್ತೆ. ದೃಶ್ಯ ಸಂಯೋಜನೆಗೇ ಲಕ್ಷಗಟ್ಟಲೆ ಬೇಕು. ೫-೬ ತಿಂಗಳಾದರೂ ನಟ-ನಟಿಯರನ್ನು ಸಾಕಬೇಕು. ಗುಂಪಿನ ದೃಶ್ಯ, ಯುದ್ಧದ ದೃಶ್ಯಗಳಿಗೆ ಸಾವಿರಾರು ಜನರನ್ನು ಕರೆತಂದು ಹಣ, ಊಟ ಎಲ್ಲ ಕೊಡಬೇಕು. ಸ್ಟುಡಿಯೋ, ನಿರ್ದೇಶಕ, ಕಚ್ಚಾ ಫಿಲಂ ಎಲ್ಲವೂ ಬೆಲೆ ಹೆಚ್ಚೇ ಅನ್ನಿಸತೊಡಗಿತ್ತು. ಇಂಥ ಅನೇಕ ಕಾರಣಗಳು ಕೌಟುಂಬಿಕ ಚಿತ್ರಗಳತ್ತ ತಿರುಗಲು ಕಾರಣವಾದವು. ಆದರೆ ಇದಾವುದೂ ಕನ್ನಡ ಚಿತ್ರಗಳಿಗೆ ತಟ್ಟಿದಂತಿಲ್ಲ. ಒಂದೆರಡು ಪ್ರಯತ್ನಗಳ ಅಪವಾದ ಇರಬಹುದಾದರೂ ಮುಂದಾಲೋಚನೆಯಂಥ ಸಂಗತಿಗಳು ನಮಗೆ ಎಂದೂ ಅನ್ವಯವಾಗಲೇ ಇಲ್ಲ.

ಮದರಾಸಿನ ನಿರ್ಮಾಪಕರನೇಕರು ಈ ನಿಯಮವನ್ನು ವಿರೋಧಿಸಿದರು. ಪೌರಾಣಿಕ ಚಿತ್ರಗಳಾದ್ದರಿಂದ, ಪುರಾಣ -ಸಂತರುಗಳ ಬಗ್ಗೆ ಪ್ರೇಕ್ಷಕರಿಗೆ ಇರುವ ಭಾವನಾತ್ಮಕ ಆಸಕ್ತಿಗಳನ್ನು ಉಳಿಸಿಕೊಳ್ಳಬೇಕಾದರೆ ಕಥೆಯನ್ನು ಕಡಿತ ಮಾಡುವುದೇ ಮೊದಲಾದ ಸ್ವಾತಂತ್ರ್ಯ ತೆಗೆದುಕೊಳ್ಳುವ ಹಾಗಿಲ್ಲ. ಅವು ಇರುವಂತೆಯೇ ಚಿತ್ರಿತವಾಗಬೇಕು ಎಂಬ ವಾದವೇ ಪ್ರಬಲವಾಗಿತ್ತು.

'ವಸಂತಸೇನಾ' ಚಿತ್ರದ ನಂತರ ನಾಗೇಂದ್ರರಾಯರು ಪುನಃ ಚಿತ್ರ ತಯಾರಿಸಲು ಕೆಲವು ವರ್ಷಗಳೇ ಬೇಕಾದವು. ಈ ಕಚ್ಚಾ ಫಿಲಂ ಸಮಸ್ಯೆಗಳ ಸಂದರ್ಭದಲ್ಲಿ



(ಚಿತ್ರ ೨೯) 'ಹರಿಶ್ಚಂದ್ರ'ದಲ್ಲಿ ಸುಬ್ಬಯ್ಯನಾಯ್ಡು, ಲಕ್ಷ್ಮೀಬಾಯಿ ಮಾ।ನರಸಿಂಹನ್




(ಚಿತ್ರ ೩೦) ಒಂದು ವಿಶೇಷ ಜಾಹಿರಾತು

ಸ್ಟುಡಿಯೋದವರ ಸಹಯೋಗ ಅನಿವಾರ್ಯವಾಗಿದ್ದುದರಿಂದ ನಾಗೇಂದ್ರರಾಯರು ಜೆಮಿನಿ ಸಂಸ್ಥೆಯ ಎಸ್.ಎಸ್.ವಾಸನ್ ಜೊತೆ ಮಾತುಕತೆ ನಡೆಸಿದರು. ಅದು ಫಲಕಾರಿಯಾಗಲಿಲ್ಲ. ಎ.ವಿ.ಮೇಯಪ್ಪನ್ ಪಾಲುದಾರಿಕೆಯ ಮೇಲೆ ಕನ್ನಡ ಚಿತ್ರ ತಯಾರಿಸಲು ಒಪ್ಪಿದರು. ೧೧,೦೦೦ ಅಡಿಗಳ ಮಿತಿಯಲ್ಲಿ ತಯಾರಿಸಬಹುದಾದ್ದು ಹರಿಶ್ಚಂದ್ರನ ಕಥೆ ಮಾತ್ರ ಎಂದು ತೀರ್ಮಾನಿಸಿದರು. ಅದೇ ಸಮಯದಲ್ಲಿ ಜೆಮಿನಿ ಸ್ಟುಡಿಯೋದಲ್ಲಿ ಪಿ.ಕನ್ನಾಂಬ ಮತ್ತು ಎಸ್.ಎಸ್.ವಾಸನ್ ಅವರ ಸಹಭಾಗಿತ್ವದಲ್ಲಿ ತಮಿಳಿನಲ್ಲಿ 'ಹರಿಶ್ಚಂದ್ರ' ಚಿತ್ರ ತಯಾರಾಗುತ್ತಿತ್ತು. ಆದರೆ ಕನ್ನಡದಲ್ಲಿ ನಾಟಕ ಶಿರೋಮಣಿ ಎ.ವಿ.ವರದಾಚಾರ್ಯರು ಅಭಿನಯಿಸುತ್ತಿದ್ದ 'ಹರಿಶ್ಚಂದ್ರ' ಜನಪ್ರಿಯ ನಾಟಕವೆನಿಸಿತ್ತು. ನಾಗೇಂದ್ರರಾಯರು ವಿಶ್ವಾಮಿತ್ರನ ಪಾತ್ರವನ್ನು ವಿಶಿಷ್ಟವಾಗಿ ರೂಪಿಸಿ ಚಿತ್ರಕಥೆ ಸಿದ್ಧಮಾಡಿದರು. ಮೇಯಪ್ಪನ್ ಅವರ ಪ್ರಗತಿ ಪಿಕ್ಚರ್ಸ್, ಎಸ್.ಎಸ್.ಎಸ್ ನಾಟಕ ಮಂಡಳಿ (ಒಂದು ಹಂತದಲ್ಲಿ ಸರಸ್ವತಿ ಸ್ಟೋರ್ಸ್ ಸಹ ಸೇರಿತು) ಆಶ್ರಯದಲ್ಲಿ 'ಹರಿಶ್ಚಂದ್ರ' ತಯಾರಾಯಿತು. ಮೇಯಪ್ಪನ್ ಸಲಹೆಯ ಮೇರೆಗೆ ನಾಗೇಂದ್ರರಾಯರೇ ವಿಶ್ವಾಮಿತ್ರನ ಪಾತ್ರವನ್ನು ನಿರ್ವಹಿಸಿ ಚಿತ್ರವನ್ನು ನಿರ್ದೇಶಿಸಿದರು. ಎ.ಟಿ.ಕೃಷ್ಣಸ್ವಾಮಿ ಈ ಚಿತ್ರದಲ್ಲಿ ನಾಗೇಂದ್ರರಾಯರಿಗೆ ಸರಿದೊರೆಯಾಗಿ ನಿರ್ದೇಶನದಲ್ಲಿ ದುಡಿದರು. ಜಾಹಿರಾತುಗಳಲ್ಲಿ ಮೊದಲು ಕೃಷ್ಣಸ್ವಾಮಿಯವರು, ಅನಂತರ ನಾಗೇಂದ್ರರಾಯರ ಹೆಸರುಗಳನ್ನು ಪ್ರಚಾರ ಮಾಡಲಾಗಿತ್ತು. ಸಂಗೀತ ನಿರ್ದೇಶಕರು ಆರ್.ಸುದರ್ಶನಂ. ಹರಿಶ್ಚಂದ್ರನಾಗಿ ಸುಬ್ಬಯ್ಯ ನಾಯ್ಡು, ಚಂದ್ರಮತಿಯಾಗಿ ಲಕ್ಷ್ಮೀಬಾಯಿ ಅಭಿನಯಿಸಿದ್ದರು. ಜಿ.ವಿ.ಕೃಷ್ಣಮೂರ್ತಿ, ಎಂ.ಜಿ.ಮರಿರಾವ್ ಮತ್ತು ಸಂಗೀತ ವಿದ್ವಾಂಸರಾದ ಬಿ.ಎಸ್.ರಾಜಯ್ಯಂಗಾರ್ ಮುಖ್ಯ ಪಾತ್ರಗಳಲ್ಲಿದ್ದರು.

ಲೋಹಿತಾಶ್ವನನ್ನು ಹಾವು ಕಚ್ಚುವ ಸನ್ನಿವೇಶದ ಚಿತ್ರೀಕರಣ ನಡೆದಿತ್ತು. ಲೋಹಿತಾಶ್ವನ ಪಾತ್ರದ ಬಾಲಕ ಎಷ್ಟು ಪುಸಲಾಯಿಸಿದರೂ ಹಾವಿನ ಹತ್ತಿರಕ್ಕೂ ಹೋಗಲು ಅಂಜಿದ. ನಾಗೇಂದ್ರರಾಯರಿಗೆ ಪೇಚಿಗಿಟ್ಟುಕೊಂಡಿತು. ಹಾವಿನ ಸ್ವಭಾವವನ್ನೇ ಗಮನಿಸಿದರು. ಹಾವಾಡಿಗ ಕೈ ಎತ್ತಿದರೆ ಹೆಡೆ ಎತ್ತುತ್ತಿತ್ತು. ಆತ ಸೂಚನೆ ನೀಡಿದರೆ ರೋಷದಿಂದ ಹೆಡೆಯನ್ನು ನೆಲಕ್ಕೆ ಅಪ್ಪಳಿಸುತ್ತಿತ್ತು. ರಾಯರಿಗೆ ಏನೋ ಹೊಳೆಯಿತು. ಹಾವಿನ ಭಾಗವನ್ನು ಬೇರೆಯಾಗಿ ಚಿತ್ರಿಸಿದರು. ಹುಡುಗನಿಗೆ ಹೇಳಿ ಕೊಟ್ಟು ಕೆಲವು ಅಭಿನಯದ ಭಾಗಗಳನ್ನು ಚಿತ್ರಿಸಿಕೊಂಡರು. ಇವೆರಡನ್ನೂ ಜೋಡಿಸಿ ಹುಡುಗನನ್ನು ಹಾವು ಕಚ್ಚಿತೆಂಬಂತೆ ಕಾಣುವ ಪರಿಣಾಮ ತಂದರು.

ಈ ಹೊತ್ತು ಇಂಥ ಅನೇಕ ತಂತ್ರಗಳು ಸಹಜವಾಗಿಯೇ ಇವೆ. ಸಂಕಲನದಲ್ಲಿಯ ಇಂಟರ್‌ಕಟಿಂಗ್ (Intercutting) ಇತ್ಯಾದಿಗಳು ಇಂಥ ಜೋಡಣೆಗಳೇ ಆಗಿವೆ. ಎಲ್ಲವನ್ನೂ ಅನುಭವವೇ ಕಲಿಸಿತ್ತು. ಅದೇ ಮುಂದೆ ಸಿದ್ಧಾಂತವಾಯಿತು ಎಂಬುದನ್ನು ಚಿತ್ರರಂಗದ ಇಂಥ ಅನೇಕ ಸಂಗತಿಗಳಿಂದ ತಿಳಿಯಬಹುದಾಗಿದೆ.

ಚಿತ್ರ ಮೊದಲು ಮೈಸೂರಿನ ಚಾಮುಂಡೇಶ್ವರಿ ಟಾಕೀಸ್, ಮಂಗಳೂರಿನ ಬಾಲಾಜಿ, ಚಿತ್ರದುರ್ಗದ ರೂಪವಾಣಿ, ಹುಬ್ಬಳ್ಳಿಯ ಮೋಹನ ಚಿತ್ರಮಂದಿರಗಳಲ್ಲಿ ತೆರೆಕಂಡಿತು. ಹುಬ್ಬಳ್ಳಿಯಲ್ಲಿ ೨೯ ವಾರಗಳ ಕಾಲ ಪ್ರದರ್ಶನ ಕಂಡ ಮೊದಲ ಕನ್ನಡ ಚಿತ್ರ 'ಹರಿಶ್ಚಂದ್ರ'.

೧೯೪೩ ಡಿಸೆಂಬರ್ ೧೨ನೇ ತಾರೀಖು ಬೆಂಗಳೂರಿನ ಮೂವಿಲ್ಯಾಂಡ್‌ನಲ್ಲಿ ತೆರೆಕಂಡ ಚಿತ್ರ ಭಾರಿ ಯಶಸ್ಸು ಗಳಿಸಿತ್ತು. ಮೇ ೧ನೇ ತಾರೀಖಿನಿಂದ ಧಾರವಾಡ, ಗದಗ್‌ಗಳಲ್ಲಿ ಪ್ರದರ್ಶನ ಕಂಡಿತು. ಮತ್ತು ಧಾರವಾಡದಲ್ಲಿ ೧೦೦ ದಿನ ಪ್ರದರ್ಶನ ಕಂಡಿತು. ಕೊಯಮತ್ತೂರು, ತಿರುಚನಾಪಳ್ಳಿ, ರಾಜಮಹೇಂದ್ರಿಗಳಲ್ಲಿಯೂ ಈ ಚಿತ್ರ ಯಶಸ್ವಿಯಾಯಿತು. 'ಸತ್ಯಶೋಧನೆ' ಅಥವಾ 'ಹರಿಶ್ಚಂದ್ರ' ಕೆಲವು ಮಾರ್ಪಾಟುಗಳಿಂದ ಆಧುನೀಕರಣಗೊಂಡ ಪೌರಾಣಿಕ ಚಿತ್ರ 'ಸತ್ಯವೇ ಸರ್ವಧರ್ಮದ ಮೂಲ' ಎಂಬ ತತ್ವವನ್ನು ಪ್ರತಿಪಾದಿಸುತ್ತದೆ. ಪ್ರಾರಂಭದಲ್ಲಿ ಕೊಂಚ ಗಡಿಬಿಡಿಯಾಗಿದ್ದು ಛಾಯಾಗ್ರಹಣವೂ ಚೆನ್ನಾಗಿಲ್ಲ. ಅನಂತರ ಎಲ್ಲವೂ ವ್ಯವಸ್ಥಿತವಾಗಿದೆ. ಮನೋಹರ ದೃಶ್ಯಗಳು, ಉತ್ತಮ ಸನ್ನಿವೇಶಗಳ ಸಂವಿಧಾನವಿದೆ ಎಂದೂ ಮುಖ್ಯವಾಗಿ ವಿಶ್ವಾಮಿತ್ರನಾಗಿ ನಾಗೇಂದ್ರರಾಯರು, ಹರಿಶ್ಚಂದ್ರನಾಗಿ ಸುಬ್ಬಯ್ಯನಾಯ್ಡು, ಚಂದ್ರಮತಿಯ ಪಾತ್ರದ ಲಕ್ಷ್ಮೀಬಾಯಿ ಹಾಗೂ ನಕ್ಷತ್ರಿಕನಾಗಿ ಜಿ.ವಿ.ಕೃಷ್ಣಮೂರ್ತಿಯವರ ಅಭಿನಯ ಬಹು ಚೆನ್ನಾಗಿದೆ ಎಂದು ಪತ್ರಿಕೆಗಳು ವಿಮರ್ಶಿಸಿದ್ದವು.

ಎಂ.ನರೇಂದ್ರಬಾಬು ಈ ಚಿತ್ರವನ್ನು ಕುರಿತು "ರಾಘವಾಂಕನ ಹರಿಶ್ಚಂದ್ರ ಕಾವ್ಯವೇ ಆಕರವಾದ 'ಹರಿಶ್ಚಂದ್ರ' ಆರ್‌ನಾರ್ ಅವರ ನಿರ್ದೇಶನದಲ್ಲಿ ಸಿದ್ಧವಾಯಿತು. ೧೧,೦೦೦ ಅಡಿಗಳಲ್ಲಿ ಮೂಲಕಾವ್ಯದ ಸಾರ ಸಂಗ್ರಹಿಸಿ, ಅನೇಕ ಸಂಭಾಷಣೆಗಳನ್ನು ಪಡೆದುಕೊಂಡು ಚಿತ್ರನಾಟಕ ರೂಪಿತವಾಗಿತ್ತು. ವಿಶೇಷವೆಂದರೆ ತಾಂತ್ರಿಕ ಚಮತ್ಕಾರಗಳನ್ನು ತುಂಬ ಕಡಿಮೆ ಬಳಸಿ ಕಥೆ ಹೇಳಿದ ಶೈಲಿ. ಅದು ಸ್ವಾರಸ್ಯಪೂರ್ಣ ಚಿತ್ರನಾಟಕವಾಗಿತ್ತು. ಮತ್ತು ಎಲ್ಲ ಕಲಾವಿದರಿಗೂ ಸ್ಫೂರ್ತಿ ಕೊಟ್ಟಂಥದ್ದಾಗಿತ್ತು.." ಎಂದಿದ್ದಾರೆ.

ಲೋಹಿತಾಶ್ವನ ಮರಣದ ಸನ್ನಿವೇಶದಲ್ಲಿ ಚಂದ್ರಮತಿಯ ಭಾವಾಭಿನಯ, ದುಃಖ ಪ್ರೇಕ್ಷಕರನ್ನು ಬಿಕ್ಕಿ ಬಿಕ್ಕಿ ಅಳುವಂತೆ ಮಾಡಿತೆಂದು ನೆನೆಯುತ್ತಾರೆ. ಚಿತ್ರೀಕರಣ ನಡೆಯುತ್ತಿದ್ದಾಗಲೇ ಇನ್ನೊಂದು ಭಾಷೆಗೆ ಡಬ್ ಮಾಡುವ ಸಲಹೆಯೂ ಬಂತು. ಧ್ವನಿಗ್ರಾಹಕ ರಾಘವನ್ ಅವರ ಈ ಸಲಹೆ ರಾಯರಿಗೆ ಪ್ರಿಯವಾಯಿತು. ಆವರೆಗೆ ಯಾವ ಚಿತ್ರವೂ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಡಬ್ ಆಗಿದ್ದೇ ಇಲ್ಲ. ಮೇಯಪ್ಪನ್ ಮುಂದೆ ಈ ಪ್ರಸ್ತಾಪವನ್ನಿಟ್ಟಾಗ ಕೊಂಚ ಅನುಮಾನಿಸಿದರು. ಪ್ರಾಯೋಗಿಕವಾಗಿ ಒಂದು ರೀಲನ್ನು ಡಬ್ ಮಾಡಿ ತೋರಿಸಿದ ಮೇಲೆ ಒಪ್ಪಿದರು. ಚಿತ್ರೀಕೃತ ಫಿಲಂ ಅನ್ನು ಹಾಗೇ ಉಳಿಸಿಕೊಂಡು, ಸೌಂಡ್‌ಟ್ರ್ಯಾಕ್ ಮಾತ್ರ ಬದಲಾಯಿಸುವುದು ಈ ಡಬ್ಬಿಂಗ್ ತಂತ್ರದ ರಹಸ್ಯ. ಕನ್ನಡದಲ್ಲಿ ಕಲಾವಿದರು ಮಾತಾಡಿರುತ್ತಾರೆ. ಸೌಂಡ್ ತೆಗೆದರೆ ತುಟಿಗಳ ಚಲನೆ ಇರುತ್ತದೆ. ಅದಕ್ಕೆ ಹೊಂದುವ ಹಾಗೆ ಇನ್ನೊಂದು ಭಾಷೆಯಲ್ಲಿ ಸಂಭಾಷಣೆ ಬರೆಯಬೇಕು. ಮಾತನಾಡುವವರೂ ಆಗಲೇ ಇದ್ದ ತುಟಿ ಚಲನೆಗೆ ಹೊಂದಿಸಿಕೊಂಡು ಸಂಭಾಷಣೆ ಹೇಳಬೇಕು.

ಹಾಡುಗಳನ್ನು ಕೂಡಾ ಬೇರೆ ಭಾಷೆಗಳಲ್ಲಿ ಬರೆಸಿ ಧ್ವನಿ ಮುದ್ರಿಸುವಾಗ ಮೂಲದಲ್ಲಿನ ತುಟಿಗಳ ಚಲನೆಯನ್ನು ಎಚ್ಚರಿಕೆಯಿಂದ ಗಮನಿಸಿ ಹೊಂದಿಸಿಕೊಳ್ಳಬೇಕು. ಇವೆಲ್ಲವೂ ಸಮರ್ಥವಾಗಿ ಅಡಕಗೊಳ್ಳುತ್ತದೆಯೇ ಎಂಬ ಸಂದೇಹವಿದ್ದ ಮೇಯಪ್ಪನ್ ಅವರಿಗೆ ಒಂದೆರಡು ಸ್ಯಾಂಪಲ್ ಮಾಡಿ ತೋರಿಸಿ ಒಪ್ಪಿತವೆನಿಸಿದ ಮೇಲೆಯೇ ಅನುಮತಿಸಿದರು. ಹೀಗೆ ನಾಗೇಂದ್ರರಾಯರ ಪ್ರಥಮ ನಿರ್ದೇಶನದ ಚಿತ್ರ ತಮಿಳಿಗೆ 'ಡಬ್' ಆಯಿತು, ಮತ್ತು ಧ್ವನಿ ಮುದ್ರಣದಲ್ಲಿ ಒಂದು ವಿಶೇಷ ಬಳಕೆಯೂ ಅಧಿಕೃತವಾಗಿ ಚಾಲ್ತಿಗೆ ಬಂದಿತು. ಈ ಮೊದಲೇ ಪ್ರಾರಂಭವಾಗಿದ್ದ ಪಿ.ಯು.ಚಿನ್ನಪ್ಪ, ಕನ್ನಾಂಬ ಅಭಿನಯದ ತಮಿಳಿನ 'ಹರಿಶ್ಚಂದ್ರ' ಚಿತ್ರಕ್ಕಿಂತ ಕನ್ನಡದಿಂದ 'ಡಬ್' ಆದ ಚಿತ್ರವೇ ಹೆಚ್ಚು ಯಶಸ್ವಿಯಾಗಿ ದಾಖಲೆ ಸೃಷ್ಟಿಸಿತು. ತಮಿಳಿಗೆ ಡಬ್ ಆದಾಗ ಅದೊಂದು ಹೊಸ ತಂತ್ರವೆಂಬುದು ಎಷ್ಟೇ ಮೆಚ್ಚುವ ಸಂಗತಿಯಾದರೂ ಹಾಗೆ ಮಾಡಿದ್ದು ತಪ್ಪು. ಈ ಹೊಸ ಯೋಜನೆ ತನಗೆ ತಾನೇ ದ್ರೋಹ ಮಾಡಿಕೊಂಡಂತೆ ಎಂದೂ, ಇದೊಂದು ಪರಂಪರೆ ಆದರೆ ದಕ್ಷಿಣ ಭಾರತ ಚಿತ್ರರಂಗವೇ ನಾಶವಾಗುತ್ತದೆ. ಇದನ್ನೆಲ್ಲ ಪ್ರತಿಭಟಿಸಿ ಎಂದು ಪತ್ರಿಕೆಗಳು ತೀವ್ರವಾಗಿ ಟೀಕಿಸಿದವು. ಪತ್ರಿಕಾ ಮಾಧ್ಯಮ ಕಂಡ ಮುನ್ನೋಟವಿದು.

ಈ ಮಧ್ಯೆ ನಡೆದ ಒಂದು ಸ್ವಾರಸ್ಯಕರ ಸಂಗತಿಯೆಂದರೆ ಟಿ.ಪಿ.ಕೈಲಾಸಂ ಅವರ ಬಹಳ ದಿನಗಳ ಆಸೆಯಾಗಿದ್ದ ಅವರದೇ 'ಕೀಚಕ' ನಾಟಕವನ್ನು ತೆರಗೆ



(ಚಿತ್ರ ೩೧) 'ವಾಣಿ' ಚಿತ್ರದ ತಾರಾಶ್ರೀಗಳು : ಶಾಂತರಾಜಮ್ಮ, ಪಂಢರಿಬಾಯಿ, ಬಳ್ಳಾರಿ ಲಲಿತ, ರತ್ನ ಮತ್ತು ಚಂದ್ರಮ್ಮ

ತರಬೇಕೆಂಬುದು ಕಾರ್ಯ ರೂಪಕ್ಕೆ ಬಂದದ್ದು. ಮದರಾಸ್ ಫೆಡರಲ್ ಫಿಲಂಸ್‌ರವರ ನಿರ್ಮಾಣದಲ್ಲಿ ಹೆಚ್.ಎಸ್.ಕೃಷ್ಣಸ್ವಾಮಿ ಅವರು 'ಕೀಚಕ' ನಿರ್ದೇಶಿಸುವುದೆಂದು ನಿರ್ಧಾರವಾಯಿತು. ಆ ಕುರಿತು ಹೆಚ್ಚು ಮಾಹಿತಿ ಲಭ್ಯವಿಲ್ಲ. ಆದರೆ ಚಿತ್ರ ಪೂರ್ತಿಯಾಗಲಿಲ್ಲ. ಲಭ್ಯವಿರುವ ಒಂದು ಜಾಹಿರಾತಿನ ಚಿತ್ರವನ್ನು ಮಾತ್ರ ಇಲ್ಲಿ ಕೊಡುತ್ತಿದ್ದೇವೆ. (ಚಿತ್ರ ೩೦)

ಕಲ್ಯಾಣಿ ಸಂಸ್ಥೆಯ 'ಕೃಷ್ಣ ಸುಧಾಮ' ಚಿತ್ರವೂ ೧೯೪೩ರಲ್ಲೇ ಸಿದ್ಧವಾಯಿತು. 'ಪ್ರಹ್ಲಾದ' ಚಿತ್ರ ನಿರ್ದೇಶಿಸಿದ ಕೆ.ಸುಬ್ರಹ್ಮಣ್ಯಂ ಅವರೇ ಈ ಚಿತ್ರವನ್ನು ನಿರ್ದೇಶಿಸಿದ್ದರು. ಬೆಳ್ಳಾವೆ ನರಹರಿಶಾಸ್ತ್ರಿಗಳ ಸಾಹಿತ್ಯವಿತ್ತು. ಮುಖ್ಯವಾಗಿ ಅವರೇ ಸುಧಾಮನ ಪಾತ್ರದಲ್ಲಿ ಅಭಿನಯಿಸಿದ್ದು ವಿಶೇಷ. ಎಸ್.ಡಿ.ಸುಬ್ಬಲಕ್ಷ್ಮಿ ಕೃಷ್ಣನ ಪಾತ್ರದಲ್ಲಿ ಅಭಿನಯಿಸಿದ್ದರು. ಈ ಚಿತ್ರಕ್ಕೆ ಬಂದ ವಿಮರ್ಶೆಯನ್ನು ಆಧರಿಸಿ ಹೇಳುವುದಾದರೆ ಚಿತ್ರ ಆಭಾಸಕರವಾಗಿತ್ತು. ಸುಬ್ಬಲಕ್ಷ್ಮಿಯವರ ನೃತ್ಯಗೀತೆಗಳೂ ಆಕೆಯ ತುಸು ಸ್ಥೂಲಶರೀರದಿಂದಾಗಿ ಕೃಷ್ಣನ ಪಾತ್ರದಲ್ಲಿಯ ಹಾವ-ಭಾವಗಳೂ ಆಭಾಸವೆಂದು ವಿಮರ್ಶೆಗಳು ಹೇಳಿವೆ. ಸಾಹಿತಿಗಳಾದ ಬೆಳ್ಳಾವೆ ನರಹರಿಶಾಸ್ತ್ರಿಗಳಿಗೂ ಅಭಿನಯ ಸಿದ್ಧಿಸಿಲ್ಲ. ಅದರಲ್ಲೂ ಕ್ಲೋಸಪ್ ಚಿತ್ರಿಕೆಗಳಲ್ಲಿ ಈ ಅಂಶ ಎದ್ದು ಕಾಣುತ್ತಿತ್ತೆಂದೂ ಹೇಳಲಾಗಿದೆ. ಫಿಲಂಗೆ ರೇಷನಿಂಗ್ ಇದ್ದ ಕಾಲ. ಚಿತ್ರ ೧೧,೦೦೦ ಅಡಿ ಇತ್ತು. ಆದರೆ ಆ ಉದ್ದಕ್ಕೆ ಆಗುವಷ್ಟು ಸಹ ಚಿತ್ರಕಥೆ ಸಿದ್ಧ ಮಾಡಿಕೊಂಡಿರಲಿಲ್ಲ. ನಿರ್ದೇಶಕರು ಏನೇನೋ ಸೇರಿಸಿದ್ದಾರೆಂಬ ಟೀಕೆಯುಂಟು. ಮುಖ್ಯವಾಗಿ ದ್ವಾಪರಯುಗದ ಕಥೆ ಹೇಳುತ್ತಿದ್ದೇನೆಂಬುದನ್ನು ಮರೆತು ಕೇಶಮುಂಡನ ಮಾಡಿಕೊಂಡ ವಿಧವೆಯನ್ನು ತಂದದ್ದು, ಆಧುನಿಕ ಸ್ತ್ರೀಯರ ಥಳಕು-ಬಳುಕು ಕುರಿತು ಮಾತಾಡಿದ್ದು ಆಭಾಸವಾಯಿತೆಂದು ತಿಳಿದು ಬರುತ್ತದೆ. ಚಿತ್ರಕ್ಕೆ ಹೆಚ್ಚು ಫಿಲಂ ಖರ್ಚಾಗದಿರಲೆಂದು ಕೆ.ಸುಬ್ರಹ್ಮಣ್ಯಂ ತಮಿಳಿನ 'ಕುಚೇಲ'ದಿಂದ ಕೆಲವು ದೃಶ್ಯಗಳನ್ನು ಸೇರಿಸಿಬಿಟ್ಟರು. ಇವು ಹೊಂದಾಣಿಕೆಯಾಗದೆ ನಗೆಪಾಟಲೂ ಆಯಿತು.

ಚಿತ್ರನಾಟಕ ರಚನೆಯ ಬಗ್ಗೆ ಸರಿಯಾದ ಕಲ್ಪನೆ ಇರಲಿಲ್ಲ. ಚಿತ್ರಗಳಲ್ಲಿಯು ಹಾಸ್ಯ ಕೂಡಾ ನಾಟಕಗಳಲ್ಲಿಯ ವಿದೂಷಕನ ಪಾತ್ರದ ರೀತಿಯಲ್ಲೇ ಮುಂದುವರಿಯಿತು. ನಾಟಕದಲ್ಲಿ ಸೀನರಿಗಳ ಬದಲಾವಣೆಗೆ ಬರುವ ಬೀದಿ ದೃಶ್ಯ, ಹಾಸ್ಯದೃಶ್ಯಗಳ ಹಾಗೇ ಬಂದವು. ಕೆಲವೊಮ್ಮೆ ಚಿತ್ರದ ಕಥೆಯನ್ನು ಚಿತ್ರಿಸಿಯಾದ ಮೇಲೆ ಎಲ್ಲಿಯೂ ಹಾಸ್ಯವಿಲ್ಲ ಎನಿಸಿದಾಗ ಹಾಸ್ಯನಟರನ್ನು ಕರೆತಂದು ಹಾಸ್ಯ ಸನ್ನಿವೇಶ ಚಿತ್ರಿಸಿದ್ದೂ ಉಂಟು. ಇಂಥ ಕಾರಣಗಳಿಂದಲೇ ಚಿತ್ರಗಳಲ್ಲಿ ಈ ಹಾಸ್ಯದ ಅಂಶ ತೇಪೆಯಾಗುತ್ತಾ ಬಂತು. ನಟರು ಸಮರ್ಥರಾದರೆ ಹಾಸ್ಯವೇ ವಿಜೃಂಭಿಸಿ ಮೂಲಕಥೆ ಮರೆಯಾದರೂ ಆಶ್ಚರ್ಯವಿಲ್ಲ. ಕನ್ನಡ ಚಿತ್ರಗಳಲ್ಲಿ ಚಿತ್ರಕಥಾ ಸಂವಿಧಾನದ ಅಪಕ್ವತೆಯಿಂದಾಗಿ ಇವೆಲ್ಲ ಸಂಭವಿಸಿದವು.



(ಚಿತ್ರ ೩೨) 'ವಾಣಿ' ಚಿತ್ರದಲ್ಲಿ ಟಿ.ಚೌಡಯ್ಯ

ಮೈಸೂರು ಫಿಲಂ ಕಾರ್ಪೋರೇಷನ್ ಸಂಸ್ಥೆಯು ನಾಯ್ಡು ಕಲ್ಯಾಣಿಯವರ 'ಪ್ರಹ್ಲಾದ' ಚಿತ್ರದ ನೆಗೆಟಿವ್ ಹಕ್ಕನ್ನು ಕೊಂಡು ಹಲವು ಕೇಂದ್ರಗಳಲ್ಲಿ ಪ್ರದರ್ಶಿಸಿದ್ದರು. ಮತ್ತೆ ಅದೇ ಕಲ್ಯಾಣಿಯವರ 'ಕೃಷ್ಣ ಸುಧಾಮ' ಚಿತ್ರವನ್ನು ಮೈಸೂರು ಪ್ರಾಂತ್ಯಕ್ಕಲ್ಲದೆ ಹೊರ ಪ್ರಾಂತ್ಯಗಳ ಹಂಚಿಕೆಗೂ ಪಡೆದರು.

ಈ ಅವಧಿಯಲ್ಲಿ ಬೆಂಗಳೂರಿನ ಸಾಗರ್, ಸೆಲೆಕ್ಟ್, ಮೆಜೆಸ್ಟಿಕ್ ಚಿತ್ರಮಂದಿರಗಳು ಸಾಗರ್ ಪಿಕ್ಚರ್ಸ್ ಸರ್ಕ್ಯೂಟ್‌ನವರ ಆಡಳಿತದಲ್ಲಿ ಇದ್ದವು. ಒಪ್ಪಂದದ ಅವಧಿ ಮುಗಿದ ಮೇಲೆ ಗುಬ್ಬಿ ವೀರಣ್ಣನವರು ಸೆಲೆಕ್ಟ್, ಸಾಗರ್‌ಗಳನ್ನು ಸ್ವಂತಕ್ಕೆ ಪಡೆದರೆಂದೂ, ಮೆಜೆಸ್ಟಿಕ್ ಚಿತ್ರಮಂದಿರ ಮಾಲೀಕರಿಗೇ ಹೋಯಿತೆಂದೂ ತಿಳಿದು ಬರುತ್ತದೆ.

ಮೈಸೂರು ಸರ್ಕಾರ ಚಲನಚಿತ್ರವನ್ನು ಪರೀಕ್ಷೆಗೆ ಒಳಪಡಿಸಿ ಪ್ರದರ್ಶನಕ್ಕೆ ಅನುಮತಿ ನೀಡಲು ಒಂದು ಸಮಿತಿಯನ್ನು ರಚಿಸಿತು. ಇಂಥ ಸಮಿತಿಗಳನ್ನು ರಚಿಸುವಾಗ ಮಾಧ್ಯಮದಲ್ಲಿ ತಿಳಿವಳಿಕೆ ಇರುವವರನ್ನು ಆರಿಸಬೇಕಾಗಿತ್ತೆಂದೂ, ಯಾವುದೇ ಪರಿಶೀಲನೆ ಸರಿಯಾದ ನೆಲೆಗಟ್ಟಿನಲ್ಲಿ ಆಗಬೇಕೆಂದೂ ಆಕ್ಷೇಪಗಳಾದವು. ಒತ್ತಡಗಳನ್ನು ತರಲಾಯಿತು. ಈ ಸಮಿತಿಯು ಪದೇ ಪದೇ ಅಥವಾ ಒಂದು ನಿಗದಿತ ಸಮಯದಲ್ಲಿ ಸೇರುತ್ತಿರಲಿಲ್ಲ, ಚಿತ್ರಗಳನ್ನು ವೀಕ್ಷಿಸುತ್ತಿರಲಿಲ್ಲ. ಅದರ ಪರಿಣಾಮವಾಗಿ ಮುಂದೆ ಅನೇಕ ವಾದ-ವಿವಾದಗಳು ಎದ್ದವು. ಈ ಸಮಿತಿಯನ್ನೇ ಮೈಸೂರು ಸೆನ್ಸಾರ್ ಬೋರ್ಡ್ ಎಂದೂ ಕರೆಯಲಾಗುತ್ತಿತ್ತು. ಜಿಲ್ಲೆ-ತಾಲ್ಲೂಕು ಮಟ್ಟದಲ್ಲಿ ಸೆನ್ಸಾರ್ ಮಾಡುವ ಪದ್ಧತಿಯೂ ಇತ್ತು. (ನೋಡಿ : 'ಸೆನ್ಸಾರ್' ಲೇಖನ)

ಬಂಗಾಳ ಪ್ರಾಂತ್ಯದಲ್ಲಿ ಬರಗಾಲ ಬಂತು. ಹಸಿವು, ಸಾವುಗಳಿಂದ ಕಂಗಾಲಾದ ಜನರಿಗಾಗಿ ದೇಶಾದ್ಯಂತ ಸಹಾಯಕ ನಿಧಿಯನ್ನು ಸಂಗ್ರಹಿಸಲಾಯಿತು. 'ಚಿತ್ರ ಸಮಾಚಾರ್' ಪತ್ರಿಕೆಯ ಮನವಿಯ ಅಂಶಗಳು ಹೀಗಿವೆ:



(ಚಿತ್ರ ೩೩) 'ವಾಣಿ' ಚಿತ್ರದ ಸೂತ್ರಧಾರಿಗಳು. ಟಿ.ಎಸ್.ಶಿವಬಸವಸ್ವಾಮಿ, ಜಿ.ಆರ್.ರಾಮಯ್ಯ, ಸಂಗೀತರತ್ನ ಟಿ.ಚೌಡಯ್ಯ. ನಿಂತಿರುವವರು : ಎಂ.ಎನ್.ಗೋಪಾಲ್ ಮತ್ತು ಕೆ.ಹಿರಣ್ಣಯ್ಯ

> "ಈ ನಿಧಿಗೆ ನಮ್ಮ 'ಚಿತ್ರ ಸಮಾಚಾರ್' ಓದುಗರೂ, ಏಜೆಂಟರೂ, ಜಾಹೀರಾತುದಾರೂ, ಹಿತಚಿಂತಕರೂ ತಮ್ಮ ಕೈಲಾದ ಹಣ ಸಹಾಯ ಮಾಡಬೇಕೆಂದು ಕೋರುತ್ತೇವೆ. 'ಚಿತ್ರಸಮಾಚಾರ್' ಆದಷ್ಟು ಗಮನೀಯ ಅರ್ಹವಾದ ನಿಧಿ ಶೇಖರಿಸಿ ಬಂಗಾಳದ ಕೇಂದ್ರ ಸಹಾಯಕ ಸಮಿತಿಗೆ ಕಳಿಸಬೇಕೆಂದಿದೆ. ಈ ನಮ್ಮ ಉದ್ದೇಶ ಸಾಧನೆಗೆ ಎಲ್ಲರ ಸಹಕಾರ, ಬೆಂಬಲಗಳು ಬೇಕು. ಇಷ್ಟೇ ಕಳಿಸಬೇಕೆಂಬ ನಿಯಮವಿಲ್ಲ..."
>
> ಹೆಚ್.ಆರ್.ಕೃಷ್ಣಮೂರ್ತಿ
>
> ಚಿತ್ರಸಮಾಚಾರ್

ದೇವುಡು ನರಸಿಂಹಶಾಸ್ತ್ರಿಗಳು ಬರೆದಿರುವ 'ಮಯೂರ' ಕಾದಂಬರಿ ಪಠ್ಯ ಪುಸ್ತಕವಾಗಿ ಅನುಮೋದನೆಗೊಂಡಿತ್ತು. ಈ ಕೃತಿಯನ್ನು ಆಧರಿಸಿ ಚಿತ್ರ ತಯಾರಿಸುವ ಪ್ರಯತ್ನಗಳೂ ಆದವು. ದೇವುಡು ಅವರೇ ಅಭಿನಯಿಸುವರೆಂದೂ ಸುದ್ದಿಯಾಗಿತ್ತು. ಆ ಪ್ರಯತ್ನವೂ ಕೈಲಾಸಂರ 'ಕೀಚಕ'ದ ಹಾಗೇ ನಿಂತು ಹೋಯಿತು. (ಆದರೆ ೧೯೭೫ರಲ್ಲಿ ಈ ಕಾದಂಬರಿ ಆಧರಿಸಿ ರಾಜಕುಮಾರ್ ಅಭಿನಯದಲ್ಲಿ 'ಮಯೂರ' ಹೆಸರಿನಲ್ಲಿ ಚಿತ್ರ ತಯಾರಾಯಿತು)

ಕನ್ನಡಿಗರ ಬಂಡವಾಳ, ಕನ್ನಡಿಗರ ಉದ್ಯಮ, ಕನ್ನಡದ ದಿಗ್ದರ್ಶಕರು ಎಂಬ ಹೆಮ್ಮೆಯ ಜೊತೆಗೇ ಸಂಗೀತಕ್ಷೇತ್ರದ ಮಹಾಪ್ರತಿಭೆಗಳೆಲ್ಲ ಒಗ್ಗೂಡಿದ ವಿಶೇಷವೂ ಉಳ್ಳ ಸಂಗೀತ ಪ್ರಧಾನ ಚಿತ್ರ 'ವಾಣಿ'.[೧]

ದಕ್ಷಿಣಭಾರತದ ಚಿತ್ರಗಳಲ್ಲಿ ಸಂಗೀತಕ್ಕೇ ಆದ್ಯತೆ. ಶಾಸ್ತ್ರೀಯ ಸಂಗೀತವನ್ನು ಆಲಿಸಲು ಸಿದ್ಧವಾದ ಕಿವಿ, ಕಣ್ಣುಗಳಿದ್ದ ಕಾಲ ಅದು. ಚಿತ್ರಗಳೂ ರಂಗಭೂಮಿಯ ತದ್ವತ್ ಪ್ರತಿಗಳೇ ಆದವು. ಆ ದಿನಗಳಲ್ಲಿ ಚೆನ್ನಾಗಿ ಹಾಡಬಲ್ಲವರು ಮಾತ್ರ ಚಿತ್ರರಂಗಕ್ಕೆ ಆಯ್ಕೆಯಾಗುತ್ತಿದ್ದರು. ಚೆಲುವು, ಅಭಿನಯ ಇತ್ಯಾದಿಗಳಿಗೆ ಎರಡನೆಯ ಸ್ಥಾನ. ಎಲ್ಲ ಗುಣವೂ ಇದ್ದವರಿಗೆ ಸಹಜವಾಗಿಯೇ ಪ್ರಾತಿನಿಧ್ಯ ಇತ್ತು. ಸುಪ್ರಸಿದ್ಧ ಸಂಗೀತ ವಿದ್ವಾಂಸರಾದ ಜಿ.ಎನ್.ಬಾಲಸುಬ್ರಹ್ಮಣ್ಯಂ (ಜಿ.ಎನ್.ಬಿ), ಮಹಾರಾಜಪುರಂ ವಿಶ್ವನಾಥ ಅಯ್ಯರ್, ಕೆ.ಬಿ.ಸುಂದರಾಂಬಾಳ್, ಮುಸುರಿ ಸುಬ್ರಹ್ಮಣ್ಯ ಅಯ್ಯರ್, ಎಂ.ಎಂ.ದಂಡಪಾಣಿ ದೇಶಿಕರ್, ವಿ.ವಿ.ಶಡಗೋಪನ್, ಹೊನ್ನಪ್ಪ ಭಾಗವತರ್, ವಿದುಷಿಯರಾದ ಎಂ.ಎಸ್.ಸುಬ್ಬಲಕ್ಷ್ಮಿ, ಎನ್.ಸಿ.ವಸಂತ ಕೋಕಿಲಂ ಮತ್ತು ಕನ್ನಡಿಗರಾದ ವಿದ್ವಾನ್ ಬಿ.ಎಸ್.ರಾಜಯ್ಯಂಗಾರ್ ಮುಂತಾದವರು ತಮ್ಮ ಶಾಸ್ತ್ರಜ್ಞಾನ ಹಾಗೂ ಹಾಡಿಕೆಯ ಪ್ರತಿಭೆಯಿಂದಲೇ ಚಿತ್ರರಂಗ ಪ್ರವೇಶಿಸಿದರು. ಈ ಸಾಲಿನಲ್ಲಿ ಮತ್ತಷ್ಟು ಮುಂದೆ ಹೋಗಿ ಪ್ರಯತ್ನಿಸಿದವರು ಸುಪ್ರಸಿದ್ಧ ಪಿಟೀಲು ವಾದಕ ಟಿ.ಚೌಡಯ್ಯನವರು. ತಮ್ಮ ಜೊತೆಯವರೆಲ್ಲ ಚಿತ್ರಮಾಧ್ಯಮಕ್ಕೆ ಪ್ರವೇಶಿಸಿದಾಗ ತಾವೂ ಏನಾದರೂ ಮಾಡಬೇಕೆಂಬ ತೀವ್ರವಾದ ಅಪೇಕ್ಷೆಯಾಯಿತು ಚೌಡಯ್ಯನವರಿಗೆ.

ಮೈಸೂರಿನ ಪ್ರಮುಖ ವಾಣಿಜ್ಯೋದ್ಯಮಿ ಟಿ.ಎಸ್.ಶಿವಬಸವಸ್ವಾಮಿ ಮತ್ತು ಅವರ ಕೆಲವು ಮಿತ್ರರು ಕೂಡಾ ಸಂಗೀತ ಪ್ರಧಾನ ಚಿತ್ರವೊಂದನ್ನು ತಯಾರಿಸುವ ಬಗ್ಗೆ ಯೋಚಿಸುತ್ತಿದ್ದರು.[೨] ಚೌಡಯ್ಯನವರೂ ಇವರೊಂದಿಗೆ ಸೇರಿಕೊಂಡರು. ಹೆಚ್.ಆರ್.ಜಿ.ಸಿ.ಶ್ರೀ ಪಿಕ್ಚರ್ಸ್ ಎಂಬ ಸಂಸ್ಥೆ (ಕೆ.ಹಿರಣ್ಣಯ್ಯ, ಜಿ.ಆರ್.ರಾಮಯ್ಯ, ಛಾಯಾಗ್ರಾಹಕ ಗೋಪಾಲ್, ಟಿ.ಚೌಡಯ್ಯನವರು ಮತ್ತು ಶಿವಬಸವಸ್ವಾಮಿಗಳು ಸೇರಿದ್ದ ಸಂಸ್ಥೆ) ಪ್ರಾರಂಭಿಸಿದರು.

ಈ ಸಂಗೀತ ಪ್ರಧಾನ ಚಿತ್ರಕ್ಕೆ 'ವಾಣಿ' ಎಂದು ಹೆಸರಿಸಿದರು. ಕೊಯಮತ್ತೂರಿನ ಸೆಂಟ್ರಲ್ ಸ್ಟುಡಿಯೋದಲ್ಲಿ ಚಿತ್ರೀಕರಣ ಪ್ರಾರಂಭವಾಯಿತು. ಹೊಂದಿಕೆಯಾಗುವಂಥ ಕಥೆಯನ್ನು ಯೋಚಿಸಿದವರು ಕೆ.ಹಿರಣ್ಣಯ್ಯನವರಾದರೆ, ಅದನ್ನು ಚಿತ್ರನಾಟಕ-ಸಂಭಾಷಣೆಗಳೊಂದಿಗೆ ತೆರೆಗೆ ಹೊಂದಿಸಲು ಕೆ.ಹಿರಣ್ಣಯ್ಯ, ಗೋಪಾಲ್ ಇಬ್ಬರೂ ಶ್ರಮ ವಹಿಸಿದರು. ಚಿತ್ರದ ಪ್ರಧಾನ ಪಾತ್ರದಲ್ಲಿ ಚೌಡಯ್ಯನವರೇ ಅಭಿನಯಿಸಿದರು. ತಂದೆ-ಮಗ ಎರಡು ಪಾತ್ರ ಅವರೇ ನಿರ್ವಹಿಸಿದ್ದು ವಿಶೇಷ. ಆ ಕಾಲದಲ್ಲಿ ಮಾಸ್ಕ್ ಇತ್ಯಾದಿ ಇರಲಿಲ್ಲ. ತಂದೆ-ಮಗನ ಪಾತ್ರ ಒಂದೇ ಬಾರಿಗೆ ಕಾಣಿಸುವಂಥ ಸಂದರ್ಭವೇ ಬರದ ಹಾಗೆ ಕಥೆ ಹೆಣೆಯಲಾಗಿತ್ತು.

ಪ್ರಭಾಕರ ದೀಕ್ಷಿತ ಎಂಬ 'ಖಳ'ನ ಪಾತ್ರದಲ್ಲಿ ಕೆ.ಹಿರಣ್ಣಯ್ಯನವರೂ, ಕವಿಯ ಪಾತ್ರದಲ್ಲಿ ಕೆ.ಅಚ್ಯುತರಾಯರೂ, ಛಾಯಾಳ ಪಾತ್ರದಲ್ಲಿ ಟಿ.ಎನ್.ಚಂದ್ರಮ್ಮ ಮತ್ತು ನಳಿನಿಯ ಪಾತ್ರದಲ್ಲಿ ಬಳ್ಳಾರಿ ಲಲಿತಾ ಅಭಿನಯಿಸಿದ್ದರು. ಶಾಂತರಾಜಮ್ಮ, ಬಳ್ಳಾರಿ ರತ್ನ, ಧನಭಾಗ್ಯಂ, ಎಂ.ಮಾಧವರಾವ್, ಸಾರಥಿ, ಅಚ್ಯುತರಾವ್, ಎ.ನಾರಾಯಣರಾವ್, ಸುಬ್ಬಯ್ಯ, ಸುಬ್ಬಣ್ಣ, ಶಾಮಣ್ಣ ಮೊದಲಾದ ಕಲಾವಿದರು ವಿವಿಧ ಪಾತ್ರಗಳಲ್ಲಿ ಇದ್ದರು. ಈ ಚಿತ್ರದಿಂದ ಮಾ|ಬಿ.ವಿ.ಕೆ.ಮೂರ್ತಿ, ಮುಸುರಿ ಕೃಷ್ಣಮೂರ್ತಿ, ಪಂಢರಿಬಾಯಿ ಅವರುಗಳು ಪ್ರವೇಶಿಸಿದರು. ನಿರ್ದೇಶನಕ್ಕೆ ಕೆ.ಹಿರಣ್ಣಯ್ಯ, ಗೋಪಾಲ್ ನೆರವಾದರು.



(ಚಿತ್ರ ೩೪) 'ವಾಣಿ' ಚಿತ್ರದ ಬಾಲನಟರು ರಾಜು ಮತ್ತು ಪಂಢರಿಬಾಯಿ,



(ಚಿತ್ರ ೩೫) ಕವಿಯ ಪಾತ್ರದಲ್ಲಿ ಅಚ್ಯುತರಾವ್

೧. ಕನ್ನಡ ಚಿತ್ರ ಇತಿಹಾಸದಲ್ಲಿ ಇದಕ್ಕೆ ವಿಶೇಷ ಸ್ಥಾನವಿದೆ. ಇದರ ಪ್ರತಿ ಲಭ್ಯವಿರಲಿಲ್ಲ. ಅಕಸ್ಮಾತ್ತಾಗಿ ವ್ಯಾಪಾರಿಯೊಬ್ಬರ ಬಳಿ ಇದು ಸಿಕ್ಕಿತು. ಆ ಕಾಲದ ಫಿಲಂ ನಮ್ಮ ಮಾಮೂಲಿ ಪ್ರೊಜೆಕ್ಟರ್‌ನಲ್ಲಿ ನೋಡುವುದು ಸಾಧ್ಯವಿಲ್ಲ. ನಮ್ಮಲ್ಲಿ ಚಾಲ್ತಿಯಲ್ಲಿರುವ ೩೫ ಎಂ.ಎಂ. ಪ್ರೊಜೆಕ್ಟರುಗಳ ವಿನ್ಯಾಸ, ಎಸಿಟೇಟ್ ಮೂಲದ ಚಿತ್ರದ ಪ್ರತಿಗಳಿಗೆ ರೂಪಿಸಲಾಗಿದ್ದು, ಈ ಪ್ರತಿಗಳು ಈ ಪ್ರೊಜೆಕ್ಟರ್‌ನಲ್ಲಿ ಚಿತ್ರ ಬಿಂಬಿಸಲು ಬಳಸಲಾಗುವ 'ಆರ್ಕ್'ನ ಪ್ರಖರತೆಯನ್ನು ತಡೆಯಬಲ್ಲವು. ಆದರೆ ಇದೇ ಪ್ರೊಜೆಕ್ಟರ್‌ನಲ್ಲಿ ನೈಟ್ರೇಟ್ ಮೂಲದ ಚಿತ್ರದ ಪ್ರತಿಯನ್ನು ಪೋಣಿಸಿ ನೋಡಲು ಪ್ರಯತ್ನಿಸಿದರೆ ಅದು ಸುಟ್ಟು ಹೋಗುವ ಅಥವಾ ಧಿಗ್ಗನೆ ಬೆಂಕಿ ಹೊತ್ತಿಕೊಳ್ಳುವ ಸಾಧ್ಯತೆಗಳಿವೆ. ಇದಕ್ಕೆ ಪರಿಹಾರ, ಕೆಲವು ಪ್ರೊಜೆಕ್ಟರುಗಳಲ್ಲಿ ಕಡಿಮೆ ಶಾಖದ ಬಲ್ಬುಗಳ ಬೆಳಕಿನ ಕಿರಣಗಳ ಮೂಲಕ ಚಿತ್ರವನ್ನು ಪ್ರದರ್ಶಿಸಬಹುದು. ಇಂತಹ ಸಂಚಾರಿ ಪ್ರೊಜೆಕ್ಟರುಗಳ ಸಂಖ್ಯೆ ವಿರಳ, ಹಾಗೂ ಈಗ ಸಿಗುವುದೂ ಅಪರೂಪ. ಇದರಲ್ಲಿ ಈ ರೀತಿಯ 'ನೈಟ್ರೇಟ್ ಬೇಸ್' ಇರುವ ಚಿತ್ರದ ಪ್ರತಿ ನೋಡಬಹುದು. ಇನ್ನೊಂದು ಮಾರ್ಗ ಈ ನೈಟ್ರೇಟ್ ಪ್ರತಿಗಳನ್ನು ಶೀತಲ ಆವರಣದಲ್ಲಿ ನಿಧಾನವಾಗಿ ಬಿಡಿಸಿ ಅದನ್ನು ಡ್ಯೂಪ್ ನೆಗೆಟಿವ್ ಮಾಡಿ, ಆಸಿಟೇಟ್ ಬೇಸ್ ಅಥವಾ ಈಗ ಪಾಲಿಯೆಸ್ಟರ್ ಬೇಸ್‌ಗೆ ಮುದ್ರಿಸಿ ವರ್ಗಾಯಿಸುವುದು. ನಂತರ ಮೂಲ ನೈಟ್ರೇಟ್ ಪ್ರತಿಯನ್ನು ಸುರಕ್ಷಿತವಾಗಿ ನಾಶ ಮಾಡುವುದು ಎಲ್ಲ ಚಿತ್ರ ಸಂಗ್ರಹಾಗಾರದಲ್ಲಿ ಅನುಸರಿಸುವ ಪದ್ಧತಿ.

೨. ಚೌಡಯ್ಯನವರೇ ಚಿತ್ರ ಪ್ರಾರಂಭಿಸಿದರೆಂದೂ, ಹಣದ ಅಡಚಣೆಯಿಂದ ಕಾರ್ಯ ನಿಂತು ಹೋಯಿತೆಂದೂ, ಅನಂತರ ಶಿವಬಸವಸ್ವಾಮಿಗಳು ಮುಂದೆ ನಿಂತು ಹೊಣೆ ಹೊತ್ತು ನಿರ್ವಹಿಸಿದರೆಂದೂ ಬಲ್ಲವರು ಹೇಳುತ್ತಾರೆ.




(ಚಿತ್ರ ೩೬) 'ರಾಧಾರಮಣ' ಚಿತ್ರದ ಜಾಹೀರಾತು.

ಜಾಹೀರಾತುಗಳಲ್ಲಿ ಜಿ.ಆರ್.ರಾಮಯ್ಯನವರ ನಿರ್ದೇಶನ, ಗೋಪಾಲ್, ಕೆ.ಹಿರಣ್ಣಯ್ಯನವರ ದಿಗ್ದರ್ಶನ ಎಂದು ಸೂಚಿಸಲಾಗಿದೆ. ಆದರೆ ''ಜಿ.ಆರ್.ರಾಮಯ್ಯನವರು ಶ್ರೀಮಂತರಾಗಿದ್ದು ಚಿತ್ರಕ್ಕೆ ಅಗತ್ಯವಾದ ಹಣಕಾಸನ್ನು ಸಂಗ್ರಹಿಸಬಲ್ಲವರಾಗಿದ್ದರಿಂದ ಹಾಗೆ ಗೌರವ ಸೂಚಿಸಿರಬಹುದಾದರೂ ಅವರಿಗೆ ಚಿತ್ರರಂಗದ ತಾಂತ್ರಿಕ ವಿಚಾರಗಳ ಪರಿಚಯ ಇರಲಿಲ್ಲ. ನಿರ್ದೇಶಿಸಿದವರು ಕೆ.ಹಿರಣ್ಣಯ್ಯ ಮತ್ತು ಗೋಪಾಲ್. ಈ ಮಾತನ್ನು ಸ್ವತಃ ರಾಮಯ್ಯನವರೇ ಹೇಳುತ್ತಿದ್ದರು'' ಎಂದು ಹಿರಿಯ ಚಿತ್ರೋದ್ಯಮಿ ಆರ್.ಲಕ್ಷ್ಮಣ್ ಸ್ಪಷ್ಟಪಡಿಸಿದ್ದಾರೆ.

ಸಂಗೀತ ವಿದ್ವಾಂಸ, ಆತನ ಹೆಂಡತಿ, ಮಗ ಬಡತನದಲ್ಲಿ ಬದುಕುತ್ತಿದ್ದಾರೆ. ಪ್ರವಾಹದ ಕಾರಣ ದಿಕ್ಕುಪಾಲಾದ ಸಂಸಾರ. ಸಂಗೀತಗಾರ ತಂದೆ ಸಿಗಲಿಲ್ಲ. ತಾಯಿ ಅವರಿವರ ಕಿರುಕುಳ ಸಹಿಸಿಕೊಂಡೇ ಮಗನನ್ನು ಸಾಕಿ, ಪ್ರಸಿದ್ಧ ಸಂಗೀತಗಾರನನ್ನಾಗಿ ಮಾಡುತ್ತಾಳೆ ಇತ್ಯಾದಿ ಕಥಾಭಾಗವಿದೆ. ಹೀಗಾಗಿ ತಂದೆ-ಮಗ ಎರಡೂ ಪಾತ್ರ ಒಬ್ಬರೇ ನಿರ್ವಹಿಸಿದರೂ ತೊಡಕಾಗಲಿಲ್ಲ. 'ವಾಣಿ' ಚಿತ್ರದಲ್ಲಿ ಕೆ.ಮಹದೇವನ್-ಧನಭಾಗ್ಯಂ ಅವರ ಶಿವಲಾಸ್ಯ ನೃತ್ಯ ಚೆನ್ನಾಗಿತ್ತು. ಸುಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಚೆಂಬೈ ವೈದ್ಯನಾಥ ಭಾಗವತರ್ ಈ ಚಿತ್ರದಲ್ಲಿ ಸಂಗೀತ ಕಛೇರಿ ಮಾಡುವ ಸನ್ನಿವೇಶವೊಂದಿದೆ. ಭಾಗವತರಿಗೆ ಸಿನಿಮಾದಲ್ಲಿ ಅಭಿನಯಿಸುವ ಆಪೇಕ್ಷೆ ಕಿಂಚಿತ್ತೂ ಇರಲಿಲ್ಲ. ಆದರೆ ಚೌಡಯ್ಯನವರ ಸ್ನೇಹಕ್ಕೆ ಸ್ಪಂದಿಸಿದರು. ಪಾತ್ರಾಭಿನಯ ಸಾಧ್ಯವೇ ಇಲ್ಲ ಅಂದಾಗ ಒಂದು ಭರ್ಜರಿ ಕಛೇರಿ ಮಾಡಿಸಿ ಚಿತ್ರೀಕರಿಸಲಾಯಿತು. ಚೆಂಬೈ, ಚೌಡಯ್ಯ, ಪಾಲ್‌ಘಾಟ್ ಮಣಿ ಅಯ್ಯರ್ ಮೊದಲಾದವರು ಈ ಕಛೇರಿಯಲ್ಲಿ ಭಾಗವಹಿಸಿದರು. ಹಾರ್ಮೋನಿಯಂ ಶೇಷಗಿರಿರಾಯರ ನೆರವಿನೊಂದಿಗೆ ಚಿತ್ರಕ್ಕೆ ಸಂಗೀತ ನಿರ್ದೇಶಿಸಿದವರು ಚೌಡಯ್ಯನವರೇ. ಅವರೇ ಗೀತೆಯೊಂದನ್ನು ರಚಿಸಿ ರಾಗ ಸಂಯೋಜಿಸಿದ್ದರು. 'ನಿಖಿಲ ಪಾಪ ನಿವಾರಣೈಕ...' ಎಂಬ ಕೃತಿಯನ್ನು ಚೆಂಬೈ ಹಾಡಿದ್ದು, ಚೌಡಯ್ಯನವರ ಪಿಟೀಲು ವಾದನ, ಟಿ.ಎಸ್.ಮಣಿ ಅಯ್ಯರ್ ಅವರ ಮೃದಂಗವಿತ್ತು. ತನಿ ಆವರ್ತನವೇ ಹತ್ತು ನಿಮಿಷ ಕಾಲ ಹಿಡಿಯಿತಂತೆ. ಚೌಡಯ್ಯನವರು ಚೆಂಬೈ ಅವರಿಗೆ ೫,೦೦೦ ರೂಪಾಯಿಗಳ ಸಂಭಾವನೆ ನೀಡಿ ಸನ್ಮಾನಿಸಿದ್ದರು. ಚಿತ್ರದಲ್ಲಿ ಪುಟ್ಟ ಪಾತ್ರವನ್ನು ಮಾಡಿದ್ದ ಮಾ।ಹಿರಣ್ಣಯ್ಯನವರು ''...ಸಿನಿಮಾ ಎಲ್ಲ ನೆಪ. ಸುಮ್ಮನೆ ದೊಡ್ಡ ದೊಡ್ಡ ಸಂಗೀತಗಾರರನ್ನು ಕರೆಸಿ ಹಾಡಿಸಿ ಖುಷಿ ಪಡೋರು. ಒಂದು ಮನೆ ಮಾಡಿ ಬಿಟ್ಟಿದ್ರು. ಏನೋ ಸಂತೋಷ, ಸಡಗರ. ಅಂತೂ ಚಿತ್ರ ಮುಗೀತು. ಅಷ್ಟೇ ಅಲ್ಲ, ಅವರಿಗೆ ಲಾಭವೂ ಆಯಿತು. ಯುದ್ಧದ ಕಾರಣ ಮದರಾಸಿನಲ್ಲಿ ಕೆಲಸಗಳೆಲ್ಲ ಬಿಟ್ಟು ಬಂದರು. ಇಲ್ಲವಾದರೆ ಚಿತ್ರರಂಗದಲ್ಲೇ ಖಾಯಂ ಆಗಿ ಬಿಡೋರೋ ಏನೋ. ಬಂದ ಹಣದಲ್ಲಿ ಒಂದು ಭಾಗ ಬಂಡವಾಳ ಮಾಡಿಕೊಂಡು ಜಿ.ಆರ್.ರಾಮಯ್ಯ ಮತ್ತು ಇತರರನ್ನು ಸ್ಟುಡಿಯೋ ಸ್ಥಾಪಿಸಲು ಪ್ರೇರೇಪಿಸಿದ್ದರೆ, ಇನ್ನಷ್ಟು ಹಣ ತೊಡಗಿಸಿ ನನ್ನ ತಂದೆಯವರು ಕೆ.ಹಿರಣ್ಣಯ್ಯ ಮಿತ್ರ ಮಂಡಳಿ ಪ್ರಾರಂಭಿಸಿ ನಾಟಕ ಪ್ರದರ್ಶನ ಪ್ರಾರಂಭಿಸಿದರು...'' ಎಂದಿದ್ದಾರೆ ಸಂದರ್ಶನವೊಂದರಲ್ಲಿ. ಈ ಬಗೆಯ ನಂಟಿನಿಂದಲೇ ಅನಂತರವೂ ಮಾ।ಹಿರಣ್ಣಯ್ಯನವರು ಪಂತುಲು, ಶಂಕರಸಿಂಗ್, ವಿಠಲಾಚಾರ್ಯರುಗಳ ಬಳಿ ಸಹಾಯಕರಾಗಿ ಚಲನಚಿತ್ರಗಳಿಗೆ ಕೆಲವು ಕಾಲ ಕೆಲಸ ಮಾಡಿದರು.

ಮುಸುರಿ ಕೃಷ್ಣಮೂರ್ತಿಯವರ ತಂದೆ ಪ್ರಸಿದ್ಧ ಸಂಗೀತ ವಿದ್ವಾಂಸರು. ಸಹಜವಾಗಿಯೇ ತಮ್ಮ ಮಗನನ್ನು ಬಾಲನಟನಾಗಿ ಕಳಿಸಿದ್ದರಾದರೆ ಕೆ.ಹಿರಣ್ಣಯ್ಯನವರ ಮಗ ನರಸಿಂಹಮೂರ್ತಿ (ಮಾ।ಹಿರಣ್ಣಯ್ಯ) ಬಾಲನಟನಾಗಿ ಬಂದರು. ಪಂಢರಿಬಾಯಿ ಈ ಕ್ಷೇತ್ರಕ್ಕೆ ಬಂದದ್ದು ವಿಶೇಷ ಸನ್ನಿವೇಶದಿಂದಾಗಿ. ತೀರಾ ಸಂಪ್ರದಾಯಸ್ಥ ಕುಟುಂಬ. ಶಿಸ್ತಿನ ತಂದೆ, ಮಗಳು ಬಣ್ಣ ಹಾಕಲು ಎಂದೂ ಒಪ್ಪುವವರಲ್ಲ. ಆಕೆಯ ಸಹೋದರ ವಿಮಲಾನಂದದಾಸರು ನಾಟಕ ಸಂಸ್ಥೆ ನಡೆಸುತ್ತಿದ್ದರು. ನಾಯಕಿ ಪಾತ್ರಧಾರಿ ದಿಢೀರನೆ ಬಿಟ್ಟು ಹೋದರು. ವಿಮಲಾನಂದದಾಸರು ತಂದೆಯವರನ್ನು ವಿಧವಿಧವಾಗಿ ಒಲಿಸಿ ಅನುಮತಿ ಪಡೆದು ಪಂಢರಿಬಾಯಿ ಅವರನ್ನು ರಂಗಭೂಮಿಗೆ ಕರೆತಂದರು. ಕೆ.ಹಿರಣ್ಣಯ್ಯನವರು ಈಕೆಯನ್ನು ರಂಗದ ಮೇಲೆ ನೋಡಿ ಮೆಚ್ಚಿದ್ದರು, 'ವಾಣಿ' ಚಿತ್ರಕ್ಕೆ ಆಹ್ವಾನಿಸಿದರು. ಚಲನಚಿತ್ರದ ಆಹ್ವಾನವನ್ನಂತೂ ಆಕೆಯ ತಂದೆ ಒಪ್ಪುವುದು ಸಾಧ್ಯವೇ ಇರಲಿಲ್ಲ. ಆದರೆ ಅತಿ ಗಣ್ಯವ್ಯಕ್ತಿಗಳಾದ ಚೌಡಯ್ಯ, ಹಿರಣ್ಣಯ್ಯನವರೆದುರು ಹಠ ಮಾಡುವುದು ಸಾಧ್ಯವಾಗಲಿಲ್ಲ. ಕಡೆಗೂ ಪಂಢರಿಬಾಯಿಯಂಥ ಶ್ರೇಷ್ಠ ನಟಿ ಚಿತ್ರರಂಗಕ್ಕೆ ಬಂದದ್ದು ದೊಡ್ಡ ಭಾಗ್ಯವೇ ಸರಿ.

ಚಿತ್ರೀಕರಣ ನಡೆಯುತ್ತಿದ್ದಾಗ ನಿರ್ದೇಶಕರು ''ನೀನು ತುಂಬಾ ಚೆನ್ನಾಗಿ ಅಭಿನಯಿಸುತ್ತೀ'' ಎಂದು ಪ್ರೀತಿಯಿಂದ ಆ ಪುಟ್ಟ ಹುಡುಗಿಯ ಗಲ್ಲ ತಟ್ಟಿದ್ದನ್ನು ಆಕೆಯ ತಂದೆ ನೋಡಿ ವಿಪರೀತ ಸಿಟ್ಟಾದರು, ಮತ್ತು ''ಸಿನಿಮಾದಲ್ಲಿ ಅಭಿನಯಿಸಿದರೆ ಗಂಡಸರು ಮುಟ್ಟುತ್ತಾರೆ. ಇನ್ನು ಈ ಅಭಿನಯ ಸಾಕು. ನಡೀ ಮನೆಗೆ'' ಎಂದರಂತೆ. ಈ ಎಲ್ಲ ತೊಡಕುಗಳನ್ನೂ ನೀಗಿಕೊಂಡು ಚಿತ್ರೋದ್ಯಮದ ಎಲ್ಲರಿಗೂ ಹಿತೈಷಿಯಾಗಿ ನಿಡುಗಾಲ ಬೆಳಗಿದರು ಪಂಢರಿಬಾಯಿ.

'ವಾಣಿ' ಚಿತ್ರವನ್ನು ವೀಕ್ಷಿಸಿದ ಮದರಾಸಿನ ಸೆನ್ಸಾರ್ ಮಂಡಳಿಯ ಸದಸ್ಯರು ''ಇದುವರೆಗೆ ತಯಾರಾಗಿರುವ ಕನ್ನಡ ಚಿತ್ರಗಳಲ್ಲೇ ಅಗ್ರಸ್ಥಾನ ಈ ಚಿತ್ರಕ್ಕೆ ಸಲ್ಲುತ್ತದೆ'' ಎಂದರೆಂದು ಚಿತ್ರ ಸಮಾಚಾರ್ ಪತ್ರಿಕೆ ವರದಿ ಮಾಡಿದೆ. ಇತರ ಪತ್ರಿಕೆಗಳ ಪ್ರಕಾರ ಚಿತ್ರ ಹಣ ಗಳಿಕೆಯಲ್ಲಿ ಸುಮಾರು ಎಂದೇ ಇದೆ. ಚಿತ್ರಕ್ಕೆ 'ವಾಣಿ' ಅಥವಾ 'Violinist' ಎಂದು ಶೀರ್ಷಿಕೆ ಕೊಡಲಾಗಿತ್ತು. ಚಿತ್ರ ೧೯೪೩ರಲ್ಲಿ ತೆರೆಗೆ ಬರುವ ಬಗ್ಗೆ ಸುದ್ದಿ, ಜಾಹಿರಾತುಗಳು ಇದ್ದವು. ಆದರೆ ಚಿತ್ರ ಮದರಾಸಿನ ಸೆನ್ಸಾರ್ ಬೋರ್ಡ್‌ನಲ್ಲಿ ಸೆನ್ಸಾರ್ ಆದದ್ದು ೧೯೪೪ರಲ್ಲಿ. ೧೯೪೪ರ ಏಪ್ರಿಲ್ ವೇಳೆಗೆ ತೆರೆಗೆ ಬಂದಿತು. ಬೆಂಗಳೂರಿನ ಮೂವಿಲ್ಯಾಂಡ್, ಮೈಸೂರಿನ ಚಾಮುಂಡೇಶ್ವರಿ ಚಿತ್ರಮಂದಿರಗಳಲ್ಲಿ ಬಿಡುಗಡೆಯಾಯಿತು.

೧೯೪೩ರಲ್ಲಿ ಬಹಳಷ್ಟು ಸುದ್ದಿಯಲ್ಲಿದ್ದ ಮತ್ತೊಂದು ಚಿತ್ರ 'ರಾಧಾರಮಣ'. ಅನಂತರದ ದಿನಗಳಲ್ಲಿ ಕನ್ನಡ ಚಿತ್ರರಂಗವನ್ನೇ ಬಹಳಷ್ಟು ಕಾರಣಗಳಿಗಾಗಿ ವ್ಯಾಪಿಸಿಕೊಂಡ ಜಿ.ವಿ.ಅಯ್ಯರ್, ಟಿ.ಎನ್.ಬಾಲಕೃಷ್ಣ ಮೊದಲಾದವರು ಚಿತ್ರರಂಗ ಪ್ರವೇಶಿಸಿದ್ದು ಈ ಚಿತ್ರದ ಮೂಲಕ. ಅದಾಗಲೇ ತಮಿಳು ಚಿತ್ರರಂಗದಲ್ಲಿ ಜನಪ್ರಿಯರಾಗಿದ್ದ ತಾರೆ ಎಂ.ವಿ.ರಾಜಮ್ಮ ಈ ಚಿತ್ರದ ನಿರ್ಮಾಪಕಿ. ಈ ಚಿತ್ರವನ್ನು ಬಂಗಾಳದವರಾದ ಜ್ಯೋತಿ ಸಿನ್ಹಾ ನಿರ್ದೇಶಿಸಿದರು. ರಾಜಮ್ಮನವರ ಪಾಲುದಾರರಾಗಿದ್ದ ಕಾಶಿ ಚೆಟ್ಟಿಯಾರ್ ಮಧ್ಯೆ ಭಿನ್ನಾಭಿಪ್ರಾಯ ಬಂದು ಕೆಲಕಾಲ ಚಿತ್ರ ಸ್ಥಗಿತವಾಗಿತ್ತು. ಕಡೆಗೆ ರಾಜಮ್ಮನವರೇ ಚಿತ್ರ ಪೂರೈಸಿದರು. ಆದರೆ ''ಜ್ಯೋತಿಸಿನ್ಹಾ ಮೂಲತಃ ಶಬ್ದಗ್ರಾಹಕರು. ನಿರ್ಮಾಪಕರೊಂದಿಗೆ ಹೆಣಗಲಾರದೆ ನಿರ್ದೇಶನ ಕ್ಷೇತ್ರವನ್ನೇ ಬಿಟ್ಟು ಮತ್ತೆ ಶಬ್ದಗ್ರಹಣಕ್ಕೆ ತೆರಳಿದರು'' ಎಂದು ವಾಕ್ಚಿತ್ರ ವರದಿ ಮಾಡಿದೆ. ಎಲ್ಲೂ ರಾಜಮ್ಮನವರು ನಿರ್ದೇಶಿಸಿದ್ದನ್ನಾಗಲೀ, ಜ್ಯೋತಿಸಿನ್ಹಾ ಅರ್ಧಕ್ಕೆ ಬಿಟ್ಟರೆಂದಾಗಲೀ ಹೇಳಿಲ್ಲ.

ಚಿತ್ರದಲ್ಲಿ ಬಿ.ಆರ್.ಪಂತುಲು, ಎಂ.ವಿ.ರಾಜಮ್ಮ, ಜಿ.ವಿ.ಅಯ್ಯರ್, ಟಿ.ಎನ್.ಬಾಲಕೃಷ್ಣ, ಶ್ರೀನಿವಾಸರಾವ್, ಪಿ.ಕಾಳಿಂಗರಾವ್, ಭಾನುಮತಿ, ಮೋಹನಕುಮಾರಿ, ಸ್ವರ್ಣಕುಮಾರಿ, ಬಿ.ರಾಜಮ್ಮ, ಆರ್.ನಾಗರತ್ನಮ್ಮ, ಎಂ.ಮಾಧವರಾವ್, ಜಿ.ಆರ್.ಸ್ಯಾಂಡೋ, ಕುಮಾರಿ ವಿಜಯ, ಚಂದ್ರಮ್ಮ ಅಭಿನಯಿಸಿದ್ದರು. ರಂಗಭೂಮಿಯಿಂದಲೇ ಹತ್ತಿರದ ಗೆಳೆಯರಾಗಿದ್ದ ಸೋರಟ್

ಅಶ್ವತ್ಥ್ ಈ ಚಿತ್ರದಿಂದಲೇ ಪ್ರವೇಶಿಸಿದವರು. ಅಶ್ವತ್ಥ್ ಅವರು ಸಾಹಿತ್ಯ ವಿಭಾಗದಲ್ಲಿ ಹೆಚ್ಚಿನ ನೆರವು ನೀಡಬಲ್ಲವರಾಗಿದ್ದರು. ರಾಜಮ್ಮನವರಿಗೆ ಆಪ್ತರಾಗಿದ್ದರು. ಧೈರ್ಯವಾಗಿ ಸಲಹೆ ಕೊಡಬಲ್ಲವರಾಗಿದ್ದರು. ಅವರ ಒತ್ತಾಯದಿಂದಲೇ ಕೊಂಚ ಆರ್ಥಿಕವಾಗಿ ಕಷ್ಟ ಎನ್ನಬಹುದಾದ ಸ್ಥಿತಿಯಲ್ಲಿದ್ದ ಜಿ.ವಿ.ಅಯ್ಯರ್, ಬಾಲಕೃಷ್ಣರನ್ನು 'ರಾಧಾರಮಣ'ಕ್ಕೆ ಕರೆಸಿಕೊಂಡರು. ಸೋರಟ್ ಅವರ ಸಹೋದರ ರತ್ನಾಕರ್ ಅವರೂ ಈ ಚಿತ್ರದಿಂದಲೇ ಪ್ರವೇಶ ಪಡೆದರು. ಈ ಚಿತ್ರದ ಸಂಗೀತ ನಿರ್ದೇಶಕರು ಪದ್ಮನಾಭಶಾಸ್ತ್ರಿ. ಒಟ್ಟು ಹನ್ನೆರಡು ಹಾಡುಗಳಿದ್ದವು. ರಚಿಸಿದವರು ಆರ್.ಕುಲಕರ್ಣಿ. ಶ್ರೀನಿವಾಸಕುಲಕರ್ಣಿ ನೃತ್ಯ ನಿರ್ದೇಶನ ಮಾಡಿದ್ದರು. ನ್ಯೂಟೋನ್ ಸ್ಟುಡಿಯೋದಲ್ಲಿ ಚಿತ್ರಿಸಲಾಯಿತು.

ಈ ಚಿತ್ರ ಕೂಡಾ ತೆರೆಗೆ ಬಂದದ್ದು ೧೯೪೪ರಲ್ಲಿ. ಚಿತ್ರ ತೆರೆಗೆ ಬಂದಾಗ ಅನ್ಯಭಾಷಾ ವಿತರಕರು ವ್ಯವಸ್ಥಿತವಾಗಿ ಅಪಪ್ರಚಾರ ಮಾಡಿದರು. ಚಿತ್ರೀಕರಣದ ವೇಳೆ ಕೆಲವು ಅನಿರೀಕ್ಷಿತ ತೊಡಕುಗಳಿಂದಾಗಿ ಚಿತ್ರ ನಿಗದಿತ ಸಮಯಕ್ಕೆ ಪೂರ್ತಿಯಾಗಲಿಲ್ಲ. ಅದನ್ನೇ ಅವಕಾಶ ಮಾಡಿಕೊಂಡ ಕೆಲವರು "ರಾಧಾರಮಣ.. ರಮಾ ರಮಣ ಗೋವಿಂದಾ" ಇತ್ಯಾದಿ ಕೀಟಲೆಗಳನ್ನು ಮಾಡಿದರು.

"ಜೀವನದ ಪ್ರತಿ ಹೆಜ್ಜೆಯಲ್ಲೂ ತೋರಿಬರುವ ಪ್ರೇಮ-ಕಾಮದ, ಸತ್ಯ-ಸಂಶಯಗಳ ಸಮಸ್ಯೆಯನ್ನು ಎತ್ತಿ ತೋರಿಸುವ ಚಿತ್ರ.." ಎಂಬ ಹೇಳಿಕೆಯನ್ನು ಜಾಹಿರಾತುಗಳಲ್ಲಿ ಪ್ರಚಾರ ಮಾಡಿದ 'ರಾಧಾರಮಣ' ಪೌರಾಣಿಕ ಕಥಾ ಭಾಗವಾದರೂ ವಿಭಿನ್ನ ರೀತಿಯಲ್ಲಿ ನಿರೂಪಿತವಾಗಿತ್ತು.

"...'ರಾಧಾರಮಣ' ಚಿತ್ರ ರಾಧಾ-ಕೃಷ್ಣರ ಪ್ರಣಯದಲ್ಲಿದ್ದ ನಿಷ್ಕಳಂಕತೆಯನ್ನು ಹೇಳುತ್ತದೆ. ರಾಧೆಯ ಪತಿ ಅನಯನ ಸುತ್ತ ಬಿಚ್ಚಿಕೊಳ್ಳುವ ಕಥಾ ಭಾಗ. ಅನಯನಿಗೆ ರಾಧೆಯ ಮೇಲೆ ಸಂಶಯ. ಕೃಷ್ಣ ಜನ್ಮ ರಹಸ್ಯ ತಿಳಿದ ಮೇಲೆ ಕೃಷ್ಣನ ವೈರಿ ಕಂಸನೊಂದಿಗೆ ಸೇರಿ ಆ ಮೂಲಕ ರಾಧಾ-ಕೃಷ್ಣರನ್ನು ದೂರ ಮಾಡುವುದು ಅವನ ಉದ್ದೇಶ. ಹಿತೈಷಿಯಂತೆ ನಟಿಸಿ, ರಾಧೆಯನ್ನೇ ಮೋಹಿಸಿ ಬಲಾತ್ಕಾರಿಸಲು ಬಂದ ಕಂಸನನ್ನು ರಾಧೆ ವಿರೋಧಿಸುತ್ತಾಳೆ. ಇದರಿಂದ ಅನಯನ ಸಂಶಯ ದೂರವಾಗಿ, ರಾಧೆಯ ಪತಿನಿಷ್ಠೆಯನ್ನು ಅರ್ಥ ಮಾಡಿಕೊಳ್ಳುತ್ತಾನೆ. ಅತ್ತ ಯಶೋದೆ-ನಂದಾದಿಗಳಿಗೆ ಮಗು ತಮ್ಮದಲ್ಲವೆಂಬ ನೋವು, ತಲ್ಲಣಗಳು.. ಹೀಗೆ ಹಲವು ಮಗ್ಗುಲುಗಳಿಂದ ಮನೋವ್ಯಾಪಾರಗಳನ್ನು ಬಿಂಬಿಸುತ್ತದೆ 'ರಾಧಾರಮಣ'.



(ಚಿತ್ರ ೩೭) 'ರಾಧಾರಮಣ' ಚಿತ್ರದಲ್ಲಿ ಎಂ.ವಿ.ರಾಜಮ್ಮ

"...ಎಲ್ಲಕ್ಕಿಂತ ಮಿಗಿಲಾಗಿ ಎಲ್ಲಿಯೂ ಪವಾಡಗಳನ್ನು ತೋರಿಸದೆ ಮಾನವೀಯ ನೆಲೆಯಲ್ಲಿ ಹೆಣೆದ ಕಥೆ, ಸಭ್ಯತೆಯ ಎಲ್ಲೆ ಮೀರುವುದಿಲ್ಲ. ಚಿತ್ರದ ಪ್ರಧಾನ ಭಾವನೆ ಆರಾಧನೆ. ಪ್ರಾರಂಭದ ದೃಶ್ಯವೇ ವಿಷ್ಣು ದೇವಾಲಯದಲ್ಲಿ ದೀಪೋತ್ಸವ, ಆರಾಧನೆ. ಆದರೆ ರಾಧೆ ಈ ಸಂಭ್ರಮಕ್ಕೆ ಬರುವುದಿಲ್ಲ. ಕೃಷ್ಣನಿಗೆ ಅವಳದು ಮಾನಸ ಪೂಜೆ. ಇದನ್ನು ನೃತ್ಯ ರೂಪದಲ್ಲಿ ತೋರಿಸಲಾಗಿದೆ. ಅದೇ ರಾಧೆ ಮುಂದಿನ ದೃಶ್ಯದಲ್ಲಿ ಪತಿಶುಶ್ರೂಷೆಯಲ್ಲಿ ತೊಡಗಿದ್ದಾಳೆ. ಅತ್ಯಂತ ಗಾಢ. ಜಟಿಲ ಅಭಿನಯ ತೋರಿದ್ದಾರೆ ಎಂ.ವಿ.ರಾಜಮ್ಮ. ಅನಯನ ಪಾತ್ರದಲ್ಲಿ ಪಂತುಲು, ಪೋಷಕ ನಟರೂ ಸೊಗಸಾಗಿ ಅಭಿನಯಿಸಿದ್ದಾರೆ. ಒಂದು ಸನ್ನಿವೇಶವನ್ನು ಬಿಟ್ಟು ಮಿಕ್ಕಂತೆ ಪದ್ಮನಾಭಶಾಸ್ತ್ರಿಗಳ ಸಂಗೀತ ಚೆನ್ನಾಗಿದೆ. ಸಂಭಾಷಣೆ ಗ್ರಾಂಥಿಕವಾಗಿ ತೊಡಕಾಗಿದೆ. ಆದರೆ ಕಲಾವಿದರೇ ಸರಿಪಡಿಸಿಕೊಂಡು ಸಹಜವಾಗಿಸಲು ಯತ್ನಿಸಿದ್ದಾರೆ. ಆದರೂ ಕೊಂಚ ಕೃತಕವೇ ಆಯಿತು. ಕೀಳುದರ್ಜೆಯ ಹಾಸ್ಯವಿಲ್ಲ, ಅಸಭ್ಯವಿಲ್ಲ, ಉನ್ನತ ಭಾವನೆ ಇದೆ. 'ರಾಧಾರಮಣ' ನೋಡಬೇಕಾದ, ಅರ್ಥ ಮಾಡಿಕೊಳ್ಳಬೇಕಾದ ಚಿತ್ರ..." ಎಂದು ಪರಿಚಯ ಮಾಡುತ್ತದೆ ಪಾಕ್ಷಿಕ ತನ್ನ ೧೯೪೪ನೇ ಆಗಸ್ಟ್ ತಿಂಗಳ ಸಂಚಿಕೆಯಲ್ಲಿ.

೧೯೪೩ರಲ್ಲಿ 'ವಾಣಿ', 'ರಾಧಾರಮಣ' ಚಿತ್ರಗಳು ಸಿದ್ಧವಾಗುತ್ತಿರುವ ಬಗ್ಗೆ ಸುದ್ದಿಗಳು ಬರುತ್ತಿರುವಾಗಲೇ ಮತ್ತೊಂದು ಮುಖ್ಯ ಘಟನೆ ಸಂಭವಿಸಿತು. ಮೈಸೂರು ಸಂಸ್ಥಾನದ ಕೆಲವು ವ್ಯಾಪಾರಿಗಳು ಹಣ ತೊಡಗಿಸಿ ಒಂದು ಸ್ಟುಡಿಯೋ ಪ್ರಾರಂಭಿಸಿದರು. ಹೆಚ್.ಎಂ.ರೆಡ್ಡಿ ಅವರ ನೇತೃತ್ವದಲ್ಲಿ 'ದಿ ಮೈಸೂರು ಮೂವಿಟೋನ್' ಸ್ಟುಡಿಯೋ ಪ್ರಾರಂಭವಾಯಿತು, ೧೯೪೩ರ ಅಕ್ಟೋಬರ್ ೧೦ರಂದು ಮೈಸೂರಿನ ಇಲವಾಲ ರಸ್ತೆಯಲ್ಲಿರುವ ಚಿತ್ತರಂಜನ್ ಮಹಲ್‌ನಲ್ಲಿ. ಮೈಸೂರು ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕೆಯ ಡೈರೆಕ್ಟರ್ ಆದ ಟಿ.ಜಿ.ಅಪ್ಪಾದೊರೈ ಮೊದಲಿಯಾರ್ ಅವರಿಂದ ಈ ಸ್ಟುಡಿಯೋ ಉದ್ಘಾಟನೆಯಾಯಿತು. ಸ್ಟುಡಿಯೋದ ಧ್ಯೇಯೋದ್ದೇಶಗಳನ್ನು ಹೆಚ್.ಎಂ.ರೆಡ್ಡಿಯವರೇ ಉತ್ಸಾಹದಿಂದ ವಿವರಿಸಿದ್ದರು. ಆದರೆ ಆ ಉತ್ಸಾಹ ಕೊನೆತನಕ ಉಳಿಯಲಿಲ್ಲ. ಅವರೇ ೧೯೪೪ರ ಜುಲೈ ತಿಂಗಳಲ್ಲಿ ರಾಜೀನಾಮೆ ಕೊಟ್ಟರು. ಸ್ಟುಡಿಯೋ ಮುಚ್ಚಿ ಹೋಯಿತು.

೧೯೪೩ರಲ್ಲೇ ನಾಲ್ಕು ಚಿತ್ರಗಳು ತೆರೆಕಂಡುವೆಂದು ಈವರೆಗೆ ದಾಖಲಾಗಿದೆ. ಆದರೆ 'ರಾಧಾರಮಣ', 'ವಾಣಿ' ೧೯೪೪ರಲ್ಲಿ ತೆರೆ ಕಂಡಿತೆಂಬುದು ಅಧಿಕೃತವಾಗಿರುವುದರಿಂದ ೧೯೪೪ರಲ್ಲಿ ಚಿತ್ರಗಳೇ ಇಲ್ಲ ಎಂಬ ದಾಖಲೆ ತಪ್ಪು.

'ವಾಣಿ' ಚಿತ್ರದ ನಿರ್ಮಾಪಕ ಟಿ.ಎಸ್.ಶಿವಬಸವಸ್ವಾಮಿ ಮತ್ತು ಸಂಗಡಿಗರು 'ಕೃಷ್ಣಲೀಲೆ' ಚಿತ್ರವನ್ನು ತಯಾರಿಸಲು ಸಿದ್ಧತೆ ಮಾಡಿಕೊಂಡರು. ಸ್ಟುಡಿಯೋ ಸೌಲಭ್ಯ ಇತ್ಯಾದಿಗಳ ವ್ಯವಸ್ಥೆಗಾಗಿ ಅವರ ಪರವಾಗಿ ಮದರಾಸಿಗೆ ಹೋಗಿದ್ದ ಜಿ.ಆರ್.ರಾಮಯ್ಯ ಮೊದಲಾದವರಿಗೆ ಮೈಸೂರಿನಲ್ಲಿ ತಾವೇ ಒಂದು ಸ್ಟುಡಿಯೋ ಸ್ಥಾಪಿಸುವ ಯೋಚನೆ ಬಂತು. ಅದೇ ವೇಳೆಗೆ ಮದರಾಸಿನ ಪ್ರಾಗ್ಜ್ಯೋತಿ ಸ್ಟುಡಿಯೋ ಕೂಡಾ ಲಿಕ್ವಿಡೇಟ್ ಆಗಿತ್ತು. ನಿರ್ದೇಶಕ ಸಿ.ವಿ.ರಾಜು ಸಲಹೆಯಂತೆ ಹರಾಜಿನಲ್ಲಿ ಕೆಲವು ಯಂತ್ರೋಪಕರಣಗಳನ್ನು ತಂದು ಮೈಸೂರಿನ ಸರಸ್ವತಿಪುರಂನ ದಳವಾಯಿತೋಟದಲ್ಲಿ ನವಜ್ಯೋತಿ ಸ್ಟುಡಿಯೋ ಎಂಬ ಹೆಸರಿನಲ್ಲಿ ಸ್ಟುಡಿಯೋ ಪ್ರಾರಂಭಿಸಿದರು. ೧೯೪೪ರಲ್ಲಿ ಸರಸ್ವತಿಪುರಂ ಬಡಾವಣೆಯಲ್ಲಿ ಎಂಟು ಎಕರೆ ಪ್ರದೇಶದಲ್ಲಿ ಸ್ವಂತ ಕಟ್ಟಡ ಕಟ್ಟಿ ಸ್ಟುಡಿಯೋ ಪ್ರಾರಂಭಿಸಿದಾಗ ಮೂರು ಫ್ಲೋರುಗಳಿದ್ದವು. ಆದರೆ ವಾಸ್ತವವಾಗಿ ಚಿತ್ರವೊಂದನ್ನು ತೆಗೆದದ್ದು ಮಹಾತ್ಮಾ ಪಿಕ್ಚರ್ಸ್ ಸಂಸ್ಥೆ. ಮುಂದೆ ಶಂಕರಸಿಂಗ್ ನಿರ್ದೇಶನದ 'ಕೃಷ್ಣಲೀಲಾ' ನವಜ್ಯೋತಿ ಸ್ಟುಡಿಯೋದಲ್ಲೇ ಸಿದ್ಧವಾಯಿತು.

ಕನ್ನಡ ಚಿತ್ರತಯಾರಿಕೆ ಪ್ರಾರಂಭವಾಗಿ ಹತ್ತು ವರ್ಷಗಳೇ ಆದರೂ (೧೯೩೪-೧೯೪೩) ಕೇವಲ ಹದಿನೈದು ಚಿತ್ರಗಳು ತಯಾರಾಗಿದ್ದವು. ಇತರ ಭಾಷಾ ಚಿತ್ರಗಳು ವರ್ಷಕ್ಕೆ ೧೫೦ಕ್ಕೂ ಹೆಚ್ಚು ಚಿತ್ರಗಳನ್ನು ತಯಾರಿಸುತ್ತಿದ್ದಾಗ ಕನ್ನಡ ಚಿತ್ರಗಳೇಕೆ ಇಷ್ಟು ಕಡಿಮೆ ಎಂಬುದು ಪ್ರಶ್ನೆ.

ಪ್ರಾರಂಭದಲ್ಲಿ ಪರಕೀಯರೇ ಅಧಿಕವಾಗಿದ್ದುದು ತಪ್ಪಿ ನಮ್ಮವರೇ ತೊಡಗಿಕೊಂಡದ್ದೊಂದು ಸ್ವಾಗತಾರ್ಹ ಬದಲಾವಣೆ. ಕನ್ನಡದಲ್ಲಿ ಸಾಮಾಜಿಕ ಚಿತ್ರಗಳು ತೀರಾ ಕಡಿಮೆ, ಆದರೂ 'ಸಂಸಾರನೌಕ', 'ಜೀವನನಾಟಕ' ಚಿತ್ರಗಳು ಬಂದಿವೆ. ಪ್ರೇಕ್ಷಕರೂ ಪ್ರೋತ್ಸಾಹಿಸಿದ್ದಾರೆ. ಆದರೆ 'ಹರಿಶ್ಚಂದ್ರ'ಕ್ಕೆ ಸಿಕ್ಕ ಮನ್ನಣೆ ನೋಡಿದರೆ ಇನ್ನು ಮುಂದೆ ಅಂಥ ಚಿತ್ರಗಳ ಪರಂಪರೆಯೇ ಪ್ರಾರಂಭವಾಗಿ ಬಿಡಬಹುದೇನೋ. ಆದರೂ ಆ ಹೊತ್ತಿನಲ್ಲಿ ಅತ್ಯಂತ ಶ್ರೀಮಂತವಾಗಿ ಮೂಡಿ ಬಂದಿದ್ದ ಹಿಂದಿ ಭಾಷೆಯ 'ಭರತ್ ಮಿಲಾಪ್', 'ರಾಮರಾಜ್ಯ'ಗಳಂಥ ಚಿತ್ರಗಳು ಪೌರಾಣಿಕ ಚಿತ್ರ ತಯಾರಕರಿಗೆ ಮಾದರಿಯಾದರೆ ಒಳಿತು. ಇಲ್ಲವಾದರೆ ಎಲ್ಲವೂ ಬಡಕಲಾಗುತ್ತದೆ. ಆಯಾ ವಸ್ತುವಿಗೆ ತಕ್ಕ ಶ್ರೀಮಂತಿಕೆ ಬೇಕು. ತಾಂತ್ರಿಕವಾಗಿ ಕೂಡಾ ಗುಣಮಟ್ಟ ಹೆಚ್ಚಬೇಕು ಎಂದು ತಜ್ಞರು ವ್ಯಾಖ್ಯಾನ ಮಾಡಿದರು. ಹತ್ತು ವರ್ಷಗಳಲ್ಲಿ ಸಾಧನೆ ಅನ್ನುವಂಥದ್ದೇನೂ ಇರಲಿಲ್ಲ ಎಂಬುದೂ ಅಷ್ಟೇ ಸತ್ಯವಾಗಿತ್ತು.

೧೯೪೩ರ ಜೂನ್ ೧ನೇ ತಾರೀಖು ಮೈಸೂರು ಪ್ರಜಾ ಪ್ರತಿನಿಧಿ ಸಭೆ ಆರಂಭವಾಯಿತು. ಸಭೆಯಲ್ಲಿ ತಾಲ್ಲೂಕು ಕೇಂದ್ರಗಳಿಗೆ ಟೂರಿಂಗ್ ಟಾಕೀಸ್ ಬೇಡ ಎಂಬ ಠರಾವು ಪಾಸ್ ಮಾಡಿದರು. ಜನರಿಗೆ ಈಗಲೇ ಹೊಟ್ಟೆಗಿಲ್ಲ, ಟೂರಿಂಗ್

ಟಾಕೀಸ್ ಆಕರ್ಷಣೆಯಾದರೆ ಅವರ ಹೊಟ್ಟೆ-ಬಟ್ಟೆಗೆ ಮತ್ತೂ ಸಂಚಕಾರವಾದೀತೆಂಬ ಆಲೋಚನೆಯಂತೆ.

೧೯೪೩ರ ಜೂನ್ ೨೫ನೇ ತಾರೀಖು ತಿಪಟೂರಿನಲ್ಲಿ ಗುಬ್ಬಿ ವೀರಣ್ಣ ಹಾಗೂ ಕರಿಬಸವಯ್ಯನವರ ಮಾಲೀಕತ್ವದಲ್ಲಿ ವಿನೋದಾ ಟಾಕೀಸ್ ಪ್ರಾರಂಭವಾಯಿತು. ಚಿತ್ರಮಂದಿರದಲ್ಲಿ ಎಚ್ಚರ ವಹಿಸದಿದ್ದರೆ ಸಾಕಷ್ಟು ಆಕ್ಷೇಪ ಎದುರಿಸಬೇಕಾಗಿತ್ತು. ಬೆಂಗಳೂರಿನ ಮೂವಿಲ್ಯಾಂಡ್ ಟಾಕೀಸ್‌ನಲ್ಲಿ ಸದಾ ಕಾಫಿ, ಟೀ ಮಾರುವವರ ಗದ್ದಲವಿರುತ್ತದೆಂಬ ದೂರು, ಮ್ಯಾಟನಿ ಶೋ ನಡೆಯುವಾಗ ಕಿಟಕಿ-ಬಾಗಿಲುಗಳ ಕರಿ ತೆರೆಯನ್ನು ಸರಿಯಾಗಿ ಹಾಕದೇ ಹೊರಗಿನ ಬೆಳಕು ಬಿದ್ದು ತೆರೆಯ ಮೇಲಿನ ದೃಶ್ಯ ಸರಿಯಾಗಿ ನೋಡಲಾಗುತ್ತಿಲ್ಲ, ಗೇಟ್‌ಕೀಪರ್‌ಗಳು ಒಳಗೂ ಹೊರಗೂ ಓಡಾಡುತ್ತಾ ಪ್ರೇಕ್ಷಕರ ಏಕಾಗ್ರತೆಗೆ ಭಂಗ ತರುತ್ತಾರೆ ಮೊದಲಾದ ದೂರುಗಳು ಬರುತ್ತಿದ್ದವು. ಇಂಥ ಆಕ್ಷೇಪ ಬೇರೆ ಚಿತ್ರಮಂದಿರಗಳ ಬಗ್ಗೆಯೂ ಇತ್ತು.

೧೯೪೩ನೇ ಏಪ್ರಿಲ್ ತಿಂಗಳಲ್ಲಿ ಮೈಸೂರಿನ ನ್ಯೂ ಆಪೇರಾ ಚಿತ್ರಮಂದಿರದಲ್ಲಿ ತಮಿಳಿನ 'ಮನೋನ್ಮಣಿ' ಚಿತ್ರ ಪ್ರದರ್ಶನವಿತ್ತು. ಜನರ ನೂಕು ನುಗ್ಗಲು ಹೆಚ್ಚಾಗಿತ್ತು. ಅದು ಯುದ್ಧದ ಕಾಲ, ವಿಮಾನ ದಾಳಿ ಜಾಗ್ರತೆಗಾಗಿ ನಿರ್ಮಿಸಿದ್ದ ಗೋಡೆಯೇ ಉರುಳಿತು. ಅನೇಕರಿಗೆ ಗಾಯವಾಯಿತು. ಇಬ್ಬರು ಮೃತರಾದರು. ಚಿತ್ರಮಂದಿರದವರ ನಿರ್ಲಕ್ಷ್ಯವೇ ಇದಕ್ಕೆ ಕಾರಣ, ಸರಿಯಾಗಿ ಬಂದೋಬಸ್ತ್ ಮಾಡಿರಲಿಲ್ಲ. ಮುಖ್ಯವಾಗಿ ಅಧಿಕಾರಿಗಳು, ಪೊಲೀಸರು ತಮ್ಮ ಕರ್ತವ್ಯ ಸರಿಯಾಗಿ ನಿರ್ವಹಿಸಲಿಲ್ಲ ಎಂಬ ಆಕ್ಷೇಪ. ಇಂಥದೊಂದು ಅವಘಡವಾದದ್ದು ಇದೇ ಮೊದಲು.

ಕಿರಿಯ ಪ್ರತಿಭಾವಂತರ ತಂಡವೊಂದು ಜಯ ಮಾರುತಿ ಆರ್ಕೆಸ್ಟ್ರಾ ಎಂಬ ಹೆಸರಿನಲ್ಲಿ ಸಂಸ್ಥೆಯನ್ನು ಪ್ರಾರಂಭಿಸಿತು. ಕರ್ನಾಟಕ, ಹಿಂದೂಸ್ತಾನಿ, ಇಂಗ್ಲಿಷ್ ರಾಗ ಸಂಯೋಜನೆ ಬಲ್ಲ ಪ್ರತಿಭಾವಂತರಿದ್ದರು. ಈ ಸಂಸ್ಥೆಯಲ್ಲಿ ಪ್ರಸಿದ್ಧ ಮೋಹನ್ ಲಾಲ್ ಮೊದಲಾದವರಿದ್ದರು. ಈ ಸಂಸ್ಥೆಯ ಉಗಮದ ಹಿಂದೆ ಶ್ರೀರಂಗಪ್ಪ ಎಂಬ ವ್ಯಕ್ತಿಯ ಪರಿಶ್ರಮವಿತ್ತು.

೧೯೪೩ರಲ್ಲೇ ಮೈಸೂರು ಪಿಕ್ಚರ್ಸ್ ಲಿಮಿಟೆಡ್ ಎಂಬ ಜಾಯಿಂಟ್ ಸ್ಟಾಕ್ ಕಂಪನಿ ಪ್ರಾರಂಭವಾಯಿತು. ೫೦,೦೦೦ ರೂಪಾಯಿಗಳ ಶೇರುಗಳನ್ನು ಹೊಂದಿತ್ತು (೧೦ ರೂಪಾಯಿಯ ೫,೦೦೦ ಶೇರುಗಳು). ಸಂಸ್ಥೆಯಲ್ಲಿ ಪ್ರಭಾವಶಾಲಿ ವ್ಯಾಪಾರಿಗಳು, ಬ್ಯಾಂಕರುಗಳು ನಿರ್ದೇಶಕರಾಗಿದ್ದರು. ಧ್ಯೇಯೋದ್ದೇಶಗಳು ಹಲವು. ಆರೋಗ್ಯ, ವಿದ್ಯೆ, ಯುದ್ಧ, ಗ್ರಾಮ ಪುನರುದ್ಧಾರ ಇತ್ಯಾದಿಗಳನ್ನು ಆಧರಿಸಿ ಕಿರುಚಿತ್ರ ನಿರ್ಮಿಸುವುದರಿಂದ ಕಾರ್ಯಾರಂಭವಾಯಿತು.

ಬಂಗಾಳದ ಬರಗಾಲವನ್ನು ಮೀರಿದ ಬವಣೆ ಕಚ್ಚಾ ಫಿಲಂ ಹೊಂದಿಸುವುದೇ ಆಗಿತ್ತು. ಕೆಲವರಿಗೆ 'ಬ್ಲಾಕ್‌ಮಾರ್ಕೆಟ್‌ನಲ್ಲಿ ಫಿಲಂ ಲಭಿಸುತ್ತಿತ್ತು. ಆದರೆ ಸರ್ಕಾರ ಅನುಮತಿ ಕೊಡದೆ ಚಿತ್ರಿಸುವಂತಿರಲಿಲ್ಲವಾದ್ದರಿಂದ ಬ್ಲಾಕ್‌ಮಾರ್ಕೆಟ್‌ನಲ್ಲಿ ಪಡೆದರೂ ಚಿತ್ರಣ ಸಾಧ್ಯವಿರಲಿಲ್ಲ. ಈ ಲೆಕ್ಕದಲ್ಲಿ ೧೯೪೩ರ ಸೆಪ್ಟೆಂಬರ್ ೧ರಿಂದ ವರ್ಷಕ್ಕೆ ೧೫೦ ಚಿತ್ರಗಳು ಮಾತ್ರ ತಯಾರಾಗಬಹುದಿತ್ತು. ಹಿಂದೆ ತಯಾರಿಸಿದ ಚಿತ್ರಗಳ ಸಂಖ್ಯೆಯನ್ನು ಆಧರಿಸಿ ಅನುಮತಿ ಎಷ್ಟು ಚಿತ್ರಕ್ಕೆ ಎಂಬುದು ನಿರ್ಧಾರ ಮಾಡಬೇಕೆಂಬುದು ಸರ್ಕಾರದ ನಿಲುವು. ಬೊಂಬಾಯಿಗೆ, ಮದರಾಸಿಗೆ ೪೫, ಇನ್ನುಳಿದ ೨೯ ಚಿತ್ರಗಳನ್ನು ಬಂಗಾಳ, ಪಂಜಾಬುಗಳಿಗೆ ಹಂಚಿದರೆ ಆಯಿತು. ರಹದಾರಿ ಕೊಡುವಾಗ ಅಭಿವೃದ್ಧಿ ಹೊಂದುತ್ತಿರುವ ರಾಜ್ಯಗಳಿಗೆ ಆದ್ಯತೆ ಕೊಡುವ ಅಗತ್ಯ ಕಾಣುವುದಿಲ್ಲವೆ ? ಭಾರತ ಚಿತ್ರೋದ್ಯಮ ಕಚ್ಚಾ ಫಿಲಂ ಅನ್ನೇ ಅವಲಂಬಿಸಿತ್ತು. ಈ ಸಮಯದಲ್ಲಿ ಯುದ್ಧದ ಸುದ್ದಿಯಲ್ಲಿ ಒಂದು ಆಶಾದಾಯಕ ಸಂಗತಿ ಇತ್ತು. ಅದೆಂದರೆ ಇಟಲಿಯು ಮಿತ್ರರಾಷ್ಟ್ರಗಳಿಗೆ ಜಯವಾಗಿತ್ತು. ಮೆಡಿಟರೇನಿಯನ್ ಮೂಲಕ ಹಡಗುಗಳು ಓಡಾಡತೊಡಗಿದ್ದವು. ಆದರೆ ಅಮೆರಿಕಾ ಕಚ್ಚಾ ಫಿಲಂ ಸಾಕಷ್ಟು ತುಂಬಿಸಿ ಭಾರತಕ್ಕೂ ಒದಗಿಸಲು ಇಷ್ಟಪಡುತ್ತದೆಯೇ ಎಂಬ ಪ್ರಶ್ನೆಯಂತೂ ಇದ್ದೇ ಇತ್ತು.

ಸರ್ಕಾರ ಚಿತ್ರಗಳ ಉದ್ದಕ್ಕೆ ಮಿತಿ ಹಾಕಿ ಫಿಲಂ ಉಳಿತಾಯ ಮಾಡಲು ಸೂಚಿಸಿತ್ತಷ್ಟೆ. ದಕ್ಷಿಣದವರು ೧೫-೧೬ ಸಾವಿರ ಅಡಿಗಾದರೂ ಅನುಮತಿ ಕೊಡಿ ಎಂದು ಕೋರಿದರೂ ಸರ್ಕಾರ ಒಪ್ಪಲಿಲ್ಲ. ಈ ಸಂದರ್ಭದಲ್ಲಿ ಸರ್ಕಾರ ಹೇಳಿರುವ ೧೧,೦೦೦ ಅಡಿ ಚಿತ್ರ ತಯಾರಾಗಬೇಕಾದರೆ ೫೦,೦೦೦ ಅಡಿ ಕಚ್ಚಾ ಫಿಲಂ ಅಗತ್ಯವಾಗಿ ಬೇಕಾಗುತ್ತದೆ ಎಂದು ಕೊಡಕ್ ಕಂಪನಿಯ ಜನರಲ್ ಮ್ಯಾನೇಜರ್ ನೋಬಲ್ ಅವರು ಅಭಿಪ್ರಾಯಪಟ್ಟರು. ಈ ಮಾತು ಸರ್ಕಾರಕ್ಕೂ ಮನವರಿಕೆ ಆಗಿ ಒಪ್ಪಿಕೊಂಡಿತ್ತು. ಆದರೆ ನಮ್ಮವರ ಅತಿ ಜಾಣತನ ಅದಕ್ಕೂ ಸಂಚಕಾರ ತಂದಿತು. ಹೇಗೆಂದರೆ "ನೀವು ೨೦,೦೦೦ ಅಡಿ ಉದ್ದದ ಚಿತ್ರಕ್ಕೆ ಅನುಮತಿ ಕೊಟ್ಟರೆ ನಾವು ೪೦,೦೦೦ ಅಡಿಯಲ್ಲೇ ನಿರ್ಮಿಸುತ್ತೇವೆ" ಎಂದರು. ಸರ್ಕಾರ ಮೊದಲಿನ ಪಟ್ಟು ಹಿಡಿದು ಅದೇ ೧೧,೦೦೦ ಅಡಿ ಇರಲಿ, ಕೇವಲ ೩೦,೦೦೦ ಅಡಿ ಕಚ್ಚಾ ಫಿಲಂ ಒದಗಿಸಲಾಗುವುದು ಎಂಬ ತೀರ್ಮಾನಕ್ಕೆ ಬಂದಿತು. ಇದು ಸ್ವಯಂಕೃತಾಪರಾಧದ ಪರಿಣಾಮ.

ಹಂಚಿಕೆ, ಪ್ರದರ್ಶನ ವಿಭಾಗದಲ್ಲಿಯೂ ಅನೇಕ ತೊಡಕುಗಳಿದ್ದವು. ಕನ್ನಡ ಚಿತ್ರಗಳು ಆಗಲೂ ಬಸವಳಿದವು. ಕನ್ನಡ ಚಿತ್ರಗಳೇ ಇಲ್ಲವಾಗಿರುವಾಗ ಸಹಜವಾಗಿಯೇ ತಮಿಳು, ಹಿಂದಿ ಚಿತ್ರಗಳ ಪ್ರಭಾವ ಅಧಿಕವಾಯಿತು. ಕನ್ನಡದವರೂ ಕೂಡಾ ಹಿಂದಿ ಚಿತ್ರಗಳ ಹಕ್ಕನ್ನು ಪಡೆಯಲಾರಂಭಿಸಿದರು. ಆದರೆ ಫಿಲಂ ವ್ಯಾಪಾರದಲ್ಲಿ ಅನುಭವ ಇಲ್ಲದವರೆಲ್ಲ ನುಗ್ಗಿದರು. ಅವರಿವರ ಬಣ್ಣದ ಮಾತಿಗೆ ಮರುಳಾಗಿ ಕಳಪೆ ಚಿತ್ರಗಳಿಗೂ ಅಧಿಕ ಬೆಲೆ ತೆತ್ತರು. ನಷ್ಟ ಹೊಂದಿ ಮೇಲೇಳದಂತೆ ಸೊರಗಿದರು. ಈ ಅವಧಿಯಲ್ಲಿ ಚಿತ್ರಗಳ ಬೆಲೆಯೂ ಹೆಚ್ಚಾಗಿತ್ತು. ಫೈಟಿಂಗ್ ಇರುವ ಚಿತ್ರಗಳು ೭-೮ ಸಾವಿರಗಳಿಗೆ ಸಿಗುತ್ತಿದ್ದಂಥವು ಕೂಡಾ ೧೪-೧೫ ಸಾವಿರಕ್ಕೆ ಕಡಿಮೆ ಇಲ್ಲದಂತಾದವು. ಒಳ್ಳೆಯ ಚಿತ್ರಗಳ ಬೆಲೆ ಮತ್ತೂ ಏರುವುದು ಸಹಜವೇ.

ಚಿತ್ರಮಂದಿರಗಳೂ ಸಹ ಪರರ ಅಧೀನದಲ್ಲಿದ್ದವು. ಅವರೇ ಹಂಚಿಕೆದಾರರೂ ಆದ್ದರಿಂದ ಅವರು ವಿತರಣೆಗೆ ತೆಗೆದುಕೊಂಡ ಚಿತ್ರಗಳಿಗೇ ಆದ್ಯತೆ. ಇತರರ ಚಿತ್ರಗಳಿಗೆ ಅವಕಾಶ ಸಿಕ್ಕರೂ ಎರಡು ವಾರ ಕೂಡಾ ಚಿತ್ರಮಂದಿರ ಸಿಗುತ್ತಿರಲಿಲ್ಲ. ಕನ್ನಡಿಗರೇ ಮಾಲೀಕರಾಗಿರುವ ಚಿತ್ರಮಂದಿರಗಳೂ ಇದ್ದವು. ಅಲ್ಲಿಯೂ ತೆಲುಗು, ತಮಿಳು ಚಿತ್ರಗಳು ೨೦-೨೫ ವಾರ ನಡೆದರೆ, ಕನ್ನಡ ಚಿತ್ರಗಳಿಗೆ ಅವಕಾಶವೆಲ್ಲಿ ? ಇರುವ ಒಂದೋ, ಎರಡೋ ಚಿತ್ರಗಳು ಕೂಡಾ ಪೆಟ್ಟಿಗೆಯಲ್ಲಿ ಕೂತವು. ಇಂಥ ಸಂದರ್ಭದಲ್ಲಿ ಕನ್ನಡದ ಬಂಡವಾಳಗಾರರು ಮುಂದೆ ಬಂದು ಚಿತ್ರಮಂದಿರಗಳ ಸ್ವಾಮ್ಯ ಪಡೆದುಕೊಳ್ಳಬೇಕು ಅಥವಾ ಹೊಸ ಚಿತ್ರಮಂದಿರ ಕಟ್ಟಿಸಬೇಕು, ಸಾಧ್ಯವಾದಾಗಲೆಲ್ಲ ಕನ್ನಡ ಚಿತ್ರ ಪ್ರದರ್ಶಿಸಿ ಕನ್ನಡದ ಹಂಚಿಕೆದಾರನನ್ನು ಉದ್ಧರಿಸಬೇಕು ಎಂಬ ಕೂಗೂ ಇತ್ತು.

ಅದೇ ತಾನೇ ಸಿದ್ಧವಾಗಿದ್ದ ಹೆಚ್.ಆರ್.ಜಿ.ಸಿ.ಶ್ರೀ ಸಂಸ್ಥೆಯ 'ವಾಣಿ' ಕನ್ನಡದ ಹೊಸ ಚಿತ್ರವಾಗಿ ಸಿದ್ಧವಾಗಿತ್ತು. ಚಿತ್ರ ನಿರ್ಮಾಣಕ್ಕೆ ಅನುಮತಿ ಕೇಳಿ ಬೊಂಬಾಯಿ, ಮದರಾಸಿನ ನಿರ್ಮಾಪಕರು ಅರ್ಜಿ ಹಾಕಿದ್ದರು. ಕನ್ನಡದ ನಿರ್ಮಾಪಕರು ಅನುಮತಿ ಕೇಳಿಯೇ ಇರಲಿಲ್ಲ. 'ರಹದಾರಿ' (ಪರ್ಮಿಟ್ ಅಥವಾ ಪರವಾನಗಿ) ಪಡೆಯದಿದ್ದರೆ ಕನ್ನಡ ಚಿತ್ರ ನಿರ್ಮಾಣವೇ ಅಸಾಧ್ಯವಾಗಬಹುದು ಎಂಬುದು ತಜ್ಞರ ಊಹೆ. ಆದದ್ದೂ ಹಾಗೆಯೇ. ಮುಂದಿನ ಕೆಲವು ವರ್ಷಗಳಲ್ಲಿ ಚಿತ್ರಗಳು ಬರಲೇ ಇಲ್ಲ.

ಇನ್ನೊಂದು ವಿಪರ್ಯಾಸವೆಂದರೆ ಕನ್ನಡನಾಡಿನಲ್ಲಿ ಸ್ಟುಡಿಯೋಗಳು ಪ್ರಾರಂಭವಾಗುತ್ತಿದ್ದಾಗಲೇ ಇಂಥ ಸಂಕಟ ಎದುರಾದದ್ದು. ಕರ್ನಾಟಕ ಫಿಲಂಸ್, ಭವಾನಿ ಸ್ಟುಡಿಯೋಸ್, ರಾಘವೇಂದ್ರ ಸೌಂಡ್ ಸ್ಟುಡಿಯೋಸ್, ಜಯಶಂಕರ್ ಫಿಲಂ ಕಾರ್ಪೊರೇಷನ್, ಮೈಸೂರು ಪಿಕ್ಚರ್ಸ್ ಇವರೆಲ್ಲ ರಹದಾರಿ ಪಡೆಯುವ ಪ್ರಯತ್ನ ಮಾಡದಿದ್ದರೆ ಕನ್ನಡ ಚಿತ್ರ ತಯಾರಿಕೆ ಒಂದು ಕನಸೇ ಆದೀತು ಎಂಬ ಪತ್ರಿಕೆಗಳ ವಿಶ್ಲೇಷಣೆ ನಿಜವೇ ಆಗಿತ್ತು.

ಇವುಗಳ ನಡುವೆ ಅವರಿವರ ಕೆಟ್ಟ ಚಟಗಳು, ಸುಳ್ಳುಗಳಿಗೇನೂ ಕಡಿಮೆ ಇರಲಿಲ್ಲ. ಭವಾನಿ ಸೌಂಡ್ ಸ್ಟುಡಿಯೋಸ್‌ನವರು ಚಿತ್ರ ನಿರ್ಮಿಸುತ್ತೇವೆಂದು ಸುದ್ದಿ ಮಾಡಿದರು, ಚಿತ್ರ ಪ್ರಾರಂಭವಾಗಲೇ ಇಲ್ಲ. ಇವೆಲ್ಲ ಶೇರುದಾರರ ಕಣ್ಣೊರೆಸುವ ತಂತ್ರವೆಂಬುದು ಅನಂತರ ತಿಳಿಯಿತು.

೧೯೪೪ ಬಹಳಷ್ಟು ಕಾರಣಗಳಿಗೆ ಮುಖ್ಯವಾದ ವರ್ಷ.

೧೯೪೪ನೇ ಮೇ ತಿಂಗಳ ೧೯ನೇ ತಾರೀಖು ಶಿವನಸಮುದ್ರದ ವಿದ್ಯುತ್ ಉತ್ಪಾದನಾ ಕೇಂದ್ರಕ್ಕೆ ಸಿಡಿಲು ಹೊಡೆಯಿತು. ಎಲ್ಲೆಲ್ಲೂ ಅಂಧಕಾರ ಕವಿಯಿತು. ಸರ್ಕಾರ ಈ ಸಮಸ್ಯೆಗೆ ಬೇಗ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿತು. ಆದರೆ ಎಲ್ಲ ಯಥಾಸ್ಥಿತಿಗೆ ಬರುವವರೆಗೆ ವಿದ್ಯುತ್ತನ್ನು ಮಿತವಾಗಿ ಬಳಸಬೇಕಾಗಿತ್ತು. ಇಂತಿಷ್ಟೆಂದು ಹಂಚುವ ವ್ಯವಸ್ಥೆ ಮಾಡಲಾಯಿತು. ಆ ಹಿನ್ನೆಲೆಯಲ್ಲಿ ಜೂನ್ ೧ನೇ ತಾರೀಖಿನಿಂದ ಬೆಂಗಳೂರು ನಗರದ ಚಿತ್ರಮಂದಿರಗಳಿಗೆ ಒಂದೊಂದು ಪ್ರದರ್ಶನಕ್ಕೆ ಮಾತ್ರ ವಿದ್ಯುತ್ತನ್ನು ಕೊಡಲಾಗುತ್ತಿತ್ತು. ಇದರಿಂದ ವಿಪರೀತ ತೊಂದರೆಯನ್ನಂತೂ ಎದುರಿಸಬೇಕಾಯಿತು. ಚಿತ್ರಮಂದಿರಗಳಲ್ಲಿ ಪ್ರದರ್ಶನ ಒಂದೇ ಇರಲಿ, ನಾಲ್ಕೇ ಇರಲಿ ಪ್ರಚಾರಕ್ಕೆ ಅಷ್ಟೇ ವೆಚ್ಚ ಮಾಡಬೇಕು. ಮತ್ತು ಚಿತ್ರಮಂದಿರದ ಸಿಬ್ಬಂದಿ ವೆಚ್ಚ

ಇತ್ಯಾದಿಗಳೂ ಇದ್ದೇ ಇರುತ್ತವೆ. ಹಂಚಿಕೆದಾರರು ಕೂಡಾ ಕೇವಲ ಒಂದೇ ಪ್ರದರ್ಶನವಾದರೆ ಚಿತ್ರಗಳನ್ನು ಕೊಡುವುದಿಲ್ಲ ಎನ್ನುತ್ತಾರೆ. ಹಾಗೆ ಕೊಟ್ಟರೆ ಅವರಿಗೆ ಆದಾಯ ಕಡಿಮೆಯಾಗುತ್ತದೆಂಬುದು ಕಾರಣ. ಹಾಗೆಂದು ಕೆಲಕಾಲ ಹಳೆಯ ಚಿತ್ರಗಳನ್ನೇ ತೋರಿಸೋಣವೆಂದರೆ ಆದಾಯವೇ ಇರುವುದಿಲ್ಲ. ಕನಿಷ್ಠ ಎರಡು ಪ್ರದರ್ಶನಗಳಿಗೆ ಎಲ್ಲ ಕಡೆ ದೀಪ ಹತ್ತುವ ಮುಂಚೆ ಮತ್ತು ರಾತ್ರಿ ದೀಪದ ಉಪಯೋಗ ಕಡಿಮೆ ಆದ ಮೇಲೆ (೯.೩೦ ಮತ್ತು ೧೦.೩೦ ಗಂಟೆಗೆ) ಪ್ರದರ್ಶನಕ್ಕೆ ಅನುವು ಮಾಡಿಕೊಡಿ, ವಿದ್ಯುತ್ ಸರಬರಾಜಿನಲ್ಲಿ ಕೊಂಚ ಕಟ್ಟುನಿಟ್ಟನ್ನು ಸಡಿಲಿಸಿ ಎಂದು ಕೋರಲಾಯಿತು. ಪತ್ರಿಕೆಗಳೂ ಇವನ್ನು ಬೆಂಬಲಿಸಿದವು.

ಕೆಲವೇ ದಿನಗಳಲ್ಲಿ ಸರ್ಕಾರ ಈ ಪ್ರಾರ್ಥನೆಯನ್ನು ಒಪ್ಪಿ ಅಷ್ಟು ಅನುಕೂಲ ಮಾಡಿಕೊಟ್ಟಿತು. ನಷ್ಟದ ಬಾಬತ್ತುಗಳಿಗೆಲ್ಲ ಪರಿಹಾರವಿಲ್ಲದಿದ್ದರೂ ಅನಿವಾರ್ಯವಾಗಿ ಎದುರಾದ ಸಮಸ್ಯೆಗೆ ಅಷ್ಟು ಮಾತ್ರ ನೆರವು ಗುಣಾಂಶವೇ ಆಗುತ್ತದೆ.

ಯುದ್ಧ ಕಾಲದಲ್ಲಿ ಆಮದು ನೀತಿಯಲ್ಲಿನ ಮಾರ್ಪಾಟುಗಳಿಂದಾಗಿ ಇಂಡಿಯಾಕ್ಕೆ ಕಚ್ಚಾ ಫಿಲಂ ಸಾಕಷ್ಟು ಬರುತ್ತಿರಲಿಲ್ಲವೆಂಬ ಅಂಶ, ರೇಷನ್ ಅದ್ದರಿಂದ ಫಿಲಂ ಅಡ್ವೈಸರಿ ಬೋರ್ಡ್‌ನಿಂದ ಹಂಚಿಕೆಯಾಗುತ್ತಿತ್ತು ಎಂಬುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ೧೯೪೪ರ ಜೂನ್ ವೇಳೆಗೆ ಇಂಡಿಯಾ ಸರ್ಕಾರ ೧೭೯ ಚಿತ್ರಗಳಿಗೆ ಲೈಸೆನ್ಸ್ ಕೊಟ್ಟಿತ್ತು. ಅದರಲ್ಲಿ ಬೊಂಬಾಯಿಗೆ ೯೭, ಬಂಗಾಳಕ್ಕೆ ೩೩, ಪಂಜಾಬಿಗೆ ೧೧, ಮದರಾಸಿಗೆ ೩೯, ಕರ್ನಾಟಕಕ್ಕೆ ಸೊನ್ನೆ.

ಚಿತ್ರಗಳ ಉದ್ದಕ್ಕೆ ನಿಯಂತ್ರಣ ಹಾಕಿದ್ದು, ಆ ಮಿತಿಗೆ ಹೊಂದುವಂಥ ಕಥೆಯನ್ನೇ ಆಯ್ದು ಚಿತ್ರ ಮಾಡಿದ್ದು ಪ್ರಸ್ತಾಪವಾಗಿದೆ. ಈ ನಿಯಂತ್ರಣವು ಬಳಸುವ ಕಾಗದದ ಮೇಲೂ ಇತ್ತು. "...ತನ್ನ ನೃತ್ಯ ಪ್ರದರ್ಶನದ ಸಂದರ್ಭದಲ್ಲಿ ಶ್ರೀಮತಿ ಸಾಧನಾ ಬೋಸ್ ಹಚ್ಚಿದ್ದ ಪೋಸ್ಟರ್‌ಗಳು ಕಾಗದ ನಿಯಂತ್ರಣ ಆದೇಶದಲ್ಲಿ ಸೂಚಿಸಿರುವ ಅಳತೆಗಿಂತ ದೊಡ್ಡದಾಗಿದ್ದುವೆಂದು ಅಧಿಕಾರಿಗಳು ಆಕೆಯ ಮೇಲೆ ಕಾಯಿದೆ ಪ್ರಕಾರ ಮೊಕದ್ದಮೆ ಹೂಡಿದ್ದಾರೆ..." ಎಂದು ವಾಕ್ಚಿತ್ರದ ಆಗಸ್ಟ್, ೧೯೪೪ರ ಸಂಚಿಕೆ ವರದಿ ಮಾಡಿದೆ.

ಕನ್ನಡ ಚಿತ್ರನಿರ್ಮಾಪಕರೊಬ್ಬರ ಚಿತ್ರಕ್ಕೆ ಮಿತಿಯನ್ನು ದಾಟಿದ ಸಂಖ್ಯೆಯಷ್ಟು ಪೋಸ್ಟರ್ ಅಂಟಿಸಿದ್ದನ್ನು ಯಾರೋ ನೋಡಿ ಹೇಳಿದಾಗ ರಾತ್ರೋರಾತ್ರಿ ನಿರ್ಮಾಪಕರೇ ಖುದ್ದಾಗಿ ಹೋಗಿ ಅದನ್ನೆಲ್ಲ ಕಿತ್ತು ಹಾಕಿದ ಸುದ್ದಿ ವರದಿಯಾಗಿದೆ.

ಆಗ ಬೆಂಗಳೂರು ಬೀದಿಯಲ್ಲಿ ಓಡಾಡುವ ಪ್ರತಿ ಮೂರು ಮಂದಿಯಲ್ಲಿ ಇಬ್ಬರು ಮಿಲಿಟರಿ ಕಂಟ್ರಾಕ್ಟರುಗಳೆಂದು ವ್ಯಂಗ್ಯ ಮಾಡಿವೆ ಪತ್ರಿಕೆಗಳು.

ಕನ್ನಡ ಚಿತ್ರರಂಗದಲ್ಲಿಯೂ ಹಲವು ಸಾಹಸಗಳನ್ನು ಮಾಡಿ ತೋರಿಸಿದ ಮೊದಲಿಗರಾದ ಗುಬ್ಬಿ ವೀರಣ್ಣನವರಿಗೆ ಮಾತ್ರ ಚಿತ್ರವೊಂದನ್ನು ನಿರ್ಮಿಸಲು ಪರ್ಮಿಟ್ ಸಿಕ್ಕಿತ್ತು. ಸಾಮಾನ್ಯವಾಗಿ ಸ್ಟುಡಿಯೋ ಇದ್ದವರು ಅಥವಾ ಆಯಾ ಸಂಸ್ಥೆಯ ಸಾಧನೆಯನ್ನು ಆಧರಿಸಿ ಈ ಪರವಾನಗಿ ಕೊಡಲಾಗುತ್ತಿತ್ತು. ಇಂಡಿಯಾ ಸರ್ಕಾರದಿಂದ ಪರ್ಮಿಟ್ ಪಡೆದವರು ಚಿತ್ರ ಪ್ರಾರಂಭಿಸಿ ಕೆಲಸ ಎಲ್ಲಿಯವರೆಗೆ ಬಂದಿದೆ ಎಂಬ ವಿವರಗಳನ್ನು ಸರ್ಕಾರಕ್ಕೆ ವರದಿ ಮಾಡಬೇಕಿತ್ತು. ಆ ವರದಿಯ ಆಧಾರದ ಮೇಲೆ, ಅವರ ಕೆಲಸದ ಪ್ರಗತಿಯನ್ನು ನೋಡಿ ಮುಂದಿನ ವರ್ಷ ಪರ್ಮಿಟ್ ಕೊಡುವ-ಬಿಡುವ ಬಗ್ಗೆ ತೀರ್ಮಾನ ತೆಗೆದುಕೊಳ್ಳುತ್ತಿತ್ತು ಸರ್ಕಾರ.

ವೀರಣ್ಣನವರು 'ಮಲ್ಲಮ್ಮ' ಚಿತ್ರ ನಿರ್ಮಿಸಲು ತೀರ್ಮಾನಿಸಿ ಮುಹೂರ್ತವನ್ನು ಮಾಡಿದರು. ಮದರಾಸಿನ ನ್ಯೂಟೋನ್ ಸ್ಟುಡಿಯೋದಲ್ಲಿ ಚಿತ್ರಿಸಬೇಕಾಗಿತ್ತು. ಆ ಸ್ಟುಡಿಯೋ ಎಷ್ಟು ಬಿಜಿ (busy) ಆಗಿತ್ತೆಂದರೆ ತಿಂಗಳುಗಳಾದರೂ ವೀರಣ್ಣನವರಿಗೆ ಚಿತ್ರೀಕರಣಕ್ಕೆ ಫ್ಲೋರ್ ಸಿಗಲಿಲ್ಲ. ವೀರಣ್ಣನವರು ಈ ಸ್ಟುಡಿಯೋಗೆ ಆಗಲೇ ಮುಂಗಡ ಹಣ ಕೊಟ್ಟಿದ್ದುದರಿಂದ ಆ ಸ್ಟುಡಿಯೋ ಬಿಟ್ಟು ಬೇರೆ ಕಡೆ ಹೋಗುವ ಹಾಗೂ ಇರಲಿಲ್ಲ. ಇವೆಲ್ಲಕ್ಕಿಂತ ಮಿಗಿಲಾದ ಆಶ್ಚರ್ಯವೆಂದರೆ ಕೆಲವೇ ವಾರಗಳ ಹಿಂದೆ ಪರ್ಮಿಟ್ ಪಡೆದ ಗೂಡಪಲ್ಲಿ ರಾಮಬ್ರಹ್ಮಂ ಅವರಿಗೆ ಚಿತ್ರ ತಯಾರಿಸಲು ಕೂಡಲೇ ಸ್ಟುಡಿಯೋ ತೆರವು ಮಾಡಿಕೊಟ್ಟರು.

ಈ ಮಧ್ಯೆ ಈ ಚಿತ್ರದ ನಿರ್ದೇಶಕರಾಗಿ ಗೊತ್ತಾಗಿದ್ದ ಕೆ.ಆರ್.ಶರ್ಮ ಅವರು ಶೂಟಿಂಗ್ ಸ್ಕ್ರಿಪ್ಟ್ ಸಿದ್ಧ ಮಾಡಿಕೊಂಡಿರಲಿಲ್ಲ. ಕಾರಣ, ಮಲ್ಲಮ್ಮನ ಕಾಲದ ಉಡುಗೆ-ತೊಡುಗೆ ಇತ್ಯಾದಿಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರವಾಸ ಮಾಡುತ್ತಿದ್ದರು. ಇವೆಲ್ಲ ನೋಡಿದರೆ 'ಮಲ್ಲಮ್ಮ' ತಯಾರಾಗುವುದೇ ಅನುಮಾನ ಎಂಬ ತರ್ಕವೂ ಎದ್ದಿತು. ತಮಿಳು ಯುಗಾದಿಯ ದಿನ 'ಮಲ್ಲಮ್ಮ'ಕ್ಕೆ ಸಂಬಂಧಿಸಿದಂತೆ ಸಮಾರಂಭವೊಂದರ ಸುದ್ದಿ ಬಂದು 'ಮಲ್ಲಮ್ಮ' ಚಿತ್ರೀಕರಣ ಪ್ರಾರಂಭವಾಗಿದೆ ಎಂದು ಭಾವಿಸಲಾಯಿತು. ಆದರೆ ಅದು ಆ ಚಿತ್ರದ ಪಾಲುದಾರರಾಗಿ ಸೇರಿಕೊಂಡ ಸೌಂದರರಾಜನ್ ಕಚೇರಿಯ ಸಂತೋಷ ಕೂಟವಾಗಿತ್ತು. 'ಮಲ್ಲಮ್ಮ' ಚಿತ್ರವನ್ನು 'ಶಿವಭಕ್ತಿ' ಎಂತಲೂ ಕರೆಯುವ ಬಗ್ಗೆ ಜಿಜ್ಞಾಸೆಯಿತ್ತು. ಹೀಗೆ ಆಗ ಸುದ್ದಿಗಳೂ ಬಂದವು. ಎಲ್ಲವನ್ನು ದಾಟಿ 'ಮಲ್ಲಮ್ಮ' ಸೆಟ್ ಏರಿತು. ಅದೇ ದಿನ ಚಿತ್ರೀಕರಣಕ್ಕೆಂದು ಬರುತ್ತಿದ್ದ ಛಾಯಾಗ್ರಾಹಕನಿಗೆ ಅಪಘಾತವಾಯಿತು. ಅವರ ಬದಲಿಗೆ ಬೇರೆಯವರನ್ನು ಹೊಂದಿಸಲು ಕಷ್ಟ ಪಡಬೇಕಾಯಿತು. ಕಡೆಗೂ ನ್ಯೂಟೋನ್ ಸ್ಟುಡಿಯೋದಲ್ಲೇ ಅತ್ತ 'ಮೀರಾ', ಇತ್ತ 'ಸ್ವರ್ಗಸೀಮಾ' ಚಿತ್ರೀಕರಣ ನಡೆದಿರುವಾಗಲೇ ಆ ಎರಡು ಸೆಟ್‌ಗಳ ನಡುವೆ ಇರುವ ಪುಟ್ಟದೊಂದು ಸ್ಥಳದಲ್ಲಿ ಪೂಜಾಮಂದಿರದ ಸೆಟ್ ಹಾಕಿ ಚಿತ್ರೀಕರಣ ಪ್ರಾರಂಭಿಸಿದರು. 'ಮಲ್ಲಮ್ಮ' ಚಿತ್ರೀಕರಣ ನಡೆದಿರುವಾಗಲೇ ನಿರ್ದೇಶಕ ಸೌಂದರರಾಜನ್ ಮನೆಯಲ್ಲಿ ಯಾರೋ ನಿಧನರಾದರೆಂಬ ಕಾರಣದಿಂದ ಆತ ಹಿಂತಿರುಗುವವರೆಗೆ ಚಿತ್ರೀಕರಣ ನಿಂತಿತು. ಹೀಗೆ 'ಮಲ್ಲಮ್ಮ' ನೂರೆಂಟು ಅಡೆ-ತಡೆಗಳನ್ನು ಹಾದು ಬರಬೇಕಾಯಿತು.

ಕನ್ನಡ ಚಿತ್ರರಂಗ ಎಲ್ಲರ ಬಯಕೆಯಂತೆ ನೆಲೆಯೂರಲು ಪ್ರಯತ್ನಿಸಿದರೂ ತೊಡಕುಗಳೇ ಅಧಿಕವಾಗಿದ್ದವು. ಅದಾಗಲೇ ಎರಡು ಚಿತ್ರ ನಿರ್ಮಾಣ ಸ್ಟುಡಿಯೋಗಳಿದ್ದವು. ಅವರೂ ಕೆಲಸವಿಲ್ಲದೆ ಸ್ಥಗಿತವಾದವು. ಹೊರನಾಡಿನಲ್ಲಿ ಚಿತ್ರೀಕರಣ ಮಾಡಿಕೊಂಡು ಬಂದವರಿಗೆ ತೀರಾ ಕಹಿ ಅನುಭವಗಳಾಗಿದ್ದವು. ನಮ್ಮ ನಾಡಲ್ಲೇ ಅವರೆ ಒಳ್ಳೆಯದೆಂದು ಏಕಾಭಿಪ್ರಾಯವಾಗಿತ್ತು.

ನವಜ್ಯೋತಿ, ಮೈಸೂರು ಮೂವಿಟೋನ್‌ಗಳು ಕೆಲಸ ಪ್ರಾರಂಭಿಸುವಷ್ಟರಲ್ಲಿ ೧೯೪೩ರ ಜುಲೈ ೧೬ನೇ ತಾರೀಖು ಕಚ್ಚಾ ಫಿಲಂ ನಿಯಂತ್ರಣ ಜಾರಿಗೆ ಬಂತು. ಅದುವರೆಗೆ ಚಿತ್ರ ನಿರ್ಮಿಸುತ್ತಿದ್ದವರಿಗೆ ಮಾತ್ರ ಕಚ್ಚಾ ಫಿಲಂ ಎಂಬ ನಿಯಮವಾಗಿತ್ತು. ಆ ಹೊತ್ತಿಗೆ ಸೆನ್ಸಾರ್ ಮಾಡಿಕೊಳ್ಳದವರು, ಇನ್ನಿತರರಿಗೆ ಕಚ್ಚಾ ಫಿಲಂ ಇಲ್ಲ. ಎಷ್ಟೇ ಪ್ರಯತ್ನಿಸಿದರೂ ಬ್ರಿಟಿಷ್ ಇಂಡಿಯಾ ಸರ್ಕಾರದವರು ಮೈಸೂರಿನವರಿಗೆ ಗಮನ ಕೊಡಲಿಲ್ಲ. ಸ್ಟುಡಿಯೋ ಒಡೆತನವಿದ್ದ ನಿರ್ಮಾಪಕರಿಗೆ ಮಾತ್ರ ವಿನಾಯಿತಿ ಇತ್ತು. ಮೈಸೂರು, ಇಂಡಿಯಾ ಸರ್ಕಾರಗಳೆರಡೂ ತೋರಿದ ತಾತ್ಸಾರದಿಂದ ಇಲ್ಲಿಯ ಉದ್ಯಮ ನೆಲ ಕಚ್ಚಿತು. ಅನೇಕ ರೀತಿಯ ತಾರತಮ್ಯಗಳಾದವು. ಇದೆಲ್ಲ ಸ್ಥಳೀಯ ಸರ್ಕಾರಗಳು ತೋರಿದ ದಿವ್ಯ ನಿರ್ಲಕ್ಷ್ಯ, ಅಥವಾ ಉದ್ಯಮ ಸರ್ಕಾರಕ್ಕೆ ಸರಿಯಾಗಿ ಮನವರಿಕೆ ಮಾಡಿಕೊಡದಿದ್ದುದರ ಫಲ.

ಹೀಗಾಗಿ ಚಲನಚಿತ್ರ ತಯಾರಿಕಾಸಂಸ್ಥೆ ಮತ್ತು ಲ್ಯಾಬೊರೇಟರಿ ಇರುವ ಸಂಸ್ಥೆಗಳಿಗೆ ಮಾತ್ರ ಕೊಡಕ್ ಕಂಪನಿಯವರು ತಿಂಗಳೊಂದಕ್ಕೆ ೧೦ ಸಾವಿರ ಅಡಿಗಳ ಪಾಸಿಟಿವ್ ಮತ್ತು ಸೌಂಡ್ ಕಚ್ಚಾ ಫಿಲಂ ಕೊಡುವಂತಾಯಿತು. ಇದರಿಂದಾಗಿ ಅನೇಕ ಚಿತ್ರಸಂಸ್ಥೆಗಳು ಕೆಲಸವಿಲ್ಲದೆ ಕುಳಿತವು.

ಈಗಾಗಲೇ ಪ್ರಸ್ತಾಪಿಸಿರುವಂತೆ ಚಿತ್ರಗಳನ್ನು ವೀಕ್ಷಿಸಿ ಪ್ರದರ್ಶನಕ್ಕೆ ಅನುಮತಿ ನೀಡಲು ಒಂದು ಸಮಿತಿಯನ್ನು ರಚಿಸಲಾಗಿತ್ತಷ್ಟೆ. ಇದನ್ನು ಪ್ರಾಂತೀಯ ಸೆನ್ಸಾರ್ ಎನ್ನಬಹುದು. ಚಿತ್ರ ವೀಕ್ಷಿಸಿ ನಿರ್ಧರಿಸಲು ೧೫ ರೂ ಶುಲ್ಕವನ್ನು ವಿಧಿಸಲಾಗುತ್ತಿತ್ತು. ಆದರೆ ಈ ಸೆನ್ಸಾರ್ ಬೋರ್ಡ್ ಎಲ್ಲ ಚಿತ್ರಗಳನ್ನೂ ನೋಡುತ್ತಿರಲಿಲ್ಲ. ಆರು ತಿಂಗಳಿಗೊಮ್ಮೆಯೂ ಈ ಸಮಿತಿ ಸೇರುತ್ತಿರಲಿಲ್ಲವಂತೆ. ಆದರೆ ಜನರು, ಪತ್ರಿಕೆಗಳು ಆಕ್ಷೇಪವೆತ್ತಿದಾಗ ಕಡ್ಡಾಯವಾಗಿ ನೋಡಬೇಕಾಗುತ್ತಿತ್ತು. ಹಾಗೆ ಚಿತ್ರವನ್ನು ನೋಡಿದಾಗ ಆಕ್ಷೇಪಿಸಲಾಗಿದ್ದ ಸನ್ನಿವೇಶ, ಮಾತುಗಳು ಚಿತ್ರದಲ್ಲಿ ಇರುತ್ತಿರಲಿಲ್ಲ. ಅನಂತರ ಅಂಥ ದೃಶ್ಯಗಳನ್ನು ಸೇರಿಸಿ ಪ್ರದರ್ಶಿಸಿದ್ದೂ ಉಂಟಂತೆ. (ಇಂಥ ಆಕ್ಷೇಪಗಳು ೨೧ನೇ ಶತಮಾನದಲ್ಲೂ ಮುಂದುವರಿದಿವೆ)

೧೯೪೪ರಲ್ಲಿ ತಮಿಳಿನ 'ಭರ್ತೃಹರಿ' ತೆರೆಗೆ ಬಂತು. ಕನ್ನಡ ಚಿತ್ರಗಳನ್ನು ನಿರ್ದೇಶಿಸಿದ್ದ ಸುಬ್ರಹ್ಮಣ್ಯಂ ಅವರು ನಿರ್ದೇಶಿಸಿದ್ದರು, ಬಿ.ಜಯಮ್ಮನವರು ಪಾತ್ರ ವಹಿಸಿದ್ದರು. ಈ ಚಿತ್ರದಲ್ಲಿ ಕನ್ನಡಿಗರಿಗೆ, ಕನ್ನಡ ಸಂಸ್ಕೃತಿಗೆ ಅಪಮಾನವಾಗುವಂಥ ದೃಶ್ಯಗಳಿವೆ. ಅಂಥವನ್ನು ಕೂಡಲೇ ತೆಗೆದುಹಾಕಬೇಕು, ಮೈಸೂರು ಸೆನ್ಸಾರ್ ಬೋರ್ಡ್ ಅಲ್ಲಿಯವರೆಗೆ ಇಂಥ ಚಿತ್ರಗಳಿಗೆ ಪ್ರದರ್ಶನಾನುಮತಿ ಕೊಡಕೂಡದು, ಮೈಸೂರು ಸಂಸ್ಥಾನ ಮಾತ್ರವಲ್ಲ, ಹೊರಗಡೆಯೂ ಕನ್ನಡಿಗರನ್ನು ಅವಹೇಳನ

ಮಾಡುವಂಥ ಚಿತ್ರಗಳಿಗೆ ಪ್ರದರ್ಶನಾನುಮತಿ ಕೊಡದು ಎಂದು ಆ ಚಿತ್ರವನ್ನು ನೋಡಿದ ಪ್ರೇಕ್ಷಕರು ತೀವ್ರವಾಗಿ ಪ್ರತಿಭಟಿಸಿದರು.[೧]

ಇದರ ಹಿಂದೆಯೇ 'ವಿಶ್ವೇಶ್ವರ' ಎಂಬ ಹೆಸರಿನಲ್ಲಿ ಪತ್ರಕರ್ತರೊಬ್ಬರು ಬರೆದ ಲೇಖನ ಇಂಥ ವಿಷಯಗಳನ್ನು ಸವಿಸ್ತಾರವಾಗಿ ತಿಳಿಸಿ ದೋಷಗಳಿಗೆ ಕನ್ನಡಿ ಹಿಡಿಯಿತು. 'ಭರ್ತೃಹರಿ', 'ಚೆಂಚುಲಕ್ಷ್ಮಿ' ಚಿತ್ರಗಳಲ್ಲಿ ಕ್ರಮವಾಗಿ ಕನ್ನಡಿಗರನ್ನು ಅಪಮಾನಿಸಿದ, ಅಶ್ಲೀಲ ಅನ್ನಿಸುವ ದೃಶ್ಯಗಳಿರುವ ಸಂಗತಿಗಳಿದ್ದವೆಂದರು. 'ಚೆಂಚುಲಕ್ಷ್ಮಿ' ಚಿತ್ರದಲ್ಲಿ ನರಸಿಂಹಾವತಾರದಲ್ಲಿ ಬಂದ ವಿಷ್ಣು ಅಸುರನನ್ನು ಸಂಹರಿಸಿದ ಮೇಲೆ ಅವನ ಉಗ್ರಾವತಾರವನ್ನು ಶಾಂತಗೊಳಿಸಲು ಚೆಂಚುಲಕ್ಷ್ಮಿಯ ಅವತಾರವಾಗುತ್ತದೆ. ಸ್ನಾನ ಮಾಡುತ್ತಿರುವಾಗ ಆಕೆಯನ್ನು ನೋಡಿದ ನರಸಿಂಹಾವತಾರವು ಮೋಹಗೊಂಡು ಒಂದು ಮೀನಾಗಿ ಪರಿವರ್ತಿತಗೊಂಡು ಆಕೆಯೊಂದಿಗೆ ಸರಸವಾಡುವ ದೃಶ್ಯಗಳನ್ನು 'ಅಶ್ಲೀಲ' ಎಂದು ಹೇಳಲಾಯಿತು. ಇವೆಲ್ಲಕ್ಕಿಂತ ಮಿಗಿಲಾಗಿ 'ಪೃಥ್ವೀವಲ್ಲಭ್' ಎಂಬ ಚಿತ್ರ ಕೆಲವು ವಾರಗಳಿಂದ ಪ್ರದರ್ಶಿತವಾಗುತ್ತಿತ್ತು. ಇದರ ನಿರ್ದೇಶಕರು ಸೊಹ್ರಾಬ್ ಮೋದಿ. ಇದಕ್ಕೆ ಬೊಂಬಾಯಿನ ಕನ್ಹಯ್ಯಾಲಾಲ್ ಮುನ್ಷಿ ಅವರ ಕಾದಂಬರಿ ಆಧಾರವೆಂದೂ, ಇಲ್ಲಿ ಕರ್ನಾಟಕದ ದೊರೆ ಎರಡನೆಯ ತೈಲಪ (ಸತ್ಯಾಶ್ರಯ ಬೆಡಂಗ)ನನ್ನು ತೀರಾ ಅವಹೇಳನಕಾರಿಯಾಗಿ ಚಿತ್ರಿಸಲಾಗಿದೆಯೆಂದೂ ಎಲ್ಲ ವಿವರಗಳನ್ನು ತಿಳಿಸಿ ರನ್ನ ಕವಿಯ ಆಶ್ರಯದಾತನೂ, ಸುಸಂಸ್ಕೃತನೂ, ವೀರನೂ ಆದ ದೊರೆಯನ್ನು ಹೀನಾಯವಾಗಿ ಚಿತ್ರಿಸಲಾಗಿದೆ. ಇಂಥದಕ್ಕೆ ಮೈಸೂರು ಫಿಲಂ ಸೆನ್ಸಾರ್ ಬೋರ್ಡ್ ಹೇಗೆ ಅನುಮತಿ ಕೊಟ್ಟಿತು ? ಎಂದು ವಿಶ್ವೇಶ್ವರ ಪ್ರಶ್ನಿಸಿದ್ದರು. ಈ ಬಗ್ಗೆ ಪತ್ರಿಕೆಗಳು ಅಗ್ರ ಲೇಖನ ಬರೆದವು. ಇಂಥದ್ದೊಂದು ಸಂಗತಿ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನದಲ್ಲಿ ಮೊದಲ ಬಾರಿಗೆ ಚರ್ಚೆಗೆ ಬಂದಿತು. ಅಧಿವೇಶನದಲ್ಲಿ ಸಿನಿಮಾದ ಪ್ರಸ್ತಾಪ ಇದೇ ಪ್ರಥಮ. ಇದನ್ನು ಮಂಡಿಸಿದವರು ಪ್ರತಿನಿಧಿ ಸಭೆ ಸದಸ್ಯರಾದ ಎಂ.ಎನ್.ಜೋಯಿಸ್. (ನೋಡಿ : ಸೆನ್ಸಾರ್ ಲೇಖನ)

ಮೈಸೂರು ಫಿಲಂ ಸೆನ್ಸಾರ್ ಬೋರ್ಡ್ ಸರಿಯಾಗಿ ಕರ್ತವ್ಯ ನಿರ್ವಹಿಸುತ್ತಿಲ್ಲ. 'ಚೆಂಚುಲಕ್ಷ್ಮಿ', 'ಭರ್ತೃಹರಿ', 'ಪೃಥ್ವೀವಲ್ಲಭ್' ಚಿತ್ರಗಳಲ್ಲಿರುವ ಆಕ್ಷೇಪಣೀಯ ಅಂಶಗಳ ಬಗ್ಗೆ ವಿಪರೀತ ವಿವಾದಗಳಾದರೂ ಏನೂ ಕ್ರಮ ಜರುಗಿಸಿಲ್ಲ. ನಾಡು-ನುಡಿಗೆ ಅವಮಾನವಾಗಿರುವುದನ್ನು ಸಹಿಸಲಾಗದು ಎಂದು ಜೋಯಿಸರು ಸಭೆಯಲ್ಲಿ ವಾದಿಸಿದರು.

ಅಲ್ಲದೆ ಇದೇ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಅಧಿವೇಶನ ಕಾಲದಲ್ಲಿ ಬಜೆಟ್ ಭಾಷಣದಲ್ಲಿ ಚಲನಚಿತ್ರ ಕುರಿತ ಚರ್ಚೆ, ಚಿತ್ರೋದ್ಯಮಕ್ಕೆ ಪ್ರೋತ್ಸಾಹ ಕೊಡಬೇಕೆಂದು ಕೂಡಾ ಪ್ರಸ್ತಾಪಿಸಲಾಯಿತು. ೧೯೪೪ನೇ ಜೂನ್ ತಿಂಗಳಲ್ಲಿ ನಡೆದ ಮಹತ್ವದ ಸಂಗತಿಗಳಲ್ಲಿ ಈ ಅಂಶ ತುಂಬ ಮುಖ್ಯವಾದುದು.

ಈ ವಾದ-ವಿವಾದಗಳ ಪರಿಣಾಮವಾಗಿ, ಎಂ.ಎನ್.ಜೋಯಿಸ್ ಅವರು ಎತ್ತಿದ್ದ ಪ್ರಶ್ನೆಗಳ ಹಿನ್ನೆಲೆಯಲ್ಲಿ ಸರ್ಕಾರ ಎಚ್ಚೆತ್ತು ಚಿತ್ರಪ್ರದರ್ಶನಕ್ಕೆ ಅನುಮತಿ ನೀಡಲು ಹೊಸ ನಿಯಮಾವಳಿ ಮಾಡಲು ತೀರ್ಮಾನಿಸಿತು. ಮೈಸೂರು ಸಂಸ್ಥಾನದಲ್ಲಿ ಪ್ರದರ್ಶನಕ್ಕೆ ಬರುವ ಎಲ್ಲ ಚಿತ್ರಗಳನ್ನೂ ಈ ಪರಿಶೀಲನಾ ಮಂಡಳಿ ನೋಡಬೇಕು. ಬ್ರಿಟಿಷ್ ಇಂಡಿಯಾದವರು ಕೊಟ್ಟ ಅನುಮತಿಯೇ ಸಾಕೆಂದು ಸುಮ್ಮನಿರಕೂಡದು. ಪದೇ ಪದೇ ಮಂಡಳಿ ಸಭೆ ಸೇರಬೇಕು, ಸೆನ್ಸಾರ್ ಮಂಡಳಿ ತೆಗೆದು ಹಾಕಿದ ಭಾಗವನ್ನು ಮತ್ತೆ ಸೇರಿಸಿ ಪ್ರದರ್ಶಿಸದ ಹಾಗೆ ನಿಯಮಾವಳಿ ತರಬೇಕೆಂದೂ ಒತ್ತಾಯಿಸಲಾಯಿತು. ಹೀಗಾಗಿ ಹೊಸ ನಿಯಮಾವಳಿಗಳನ್ನು ರಚಿಸಿ, ಪ್ರತಿ ಆರು ತಿಂಗಳಿಗೊಮ್ಮೆ ಸರ್ಕಾರಕ್ಕೆ ವರದಿ ಸಲ್ಲಿಸಬೇಕು ಎಂದಿತು. ಜೊತೆಗೆ ಫಿಲ್ಮ್ ಪರೀಕ್ಷಣಾ ಶುಲ್ಕವನ್ನೂ ಹೆಚ್ಚಿಸಿತ್ತು. ಈ ಹದಿನೈದು ರೂಪಾಯಿ ಶುಲ್ಕವನ್ನು ತೆರುವುದಕ್ಕೂ ವಿರೋಧ ವ್ಯಕ್ತಪಡಿಸಿತ್ತು ಉದ್ಯಮ. ಒಟ್ಟಾರೆ ತಾರೀಖು ೧೯೪೪ರ ಜುಲೈ ೧ರಂದು ಈ ಹೊಸ ನಿಯಮಾವಳಿಯನ್ನು ರಚಿಸಲಾಯಿತು. 'ಹಮಾರಾ ದೇಶ್' ಬೊಂಬಾಯಿಯ ಮೋಹನ್ ಪಿಕ್ಚರ್ಸ್‌ರವರ ತಯಾರಿಕೆ. ಬೊಂಬಾಯಿಯಲ್ಲಿ ಅನುಮತಿ ಸಿಕ್ಕರೂ ಮೈಸೂರು ಸಿನಿಮಾಟೊಗ್ರಾಫಿ ಆ್ಯಕ್ಟ್ ಪ್ರಕಾರ ಆ ಚಿತ್ರ ಇಲ್ಲಿ ಪ್ರದರ್ಶನ ಯೋಗ್ಯವಲ್ಲ ಎಂದು ಮೈಸೂರು ಸರ್ಕಾರ ಆಜ್ಞೆ ಮಾಡಿತ್ತು.

ಇದೇ ವೇಳೆಗೆ ಬಂಗಾಳದ ಶಾಸನ ಸಭೆಯಲ್ಲಿ ಚಿತ್ರಮಂದಿರಗಳ ಬಗ್ಗೆ ಚರ್ಚಿಸಿ ಕೆಲವು ತೀರ್ಮಾನ ತೆಗೆದುಕೊಂಡುದನ್ನು ಕುರಿತು ಎಂ.ಕೆ.ಮೂರ್ತಿ ಎಂಬುವವರು ಪ್ರಸ್ತಾಪಿಸಿ ನಮಗೂ ಇವು ಅನ್ವಯಿಸುತ್ತವೆ ಎನ್ನುತ್ತ ಕೆಲವು ಮುಖ್ಯಾಂಶಗಳನ್ನು ಕೊಟ್ಟರು ಮತ್ತು ಇವು ಇಲ್ಲಿಯೂ ಕಟ್ಟುನಿಟ್ಟಾಗಿ ಪಾಲಿಸುವಂಥ ಶಾಸನಗಳು ಎಂದು ಒತ್ತಾಯಿಸಿದರು.

ಚಿತ್ರಮಂದಿರದಲ್ಲಿ ಧೂಮಪಾನ ನಿಷೇಧಿಸಬೇಕು. ಸಾರ್ವಜನಿಕರ ಆರೋಗ್ಯದ ದೃಷ್ಟಿಯಿಂದ ಇದು ಮುಖ್ಯ. ಪ್ರತಿ ಪ್ರದರ್ಶನದ ಅನಂತರ ಚಿತ್ರಮಂದಿರವನ್ನು ಗುಡಿಸಬೇಕು, ಕ್ರಿಮಿನಾಶಕ ಬೆರೆಸಿದ ನೀರಿನಿಂದ ತೊಳೆಯಬೇಕು. ಚೊಕ್ಕಟವಾದ ಶೌಚಾಲಯಗಳಿರಬೇಕು. ಪ್ರತಿ ಪ್ರದರ್ಶನದ ನಂತರ ಅವನ್ನು ಸ್ವಚ್ಛಗೊಳಿಸಬೇಕು. ಪ್ರೇಕ್ಷಕರೂ ಗಲೀಜು ಮಾಡುತ್ತಾರಾದ್ದರಿಂದ ಸ್ಯಾನಿಟರಿ ಪೊಲೀಸರನ್ನಿಟ್ಟು ಅವರಲ್ಲಿ ಶುಚಿಯ ಅರಿವನ್ನುಂಟುಮಾಡಬೇಕು. ಚಿತ್ರಮಂದಿರದ ಮಾಲೀಕರು ಕೂಡಾ ವ್ಯಾಪಾರಿಗಳನ್ನು ಒಳಗೆ ಬಿಡಬಾರದು, ಸೀಟುಗಳಿರುವಷ್ಟೇ ಟಿಕೆಟ್‌ಗಳನ್ನು ಮಾರಬೇಕು. ಚಲನಚಿತ್ರ ಪ್ರದರ್ಶನಕ್ಕೆ ಸಂಬಂಧಿಸಿದ ಕಾನೂನುಗಳು ರಚಿತವಾಗಿ ಬಹಳ ವರ್ಷಗಳಾಗಿವೆ, ಬದಲಾಗುತ್ತಿರುವ ಸಂದರ್ಭದಲ್ಲಿ ಹೊಸ ಸಮಸ್ಯೆಗಳು ಹುಟ್ಟಿಕೊಳ್ಳುವುದರಿಂದ ಈ ಕಾನೂನುಗಳ ತಿದ್ದುಪಡಿಯಾಗಬೇಕು ಎಂಬ ಸಲಹೆಗಳನ್ನು ಮುಂದಿಟ್ಟರು.

ಇಂಥದೊಂದು ಒತ್ತಾಯ ಬರುವುದರ ಹಿಂದೆ ಚಿತ್ರಮಂದಿರಗಳ ಕೆಲವು ಅಕೃತ್ಯಗಳೂ ಕಾರಣ ಎನ್ನಬಹುದಾಗಿದೆ. ಚಿತ್ರಮಂದಿರ ಭರ್ತಿ ಇದೆ ಎಂದು ಹೇಳಿ ಪ್ರೇಕ್ಷಕರನ್ನು ಹಿಂದಕ್ಕೆ ಕಳುಹಿಸುವಂತೆ ಮಾಡುವುದರಿಂದ ಬೇಡಿಕೆ ಬಹಳ ಇದೆ ಎಂಬ ಪ್ರಚಾರ ಸಿಗುತ್ತದೆಂಬ ಹುನ್ನಾರ, ತರಗತಿ ಭರ್ತಿ ಎಂದು ಹೇಳಿ ಕಡಿಮೆ ಬೆಲೆ ಟಿಕೆಟನ್ನು ಕೊಡದೆ ಹೆಚ್ಚಿನ ಬೆಲೆಯ ಬಾಲ್ಕನಿ ಟಿಕೆಟ್ ಮಾರುವುದು ಇತ್ಯಾದಿಗಳೂ ನಡೆಯುತ್ತಿದ್ದವು.

ಸಮಸ್ಯೆಗಳು ಎಲ್ಲ ಕಡೆ ಇದ್ದುವು. ಅತ್ತ ಪ್ರೇಕ್ಷಕರ ದೂರುಗಳಾದರೆ ಇತ್ತ ಚಿತ್ರಮಂದಿರದವರ ಸಮಸ್ಯೆಗಳೂ ಕಡಮೆಯೇನಲ್ಲ. ಚಿತ್ರಮಂದಿರಕ್ಕೆ ಅನುಮತಿ ಸಿಗುವುದೇ ಕಷ್ಟವಿತ್ತು. ಕೆಂಪೇಗೌಡ ರಸ್ತೆಯಲ್ಲಿ ಚಿತ್ರಮಂದಿರ ಕಟ್ಟಲು ಅನುಮತಿ ಸಿಕ್ಕಿತ್ತು. ಕಟ್ಟಡವೂ ಸಿದ್ಧವಾಯಿತು. ಕೆಲವು ಅಧಿಕಾರಿಗಳು ಸಿನಿಮಾಗಿಂತ ಇದೇ ಮುಖ್ಯವೆಂದು, ಧಾನ್ಯದ ಮೂಟೆ ತುಂಬುವ ಗೋಡೌನ್ ಮಾಡಲು ಒತ್ತಾಯಿಸಿದ ಪ್ರಸಂಗವಿತ್ತು. ಇಂಥವನ್ನೆಲ್ಲ ಪ್ರತಿಭಟಿಸಬೇಕಾದ ಸಂದರ್ಭಗಳವು.

ಇದೇ ರೀತಿ ಬೆಳಗಾವಿಯಲ್ಲೂ ಆಗಿತ್ತು. ಹಳೆಯ ಚಿತ್ರಮಂದಿರವೊಂದನ್ನು ಪುನರ್‌ನಿರ್ಮಾಣ ಮಾಡಿದ್ದರು. 'ಡಿಫೆನ್ಸ್ ಆಫ್ ಇಂಡಿಯಾ' ಶಾಸನದ ಅನ್ವಯ ಅದನ್ನು ಗೋಡೌನ್ ಮಾಡಲಾಯಿತು. ಈ ಬಗ್ಗೆ ವಿವರವಾಗಿ ಹೇಳಿ 'ಇಂಥ ಆಜ್ಞೆ ರದ್ದುಗೊಳಿಸಿ' ಎಂದು ಮಾಲೀಕರು ಅರ್ಜಿ ಹಾಕಿಕೊಂಡ ಮೇಲೆ ಮೇಲಿನ ಅಧಿಕಾರಿಗಳು ಕೆಳಗಿನ ಅಧಿಕಾರಿಯ ಈ ಆಜ್ಞೆಯನ್ನು ರದ್ದು ಮಾಡಿದರು. ಚಿತ್ರಮಂದಿರ ಚಿತ್ರಗಳನ್ನು ಪ್ರದರ್ಶಿಸತೊಡಗಿತು. ಇಂಥ ಅನೇಕ ಸಮಸ್ಯೆಗಳನ್ನು ಪ್ರೇಕ್ಷಕ-ಚಿತ್ರಮಂದಿರದ ಮಾಲೀಕ ಇಬ್ಬರೂ ಎದುರಿಸಬೇಕಾಗಿತ್ತು. ಅವು ಪ್ರಾರಂಭದ ದಿನಗಳಲ್ಲವೆ ?

ದಕ್ಷಿಣ ಭಾರತ ಫಿಲಂ ಚೇಂಬರ್ ಪ್ರಾರಂಭವಾಗಿ ಸುಮಾರು ಐದು ವರ್ಷವೇ ಆದರೂ ಇತರರ ಬಗ್ಗೆ ಆಸಕ್ತಿ ತೋರಲಿಲ್ಲ, ಕೆಲಸ ಮಾಡಲಿಲ್ಲ. ಇವರಿಂದಾಗಿ ಹೈದರಾಬಾದ್ ಸಂಸ್ಥಾನದಲ್ಲಿ ಪ್ರತ್ಯೇಕವಾಗಿ ಫಿಲಂ ಚೇಂಬರ್ ಪ್ರಾರಂಭಿಸಿದರು. ಇದೇ ಮಾದರಿಯಲ್ಲಿ ಮೈಸೂರು ಸಂಸ್ಥಾನಕ್ಕಾಗಿ ಬೆಂಗಳೂರಿನಲ್ಲಿ ಫಿಲಂ ಚೇಂಬರ್ ಪ್ರಾರಂಭಿಸುವ ಸಿದ್ಧತೆ ನಡೆಯಿತು. ಇದಕ್ಕೆ ಸರ್ಕಾರದ ರಹದಾರಿಯೂ ಸಿಗುವುದು ಖಚಿತವಿತ್ತು. ಮೆಮೊರಾಂಡಂ ಆಫ್ ಅಸೋಸಿಯೇಷನ್‌ನ ರಚನೆಯಲ್ಲಿ ಒಂಬತ್ತಕ್ಕೂ ಹೆಚ್ಚು ಉದ್ದೇಶಗಳನ್ನು ರೂಪಿಸಲಾಗಿತ್ತು. ಮುಖ್ಯವಾಗಿ : ೧. ಮೈಸೂರು ಸಂಸ್ಥಾನದಲ್ಲಿ ಚಲನಚಿತ್ರ ಕೈಗಾರಿಕೆಯನ್ನು ಬೆಳೆಸುವುದು, ಪೋಷಿಸುವುದು. ೨. ಚಲನಚಿತ್ರ ಕೈಗಾರಿಕೆ ಹಾಗೂ ಅದಕ್ಕೆ ಸಂಬಂಧಿಸಿದವರ ಹಿತರಕ್ಷಣೆ ಮಾಡುವುದು. ೩. ಮಾರಾಟ, ಹಂಚಿಕೆ, ಪ್ರದರ್ಶನಗಳಿಗೆ ವಾಣಿಜ್ಯದ ಹಿತರಕ್ಷಣೆ ಸಿಗಬೇಕು.

ಇದಕ್ಕೆ ಹಲವು ಬಗೆಯಲ್ಲಿ ಪ್ರತಿಕ್ರಿಯೆಗಳಿದ್ದವು. ಎಲ್ಲಕ್ಕೂ ಮುಖ್ಯವಾಗಿ ಇಂಡಿಯಾ ಸರ್ಕಾರದ ಕೃಪೆ ಬೇಕು. ಅವರು ಕಚ್ಚಾ ಫಿಲಂ ಕೊಡಿಸದೆ ಚಿತ್ರ ನಿರ್ಮಾಣವೇ ಸಾಧ್ಯವಿಲ್ಲ. ಮೊದಲು ಇಲ್ಲಿ ನಿರ್ಮಾಣವೇ ಇರಲಿಲ್ಲ. ಆದರೆ ಆಗಷ್ಟೇ ಸ್ಥಾಪಿತವಾದ ಸ್ಟುಡಿಯೋಗಳು, ಚಿತ್ರ ನಿರ್ಮಾಣದಲ್ಲಿ ಆಸಕ್ತಿ ಇರುವವರಿಗೇ ಅನುಮತಿ ಸಿಗುತ್ತಿಲ್ಲ. ಇನ್ನು ಚೇಂಬರ್‌ನಂತಹ ಸಂಸ್ಥೆಯಲ್ಲಿ ಕನ್ನಡೇತರರು (ನಮ್ಮವರಲ್ಲದ)

೧. 'ಹೆದ್ದ' ಎಂಬ ಪದಕ್ಕೆ ತಮಿಳಿನಲ್ಲಿ 'ಶುದ್ಧ ಕರ್ನಾಟಕಂ' ಎಂಬ ಪದದ ಪ್ರಯೋಗವಿದೆ. ಇದೇ ವಿವಾದಕ್ಕೆ ಕಾರಣ.

ಸದಸ್ಯರಾದರೆ ಏನಾಗಬಹುದು ? ಇವರು ಕನ್ನಡ ಚಿತ್ರೋದ್ಯಮದ ಹಿತ ಕಾಯುತ್ತಾರೆಯೆ ? ಬಹುತೇಕ ನಮ್ಮವರಲ್ಲದವರ ಕೈಯಲ್ಲೇ ವಹಿವಾಟು ಇರುವಾಗ ನಮಗೆಷ್ಟು ಅನುಕೂಲವಾದೀತು ? ಎಂಬ ಪ್ರಶ್ನೆಗಳಿದ್ದವು. ಆದೇ ತಾನೇ ಫಿಲಂ ಸೆನ್ಸಾರ್ ಬೋರ್ಡ್‌ನ ಸರ್ಟಿಫಿಕೇಟು ಪಡೆಯುವವರಿಂದ ಪ್ರತಿ ಸಾವಿರ ಅಡಿಗೆ ೧೫ ರೂ.ನಂತೆ ತೆರಿಗೆ ಕೇಳಲಾಗಿತ್ತು. ಇದು ಅನೇಕರಿಗೆ ಒಪ್ಪಿಗೆಯಾಗಲಿಲ್ಲ. ಆ ತೆರಿಗೆಯನ್ನು ಕೈ ಬಿಡಿ ಅಂದಾಗ ಕೆಲವರು ''ಎಲ್ಲ ಹೊರಗಿನವರು, ಇಷ್ಟು ಹಣ ಮಾಡುವಾಗ ನಾಲ್ಕು ಕಾಸು ಕೊಡಲಿ ಬಿಡಿ'' ಅಂದರು. ಇದೆಲ್ಲ ನೋಡಿದಾಗ ಈ ಭೇದ ಬಿಟ್ಟು, ಅನ್ಯೋನ್ಯಕ್ಕೆ ಧಕ್ಕೆ ಬರದ ಹಾಗೆ ನಡೆದು ಕೊಂಡಾರೇ ಎಂಬ ಸಂದೇಹದ ಜೊತೆ ಹಿತವಚನವನ್ನು ಹೇಳಿದ ಒಂದು ವರ್ಗವೂ ಇತ್ತು.

ಒಟ್ಟಾರೆ ಮೈಸೂರು ಫಿಲಂ ಚೇಂಬರ್‌ಗೆ ಇಲ್ಲಿಯವರ ರಕ್ಷಣೆ ಮುಖ್ಯವಾಗಬೇಕು, ಕನ್ನಡೇತರರ ಮೈ ಕಾಯಬೇಕಿಲ್ಲ ಎಂಬ ಧ್ವನಿಯೇ ದೊಡ್ಡದಾಗಿತ್ತು.

೧೯೪೪ರಲ್ಲಿ ಶಾಂತಾ ಪಿಕ್ಚರ್ಸ್ ಸಂಸ್ಥೆ ಪ್ರಾರಂಭವಾಯಿತು. ಕರ್ನಾಟಕ ಪಿಕ್ಚರ್ಸ್ ಲಿಮಿಟೆಡ್ ಹಾಗೆಯೇ ಕನ್ನಡ ಚಿತ್ರಗಳಿಗೆ ನೆರವಾದ ಸಂಸ್ಥೆ. ಬಹುತೇಕ ಮಹಾತ್ಮಾ ಸಂಸ್ಥೆಯ ಚಿತ್ರಗಳನ್ನು ವಿತರಿಸಿತು. ಈ ಸಂಸ್ಥೆ ಒಂದು ಅರ್ಥದಲ್ಲಿ, ಅನಂತರ ಹಲವು ಸಂಸ್ಥೆಗಳು ಹುಟ್ಟಿ ಕನ್ನಡ ಚಿತ್ರಗಳ ನೆರವಿಗೆ ಬರುವ ಪರಂಪರೆಯನ್ನು ಬೆಳೆಸಿತು ಎನ್ನಬಹುದು.

ಆ ದಿನಗಳಲ್ಲಿ ಚಲನಚಿತ್ರದ ಆಕರ್ಷಣೆಯೇ ವಿಚಿತ್ರ. ಎಲ್ಲವೂ ಹೊಸದು. ಬೇಡವಾದ ಫಿಲಂಗಳನ್ನು ಬಳಸಿ ಮಾಡಿದ ಕೈ ಚೀಲಗಳು, ಮನಿ ಪರ್ಸ್‌ಗಳು ಮತ್ತಿತರ ವಸ್ತುಗಳು ಎಲ್ಲೆಡೆ ಮಾರಾಟವಾಗತೊಡಗಿದವು. ನಿರ್ದೇಶಕ ಕೆ.ಸುಬ್ರಹ್ಮಣ್ಯಂ ಈ ಕುರಿತು ಒಂದು ಸುದೀರ್ಘ ಹೇಳಿಕೆ ನೀಡಿದರು : ''...ಈ ಫಿಲಂ ಒಂದು ಸಣ್ಣ ಕಿಡಿ ಬಿದ್ದರೂ ಹತ್ತಿ ಉರಿಯುತ್ತದೆ. ಈ ಉರಿಯುವ ಫಿಲಂ ಅನ್ನು ನೀರಿಗೆ ಹಾಕಿದರೂ ಆರುವುದಿಲ್ಲ. ಮಕ್ಕಳು ಮರಿಗಳಿಗೆ ಇಂಥ ಪದಾರ್ಥದಿಂದ ಮಾಡಿದ ಚೀಲ ಇತ್ಯಾದಿಗಳನ್ನು ಕೊಡಬಾರದು. ಅದು ಅಪಾಯಕಾರಿ. ಈ ಬಗ್ಗೆ ಜನರಿಗೆ ತಿಳಿದಿಲ್ಲವಾದ್ದರಿಂದ ಎಷ್ಟೋ ದುರಂತಗಳು ಸಂಭವಿಸಿವೆ. ಅನುಪಯೋಗಿ ಫಿಲಂಗಳನ್ನು ಮಾರುವವರು, ಕೊಳ್ಳುವವರು ಇಬ್ಬರನ್ನೂ ನಿಷೇಧಿಸಬೇಕು. ಅವನ್ನು ಬಳಸಿ ಪದಾರ್ಥ ಮಾಡಿ ಮಾರುವವರು-ಕೊಳ್ಳುವವರಿಗೆ ಎಚ್ಚರಿಕೆ ಕೊಡಬೇಕು. ಇದೆಲ್ಲ ಪೊಲೀಸ್ ಕಮಿಷನರ್ ಮೊದಲು ತೆಗೆದುಕೊಳ್ಳಬೇಕಾದ ತೀರ್ಮಾನ. ನಿರ್ಲಕ್ಷಿಸಿ ಇಂಥ ವ್ಯವಹಾರ ಮುಂದುವರೆದರೆ ಬಹು ದೊಡ್ಡ ಅಪಾಯವಿದೆ. ಮೈಸೂರು ಸರ್ಕಾರ ಕೂಡಾ ಈ ಬಗ್ಗೆ ಗಮನ ಹರಿಸಬೇಕು. ಈಚೆಗೆ ಈ ಬಗೆಯ ವ್ಯಾಪಾರ ಬಹಳವಾಗುತ್ತಿದೆ....'' ಈ ಹೇಳಿಕೆ, ಒತ್ತಾಯಗಳು ಜನರನ್ನು ಬಹುದೊಡ್ಡ ಅಪಾಯದಿಂದ ತಪ್ಪಿಸಿದವು. ಕ್ರಮೇಣ ಫಿಲಂನಿಂದ ಮಾಡಿದ ಪದಾರ್ಥಗಳ ಬಳಕೆ ನಿಂತಿತು.

೧೯೪೪ನೇ ಸೆಪ್ಟೆಂಬರ್ ತಿಂಗಳಿನಲ್ಲೇ ಮೈಸೂರು ಸಂಸ್ಥಾನದ ಚಲನಚಿತ್ರ ನಿರ್ಮಾಪಕರ ಸಂಘ ಪ್ರಾರಂಭವಾಗಿತ್ತು. ಚಿತ್ರ ನಿರ್ಮಾಣದಲ್ಲಿರುವ ತೊಂದರೆಗಳನ್ನು ಪರಿಹರಿಸಿಕೊಳ್ಳಲು, ಉದ್ಯಮವನ್ನು ಬೆಳೆಸಲು ಇದು ಅಗತ್ಯವೆಂದು ತೋರಿದ್ದರಿಂದ ಈ ತೀರ್ಮಾನ. ಆದರೆ ಉದ್ದೇಶ ಈಡೇರಬೇಕಾದರೆ ನಿರ್ಮಾಪಕರೆಲ್ಲರೂ ಸದಸ್ಯರಾಗಬೇಕು. ಹೆಚ್ಚೆಂದರೆ ೨೦ ಮಂದಿ ನಿರ್ಮಾಪಕರಿರಬಹುದು. ಇಂಥ ಸಂಘಟನೆಯ ಹಿಂದೆ ರಾಷ್ಟ್ರಹಿತಕ್ಕೆ ಸಂಬಂಧಿಸಿದ ಕೆಲಸ ಮಾಡುವ ಮಹತ್ವಾಕಾಂಕ್ಷೆ ಇತ್ತು. ಹಿರಿದಾದ ಕೆಲಸವಿದು ಅನ್ನಿಸಿತ್ತು. ಈ ಉದ್ದೇಶಗಳು ಈಡೇರಬೇಕಾದರೆ ಇಂಡಿಯಾ ಸರ್ಕಾರದೊಡನೆ ಮೈಸೂರು ಸರ್ಕಾರ ಮಾತುಕತೆ ನಡೆಸಬೇಕು. ಇತರ ಪ್ರದೇಶಗಳ ನಿರ್ಮಾಪಕರಿಗೆ ಒದಗಿಸಿರುವ ಸೌಕರ್ಯಗಳನ್ನು ಒದಗಿಸುವಂತೆ ಒತ್ತಾಯಿಸಬೇಕು ಎಂಬ ಸೂಚನೆಗಳೂ ಬಂದವು. ಚಿತ್ರೋದ್ಯಮ ಈಗೀಗ ಹಲವರ ಕಣ್ಣಿಗೆ ವಿಶೇಷವಾಗಿ ಕಾಣತೊಡಗಿತ್ತು. ಮಾಧ್ಯಮ ವಿಶೇಷವೂ ಇದ್ದುದರಿಂದ ಅದರ ಎಲ್ಲ ಆಗು-ಹೋಗುಗಳನ್ನು ಪ್ರತ್ಯೇಕ ಆಸಕ್ತಿಯಿಂದ ನೋಡುತ್ತಿದ್ದರು. ಸಹಜವಾಗಿಯೇ ನಟ-ನಟಿಯರ ದೈನಂದಿನ ಚಟುವಟಿಕೆ, ಸ್ವಭಾವ ಕುರಿತು ಟೀಕೆಗಳು ಬರತೊಡಗಿದವು.

ವಾಕ್ಚಿತ್ರ ಪ್ರಾರಂಭವಾದ ಹೊಸತಿನಲ್ಲೇ ಹಾರ್ಮೋನಿಯಂ ಶೇಷಗಿರಿರಾಯರು ''...ಯಾವತ್ತು ಸಿನಿಮಾದಲ್ಲಿ ಲೇಡೀಸ್ ಇಂಟ್ರೊಡ್ಯೂಸ್ ಆಯ್ತೊ, ಅಂದಿನಿಂದ ಪಿಕ್ಚರ್ ಲೈನ್ ಕೆಟ್ಟು ಹೋಯಿತು...'' ಎಂದಿದ್ದರು. ಆದರೆ ಚಲನಚಿತ್ರಕ್ಕೆ ಸ್ತ್ರೀಯರೇ ಪ್ರಧಾನ ಆಕರ್ಷಣೆಯಾದದ್ದಂತೂ ನಿಜ. ಟೀಕೆಗಳು ಬಂದಾಗೆಲ್ಲ ಪ್ರತ್ಯುತ್ತರಗಳೂ ಬರುತ್ತಿದ್ದವು. ಪ್ರಸಿದ್ಧ ಪತ್ರಕರ್ತ ಬಾಬುರಾವ್ ಪಟೇಲ್ ಅವರ ಇಂಥ ಟೀಕೆಯೊಂದಕ್ಕೆ ಉತ್ತರಿಸಿದ ಓದುಗರೊಬ್ಬರು ಸ್ತ್ರೀ-ಪುರುಷರು ಒಂದೆಡೆ ಸೇರಿ ಕೆಲಸ ಮಾಡಿದಾಕ್ಷಣಕ್ಕೆ ಇಂಥ ಪ್ರಸಂಗಗಳು ಬರುವುದಿಲ್ಲ. ಒಟ್ಟಾಗಿದ್ದಾಗಲೂ ಶಿಸ್ತು-ಸಂಯಮ ಇಲ್ಲದಾಗ ಅಸಂಗತಗಳು ಏರ್ಪಡಬಹುದು. ಅಭಿನಯದ ಕಾರಣ ಅತಿ ಸಾಮೀಪ್ಯ ಉಂಟಾಗುವುದರಿಂದ ಕೆಲವರಲ್ಲಿ ಆಕರ್ಷಣೆಯ ಭಾವ ಉಂಟಾಗಲೂ ಬಹುದು. ಹಾಗಾದಾಗಲೂ ವಿವಾಹದಲ್ಲಿ ವಿವಾಹೇತರ ಸಂಬಂಧದಲ್ಲಿ ಪರ್ಯಾವಸನವಾದೀತೇ ವಿನಹ ಬೀದಿಗಳಲ್ಲಿ ಅಸಭ್ಯವಾಗಿ ಯಾರೂ ವರ್ತಿಸುವುದಿಲ್ಲ ಎಂದರು. ಹೀಗೆ ಚಿತ್ರ ವಿಚಿತ್ರ ವಾದಗಳು-ಪ್ರತಿವಾದಗಳು ನಡೆದಿವೆ. ಅಂದಿನಿಂದಲೂ ಈ ೨೧ನೇ ಶತಮಾನದವರೆಗೂ ದೃಶ್ಯ ಮಾಧ್ಯಮಗಳಲ್ಲಿ ದುಡಿಯುವ ಸ್ತ್ರೀಯರನ್ನು ಗೌರವದಿಂದ ಕಂಡುದೇ ಅಪರೂಪ. ಚಲನಚಿತ್ರ ಪತ್ರಿಕೆಗಳೂ ಕಲಾವಿದೆಯರನ್ನು ತೀರಾ ಕೆಳ ಮಟ್ಟದಲ್ಲಿಟ್ಟು ಚರ್ಚಿಸುವುದು ವಾಡಿಕೆ. ಇಂಥ ಅನೇಕ ಉದಾಹರಣೆಗಳನ್ನು ಕೊಡಬಹುದಾಗಿದೆ.

ಚಲನಚಿತ್ರಗಳಲ್ಲಿ ಚುಂಬನದ ಸಂಗತಿಯೇ ಒಂದು ವಿಶೇಷ ಸಂಗತಿಯಾಗಿತ್ತು. ಮೊದಲಿಗರಾರೆಂಬ ಮೂಲ ಹುಡುಕಿದ್ದೂ ಉಂಟು.

'ಪಹಲಿ ಮಂಗಲ ಗೌರ್' (೧೯೪೩) ಮರಾಠಿ ಚಿತ್ರದಲ್ಲಿಯ ಚುಂಬನ ದೃಶ್ಯವೇ ಮೊದಲನೆಯದೆಂದೂ, ಚುಂಬನ ದೃಶ್ಯದಲ್ಲಿ ಭಾಗವಹಿಸಿದ ಮೊದಲ ಭಾರತೀಯ ಕಲಾವಿದರು ಸಾಹುಮೋದಕ್ ಮತ್ತು ಸ್ನೇಹಪ್ರಭಾ ಪ್ರಧಾನ್ ಎಂದೂ, ದಕ್ಷಿಣ ಭಾರತದ ತಮಿಳಿನಲ್ಲಿ ಮೊದಲು ಚುಂಬನ ಇರುವ ಚಿತ್ರ 'ಪವಳಕ್ಕೊಡಿ' ತಯಾರಾಯಿತೆಂದೂ ಎಂ.ಕೆ.ತ್ಯಾಗರಾಜ ಭಾಗವತರ್, ಎಸ್.ಡಿ.ಸುಬ್ಬಲಕ್ಷ್ಮಿ ಚುಂಬಿತರೆಂದೂ ಪತ್ರಿಕೆಗಳು ರಂಜನೀಯವಾಗಿ ಬರೆಯುತ್ತಿದ್ದವು. ಇದಕ್ಕೆ ಕನ್ನಡದ ಪತ್ರಿಕೆಗಳೇನೂ ಹಿಂದೆ ಬೀಳಲಿಲ್ಲ. ಪ್ರಾಯಶಃ ಅದೇ ಅವರ ವ್ಯಾಪಾರದ ತಂತ್ರವೂ ಇರಬಹುದು. ಒಟ್ಟಾರೆ ಚಿತ್ರರಂಗದಲ್ಲಿ ಅಭಿನೇತ್ರಿಯರಿಗೆ ಗೌರವದಿಂದ ವೃತ್ತಿ ನಿರ್ವಹಿಸುವುದು ಬಹು ಕಷ್ಟವಿತ್ತು.

'ವಾಕ್ಚಿತ್ರ'ದ ಹಲವು ಸಂಚಿಕೆಗಳಲ್ಲಿ ಉದ್ಯಮದ ಬಗ್ಗೆ ಪರ-ವಿರೋಧ ಅಭಿಪ್ರಾಯ, ಪ್ರತಿಕ್ರಿಯೆಗಳು ಪ್ರಕಟವಾದವು. ಆಕ್ಷೇಪಗಳು ನಿರ್ಮಾಪಕರನ್ನೂ ಬಿಡಲಿಲ್ಲ. ಚಿತ್ರೋದ್ಯಮ ಬೆಳೆಯದಿರಲು ಕಾರಣ ನಿರ್ಮಾಪಕರೇ ಎಂದರು, ಮತ್ತು ಚಿತ್ರ ತಯಾರಿಸಲು ಬರುವವರೆಲ್ಲ ಕಲೆಗಾರರಲ್ಲ, ಕಲಾದೇವಿಯನ್ನು 'ಬಂಗಾರ'ದವಳನ್ನಾಗಿ ಮಾಡಿಕೊಳ್ಳಲು ಯತ್ನಿಸುವವರು. ಆದರಿಂದ ಕಲೆಯು ಕೊಲೆಯಾಗಿದೆ ಎಂಬ ಆಕ್ಷೇಪಕ್ಕೆ ಅಷ್ಟೇ ತೀವ್ರವಾಗಿ ಪ್ರತಿಕ್ರಿಯಿಸಲಾಯಿತು.

'ಧ್ರುವಕುಮಾರ' ಮೊದಲಾದ ಚಿತ್ರ ಮಾಡಿದವರು ಕಲೆಗಾರರಲ್ಲವೆ ? ಅಪಾರ ಹಣ ಬೇಡುವ ಈ ಉದ್ಯಮಕ್ಕೆ ಬಂಡವಾಳಗಾರನೇ ಬೇಕು. ಹಾಕಿದ ಹಣ ಹಿಂದೆ ಪಡೆಯುವ ಇಚ್ಛೆಯಲ್ಲಿ ತಪ್ಪೇನಿದೆ ? ಜನ ನೋಡುವುದಾದರೆ ಉದ್ಯಮ ಬೆಳೆಯುತ್ತಿತ್ತು ಎಂದುದಲ್ಲದೆ ದ್ರೋಹಿಗಳು ನಿರ್ಮಾಪಕರಲ್ಲ, ಪತ್ರಿಕೆಗಳೇ. ಲಂಚ, ಜಾಹಿರಾತು ಸಿಗಲಿಲ್ಲವೆಂಬ ಕೋಪದಿಂದ ದಾಳಿ ಮಾಡುವ ಇವರಿಂದ ಒಳ್ಳೆಯ ಕನ್ನಡ ಚಿತ್ರಗಳಿಗೆ ಉಳಿಗಾಲವಿಲ್ಲ ಎನ್ನುವಷ್ಟು ಪ್ರಕೋಪಕ್ಕೆ ಹೋಯಿತು. ಇಂಥ ಆರೋಪ ಪ್ರತ್ಯಾರೋಪಗಳ ಚಿರಂಜೀವಿತ್ವ ಅಥವಾ ಸಾರ್ವಕಾಲಿಕತೆಯ ಬಗ್ಗೆ ಹೇಳಲು ೨೧ನೇ ಶತಮಾನದಲ್ಲೂ ಹೊಸ ಮಾತುಗಳಿಲ್ಲ.

ಶ್ರೀರಂಗರಂಥ ಬುದ್ಧಿಜೀವಿಗಳೂ ಕೂಡ ಚಿತ್ರರಂಗದ ಬಗ್ಗೆ ಧಾರಾವಾಹಿಯಂತೆ ಲೇಖನಗಳನ್ನು ಬರೆದರು.

''ಚಿತ್ರ ಮಾಡುವವರಿಗೆ ಏನೂ ತಿಳಿದಿಲ್ಲ. ಭಾಷೆಯೇ ಗೊತ್ತಿಲ್ಲದ ನಿರ್ದೇಶಕರು, ಕಣ್ಣು ಕುಕ್ಕುವ ವೇಷ-ಭೂಷಣ, ಮನೋಹರ ನೃತ್ಯ ಇದ್ದುದೆಲ್ಲ ಒಳ್ಳೆಯ ಚಿತ್ರವಲ್ಲ. ಇಲ್ಲಿಯ ಆಭಾಸ, ಅಸಂಗತ, ಅಸಹಜಗಳ ಬಗ್ಗೆ ಪತ್ರಿಕೆ-ಪ್ರೇಕ್ಷಕ ಗಂಭೀರವಾಗಿ ಪ್ರತಿಕ್ರಿಯಿಸದಿದ್ದರೆ ಕನ್ನಡ ಪಟ ಕನ್ನಡೇತರರ ಎಂಜಲು ವ್ಯವಹಾರವಾದೀತು'' ಎಂಬುದು ಶ್ರೀರಂಗರ ಮಾತು.

ಖ್ಯಾತ ಪತ್ರಕರ್ತ, ದೇಶ-ವಿದೇಶಗಳಲ್ಲಿ ಸಂಚಾರ ಮಾಡಿ ಅಭ್ಯಾಸ ಮಾಡಿದವರೂ ಆದ ಡಿ.ಎಫ್.ಕಾರಕ ಅವರು ''...ಈ ಕೈಗಾರಿಕೆಗೆ ಸಂಬಂಧಿಸಿದವರು ದಕ್ಷರಲ್ಲ. ಸಾಧಾರಣ ಸಾಧನೆಯಾದ್ದರಿಂದ ದೋಷಗಳನ್ನು ಮುಚ್ಚಿಕೊಳ್ಳಲು ಕೀಳು ಹಾಸ್ಯ, ಶೃಂಗಾರ ಇತ್ಯಾದಿಗಳ ಹಾದಿ ಹಿಡಿಯುತ್ತಾರೆ. ಚಿತ್ರೋದ್ಯಮದ ಪ್ರಗತಿ ಆಗಿಲ್ಲದಿರುವುದಕ್ಕೆ ಭಾರತ ಸ್ವತಂತ್ರವಾಗಿಲ್ಲ ಎಂಬುದು ಕಾರಣವಲ್ಲ. ಇಲ್ಲಿರುವ ಅವ್ಯವಸ್ಥೆ, ಅವ್ಯವಹಾರಗಳು ಕಾರಣ. ಇತರ ಉದ್ಯಮಗಳಲ್ಲಿ ಪರಿಣತರಲ್ಲದವರಿಗೆ

ಪ್ರವೇಶವೇ ಅಸಾಧ್ಯ. ಇಲ್ಲಿ ಹಾಗಿಲ್ಲ, ನಟ-ನಟಿಯರಲ್ಲೂ ಬಹುಪಾಲು ಅವಿದ್ಯಾವಂತರಿದ್ದಾರೆ. ಇಲ್ಲಿಯ ಸಾಹಿತ್ಯ ರಚಕರನ್ನು ಪ್ರಪಂಚಕ್ಕೆ ಹೋಲಿಸಿದರೆ ಐದನೇ ದರ್ಜೆಗೆ ನಿಲ್ಲುತ್ತಾರೆ. ತಂತ್ರಜ್ಞರೂ ಕೆಳಮಟ್ಟದವರೇ. ಮುಖ್ಯವಾಗಿ ಪ್ರೇಕ್ಷಕರ ಮನರಂಜನೆಯ ಅಸಕ್ತಿಯಲ್ಲೂ ಮೇಲ್ಮಟ್ಟದ ಅಭಿರುಚಿ ಇಲ್ಲ. ಯಾರೂ ತಿಳಿವಳಿಕೆ ಉತ್ತಮ ಪಡಿಸಿಕೊಳ್ಳಲು ಚಿತ್ರ ನೋಡುತ್ತಿಲ್ಲ. ಆದ್ದರಿಂದಾಗಿ ಉತ್ತಮ ಚಿತ್ರ ಮಾಡಲು ಹೆದರುತ್ತಿದ್ದಾರೆ. ಜನ ಮೆಚ್ಚುವುದು ಎಂದರೆ ಕೀಳುದರ್ಜೆ ಎಂಬ ಅಭಿಪ್ರಾಯಕ್ಕೆ ಬರಲಾಗಿದೆ. ನಮ್ಮ ರಾಷ್ಟ್ರದ ಚಿತ್ರಗಳಲ್ಲಿ ಅನೇಕ ದೋಷಗಳಿವೆ. ಯಾವುದೂ ಸಹಜವಾಗಿಲ್ಲ. ಹಾಸ್ಯ ಎಂದರೆ ಕುರೂಪ, ಕುಳ್ಳ, ಡೊಳ್ಳು ಹೊಟ್ಟೆ, ದೊಡ್ಡ ಮೂಗು ಇತ್ಯಾದಿ ಅತಿರೇಕಗಳೆಂದು ಭಾವಿಸಿದ್ದಾರೆ. ಅಂಗವಿಕಲತೆ ಗಳಿಕೆಯ ಸಾಧನವಾಗಬಾರದು. ಅಮೆರಿಕ, ರಷ್ಯಾ, ಬ್ರಿಟನ್ ಚಿತ್ರಗಳಲ್ಲಿ ಹಾಡು ಇತ್ಯಾದಿ ಇರಲೇಬೇಕೆಂದಿಲ್ಲ. ಆ ಚಿತ್ರಗಳನ್ನು ನಮ್ಮ ದೇಶದಲ್ಲೂ ನೋಡುತ್ತಾರಲ್ಲ.... ಹಾಡು ಇತ್ಯಾದಿ ಇಲ್ಲದೆಯೂ ಚಿತ್ರ ಶಕ್ತವಾಗಬೇಕಾದರೆ ಸಮರ್ಥ ಚಿತ್ರಕಥೆ, ಸಂಭಾಷಣೆ ಇತ್ಯಾದಿಗಳಿರಬೇಕು. ಅದಿಲ್ಲದ್ದರಿಂದ ಇಲ್ಲಿ ಹಾಡು, ನೃತ್ಯದ ಊರುಗೋಲು ಬೇಕಾಗುತ್ತದೆ. ಇದಕ್ಕೆಲ್ಲ ಪರಿಹಾರವೆಂದರೆ ನಷ್ಟವಾದರೂ ಭರಿಸಬಲ್ಲ ಪ್ರಬಲ ಧನವಂತರು ಉದ್ಯಮಕ್ಕೆ ಬರಬೇಕು. ಪ್ರಾರಂಭದಲ್ಲಿ ಉತ್ತಮ ಚಿತ್ರ ಧನ ಗಳಿಸುವುದಿಲ್ಲ. ಎರಡು-ಮೂರು ಚಿತ್ರಗಳು ಸೋತರೂ ಮತ್ತದೇ ಪ್ರಯತ್ನದಲ್ಲಿದ್ದರೆ ಖಂಡಿತ ಧನ ಗಳಿಕೆ, ಅಭಿರುಚಿ ನಿರ್ಮಾಣ ಸಾಧ್ಯವಾಗುತ್ತದೆ. ನವ ಭಾವನೆಯುಳ್ಳ ಹೊಸಬರು ಬರಬೇಕು. ಅಭಿನಯ ಚಾತುರ್ಯ ಉಳ್ಳವರು ಬರಬೇಕು. ಶುದ್ಧ ನೀರು ಬರಬೇಕೆಂದರೆ ಬಾವಿಯಲ್ಲಿರುವ ಕೊಚ್ಚೆ ತೆಗೆಯಬೇಕು...'' ಎನ್ನುತ್ತಾರೆ.

ದಖಿನ್ ಫಿಲಂಸ್‌ನ ಮಾಲೀಕ ಸೇಟ್ ಇಂದ್ರಮಲ್ ಪ್ರಕಾರ ಕೆಲವರು ಚಿತ್ರರಂಗಕ್ಕೆ ಬರಲು ಕಾರಣಗಳು ಹೀಗಿವೆ : ಚಿತ್ರಮಂದಿರದ ಮುಂದೆ ಜನ ಸೇರಿದ್ದನ್ನು ನೋಡಿ ಇದು ಲಾಭದಾಯಕ, ಚಿನ್ನದ ಗಣಿಯೆಂದು ಭಾವಿಸಿ ಬರುತ್ತಾರೆ. ಕೆಲವರಿಗೆ ನಟಿಯರ ಚೆಲುವಿನ ಬಯಕೆ. ಹಾಗೆ ಬಂದು ಹಣ, ಶಕ್ತಿ, ಮನಃಸ್ಥಿತಿ ಕಳಕೊಂಡವರೂ ಇದ್ದಾರೆ. ಬೇರೆ ಉದ್ಯಮಗಳಲ್ಲಿ ಕಂಟ್ರೋಲ್ ಕಾಯಿದೆಯಿಂದ ವಿಪರೀತ ಬಿಕ್ಕಟ್ಟಿದೆ. ಇಲ್ಲಿ ಅಂಥ ತೊಂದರೆ ಇಲ್ಲ ಎಂತಲೂ ಬರುತ್ತಾರೆ. ಹೇಗೇ ಬರಲಿ, ಏಕೇ ಬರಲಿ ಪಟ್ಟಾಗಿ ನಿಂತು ಸೋಲು ಕಂಡಾಗ ಓಡದೆ ಕೆಲಸ ಮಾಡಿದರೆ ಹಣಕ್ಕೆ ಮೋಸವಿಲ್ಲ. ಆದರೆ ದಕ್ಷ ಆಡಳಿತಗಾರನೊಬ್ಬ ಇರಬೇಕು. ಮುಖ್ಯವಾಗಿ ಚಿತ್ರಮಂದಿರಗಳ ಗುಣಮಟ್ಟ ಸರಿಯಾಗಿರಬೇಕು. ಇಲ್ಲವಾದರೆ ಆಕರ್ಷಣೆ ಕಳಕೊಳ್ಳುತ್ತವೆ. ಯುದ್ಧದಿಂದಾಗಿ ಬಂದ ಉಬ್ಬರ ಮುಗಿಯುವಷ್ಟರಲ್ಲಿ ಈ ಉದ್ಯಮ ದೃಢವಾಗಬೇಕು....

ಇವು ಒಟ್ಟಾರೆ ರಾಷ್ಟ್ರದ ಚಿತ್ರೋದ್ಯಮ ಕುರಿತ ವಿಶ್ಲೇಷಣೆಗಳಾದರೆ ಹನುಮಂತರಾವ್ ಎಂಬ ಚಿತ್ರಪ್ರೇಮಿಯ ಅವಲೋಕನ ಹೀಗಿದೆ : ''ಇದು ಅನುಕರಣ ವ್ಯಾಧಿ. ಮೊದಲು ಇಂಗ್ಲಿಷ್ ಚಿತ್ರದ ಕಥೆ ಕೆಡಿಸಿ ಯಾರೋ ತೆಗೆದರು, ದುಡ್ಡು ಬಂತು. ಎಲ್ಲರೂ ಅದೇ ಜಾಡಿಗೆ ಹೋದರು. ಎಲ್ಲರಿಗೂ ಲಾಭ ಆಗಲಿಲ್ಲ. ಆಗ ಕೊಂಚ ಉರುಬು ತಗ್ಗಿತು. ಹೊಸ ನಟಿಯೊಬ್ಬಳನ್ನು ಮೆರೆಸಿದ ಚಿತ್ರ ಹಣ ಗಳಿಸಿತು. ಎಲ್ಲರೂ ಅತ್ತಲೇ.... ಎಲ್ಲರಿಗೂ ಹೊಸ ನಟಿಯರು ಸಿಗಬೇಕಲ್ಲ...! ಒಬ್ಬ ಹೊಸ ರೀತಿ ಸಂಗೀತ ಮಾಡಿದ, ಗೆದ್ದ. ಎಲ್ಲರೂ ಅದೇ ಮಾಡಿದರು.. ಖ್ಯಾತ ನಟ-ನಟಿಯರ ಹಿಂದೆ ಬೀಳುವುದಂತೂ ಇದ್ದೇ ಇದೆ. ಒಂದು ಚಿತ್ರ ೨೫ ವಾರ ಪ್ರದರ್ಶನ ಕಂಡಿತು. ಅಭಿನಂದನೆ ಆಯಿತು. ಅದರ ಪ್ರಚಾರದಿಂದ ಮತ್ತಷ್ಟು ಜನ ನೋಡಿದರು. ಚಿತ್ರಗಳಿಗೆ ರಜತೋತ್ಸವ ನಡೆಸಿದರೆ ಲಾಭ ಎಂದು ಭಾವಿಸಿ ಕಡ್ಡಾಯವಾಗಿ ೨೫ ವಾರ ನಡೆಸುವ ಸಾಹಸ. ಇನ್ನೂ ಹೆಚ್ಚು ಕೂಡಾ. ಜೊಳ್ಳು ಪ್ರಚಾರ, ಪ್ರಶಸ್ತಿ ಇತ್ಯಾದಿ ಮಾದರಿಗಳನ್ನು ಮುಂಬಯಿ ಚಿತ್ರರಂಗ ಕೊಡುತ್ತಿದೆ. ಟಿಕೆಟ್‌ಗಳನ್ನು ನಿರ್ಮಾಪಕರೇ ಕೊಂಡು ಸೈನಿಕರಿಗೆ ಹಂಚುವುದು. ಪುಕ್ಸಟ್ಟೆ ನೋಡುವವರನ್ನು ಕಂಡು ಇತರರನ್ನು ಆಕರ್ಷಿಸುತ್ತದೆಂಬ ನಂಬಿಕೆ. ಹೀಗೆ ಬಲವಂತವಾಗಿ ನಡೆಸಿ ನಿಜವಾಗಲೂ ಕಾದಿರುವ ಇನ್ನೊಂದು ಚಿತ್ರಕ್ಕೆ ಚಿತ್ರಮಂದಿರ ಇಲ್ಲದ ಹಾಗೆ ಮಾಡುವುದು. ಇದೆಂಥ ವ್ಯವಹಾರ? ಉದ್ಯಮ ?....''

ಇಂಥ ತೀವ್ರವಾದ ಆಕ್ಷೇಪಗಳ ನಡುವೆಯೂ ಚಲನಚಿತ್ರೋದ್ಯಮ ನೆಲೆಯೂರಲಿ ಎಂಬ ಆಶಯಗಳು, ಅದಕ್ಕಾಗಿ ಒತ್ತಾಯಗಳು ನಿರಂತರವಾಗಿ ನಡೆದು ಬಂದವು. ಭಾರತದ ಚಲನಚಿತ್ರೋದ್ಯಮಕ್ಕೆ ಹತ್ತಿರ ಹತ್ತಿರ ಅರ್ಧ ಶತಮಾನವಾದರೂ ಮೈಸೂರು ಪ್ರಾಂತ್ಯದಲ್ಲಿ ಉದ್ಯಮ ಬೇರು ಬಿಡಲಿಲ್ಲ. ಪ್ರಯತ್ನಗಳು ವಿಫಲವಾದವು ಎಂಬ ಕೂಗು ತೀವ್ರವಾಗಿಯೇ ಇತ್ತು. ಆ ದಿನಗಳಲ್ಲಿ ಅತ್ಯಂತ ಗಂಭೀರವಾದ ಪತ್ರಿಕೆಯೆಂದು ಪರಿಗಣಿಸಲಾಗಿದ್ದ 'ವಾಕ್ಚಿತ್ರ' (೧೯೪೪, ಜೂನ್ ಸಂಚಿಕೆ) ''ಒಂದೂವರೆ ವರ್ಷದ ಹಿಂದಿನಿಂದ ನಡೆದ ಪ್ರಯತ್ನಗಳಲ್ಲಿ ಮೈಸೂರಿನಲ್ಲಿ ಒಂದು ಸ್ಟುಡಿಯೋ, ಮತ್ತೊಂದು ವಾಣಿಜ್ಯ ಸಂಸ್ಥೆ, ನಗರಕ್ಕೆ ಸಮೀಪ ಮತ್ತೊಂದು ಚಿತ್ರ ನಿರ್ಮಾಣ ಕೇಂದ್ರ ಇತ್ಯಾದಿಗಳಿದ್ದರೂ ಫಿಲಂ ಮಾರಾಟದ ಮೇಲಿನ ನಿರ್ಬಂಧದಿಂದಾಗಿ ಒಂದೇ ಒಂದು ಚಿತ್ರವೂ ತಯಾರಾಗಲಿಲ್ಲ. ಅನಂತರ ಫಿಲಂ ಮಾರಾಟಕ್ಕೆ ಕಂಟ್ರೋಲ್ ಬಂದರೂ ಇವರಿಗೆ ಕೋಟಾ ಇರಲಿಲ್ಲವಾಗಿ ಚಿತ್ರಗಳು ತಯಾರಾಗಲಿಲ್ಲ. ಇಂಥ ಸಂದರ್ಭಗಳಲ್ಲೂ ಬಹು ವಿಧದಲ್ಲಿ ಪ್ರಾರ್ಥಿಸಿದರೂ ಮೈಸೂರು ಸರ್ಕಾರ ಆಸಕ್ತಿ ತೆಗೆದುಕೊಳ್ಳಲಿಲ್ಲ. ಈ ಸರ್ಕಾರ ಇಂಡಿಯಾ ಸರ್ಕಾರದೊಂದಿಗೆ ವ್ಯವಹರಿಸಿ ಫಿಲಂ ಕೊಡಿಸಿದ್ದರೆ ಮೈಸೂರು ಸಂಸ್ಥಾನದಲ್ಲಿ ಚಿತ್ರೋದ್ಯಮ ಬೆಳೆಯುತ್ತಿತ್ತು. ಆದರೆ ಮೈಸೂರು ಸರ್ಕಾರ ಪ್ರಸ್ತುತ ಸಾಧ್ಯವಿಲ್ಲ ಎಂದು ಬಿಟ್ಟಿತು. ಇನ್ನು ಮುಂದಾದರೂ ಕನಿಷ್ಠ ಕನ್ನಡಿಗರೇ ಬಂಡವಾಳ ಹಾಕಿ ಮಾಡಿದ ಚಿತ್ರಗಳಿಗೆ ಮನರಂಜನಾ ತೆರಿಗೆಯನ್ನು ಬಿಟ್ಟು ಕೊಡಲಿ. ಪ್ರಜಾ ಪ್ರತಿನಿಧಿ ಸಭೆ, ಶಾಸನ ಸಭೆಯ ಸದಸ್ಯರು ಅಧಿವೇಶನದಲ್ಲಿ ಸರ್ಕಾರದ ಸಹಾನುಭೂತಿ ಈ ದಿಕ್ಕಿಗೆ ತಿರುಗುವಂತೆ ಮಾಡಲಿ'' ಎಂದು ಅಗ್ರಲೇಖನ ಬರೆದು ಒತ್ತಾಯಿಸುತ್ತದೆ.

ಪ್ರಸಿದ್ಧ ಬರಹಗಾರ, ಪತ್ರಕರ್ತ ಪಾ.ನಾ.ಚೌಡಪ್ಪ ಸರ್ಕಾರಕ್ಕೆ ಕೆಲವು ಸಲಹೆಗಳನ್ನು ಕೊಡುತ್ತಾರೆ. ಅವರ ಪ್ರಕಾರ ಚಲನಚಿತ್ರ ಕೈಗಾರಿಕೆ ಸುಗಮಗೊಳಿಸುವ ಎರಡು ವಿಧಾನಗಳಿವೆ. ಮೊದಲನೆಯದು, ಹೊರಗಿನ ಚಿತ್ರಗಳ ಆಕ್ರಮಣವನ್ನು ತಡೆ ಹಿಡಿಯುವುದು. ಎರಡನೆಯದು, ನಾಡಿನೊಳಗಿನ ಚಲನಚಿತ್ರ ಉದ್ಯಮವನ್ನು ವ್ಯವಸ್ಥಿತಗೊಳಿಸುವುದು. ಹೊರನಾಡಿನಿಂದ ಬರುವ ಚಿತ್ರಗಳಿಗೆ ನಿಯಂತ್ರಣ ಹಾಕಬೇಕು. ಇದಕ್ಕೆ ಅವರು ಇಂಗ್ಲೆಂಡಿನಲ್ಲಾದ ಒಂದು ಪ್ರಕರಣವನ್ನು ಉದಾಹರಣೆಯಾಗಿ ಕೊಡುತ್ತಾರೆ. ಅಮೆರಿಕಾದವರೂ ಇಂಗ್ಲಿಷ್ ಚಿತ್ರವನ್ನೇ ಮಾಡುತ್ತಾರೆ. ಇಂಗ್ಲೆಂಡಿಗೂ ಕಳುಹಿಸುತ್ತಾರೆ. ಹೀಗಾಗಿ ಇಂಗ್ಲೆಂಡಿನ ಚಿತ್ರಗಳಿಗೇ ಪ್ರದರ್ಶನದ ತೊಡಕುಂಟಾಯಿತು. ಬ್ರಿಟಿಷ್ ಸರ್ಕಾರವು ಅಮೆರಿಕೆಯಿಂದ ಬರುವ ಚಿತ್ರಗಳ ಸಂಖ್ಯೆಯನ್ನೇ ನಿಯಂತ್ರಿಸಿತು. ಅನಂತರವೇ ಬ್ರಿಟನ್ನಿಗೆ ಅಮೆರಿಕೆಯನ್ನು ಸರಿಗಟ್ಟಬಲ್ಲ ಪ್ರಮಾಣದ ಚಿತ್ರ ನಿರ್ಮಾಣ ಸಾಧ್ಯವಾಯಿತು. ಅದೇ ಬ್ರಿಟನ್ನಿನ ಚಿತ್ರಗಳು ಅಮೆರಿಕೆಗೆ ಹೋದಾಗ ಪ್ರದರ್ಶನಕ್ಕೆ ಅವಕಾಶವಾಗದೆ ಮೂಲೆ ಸೇರಿದವು. ಆಗ ಬ್ರಿಟಿಷ್ ಸರ್ಕಾರ ತನ್ನದೇ ಪ್ರಚಾರ, ಪತ್ರಿಕೆ, ಹಂಚಿಕಾ ವ್ಯವಸ್ಥೆಗಳ ಮೂಲಕ ಪ್ರದರ್ಶನಕ್ಕೆ ಅವಕಾಶ ಮಾಡಿಕೊಳ್ಳಬೇಕು, ಅದೂ ಆಗದಿದ್ದಲ್ಲಿ ಅಮೆರಿಕೆಯ ಚಿತ್ರಗಳು ಬ್ರಿಟನ್ನಿನಲ್ಲಿ ಪ್ರದರ್ಶನಗೊಳ್ಳದ ಹಾಗೆ ತಡೆ ಹಿಡಿಯಬೇಕು ಎಂದು ತೀರ್ಮಾನಿಸಿತು.

ಅಮೆರಿಕಾ ಈಗ ಅದೇ ತಂತ್ರವನ್ನು ಇಂಡಿಯಾದ ಮೇಲೂ ಪ್ರಯೋಗಿಸಿ ಆಕ್ರಮಿಸಿಕೊಳ್ಳುತ್ತಿದೆ. ಇಂಡಿಯಾ ಸರ್ಕಾರ ಕೂಡಲೇ ಮುಂಜಾಗ್ರತೆ ವಹಿಸಬೇಕು. ಅಮೆರಿಕಾ ವಿ.ಶಾಂತಾರಾಂ ಅಂಥ ನಿರ್ದೇಶಕರನ್ನೇ ಕೊಂಡುಕೊಳ್ಳುತ್ತದೆ. ತನ್ನದೇ ಬಂಡವಾಳ, ಕಾರ್ಮಿಕರನ್ನು ಬಳಸಿ ಇಲ್ಲೇ ಚಿತ್ರ ತಯಾರಿಸುತ್ತದೆ. ಅವುಗಳನ್ನು ಇಂಡಿಯಾ ಚಿತ್ರಗಳು ಎಂದು ಹೇಳಿ ಹೊರದೇಶದಿಂದ ಬರುವ ಚಿತ್ರಗಳ ಮೇಲೆ ಬೀಳುವ ಸಂಖ್ಯೆ ನಿಯಂತ್ರಣ, ತೆರಿಗೆಗಳಿಂದ ಕೂಡಾ ತಪ್ಪಿಸಿಕೊಂಡು ಬಿಡುವ ಜಾಣತನ ಮಾಡುತ್ತಿದೆ. ಇದೆಲ್ಲ ಭಾರತದ ಚಿತ್ರೋದ್ಯಮಕ್ಕೆ ಮಾರಕವಾಗುವಂಥ ಪ್ರಯತ್ನಗಳು. ನಮ್ಮಲ್ಲಿ ಕಚ್ಚಾ ಫಿಲಂಗೆ ನಿಯಂತ್ರಣವಿದ್ದರೂ ಸಾಕಷ್ಟು ಚಿತ್ರಗಳು ತಯಾರಾಗಿವೆ. ಆದರೆ ಆ ಪ್ರಮಾಣದಲ್ಲಿ ಪ್ರದರ್ಶನ ವ್ಯವಸ್ಥೆ ಇಲ್ಲ. ಹಾಗಾಗಿ ಅಗತ್ಯಕ್ಕಿಂತ ಹೆಚ್ಚು ಚಿತ್ರಗಳೆನಿಸಿ ಮೂಲೆ ಸೇರುತ್ತಿವೆ. ಪರ್ಮಿಟ್‌ಗಳನ್ನು ಕೊಡುವಾಗ ಅವರ ಅರ್ಹತೆ, ಯೋಗ್ಯತೆಗಿಂತ ಹೆಚ್ಚು ಕೊಡಲಾಗುತ್ತಿದೆ. ಅದೇ ಮೈಸೂರಿನ ಸ್ಟುಡಿಯೋಗಳಿಗೆ ಪರ್ಮಿಟ್ ಕೊಡದೆ ಅವರು ಕೆಲಸವಿಲ್ಲದೆ ಕೂರುವಂತೆ ಮಾಡಲಾಗಿದೆ. ಈ ಲೈಸೆನ್ಸ್ ವ್ಯವಸ್ಥೆಯ ಕೇಂದ್ರೀಕರಣ ತಪ್ಪಬೇಕು. ಪ್ರಾಂತಿಕವಾಗಬೇಕು.

ದಕ್ಷಿಣ ಭಾರತ ಫಿಲಂ ಚೇಂಬರ್ ಅಧ್ಯಕ್ಷರೂ ಇಂಥ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಪ್ರಾಂತಿಕ ಸಂಸ್ಥೆಗಳು ಪ್ರಾದೇಶಿಕ ಸಂಸ್ಕೃತಿಗೆ ಬೆಂಬಲವಾಗಲಿ ಮತ್ತು ಮುಂದೆ ಇವೇ ಹಿತರಕ್ಷಣಾ ಸಮಿತಿಗಳೂ ಆಗಿ ಅವುಗಳ ಮೂಲಕವೇ ಪ್ರಾಂತೀಯ ನಿಯಮ, ವಿವಿಧ ಭಾಷಾ ಸಂಸ್ಕೃತಿ ಸಂಗೋಪನಾದಿಗಳು ಆಗಬೇಕು ಎಂಬುದು ಪಾ.ನಾ.ಚೌಡಪ್ಪನವರ ಅಭಿಪ್ರಾಯವಾಗಿತ್ತು. ಸಕಾಲಿಕವಾದ ಈ ಸೂಚನೆಗಳ ಹಿಂದೆ ಉದ್ಯಮ ಹೇಗೆ ಬೆಳೆಯಬೇಕು ಎಂಬ ಕಳಕಳಿಯಿತ್ತು.

ಕೇಂದ್ರದಿಂದ ಭಾರತದಲ್ಲಿ ತಯಾರಾಗುವ ಚಿತ್ರಗಳ ಪ್ರದರ್ಶನ ಪ್ರತಿ ೧೧ ಸಾವಿರ ಅಡಿಗಳನ್ನು ಮೀರುವಂತಿಲ್ಲ ಎಂಬ ನಿಯಮ ಇತ್ತು. ಮತ್ತು ಅವುಗಳ ಜೊತೆಗೆ ೨-೩ ಸಾವಿರ ಅಡಿಯಷ್ಟು ಕಿರುಚಿತ್ರ (ಶಾರ್ಟ್ಸ್) ತೋರಿಸಲೇಬೇಕೆಂಬ ಆಜ್ಞೆಯೂ ಇತ್ತು. ಸರ್ಕಾರವೇ ಅಂಥ ಕಿರುಚಿತ್ರ ನಿರ್ಮಿಸುವ ಆಸಕ್ತಿ ವಹಿಸಿತು. ಆದರೆ ಹಾಗೆ ನಿರ್ಮಿಸಲಾದ ಚಿತ್ರಗಳು ಕಳಪೆಯಾಗಿದ್ದವು ಮತ್ತು ಭಾರತೀಯರ ಆತ್ಮಗೌರವಕ್ಕೆ ಕುಂದು ತರುವಂತಿದ್ದವು. ಅದಕ್ಕಾಗಿ ಸಾಕಷ್ಟು ವಿರೋಧವನ್ನು ಎದುರಿಸಬೇಕಾಯಿತು. ಆಗ ಮತ್ತೊಂದು ಯೋಜನೆ ತಯಾರಾಯಿತು. ಆಗ ಇಂಥ ಚಿತ್ರ ತಯಾರಿಕೆಯನ್ನು ಮೂರು ಭಾಗಗಳಾಗಿ ವಿಂಗಡಿಸಿದರು. ೧. ಭಾರತೀಯ ಸಂಸ್ಕೃತಿ, ಕಲೆ, ಕೈಗಾರಿಕೆಗಳ ಬಗ್ಗೆ. ೨. ವಾರ್ತಾ ಚಿತ್ರಗಳು. ೩. ಯುದ್ಧ ಪ್ರಚಾರ ಮತ್ತು ಪ್ರಚಾರ ವಾರ್ತೆಗಳು.



(ಚಿತ್ರ ೩೮) 'ಹೇಮರೆಡ್ಡಿ ಮಲ್ಲಮ್ಮ' ಚಿತ್ರದಲ್ಲಿ ಗುಬ್ಬಿ ವೀರಣ್ಣ ಮತ್ತು ಬಿ.ಜಯಮ್ಮ

ಇವೆಲ್ಲವರ ಹಿಂದೆ ಈ ಸಿನಿಮಾಗಳು ಇಂಡಿಯಾದಲ್ಲಿರುವ ಪರಕೀಯರ ತಿಳಿವಳಿಕೆಗೆ ಮತ್ತು ಆಹ್ಲಾದಕ್ಕೆ ಎಂಬ ಉದ್ದೇಶವೂ ಇತ್ತು. ಮೊದಲನೆಯ ಗುಂಪಿನ ಚಿತ್ರಗಳು ಭಾರತೀಯರಿಗೆ ಪ್ರಿಯವಾಗುವಂತಿದ್ದವು. ಇವುಗಳಲ್ಲಿ ಭಾರತದ ವಿವಿಧ ಪ್ರಾಂತ್ಯಗಳ ಗ್ರಾಮೀಣ ಬದುಕನ್ನು ಚಿತ್ರಿಸುವುದೂ ಸೇರಿತ್ತು. ಅದರಿಂದಾಗಿ ಖಾಸಗಿಯಾಗಿ ಆಯಾ ಪ್ರಾಂತ್ಯದ ಸಂಸ್ಥೆಗಳಿಗೆ ಚಿತ್ರ ನಿರ್ಮಿಸುವ ಕೆಲಸ ವಹಿಸಿದರು. ಪ್ರಭಾತ್ ಚಿತ್ರ ಸಂಸ್ಥೆಗೆ ಮಹಾರಾಷ್ಟ್ರದ ಗ್ರಾಮ ಪರಿಸರದ ಬಗ್ಗೆ, ಪಾಂಚೋಲಿ ಮತ್ತು ನ್ಯೂ ಥಿಯೇಟರ್ಸ್‌ನವರಿಗೆ ಪಂಜಾಬ್, ಬಂಗಾಳಗಳ ಗ್ರಾಮ ಜೀವನದ ಬಗ್ಗೆಯೂ ಚಿತ್ರಿಸಲು ವಹಿಸಿಕೊಡಲಾಗಿತ್ತು. ಆದರೆ ದಕ್ಷಿಣದ ಕನ್ನಡ, ತಮಿಳು, ತೆಲುಗು, ಮಲೆಯಾಳವಂಥ ಪ್ರಧಾನ ಗ್ರಾಮ ಸಂಸ್ಕೃತಿಗಳನ್ನು ಚಿತ್ರಿಸಲು ಅಮೆರಿಕನ್ನರಾದ ಎಲಿಸ್ ಆರ್.ಡಂಕನ್ ಎಂಬುವವರಿಗೆ ವಹಿಸಲಾಗಿತ್ತು. ಇವರು ಕೆಲಕಾಲ ಭಾರತದಲ್ಲಿದ್ದರು ಎಂಬ ಒಂದೇ ಕಾರಣಕ್ಕೆ ಇಡೀ ದಕ್ಷಿಣ ಭಾರತದ ಗ್ರಾಮೀಣ ಸಂಸ್ಕೃತಿಯನ್ನು ಪರಿಚಯಿಸುವಷ್ಟು ಅರ್ಹತೆ ಬರುತ್ತದೆಯೇ ಎಂಬುದು ಚರ್ಚೆಯ ವಿಷಯವಾಗಿ ವಿರೋಧವೆದ್ದಿತ್ತು. ದಕ್ಷಿಣದಲ್ಲೂ ಆಯಾ ಪ್ರದೇಶದ ಚಿತ್ರ ನಿರ್ಮಾಣ ಸಂಸ್ಥೆಗಳಿಗೇ ಈ ಕಾರ್ಯ ನಿರ್ವಹಿಸಲು ಅವಕಾಶ ಮಾಡಬೇಕೆಂಬ ಒತ್ತಾಯವನ್ನು ತರಲಾಯಿತು.

೧೯೪೦ರಲ್ಲೇ ಇಂಡಿಯಾ ಸರ್ಕಾರ ಫಿಲಂ ಅಡ್ವೈಸರಿ ಬೋರ್ಡ್ ಅನ್ನು ಸ್ಥಾಪಿಸಿದ್ದು ಅದರ ಅಧ್ಯಕ್ಷತೆಯನ್ನು ಜೆ.ಬಿ.ಹೆಚ್.ವಾಡಿಯಾ ಅವರು ಒಪ್ಪಿಕೊಂಡದ್ದು ಸರಿಯಷ್ಟೆ. ಇದು ಯುದ್ಧ ಸಂಗತಿಗಳನ್ನು ಪ್ರಚಾರ ಮಾಡುವ ಕಿರುಚಿತ್ರಗಳನ್ನು ತಯಾರಿಸುತ್ತಿತ್ತು. ಇವು ಭಾರತೀಯರ ಗೌರವಕ್ಕೆ ಕುಂದು ತರುವಂಥ ಚಿತ್ರಗಳಾಗಿದ್ದುವೆಂದು ಹಿಂದೆಯೇ ಪ್ರಸ್ತಾಪಿಸಲಾಗಿದೆ. ಸರ್ಕಾರದ ನೆರವಿನಿಂದ ಕೆಲಸ ಮಾಡುತ್ತಿದ್ದ ಇಂಡಿಯನ್ ಮೂವಿಟೋನ್ ನ್ಯೂಸ್ ಸಂಸ್ಥೆಯ ಚಿತ್ರ ತಯಾರಿಕೆಯನ್ನು ಸರ್ಕಾರವೇ ಹಿಂದೆ ಪಡೆದು, ೧೯೪೩ರಲ್ಲಿ ಇಂಡಿಯನ್ ನ್ಯೂಸ್ ಪೆರೇಡ್ ಎಂದು ಮರುನಾಮಕರಣ ಮಾಡಿತ್ತು. ಇದನ್ನೇ ಪುನಃ ಬದಲಾಯಿಸಿ 'ಇನ್‌ಫರ್ಮೇಶನ್ ಫಿಲಂಸ್ ಆಫ್ ಇಂಡಿಯಾ' ಎಂದು ಕರೆದರು. ಈ ಹಂತದಲ್ಲಿ ಚಿತ್ರಮಂದಿರಗಳಲ್ಲಿ ಈ ಚಿತ್ರಗಳ ಪ್ರದರ್ಶನ ಕಡ್ಡಾಯವಾಯಿತು. ಪ್ರಾರಂಭದಲ್ಲಿ ಚಿತ್ರಮಂದಿರಗಳನ್ನು ಪ್ರಾರ್ಥಿಸಲಾಗಿತ್ತು, ಅವುಗಳಿಗೆ ವಾರಕ್ಕೆ ೨೦ ರೂಪಾಯಿಗಳವರೆಗೆ ಶುಲ್ಕವನ್ನು (ಬಾಡಿಗೆ) ಕೊಡಬೇಕಿತ್ತು. ಈ ಬೆಲೆಯಲ್ಲಿ ವ್ಯತ್ಯಾಸಗಳಿದ್ದವು. ಈ ಅಧಿಕಾರ ಚಲಾಯಿಸಿ ಕಡ್ಡಾಯ ಮಾಡಿದರು.

ಈ ಎಲ್ಲ ದೂರದೃಷ್ಟಿಯ ಪರಿಣಾಮವೇ ಮೇಲೆ ಹೇಳಿದ ಕಿರುಚಿತ್ರ ನಿರ್ಮಾಣದ ಹಂತದವರೆಗೆ ಬಂದಿತ್ತು. ಈ ಇನ್‌ಫರ್ಮೇಶನ್ ಆಫ್ ಇಂಡಿಯಾದ ವತಿಯಿಂದ (ಅಲ್ಲಿನ ಅಧಿಕಾರಿಗಳೇ) 'ಓಲ್ ಸ್ಟೇಪಸ್ಸ್ ಅಫ್ ಇಂಡಿಯಾ' ಚಿತ್ರಮಾಲೆ ನಿರ್ಮಿಸಲಾಗುತ್ತಿತ್ತು. ಇದನ್ನು ಭಾಸ್ಕರರಾವ್ ಎಂಬ ಅಧಿಕಾರಿಗೆ ವಹಿಸಲಾಗಿತ್ತು. ಅವರು ಮೈಸೂರು ಸಂಸ್ಥಾನಕ್ಕೆ ತೆಂಗಿನ ಮರದ ಉಪಯುಕ್ತತೆ, ದಕ್ಷಿಣ ಭಾರತದ ಗೃಹ ಕೈಗಾರಿಕೆ ಕುರಿತಂತೆ ಚಿತ್ರಿಸಲಿರುವುದಾಗಿಯೂ, ಅದಕ್ಕೆ ಅಗತ್ಯವಾದ ಸಹಕಾರ ಕೊಡಬೇಕೆಂದೂ ಕೋರಿ ಪತ್ರ ಬರೆದಿದ್ದರು. ಈ ಹಿನ್ನೆಲೆಯಲ್ಲಿ 'ಮೈಸೂರಿನ ವೈಶಿಷ್ಟ್ಯ ಸಾಮಾನ್ಯವಾಗಿ ಮೂಲೆಗುಂಪಾಗಿ ಬಿಡುತ್ತದೆ. ಅದೊಂದು ಅಭ್ಯಾಸವಾಗಿ ಹೋಗಿದೆ. ಹಾಗಾಗ ಕೂಡದು. ನಮ್ಮಲ್ಲಿ ಗುಡಿ ಕೈಗಾರಿಕೆ, ಕರಕುಶಲತೆ, ನಂದಿ ಬೆಟ್ಟದಂಥ ವಿಹಾರ ಕ್ಷೇತ್ರ ಇತ್ಯಾದಿಗಳಿವೆ. ಅವೆಲ್ಲ ಸರಿಯಾಗಿ ಚಿತ್ರಣವಾಗಬೇಕು. ಬೇರೆಯವರಿಗೆ ವಹಿಸಿದರೆ ಸ್ಥಳೀಯ ವೈಶಿಷ್ಟ್ಯ ಗುರುತಿಸಲಾರರು. ನಮ್ಮಲ್ಲೇ ಎರಡು ಚಿತ್ರ ನಿರ್ಮಾಣ ಸಂಸ್ಥೆಗಳಿರುವಾಗ ಅವರಿಗೇ ವಹಿಸಬಾರದೇಕೆ' ಎಂಬ ಒತ್ತಡವನ್ನು ತರಲಾಯಿತು.

ಮೈಸೂರು ಸಂಸ್ಥಾನದ ಚಿತ್ರಮಂದಿರಗಳಿಗೆ ಅಂಥ ನ್ಯೂಸ್ ರೀಲ್‌ಗಳೂ ಸರಿಯಾಗಿ ಬರುತ್ತಿರಲಿಲ್ಲ. ಇಂಡಿಯನ್ ನ್ಯೂಸ್ ರೀಲ್‌ಗಳನ್ನು ತಯಾರಿಸಲು ಪ್ರಾರಂಭದಲ್ಲಿ ಎರಡು ವರ್ಷಕ್ಕೂ ಹೆಚ್ಚು ಸಮಯ ಬೇಕಾಯಿತು. ಅವುಗಳಲ್ಲಿ ಬಹುತೇಕ ಪ್ರಚಾರವೇ ಅನ್ನಿಸಿ ಜನಪ್ರಿಯವಾಗಲಿಲ್ಲ. ಯುದ್ಧ ಪ್ರಚಾರದ ಚಿತ್ರಗಳಲ್ಲಿದ್ದಂತೆ ಇಲ್ಲಿಯೂ 'ಕುಣಿಯುವ ಸಿಪಾಯಿ' ತಲೆ ಹಾಕುತ್ತಿದ್ದುದರಿಂದ ಕೂಡ ಜನ ಇದು ಪ್ರಚಾರ ಚಿತ್ರ ಎಂದು ಭಾವಿಸಿರಬಹುದು. ಜನಪ್ರಿಯವಾಗುವವರೆಗೆ ವಾರ್ತೆಗಳಿಗೆ ಮಾತ್ರ ಸೀಮಿತಗೊಳಿಸದೆ ಜನರಿಗೆ ಇಷ್ಟವಾಗುವ ಗಾಂಧಿ-ಜಿನ್ನಾ ಭೇಟಿ, ಬೊಂಬಾಯಿ ಅಗ್ನಿ ದುರಂತ ಇತ್ಯಾದಿಗಳ ಚಿತ್ರಿಕೆಗಳನ್ನು ಸೇರಿಸಿದರು. ಈ ಚಿತ್ರಗಳಿಗೆ ಪ್ರಾದೇಶಿಕ ಭಾಷೆಗಳಲ್ಲೇ ವಿವರಣೆಗಳನ್ನು ಕೊಡಲಾಗುತ್ತಿತ್ತು. ಇಂಗ್ಲಿಷ್, ಹಿಂದಿ, ಬಂಗಾಳಿ, ತೆಲುಗು, ತಮಿಳು ಭಾಷೆಗಳ ವಿವರಣೆ ಇತ್ತು. ಆದರೆ ಕನ್ನಡದಲ್ಲಿ ಮಾತ್ರ ಇಲ್ಲ! ಮತ್ತದೇ ಗದ್ದಲ.. ''ಭಾರತದ ಪ್ರಧಾನ ಭಾಗವೂ, ಒಂದೂವರೆ ಕೋಟಿ ಜನಸಂಖ್ಯೆಯುಳ್ಳದ್ದೂ ಆದ ಕನ್ನಡ ನಾಡಿನ ಭಾಷೆ ಕನ್ನಡದಲ್ಲಿ ವಿವರಣೆ ಬೇಡವೆ ? ಕನ್ನಡದಲ್ಲಿ ಸುಮಾರು ೧೨೫ ಚಿತ್ರಮಂದಿರಗಳಿವೆ. ಇಲ್ಲೆಲ್ಲ ವಿವರಣೆ ಕನ್ನಡದಲ್ಲೇ ಇರಬೇಕು..'' ಎಂದು ಆಗ್ರಹಿಸಬೇಕಾಯಿತು.

ಕನ್ನಡ ಏನು ಪಡೆದುಕೊಂಡರೂ ಹೋರಾಟ ಮಾಡಿಯೋ, ಹೆಣಗಿಯೋ ಪಡೆದುಕೊಳ್ಳುತ್ತಿತ್ತು. ಅಂದೂ, ಇಂದೂ ಪರಿಸ್ಥಿತಿ ಬಹಳ ಬದಲಾಗಿಲ್ಲ.

೧೯೪೪ರ ಜುಲೈ ತಿಂಗಳ ಹೊತ್ತಿಗೆ ಎಂ.ಜಿ.ಡಿ.ನಯೀಂ ಬೆಂಗಳೂರಿನಿಂದ 'ಸಿನಿಮಾ ಫ್ಲೇಮ್' ಇಂಗ್ಲಿಷ್ ಪತ್ರಿಕೆ ಪ್ರಾರಂಭಿಸಿದರು. ಡೆಮಿ ೧/೮ ಆಕಾರದಲ್ಲಿ ೩೮ ಪುಟಗಳಿದ್ದ ಪತ್ರಿಕೆ. ಪೂರ್ತಿ ಆರ್ಟ್ ಕಾಗದವನ್ನು ಬಳಸಲಾಗಿತ್ತು. ಬೆಲೆ ಹನ್ನೆರಡಾಣೆ. ಈ ಪತ್ರಿಕೆಗೆ 'ತಾಯಿನಾಡು' ಪತ್ರಿಕೆಯ ಸಂಪಾದಕರಾಗಿದ್ದ ಪಿ.ಬಿ.ಶ್ರೀನಿವಾಸನ್ ಅವರೇ ಸಂಪಾದಕರು.

ಧನ, ಜಾಹಿರಾತು ಮೂಲಕವಾದ ಲಂಚದ ಆಸೆಗೆ ಬೀಳದೆ ಭಾರತೀಯರು ಚಿತ್ರೋದ್ಯಮದ ಕುಂದುಕೊರತೆಗಳನ್ನು ಎತ್ತಿ ತೋರುವ, ಉದ್ಯಮವನ್ನು ಹಸನುಗೊಳಿಸಲು ನೆರವಾಗುವುದು ಪತ್ರಿಕೆಯ ಧ್ಯೇಯವೆನ್ನಲಾಗಿತ್ತು. ಮೊದಲ



(ಚಿತ್ರ ೪೦) 'ಚಂದ್ರಹಾಸ' ಚಿತ್ರದಲ್ಲಿ ಕುಂದಾಪುರ ಬಿ.ಶಾರದ

ರೋಮಾಂಚನವಾಗಿತ್ತು. ಸಿ.ವಿ.ರಾಜು ಆ 'ಕೃಷ್ಣಲೀಲಾ' ಚಿತ್ರದ ಹಕ್ಕುಗಳನ್ನು ಕೊಡಿಸುವುದಾಗಿಯೂ, ತಮಗೂ ಅದರಲ್ಲಿ ಶೇ. ೨೦ ಅಥವಾ ೧೦ರಷ್ಟಾದರೂ ಪಾಲುದಾರಿಕೆ ಇರಬೇಕೆಂದೂ ಹೇಳಿ ಒಪ್ಪಿಸಿಯೂ ಬಿಟ್ಟರು. ಅಂತೂ ೨೫ ಸಾವಿರ ರೂಪಾಯಿಗಳಿಗೆ ವ್ಯವಹಾರ ಕುದುರಿಸಿದ್ದೂ ಆಯಿತು. 'ಕೃಷ್ಣಲೀಲಾ' ಚಿತ್ರ ಹಾಗೂ ನವಜ್ಯೋತಿ ಸ್ಟುಡಿಯೋ ಎರಡೂ ಹಕ್ಕುಗಳು ಎನ್ನಲಾಗಿತ್ತು. ಮಿತ್ರರು ಮೈಸೂರಿಗೆ ಪ್ರಯಾಣ ಬೆಳೆಸಿ ಸ್ಟುಡಿಯೋ ಹತ್ತಿರ ಬಂದರು. ಅಲ್ಲೊಂದಿಷ್ಟು ಒಣಗಿದ ಗಿಡ, ಅದು-ಇದು ಇತ್ತು. 'ಫೋಟೋಗೆ ಹಾಗಿದ್ದರೇನೇ ಚೆನ್ನಾಗಿ ಬರೋದು' ಅಂತ ಸಿ.ವಿ.ರಾಜು ಸಮಜಾಯಿಷಿ ನೀಡಿ ಒಪ್ಪಿಸಿದರು.

ವಿಠಲಾಚಾರ್ಯರು ಸಂದರ್ಶನವೊಂದರಲ್ಲಿ ಹೀಗೆ ಹೇಳುತ್ತಾರೆ : ''ಒಂದು ಆಶ್ರಮದ ಸೆಟ್ ಹಾಕಿ ಶೂಟಿಂಗ್ ಶುರು ಮಾಡಿದರು. ರಾತ್ರಿ ಶೂಟಿಂಗ್. ಶೂಟಿಂಗ್ ಅಂದರೇನು ಎಂತಲೇ ನಮಗೆ ಗೊತ್ತಿರಲಿಲ್ಲ. ಸ್ಟಾರ್ಟ್, ಕಟ್, ಓ.ಕೆ. ಅಂದರೇನಂತಲೂ ಗೊತ್ತಿರಲಿಲ್ಲ.

''ಕ್ಯಾಮರಾಮನ್ ದೊರೆ ಮತ್ತು ಮಣಿ ಎಂಬುವವರನ್ನು ಕೊಯಮತ್ತೂರಿನಿಂದ ಕರೆದುಕೊಂಡು ಬರಲಾಗಿತ್ತು. ಬಹುಶಃ ಜಿ.ಡಿ.ಅಯ್ಯಂಗಾರ್ ಪಾತ್ರ ಅದು. 'ಕಂಸಾ ಕಂಸಾ' ಅಂತ ಕೂಗುತ್ತಾ ಬರುತ್ತಾನೆ. ರಾತ್ರಿ ಶುರುವಾದ್ದು ಬೆಳಿಗ್ಗೆ ೫ ಗಂಟೆ ಆದರೂ ಓ.ಕೆ. ಆಗಲಿಲ್ಲ. ಹೀಗೆ ಚಿತ್ರೀಕರಣವೆಲ್ಲ ವ್ಯರ್ಥವಾದದ್ದೇ ಹೆಚ್ಚು. ಫಿಲಂ ಸಿಗಲ್ಲ, ಬ್ಲಾಕ್‌ನಲ್ಲಿ ತಗೋಬೇಕು ಅಂತಲೂ ಸಮಯ ಕಳೆದರು-ಎಳೆದರು. ನಮಗೆ ಏನೂ ಅನುಭವ ಇರಲಿಲ್ಲ. ಹೀಗೆ ಬಂದೆವು ಪ್ರೊಡಕ್ಷನ್ ಲೈನ್‌ಗೆ.

''ನಾನು, ಶಂಕರಸಿಂಗ್, ಮತ್ತಷ್ಟು ಗೆಳೆಯರು ೧೯೪೭ರಲ್ಲಿ 'ಮಹಾತ್ಮಾ ಪಿಕ್ಚರ್ಸ್' ಅಂತ ಪ್ರಾರಂಭಿಸಿ ತೆಗೆದ ಮೊದಲ ಚಿತ್ರವೇ 'ಕೃಷ್ಣಲೀಲಾ'. ಏನೂ ತಿಳಿಯದ ನಮಗೆ ಟೆಕ್ನೀಷಿಯನ್ಸ್ ಎಲ್ಲ ಸುಳ್ಳು ಹೇಳಿ, ಚಿತ್ರ ಮುಗಿಸುವ ಹೊತ್ತಿಗೆ ಎರಡೂವರೆ ಲಕ್ಷ ಕೈ ಬಿಟ್ಟಿತ್ತು.

''ಕೆಂಪರಾಜ್ ಕಂಸನಾಗಿ ಪಾತ್ರ ಚೆನ್ನಾಗಿ ಮಾಡಿದ್ದರು. ಕೃಷ್ಣನ ಪಾತ್ರದಲ್ಲಿ ಕು॥ಉಷಾ, ಬೇಲೂರು ರಾಘವೇಂದ್ರರಾವ್ ಮೊದಲಾದವರೆಲ್ಲ ಚೆನ್ನಾಗಿಯೇ ಅಭಿನಯಿಸಿದ್ದರು. ೧೯೪೭ರಲ್ಲಿ ಚಿತ್ರ ಬಿಡುಗಡೆ ಮಾಡಿದಾಗ ಬಾಕ್ಸಾಫೀಸ್‌ನಲ್ಲಿ ಫೈಲ್ ಆಯಿತು. ಅನಂತರ ಅದನ್ನು ಮತ್ತೆ ಡೈರೆಕ್ಟರ್ ಕೆ.ಸುಬ್ರಹ್ಮಣ್ಯಂ ಅವರಿಗೆ ತೋರಿಸಿ ರಿ-ಎಡಿಟ್ ಮಾಡಿಸಿ ಇಂಪೀರಿಯಲ್ ಟಾಕೀಸ್‌ನಲ್ಲಿ ರಿಲೀಸ್ ಮಾಡಿದ ನಂತರ ಹಾಗೂ ಹೀಗೂ ಸ್ವಲ್ಪ ದುಡ್ಡು ಬರೋಕೆ ಶುರು ಆಯ್ತು. ಈ ಲೈನ್‌ಗೆ ಬಂದಾಯಿತು. ಇಲ್ಲಿಯೇ ಉಳಿಯುವುದು ಎಂದು ತೀರ್ಮಾನಿಸಿದೆವು....''

ಆಚಾರ್ಯರ ಈ ಹೇಳಿಕೆ ನವಜ್ಯೋತಿ ಸ್ಟುಡಿಯೋ ಹಾಗೂ 'ಕೃಷ್ಣಲೀಲಾ' ಚಿತ್ರದ ತಯಾರಿಕೆಯ ಕಥೆಯನ್ನು ತಿಳಿಸುತ್ತದೆ. ನವಜ್ಯೋತಿ ಸ್ಟುಡಿಯೋದ ಮುಖ್ಯಸ್ಥರಾಗಿದ್ದ ಜಿ.ಆರ್.ರಾಮಯ್ಯನವರ ಕೋರಿಕೆಯಂತೆ ಅವರಲ್ಲಿ ತಯಾರಾಗುವ ಚಿತ್ರಗಳಿಗೆ ಸಂಗೀತ ನಿರ್ದೇಶಕರಾಗಲು ಒಪ್ಪಿದ ಕಾಳಿಂಗರಾಯರೇ 'ಕೃಷ್ಣಲೀಲಾ' ಚಿತ್ರಕ್ಕೆ ಸಂಗೀತ ನೀಡಿದ್ದರು. ಸೋಹನ್‌ಲಾಲ್ ಅವರ ನೃತ್ಯ ನಿರ್ದೇಶನವಿತ್ತು.

ಮುಂದೆ ೧೯೫೩ರಲ್ಲಿ ಈ ಚಿತ್ರ ಅಲ್ಪ ಸ್ವಲ್ಪ ಬದಲಾವಣೆಗಳೊಡನೆ 'ಶ್ರೀಕೃಷ್ಣ' ಎಂಬ ಹೆಸರಿನಲ್ಲಿ ಪುನಃ ಬಿಡುಗಡೆಯಾಯಿತು.

ಶಂಕರಸಿಂಗ್ ನೇತೃತ್ವದಲ್ಲಿ ಮಹಾತ್ಮಾ ಪಿಕ್ಚರ್ಸ್ ಸಂಸ್ಥೆ ಮುಂದೆ ಇದೇ ಸ್ಟುಡಿಯೋದಲ್ಲಿ ಸಾಲು ಸಾಲಾಗಿ ಕನ್ನಡ ಚಿತ್ರಗಳನ್ನು ತಯಾರಿಸಿ ಕನ್ನಡ ಚಿತ್ರೋದ್ಯಮಕ್ಕೆ ಸುಭದ್ರ ಬುನಾದಿ ಹಾಕಿತು.

ಈ ಚಿತ್ರದಲ್ಲಿ ಪಾತ್ರ ವಹಿಸಿದ್ದ ಪ್ರತಿಮಾದೇವಿಯವರು ಹೇಳಿದ ಕೆಲವು ಸಂಗತಿಗಳನ್ನು ಸಂಗ್ರಹವಾಗಿ ಹೀಗೆ ಹೇಳಬಹುದು :

'ಕೃಷ್ಣಲೀಲಾ' ಚಿತ್ರದ ಸಲುವಾಗಿ ಪ್ರತಿಮಾದೇವಿಯವರನ್ನು ಉಡುಪಿಯಿಂದ ಕರೆತರಲಾಗಿತ್ತು. ಚಿತ್ರ ಮೈಸೂರು ಮೂವಿಟೋನ್ ಸ್ಟುಡಿಯೋದಲ್ಲಿ ಪ್ರಾರಂಭವಾಗಿತ್ತು. ಕ್ಯಾಮರಾದಲ್ಲಿ ಫಿಲಂ ಇಲ್ಲದೆ ಶ್ರೀರಂಗಪಟ್ಟಣದ ಕಾವೇರಿ ತೀರದಲ್ಲಿ ಒಂದು ತಿಂಗಳ ಕಾಲ ಚಿತ್ರೀಕರಣದ ನಾಟಕ ಮಾಡಿದರು. ಕಲಾವಿದರಿಗೆ ಇದೆಲ್ಲ ತಿಳಿಯದು. ಹೇಳಿದ ಹಾಗೆ ಅಭಿನಯಿಸುತ್ತಿದ್ದರು. ಇದು ಚಿತ್ರೀಕರಣ ಆಗುತ್ತಿದೆ ಎಂಬ ನಂಬಿಕೆ ಹುಟ್ಟಿಸಿ ಹಣ ತೊಡಗಿಸುವವರನ್ನು ಆಕರ್ಷಿಸುವ ತಂತ್ರವಾಗಿತ್ತು. ಅನಂತರ ಅರಸೀಕೆರೆಯ ಮಹಾತ್ಮ ಟೂರಿಂಗ್ ಟಾಕೀಸಿನ ಶಂಕರಸಿಂಗ್, ವಿಠಲಾಚಾರ್ಯ, ಮತ್ತಷ್ಟು ಜನ - ಪ್ರಾಯಶಃ ೮-೧೦ ಜನ ಪಾಲುದಾರರು - ಚಿತ್ರದ ಹಕ್ಕು ಪಡೆದ ಮೇಲೆ ನವಜ್ಯೋತಿ ಸ್ಟುಡಿಯೋದಲ್ಲಿ ಚಿತ್ರೀಕರಣ ಮಾಡಿದರು. ಹುಣಸೂರು ಕೃಷ್ಣಮೂರ್ತಿಯವರದೇ ಸಾಹಿತ್ಯ. ಸಿ.ವಿ.ರಾಜು ನಿರ್ದೇಶಕರು. ಮಂಗಳೂರು ಕನ್ನಡ ಮಾತಾಡುತ್ತಿದ್ದ ಪ್ರತಿಮಾದೇವಿ ಅವರಿಗೆ ಚಿತ್ರಕ್ಕಾಗಿ ಮೈಸೂರು ಕನ್ನಡ ಮಾತಾಡಲು ಕಲಿಸುತ್ತಿದ್ದವರು ಸಿ.ವಿ.ರಾಜು ಅಥವಾ ಅವರ ಸಹಾಯಕರು. ಚಿತ್ರ ಕ್ಕೆ ನೃತ್ಯ ನಿರ್ದೇಶಿಸಲು ಸೋಹನ್ ಲಾಲ್ ಅವರನ್ನು ಕರೆತರಲಾಗಿತ್ತು. ಅವರು ತಮ್ಮ ಗೆಳತಿ ಕಾಂತಾ ಎಂಬಾಕೆಗೆ ರಾಧೆಯ ಪಾತ್ರ ಕೊಟ್ಟರೆ ಮಾತ್ರ ನೃತ್ಯ ನಿರ್ದೇಶಿಸುತ್ತೇನೆಂದುದರಿಂದ ಪ್ರತಿಮಾದೇವಿ ಅವರಿಗೆ ಆ ಪಾತ್ರ ಕೈತಪ್ಪಿ ಗೋಪಿಕೆಯರಲ್ಲಿ ಮುಖ್ಯವಾದ ಪಾತ್ರವೊಂದು ಸಿಕ್ಕಿತು. ಸಂಭಾಷಣೆಯೂ ಬಹಳವಿಲ್ಲ. ಸ್ನಾನ ಮಾಡುತ್ತಿದ್ದಾಗ ಬಂದು ನಮ್ಮ ವಸ್ತ್ರಗಳನ್ನೆಲ್ಲ ಕೃಷ್ಣ ಅಪಹರಿಸಿದ ಎಂದು ಯಶೋದೆಯ ಬಳಿ ದೂರು ಹೇಳುವುದಷ್ಟೇ ಮಾತು. ರಿಹರ್ಸಲ್‌ಗೆಂದೇ ಲಕ್ಷ್ಮೀಪುರಂನಲ್ಲಿ ಒಂದು ದೊಡ್ಡ ಮನೆ ಬಾಡಿಗೆಗೆ ಹಿಡಿಯಲಾಗಿತ್ತು. ನಿತ್ಯ ನಾಟಕದ ಹಾಗೆ ಸೀನ್‌ಗಳು, ಅಭಿನಯ, ನೃತ್ಯ , ಸಂಗೀತ ಎಲ್ಲವೂ ೨-೩ ತಿಂಗಳವರೆಗೆ ರಿಹರ್ಸಲ್ ಮಾಡಿಸಲಾಗುತ್ತಿತ್ತು. ಸೋಹನ್ ಲಾಲ್ ನೃತ್ಯ ನಿರ್ದೇಶಕರಾದ್ದರಿಂದ ನೃತ್ಯ ಕಥಕ್ ಶೈಲಿಯಲ್ಲಿತ್ತು. ರಾಧೆ-ಕೃಷ್ಣರಿಗೆ ಮಾತ್ರ ವಿಶೇಷವಾಗಿ ಭರತ ನಾಟ್ಯ ಶೈಲಿಯ ನೃತ್ಯವನ್ನು ಅಳವಡಿಸಲಾಗಿತ್ತು. ಬೆಂಗಳೂರಿನ ಜಯಚಾಮರಾಜೇಂದ್ರ ಆಕ್ಯುಪೇಷನಲ್ ಇನ್‌ಸ್ಟಿಟ್ಯೂಟ್‌ನಲ್ಲಿ ರಿಕಾರ್ಡಿಂಗ್ ಆಗಿತ್ತೆಂದು ನೆನಪು. ಕೃಷ್ಣಲೀಲಾ ನಾಟಕಕ್ಕೂ, ಸಿನಿಮಾಗೂ ವ್ಯತ್ಯಾಸವೇನೂ ಇರಲಿಲ್ಲ. ಅದೇ ಕಥೆಯೇ. ಕೃಷ್ಣನ ಪಾತ್ರಕ್ಕೆ ಉಷಾ ಎಂಬ ಹುಡುಗಿ - ಮಹಾರಾಜ ಕಾಲೇಜಿನ ವಾರ್ಡನ್‌ರ ಮಗಳು - ಗೊತ್ತಾಗಿದ್ದಳು. ಮಕರಂದನಾಗಿ ರಾಜಕುಮಾರ್ ಅವರ ಸಹೋದರ ವರದಪ್ಪನವರಾದರೆ ಅವರ ತಂಗಿ ಶಾರದಮ್ಮನವರೂ ಪಾತ್ರ ಮಾಡಿದ್ದರು. ಖ್ಯಾತ ರಂಗ ಕಲಾವಿದೆ ಹೆಚ್.ಪಿ.ಸರೋಜಾ ಅವರ ಅಕ್ಕ ಕಾವೇರಿ ಅನ್ನುವವರೂ ಪಾತ್ರ ವಹಿಸಿದ್ದರು. ಆಕೆ ಮರಿರಾಯರ ಹೆಂಡತಿಯ ಪಾತ್ರದಲ್ಲಿದ್ದರು. ಆಗೆಲ್ಲ ಒಬ್ಬರೇ ಮೇಕಪ್ ಮ್ಯಾನ್, ಎಂ.ಎಸ್.ಸುಬ್ಬಣ್ಣ.

ವಸ್ತ್ರಾಲಂಕಾರಕ್ಕೆ ವಿಶೇಷವೇನಿಲ್ಲ. ಪೌರಾಣಿಕ ಕಥೆಯಾದ್ದರಿಂದ ಎಲ್ಲ ಗೊತ್ತಿರೋದು. ಕಾಸ್ಟ್ಯೂಮರ್‌ನ ಮದರಾಸಿನಿಂದ ಕರೆತಂದಿದ್ದರು. ಯಶೋದೆ ಪಾತ್ರಕ್ಕೆ ಕಚ್ಚೆ ಸೀರೆ. ಗೋಪಿಕಾ ಸ್ತ್ರೀಯರು, ರಾಧೆ ಎಲ್ಲರಿಗೂ ಲಂಗ ದಾವಣಿ, ಮಣಿ ಸರಗಳು ಇತ್ಯಾದಿ. ಕೊಂಚ ಉತ್ತರ ಭಾರತದ ಛಾಯೆ ಇರೋದು. ರಾಸಲೀಲೆಯೊಂದರ ನೃತ್ಯ, ಹಾಡುಗಳಿಗೆ ಬಹಳ ಸಮಯ ತಗೊಂಡಿತ್ತು. ಚಿತ್ರದಲ್ಲಿ ಹಾಸ್ಯ ಅಂತ ಪ್ರತ್ಯೇಕವಾಗಿ ಇರಲಿಲ್ಲ. ಮುಖ್ಯವಾಗಿ ಮಕರಂದನ ಪಾತ್ರದಲ್ಲಿ ಹಾಸ್ಯ ಇತ್ತು. ಚಿತ್ರದಲ್ಲಿ ಸಂಗೀತ ಮುಖ್ಯ, ಕಾಳಿಂಗರಾಯರು ಆ ಕಾಲದಲ್ಲೇ ಸಂಗೀತಕ್ಕೆ ವಿಶೇಷ ವಾದ್ಯಗಳನ್ನು ಬಳಸಿ ವಿಭಿನ್ನವಾಗಿ ರಾಗ ಸಂಯೋಜಿಸಿದ್ದರು.

ಚಿತ್ರ ಬಿಡುಗಡೆ ಆಯಿತು. ಅರ್ಧ ಭಾಗ ಮಾತ್ರ. ಇನ್ನರ್ಧ ಭಾಗ ನಾಳೆ ತೋರಿಸುತ್ತೇವೆ ಎಂದು ಹೇಳಿ ಮರುದಿನ ತೋರಿಸಿದ್ದರು. ಪ್ರಿಂಟ್ ಬಂದಿರಲಿಲ್ಲ.

'ಕೃಷ್ಣಲೀಲೆ'ಯನ್ನು ನೋಡಿ ಜನ ಗಲಾಟೆ ಮಾಡಿದ ಮೇಲೆ ಮರುದಿನ ಕಾಳಿಂಗ ಮರ್ದನ, ಮತ್ತಿತರ ದೃಶ್ಯಗಳನ್ನು ಪ್ರಿಂಟ್ ಮಾಡಿ ಪ್ರದರ್ಶಿಸಿದ್ದರು.

ಪ್ರತಿಮಾದೇವಿ ಅವರ ನೆನಪುಗಳು ಇಷ್ಟನ್ನು ಹೆಕ್ಕಿ ತೆಗೆದರೆ ಕುಮಾರ ವೆಂಕಣ್ಣನವರು ''ಚಿತ್ರಗಳಿಗೆ ಕಲಾವಿದೆಯರನ್ನು ಕರೆತರುವುದೇ ಪ್ರಯಾಸವಾಗಿತ್ತು. ಸಾಮಾನ್ಯ ನಾಗರಿಕರಿಗೆ ಇದೊಂದು ಮೈಲಿಗೆಯ ಕೂಟ. ನಂಜನಗೂಡಿನ ಸಹೋದರಿಯರೆಂದು ಪ್ರಸಿದ್ಧರಾಗಿದ್ದ ಜಯಮ್ಮ, ನಾಗರತ್ನಮ್ಮ ಒಪ್ಪಿಕೊಂಡರು. ಶಿವಮೊಗ್ಗೆ, ಕುಂದಾಪುರಗಳ ಕಡೆಗೆ ಗಮನ ಹರಿಸಬೇಕಾಯಿತು...'' ಎನ್ನುತ್ತಾರೆ.

'ಕೃಷ್ಣ ಲೀಲಾ' ತೆರೆಗೆ ಬರುವುದಕ್ಕೂ ಮೊದಲೇ ಉತ್ತರ ಕರ್ನಾಟಕದವರೇ ತಯಾರಿಸಿದ ಪಂಪಾ ಪಿಕ್ಚರ್ಸ್ ಸಂಸ್ಥೆಯ 'ಚಂದ್ರಹಾಸ' ತಯಾರಾಗಿತ್ತು.

ಈ ಚಿತ್ರದ ನಿರ್ದೇಶಕರಾದ ಶಾಂತೇಶ ಪಾಟೀಲರು ಸುಶಿಕ್ಷಿತರು. ಲಖನೌ ವಿಶ್ವವಿದ್ಯಾನಿಲಯದಲ್ಲಿ ಬಾನುಲಿ ಪ್ರಸಾರ ತಂತ್ರದ ಬಗ್ಗೆ ಸ್ನಾತಕೋತ್ತರ ಪದವಿ ಪಡೆದವರು. ಮುಂದೆ ಸಾಗರ್ ಮೂವಿಟೋನ್‌ನಲ್ಲಿ ಧ್ವನಿಗ್ರಹಣ ತಂತ್ರಜ್ಞರಾಗಿ ಸೇರಿದರು. ಅಲ್ಲಿ ಸ್ವಲ್ಪ ಕಾಲ ತರಬೇತಿ ಪಡೆದ ನಂತರ ಮಿತ್ರರ ಜತೆ ಸೇರಿ ಶ್ರೀ ಸೌಂಡ್ ಸ್ಟುಡಿಯೋಸ್ ಸ್ಥಾಪಿಸಿದರು. ಸುಪ್ರಸಿದ್ಧ ಸಂಗೀತ ನಿರ್ದೇಶಕರುಗಳಾದ ಸಿ.ರಾಮಚಂದ್ರ, ವಸಂತ ದೇಸಾಯಿ ಅವರ ಹಾಡುಗಳು ಪ್ರಥಮವಾಗಿ ರಿಕಾರ್ಡ್ ಆದುದು ಈ ಸ್ಟುಡಿಯೋದಲ್ಲಿಯೇ. ಎಂ.ಎಸ್.ಸುಬ್ಬಲಕ್ಷ್ಮಿ ಅಭಿನಯದ 'ಮೀರಾಬಾಯಿ', ಸೈಗಾಲ್ ಗಾಯನದ 'ಸೂರ್ ದಾಸ್', ವಿ.ಶಾಂತಾರಾಮ್ ಅವರ 'ಶಕುಂತಲಾ', 'ಡಾ|ಕೋಟ್ನಿಸ್ ಕಿ ಅಮರ್ ಕಹಾನಿ' ಮುಂತಾದ ಚಿತ್ರಗಳ ಹಾಡುಗಳ ಧ್ವನಿಮುದ್ರಣ ಕೂಡ ಇಲ್ಲೇ ಆಯಿತು ಎಂದು ಹೆಮ್ಮೆಯಿಂದ ಹೇಳುತ್ತಾರೆ ವಯೋವೃದ್ಧ ಶಾಂತೇಶ ಪಾಟೀಲರು.

'ಚಂದ್ರಹಾಸ' ಚಿತ್ರದ ತಯಾರಿಕೆ ಬಗ್ಗೆ ಶಾಂತೇಶ ಪಾಟೀಲರು ಹೀಗೆನ್ನುತ್ತಾರೆ : ''ಇದೇ ಸಮಯದಲ್ಲಿ ನನಗೆ ಚಿತ್ರ ತಯಾರಿಸುವ ಆಸಕ್ತಿ ಮೂಡಿ 'ಪಂಪಾ ಪಿಕ್ಚರ್ಸ್ ಪ್ರೈವೇಟ್ ಲಿಮಿಟೆಡ್' ಉದಯವಾಯಿತು. ಅದು ೧೯೪೭ರಲ್ಲಿ . ನಾವು ಆರಿಸಿದ ಕಥೆ ಜೈಮಿನಿ ಭಾರತದಲ್ಲಿ ಬರುವ ಚಂದ್ರಹಾಸನ ಕಥೆ. ನನಗೆ ತಿಳಿದಂತೆ ಕನ್ನಡ ಸಾಹಿತ್ಯ ಕೃತಿಯೊಂದನ್ನು ಆಧರಿಸಿ ತಯಾರಿಸಿದ ಪ್ರಥಮ ಚಿತ್ರ ಇದೇ. ಇದಕ್ಕೆ ಉತ್ತಮ ಸಂಭಾಷಣೆ ರಚಿಸಬಲ್ಲವರಾರೆಂದು ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚಾರ್ಯರುಗಳಾಗಿದ್ದ ರೂಬನ್ ಮತ್ತು ಮಾಳವಾಡ ಅವರನ್ನು ಕೇಳಿದಾಗ ಅವರು ಮುಂಬಯಿ ಆಕಾಶವಾಣಿಯಲ್ಲಿದ್ದ 'ಎನ್ಕೆ' ಅವರ ಹೆಸರು ಸೂಚಿಸಿದರು. ಪ್ರಾಚಾರ್ಯ ಬಸವನಾಳ ಅವರು ಸಂಗೀತ ನಿರ್ದೇಶನಕ್ಕೆ ಮಲ್ಲಿಕಾರ್ಜುನ ಮನ್ಸೂರರ ಹೆಸರನ್ನು ಸಲಹೆ ಮಾಡಿದರು.

''ಚಂದ್ರಹಾಸ'ನ ಪಾತ್ರಕ್ಕೆ ವಿಕಾಸ್ ಷಾ ಎಂಬಾತನನ್ನು, ನಾಯಕಿಯ ಪಾತ್ರಕ್ಕೆ ಕುಂದಾಪುರದ ಒಬ್ಬ ಕಲಾವಿದೆಯನ್ನು ಆರಿಸಿ ತರಬೇತಿ ನೀಡಿದೆ.[೧] ಚಿತ್ರದ ಅತಿ ಮುಖ್ಯ ಪಾತ್ರಗಳಲ್ಲೊಂದಾದ ದುಷ್ಟಬುದ್ಧಿಯ ಪಾತ್ರಕ್ಕೆ ಆಗಿನ ಖ್ಯಾತ ರಂಗಭೂಮಿ ಕಲಾವಿದ ಹಂದಿಗನೂರು ಸಿದ್ಧರಾಮಪ್ಪ ದೊರೆತದ್ದು ನನ್ನ ಅದೃಷ್ಟ. ಈತ ತಮ್ಮ ಪಾತ್ರವನ್ನು ಅತ್ಯುತ್ತಮವಾಗಿ ನಿರ್ವಹಿಸಿದರಲ್ಲದೆ ಉಳಿದ ಕಲಾವಿದರ ತಯಾರಿಯಲ್ಲಿ ಒಳ್ಳೆಯ ಸಹಕಾರ ನೀಡಿದರು.

''ಗಂಗಪ್ಪ ವಾಲಿ ಮತ್ತು ಶ್ರೀಕಂಠಶಾಸ್ತ್ರಿ ಗೀತೆಗಳನ್ನು ಬರೆದರು. ಜನಪದ ಸಾಹಿತ್ಯದಲ್ಲಿನ ಬೀಸುವ, ಕುಟ್ಟುವ ಪದಗಳನ್ನು ಧಾರಾಳವಾಗಿ ಬಳಸಲಾಯಿತು. ಆ ಕಾಲದ ಲತಾ ಮಂಗೇಶ್ಕರ್ ಎನ್ನಬಹುದಾದ ಅಮೀರ್‌ಬಾಯಿ ಕರ್ನಾಟಕಿ ತಮಗೆ ಈ ಚಿತ್ರದಲ್ಲಿ ಒಂದು ಪಾತ್ರ ಕೊಡಲೇಬೇಕೆಂದು ಒತ್ತಾಯ ಮಾಡಿದರು. ಅವರಿಗೆ ಕಾಡಿನಲ್ಲಿ ಚಂದ್ರಹಾಸನನ್ನು ಬೆಳೆಸುವ ತಾಯಿಯ ಪಾತ್ರ ಕೊಟ್ಟೆ. ಆ ಸಂದರ್ಭದಲ್ಲಿ ಅವರು ಹಾಡಿದ ಜೋಗುಳ ಹಾಡು ಶ್ರೀಕಂಠಶಾಸ್ತ್ರಿಗಳು ಬರೆದ 'ಬಾ ಬಾ ಬನಸಿರಿಯೆ...' ಬಹಳ ಜನಪ್ರಿಯವಾಯಿತು.

''ಮಾ|ವಿನಾಯಕ್ ಅವರ ಸೋದರ ವಾಸುದೇವ ಕರ್ನಾಟಕಿ ಚಿತ್ರದ ಛಾಯಾಗ್ರಾಹಕರು. ಒಳಾಂಗಣ ಚಿತ್ರೀಕರಣವನ್ನು ಮುಂಬಯಿನಲ್ಲೂ, ಹೊರಾಂಗಣ ಚಿತ್ರೀಕರಣವನ್ನು ಕೊಲ್ಹಾಪುರದ ಸಮೀಪ ಅಂಬಾಘಾಟ್ ಅರಣ್ಯದಲ್ಲೂ ಮಾಡಿದೆವು. ಚಿತ್ರ ತಯಾರಿಕೆಯ ವೆಚ್ಚ ಸುಮಾರು ಒಂದೂವರೆ ಲಕ್ಷ ರೂಪಾಯಿಗಳು. ೧೨ ಪ್ರಿಂಟ್ ತೆಗೆದಿದ್ದೆವು. ಮೈಸೂರಿನ ಪ್ರಭುದೇವ ಥಿಯೇಟರಿನಲ್ಲಿ ಚಿತ್ರ ಬಿಡುಗಡೆ ಆದಾಗ ಆಗಿನ ಅರ್ಥ ಸಚಿವ ಹೆಚ್.ಸಿ.ದಾಸಪ್ಪ ಅವರನ್ನು ಉದ್ಘಾಟನೆಗೆ ಕರೆದಿದ್ದೆವು. ಬೆಂಗಳೂರಿನ ಸೂಪರ್ ಟಾಕೀಸ್‌ನಲ್ಲೂ ಬಿಡುಗಡೆಗೆ ಸಚಿವ ಕೆ.ಟಿ.ಭಾಷ್ಯಂ ಅವರನ್ನು ಕರೆಸಿದ್ದೆವು. ಮುಖ್ಯ ಅತಿಥಿಗಳಾಗಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಗುಬ್ಬಿ ವೀರಣ್ಣ ಬಂದಿದ್ದರು. ಉತ್ತರ ಕರ್ನಾಟಕ ಹಾಗೂ ಮೈಸೂರು ರಾಜ್ಯದಲ್ಲಿ ಚಿತ್ರ ಚೆನ್ನಾಗಿ ಹಣ ಗಳಿಸಿತು. ಹೈದರಾಬಾದ್‌ನಲ್ಲಿ ೧೯೪೮ರ ರಜಾಕಾರ್ ದಾಳಿಯ ನೆಪದಿಂದ ಚಿತ್ರಮಂದಿರಗಳಿಂದ ಬರಬೇಕಾದ ಹಣ ಬರಲಿಲ್ಲ. ಆದರೆ ಒಟ್ಟಿನಲ್ಲಿ ಚಿತ್ರ ಯಶಸ್ವಿಯಾಯಿತು.

''ಈ ಯಶಸ್ಸಿನ ರುಚಿ ಕಂಡ ನಮ್ಮ ಸಂಸ್ಥೆಯ ಆಡಳಿತ ಮಂಡಳಿ ಮುಂದಿನ ಚಿತ್ರವನ್ನು ಇನ್ನೂ ಅದ್ದೂರಿಯಾಗಿ ಹಿಂದಿಯಲ್ಲಿ ತಯಾರಿಸಬೇಕೆಂದು ಅಪೇಕ್ಷಿಸಿತು. ಆದರೆ ಕನ್ನಡದಲ್ಲಿಯೇ ಚಿತ್ರ ತೆಗೆಯಬೇಕೆಂದಿದ್ದ ನಾನು ಅದಕ್ಕೆ ಒಪ್ಪದೆ ಸಂಸ್ಥೆಯಿಂದ ಹೊರಬಂದೆ.''

ಶಾಂತೇಶ ಪಾಟೀಲರು ಮುಂದೆ ಮುಂಬಯಿ ಸರ್ಕಾರದ ಚಲನಚಿತ್ರ ವಿಭಾಗದಲ್ಲಿ ಅಧಿಕಾರಿಯಾಗಿ ಸೇರಿದರು. ಕನ್ನಡದ ಮೊಟ್ಟ ಮೊದಲ ಸಾಕ್ಷ್ಯಚಿತ್ರ, ಸುದ್ದಿ ಚಿತ್ರಗಳ ತಯಾರಿಕೆ ಆರಂಭವಾದದ್ದು ಅಲ್ಲಿಯೇ. ಅನಂತರ ಪಾಟೀಲರು ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆಯ ನಿರ್ದೇಶಕರಾಗಿದ್ದರು.

ಶಾಂತೇಶ ಪಾಟೀಲರ ನಿರ್ದೇಶನದ 'ಚಂದ್ರಹಾಸ' ಬಗ್ಗೆ ಬಂದ ಪತ್ರಿಕಾ ವಿಮರ್ಶೆಗಳಲ್ಲಿ ''ಪ್ರಾರಂಭದಲ್ಲೇ ಇರುವ 'ಪಂಪಾ' ಗೀತೆ ಕರ್ಣಕಠೋರವಾಗಿದೆ. ಕತೆಯ ಬೆಳವಣಿಗೆ ಚಿತ್ರಕ್ಕೆ ಹೊಂದಿಕೊಂಡಿಲ್ಲ. ಜೈಮಿನಿ ಭಾರತದಿಂದ ಆರಿಸಿದೆ ಎಂದು ಹೇಳಿದ್ದಾರೆ. ಆದರೆ ಲಕ್ಷ್ಮೀಶನ ಕತೆಯ ನೈಜಾನುಸರಣೆ, ಅಲ್ಲಿಯ ಗೀತೆ (ಪದ್ಯ)ಗಳು ಚಿತ್ರದಲ್ಲಿ ಇಲ್ಲ. ಕಲಾವಿದರು ಪರಕಂಠ ಗೀತೆಗಳಿಗೆ ಹೊಂದಿಸಿಕೊಂಡು ಅಭಿನಯಿಸಿಲ್ಲ. ವಿಷಯೆಯ ಪಾತ್ರವು ವೀಣಾವಾದನ ಮಾಡುವಾಗ ಧ್ವನಿಯ ಏರಿಳಿತಕ್ಕೆ ತಕ್ಕಂತೆ ಬೆರಳುಗಳು ವಾದ್ಯದ ಮೇಲೆ ಆಡುವುದಿಲ್ಲ. ರಂಗ ಕಲಾವಿದರು ಚಿತ್ರ ಮಾಧ್ಯಮಕ್ಕೆ ಒಗ್ಗಿಕೊಂಡಿಲ್ಲ. ಇತರ ಕನ್ನಡ ಚಿತ್ರಗಳಲ್ಲಿಯಂತೆ ಕನ್ನಡೇತರ ಮುಖಗಳ ಬದಲು ಕನ್ನಡಿಗರೇ ಹೆಚ್ಚಾಗಿದ್ದಾರೆಂಬುದು ಮೆಚ್ಚುವಂಥ ಸಂಗತಿ. ಬಾಲ ಚಂದ್ರಹಾಸನ ಪಾತ್ರದಲ್ಲಿ ಚಿ|ಕುಮುದ ಚೆನ್ನಾಗಿ ಅಭಿನಯಿಸಿದ್ದಾರೆ...'' ಮೊದಲಾದ ಅಭಿಪ್ರಾಯಗಳು ವ್ಯಕ್ತವಾಗಿವೆ.

೧೯೪೭ರಲ್ಲಿ ತಯಾರಾದ ಇನ್ನೊಂದು ಚಿತ್ರ 'ಮಹಾನಂದ'. ಮೊದಲು ಈ ಚಿತ್ರ ತಯಾರಿಸಿದ ಛಾಯಾಗ್ರಾಹಕ ಟಿ.ಜಾನಕಿರಾಮ್ (ಅವರೇ ನಿರ್ದೇಶಕರು) ಅದನ್ನು



(ಚಿತ್ರ ೪೧) 'ಚಂದ್ರಹಾಸ' ಚಿತ್ರದಲ್ಲಿ ಅಮೀರ್‌ಬಾಯಿ ಕರ್ನಾಟಕಿ

೧. ಕುಂದಾಪುರದ ಕಲಾವಿದೆ ಶಾರದಮ್ಮ. ಇವರು ಖ್ಯಾತ ಕಲಾವಿದೆ. ವೈಶಾಲಿ ಕಾಸರವಳ್ಳಿಯವರ ಚಿಕ್ಕಮ್ಮ. ಚಿತ್ರೀಕರಣದ ದಿನ ವೈಶಾಲಿ ಅವರ ತಾಯಿ ಕೃಷ್ಣವೇಣಿ ಅವರೂ ಜೊತೆಗೆ ಹೋಗಿದ್ದರೆಂದೂ, ಆಕೆಗೂ ಮೇಕಪ್ ಹಾಕಿ ಚಿತ್ರೀಕರಿಸಿದರೆಂದೂ ಕಲಾವಿದೆ ಶಾರದಮ್ಮನವರೇ ಹೇಳುತ್ತಾರೆ.



(ಚಿತ್ರ ೪೨) 'ಮಹಾನಂದ' ಚಿತ್ರದಲ್ಲಿ ಸೋರಟ್ ಅಶ್ವತ್ಥ್ ಮತ್ತು ಕಾಶೀನಾಥ್

ಮಹಾತ್ಮ ಪಿಕ್ಚರ್ಸ್‌ಗೆ ಮಾರಿದರು. ಅನಂತರ ಈ ಸಂಸ್ಥೆಯಲ್ಲೇ ಪಾಲುದಾರರಾಗಿದ್ದ ಟಿ.ವಿ.ರಾಮಸ್ವಾಮಿ ತಾವೇ ಖರೀದಿಸಿ ಬಿಡುಗಡೆ ಮಾಡಿದರು. ಚಿತ್ರ ಸೋತಿತು.

ಕೆಂಪರಾಜ ಅರಸ್, ಸುಮತಿ, ಕಾಶೀನಾಥ್, ವೇದಾಂತಂ ಪದ್ಮನಾಭನ್, ರಾಜಕುಮಾರಿ, ಪ್ರತಿಮಾದೇವಿ, ಶಾಂತಾದೇವಿ, ಸೋರಟ್ ಅಶ್ವಥ್, ಎಂ.ಸಿ.ವೀರ್ (ನೃತ್ಯ), ಮೋಹನಕುಮಾರಿ ಮುಂತಾದವರು ತಾರಾಗಣದಲ್ಲಿದ್ದರು. ಮೈಸೂರಿನ ಸುಪ್ರಸಿದ್ಧ ಬಲ್ಲಾಳ್ ಹೋಟೇಲ್‌ನ ಎಸ್.ಆರ್.ಕೃಷ್ಣ ಬಲ್ಲಾಳ್ ಒಂದು ಪಾತ್ರದಲ್ಲಿ ಅಭಿನಯಿಸಿದ್ದರು. ತ್ರಿವೇಣಿ ಫಿಲಂಸ್/ನೆಹರು ಪಿಕ್ಚರ್ಸ್ ಲಾಂಛನದಡಿ ತಯಾರಾದ 'ಮಹಾನಂದ' ಚಿತ್ರದ ಕಥೆ, ಸಂಭಾಷಣೆ, ಗೀತೆಗಳನ್ನು ಹುಣಸೂರು ಕೃಷ್ಣಮೂರ್ತಿಗಳು ರಚಿಸಿದ್ದರು.

ಮುಂದೆ ಸುಪ್ರಸಿದ್ಧ ಚಿತ್ರಸಾಹಿತಿ, ನಿರ್ದೇಶಕ, ನಿರ್ಮಾಪಕರಾಗಿ ಚಿತ್ರರಂಗದಲ್ಲಿ ದೊಡ್ಡ ಹೆಸರು ಮಾಡಿದುದಲ್ಲದೆ, ಅನೇಕ ಹೊಸ ಕಲಾವಿದರುಗಳನ್ನು ಚಿತ್ರರಂಗಕ್ಕೆ ಪರಿಚಯಿಸಿದ ಕೃಷ್ಣಮೂರ್ತಿಗಳು ರಂಗಭೂಮಿ ಹಿನ್ನೆಲೆಯಿಂದ ಬಂದವರು. ಪ್ರಾರಂಭದ ದಿನಗಳಲ್ಲಿ ರಂಗಭೂಮಿಯ ನಾಟಕೀಯ ಹಾಗೂ ಗ್ರಾಂಥಿಕ ಸಂಭಾಷಣೆಗಳೇ ಇರುತ್ತಿದ್ದವು. ಇದನ್ನು ಬದಲಾಯಿಸಿ ಆಡು ಮಾತಿನ ಭಾಷೆಯನ್ನು ಬಳಕೆಗೆ ತಂದ ಕೀರ್ತಿ ಹುಣಸೂರರಿಗೆ ಸಲ್ಲುತ್ತದೆ. ಆದರೆ ಅವರು ಹೇಳುವುದು ಈ ಕೀರ್ತಿ ನಾಗೇಂದ್ರರಾಯರಿಗೆ ಸಲ್ಲಬೇಕು ಎಂದು. ಅದು ಹೇಗೇ ಇರಲಿ, ಚಿತ್ರ ಸಂಭಾಷಣೆಗಳಲ್ಲಿ ಹೊಸತನವನ್ನು ತುಂಬಿದವರು ಈ ಇಬ್ಬರು ಮಹನೀಯರು.

೧೯೩೨ರಲ್ಲಿ ಆರಂಭವಾದ 'ಚಿತ್ರ ಸಮಾಚಾರ್' ಮಾಸಪತ್ರಿಕೆ ತನ್ನ ಸೆಪ್ಟೆಂಬರ್ ೧೯೪೭ರ ಸಂಚಿಕೆಯಲ್ಲಿ ''ತ್ರಿವೇಣಿ ಸಂಸ್ಥೆಯವರ 'ಮಹಾನಂದ' ಕನ್ನಡ ಚಿತ್ರವು ಕೇವಲ ೧೪ ದಿನಗಳು ಮಾತ್ರ ಬೆಂಗಳೂರು ನಗರದಲ್ಲಿ ನಡೆಯಿತು. ಅನೇಕ ಪರಭಾಷಾ ಚಿತ್ರಗಳು ರಜತ-ಶತದಿನೋತ್ಸವಗಳನ್ನು ನಡೆಸಿದರೆ ಕನ್ನಡದ 'ಮಹಾನಂದ' ಕೇವಲ ೧೪ ದಿನ ನಡೆದದ್ದೇ ದಾಖಲೆ'' ಎಂದು ಹೇಳುತ್ತದೆ. ಕನ್ನಡ ಚಿತ್ರರಂಗಕ್ಕೆ ಇನ್ನೆಂದೂ ಇಂಥ ಸ್ಥಿತಿ ಬಾರದಿರಲೆಂದೂ, ಅಪಮಾನಕರ ಸಂಗತಿ ಎಂದೂ ವಿವರಿಸುತ್ತದೆ, ಮತ್ತು ಚಿತ್ರದ ಬಗ್ಗೆ 'ಕಣ್ ಚಳಕ ಕೈ ಚಳಕ' ಎಂಬ ಶೀರ್ಷಿಕೆಯಡಿ ಹೀಗೆ ಬರೆಯುತ್ತದೆ : 'ಮಹಾನಂದ' ಚಿತ್ರದಲ್ಲಿ



(ಚಿತ್ರ ೪೩) 'ಮಹಾತ್ಮಾ ಕಬೀರ್' ಚಿತ್ರದಲ್ಲಿ ನಾಗೇಂದ್ರರಾಯರು

ಕೆಂಪರಾಜ್ (ಪಾತ್ರ) ಸತ್ತಾಗ ಕಣ್ಣು ಬಿಡುವ ಅನುಪಮ ದೃಶ್ಯಕ್ಕೆ ತಾವು ಹೊಣೆಗಾರರಲ್ಲ ಎಂದೂ, ಈ ಬುದ್ಧಿ ಚಾತುರ್ಯವು ಈ ಚಿತ್ರವನ್ನು ಎಡಿಟ್ ಮಾಡಿದಾತನದು ಎಂದು 'ಮಹಾನಂದ' ತಯಾರಿಕಾ ವೃಂದದವರು ಹೇಳುತ್ತಿದ್ದಾರಂತೆ...''

'ಮಹಾನಂದ'ದ ಮತ್ತಷ್ಟು ವಿವರಗಳು ಹೀಗಿವೆ: ತ್ರಿವೇಣಿ ಫಿಲಂಸ್ ಹೆಸರಿನಲ್ಲಿ ಚಿತ್ರ ಸಂಸ್ಥೆ ಸ್ಥಾಪಿಸಿ 'ಮಹಾನಂದ' ಎಂಬ ಚಿತ್ರದ ತಯಾರಿಕೆ ಆರಂಭಿಸಿ ಹಣವಿಲ್ಲದೆ ಕಣ್ಣು ಕಣ್ಣು ಬಿಡುತ್ತಿದ್ದ ಸಮಯದಲ್ಲಿ ಅರಸೀಕೆರೆಯ ಡಿ.ವಿ.ರಾಮಸ್ವಾಮಿ ಎಂಬುವರು ಮಹಾತ್ಮ ಸಂಸ್ಥೆಯ ಮೂಲಕ ನೆಹರು ಪಿಕ್ಚರ್ಸ್ ಎಂಬ ಸಂಸ್ಥೆಯ ಬಲೆಗೆ ಬಿದ್ದು ಲಕ್ಷಾಂತರ ರೂಪಾಯಿ ನಷ್ಟಕ್ಕೆ ಗುರಿಯಾದರು. ಬೆಂಗಳೂರಿನಲ್ಲಿ ಚಿತ್ರ ಬಿಡುಗಡೆಯಾದಾಗ ದಯನೀಯ ಸ್ಥಿತಿಯಲ್ಲಿ ಸೋತು ಹೋಯಿತು. ಇದನ್ನು ಕಂಡು ಇದೇ ಸ್ಥಿತಿಯಲ್ಲಿ ಬೇರೆ ಕಡೆ ಈ ಚಿತ್ರವನ್ನು ಬಿಡುಗಡೆ ಮಾಡಿದರೆ ತಮ್ಮ ಘನತೆಗೆ ಕುಂದೆಂದೂ, ಎಷ್ಟೇ ಕಷ್ಟವಾದರೂ ಆ ಚಿತ್ರವನ್ನು ಒಂದು ಸುಸ್ವರೂಪಕ್ಕೆ ತರಬೇಕೆಂದು ನಿಶ್ಚಯಿಸಿ ರಾಮಸ್ವಾಮಿಯವರು ಪುನರ್ ನಿರ್ಮಾಣ ಕಾರ್ಯವನ್ನು ಪ್ರಾರಂಭಿಸಿದರು. ಉದ್ಯಮದ ಅನೇಕರು ಅವರನ್ನು ನಿರುತ್ಸಾಹಗೊಳಿಸಿದರು. ಕೆಲವರು ತೀರ ಅಪಹಾಸ್ಯವನ್ನೂ ಮಾಡಿದರು. ಇವೆಲ್ಲವುಗಳ ಮಧ್ಯೆ ಹಣದ ತಾಪತ್ರಯ ಬೇರೆ. ಇಷ್ಟಾದರೂ ಹಠ ಬಿಡದೆ ತಮ್ಮ ಧ್ಯೇಯವನ್ನು ಸಾಧಿಸಿದರು. ನವಜ್ಯೋತಿಯಲ್ಲಿ ಕೆಲವು ಹಾಡುಗಳನ್ನು ರಿಕಾರ್ಡ್ ಮಾಡಿದರು. ಸ್ಟಾರ್ ಕಂಬೈನ್ಸ್‌ನಲ್ಲಿ ಕೆಲವು ಭಾಗಗಳನ್ನು ತೆಗೆದರು. ಎ.ವಿ.ಎಂ. ಸ್ಟುಡಿಯೋದಲ್ಲಿ ಡೆವಲಪ್ ಮಾಡಿಸಬೇಕಾದ ಸಂದರ್ಭವೂ ಬಂತು. ಬೆಂಗಳೂರಿನಲ್ಲಿ ಆಗ ಇದ್ದ ವಿಕ್ರಂ ಲ್ಯಾಬರೇಟರಿಯಲ್ಲಿ ಎಡಿಟ್ ಮಾಡಿಸಿದರು. ವಾಹಿನಿ ಸ್ಟುಡಿಯೋದಲ್ಲಿ ರೀ-ರೆಕಾರ್ಡಿಂಗ್ ಮಾಡಿಸಿ ಕಡೆಗೆ ಮುಂಬಯಿನಲ್ಲಿ ಪ್ರಿಂಟ್ ಮಾಡಿಸಿ 'ಶಿವ ಪಾರ್ವತಿ' (೧೯೪೯) ಎಂಬ ಹೆಸರಿನಲ್ಲಿ ಬಿಡುಗಡೆ ಮಾಡಿದರು.

ರಾಮಸ್ವಾಮಿ ದೇಶಭಕ್ತರ ಗುಂಪಿಗೆ ಸೇರಿದವರು. ಕಾಂಗ್ರೆಸ್ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿದ್ದರು. ಸ್ವಾತಂತ್ರ್ಯ ಚಳವಳಿಯಲ್ಲಿ ಸೆರೆವಾಸವನ್ನು ಅನುಭವಿಸಿದವರು. ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಪಕ್ಷದ ಕಾರ್ಯಕರ್ತರಾಗಿದ್ದು, ಅನಂತರ ನೇಪಥ್ಯಕ್ಕೆ ಸರಿದರು. ಅನಂತರ ಒಂದು ಒಳ್ಳೆಯ ಚಿತ್ರ ತಯಾರಿಸಬೇಕೆಂದು ಹಲವು ವರ್ಷ ಕಷ್ಟ ಪಟ್ಟರು. ಸ್ವಾರ್ಥಿಗಳು ಅವರನ್ನು ಹರಿದು ತಿಂದರು. ಕಡೆಗೂ ಅವರ ಆಸೆ ಈಡೇರಲಿಲ್ಲ.

೧೯೪೭ರಲ್ಲಿ ತಯಾರಾದ ಇನ್ನೊಂದು ಮಹತ್ವದ ಚಿತ್ರ 'ಮಹಾತ್ಮ ಕಬೀರ್'. ಇದು ಆರ್.ನಾಗೇಂದ್ರರಾಯರ ಪೂರ್ಣ ಪ್ರಮಾಣದ ನಿರ್ದೇಶನದ ಪ್ರಥಮ ಚಿತ್ರ. ಹಿಂದೆ 'ಹರಿಶ್ಚಂದ್ರ' ಚಿತ್ರವನ್ನು ಅವರೇ ನಿರ್ದೇಶಿಸಿರುವರಾದರೂ ಅವರ ಜತೆ ಎ.ಟಿ.ಕೃಷ್ಣಸ್ವಾಮಿ ಹೆಸರೂ ಇತ್ತು.

ಭಾರತದ ವಿಭಜನೆಯ ನಂತರ ಹಿಂದೂ-ಮುಸ್ಲಿಂ ಧರ್ಮೀಯರ ನಡುವೆ ಭುಗಿಲೆದ್ದ ಹಿಂಸಾಚಾರ, ಅತ್ಯಾಚಾರಗಳ ಸಮಯದಲ್ಲಿ ಹಿಂದೂ ಮುಸ್ಲಿಂ ಭಾವೈಕ್ಯತೆ ತತ್ವ ಸಾರುವ ಈ ಚಿತ್ರ ತೆರೆ ಕಂಡು ಯಶಸ್ವಿಯಾಯಿತು.

ನಾಗೇಂದ್ರರಾಯರು ಈ ಬಾರಿಯೂ ಎ.ವಿ.ಎಂ. ಮಾಲೀಕರೊಡನೆ ಸೇರಿ ಪ್ರಗತಿ ಸ್ಟುಡಿಯೋದ ಪಾಲುದಾರಿಕೆಯಲ್ಲಿ ಈ ಚಿತ್ರವನ್ನು ನಿರ್ದೇಶಿಸಿದರು.

ಕಾಶಿಯಲ್ಲಿ ಮುಸ್ಲಿಂ ಕುಟುಂಬದಲ್ಲಿ ಜನಿಸಿದ ಕಬೀರ್, ಸಮರ್ಥ ರಾಮದಾಸರ ಶಿಷ್ಯನಾಗಿ ರಾಮನಾಮ ಜಪ ಮಾಡುತ್ತ ಹೊಸ ಸಂಪ್ರದಾಯಕ್ಕೆ ನಾಂದಿ ಹಾಡಿದ. ಜಾತಿ ಭೇದವಿಲ್ಲದೆ ಎಲ್ಲರನ್ನೂ ಸಮಾನರಾಗಿ ಕಾಣುವ ಗುಣ ಬೆಳೆಸಿಕೊಂಡ. ತಂದೆಯ ಕಠೋರತೆಗೂ ಅವನ ಭಕ್ತಿ ಪರವಶತೆಯನ್ನು ತಡೆಯಲಾಗಲಿಲ್ಲ. ಅವನಿಗೆ ತಕ್ಕ ಹೆಂಡತಿ ಲೋಯಿ ಹಾಗೂ ಇಬ್ಬರು ಮಕ್ಕಳು. ಕಾಮಾಂಧನಾದ ಧರ್ಮದಾಸ ಲೋಯಿಯ ರೂಪಕ್ಕೆ ಮರುಳಾಗಿ ಅವಳನ್ನು ವಶಪಡಿಸಿಕೊಳ್ಳಲು ಹೋಗಿ ವಿಫಲನಾಗುತ್ತಾನೆ. ಈ ಮಧ್ಯೆ ಹಿಂದೂ-ಮುಸ್ಲಿಂ ಭೇದ ಕಲ್ಪಿಸಿದ ಧರ್ಮದಾಸನಿಂದ ಕಬೀರ್ ಶಿಕ್ಷೆಗೆ ಗುರಿಯಾಗುತ್ತಾನೆ. ಆದರೆ



(ಚಿತ್ರ ೪೪) 'ಕಬೀರ್' ಚಿತ್ರದಲ್ಲಿ ಸುಬ್ಬಯ್ಯನಾಯ್ಡು

ಪ್ರಾರ್ಥನೆಯ ಬಲದಿಂದ ಅದು ತಪ್ಪಿ 'ರಾಮ ರಹೀಮ ಕೃಷ್ಣ ಕರೀಮ' ಎಲ್ಲ ಒಂದೇ ಎಂಬ ತತ್ವ ಪ್ರಚಾರವಾಗುವುದು. ಇದು ಚಿತ್ರದ ತತ್ವ. ''ಚಿತ್ರದ ತತ್ವ ಈಗಿನ ಪರಿಸ್ಥಿತಿಗೆ ತಕ್ಕುದಾಗಿದೆ. ಛಾಯಾಗ್ರಹಣ, ಧ್ವನಿಗ್ರಹಣ ಉತ್ತಮವಾಗಿದೆ. ಚಿತ್ರದಲ್ಲಿ ಮುಸ್ಲಿಂ ವೇಷಧಾರಿಗಳು ಮಾತನಾಡುವಾಗ ಮುಸ್ಲಿಮರೆಂದೇ ತೋರುವುದಿಲ್ಲ. ಚಿತ್ರದಲ್ಲಿ ಸಂಗೀತ ಮಧುರವಾಗಿದೆ. ಹೊಸ ಮಟ್ಟುಗಳಲ್ಲಿ ಹಾಡಿರುವ ಗೀತೆಗಳು ಆಪ್ಯಾಯಮಾನವಾಗಿವೆ. ಸನ್ನಿವೇಶಗಳ ರಚನೆಯಲ್ಲಿ ಔಚಿತ್ಯ ಮೀರದ ಕೌಶಲ್ಯವಿದೆ..'' ಎಂದು ಪತ್ರಿಕೆಗಳು ಮೆಚ್ಚಿದವು.

'ಮಹಾತ್ಮ ಕಬೀರ್' ಚಿತ್ರದ ಛಾಯಾಗ್ರಾಹಕರು ಜರ್ಮನಿಯ ಬೇಯೆಜ್. ಅವರೊಂದಿಗೆ ಕನ್ನಡದ ಮಾರುತಿರಾವ್ ಇದ್ದರು.

ಚಿತ್ರ ೧೯೪೭ರ ಡಿಸೆಂಬರ್‌ನಲ್ಲಿ ಬೆಂಗಳೂರಿನ ಸಾಗರ್, ಮೈಸೂರಿನ ರಾಜಕಮಲ್ ಚಿತ್ರಮಂದಿರಗಳಲ್ಲಿ ಹಾಗೂ ಹಾಸನ, ಶಿವಮೊಗ್ಗ, ಚಿತ್ರದುರ್ಗ ಮುಂತಾದೆಡೆಗಳಲ್ಲಿ ಬಿಡುಗಡೆಯಾಗಿ ಯಶಸ್ವಿಯಾಯಿತು.

ಹಿಂದೆ ಬಿಡುಗಡೆಯಾಗಿದ್ದ 'ರಾಜಸೂಯ ಯಾಗ' ೧೯೪೭ರ ಕೊನೆಯಲ್ಲಿ ಮಾಸ್ಕಟ್ ಪಿಕ್ಚರ್ಸ್ ಲಾಂಛನದಡಿ ಮತ್ತೆ ಬಿಡುಗಡೆಯಾಯಿತು.

೧೯೪೮ರಲ್ಲಿ 'ಭಕ್ತ ರಾಮದಾಸ' ಮತ್ತು 'ಭಾರತಿ' ಎರಡು ಚಿತ್ರಗಳು ಮಾತ್ರ ಬಿಡುಗಡೆಯಾದವು. 'ಭಕ್ತ ಕುಂಬಾರ' ತಯಾರಿಕೆಯಲ್ಲಿದ್ದು ಅನೇಕ ಪಡಿಪಾಟಲುಗಳನ್ನು ಅನುಭವಿಸುತ್ತಿತ್ತು.

'ಭಕ್ತ ರಾಮದಾಸ್' ಮಹಾತ್ಮ ಅವರ ತಯಾರಿಕೆ. ಗೋಲ್ಕೊಂಡಾದ ದೊರೆ ತಾನೇಶಾನ ಮಂತ್ರಿ ಅಕ್ಕಣ್ಣನ ಅಳಿಯ ಗೋಪಣ್ಣ ಕಬೀರನಿಂದ ಉಪದೇಶ ಪಡೆದು ರಾಮದಾಸನಾಗುತ್ತಾನೆ. ಭದ್ರಾಚಲದ ತಹಸೀಲ್ದಾರನಾಗಿ ನೇಮಿಸಲ್ಪಟ್ಟಾಗ ಸರ್ಕಾರಿ ಹಣದಿಂದ ದೇವಸ್ಥಾನ ಕಟ್ಟಿಸುತ್ತಾನೆ. ತಾನೇಶಾ ರಾಮದಾಸನನ್ನು ಸೆರೆಮನೆಗೆ ತಳ್ಳುತ್ತಾನೆ. ವಧಾ ಸ್ಥಾನದಲ್ಲಿದ್ದ ರಾಮದಾಸನನ್ನು ಕಬೀರರೇ ಬಂದು ಹರಸಿದರು. ಶ್ರೀರಾಮಚಂದ್ರನು ಪ್ರತ್ಯಕ್ಷನಾಗಿ ಸತ್ತ ಮಗನನ್ನು ಮತ್ತೆ ಕರುಣಿಸಿದ. ಈ ಭಕ್ತಿ ಪ್ರಧಾನ ಚಿತ್ರದಲ್ಲಿ ಕೆಂಪರಾಜ ಅರಸ್, ವಿಮಲಾನಂದ ದಾಸ್, ಸುಮತಿ, ಎಂ.ಜಿ.ಮರಿರಾವ್, ಬಿ.ರಾಘವೇಂದ್ರರಾವ್, ಮಹಾಬಲರಾವ್, ಎಂ.ಎಸ್.ಸುಬ್ಬಣ್ಣ, ಗಣಪತಿಭಟ್, ಸುಶೀಲಮ್ಮ, ಪ್ರತಿಮಾದೇವಿ, ಬೇಬಿ ಕಲಾವತಿ ಅಭಿನಯ ಭೂಮಿಕೆಯಲ್ಲಿದ್ದರು. ಕಥೆಯನ್ನು ಸುಬ್ರಹ್ಮಣ್ಯ ರಾಜ ಅರಸ್ (ಚದುರಂಗ) ಬರೆದಿದ್ದರು.

ಮೊದಲಿಗೆ ಕೆಂಪರಾಜ ಅರಸ್ ಅವರ ಅಣ್ಣ ದೇವರಾಜ ಅರಸರಿಗೆ ಮೇಕಪ್ ಹಾಕಿಸಲಾಗಿತ್ತು. ಹೊಂದಲಿಲ್ಲವೋ ಮತ್ತೆಂಥದೋ ಕಾರಣಗಳಿಂದ ಅವರನ್ನು ಕೈ ಬಿಡಬೇಕಾಯಿತು. ಈ ಚಿತ್ರದಲ್ಲಿ ದೊರೆ ತಾನೇಶಾನ ಪಟ್ಟದ ರಾಣಿ ಪಾತ್ರದಲ್ಲಿ ಪ್ರತಿಮಾದೇವಿ ಅಭಿನಯಿಸಿದ್ದರು. ಸಂಗೀತ ನೀಡಿದ್ದ ಕಾಳಿಂಗರಾಯರು ಪಾಶ್ಚಾತ್ಯ ವಾದ್ಯ ಬಳಸಿ ಸಂಗೀತವನ್ನು ವಿಶೇಷವಾಗಿ ಅಳವಡಿಸಿದ್ದರು. ಅದು ಸಾಂದರ್ಭಿಕವಾಗಿಯೂ ಇತ್ತು. ಜೈಲಿನಲ್ಲಿ ಸುಮತಿ ಎಂಬ ಪಾತ್ರ ನರ್ತಿಸುವ ಸನ್ನಿವೇಶ. ಇಲ್ಲಿ ಸೊಗಸಾಗಿ ಪಾಶ್ಚಾತ್ಯ ಸಂಗೀತವನ್ನು ಹೊಂದಿಸಲಾಗಿತ್ತು.

ಪಂಢರಿಬಾಯಿಯವರ ಸಹೋದರ ವಿಮಲಾನಂದದಾಸರದು ಭಕ್ತಿ ಪ್ರಧಾನ ಪಾತ್ರಕ್ಕೆ ಸರಿ ಹೊಂದುವಂಥ ನಿಲುವು, ಮುಖಭಾವ. ಅವರನ್ನೇ ಮುಖ್ಯ ಪಾತ್ರಕ್ಕೆ ಆರಿಸಲಾಗಿತ್ತು.

ಈ ಚಿತ್ರದ ಬಿಡುಗಡೆಯಂದೇ 'ಚಂದ್ರಲೇಖ' ಚಿತ್ರದ ಬಿಡುಗಡೆ. ಅದೂ ಎದುರು ಬದುರು ಥಿಯೇಟರ್‌ಗಳಲ್ಲಿ. ''ತಮಿಳು ಚಿತ್ರ ಲಕ್ಷಾಂತರ ರೂಪಾಯಿ ಹಾಕಿದ್ದಾರೆ. ಅದರ ಎದುರು ಹಾಕೋದು ಒಳ್ಳೆಯದಲ್ಲ'' ಎಂದು ಕೆಲವು ಸ್ನೇಹಿತರು ಹೇಳಿದರೂ ನಿರ್ದೇಶಕ/ನಟ ಕೆಂಪರಾಜ ಅರಸ್ ಅವರು ''ಕನ್ನಡಕ್ಕೂ ತಮಿಳಿಗೂ ಸಂಬಂಧವಿಲ್ಲ. ನೋಡೋರು ನೋಡೇ ನೋಡ್ತಾರೆ'' ಎಂದು ಹಠ ಹಿಡಿದರು.

ಮಧ್ಯಾಹ್ನ ಮ್ಯಾಟ್ನಿ ಷೋ. ವಿಠಲಾಚಾರ್ಯರು ಮತ್ತಿತರರು ಕಾಂಪೌಂಡ್‌ನಲ್ಲಿ ನಿಂತಿದ್ದರು. ಚಿತ್ರಮಂದಿರದ ಬಳಿ ಪ್ರೇಕ್ಷಕರು ಸುಳಿಯಲಿಲ್ಲ. ಅಲ್ಲಿ ಹೌಸ್‌ಫುಲ್ ಆದ ಮೇಲೆ ಬರಬಹುದು ಎಂದು ಕಾದರು. ಕಡೆಗೂ ಜನ ಬರಲಿಲ್ಲ. ಚಿತ್ರ ಪೂರ್ತಿಯಾಗಿ ಸೋತು ಹೋಯಿತು. ಮೈಸೂರಿನಲ್ಲೂ ಹಾಗೇ ಆಯಿತು. ಆ ಚಿತ್ರದಿಂದ ಒಂದೂವರೆ ಲಕ್ಷ ರೂಪಾಯಿ ನಷ್ಟವಾಯಿತು.

ಆ ದಿನಗಳಲ್ಲಿ ಮಹಾತ್ಮ ಪಿಕ್ಚರ್ಸ್‌ಗೆ ಒಟ್ಟು ನಾಲ್ಕೂವರೆ ಲಕ್ಷ ರೂ. ನಷ್ಟವಾಯಿತು. ಕೆಲವು ಪಾಲುದಾರರೂ ಸಹ ಸಂಸ್ಥೆ ಬಿಟ್ಟು ಹೋದರು.

ಈ ಮಧ್ಯೆ 'ಬಿಂದು ಬಿ.ಎ.' ಎಂಬ ಚಿತ್ರವೊಂದು ಸಿದ್ಧವಾಯಿತು. ಅದಾಗಲೇ ನಾಡು-ನುಡಿ, ಏಕೀಕರಣದ ಕೂಗು ಪ್ರಾರಂಭವಾಗಿತ್ತು. ಆ ಬಿಸಿ ಚಿತ್ರರಂಗವನ್ನು ತಲುಪಿತ್ತು. ಹಿಮಾಂಶು ರೂಪವಾಣಿ ಸಂಸ್ಥೆಯ ಕನ್ನಾಡು ಸಾಮಾಜಿಕ ಚಿತ್ರ 'ಬಿಂದು ಬಿ.ಎ.' ಬಗ್ಗೆ ಬಂದ ಜಾಹಿರಾತಿನಲ್ಲಿ ಗಮನಾರ್ಹವಾದ ಕೆಲವು ಮಾತುಗಳಿವೆ. ''ಬಂಗಾರದ ನಾಡು ಈ ನಾಡು ಕನ್ನಾಡು ನಮ್ಮ ನಾಡು ಎಂಬ ಏಕೀಕರಣದ ಕಹಳೆ ಮೊಳಗಿ ನಾಡನ್ನೆಚ್ಚರಿಸಲು ಬಂದ ಕನ್ನಡ ಚಿತ್ರ.''

ಜಾಹಿರಾತಿನ ಪ್ರಕಾರ ಎಂ.ಎಸ್.ಆಚಾರ್ಯ ಚಿತ್ರದ ನಿರ್ದೇಶಕರೆಂದಿದೆ. ನವಜ್ಯೋತಿಯಲ್ಲಿದ್ದು ಎಲ್ಲ ಕಾರ್ಯಗಳನ್ನೂ ಬಲ್ಲವರಾಗಿದ್ದ ದೊರೆಸ್ವಾಮಿ ಚಿತ್ರವನ್ನು ತಾವೂ ನಿರ್ದೇಶಿಸಿ, ಅದರಲ್ಲಿ ಅಭಿನಯಿಸಿಯೂ ಇದ್ದುದಾಗಿ ಸಂದರ್ಶನದಲ್ಲಿ ಹೇಳಿದ್ದಾರೆ.

ಈ ಚಿತ್ರಕ್ಕೆ ಕುಮಾರ ವೆಂಕಣ್ಣನವರ ನೃತ್ಯ ನಿರ್ದೇಶನವಿತ್ತು. ಚಿತ್ರದಲ್ಲಿ ಭೋಜರಾಜ್, ಪ್ರತಿಮಾದೇವಿ, ಸುಬ್ಬಲಕ್ಷ್ಮಿ, ರೋಹಿಣೀದೇವಿ, ಹನುಮಂತರಾವ್, ರಂಗಸ್ವಾಮಿ, ಶೀಲಾದೇವಿ, ಸಾವಂತ್, ದೊರೆಸ್ವಾಮಿ ಮೊದಲಾದವರು ಅಭಿನಯಿಸಿದ್ದರು. ೧೯೪೭ನೇ ನವಂಬರ್ ಮೊದಲ ವಾರದಲ್ಲಿ ನಾಡಿನೆಲ್ಲೆಡೆ ಪ್ರದರ್ಶನವಾಗುವುದು ಎಂದು ಪ್ರಚಾರ ಮಾಡಲಾಗಿತ್ತು. ಚಿತ್ರ ತೆರೆಗೆ ಬರಲಿಲ್ಲ. ಅಚಾತುರ್ಯವೋ, ಆಕಸ್ಮಿಕವೋ ಚಿತ್ರಕ್ಕೆ ಬೆಂಕಿ ತಾಗಿತು. ನೈಟ್ರೇಟ್ ಫಿಲಂ ಆದ್ದರಿಂದ ಫಿಲಂ ಪೂರ್ತಿ ಸುಟ್ಟು ಹೋಯಿತು. ನಿಜಕ್ಕೂ ಕನ್ನಡಕ್ಕೆ ಒಂದು ದೊಡ್ಡ ನಷ್ಟ.

ಆ ದಿನಗಳಲ್ಲಿ ಚಿತ್ರೀಕರಣದಲ್ಲಿ ಭಾಗಿಯಾಗಿದ್ದ ಹಿರಿಯ ಕಲಾವಿದ/ತಂತ್ರಜ್ಞ ದೊರೆಸ್ವಾಮಿ ಅವರ ಮಾತುಗಳು 'ಬಿಂದು ಬಿ.ಎ.' ಚಿತ್ರದ ಬಗ್ಗೆ ಮತ್ತಷ್ಟು ಬೆಳಕು ಚೆಲ್ಲುತ್ತವೆ.

''ನನಗೆ ಚಲನಚಿತ್ರದಲ್ಲಿ ಶಿಕ್ಷಣವಿಲ್ಲ. ಚಿತ್ರಗಳನ್ನು ನೋಡಿ ನೋಡಿ ತಿಳಿದವನು. ಸ್ವಾತಂತ್ರ್ಯ ಚಳವಳಿ ಸೇರಿ ಜೈಲಿಗೂ ಹೋಗಿ ಬಂದೆ. ಮತ್ತದೇ ಗೀಳು ೧೯೪೭-೪೮ರಲ್ಲಿ. ಆಗ ಗೆಳೆಯರಾಗಿ ಬಂದ ಎಂ.ಎಸ್.ಆಚಾರ್ಯ, ಸ್ತ್ರೀಯರಿಗೆ ಶಿಕ್ಷಣ ಅಗತ್ಯ ಎಂದು ಹೇಳುವ ನಾಟಕವೊಂದನ್ನು ಆಡುತ್ತಿದ್ದರು. ಅದನ್ನು ಚಿತ್ರಿಸುವ ಆಸೆ. ಗಾಂಧೀಜಿ ಸ್ತ್ರೀ ಶಿಕ್ಷಣ ಅಗತ್ಯ ಎನ್ನುತ್ತಿದ್ದುದರ ಪ್ರಭಾವ ಇರಬಹುದು. ಅದನ್ನೇ 'ಬಿಂದು ಬಿ.ಎ.' ಅಂದೆವು. ಗರ್ಗೇಶ್ವರಿಯ ನಜೀರ್ ಸಾಬ್ ಮತ್ತು ನಂಜುಂಡಯ್ಯ ನಿರ್ಮಿಸಲು ಮುಂದೆ ಬಂದರು. ಆಗೆಲ್ಲ ಪ್ರಸಿದ್ಧ ಕಲಾವಿದೆ ರಾಜಕುಮಾರಿ ಅನ್ನುವವರಿದ್ದರು. ಶಂಕರಸಿಂಗ್ ಆಕೆಯನ್ನು ಬಿಟ್ಟುಕೊಡಲಿಲ್ಲ. ನಮಗೆ ಪ್ರತಿಮಾದೇವಿ ಪರಿಚಯವೂ ಇತ್ತು. ಹೋಗಿ ಆಕೆಯನ್ನು ಕರೆತಂದೆವು. 'ಕೃಷ್ಣಲೀಲಾ'ದಲ್ಲಿ ಗೋಪಿಕೆಯಾಗಿ ಅಭಿನಯಿಸಿ ಊರಿಗೆ ಹೋಗಿದ್ದರು. ಆಕೆ 'ಬಿಂದು ಬಿ.ಎ.' ಚಿತ್ರದ ನಾಯಕಿ, ಕಲ್ಕತ್ತೆಯ ಪ್ರಸಿದ್ಧ ಸಂಗೀತ ಕಲಾವಿದರ ಸೋದರ ಬೋಳಾರ ಭೋಜರಾವ್ ಎಂಬುವವರು ನಾಯಕನಾಗಿ ಆಯ್ಕೆಯಾದರು. ನಾನು (ದೊರೆಸ್ವಾಮಿ) ಮತ್ತು ಎಂ.ಎಸ್.ಆಚಾರ್ ನಿರ್ದೇಶಕರು.

''ಚಿತ್ರದಲ್ಲಿ ಅಲ್ಮೇಡ, ಸುಬ್ಬಲಕ್ಷ್ಮಿ ಮೊದಲಾದವರಿದ್ದರು. ಕುಮಾರ ವೆಂಕಣ್ಣ ನೃತ್ಯ ನಿರ್ದೇಶಿಸಿ ಅಭಿನಯಿಸಿದ್ದ. ಅವನ ಜೊತೆ ಹಾಸ್ಯ ಪಾತ್ರಕ್ಕೆ

ಎಂ.ಎಸ್.ಲಕ್ಷ್ಮೀದೇವೀನ ಕರೆತಂದೆವು. ಅದೇ ಮೊದಲ ಚಿತ್ರ ಅಕೆಗೆ. ರಾಜಾಶಂಕರ್ ತಂದೆ ಸಿದ್ದೇಗೌಡರು ಸಹ ಪಾತ್ರ ವಹಿಸಿದ್ದರು. ಪಕ್ಷಿರಾಜಾದಿಂದ ಬಂದಿದ್ದ ದೊರೆ ಛಾಯಾಗ್ರಾಹಕರು. ಒಬ್ಬ ಮುಸ್ಲಿಂ ಮಹಿಳೆ ಸಂಗೀತ ನೀಡಿದ್ದರು (ಹೆಸರು ನೆನಪಿಲ್ಲ). ಪಟ್ಟಾಭಿ ಕಾಸ್ಟ್ಯೂಮ್ ನೋಡಿಕೊಂಡ. ಸ್ಟುಡಿಯೋದಲ್ಲಿದ್ದೋರೇ ಮೇಕಪ್ ಮಾಡಿದರು. ಪೂರ್ತಿ ಹೊರಾಂಗಣದಲ್ಲಿ ಚಿತ್ರೀಕರಣ ಮಾಡಿದೆವು. ಬಹುತೇಕ ಥಂಡಿ ಸಡಕ್‌ನಲ್ಲಿ, ದರ್ಬಾರ್‌ಭಕ್ಷಿಯವರ ಮನೆಯೊಂದಿತ್ತು. ಅಲ್ಲಿ ಟೆನ್ನಿಸ್ ಕೋರ್ಟ್ ಇತ್ತು. ಅಲ್ಲಿ ಮತ್ತು ಪಡುವಾರಳ್ಳಿಯ ಅರಳೀಕಟ್ಟೆಯಲ್ಲಿ. ಕುಮಾರ ವೆಂಕಣ್ಣ ಒಂದು ಸೊಗಸಾದ 'ಸುಗ್ಗಿ ಕುಣಿತ'ವನ್ನು ಸಂಯೋಜಿಸಿದ್ದನ್ನು ಅಲ್ಲಿ ಚಿತ್ರಿಸಿದ್ದೆವು. ಬಹಳ ಮುಖ್ಯವಾಗಿ ಆಗೆಲ್ಲ ಫಿಲಂ ಪರ್ಮಿಟ್ ಇರಲಿಲ್ಲ. ನವಜ್ಯೋತಿ ಪರವಾಗಿ ಜಿ.ಆರ್.ರಾಮಯ್ಯ ಕಚ್ಚಾಫಿಲಂ ತಗೊಂಡು ನಮಗೆ ಕೊಡಬೇಕಿತ್ತು. 'ನಾನು ಎಲ್ಲ ಸಹಾಯ ಮಾಡ್ತೀನಿ. ಚಿತ್ರೀಕರಣ ಮಾತ್ರ ಸ್ಟುಡಿಯೋದಲ್ಲಿ ಮಾಡದೆ ಹೊರಗೆ ಮಾಡ್ತೀರಿ' ಅಂತ ರಾಮಯ್ಯನೋರು ಗದರಿಸಿದಾಗ ಎರಡು ದಿನದ ಮಟ್ಟಿಗೆ ಒಂದು ಸೆಟ್ ಹಾಕಿ ಸ್ಟುಡಿಯೋದಲ್ಲಿ ಚಿತ್ರಿಸಿದೆವು. ತಲ್ಲಂ ಆಫೀಸಿನಲ್ಲಿ ನಾಣಯ್ಯ ಅಂತ ಮ್ಯಾನೇಜರ್ ಇದ್ದರು. ಅವರನ್ನು ವಿಚಾರಿಸಿದಾಗ ಚಿತ್ರವನ್ನು ಒಂದು ಲಕ್ಷಕ್ಕೆ ಕೇಳಿದರು. ನಾವು ಒಂದೂವರೆ ಅಂದೆವು. ಹಾಗೇ ನಿಂತಿತು. ನಜೀರ್ ಸಾಬರು ಚಿತ್ರ ನೋಡಲು ಪ್ರಿಂಟ್ ತಗೊಂಡು ಗರ್ಗೇಶ್ವರಿಗೆ ಹೋದರು. ಏನಾಯಿತೋ ಬೆಂಕಿ ತಗುಲಿ ಪಾಸಿಟಿವ್ ಸುಟ್ಟು ಹೋಯಿತು. ನೆಗೆಟಿವ್‌ನಿಂದ ಇನ್ನೊಂದು ಪ್ರಿಂಟ್ ತೆಗೆಯುವಷ್ಟು ಹಣ ಇರಲಿಲ್ಲ. ಹೇಗಿಡಬೇಕೋ ತಿಳೀದು. ಮನೆಯಲ್ಲಿಟ್ಟು ಬಿಟ್ರು. ನೈಟ್ರೇಟ್ ಅಲ್ವಾ, ಎಲ್ಲ ಪುಡಿ ಪುಡಿ ಆಗಿ ಹೋಯಿತು. ಹೀಗೆ ಸಾಮಾಜಿಕ ಸಮಸ್ಯೆ ಇದ್ದ ಚಿತ್ರವೊಂದು ಇತಿಹಾಸದಿಂದ ಕಣ್ಮರೆಯಾಯಿತು'' ಎಂದು ವ್ಯಥೆಯಿಂದ ಹೇಳುವ ದೊರೆಸ್ವಾಮಿ ಅವರಿಗೆ 'ಬಿಂದು ಬಿ.ಎ.' ಬಗ್ಗೆ ಬಂದಿದ್ದ ಜಾಹಿರಾತೊಂದೇ ಅದರ ನೆನಪಾಗಿ ಉಳಿದಿದೆ. (ನೋಡಿ : ಚಿತ್ರ ೪೫)

ಬಿಂದು. ಬಿ.ಎ.

For Rights and Particulars

HIMAMSU ROOPAVANI, Saraswatipuram, Mysore.

(ಚಿತ್ರ ೪೫) ಪತ್ರಿಕಾ ಜಾಹಿರಾತು

೧೯೪೮ರ ಮಾರ್ಚ್ ೧೨ರಂದು ಬೆಂಗಳೂರಿನ ಚಿಕ್ಕಪೇಟೆಯಲ್ಲಿ ವಿಜಯ ಟಾಕೀಸ್ ಪ್ರಾರಂಭವಾಯಿತು. ಅಂದು 'ಗೀತಾಂಜಲಿ' ಎಂಬ ಚಿತ್ರವನ್ನು ಪ್ರದರ್ಶಿಸಿದ್ದರು. ರಂಗಣ್ಣ ಎನ್ನುವವರು ಅದರ ಮಾಲೀಕರು. ಅನಂತರ ಆ ಚಿತ್ರಮಂದಿರ ವಿಜಯಲಕ್ಷ್ಮಿ ಎಂಬ ಹೆಸರಿನಲ್ಲಿ ಮುಂದುವರೆಯಿತು. ಬಹುತೇಕ ಇಂಗ್ಲಿಷ್ ಚಿತ್ರಗಳನ್ನು ಪ್ರದರ್ಶಿಸುತ್ತಿದ್ದರು. ಅನಂತರ ಕನ್ನಡ ಚಿತ್ರಗಳ ಸರದಿ.

ಹೊನ್ನಪ್ಪ ಭಾಗವತರು ಕನ್ನಡದ ಒಂದೆರಡು ಚಿತ್ರಗಳಲ್ಲಿ ಮಾತ್ರ ಕಾಣಿಸಿಕೊಂಡಿದ್ದರು. ಅವರ ರೂಪ, ಶಾರೀರಗಳ ಕಾರಣವಾಗಿ ತಮಿಳು ಚಿತ್ರರಂಗದಲ್ಲಿ ತುಂಬ ಹೆಸರಾಗಿದ್ದರು. ಪ್ರಸಿದ್ಧರಾಗಿದ್ದ ತ್ಯಾಗರಾಜ ಭಾಗವತರು ಜೈಲಿಗೆ ಹೋಗಬೇಕಾದ ಪ್ರಸಂಗವೂ ಬಂದು ಹೊನ್ನಪ್ಪ ಭಾಗವತರಿಗೆ ಬೇಡಿಕೆ ಬಹಳವಾಗಿತ್ತು. ಆ ವೇಳೆಗೆ ಸುಮಾರು ೧೯-೨೦ ತಮಿಳು ಚಿತ್ರಗಳಲ್ಲಿ ಅಭಿನಯಿಸಿದ್ದರು. ಅವರಿಗೆ ಆ ಕಾಲಕ್ಕೇ ೫೦,೦೦೦ ರೂಪಾಯಿಗಳ ಸಂಭಾವನೆಯಿತ್ತು. ತ್ಯಾಗರಾಜ ಭಾಗವತರು ಅಭಿನಯಿಸಬೇಕಾಗಿದ್ದ 'ಶ್ರೀಮುರುಗನ್' ಎಂಬ ತಮಿಳು ಚಿತ್ರದಲ್ಲಿ 'ಮುರುಗ'ನ ಪಾತ್ರಕ್ಕೆ ಹೊನ್ನಪ್ಪ ಭಾಗವತರು ಆಯ್ಕೆಯಾದರು. ಇದರಲ್ಲಿ ಬಾಲ ಮುರುಗನ ಪಾತ್ರದಲ್ಲಿ ಅಗ್ಗ ಬಾಲಕಲಾವಿದೆಯಾಗಿದ್ದ ಕನ್ನಡದ ಹರಿಣಿ ಅಭಿನಯಿಸಿದರು. ಬಾಲಕ ಮತ್ತು ದೊಡ್ಡ ಮುರುಗನ ಪಾತ್ರಗಳಲ್ಲಿ ಕನ್ನಡಿಗರು ಅಭಿನಯಿಸಿದ್ದು ಒಂದು ವಿಶೇಷ. ಕನ್ನಡ ಚಿತ್ರಗಳಲ್ಲಿ ಅವರಿಗೆ ಇತರರಿಗಿಂತ ಹೆಚ್ಚು ಸಂಭಾವನೆ ಕೊಡುತ್ತಿದ್ದರು. ಭಾಗವತರಿಗೆ ತಾವು ಕನ್ನಡ ಚಿತ್ರದಲ್ಲೂ ಅಭಿನಯಿಸಬೇಕೆಂಬ ಉತ್ಕಟವಾದ ಅಭಿಲಾಷೆ. ಮುಂಬಯಿನ ಬೊಮ್ಮನ್ ಡಿ.ಇರಾನಿಯವರು ಅತ್ಯುತ್ತಮ ಛಾಯಾಗ್ರಾಹಕರೆಂದು ಪ್ರಸಿದ್ಧರು. ಭಾಗವತರಿಗೆ ತಮಿಳು ಚಿತ್ರ 'ಕುಂಡಲಕೇಶಿ'ಯಲ್ಲಿ ಕೆಲಸ ಮಾಡುವಾಗ ಅವರ ಪರಿಚಯವಾಯಿತು. ತಮ್ಮ ಕನ್ನಡ ಚಿತ್ರ ನಿರ್ಮಾಣದ ಅಪೇಕ್ಷೆಯನ್ನು ಅವರಲ್ಲಿ ತಿಳಿಸಿ ಅವರನ್ನೇ ಚಿತ್ರ ನಿರ್ದೇಶಿಸಲು ಆಹ್ವಾನಿಸಿದರು.

೧೯೪೯ರಲ್ಲಿ ತೆರೆಕಂಡ ಮೊದಲ ಚಿತ್ರ 'ಭಕ್ತ ಕುಂಬಾರ' ಅಭಿನಯ, ಸಂಗೀತದ ದೃಷ್ಟಿಯಿಂದ ಕೂಡಾ ಸಾಕಷ್ಟು ಅವಕಾಶ ಇರುವಂಥ ವಸ್ತು. ಭಕ್ತಿ ಪ್ರಧಾನ ಚಿತ್ರಗಳು ಜನರಿಗೆ ಪ್ರಿಯವಾಗುತ್ತವೆ ಎಂಬ ಕಾರಣಕ್ಕೆ ಅಯ್ಕೆ ಮಾಡಿಕೊಂಡರು. ಕಥೆ, ಸಂಭಾಷಣೆ ಬರೆಯಲು ಹುಣಸೂರು ಕೃಷ್ಣಮೂರ್ತಿಗಳನ್ನು ಗೊತ್ತು ಮಾಡಲಾಯಿತು. ಅವರಿಗೆ ಚಿತ್ರರಂಗ ಇನ್ನೂ ಹೊಸದೆಂದೋ, ಕೆಲಸಗಳ ಒತ್ತಡವೋ ಹುಣಸೂರರು ಸಕಾಲಕ್ಕೆ ಕೆಲಸ ಮುಗಿಸಲಿಲ್ಲ. ಕೊಂಚ ಮನಸ್ತಾಪವೂ ಅಗಿ ಸಾಹಿತ್ಯ ರಚನೆಯಿಂದ ಹೊರಗುಳಿದರು. ಭಾಗವತರಿಗೆ ತಮಿಳು ಚಿತ್ರಗಳ ಕೆಲಸವಿದ್ದುದರಿಂದ ಅವರು ಕೊಯಮತ್ತೂರಿನಲ್ಲಿ ಹಾಡು, ಸಾಹಿತ್ಯ ಇತ್ಯಾದಿಗಳನ್ನು ಸಿದ್ಧ ಮಾಡಲು ವ್ಯವಸ್ಥೆ ಮಾಡಿದರು. ಗೀತೆಗಳನ್ನು ರಚಿಸಲು ಬಂದಿದ್ದ ಕು.ರ.ಸೀತಾರಾಮಶಾಸ್ತ್ರಿಗಳಿಗೇ ಸಂಭಾಷಣೆ ಇತ್ಯಾದಿ ಸಾಹಿತ್ಯದ ಜವಾಬ್ದಾರಿಯನ್ನು ವಹಿಸಿದರು. ಮೊದಲ ಬಾರಿಗೆ ಅಂಜುತ್ತಲೇ ಈ ಹೊಣೆ ಹೊತ್ತರು ಸೀತಾರಾಮಶಾಸ್ತ್ರಿಗಳು.

ಭಾಗವತರು ಈ ಹಿಂದೆಯೇ 'ಭಾರತ ಸೇವಾ ಮಂಡಳಿ' ಎಂಬ ವಾದ್ಯಗೋಷ್ಠಿಯನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿದ್ದರು. ಚಿತ್ರಕ್ಕೆ ಎಲ್ಲ ಕೆಲಸ ಕನ್ನಡದವರಿಂದಲೇ ಆಗಲಿ ಎಂಬ ಆಸೆಯಿಂದ ವಾದ್ಯಗೋಷ್ಠಿಯಲ್ಲಿದ್ದ ೧೫ ಮಂದಿಯನ್ನೂ ಕೊಯಮತ್ತೂರಿಗೆ ಕರೆಸಿಕೊಂಡು ರಿಹರ್ಸಲ್ ಮಾಡಲು ಹೇಳಿದರು. ಸುಮಾರು ಎರಡು ತಿಂಗಳ ಕಾಲ ಈ ತಂಡವನ್ನು ಅವರು ಸಾಕಿದರು. ಭಾಗವತರಿಗೆ ವಿಪರೀತ ಸಿನಿಮಾಗಳ ಕೆಲಸವಾಗಿದ್ದರಿಂದ ಚಿತ್ರೀಕರಣ ಪ್ರಾರಂಭಿಸಲು ಸಾಧ್ಯವಾಗಲಿಲ್ಲ. ಭಾಗವತರಿಗೆ ಕೆಲವು ಪ್ರಸಂಗಗಳಲ್ಲಿ ಪತ್ರಿಕೆಗಳಲ್ಲಿ ಬಂದ ಟೀಕೆಗಳ ಕಾರಣದಿಂದ ವ್ಯಥೆಯಾಗಿತ್ತು. ಚಿತ್ರ ಮಾಡುವ ಸಂಕಲ್ಪವನ್ನೇ ಕೈ ಬಿಡುವಷ್ಟು ತೀವ್ರವಾದ ಜಿಗುಪ್ಸೆಯದು. ಆ ಹೊತ್ತಿಗೆ ಮೂವತ್ತು ಸಾವಿರಕ್ಕೂ ಹೆಚ್ಚು ಹಣ ಖರ್ಚಾಗಿತ್ತು. ಸುಮಾರು ಅರು ತಿಂಗಳ ಕಾಲ ಮೌನವಾದರು. ಆದರೂ ಒಳಗೇ ಮನಸ್ಸು ಕನ್ನಡ ಚಿತ್ರ ಮಾಡಲು ಒತ್ತಾಯಿಸುತ್ತಿತ್ತು. ಕಡೆಗೂ ಬೆಂಗಳೂರಿಗೆ ಹಿಂತಿರುಗಿ ಲಕ್ಷ್ಮೀಬಾಯಿ, ಪಂಢರಿಬಾಯಿ, ರಾಘವೇಂದ್ರರಾವ್ ಮೊದಲಾದ ಕೆಲವರನ್ನು ಸಂಪರ್ಕಿಸಿ ''ಮದರಾಸಿನಲ್ಲಿ ಚಿತ್ರ ನಿರ್ಮಿಸುತ್ತೇವೆ. ತಾವೆಲ್ಲ ಸೂಚನೆ ಬಂದ ಕೂಡಲೇ ಬರಬೇಕು'' ಎಂದು ಹೇಳಿ ಮುಂಗಡವನ್ನು ಕೊಟ್ಟು ಬಂದರು. ಮದರಾಸಿನಲ್ಲಿ ಒಂದು ಬಂಗಲೆ ಬಾಡಿಗೆಗೆ ಹಿಡಿದು ಇದಕ್ಕಾಗಿ ಕಚೇರಿಯನ್ನು ಮಾಡಿಕೊಂಡರು. ಸೀತಾರಾಮಶಾಸ್ತ್ರಿಯವರನ್ನೂ ಕರೆಸಿಕೊಂಡರು.

ಇರಾನಿಯವರು, ಭಾಗವತರು, ಸೀತಾರಾಮಶಾಸ್ತ್ರಿಗಳು ನಿತ್ಯ ಕೂತು ಕಥೆ, ಸಂಭಾಷಣೆ ಇತ್ಯಾದಿ ಚರ್ಚೆ ಮಾಡಿ ಸನ್ನಿವೇಶ-ಹಾಡುಗಳು ಹೇಗೆ ಎಲ್ಲಿ ಅಳವಡಿಸಬೇಕೆಂದು ತೀರ್ಮಾನಿಸುತ್ತಿದ್ದರು. ಇದೇ ಎರಡು ತಿಂಗಳ ಕಾಲ ಹಿಡಿಯಿತು.



(ಚಿತ್ರ ೪೬) ‘ಭಕ್ತ ಕುಂಬಾರ’ ಚಿತ್ರದಲ್ಲಿ ಹೊನ್ನಪ್ಪ ಭಾಗವತರ್

ಎಲ್ಲ ಮುಗಿದು ಎ.ವಿ.ಮೇಯಪ್ಪ ಚೆಟ್ಟಿಯಾರ್ ಅವರ ಸ್ಟುಡಿಯೋದಲ್ಲಿ ಮುಹೂರ್ತ ಮಾಡಿ ಚಿತ್ರೀಕರಣ ಪ್ರಾರಂಭಿಸುವ ವೇಳೆಗೆ ಒಂದು ವರ್ಷವೇ ಕಳೆದಿತ್ತು. ಪ್ರಾರಂಭವಾದ ಮೇಲೆ ಮೊದಲು ಹಾಡುಗಳನ್ನು ಧ್ವನಿ ಮುದ್ರಿಸಿಕೊಂಡರು. ಅದಕ್ಕಾಗಿ ಬೆಂಗಳೂರಿನ ವಾದ್ಯವೃಂದವನ್ನು ಮತ್ತೆ ಕರೆಸಿ, ಕಳುಹಿಸಿದ್ದು ಇತ್ಯಾದಿ ಒಂದು ತಿಂಗಳವರೆಗೂ ಆಯಿತು. ‘‘ಚಿತ್ರ ಮಾಡೋಣ. ನಾನೂ ಪಾಲುದಾರನಾಗುತ್ತೇನೆ...’’ ಎಂದೆಲ್ಲಾ ಹೇಳಿ ಭಾಗವತರೊಂದಿಗೆ ಬಂದಿದ್ದ ನಿರ್ದೇಶಕ ಬೊಮ್ಮನ್ ಡಿ.ಇರಾನಿ ಹಣಕ್ಕಾಗಿ ತಕರಾರೆತ್ತಿದರು. ಚಿತ್ರೀಕರಣದಲ್ಲಿ ತೊಡಕು ಬರತೊಡಗಿತು. ಚಿತ್ರೋದ್ಯಮದ ಗಣ್ಯರಿಂದ ಬುದ್ಧಿ ಹೇಳಿಸಿದರೂ ಪ್ರಯೋಜನವಾಗಲಿಲ್ಲ. ಅನುಭವಿಗಳ ಸಲಹೆಯಂತೆ ಆತನನ್ನು ತೆಗೆದು ಆಂಧ್ರದ ಪಿ.ಪುಲ್ಲಯ್ಯನವರನ್ನು ನಿರ್ದೇಶನಕ್ಕೆ ಗೊತ್ತು ಮಾಡಲಾಯಿತು.

ಚಿತ್ರೀಕರಣದಲ್ಲಿ ಸಮಸ್ಯೆಗಳ ಪೂರವೇ ಎದುರಾಯಿತು. ಮಣ್ಣು ತುಳಿಯುತ್ತಾ ಹಾಡುವ ಸನ್ನಿವೇಶದಲ್ಲಿ ದೊಡ್ಡ ಕಬ್ಬಿಣದ ಮೊಳೆಯೊಂದು ಚುಚ್ಚಿ ಕಾಲಿಗೆ ನಂಜೇರಿತು. ಸುಧಾರಿಸಿಕೊಂಡು ಚಿತ್ರಿಸುವ ಹೊತ್ತಿಗೆ ಕಾಲಿನಡಿ ಬೀಳಬೇಕಿದ್ದ ಮಗುವಿಗೆ ಜ್ವರ ಬಂತು. ಕಂಟಿನ್ಯುಯಿಟಿ ಇರುವುದಿಲ್ಲ ಎಂಬ ಕಾರಣಕ್ಕಾಗಿ ಬೇರೆ ಮಗುವನ್ನು ಬಳಸುವ ಹಾಗಿಲ್ಲ. ಕಾಯಬೇಕಾಯಿತು.

ಈ ಹೊತ್ತಿಗೆ ಲಕ್ಷ್ಮೀಬಾಯಿಯವರ ಕಾಲ್‌ಶೀಟ್ ಮುಗಿದು ಹಿಂತಿರುಗಬೇಕಿತ್ತು. ಕೊನೆಯ ದೃಶ್ಯವೊಂದಕ್ಕಾಗಿ ಒಂದೆರಡು ಚಿತ್ರಿಕೆಗಳು, ಸುಮಾರು ಎರಡು ಗಂಟೆಯ ಕೆಲಸಕ್ಕಾಗಿ ಆಕೆಯನ್ನು ಕರೆದಾಗ ಸುಬ್ಬಯ್ಯನಾಯ್ಡು ಸಹಕರಿಸಲಿಲ್ಲ. ಮೊದಲೇ ತೆಗೆದಿದ್ದ ಒಂದೆರಡು ಕ್ಲೋಸ್-ಅಪ್‌ಗಳನ್ನೇ ಇಟ್ಟು ಕೊಂಡು ಹೇಗೋ ಮುಗಿಸಬೇಕಾಯಿತು. ಚಿತ್ರದ ಬಿಡುಗಡೆಗೆ ತೊಡಕು ತಂದರು ಮಾಜಿ ನಿರ್ದೇಶಕ ಇರಾನಿ. ಕೋರ್ಟಿಗೆ ಅಲೆದಾಡಿ ಕಡೆಗೂ ಒಬ್ಬ ರಿಸೀವರ್ ಅನ್ನು ನೇಮಿಸಿ ಚಿತ್ರ ಬಿಡುಗಡೆ ಮಾಡಲು ಅನುಮತಿ ದೊರಕಿತು.

ಬೆಂಗಳೂರಿನ ಸ್ಟೇಟ್ಸ್ ಚಿತ್ರಮಂದಿರದಲ್ಲಿ ರಂಗಪ್ಪನವರ ಬಳಿ ಮಾತನಾಡಿ ಬಿಡುಗಡೆಗೆ ವ್ಯವಸ್ಥೆ ಮಾಡಿದ್ದರು. ಆದರೆ ರಂಗಪ್ಪನವರ ಸಹೋದರರಾಗಿದ್ದ ಸೂಪರ್ ಟಾಕೀಸ್‌ನ ಮಾಲೀಕರು ಸಹಕರಿಸಲಿಲ್ಲ. ಅದಾಗಲೇ ವಿ.ನಾಗಯ್ಯ-ಪುಷ್ಪವಲ್ಲಿ ಅಭಿನಯದಲ್ಲಿ ಇದೇ ಕಥೆಯುಳ್ಳ ‘ಚಕ್ರಧಾರಿ’ ಎಂಬ ಹೆಸರಿನ ತಮಿಳು ಚಿತ್ರವೊಂದು ಸಿದ್ಧವಾಗಿತ್ತು. ಅದರ ನಿರ್ಮಾಪಕರಾದ ಜೆಮಿನಿ ಸ್ಟುಡಿಯೋ ಮಾಲೀಕ ವಾಸನ್ ಅವರನ್ನು ಭೇಟಿ ಮಾಡಿ ‘ಚಕ್ರಧಾರಿ’ಯನ್ನು ವಿತರಿಸಲು ಕೊಡಿ ಎಂದು ಕೇಳಿದರಂತೆ. ವಾಸನ್ ‘ಭಕ್ತ ಕುಂಬಾರ’ ಇರುವಾಗ ಇದು ಬೇಡ ಎಂದು ಹೇಳಿದರೂ ಕೇಳಲಿಲ್ಲ. ಭಾಗವತರ ಬಳಿ ಬಂದು ವಿವರ ಕೊಟ್ಟರಲ್ಲದೆ, ನಿಮ್ಮ ‘ಕುಂಬಾರ’ ಚಿತ್ರ ಬಿಡುಗಡೆ ಮಾಡೋಕಾಗಲ್ಲ ಹಿಂತೆಗೆದುಕೊಳ್ಳಿ ಎಂದು ಗಲಾಟೆ ಮಾಡಿದರು. ಭಾಗವತರು ಒಪ್ಪದಿದ್ದಾಗ ತನ್ನ ಅಣ್ಣನ ಬಳಿ ದೂರು ಕೊಂಡೊಯ್ದು, ಭಾಗವತರಿಗೆ ಚಿತ್ರಮಂದಿರ ಕೊಡಬೇಡ ಎಂತಲೂ ಹೇಳಿದರು. ಆದರೆ ರಂಗಪ್ಪನವರು ಕನ್ನಡ ಚಿತ್ರಗಳೇ ಬರುತ್ತಿಲ್ಲ. ಎಷ್ಟೋ ಪ್ರಯಾಸದಿಂದ ಚಿತ್ರ ಮಾಡಿದ್ದಾರೆ. ಈಗ ತೊಂದರೆ ಕೊಡಕೂಡದು ಎಂದು ಬುದ್ಧಿ ಹೇಳಿದರೂ ಫಲಿಸಲಿಲ್ಲ. ಚಿತ್ರ ವಿಜಯಲಕ್ಷ್ಮಿ ಚಿತ್ರಮಂದಿರದಲ್ಲಿ ತೆರೆ ಕಾಣಬೇಕಾಯಿತು.

ಕಡೆಗೂ ‘ಭಕ್ತ ಕುಂಬಾರ’ - ‘ಚಕ್ರಧಾರಿ’ ಎರಡೂ ಒಂದೇ ದಿನ ತೆರೆಗೆ ಬಂದವು. ಪ್ರೇಕ್ಷಕರಿಗೆ ಕನ್ನಡದ ಕುಂಬಾರನೇ ಇಷ್ಟವಾದ. ಅಂತೂ ಭಾಗವತರಿಗೆ ಹಾಕಿದ ಹಣ ಬಂತು. ಆ ಕಾಲಕ್ಕೆ ಸಾಲ-ಬಡ್ಡಿ ಎಲ್ಲ ಸೇರಿ ದೊಡ್ಡ ಮೊತ್ತವೇ ಆಗಿತ್ತು. ಕೋರ್ಟಿನಲ್ಲಿ ಬೊಮ್ಮನ್ ಡಿ.ಇರಾನಿಯವರೇ ತಪ್ಪಿತಸ್ಥರೆಂದು ಸಾಬೀತಾದರೂ ಆತನಿಂದ ನಷ್ಟ ವಸೂಲು ಮಾಡದೆ ಭಾಗವತರು ಔದಾರ್ಯ ತೋರಿದರು.

ಈ ಮಧ್ಯೆ ಮದರಾಸಿನ ಒಂದು ಲ್ಯಾಬೊರೇಟರಿಯಲ್ಲಿ ಇಟ್ಟಿದ್ದ ನೆಗೆಟಿವ್ ವಿದ್ಯುತ್ ಶಾರ್ಟ್ ಸರ್ಕ್ಯೂಟ್‌ನಿಂದಾಗಿ ಬೆಂಕಿ ತಗುಲಿ ‘ಕುಂಬಾರ’ ಮತ್ತು ಕೆಲವು ಚಿತ್ರಗಳು ಸುಟ್ಟು ಹೋದವು. ಭಾಗವತರಿಗೆ ಚಿತ್ರ ನಿರ್ಮಾಣವೇ ಒಂದು ದುಃಸ್ವಪ್ನವೆನ್ನಿಸಿದಂಥ ಅನುಭವಗಳಿವು.

‘ಭಕ್ತ ಕುಂಬಾರ’ ಸುರಭಿ ಚಿತ್ರ ಲಾಂಛನದಲ್ಲಿ ತಯಾರಾಯಿತು. ಕುಂಬಾರನಾಗಿ ಭಾಗವತರು, ಮೊದಲ ಹೆಂಡತಿ ಲಕ್ಷ್ಮೀಬಾಯಿ, ಎರಡನೆಯ ಹೆಂಡತಿ ಪಂಢರಿಬಾಯಿ, ಪಟೇಲ (ಖಳ)ನಾಗಿ ಬೇಲೂರು ರಾಘವೇಂದ್ರರಾವ್, ವಿಮಲಾನಂದದಾಸ್ ಜನಮನ್ನಣೆ ಗಳಿಸಿದ್ದರು. ಚಿತ್ರದ ಸಂಗೀತವನ್ನು ಭಾಗವತರೇ ನಿರ್ವಹಿಸಿದಂತೆ ತೋರುತ್ತದೆ. ಈ ಚಿತ್ರ ಹದಿನಾರು ಸಾವಿರ ಅಡಿಗಳಷ್ಟು ಉದ್ದವಿತ್ತು. ಆ ಕಾಲಕ್ಕೆ ಮೂರರಿಂದ ನಾಲ್ಕು ಲಕ್ಷದವರೆಗೆ ಖರ್ಚಾಗಿತ್ತು. ಕರ್ನಾಟಕದ ೧೦ ಕೇಂದ್ರಗಳಲ್ಲಿ ಯಶಸ್ವಿಯಾಗಿ ಪ್ರದರ್ಶಿತವಾಯಿತು. ಶ್ರೇಷ್ಠ ಚಿತ್ರವೆಂದು ಪರಿಗಣಿತವಾಯಿತು.

೧೯೪೮ರಲ್ಲಿ ತೆರೆಕಂಡ ‘ಭಾರತಿ’ ಮುಖ್ಯವಾಗಿ ಪ್ರಸ್ತಾಪಿಸಬೇಕಾದ ಚಿತ್ರ. ಇದೊಂದು ಸಾಮಾಜಿಕ ವಸ್ತುವನ್ನು ಒಳಗೊಂಡ ಚಿತ್ರವಾಗಿತ್ತು. ಹವ್ಯಾಸಿ ರಂಗಭೂಮಿಯಲ್ಲಿ ಹೆಸರಾದವರೂ, ಇಂಗ್ಲಿಷ್ ನಾಟಕಗಳ ಪ್ರಯೋಗ, ಅಭಿನಯದ ಅನುಭವ ಇದ್ದವರೂ ಅದ ಸಂಪತ್ (ಚೆಲುವಯ್ಯಂಗಾರ್) ಮತ್ತು ಇಂಗ್ಲಿಷ್ ಅಧ್ಯಾಪಕರಾಗಿದ್ದ ಎಂ.ವಿ.ಕೃಷ್ಣಸ್ವಾಮಿಯವರು, ಆಂಧ್ರ ಕೇಸರಿ ಎಂದೇ ಹೆಸರಾಗಿದ್ದ ಟಿ.ಪ್ರಕಾಶಂ ಮಗಳು ಟಿ.ಸೂರ್ಯಕುಮಾರಿ, ರಾಜಕುಮಾರಿ, ಹೆಚ್.ಪಿ.ಸರೋಜ, ರಂಗ ಸಂಗೀತ ನಟರಾದ ಪರಮಶಿವು ಮೊದಲಾದವರು ಅಭಿನಯಿಸಿದ್ದರು. ತಿರುವಾಂಕೂರು ಸೋದರಿಯರೆಂದು ಪ್ರಸಿದ್ಧರಾಗಿದ್ದ ಲಲಿತ-ಪದ್ಮಿನಿಯವರನ್ನು ಕನ್ನಡಕ್ಕೆ ಪರಿಚಯಿಸಿ, ಚಿತ್ರದಲ್ಲಿ ಅವರ ನೃತ್ಯ ಸನ್ನಿವೇಶ ಅಳವಡಿಸಲಾಗಿತ್ತು.

ಮೈಸೂರಿನ ಕಾಲೇಜಿನಲ್ಲೇ ಓದುತ್ತಿದ್ದ, ಅದಾಗಲೇ ಕಥೆ, ಕಾದಂಬರಿ ಬರೆದು ಪರಿಚಿತರಾಗಿದ್ದ ಎಂ.ನರೇಂದ್ರಬಾಬು ಈ ಚಿತ್ರ ಕ್ಕೆ ಕಥೆ, ಸಂಭಾಷಣೆ ಮತ್ತು ಗೀತೆಗಳನ್ನು ರಚಿಸಿದ್ದರು. ಕನ್ನಡ ಸಂಗೀತ ವಿದ್ವಾನ್ ಎಂ.ಎಸ್.ಚಂದ್ರಶೇಖರಯ್ಯ ಸಂಗೀತ ನೀಡಿದ್ದರು. ಈ ಚಿತ್ರದ ಹಾಡುಗಳು ಆವರೆಗೆ ಬಂದವುಗಳಿಗಿಂತ ಭಿನ್ನವಾಗಿದ್ದವು ಹಾಗೂ ಜನಪ್ರಿಯವೂ ಆಗಿದ್ದವು. ಚಿತ್ರವನ್ನು ನವಜ್ಯೋತಿ ಸ್ಟುಡಿಯೋದಲ್ಲಿ ಚಿತ್ರೀಕರಿಸಿದ್ದರು.

ಭಾರತೀಯ ಸ್ತ್ರೀ ನಮ್ಮ ಸಂಸ್ಕೃತಿಗೆ ತಕ್ಕಂತೆ ಇರಬೇಕು. ಪಾಶ್ಚಿಮಾತ್ಯರ ಆಧುನಿಕತೆ ನಮ್ಮ ಕುಟುಂಬ ವ್ಯವಸ್ಥೆಯನ್ನು ಪಲ್ಲಟಗೊಳಿಸುತ್ತದೆ ಎಂಬುದು ಈ ಕಥೆಯ ತಿರುಳು. ಎಲ್ಲಕ್ಕಿಂತ ಮಿಗಿಲಾಗಿ ಈ ಚಿತ್ರದಲ್ಲಿ ರಾಷ್ಟ್ರೀಯತೆಯ ಭಾವನೆಯನ್ನು



(ಚಿತ್ರ ೪೭) 'ಭಾರತಿ' ಚಿತ್ರದಲ್ಲಿ ಸೂರ್ಯಕುಮಾರಿ

ಎತ್ತಿ ಹಿಡಿಯಲಾಗಿತ್ತು. ಮೂಲತಃ ಚಿತ್ರಕಲಾವಿದ-ಕಲಾನಿರ್ದೇಶಕ ಆಗಿದ್ದ ಆರ್.ಎಂ.ವೀರಭದ್ರಯ್ಯ ಈ ಚಿತ್ರದ ನಿರ್ದೇಶಕರು. ಎಂ.ಎಸ್.ಮಣಿ ಛಾಯಾಗ್ರಹಣವಿತ್ತು.

ಈ ಚಿತ್ರದಲ್ಲಿ ಹಲವರು ಪ್ರಥಮರು. ಅವರಲ್ಲಿ ಸಂಪತ್ ಅನಂತರವೂ ಶ್ರೇಷ್ಠ ನಟರೆನ್ನಿಸಿದ ಹಿರಿಯರು. ವೀರಭದ್ರಯ್ಯನವರೂ ಉತ್ತಮ ಕಾರ್ಯ ನಿರ್ವಹಿಸಿದ್ದರು. ನಾಯಕ ನಟ ಎಂ.ವಿ.ಕೃಷ್ಣಸ್ವಾಮಿಯವರಂತೂ ಚಲನಚಿತ್ರಕ್ಕೆ ಸಂಬಂಧಿಸಿದಂತೆ ವಿದೇಶದಲ್ಲಿ ಉಚ್ಚ ಶಿಕ್ಷಣ ಪಡೆದವರು. ಅವರಿಗೆ ಫ್ರಾನ್ಸ್‌ನ ವಿದ್ಯಾರ್ಥಿ ವೇತನವೂ ಸಿಕ್ಕಿತ್ತು. ಉತ್ತಮ ಚಿತ್ರಗಳನ್ನು ತೆರೆಗಿತ್ತರು. ಕರ್ನಾಟಕದಲ್ಲಿ ಚಿತ್ರ ಸಮಾಜಗಳಿಗೆ ಕಾರಣರಾದರು. ಅಂತಾರಾಷ್ಟ್ರೀಯ ಮಟ್ಟದಲ್ಲಿ ಅವರ ಖ್ಯಾತಿ ಬೆಳಗಿತು. ಈ ಚಿತ್ರದ ಕಲಾ ನಿರ್ದೇಶಕರೂ ಆಗಿದ್ದ ವೀರಭದ್ರಯ್ಯನವರು ಮುಂದೆ 'ಝನಕ್ ಝನಕ್ ಪಾಯಲ್ ಬಾಜೆ' ಚಿತ್ರಕ್ಕೆ ಕಲಾ ನಿರ್ದೇಶನ ಮಾಡಿದರು. 'ಭಾರತಿ' ೧೯೪೮ರಲ್ಲಿ ಬಿಡುಗಡೆಯಾದರೂ ಮತ್ತೆ ೧೯೪೯ರ ಆಗಸ್ಟ್ ೧೧ರಂದು ಸೇಲಂ, ದಾವಣಗೆರೆ, ಹಾಸನ, ಕೋಲಾರ, ಹೊಳೆನರಸೀಪುರ ಮೊದಲಾದ ಕಡೆ ಪ್ರದರ್ಶಿತವಾಯಿತು.

೧೯೪೯ರಲ್ಲಿ ಬಿಡುಗಡೆಯಾದ ಮತ್ತೊಂದು ಚಿತ್ರ 'ದಸರಾ'. ಕಥೆಗೂ ಚಿತ್ರದ ಶೀರ್ಷಿಕೆಗೂ ಸಂಬಂಧವಿರಲಿಲ್ಲವೆನ್ನಲಾಗಿದೆ. ಚಿತ್ರ ಯಶಸ್ವಿಯಾಗಲಿಲ್ಲ. ಬಿ.ವೈ.ರಾಮದಾಸ್ ನಿರ್ದೇಶಿಸಿದ್ದ ಚಿತ್ರ. ಮುಂಬಯಿನಲ್ಲಿ ತಯಾರಾಯಿತಂತೆ. ಛಾಯಾಗ್ರಹಣ, ಸಂಗೀತ, ಇದಾವುದೂ ಮೆಚ್ಚುವಂತಿರಲಿಲ್ಲವೆಂದು ಪತ್ರಿಕಾ ವರದಿಗಳಿಂದ ತಿಳಿದು ಬರುತ್ತದೆ.

'ಸತೀ ತುಳಸಿ' ೧೯೪೯ರಲ್ಲಿ ಬಿಡುಗಡೆಯಾಯಿತು. ಅಯ್ಯನಾರ್ ಪಾಂಡುರಂಗ ಪ್ರೊಡಕ್ಷನ್ಸ್ ಅವರ ನಿರ್ಮಾಣ. ಸಂಗೀತ ಪ್ರಧಾನ ಪೌರಾಣಿಕ ಕಥಾ ವಸ್ತು. ನಿರ್ದೇಶಕರು ಎಂ.ಎ.ಎಸ್.ಅಯ್ಯಂಗಾರ್ ಮತ್ತು ಎಂ.ಎಸ್.ಮಾಧವರಾವ್. ನೀಲಮ್ಮ ಕಡಾಂಬಿ ಸಂಗೀತ ನೀಡಿದ್ದರು. ಸಂಗೀತ ವಿದ್ವಾನ್ ಬಿ.ಎಸ್.ರಾಜಯ್ಯಂಗಾರ್, ಜಿ.ಆರ್.ಸ್ಯಾಂಡೋ, ಎಂ.ಜಿ.ಮರಿರಾವ್, ನೀಲಮ್ಮ ಕಡಾಂಬಿ, ಜಯಶ್ರೀ ಮೊದಲಾದವರು ಅಭಿನಯಿಸಿದ್ದರು. ಚಿತ್ರ ಸೋತಿತು. ಚಿತ್ರಕ್ಕೆ ಬಂದ ವಿಮರ್ಶೆಗಳು ಚಿತ್ರದ ಯಾವ ಗುಣವನ್ನೂ ಎತ್ತಿ ಹಿಡಿಯಲಿಲ್ಲ.

ಸಿ.ಎಸ್.ಕೃಷ್ಣಕುಮಾರ್ ನಿರ್ದೇಶನದ 'ಅಳಿಯ', ಆರ್.ನಾಗೇಂದ್ರರಾಯರು ಚಿತ್ರಿಸುವರೆಂಬ ಸುದ್ದಿಯಿದ್ದ 'ತಾಯಿ' ಚಿತ್ರಗಳು ಬರಲಿಲ್ಲ. 'ಮೀರಾ' ಎಂಬ ಸುಬ್ಬಲಕ್ಷ್ಮಿಯವರ ಅಭಿನಯದ ಚಿತ್ರವೊಂದಕ್ಕೆ ಬೆಳ್ಳಾವೆಯವರ ಸಾಹಿತ್ಯ, ಗೀತೆಗಳಿವೆ ಎಂದು ಪ್ರಚಾರವಾಗಿದೆ. ಜಾಹಿರಾತೂ ಬಂದಿದೆ. ಆದರೆ ಈ ಚಿತ್ರ ತೆರೆ ಕಂಡದ್ದಕ್ಕೂ ಖಚಿತ ಮಾಹಿತಿ ಇಲ್ಲ. ಕುಮಾರ ವೆಂಕಣ್ಣ 'ಕನ್ನಡ ಚಲನಚಿತ್ರೋದ್ಯಮ' ಕುರಿತು ಬರೆದ ಕಿರು ಹೊತ್ತಿಗೆಯಲ್ಲಿ (ಕಟಕ ಪ್ರಕಾಶನ, ಜುಲೈ ೧೯೬೦) "...೧೯೪೯ರಲ್ಲಿ ಸುಮಾರು ಹತ್ತು ಮಂದಿ ಚಿತ್ರ ತಯಾರಕರು ತಲೆ ಎತ್ತಿಕೊಂಡರು. ಅವರಲ್ಲಿ ಆರು ಮಂದಿ ಹೇಗೋ ಪ್ರಯತ್ನಿಸಿ ಆರು ಚಿತ್ರಗಳನ್ನು ಪ್ರದರ್ಶನಕ್ಕೆ ಸಿದ್ಧಗೊಳಿಸಿದರು. ಆರೂ ಚಿತ್ರಗಳು ನಿರಾಶಾದಾಯಕವಾದವು. ೧೯೪೮ರಲ್ಲಿ 'ಮೀರಾ' ಮತ್ತು 'ರಾಮದಾಸ್' ಎಂಬ ಎರಡು ಚಿತ್ರಗಳು ಬಂದು ಹಾಗೇ ಯಾರಿಗೂ ತಿಳಿಸದೆ ಮರೆಯಾದವು.." ಎನ್ನುತ್ತಾರೆ. ಇದಲ್ಲದೆ ಈ ಚಿತ್ರಕ್ಕೆ ಚಲನಚಿತ್ರ ಶಿಕ್ಷಣಕ್ಕಾಗಿ ಪ್ರಾರಂಭವಾಗಿದ್ದ ಎಸ್.ಜೆ.ಪಿ.ಯಲ್ಲಿ ಧ್ವನಿಗ್ರಹಣ ಮಾಡಿದ ದಾಖಲೆಗಳಿವೆ. ಈ ಚಿತ್ರದ ಹಿಂದೆ ಇದ್ದ ಬಿ.ನರಸಿಂಹಯ್ಯ ಎಂಬ ವ್ಯಕ್ತಿ ಚಿತ್ರೋದ್ಯಮದ ಸಾಮಾನ್ಯ ಕೆಲಸಗಾರರಾಗಿದ್ದರು. ಹೀಗೊಂದು ಚಿತ್ರ ಮಾಡುವ ಪ್ರಯತ್ನ ಮಾಡಿದರು.

ನರಸಿಂಹಯ್ಯನವರು ರಜಪೂತ ಭಕ್ತೆಯ ಅಮರ ಕತೆಯ ಚಿತ್ರ, ಪ್ರಸಿದ್ಧ ತಾರೆ ಕೆ.ಅಶ್ವತ್ಥಮ್ಮನ ಸೋದರಿ ಸುಬ್ಬಲಕ್ಷ್ಮಿಯ ಸಂಗೀತ, ಸಂಭಾಷಣೆ, ಗೀತೆ ಬೆಳ್ಳಾವೆ ನರಹರಿಶಾಸ್ತ್ರಿಗಳಿಂದ ಎಂತ ಜಾಹಿರಾತನ್ನೂ ಪ್ರಕಟಿಸಿದ್ದಾರೆ. ಅದರಲ್ಲಿ ಶಿವಾನಂದ ಫಿಲಂಸ್ ವಿತರಿಸುತ್ತದೆ ಎಂದು ಹೇಳಲಾಗಿದೆ. ಒಂದು ಸೊಗಸಾದ ಪದ್ಯವನ್ನು ರಚಿಸಿ ಪ್ರಕಟಿಸಲಾಗಿದೆ :

ಶ್ರೀಕೃಷ್ಣ ಪಾದ ಭಕ್ತಿಯ ತಳೆದಪಾರ
ಶೋಕ ಮಳಿದುದಿಸೆ ಮನದೊಳಗೆ ಸುವಿಚಾರ
ಲೋಕಕಾನಂದ ಮಿತ್ತಿರೆ ಭಜನ ಸಾರ
ಸ್ತ್ರೀ ಕುಲಕ್ಕಾದರ್ಶವೆನಿಸಿಹಳು ಮೀರಾ ॥

"ಇಷ್ಟೆಲ್ಲ ಸಾಹಸ ಮಾಡಿದ್ದೂ ಬರೀ ಸ್ಟಂಟ್ ಮತ್ತು ಬೇರೆ ಬೇರೆ ಕಾರಣಗಳಿಗಾಗಿಯೇ ವಿನಾ, ಆತನಿಗೆ ಸಿನಿಮಾ ಮಾಡುವ ಉದ್ದೇಶವಿರಲಿಲ್ಲ" ಎಂಬ ಮಾತನ್ನು ಚಿತ್ರೋದ್ಯಮದ ಹಿರಿಯರು ಹೇಳುತ್ತಾರೆ.

ಭಾಷೆ ತೆಲುಗಾದರೂ ಕನ್ನಡದವರ ಕಾರ್ಯ ಎಂಬ ಕಾರಣಕ್ಕೆ ಇಲ್ಲಿ 'ಭೂಕೈಲಾಸ' ಕುರಿತು ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಸುಂದರರಾವ್ ನಾಡಕರ್ಣಿ ನಿರ್ದೇಶನದಲ್ಲಿ 'ಭೂಕೈಲಾಸ' ತೆಲುಗಿನಲ್ಲಿ ಸಿದ್ಧವಾಯಿತು. ಮತ್ತೆ ಆರ್.ನಾಗೇಂದ್ರರಾಯರ ಎಡೆಬಿಡದ ಪ್ರಯತ್ನಗಳ ಫಲ ಈ ಚಿತ್ರ. ಸುಬ್ಬಯ್ಯನಾಯ್ಡು, ಲಕ್ಷ್ಮೀಬಾಯಿ, ನಾಗೇಂದ್ರರಾಯರೇ ಮೊದಲಾಗಿ ಬಹುತೇಕ ಎಲ್ಲರೂ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿಯ ನಟ ನಟಿಯರೇ ಅಭಿನಯಿಸಿದ್ದರು. ಎ.ವಿ.ಮೇಯಪ್ಪನ್ ಅವರೇ ನೆರವಾಗಿದ್ದರು. ಆದರೆ ಆಂಧ್ರದಲ್ಲಿ ಇದರ ಪ್ರವೇಶ ಸುಲಭವಿರಲಿಲ್ಲ.

"ಪ್ರಗತಿ ಪಿಕ್ಚರ್ಸ್ ಲಾಂಛನದ ಈ ಚಿತ್ರದಲ್ಲಿ ಕಲಾವಿದರೆಲ್ಲ ಕನ್ನಡ ನಾಟಕ ಕಂಪನಿಯ ನಟರು. ನಿರ್ದೇಶಕ ಮರಾಠಿಗ. ನಿರ್ಮಾಪಕ ತಮಿಳರು. 'ಭೂಕೈಲಾಸ'ದ ಭಾಷೆ ಯಾವುದು ?" ಎಂದು ತೆಲುಗು ಪತ್ರಿಕೆಗಳು ನಿಷ್ಠುರವಾಗಿ ಬರೆದವು.

ಇದರ ಪರಿಣಾಮವಾಗಿ ವಿಜಯವಾಡ (ಬೆಜವಾಡ)ದಲ್ಲಿ ಈ ಚಿತ್ರ ಬಿಡುಗಡೆಯೇ ಆಗಿರಲಿಲ್ಲ. ಹರ ಸಾಹಸ ಮಾಡಿ 'ಲಕ್ಷ್ಮೀ ಟಾಕೀಸ್'ನಲ್ಲಿ ಪ್ರದರ್ಶಿಸಿದರು. ಜನ ಹೊರಗೆ ನಿಂತು ಚಿತ್ರನೋಡಿ ಹೊರಬರುವ ಪ್ರೇಕ್ಷಕನ ಅಭಿಪ್ರಾಯಕ್ಕೆ ಕಾಯುತ್ತಿದ್ದರು. ಹಾಗೆ ನೋಡಿ ಬಂದವರು 'ಚಾಲಾ ಬಾಗುಂದಿ' (ತುಂಬಾ ಚೆನ್ನಾಗಿದೆ) ಎಂದ ಮೇಲೆ ಟಿಕೆಟ್ ಖರೀದಿ ಮಾಡುತ್ತಿದ್ದರಂತೆ. ಅನಂತರ ಸಮಸ್ಯೆ ಪರಿಹಾರವಾಯಿತು. ಮೇಯಪ್ಪನ್ ಅವರು ಅದೇ ವಸ್ತುವನ್ನು ಎನ್.ಟಿ.ರಾಮರಾವ್ ಮತ್ತು ಜಮುನಾರ ಜೋಡಿಯಲ್ಲಿ ನಿರ್ಮಿಸಿದರು. ಆದರೆ ಆ ಚಿತ್ರ ಸೋತಿತು ಎಂದು ನಾಗೇಂದ್ರರಾಯರೇ ನೆನಪು ಮಾಡಿಕೊಳ್ಳುತ್ತಾರೆ.

೧೯೪೯ರಲ್ಲಿ ತೆರೆ ಕಂಡ ಮತ್ತೊಂದು ಚಿತ್ರ 'ನಾಗಕನ್ನಿಕಾ'. ಮೊದಲ ಬಾರಿಗೆ ಧೈರ್ಯ ಮಾಡಿ ಸ್ತ್ರೀಯರ ಮೈ-ಮಾಟ ಪ್ರದರ್ಶಿಸುವ ಪ್ರಯತ್ನವಾಗಿತ್ತು. ಮೈಸೂರಿನ ಜನರಿಗೆ ಇನ್ನೂ ಕನ್ನಡ ಚಿತ್ರಗಳ ಬಗ್ಗೆ ಅಂಥ ಆಸಕ್ತಿಯೇ ಇರಲಿಲ್ಲ. ಚಿತ್ರಗಳ ತಯಾರಿಕೆಯೂ ಬೆರಳೆಣಿಕೆಯಷ್ಟು. ಅವುಗಳಿಗೇ ಚಿತ್ರಮಂದಿರಗಳು ಸಿಗುತ್ತಿರಲಿಲ್ಲ. ತೆಲುಗು, ತಮಿಳು, ಹಿಂದಿ ಚಿತ್ರಗಳ ಬಗ್ಗೆ ತೋರುತ್ತಿದ್ದಷ್ಟು ಆಸ್ಥೆಯನ್ನು ಕನ್ನಡ ಚಿತ್ರಗಳಿಗೆ ಪ್ರದರ್ಶಕರು ತೋರುತ್ತಿರಲಿಲ್ಲ.

ವಿಠಲಾಚಾರ್ಯರು ಹೀಗೆ ಹೇಳುತ್ತಾರೆ : ''ಆ ದಿನಗಳಲ್ಲಿ ಕನ್ನಡಿಗರೇ ಕನ್ನಡ ಚಿತ್ರಗಳನ್ನು ನೋಡುತ್ತಿರಲಿಲ್ಲ. ಕನ್ನಡ ಪಿಕ್ಚರ್ಸ್ ಎಂದರೆ ಡಿಸ್ಟ್ರಿಬ್ಯೂಟರ್‌ಗಳೇ ಮುಂದೆ ಬರುತ್ತಿರಲಿಲ್ಲ. ಥಿಯೇಟರ್‌ಗಳೂ ಸಿಗುತ್ತಿರಲಿಲ್ಲ. ಈ ಚಿತ್ರಗಳನ್ನು ನೋಡಲು ಮೊದಲು ಬರುತ್ತಿದ್ದವರು ತಮಿಳರೇ. ಅವರು 'ಚಿತ್ರ ಚೆನ್ನಾಗಿಲ್ಲ ಕಣೋ' ಅಂದರೆ ಮುಗಿದೇ ಹೋಯ್ತು. ನಮ್ಮೋರು ಒಬ್ಬರೂ ಬರುತ್ತಿರಲಿಲ್ಲ. ನಾನು ಮತ್ತು ಶಂಕರಸಿಂಗ್ ಜೀಪ್‌ನಲ್ಲಿ ಮೈಕ್ ಇಟ್ಟುಕೊಂಡು ಬೀದಿ ಬೀದಿಯಲ್ಲಿ 'ಕನ್ನಡ ಚಿತ್ರ ನೋಡಿ. ನೀವು ಎಂಟಾಣೆ ಕೊಟ್ಟು ಟಿಕೆಟ್ ತೆಗೆದುಕೊಂಡು ಚಿತ್ರ ನೋಡಿ. ಅನಂತರ ಚೆನ್ನಾಗಿಲ್ಲ ಅಂತ ಹೇಳಿದರೆ ಪರವಾಗಿಲ್ಲ' ಎಂತ ಬೆಂಗಳೂರಿನಲ್ಲಿ ಪ್ರಚಾರ ಮಾಡುತ್ತಿದ್ದೆವು. ಆದ್ರೂ ಜನ ಬರ್ತಾ ಇರಲಿಲ್ಲ.

''ನಾವು 'ನಾಗಕನ್ನಿಕಾ' ಚಿತ್ರ ತಯಾರಿಸಿದ್ದೆವು. ಆಗ ಕೆ.ಟಿ.ಭಾಷ್ಯಂ ಮಂತ್ರಿಗಳು. ಅವರ ಮೂಲಕ ಮೂವಿಲ್ಯಾಂಡ್‌ನ ರಂಗಪ್ಪನವರಿಗೆ ಹೇಳಿಸಿದೆವು. ಅವರು 'ಎರಡು ಷೋ ಹಾಕಿಸ್ತೀನಿ. ಮಧ್ಯಾಹ್ನ ಮ್ಯಾಟಿನಿ ಮತ್ತು ಫಸ್ಟ್ ಷೋ. ಅದು ಏನಾದರೂ ಜನರಿಗೆ ಹಿಡಿಸ್ತು, ಕಂಟಿನ್ಯೂ ಮಾಡ್ತೀನಿ. ಇಲ್ಲದಿದ್ರೆ ತೆಗೆದು ಹಾಕ್ತೀನಿ' ಎಂದರು. ನಾವು ಒಪ್ಪಿಕೊಂಡೆವು. ಶಂಕರಸಿಂಗ್ ಅಲ್ಲೇ ಹೊಟೇಲ್‌ನಲ್ಲಿ ಇದ್ದು ಬಿಟ್ಟರು. ನಾನು ಥಿಯೇಟರ್‌ಗೆ ಹೋದೆ. ನಮ್ಮ ಬ್ಯಾನರ್‌ನೇ ಹರಿದು ಹಾಕಿದ್ದರು. ಅವರೂ ಮ್ಯಾಟಿನಿ ಷೋ ಫುಲ್ ಆಯಿತು. ಚಿತ್ರ ಚೆನ್ನಾಗಿದೆ ಅಂತ ಅಭಿಪ್ರಾಯ ಬಂತು. ಫಸ್ಟ್ ಷೋನೂ ಫುಲ್. ಕಡೆಗೆ ಅದೇ ಥಿಯೇಟರ್‌ನಲ್ಲಿ 'ನಾಗಕನ್ನಿಕಾ' ನೂರು ದಿನ ಪ್ರದರ್ಶನ ಕಂಡಿತು. ಅದು ಯಶಸ್ವಿಯಾದ ನಮ್ಮ ಪ್ರಥಮ ಚಿತ್ರ. ಅದನ್ನು ನಿರ್ದೇಶಿಸಿದವರು ನಮ್ಮ ಹಿಂದಿನ ಚಿತ್ರಗಳಿಗೆ ಎಡಿಟರ್ ಆಗಿದ್ದ ಜಿ.ವಿಶ್ವನಾಥನ್. ಅವರು ಮುಂದೆ ನನ್ನ ಹತ್ತಿರ ಸಹ ನಿರ್ದೇಶಕರಾದರು...''

'ನಾಗಕನ್ನಿಕಾ'ದಲ್ಲಿ ಒಬ್ಬ ಮಾಂತ್ರಿಕ ಹಾಗೂ ಆತನ ಅಲೌಕಿಕ ಶಕ್ತಿಗಳ ಸುತ್ತ ಹೆಣೆದ ಕಥಾವಸ್ತುವಿತ್ತು. ಮಂತ್ರವಾದಿಯ ಪಾತ್ರದಲ್ಲಿ ಬಿ.ರಾಘವೇಂದ್ರರಾಯರಿದ್ದರು. ನಾಗಕನ್ನಿಕೆಯ ಪಾತ್ರದಲ್ಲಿ ಜಯಶ್ರೀ ಅಭಿನಯಿಸಿದ್ದರು. ಜಲಕ್ರೀಡೆಯ ದೃಶ್ಯದಲ್ಲಿಯ ಆಕೆಯ ಮೈಮಾಟ ರಸಿಕರಿಗೆ ಮೋಹಕವೆನಿಸಿತ್ತು. ಅದುವರೆಗೆ ಕನ್ನಡ ಚಿತ್ರಗಳಲ್ಲಿ ಇಂಥ ಪ್ರಯೋಗಗಳು ಆಗಿರಲಿಲ್ಲ. ಅದೇ ಮನೆ ಮಾತಾಯಿತು. ಮಹಾತ್ಮಾ ಪಿಕ್ಚರ್ಸ್‌ನ ಯಶೋಧ್ವಜ ಹೆಮ್ಮೆಯಿಂದ ಹಾರಾಡಿತು. ಇದೇ ಚಿತ್ರವನ್ನು ೧೯೫೦ರಲ್ಲಿ ತಮಿಳಿಗೆ ಡಬ್ ಮಾಡಿದ್ದರು. ಅಲ್ಲೂ ಯಶಸ್ವಿಯಾಯಿತು.

ಈ ಚಿತ್ರದಲ್ಲಿ ಸ್ತ್ರೀಯರು ಸರ್ಪಗಳಾಗುವ, ಋಷಿಗಳು ಕಲ್ಲಾಗುವ ಚಮತ್ಕಾರಗಳಿದ್ದವು. ನವಜ್ಯೋತಿ ಸ್ಟುಡಿಯೋದಲ್ಲೇ ಚಿತ್ರ ತಯಾರಾಯಿತು. ಜಾನಪದ ಚಿತ್ರವಾದ್ದರಿಂದ ಅಗತ್ಯವಿರುವ ಅರಮನೆ ಮುಂತಾದ ಸೆಟ್‌ಗಳನ್ನು ನವಜ್ಯೋತಿಯಲ್ಲೇ ಇದ್ದ ಎಂಬಾರಯ್ಯ ನಿರ್ಮಿಸಿದರು. ಆತ ದಕ್ಷಿಣ ಭಾರತದ ಪ್ರಮುಖ ಕಲಾ ನಿರ್ದೇಶಕ. ನವಜ್ಯೋತಿಯ ಭಾಗಸ್ಥರಲ್ಲಿ ಒಬ್ಬರು ಕೂಡಾ. ಈ ಚಿತ್ರದ ಸಂಗೀತ ಪಲವಾಂಗುಡಿ ಶ್ಯಾಮಯ್ಯರ್ ಅವರದು. ಹಿನ್ನೆಲೆಗೆ ಹಾಡಿದವರು ಶ್ಯಾಮಯ್ಯರ್ ಮತ್ತು ಪಿ.ಲೀಲಾ.

ತಾರಾಗಣದಲ್ಲಿ ಬಳ್ಳಾರಿ ರತ್ನಮಾಲಾ, ಮಹಾಬಲರಾವ್, ವೀರಭದ್ರಪ್ಪ, ಜಯಶ್ರೀ, ಪ್ರತಿಮಾದೇವಿ, ಜಿ.ಆರ್.ಸ್ಯಾಂಡೊ, ಈಶ್ವರಪ್ಪ, ಟಿ.ಆರ್.ರಾಜಬಾಲ, ರಾಧಾಬಾಯಿ ಇದ್ದರು. ಸಂಭಾಷಣೆ ಬರೆದವರು ಹುಣಸೂರು ಕೃಷ್ಣಮೂರ್ತಿ. ಗೀತೆಗಳನ್ನು ಹುಣಸೂರು ಕೃಷ್ಣಮೂರ್ತಿ ಮತ್ತು ಎಂ.ನರೇಂದ್ರಬಾಬು ಇಬ್ಬರೂ ರಚಿಸಿದ್ದರು. ನಾಟ್ಯ ನಿರ್ದೇಶನವನ್ನು ಸೋಹನ್‌ಲಾಲ್ ನಿರ್ವಹಿಸಿದ್ದರು. ನಿರ್ಮಾಪಕರೆಂದು ಶಂಕರಸಿಂಗ್ ಹೆಸರೇ ಇದೆ. ವಿಠಲಾಚಾರ್ಯರೂ ನಿರ್ಮಾಪಕರೇ. ಮೈಸೂರು, ಕೊಡಗು, ದಕ್ಷಿಣ ಕನ್ನಡ ಮತ್ತಿತರ (ಸೀಡೆಡ್) ಕಡೆಗಳ ವಿತರಣೆಯನ್ನು ಶಾಂತಾ ಪಿಕ್ಚರ್ಸ್‌ನವರೇ ಇಟ್ಟುಕೊಂಡಿದ್ದರು. ಚಿತ್ರದ ಪೂರ್ಣ ಹಕ್ಕುಗಳನ್ನೂ ಶಾಂತಾ ಪಿಕ್ಚರ್ಸ್‌ನ ಎಸ್.ವಿ.ಗೋಪಾಲಶೆಟ್ಟಿ ಅವರು ಪಡೆದಿದ್ದರು.

ಚಿತ್ರಕ್ಕೆ ಪತ್ರಿಕಾ ವಿಮರ್ಶೆಗಳು ಉತ್ತಮವಾಗಿಯೇ ಬಂದವು. ಕಥೆಯಲ್ಲಿ ಹೊಸತೇನಿಲ್ಲವಾದರೂ ಹೇಳುವ ವಿಧಾನ ಚೆನ್ನ, ಕುತೂಹಲ ಉಳಿಸಿಕೊಳ್ಳುತ್ತದೆಯೆಂದೂ, ಹಾಸ್ಯ ದೃಶ್ಯಗಳು ಒಪ್ಪವಾಗಿಲ್ಲ, ಗೀತೆಗಳು ಹಾಗೂ ಸಂಭಾಷಣೆ ಉತ್ತಮವೆಂದೂ ಮೆಚ್ಚಿಕೊಂಡಿದ್ದರು. ಸ್ಟುಡಿಯೋ ಕೆಲಸಗಾರರ ಪರಿಶ್ರಮ, ಶ್ರದ್ಧೆಯ ಕೆಲಸ ಚಿತ್ರದ ಚೊಕ್ಕತನಕ್ಕೆ ಕಾರಣ ಎಂಬ ಮಾತು ಗಮನಾರ್ಹವೆನಿಸುತ್ತದೆ.

ಈ ಚಿತ್ರ ೧೯೪೯ನೇ ಸೆಪ್ಟೆಂಬರ್ ೬ರಿಂದ ಬೆಂಗಳೂರಿನ ಮೂವಿಲ್ಯಾಂಡ್, ಮಿನರ್ವ ಹಾಗೂ ಮೈಸೂರಿನ ರಾಜಕಮಲ್, ಲಕ್ಷ್ಮಿ ಚಿತ್ರಮಂದಿರಗಳಲ್ಲಿ ತೆರೆಗೆ ಬಂತು. ದಾವಣಗೆರೆ, ಚಿತ್ರದುರ್ಗ, ಚಿಕ್ಕ ಮಗಳೂರು, ತುಮಕೂರು, ಹಾಸನ, ಅರಸೀಕೆರೆಗಳಲ್ಲಿ ಚಿತ್ರ ತೆರೆ ಕಂಡು ಯಶಸ್ವಿಯಾಯಿತು.

ಚಿತ್ರ ಬಿಡುಗಡೆಯಾಗುವ ಹೊತ್ತಿಗೆ ಹೆಚ್.ಎಂ.ವಿ.ಅವರಿಂದ ಚಿತ್ರದ ಹಾಡುಗಳ ರೆಕಾರ್ಡುಗಳು ಬರುವಂತೆ ವ್ಯವಸ್ಥೆಯಾಗಿತ್ತು. 'ನಾಗಕನ್ನಿಕಾ'ದಲ್ಲಿ ಅಭಿನಯಿಸಿದ್ದ ಕಲಾವಿದೆ ಮಹಾತ್ಮ ಸಂಸ್ಥೆಯ ಪ್ರತಿಮಾದೇವಿ ''ನಾಗಕನ್ನಿಕಾ' ಚಮತ್ಕಾರಗಳ ಚಿತ್ರ. ಜಮಖಾನದಲ್ಲಿ ಕೂತು ಏಳು ಸಮುದ್ರ ದಾಟಿ ಹೋಗುವುದು, ಜೀವ ತರೋದು ಇತ್ಯಾದಿಗಳಿದ್ದವು. ಅದೊಂದು ಜಾನಪದ ಕಥೆ. ಮಾಯ ಮಂತ್ರವಿತ್ತು. ಹುಣ್ಣಿಮೆಯ ದಿನ ಸರ್ಪವಾಗುವ ನಾಯಕಿ. ಅವಳು ಯಾರನ್ನಾದರೂ ಕಡಿದರೇನೇ ಹೆಣ್ಣಿನ ರೂಪ ಬರೋದು. ಈ ಥರದ ಕಥೆ. ಆಗೆಲ್ಲ ವಿಶೇಷ ಚಮತ್ಕಾರಗಳಿಗೆ ಮದರಾಸಿಗೇ ಹೋಗಿ ಬರಬೇಕಿತ್ತು. ಅಂಥ ತಂತ್ರಗಳಿಗಾಗಿ ಹೋಗಿ ಬಂದಿರಬಹುದು. ಉಳಿದಂತೆ ಮೈಸೂರಿನ ಸ್ಟುಡಿಯೋದಲ್ಲೇ ಚಿತ್ರಿಸಿದ್ದರು...'' ಎನ್ನುತ್ತಾರೆ.


(ಚಿತ್ರ ೪೮) 'ನಾಗಕನ್ನಿಕಾ' ಚಿತ್ರದಲ್ಲಿ ಜಯಶ್ರೀ

ಈ ಮಧ್ಯೆ ಚಿತ್ರರಂಗಕ್ಕೆ ನೇರ ಸಂಬಂಧ ಇಲ್ಲವಾದರೂ ಕೆಲವು ಕಾರಣಗಳಿಗಾಗಿ ಕೇಂದ್ರ ಸರ್ಕಾರದ ಧೋರಣೆಗಳನ್ನು, ಮುಖ್ಯವಾದ ಸ್ಥಳದಲ್ಲಿ ಕನ್ನಡದವರೇ ಇದ್ದಾಗಲೂ ಆಗುವ ಆಭಾಸಗಳನ್ನು ಕುರಿತು ನಾಲ್ಕು ಮಾತು ಹೇಳುವುದು ಉಚಿತ.

ಭಾರತ ಸರ್ಕಾರದ ನ್ಯೂಸ್ ರೀಲುಗಳ ತಯಾರಿಕೆಯ ಯೋಜನೆ, ಕನ್ನಡದ ಬಗ್ಗೆ ತೋರಿದ ದಿವ್ಯ ನಿರ್ಲಕ್ಷ್ಯದ ಬಗ್ಗೆ ಈ ಹಿಂದೆಯೂ ಪ್ರಸ್ತಾಪವಾಗಿದೆ. ಅದರ ಮುಂದುವರಿಕೆಯೋ ಎಂಬಂತೆ ಎಂ.ಎಸ್.ಭಾರದ್ವಾಜ್ (ಚಿತ್ರಗುಪ್ತ) ಕೆಲವು ಮಾತುಗಳನ್ನಿಲ್ಲಿ ಉದ್ಧರಿಸಲಾಗಿದೆ : ''...ದೇಶದ ಸುದ್ದಿಗಳನ್ನು ಅನಕ್ಷರಸ್ಥರಿಗೆ ಇಂಥ ಸುದ್ದಿಚಿತ್ರಗಳ ಮೂಲಕ ಹೇಳಬೇಕಾಗುತ್ತದೆ. ತಮಿಳು, ತೆಲುಗು, ಮರಾಠಿಯಲ್ಲಿ ಈ ಚಿತ್ರಗಳು ಆಗುತ್ತಿವೆ. ಕನ್ನಡದಲ್ಲಿ ಇಲ್ಲ. ಏಕೆ ಈ ಮೌನ ? ಆರ್.ಆರ್.ದಿವಾಕರ್ ಅವರೇ ವಾರ್ತಾ ಇಲಾಖೆಯ ಮಂತ್ರಿಗಳು. ಕನ್ನಡಿಗರು. ಅವರೂ ಕನ್ನಡದ ಬಗ್ಗೆ ಈ

ಉದಾಸೀನವೇಕೆ ? ಕರ್ನಾಟಕ ಪ್ರಾಂತ ಇನ್ನೂ ರಚಿತವಾಗಿಲ್ಲ. ಆದರೆ ಭಾಷೆಯ ಮಟ್ಟಿಗೆ, ಸಂಸ್ಕೃತಿಯ ಮಟ್ಟಿಗೆ ಕರ್ನಾಟಕ ಪ್ರಾಂತ ಇದ್ದೇ ಇದೆ. ಕನ್ನಡಿಗರಿಗೆ ಮಾತ್ರ ಸುದ್ದಿ ಚಿತ್ರಗಳಿಲ್ಲ. ಅವರಿಗದು ಅನಗತ್ಯವೊ...?'' (ಚಿತ್ರಗುಪ್ತ, ೧೯೪೯ ಸೆಪ್ಟೆಂಬರ್ ೯)

ಇಂಥ ನಿರ್ಲಕ್ಷ್ಯ ಅಸಡ್ಡೆ ನಿರಂತರವಾಗಿ ನಡೆದು ಬಂದಿದೆ. ಆ ಬಗ್ಗೆ ಪ್ರಶ್ನಿಸಿದಾಗ ಕನ್ನಡಿಗರು ತಕರಾರು ಮಾಡುವವರು ಎಂಬ ಆಕ್ಷೇಪವೂ ಹಿಂದೆಯೇ ಬರುತ್ತದೆ.

ಮತ್ತೆ ಮತ್ತೆ ಕಚ್ಚಾ ಫಿಲಂ ಬಗ್ಗೆ ವಾದ ವಿವಾದಗಳು ಆಗುತ್ತಲೇ ಇದ್ದವು. ಬಹಳ ಹಿಂದೆಯೇ ಸರ್ಕಾರ ಸಿನಿಮಾ ಮಾಡಲು ಪರವಾನಗಿ, ಫಿಲಂ ಹಂಚಿಕೆ ಇತ್ಯಾದಿಗಳಲ್ಲದೆ, ಚಿತ್ರದ ಉದ್ದದ ಬಗೆಗೂ ಮಿತಿ ಹೇರಿತ್ತು. ಯುದ್ಧ ಕಾಲದ ಮಾತು ಹಾಗಾದರೆ, ಸ್ವಾತಂತ್ರ್ಯಾನಂತರವೂ ಈ ಪರದಾಟ ನಿಲ್ಲುವುದಿಲ್ಲ. ಮುಖ್ಯವಾಗಿ ಕೇಂದ್ರ ಸರ್ಕಾರದ ಕೆಂಗಣ್ಣು ದಕ್ಷಿಣ ಭಾರತದವರ ಚಿತ್ರಗಳ ಉದ್ದದ ಬಗ್ಗೆಯೇ ಇತ್ತು. ಬಹುತೇಕ ಪುರಾಣ-ಜನಪದ ಕಥಾವಸ್ತುವಾದ್ದರಿಂದ, ಅತಿ ದೀರ್ಘ ಚಿತ್ರ ನೋಡುವುದನ್ನು ಪ್ರೇಕ್ಷಕನೂ ಅಭ್ಯಾಸ ಮಾಡಿಕೊಂಡಿದ್ದನಾದ್ದರಿಂದ ಅಷ್ಟು ಸುಲಭವಾಗಿ ಚಿತ್ರದ ಉದ್ದ ಕಡಿಮೆ ಮಾಡುವಂತಿರಲಿಲ್ಲ. ಮತ್ತೆ ೧೯೪೯ರಲ್ಲಿ ಎದ್ದ ವಿವಾದ ಹೀಗಿತ್ತು : ''...ಕೇಂದ್ರ ಸರ್ಕಾರ ದಕ್ಷಿಣಭಾರತದ ಚಿತ್ರಗಳ ಫಿಲಂ ಉಪಯೋಗದಲ್ಲಿ ಮಿತಿ ಅನುಸರಿಸಬೇಕು. ದೇಶದಲ್ಲಿ ಯಾವುದೇ ಚಿತ್ರ ೧೧,೫೦೦ ಅಡಿಗೆ ಮೀರಿರಬಾರದು'' ಎಂದು ಆದೇಶ ಹೊರಡಿಸಿತ್ತು. ಮದರಾಸು ಸರ್ಕಾರ ಇದನ್ನು ಪ್ರಕಟಿಸಿದಾಗ ಚಿತ್ರ ತಯಾರಕರಿಗೆ ಹಿಡಿಸಲಿಲ್ಲ. ದಕ್ಷಿಣ ಭಾರತ ಚಲನಚಿತ್ರೋದ್ಯಮ ಸಂಸ್ಥೆಯ ಅಧ್ಯಕ್ಷ ಟಿ.ಆರ್.ಸುಂದರಂ ಮತ್ತು ಜೆಮಿನಿ ಸಂಸ್ಥೆಯ ಮಾಲೀಕರಾದ ಎಸ್.ಎಸ್.ವಾಸನ್ ತೀವ್ರ ವಿರೋಧ ವ್ಯಕ್ತ ಮಾಡಿದರು.

ಸಾಮಾನ್ಯವಾಗಿ ದಕ್ಷಿಣ ಭಾರತ ಚಿತ್ರಗಳ ಉದ್ದ ೧೭,೦೦೦ ಅಡಿ. ಅದನ್ನು ೧೧,೫೦೦ ಅಡಿಗೆ ಇಳಿಸಿದರೆ (ಶೇ. ೩೨ರಷ್ಟು) ಉದ್ದ ತೀರಾ ಮಿತಿಗೊಳ್ಳುತ್ತದೆ. ತಯಾರಿಕೆಯ ಪ್ರಗತಿಗೆ ಧಕ್ಕೆ. ಚಲನಚಿತ್ರ ಕೈಗಾರಿಕೆ ಆದಾಯದಲ್ಲಿ ಶೇ. ೬೦ರಷ್ಟು ತೆರಿಗೆ ಕೇಂದ್ರ ಸರ್ಕಾರಕ್ಕೆ ಪಾವತಿ ಆಗುತ್ತಿದೆ. ಇದರಿಂದ ನಮಗೆ ನಷ್ಟವೇ ಅಧಿಕ. ಫಿಲಂ ಅಭಾವ ಇರುವ ಬೇರೆ ಯಾವ ದೇಶದಲ್ಲೂ ಈ ರೀತಿ ನಿರ್ಬಂಧಗಳಿಲ್ಲ. ಭಾರತದಲ್ಲಿ ಮಾತ್ರ ಸಾಮಾಜಿಕ ಚಿತ್ರಗಳಿಗೆ ಈ ಮಿತಿ ಹೊಂದಿಸಬಹುದು. ಪೌರಾಣಿಕ, ಜಾನಪದ ಚಿತ್ರಗಳಿಗೆ ಈ ಮಿತಿಯಲ್ಲಿ ಚಿತ್ರ ನಿರ್ಮಾಣ ಸಾಧ್ಯವೇ ಇಲ್ಲ. ಆದರೆ ಅವೇ ಹೆಚ್ಚು ಜನಪ್ರಿಯ, ಲಾಭದಾಯಕ ಚಿತ್ರಗಳು (ಚಿತ್ರಗುಪ್ತ - ಡಿಸೆಂಬರ್ ೨, ೧೯೪೯).

೧೯೫೦ರಲ್ಲಿ ಬಿಡುಗಡೆಯಾದ ಏಕೈಕ ಚಿತ್ರ ವಿಶ್ವಕಲಾಸ್ಥಾನ್ ಅವರ 'ಕಲಾವಿದ', 'ಭಾರತಿ' ಚಿತ್ರದ ನಂತರ ಬಂದ ಪ್ರಥಮ ಸಾಮಾಜಿಕ. ನೃತ್ಯ ಕಲಾವಿದನ ಜೀವನದ ಸುತ್ತ ಹೆಣೆದ ಕಥೆಯಾದ್ದರಿಂದ ನೃತ್ಯವೇ ಪ್ರಧಾನ. ಚಿತ್ರದ ತಯಾರಕರಾದ ಸೋಹನ್ ಲಾಲ್ ಅವರದೇ ನೃತ್ಯ ನಿರ್ದೇಶನ. ಸೋಹನ್ ಲಾಲ್, ಕಾಂತಾ ಮತ್ತು ಶಾಂತಾ ಮುಖ್ಯ ತಾರಾಗಣದಲ್ಲಿದ್ದು ಚಿತ್ರದ ಹಾಡುಗಳು ಉತ್ತಮವಾಗಿದ್ದವು. ಕೈಯ್ಯಾರ ಕಿಞ್ಞಣ್ಣ ರೈ ಬರೆದ 'ಹಾಡೊಮ್ಮೆ ಹಾಡಬೇಕು...' ಎಂಬ ರಾಷ್ಟ್ರಭಕ್ತಿ ಗೀತೆಯನ್ನು ಚಿತ್ರದಲ್ಲಿ ಅಳವಡಿಸಲಾಗಿದೆ. ಈ ಗೀತೆಯನ್ನು ಮೋಹನಕುಮಾರಿ ಹಾಡಿದ್ದರು. ನಾಯಕಿಯ ಪಾತ್ರಕ್ಕೆ ಪ್ಲೇ ಬ್ಯಾಕ್ ಹಾಡಿದವರು ಶಾಸ್ತ್ರೀಯ ಸಂಗೀತ ಬಲ್ಲವರಾಗಿದ್ದ ಸರೋಜ. ಪಿ.ಕಾಳಿಂಗರಾಯರ ಸಂಗೀತದಲ್ಲಿ ಮಧುರವಾದ ಗೀತೆಗಳಿದ್ದವು. ನಾಯಕಿಯೇ ಖಳನಾಯಕಿಯಂತೆಯೂ ಚಿತ್ರಿತವಾದ ವಿಶೇಷವಿತ್ತು. ನಾಯಕಿ ನರ್ತಿಸುವ 'ಬುದ್ಧ - ಆಮ್ರಪಾಲೀ' ನೃತ್ಯ ಬಹು ಮೆಚ್ಚುಗೆ ಪಡೆದಿತ್ತು. ಗೀತೆಗಳನ್ನು ಗುಂಡೂರಾವ್ ಬರೆದಿದ್ದರು.

೧೯೫೦ರಲ್ಲಿ ತೆರೆಕಂಡ 'ಕಲಾವಿದ' ಚಿತ್ರದ ನಿರ್ದೇಶಕರು ಸೋಹನ್ ಲಾಲ್ ಎನ್ನುವುದಾಗಿ ಲಭ್ಯವಿರುವ ದಾಖಲೆಗಳು ಹೇಳುತ್ತವೆ. ಆದರೆ ''ನೃತ್ಯ ಕಲಾವಿದನೊಬ್ಬನ ಜೀವನದ ಕಥೆ ಹೇಳುವ ಈ ಚಿತ್ರದ ನಾಯಕ ಹಾಗೂ ನೃತ್ಯ ನಿರ್ದೇಶಕರಾಗಿ ಸೋಹನ್ ಲಾಲ್ ಕೆಲಸ ಮಾಡಿದ್ದಾರೆ'' ಎನ್ನುತ್ತಾರೆ ಚಿತ್ರದ ಸಹನಿರ್ದೇಶಕರಾಗಿ ಕೆಲಸ ಮಾಡಿದ ಕೆ.ಸುಂದರರಾವ್.[೧]

''ಕಲಾವಿದ'ಚಿತ್ರವನ್ನು ಸಿ.ವಿ.ರಾಜು ನಿರ್ದೇಶಿಸಬೇಕಾಗಿತ್ತು. ಕಾರಣಾಂತರದಿಂದ ಅವರು ನಿರ್ದೇಶಿಸುವುದಿಲ್ಲ ಎಂದರು. ಕೊನೆಗೆ ಅದನ್ನು ಸೂರ್ಯನಾರಾಯಣ ನಿರ್ದೇಶಿಸಿದರು. ಕಾಳಿಂಗರಾಯರು ಅದರ ಸಂಗೀತ ನಿರ್ದೇಶಕರು'' ಎಂದು ನೆನಪಿಸಿಕೊಳ್ಳುತ್ತಾರೆ ಸುಂದರರಾವ್. ಮೈಸೂರಿನಲ್ಲಿ ಚಿತ್ರೀಕರಣ, ನವಜ್ಯೋತಿ ಸ್ಟುಡಿಯೋದಲ್ಲೇ ಈ ಚಿತ್ರದ ಸಂಸ್ಕರಣ ಆಯಿತು.

ಹೆಚ್.ಎಲ್.ಎನ್.ಸಿಂಹ, ಹುಣಸೂರು ಕೃಷ್ಣಮೂರ್ತಿ ಮತ್ತು ರಾಜು ಚಿತ್ರದ ಸಂಭಾಷಣೆಗಳನ್ನು ಬರೆದಿದ್ದಾರೆ ಎಂದು ಪ್ರಕಟಿಸಲಾಗಿತ್ತು. ಯಾರು ಯಾವ ಸಂಭಾಷಣೆ ಬರೆದಿದ್ದಾರೆಂದು ಹೇಳುವುದು ಕಷ್ಟ. ''ಆದರೆ ಈ ಸಂಭಾಷಣೆಗಳು ಮೂವರಿಗೂ ಗೌರವ ತರುವಂಥವುಗಳಲ್ಲ'' ಎಂದು 'ವಿಶ್ವವಾಣಿ' ಪತ್ರಿಕೆ ತನ್ನ ವಿಮರ್ಶೆಯಲ್ಲಿ ಹೇಳಿದೆ. ಚಿತ್ರವನ್ನು ತೀಕ್ಷ್ಣವಾಗಿ ಟೀಕಿಸಿದೆ. ಆದರೆ 'ಚಿತ್ರಗುಪ್ತ' ವಾರಪತ್ರಿಕೆ ಮಾತ್ರ 'ಕಲಾವಿದ' ಒಮ್ಮೆ ನೋಡಬೇಕು ಎಂಬ ಶಿರೋನಾಮೆಯ ವಿಮರ್ಶೆಯಲ್ಲಿ : ''...ಚಿತ್ರದ ಕಥಾವಸ್ತು ಮೂಲತಃ ಚೆನ್ನಾಗಿರುವುದಾದರೂ ಬಳಸಿಕೊಂಡಿರುವ ರೀತಿ ಅಷ್ಟು ಚೆನ್ನಾಗಿಲ್ಲ. ಇದರಿಂದಾಗಿ ಅಲ್ಲಲ್ಲಿ ಕಥೆಯ ಓಟ ಸಡಿಲವಾಗಿದೆ. ಇಷ್ಟಾದರೂ ಇದೊಂದು ಕನ್ನಡ ಚಿತ್ರವಷ್ಟೆ. ಕಟು ವಿಮರ್ಶೆಗೆ ಹತ್ತಾರು ಅಂಶಗಳಿರುವುದಾದರೂ ಅಭಿನಂದನೆಗೂ ಸಾಕಷ್ಟು ಅಂಶಗಳಿಲ್ಲದೆ ಇಲ್ಲ. ಈ ಅಂಶಗಳೇ ಕನ್ನಡ ಚಿತ್ರ ತಯಾರಿಕೆ ಬಗ್ಗೆ ಇರುವ ಆಶಾಕಿರಣಗಳು. ಕನ್ನಡಿಗರಲ್ಲಿ ಯೋಗ್ಯತೆ, ಅರ್ಹತೆಗಳಿಲ್ಲದೆ ಇಲ್ಲ. ಒಳ್ಳೆಯ ಪ್ರೋತ್ಸಾಹ ದೊರೆತರೆ ಇದೇ ಕುಸುಮಗಳು ನಾಳೆ ವಿಕಸಿಸಬಹುದು. ಆ ಆಶೆ ಇದೆ...'' ಎನ್ನುತ್ತದೆ.

೧೯೪೭ರಲ್ಲಿ ತಯಾರಾದ 'ಮಹಾನಂದ' ಚಿತ್ರ ಸ್ವಲ್ಪ ಬದಲಾವಣೆಗಳೊಂದಿಗೆ 'ಶಿವ ಪಾರ್ವತಿ' ಎಂಬ ಹೆಸರಿನಲ್ಲಿ ಚಿತ್ರವಾಣಿ ಪ್ರೊಡಕ್ಷನ್ಸ್ ಲಾಂಛನದಡಿ ಮತ್ತೆ ೧೯೫೦ರಲ್ಲಿ ಬಿಡುಗಡೆಯಾದದ್ದು ಒಂದು ವಿಶೇಷ.

ಮತ್ತೆ ಮತ್ತೆ ಸೆನ್ಸಾರ್ ಬೋರ್ಡಿನ ನಿರ್ಲಕ್ಷ್ಯವನ್ನು ಎತ್ತಿ ತೋರುವ, ಪ್ರಶ್ನಿಸುವ ಸಂಗತಿಗಳು ನಡೆದವು.

೧೯೫೦ರ ಅಕ್ಟೋಬರ್ ತಿಂಗಳಲ್ಲಿ ಚಿತ್ರಮಂದಿರಗಳಲ್ಲಿ ಕೊರಿಯಾ ಯುದ್ಧದ ವಾರ್ತಾ ಚಿತ್ರಗಳನ್ನು ತೋರಿಸಲಾಗುತ್ತಿತ್ತು. ಅವು ಅಮೆರಿಕೆಯ ಸಾಹಸ-ಧೈರ್ಯವನ್ನು ವಿಜೃಂಭಿಸುವಂಥ ಚಿತ್ರಗಳಾಗಿದ್ದವು. ಕೊರಿಯಾದ ಮೇಲೆ ಅಮೆರಿಕದ ವಿಮಾನಗಳು ಬಾಂಬುಗಳ ದಾಳಿ ಮಾಡುತ್ತವೆ. ರೈತ ಕಾರ್ಮಿಕರು, ಹೆಂಗಸರು, ಮಕ್ಕಳು ಕಂಗಾಲಾಗುತ್ತಾರೆ. ಉತ್ತರದವರು ಗೆದ್ದ ದಕ್ಷಿಣ ಕೊರಿಯಾದ ಭೂಭಾಗಗಳ ಮೇಲೆ ಸುರಿದ ಬಾಂಬ್‌ನಿಂದಾಗಿ ಕೈಗಾರಿಕಾ ಕೇಂದ್ರಗಳೆಲ್ಲವೂ ನಾಶವಾಗುತ್ತವೆ. ಕೊರಿಯನ್ನರು ತಮ್ಮ ಧೈರ್ಯ, ಸಾಹಸಗಳನ್ನು ತೋರಿ ಹೇಗೆ ಅಮೆರಿಕನ್ನರನ್ನು ಎದುರಿಸುತ್ತಿದ್ದಾರೆಂಬ ಅಂಶವೇ ಬರುವುದಿಲ್ಲ. ಇದು ಏಷ್ಯಾದ ಮೇಲೆ ಪಾಶ್ಚಾತ್ಯರು ನಡೆಸುತ್ತಿರುವ ಅತ್ಯಾಚಾರ. ಇಂಥ ಚಿತ್ರಗಳನ್ನು ಭಾರತದಲ್ಲಿ ಪ್ರದರ್ಶಿಸಲು ಭಾರತ ಸರ್ಕಾರ ಅನುಮತಿ ಕೊಟ್ಟಿದ್ದು ಹೇಗೆ ? ಇಂಥ ಚಿತ್ರಗಳನ್ನು ಪ್ರದರ್ಶಿಸಲು ಸೆನ್ಸಾರ್ ಬೋರ್ಡ್ ಹೇಗೆ ಅನುಮತಿ ಕೊಡುತ್ತಿದೆ? ಅವರಿಗೆ ತೆರೆಯ ಮೇಲೆ ಚುಂಬನ, ಒಂದೂವರೆ ನಿಮಿಷಕ್ಕಿಂತ ಹೆಚ್ಚು ಕಾಲ ಹೊಡೆದಾಟದ ದೃಶ್ಯ ಇದ್ದರೆ ಜನತೆಯ ಮೇಲೆ ದುಷ್ಪರಿಣಾಮವುಂಟಾಗುತ್ತದೆ ಎಂಬ ಸೆನ್ಸಾರ್ ನಿಯಮವೂ ಮರೆತು ಹೋಗಿದೆಯೆ ? ಎಂಬ ತೀವ್ರ ಪ್ರಶ್ನೆಗಳು ಎದುರಾದವು. (ಚಿತ್ರಗುಪ್ತ - ೧೯೫೦, ಅಕ್ಟೋಬರ್ ೨)

೧೯೫೦ರ ದಶಕ ಪ್ರಾರಂಭವಾಗುವ ಹೊತ್ತಿಗೆ ದೇಶದ ಚಲನಚಿತ್ರ ಉದ್ಯಮದ ಪರಿಸ್ಥಿತಿ ಹೇಗಿತ್ತೆಂಬ ಬಗೆಗೆ 'ಚಿತ್ರಗುಪ್ತ' ವಾರಪತ್ರಿಕೆಯ ಜೂನ್ ೧೯ರ ಸಂಚಿಕೆಯಲ್ಲಿ ಅಂಕಿ ಅಂಶಗಳನ್ನು ಪ್ರಕಟಿಸಿದೆ. ಅದರ ವಿವರಗಳು ಹೀಗಿವೆ :

ಭಾರತ ಚಲನಚಿತ್ರ ತಯಾರಕರ ಸಂಘದ ಅಧ್ಯಕ್ಷ ಚುನಿಲಾಲ್ ಅವರ ಪ್ರಕಾರ :

೧. ಭಾರತೀಯ ಚಿತ್ರೋದ್ಯಮ ಕಳೆದ ವರ್ಷ ವಿಶ್ವದಲ್ಲೇ ದ್ವಿತೀಯ ಸ್ಥಾನ ಪಡೆದಿತ್ತು. ಈಗ ಶೋಚನೀಯ ಪರಿಸ್ಥಿತಿ ಇದೆ. ಚಲನಚಿತ್ರ ತಯಾರಿಕೆ ಒಂದು ಸಾಹಸವಾಗುತ್ತಿದೆ.

೨. ಕಳೆದ ವರ್ಷ ಇಲ್ಲಿ ೨೮೯ ಚಿತ್ರಗಳು ತಯಾರಾದವು (ಕನ್ನಡದಲ್ಲಿ ಕೇವಲ ೪ ಚಿತ್ರಗಳು). ಈಗ ಆಂತರಿಕ ಅನೈಕ್ಯತೆ ಪ್ರಾರಂಭವಾಗಿದೆ.

೩. ಭಾರತದಲ್ಲಿ ೩೦೦೦ ಚಿತ್ರಮಂದಿರಗಳಿವೆ. ಪ್ರತಿದಿನ ೨೦ ಲಕ್ಷ ಜನ ಸಿನಿಮಾ ನೋಡುತ್ತಾರೆ. ದಿನಕ್ಕೆ ೬೦ ಲಕ್ಷ ರೂ. ಸಂಗ್ರಹ. ಹಾಕುವ ಬಂಡವಾಳ ೩೦

೧. ಕಾಸರಗೋಡಿನಲ್ಲಿ ಹೆಸರಾಂತ ಛಾಯಾಗ್ರಾಹಕರಾಗಿರುವ ರಾವ್ ಅವರು ಸೇಲಂನ ನವರತ್ನ ಸ್ಟುಡಿಯೋದಲ್ಲಿ ಕೆಲಕಾಲ ಕೆಲಸ ಮಾಡಿದ್ದರು. ಛಾಯಾಗ್ರಾಹಕ ದೊರೆ (ದೊರೆ-ಭಗವಾನ್ ಜೋಡಿ) ಅವರೊಂದಿಗೆ ಸ್ವಲ್ಪ ಸಮಯ ಇದ್ದ ರಾವ್, ನಿರ್ದೇಶಕ ಟಿ.ಜಾನಕಿರಾಮ್ ಅವರ ಸಹಾಯಕರಾಗಿದ್ದವರು. ಕಾಳಿಂಗರಾವ್ ಅವರ ನಿಕಟವರ್ತಿಗಳು, ಸ್ವತಃ ನೃತ್ಯಕಲಾವಿದರು ಕೂಡ.

ಕೋಟಿ ರೂಪಾಯಿಗಳಿಗೂ ಹೆಚ್ಚು. ಸರ್ಕಾರಕ್ಕೆ ೬ ಕೋಟಿ ರೂ. ಮನರಂಜನಾ ತೆರಿಗೆ ಸಂದಾಯವಾಗುತ್ತದೆ. ೭೦,೦೦೦ ಜನ ಈ ರಂಗದಲ್ಲಿ ಕೆಲಸ ಮಾಡುತ್ತಿದ್ದಾರೆ.

೪. ಸರ್ಕಾರ ಈ ಉದ್ಯಮದ ಬಗ್ಗೆ ಅನುಸರಿಸುತ್ತಿರುವ ನೀತಿ ಸರಿ ಇಲ್ಲ. ಸಾಮಾಜಿಕ ಚಿತ್ರಗಳ ಬಗ್ಗೆ ತಿರಸ್ಕಾರವಿದೆ. ತೆರಿಗೆ ಅಧಿಕವಾಗಿದೆ. ನಿರುದ್ಯೋಗ, ಆರ್ಥಿಕ ಮುಗ್ಗಟ್ಟಿದೆ. ಇದರ ಪರಿಣಾಮ ಚಿತ್ರರಂಗದ ಮೇಲೆ ಆಗುತ್ತಿದೆ.

೫. ಚಲನಚಿತ್ರ ಉದ್ಯಮಿಗಳು ಸರಿಯಾದ ಯೋಜನೆ ಇಲ್ಲದೆ ಇದಕ್ಕೆ ಕೈ ಹಾಕಬಾರದು. ಸದ್ಯದ ಪರಿಸ್ಥಿತಿಯಲ್ಲಿ ಚಿತ್ರ ತಯಾರಿಕೆಗೆ ಕೆಲವು ಕಟ್ಟಳೆಗಳು ಅಗತ್ಯ. (ಅದು ಸರ್ಕಾರದ ನಿಯಂತ್ರಣದಲ್ಲಿಲ್ಲ)

೬. ಉದ್ಯಮಕ್ಕೆ ಆರ್ಥಿಕ ನೆರವು ಒದಗಿಸುವಂತೆ ಕೇಂದ್ರವು ಫಿಲಂ ಆರ್ಥಿಕ ಸಮಿತಿ ರಚಿಸಬೇಕು.

೭. ಕಲಾವಿದರಿಗೂ, ತಂತ್ರಜ್ಞರಿಗೂ ಶಿಕ್ಷಣ ಕೊಡುವಂಥ ಶಾಲೆ ಪ್ರಾರಂಭಿಸಬೇಕು.

೮. ಸಚಿವರೇ ನಮ್ಮ ಚಿತ್ರಗಳನ್ನು ಹಳಿಯುತ್ತಿದ್ದಾರೆ. ಉದ್ಯಮದ ಮೇಲೆ ಹಿಡಿತ ಬೇಡ. ಪರಿಣತ ಚಿತ್ರೋದ್ಯಮಿಗಳಿರುವ ಫಿಲಂ ಕಾರ್ಪೊರೇಷನ್ ಒಂದನ್ನು ಕೇಂದ್ರ ಸರ್ಕಾರ ಸ್ಥಾಪಿಸಲಿ. ಉದ್ಯಮಕ್ಕೆ ಸಹಾಯದ ವಿರೋಧವನ್ನು ಕಿತ್ತು ಹಾಕಲಿ.

ಚಲನಚಿತ್ರ ಉದ್ಯಮ ಪ್ರಗತಿಪರ ಹಾದಿಯಲ್ಲಿ ಮುನ್ನಡೆಯಬೇಕಾದರೆ ಅವರ ರಾಷ್ಟ್ರೀಕರಣ ಅಗತ್ಯ ಎಂದು ಪ್ರಸಿದ್ಧ ಸಾಹಿತಿ-ಪತ್ರಕರ್ತ ಮಾ.ನಾ.ಚೌಡಪ್ಪ ಪ್ರಗತಿಶೀಲ ಲೇಖಕರ ಸಂಘದಲ್ಲಿ ಮಾಡಿದ ಭಾಷಣದಲ್ಲಿ ಪ್ರತಿಪಾದಿಸಿದ್ದಾರೆ. ಅವರ ಸಲಹೆಯ ವಿವರಗಳು : ''ಇಂದು ಬಂಡವಾಳಶಾಹಿಗಳ ಕೃಪಾಶ್ರಯದಲ್ಲಿ ಸಾಗಿರುವ ಚಲಚ್ಚಿತ್ರ ಕೈಗಾರಿಕೆ ಪ್ರಗತಿಪರ ಹಾದಿಯಲ್ಲಿ ಮುನ್ನಡೆಯಬೇಕಾದರೆ ಸರ್ಕಾರ ಈ ಕೈಗಾರಿಕೆಯ ಮೇಲೆ ಯೋಗ್ಯ ರೀತಿಯಲ್ಲಿ ಹತೋಟಿಯನ್ನು ಇಟ್ಟುಕೊಳ್ಳಬೇಕು. ಇಲ್ಲವೇ ಈ ಉದ್ಯಮವನ್ನು ರಾಷ್ಟ್ರೀಕರಣ ಮಾಡಬೇಕು.

''ಈ ಕೈಗಾರಿಕೆ ಪ್ರಗತಿಪರ ಹಾದಿಯಲ್ಲಿ ಮುನ್ನಡೆಯಲು ಕೆಲವು ಆತಂಕಗಳಿವೆ. ದುಡ್ಡು ಹಾಗೂ ಲಾಭವೇ ಪ್ರಧಾನ ಮಾಡಿಕೊಂಡು ಚಿತ್ರಗಳು ತಯಾರಾಗುತ್ತಿವೆ. ಅವು ಸಮಾಜದ ಮೇಲೆ ದುಷ್ಪರಿಣಾಮ ಬೀರುವ ವಸ್ತು-ನಿರೂಪಣೆಯನ್ನುಳ್ಳವು. ಇಲ್ಲಿ ನಿರ್ದೇಶಕರಿಗೆ ಅಧಿಕಾರ ಇರಬೇಕು. ಈ ಅಧಿಕಾರಕ್ಕಾಗಿ ಪಾಶ್ಚಾತ್ಯರಲ್ಲೂ ಸಾಕಷ್ಟು ಹೋರಾಟ ನಡೆದಿದೆ. ಲೇಖಕ-ನಿರ್ದೇಶಕ ಇಬ್ಬರಿಗೂ ಸಾಕಷ್ಟು ಅಧಿಕಾರ ಕೊಟ್ಟು ಒಂದು ನಿರ್ದಿಷ್ಟ ರೀತಿಯಲ್ಲಿ ಈ ಕೈಗಾರಿಕೆ ನಡೆಯುತ್ತಿರುವುದು ರಷ್ಯಾದಲ್ಲಿ ಮಾತ್ರ. ಅಲ್ಲಿ ಹಣದಾಸೆಯಿಲ್ಲ. ಜನರಿಗೆ ಪ್ರಚಲಿತ ವಿಷಯಗಳ ಬಗ್ಗೆ ಶಿಕ್ಷಣ ಕೊಡಲು ಶ್ರಮಿಸುತ್ತಿದ್ದಾರೆ.'' (ಚಿತ್ರಗುಪ್ತ - ಜೂನ್ ೩೦, ೧೯೫೦)

''ಸುಬೋಧ ಚಿತ್ರ ಸಂಸ್ಥೆಯ ಲಾಂಛನದಲ್ಲಿ 'ಭಗವಾನ್ ಬಸವೇಶ್ವರ' ಚಿತ್ರ ತೆರೆಗೆ ಬರುವ ಸಿದ್ಧತೆಗಳು ನಡೆಯುತ್ತಿವೆ. ಆರ್.ವಿ.ಜಾಗೀರ್‌ದಾರ್, ಬಸವನಾಳ ಮೊದಲಾದವರು ಇದಕ್ಕೆ ನೆರವಾಗಲು ಒಪ್ಪಿದ್ದಾರೆ. ಸುಬೋಧ್ ಸಂಸ್ಥೆಯ ಚೇರ್ಮನ್ ಎನ್.ರುದ್ರಪ್ಪ, ಸಂಚಾಲಕ ಎಸ್.ಎಸ್.ವೈದ್ಯ ನೇತೃತ್ವ ವಹಿಸಿದ್ದಾರೆ. ಕನ್ನಡ ಚಿತ್ರಗಳ ಮೌಲ್ಯ ಕುಸಿಯುತ್ತಿರುವ ಕಾರಣ ಈ ಕಾರ್ಯವನ್ನು ಕೈಗೆತ್ತಿಕೊಂಡಿರುವ ಈ ಸಂಸ್ಥೆಗೆ ವ್ಯಾಕರಣ ತೀರ್ಥ ಚಂದ್ರಶೇಖರಶಾಸ್ತ್ರಿಗಳೊಡನೆ ಶ್ರೀವಾನ್ ನಿರಂಜನ ಶಾಂತವೀರಸ್ವಾಮಿಗಳು ಮ್ಯಾನೇಜಿಂಗ್ ಡೈರೆಕ್ಟರ್ ಆಗಿರಲು ಒಪ್ಪಿದ್ದಾರೆ'' ಎಂಬ ಸುದ್ದಿ ಪತ್ರಿಕೆಗಳಲ್ಲಿ ಅನೇಕ ಬಾರಿ ಪ್ರಕಟವಾದರೂ ಕಡೆಗೂ ಈ ಚಿತ್ರ ತಯಾರಾಗಲೇ ಇಲ್ಲ. ಮುಂದೆ ವಿಶ್ವಕಲಾ ಚಿತ್ರ ಸಂಸ್ಥೆ ಬಸವೇಶ್ವರರನ್ನು ಕುರಿತ ಒಂದು ಚಿತ್ರವನ್ನು ತಯಾರಿಸಿತು.

ಚಲನಚಿತ್ರ ತಯಾರಿಕೆಯಲ್ಲಿ ಸಾರ್ವಜನಿಕ ಬಂಡವಾಳವನ್ನು ಹೂಡಿದ ಕಂಪನಿಗಳು ಅಸ್ತಿತ್ವಕ್ಕೆ ಬಂದಿದ್ದು ೧೯೪೦ರ ದಶಕದಲ್ಲಿಯೇ ಎಂಬ ಪ್ರತೀತಿಯಿದೆ. ಆದರೆ ಇದು ಅವಾಸ್ತವ. ಕನ್ನಡ ಚಲನಚಿತ್ರದ ಇತಿಹಾಸದಲ್ಲಿ ಇಂತಹ ಕಂಪನಿಗಳು ೧೯೩೯ರಿಂದಲೇ ಪ್ರಾರಂಭವಾಗಿ ಕಾರ್ಯ ಪ್ರವೃತ್ತವಾದ ದಾಖಲೆಗಳಿವೆ.

ಬಾನುಲಿ ಪ್ರಸಾರದಲ್ಲಿ ಪರಿಣತರಾಗಿದ ಅಮೆರಿಕಾದ ನೌಕಾಪಡೆಯಲ್ಲಿ ಸೇವೆ ಸಲ್ಲಿಸಿದ್ದ ವಿಲ್‌ಫ್ರೀಡ್ ಡೆನಿಂಗ್ ಎಂಬುವರು ಬೆಂಗಳೂರಿನಲ್ಲಿ ಸ್ಟುಡಿಯೋ ಸ್ಥಾಪಿಸಿ, ಚಲನಚಿತ್ರಗಳನ್ನು ನಿರ್ಮಿಸಲು 'ಅಸೋಸಿಯೇಟೆಡ್ ಪಿಕ್ಚರ್ಸ್' ಎಂಬ ಜಾಯಿಂಟ್ ಸ್ಟಾಕ್ ಕಂಪನಿ ಆರಂಭಿಸಲು ಸನ್ನಾಹ ನಡೆಸಿದ್ದರು. ಈ ಸಂಬಂಧದಲ್ಲಿ ಆಗಿನ ದಿವಾನರಾದ ಸರ್.ಮಿರ್ಜಾ ಇಸ್ಮಾಯಿಲ್ ಅವರನ್ನು (ಮೇ ೧೯೩೬) ಭೇಟಿಯಾಗಿದ್ದರು. ಅವರ ಸಲಹೆ ಮೇಲೆ ಮುಂಬಯಿನಿಂದ ಭಾವಿ ಸಂಸ್ಥೆಯ ರೂಪರೇಷೆಗಳು ಹಾಗೂ ವ್ಯವಹಾರ ನೀತಿಯನ್ನು ಸಿದ್ಧಪಡಿಸಿ ಸರ್ಕಾರದ ಅವಗಾಹನೆಗಾಗಿ ಕಳುಹಿಸಿದರು. ಕಂಪನಿಯ ಮೂಲ ಬಂಡವಾಳ ೨೫ ಲಕ್ಷ. ಆರಂಭದ ಬಂಡವಾಳ ಸಂಗ್ರಹ ೧೨.೫ ಲಕ್ಷ ರೂಪಾಯಿ. ಮೂರು ಫ್ಲೋರ್‌ಗಳ ಸ್ಟುಡಿಯೋ ಕಟ್ಟಡಕ್ಕೆ ೫ ಲಕ್ಷ ರೂಪಾಯಿ. ಉಳಿದ ಹಣ ಚಾಲ್ತಿ ಬಂಡವಾಳ. ಸರಕಾರಕ್ಕೆ ೧೫ ಸಾವಿರ ರೂಪಾಯಿಗಳ ಷೇರು. ಡೈರೆಕ್ಟರುಗಳ ಮಂಡಳಿಯಲ್ಲಿ ಸರ್ಕಾರ ನಾಮಕರಣ ಮಾಡಿದ ಮೂವರು ಪ್ರತಿನಿಧಿಗಳಿಗೆ ಸ್ಥಾನ. ಉಚಿತ ಜಮೀನು, ರಿಯಾಯಿತಿ ದರದಲ್ಲಿ ನೀರು ಮತ್ತು ವಿದ್ಯುತ್ ಸರಬರಾಜನ್ನು ನೀಡಲು ಸರ್ಕಾರಕ್ಕೆ ಕೋರಿಕೆ.

ಬೊಂಬಾಯಿನ ಪ್ರಮುಖ ವಾಣಿಜ್ಯೋದ್ಯಮಿಗಳನ್ನು ಡೆನಿಂಗ್ ಸಂಪರ್ಕಿಸಿದರು. ವೇಶ್ಯಾವೃತ್ತಿ, ವ್ಯಭಿಚಾರಕ್ಕೆ ಸಂಬಂಧಪಟ್ಟ ಸಂಸ್ಥೆಯಲ್ಲಿ ಡೈರೆಕ್ಟರಾಗಲು ಅವರು ಆರಂಭದಲ್ಲಿ ಒಪ್ಪಲಿಲ್ಲವೆಂದೂ ಶಿಸ್ತಿನ ಉದ್ಯಮವೆಂದು ಅವರಿಗೆ ಮನವರಿಕೆ ಮಾಡಿದ ಮೇಲೆ ಕೆಲವು ಪ್ರಮುಖರು ಸಮ್ಮತಿಸಿದರೆಂದೂ ಡೆನಿಂಗ್ ಸರಕಾರಕ್ಕೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ. ಚಿತ್ರ ತಯಾರಿಕೆಗಾಗಿ ಲಿಮಿಟೆಡ್ ಕಂಪನಿ ಸ್ಥಾಪಿಸಲು ರಾಜ್ಯದಲ್ಲಿ ನಡೆದ ಮೊದಲ ಪ್ರಯತ್ನವೆಂದು ಮೈಸೂರು ಸರಕಾರದ ಪತ್ರಾಗಾರದಲ್ಲಿ ಈ ಪತ್ರ ವ್ಯವಹಾರವನ್ನು ರಕ್ಷಿಸಿ ಇಡಲಾಗಿದೆ.

೧೯೪೩ರ ಸೆಪ್ಟೆಂಬರ್ ೧ ರಂದು ಜಯಶಂಕರ್ ಫಿಲಂ ಕಾರ್ಪೊರೇಷನ್ ಲಿಮಿಟೆಡ್ ಎಂಬ ಸಂಸ್ಥೆಯ ನೋಂದಣಿಯಾಯಿತು. ಈ ಕಂಪನಿಯ ಅಧಿಕೃತ ಷೇರು ಬಂಡವಾಳ ೨೦ ಲಕ್ಷ ರೂಪಾಯಿಗಳು. ನೋಂದಣಿಯಾಗುವ ವೇಳೆಗೆ ಸಂಸ್ಥೆ ೧,೫೬,೦೦೦ ರೂಪಾಯಿಗಳನ್ನು ಸಂಗ್ರಹಿಸಿತ್ತು. ಚಲನಚಿತ್ರಗಳ ನಿರ್ಮಾಣ, ವಿತರಣೆ ಮತ್ತು ತಯಾರಿಕೆಗೆ ಬೇಕಾದ ಸಾಮಗ್ರಿಗಳ ಉತ್ಪಾದನೆ ಮತ್ತು ವಿತರಣೆ ಈ ಸಂಸ್ಥೆಯ ಧ್ಯೇಯಗಳೆಂದು ನೋಂದಣಿ ಪತ್ರದಲ್ಲಿ ವಿವರಿಸಲಾಗಿತ್ತು. ಬೆಂಗಳೂರಿನ ಕೈಗಾರಿಕೋದ್ಯಮಿಗಳಾದ ವಿ.ನಾರಾಯಣ್, ಎಂ.ಜಿ.ರೆಡ್ಡಿ, ಎ.ಎಂ.ಲಿಂಗಣ್ಣ, ಕೆ.ರಾಜು, ಚಿತ್ರದುರ್ಗದ ವಕೀಲರೂ ರಾಜಕಾರಣಿಗಳಾದ ಮುಲ್ಕಾ ಗೋವಿಂದರೆಡ್ಡಿ ಮತ್ತು ಚಿತ್ರೋದ್ಯಮಿ ಹೆಚ್.ಎಂ.ರೆಡ್ಡಿ ಡೈರಕ್ಟರುಗಳು.

೧೯೪೪ರ ಜುಲೈ ತಿಂಗಳಲ್ಲಿ ೨೫ ಲಕ್ಷ ರೂಪಾಯಿಗಳ ಅಧಿಕೃತ ಬಂಡವಾಳ ಹೂಡಿಕೆಗೆ ಅನುಮತಿ ಪಡೆದು, ಮೈಸೂರು ಸಿನಿ ಕಾರ್ಪೊರೇಷನ್ ಎಂಬ ಸಂಸ್ಥೆಯ ನೋಂದಣಿಯಾಯಿತು. ಚಲನಚಿತ್ರಗಳಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ನಿರತವಾಗುವುದು ಈ ಸಂಸ್ಥೆಯ ಉದ್ದೇಶ.

೧೯೪೯ರ ಏಪ್ರಿಲ್ ತಿಂಗಳಲ್ಲಿ ಸಿನಿ ಸಪ್ಲೈಸ್ ಲಿಮಿಟೆಡ್ ಎಂಬ ಇನ್ನೊಂದು ಸಾರ್ವಜನಿಕ ನಿಯಮಿತ ಸಂಸ್ಥೆಯನ್ನು ನೋಂದಾಯಿಸಲಾಯಿತು. ಈ ಸಂಸ್ಥೆಯ ಅಧಿಕೃತ ಬಂಡವಾಳ ನಾಲ್ಕು ಲಕ್ಷ ರೂಪಾಯಿಗಳೆಂದು ನಿಗದಿಯಾಯಿತು. ಸಿನಿಮಾ ಪ್ರೊಜೆಕ್ಟರುಗಳು ಮತ್ತು ಇನ್ನಿತರ ಸಾಮಗ್ರಿಗಳ ಉತ್ಪಾದನೆ ಮತ್ತು ಆಮದು ಈ ಸಂಸ್ಥೆಯ ಉದ್ದೇಶ.

ಮಾರ್ಚ್ ೧೯೫೦ರಲ್ಲಿ ಬಿ.ಎಂ.ಎಸ್.ಫಿಲಂಸ್ ಲಿಮಿಟೆಡ್ ನೋಂದಣಿಯಾಯಿತು. ಐದು ಲಕ್ಷ ರೂಪಾಯಿಗಳ ಅಧಿಕೃತ ಬಂಡವಾಳ ಹೊಂದಿದ ಈ ಕಂಪನಿಯ ಉದ್ದೇಶ ಕೂಡ ಚಲನಚಿತ್ರಗಳ ನಿರ್ಮಾಣ, ವಿತರಣೆ ಮತ್ತು ಪ್ರದರ್ಶನ ಹಾಗೂ ಸಾಮಗ್ರಿಗಳ ಉತ್ಪಾದನೆ.

ಇದೇ ಧ್ಯೇಯಗಳನ್ನು ಹೊಂದಿದ ಬೃಂದಾವನ್ ಫಿಲಂಸ್ ಲಿಮಿಟೆಡ್ ೧೯೫೦ರಲ್ಲಿ ಐದು ಲಕ್ಷ ರೂಪಾಯಿಗಳ ಅಧಿಕೃತ ಷೇರು ಬಂಡವಾಳದ ಅನುಮತಿ ಪಡೆದು ನೋಂದಣಿಯಾಯಿತು.

ಡಿಸೆಂಬರ್ ೧೯೫೩ರಲ್ಲಿ ಐದು ಲಕ್ಷ ರೂಪಾಯಿಗಳ ಅಧಿಕೃತ ಷೇರು ಬಂಡವಾಳದೊಂದಿಗೆ ಚಿತ್ರಗಳ ಪ್ರದರ್ಶನದ ವ್ಯಾಪಾರವನ್ನು ನಡೆಸುವ ಉದ್ದೇಶದಿಂದ ನೋಂದಾಯಿತವಾದ ಸಂಸ್ಥೆ ಪ್ರೀಮಿಯರ್ ಫಿಲಂ ಕಾರ್ಪೊರೇಷನ್ ಲಿಮಿಟೆಡ್. ಈ ಕಂಪನಿಗೆ ಸೇರಿದ ಭೂಮಿಯನ್ನು ಈ ಉದ್ದೇಶವನ್ನು ಈಡೇರಿಸಲು ಅಗತ್ಯವಾದ ಯಾವುದೇ ಚಟುವಟಿಕೆಗಳನ್ನು ನಡೆಸಲು ಅನುಮತಿ ನೀಡಲಾಯಿತು.

೧೯೫೪ರಲ್ಲಿ ಚಲನಚಿತ್ರ ನಿರ್ಮಾಣದ ಉದ್ದೇಶವನ್ನಿಟ್ಟುಕೊಂಡ ಲಲಿತಕಲಾ ಫಿಲಂಸ್ ಲಿಮಿಟೆಡ್ ಸಂಸ್ಥೆಯನ್ನು ಒಂದು ಜಾಯಿಂಟ್ ಸ್ಟಾಕ್ ಕಂಪನಿಯಾಗಿ ನೋಂದಾಯಿಸಲಾಯಿತು.

(ಈ ಪ್ರಾಸೆ... ಮುದ್ರಾಸು ಮತ್ತು ಬೊಂಬಾಯಿ ಅಧಿಸತ್ಯಗಳ
ಜಾಯಿಂಟ್ ಸ್ಟಾಕ್ ಕಂಪನಿ ರಿಜಿಸ್ಟ್ರಾರ್ ... ದಾಖಲ್ಮಾಡಲಾಗಿದೆ)

೧೯೩೮ನೇ ಸಾಲಿನ ಮೈಸೂರು ಕಂಪನಿಗಳ ೧೮ನೆ ಕಾನೂ... ಪ್ರಕಾರ ೧೯೪೩ನೇ
ಡಿಸೆಂಬರ್ ೧೬ನೇ ತಾರೀಖಿನಲ್ಲಿ ರಿಜಿಸ್ಟರ್ ಮಾ... ಟ್ಟಿದೆ

# ದಿ ಕರ್ನಾಟಕ ಫಿಲಂಸ್ ಲಿಮಿಟೆಡ್

**ಬೆಂಗಳೂರು ನಗರ**



ಅಧಿಕೃತ ಮತ್ತು ಹಂಚಿಕೆಗಿಟ್ಟ ಬಂಡವಾಳ ರೂ. ೧೦,೦೦,೦೦೦
ಷೇರು ೧ಕ್ಕೆ ರೂ. ೫೦ ರ ೨೦,೦೦೦ ಷೇರುಗಳಾಗಿ ವಿಭಾಗಿಸಿದೆ.

ಷೇರು ನೊಬಲಗನ್ನು ಪಾವತಿಮಾಡುವ ರೀತಿ ಅರ್ಜಿಯೊಡನೆ ಪ್ರತಿ ಷೇರಿಗೆ ರೂ. ೧೦, ... ಯ ...ಮೇಲೆ ರೂ. ೧೦, ಆಮೇಲೆ ಕಂಪೆನಿಯು ಅಪೇಕ್ಷಿಸಿದಾಗ ರೂ. ೧೦ ಯಂತೆ ಮೂರು ಕಂತುಗ...

**ಡೈರೆಕ್ಟರುಗಳು**

ಶ್ರೀ ಎ... ವೀರಬಸಪ್ಪ. ಬಿ.ಎ.ಎಲ್.ಎಲ್.ಬಿ ... ಚಿತ್ರದುರ್ಗ (ಚೇರ್ಮನ್)

ಶ್ರೀ ಬಿ. ... ಭೂಮರೆಡ್ಡಿ ...

ಶ್ರೀ ಗುರುನಾ... ದೀಕಪ್ಪ ಹುಬ್ಬಳ್ಳಿ ...

ಶ್ರೀ ಎಸ್. ಎಸ್. ಸಕ್ರಿ ...

ಶ್ರೀ ಹೆಚ್. ಆರ್. ಇಟಗಿ ...

ಶ್ರೀ ಐಯ್ಯನಹಳ್ಳಿ ಸಣ್ಣವೀರಪ್ಪ ...

ಶ್ರೀ ಕೆ. ಸಿ. ಸುಬ್ಬಣ್ಣ ...

ಶ್ರೀ ಟಿ. ವೀರಣ್ಣ ಬಿ.ಎ. (ಆನರ್ಸ್) ಎಲ್.ಎಲ್.ಬಿ. ...

ಶ್ರೀ ಬಿ. ಬಿ. ನಾಯ್ಡು ... ಬೆಂಗಳೂರು

ಎಕ್ಸ್‌ಪಿಯೋ ಡೈರೆಕ್ಟರುಗಳು

ಶ್ರೀ ನಾಟಕರತ್ನ ಜಿ. ಹೆಚ್. ವೀರಣ್ಣ ...

ಶ್ರೀ ದುಮ್ಮಿ ಮುರುಗಪ್ಪ ...

(ಚಿತ್ರ ೪೯) ಪತ್ರಿಕೆಗಳಲ್ಲಿ ಪ್ರಕಟವಾದ ಕರ್ನಾಟಕ ಫಿಲಂಸ್ ಲಿಮಿಟೆಡ್ ಸಂಸ್ಥೆಯ ಷೇರು ನೀಡಿಕೆ ಜಾಹೀರಾತು.

ಮಾಜಿ ಸಚಿವರಾದ ಎ.ಭೀಮಪ್ಪನಾಯಕ್, ಆರ್.ಚೆನ್ನಿಗರಾಮಯ್ಯ, ಆರ್.ಎಂ.ಪಾಟೀಲ್ ಇವರ ನೇತೃತ್ವದಲ್ಲಿ ಪ್ರಮುಖ ವ್ಯಾಂಗನೀಸ್ ಉದ್ಯಮಿಗಳಾದ ಬಿ.ಕೆ.ಆರ್.ಎಸ್.ಸಿಂಗ್, ಬಿ.ಕೆ.ನಾರಾಯಣಸಿಂಗ್ ಮೊದಲಾದವರು ಕೂಡಿ ಪಿಕ್ಟಾಟಿಕ್ ಫಿಲಂಸ್ ಕಾರ್ಪೊರೇಷನ್ (ಪ್ರೈ) ಲಿಮಿಟೆಡ್ ಸ್ಥಾಪಿಸಿದರು. ಪ್ರಥಮ ವಾರ್ಷಿಕ ಸಭೆ ೧೯೬೦ರ ಜುಲೈನಲ್ಲಿ ನಡೆಯಿತು. ಇದರ ಅಧಿಕೃತ ಬಂಡವಾಳ ಎರಡು ಲಕ್ಷ ರೂಪಾಯಿ. ಆರಂಭದಲ್ಲಿ ಈ ಸಂಸ್ಥೆ ಚಲನಚಿತ್ರಗಳ ವಿತರಣ ಕಾರ್ಯ ನಡೆಸಿತು.

೧೯೪೨ರ ಆರಂಭದ ದಿನಗಳಲ್ಲಿ ಚಿತ್ರದುರ್ಗದಲ್ಲಿ ಗುಬ್ಬಿ ವೀರಣ್ಣನವರ ಗೌರವಾರ್ಥ ಏರ್ಪಡಿಸಲಾಗಿದ್ದ ಸಮಾರಂಭದಲ್ಲಿ ಸಿದ್ಧವನಹಳ್ಳಿ ನಿಜಲಿಂಗಪ್ಪನವರು ಮಾತನಾಡುತ್ತ ಚಲನಚಿತ್ರಕ್ಕೆ ಸಂಬಂಧಪಟ್ಟ ಚಟುವಟಿಕೆಗಳಿಗೆ ಮೀಸಲಾದ ಲಿಮಿಟೆಡ್ ಕಂಪನಿಯೊಂದನ್ನು ಸ್ಥಾಪಿಸುವುದು ಉಚಿತವೆಂದು ಸಲಹೆ ಮಾಡಿದರು. ಈ ರಚನಾತ್ಮಕ ಸಲಹೆ ಅಲ್ಲಿದ್ದ ಪ್ರಮುಖರ ಗಮನ ಸೆಳೆಯಿತು. ನಿಜಲಿಂಗಪ್ಪನವರ ಒತ್ತಾಸೆಯಿಂದ ೧೯೪೨ರ ಡಿಸೆಂಬರ್ ತಿಂಗಳಲ್ಲಿ 'ದಿ ಕರ್ನಾಟಕ ಫಿಲಂಸ್ ಲಿಮಿಟೆಡ್ ಕಂಪನಿ' ಅಸ್ತಿತ್ವಕ್ಕೆ ಬಂದಿತು. ರೂ. ೧೦,೦೦೦.೦೦ ಅಧಿಕೃತ ಬಂಡವಾಳ. ಷೇರು ಮೌಲ್ಯ ರೂ. ೫೦.

ಚಿತ್ರದುರ್ಗದ ಪ್ರಮುಖ ವಕೀಲರೂ ಹಾಗೂ ಜಿಲ್ಲಾ ಬೋರ್ಡ್ ಅಧ್ಯಕ್ಷರೂ ಆಗಿದ್ದ ಎಸ್.ವೀರಬಸಪ್ಪ ಚೇರ್ಮನ್ ಆಗಿದ್ದ ಈ ಸಂಸ್ಥೆಯ ಡೈರೆಕ್ಟರುಗಳ ಮಂಡಲಿಯಲ್ಲಿ ಇದ್ದವರು : ಮುಂಬಯಿನ ವಾಣಿಜ್ಯೋದ್ಯಮಿ ಬಿ.ವಿ.ಭೂಮರೆಡ್ಡಿ, ಚಲನಚಿತ್ರ ಪ್ರದರ್ಶಕರೂ ವಾಣಿಜ್ಯೋದ್ಯಮಿಗಳೂ ಆದ ಹುಬ್ಬಳ್ಳಿಯ ಗುರುನಾಥಪ್ಪ ದೀಕಪ್ಪ, ಬಾಗಲಕೋಟೆಯ ಎಸ್.ಎಸ್.ಸಕ್ರಿ, ಹಂಸಭಾವಿಯ ಭೂಮಾಲೀಕ ಹೆಚ್.ಆರ್.ಇಟಗಿ, ದಾವಣಗೆರೆಯ ವಾಣಿಜ್ಯೋದ್ಯಮಿ ಐಯ್ಯನಹಳ್ಳಿ ಸಣ್ಣವೀರಪ್ಪ, ನಾಗತಿಹಳ್ಳಿಯ ಭೂಮಾಲಿಕ ಟಿ.ವೀರಣ್ಣ, ಬೆಂಗಳೂರಿನ ಕಂಟ್ರಾಕ್ಟರ್ ಬಿ.ಬಿ.ನಾಯ್ಡು, ಮೈಸೂರಿನ ಭೂಮಾಲೀಕರು ಮತ್ತು ಪ್ರಜಾಪ್ರತಿನಿಧಿ ಸಭೆ ಸದಸ್ಯರಾದ ಕೆ.ಸಿ.ಸುಬ್ಬಣ್ಣ, ವಾಣಿಜ್ಯೋದ್ಯಮಿ ಸಿ.ಆರ್.ಬಸವರಾಜ್, ಚಿತ್ರರಂಗದ ಭೂಮಾಲೀಕ ಹಾಗೂ ವಾಣಿಜ್ಯೋದ್ಯಮಿ ದುಮ್ಮಿ ಮುರುಗಪ್ಪ ಮತ್ತು ಜಿ.ಹೆಚ್.ವೀರಣ್ಣ.

ಎರಡನೆ ಮಹಾಯುದ್ಧದ ಕಾರಣ ಸ್ಟುಡಿಯೋ ಸ್ಥಾಪನೆಗೆ ಅಗತ್ಯವಾದ ಯಂತ್ರೋಪಕರಣಗಳು ಅಲಭ್ಯವಾದವು. ಸಂಸ್ಥೆಯು ಚಟುವಟಿಕೆಯನ್ನು ಚಲನಚಿತ್ರ ವಿತರಣೆಗೆ ಮೀಸಲಾಗಿರಿಸಲಾಯಿತು.

ಕರ್ನಾಟಕ ಫಿಲಂಸ್ ಕರ್ನಾಟಕದ ಪ್ರಮುಖ ಚಲನಚಿತ್ರ ವಿತರಣಾ ಸಂಸ್ಥೆಯಾಗಿ ಬೆಳೆಯಿತು. ಜನ್ಮ ತಾಳಿ ೨೦೦೦ದ ಹೊತ್ತಿಗೆ ೫೮ ವರ್ಷಗಳಾಗಿವೆ. ಭಾರತದಲ್ಲಿ ಕರ್ನಾಟಕ ಫಿಲಂಸ್‌ನಷ್ಟು ದೀರ್ಘಾಯುವಾಗಿ ಬಾಳಿದ, ಚಲನಚಿತ್ರಕ್ಕೆ ಸಂಬಂಧಪಟ್ಟಂತೆ ಬೇರಾವ ಲಿಮಿಟೆಡ್ ಕಂಪನಿಯೂ ಇಲ್ಲ.

ಮೈಸೂರು ವಿಭಾಗದಲ್ಲಿನ ಚಟುವಟಿಕೆಗಳು ಉತ್ತರ ಕರ್ನಾಟಕದ ಕಲಾಭಿಮಾನಿಗಳಲ್ಲೂ ಚಲನಚಿತ್ರ ಉದ್ಯಮದ ಬಗೆಗೆ ಆಸಕ್ತಿ ಮೂಡಲು ಪ್ರೇರಣೆ ನೀಡಿತು. ಆಮದು-ರಫ್ತು ವ್ಯಾಪಾರಿಗಳಾಗಿದ್ದ ಬಿ.ವಿ.ಭೂಮರೆಡ್ಡಿ ಹಿಂದಿ ಚಲನಚಿತ್ರಗಳಿಗೆ ಆರ್ಥಿಕ ನೆರವು ನೀಡುತ್ತಿದ್ದರು. ಸ್ವತಃ ಹಿಂದಿ ಚಿತ್ರವನ್ನು ತಯಾರಿಸಿದ್ದರು. ಕನ್ನಡ ಚಲನಚಿತ್ರಗಳಿಗೆ ನೆರವು ನೀಡಲು ಮುಂದೆಬಂದರು. ಬಿ.ಡಿ.ಜತ್ತಿ, ಶಾಂತೇಶ್ ಪಾಟೀಲ್ ಮೊದಲಾದ ಗಣ್ಯರು ಪಂಪಾ ಪಿಕ್ಚರ್ಸ್ ಎಂಬ ಲಿಮಿಟೆಡ್ ಕಂಪನಿ ಸ್ಥಾಪಿಸಿದರು. ಭೂಮರೆಡ್ಡಿ ಈ ಸಂಸ್ಥೆಗೆ ಉದಾರವಾಗಿ ನೆರವು ನೀಡಿದರು. ಉತ್ತರ ಕರ್ನಾಟಕದ ಧನಿಕರೂ ಈ ಸಂಸ್ಥೆಗೆ ಬೆಂಬಲ ನೀಡಿದರು.

ಪಂಪಾ ಪಿಕ್ಚರ್ಸ್ 'ಚಂದ್ರಹಾಸ' ಚಿತ್ರ ತಯಾರಿಸಿತು. ಚಿತ್ರ ಯಶಸ್ವಿಯಾಗಲಿಲ್ಲ. ಮುಂದೆ ಪಂಪಾ ಪಿಕ್ಚರ್ಸ್ ಮೂಲೆಗುಂಪಾಯಿತು. ಚಿತ್ರೋದ್ಯಮಕ್ಕೆ ನೆರವು ನೀಡಲು ಬಂದ ಶ್ರೀಮಂತರನ್ನೆಲ್ಲಾ ನಿರಾಶೆಗೊಳಿಸಿತು.

೧೯೩೪ರಿಂದ ೧೯೫೦ರವರೆಗೆ ಒಟ್ಟು ೪೯ ಚಿತ್ರಗಳು ಮಾತ್ರ ತೆರೆಕಂಡಿವೆ. ಆ ಪೈಕಿ ಎರಡು ಚಿತ್ರಗಳು ಹೊಸ ಹೆಸರಿನಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳೊಡನೆ ತೆರೆಕಂಡ ಹಳೆಯ ಚಿತ್ರಗಳು. ಹಾಗಾಗಿ ಲೆಕ್ಕ ಹಾಕಿದರೆ ತಯಾರಾದದ್ದು ಕೇವಲ ೨೭ ಚಿತ್ರಗಳು. ೧೭ ವರ್ಷಗಳಲ್ಲಿ ೨೭ ಚಿತ್ರಗಳು ದೊಡ್ಡ ಸಂಖ್ಯೆಯೇನಲ್ಲ. ಆದರೆ ಕನ್ನಡ ಚಿತ್ರ ತಯಾರಿಕೆಗೆ ಇದ್ದ ಅಡ್ಡಿ ಆತಂಕಗಳು, ಬಂಡವಾಳದ ಕೊರತೆ, ಸೌಲಭ್ಯಗಳ ಅಭಾವದ ದೃಷ್ಟಿಯಿಂದ ಗಮನಿಸಿದಾಗ ಇದು ಕಡಿಮೆ ಸಾಧನೆಯಲ್ಲ.

ಈ ಅವಧಿಯಲ್ಲಿ ತಯಾರಾದ ಚಿತ್ರಗಳನ್ನು ಗುಣದ ದೃಷ್ಟಿಯಿಂದ ವಿಶ್ಲೇಷಿಸುವುದು ಕಷ್ಟ. ಚಿತ್ರಗಳು ಲಭ್ಯವಿಲ್ಲವಾದ್ದರಿಂದ ಚಿತ್ರಗಳ ಗುಣಮಟ್ಟಕ್ಕೆ ಪತ್ರಿಕಾ ವಿಮರ್ಶೆಯನ್ನು ಆಧರಿಸಲಾಗಿದೆ. ಇವು ಕನ್ನಡ ಚಿತ್ರೋದ್ಯಮದ ಆರಂಭದ ದಿನಗಳು. ಚಿತ್ರ ತಯಾರಿಸುವುದೇ ಒಂದು ದೊಡ್ಡ ಸಾಹಸವಾಗಿದ್ದ ದಿನಗಳು. ಆದರೆ ಕನ್ನಡ ಚಿತ್ರೋದ್ಯಮವನ್ನು ಸುಭದ್ರ ಬುನಾದಿಯ ಮೇಲೆ ನಿರ್ಮಿಸುವ ಪ್ರಾಮಾಣಿಕ ಪ್ರಯತ್ನ ಎಂಬ ದೃಷ್ಟಿಯಿಂದ ಸ್ವಾಗತಿಸಬೇಕು.



(ಚಿತ್ರ ೧) 'ಬೇಡರ ಕಣ್ಣಪ್ಪ' ಚಿತ್ರದಲ್ಲಿ ರಾಜಕುಮಾರ್ ಮತ್ತು ರಾಮಚಂದ್ರಶಾಸ್ತ್ರಿ



(ಚಿತ್ರ ೨) 'ಸ್ಕೂಲ್ ಮಾಸ್ಟರ್' ಚಿತ್ರದಲ್ಲಿ ಬಿ.ಆರ್.ಪಂತುಲು

# ಮೂಡಿದ ಜಾಗೃತಿ

ದ್ವಿತೀಯ ಪ್ರಪಂಚ ಸಮರದ ಪರಿಣಾಮವಾಗಿ ಉಂಟಾದ ಕಚ್ಚಾ ಫಿಲಂ ಅಭಾವ, ಸೆನ್ಸಾರ್ ಸಮಸ್ಯೆ, ಚಿತ್ರಗಳ ಉದ್ದದ ಮೇಲೆ ನಿರ್ಬಂಧ - ಇಂಥ ಹಲವು ಹತ್ತು ಸಮಸ್ಯೆಗಳಿಗೆ ಸಿಕ್ಕಿ ನಲುಗಿದ ಕನ್ನಡ ಚಿತ್ರೋದ್ಯಮ ೫೦ರ ದಶಕದಲ್ಲಿ ಅಡಿ ಇಟ್ಟಾಗ ಅಂಥ ಉತ್ಸಾಹದ ವಾತಾವರಣವಿರಲಿಲ್ಲ. ಸಾಲದ್ದಕ್ಕೆ ಕನ್ನಡ ಚಿತ್ರಗಳ ಬಗ್ಗೆ ಕನ್ನಡಿಗರ ತಾತ್ಸಾರ, ಪರಭಾಷಾ ಚಿತ್ರಗಳ ಪೈಪೋಟಿ, ಹಂಚಿಕೆದಾರರು ಮತ್ತು ಪ್ರದರ್ಶಕರ ದಿವ್ಯ ನಿರ್ಲಕ್ಷ್ಯ ಕನ್ನಡ ಚಿತ್ರಗಳಿಗೆ ಭವಿಷ್ಯವೇ ಇಲ್ಲವೇನೋ ಎಂಬ ಅನಿಶ್ಚಿತ ಪರಿಸ್ಥಿತಿ ಉಂಟುಮಾಡಿತ್ತು. ಆದರೂ ಕನ್ನಡದಲ್ಲಿ ೧೯೫೧ರಿಂದ ೬೦ರವರೆಗಿನ ಅವಧಿಯಲ್ಲಿ ೭೫ ಚಿತ್ರಗಳು ತೆರೆಕಂಡಿವೆ.

೧೯೫೧ರಲ್ಲಿ ತೆರೆಕಂಡ ಮೂರು ಚಿತ್ರಗಳಲ್ಲಿ ಕೆಂಪರಾಜ್ ಪ್ರೊಡಕ್ಷನ್ಸ್ ಅವರ 'ರಾಜಾ ವಿಕ್ರಮ' ಅಭೂತಪೂರ್ವ ಯಶಸ್ಸು ಗಳಿಸಿತು. ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯಕ್ಕೆ ನಾಂದಿ ಹಾಡಿತು. ಅದುವರೆಗೆ ತಯಾರಾದ ಯಾವ ಕನ್ನಡ ಚಿತ್ರವೂ ಗಳಿಸದಷ್ಟು ಹಣ ಗಳಿಸಿ ಚಿತ್ರ ತಯಾರಕರಿಗೆ ಹೊಸ ಹುರುಪು ನೀಡಿತು.

ಶನಿಮಹಾತ್ಮೆಯನ್ನು ಸಾರುವ ಜಾನಪದ ಕಥಾವಸ್ತು ಉಳ್ಳ ಈ ಚಿತ್ರ ಉತ್ತಮ ಸಂಗೀತ, ನಿರೂಪಣೆಗಳಿಂದ ಕೂಡಿ ಚಿತ್ರರಸಿಕರನ್ನು ಆಕರ್ಷಿಸಿತು. ಕೆಂಪರಾಜ ಅರಸ್, ಎಂ.ವಿ.ರಾಜಮ್ಮ, ಬಿ.ಜಯಮ್ಮ, ಎಂ.ಎಸ್.ಸುಬ್ಬಣ್ಣ, ಪಂಢರಿಬಾಯಿ, ಮಹಾಬಲರಾವ್, ಶನಿಯ ಪಾತ್ರದಲ್ಲಿ ಎಚ್.ಟಿ.ಅರಸ್ ಮುಂತಾದವರು ತಾರಾಗಣದಲ್ಲಿದ್ದ ಈ ಚಿತ್ರದ ಸಾಹಿತ್ಯವನ್ನು ರಚಿಸಿದವರು ಹುಣಸೂರು ಕೃಷ್ಣಮೂರ್ತಿ. ಸಂಗೀತ ನೀಡಿದವರು ಮದರಾಸಿನ ಖ್ಯಾತ ಸಂಗೀತ ವಿದ್ವಾಂಸ ಎಸ್.ರಾಜಂ (ಇವರು ವೀಣಾ ಬಾಲಚಂದರ್ ಅವರ ಸೋದರರು). ಈ ಚಿತ್ರದಲ್ಲಿ ಶಾಸ್ತ್ರೀಯ ಧಾಟಿಯ ೧೫ ಹಾಡುಗಳಿದ್ದು ಅವುಗಳನ್ನು ಹಾಡಿದವರು ಎಸ್.ರಾಜಂ ಮತ್ತು ಕಾಂತಿಮತಿ. ಹಲವು ರಾಗಗಳ ರಾಗಮಾಲಿಕೆಯನ್ನು ಹೋಲುವ ಒಂದು ಗೀತೆ, ಅದಕ್ಕೆ ಅಷ್ಟೇ ವಿಭಿನ್ನ ವಸ್ತ್ರಾಲಂಕಾರ ಧರಿಸಿ ಕೆಂಪರಾಜ ಅರಸು-ಎಂ.ವಿ.ರಾಜಮ್ಮ ನರ್ತಿಸಿದ ರೀತಿ ಮೆಚ್ಚುವಂತಿತ್ತು.

ಈ ಚಿತ್ರದಲ್ಲಿ ಬಳಸಲಾದ ಗೀತೆ 'ಸರಧೀರ ಬರುವಾ ಮಿರುಗುವ ಮೀಸೆಯ...' ಆ ದಿನಗಳಲ್ಲಿ ಅತ್ಯಂತ ಜನಪ್ರಿಯವಾಗಿದ್ದ 'ಛುಪ್ ಛುಪ್ಪು ಖಡೇ ಹುಯೇ....' ಹಿಂದಿ ಚಿತ್ರಗೀತೆಯ ಅನುಕರಣೆಯಾಗಿತ್ತು. 'ನಾದೋಪಾಸನೆಯೋ...' ಮತ್ತು 'ಹಾಳು ಒಲೆಯ ಊದಿ ಊದಿ ಉಸಿರು ಮೇಲಕಾಗಿದೆ...' ಎಂಬ ಹಾಸ್ಯ ಸನ್ನಿವೇಶದ ಗೀತೆ ಮುಂತಾದವು ಆ ದಿನಗಳಲ್ಲಿ ಅತ್ಯಂತ ಜನಪ್ರಿಯವಾಗಿದ್ದವು. ಚಿತ್ರ ಸಿದ್ಧವಾದಾಗ ಅದಕ್ಕೆ ಬಿಡುಗಡೆಯದೇ ಸಮಸ್ಯೆಯಾಯಿತು. ಆಗ ಬೆಂಗಳೂರಿನ ಕೆಂಪೇಗೌಡ ರಸ್ತೆಯಲ್ಲಿದ್ದ ಪ್ರತಿಷ್ಠಿತ ಚಿತ್ರಮಂದಿರಗಳೆಂದರೆ ಪ್ರಭಾತ್, ಸ್ಟೇಟ್ಸ್, ಸಾಗರ್, ಗೀತಾ ಹಾಗೂ ಮೂವಿಲ್ಯಾಂಡ್. ಬಿಡುಗಡೆಗೆ ಕಾದಿದ್ದ ಕೆಲವು ಹಿಂದಿ ಚಿತ್ರಗಳಿದ್ದುದ್ದರಿಂದ ಈ ಥಿಯೇಟರುಗಳು ದೊರೆಯಲಿಲ್ಲ. ಕನ್ನಡ ಚಿತ್ರಗಳಿಗೆ ಆಗ ಇದ್ದ ಬೆಲೆ ಅಷ್ಟೆ. ಕೊನೆಗೆ ಚಿಕ್ಕಪೇಟೆಯಲ್ಲಿದ್ದ ವಿಜಯ (ಈಗಿನ ವಿಜಯಲಕ್ಷ್ಮಿ) ಹಾಗೂ ಮಿನರ್ವ ಚಿತ್ರಮಂದಿರಗಳಲ್ಲಿ ಚಿತ್ರ ಬಿಡುಗಡೆಯಾಯಿತು.


(ಚಿತ್ರ ೩) 'ರಾಜಾ ವಿಕ್ರಮ' ಚಿತ್ರದಲ್ಲಿ ಎಂ.ವಿ.ರಾಜಮ್ಮ ಮತ್ತು ಕೆಂಪರಾಜ ಅರಸು

'ರಾಜಾ ವಿಕ್ರಮ' ದಿನ ದಿನಕ್ಕೆ ಜನಪ್ರಿಯವಾಯಿತು. ಚಿತ್ರ ನೋಡಲು ೩೦-೪೦ ಮೈಲಿಗಳಿಂದ ಜನ ಬರುತ್ತಿದ್ದರು. ಭಾರಿ ನಿರ್ಮಾಣದ 'ಚಂದ್ರಲೇಖ' ಚಿತ್ರಕ್ಕಿಂತ ಸಾಧಾರಣ ವೆಚ್ಚದ 'ರಾಜಾ ವಿಕ್ರಮ' ಯಾವ ರೀತಿಯಲ್ಲೂ ಕಳಪೆಯಲ್ಲ ಎಂದು ಜನ ಆಡಿಕೊಳ್ಳುತ್ತಿದ್ದರು. ಮುಖ್ಯವಾಗಿ ಕೆಂಪರಾಜ ಅರಸರ ನಿಲುವು, ಠೀವಿ, ರೂಪ ಮೆಚ್ಚುಗೆಯಾಯಿತು. ಆ ಕಾಲಕ್ಕೆ ಚಿತ್ರ ಶ್ರೀಮಂತವಾಗಿಯೂ ಇತ್ತು. ಪತ್ರಿಕೆಗಳಲ್ಲಿ 'ರಾಜಾ ವಿಕ್ರಮ'ದ ಬಗ್ಗೆ ಒಳ್ಳೆಯ ವಿಮರ್ಶೆಗಳು ಪ್ರಕಟವಾದವು.

''ಕನ್ನಡ ತೆರೆಗೆ ಬಂದಿರುವ 'ರಾಜಾ ವಿಕ್ರಮ' ಹಳೆಯ ಕತೆಯನ್ನೇ ಹೊಸ ದಾರಿಯಲ್ಲಿ ನಡೆಸುವ ಪ್ರಯತ್ನ. ಮೊದಲ ಬಾರಿಗೆ ಕನ್ನಡ ಚಿತ್ರದಲ್ಲಿ ಕತ್ತಿಯುದ್ಧ, ಕಠಾರಿ ಮಸಲತ್ತು ತೋರಿಸಿದ್ದಾರೆ. ಗದ್ಯವನ್ನೇ ಪದ್ಯವಾಗಿ ಹಾಡಿರುವುದನ್ನು ಮತ್ತು ಕೆಲವೆಡೆ ಕಂಡುಬರುವ ಭಾವ ನಿರಸನ ಮತ್ತು ರಸಭಂಗ ಸನ್ನಿವೇಶಗಳನ್ನೂ ಸರಿಪಡಿಸಿದ್ದರೆ ಚಿತ್ರ ಇನ್ನೂ ಉತ್ತಮವಾಗಿರುತ್ತಿತ್ತು.'' ('ಕತೆಗಾರ')

'ರಾಜಾವಿಕ್ರಮ' ಚಿತ್ರದ ವಿತರಣೆಯ ಸಂಬಂಧವಾಗಿ ತನಗೆ ಅನ್ಯಾಯವಾಯಿತೆಂದು ಕೋರ್ಟಿನ ಮೆಟ್ಟಿಲೇರಿದರು ಕೆಂಪರಾಜ ಅರಸು. ಬಹುಕಾಲ ನಡೆದ ಕೇಸ್, ಅಂತಿಮವಾಗಿ ಅರಸರ ಕಡೆಗೇ ತೀರ್ಪು ಬಂದು ವಿತರಕರು ಹಣವನ್ನು ಕಟ್ಟಿಕೊಡಬೇಕಾಗಿ ಬಂದಿತು. ಚಿತ್ರವನ್ನು ವಿತರಣೆ ಮಾಡುವಾಗ ಹೆಚ್ಚು ಬೇಡಿಕೆ ಇಲ್ಲದ ಚಿತ್ರವನ್ನು ಕೊಂಡೊಯ್ಯಲು ಒತ್ತಾಯಿಸುವ ಪರಿಪಾಠವಿದೆ. ಅದೇ ತಂತ್ರವನ್ನು ಆ ವಿತರಕರೂ ಬಳಸಿದ್ದರು. ಇದನ್ನು ಕೆಂಪರಾಜ ಅರಸು ಒಪ್ಪಲಿಲ್ಲ. ನನ್ನ ಚಿತ್ರದ ಗಳಿಕೆಗೆ ಧಕ್ಕೆ ಆಯಿತೆಂದು ವಾದಿಸಿದ್ದರು. ''ಈ ಪ್ರಕರಣದ ನಂತರ ವಿತರಕರು ಒಪ್ಪಂದ ಪತ್ರದಲ್ಲೇ ಇಂಥ ವ್ಯವಹಾರವನ್ನು ನಿಯಮದಲ್ಲಿ ಸೇರಿಸಿಕೊಂಡರು. ಪ್ರದರ್ಶಕರು ಜನಪ್ರಿಯ ಚಿತ್ರಗಳನ್ನು ಕೇಳುವಾಗ ಎರಡು ಜನಪ್ರಿಯ ಚಿತ್ರದ ಜೊತೆ ಒಂದು ಬೇಡಿಕೆ ಇಲ್ಲದ ಚಿತ್ರವನ್ನು ತೆಗೆದುಕೊಳ್ಳಿ ಎಂದು ಹೇಳುವುದು ಚಿತ್ರವೊಂದರ ಪ್ರಮೋಷನ್ ಅನ್ನು ಗುರಿಯಾಗಿಟ್ಟುಕೊಂಡಿರುತ್ತದೆ.'' ಎಂದು ವಿತರಕ ಕೆ.ವಿ.ಗುಪ್ತ ಸಂದರ್ಶನದಲ್ಲಿ ಹೇಳಿದ್ದಾರೆ.

೧೯೪೮ರಲ್ಲೇ ನವಜ್ಯೋತಿಯಲ್ಲಿ 'ಕನಕದಾಸ' ಚಿತ್ರ ಸಿದ್ಧವಾಗುತ್ತಿದ್ದಾಗ ಸಾಹಿತ್ಯ ವಿಭಾಗದಲ್ಲಿದ್ದ ಮ.ನ.ಮೂರ್ತಿ ಅವರ ಬಳಿ ಭಗವಾನ್ ಒಂದು ಕೆಲಸ ಬೇಕೆಂದು ಅರ್ಜಿ ಹಾಕಿಕೊಂಡರು. ಮುದ್ದಾದ ಅಕ್ಷರಗಳನ್ನು ನೋಡಿ ಕೂಡಲೇ ಸ್ಕ್ರಿಪ್ಟ್ ವಿಭಾಗದಲ್ಲಿ ಕೆಲಸ ಕೊಟ್ಟರು. ಮ.ನ.ಮೂರ್ತಿ ಅವರ 'ಕನಕದಾಸ' ಚಿತ್ರ ಸಿದ್ಧವಾಗದೇ ಹೋದರೂ ಭಗವಾನ್‌ರಂಥ ಪ್ರತಿಭಾವಂತರನ್ನು ಚಿತ್ರರಂಗಕ್ಕೆ ಒಂದು ಕೊಡುಗೆಯಾಗಿ ಕೊಟ್ಟಿದ್ದಂತೂ ಹೌದು.

'ವಾಣಿ' ಚಿತ್ರ ತಯಾರಾದಾಗ ಭಗವಾನ್ ಅದರ ರೆಪ್ರೆಸೆಂಟೇಟೀವ್ ಆಗಿ ಬಾಕ್ಸ್‌ಗಳನ್ನು ಹೊತ್ತುಕೊಂಡು ಹಂಪಾಪುರ, ಸಾಲಿಗ್ರಾಮಗಳಿಗೆ ಓಡಾಡಿದ್ದು, ದುಡಿದದ್ದು ಹೇಳುತ್ತಾ - ''ನಿಜವಾಗಿ ಉದ್ಯಮ ಅಂತ ಇದ್ದದ್ದು ಮೈಸೂರಲ್ಲೇ. ಬೆಂಗಳೂರಲ್ಲಿ ವಿತರಣೆಯ ವ್ಯವಸ್ಥೆ ಮಾತ್ರ ಇತ್ತು. ಅದರಲ್ಲೂ ಗೋಪಾಲಶೆಟ್ಟರ ಪಾತ್ರ ಹಿರಿದು. ಶಾಂತಾ ಪಿಕ್ಚರ್ಸ್, ಪ್ರಕಾಶ್ ಪಿಕ್ಚರ್ಸ್, ವಿಜಯ ಪಿಕ್ಚರ್ಸ್, ಬಹಳಷ್ಟು ಮೊದಲಿಂದ ಕನ್ನಡ ಚಿತ್ರಗಳಿಗಾಗಿ ರಿಸ್ಕ್ ತೆಗೆದುಕೊಂಡ ತಲ್ಲಂ ಪಿಕ್ಚರ್ಸ್ ಕೊಡುಗೆ

ಹಿರಿದು. ಅವರೆಲ್ಲ ವಿತರಿಸಲು ಸಿದ್ಧವಿದ್ದರೂ ಚಿತ್ರಗಳು ನಾಲ್ಕೋ ಆರೋ ಆಗುತ್ತಿದ್ದವು'' ಎನ್ನುತ್ತಾರೆ.

''ರಾಜಾ ವಿಕ್ರಮ' ಚಿತ್ರ ಬಿಡುಗಡೆಯಾದಾಗ ಭಾರೀ ಕಲೆಕ್ಷನ್ ಆಗಿತ್ತು. ಆ ಕಾಲಕ್ಕೆ ನಲವತ್ತು, ಐವತ್ತು ಲಕ್ಷ ದುಡಿದಿತ್ತು. ಜಾತ್ರೆಗಳಲ್ಲಿ ಗಲಾಟೆ ಹೆಚ್ಚಾಗಿ ಟಿಕೆಟ್ ಕೊಡೋಕ್ಕೆ ಆಗದೆ ಟವಲ್ ಹಿಡಿದು ದುಡ್ಡು ಹಾಕಿಸಿಕೊಂಡು ಒಳಗೆ ಕಳ್ಸಿದ್ದಿದೆ'' ಎನ್ನುತ್ತಾರೆ ಭಗವಾನ್.

ಶಂಕರಸಿಂಗ್ ಮತ್ತು ವಿಠಲಾಚಾರ್ಯ ಸೇರಿ ಕಥೆ ಬರೆದು, ಹುಣಸೂರು ಕೃಷ್ಣಮೂರ್ತಿಯವರಿಂದ ಸಂಭಾಷಣೆ, ಗೀತೆಗಳನ್ನು ಬರೆಸಿ 'ಜಗನ್ಮೋಹಿನಿ' ಚಿತ್ರವನ್ನು ಸಿದ್ಧಪಡಿಸಿದರು. ಶಂಕರಸಿಂಗ್ ಹೆಸರನ್ನು ನಿರ್ದೇಶಕರಾಗಿ ಹಾಕಲಾಯಿತು. ಈ ಚಿತ್ರ ಭಾರೀ ಯಶಸ್ಸು ಗಳಿಸಿತು. ದಾವಣಗೆರೆ ಹಾಗೂ ಹೈದರಾಬಾದ್ ಕರ್ನಾಟಕದ ಒಂದು ಪ್ರದೇಶದಲ್ಲಿ ಸಿಲ್ವರ್ ಜ್ಯೂಬಿಲಿ ಆಚರಿಸಿತು. ಈ ಚಿತ್ರದ ಬಗ್ಗೆ ಅಪಾರ ಪ್ರೀತಿ ತೋರಿದ ದಾವಣಗೆರೆಯ ಜನ ಅದ್ದೂರಿ ಸಮಾರಂಭ ಏರ್ಪಡಿಸಿದರು. ಮುಖ್ಯವಾಗಿ ಹಾಸ್ಯನಟ ಮಹಾಬಲರಾಯರನ್ನು ಆನೆಯ ಮೇಲೆ ಕೂರಿಸಿ ಮೆರವಣಿಗೆ ಮಾಡಿದರು. ಚಿತ್ರದಲ್ಲಿ ಅವರು ಖೀರು (ಪಾಯಸ) ಕುಡಿಯುವ ಸ್ವಾರಸ್ಯಕರ ಸನ್ನಿವೇಶ ಇರುವುದರ ನೆನಪಿಗೆ ಮಹಾಬಲರಾಯರಿಗೆ ಆ ದಿನ ಖೀರು ಕೊಟ್ಟರು. ಉಡುಗೊರೆಯಾಗಿ ದಶಾವತಾರದ ಚಿತ್ರಗಳನ್ನು ಕೆತ್ತಿರುವ ಹೂವಿನ ಕುಂಡದ ಆಕಾರದ ಬೆಳ್ಳಿ ಪಾತ್ರೆಯನ್ನು ಕೊಟ್ಟರು. ಮಹಾತ್ಮ ಪಿಕ್ಚರ್ಸ್ ಲಾಂಛನದಡಿ ಚಿತ್ರಗಳ ತಯಾರಿಕೆ ಮುಂದುವರಿಯಿತು.

'ಜಗನ್ಮೋಹಿನಿ' ಚಿತ್ರದ ತಾರಾಗಣದಲ್ಲಿ ಹರಿಣಿ, ಪ್ರತಿಮಾದೇವಿ, ಜಯಶ್ರೀ, ಶ್ರೀನಿವಾಸರಾವ್, ಮಹಾಬಲರಾವ್, ಎಂ.ಎಸ್.ಸುಬ್ಬಣ್ಣ, ರಾಧಾಬಾಯಿ, ಈಶ್ವರಪ್ಪ ಮುಂತಾದವರಿದ್ದರು. ಸಂಗೀತ ನಿರ್ದೇಶಕರು ಪಿ.ಶಾಮಣ್ಣ. ಹಿನ್ನೆಲೆ ಗಾಯನ ನೀಲಮ್ಮ ಕಡಾಂಬಿ ಮತ್ತು ಸರೋಜಿನಿ. ಚಿತ್ರದಲ್ಲಿ ೧೨ ಹಾಡುಗಳಿದ್ದವು. ಜನಪ್ರಿಯ ಹಿಂದಿ ಚಿತ್ರಗೀತೆಗಳ ಧಾಟಿಯಲ್ಲಿದ್ದ ಹಾಡುಗಳು ಬಹಳ ಜನಪ್ರಿಯವಾದವು. ಹಾಡುಗಳು ಹಿಂದಿಯ 'ಮಹಲ್' ಚಿತ್ರದ ಗೀತೆಗಳ ತದ್ರೂಪು. 'ಮಹಲ್' ಚಿತ್ರ ತಡವಾಗಿ (ಕರ್ನಾಟಕದಲ್ಲಿ) ಬಿಡುಗಡೆ ಆಗಿದ್ದರಿಂದ 'ಜಗನ್ಮೋಹಿನಿ'ಯ ಹಾಡುಗಳೇ ಅಲ್ಲವೆ ಅಂದುಕೊಂಡವರೂ ಉಂಟು. ಮತ್ತು ಹಿಂದಿ ಗೀತೆಗಿಂತ ಕನ್ನಡದ ಹಾಡುಗಳು ಜನಪ್ರಿಯವಾದವು. ಅದರಲ್ಲೂ 'ಎಂದೊ ಎಂದೊ, ಎಂದೋ ನಿನ್ನ ದರುಶನ.....' ಮತ್ತು 'ಏನಿದು ರಮಣೀ ಕನಸೊ ನನಸೊ ಏನೆಂಬುದ ನೀ ಹೇಳೆ...' ಎಂಬ ಗೀತೆಗಳು ಮನೆಮಾತಾಗಿದ್ದವು. ಒಂದೆಡೆ ಬರುವ 'ಗಜ ನಿಂಬೆ ಹಣ್ಣು' ಶಬ್ದ ಸ್ತ್ರೀಯರನ್ನು ಚುಡಾಯಿಸಲು ಒಂದು ಈಡಿಯಂ ರೀತಿ ಸಲೀಸಾಗಿ ಬಳಕೆಯಾಗುತ್ತಿತ್ತು. ದಾವಣಗೆರೆಯಲ್ಲಿ ಈ ಚಿತ್ರವನ್ನು ನಿತ್ಯವೂ ನೋಡಿದ ಒಬ್ಬ ಪ್ರೇಕ್ಷಕ 'ಹುಚ್ಚ'ನಾದುದನ್ನು ಕಂಡವರಿದ್ದಾರೆ. ದಾವಣಗೆರೆಯ ಪ್ರೇಕ್ಷಕರು ಹಸು, ಎಮ್ಮೆಗಳನ್ನು ಮಾರಿ ಸಿನಿಮಾ ನೋಡುತ್ತಿದ್ದರೆಂದೂ ಇದು ಜನಜೀವನವನ್ನು ಪಲ್ಲಟಗೊಳಿಸಿದೆ, ಇಂಥ ಚಿತ್ರ ನಡೆಯಕೂಡದು ಎಂದು ಸಾರ್ವಜನಿಕ ಹಿತಾಸಕ್ತಿ ರಿಟ್ ಹಾಕಿದ್ದರಿಂದಾಗಿ ಚಿತ್ರವನ್ನು ಕೋರ್ಟ್ ಆಜ್ಞೆಯ ಮೇರೆಗೆ ಪ್ರದರ್ಶನ ತಡೆಹಿಡಿಯಲಾಗಿತ್ತು. ವಿವಾದ ಇತ್ಯರ್ಥವಾದ ಮೇಲೆ ಮತ್ತೆ ಪ್ರದರ್ಶಿಸಿದರು. ಹುಬ್ಬಳ್ಳಿಯಲ್ಲಿ ಅತಿ ಹೆಚ್ಚು ದಿನ ಓಡಿದ ಚಿತ್ರವಿದು. ಪೂರ್ವಜನ್ಮದ ಕರ್ಮಫಲವನ್ನು ಅನುಭವಿಸಿಯೇ ತೀರಬೇಕೆಂಬ ಕರ್ಮಸಿದ್ಧಾಂತವನ್ನು ಸಾರುವ ಕಥೆ. ಮೋಹಿನಿ (ದೆವ್ವ)ಯಿಂದ ಅಪಹೃತನಾದ ಪತಿಯನ್ನು ಸತಿಯ ಪಾತಿವ್ರತ್ಯ, ದೈವಭಕ್ತಿಗಳು ಕಾಪಾಡುತ್ತವೆ.

ಆ ದಿನಗಳ ಪ್ರೇಕ್ಷಕರನ್ನು ಆಕರ್ಷಿಸುವ ಎಲ್ಲ ತಂತ್ರಗಳೂ ಈ ಕಥೆಯಲ್ಲಿದ್ದುವು. ಅದಕ್ಕೆ ಮತ್ತಷ್ಟು ಮಸಾಲೆ ಸೇರಿಸಿ ಚಿತ್ರವನ್ನು ತಯಾರಿಸಲಾಗಿತ್ತು. ಈ ಚಿತ್ರಕ್ಕೆ ಕೊಂಚ ಹೊರಾಂಗಣ ಚಿತ್ರೀಕರಣವೂ ಆಗಿತ್ತು. ಸೌಮ್ಯ ಪಾತ್ರದ ಪ್ರತಿಮಾದೇವಿಯವರು ದುರ್ಗಮವಾದ ಪ್ರದೇಶಗಳಲ್ಲಿ ಅಲೆದಾಡುತ್ತ ಮೋಹಿನಿಯು ಎತ್ತಿಕೊಂಡು ಹೋದ ಗಂಡನನ್ನು ಹುಡುಕುವ ಸನ್ನಿವೇಶವೊಂದನ್ನು 'ಮೇಕೆದಾಟು' ಪ್ರದೇಶದಲ್ಲಿ ಚಿತ್ರೀಕರಿಸಲಾಗಿತ್ತು.

''ನಾನು, ಶಂಕರಸಿಂಗ್, ವಿಠಲಾಚಾರ್ಯ, ಸೌಂಡ್ ಇಂಜಿನಿಯರ್ ಅಯ್ಯಂಗಾರ್ ನಾಲ್ಕೂ ಜನ ಮೊದಲ ದಿನವೇ ಸ್ಥಳ ನೋಡಿ ಬರಲು ಹೋದೆವು. ರಾಜೇಂದ್ರಸಿಂಗ್ ಒಂದು ವರ್ಷದ ಮಗು. ಗುಂಡಗೆ ತೂಕವಾಗಿದ್ದ. ಸುಮಾರು ನಾಲ್ಕು ಮೈಲಿ ಕಾಡಿನಲ್ಲಿ ಮಗುವನ್ನು ಒಬ್ಬರಾದ ಮೇಲೊಬ್ಬರು ಎತ್ತಿಕೊಂಡು ಹೋದೆವು. ಕಡೆಗೆ ಅಯ್ಯಂಗಾರರಿಗೆ ಜ್ವರವೇ ಬಂದುಬಿಟ್ಟಿತು. ಅರ್ಕಾವತಿ ನದಿ ಬಂಡೆಗಳನ್ನು ಕೊರೆದುಕೊಂಡು ಬರುತ್ತೆ, ಒಂದು ಸ್ಥಳದಲ್ಲಿ ಮೇಕೆ ದಾಟುವಷ್ಟು ಕಿರಿದಾಗಿ ಬಿಡುತ್ತೆ. ಆ ಸ್ಥಳ ಆರಿಸಿ ಒಂದು ಪುಟ್ಟ ಸೇತುವೆ ಹಾಕಲಾಗಿತ್ತು. ಅದನ್ನು ದಾಟುವಾಗ ಸೇತುವೆ ತುಂಡಾಗುವುದು, ಇಂಥ ಚಿತ್ರಿಕೆಗಳನ್ನೆಲ್ಲ ತೆಗೆಯಲಾಗಿತ್ತು. ಚಿತ್ರ ಬಿಡುಗಡೆ ಆದ ಮೇಲೆ ದಾವಣಗೆರೆಯ ಸಾಹುಕಾರ್ ಹನುಮಂತಪ್ಪ ಅನ್ನುವವರು ನನ್ನನ್ನು ಭೇಟಿ ಮಾಡಿದರು. 'ಅದು ಹೇಗೆ ಅಂಥ ಜಾಗಗಳಿಗೆಲ್ಲ ಹೋದೆ ತಾಯಿ...' ಅಂತ ಕೇಳಿದರು. ಆ ಸಾಹುಕಾರರು ನನಗೊಂದು ಕಾಣಿಕೆ ಸಹ ಕೊಟ್ಟಿದ್ದರು. ಆ ಸೌಮ್ಯ ಪಾತ್ರ ಬಹಳ ಜನಕ್ಕೆ ಇಷ್ಟವಾಗಿತ್ತು'' ಎಂದು ಹೇಳುತ್ತಾರೆ ಪ್ರತಿಮಾದೇವಿ.

ಆ ದಿನಗಳಲ್ಲಿ ಎಲ್ಲ ಕೆಲಸವೂ ಆಫೀಸಿನಲ್ಲೇ ಆಗುತ್ತಿತ್ತು. ಈಗಿನ ಹಾಗೆ ಹೊಟೇಲ್, ವಿಶ್ರಾಂತಿಧಾಮ ಅಂತೆಲ್ಲ ಇರಲಿಲ್ಲ. ಕಥೆ, ಸ್ಕ್ರೀನ್ ಪ್ಲೇ, ಸಂಭಾಷಣೆ ಅಂತ ಚರ್ಚೆ ಮಾಡೋರು. ಇನ್ನೊಂದು ಕಡೆ ಸಂಗೀತದ ರಿಹರ್ಸಲ್ ಇತ್ಯಾದಿ. ಕಲಾವಿದರಿಗೂ ಹಾಗೆಲ್ಲ ಬೇರೆ ವಸತಿ ಇತ್ಯಾದಿ ಇರಲಿಲ್ಲ ಎನ್ನುವ ಪ್ರತಿಮಾದೇವಿ ಅವರು ''ನಾನು, ಹರಿಣಿ, ಜಯಶ್ರಿ ಒಂದೇ ಕಡೆ ಇರುತ್ತಿದ್ದೆವು. 'ನಾಗಕನ್ನಿಕಾ'ದಲ್ಲಿ ಪಾತ್ರ ಮಾಡಿದ್ದ ಬಳ್ಳಾರಿ ರತ್ನ ಅವರು ಸಹ ನಮ್ಮ ಮನೇಲೇ ಇದ್ದರು. ಒಂದೇ ಊಟ, ಒಂದೇ ವಸತಿ, ಬೇರೆ ಭಾವನೆ ಇರಲೇ ಇಲ್ಲ. ಆ ದಿನಗಳಲ್ಲಿ ಪ್ರತ್ಯೇಕ ಕಾಸ್ಟ್ಯೂಮರ್ ಸಹ ಇರಲಿಲ್ಲ. ಮೇಕಪ್‌ನೋರೇ ಕೇಶಾಲಂಕಾರ ಮಾಡುತ್ತಿದ್ದರು'' ಎನ್ನುತ್ತಾರೆ. ಮತ್ತು ''ಜಗನ್ಮೋಹಿನಿ'ಯ ಯಶಸ್ಸಿನ ಹಿಂದೆ ಎಲ್ಲದರ ಜೊತೆಗೆ ಪ್ರಧಾನ ಆಕರ್ಷಣೆಯಾಗಿದ್ದುದು ಹರಿಣಿ ಅವರ ಚೆಲುವು. ಮುಖ್ಯವಾಗಿ ಆಕೆ ಈಜುಡುಗೆ ತೊಟ್ಟು ಅಭಿನಯಿಸಿದ್ದು. ಹಾಸ್ಯ ಪಾತ್ರಗಳಲ್ಲಿ ಮಹಾಬಲರಾಯರು ಮತ್ತು ಸುಬ್ಬಣ್ಣ ಇರುತ್ತಿದ್ದರು. ಸುಬ್ಬಣ್ಣ ಮೇಕಪ್ ಜೊತೆಗೆ ಗಮನಾರ್ಹ ಪಾತ್ರದಲ್ಲೂ ಇರುತ್ತಿದ್ದರು. ಆಗೆಲ್ಲ ಡಮ್ಮಿ/ಡ್ಯೂಪ್‌ನಂಥದು ಇರಲಿಲ್ಲ. ಕ್ಲಿಷ್ಟ ಅನ್ನಿಸುವ ಸನ್ನಿವೇಶದಲ್ಲಿ ಅಪಾಯವಾಗದ ಹಾಗೆ ಎಚ್ಚರ ತೆಗೆದುಕೊಳ್ಳುತ್ತಿದ್ದರು. ಮೇಲೆ ಹೇಳಿದ ಮೇಕೆದಾಟಿನ ಚಿತ್ರೀಕರಣದಲ್ಲಿ ಪೆಟ್ಟುಗಳಾಗದ ಹಾಗೆ ಮರಳು ಇತ್ಯಾದಿ ಹಾಕಲಾಗಿತ್ತು'' ಎನ್ನುತ್ತಾರೆ.



(ಚಿತ್ರ ೪) 'ಜಗನ್ಮೋಹಿನಿ' ಚಿತ್ರದಲ್ಲಿ ಹರಿಣಿ

ಆರ್.ಎಂ.ವೀರಭದ್ರಯ್ಯನವರು ಸುಖಸಂಪತ್ ಪಿಕ್ಚರ್ಸ್ ಲಾಂಛನದಡಿ ನಿರ್ದೇಶಿಸಿದ 'ತಿಲೋತ್ತಮೆ'ಗೆ ಪಿ.ಶಾಮಣ್ಣನವರ ಸಂಗೀತವಿತ್ತು. 'ತಿಲೋತ್ತಮೆ' ಚಿತ್ರದ ವಿಶೇಷವೆಂದರೆ ಹಾಡುಗಳು, ಸಂಭಾಷಣೆ ಎರಡೂ ಮೈಸೂರಿನ ಸ್ಟುಡಿಯೋದಲ್ಲೇ ಮಾಡಿದ್ದು. ಇಲ್ಲೊಂದು ರೋಚಕ ಸಂಗತಿಯುಂಟು. ಮದರಾಸಿಗೇಕೆ ಹೋಗಬೇಕು. ನಾನೇ ಮಾತು, ಹಾಡು ಇಲ್ಲೇ ಮಾಡಿಕೊಡುತ್ತೇನೆ ಎಂದರು ಅಲ್ಲಿಯ ಸೌಂಡ್ ರಿಕಾರ್ಡಿಸ್ಟ್ ಆಗಿದ್ದ ವಿ.ಸಿ.ಶೇಖರ್. ಹಾಗೆ ಮಾಡಿಯೂಬಿಟ್ಟರು. ಸ್ಟುಡಿಯೋದಲ್ಲಿದ್ದ ಆರ್.ಸಿ.ಎ. ಮೆಷಿನ್ ಅನ್ನು ಬಿಚ್ಚಿ ಸಂಭಾಷಣೆಗೊಂದು ಟ್ರ್ಯಾಕ್, ಹಾಡುಗಳಿಗೆ ಬೇರೆ ಟ್ರ್ಯಾಕ್ ಮಾಡಿಕೊಂಡಿದ್ದರು. ಅದೇನೋ ಆಗಬಾರದ್ದು ಆಗಿಹೋಗಿದೆ ಎಂಬ ಅಪಾದನೆ ಆತನ ಮೇಲೆ. ಎಂ.ವಿ.ಎಸ್.ಅಯ್ಯಂಗಾರ್ ಅವರೆಲ್ಲ ಆರ್.ಸಿ.ಎ. ಕಂಪನಿಗೆ ದೂರು ಒಯ್ದರು. ಮದರಾಸಿನಿಂದ ನಾಗರಾಜ್ ಎಂಬ ಧ್ವನಿ ತಜ್ಞರು ಬಂದರು. ಶೇಖರ್ 'ಕ್ಷಮಿಸಿ, ತಪ್ಪಾಯಿತು' ಅಂತ ಕೇಳಿಕೊಂಡರು. ನಾಗರಾಜ್ ಅವರು ಎಂ.ಜಿ.ರಾಮಚಂದ್ರನ್ ಅವರ ಸತ್ಯ ಸ್ಟುಡಿಯೋಗೆ ಈ ಪ್ರತಿಭಾವಂತನನ್ನು ತಗೊಳ್ಳಿ ಅಂತ ಶಿಫಾರಸ್ಸು

ಮಾಡಿವರು. ಸತ್ಯ ಸ್ಟುಡಿಯೋದಲ್ಲಿ ಆಗ ಮ್ಯಾನೇಜರ್ ಆಗಿದ್ದ ಗೋವಿಂದಸ್ವಾಮಿ ಅವರು ಮುಂದೆ ಬೆಂಗಳೂರಿನ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಬಹಳ ಕಾಲ ಧ್ವನಿಗ್ರಾಹಕರಾಗಿ ಶ್ರಮಿಸಿದರು.

ದೇವಲೋಕದ ಅಪ್ಸರೆಯರಲ್ಲಿ ಒಬ್ಬಳಾದ ತಿಲೋತ್ತಮೆಯ ಕುರಿತ ಈ ಚಿತ್ರದಲ್ಲಿ ಕೊಟ್ಟೂರಪ್ಪ ನಾರದನ ಪಾತ್ರದಲ್ಲಿಯೂ, ನಾಯಕಿಯಾಗಿ ಜಯಶ್ರೀಯವರೂ, ಸುರೇಂದ್ರನಾಥ್ ಪಂಡಿತ್, ವೀರಭದ್ರಯ್ಯ, ಸೀತಾರಾಮ್, ವಿಶ್ವೇಶ್ವರಯ್ಯ, ಸ್ಯಾಂಡೋ, ಜಯದೇವ್ ಮೊದಲಾದವರು ಅಭಿನಯಿಸಿದರು.

೧೯೪೮ರಲ್ಲಿ ತೆರೆಕಂಡ 'ಭಾರತಿ' ಚಿತ್ರ ಬೆಂಗಳೂರಿನ ಸ್ವಸ್ತಿಕ್ ಚಿತ್ರಮಂದಿರದಲ್ಲಿ ೧೬ ವಾರ ಪ್ರದರ್ಶನವಾಗಿತ್ತು. ಅದಾದ ನಂತರ ಪುರಾಣ ಕಥೆಯೊಂದನ್ನು ಕೈಗೆತ್ತಿಕೊಳ್ಳುವ ನಿರ್ಧಾರವಾಯಿತು. 'ಭಾರತಿ' ಚಿತ್ರದ ಪಾಲುದಾರರು ಇದಕ್ಕೆ ಅವರ ಕೈಲಿದ್ದ ೨೦,೦೦೦ ರೂಪಾಯಿಗಳನ್ನು ಹಾಕಿದರು. ನಿರ್ದೇಶಕ ಆರ್.ಎಂ.ವೀರಭದ್ರಯ್ಯನವರು ೨೧,೦೦೦ ರೂಪಾಯಿ ಸೇರಿಸಿದರು. ಈ ಬಂಡವಾಳದಲ್ಲೇ 'ತಿಲೋತ್ತಮೆ' ತಯಾರಾಯಿತು ಎಂದು ವೀರಭದ್ರಯ್ಯನವರು ಹೇಳುತ್ತಾರೆ.

೧೯೫೧ರಲ್ಲಿ ನಾಸಿಕ್ ಅಧಿವೇಶನದ ಅಧ್ಯಕ್ಷ ಭಾಷಣದಲ್ಲಿ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಪುರುಷೋತ್ತಮದಾಸ್ ಟಂಡನ್ ಅವರು "ಭಾರತೀಯ ಚಿತ್ರಗಳು ಹಣದ ದುರುಪಯೋಗದ ನಿದರ್ಶನ. ಕಲೆಯು ಇಂದ್ರಿಯ ಚಾಪಲ್ಯ ತೀರಿಸುವುದಕ್ಕಲ್ಲ, ಅದು ಮನಸ್ಸು, ಹೃದಯಗಳ ಮೇಲೆ ಉತ್ತಮ ಪರಿಣಾಮ ಮೂಡುವುದಕ್ಕೆ..." ಎಂದದ್ದು ತೀವ್ರವಾದ ವಿರೋಧಕ್ಕೆ ಒಳಗಾಯಿತು. ಭಾರತದಲ್ಲಿ ಜನತೆಗೆ ಮನರಂಜನೆಯೆಂದರೆ ಚಲನಚಿತ್ರಗಳೇ ಆಧಾರ. ಹೀಗಿರುವಾಗ ಟಂಡನ್‌ರ ಟೀಕೆ ಕಟುವಾಯಿತು. ಮನಸ್ಸು ಮತ್ತು ಹೃದಯದ ಮೇಲೆ ಪರಿಣಾಮ ಬೀರಬೇಕಾದರೆ ಬಾಹ್ಯೇಂದ್ರಿಯಗಳಿಗೂ ಅದು ಆಕರ್ಷಣೆಯಾಗಿರಬೇಕು. ಅನಂತರವೇ ಅದು ಅಂತರಂಗದ ಮೇಲೆ ಪರಿಣಾಮ ಬೀರುತ್ತದೆ. ನಮ್ಮ ಚಲನಚಿತ್ರಗಳಲ್ಲಿ ಪೌರಾಣಿಕ ಚಿತ್ರಗಳೇ ಅಧಿಕವಾಗಿವೆ. ಈ ಚಿತ್ರಗಳಲ್ಲಿಯ ಪ್ರಧಾನ ಅಂಶ ನೀತಿಯೇ ಆಗಿದೆ. ಇಂಥವನ್ನೆಲ್ಲ ಗಮನಿಸದೇ ಮಾತನಾಡುವುದು ಸರಿಯಲ್ಲ ಎಂಬುದು ಮತ್ತೊಂದು ವಾದ. ದೊಡ್ಡವರು, ಅಂಥವರ ಮಾತಿಗೆ ಲೋಕವೇ ಮೈಯೆಲ್ಲ ಕಿವಿಯಾಗಿ ಕೂತು ಕೇಳುತ್ತದೆ. ಇಂಥ ಮಾಧ್ಯಮಗಳ ಬಗ್ಗೆ ಧೋರಣೆಯ ಮಾತಾಡಿದರೆ ಅದೇ ಜನ-ಮನದಲ್ಲಿ ಉಳಿದು ಹೋಗುತ್ತದೆ. ಆ ಪ್ರಸಂಗ ಹೀಗಿದೆ :

ಚಲನಚಿತ್ರ ಉದ್ಯಮಕ್ಕೆ ವಿಶ್ವಮಾನ್ಯತೆ ದೊರೆತಿದ್ದರೂ ಭಾರತದಲ್ಲಿ ಮಾತ್ರ ಆರಂಭದ ದಿನಗಳಿಂದಲೂ ಅದಕ್ಕೆ ಆಳರಸರಿಂದ ಇಲ್ಲವೆ ಮುಂದೆ ಅಧಿಕಾರಕ್ಕೆ ಬಂದ ಗಾಂಧಿವಾದಿಗಳಿಂದಲೂ ಸೂಕ್ತ ಮಾನ್ಯತೆ ದೊರೆಯಲಿಲ್ಲ. ಬ್ರಿಟಿಷರ ಕಾಲದಲ್ಲಿ ಅದು ಎಲ್ಲ ದೇಶೀಯ ಉದ್ಯಮಗಳಂತೆ ಅವರ ಶೋಷಣೆಗೆ ಗುರಿಯಾಯಿತು. ಆದರೆ ಸ್ವಾತಂತ್ರ್ಯಪೂರ್ವ ಹಾಗೂ ಅನಂತರ ಅಧಿಕಾರಕ್ಕೆ ಬಂದ ಕಾಂಗ್ರೆಸ್ಸಿಗರಿಗೆ ಚಿತ್ರೋದ್ಯಮದ ಬಗೆಗೆ ಒಳ್ಳೆಯ ಅಭಿಪ್ರಾಯವೇ ಇರಲಿಲ್ಲ.

ಚಲನಚಿತ್ರರಂಗ ಗೌರವದ ಸ್ಥಾನ ಪಡೆದುಕೊಳ್ಳಲು ಸ್ವಯಂಕೃತಾಪರಾಧ ಒಂದೆಡೆಯಾದರೆ, ದೇಶದ ಅತಿ ದೊಡ್ಡ ವ್ಯಕ್ತಿಯಾದ ಮಹಾತ್ಮ ಗಾಂಧಿಯವರು ಆರಂಭದಿಂದಲೇ ಈ ಮಾಧ್ಯಮದ ಬಗ್ಗೆ ತೋರಿದ ನಿರ್ಲಕ್ಷ್ಯ ಕೂಡಾ ಸಮಾಜದ ಒಂದು ವರ್ಗ ಚಲನಚಿತ್ರ ಮಾಧ್ಯಮವನ್ನು ತನ್ನ ತೆಕ್ಕೆಯೊಳಗೆ ತೆಗೆದುಕೊಳ್ಳದಿರಲು ಕಾರಣ ಎಂದು ಊಹಿಸಬಹುದಾಗಿದೆ. ಗಾಂಧೀಜಿಯವರ ಈ ನಿಲುವನ್ನು ವಿರೋಧಿಸಿ ಕೆ.ಎ.ಅಬ್ಬಾಸ್ ಅವರು ಗಾಂಧೀಜಿಯವರಿಗೆ ಪತ್ರ ಬರೆದರು. ಆ ಪತ್ರದ ಆಯ್ದ ಕೆಲವು ಸಾಲುಗಳು ಹೀಗಿವೆ : "...ಭಾರತದ ಮಕ್ಕಳಾದ ನಾವು ಸಮಾಧಾನ ಮತ್ತು ಮಾರ್ಗದರ್ಶನಕ್ಕೆ ತಂದೆಯಂತೆ ಭಾವಿಸಿ, ಪ್ರೀತಿಸಿ, ಗೌರವಿಸುವ ನಿಮ್ಮ ಬಳಿಯಲ್ಲದೆ ಬೇರೆಲ್ಲಿಗೆ ಹೋಗಬೇಕು. ಸಿನಿಮಾ ಕುರಿತಂತೆ ಇತ್ತೀಚೆಗೆ ನಿಮ್ಮ ಹೇಳಿಕೆಗಳಲ್ಲಿ ಸ್ವಲ್ಪ ಅವಹೇಳನಕಾರಿ ಧೋರಣೆ ನೋಡಿ ಆಶ್ಚರ್ಯ ಹಾಗೂ ನೋವು ಉಂಟಾಗಿದೆ. ಮುಂಬಯಿನ ಪತ್ರಿಕಾ ಸಂಪಾದಕರೊಬ್ಬರು 'ಭಾರತೀಯ ಚಲನಚಿತ್ರ ಕಾಂಗ್ರೆಸ್'ನ ಸಂದರ್ಭದಲ್ಲಿ ಸಂದೇಶವೊಂದನ್ನು ಕೇಳಿದಾಗ 'ಚಲನಚಿತ್ರಗಳನ್ನು ನೋಡುವುದಿಲ್ಲ' ಎಂದಿದ್ದೀರಿ. ಈಚೆಗಿನ ಒಂದು ಹೇಳಿಕೆಯಲ್ಲಿ ಸಿನಿಮಾವನ್ನು ಜೂಜು, ಸಟ್ಟಾ, ಕುದುರೆ ರೇಸು ಮೊದಲಾದ ದುಶ್ಚಟಗಳೊಂದಿಗೆ ಸೇರಿಸಿಬಿಟ್ಟಿದ್ದೀರಿ. ಮತ್ತು 'ಜಾತಿಯಿಂದ ಬಹಿಷ್ಕಾರಗೊಳ್ಳುವ ಭಯ'ದಿಂದಾಗಿ ಅದರ ತಂಟೆಗೆ ಹೋಗುವುದಿಲ್ಲ ಎಂದಿದ್ದೀರಿ. ನಮ್ಮ ದೇಶದಲ್ಲಿ - ವಿಶ್ವದಲ್ಲೆ ಎಂದೂ ಹೇಳಬಹುದು - ನೀವು ಹೊಂದಿರುವ ಬಹಳ ಮುಖ್ಯ ಸ್ಥಾನದ ಹಿನ್ನೆಲೆಯಲ್ಲಿ ನಿಮ್ಮ ಮಾತಿಗೆ ಲಕ್ಷಾಂತರ ಜನ ಬಹಳ ಬೆಲೆ ಕೊಡುತ್ತಾರೆ. ನಿಮ್ಮ ಹೇಳಿಕೆಯಿಂದ ನಮ್ಮ ಬಹು ಸಂಖ್ಯೆಯ ಸಂಪ್ರದಾಯಸ್ಥ ಜನರಿಗೆ ಸಿನಿಮಾ ಬಗ್ಗೆ ಇರುವ ಪ್ರತಿಕೂಲ ಧೋರಣೆ ಇನ್ನಷ್ಟು ದೃಢವಾಗುವುದರಲ್ಲಿ ಸಂಶಯವಿಲ್ಲ. 'ಮಹಾತ್ಮರವರ ಇದನ್ನು ಒಪ್ಪುವುದಿಲ್ಲವೆಂದರೆ ಇದರಲ್ಲಿ ಏನೋ ಕೆಟ್ಟದಿರಲೇಬೇಕು' ಎಂದು ತಿಳಿಯಬಹುದು. ಜಗತ್ತಿಗೆ ಅತ್ಯಂತ ಉಪಯುಕ್ತ ಆವಿಷ್ಕಾರವೊಂದು ತಿರಸ್ಕಾರಕ್ಕೊಳಗಾಗಬಹುದು ಅಥವಾ ಅದಕ್ಕಿಂತ ದುರಂತವೆಂದರೆ ಅವಿವೇಕಿ ಜನಗಳ ದುರ್ಬಳಕೆಗೆ ಒದಗಿ ಬರಬಹುದು..."

ಚಿತ್ರರಂಗದ ಸ್ಥಿತಿ ಅಬ್ಬಾಸ್ ಅವರ ಮುನ್ನೋಟದ ದಿಕ್ಕಿನಲ್ಲೇ ನಡೆದದ್ದೂ ಹೌದು. ಅಲ್ಲೊಂದು ಇಲ್ಲೊಂದು ಸೆಳೆಮಿಂಚುಗಳು, ಈ ಬಗ್ಗೆ ಶಾಸ್ತ್ರೀಯ ವಿದ್ಯಾಭ್ಯಾಸ ಇತ್ಯಾದಿಗಳು ಆದ ಮೇಲೆ ಕೊಂಚಮಟ್ಟಿಗೆ ಪರಿಸ್ಥಿತಿ ಬದಲಾಗಿರಬಹುದು, ಅಷ್ಟೇ.

ಮಹಾತ್ಮರವರೇ ಸಿನಿಮಾವನ್ನು ಒಪ್ಪುವುದಿಲ್ಲ ಎಂದ ಮೇಲೆ ಸಂಪ್ರದಾಯಸ್ಥ ಧೋರಣೆಯ ಕಾಂಗ್ರೆಸ್ ಭಕ್ತರಿಗೆ ಅದು ವೇದವಾಕ್ಯವಾಯಿತು. ಸಿನಿಮಾ ಕೆಟ್ಟದೆಂದು ಹಣೆಪಟ್ಟಿ ಕಟ್ಟಿಬಿಟ್ಟರು. ಆದರೆ ಈ ಪಾಪದ ಉದ್ಯಮದ ಮೇಲೆ ತೆರಿಗೆ ಹೊರೆ ಹೆಚ್ಚಿಸಿದರು. ಕೆಟ್ಟ ಉದ್ಯಮ ಬೇಡ, ಆದರೆ ಅದರ ಹಣ ಬೇಕು.

ಚಲನಚಿತ್ರ ಮಾಧ್ಯಮ ಜನಸಾಮಾನ್ಯರಿಗೆ, ಶ್ರಮಜೀವಿಗಳಿಗೆ ಅಲ್ಪ ವೆಚ್ಚದಲ್ಲಿ ಮನರಂಜನೆ ನೀಡುವ ಸಮೂಹ ಮಾಧ್ಯಮವೆನ್ನುವುದು ಗಮನಕ್ಕೆ ಬರಲಿಲ್ಲ. ಸಾಮಾಜಿಕ ಸುಧಾರಣೆಗೆ ಈ ಮಾಧ್ಯಮ ಅತ್ಯಂತ ಉಪಯುಕ್ತ ಎನ್ನುವ ಅಂಶವೂ ಅವರಿಗೆ ಮನವರಿಕೆ ಆಗಲಿಲ್ಲ.

೧೯೫೨ರಲ್ಲಿ ವಾರ್ತಾ ಮತ್ತು ಪ್ರಸಾರ ಖಾತೆಯ ಸಚಿವರಾಗಿ ಬಂದ ಬಿ.ವಿ.ಕೇಸ್ಕರ್ ಸುಸಂಸ್ಕೃತ ವ್ಯಕ್ತಿ. ಸಂಗೀತದಲ್ಲಿ ಅಭಿರುಚಿ ಇದ್ದ ಗಾಂಧೀವಾದಿ. ಸರ್ಕಾರಿ ಸ್ವಾಮ್ಯದಲ್ಲಿ ಇದ್ದ 'ಆಲ್ ಇಂಡಿಯಾ ರೇಡಿಯೋ'ದಲ್ಲಿ ಪ್ರೇಮಗೀತೆಗಳು, ಪ್ರಣಯ ಯುಗಳ ಗೀತೆಗಳು ಇರುವ ಸಿನಿಮಾ ಹಾಡುಗಳ ಪ್ರಸಾರಕ್ಕೆ ಶೇಕಡ ೧೦ರಷ್ಟು ಸಮಯ ನಿಗದಿಪಡಿಸಿದರು. ಮುಂದಿನ ೧೮ ತಿಂಗಳಲ್ಲಿ ಸಂಪೂರ್ಣವಾಗಿ ಸಿನಿಮಾ ಹಾಡುಗಳನ್ನು ಹೊರ ಹಾಕಲು ಆಜ್ಞಾಪಿಸಿದರು. ಆದರೆ ಸಿನಿಮಾದಲ್ಲಿ ಉಪಯೋಗಿಸುವ ಧಾರ್ಮಿಕ ಭಕ್ತಿರಸ ಪಾತ್ರದ ಹಾಡುಗಳಿಗೂ ಜಾನಪದ ಗೀತೆಗಳಿಗೂ ಅನ್ವಯಿಸುವುದಿಲ್ಲವೆಂಬ ನಿಲುವನ್ನು ತಳೆದರು.

ಈ ನಿರ್ಣಯದ ಪರಿಣಾಮವನ್ನು ಸಚಿವಾಲಯ ಊಹಿಸಲಿಲ್ಲ. ಆದರೆ ಶ್ರೋತೃಗಳು ಹೆಚ್ಚಿನ ಸಂಖ್ಯೆಯಲ್ಲಿ ರೇಡಿಯೋ ಸಿಲೋನ್‌ಗೆ ತಮ್ಮ ಕಿವಿ ನೀಡಿದರು. ಅವರೂ ಸಹ ಈ ರೀತಿ ಹಾಡುಗಳ ಪ್ರಸಾರ ಹೆಚ್ಚಿಸಿ, ಭಾರತೀಯ ಗ್ರಾಹಕ ವಸ್ತುಗಳ ಜಾಹಿರಾತುಗಳನ್ನು ಹೆಚ್ಚು ಹೆಚ್ಚು ಕೈಗೊಂಡು ತಮ್ಮ ಆದಾಯವನ್ನು ಹೆಚ್ಚಿಸಿಕೊಂಡರು. ಈ ರೀತಿ ಜಾಹಿರಾತು ನೀಡುವ ಸಂಸ್ಥೆಗಳೂ ಭಾರತ ಸೀಮೆಯಲ್ಲೇ ಇದ್ದವು. ಈ ಆದಾಯ ಸೋರಿಕೆ ತಡೆಯಲು ಕಾನೂನುಗಳು ಇರಲಿಲ್ಲ. ಹೀಗಾಗಿ ಆ ಪ್ರಯತ್ನಗಳನ್ನು ನಿಲ್ಲಿಸಲಾಯಿತು.

ಇದರಿಂದಾಗಿ ಸಿನಿಮಾ ಹಾಡುಗಳ ಮೇಲಿನ ನಿರ್ಬಂಧವನ್ನು ತುಸುಮಟ್ಟಿಗೆ ೧೯೫೫ರಲ್ಲಿ ಕಡಿಮೆ ಮಾಡಲಾಯಿತು. ಕೊನೆಗೆ ಅಕ್ಟೋಬರ್ ೩, ೧೯೫೭ರಂದು 'ವಿವಿಧ ಭಾರತಿ' ವಿಭಾಗದಲ್ಲಿ ಸಿನಿಮಾ ಹಾಡುಗಳನ್ನು ಹೆಚ್ಚು ಒತ್ತು ಕೊಟ್ಟು ಬಿತ್ತರಿಸಲಾಯಿತು. ಆದರೂ ಆಗಬೇಕಾದ ಅನಾಹುತ ಆಗಿಯೇಬಿಟ್ಟಿತ್ತು. ಅದನ್ನು ಸರಿಪಡಿಸಲು ಪೂರ್ಣ ಸಾಧ್ಯವಾಗಲೇ ಇಲ್ಲ. ಸಿಲೋನ್ ರೇಡಿಯೋ ರುಚಿ ಕಂಡ ಶ್ರೋತೃಗಳು ಇತ್ತ ಕಡೆ ನಿರೀಕ್ಷಿಸಿದ ಸಂಖ್ಯೆಯಲ್ಲಿ ಮರಳಿ ಬರಲಿಲ್ಲ. ಮುನ್ನೋಟಗಳು, ಲೆಕ್ಕಾಚಾರ ಇಲ್ಲದ ತೀರ್ಮಾನಗಳಾದರೆ ಇಂಥ ಆಭಾಸಗಳಾಗುತ್ತವೆ. ಇದಲ್ಲದೆ ಚಿತ್ರಗೀತೆಗಳನ್ನು ಪ್ರಸಾರಮಾಡುವಾಗ ನಿರ್ಮಾಪಕರು, ಸಂಸ್ಥೆ ಮೊದಲಾದ ಯಾವುದೇ ವಿವರಗಳನ್ನು ಕೊಡುತ್ತಿರಲಿಲ್ಲ. ಫಿಲಂ ಫೆಡರೇಶನ್ ಆಫ್ ಇಂಡಿಯಾ ಮತ್ತು ಸರ್ಕಾರದ ನಡುವೆ ನಡೆದ ಮಾತುಕತೆಗಳು ವಿಫಲವಾದವು. ಹಲವು ರೀತಿಯ ವಿರೋಧ ವ್ಯಕ್ತವಾದರೂ ದಿವ್ಯ ನಿರ್ಲಕ್ಷ್ಯ ತೋರಿತು ಸರ್ಕಾರ.

ಟೆಲಿವಿಷನ್ ಭಾರತ ಪ್ರವೇಶಿಸಿದಾಗ ಭಾರತೀಯ ಚಲನಚಿತ್ರ ಉದ್ಯಮ ವಲಯದಲ್ಲಿ ಗಾಬರಿ, ಪ್ರಳಯವಾಗಬಹುದೇನೋ ಎಂಬ ಆತಂಕ. ಆದರೆ ಇಂದಿನ ವಸ್ತುಸ್ಥಿತಿಯೇ ಬೇರೆ. ವಿವಿಧ ಛಾನಲ್‌ಗಳ ಆಗಮನದಿಂದಾಗಿ ಚಲನಚಿತ್ರ, ಚಲನಚಿತ್ರದ ಹಾಡುಗಳು ಹಾಗೂ ಚಲನಚಿತ್ರಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳೇ ದೂರದರ್ಶನವೂ ಸೇರಿದಂತೆ ಎಲ್ಲ ಛಾನಲ್‌ಗಳ ಜೀವನಾಧಾರವಾಗಿದೆ.

೧೯೫೧ರಲ್ಲಿ ಬಿ.ಎಸ್.ರಂಗಾ ಅವರು ಹಿಂದಿಯಲ್ಲಿ ನ್ಯೂ ಥಿಯೇಟರ್ಸ್‌ನವರಿಗಾಗಿ 'ಛೋಟಾ ಭಾಯ್' ಎಂಬ ಚಿತ್ರ ತಯಾರಿಸಿದರು. ಅದು ವರ್ಷದ ಅತ್ಯುತ್ತಮ ಚಿತ್ರಗಳಲ್ಲಿ ಒಂದೆಂದು ಪರಿಗಣಿತವಾಯಿತು. ವಿಶೇಷ ಸಂಗತಿಯೆಂದರೆ ಈ ಚಿತ್ರವನ್ನು



(ಚಿತ್ರ ೫) ಮೈಸೂರಿನ ಮಹಾತ್ಮಾ ಪಿಕ್ಚರ್ಸ್ ಸಂಸ್ಥೆಯ ಒಂದು ಅಪೂರ್ವ ಸ್ಮೃತಿ ಚಿತ್ರ. 'ಶ್ರೀನಿವಾಸ ಕಲ್ಯಾಣ' (೧೯೫೨) ಚಿತ್ರೀಕರಣ ಸಂದರ್ಭದಲ್ಲಿ ತೆಗೆಯಲಾದ ಈ ಚಿತ್ರದಲ್ಲಿ ಮೊದಲನೇ ಸಾಲಿನಲ್ಲಿ ಕುಳಿತಿರುವವರು (ಎಡದಿಂದ ಬಲಕ್ಕೆ) ಕಲಾವಿದ ಶ್ರೀನಿವಾಸರಾವ್, ವಿಠಲಾಚಾರ್ಯ (ಮೂರನೆಯವರು), ಡಿ.ಶಂಕರ್‌ಸಿಂಗ್, ಅಮೀರ್‌ಬಾಯಿ ಕರ್ನಾಟಕಿ, ಪಿ.ಶಾಮಣ್ಣ, ಎಂ.ಎ.ಎನ್.ಐಯ್ಯಂಗಾರ್ (ಸೌಂಡ್ ಇಂಜಿನಿಯರ್), ಹುಣಸೂರು ಕೃಷ್ಣಮೂರ್ತಿ, ಚಿತ್ರ ನಿರ್ಮಾಪಕ ನಾರಾಯಣಸಿಂಗ್. ನೆಲದ ಮೇಲೆ ಕುಳಿತಿರುವವರು ಕಲಾವಿದ ಸುಬ್ಬಣ್ಣ ಮತ್ತು ಗಾಯಕ ನಾಗೇಂದ್ರ. ಹಿಂದಿನ ಸಾಲುಗಳಲ್ಲಿ ನಿಂತವರೆಲ್ಲ ವಾದ್ಯಗೋಷ್ಠಿಯ ಕಲಾವಿದರು.

ಪಾಕಿಸ್ತಾನದಲ್ಲಿ ಪ್ರದರ್ಶಿಸಲು ಅನುಮತಿ ಕೊಡದೆ ನಿಷೇಧಿಸಿದರು. ಅದಕ್ಕೆ ಚಿತ್ರದ ಕಥೆ, ಅಂತಿಮ ತಿರುವು ಕಾರಣ. ಅಣ್ಣ-ತಮ್ಮ ಇರುತ್ತಾರೆ. ಜಗಳವಾಡಿಕೊಂಡು ತಮ್ಮನು ಬೇರೆಯಾದ. ಮುಂದೆ ಮನಸ್ಸು ಬದಲಾಯಿಸಿ ಅಣ್ಣ-ತಮ್ಮ ಮತ್ತೆ ಒಂದಾಗುತ್ತಾರೆ ಎಂಬುದು ಚಿತ್ರದ ಕಥೆ.

''ಪಾಕಿಸ್ತಾನದವರಿಗೆ ಅಣ್ಣ-ತಮ್ಮರ ಜಗಳ, ಅವರು ಬೇರೆ ಆಗುವುದರವರೆಗೆ ಅಭ್ಯಂತರವಿಲ್ಲ. ಆದರೆ ಅಂತ್ಯದಲ್ಲಿ ಅವರು ಒಂದಾಗುವ ಭಾಗ ಇಷ್ಟವಾಗಲಿಲ್ಲ. ಅರ್ಥಾತ್ ಭಾರತದ ವಿಭಜನೆಯ ಬಗ್ಗೆ ಆಕ್ಷೇಪವಿಲ್ಲ, ಮತ್ತೆ ಒಂದಾಗುವುದು ಅಗತ್ಯವಿಲ್ಲ. ಅಂಥ ಭಾವನೆ ಪ್ರಚೋದಿಸುವ ಚಿತ್ರ ಪ್ರದರ್ಶಿಸಲು ಅನುಮತಿಯೂ ಇಲ್ಲ''. (ಚಿತ್ರಗುಪ್ತ - ಅಕ್ಟೋಬರ್ ೧೫, ೧೯೫೧)

ಬಿ.ಎಸ್.ರಂಗಾ ಈ ಚಿತ್ರವನ್ನು ಕನ್ನಡ ಮತ್ತು ತೆಲುಗಿನಲ್ಲೂ ತರಲು ಪ್ರಯತ್ನಿಸಿದರು. ಮುಂದೆ ಕಾರಣಾಂತರದಿಂದ ಕನ್ನಡ ಚಿತ್ರ ನಿರ್ಮಾಣ ಆಗಲಿಲ್ಲವೆಂದು ತಿಳಿದುಬರುತ್ತದೆ.

೧೯೫೨ರಲ್ಲಿ ಬಿಡುಗಡೆಯಾದ ಮಹಾತ್ಮ ಪಿಕ್ಚರ್ಸ್ ಅವರ 'ಶ್ರೀನಿವಾಸ ಕಲ್ಯಾಣ' ಚಿತ್ರದಲ್ಲಿ ವಿಮಲಾನಂದದಾಸ್, ಪ್ರತಿಮಾದೇವಿ, ಹರಿಣಿ, ಅಮೀರ್‌ಬಾಯಿ ಕರ್ನಾಟಕಿ ಮುಂತಾದವರು ಅಭಿನಯಿಸಿದ್ದರು. ಅಮೀರ್‌ಬಾಯಿ ಕರ್ನಾಟಕಿ ಬಕುಳಾದೇವಿ ಪಾತ್ರದಲ್ಲಿ ಅಭಿನಯಿಸಿದ್ದರು. ಹಾಡಿದ್ದರು ಕೂಡ. ವಿಠಲಾಚಾರ್ಯರು ನಿರ್ದೇಶಿಸಿದ ಈ ಚಿತ್ರಕ್ಕೆ ಪಿ.ಶಾಮಣ್ಣ ಸಂಗೀತ ನೀಡಿದ್ದರು. ಪಿ.ಶಾಮಣ್ಣನವರ ಸಂಗೀತ ಪ್ರತಿಭೆಯಿಂದ ಆಕರ್ಷಿತರಾದ ಅಮೀರ್‌ಬಾಯಿ ಕರ್ನಾಟಕಿ ಶಾಮಣ್ಣ ಅವರನ್ನು ತಮ್ಮೊಡನೆ ಮುಂಬಯಿಗೆ ಬರಬೇಕೆಂದು ಪ್ರಾರ್ಥಿಸಿದರಂತೆ. ಆದರೆ ಶಾಮಣ್ಣನವರು ಮೈಸೂರಿನಲ್ಲೇ ಉಳಿದು ಸಂಗೀತ ಸೇವೆ ಮಾಡುವ ಆಶಯ ವ್ಯಕ್ತಪಡಿಸಿದರೆಂದು ಪ್ರತಿಮಾದೇವಿ ಹೇಳುತ್ತಾರೆ. ಚಿತ್ರ ಜನಾದರಣೆ ಗಳಿಸುವಲ್ಲಿ ವಿಫಲವಾಯಿತು.

''...ಶ್ರೀನಿವಾಸನು ತಿರುಪತಿಯಲ್ಲಿ ನೆಲೆಸಿದೊಡನೆ ಶ್ರೀನಿವಾಸ ಕಲ್ಯಾಣದ ಕತೆ ಮುಗಿಯುತ್ತದೆ. ಆದರೆ ಅಲ್ಲಿಂದ ಮುಂದಕ್ಕೆ ಅರ್ಥವಿಲ್ಲದೆ ಸಾವಿರಾರು ಅಡಿಗಳಷ್ಟು ಲಂಬಿಸಲಾಗಿದೆ. ಹೊಸ ಪಾತ್ರಗಳೂ, ದೃಶ್ಯಗಳೂ ವ್ಯರ್ಥವಾಗಿ ಜೋಡಿಸಿದಂತಿದೆ. ಇದರಿಂದ ಒಳ್ಳೆಯ ಚಿತ್ರಕ್ಕೆ ಅಗತ್ಯವಾದ ಐಕ್ಯತೆ ಇಲ್ಲವಾಗಿದೆ...'' (ಪತ್ರಿಕೆ) ಎಂಬ ವಿಮರ್ಶೆಯ ಮಾತು ಚಿತ್ರದ ಬಗ್ಗೆ ಒಂದು ಅಭಿಪ್ರಾಯವನ್ನು ಕೊಡುತ್ತದೆ.

ಈ ಚಿತ್ರದಲ್ಲಿ ಪುಟ್ಟದೊಂದು ಪಾತ್ರವಹಿಸಿದ್ದ ಮುತ್ತುರಾಜ್ ಮುಂದೆ ಪ್ರಸಿದ್ಧ ಕಲಾವಿದ ರಾಜಕುಮಾರ್ ಆದರು.

೧೯೫೩ರಲ್ಲಿ ನವಜ್ಯೋತಿ ಸ್ಟುಡಿಯೋದಲ್ಲಿ ತಯಾರಾದ ಇನ್ನೊಂದು ಕನ್ನಡ ಚಿತ್ರ ಮಹಾತ್ಮ ಪಿಕ್ಚರ್ಸ್ ಅವರ 'ದಲ್ಲಾಳಿ'. ಆ ದಿನಗಳಲ್ಲಿ ವಿಪರೀತ ಬಡ್ಡಿ ನೀಡುವ ಆಮಿಷ ಒಡ್ಡಿ ನೂರಾರು ಮಂದಿ ಅಮಾಯಕರ ಹಣವನ್ನು ನುಂಗಿ ಹಾಕಿ ಇಡೀ ಬೆಂಗಳೂರನ್ನು ನಡುಗಿಸಿದ ಗೋಪಾಲರಾಯರ ವ್ಯವಹಾರಗಳನ್ನು ಆಧರಿಸಿ ಹುಣಸೂರು ಕೃಷ್ಣಮೂರ್ತಿ ಅವರು 'ಧರ್ಮ ರತ್ನಾಕರ' ಎಂಬ ಸಾಮಾಜಿಕ ನಾಟಕವನ್ನು ರಚಿಸಿದ್ದರು. ಈ ನಾಟಕ ರಂಗಭೂಮಿಯಲ್ಲಿ ಜನಪ್ರಿಯವಾಗಿತ್ತು. ಇದನ್ನು ಮತ್ತಷ್ಟು ಪರಿಷ್ಕರಿಸಿ ಕೆ.ಹಿರಣ್ಣಯ್ಯನವರು 'ಮಕ್ಮಲ್ ಟೋಪಿ' ಎಂಬ ಶೀರ್ಷಿಕೆಯಲ್ಲಿ ಪ್ರದರ್ಶಿಸುತ್ತಿದ್ದರು. ಇದೇ ಕಥಾವಸ್ತುವನ್ನಾಧರಿಸಿದ ಹುಣಸೂರರೇ ಚಿತ್ರಕತೆ, ಸಂಭಾಷಣೆ, ಹಾಡುಗಳನ್ನು ರಚಿಸಿ, ಡಿ.ಶಂಕರಸಿಂಗ್ ನಿರ್ದೇಶಿಸಿದ ಈ ಚಿತ್ರ ಹೊಸ ಬಗೆಯ ಕಥಾವಸ್ತುವಿನಿಂದ ಕೂಡಿ ಜನಾದರಣೆ ಗಳಿಸಿತು. ಗಲ್ಲಾಪೆಟ್ಟಿಗೆಯಲ್ಲಿ ಭಾರಿ ಯಶಸ್ಸು ಗಳಿಸಿತು.

ದಲ್ಲಾಳಿ ಗೋವಿಂದಯ್ಯನಾಗಿ ಸಂಪತ್, ಸಾಹುಕಾರ್ ಭದ್ರಣ್ಣನ ಪಾತ್ರದಲ್ಲಿ ಎಂ.ಎಸ್.ಮಾಧವರಾವ್ ಮತ್ತು ಶಿರೋಮಣಿ ಪಾತ್ರದಲ್ಲಿ ಮಹಾಬಲರಾವ್ ಇಡೀ ಚಿತ್ರವನ್ನು ಲವಲವಿಕೆಯಿಂದ ನಡೆಸಿಕೊಂಡು ಹೋಗುತ್ತಾರೆ. ಉಳಿದ ಪಾತ್ರಗಳಲ್ಲಿ ಬಿ.ರಾಘವೇಂದ್ರರಾವ್, ಎಂ.ಎಸ್.ಸುಬ್ಬಣ್ಣ, ಹರಿಣಿ, ಪ್ರತಿಮಾದೇವಿ, ಈಶ್ವರಪ್ಪ, ಟಿ.ಎಸ್.ಬಾಲಕೃಷ್ಣ ಮುಂತಾದವರು ಅಭಿನಯಿಸಿದ್ದಾರೆ. ಎಂ.ಸಿ.ವೀರ್ ಅವರ ಕಲಾ ನಿರ್ದೇಶನ, ನೃತ್ಯ ನಿರ್ದೇಶನ, ಎಂಬಾರಯ್ಯ ಮತ್ತು ಬಿ.ಸಿ.ಬಾಬು ಅವರ ಕಲಾ ನಿರ್ದೇಶನ, ಪಿ.ಎಸ್.ಮೂರ್ತಿ ಅವರ ಸಂಕಲನ ಮತ್ತು ಪಿ.ಶಾಮಣ್ಣ ಅವರ ಸಂಗೀತ ಈ ಚಿತ್ರದ ಇತರ ಅಂಶಗಳು. ಅಮೀರ್‌ಬಾಯಿ ಕರ್ನಾಟಕಿ, ಸರೋಜ, ರಾಜ ಮತ್ತು

ಹುಣಸೂರರರೂ ಹಾಡುಗಳನ್ನು ಹಾಡಿದ್ದಾರೆ. ಆಧುನಿಕ ಬೆಡಗಿಯರನ್ನು ವಿಡಂಬಿಸುವ 'ಮುಂಜಾನೆ ಮುಂಗೈ ತನಕ, ಮಧ್ಯಾಹ್ನ ಮೊಣಕೈಗೆ, ಮುಸ್ಸಂಜೆಗೆ ಭುಜಕ್ಕೇರಿದ್ದು ರಾತ್ರಿ ಎಲ್ಲಿ ಹೋಯ್ತು ಹರಹರಾ ಶ್ರೀ ಚೆನ್ನ ಸೋಮೇಶ್ವರಾ...' ಎಂಬ ಗೀತೆಯೊಂದು ಹಾಗೂ ಅತ್ಯಂತ ಕಷ್ಟದಲ್ಲಿರುವ ನಾಯಕ (ಮೇಕಪ್ ಸುಬ್ಬಣ್ಣ) ನ ಬಗ್ಗೆ 'ವಿಧಿ'ಯನ್ನು ಕುರಿತು ಹಾಡುವ ಹಿನ್ನೆಲೆ ಗಾಯನವೂ ತುಂಬಾ ಜನಪ್ರಿಯವಾಗಿದ್ದವು. ಚಿತ್ರಕ್ಕೆ ಎಂ.ಎಸ್.ಮಣಿ ಮತ್ತು ದೊರೆ ಛಾಯಾಗ್ರಹಣ ಮಾಡಿದ್ದರು.

ತಾಂತ್ರಿಕವಾಗಿ ಚಿತ್ರದಲ್ಲಿ ವಿಶೇಷವೇನಿಲ್ಲವಾದರೂ ಹುಣಸೂರರ ಚುರುಕಾದ ಸಂಭಾಷಣೆಗಳು ಮತ್ತು ಮುಖ್ಯ ಕಲಾವಿದರ ಲವಲವಿಕೆಯ ಅಭಿನಯ ಚಿತ್ರವನ್ನು ಸಹ್ಯವಾಗಿಸಿತ್ತು. ಹಾಡುಗಳು ಯಥಾ ಪ್ರಕಾರ ಹಿಂದಿ ಚಿತ್ರಗೀತೆಗಳ ಅನುಕರಣೆ.


(ಚಿತ್ರ ೬) 'ದಲ್ಲಾಳಿ' ಚಿತ್ರದಲ್ಲಿ ಪ್ರತಿಮಾದೇವಿ

ಈ ಅವಧಿಯಲ್ಲಿ ಕನ್ನಡ ಚಿತ್ರರಂಗದ ಏಳು-ಬೀಳುಗಳನ್ನು ಕಂಡು ಹಿರಿಯ ಚಿತ್ರೋದ್ಯಮಿ ಬಿ.ಎಸ್.ರಂಗಾ ಅವರು ಹೀಗೆ ಹೇಳುತ್ತಾರೆ : "ಅತ್ಯಂತ ಶ್ರೀಮಂತವಾಗಿ ತಯಾರಾದ ಇತರ ಭಾಷಾ ಚಿತ್ರಗಳ ಜೊತೆ ಪೈಪೋಟಿ ಇದೆ. ಅವರೆ ಅಷ್ಟು ಖರ್ಚು ಮಾಡಿ ಚಿತ್ರ ತೆಗೆದು ಹಿಂತಿರುಗಿ ಪಡೆಯುವಂಥ ದೊಡ್ಡ ಮಾರುಕಟ್ಟೆ ಕನ್ನಡಕ್ಕಿಲ್ಲ. ಬೇರಾವ ಪ್ರದೇಶದಲ್ಲೂ ಕನ್ನಡ ಚಿತ್ರಗಳು ಪ್ರದರ್ಶಿತವಾಗುತ್ತಿಲ್ಲ. ಇವು ಸರ್ವಾದರಣೀಯವಾಗಬೇಕಾದರೆ ಕನ್ನಡ ಚಿತ್ರಗಳಿಗೆ ಆರಿಸುವ ಕಥಾವಸ್ತು ದಕ್ಷಿಣ ಭಾರತಕ್ಕೇ ಒಪ್ಪುವಂತಿರಬೇಕು. ವಸ್ತು ಮತ್ತು ತಯಾರಿಕಾ ವಿಶೇಷಗಳಿಗಾಗಿ ಅವು ಇತರ ಭಾಷೆಗಳಿಗೆ 'ಡಬ್' ಆಗುವಂತಿರಬೇಕು. ಎಲ್ಲ ವರ್ಗಕ್ಕೂ ಹಿಡಿಸುವಂತಹ ಕಥೆ ಇರಬೇಕು. ಈ ದೃಷ್ಟಿಯಿಂದ ಸಾಮಾಜಿಕ ಚಿತ್ರ ಅಪಾಯಕಾರಿ.

"ಮಾರುಕಟ್ಟೆ ಶುದ್ಧವಾಗಿಲ್ಲ. ಪರಿಶುದ್ಧ ವ್ಯವಹಾರ ಬಹಳ ಮುಖ್ಯ. ಏಕಸ್ವಾಮ್ಯ ತೊಲಗಿ, ಶುದ್ಧ, ನೇರ ವ್ಯವಹಾರ ಬೇಕು. ತೆಲುಗಿನಷ್ಟೇ ವಿಶಾಲವಾದ ಕನ್ನಡದ ಮಾರುಕಟ್ಟೆ ಈ ಶುದ್ಧತೆಯಿಂದ ಮಾತ್ರ ಚೇತರಿಸಿಕೊಳ್ಳಬಲ್ಲುದು.

"...ಕನ್ನಡ ನಾಡಿನಲ್ಲಿ 'ಟೂರಿಂಗ್' ಟಾಕೀಸುಗಳಿಗೆ ಅವಕಾಶ ಮಾಡಿಕೊಡಬೇಕು. ಇನ್ನೂ ನೂರು ಟೂರಿಂಗ್ ಟಾಕೀಸಿಗೆ ಅವಕಾಶ ಕೊಟ್ಟರೆ ಮಾರುಕಟ್ಟೆ ವಿಸ್ತರಿಸಬಹುದು. ಗ್ರಾಮಾಂತರ ಪ್ರದೇಶಗಳಲ್ಲಿ ಕನ್ನಡ ಚಿತ್ರಗಳು ಹೆಚ್ಚು ನಡೆಯುತ್ತವೆ. ಹಾಕಿದ ಹಣ ಹಿಂತಿರುಗುತ್ತದೆ. ಆಂಧ್ರ, ಮುಂಬಯಿ, ಮದರಾಸು ಪ್ರಾಂತಗಳಲ್ಲಿ ಟೂರಿಂಗ್ ಟಾಕೀಸಿಗೆ ಸರ್ಕಾರಗಳು ಸಹಾಯ ಮಾಡಿವೆ. ತೆರಿಗೆ ಬಗ್ಗೆಯೂ ಉದಾರವಾಗಿವೆ. ಇಲ್ಲಿಯೂ ಹಾಗಾಗಬೇಕು....

"ಸರ್ಕಾರದ ಬಿಗಿಮುಷ್ಟಿ ಬಿಡಿಸಿಕೊಳ್ಳಬೇಕು. ಮೈಸೂರು ರಾಜ್ಯದ ಸಿನಿಮಾ ಮಂದಿರಗಳಲ್ಲಿ ಸರ್ಕಾರ ನಡೆಸಿದ 'ಶುದ್ಧೀಕರಣ'ದಿಂದ ಸೀಟುಗಳು ಹತವಾದವು. ಶೇ.೨೦ರಷ್ಟು ವರಮಾನಕ್ಕೆ ಖೋತಾ ಆಯಿತು. ಎಂಟುನೂರು ಸಂಪಾದಿಸುತ್ತಿದ್ದ ಚಿತ್ರಮಂದಿರ ಆರುನೂರು ರೂ.ಗೆ ಇಳಿಯಿತು. ಅತ್ತ ತೆರಿಗೆಯನ್ನು ಏರಿಸಿ, ಇತ್ತ ಇದ್ದ ಆದಾಯವನ್ನು ಕತ್ತರಿಸುವ ನೀತಿ... ಕನ್ನಡಕ್ಕೆ ಶೋಚನೀಯವಾದ ಸಂಗತಿ". ಪರದೆಯ ಮುಂದೆ ೧೮ ಅಡಿ ಬಿಟ್ಟು ಆಸನಗಳನ್ನು ಹಾಕಬೇಕು. ಪ್ರತಿ ಸಾಲಿನ ಮುಂದೆ ಒಂದೂವರೆ ಅಡಿ ಸ್ಥಳಾವಕಾಶ ಇರಬೇಕು ಎಂದು ೧೯೫೨ರಲ್ಲಿ ಬಂದ ಸಿನಿಮಾಟೊಗ್ರಾಫಿ ಆ್ಯಕ್ಟ್‌ನಲ್ಲಿಯ ನಿಯಮಾವಳಿಯಿಂದಾಗಿ ಸಾಕಷ್ಟು ಆಸನಗಳು ಕಡಿಮೆ ಆದವು ಎಂಬುದಕ್ಕೆ ಈ ಆಕ್ಷೇಪ.

'ದಲ್ಲಾಳಿ'ಯ ಯಶಸ್ಸಿನಿಂದ ಕನ್ನಡ ಚಿತ್ರರಂಗದಲ್ಲಿ ಹೊಸ ಹುರುಪು ಮೂಡಿತು. ಆ ಸಾಲಿನ ಮತ್ತೊಂದು ವಿಶೇಷವೆಂದರೆ ಆರ್.ನಾಗೇಂದ್ರರಾಯರು ಸ್ವತಂತ್ರ ನಿರ್ಮಾಪಕರಾಗಿ 'ಜಾತಕ ಫಲ' ಚಿತ್ರವನ್ನು ಮೂರು ಭಾಷೆಗಳಲ್ಲಿ ತಯಾರಿಸಿದ್ದು, ಕನ್ನಡ ಚಿತ್ರರಂಗದ ಹೆಸರಾಂತ ಸಂಗೀತ ನಿರ್ದೇಶಕರಾಗಿ ಹೆಸರು ಮಾಡಿರುವ ರಾಜನ್-ನಾಗೇಂದ್ರ 'ಸೌಭಾಗ್ಯ ಲಕ್ಷ್ಮಿ' ಚಿತ್ರದ ಮೂಲಕ ಸಂಗೀತ ನಿರ್ದೇಶಕರಾಗಿ ಹಾಗೂ ನಾಯಕನಟನಾಗಿ ಇಂದುಶೇಖರ್ ಚಿತ್ರರಂಗ ಪ್ರವೇಶಿಸಿದರು.

೧೯೪೭ರಲ್ಲಿ 'ಮಹಾತ್ಮಾ ಕಬೀರ್' ಚಿತ್ರ ನಿರ್ದೇಶಿಸಿದ ನಂತರ ನಾಗೇಂದ್ರರಾಯರು ಸುಬ್ಬಯ್ಯನಾಯ್ಡು ಅವರಿಂದ ಬೇರೆಯಾಗಿ ಮುಂದೆ ತಮಿಳು ಚಿತ್ರರಂಗದಲ್ಲಿ ಭಾರಿ ನಟ-ನಿರ್ದೇಶಕರಾಗಿ ಹೆಸರು ಮಾಡಿದರು. ಜೆಮಿನಿ ಸಂಸ್ಥೆಯ 'ಅಪೂರ್ವ ಸಹೋದರ್‌ಗಳ್' ಚಿತ್ರದಲ್ಲಿ (ತಮಿಳು) ಖಳನಾಯಕನ ಪಾತ್ರದಲ್ಲಿ ಅಭಿನಯಿಸಿ ಆ ವರ್ಷದ ಶ್ರೇಷ್ಠ ಖಳನಟ ಪ್ರಶಸ್ತಿ ಗಳಿಸಿದರು. ಕಾರ್ಸಿಕನ್ ಬ್ರದರ್ಸ್ ಕಾದಂಬರಿ ಆಧರಿಸಿ ತಯಾರಾದ ಆ ಚಿತ್ರ ಹಿಂದಿಯಲ್ಲೂ (ನಿಶಾನ್) ತಯಾರಾಯಿತು. ಹಿಂದಿಯಲ್ಲೂ ರಾಯರೇ ಆ ಖಳನ ಪಾತ್ರ ನಿರ್ವಹಿಸಿ ಆ ವರ್ಷ ಹಿಂದೀ ಚಲನಚಿತ್ರ ಪತ್ರಕರ್ತರ ಸಂಘದ 'ಶ್ರೇಷ್ಠ ಖಳನಟ' ಪ್ರಶಸ್ತಿ ಗಳಿಸಿದರು.

ಅನಂತರ ಜೆಮಿನಿ ಸಂಸ್ಥೆಯ ವಾಸನ್ ಅವರಿಗಾಗಿ 'ಮೂನ್ರು ತನಯರ್' (ತ್ರೀ ಸನ್ಸ್) ಚಿತ್ರವನ್ನು ನಿರ್ದೇಶಿಸಿ ಆ ಚಿತ್ರದ ಮೂಲಕ ಜೆಮಿನಿ ಗಣೇಶ್‌ರವರನ್ನು ಚಿತ್ರರಂಗಕ್ಕೆ ಪರಿಚಯ ಮಾಡಿಸಿದರು. ಇಷ್ಟಾದರೂ ಕನ್ನಡ ಚಿತ್ರ ತಯಾರಿಸುವ ಗೀಳು ಅವರನ್ನು ಬಿಟ್ಟಿರಲಿಲ್ಲ. ಹಾಗಾಗಿ ೧೯೫೨ರಲ್ಲಿ ಆರೆನ್ನಾರ್ (RNR) ಪಿಕ್ಚರ್ಸ್ ಸಂಸ್ಥೆಯನ್ನು ಮದರಾಸಿನಲ್ಲಿ ಸ್ಥಾಪಿಸಿದರು. ಆ ದಿನಗಳಲ್ಲಿ ಕನ್ನಡ ಚಿತ್ರ ತಯಾರಿಸುವುದು ಬಹಳ ಕಷ್ಟವಿತ್ತು. ಕಚ್ಚಾ ಫಿಲಂ ದೊರೆಯುತ್ತಿರಲಿಲ್ಲ. ಆದುದರಿಂದ 'ಜಾತಕ ಫಲ' ಚಿತ್ರವನ್ನು ಕನ್ನಡ, ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ತಯಾರಿಸಿದರು. ಮೂರೂ ಭಾಷೆಗಳಲ್ಲಿ ರಾಯರೇ ಅಭಿನಯಿಸಿದರು. ಅವರ ಜೊತೆ ಕನ್ನಡ ಮತ್ತು ತಮಿಳಿನಲ್ಲಿ ಸಾರಂಗಪಾಣಿಯವರೂ, ತೆಲುಗಿನಲ್ಲಿ ಎಸ್.ವಿ.ರಂಗರಾವ್ ಅವರೂ ಅಭಿನಯಿಸಿದರು. ಸೂರ್ಯಕಲಾ ಮತ್ತು ಟಿ.ಕೆ.ಬಾಲಚಂದ್ರನ್ ನಾಗೇಂದ್ರರಾಯರ ನವ ಶೋಧ. ಚಿತ್ರದಲ್ಲಿ ಕಮಲಾಬಾಯಿ, ಪಿ.ಡಿ.ಸಂಬಂಧಂ, ಗಣಪತಿಭಟ್, ವಿಗಡಂ ಕೃಷ್ಣಮೂರ್ತಿ, ಕೆ.ಎನ್.ಕಮಲಂ ಮುಂತಾದವರಿದ್ದರು. ಅದೊಂದು ಹಾಸ್ಯ ಪ್ರಧಾನ ಸಾಮಾಜಿಕ ಚಿತ್ರ. ಇಬ್ಬರು ಹಳೆಯ ಸ್ನೇಹಿತರು ತಮ್ಮ ಮಗ ಮತ್ತು ಮಗಳ ಮದುವೆಗಾಗಿ ಜಾತಕದಲ್ಲಿ ಅಪಾರ ನಂಬಿಕೆಯಿದ್ದ ತಮ್ಮ ಪತ್ನಿಯರಿಗೆ ಸುಳ್ಳು ಜ್ಯೋತಿಷ್ಯ ಹೇಳಿ ಮದುವೆ ಕುದುರಿಸುವ ಕಥೆ. ಸುಳ್ಳು ಹೇಳಿದ್ದರಿಂದ ಎದುರಾದ ಸಮಸ್ಯೆಗಳು - ಇದು ಕಥಾ ವಸ್ತು. ಮುಖ್ಯವಾಗಿ ಮೂಢನಂಬಿಕೆಗಳನ್ನು ಅಪ್ರಜ್ಞಾಪೂರ್ವಕವಾಗಿಯಾದರೂ ಪ್ರಶ್ನಿಸಿದ್ದನ್ನು ಸ್ಮರಿಸಬೇಕು. ನಾಗೇಂದ್ರರಾಯರೇ ಸಂಭಾಷಣೆಗಳನ್ನು ಹಾಗೂ ಗೀತೆಗಳನ್ನು ಬರೆದರು. ಆರ್.ಗೋವರ್ಧನ್ ಸಂಗೀತ ನೀಡಿದರು. ರಾಯರೇ ಬರೆದ ಒಂದೆರಡು ಗೀತೆಗಳು ಜನಪ್ರಿಯವಾದವು. ಚಿತ್ರ ಮೂರೂ ಭಾಷೆಗಳಲ್ಲಿ ಯಶಸ್ವಿಯಾಯಿತು. ಎ.ವಿ.ಮೇಯಪ್ಪನವರ ಸಹಕಾರದೊಂದಿಗೆ ರಾಯರು ಈ ಚಿತ್ರವನ್ನು ಎ.ವಿ.ಎಂ. ಸ್ಟುಡಿಯೋದಲ್ಲಿ ತಯಾರಿಸಿದರು. ತಂತ್ರಜ್ಞರೆಲ್ಲ ಅಲ್ಲಿಯವರೇ. ಈ ಚಿತ್ರದ ಛಾಯಾಗ್ರಾಹಕರು ಯೂಸುಫ್ ಮೂಲ್ಜಿ. ೧೯೫೩ನೇ ಡಿಸೆಂಬರ್ ೪ರಿಂದ ಮೈಸೂರು ಪ್ರಾಂತ್ಯದ ೧೦ ಕೇಂದ್ರಗಳಲ್ಲಿ ಬಿಡುಗಡೆಯಾಯಿತು.


(ಚಿತ್ರ ೭) 'ಜಾತಕ ಫಲ' ಚಿತ್ರದಲ್ಲಿ ನಾಗೇಂದ್ರರಾಯರು, ಸೂರ್ಯಕಲಾ, ಬಾಲಚಂದ್ರನ್

(ಚಿತ್ರ ೮) 'ಸೌಭಾಗ್ಯ ಲಕ್ಷ್ಮಿ' ಚಿತ್ರದಲ್ಲಿ ಇಂದುಶೇಖರ್ ಮತ್ತು ಹರಿಣಿ

ಈ ಚಿತ್ರದಿಂದ ಕನ್ನಡ ಚಿತ್ರರಂಗಕ್ಕಾದ ಒಂದು ಲಾಭವೆಂದರೆ ಹಿನ್ನೆಲೆ ಗಾಯಕರಾಗಿ ಪಿ.ಬಿ.ಶ್ರೀನಿವಾಸ್ ಅವರ ಪರಿಚಯವಾಯಿತು. ಮುಂದೆ ಪಿ.ಬಿ.ಶ್ರೀನಿವಾಸ್ ಅವರು ಕನ್ನಡ ಚಿತ್ರರಂಗದ ಅತ್ಯಂತ ಜನಪ್ರಿಯ ಗಾಯಕರಾಗಿ ಮೂರು ದಶಕಗಳ ಕಾಲ ರಾರಾಜಿಸಿದರು. 'ಜಾತಕ ಫಲ' ಚಿತ್ರದಲ್ಲಿ ಪಿ.ಬಿ.ಶ್ರೀನಿವಾಸ್ ಅವರು ಹಾಡಿದ ಮೊದಲನೆಯ ಗೀತೆ 'ಚಿಂತಿಸದಿರು ರಮಣೀ....'. ಈ ಚಿತ್ರ ೧೯೫೩ರಲ್ಲಿ ಬಿಡುಗಡೆಯಾದ ಅತ್ಯಂತ ಯಶಸ್ವೀ ಚಿತ್ರಗಳಲ್ಲೊಂದು.

ಅದೇ ರೀತಿ ೧೯೫೨ರಲ್ಲಿ ತಯಾರಿಕೆ ಪ್ರಾರಂಭವಾಗಿ ೧೯೫೩ರಲ್ಲಿ ಬಿಡುಗಡೆಯಾದ ಚಿತ್ರ ಮಹಾತ್ಮ ಪಿಕ್ಚರ್ಸ್ ಅವರ 'ಸೌಭಾಗ್ಯ ಲಕ್ಷ್ಮಿ'. ಇದು ಮಹಾತ್ಮ ಸಂಸ್ಥೆಯ ಎರಡನೆಯ ಸಾಮಾಜಿಕ ಚಿತ್ರ. ಭಕ್ತಿ, ಪಾತಿವ್ರತ್ಯ, ಪ್ರಣಯದಂಥ ಸಾರ್ವತ್ರಿಕ ಮೌಲ್ಯಗಳನ್ನು ರಂಜನೀಯವಾಗಿ ಹೇಳುವ ವಿಧಾನ ಇಲ್ಲಿತ್ತು. 'ದಲ್ಲಾಳಿ' ಚಿತ್ರದ ನಂತರ ಬಂದ 'ಸೌಭಾಗ್ಯಲಕ್ಷ್ಮಿ'ಯಲ್ಲಿ ಹರಿಣಿ, ಮಹಾಬಲರಾವ್, ಮಾಧವರಾವ್, ಜಿ.ಆರ್.ಸ್ಯಾಂಡೋ, ಹನುಮಂತರಾವ್, ಸರೋಜ, ಲಕ್ಷ್ಮಮ್ಮ ಮುಂತಾದವರು ಅಭಿನಯಿಸಿದರು. ನಿರ್ದೇಶಿಸಿದವರು ಬಿ.ವಿ.ಆಚಾರ್ಯ (ವಿಠಲಾಚಾರ್ಯ). ಚಿತ್ರ ತೆರೆಗೆ ಬಂದ ಮೇಲೆ ನಿರೀಕ್ಷಿಸಿದಷ್ಟು ಉತ್ತಮ ಎನ್ನಿಸಲಿಲ್ಲ. ಮಧುರವಾದ ಹಿನ್ನೆಲೆ ಸಂಗೀತವಂತೂ ಇತ್ತು. ಆದರೆ ಅವೆಲ್ಲ ಹಿಂದಿ ಹಾಡುಗಳ 'ನಕಲು'ಗಳಾಗಿದ್ದವು. ಕುತೂಹಲ ಮೂಡಿಸುವಂಥ ಕಥಾ ಹಂದರವಿತ್ತು. ಹೊಸ ನಟ ಇಂದುಶೇಖರ್ ಹುಚ್ಚನ ಪಾತ್ರದಲ್ಲಿ ಗಮನ ಸೆಳೆದರು. ವೇಷ-ಭೂಷಣದಲ್ಲಿ ಅಂಥ ವಿಶೇಷವಿರಲಿಲ್ಲ. ಶಬ್ದಗ್ರಹಣ ಉತ್ತಮ ಎಂದು ಹೇಳಲಾಗಿತ್ತು. ಪ್ರೇಕ್ಷಕರು ಚಿತ್ರದ ಟೈಟಲ್ ಕಾರ್ಡ್ ಇಂಗ್ಲಿಷ್‌ನಲ್ಲಿದ್ದುದನ್ನು ಆಕ್ಷೇಪಿಸಿ ಕನ್ನಡದಲ್ಲೇ ಇರಬೇಕಿತ್ತೆಂದು ಆಗ್ರಹಿಸಿದರು. ಹಾಸ್ಯ, ಸಡಿಲು ಸಂಭಾಷಣೆ, ಸಭ್ಯತೆಯ ಗಡಿ ದಾಟಿತು ಎಂದವರುಂಟು. 'ಸೌಭಾಗ್ಯಲಕ್ಷ್ಮಿ' ಚಿತ್ರವು ೧೯೫೩ನೇ ಜೂನ್ ೬ನೆಯ ತಾರೀಖು ತೆರೆಗೆ ಬಂದಿತು. ಈ ಚಿತ್ರದಿಂದ ಕನ್ನಡಕ್ಕಾದ ಲಾಭವೆಂದರೆ ಪ್ರತಿಭಾವಂತ ಸಂಗೀತ ನಿರ್ದೇಶಕರುಗಳಾದ ರಾಜನ್-ನಾಗೇಂದ್ರ ಅವರ ಪರಿಚಯ.[2]

೧೯೫೨ರಲ್ಲಿ 'ಸೌಭಾಗ್ಯ ಲಕ್ಷ್ಮಿ' ಚಿತ್ರಕ್ಕೆ ಸಂಗೀತ ನೀಡಲು ವಿಠಲಾಚಾರ್ಯ ಅವರು ರಾಜನ್-ನಾಗೇಂದ್ರ ಅವರುಗಳಿಗೆ ಪ್ರಥಮ ಬಾರಿಗೆ ಅವಕಾಶ ನೀಡಿದರು. ಅಲ್ಲಿಂದ ಮುಂದೆ ಅತ್ಯಂತ ಜನಪ್ರಿಯ ಸಂಗೀತ ನಿರ್ದೇಶಕ ಜೋಡಿಯಾಗಿ ರಾಜನ್-ನಾಗೇಂದ್ರ ಪ್ರಸಿದ್ಧರಾದರು. ಇನ್ನೂರಕ್ಕೂ ಹೆಚ್ಚು ಚಿತ್ರಗಳಿಗೆ ಸಂಗೀತ ನೀಡಿರುವುದಲ್ಲದೆ ತೆಲುಗು, ತಮಿಳು ಚಿತ್ರಗಳಿಗೂ ಸಂಗೀತ ನೀಡಿ ಎಂದೆಂದಿಗೂ ನೆನಪಿನಲ್ಲುಳಿಯುವಂತಹ ಚಿತ್ರಗೀತೆಗಳನ್ನು ಸಂಯೋಜಿಸಿದ್ದಾರೆ.

ಈ ಸೋದರರ ಒಂದು ವೈಶಿಷ್ಟ್ಯವೆಂದರೆ, ರಾಜನ್ ಅವರು ಹಾಡುಗಳಿಗೆ ರಾಗ ಸಂಯೋಜನೆ ಮತ್ತು ಹಿನ್ನೆಲೆ ಸಂಗೀತ ಸಂಯೋಜನೆ ಮಾಡಿದರೆ ನಾಗೇಂದ್ರ ಹಾಡುವ ಹಾಗೂ ಗಾಯಕ-ಗಾಯಕಿಯರಿಗೆ ಹಾಡುಗಳನ್ನು ಕಲಿಸುವ ಕೆಲಸ ಮಾಡಿದರು.

'ಸೌಭಾಗ್ಯಲಕ್ಷ್ಮಿ' ಚಿತ್ರಕ್ಕೆ ಸಂಬಂಧಿಸಿದಂತೆ ಮತ್ತೊಂದು ಮುಖ್ಯ ಅಂಶವಿದೆ. ಅದು ಪತ್ರಕರ್ತರನ್ನು ಕುರಿತದ್ದು. ವಿಠಲಾಚಾರ್ಯರು ಪತ್ರಕರ್ತರೊಬ್ಬರನ್ನು ಭೇಟಿ ಮಾಡಿ 'ಕನ್ನಡ ಚಿತ್ರಗಳನ್ನು ಸದಾ ಆಕ್ಷೇಪಿಸುತ್ತೀರಿ, ಕೊಂಚ ಪ್ರೋತ್ಸಾಹ ಕೊಡದಿದ್ದ್ರೆ ಉದ್ಯಮ ಬೆಳೆಯೋದಿಲ್ಲ' ಅಂದರು. ಆತ ಇನ್ನಷ್ಟು ಕಟುವಾಗಿ ಬರೆದರು. 'ಸೌಭಾಗ್ಯ ಲಕ್ಷ್ಮಿ' ಚಿತ್ರದಲ್ಲಿ ನಾಯಕನಟ ಇಂದುಶೇಖರ್ ಹುಚ್ಚನಾಗುತ್ತಾನೆ. ಪಾರ್ಕಿನಲ್ಲಿ ಭೇಟಿಯಾದ ವ್ಯಕ್ತಿಯೊಬ್ಬರಿಗೆ ಆ ಹುಚ್ಚ "ಓಹೋ ನೀನೋ ? ನೀನೇನು ಹಜಾಮತಿ ಎಡಿಟರ್ರಾ ? ಅದಕ್ಕೇ ನೀನು ರಾಜಮ್ಮನ ಕೈಲಿ ಚ...ಲಿ ಏಟು ತಿಂದೆ.." ಅಂತ ಒಂದು ಸಂಭಾಷಣೆ ಹೇಳಿಸಿಬಿಟ್ಟರು. ಇದರ ಪರಿಣಾಮ ತೀವ್ರವೇ ಆಯಿತು. ಪತ್ರಕರ್ತರು ಅನಂತರವೂ ಕಟು ನಿಲುವು ತಳೆದರು. ಕೆಲಕಾಲದ ನಂತರ ವಿಠಲಾಚಾರ್ಯರು ಸಿಟ್ಟಾಗಿ ಮದರಾಸಿಗೇ ಹೋಗಿಬಿಟ್ಟರು. ಒಂದು ಹಂತದಿಂದಾಚೆಗೆ ಕನ್ನಡ ಚಿತ್ರಗಳನ್ನು ತಯಾರಿಸಲೇ ಇಲ್ಲ.

೧೯೫೩ರಲ್ಲಿ ತೆರೆಕಂಡ ಇನ್ನೊಂದು ಕನ್ನಡ ಚಿತ್ರ ಮಹಾತ್ಮ ಅವರ 'ಚಂಚಲ ಕುಮಾರಿ'. ರಾಜನ್-ನಾಗೇಂದ್ರ ಅವರೇ ಈ ಚಿತ್ರದ ಸಂಗೀತ ನಿರ್ದೇಶಕರು. ಮಹಾತ್ಮ ಸಂಸ್ಥೆಯು 'ಸೌಭಾಗ್ಯಲಕ್ಷ್ಮಿ' ಚಿತ್ರದ ಕೆಲಸ ಮುಗಿದ ಕೂಡಲೇ 'ಚಂಚಲಕುಮಾರಿ' ಎಂಬ ಮತ್ತೊಂದು ಸಾಮಾಜಿಕ ಚಿತ್ರವನ್ನು ಕೈಗೆತ್ತಿಕೊಂಡಿತು. ಏಪ್ರಿಲ್ ೧೬ನೇ ತಾರೀಖು ಈ ಚಿತ್ರದ ಮುಹೂರ್ತವನ್ನು ಮಾಡಿದರು. ಶಂಕರಸಿಂಗ್ ಅವರ ಮಗ ರಾಜೇಂದ್ರಸಿಂಗ್ ಬಾಬು ಈ ಚಿತ್ರದಲ್ಲಿ ಅಭಿನಯಿಸಿದರು. ಮುಹೂರ್ತದ ದಿನ ಅವರೇ ಕ್ಯಾಮರಾ ಸ್ವಿಚ್ ಆನ್ ಮಾಡಿದ್ದರು. ಕನ್ನಡ ನಾಡಿನ (ಉದಕಮಂಡಲ, ದಕ್ಷಿಣ ಕನ್ನಡ ಜಿಲ್ಲೆ) ವಿವಿಧೆಡೆಗಳಲ್ಲಿ ಸುಂದರವಾದ ನಿಸರ್ಗವನ್ನು ಸೆರೆ ಹಿಡಿಯಲಾಗಿತ್ತು.

ಚಿತ್ರದ ನಾಯಕಿ ಪಾತ್ರದಲ್ಲಿ ಹೊಸ ನಟಿ ಕಾಮಿನಿ[3] ಅಭಿನಯಿಸಿದರು. ಇಂದುಶೇಖರ್ ನಾಯಕ. ಮಹಾತ್ಮ ಅವರ ಖಾಯಂ ಕಲಾವಿದರಾದ ಈಶ್ವರಪ್ಪ, ಪ್ರತಿಮಾದೇವಿ, ಸರೋಜಮ್ಮ, ಲಕ್ಷ್ಮೀದೇವಿ ಮುಂತಾದವರು ತಾರಾಗಣದಲ್ಲಿದ್ದರು. ಎಂ.ಎಸ್.ಮಣಿ ಅವರ ಛಾಯಾಗ್ರಹಣ, ಎಂ.ಎ.ಎಸ್.ಅಯ್ಯಂಗಾರ್ ಅವರ ಶಬ್ದಗ್ರಹಣ, ಪಿ.ಎಸ್.ಮೂರ್ತಿ ಅವರ ಸಂಕಲನ ಇವು ಯಾವುವೂ ಚಿತ್ರವನ್ನು

---

೧. ಪಿ.ಬಿ.ಶ್ರೀನಿವಾಸ್ ಮೂಲತಃ ತೆಲುಗಿನವರಾದರೂ ಅವರ ಕನ್ನಡ ಉಚ್ಚಾರಣೆ ಅತ್ಯಂತ ಸ್ಫುಟ. ಕನ್ನಡದಲ್ಲಿ ಅನೇಕ ಗೀತೆಗಳನ್ನು, ಲೇಖನಗಳನ್ನು ಬರೆದಿದ್ದಾರೆ. ಎಂಟು ಭಾಷೆಗಳಲ್ಲಿ ಓದಿ, ಬರೆಯಬಲ್ಲ ಪಿ.ಬಿ.ಶ್ರೀನಿವಾಸ್, ಸಂಸ್ಕೃತದಲ್ಲೂ ಕನ್ನಡ ಚಿತ್ರಗಳಿಗಾಗಿ ಗೀತೆಯನ್ನು ಬರೆದಿದ್ದಾರೆ. ಅಮೆರಿಕದ ಗಗನಯಾತ್ರಿ ನೀಲ್ ಆರ್ಮ್‌ಸ್ಟ್ರಾಂಗ್ ಪ್ರಥಮ ಬಾರಿಗೆ ಚಂದ್ರನಲ್ಲಿ ಕಾಲಿಟ್ಟ ಸಂದರ್ಭದಲ್ಲಿ ಇಂಗ್ಲಿಷ್‌ನಲ್ಲಿ ಒಂದು ಹಾಡನ್ನು ರಚಿಸಿ, ಸಂಗೀತ ಸಂಯೋಜಿಸಿ ಎಸ್.ಜಾನಕಿಯವರೊಂದಿಗೆ ಹಾಡಿ ಧ್ವನಿ ಮುದ್ರಿಕೆ (ಎಚ್.ಎಂ.ವಿ) ತಯಾರಿಸಿದರು. ಖ್ಯಾತ ನಟ ರಂಜನ್ (ಚಂದ್ರಲೇಖ ಖ್ಯಾತಿ) ಆ ಧ್ವನಿ ಮುದ್ರಿಕೆಯನ್ನು ಬಿಡುಗಡೆ ಮಾಡಿ ಅಮೆರಿಕದ ಕಾನ್ಸುಲ್ ಜನರಲ್‌ಗೆ ಅರ್ಪಿಸಿದರು. ಅದನ್ನು ಆಲಿಸಿದ ಅಮೆರಿಕದ ಅಧ್ಯಕ್ಷ ರಿಚರ್ಡ್ ನಿಕ್ಸನ್ ಪಿ.ಬಿ.ಶ್ರೀನಿವಾಸ್ ಅವರನ್ನು ಪ್ರಶಂಸಿಸಿದರು.

೨. ರಾಜನ್ ಮತ್ತು ನಾಗೇಂದ್ರ ಸೋದರರು. ಅವರ ತಂದೆ ರಾಜಪ್ಪನವರು ಸಂಗೀತ ವಿದ್ವಾಂಸರು. ಹಾರ್ಮೋನಿಯಂ ಮತ್ತು ಕೊಳಲು ನುಡಿಸುತ್ತಿದ್ದರು. ಮೂಕಿ ಚಿತ್ರಗಳ ಕಾಲದಲ್ಲಿ ಪಾಶ್ಚಾತ್ಯ ಹಾಗೂ ಪೌರಾಣಿಕ ಚಿತ್ರಗಳ ಪ್ರದರ್ಶನದ ಸಮಯದಲ್ಲಿ ಪರದೆಯ ಪಕ್ಕದಲ್ಲಿ ಕುಳಿತು ವಾದ್ಯ ಸಂಗೀತವನ್ನು ನುಡಿಸುತ್ತಿದ್ದರು. ಮಕ್ಕಳಿಗೆ ತಂದೆಯವರಿಂದಲೇ ಸಂಗೀತ ಪಾಠ. ರಾಜನ್ ಅವರು ವಯಲಿನ್‌ನಲ್ಲಿ ಪಂಡಿತರಾಗಿ ರಾಜ್ಯದ ಸಂಗೀತ ಪರೀಕ್ಷೆಗಳಲ್ಲಿ ಪ್ರಥಮ ರ್‍ಯಾಂಕ್‌ನಲ್ಲಿ ಉತ್ತೀರ್ಣರಾದರು. ನಾಗೇಂದ್ರ ಹಾಡುಗಾರಿಕೆ (ತಾಯಿಯವರಿಂದ ದೇವರ ನಾಮಗಳನ್ನು ಕಲಿತರು) ಮತ್ತು ಜಲತರಂಗ್ ವಾದ್ಯದಲ್ಲಿ ನಿಪುಣರಾದರು. ಮೈಸೂರು ಅರಮನೆ ಆರ್ಕೆಸ್ಟ್ರಾದ ಸಂಪರ್ಕದಿಂದ ವಾದ್ಯಗೋಷ್ಠಿಯ ಪರಿಜ್ಞಾನ. ಬೆಂಗಳೂರಿನಲ್ಲಿ ಜಯಮಾರುತಿ ವಾದ್ಯವೃಂದದವರೊಂದಿಗೆ ಮದರಾಸಿಗೆ ಹೋಗಿ ಅಲ್ಲಿ ಎಚ್.ಆರ್.ಪದ್ಮನಾಭಶಾಸ್ತ್ರಿ ಅವರ ನೇತೃತ್ವದಲ್ಲಿ ಕೆಲವು ಚಿತ್ರಗಳ ಹಾಡುಗಳನ್ನು ರಿಕಾರ್ಡ್ ಮಾಡುವ ಪದ್ಧತಿ ಕಲಿತು ಹಾಡುವವರೊಂದಿಗೆ ನುಡಿಸಿ ಅನುಭವ ಗಳಿಸುತ್ತಿದ್ದರು. ಕಲಾವಿದ' ಮತ್ತು ಮಹಾತ್ಮ ಅವರ 'ರಾಮದಾಸ್' ಚಿತ್ರದಲ್ಲಿ ಜಲತರಂಗ್ ನುಡಿಸಿದರು.

ಈ ಮಧ್ಯೆ ನಾಗೇಂದ್ರ ಮಾತ್ರ ಮೈಸೂರಿಗೆ ಹೋಗಿ ಕಾಳಿಂಗರಾಯರ ನಿರ್ದೇಶನದಲ್ಲಿ 'ಕಲಾವಿದ' ಮತ್ತು ಮಹಾತ್ಮ ಅವರ 'ರಾಮದಾಸ್' ಚಿತ್ರದಲ್ಲಿ ಜಲತರಂಗ್ ನುಡಿಸಿದರು. 'ಶ್ರೀನಿವಾಸ ಕಲ್ಯಾಣ' ಚಿತ್ರದಲ್ಲಿ ಅಮೀರ್ ಬಾಯಿ ಕರ್ನಾಟಕಿ ಅವರಿಗೆ ಹಾಡು ಕಲಿಸಲು ಅವರೇ ಹಾಡಿ ತೋರಿಸಿದರು. ಅದನ್ನು ಕೇಳಿ ಪಿ.ಶಾಮಣ್ಣ, ಹುಣಸೂರರು, ವಿಠಲಾಚಾರ್ಯ ಎಲ್ಲರೂ ಒಪ್ಪಿ ನಾಗೇಂದ್ರ ಅವರಿಂದ ಎರಡು ಡ್ಯೂಯೆಟ್‌ಗಳನ್ನು ಹಾಡಿಸಿದರು. ಅಂದಿನಿಂದ ನಾಗೇಂದ್ರ ಹಿನ್ನೆಲೆ ಗಾಯಕರೂ ಆದರು.

೩. ಕಾಮಿನಿ ಅವರು ಮಹಾತ್ಮ ಸಂಸ್ಥೆಯ ಎರಡು ಚಿತ್ರಗಳಲ್ಲಿ ಅಭಿನಯಿಸಿದರು. ಅನಂತರ ಆಕೆ ವೈದ್ಯಕೀಯ ಸಂಸ್ಥೆಯಲ್ಲಿ ನರ್ಸ್ ಆಗಿದ್ದರೆಂದು ತಿಳಿಯುತ್ತದೆ.

ಸಾಧಾರಣ ಮಟ್ಟಕ್ಕಿಂತ ಮೇಲೇರಿಸಲು ಸಾಧ್ಯವಾಗಲಿಲ್ಲ. ಆಗ ಮದರಾಸಿನಿಂದ ಪ್ರಕಟವಾಗುತ್ತಿದ್ದ 'ಸಿನಿಮಾ' ಮಾಸಪತ್ರಿಕೆಯಲ್ಲಿ ಪ್ರಕಟವಾದ ವಿಮರ್ಶೆಯ ಕೆಲವು ಸಾಲುಗಳನ್ನು ಇಲ್ಲಿ ಉಲ್ಲೇಖಿಸುವುದು ಉಚಿತ ಎನ್ನಿಸುತ್ತದೆ :

''...'ಚಂಚಲಕುಮಾರಿ' ಆ ಹೆಸರಿನ ಪಾತ್ರವೇ ಚಿತ್ರದಲ್ಲಿಲ್ಲ. ಪಂಚಾಯಿತಿ ಪ್ರಸಂಗ, ಕಾಮಿನಿ ಗಂಡು ವೇಷ ಧರಿಸಿ ಹೋಗುವ ಮತ್ತು ಗವಿಯಲ್ಲಿ ನಡೆಯುವ ಪ್ರಸಂಗ- ಈ ಎರಡನೆಯ ಪ್ರಸಂಗವಂತೂ ಜಿಪ್ಸಿ ಪ್ರಣಯ. ಹೀಗೆ ದೋಷ ಪೂರಿತವಾಗಿದೆ. ಒಂದೇ ಗುಣವೆಂದರೆ ಸಮರ್ಪಕ ಚಿತ್ರಗ್ರಹಣ. ದಕ್ಷಿಣ ಕನ್ನಡದ ಕರಾವಳಿ ಪ್ರದೇಶಗಳ ನೈಸರ್ಗಿಕ ಸೌಂದರ್ಯದ ಸಮರ್ಪಕ ಚಿತ್ರಣಕ್ಕಾಗಿ ಕ್ಯಾಮರಾಮನ್ ಎಂ.ಎಸ್.ಮಣಿ ಅವರನ್ನು ಅಭಿನಂದಿಸಬಹುದು...''


(ಚಿತ್ರ ೯) 'ಗುಣಸಾಗರಿ' ಚಿತ್ರದಲ್ಲಿ ಹೊನ್ನಪ್ಪ ಭಾಗವತರ್ ಮತ್ತು ಪಂಢರಿಬಾಯಿ

'ಹೇಮರೆಡ್ಡಿ ಮಲ್ಲಮ್ಮ' (೧೯೪೫) ಚಿತ್ರದ ನಂತರ ಚಿತ್ರರಂಗದಿಂದ ದೂರವಿದ್ದ ಗುಬ್ಬಿ ವೀರಣ್ಣನವರು ಮತ್ತೆ ಚಿತ್ರರಂಗಕ್ಕೆ ಮರಳಿ ಬಂದದ್ದು ೧೯೫೩ರಲ್ಲಿ. ಚಲನಚಿತ್ರ ನಿರ್ಮಾಣ, ಸ್ಟುಡಿಯೋ ಸ್ಥಾಪನೆ, ಚಿತ್ರ ಹಂಚಿಕೆ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ೧೯೪೨ರಲ್ಲಿ ವೀರಣ್ಣನವರು ಕರ್ನಾಟಕ ಫಿಲಂಸ್ ಲಿಮಿಟೆಡ್ ಸಂಸ್ಥೆಯನ್ನು ಸ್ಥಾಪಿಸಿದ್ದರು. ಸಾರ್ವಜನಿಕರಿಂದ ಷೇರುಗಳ ಮೂಲಕ ಬಂಡವಾಳ ಸಂಗ್ರಹಿಸಿದ್ದರು. ನಿರ್ದೇಶಕರುಗಳ ಮಂಡಳಿಯಲ್ಲಿ ಸುಪ್ರಸಿದ್ಧ ವಾಣಿಜ್ಯೋದ್ಯಮಿಗಳಿದ್ದರು. ವೀರಣ್ಣನವರು, ಸಿ.ಆರ್.ಬಸವರಾಜ್, ಮಮ್ಮಿ ಮುರಿಗೆಪ್ಪ ಆಡಳಿತ ನಿರ್ವಾಹಕರಾಗಿದ್ದರು. ಸ್ಟುಡಿಯೋ ಸ್ಥಾಪನೆಗಾಗಿ ಆಗಿನ ಮೈಸೂರು ಮಹಾರಾಜರ ಸರ್ಕಾರ ೧೦೦ ಎಕರೆಗಳ ಜಮೀನನ್ನು ಮತ್ತು ಚಿತ್ರೋದ್ಯಮದ ಅಭಿವೃದ್ಧಿಗಾಗಿ ಇತರ ರಿಯಾಯಿತಿಗಳನ್ನು ನೀಡುವುದಾಗಿ ಆಶ್ವಾಸನೆ ನೀಡಿತ್ತು. ಆದರೆ ಆ ಸಂಸ್ಥೆ ಕೇವಲ ಚಿತ್ರ ಹಂಚಿಕಾ ಕಾರ್ಯವನ್ನು ನಿರ್ವಹಿಸುತ್ತಾ ಬಂದಿತು. 'ಜಾತಕ ಫಲ' ಹಾಗೂ ಅನಂತರದ ವರ್ಷಗಳಲ್ಲಿ 'ಮಹಾಕವಿ ಕಾಳಿದಾಸ' ಮುಂತಾದ ಚಿತ್ರಗಳು ಕರ್ನಾಟಕ ಫಿಲಂಸ್ ಮೂಲಕವೇ ಬಿಡುಗಡೆಯಾದವು. ಭಾರತೀಯ ಚಿತ್ರರಂಗದ ಇತಿಹಾಸದಲ್ಲಿ ಬೇರಾವ ಲಿಮಿಟೆಡ್ ಸಂಸ್ಥೆಯೂ ಇಷ್ಟು ದೀರ್ಘ ಕಾಲ ಉಳಿದಿಲ್ಲ. ೧೯೫೩ರಲ್ಲಿ ಈ ಸಂಸ್ಥೆಯ ಜತೆಗೂಡಿ 'ಗುಬ್ಬಿ ಕರ್ನಾಟಕ ಫಿಲಂಸ್' ಉದಯವಾಯಿತು. ಈ ಲಾಂಛನದಡಿ ತಯಾರಾದ ಪ್ರಥಮ ಚಿತ್ರ 'ಗುಣಸಾಗರಿ'.

ವೀರಣ್ಣನವರ ಮಾತೃಶ್ರೀ ರುದ್ರಮ್ಮನವರು ಹೇಳುತ್ತಿದ್ದ ಜಾನಪದ ಗೀತೆಗಳ ಕಥೆಯನ್ನಾಧರಿಸಿ ಈ ಚಿತ್ರದ ಕಥೆಯನ್ನು ಸಿದ್ಧಪಡಿಸಲಾಯಿತು. 'ಸಂಸಾರನೌಕ' (೧೯೩೬) ಚಿತ್ರದ ನಿರ್ದೇಶಕರಾಗಿದ್ದ ಹೆಚ್.ಎಲ್.ಎನ್.ಸಿಂಹ ಅವರು ಹದಿನಾರು ವರ್ಷಗಳ ನಂತರ 'ಗುಣಸಾಗರಿ' ಚಿತ್ರವನ್ನು ನಿರ್ದೇಶಿಸಿದರು. ಸಂಭಾಷಣೆಗಳನ್ನು ಅವರೇ ರಚಿಸಿದ್ದರು. ಕು.ರ.ಸೀತಾರಾಮಶಾಸ್ತ್ರಿಗಳು ಗೀತೆಗಳನ್ನು ಬರೆದರು. ಸಂಗೀತ ನೀಡಿದವರು ಆರ್.ಸುದರ್ಶನ್.[೧]

ಗಾಯಕ/ನಟ ಹೊನ್ನಪ್ಪ ಭಾಗವತರ್, ಜಿ.ಹೆಚ್.ವೀರಣ್ಣ, ಬಿ.ಜಯಮ್ಮ, ಟಿ.ಎಸ್.ಕರಿಬಸವಯ್ಯ, ಕೆ.ಬಸವರಾಜ್, ಹನುಮಂತಾಚಾರ್, ಪಂಢರಿಬಾಯಿ, ಕೃಷ್ಣಕುಮಾರಿ, ಗಣಪತಿಭಟ್, ರಾಜಾ ಸುಲೋಚನಾ ಮತ್ತು ತಮಿಳು ನಟ ಟಿ.ಎಸ್.ಬಾಲಯ್ಯ ಮುಂತಾದವರು ತಾರಾಗಣದಲ್ಲಿದ್ದರು. ಕುಮಾರಿ ಕಮಲ ನೃತ್ಯ ಇತ್ತು. 'ಹೇಮರೆಡ್ಡಿ ಮಲ್ಲಮ್ಮ' ಚಿತ್ರದಂತೆಯೇ ಇದೂ ಸಾಧ್ವೀಮಣಿಯೊಬ್ಬಳನ್ನು ಕುರಿತ ಚಿತ್ರ. ಈ ಚಿತ್ರದಿಂದ ಪಂಢರಿಬಾಯಿ ಅವರು ನಾಯಕಿ ನಟಿಯಾದರು. ಹಾಸ್ಯನಟ ಹನುಮಂತಾಚಾರ್, ರಾಜಾ ಸುಲೋಚನಾರ ಪ್ರವೇಶವಾಯಿತು.

ಎ.ವಿ.ಎಂ. ಮತ್ತು ಗುಬ್ಬಿ ಕರ್ನಾಟಕದವರು ತಯಾರಿಸುತ್ತಿರುವ 'ಗುಣಸಾಗರಿ' ಚಿತ್ರ ಕನ್ನಡ ಹಾಗೂ ತಮಿಳು (ಸತ್ಯ ಶೋಧನೈ) ಭಾಷೆಗಳಲ್ಲಿ ತಯಾರಾಗುತ್ತಿದೆಯೆಂದೂ, ಕನ್ನಡಿಗ ವೀರಣ್ಣನವರು ತಮಿಳಿನಲ್ಲೂ, ತಮಿಳಿನವರಾದ ಬಾಲಯ್ಯ ಕನ್ನಡದಲ್ಲೂ ನಟಿಸುತ್ತಾರೆಂಬ ಸುದ್ದಿಗಳು ಪ್ರಕಟವಾಗಿದ್ದವು. ಜನರಿಗೆ ಇದು ಪ್ರಿಯವಂತೂ ಆಯಿತು. ಈ ಚಿತ್ರಕ್ಕೆ ಮೊದಲು ಬಿ.ಜಯಮ್ಮನವರೇ ನಾಯಕಿ ಎಂದು ತೀರ್ಮಾನಿಸಿದ್ದರೆಂದೂ, ಕೊಂಚ ಎಳೆಯ ಮುಖ ಬೇಕು ಅನ್ನಿಸಿದಾಗ ಪಂಢರಿಬಾಯಿಯವರನ್ನು ಕರೆತಂದರೆಂದೂ, ಜಯಮ್ಮನವರು ಅತ್ತೆಯ ಪಾತ್ರ ನಿರ್ವಹಿಸಿದರೆಂದೂ, ಬಿ.ಜಯಮ್ಮ ಮತ್ತು ಪಂಢರಿಬಾಯಿ ಇಬ್ಬರೂ ತಮ್ಮ ಸಂದರ್ಶನಗಳಲ್ಲಿ ಹೇಳಿದ್ದಾರೆ.

ಚಿತ್ರದಲ್ಲಿ ಶಾಪಗ್ರಸ್ತ ಕರಡಿಯೊಂದು ಬರುವ ಸನ್ನಿವೇಶ ಆ ದಿನಗಳಲ್ಲಿ ಬಹಳಷ್ಟು ಸುದ್ದಿಯಲ್ಲಿದ್ದ ಅಥವಾ ಆಕರ್ಷಣೀಯ ಅನ್ನಿಸಿದ್ದ ಸಂಗತಿ. ನವದಂಪತಿಗಳು. ವಾಣಿಜ್ಯ ಕಾರಣಕ್ಕಾಗಿ ಊರಿಗೆ ಹೊರಟ ಗಂಡ, ವಿರಹ ತಾಳಲಾರದೆ ಊರಿಗೆ ಹಿಂತಿರುಗಿ ಅರ್ಧರಾತ್ರಿ ರಹಸ್ಯವಾಗಿ ಆಕೆಯನ್ನು ಸೇರಿ ಮತ್ತೆ ಪ್ರಯಾಣಿಸಿದ ಪತಿ, ಗರ್ಭಿಣಿಯಾದ ಆಕೆಯ ಮೇಲೆ ವ್ಯಭಿಚಾರದ ಆಪಾದನೆ... ಹೀಗೆ ಸಾಗುವ ಕಥಾ ಭಾಗದಲ್ಲಿ ಕೆಲವು ಪುಳಕಗೊಳ್ಳುವಂಥ ಸನ್ನಿವೇಶಗಳಿದ್ದವು. ಹೊನ್ನಪ್ಪ ಭಾಗವತರ ಎದುರಿಗೆ ಪಂಢರಿಬಾಯಿ ಪುಟ್ಟ ಬಾಲೆ ಅನ್ನಿಸಿದ್ದರೂ, ಅಭಿನಯ, ಸಂಗೀತಗಳು ಎಲ್ಲವನ್ನೂ ಮರೆಸಿದ್ದವು. ಸಂಭಾಷಣೆಯಲ್ಲಿ ಗ್ರಾಮ್ಯ, ಗ್ರಾಂಥಿಕಗಳ ಕಲಬೆರಕೆ ಎಂಬ ಆಕ್ಷೇಪಕ್ಕೆ ಗುರಿಯಾಯಿತು. ವೀರಣ್ಣನವರ ಹಾಸ್ಯ ರಂಗಭೂಮಿಯಲ್ಲಿ ಮೆಚ್ಚುಗೆಯಾದಂತೆ ತೆರೆಯ ಮೇಲೆ ಆಗಲಿಲ್ಲ. ಅವರು ಬರೀ ನಿರ್ಮಾಪಕರಾದರೇ ಉತ್ತಮ, ನಟಿಸಿ ಪ್ರೇಕ್ಷಕರನ್ನು ಹಿಂಸಿಸದಿರಲಿ ಎಂಬ ಕಟು ಟೀಕೆಗಳೂ ಬಂದವು. ಆದರೆ ವೀರಣ್ಣನವರಿಗೆ ಅಭಿನಯಿಸುವ ಬಯಕೆ. ಹಿಂದೆ ಇಂಥ ಸಮಸ್ಯೆ ಎದುರಾಗಿದ್ದರಿಂದಲೇ 'ಜೀವನ ನಾಟಕ'ದಿಂದ ಅ.ನ.ಕೃಷ್ಣರಾಯರು ನಿರ್ಗಮಿಸಿದ್ದರು. ಅಂಥ ಅನುಭವಗಳೇ ಒಂದು ಪಾಠ ಆಗುವುದು ಬಹಳ ಅಪರೂಪ.

ಆ ವರ್ಷ ಬಿಡುಗಡೆಯಾದ ಮತ್ತೊಂದು ಚಿತ್ರ ಮಾಡ್ರನ್ ಥಿಯೇಟರ್ಸ್, ಸೇಲಂ ಅವರ ಪ್ರಥಮ ಕನ್ನಡ ಚಿತ್ರ 'ಮಂಗಳ ಗೌರಿ'. ಈ ಚಿತ್ರವನ್ನು ನಿರ್ದೇಶಿಸಿದವರು ಟಿ.ಆರ್.ಸುಂದರಂ ಅವರಾದರೂ, ನಿರ್ದೇಶನದ ಹೆಚ್ಚಿನ ಕಾಯಕವನ್ನು ನಿರ್ವಹಿಸಿದವರು ಚಿತ್ರ ಸಾಹಿತ್ಯ ರಚಿಸಿದ ಹುಣಸೂರು ಕೃಷ್ಣಮೂರ್ತಿಯವರು. ಈ ಚಿತ್ರಕ್ಕೆ ಅದೇ ಸಂಸ್ಥೆ ತಮಿಳಿನಲ್ಲಿ ತಯಾರಿಸಿದ್ದ 'ವಿಜಯಲಕ್ಷ್ಮಿ' ಚಿತ್ರದ ಕಥೆಯು ಆಧಾರವಾಗಿತ್ತು. ೧೯೫೩ನೇ ಅಕ್ಟೋಬರ್ ಎರಡನೇ ವಾರದಿಂದ ವಿವಿಧ ಕೇಂದ್ರಗಳಲ್ಲಿ ಪ್ರದರ್ಶಿತವಾಯಿತು. ಇಂದುಶೇಖರ್, ಹರಿಣಿ, ಜಯಶ್ರೀ, ಶ್ರೀನಿವಾಸರಾವ್, ರಾಮಚಂದ್ರಶಾಸ್ತ್ರಿ, ಎಂ.ಎಸ್.ಲಕ್ಷ್ಮೀದೇವಿ, ಬಾಲಕೃಷ್ಣ ಮುಂತಾದವರು ತಾರಾಗಣದಲ್ಲಿದ್ದರು. ಸಂಗೀತ ನಿರ್ದೇಶಕರು ಜಿ.ರಾಮನಾಥನ್. ತಲ್ಲಂ ಪಿಕ್ಚರ್ಸ್ ಮೂಲಕ ಈ ಚಿತ್ರ ಬಿಡುಗಡೆಯಾಯಿತು.

ಪಿತಸ್ಮೃಧ್ಯೆ 'ನಾಗಕನ್ನಿಕಾ' ಚಿತ್ರವನ್ನು ಮಹಾತ್ಮ ಸಂಸ್ಥೆಯು ತಮಿಳಿನ ಅವತರಣಿಕೆಯಲ್ಲಿ ತಂದು ಬಿಡುಗಡೆ ಮಾಡಿತ್ತು. ಸಾಮಾನ್ಯವಾಗಿ ಕನ್ನಡ ಚಿತ್ರವೊಂದರ ತಮಿಳು ಅವತರಣಿಕೆ ಯಶಸ್ವಿಯಾದ ಉದಾಹರಣೆ ಇರಲಿಲ್ಲ. ಇದ್ದುದರಲ್ಲಿ ಯಶಸ್ವಿಯಾದದ್ದು 'ಹರಿಶ್ಚಂದ್ರ' ಮಾತ್ರ. ಅದೇ ಮೊದಲ ಡಬ್ಬಿಂಗ್ ಚಿತ್ರವಾಗಿತ್ತು. ಮತ್ತು ಅದರ ಯಶಸ್ಸು ಹಣ ಎಲ್ಲದರ ಒಡೆತನ ಮೇಯಪ್ಪ ಚೆಟ್ಟಿಯಾರ್ ಅವರಿಗೇ ಹೋಗಿತ್ತು. ಆದರೆ 'ನಾಗಕನ್ನಿಕಾ'ದ ಯಶಸ್ಸು ಕನ್ನಡಿಗರದ್ದೇ ಎಂಬುದು ಮುಖ್ಯ. ಇಂಥ ಸಾಹಸ ಮಾಡಿದ ಗೋಪಾಲಶೆಟ್ಟರು ಮತ್ತು ಆಸರೆಯಾಗಿ ನಿಂತ ಶಾಂತಾ ಪಿಕ್ಚರ್ಸ್‌ನವರು ಅಭಿನಂದನಾರ್ಹರು.

೧. ಸುದರ್ಶನ್ ಮತ್ತು ಅವರ ತಮ್ಮ ಗೋವರ್ಧನ್ ಕನ್ನಡ ನಾಟಕ ಕಂಪನಿಗಳಲ್ಲಿ ಕೆಲಸ ಮಾಡಿದವರು. ಅನೇಕ ತಮಿಳು ಚಿತ್ರಗಳಿಗೆ ಸುದರ್ಶನ್ ಸಂಗೀತ ನೀಡಿದ್ದಾರೆ. ಗೋವರ್ಧನ್ ಅವರು ಕೆಲವು ಚಿತ್ರಗಳಿಗೆ ಅವರ ಸಹಾಯಕರಾಗಿ ಕೆಲಸ ಮಾಡಿರುವುದಲ್ಲದೆ 'ಜಾತಕ ಫಲ' ಮುಂತಾದ ಕನ್ನಡ ಚಿತ್ರಗಳಿಗೆ ಸಂಗೀತ ನೀಡಿದ್ದಾರೆ.

'ಚಂಚಲಕುಮಾರಿ' ಚಿತ್ರದ ತಯಾರಿಕೆ ಸಮಯದಲ್ಲಿ ಉಂಟಾದ ಅಭಿಪ್ರಾಯ ಭೇದದಿಂದಾಗಿ ಮಹಾತ್ಮ ಸಂಸ್ಥೆಯ ಡಿ.ಶಂಕರಸಿಂಗ್ ಮತ್ತು ಬಿ.ವಿಠಲಾಚಾರ್ಯರ ಪಾಲುದಾರಿಕೆ ಕೊನೆಗೊಂಡಿತು. ವ್ಯವಹಾರದಲ್ಲಿ ಅವರಿಬ್ಬರೂ ಬೇರೆಯಾದರೂ ಸ್ನೇಹ ಮಾತ್ರ ಕೊನೆಯವರೆಗೆ ಉಳಿದಿತ್ತು. ಕನ್ನಡ ಚಿತ್ರರಂಗದ ಶೈಶವ ದಿನಗಳಲ್ಲಿ ಈ ಇಬ್ಬರ ಕೊಡುಗೆ ಮಹತ್ವದ್ದು.

ವೀರಣ್ಣನವರು 'ಗುಣಸಾಗರಿ' ಚಿತ್ರವನ್ನು ತಮಿಳಿನಲ್ಲಿ 'ಸತ್ಯ ಶೋಧನೈ' ಎಂಬ ಹೆಸರಿನಲ್ಲಿ ತಯಾರಿಸಿದರು. ಆದರೆ ಆ ಚಿತ್ರದಿಂದ ಭಾರೀ ನಷ್ಟವಾಯಿತು.

೧೯೪೭ರಲ್ಲಿ ತಯಾರಾದ 'ಕೃಷ್ಣಲೀಲಾ' ಚಿತ್ರ ಸ್ವಲ್ಪ ಮಾರ್ಪಾಡುಗಳೊಂದಿಗೆ ೧೯೫೩ರಲ್ಲಿ 'ಶ್ರೀಕೃಷ್ಣ' ಎಂಬ ಹೆಸರಿನಲ್ಲಿ ಬಿಡುಗಡೆಯಾಯಿತು.

೧೯೫೪, ೫೫, ೫೬ರ ಚಿತ್ರರಂಗದ ಬಗ್ಗೆ "ಕನ್ನಡ ಚಿತ್ರ ನಿರ್ಮಾಣದ ವಾತಾವರಣ ಸಂಭ್ರಮದ್ದೇ ಆಗಿತ್ತು. ಆರ್.ನಾಗೇಂದ್ರರಾಯರು, ಎ.ವಿ.ಎಮ್. ಸಂಸ್ಥೆಗಳು ಭಾಗಸ್ಥರಾಗಿ ಬಹಳಷ್ಟು ಕೆಲಸ ಮಾಡಿದರು. ಅವರ ಚಿತ್ರಗಳಿಗೆ ಭರ್ಜರಿ ಸೆಟ್ಸ್ ಹಾಕುತ್ತಿದ್ದರು. ಆರೆನ್ನಾರ್, ಸುಬ್ಬಯ್ಯನಾಯ್ಡು, ಮೇಯಪ್ಪನ್ ಸಖ್ಯವೇ ಕನ್ನಡಕ್ಕಾದ ಅಪರೂಪ ಲಾಭ. ಪ್ರಗತಿ ಪಿಕ್ಚರ್ಸ್ ಹೆಸರಿನಲ್ಲಿ ಚಿತ್ರ ತಯಾರಿಸಿದರು. ಇತ್ತ ಬಸವರಾಜಪ್ಪನವರು ಅದಷ್ಟು ಸ್ವಂತ ಖರ್ಚಿನಲ್ಲಿ ಸೆಟ್‌ಗಳನ್ನು ಹಾಕುತ್ತಿದ್ದರು. 'ಆದರ್ಶಸತಿ', 'ಭೂಕೈಲಾಸ', 'ಸದಾರಮೆ' ಚಿತ್ರಗಳ ಸೆಟ್‌ಗಳ ವೈಭವವೇನೂ ಕಡಿಮೆ ಮಟ್ಟದ್ದಾಗಿರಲಿಲ್ಲ. ಕನ್ನಡ ಚಿತ್ರರಂಗ ಗರಿಗಟ್ಟಿಕೊಳ್ಳುತ್ತಿದ್ದ ಕಾಲವಿದು. ಎ.ವಿ.ಎಂ. ಸಂಸ್ಥೆಯಲ್ಲಿ ಸೀತಾರಾಂ ಕುಮಾರ್ ಎಂಬುವವರು ಸಂಗೀತ ವಿಭಾಗದಲ್ಲಿ (ವಾದ್ಯ) ಖಾಯಂ ಕೆಲಸಗಾರರಾಗಿದ್ದರು. ಜೆಮಿನಿ ಸ್ಟುಡಿಯೋದಲ್ಲಿ ನರಸಿಂಹರಾವ್, ರಾಮಕೃಷ್ಣರಾವ್ ಮೇಕಪ್ ವಿಭಾಗದಲ್ಲಿದ್ದ ಪ್ರತಿಭಾವಂತರು. ಗಣಪತಿಭಟ್ಟರಿಗೆ ಬರೀ ಅಭಿನಯವಲ್ಲ, ಎಲ್ಲ ವಿಭಾಗವಲ್ಲೂ ತಿಳಿವಳಿಕೆ ಇತ್ತು. ಈ ಎಲ್ಲರೂ ಮದರಾಸಿನಲ್ಲಿದ್ದರು, ಎಲ್ಲ ಕನ್ನಡಿಗರೂ ಕನ್ನಡ ಸಂಘದ ಸದಸ್ಯರು. ಆ ಕನ್ನಡ ಸಂಘದ ಕೊಡುಗೆಯೂ ಕನ್ನಡ ಚಿತ್ರರಂಗಕ್ಕಿದೆ ಎಂದು ನೆನೆಯಬೇಕು." ಎನ್ನುತ್ತಾರೆ ಶಂಕರನಾರಾಯಣರಾವ್.

ಎನ್.ಪಿ.ಶಂಕರನಾರಾಯಣರಾಯರು ೧೯೫೩ರಲ್ಲಿ ಮದರಾಸಿನಲ್ಲಿ 'ಪ್ರಜಾವಾಣಿ' ಪತ್ರಿಕೆಯ ವರದಿಗಾರರಾಗಿದ್ದರು. ಆಗಿನ ಚಿತ್ರರಂಗವನ್ನು ಹತ್ತಿರದಿಂದ ಕಂಡವರು. ಅವರು 'ಜಾತಕಫಲ'ದಲ್ಲಿ ಸಬ್ ಇನ್ಸ್‌ಪೆಕ್ಟರ್ ಪಾತ್ರದಲ್ಲಿಯೂ, ಕೆಂಪರಾಜರ 'ಜಲದುರ್ಗ' ಚಿತ್ರದಲ್ಲಿ ಜೈಲ್ ವಾರ್ಡನ್ ಆಗಿ, 'ಭಕ್ತ ಮಾರ್ಕಂಡೇಯ' ಚಿತ್ರದಲ್ಲಿ ಯಮದೂತನಾಗಿ, 'ಧರ್ಮವಿಜಯ'ದಲ್ಲಿ ಬ್ರಾಹ್ಮಣನ ಪಾತ್ರದಲ್ಲಿ, 'ವಿಜಯನಗರದ ವೀರಪುತ್ರ'ದಲ್ಲಿ ಸಾಮಂತ ರಾಜನಾಗಿ, 'ರಣಧೀರ ಕಂಠೀರವ' ಚಿತ್ರದಲ್ಲಿ ಸೇನಾಪತಿಯಾಗಿ, 'ಸ್ಕೂಲ್ ಮಾಸ್ಟರ್' ಚಿತ್ರದಲ್ಲಿ ಮಾರ್ವಾಡಿಯಾಗಿ ಪಾತ್ರ ವಹಿಸಿದ್ದನ್ನು ನೆನೆಯುತ್ತಾರೆ. "ಆ ದಿನಗಳಲ್ಲಿ ಜೊತೆಗಿದ್ದವರು ಉಡುಪಿ ಜಯರಾಂ, ಟಿ.ಉದಯಶಂಕರ್. 'ರಾಣಿ ಹೊನ್ನಮ್ಮ'ದಲ್ಲಿ ನಾನು, ಉದಯಶಂಕರ್ ಸಣ್ಣ ಪಾತ್ರ ವಹಿಸಿದ್ದೆವು. ಉಡುಪಿ ಜಯರಾಂ ಅಭಿನಯದಿಂದ ಸರಿದು ನೃತ್ಯಕ್ಷೇತ್ರದಲ್ಲಿ ಹೆಸರು ಮಾಡಿದ" ಎನ್ನುತ್ತಾರೆ.

"ಸ್ಟುಡಿಯೋದ ರಾಮಕೃಷ್ಣರಾವ್ ಅದ್ಭುತವಾದ ಮೇಕಪ್ ಕಲಾವಿದ. ಪ್ರಸಾಧನದಲ್ಲಿ ಹರಿಬಾಬು ಬಹಳ ಪ್ರಸಿದ್ಧರು. ಸರೋಜಾದೇವಿಗೆ ಅವರೇ ಮೇಕಪ್ ಮಾಡಬೇಕಿತ್ತು" ಎನ್ನುತ್ತಾ "ಆಗ ತಮಿಳಿನಲ್ಲಿ ಹೆಚ್ಚು ಚಿತ್ರಗಳಾಗುತ್ತಿದ್ದವು. ನಮ್ಮ ಕಲಾವಿದರೂ ಅಲ್ಲಿ ಅಭಿನಯಿಸಿಯೇ ಬದುಕು ಸಾಗಿಸಬೇಕಿತ್ತು. ಅಶ್ವತ್ಥಮ್ಮನಂಥ ಕಲಾವಿದೆಯರಿಗೂ ತಮಿಳೇ ಆಶ್ರಯವಾಗಿತ್ತು. 'ಚಿಂತಾಮಣಿ' ಚಿತ್ರದಲ್ಲಿ ಬರುವ ಪ್ರಸಿದ್ಧ ಗೀತೆ 'ಕೃಷ್ಣ ಕೃಷ್ಣ...' ಕ್ಕೆ 'ಅಮರಜ್ಯೋತಿ' ಹಿಂದೀ ಚಿತ್ರದ 'ಸುನೊ ಸುನೊ ಪ ಬನ್‌ಕೇ ರಾಣೀ...' ಎಂಬ ಹಾಡಿನ ಧಾಟಿಯನ್ನೇ ಅನುಸರಿಸಲಾಗಿತ್ತು. ಆಗೆಲ್ಲ ಅದೊಂದು ದೊಡ್ಡ ದೋಷವೆಂದು ಪರಿಗಣಿಸುತ್ತಿರಲಿಲ್ಲ..." ಎನ್ನುತ್ತಾರೆ.

ಆ ದಿನಗಳಲ್ಲೂ ಸೆನ್ಸಾರ್ ಸಮಸ್ಯೆಗಳಿದ್ದವು. ಸಹಾಯಂ ಶ್ರೀನಿವಾಸನ್ ಎಂಬ ಒಬ್ಬ ಸೆನ್ಸಾರ್ ಆಫೀಸರ್. ಅವರು ಚಿತ್ರಗಳಲ್ಲಿ ಏನೇ ಕಟ್ ಮಾಡಿದರೂ ನ್ಯಾಯಯುತವಾಗಿ ಮಾಡುತ್ತಿದ್ದರು. ನಿರ್ಮಾಪಕರು ಕೇಳಿಕೊಂಡಾಗ ಸ್ವಲ್ಪ ರಿಯಾಯ್ತಿ ನೀಡುತ್ತಿದರು. ಅವರು ಎಷ್ಟು ಜನಪ್ರಿಯರಾಗಿದ್ದರೆಂದರೆ, ಮದರಾಸಿನಿಂದ ಅವರು ವರ್ಗವಾಗಿ ಹೋದಾಗ ಮದರಾಸಿನ ಚಿತ್ರೋದ್ಯಮಿಗಳು ವಾಹಿನಿ ಸ್ಟುಡಿಯೋ ಆವರಣದಲ್ಲಿ ಭಾರೀ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿ (ಮಾರ್ಚ್ ೩, ೧೯೫೩) ಸನ್ಮಾನಿಸಿದರು.

ಅವರ ನಂತರ ಸೆನ್ಸಾರ್ ಆಫೀಸರ್ ಆಗಿ ಬಂದವರು ಎಸ್.ಎ.ಅಯ್ಯರ್. ಆತ ಸುಭಾಷ್‌ಚಂದ್ರ ಬೋಸರ ಐ.ಎನ್.ಎ.ದಲ್ಲಿ ಅಧಿಕಾರಿ ಆಗಿದ್ದರಂತೆ. ಬಹಳ ದರ್ಪ. ಸಿನಿಮಾ ಬಗ್ಗೆ ಸ್ವಲ್ಪವೂ ಜ್ಞಾನವಿರಲಿಲ್ಲ.

'ಸೌಭಾಗ್ಯ ಲಕ್ಷ್ಮಿ' ಚಿತ್ರದ ತಯಾರಿಕೆ ಸಂದರ್ಭದಲ್ಲಿ ವಿಠಲಾಚಾರ್ಯರಿಗೆ ಆದ ಕಟು ಅನುಭವ. ಅವರ ಮಾತಿನಲ್ಲೇ ಹೇಳುವುದಾದರೆ,

"ಖಳನಾಯಕ ಹುಡುಗಿಯರನ್ನು ಮುಟ್ಟಿದಾಗಲೆಲ್ಲಾ ಕಟ್, ಮಹಾರಾಜರ ಫೋಟೋಗಳು ಎಲ್ಲಿ ಬಂದರೂ ಕಟ್, ವಿಲನ್ ಕತ್ತಿ ಎಳೆದರೆ ಕಟ್. ಹೀಗೆ ಒಂದು ಸಾರಿ ಪಿಕ್ಚರ್ ನೋಡಿ ಕಟ್‌ಗಳನ್ನು ಮಾಡಿದ. ಅನಂತರ ಬರೀ ಸೌಂಡ್ ನೋಡಿ ಕಟ್‌ಗಳನ್ನು ಮಾಡಿದ. ಮತ್ತೊಂದು ಸಾರಿ ಸಾಂಗ್ಸ್ ನೋಡಿ ಇನ್ನಷ್ಟು ಕಟ್‌ಗಳನ್ನು ಮಾಡಿದ. ಪ್ರೊಜೆಕ್ಷನ್‌ನಲ್ಲಿ ಪೂರ್ತಿ ಫಿಲಂ ನೋಡಿ ಮತ್ತಷ್ಟು ಕಟ್ ಮಾಡಿದ. ೧೮,೦೦೦ ಅಡಿ ಫಿಲಂ ಕೈಗೆ ಕೊಟ್ಟರೆ ೧೦,೦೦೦ ಅಡಿ ಕಟ್ ಮಾಡಿ ೮,೦೦೦ ಅಡಿ ಕೈಗೆ ಕೊಡುತ್ತಿದ್ದ. ಎಷ್ಟೇ ಕೇಳಿಕೊಂಡರೂ ಒಪ್ಪುತ್ತಿರಲಿಲ್ಲ. ಅದೇ ಸಮಯದಲ್ಲಿ ಮಾಡ್ರನ್ ಥಿಯೇಟರ್ಸ್ ಅವರ 'ತಿರುಂಬಿಪಾರ್' ಮತ್ತು ಕೆಲವು ಮಲೆಯಾಳಂ ಚಿತ್ರಗಳು ಹಾಗೂ ವೈ.ವಿ.ರಾವ್ ನಿರ್ದೇಶನದ 'ರಾಮದಾಸ್' ತೆಲುಗು ಚಿತ್ರ ಸೆನ್ಸಾರ್‌ಗೆ ಬಂದಿದ್ದವು. ನಾನು ಸೆನ್ಸಾರ್ ಆಫೀಸರ್ ಅಯ್ಯರ್ ಮೇಲೆ ಗಲಾಟೆ ಮಾಡಿದೆ. ಆತ ನನ್ನನ್ನು ಪೊಲೀಸ್‌ಗೆ ಕೊಡ್ತೀನಿ ಅಂತ ಹೆದರಿಸಿದ. "ನಿನಗೆ ಅಧಿಕಾರ ಇಲ್ಲ. ಸಫರ್ ಆಗಿರೋನು ನಾನು" ಎಂದೆ. ವೈ.ವಿ.ರಾವ್ ಅವರು ನನಗೂ ಅವರಿಗೂ ಸಮಾಧಾನ ಮಾಡಿದರು.

"ಸರಿ, ನಮ್ಮ ಪಾರ್ಟ್ನರ್‌ಗೆ ಫೋನ್ ಮಾಡಿ, ಏನು ಮಾಡುವುದು ಎಂದು ಕೇಳಿದೆ. ಅವರು ಏನೂ ಮಾಡುವುದು ಬೇಡ. ಯಾವುದಾದರೂ ಡಾಕ್ಯುಮೆಂಟರಿ ಅಥವಾ ನ್ಯೂಸ್ ರೀಲ್ ಸೇರಿಸಿ ರಿಲೀಸ್ ಮಾಡೋಣ ಎಂದರು. ಹಳೇದು ಪಳೇದು ಎಲ್ಲ ಸೇರಿಸಿ ೧೦,೦೦೦ ಅಡಿ ಮಾಡಿ ರಿಲೀಸ್ ಮಾಡಿದೆವು. ಅಂದೇ 'ಅನಾರ್ಕಲಿ' ಹಿಂದಿ ಚಿತ್ರದ ಬಿಡುಗಡೆ. ಆದರೂ ನಮ್ಮ ಚಿತ್ರ ಹೌಸ್‌ಫುಲ್ ಆಗಿ ೧೨ ವಾರ ಪ್ರದರ್ಶನವಾಯಿತು.

"ಆದರೆ ಸೆನ್ಸಾರ್ ಅಧಿಕಾರಿ ಅಯ್ಯರ್ ಮೇಲೆ ನನಗೆ ಬಹಳ ಕೋಪ ಬಂತು. ಜೆಮಿನಿ ವಾಸನ್ ಅವರ ಹತ್ತಿರ ಹೇಳಿದೆ. ಅವರು ಆತನಿಗೆ ಒಂದು ರೀತಿ ವಾರ್ನ್ ಮಾಡಿ 'ನೀನು ಇಲ್ಲಿಂದ ಹೊರಟು ಹೋಗು. ಇಲ್ಲದಿದ್ರೆ ಡೇಂಜರ್' ಅಂತ ಹೇಳಿದರು. ಆತ ವರ್ಗ ಮಾಡಿಸಿಕೊಂಡು ಹೋದ. ಅನಂತರ ಶಾಸ್ತ್ರಿ ಅಂತ ಆಫೀಸರ್ ಬಂದರು. ಆತ ಒಳ್ಳೆಯವರು". (ಸಂದರ್ಶನ)

೧೯೫೪ ಕನ್ನಡ ಚಿತ್ರರಂಗಕ್ಕೆ ಅತ್ಯಂತ ಮಹತ್ವದ ವರ್ಷ. ರಾಜಕುಮಾರ್ ಚಿತ್ರರಂಗ ಪ್ರವೇಶಿಸಿದ ವರ್ಷ. ಹಾಗೆಯೇ ಕನ್ನಡ ಚಿತ್ರರಂಗದಲ್ಲಷ್ಟೇ ಅಲ್ಲ, ತಮಿಳಿನಲ್ಲೂ ಹೆಸರು ಮಾಡಿದ ಕಲ್ಯಾಣ್‌ಕುಮಾರ್ ಕೂಡ ಚಿತ್ರರಂಗ ಪ್ರವೇಶಿಸಿದ ವರ್ಷ.

ವೀರಣ್ಣನವರು ತಮ್ಮ ಕಂಪನಿಯ ಜನಪ್ರಿಯ ನಾಟಕ 'ಬೇಡರ ಕಣ್ಣಪ್ಪ'ವನ್ನು ಚಿತ್ರ ಮಾಡುವ ಬಗ್ಗೆ ಯೋಚಿಸಿದರು. ಆದರೆ 'ಸತ್ಯ ಶೋಧನೈ'ಯಿಂದ ಅಪಾರ ನಷ್ಟ ಅನುಭವಿಸಿದ್ದರಿಂದ ಸ್ವಂತವಾಗಿ ಚಿತ್ರ ತಯಾರಿಸಲು ಅನುಕೂಲವಿರಲಿಲ್ಲ. ಎ.ವಿ.ಮೇಯಪ್ಪನ್‌ನವರ ಬಳಿ ಈ ವಿಷಯ ಪ್ರಸ್ತಾಪಿಸಿದರು. ನಾಟಕವನ್ನು ನೋಡಿದ್ದ ಮೇಯಪ್ಪನ್ ಸಹಕಾರ ನೀಡಲು ಸಿದ್ಧರಾದರು. ಗುಬ್ಬಿ ಕರ್ನಾಟಕ ಫಿಲಂಸ್ ಲಾಂಛನದಲ್ಲಿ 'ಬೇಡರ ಕಣ್ಣಪ್ಪ' ಚಿತ್ರದ ತಯಾರಿಕೆಗೆ ಪೂರ್ವ ಸಿದ್ಧತೆಗಳು ನಡೆದವು. ಹೆಚ್.ಎಲ್.ಎನ್.ಸಿಂಹ ಅವರೇ ನಿರ್ದೇಶಕರಾಗಿ ನೇಮಕವಾದರು. ಕಣ್ಣಪ್ಪನ ಪಾತ್ರಕ್ಕೆ ಎಲಿವಾಳ ಸಿದ್ದಯ್ಯಸ್ವಾಮಿ ಆಯ್ಕೆಯಾದರು. ಮೇಕಪ್ ಟೆಸ್ಟ್ ಎಲ್ಲ ಆದ ನಂತರ ಮೇಯಪ್ಪ ಚೆಟ್ಟಿಯಾರ್‌ಗೆ ಆತ ಒಪ್ಪಿಗೆಯಾಗಲಿಲ್ಲ. ಆಮೇಲೆ ವೀರಣ್ಣನವರ ಸಲಹೆಯ ಮೇರೆಗೆ ಆಗ ಸುಬ್ಬಯ್ಯನಾಯ್ಡು ಅವರ ಕಂಪನಿಯಲ್ಲಿ ನಟರಾಗಿದ್ದ ಎಸ್.ಪಿ.ಮುತ್ತುರಾಜ್ ಅವರನ್ನು ಕರೆಸಲಾಯಿತು. ಮುತ್ತುರಾಜ್ ಮತ್ತು ಅವರ ತಂದೆ ಸಿಂಗಾನಲ್ಲೂರು ಪುಟ್ಟಸ್ವಾಮಯ್ಯ ಅವರುಗಳು ಹಿಂದೆ ಗುಬ್ಬಿ ಕಂಪನಿಯಲ್ಲಿ ನಟರಾಗಿದ್ದರು. ತಂದೆ ಪುಟ್ಟಸ್ವಾಮಯ್ಯನವರಿಗೆ ರಾಜಕುಮಾರನಂತಿರುವ ತಮ್ಮ ಮಗ ಸಿನಿಮಾದಲ್ಲಿ ಅಭಿನಯಿಸಿ ಹೆಸರು ಮಾಡಬೇಕು ಎಂದು ಆಸೆಯಿತ್ತು. ಅದನ್ನು ವೀರಣ್ಣನವರಲ್ಲಿ ತೋಡಿಕೊಂಡೂಬಿಟ್ಟಿದ್ದರು. ಈಗ ಅದಕ್ಕೆ ಸಮಯ ಬಂದಂತಾಯಿತು. ಆಗ ಸುಬ್ಬಯ್ಯನಾಯ್ಡು ಅವರ ಕಂಪನಿಗೆ ಕರ್ನಾಟಕ ಫಿಲಂಸ್ ಅವರಿಂದ ಟೆಲಿಗ್ರಾಂ



(ಚಿತ್ರ ೧೦) 'ಬೇಡರ ಕಣ್ಣಪ್ಪ' ಚಿತ್ರದಲ್ಲಿ ಪಂಢರಿಬಾಯಿ ಮತ್ತು ರಾಜಕುಮಾರ್

ಹೋಯಿತು. ತಾವು ಭಕ್ತಿಪ್ರಧಾನ ಚಿತ್ರವೊಂದನ್ನು ತಯಾರಿಸುತ್ತಿರುವುದಾಗಿಯೂ, ಮೇಕಪ್ ಟೆಸ್ಟ್‌ನಲ್ಲಿ ಪಾಸಾಗಿ ನಿರ್ದೇಶಕರು ಒಪ್ಪಿದರೆ ನಿಮ್ಮನ್ನು ನಾಯಕ ಪಾತ್ರಕ್ಕೆ ಕಾಂಟ್ರಾಕ್ಟ್ ಮಾಡಿಕೊಳ್ಳಲಾಗುವುದೆಂದೂ ಆ ಟೆಲಿಗ್ರಾಂನ ಒಕ್ಕಣೆ.

ಮುತ್ತುರಾಜ್‌ಗೆ ಇದು ಅನಿರೀಕ್ಷಿತ. ಏಕೆಂದರೆ ತಾನು ಸಿನಿಮಾ ನಟನಾಗುವೆನೆಂದು ಅವರು ಕನಸು ಮನಸಿನಲ್ಲೂ ಎಣಿಸಿರಲಿಲ್ಲ. ಆದರೆ ಅವರ ತಂದೆ ಪುಟ್ಟಸ್ವಾಮಯ್ಯನವರಿಗೆ ಮಾತ್ರ ತಮ್ಮ ಮಗ ಸಿನಿಮಾ ರಂಗದಲ್ಲಿ ದೊಡ್ಡ ನಟನಾಗಬೇಕೆಂಬ ಮಹದಾಸೆಯಿತ್ತು. ಆದರೆ ಅವರ ಜೀವಿತ ಕಾಲದಲ್ಲಿ ಆ ಆಸೆ ಈಡೇರಲಿಲ್ಲ, ತಡವಾಯಿತು.

ಟೆಲಿಗ್ರಾಂ ಬಂದಾಗ ಈಗಲಾದರೂ ತಮ್ಮ ಅಪ್ಪಾಜಿಯವರ ಆಸೆ ಕೈಗೂಡುವ ಸಂದರ್ಭ ಬಂತಲ್ಲಾ ಎಂಬ ಸಂತೋಷದಿಂದ ಮುತ್ತುರಾಜ್ ಮದರಾಸಿಗೆ ಧಾವಿಸಿ ಸಂಬಂಧಿಸಿದವರನ್ನು ಕಂಡರು. ಮೇಕಪ್ ಟೆಸ್ಟ್ ಎಲ್ಲ ಆಯಿತು. ೩-೪ ದಿನಗಳಲ್ಲಿ ತಿಳಿಸುವುದಾಗಿ ಹೇಳಿದರು. ನಾಟಕದ ಕ್ಯಾಂಪ್‌ಗೆ ಹಿಂತಿರುಗಿ ೧೫ ದಿನಗಳಾದರೂ ಯಾವುದೇ ಸಮಾಚಾರ ಬಾರದಿದ್ದುದರಿಂದ ಮೇಕಪ್ ಟೆಸ್ಟ್‌ನಿಂದ ಪಾಸಾಗಿಲ್ಲವೇನೋ ಎಂಬ ಆತಂಕ ಮುತ್ತುರಾಜ್ ಅವರಲ್ಲಿ ಉಂಟಾಯಿತು. ನಾಯ್ಡು ಅವರ ಕಂಪನಿ ಕ್ಯಾಂಪ್‌ನಲ್ಲಿದ್ದಾಗಲೇ ಒಂದು ದಿನ ರಿಜಿಸ್ಟರ್ಡ್ ಅಂಚೆ ಅವರ ಕೈ ತಲುಪಿತು. 'ಬೇಡರ ಕಣ್ಣಪ್ಪ' ಚಿತ್ರಕ್ಕೆ ಆಯ್ಕೆ ಮಾಡಿರುವುದಾಗಿಯೂ, ತಕ್ಷಣ ಹೊರಟು ಬರಬೇಕೆಂದೂ ಕಾಂಟ್ರಾಕ್ಟ್ ಪತ್ರ ಬಂದಿತ್ತು.

ಸುಬ್ಬಯ್ಯನಾಯ್ಡು ಅವರನ್ನು ಕಂಡು ಪತ್ರದ ವಿಷಯ ತಿಳಿಸಿ ದಯವಿಟ್ಟು ತಮ್ಮನ್ನು ಬಿಟ್ಟುಕೊಡಬೇಕೆಂದು ಮುತ್ತುರಾಜ್ ಪ್ರಾರ್ಥಿಸಿದರು. ನಾಯ್ಡು ಅವರಿಗೆ ಮುತ್ತುರಾಜರನ್ನು ಬಿಟ್ಟುಕೊಡಲು ಮನಸ್ಸಿರಲಿಲ್ಲ. ಕಡೆಗೆ ''ನಿನಗೆ ಒಳ್ಳೆಯದಾಗುವುದಾರೆ ನನ್ನ ಅಡ್ಡಿಯಿಲ್ಲ. ಸಂತೋಷವಾಗಿ ಹೋಗಿ ಬಾ. ಪುನಃ ಬರಬೇಕೆನಿಸಿದರೆ, ನನ್ನ ಕಂಪೆನಿ ಬಾಗಿಲು ನಿನಗೆ ಯಾವಾಗಲೂ ತೆಗೆದಿರುವುದು'' ಎಂದು ಆಶೀರ್ವದಿಸಿ ಕಳುಹಿಸಿದರು.

೧೫ ದಿನಗಳ ಕಾಲಾವಕಾಶ ಕೇಳಿ ಅನಂತರ ಯಜಮಾನರು (ಸುಬ್ಬಯ್ಯನಾಯ್ಡು) ಹಾಗೂ ಹಿತೈಷಿಗಳೆಲ್ಲರಿಂದ ಬೀಳ್ಕೊಟ್ಟು, ಮದರಾಸಿನತ್ತ ಮುತ್ತುರಾಜ್ ಪ್ರಯಾಣ ಬೆಳೆಸಿದರು. ಮುತ್ತುರಾಜ್ ಎಂಬ ಹೆಸರು ಚಿತ್ರರಂಗಕ್ಕೆ ಅಷ್ಟು ಸರಿಹೊಂದುವುದಿಲ್ಲವೆಂದೂ, ಹೆಸರು ಬದಲಾಯಿಸಬೇಕೆಂದೂ ನಿರ್ಮಾಪಕರು ಸಲಹೆ ಮಾಡಿದರು. ಅವರ ಮನೆಯಲ್ಲಿ ಎಲ್ಲರ ಹೆಸರಿನಲ್ಲೂ ರಾಜ ಎಂಬ ಹೆಸರು ಸೇರಿರಬೇಕೆಂಬುದು ಅವರ ತಂದೆಯವರ ಇಚ್ಛೆಯಾಗಿತ್ತು. ಹೆಸರು ಸೂಚಿಸುವ ಸರದಿ ನಿರ್ದೇಶಕ ಸಿಂಹ ಅವರ ಪಾಲಿಗೆ ಬಂತು. ಅವರೇ 'ರಾಜಕುಮಾರ್' ಎಂದು ಸೂಚಿಸಿದರು. ಅದು ಎಲ್ಲರಿಗೂ ಒಪ್ಪಿಗೆ ಆಯಿತು.

''ಮುತ್ತುರಾಜರನ್ನು ಮದುವೆ ಆದ ಹೊಸತರಲ್ಲೇ ಗಂಡ-ಹೆಂಡತಿಯರನ್ನು ಸಿಂಹ ಅವರು ರೈಲ್ವೆಸ್ಟೇಷನ್‌ನಲ್ಲಿ ಭೇಟಿ ಆಗಿದ್ದರು. ಮನಸ್ಸಿನಲ್ಲಿ ಕಣ್ಣಪ್ಪನ ಪಾತ್ರಕ್ಕೆ ಈತನೇ ಸರಿ ಎನ್ನಿಸಿತ್ತು. ಮುತ್ತುರಾಜರು 'ಅಂಬರೀಷ' ನಾಟಕದಲ್ಲಿ ರಮಾಕಾಂತನ ಪಾತ್ರ ಮಾಡಿದ್ದನ್ನು ನೋಡಿದ್ದ ಸಿಂಹರ ಮನಸ್ಸಿನಲ್ಲಿ ಕಣ್ಣಪ್ಪ ಹೀಗೇ ಇರಬೇಕೆಂಬ ಕಲ್ಪನೆ ಮೂಡಿಬಿಟ್ಟಿತ್ತು. ಸರಿಯಾದ ಸಮಯಕ್ಕೆ ದುಮ್ಮಿ ಮುರಿಗೆಪ್ಪನವರ ತಮ್ಮ ಮುತ್ತುರಾಜರ ಹೆಸರನ್ನು ಸೂಚಿಸಿದರು. ಆದರೆ ಮೇಕಪ್ ಟೆಸ್ಟ್‌ನಲ್ಲಿ ಬ್ರೆಡ್ ಅಂಗಡಿ ರಾಜು ಮತ್ತು ಇನ್ನೂ ಕೆಲವರು ಆಯ್ಕೆ ಆಗಿದ್ದರು. ಅಂತಿಮವಾಗಿ ಮುತ್ತುರಾಜರೇ ಆಯ್ಕೆಯಾದರು. ಅದು ಚಿತ್ರದುರ್ಗ ಕ್ಯಾಂಪ್‌ನಲ್ಲಿದ್ದಾಗ ನಡೆದದ್ದು (ನರಸಿಂಹರಾಜು ಅವರ ಮಾತು ಇದನ್ನು ಪುಷ್ಟೀಕರಿಸುತ್ತದೆ). ರಾಜ್ ಕಪೂರ್, ದಿಲೀಪ್ ಕುಮಾರ್ ಅವರನ್ನೂ ಮೀರಿಸಿದ ಕಲಾವಿದನನ್ನು ರೂಪಿಸುವ ಬಯಕೆಯಿಂದ ಅವರ ಹೆಸರುಗಳ ಅರ್ಧ ಭಾಗವನ್ನಾಯ್ದು 'ರಾಜಕುಮಾರ್' ಎಂದು ಕರೆದರು'' ಎಂದು ಹೆಚ್.ಎಲ್.ಎನ್.ಸಿಂಹರೊಂದಿಗೆ ನಿಕಟ ಸಂಪರ್ಕವಿದ್ದ ಪತ್ರಕರ್ತ ಬಿ.ವಿ.ವೈಕುಂಠರಾಜು ಹೇಳುತ್ತಾರೆ.

ಹೀಗೆ ರಂಗಭೂಮಿಯ ಮುತ್ತುರಾಜರು ರಾಜಕುಮಾರ್ ಆಗಿ ಚಿತ್ರರಂಗ ಪ್ರವೇಶಿಸಿದರು. ಅವರ ಜೀವನದಲ್ಲಿ ಹೊಸ ಅಧ್ಯಾಯವೊಂದು ಪ್ರಾರಂಭವಾಯಿತು.

'ಬೇಡರ ಕಣ್ಣಪ್ಪ' ನಾಟಕದಲ್ಲಿ ಅಭಿನಯಿಸುತ್ತಿದ್ದ ಅದೇ ಪಾತ್ರಗಳಿಗೆ ಜಿ.ವಿ.ಅಯ್ಯರ್ ಮತ್ತು ನರಸಿಂಹರಾಜು ಆಯ್ಕೆಯಾದರು. ಜಯಲಲಿತಾ ಅವರ ತಾಯಿ ಸಂಧ್ಯಾ, ರಾಜಾ ಸುಲೋಚನ, ರಾಮಚಂದ್ರಶಾಸ್ತ್ರಿ ಮುಂತಾದವರು ಆಯ್ಕೆಯಾದರು. ನಾಯಕಿ ಪಾತ್ರಕ್ಕೆ ಪಂಢರಿಬಾಯಿ ಆಯ್ಕೆಯಾದರು.[1]

'ಬೇಡರ ಕಣ್ಣಪ್ಪ' ನಿರ್ಮಾಣದ ಹಿನ್ನೆಲೆ ಕುರಿತು ನರಸಿಂಹರಾಜು ಆತ್ಮಕಥನದಲ್ಲಿ ಹೀಗೆ ಹೇಳಿದ್ದಾರೆ : ''ಮಂಡ್ಯದಲ್ಲಿ 'ಸಾಹುಕಾರ' ೩೦-೪೦ ನಾಟಕಗಳಾದ ಮೇಲೆ 'ಬೇಡರ ಕಣ್ಣಪ್ಪ' ಹಾಕಿದೆವು. ಇದೇ ಸಮಯದಲ್ಲೇ 'ಬೇಡರ ಕಣ್ಣಪ್ಪ' ಚಿತ್ರ ತೆಗೆಯುವುದೆಂದು ತೀರ್ಮಾನವಾಯಿತು. ಗುಬ್ಬಿ ಕರ್ನಾಟಕ ಫಿಲಂಸ್ ಲಾಂಛನದಡಿ ಎ.ವಿ.ಎಂ.ಕಂಪನಿಯವರೊಡನೆ ಸೇರಿ ವೀರಣ್ಣನವರು ನಿರ್ಮಾಪಕರಾದರು. ನಿರ್ದೇಶನಕ್ಕೆ ಹೆಚ್.ಎಲ್.ಎನ್.ಸಿಂಹ ಗೊತ್ತಾದರು. ಆಗ ಗುಬ್ಬಿ ಕರ್ನಾಟಕ ಫಿಲಂಸ್‌ಗೆ ವೀರಣ್ಣ, ಆರ್.ಬಸವರಾಜು, ಗುರುನಾಥ, ದುಮ್ಮಿ ಮುರಿಗೆಪ್ಪ ಡೈರೆಕ್ಟರುಗಳಾಗಿದ್ದರು. ಅವರೂ ನಿರ್ಮಾಪಕರು. ಇವರಿಗೆ ನಾಟಕ ಆಡಿ ತೋರಿಸಲಾಯಿತು. ಆಗಲೇ ಚಿತ್ರದಲ್ಲಿ ಕಾಶಿ ಪಾತ್ರ ನನ್ನದೆಂದು ತೀರ್ಮಾನವಾಯಿತು.

''ಆಗ ರಾಜಕುಮಾರ್ ಸುಬ್ಬಯ್ಯನಾಯ್ಡು ಅವರ ಕಂಪನಿಯಲ್ಲಿದ್ದರು. ಅವರೇ ಕಣ್ಣಪ್ಪನ ಪಾತ್ರಕ್ಕೆ ಗೊತ್ತಾದರು. ಅವರು ಆಗ ಚಿತ್ರದುರ್ಗದ ಕ್ಯಾಂಪಿನಲ್ಲಿದ್ದರು. ಅದು ೧೯೫೩ನೆಯ ಇಸವಿ. ಅದೇ ವರ್ಷ ನನ್ನ ಮದರಾಸ್ ಪ್ರಯಾಣ. 'ಬೇಡರ ಕಣ್ಣಪ್ಪ' ಚಿತ್ರೀಕರಣದಲ್ಲಿ ಭಾಗವಹಿಸಲು ಮದರಾಸಿಗೆ ಹೊರಟೆ.

''ಶೂಟಿಂಗ್ ಪ್ರಾರಂಭವಾಗಲು ಇನ್ನೂ ನಾಲ್ಕು ದಿನಗಳ ಕಾಲಾವಕಾಶವಿತ್ತು. ನಿರ್ದೇಶಕ ಹೆಚ್.ಎಲ್.ಎನ್.ಸಿಂಹ ಅವರು ನಮಗೆಲ್ಲ ಕ್ಯಾಮರಾ ಮುಂದೆ ನಿಲ್ಲುವುದು, ಡೈಲಾಗ್ ಹೇಳುವುದು, ವಿದ್ಯುತ್ ದೀಪದ ಬೆಳಕಿಗೆ ಹೊಂದಿಕೊಳ್ಳುವುದೇ ಮೊದಲಾದ ವಿಷಯಗಳ ಬಗ್ಗೆ ವಿವರಿಸಿ ಹೇಳಿದರು. ಮಿಡ್‌ಶಾಟ್, ಲಾಂಗ್ ಶಾಟ್, ಕ್ಲೋಸಪ್‌ಗಳಲ್ಲಿ ಹೇಗಿರಬೇಕೆಂಬುದನ್ನು ತಿಳಿಸಿಕೊಟ್ಟರು. ಶೂಟಿಂಗ್ ಪ್ರಾರಂಭವಾದ ದಿನಾಂಕ ನನಗೆ ನೆನಪಿಲ್ಲ. ಆದರೆ ಆರಂಭವಾಗುವುದಕ್ಕೆ ಒಂದು ದಿನ ಮೊದಲು ರಾತ್ರಿಯೇ ಅಯ್ಯರ್ ಮತ್ತು ನನ್ನ ತಲೆಯನ್ನು ನುಣ್ಣಗೆ ಮುಂಡನ ಮಾಡಲಾಯಿತು.

೧. ಹೆಚ್ಚು ಕಡಿಮೆ ಇದೇ ಸಮಯದಲ್ಲಿ 'ಪರಾಶಕ್ತಿ' ತಮಿಳು ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ಶಿವಾಜಿ ಗಣೇಶನ್ ಅವರಿಗೂ ಪಂಢರಿಬಾಯಿ ಪ್ರಥಮ ನಾಯಕಿಯಾಗಿದ್ದರು.

''ಮೊದಲ ಬಾರಿ ಕ್ಯಾಮರಾ ಮುಂದೆ ನಿಂತಾಗ ನಾನು ಬಹಳ ಉತ್ಸಾಹದಿಂದಿದ್ದೆ. ಹೇಳಿಕೊಟ್ಟಿದ್ದ ಮಾತುಗಳನ್ನು ಒಂದೂ ತಪ್ಪಿಲ್ಲದಂತೆ ಹೇಳಿ ಅಭಿನಯಿಸಿದೆ. ವೀರಣ್ಣನವರು, ಎ.ವಿ.ಎಂ.ಚೆಟ್ಟಿಯಾರರು ಬಹಳ ಸಂತೋಷ ಪಟ್ಟರು. ರಷಸ್ ನೋಡಿದ ಮೇಲಂತೂ ಅವರಿಗೆ ಹೆಚ್ಚು ತೃಪ್ತಿಯಾಯಿತು.

''ಚಿತ್ರದುರ್ಗದ ಕ್ಯಾಂಪಿನಲ್ಲಿದ್ದಾಗ ೧೯೫೪ರಲ್ಲಿ ಯುಗಾದಿಯ ದಿನ 'ಬೇಡರ ಕಣ್ಣಪ್ಪ', 'ಮುಟ್ಟಿದ್ದೆಲ್ಲ ಚಿನ್ನ' ಚಿತ್ರಗಳೆರಡೂ ಬಿಡುಗಡೆಯಾದವು. ಆ ವೇಳೆಗೆ ಚಿತ್ರದ ಕೆಲಸ ಮುಗಿದು ಆರು ತಿಂಗಳು ಕಳೆದಿತ್ತು.''

'ಬೇಡರ ಕಣ್ಣಪ್ಪ' ಚಿತ್ರದ ಬಗ್ಗೆ ಜಿ.ವಿ.ಅಯ್ಯರ್ ಹೀಗೆ ಹೇಳುತ್ತಾರೆ : ''ಚೆಟ್ಟಿಯಾರ್ ಅವರಿಗೆ ಭರವಸೆಯೇ ಇಲ್ಲ. 'ಏನಯ್ಯಾ ಒಬ್ಬ ಗಿಣಿ ಮೂಗಿನವ, ಒಬ್ಬ ಹಲ್ಲುಬ್ಬಿನವನು, ಇನ್ನೊಬ್ಬ ಸೊಣಕಲ - ಇವ್ರನ್ನೆಲ್ಲ ಇಟ್ಕೊಂಡು ನೀನೇನು ಸಿನಿಮಾ ಮಾಡ್ತಿಯೋ..' ಅನ್ನುತ್ತಲೇ ಇದ್ದರು.

''ಚೆಟ್ಟಿಯಾರ್ ಅವರು 'ಬೇಡರ ಕಣ್ಣಪ್ಪ' ನಾಟಕ ನೋಡಿದ್ದರು. ಕಥೆ ಇಷ್ಟವಾಗಿತ್ತು. ಅದರಿಂದಲೇ ಸಿನಿಮಾ ಮಾಡಲು ಒಪ್ಪಿದ್ದು. ಮೊದಲು 'ಶ್ರೀಕೃಷ್ಣ ಗಾರುಡಿ'ಯಲ್ಲಿ ಕೃಷ್ಣನ ಪಾತ್ರ ಮಾಡಿದ್ದ ಎಲಿವಾಳ ಸಿದ್ದಯ್ಯ, ಮತ್ತೊಂದಿಬ್ಬರು ವೃತ್ತಿರಂಗಭೂಮಿ ನಟರನ್ನೇ ಕರೆಸಲಾಗಿತ್ತು. ಅದ್ಯಾವುದೂ ಸರಿ ಹೊಂದಲಿಲ್ಲ. ಆಮೇಲೆ ಮುತ್ತುರಾಜನನ್ನು ಕರೆಸಿದ್ದು. ಮೇಕಪ್ ಟೆಸ್ಟಿನಲ್ಲೂ ಚೆಟ್ಟಿಯಾರ್ರಿಗೆ ಅನುಮಾನ. ಎರಡು ಮೂರು ಸೀನ್ ಆದ ಮೇಲೆ ಈ ಹುಡುಗ ಚೆನ್ನಾಗಿ ಅಭಿನಯಿಸ್ತಾನಪ್ಪ ಅಂತ ಮೆಚ್ಚಿಕೊಂಡರು. ನಿರ್ದೇಶಕ ಸಿಂಹ ಅವರು 'ಸಿಂಗಾನಲ್ಲೂರು ಪುಟ್ಟಸ್ವಾಮಯ್ಯ ಮುತ್ತುರಾಜ್' ಅನ್ನುವ ಹೆಸರನ್ನು ರಾಜಕುಮಾರ್ ಅಂತ ಬದಲಾಯಿಸಿದರು. ಮೊದ ಮೊದಲು ಮುತ್ತುರಾಜ್ ಅದನ್ನು ಇಷ್ಟಪಡಲಿಲ್ಲ..''.

''ಅವರಿಗೆ ಪದ್ಮಭೂಷಣ ಪ್ರಶಸ್ತಿ ಬಂದಾಗ ಪತ್ರಿಕೆಗಳಲ್ಲಿ 'ಸಿಂಗಾನಲ್ಲೂರು ಪುಟ್ಟಸ್ವಾಮಯ್ಯ ಮುತ್ತುರಾಜ್'ಗೆ ಪ್ರಶಸ್ತಿ ಅಂತ ಪ್ರಕಟವಾದಾಗ ಬಹಳ ಜನರಿಗೆ ಗೊತ್ತಾಗಲೇ ಇಲ್ಲ. ಪತ್ರಿಕೆಯವರು ಕೂಡಾ ರಾಜ್ ಮನೆಗೆ ಫೋನ್ ಮಾಡಿ 'ನೀವೇನಾ'? ಅಂತ ಕೇಳಿ ಕನ್‌ಫರ್ಮ್ ಮಾಡಿಕೊಂಡಿದ್ದರು'' ಎಂದು ನೆನೆಯುತ್ತಾರೆ ನಿರ್ದೇಶಕ ರವೀ.

ಮೇಯಪ್ಪ ಚೆಟ್ಟಿಯಾರರು ಅಸಮ್ಮತಿ ಸೂಚಿಸಿದಾಗ ಪದೇ ಪದೇ ಕಲಾವಿದರ ಸಾಮರ್ಥ್ಯದ ಬಗ್ಗೆ ವಿವರಿಸಿ ಒಪ್ಪಿಸಲು ಪ್ರಯತ್ನಿಸಿದವರು ಪಂಢರಿಬಾಯಿ. ಆಕೆ ಕೊಂಚ ಭಾಗ ಚಿತ್ರಿಸಿ, ಪ್ರೋಸೆಸ್ ಮಾಡಿ ನೋಡಿ, ಅವಸರದಲ್ಲಿ ಬೇಡ ಅನ್ನಬೇಡಿ ಎಂದು ಒತ್ತಾಯ ಮಾಡಿದರೆಂದೂ, ಹಾಗೆ 'ಸ್ಯಾಂಪಲ್' ನೋಡಿದ ಮೇಲೆ ಚೆಟ್ಟಿಯಾರರು ತುಂಬಾ ಸಂತೋಷ ಪಟ್ಟು ಮುತ್ತುರಾಜ್ ದೊಡ್ಡ ಕಲಾವಿದನಾಗುತ್ತಾನೆ ಎಂದರೆಂದೂ ಉದ್ಯಮದ ಹಿರಿಯರು ಹೇಳುತ್ತಾರೆ. ಮತ್ತು ಆ ಕಾಲದಲ್ಲಿ ಕಲಾವಿದರ ಮಧ್ಯೆ ಇದ್ದ ಪ್ರೀತಿ, ಸ್ನೇಹ, ಪರಸ್ಪರರಲ್ಲಿ ಕಿಂಚಿತ್ತೂ ಈರ್ಷೆಯಿಲ್ಲದ ರೀತಿಗೆ ಪಂಢರಿಬಾಯಿಯವರ ಈ ಸ್ವಭಾವವೇ ಒಂದು ಉದಾಹರಣೆ ಎಂದೂ ಹೇಳುತ್ತಾರೆ.

೧೯೫೪ರ ಆಗಸ್ಟ್ ೨೭ನೇ ತಾರೀಖು ಚಿತ್ರ ಮದರಾಸಿನ ಎ.ವಿ.ಎಂ. ಸ್ಟುಡಿಯೋದಲ್ಲಿ ಸೆಟ್ ಏರಿತು. ಈ ಚಿತ್ರದ ಛಾಯಾಗ್ರಾಹಕರು ಕನ್ನಡಿಗ ಮಾರುತಿರಾವ್.

ಈ ಚಿತ್ರದಲ್ಲಿ ರಾಜಕುಮಾರ್ ಎರಡು ಬಗೆಯ ಸವಾಲನ್ನು ಎದುರಿಸಬೇಕಾಗಿತ್ತು. ಚಿತ್ರದ ಪ್ರಾರಂಭದಲ್ಲಿ ದೇವರಲ್ಲಿ ನಂಬಿಕೆಯಿಲ್ಲದ, ಸಿಡುಕು ಸ್ವಭಾವದ ಬೇಡ ದಿಣ್ಣನಾಗಿ, ಮುಂದೆ ಅದೇ ದಿಣ್ಣ ಶಿವಭಕ್ತ ಶಿರೋಮಣಿಯಾಗಿ, ಕಡೆಗೆ ತನ್ನ ಕಣ್ಣುಗಳನ್ನೇ ಶಿವನಿಗರ್ಪಿಸುವ ಕಣ್ಣಪ್ಪನಾಗಿ ಎರಡು ವಿಭಿನ್ನ ತಿರುವು ಪಡೆಯುವ ಪಾತ್ರಗಳಲ್ಲಿ ಅಭಿನಯಿಸಬೇಕಾಗಿತ್ತು. ಮೊದಲ ಸನ್ನಿವೇಶಗಳಲ್ಲಿ ಲೀಲಾಜಾಲವಾಗಿ ಅಭಿನಯಿಸಿದ ರಾಜ್ ಮೂಢಭಕ್ತಿಯನ್ನು ಪ್ರದರ್ಶಿಸುವ ಸನ್ನಿವೇಶಗಳಲ್ಲಿ ಬಹಳ ಎಚ್ಚರಿಕೆಯಿಂದ ಅಭಿನಯಿಸಬೇಕಾಗಿತ್ತು. ಈ ಚಿತ್ರದ ಯಶಸ್ಸಿನಿಂದಲೇ ತನ್ನ ಭವಿಷ್ಯದ ನಿರ್ಧಾರವಾಗಬೇಕೆಂಬ ಛಲ ಬೇರೆ. ಒಳಗೆ ಅಳುಕು. ಅಂತೂ ಶ್ರದ್ಧೆಯಿಂದ ಅಭಿನಯಿಸಿದರು. ಆ ಸಂದರ್ಭದಲ್ಲಿ ನಡೆದ ಒಂದು ಘಟನೆ ರಾಜಕುಮಾರ್ ಅವರ ನೆನಪಿನಿಂದ ಇಂದಿಗೂ ಮಾಸಿಲ್ಲ :

''ನನ್ನನ್ನು ಮರಕ್ಕೆ ಕಟ್ಟಿ ಹಾಕುವ ಸನ್ನಿವೇಶ. ನನಗೂ ಉತ್ಸಾಹ, ಬಿಗಿಯಾಗಿ ಕಟ್ಟಿ ಅಂತ ಕಟ್ಟಿಸಿಕೊಂಡೆ. ದೃಶ್ಯದಲ್ಲಿ ಸಂಭಾಷಣೆ ಮಾತ್ರವಲ್ಲದೆ, 'ಏನ್ನೊಡೆಯಾ ಭವ ಬಂಧನ ಹರಿಸೊ..' ಎನ್ನುವ ಗೀತೆಯ ಚಿತ್ರೀಕರಣವೂ ಆಗಬೇಕಿತ್ತು. ಚಿತ್ರೀಕರಣ ಪ್ರಾರಂಭ ಆಯಿತು. ಕಟ್ಟಿದ ಹುರಿ ಬಿಗಿಯತೊಡಗಿತು. ಸೆಕೆ, ಮೈಯೆಲ್ಲ ನವೆ ಆಗುತ್ತಿದೆ - ಕೈ ಕಾಲು ಆಡಿಸಲೂ ಆಗದಷ್ಟು ಬಿಗಿಯಾಗಿ ಕಟ್ಟಿದ್ದರಿಂದ, ಬಳಲಿಕೆ ಹೆಚ್ಚತೊಡಗಿತು. ಮಧ್ಯಾಹ್ನದ ಊಟದ ಬ್ರೇಕ್‌ವರೆಗೂ ಬಂದೆವು. 'ಕಟ್ಟು ಬಿಚ್ಚೋದು ಬೇಡ, ಮತ್ತೆ ಹಾಗೇ ಕಟ್ಟದಿದ್ದರೆ ಕಂಟಿನ್ಯೂಯಿಟಿ ಜಂಪ್ ಆಗುತ್ತೆ. ಅಲ್ಲೇ ಊಟ ತಿನ್ನಿಸಿಬಿಡಿ' ಅಂದು ಹೊರಟುಬಿಟ್ಟರು. ಊಟ ತಂದವನಿಗೆ ಬಿಗುಮಾನ-ಸಿಟ್ಟಿನಿಂದ 'ಬೇಡ ಹೋಗು' ಅಂದುಬಿಟ್ಟೆ. ಎಲ್ಲ ಊಟ ಮಾಡಿ ಬಂದು ಚಿತ್ರೀಕರಣ ಪ್ರಾರಂಭಿಸಿದರು. ರಾತ್ರಿವರೆಗೂ ಚಿತ್ರೀಕರಣ ಆಯಿತು. 'ಪ್ಯಾಕಪ್' ಅಂದ್ರು. ಇಬ್ಬರು ಬಂದು ಹಗ್ಗ ಬಿಚ್ಚಲಾರಂಭಿಸಿದರು. ಹಸಿವು, ಆಯಾಸ, ಸೆಕೆ, ಮೈ ಬಿಗಿತ ಇವೆಲ್ಲ ನನ್ನ ಶಕ್ತಿಯನ್ನೇ ಕುಗ್ಗಿಸಿದ್ದವು. ಎಲ್ಲೋ ತೇಲುತ್ತಿದ್ದ ಹಾಗೆ... ಅಥವಾ ಈ ಬಂಧನದ



(ಚಿತ್ರ ೧೧) 'ಬೇಡರ ಕಣ್ಣಪ್ಪ' ತೆಲುಗು ಮತ್ತು ಹಿಂದಿಯಲ್ಲೂ ಚಿತ್ರಿತವಾಯಿತು. ಮೂರು ಭಾಷೆಯ ಚಿತ್ರಗಳಿಗೂ ಹೆಚ್.ಎಲ್.ಎನ್.ಸಿಂಹ ಅವರೇ ನಿರ್ದೇಶಕರು. ರಾಜಕುಮಾರ್ ಕನ್ನಡ ಮತ್ತು ತೆಲುಗು ಅವತರಣಿಕೆಯಲ್ಲಿ ಅಭಿನಯಿಸಿದ್ದರು. ತೆಲುಗು ಅವತರಣಿಕೆಯ ಚಿತ್ರೀಕರಣ ಸಂದರ್ಭದಲ್ಲಿ ತೆಗೆದ ಈ ಚಿತ್ರದಲ್ಲಿ ಸಹಕಲಾವಿದರೊಂದಿಗೆ ಹೆಚ್.ಎಲ್.ಎನ್.ಸಿಂಹ, ರಾಜಕುಮಾರ್ ಮತ್ತು ಮಾಲತಿ ಇವರನ್ನು ಕಾಣಬಹುದು.

ಬಿಗಿತದಿಂದ ನೇತಾಡುತ್ತಿದ್ದೇನೆಯೋ... ಅರ್ಥವಾಗಲಿಲ್ಲ. ಬಿಗಿತದಿಂದ ಮೈಯೆಲ್ಲ ರಕ್ತ ಚಲನೆಯೇ ಇಲ್ಲದಂತಾಗಿ ಸ್ಪರ್ಶದ ಪರಿವೆಯೂ ಇಲ್ಲ. ಕೈ ಕಾಲುಗಳ ಮೇಲೆ ಹತೋಟಿಯಿಲ್ಲ. ಹಿಂದೂ ಮುಂದೂ ಆಡಲಾಗದೆ ಮರದ ಜೊತೆ ಮರವಾಗಿ ನಿಂತೆ. 'ಮುಂದೆ ಬನ್ನಿ' ಅಂದರು. ಹೆಜ್ಜೆ ಎತ್ತಿಡಲು ಹೋಗಿ ಹತೋಟಿ ತಪ್ಪಿ ಬೀಳುವವನಿದ್ದೆ. ಯಾರೋ ಓಡಿ ಬಂದು ಹಿಡಿದುಕೊಂಡರು. ಕೈ ಕಾಲುಗಳನ್ನು ಉಜ್ಜಿ, ಬಿಚ್ಚಿ-ಮಡಿಸಿ ಮಾಡಿದರು. ಕಿರಿಚಿಕೊಳ್ಳುವ ಹಾಗಾಗುತ್ತಿತ್ತು. ನೋವು ನುಂಗಿಕೊಂಡಿದ್ದೆ. ೧೦-೧೫ ನಿಮಿಷಗಳ ಮೇಲಾಯಿತು ಸರಿ ಹೋಗಲು. ಯಾವ ಕಲಾವಿದನೂ ಹೀಗೆ ಕಟ್ಟಿಸ್ಕೊಳ್ಳಲ್ಲ ಎಂದರು ಎಲ್ಲರೂ. ಅವರ ಆ ಮಾತು, ಮೆಚ್ಚುಗೆ, ಅನುಕಂಪ ಇವೇ ನನಗೆ ಮತ್ತೆ ಸಮಾಧಾನ ತೃಪ್ತಿ ತಂದುಕೊಟ್ಟವು.''

ಚಿತ್ರ ಬಿಡುಗಡೆಯಾದಾಗ ಎಲ್ಲ ಕಡೆಗಳಿಂದಲೂ ಪ್ರಶಂಸೆಗಳ ಸುರಿಮಳೆ. ಚಿತ್ರ ಅಪಾರ ಯಶಸ್ಸು, ಕೀರ್ತಿ, ಹಣ ಎಲ್ಲವನ್ನೂ ಗಳಿಸಿತು.

ರಾಜಕುಮಾರ್, ನರಸಿಂಹರಾಜು ಮತ್ತು ಜಿ.ವಿ.ಅಯ್ಯರ್ ಅವರ ನಿಜವಾದ ಪ್ರತಿಭೆಯ ಪರಿಚಯವಾಯಿತು. ಅವರುಗಳ ರಂಗಭೂಮಿಯ ಅನುಭವ ಇಲ್ಲಿ ನೆರವಿಗೆ ಬಂದಿತು.

ಈ ಚಿತ್ರದ ಸಂಗೀತವೂ ಅಷ್ಟೇ ಪರಿಣಾಮಕಾರಿ. ಸಂಗೀತ ನಿರ್ದೇಶಕ ಆರ್.ಸುದರ್ಶನ್[೧] ಒಳ್ಳೆಯ ಹಾಡುಗಳನ್ನು ನೀಡಿದ್ದಾರೆ. ಈ ಚಿತ್ರದ ನೃತ್ಯ ನಿರ್ದೇಶಕರು ಬಂಗಾಳದ ಖ್ಯಾತ ನೃತ್ಯ ಕಲಾವಿದ ಉದಯಶಂಕರ್ ಅವರ 'ಕಲ್ಪನಾ' ಚಿತ್ರಕ್ಕೆ ಕೆಲಸ ಮಾಡಿದ್ದ ಜಯಶಂಕರ್ ಅವರು. ಲಾವಣಿ ನಂಜುಕವಿ ಅವರ ಗೀತೆಗಳಿದ್ದವು. 'ಶಿವಪ್ಪ ಕಾಯೋ ತಂದೆ ಮೂರು ಲೋಕ ಸ್ವಾಮಿದೇವ...', 'ಕಾಯೋ ತಂದೆಯೇ.....' ಮೊದಲಾದ ಹಾಡುಗಳು ಅತ್ಯಂತ ಜನಪ್ರಿಯವಾದವು.

ಚಿತ್ರವನ್ನು ಎ.ವಿ.ಮೇಯಪ್ಪ ಚೆಟ್ಟಿಯಾರರು ಬೆಂಗಳೂರಿನ ಸಾಗರ್ ಚಿತ್ರಮಂದಿರದಲ್ಲಿ ಪ್ರೇಕ್ಷಕರ ಜೊತೆಗೇ ಕುಳಿತು ನೋಡಿದರು. 'ಶಿವಪ್ಪ ಕಾಯೋ ತಂದೆ...' ಹಾಡಿನ ಸನ್ನಿವೇಶದಲ್ಲಿ ಮುತ್ತುರಾಜರು ಮೈಮರೆತು ಅಭಿನಯಿಸಿರುವುದನ್ನು, ಪ್ರೇಕ್ಷಕರು ತೆರೆಗೆ ಕಾಸಿನ ಮಳೆಗರೆದದ್ದನ್ನು ಕಂಡು ಮನಸೋತರು.



(ಚಿತ್ರ ೧೨) 'ಬೇಡರ ಕಣ್ಣಪ್ಪ' ಚಿತ್ರದಲ್ಲಿ ರಾಜಕುಮಾರ್

ಸಿಂಹರಿಗೆ ಹಸ್ತಲಾಘವ ನೀಡಿ ನಿರ್ದೇಶನ ಪ್ರತಿಭೆಯನ್ನು ಮೆಚ್ಚಿದರು. ಮುಂದೆ ಈ ಚಿತ್ರದ ತಮಿಳು ಅವೃತ್ತಿಯನ್ನು ಸಿಂಹ ಅವರೇ ನಿರ್ದೇಶಿಸಿದರು. ಹಿಂದಿಯಲ್ಲಿ ಸಾಹುಮೋದಕ್ ಮತ್ತು ಪಂಢರಿಬಾಯಿ ಅಭಿನಯಿಸಿದ್ದ 'ಶಿವಭಕ್ತ್' ಹೆಸರಿನಲ್ಲೂ, ತೆಲುಗಿನಲ್ಲಿ 'ಕಾಳಹಸ್ತಿಮಹಾತ್ಮ್ಯಂ' ಹೆಸರಿನಲ್ಲೂ 'ಬೇಡರ ಕಣ್ಣಪ್ಪ'ದ ಅವತರಣಿಕೆಗಳು ಬಂದವು. ತೆಲುಗಿನಲ್ಲಿ ರಾಜಕುಮಾರ್ ಅವರೇ ನಾಯಕನಟ. ಅವರ ಜೋಡಿಯಾಗಿ ಮಾಲತಿ ಅವರಿದ್ದರು. ಇದೊಂದೇ ಕನ್ನಡೇತರ ಚಿತ್ರದಲ್ಲಿ ರಾಜಕುಮಾರ್ ಅವರು ಅಭಿನಯಿಸಿದ್ದು.

'ಬೇಡರ ಕಣ್ಣಪ್ಪ' ಚಿತ್ರ ಯಶಸ್ವಿಯಾದ ಹಿನ್ನೆಲೆಯಲ್ಲಿ ಬೆಂಗಳೂರಿನ ಸಾಗರ್ ಚಿತ್ರಮಂದಿರದಲ್ಲಿ ತಾರೀಖು ೧೭, ಮೇ ೧೯೫೪ರಂದು ನಾಯಕಿ ಪಾತ್ರದ ಪಂಢರಿಬಾಯಿಯವರನ್ನು ಕರೆಸಿ ಪುಟ್ಟ ಸಮಾರಂಭ ನಡೆಸಿದರು. ಪಂಢರಿಬಾಯಿ ಚಿತ್ರಪ್ರೇಮಿಗಳಿಗೆ ಕೃತಜ್ಞತೆ ಹೇಳಿದರು. ಸಮಾರಂಭದಲ್ಲಿ ಸೆಲೆಕ್ಟ್ ಪಿಕ್ಚರ್ ಸರ್ಕ್ಯೂಟ್‌ನ ಕೃಷ್ಣಮೂರ್ತಿ, ಜಿ.ಹೆಚ್.ವೀರಣ್ಣ (ಆಗ ಎಂ.ಎಲ್.ಸಿ. ಆಗಿದ್ದರು), ವಿಮಲಾನಂದದಾಸ್, ನಿರ್ದೇಶಕ ಹೆಚ್.ಎಲ್.ಎನ್.ಸಿಂಹ, ಕರ್ನಾಟಕ ಫಿಲಂಸ್‌ನ ಮ್ಯಾನೇಜಿಂಗ್ ಡೈರೆಕ್ಟರ್ ಗುರುನಾಥ್ ಮೊದಲಾದವರು ಭಾಗವಹಿಸಿದ್ದರು.

ಫಿಲಂಫೇರ್ ವಾರ್ಷಿಕ ಪ್ರಶಸ್ತಿಯು ೧೯೫೩ರಲ್ಲಿ ಪ್ರಾರಂಭವಾದರೆ ೧೯೫೪ರಲ್ಲಿ ರಾಷ್ಟ್ರಮಟ್ಟದ ಪ್ರಶಸ್ತಿ ನೀಡಿಕೆ ಪರಂಪರೆ ಪ್ರಾರಂಭವಾಯಿತು. 'ಬೇಡರ ಕಣ್ಣಪ್ಪ' ಚಿತ್ರಕ್ಕೆ ಅಖಿಲ ಭಾರತ ಮಟ್ಟದಲ್ಲಿ ಅರ್ಹತಾಪತ್ರ ಬಂದಿತು. ಹೀಗಾಗಿ 'ಬೇಡರ ಕಣ್ಣಪ್ಪ' ಅಖಿಲ ಭಾರತ ಮಟ್ಟದಲ್ಲಿ ಪ್ರಶಸ್ತಿ ಪಡೆದ ಚಿತ್ರವೆಂಬ ಹೆಗ್ಗಳಿಕೆಗೂ ಪಾತ್ರವಾಯಿತು.

ಮುಂದೆ ಕನ್ನಡ ಚಿತ್ರಗಳ ಮಾರುಕಟ್ಟೆಯ ವ್ಯಾಪ್ತಿಯನ್ನು ವಿಸ್ತರಿಸುವಲ್ಲಿ ರಾಜಕುಮಾರ್ ಕುಟುಂಬದ ಕೊಡುಗೆ ಗಮನಾರ್ಹ. ಅವರಂತೆಯೇ ಕಷ್ಟ-ಸುಖಗಳಲ್ಲಿ ಪಾಲ್ಗೊಂಡು ಕನ್ನಡ ಚಿತ್ರೋದ್ಯಮಕ್ಕೆ ಸ್ಥಿರ ನೆಲೆಗಟ್ಟು ಒದಗಿಸಿದವರು ಜಿ.ವಿ.ಅಯ್ಯರ್, ನರಸಿಂಹರಾಜು ಮತ್ತು ಬಾಲಕೃಷ್ಣ.

'ಬೇಡರ ಕಣ್ಣಪ್ಪ' ನಂತರ ತೆರೆಕಂಡ ಚಿತ್ರ ಮಾಡ್ರನ್ ಥಿಯೇಟರ್ಸ್ (ಸೇಲಂ) ಅವರ 'ದೇವಕನ್ನಿಕಾ'. ಈ ಚಿತ್ರದ ತಯಾರಿಕೆ ಮುಂಚೆಯೇ ಪ್ರಾರಂಭವಾಗಿತ್ತು. ಇದಕ್ಕೂ ಮೊದಲು 'ಮಂಗಳಗೌರಿ' ಕನ್ನಡ ಚಿತ್ರವನ್ನು ತಯಾರಿಸಿದ್ದ ಮಾಡ್ರನ್ ಥಿಯೇಟರ್ಸ್ ದಕ್ಷಿಣ ಭಾರತದಲ್ಲಷ್ಟೇ ಅಲ್ಲ, ಇಡೀ ಭಾರತದಲ್ಲೇ ಸ್ವಂತ ಸ್ಟುಡಿಯೋ ಮತ್ತಿತರ ಸೌಲಭ್ಯಗಳನ್ನು ಹೊಂದಿದ್ದ ದೊಡ್ಡ ಸಂಸ್ಥೆ. ಒಂದೇ ಲಾಂಛನವಡಿ ನೂರಕ್ಕೂ ಹೆಚ್ಚು ಚಿತ್ರಗಳನ್ನು ತಯಾರಿಸಿದ ಸಂಸ್ಥೆ. ಇತರ ಭಾಷಾ ಚಿತ್ರಗಳನ್ನೂ ತಯಾರಿಸಿದೆ. ತಮಿಳು ಚಿತ್ರಗಳೇ ಹೆಚ್ಚು. ಈ ಸಂಸ್ಥೆಯ ಮಾಲೀಕರು ನಿರ್ದೇಶಕ ಟಿ.ಆರ್.ಸುಂದರಂ. ಆ ದಿನಗಳಲ್ಲಿ ದಕ್ಷಿಣ ಭಾರತ ಫಿಲಂ ಚೇಂಬರ್‌ನ ಅಧ್ಯಕ್ಷರಾಗಿದ್ದವರು.

'ದೇವಕನ್ನಿಕಾ' ಚಿತ್ರದ ನಿರ್ದೇಶಕರು ಜಿ.ಆರ್.ರಾವ್. ಸಂಗೀತ ನೀಡಿದವರು ಜಿ.ರಾಮನಾಥನ್. ಸಾಹುಕಾರ್ ಜಾನಕಿ, ಇಂದುಶೇಖರ್, ಬಾಲಕೃಷ್ಣ, ಎಚ್.ಆರ್.ಶಾಸ್ತ್ರಿ ಮುಂತಾದವರು ತಾರಾಗಣದಲ್ಲಿದ್ದರು.

'ದೇವಕನ್ನಿಕಾ' ಚಿತ್ರದ ಬಗ್ಗೆ ನಿರ್ದೇಶಕ ಎನ್.ಲಕ್ಷ್ಮೀನಾರಾಯಣ್ ಅವರ ಅಭಿಪ್ರಾಯ:

''ಈ ಚಿತ್ರದಲ್ಲಿ ನನಗೆ ತುಂಬ ನೆನಪಿನಲ್ಲಿರುವುದು ದೃಶ್ಯದಿಂದ ದೃಶ್ಯಕ್ಕೆ ಬರುವ ಬದಲಾವಣೆ (ಟ್ರಾನ್ಸಿಷನ್). ನಮ್ಮ ಚಿತ್ರಗಳಲ್ಲಿ ಡಿಸಾಲ್ವ್, ಫೇಡ್ ಇನ್, ಫೇಡ್ ಔಟ್‌ಗಳೇ ಬರುತ್ತಿದ್ದವು. ಅದು ಈಗ ಸ್ವಲ್ಪ ಕಡಿಮೆಯಾಗಿ ಕಟ್-ಟು-ಕಟ್ ತಂತ್ರ ಬಳಸುತ್ತಿದ್ದೇವೆ. ಅವರಲ್ಲಿ ತುಂಬಾ ಫ್ಲವರ್ ವೈಪ್ಸ್ (wipes), ಮಾಸ್ಕ್ಸ್ ಹಾಕುತ್ತಿದ್ದರು. ಅದೂ ಒಂದು ರೀತಿಯಲ್ಲಿ ಕಲಾತ್ಮಕವಾಗೇ ಇರುತ್ತದೆ. ಅದರಿಂದಲೇ ಆ ಚಿತ್ರದಲ್ಲಿನ ನೆನಪು ಹೆಚ್ಚಾಗಿ ಉಳಿದುಕೊಂಡಿದೆ. ಆ ಚಿತ್ರದಲ್ಲಿ ಬಳಸಿದ ತಂತ್ರ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. 'ದೇವಕನ್ನಿಕಾ' ತಮಿಳು ನಿರ್ಮಾಪಕರೊಬ್ಬರು ಕನ್ನಡ ಭಾಷೆಯ ಮೇಲಿನ ಅಭಿಮಾನದಿಂದ ತಯಾರಿಸಿದ ಸರಳ ಸುಂದರ ಚಿತ್ರ''.

೧೯೫೪ರ ಇನ್ನೊಂದು ಮುಖ್ಯ ಚಿತ್ರ 'ನಟಶೇಖರ'. ಕನ್ನಡ ಚಿತ್ರರಂಗದ ಕುಮಾರತ್ರಯರಲ್ಲೊಬ್ಬರಾದ ಕಲ್ಯಾಣ್‌ಕುಮಾರ್ ಚಿತ್ರರಂಗ ಪ್ರವೇಶ ಮಾಡಿದ ಚಿತ್ರ.

'ಕೃಷ್ಣಲೀಲಾ' ನಂತರ ಕನ್ನಡ ಚಿತ್ರವೊಂದನ್ನು ಮಾಡಬೇಕೆಂದು ನಿರ್ದೇಶಕ ಸಿ.ವಿ.ರಾಜು ಪ್ರಯತ್ನ ಮಾಡುತ್ತಿದ್ದರು. ಶ್ರೇಷ್ಠ ಸಂಕಲನಕಾರರೆಂದು ಮದರಾಸಿನಲ್ಲಿ ಪ್ರಸಿದ್ಧರಾಗಿದ್ದ ರಾಜು ಅವರ ಬಗ್ಗೆ ಉದ್ಯಮಿಗಳಲ್ಲಿ ಗೌರವವಿತ್ತು. ಅವರು ಆರಿಸಿಕೊಂಡ ಕಥೆ ಚಿತ್ರರಂಗದಲ್ಲಿ ಪ್ರಸಿದ್ಧ ನಟನಾಗಬೇಕೆಂದು ಸ್ಫುರದ್ರೂಪಿ ತರುಣನೊಬ್ಬ ನಾನಾರೀತಿ ಪ್ರಯತ್ನಿಸಿ ಕಡೆಗೆ ಯಶಸ್ವಿಯಾಗುವ ಕಥಾವಸ್ತು. ತಯಾರಿಕೆಗೆ ಸಿದ್ಧತೆಗಳನ್ನು ಮಾಡಿದ ನಂತರ ಈ ಪಾತ್ರಕ್ಕೆ ಸೂಕ್ತವಾದ ತರುಣನನ್ನು

೧.ಒಂದು ವಿಶೇಷವೆಂದರೆ ರಾಜಕುಮಾರ್ ಅವರ ಪ್ರಥಮ ಚಿತ್ರದ ಸಂಗೀತ ನಿರ್ದೇಶಕರಾದ ಸುದರ್ಶನ್ ಅವರೇ ಶಿವಾಜಿ ಗಣೇಶನ್ ಅವರ ಪ್ರಥಮ ಚಿತ್ರ 'ಪರಾಶಕ್ತಿ'ಗೂ ಸಂಗೀತ ನೀಡಿದ್ದಾರೆ.

ಹುಡುಕಲಾರಂಭಿಸಿದರು. ಕಡೆಗೆ ಅವರ ಕಣ್ಣಿಗೆ ಬಿದ್ದವರು ಅಂಥದೇ ಕನಸು ಕಾಣುತ್ತಿದ್ದ ಬೆಂಗಳೂರು ಬಸವನಗುಡಿಯ ಯುವಕ ಚೊಕ್ಕಣ್ಣ. ನ್ಯಾಷನಲ್ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೇ ಹಿಂದಿ ಚಿತ್ರನಟ ಕಿಶೋರ್ ಕುಮಾರ್‌ನ ಕಟ್ಟಾ ಅಭಿಮಾನಿಯಾಗಿದ್ದ ಚೊಕ್ಕಣ್ಣ, ಆತನಂತೆಯೇ ಸುಪ್ರಸಿದ್ಧ ನಟನಾಗಬೇಕೆಂಬ ಹಂಬಲದಿಂದ ಮುಂಬಯಿಗೆ ಹೋಗಿ ಅಲ್ಲಿ ಸ್ಟುಡಿಯೋಗಳ ಒಳಕ್ಕೆ ಹೋಗಲು ಪ್ರಯಾಸ ಪಟ್ಟು, ಕೊನೆಗೆ ನಿರಾಶರಾಗಿ ಹಿಂದಿರುಗಿದ್ದರು. ನಟಿ ಸಂಧ್ಯಾ ಹಾಗೂ ಏರ್‌ಹೋಸ್ಟೆಸ್ ಆಗಿದ್ದ ಆಕೆಯ ತಂಗಿ ವಿದ್ಯಾ ಅವರ ಸಲಹೆಯ ಮೇರೆಗೆ ಚೊಕ್ಕಣ್ಣನನ್ನು ಈ ಚಿತ್ರದ ನಾಯಕನಾಗಿ ಆಯ್ಕೆ ಮಾಡಲಾಯಿತು. ಸಿನಿಮಾ ರಂಗಕ್ಕೆ ಚೊಕ್ಕಣ್ಣ ಎಂಬ ಹೆಸರು ಅಷ್ಟು ಸೂಕ್ತವಲ್ಲ ಎಂಬ ಕಾರಣಕ್ಕಾಗಿ ಹೆಸರನ್ನು ಬದಲಾಯಿಸಲು ಸೂಚಿಸಿದರು. ಚೊಕ್ಕಣ್ಣ ಅವರ ತಾಯಿಯ ಹೆಸರು ಕಲ್ಯಾಣಿ. ಹಾಗಾಗಿ ಕಲ್ಯಾಣ್‌ಕುಮಾರ್ ಎಂಬ ಹೆಸರನ್ನು ಆಯ್ಕೆ ಮಾಡಲಾಯಿತು. ಹೀಗೆ ಚೊಕ್ಕಣ್ಣ ಕಲ್ಯಾಣ್‌ಕುಮಾರ್ ಆಗಿ ಚಿತ್ರರಂಗಕ್ಕೆ ಕಾಲಿಟ್ಟರು.




(ಚಿತ್ರ ೧೩) 'ನಟಶೇಖರ' ಚಿತ್ರದಲ್ಲಿ ವಿದ್ಯಾ ಮತ್ತು ಕಲ್ಯಾಣ್ ಕುಮಾರ್

ಸಿ.ವಿ.ರಾಜು ಅವರೇ ಕಥೆ ಬರೆದರು. ಸುಪ್ರಸಿದ್ಧ ಹಾಸ್ಯ ಸಾಹಿತಿ, ಪತ್ರಕರ್ತ ನಾಡಿಗೇರ್ ಕೃಷ್ಣರಾವ್ ಸಂಭಾಷಣೆ ಮತ್ತು ಹಾಡುಗಳನ್ನು ಬರೆದರು. ಜಯರಾಜ್ ಪ್ರೊಡಕ್ಷನ್ಸ್ ಲಾಂಛನದಡಿ ಚಿತ್ರ ತಯಾರಾಯಿತು. ಸಂಧ್ಯಾ, ವಿದ್ಯಾ, ಶಾಂತಿಗ್ರಾಮ್, ಎಂ.ಜಿ.ಮರಿರಾವ್, ಗಣಪತಿಭಟ್, ಜಯಶ್ರೀ ಮುಂತಾದವರು ಭೂಮಿಕೆಯಲ್ಲಿದ್ದರು. ನೀಲಕಂಠಪ್ಪ ಮತ್ತು ರಾಮಸ್ವಾಮಿಯವರ ಲಾವಣಿಯೊಂದನ್ನು ಬಳಸಿದ್ದರು. ಸ್ಟಾರ್ ಕಂಬೈನ್ಸ್ ಸ್ಟುಡಿಯೋದಲ್ಲಿ ಚಿತ್ರಿತವಾಯಿತು. ಕಲ್ಯಾಣ್‌ಕುಮಾರ್ ಅವರ ಸಹಜ ಅಭಿನಯ, ಸಿ.ವಿ.ರಾಜು ಅವರ ಚೊಕ್ಕ ನಿರೂಪಣೆಯಿಂದಾಗಿ 'ನಟಶೇಖರ' ಒಂದು ಯಶಸ್ವೀ ದೃಶ್ಯ ಪ್ರಧಾನ ಸಾಮಾಜಿಕ ಚಿತ್ರವಾಯಿತು.

ಬೆಂಗಳೂರಿನ ವಿಜಯಲಕ್ಷ್ಮಿ ಮತ್ತು ಮಿನರ್ವ ಚಿತ್ರಮಂದಿರಗಳು ಮತ್ತು ಮೈಸೂರಿನ ವುಡ್‌ಲ್ಯಾಂಡ್ಸ್ ಥಿಯೇಟರುಗಳಲ್ಲಿ ಚಿತ್ರ ಬಿಡುಗಡೆಯಾಯಿತು. ಈ ಚಿತ್ರ ಮಂಗಳೂರು, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ತುಮಕೂರು ಮುಂತಾದ ಕಡೆಗಳಲ್ಲೆಲ್ಲ ಪ್ರದರ್ಶನವಾಯಿತು.

ಸಾಮಾಜಿಕ ಚಿತ್ರಗಳಿಗೆ ಸೂಕ್ತ ನಾಯಕ ನಟನೊಬ್ಬ ಈ ಚಿತ್ರದ ಕೊಡುಗೆ. ಮೊದಲ ಚಿತ್ರದಲ್ಲೇ ಲೀಲಾಜಾಲವಾಗಿ ಅಭಿನಯಿಸಿದ ಕಲ್ಯಾಣ್‌ಕುಮಾರ್ ಮುಂದೆ ತಮಿಳು ಚಿತ್ರಗಳಲ್ಲಿ ಭಾರಿ ಹೆಸರು ಮಾಡಿದರು. ಕನ್ನಡದ ಪ್ರಥಮ ವರ್ಣಚಿತ್ರ 'ಅಮರಶಿಲ್ಪಿ ಜಕಣಾಚಾರಿ' ಚಿತ್ರದಲ್ಲಿ ಅಭಿನಯಿಸಿದ ಹೆಗ್ಗಳಿಕೆಯೂ ಅವರದಾಯಿತು.

'ನಟಶೇಖರ' ಒಂದು ಲಘು ಹಾಸ್ಯಭರಿತ ಸಾಮಾಜಿಕ ಚಿತ್ರ. ಈ ಚಿತ್ರಕ್ಕೆ ಸಂಗೀತ ನೀಡಿದವರು ಪಿ.ಕಾಳಿಂಗರಾವ್. 'ಕೃಷ್ಣಲೀಲಾ' ಚಿತ್ರದೊಂದಿಗೆ ಪ್ರಾರಂಭವಾದ ಸಿ.ವಿ.ರಾಜು-ಕಾಳಿಂಗರಾವ್ ಸಖ್ಯ ಈ ಚಿತ್ರದಲ್ಲೂ ಮುಂದುವರಿಯಿತು.

೧೯೫೩ರಲ್ಲಿ 'ಜೀವಕ ಚಿಂತಾಮಣಿ', 'ತಾಯಿ' ಮೊದಲಾದ ಕೆಲವು ಚಿತ್ರಗಳು ಕನ್ನಡ-ತಮಿಳು- ಹಿಂದಿಗಳಲ್ಲಿ ತಯಾರಾಗುತ್ತಿವೆ ಎಂಬ ಸುದ್ದಿಗಳಿದ್ದವು. ಆ ಯಾವ ಚಿತ್ರವೂ ಪೂರ್ತಿಯಾಗಲಿಲ್ಲ.

೧೯೫೪ರ ಹೊತ್ತಿಗೆ ನವಜ್ಯೋತಿ ಸ್ಟುಡಿಯೋ ಪ್ರವರ್ಧಮಾನ ಸ್ಥಿತಿಯಲ್ಲಿತ್ತು. ಅದಕ್ಕೆ ಮುಂಚೆ ಜಿ.ಆರ್.ರಾಮಯ್ಯ ಅವರು ಪಾಲುದಾರರಿಗೆಲ್ಲ ಸ್ವಲ್ಪ ಹಣ ಕೊಟ್ಟು ಕಳುಹಿಸಿಬಿಟ್ಟರು. ತಮ್ಮ ಸಂಬಂಧಿ ಜಿವಿ.ರಾಮಯ್ಯ ಎಂಬುವವರನ್ನು ಮ್ಯಾನೇಜರ್ ಆಗಿ ನೇಮಿಸಿದರು (ಈಗ ಅವರು ಬೆಂಗಳೂರಿನಲ್ಲಿ ವಕೀಲರಾಗಿದ್ದಾರೆ). ಈ ಮಧ್ಯೆ ಕೋರ್ಟ್ ವ್ಯವಹಾರದಲ್ಲಿ ಸಿಲುಕಿ ಮೈಸೂರು ಸಿನೆ ಕಾರ್ಪೊರೇಷನ್ನಿನ ಹಿರಣ್ಣಯ್ಯ ಎಂಬುವರನ್ನು ನ್ಯಾಯಾಲಯ ರಿಸೀವರ್ ಆಗಿ ನೇಮಕ ಮಾಡಿತು. (ನೋಡಿ : ಸ್ಟುಡಿಯೋಗಳು). ತಮಿಳು ಚಿತ್ರರಂಗದ ಖ್ಯಾತ ನಟ ಎಂ.ಜಿ.ರಾಮಚಂದ್ರನ್ ಮತ್ತು ಪಿ.ಎಸ್.ಜಾನಕಿ ಅಭಿನಯದ 'ಮರುದನಾಟ್ಟು ಇಳವರಸಿ' ಎಂಬ ತಮಿಳು ಚಿತ್ರವನ್ನು ಇಲ್ಲಿ ತಯಾರಿಸಲಾಯಿತು. ಚಿತ್ರದ ಗುಣಮಟ್ಟ ಉತ್ತಮವಾಗಿತ್ತು. ಆದರೆ ನವಜ್ಯೋತಿಯ ಬಗ್ಗೆ ಎಲ್ಲೂ ಪ್ರಚಾರವಿರಲಿಲ್ಲ. ಮೈಸೂರಿನ ನವಜ್ಯೋತಿ ಯಾವ ಪ್ರಸಿದ್ಧ ಸ್ಟುಡಿಯೋಗಳಿಗೂ ಕಡಿಮೆ ಇಲ್ಲ. ಪ್ರಚಾರ ಇತ್ಯಾದಿಗಳಲ್ಲಿ ಹೆಸರು ಹಾಕದಿರುವ ಜಾಣತನವೇಕೆ ? ಎಂದು ಪತ್ರಿಕೆಗಳು ಖಂಡಿಸಿದವು. ಅಮೆರಿಕದ ಮೈಕಲ್ ಡೇ ಅವರು ಈ ಸ್ಟುಡಿಯೋದ ಸಲಕರಣೆಗಳನ್ನು ಬಳಸಿಕೊಂಡು ಒಂದು ಇಂಗ್ಲಿಷ್ ಚಿತ್ರವನ್ನು ತಯಾರಿಸಿದರು. ಆ ಸಮಯದಲ್ಲಿ ಸ್ಟುಡಿಯೋ ಸಿಬ್ಬಂದಿ ಹಾಗೂ ತಂತ್ರಜ್ಞರು ನೀಡಿದ ಸಹಕಾರ ಹಾಗೂ ಅವರುಗಳ ನೈಪುಣ್ಯವನ್ನು ಆತ ಮುಕ್ತ ಕಂಠದಿಂದ ಪ್ರಶಂಸಿಸಿದ್ದಾರೆ. ನವಜ್ಯೋತಿಯಲ್ಲಿ ಮತ್ತೆ ಬಿರುಸಿನ ಚಟುವಟಿಕೆಗಳು ಪ್ರಾರಂಭವಾದವು. ಆ ವರ್ಷ ಇಲ್ಲಿ ನಾಲ್ಕು ಕನ್ನಡ ಚಿತ್ರಗಳು ತಯಾರಾದವು.

ನವಜ್ಯೋತಿ ಸ್ಟುಡಿಯೋದಲ್ಲಿ ಆಗ ಇದ್ದ ಸೌಲಭ್ಯಗಳೇನು ಎಂಬುದನ್ನು ತಂತ್ರಜ್ಞ ದೊರೆಸ್ವಾಮಿ ಅವರು ನೆನಪು ಮಾಡಿಕೊಳ್ಳುವುದು ಹೀಗೆ : ''ಸಂಗೀತ ವಿಭಾಗವನ್ನು ಪಿ.ಶಾಮಣ್ಣನವರೇ ನಿರ್ವಹಿಸುತ್ತಿದ್ದರು. ನೀಲಮ್ಮ ಕಡಾಂಬಿ, ಸರೋಜ, ಲೀಲಾವತಿ, ಮೊದಲಾದವರು ಹಾಡುಗಾರರು. ಮುಂಬಯಿನಿಂದ ಕರೆಸಿದ್ದ ಮೇಕಪ್ ಮ್ಯಾನ್ ಒಬ್ಬರಿದ್ದರು. ರಿಕಾರ್ಡಿಂಗ್ ಸಲುವಾಗಿ ಆರ್.ಸಿ.ಎ. ಮೆಷಿನ್ ಇತ್ತು. ಅದನ್ನು ಅಮೆರಿಕೆಯ ಕಂಪನಿಯೊಂದು ಇಂತಿಷ್ಟು ಬಾಡಿಗೆಗೆ ಕೊಡುತ್ತಿತ್ತು. ಎಂ.ಎ.ಎನ್.ಅಯ್ಯಂಗಾರ್ ಅವರು ಸೌಂಡ್ ಇಂಜಿನಿಯರ್. ಒಂದು ಲ್ಯಾಬ್ ಇತ್ತು. ಎಡಿಟಿಂಗ್ ರೂಂ ಇತ್ತು, ಕೈಲಿ ಸುತ್ತುವ ರಾಟೆಯ ತರಹದ್ದು. ಹಳೇ ಕಾಲದ ಪ್ರಿಂಟಿಂಗ್ ಮೆಷಿನ್ ಇತ್ತು. ಹಾಡುಗಳನ್ನು ರಿಕಾರ್ಡ್ ಮಾಡಲು ಕೂಡಾ ಒಂದು ಮಿಷನ್ ಇತ್ತು (ಅದರ ಹೆಸರು ನೆನಪಿಲ್ಲ). ಮಹಾರಾಜ ಬ್ಯಾಂಡ್‌ಸೆಟ್ ಅನ್ನೋ ವಾದ್ಯಗೋಷ್ಠಿ ಬಳಸಿಕೊಳ್ಳುತಿದ್ರು. ಸೀತಾರಾಂ ಕಶಾಲ್‌ಕರ್, ಬಾಲ್ ಜಿ.ಯಾದವ್ ಅಲ್ಲಿಯ ತಂತ್ರಜ್ಞರು. ಎಂ.ಎಚ್.ರಾಮು ಸಹ ಆರ್ಟ್ ಡೈರೆಕ್ಷನ್ ಮಾಡ್ತಿದ್ದರು.''

ಮಹಾತ್ಮ ಸಂಸ್ಥೆಯಿಂದ ಹೊರಬಂದ ವಿಠಲಾಚಾರ್ಯರು ತಮ್ಮ ಸ್ವಂತ ವಿಠಲ್ ಪ್ರೊಡಕ್ಷನ್ಸ್ ಸ್ಥಾಪಿಸಿ ಪ್ರಥಮ ಕಾಣಿಕೆ 'ರಾಜಲಕ್ಷ್ಮಿ' ಚಿತ್ರದ ತಯಾರಿಕೆ ಪ್ರಾರಂಭಿಸಿದರು. ಅವರ ಹಿಂದಿನ ಪಾಲುದಾರ ಡಿ.ಶಂಕರಸಿಂಗ್ ಅವರೇ ಚಿತ್ರದ ಚಿತ್ರೀಕರಣ ಪ್ರಾರಂಭೋತ್ಸವವನ್ನು ನೆರವೇರಿಸಿದರು.

ಜಾನಪದ ಕಥಾವಸ್ತುವುಳ್ಳ ಈ ಚಿತ್ರದ ತಾರಾಗಣಕ್ಕೆ ಆಗ ತಮಿಳಿನಲ್ಲಿ ಹೆಸರು ಮಾಡಿದ್ದ ರೇವತಿಯನ್ನು ದ್ವಿಪಾತ್ರದಲ್ಲಿ ಅಭಿನಯಿಸಲು ಆಯ್ಕೆ ಮಾಡಲಾಯಿತು. ಸಂಪತ್, ವಿದ್ಯಾ, ಮಹಾಬಲರಾವ್ ಮುಖ್ಯ ಪಾತ್ರಗಳಿಗೆ ಗೊತ್ತಾದರು. ಚಿತ್ರಕಥೆ, ಸಂಭಾಷಣೆ, ಹಾಡುಗಳನ್ನು ಹುಣಸೂರು ಕೃಷ್ಣಮೂರ್ತಿ ರಚಿಸಿದರು. ಜಯಮಾರುತಿ ಆರ್ಕೆಸ್ಟ್ರಾದ ರಾಜನ್-ನಾಗೇಂದ್ರ ಸಂಗೀತ ನಿರ್ದೇಶಕರು. ಪಿ.ಲೀಲಾ ಹಾಡಿದ್ದರು. ವಿಠಲಾಚಾರ್ಯರೇ ನಿರ್ದೇಶಕರು. ಮೈಸೂರಿನ ನಟರಾಜ್ ಮತ್ತು ರಾಮನಾಥ್ ನಾಟ್ಯ ನಿರ್ದೇಶಕರು. ೧೯೫೩ ಸೆಪ್ಟೆಂಬರ್ ೧೮ರಂದು ನವಜ್ಯೋತಿಯಲ್ಲಿ ಹಾಕಿದ ಅಂತಃಪುರದ ಸೆಟ್‌ನಲ್ಲಿ ಚಿತ್ರೀಕರಣ ಪ್ರಾರಂಭಿಸಿ ಮೊದಲೇ ನಿರ್ಧರಿಸಿದ್ದಂತೆ ೧೯೫೪ರಲ್ಲಿ ತೆರೆಗೆ ತಂದರು.



(ಚಿತ್ರ ೧೪) 'ರಾಜಲಕ್ಷ್ಮಿ' ಚಿತ್ರದಲ್ಲಿ ರೇವತಿ

ಈ ಚಿತ್ರ ಬೆಂಗಳೂರಿನ ಗೀತಾ ಟಾಕೀಸಿನಲ್ಲಿ ೧೪ ದಿನಗಳ ಕಾಲ ಹೌಸ್‌ಫುಲ್ ಆಗಿ ಪ್ರದರ್ಶಿತವಾಯಿತು. ಆಗ ಚಿತ್ರ ಹಂಚಿಕೆದಾರರೊಬ್ಬರು ಚಿತ್ರದ ಹಕ್ಕುಗಳನ್ನು ಖರೀದಿಸಲು ಮುಂದೆ ಬಂದರು. ವಿಠಲಾಚಾರ್ಯರು ಅದನ್ನು ಮಾರಿಬಿಟ್ಟರು. ಆದರೆ ಮಾರನೆಯ ದಿನದಿಂದಲೇ ಚಿತ್ರದ ಗಳಿಕೆ ಇಳಿಕೆಯಾಗಿ ಚಿತ್ರ ಮೂಲೆಗುಂಪಾಯಿತು.

ಅನಂತರ ಅವರು ಅದೇ ವರ್ಷ ಕಪ್ಪು ಹೆಣ್ಣು ಹಾಗೂ ಅವಳ ಮದುವೆಯ ಸಮಸ್ಯೆ ಕುರಿತ 'ಕನ್ಯಾದಾನ' ಚಿತ್ರವನ್ನು ಮೈಸೂರಿನಲ್ಲೇ ತಯಾರಿಸಿದರು. ಬಡ ಸಂಸಾರದಲ್ಲಿ ಕಪ್ಪು ಹೆಣ್ಣಾಗಿ ಹುಟ್ಟಿ ಮದುವೆಯ ವಿಷಯದಲ್ಲಿ ನಾನಾ ಬವಣೆಗಳನ್ನು ಎದುರಿಸುವ ನತದೃಷ್ಟ ಹೆಣ್ಣಿನ ಪಾತ್ರದಲ್ಲಿ ಹರಿಣಿ ಅಭಿನಯಿಸಿದ್ದರು. ಇಂದುಶೇಖರ್ ಕಥಾನಾಯಕ. ಆದರೆ ಆ ಚಿತ್ರದ ಕೇಂದ್ರ ಆಕರ್ಷಣೆ ಆ ಹೆಣ್ಣಿನ ಮದುವೆ ಮಾಡಿಸಲು ನಾನಾ ಪ್ರಯತ್ನಗಳನ್ನು, ಉಪಾಯಗಳನ್ನು ಮಾಡುವ ದಲ್ಲಾಳಿ ಸೀತಾರಾಮಯ್ಯನ ಪಾತ್ರದಲ್ಲಿ ಟಿ.ಎನ್.ಬಾಲಕೃಷ್ಣ ಅಭಿನಯ. ರಾಜನ್-ನಾಗೇಂದ್ರ ಸಂಗೀತ ನಿರ್ದೇಶನದಲ್ಲಿ ಆ ಚಿತ್ರದ ಹಾಡು 'ಬಣ್ಣದಲೇನಿದೆಯೋ...' ಅತ್ಯಂತ ಜನಪ್ರಿಯವಾಯಿತು.

ಪ್ರಥಮ ಬಾರಿಗೆ ಸಾಮಾಜಿಕ ಸಮಸ್ಯೆಯೊಂದನ್ನು ಎತ್ತಿಕೊಂಡು ತಯಾರಿಸಿದ ಆ ಚಿತ್ರ ಅತ್ಯಂತ ಯಶಸ್ವಿಯಾಗಿ ಪ್ರದರ್ಶಿತವಾಯಿತು. ಆ ಕಾಲದ ಸೂಪರ್ ಹಿಟ್ ಎಂದರೂ ಸರಿಯೇ. ಅದು ವಿಠಲಾಚಾರ್ಯರಿಗೆ ಕೀರ್ತಿ, ಹಣ ಎರಡನ್ನೂ ತಂದುಕೊಟ್ಟಿತು.

'ಕನ್ಯಾದಾನ' ಚಿತ್ರದ ನಂತರ ವಿಠಲಾಚಾರ್ಯರು ತಮ್ಮ ವ್ಯವಹಾರ ವಿಸ್ತರಿಸಿಕೊಳ್ಳಲು ದಕ್ಷಿಣ ಭಾರತದ ಚಲನಚಿತ್ರ ಕೇಂದ್ರವಾಗಿದ್ದ ಮದರಾಸಿಗೆ ಹೋಗಿ ಅಲ್ಲೇ ನೆಲೆಸಿ ಚಿತ್ರಗಳ ತಯಾರಿಕೆಯನ್ನು ಮುಂದುವರೆಸಿದರು. ಅವರು ಜಾನಪದ ಕಥೆಗಳನ್ನೊಳಗೊಂಡ (ಮಾಯಾ ಮಂತ್ರ) ತೆಲುಗು ಚಿತ್ರಗಳನ್ನು ತಯಾರಿಸಿ ಮದರಾಸಿನ ಪ್ರತಿಷ್ಠಿತ ನಿರ್ಮಾಪಕ-ನಿರ್ದೇಶಕರಲ್ಲೊಬ್ಬರಾದದ್ದು ಮುಂದಿನ ಕಥೆ.

ಶಂಕರಸಿಂಗ್ ಅವರು ಮಹಾತ್ಮಾ ಬ್ಯಾನರ್‌ನಲ್ಲಿ 'ಮುಟ್ಟಿದ್ದೆಲ್ಲ ಚಿನ್ನ' ಚಿತ್ರ ಪ್ರಾರಂಭಿಸಿದರು. ಮೈಸೂರಿನಲ್ಲಿ ಪ್ರಾರಂಭಿಸಿದರೂ ಮುಗಿದಿದ್ದು ಮದರಾಸಿನಲ್ಲಿ. ಈ ಚಿತ್ರಕ್ಕೆ ಸಾಹಿತ್ಯ ರಚಿಸಿದವರು ಕವಿ ಗುಂಡೂರಾಯರು. ಗುಬ್ಬಿ ಕಂಪನಿಯ 'ಸಾಹುಕಾರ' ನಾಟಕದ ಸ್ಫೂರ್ತಿ. ಮುಖ್ಯವಾಗಿ 'ತೂಕ್ಕು ತೂಕ್ಕಿ' ತಮಿಳಿನ ಕಥೆಯನ್ನು ಆಧರಿಸಲಾಗಿತ್ತು, ಮೂಲ ಕಥೆಯ ಒಂದು ಎಳೆ ಇಟ್ಟುಕೊಂಡು ಅನೇಕ ಕಾಲ್ಪನಿಕ ಅಂಶಗಳನ್ನು ಸೇರಿಸಿದ್ದರು ಎಂದು ತಂತ್ರಜ್ಞ ದೊರೆಸ್ವಾಮಿ ಹೇಳುತ್ತಾರೆ. ಹುಣಸೂರು ಕೃಷ್ಣಮೂರ್ತಿಗಳು ಸಾಹಿತ್ಯ ವಿಭಾಗದಲ್ಲಿ ನೆರವಾದರು. ಪಿ.ಶಾಮಣ್ಣನವರ ಸಂಗೀತ ಹಾಗೂ ಪಿ.ಲೀಲಾ, ಜಿಕ್ಕಿ, ರಾಜನ್ ಹಿನ್ನೆಲೆಗೆ ಹಾಡಿದ್ದರು. ಹೆಚ್ಚಿನ ಸಂಖ್ಯೆಯಲ್ಲಿ ಹಾಡುಗಳಿದ್ದವು. ಬಹುತೇಕ ರಂಗಭೂಮಿಯ ಹಾಸ್ಯ ಕಲಾವಿದರೇ ಅಭಿನಯಿಸಿದ್ದರು. ಟಿ.ಎನ್.ಬಾಲಕೃಷ್ಣ, ನರಸಿಂಹರಾಜು, ಎಂ.ಎಸ್.ಮಾಧವರಾವ್, ಎಂ.ಶ್ರೀನಿವಾಸರಾವ್, ಮಹಾಬಲರಾವ್ ಇದ್ದರು. ನಾಯಕನಾಗಿ ವೀರಭದ್ರಪ್ಪನವರಿದ್ದರು. ಪ್ರತಿಮಾದೇವಿ, ಕಾಮಿನಿ, ಸರೋಜರ ಅಭಿನಯವಿತ್ತು. ಈಶ್ವರಪ್ಪ ಕೂಡಾ ಒಂದು ಪಾತ್ರದಲ್ಲಿದ್ದರು. ಚಿತ್ರಕ್ಕೆ ಸಂಬಂಧಿಸಿದ ಜಾಹಿರಾತಿನಲ್ಲಿ ಇಂಥ ಸಾಲುಗಳಿದ್ದವು:

ಆಸೆಯಿಂದಿಹ ತಂದೆ - ವಾತ್ಸಲ್ಯಮಯಿ ತಾಯಿ
ಗಂಟಿರಲು ನಂಟರ್ಗೆ ಸತಿಯ ಕೆಣಕಲು ಬೇಡ
ಆಪತ್ತ ನೀಗುತಲಿದೆ - ಕಾಪಾಡುವುದೇ ಹಣವು
ಮಮತೆಯಾ ಸವಿಗೀತ - ಮಿಗಿಲಿಲ್ಲವೀ ಜಗದಿ

ತಾರೀಖು ೧೯೫೪ರ ಏಪ್ರಿಲ್ ೪ರಿಂದ ಚಿತ್ರವು ಬೆಂಗಳೂರಿನ ಜೈಹಿಂದ್, ಶಿವಾಜಿ ಚಿತ್ರಮಂದಿರಗಳಲ್ಲೂ, ಮೈಸೂರು, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ತುಮಕೂರು, ಚಿಕ್ಕಮಗಳೂರು, ಮಂಗಳೂರು ಕೇಂದ್ರಗಳಲ್ಲೂ ತೆರೆಕಂಡಿತು.

೧೯೫೪ರಲ್ಲಿ ತೆರೆಕಂಡ ಇನ್ನೊಂದು ಚಿತ್ರ ಕೆಂಪರಾಜ ಅರಸು ಅವರ 'ಜಲದುರ್ಗ'. ಸುಪ್ರಸಿದ್ಧ ಫ್ರೆಂಚ್ ಕಾದಂಬರಿ 'ಕೌಂಟ್ ಆಫ್ ಮಾಂಟೆಕ್ರಿಸ್ಟೋ' ಆಧರಿಸಿ ತಯಾರಿಸಿದ ಒಂದು ಸದಭಿರುಚಿಯ ಚಿತ್ರ. ಕೆಂಪರಾಜ್ ಅವರೇ ಕಥಾನಾಯಕ. ತೆಲುಗು ನಟಿ ಕೃಷ್ಣಕುಮಾರಿ, ಸಂಧ್ಯಾ, ಗಣಪತಿಭಟ್ ಮುಖ್ಯ ತಾರಾಗಣದಲ್ಲಿದ್ದರು. ಪತ್ರಿಕೆಗಳೂ ಚಿತ್ರದ ಬಗ್ಗೆ ಒಳ್ಳೆಯ ಅಭಿಪ್ರಾಯ ವ್ಯಕ್ತಪಡಿಸಿದ್ದವು. ಆದರೂ ಈ ಚಿತ್ರ ದಯನೀಯ ರೀತಿಯಲ್ಲಿ ಸೋಲನ್ನಪ್ಪಿತ್ತು. ಕೆಂಪರಾಜ್ ಅವರು ಈ ಚಿತ್ರವನ್ನು ತಮಿಳಿನಲ್ಲೂ ತಯಾರಿಸಿದ್ದರು. ಅಲ್ಲೂ ಅವರ ಪ್ರಯತ್ನ ವಿಫಲವಾಯಿತು. ಇದರಿಂದ ಕೋಪಗೊಂಡು ಚಿತ್ರದ ನೆಗೆಟಿವ್‌ಗಳನ್ನು ಸುಟ್ಟು ಹಾಕಿದ್ದಾಗಿ ಕೆಂಪರಾಜ ಅರಸು ತಮ್ಮ ಆತ್ಮಚರಿತ್ರೆಯಲ್ಲಿ ಸ್ಮರಿಸುತ್ತಾರೆ.

ಆ ವರ್ಷದ ಕೊನೆಯಲ್ಲಿ ಬಿಡುಗಡೆಯಾದ ಚಿತ್ರ ಮಹಾತ್ಮ ಅವರ 'ಮಾಡಿದ್ದುಣ್ಣೋ ಮಹರಾಯ'. ಚಿತ್ರಕಥೆ, ಸಂಭಾಷಣೆ, ಹಾಡುಗಳನ್ನು ಗೌತಮ ಎಂಬ ಹೆಸರಿನಲ್ಲಿ ಹುಣಸೂರು ಕೃಷ್ಣಮೂರ್ತಿ ಅವರೇ ರಚಿಸಿದ್ದರು. ಇನ್ನು ಇತರ ಪಾರಿಭಾಷಿಕ ವರ್ಗ ಹಾಗೂ ತಂತ್ರಜ್ಞರೆಲ್ಲ ಮಹಾತ್ಮ ಸಂಸ್ಥೆಯ ಖಾಯಂ ತಂತ್ರಜ್ಞರು. ಛಾಯಾಗ್ರಹಣ - ಎಂ.ಎಸ್.ಮಣಿ, ಸಂಕಲನ - ಪಿ.ಎಸ್.ಮೂರ್ತಿ, ಸಂಗೀತ - ಪಿ.ಶಾಮಣ್ಣ. ಹುಣಸೂರು ಕೃಷ್ಣಮೂರ್ತಿ, ಹರಿಣಿ, ಪ್ರತಿಮಾದೇವಿ, ರೇವತಿ, ಸಂಪತ್ ಅವರುಗಳು ಈ ಚಿತ್ರದಲ್ಲಿ ಅಭಿನಯಿಸಿದ್ದರು. ಈ ಚಿತ್ರ ಚೆನ್ನಾಗಿಯೇ ಪ್ರದರ್ಶಿತವಾಗಿ ಯಶಸ್ವಿಯಾಯಿತು.



(ಚಿತ್ರ ೧೫) 'ಕನ್ಯಾದಾನ'ದಲ್ಲಿ ಸುಬ್ಬಣ್ಣ, ಬಾಲಕೃಷ್ಣ, ರೇವತಿ, ರಮಾದೇವಿ, ಇಂದುಶೇಖರ್ ಮತ್ತು ಜಯಶ್ರೀ

"'ಮಾಡಿದ್ದುಣ್ಣೋ ಮಹರಾಯ' ಮೂರು ತಿಂಗಳಲ್ಲಿ ಮುಗಿಯಿತು. ನಂಬಿಯಕ್ಕ ಬಿಟ್ಟರೆ ಚಿತ್ರ ನಿರ್ಮಾಣದಲ್ಲಿ ಇದೇ ರಿಕಾರ್ಡ್. ಫಿಲಂ ಸೆಂಟರ್‌ನಲ್ಲಿ ಸ್ಟಂಟ್ ಸೋಮು ಇದ್ದರು. ಅವರೇ ಸಾಹಸ ಸನ್ನಿವೇಶಗಳನ್ನು ನೋಡಿಕೊಂಡರು. ಬಹುತೇಕ ನಾವೇ ನಿರ್ವಹಿಸುತ್ತಿದ್ದೆವು. ಈ ಚಿತ್ರದ ಒಂದು ದೃಶ್ಯದಲ್ಲಿ ಪೊಲೀಸಿನವರು ಅಟ್ಟಿಸಿಕೊಂಡು ಬಂದಾಗ ಡೈವ್ ಮಾಡಿ ಓಡಿ ಹೋಗಬೇಕು. ಇಂಥದ್ದೆಲ್ಲ ಕೊಂಚ ಕಷ್ಟ. ಆದ್ದರಿಂದ ಆ ಪಾತ್ರ ಮಾಡಿದ್ದ ಹುಣಸೂರು ಕೃಷ್ಣಮೂರ್ತಿಗೆ ಡ್ಯೂಪ್ ಹಾಕಿಸಿದ್ದೆವು.." ಎನ್ನುತ್ತಾರೆ ಆ ಚಿತ್ರದ ತಂತ್ರಜ್ಞ ದೊರೆಸ್ವಾಮಿ ಅವರು.

ಆ ದಿನಗಳಲ್ಲಿ ಕನ್ನಡ ಚಿತ್ರರಂಗದ ಬಗ್ಗೆ ಬುದ್ಧಿ ಜೀವಿಗಳ ಅಭಿಪ್ರಾಯ ಯಾವ ರೀತಿ ಇತ್ತು ಎಂಬುದಕ್ಕೆ ೧೯೫೪ರಲ್ಲಿ ಕುಮಟಾದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ವಿ.ಸೀತಾರಾಮಯ್ಯನವರ ಭಾಷಣದಲ್ಲಿನ ಕೆಲವು ಸಾಲುಗಳನ್ನು ಗಮನಿಸಬಹುದು :

"...ಚಲಚ್ಚಿತ್ರದ ಮೇಲ್ಮೆಯ ಮಾತು ಬಂದುದರಿಂದ ಅದನ್ನು ಕುರಿತು ಒಂದು ಮಾತು ಸಂದೀತು. ಎಂಟಾಣೆ, ಹನ್ನೆರಡಾಣೆ ವೆಚ್ಚ ಮಾಡಿದರೆ ಮೂರು ಗಂಟೆಗಳ ಅವಧಿಯಲ್ಲಿ



(ಚಿತ್ರ ೧೬) 'ಮಹಾಕವಿ ಕಾಳಿದಾಸ' ಚಿತ್ರದಲ್ಲಿ ರಾಘವೇಂದ್ರರಾವ್, ಹೊನ್ನಪ್ಪ ಭಾಗವತರ್, ಈಶ್ವರಪ್ಪ, ಬಿ.ಸರೋಜಾದೇವಿ.

ಭರತ ಖಂಡದ ಮತ್ತು ಹೊರಗಿನ ಶ್ರೇಷ್ಠ ನಟ-ನಟಿಯರು, ಗಾಯಕರು, ರೂಪಗ್ರಾಹಕರು ಹಾಗೂ ನಿರ್ದೇಶಕರ ಕೃತಿಗಳನ್ನು ನೋಡಿ, ಕೇಳಿ ಆನಂದ ಪಡುವ ಅವಕಾಶವಿರುವಾಗ ಅಪಕ್ವವಾಗಿ, ಅಪೂರ್ಣವಾಗಿ ಒಟ್ಟಿನಲ್ಲಿ ಹಾಗೂ-ಹೀಗೂ ಇರುವ, ಆಡಿದ ನಾಟಕವನ್ನೆ ನೋಡುವವರು ಯಾರು ? ನಮ್ಮ ಚಲಚ್ಚಿತ್ರಗಳಾದರೂ ಹಣ ಗಳಿಸಿವೆಯೇ ? ಕೀರ್ತಿ ಪಡೆದಿವೆಯೇ ? ಇಲ್ಲ. ಕನ್ನಡ ಜನ ಅಲ್ಪ ಸಂಖ್ಯಾತ, ಬಡಮಂದಿ - ಇವರ ವಿನೋದಕ್ಕಾಗಿ ಲಕ್ಷಗಟ್ಟಲೆ ಹಣ ಸುರಿಯುವವರು ಯಾರು ? ಹಣ ಹಾಗೆ ಚೆಲ್ಲದಿದ್ದರೆ ಉತ್ತಮ ನಟ-ನಟಿಯರೂ, ನಿರ್ದೇಶಕರೂ ದೊರಕಲಾರರು. ಸಾಧನ, ಸಂಪತ್ತಿ ಇಲ್ಲದ ಚಿತ್ರ ಬಡಕಲಾಗುವುದು. ಕನ್ನಡಿಗರಲ್ಲದ ನಟರನ್ನು ಯೋಜಿಸಿದರೂ ಕನ್ನಡದ ಸೊಗಸೇ ಸೊಗಸು ! ಇನ್ನು ಕನ್ನಡದ ನಟರು ಸಾಕಾದಷ್ಟು ಚಿತ್ರಗಳಲ್ಲಿ ನಟಿಸಬಲ್ಲ ಶಕ್ತಿ, ಸಿದ್ಧತೆ ಇಲ್ಲದವರ ಭಾಗವೇ ಹೆಚ್ಚು. ಯಾವ ರಂಗದಲ್ಲೂ ಕನ್ನಡದವರು ಹಿಂದು.'' (ಕನ್ನಡ ನುಡಿ, ಸಮ್ಮೇಳನ ಸಂಚಿಕೆ. ಸಂ : ಡಿ.ಸಿ.ಸುಬ್ಬರಾಯಪ್ಪ)

೧೯೫೪ರಲ್ಲಿ ಮೈಸೂರಿನಲ್ಲಿ ಎಂ.ಎಸ್.ಬಸವರಾಜಯ್ಯನವರು ಪ್ರೀಮಿಯರ್ ಸ್ಟುಡಿಯೋ ಪ್ರಾರಂಭಿಸಿದರು. (ನೋಡಿ : 'ಸ್ಟುಡಿಯೋಗಳು' ಲೇಖನ)

ಈ ಕಾಲಘಟ್ಟದಲ್ಲಿ ಕಳೆದ ೨೫ ವರ್ಷಗಳಲ್ಲಿ ಕನ್ನಡ ಚಿತ್ರರಂಗವನ್ನು ಬೆಳಗಿದ ಪೋಷಕ ಕಲಾವಿದರುಗಳನ್ನು ನೆನೆಯುವುದು ಸೂಕ್ತ. ಈ ಪೈಕಿ ಮುಖ್ಯರಾದವರು ಹೆಚ್.ಆರ್.ಶಾಸ್ತ್ರಿ, ಎಚ್.ಕೃಷ್ಣಶಾಸ್ತ್ರಿ ಸೋದರರು (ಇವರ ಕಿರಿಯ ಸಹೋದರ ವಿಜಯನಾರಸಿಂಹ ಚಿತ್ರ ಸಾಹಿತಿಯಾಗಿ, ಕಾವ್ಯ ಗುಣವುಳ್ಳ ಅನೇಕ ಚಿತ್ರಗೀತೆಗಳನ್ನು ರಚಿಸಿ ಹೆಸರು ಮಾಡಿದರು), ವಾಸುದೇವ ಗಿರಿಮಾಜಿ, ಡಿಕ್ಕಿ ಮಾಧವರಾವ್, ಸೋರಟ್ ಅಶ್ವಥ್, ಈಶ್ವರಪ್ಪ, ಗಣಪತಿಭಟ್, ವೀರಭದ್ರಪ್ಪ, ಬೇಲೂರು ರಾಘವೇಂದ್ರರಾವ್, ಎಂ.ಜಿ.ಮರಿರಾವ್, ಎಂ.ಎಸ್.ಸುಬ್ಬಣ್ಣ, ಹನುಮಂತಾಚಾರ್, ವಿಮಲಾನಂದ ದಾಸ್ ಮುಂತಾದವರು. ಇವರೆಲ್ಲ ಬಹುತೇಕ ವೃತ್ತಿ ರಂಗಭೂಮಿಯಿಂದ ಬಂದವರು. ಕೃಷ್ಣಶಾಸ್ತ್ರಿಗಳು ನಾಟಕದ ಕಂಪನಿಯಲ್ಲಿ ರಾಜಕುಮಾರ್ ಅವರಿಗೆ ಸಂಗೀತ ಕಲಿಸಿದ ಗುರುಗಳು. ಕಲಾವಿದೆಯರ ಪೈಕಿ ಘಟವಾಣಿ ಅತ್ತೆ ಪಾತ್ರಗಳಿಗೆ ಹೆಸರಾದ ಬಳ್ಳಾರಿ ರಮಾದೇವಿ, ಶಾಂತಮ್ಮ, ಪಾಪಮ್ಮ, ಎಂ.ಎನ್.ಲಕ್ಷ್ಮೀದೇವಿ ಮುಂತಾದವರನ್ನು ಹೆಸರಿಸಬಹುದು.

೧೯೫೫ರಲ್ಲಿ ಒಟ್ಟು ೧೩ ಕನ್ನಡ ಚಿತ್ರಗಳು ಮತ್ತು ಮಲಿಯಾಳಂನಿಂದ ಡಬ್ ಆದ 'ಅಜ್ಞಾತ' ತೆರೆಕಂಡವು.

ಈ ಪೈಕಿ ಲಲಿತಕಲಾ ಫಿಲ್ಮ್ಸ್ ಅವರ 'ಮಹಾಕವಿ ಕಾಳಿದಾಸ' ಹಲವು ದೃಷ್ಟಿಯಿಂದ ಒಂದು ಮಹತ್ವದ ಚಿತ್ರ. ಕನ್ನಡದಲ್ಲಷ್ಟೇ ಅಲ್ಲದೆ ತಮಿಳು ಚಿತ್ರರಂಗದಲ್ಲೂ ತಮ್ಮ ಗಾಯನ ಅಭಿನಯದಿಂದ ಹೆಸರು ಮಾಡಿದ್ದ ಹೊನ್ನಪ್ಪ ಭಾಗವತರ್ ಅವರು ಕಾಳಿದಾಸನ ಪಾತ್ರ ವಹಿಸಿ ತಯಾರಿಸಿದ ಚಿತ್ರ. ಬಿ.ಸರೋಜಾದೇವಿ ಈ ಚಿತ್ರದ ಮೂಲಕ ಕಥಾನಾಯಕಿಯಾಗಿ ಬೆಳ್ಳಿ ತೆರೆಗೆ ಪರಿಚಯವಾದರು. ಇದಕ್ಕೆ ಮುಂಚೆಯೇ ಅವರು ಬಿ.ಆರ್.ಕೃಷ್ಣಮೂರ್ತಿ ಅವರ 'ಶ್ರೀರಾಮ ಪೂಜಾ' ಚಿತ್ರಕ್ಕಾಗಿ ಕ್ಯಾಮರಾ ಎದುರಿಸಿದ್ದರಾದರೂ ಮೊದಲು ತೆರೆಕಂಡದ್ದು 'ಮಹಾಕವಿ ಕಾಳಿದಾಸ'. ಹೊನ್ನಪ್ಪ ಭಾಗವತರ್ ಅವರೇ ಸಂಗೀತ ನೀಡಿ ಅವರೇ ಹಾಡಿದ ಚಿತ್ರದ ಹಾಡುಗಳು ಅತ್ಯಂತ ಜನಪ್ರಿಯವಾದವು.

ಹಿಂದೆ 'ಭಕ್ತ ಕುಂಬಾರ' ಸಂಗೀತ ಪ್ರಧಾನ ಭಕ್ತಿ ಚಿತ್ರವನ್ನು ನಿರ್ಮಿಸಿದ್ದ ಹೊನ್ನಪ್ಪ ಭಾಗವತರ್ ಅವರು ತಮಿಳು ಚಿತ್ರಗಳಿಂದ ಗಳಿಸಿದ ಹಣವನ್ನು ಹಾಕಿ ತಮ್ಮ ಬಹುದಿನದ ಮಹತ್ವಾಕಾಂಕ್ಷೆಯ 'ಕಾಳಿದಾಸ' ಚಿತ್ರವನ್ನು ತಯಾರಿಸಲು ನಿರ್ಧರಿಸಿ ಆ ದಿನಗಳಲ್ಲಿ ಶ್ರೇಷ್ಠ ಚಿತ್ರ ಸಾಹಿತಿಗಳೆಂದು ಹೆಸರು ಮಾಡಿದ್ದ ಕು.ರ.ಸೀತಾರಾಮಶಾಸ್ತ್ರಿ[1] ಅವರಿಗೆ ಚಿತ್ರ ಸಾಹಿತ್ಯ ಹಾಗೂ ನಿರ್ದೇಶನದ ಹೊಣೆಯನ್ನು ವಹಿಸಿದರು. ಚಿತ್ರ ಮದರಾಸಿನ ವಾಹಿನಿ ಸ್ಟುಡಿಯೋದಲ್ಲಿ ತಯಾರಾಯಿತು. ಈ ಚಿತ್ರದ ಹಾಡುಗಳನ್ನು ಕು.ರ.ಸೀ ಅವರೇ ರಚಿಸಿದರಾದರೂ ಒಂದು ಹಾಡನ್ನು ಮಾತ್ರ ಕನ್ನಡ ಚಿತ್ರ ಸಾಹಿತ್ಯದ ಪಿತಾಮಹ ಬೆಳ್ಳಾವೆ ನರಹರಿಶಾಸ್ತ್ರಿಗಳಿಂದ ಬರೆಸಿದರು. ಇದರ ಹಿನ್ನೆಲೆ:

ಚಿತ್ರದ ಅತ್ಯಂತ ಪ್ರಮುಖ ಸನ್ನಿವೇಶ ಭೋಜರಾಜನ ಆಸ್ಥಾನದಲ್ಲಿ ಕಾಳಿದಾಸ ರಚಿಸಿದ 'ಮೇಘದೂತ', 'ಕುಮಾರ ಸಂಭವ', 'ರಘುವಂಶ' ಮೊದಲಾದ ಖಂಡ ಕಾವ್ಯಗಳ ವಿವರಣೆಗಳನ್ನೊಳಗೊಂಡಂತೆ ಒಂದು ಅಮೋಘ ರೀತಿಯ ಗೀತೆಯೊಂದನ್ನು ರಚಿಸಲು ಭಾಗವತರ್ ಕು.ರ.ಸೀ. ಯವರಿಗೆ ಹೇಳಿದರು. ''ಇದೊಂದು ಗೀತೆಯನ್ನು ಮಾತ್ರ ನಾನು ಬರೆಯುವುದಿಲ್ಲ. ಬೆಳ್ಳಾವೆ ನರಹರಿಶಾಸ್ತ್ರಿಗಳಿಂದಲೇ ಈ ಗೀತೆಯ ರಚನೆಯಾಗಬೇಕು. ಅವರೇ ಅದಕ್ಕೆ ಸಮರ್ಥರು'' ಎಂದರು ಕು.ರ.ಸೀ.

ಮಾರನೆಯ ದಿನ ಹೊನ್ನಪ್ಪ ಭಾಗವತರ್ ಮತ್ತು ಕು.ರ.ಸೀ ಬೆಂಗಳೂರು ಪೈಪ್‌ಲೈನ್‌ನಲ್ಲಿದ್ದ ನರಹರಿಶಾಸ್ತ್ರಿಗಳ ಮನೆಗೆ ಹೋದರು. ತಾವು ಬಂದ ಉದ್ದೇಶವನ್ನು ಬೆಳ್ಳಾವೆ ಅವರಿಗೆ ಭಾಗವತರ್ ವಿವರಿಸಿದರು. ''ಶಾಸ್ತ್ರಿಗೆ ಹೇಳಯ್ಯಾ, ಬರೆಯುತ್ತಾನೆ'' ಎಂದರು ಅವರು. ''ಸ್ವಾಮಿ, ಇದೊಂದು ಗೀತೆ ತಮ್ಮಿಂದಲೇ ರಚನೆಯಾಗಬೇಕು'' ಎಂದರು ಕು.ರ.ಸೀ. ''ಸರಿ, ನಾಳೆ ಬೆಳಗ್ಗೆ ಹತ್ತೂವರೆಗೆ ಎಂಪೈರ್ ಸ್ಟುಡಿಯೋಗೆ ಬನ್ನಿ'' ಎಂದರು ಬೆಳ್ಳಾವೆ ನರಹರಿಶಾಸ್ತ್ರಿಯವರು.

ಮಾರನೆಯ ದಿನ ಹೇಳಿದ ಸಮಯಕ್ಕೆ ಎಂಪೈರ್ ಸ್ಟುಡಿಯೋಗೆ ಹಾಜರಾದ ಭಾಗವತರ್ ಮತ್ತು ಕು.ರ.ಸೀ. ಸನ್ನಿವೇಶವನ್ನು ಮತ್ತೊಮ್ಮೆ ವಿವರಿಸಿದರು. ''ಬರೆದು ಕೊಳ್ಳಯ್ಯ'' ಎಂದರು ಶಾಸ್ತ್ರಿಗಳು.

ಕು.ರ.ಸೀ. ಬರೆದುಕೊಳ್ಳತೊಡಗಿದರು :

''ರಾಜೇಂದ್ರ ನಾಂ । ರಚಿಸಿದೆನೈ ಪ್ರಭು ।
ರಂಜಿಪ ಸುಕಾವ್ಯಗಳ । ನವರಸಯುತ ಕೃತಿಗಳ ॥

ಎಂದು ಹೇಳಿ ''ಹೊನ್ನಪ್ಪ, ಇದಕ್ಕೆ ಟ್ಯೂನ್ ಮಾಡು'' ಎಂದರು. ಕೇದಾರಗೌಳ ರಾಗದಲ್ಲಿ ಸ್ವರ ಸಂಯೋಜಿಸಿ ಹಾಡಿ ತೋರಿಸಿದರು ಭಾಗವತರು. 'ಭೇಷ್, ಚೆನ್ನಾಗಿದೆ'' ಎಂದು ನುಡಿದ ಶಾಸ್ತ್ರಿಗಳು,

ಶಿವ ಪಾರ್ವತಿಯರ ಲೀಲೆಗಳ । ಸವಿಯನು
ವಿವರಿಸಿ ವಿರಚಿಸಿದೆ । ಕುಮಾರನುದಿಸಿ
ಮಹಿಮೆಯ ತೋರಿ ।
ಅಮಿತಾನಂದವ । ಅಮರರಿಗೆ ಕರುಣಿಸಿದ
ಸುರರಿಪುಹರ ॥

ಎಂದು ಚರಣ ಪ್ರಾರಂಭಿಸಿ,

ಮೇಘ ಸಂದೇಶವ ಪೇಳುವೆನೊಲಿದು
ರಾಗಾವೇಶದ ನಿಜಸತಿಗೆ ॥
ರಮಣನು ಕಳುಹಿದ ವಿರಹದ ಪರಿಯ ।
ಸುಮಧುರ ಕೃತಿಯಿದು । ನರವಿನುತನೆ ।
ಧರೆಯರಸನೆ ವರಚರಿತನೆ ॥ ೨ ॥

೧. ಕು.ರ.ಸೀತಾರಾಮಶಾಸ್ತ್ರಿ ಕೆಲವು ಕಾಲ ಮಲಯಾದ ಷಾ ಸ್ಟುಡಿಯೋದಲ್ಲಿ ಕೆಲವು ಚಿತ್ರಗಳನ್ನು ನಿರ್ದೇಶಿಸಿ ಪರಿಣತಿ ಹೊಂದಿದ್ದರು. ಇವರು ಭಾರತಕ್ಕೆ ಬಂದ ಮೇಲೆ ಕಾಳಿದಾಸ ಚಿತ್ರ ಮಾಡಲು ಅವಕಾಶ ದೊರೆಯಿತು.

ಪಾಗಾದಿಯನು । ಶ್ರೀಕಾವ್ಯವನಾ ।
ರಘುವಂಶವನೆ । ಪೇಳಿಹೆನೈ ದೇವಾ ॥
ರಾಘವ ಚರಿತೆಯನು ಕೇಳೈ ॥
ಅನುರಾಗದಿ ನೀಂ । ಕವಿಜಗಹಿತ ।
ನವಗುಣಯುತ । ಭುವನವಿನುತ ॥ ೩ ॥

ಎಂದು ಮುಗಿಸಿದರು. ಈ ಚರಣಗಳಿಗೆ ಭಾಗವತರು ಹಂಸಾನಂದಿ ಮತ್ತು ಕಾನಡಾ ರಾಗಗಳನ್ನು ಸಂಯೋಜಿಸಿ ಹಾಡಿದರು. ಬೆಳ್ಳಾವೆ ನರಹರಿ ಶಾಸ್ತ್ರಿಗಳು ಸಾಹಿತ್ಯ ಹೇಳಿ, ಕು.ರ.ಸೀ. ಬರೆದುಕೊಂಡು, ಹೊನ್ನಪ್ಪ ಭಾಗವತರ್ ಸ್ವರಸಂಯೋಜನೆ ಮಾಡಿ, ಹಾಡಿ ಮುಗಿಸಿದಾಗ ಕೇವಲ ಇಪ್ಪತ್ತು ನಿಮಿಷಗಳಾಗಿದ್ದವು ಅಷ್ಟೆ. ಆ ದಿನಗಳಲ್ಲಿ ಅಷ್ಟು ಬೇಗ ಗೀತೆಯೊಂದರ ರಚನೆಯಾದದ್ದು ಅದೇ ಮೊದಲು.

ಈ ಹಾಡು, ಹಾಗೂ ಕು.ರ.ಸೀ. ಬರೆದ ಕಲ್ಯಾಣಿ ರಾಗದ 'ಶೃಂಗಾರ ವಾಹಿನಿ ಮನಮೋಹಿನಿ....' ಗೀತೆಗಳು ಅತ್ಯಂತ ಜನಪ್ರಿಯವಾದುವು. ಜನಪದ ಸಾಹಿತ್ಯದಲ್ಲಿನ ಕೋಲಾಟದ ಹಾಡು 'ಚೆಲ್ವಯ್ಯ ಚೆಲ್ವೋ.....' ಇನ್ನೊಂದು ಜನಪ್ರಿಯ ಗೀತೆ. ಈ ದೃಶ್ಯಕ್ಕಾಗಿ ನಟ ಶಿವರಾಮ್ (ರಾಶಿ ಸಹೋದರರು) ಜನಪದ ನರ್ತಕರ ತಂಡವನ್ನು ಮದರಾಸಿಗೆ ಕರೆದೊಯ್ದಿದ್ದರು.

'ಮಹಾಕವಿ ಕಾಳಿದಾಸ' ಚಿತ್ರಕ್ಕೆ ಒಳ್ಳೆಯ ಹೆಸರು ಬಂತು. ರಾಷ್ಟ್ರಪತಿಗಳ ಅರ್ಹತಾ ಪತ್ರ ಪ್ರಶಸ್ತಿಯೂ ಬಂತು. ಕೀರ್ತಿ ಬಂದರೂ ಹಣ ಹಿಂತಿರುಗಲು ೩-೪ ವರ್ಷಗಳೇ ಬೇಕಾಯಿತು. ಇಷ್ಟೆಲ್ಲ ಹೇಳುವಾಗಲೂ ಹೊನ್ನಪ್ಪ ಭಾಗವತರು ತಮ್ಮ ಜೀವನ ಕಥೆಯಲ್ಲಿ ಹೇಳಿರುವ ಕೆಲವು ಸಂಗತಿಗಳನ್ನು ಇಲ್ಲಿ ನೆನೆಯಬೇಕು.

"...'ಮಹಾಕವಿ ಕಾಳಿದಾಸ' ಚಿತ್ರಕ್ಕೆ ಕಥೆಯ ಆಯ್ಕೆಯೇ ಕಷ್ಟವಾಯಿತು. ಹಲವರು ಕಾಳಿದಾಸನ ಬಗ್ಗೆ ಬರೆದಿದ್ದರು. ಆದರೆ ಅದಾವುದೂ ಸಮರ್ಪಕ ಅನ್ನಿಸಿರಲಿಲ್ಲ. ಸಿ.ಕೆ.ವೆಂಕಟರಾಮಯ್ಯನವರು ಕಾಳಿದಾಸನ ಬಗ್ಗೆ ಬರೆದಿದ್ದರು. ಅವರಲ್ಲಿ ವಿಚಾರಿಸಿದಾಗಲೂ ಖಚಿತ ಮಾಹಿತಿ ಸಿಗಲಿಲ್ಲ. ಕಪೋಲಕಲ್ಪಿತ ಕಥೆಗಳನ್ನೇ ಜೋಡಿಸಿ ಗೊಳಿಸುವುದಷ್ಟೇ ಉಳಿದ ದಾರಿಯಾಗಿತ್ತು. ಹಾಗೆ ಚಿತ್ರಕಥೆ-ಸಂಭಾಷಣೆ ಸಿದ್ಧ ಮಾಡಿಕೊಂಡೆವು..."

ಕರ್ನಾಟಕ ಶಾಸ್ತ್ರೀಯ ಸಂಗೀತವನ್ನೇ ಅಳವಡಿಸಬೇಕು, ಆದಷ್ಟೂ ದೇಶೀ ವಾದ್ಯಗಳನ್ನೇ ಬಳಸಬೇಕು ಎಂಬ ಉದ್ದೇಶದಿಂದ ಪಾಶ್ಚಾತ್ಯ ವಾದ್ಯಗಳನ್ನೆಲ್ಲ ಕಡಿಮೆ ಮಾಡಿದರು. ವೀಣೆ, ಕೊಳಲು, ಮೃದಂಗ, ಕಲವು ತಂತಿ ವಾದ್ಯಗಳು ಮತ್ತು ವಿದೇಶಿ ವಾದ್ಯ ಕ್ಲಾರಿಯೊನೆಟ್ ಬಳಸಿ (ಕ್ಲಾರಿಯೊನೆಟ್ ಆ ಹೊತ್ತಿಗೆ ನಮ್ಮೊಂದಿಗೆ ಸೇರಿ ಹೋಗಿತ್ತು. ಅದು ವಿದೇಶಿ ವಾದ್ಯ ಎನ್ನುವುದೇ ತಪ್ಪೇನೊ.) ಹಾಡುಗಳನ್ನೆಲ್ಲ ಧ್ವನಿ ಮುದ್ರಿಸಿದರು. ಚಿತ್ರದಲ್ಲಿ ಬರುವ ಗುರುವಿನ ಪಾತ್ರಕ್ಕೆ ತಮ್ಮ ಸಂಗೀತ ಗುರು ಸಂಬಂಧಮೂರ್ತಿ ಭಾಗವತರನ್ನು ಆಯ್ದರು. ಜಿ.ವಿ.ಅಯ್ಯರ್, ನರಸಿಂಹರಾಜು, ಬೇಲೂರು ರಾಘವೇಂದ್ರರಾವ್, ಗಣಪತಿಭಟ್, ರಾಜಸುಲೋಚನ, ಮಿತ್ರವಿಂದ ಮೊದಲಾದವರು ಅಭಿನಯಿಸಿದ್ದರು. ರಾಘವೇಂದ್ರರಾಯರ ಭೋಜರಾಜನ ಪಾತ್ರ ಬಹಳ ಮೆಚ್ಚುಗೆ ಪಡೆದಿತ್ತು. ನಿರ್ದೇಶನಕ್ಕೆ ಆಯ್ದ ಕು.ರ.ಸೀ. ಅವರು, ಅಭಿನಯಕ್ಕೆ ಆಯ್ದ ಸರೋಜ (ಬಿ.ಸರೋಜಾದೇವಿ) ಹೊಸಬರು, ಸಹಾಯಕ ನಿರ್ದೇಶಕರಾಗಿ ಆಯ್ದ ಎಸ್.ರಾಮನಾಥನ್ ಸಹ ಹೊಸಬರು. ಛಾಯಾಗ್ರಾಹಕರಾಗಿ ಆಗಷ್ಟೇ ಡಿಪ್ಲೊಮಾ ಪಡೆದಿದ್ದ ಪರಮೇಶ್ ಅವರನ್ನು ನಿಯೋಜಿಸಲಾಗಿತ್ತು. ಉಳಿದಂತೆ ಹೆಸರಾಂತ ರಂಗಕಲಾವಿದರನ್ನು ಗೊತ್ತು ಮಾಡಿಕೊಂಡರು.

'ಮಹಾಕವಿ ಕಾಳಿದಾಸ' ಚಿತ್ರದ ಬಗ್ಗೆ ಸರೋಜಾದೇವಿ ಅವರು ನೆನಪು ಮಾಡಿಕೊಂಡದ್ದು ಹೀಗೆ : "ಜಯಮಾರುತಿ ಆರ್ಕೆಸ್ಟ್ರಾದಲ್ಲಿ ಹಾಡುತ್ತಿದ್ದೆ. ಮೇಯೋಹಾಲ್‌ನಲ್ಲಿ ಅನಾರ್ಕಲಿ ಸಿನಿಮಾದಲ್ಲಿ ಲತಾ ಹಾಡಿರುವ 'ಏ ಜಿಂದಗೀ ಉಸೀಕಿ...' ಹಾಡು ಹಾಡಿದೆ. ಹೊನ್ನಪ್ಪ ಭಾಗವತರು ನೋಡಿ, ಕೇಳಿ, ಅವರ ಸಿನಿಮಾಕ್ಕೆ ಗೊತ್ತು ಮಾಡಿಕೊಂಡರು. ಹಾಡಿಗೊ, ನಟನೆಗೋ ಏನು ಹೇಳಿದರೋ ನೆನಪಿಲ್ಲ. ಹಾಡೂ ಹಾಡಿಸಿ, ಡೈಲಾಗ್ಸ್ ಹೇಳಿಸಿ ಪರೀಕ್ಷಿಸಿದರು. ಕೊನೆಗೆ ಹಾಡಿಸಲಿಲ್ಲ, ಪಾತ್ರ ಕೊಟ್ಟರು. ಕು.ರ.ಸೀತಾರಾಮಶಾಸ್ತ್ರಿಗಳು ನನ್ನನ್ನು ತಿದ್ದಿ, ನಟನೆ, ಮಾತು ಎಲ್ಲ ಕಲಿಸಿದ ಗುರುಗಳು. 'ಪಂಚರತ್ನ'ದಲ್ಲಿ ಅಭಿನಯಿಸಿದೆ. ಅನಂತರ ನರೇಂದ್ರಬಾಬುಗಳ ಮುಖಾಂತರ ಸುಬ್ರಹ್ಮಣ್ಯಂ ನಿರ್ದೇಶನದ 'ಕಚ ದೇವಯಾನಿ'ಯಲ್ಲಿ ಅಭಿನಯಿಸಿದೆ...".

ಚಿತ್ರೀಕರಣ ಪ್ರಾರಂಭವಾಯಿತು. ನೋಡುತ್ತಿದ್ದವರೆಲ್ಲ ಶ್ರೀಮಂತವಾಗಿದೆ ಎಂದು ಮೆಚ್ಚುತ್ತಿದ್ದರು. ರಾಜಾಸ್ಥಾನದ ದೃಶ್ಯಕ್ಕೆ ಒಳ್ಳೆಯ ಸೆಟ್ಸ್ ಹಾಕಿ ಚಿತ್ರಿಸುವ ಅಪೇಕ್ಷೆ. ಆದರೆ ಅಷ್ಟು ಹಣವಿಲ್ಲ. ಸ್ಟುಡಿಯೋ ಮಾಲೀಕರಾದ ನಾಗಿರೆಡ್ಡಿ ಅವರ ಬಳಿ ಸಮಸ್ಯೆ ಹೇಳಿದಾಗ ಅವರು ತಾವು ಚಿತ್ರಿಸುತ್ತಿದ್ದ 'ಚಂದ್ರಹಾರ' ಚಿತ್ರಕ್ಕೆ ಹಾಕಿದ್ದ ಸೆಟ್‌ಗಳ ಪರಿಕರವನ್ನೇ ಬಳಸಿ ಉತ್ತಮವಾದ ಸೆಟ್ ಹಾಕಲು ತಮ್ಮ ಕಲಾ ನಿರ್ದೇಶಕರನ್ನೇ ಕಳುಹಿಸಿ ಉಪಕಾರ ಮಾಡಿದರು.

ಈ ಮಧ್ಯೆ ಮನಸ್ಸಿಗೆ ಬಂದಂತೆ ಮಾತಾಡಿಕೊಳ್ಳುವ ಅಸೂಯಾಪರರಿಂದ ಕ್ಲೇಶವಾಗುತ್ತಿತ್ತು. ನಾಯಕಿ ಸರೋಜ ಹೊಸಬರು, ಬೇಗ ಗ್ರಹಿಸುತ್ತಿರಲಿಲ್ಲ. ಕೆಲಸ ನಿಧಾನವಾಗುತ್ತಿತ್ತು. ಇನ್ನು ೮-೧೦ ದಿನದಲ್ಲಿ ಚಿತ್ರ ಮುಗಿಯುತ್ತದೆ ಎನ್ನುವಾಗ ಛಾಯಾಗ್ರಾಹಕರಿಗೆ ಸರಕಾರಿ ಕೆಲಸಕ್ಕೆ ಸಂದರ್ಶನದ ಆದೇಶ ಬಂತು. ಆತ ಒಲ್ಲದ ಮನಸ್ಸಿನಿಂದಲೇ ಹೋದರು. ಉದ್ಯೋಗ ಸಿಕ್ಕಿತು. ಮತ್ತೆ ಚಿತ್ರೀಕರಣಕ್ಕೆ ಬರಲಿಲ್ಲ. ಬೇರೆ ಛಾಯಾಗ್ರಾಹಕರನ್ನು ನೇಮಿಸಿ ಚಿತ್ರೀಕರಣ ಮುಗಿಸಿದರು. ಚಿತ್ರದ ಬಿಡುಗಡೆ ದಿನಾಂಕವೂ ಗೊತ್ತಾಗಿ, ಸೆನ್ಸಾರ್ ಸಹ ಆಯಿತು. ಆದರೆ ಚಿತ್ರದ ಉದ್ದ ೧೯ ಸಾವಿರ ಅಡಿ ಇತ್ತು ! ಚಿತ್ರ ನೋಡುವಾಗ ಸೌಂಡ್ ನಾನ್‌ಸಿಂಕ್ ಆಗಿ, ಆಭಾಸವಾಗಿ ಕೇಳುತ್ತಿತ್ತು. ಚಿತ್ರೀಕರಣ ನಡೆದಿರುವಾಗಲೇ ಕೊಂಚ ಕೊಂಚವಾಗಿ ನಿರ್ದೇಶಕರೊಂದಿಗ ಅಸಮಾಧಾನ ಏರ್ಪಟ್ಟಿತ್ತು. ಈಗ ಚಿತ್ರ ಹಾಗಾಗಲು 'ಎಡಿಟಿಂಗ್ ಕಾರಣ. ನಾನಲ್ಲ' ಎಂದು ನಿರ್ದೇಶಕರು ಉತ್ತರಿಸಿದಾಗ ಮತ್ತಷ್ಟು ಬೇಸರವಾಯಿತು.

ಒಂದು ಮರದಡಿ ಕುಳಿತು ಕಣ್ಣೀರು ಹಾಕಿದರು ಭಾಗವತರು. ಇದನ್ನು ನೋಡಿದ ಸ್ಟುಡಿಯೋ ಕೆಲಸದವರೊಬ್ಬರು ನಾಗಿರೆಡ್ಡಿಯವರ ಗಮನಕ್ಕೆ ತಂದರು. ಅವರು ವಿಚಾರಿಸಿ ವಿಷಯ ತಿಳಿದುಕೊಂಡು ಜಂಬೂ ಮತ್ತು ಕಲ್ಯಾಣ ಎಂಬ ಸಂಕಲನಕಾರರನ್ನು ಕರೆಸಿ ಚಿತ್ರ ಪೂರ್ತಿ ನೋಡಿ, ಕೆಲವು ಸಲಹೆಗಳನ್ನು ಕೊಟ್ಟು ಒಂದೊಂದು ರೀಲ್ ಅನ್ನೇ ಎಡಿಟ್ ಮಾಡಿಸಿ, ಹೊಸದಾಗಿ ಪ್ರಿಂಟ್ ಮಾಡಿಸಿ ತಾವೇ ಪರಿಶೀಲಿಸಿದರು. ಇದೆಲ್ಲ ಮುಗಿದು ಚಿತ್ರಕ್ಕೆ ಒಂದು ರೂಪ ಬರಲು, ೧೯ ಸಾವಿರ ಅಡಿಯಿಂದ ೧೭ ಸಾವಿರಕ್ಕೆ ಬಂದು ನಿಲ್ಲಲು ಸುಮಾರು ಹತ್ತು ದಿನಗಳೇ ಆದವು. ಚಿತ್ರ ನೋಡಿದ ಎಲ್ಲರೂ ಚೆನ್ನಾಗಿದೆ ಎಂದ ಮೇಲೆ ಪ್ರತಿಗಳನ್ನು ತೆಗೆದು ಗೊತ್ತಾದ ದಿನಾಂಕಕ್ಕೆ ಬಿಡುಗಡೆ ಮಾಡಲಾಯಿತು. ಕು.ರ.ಸೀ. ಅವರೊಂದಿಗೆ ಭಾಗವತರಿಗೆ ಏನೇ ಅಸಮಾಧಾನವಿದ್ದರೂ "ಅವರು ಕಥೆ, ಸಂಭಾಷಣೆ, ಹಾಡುಗಳು ಹಾಗೂ ಸನ್ನಿವೇಶಕ್ಕೆ ತಕ್ಕಂಥ ಕ್ಲೋಸಪ್‌ಗಳನ್ನು ಬಹಳ ಚೆನ್ನಾಗಿ ಅಳವಡಿಸಿದ್ದಾರೆ... ಸಾಹಿತ್ಯದ ವಿಷಯದಲ್ಲಿ ಅವರಿಗಿದ್ದ ಪ್ರತಿಭೆಯನ್ನು ನಾನೆಂದಿಗೂ ಮರೆಯಲಾರೆ.." ಎಂದಿದ್ದಾರೆ.



(ಚಿತ್ರ ೧೭) 'ಮಹಾಕವಿ ಕಾಳಿದಾಸ' ಚಿತ್ರದಲ್ಲಿ ಬಿ.ಸರೋಜಾದೇವಿ ಮತ್ತು ಸಖಿಯರು.



(ಚಿತ್ರ ೧೮) 'ಆದರ್ಶ ಸತಿ' ಚಿತ್ರದಲ್ಲಿ ಜಮುನಾ

ಕನ್ನಡ ಚಿತ್ರಗಳಿಗೆ ಕನ್ನಡಿಗರಿಂದಲೇ ಪ್ರೋತ್ಸಾಹವಿರಲಿಲ್ಲ. ಚಿತ್ರವೊಂದು ಏಳೆಂಟು ವಾರ ಪ್ರದರ್ಶಿತವಾದರೆ ಅದ್ಭುತವಾಗುತ್ತಿತ್ತು. ಆದರೆ 'ಮಹಾಕವಿ ಕಾಳಿದಾಸ' ಯಶಸ್ವಿಯೆನಿಸಿತು. ಭಾಗವತರು ನಾಗಿರೆಡ್ಡಿಯವರಿಗೆ ಕೃತಜ್ಞತೆ ಹೇಳಿ ಸ್ಟುಡಿಯೋದ ಬಾಕಿ ಎಷ್ಟು ಕೊಡಬೇಕೆಂದು ವಿಚಾರಿಸಿದರು. ಅವರು ಲೆಕ್ಕ ಹಾಕಿಸಿದಾಗ ಕಾಲ್‌ಶೀಟ್, ಸೆಟ್ಟಿಂಗ್ಸ್‌ಗಳಿಗೆ ೨೨ ಸಾವಿರ ರೂಪಾಯಿ ಹಾಗೂ ಎಡಿಟಿಂಗ್, ಪ್ರಿಂಟಿಂಗ್ ಮಾಡಿಸಿದ ಪಾಸಿಟಿವ್‌ಗಾಗಿ ೧೫ ಸಾವಿರ ರೂಪಾಯಿ ಬಾಕಿ ಇತ್ತು. ನಾಗಿರೆಡ್ಡಿಯವರು ಅವೆಲ್ಲವನ್ನೂ ವಜಾ ಮಾಡಿ "ಕಷ್ಟುಪಟ್ಟು ಒಳ್ಳೆಯ ಚಿತ್ರ ಮಾಡಿದ್ದೀರಿ. ಶುಭವಾಗಲಿ" ಎಂದರಂತೆ... ಹೀಗೆ ಕಾಳಿದಾಸ ಚಿತ್ರವಾದದ್ದೇ ಒಂದು ಕಥೆ ಎಂದಿದ್ದಾರೆ ಭಾಗವತರು.

ಅದೇ ರೀತಿ ಎ.ವಿ.ಎಂ. ಸ್ಟುಡಿಯೋದಲ್ಲಿನ ಸೌಲಭ್ಯಗಳನ್ನು ಬಳಸಿಕೊಂಡು ತಯಾರಾದ 'ಆದರ್ಶ ಸತಿ' ಒಂದು ಅದ್ದೂರಿಯ ಚಿತ್ರ. ಮೇಯಪ್ಪ ಚೆಟ್ಟಿಯಾರ್ ಅವರೇ ಎ.ವಿ.ಎಂ. ಪ್ರೊಡಕ್ಷನ್ಸ್ ಲಾಂಛನದಡಿ ತಯಾರಿಸಿದ ಈ ಚಿತ್ರ ಅದ್ಭುತ ಸೆಟ್‌ಗಳ ಜತೆಗೆ ಭವ್ಯ ತಾರಾಗಣ, ಉತ್ತಮ ಕಥಾ ನಿರೂಪಣೆ, ಒಳ್ಳೆಯ ಸಂಗೀತ ಹಾಗೂ ಇತರ ತಾಂತ್ರಿಕ ಮೌಲ್ಯಗಳಿಂದಾಗಿ ಒಂದು ಯಶಸ್ವಿ ಚಿತ್ರವಾಯಿತು.

ನಾಗೇಂದ್ರರಾವ್, ಜಮುನಾ, ಸಾಹುಕಾರ್ ಜಾನಕಿ, ಮೋಹನ್, ರಘುರಾಮಯ್ಯ, ನರಸಿಂಹರಾಜು, ಬಳ್ಳಾರಿ ರಮಾದೇವಿ ಮುಂತಾದವರು ತಾರಾಗಣದಲ್ಲಿದ್ದರು. ತೆಲುಗು ಚಿತ್ರರಂಗದ ಖ್ಯಾತ ನಿರ್ದೇಶಕ ಚಿತ್ರಪು ನಾರಾಯಣಮೂರ್ತಿ ನಿರ್ದೇಶಿಸಿದ ಈ ಚಿತ್ರದಲ್ಲಿ ಛಾಯಾಗ್ರಹಣದ ಹಲವು ಟ್ರಿಕ್‌ಗಳನ್ನು ಮಾಡಲಾಗಿತ್ತು. ಛಾಯಾಗ್ರಾಹಕರು ಮಹಾರಾಷ್ಟ್ರದ ಮಾಧವ ಬುಲ್ ಬುಲೆ. ಎ.ವಿ.ಎಂ.ನ ಮುತ್ತುಸ್ವಾಮಿ ಅವರು ಟ್ರಿಕ್ಸ್ ಇರುವ ಚಿತ್ರಿಕೆಗಳನ್ನು ತೆಗೆದರು. ಇಲ್ಲಿ ಬಳಸಲಾದ ಜೋಡಿ ಹಾವುಗಳ ಚಿತ್ರಿಕೆಗಳು ಬಹಳಷ್ಟು ಪ್ರಚಾರದಲ್ಲಿದ್ದವು. ಆ ದಿನಗಳಲ್ಲಿ ಅದೇ ದೊಡ್ಡ ಸಾಧನೆ, ಆಶ್ಚರ್ಯದ ಸಾಧನೆ. ಆರ್.ಸುದರ್ಶನ್ ಮತ್ತು ಗೋವರ್ಧನ್ ಸೋದರರ ಸಂಗೀತ ನಿರ್ದೇಶನದಲ್ಲಿ ಕೆಲವು ಹಾಡುಗಳು ಅತ್ಯಂತ ಜನಪ್ರಿಯವಾದವು. 'ಪ್ರಭು ನನ್ನೆದೆಯೆ ನಿನ್ನಯ ಮಹಾಮಂದಿರ...' ಎಂಬ ಗೀತೆ ಎಲ್ಲರ ನಾಲಿಗೆಯಲ್ಲಿ ಆಡುತ್ತಿತ್ತು. 'ಆದರ್ಶ ಸತಿ' ಚಿತ್ರಕ್ಕೆ ಪ್ರತಿ ಫ್ರೇಮಿಗೂ ವರ್ಣವನ್ನು ಪೈಂಟ್ ಮಾಡಿ ವರ್ಣ ಚಿತ್ರವಾಗಿಸುವ ಪ್ರಯೋಗ ಮಾಡಿದ್ದರೆಂದು ಹಿರಿಯರು ಹೇಳುತ್ತಾರೆ.

ಸಂಪತ್ ಅಭಿನಯದ ಮಹಾತ್ಮ ಅವರ 'ಆಷಾಢಭೂತಿ'ಯ ಕಥೆ ನೋಡಿದಾಗ ಅದು ಎ.ಎನ್.ಮೂರ್ತಿರಾಯರ ನಾಟಕದ ಆಧಾರ ಎಂದು ಅನ್ನಿಸುತ್ತದೆ. ಚಿತ್ರ ಸಾಹಿತ್ಯವನ್ನು ರಚಿಸಿದ್ದವರು ಪಿ.ಗುಂಡೂರಾಯರು. ಈ ಚಿತ್ರದಲ್ಲೇ ಪುಟ್ಟ ಪಾತ್ರವೊಂದರಿಂದ ರಾಜಾಶಂಕರ್ ಪರಿಚಯವಾಯಿತು.

ಆ ವರ್ಷದ ಮತ್ತೊಂದು ಮಹತ್ವದ ಚಿತ್ರ ಎಂದರೆ ಪಂತುಲು ಅವರ ಪದ್ಮಿನಿ ಪಿಕ್ಚರ್ಸ್ ಲಾಂಛನದಡಿ ಮಹೋನ್ನತ ಚಿತ್ರಗಳಿಗೆ ನಾಂದಿ ಹಾಡಿದ 'ಮೊದಲ ತೇದಿ'. ಈ ಚಿತ್ರವನ್ನು ನಿರ್ದೇಶಿಸಿದವರು ತಮಿಳಿನ ಪಿ.ನೀಲಕಂಠನ್. ರೇವತಿ ಸ್ಟುಡಿಯೋದಲ್ಲಿ ಚಿತ್ರೀಕರಣವಾಯಿತು. ನ್ಯಾಷನಲ್ ಹೈಸ್ಕೂಲ್‌ನಲ್ಲಿ ಅಧ್ಯಾಪಕರಾಗಿದ್ದ ಸಾಹಿತಿ, ನಾಟಕಕಾರ ಚಿ.ಸದಾಶಿವಯ್ಯ ಚಿತ್ರದ ಸಾಹಿತ್ಯ ರಚಿಸಿದರು. 'ತೇದಿ' ಎನ್ನುವ ಹೆಸರಿನ ಬಗ್ಗೆ ಒಂದಷ್ಟು ವಾದ ವಿವಾದಗಳಾದವು. ಅದು ತಮಿಳು ಪದ ಎಂದು ಕೆಲವರ ವಾದ. ಕನ್ನಡದಲ್ಲಿ ತೇದಿ ಎಂಬ ಪದವಿದೆ ಎಂಬುದನ್ನು ಸದಾಶಿವಯ್ಯ ಆಧಾರಸಹಿತ ಸಮರ್ಥಿಸಿದಾಗ ವಿವಾದ ತಣ್ಣಗಾಯಿತು.

ಬಿ.ಆರ್.ಪಂತುಲು, ಎಂ.ವಿ.ರಾಜಮ್ಮ, ಢಿಕ್ಕಿ ಮಾಧವರಾವ್, ಮಾಸ್ಟರ್ ಹಿರಣ್ಣಯ್ಯ, ರೇವತಿ, ಸುಶೀಲಾ, ಎಚ್.ಆರ್.ಶಾಸ್ತ್ರಿ, ಜಿ.ಆರ್.ಸ್ಯಾಂಡೋ, ಸುಜಾತಾ, ಚಿ.ಸದಾಶಿವಯ್ಯ ಮೊದಲಾದವರು ತಾರಾಗಣದಲ್ಲಿದ್ದರು. ಸದಾಶಿವಯ್ಯನವರ ಪುತ್ರ ಹಾಗೂ ಮುಂದೆ ಕನ್ನಡ ಚಿತ್ರರಂಗದ ಅತ್ಯಂತ ಜನಪ್ರಿಯ ಸಾಹಿತಿಯಾಗಿ ಪ್ರಸಿದ್ಧರಾದ ಚಿ.ಉದಯಶಂಕರ್ ಈ ಚಿತ್ರದ ಸಹಾಯಕ ನಿರ್ದೇಶಕರಾಗಿದ್ದುದಲ್ಲದೆ ಒಂದು ಪಾತ್ರವನ್ನು ಮಾಡಿದ್ದರು. ನಟ ವಿಷ್ಣುವರ್ಧನ್ ಅವರ ಸೋದರ ರವಿ ಆಗ ಚಿಕ್ಕ ಹುಡುಗ. ಅತ ಬಾಲ ಕಲಾವಿದರಲ್ಲೊಬ್ಬರಾಗಿ ಅಭಿನಯಿಸಿದ್ದರು. ಖ್ಯಾತ ತಮಿಳು ನಟ ಶಿವಾಜಿ ಗಣೇಶನ್ ಅತಿಥಿ ನಟರಾಗಿ ಕಾಣಿಸಿಕೊಂಡಿದ್ದಾರೆ. ಈ ಚಿತ್ರದಲ್ಲಿ ಡಿಕ್ಕಿ ಮಾಧವರಾವ್ ಹಾಡಿರುವ ಮಧ್ಯಮ ವರ್ಗದ ಆರ್ಥಿಕ ಸಂಕಷ್ಟಗಳನ್ನು ಸೊಗಸಾಗಿ ಕಟ್ಟಿಕೊಡುವ 'ಮೊದಲ ತೇದಿ ಇಂದು ಮೊದಲ ತೇದಿ...' ಗೀತೆ ಇಂದಿಗೂ ಜನಪ್ರಿಯವಾಗಿದೆ.

ಆ ಚಿತ್ರದಲ್ಲಿ ಕೆಲಸ ಮಾಡಿದ ಕಲಾವಿದರು, ತಂತ್ರಜ್ಞರು ಅವರವರ ಪ್ರತಿಭೆ, ಪರಿಶ್ರಮಗಳಿಂದ ಈ ಹೊತ್ತು ಚಿತ್ರರಂಗದಲ್ಲಿ ತೊಡಗಿ ಹೆಸರು ಮಾಡಿದ್ದಾರೆ ಎಂಬುದನ್ನು ನೆನಪು ಮಾಡಿಕೊಳ್ಳಬೇಕು. ಖ್ಯಾತ ಸಂಗೀತ ನಿರ್ದೇಶಕ ಟಿ.ಜಿ.ಲಿಂಗಪ್ಪನವರು ಈ ಚಿತ್ರದ ಮೂಲಕವಾಗಿಯೇ ಕನ್ನಡದಲ್ಲಿ ಒಂದು ಶಾಶ್ವತವಾದ ಹೆಸರು ಗಳಿಸಿದರು. ಅವರ ಸಂಗೀತ ನಿರ್ದೇಶನದ ಅನೇಕ ಹಾಡುಗಳು ಇಂದಿಗೂ ಅತ್ಯಂತ ಜನಪ್ರಿಯವಾಗಿದ್ದು ಚಿತ್ರ ರಸಿಕರ ನಾಲಿಗೆಯಲ್ಲಿ ನಲಿಯುತ್ತಿವೆ. 'ಚಿಂತನೆಯನ್ನು ಕೆರಳಿಸುವ ಚಿತ್ರ' ಎಂದು ಜಾಹಿರಾತಿನಲ್ಲಿ ಪ್ರಚಾರ ಮಾಡಿದ್ದ 'ಮೊದಲ ತೇದಿ' ಚಿತ್ರದ ಬಗ್ಗೆ ಎಂ.ನರೇಂದ್ರಬಾಬುಗಳು ಹೀಗೆ ಹೇಳುತ್ತಾರೆ : "...೧೯೫೦ರಲ್ಲಿ ಪದ್ಮಿನಿ ಪಿಕ್ಚರ್ಸ್‌ನವರು ತಯಾರಿಸಿದ ಚಿತ್ರ 'ಮೊದಲ ತೇದಿ'. ಇದರ ಚಿತ್ರನಾಟಕದಲ್ಲಿ ಹೊಸದಾರಿಯೊಂದು ತೆರೆದುಕೊಂಡಿತೆನ್ನಬಹುದು. ಒಂದು ವ್ಯಕ್ತಿ ತಾನು ಸತ್ತ ನಂತರ ತನ್ನ ಸಂಸಾರಕ್ಕೆ ಒದಗಬಹುದಾದ ಕಷ್ಟ ಪರಂಪರೆ ಕಲ್ಪಿಸಿಕೊಳ್ಳುವ ದೃಶ್ಯಾವಳಿ. ಬಹು ಪರಿಣಾಮಕಾರಿಯಾದ ನಿರೂಪಣೆ ಇತ್ತು. ಕಥಾ ಕುತೂಹಲ ಮಾತ್ರವಲ್ಲದೆ ಪ್ರೇಕ್ಷಕನ ಕಲ್ಪನಾ ಶಕ್ತಿಗೂ ಹೊಸ ವ್ಯಾಪ್ತಿಯನ್ನು ಒದಗಿಸಿತು...".

'ಶ್ರೀರಾಮ ಪೂಜಾ' ಚಿತ್ರದಿಂದ ಕನ್ನಡ ಚಿತ್ರರಂಗಕ್ಕೆ ಆದ ಬಹು ದೊಡ್ಡ ಲಾಭಗಳೆಂದರೆ, ಖ್ಯಾತ ಸಂಗೀತ ನಿರ್ದೇಶಕ ವಿಜಯ ಭಾಸ್ಕರ್ ಪೂರ್ಣ ಪ್ರಮಾಣದ ಸಂಗೀತ ನಿರ್ದೇಶಕರಾಗಿ ಕನ್ನಡ ಚಿತ್ರರಂಗ ಪ್ರವೇಶಿಸಿದ್ದು ಮತ್ತು ಮುಂದೆ ಸದಭಿರುಚಿಯ, ಕಲಾತ್ಮಕ ಚಿತ್ರಗಳ ನಿರ್ದೇಶಕರಾಗಿ ದೇಶ ವಿದೇಶಗಳಲ್ಲಿ ಹೆಸರು ಮಾಡಿದ್ದ ಎನ್.ಲಕ್ಷ್ಮೀನಾರಾಯಣ್ ಚಿತ್ರರಂಗ ಪ್ರವೇಶಿಸಿದ್ದು. ಗೀತ ರಚನೆಕಾರರಾಗಿ ಗೀತಪ್ರಿಯರ ಪ್ರವೇಶವಾಯಿತು. ಈ ಚಿತ್ರದಿಂದ ಸಂಧ್ಯಾ ನಾಯಕಿಯಾದರು. ಈ ಚಿತ್ರದ ಧ್ವನಿಮುದ್ರಣ ನವಜ್ಯೋತಿ ಸ್ಟುಡಿಯೋದಲ್ಲೇ ನಡೆಯಿತು.



(ಚಿತ್ರ ೧೯) 'ಮೊದಲ ತೇದಿ' ಚಿತ್ರದಲ್ಲಿ ಎಂ.ವಿ.ರಾಜಮ್ಮ ಹಾಗೂ ಬಿ.ಆರ್.ಪಂತುಲು

ಆ ವರ್ಷ ಚಿತ್ರ ವಲಯಗಳಲ್ಲಿ ವಿವಾದದ ದೂಳೆಬ್ಬಿಸಿದ ಎರಡು ಚಿತ್ರಗಳಾಗಿ ಮಹಾತ್ಮ ಅವರ 'ಶಿವಶರಣೆ ನಂಬಿಯಕ್ಕ' ಮತ್ತು ಪದ್ಮಿನಿ ಪಿಕ್ಚರ್ಸ್‌ರವರ 'ಶಿವಶರಣೆ ನಂಬೆಕ್ಕ' - ಗಮನ ಸೆಳೆದವು.

ಒಂದೇ ಕಥಾವಸ್ತುವನ್ನು ಇಬ್ಬರು ನಿರ್ಮಾಪಕರು ಕೈಗೆತ್ತಿಕೊಂಡದ್ದು ಈ ವಿವಾದಕ್ಕೆ ಕಾರಣ. ಎರಡು ಚಿತ್ರಗಳಿಗೆ ಕಥೆಯನ್ನು ಕೊಟ್ಟು ವಿವಾದವನ್ನು ಸೃಷ್ಟಿಸಿದ ವ್ಯಕ್ತಿ ಸಾಹಿತಿ ಪಿ.ಗುಂಡೂರಾವ್. ಮೊದಲು ಕಥೆಯನ್ನು ಶಂಕರಸಿಂಗ್ ಅವರಿಗೆ ಕೊಟ್ಟು, ಅನಂತರ ದುಡ್ಡಿನ ತಾಪತ್ರಯದಿಂದಾಗಿ ಅದೇ ಕಥೆಯನ್ನು ಪಂತುಲು ಅವರಿಗೆ ಕೊಟ್ಟರು. ವಿಷಯ ತಿಳಿಯದ ಪಂತುಲು ಅವರು ಚಿತ್ರದ ತಯಾರಿಕೆಯನ್ನು ಅದ್ದೂರಿಯಿಂದ ಪ್ರಾರಂಭಿಸಿಬಿಟ್ಟರು. ಶಂಕರಸಿಂಗ್ ಅವರು ಪಂತುಲು ಅವರ ಚಿತ್ರಕ್ಕಿಂತ ತಾವೇ ಮೊದಲು ಬಿಡುಗಡೆ ಮಾಡಬೇಕೆಂಬ ಅತುರದಿಂದ ಕೇವಲ ಎರಡು ಮೂರು ವಾರಗಳಲ್ಲಿ ಚಿತ್ರ ತಯಾರಿಸಿ ಬಿಡುಗಡೆ ಮಾಡಿದರು. ಅನಂತರ ಪಂತುಲು ಅವರ ಚಿತ್ರ ತೆರೆಗೆ ಬಂತು. ಆತುರದಲ್ಲಿ ಮಾಡಿದ್ದರೂ ಶಂಕರಸಿಂಗ್ ಅವರ ಚಿತ್ರದ ವಸ್ತುವೋ ನಿರೂಪಣೆಯ ವಿಶೇಷವೋ ಏನೋ ಜನಗಳನ್ನು ಹೆಚ್ಚು ಆಕರ್ಷಿಸಿತ್ತು. ಈ ವಿವಾದ ಪತ್ರಿಕೆಗಳಲ್ಲಿ ಪ್ರಾಮುಖ್ಯವಾಗಿ ಪ್ರಕಟವಾಗಿತ್ತು. ಚಲನಚಿತ್ರ ವಾರಪತ್ರಿಕೆಯೊಂದು 'ಶಂಕರಸಿಂಗ್ ಬೆನ್ನಿಗೆ ಪಂತುಲು ಚೂರಿ' ಎಂಬ ಶಿರೋನಾಮೆಯಲ್ಲಿ ದೊಡ್ಡ ಲೇಖನವನ್ನೇ ಪ್ರಕಟಿಸಿತ್ತು. ಪಂತುಲು ಅವರು ಯಾವುದೇ ವಿವಾದಗಳಿಗೆ ತಲೆ ಹಾಕುತ್ತಿರಲಿಲ್ಲ. ಚಿತ್ರ ಸಾಹಿತಿಯ ತಪ್ಪಿನಿಂದಾಗಿ ಈ ವಿವಾದ ಉಂಟಾಯಿತು. ಅದಕ್ಕೆ ಮುನ್ನ ಒಬ್ಬರು ಒಂದು ಕಥಾ ವಸ್ತುವನ್ನು ತೆಗೆದುಕೊಂಡಾಗ ಇನ್ನೊಬ್ಬ ನಿರ್ಮಾಪಕ ಅದೇ ವಸ್ತುವನ್ನು ಅಧರಿಸಿ ಚಿತ್ರ ಮಾಡುತ್ತಿರಲಿಲ್ಲ. ಇದೇ ಮೊದಲು. 'ನಂಬಿಯಕ್ಕ' ಚಿತ್ರಕ್ಕೆ ಶಂಕರಸಿಂಗ್ ಜೊತೆ ಹಗಲಿರುಳು ದುಡಿದ ದೊರೆಸ್ವಾಮಿಗಳು ಹೀಗೆನ್ನುತ್ತಾರೆ:

''ನಂಬೆಕ್ಕ-ನಂಬಿಯಕ್ಕಗಳ ಹಿಂದೆ ನಿರ್ಮಾಪಕರಲ್ಲ, ಲೇಖಕರೇ ತಪ್ಪು ಮಾಡಿದ್ದರು. ಮೊದಲು ಶಂಕರಸಿಂಗ್ ಅವರಿಗೆ ಕೊಟ್ಟ ಕಥೆಯನ್ನೇ ಪಂತುಲು ಅವರಿಗೆ ಕೊಟ್ಟರು. ಅವರಿಬ್ಬರದೂ ರಂಗಭೂಮಿಯ ನಂಟು. ಕವಿ ಗುಂಡೂರಾಯರು ನಾಟಕ ರಚನೆಯಲ್ಲಿ ಪ್ರಸಿದ್ಧರು. ಮಹಾತ್ಮಾ ಸಂಸ್ಥೆಯಲ್ಲಿ ಸಾಕಷ್ಟು ಸಾಹಿತ್ಯಿಕವಾಗಿ ಕೆಲಸ ಮಾಡಿದ್ದರು. ಇಬ್ಬರು ನಿರ್ಮಾಪಕರೂ ಕಾರ್ಯಾರಂಭ ಮಾಡಿಯಾಗಿತ್ತು. ತೊಡಗಿಸಿದ ಹಣ ಕಳೆದುಕೊಳ್ಳಲು ಯಾರು ಇಚ್ಛಿಸುತ್ತಾರೆ ? ಇಬ್ಬರೂ ಚಿತ್ರ ಮಾಡಿದರು. ನಮಗೆ ಹಗಲಿರುಳೂ ಕೆಲಸ. ಮದರಾಸಿನಲ್ಲಿ ಫಿಲಂ ಸೆಂಟರ್‌ನಲ್ಲಿ ಒಂದು ಭರ್ಜರಿ ಸೆಟ್ ಇತ್ತು. ಚಿತ್ರದಲ್ಲಿ ಅರಮನೆ ತೋರಿಸಬೇಕಿತ್ತು. ಮದರಾಸಿನಲ್ಲೇ ಇದ್ದ ಶಂಕರಸಿಂಗ್ ಅವರ ಅಕ್ಕನ ಮಗ ಗಣೇಶಸಿಂಗ್ ಈ ಭಾಗವನ್ನೆಲ್ಲ ಚಿತ್ರಿಸಿಕೊಂಡರು. ಮೈಸೂರು, ಶ್ರೀರಂಗಪಟ್ಟಣ, ಮೊದಲಾದ ಕಡೆಗಳಲ್ಲಿ ಚಿತ್ರಿಸಿದೆವು. ಪಿ.ಎಸ್.ಮೂರ್ತಿ ಅವರು ತ್ವರಿತವಾಗಿ ಸಂಕಲಿಸಿದರು. ಲ್ಯಾಬ್‌ನಲ್ಲಿ ಪ್ರಿಂಟ್ ಹಾಕಿಸಿ, ಸೆನ್ಸಾರ್ ಸಹ ಮಾಡಿದ್ದಾಯಿತು. ಕೇವಲ ೨೮ ದಿನದಲ್ಲಿ ಮುಗಿಸಿದೆವು. ಅ ಕಾಲಕ್ಕೆ ಎಪ್ಪತ್ತು ಸಾವಿರ ರೂಪಾಯಿಗಳಷ್ಟು ಖರ್ಚಾಗಿತ್ತು. ಪಂತುಲು ಅವರಿಗೆ ಚಿತ್ರ ಪೂರ್ತಿ ಮಾಡಲು ಮೂರು ತಿಂಗಳು ಬೇಕಾಯಿತು. ನಂಬೆಕ್ಕ-ನಂಬಿಯಕ್ಕಗಳ ಬಗ್ಗೆ ಚಿತ್ರರಂಗದವರ ಸ್ಪರ್ಧೆ ಏನೇ ಇದ್ದರೂ ಚಿತ್ರ ಸಿದ್ಧವಾಗಿ ಬಿಡುಗಡೆ ಅದಾಗ ಶಂಕರ್‌ಸಿಂಗ್ ನಿರ್ಮಾಣದ 'ಶಿವಶರಣೆ ನಂಬಿಯಕ್ಕ' ಚಿತ್ರವನ್ನು ಜನ ಮೆಚ್ಚಿದರು.'' ಎಂದು ಹೇಳುತ್ತಾರೆ ದೊರೆಸ್ವಾಮಿ. ಅಂದಿನ ದಿನಗಳಲ್ಲಿನ ಚಿತ್ರೀಕರಣ ವಿಧಾನದ ಬಗ್ಗೆ ನೆನಪು ಮಾಡಿಕೊಳ್ಳುತ್ತಾ ದೊರೆಸ್ವಾಮಿ, ಚಿತ್ರಗಳಲ್ಲಿ ಟ್ರಿಕ್‌ಶಾಟ್ಸ್ ಸಹ ತಾವೇ ನಿರ್ವಹಿಸಬೇಕಾಗಿದ್ದುದನ್ನು, ಜೀವದ ಹಂಗು ತೊರೆದು ಕೆಲಸ ಮಾಡುತ್ತಿದ್ದುದನ್ನು ನೆನಪು ಮಾಡಿಕೊಳ್ಳುತ್ತಾರೆ.

''ಅಗೆಲ್ಲ ಮಿಚೆಲ್ ಇದ್ದರೂ ಡೆಬ್ರಿ ಕ್ಯಾಮರಾ ಬಳಸುತ್ತಿದ್ದೆವು. ಜೊತೆಗೆ ಮಣಿ ಇರುತ್ತಿದ್ದರು. ಡೆಬ್ರಿಯಲ್ಲಿ ಒಂದು ಅನುಕೂಲ ಇತ್ತು. ಚಿತ್ರೀಕರಣ ಆಗುತ್ತಿರುವಾಗಲೇ ಪಿಕ್ಚರ್ ನೋಡಲೂ ಸಾಧ್ಯವಿತ್ತು. ಕೆಲವು ಕಡೆ ಮಿಚೆಲ್ ಬೇಕು. ಒಂದು ಚಿತ್ರದಲ್ಲಿ ಪ್ರತಿಮಾದೇವಿ, ಹರಿಣೀನ ದೋಣಿಯಲ್ಲಿ ಕೂರಿಸಿ ಚಿತ್ರಿಸುವ ಒಂದು ದೃಶ್ಯ, ಇನ್ನೊಂದು ದಿಕ್ಕಿನಲ್ಲಿ ಮತ್ತೊಂದು ದೋಣಿಯಲ್ಲಿ ಕ್ಯಾಮರಾ ಇತ್ತು. ಕಾವೇರಿ ನದಿ ಭಾರಿ ಪ್ರವಾಹ ಇರೋ ಸ್ಥಳ. ನೀರಿನ ಹರವೂ ದೊಡ್ಡದು. ಆಳವೂ ಬಹಳ ಇತ್ತು. ಹರಿಣಿಯವರ ತಂದೆ ಫಣಿಯಾಡಿಯವರು ಮಗಳಿಗೆಲ್ಲಿ ಅಪಾಯವಾಗುತ್ತೋ ಅಂತ ಹೆದರಿ ಕೂಗಾಡೋರು. ನಾವು ಈಜು ಬಲ್ಲ ಇಬ್ಬರು-ಮೂವರು ದೋಣಿಯನ್ನು ಹಿಡಿದಿರುತ್ತಿದ್ದೆವು. ಶಾಟ್ ತೆಗೆಯೋವಾಗ ನೀರಿನೊಳಗೆ ಮುಳುಗಿಬಿಡುತ್ತಿದ್ದೆವು. ಕನಿಷ್ಠ ೬೦-೭೦ ಅಡಿ ಆಳದ ನೀರು. ಇವೆಲ್ಲ ಜೀವಭಯ ಇದ್ದೋರಿಗೆ ಸಾಧ್ಯವಾಗೋ ಮಾತಲ್ಲ ಬಿಡಿ. ದ್ವಿಪಾತ್ರಗಳಿದ್ದಾಗ ಮಾಸ್ಕ್ ಮಾಡುತ್ತಿದ್ದೆವು. ಇದು ಕೊಂಚ ಕಷ್ಟ. ಇವತ್ತಿನಷ್ಟು ಆಧುನಿಕ ತಂತ್ರಜ್ಞಾನವಿಲ್ಲದ ದಿನಗಳು. ಇರುವುದರಲ್ಲೇ ಕಸರತ್ತು ಮಾಡಬೇಕಿತ್ತು. ಪೇಪರ್ ಕಟ್ ಮಾಡಿ ಅರ್ಧಕ್ಕಿಟ್ಟು ತೆಗೆಯೋದು ಸ್ವಲ್ಪ ಕಷ್ಟವಾಗುತ್ತಿತ್ತು.

''ಒಂದು ಚಿತ್ರದಲ್ಲಿ ಪ್ರತಿಮಾದೇವಿ ಟ್ರೈನ್ ಕೆಳಗೆ ಬೀಳೋ ಸನ್ನಿವೇಶವಿತ್ತು. ಟ್ರೈನ್ ಶಾಟ್ ತಗೊಂಡು ರಿವರ್ಸ್ ತಗೋತಿದ್ದೆವು. ಸರಿಯಾಗಿ ಟೈಂ ಮಾಡಿಕೊಂಡು ಬೀಳೋ ಥರಾ ತೆಗೀತಿದ್ದೆವು. ವೈಪ್, ಡಿಸಾಲ್ವ್ ಎಲ್ಲ ಮಿಚೆಲ್‌ನಲ್ಲೇ ಮಾಡ್ತಿದ್ದೆವು. ೪೦, ೫೦, ೭೫ ಲೈನ್ಸ್‌ಗಳಿದ್ದವು. ಹೆಚ್ಚಿನಂಶ ೪೦-೫೦ ಬಳಸ್ತಿದ್ದೆವು. ಮೊದಲು ಲಾಂಗ್‌ಶಾಟ್, ಮಿಡ್‌ಶಾಟ್, ಅಮೇಲೆ ಕ್ಲೋಸಪ್ ಕ್ರಮವಾಗಿ ಬರೋದು. ಈಗ ಲಾಂಗ್ ಇಂದ ಸೀದಾ ಕ್ಲೋಸ್‌ಗೆ ಬಂದುಬಿಡುತ್ತಾರೆ...

''ಚಿತ್ರವೊಂದರಲ್ಲಿ ಪ್ರತಿಮಾದೇವಿ ಉಯ್ಯಾಲೆಯಲ್ಲಿ ಕೂರುವ ಸನ್ನಿವೇಶ. ಎತ್ತಿನ ಗಾಡಿಯ ನೊಗ (ಮೂಕಿ) ಇರುತ್ತಲ್ಲ ಅದಕ್ಕೆ ಕ್ಯಾಮರಾ ಕಟ್ಟಿ, ಎತ್ತಿ-ಇಳಿಸಿ ಮಾಡೋದು. ಅದೇ ಕ್ರೇನ್ ಎಫೆಕ್ಟ್. ಆ ಸನ್ನಿವೇಶದಲ್ಲಿ ಪ್ರತಿಮಾದೇವಿ ನೀರಿಗೆ ಬಿದ್ದು ಬಿಡಬೇಕಾಗಿತ್ತು. ಸ್ವಲ್ಪದರಲ್ಲಿ ಪಾರಾದರು. ಆಗ ಸ್ಟಂಟ್‌ಗೆ ಪ್ರತ್ಯೇಕವಾಗಿ ಡೈರೆಕ್ಟರ್ ಇರುತ್ತಿರಲಿಲ್ಲ. ಕತ್ತಿವರಸೆ, ಹಾರೋದು, ಇದೆಲ್ಲ ನಾವೇ ಹೇಳಿಕೊಟ್ಟದ್ದೂ ಇದೆ. ಡ್ಯಾನ್ಸ್ ಸಹ ಹಾಗೆ ಹೇಳಿಕೊಟ್ಟಿದೀವಿ.

''ಗಂಧರ್ವ ಕನ್ಯೆ' ಚಿತ್ರದಲ್ಲಿ ಬಾಲಣ್ಣನಿಗೆ ಡ್ಯೂಪ್ ನಾನು ಹಾಕಿದ್ದೆ. ಸಾಮಾನ್ಯವಾಗಿ ಅದೇ ಥರಾ ಇರೋ ಸರ್ಕಸ್‌ನೋರು ಯಾರನ್ನಾದರೂ ಕರೆ ತರ್‍ತಿದ್ದೆವು. ಬಾಲಕೃಷ್ಣ 'ಈ ಥರಾ ಸೀನ್ ಮಾಡೋಕೆ ಆಗಲ್ಲ' ಅಂದಾಗ ನಾನು 'ಡ್ಯೂಪ್' ಹಾಕಿದ್ದೆ. ಮಗುವನ್ನು ಎತ್ತಿಕೊಂಡು ಓಡಿ ಹೋಗೋದು. ಶ್ರೀರಂಗಪಟ್ಟಣದ ಹತ್ತಿರ ಹಳೇ ಸೇತುವೆ ಇದೆಯಲ್ಲ, ಅಲ್ಲಿಂದ ಒಳಗೆ ಒಂದು ಗವಿ ಥರಾ ಇತ್ತು. ಸ್ವಲ್ಪ ದೂರ ಹೋಗಿ ಹೆದರಿಕೊಂಡುಬಿಟ್ಟಿದ್ದೆ.''

'ಗಂಧರ್ವ ಕನ್ಯೆ' ಆ ವರ್ಷ ಬಿಡುಗಡೆಯಾದ ಶಂಕರಸಿಂಗ್ ಅವರ ಜಾನಪದ ಕಥಾಚಿತ್ರ. ಮದರಾಸಿನ ಫಿಲಂ ಸೆಂಟರ್ ಮತ್ತು ರೇವತಿ ಸ್ಟುಡಿಯೋಗಳಲ್ಲಿ ಚಿತ್ರಿತವಾದ ಈ ಚಿತ್ರದಲ್ಲಿ ರಾಜಸುಲೋಚನ, ರೇವತಿ, ಹರಿಣಿ, ಇಂದುಶೇಖರ್ ನಟಿಸಿದ್ದರು.

ಈ ಚಿತ್ರದ ಕೆಲವು ಚಿತ್ರಿಕೆಗಳ ಬಗ್ಗೆ ತಂತ್ರಜ್ಞ ದೊರೆಸ್ವಾಮಿ ಹೀಗೆನ್ನುತ್ತಾರೆ : ''...'ಗಂಧರ್ವ ಕನ್ಯೆ' ಚಿತ್ರದಲ್ಲಿ ನಟ ಇಂದುಶೇಖರ್ ನೀರಿನಲ್ಲಿ ಮೊಸಳೆಯೊಂದನ್ನು ಕೊಂದು ನಾಯಕಿ ಹರಿಣಿಯನ್ನು ಕಾಪಾಡುವ ದೃಶ್ಯ ಚಿತ್ರೀಕರಿಸಬೇಕಿತ್ತು. ಅದನ್ನು ಚಿತ್ರಿಸೋದಕ್ಕೆ ಟ್ರಿಕ್ ಶಾಟ್ಸ್‌ಗಳನ್ನು ನಾನೇ ಮಾಡಿದ್ದೆ. ಮೊಸಳೆ ಬರೋದು, ಬಾಲ ಬಡಿಯೋದು ಎಲ್ಲ ಇರೋವಂತಹ ಒಂದು ಇಂಗ್ಲಿಷ್ ಚಿತ್ರದ ಚಿತ್ರಿಕೆ ತೆಗೆದುಕೊಂಡು ಅದಕ್ಕೆ ನಾವು ಶೂಟ್ ಮಾಡ್ಕೊಂಡಿದ್ದನ್ನ ಮಿಕ್ಸ್ ಮಾಡ್ಕೊಂಡಿದ್ವಿ. ಮೀನು ಸಾಕೋ



(ಚಿತ್ರ ೨೦) 'ಸೋದರಿ' ಚಿತ್ರದಲ್ಲಿ ಪಂಢರಿಬಾಯಿ



(ಚಿತ್ರ ೨೧) 'ಸ್ತ್ರೀರತ್ನ' ಚಿತ್ರದಲ್ಲಿ ಸಂಧ್ಯಾ

ಅಕ್ವೇರಿಯಂ ತೆಗೆದುಕೊಂಡು ಅದರ ಹಿಂದೆ ಒಂದು ಬ್ಲಾಕ್ ಸ್ಕ್ರೀನ್ ಹಾಕಿ, ಅಲ್ಲಿ ಹರಿಣಿಯನ್ನು ಒದ್ದೆ ಮೈನಲ್ಲಿ ಮಲಗ್ಸಿದ್ವು (ನೀರಿನಿಂದ ಪಾರಾಗಬೇಕಿತ್ತಲ್ಲ!), ಅಕ್ವೇರಿಯಂ ನೀರಿನಲ್ಲಿ ಎಲೆಗಳು ಬೀಳೋದು, ಮೀನುಗಳು ಓಡಾಡೋದು ಇದನ್ನೆಲ್ಲ ಶೂಟ್ ಮಾಡಿಕೊಂಡ್ವು, ಇಂಗ್ಲಿಷ್ ಚಿತ್ರದ ದಾಸ್ತಾನು ಚಿತ್ರಿಕೆಯಲ್ಲಿ ಮೊಸಳೆ ಬಾಲವನ್ನ ಬೀಸೋದನ್ನ ಇಟ್ಕೊಂಡು, ಅದಕ್ಕೆ ಇಂದುಶೇಖರ್ ಕೈ ಮೇಲೆ ಮಾಡ್ದಾಗ ಅದರ ಜೊತೆಯಲ್ಲಿ ನೀರು ಹಾರೋದನ್ನೆಲ್ಲ ಸೇರಿಸಿ ನಾವು ಶೂಟ್ ಮಾಡಿದ್ದನ್ನ ಮಿಕ್ಸ್ ಮಾಡಿ ಅದ್ಭುತ ಪರಿಣಾಮ ತಂದೆವು..''

ಮಹಾತ್ಮ ಪಿಕ್ಚರ್ಸ್ ಸಂಸ್ಥೆಯ ಸ್ಥಾಪಕರಲ್ಲೊಬ್ಬರಾಗಿದ್ದ ಜಿ.ಎಸ್.ವಿಶ್ವನಾಥಶೆಟ್ಟಿ ಅವರು ಕಾರಣಾಂತರದಿಂದ ಮಹಾತ್ಮ ಸಂಸ್ಥೆಯ ಪಾಲುದಾರಿಕೆಯಿಂದ ಹೊರಬಂದು ತಮ್ಮದೇ ಆದ ವಿಶ್ವಕಲಾ ಚಿತ್ರ ಸಂಸ್ಥೆಯನ್ನು ಪ್ರಾರಂಭಿಸಿ ಮೊದಲನೆಯದಾಗಿ ಮದರಾಸಿನಲ್ಲಿ 'ಸೋದರಿ' ಚಿತ್ರವನ್ನು ತಯಾರಿಸಿದರು. ಈ ಲಾಂಛನದಡಿ ಅವರು ಒಂದರ ನಂತರ ಒಂದರಂತೆ ನಾಲ್ಕು ಚಿತ್ರಗಳನ್ನು ತಯಾರಿಸಿದರು. ಅವರ ವಿಶ್ವಕಲಾ ಚಿತ್ರ ಒಂದು ಛತ್ರದಂತೆ ಎಲ್ಲರಿಗೂ ಆಶ್ರಯ ಕೊಡುವಂಥದಾಗಿತ್ತು. ಆಗ ಅತ್ಯಂತ ಕಷ್ಟದಲ್ಲಿದ್ದ ಅನೇಕ ಕಲಾವಿದರಿಗೆ ಅನ್ನ, ಆಶ್ರಯ ನೀಡಿದ ಸಂಸ್ಥೆ ಅದು. ಸಂಸ್ಥೆಯ ಎಲ್ಲ ಚಿತ್ರಗಳಲ್ಲಿ ರಾಜಕುಮಾರ್, ಜಿ.ವಿ.ಅಯ್ಯರ್, ನರಸಿಂಹರಾಜು, ಬಾಲಕೃಷ್ಣ ಮುಂತಾದವರು ಅಭಿನಯಿಸುತ್ತಿದ್ದರು.

೧೯೫೫ರಲ್ಲಿ ಬಿಡುಗಡೆಯಾದ 'ಸೋದರಿ'ಯನ್ನು ನಿರ್ದೇಶಿಸಿದವರು ಟಿ.ವಿ.ಸಿಂಗ್ ಠಾಕೂರ್. ಮುಂದೆ ಸಂಸ್ಥೆಯ ಎಲ್ಲ ಚಿತ್ರಗಳನ್ನು ಅವರೇ ನಿರ್ದೇಶಿಸಿದರು. ಈ ಸಂಸ್ಥೆಯ ಎಲ್ಲ ನಿರ್ವಹಣಾ ಕಾರ್ಯ ಜಿ.ವಿ.ಅಯ್ಯರ್ ಅವರದಾಗಿತ್ತು. ಕಥೆ, ಸಾಹಿತ್ಯ, ಕಲಾವಿದರ ಆಯ್ಕೆ ಎಲ್ಲ ಹೊಣೆಗಳನ್ನು ಜಿ.ವಿ.ಅಯ್ಯರ್ ಅವರೇ ನಿರ್ವಹಿಸಿದರು. ಹಣ ಒದಗಿಸುವುದಷ್ಟೇ ವಿಶ್ವನಾಥ ಶೆಟ್ಟಿ ಅವರ ಕೆಲಸವಾಗಿತ್ತು.

'ನಲ್ಲ ತಂಗಾಳ್' ಎಂಬ ಸಾಧ್ವಿಯ ಕಥೆಯನ್ನಾಧರಿಸಿ 'ಸೋದರಿ' ಚಿತ್ರಕಥೆಯನ್ನು ಅಯ್ಯರ್ ರಚಿಸಿದರು. ರಾಜಕುಮಾರ್, ಪಂಢರಿಬಾಯಿ, ಜಯಶ್ರೀ, ರಾಘವೇಂದ್ರರಾವ್, ಇಂದಿರಾ ಆಚಾರ್ಯ, ಲಕ್ಷ್ಮೀದೇವಿ, ಜಿ.ವಿ.ಅಯ್ಯರ್, ನರಸಿಂಹರಾಜು, ಬೇಬಿ ಪ್ರಮೀಳ ತಾರಾಗಣದಲ್ಲಿದ್ದರು. ಪದ್ಮನಾಭಶಾಸ್ತ್ರಿ ಮತ್ತು ಜಿ.ಕೆ.ವೆಂಕಟೇಶ್ ಈ ಚಿತ್ರಕ್ಕೆ ಸಂಗೀತ ನೀಡಿದ್ದರು. ಛಾಯಾಗ್ರಾಹಕರು ಬಿ.ದೊರೈರಾಜ್. ರೋಹಿಣಿ ಸ್ಟುಡಿಯೋದಲ್ಲಿ ಕೆಲಸ ಮಾಡುತ್ತಿದ್ದ ಜಾನಕಿರಾಂ ಅವರೂ ಈ ಚಿತ್ರದ ಛಾಯಾಗ್ರಹಣಕ್ಕೆ ನೆರವಾದರು.

''ಮೊದಲು ಈ ಚಿತ್ರಾನ ತೆಲುಗು ನಟರೊಬ್ಬರು ಮತ್ತು ಸಾಹುಕಾರ್ ಜಾನಕೀನ ಹಾಕಿ ಸಿನಿಮಾ ಮಾಡೋದೂಂತ ಇತ್ತು. ಅದಕ್ಕಾಗಿ ಬಟ್ಟೆ ಸಹ ಹೊಲಿಸಿದ್ದರು. ಆದರೆ ಅದು ವಿಶ್ವಕಲಾ ಸಂಸ್ಥೆಯ ಕೈಗೆ ಬಂದ ಮೇಲೆ ರಾಜಕುಮಾರ್ ಮತ್ತು ಪಂಢರಿಬಾಯಿನ ಹಾಕಿ ಸಿನಿಮಾ ಮಾಡಿದೆವು. ಆ ಮೇಲೆ ನಾನು ಚಿತ್ರರಂಗದಿಂದ ಹಿಂತಿರುಗಲೇ ಇಲ್ಲ. ಸಾಮಾನ್ಯವಾಗಿ ನಮ್ಮದೇ ಒಂದು ಪರಿವಾರ ಇತ್ತು. ಏನೇ ಮಾಡಿದರೂ ನಾವೇ ಸೇರುತ್ತಿದ್ದೆವು. ಪಾತ್ರವರ್ಗದಲ್ಲಿ ರಾಜಕುಮಾರ್, ಲೀಲಾವತಿ, ಬಾಲಕೃಷ್ಣ, ನರಸಿಂಹರಾಜು ಇದ್ದರು. ಸಾಹಿತ್ಯಕ್ಕೆ ನಾನು, ಸಂಗೀತ ಜಿ.ಕೆ.ವೆಂಕಟೇಶ್, ಛಾಯಾಗ್ರಹಣಕ್ಕೆ ದೊರೆ, ಸಂಕಲನಕ್ಕೆ ಎಸ್.ಸಿ.ರಾಜನ್, ಹೀಗೆ ನಮ್ಮದೇ ಒಂದು ತಂಡ. ಸಿನಿಮಾದ ಹೆಸರು, ಬ್ಯಾನರ್ರು ಬೇರೆ ಆಗ್ತಿತ್ತಾಗಲೀ ನಾವು ಮಾತ್ರ ಒಂದೇ ಟೀಮ್. 'ಸೋದರಿ' ಸಿನಿಮಾದ ಕಾರಣದಿಂದ ವಿಶ್ವನಾಥ ಶೆಟ್ಟರು ಹತ್ತಿರವಾದರು. ಅವರಿಗೂ ನನ್ನ ಕೆಲಸ ಇಷ್ಟ ಆಗಿತ್ತು. ಆಡಳಿತಾನ ನನಗೇ ವಹಿಸಿದ್ರು. ಹಾಗೆ ವಿಶ್ವಕಲಾದಿಂದ 'ಸೋದರಿ', 'ಹರಿಭಕ್ತ', 'ಓಹಿಲೇಶ್ವರ', 'ಬಸವೇಶ್ವರ', ಮೊದಲಾದ ಚಿತ್ರಗಳು ಬಂದವು. ಎಲ್ಲಕ್ಕೂ ಕೆಲಸ ಮಾಡಿದ್ದೇನೆ, ಬಹುತೇಕ ಸಿಂಗ್ ಠಾಕೂರ್ ನಿರ್ದೇಶನದ ಚಿತ್ರಗಳಿಗೆ ಸಹನಿರ್ದೇಶಕನಾಗಿ. ಶಂಕರಸಿಂಗ್ ಮತ್ತು ಸಿಂಗ್ ಠಾಕೂರ್ ಷಡ್ಡಕರು. 'ಬಸವೇಶ್ವರ' ಚಿತ್ರದ ಸಮಯ ವಿಶ್ವನಾಥ ಶೆಟ್ಟರು ಕೊಂಚ ಹಣ ತಮ್ಮನಿಂದ ತೆಗೆದುಕೊಂಡಿದ್ದರಿಂದ 'ಶಶಿಕಲಾ' ಅಂತ ಕರೆದರು....'' ಎನ್ನುತ್ತಾರೆ ಜಿ.ವಿ.ಅಯ್ಯರ್.

ಇದೇ ಸಮಯದಲ್ಲಿ ಪಂಢರಿಬಾಯಿ ಅವರು ಪಾಂಡುರಂಗ ಪ್ರೊಡಕ್ಷನ್ಸ್ ಲಾಂಛನದಡಿ 'ಸಂತ ಸಖು' ಚಿತ್ರವನ್ನು ತಯಾರಿಸಿದರು. ತಮಿಳು 'ಪರಾಶಕ್ತಿ'ಯಂಥ ಕ್ರಾಂತಿಕಾರಿ ಚಿತ್ರವನ್ನು ನಿರ್ದೇಶಿಸಿದ ಕೃಷ್ಣನ್-ಪಂಜು ಜೋಡಿ ಈ ಚಿತ್ರದ ನಿರ್ದೇಶಕರು. ಚಿತ್ರದಲ್ಲಿ ರಾಯ್ ಚೌಧರಿ ಅವರ ನೃತ್ಯ ನಿರ್ದೇಶನವಿತ್ತು.

ಪಂಢರಿಬಾಯಿ, ಮೈನಾವತಿ, ಬಿ.ಹನುಮಂತಾಚಾರ್, ಡಿಕ್ಕಿ ಮಾಧವರಾವ್ ಮುಂತಾದವರು ತಾರಾಗಣದಲ್ಲಿದ್ದರು. ಬೆಂಗಳೂರಿನ ನ್ಯೂ ಸಿಟಿ ಮತ್ತು ಸ್ವಸ್ತಿಕ್ ಚಿತ್ರಮಂದಿರಗಳಲ್ಲಿ ಮತ್ತು ಮೈಸೂರಿನ ಚಾಮುಂಡೇಶ್ವರಿ ಚಿತ್ರಮಂದಿರದಲ್ಲಿ ಚಿತ್ರ ಬಿಡುಗಡೆಯಾಗಿ ಸ್ವಲ್ಪ ಮಟ್ಟಿಗೆ ಯಶಸ್ವಿಯಾಯಿತು. ಆದರೆ ನಿರ್ಮಾಪಕರಿಗೆ ಹಣ ಬರಲಿಲ್ಲ.

೧೯೫೫ರಲ್ಲಿ ತೆರೆಕಂಡ ಇನ್ನೊಂದು ಮುಖ್ಯ ಚಿತ್ರ 'ಸ್ತ್ರೀರತ್ನ'. ಮೈಸೂರಿನಲ್ಲಿ ಪ್ರೀಮಿಯರ್ ಸ್ಟುಡಿಯೋ ಸ್ಥಾಪಿಸಿದ ಎಂ.ಎಸ್.ಬಸವರಾಜಯ್ಯ ಅವರು ಲೋಕೇಶ್ವರಿ ಪಿಕ್ಚರ್ಸ್ ಲಾಂಛನದಡಿ ಪ್ರೀಮಿಯರ್‌ನಲ್ಲಿ ತಯಾರಿಸಿದ ಪ್ರಥಮ ಚಿತ್ರ. ಮೈಸೂರಿನಲ್ಲಿ ರೇಷನಿಂಗ್ ಆಫೀಸ್‌ನಲ್ಲಿ ಅಧಿಕಾರಿಯಾಗಿದ್ದ ಹವ್ಯಾಸಿ ಹಾಗೂ ಆಕಾಶವಾಣಿ ಕಲಾವಿದ ಕೆ.ಎಸ್.ಅಶ್ವತ್ಥ್ ಈ ಚಿತ್ರದ ಮೂಲಕ ಸಿನಿಮಾರಂಗ ಪ್ರವೇಶಿಸಿದರು.

ಈ ಚಿತ್ರದ ಒಂದು ವಿಶೇಷವೆಂದರೆ ದಕ್ಷಿಣದ ಶಾಂತಾರಾಮ್ ಎಂದೇ ಪ್ರಸಿದ್ಧರಾಗಿದ್ದ ಕೆ.ಸುಬ್ರಹ್ಮಣ್ಯಂ ಅವರು ಚಿತ್ರವನ್ನು ನಿರ್ದೇಶಿಸಿದರು. ಸುಪ್ರಸಿದ್ಧ ಕಾದಂಬರಿಕಾರ ಅ.ನ.ಕೃಷ್ಣರಾಯರು ಸಂಭಾಷಣೆಗಳನ್ನು ಬರೆಯಲು ಗೊತ್ತಾಗಿದ್ದರು. ಚಿತ್ರ ತಯಾರಿಕೆಯ ಒಂದು ಘಟ್ಟದಲ್ಲಿ ಅಸಮಾಧಾನಗೊಂಡ ಅ.ನ.ಕೃಷ್ಣರಾಯರು ಮಧ್ಯದಲ್ಲೇ ಬಿಟ್ಟು ಹೋದಾಗ ಎಂ.ನರೇಂದ್ರಬಾಬು ಪೂರ್ತಿಗೊಳಿಸಿದರು.

ಇನ್ನೊಂದು ವಿಶೇಷವೆಂದರೆ ತಮಿಳು ಚಿತ್ರರಂಗದ ಸುಪ್ರಸಿದ್ಧ ಹಾಸ್ಯ ಜೋಡಿ ಎನ್.ಎಸ್.ಕೃಷ್ಣನ್ ಮತ್ತು ಟಿ.ಎ.ಮಧುರಂ ಅವರುಗಳು ಭಾಷೆ ಬಾರದಿದ್ದರೂ, ಅಲ್ಪ ಕಾಲದಲ್ಲೇ ಕನ್ನಡ ಕಲಿತು ಈ ಚಿತ್ರದಲ್ಲಿ ಅಭಿನಯಿಸಿದರು. ನಟಿ ಸಂಧ್ಯಾ ಹಾಗೂ ಅವರ ಸೋದರಿ ವಿದ್ಯಾ ತಾರಾಗಣದಲ್ಲಿದ್ದರು. ಗೋಟುವಾದ್ಯಂ ಶ್ರೀನಿವಾಸ ಅಯ್ಯಂಗಾರ್ ಸಂಗೀತ ಸಂಯೋಜಿಸಿದ್ದರು. ಸುಬ್ರಹ್ಮಣ್ಯಂ ಅವರ ಹೆಂಡತಿ ಅವರಿಗೆ ಸಂಗೀತ ನೀಡಲು ನೆರವಾದರು. ಪ್ರಥಮ ಬಾರಿಗೆ ಸಂಗೀತ ವಿದುಷಿ ಎಂ.ಎಸ್.ರತ್ನ ಹಿನ್ನೆಲೆ ಗಾಯನದಲ್ಲಿ ಪಾಲ್ಗೊಂಡಿದ್ದರು. ಕಣಗಾಲ್ ಪ್ರಭಾಕರಶಾಸ್ತ್ರಿ ಐದು ಹಾಡು ಬರೆದಿದ್ದರು. ನರೇಂದ್ರಬಾಬು ಕೆಲವು ಹಾಡು, ಸಂಭಾಷಣೆ ರಚಿಸಿದರು.

'ಸ್ತ್ರೀರತ್ನ' ಚಿತ್ರಕ್ಕೆ ನರೇಂದ್ರಬಾಬುಗಳ ಸಹನಿರ್ದೇಶನವಿತ್ತು. ಅವರು ಅ.ನ.ಕೃಷ್ಣರಾಯರು ಮಧ್ಯದಲ್ಲೇ ಬಿಟ್ಟು ಹೋದುದಕ್ಕೆ ಕೊಡುವ ಕಾರಣ ಹೀಗಿದೆ: ''ಎನ್.ಎಸ್.ಕೃಷ್ಣನ್, ಟಿ.ಎ.ಮಧುರಂ ಕನ್ನಡಿಗರಲ್ಲ. ಅವರ ಜೊತೆ ನಾನು ಕೆಲಸ ಮಾಡೋದಿಲ್ಲ ಅಂತ ಹೊರಟು ಹೋದರು. ಒಂದು ಅರ್ಥದಲ್ಲಿ ಕನ್ನಡ ಚಳವಳಿ ಆಗಲೇ ಪ್ರಾರಂಭವಾಯಿತೇನೋ. ನಾನು ಅನಂತರ ಸಾಹಿತ್ಯ ವಿಭಾಗ ನೋಡಿಕೊಳ್ಳಬೇಕಾಯಿತು''

''ಪ್ರೀಮಿಯರ್‌ನಲ್ಲಿ ಹಗಲಿರುಳೆನ್ನದೆ ದುಡಿಯುತ್ತಿದ್ದ ಎಸ್.ಕೆ.ಎ.ಚಾರಿ ಮತ್ತು ಕಪ್ಪು-ಬಿಳುಪು ಚಿತ್ರಗಳ ಸಂಸ್ಕರಣಕಾರನೆಂದು ಪ್ರಸಿದ್ಧರಾಗಿದ್ದ ಸೀತಾರಾಂ ಕಶಾಲ್ಕರ್ ಅವರು ನವಜ್ಯೋತಿಯಿಂದ ಪ್ರೀಮಿಯರ್‌ಗೆ ಬಂದು ಕಾರ್ಯ ನಿರ್ವಹಿಸತೊಡಗಿದ್ದೇ ಆ ಸ್ಟುಡಿಯೋದ ಅಭಿವೃದ್ಧಿಗೆ ಬಹಳ ಸಹಾಯಕವಾಯಿತು. ಕೆ.ಸುಬ್ರಹ್ಮಣ್ಯಂ ಮಹಾ ಮೇಧಾವಿ. ಅವರನ್ನು ಸಂಪತ್ ಅವರು 'ಇವರಿಂದ ಚಿತ್ರ ನಿರ್ದೇಶನ ಮಾಡಿಸಿ' ಅಂತ ಹೇಳಿ ಪರಿಚಯಿಸಿದರು. ಆತನಿಂದ

ಬಸವರಾಜಯ್ಯನವರು ಚಿತ್ರವೊಂದರ ಆರ್ಥಿಕ ಸಂಗತಿ, ಮಿತವ್ಯಯ, ವ್ಯವಹಾರ ಎಲ್ಲವನ್ನು ಬಹಳ ಬೇಗ ಕಲಿತರು. ಅವರಿಗೆ ಕಡಿಮೆ ವೆಚ್ಚದಲ್ಲಿ ಉತ್ತಮ ಚಿತ್ರ ಕೊಡುವ ಕಲೆ ಕರಗತವಾಯಿತು. 'ಸ್ತ್ರೀರತ್ನ' ಭಾಗಶಃ ಗೇವಾಕಲರ್ ಆದ್ದರಿಂದ ಹತ್ತು ಪ್ರಿಂಟ್‌ಗಳನ್ನು ಹಾಕಲಾಯಿತು. ಸಾಮಾನ್ಯವಾಗಿ ಕಪ್ಪು-ಬಿಳುಪು ಚಿತ್ರಗಳ ಐದು-ಆರು ಪ್ರಿಂಟ್ ಮಾತ್ರ ಹಾಕಲಾಗುತ್ತಿತ್ತು'' ಎಂದೂ ಹೇಳಿದ್ದಾರೆ ನರೇಂದ್ರಬಾಬು.

ಪ್ರೀಮಿಯರ್ ಸ್ಟುಡಿಯೋದ ಪ್ರಥಮ ಕಾಣಿಕೆ ಹಾಗೂ ಸುಸಂಸ್ಕೃತ, ಸದಭಿರುಚಿಯ ನಟ ಕೆ.ಎಸ್.ಅಶ್ವತ್ಥ್ ಅವರನ್ನು ಪರಿಚಯಿಸಿದ ಚಿತ್ರ ಎಂಬ ಕಾರಣಕ್ಕಾಗಿ 'ಸ್ತ್ರೀರತ್ನ' ಮುಖ್ಯ ಚಿತ್ರ. ಹೊಸದಾಗಿ ಪ್ರಾರಂಭವಾಗಿದ್ದ ಪ್ರೀಮಿಯರ್ ಸ್ಟುಡಿಯೋ ಎಂಥ ಸಾಹಸಕ್ಕೂ ಸಿದ್ಧವೆಂದೂ ಗುಣಮಟ್ಟವೇ ಪ್ರಧಾನ ಆಶಯವೆಂದೂ ತೋರಿಸಲೆಂದೇ ಬಸವರಾಜಯ್ಯನವರು 'ಸ್ತ್ರೀರತ್ನ' ತಯಾರಿಸಿದರು. ಮತ್ತು ಕೆಲವು ಭಾಗಗಳನ್ನು ಮುಂಬಯಿಗೆ ಕಳುಹಿಸಿ ಗೇವಾ ಕಲರ್‌ನಲ್ಲಿ ವರ್ಣ ಸಂಸ್ಕರಣ ಮಾಡಿಸಿ ಸೇರಿಸಲಾಗಿತ್ತು.

''ಸ್ತ್ರೀರತ್ನ' ಚಿತ್ರಕ್ಕೆ ರೀ-ರಿಕಾರ್ಡಿಂಗ್ ಮಾಡಲು ನನಗೆ ಕೇಳಿದ್ದರು. ಆಗುವುದಿಲ್ಲ ಅನ್ನಬೇಕಾಗಿ ಬಂದಿತ್ತು. ಆ ಚಿತ್ರಕ್ಕೆ ಮುಂಬಯಿನ ಮೀನಾಕಪೂರ್ ಹಾಡಿದ್ದರು. ಚಿತ್ರದಲ್ಲಿ ವೀಣೆ ನುಡಿಸುವ ಒಂದು ದೃಶ್ಯವಿದೆ. ಒಂದು ಚೇಳು ಬರುತ್ತಿರುವ ಚಿತ್ರಿಕೆಯನ್ನು ಇಂಟರ್‌ಕಟ್ ಮಾಡಿದ್ದರು. ಅದು ನೋಡುಗನ ಆಲೋಚನೆಯನ್ನು ಬೇರೆ ಕಡೆಗೆ ತಿರುಗಿಸುತ್ತೆ. ಜನ ಏನೇನೋ ಕಲ್ಪಿಸಲು ಪ್ರಾರಂಭಿಸುತ್ತಾರೆ. ಅಂಥದೇನೂ ಸಂಬಂಧ ಇಲ್ಲವಾದ್ದರಿಂದ ಆ ಚೇಳಿನ ಚಿತ್ರಿಕೆ ತೆಗೆದುಹಾಕಿಬಿಡಿ ಅಂದಿದ್ದೆ. ತೆಗೆದರೋ ಇಲ್ಲವೋ ಕಾಣೆ'' ಎಂದು ನೆನೆಯುತ್ತಾರೆ ವಿಜಯಭಾಸ್ಕರ್.



(ಚಿತ್ರ ೨೨) ಚಿತ್ರದಲ್ಲಿ 'ವಿಚಿತ್ರ ಪ್ರಪಂಚ' ನಟ-ಸಾಹಿತಿ ಸೋರಟ್ ಅಶ್ವತ್ಥ್, ನಿರ್ದೇಶಕ ಬಾಳಗಜಬರ್, ನಟ-ಸಹನಿರ್ದೇಶಕ ಕಾಶೀನಾಥ್ ಮತ್ತು ವಾಸುದೇವ ಗಿರಿಮಾಜಿ

ಆ ವರ್ಷ ತೆರೆಕಂಡ ಕೊನೆಯ ಚಿತ್ರ 'ವಿಚಿತ್ರ ಪ್ರಪಂಚ'. ಎಸ್.ಎಸ್.ವೈದ್ಯ ಮತ್ತು ಮಿತ್ರರು ವಿಜಯಶ್ರೀ ಚಿತ್ರ ಲಾಂಛನದಲ್ಲಿ ತಯಾರಿಸಿದ ಈ ಚಿತ್ರಕ್ಕಾಗಿಯೇ ಗೀತೆ ರಚಿಸಿದರು ದ.ರಾ.ಬೇಂದ್ರೆ.

ಕುರುಡಿ ಹೆಣ್ಣೊಬ್ಬಳನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳಲೆತ್ನಿಸುವ ಕಥೆಯನ್ನೊಳಗೊಂಡ ಈ ಚಿತ್ರದ ಸಂಭಾಷಣೆಗಳನ್ನು ಬರೆಯಲು ಶಾಂತಕುಮಾರ್ ಎಂಬುವರು ಗೊತ್ತಾಗಿದ್ದರು. ಅವರಿಗೆ ಸಿನಿಮಾ ಬಗ್ಗೆ ಗೊತ್ತಿರಲಿಲ್ಲ. ಹಾಗಾಗಿ ಸುದೀರ್ಘ ಸಂಭಾಷಣೆಗಳನ್ನು ಬರೆದಿದ್ದರು. ಅದನ್ನು ಚಿತ್ರೀಕರಿಸಲು ಒಂದೊಂದು ಸೀನ್‌ಗೆ ೭೫೦-೮೦೦ ಅಡಿ ಫಿಲಂ ಮುಗಿದು ಹೋಗುತ್ತಿತ್ತು. ಆಗ ನಟಿಯರಾದ ಹರಿಣಿ ಮತ್ತು ಸುಮತಿಯವರು ಸೋರಟ್ ಅಶ್ವತ್ಥ್ ಅವರನ್ನು ಅಲ್ಲಿಗೆ ಕಳುಹಿಸಿಕೊಟ್ಟರು. ಅನಂತರ ಸೋರಟ್ ಅಶ್ವತ್ಥ್ ಅವರೇ ಸಂಭಾಷಣೆಗಳನ್ನು ಬರೆದರು. ಆದರೆ ಚಿತ್ರದಲ್ಲಿ ಅವರ ಹೆಸರು ಹಾಕಲಿಲ್ಲ. ''ಕೇವಲ ಸಂಭಾಷಣಾ ದಿಗ್ದರ್ಶನ ಅಂತ ಮಾತ್ರ ಹಾಕಿದ್ದರು'' ಎಂದು ಸೋರಟ್ ಅಶ್ವತ್ಥ್ ಸಂದರ್ಶನದಲ್ಲಿ ಹೇಳಿದ್ದಾರೆ. ಕೊಲ್ಲಾಪುರದ ಶಾಲಿನಿ ಸಿನಿಟೋನ್‌ನಲ್ಲಿ ಚಿತ್ರಿಸಿದರು.

''ವಿಚಿತ್ರ ಪ್ರಪಂಚ' ಚಿತ್ರದ ನಿರ್ದೇಶಕ ಮಹಾರಾಷ್ಟ್ರದ ಬಾಳಗಜಬರ್. ಪ್ರತಿಭಾವಂತ. ಕ್ಯಾಮರಾ ಕೋನಗಳು, ಲೈಟಿಂಗ್ ಪಾಯಿಂಟ್ಸ್‌ಗಳನ್ನು ಬಹಳ ಎಚ್ಚರಿಕೆಯಿಂದ ನೋಡುತ್ತಿದ್ದರು. ಕಲಾವಿದರು ಸಹ ಲೊಕೇಶನ್‌ಗೆ ಬಂದ ಕೂಡಲೇ ಮೇಕಪ್‌ಗೆ ಹೋಗಿಬಿಡಬೇಕಿತ್ತು. ಚಿತ್ರದ ಹಾಡುಗಳು ತುಂಬ ಚೆನ್ನಾಗಿದ್ದವು. ಭಾವನೆಗಳು ತುಂಬಿ ಬರುತ್ತಿದ್ದವು. 'ಬಂದಾ ಬಂದಾ ರಾವಣನ ಮಾವ ಮಾಯಾವಿ ಜೀವ ಮಾರೀಚ ನೀಚ...' ಇಂಥ ಗೀತೆಗಳಿದ್ದವು'' ಎಂದು ಹಾಡುತ್ತಲೇ ನೆನೆಯುತ್ತಾರೆ ಸೋರಟ್ ಅಶ್ವಥ್.

ಸುಮತಿ, ಹರಿಣಿ, ವಾಸುದೇವ ಗಿರಿಮಾಜಿ, ಇಂದುಶೇಖರ್, ಸೋರಟ್ ಅಶ್ವತ್ಥ್, ರತ್ನಾಕರ್, ಶಾಂತಕುಮಾರ್ ಮುಂತಾದವರು ಅಭಿನಯಿಸಿದ್ದರು. ಸಂಗೀತ ನೀಡಿದವರು ಪುರುಷೋತ್ತಮ್. ರತ್ನಾಕರ್ ಈ ಚಿತ್ರದಿಂದಲೇ ಚಿತ್ರರಂಗ ಪ್ರವೇಶಿಸಿದರು. ಈ ಚಿತ್ರ ೧೯೫೫ರ ಡಿಸೆಂಬರ್‌ನಲ್ಲಿ ತೆರೆಕಂಡಿತು.

೧೯೫೬ರಲ್ಲೂ ೧೩ ಚಿತ್ರಗಳು ತೆರೆಕಂಡವು. ಆ ವರ್ಷ ಬಿಡುಗಡೆಯಾದ ಒಂದು ಮುಖ್ಯ ಚಿತ್ರ ಚಿತ್ರಭಾರತ್ ಅವರ 'ಭಾಗ್ಯಚಕ್ರ'. ಕನ್ನಡಿಗರೇ ಆಗಿ ಮುಂಬಯಿ ಚಿತ್ರರಂಗದಲ್ಲಿ ಛಾಯಾಗ್ರಾಹಕರಾಗಿ ಹೆಸರು ಮಾಡಿದ್ದ ಎನ್.ಜಿ.ರಾವ್ ನಿರ್ಮಿಸಿದ ಈ ಚಿತ್ರದ ಕಥೆ ಬರೆದವರು ವಿಜಯಭಾಸ್ಕರ್. ಸಂಗೀತ ನಿರ್ದೇಶನವೂ ಅವರದೇ. ಈ ಚಿತ್ರದ ನಿರ್ಮಾಪಕರಲ್ಲಿ ಒಬ್ಬರಾದ ಕಲ್ಯಾಣಸತ್ಯ ಚಿತ್ರದಲ್ಲಿ ಒಂದು ಪಾತ್ರವನ್ನು ಮಾಡಿದ್ದಾರೆ. ಮುಂದೆ ಸುಪ್ರಸಿದ್ಧ ಚಿತ್ರ ಸಾಹಿತಿ, ನಿರ್ದೇಶಕರಾಗಿ ಹೆಸರು ಮಾಡಿದ ಗೀತಪ್ರಿಯ ಈ ಚಿತ್ರದ ಸಂಭಾಷಣೆ ಮತ್ತು ಗೀತೆಗಳನ್ನು ಬರೆದರು. ಗೀತಪ್ರಿಯ ಒಂದು ನೃತ್ಯವನ್ನೂ ಮಾಡಿದ್ದಾರೆ. ಕನ್ನಡದ ಪ್ರಥಮ ವಾಕ್ಚಿತ್ರ 'ಸತಿ ಸುಲೋಚನಾ' ದಿಗ್ದರ್ಶಿಸಿದ ವೈ.ವಿ.ರಾವ್ ಈ ಚಿತ್ರವನ್ನು ನಿರ್ದೇಶಿಸಿದರು. ಛಾಯಾಗ್ರಹಣ ಮಾಡಿದವರು ಎನ್.ಜಿ.ರಾವ್. ಮದರಾಸಿನ ವಾಹಿನಿ ಸ್ಟುಡಿಯೋದಲ್ಲಿ ತಯಾರಾದ ಈ ಚಿತ್ರದಲ್ಲಿ ಕಲ್ಯಾಣ್‌ಕುಮಾರ್, ಸಾಹುಕಾರ್ ಜಾನಕಿ, ವಿದ್ಯಾವತಿ, ಲಲಿತಾರಾವ್ ಮುಂತಾದವರು ಅಭಿನಯಿಸಿದ್ದರು.

''ದಕ್ಷಿಣ ಭಾರತದಲ್ಲೇ ಮೊದಲ ಬಾರಿಗೆ ಪೂರ್ತಿ ಸ್ಕ್ರಿಪ್ಟ್ ಸಿದ್ಧಮಾಡಿದ್ದು, ಎಂದರೆ ಚಿತ್ರಿಕೆಗಳನ್ನು ಯಾವುದು, ಎಲ್ಲಿ, ಎಂಥದ್ದೆಂದು ವಿಭಾಗಿಸಿಕೊಂಡ ಪೂರ್ಣ ಪ್ರಮಾಣದ ಸ್ಕ್ರಿಪ್ಟ್ ಮಾಡಿದ್ದೆ ನಾನು'' ಎಂದು ನೆನೆಯುವ ವಿಜಯಭಾಸ್ಕರ್ ಅವರ ಬಳಿ ಇಂದಿಗೂ ಆ ಹಸ್ತಪ್ರತಿ ಇದೆ.

''ಖ್ಯಾತ ಹಾಸ್ಯನಟ ಚಂದ್ರಬಾಬು ಅಭಿನಯಿಸಿದ್ದರು. ಈ ಚಿತ್ರದಲ್ಲಿ ಅವರು ಗಾಯಕ. ಒಂದು 'ಕಾಮೆಡಿ ಸಾಂಗ್' ಅವರ ಕೈಲಿ ಹಾಡಿಸಿಯೂ ಇದ್ದೆ. ಆತ ಹಣವೇ ಬೇಡ ಎಂದರು. ಬರೀ ೧೨೫ ರೂಪಾಯಿ ಕೊಟ್ಟಿದ್ದು. ಈ ಚಿತ್ರದಿಂದ ಕನ್ನಡಕ್ಕೆ ಗಾಯಕರಾಗಿ ಪರಿಚಯಿಸಿದ್ದು ಘಂಟಸಾಲ, ಪಿ.ಸುಶೀಲ, ಬಾಲಸರಸ್ವತಿ, ಜಿಕ್ಕಿ ಇವರುಗಳನ್ನು'' ಎಂದು ವಿಜಯಭಾಸ್ಕರ್ ಹೇಳುತ್ತಾರೆ. ಈ ಚಿತ್ರದಲ್ಲಿ ಗೀತಪ್ರಿಯರ ಒಂದು ಗೀತೆಯನ್ನು ಒಂದು ರೀತಿಯ ಗೊಗ್ಗರು ದನಿಯಲ್ಲಿ ಹಾಡಿಸಲಾಗಿದೆ. ಇದಕ್ಕೆ ಹಿಚ್‌ಕಾಕ್‌ರ 'ಸ್ಟೇಜ್ ಫ್ರೈಟ್' ಚಿತ್ರಕ್ಕೆ ಮಾರ್ಲಿನ್ ಡಿಟ್ರಿಚ್ ಗೊಗ್ಗರು ದನಿಯಲ್ಲಿ ಹಾಡಿದ ಹಾಡೊಂದು ಸ್ಫೂರ್ತಿ. ಗೀತರಚನೆಯಲ್ಲಿ ಅದನ್ನು ಅನುಸರಿಸಲಾಗಿತ್ತು.

ಚಿತ್ರ ಹಂಚಿಕೆದಾರರಾಗಿದ್ದ ಭಕ್ತವತ್ಸಲ ಹಾಗೂ ಎ.ಸಿ.ನರಸಿಂಹಮೂರ್ತಿ ಅವರು ಉದಯ ಪ್ರೊಡಕ್ಷನ್ಸ್ ಲಾಂಛನದಡಿ 'ಭಾಗ್ಯೋದಯ' ಚಿತ್ರವನ್ನು ತಯಾರಿಸಿದರು. ಕನ್ನಡದ ಕುಮಾರತ್ರಯರಲ್ಲಿ ಒಬ್ಬರಾದ ಉದಯಕುಮಾರ್ ನಾಯಕ ನಟರಾಗಿ ಚಿತ್ರರಂಗ ಪ್ರವೇಶಿಸಿದ್ದು ಈ ಚಿತ್ರದ ಮೂಲಕ. ಸಂಕಲನ ತಜ್ಞ ಮಾಣಿಕ್ಯಂ (ಬಾಬು) ಚಿತ್ರವನ್ನು ನಿರ್ದೇಶಿಸಿದ್ದಾರೆ. ಸಾಹುಕಾರ್ ಜಾನಕಿ, ಕೌಶಿಕ್, ನರಸಿಂಹರಾಜು ತಾರಾಗಣದಲ್ಲಿದ್ದರು. ಕಣಗಾಲ್ ಪ್ರಭಾಕರಶಾಸ್ತ್ರಿ ಸಾಹಿತ್ಯ ರಚಿಸಿದ್ದರು. ಪ್ರಭಾಕರಶಾಸ್ತ್ರಿಗಳು ಆ ಹೊತ್ತಿಗೆ 'ಸ್ತ್ರೀರತ್ನ' ಚಿತ್ರಕ್ಕೆ ಅ.ನ.ಕೃಷ್ಣರಾಯರ ಜೊತೆ ಕೆಲಸ



(ಚಿತ್ರ ೨೩)'ಭಾಗ್ಯೋದಯ' ಚಿತ್ರದಲ್ಲಿ ಸಾಹುಕಾರ್ ಜಾನಕಿ ಮತ್ತು ಸಹನಟ

ಮಾಡಿದ್ದರು. ಆದರೆ ಪೂರ್ತಿಯಾಗಿ (ಚಿತ್ರನಾಟಕ, ಸಂಭಾಷಣೆ, ಗೀತೆ) ಸಾಹಿತ್ಯ ವಿಭಾಗ ನಿರ್ವಹಿಸಲು ಪ್ರಾರಂಭವಾದದ್ದು ಈ ಚಿತ್ರದಿಂದ. ಸಂಗೀತ ನೀಡಿದವರು ಮಲ್ಲೇಶ್ವರ ರಾವ್. ಎಲ್ಲಕ್ಕಿಂತ ಮುಖ್ಯವಾಗಿ ಪ್ರತಿಭಾವಂತ ನಟ ಉದಯಕುಮಾರ್ ಈ ಚಿತ್ರದ ಮೂಲಕ ಚಿತ್ರರಂಗಕ್ಕೆ ಬಂದದ್ದು, ಗುಬ್ಬಿ ಕಂಪೆನಿ ನಟರಾಗಿದ್ದ ಸೂರ್ಯನಾರಾಯಣಶಾಸ್ತ್ರಿ, ಉದಯಕುಮಾರ್ ಆದರು. ಈ ಚಿತ್ರದಲ್ಲಿ ಡಿಕ್ಕಿ ಮಾಧವರಾವ್, ಲಲಿತಾ ರಾವ್ ಮೊದಲಾದವರು ಇದ್ದರು.

"ನಿತ್ಯ ಜೀವನದ ಈ ಕಥೆಯನ್ನು ಉದಯ (ಸಂಸ್ಥೆ)ರವರು ಸುಂದರವಾಗಿ ಚಿತ್ರಿಸಿದ್ದಾರೆ. ನಿರ್ಮಾಪಕರಲ್ಲೊಬ್ಬರಾದ ಎ.ಸಿ.ನರಸಿಂಹಮೂರ್ತಿ ಅವರ ಕನ್ನಡ ನುಡಿ ಪ್ರೇಮ, ನಿರ್ಮಲವಾದ ಕಥಾ ಸಂವಿಧಾನವನ್ನು ಚಿತ್ರೀಕರಿಸುವಲ್ಲಿನ ಶ್ರದ್ಧೆ ಈ ಪ್ರಯತ್ನದಲ್ಲಿ ಎದ್ದು ಕಾಣುತ್ತದೆ. ಹಾಸ್ಯ, ಒಗ್ಗದ ದೃಶ್ಯಗಳು ಇಲ್ಲದೆ ಹಿತಕರವಾಗಿ ಚಿತ್ರಗಳನ್ನು ತಯಾರಿಸುವುದು ಸಾಧ್ಯವೆಂಬುದನ್ನು ಈ ಚಿತ್ರ ತೋರಿಸುತ್ತದೆ. ಸಂಭಾಷಣೆಗಳು ಭಾಷಾ ಸೌಷ್ಠವದಿಂದ ಕೂಡಿವೆ. ಗೀತೆಗಳು ಸಾಹಿತ್ಯ ಹಾಗೂ ಸಂಗೀತದ ದೃಷ್ಟಿಯಿಂದ ಇಂಪಾಗಿವೆ..." ಎಂದವು ಪತ್ರಿಕೆಗಳು.

ತಾರೆ ಪಂಢರಿಬಾಯಿ ಚಿಕ್ಕಂದಿನಿಂದ ಪಾಂಡುರಂಗನ ಪರಮ ಭಕ್ತೆ. ಮದರಾಸಿನಲ್ಲಿ ತಮ್ಮ ಮನೆಯ ಮುಂದೆ ಪಾಂಡುರಂಗನ ದೇವಸ್ಥಾನವನ್ನೇ ಕಟ್ಟಿಸಿದ್ದಾರೆ. ಪ್ರತಿನಿತ್ಯ ಭಜನೆ, ಪೂಜೆಗಳಲ್ಲಿ ನಿರತರಾಗಿರುತ್ತಾರೆ. ನಿರ್ಮಾಪಕಿಯಾಗಿ ಅವರು ಹಲವು ಉತ್ತಮ ಚಿತ್ರಗಳನ್ನು ತಯಾರಿಸಿದ್ದಾರೆ. ಅವರು ತಮ್ಮ ಪಾಂಡುರಂಗ ಪ್ರೊಡಕ್ಷನ್ಸ್ ಲಾಂಛನದಲ್ಲಿ 'ಸಂತ ಸಖೂ' ನಿರ್ಮಿಸಿದರು. ಅವರು ನಿರ್ಮಿಸಿದ ಚಿತ್ರಗಳಲ್ಲಿ ಭಕ್ತಿ ಪ್ರಧಾನ ಚಿತ್ರಗಳೇ ಹೆಚ್ಚು. ಈ ಬಾರಿ ಅವರು ಪಿ.ಕೆ.ಜನಾರ್ಧನ್ ಅವರೊಡಗೂಡಿ ಜಗನ್ನಾಥ್ ಪ್ರೊಡಕ್ಷನ್ಸ್ ಲಾಂಛನದಡಿ 'ಭಕ್ತ ವಿಜಯ' ಚಿತ್ರ ನಿರ್ಮಾಣದಲ್ಲಿ ಸಹಕರಿಸಿದರು.

ಈ ಚಿತ್ರವನ್ನು ನಿರ್ದೇಶಿಸಿದವರು ಎ.ಕೆ.ಪಟ್ಟಾಭಿ (ಮುಂದೆ ಆರೂರು ಪಟ್ಟಾಭಿ ಎಂದು ಹೆಸರಾದವರು). ಪಟ್ಟಾಭಿ ಅವರ ಪತ್ನಿ ಸಿ.ಎಸ್.ಸರೋಜಿನಿ ಪ್ರಾರಂಭದ ಕನ್ನಡ ಚಿತ್ರಗಳಲ್ಲಿ ಹಿನ್ನೆಲೆ ಗಾಯಕಿಯಾಗಿದ್ದರು. ಪಂಢರಿಬಾಯಿ, ಮೈನಾವತಿ, ರಾಜಕುಮಾರ್, ಡಿಕ್ಕಿ ಮಾಧವರಾವ್, ವಿಮಲಾನಂದ ದಾಸ್ ಮುಂತಾದವರು ತಾರಾಗಣದಲ್ಲಿದ್ದ 'ಭಕ್ತ ವಿಜಯ' ಭಕ್ತ ಸಂತೋಬನ ಕಥೆ. ಫಿಲಂ ಸೆಂಟರ್‌ನಲ್ಲಿ ಸಿದ್ಧವಾಯಿತು. ಪಿ.ಶ್ಯಾಮ್ ಮತ್ತು ಆತ್ಮನಾಥ್ ಅವರು ಸಂಗೀತ ನೀಡಿದ್ದರು. ೧೯೫೬ನೆ ನವೆಂಬರ್ ೩ರಂದು ತೆರೆಗೆ ಬಂತು. ಬೆಂಗಳೂರಿನ ಗೀತಾ, ಮೈಸೂರಿನ ನ್ಯೂ ಅಪೇರಾ ಹಾಗೂ ದಾವಣಗೆರೆ, ಶಿವಮೊಗ್ಗ, ಚಿತ್ರದುರ್ಗ, ಚಿಕ್ಕಮಗಳೂರು, ಮಂಡ್ಯ, ಕೋಲಾರ, ತುಮಕೂರುಗಳಲ್ಲಿ ಒಮ್ಮೆಗೇ ಬಿಡುಗಡೆ ಆಯಿತು. "ಭಗವಂತನ ದರ್ಶನವಾಗುವವರೆಗೆ ಅನ್ನಾಹಾರ ಮುಟ್ಟೆನೆಂದು ಪ್ರತಿಜ್ಞೆ ಮಾಡಿದ, ಅಪ್ರತಿಮ ದೈವಭಕ್ತಿಯಿಂದ ಆತ್ಮೋದ್ಧಾರದ ಮಾರ್ಗ ಕಂಡುಕೊಂಡ ಭಕ್ತಾಗ್ರಣಿಯ ಕಥೆ" ಎಂದು ಜಾಹಿರಾತು ಹೇಳಿತ್ತು. 'ಭಕ್ತ ವಿಜಯ' ಚಿತ್ರಕ್ಕೆ ಜಾನಕಿರಾಂ ಛಾಯಾಗ್ರಾಹಕರು. ಈ ಚಿತ್ರವನ್ನು ಈಗ ನೋಡುವಾಗ ಎಲ್ಲ ಕಲಾವಿದರ ಕಣ್ಣಿನ ಬಳಿ ಒಂದು ಪಟ್ಟಿಯ ಹಾಗೆ ಬೆಳಕಿನ ತೆರೆ ಬರುತ್ತದೆ. ನಿರ್ದೇಶಕ ರಾಜೇಂದ್ರಸಿಂಗ್ ಬಾಬು ಅವರು "ಇದು ಯಾವುದೋ ವಿಶೇಷವೆಂದು ಬಳಸಿದಂತಿದೆ. ಹೊಸ ವಿಧಾನ-ಶೈಲಿಗಳಿಗೆ ಇಂಗ್ಲಿಷ್ ಚಿತ್ರಗಳನ್ನು ನೋಡುತ್ತಿದ್ದರು. ಅಂಥ ಪ್ರಭಾವ ಈ ಲೈಟಿಂಗ್‌ನ ಹಿಂದೆ ಇರಬಹುದು" ಎಂದು ಅಭಿಪ್ರಾಯಪಟ್ಟರು. ಜಾನಕಿರಾಂ ಅವರಿಗೆ ಅಂಥದೇನೂ ಮಾಡಿದ ನೆನಪಿಲ್ಲ. ಎಲ್ಲೋ ಪ್ರಿಂಟ್ ಸರಿಯಿರಲಾರದು ಎಂದರು. ಇಂಥ ಸಮಸ್ಯೆಗಳು ಹಳೆಯ ಚಿತ್ರಗಳನ್ನು ನೋಡುವಾಗೆಲ್ಲ ಎದುರಾಗುತ್ತವೆ.

'ಭಕ್ತ ವಿಜಯ'ದಲ್ಲಿ ನೃತ್ಯ ಸನ್ನಿವೇಶವೊಂದರಲ್ಲಿ ೨-೩ ಇಮೇಜ್ ಬರುವ ಹಾಗೆ ಚಿತ್ರಿಸಲಾಗಿದೆ. ಆ ಕಾಲದಲ್ಲಿ ಇಂಥದೆಲ್ಲ ಹೇಗೆ ಸಾಧ್ಯವಾಗಿರಬಹುದು ಎಂಬುದಕ್ಕೆ ಜಾನಕಿರಾಂ ಹೇಳುವುದು "ಅದಕ್ಕೆಲ್ಲ ಪ್ರಿಸಂ ಲೆನ್ಸ್ ಬಳಸಿದ್ದೇವೆ. ಆಗ ಏನೇ ಟ್ರಿಕ್ಸ್ ಆಗಲೀ, ಮಾಸ್ಕ್ ಆಗಲೀ ನಾವೇ ಮಾಡಬೇಕಿತ್ತು. ಅದಕ್ಕಾಗಿ ಬೇರೆ ಕ್ಯಾಮರಾಮೆನ್ ಇರಲಿಲ್ಲ. ಪ್ರತಿಯೊಂದೂ ಅವರಿವರನ್ನು ನೋಡಿ ಕಲಿಯುತ್ತಿದ್ದೆವು" ಎನ್ನುವ ಜಾನಕಿರಾಮ್ "'ನಳದಮಯಂತಿ' ಚಿತ್ರಕ್ಕೂ ನಾನು ಕೆಲಸ ಮಾಡಿದ್ದೆ. ಆಗ ಟ್ರಿಕ್‌ಶಾಟ್ಸ್ ಸಲುವಾಗಿ ಮುಂಬಯಿನಿಂದ ಛಾಯಾಗ್ರಾಹಕರೊಬ್ಬರು ಬಂದಿದ್ದರು. ಅವರಿಂದ ಬಹಳಷ್ಟು ಕಲಿತೆ. ಆ ಚಿತ್ರದಲ್ಲಿ ಬರುವ ಹಕ್ಕಿಗಳು ಸೀರೆಯನ್ನು ಕೊಂಡೊಯ್ಯುವ ಟ್ರಿಕ್ಸ್ ಎಲ್ಲ ನಾನೇ ನಿರ್ವಹಿಸಿದ್ದೆ. ಮಳೆಯ ಎಫೆಕ್ಟ್ ತರೋದು ತುಂಬಾ ಕಷ್ಟವಾಗುತ್ತಿತ್ತು. ಆಳ್ವಾರ್ ಪೇಟೆಯಲ್ಲಿದ್ದ ಸ್ಟುಡಿಯೋ ಒಂದರಲ್ಲಿ ಮಲೆಯಾಳಂ ಭಾಷೆಯ ಚಿತ್ರವೊಂದಕ್ಕೆ ಹೀಗೆ ವಿಶೇಷವಾದ ಚಿತ್ರೀಕರಣ ಇದೆ ಅಂತ ತಿಳಿದಾಗ ರಾತ್ರೋರಾತ್ರಿ ಅಲ್ಲಿಗೆ ಹೋಗಿ ಗುಂಪಿನಲ್ಲಿ ನುಸುಳಿ ನಿಂತು ನೋಡಿ ಕಲಿತಿದ್ದೇನೆ. ಮಳೆಯಲ್ಲಿ ಹಾಡುತ್ತಾ ನರ್ತಿಸುವ ಪ್ರಣಯ ದೃಶ್ಯ ಮತ್ತು ನಾಯಕ ಕಾರ್ ಡ್ರೈವ್ ಮಾಡೋ ದೃಶ್ಯ ಇತ್ತು. ಒಳಗಡೆ ಬ್ಯಾಟರಿಗಳನ್ನಿಟ್ಟು ಚಿತ್ರಿಸುತ್ತಿದ್ದರು. ಫೈರ್ ಇಂಜಿನ್‌ಗಳನ್ನು ಬಳಸಿದ್ದರು. ಇಡೀ ರಾತ್ರಿ ಚಿತ್ರೀಕರಣ ನಡೆದಿತ್ತು.

"ಕನ್ನಡ ಚಿತ್ರಗಳಲ್ಲಿ ಫೈಟ್ಸ್ ಇತ್ಯಾದಿಗಳಿಗೆ ಹೆಚ್ಚು ಹಣ ಖರ್ಚು ಮಾಡೋದು ಸಾಧ್ಯ ಇರಲಿಲ್ಲ. ಅದಕ್ಕಾಗಿ ವಿಶೇಷವಾಗಿ ಯಾರನ್ನೂ ಕರೆಯುತ್ತಿರಲಿಲ್ಲ. ಫೈಟ್ಸ್‌ಗೆ ಲೈಟಿಂಗ್ ಮಾಮೂಲಾಗೇ ಇಡ್ತಿದ್ದೆವು (ಜಾಸ್ತಿ ಲಕ್ಷ್ಯ ಇರಲಿಲ್ಲ). ಆದಷ್ಟು ಫ್ಲ್ಯಾಟ್ ಆಗದ ಹಾಗೆ ಮತ್ತೆ ಅಟ್ಯಾಕ್, ಬೀಳೋದು, ಏಳೋದು, ಪಂಚ್‌ಗಳನ್ನು ಬೇರೆ ಬೇರೆ ಶಾಟ್ಸ್‌ನಲ್ಲಿ ತಗೊಂಡು ಅದೇ ಕ್ರಮದಲ್ಲಿ ಸೇರಿಸಿ ಇಡುತ್ತಿದ್ದೆವು. ಇದಕ್ಕಾಗಿ ಸಂಕಲನಕಾರ, ಸಾಹಸ ನಿರ್ದೇಶಕ, ಸಂಗೀತ ನಿರ್ದೇಶಕರ ಜೊತೆ ಕೂತು ಚರ್ಚೆ



(ಚಿತ್ರ ೨೪)'ಹರಿಭಕ್ತ' ಚಿತ್ರದಲ್ಲಿ ಹೆಚ್.ರಾಮಚಂದ್ರಶಾಸ್ತ್ರಿ, ಶಾಂತಮ್ಮ, ವಾಸುದೇವ ಗಿರಿಮಾಜಿ, ರಾಜಕುಮಾರ್, ನರಸಿಂಹರಾಜು ಮತ್ತು ಪಂಢರಿಬಾಯಿ

ಮಾಡುವುದು ಸರಿಯಾದ ವಿಧಾನ. ಅದರೆ ಅವೆಲ್ಲ ಆ ದಿನಗಳಲ್ಲಿ ಸಾಧ್ಯವಾಗುತ್ತಿರಲಿಲ್ಲ. ಇದ್ದುದರಲ್ಲಿ ಒಳ್ಳೇ ಎಫೆಕ್ಟ್ ಕೊಡೋದು. ಹಾಗೆ ಕನ್ನಡ ಚಿತ್ರಗಳಲ್ಲಿ ಉತ್ತಮ ಪರಿಣಾಮ ತಂದಿದೀನಿ ಅನ್ನಿಸುತ್ತೆ. ಇವತ್ತಿಗೂ ಆ ಕಷ್ಟದ ಫಲ ಉತ್ತಮವಿತ್ತು ಅನ್ನೋದು ಹೆಮ್ಮೆಯ ಸಂಗತಿಯೇ...''.

'ದೈವ ಸಂಕಲ್ಪ' ಮಹಾತ್ಮ ಅವರ ಇನ್ನೊಂದು ಚಿತ್ರ. ಈ ಚಿತ್ರಕ್ಕೆ ಗಾರ್ಡ್ ಚೆನ್ನಬಸಪ್ಪನವರನ್ನು ನರೇಂದ್ರಬಾಬುಗಳು ನಿರಂಜನ್ ಎಂಬ ಹೆಸರಿನಲ್ಲಿ ನಾಯಕ ನಟರಾಗಿ ಪರಿಚಯಿಸಿದರು.

ಅನಂತರ ತೆರೆಕಂಡದ್ದು ಮೊರಾಕ್ ಪಿಕ್ಚರ್ಸ್ ಅವರ 'ಕಚ ದೇವಯಾನಿ'. ಕೆ.ಎಸ್.ಅಶ್ವತ್ಥ್-ಬಿ.ಸರೋಜಾದೇವಿ ಅಭಿನಯದ ಈ ಚಿತ್ರಕ್ಕೆ ಕೆ.ಸುಬ್ರಹ್ಮಣ್ಯಂ ಅವರ ಕಥಾ ಸಂವಿಧಾನವಿತ್ತು. 'ಕಚ ದೇವಯಾನಿ' ಚಿತ್ರಕ್ಕೆ ಸಂಭಾಷಣೆ, ಹಾಡುಗಳನ್ನು ಬರೆದವರು ಎಂ.ನರೇಂದ್ರಬಾಬು. ಸಂಗೀತ ನೀಡಿದವರು ಪಾಂಡು ಮತ್ತು ಮೀನಾಕ್ಷಿ ಸುಬ್ರಹ್ಮಣ್ಯಂ. ನಿರ್ದೇಶಕರು ಬಾಲು ಮತ್ತು ಎಂ.ಆರ್.ಎಸ್.ಮಣಿ. ೧೯೫೭ರ ಸೆಪ್ಟೆಂಬರ್ ೨೮ರಂದು ಚಿತ್ರ ತೆರೆ ಕಂಡಿತು. ಬೆಂಗಳೂರಿನ ಶಿವಾಜಿ, ಮೈಸೂರಿನ ಪ್ರಭಾ ಪಿಕ್ಚರ್ ಹೌಸ್ ಮತ್ತು ದಾವಣಗೆರೆ, ಶಿವಮೊಗ್ಗ, ಚಿತ್ರದುರ್ಗ, ಹಾಸನ, ತರೀಕೆರೆ, ಮಂಗಳೂರುಗಳಲ್ಲಿ ತೆರೆಕಂಡಿತು. ಚಿತ್ರ ಯಶಸ್ವಿಯಾಗಲಿಲ್ಲ.

ಹಾಗೆಯೇ ತಮಿಳು ನಟ ಎಸ್.ಎ.ನಟರಾಜನ್ ನಿರ್ದೇಶಿಸಿ ತಯಾರಿಸಿದ 'ಕೋಕಿಲ ವಾಣಿ' ತೆರೆಗೆ ಬಂತು. ಕನ್ನಡ ಚಿತ್ರರಂಗದಲ್ಲಿ ಏನಾದರೂ ದಾಖಲೆ ಅನ್ನುವಂಥ ಯಾವ ಉತ್ತಮ ಅಂಶಗಳೂ ಇರಲಿಲ್ಲ. ಚಿತ್ರ ತಮಿಳು-ಕನ್ನಡ ಎರಡೂ ಭಾಷೆಗಳಲ್ಲಿ ಸಿದ್ಧವಾಯಿತು. ತಮಿಳಿಗೇ ಬೇರೆ, ಕನ್ನಡಕ್ಕೇ ಬೇರೆ ನಟ-ನಟಿಯರಿದ್ದರೆಂದೂ, ಒಂದು ಸಾರಿ ಕ್ಯಾಮರಾ ಇಟ್ಟರೆ ತಮಿಳಿನಲ್ಲಿ ಒಂದು ಚಿತ್ರಿಕೆ, ಅನಂತರ ಅದೇ ರೀತಿಯಲ್ಲಿ ಕನ್ನಡದಲ್ಲಿ ಒಂದು ಚಿತ್ರಿಕೆ ತೆಗೆಯುತ್ತಿದ್ದರೆಂದೂ ನರೇಂದ್ರಬಾಬುಗಳು ಹೇಳುತ್ತಾರೆ. ಕನ್ನಡದಲ್ಲಿ ಸರೋಜಾದೇವಿ ಅವರು ನಾಯಕಿಯಾದರೆ ತಮಿಳಿನಲ್ಲಿ ತಾಂಬರಂ ಲಲಿತ ಎನ್ನುವವರು ನಾಯಕಿಯಾಗಿದ್ದರು. ನರೇಂದ್ರಬಾಬುಗಳು ನರಸಿಂಹನ್ ಎಂಬ ತರುಣನನ್ನು ನಾಯಕ ಪಾತ್ರಕ್ಕೆ ಪರಿಚಯಿಸಿದರು.

ಹೊನ್ನಪ್ಪ ಭಾಗವತರ್ ತಯಾರಿಸಿದ 'ಪಂಚರತ್ನ'ವೂ ಯಶಸ್ವಿಯಾಗಲಿಲ್ಲ. ಟಿ.ಎನ್.ಬಾಲಕೃಷ್ಣ ಅವರು ಕಥೆಯೊಂದನ್ನು ಬರೆದು ಹೊನ್ನಪ್ಪ ಭಾಗವತರಲ್ಲಿ ಪ್ರಸ್ತಾಪಿಸಿದರು. ಅದಕ್ಕೆ 'ಪಂಚರತ್ನ' ಎಂಬ ಹೆಸರಿಟ್ಟು ಚಿತ್ರಿಸಲು ತೀರ್ಮಾನಿಸಿದರು. ಸಂಭಾಷಣೆ ಇತ್ಯಾದಿ ಬಾಲಕೃಷ್ಣರೇ ನಿರ್ವಹಿಸಿದರೆ ಕೆಲವು ಹಾಡುಗಳನ್ನು ನಂಜಪ್ಪಕವಿ ಅವರಿಗೆ ವಹಿಸಲಾಯಿತು. ತಮಿಳು ನಾಡಿನ ವೇಂಬು ಎನ್ನುವವರಿಗೆ ನಿರ್ದೇಶನ ವಹಿಸಿದರು.

'ಕಾಳಿದಾಸ' ಚಿತ್ರದ ಒಪ್ಪಂದ ಮಾಡುವಾಗಲೇ ತಮ್ಮ ಮುಂದಿನ ಚಿತ್ರಕ್ಕೂ ನಾಯಕಿಯಾಗಬೇಕೆಂದು ಮಾತಾಗಿದ್ದರಿಂದ ಸರೋಜಾದೇವಿ ಅವರೇ 'ಪಂಚರತ್ನ'ದ ನಾಯಕಿಯಾದರು. ಬಾಲಕೃಷ್ಣ, ನರಸಿಂಹರಾಜು ಮತ್ತಿತರ ರಂಗನಟರನ್ನು ಆಯ್ಕೆ ಮಾಡಿದರು. ಭಾಗವತರೇ ಸಂಗೀತ ನಿರ್ದೇಶಿಸಿದರು. ಕಡಿಮೆ ವೆಚ್ಚದಲ್ಲಿ ಸುಮಾರು ನಾಲ್ಕು ತಿಂಗಳಲ್ಲಿ 'ಪಂಚರತ್ನ' ಚಿತ್ರ ತಯಾರಾಯಿತು.

ಚಿತ್ರದ ಕಥಾಭಾಗದಲ್ಲಿ ತಂದೆ-ಮಗ ಒಬ್ಬಳೇ ಪ್ರೇಯಸಿಯ ಬಳಿ ಹೋಗಿ ಬರುವ ಸನ್ನಿವೇಶಗಳಿದ್ದವು. ಕಡೆಯಲ್ಲಿ ನಾಯಕ-ನಾಯಕಿ ಆತ್ಮಹತ್ಯೆ ಮಾಡಿಕೊಳ್ಳುವರು. ಇಂಥ ಸನ್ನಿವೇಶ ಅದುವರೆಗೆ ಯಾವ ಕನ್ನಡ ಚಿತ್ರದಲ್ಲೂ ಇರಲಿಲ್ಲ. ಜನ ಇಷ್ಟಪಡಲಿಲ್ಲ. ಚಿತ್ರ ಸೋತಿತು.

ವಿಶ್ವಕಲಾ ಚಿತ್ರ ಅವರ 'ಹರಿಭಕ್ತ' ಚಿತ್ರದ ಮೂಲಕ ಜಿ.ಕೆ.ವೆಂಕಟೇಶ್ ಅವರು ಪೂರ್ಣ ಪ್ರಮಾಣದ ಸಂಗೀತ ನಿರ್ದೇಶಕರಾಗಿ ಪರಿಚಯವಾದರು. ವೆಂಕಟೇಶ್ ಕನ್ನಡ ಚಿತ್ರರಂಗದ ಅತ್ಯಂತ ಪ್ರತಿಭಾನ್ವಿತ ಸಂಗೀತ ನಿರ್ದೇಶಕರಲ್ಲೊಬ್ಬರು. ಹೊಸ ಹೊಸ ಪ್ರಯೋಗಗಳನ್ನು ಮಾಡಿದ ಸೃಜನಶೀಲ ಪ್ರತಿಭೆ. ಅವರೊಂದಿಗೆ ಹೆನ್ರಿ ಡೇನಿಯಲ್ ಸಹಾಯಕ ಸಂಗೀತ ನಿರ್ದೇಶಕರಾಗಿ ದುಡಿದದ್ದುಂಟು. ಅವರ ಶಿಷ್ಯರಾಗಿದ್ದ ವೈದ್ಯನಾಥನ್ (ವೈದಿ), ಇಳಯರಾಜ, ಶಂಕರ್-ಗಣೇಶ್ ದಕ್ಷಿಣ ಭಾರತದ ಸುಪ್ರಸಿದ್ಧ ಸಂಗೀತ ನಿರ್ದೇಶಕರಾಗಿದ್ದಾರೆ. ಚಿತ್ರದಲ್ಲಿ ರಾಜಕುಮಾರ್ ಅವರಿಂದ ಹಾಡಿಸಿದ (ಓಹಿಲೇಶ್ವರ) ಮೊದಲಿಗರು. ಆ ವರ್ಷ ತೆರೆಕಂಡ ವಿಶ್ವಕಲಾ ಚಿತ್ರ ಅವರ ಇನ್ನೊಂದು ಕಾಣಿಕೆ 'ಓಹಿಲೇಶ್ವರ'. ಈ ಎರಡೂ ಚಿತ್ರಗಳನ್ನು ನಿರ್ದೇಶಿಸಿದವರು ಟಿ.ವಿ.ಸಿಂಗ್ ಠಾಕೂರ್. ಸಾಹಿತ್ಯ ಜಿ.ವಿ.ಅಯ್ಯರ್. 'ಓಹಿಲೇಶ್ವರ' ಚಿತ್ರದಲ್ಲಿ ರಾಜಕುಮಾರ್, ಜೂನಿಯರ್ ಶ್ರೀರಂಜಿನಿ, ನರಸಿಂಹರಾಜು ಮತ್ತು ಮೀನಾಕ್ಷಿಯವರ ಜತೆಗೆ ಕಲ್ಯಾಣ್‌ಕುಮಾರ್ ಗೂನುಬೆನ್ನಿನ ಒಂದು ವಿಶಿಷ್ಟ ಪಾತ್ರದಲ್ಲಿ ಅಭಿನಯಿಸಿದ್ದಾರೆ. ಅವರ ಈ ಮೂರು ಚಿತ್ರಗಳು ಒಳ್ಳೆಯ ಹೆಸರು ಗಳಿಸಿದವು. ರಾಜಕುಮಾರ್ ಮತ್ತಿತರ ಕಲಾವಿದರ ಜನಪ್ರಿಯತೆಯನ್ನು ಹೆಚ್ಚಿಸಿದವು. ಈ ಚಿತ್ರದ ಕಲಾನಿರ್ದೇಶಕರು ಆರ್.ಬಿ.ಎಸ್.ಮಣಿ. ಗುಜರಾತಿನ ಸೋಮನಾಥ ದೇವಾಲಯದ ಶಿಲ್ಪಕಲಾ ವೈಭವವನ್ನು ನೋಡಿಕೊಂಡು ಬಂದು, ಅಂಥದೇ ಸೆಟ್ ಅನ್ನು ಹಾಕಿದರು. ಕಥೆಯಲ್ಲಿ ಆ ದೇವಾಲಯವೆಂದೇ ಹೇಳಿದ್ದರಿಂದ ಈ ಶ್ರಮ ತೆಗೆದುಕೊಂಡರು. ಅದರೆ ನಿರ್ಮಾಪಕ ವಿಶ್ವನಾಥಶೆಟ್ಟಿಯವರಿಗೆ ಯಾವ ಆರ್ಥಿಕ ಲಾಭವೂ ಅಗಲಿಲ್ಲ. ಪ್ರತಿಯಾಗಿ ಸಾಲದ ಹೊರೆ ಜಾಸ್ತಿಯಾಯಿತು. ಚಿತ್ರೋದ್ಯಮದ ಅಗಿನ ಸ್ಥಿತಿಯನ್ನು ಜಿ.ವಿ.ಅಯ್ಯರ್ ಹೀಗೆ ನೆನೆಯುತ್ತಾರೆ :

''ಸೋದರಿ' ಚಿತ್ರದವರೆಗೂ ಕರ್ನಾಟಕ ಫಿಲಂಸ್‌ನವರ ಆಶ್ರಯವೇ ಆಯಿತು. ಅದು ಮಾತೃಸಂಸ್ಥೆ ಅಲ್ವೇ? ಬಸವರಾಜ್ ನಮ್ಮ ಎಲ್ಲ ಅವಶ್ಯಕತೇನೂ ಪೂರೈಸುತ್ತಿದ್ದರು. ಆಗಲೂ ಕಂಪನಿ ಥರಾ ಅದೇ ನಮ್ಮ ಮನೆ.

''ಹರಿಭಕ್ತ'ದ ಹೊತ್ತಿಗೆ ಕೆ.ವಿ.ಗುಪ್ತ, ಬಿ.ಎಸ್.ಗುಪ್ತರ ಜೊತೆ ಕೆಲಸ. ಸಾಮಾನ್ಯವಾಗಿ ನಾವು ಮೂರು ರೀಲ್ ಶೂಟ್ ಮಾಡುತ್ತಿದ್ದೆವು. ಅದರಲ್ಲಿ ಕ್ಲೈಮ್ಯಾಕ್ಸ್, ರೊಮಾನ್ಸ್, ಒಂದೊ ಎರಡೊ ಹಾಡು ಇರಬೇಕು. ಕಥೆಪುಸ್ತಕ ಅಥವಾ ಚಿತ್ರ ನಾಟಕದ ಹಸ್ತಪ್ರತಿಯನ್ನೂ, ಆ ಮೂರು ರೀಲನ್ನೂ ತಗೊಂಡು ಒಂದೊಂದು



(ಚಿತ್ರ ೨೫) 'ಓಹಿಲೇಶ್ವರ' ಚಿತ್ರದಲ್ಲಿ ರಾಜಕುಮಾರ್

ಆಫೀಸಿಗೂ ಹೋಗಿ ಕಥೆ ಓದೋದು. ಸಿನಿಮಾ ನೋಡಬೇಕು ಅನ್ನೋರಿಗೆ ಆ ಮೂರು ರೀಲನ್ನು ಹಾಕಿ ತೋರಿಸೋದು. ಅವರಿಗೆ ಇಷ್ಟವಾದರೆ ಹತ್ತು ಸಾವಿರ ಕೊಡುತ್ತಿದ್ದರು. ಹೀಗೆ ಆಬ್ಬಾ ಎಂದರೆ ೮೦ ಸಾವಿರದಲ್ಲಿ ಸಿನಿಮಾ ಮುಗಿಸಬೇಕಿತ್ತು. ಮುಖ್ಯವಾಗಿ ವಿತರಕ ಮೂರೊ-ಐದೊ ಸಾವಿರ ಕೊಟ್ಟು, ಉಳಿದ ಹಣವನ್ನು ಏಳು, ಎಂಟು ಚಿತ್ರಮಂದಿರಗಳ ಮಾಲೀಕರಿಗೆ ಇಂಥ ಚಿತ್ರ ಬರುತ್ತೆ. ಒಂದೊಂದು ಸಾವಿರ ಕೊಡಿ ಅಂತ ಹೇಳಿ ಕೊಡಿಸೋರು. ಹೀಗಾಗಿ ನಿರ್ಮಾಣ ಯಾರೋ ಒಬ್ಬರ ತಲೆಗೇ ಹೊರೆ ಆಗುತ್ತಿರಲಿಲ್ಲ. ನಮಗೂ ಚಿತ್ರ ಚೆನ್ನಾಗಿದ್ರೆ ಮಾತ್ರ ಹಣ ಬರುತ್ತೆ ಅನ್ನುವ ಭಯ ಇರುತ್ತಿತ್ತು. ತಾಂತ್ರಿಕವಾಗಿ ಆ ಚಿತ್ರಗಳು - ಇವತ್ತಿಗೆ ಹೋಲಿಸಿದರೆ - ಹಿಂದೆ ಬಿದ್ದರೂ, ಸಾಹಿತ್ಯ ನಿರೂಪಣೆಯಲ್ಲಿ ಚೆನ್ನಾಗಿರುತ್ತಿದ್ದವು. ಒಟ್ಟು ಕಥೆ, ಹಾಡು ಮುಖ್ಯ. ತಾಂತ್ರಿಕ ವಿಚಾರಕ್ಕೆ ಗಮನ ಕೊಡುತ್ತಿರಲಿಲ್ಲ.

''ಆಗೆಲ್ಲ ಕಂಪನಿ ಮನೇಲೇ ಎಲ್ಲರೂ ಇರುತ್ತಿದೆವು. ಕಂಪನಿಯದೇ ಊಟ. ಎಲ್ಲಾ ಒಂದು ಮನೆಯವರ ತರಹ ಇರುತ್ತಿದ್ದೆವು. ಈ ಪದ್ಧತಿ ಬದಲಾಗಿದ್ದು ಹೊನ್ನಪ್ಪ ಭಾಗವತರು 'ಕಾಳಿದಾಸ' ಚಿತ್ರ ತಯಾರಿಸಿದ ಮೇಲೆ. ಅದೇನೋ ಕಿರಿ ಕಿರಿ ಪ್ರಾರಂಭವಾಯಿತು. ಕೆಲವರಿಗೆ ಮದುವೆ ಆಗಿತ್ತು, ಪ್ರತ್ಯೇಕವಾಗಿರಿಸೋದು ಅನಿವಾರ್ಯವಾಯಿತು. ಭಾಗವತರು ಎರಡನೇ ಸಿನಿಮಾದ ಹೊತ್ತಿಗಾಗಲೇ ಇಬ್ಬರು ಮೂವರನ್ನು ಹೊಟೇಲ್‌ನಲ್ಲಿ ಇಳಿಸುತ್ತಿದ್ದರು. ಪೂರ್ತಿ ಬದಲಾವ ವ್ಯವಸ್ಥೆ ಬಂದಿದ್ದು ಕೆಂಪರಾಜ ಅರಸರಿಂದ. ಅವರಿಗೆ ಮದುವೆ ಆಗಿತ್ತು. ಗಂಡ-ಹೆಂಡತಿಗೆ ಪ್ರತ್ಯೇಕ

ಹೋಟೇಲ್ ರೂಮ್ ಮಾಡಬೇಕಾಯಿತು. ಆಮೇಲೆ ಎಲ್ಲರಿಗೂ ಹೋಟೇಲ್ ರೂಮೇ ಆಯಿತು'' ಎಂದು ಜಿ.ವಿ.ಅಯ್ಯರ್ ಆ ದಿನಗಳಲ್ಲಿ ಕಲಾವಿದರ ಕುರಿತು ಸಂದರ್ಶನದಲ್ಲಿ ಹೇಳುತ್ತಾರೆ.

ಬಿ.ಎಸ್.ರಂಗಾ ಛಾಯಾಗ್ರಾಹಕರಾಗಿ ಚಿತ್ರರಂಗ ಪ್ರವೇಶಿಸಿ 'ಚಂದ್ರಲೇಖ'ದಂಥ ಮಹಾನ್ ಚಿತ್ರಗಳಲ್ಲಿ ಕೆಲಸ ಮಾಡಿ ಮುಂದೆ ಮದರಾಸಿನಲ್ಲಿ ತಮ್ಮದೇ ಸ್ವಂತ ವಿಕ್ರಂ ಸ್ಟುಡಿಯೋ ಸ್ಥಾಪಿಸಿ ಅನೇಕ ಉತ್ತಮ ಚಿತ್ರಗಳನ್ನು ತಯಾರಿಸಿದ ಸಾಹಸಿ. ಕನ್ನಡದ ಪ್ರಥಮ ವರ್ಣ ಚಿತ್ರ ತಯಾರಿಸಿದ ಕೀರ್ತಿಯೂ ಅವರಿಗೇ ಸಲ್ಲುತ್ತದೆ. ಮದರಾಸಿನಲ್ಲಿ ಕನ್ನಡ ಚಿತ್ರಗಳಿಗೆ ಕೀರ್ತಿ, ಸ್ಥಾನಗಳನ್ನು ಗಳಿಸಿಕೊಟ್ಟ ಆರೆನ್ನಾರ್ ಪಿಕ್ಚರ್ಸ್, ಪದ್ಮಿನಿ ಪಿಕ್ಚರ್ಸ್ ಸಾಲಿಗೆ ಅವರ ವಿಕ್ರಂ ಪ್ರೊಡಕ್ಷನ್ಸ್ ಕೂಡ ಸೇರುತ್ತದೆ. ಈ ಮೂರೂ ಬ್ಯಾನರ್‌ಗಳು ಮೈಸೂರಿನ ಮಹಾತ್ಮ ಪಿಕ್ಚರ್ಸ್‌ನಂತೆಯೇ ಕನ್ನಡ ಚಿತ್ರಗಳಿಗೆ ಸ್ಥಿರವಾದ ನೆಲೆಯನ್ನು ತಂದುಕೊಡುವಲ್ಲಿ ಮಹತ್ವದ ಪಾತ್ರ ನಿರ್ವಹಿಸಿದವು. ರಂಗಾ ಅವರ ನಿರ್ಮಾಣ, ನಿರ್ದೇಶನದ 'ಭಕ್ತ ಮಾರ್ಕಂಡೇಯ'ದಲ್ಲಿ ಭಾರಿ ತಾರಾಗಣವಿತ್ತು. ತೆಲುಗು ಚಿತ್ರರಂಗದ ಶ್ರೇಷ್ಠ ನಟ ಚಿತ್ತೂರು ವಿ.ನಾಗಯ್ಯ, ಪುಷ್ಪವಲ್ಲಿ (ಖ್ಯಾತ ಹಿಂದಿ ತಾರೆ ರೇಖಾಳ ತಾಯಿ), ನರಸಿಂಹರಾಜು, ಚಿ.ಸದಾಶಿವಯ್ಯ, ನಾಗೇಂದ್ರರಾವ್, ಕಾಂತಾರಾವ್, ಸೂರ್ಯಕಲಾ, ರಮಾದೇವಿ ಮತ್ತು ಬೇಬಿ ಉಮಾ ಅಭಿನಯಿಸಿದರು.

ಚಿತ್ರ ಸಾಹಿತ್ಯವನ್ನು ಚಿ.ಸದಾಶಿವಯ್ಯ ರಚಿಸಿದ್ದರು. ಈ ಚಿತ್ರದ ಹಾಡುಗಳು ಅತ್ಯುತ್ತಮವಾಗಿದ್ದು ಬಹಳ ಜನಪ್ರಿಯವಾದವು. ಸಂಗೀತ ನೀಡಿದವರು ವಿಶ್ವನಾಥನ್-ರಾಮಮೂರ್ತಿ. ಈ ಜೋಡಿ ತಮಿಳು ಚಿತ್ರರಂಗದಲ್ಲಿ ದೊಡ್ಡ ಹೆಸರು ಮಾಡಿತ್ತು.

'ಭಕ್ತ ಮಾರ್ಕಂಡೇಯ' ೧೯೫೬ನೇ ಡಿಸೆಂಬರ್ ೨೮ರಂದು ತೆರೆಗೆ ಬಂದಿತು. ವಿಕ್ರಂ ಸಂಸ್ಥೆಯೇ ವಿತರಿಸಿತ್ತು. 'ಅಪ್ರತಿಮ ದೈವಭಕ್ತಿಯಿಂದ ಮೃತ್ಯುವನ್ನು ಜಯಿಸಿದ ಬಾಲ ಮುನಿಯ ಕಥೆ ನಿಮ್ಮನ್ನು ರೋಮಾಂಚನಗೊಳಿಸುವುದು' ಎಂಬ ಪ್ರಚಾರದಿಂದ ಬೆಂಗಳೂರಿನ ಮಿನರ್ವ, ಸಾಗರ್ ಹಾಗೂ ಮೈಸೂರಿನ ಪ್ರಭುದೇವ ಚಿತ್ರಮಂದಿರಗಳಲ್ಲಿ ತೆರೆಗೆ ಬಂದಿತು. ಚಿಕ್ಕಮಗಳೂರು, ಹಾಸನ, ತುಮಕೂರು, ಮಂಗಳೂರು, ಹುಬ್ಬಳ್ಳಿ, ಬಾಗಲಕೋಟೆ, ಗದಗ್‌ಗಳಲ್ಲೂ ತೆರೆಕಂಡಿತು. ಬಳ್ಳಾರಿಯಲ್ಲಿ ಮಾತ್ರ ಇದರ ತೆಲುಗು ಅವತರಣಿಕೆಯನ್ನು ಬಿಡುಗಡೆ ಮಾಡಿದ್ದರು.

'ಮುತ್ತೈದೆ ಭಾಗ್ಯ' ವಿಠಲಾಚಾರ್ಯರು ಮದರಾಸಿನಲ್ಲಿ ತಯಾರಿಸಿದ ಯಶಸ್ವಿ ಸಾಮಾಜಿಕ ಚಿತ್ರ. ಚಿತ್ರ ಸಾಹಿತ್ಯವನ್ನು ರಚಿಸಿದವರು ಹುಣಸೂರು ಕೃಷ್ಣಮೂರ್ತಿ. ಕಲ್ಯಾಣ್‌ಕುಮಾರ್, ಮೈನಾವತಿ, ಬಾಲಕೃಷ್ಣ, ರೇವತಿ, ಜಯಶ್ರೀ ಮತ್ತು ಮಾ|ಹಿರಣ್ಣಯ್ಯ ಈ ಚಿತ್ರದಲ್ಲಿ ಅಭಿನಯಿಸಿದ್ದರು.

ಈ ಚಿತ್ರಕ್ಕಾಗಿ ಹುಣಸೂರು ಕೃಷ್ಣಮೂರ್ತಿ ಗೀತೆ ರಚಿಸಿ, ರಾಜನ್-ನಾಗೇಂದ್ರ ಸಂಗೀತ ಸಂಯೋಜಿಸಿದ್ದ 'ನಮ್ಮೂರೆ ಚೆಂದ ನಮ್ಮವರೆ ಅಂದ ಕನ್ನಡ ಭಾಷೆ ಕರ್ಣಾನಂದ....' ಎಂಬ ಕನ್ನಡ ನಾಡಿನ ಹಿರಿಮೆ ಸಾರುವ ಗೀತೆ ಅತ್ಯಂತ ಜನಪ್ರಿಯವಾಯಿತು. ಇದನ್ನು ಹಾಡಿದವರು ನಾಗೇಂದ್ರ ಅವರೇ. ಮುಂದೆ ಪ್ರವಾಹ ಪರಿಹಾರ ನಿಧಿ ಸಂಗ್ರಹ ಯಾತ್ರೆಯಲ್ಲಿ ಹೋದ ಪ್ರತಿ ಊರುಗಳಲ್ಲಿಯೂ ನಾಗೇಂದ್ರ ಈ ಹಾಡನ್ನು ಹಾಡಿ ಚಪ್ಪಾಳೆ ಗಿಟ್ಟಿಸುತ್ತಿದ್ದರು. ಅದಿನ್ನೂ ಕರ್ನಾಟಕ ಏಕೀಕರಣದ ಹೊಸತು. ಕನ್ನಡ ನಾಡು-ನುಡಿಯ ಬಗ್ಗೆ ಜನರಲ್ಲಿ ಅಭಿಮಾನ ಉಕ್ಕುತ್ತಿದ್ದ ಕಾಲವದು.

ಅನಂತರ ಬಂದದ್ದು ಎಚ್.ಎಂ.ರೆಡ್ಡಿಯವರ ರೋಹಿಣಿ ಫಿಲಂಸ್ ಲಾಂಛನದಡಿ ತಯಾರಾದ 'ರೇಣುಕಾ ಮಹಾತ್ಮೆ'. ಈ ಚಿತ್ರದ ಮೂಲಕ ವೈ.ಆರ್.ಸ್ವಾಮಿ ನಿರ್ದೇಶಕ ಪಟ್ಟಕ್ಕೇರಿದರು. ನಾಗೇಂದ್ರರಾವ್, ಪಂಢರಿಬಾಯಿ, ನರಸಿಂಹರಾಜು ಮುಂತಾದವರು ತಾರಾಗಣದಲ್ಲಿದ್ದರು.

ಎಲ್ಲೇ ಇದ್ದರೂ ನಮ್ಮ ಭಾಷೆಯ ಚಿತ್ರ ಮಾಡಬೇಕು ಎನ್ನುವ ಆಸೆ ಇದ್ದೇ ಇರುತ್ತದಲ್ಲ. ಆ ದೃಷ್ಟಿಯಿಂದ ಅವರು 'ರೇಣುಕಾ ಮಹಾತ್ಮೆ' ಮಾಡಿದರು. ಖ್ಯಾತ ನಿರ್ದೇಶಕ ಎಸ್.ಲಕ್ಷ್ಮೀನಾರಾಯಣ್ ಅವರ ಪ್ರಕಾರ ಆ ಕಾಲದ ದೃಷ್ಟಿಯಿಂದ 'ರೇಣುಕಾ ಮಹಾತ್ಮೆ' ಒಂದು ಉತ್ತಮ ಚಿತ್ರ. ಅಚ್ಚುಕಟ್ಟಾದ ಚಿತ್ರ ಹಾಗೂ ತುಂಬ ಜನಪ್ರಿಯವಾದ ಚಿತ್ರ.

ಅನಂತರ ಎ.ವಿ.ಎಂ. ಸಂಸ್ಥೆಯವರು ತಮ್ಮ ಸೋದರ ಸಂಸ್ಥೆಯಾದ ಶಂಕರ್ ಪ್ರೊಡಕ್ಷನ್ಸ್ ಹೆಸರಿನಲ್ಲಿ ಕು.ರ.ಸೀತಾರಾಮಶಾಸ್ತ್ರಿ ಅವರ ನಿರ್ದೇಶನದಲ್ಲಿ 'ಸದಾರಮೆ' ತೆರೆಗೆ ತಂದರು. ಈ ಜಾನಪದ ಕಥೆ ಆಧಾರದ ಮೇಲೆ ೧೯೩೫ರಲ್ಲಿ ಚಿತ್ರ ತಯಾರಾಗಿ ಯಶಸ್ವಿಯಾಗಿ ಪ್ರದರ್ಶಿತವಾಗಿತ್ತು. ಇದರ ಮೂಲ ಗುಬ್ಬಿ ಕಂಪೆನಿಯ ಯಶಸ್ವಿ ನಾಟಕ. ಅವರೇ ಚಿತ್ರವನ್ನು ತಯಾರಿಸಿದರು. ಕಲ್ಯಾಣ್‌ಕುಮಾರ್, ಸಾಹುಕಾರ್ ಜಾನಕಿ, ನರಸಿಂಹರಾಜು, ಬಾಲಕೃಷ್ಣ, ಜಿ.ವಿ.ಅಯ್ಯರ್ ಎಲ್ಲರೂ ಅಭಿನಯಿಸಿದ್ದಾರೆ. ಭಾಗಶಃ ವರ್ಣ ಹಾಗೂ ಕಳ್ಳನ ಪಾತ್ರದಲ್ಲಿ ಕಲ್ಯಾಣ್‌ಕುಮಾರ್ ಅವರ ಹಾಡು-ನೃತ್ಯ ಈ ಚಿತ್ರದ ಯಶಸ್ಸಿಗೆ ಕಾರಣವಾದುವು. ಆರ್.ಸುದರ್ಶನ್ ಮತ್ತು ಗೋವರ್ಧನ್ ಸಂಗೀತ ನಿರ್ದೇಶನದಲ್ಲಿ ಒಂದೆರಡು ಹಾಡುಗಳು ಬಹಳ ಜನಪ್ರಿಯವಾದುವು. ಈ 'ಸದಾರಮೆ' ಚಿತ್ರದ ಹಿಂದೆ ಒಂದು ಪುಟ್ಟ ಒಳಕಥೆಯಿತ್ತು. ಅದನ್ನು ರಾಜಕುಮಾರ್ ಹೀಗೆ ನೆನೆಯುತ್ತಾರೆ :

ಸೋದರಿ ಚಿತ್ರ ಆಗಿತ್ತು. ಕೆಲಸವಿಲ್ಲ. ಕರ್ನಾಟಕ ಫಿಲಂಸ್‌ನವರು 'ಸದಾರಮೆ' ಚಿತ್ರಿಸಲು ಯೋಚಿಸಿದರು. ಎದುರಿಗೇ ಇದ್ದರೂ ರಾಜಕುಮಾರ್‌ರನ್ನು ಕರೆಯಲಿಲ್ಲ. ಅವರನ್ನೇ "ಈ ಚಿತ್ರದಲ್ಲಿ ಕಳ್ಳನ ಪಾತ್ರಕ್ಕೆ ಯಾರನ್ನಾದರೂ ಸೂಚಿಸಿ'' ಅಂದರು. ಎಲಿವಾಳ ಸಿದ್ಧಯ್ಯಸ್ವಾಮಿಯನ್ನು ರಾಜಕುಮಾರ್ ಸೂಚಿಸಿದರು, ಆತ ಬಂದರು. ಆದರೆ ಕುಣಿಯಲು ಆಗಲಿಲ್ಲ. ಅವರ ಬದಲಿಗೆ ಕಲ್ಯಾಣ್‌ಕುಮಾರ್ ಅಭಿನಯಿಸಿದರು. ಆ ಚಿತ್ರದಲ್ಲಿ ಬರುವ 'ಕಲಹಂಸ' ಎಂಬ ಖಳನ ಪಾತ್ರ ರಾಜಕುಮಾರ್‌ಗೆ ಎಂದಿತ್ತು. ಒಂದು ಹಂತದಲ್ಲಿ "ನೀವು ಬೇಡ, ನಾಯಕ ಪಾತ್ರ ಮಾಡಿದ್ದೀರಿ. ಬೇರೆ ಕಡೆ ಹೋಗಲು ಅಡ್ಡಿ ಇಲ್ಲ. ನಮ್ಮ ಕರಾರು ಪತ್ರ ಹರಿದು ಹಾಕ್ತಿದೀವಿ'' ಅಂದಾಗ ಬಿಡುಗಡೆಯ ನಿಟ್ಟುಸಿರು ಬಿಟ್ಟರು ರಾಜಕುಮಾರ್. ಕೆಲಸವಿಲ್ಲದೆ ಸಂಕಟ ಪಡುವುದಂತೂ ಇದ್ದೇ ಇತ್ತು. ಕಡೆಗೂ 'ಹರಿಭಕ್ತ'ದಲ್ಲಿ ಅವಕಾಶವಾಯ್ತು. ಕಥೆಯ ಪೂರ್ವಾರ್ಧದ ಗ್ಲಾಮರ್‌ಗಿಂತ ಉತ್ತರಾರ್ಧದ ಭಕ್ತಿ, ಸಂಕಟಗಳೇ ಇಷ್ಟವಾಗಿದ್ದವೆಂದೂ ತಾದಾತ್ಮ್ಯದಿಂದ ಅಭಿನಯಿಸಿದ್ದಾಗಿಯೂ ಹೇಳುತ್ತಾರೆ ರಾಜಕುಮಾರ್. "ಚಿತ್ರ ಬಿಡುಗಡೆಯಾದಲ್ಲೆಲ್ಲಾ ಚೆನ್ನಾಗಿ ಹೋಯಿತು. ನನ್ನ ಮನಸ್ಸಿನಲ್ಲೂ ಆ ಪಾತ್ರ ನಿಂತುಹೋಗಿದೆ. ಹಾಗೆಯೇ ಆ ಚಿತ್ರದಿಂದ ಬರಬೇಕಾಗಿದ್ದ ಸಂಭಾವನೆಯೂ ನಿಂತುಹೋಯಿತು'' ಎನ್ನುತ್ತಾರೆ ರಾಜಕುಮಾರ್.

ಈ ಅವಧಿಯಲ್ಲಿ ಕಲಾವಿದರು ತುಂಬ ಸುಖ-ಸಂತೋಷಗಳಿಂದೇನೂ ಇರಲಿಲ್ಲ. ಕೆಲಸವಿಲ್ಲ, ಕೆಲಸ ಸಿಕ್ಕರೂ ಅದಕ್ಕೆ ಸಂಭಾವನೆ ಇಲ್ಲ. ಅವರಿಗವರೇ ಸಾಂತ್ವನ ಹೇಳಿಕೊಳ್ಳಬೇಕಷ್ಟೇ.

ಚಿತ್ರವೊಂದರ ಚಿತ್ರೀಕರಣ ಸಮಯದಲ್ಲಿ ಒಮ್ಮೆ ರಾಜಕುಮಾರ್ ಹೊರಗೆ ಹೋಗಬೇಕಾಗಿತ್ತು. ಸಹಾಯಕರಿಗೆ, ಪ್ರೊಡಕ್ಷನ್ಸ್‌ನವರಿಗೆ ಹೇಳಿಯೇ ಹೋದರು. ಆದರೆ ಆತ ನಿರ್ದೇಶಕರಿಗೆ ಹೇಳಲು ಮರೆತ. ರಾಜಕುಮಾರ್ ಹಿಂತಿರುಗಿ ಬಂದಾಗ ಮಾತನಾಡಿಸಿದ ರೀತಿ, ಸಮಜಾಯಿಷಿ ಕೇಳಿದ ರೀತಿ ಎಂಥವರಿಗೂ ಸಿಟ್ಟು



(ಚಿತ್ರ ೨೬) 'ರೇಣುಕಾ ಮಹಾತ್ಮೆ' ಚಿತ್ರದಲ್ಲಿ ನಾಗೇಂದ್ರರಾಯರು, ಕೌಶಿಕ್, ಪಂಢರಿಬಾಯಿ

೧. ಮಾರ್ಕಂಡೇಯನ ಕಥೆ ಪುರಾಣ ಪ್ರಸಿದ್ಧ. ಕನ್ನಡ ಚಿತ್ರರಂಗದ ಪ್ರಾರಂಭದ ದಿನಗಳಲ್ಲಿ 'ಚಿರಂಜೀವಿ' ಎಂಬ ಹೆಸರಿನಲ್ಲಿ ಈ ಕಥೆ ತೆರೆಗೆ ಬಂದಿತ್ತು.

ಬರುವಂಥದ್ದು. ಅದನ್ನೆಲ್ಲ ನೋಡುತ್ತಾ ಜೊತೆಯಲ್ಲಿದ್ದ ಜಿ.ವಿ.ಅಯ್ಯರ್ ''ಆ ಹುಡುಗನ್ನ ಹಾಗ್ಯಾಕೆ ದಬಾಯಿಸ್ತೀರಿ. ನಾವೇನು ಮಾನ-ಮರ್ಯಾದೆ ಅಡ ಇಟ್ಟಿದ್ದೀವಾ'' ಎಂತ ರೇಗಿಕೊಂಡಿದ್ದುಂಟು. ಒಬ್ಬರಿಗೊಬ್ಬರು ಸಮಾಧಾನ ಮಾಡಿಕೊಂಡು ತಾಳ್ಮೆಯಿಂದ ಇರಲು ಪ್ರಯತ್ನಿಸುತ್ತಿದ್ದರು. ರಾಜಕುಮಾರ್ ಅವರಿಗೆ 'ಹರಿಭಕ್ತ' ಚಿತ್ರದ ಹಣ ಬರಲಿಲ್ಲ. ''ನಾಳೆ ಬಾ''ಗಳಿಗೆ ಕೊನೆಯೇ ಇಲ್ಲ. ಅದೇ ಸಂಸ್ಥೆ ಸಮಾಜಿಕ ಚಿತ್ರ ಮಾಡಲು ಹೋಗಿ ರಾಜಕುಮಾರ್ ಅಂಥ ಪಾತ್ರಕ್ಕೆ ಹೊಂದುವುದಿಲ್ಲ ಎಂದು ಉದಯಕುಮಾರ್‌ರನ್ನು ಗೊತ್ತು ಮಾಡಿಕೊಂಡರು. ಚಿತ್ರ ಏಕೋ ಸೆಟ್ ಏರಲಿಲ್ಲ. 'ಓಹಿಲೇಶ್ವರ' ಮಾಡಿದರು. ಮತ್ತೆ ರಾಜಕುಮಾರ್ ಅವರನ್ನು ಕರೆದರು.

''ಇದೇ ಸಂದರ್ಭದಲ್ಲಿ ನಾವು 'ಕನ್ನಡ ಚಲನಚಿತ್ರ ಕಲಾವಿದರ ಸಂಘ' ಮಾಡಿದ್ದು. ನಮಗೆ ನಿಜವಾದ ಪ್ರೋತ್ಸಾಹ ನೀಡಿದವರು ನನ್ನ ಸಮೀಪದ ಬಂಧು ರಾಜಣ್ಣ'' ಎಂದು ಕೃತಜ್ಞತೆಯಿಂದ ನೆನೆಯುತ್ತಾರೆ ರಾಜಕುಮಾರ್.

ಗ್ಲಾಮರ್ ಪಾತ್ರಗಳಿಗೆ ಮುಖ ಸರಿ ಹೊಂದುವುದಿಲ್ಲ ಎಂಬ ಮಾತು ರಾಜಕುಮಾರ್ ಅವರಿಗೆ ಬಹಳಷ್ಟು ಅವಕಾಶಗಳಿಂದ ವಂಚಿತವಾಗಿಸಿತು. ಜೊತೆಗೆ ಅದೊಂದು ಕೊರಗೂ ಆಗಿತ್ತು. 'ಶ್ರೀಕೃಷ್ಣ ಗಾರುಡಿ' ಚಿತ್ರವಲ್ಲಿ ಅರ್ಜುನನ ಪಾತ್ರಕ್ಕೆ ಅವಕಾಶ ಬಂದಾಗ ಮೇಕಪ್‌ಗೆ ಬಂದ ದೊರೆಸ್ವಾಮಿನಾಯ್ಡು ಅವರಲ್ಲಿ ತಮ್ಮ ವೇದನೆಯನ್ನು ''ಅಪ್ಪಾ, ನನ್ನ ಮುಖ ಚೆನ್ನಾಗಿಲ್ಲಾಂತ ಎಲ್ರೂ ಹೇಳ್ತಾರೆ. ನೀವಾದ್ರೂ ನಾನು ಸ್ವಲ್ಪ ಚೆನ್ನಾಗಿ ಕಾಣೋ ಹಾಗೆ ಮೇಕಪ್ ಮಾಡಿ'' ಎಂದು ಕೇಳಿಕೊಂಡರಂತೆ. ''ಯಾವ ಮುಠ್ಠಾಳ ಸ್ವಾಮಿ ಹಾಗೆ ಹೇಳಿದ್ದು ? ನನ್ನ ಎದುರಿಗೆ ಹೇಳ್ಲಿ ನೋಡೋಣ.. ನಿಮ್ಮ ಮುಖಕ್ಕೆ ಕೊಂಚ ಕಡಿಮೆ ಕಲರ್ ಬಳಸಬೇಕು, ನೋಡೀರಂತೆ ಈಗ..'' ಎಂತ ಮೇಕಪ್ ಮಾಡಿದರು. ಕನ್ನಡೀಲಿ ನೋಡಿ ಖುಷಿಯಾಗಿ ಹೋಯ್ತು. ಅಲ್ಲಿಂದಾಚೆಗೆ ರಾಜ್ ಅವರಿಗೆ ಎಂಟಾನೆಯ ಬಲ ಬಂದ ಹಾಗಾಯ್ತು. ಮುಂದೆ ಬಹು ದೀರ್ಘ ಕಾಲ ಅವರಿಗೆ ನಾಯ್ಡು ಮೇಕಪ್ ಮ್ಯಾನ್. ಅದೇ ರೀತಿ ಅವರ ಜುಟ್ಟು ಕತ್ತರಿಸಿ ಕ್ರಾಪ್ ಮಾಡಿದ್ದ ರಾಜು ಖಾಯಂ ನಾಪಿತ.

೧೯೫೬ರಲ್ಲಿ ಮೊದಲ ಬಾರಿಗೆ 'ಭಕ್ತ ವಿಜಯ' ಚಿತ್ರ ನಿರ್ದೇಶಿಸಿದ ಆರೂರು ಪಟ್ಟಾಭಿ ನಿಜಕ್ಕೂ ಕನ್ನಡ ಚಿತ್ರರಂಗಕ್ಕೆ, ಉಪಭಾಷೆಗೆ ಉತ್ತಮ ಕೊಡುಗೆ ಕೊಟ್ಟರು. ಅಂದು ಹುಟ್ಟಿಸಿದ ಭರವಸೆ ಹುಸಿಯಾಗಲಿಲ್ಲ. ಪ್ರಾರಂಭದಲ್ಲೇ ರಾಷ್ಟ್ರ ಪ್ರಶಸ್ತಿ ಗಳಿಸಿದ್ದರು. ಎಂ.ಬಿ.ಗಣೇಶ್‌ಸಿಂಗ್, ವೈ.ಆರ್.ಸ್ವಾಮಿ ಅವರೂ ಪ್ರಥಮರೇ. ಆದರೆ ವೈ.ಆರ್.ಸ್ವಾಮಿ ಮುಂದೆ ಕನ್ನಡದ ಶ್ರೇಷ್ಠ ಚಿತ್ರಗಳನ್ನು ತೆರೆಗಿತ್ತು ಕನ್ನಡ ನಾಡು ಸ್ಮರಿಸುವಂಥ ನಿರ್ದೇಶಕರಾದರು. ಉದಯಕುಮಾರ್, ಅದವಾನಿ ಲಕ್ಷ್ಮೀದೇವಿಯವರುಗಳು ತೆರೆಗೆ ಬಂದು ಮುಂದೆ ಪ್ರಸಿದ್ಧರಾದರು. ೫೬ರಲ್ಲಿ ಹೊಸ ನಿರ್ಮಾಪಕರುಗಳೂ ಬಂದರು. ಅದರಲ್ಲಿ ವಿಕ್ರಂ ಸಂಸ್ಥೆಯ ಬಿ.ಎಸ್.ರಂಗಾ ಕನ್ನಡ ಚಲನಚಿತ್ರರಂಗಕ್ಕೆ ಮಹತ್ವದ ಕೊಡುಗೆಗಳನ್ನು ಕೊಟ್ಟರು.. ಎಸ್.ಜಿ.ರಾವ್‌ರಂಥ ತಂತ್ರಜ್ಞರು ಪ್ರವೇಶಿಸಿದ್ದೂ ವಿಶೇಷ.

ಇಷ್ಟಾದರೂ ಮುಜುಗರ ತಂದ ಸಂಗತಿಯೆಂದರೆ ಸ್ವತಂತ್ರ ಕಥೆಗಳು ಕಡಿಮೆ. ಅವರಿವರು ಚಿತ್ರಿಸಿ ಯಶಸ್ವಿಯಾದುದನ್ನೇ ಆಧರಿಸುವ ಬದಲು ಉತ್ತಮ ಸಾಹಿತ್ಯವನ್ನು ಆಧರಿಸಬಾರದೇಕೆ? ಎಂಬ ಪ್ರಶ್ನೆ ೧೯೫೬ರಲ್ಲೇ ಇತ್ತು. ನಟ-ನಟಿಯರಲ್ಲೂ ಹೊರಗಿನವರೇ ಅಧಿಕ. ಬಹುತೇಕ ತೆಲುಗು ನಟಿಯರನ್ನು ಕರೆತಂದರು. ಹೇಗಾದರೂ ಮಾಡಿ ಮೂಲವನ್ನು ಹುಡುಕಿ ಅವರು ಮೂಲತಃ ಕನ್ನಡಿಗರು ಎಂದು ಸಾಬೀತುಪಡಿಸುವ ಸಾಹಸವೂ ಇತ್ತು. ನಮ್ಮ ನಟರನ್ನೇ ಆಯ್ದು ತರಬೇತಿ ಕೊಡದೆ ಹೊರಗಿನವರಿಗೆ ಕಂಠದಾನ ಮಾಡುವ ಈ ಪರಿಪಾಠಕ್ಕೆ ಬಹುತೇಕ ಅನ್ಯ ಭಾಷೆಯವರೇ ಹಂಚಿಕೆದಾರರಾಗಿರುವುದೂ ಕಾರಣ ಎಂಬ ವಿಶ್ಲೇಷಣೆಯೂ ಇತ್ತು. ಪ್ರೇಕ್ಷಕರಿಗೂ ಅತಿ ಖ್ಯಾತಿವೆತ್ತ ತೆಲುಗು ನಟಿಯರ ಬಗ್ಗೆ ವಿಚಿತ್ರ ಪ್ರೀತಿ. ಇಂಥದೊಂದು ಚರ್ಚೆ ನಡೆದಾಗ ನಿರ್ದೇಶಕರೊಬ್ಬರು ''ನನಗೂ ಹೆದರಿಕೆಯಾಗುತ್ತಿದೆ, ಇನ್ನು ಕೆಲವೇ ದಿನಗಳಲ್ಲಿ ತೆಲುಗು ನಟಿಯರೇ ನಮ್ಮ ಕನ್ನಡ ತಿದ್ದಿದರೂ ಆಶ್ಚರ್ಯವಿಲ್ಲ..'' ಎಂದರು. ಈ ಆಕ್ರಮಣ ನಿಲ್ಲದಿದ್ದರೆ ಕನ್ನಡ ಚಿತ್ರರಂಗವೂ ತಮಿಳಿನಂತೆ ಆಗುವ ಅಪಾಯವಿದೆ ಎನ್ನುತ್ತಿದ್ದವು ಪತ್ರಿಕೆಗಳು. ಆ ದಿನಗಳಲ್ಲಿ ತಮಿಳಿನ ಒಬ್ಬ ಮುಖ್ಯ ನಟಿಯೂ ಇರಲಿಲ್ಲವಂತೆ.

ತೆಲುಗಿನ ನಟಿಯರಿಗೆ ಕನ್ನಡದಲ್ಲಿ ಅಭಿನಯಿಸುವ ಆಪೇಕ್ಷೆ ಬಹಳವಾಗಿತ್ತು. ಜಾನಕಿ ಅವರಿಂದ ಆರಂಭವಾದ ಈ ಪ್ರವೃತ್ತಿ ಜಮುನ, ಶ್ರೀರಂಜಿನಿ, ಭಾನುಮತಿ ಇವರೆಲ್ಲರೂ ಕನ್ನಡದಲ್ಲಿ ಅಭಿನಯಿಸುವಂತಾಗಿತ್ತು. ಜಿ.ವರಲಕ್ಷ್ಮಿ ಎಂಬ ತೆಲುಗು ತಾರೆ ತಾನೇ ಒಂದು ಕನ್ನಡ ಚಿತ್ರ ನಿರ್ಮಿಸಿಯಾದರೂ ಕನ್ನಡದಲ್ಲಿ ಅಭಿನಯಿಸುವ ಅಪೇಕ್ಷೆ ತೀರಿಸಿಕೊಳ್ಳಬೇಕು ಎಂದದ್ದೂ ವರದಿಯಾಗಿದೆ. ಇವೆಲ್ಲವನ್ನೂ ಪತ್ರಿಕೆಗಳು ಟೀಕಿಸಿದ್ದವು. ಇವರ್‍ಯಾರೂ ಕನ್ನಡ ಅಭಿನೇತ್ರಿಯರನ್ನು ಮೀರಿಸಿ ನಟಿಸಿಲ್ಲ, ಕೆಟ್ಟ ಕನ್ನಡ ಮಾತಾಡಿದ್ದಷ್ಟೇ ವಿಶೇಷ ಎಂದು ಆಕ್ಷೇಪಿಸಿದ್ದವು.

೧೯೫೬ರಲ್ಲಿ ರಾಜಕುಮಾರ್ ತಾವು ಅಭಿನಯಿಸಿದ ಮೂರು ಚಿತ್ರಗಳಲ್ಲೂ ಅತ್ಯುತ್ತಮ ಅಭಿನಯ ನೀಡಿದ್ದರು. ಅದರಲ್ಲೂ 'ಓಹಿಲೇಶ್ವರ'ದ ಅಭಿನಯ ಹೆಸರಿಸಲೇಬೇಕಾದ್ದು. ಆರ್.ನಾಗೇಂದ್ರರಾಯರು ಎರಡು ಚಿತ್ರಗಳಲ್ಲಿ, ಅದರಲ್ಲೂ 'ರೇಣುಕಾ ಮಹಾತ್ಮೆ'ಯ ಜಮದಗ್ನಿಯ ಪಾತ್ರದಲ್ಲಿ ಅಸಾಧಾರಣ ಪ್ರತಿಭೆ ತೋರಿದ್ದರು. ಅಭಿನೇತ್ರಿಯರಲ್ಲಿ ಪಂಢರಿಬಾಯಿ, ಮೈನಾವತಿ ಅವರದು ಅದ್ವಿತೀಯ ಅಭಿನಯವೆನ್ನಿಸಿತ್ತು. ಸಂಗೀತ ವಿಭಾಗದಲ್ಲಿ ವಿಶ್ವನಾಥನ್-ರಾಮಮೂರ್ತಿ, ಪಿ.ಶಾಮಣ್ಣ, ಜಿ.ಕೆ.ವೆಂಕಟೇಶ್, ಮಲ್ಲೇಶ್ವರರಾವ್, ರಾಜನ್-ನಾಗೇಂದ್ರರ ಸಂಗೀತ ಸ್ಮರಣೀಯವಾಗಿತ್ತು. ಗಾಯಕ-ಗಾಯಕಿಯರೆಲ್ಲ ಹೊರಗಿನವರು. ''ಸಾಹಿತ್ಯದ ಭಾವಸ್ಫುರಣೆಗೆ ಭಾಷೆ ಬಲ್ಲ ನಮ್ಮವರೇ ಗಾಯಕರಾದಾಗಲೇ ಚೆನ್ನ'' ಎಂದವು ಪತ್ರಿಕಾ ಸಮೀಕ್ಷೆಗಳು.


(ಚಿತ್ರ ೨೭) 'ಸದಾರಮೆ' ಚಿತ್ರದಲ್ಲಿ ಜಿ.ವಿ.ಅಯ್ಯರ್, ನರಸಿಂಹರಾಜು, ಗುಬ್ಬಿ ವೀರಣ್ಣ

ಹಿಂದೆ ೧೯೪೯ರಲ್ಲಿ ನೇಮಕವಾದ ಎಸ್.ಕೆ.ಪಾಟೀಲ್ ಫಿಲಂ ವಿಚಾರಣಾ ಸಮಿತಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಚಿತ್ರೋದ್ಯಮಕ್ಕೆ ಸಂಬಂಧಿಸಿದ ನಾನಾ ವಿಷಯಗಳ ಬಗ್ಗೆ, ಉದಾಹರಣೆಗೆ ಕಪ್ಪು ಹಣ, ಸ್ಟಾರ್ ಸಿಸ್ಟಂ ಮುಂತಾದುವುಗಳ ಬಗ್ಗೆ ಸೂಕ್ತ ಶಿಫಾರಸುಗಳನ್ನು ಮಾಡಲಾಗಿತ್ತು. ಫಿಲಂ ಫೈನಾನ್ಸ್ ಕಾರ್ಪೊರೇಷನ್, ಫಿಲಂ ಇನ್‌ಸ್ಟಿಟ್ಯೂಟ್ ಮತ್ತು ಫಿಲಂ ಆರ್ಕೈವ್‌ಗಳ ಸ್ಥಾಪನೆಗೂ ಶಿಫಾರಸು ಮಾಡಿದ್ದ ಈ ಸಮಿತಿಯ ವರದಿಯನ್ನು ಬಹಳ ದಿನ ಉಪೇಕ್ಷಿಸಲಾಗಿತ್ತು.

ಮುಂಬಯಿಯಲ್ಲಿ ಸ್ಥಾಪಿಸಲಾದ ಕೇಂದ್ರ ಸೆನ್ಸಾರ್ ಮಂಡಳಿಯ ನೇತೃತ್ವದಲ್ಲಿ ಫಿಲಂ ಸೆನ್ಸಾರ್‌ಶಿಪ್ ಅನ್ನು ಕೇಂದ್ರೀಕೃತಗೊಳಿಸಲಾಯಿತು. ಚಂದುಲಾಲ್ ಷಾ ಅಧ್ಯಕ್ಷತೆಯಲ್ಲಿ ಫಿಲಂ ಫೆಡರೇಷನ್ ಆಫ್ ಇಂಡಿಯಾ ಸ್ಥಾಪಿತವಾಯಿತು.

೧೯೫೭ರಲ್ಲಿ ೧೧ ಚಿತ್ರಗಳು ಬಿಡುಗಡೆಯಾದವು. ಹಿಂದಿನ ವರ್ಷಕ್ಕಿಂತ ಎರಡು ಕಡಿಮೆ. ಆದರೆ ಸೆನ್ಸಾರ್ ಆದದ್ದು ೧೨ ಚಿತ್ರಗಳು. ಗೋಪಿಕೃಷ್ಣ ಪಿಕ್ಚರ್ಸ್ ಲಾಂಛನದಲ್ಲಿ ತಯಾರಾದ 'ಭಾಗ್ಯಜ್ಯೋತಿ' ಎಂಬ ಚಿತ್ರದ ಬಗ್ಗೆ ಯಾವ ಮಾಹಿತಿಯೂ ಲಭ್ಯವಿಲ್ಲ. ಕನ್ನಡಿಗರೇ ಆಗಿ ಹಿಂದಿ ಚಿತ್ರರಂಗದಲ್ಲಿ ಹೆಸರು ಮಾಡಿದ್ದ ಬಾಂಬೆ ಮೀನಾಕ್ಷಿ (ತೀನ್ ಬತ್ತಿ ಚಾರ್ ರಾಸ್ತ) ಕನ್ನಡದಲ್ಲಿ ಚಿತ್ರ ನಿರ್ಮಿಸಬೇಕೆಂಬ ಹಂಬಲದಿಂದ 'ಮಹಿರಾವಣ' ಚಿತ್ರವನ್ನು ತಯಾರಿಸಿದರು. ಉದ್ದೇಶವೇನೋ ಒಳ್ಳೆಯದಾಗಿತ್ತು. ಆದರೆ ಚಿತ್ರ ನೋಡಿದಾಗ ನಿರಾಶೆ ಆಯಿತು.

ಈ ಚಿತ್ರದ ಬಗ್ಗೆ ನಿರ್ದೇಶಕ ಎಸ್.ಲಕ್ಷ್ಮೀನಾರಾಯಣ್ ಒಂದೆಡೆ ಹೀಗೆ ಹೇಳಿದ್ದಾರೆ: ''ಈ ಚಿತ್ರದಲ್ಲಿ ನಾಗೇಂದ್ರರಾಯರು ಅಭಿನಯಿಸಿದ್ದಾರೆ. ಆದರೆ ರಂಗಭೂಮಿಯಲ್ಲಾಗಲಿ, ಚಿತ್ರಗಳಲ್ಲೇ ಆಗಲಿ ಅವರ ಅಭಿನಯವನ್ನು ನೋಡದೆ ಇದ್ದವರು ಈ ಚಿತ್ರ ನೋಡಿದರೆ, ಇವರು ಯಾವ ಜೂನಿಯರ್ ಆರ್ಟಿಸ್ಟ್ ಅಂದಾರು.

ಏನೂ ಗೊತ್ತಿಲ್ಲದವರು ಅಭಿನಯಿಸಿದರೆ ಹೇಗೆ ಕಾಣಿಸುತ್ತದೆಯೋ ಹಾಗಿದೆ' ಎನ್ನಿಸುವಂತಿತ್ತು. ಅಂದರೆ ಎಷ್ಟೇ ಪ್ರತಿಭಾವಂತ ಕಲಾವಿದ ಇದ್ದರೂ ಕೂಡ ಅದರ ನಿರೂಪಣೆಗೆ ಒಬ್ಬ ದಕ್ಷ ನಿರ್ದೇಶಕ ಬೇಕು ಎನ್ನುವುದಕ್ಕೆ ಈ ಚಿತ್ರವನ್ನು ಉದಾಹರಣೆಯಾಗಿ ಹೇಳಬಹುದು. ಒಬ್ಬ ಕಲಾವಿದರ ಪ್ರತಿಭೆಯನ್ನು ಕಾಣಿಸಬೇಕಾದರೆ, ಕ್ಯಾಮರಾ ಮುಂದೆ ಇರುವ ಕಲಾವಿದನಷ್ಟೇ ದಕ್ಷತೆಯಿಂದ ಕೆಲಸ ಮಾಡುವ ತಾಂತ್ರಿಕರೂ ಇರಬೇಕು. ಇಲ್ಲದಿದ್ದರೆ ಚಿತ್ರ ಹೇಗೆ ಸೊರಗಿ ಹೋಗುತ್ತದೆ ಎಂಬುದಕ್ಕೆ ಈ ಚಿತ್ರ ನೆನಪಾಗುತ್ತದೆ.''



(ಚಿತ್ರ ೨೮) 'ಪ್ರಭುಲಿಂಗ ಲೀಲೆ' ಚಿತ್ರದಲ್ಲಿ ಪ್ರತಿಮಾದೇವಿ

'ಮಹಿರಾವಣ' ಚಿತ್ರದ ಕಥಾಭಾಗ ಉತ್ತಮವಾದದ್ದು. ಒಂದು ಒಳ್ಳೆಯ ಪೌರಾಣಿಕ ಕಥೆ ಅಸಮರ್ಪಕ ಕಾರ್ಯ ನಿರ್ವಹಣೆಯಿಂದಾಗಿ ಸಂಪೂರ್ಣ ವ್ಯರ್ಥವಾಯಿತು. ನಾಗೇಂದ್ರರಾಯರಂಥವರಿದ್ದೂ ಇಂಥ ಚಿತ್ರವೇ ಎಂಬ ಅಚ್ಚರಿ. ಆದರೆ ಅವರ ಹಾಗೂ ಛಟನಾಯಕನ ಪಾತ್ರದ ಬಾಲಕೃಷ್ಣರ ಅಭಿನಯ ಇದ್ದುದರಲ್ಲಿ ಉತ್ತಮವಾಗಿತ್ತೆನ್ನಲಾಗಿದೆ. ಸಂಗೀತ ಉತ್ತಮವಾದರೂ ಅಲ್ಲಿ-ಇಲ್ಲಿಯ ಎರವಲು ಸರಕಾಗಿದ್ದರಿಂದ ಹಿತವಾಗಲಿಲ್ಲ. ಹದಿನೈದು ದಿನದಲ್ಲಿ ೨೦,೦೦೦ ಅಡಿ ಚಿತ್ರಿಸಿದರೆಂಬ ವರದಿ ನಿಜವಾದರೆ, ಅವಸರದ ಕಾರಣದಿಂದಲೇ ಚಿತ್ರ ಕೆಟ್ಟಿರಬಹುದೆಂದು ತೀರ್ಮಾನಿಸಬಹುದು. ಕಥೆಯ ಓಟದಲ್ಲಿ ಪರಿಳಿತಗಳಿಲ್ಲ, ಸಾಮರಸ್ಯವಿಲ್ಲ, ಕಲಾತ್ಮಕತೆಯಂತೂ ಇಲ್ಲವೇ ಇಲ್ಲ. ಚಿತ್ರಿಕೆಗಳಲ್ಲಿ ವಿಪರೀತ ಲಂಘನ (ಜಂಪ್ಸ್)ಗಳಿವೆ. ಕನ್ನಡದಲ್ಲಿ ರಾಮನ ಪಾತ್ರಕ್ಕೆ ಕಲಾವಿದರಿಲ್ಲವೆ ? ಏನೂ ಬಾರದ ಹೊಸ ಮುಖಗಳೇ ಪಾತ್ರಗಳಾದಾಗ ಎಲ್ಲವೂ ಕಳಪೆಯೇ ಆಗುವುದು ಸಹಜವೇ ಆಗಿದೆ. 'ಮಹಿರಾವಣ' ಚಿತ್ರಕ್ಕೆ ಇಂಥ ಅನೇಕ ಆಕ್ಷೇಪಗಳಿದ್ದವು.

ಲೋಕೇಶ್ವರಿ ಪಿಕ್ಚರ್ಸ್ ಅವರ 'ಚಿಂತಾಮಣಿ' ಮತ್ತು ಮಧುಕೇಶ್ವರಾ ಪಿಕ್ಚರ್ಸ್ ಅವರ 'ಪ್ರಭುಲಿಂಗಲೀಲೆ' ಹೇಳುವಂಥದೇನೂ ಇಲ್ಲದ್ದರಿಂದ ಬರೀ ಕನ್ನಡ ಚಿತ್ರಗಳ ಪಟ್ಟಿಗೆ ಸೇರುತ್ತವೆ. ಆದರೆ 'ಚಿಂತಾಮಣಿ' ಚಿತ್ರದಲ್ಲಿ ಸರೋಜಾದೇವಿ ಅವರು ನೃತ್ಯ ಮಾಡಿದ್ದಾರೆ. ಅದನ್ನು ವರ್ಣದಲ್ಲಿ ಬ್ಲೋ ಅಪ್ ಮಾಡಿದ್ದರೆಂದೂ ಅದಕ್ಕೆ ಬೇಕಾದ ಯಂತ್ರೋಪಕರಣ ಇರಲಿಲ್ಲವಾದರೂ ಮುಂಬಯಿನಿಂದ ಬಂದಿದ್ದ ಮಾಥೂರ್ ಎಂಬ ಛಾಯಾಗ್ರಾಹಕರು ಇಂಥದೊಂದು ಪ್ರಯೋಗ ಮಾಡಿದ್ದರೆಂದೂ ತಿಳಿದು ಬರುತ್ತದೆ. ಈ ವಿಷಯವನ್ನು ಸರೋಜಾದೇವಿ, ನರೇಂದ್ರಬಾಬು ಅವರುಗಳು ಸಂದರ್ಶನದಲ್ಲಿ ದೃಢಪಡಿಸಿದ್ದಾರೆ.

'ಪ್ರಭುಲಿಂಗಲೀಲೆ' ಕನ್ನಡ ನಾಡಿನ ಅಗ್ರಗಣ್ಯ ಶಿವಭಕ್ತನೊಬ್ಬನ ಜೀವಿತದ ಪ್ರಾಮಾಣಿಕ ಕಥಾಚಿತ್ರ ಎಂದು ಹೇಳಿಕೊಂಡು ತೆರೆಗೆ ಬಂತು. ೧೯೫೭ರ ಮಾರ್ಚ್ ೨೯ರಂದು ಬೆಂಗಳೂರಿನ ಜೈಹಿಂದ್, ಶಾರದಾ ಚಿತ್ರಮಂದಿರಗಳಲ್ಲೂ, ೧೯೫೭ರ ಮಾರ್ಚ್ ೩೦ರಂದು ಮೈಸೂರು, ದಾವಣಗೆರೆ, ಚಿಕ್ಕಮಗಳೂರು, ಚಿತ್ರದುರ್ಗಗಳಲ್ಲೂ ತೆರೆ ಕಂಡಿತು.

ಚಿತ್ರದಲ್ಲಿ ಪ್ರತಿಮಾದೇವಿ, ಬಿಂದೋಡಿ ವೀರಪ್ಪ, ಹರಿಣಿ, ಪ್ರಿಯಂವದ, ನರಸಿಂಹರಾಜು ಮೊದಲಾದವರು ಅಭಿನಯಿಸಿದ್ದರು. ಮೂರು ರೀಲುಗಳನ್ನು ಗೇವಾ ವರ್ಣದಲ್ಲಿ ಪ್ರದರ್ಶಿಸಿತ್ತು. ಚಿತ್ರದ ಬಗ್ಗೆ ಜಾಹಿರಾತಿನಲ್ಲಿ:

''ಪಾರ್ವತಿಯ ತಾಮಸಿ ಕಳೆಯಾದ ಮಾಯೆಯ ಸೋಲು
ಪಾರ್ವತಿಯ ಸಾತ್ವಿಕ ಕಳೆಯಾದ ಅಕ್ಕಮಹಾದೇವಿಯ ಜಯ
ಸಿದ್ಧರಾಮ, ಬಸವೇಶ್ವರ ಇವರಿಗೆ ಜ್ಞಾನೋಪದೇಶ''

ಎಂದಿತ್ತು. ಪ್ರಾಯಶಃ ವರ್ಣದ ಮೂರು ರೀಲುಗಳಲ್ಲಿ ಈ ವಿಶೇಷಗಳನ್ನು ಚಿತ್ರಿಸಿದ್ದಿರಬಹುದು.

ಅನಂತರ ಕೆಂಪರಾಜ ಅರಸು ಅವರ 'ನಳ ದಮಯಂತಿ' ತೆರೆಗೆ ಬಂತು. ದಕ್ಷಿಣ ಭಾರತದ ಹೆಸರಾಂತ ಕಲಾವಿದೆಯಾಗಿದ್ದ ಪಿ.ಭಾನುಮತಿ ಈ ಚಿತ್ರದಲ್ಲಿ ಅಭಿನಯಿಸಿದರು. ಈ ಚಿತ್ರಕ್ಕಾಗಿ ಮದರಾಸಿನ ಗೋಲ್ಡನ್ ಸ್ಟುಡಿಯೋದಲ್ಲಿ ಕಾಡಿನ ಸೆಟ್ ಹಾಕಿದ್ದರು. ಆ ಸೆಟ್ ಅನೇಕ ತಿಂಗಳು ಕಾಲ ಹಾಗೇ ಇತ್ತು. ಎಲ್ಲಾ ಫ್ಲೋರ್‌ಗಳಲ್ಲಿ ಸೆಟ್‌ಗಳು ಬದಲಾದರೂ ಈ ಸೆಟ್ ಮಾತ್ರ ಹಾಗೇ ಉಳಿಸಿಕೊಳ್ಳಲಾಗಿತ್ತು. ಕೆಂಪರಾಜ್ ಬಹಳ ಕಷ್ಟ ಪಟ್ಟು ಆ ಚಿತ್ರ ತೆಗೆದರು. ಭಾನುಮತಿಯವರೇ ಹಾಡುಗಳನ್ನು ಹಾಡಿದ್ದರು. ಕೆಂಪರಾಜ ಅರಸು ಅವರದು ಸಾಹಸದ ಪ್ರವೃತ್ತಿ. ಒಂದು ಕೆಲಸ ಶುರು ಮಾಡಿದ ನಂತರ ಅದು ಮುಗಿಯುವವರೆಗೂ ಎಷ್ಟೇ ಕಷ್ಟ ಬಂದರೂ ಸಹ ಎದುರಿಸಿ ಮುಗಿಸುತ್ತಿದ್ದರು ಎಂಬುದಕ್ಕೆ ಈ ಉದಾಹರಣೆ. ''ನರಸಿಂಹರಾಜು, ಗಣಪತಿಭಟ್ ಮುಂತಾದವರು ತಾರಾಗಣದಲ್ಲಿದ್ದರು. ಈ ಚಿತ್ರಕ್ಕೆ ಜಾನಕಿರಾಂ ಛಾಯಾಗ್ರಾಹಕರಾಗಿ ಕೆಲಸ ಮಾಡಿದರು. ಚಿತ್ರದ ಬಗ್ಗೆ ಒಳ್ಳೆಯ ಅಭಿಪ್ರಾಯ ಬಂದರೂ, ಬಾಕ್ಸಾಫೀಸ್‌ನಲ್ಲಿ ಗೆಲ್ಲಲಿಲ್ಲ. 'ನಳದಮಯಂತಿ' ಚೆನ್ನಾಗಿ ನಡೀಲಿಲ್ಲ. ಆದರೆ ಭಾನುಮತಿ ಅವರಿಗೂ ಕೆಂಪರಾಜ್‌ಗೂ ಮನಸ್ತಾಪ ಆಯಿತು. ಆಕೆ 'ನಿಮ್ಮ ದುರಿಗೆ ನಟಿಸೋದಿಲ್ಲ' ಅಂತ ಹೊರಟೇಬಿಟ್ಟರು. ನೀನಿಲ್ಲದೆ ಚಿತ್ರ ಮಾಡ್ತೀನಿ ಅಂತ ಕೆಂಪರಾಜರ ಹಟ, ಅನಂತರ ಮ್ಯಾಚ್ ಮಾಡ್ಕೊಂಡು, ಮಾಸ್ಕ್ ಬಳಸಿ ಜೊತೇಲಿ ಭಾನುಮತಿ ಇದಾರೆ ಅನ್ನುವ ಹಾಗೆ ಸಿನಿಮಾ ಮಾಡಿದರು. ಆ ಕಾಲಕ್ಕೆ ಅದೇ ಹೆಗ್ಗಳಿಕೆ ಅನ್ನಬಹುದು '' ಎಂದು ನೆನೆಯುತ್ತಾರೆ ನಿರ್ದೇಶಕ ಭಗವಾನ್.

ಅನಂತರ ಬಂದ ಆರೆನ್ನಾರ್ ಅವರ 'ಪ್ರೇಮದ ಪುತ್ರಿ' ಒಂದು ಯಶಸ್ವಿ ಚಿತ್ರ. ನಾಗೇಂದ್ರರಾಯರು ಏಕ ಕಾಲದಲ್ಲಿ ಈ ಚಿತ್ರವನ್ನು ಮೂರು ಭಾಷೆಗಳಲ್ಲಿ (ಕನ್ನಡ, ತೆಲುಗು, ತಮಿಳು) ತೆಗೆದರು. ಕೆಲವು ಕಲಾವಿದರು ಎರಡು ಭಾಷೆಗಳಲ್ಲೂ ಇರುತ್ತಿದ್ದರು. ಉಳಿದವರು ಆಯಾ ಭಾಷೆಯವರಾಗಿರುತ್ತಿದ್ದರು. ಕಲಾತ್ಮಕವಾಗಿ ಅಚ್ಚುಕಟ್ಟಾಗಿ ತೆಗೆದ ಚಿತ್ರ 'ಪ್ರೇಮದ ಪುತ್ರಿ'. ಈ ಚಿತ್ರದ ಮೂಲಕ ರಾಯರು ತಮ್ಮ ಪುತ್ರ ಜಯಗೋಪಾಲ್ ಅವರನ್ನು ಪ್ರಥಮ ಬಾರಿಗೆ ಸಾಹಿತಿಯಾಗಿ ಮತ್ತು ಆರ್.ಎನ್.ಕೃಷ್ಣಪ್ರಸಾದ್‌ರನ್ನು ಛಾಯಾಗ್ರಾಹಕರಾಗಿ ಪರಿಚಯಿಸಿದರು.

ಕೃಷ್ಣಪ್ರಸಾದ್ ಅವರು ಬೆಂಗಳೂರು ಎಸ್.ಜೆ.ಪಾಲಿಟೆಕ್ನಿಕ್‌ನಲ್ಲಿ ಛಾಯಾಗ್ರಹಣ ತರಬೇತಿ ಪಡೆದರು. ಜಯಗೋಪಾಲ್ ಅವರು ಸೌಂಡ್ ಎಂಜಿನಿಯರಿಂಗ್ ಡಿಪ್ಲೊಮೊ ಮಾಡಿದರು. ಬೆಂಗಳೂರಿನಲ್ಲಿ ಒಂದು ಸ್ಟುಡಿಯೋ ಸ್ಥಾಪಿಸಬೇಕೆಂಬ ಉದ್ದೇಶದಿಂದ ನಾಗೇಂದ್ರರಾಯರು ಮಕ್ಕಳಿಗೆ ಈ ಶಿಕ್ಷಣ ಕೊಡಿಸಿದ್ದರು. ಪ್ರಸಾದ್ ಅವರು ಎ.ವಿ.ಎಂ.ನಲ್ಲಿ ಸಹಾಯಕ ಛಾಯಾಗ್ರಾಹಕರಾಗಿ ಕೆಲಸ ಮಾಡಿ, ಸ್ವತಂತ್ರವಾಗಿ ಛಾಯಾಗ್ರಹಣ ಮಾಡಬಹುದು ಎಂದು ಆಗ ದೊಡ್ಡ ಕ್ಯಾಮರಾಮನ್ ಆಗಿ ಹೆಸರು



(ಚಿತ್ರ ೨೯) 'ನಳದಮಯಂತಿ' ಚಿತ್ರದಲ್ಲಿ ಕೆಂಪರಾಜ ಅರಸು ಮತ್ತು ಭಾನುಮತಿ



(ಚಿತ್ರ ೩೦) 'ಪ್ರೇಮದ ಪುತ್ರಿ' ಚಿತ್ರದಲ್ಲಿ ನಾಗೇಂದ್ರರಾಯರು ಮತ್ತು ಬೇಬಿ ಉಮಾ

ಮಾಡಿದ್ದ ಮುತ್ತುಸ್ವಾಮಿಯವರು ಒಪ್ಪಿಗೆ ಕೊಟ್ಟ ನಂತರವೇ ಕೃಷ್ಣಪ್ರಸಾದ್ 'ಪ್ರೇಮದ ಪುತ್ರಿ'ಗೆ ಛಾಯಾಗ್ರಾಹಕರಾಗಿ ಕೆಲಸ ಮಾಡಿದ್ದು.

ಜಯಗೋಪಾಲ್ ವಿದ್ಯಾರ್ಥಿಯಾಗಿದ್ದಾಗಲೇ ಸಾಹಿತ್ಯದಲ್ಲಿ ಆಸಕ್ತಿ ತಳೆದಿದ್ದರು. ಕವನಗಳನ್ನು ಬರೆಯುವ ಅಭ್ಯಾಸ ಇದ್ದುದರಿಂದ ಸೌಂಡ್ ಇಂಜಿನಿಯರಿಂಗ್ ಓದಿದ್ದರೂ ಅವರ ಸಾಹಿತ್ಯದ ಒಲವನ್ನು ಗುರುತಿಸಿ ಸಾಹಿತ್ಯ ರಚನೆಗೆ ಅವಕಾಶ ಕೊಟ್ಟರು. ಆತ ಮುಂದೆ ಖ್ಯಾತ ನಿರ್ದೇಶಕರಾದ ಎನ್.ಲಕ್ಷ್ಮೀನಾರಾಯಣ್ ಮತ್ತು ನಾಗೇಶ್ ಬಾಬಾ ಬಳಿ ಸಹಾಯಕ ನಿರ್ದೇಶಕರಾಗಿ ಕೆಲಸ ಮಾಡಿದರು.

ಈ ಚಿತ್ರದ ವೈಶಿಷ್ಟ್ಯವೆಂದರೆ ಸಹಜವಾದ ಕಥೆ. ದಿನ ನಿತ್ಯದ ಬದುಕಿನಲ್ಲಿ ನಾವು ಕಂಡು, ಕೇಳುವ ಮನುಷ್ಯ ಸ್ವಭಾವದ ವಿವಿಧ ಮುಖಗಳ ಪರಿಚಯವಿದೆ. ನಾಗೇಂದ್ರರಾವ್ ತೆರೆಯಲ್ಲಿ ಒಬ್ಬ ನಿರ್ದೇಶಕನ ಪಾತ್ರದಲ್ಲಿ ಅಭಿನಯಿಸಿದ್ದಾರೆ. ಸಂಧ್ಯಾ, ಉದಯಕುಮಾರ್, ಜೂನಿಯರ್ ಶ್ರೀರಂಜನಿ ಅಭಿನಯ ಉತ್ತಮವಾಗಿತ್ತು. ಪ್ರೇಮದ ಪುತ್ರಿಯಾಗಿ ಬೇಬಿ ಉಮಾ, ಸೂರ್ಯಕಲಾ ಹಾಗೂ ನಾಯಕನಾಗಿ ಕಲ್ಯಾಣ್‌ಕುಮಾರ್ ಚಿತ್ರಕ್ಕೆ ಜೀವ ತುಂಬಿದರು. ರಾಜನಾಲ, ಗಣಪತಿಭಟ್ ಮೊದಲಾದವರೂ ಇದ್ದರು. ಸಂಗೀತ ನಿರ್ದೇಶಕರಾಗಿ ಪದ್ಮನಾಭಶಾಸ್ತ್ರಿ ಮೊದಲು ಗೊತ್ತಾಗಿದ್ದರು. ಅನಂತರ ವಿಜಯಭಾಸ್ಕರ್ ಆ ಹೊಣೆಯನ್ನು ನಿರ್ವಹಿಸಿದರು. ಉತ್ತಮ ಸಂಭಾಷಣೆ, ಇಂಪಾದ ಗೀತೆಗಳು, ಸಹಜ ಅಭಿನಯ ಇವುಗಳಿಂದ ಚಿತ್ರ ಬಹಳ ಯಶಸ್ವಿಯಾಯಿತು. ಮೊದಲ ಚಿತ್ರದಲ್ಲೇ ಕೃಷ್ಣಪ್ರಸಾದ್‌ರ ಛಾಯಾಗ್ರಹಣ ಗಮನ ಸೆಳೆಯಿತು.

'ತ್ರಿಭುವನ ಜನನೀ ಜಗನ್ಮೋಹಿನಿ...' ಹಾಗೂ 'ಬಾರಮ್ಮ ನಿದಿರಾದೇವಿ ನಮ್ಮ ಸರಸಮ್ಮನಿಗೆ ನಿದಿರೆ ತಾರಮ್ಮಾ...' ಗೀತೆಗಳು ಬಹಳ ಜನಪ್ರಿಯವಾದುವು (ಹಾಡಿದವರು ಪಿ.ಲೀಲಾ). ರಾಷ್ಟ್ರಪತಿಗಳ ರಜತ ಪದಕ ಪಡೆದ ಪ್ರಥಮ ಕನ್ನಡ ಚಿತ್ರ 'ಪ್ರೇಮದ ಪುತ್ರಿ'. ೧೯೫೪ರಲ್ಲಿ ರಾಷ್ಟ್ರ ಪ್ರಶಸ್ತಿ ಆರಂಭವಾಗಿದ್ದು, ಚಿನ್ನ, ರಜತ, ಕಂಚು ಹಾಗೂ ಅರ್ಹತಾ ಪತ್ರ ಕೊಡಲಾಗುತ್ತಿತ್ತು. 'ಪ್ರೇಮದ ಪುತ್ರಿ'ಗೆ ರಾಷ್ಟ್ರಪತಿಗಳ ರಜತಪದಕ ಲಭಿಸಿತು.

ಅನಂತರ ತೆರೆಗೆ ಬಂದ ಚಿತ್ರ ಪಕ್ಷಿರಾಜಾ ಅವರ 'ಬೆಟ್ಟದ ಕಳ್ಳ'. ತಮಿಳಿನಲ್ಲಿ ಭಾರೀ ಹಿಟ್ ಆದ ಎಂ.ಜಿ.ರಾಮಚಂದ್ರನ್-ಭಾನುಮತಿ ಅಭಿನಯದ 'ಮಲೈ ಕಳ್ಳನ್' ಆಧರಿಸಿದ ಚಿತ್ರ. ಆ ದಿನಗಳಲ್ಲಿ ರೀಮೇಕ್‌ಗೆ ವಿರೋಧವಿರಲಿಲ್ಲ. ಕಲ್ಯಾಣ್‌ಕುಮಾರ್, ಮೈನಾವತಿ, ಉದಯಕುಮಾರ್, ನಾಗೇಂದ್ರರಾವ್, ಗಣಪತಿಭಟ್ ಮುಂತಾದವರು ಅಭಿನಯಿಸಿದ ಈ ಚಿತ್ರದ ತಯಾರಕರು ಕೊಯಮುತ್ತೂರಿನ ಪಕ್ಷಿರಾಜಾ ಸ್ಟುಡಿಯೋದ ಮಾಲೀಕರಾದ ಎಸ್.ಎಂ.ಎಸ್.ನಾಯ್ಡು. ಈಗ ಬೆಂಗಳೂರಿನಲ್ಲಿರುವ ಚಾಮುಂಡೇಶ್ವರಿ ಸ್ಟುಡಿಯೋದ ಮೂಲ ಸಂಸ್ಥೆ ಪಕ್ಷಿರಾಜಾ ಸ್ಟುಡಿಯೋಸ್. ಈ ಚಿತ್ರವೂ ಸೇರಿದಂತೆ ಅವರು ತಯಾರಿಸಿದ ಎಲ್ಲ ಚಿತ್ರಗಳೂ ಮುಟ್ಟಿದ್ದೆಲ್ಲ ಚಿನ್ನ ಎನ್ನುವ ಹಾಗೆ ಯಶಸ್ವಿಯಾದವು. ಮೈನಾವತಿ ಅವರ ಗಾಯನ, ನೃತ್ಯ ಮತ್ತು ಒಂದು ಉರ್ದು ಕವ್ವಾಲಿಯೂ ವಿಶೇಷವಾಗಿದ್ದುವು. ನವೆಂಬರ್ ೨೯ರಂದು ನಾಡಿನ ಪ್ರಮುಖ ಕೇಂದ್ರಗಳಲ್ಲಿ ಬಿಡುಗಡೆ ಆಯಿತು. ಇದೇ ಕಥಾವಸ್ತು ಹಿಂದಿಯಲ್ಲಿ ಮೀನಾಕುಮಾರಿ-ದಿಲೀಪ್ ಕುಮಾರ್ ಅಭಿನಯದಲ್ಲಿ 'ಆಜಾದ್' ಎಂಬ ಹೆಸರಿನಲ್ಲಿ ತಯಾರಾಯಿತು. ಈ ಚಿತ್ರಕ್ಕಾಗಿ ಕಲ್ಯಾಣ್‌ಕುಮಾರ್ ಹೆಚ್ಚು ಸಂಭಾವನೆ ಪಡೆದರು. ಆ ದಿನಗಳಲ್ಲಿ ಕನ್ನಡದ ನಟರೊಬ್ಬರು ಪಡೆದ ಅತ್ಯಧಿಕ ಮೊತ್ತವಾಗಿತ್ತು. ಬೆಟ್ಟದ ಕಳ್ಳ ಮತ್ತು ಖಾನ್ ಸಾಹೇಬ್ ಪಾತ್ರದಲ್ಲಿ ಕಲ್ಯಾಣ್, ಪೊಲೀಸ್ ಅಧಿಕಾರಿಯಾಗಿ ಆರ್.ನಾಗೇಂದ್ರರಾಯರು, ದುಷ್ಟ ಯುವಕನಾಗಿ ಉದಯಕುಮಾರ್ ಇದ್ದರು. ಎಚ್.ರಾಮಚಂದ್ರಶಾಸ್ತ್ರಿ, ರಮಾಬಾಯಿ, ರೇವತಿ, ಮೈನಾವತಿ ಅಭಿನಯಿಸಿದ್ದರು. 'ಬೆಟ್ಟದ ಕಳ್ಳ' ಅವತರಣಿಕೆಯಲ್ಲಿ ಜಿ.ವಿ.ಅಯ್ಯರ್, ಬಿ.ಎಸ್.ಗುಪ್ತ ಇಬ್ಬರೂ ಶ್ರೀರಾಮುಲುನಾಯ್ಡುರವರಿಗೆ ನೆರವಾದರು. ಕನ್ನಡ ಭಾಷಾಂತರ ಜಿ.ವಿ.ಅಯ್ಯರ್‌ರದ್ದು.

'ಬೆಟ್ಟದ ಕಳ್ಳ' ಚಿತ್ರದ ಬಗ್ಗೆ ಮಾತನಾಡುತ್ತ ದೊರೆಸ್ವಾಮಿಯವರು ''ಮಯೂರ ಕಾದಂಬರಿ ಓದುತ್ತಿದ್ದೆ. 'ಬೆಟ್ಟದಕಳ್ಳ' ಚಿತ್ರ ಮಾಡುವಾಗ ಆ ಕಾದಂಬರಿಯ ಉತ್ತರಾರ್ಧದ ಅನೇಕ ಅಂಶಗಳನ್ನು ಸೇರಿಸಿಕೊಂಡೆ. ಇದನ್ನು ಹಿಂದಿ, ತಮಿಳು, ತೆಲುಗು ಭಾಷೆಗಳಲ್ಲೂ ತಯಾರಿಸಿದ್ದರು. ತಮಿಳಿನಲ್ಲಿ ಮಲೈ ಕಳ್ಳನ್, ಹಿಂದಿಯಲ್ಲಿ 'ಆಜಾದ್'' ಎಂದು ನೆನಪು ಮಾಡಿಕೊಳ್ಳುತ್ತಾರೆ.

''ಸ್ಟುಡಿಯೋಗಳಲ್ಲಿ ಹೊರಗಿನವರು ಯಾರೂ ಬರುತ್ತಿರಲಿಲ್ಲ. ಎಲ್ಲವೂ ಗುಟ್ಟಾಗಿರುತ್ತಿತ್ತು. ಆಗ ಟ್ರಿಕ್‌ಶಾಟ್ಸ್‌ಗೆ ಚಂದ್ರ ಅಂತ ಒಬ್ಬ ಕ್ಯಾಮರಾಮನ್ ಇದ್ದರು. ಆತ ಸೊಗಸಾಗಿ ಹೆಚ್ಚು ಶ್ರಮವೇ ಇಲ್ಲದೆ ಟ್ರಿಕ್‌ಶಾಟ್ಸ್ ತೆಗೀತಿದ್ದ. ಒಂದು ಅಗಲವಾದ ಪಾತ್ರೆ ಬೋರಲು ಹಾಕಿ, ಅದರ ಮೇಲೆ ಕ್ಯಾಮರಾ ಇಟ್ಟು ಅಲ್ಲಾಡಿಸೋನು, ಇಡೀ ಸೆಟ್ ಅಲ್ಲಾಡಿಸಿದ ಹಾಗೆ ಚಿತ್ರಿತವಾಗಿರೋದು. ಅತ ಪ್ರತಿಯೊಂದಕ್ಕೂ ಇಂಥ ಸುಲಭ ಮಾರ್ಗ ಹುಡುಕಿಕೊಳ್ಳುತ್ತಿದ್ದ. ತೀರಾ ವಿಶೇಷವಾಗಿ ಬೇಕಾದಾಗ ಇಂಗ್ಲಿಷ್ ಚಿತ್ರಗಳಿಂದ ಶಾಟ್ಸ್ ತಗೊಂಡು ಮ್ಯಾಚ್ ಮಾಡ್ತಿದ್ದೆವು. ಎಲ್ಲರಿಗೂ ಇದ್ದ ಹಾಗೆ ಫಿಲಂ ಪ್ರಾಬ್ಲಂ ಇತ್ತು. ಆದರೆ ಕೊಡಕ್ ಕಂಪನಿಯ ರಾಮಮೂರ್ತಿ ಅವರು ನಮಗೆ ತುಂಬ ಬೇಕಾದವರು, ಹತ್ತಿರದವರು ಆಗಿದ್ದರು. ಆಗ-ಈಗ ಕಾಫಿಬೀಜ, ತರಕಾರಿ ತಗೊಂಡು ಹೋಗಿಕೊಟ್ಟು ಮಾತಾಡಿಸಿದರೆ ಡ್ಯಾಮೇಜ್ಡ್ ಕೊಡಕ್ ಫಿಲಂನೆಲ್ಲ ಕೊಟ್ಟುಬಿಡೋರು. ನಮ್ಮ ಸಂಸ್ಥೆ ಫಿಲಂ ಅಭಾವದಿಂದ ಬಹಳ ಒದ್ದಾಡಲೇ ಇಲ್ಲ.



(ಚಿತ್ರ ೩೧) 'ಬೆಟ್ಟದ ಕಳ್ಳ' ಚಿತ್ರದಲ್ಲಿ ಉದಯಕುಮಾರ್, ನಾಗೇಂದ್ರರಾವ್ ಮತ್ತು ಕಲ್ಯಾಣ್‌ಕುಮಾರ್

ಬೇರೆಯವರು ಕ್ಯೂ ನಿಂತು ಕಾಯೋರು. ಸಾಮಾನ್ಯವಾಗಿ ಶಂಕರಸಿಂಗ್ ಅವರ ಚಿತ್ರಗಳನ್ನೆಲ್ಲ ವಿಜಯಾ ಡಿಸ್ಟ್ರಿಬ್ಯೂಟರ್ಸ್ ತಗೋತಿದ್ರು. ಕನಿಷ್ಠ ಹತ್ತು ಪ್ರಿಂಟ್ ಹಾಕಿಸುತ್ತಿದ್ದೆವು'' ಎಂದು ಸಂಸ್ಥೆಯ ತಂತ್ರಜ್ಞ ದೊರೆಸ್ವಾಮಿ ವಿವರಿಸುತ್ತಾರೆ.

ಆ ವರ್ಷ ತೆರೆಕಂಡ ಪದ್ಮಿನಿ ಪಿಕ್ಚರ್ಸ್ ಅವರ 'ರತ್ನಗಿರಿ ರಹಸ್ಯ' ಒಂದು ಅದ್ದೂರಿ ತಯಾರಿಕೆ. ಈ ಚಿತ್ರದ ಮೂಲಕ ಬಿ.ಆರ್.ಪಂತುಲು ನಿರ್ದೇಶಕರೂ ಆದರು. ಅವರು ಈ ಚಿತ್ರವನ್ನು ತಮಿಳಿನಲ್ಲೂ ಮಾಡಿದರು. ಅದು ಆಗಿನ ಟ್ರೆಂಡ್. ತಮಿಳಿನಲ್ಲಿ ಶಿವಾಜಿ ಗಣೇಶನ್ ಅಭಿನಯಿಸಿದ್ದರು.

ಕನ್ನಡದಲ್ಲಿ ಉದಯಕುಮಾರ್, ಜಮುನ, ಸಾಹುಕಾರ್ ಜಾನಕಿ, ಎಂ.ವಿ.ರಾಜಮ್ಮ, ಬಿ.ಆರ್.ಪಂತುಲು, ಡಿಕ್ಕಿ ಮಾಧವರಾವ್, ಟಿ.ಆರ್.ರಾಮಚಂದ್ರನ್, ರೇವತಿ, ಸರೋಜಾದೇವಿ ಮುಂತಾದವರು ಅಭಿನಯಿಸಿದ್ದರು. ಕಣಗಾಲ್ ಪ್ರಭಾಕರಶಾಸ್ತ್ರಿ ಅವರ ಚುರುಕಾದ ಸಂಭಾಷಣೆಗಳು ಮತ್ತು ಪ್ರಾಸಬದ್ಧವಾದ ಗೀತೆಗಳು, ಟಿ.ಜಿ.ಲಿಂಗಪ್ಪನವರ ಸೊಗಸಾದ ಸಂಗೀತ, ಉದಯಕುಮಾರ್ ಅವರ ಸಾಹಸಮಯ ಅಭಿನಯ ಈ ಚಿತ್ರದ ಹೆಗ್ಗಳಿಕೆಗಳು.

ಇದೊಂದು ಜಾನಪದ ಕಥೆ. ಆದುದರಿಂದ ಕಥೆಯಲ್ಲಿ ವಿಶೇಷವೇನೂ ಇಲ್ಲ. ಆದರೆ ನಿರೂಪಣೆಯಲ್ಲಿ ನೈಪುಣ್ಯವಿತ್ತು. ವಿಶ್ವದ ಸಾಹಿತ್ಯದಲ್ಲಿ ಮತ್ತು ಮನರಂಜನೆಯಲ್ಲಿ ಬಹಳ ಪ್ರಸಿದ್ಧವಾದ ಪಾತ್ರ ಎಂದರೆ ಟಾರ್ಜಾನ್. ಟಾರ್ಜಾನ್‌ನನ್ನು ಇಂಗ್ಲಿಷ್‌ನಲ್ಲಿ ಅನೇಕ ರೀತಿಯಲ್ಲಿ ಚಿತ್ರಿಸಲಾಗಿದೆ. ಹಿಂದಿಯಲ್ಲಂತೂ ಮಹಿಳಾ ಟಾರ್ಜಾನ್‌ಳನ್ನೂ ಸೃಷ್ಟಿಸಲಾಗಿದೆ. ಪ್ರಪಂಚದ ಇತರ ಭಾಷೆಗಳಲ್ಲೂ ಚಿತ್ರಗಳು ತಯಾರಾಗಿವೆ. ಅವನ್ನು ಕನ್ನಡಕ್ಕೆ ತಂದು ಟಾರ್ಜಾನ್ ಪಾತ್ರವನ್ನು ಸೃಷ್ಟಿಸಿರುವುದು ಈ ಚಿತ್ರದ ವಿಶೇಷ. ಉದಯಕುಮಾರ್ ಈ ಪಾತ್ರಕ್ಕೆ ಜೀವ ತುಂಬಿದ್ದಾರೆ.


(ಚಿತ್ರ ೩.೨) 'ರತ್ನಗಿರಿ ರಹಸ್ಯ' ಚಿತ್ರದಲ್ಲಿ ಉದಯಕುಮಾರ್

ಯೂನಿವರ್ಸ್ಯಾಲಿಟಿ ಆಫ್ ಕ್ಯಾರೆಕ್ಟರೈಸೇಷನ್, ಅಂದರೆ ಒಂದು ಪಾತ್ರವನ್ನು ವಿಶ್ವದ ಯಾವ ದೇಶ, ಯಾವ ಭಾಷೆಗಾದರೂ ಹೊಂದಿಸಿಕೊಳ್ಳಬಹುದು. ಉದಾಹರಣೆಗೆ : ಫ್ರಾಂಕೆನ್‌ಸ್ಟೈನ್, ಜೇಮ್ಸ್‌ಬಾಂಡ್, ಟಾರ್ಜಾನ್, ಸೂಪರ್ ಮ್ಯಾನ್ ಈ ಪಾತ್ರಗಳು. ಈ ಅಂಶವನ್ನು ಪಂತುಲು ಅವರ ಈ ಚಿತ್ರ ಸ್ಪಷ್ಟಪಡಿಸುತ್ತದೆ. ಮತ್ತೊಂದು ವಿಶೇಷವೆಂದರೆ ಈ ಚಿತ್ರದ ಸಂಗೀತ. ಇಂದಿಗೂ ಈ ಸಂಗೀತವನ್ನು ರೇಡಿಯೋದಲ್ಲಿ ಕೇಳುತ್ತಿರುತ್ತೇವೆ. ಕಣಗಾಲ್ ಪ್ರಭಾಕರಶಾಸ್ತ್ರಿಗಳ ಗೀತೆಗಳು ಅವರೇ ಹೇಳುವಂತೆ ''ಅಜರಾಮರ...''. 'ಅಮರ ಮಧುರ ಪ್ರೇಮ...', 'ಅನುರಾಗದಾ ಅಮರಾವತಿ...' ಮುಂತಾದ ಗೀತೆಗಳು ಅತ್ಯಂತ ಜನಪ್ರಿಯವಾದವು. ಆ ಸಂದರ್ಭದಲ್ಲಿ ಕನ್ನಡದ ಚಲನಚಿತ್ರ ಪತ್ರಿಕೆಯೊಂದು 'ರತ್ನಗಿರಿ ರಹಸ್ಯ' ಚಿತ್ರದ ಹಾಡುಗಳ ಸ್ಪರ್ಧೆಯನ್ನೇರ್ಪಡಿಸಿತ್ತು. ಅದಕ್ಕೆ ದೊರೆತ ಪ್ರತಿಕ್ರಿಯೆ ಗಮನಾರ್ಹ. ಆ ಸ್ಪರ್ಧೆಯ ವಿಜೇತರಿಗೆ ಬಹುಮಾನ ವಿತರಣೆ ಮಾಡಿದವರು ಅಂದು ಉಪಮಂತ್ರಿಯಾಗಿದ್ದ ರಾಮಕೃಷ್ಣ ಹೆಗ್ಗಡೆ.

ರಾಜಕುಮಾರ್ ಅಭಿನಯಿಸಿದ ಪ್ರಪ್ರಥಮ ಸಾಮಾಜಿಕ ಚಿತ್ರ ಎಂಬ ದೃಷ್ಟಿಯಿಂದ ಪಂಢರಿಬಾಯಿಯವರು ತಯಾರಿಸಿದ 'ರಾಯರ ಸೊಸೆ' ಗಮನ ಸೆಳೆಯುತ್ತದೆ. ಜಾನಪದ, ಪೌರಾಣಿಕ ಚಿತ್ರಗಳಲ್ಲೇ ಅಭಿನಯಿಸುತ್ತಿದ್ದ ಕಲಾವಿದನೊಬ್ಬನಿಗೆ ಕ್ರಾಪು ಮಾಡಿಸಿ ಪ್ಯಾಂಟು, ಸೂಟು ಹಾಕಿಸಿತ್ತು. ರಾಜಕುಮಾರ್ ಅವರಿಗೆ ಸಾಮಾಜಿಕ ಚಿತ್ರದಲ್ಲಿ ನಟಿಸಲು ಅವಕಾಶ ನೀಡಿದ ಚಿತ್ರ 'ರಾಯರ ಸೊಸೆ'. ರಾಜಕುಮಾರ್ ಅವರ ಜತೆ ಕಲ್ಯಾಣ್‌ಕುಮಾರ್ ಅವರೂ ಇದ್ದರು. ಆದರೆ ಕಲ್ಯಾಣ್ ಆ ವೇಳೆಗಾಗಲೇ ಸಾಮಾಜಿಕ ಚಿತ್ರಗಳಲ್ಲಿ ಅಭಿನಯಿಸಿ ಹೆಸರು ಮಾಡಿದರು. ರಾಜಕುಮಾರ್ ಅವರಿಗೆ ಅದು ಮೊದಲ ಸಾಮಾಜಿಕ ಚಿತ್ರವಾದರಿಂದ ಚಿತ್ರರಸಿಕರಿಗೆ ಅದೊಂದು ವಿಶೇಷ ಆಕರ್ಷಣೆಯಾಯಿತು. ರಾಜಕುಮಾರ್ ಅವರಿಗೂ ಆಧುನಿಕ ಉಡುಗೆ ತೊಡುಗೆ ಅಳತೆಗಿಂತ ದೊಡ್ಡದಾಗಿದ್ದು, ಸರಾಗವಾಗಿ ಅಭಿನಯಿಸಲು ಹಿಂಸೆಯಾಗಿತ್ತಂತೆ. ಆದರೆ ರಾಜಕುಮಾರ್‌ಗೆ ಅವರೆಗೆ ಇದ್ದ ಪೌರಾಣಿಕ, ಜಾನಪದ ಪಾತ್ರದ ಇಮೇಜನ್ನು ಹೊರತುಪಡಿಸಿ, ಎಲ್ಲ ಬಗೆಯ ಪಾತ್ರಗಳಿಗೂ ಆತ ಹೊಂದುತ್ತಾರೆಂದು ತೋರಿಸಿಕೊಟ್ಟ ಚಿತ್ರವಿದು.

'ರಾಯರ ಸೊಸೆ' ನಿರ್ಮಿಸಿದವರು ನಿರ್ಮಾಪಕಿ ಪಂಢರಿಬಾಯಿ. ಆಕೆ ಪೌರಾಣಿಕ ಬಿಟ್ಟು ಸಾಮಾಜಿಕಕ್ಕೆ ಬಂದದ್ದು ಪ್ರಶಂಸಾರ್ಹ. ಅದೇ ಹೆಸರಿನ ನಾಟಕವನ್ನು ಆಧರಿಸಿ ಸರಳವೂ, ಸಭ್ಯವೂ ಆಗಿ ಚಿತ್ರಿಸಲಾಗಿತ್ತು. ಕಥೆಯಲ್ಲಿ ಹೊಸತನವೇನೂ ಇಲ್ಲ. ಮೂಲದಿಂದ ಬೇರೆಯಾದ ಕೆಲವು ಅಂಶಗಳನ್ನು ಸೇರಿಸಲಾಗಿದೆ. ಅದರಲ್ಲೂ ಹಾಸ್ಯ ಸನ್ನಿವೇಶಗಳು ತೀರಾ ಪ್ರತ್ಯೇಕವಾಗಿ ಉಳಿಯುತ್ತವೆ. ದೃಶ್ಯದಿಂದ ದೃಶ್ಯಕ್ಕೆ ಒಂದು ಬಗೆಯ 'ಜಿಗಿತ'ವಿದೆ. ಕಾಲದ ಸೂಚನೆಯಾಗಿ ಸೂರ್ಯಾಸ್ತ, ಸೂರ್ಯೋದಯ ತೋರಿಸಲಾಗಿದೆ. ಸಮರ್ಪಕ ಬಳಕೆ ಅನ್ನಿಸದು. ಸಂಭಾಷಣೆಯಲ್ಲಿ ಗ್ರಾಂಥಿಕತೆ ಹಾಗೂ ಪ್ರಾಸಕ್ಕೆ ಒತ್ತು ನೀಡಿದ್ದಾರೆ. ಇದರಿಂದಾಗಿ ಮಧ್ಯೆ ನುಸುಳುವ ಆಡುಮಾತು ಸರಿಯಾಗಿ ಸೇರಿಕೊಳ್ಳುವುದಿಲ್ಲ. ನಿರ್ದೇಶಕದ್ವಯರಾದ ರಾಮಮೂರ್ತಿ-ಕೆ.ಎಸ್.ಮೂರ್ತಿ ಇನ್ನಷ್ಟು ಶ್ರದ್ಧೆ ವಹಿಸಬೇಕಿತ್ತು. ಚಿತ್ರದಲ್ಲಿ ವಿಶೇಷವಾಗಿ ಅಳವಡಿಸಿರುವ ಪದ್ಮಿನಿ, ಪ್ರಿಯದರ್ಶಿನಿ ಅವರ ನೃತ್ಯ ಚೆನ್ನಾಗಿದೆ. ಅವನ್ನು ಒಂದು ಸರಿಯಾದ ಸಂದರ್ಭದ ಜೊತೆ ಅಳವಡಿಸಲು ಆಗಿಲ್ಲ. ತುರುಕಿದಂತಿದ್ದು ತೇಪೆ ಅನ್ನಿಸುತ್ತದೆ ಎಂಬ ಅಭಿಪ್ರಾಯಗಳು ಬಂದವು.

'ವರದಕ್ಷಿಣೆ' ಹೆಸರೇ ಹೇಳುವಂತೆ ಒಂದು ಸಾಮಾಜಿಕ ಸಮಸ್ಯೆ. ಶಂಕರಸಿಂಗ್ ಈ ಚಿತ್ರ ತಯಾರಿಸಿದ್ದರು. ವರದಕ್ಷಿಣೆ ಇಂದಿಗೂ ಸಮಾಜವನ್ನು ಕಾಡುತ್ತಿರುವ ದೊಡ್ಡ ಸಮಸ್ಯೆ. ಇಂಥ ಸಮಸ್ಯೆಗಳನ್ನು ಜನರ ಗಮನಕ್ಕೆ ತರುವ ಚಿತ್ರಗಳನ್ನು ೧೯೫೭ರಲ್ಲೇ ಕನ್ನಡದಲ್ಲಿ ಮಾಡಿದ್ದಾರೆ ಎಂಬುದನ್ನು ನಾವು ನೆನಪು ಮಾಡಿಕೊಳ್ಳಬೇಕು.

'ಶುಕ್ರದೆಶೆ' ಕನ್ನಡ ಚಿತ್ರರಂಗದ ಅಭಿಮಾನದ ಬಾಲಣ್ಣ ತಯಾರಿಸಿದ ಸ್ವಂತ ಚಿತ್ರ. ಚಿತ್ರ ತಯಾರಿಕೆಯ ವಿವಿಧ ಹಂತಗಳಲ್ಲಿ ನಾನಾ ಸಮಸ್ಯೆಗಳುಂಟಾಗಿ ಅಂತೂ ಬಿಡುಗಡೆ ಆಯಿತು. ಆದರೆ ನಿರ್ಮಾಪಕ ಪಿ.ಕೆ.ಜನಾರ್ಧನ್ ಎಂದು ದಾಖಲೆಗಳಿವೆ. ಈ ಚಿತ್ರವನ್ನು ನಿರ್ದೇಶಿಸಿದವರು ಆರೂರು ಪಟ್ಟಾಭಿ.

'ಶುಕ್ರದೆಶೆ'ಯಲ್ಲಿ ಸೂರ್ಯಕಲಾ, ಟಿ.ಕೆ.ಬಾಲಚಂದರ್, ಬಾಲಕೃಷ್ಣ, ಅದವಾನಿ ಲಕ್ಷ್ಮೀದೇವಿ, ಹನುಮಂತಾಚಾರ್. ಗಣಪತಿಭಟ್, ಸಿ.ಟಿ.ಶೇಷಾಚಲಂ, ರಾಮಚಂದ್ರಶಾಸ್ತ್ರಿ, ರಮಾಬಾಯಿ ಮುಂತಾದವರು ಅಭಿನಯಿಸಿದರು. ೧೯೫೭ನೇ ಆಗಸ್ಟ್ ಹೊತ್ತಿಗೆ ತೆರೆಕಂಡಿತು. ಬೆಂಗಳೂರಿನ ಜೈಹಿಂದ್, ಮಿನರ್ವ, ಮೈಸೂರಿನ ಚಾಮುಂಡೇಶ್ವರಿ ಹಾಗೂ ಚಿತ್ರದುರ್ಗ, ಚಿಕ್ಕಮಗಳೂರು, ಹಾಸನಗಳಲ್ಲೂ, ದಾವಣಗೆರೆ, ಧಾರವಾಡ, ಹಾವೇರಿ, ಹುಬ್ಬಳ್ಳಿಗಳಲ್ಲೂ ತೆರೆಕಂಡಿತು. ಜಾಹಿರಾತುಗಳಲ್ಲಿ ಸ್ವಾರಸ್ಯವಾದ ಒಂದು ಪದ್ಯ ಹೀಗಿತ್ತು :

''ನಿನ್ನ ಮುಂದೆ ಪಾಪವೇನು ಪುಣ್ಯವೇನು ದುಡ್ಡೇ
ನೀನೇ ಧರ್ಮ ನೀನೇ ಕರ್ಮ ಸಕಲ ಮರ್ಮ ದುಡ್ಡೆ''

೧೯೫೮ರಲ್ಲಿ ಪರಭಾಷೆಗಳಿಂದ ಡಬ್ ಮಾಡಲ್ಪಟ್ಟ ಮೂರು ಚಿತ್ರಗಳೂ ತೆರೆ ಕಂಡವು. ಕೆಲವು ಪ್ರಾಮಾಣಿಕ ಪ್ರಯತ್ನಗಳು ಇದ್ದಲ್ಲೇ ಸೊರಗಿದವು. ನರೇಂದ್ರಬಾಬು, ಗಾರ್ಮ್ ಚೆನ್ನಬಸಪ್ಪನವರು ಸೇರಿ ಒಂದು ಚಿತ್ರ ಮಾಡುವ ಯೋಜನೆ ಹಾಕಿದರು. 'ನಿರಂಜನ್ ಚಿತ್ರ' ಲಾಂಛನದಲ್ಲಿ 'ಮಾಯಾಲೋಕ' ಎಂಬ ಜಾನಪದ ಕಥೆಯುಳ್ಳ ಚಿತ್ರ ೧೯೫೭ರಲ್ಲಿ ಪ್ರಾರಂಭಿಸಿದರು. ನಾಯಕನಾಗಿ ನಿರಂಜನ್, ಸಾಹುಕಾರ ಜಾನಕಿ, ಡಿಕ್ಕಿ ಮಾಧವರಾವ್, ಮುಧೋಳ್, ಪ್ರಥಮ ಬಾರಿಗೆ ಬೆಂಡೋಡಿ ಲೀಲಾ ಅಭಿನಯಕ್ಕೆ ಆಯ್ಕೆ ಆಗಿದ್ದರು. ಯೋಗಾನರಸಿಂಹ ಅವರು ಸಂಗೀತ ನಿರ್ದೇಶಕರಾಗಿಯೂ,



(ಚಿತ್ರ ೩೩) 'ರಾಯರ ಸೊಸೆ' ಚಿತ್ರದಲ್ಲಿ ರಾಜಕುಮಾರ್, ಪಂಢರಿಬಾಯಿ, ಕಲ್ಯಾಣಕುಮಾರ್

ಕೆ.ಸುಬ್ರಹ್ಮಣ್ಯಂ ಅವರ ಮಗ ಬಾಲಕೃಷ್ಣ ಅವರು ನಿರ್ದೇಶಕರಾಗಿಯೂ ಗೊತ್ತಾಗಿತ್ತು. ''...ಯೋಗಾನರಸಿಂಹರ ಬಗ್ಗೆ ಮೊದ ಮೊದಲು ಅಪಹಾಸ್ಯ ಮಾಡಿದ ಜನ ಅವರ ಸಂಗೀತ ಜ್ಞಾನ, ಹಾಡಿಕೆ ಕೇಳಿ ಆಶ್ಚರ್ಯಪಟ್ಟರು. ನರಸು ಸ್ಟುಡಿಯೋದಲ್ಲಿ ಹಾಡುಗಳನ್ನು ರಿಕಾರ್ಡ್ ಮಾಡಲಾಯಿತು. ಅಲ್ಲಿ ಸೌಂಡ್ ಇಂಜಿನಿಯರ್ ಆಗಿದ್ದ ರಾಮಚಂದ್ರ ಅಯ್ಯಂಗಾರ್ ಅವರು ಸಂಗೀತ ಕಛೇರಿ ಮಾಡುವಷ್ಟು ಸಂಗೀತ ಜ್ಞಾನ ಇದ್ದವರು. ಒಟ್ಟು ಏಳು ಹಾಡುಗಳನ್ನು ಧ್ವನಿಮುದ್ರಿಸಲಾಯಿತು. ಪಿ.ಬಿ.ಶ್ರೀನಿವಾಸ್, ಜಾನಕಿ, ಕಾಳಿಂಗರಾಯರು ಎಲ್ಲರೂ ಹಾಡಿದ್ದರು. ಮೂರು ಸಾವಿರ ಅಡಿ ಚಿತ್ರ ಆಗಿತ್ತು, ನಿಂತು ಹೋಯಿತು. ಕಚ್ಚಾ ಫಿಲಂ ಕಂಟ್ರೋಲ್ ಬಂತು. ಆದಕ್ಕೂ ಮೊದಲೇ ಫಿಲಂ ತಗೊಂಡಿದ್ದೆ, ಕಾರಣಾಂತರದಿಂದ ಚಿತ್ರೀಕರಣ ಆಗಿರಲಿಲ್ಲ. ಆವರು ನಂಬಲಿಲ್ಲ. ನನ್ನ ಬಳಿ ರಸೀದಿಯೂ ಇರಲಿಲ್ಲ. ಆರು ತಿಂಗಳು ನಿಂತು ಹೋಯಿತು. ಪರ್ಮಿಟ್‌ಗೇ ತೊಂದರೆ ಆಗಿ ಅದು ಕೈಗೆ ಬರಲು ಒಂದು ವರ್ಷವೇ ಆಯಿತು. ಆದರೆ ಚಿತ್ರ ಮಾಡಲು ಆಗಲೇ ಇಲ್ಲ. ಹಳ್ಳಿ ಕಡೆ ಇದ್ದ ಜಮೀನು ಇತ್ಯಾದಿ ಎಲ್ಲ ಆಸ್ತಿಯೂ ಹೋಯ್ತು'' ಎಂದು ವ್ಯಥೆಯ ಕಥೆ ಹೇಳುತ್ತಾರೆ ಎಂ.ನರೇಂದ್ರಬಾಬು.

ಮದರಾಸಿನ ಚಿತ್ರಪ್ರೇಮಿಗಳ ಸಂಘದವರು ೧೯೫೭ರ ಶ್ರೇಷ್ಠ ಚಿತ್ರವೆಂದು ಆರಿಸಿದ್ದು 'ಪ್ರೇಮದ ಪುತ್ರಿ' ಚಿತ್ರವನ್ನು. ಇತರ ಆಯ್ಕೆಗಳು : ಕೆಂಪರಾಜ ಆರಸು - ಶ್ರೇಷ್ಠನಟ (ನಳದಮಯಂತಿ), ಸಂಧ್ಯಾ - ಶ್ರೇಷ್ಠ ನಟಿ (ಪ್ರೇಮದ ಪುತ್ರಿ), ಉದಯಕುಮಾರ್ - ಸಹಾಯಕ ನಟ (ಪ್ರೇಮದ ಪುತ್ರಿ), ಜೂನಿಯರ್ ಶ್ರೀರಂಜಿನಿ - ಶ್ರೇಷ್ಠ ಸಹಾಯಕ ನಟಿ (ಪ್ರೇಮದ ಪುತ್ರಿ), ಗಣಪತಿ ಭಟ್ - ಶ್ರೇಷ್ಠ ಹಾಸ್ಯನಟ (ಬೆಟ್ಟದ ಕಳ್ಳ). ೧೯೫೭ರಲ್ಲಿ 'ರತ್ನಗಿರಿ ರಹಸ್ಯ' ಬಿಟ್ಟರೆ ಬೇರಾವ ಚಿತ್ರವೂ ನಿರೀಕ್ಷಿಸಿದಷ್ಟು ಹಣ ಗಳಿಸಲಿಲ್ಲ.

೧೯೫೭ರಲ್ಲಿ ಹಿಂದಿನ ವರುಷಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಚಿತ್ರಗಳು ಸೋತಿದ್ದರಿಂದ ಆರ್ಥಿಕವಾಗಿ ಜರ್ಝರಿತವಾಗಿತ್ತು. ಕನ್ನಡ ಭಾಷೆಯ ಮೇಲಿನ ಪ್ರೇಮದಿಂದ ದೊಡ್ಡ ಮಾತಾಡಿದ್ದವರೂ ಸಹ ಸೋಲಿನ ಸತ್ಯವನ್ನು ಎದುರಿಸಲಾರದೆ ತತ್ತರಿಸಿದ್ದರು. 'ರತ್ನಗಿರಿ ರಹಸ್ಯ' ಚಿತ್ರವೊಂದೇ ನಿರ್ಮಾಪಕನಿಗೆ ಹನ್ನೊಂದೂವರೆ ಲಕ್ಷ ರೂಪಾಯಿಯನ್ನು ಗಳಿಸಿಕೊಟ್ಟಿತ್ತು. ಯಶಸ್ಸು ಖಚಿತ ಎಂದುಕೊಂಡ ಚಿತ್ರಗಳು ಸೋತವು. ಕೆಲವು ತೆರೆ ಕಾಣಲಿಲ್ಲ. ಎಲ್ಲಕ್ಕೂ ಕನ್ನಡಿಗರ ಭಾಷಾಭಿಮಾನದ ಕೊರತೆಯೇ ಕಾರಣ ಅನ್ನುವುದಕ್ಕಿಂತ ನಿರ್ಮಾಪಕರು ಸತ್ವಹೀನ ಚಿತ್ರಗಳನ್ನು ತಯಾರಿಸಿದರೆಂಬುದನ್ನು ಮರೆಯಬಾರದು. ಹೀಗಾಗಿ ಹೊಸ ಚಿತ್ರಗಳಿಗೆ ಹಣ ಹಾಕುವವರು ಮುಂದೆ ಬರಲು ಯೋಚಿಸುವಂತಾಯಿತು. ಅರ್ಧ ತಯಾರಾದ ಚಿತ್ರಗಳಿಗೂ ಮುಂದುವರಿಸಲು ಹಣ ಕೊಡುವವರಿಲ್ಲ, ಪೂರ್ತಿಯಾದ ಚಿತ್ರಗಳಿಗೆ ಬಾಕಿ ತೀರಿಸಿ ಬಿಡುಗಡೆ ಮಾಡಲು ಬೇಕಾದ ಹಣವೂ ಸಿಗದ ಸ್ಥಿತಿಯಿತ್ತು. ಈ ಹಿಂದೆ ಯಶಸ್ವೀ ಚಿತ್ರಗಳನ್ನೇ ಹೊರತರಬಲ್ಲ, ಗಟ್ಟಿ ಸಂಸ್ಥೆಗಳಾಗಿದ್ದ ವಿಠಲ್ ಪ್ರೊಡಕ್ಷನ್ಸ್, ಕರ್ನಾಟಕ ಫಿಲಂಸ್, ಎ.ವಿ.ಎಂ., ವಿಶ್ವಕಲಾ ಮೊದಲಾದವು ಕಾರ್ಯೋನ್ಮುಖವಾಗಿರಲಿಲ್ಲ ಎಂಬುದೂ ಗಮನಿಸಬೇಕಾದ ಸಂಗತಿ.

ಈ ವರ್ಷ ಕೇವಲ ನಾಲ್ಕು ಮಂದಿ ಹೊಸ ನಿರ್ಮಾಪಕರು ಬಂದರು. ಹೊಸ ನಟ-ನಟಿಯರೂ ಇಲ್ಲ. ಆದರೆ ಹಿನ್ನೆಲೆಯಲ್ಲಿದ್ದ ಲೇಖಕರು ಗಮನ ಸೆಳೆದರು. 'ವರದಕ್ಷಿಣೆ' ಚಿತ್ರದ ಸಾಹಿತಿ ನಾರಾಯಣರಾವ್, 'ಪ್ರೇಮದ ಪುತ್ರಿ'ಯ ಜಯಗೋಪಾಲ್, 'ನಳದಮಯಂತಿ'ಯ ಶ್ರೀನಿವಾಸ್, ಗೀತೆ ರಚಿಸಿದ ಇಂದಿರಾತನಯ (ಶ್ಯಾಂ) ಮುಖ್ಯರೆನ್ನಬಹುದು. ನಿರ್ಮಾಪಕರಾಗಿ-ನಟರಾಗಿ ಪ್ರಸಿದ್ಧರಾಗಿದ್ದ ಬಿ.ಆರ್.ಪಂತುಲು ನಿರ್ದೇಶಕರಾಗಿ ಯಶಸ್ವಿಯಾದರು. ಪಿ.ಎಸ್.ಮೂರ್ತಿ, ರಾಮಮೂರ್ತಿ, ನಟರಾಜ್ ಹೊಸದಾಗಿ ನಿರ್ದೇಶಕರಾಗಿ ಬಂದವರು.

ಜಾನಪದ, ಪೌರಾಣಿಕಗಳೇ ಯಶಸ್ವಿ ಎಂದು ಆ ಜಾಡನ್ನೇ ಅನುಸರಿಸುವುದಕ್ಕಿಂತ ಸಾಮಾಜಿಕ ವಸ್ತುವೂ ಗೆಲ್ಲಬಲ್ಲದು ಎಂಬಂತೆ ಈ ಸಾಲಿನ ಚಿತ್ರಗಳು ಕಣ್ಣು ತೆರೆಸಿದವು. ಆದರೆ ಎಲ್ಲವೂ ತಾಳಿ ಕಟ್ಟುವುದರ ಸುತ್ತ ಹೆಣೆಯುವುದಾದರೆ ಬಹುಕಾಲ ಆಕರ್ಷಣೆ ಉಳಿಯಲಾರದು ಎಂದು ಆಂದೇ ವಿಶ್ಲೇಷಿಸಲಾಗಿತ್ತು. ಮತ್ತು ಕರ್ನಾಟಕದಲ್ಲಿ ನಡೆಯುತ್ತಿರುವ ಇತರ ಭಾಷಾ ಚಿತ್ರಗಳು ಅಥವಾ ಈ ಹಿಂದೆ ಕನ್ನಡದಲ್ಲಿ ಬಂದ ಕಥೆಗಳನ್ನೇ ಪುನಃ ಚಿತ್ರಿಸುವ ಅಗತ್ಯವೂ ಇಲ್ಲ ಎಂಬ ಟೀಕೆಯೂ ಬಂತು. ಅಂಥ ೫-೬ ಚಿತ್ರಗಳು ಈ ವರ್ಷವೇ ತೆರೆ ಕಂಡಿದ್ದವು. ಅಭಿನಯದ ಮಾತಿಗೆ ಬಂದರೆ ನಮ್ಮ ನಟರದು ಉತ್ತಮ ಪ್ರತಿಭೆ. 'ರತ್ನಗಿರಿ ರಹಸ್ಯ'ದ ತಮಿಳು ಅವತರಣಿಕೆಯಲ್ಲಿ ಅಲ್ಲಿಯ ನಟರ ಅಭಿನಯಕ್ಕೆ ಹೋಲಿಸಿದರೆ ಕನ್ನಡದ ನಟರೇ ಉತ್ತಮ ಅಭಿನಯ ನೀಡಿದ್ದರು. 'ಬೆಟ್ಟದ ಕಳ್ಳ'ದ ಕಲ್ಯಾಣ್‌ಕುಮಾರ್ ಇತರ ಭಾಷೆಗಳ ಎಂ.ಜಿ.ಆರ್, ಎನ್.ಟಿ.ಆರ್, ದಿಲೀಪ್ ಕುಮಾರ್ ಆಭಿನಯಕ್ಕಿಂತ ಉತ್ತಮವಾಗಿ ಕಂಡರು. ರಾಜಕುಮಾರ್ ಪೌರಾಣಿಕ, ಜಾನಪದಕ್ಕೆ ಮಾತ್ರ ಸೀಮಿತವಲ್ಲ, ಸಾಮಾಜಿಕದಲ್ಲೂ ಸಾಟಿಯಿಲ್ಲದ ಅಭಿನಯ ನೀಡಬಲ್ಲರೆಂದು ತೋರಿಸಿದ್ದರು. ಉಳಿದ ನಟರೂ ಅಷ್ಟೇ ಉತ್ತಮರೆಂದು ರುಜುವಾತಾಗಿತ್ತು. ತೆಲುಗು, ತಮಿಳು ಚಿತ್ರಗಳಿಗೆ ಆಯಾ ರಾಜ್ಯಗಳಲ್ಲಿ ಸಿಕ್ಕಿರುವ ಸ್ಥಾನ ಕನ್ನಡ ಚಿತ್ರಗಳಿಗೆ ಕನ್ನಡದಲ್ಲಿ ಸಿಕ್ಕಿರಲಿಲ್ಲ ಎಂಬುದೊಂದು ವ್ಯಥೆಯ ಸಂಗತಿ. ಮಾರುಕಟ್ಟೆ, ಜನಾಭಿರುಚಿ, ಇತರರ ಪೈಪೋಟಿಗಳ ನಡುವೆ ಅಷ್ಟೇನೂ ಶ್ರೀಮಂತವಲ್ಲದ ಚಿತ್ರಗಳು ಉಸಿರಾಡುವುದೇನೂ ಸಣ್ಣ ಪ್ರಮಾಣದ ಸಾಹಸವಲ್ಲ.

ಈ ಮಧ್ಯೆ ಉದ್ದಿಮೆ ಅನ್ಯಭಾಷಾ ಚಿತ್ರಗಳನ್ನು ಡಬ್ ಮಾಡುವ ಸುಲಭ ಉಪಾಯಕ್ಕೆ, ಬೇಗ ಹಣ ಮಾಡುವ ಚಪಲಕ್ಕೆ ಬಿದ್ದುದೊಂದು ದೊಡ್ಡ ದುರಂತ. ಕರ್ನಾಟಕದಲ್ಲಿ ಇವರ ವಿರುದ್ಧ ಸೊಲ್ಲೆತ್ತಿದ್ದು ದೊಡ್ಡ ಇತಿಹಾಸ. ಪರ-ವಿರೋಧದ ಮಾತುಗಳ ಅಬ್ಬರದ ನಡುವೆ ಡಬ್ ಆದ ಚಿತ್ರಗಳೂ ಬಂದವು. ೧೯೫೭ರಲ್ಲಿ ಚಿತ್ರರಂಗ ಆಕ್ರಮಣಶೀಲ ಪ್ರವೃತ್ತಿಯನ್ನು ವಿರೋಧಿಸುವ ಎಚ್ಚರ, ಶಕ್ತಿ ಪಡೆದುಕೊಂಡಿತ್ತು. ಎಂಬುದೊಂದು ಆಶಾದಾಯಕ ಸಂಗತಿ. ಇದು ಬರಲಿರುವ ಆಘಾತಗಳಿಗೆ ಎದೆಯೊಡ್ಡಲು ಸಿದ್ಧತೆಯೂ ಹೌದು.

೧೯೫೭ರಲ್ಲಿ ಪ್ರದರ್ಶನ ರಂಗದಲ್ಲಿ ಅನುಭವ ಇದ್ದವರಾದ ಎಚ್.ಎಂ.ತಿಮ್ಮಾಚಾರ್ ಅವರು ಹೊಸ ಹಂಚಿಕಾ ಸಂಸ್ಥೆ ವಿಶ್ವಭಾರತಿ ಫಿಲಂಸ್



(ಚಿತ್ರ ೩೪) 'ವರದಕ್ಷಿಣೆ' ಚಿತ್ರದಲ್ಲಿ ಪ್ರತಿಮಾದೇವಿ ಮತ್ತು ಉದಯಕುಮಾರ್



(ಚಿತ್ರ ೩೫) 'ಸ್ಕೂಲ್ ಮಾಸ್ಟರ್' ಚಿತ್ರದಲ್ಲಿ ಬಿ.ಆರ್.ಪಂತುಲು

ಪ್ರಾರಂಭಿಸಿದರು. ಆ ದಿನಗಳಲ್ಲಿ ಹಂಚಿಕಾ ಸಂಸ್ಥೆ ಪ್ರಾರಂಭವಾಯಿತೆಂದರೆ ಚಿತ್ರರಂಗಕ್ಕದೇ ಜೀವಕಳೆ. ನಿರ್ಮಾಪಕರಿಗೆ ಉತ್ಸಾಹ, ಸಡಗರ ಇರುತ್ತಿತ್ತು.

ಈ ಅವಧಿಯಲ್ಲೂ ರಾಜ್ಯದಲ್ಲೇ ಮೂಲಸೌಲಭ್ಯ ಹೊಂದಿಸಿಕೊಳ್ಳಲು ಕನ್ನಡ ಚಿತ್ರ ನಿರ್ಮಾಪಕರು ಪ್ರಯತ್ನಿಸಲಿಲ್ಲ. ಆದರೆ ಇದೇ ಅವಧಿಯಲ್ಲಿ ಪ್ರದರ್ಶನ ವಲಯ ಲಾಭದಾಯಕವೆಂಬುವನ್ನು ಗುರುತಿಸಿತ್ತು. ಮತ್ತಷ್ಟು ಚಿತ್ರಮಂದಿರಗಳಾದವು. ಕೆಲವೇ ವರ್ಷದ ಅಂತರದಲ್ಲಿ ಮತ್ತೆ ಮತ್ತೆ ಚಿತ್ರಮಂದಿರ ಕಟ್ಟಿದರು. ಇಂದಿಗೂ ಅವೇ ಕೋಟ್ಯಾಂತರ ರೂಪಾಯಿಗಳ ಆಸ್ತಿಯಾಗಿ ಉಳಿದಿವೆ. ಸೂಪರ್ ಟಾಕೀಸ್, ಮೂವಿಲ್ಯಾಂಡ್, ಸ್ಟೇಟ್ಸ್, ತ್ರಿವೇಣಿ, ಸಂತೋಷ್, ನಂದಾ, ಉಮಾ ಮೊದಲಾದವನ್ನು ಉದಾಹರಣೆಗಾಗಿ ಹೇಳಬಹುದು.

ಕನ್ನಡದಲ್ಲಿ ಚಿತ್ರಿಸದೆ ಬೇರೆ ಭಾಷೆಯಲ್ಲಿ ಚಿತ್ರಿಸಿದ್ದರೆ ಶ್ರೀಮಂತರಾಗುತ್ತಿದ್ದೆವು. ಕನ್ನಡ ನಮ್ಮನ್ನು ಸಾಯಿಸಿಬಿಟ್ಟಿತು ಎಂಬ ಗೊಣಗಾಟ ಬಹಳವಿದ್ದ ಕಾಲವದು. ಈ ಧೋರಣೆಯನ್ನು ಖಂಡಿಸಲಾಯಿತು. ಕನ್ನಡ ಅವತರಣಿಕೆಯಿಂದ ಬದುಕುಳಿದ ಉದಾಹರಣೆಗಳಿವೆ. 'ರಾಜಾ ವಿಕ್ರಮ'ದಿಂದ 'ಭಕ್ತ ಮಾರ್ಕಂಡೇಯ'ದವರೆಗೆ ಅವಲೋಕಿಸಿದರೆ ನಿರ್ಮಾಪಕರಿಗೆ ಜೀವದಾನ ಆಗಿರುವುದು ಕನ್ನಡ ಚಿತ್ರಗಳಿಂದಲೇ. ಇದೇ ಚಿತ್ರಗಳು ಇತರ ಭಾಷೆಯಲ್ಲಿ ಬಂದಾಗ ಏನೂ ಗಳಿಸಿಲ್ಲ. ಅತ್ಯುತ್ತಮ ಚಿತ್ರಗಳಿಗೇ ಇಂಥ ಸ್ಥಿತಿ ಏರ್ಪಟ್ಟಿದೆ. ತಮಿಳಿನಲ್ಲಿ 'ಮೊದಲ ತೇದಿ' ಸೋತಿತು. ತೆಲುಗು ನಟರ ದಂಡು ದಂಡೇ ಇದ್ದೂ, 'ಜಾತಕ ಫಲ', 'ಸದಾರಮೆ', 'ಗುಣಸಾಗರಿ', 'ಆದರ್ಶಸತಿ', 'ಭಕ್ತ ಮಾರ್ಕಂಡೇಯ'ಗಳು ತೆಲುಗಿನಲ್ಲೇ ಯಶಸ್ವಿಯಾಗಲಿಲ್ಲ. ಕನ್ನಡ ಪ್ರೇಕ್ಷಕರು ಹಾಗೆ ಮಾಡಿಲ್ಲ. ಅವರ ಅಭಿರುಚಿಯ ಮಟ್ಟವೇ ಬೇರೆ ಎಂಬುದನ್ನು ಅಧ್ಯಯನ ಮಾಡಿ ತಿಳಿಯಬೇಕು.

ಮುಖ್ಯವಾಗಿ ಅವರಿವರ ಜಾಡಲ್ಲಿ ಹೋಗುವ ಚಟ ಬಿಡಬೇಕು. 'ಭಕ್ತ ಮಾರ್ಕಂಡೇಯ' ಗೆದ್ದಿದೆ ಎಂದ ಕೂಡಲೇ ಮಕ್ಕಳು ಮುಖ್ಯ ಪಾತ್ರದಲ್ಲಿರುವ ಭಕ್ತಿ ಚಿತ್ರಗಳೇ ಗೆಲ್ಲುತ್ತವೆ ಎಂದು ಭಾವಿಸಿ ಅತ್ತಲೇ ನುಗ್ಗುವವರಿದ್ದಾರೆ. ಸುಬ್ಬಯ್ಯನಾಯ್ಡು, 'ಭಕ್ತ ಪ್ರಹ್ಲಾದ' ಪ್ರಾರಂಭಿಸಿರುವುದಾಗಲಿ, ಪಾಂಡುರಂಗ ಪ್ರೊಡಕ್ಷನ್ಸ್‌ನವರು 'ಭಕ್ತ ಧ್ರುವ'ದ ಸಿದ್ಧತೆ ನಡೆಸಿರುವುದಾಗಲಿ ಅವರಿವರ ಜಾಡನ್ನು ಹಿಡಿದು ಹೋಗುವ ಲಕ್ಷಣಗಳೇ ಆಗಿವೆ ಎಂದು ವಿಮರ್ಶಕರು ಕಟುವಾಗಿ ಟೀಕಿಸಿದರು.

ಈ ಹಿಂದೆಯೇ ಸಾಕಷ್ಟು ಹೇಳಿರುವ ಅಂಶ ಚಿತ್ರಗಳ ಉದ್ದ ಕುರಿತದ್ದು. ಆಗ ಯುದ್ಧ, ಆಮದು ನೀತಿಯಲ್ಲಿದ್ದ ಸಮಸ್ಯೆಗಳಿಂದಾಗಿ ಕಚ್ಚಾ ಫಿಲಂಗೆ ರೇಷನ್ ಬಂತು. ಮಿತವ್ಯಯ, ಇದ್ದುದರಲ್ಲೇ ಎಲ್ಲರೂ ಹಂಚಿಕೊಳ್ಳಬೇಕಾದ ಅನಿವಾರ್ಯ ಇತ್ತು. ಇದರ ಬಗ್ಗೆ ಸಾಕಷ್ಟು ವಾದ ವಿವಾದಗಳಾದವು. ಒಂದು ವರ್ಗ ಚಿತ್ರದ ನೀಳ (ಉದ್ದ) ಹದಿಮೂರುವರೆ ಸಾವಿರದ ಒಳಗೆ ಇರಲಿ, ೨೦ ಪ್ರತಿ ಮಾತ್ರ ಹಾಕಬೇಕು ಎಂದರೆ ಇನ್ನೊಂದು ವರ್ಗ ಚಿತ್ರ ನಿರ್ಮಾಣದ ವೆಚ್ಚ ಅದರ ಕಥಾವಸ್ತುವನ್ನು ಆಧರಿಸಿ ಹೆಚ್ಚು ಕಡಿಮೆ ಇರುತ್ತದೆಯಾದ್ದರಿಂದ ಅಧಿಕ ವೆಚ್ಚವಾದ ಚಿತ್ರದ ಪ್ರತಿಗಳನ್ನು ಕಡಿಮೆ ಹಾಕಿದರೆ ಹಾಕಿದ ಹಣ ಹಿಂತಿರುಗುವುದಿಲ್ಲ ಎಂದಿತು.

ಇದಲ್ಲದೆ ಡಬ್ ಆಗುವ ಚಿತ್ರಗಳ ಬಗೆಗೂ ವಿಪರೀತ ಚರ್ಚೆಯಾಗುತ್ತಿತ್ತು. ಒಂದು ಚಿತ್ರ ಡಬ್ ಆಗಲು ಒಂದು ಲಕ್ಷ ರೂ. ಖರ್ಚಾದರೆ ಅಧಿಕ ವೆಚ್ಚದಲ್ಲಿ ತಯಾರಾದ ಮೂಲ ಚಿತ್ರಕ್ಕೇ ನಷ್ಟವಾಗಿ ಬಿಡುತ್ತದೆ. ಮತ್ತು ಭಾರೀ ಪೈಪೋಟಿ ಬರುತ್ತದೆ. ಡಬ್ ಆದ ಚಿತ್ರದ ಹಣ (ಡಬ್ ಮಾಡಲು ಆದ ಖರ್ಚು) ಎರಡು ವಾರದಲ್ಲಿ ಬಂದುಬಿಡಬಹುದು. ಮೂಲ ಚಿತ್ರದವರಿಗೆ ೨ ವರ್ಷವಾದರೂ ಹಣ ಬರುವುದಿಲ್ಲ ಎಂಬೆಲ್ಲ ಚರ್ಚೆಗಳಾದರೂ ಅಂತಿಮ ತೀರ್ಮಾನ ಅಥವಾ ಚರ್ಚೆಯ ಫಲಶ್ರುತಿ ತಿಳಿಯುವಂತಿರಲಿಲ್ಲ. ಕಡೆಗೂ ಚಿತ್ರಗಳು ಕೇವಲ ೧೫೦೦೦ ಅಡಿಯ ಮಿತಿಗೇ ನಿಲ್ಲಬೇಕಾಯಿತು.

ಕಚ್ಚಾ ಫಿಲಂ ಹಂಚಿಕೆಯ ನಿಯಮಾವಳಿಯಲ್ಲೇ ಪ್ರತಿಗಳಿಗೂ ಮಿತಿ ಹಾಕಿದರು. ತೆಲುಗಿಗೆ ೨೦ ಪ್ರತಿಗಳಾದರೆ, ತಮಿಳಿಗೆ ೩೦ ಪ್ರತಿ, ಕನ್ನಡಕ್ಕೆ ಮಾತ್ರ ಕೇವಲ ೧೦ ಪ್ರತಿ ಎಂದರು. ಯಾವ ಆಧಾರದ ಮೇಲೆ ಹೀಗೆ ಮಾಡಿದಿರಿ ? ಜನಸಂಖ್ಯೆಯೇ ? ಪ್ರದರ್ಶನ ಕೇಂದ್ರಗಳ ಸಂಖ್ಯೆಯಿಂದಲೇ ? ರಾಜ್ಯದ ವಿಸ್ತೀರ್ಣವೇ ? ಎಂದು ಉದ್ಯಮ ಪ್ರಶ್ನಿಸಿತು.

೧೯೫೮ರಲ್ಲಿ ಕೇವಲ ಏಳು ಚಿತ್ರಗಳು ತೆರೆಕಂಡವು. ಈ ಹಠಾತ್ ಇಳಿತಕ್ಕೆ ಕಾರಣಗಳು ಹಲವಾರು. ಮೊದಲನೆಯದಾಗಿ ಪರಭಾಷಾ ಚಿತ್ರಗಳನ್ನೇ ನೋಡಿ ನೋಡಿ ಅದಕ್ಕೇ ಒಗ್ಗಿ ಹೋದ ಕನ್ನಡ ಪ್ರೇಕ್ಷಕರ ನಿರಭಿಮಾನದಿಂದಾಗಿ ಕನ್ನಡ ಚಿತ್ರಗಳ ಗಳಿಕೆ ತೀರಾ ಕಡಿಮೆಯಾಗಿ ನಿರ್ಮಾಪಕರಿಗೆ ಭಾರೀ ನಷ್ಟವಾಯಿತೆಂಬ ಒಂದು ವಾದ ಮತ್ತು ಚಿತ್ರಗಳ ಸಂಖ್ಯೆ ಕಡಿಮೆಯಾದುದಕ್ಕೆ ಮುಖ್ಯ ಕಾರಣವೆಂದರೆ ಕಚ್ಚಾ ಫಿಲಂ ಅಭಾವ. ೧೯೫೭-೫೮ರ ಹೊತ್ತಿಗೆ ಈ ಸಮಸ್ಯೆ ತೀರಾ ಉಲ್ಬಣಗೊಂಡಿತ್ತು.

ಚಲನಚಿತ್ರ ನಿರ್ಮಾಣವನ್ನು ಕಚ್ಚಾ ಫಿಲಂ ಕಂಟ್ರೋಲ್ ಆರ್ಡರ್‌ಗ ಒಳಪಡಿಸಲಾಗಿತ್ತು. ಆ ಫಿಲಂ ಹಂಚಿಕೆಯ ಕಾರ್ಯವನ್ನು ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಗೆ ವಹಿಸಲಾಗಿತ್ತು. ಆಗ ಅಲ್ಲಿ ಇತರ ಭಾಷಾ ಚಿತ್ರಗಳಿಗೇ ಆದ್ಯತೆ. ಇಂಥ ಸಮಯದಲ್ಲಿ ಚೇಂಬರ್‌ನಲ್ಲಿ ಉದ್ಯೋಗದಲ್ಲಿದ್ದ ನಾಗೇಶ್ ಬಾಬಾ ಕನ್ನಡ ಚಿತ್ರಗಳ ಬಗ್ಗೆ ಸಹಾಯಕ ಧೋರಣೆಯನ್ನನುಸರಿಸಿ ತಮ್ಮ ಕೈಲಾದ ಮಟ್ಟಿಗೆ ನೆರವಾದರು. ಈ ವಿಷಯದಲ್ಲಿ ಅವರ ಹೇಳಿಕೆಯನ್ನೇ ಇಲ್ಲಿ ಪರಿಶೀಲಿಸಬಹುದು :

''ಆ ದಿನಗಳಲ್ಲಿ ಚಿತ್ರ ತಯಾರಕರೆಲ್ಲರೂ ತಮ್ಮ ತಮ್ಮ ಚಿತ್ರಗಳಿಗೆ ಪರವಾನಗಿ ಪಡೆದ ನಂತರವೇ ತಯಾರಿಕೆ ಪ್ರಾರಂಭಿಸಬೇಕಾದ ಪ್ರಮೇಯ ಬಂದೊದಗಿತು. ಇದನ್ನು ನಿಭಾಯಿಸುವ ಕಾರ್ಯ ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿ (SIFCC) ಯದಾಗಿತ್ತು. ಅಲ್ಲಿ ನಿರ್ಮಾಪಕ-ನಿರ್ದೇಶಕ ಕೆಂಪರಾಜ ಅರಸು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಅವರ ಶಿಫಾರಸಿನ ಮೇರೆಗೆ ಹೆಚ್.ಎಲ್.ಎನ್.ಸಿಂಹ ನನ್ನನ್ನು ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಗೆ ಸೇರಿಸಿದ್ದರು. ಕಚ್ಚಾ (Raw) ಫಿಲಂ ಪರ್ಮಿಟ್ ಇನ್-ಚಾರ್ಜ್ ಆಗಿ ನಾನು ಅಲ್ಲಿ ಕೆಲಸ ಮಾಡತೊಡಗಿದೆ. ಅಷ್ಟು ಹೊತ್ತಿಗೆ ನಾನು 'ಪ್ರೇಮದ ಪುತ್ರಿ' ಮತ್ತು 'ಬೆಟ್ಟದ ಕಳ್ಳ' ಚಿತ್ರಗಳಿಗೆ ಸಹಾಯಕ ನಿರ್ದೇಶಕನಾಗಿ ಕೆಲಸ ಮಾಡಿ ಕನ್ನಡ ಚಿತ್ರಗಳ ಸಮಸ್ಯೆಗಳ ಬಗ್ಗೆ ತಿಳಿದುಕೊಂಡಿದ್ದೆ. ವಾಣಿಜ್ಯ ಮಂಡಳಿಯಲ್ಲಿ ಕಳೆದ ೧೦ ವರ್ಷಗಳಲ್ಲಿ ಚಿತ್ರರಂಗದ ಹಿರಿ-ಕಿರಿಯ ವ್ಯಕ್ತಿಗಳ ಏಳು-ಬೀಳುಗಳನ್ನು ಹಾಗೂ ಚಿತ್ರರಂಗದ ಅಂತರಂಗವನ್ನು ಪ್ರತ್ಯಕ್ಷವಾಗಿ ಕಾಣಲು ನನಗೆ ಅವಕಾಶವಾಯಿತು.

''ಹಣದ ಬಲ ಎಷ್ಟೇ ಇದ್ದರೂ ಚಿತ್ರ ನಿರ್ಮಾಪಕ ಪರವಾನಗಿ ಪಡೆದು ಚಿತ್ರ ತಯಾರಿಸುವುದು ಒಂದು ಮಹತ್ಕಾರ್ಯವೇ ಆಗಿತ್ತು. ಆಗ ಒಂದು ಕಪ್ಪು-ಬಿಳುಪು ನೆಗೆಟಿವ್ ರೋಲ್‌ಗೆ ರೂ.೩೦೦ರ ಒಳಗೆ ಇತ್ತು. ಆದರೂ ಚಿತ್ರಕ್ಕೆ ಪರವಾನಗಿ ಪಡೆಯುವುದು ಮಹಾ ಸಾಹಸದ ಕೆಲಸವಾಗಿತ್ತು. ದಿನವಿಡೀ ಮೀಟಿಂಗ್ ಮಾಡಿದರೂ ದಕ್ಷಿಣ ರಾಜ್ಯಗಳ ನಾಲ್ಕು ಭಾಷೆಗಳ ಚಿತ್ರ ನಿರ್ಮಾಪಕರಿಗೆ ಕಚ್ಚಾ ಫಿಲಂ ಹಂಚುವ ಕಾರ್ಯ ಇತ್ಯರ್ಥವಾಗುತ್ತಿರಲಿಲ್ಲ. ಅನೇಕ ವೇಳೆ ಯುದ್ಧದ ರೀತಿ ಮಾರಾಮಾರಿ ನಡೆದು ನಾಯಕರುಗಳಲ್ಲಿ ವೈಮನಸ್ಸು ಉಂಟಾಗಿ ಅನಂತರ ತಿಳಿ ವಾತಾವರಣ ಮೂಡುತ್ತಿತ್ತು. ಅದನ್ನು ಸಮರ್ಥವಾಗಿ ನಿಭಾಯಿಸುವ ಹೊಣೆ ನನ್ನದಾಗಿತ್ತು. ಇದರಿಂದ ಚಿತ್ರರಂಗದವರಿಗೆಲ್ಲ ನಾನು - ಬಾಬ - ಚಿರಪರಿಚಿತನಾದೆ.

''ಅಂದಿನ ಕನ್ನಡ ನಿರ್ಮಾಪಕರ ಬವಣೆ ಹೇಳತೀರದು. ಅಷ್ಟೇ ನಿಷ್ಠೆಯಿಂದ ನನ್ನ ಪಾಲಿನ ಕರ್ತವ್ಯವನ್ನು ಅಂದಿನ ಕನ್ನಡ ಚಿತ್ರರಂಗಕ್ಕೆ ಸಲ್ಲಿಸಿದುದು ನನ್ನ ಜೀವನವಲ್ಲಿ ಅತಿ ಮುಖ್ಯ ಸವಾಲುಗಳಲ್ಲಿ ಒಂದು. ಅವು ನನ್ನ ಜೀವನದ ಅತ್ಯಂತ ಶ್ರೇಷ್ಠ ವರ್ಷಗಳು. ಬಹುಶಃ ಚಿತ್ರರಂಗದ ಹಿರಿಯರಾದ ಬಿ.ಎಸ್.ರಂಗಾ, ಕೆ.ವಿ.ಗುಪ್ತ,



(ಚಿತ್ರ ೩೬) 'ಭೂಕೈಲಾಸ' ಚಿತ್ರದಲ್ಲಿ ರಾಜಕುಮಾರ್, ಕಲ್ಯಾಣ್ ಕುಮಾರ್ ಮತ್ತು ಎಸ್.ವಿ.ರಂಗರಾವ್

ಲಕ್ಷ್ಮಣ್, ಗಂಗಪ್ಪ, ಸಿದ್ಧಲಿಂಗಯ್ಯ, ಭಾರ್ಗವ, ಕೆ.ಎಸ್.ಎಲ್.ಸ್ವಾಮಿ (ರವೀ) ಮುಂತಾದವರು ಅಂದಿನ ಶೋಚನೀಯ ಸ್ಥಿತಿಯನ್ನು ಅರಿಯಬಲ್ಲವರಾಗಿದ್ದಾರೆ.

''ಕಚ್ಚಾ ಫಿಲಂ ಪರ್ಮಿಟ್ ಸಿಸ್ಟಮ್ ಬಂದ ಮೊದಲ ವರ್ಷ, ಪ್ರಮುಖ ವ್ಯಕ್ತಿಗಳಾದ ಮಾಡ್ರನ್ ಥಿಯೇಟರ್ಸ್‌ನ ಟಿ.ಆರ್.ಸುಂದರಂ, ಜೆಮಿನಿಯ ಎಸ್.ಎಸ್.ವಾಸನ್, ಎ.ವಿ.ಎಂ.ನ ಮೇಯಪ್ಪ ಚೆಟ್ಟಿಯಾರ್, ನಾರಾಯಣನ್ ಅಂಡ್ ಕಂಪನಿಯ ನಾರಾಯಣ ಅಯ್ಯಂಗಾರ್, ಪಕ್ಷಿರಾಜಾ ಸ್ಟುಡಿಯೋದ ಎಸ್.ಎಂ.ಎಸ್.ನಾಯ್ಡು - ಈ ಐದು ಜನರ ಕೈಯಲ್ಲಿ ಚಿತ್ರರಂಗದ ಅಳಿವು-ಉಳಿವಿನ ಪ್ರಶ್ನೆಯಿತ್ತು. ಆಗ ತಾನೇ ಚಿತ್ರರಂಗಕ್ಕೆ ಪಾದಾರ್ಪಣ ಮಾಡಿದ್ದ ನಾಗಿರೆಡ್ಡಿಯವರು ವಿಷ್ಣು ಖಂಡದಲ್ಲೇ ಅಚ್ಚುಕಟ್ಟಾದ ವಿಜಯ-ವಾಹಿನಿ ಸಂಸ್ಥೆಯಿಂದ ಸುಸಜ್ಜಿತವಾದ ೧೦ರಿಂದ ೧೨ ಫ್ಲೋರುಗಳುಳ್ಳ ಸ್ಟುಡಿಯೋ ಸ್ಥಾಪಿಸಿ ಹೊಸ ಪೀಳಿಗೆಯ ಆಗಮನಕ್ಕೆ ನಾಂದಿ ಹಾಡಿದ್ದರು. ಆ ಐದು ಜನರ ಗುಂಪಿನೊಡನೆ ಯುವ ಪೀಳಿಗೆಯ ಮುಖಂಡರಾಗಿ ನಾಗಿರೆಡ್ಡಿ ಯುದ್ಧ ಸಾರಿದರು. ಹೊಸಬರಿಗೆ ಹೆಚ್ಚು ಅವಕಾಶ ಕೊಡಬಾರದೆಂದು ಆ ಐವರ ವಾದ. ಹೊಸಬರಿಗೆ ಅವಕಾಶ ಮಾಡಿಕೊಡಲೇ ಬೇಕು ಎಂಬುದು ನಾಗಿರೆಡ್ಡಿಯವರ ವಾದ. ಕಡೆಗೆ ರೆಡ್ಡಿಯವರೇ ಜಯಶಾಲಿಯಾದರು. ಹೆಚ್ಚು ಹೆಚ್ಚು ಹೊಸಬರ ಪ್ರವೇಶಕ್ಕೆ ಹಾದಿ ಮಾಡಿ ಚಿತ್ರರಂಗವ ಯಶಸ್ಸಿಗೆ ಕಾರಣರಾದರು.

''ಅಂದಿನ ಮದರಾಸ್ ಚಿತ್ರರಂಗದ ಜನರು ಕನ್ನಡ ಚಿತ್ರ ಎಂದರೆ ಮೂಗು ಮುರಿಯುತ್ತಿದ್ದ ಕಾಲ. ಮೈಸೂರಿನಲ್ಲಿ ಸುಸಜ್ಜಿತ ಸ್ಟುಡಿಯೋ ಸ್ಥಾಪಿತವಾಗಿದೆ ಎಂದು ಹೇಳಿದರೂ ಒಪ್ಪಲು ತಯಾರಿರಲಿಲ್ಲ. ನಾನು ಕನ್ನಡ ಚಿತ್ರರಂಗದ ಬಗ್ಗೆ ಆಧಾರ ಸಹಿತ ಮಾತಾಡಬಲ್ಲವನಾಗಿದ್ದುದರಿಂದ ಕನ್ನಡ ಚಿತ್ರಗಳಿಗೆ ಹೆಚ್ಚು ಹೆಚ್ಚು ಪರವಾನಗಿ ಕೊಡಿಸುವಲ್ಲಿ ಯಶಸ್ವಿಯಾದೆ. ಆ ಸಾಧನೆಯಲ್ಲಿ ನನ್ನ ಪಾಲಿರುವುದು ನನಗೆ ಹೆಮ್ಮೆಯ ವಿಷಯವಾಗಿದೆ'' ಎನ್ನುತ್ತಾರೆ ನಾಗೇಶ್ ಬಾಬಾ.

ಈ ಪರಿಸ್ಥಿತಿಯಲ್ಲಿ ಆ ವರ್ಷ ಏಳು ಚಿತ್ರಗಳು ತೆರೆಕಂಡಿದ್ದೇ ದೊಡ್ಡ ವಿಷಯ. ಚಿತ್ರಗಳ ಸಂಖ್ಯೆ ಕಡಿಮೆಯಾದರೂ ಕನ್ನಡ ಚಿತ್ರರಂಗಕ್ಕೆ ಕೀರ್ತಿ ತಂದ 'ಸ್ಕೂಲ್ ಮಾಸ್ಟರ್'ನಂಥ ಶ್ರೇಷ್ಠ ಚಿತ್ರ ಬಂದದ್ದು ೧೯೫೮ರ ವಿಶೇಷ.

'ರತ್ನಗಿರಿ ರಹಸ್ಯ'ದ ಅದ್ಭುತ ಯಶಸ್ಸಿನಿಂದ ಉತ್ತೇಜಿತರಾದ ಪಂತುಲು ಅವರು ತಮ್ಮ ಮುಂದಿನ ಚಿತ್ರಕ್ಕೆ ಸಾಮಾಜಿಕ ವಸ್ತುವನ್ನು ಆಯ್ಕೆ ಮಾಡಿಕೊಂಡರು. ಬಡ ಉಪಾಧ್ಯಾಯರುಗಳು ಅನೇಕರಿಗೆ ವಿದ್ಯಾದಾನ ಮಾಡಿ, ಕಡೆಗೆ ನಿವೃತ್ತರಾದ ನಂತರ ಪಡುವ ಬವಣೆಗಳನ್ನು ಯಥಾವತ್ತಾಗಿ ಚಿತ್ರಿಸಿದ ಕಥಾವಸ್ತು. ಈ ಚಿತ್ರದಲ್ಲಿ ಬಿ.ಆರ್.ಪಂತುಲು, ಎಂ.ವಿ.ರಾಜಮ್ಮ, ಉದಯಕುಮಾರ್, ಸಾಹುಕಾರ್ ಜಾನಕಿ, ಬಿ.ಸರೋಜಾದೇವಿ, ಸೂರ್ಯಕುಮಾರ್, ಬಾಲಕೃಷ್ಣ, ಡಿಕ್ಕಿ ಮಾಧವರಾವ್, ನರಸಿಂಹರಾಜು ಮುಂತಾದ ಪ್ರತಿಭಾವಂತ ನಟ-ನಟಿಯರು ಅಭಿನಯಿಸಿದ್ದರು.

ಪಂತುಲು ಅವರೇ ಸ್ಕೂಲ್ ಮಾಸ್ಟರ್ ಪಾತ್ರ ವಹಿಸಿದ್ದರು. ಬಹುಶಃ ಅಭಿನಯದ ದೃಷ್ಟಿಯಿಂದ ಪಂತುಲು ಅವರ ಬಹಳ ಮುಖ್ಯವಾದ ಚಿತ್ರ ಇದು. ತಮ್ಮ ಕಲಾ ನೈಪುಣ್ಯವನ್ನು, ಪಾಂಡಿತ್ಯವನ್ನು ಅವರು ಈ ಚಿತ್ರದಲ್ಲಿ ತುಂಬ ಚೆನ್ನಾಗಿ ಪ್ರದರ್ಶಿಸಿದ್ದಾರೆ. ಕನ್ನಡಕದ ಗಾಜು ಒಡೆದು ಹೋದಾಗ ಕಾಗದ ಓದಬೇಕಾದರೆ ಆ ಸಣ್ಣ ತುಂಡನ್ನು ಇಟ್ಟುಕೊಂಡು ಓದುವುದು, ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುವುದು - ಆ ದೃಶ್ಯ ಇಂದಿಗೂ ಮಾರ್ಮಿಕ ಎನ್ನಿಸುತ್ತದೆ. ಅದು ಕನ್ನಡ ಚಿತ್ರರಂಗದ ಇತಿಹಾಸದಲ್ಲೇ ಮರೆಯಲಾಗದ ಒಂದು ದೃಶ್ಯ. ಈ ಚಿತ್ರದ ಹಾಡುಗಳದ್ದೇ ಒಂದು ವೈಶಿಷ್ಟ್ಯ. 'ರಾಧಾ ಮಾಧವ ವಿನೋದ ಹಾಸಾ...', 'ನಾನೂ ನೀನೂ ಜೋಡಿ...' ಗೀತೆಗಳು ಜನಪ್ರಿಯ. ಮತ್ತು ಚಿತ್ರದಲ್ಲಿ ಅಳವಡಿಸಿದ 'ಸ್ವಾಮಿದೇವನೆ...' ಗೀತೆ ಶಾಲೆಗಳಲ್ಲಿ ಪ್ರಾರ್ಥನಾಗೀತೆಯಂತೆ ಬಳಸಲಾಗುತ್ತಿತ್ತು. ಉತ್ತಮವಾದ ಸಾಮಾಜಿಕ, ಸಾಂಸಾರಿಕ ಚಿತ್ರಗಳನ್ನು ತೆಗೆದರೆ ಕನ್ನಡದಲ್ಲಿ ಯಶಸ್ವಿಯಾಗುತ್ತದೆ ಎನ್ನುವುದಕ್ಕೆ 'ಸ್ಕೂಲ್ ಮಾಸ್ಟರ್' ಮತ್ತು 'ಪ್ರೇಮದ ಪುತ್ರಿ' ಚಿತ್ರಗಳು ಉದಾಹರಣೆಯಾದವು. 'ಸ್ಕೂಲ್ ಮಾಸ್ಟರ್' ಮರಾಠಿ ಕಥೆಯನ್ನು ಆಧರಿಸಿದ್ದಾಗಿತ್ತು. ಮರಾಠಿಯಲ್ಲಿ ಚಿತ್ರವೂ ಆಗಿದೆ. ಆ ಚಿತ್ರ ಆ ಕಾಲದಲ್ಲಿ ೨೫ ವಾರಗಳ ಕಾಲ ಪ್ರದರ್ಶಿತವಾಗಿ ದಾಖಲೆ ನಿರ್ಮಿಸಿತು. 'ಸ್ಕೂಲ್ ಮಾಸ್ಟರ್' ಚಿತ್ರಕ್ಕೆ ರಾಷ್ಟ್ರಪತಿಗಳ ರಜತ ಪದಕ ಮತ್ತು ಅರ್ಹತಾಪತ್ರ ಪ್ರಶಸ್ತಿ ಬಂತು. ಪತ್ರಿಕೆಗಳು, ಸಾಹಿತಿಗಳು ಮೆಚ್ಚುಗೆಯ ನುಡಿಗಳನ್ನಾಡಿದರು.

ಕನ್ನಡ ಸಾಮಾಜಿಕ ಚಿತ್ರವೊಂದು ಪ್ರಥಮ ಬಾರಿಗೆ ಶತದಿನೋತ್ಸವ ದಾಟಿ ೨೫ ವಾರ ಪ್ರದರ್ಶನವಾಯಿತು. ಕನ್ನಡ ವಾಕ್ಚಿತ್ರ ರಜತೋತ್ಸವ ವರ್ಷದಲ್ಲಿ ಕನ್ನಡ ಚಿತ್ರ ಕಂಡ ಶತದಿನ ನಿಜಕ್ಕೂ ವಿಶೇಷವೇ, ಸಂಭ್ರಮವೇ.

ಪ್ರಮುಖ ಸಾಹಿತಿಗಳಾದ ಡಿ.ವಿ.ಗುಂಡಪ್ಪ, ಶಿಕ್ಷಣವೇತ್ತ ಎಂ.ಪಿ.ಎಲ್.ಶಾಸ್ತ್ರಿ ಅವರುಗಳ ನೇತೃತ್ವದಲ್ಲಿ ೧೯೫೮ನೇ ಮೇ ತಿಂಗಳ ೧೨ರಂದು ಅದ್ಧೂರಿ ಸಮಾರಂಭ ಏರ್ಪಡಿಸಿ ಚಿತ್ರತಂಡವನ್ನು ಸತ್ಕರಿಸಿದ್ದರು.

'ಸ್ಕೂಲ್ ಮಾಸ್ಟರ್' ಚಿತ್ರದಲ್ಲಿ ನಮ್ಮ ಗಮನವನ್ನು ಅತಿಯಾಗಿ ಸೆಳೆದ ಇನ್ನೊಂದು ಪಾತ್ರ ಬಂಗ್ಲೆ ಕಾವೇರಮ್ಮನ ಪಾತ್ರ. ಅದನ್ನು ನಿರ್ವಹಿಸಿದ ಹಿರಿಯ ನಟಿ ಅನ್ನಪೂರ್ಣಮ್ಮ ಮೂಕಿ ಚಿತ್ರಗಳ ಕಾಲದಲ್ಲೇ ಹೆಸರಾಗಿದ್ದ ನಟಿ.

'ಭೂ ಕೈಲಾಸ' ಆ ವರ್ಷ ತೆರೆಕಂಡ ಮತ್ತೊಂದು ಮುಖ್ಯ ಚಿತ್ರ. ಎ.ವಿ.ಎಂ.ಸಂಸ್ಥೆಯವರು ರಾಜಕುಮಾರ್, ಕಲ್ಯಾಣ್‌ಕುಮಾರ್, ಜಮುನ, ಸರೋಜಾದೇವಿ, ಕೆ.ಎಸ್.ಅಶ್ವತ್ಥ್, ಎಸ್.ವಿ.ರಂಗರಾವ್ ಮುಂತಾದವರ ತಾರಾಗಣದಲ್ಲಿ 'ಭೂಕೈಲಾಸ' ಚಿತ್ರವನ್ನು ಅದ್ಧೂರಿಯಾಗಿ ತಯಾರಿಸಿದರು.

'ರಾಯರ ಸೊಸೆ' ಮೂಲಕ ರಾಜಕುಮಾರ್ ಪೌರಾಣಿಕ, ಜಾನಪದ ಚಿತ್ರಗಳಿಂದ ಸಾಮಾಜಿಕ ಚಿತ್ರಕ್ಕೆ ಬಂದಂತೆ ಕಲ್ಯಾಣ್‌ಕುಮಾರ್ ಸಾಮಾಜಿಕ ಚಿತ್ರಗಳಿಂದ ಪೌರಾಣಿಕ ಚಿತ್ರಕ್ಕೆ ಬಂದರು. 'ಭೂ ಕೈಲಾಸ' ಚಿತ್ರದಲ್ಲಿ ಅವರು ನಾರದನ ಪಾತ್ರವನ್ನು ನಿರ್ವಹಿಸಿದರು. ರಾವಣನಾಗಿ ರಾಜಕುಮಾರ್ ಅವರ ಅಭಿನಯವನ್ನು ಆ ಪಾತ್ರದಲ್ಲಿ ಹೆಸರಾಗಿದ್ದ ಎನ್.ಟಿ.ರಾಮರಾವ್ ಮತ್ತು ಎಸ್.ವಿ.ರಂಗರಾವ್ ಮುಕ್ತಕಂಠದಿಂದ ಪ್ರಶಂಸಿಸಿದರು. ಕೆ.ಶಂಕರ್ ನಿರ್ದೇಶಿಸಿದ ಈ ಚಿತ್ರ ಭಾರಿ ಸೆಟ್‌ಗಳಿಂದ ಕೂಡಿ, ಕಲಾವಿದರ ಶ್ರೇಷ್ಠ ಅಭಿನಯದೊಂದಿಗೆ ಒಂದು ಉತ್ತಮ ಪೌರಾಣಿಕ ಚಿತ್ರವಾಗಿ ಮೂಡಿ ಬಂತು.

ಆರ್.ಸುದರ್ಶನ್ ಮತ್ತು ಗೋವರ್ಧನ್‌ರ ಸಂಗೀತ ನಿರ್ದೇಶನದಲ್ಲಿ ನಾರದನ ಪಾತ್ರಕ್ಕೆ ಸಂಗೀತ ವಿದ್ವಾಂಸ ಶೀರ್ಕಾಳಿ ಗೋವಿಂದರಾಜನ್ ಹಾಡಿರುವ 'ರಾಮನ ಅವತಾರ....' ಎಂಬ ಸುದೀರ್ಘ ಹಾಡು ಬಹಳ ಜನಪ್ರಿಯವಾಯಿತು. ಸಾಹಿತ್ಯ ರಚಿಸಿದವರು ಕು.ರ.ಸೀತಾರಾಮಶಾಸ್ತ್ರಿ. ಚಿತ್ರದ ಸಂಭಾಷಣೆ ಸಹ ಅವರೇ ನಿರ್ವಹಿಸಿದ್ದರು.

ಎ.ವಿ.ಎಂ. ಸ್ಟುಡಿಯೋದಲ್ಲಿ 'ಭೂಕೈಲಾಸ'ಕ್ಕೆ ಭವ್ಯವಾದ ಸೆಟ್‌ಗಳನ್ನು ಹಾಕಲಾಗಿತ್ತು. ಗೋಪಿಕೃಷ್ಣರ ಸೊಗಸಾದ ನೃತ್ಯವೂ ಇತ್ತು. ''ಎ.ವಿ.ಎಂ. ಸಂಸ್ಥೆಯ 'ಭೂಕೈಲಾಸ' ಅದ್ಭುತ-ಮಹೋನ್ನತ'' ಎಂದು ವಿಧಾನ ಸಭಾಧ್ಯಕ್ಷ ಎಸ್.ಆರ್.ಕಂಠಿಯವರು ಪ್ರಶಂಸಿಸಿದ್ದಾರೆ. ಕರ್ನಾಟಕ ಫಿಲಂಸ್ ಅವರು ವಿತರಿಸಿದ ಈ ಚಿತ್ರವು ಫೆಬ್ರವರಿ ೨, ೧೯೫೮ರಲ್ಲಿ ನ್ಯೂ ಅಪೇರಾ ಚಿತ್ರಮಂದಿರದಲ್ಲಿ ಬಿಡುಗಡೆಯಾದಾಗ ಎಸ್.ಆರ್.ಕಂಠಿ ಅವರು ಆಹ್ವಾನಿತರಾಗಿ ಬಂದು ಚಿತ್ರ ವೀಕ್ಷಿಸಿ ಮಾತಾಡಿದ್ದರು.

ಮೊದಲಿನಿಂದಲೂ ಸರ್ಕಾರವು ಕನ್ನಡ ನಿರೂಪಣೆಯ ವಾರ್ತಾ ಚಿತ್ರಗಳನ್ನು ಕೊಡಲಿಲ್ಲವೆಂಬ ದೂರುಗಳಿದ್ದವು. ಕಡೆಗೂ ಆ ಕಾರ್ಯ ಸಾಧಿತವಾಯಿತು. ೧೯೫೮ರ ಜೂನ್ ೧ನೆಯ ತಾರೀಖಿನಂದು ವಾರ್ತಾ ಇಲಾಖೆಯ ವತಿಯಿಂದ ಕನ್ನಡ ಸಾಕ್ಷ್ಯ

ಚಿತ್ರಗಳ ಉದ್ಘಾಟನಾ ಸಮಾರಂಭ ನಡೆಯಿತು. ಕನ್ನಡ ಭಾಷೆಯಲ್ಲಿ ನಿರೂಪಿತವಾದ ಸಾಕ್ಷ್ಯಚಿತ್ರಗಳನ್ನು ಅಂದು ಪ್ರದರ್ಶಿಸಿದರು. ಬೆಂಗಳೂರಿನ ಅಲಂಕಾರ್ ಚಿತ್ರಮಂದಿರದಲ್ಲಿ 'ಪರ್ವತಗಳ ಕರೆ'. 'ಜೇಪವಿಮೆ' ಎಂಬ ಎರಡು ಸಾಕ್ಷ್ಯಚಿತ್ರಗಳು. ಅಂದಿನ ಮುಖ್ಯಮಂತ್ರಿ ಬಿ.ಡಿ.ಜತ್ತಿ ಮತ್ತಿತರ ಗಣ್ಯರ ಉಪಸ್ಥಿತಿಯಲ್ಲಿ ಪ್ರದರ್ಶಿತವಾದವು. ಈ ಚಿತ್ರಗಳ ಸಾಹಿತ್ಯ, ನಿರೂಪಣೆ ತುಂಬ ಚೆನ್ನಾಗಿತ್ತೆಂದು ಪ್ರಶಂಸೆಯಿತ್ತು.

ಸುಬ್ಬಯ್ಯನಾಯ್ಡು ಅವರ 'ಭಕ್ತ ಪ್ರಹ್ಲಾದ' ಚಿತ್ರದ ಮೂಲಕ ಸುಬ್ಬಯ್ಯನಾಯ್ಡು ಅವರ ಪುತ್ರ ಲೋಕೇಶ್ ಪ್ರಹ್ಲಾದನಾಗಿ ಚಿತ್ರರಂಗ ಪ್ರವೇಶಿಸಿದರು. ಸಂಗೀತ ವಿದ್ವಾಂಸ ತುರೆಯೂರು ರಾಜಗೋಪಾಲಶರ್ಮ, ಬೆಂಗಳೂರಿನ ಸಂಗೀತ ವಿದುಷಿ ಎಚ್.ಎಸ್.ಅನುಸೂಯ, ಪಿ.ಬಿ.ಶ್ರೀನಿವಾಸ್, ಎ.ಪಿ.ಕೋಮಲ ಹಿನ್ನೆಲೆ ಗಾಯನ ನೀಡಿದ್ದರು.

ಮದರಾಸಿನಲ್ಲಿ ಚಿತ್ರೀಕರಣ ನಡೆಯುತ್ತಿದ್ದ ಈ ದಿನಗಳಲ್ಲಿ ಇದ್ದ ವಾತಾವರಣ-ತಾಂತ್ರಿಕ ಸೌಲಭ್ಯ ಕುರಿತು ಛಾಯಾಗ್ರಾಹಕ ಜಾನಕಿರಾಂ ಹೇಳಿದ ಮಾತು ಮುಖ್ಯ. "ನಾನು ಬಂದದ್ದೇ ಸೌಂಡ್ ವಿಭಾಗಕ್ಕೆಂದು. ಆದರೆ ಸೌಂಡ್ ರಿಕಾರ್ಡಿಂಗ್ ದೂರದಲ್ಲಿ ಆಗಬೇಕು. ಶೂಟಿಂಗ್ ಸ್ಥಳದಲ್ಲಿ ಮಿಕ್ಸರ್ ಮಾತ್ರ ಇರುತ್ತಿತ್ತು. ಕೇಬಲ್ ಎಳೆಯೋದು, ಹೊರೋದು ವಿಪರೀತ ಕಷ್ಟ. ಅದನ್ನು ಬಿಟ್ಟು ಕ್ಯಾಮರಾ ಅಪ್ರೆಂಟಿಸ್ ಆಗಿ ವಾಹಿನಿ ಸ್ಟುಡಿಯೋದಲ್ಲಿ, ಅನಂತರ ಎಚ್.ಎಂ.ರೆಡ್ಡಿ ಅವರ ರೋಹಿಣಿ ಸ್ಟುಡಿಯೋದಲ್ಲಿ ತಿಂಗಳ ಸಂಬಳಕ್ಕೆ ಸೇರಿದೆ. ನನಗೆ ಯಾವ ಶಿಕ್ಷಣವೂ ಇಲ್ಲ. ಅನುಭವದಿಂದಲೇ ಕಲಿತೆವು."

ಅನಂತರ ವಾಹಿನಿಯಿಂದ ರೋಹಿಣಿಗೆ ಬಂದು ಕ್ಯಾಮರಾ ಸಹಾಯಕರಾದ ಅವರು "ಆ ದಿನಗಳಲ್ಲಿ ಚಿತ್ರೀಕರಣಕ್ಕೆ ಸ್ಟುಡಿಯೋ ಕಾಲ್‌ಶೀಟ್ ಮುಖ್ಯವಾಗಿತ್ತು. ಮಧ್ಯಾಹ್ನ ೨ರಿಂದ ಬೆಳಗಿನ ೬ ಗಂಟೆಯವರೆಗೆ ದುಡಿದು ಪುನಃ ೨ ಗಂಟೆಗೆ ಬರುತ್ತಿದ್ದೆವು. ಟೈಂಗಿಂತ ಕೆಲಸ ಮುಖ್ಯ ಆಗಿತ್ತು" ಎನ್ನುತ್ತಾರೆ.

"ಆಗ ಇದ್ದದ್ದು ಮಿಚೆಲ್ ಹಾಗೂ ಡೆಬ್ರಿ ಕ್ಯಾಮರಾಗಳು. ಬಂಗಾಳದಿಂದ ನಿಮಾಯ್‌ಘೋಷ್ ಛಾಯಾಗ್ರಹಣಕ್ಕೆಂದು ಬಂದರು. ಅವರಿಗೆ ಈ ಡೆಬ್ರಿ ಕ್ಯಾಮರಾ ಹ್ಯಾಂಡ್ಲ್ ಮಾಡೋಕಾಗಲಿಲ್ಲ. ಆಗ ನನಗೆ ಅವಕಾಶ ಸಿಕ್ಕಿತು. ವೈ.ಆರ್.ಸ್ವಾಮಿ ಅವರ ಚಿತ್ರಗಳಿಗೆ ಕೆಲಸ ಮಾಡಿದೆ. ಆಗ ಮಧು[1] ಇನ್ನೂ ಬಾಲ ಕಲಾವಿದ. ರೋಹಿಣಿ ಮಾಲೀಕರಾದ ಎಚ್.ಎಂ.ರೆಡ್ಡಿ ಯಾವಾಗಲೂ ಸೆಟ್‌ನಲ್ಲಿರೋರು. ಆಗ ಚಿತ್ರಗಳು ಎರಡು, ಮೂರು ಭಾಷೆಗಳಲ್ಲಿ ಆಗುತ್ತಿದ್ದವು. ಎಲ್ಲ ಭಾಷೆಯ ಕಲಾವಿದರೂ ಇರುತ್ತಿದ್ದರು. ಕನ್ನಡದವರನ್ನು ಸ್ಟುಡಿಯೋದಲ್ಲಿ ಸೇರಿಸೋದೇ ಕಷ್ಟವಿತ್ತು. ತಮಿಳು ಚಿತ್ರಗಳ ಕೆಲಸ ೧೦ ಗಂಟೆವರೆಗೆ, ಆಮೇಲೆ ರಾತ್ರಿ ಕನ್ನಡ ಚಿತ್ರ ಆಗುತ್ತಿತ್ತು. ಅದರಿಂದ ಕೊಂಚ ಬಾಡಿಗೆ ಕಡಿಮೆ ಆಗುತ್ತಿತ್ತು. ಬೆಳಗಿನ ಕಾಲ್‌ಶೀಟ್‌ಗಿಂತ ರಾತ್ರಿಗೆ ೨೦೦ ರೂ. ಕಡಿಮೆ ಇತ್ತು. ಕೆಲವು ಮಾಲೀಕರು ಅವರೇ ಸಲಹೆ ಕೊಟ್ಟು ರಾತ್ರಿ ಚಿತ್ರೀಕರಣ ಮಾಡಿ ಅನ್ನುತ್ತಿದ್ದರು. ಅದು ಕನ್ನಡದ ಬಗ್ಗೆ ಅವಹೇಳನವಲ್ಲ, ಸಹಕಾರ". ಈ ಮಾತಿಗೆ ಬಂದರೆ ಜಿ.ವಿ.ಅಯ್ಯರ್‌ರವರ ಅಭಿಪ್ರಾಯ ಹೀಗಿದೆ :

"ಒಂದು ಮಾನವೀಯತೆ ಇತ್ತು, ಅನುಕಂಪ ಇತ್ತು. ಸೆಟ್‌ಗಳನ್ನು ಬಳಸಿದರೆ ಅವರಿವರು ಕದ್ದರು ಅನ್ನೋ ಭಾವನೆ ಇರಲಿಲ್ಲ. 'ಪಾಪ, ಕನ್ನಡ ಸಿನಿಮಾ ತೆಗೀತಿದಾರೆ, ಸಹಾಯ ಮಾಡಿ' ಅನ್ನೋರು. ಅಂದರೆ ಆಗ ಭಾಷೆ, ಪ್ರಾಂತ್ಯ ಅಂತಲ್ಲ, ವ್ಯವಹಾರದ ನೆಲೆಯಲ್ಲಿ ಕನ್ನಡಕ್ಕೆ ಒಂದು 'ಅನುಕಂಪ' ಭಾವನೆ ಇದ್ದೇ ಇತ್ತು. ಸ್ಟುಡಿಯೋದವರೇ ಕೆಲಸಗಾರರಿಗೆ ಹೇಳಿ ಏನೂ ಹಣ ವಸೂಲು ಮಾಡದೆ, ಅವರ ಪ್ರಾಪರ್ಟಿಯನ್ನೇ ಬಳಸಿ ಸೆಟ್ ಇತ್ಯಾದಿ ಹಾಕಿಕೊಡುತ್ತಿದ್ದರು. ಅಥವಾ ಅವರ ಶೂಟಿಂಗ್ ಆದ ಮೇಲೆ ಕನ್ನಡ ಚಿತ್ರದವರಿಗೆ ಅದನ್ನು ಬಳಸಿಕೊಳ್ಳಲು ಅನುಮತಿ ಇತ್ತು. ಮದರಾಸಿನಲ್ಲಿ ಕನ್ನಡದವರಿಗೆ ಗೌರವ ಇರಲಿಲ್ಲ ಅನ್ನೋದು ತಪ್ಪು. ಒಬ್ಬ ಸಾಹಿತಿಯಾಗಿ ನನಗೆ ಯಾವತ್ತೂ ಗೌರವ ಕೊಟ್ಟಿದ್ದಾರೆ. ಸಮಸ್ಯೆ ಅಂದರೆ ನಮ್ಮ ಹತ್ತಿರ ದುಡ್ಡಿಲ್ಲ. ನಿರ್ಮಾಪಕರಾಗಿ ಹೋಗಿ ಕನ್ನಡ ಸಿನಿಮಾ ಮಾಡ್ತಿದೇವೆ. ಲಿಮಿಟೆಡ್ ಏರಿಯಾ, ಕಡಿಮೆ ಮಾಡಿಕೊಳ್ಳಿ ಅಂತ ನಾವೇ ಗಿಂಜುತ್ತಾ ಇದ್ದೆವು. ಸ್ಟುಡಿಯೊದಲ್ಲಿ, ಪ್ರಾಪರ್ಟಿ ಕೊಡೋರ ಹತ್ತಿರ, ಲ್ಯಾಬ್‌ನಲ್ಲಿ, ಹೀಗೆ ಎಲ್ಲರ ಹತ್ತಿರ ಅದೇ ವರಸೆ ಇಡ್ತಿದ್ದೆವು. ಶೂಟಿಂಗ್ ಮಾಡಿದ್ದೆಲ್ಲ ರಾತ್ರಿ. ನಿದ್ದೆಗೆಡೋದಂತೂ ಅಭ್ಯಾಸ ಇತ್ತು. ಒಂದಿಷ್ಟು ಬನ್ನು-ಜಾಮ್ ಕೊಟ್ಟರೆ ಆಯಿತು. ಇವೆಲ್ಲ ಖರ್ಚು ಕಡಿಮೆ ಮಾಡುವ ವಿಧಾನಗಳಾಗಿದ್ದವು. ಕಡೆಗೆ ಪಾಸಿಟಿವ್‌ನವರ ಹತ್ತಿರ ಕೂಡಾ ಡಿಸ್ಟ್ರಿಬ್ಯೂಟರ್ ಕಾಯುತ್ತಿದ್ದಾರೆ ಪಾಸಿಟಿವ್ ಕೊಡಿ ಸ್ವಾಮಿ ಅಂತ ಗೋಗರೀತಿದ್ದುದು, ಇದೆಲ್ಲ ಆಗ ನಾವು ಹೊಟ್ಟೆ ಪಾಡಿಗೆ-ಬದುಕಿಗೆ ಅಂತ ಮಾಡಿದ್ದು. ಅವರೆ ಹಾಗೆ ಮಾಡೋವಾಗ ನಾವು ನಮ್ಮ ನಾಡು, ಭಾಷೆಗೆ ಆಗಬಹುದಾದ ಅವಮಾನ ಅಥವಾ ನಾವಾಗಿ ಕೀಳರಿಮೆಗೆ ತಳ್ಳುತ್ತಿದ್ದೇವೆ ಅನ್ನೋದರ ಪರಿಜ್ಞಾನ ಇರಲಿಲ್ಲ. ಇವತ್ತು ಅದೆಲ್ಲ ಹೊಳೆಯುತ್ತದೆ."[2]

"ಆರೂರು ಪಟ್ಟಾಭಿ ನಿರ್ದೇಶನದ 'ಶ್ರೀಶೈಲ ಮಹಾತ್ಮೆ' ಚಿತ್ರಕ್ಕೆ ನಾನು ಕೆಲಸ ಮಾಡುತ್ತಿದ್ದೆ. ಎದುರಿಗಿದ್ದ ಫ್ಲೋರ್‌ನಲ್ಲಿ 'ದೀಪಾವಳಿ' ತೆಲುಗು ಚಿತ್ರದ ಕೆಲಸ ನಡೆದಿತ್ತು. ರಜನೀಕಾಂತ್ ಎನ್ನುವವರು ನಿರ್ದೇಶಕರು. ಅವರ ಛಾಯಾಗ್ರಾಹಕರು ಇನ್ನಾವುದೋ ಗೇವಾಕಲರ್ ಚಿತ್ರಕ್ಕೆ ಹೊರಟು ಹೋಗಿದ್ದರಿಂದ ನನ್ನನ್ನು ಕರೆಸಿದರು. ನನ್ನ ನಿಲುವು-ರೀತಿ ನೋಡಿ ಇವನೇನು ಮಾಡ್ತಾನೆ, ಬೇಡ ಎಂದಿದ್ದರು ಎಸ್.ವಿ.ರಂಗರಾವ್. ರಷಸ್ ನೋಡಿದ ಮೇಲೆಯೇ ಒಪ್ಪಿದ್ದು. ಇದಾದ ಮೇಲೆ ನಾನು ಸ್ವತಂತ್ರ ಛಾಯಾಗ್ರಾಹಕನಾದೆ. ಅಲ್ಲಿಯವರೆಗೆ ರಾತ್ರಿ ನಡೆಯುತ್ತಿದ್ದ ಕನ್ನಡ ಚಿತ್ರಗಳಿಗೆ ಛಾಯಾಗ್ರಾಹಕ, ಬೆಳಗ್ಗೆ ಬೇರೆ ಭಾಷೆ ಚಿತ್ರಗಳಿಗೆ ಆಪರೇಟಿವ್ ಕ್ಯಾಮರಾಮನ್ !" ಎಂದು ಆ ದಿನಗಳ ಬವಣೆಯನ್ನು ಹೇಳುತ್ತಾರೆ ಜಾನಕಿರಾಂ.

"ಆ ದಿನಗಳಲ್ಲಿ ಕ್ಯಾಮರಾಮನ್ ಶಾಟ್ಸ್ ನಿರ್ಧಾರ ಮಾಡುತ್ತಿರಲಿಲ್ಲ. ನಿರ್ದೇಶಕ ಹೇಳಿದ ಹಾಗೆ ಮಾಡಬೇಕಿತ್ತು. ಸ್ಟುಡಿಯೋ ಸೆಟ್ಸ್ ಆದ್ದರಿಂದ ಲೈಟಿಂಗ್ ಒಂದು ಭಾರಿ ಸಮಸ್ಯೆ ಆಗುತ್ತಿರಲಿಲ್ಲ. ಕ್ಯಾಬರೆ ಇತ್ಯಾದಿಗೆ ಬ್ಯಾಕ್ ಲೈಟಿಂಗ್ ಮಾಡುತ್ತಿದ್ದೆವು. ಆಗ ಇದ್ದುದೇ ಇಬ್ಬರು ಕ್ಯಾಮರಾಮನ್‌ಗಳು - ನಾನು ಮತ್ತು ಸಂಪತ್. ಬ್ಯಾನರ್ಜಿ ಅಂತ ಒಬ್ಬರು ನ್ಯೂಟೋನ್ ಸ್ಟುಡಿಯೋದಲ್ಲಿದ್ದರು. ನಾವೆಲ್ಲ ಪಾಲಿಮಿಸ್ತ್ರಿ ಅವರ ಶೈಲಿಯನ್ನೇ ಅನುಕರಿಸುತ್ತಿದ್ದೆವು. ಸಾಮಾನ್ಯವಾಗಿ ಗ್ಲಾಮರ್ ಆಗಿ ಕಾಣಲಿ ಎಂತ ಕಲಾವಿದೆಯರಿಗೆ, ದೇವರಿಗೆ ಬ್ಯಾಕ್ ಲೈಟಿಂಗ್ ಇರುತ್ತಿತ್ತು. ಕ್ಲೋಸಪ್‌ನಲ್ಲಿ ವಿಶೇಷ ಲೈಟಿಂಗ್ ಇರೋದು. ಸಾಂಬ್ರಾಣಿ ಹೊಗೆ ಹಾಕಿ ದೇವರ ಹತ್ತಿರ ವಿಶೇಷವಾದ ಎಫೆಕ್ಟ್ಸ್ ಕೊಡುತ್ತಿದ್ದೆವು. ಆಗೆಲ್ಲ ಮೇಕಪ್ ಬಹಳ ಕಷ್ಟವಾಗುತ್ತಿತ್ತು. ನಿಧಾನವೂ ಆಗುತ್ತಿತ್ತು. ಕನಿಷ್ಟ ಒಂದು ಗಂಟೆ ಬೇಕಾಗ್ತಿತ್ತು. ಬೆಳಗಿನ ಆರು ಗಂಟೆ ಕಾಲ್‌ಶೀಟ್ ಇದ್ದರೆ, ಏಳು ಗಂಟೆಗೆ ಮೇಕಪ್ ಆಗಿ ರೆಡಿ ಇರಬೇಕಿತ್ತು. ಕಪ್ಪು-ಬಿಳುಪು ಚಿತ್ರಗಳಾದ್ದರಿಂದ ಮೇಕಪ್ ಮ್ಯಾನ್‌ಗೆ ಬಹಳ ಪ್ರಾಮುಖ್ಯ ಇತ್ತು. ಪೀತಾಂಬರಂ ಅಂತ ಮೇಕಪ್ ಮ್ಯಾನ್ ಇದ್ದರು. ಅವರು ಮಲೆಯಾಳದವರೆಂದು ತೋರುತ್ತೆ. ಇವರ ಪುತ್ರ ಪಿ.ವಾಸು ನಿರ್ದೇಶಕರಾಗಿದ್ದಾರೆ. ಅವರ ಸಹೋದರ ಚಂದ್ರಶೇಖರ್ ಇದ್ದರು. ಹರಿಬಾಬು ಹೆಸರಾಂತ ಮೇಕಪ್ ಮ್ಯಾನ್. ಅನಂತರ ಸುಬ್ಬಣ್ಣ, ದೊರೆಸ್ವಾಮಿ ಮೊದಲಾದವರೆಲ್ಲ ಬಂದರು.

"ಆಗೆಲ್ಲ ಪೌರಾಣಿಕ ಚಿತ್ರಗಳು, ಜಾನಪದ ಚಿತ್ರಗಳು ಜಾಸ್ತಿ. ಅದಕ್ಕೆ ಸೆಟ್ಸ್ ಬಹಳ ಮುಖ್ಯ. ಕಲಾ ನಿ[illegible]ಕರ ಕೆಲಸ ಬಹಳವಿತ್ತು. ಚರ್ಚೆ ಮಾಡಿ. ಸ್ಕೆಚ್ [illegible]. ಪ್ರಾಪರ್ಟಿ ತರಿಸೋದು. ಸೆಟ್ಟು ಕೆಲಸ



(ಚಿತ್ರ ೩.೭) 'ಭಕ್ತ ಪ್ರಹ್ಲಾದ' ಚಿತ್ರದಲ್ಲಿ ಮಾ|ಲೋಕೇಶ್

---

೧. ಮಧು ಪ್ರಸಿದ್ಧ ಛಾಯಾಗ್ರಾಹಕರು. ನೋಡಿ 'ಛಾಯಾಗ್ರಹಣ' ಲೇಖನ.

೨. ಮದರಾಸಿನಲ್ಲಿ ಕನ್ನಡ ಚಲನಚಿತ್ರರಂಗದ ಸ್ಥಿತಿ-ಸ್ಥಾನ ಕುರಿತು ವಿರುದ್ಧ ಅಭಿಪ್ರಾಯಗಳಿವೆ.

ಎಲ್ಲವರಲ್ಲೂ ಕಲಾ ನಿರ್ದೇಶಕ, ಕಾಸ್ಟ್ಯೂಮರ್, ಕ್ಯಾಮರಾಮನ್ ಜೊತೇಲೇ ಇರ್ತಿದ್ದೆವು. ಬಹುತೇಕ ಸ್ಟುಡಿಯೋದಲ್ಲಿ ಅವರು ಖಾಯಂ ಆಗಿ ಇರುತ್ತಿದ್ದವರೆ.

''ಸಾಮಾನ್ಯವಾಗಿ ಸೆಟ್‌ನಲ್ಲಿ ಸೀಲಿಂಗ್ ಇರೋದು. ಲಾಂಗ್ ಶಾಟ್ ಇದ್ದರೆ ಕೆಳಕ್ಕೆ, ಉಳಿದಂತೆ ಮೇಲಕ್ಕೆ ಹೋಗಬೇಕು. ಕಪ್ಪು-ಬಿಳುಪು ಚಿತ್ರಗಳಿಗೆ ಇದೆಲ್ಲ ಬಹಳ ಮುಖ್ಯ. ಸಾಮಾನ್ಯವಾಗಿ ಹಿಂದಿನ ದಿನ, ಕೆಲವು ಸಲ ೨-೩ ದಿನ ಸಮಯ ತಗೊಂಡು ಮೂರೂ ಜನ ನಿಂತು ಸೆಟ್ಸ್ ಹಾಕುತ್ತಿದ್ದೆವು. 'ಕಾಸಿದ್ರೆ ಕೈಲಾಸ' ಚಿತ್ರಕ್ಕೆ ಹೀಗೆ ಸೆಟ್ಸ್ ಹಾಕಿ ಕೆಲಸ ಮಾಡಿದ್ದ ನೆನಪಿದೆ'' ಎಂದು ಆ ದಿನಗಳ ತಾಂತ್ರಿಕ ಸಂಗತಿಗಳ ಚಿತ್ರಣ ಕೊಡುತ್ತಾರೆ ಹಿರಿಯ ಛಾಯಾಗ್ರಾಹಕ ಜಾನಕಿರಾಂ. ಮದರಾಸು ಬಿಟ್ಟು ಕರ್ನಾಟಕಕ್ಕೆ ಬಂದ ಮೇಲೆ ಅವರು ಛಾಯಾಗ್ರಹಣ ಮಾಡಿದ ಮೊದಲ ಚಿತ್ರ ಆರೂರು ಪಟ್ಟಾಭಿ ನಿರ್ದೇಶನದ 'ಅನುರಾಧಾ'. ''ಮಧುಸೂದನ್ ಮಾಡಬೇಕಿತ್ತು. ಆಗಲಿಲ್ಲ. ಪ್ರೀಮಿಯರ್ ಕ್ಲೀನ್ ಮಾಡಿಸಿ ಪ್ರಾರಂಭಿಸಿದೆವು. ಸರ್ಕಾರದ ಸಹಾಯಧನ ಯೋಜನೆ ಘೋಷಣೆ ಆದ ಮೇಲೆ ಪ್ರಾರಂಭವಾದ ಮೊದಲ ಚಿತ್ರ ಇದು'' ಎಂದರು.

ಅದೇ ವರ್ಷ ಚಿತ್ರರಂಗದಲ್ಲಿ ಸಾಹಿತಿಯಾಗಿ, ಕಲಾವಿದರಾಗಿ, ನಿರ್ದೇಶಕರಾಗಿ ಹೆಸರು ಮಾಡಿದ್ದ ಹುಣಸೂರು ಕೃಷ್ಣಮೂರ್ತಿ ಅವರು ನಂದಿ ಪಿಕ್ಚರ್ಸ್‌ನ ನಾಗಣ್ಣ ಅವರಿಗಾಗಿ 'ಶ್ರೀಕೃಷ್ಣ ಗಾರುಡಿ' ಚಿತ್ರವನ್ನು ನಿರ್ದೇಶಿಸಿದರು. ಸಂಭಾಷಣೆ - ಹಾಡುಗಳೂ ಅವರದೇ. ರಾಜಕುಮಾರ್, ಸೂರ್ಯಕಲಾ, ಸಿದ್ಧಯ್ಯಸ್ವಾಮಿ, ಹನುಮಂತರಾವ್, ನರಸಿಂಹರಾಜು, ರಾಮಚಂದ್ರಶಾಸ್ತ್ರಿ, ಅನಿಲ್ ಕುಮಾರ್, ಗಣಪತಿಭಟ್, ವಾದಿರಾಜ್, ರೇವತಿ, ರಮಾದೇವಿ, ಲಲಿತಾ ರಾವ್.ಬಿ.ಎ. ಮುಂತಾದವರು ತಾರಾಗಣದಲ್ಲಿದ್ದರು. ನಾರದನ ಪಾತ್ರ ವಹಿಸಿದ್ದ ಅನಿಲ್ ಕುಮಾರ್ ಚತುರ್ಭಾಷಾ ತಾರೆ ಬಿ.ಜಯಮ್ಮನವರ ಸೋದರ. ಚಿತ್ರದಲ್ಲಿ ನಾರದ ಹೇಳುವ 'ಬೊಂಬೆಯಾಟವಯ್ಯ...' ಅತ್ಯುತ್ತಮ ಗೀತೆ. ಅದೇ ರೀತಿ 'ಭಲೆ ಭಲೆ ಗಾರುಡಿ...' - ಈ ಎರಡು ಹಾಡುಗಳೂ ಬಹಳ ಜನಪ್ರಿಯವಾದವು.

'ಕೃಷ್ಣಗಾರುಡಿ'ಯಲ್ಲಿ ಚಿರತೆಯೊಡನೆ ಸೆಣಸುವ ದೃಶ್ಯವೊಂದನ್ನು ಅತ್ಯಂತ ಶ್ರಮಪಟ್ಟು ಚಿತ್ರಿಸಲಾಗಿದೆ. ಬಳಸಲಾಗಿರುವ ಕೆಲವು ಗಾರುಡಿಗ ತಂತ್ರಗಳು, ಅಚ್ಚರಿಗಳು ಕನ್ನಡದಲ್ಲೇ ಮೊದಲ ಬಾರಿಗೆ ಎನ್ನಲಾಗಿದೆ. ವಿಶೇಷವಾದ ಸೆಟ್‌ಗಳನ್ನು ನಿರ್ಮಿಸಲಾಗಿತ್ತು. ಪದ್ಮಿನಿ - ಪ್ರಿಯದರ್ಶಿನಿಯವರ ನೃತ್ಯವೊಂದು ವಿಶೇಷ ಸೇರ್ಪಡೆ.

ಅರ್ಜುನನ ಗರ್ವಭಂಗ ಈ ಚಿತ್ರದ ಕಥಾವಸ್ತು. ಸಂಗೀತ ನಿರ್ದೇಶನ ಪೆಂಡ್ಯಾಲ ನಾಗೇಶ್ವರರಾವ್. ಒಳ್ಳೆಯ ಅಭಿನಯ, ಹಿತವಾದ ಸಂಗೀತ ಹಾಗೂ ಛಾಯಾಗ್ರಹಣದಲ್ಲಿ ಟ್ರಿಕ್ ಶಾಟ್‌ಗಳ ಚಮತ್ಕಾರದಿಂದಾಗಿ ಈ ಚಿತ್ರ ಯಶಸ್ವಿಯಾಯಿತು. ನಿರ್ಮಾಪಕ ನಾಗಣ್ಣನವರು ಬೆಂಗಳೂರಿನ ಮೇಯರ್ ಆಗಿದ್ದವರು ಮತ್ತು ಶಿವಾಜಿ ಟಾಕೀಸಿನ ಮಾಲೀಕರು.

ವಿಠಲ್ ಪ್ರೊಡಕ್ಷನ್ಸ್‌ನ 'ಮನೆ ತುಂಬಿದ ಹೆಣ್ಣು' ವಿಠಲಾಚಾರ್ಯರು ನಿರ್ದೇಶಿಸಿ, ತಯಾರಿಸಿದ ಸಾಮಾಜಿಕ ಚಿತ್ರ. ಸಂಭಾಷಣೆಗಳನ್ನು ಬರೆದವರು ಇಂದಿರಾತನಯ



(ಚಿತ್ರ ೩೮) 'ಶ್ರೀಕೃಷ್ಣಗಾರುಡಿ' ಚಿತ್ರದಲ್ಲಿ ರಾಜಕುಮಾರ್

ಕಾವ್ಯನಾಮದ ವಿ.ಆರ್.ಶ್ಯಾಮ್. ಇವರು ಪತ್ರಕರ್ತರೂ, ಗಾಯಕರೂ ಆಗಿದ್ದರು. ಹಾಡುಗಳನ್ನು ಬರೆದವರು ಸೋರಟ್ ಅಶ್ವತ್ಥ್. ಸಂಗೀತ : ರಾಜನ್-ನಾಗೇಂದ್ರ.

ವಿಜಯ-ವಾಹಿನಿ ಸ್ಟುಡಿಯೋದಲ್ಲಿ ಚಿತ್ರ ತಯಾರಾಯಿತು. ಉದಯಕುಮಾರ್, ಆದವಾನಿ ಲಕ್ಷ್ಮೀದೇವಿ, ಲಲಿತಾ ರಾವ್, ಬಾಲಕೃಷ್ಣ, ನರಸಿಂಹರಾಜು, ರಮಾದೇವಿ ಮುಂತಾದವರು ಅಭಿನಯಿಸಿದ್ದರು.

ಈ ಚಿತ್ರದ ಮುಖ್ಯ ಆಕರ್ಷಣೆ ಸೀತಾಪತಿ ಪಾತ್ರದಲ್ಲಿ ಟಿ.ಎನ್.ಬಾಲಕೃಷ್ಣ ಅವರ ಸ್ಮರಣೀಯ ಅಭಿನಯ. ಹಿಂದೆ 'ಕನ್ಯಾದಾನ'ದ ದಲ್ಲಾಳಿ ಸೀತಾರಾಮಯ್ಯನಂತೆಯೇ ಇಲ್ಲಿ ಸೀತಾಪತಿಯಾಗಿ ಗಮನ ಸೆಳೆಯುತ್ತಾರೆ. ಈ ಹಿಂದೆ ಆಚಾರ್ಯರಿಂದಲೇ ತಯಾರಾದ 'ಮುತ್ತೈದೆ ಭಾಗ್ಯ', 'ಕನ್ಯಾದಾನ' ಚಿತ್ರದ ಸೂತ್ರಗಳೇ ಇಲ್ಲೂ ಇದ್ದವು. ಚಿತ್ರದ ಉದ್ದಕ್ಕೂ 'ಹುಚ್ಚು'ತನಕ್ಕೇ ಪ್ರಾಧಾನ್ಯ. ಹಿಂದಿನ ಚಿತ್ರಗಳ ಜಾಡಿನಿಂದ ಹೊರತಾದ ಅಂಶವೆಂದರೆ ಹುಚ್ಚಿನ ಪ್ರಸಂಗ. ಅಬ್ಬರ, ಆಭಾಸಗಳು ಹೆಚ್ಚಾಗಿವೆ. ಇಂದಿರಾತನಯರ ಸಂಭಾಷಣೆಯಲ್ಲಿ ಹೊಸತನವಿತ್ತು. ಅತಿಯಾದ ಪ್ರಾಸ ಒಮ್ಮೊಮ್ಮೆ ಇರಿಸು ಮುರಿಸೆನಿಸುತ್ತಿತ್ತು. ಆದವಾನಿ ಲಕ್ಷ್ಮಿ, ನರಸಿಂಹರಾಜು ಅವರದು ಉತ್ತಮ ಅಭಿನಯ. ವಿಶೇಷವೆಂದರೆ ಗೋಪಿಕೃಷ್ಣ - ಇ.ವಿ.ಸರೋಜರ ನೃತ್ಯ. ನೃತ್ಯದ ಗೀತೆಗೆ ಕನ್ನಡದ ಶಬ್ದಗಳನ್ನು ಸರಿಯಾಗಿ ಕೂಡಿಸಲು ಆದಂತಿಲ್ಲ. ತುಟಿ ಚಲನೆ ಹೊಂದುವುದಿಲ್ಲ. ವಿಠಲಾಚಾರ್ಯರಂಥ ಡಬ್ಬಿಂಗ್ ಕಲೆಯ ನಿಷ್ಣಾತರಿಗೂ ಇದು ಅಸಾಧ್ಯವಾಯಿತೇ ಎಂಬ ಆಕ್ಷೇಪವೂ ಬಂತು.

ಅನಂತರ ಬಂದದ್ದು ಗ್ರಾಮೀಣ ಭಾಷೆಯ ಸತ್ವದಿಂದ ಕೂಡಿದ 'ಅಣ್ಣ-ತಂಗಿ'. ಗಿರಿಜಾ ಪ್ರೊಡಕ್ಷನ್ಸ್ ಲಾಂಛನದಡಿ ಕರಿಬಸವಯ್ಯ ತಯಾರಿಸಿದ ಈ ಚಿತ್ರದಲ್ಲಿ ರಾಜಕುಮಾರ್, ಬಿ.ಸರೋಜಾದೇವಿ, ಕೆ.ಎಸ್.ಅಶ್ವತ್ಥ್, ವಿದ್ಯಾವತಿ, ಜಯಮ್ಮ, ಬಾಲಕೃಷ್ಣ, ನರಸಿಂಹರಾಜು ಮುಂತಾದವರು ಅಭಿನಯಿಸಿದ್ದರು. ಸಾಹಿತ್ಯ ಒದಗಿಸಿದ ಕು.ರ.ಸೀತಾರಾಮಶಾಸ್ತ್ರಿಗಳೇ ಈ ಚಿತ್ರದ ನಿರ್ದೇಶಕರು.

ಈ ಚಿತ್ರದಲ್ಲಿ ರಾಜಕುಮಾರ್ ಅವರದು ಗ್ರಾಮೀಣ ಭಾಷೆಯಲ್ಲಿ ಮಾತನಾಡುವ ಹಳ್ಳಿಯ ಮುಗ್ಧನೊಬ್ಬನ ಪಾತ್ರ. ಅಂಥದೇ ಪಾತ್ರ ಸರೋಜಾದೇವಿಯದು. ಆಕೆ ಆ ವೇಳೆಗಾಗಲೇ ದಕ್ಷಿಣ ಭಾರತದಲ್ಲೆಲ್ಲಾ ದೊಡ್ಡ ತಾರೆಯಾಗಿ



(ಚಿತ್ರ ೩೯) 'ಮನೆ ತುಂಬಿದ ಹೆಣ್ಣು' ಚಿತ್ರದಲ್ಲಿ ಆದವಾನಿ ಲಕ್ಷ್ಮೀದೇವಿ, ರಾಮಚಂದ್ರಶಾಸ್ತ್ರಿ ಲಲಿತಾ ರಾವ್

ಹೆಸರು ಮಾಡಿದ್ದರು. ಇವರಿಬ್ಬರ ಸಂಭಾಷಣೆಗಳನ್ನು ಜನ ಇಂದಿಗೂ ನೆನಪು ಮಾಡಿಕೊಳ್ಳುತ್ತಾರೆ. ಅಭಿನಯವೂ ಅಷ್ಟೇ, ಎಂದೆಂದಿಗೂ ನೆನಪಿನಲ್ಲುಳಿಯುವಂಥದು. ಚಿತ್ರದಲ್ಲಿ ನಾಯಕ ಬಿಟ್ಟು ಹೋದ ಟವೆಲ್ ಅನ್ನು ಪಡೆಯಲು ವಾಪಸ್ ಬರುತ್ತಾನೆ. ಆಗ ನಾಯಕ-ನಾಯಕಿಯರ ಮಾತು, ಅಭಿನಯದ ದೃಶ್ಯ ಸವಿರಾದ ಚಿತ್ರಣಕ್ಕೆ ಉತ್ತಮ ಉದಾಹರಣೆ. ಕು.ರ.ಸೀ. ಅವರ ಸಂಭಾಷಣೆ ಹಾಗೂ ಎಲ್ಲ ಗೀತೆಗಳೂ ಚೆನ್ನಾಗಿವೆ. ಅವರಿಗೆ ಸಾಹಿತ್ಯದ ಜತೆಗೆ ಸಂಗೀತ ಜ್ಞಾನವೂ ಇದ್ದುದರಿಂದ ಅವರ ರಚನೆಗಳಿಗೆ ವಿಶೇಷ ಶಕ್ತಿ ಇರುತ್ತಿತ್ತು.

'ಅಣ್ಣ-ತಂಗಿ' ಒಂದು ರೀಮೇಕ್ ಎನ್ನಿಸುವುದೇ ಇಲ್ಲ. ಇದರ ಮೂಲ ಶಿವಾಜಿ ಗಣೇಶನ್ ಮತ್ತು ಭಾನುಮತಿ, ಕನ್ನಾಂಬ ಅಭಿನಯದ 'ಮಕ್ಕಳ್ಳೆ ಪೆಟ್ರ ಮಹರಾಸಿ'.

ಆ ವರ್ಷ ತೆರೆಕಂಡ 'ಮಾಂಗಲ್ಯ ಯೋಗ' ಸಾಮಾಜಿಕ ಚಿತ್ರ. ಮುಂಬಯಿನಲ್ಲಿ ನೆಲೆಸಿದ್ದ ಕನ್ನಡಿಗರೇ ಆದ ಪಿ.ಕೆ.ಲಾಲ್ ಅವರು ನಿರ್ದೇಶಿಸಿದ ಈ ಚಿತ್ರ ಮದರಾಸಿನಲ್ಲೇ ತಯಾರಾಯಿತು. ಈ ಚಿತ್ರದ ವಿಶೇಷವೆಂದರೆ ಇದು ತಾರೆ ಲೀಲಾವತಿ ಅವರ ಅಭಿನಯದ ಪ್ರಥಮ ಚಿತ್ರ. ಇದಕ್ಕೆ ಮುಂಚೆ 'ಗಂಗೆ-ಗೌರಿ' ಎಂಬ ಚಿತ್ರದಲ್ಲಿ ಅವರು ನಟಿಸಿದ್ದರೂ ಆ ಚಿತ್ರ ಪೂರ್ತಿಗೊಳ್ಳಲೇ ಇಲ್ಲ. ಇದೇ ರೀತಿ ಅನೇಕ ಚಿತ್ರಗಳು ತಯಾರಿಕೆ ಪ್ರಾರಂಭಿಸಿ ಅರ್ಧದಲ್ಲೇ ನಿಂತುಹೋದ ಉದಾಹರಣೆಗಳಿವೆ. ಒಂದೆರಡು ಚಿತ್ರಗಳು ಪೂರ್ತಿಗೊಂಡರೂ ಕಾರಣಾಂತರಗಳಿಂದ ಪ್ರದರ್ಶನ ಯೋಗ ಕಾಣಲಿಲ್ಲ.

೧೯೫೯ರಲ್ಲಿ ಚಿತ್ರಗಳ ಸಂಖ್ಯೆ ಇನ್ನಷ್ಟು ಕುಗ್ಗಿತು. ಆ ವರ್ಷ ತೆರೆಕಂಡದ್ದು ಕೇವಲ ಆರು ಚಿತ್ರಗಳು. ಇವುಗಳಲ್ಲಿ ಮೂರು ಸಾಮಾಜಿಕ (ಮಂಗಳ ಸೂತ್ರ, ಮನೆಗೆ ಬಂದ ಮಹಾಲಕ್ಷ್ಮಿ ಮತ್ತು ಅಬ್ಬಾ ಆ ಹುಡುಗಿ), ಒಂದು ಜಾನಪದ (ಧರ್ಮ ವಿಜಯ), ಒಂದು ಜೀವನ ಚರಿತ್ರೆ (ಜಗಜ್ಯೋತಿ ಬಸವೇಶ್ವರ) ಮತ್ತು ಒಂದು ಪೌರಾಣಿಕ (ಮಹಿಷಾಸುರ ಮರ್ದಿನಿ).

ಈ ಪೈಕಿ 'ಮನೆಗೆ ಬಂದ ಮಹಾಲಕ್ಷ್ಮಿ' ತಾರೆ ರೇವತಿ ಮಂಜುನಾಥ ಪ್ರೊಡಕ್ಷನ್ ಲಾಂಛನದಲ್ಲಿ ತಯಾರಿಸಿದ ಚಿತ್ರ. ಈ ಚಿತ್ರದ ಸಮಯದಲ್ಲಿ ರೇವತಿ-ಕಲ್ಯಾಣ್ ನಡುವೆ ಅನುರಾಗ ಬೆಳೆದು ಮುಂದೆ ಅವರಿಬ್ಬರೂ ಸತಿ-ಪತಿಗಳಾದರು. ಬಿ.ವಿ.ಆಚಾರ್ಯ ಚಿತ್ರದ ನಿರ್ದೇಶಕರು. ಆದರೆ ನಿರ್ದೇಶನದ ಹೆಚ್ಚಿನಂಶ ಅವರ ಶಿಷ್ಯ ಗೋವಿಂದಯ್ಯ ನೋಡಿಕೊಂಡರು. ಸಹಜವಾಗಿಯೇ ಜಾನಪದದಲ್ಲಿ ಅವರಿಗಿದ್ದ ಪ್ರೀತಿಯಿಂದಾಗಿ ಈ ಸಾಮಾಜಿಕ ವಸ್ತುವಿದ್ದ ಚಿತ್ರದಲ್ಲೂ ಗ್ರಾಮೀಣ ಜನತೆಯ ಜನಪದ ಕಲೆಗಳನ್ನು ಬಳಸಿ ಅದರ ವೈಶಿಷ್ಟ್ಯವನ್ನು ಎತ್ತಿ ಹೇಳುವ ಉತ್ಸಾಹ ತೋರಿದರು. ರೇವತಿ, ಕೆ.ಎಸ್.ಅಶ್ವತ್ಥ್, ರಮಾದೇವಿ, ಕಲ್ಯಾಣ್‌ಕುಮಾರ್, ಜಿ.ವಿ.ಅಯ್ಯರ್, ವೈನಾವತಿ, ಹೆಚ್.ಆರ್.ಶಾಸ್ತ್ರಿ, ಚಂದ್ರಯ್ಯಸ್ವಾಮಿ ಮೊದಲಾದವರು ಅಭಿನಯಿಸಿದ್ದರು. ರಾಜನ್-ನಾಗೇಂದ್ರರ ಸಂಗೀತವಿತ್ತು.



(ಚಿತ್ರ ೪೧)'ಅಬ್ಬಾ ಆ ಹುಡುಗಿ' ಚಿತ್ರದಲ್ಲಿ ರಾಜಾಶಂಕರ್ ಮತ್ತು ಮೈನಾವತಿ



(ಚಿತ್ರ ೪೦)'ಅಣ್ಣ ತಂಗಿ' ಚಿತ್ರದಲ್ಲಿ ರಾಜಕುಮಾರ್ ಮತ್ತು ಬಿ.ಜಯಮ್ಮ

ವಾಹಿನಿ ಸ್ಟುಡಿಯೋದಲ್ಲಿ ಚಿತ್ರೀಕರಿಸಲ್ಪಟ್ಟಿತು. ಕಲಾನಿರ್ದೇಶಕರು ಜಿ.ವಿ.ಬಾಬು. ಕಲೆ ಕುರಿತ ಪ್ರಚಾರ ಮಾಡಿರುವುದು ವಿಶೇಷ. ಎಲ್ಲೂ ಕಲೆಯ ಬಗ್ಗೆ ಹೇಳುತ್ತಿರಲಿಲ್ಲ. ವ್ಯವಸಾಯದಲ್ಲಿ ಆಧುನಿಕ ಯಂತ್ರೋಪಕರಣಗಳ ಬಳಕೆ, ಸಾಮೂಹಿಕ ವ್ಯವಸಾಯ, ಪ್ರಗತಿ ಇತ್ಯಾದಿ ಆ ಹೊತ್ತಿನ ಜನಪರ ಅಂಶಗಳನ್ನು ಒಳಗೊಂಡ ಕಥೆ ಇದಾಗಿತ್ತು. ಗ್ರಾಮೋದ್ಧಾರದ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಗ್ರಾಮವೊಂದರ ಒಳ ಜಗಳಗಳು, ಗುಂಪುಗಳಾಗಿ ಬೇರೆಯಾಗುವುದು ಇತ್ಯಾದಿ ಹಳ್ಳಿಯ ಬದುಕನ್ನು ಚಿತ್ರಿಸುತ್ತಲೇ ನಾಯಕ ನಟ ಟ್ರ್ಯಾಕ್ಟರ್ ತಂದು ಹೊಲ ಉಳುವ ಅಂಶ ವಿಶೇಷವಾಗಿತ್ತು. ಇಂದಿರಾತನಯರು ರಚಿಸಿದ ಸಾಹಿತ್ಯ ತತ್ಕಾಲೀನ ಸಮಾಜಕ್ಕೆ ಕನ್ನಡಿ ಹಿಡಿಯುವ, ದೇಶದ ಪ್ರಗತಿಗಾಗಿ ನಾಯಕರು ಹೇಳುತ್ತಿದ್ದ ಮಾತುಗಳನ್ನು ಜನಸಾಮಾನ್ಯರಿಗೆ ದೃಶ್ಯಗಳ ಮೂಲಕ ಹೇಳುವ ಪ್ರಯತ್ನವಿತ್ತು.

'ಅಬ್ಬಾ ಆ ಹುಡುಗಿ' ಚಿತ್ರದ ಮೂಲಕ ರಾಜಾಶಂಕರ್ ನಾಯಕ ನಟನಾಗಿ ಚಿತ್ರರಂಗ ಪ್ರವೇಶಿಸಿದರು. ರಾಜಕುಮಾರ್, ಪಂಢರಿಬಾಯಿ, ಮೈನಾವತಿ, ಎಂ.ವಿ.ರಾಜಮ್ಮ ಮತ್ತು ಬಿ.ಆರ್.ಪಂತುಲು ಈ ಚಿತ್ರದಲ್ಲಿ ಅಭಿನಯಿಸಿದ್ದರು. ಸಂಗೀತ ನೀಡಿದವರು ಪಿ.ಕಾಳಿಂಗರಾವ್. ಈ ಚಿತ್ರವನ್ನು ಹೆಚ್.ಎಲ್.ಎನ್.ಸಿಂಹ ನಿರ್ದೇಶಿಸಿದರು. ಅವರೇ ಕಥೆ, ಸಂಭಾಷಣೆ, ಗೀತೆ ಸಹ ಬರೆದರು. ಪಂತುಲು-ಎಂ.ವಿ.ರಾಜಮ್ಮ ಅಭಿನಯಿಸಿದ್ದ 'ಸಂಸಾರ ನೌಕ' ಚಿತ್ರದ ಒಂದು ದೃಶ್ಯ ಸೇರಿಸಿತ್ತು. ಅದೇ ದೃಶ್ಯ ಮತ್ತು ಮತ್ತೆ ಅವರಿಬ್ಬರೂ ಆ ದೃಶ್ಯವನ್ನೇ ಅಭಿನಯಿಸಿರುವುದು ಚಿತ್ರದ ಒಂದು ವಿಶೇಷ.

ಸಿಂಹ ಅವರ ಜನಪ್ರೀತಿ ಹೇಗೆಂದರೆ ಪಾತ್ರ ಕೊಡಿ ಎಂದವರಿಗೆಲ್ಲ - ಬಹುತೇಕ ಅವರ ರಂಗ ಶಿಷ್ಯರಿಗೆ - ಅವಕಾಶ ಮಾಡಿದರು. ಅವರಿಗಾಗಿ ಸನ್ನಿವೇಶಗಳನ್ನು ಹೊಸದಾಗಿ ಸೇರಿಸಿದರು. ಇದೆಲ್ಲ ಕಾರಣಗಳಿಂದಾಗಿ ಚಿತ್ರನಾಟಕದ ಬಂಧವೇ ತಪ್ಪಿ ಹೋಯಿತು. ಚಿತ್ರಕಥೆಗೆ 'ಟೇಮಿಂಗ್ ಆಫ್ ದಿ ಶ್ರೂ' ನಾಟಕ ಸ್ಫೂರ್ತಿಯಾಗಿತ್ತು. ರಂಗದ ಮೇಲೆ ಯಶಸ್ವಿಯಾಗಿದ್ದ ನಾಟಕ. ರಾಜಾಶಂಕರ್-ಮೈನಾವತಿ ನಾಯಕ-ನಾಯಕಿಯಾಗಿದ್ದರೆ, ಸಿಂಹ ಅವರೇ ಒಂದು ಪಾತ್ರದಲ್ಲಿದ್ದರು. ಸಿಂಹ ಅವರನ್ನು ನಂಜನಗೂಡಿನಲ್ಲಿ ಭಾರೀ ಸಮಾರಂಭ ಮಾಡಿ ಸನ್ಮಾನಿಸಿದ್ದರು. ಸಮಾರಂಭವನ್ನು ದಕ್ಷಿಣ ಭಾರತ ಫಿಲಂ ಚೇಂಬರ್ ಹಾಗೂ ಎ.ವಿ.ಎಂ.ಚೆಟ್ಟಿಯಾರ್, ನಾಗಿರೆಡ್ಡಿ ಸಂಯೋಜಿಸಿದ್ದರೆಂದೂ, ಎಲ್ಲ ಭಾಷೆಯ ನಟ-ನಟಿಯರೂ ಆಗಮಿಸಿದ್ದ ಆ ಸಮಾರಂಭಕ್ಕೆ ಎಂ.ಜಿ.ರಾಮಚಂದ್ರನ್ ಮುಖ್ಯ ಅತಿಥಿಯಾಗಿದ್ದರು ಮತ್ತು ಆಗಿನ ಮದರಾಸಿನ ಮುಖ್ಯಮಂತ್ರಿ, ಮುಂದೆ ರಾಷ್ಟ್ರಪತಿಯೂ ಆದ ಆರ್.ವೆಂಕಟರಾಮನ್ ಅವರು ಸಮಾರಂಭದ ಅಧ್ಯಕ್ಷರಾಗಿದ್ದರೆಂದೂ ಸಿಂಹ ಅವರ ಮಗ ಶೇಷಚಂದ್ರ ಅವರ ದಾಖಲೆಗಳಿಂದ ತಿಳಿದುಬರುತ್ತದೆ.

ಅನಂತರ ಬಂದ 'ಜಗಜ್ಯೋತಿ ಬಸವೇಶ್ವರ' ಒಂದು ಉತ್ತಮ ಚಿತ್ರ. ಈ ಚಿತ್ರದ ಬಗ್ಗೆ ಪ್ರಸ್ತಾಪಿಸುವಾಗ ಹಿಂದೆ ನಡೆದ ಒಂದು ಪ್ರಯತ್ನ ನೆನಪಿಗೆ ಬರುತ್ತದೆ. ೧೯೫೦ರಷ್ಟು

ಮುಂಚೆಯೇ ಸುಬೋಧ ಚಿತ್ರ ಸಂಸ್ಥೆಯ ಲಾಂಛನದಡಿ 'ಭಗವಾನ್ ಬಸವೇಶ್ವರ' ಎಂಬ ಹೆಸರಿನಲ್ಲಿ ಚಿತ್ರ ತಯಾರಿಸಲು ಸಿದ್ಧತೆಗಳಾಗಿದ್ದವು. ಹೈಕೋರ್ಟ್ ವಕೀಲರಾಗಿದ್ದ ದಾನಿ ಎಸ್.ರುದ್ರಪ್ಪ ಈ ಸಂಸ್ಥೆಯ ಛೇರ್ಮನ್ ಆಗಿದ್ದರು. ಗುರುಮಠಕಲ್ ಖಾಸಾಮಠದ ನಿರಂಜನ ಶಾಂತವೀರಸ್ವಾಮಿ ಅವರು ಕನ್ನಡ ಚಿತ್ರಗಳ ಅವನತಿಯ ಬಗ್ಗೆ ಬಹುವಾಗಿ ಮರುಕಗೊಂಡು ಈ ಪ್ರಯತ್ನಕ್ಕೆ ನೆರವು ನೀಡಲು ಉದ್ದೇಶಿಸಿ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳೊಂದಿಗೆ ಸಂಸ್ಥೆಯ ಮ್ಯಾನೇಜ್‌ಮೆಂಟ್ ನೋಡಿಕೊಳ್ಳಲು ಒಪ್ಪಿದ್ದರು. ಎಸ್.ಎಸ್.ವೈದ್ಯ ಸಂಚಾಲಕರಾಗಿದ್ದರು. ಇಷ್ಟೆಲ್ಲ ಸಿದ್ಧತೆಗಳಾಗಿದ್ದೂ ಚಿತ್ರ ತಯಾರಾಗಲೇ ಇಲ್ಲ.

ಕಡೆಗೆ ವಿಶ್ವಕಲಾ ಚಿತ್ರ ಸಂಸ್ಥೆಯ ವಿಶ್ವನಾಥಶೆಟ್ಟಿ ಅವರು 'ಜಗಜ್ಯೋತಿ ಬಸವೇಶ್ವರ' ಚಿತ್ರದ ತಯಾರಿಕೆಯನ್ನು ಪ್ರಾರಂಭಿಸಿದರು. ಅದೇ ವೇಳೆಗೆ ಗುಬ್ಬಿ ಕರ್ನಾಟಕ ಫಿಲಂಸ್ ಕೂಡ ಬಸವೇಶ್ವರ ಚಿತ್ರವನ್ನು ತಯಾರಿಸುವುದಾಗಿ ಪ್ರಕಟಿಸಿತ್ತು. ಇದು ಮತ್ತೊಂದು ಸಂಚಿಕ್ಕ-ಸಂಬಿಯಕ್ಕ ಪ್ರಕರಣವಾಗುವುದೇನೋ ಎಂಬ ಆತಂಕ ಚಿತ್ರವಲಯಗಳಲ್ಲಿ ವ್ಯಕ್ತವಾಯಿತು. ಆದರೆ ಅಂಥದ್ದೇನೂ ನಡೆಯಲಿಲ್ಲ. ಕಡೆಗೆ ತಯಾರಿಸಿದವರು ವಿಶ್ವನಾಥಶೆಟ್ಟರೇ. 'ಸೋದರಿ', 'ಹರಿಭಕ್ತ', 'ಓಹಿಲೇಶ್ವರ'ದಂಥ ಉತ್ತಮ ಚಿತ್ರಗಳನ್ನು ತಯಾರಿಸಿ ಆರ್ಥಿಕವಾಗಿ ಸಂಕಷ್ಟಕ್ಕೆ ಗುರಿಯಾಗಿದ್ದರೂ ಕನ್ನಡ ಭಾಷೆಯ ಮೇಲಿನ ಅಭಿಮಾನದಿಂದ ಅವರು ಈ ಚಿತ್ರ ತಯಾರಿಸುವ ಸಾಹಸ ಮಾಡಿದರು. ಎಂದಿನಂತೆ ಎಲ್ಲ ವ್ಯವಹಾರಗಳ ಜವಾಬ್ದಾರಿಯನ್ನು ಜಿ.ವಿ.ಅಯ್ಯರ್ ಅವರಿಗೆ ವಹಿಸಿದರು.

ಬಸವೇಶ್ವರನ ಪಾತ್ರಕ್ಕೆ ಹೊನ್ನಪ್ಪ ಭಾಗವತರ್ ಅವರನ್ನೂ, ಬಿಜ್ಜಳನ ಪಾತ್ರಕ್ಕೆ ರಾಜಕುಮಾರ್ ಅವರನ್ನೂ ಆಯ್ಕೆ ಮಾಡಲಾಯಿತು. ಇತರ ಪಾತ್ರಗಳಿಗೆ ಬಿ.ಸರೋಜಾದೇವಿ, ಲೀಲಾವತಿ, ಸಂಧ್ಯಾ, ಕೆ.ಎಸ್.ಅಶ್ವತ್ಥ್, ಬಾಲಕೃಷ್ಣ, ಜಿ.ವಿ.ಅಯ್ಯರ್, ಚಿ.ಸದಾಶಿವಯ್ಯ ಮುಂತಾದವರು ಗೊತ್ತಾದರು. ಚಿತ್ರ ತಯಾರಿಕೆ ಪ್ರಗತಿಯಲ್ಲಿದ್ದಾಗ ಹಣಕಾಸಿನ ತೊಂದರೆ ಉಂಟಾಯಿತು. ಆಗ ವಿಶ್ವನಾಥಶೆಟ್ಟರೆ ಅವರ ತಮ್ಮನಿಂದ ಸ್ವಲ್ಪ ಹಣ ಸಹಾಯ ಪಡೆದು ಮುಂದುವರೆಸಿದರು. ಹೀಗಾಗಿ ವಿಶ್ವಕಲಾ ಚಿತ್ರ ಬ್ಯಾನರನ್ನು ಶಶಿಕಲಾ ಚಿತ್ರ ಎಂದು ಬದಲಾಯಿಸಿದರು. ಅಯ್ಯರ್ ಅವರ ಸಾಹಿತ್ಯ, ಜಿ.ಕೆ.ವೆಂಕಟೇಶ್ ಅವರ ಸಂಗೀತದೊಂದಿಗೆ ಚಿತ್ರ ಉತ್ತಮ ರೀತಿಯಲ್ಲಿ ಸಿದ್ಧವಾಯಿತು. ನಿರ್ದೇಶಕರು : ಟಿ.ವಿ.ಸಿಂಗ್ ಠಾಕೂರ್.

೧೯೫೮ರಲ್ಲೇ ಗುಬ್ಬಿ ಫಿಲಂಸ್‌ನವರು 'ಬಸವೇಶ್ವರ' ಚಿತ್ರಿಸಲು ಸಿದ್ಧವಾಗುತ್ತಿದ್ದಾಗ ಜಗನ್ನಾಥ್ ಪಿಕ್ಚರ್ಸ್‌ನವರೂ ಏರ್ಪಾಡು ಮಾಡಿಕೊಂಡಿದ್ದರು. ಇವರಿಬ್ಬರ ನಡುವೆ ಸದ್ದಿಲ್ಲದೆ ಶಶಿಕಲಾ ಸಂಸ್ಥೆ ಪ್ರಾರಂಭವಾಯಿತು ಮತ್ತು ಅದು 'ಜಗಜ್ಯೋತಿ ಬಸವೇಶ್ವರ'ದ ಕೆಲಸ ಪ್ರಾರಂಭಿಸಿಬಿಟ್ಟಿತ್ತು. ಸುಮಾರು ಒಂಬತ್ತು ದಿನಗಳ ಕೆಲಸವೂ ಆಯಿತು. ಶಶಿಕಲಾ ಸಂಸ್ಥೆಯು ವಿಶ್ವಕಲಾರವರ ಸೋದರ ಸಂಸ್ಥೆ. ಬೇರೆಯವರು ಏನು ಮಾಡುತ್ತಿದ್ದಾರೆಂದು ಗಮನಿಸಲೇ ಇಲ್ಲ. ಶ್ಯಾಮಲಾ ಸ್ಟುಡಿಯೋದಲ್ಲಿ ಕಾರ್ಯಾರಂಭ ಮಾಡಿಬಿಟ್ಟಿತ್ತು. ಎಂ.ಎನ್.ನಂಜಪ್ಪನವರು ಸಾಹಿತ್ಯ ರಚಿಸಿದ್ದರು. ಸಿಂಗ್ ಠಾಕೂರರು ನಿರ್ದೇಶಿಸುತ್ತಿದ್ದರು.



(ಚಿತ್ರ ೪೨) 'ಜಗಜ್ಯೋತಿ ಬಸವೇಶ್ವರ' ಚಿತ್ರದಲ್ಲಿ ಹೊನ್ನಪ್ಪ ಭಾಗವತರ್

ಇದೇ ಹೊತ್ತಿನಲ್ಲೇ ಹಿಂದೆ 'ಚಂದ್ರಹಾಸ' ನಿರ್ಮಿಸಿದ್ದ ಪಂಪಾ ಪಿಕ್ಚರ್ಸ್‌ನವರು ಹಾಗೂ ಮಹಾತ್ಮ ಸಂಸ್ಥೆಯ ಶಂಕರಸಿಂಗ್ ಕೂಡಾ ಬಸವೇಶ್ವರ ತಯಾರಿಸಲು ಪ್ರಯತ್ನಿಸಿದರು. ಶಂಕರಸಿಂಗ್ ಅವರಂತೂ ಗುಬ್ಬಿ ಸಂಸ್ಥೆಯವರೊಂದಿಗೆ ಒಪ್ಪಂದ ಮಾಡಿಕೊಂಡು 'ಪ್ರಭುಲಿಂಗಲೀಲೆ' ಚಿತ್ರಿಸುತ್ತಿದ್ದರು.

ಈ ಮಧ್ಯೆ ಜಿ.ವಿ.ಅಯ್ಯರ್ ಅವರು ವೀರಣ್ಣನವರ ಬಳಿ ಮಾತನಾಡಿ ಅವರಿಗೇ ಚಿತ್ರದ ಹಂಚಿಕೆ ಕೊಡುವುದಾಗಿ ಒಪ್ಪಿಸಿ, ಶಶಿಕಲಾ ಸಂಸ್ಥೆಯ ಚಿತ್ರ ನಿರ್ಮಾಣವೇ ಗಟ್ಟಿ ಆಗುವಂತೆ ಮಾಡಿದರು. ಪೈಪೋಟಿಗಳ ರಭಸ ನಿಂತು ಚಿತ್ರ ನಿರ್ಮಾಣದತ್ತ ನೆಮ್ಮದಿಯಿಂದ ಗಮನ ಹರಿಸುವಂತಾಯಿತು. ಅಯ್ಯರ್ ಚಿತ್ರಕಥೆಗೆ ಮತ್ತಷ್ಟು ರಕ್ತಮಾಂಸ ತುಂಬಿದರು. ಸೆಟ್‌ಗಳು ಭವ್ಯವೂ, ಅಧಿಕೃತವೂ ಆಗುವಂತೆ ನೋಡಿಕೊಂಡರು. ಮುಖ್ಯವಾಗಿ ಹಿನ್ನೆಲೆ ಗಾಯನಕ್ಕೆ ಎಲ್ಲರೂ ಕನ್ನಡಿಗರೇ ಎಂಬುದೊಂದು ನೆಮ್ಮದಿಯ ಸುದ್ದಿಯಾಗಿತ್ತು. ವಚನಗಳ ಗಾಯನ 'ಕ' 'ಗ' ಗಳ ಬೆರಕೆಯಲ್ಲಿ ಅಪಭ್ರಂಶವಾಗುವುದು ತಪ್ಪಿತು ಎಂಬ ಸಮಾಧಾನ. ಜಿ.ಕೆ.ವೆಂಕಟೇಶ್‌ರ ಸಂಗೀತ ನಿರ್ದೇಶನದಲ್ಲಿ ಕಾಳಿಂಗರಾಯರು, ಮೋಹನಕುಮಾರಿ, ನಾಗರತ್ನ, ಹೊನ್ನಪ್ಪ ಭಾಗವತರು ಹಾಡಿದರು.

ಕಲ್ಯಾಣನಗರ, ಅದರ ಹೊರವಲಯದ ಗುಡಿಸಲುಗಳು, ಅಸ್ಪೃಶ್ಯರ ಕೇರಿ ಇವಕ್ಕೆಲ್ಲ ಸೊಗಸಾಗಿ ಸೆಟ್‌ಗಳನ್ನು ಹಾಕಲಾಗಿತ್ತು. ಚಿತ್ರದಲ್ಲಿ ಸುಮಾರು ೨೦ಕ್ಕೂ ಹೆಚ್ಚು ಪ್ರಮುಖ ಪಾತ್ರಗಳಿದ್ದವು. ಹಿರಿಯ ಕಲಾವಿದರೂ ಇದ್ದರು. ಪ್ರಸಿದ್ಧ ನಟ ಹುಲಿಮನೆ ಸೀತಾರಾಮಶಾಸ್ತ್ರಿಗಳನ್ನೂ ಕರೆತರಲಾಗಿತ್ತು.

ಜೆಮಿನಿ ಸ್ಟುಡಿಯೋದ ಶ್ರೀಮಂತ ಫ್ಲೋರ್‌ಗಳಲ್ಲಿ, ವಾಹಿನಿ, ರೇವತಿ, ಶ್ಯಾಮಲಾ ಮೊದಲಾದ ಕಡೆಗಳಲ್ಲಿ ಚಿತ್ರೀಕರಣ ನಡೆಸಿದರು. ಮುಖ್ಯವಾಗಿ ಕಲ್ಯಾಣ, ಕೂಡಲ ಸಂಗಮಗಳಲ್ಲಿ ಚಿತ್ರೀಕರಣ ಮಾಡುವುದು ವಿಶೇಷವೆನಿಸಿತ್ತು. ಚಿತ್ರವು ತೆರೆಕಂಡದ್ದು ಮಾತ್ರ ೧೯೫೯ರಲ್ಲಿ.

ಎಚ್.ಎಂ.ಬಾಬಾ ಅವರ 'ಧರ್ಮ ವಿಜಯ' ಒಂದು ಸಾಧಾರಣ ಚಿತ್ರ. ಆದರೆ ಕನ್ನಡ ಚಿತ್ರಗಳೇ ಇಲ್ಲದೆ ಕಲಾವಿದರು ಕಂಗಾಲಾದ ಹೊತ್ತಿನಲ್ಲಿ ಒದಗಿದ ನೆರವಿನಿಂದ ಬಂದ ಚಿತ್ರ. ರಾಜಕುಮಾರ್ ಮೊದಲಾದವರನ್ನು ಈ ಚಿತ್ರಕ್ಕೆ ಕರೆತಂದು ಕಾರ್ಯಾರಂಭ ಮಾಡಿದ್ದವರು ಸೋರಟ್ ಅಶ್ವತ್ಥ್. ಮತ್ತೆ ಚಾಲನೆಯೂ ಇವರಿಂದ ಸಿಕ್ಕಿತು.

ವಿಕ್ರಂ ಅವರ 'ಮಹಿಷಾಸುರ ಮರ್ದಿನಿ' ಆ ವರ್ಷ ತೆರೆಕಂಡ ಒಂದು ಮಹತ್ವದ ಚಿತ್ರ. ಹಲವಾರು ಅದ್ದೂರಿಯ ಪೌರಾಣಿಕ ಚಿತ್ರಗಳನ್ನು ತಯಾರಿಸಿದ ವಿಕ್ರಂ ಸ್ಟುಡಿಯೋದ ಮಾಲೀಕ ಬಿ.ಎಸ್.ರಂಗಾ ಅವರು ವಿಕ್ರಂ ಪ್ರೊಡಕ್ಷನ್ಸ್ ಲಾಂಛನದಡಿ ತಯಾರಿಸಿದ ಈ ಚಿತ್ರ ಅದ್ದೂರಿಯ ಸೆಟ್‌ಗಳಿಂದ, ಕಲಾವಿದರ ಉತ್ತಮ ಅಭಿನಯದಿಂದ ಒಂದು ಉತ್ತಮ ಚಿತ್ರವಾಗಿ ತಯಾರಾಯಿತು. ಮಹಿಷಾಸುರನ ಪಾತ್ರದಲ್ಲಿ ರಾಜಕುಮಾರ್ ಅದ್ಭುತವಾಗಿ ಅಭಿನಯಿಸಿದ್ದರು ಹಾಗೂ ಎಸ್.ಜಾನಕಿಯವರೊಂದಿಗೆ ಒಂದು ಡ್ಯುಯೆಟ್ ಹಾಡಿದ್ದರು. ಜಿ.ಕೆ.ವೆಂಕಟೇಶ್‌ರ ಸಂಗೀತ ನಿರ್ದೇಶನ ಸೊಗಸಾಗಿತ್ತು.



(ಚಿತ್ರ ೪೩) 'ಮಹಿಷಾಸುರ ಮರ್ದಿನಿ' ಚಿತ್ರದಲ್ಲಿ ರಾಜಕುಮಾರ್ ಮತ್ತು ಸಂಧ್ಯಾ



(ಚಿತ್ರ ೪೪) 'ರಣಧೀರ ಕಂಠೀರವ' ಚಿತ್ರದಲ್ಲಿ ಸಂಧ್ಯಾ, ರಾಜಕುಮಾರ್ ಮತ್ತು ಲೀಲಾವತಿ

ರಾಜಕುಮಾರ್, ಉದಯಕುಮಾರ್, ಸಾಹುಕಾರ್ ಜಾನಕಿ, ವಿ.ನಾಗಯ್ಯ, ಕೆ.ಎಸ್.ಅಶ್ವತ್ಥ್, ನರಸಿಂಹರಾಜು, ಜಿ.ಸದಾಶಿವಯ್ಯ ಹಾಗೂ ಮಹಿಷಾಸುರ ಮರ್ದಿನಿ ಚಾಮುಂಡೇಶ್ವರಿ ಪಾತ್ರದಲ್ಲಿ ನಟಿ ಸಂಧ್ಯಾ ಅಭಿನಯಿಸಿದ್ದರು. ರಂಗಾ ಅವರೇ ನಿರ್ದೇಶಿಸಿದ ಈ ಚಿತ್ರ ಭಾರೀ ಹಿಟ್ ಆಯಿತು. ಚಿತ್ರ ೧೦೦ ದಿನ ಓಡಿದ ನಂತರ ರಂಗಾ ಅವರು ರಾಜಕುಮಾರ್ ಅವರನ್ನು ಕರೆಸಿ ತಮ್ಮ ಸಂತೋಷ ವ್ಯಕ್ತಪಡಿಸಿ ಹಿಂದೆ ಕೊಟ್ಟಷ್ಟೇ ಸಂಭಾವನೆಯನ್ನು ಮತ್ತೆ ಅವರಿಗೆ ಉಡುಗೊರೆಯಾಗಿ ಕೊಟ್ಟರು. ಕೊಡಬೇಕಾದ ಸಂಭಾವನೆಯನ್ನೇ ಕೊಡಲು ಸತಾಯಿಸುವ ನಿರ್ಮಾಪಕರೇ ಹೆಚ್ಚಾಗಿರುವ ಚಿತ್ರರಂಗದಲ್ಲಿ ರಂಗಾ ಅವರಂಥ ವಿರಳರೂ ಇದ್ದಾರೆಂಬುದು ಸಂತಸದ ಸಂಗತಿ. ಈ ಚಿತ್ರ ಹಿಂದಿಯೂ ಸೇರಿದಂತೆ ಅನೇಕ ಭಾಷೆಗಳಲ್ಲಿ ಡಬ್ ಆಯಿತು.

೧೯೫೭ರ ನಂತರ ಕನ್ನಡ ಚಿತ್ರರಂಗದಲ್ಲಿ ಒಂದು ರೀತಿ ಬರಗಾಲವಿತ್ತು. ಕೈಯಲ್ಲಿ ಸಾಕಷ್ಟು ಚಿತ್ರಗಳಿಲ್ಲದೆ ಮದರಾಸಿನಲ್ಲಿ ನೆಲೆಸಿದ್ದ ಕನ್ನಡ ಕಲಾವಿದರ ಸುಮಾರು ೩೦೦ ಕುಟುಂಬಗಳು ಜೀವನ ಸಾಗಿಸುವುದೇ ಕಷ್ಟವಾಯಿತು.

ಆ ಸಮಯದಲ್ಲಿ ಜಿ.ವಿ.ಅಯ್ಯರ್ ನೇತೃತ್ವದಲ್ಲಿ ರಾಜಕುಮಾರ್, ನರಸಿಂಹರಾಜು ಮತ್ತು ಬಾಲಕೃಷ್ಣ ಸೇರಿ ಕನ್ನಡ ಚಲನಚಿತ್ರ ಕಲಾವಿದರ ಸಂಸ್ಥೆ ಸ್ಥಾಪಿಸಿ ನಾಟಕಗಳನ್ನು ಪ್ರದರ್ಶಿಸಲು ನಿರ್ಧರಿಸಿದರು.

ಮೊದಲು ಹಾಸನದ ಜಾತ್ರೆಯಲ್ಲಿ ನಾಟಕಗಳನ್ನು ಪ್ರದರ್ಶಿಸಿದರು. ಈ ಬಗ್ಗೆ ಜಿ.ವಿ.ಅಯ್ಯರ್ ಹೀಗೆ ಹೇಳುತ್ತಾರೆ : ''ಹಾಸನದಲ್ಲಿ ಮೊದಲ ಬಾರಿಗೆ ನಾಟಕ ಆಡಿದೆವು. ಅಲ್ಲೇ ಪಕ್ಕದಲ್ಲೇ ಹಿರಣ್ಣಯ್ಯನವರ ಕಂಪೆನಿ ನಾಟಕಗಳನ್ನು ಪ್ರದರ್ಶಿಸುತ್ತಿತ್ತು. ಅವರಿಗೆ ೫೦೦ ರೂಪಾಯಿ ಕಲೆಕ್ಷನ್ ಆಗುತ್ತಿದ್ದಾಗ, ನಮಗೆ ೩೦೦೦ ರೂಪಾಯಿ ಆಗುತ್ತಿತ್ತು. ಏಕೆಂದರೆ ರಾಜಕುಮಾರ್ ಅವರ ಹೆಸರು ಅಲ್ಲೆಲ್ಲ ಚೆನ್ನಾಗಿ ಪರಿಚಿತವಾಗಿತ್ತು. 'ಬೇಡರ ಕಣ್ಣಪ್ಪ', 'ಸೋದರಿ', 'ಹರಿಭಕ್ತ', 'ಭೂಕೈಲಾಸ' ಎಲ್ಲ ಚಿತ್ರಗಳು ಬಂದಿದ್ದವು. ಹಾಗಾಗಿ ಜನ ನಮ್ಮ ನಾಟಕಗಳಿಗೆ ಬರುತ್ತಿದ್ದರು.

''ಒಂದು ನಾಟಕ ಆಡಿ ಅಂತ ಹೇಳಿದೋರು ಕೊನೆಗೆ ೩ ನಾಟಕ ಆಡಿಸಿದ್ರು. ಮೂರು ಸಾವಿರ ರೂ. ಕೊಟ್ಟರು. ಇದನ್ನು ಗಮನಿಸಿದ ಬಳ್ಳಾರಿ ಶರಬಣ್ಣ ಎಂಬುವರು

ಬಂದು ೧೦,೦೦೦ ಕೊಡ್ತೀವಿ, ದಾವಣಗೆರೇಲಿ ಆಡಿ, ಹುಬ್ಬಳ್ಳೀಲಿ ಆಡಿ ಅಂತ ಹೇಳಿ ಮುಂಚೆಯೇ ದುಡ್ಡು ಕೊಟ್ಟು ಬಿಡೋರು. ಅದನ್ನು ನಾವು ೩೦ ಮನೆಯವರೂ ಹಂಚಿಕೊಳ್ಳುತ್ತಿದ್ದೆವು. ಹೀಗೆ ನಾಟಕಗಳನ್ನು ಆಡ್ತಾ, ಜೀವನ ಮಾಡ್ತಾ ಹಣ ಉಳಿಸಿ ಕೊನೆಗೆ 'ರಣಧೀರ ಕಂಠೀರವ' ಚಿತ್ರ ಮಾಡಿದ್ವಿ.''

ಆಯ್ಯರ್ ಅವರೇ ಚಿತ್ರ ಸಾಹಿತ್ಯ ಸಿದ್ದಮಾಡಿದರು. ಈ ಚಿತ್ರ ೧೯೬೦ರಲ್ಲಿ ತೆರೆಕಂಡ ಒಂದು ಮಹತ್ವದ ಚಿತ್ರ. ಮೈಸೂರು ಅರಸರ ಪರಂಪರೆಯಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯರ್ ಅವರ ಹೆಸರು ಸುಪ್ರಸಿದ್ಧ. ಅವರ ಜೀವನದಲ್ಲಿ ಬಂದ ಹೆಣ್ಣೊಬ್ಬಳ ಮೂಲಕ ನಾನಾ ಸಮಸ್ಯೆಗಳುಂಟಾಗಿ ರಾಜ್ಯದಲ್ಲಿ ಅಲ್ಲೋಲ ಕಲ್ಲೋಲವಾಗುತ್ತದೆ. ಈ ಕಥೆಯನ್ನು ತೆರೆಗೆ ತರಲು ಸಿದ್ಧತೆಗಳಾದುವು. ವಿಕ್ರಂ ಸಂಸ್ಥೆಯ ಬಿ.ಎಸ್.ರಂಗಾ ತಮ್ಮ ಸ್ಟುಡಿಯೋದ ಸೌಲಭ್ಯಗಳನ್ನು ಒದಗಿಸಲು ಮುಂದೆ ಬಂದರು. ಎನ್.ಸಿ.ರಾಜನ್ ನಿರ್ದೇಶನಕ್ಕೆ ಗೊತ್ತಾದರು. ಉಳಿದಂತೆ ವಿಶ್ವಕಲಾ ಚಿತ್ರದ ತಾಂತ್ರಿಕ ವರ್ಗದವರೆಲ್ಲ ಇದ್ದರು. ದೊರೆ ಛಾಯಾಗ್ರಾಹಕ. ಜಿ.ಕೆ.ವೆಂಕಟೇಶ್‌ರ ಸಂಗೀತ.

ರಣಧೀರ ಕಂಠೀರವನಾಗಿ ರಾಜಕುಮಾರ್, ಇತರ ಪಾತ್ರಗಳಲ್ಲಿ ನಾಗೇಂದ್ರರಾವ್, ಉದಯಕುಮಾರ್, ಲೀಲಾವತಿ, ವೀರಭದ್ರಪ್ಪ, ನರಸಿಂಹರಾಜು, ಬಾಲಕೃಷ್ಣ, ಸಂಧ್ಯಾ, ಕೆ.ಎಸ್.ಅಶ್ವತ್ಥ್ ಮುಂತಾದವರು ತಾರಾಗಣದಲ್ಲಿದ್ದರು.

ಚಿತ್ರ ತಯಾರಾದ ನಂತರ ಬಿಡುಗಡೆಗೆ ಸಮಸ್ಯೆ ಆಯಿತು. ಕಡೆಗೆ ಹಿಮಾಲಯ ಥಿಯೇಟರ್‌ನಲ್ಲಿ ಬಿಡುಗಡೆ ಮಾಡಿದರು. ಆ ಸಮಯದಲ್ಲಿ ಪಾಟಾಳ್ ನಾಗರಾಜ್ ಅವರು ಚಿತ್ರದ ಪರವಾಗಿ ಹೋರಾಟ ಮಾಡಿದರು. ಆಗ ಮೆಜೆಸ್ಟಿಕ್‌ನಲ್ಲಿ ಶಿವಾಜಿ ಗಣೇಶನ್‌ರ ಚಿತ್ರ, ಸೆಲೆಕ್ಟ್ (ಗೀತಾ)ನಲ್ಲಿ ಎಂ.ಜಿ.ಆರ್. ಪಿಕ್ಚರ್ ನಡೆಯುತ್ತಿತ್ತು. ಪಾಟಾಳ್ ಅವರು ಆ ಚಿತ್ರಮಂದಿರಗಳ ಕ್ಯೂನಲ್ಲಿ ನಿಂತಿದ್ದ ಜನರನ್ನು ಚದುರಿಸಿ 'ಕನ್ನಡ ಸಿನಿಮಾ ನೋಡಿ, ಹೋಗಿ' ಎಂದು ಕಳುಹಿಸುತ್ತಿದ್ದರು. ಚಿತ್ರ ಎಂಟು ವಾರಗಳ ಕಾಲ ಹೌಸ್‌ಫುಲ್ ಆಗಿ ಪ್ರದರ್ಶಿತವಾಯಿತು. ವಿಕ್ರಂ ಪಿಕ್ಚರ್ಸ್ ಅವರೇ ವಿತರಣೆ ಮಾಡಿದರು.

ಈ ಚಿತ್ರದಿಂದ ರಾಜಕುಮಾರ್ ಅವರ ಹೆಸರು ಇನ್ನಷ್ಟು ಜನಪ್ರಿಯವಾಯಿತು. ಚಿತ್ರದ ಸಂಗೀತವೂ ಸೊಗಸಾಗಿತ್ತು. ಹಾಡುಗಳೂ ಬಹಳ ಚೆನ್ನಾಗಿದ್ದವು. 'ಕರುನಾಡ ವೈರಮುಡಿ ಕಂಠೀರವಾ.....' ಮುಂತಾದ ಜನಪ್ರಿಯವಾದ ಹಾಡುಗಳು ಇಂದಿಗೂ ಜನರ ನೆನಪಿನಲ್ಲುಳಿದಿವೆ. ರಾಜಕುಮಾರ್ ಅವರ ಅಭಿನಯವಂತೂ ಅದ್ಭುತವಾಗಿತ್ತು. ಒಂದು ದೃಶ್ಯದಲ್ಲಂತೂ ಆನೆ ಅವರನ್ನು ಸೊಂಡಿಲಿನಿಂದ ಎತ್ತಿ ಬಿಸಾಡಿತ್ತು. ಇನ್ನೊಂದು ದೃಶ್ಯದಲ್ಲಿ ರಾಜಕುಮಾರ್ ಭಾರೀ ತೂಕದ ಪೈಲ್ವಾನ್ ಬಜ್ಜಯ್ಯನವರನ್ನು ಅನಾಮತ್ತಾಗಿ ಎತ್ತಿ ನಾಲ್ಕೈದು ಸುತ್ತು ಗಿರಗಿರನೆ ತಿರುಗಿಸಿದ್ದು ಅದ್ಭುತವಾಗಿತ್ತು. ಚಿತ್ರದ ಕೊನೆಯಲ್ಲಿ ದಳವಾಯಿ ಪಾತ್ರದಲ್ಲಿನ ವೀರಭದ್ರಪ್ಪನವರು ಅರಸನ ಕಣ್ಣುಗಳ ತೀಕ್ಷ್ಣತೆಗೆ ಅಂಜಿ ನಿಂತ ನಿಂತಲ್ಲೇ ಸಾಯುವ ದೃಶ್ಯ ಒಂದು ಅಪೂರ್ವ ಕಲ್ಪನೆ, ಅನುಭವ! ಉದಯಕುಮಾರ್ ಸಂಗೀತ-ನೃತ್ಯ ಗುರುಗಳಾಗಿ ಚೇತೋಹಾರಿ ಅಭಿನಯ ನೀಡಿದ್ದರು ಇನ್ನೊಬ್ಬ ದಳವಾಯಿ ಪಾತ್ರದಲ್ಲಿ ನಾಗೇಂದ್ರರಾವ್ ಗಂಭೀರವಾಗಿ ಅಭಿನಯಿಸಿದ್ದರು. ಈ ಎಲ್ಲ ಅಂಶಗಳೂ 'ರಣಧೀರ ಕಂಠೀರವ' ಒಂದು ಉತ್ತಮ ಚಿತ್ರವಾಗಲು ನೆರವಾದುವು.



(ಚಿತ್ರ ೪೫) 'ರಾಣಿ ಹೊನ್ನಮ್ಮ' ಚಿತ್ರದಲ್ಲಿ ಲೀಲಾವತಿ

ಈ ಚಿತ್ರದ ಕಥಾವಸ್ತುವಿನ ಬಗ್ಗೆ ವಿವಾದ ಉಂಟಾಗಿತ್ತು. ವೀರಕೇಸರಿ ಸೀತಾರಾಮಶಾಸ್ತ್ರಿಗಳು ತಮ್ಮ ಪುಸ್ತಕದಿಂದ ಎತ್ತಿಕೊಳ್ಳಲಾಗಿದೆ, ಕಾಪಿರೈಟ್ ಹಕ್ಕುಗಳ ಉಲ್ಲಂಘನೆಯಾಗಿದೆ ಎಂದು ವ್ಯಾಜ್ಯ ಹೂಡಿದರು. ಅಯ್ಯರ್ ತಾವು ಸಂಸರ 'ವಿಗಡ ವಿಕ್ರಮರಾಯ'ದಿಂದ ತೆಗೆದುಕೊಂಡಿರುವುದಾಗಿ ಹೇಳಿದರು. ಆದರೆ ಇವರಲ್ಲಿ ಬರುವ ವಿಶ್ವೇಶ್ವರನ ಕಥೆ ತಮ್ಮದು ಎಂದು ವೀರಕೇಸರಿ ಅವರು ವಾದಿಸಿದರು. ಕಡೆಗೆ ವಿಕ್ರಂ ಪಿಕ್ಚರ್ಸ್‌ನ ಬಿ.ಎಸ್.ಗರುಡಾಚಾರ್ ಅವರಿಂದ ವ್ಯಾಜ್ಯ ಪರಿಹಾರವಾಯಿತು.

ಚಿತ್ರ ಜನಪ್ರಿಯವೆನಿಸಿದರೂ ನಿರ್ಮಾಪಕರಿಗೆ ಹೆಚ್ಚು ಆದಾಯ ಬರಲಿಲ್ಲ. ಎರಡನೆಯ ಸಾರಿ ಬಿಡುಗಡೆ ಮಾಡಿದಾಗ ಸ್ವಲ್ಪ ಲಾಭ ಬಂತು.

ಯಾವುದು ಹೇಗೇ ಇರಲಿ, 'ರಣಧೀರ ಕಂಠೀರವ' ಚಿತ್ರದೊಂದಿಗೆ ಒಳ್ಳೆಯ ಚಿತ್ರಗಳನ್ನು ತಯಾರಿಸುವ ಒಂದು ಹೊಸ ಪರಂಪರೆಗೆ ಹಾದಿಯಾಯಿತು. ಕನ್ನಡ ಚಿತ್ರಕ್ಕೆ ಪ್ರೇಕ್ಷಕರು ಹೆಚ್ಚಾದರು. ಕನ್ನಡ ಕಲಾವಿದರ ಜನಪ್ರಿಯತೆ ನೂರ್ಮಡಿಯಾಯಿತು ಎನ್ನಬಹುದು. ಚಿತ್ರದ ಬಿಡುಗಡೆಯ ಸಂದರ್ಭದಲ್ಲಿ ನಡೆದ ಗದ್ದಲಗಳು, ಕನ್ನಡ ಪರ ನಿಲುವುಗಳದ್ದೇ ಒಂದು ರೋಚಕ ಕಥೆಯಾಗಿತ್ತು. ಇದಕ್ಕೆ ಮುಂಚೆ ಬಿಡುಗಡೆಯಾದ 'ಶಿವಲಿಂಗ ಸಾಕ್ಷಿ' ಒಂದು ತೀರಾ ಸಾಧಾರಣ ಚಿತ್ರ.

ಅನಂತರ ಬಂದದ್ದು ಗಿರಿಜಾ ಪ್ರೊಡಕ್ಷನ್ಸ್ ಅವರ 'ರಾಣಿ ಹೊನ್ನಮ್ಮ' ಒಂದು ಜಾನಪದ ಕಥೆ. ಕು.ರ.ಸೀತಾರಾಮಶಾಸ್ತ್ರಿ ನಿರ್ದೇಶಿಸಿದ ಈ ಚಿತ್ರದ ಹಾಡುಗಳು ಬಹಳ ಜನಪ್ರಿಯವಾದವು ಸಂಗೀತ ವಿಜಯ ಭಾಸ್ಕರ್ ಅವರದು. ಕು.ರ.ಸೀ. ಅವರೇ ಚಿತ್ರಕಥೆ, ಸಂಭಾಷಣೆ, ಹಾಡುಗಳನ್ನು ರಚಿಸಿದ್ದರು. ರಾಜಕುಮಾರ್, ಲೀಲಾವತಿ, ಲಲಿತಾ ರಾವ್, ಬಾಲಕೃಷ್ಣ, ನರಸಿಂಹರಾಜು, ಈಶ್ವರಪ್ಪ, ವೀರಭದ್ರಪ್ಪ, ರಾಮಚಂದ್ರಶಾಸ್ತ್ರಿ, ಜಯಶ್ರೀ ಮುಂತಾದವರು ತಾರಾಗಣದಲ್ಲಿದ್ದರು. ಪ್ರಭಾಕರ್ ಅವರ ಛಾಯಾಗ್ರಹಣ, ತಂಗಪ್ಪನ್ ಅವರ ನೃತ್ಯ ನಿರ್ದೇಶನವಿತ್ತು. ಫಿಲಂ ಸೆಂಟರ್‌ನಲ್ಲಿ ಚಿತ್ರೀಕರಿಸಿದ್ದರು. ಟಿ.ಎಸ್.ಕರಿಬಸವಯ್ಯನವರು ಗಿರಿಜಾ ಮತ್ತು ಸೂರ್ಯಪ್ರಭಾ ಅವರ ಹೆಸರಿನಲ್ಲಿ ನಿರ್ಮಿಸಿದ್ದರು.

ಭಾರಿ ತಾರಾಗಣ, ಅದ್ದೂರಿಯ ಸೆಟ್‌ಗಳು ಶ್ರೀಮಂತ ನಿರ್ಮಾಣದ 'ದಶಾವತಾರ' ಒಂದು ಒಳ್ಳೆಯ ಪೌರಾಣಿಕ ಚಿತ್ರವಾಗಿ ಯಶಸ್ವಿಯಾಯಿತು. ವಿಕ್ರಂ ಪ್ರೊಡಕ್ಷನ್ಸ್ ಅವರ ಈ ಚಿತ್ರದ ನಿರ್ಮಾಣದ ಸಮಸ್ತ ಹೊಣೆಗಾರಿಕೆಯನ್ನು ಚಿತ್ರ ಸಾಹಿತ್ಯ ರಚಿಸಿದ ಜಿ.ವಿ.ಅಯ್ಯರ್ ವಹಿಸಿಕೊಂಡರು. ರಾಜಕುಮಾರ್, ಲೀಲಾವತಿ, ರಾಜಾಶಂಕರ್, ಉದಯಕುಮಾರ್, ರಾಜಶ್ರೀ, ಕೆ.ಎಸ್.ಅಶ್ವತ್ಥ್, ನರಸಿಂಹರಾಜು, ಆದವಾನಿ ಲಕ್ಷ್ಮೀದೇವಿ ಮುಂತಾದವರು ಅಭಿನಯಿಸಿದ್ದರು. ವಿಷ್ಣುವಿನ ಎಲ್ಲ ಅವತಾರಗಳ ಪಾತ್ರದಲ್ಲಿ ರಾಜಾಶಂಕರ್ ವಿಜೃಂಭಿಸಿದರು. ಈ ಚಿತ್ರಕ್ಕೆ ಜಿ.ಕೆ.ವೆಂಕಟೇಶ್ ನೀಡಿರುವ ಸಂಗೀತ ವಿಶಿಷ್ಟವಾದುದು.

ದಶಾವತಾರದ ಕಥೆ ಎಲ್ಲರಿಗೂ ಗೊತ್ತಿರುವುದೆ. ವಿಷ್ಣುವಿನ ಹತ್ತು ಅವತಾರಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಈ ಚಿತ್ರವನ್ನು ನಿರ್ದೇಶಿಸಿದವರು ಜಿ.ವಿ.ಅಯ್ಯರ್ ಮತ್ತು ಪಿ.ಜಿ.ಮೋಹನ್. ಈ ವೇಳೆಗೆ ರಾಜಕುಮಾರ್-ಲೀಲಾವತಿ ಜೋಡಿ ಬಹಳ ಜನಪ್ರಿಯವಾಗಿ ಮುಂದೆ ಅನೇಕ ಚಿತ್ರಗಳಲ್ಲಿ ಅವರು ಒಟ್ಟಿಗೆ ಅಭಿನಯಿಸಿದರು.

'ದಶಾವತಾರ' ಚಿತ್ರದ ಹಾಡುಗಳು ಅತ್ಯಂತ ಜನಪ್ರಿಯ. ಜಿ.ವಿ.ಅಯ್ಯರ್ ರಚಿಸಿದ 'ವೈದೇಹಿ ಏನಾದಳೊ....' ಗೀತೆ ಇಂದಿಗೂ ಜನಮನದಲ್ಲಿ ನಿಂತು ಹೋಗಿದೆ. ರಾಜಕುಮಾರ್ ಅವರು ಒಂದರ್ಥದಲ್ಲಿ 'ಖಳ'ನಾಗಿ ಮಿಂಚಿದ್ದರು. ರಾವಣನ ಪಾತ್ರದಲ್ಲಿ ಅವರಿಗೆ ಹತ್ತು ತಲೆಗಳು. ಈ ವಿಷಯವನ್ನು ಪ್ರಸ್ತಾಪಿಸಿದ ಜಿ.ವಿ.ಅಯ್ಯರ್ ಮತ್ತು ಸಹನಿರ್ದೇಶಕ ಭಗವಾನ್ ಅವರು ಪದೇ ಪದೇ ನೆನಪು ಮಾಡಿಕೊಳ್ಳುವುದು ಅಲ್ಲಿ ಬಳಸಿದ ಟ್ರಿಕ್ ಶಾಟ್ ಅನ್ನು, ಅದನ್ನು ನಿರ್ವಹಿಸಿದ ರಾಜಕುಮಾರ್ ಅವರ ತಾಳ್ಮೆಯನ್ನು. ಟ್ರಿಕ್ ಫೋಟೋಗ್ರಫಿ ಪರಿಣತ ರೆಹಮಾನ್ ಈ ಚಿತ್ರದ ಛಾಯಾಗ್ರಾಹಕರು.

ಹತ್ತು ತಲೆಗಳಿಗೆ ಹತ್ತು ಚೌಕಾಕಾರದ ದಾರಗಳನ್ನು ಕಟ್ಟಲಾಗಿತ್ತು. ಒಂದು ದಾರದ ಚೌಕದಲ್ಲಿ ನಿಂತು ಮಾತನಾಡುತ್ತಿದ್ದಾಗ ಮಿಕ್ಕಿದ ಒಂಬತ್ತು ತಲೆಗಳು ನೋಡುತ್ತಿರುತ್ತವೆ, ಬೇರೆ ಬೇರೆ ಭಾವಾಭಿನಯ ಇರುವಂತೆ. ಇದಕ್ಕಾಗಿ ಹತ್ತು ಮಾಸ್ಕ್‌ಗಳನ್ನು ಮಾಡಲಾಗಿತ್ತು. ರಾತ್ರಿ ಹತ್ತು ಗಂಟೆಗೆ ಪ್ರಾರಂಭವಾದದ್ದು ಮುಗಿದಾಗ



(ಚಿತ್ರ ೪೬) 'ದಶಾವತಾರ' ಚಿತ್ರದಲ್ಲಿ ಜಯಶ್ರಿ ಮತ್ತು ರಾಜಾಶಂಕರ್

ಬೆಳಗಿನ ಝಾವ ಆರು ಗಂಟೆ. ರಾಜಕುಮಾರ್ ಒಂದು ಚೌಕದಲ್ಲಿ ನಿಂತರೆ ಅಲ್ಲಿಂದ ಅಲುಗಾಡುವ ಹಾಗೇ ಇಲ್ಲ. ಕೊಂಚ ಮಿಸುಕಿದರೂ ಕೆಡುತ್ತದೆ. ಒಂದಾದ ಮೇಲೆ ಒಂದರಂತೆ ಕೇವಲ ಒಂದು ಕೂದಲೆಳೆಯಷ್ಟು ಅಥವಾ ಕೊಂಚ ಹೆಚ್ಚು ಅಂತರಕ್ಕೆ ಜರುಗಿ ನಿಲ್ಲಬೇಕು, ಇನ್ನೊಂದು ಚೌಕಕ್ಕೆ. ಎಲ್ಲ ತಲೆಗಳೇ, ಕಿವಿಗಳು ಕಾಣೋದೇ ಇಲ್ಲ. ಆ ಕೊನೆ, ಈ ಕೊನೆಗೆ ಮಾತ್ರ ಕಿವಿ ಕಾಣುತ್ತದೆ. ಒಮ್ಮೆ ನಿಂತವರು ಶೌಚಕ್ಕೂ ಹೋಗದೆ ನಿರ್ವಹಿಸಿದ್ದರು ರಾಜಕುಮಾರ್. ಮುಗಿಯಿತು ಅಂದಾಗ ಹಾಗೇ ಕೆಳಗೆ ಕುಸಿದುಬಿಟ್ಟಿದ್ದರು. ಸ್ವಲ್ಪ ಸಮಯ ಕಳೆಯುವವರೆಗೆ ಸಹಜ ಸ್ಥಿತಿಗೆ ಬರಲೇ ಇಲ್ಲ ಎಂದು ಭಗವಾನ್ ಅವರು ವರ್ಣಿಸುತ್ತಾರೆ. ಈ ಮಾತನ್ನು ರಾಜಕುಮಾರ್ ಅವರೂ ನಮ್ಮ ಸಂದರ್ಶನದಲ್ಲಿ ಹೇಳಿದ್ದಾರೆ. ಚಿತ್ರವೊಂದು ಚೆನ್ನಾಗಿರಬೇಕೆಂದರೆ ಆ ದಿನಗಳಲ್ಲಿ ಇಷ್ಟೆಲ್ಲ ಕಷ್ಟಪಡುತ್ತಿದ್ದೆವು ಎನ್ನುತ್ತಾರೆ ಭಗವಾನ್.

ಆ ವರ್ಷದ ಇನ್ನೊಂದು ಗಮನಾರ್ಹ ಚಿತ್ರ ಎಂ.ವಿ.ರಾಜಮ್ಮ ಅವರು ಎಂ.ವಿ.ಆರ್.ಪಿಕ್ಚರ್ಸ್ ಲಾಂಛನದಲ್ಲಿ ತಯಾರಿಸಿದ 'ಮಕ್ಕಳ ರಾಜ್ಯ'. ಇದರ ವಿಶೇಷವೆಂದರೆ ಬಾಲ ಕಲಾವಿದರನ್ನೇ ಇಟ್ಟುಕೊಂಡು ಸಂಪೂರ್ಣ ಚಿತ್ರ ಮಾಡಿದ್ದು. ಕಥೆಗೆ ಪೂರಕವಾಗಿ ಕೆಲವು ಹಿರಿಯ ಕಲಾವಿದರಿದ್ದರು. ಇಂದು ಸುಪ್ರಸಿದ್ಧ ಹಾಸ್ಯ ನಟರಾಗಿರುವ ಎಂ.ಎಸ್.ಉಮೇಶ್ ಬಾಲ ಕಲಾವಿದನಾಗಿ ಈ ಚಿತ್ರದ ನಾಯಕನಾಗಿ ನಟಿಸಿದ್ದರು. ಸಂಭಾಷಣೆ, ಹಾಡುಗಳನ್ನು ಬಿ.ಸದಾಶಿವಯ್ಯ ಅವರು ರಚಿಸಿದ್ದರು. ಟಿ.ಜಿ.ಲಿಂಗಪ್ಪನವರು ಮಧುರವಾದ ಸಂಗೀತವನ್ನು ಸಂಯೋಜಿಸಿದ್ದರು. 'ಮಳೆಯೇ ಸುರಿದು ಬಾ...' ಎಂಬ ಹಾಡಂತೂ ಬಹಳ ಜನಪ್ರಿಯವಾಯಿತು. ಎಂ.ವಿ.ರಾಜಮ್ಮನವರಿಗಾಗಿ ಈ ಚಿತ್ರವನ್ನು ಬಿ.ಆರ್.ಪಂತುಲು ಅವರೇ ನಿರ್ದೇಶಿಸಿದರು. ತಾಂತ್ರಿಕ ವರ್ಗ ಎಂದಿನಂತೆ ಪದ್ಮಿನಿ ಪಿಕ್ಚರ್ಸ್ ಬಳಗ. ಮುಖ್ಯವಾಗಿ ಈ ಹೊತ್ತಿಗೆ ಪುಟ್ಟಣ್ಣ ಕಣಗಾಲರು ಈ ಸಂಸ್ಥೆಯಲ್ಲಿ ಸಹನಿರ್ದೇಶಕರಾಗಿದ್ದರು.

ಇಲ್ಲಿ ನೆನಪಿಗೆ ಬರುವುದು ಪದ್ಮಿನಿ ಪಿಕ್ಚರ್ಸ್ ಮತ್ತು ಖ್ಯಾತ ತಮಿಳು ನಟ ಶಿವಾಜಿ ಗಣೇಶನ್ ನಡುವೆ ಇದ್ದ ಸ್ನೇಹ ಸಂಪರ್ಕ. ಪಂತುಲು-ಶಿವಾಜಿ ಆತ್ಮೀಯ ಮಿತ್ರರಾಗಿದ್ದರು. ಅದಕ್ಕಾಗಿಯೇ ಅವರು 'ಸ್ಕೂಲ್ ಮಾಸ್ಟರ್' ಚಿತ್ರದಲ್ಲಿ ಪೊಲೀಸ್ ಅಧಿಕಾರಿಯ ಸಣ್ಣ ಪಾತ್ರವೊಂದರಲ್ಲಿ ಅಭಿನಯಿಸಿದ್ದರು. 'ಮಕ್ಕಳ ರಾಜ್ಯ'ದಲ್ಲೂ ಒಂದು ಸಣ್ಣ ಪಾತ್ರದಲ್ಲಿ ಕಾಣಿಸಿಕೊಂಡಿದ್ದಾರೆ. ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸುವುದಕ್ಕೆ ಕಾರಣ, ಕಲಾವಿದರಾದವರಿಗೆ ದೊಡ್ಡ ಪಾತ್ರ, ಸಣ್ಣ ಪಾತ್ರ ಎಂಬುದು ಮುಖ್ಯವಲ್ಲ. ಸ್ನೇಹ, ವಿಶ್ವಾಸಕ್ಕಾಗಿ ಯಾವ ಪಾತ್ರವನ್ನು ಬೇಕಾದರೂ ಮಾಡಬಹುದು ಎಂಬುದಕ್ಕೆ ಇದೊಂದು ಉದಾಹರಣೆ.

ಹನುಮಂತಾಚಾರ್, ನರಸಿಂಹರಾಜು ಮತ್ತು ಡಿಕ್ಕಿ ಮಾಧವರಾವ್ ಹಾಸ್ಯ ಪಾತ್ರಗಳಲ್ಲಿ ಕಾಣಿಸಿಕೊಂಡಿದ್ದರು. ಅದುವರೆಗೆ ಯಾರೂ ಸಂಪೂರ್ಣವಾಗಿ ಮಕ್ಕಳ ಚಿತ್ರವನ್ನು ತಯಾರಿಸಿರಲಿಲ್ಲ ಎಂಬುದು ಗಮನಾರ್ಹ.

ಆನಂತರ ಬಂದದ್ದು ಗೌರಿ ಪ್ರೊಡಕ್ಷನ್ಸ್ ಅವರ 'ಆಶಾ ಸುಂದರಿ'. ಅದೊಂದು ಜಾನಪದ ಚಿತ್ರ. ಇಂಥ ಚಿತ್ರಗಳನ್ನು ನಿರ್ದೇಶಿಸುವುದರಲ್ಲಿ ಸಿದ್ಧಹಸ್ತರಾದ ಹುಣಸೂರು ಕೃಷ್ಣಮೂರ್ತಿ ಇದಕ್ಕೆ ಬೇಕಾದ ಎಲ್ಲ ಮಸಾಲೆಗಳನ್ನು ತುಂಬಿ ಚಿತ್ರೀಕರಿಸಿದ್ದಾರೆ. ರಾಜಕುಮಾರ್, ಕೃಷ್ಣಕುಮಾರಿ, ಹರಿಣಿ, ಸಿ.ವಿ.ಶಿವಶಂಕರ್, ನರಸಿಂಹರಾಜು ಮುಂತಾದವರು ಅಭಿನಯಿಸಿದ್ದು, ಈ ಚಿತ್ರದ ಸಂಗೀತ ನಿರ್ದೇಶಕರು ದಕ್ಷಿಣಾಮೂರ್ತಿ. ಬೆಂಗಳೂರಿನ ಕೆಂಪೇಗೌಡ ಮತ್ತು ಶಿವಾಜಿ ಚಿತ್ರಮಂದಿರಗಳಲ್ಲಿ ಬಿಡುಗಡೆಯಾದ ಈ ಚಿತ್ರ ಸಾಧಾರಣ ಯಶಸ್ವಿಯಾಯಿತು.

''...ಸುಖಾಂತ್ಯದಲ್ಲಿ ಕೊನೆಗೊಳ್ಳುವ ಈ ಜಾನಪದ ಚಿತ್ರದಲ್ಲಿ ಮನರಂಜನೆಗೆ ವಿಶೇಷ ಪ್ರಾಮುಖ್ಯ ನೀಡಲಾಗಿದೆ. ಭವ್ಯ ರಂಗಸಜ್ಜಿಕೆ, ಸರಸ ಸಾಹಿತ್ಯ, ಮೋಹಕ ಗೀತೆಗಳು, ಮನರಂಜಿಸುವ ನೃತ್ಯ, ಸುಶ್ರಾವ್ಯ ಸಂಗೀತ, ಜತೆಗೆ ಮಂತ್ರ, ಮಾಯ, ಪವಾಡಗಳೆಲ್ಲಾ ತುಂಬಿಕೊಂಡಿದ್ದು ಪ್ರೇಕ್ಷಕರ ಮನಸ್ಸನ್ನು ಅಪಹರಿಸುವ ಬಗ್ಗೆ ಸಂಶಯವಿಲ್ಲ. ಅಭಿನಯ ಉತ್ತಮವಾಗಿದೆ. ವಿಜಯ-ವಾಹಿನಿ ಸ್ಟುಡಿಯೋದಲ್ಲಿ ತಯಾರಾದ ಚಿತ್ರದ ತಾಂತ್ರಿಕ ವರ್ಗದ ಕೆಲಸ ಕೂಡ ಪರಿಪಕ್ವವಾದುದು. ದಕ್ಷಿಣಾಮೂರ್ತಿಯವರ ಸಂಗೀತ ಹಿತಮಿತವಾಗಿದೆ..'' ಎಂದು ಪತ್ರಿಕೆಗಳು ವಿಮರ್ಶಿಸಿದವು.



(ಚಿತ್ರ ೪೭) 'ಮಕ್ಕಳ ರಾಜ್ಯ' ಚಿತ್ರದಲ್ಲಿ ಬೇಬಿ ಲಕ್ಷ್ಮಿ

ಎಂ.ವಿ.ರಾಜಮ್ಮ

ಮುಖ್ಯವಾಗಿ ಗೆಳತಿಯರಿಬ್ಬರು ಒಬ್ಬರನ್ನೊಬ್ಬರು ಅಗಲಲಾರದೇ ಮದುವೆಯೇ ಬೇಡವೆಂದು ಇದ್ದು ಬಿಡುವ ಪ್ರಯತ್ನವಿದೆ. ಇಂಥ ಕಥೆ ಪ್ರೇಕ್ಷಕರಿಗೆ ಅಸಹಜವೆನಿಸಿತು.

ಶ್ಯಾಮಪ್ರಸಾದ್ ಮೂವೀಸ್ ಅವರ 'ಭಕ್ತ ಕನಕದಾಸ' ೧೯೬೦ರ ದಶಕದ ಮಹತ್ವದ ಚಿತ್ರ. ಕನಕದಾಸರ ಜೀವಿತ ಕಥೆಯನ್ನು ಚಿತ್ರಿಸುವ ಈ ಚಿತ್ರದ ಚಿತ್ರಕಥೆ, ಸಂಭಾಷಣೆ ಹಾಗೂ ಹಾಡುಗಳನ್ನು ಹುಣಸೂರು ಕೃಷ್ಣಮೂರ್ತಿಗಳು ಶ್ರದ್ಧೆಯಿಂದ ರಚಿಸಿದ್ದಾರೆ. ಉಳಿದಂತೆ ಕನಕದಾಸರ ಕೃತಿಗಳೇ ಈ ಚಿತ್ರದ ಸುಂದರ ಗೀತೆಗಳು. ಎಂ.ವೆಂಕಟರಾಜು ಮಧುರವಾಗಿ ಸಂಗೀತ ಸಂಯೋಜಿಸಿದ್ದಾರೆ. ಪಿ.ಬಿ.ಶ್ರೀನಿವಾಸ್ ಹಾಡಿರುವ ಈ ಗೀತೆಗಳು ಸುಶ್ರಾವ್ಯವಾಗಿದ್ದು ಇಂದಿಗೂ ರೇಡಿಯೋ ಹಾಗೂ ಸಂಗೀತ ಪ್ರಿಯರ ನಾಲಿಗೆಗಳಲ್ಲಿ ಮೆಲ್ಲುಲಿಯುತ್ತಿವೆ. ಅವರಲ್ಲೂ 'ಬಾಗಿಲನು ತರೆದು ...', 'ಈತನೀಗ ವಾಸುದೇವನು....' ಹಾಗೂ 'ಕುಲ ಕುಲ ಕುಲವೆಂದು ಹೊಡೆದಾಡದಿರಿ...' ಗೀತೆಗಳು ಎಂದೆಂದಿಗೂ ನೆನಪಿನಲ್ಲುಳಿಯುವಂಥವು. ಎಸ್.ಜಾನಕಿ ಹಾಡಿರುವ 'ಶೃಂಗಾರ ಶೀಲಾ ಸಂಗೀತ ಲೋಲಾ...' ಹಾಡಿಗೂ ಈ ಮಾತು ಅನ್ವಯಿಸುತ್ತದೆ.



(ಚಿತ್ರ ೪೮) 'ಭಕ್ತ ಕನಕದಾಸ' ಚಿತ್ರದಲ್ಲಿ ಜಯಶ್ರೀ ಮತ್ತು ರಾಜಕುಮಾರ್

ಬೆಂಗಳೂರಿನ ಅಬಕಾರಿ ಕಂಟ್ರಾಕ್ಟರ್ ಡಿ.ಆರ್.ನಾಯ್ಡು ಅವರು ತಯಾರಿಸಿದ ಈ ಚಿತ್ರವನ್ನು ವೈ.ಆರ್.ಸ್ವಾಮಿ ಚೊಕ್ಕವಾಗಿ ನಿರ್ದೇಶಿಸಿದ್ದರು. ಮಧು ಅವರ ಛಾಯಾಗ್ರಹಣ ಈ ಚಿತ್ರದ ಒಂದು ಗುಣಾಂಶ.

ಕನಕದಾಸನಾಗಿ ರಾಜಕುಮಾರ್ ಅವರ ಅಭಿನಯ ಮನೋಜ್ಞ. ಕೃಷ್ಣಕುಮಾರಿ, ಉದಯಕುಮಾರ್, ಕೆ.ಎಸ್.ಅಶ್ವತ್ಥ್, ಜಯಶ್ರೀ, ರಾಮಚಂದ್ರಶಾಸ್ತ್ರಿ ಹಾಗೂ ಹಾಸ್ಯ ಪಾತ್ರಗಳಲ್ಲಿ ಹನುಮಂತಾಚಾರ್ ಮತ್ತು ಶಿವಶಂಕರ್ ಮುಂತಾದವರು ತಮ್ಮ ಪಾತ್ರಗಳನ್ನು ತೃಪ್ತಿಕರವಾಗಿ ನಿರ್ವಹಿಸಿದ್ದಾರೆ. ಈ ಎಲ್ಲ ದೃಷ್ಟಿಗಳಿಂದಲೂ 'ಕನಕದಾಸ' ಒಂದು ಒಳ್ಳೆಯ ಚಿತ್ರ. ಈ ಚಿತ್ರಕ್ಕೆ ರಾಷ್ಟ್ರಪತಿಗಳ ಅಖಿಲ ಭಾರತ ಅರ್ಹತಾ ಪತ್ರ ಪ್ರಶಸ್ತಿಯೂ ದೊರೆಯಿತು.

ಪ್ರಸಕ್ತ ಸಮಾಜದ ಆಗು-ಹೋಗುಗಳನ್ನು ಪ್ರತಿಬಿಂಬಿಸುವ ಅರ್ಥಪೂರ್ಣ ಸಾಮಾಜಿಕ ವಸ್ತುಗಳ ಬಗೆಗೆ ನಮ್ಮ ನಿರ್ಮಾತೃಗಳು ಗಮನ ಹರಿಸದಿರುವುದು ಒಂದು ದೊಡ್ಡ ಕೊರತೆ ಎನ್ನಿಸುತ್ತದೆ.

ಕನ್ನಡ ವಾಕ್ಚಿತ್ರ ಯುಗ ಪ್ರಾರಂಭವಾದಂದಿನಿಂದ ಇದುವರೆಗೆ ಅಂದರೆ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಒಟ್ಟು ೧೦೨ ಚಿತ್ರಗಳು ತೆರೆಕಂಡಿವೆ. ಈ ಪೈಕಿ ಉತ್ತಮ ಚಿತ್ರಗಳು ಬೆರಳೆಣಿಕೆಯಷ್ಟು. ಇದು ಅಂಥ ದೊಡ್ಡ ಸಾಧನೆಯೇನಲ್ಲ. ಕನ್ನಡ ಚಿತ್ರಗಳಿಗಿರುವ ಸೀಮಿತ ಮಾರುಕಟ್ಟೆ, ಜತೆಗೆ ಕನ್ನಡ ಚಿತ್ರಗಳ ಬಗ್ಗೆ ಕನ್ನಡಿಗರಿಗೇ ಅಭಿಮಾನವಿಲ್ಲದಿರುವುದು ಇದಕ್ಕೆ ಕಾರಣವೆನ್ನಬಹುದು.

ಒಂದು ಸಮಾಧಾನಕರ ಸಂಗತಿ ಎಂದರೆ 'ಮಾಯಾಬಜಾರ್' ಮೊದಲಾದ ಕೆಲವು ಡಬ್ ಆದ ಚಿತ್ರಗಳ ನಂತರ ನಡೆದ ಡಬ್ಬಿಂಗ್ ವಿರೋಧಿ ಚಳವಳಿಯಿಂದಾಗಿ ಹಾಗೂ ಅ.ನ.ಕೃ. ನೇತೃತ್ವದ ಮತ್ತು ವಾಟಾಳ್ ನಾಗರಾಜ್‌ರ ಚಳವಳಿಯಿಂದಾಗಿ ಕನ್ನಡಿಗರಲ್ಲಿ ಜಾಗೃತಿಯುಂಟಾಯಿತು. ಕನ್ನಡ ಚಿತ್ರಗಳನ್ನು ನೋಡಬೇಕೆಂಬ ಎಚ್ಚರ ಬಂತು.

ಈ ಚಳವಳಿಯಿಂದ ನಮ್ಮ ಕಲಾವಿದರಿಗೆ ಅಸಮಾಧಾನ ಉಂಟಾಗಿದ್ದು ನಿಜ. ಚಿತ್ರಗಳೇ ಇಲ್ಲದೆ ದೈನಂದಿನ ಜೀವನಕ್ಕೆ ತೊಂದರೆಯುಂಟಾಗಿರುವ ಸಮಯದಲ್ಲಿ ಡಬ್ಬಿಂಗ್ ಚಿತ್ರಗಳಿಂದಾಗಿ ಎರಡು ಹೊತ್ತು ಊಟ ಮಾಡುವ ಅವಕಾಶವಾದರೂ ತಮ್ಮ ಸಂಸಾರಗಳಿಗೆ ದೊರೆಯುತ್ತಿತ್ತು ಎಂಬುದು ಅವರ ವಾದ. ಅವರ ಈ ನಿಲುವಿನಲ್ಲಿ ನ್ಯಾಯವೂ ಇತ್ತು. ಆದರೆ ಈ ತಾತ್ಕಾಲಿಕ ಸಮಾಧಾನಕ್ಕಿಂತ ಶಾಶ್ವತ ಪರಿಹಾರದ ದೃಷ್ಟಿಯಿಂದ ಡಬ್ಬಿಂಗ್ ಸಂಸ್ಕೃತಿಯನ್ನು ವಿರೋಧಿಸುವುದು ಸರಿ ಎಂದು ಅವರುಗಳಿಗೆ ಚಳವಳಿ ಮುಖಂಡರು ಮನವರಿಕೆ ಮಾಡಿಕೊಟ್ಟರು.

ಈ ಬೆಳವಣಿಗೆಗಳಿಂದಾಗಿ ಹಾಗೂ ಕನ್ನಡ ಚಿತ್ರ ಪ್ರೇಕ್ಷಕರಲ್ಲಿ ಉಂಟಾಗಿರುವ ಹೊಸ ಅಭಿಮಾನದಿಂದಾಗಿ ಮುಂಬರುವ ದಿನಗಳಲ್ಲಿ ಕನ್ನಡ ಚಿತ್ರರಂಗದ ಭವಿಷ್ಯ ಉತ್ತಮವಾಗುವುದೆಂಬ ಆಶಾಕಿರಣ ಮೂಡಿತು. ಪಂತುಲು, ರಂಗಾ ಹಾಗೂ ಆರೆನ್ನಾರ್ ಅವರ ಮುಂದಿನ ಯೋಜನೆಗಳು ಇಂಥ ಆಶಾಭಾವಕ್ಕೆ ಎಡೆಮಾಡಿವೆ.

ಈ ಅವಧಿಯಲ್ಲಿ ಪ್ರಾರಂಭದಿಂದ ೧೯೬೦ರವರೆಗೆ ತಮಿಳು, ತೆಲುಗು, ಮಲೆಯಾಳಂ ಮತ್ತು ಹಿಂದೀ ಭಾಷೆಗಳಿಂದ ಹಲವು ಚಿತ್ರಗಳು ಕನ್ನಡಕ್ಕೆ ಡಬ್ ಮಾಡಲ್ಪಟ್ಟವು. ಹೀಗೆ ತಯಾರಾದ ಚಿತ್ರಗಳು : 'ಅಧಿಕಾರಿ', 'ಅಜ್ಞಾತಿ', 'ಸಿ.ಐ.ಡಿ.', 'ಮಯಾಮಚ್ಛೀಂದ್ರ', 'ಸತಿಸಾವಿತ್ರಿ', 'ಮಾಯಾಬಜಾರ್', 'ಅತ್ತಿಗೆ', 'ಚಂದ್ರಸೇನ', 'ಸಹಸ್ರ ಶಿರಚ್ಛೇದ ಅಪೂರ್ವ ಚಿಂತಾಮಣಿ', 'ಶ್ರೀ ಕೃಷ್ಣಾರ್ಜುನ ಯುದ್ಧ', 'ವನದೇವತೆ', 'ಭಕ್ತ ಕುಚೇಲ', 'ಜಗದೇಕ ವೀರನ ಕಥೆ', 'ಅಪರಾಧಿ', 'ನರಕಾಸುರ ವಧೆ', 'ಗಿರಿಜಾ ಕಲ್ಯಾಣ', 'ಅರಬ್ಬಿ ಸುಂದರಿ', 'ತಿರುವಿಳೆಯಾಡಲ್' (ಬಿಡುಗಡೆಯಾಗಲಿಲ್ಲ), 'ಸಂಪೂರ್ಣ ರಾಮಾಯಣ', 'ಪಾಂಡವ ವನವಾಸ', 'ವೀರಾಂಜನೇಯ', 'ಅಹಿರಾವಣ-ಮಹಿರಾವಣ', 'ಜಂಬೋನಗರ ಪ್ರವೇಶ' 'ಮೋಹಿನಿ ರುಕ್ಮಾಂಗದ', 'ವರಮಹಾಲಕ್ಷ್ಮಿ ಪೂಜಾಫಲ', 'ಮಾಯಾಜಾಲ' ಇತ್ಯಾದಿ.

ಪ್ರಾರಂಭದಲ್ಲಿ ಡಬ್ಬಿಂಗ್ ಚಿತ್ರಗಳಿಗೆ ವಿರೋಧಗಳಿರಲಿಲ್ಲ. ಆದರೆ ಕ್ರಮೇಣ ಅವುಗಳ ಸಂಖ್ಯೆ ಹೆಚ್ಚುತ್ತಾ ಬಂದು, ಆಗ ತಾನೇ ಕಣ್ಣು ಬಿಡುತ್ತಿದ್ದ ಕನ್ನಡ ಚಿತ್ರಗಳ ತಯಾರಿಕೆಗೆ ಕುತ್ತು ಬಂದು, ಕನ್ನಡ ಚಿತ್ರಗಳನ್ನೇ ನಂಬಿಕೊಂಡಿದ್ದ ಕಲಾವಿದರು ಮತ್ತು ತಂತ್ರಜ್ಞರಿಗೆ ಕೆಲಸವಿಲ್ಲದಂತಾಗಿ ಅವರ ಜೀವನವೇ ದುರ್ಭರವಾಗತೊಡಗಿದಾಗ ಡಬ್ಬಿಂಗ್ ಚಿತ್ರಗಳ ವಿರುದ್ಧ ಚಳವಳಿ ಪ್ರಾರಂಭವಾಯಿತು. ಇದರಲ್ಲಿ ಕನ್ನಡ ಕಲಾವಿದರ ಜತೆಗೆ ಕನ್ನಡ ಪರ ಸಂಘ ಸಂಸ್ಥೆಗಳೂ ಕೈ ಜೋಡಿಸಿದವು. 'ಯಶೋದೆ ಕೃಷ್ಣ' ತೆಲುಗಿನಿಂದ ಕನ್ನಡಕ್ಕೆ ಡಬ್ ಆದಾಗ ನಾಡಿಗೇರ ಕೃಷ್ಣರಾಯರ ನೇತೃತ್ವದಲ್ಲಿ ಪ್ರತಿಭಟನಾ ಮೆರವಣಿಗೆಯೇ ಆಯಿತು. 'ಮೋಹಿನಿ ರುಕ್ಮಾಂಗದ' ಚಿತ್ರದ ವೇಳೆಗೆ ಈ ಚಳವಳಿ ಉಗ್ರ ರೂಪಕ್ಕೆ ತಿರುಗಿ ಮಿನರ್ವ ಥಿಯೇಟರ್‌ನಲ್ಲಿ ಆ ಚಿತ್ರದ ಪ್ರಿಂಟನ್ನು ಸುಟ್ಟುಹಾಕಿದ ನಂತರ ಡಬ್ಬಿಂಗ್ ಚಿತ್ರಗಳ ತಯಾರಿಕೆ ನಿಂತುಹೋಯಿತು. ಅನಂತರ ಇದುವರೆಗೆ ಯಾವುದೇ ಡಬ್ಬಿಂಗ್ ಚಿತ್ರ ತಯಾರಾಗಿಲ್ಲ. (ಭಾಗಶಃ ಡಬ್ ಮಾಡಲ್ಪಟ್ಟ 'ಭಾರತ್ ೨೦೦೦' ಚಿತ್ರ ಬಿಟ್ಟು)



(ಚಿತ್ರ ೧) ಬಣ್ಣದ ಮೊದಲ ಹೆಜ್ಜೆ : 'ಅಮರಶಿಲ್ಪಿ ಜಕಣಾಚಾರಿ' (೧೯೬೪) ಚಿತ್ರದಲ್ಲಿ ಕಲ್ಯಾಣ್‌ಕುಮಾರ್

# ಬೆಳ್ಳಿ ತೆರೆಗೆ ಬಣ್ಣ

ಕನ್ನಡ ಚಲನಚಿತ್ರ ಇತಿಹಾಸದಲ್ಲಿ ೧೯೬೧-೭೦ ಬಹಳ ಮಹತ್ವದ ದಶಕ. ಕೇವಲ ನಿರ್ಮಾಣ ಚಟುವಟಿಕೆಯಿಂದ ದೂರ ಸಡೆದು ಒಂದು ಉದ್ಯಮವಾಗಿ ಬೆಳೆಯುವ ಅರ್ಹತೆಯನ್ನು ಕನ್ನಡ ಚಿತ್ರರಂಗ ಪಡೆದುಕೊಂಡ ದಶಕ ಇದು. ಕ್ರಿಯಾತ್ಮಕ ದೃಷ್ಟಿಯಿಂದ ಕೂಡ ಅನೇಕ ಉಲ್ಲೇಖನಾರ್ಹ ದಾಖಲೆಗಳನ್ನು ಸ್ಥಾಪಿಸಿದ ಮತ್ತು ಅತ್ಯಂತ ದೊಡ್ಡ ಸಂಖ್ಯೆಯಲ್ಲಿ ಚಿತ್ರ ನಿರ್ಮಾಣದ ವಿವಿಧ ವಿಭಾಗಗಳಲ್ಲಿ ಹೊಸ ಪ್ರತಿಭೆಗಳನ್ನು ಬೆಳಕಿಗೆ ತಂದ ದಶಕ ಕೂಡ.

ಕನ್ನಡ ಚಿತ್ರವೊಂದು ಮೊದಲು ಮಾತನಾಡಿದ ಎರಡು ದಶಕಗಳ ನಂತರ ದೂರದ ಮದರಾಸಿನಲ್ಲಿ ತಾನು ಬಿಟ್ಟಿದ್ದ ಬೇರುಗಳನ್ನು ಕ್ರಮೇಣವಾಗಿ ಕಳಚಿಕೊಂಡು ಕರ್ನಾಟಕದಲ್ಲಿಯೇ ತನ್ನ ನೆಲೆಯನ್ನು ಕನ್ನಡ ಚಿತ್ರರಂಗ ಕಟ್ಟಿಕೊಳ್ಳಲು ಪ್ರಾರಂಭಿಸಿದ ಮಹತ್ವದ ದಶಕವೂ ಹೌದು. ಜೊತೆಗೆ ಆದುವರೆಗೆ ಕಪ್ಪು-ಬಿಳುಪು ಲೋಕದಲ್ಲಿಯೇ ವಿಹರಿಸುತ್ತಿದ್ದ ಕನ್ನಡ ಚಿತ್ರಗಳು ಪ್ರಥಮ ಬಾರಿಗೆ ಬಣ್ಣದ ಹೊದಿಕೆಯನ್ನು ಹೊದ್ದುಕೊಂಡಿದ್ದು ಕೂಡ ಇದೇ ದಶಕದಲ್ಲಿಯೇ. ಎಲ್ಲಕ್ಕಿಂತ ಹೆಚ್ಚಾಗಿ ಅದುವರೆಗೆ ಸುಪ್ತವಾಗಿದ್ದ ತನ್ನತನದ ಹುಡುಕಾಟಕ್ಕೆ ಕನ್ನಡ ಚಿತ್ರರಂಗ ಸಾರ್ಥಕ್ಯವನ್ನು ಕಂಡುಕೊಂಡಿದ್ದು ಈ ದಶಕದ ಅತ್ಯಂತ ಪ್ರಮುಖ ಬೆಳವಣಿಗೆ.

ಸೋಜಿಗವೆಂದರೆ ೧೯೫೬ರಲ್ಲಿಯೇ ಕನ್ನಡಿಗರ ಅನೇಕ ವರ್ಷಗಳ ಕನಸಾಗಿದ್ದ ಕರ್ನಾಟಕದ ಏಕೀಕರಣ ಕೈಗೂಡಿದ್ದರೂ ೧೫ ವರ್ಷಗಳಿಗೂ ಹೆಚ್ಚಾಗಿ ಈ ವಿಸ್ತೃತ ರಾಜ್ಯದ ಹೆಸರು ಮೈಸೂರೆಂದೇ ಮುಂದುವರಿದಿತ್ತು. ಮದರಾಸು, ನಿಜಾಂ, ಮುಂಬಯಿ ಪ್ರಾಂತ್ಯಗಳಲ್ಲಿ ಹರಿದು ಹಂಚಿಹೋಗಿದ್ದ, ಕನ್ನಡವೇ ಪ್ರಧಾನ ಭಾಷೆಯಾಗಿದ್ದ, ಅನೇಕ ಭಾಗಗಳು ೧೯೫೬ರಲ್ಲಿ ಭೌಗೋಳಿಕವಾಗಿ ವಿಲೀನವಾದರೂ ಅದುವರೆಗೆ ಕನ್ನಡ ನಾಡಿನ ಕೇಂದ್ರವೆನಿಸಿದ್ದ ಹಳೆಯ ಮೈಸೂರು ಭಾಗದ ಹೆಸರನ್ನು ಬದಲಾಯಿಸಿದರೆ ಆ ಭಾಗದ ಜನ ದಂಗೆಯೇಳಬಹುದೆಂಬ ಭೀತಿ ಏಕೀಕರಣವಾದ ಮೇಲೆಯೂ ಅಂದಿನ ಸರ್ಕಾರಗಳನ್ನು ಬಾಧಿಸಿತು. ಈ ಭೀತಿ ಆಧಾರರಹಿತವಾಗೇನೂ ಇರಲಿಲ್ಲ. ಮೈಸೂರು ರಾಜವಂಶದ ಪ್ರಗತಿಪರ ಆಡಳಿತದಿಂದಾಗಿ ದೇಶದ ಅತ್ಯಂತ ಮುಂದುವರಿದ ರಾಜ್ಯಗಳಲ್ಲೊಂದೆಂಬ ಹೆಸರು ಗಳಿಸಿದ್ದ ಆ ರಾಜ್ಯದ ಬಹುಪಾಲು ಜನರಿಗೆ ಇಂತಹ ಪ್ರಗತಿಯಿಂದ ವಂಚಿತರಾಗಿದ್ದ ಉತ್ತರ ಕರ್ನಾಟಕದ ಪ್ರದೇಶಗಳ ವಿಲೀನ ಅಷ್ಟೇನೂ ಹಿತವೆನಿಸಲಿಲ್ಲ. ಕನ್ನಡದ ಪ್ರದೇಶಗಳೆಲ್ಲ ಪ್ರಥಮ ಬಾರಿಗೆ ಒಂದಾದ ಭಾವನಾತ್ಮಕ ತೃಪ್ತಿ ಒಂದು ಕಡೆಯಾದರೆ ಈ ವಿಲೀನ ತಂದ ಕೆಲವು ಕ್ಲಿಷ್ಟವಾದ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳು ಆ ತೃಪ್ತಿಗೆ ಸಾಕಷ್ಟು ಅಡ್ಡಗಾಲು ಹಾಕಿದ್ದು ಒಂದು ಕಟು ಸತ್ಯ. ಇದರ ಜೊತೆಗೆ ಮೈಸೂರು ರಾಜ್ಯದಲ್ಲಿ ವಿಲೀನಗೊಂಡ ಕರಾವಳಿ ಪ್ರದೇಶಕ್ಕೆ ಐತಿಹಾಸಿಕವಾಗಿ ಮೊದಲಿನಿಂದಲೇ ಮುಂಬಯಿಯೊಂದಿಗೆ ಔದ್ಯಮಿಕ ಮತ್ತು ಆರ್ಥಿಕ ಸಂಬಂಧಗಳು ಬೇರೂರಿದ್ದವು. ನಂತರ ಮುಂಬಯಿ ಕರ್ನಾಟಕವೆಂದು ಹೆಸರು ಪಡೆದ ಪ್ರದೇಶಗಳೂ ಮುಂಬಯಿಯೊಂದಿಗೇ ಅಂತಹ ಅವಿನಾ ಸಂಬಂಧವನ್ನು ಹೊಂದಿದ್ದರಿಂದ ಕೂಡ ವಿಲೀನಗೊಂಡ ಪ್ರದೇಶಗಳ ನಡುವೆ ಭಾವೈಕ್ಯತೆ ಮೂಡಲು ಸಾಕಷ್ಟು ಸಮಯವೇ ಹಿಡಿಯುವುದೆಂಬ ಸ್ಪಷ್ಟ ಸೂಚನೆಗಳೂ ಇದ್ದವು. ಹೀಗಾಗಿ ರಾಜ್ಯದ ಹೆಸರನ್ನು 'ಕರ್ನಾಟಕ'ವೆಂದು ಬದಲಾಯಿಸುವ ಪ್ರಕ್ರಿಯೆ ಕೂಡ ಕೆಲವು ವರ್ಷಗಳು ನನೆಗುದಿಗೆ ಬೀಳುವುದೂ ಅನಿವಾರ್ಯವಾಯಿತು. ಅಂತಹ ಪ್ರಯತ್ನ ನಡೆದಾಗಲೆಲ್ಲ ಹಳೆಯ ಮೈಸೂರು ಪ್ರದೇಶದಲ್ಲಿ ಅಸಹನೆ ವ್ಯಕ್ತಪಟ್ಟು ಕೆಲವೊಮ್ಮೆ ತೀವ್ರ ಸ್ವರೂಪ ತಳೆದದ್ದೂ ಉಂಟು. ಆದರೆ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಾತ್ರ ಅನೇಕ ವೇದಿಕೆಗಳಿಂದ ಪ್ರಮುಖವಾಗಿ ಪ್ರತಿ ವರ್ಷ ನಡೆಯುತ್ತಿದ್ದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ - ರಾಜ್ಯವನ್ನು ಕರ್ನಾಟಕವೆಂದು ಕರೆಯುವ ಬಗ್ಗೆ ರಾಜಕಾರಣಿಗಳು ಇಲ್ಲ ಸಲ್ಲದ ನೆಪಗಳನ್ನು ಮುಂದೊಡ್ಡುತ್ತಿದ್ದಾರೆಂಬ ತೀವ್ರ ಅತೃಪ್ತಿ ವ್ಯಕ್ತವಾಗುತ್ತಲೇ ಹೋಯಿತು. ಅಂದಿನ ಸಾಹಿತ್ಯ ಪ್ರಪಂಚದ ದಿಗ್ಗಜರೆಲ್ಲ ಅದೇ ಕಾಳಜಿಯನ್ನು ನಾನಾ ರೂಪಗಳಲ್ಲಿ ವ್ಯಕ್ತಪಡಿಸುತ್ತಲೇ ಹೋದರೂ ಹೆಚ್ಚು ಪರಿಣಾಮವೇನೂ ಆಗಲಿಲ್ಲ.

ಆದರೆ ರಾಜಕಾರಣಿಗಳು, ಪಟ್ಟಭದ್ರ ಹಿತಾಸಕ್ತಿಗಳು ಸ್ಫುರಿಸಲು ಹಿಂದೆಗೆಯುವ ಭಾವೈಕ್ಯತೆಯನ್ನು ಚಲನಚಿತ್ರದಂತಹ ಪ್ರಭಾವಶಾಲಿ ಮಾಧ್ಯಮ ತನ್ನ ಸ್ವಂತ ಚಮತ್ಕಾರದಿಂದ ಸಾಧಿಸಬಹುದು ಎಂಬ ಸತ್ಯವನ್ನು ಕೇವಲ ಉತ್ತರ ಭಾರತದ ಭಾಷೆಯಾದ ಹಿಂದಿ ಈ ಮಾಧ್ಯಮದ ಮೂಲಕ ಇಡೀ ದೇಶವನ್ನೇ ಆವರಿಸಿಕೊಂಡಿರುವ ಪವಾಡ ಒತ್ತಿ ಹೇಳುತ್ತದೆ. ಅಂದಿನ ವಿಶಾಲ ಮೈಸೂರು ರಾಜ್ಯದಲ್ಲಿ ಕೂಡ ಇಂತಹುದೇ ಒಂದೆರಡು ಪವಾಡಗಳು ನಡೆದು ಕನ್ನಡ ಚಿತ್ರೋದ್ಯಮ ತನ್ನ ಮಣ್ಣಿನಲ್ಲಿಯೇ ಬೇರೂರಲು ಅನುಕೂಲವಾದ ಪರಿಸರವನ್ನು ಸೃಷ್ಟಿಸಿಕೊಳ್ಳುವುದರ ಜೊತೆಗೆ ಭೌಗೋಳಿಕವಾಗಿ ವಿಲೀನಗೊಂಡಿದ್ದ ನಾನಾ ಪ್ರದೇಶಗಳ ಜನರನ್ನು ಹೆಚ್ಚು ಭಾವನಾತ್ಮಕವಾಗಿ ಬೆಸೆಯುವುದರಲ್ಲಿಯೂ ಯಶಸ್ವಿಯಾಯಿತು. ರಾಜಕೀಯ ಹಾಗೂ ಆಡಳಿತಾತ್ಮಕ ವ್ಯವಸ್ಥೆಗಳ ಬಿಂಕಗಳನ್ನು ಒಡೆದು ಜನ ಸಾಮಾನ್ಯರ ಮಟ್ಟದಲ್ಲಿ ಭಾವೈಕ್ಯದ ಹೊಸ ಪ್ರಜ್ಞೆಯನ್ನು ಮೂಡಿಸುವಲ್ಲಿ ೧೯೬೦ರ ತರುಣದಲ್ಲಿ ಅಂದಿನ ಕೆಲವು ಪ್ರತಿಷ್ಠಿತ ಸಾಹಿತಿಗಳ ನೇತೃತ್ವದಲ್ಲಿ ರಾಜ್ಯದಾದ್ಯಂತ ಭುಗಿಲೆದ್ದ ಕನ್ನಡ ಚಳವಳಿಯ ಪಾತ್ರ ಚರಿತ್ರಾರ್ಹ. ತಮ್ಮ ಸೀಮಿತ ವಲಯಗಳಲ್ಲಿ ಕನ್ನಡ ಪತ್ರಿಕೆಗಳು, ಸಾಹಿತ್ಯ ಕೃತಿಗಳು ಈ ನಿಟ್ಟಿನಲ್ಲಿ ಸಾಧಿಸಿದ್ದ ಸಣ್ಣ ಪ್ರಮಾಣದ ಪ್ರಗತಿ ಚಿತ್ರರಂಗದ ಅನಿರೀಕ್ಷಿತ ಪ್ರವೇಶದಿಂದಾಗಿ ಒಂದು ಹೊಸ ಹೊಳಹನ್ನು ಕಂಡುಕೊಂಡಿತು. ಕನ್ನಡ ಚಿತ್ರರಂಗದ ಪಾಲಿಗೆ ಇಂತಹ ಮಹತ್ವದ ಪಾತ್ರ ದಕ್ಕಿದ್ದು ಕಾಕತಾಳೀಯವೆನಿಸಿದರೂ ಅದರ ಪರಿಣಾಮ ಮಾತ್ರ ಅಗಾಧವೆನಿಸಿತು. ಮುಂದೆ ೧೯೭೩ರಲ್ಲಿ ಅಂದಿನ ಮುಖ್ಯಮಂತ್ರಿ ದೇವರಾಜ ಅರಸರು ಕೊನೆಗೂ ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣ ಮಾಡುವ ಧೈರ್ಯವನ್ನು ತೋರುವ ಮುಂಚೆಯೇ ಈ ಮಹತ್ವದ ಬದಲಾವಣೆಗೆ ಕನ್ನಡ ಚಿತ್ರರಂಗ ಭಾವನಾತ್ಮಕವಾದ ಭೂಮಿಕೆಯನ್ನು ಸಿದ್ಧಪಡಿಸಿದ್ದು ಈ ದಶಕದ ಒಂದು ಮಹತ್ವದ ಸಾಧನೆ.

ಅನಿವಾರ್ಯವಾಗಿ ಅದುವರೆಗೆ ಕನ್ನಡೇತರ ಪರಿಸರದಲ್ಲಿಯೇ ಸಾಗಿಕೊಂಡು ಬಂದಿದ್ದ ಕನ್ನಡ ಚಿತ್ರರಂಗ ಪ್ರೇಕ್ಷಕರಲ್ಲಿ ಕನ್ನಡದ ಕಿಚ್ಚನ್ನೆಬ್ಬಿಸುವ ವಿಶೇಷ ಪ್ರಯತ್ನಗಳನ್ನೇನೂ ಮಾಡಿರದಿದ್ದರೂ ಅಂದಿನ ಚಿತ್ರಗಳಲ್ಲಿ ಕನ್ನಡತನ ಸುಪುಷ್ಟವಾಗಿ ಮೈಗೂಡಿಕೊಂಡಿದ್ದು ಉಲ್ಲೇಖನೀಯ. ೧೯೪೦-೫೦ರ ದಶಕದಲ್ಲಿ ಮೈಸೂರಿನಲ್ಲಿಯೇ ಎರಡು ಸ್ಟುಡಿಯೋಗಳು ಅಸ್ತಿತ್ವದಲ್ಲಿದ್ದರೂ ಅಂದಿನ ಬಹು ಪಾಲು ಚಿತ್ರಗಳು ತಯಾರಾಗುತ್ತಿದ್ದುದು ಮದರಾಸಿನಲ್ಲಿಯೇ. ಆ ಚಿತ್ರಗಳು ಕನ್ನಡ ರಾಜ್ಯದ ತಾಣಗಳಲ್ಲಿಯೇ ಚಿತ್ರಿತವಾಗುವ ಅವಕಾಶದಿಂದ ವಂಚಿತವಾಗಿದ್ದರೂ, ಮದರಾಸಿನಲ್ಲಿ ತಯಾರಾಗುತ್ತಿದ್ದ ಅನೇಕ ಚಿತ್ರಗಳು ತಮಿಳು, ತೆಲುಗು ಚಿತ್ರಗಳಿಗಾಗಿ ಸ್ಟುಡಿಯೋಗಳಲ್ಲಿ ನಿರ್ಮಿತವಾಗುತ್ತಿದ್ದ ಸೆಟ್‌ಗಳನ್ನೇ ಅಲ್ಪ ಸ್ವಲ್ಪ ಬದಲಾವಣೆ ಗಳೊಂದಿಗೆ ಉಪಯೋಗಿಸಿಕೊಳ್ಳುತ್ತಿದರೂ ದಿನ ನಿತ್ಯದ ವಿದ್ಯಮಾನಗಳ ನಿರೂಪಣೆಯಲ್ಲಿ, ಪಾತ್ರಗಳ ವೇಷ-ಭೂಷಣಗಳಲ್ಲಿ, ಸಂಭಾಷಣೆಗಳ ಉಚ್ಚಾರಣೆಯಲ್ಲಿ ಸ್ವಚ್ಛವಾದ ಕನ್ನಡತನ ಎದ್ದು ಕಾಣುತ್ತಿತ್ತು. ಆ ಮಟ್ಟದ ಕನ್ನಡತನ ಕನ್ನಡ ನಾಡಿನಲ್ಲಿಯೇ ಕನ್ನಡ ಚಿತ್ರರಂಗ ಭದ್ರವಾಗಿ ತಳವೂರಿದ ನಂತರ ಅನೇಕ ಕನ್ನಡ ಚಿತ್ರಗಳಲ್ಲಿ

ಲಕ್ಷ್ಯವಾಗದಿದ್ದುದೊಂದು ವಿಪರ್ಯಾಸ. ಗ್ರಾಮೀಣ ಕಥಾವಸ್ತುವನ್ನು ಹೊಂದಿದ ಚಿತ್ರಗಳಲ್ಲಂತೂ ಈ ಕನ್ನಡತನದ ಸೊಗಡು ವಿಶೇಷವಾಗಿ ಕಾಣುತ್ತಿತ್ತು.

೧೯೬೦ರ ದಶಕದ ವೇಳೆಗಾಗಲೇ ಕನ್ನಡ ಸಾರಸ್ವತ ಲೋಕದ ಅನೇಕ ಪ್ರತಿಭಾನ್ವಿತರು ಕನ್ನಡ ಚಿತ್ರರಂಗಕ್ಕೆ ಲಗ್ಗೆ ಹಾಕಿದ್ದರು. ಅವರಲ್ಲಿ ಕೆಲವರು ಉತ್ಕಟ ಕನ್ನಡ ಪ್ರೇಮಿಗಳು, ಕನ್ನಡ ನಡೆ-ನುಡಿಗಳ ಬಗ್ಗೆ ಅಪಾರವಾದ ಅಭಿಮಾನವನ್ನಿಟ್ಟಿದ್ದವರು. ಕನ್ನಡ ರಂಗಭೂಮಿಗೆ ಅವರಲ್ಲಿ ಹಲವರು ಕೊಟ್ಟ ಕೊಡುಗೆ ಅನನ್ಯವಾದದ್ದು. ನಾಡಿನ ಉದ್ದಾಮ ಸಾಹಿತಿಗಳ ಪೈಕಿ ದೇವುಡು ನರಸಿಂಹಶಾಸ್ತ್ರಿಗಳು, ಬೆಳ್ಳಾವೆ ನರಹರಿಶಾಸ್ತ್ರಿಗಳು, ಟಿ.ಪಿ.ಕೈಲಾಸಂರವರು ಬೆಂಗಳೂರಿನಲ್ಲಿ ಮೂಕಿ ಚಿತ್ರಗಳಿಗೆ ಬೆಂಗಾವಲಾಗಿ ನಿಂತಿದ್ದರೆ ಟಾಕಿ ಯುಗ ಪ್ರಾರಂಭವಾದ ಮೇಲೆ ಅ.ನ.ಕೃಷ್ಣರಾಯರಂತಹ ಪ್ರಗತಿಶೀಲ ಸಾಹಿತ್ಯದ ಪ್ರವರ್ತಕರು, ಅವರ ಒಡನಾಡಿಗಳಾದ ತ.ರಾ.ಸುಬ್ಬರಾಯರಂತಹವರು ಕನ್ನಡ ಚಲನಚಿತ್ರ ರಂಗದ ಬಗ್ಗೆ ವಿಶೇಷವಾಗಿ ಆಸಕ್ತಿ ತೋರಿದರು. ಸಾಹಿತ್ಯ, ರಂಗಭೂಮಿ ಮತ್ತು ಚಿತ್ರರಂಗಗಳಿಗೆ ಸಮಾನವಾಗಿ ಸಲ್ಲುವ ಪ್ರತಿಭೆ ಹೊಂದಿದ ಹೆಚ್.ಎಲ್.ಎನ್.ಸಿಂಹ, ಕು.ರ.ಸೀತಾರಾಮಶಾಸ್ತ್ರಿಗಳು, ಹುಣಸೂರು ಕೃಷ್ಣಮೂರ್ತಿಗಳು, ನರೇಂದ್ರಬಾಬು, ಆರ್.ನಾಗೇಂದ್ರರಾವ್, ಜಿ.ವಿ.ಅಯ್ಯರ್ ತಮ್ಮ ಚಿತ್ರಗಳಿಗೆ ಸಾಹಿತ್ಯ, ಸಂಸ್ಕೃತಿಗಳ ಜೀವಾಳವನ್ನು ತುಂಬಿದರು. ಕನ್ನಡ ಚಿತ್ರರಂಗದೊಂದಿಗೆ ಅವರೆಲ್ಲರ ಒಡನಾಟದಿಂದಾಗಿ ಆಗಲೇ ಕೆಲವು ಉತ್ಕೃಷ್ಟ ಕೃತಿಗಳು ಚಲನಚಿತ್ರ ಭಂಡಾರವನ್ನು ಸೇರಿದ್ದವು. ಅವುಗಳಲ್ಲಿ ಆರ್ಥಿಕವಾಗಿ ಯಶಸ್ವಿಯಾದ ಚಿತ್ರಗಳೂ ಇದ್ದವು. ಆದರೂ ಕನ್ನಡಿಗರಿಗೂ, ಕನ್ನಡ ಚಿತ್ರಗಳಿಗೂ ನಡುವೆ ಯಾವುದೋ ಒಂದು ಕೃತಕ ಕಂದಕ ಮಾತ್ರ ಹಾಗೆಯೇ ಉಳಿದುಕೊಂಡು ಬಂದಿದ್ದೂ ಹೌದು. ಮೈಸೂರು ನಗರವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮುಂದುವರಿಸಿಕೊಂಡು ಬಂದ ಶಂಕರಸಿಂಗ್‌ರವರನ್ನುಳಿದರೆ ಕೆಲವು ಕಾಲದ ಅವರೊಂದಿಗಿನ ವ್ಯಾಪಾರೀ ಸಖ್ಯವನ್ನು ಮುರಿದು ಮದರಾಸಿಗೆ ವಲಸೆ ಹೋದ ಬಿ.ವಿಠಲಾಚಾರ್ಯರನ್ನು ಮೊದಲುಗೊಂಡು ಕನ್ನಡ ಚಿತ್ರರಂಗದಲ್ಲಿ ಅಂದು ಮುಂಚೂಣಿಯಲ್ಲಿದ್ದ ಬಿ.ಆರ್.ಪಂತುಲು, ಆರ್.ನಾಗೇಂದ್ರರಾವ್, ಬಿ.ಎಸ್.ರಂಗಾ ಮತ್ತು ಕೆಂಪರಾಜ ಅರಸರಂತಹ ಪ್ರಮುಖರೆಲ್ಲ ಮದರಾಸಿನಲ್ಲಿಯೇ ತಳವೂರಿದ್ದರಿಂದ ಕನ್ನಡ ನಾಡಿನೊಂದಿಗೆ ಅವರ ಸಕ್ರಿಯ ಸಂಬಂಧ ಹೆಚ್ಚು ಕಡಿಮೆ ವ್ಯಾಪಾರಿ ಚಟುವಟಿಕೆಗಳಿಗೆ ಮಾತ್ರ ಮೀಸಲಾಗಿತ್ತು. ಹೀಗಾಗಿ ಮೈಸೂರಿನಲ್ಲಿನ ಕನ್ನಡ ಚಿತ್ರರಂಗದ ಚಟುವಟಿಕೆ ಸಾಕಷ್ಟು ಗೌಣವಾಗಿಯೇ ಉಳಿದಿತ್ತು. ಕೆಲವು ಕನ್ನಡ ಚಿತ್ರಗಳ ಆರ್ಥಿಕ ಯಶಸ್ಸು ಕನ್ನಡಿಗರ ಹಾಗೂ ಕನ್ನಡ ಚಿತ್ರರಂಗದ ನಡುವೆ ಯಾವುದೇ ರೀತಿಯ ಭಾವನಾತ್ಮಕ ಸಂಬಂಧವನ್ನು ಕಲ್ಪಿಸಲಿಲ್ಲ.

ಕನ್ನಡ ನಾಡಿನ ಮೂಲವಾಹಿನಿಯಿಂದ ದೂರವೇ ಇರಬೇಕಾಗಿದ್ದ ಮದರಾಸಿನಲ್ಲಿನ ಕನ್ನಡ ಚಿತ್ರರಂಗದವರಿಗೆ ಮೈಸೂರು ರಾಜ್ಯದಲ್ಲಿ ೧೯೬೦ರ ತರುಣದಲ್ಲಿ ಪ್ರಾರಂಭವಾದ ಕನ್ನಡ ಚಳವಳಿಯ ಬಿಸಿ ಗಮನಾರ್ಹವಾಗಿ ತಟ್ಟಲೇ ಇಲ್ಲ. ಈ ಚಳವಳಿ ಗರಿಕಟ್ಟುವುದಕ್ಕೆ ಮುಂಚೆಯೇ ೧೯೬೧ರಲ್ಲಿ ರಾಜ್ಯದ ನಾನಾ ಕಡೆ ಭೀಕರವಾಗಿ ಪ್ರಕೃತಿಯ ವಿಕೋಪಕ್ಕೆ ಒಳಗಾದ ಲಕ್ಷಾಂತರ ಸಂತ್ರಸ್ತರ ನೆರವಿಗಾಗಿ 'ಡೆಕ್ಕನ್ ಹೆರಾಲ್ಡ್' ಮತ್ತು 'ಪ್ರಜಾವಾಣಿ' ಪತ್ರಿಕೆಗಳ ಒಡೆಯರ ನೇತೃತ್ವದಲ್ಲಿ ರಾಜ್ಯದಾದ್ಯಂತ ನಡೆದ ಚರಿತ್ರಾರ್ಹ 'ಪ್ರವಾಹ ಪರಿಹಾರ ನಿಧಿ ಸಂಗ್ರಹ ಯಾತ್ರೆ' ಯಲ್ಲಿ ಕನ್ನಡ ಚಿತ್ರರಂಗದ ಅಂದಿನ ಬಹುತೇಕ ಜನಪ್ರಿಯ ನಟ-ನಟಿಯರು ಪಾಲ್ಗೊಂಡರು. ಕಲಾವಿದರು ಮತ್ತು ಕನ್ನಡ ಚಲನಚಿತ್ರ ಅಭಿಮಾನಿಗಳ ನಡುವೆ ನಿರ್ಮಿತವಾಗಿದ್ದ ಗೋಡೆ ಒಡೆದು ಕನ್ನಡ ಚಿತ್ರರಂಗವನ್ನು ಕನ್ನಡ ಜನತೆಯ ಸಮೀಪಕ್ಕೆ ತರುವುದರಲ್ಲಿ ಇದೊಂದು ದೊಡ್ಡ ಯಶಸ್ಸು. ಈ ಘಟನೆಯ ನಂತರ ರಾಜ್ಯದಲ್ಲಿ ವ್ಯಾಪಕವಾಗಿ ಹಬ್ಬಿದ ಕನ್ನಡ ಚಳವಳಿಯಾಗಲಿ, ಡಬ್ಬಿಂಗ್ ವಿರೋಧದ ಚಳವಳಿಯಾಗಲಿ ಮದರಾಸಿನಲ್ಲಿದ್ದ ಕನ್ನಡ ಚಿತ್ರೋದ್ಯಮದ ಮೇಲೆ ಯಾವುದೇ ಪರಿಣಾಮವನ್ನೂ ಬೀರದಿದ್ದುದೂ ಒಂದು ವಿಚಿತ್ರವೆಂದೇ ಹೇಳಬೇಕು. "ಮೈಸೂರಿನಲ್ಲಿ ಕನ್ನಡ ಚಳವಳಿ ಪ್ರಾರಂಭವಾದ ಬಗ್ಗೆ ಆಗಾಗ ನಮ್ಮ ಕಿವಿಗೆ ಬೀಳುತ್ತಿತ್ತು, ಅಷ್ಟೆ" ಎಂದು ಇತ್ತೀಚಿನ ವರ್ಷಗಳಲ್ಲಿ ಅನೇಕ ಕನ್ನಡ ಪರ ಆಂದೋಲನಗಳಲ್ಲಿ ಪ್ರಮುಖ ಪಾತ್ರ ವಹಿಸಿರುವ ಕಲಾವಿದ ರಾಜಕುಮಾರ್‌ರವರು ಹೇಳುತ್ತಾರೆ. ಕನ್ನಡ ಚಳವಳಿಯೇನೋ ರಭಸದಿಂದ ನಡೆಯಿತು. ಆದರೆ ಅದರಲ್ಲಿ ಕನ್ನಡ ಚಿತ್ರರಂಗದವರ ಪಾತ್ರ ಮಾತ್ರ ಅತಿ ಕಡಿಮೆ ಪ್ರಮಾಣದ್ದು.

ಮೈಸೂರು ನಗರದಲ್ಲಿಯೇ ಎರಡು ಫಿಲಂ ಸ್ಟುಡಿಯೋಗಳು ಅಸ್ತಿತ್ವದಲ್ಲಿದ್ದು ಅಂದಿನ ಪ್ರಮುಖ ನಿರ್ಮಾಣ ಸಂಸ್ಥೆ ಮಹಾತ್ಮಾ ಪಿಕ್ಚರ್ಸ್ ತನ್ನ ಎಲ್ಲ ಚಿತ್ರಗಳನ್ನು ಅಲ್ಲಿಯೇ ತಯಾರಿಸುತ್ತಿದ್ದರೂ, ೧೯೫೦ರ ದಶಕದ ಕೊನೆ ಹಾಗೂ ೧೯೬೦ರ ದಶಕದ ಮೊದಲಲ್ಲಿ ಮೈಸೂರಿನಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ಸ್ವಲ್ಪ ಮಟ್ಟಿಗೆ ಹೆಚ್ಚಿದರೂ ಮೈಸೂರು ನಿವಾಸಿಗಳಲ್ಲಿ ಕನ್ನಡ ನಟ-ನಟಿಯರ ಬಗ್ಗೆ ವಿಶೇಷವಾದ ಒಲವೇನೂ ಕಾಣಲಿಲ್ಲ. ಇದಕ್ಕೆ ಕಾರಣ ಮೈಸೂರು ತುಂಬಾ ಸಂಪ್ರದಾಯಸ್ಥ ನಗರವಾಗಿದ್ದರಿಂದ ಅಲ್ಲಿಯ ನಾಗರಿಕತೆಗೆ ಶಾಸ್ತ್ರೀಯ ಸಂಗೀತ, ನೃತ್ಯ ಹಾಗೂ ನಾಟಕರಂಗಗಳೊಂದಿಗೆ ಇದ್ದಷ್ಟು ಭಾವನಾತ್ಮಕ ಸಂಬಂಧ ಚಿತ್ರರಂಗದೊಂದಿಗೆ ಬೆಳೆಯಲು ಸಾಧ್ಯವಾಗಲಿಲ್ಲವೆಂದೂ ಗ್ರಹಿಸಬಹುದಾಗಿದೆ. ಮೈಸೂರಿನ ರಸ್ತೆಗಳಲ್ಲಿ ಅಂದಿನ ಪ್ರಮುಖ ನಟ-ನಟಿಯರು ತಿರುಗಾಡುತ್ತಿದ್ದರೂ ಜನ ಅವರನ್ನು ಗುರುತಿಸುವ ಗೋಜಿಗೆ ಹೋಗುತ್ತಿರಲಿಲ್ಲವಂತೆ. ಇನ್ನು ಚಿತ್ರರಂಗದವರ ಬಗ್ಗೆ ಯಾವುದೇ ಗುಸುಗುಸು ಮಾತುಗಳು ಹಬ್ಬುವ ಸಂಭವವೂ ದೂರವೇ ಉಳಿಯಿತು. ಮೈಸೂರು ನಗರದ ವರ್ತಕರು ಕೂಡ ಕನ್ನಡ ನಾಟಕಗಳ ಬಗ್ಗೆ ತೋರಿದಷ್ಟು ಆಸಕ್ತಿಯನ್ನು ಕನ್ನಡ ಚಿತ್ರಗಳ ಬಗ್ಗೆ ತೋರುತ್ತಿರಲಿಲ್ಲ. ಸಾರಸ್ವತ ಪ್ರಪಂಚದ ಪ್ರತೀಕವೆನಿಸಿದ ಸರಸ್ವತಿಪುರದಲ್ಲಿ ನವಜ್ಯೋತಿ ಸ್ಟುಡಿಯೋ ತಲೆಯೆತ್ತಿದಾಗ ಅಲ್ಲಿಯ ಸಂಸ್ಕೃತಿ ಮಲಿನವಾಯಿತೆಂದು ಪ್ರತಿಭಟಿಸಿದವರೂ ಇದ್ದರು.

ಪ್ರಾಯಶಃ ಈ ಪರಿಸ್ಥಿತಿಗೆ ಹೊರತಾಗಿದ್ದವರು ನಟರಾದ ಸಂಪತ್ ಮತ್ತು ಕೆಂಪರಾಜ ಅರಸ್. ಸಂಪತ್ ಮೈಸೂರಿನಲ್ಲಿ ಹವ್ಯಾಸಿ ರಂಗಭೂಮಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದು ಸಾರಸ್ವತ ವಲಯದಲ್ಲಿ ಚಿರಪರಿಚಿತರಾಗಿದ್ದರು. ಕೆಂಪರಾಜ ಅರಸರಿಗೆ ರಾಜಮನೆತನದೊಂದಿಗೆ ನಿಕಟ ಸಂಬಂಧವಿತ್ತು. ಆ ಅಜಾನುಬಾಹು ವ್ಯಕ್ತಿಯ ಮುಖದಲ್ಲಿದ್ದ ವಿಶೇಷ ಕಳೆ ಅವರ ಬಗ್ಗೆ ಯಾರಿಗೇ ಆದರೂ ತಕ್ಷಣ ಗೌರವವನ್ನು ಮೂಡಿಸುವಂತಿತ್ತು. ಆದರೆ ತೆರೆಯ ಮೇಲೆ ಕಾಣಿಸಿಕೊಳ್ಳದಿದ್ದರೂ ಜನಸಾಮಾನ್ಯರು ತಟ್ಟನೆ ಗುರುತಿಸುತ್ತಿದ್ದ ಚಿತ್ರರಂಗದ ವ್ಯಕ್ತಿಯೆಂದರೆ ಸಂಗೀತ ನಿರ್ದೇಶಕ ಪಿ.ಶಾಮಣ್ಣನವರು. ಏಕೆಂದರೆ ಅಂದಿನ ದಿನಗಳಲ್ಲಿ ಪ್ರಚಂಡ ಜನಪ್ರಿಯತೆ ಗಳಿಸಿದ್ದ ಮೈಸೂರು ಅರಮನೆಯ ವಾದ್ಯಗೋಷ್ಠಿಯಲ್ಲಿ ಶಾಮಣ್ಣನವರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಅವರು ಮಹಾತ್ಮಾ ಸಂಸ್ಥೆಯ ಚಿತ್ರಗಳಿಗೆ ಸಂಗೀತ ನೀಡಲು ಪ್ರಾರಂಭಿಸಿದ ಮೇಲೆಯೂ ಈ ವಾದ್ಯಗೋಷ್ಠಿಯೊಂದಿಗೆ ತಮ್ಮ ಸಂಬಂಧವನ್ನು ಕಡಿದುಕೊಳ್ಳಲಿಲ್ಲ.

ಅತ್ತ ಮದರಾಸಿನಲ್ಲಿ ನೆಲೆಯೂರಿದ್ದ ಕನ್ನಡ ಚಲನಚಿತ್ರ ಕಲಾವಿದರಿಗಾಗಲಿ, ತಂತ್ರಜ್ಞರಿಗಾಗಲಿ, ನಿರ್ಮಾಪಕ/ನಿರ್ದೇಶಕರಿಗಾಗಲಿ ಮದರಾಸನ್ನು ಬಿಟ್ಟು ಕನ್ನಡ ನಾಡನ್ನು ಸೇರಿಕೊಳ್ಳಬೇಕೆಂಬ ಕಾತರವೇನೂ ಇರಲಿಲ್ಲ. ಅಂದರೆ ಅಲ್ಲಿ ಅವರ ಜೀವನ ಸುಗಮವಾಗಿತ್ತೆಂದೇನೂ ಅಲ್ಲ. ಆದರೂ ಕನ್ನಡದ ಕೆಲವು ಪ್ರಮುಖ ನಟ-ನಟಿಯರಿಗೆ ತೆಲುಗು ಮತ್ತು ತಮಿಳು ಚಿತ್ರಗಳಲ್ಲಿ ಅಭಿನಯಿಸಲು ಸಾಕಷ್ಟು ಅವಕಾಶಗಳು ಸಿಗುತ್ತಿದ್ದವು. ಪಂತಲುರವರಾಗಲಿ, ನಾಗೇಂದ್ರರಾಯರಾಗಲಿ, ರಂಗಾ ಅವರಾಗಲಿ ಕೇವಲ ಕನ್ನಡ ಚಿತ್ರಗಳಿಗೇ ತಮ್ಮ ಕಾರ್ಯವ್ಯಾಪ್ತಿಯನ್ನು ಸೀಮಿತಗೊಳಿಸಲಿಲ್ಲ. ಕನ್ನಡದ ಅನೇಕ ಪೋಷಕ ನಟ-ನಟಿಯರಿಗೂ ಕನ್ನಡೇತರ ಚಿತ್ರಗಳಲ್ಲಿ ಸಣ್ಣ-ಪುಟ್ಟ ಪಾತ್ರಗಳಲ್ಲಿ ಅಭಿನಯಿಸಲು ಆಗಾಗ ಕರೆ ಬರುತ್ತಿತ್ತು. ಕೆಲವು ಕಲಾವಿದರಂತೂ ಇತರ ಭಾಷೆಗಳಿಂದ ಕನ್ನಡಕ್ಕೆ ಡಬ್ ಆದ ಚಿತ್ರಗಳಿಗೆ ಕಂಠದಾನ ಮಾಡಿ ತಕ್ಕಮಟ್ಟಿಗೆ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಈ ಹಿನ್ನೆಲೆಯಲ್ಲಿ ಕನ್ನಡ ನಾಡು ಅವರಿಗೆ ಯಾವ ರೀತಿಯಲ್ಲಿಯೂ ಆರ್ಥಿಕವಾಗಿ ಆಕರ್ಷಕವೆನಿಸಲಿಲ್ಲ. ಅವರಲ್ಲಿ ಕನ್ನಡ ನಾಡಿನ ಬಗ್ಗೆ ಭಾವನಾತ್ಮಕ ತುಡಿತವಿದ್ದರೂ ಅದು ಸುಪ್ತವಾಗಿಯೇ ಇರುವುದು ಕೂಡ ಅನಿವಾರ್ಯವಾಯಿತು.

ಅದೇ ಸಮಯದಲ್ಲಿ ಕನ್ನಡ ಚಿತ್ರರಂಗ ಮತ್ತು ತೆಲುಗು, ತಮಿಳು ಚಿತ್ರರಂಗಗಳ ನಡುವಿನ ಸಂಬಂಧ ಅನ್ಯೋನ್ಯವಾಗಿಯೇ ಇತ್ತು. ಅಂದಿನ ದಿನಗಳಲ್ಲಿ ತೆಲುಗು, ತಮಿಳು ನಿರ್ಮಾಪಕರು/ನಿರ್ದೇಶಕರು, ಕಲಾವಿದರು, ತಂತ್ರಜ್ಞರು, ಅಷ್ಟೇ ಏಕೆ ಸ್ಟುಡಿಯೋ ಕಾರ್ಮಿಕರು ಕೂಡ ಕನ್ನಡದವರನ್ನು ನಿಕೃಷ್ಟವಾಗಿ ಕಾಣುತ್ತಿದ್ದರೆಂಬ ಆರೋಪದಲ್ಲಿ ಸ್ವಲ್ಪವೂ ಹುರುಳಿಲ್ಲವೆಂದು ಕನ್ನಡ ಚಿತ್ರರಂಗದ ಅಂದಿನ ಬಹು ಪಾಲು ಪ್ರಮುಖರು ಹೇಳುತ್ತಾರೆ. ಕನ್ನಡ ಚಿತ್ರಗಳ ಶೂಟಿಂಗ್ ಮತ್ತು ರಿಕಾರ್ಡಿಂಗ್ ಮದರಾಸಿನ ಸ್ಟುಡಿಯೋಗಳಲ್ಲಿ ರಾತ್ರಿ ವೇಳೆಯೇ ನಡೆಯುತ್ತಿತ್ತು. ಅದಕ್ಕೆ ಕಾರಣ ಅಲ್ಲಿಯ ಸ್ಟುಡಿಯೋ ಮಾಲೀಕರು ಕನ್ನಡ ನಿರ್ಮಾತೃಗಳನ್ನು ದ್ವಿತೀಯ ದರ್ಜೆಯ ಪ್ರಜೆಗಳಂತೆ ಕಾಣುತ್ತಿದರೆಂಬ ಹೇಳಿಕೆ ಸರಿಯಲ್ಲ. ಬಹುತೇಕ ಕನ್ನಡ ಚಿತ್ರಗಳಿಗೆ ಆ ದಿನಗಳಲ್ಲಿ ಹೇಳಿಕೊಳ್ಳುವಂತಹ ಬಜೆಟ್ ಇರಲಿಲ್ಲ. ಸ್ಟುಡಿಯೋಗಳಲ್ಲಿ ರಾತ್ರಿ ಶೂಟಿಂಗ್ ಮಾಡಿದರೆ ರಿಯಾಯಿತಿ ಸಿಗುತ್ತಿತ್ತು. ಅಲ್ಲದೆ ಕನ್ನಡ ಮತ್ತು ತೆಲುಗು ಚಿತ್ರಗಳಿಗೆ

ನಿರ್ಮಿತವಾಗಿದ್ದ ಸೆಟ್‌ಗಳು ಕೂಡ ಕಡಿಮೆ ಬಾಡಿಗೆಗೆ ಲಭ್ಯವಾಗುತ್ತಿದ್ದವು. ಅಹನ್ಯಹನಿ ಕಾಲಕ್ಷೇಪ ಮಾಡುತ್ತಿದ್ದ ನಿರ್ಮಾಪಕರಿಗೆ ಈ ರಿಯಾಯಿತಿ ದೊಡ್ಡ ವರವಾಗಿತ್ತು. ಆದ್ದರಿಂದ ಕೇವಲ ಆರ್ಥಿಕ ಕಾರಣಗಳಿಗಾಗಿ ಕನ್ನಡ ಚಿತ್ರರಂಗದವರು ಸತತವಾಗಿ ರಾತ್ರಿ ಚಿತ್ರಣದ ಅನಾನುಕೂಲವನ್ನು ಎದುರಿಸಬೇಕಾಯಿತು. ಬಿಸಿಲು ಕಾಲದಲ್ಲಿ ಚಿತ್ರೀಕರಣಕ್ಕೆ ಊಟಿ, ಕೊಡೈಕೆನಾಲ್‌ನಿಂದ ಹೊರಾಂಗಣಕ್ಕೆ ಚಿತ್ರ ತಂಡಗಳು ತೆರಳುತ್ತಿದ್ದುದರಿಂದ ತೆರವಾದ ಸ್ಟುಡಿಯೋಗಳಲ್ಲಿ ಬಿಸಿಲ ಬೇಗೆಯನ್ನು ಸಹಿಸಿಕೊಂಡೇ ಕನ್ನಡ ಚಿತ್ರಗಳು ಚಿತ್ರೀಕರಣಗೊಳ್ಳುತ್ತಿದ್ದವು. ಎಲ್ಲದರ ಹಿಂದೆ ಅರ್ಥಿಕ ಕಾರಣಗಳು ಇದ್ದವೆಂಬುದು ಮುಖ್ಯ. ವಾಸ್ತವವಾಗಿ ಕನ್ನಡ ಕಲಾವಿದರನ್ನು ತಮಿಳು, ತೆಲುಗಿನ ಅವರ ಸಹೋದ್ಯೋಗಿಗಳು ತುಂಬಾ ವಿಶ್ವಾಸದಿಂದಲೇ ನಡೆಸಿಕೊಳ್ಳುತ್ತಿದ್ದರು.



(ಚಿತ್ರ ೨) ಕನ್ನಡ ಭಾಷೆ ಮತ್ತು ಸಂಸ್ಕೃತಿಗಳ ರಕ್ಷಣೆಗಾಗಿ ಕನ್ನಡ ಭಾಷಾ ಚಳವಳಿ

ಆದರೂ ಅಂದು ತಯಾರಾಗುತ್ತಿದ್ದ ಕನ್ನಡ ಚಿತ್ರಗಳ ಸಂಖ್ಯೆಯೇ ಕಡಿಮೆಯಾದ್ದರಿಂದ, ಹಾಗೂ ಆ ಚಿತ್ರಗಳನ್ನೂ ನಿರ್ಮಾಪಕರು ಹೊಟ್ಟೆ, ಬಟ್ಟೆ ಕಟ್ಟಿ ಮಾಡಬೇಕಾದ್ದರಿಂದ ಕಲಾವಿದರ ಹಾಗೂ ತಂತ್ರಜ್ಞರ ಆರ್ಥಿಕ ಸ್ಥಿತಿ ಕಳವಳಕಾರಿಯಾಗಿಯೇ ಇತ್ತು. ಕನ್ನಡೇತರ ಚಿತ್ರಗಳಲ್ಲಿ ಅಭಿನಯಿಸಿ ಜನಪ್ರಿಯರಾಗಿದ್ದ ಬಿ.ಸರೋಜಾದೇವಿ, ಕೆಲಮಟ್ಟಿಗೆ ಕಲ್ಯಾಣ್‌ಕುಮಾರ್ ಮೊದಲಾದ ಬೆರಳೆಣಿಕೆಯಷ್ಟು ಕಲಾವಿದರನ್ನು ಬಿಟ್ಟರೆ ಒಬ್ಬ ನಾಯಕ ನಟ ಚಿತ್ರವೊಂದಕ್ಕೆ ನಾಲ್ಕರಿಂದ ಐದು ಸಾವಿರ ರೂಪಾಯಿಗಳ ಸಂಭಾವನೆ ಪಡೆಯುವುದೇ ಒಂದು ಪವಾಡವೆನಿಸುವಂತಿತ್ತು. ರಾಜಕುಮಾರ್‌ರವರು ಈ ಪರಿಸ್ಥಿತಿಯನ್ನು ತುಂಬಾ ದಯನೀಯವಾಗಿ ವಿವರಿಸುತ್ತಾರೆ. ''ನಿರ್ಮಾಪಕರು ಆ ದಿನಗಳಲ್ಲಿ ನಮಗೆಲ್ಲ ಪ್ರಸಾದ ಕೊಟ್ಟ ಹಾಗೆ ಆಗಾಗ ಸ್ವಲ್ಪ ಹಣ ಕೊಡುತ್ತಿದ್ದರು. ಆ ಹಣ ಯಾರಿಗೆ ತಾನೆ ಸಾಕಾಗಿತ್ತು ? ಅಂತೂ ಹೇಗೋ ಜೀವನವನ್ನು ತಳ್ಳಬೇಕಾಗಿತ್ತು.''

ಈ ಪರಿಸ್ಥಿತಿ ಎಷ್ಟು ಗಂಭೀರವಾಯಿತೆಂದರೆ ಮುಂದಿನ ದಾರಿ ಕಾಣದೆ ರಾಜಕುಮಾರ್, ಜಿ.ವಿ.ಅಯ್ಯರ್, ಬಾಲಕೃಷ್ಣ, ನರಸಿಂಹರಾಜು ಅವರು ಸೇರಿ ಕನ್ನಡ ಚಲನಚಿತ್ರ ಕಲಾವಿದರ ಸಂಘವೊಂದನ್ನು ಸ್ಥಾಪಿಸಿ ಆ ಸಂಘದ ವತಿಯಿಂದ ಮೈಸೂರು ರಾಜ್ಯದಾದ್ಯಂತ ನಾಟಕಗಳನ್ನಾಡಿಯಾದರೂ ಅಲ್ಪಸ್ವಲ್ಪ ಹಣವನ್ನು ಸಂಪಾದಿಸುವ ಯೋಜನೆ ಹಾಕಿದರು. ಕೇವಲ ಪ್ರಾಯೋಗಿಕವಾಗಿ ಪ್ರಾರಂಭವಾದ ಈ ಯೋಜನೆ ಅವರ ಎಲ್ಲ ನಿರೀಕ್ಷೆಗಳನ್ನೂ ಮೀರಿ ಅದ್ಭುತ ಯಶಸ್ಸನ್ನು ಗಳಿಸಿತು. ವಿಪರ್ಯಾಸವೆಂದರೆ ಹಳೆಯ ಮೈಸೂರು ಪ್ರದೇಶದಲ್ಲಿ ಸಂಘ ಆಡಿದ ನಾಟಕಗಳಿಗೆ ಸಾಕಷ್ಟು ಪ್ರೋತ್ಸಾಹ ಸಿಗಲಿಲ್ಲ. ಆದರೆ ರಾಜ್ಯದಲ್ಲಿ ವಿಲೀನವಾಗಿದ್ದ ಉತ್ತರ ಭಾಗಗಳಲ್ಲಿ ರಾಜಕುಮಾರ್ ಮಾತಿನಲ್ಲೇ ಹೇಳುವುದಾದರೆ ''ಯದ್ವಾತದ್ವಾ'' ಹಣ ಸಿಕ್ಕಿತು. ಹಸಿದ ಹೊಟ್ಟೆಗಳನ್ನು ಸಮಾಧಾನಕರವಾಗಿ ತುಂಬುವುದರ ಜೊತೆಗೆ ಒಂದಿಷ್ಟು ನಿವ್ವಳ ಲಾಭವನ್ನೂ ತಂದಿತು. ಈ ಪವಾಡದಿಂದ ಉತ್ತೇಜಿತವಾದ ಸಂಘ ಆ ಲಾಭದಿಂದ ಚಿತ್ರವೊಂದನ್ನು ತಯಾರಿಸಿ ಇನ್ನಷ್ಟು ಹಣ ಗಳಿಸುವ ಸನ್ನಾಹ ನಡೆಸಿತು. ಆ ಸನ್ನಾಹದ ಫಲಶ್ರುತಿಯೇ ಇಂದಿಗೂ ಕನ್ನಡ ಚಿತ್ರರಂಗದಲ್ಲಿ ಒಂದು ಮೈಲಿಗಲ್ಲಾಗಿ ಉಳಿದಿರುವ 'ರಣಧೀರ ಕಂಠೀರವ'.

''ನಾನು ನನ್ನ ಅನುಭವದ ಶೈಶವಾವಸ್ಥೆಯಲ್ಲಿ ಮಾಡಿದ ಸಿನಿಮಾ ಇದು. ಬಹಳ ದೊಡ್ಡ ದೊಡ್ಡ ಸೆಟ್‌ಗಳನ್ನು ಹಾಕಿದ್ದೆ. ಒಂದೂವರ ಲಕ್ಷ ರೂ. ಖರ್ಚು ಮಾಡಿ ಅದ್ಭುತ ಮಾಡಿದ್ದೆವು. ಮುಖ್ಯವಾಗಿ ಮೈಸೂರಿನ ಸೊಗಡು ತುಂಬಿದೆ. ಅಂಥ ಭಾಷೆ-ವೇಷ ಉಪಯೋಗಿಸಿಕೊಂಡೆವು. ಸಂಸರು ವಿಗಡ ವಿಕ್ರಮರಾಯದಲ್ಲಿ ಬಳಸಿದ ಭಾಷೇನೇ ಕೊಂಚ ಸರಳ ಮಾಡಿದ್ದೆ. ಅದರಲ್ಲಿ ಹೇಳಿರುವ ಉಡುಪಿನ ವಿನ್ಯಾಸವೇ ಆಧಾರ ಮಾಡಿಕೊಂಡೆ. ಈ ಸಿನಿಮಾ ನೋಡಿದ ಒಡೆಯರ್ ಮನೆತನದವರ ಪ್ರತಿಕ್ರಿಯೆ ಚೆನ್ನಾಗಿಯೇ ಇತ್ತು. ಮಿಚೆಲ್ ಕ್ಯಾಮೆರಾನೇ ಬಳಸಿದ್ದೆವು. ಚಿತ್ರ ಯಶಸ್ವಿಯಾಯಿತು, ಹಣಾನೂ ಬಂತು. ಹಣ ಇದ್ದ ಕಡೆ ವ್ಯಾಜ್ಯ ಇರೋದು ಸಹಜ. ಬಾಲಕೃಷ್ಣ ತಕರಾರು ಮಾಡಿದ. ನರಸಿಂಹರಾಜು, ರಾಜಕುಮಾರ್‌ದು ಏನೂ ತಕರಾರು ಇರಲಿಲ್ಲ'' ಎಂದು ಜಿ.ವಿ.ಅಯ್ಯರ್ ಅವರು ಹೇಳುತ್ತಾರೆ.

''ಈ ಚಿತ್ರದಿಂದ ನಮಗೆ ಒಳ್ಳೆಯ ಹೆಸರು ಸಿಕ್ಕಿತೇ ಹೊರತು ಬೇರೇನೂ ಸಿಗಲಿಲ್ಲ...'' ಎಂದು ನಗುತ್ತಾರೆ ರಾಜಕುಮಾರ್.

'ರಣಧೀರ ಕಂಠೀರವ' ಚಿತ್ರವನ್ನು ವಿಕ್ರಂ ಫಿಲಂಸ್ ಮೂಲಕ ವಿತರಿಸಲು ಬಿ.ಎಸ್.ರಂಗಾ ಅವರ ಅಣ್ಣ ಗರುಡಾಚಾರ್ ಅವರು ಒಪ್ಪಿದ್ದರು. ವಿಕ್ರಂ ಫಿಲಂಸ್ ಅತ್ಯಂತ ವ್ಯವಸ್ಥಿತವಾಗಿ ನಡೆಯುತ್ತಿದ್ದ, ಶ್ರೀಮಂತ ಹಾಗೂ ಶಿಸ್ತುಬದ್ಧ ಸಂಸ್ಥೆಯಾಗಿತ್ತು. ಕೆಂಪೇಗೌಡ ರಸ್ತೆಯ ಯಾವುದೇ ಚಿತ್ರಮಂದಿರವೂ ಸಿಗದೆ ಚಿತ್ರದ ಬಿಡುಗಡೆಯೇ ಒಂದು ಸಮಸ್ಯೆಯಾಯಿತು. ಕೆಂಪೇಗೌಡ ವೃತ್ತದ ಬಳಿ ಇರುವ ಹಿಮಾಲಯ ಟಾಕೀಸ್‌ನಲ್ಲಿ '೨೪ ಗಂಟೆಗಳು' ಎಂಬ ಹಿಂದಿ ಚಿತ್ರವೊಂದು ನಡೆಯುತ್ತಿತ್ತು. ಗರುಡಾಚಾರ್ ಅವರು ಆ ಚಿತ್ರವನ್ನು ಎಷ್ಟು ವಾರಕ್ಕೆಂದು ಗೊತ್ತು ಮಾಡಲಾಗಿತ್ತೋ ಅಷ್ಟು ಲೆಕ್ಕ ಮಾಡಿ ಅದು ಗಳಿಸಬಹುದಾಗಿದ್ದ ಹಣವನ್ನು ಕೊಟ್ಟು ಚಿತ್ರಮಂದಿರವನ್ನು ಬಿಡಿಸಿಕೊಂಡರು. ಹಿಮಾಲಯದಲ್ಲಿ 'ರಣಧೀರ ಕಂಠೀರವ' ಪ್ರದರ್ಶಿಸಿದ್ದು ಇಂಥ ಸಾಹಸದಿಂದ. ಈ ಕ್ರಿಯೆಯ ಹಿಂದೆ ಇದ್ದದ್ದು ಕನ್ನಡ ಚಿತ್ರವೊಂದು ತೆರೆಕಾಣಬೇಕೆಂಬ ಹಂಬಲ ಮಾತ್ರ. ಹಣ ಗಳಿಕೆಯ, ಲಾಭ-ನಷ್ಟದ ಲೆಕ್ಕಾಚಾರವಲ್ಲ. ಇದೇ ಸಮಯದಲ್ಲಿ ಆರ್.ಲಕ್ಷ್ಮಣ್ ಅವರು ಹಿಮಾಲಯ ಚಿತ್ರಮಂದಿರದ ಮಾಲೀಕರನ್ನು ಮಾತನಾಡಿಸಲು ಬಂದಿದ್ದವರು ಈ ಎಲ್ಲ ವಿದ್ಯಮಾನಗಳನ್ನು ಕೇಳಿ ತಿಳಿದರು.

ಭಾರತ್ ಟಾಕೀಸಿನ ಮಾಲೀಕರಾದ ಖಾಸಿಂ ಷರೀಫ್ ಅವರ ಬಳಿ ಈ ವಿಷಯ ಪ್ರಸ್ತಾಪಿಸಿದರು. ಖಾಸಿಂ ಸಾಹೇಬರು ಆಗಷ್ಟೇ ಗ್ಲೋಬ್ ಚಿತ್ರಮಂದಿರವನ್ನು ಸ್ವಾಧೀನಕ್ಕೆ ತೆಗೆದುಕೊಂಡಿದ್ದರು. ಚಿತ್ರಮಂದಿರ ಇನ್ನೂ ಪ್ರಾರಂಭವಾಗಿರಲಿಲ್ಲ. ಮರಸ್ತಿ ಮಾಡುತ್ತಿದ್ದರು. ಹೇಗೆ ಚಿತ್ರಮಂದಿರ ಪ್ರಾರಂಭಿಸಬೇಕೆಂಬ ಬಗ್ಗೆ ಯೋಚಿಸುತ್ತಿದ್ದರು. ಕನ್ನಡ ಪ್ರೇಮಿ ಖಾಸಿಂ ಸಾಹೇಬರು ಕೂಡಲೇ ಕನ್ನಡ ಚಿತ್ರವೊಂದನ್ನು ಪ್ರದರ್ಶಿಸುವ ಮೂಲಕ 'ಭಾರತ್' ಚಿತ್ರಮಂದಿರ ಪ್ರಾರಂಭಿಸಲು ಒಪ್ಪಿದರು. ಆದರೆ ಈ ಎಲ್ಲ ವ್ಯವಹಾರ, ನಿರ್ವಹಣೆಯ ಹೊಣೆಯನ್ನು ಹೊತ್ತುಕೊಳ್ಳಲೇಬೇಕೆಂದು ಲಕ್ಷ್ಮಣ್ ಅವರ ಮೇಲೆ ಪ್ರೀತಿಯ ಒತ್ತಡವನ್ನು ತಂದರು.

ಕನ್ನಡ ಚಿತ್ರಗಳು ಕನ್ನಡ ನೆಲದಲ್ಲಿ ಬೆಳೆಯಬೇಕೆಂಬ ಹಂಬಲವಿದ್ದ ಲಕ್ಷ್ಮಣ್ ಅವರೂ ಒಪ್ಪಿ ಭಾರತ್ ಚಿತ್ರಮಂದಿರದ ನಿರ್ವಾಹಕರಾಗಿ ಕಾರ್ಯ ನಿರ್ವಹಿಸಲಾರಂಭಿಸಿದರು. 'ರಣಧೀರ ಕಂಠೀರವ' ಭಾರತ್ ಹಾಗೂ ಹಿಮಾಲಯ ಚಿತ್ರಮಂದಿರಗಳಲ್ಲಿ ನೂರು ನೂರು ದಿನಗಳ ಕಾಲ ನಡೆಯಿತು.

ಇಲ್ಲಿಂದಾಚೆಗೆ ಖಾಸಿಂ ಸಾಹೇಬರು ಮತ್ತು ರಾಜಕುಮಾರ್ ನಡುವೆ ಗಾಢವಾದ ಸ್ನೇಹವೂ ಬೆಳೆಯಿತು. ಭಾರತ್ ಚಿತ್ರಮಂದಿರ ಬಹುಕಾಲ ಕನ್ನಡ ಚಿತ್ರಗಳನ್ನು ಮಾತ್ರ ಪ್ರದರ್ಶಿಸುವ ಪಣತೊಟ್ಟು ಹಾಗೇ ನಡೆದುಕೊಂಡೂ ಬಂದು, ಕನ್ನಡಪರ ಚಳವಳಿಗಳು, ಡಬ್ಬಿಂಗ್ ವಿರೋಧಿ ನಿಲುವು, ಕನ್ನಡ ಚಿತ್ರ ರಸಿಕರ ಸಂಘವೇ ಮೊದಲಾದ ಸಂಸ್ಥೆಗಳನ್ನು ಪ್ರಾರಂಭಿಸುವ ಯೋಜನೆ ಇಂಥ ಅನೇಕ ಕನ್ನಡಪರ ಕೆಲಸಗಳಿಗೆ ನೆರಳಾಗಿ ನಿಂತಿತು ಭಾರತ್ ಚಿತ್ರಮಂದಿರ. ಅ.ನ.ಕೃಷ್ಣರಾಯರೇ ಮೊದಲಾದ ಎಲ್ಲ ಹಿರಿಯರೂ ಈ ಕಾರ್ಯಯೋಜನೆಗಳಿಗೆ ಸಲಹೆ-ಸೂಚನೆ ಕೊಡುತ್ತಿದ್ದರು. ಕನ್ನಡ ಚಲನಚಿತ್ರ ಇತಿಹಾಸದಲ್ಲಿ ಕನ್ನಡ ಭಾಷಾ ಚಳವಳಿಯ ಇತಿಹಾಸದಲ್ಲಿ ಭಾರತ್ ಚಿತ್ರಮಂದಿರ ವಿಶಿಷ್ಟವಾದ ಸ್ಥಾನ ಹೊಂದಿದೆ. ಮುಂದೆ ದೊಡ್ಡ ದೊಡ್ಡ ಚಿತ್ರಮಂದಿರಗಳಾದಾಗ ಕನ್ನಡ ಚಿತ್ರಗಳು ಅತ್ತ ಸರಿದವು. ಭಾರತ್ ಚಿತ್ರಮಂದಿರಕ್ಕೆ ಕನ್ನಡ ಚಿತ್ರಗಳೇ ಇಲ್ಲ. ಈ ಹೊತ್ತಿಗೆ ಲಕ್ಷ್ಮಣ್ ಅವರು ದೊಡ್ಡ ನಿರ್ಮಾಪಕರಾಗಿದ್ದರು, ಖಾಸಿಂ ಸಾಹೇಬರು ನಿಧನರಾಗಿದ್ದರು. ಅವರ ಮಕ್ಕಳು ಬೇರೆ ಗತ್ಯಂತರವಿಲ್ಲದೆ ಅನ್ಯ ಭಾಷಾ ಚಿತ್ರಗಳನ್ನು ಪ್ರದರ್ಶಿಸಬೇಕಾಯಿತು. ಈ ಸಂದರ್ಭದಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯು ಕನ್ನಡ ಭಾಷೆಗೆ, ಕಲೆಗೆ ಮಹತ್ವ ಕೊಟ್ಟು ನಾಡಿನ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂಥ ಕೆಲಸ ಮಾಡಿದ್ದ ಭಾರತ್ ಚಿತ್ರಮಂದಿರಕ್ಕೆ ಒದಗಿದ ಈ ಮಸ್ಥಿತಿ ಕನ್ನಡ ನಾಡಿಗೆ ಆದ ದೊಡ್ಡದೊಂದು ದುರಂತವೆಂದು ವಿಷಾದದಿಂದ ಬರೆಯಿತು. ಕ್ರಮೇಣ ಭಾರತ್ ಚಿತ್ರಮಂದಿರ ಕೂಡಾ ನೆಲಸಮವಾಯಿತು.

'ರಣಧೀರ ಕಂಠೀರವ' ಆರ್ಥಿಕವಾಗಿ ಸೋತರೂ ಕನ್ನಡ ಚಿತ್ರರಂಗದ ಬೆಳವಣಿಗೆಯಲ್ಲಿ ಒಂದು ಹೊಸ ಮೈಲಿಗಲ್ಲನ್ನೇ ಸ್ಥಾಪಿಸಿತು. ಆಗಲೇ ಹೊಗೆಯಾಡುತ್ತಿದ್ದ ಕನ್ನಡ ಚಳವಳಿ ಕನ್ನಡ ಚಲನಚಿತ್ರರಂಗಕ್ಕೂ ತಟ್ಟಿದ್ದು ಈ ಚಿತ್ರಕ್ಕೆ ಪ್ರದರ್ಶಕರಿಂದ ಆದ ಅನ್ಯಾಯದಿಂದಲೇ.

ಕನ್ನಡ ನಾಡಿನಲ್ಲಿಯೇ ಕನ್ನಡ ಚಿತ್ರಗಳ ಪ್ರದರ್ಶನಕ್ಕಾಗಿ ನಿರ್ಮಾಪಕರು ಈ ರೀತಿ ಪರದಾಡುವುದು ಕನ್ನಡ ಭಾಷೆ, ಸಂಸ್ಕೃತಿ ಹಾಗೂ ಕಲೆಗಳಿಗಾದ ಘೋರ ಅಪಮಾನವೆಂಬ ಕೂಗೆದ್ದಾಗ ಕನ್ನಡ ಚಳವಳಿ ಮತ್ತಷ್ಟು ಗರಿಕೆದರಿಕೊಂಡಿತು. ಅದೇ ಸಮಯದಲ್ಲಿ ಚುರುಕುಗೊಂಡಿದ್ದು ಡಬ್ಬಿಂಗ್ ವಿರೋಧದ ಚಳವಳಿ. ಕನ್ನಡ ಚಿತ್ರರಂಗದ ಚರಿತ್ರೆಯಲ್ಲಿ ಅದೇ ಒಂದು ದೊಡ್ಡ ಅಧ್ಯಾಯ.

ಕನ್ನಡ ಚಳವಳಿಯ ಮೊದಲ ಕಹಳೆಯನ್ನು ಮೊಳಗಿದವರು ಅ.ನ.ಕೃಷ್ಣರಾಯರು. ೧೯೬೦ರಲ್ಲಿ ದಕ್ಷಿಣ ಕನ್ನಡದ ಮಣಿಪಾಲದಲ್ಲಿ ಅದ್ದೂರಿಯಿಂದ ನಡೆದ ೪೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ರಾಯರು ''ಅಭದ್ರ ಆಡಳಿತ, ನಾಯಕತ್ವಕ್ಕಾಗಿ ಹೋರಾಟ, ಅಧಿಕಾರ ಸ್ಥಾನಗಳನ್ನು ಆಕ್ರಮಿಸಿಕೊಳ್ಳುವ ದಾಹದಲ್ಲಿ ನಾಯಕರೆನಿಸಿಕೊಂಡವರಿಗೆ ಕನ್ನಡ ನಾಡು-ನುಡಿ, ಜನತೆಯ ಕಡೆ ಲಕ್ಷ್ಯ ಬೀಳುವುದಕ್ಕೆ ವ್ಯವಧಾನವೇ ಇಲ್ಲವಾಗಿದೆ. ರಾಜ್ಯ ಸರ್ಕಾರವೇ ಕನ್ನಡಿಗರನ್ನು ಅಲಕ್ಷಿಸುತ್ತಿದೆ. ರಾಜ್ಯ ರಸ್ತೆ ಸಾರಿಗೆ ಶಾಖೆ ಮತ್ತು ಪೊಲೀಸ್ ಇಲಾಖೆಗಳಲ್ಲೂ ತಮಿಳರನ್ನೇ ತುಂಬುತ್ತಿದ್ದಾರೆ....'' ಎಂದು ಗುಡುಗಿದ ನಂತರ ರಾಮ ಮನೋಹರ ಲೋಹಿಯಾರಿಂದ ಪ್ರಭಾವಿತರಾಗಿದ್ದ ವಿದ್ಯಾರ್ಥಿ ಮುಖಂಡರಾದ ಕೋಣಂದೂರು ಲಿಂಗಪ್ಪ, ಬಂದಗದ್ದೆ ರಮೇಶ್ ಮುಂತಾದವರು ಶಾಂತವೇರಿ ಗೋಪಾಲಗೌಡರ ಒತ್ತಾಸೆಯಿಂದ 'ಕನ್ನಡ ಯುವಜನ ಸಭಾ' ಎಂಬ ಸಂಘಟನೆಯನ್ನು ರೂಪಿಸಿದರು. ಕನ್ನಡಿಗರಲ್ಲಿ ನಾಡು-ನುಡಿಯ ಬಗ್ಗೆ ಜಾಗೃತಿ ಮೂಡಿಸುವುದೇ ಅವರ ಆಶಯ. ಅದಾದ ಮೇಲೆ 'ಸ್ಥಳೀಯ ನಿರಾಶ್ರಿತ'ರಾಗಿದ್ದ ಅನೇಕ ಕನ್ನಡಿಗರು ಬೇರೆ ಬೇರೆ ಸಂಘಟನೆಗಳನ್ನು ಪ್ರಾರಂಭಿಸಿದರು. ಅದೇ ವರ್ಷದ ಡಿಸೆಂಬರ್‌ನಲ್ಲಿ 'ಬೆಂಗಳೂರಿನ ಕನ್ನಡಿಗರ ಶೋಚನೀಯ ಸ್ಥಿತಿ' ಎಂಬ ಬಗ್ಗೆ ಒಂದು ಸಭೆ ನಡೆದು ಅದರ ಅಧ್ಯಕ್ಷತೆಯನ್ನು ಅ.ನ.ಕೃಷ್ಣರಾಯರೇ ವಹಿಸಿದರು. ಮುಂದಿನ ದಿನಗಳಲ್ಲಿ ಚಳವಳಿಯ ಚುಕ್ಕಾಣಿ ಹಿಡಿದ ಮ.ರಾಮಮೂರ್ತಿಗಳೂ ಈ ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಅದೇ ಸಮಯದಲ್ಲಿ ನಡೆದ ಇನ್ನೊಂದು ಸಭೆಯಲ್ಲಿ ''ನಾವು ಬಯಸುವ ಕರ್ನಾಟಕ ಏರ್ಪಟ್ಟಿಲ್ಲ'' ಎಂದು ದ.ರಾ.ಬೇಂದ್ರೆ ನೊಂದುಕೊಂಡರು.

ನಂತರ ಕನ್ನಡದ ಪರ ಕೂಗೆತ್ತಿದ್ದವರು ನಾಟಕಕಾರ ಶ್ರೀರಂಗರು. ಧಾರವಾಡದ ವಿದ್ಯಾವರ್ಧಕ ಸಂಘ ದ ಕೂಗು ಸಂಬಂಧಪಟ್ಟವರ ಎದೆ ನಡುಗಿಸುವಂಥದ್ದಾಗಿತ್ತು. ಹೀಗಾಗಿ ಅಂದಿನ ಸಾರಸ್ವತ ಲೋಕದ ಪ್ರತಿಷ್ಠಿತರೆಲ್ಲರೂ ಕನ್ನಡ ಭಾಷೆ ಮತ್ತು ಸಂಸ್ಕೃತಿಗಳನ್ನು ಕಾಪಾಡುವ ಕೆಲಸದಲ್ಲಿ ಭುಜಕ್ಕೆ ಭುಜ ಕೊಟ್ಟಂತಾಯಿತು. ಬೆಂಗಳೂರಿನ ಎಲ್ಲ ಕಡೆಯೂ ಕನ್ನಡದ ಉದ್ಧಾರದ ಬಗ್ಗೆ ಗಂಭೀರವಾದ ಚರ್ಚೆ ಪ್ರಾರಂಭವಾಯಿತು. ಆದರೆ ನೇರ ಪ್ರತಿಭಟನೆ ಪ್ರಾರಂಭವಾಗಿದ್ದು ಕನ್ನಡಿಗರು ಅಲ್ಪಸಂಖ್ಯಾತರಾಗಿದ್ದ ಬಡಾವಣೆಗಳಲ್ಲಿ. ಆ ವೇಳೆಗೆ ಬೆಂಗಳೂರಿನಲ್ಲಿ ಪ್ರಾರಂಭವಾಗಿದ್ದ ಕೇಂದ್ರ ಸರ್ಕಾರದ ಬೃಹತ್ ಕೈಗಾರಿಕೆಗಳು ಹೆಚ್ಚು ಕಡಿಮೆ ತಮಿಳರ ವಸಾಹತುಗಳಾಗಿದ್ದವು. ಆ ಘಟಕಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಲಯಾಳಿಗಳೂ ಕೆಲಸ ಮಾಡುತ್ತಿದ್ದರು. ಕನ್ನಡಿಗರಲ್ಲಿ ತಮ್ಮ ಅಸ್ತಿತ್ವದ ಬಗ್ಗೆ ಜಾಗೃತಿ ಹೆಚ್ಚಿದಂತೆಲ್ಲ ತಮಿಳರು ಮತ್ತು ಮಲಯಾಳಿಗಳೂ ಪ್ರತಿಭಟನೆಯ ಹಾದಿ ಹಿಡಿದರು. ಈ ಉದ್ದಿಮೆಗಳಿಗೆ ಸೇರಿದ ಕಾಲೋನಿಗಳಲ್ಲಿ ನೇರ ಸಂಘರ್ಷಗಳೇ ಪ್ರಾರಂಭವಾದವು.

ಬೆಂಗಳೂರಿನಲ್ಲಿ ವ್ಯಾಪಕವಾಗಿ ನಡೆಯುತ್ತಿದ್ದ ರಾಮನವಮಿ, ಗಣೇಶೋತ್ಸವ ಮುಂತಾದ ಕಾರ್ಯಕ್ರಮಗಳಲ್ಲಿ ಕನ್ನಡ ಭಾಷೆಗೆ, ಕನ್ನಡ ಕಲಾವಿದರಿಗೆ ಅವಕಾಶಗಳು ದುರ್ಲಭವಾಗಿದ್ದುದು ಕನ್ನಡಿಗರ ಕಿಚ್ಚನ್ನು ಇನ್ನಷ್ಟು ಕೆರಳಿಸಿತು. ಇದರಿಂದಾಗಿ ಕನ್ನಡಿಗರು ಕೆಲವು ಕಾಲ ಅಸಂಘಟಿತರಾಗಿಯೇ ಹೋರಾಡಬೇಕಾಯಿತು. ಆಗ ಕನ್ನಡ ಪರ ಹೋರಾಟಗಳಿಗೆ ಸಂಘಟನೆಯ ರೂಪವನ್ನು ಕೊಡುವ ಜವಾಬ್ದಾರಿಯನ್ನು ಕೋಣಂದೂರು ಲಿಂಗಪ್ಪನವರೇ ಹೊತ್ತರು. ಕನ್ನಡ ಯುವಜನ ಸಭೆಯನ್ನು ಬೆಂಗಳೂರಿನಲ್ಲಿ ಪುನರುಜ್ಜೀವನಗೊಳಿಸುವುದರ ಮೂಲಕ ಕನ್ನಡಪರ ಸಂಘರ್ಷಗಳಿಗೊಂದು ವೇದಿಕೆಯನ್ನು ಸಿದ್ಧಗೊಳಿಸಿದರು. ಅ.ನ.ಕೃ. ಅವರೇ ಆ ವೇದಿಕೆಯ ಅಧ್ಯಕ್ಷರಾದರು. ಮ.ರಾಮಮೂರ್ತಿ, ಬಂದಗದ್ದೆ ರಮೇಶ್, ಕೆ.ಜಿ.ಮಹೇಶ್ವರಪ್ಪ ಮುಂತಾದವರು ಕೋಣಂದೂರು ಲಿಂಗಪ್ಪನವರೊಂದಿಗೆ ಸಮಿತಿಯ ಸದಸ್ಯರಾದರು. ಶಾಂತವೇರಿ ಗೋಪಾಲಗೌಡ ಮತ್ತು ಅಂದಾನಪ್ಪ ದೊಡ್ಡಮೇಟಿಯವರಂತಹ ಹುಟ್ಟು ಹೋರಾಟಗಾರರು ಅವರಿಗೆ ಬೆಂಬಲವಾಗಿ ನಿಂತರು. ವ್ಯಾಪಾರದ ಸ್ಥಳಗಳಲ್ಲಿ ಕನ್ನಡ ನಾಮಫಲಕಗಳಿಗೆ ಒತ್ತಾಯಿಸುವುದು, ಕನ್ನಡ ಹಾಡು, ಚಲನಚಿತ್ರಗಳಿಗೆ ಒತ್ತಾಯಿಸುವುದು ಈ ಸಂಘಟನೆಯ ಮೂಲ ಧ್ಯೇಯಗಳಾದವು.

೧೯೬೨ರ ಫೆಬ್ರುವರಿ ೪ರಂದು ಬೃಹತ್ ಕನ್ನಡಿಗರ ಸಮ್ಮೇಳನವೊಂದು ಮ.ರಾಮಮೂರ್ತಿಯವರ ನೇತೃತ್ವದಲ್ಲಿ ನಡೆಯಿತು. ರಾಜ್ಯದ ಹೆಸರು ಕರ್ನಾಟಕವಾಗಬೇಕು, ಆಡಳಿತವೂ ಸೇರಿದಂತೆ ಎಲ್ಲ ಕ್ಷೇತ್ರಗಳಲ್ಲಿ ಕನ್ನಡಕ್ಕೆ ಆದ್ಯತೆಯಿರಬೇಕು, ಹೊರಗುಳಿದಿರುವ ಕನ್ನಡ ಪ್ರದೇಶಗಳು ರಾಜ್ಯಕ್ಕೆ ಸೇರ್ಪಡೆಯಾಗಬೇಕು, ಉದ್ಯಮಗಳಲ್ಲಿ ಕನ್ನಡಿಗರಿಗೆ ಆದ್ಯತೆಯಿರಬೇಕು ಎಂಬೆಲ್ಲ ನಿರ್ಣಯಗಳು ಈ ಸಮ್ಮೇಳನದಲ್ಲಿ ಅಂಗೀಕೃತವಾದ ಮೇಲೆ ಅ.ನ.ಕೃ, ನಾಡಿಗೇರ ಕೃಷ್ಣರಾಯ, ಎಂ.ಎಸ್.ನಟರಾಜ್, ತ.ರಾ.ಸು. ಅವರುಗಳು ಕನ್ನಡ ಚಳವಳಿಯಲ್ಲಿ ಮತ್ತಷ್ಟು ತೀವ್ರವಾಗಿ ತೊಡಗಿಕೊಂಡರು. ಇದಾದ ನಂತರ ರಾಜ್ಯದ ನಾನಾ ಭಾಗಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಕನ್ನಡ ಸಂಘಗಳು ಅಸ್ತಿತ್ವಕ್ಕೆ ಬಂದವು.

೧೯೬೩ರ ಫೆಬ್ರವರಿ ೨೭ ಕನ್ನಡ ಚಳವಳಿಯ ಇತಿಹಾಸದಲ್ಲಿ ಒಂದು ಪ್ರಮುಖ ದಿನ. ಅಂದು ಬೆಂಗಳೂರಿನ ಸಿಟಿ ಇನ್‌ಸ್ಟಿಟ್ಯೂಟ್ ಆವರಣದಲ್ಲಿ ವ್ಯವಸ್ಥೆ ಮಾಡಿದ್ದ ರಾಮೋತ್ಸವ ಕಾರ್ಯಕ್ರಮದ ಚಪ್ಪರದ ಎದುರು ಕನ್ನಡ ಕಲಾವಿದರಿಗೆ ಮತ್ತು ಕನ್ನಡ ವಾಗ್ಗೇಯಕಾರರ ಕೃತಿಗಳಿಗೆ ಆದ್ಯತೆಯಿರಬೇಕೆಂದು ಒತ್ತಾಯಿಸಿ ಅ.ನ.ಕೃ., ವೀರಕೇಸರಿ ಸೀತಾರಾಮಶಾಸ್ತ್ರಿ, ಮ.ರಾಮಮೂರ್ತಿ ಮತ್ತು ಇತರರ ನೇತೃತ್ವದಲ್ಲಿ 'ಕರ್ನಾಟಕ ಸಂಯುಕ್ತರಂಗ' ಬೃಹತ್ ಪ್ರತಿಭಟನಾ ಮೆರವಣಿಗೆ ನಡೆಸಿತು. ಅಂದು ಖ್ಯಾತ ಗಾಯಕಿ ಎಂ.ಎಸ್.ಸುಬ್ಬಲಕ್ಷ್ಮಿಯವರ ಸಂಗೀತ ಕಛೇರಿ ಏರ್ಪಾಟಾಗಿತ್ತು. ಸಹಸ್ರಾರು ಕನ್ನಡಿಗರು ಮೆರವಣಿಗೆಯಲ್ಲಿ ನೆರೆದಿದ್ದರು. ಕಛೇರಿಗೆ ಅಡ್ಡಿಪಡಿಸಿದ ಅನೇಕ ಕನ್ನಡ ಕಾರ್ಯಕರ್ತರು ಬಂಧನಕ್ಕೊಳಗಾದರು. ಸಭೆಯ ಹೊರಗೂ ಗಲಭೆಗಳಾದವು. ಅದೇ ಕನ್ನಡದ ಕಳಕಳಿಗೆ ಚಳವಳಿಯ ರೂಪ ಬಂದ ದಿನ. ಅಂದು ಭುಗಿಲೆದ್ದ ಚಳವಳಿ ಹಲವು ರೂಪಗಳನ್ನು ಪಡೆದುಕೊಂಡು ಬೆಂಗಳೂರಿನ ಬಡಾವಣೆಗಳಲ್ಲಿ ವ್ಯಾಪಕವಾಗಿ ಹರಡಿತು. ಇದರ ಜೊತೆಗೆ ತಮಗೇ ಅರಿವಿಲ್ಲದಂತೆ ತಮಿಳರೊಂದಿಗಿನ ಶತ್ರುತ್ವವೂ ಬೆಳೆಯಿತು. ಅತ್ತ ಕಡೆಯವರಿಂದಲೂ ಪ್ರತಿರೋಧ ಹೆಚ್ಚಿತ್ತು.

ರಾಮೋತ್ಸವದ ಪ್ರತಿಭಟನೆಯಂದು ಯಾರೋ ಕಿಡಿಗೇಡಿಗಳು ಚಪ್ಪರದ ಒಂದು ಮೂಲೆಗೆ ಬೆಂಕಿ ಹಚ್ಚಿದರು. ಪೊಲೀಸರು ಅನೇಕ ಕನ್ನಡ ಕಾರ್ಯಕರ್ತರನ್ನು ಥಳಿಸುವ ಜೊತೆಗೆ ಸಿಕ್ಕಿದವರನ್ನು ಹಿಡಿದು ಮೊಕದ್ದಮೆಗಳನ್ನೂ ಹೂಡಿದರು. ಇದರಿಂದ ಕನ್ನಡದ ಕಾರ್ಯಕರ್ತರು ಆಗಾಗ ಭೇಟಿ ಮಾಡಲು ಅವಕಾಶವಾಯಿತು. ನಂತರ ತಿರುಮಲೆ ತಾತಾಚಾರ್ಯ ಶರ್ಮ, ತ.ರಾ.ಸು., ನಾಡಿಗೇರ ಕೃಷ್ಣರಾಯ ಮುಂತಾದ ಪ್ರಮುಖರೂ ಚಳವಳಿಯನ್ನು ಸೇರಿಕೊಂಡಾಗ ಅದಕ್ಕೊಂದು ದೈತ್ಯ ಸ್ವರೂಪವೇ ಬಂತು.

ಅ.ನ.ಕೃ.ರಂತೂ ತಮ್ಮ ಅಮೋಘ ಮಾತುಗಾರಿಕೆಯಿಂದ ಕನ್ನಡ ಯುವಕರನ್ನು ಹುರಿದುಂಬಿಸುತ್ತಿದ್ದರು.

'ಕರ್ನಾಟಕ ಸಂಯುಕ್ತರಂಗ' ದಿನ ದಿನಕ್ಕೆ ಜನಪ್ರಿಯತೆ ಹೆಚ್ಚಿಸಿಕೊಂಡಂತೆ ತಮಿಳರ ಪ್ರತೀಕಾರವೂ ಹೆಚ್ಚಿ ಅನೇಕ ಕಡೆಗಳಲ್ಲಿ ಘರ್ಷಣೆಯ ಪ್ರಸಂಗಗಳೂ ಹೆಚ್ಚಿದವು. ಕರ್ನಾಟಕ ಏಕೀಕರಣವಾದ ನವಂಬರ್ ಒಂದನ್ನು 'ಕನ್ನಡ ರಾಜ್ಯೋತ್ಸವ ದಿನ'ವೆಂದು ಆಚರಿಸುವ ಪರಿಪಾಠ ಬೆಳೆದಿದ್ದು ೧೯೬೩ರಲ್ಲಿಯೇ. ನಂತರದ ದಿನಗಳಲ್ಲಿ ರಾಜ್ಯ ಸರ್ಕಾರ ಈ ದಿನವನ್ನು ಸಾರ್ವಜನಿಕ ರಜಾ ದಿನವಾಗಿಯೂ ಘೋಷಿಸಿತು.

ಅರವತ್ತರ ದಶಕದ ಆರಂಭದಲ್ಲಿ ಬೆಂಗಳೂರಿನ ಚಿತ್ರಮಂದಿರಗಳಲ್ಲಿ ಬಹುತೇಕ ತಮಿಳು, ತೆಲುಗು, ಹಿಂದಿ ಚಿತ್ರಗಳೇ ಪ್ರದರ್ಶಿತವಾಗುತ್ತಿದ್ದವು. ಪ್ರದರ್ಶಿತವಾಗುತ್ತಿದ್ದ ಕೆಲವೇ ಕನ್ನಡ ಚಿತ್ರಗಳಲ್ಲಿ ಬಹುಪಾಲು ಬೇರೆ ಭಾಷೆಗಳಿಂದ ಡಬ್ ಆದ ಚಿತ್ರಗಳೇ ಇದ್ದವು. ಕನ್ನಡ ಚಳವಳಿಗಾರರ ಆಕ್ರೋಶ ಅಂತಹ ಚಿತ್ರಗಳತ್ತ ತಿರುಗಿತು. ಡಬ್ಬಿಂಗ್ ಚಿತ್ರಗಳ ವಿರುದ್ಧ ಹೋರಾಟದ ಚುಕ್ಕಾಣಿ ಹಿಡಿದವರು ನಾಡಿಗೇರ ಕೃಷ್ಣರಾಯರು. ಡಬ್ ಆದ ಚಿತ್ರಗಳನ್ನು ಪ್ರದರ್ಶಿಸುತ್ತಿದ್ದ ಚಿತ್ರಮಂದಿರಗಳ ಎದುರು ಪ್ರತಿಭಟನೆಗಳು ನಡೆದವು. ಕ್ರಮೇಣ ತಾಜಾ ಕನ್ನಡ ಚಿತ್ರಗಳು ರೀಮೇಕ್‌ಗಳೇ ಆಗಲು ತೊಡಗಿದಾಗ ಚಳವಳಿಗಾರರ ಕೆಂಗಣ್ಣು ಅಂತಹ ಚಿತ್ರಗಳ ಮೇಲೆಯೂ ಬಿದ್ದಿತು. ಕನ್ನಡದ ಸೊಗಡಾಗಲಿ, ವಾತಾವರಣವಾಗಲಿ ಇಲ್ಲದ ಈ ಚಿತ್ರಗಳ ವಿರುದ್ಧ ಅವರು ಕೆರಳಿ ''ಇತ್ತೀಚಿನ ಚಳವಳಿಯಿಂದ ಕನ್ನಡಿಗರು ಹೆಚ್ಚು ಹೆಚ್ಚು ಕನ್ನಡ ಚಿತ್ರಗಳನ್ನು ನೋಡುತ್ತಿರುವುದು ಅಭಿಮಾನದ ಸಂಗತಿ. ಆದರೆ ಕನ್ನಡಿಗರ ಅಭಿಮಾನದ ದುರ್ಲಾಭವನ್ನು ಇಂದು ಅನೇಕ ಚಿತ್ರೋದ್ಯಮಿಗಳು ಪಡೆಯುತ್ತಿರುವುದು ದುರ್ದೈವದ ಸಂಗತಿ. ಕೇವಲ ಭಾಷೆ ಕನ್ನಡವಾದರೆ ಸಾಲದು. ಚಿತ್ರಗಳಲ್ಲಿ ಕರ್ನಾಟಕದ ಸಂಸ್ಕೃತಿ, ಪರಿಸರವೂ ಕಾಣಿಸಬೇಕು. ಇಲ್ಲದಿದ್ದರೆ ಕಳಪೆ ಚಿತ್ರಗಳನ್ನು ಬಹಿಷ್ಕರಿಸಬೇಕಾಗುತ್ತದೆ.'' ಎಂದು ಕರೆಯಿತ್ತರು. ಮುಂದೆ ಕಾದಂಬರಿಯಾಧಾರಿತ ಕನ್ನಡ ಚಿತ್ರಗಳು ನಿರ್ಮಾಣವಾಗಲು ಈ ಕರೆಯೇ ಪ್ರೇರಣೆಯಾಯಿತೆಂದರೂ ಉತ್ಪ್ರೇಕ್ಷೆಯಲ್ಲ.



(ಚಿತ್ರ ೩) ಶಿಕ್ಷಣದಲ್ಲಿ ಕನ್ನಡಕ್ಕೆ ಆದ್ಯತೆ ಹಾಗೂ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಆದ್ಯತೆ ಕೋರಿ ಚಳವಳಿ

೧೯೬೪ರಲ್ಲಿ ಬಿಡುಗಡೆಯಾದ 'ಕಾಂಚಿ ತಲೈವನ್' ಎಂಬ ತಮಿಳು ಚಿತ್ರದಲ್ಲಿ ತಮಿಳುನಾಡಿನ ರಾಜನೊಬ್ಬ ಪುಲಿಕೇಶಿಯನ್ನು ಸೋಲಿಸಿ ಕರ್ನಾಟಕದ ಬಾವುಟವನ್ನು ತುಳಿಯುವ ದೃಶ್ಯವೊಂದಿತ್ತು. ಅದರ ವಿರುದ್ಧ ಪ್ರತಿಭಟಿಸಲು ಅ.ನ.ಕೃ ಮತ್ತು ಮ.ರಾಮಮೂರ್ತಿ ಕನ್ನಡಿಗರಿಗೆ ಕರೆ ಕೊಟ್ಟರು. ಆದರೆ ಈ ಪ್ರತಿಭಟನೆ ಹಿಂಸಾಮಾರ್ಗವನ್ನು ಹಿಡಿದದ್ದು ಅ.ನ.ಕೃ.ಗೆ ಸಹ್ಯವಾಗಲಿಲ್ಲ. ಚಳವಳಿ ಎಂದಿಗೂ ತನ್ನ ಸಭ್ಯತೆಯನ್ನು ಕಾಪಾಡಿಕೊಳ್ಳಬೇಕೆನ್ನುವುದು ಅವರ ಸ್ಪಷ್ಟ ಅಭಿಮತ. ಆದರೆ ರಾಮಮೂರ್ತಿಯವರ ದೃಷ್ಟಿಕೋನವೇ ಬೇರೆಯಾಯಿತು. ಭಾವೋದ್ವೇಗದಲ್ಲಿ ಇಂತಹ ಘಟನೆಗಳು ಅನಿವಾರ್ಯವೆಂಬ ಅವರ ವಾದ ಅ.ನ.ಕೃ.ಗೆ ಒಪ್ಪಿಗೆಯಾಗಲಿಲ್ಲ. ಅಂದಿನಿಂದ ಅವರು ಸಕ್ರಿಯ ಚಳವಳಿಯಿಂದ ದೂರವಾದರು. ರಾಮಮೂರ್ತಿ, ವಾಟಾಳ್ ನಾಗರಾಜ್‌ರ ಕೈಗೆ ನಾಯಕತ್ವ ಹೋಯಿತು.

ಕಡೆಗೆ 'ಕಾಂಚಿ ತಲೈವನ್' ಚಿತ್ರದ ನಾಯಕ ನಟ ಎಂ.ಜಿ.ರಾಮಚಂದ್ರನ್ ಅವರೇ ಸ್ವತಃ ಬೆಂಗಳೂರಿಗೆ ಬಂದು ಅ.ನ.ಕೃ. ಅವರನ್ನು ಭೇಟಿ ಮಾಡಿ, ಅನಂತರ ಉಡ್‌ಲ್ಯಾಂಡ್ಸ್ ಹೊಟೇಲ್‌ನಲ್ಲಿ ಪತ್ರಿಕಾಗೋಷ್ಠಿ ಕರೆದು - ಕನ್ನಡಕ್ಕೆ, ಕನ್ನಡ ಜನತೆಗೆ - ಅವಮಾನ ಮಾಡುವ ಉದ್ದೇಶ ತಮಗಿರಲಿಲ್ಲವೆಂದೂ - ಇದರಿಂದ ಕನ್ನಡಿಗರ ಮನಸ್ಸಿಗೆ ನೋವಾಗಿದ್ದರೆ ಕ್ಷಮೆ ಯಾಚಿಸುವುದಾಗಿಯೂ ತಿಳಿಸಿದರು.

ಪಕ್ಕದ ತಮಿಳುನಾಡಿನಲ್ಲಿ ಡಿ.ಎಂ.ಕೆ. ಪಕ್ಷ ಜನಸಾಮಾನ್ಯರನ್ನು ನೇರವಾಗಿ ತಲುಪಲು ಚಲನಚಿತ್ರ ಕಲಾವಿದರನ್ನು ಬಳಸಿಕೊಂಡಂತೆ ಇಲ್ಲಿ ಕನ್ನಡ ಚಳವಳಿ ಕೂಡ ಕನ್ನಡದ ಚಿತ್ರ ನಟರನ್ನು, ಸಾಹಿತಿಗಳನ್ನು ಬಳಸಿಕೊಳ್ಳಲು ಮಾಡಿದ ಪ್ರಯತ್ನ ನಿರೀಕ್ಷಿಸಿದಷ್ಟು ಯಶಸ್ವಿಯಾಗಲಿಲ್ಲ. ಈ ಕರೆಗೆ ಓಗೊಟ್ಟು ಚಳವಳಿಯೊಂದಿಗೆ ತಮ್ಮನ್ನು ನೇರವಾಗಿ ಗುರುತಿಸಿಕೊಂಡವರು ನಟ ಉದಯಕುಮಾರ್ ಒಬ್ಬರೇ. ಆದರೆ ಚಿತ್ರ ಸಾಹಿತಿಗಳು ಈ ಕರೆಗೆ ಹೆಚ್ಚಾಗಿ ಸ್ಪಂದಿಸಿದ್ದರಿಂದ ಅನೇಕ ಕನ್ನಡ ಚಿತ್ರಗಳಲ್ಲಿ ಕನ್ನಡ ನಾಡು-ನುಡಿಗೆ ಸಂಬಂಧಿಸಿದ ಹೆಚ್ಚಿನ ಹಾಡುಗಳು, ಸಂಭಾಷಣೆಗಳು ಕಾಣಿಸಿಕೊಂಡವು. ಆದರೆ ಇದು ತಮಿಳು ಚಿತ್ರಗಳಲ್ಲಿ ನಡೆದಷ್ಟು ಪರಿಣಾಮಕಾರಿಯಾಗಿ ಕನ್ನಡ ಚಿತ್ರಗಳಲ್ಲಿ ನಡೆಯಲಿಲ್ಲವೆನ್ನುವುದೂ ನಿರ್ವಿವಾದ.

ರಾಜ್ಯೋತ್ಸವ ಸಂದರ್ಭದಲ್ಲಿ ನಾಟಕಗಳು ಮುಗಿಯುವುದು ಮಧ್ಯ ರಾತ್ರಿಯೇ ಆದರೂ ವಾಟಾಳ್ ನಾಗರಾಜ್ ಭಾಷಣ ಮಾಡುತ್ತಿದ್ದುದೆಲ್ಲ ಆಮೇಲೆಯೇ. ಅವರ ಸತತ ಪ್ರಯತ್ನದಿಂದಾಗಿ ಬೆಂಗಳೂರಿನ ಬಹುತೇಕ ಚಿತ್ರಮಂದಿರಗಳು ನವಂಬರ್‌ನಲ್ಲಿ ಕನ್ನಡ ಚಿತ್ರಗಳನ್ನು ಪ್ರದರ್ಶಿಸಲು ಪ್ರಾರಂಭಿಸಿದವು. ಇದರ ಕೀರ್ತಿ ವಾಟಾಳರಿಗೇ ಸಲ್ಲಬೇಕು.

ಅಂದಿನ ದಿನಗಳಲ್ಲಿ ತಮಿಳರು ಅಧಿಕ ಸಂಖ್ಯೆಯಲ್ಲಿದ್ದ ಬೆಂಗಳೂರಿನ ಬಡಾವಣೆಗಳಲ್ಲಿ ಡಿ.ಎಂ.ಕೆ. ಬಾವುಟಗಳನ್ನು ಹಾರಿಸುವ ಪ್ರವೃತ್ತಿ ಬೆಳೆದಿತ್ತು. ಈ ಪ್ರವೃತ್ತಿ ಕನ್ನಡ ಕಾರ್ಯಕರ್ತರಲ್ಲಿ ತೀವ್ರ ಅಸಹನೆ ಮೂಡಿಸಿತು. ಎರಡು ಭಾಷಾ ಕಾರ್ಯಕರ್ತರ ನಡುವೆ ಘರ್ಷಣೆಗಳೂ ಆದವು. ಈ ಬಾವುಟಗಳ ಸಮರದಿಂದಾಗಿ ದ್ರಾವಿಡ ಕಳಗಂ (ಡಿ.ಕೆ) ಹೋರಾಟದ ಹಿನ್ನೆಲೆಯಿಂದ ಬಂದ ಜೆ.ನಿ.ಈಶ್ವರಪ್ಪ, ಕೆ.ಮು.ಸಂಪಂಗಿರಾಮಯ್ಯ ಮುಂತಾದವರು ಕನ್ನಡದ ಬಾವುಟವೊಂದನ್ನು ರೂಪಿಸಿ ಕನ್ನಡಿಗರೂ ಬಾವುಟ ಹಾರಿಸುವ ಸಂಪ್ರದಾಯವನ್ನು ಪ್ರಾರಂಭಿಸಬೇಕೆಂದು ಸೂಚಿಸಿದಾಗ ಮ.ರಾಮಮೂರ್ತಿ ಅಧ್ಯಕ್ಷತೆ ವಹಿಸಿದ್ದ ಸಭೆಯೊಂದರಲ್ಲಿ ನಿಯೋಜಿತ ಹಳದಿ, ಕೆಂಪು ಬಣ್ಣದ ಬಾವುಟವನ್ನು ಕನ್ನಡದ ಬಾವುಟವನ್ನಾಗಿ ಸ್ವೀಕರಿಸಲಾಯಿತು. ಈ ಬಾವುಟ ಕರ್ನಾಟಕದಾದ್ಯಂತ ಜನಪ್ರಿಯವಾಗಲು ಹೆಚ್ಚು ಕಾಲವೇನೂ ಹಿಡಿಯಲಿಲ್ಲ.

ನಂತರ ವಾಟಾಳ್ ನಾಗರಾಜ್ ಸ್ವಪ್ರೇರಣೆಯಿಂದ ಸಂಯುಕ್ತರಂಗದಿಂದ ದೂರ ಸರಿದು ಕನ್ನಡ ಚಳವಳಿಯನ್ನು ಉಗ್ರ ಸ್ವರೂಪದಲ್ಲಿ ಮುಂದುವರಿಸುವುದಾಗಿ ಘೋಷಿಸಿದ್ದು, ಮ.ರಾಮಮೂರ್ತಿ ತಮ್ಮ ಮೇಲೆ ಬಿದ್ದ ಹಣದ, ಅಸಂಖ್ಯಾತ ಮೊಕದ್ದಮೆಗಳ ಭಾರದಿಂದ ಅತಂತ್ರರಾಗಿದ್ದು, ತಮ್ಮ ವಾಚಾಳಿತನದಿಂದ ಸಹಸ್ರಾರು ಯುವಕರ ಹೃದಯಗಳನ್ನು ವಾಟಾಳ್ ನಾಗರಾಜ್ ಗೆದ್ದಿದ್ದು, ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಅವರು ಬಲಪ್ರಯೋಗದಿಂದ ಕೂಡ ಒತ್ತಾಯ ತಂದಿದ್ದು, ಇದೇ ಕಾರಣದಿಂದ ನಾಡಿನ ಪ್ರಪ್ರಥಮ ಸಿನಿರಮಾ ಚಿತ್ರಮಂದಿರ ಬೆಂಗಳೂರಿನ ಕಪಾಲಿ ತನ್ನ ಮೊದಲ ಚಿತ್ರವಾಗಿ ಯಾವುದೇ ಕನ್ನಡ ಚಿತ್ರವನ್ನು ಆಯ್ದುಕೊಳ್ಳದೆ ಆಂಗ್ಲ ಚಿತ್ರವೊಂದರಿಂದ ತನ್ನ ಪ್ರಾರಂಭೋತ್ಸವವನ್ನು ನೆರವೇರಿಸಿಕೊಂಡಾಗ ಚಳವಳಿಗಾರರು ಚಿತ್ರಮಂದಿರದ ಗಾಜುಗಳನ್ನು ಪುಡಿಪುಡಿ ಮಾಡಿ ದಾಂಧಲೆಯೆಬ್ಬಿಸಿದ್ದು, ಕೊನೆಗೆ

ವಾಟಾಳರು ಕನ್ನಡ ಚಳವಳಿಯನ್ನು ರಾಜಕೀಯ ಪಕ್ಷವನ್ನಾಗಿ ಕಟ್ಟಿದ್ದು, ೧೯೬೭ರಲ್ಲಿ ಚಿಕ್ಕಪೇಟೆ ಕ್ಷೇತ್ರದಿಂದ ರಾಜ್ಯ ವಿಧಾನಸಭೆಗೆ ಆಯ್ಕೆಯಾಗಿ ಕನ್ನಡದ ಕಹಳೆಯನ್ನು ಶಾಸನ ಸಭೆಯಲ್ಲಿಯೂ ಮೊಳಗಿದ್ದು, ನಂತರ ಅಪಹಾಸ್ಯಕ್ಕೊಳಗಾದ ಕೆಲವು ಪ್ರತಿಭಟನೆಗಳಿಂದಾಗಿ ಕನ್ನಡ ಚಳವಳಿ ಕೆಲವು ಹೋಳುಗಳಾಗಿದ್ದು - ಇವೆಲ್ಲ ಒಂದರ ಹಿಂದೊಂದರಂತೆ ಕ್ಷಿಪ್ರಗತಿಯಲ್ಲಿ ಜರುಗಿದ ಘಟನೆಗಳು.

ಮ.ರಾಮಮೂರ್ತಿ ೧೯೬೭ರ ಡಿಸೆಂಬರ್ ೨೫ರಂದು ಅವರ ತೋಟದಲ್ಲಿಯೇ ಸಂಭವಿಸಿದ ಅಪಘಾತವೊಂದರಲ್ಲಿ ದುರ್ಮರಣ ಹೊಂದಿದರು. ಸ್ವಲ್ಪ ಕಾಲದ ನಂತರ ತ.ರಾ.ಸು. ಕೂಡ ಕನ್ನಡ ಚಳವಳಿಯಿಂದ ಹಿಂದೆಗೆದರು. ೧೯೭೧ರಲ್ಲಿ ಅ.ನ.ಕೃ. ತೀರಿಕೊಂಡಾಗ ಒಂದು ಪರಂಪರೆ ಅಂತ್ಯಗೊಂಡಿತು.

ಒಂದು ಕಡೆ ಡಬ್ಬಿಂಗ್ ವಿರೋಧಿ ಚಳವಳಿ, ಇನ್ನೊಂದು ಕಡೆ ಕನ್ನಡ ಚಿತ್ರರಂಗದ ಅಂದಿನ ಜನಪ್ರಿಯ ನಟ-ನಟಿಯರು ರಾಜ್ಯದಾದ್ಯಂತ ಪ್ರವಾಹ ಪರಿಹಾರ ನಿಧಿಗೆ ಹಣ ಸಂಗ್ರಹಿಸಲು ಕೈಗೊಂಡ ಜಯಪ್ರದ ಯಾತ್ರೆ, ಮತ್ತೊಂದು ಕಡೆ ಇನ್ನೂ ಹೆಚ್ಚು ವ್ಯಾಪಕವಾದ ಉದ್ದೇಶ ಹೊಂದಿದ್ದ ಕನ್ನಡ ಚಳವಳಿ - ಈ ಮೂರು ಪ್ರಮುಖ ಘಟನೆಗಳೂ ೧೯೬೦ರಿಂದ ೬೭ರೊಳಗಾಗಿ ಒಂದಾದ ನಂತರ ಒಂದು ನಡೆದದ್ದು ಒಂದು ದೃಷ್ಟಿಯಿಂದ ಕಾಕತಾಳೀಯವಾದರೂ ಕನ್ನಡ ಚಿತ್ರರಂಗದ ಮೇಲೆ ಅವುಗಳಿಂದಾದ ಪರಿಣಾಮ ಮಾತ್ರ ಅಗಾಧ. ಕನ್ನಡದ ಬಗ್ಗೆ ಕನ್ನಡಿಗರ ಕಳಕಳಿಯನ್ನು ಹೊಡೆದೆಬ್ಬಿಸಿದ ಈ ಮೂರೂ ಘಟನೆಗಳು ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಮೂರು ಅವಿಸ್ಮರಣೀಯ ಕಾಲಘಟ್ಟಗಳು. ಮುಂದೆ ರಾಜ್ಯ ಸರ್ಕಾರ ಕನ್ನಡ ಚಿತ್ರೋದ್ಯಮದ ಬೇರುಗಳನ್ನು ಮದರಾಸಿನಿಂದ ಕಿತ್ತು ಕನ್ನಡದ ಮಣ್ಣಿನಲ್ಲಿಯೇ ಕಸಿ ಮಾಡಬೇಕೆಂದು ರಾಜ್ಯದಾದ್ಯಂತ ಎದ್ದ ಕೂಗಿಗೆ ಈ ಮೂರು ಘಟನೆಗಳೂ ಪ್ರಚಂಡವಾದ ಪುಷ್ಟಿ ನೀಡಿದವು.

ವಾಸ್ತವವಾಗಿ ಕನ್ನಡದಲ್ಲಿ ಡಬ್ಬಿಂಗ್ ವಿರುದ್ಧ ಅಪಸ್ವರಗಳು ೧೯೫೭ರಿಂದಲೇ ಕೇಳಲು ಪ್ರಾರಂಭವಾಗಿದ್ದರೂ ಈ ಚಳವಳಿ ಒಂದು ಗಟ್ಟಿಯಾದ ನೆಲೆಯನ್ನು ಕಂಡುಕೊಂಡಿದ್ದು ೧೯೬೦ರ ನಂತರವೇ. ದಕ್ಷಿಣ ಭಾರತದ ಖ್ಯಾತ ಚಿತ್ರ ನಿರ್ಮಾಣ ಸಂಸ್ಥೆ ವಿಜಯ ವಾಹಿನಿ ತನ್ನ ಅತ್ಯಂತ ಜನಪ್ರಿಯ ತೆಲುಗು ಚಿತ್ರಗಳಾದ 'ಮಾಯಾ ಬಜಾರ್' ಮತ್ತು 'ಪಾತಾಳ ಭೈರವಿ' ಗಳನ್ನು ಕನ್ನಡಕ್ಕೆ ಡಬ್ ಮಾಡಲು ನಿರ್ಧರಿಸಿದ ತರುಣದಲ್ಲಿಯೇ ಈ ವಿರೋಧವೂ ತಲೆಯೆತ್ತಿತ್ತು. ಅನೇಕ ಪ್ರಮುಖ ಕನ್ನಡ ನಟ-ನಟಿಯರು ಈ ಚಿತ್ರಗಳ ಕನ್ನಡ ಅವತರಣಿಕೆಗಳಿಗೆ ಕಂಠದಾನ ಮಾಡಲು ಕೂಡ ಗೊತ್ತಾಗಿತ್ತು.

ಮೊದಮೊದಲು ಕೆಳಸ್ತರದಲ್ಲಿ ಪ್ರಾರಂಭವಾಗಿ ನಂತರ ಈ ಪ್ರತಿಭಟನೆ ತಾರಕಕ್ಕೇರುವ ವೇಳೆಗೆ ಗೋಚರವಾದ ಒಂದು ಸೂಕ್ಷ್ಮವಾದ ಅಂಶವೆಂದರೆ ಈ ಸಂಘರ್ಷ ಹೊಟ್ಟೆಪಾಡಿನ ಮತ್ತು ಆತ್ಮಗೌರವಗಳ ನಡುವೆ ನಡೆಯಲಾರಂಭಿಸಿದ್ದು.

ಡಬ್ಬಿಂಗ್ ಪ್ರಕ್ರಿಯೆ ನಡೆದಿದ್ದು ಮದರಾಸಿನಲ್ಲಿಯೇ ಆದ್ದರಿಂದ ಅಲ್ಲಿಗೂ ಈ ವಿವಾದದ ಬಿಸಿ ಜೋರಾಗಿಯೇ ತಟ್ಟಿತು. ಮೈಸೂರು ರಾಜ್ಯದಲ್ಲಿ ಅದರ ಭಾವನಾತ್ಮಕ ಮಗ್ಗುಲುಗಳು ಪ್ರಧಾನವಾದರೆ ಮದರಾಸಿನಲ್ಲಿ ಪ್ರಧಾನವಾಗಿ ಬೆಳಕಿಗೆ ಬಂದಿದ್ದು ಡಬ್ಬಿಂಗ್ ಪರವಾದ ಆರ್ಥಿಕ ಸಮರ್ಥನೆಗಳು. ಹೀಗಾಗಿ ಡಬ್ಬಿಂಗ್ ಪರ-ವಿರೋಧದ ಹೇಳಿಕೆಗಳ ಮಹಾಪೂರವೇ ಅಂದಿನ ಪತ್ರಿಕೆಗಳನ್ನು ತುಂಬಿದವು. ಬಹಿರಂಗ ಸಭೆಗಳಲ್ಲಿ ಕೂಡ ಈ ವಿವಾದಕ್ಕೆ ಮುಕ್ತವಾದ ಅವಕಾಶವಾಯಿತು. ಅನೇಕ ಹಿರಿ-ಕಿರಿಯ ಕನ್ನಡ ನಟ-ನಟಿಯರೂ ಈ ಹೇಳಿಕೆಗಳ ಸಮರದಲ್ಲಿ ನೇರವಾಗಿ ಭಾಗವಹಿಸಿದ್ದು ಒಂದು ವಿಶೇಷ.

ಕನ್ನಡ ನಾಡಿನಲ್ಲಿ ಕನ್ನಡ ಚಿತ್ರಗಳಿಗೇ ಇದ್ದ ಸೀಮಿತ ಮಾರುಕಟ್ಟೆಯಿಂದಾಗಿ ಕನ್ನಡ ಚಿತ್ರಗಳ ಸಂಖ್ಯೆ ಕುಂಠಿತವಾಗಿಯೇ ಇತ್ತು. ೧೯೫೭ರಲ್ಲಿ ಕೇವಲ ೧೧ ಚಿತ್ರಗಳು ತಯಾರಾದರೆ ೧೯೫೮ರಲ್ಲಿ ಈ ಸಂಖ್ಯೆ ೭ಕ್ಕೂ, ೧೯೫೯ರಲ್ಲಿ ೫ಕ್ಕೂ ಇಳಿದಾಗ ಕನ್ನಡ ಕಲಾವಿದರು, ತಂತ್ರಜ್ಞರು ತತ್ತರಿಸಿಹೋದರು. ಜೊತೆಗೆ ಇಡೀ ದೇಶದ ಚಿತ್ರೋದ್ಯಮವನ್ನು ಕಾಡಿಕೊಂಡೇ ಬಂದ ಕಚ್ಚಾ ಫಿಲಂ ಅಭಾವ ಬೇರೆ ಕನ್ನಡ ಚಿತ್ರಗಳ ತಯಾರಿಕೆಗೆ ಇನ್ನಷ್ಟು ಕಡಿವಾಣ ಹಾಕಿತ್ತು. ಇಂತಹ ದುರ್ಭರ ಸನ್ನಿವೇಶದಲ್ಲಿ ಡಬ್ಬಿಂಗ್ ಚಿತ್ರಗಳಿಗಾಗಿ ಕಂಠದಾನ ಮಾಡಲು ಕನ್ನಡ ನಟನಟಿಯರಿಗೆ ಬರುತ್ತಿದ್ದ ಕರೆಗಳು ಅವರ ಹಸಿದ ಹೊಟ್ಟೆಗಳಿಗೆ ಒಂದಿಷ್ಟು ಸಾಂತ್ವನ ಹೇಳಿದ್ದು ಕೂಡ ಸತ್ಯ. ಆದರೂ ಡಬ್ಬಿಂಗ್ ವಿರೋಧದ ವಾದಗಳಿಗೆ ಕೂಡ ಅಷ್ಟೇ ತರ್ಕಬದ್ಧವಾದ ನೆಲೆಯಿತ್ತು. ಪರಭಾಷೆಗಳಿಂದ ಡಬ್ ಆದ ಚಿತ್ರಗಳು ಕನ್ನಡದ ಸಣ್ಣ ಮಾರುಕಟ್ಟೆಯನ್ನು ಮುತ್ತಿದಲ್ಲಿ ಅವುಗಳಿಗೆ ಸಹಕಾರ ನೀಡಿದ ನಟ-ನಟಿಯರು ಮತ್ತಿತರರು ಕನ್ನಡಕ್ಕೆ ದ್ರೋಹ ಮಾಡಿದಂತಾಗುತ್ತದೆ ಎನ್ನುವುದು ಒಂದು ವಾದವಾದರೆ, ಇಂತಹ ಚಿತ್ರಗಳಿಂದಾಗಿ ಕನ್ನಡ ನಾಡಿನ ಹಣವನ್ನು ಕನ್ನಡೇತರರು ಲೂಟಿ ಮಾಡಿದಂತಾಗುತ್ತದೆ ಎನ್ನುವುದು ಇನ್ನೊಂದು ವಾದ. ನೇರವಾಗಿ ಕನ್ನಡ ಚಿತ್ರಗಳನ್ನು ನಿರ್ಮಿಸುವವರಿಗೆ ಇದರಿಂದ ದ್ರೋಹ ಮಾಡಿದಂತಾಗುತ್ತದೆಯೆನ್ನುವುದು ಮತ್ತೊಂದು ಪ್ರಬಲವಾದ ವಾದ.

ಆದರೆ ಡಬ್ಬಿಂಗ್ ಪರವಾಗಿದ್ದ ಸಂತ್ರಸ್ತರಿಗೆ ಈ ವಾದಗಳಾವುವೂ ಬೇಕಾಗಿರಲಿಲ್ಲ. ಆಗಲೇ ಡಬ್ ಆದ 'ಸತಿ ಸಾವಿತ್ರಿ' ಚಿತ್ರಕ್ಕೆ ಸಂಭಾಷಣೆಗಳನ್ನು ಒದಗಿಸಿದ್ದ ಹಾಗೂ ಡಬ್ ಆಗಲು ನಿಯೋಜಿತವಾಗಿದ್ದ 'ಮಾಯಾಬಜಾರ್'ಗೆ ಕೂಡ ಸಂಭಾಷಣೆಗಳನ್ನು ಬರೆಯಲು ನಿಗದಿಯಾಗಿದ್ದ ಚಿ.ಸದಾಶಿವಯ್ಯನವರು ಈ ಚಳವಳಿಯ ವಿರುದ್ಧ ತಮ್ಮ ಧ್ವನಿಯನ್ನು ಪ್ರಬಲವಾಗಿಯೇ ಎತ್ತಿ ಕಲಾರಂಗದಲ್ಲಿ ಭಾಷಾಂಧತೆಗೆ ಸ್ಥಾನವಿಲ್ಲವೆಂದು ಘೋಷಿಸಿ ಡಬ್ಬಿಂಗ್ ಪದ್ಧತಿಯನ್ನು ಬಲವಾಗಿ ಸಮರ್ಥಿಸಿಕೊಂಡರು. ಆದರೆ ಅವರ ಪ್ರತಿರೋಧ ಪರಿಣಾಮಕಾರಿಯಾಗಲಿಲ್ಲ.

ಆಗ ಡಬ್ಬಿಂಗ್ ವಿರೋಧಿಗಳಿಗೆ ವಿಶೇಷವಾಗಿ ಕಣ್ಣು ಕುಕ್ಕಿದ ಘಟನೆಯೆಂದರೆ ಮದರಾಸಿನ ವಾಹಿನಿ ಸ್ಟುಡಿಯೋವಲ್ಲಿ ಡಬ್ಬಿಂಗ್ ಕಾರ್ಯಕ್ಕಾಗಿಯೇ ಒಂದು ವಿಶಾಲವಾದ ಶಬ್ದರಕ್ಷಿತ ಹಜಾರ ನಿರ್ಮಾಣವಾದದ್ದು. ಅಲ್ಲಿ ವಿಜಯಾರವರ 'ಮಾಯಾ ಬಜಾರ್' ಮತ್ತು 'ಪಾತಾಳ ಭೈರವಿ' ಚಿತ್ರಗಳನ್ನು ಕನ್ನಡಕ್ಕೆ ಡಬ್ ಮಾಡಲು ಸರ್ವ ಸಿದ್ಧತೆಗಳನ್ನು ಮಾಡಲಾಗಿತ್ತು. ಅನೇಕ ಕನ್ನಡ ನಟ-ನಟಿಯರನ್ನು ಕಂಠದಾನ ಮಾಡಲು ನಿಯೋಜಿಸಲಾಗಿತ್ತು. ಡಬ್ಬಿಂಗ್ ಮೇಲ್ವಿಚಾರಣೆಗೆ ಕನ್ನಡದ ನುರಿತ ನಿರ್ದೇಶಕರೊಬ್ಬರು ಆಯ್ಕೆಯಾಗಿದ್ದರು.

ಕರ್ನಾಟಕವಿಡೀ ಡಬ್ಬಿಂಗ್ ಕುರಿತು ಪತ್ರಿಕೆಗಳು, ಚಿತ್ರ ಪ್ರೇಮಿಗಳು ಪ್ರತಿಭಟಿಸುತ್ತಿದ್ದರೂ, ಹೊಸ ಚಿತ್ರಗಳಿಗೆ ಕಚ್ಚಾ ಫಿಲಂ ಅಭಾವ ಕಿತ್ತು ತಿನ್ನುತ್ತಿದ್ದರೂ ಮತ್ತೊಂದು ದಿಕ್ಕಿನಿಂದ ಕನ್ನಡ ಚಿತ್ರರಂಗಕ್ಕೆ 'ಡಬ್' ಆದ ಚಿತ್ರಗಳು ಲಗ್ಗೆ ಹಾಕುತ್ತಿರುವ ಬಗ್ಗೆ ತೀವ್ರ ಪ್ರತಿಕ್ರಿಯೆಗಳು ಬರಲು ಪ್ರಾರಂಭವಾದವು. 'ಮಾಯಾಬಜಾರ್' ಚಿತ್ರಕ್ಕೆ ಧ್ವನಿಯನ್ನು ಎರವಲು ನೀಡಲು ಬಂದ ಕರೆಯನ್ನು ರಾಜ್‌ಕುಮಾರ್, ನರಸಿಂಹರಾಜು, ಜಿ.ವಿ.ಅಯ್ಯರ್ ಮುಂತಾದ ಪ್ರಮುಖ ನಟರು ತಿರಸ್ಕರಿಸಿದರು.

ಈ ಎರಡು ಚಿತ್ರಗಳ ಡಬ್ಬಿಂಗ್ ಮೇಲ್ವಿಚಾರಣೆಗೆ ಬಿ.ವಿಠಲಾಚಾರ್ಯರು ಒಪ್ಪಿದಾಗ ಪ್ರತಿಭಟನೆ ಇನ್ನಷ್ಟು ಬಿರುಸಾಯಿತು. ಡಬ್ಬಿಂಗ್‌ನಿಂದ ಕನ್ನಡ ಚಿತ್ರರಂಗಕ್ಕೆ ಕೊಡಲಿ ಪೆಟ್ಟು, ಇದನ್ನು ನಮ್ಮ ಚಿತ್ರರಂಗದ ಹಿರಿಯರೇ ಈ ರೀತಿ ಬೆಂಬಲಿಸಬಹುದೆ ಎಂಬ ಪ್ರಶ್ನೆಯೂ ಪ್ರಮುಖವಾಗಿ ಎದ್ದಿತು. ಆ ಸಂದರ್ಭದಲ್ಲಿ ಹಲವು ಬಗೆಯ ಪ್ರತಿಕ್ರಿಯೆಗಳು ಬಂದವು.

ಪ್ರಮುಖ ಬರಹಗಾರರೊಬ್ಬರು ''ಬಣ್ಣ ಬಣ್ಣವಾಗಿ 'ಚಂದಮಾಮ' ತಂದು ಕನ್ನಡದಲ್ಲಿ ಬರುತ್ತಿದ್ದ ಮಕ್ಕಳ ಸಾಹಿತ್ಯಕ್ಕೆ ಅಡ್ಡಗಾಲಾಗಿ ಮೂರನೆಯ ದರ್ಜೆಯ ಕೃತಿಗಳ ಅನುವಾದವನ್ನು ಬೆಂಬಲಿಸಿದ ವ್ಯಕ್ತಿ-ಸಂಸ್ಥೆಗಳೇ ಹೀಗೆ ಮಾಡುತ್ತಿದ್ದಾರೆ. ಅಂಥ ಪತ್ರಿಕೆಯನ್ನು ಸ್ವಾಗತಿಸಿದಂತೆ ಕನ್ನಡಿಗರು ಈ ಡಬ್ ಆದ ಚಿತ್ರಗಳನ್ನು ಸ್ವಾಗತಿಸಿದರೆ ವಾಹಿನಿಯಲ್ಲಿ ನಿರ್ಮಿತವಾದ ವಿಶೇಷ ಹಜಾರ ಕನ್ನಡ ಚಿತ್ರರಂಗದ ಸಮಾಧಿ ಆದೀತು. ಅದರಿಂದ ಬದುಕಿದವರೇ ಹೂತು ಹಾಕಲೂ ಬರುತ್ತಿದ್ದಾರಲ್ಲ !'' ಎಂದು ಉದ್ಗಾರವೆಳೆದರು.

ಇಂತಹ ಕ್ಲಿಷ್ಟ ಸಮಸ್ಯೆ ಇರುವಾಗಲೂ ಕನ್ನಡ ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆ ತೆಪ್ಪಗಿರುವುದು ಸರಿಯೇ? ಎಂದು ಈ ಬರಹಗಾರರು ಪ್ರಶ್ನಿಸುತ್ತಿದ್ದಂತೆಯೇ ಜುಲೈ ೨೧, ೧೯೫೭ರಂದು ನಡೆಯಲಿದ್ದ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಬೇರೆ ಭಾಷೆಗಳಿಂದ ಕನ್ನಡಕ್ಕೆ ಚಿತ್ರಗಳನ್ನು ಡಬ್ ಮಾಡುವುದನ್ನು ವಿರೋಧಿಸುವ ನಿರ್ಣಯವೊಂದು ಚರ್ಚೆಗೆ ಬರಲಿದೆಯೆಂದು ಪರಿಷತ್ತಿನಿಂದ ಅಧಿಕೃತ ಪ್ರಕಟಣೆಯೊಂದು ಹೊರಬಂತು.

ಕನ್ನಡ ಚಿತ್ರರಂಗದ ಕೆಲವು ಖ್ಯಾತನಾಮರೂ ತಮ್ಮ ತೀಕ್ಷ್ಣವಾದ ಹೇಳಿಕೆಗಳಿಂದ ಡಬ್ಬಿಂಗ್ ಸಂಸ್ಕೃತಿಯ ವಿರುದ್ಧ ಸಮರವನ್ನೇ ಸಾರಿದರು. ''ಮೂಲ ಚಿತ್ರಗಳಿಗೆ ಬೇಕಾದರೆ ಕನ್ನಡದ ಕಾಮೆಂಟರಿ ಕೊಡಲಿ, ಆದರೆ ಡಬ್ ಮಾಡುವುದು ಸಲ್ಲ'' ಎಂದು ಪ್ರಮುಖ ತಾರೆ ಹರಿಣಿ ಅಭಿಪ್ರಾಯಪಟ್ಟರೆ, ''ಡಬ್ಬಿಂಗ್‌ನಿಂದ ಕನ್ನಡಕ್ಕೆ ದ್ರೋಹವೆಂದು'' ಗುಡುಗಿದವರು ಕಣಗಾಲ್ ಪ್ರಭಾಕರಶಾಸ್ತ್ರಿಗಳು. ಕನ್ನಡವನ್ನು ಹಾಳು ಮಾಡಲೆಂದೇ ಬಂದ ಡಬ್ಬಿಂಗ್ ಚಿತ್ರಗಳಿಗೆ ಕನ್ನಡಿಗರೇ ಸಹಾಯಕ್ಕೆ ನಿಲ್ಲುವುದು ಸರಿಯಲ್ಲವೆಂದ ಅವರು ಅಂತಹವರು ಎಷ್ಟೇ ದೊಡ್ಡ ವ್ಯಕ್ತಿಗಳಾಗಿದ್ದರೂ ಕನ್ನಡದ ಉದ್ಧಾರಕರಲ್ಲವೆಂದು ಟೀಕಿಸಿದರು. ಡಬ್ ಆದ ಚಿತ್ರಗಳು ಎಷ್ಟೇ ಚೆನ್ನಾಗಿದ್ದರೂ

ಕನ್ನಡದ ಪ್ರೇಕ್ಷಕರು ಅವುಗಳನ್ನು ತಿರಸ್ಕರಿಸಬೇಕೆಂದು ಕರ ಕೊಟ್ಟವರು ಸಂಗೀತ ನಿರ್ದೇಶಕ ರಾಜನ್-ನಾಗೇಂದ್ರ. ಡಬ್ಬಿಂಗ್‌ನಿಂದಾಗಿ ಕನ್ನಡ ಕಲಾವಿದರೆಲ್ಲಾ ಅಭಿನಯವನ್ನು ಮರೆತು 'ಮಾತುಗಾರ'ರಾಗಬೇಕಾಗುತ್ತದೆ ಎಂದು ಎಚ್ಚರಿಸಿದವರು ಆರೂರು ಪಟ್ಟಾಭಿ. ತಾವು ಹಿಂದೆ ಕೆಲವು ಚಿತ್ರಗಳನ್ನು ಕನ್ನಡಕ್ಕೆ ಡಬ್ ಮಾಡಿದ್ದರೂ ಆಗ ಇನ್ನೂ ಹೆಚ್ಚು ಮೂಲ ಕನ್ನಡ ಚಿತ್ರಗಳು ತಯಾರಾಗುತ್ತಿರಲಿಲ್ಲ ಎಂಬುದು ಅವರ ಸಮರ್ಥನೆ. ಒಂದು ಚಿತ್ರ ಕನ್ನಡಕ್ಕೆ ಡಬ್ ಆದರೆ ಎರಡು ಕನ್ನಡ ಚಿತ್ರಗಳು ನಾಶವಾಗುತ್ತವೆ ಎಂದು ಲೆಕ್ಕ ಹಾಕಿದ ಜಿ.ವಿ.ಅಯ್ಯರ್ ಈಗಾಗಲೇ ಕನ್ನಡ ಕಲಾವಿದರಿಗೆ ಅರೆ ಹೊಟ್ಟೆಗೆ ಗಂಜಿ ಇಲ್ಲದ ಸ್ಥಿತಿಯಲ್ಲಿ ಪರಿಸ್ಥಿತಿ ಇನ್ನಷ್ಟು ವಿಷಮಿಸುವುದು ಖಂಡಿತವೆಂದರು.

ವಿಶ್ವಕಲಾ ಚಿತ್ರ ಮಂಡಳಿಯ ಕಟ್ಟಡದಲ್ಲಿಯೇ ಈ ಡಬ್ಬಿಂಗ್ ವಿರುದ್ಧದ ಚಟುವಟಿಕೆಗಳು ನಡೆಯುತ್ತಿದ್ದವು. ಇದರಲ್ಲಿ ಹೊನ್ನಪ್ಪ ಭಾಗವತರ್, ಕೆಂಪರಾಜ ಅರಸು, ಸುಬ್ಬಯ್ಯನಾಯ್ಡುರವರೂ ಭಾಗವಹಿಸಿದ್ದರು. ಇವರನ್ನೆಲ್ಲ ಕಲೆ ಹಾಕುವ ಹೊಣೆಯನ್ನು ಜಿ.ವಿ.ಅಯ್ಯರ್ ಹೊತ್ತಿದ್ದರು.

ಆಗ ರಾಜಕುಮಾರ್‌ರವರು ಕೊಟ್ಟ ಹೇಳಿಕೆ ಈ ಸಮಸ್ಯೆಯ ಆಯಾಮಗಳನ್ನು ಪರಿಣಾಮಕಾರಿಯಾಗಿ ವಿವರಿಸಿತು. ''ಡಬ್ಬಿಂಗ್ ಚಿತ್ರಗಳಿಂದ ಕನ್ನಡದಲ್ಲಿ ತಯಾರಾಗುವ ಚಿತ್ರಗಳಿಗೆ ಕೊಡಲಿ ಪೆಟ್ಟು. ಹತ್ತು ಚಿತ್ರ ತಯಾರಾದರೆ ಹಲವರಿಗೆ ಅವಕಾಶವಿದೆ. ಅದರಲ್ಲಿ ಐದು ಚಿತ್ರ ಡಬ್ ಆದರೆ ಒಂದಿಷ್ಟು ಜನರಿಗೆ ಅವಕಾಶ ತಪ್ಪುತ್ತೆ. ಇದೊಂದು ವ್ಯವಹಾರ, ಸಂಪಾದನೆಯೇ ಅದರ ಮೂಲ ಉದ್ದೇಶ ಎಂಬ ಮಾತು ನಿಜವಾದರೂ ಅದು ಕಲೆಯನ್ನು ಬಿಟ್ಟು ಆಡುವ ಮಾತಲ್ಲ - ಕಲೆ, ವ್ಯವಹಾರಗಳು ಸಮರಸ ಸಾಧಿಸಬೇಕು. ಒಂದಕ್ಕಾಗಿ ಇನ್ನೊಂದು ತ್ಯಾಗ ಆಗಬಾರದು. ಆಯಾ ಭಾಷೆಯ ಜನ ಆಯಾ ಭಾಷೆಗಳಲ್ಲಿ ಆಯಾ ಭಾಷೆಯ ಕಲಾವಿದರನ್ನೇ ಗೊತ್ತುಮಾಡಿಕೊಂಡು ಚಿತ್ರ ತೆಗೆಯಲಿ. ಕೆಲವು ಚಿತ್ರಗಳು ಬಡವಾಗಿರಬಹುದು. ಲೋಕದಲ್ಲಿ ಬಡವ-ಶ್ರೀಮಂತರಿಬ್ಬರಿಗೂ ಬಾಳಲು ಅವಕಾಶವಿಲ್ಲವೇ ? ಹಾಗೆಯೇ ಇದೂ ಸಹ. ಯಾವ ಭಾಷೆಯಿಂದ ಯಾವ ಭಾಷೆಗೂ ಡಬ್ ಆಗಬಾರದು. ಇದೀಗ ಕಣ್ಣು ಬಿಡುತ್ತಿರುವ ಕನ್ನಡ ಚಿತ್ರರಂಗಕ್ಕಂತೂ ಇದು ಕುಠಾರಪ್ರಾಯ.' ಅದನ್ನು ತಡೆಯಲು ಕನ್ನಡ ಜನ ಶಕ್ತರು. ಪ್ರೇಕ್ಷಕರು ಡಬ್ಬಿಂಗ್ ಚಿತ್ರಗಳನ್ನು ಸ್ವೀಕರಿಸದಿರಲಿ''.

ಆದರೆ ವಿಜಯಾ ಸಂಸ್ಥೆಯ ತೆಲುಗು ಚಿತ್ರಗಳನ್ನು ಕನ್ನಡಕ್ಕೆ ಡಬ್ ಮಾಡಲು ನಿಗದಿಯಾಗಿದ್ದ ಬಿ.ವಿಠಲಾಚಾರ್ಯರು ಈ ನಾಣ್ಯದ ಎರಡು ಮುಖಗಳ ಬಗ್ಗೆಯೂ ಪ್ರಸ್ತಾಪಿಸಿ ಡಬ್ಬಿಂಗ್ ಪರ-ವಿರೋಧದ ವಿಶ್ಲೇಷಣೆ ಮಾಡಿದ್ದು ಹೀಗೆ : ''ಬೇರೆ ದೇಶದ ಚಿತ್ರಗಳು ಡಬ್ ಆದರೆ 'ಜನ ಜೀವನದ ಪರಿಚಯ', 'ಸಾಂಸ್ಕೃತಿಕ ವಿನಿಮಯ' ಅನ್ನಬಹುದಾದರೆ ನಮ್ಮ ದೇಶದ್ದೇ ಇನ್ನೊಂದು ಭಾಷೆಯ ಚಿತ್ರ ಡಬ್ ಆಗಬಾರದೇಕೆ ?.

''ದೊಡ್ಡ ಮಾರುಕಟ್ಟೆಯಿರುವ ಚಿತ್ರಗಳನ್ನು ಇತರ ಭಾಷೆಗಳಿಗೆ ಡಬ್ ಮಾಡುವಾಗ ಲಾಭದ ಉದ್ದೇಶವಿದ್ದರೆ ಚಿಕ್ಕ ಮಾರುಕಟ್ಟೆಯಿರುವ ಭಾಷಾ ಚಿತ್ರಗಳಿಗೆ ಈಗಾಗಲೇ ಆಗಿರುವ ನಷ್ಟದ ಅಂಶವನ್ನು ಕಡಿಮೆ ಮಾಡಿಕೊಳ್ಳುವುದಾಗಿರುತ್ತದೆ. ಹೀಗೆ ಪರಿವರ್ತಿತವಾಗುವಾಗ ಆ ಭಾಷೆಯ ಸಾಹಿತ್ಯ, ಕಲೆ, ಸಂಸ್ಕೃತಿ, ಆಚಾರ-ವಿಚಾರಗಳ ಕೊಲೆ, ಮೂಲ ಕಲಾವಿದರಿಗೆ ಅಪಚಾರ ಸಹಜ. ಕೆಲವು ತಂತ್ರಜ್ಞರಿಗೆ, ಸಾಧಾರಣ ದರ್ಜೆಯ ಕಲಾವಿದರಿಗೆ ಇದರಿಂದ ಅನುಕೂಲ. ನಗರದಲ್ಲಿದ್ದು ಇತರ ಭಾಷಾ ಚಿತ್ರಗಳನ್ನು ನೋಡುವವರಿಗೆ ಇದು ಅನುಕೂಲವಲ್ಲ. ಆದರೆ ಗ್ರಾಮಾಂತರದಲ್ಲಿರುವ ತಮ್ಮ ಭಾಷೆಯಲ್ಲಿನ ಚಿತ್ರಗಳನ್ನು ಮಾತ್ರ ನೋಡುವವರಿಗೆ ಡಬ್ ಆದ ಚಿತ್ರಗಳಿಂದ ಪರಭಾಷಾ ಚಿತ್ರಗಳ ಪರಿಚಯ ಆಗುತ್ತದೆ. ಹಾಗೆಂದು ಎಲ್ಲ ಚಿತ್ರಗಳೂ 'ಡಬ್' ಆಗಬಾರದು. ಹಾಗೆಯೇ ಡಬ್ಬಿಂಗ್ ಒಂದು ಸಾಂಕ್ರಾಮಿಕ ರೋಗ ಆಗಿ ಬಿಡಲೂ ಬಹುದು, ಇವೆಲ್ಲ ಬಹು ಕಾಲ ಇರಲಾರದು. ನಮ್ಮ ಭಾಷೆಗಳಲ್ಲಿ ತಯಾರಿಸಲು ಸಾಧ್ಯವೇ ಇಲ್ಲವೆಂಬಂತಹ ಭವ್ಯತೆಯೋ, ವಿಶೇಷವೋ ಇದ್ದಾಗ ಡಬ್ ಆದರೆ ತೊಂದರೆಯಿಲ್ಲ. ಇವನ್ನೆಲ್ಲ ವಿರೋಧಿಸಲು ಕೇವಲ ಉದ್ವೇಗದಿಂದ ಮಾತಾಡಿದರೆ ಸಾಲದು. ನಿರ್ಮಾಪಕರು ಅಸೂಯೆ ಬಿಟ್ಟು ಉತ್ತಮ ಚಿತ್ರಗಳನ್ನು ತಯಾರಿಸಬೇಕು, ಡಬ್ ಮಾಡಿ ದಿಢೀರ್ ಶ್ರೀಮಂತರಾಗುವುದಕ್ಕಿಂತ.''

ಕನ್ನಡ ನಾಡಿನಲ್ಲಿ ಈ ವಿವಾದ ಉಲ್ಬಣಾವಸ್ಥೆ ತಲುಪುತ್ತಿದ್ದಾಗಲೇ ಮದರಾಸಿನಲ್ಲಿ. ಕೆಲವು ಪ್ರಮುಖ ತೆಲುಗು ಕಲಾವಿದರಿಂದ ಬೇರೊಂದು ರೀತಿಯ ಪ್ರತಿಕ್ರಿಯೆ ತೀಕ್ಷ್ಣವಾಗಿ ಕೇಳಿ ಬಂತು.

ದಕ್ಷಿಣ ಭಾರತ ಚಿತ್ರರಂಗದ ಅಂದಿನ ಸೂಪರ್‌ಸ್ಟಾರ್ ಸಾವಿತ್ರಿ ತಾವು ಅಭಿನಯಿಸಿದ ಕೆಲವು ಉತ್ತಮ ಚಿತ್ರಗಳು ಬೇರೆ ಭಾಷೆಗಳಿಗೆ ಡಬ್ ಆದಾಗ ತಾವು ಮೂಲಚಿತ್ರಗಳಲ್ಲಿ ಸೊಗಸಾಗಿ ನಿರ್ವಹಿಸಿದ ಪಾತ್ರಗಳು ನಿಸ್ತೇಜವಾಗಿ ಸೋತು ಸೊರಗುವುದನ್ನು ಉಗ್ರವಾಗಿ ಖಂಡಿಸಿದರು. ಯಾವುದೇ ಭಾಷೆಯಲ್ಲಿ ಒಬ್ಬ ಸಾಹಿತಿ ಬರೆದ ಮಾತುಗಳನ್ನು ಡಬ್ ಮಾಡಲು ಮತ್ತೊಂದು ಭಾಷೆಯಲ್ಲಿ ಬರೆದ ಪದಗಳನ್ನು ಹೆಣೆದು ತುಂಬುವುದರಿಂದ ಸಿನಿಮಾದಲ್ಲಿ ಕಲೆಗೆ ಬೆಲೆ ಬಹಳ ಇಳಿದುಹೋದಂತೆ ಎಂದು ಕಟುವಾಗಿ ಟೀಕಿಸಿದ ಆಕೆ ಈ ಪದ್ಧತಿ ಎಷ್ಟು ಬೇಗ ನಿಂತರೆ ಅಷ್ಟು ಕ್ಷೇಮವೆಂದರು.

ಖ್ಯಾತ ನಟ ಎಸ್.ವಿ.ರಂಗರಾಯರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಈ ಪಿಡುಗಿಗೆ ಅತಿಯಾಗಿ ಗುರಿಯಾಗಿರುವ ಕಲಾವಿದರಲ್ಲಿ ತಾವೂ ಒಬ್ಬರೆಂದು ಹೇಳಿಕೊಂಡು ಡಬ್ ಆದ ಚಿತ್ರಗಳಲ್ಲಿ ಭಾವ ಹಾಗೂ ಮಾತುಗಳ ನಡುವೆಯ ಹೊಂದಾಣಿಕೆ ತೀರಾ ಸೊರಗುತ್ತದೆಂದೂ, ಇದರಿಂದ ಪ್ರೇಕ್ಷಕರ ರಸಾನುಭವಕ್ಕೂ ಅಡ್ಡಿಯಾಗುತ್ತದೆಂದೂ ಹೇಳಿ ತಾವು ಅಭಿನಯಿಸುವ ಚಿತ್ರಗಳ ಕಾಂಟ್ರಾಕ್ಟ್‌ಗಳಲ್ಲಿ ತಮ್ಮ ಪಾತ್ರವನ್ನು ಡಬ್ ಮಾಡಿಸಬಾರದೆಂಬ ಷರತ್ತನ್ನು ಸೇರಿಸಲು ಪ್ರಾರಂಭಿಸಿದರು. ಈ ರೀತಿ ಮಾಡಿದ ಕಲಾವಿದರಲ್ಲಿ ಪ್ರಾಯಶಃ ರಂಗರಾಯರೇ ಮೊದಲಿಗರು.

ಅಂದಿನ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಇಂದಿನಷ್ಟು ಸದೃಢವಾಗಿ, ಪ್ರಾತಿನಿಧಿಕವಾಗಿರಲಿಲ್ಲ. ಪ್ರದರ್ಶಕರ ಪ್ರಭಾವವೇ ಹೆಚ್ಚಾಗಿದ್ದ ಆ ಸಂಸ್ಥೆ ಈ ಕ್ಲಿಷ್ಟವಾದ ಸಮಸ್ಯೆಯ ಬಗ್ಗೆ ಯಾವುದೇ ರೀತಿಯ ಅಧಿಕೃತ ನಿಲುವನ್ನು ತೆಗೆದುಕೊಳ್ಳುವುದು ಸುಲಭವೂ ಆಗಿರಲಿಲ್ಲ. ಅಂದಿನ ರಾಜ್ಯ ಸರ್ಕಾರಕ್ಕೆ ಇದು ಅಷ್ಟು ಪ್ರಸ್ತುತವಾದ ವಿಷಯವೂ ಆಗಿರಲಿಲ್ಲ. ಆದ್ದರಿಂದ ಯಾವ ಸಂಸ್ಥೆಗಳೂ ಅಧಿಕಾರಯುತವಾಗಿ ಈ ಬಗ್ಗೆ ಯಾವುದೇ ತೀರ್ಮಾನಕ್ಕೆ ಬರುವುದು ಅಸಾಧ್ಯವಾದಾಗ ಕನ್ನಡ ಪರ ಸಂಘಟನೆಗಳೇ ಅನೌಪಚಾರಿಕವಾಗಿ ಒಂದು ನಿರ್ಧಾರಕ್ಕೆ ಬರಬೇಕಾಯಿತು. ಇನ್ನು ಮುಂದೆ ಕನ್ನಡಕ್ಕೆ ಡಬ್ ಆದ ಯಾವುದೇ ಚಿತ್ರದ ಪ್ರದರ್ಶನಕ್ಕೆ ಅವಕಾಶ ಕೊಡಬಾರದೆಂಬ ಈ ನಿರ್ಣಯಕ್ಕೆ ಯಾವುದೇ ಕಾನೂನಿನ ಅಥವಾ ನಿಯಮಗಳ ಶಕ್ತಿಯಿಲ್ಲದಿದ್ದರೂ ಆ ವೇಳೆಗಾಗಲೇ ಹೆಪ್ಪುಗಟ್ಟಿದ್ದ ಸಾರ್ವಜನಿಕ ವಿರೋಧಕ್ಕೆ ತಲೆ ಬಾಗಿ ಕನ್ನಡಕ್ಕೆ ಚಿತ್ರಗಳನ್ನು ಡಬ್ ಮಾಡುವ ಸಂಪ್ರದಾಯ ತಾನೇ ತಾನಾಗಿ ಕ್ಷೀಣಗೊಂಡಿತು. ಹಾಗೂ ಮೀರಿ ಡಬ್ ಆದ ಚಿತ್ರಗಳು ತೆರೆ ಕಂಡಾಗ ನಾಡಿಗೇರ ಕೃಷ್ಣರಾಯರ ನೇತೃತ್ವದಲ್ಲಿ ಮೆರವಣಿಗೆ, ಪ್ರತಿಭಟನೆ ಇತ್ಯಾದಿಗಳು ನಡೆದ ದಾಖಲೆಗಳಿವೆ.

ಸ್ವಾರಸ್ಯವೆಂದರೆ ಇದೆಲ್ಲ ಆದ ಹತ್ತು ವರ್ಷಗಳಿಗೂ ನಂತರ ಕೆಲವು ಹಿಂದಿ ಚಿತ್ರಗಳನ್ನು ಕನ್ನಡಕ್ಕೆ ಡಬ್ ಮಾಡುವ ಪ್ರಕ್ರಿಯೆ ಇದ್ದಕ್ಕಿದ್ದಂತೆ ಪ್ರಾರಂಭವಾದಾಗ ಕಮರಿ ಹೋಗಿದ್ದ ಡಬ್ಬಿಂಗ್ ವಿರೋಧಿ ಚಳವಳಿಗೆ ಪುನಃ ಜೀವ ಬಂತು. ಆದರೆ ಆ ವೇಳೆಗೆ ತನ್ನ ಸಂಘಟನಾ ಬಲವನ್ನು ಗಣನೀಯವಾಗಿ ವೃದ್ಧಿಸಿಕೊಂಡು ಚಿತ್ರೋದ್ಯಮದ ಎಲ್ಲ ವಲಯಗಳ ಪ್ರಾತಿನಿಧಿಕ ಸಂಸ್ಥೆಯಾಗಿ ಬೆಳೆದಿದ್ದ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಈ ವಿವಾದವನ್ನು ಅಧಿಕೃತವಾಗಿ ತನ್ನ ಮಡಿಲಿಗೆ ತೆಗೆದುಕೊಂಡು ಕೆಲವು ತಿಂಗಳ ಪರ-ವಿರೋಧ ಜಗ್ಗಾಟದ ನಂತರ ಡಬ್ ಆದ ಕನ್ನಡ ಚಿತ್ರಗಳಿಗೆ ಅಧಿಕೃತವಾಗಿಯೇ ಮುಟ್ಟುಗೋಲು ಹಾಕಿತು.

ಹಿಂದಿರುಗಿ ನೋಡಿದರೆ ಅಂದು ಡಬ್ಬಿಂಗ್ ವಿರೋಧಿ ಚಳವಳಿಗೆ ಸಾಕಷ್ಟು ಸಮರ್ಥನೆಯಿದ್ದುದು ಕಾಣುತ್ತದೆ. ಎಲ್ಲ ಭಾಷೆಗಳ ಚಿತ್ರಗಳನ್ನು ಸಮಾನವಾಗಿ ಪುರಸ್ಕರಿಸುವ ಜಾಯಮಾನವನ್ನು ಮೊದಲಿನಿಂದಲೂ ಕನ್ನಡಿಗರು ಬೆಳೆಸಿಕೊಂಡು ಬಂದಿದ್ದರಿಂದ ಸಾಂಸ್ಕೃತಿಕವಾಗಿ ಪ್ರಾಯಶಃ ಇನ್ನಾವ ರಾಜ್ಯಗಳಿಗೂ ಸಿಗದ ಪರಿಪೂರ್ಣತೆ ಕನ್ನಡ ನಾಡಿಗೆ ಲಭ್ಯವಾದದ್ದೇನೋ ನಿಜ. ಮೇಲ್ನೋಟಕ್ಕೆ ಬಹಳ ಆರೋಗ್ಯಕರವಾಗಿ ಕಾಣುವ ಈ ಪ್ರವೃತ್ತಿ ವಾಸ್ತವವಾಗಿ ಕನ್ನಡದ ಸರ್ವತೋಮುಖ ಬೆಳವಣಿಗೆಗೆ ಬಹಳ ಮಟ್ಟಿಗೆ ಮುಳುವಾಗುವಂಥದ್ದು. ವಿಸ್ತೃತ ಮಾರುಕಟ್ಟೆಯನ್ನು ಹೊಂದಿದ್ದ ತೆಲುಗು, ತಮಿಳು, ಹಿಂದಿ ಚಿತ್ರಗಳು ಈ ರಾಜ್ಯದಲ್ಲಿ ಮುಕ್ತವಾಗಿ ಪ್ರದರ್ಶಿತವಾಗುತ್ತಿದ್ದಾಗಲೇ ಆ ಚಿತ್ರಗಳ ಕನ್ನಡದ ಡಬ್ ಅವತರಣಿಕೆಗಳೂ ತೆರೆ ಕಂಡವು. ನೇರವಾಗಿ ತಯಾರಾದ ಕೆಲವೇ ಕನ್ನಡ ಚಿತ್ರಗಳಿಗೆ ಇದು ಭಾರಿ ಪೈಪೋಟಿಯಾಗಿ ನಿಂತಾಗ ಕನ್ನಡ ಚಿತ್ರಗಳಿಗೆ ಉಳಿಗಾಲವಿಲ್ಲ ಎಂಬ ಸಮಸ್ಯೆಯನ್ನು ಎದುರಿಸುವಂತಾಯಿತು. ಇಂತಹ ವಾತಾವರಣದಲ್ಲಿ ಕನ್ನಡ ಚಿತ್ರಗಳ ಜನಪ್ರಿಯತೆಯನ್ನು ವ್ಯಾಪಕವಾಗಿ ಹಬ್ಬಿಸುವುದು ಒಂದು ದೊಡ್ಡ ಸವಾಲೇ ಆಗಿತ್ತು.



(ಚಿತ್ರ ೪) ತುಂಗಭದ್ರ ಅಣೆಕಟ್ಟಿನ ಎಡದಂಡೆಯಲ್ಲಿರುವ ವೈಕುಂಠ ಪ್ರವಾಸಿ ಭವನದ ಮುಂದೆ ಪ್ರಿಂಟರ್ಸ್ ಮೈಸೂರು (ಪ್ರೈ) ಲಿಮಿಟೆಡ್‌ನ ಕೆ.ವೆಂಕಟಸ್ವಾಮಿಯವರ ಜೊತೆಯಲ್ಲಿ ನಿಧಿಸಂಗ್ರಹ ಯಾತ್ರೆಗೆ ತೆರಳಲು ನಿಂತ ಚಲನಚಿತ್ರ ಕಲಾವಿದರು, ಪತ್ರಕರ್ತರು ಮತ್ತು ಕಾರ್ಯಕರ್ತರು .

ಬೆಂಗಳೂರಿನಲ್ಲಿಯೇ ಕೇಂದ್ರೀಕೃತವಾಗಿದ್ದ ಹಂಚಿಕೆದಾರರು ಕೂಡ ಡಬ್ ಆದ ಕನ್ನಡ ಚಿತ್ರಗಳಿಗೇ ಆದ್ಯತೆ ಕೊಡುವ ಪರಿಪಾಠ ಪ್ರಾರಂಭವಾದಾಗ ಸಮಸ್ಯೆ ಇನ್ನಷ್ಟು ಜಟಿಲಗೊಂಡಿತು. ಈ ಸಂಪ್ರದಾಯವನ್ನು ಹಾಗೆಯೇ ಬೆಳೆಯಲು ಬಿಟ್ಟಿದ್ದರೆ ಕನ್ನಡ ಚಿತ್ರರಂಗದ ಬೆಳವಣಿಗೆಯೇ ಒಂದು ದೊಡ್ಡ ಪ್ರಶ್ನಾರ್ಥಕ ಚಿಹ್ನೆಯಾಗುವ ಅಪಾಯವೂ ಇತ್ತು.

ಅಂದು ಡಬ್ಬಿಂಗ್ ವಿರೋಧಿ ಚಳವಳಿಯಲ್ಲಿ ಸಕ್ರಿಯವಾಗಿ ಭಾಗಿಗಳಾದ ಕನ್ನಡ ಸಾಹಿತ್ಯ ಮತ್ತು ಸಾರಸ್ವತ ಪ್ರಪಂಚದ ಪ್ರತಿಷ್ಠಿತರನ್ನು ಕೃತಜ್ಞತೆಯಿಂದ ನೆನೆಯುತ್ತದೆ ಕನ್ನಡ ಚಿತ್ರರಂಗ. ಆ ಹೋರಾಟಗಾರರಾರಿಗೂ ಈ ಚಳವಳಿಯಿಂದ ಯಾವುದೇ ರೀತಿಯ ವೈಯಕ್ತಿಕ ಲಾಭವಿರಲಿಲ್ಲವೆನ್ನುವುದು ಚಳವಳಿಗೆ ಗಟ್ಟಿಯಾದ ತಾತ್ವಿಕ ಅಸ್ತಿಭಾರವನ್ನು ಹಾಕಿದ ಇನ್ನೊಂದು ಅಂಶ. ಈ ಚಳವಳಿಯಲ್ಲಿ ಕನ್ನಡ ಪತ್ರಿಕೆಗಳು ತಮ್ಮನ್ನು ತೊಡಗಿಸಿಕೊಂಡ ರೀತಿ ಪ್ರಶಂಸಾರ್ಹ. ಚಳವಳಿಯಿಂದಾಗಿ ತಾತ್ಕಾಲಿಕವಾಗಿ ಕೆಲವು ಲೇಖಕರಿಗೆ, ಕಲಾವಿದರಿಗೆ ಆರ್ಥಿಕವಾಗಿ ಹಾನಿಯುಂಟಾದರೂ ೧೯೬೦ರ ದಶಕದ ಉತ್ತರ ಭಾಗದಲ್ಲಿ ಕನ್ನಡ ಚಿತ್ರರಂಗ ತನ್ನ ಕಾಲಿನ ಮೇಲೆ ತಾನು ನಿಲ್ಲುವ ಸುಸ್ಥಿತಿ ಬಂದಾಗ ಅವರ ಅಂದಿನ ಅಸಮಾಧಾನಗಳೆಲ್ಲ ನಶಿಸಿಹೋದವು ಎಂದು ಅಂದಿನ ಡಬ್ಬಿಂಗ್ ಬೆಂಬಲಿಗರು ಈಗ ಒಪ್ಪಿಕೊಳ್ಳುತ್ತಾರೆ.

೧೯೬೦ರ ದಶಕದ ತರುಣದಲ್ಲಿ ರಾಜ್ಯವಾದ್ಯಂತ ಪ್ರವಾಹ ಪರಿಹಾರ ನಿಧಿಗಾಗಿ ಕನ್ನಡ ಚಲನಚಿತ್ರ ನಟ-ನಟಿಯರ ಪ್ರಚಂಡ ಅಭಿಯಾನ ನಡೆಯದಿದ್ದರೆ ಇಂತಹ ಸಕಾರಾತ್ಮಕ ಚಳವಳಿಗಳಿಗೆ ಪ್ರಶಸ್ತವಾದ ವಾತಾವರಣ ಸೃಷ್ಟಿಯಾಗುವುದು ದುರ್ಲಭವೇ ಆಗುತ್ತಿದ್ದಿತೇನೋ. ಕನ್ನಡ ಚಿತ್ರೋದ್ಯಮದ ದಿಗ್ಗಜಗಳೆಲ್ಲ ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತಿದ್ದ, ಇಂದಿಗೂ ನೆನೆಸಿಕೊಳ್ಳುವ ಅಪೂರ್ವ ಅನುಭವ ಅದು. ರಾಜಕುಮಾರ್‌ರವರ ಮಾತಿನಲ್ಲಿಯೇ ಹೇಳಬೇಕೆಂದರೆ, ''ಪ್ರವಾಹ ಪರಿಹಾರ ನಿಧಿ ಪ್ರವಾಸಗಳು ನಮ್ಮಲ್ಲಿನ ಕೊಳಕುಗಳನ್ನೆಲ್ಲ ಕೊಚ್ಚಿಕೊಂಡು ಹೋದವು. ಯಾಕೆಂದರೆ ನಮ್ಮ ನಮ್ಮಲ್ಲಿನ ಸಂಪರ್ಕ ಹೆಚ್ಚು ಹೆಚ್ಚಾಗಿ ಬೆಸೆದುಕೊಳ್ಳುವುದರೊಂದಿಗೆ ನಮ್ಮ ಮತ್ತು ಕನ್ನಡ ಚಿತ್ರಪ್ರೇಮಿಗಳ ನಡುವೆ ಎಂದೆಂದೂ ಬಿಡಿಸಲಾಗದ ಬಾಂಧವ್ಯ ಬೆಳೆಯಲು ಈ ಪ್ರವಾಸಗಳು ತುಂಬಾ ಸಹಾಯಕವಾದವು''. ಈ ಪರಿಹಾರ ನಿಧಿಯನ್ನು ಸಂಗ್ರಹಿಸುವ ಯೋಜನೆಯನ್ನು ಮೊದಲು 'ಡೆಕ್ಕನ್ ಹೆರಾಲ್ಡ್' ಮತ್ತು 'ಪ್ರಜಾವಾಣಿ' ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದ ಪ್ರಿಂಟರ್ಸ್(ಮೈಸೂರು) ಪ್ರೈವೇಟ್ ಲಿಮಿಟೆಡ್ ಸಂಸ್ಥೆ ಹಮ್ಮಿಕೊಂಡರೂ ಸಂಸ್ಥೆಯ ಮುಂದಾಳುಗಳಾಗಿದ್ದ ಕೆ.ವೆಂಕಟಸ್ವಾಮಿ ಮತ್ತು ಕೆ.ಎನ್.ಗುರುಸ್ವಾಮಿಯವರು ಈ ಯೋಜನೆಯಿಂದ ತಮ್ಮ ಸಂಸ್ಥೆಗೆ ಮಾತ್ರ ಪ್ರಚಾರ ಪಡೆಯಲು ಇಚ್ಛಿಸಲಿಲ್ಲ. ಕನ್ನಡ ಚಿತ್ರರಂಗದ ಪ್ರತಿನಿಧಿಗಳೊಂದಿಗೆ ಕೇಂದ್ರ ವ್ಯವಸ್ಥಾಪಕ ಸಮಿತಿಯ ಸದಸ್ಯರಾಗಲು ಅಂದಿನ ಅನೇಕ ಪ್ರಮುಖ ಪತ್ರಕರ್ತರಿಗೂ ಆಹ್ವಾನ ಹೋಯಿತು. ಚಿತ್ರರಂಗದೊಂದಿಗೆ ನಿಕಟವಾದ ಬಾಂಧವ್ಯವನ್ನು ಹೊಂದಿದ್ದ ಹಿರಿಯ ಪತ್ರಕರ್ತರೆಲ್ಲರೂ ಸಹಕಾರ ಮನೋಭಾವದಿಂದ ಹೆಗಲಿಗೆ ಹೆಗಲು ಕೊಟ್ಟು ದುಡಿದು ನಾನಾ ಜವಾಬ್ದಾರಿಗಳನ್ನು ಉತ್ಸಾಹದಿಂದ ನಿರ್ವಹಿಸಿದರು. ವೆಂಕಟಸ್ವಾಮಿಗಳು, 'ಪ್ರಜಾವಾಣಿ' ಸಂಪಾದಕರಾಗಿದ್ದ ಟಿ.ಎಸ್.ರಾಮಚಂದ್ರರಾವ್ ಮತ್ತು 'ಪ್ರಜಾವಾಣಿ'ಯ ವಾರದ ಪುರವಣಿ ಹಾಗೂ ಚಲನಚಿತ್ರ ವಿಭಾಗಗಳನ್ನು ನಿರ್ವಹಿಸುತ್ತಿದ್ದ ಎಂ.ಬಿ.ಸಿಂಗ್ ಎಲ್ಲ ವ್ಯವಸ್ಥೆಗಳ ಮೂಲ ಹೊಣೆಗಾರಿಕೆಯನ್ನು ಹೊತ್ತರು. ಚಿತ್ರರಂಗ ಆಗಲೇ ಅಪಾರ ಜನಪ್ರಿಯತೆ ಗಳಿಸಿದ್ದ ರಾಜಕುಮಾರ್‌ರನ್ನು ತನ್ನ ನಾಯಕನನ್ನಾಗಿ ಆರಿಸಿಕೊಂಡಿತು. ಬೆಂಗಳೂರಿನಲ್ಲಿ ಮಾತ್ರವಲ್ಲದೆ ರಾಜ್ಯದ ಎಲ್ಲ ಪ್ರಮುಖ ಜಿಲ್ಲಾ ಕೇಂದ್ರಗಳಲ್ಲಿಯೂ ನಟ-ನಟಿಯರ ಮೆರವಣಿಗೆಗಳು ಮತ್ತು ರಸಮಂಜರಿ ಕಾರ್ಯಕ್ರಮಗಳು ಏರ್ಪಟ್ಟವು. ಈ ರೀತಿ ಸಂಘಟಿತವಾಗಿ ಕನ್ನಡ ಚಲನಚಿತ್ರ ಕಲಾವಿದರು ಚಿತ್ರಪ್ರೇಮಿಗಳಿಗೆ ಅತಿ ಹತ್ತಿರ ಹೋಗಿದ್ದು ಅದೇ ಪ್ರಥಮ. ಪ್ರವಾಸ ಹೋದ ಪ್ರತಿಯೊಬ್ಬರಿಗೂ ಇದೊಂದು ಅವಿಸ್ಮರಣೀಯ ಅನುಭವವೆನಿಸಿತು. ಒಬ್ಬರಿಗೊಬ್ಬರು ಚಿತ್ರಗಳ ಮೂಲಕ ಪರಿಚಿತರಾಗಿದ್ದ ಕಲಾವಿದರು ಮತ್ತು ಚಿತ್ರಪ್ರೇಮಿಗಳು ಮೊಟ್ಟ ಮೊದಲ ಬಾರಿಗೆ ತಮ್ಮ ನಡುವೆ ಭಾವನಾತ್ಮಕ ಸಂಬಂಧವನ್ನು ಬೆಳೆಸಿಕೊಳ್ಳಲು ಈ ಪ್ರವಾಸ ಅವಕಾಶ ಮಾಡಿಕೊಟ್ಟಿತಲ್ಲದೆ ಕನ್ನಡ ಚಿತ್ರರಂಗದ ಆಗು-ಹೋಗುಗಳ ಬಗ್ಗೆ ಜನಸಾಮಾನ್ಯರು ಕೂಡ ವಿಶೇಷ ಆಸಕ್ತಿ ವಹಿಸುವಂತೆಯೂ ಆಯಿತು.

ಅದೇ ಸಮಯದಲ್ಲಿ ಕನ್ನಡ ಚಿತ್ರರಂಗ ಮತ್ತು ಚಲನಚಿತ್ರ ಪತ್ರಕರ್ತರ ನಡುವೆ ನಿಕಟವಾದ ಬಾಂಧವ್ಯ ಏರ್ಪಡುವುದು ಕೂಡ ಸಾಧ್ಯವಾಯಿತು. ಅದುವರೆಗೆ ಕೆಲವು ಚಲನಚಿತ್ರ ಪತ್ರಕರ್ತರು ವೈಯಕ್ತಿಕವಾಗಿ ಉದ್ಯಮದವರೊಂದಿಗೆ ಸಖ್ಯವನ್ನು ಬೆಳೆಸಿಕೊಂಡಿದ್ದರೂ ಈ ಅಭಿಯಾನದಿಂದಾಗಿ ಕನ್ನಡ ಚಿತ್ರೋದ್ಯಮಿಗಳ ಮತ್ತು ಚಲನಚಿತ್ರ ಪತ್ರಿಕೋದ್ಯಮಿಗಳ ನಡುವೆ ಔಪಚಾರಿಕ ಸಂಬಂಧ ಬೆಳೆದಂತಾಗಿ ಚಿತ್ರರಂಗದ ಸಮಸ್ಯೆಗಳ ಬಗ್ಗೆ ಪತ್ರಿಕೋದ್ಯಮ ಹೆಚ್ಚಿನ ಕಾಳಜಿ ವಹಿಸುವ, ಚಲನಚಿತ್ರ



(ಚಿತ್ರ ೫) ಹುಬ್ಬಳ್ಳಿಯ ಬೀದಿಯಲ್ಲಿ ತಾರೆಯರ ನಿಧಿಸಂಗ್ರಹ ಯಾತ್ರೆ.

ಪತ್ರಿಕೋದ್ಯಮ ಚಿತ್ರರಂಗದ ಮಿತ್ರ, ವಿಶ್ಲೇಷಕ ಹಾಗೂ ಮಾರ್ಗದರ್ಶಿಯೆನಿಸುವ ಹಾಗೆ ಬೆಸೆಯಿತು.

ಇಂತಹ ಸೌಹಾರ್ದಯುತ ವಾತಾವರಣದಲ್ಲಿಯೂ ಪತ್ರಕರ್ತರು ಚಿತ್ರರಂಗದ ವಿಷಯದಲ್ಲಿ ತಮ್ಮ ವಸ್ತುನಿಷ್ಠೆಯನ್ನು ಬಿಟ್ಟು ಕೊಡದೆ ಉದ್ಯಮ ಹಳಿ ತಪ್ಪಿದಾಗಲೆಲ್ಲ ಅದನ್ನು ತರಾಟೆಗೆ ತೆಗೆದುಕೊಂಡು ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡೇ ಬಂದರು. ಕನ್ನಡ ಚಿತ್ರರಂಗವಲ್ಲಿ ಕುಸಿಯುತ್ತಿದ್ದ ಗುಣಮಟ್ಟದ ಬಗ್ಗೆ ವ್ಯಾಪಕವಾದ ಅತೃಪ್ತಿ ವ್ಯಕ್ತವಾದಾಗ ಪತ್ರಕರ್ತರು ಈ ಅತೃಪ್ತಿಯ ಮುಖವಾಣಿಯೇ ಆದರು. ವಿಮರ್ಶಕರು ಕನ್ನಡ ಚಿತ್ರಗಳನ್ನು ತೀಕ್ಷ್ಣವಾಗಿ ಟೀಕಿಸುತ್ತಿದ್ದಾರೆಂಬ ಕೋಪದಿಂದ ಅನೇಕ ನಿರ್ಮಾಪಕರು, ತಯಾರಕರು ಅವರಿಗೆ ತಮ್ಮ ಹೊಸ ಚಿತ್ರಗಳನ್ನು ತೋರಿಸುವ ಗೋಜಿಗೇ ಹೋಗಲಿಲ್ಲ. ಆದರೂ ಪತ್ರಕರ್ತರು, ವಿಮರ್ಶಕರು ವಿಚಲಿತರಾಗಲಿಲ್ಲ. ಇದರಿಂದಾಗಿ ಪತ್ರಿಕಾ ವಿಮರ್ಶೆಗಳಿಗೂ, ಗಲ್ಲಾ ಪೆಟ್ಟಿಗೆಗೂ ಸಂಬಂಧವಿದೆಯೇ ಎನ್ನುವುವರ ಬಗ್ಗೆಯೇ ತೀವ್ರ ಜಿಜ್ಞಾಸೆಯೂ ಪ್ರಾರಂಭವಾಗಿ ಇಂದಿಗೂ ಉದ್ಯಮ ಮತ್ತು ಪತ್ರಕರ್ತರ ನಡುವೆ ಒಂದು ಬಗೆಹರಿಯದ ಸಮಸ್ಯೆಯಾಗಿಯೇ ಮುಂದುವರಿದಿದೆ.

ಪ್ರವಾಹ ಪರಿಹಾರ ನಿಧಿ ಸಂಗ್ರಹದ ಕಾರ್ಯಕ್ರಮದಿಂದಾಗಿ ಕನ್ನಡ ಚಿತ್ರರಂಗದ ಭಾಗ್ಯದ ಬಾಗಿಲು ತೆರೆಯಿತು ಎನ್ನುವುದು ಉದ್ಯಮದಲ್ಲಿನ ಪ್ರತಿಯೊಬ್ಬರ ಏಕರೂಪದ ಅಭಿಪ್ರಾಯ. ರಾಜಕುಮಾರ್‌ರವರಂತೂ ಈ ಅನುಭವವನ್ನು ರೋಚಕವಾಗಿ ವರ್ಣಿಸುತ್ತಾರೆ. ಉದ್ಯಮದ ಕೆಲವು ಅತಿರಥ ಮಹಾರಥರು ಎಲ್ಲ ಕಡೆಗಳಿಗೂ ಪ್ರವಾಸ ಮಾಡಲಿಲ್ಲವಾದರೂ ರಾಜಕುಮಾರ್ ಇದಕ್ಕೆ ಹೊರತಾಗಿ ರಾಜ್ಯದ ಉದ್ದಗಲಕ್ಕೂ ಹೋದರು. ಆಗ ಅವರನ್ನು ಮೂಲವ್ಯಾಧಿ ಬೇರೆ ಪೀಡಿಸುತ್ತಿತ್ತು. ಬೆಳಿಗ್ಗೆಯಿಂದ ರಾತ್ರಿಯವರೆಗೆ ಬಿಸಿಲು-ಮಳೆಗಳನ್ನು ಲೆಕ್ಕಿಸದೆ ತೆರೆದ ವಾಹನಗಳಲ್ಲಿ ಲಕ್ಷಾಂತರ ಅಭಿಮಾನಿಗಳ ಸಮ್ಮುಖದಲ್ಲಿ ಸುತ್ತಾಡಿ ರಾತ್ರಿ ತಾವು ತಂಗಿದ್ದ ಸ್ಥಳಗಳನ್ನು ಸೇರುವ ವೇಳೆಗೆ ಅವರಿಗೆ ವಿಪರೀತ ರಕ್ತಸ್ರಾವವಾಗಿರುತ್ತಿತ್ತು. ಆದರೂ ಅವರು ಹಿಂದೆಗೆಯದೆ ಆಗಾಗ ಔಷಧಿಗಳನ್ನು ನುಂಗಿಕೊಂಡೇ ಹತ್ತು ದಿನಗಳ ಪ್ರಯಾಸಕಾರಿ ಪ್ರವಾಸವನ್ನು ಮುಗಿಸಿದ್ದರು. ಈ ಪ್ರವಾಸದಿಂದ ರಾಜ್ಯ ಸರ್ಕಾರದ ಪರಿಹಾರ ನಿಧಿಗೆ ತುಂಬಾ ಗಮನಾರ್ಹವೆನಿಸುವ ಮೊತ್ತವೇನೂ ಸೇರದಿದ್ದರೂ ಕನ್ನಡ ಚಿತ್ರರಂಗವಂತೂ ಅದರ ಸಂಪೂರ್ಣ ಲಾಭ ಪಡೆಯಿತು. ಹಳೆಯ ಮೈಸೂರು ಪ್ರದೇಶಕ್ಕಿಂತ ಉತ್ತರ ಕರ್ನಾಟಕದಲ್ಲಿ ಕಲಾವಿದರ ಈ ಪ್ರವಾಸಕ್ಕೆ ಇನ್ನೂ ಹೆಚ್ಚಿನ ಪ್ರೋತ್ಸಾಹ ಸಿಕ್ಕಿದ್ದು ಕೂಡ ಚಿತ್ರರಂಗದ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ ಸಂಗತಿ. ಏಕೆಂದರೆ ಆ ಪ್ರದೇಶದಲ್ಲಿ ಹಿಂದಿ ಚಿತ್ರಗಳ ಭರಾಟೆಯಿಂದಾಗಿ ಕನ್ನಡ ಚಿತ್ರಗಳಿಗೆ ಗ್ರಹಣ ಹಿಡಿದಂತಾಗಿತ್ತು. ಕೆಲವು ಕನ್ನಡ ಚಿತ್ರಗಳು ಆ ವೇಳೆಗಾಗಲೇ ಮುಂಬಯಿ-ಕರ್ನಾಟಕ ಪ್ರದೇಶದಲ್ಲಿ ಅಪಾರ ಜಯಪ್ರಿಯತೆ ಗಳಿಸಿದ್ದರೂ ಕನ್ನಡ ಚಿತ್ರರಂಗ ಮತ್ತು ಅಲ್ಲಿನ ಜನರ ನಡುವೆ ಒಂದು ರೀತಿಯ ಮಾನಸಿಕ ಕಂದಕ ಇದ್ದೇ ಇತ್ತು. ಅಂದಿನ ದಿನಗಳಲ್ಲಿ ಕನ್ನಡ ಚಿತ್ರಗಳಿಗೆ ಹೇಳಿಕೊಳ್ಳುವ ಸಂಪಾವನೆ ಆಗುತ್ತಿದ್ದುದು ಹಳೆಯ ಮೈಸೂರು ಪ್ರದೇಶದಲ್ಲಿಯೇ. ಉದ್ಯಮದಲ್ಲಿ ತೊಡಗಿದ್ದವರಲ್ಲಿ ಅತಿ ದೊಡ್ಡ ಪ್ರಮಾಣದಲ್ಲಿ ಹಳೆಯ ಮೈಸೂರಿನವರೇ ಇದ್ದುದರಿಂದ ಕೂಡ ಉತ್ತರ ಕರ್ನಾಟಕ ಕನ್ನಡ ಚಿತ್ರಗಳಿಗೆ ಹೆಚ್ಚು ಅರ್ಥಪೂರ್ಣವಾಗಿ ಸ್ಪಂದಿಸಲು ಸ್ವಲ್ಪ ಕಾಲವೇ ಹಿಡಿಯಿತು.

ಇಷ್ಟೆಲ್ಲ ಆದರೂ ಕನ್ನಡ ಚಿತ್ರರಂಗ ಮದರಾಸಿನೊಂದಿಗೆ ತಾನು ಬೆಳೆಸಿಕೊಂಡಿದ್ದ ನಿಕಟ ಬಾಂಧವ್ಯವನ್ನು ಮಾತ್ರ ಬಿಟ್ಟುಕೊಡಲಿಲ್ಲ. ಮೈಸೂರು ರಾಜ್ಯದಲ್ಲಿ ಆಗಿನ್ನೂ ಚಿತ್ರ ನಿರ್ಮಾಣಕ್ಕೆ ಸಾಕಷ್ಟು ಪ್ರಮಾಣದಲ್ಲಿ ಮೂಲಭೂತ ಸೌಕರ್ಯಗಳು ಇರಲಿಲ್ಲವೆಂಬುದೂ ಮದರಾಸಿನೊಂದಿಗಿನ ಈ ನಂಟು ಭದ್ರವಾಗಿಯೇ ಉಳಿದುಕೊಳ್ಳುವುದಕ್ಕೆ ಒಂದು ಮುಖ್ಯ ಕಾರಣವಾಯಿತು.

ಎಲ್ಲೋ ಬೆರಳೆಣಿಸುವಷ್ಟು ಜನರನ್ನು ಬಿಟ್ಟರೆ ಇನ್ನಾವ ಕಲಾವಿದರಾಗಲಿ, ತಂತ್ರಜ್ಞರಾಗಲಿ ಮದರಾಸಿನಲ್ಲಿ ಆರ್ಥಿಕವಾಗಿ ನೆಮ್ಮದಿಯಿಂದಿರುವುದು ಸಾಧ್ಯವಾಗದಿದ್ದರೂ ಅವರಾರಿಗೂ ಮದರಾಸನ್ನು ಬಿಟ್ಟು ಕನ್ನಡ ನಾಡಿನಲ್ಲಿ ನೆಲೆಯೂರುವ ತುಡಿತ ಇರಲಿಲ್ಲವೆಂದು ಸಾಮಾನ್ಯವಾಗಿ ಅಂದಿನ ಕನ್ನಡ ಚಿತ್ರರಂಗದ ಪ್ರಮುಖರೆಲ್ಲರೂ ಒಪ್ಪುತ್ತಾರೆ. ಅಷ್ಟೋ ಇಷ್ಟೋ ಕೆಲಸ ಸಿಗುತ್ತಿತ್ತು, ಹೇಗೋ ಮದರಾಸನ್ನು ಸೇರಿಕೊಂಡಾಗಿತ್ತು, ಜೀವನ ಅಲ್ಲಿಯೇ ನಡೆದರೆ ತಪ್ಪೇನು ಎನ್ನುವ ಮನೋಭಾವ. ಅಲ್ಲೇ ಒಂದು ಲೋಕವನ್ನು ಕಟ್ಟಿಕೊಂಡಿದ್ದ ಅವರುಗಳಿಗೆ ಕನ್ನಡ ನಾಡಿಗೆ ಬಂದರೆ ಸ್ವರ್ಗ ಸಿಗಬಹುದೆಂಬ ಭ್ರಮೆಯೇನೂ ಇರಲಿಲ್ಲ. ಕಲಾವಿದರ ನಡುವೆಯಂತೂ ಒಂದು ವಿಶಿಷ್ಟ ಅನ್ಯೋನ್ಯತೆಯಿತ್ತು. ಬಡತನವೇ ಅವರ ನಡುವೆಯ ಕೊಂಡಿಯಾಗಿತ್ತು ಎಂದು ವಿಶ್ಲೇಷಿಸುತ್ತಾರೆ ರಾಜಕುಮಾರ್.

ಆದರೆ ಈ ಘಟನೆಗಳ ತಕ್ಷಣದ ಪರಿಣಾಮವೆಂದರೆ ಕನ್ನಡ ಚಿತ್ರಗಳ ನಿರ್ಮಾಣ ಗಮನಾರ್ಹವಾಗಿ ಹೆಚ್ಚಾಗಿದ್ದು. ೧೯೫೮ರಿಂದ ೧೯೬೨ರವರೆಗೆ ಕುಸಿದು ಹೋಗಿದ್ದ

ಹೊಸ ಕನ್ನಡ ಚಿತ್ರಗಳ ತಯಾರಿಕೆ ೧೯೬೩ರಲ್ಲಿ ಇದ್ದಕ್ಕಿದಂತೆ ಸುಧಾರಿಸಿಕೊಂಡು ೨೧ಕ್ಕೆ ಏರಿದ್ದು ಒಂದು ವಿಶೇಷ ಸಂಗತಿ. ಕನ್ನಡ ಜನರಲ್ಲಿ ತಮ್ಮ ಭಾಷೆಯ ಚಿತ್ರಗಳ ಬಗ್ಗೆ ಬೆಳೆದ ಹೊಸ ಆಸಕ್ತಿಯ ಲಾಭವನ್ನು ಪಡೆಯಲು ಅನೇಕ ನಿರ್ಮಾಪಕರು ಮುಂದಾದರು. ಹಿಂದೆಂದೂ ಇಲ್ಲದಷ್ಟು ಸಂಖ್ಯೆಯಲ್ಲಿ ಕನ್ನಡ ಚಿತ್ರಗಳ ತಯಾರಿಕೆ ಆರಂಭವಾಯಿತು. ಆದರೆ ಹಣ ಬಲವಿಲ್ಲದ ಅನೇಕ ನಿರ್ಮಾಪಕರು ತಮ್ಮ ಚಿತ್ರಗಳನ್ನು ಪೂರ್ಣಗೊಳಿಸಲು ಆಗಲೇ ಇಲ್ಲ. ತಯಾರಾದ ಬಹಳ ಚಿತ್ರಗಳ ಗುಣಮಟ್ಟದ ಬಗ್ಗೆಯೂ ಅತೃಪ್ತಿ ಗೋಚರವಾಗತೊಡಗಿತು. ಪತ್ರಿಕೆಗಳಲ್ಲಂತೂ ಈ ಬಗ್ಗೆ ನಿರಂತರ ಜಿಜ್ಞಾಸೆಗಳೇ ಪ್ರಾರಂಭವಾದವು.

ಚಿತ್ರೋದ್ಯಮದಲ್ಲಿ ಕಾಣಿಸಿಕೊಂಡ ಈ ಹೊಸ ಉತ್ಸಾಹ ಎಷ್ಟರ ಮಟ್ಟಿಗೆ ಬೆಳೆಯಿತೆಂದರೆ ಅನುಭವಿ ನಿರ್ಮಾಪಕರೊಬ್ಬರು ಆ ಸನ್ನಿವೇಶವನ್ನು ಈ ರೀತಿ ವಿವರಿಸಿದರು : ''ಕನ್ನಡ ಚಿತ್ರರಂಗವನ್ನು ಮುತ್ತಿದ ಅತಿ ಉತ್ಸಾಹದ ಭರಾಟೆ ಹೇಗಿತ್ತೆಂದರೆ ನಮ್ಮ ಭಾಷೆಯಲ್ಲಿ ಒಂದು ಚಿತ್ರ ಬರುತ್ತಿದೆಯೆಂಬುದೇ ಒಂದು ದೊಡ್ಡ ವಿಷಯವಾಯಿತು. ಆದರೆ ಈ ಚಿತ್ರದ ಭಾಷೆ, ಗುಣಮಟ್ಟಗಳ ಬಗ್ಗೆ ಯಾರೂ ಹೆಚ್ಚು ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ.''

ಆದರೂ ಚಿತ್ರರಂಗದಲ್ಲಿ ನಿಂತವರು ಗಟ್ಟಿಯಾಗಿಯೇ ಬೇರೂರಿದರು. ಪಂತುಲು, ನಾಗೇಂದ್ರರಾವ್ ಮತ್ತು ರಂಗಾ ಅವರ ಸಂಸ್ಥೆಗಳು ಚಿತ್ರ ನಿರ್ಮಾಣದಲ್ಲಿ ಉತ್ತಮ ವೃತ್ತಿಪರತೆಯನ್ನು ಮೈಗೂಡಿಸಿಕೊಂಡು ತಮ್ಮ ದೂರದೃಷ್ಟಿ, ಸಂಘಟನಾ ಸಾಮರ್ಥ್ಯ ಮತ್ತು ಛಲಗಳಿಂದ ಆರೋಗ್ಯಕರವಾಗಿ ಬೆಳೆದವು. ಇತರ ಭಾಷಾ ಚಿತ್ರೋದ್ಯಮಗಳೊಂದಿಗೆ ತಮ್ಮ ನಿಕಟ ಬಾಂಧವ್ಯವನ್ನು ಮುಂದುವರಿಸಿಕೊಂಡು ಬಂದು ಆ ಭಾಷೆಯ ಚಿತ್ರಗಳೊಂದಿಗೆ ಹೆಮ್ಮೆಯಿಂದ ಪೈಪೋಟಿಗೂ ನಿಂತವು. ಅದೇ ಸಮಯದಲ್ಲಿ ಕನ್ನಡ ಚಿತ್ರರಂಗಕ್ಕೆ ಕೆಲವು ಹೊಸ ಸಾಹಸಿಗಳ ಪ್ರವೇಶವೂ ಆಯಿತು.

ಆದರೆ ಈ ಎಲ್ಲ ಬೆಳವಣಿಗೆಗಳೂ ಹೆಚ್ಚಾಗಿ ಆದದ್ದು ಮದರಾಸಿನಲ್ಲಿ ಮಾತ್ರ ಎನ್ನುವುದು ಗಮನಾರ್ಹ. ದೂರದ ಮೈಸೂರಿನಿಂದ ಆಗಾಗ್ಗೆ ಮದರಾಸಿಗೆ ಭೇಟಿ ಕೊಡುತ್ತಿದ್ದ ಪ್ರೀಮಿಯರ್ ಸ್ಟುಡಿಯೋಸ್‌ನ ಎಂ.ಎಸ್.ಬಸವರಾಜಯ್ಯನವರು ಮಾತ್ರ ಮದರಾಸಿನಲ್ಲಿ ತಮ್ಮ ವಾಸ್ತವ್ಯದ ಸಮಯದಲ್ಲಿ ಅಂದಿನ ಪ್ರಮುಖ ಉದ್ಯಮಿಗಳನ್ನೆಲ್ಲ ಭೇಟಿಯಾಗಿ ಅವರೆಲ್ಲ ಮೈಸೂರಿನಲ್ಲಿಯೇ ನೆಲೆಸಿ ಕನ್ನಡದ ಮಣ್ಣಿನ ಮೇಲೆಯೇ ಕನ್ನಡ ಚಿತ್ರೋದ್ಯಮವನ್ನು ಕಟ್ಟಬೇಕೆಂದು ಒತ್ತಾಯ ತರುತ್ತಿದ್ದರು. ಆದರೆ ಅವರ ಈ ಸಲಹೆಗೆ ಅಂತಹ ಉತ್ತೇಜಕ ಪ್ರತಿಕ್ರಿಯೆಯೇನೂ ಬರಲಿಲ್ಲ. ಮೈಸೂರು ಸರ್ಕಾರ ಕನ್ನಡ ಚಿತ್ರರಂಗ ಕನ್ನಡ ನಾಡಿನಲ್ಲಿಯೇ ಬೇರೂರಲು ಅನುಕೂಲವಾಗುವಂತೆ ಇಲ್ಲಿ ಕೆಲವು ಸೌಕರ್ಯಗಳನ್ನು ನಿರ್ಮಿಸಿ ಕನ್ನಡ ಚಿತ್ರೋದ್ಯಮಿಗಳಿಗೆ ರಿಯಾಯಿತಿಗಳನ್ನು ಕೊಡಬೇಕೆಂಬ ಮಾತು ಇನ್ನೂ ಕ್ಷೀಣವಾಗಿಯೇ ಇತ್ತು.



(ಚಿತ್ರ ೬) ಪ್ರವಾಹ ಪರಿಹಾರ ನಿಧಿಸಂಗ್ರಹ ಯಾತ್ರೆಯಲ್ಲಿ ರಾಜ್ಯದ ಮುಖ್ಯನಗರಗಳಲ್ಲಿ ಸಂಜೆ ತಾರೆಯರಿಂದ ರಸಮಂಜರಿ ಕಾರ್ಯಕ್ರಮ ನಡೆದವು. ಆ ಸಂದರ್ಭಕ್ಕಾಗಿ ವಾದಿರಾಜ್ ರಚಿಸಿದ 'ಇಷ್ಟತ್ಮದು' ಎಂಬ ಪ್ರಹಸನದಲ್ಲಿ ನರಸಿಂಹರಾಜು, ಜಯಶ್ರೀ ಮತ್ತು ಪಂಢರಿಬಾಯಿ.

ಇತ್ತ ಮೈಸೂರು ರಾಜ್ಯದಲ್ಲಿ ಕನ್ನಡ ಚಳವಳಿಯಿಂದಾಗಿ ಕನ್ನಡ ಚಿತ್ರಗಳ ಬಗ್ಗೆ ಪ್ರದರ್ಶಕರ ಧೋರಣೆ ಗಣನೀಯವಾಗಿ ಬದಲಾಗಿತ್ತು. ವಿಶ್ವಾಸ ಗಳಿಸಲಾಗದ ಯಶಸ್ಸನ್ನು ತೋಳ್ಬಲ ಗಳಿಸಿತ್ತು. ಚಳವಳಿ ಒಮ್ಮೊಮ್ಮೆ ಅಗತ್ಯಕ್ಕಿಂತ ಹೆಚ್ಚಾಗಿ ಹಿಂಸಾತ್ಮಕವಾಯಿತೆಂದು ಕೆಲವರು ಮೂಗು ಮುರಿದರೂ ಅದರಿಂದ ಚಿತ್ರ ಪ್ರದರ್ಶನ ವಲಯದ ಮೇಲೆ ಆದ ಪರಿಣಾಮ ಮಾತ್ರ ಉತ್ತಮವಾಗಿತ್ತು. ಕನ್ನಡ ಚಿತ್ರಗಳನ್ನು ಹೀಗಳೆಯುತ್ತಿದ್ದವರೇ ಕನ್ನಡದ ಅಭಿಮಾನಿಗಳಾಗಿ ಪರಿವರ್ತನೆ ಹೊಂದಿದ ಪವಾಡವೂ ನಡೆದಿತ್ತು. ಬೆಂಗಳೂರಿನ ಅನೇಕ ಪ್ರತಿಷ್ಠಿತ ಚಿತ್ರಮಂದಿರಗಳು ಕನ್ನಡ ಚಿತ್ರಗಳ ಬಗ್ಗೆ ಮೈ ಚಳಿ ಬಿಟ್ಟು ತಾವಾಗಿಯೇ ಅವುಗಳನ್ನು ಪ್ರದರ್ಶಿಸಲು ಮುಂದೆ ಬರುವವರೆಗೂ ಪರಿಸ್ಥಿತಿ ಸುಧಾರಿಸಿತ್ತು.

ವ್ಯಾಪಕವಾಗಿ ಹಬ್ಬಿದ ಕನ್ನಡ ಚಳವಳಿಯ ಪರಿಣಾಮದಿಂದಾಗಿ ರಾಜ್ಯದಲ್ಲಿ ಯಾವುದೇ ಹೊಸ ಚಿತ್ರಮಂದಿರ ಪ್ರಾರಂಭವಾದರೂ ಅದರಲ್ಲಿ ಪ್ರದರ್ಶಿತವಾಗುವ ಮೊದಲ ಚಿತ್ರ ಕನ್ನಡ ಚಿತ್ರವೇ ಆಗಿರಬೇಕೆಂಬ ಒಂದು ಅಲಿಖಿತ ಶಾಸನವೂ ಜಾರಿಗೆ ಬಂದಿತು. ಇದರಿಂದಾಗಿ ಇಡೀ ದೇಶದಲ್ಲಿಯೇ ಪ್ರಥಮ ಬಾರಿಗೆ ಸಿನಿರಮಾದಂತಹ ಅದ್ಭುತ ಆವಿಷ್ಕಾರ ಬೆಂಗಳೂರಿನಲ್ಲಿ ಅವತರಿಸಿದಾಗ ಬಹಳ ಅಹಿತವಾದ ಘಟನೆಯೊಂದಕ್ಕೂ ಕಾರಣವಾಯಿತು. ಸಿನಿರಮಾ ಚಿತ್ರಗಳ ಪ್ರದರ್ಶನಕ್ಕೆಂದೇ ಅಧಿಕ ವೆಚ್ಚದಲ್ಲಿ ನೂರು ಅಡಿಗಳಿಗೂ ಮೀರಿದ ಉದ್ದದ ತೆರೆ ಮತ್ತು ವಿಶಿಷ್ಟ ಪ್ರೊಜೆಕ್ಷನ್ ಸಾಧನಗಳನ್ನು ಅಳವಡಿಸಿಕೊಂಡ ವಿಶಾಲವಾದ ಚಿತ್ರಮಂದಿರ ಕಪಾಲಿ (೧೪೦೦ ಆಸನಗಳಿದ್ದು ಅದು ಇಡೀ ದಕ್ಷಿಣ ಭಾರತದಲ್ಲಿಯೇ ಅತ್ಯಂತ ದೊಡ್ಡ ಚಿತ್ರಮಂದಿರವೆನಿಸಿತ್ತು). ನವಂಬರ್ ೧೯೬೨ರಲ್ಲಿ ಮೊದಲ ಚಿತ್ರವಾಗಿ ಆಯ್ಕೆ ಮಾಡಿಕೊಂಡದ್ದು ಆಂಗ್ಲ ಭಾಷೆಯಲ್ಲಿನ ಸಿನಿರಮಾ ಚಿತ್ರ 'ದಿಸ್ ಈಸ್ ಸಿನಿರಮಾ'ವನ್ನು. ಚಿತ್ರಮಂದಿರವನ್ನು ರಾಷ್ಟ್ರದ ಅಂದಿನ ಉಪಪ್ರಧಾನಿ ಮೊರಾರ್ಜಿ ದೇಸಾಯಿಯವರು ಉದ್ಘಾಟಿಸಬೇಕೆಂದೂ ನಿಯೋಜಿತವಾಗಿತ್ತು. ಆದರೆ ಸಂಪ್ರದಾಯದಂತೆ ಈ ಬೃಹತ್ ಚಿತ್ರಮಂದಿರ ಕನ್ನಡ ಚಿತ್ರವೊಂದರಿಂದ ಆರಂಭವಾಗಲಿಲ್ಲವೆಂಬ ಆಕ್ರೋಶದಿಂದ ನೂರಾರು ಸಂಖ್ಯೆಯಲ್ಲಿ ನೆರೆದ ಕನ್ನಡಾಭಿಮಾನಿಗಳು ಚಿತ್ರಮಂದಿರದ ಮೇಲೆ ಅವ್ಯಾಹತವಾಗಿ ಕಲ್ಲಿನ ದಾಳಿಯನ್ನು ಪ್ರಾರಂಭಿಸಿ ಅಲ್ಲಿನ ಬೃಹತ್ ಸ್ವರೂಪದ ಗಾಜಿನ ಕಿಟಕಿಗಳನ್ನು ನುಚ್ಚು ನೂರು ಮಾಡಿ ಒಳಗಿದ್ದ ಹತ್ತಾರು ಜನರಿಗೆ ತೀವ್ರ ಗಾಯಗಳನ್ನೂ ಉಂಟುಮಾಡಿದರು. ಕೆಲವರಿಂದ ಚಿತ್ರಮಂದಿರಕ್ಕೆ ಬೆಂಕಿಯಿಡುವ ಪ್ರಯತ್ನವೂ ನಡೆದಾಗ ಪೊಲೀಸರಿಂದ ಲಾಠಿಪ್ರಹಾರ, ಗೋಲಿಬಾರ್‌ಗಳೂ ನಡೆದವು. ಚಿತ್ರಮಂದಿರದ ಮಾಲೀಕರು ಕನ್ನಡ ಚಿತ್ರವೊಂದನ್ನು ಮೊದಲು ಪ್ರದರ್ಶಿಸಿ ನಂತರ 'ದಿಸ್ ಈಸ್ ಸಿನಿರಮಾ'ವನ್ನು ಪ್ರದರ್ಶಿಸುವುದು ಅನಿವಾರ್ಯವಾಯಿತು.

(ಇದಾದ ಕೆಲವು ಸಮಯದ ನಂತರ ಕಪಾಲಿ ಚಿತ್ರಮಂದಿರದ ವ್ಯವಸ್ಥಾಪಕ ಪಾಲುದಾರರಾದ ಡಿ.ರಾಜಗೋಪಾಲ್ ತಾವೇ ಎಂ.ವಿ.ಕೃಷ್ಣಸ್ವಾಮಿಗಳ ನಿರ್ದೇಶನದಲ್ಲಿ 'ಪಾಪ-ಪುಣ್ಯ' ಕನ್ನಡ ಚಿತ್ರವನ್ನು ನಿರ್ಮಿಸಿದರು).

ದುರ್ದೈವದಿಂದ ೧೯೬೩ರ ವೇಳೆಗೆ ಕನ್ನಡ ಚಿತ್ರಗಳು ಲಾಭದಾಯಕ ಎಂದುಕೊಂಡು ತಿಳಿದವರು, ತಿಳಿಯದವರು ಎಲ್ಲರೂ ನಿರ್ಮಾಣಕ್ಕೆ ಇಳಿದಿದ್ದರಿಂದ ಅನೇಕ ಚಿತ್ರಗಳು ನೆಲ ಕಚ್ಚುವ ಅನಿವಾರ್ಯವೂ ಒದಗಿ ಬಂದಿತು. ಅಂತಹ ಅವಸರದ ಅನೇಕ ಚಿತ್ರಗಳು ಯಾರನ್ನೂ ತೃಪ್ತಿಗೊಳಿಸಲಿಲ್ಲ. ಹಿಂದಿನ ವರ್ಷ ೨೧ ಕನ್ನಡ ಚಿತ್ರಗಳು ಬಿಡುಗಡೆಯಾಗಿದ್ದವು. ಆದರೆ ಈ ವರ್ಷ ಅಷ್ಟು ಚಿತ್ರಗಳೂ ಬರುವುದು ಅಸಾಧ್ಯವೆಂಬ ಶಂಕೆಯೂ ಉಂಟಾಯಿತು. ಅನೇಕ ಹಂಚಿಕೆದಾರರ ಕೈ ಕಚ್ಚಿತು. ಮದರಾಸಿನ ಸ್ಟುಡಿಯೋಗಳಲ್ಲಿ ಕನ್ನಡ ಚಿತ್ರಗಳ ನಿರ್ಮಾಣ ಚಟುವಟಿಕೆಗೆ ಮತ್ತೊಮ್ಮೆ ಮಂಕು ಕವಿಯಿತು. ಕನ್ನಡ ಚಳವಳಿಯ ತರುಣದಲ್ಲಿ ಚಿತ್ರರಂಗ ಸಂಖ್ಯಾಬಲ ಹಾಗೂ

ಗುಣಮಟ್ಟಗಳ ದೃಷ್ಟಿಯಿಂದ ಗಮನಾರ್ಹವಾಗಿ ಚೇತರಿಸಿಕೊಳ್ಳಬಹುದೆಂಬ ಮಹದಾಸೆ ಇಟ್ಟು ಕೊಂಡವರಿಗೆ ನಾಯಿಕೊಡೆಗಳಂತೆ ಹುಟ್ಟಿ ಬೇಗನೇ ಸಾಯುವ ಇಂತಹ ನಿರ್ಮಾಪಕರಿಂದಾಗಿ ಭ್ರಮನಿರಸನವಾಗುವ ಕಾಲವೂ ಕೂಡಲೇ ಬಂತು.

ಪ್ರವಾಹ ಪರಿಹಾರ ನಿಧಿ, ಕನ್ನಡ ಚಳವಳಿ ಮತ್ತು ಡಬ್ಬಿಂಗ್ ವಿರೋಧಿ ಚಳವಳಿಗಳಲ್ಲಿ ಕನ್ನಡ ಚಿತ್ರರಂಗದ ಪರವಾಗಿ ನಿಂತ ಪತ್ರಿಕೆಗಳಿಗೂ ಈ ಪರಿಸ್ಥಿತಿಯಿಂದ ಸಾಕಷ್ಟು ಜಿಗುಪ್ಸೆಯಾಗಿ ಗುಣಮಟ್ಟದ ಕುಸಿತದ ವಿರುದ್ಧ ಅವು ಪ್ರತಿಭಟಿಸಲಾರಂಭಿಸಿದವು. ಹೀಗಾಗಿ ಚಿತ್ರೋದ್ಯಮ ಮತ್ತು ಚಲನಚಿತ್ರ ಪತ್ರಿಕೋದ್ಯಮದ ನಡುವೆ ಒಂದು ರೀತಿಯ ‘ಲವ್-ಹೇಟ್’ ಸಂಬಂಧ ಬೆಳೆದು ಪತ್ರಿಕೆಗಳು ಒಂದು ರೀತಿಯಲ್ಲಿ ‘ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನ’ದ ನೀತಿಯತ್ತ ಹೊರಳಿದವು. ಈ ಪರಿಸ್ಥಿತಿ ಹಿಂದಿನ ದಶಕದಲ್ಲಿನ ಪರಿಸ್ಥಿತಿಯಿಂದ ಸ್ವಲ್ಪಮಟ್ಟಿಗೆ ವಿಭಿನ್ನವೆನಿಸಲು ಕಾರಣ ೧೯೫೦-೬೦ರಲ್ಲಿ ಕನ್ನಡ ಚಿತ್ರರಂಗ ಕನ್ನಡದ ನೆಲೆಗೆ ಸ್ಥಳಾಂತರಗೊಳ್ಳಬೇಕೆಂಬ ಕಾಳಜಿಯೇನೂ ಇರದಿದ್ದುದು. ಆದರೆ ಚಳವಳಿಗಳಿಂದಾಗಿ ಕನ್ನಡ ಚಿತ್ರರಂಗದ ಉತ್ಕರ್ಷಕ್ಕೆ ಎಷ್ಟೇ ಪ್ರಚೋದನೆ ಸಿಕ್ಕಿದರೂ ಚಿತ್ರರಂಗ ಅಂತಹ ಸುವರ್ಣ ಅವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುತ್ತಿಲ್ಲವೆಂಬ ನಿರಾಸೆ ಚಿತ್ರೋದ್ಯಮದ ವ್ಯವಹಾರಗಳಲ್ಲಿ ಪತ್ರಿಕೆಗಳು ಇನ್ನೂ ಹೆಚ್ಚಿನ ಆಸಕ್ತಿ ತಾಳಲು ಪ್ರೇರಕವಾಯಿತು. ಕನ್ನಡ ಚಿತ್ರರಂಗದ ಚಟುವಟಿಕೆಗಳು ಕನ್ನಡ ನಾಡಿನಲ್ಲಿಯೇ ಕೇಂದ್ರೀಕೃತವಾದರೆ ಅದು ಆರ್ಥಿಕವಾಗಿ ಹಾಗೂ ಕಲಾತ್ಮಕವಾಗಿ ಹೆಚ್ಚಿನ ಸಾರ್ಥಕ್ಯ ಪಡೆಯಬಹುದೆಂಬ ನಿರೀಕ್ಷೆ ಕನ್ನಡ ಚಿತ್ರೋದ್ಯಮ ಕನ್ನಡ ರಾಜ್ಯದಲ್ಲಿಯೇ ನೆಲೆಯೂರಲು ಸಹಾಯಕವಾಗುವಂತೆ ರಾಜ್ಯ ಸರ್ಕಾರ ಕೆಲವೊಂದು ಉಪಯುಕ್ತ ಯೋಜನೆಗಳನ್ನು ಹಾಕಿಕೊಳ್ಳಬೇಕೆಂಬ ಬಯಕೆಗೆ ಇಂಬು ಕೊಟ್ಟಿತು. ಈ ಪ್ರಕ್ರಿಯೆಯಲ್ಲಿ ಕನ್ನಡ ಚಲನಚಿತ್ರ ಪತ್ರಕರ್ತರು ಪ್ರಧಾನ ಪಾತ್ರವಹಿಸಿದರು.

ಕನ್ನಡ ಚಿತ್ರರಂಗಕ್ಕೆ ಕೆಲವು ವಿಶೇಷ ಸವಲತ್ತುಗಳನ್ನು ಒದಗಿಸಿ ರಾಜ್ಯ ಸರ್ಕಾರ ಅದರ ನೆರವಿಗೆ ನಿಂತಿದ್ದು ಅದರ ಸ್ವಂತ ಪ್ರೇರಣೆಯಿಂದ ಎಂಬ ತಪ್ಪು ಗ್ರಹಿಕೆ ರಾಜ್ಯದ ಒಳಗೂ, ಹೊರಗೂ ಇದೆ. ಹಾಗೆಯೇ ಪ್ರಾದೇಶಿಕ ಚಿತ್ರೋದ್ಯಮದ ಅಭಿವೃದ್ಧಿಗೆ ಇಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡ ಮೊದಲ ರಾಜ್ಯ ಸರ್ಕಾರವೇ ಮೈಸೂರಿನದು ಎನ್ನುವ ಅವಾಸ್ತವ ಅಭಿಪ್ರಾಯವೂ ಪ್ರಚಾರದಲ್ಲಿದೆ. ಈ ಎರಡು ಅಭಿಪ್ರಾಯಗಳೂ ನಿರಾಧಾರವಾದವು. ಕನ್ನಡ ಚಿತ್ರರಂಗ ರಾಜ್ಯ ಸರ್ಕಾರದಿಂದ ಸಬ್ಸಿಡಿ ಮತ್ತಿತರ ಸವಲತ್ತುಗಳನ್ನು ಪಡೆಯಲು ವರ್ಷಗಟ್ಟಲೆ ಭಗೀರಥ ಪ್ರಯತ್ನವನ್ನೇ ಮಾಡಬೇಕಾಯಿತು.

ಈ ಬಗ್ಗೆ ಮೊದಲ ಪ್ರಯತ್ನಗಳು ಪ್ರಾರಂಭವಾದದ್ದು ೧೯೬೦-೭೦ರ ದಶಕದ ಮಧ್ಯ ಭಾಗದಲ್ಲಿ. ಆ ವೇಳೆಗಾಗಲೇ ಆಂಧ್ರ, ಗುಜರಾತ್, ಮಹಾರಾಷ್ಟ್ರ, ಬಂಗಾಳ, ಒರಿಸ್ಸಾ ಮತ್ತು ಬಿಹಾರ್ ಸರ್ಕಾರಗಳು ತಮ್ಮ ತಮ್ಮ ಪ್ರದೇಶಗಳಲ್ಲಿ ಚಿತ್ರೋದ್ಯಮದ ಪ್ರಗತಿಗೆ ಬೇರೆ ಬೇರೆ ರೀತಿಯ ನೆರವನ್ನು ನೀಡಲು ಆರಂಭಿಸಿದ್ದವು. ರಾಜ್ಯದ ಭಾಷೆಯೊಂದರಲ್ಲಿ ತಯಾರಾದ ಚಿತ್ರಗಳಿಗೆ ೫೦,೦೦೦ ರೂಪಾಯಿಗಳಷ್ಟು ಸಹಾಯ ಧನವನ್ನು ನೀಡಲು ಪ್ರಾರಂಭಿಸಿದ ಪ್ರಥಮ ರಾಜ್ಯ ಆಂಧ್ರ. ಕನ್ನಡ ನಾಡಿನಲ್ಲಿ ಕೂಡ ಸರ್ಕಾರ ಇದೇ ರೀತಿ ನೆರವು ನೀಡಬೇಕೆಂಬ ಅನಿಸಿಕೆ ವಾಸ್ತವವಾಗಿ ಮೂಡಲು ಪ್ರಾರಂಭವಾದದ್ದು ಉದ್ಯಮದಲ್ಲಿನ ಕೆಲವು ಕ್ರಿಯಾಶೀಲರಲ್ಲಿ.

ಆದರೆ ಈ ಸುಪ್ತ ಬಯಕೆಗೆ ಮೊಟ್ಟ ಮೊದಲ ಬಾರಿಗೆ ಮಾತು ಕೊಟ್ಟವರು ಪ್ರೀಮಿಯರ್ ಸ್ಟುಡಿಯೋ ಮಾಲೀಕರಾದ ಎಂ.ಎಸ್.ಬಸವರಾಜಯ್ಯನವರು. ಪದೇ ಪದೇ ಮದರಾಸಿಗೆ ಭೇಟಿ ಕೊಡುತ್ತಿದ್ದ ಅವರು ಅಲ್ಲಿನ ಕನ್ನಡ ಚಿತ್ರರಂಗದ ಅತಿರಥ ಮಹಾರಥರೊಂದಿಗೆಲ್ಲ ಸಾಕಷ್ಟು ಚರ್ಚಿಸಿ ಚಿತ್ರರಂಗದ ಹಲವು ಹತ್ತು ಸಮಸ್ಯೆಗಳಿಗೆ ರಾಜ್ಯ ಸರ್ಕಾರದ ರಿಯಾಯಿತಿಗಳು ಮತ್ತು ಇತರ ರೂಪದ ನೆರವುಗಳೇ ರಾಮಬಾಣವೆಂದು ಕಿವಿಮಾತು ಹೇಳುವುದರ ಜೊತೆಗೆ ಕನ್ನಡ ಚಿತ್ರೋದ್ಯಮ ಮದರಾಸಿನಿಂದ ಕರ್ನಾಟಕಕ್ಕೆ ಸ್ಥಳಾಂತರ ಹೊಂದುವುದು ಅನಿವಾರ್ಯವೆಂದೂ ವಾದಿಸುತ್ತಲೇ ಬಂದರು.

ಕನ್ನಡ ನಿರ್ಮಾಪಕರಿಗೆ ಪ್ರೋತ್ಸಾಹ ಕೊಡುವ ದೃಷ್ಟಿಯಿಂದ ಸರ್ಕಾರ ಕನ್ನಡ ಚಿತ್ರಗಳಿಗೆ ಮನರಂಜನೆ ತೆರಿಗೆಯನ್ನು ಕಡಿಮೆ ಮಾಡಬೇಕು, ರಾಜ್ಯದಲ್ಲಿನ ಪ್ರದರ್ಶಕರು ಕನ್ನಡ ಚಿತ್ರಗಳನ್ನು ನ್ಯಾಯವಾದ ಶೇಕಡಾವಾರು ಪ್ರತಿಫಲದ ಆಧಾರದ ಮೇಲೆ ಪ್ರದರ್ಶಿಸಬೇಕು, ರಾಜ್ಯ ಸರ್ಕಾರ ಟೂರಿಂಗ್ ಚಿತ್ರಮಂದಿರಗಳಿಗೆ ಉದಾರವಾಗಿ ಲೈಸೆನ್ಸ್ ನೀಡಬೇಕು, ರಾಜ್ಯದ ಪ್ರಮುಖ ಕೇಂದ್ರಗಳಲ್ಲಿ ಖಾಯಂ ಚಿತ್ರಮಂದಿರಗಳ ನಿರ್ಮಾಣಕ್ಕೆ ಆರ್ಥಿಕ ಸಹಾಯ ನೀಡಲು ಸರ್ಕಾರ ನಿಗಮವೊಂದನ್ನು ರಚಿಸಬೇಕು, ಉತ್ತಮ ಚಿತ್ರಗಳಿಗೆ ವಾರ್ಷಿಕ ಪಾರಿತೋಷಕಗಳನ್ನು ನೀಡಬೇಕು, ಕನ್ನಡ ಚಿತ್ರಗಳ ತಯಾರಿಕೆಗೆ ಧನ ಸಹಾಯ ನೀಡಬೇಕು, ಉತ್ತಮ ಕನ್ನಡ ಚಿತ್ರಗಳಿಗೆ ಒಂದಿಷ್ಟು ತೆರಿಗೆ ವಿನಾಯಿತಿಯನ್ನು ಕೊಡಬೇಕು ಎಂಬ ಎಲ್ಲ ಬೇಡಿಕೆಗಳೂ ಪ್ರಮುಖ ಉದ್ಯಮಿಗಳಿಂದ ಬರಲು ಪ್ರಾರಂಭವಾಯಿತು. ಈ ಬೇಡಿಕೆಗಳನ್ನು ಪ್ರತಿಬಿಂಬಿಸುವ ರೀತಿಯಲ್ಲಿ ರಾಜ್ಯದ ಮುಖ್ಯಮಂತ್ರಿಗಳೂ ಇತರ ಮಂತ್ರಿಗಳೂ ಆಗಾಗ ಚಿತ್ರಮಂದಿರಗಳ ಮಾಲೀಕರಿಗೆ ಎಚ್ಚರಿಕೆ ಕೊಡುತ್ತಲೇ ಬಂದರು.

ಆ ವೇಳೆಗಾಗಲೇ ಮೈಸೂರಿನಲ್ಲಿ ಎರಡು ಸ್ಟುಡಿಯೋಗಳು ಅಸ್ತಿತ್ವದಲ್ಲಿದ್ದರೂ ಬೆಂಗಳೂರಿನಲ್ಲಿಯೂ ಒಂದು ಸ್ಟುಡಿಯೋ ಸ್ಥಾಪನೆಯಾಗುವುದು ಅಗತ್ಯವೆಂಬ ಒತ್ತಡ ಕೂಡ ಬಂದಿತು. ಈ ಹೊತ್ತಿಗೆ ಮೈಸೂರಿನ ನವಜ್ಯೋತಿ ಸ್ಟುಡಿಯೋ ತೀವ್ರ ಆರ್ಥಿಕ ಬಿಕ್ಕಟ್ಟಿಗೆ ಸಿಕ್ಕ ೧೯೬೩ರಲ್ಲಿ ಕೊನೆಯ ಉಸಿರೆಳೆಯಿತು. ಆ ವರ್ಷವೇ ಸ್ಟುಡಿಯೋ ಹರಾಜಿಗೆ ಬಂದು ಅಲ್ಲಿಯ ಉಪಕರಣಗಳೆಲ್ಲ ಬಿಡಿ ಬಿಡಿಯಾಗಿ ಕಂಡವರ ಕೈ ಸೇರಿದ್ದು ಒಂದು ದುರಂತ. ಕನ್ನಡಕ್ಕೆ ಕೆಲವು ಉತ್ತಮ ಚಿತ್ರಗಳನ್ನು ಕೊಡುಗೆಯಾಗಿತ್ತ ನವಜ್ಯೋತಿ ಕನ್ನಡ ಚಿತ್ರರಂಗದ ಮೈಲಿಗಲ್ಲುಗಳಲ್ಲೊಂದಾಗಿ ನಿಂತಿತು. ಆದರೆ ಅದರ ಆರಂಭಿಕ ದಿನಗಳ ವೈಭವಕ್ಕೂ, ಕ್ರಮೇಣ ಅದು ಅನುಭವಿಸಬೇಕಾಗಿ ಬಂದ ಯಾತನೆಗೂ ಹೋಲಿಕೆಯೇ ಇಲ್ಲದಾಯಿತು.

ಬೆಂಗಳೂರಿನಲ್ಲಿ ಸ್ಟುಡಿಯೋ ಸ್ಥಾಪಿಸಬೇಕೆಂಬ ಯೋಜನೆ ಬಹಳ ಕಾಲ ಬಾಯಿ ಮಾತಾಗಿಯೇ ಉಳಿಯಿತೇ ಹೊರತು ಈ ಬಗ್ಗೆ ಯಾರೂ ಯಾವ ನಿರ್ದಿಷ್ಟ ಹೆಜ್ಜೆಯನ್ನೂ ಇಡಲಿಲ್ಲ. ಈ ವಿಷಯದಲ್ಲಿ ರಾಜ್ಯ ಸರ್ಕಾರ ಏನೂ ಮಾಡಲಿಲ್ಲವೆಂಬ ಮೂದಲಿಕೆ ಹೆಚ್ಚಾದಾಗ ಮಾತ್ರ ಆಗಿನ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪನವರು ಒಂದೆರಡು ಸಾರಿ ಕೆರಳಿದ್ದೂ ಉಂಟು.

೧೯೬೫ರ ಏಪ್ರಿಲ್ ತಿಂಗಳಿನಲ್ಲಿ ಬೆಂಗಳೂರಿನಲ್ಲಿ ತ್ರಿವೇಣಿ ಚಿತ್ರಮಂದಿರದ ಉದ್ಘಾಟನಾ ಸಮಾರಂಭದಲ್ಲಿ ನಿಜಲಿಂಗಪ್ಪನವರು ಬಹಿರಂಗವಾಗಿಯೇ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿ ಕನ್ನಡ ಚಿತ್ರರಂಗದ ನಿಷ್ಠಾವಂತ ತಂಡವಾವುದೂ ಬೆಂಗಳೂರು ನಗರದಲ್ಲಿ ಸ್ಟುಡಿಯೋ ಸ್ಥಾಪನೆಗೆ ನಿರ್ದಿಷ್ಟ ಸಲಹೆಗಳನ್ನು ರೂಪಿಸಿ ಮುಂದೆ ಬಾರದಿದ್ದರೆ ಕನ್ನಡ ನಾಡಿನಲ್ಲಿರುವವರು ಯಾರೂ ವ್ಯವಹಾರಜ್ಞರಲ್ಲವೆಂಬ ನಿರ್ಧಾರಕ್ಕೆ ಸರ್ಕಾರ ಬರುವುದು ಅನಿವಾರ್ಯವೆಂದು ಹೇಳಿದರು. ಇನ್ನು ನಾಲ್ಕು ತಿಂಗಳೊಳಗಾಗಿ ಖಾಸಗಿಯವರಾರೂ ಮುಂದೆ ಬಾರದಿದ್ದಲ್ಲಿ ಈ ಕೊರತೆ ನೀಗಿಸಲು ಸರ್ಕಾರ ತಾನೇ ಮುಂದೆ ಬರುವುದೆಂದು ಅವರು ಆರು ತಿಂಗಳ ಹಿಂದೆ ಹಾಕಿದ್ದ ಸವಾಲಿನ ಬಗ್ಗೆ ಮತ್ತೆ ಪ್ರಸ್ತಾಪಿಸದೆ ವಿಷಯವನ್ನು ಹಾಗೆಯೇ ಬಿಟ್ಟರು. ಆದರೆ ಈ ಹಿಂದೆ ಒಂದೆರಡು ಸಂದರ್ಭಗಳಲ್ಲಿ ನಿಜಲಿಂಗಪ್ಪನವರೇ ಸ್ಟುಡಿಯೋ ನಿರ್ಮಾಣಕ್ಕೆ ಬೆಂಗಳೂರು ಎಂತಹ ಪ್ರಶಸ್ತವಾದ ಸ್ಥಳವೆಂದು ಕೊಂಡಾಡಿ ನಗರವನ್ನು ಚಿತ್ರೋದ್ಯಮದ ಕೇಂದ್ರವನ್ನಾಗಿ ಮಾಡುವ ಕನಸನ್ನೂ ಕಂಡಿದ್ದರು. ಆದರೆ ಅವರ ಈ ಆಕಾಂಕ್ಷೆಗೆ ಖಾಸಗಿ ವಲಯದಿಂದ ದೊರೆತ ಪ್ರತಿಕ್ರಿಯೆ ಶೂನ್ಯ. ಸರ್ಕಾರದ ಕಡೆಯಿಂದಲೂ ಯಾವುದೇ ನಿರ್ದಿಷ್ಟ ಯೋಜನೆಯನ್ನೂ ಹಾಕಿಕೊಂಡ ದಾಖಲೆಯಿಲ್ಲ.

ಮೈಸೂರು ರಾಜ್ಯ ಸರ್ಕಾರದ ಮುಂದೆ ತನ್ನ ಕೆಲವು ಸೋದರ ರಾಜ್ಯ ಸರ್ಕಾರಗಳು ತಮ್ಮ ಪ್ರದೇಶದ ಚಿತ್ರೋದ್ಯಮಿಗಳಿಗೆ ಬೇರೆ ಬೇರೆ ರೀತಿಯ ನೆರವನ್ನು ನೀಡುವ ಉದಾಹರಣೆಗಳಿದ್ದವು. ಆಂಧ್ರದಲ್ಲಿ ಖ್ಯಾತ ನಟ ಎ.ನಾಗೇಶ್ವರರಾಯರು ತೆಲುಗು ಚಿತ್ರೋದ್ಯಮವನ್ನು ಮದರಾಸಿನಿಂದ ವರ್ಗಾಯಿಸಿ ಹೈದರಾಬಾದಿಗೆ ತರಬೇಕೆಂದೂ, ಆ ಸಲುವಾಗಿ ಸರ್ಕಾರ ಉದ್ಯಮಕ್ಕೆ ನೆರವಾಗಬೇಕೆಂದೂ ಮಾಡಿದ ಆಗ್ರಹವನ್ನು ಆ ರಾಜ್ಯ ಸರ್ಕಾರ ಗಂಭೀರವಾಗಿ ಪರಿಗಣಿಸಿ ಮೊದಲಿಗೆ ರಾಜ್ಯದಲ್ಲಿ ತಯಾರಾದ ಪ್ರತಿ ತೆಲುಗು ಚಿತ್ರಕ್ಕೂ ೫೦,೦೦೦ ರೂಪಾಯಿಗಳ ಸಹಾಯಧನವನ್ನು ನೀಡುವ ಯೋಜನೆಯನ್ನು ಆರಂಭಿಸಿತ್ತು. ಅಸ್ಸಾಂ ಸರ್ಕಾರ ಕೂಡ ಅಸ್ಸಾಮಿ ಚಿತ್ರೋದ್ಯಮದ ಉಳಿವಿಗಾಗಿ ಒಂದು ಸ್ಟುಡಿಯೋ ಕಟ್ಟುವ ಯೋಜನೆ ಹಾಕಿಕೊಂಡಿತ್ತು. ಪಶ್ಚಿಮ ಬಂಗಾಳ ಸರ್ಕಾರ ‘ಪಥೇರ್ ಪಾಂಚಾಲಿ’ಯ ನೆರವಿಗೆ ಬಾರದಿದ್ದರೆ ಭಾರತ ಚಿತ್ರರಂಗದ ಖ್ಯಾತಿ ಅಂತರರಾಷ್ಟ್ರೀಯ ಮಟ್ಟಕ್ಕೆ ಏರುತ್ತಿರಲಿಲ್ಲ. ಮುಂಬಯಿ ಸರ್ಕಾರ ಕೂಡ ಮರಾಠಿ ಚಿತ್ರೋದ್ಯಮದ ನೆರವಿಗೆ ಬಂದು ಆ ಉದ್ಯಮಕ್ಕಾಗಿಯೇ ಸ್ಟುಡಿಯೋ ಒಂದರ ನಿರ್ಮಾಣ, ಮರಾಠಿ ಚಿತ್ರಗಳ ಪ್ರದರ್ಶನಕ್ಕೇ ಮೀಸಲಾದ ಚಿತ್ರಮಂದಿರಗಳನ್ನು ಕಟ್ಟುವುದು, ಮುಂತಾದ ಯೋಜನೆಗಳನ್ನು ಹಾಕಿಕೊಳ್ಳುವ ಜೊತೆಗೆ ಉತ್ತಮ ಮರಾಠಿ ಚಿತ್ರಗಳಿಗೆ ವಾರ್ಷಿಕ ಪ್ರಶಸ್ತಿಗಳನ್ನು ಕೊಡುವ

ಬಗ್ಗೆಯೂ ಯೋಚಿಸುತ್ತಿತ್ತು. ಜೊತೆಗೆ ಕೇರಳ ಸರ್ಕಾರ ಕೂಡ ಮಲೆಯಾಳಿ ಚಿತ್ರರಂಗದ ಉತ್ಕರ್ಷಕ್ಕೆ ಕೆಲವು ಯೋಜನೆಗಳನ್ನು ಹಾಕಿಕೊಂಡಿತ್ತು. ಈ ಎಲ್ಲ ರಾಜ್ಯ ಸರ್ಕಾರಗಳೂ ಈ ಯೋಜನೆಗಳಿಗೆ ತಮ್ಮ ತಮ್ಮ ರಾಜ್ಯಗಳಲ್ಲಿ ಮನರಂಜನೆ ತೆರಿಗೆಯಿಂದ ಬರುವ ಆದಾಯದಲ್ಲಿ ಒಂದು ಭಾಗವನ್ನು ಎತ್ತಿಡಲು ನಿರ್ಧರಿಸಿದ್ದು ಒಂದು ವಿಶೇಷ. ಆದರೆ ಈ ಯಾವ ಯೋಜನೆಗಳೂ ಮೈಸೂರು ರಾಜ್ಯ ಸರ್ಕಾರದ ಮೇಲೆ ಯಾವ ಪರಿಣಾಮವನ್ನೂ ಬೀರಿರಲಿಲ್ಲ.

ಆ ಎಲ್ಲ ರಾಜ್ಯ ಸರ್ಕಾರಗಳ ಉದಾಹರಣೆಯನ್ನೇ ಅನುಸರಿಸಿ ಮೈಸೂರು ಸರ್ಕಾರ ಕೂಡ ಕನ್ನಡ ಚಿತ್ರೋದ್ಯಮ ಕನ್ನಡ ನಾಡಿನಲ್ಲಿಯೇ ನೆಲೆಸುವಂತೆ ಕೆಲವು ನಿರ್ದಿಷ್ಟ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ೧೯೬೦ರಲ್ಲಿ ಖ್ಯಾತ ನಟ-ನಿರ್ದೇಶಕ ಜಿ.ವಿ.ಅಯ್ಯರ್‌ರವರು ತಗಾದೆ ಮಾಡಿದರು. ಒಂದು ವರ್ಷಕ್ಕೆ ೪೦ ಚಿತ್ರಗಳನ್ನು ನಿರ್ಮಿಸುವ ಮಟ್ಟಕ್ಕೆ ಕನ್ನಡ ಚಿತ್ರೋದ್ಯಮ ಬೆಳೆದಿರುವಾಗ ಒಂದೋ ಎರಡೋ ಚಿತ್ರಗಳನ್ನು ಮಾಡಿ ವಿರಮಿಸಿದವರ ಸಂಖ್ಯೆಯೇ ಹೆಚ್ಚಾಗಿದ್ದು ಕ್ರಮವಾಗಿ ಮೂರು, ನಾಲ್ಕು ಚಿತ್ರಗಳನ್ನು ತಯಾರಿಸುವ ನಿರ್ಮಾಪಕರ ಸಂಖ್ಯೆ ಕಡಿಮೆಯಾಗುತ್ತಿದೆಯೆಂದು ಅಂಕಿ ಸಂಖ್ಯೆಗಳನ್ನು ನೀಡಿದ ಅವರು ಬೆಂಗಳೂರಿನಲ್ಲಿಯೇ ಸ್ಟುಡಿಯೋ ಆದರೆ ನಿರ್ಮಾಣ ವೆಚ್ಚ ಕಡಿಮೆಯಾಗದಿದ್ದರೂ ರಾಜ್ಯದ ಹಣ ಹೊರ ರಾಜ್ಯಗಳಿಗೆ ಸೋರಿ ಹೋಗುವ ಪದ್ಧತಿಯಾದರೂ ತಪ್ಪುತ್ತದೆಯೆಂಬ ವಾದವನ್ನು ಸರ್ಕಾರದ ಮುಂದಿಟ್ಟರು. ಮನರಂಜನೆ ತೆರಿಗೆಯಲ್ಲಿ ಒಂದು ಭಾಗವನ್ನು ಕನ್ನಡ ಚಿತ್ರೋದ್ಯಮದ ಬೆಳವಣಿಗೆಗಾಗಿಯೇ ಮೀಸಲಾಗಿಡಬೇಕೆಂಬ ಸಲಹೆ ಕೂಡ ಅವರಿಂದ ಬಂತು. ಈ ಆದಾಯದ ಒಂದು ಭಾಗ ಸ್ಟುಡಿಯೋ ನಿರ್ಮಾಣಕ್ಕೂ ವ್ಯಯವಾಗಬೇಕು ಎನ್ನುವುದು ಅವರ ಮತ್ತು ಕನ್ನಡ ಚಿತ್ರರಂಗದ ಇನ್ನೂ ಕೆಲವು ಪ್ರಮುಖರ ಸಲಹೆ.

ಬೆಂಗಳೂರಿನ ೪೦ ಚಿತ್ರಮಂದಿರಗಳ ಮಾಲೀಕರೂ ಒಟ್ಟಾಗಿ ಸೇರಿ ೨೦ ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದರೆ ಬೆಂಗಳೂರಿನಲ್ಲಿ ಸ್ಟುಡಿಯೋ ನಿರ್ಮಾಣಕ್ಕಾಗಿ ರಾಜ್ಯ ಸರ್ಕಾರ ಒಂದಿಷ್ಟು ಹಣ ಹೂಡಲು ಸಿದ್ಧವೆಂದು ನಿಜಲಿಂಗಪ್ಪನವರು ಹಾಕಿದ ಗಾಳಕ್ಕೆ ಮಾತ್ರ ಯಾವ ಪ್ರದರ್ಶಕನೂ ಸಿಕ್ಕಿಕೊಳ್ಳಲಿಲ್ಲ.

ಅದೇ ಸಮಯದಲ್ಲಿ ಅಂದಿನ ಅರ್ಥಮಂತ್ರಿಗಳಾಗಿದ್ದ ಬಿ.ಡಿ.ಜತ್ತಿಯವರು ಒಂದು ಸಂದರ್ಭದಲ್ಲಿ ಕನ್ನಡ ಚಿತ್ರರಂಗಕ್ಕೆ ರಾಜ್ಯ ಸರ್ಕಾರ ನೆರವು ಮತ್ತು ರಿಯಾಯಿತಿಗಳನ್ನು ನೀಡುವ ವಿಷಯದಲ್ಲಿ ಅದಕ್ಕಿದ್ದ ಕಾನೂನಿನ ತೊಡಕುಗಳೇ ಕಾರಣವೆಂದು ಹೇಳಿ ತಮ್ಮ ಅಸಹಾಯಕತೆಯನ್ನು ತೋಡಿಕೊಂಡ ದಾಖಲೆಯೂ ಇದೆ. ಆಗ ಜಾರಿಯಲ್ಲಿದ್ದ ಕಾನೂನುಗಳ ತಿದ್ದುಪಡಿಯಾಗದೆ ಸರ್ಕಾರ ಕನ್ನಡ ಚಿತ್ರೋದ್ಯಮಕ್ಕೆ ಯಾವ ರೀತಿಯ ಸಹಾಯವನ್ನು ಮಾಡುವುದೂ ಸಾಧ್ಯವಿಲ್ಲವೆಂದ ಜತ್ತಿಯವರು ಇತರ ರಾಜ್ಯಗಳಲ್ಲಿ ಈ ರೀತಿಯ ಸಹಾಯ ನೀಡಲು ಅಲ್ಲಿಯ ಕಾನೂನುಗಳು ಸಹಾಯಕವಾಗಿರುವುದರಿಂದ ಅವು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿವೆಯೆಂದು ವಿಶ್ಲೇಷಿಸಿದರು. ಆದರೆ ಮೈಸೂರು ರಾಜ್ಯದಲ್ಲಿ ಕಾನೂನುಗಳನ್ನು ತಿದ್ದುಪಡಿ ಮಾಡುವ ಇಂಗಿತವನ್ನೇನೂ ಅವರು ತೋರಲಿಲ್ಲ.

ಮುಂದೆ ಜತ್ತಿಯವರು ಮುಖ್ಯಮಂತ್ರಿಗಳಾದ ತರುಣದಲ್ಲಿ ಕರ್ನಾಟಕ ಚಲನಚಿತ್ರ ಕಲಾವಿದರ ಸಂಘ ಬೆಂಗಳೂರಿನಲ್ಲಿ ಪ್ರದರ್ಶಿಸಿದ ನಾಟಕವೊಂದಕ್ಕೆ ಮುಖ್ಯ ಅತಿಥಿಗಳಾಗಿ ಬಂದಿದ್ದರು. ಆಗ ಕೆಲವು ಕಲಾವಿದರು ಪ್ರದರ್ಶನದ ಮಧ್ಯೆಯೇ ನಗರದಲ್ಲಿ ನಿರ್ಮಾಣವಾಗಿದ್ದ ಓಂಕಾರ್ ಸ್ಟುಡಿಯೋಗೆ ಸರ್ಕಾರ ಸರಿಯಾದ ಉತ್ತೇಜನ ಕೊಡುತ್ತಿಲ್ಲವೆಂದು ಪ್ರತಿಭಟಿಸಿ ಘೋಷಣೆಗಳನ್ನು ಕೂಗಲಾರಂಭಿಸಿದಾಗ ಜತ್ತಿಯವರು ಬೇಸರಗೊಂಡು ನಾಟಕ ಬಿಟ್ಟು ಹೊರಟರು. ಕೆಂಗಲ್ ಹನುಮಂತಯ್ಯನವರು ಕಲಾವಿದರಿಗೆ ಸಮಾಧಾನ ಹೇಳಿದರು. ನಂತರ ಜತ್ತಿಯವರು ಸಂಘದ ಪ್ರತಿನಿಧಿಗಳನ್ನು ಕರೆಸಿಕೊಂಡು ಅವರು ತಮ್ಮ ಸಮಸ್ಯೆಗಳನ್ನು ಬಹಿರಂಗವಾಗಿ ಹೇಳಿ ಜನರನ್ನು ಪ್ರಚೋದಿಸುವ ಬದಲು ಸರ್ಕಾರವನ್ನು ನೇರವಾಗಿ ಸಂಪರ್ಕಿಸಿ ಪರಿಹಾರ ಕಂಡುಕೊಳ್ಳುವುದು ಹೆಚ್ಚು ಸೂಕ್ತವೆಂದು ಹೇಳಿ ತಾವು ಈ ಸಮಸ್ಯೆಗಳ ಬಗ್ಗೆ ಶ್ರದ್ಧೆ ವಹಿಸುವ ಆಶ್ವಾಸನೆಯನ್ನೂ ನೀಡಿದರು.

ಇಲ್ಲಿ ಇನ್ನೂ ಒಂದು ಘಟನೆಯನ್ನು ಪ್ರಸ್ತಾಪಿಸುವುದು ಸೂಕ್ತ. ಮುಖ್ಯಮಂತ್ರಿ ನಿಜಲಿಂಗಪ್ಪನವರು ಕನ್ನಡ ಉದ್ಯಮಿಗಳಿಗೆ ಸವಾಲೆಸೆದ ಕೆಲವೇ ದಿನಗಳಲ್ಲಿ ಮುಂಬಯಿನ ಹೆಸರಾಂತ ಚಿತ್ರನಿರ್ಮಾಣ ಸಂಸ್ಥೆ ಫಿಲ್ಮೀಸ್ತಾನ್ ಬೆಂಗಳೂರಿನಲ್ಲಿ ಸ್ಟುಡಿಯೋ ಸ್ಥಾಪಿಸುವ ಪ್ರಸ್ತಾಪವನ್ನು ರಾಜ್ಯ ಸರ್ಕಾರದ ಮುಂದಿಟ್ಟಿತು. ಇದಕ್ಕಾಗಿ ನಗರದಲ್ಲಿ ಕಾರ್ಯಾಲಯವೊಂದನ್ನೂ ತೆರೆಯಿತು. ಆದರೆ ಸರ್ಕಾರ ಕೇವಲ ತಾಂತ್ರಿಕ ಕಾರಣಗಳನ್ನು ಮುಂದೊಡ್ಡಿಕೊಂಡೇ ಕಾಲ ತಳ್ಳುತ್ತಾ ಹೋಯಿತು. ವಿಧಾನಸೌಧದ ಬಾಗಿಲು ಕಾದು ಕಾದು ಸುಸ್ತಾದ ಫಿಲ್ಮೀಸ್ತಾನ್ ಬರಿಗೈಯಲ್ಲಿ ಮುಂಬಯಿಗೆ ವಾಪಸು ಹೋಗುವುದು ಅನಿವಾರ್ಯವಾಯಿತು. ಕೊನೆಗೂ ಈ ಯೋಜನೆ ಕೈಗೂಡಲೇ ಇಲ್ಲ.

ಬೆಂಗಳೂರಿನಲ್ಲಿ ಸ್ಟುಡಿಯೋ ಸ್ಥಾಪನೆಯ ವಿಚಾರದಲ್ಲಿ ಅದುವರೆಗೆ ಆದ ಒಂದೇ ಒಂದು ಬೆಳವಣಿಗೆಯೆಂದರೆ ರಾಜ್ಯ ಸರ್ಕಾರ ನಟ ಟಿ.ಎನ್.ಬಾಲಕೃಷ್ಣ ಅವರಿಗೆ ಕೆಂಗೇರಿಯ ಬಳಿ ೧೫ ಎಕರೆ ಜಮೀನನ್ನು ದೀರ್ಘಾವಧಿ ಗುತ್ತಿಗೆಯ ಮೇಲೆ ನೀಡಿದ್ದು. ಈ ಯೋಜನೆಗೆ ಸರ್ಕಾರದಿಂದ ಇನ್ನಾವ ನೆರವೂ ಇಲ್ಲ. ತಾವೇ ತಲೆಗೆ ನೂರು ರೂಪಾಯಿಗಳನ್ನು ಸಂಗ್ರಹಿಸಿ ಸ್ಟುಡಿಯೋವನ್ನು ಹೇಗಾದರೂ ಮಾಡಿ ಪೂರ್ಣಗೊಳಿಸುತ್ತೇನೆ ಎಂದು ಪಣ ತೊಟ್ಟರು ಬಾಲಣ್ಣ. ಅದರ ಮುಂದಿನ ವಾರವೇ ಸ್ಟುಡಿಯೋಗೆ ಅಸ್ತಿಭಾರವನ್ನು ಹಾಕಿದರು. ಬಾಲಣ್ಣನ ಈ 'ಹುಚ್ಚಾಟ'ದಲ್ಲಿ ಮೊದಮೊದಲು ಯಾವ ನಂಬಿಕೆಯನ್ನೂ ಇಡದಿದ್ದ ಅವರ ಅಭಿಮಾನಿಗಳೆಲ್ಲ ಸಮಾರಂಭಕ್ಕೆ ಬಂದರು. ಸಮಾರಂಭದಲ್ಲಿ ಭಾವುಕತೆಯ ಮಹಾಪೂರ. ಮುಖ್ಯ ಅತಿಥಿಗಳಲ್ಲೊಬ್ಬರಾಗಿದ್ದ ಅಂದಿನ ಬೆಂಗಳೂರಿನ ಮೇಯರ್ ನಾಗಣ್ಣನವರು "ನೀವೆಲ್ಲ ಮೃಷ್ಟಾನ್ನ ಭೋಜನವನ್ನು ಮರೆತು ಬಾಲಕೃಷ್ಣರವರು ಇಲ್ಲಿ ನಿಮಗೆಲ್ಲ ಒಂದು ಗುಡಿಸಲು ಹಾಕಿಕೊಟ್ಟರೂ ಅಂಬಲಿಯುಂಡು ಒಂದೇ ತಿಂಗಳಲ್ಲಿ ಅವರು ಚಿತ್ರ ಮುಗಿಸಲು ಸಹಾಯ ಮಾಡಬೇಕು" ಎಂದಾಗ ಖ್ಯಾತ ತಾರೆ ಪಂಢರಿಬಾಯಿ "ಅಂಬಲಿಯುಣ್ಣುವುದೇ ಅಲ್ಲ, ತಂಡದವರಿಗೆಲ್ಲ ಅಡುಗೆ ಮಾಡಿ ಬಡಿಸಲೂ ನಾವು ಸಿದ್ಧ" ಎಂದು ಘೋಷಿಸಿದರು. ತಂಡದ ಹೆಂಗಳೆಯರೆಲ್ಲ ಮುಸುರೆ ತಿಕ್ಕಲೂ ಹೇಸುವುದಿಲ್ಲವೆಂಬ ಅಭಿವಾನ ನಟಿ ರಮಾದೇವಿಯವರಿಂದ ಬಂತು. ಇನ್ನು ಸರ್ಕಾರವನ್ನು ನಂಬಿ ಪ್ರಯೋಜನವಿಲ್ಲ, ಬೆಂಗಳೂರಿನಲ್ಲಿ ಸ್ಟುಡಿಯೋ ಕಟ್ಟುವುದು ಈಗ ಕನ್ನಡ ಜನತೆಯ ಕೆಲಸ ಎಂದು ಖ್ಯಾತ ಸಾಹಿತಿ, ಕನ್ನಡ ಚಳವಳಿಯ ರೂವಾರಿ ಅ.ನ.ಕೃಷ್ಣರಾಯರು ಕರೆಯಿತ್ತರು.

ಬಾಲಕೃಷ್ಣರವರು ಸ್ಟುಡಿಯೋ ನಿರ್ಮಿಸುವುದು ಸಹಜವಾಗಿಯೇ ಸುಲಭವೇನೂ ಆಗಿರಲಿಲ್ಲ. ಅವರಿಗೆ ಉದ್ಯಮದ ಅನೇಕ ಕಡೆಗಳಿಂದ ಮೂದಲಿಕೆಗಳೂ ಬಂದವು. ಇದರಿಂದ ನೊಂದ ಅವರು ಉದ್ಯಮಕ್ಕೆ ಕೆಲವು ಆಶ್ವಾಸನೆಗಳನ್ನು ಕೊಟ್ಟರು. ಕನ್ನಡ ನಿರ್ಮಾಪಕರಿಗೆ ಕಡಿಮೆ ದರದಲ್ಲಿ ಫ್ಲೋರ್ ಒದಗಿಸಿಕೊಡುವುದು, ಕೆಲವು ಸೆಟ್‌ಗಳನ್ನು ಅವರಿಗೆ ಉಚಿತವಾಗಿಯೇ ಕೊಡುವುದು, ರಾಷ್ಟ್ರಾಧ್ಯಕ್ಷರ ಸ್ವರ್ಣಪದಕ ಗಳಿಸಿದ ಚಿತ್ರಗಳ ನಿರ್ಮಾಪಕರು, ನೂರು ದಿನಗಳು ನಡೆದ ಚಿತ್ರಗಳ ನಿರ್ಮಾಪಕರಿಗೆ ಅವರ ಮುಂದಿನ ಚಿತ್ರಗಳಿಗೆ ಉಚಿತವಾಗಿ ಸ್ಟುಡಿಯೋ ಸೌಲಭ್ಯಗಳನ್ನು ಒದಗಿಸಿಕೊಡುವ ಆಶ್ವಾಸನೆಯೂ ಅವರಿಂದ ಬಂದಿತು. ಆದರೆ ಈ ಯಾವುದನ್ನೂ ನಡೆಸಿಕೊಡಲು ಆಗದಂಥ ಸ್ಥಿತಿ ಬಾಲಣ್ಣನ ಅಭಿಮಾನ್‌ಗೆ ಒದಗಿತು. (ಕೊನೆಗೆ ೧೯೮೦ರ ದಶಕದಲ್ಲಿ ಬಾಲಣ್ಣನವರು ತೀರಿಕೊಂಡಾಗ ಸರ್ಕಾರ ಅವರಿಂದ ಬರಬೇಕಾಗಿದ್ದ ಲಕ್ಷಾಂತರ ರೂಪಾಯಿಗಳ ಬಾಕಿಯನ್ನು ಒಂದೇ ಬಾರಿಗೆ ರದ್ದು ಮಾಡಿ ಸ್ಟುಡಿಯೋ ಜಮೀನಿನ ಗುತ್ತಿಗೆಯನ್ನು ಅವರ ಕುಟುಂಬಕ್ಕೂ ವಿಸ್ತರಿಸಿತು.)

ಬಾಲಣ್ಣನವರಿಗೆ ಸ್ಟುಡಿಯೋಗಾಗಿ ಜಮೀನನ್ನು ನೀಡಿದ ರೀತಿಯಲ್ಲಿಯೇ ಬೆಂಗಳೂರಿನಲ್ಲಿ ಸ್ಟುಡಿಯೋ ಕಟ್ಟಲು ಮುಂದೆ ಬರುವ ಇನ್ನಾರಿಗಾದರೂ ಜಮೀನು ನೀಡಲು ಸಿದ್ಧ ಎಂದು ನಿಜಲಿಂಗಪ್ಪನವರು 'ಸತ್ಯಹರಿಶ್ಚಂದ್ರ' ಚಿತ್ರದ ೧೦೦ನೆಯ ದಿನದ ಸಮಾರಂಭದಲ್ಲಿ ಪ್ರಕಟಿಸಿದರು. ಸ್ಟುಡಿಯೋ ನಿರ್ಮಾಣದಿಂದ ಹಣ ಹೂಡಿದವರಿಗೆ ನಷ್ಟವೇನೂ ಆಗುವುದಿಲ್ಲವೆಂಬ ಅವರ ನಂಬಿಕೆಯನ್ನು ಉದ್ಯಮಿಗಳೊಂದಿಗೂ ಹಂಚಿಕೊಂಡರು. ಆದರೆ ಉದ್ಯಮಿಗಳು ಸಲ್ಲಿಸಿದ ಇತರ ಬೇಡಿಕೆಗಳಿಗೆ ಅವರಿಂದ ಯಾವ ರೀತಿ ಪ್ರತಿಕ್ರಿಯೆಯೂ ದೊರೆಯಲಿಲ್ಲ.

ಸಮಾರಂಭದಲ್ಲಿ ಹಾಜರಿದ್ದ ಹಿರಿಯ ಚಿತ್ರೋದ್ಯಮಿ ವಿಜಯ ಸಂಸ್ಥೆಯ ಬಿ.ನಾಗಿರೆಡ್ಡಿಯವರು ಕನ್ನಡ ಚಿತ್ರೋದ್ಯಮದ ಮೂಲ ಸಮಸ್ಯೆಯೊಂದರ ಕಡೆಗೆ ಮುಖ್ಯಮಂತ್ರಿಗಳ ಗಮನ ಸೆಳೆದರು. ಮೈಸೂರು ರಾಜ್ಯದಲ್ಲಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಸಾಕಷ್ಟು ಚಿತ್ರಮಂದಿರಗಳು ಲಭ್ಯವಾಗದಿರುವುದೇ ಈ ಉದ್ಯಮಕ್ಕೆ ಮಾರಕಪ್ರಾಯವೆಂದು ವಿಶ್ಲೇಷಿಸಿದರು. ಆಂಧ್ರದಲ್ಲಿ ತೆಲುಗು ಚಿತ್ರಗಳಿಗಾಗಿಯೇ ೬೦೦ ಚಿತ್ರಮಂದಿರಗಳು ಸಿಗುವಾಗ ಮೈಸೂರು ರಾಜ್ಯದಲ್ಲಿ ಕನ್ನಡ ಚಿತ್ರಗಳಿಗೆ ಕೇವಲ ೭೦ ಚಿತ್ರಮಂದಿರಗಳಿರುವುದು ನಾಚಿಕೆಗೇಡು ಎಂದು ಕಟುವಾಗಿ ಟೀಕಿಸಿದ ರೆಡ್ಡಿಯವರು ಈ ಕೊರತೆಯನ್ನು ತುಂಬಲು ರಾಜ್ಯ ಸರ್ಕಾರ ಮುಂದಾಗಬೇಕೆಂದು ಕರೆಯಿತ್ತರು. ಆದರೆ ಇದೂ ಅರಣ್ಯರೋದನವಾಗಿಯೇ ಪರಿಣಮಿಸಿತು.

ಕನ್ನಡ ಚಿತ್ರೋದ್ಯಮದ ಹಾಗೂ ರಾಜ್ಯ ಸರ್ಕಾರದ ನಡುವೆ ಇದೇ ರೀತಿ ಜಗ್ಗಾಟ ನಡೆಯುತ್ತ ಹೋದಂತೆ ೧೯೬೬ರ ಏಪ್ರಿಲ್ ತಿಂಗಳಲ್ಲಿ ಪ್ರೀಮಿಯರ್‌ನ ಬಸವರಾಜಯ್ಯನವರು ರಾಜ್ಯ ಸರ್ಕಾರಕ್ಕೆ ಸುದೀರ್ಘ ಪತ್ರವೊಂದನ್ನು ಬರೆದು ರಾಜ್ಯ ಸರ್ಕಾರ ಮನರಂಜನೆ ತೆರಿಗೆಯಿಂದ ಬರುವ ಅರ್ಧ ಭಾಗವನ್ನು ಕನ್ನಡ ಚಿತ್ರಗಳಿಗೆ ಸಹಾಯಧನ ರೂಪದಲ್ಲಿ ಕೊಡಬೇಕೆಂದು ಆಗ್ರಹಿಸಿದರು. ಇದೊಂದು ಲಾಭದಾಯಕ ಉದ್ಯಮವೆಂದು ಬಂಡವಾಳಗಾರರಿಗೆ ಮನದಟ್ಟಾಗುವವರೆಗೆ ಅವರು ಚಿತ್ರ ನಿರ್ಮಾಣಕ್ಕೆ ಮುಂದೆ ಬರುವುದಿಲ್ಲ, ಚಿತ್ರ ನಿರ್ಮಾಣಕ್ಕೆ ಸಬ್ಸಿಡಿ ಕೊಟ್ಟರೆ ಅವರು ಮುಂದಾಗುತ್ತಾರೆ ಎನ್ನುವುದು ಅವರ ತರ್ಕ. ಈ ರೀತಿಯ ನೆರವು ಸಿಕ್ಕಿದರೆ ಕನ್ನಡ ನಾಡಿನಲ್ಲಿ ವರ್ಷಕ್ಕೆ ಕೊನೆಯ ಪಕ್ಷ ೩೦ ಚಿತ್ರಗಳಾದರೂ ನಿರ್ಮಾಣವಾಗಿ ಹೊರ ರಾಜ್ಯಗಳಲ್ಲಿ ಎರಡು ಕೋಟಿ ರೂಪಾಯಿಗಳು ವ್ಯಯವಾಗುವುದು ತಪ್ಪುತ್ತದೆ ಎಂದು ಲೆಕ್ಕಾಚಾರ ಹೇಳಿದ ಬಸವರಾಜಯ್ಯನವರು ಸರ್ಕಾರ ಸ್ಟುಡಿಯೋ ನಿರ್ಮಾಣಕ್ಕೆ ಹಣ ಖರ್ಚು ಮಾಡುವುದರ ಬದಲು ಕನ್ನಡ ಚಿತ್ರಗಳಿಗೆ ಸಬ್ಸಿಡಿ ನೀಡುವುದೇ ಹೆಚ್ಚು ಸೂಕ್ತವೆಂದು ವಾದಿಸಿದರು.

ಅದಕ್ಕೂ ಕೆಲವು ತಿಂಗಳ ಹಿಂದೆ ಫಿಲಂ ಫೆಡರೇಷನ್ ಆಫ್ ಇಂಡಿಯಾದ ಅಂದಿನ ಅಧ್ಯಕ್ಷರಾಗಿದ್ದ ದಕ್ಷಿಣ ಭಾರತ ಚಿತ್ರರಂಗದ ಅಧ್ವರ್ಯು ಎ.ಎಲ್.ಶ್ರೀನಿವಾಸನ್ ಕನ್ನಡ ಚಿತ್ರೋದ್ಯಮಕ್ಕೆ ರಾಜ್ಯ ಸರ್ಕಾರ ಉತ್ತೇಜನ ನೀಡುವ ವಿಷಯದಲ್ಲಿ ಕೆಲವು ಮಂತ್ರಿಗಳು ಈ ಬಗ್ಗೆ ಖಾಸಗಿ ಸಂಭಾಷಣೆಗಳಲ್ಲಿ ಕಾಳಜಿ ತೋರುವುದಕ್ಕೂ ವಾಸ್ತವವಾಗಿ ರಾಜ್ಯ ಸರ್ಕಾರದ ನಿಷ್ಕ್ರಿಯತೆಗೂ ನಡುವಣ ಅಂತರದ ಬಗ್ಗೆ ಕಟುವಾಗಿಯೇ ಟೀಕಿಸಿದ್ದರು. ಆಂಧ್ರ ಸರ್ಕಾರ ತೆಲುಗು ಚಿತ್ರರಂಗದ ಅಭಿವೃದ್ಧಿಯಲ್ಲಿ ತೋರುತ್ತಿದ್ದಂತಹ ಆಸಕ್ತಿಯನ್ನೇ ಮೈಸೂರು ಸರ್ಕಾರವೂ ತೋರಿ ಕೆಲವು ನಿರ್ದಿಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಅಗತ್ಯವನ್ನು ದಕ್ಷಿಣ ಭಾರತ ಚಿತ್ರರಂಗದ ಇನ್ನೂ ಕೆಲವು ಹಿರಿಯರಂತೆಯೇ ಅವರೂ ಒತ್ತಿ ಹೇಳಿದ್ದರು. ಆಯಾ ರಾಜ್ಯ ಸರ್ಕಾರಗಳ ನೆರವಿನಿಂದ ಬೆಂಗಳೂರು ಮತ್ತು ಹೈದರಾಬಾದ್ ನಗರಗಳೆರಡೂ ಇಡೀ ದೇಶದಲ್ಲಿಯೇ ಪ್ರಮುಖ ಚಿತ್ರ ನಿರ್ಮಾಣ ಕೇಂದ್ರಗಳಾಗುವುದು ಖಂಡಿತವೆಂದು ಅವರು ಭವಿಷ್ಯ ನುಡಿದಿದ್ದರು.

ಆದರೆ ರಾಜ್ಯದ ಮುಖ್ಯಮಂತ್ರಿ ನಿಜಲಿಂಗಪ್ಪನವರು ಮಾತ್ರ ಸರ್ಕಾರ ಈ ವಿಷಯದಲ್ಲಿ ದಿವ್ಯ ನಿರ್ಲಕ್ಷ್ಯ ತೋರುತ್ತಿದೆಯೆಂಬ ಟೀಕೆಗೆ ಸೊಪ್ಪು ಹಾಕಲಿಲ್ಲ. ''ನನ್ನ ಅಂತರಂಗ ಹೇಳುವ ಮಟ್ಟಿಗೆ ರಾಜ್ಯ ಸರ್ಕಾರ ಕನ್ನಡ ಚಿತ್ರರಂಗಕ್ಕೆ ಯಾವ ರೀತಿಯಲ್ಲಿಯೂ ಅನಾದರಣೆ ತೋರಿಸಿಲ್ಲ. ಒಂದು ವೇಳೆ ಪರಿಸ್ಥಿತಿ ಹೀಗಿದೆಯೆಂದು ನಮ್ಮ ಹಿರಿಯ ಉದ್ಯಮಿಗಳ ಭಾವನೆಯಾಗಿದ್ದಲ್ಲಿ ನಾವು ಏನು ಮಾಡಬೇಕೆಂಬ ಬಗ್ಗೆ ಅವರು ವಿಧಾಯಕವಾದ ಸಲಹೆಗಳನ್ನು ಕೊಡಲಿ. ನಾವು ಅದರಂತೆ ನಡೆಯಲು ಸಿದ್ಧ'' ಎಂದು ಬಹಿರಂಗವಾಗಿಯೇ ಘೋಷಿಸಿದ್ದರು. ''ನಮಗೆ ಇಂತಹ ಸಲಹೆಗಳಾವುವೂ ಬಂದಿಲ್ಲ. ನಮಗೆ ಬಂದಿರುವುದು ಕೇವಲ ದೂಷಣೆ ಮಾತ್ರ'' ಎಂದೂ ದೂರಿದ್ದರು.

ಕನ್ನಡ ಚಿತ್ರೋದ್ಯಮಿಗಳಿಂದ ಹೆಚ್ಚಿದ ಒತ್ತಾಯದ ಕಾರಣದಿಂದಲೋ ಏನೋ ರಾಜ್ಯ ಸರ್ಕಾರ ಈ ಬಗ್ಗೆ ಸ್ವಲ್ಪ ಸ್ವಲ್ಪವಾಗಿ ಕಾರ್ಯಾರಂಭ ಮಾಡಿತು. ಬೆಂಗಳೂರಿನಲ್ಲಿ ಸ್ಟುಡಿಯೋ ಸ್ಥಾಪಿಸುವವರಿಗೆ ಸರ್ಕಾರ ಬಂಡವಾಳದಲ್ಲಿ ಶೇ.೧೦ರಷ್ಟು ಹೂಡುವುದಾಗಿ ಒಮ್ಮೆ ಸಚಿವರು ಘೋಷಿಸಿದ್ದರು. ಆದರೆ ೧೯೬೫ರ ಅಂತ್ಯದ ವೇಳೆಗೆ ಸರ್ಕಾರ ಇನ್ನಷ್ಟು ಹಣ ಹೂಡಲೂ ಸಿದ್ಧವೆಂಬ ಪ್ರಕಟಣೆಯೂ ಬಂದಿತು. ಸರ್ಕಾರ ತಾನೇ ಸ್ಟುಡಿಯೋ ನಿರ್ಮಾಣಕ್ಕೆ ಕೈ ಹಾಕಬೇಕೆಂಬ ಸಲಹೆಯನ್ನಂತೂ ಅದು ಸಾರಾಸಗಟಾಗಿ ತಿರಸ್ಕರಿಸಿತು. ಇಂತಹ ರಿಯಾಯಿತಿಗೆ ಸರ್ಕಾರ ಸಿದ್ಧವಾಗಿದ್ದರೂ ಸ್ಟುಡಿಯೋ ಸ್ಥಾಪಿಸಲು ಯಾವ ಖಾಸಗಿ ವ್ಯಕ್ತಿಯಾಗಲಿ, ಸಂಸ್ಥೆಯಾಗಲಿ ಮುಂದಾಗದಿದ್ದುದರ ಬಗ್ಗೆ ಅಂದಿನ ಕೈಗಾರಿಕಾ ಮಂತ್ರಿ ಕೆ.ಮಲ್ಲಪ್ಪನವರು ತಮ್ಮ ಖೇದವನ್ನು ವ್ಯಕ್ತಪಡಿಸಿದ್ದರು. ಕೊನೆಗೂ ಫೆಬ್ರವರಿ ೧೯೬೬ರಲ್ಲಿ ಅದುವರೆಗೂ ಕನ್ನಡ ಚಿತ್ರೋದ್ಯಮದ ವಿಷಯದಲ್ಲಿ ನಿಷ್ಕ್ರಿಯವಾಗಿದ್ದ ರಾಜ್ಯ ಸರ್ಕಾರ ತನ್ನ ಸುದೀರ್ಘ ನಿದ್ದೆಯಿಂದ ಎಚ್ಚೆತ್ತುಕೊಂಡು ಈ ಉದ್ಯಮಕ್ಕೆ ನೆರವು ನೀಡಲು ಶಾಸಕಾಂಗದಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಲು ಮುಂದಾಯಿತು. ಸರ್ಕಾರದ ಈ ಚಿಂತನೆಯನ್ನು ಪತ್ರಿಕಾ ಸಂದರ್ಶನವೊಂದರಲ್ಲಿ ಮೊದಲು ಪ್ರಕಟಿಸಿದವರು ಅಂದಿನ ಅರ್ಥಮಂತ್ರಿ ರಾಮಕೃಷ್ಣ ಹೆಗಡೆಯವರು.

ತಡವಾಗಿದ್ದರೂ ಕನ್ನಡ ಚಿತ್ರೋದ್ಯಮದ ಅಭಿವೃದ್ಧಿಗೆ ಸರ್ಕಾರದಿಂದ ಅಗತ್ಯವಾದ ಎಲ್ಲ ನೆರವನ್ನು ಒದಗಿಸಲೇಬೇಕೆಂಬ ತಮ್ಮ ನಿರ್ಧಾರವನ್ನು ಅನುಸರಿಸಲು ಸಿದ್ಧವಾಗಿರುವುದಾಗಿ ಸಚಿವರು ಹೇಳಿದರು.

ಬೆಂಗಳೂರಿನಲ್ಲಿ ಸ್ಟುಡಿಯೋ ನಿರ್ಮಿಸಲು ಸಾಕಷ್ಟು ಹಣ ಒದಗಿಸಿ ಈ ಹಣವನ್ನು ಎರಡು ಕಂತುಗಳಲ್ಲಾದರೂ ಪಾವತಿ ಮಾಡಲು ಸರ್ಕಾರ ನಿರ್ಧರಿಸಿದೆಯೆಂದೂ ಹೆಗಡೆ ತಿಳಿಸಿದರು. ಜೊತೆಗೆ ಆಂಧ್ರ ಸರ್ಕಾರ ಅನುಸರಿಸುತ್ತಿದ್ದ ನೀತಿಯ ಆಧಾರದ ಮೇಲೆ ರಾಜ್ಯದಲ್ಲಿಯೇ ತಯಾರಾದ ಚಿತ್ರಗಳಿಗೆ ಸಬ್ಸಿಡಿ ನೀಡುವ ಯೋಜನೆಯೂ ಸರ್ಕಾರಕ್ಕಿದೆಯೆಂಬ ಇಂಗಿತವನ್ನು ಹೆಗಡೆ ತೋರಿದರು. ಜೊತೆಗೆ ಉತ್ತಮ ಚಿತ್ರಗಳಿಗೆ ಮನರಂಜನೆ ತೆರಿಗೆ ವಿನಾಯಿತಿ ನೀಡುವ ಪ್ರಸ್ತಾವನೆಯೂ ಸರ್ಕಾರದ ಮುಂದೆ ಇದೆಯೆಂದೂ ತಿಳಿಸಿದರು.

ಸರ್ಕಾರ ಚಿತ್ರೋದ್ಯಮಕ್ಕೆ ಯಾವ ರೀತಿಯಲ್ಲಿ ಸಹಾಯ ಮಾಡಬಹುದು ಎಂಬುದನ್ನು ಚರ್ಚಿಸಲು ಶೀಘ್ರದಲ್ಲಿಯೇ ಉದ್ಯಮಿಗಳ, ಉದ್ಯಮದ ಹಿತೈಷಿಗಳ ಸಭೆಯೊಂದನ್ನು ಕರೆಯುವ ಭರವಸೆಯನ್ನು ಹೆಗಡೆ ಇತ್ತರು. ಮುಂದಿನ ವಾರವೇ ವಿಧಾನ ಸಭೆಯಲ್ಲಿ ೧೯೬೬-೬೭ರ ಬಜೆಟ್ ಮಂಡನೆಯ ಸಂದರ್ಭದಲ್ಲಿ ಕನ್ನಡ ಚಿತ್ರರಂಗಕ್ಕೆ ಆರ್ಥಿಕ ನೆರವನ್ನೊದಗಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರ ಮನರಂಜನೆ ತೆರಿಗೆಯ ಮೇಲೆ ಸ್ವಲ್ಪ ಮಟ್ಟಿಗೆ ಅಧಿಭಾರ (ಸರ್‌ಚಾರ್ಜ್) ವಿಧಿಸುವುದಾಗಿಯೂ ಹೆಗಡೆ ಘೋಷಿಸಿದರು. ಒಡನೆಯೇ ಈ ನೀತಿಗೆ ಪೂರಕವಾದ ಮಸೂದೆಯನ್ನು ವಿಧಾನಸಭೆಯ ಮುಂದೆ ಮಂಡಿಸಿದರು. ಒಂದೇ ವಾರದಲ್ಲಿ ಮನರಂಜನೆ ತೆರಿಗೆ ಅಧಿಭಾರ ಮಸೂದೆಗೆ ವಿಧಾನಮಂಡಲದ ಅಂಗೀಕಾರವೂ ಸಿಕ್ಕಿತು. ಆದರೆ ಸಬ್ಸಿಡಿ ಬಗ್ಗೆಯಾಗಲಿ, ತೆರಿಗೆ ವಿನಾಯಿತಿ ಬಗ್ಗೆಯಾಗಲಿ ಯಾವ ನಿರ್ದಿಷ್ಟವಾದ ನೀತಿ ಘೋಷಣೆಗಳೂ ಆಗಲಿಲ್ಲ.

ಈ ಕ್ರಮದಿಂದ ಬರುವ ೨೦ ಲಕ್ಷ ರೂಪಾಯಿಗಳ ಹೆಚ್ಚುವರಿ ಆದಾಯವನ್ನು ಸರ್ಕಾರ ಸಂಪೂರ್ಣವಾಗಿ ಮೈಸೂರು ರಾಜ್ಯದಲ್ಲಿ ಚಲನಚಿತ್ರ ಕೈಗಾರಿಕೆಯ ಸರ್ವತೋಮುಖ ಅಭಿವೃದ್ಧಿಗೆ - ಅಂದರೆ ಹೆಚ್ಚಾಗಿ ಕನ್ನಡ ಚಿತ್ರರಂಗದ ಬೆಳವಣಿಗೆಗೆ - ಮೀಸಲಾಗಿಡುವ ಭರವಸೆಯನ್ನು ಅರ್ಥಸಚಿವರು ರಾಜ್ಯಕ್ಕೆ ನೀಡಿದರು. ಕನ್ನಡ ಚಿತ್ರರಂಗದ ಅಭಿವೃದ್ಧಿಯಲ್ಲಿ ರಾಜ್ಯ ಸರ್ಕಾರ ಹೆಚ್ಚಿನ ಆಸಕ್ತಿ ತಾಳಿಲ್ಲವೆಂಬ ಬಹಳ ದಿನಗಳ ಟೀಕೆ ಬೆಳೆದುಕೊಂಡು ಹೋಗಲು ಸರ್ಕಾರ ಇನ್ನು ಮುಂದೆ ಅವಕಾಶ ಕೊಡುವುದಿಲ್ಲವೆಂದೂ ಅವರು ವಾಗ್ದಾನ ಮಾಡಿದರು.

ಇದಾದ ಕೆಲವೇ ದಿನಗಳಲ್ಲಿ ಬೆಂಗಳೂರಿನಲ್ಲಿ ದೊಡ್ಡ ಪ್ರಮಾಣದ ಸ್ಟುಡಿಯೋವೊಂದರ ನಿರ್ಮಾಣಕ್ಕಾಗಿ ಅನೇಕ ಹಿರಿಯರ ಮತ್ತು ವ್ಯಾಪಾರತಜ್ಞರ ತಂಡವೊಂದರಿಂದ ಜಾಯಿಂಟ್ ಸ್ಟಾಕ್ ಕಂಪೆನಿಯೊಂದರ ನೋಂದಣಿಯಾಯಿತು. ಹೆಗಡೆಯವರು ಬಯಸಿದ್ದು ಇಂತಹ ಕಂಪೆನಿಯನ್ನೆ. ಇದೇ ಬೆಂಗಳೂರಿನಲ್ಲಿ ಕಂಠೀರವ ಸ್ಟುಡಿಯೋಸ್ ನಿರ್ಮಾಣಕ್ಕೆ ನಾಂದಿ. ಈ ಸ್ಟುಡಿಯೋಗಾಗಿ ಹೊಸದಾಗಿ ಸ್ಥಾಪಿತವಾದ ಸಂಸ್ಥೆ ನಗರದ ಹೊರ ವಲಯದಲ್ಲಿ ೨೦ ಎಕರೆ ಜಮೀನನ್ನೂ ಖರೀದಿಸಿತು. ಟಿ.ಎಸ್.ಕರಿಬಸಯ್ಯ ಕಾರ್ಯನಿರ್ವಾಹಕ ನಿರ್ದೇಶಕರಾದ ಈ ಸಂಸ್ಥೆಯ ಅಧ್ಯಕ್ಷರಾಗಿ ರಾಜಕೀಯ ಮುತ್ಸದ್ದಿ ಕೆ.ವಿ.ಶಂಕರೇಗೌಡರ ಹೆಸರು ಪ್ರಸ್ತಾಪಕ್ಕೆ ಬಂತು. ಸಂಸ್ಥೆಯ ಇತರ ಪ್ರಮೋಟರುಗಳು ರತ್ನವರ್ಮ ಹೆಗಡೆ, ಗುಬ್ಬಿ ವೀರಣ್ಣ, ಚಿನ್ನಸ್ವಾಮಿ ನಾಯ್ಡು, ಜಿ.ಕೆ.ಮಲ್ಲಪ್ಪ, ಅಂದಾನಪ್ಪ ದೊಡ್ಡಮೇಟಿ, ರಾಮರಾಜ ಅರಸು, ಟಿ.ವಾಸಣ್ಣ ಮತ್ತು ಬಿ.ಜಯಮ್ಮನವರಂತಹ ಘಟಾನುಘಟಿಗಳು.

ಮನರಂಜನೆ ತೆರಿಗೆಯ ಮೇಲೆ ಅಧಿಭಾರವನ್ನು ಹೊರಿಸಿ ಅದರಿಂದ ಬರುವ ಹಣವನ್ನು ಕನ್ನಡ ಚಿತ್ರೋದ್ಯಮದ ಉದ್ಧಾರಕ್ಕೆ ಬಳಸುವ ನೀತಿಗೆ ಸಾರ್ವತ್ರಿಕ ಸಮ್ಮತಿಯೇನೂ ಸಿಗಲಿಲ್ಲ. ಈ ಪ್ರಸ್ತಾಪಕ್ಕೆ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿತು. ಅದರ ವಿರುದ್ಧ ಸರ್ಕಾರಕ್ಕೆ ಮನವಿ ಪತ್ರವೊಂದನ್ನು ಸಲ್ಲಿಸಲೂ ನಿರ್ಧರಿಸಿತು. ಈ ಅಧಿಭಾರ ಕನ್ನಡ ಚಿತ್ರಪ್ರೇಮಿಗಳು ಹೊರಲಾರದ ಭಾರವೆಂಬುದು ವಾಣಿಜ್ಯ ಮಂಡಳಿಯ ಅಧಿಕೃತ ನಿಲುವಾಯಿತು.

ತೆರಿಗೆಯ ಮೇಲೆ ಹೊರೆ ಹೇರಿ ಉದ್ಯಮಕ್ಕೆ ಉಪಕಾರ ಮಾಡುವ ಈ ಧೋರಣೆಯನ್ನು ಹಿರಿಯ ಉದ್ಯಮಿ ಆರ್.ನಾಗೇಂದ್ರರಾಯರು ಉಗ್ರವಾಗಿ ಪ್ರತಿಭಟಿಸಿದರು. ಇದು ಕನ್ನಡ ಚಿತ್ರೋದ್ಯಮಕ್ಕೆ ಸರ್ಕಾರ ಪರೋಕ್ಷವಾಗಿ ಮಾಡಿದ ಅಪಚಾರವೆಂದು ಟೀಕಿಸಿದ ರಾಯರು ಈ ಬೆಳವಣಿಗೆಯಿಂದ ಕನ್ನಡ ಚಿತ್ರಗಳನ್ನು ನೋಡಲು ಬರುವವರ ಸಂಖ್ಯೆ ಗಮನಾರ್ಹವಾಗಿ ಇಳಿಯುವುದೆಂದೂ ವಾದಿಸಿದರು.

ಮಸೂದೆಯ ಬಗ್ಗೆ ರಾಜ್ಯ ವಿಧಾನ ಪರಿಷತ್ತಿನಲ್ಲಿ ಸ್ವಾರಸ್ಯಕರವಾದ ಚರ್ಚೆ ನಡೆಯಿತು. ಅಧಿಭಾರದಿಂದ ಹೆಚ್ಚಾಗಿ ವಸೂಲಾಗುವುದು ೨೦ ಲಕ್ಷವಲ್ಲ, ೩೨ ಲಕ್ಷ ರೂಪಾಯಿಗಳೆಂಬ ಮಾಹಿತಿಯೂ ಸದನಕ್ಕೆ ಸಿಕ್ಕಿತು. ಮಸೂದೆಯನ್ನು ಮಂಡಿಸುವಾಗ

ಈ ಇಡೀ ಮೊತ್ತವನ್ನು ಚಿತ್ರೋದ್ಯಮದ ಅಭಿವೃದ್ಧಿಗೆ ವಿನಿಯೋಗಿಸುವುದಾಗಿ ಅರ್ಥಮಂತ್ರಿ ಹೆಗಡೆಯವರು ಸ್ಪಷ್ಟವಾಗಿ ಹೇಳಿದ್ದರೆ ಈ ವರಮಾನದ ಒಂದು ಭಾಗ ಮಾತ್ರ ಅದಕ್ಕಾಗಿ ಮೀಸಲಾಗಿಡಲಾಗುವುದೆಂಬ ಉಪ ಸಚಿವ ಹೆಚ್.ಆರ್.ಅಬ್ದುಲ್ ಗಫಾರ್‌ರವರ ಸ್ಪಷ್ಟನೆ ಅನೇಕ ಸದಸ್ಯರಿಗೆ ಆಘಾತವನ್ನು ತಂದಿತು. ಸದನದಲ್ಲಿ ಮಸೂದೆಯ ಬಗ್ಗೆ ವಿಭಿನ್ನ ಅಭಿಪ್ರಾಯಗಳು ವ್ಯಕ್ತವಾದರೂ ಅದು ಅಂಗೀಕೃತವಂತೂ ಆಯಿತು. ಅದಕ್ಕೆ ಮುಂಚೆ ವಿಧಾನಸಭೆ ಮಸೂದೆಗೆ ತನ್ನ ಒಪ್ಪಿಗೆಯನ್ನು ನೀಡಿತ್ತು.

ಮನರಂಜನೆ ತೆರಿಗೆಯ ಮೇಲಿನ ಅಧಿಭಾರದೊಂದಿಗೇ ಸರ್ಕಾರ ಪ್ರಪ್ರಥಮ ಬಾರಿಗೆ ರಾಜ್ಯದಾದ್ಯಂತ ಚಲನಚಿತ್ರ ಮಂದಿರಗಳ ಮೇಲೆ ಪ್ರತಿ ಪ್ರದರ್ಶನಕ್ಕೆ ಇಷ್ಟೆಂಬ ಆಧಾರದ ಮೇಲೆ ಪ್ರದರ್ಶನ ತೆರಿಗೆಯನ್ನು ವಿಧಿಸಿತು. ಆದರೆ ಚಿತ್ರಸಮಾಜಗಳು ಮತ್ತು ಫಿಲಂ ಕ್ಲಬ್‌ಗಳು ಏರ್ಪಡಿಸುವ ಪ್ರದರ್ಶನಗಳಿಗೆ ತೆರಿಗೆ ವಿನಾಯಿತಿಯನ್ನು ಪ್ರಥಮ ಬಾರಿಗೆ ನೀಡಿತು.

ವಿಪರ್ಯಾಸವೆಂದರೆ ಸರ್ಕಾರದ ಕನ್ನಡ ಚಿತ್ರೋದ್ಯಮಕ್ಕೆ ಕೆಲವು ಸವಲತ್ತುಗಳನ್ನು ನೀಡುವ ನಿರ್ಧಾರ ೧೯೬೬-೬೭ರ ಬಜೆಟ್‌ನಲ್ಲಿಯೇ ಪ್ರಕಟವಾದರೂ ಈ ಬಗ್ಗೆ ನಿರ್ದಿಷ್ಟವಾದ ನೀತಿಯ ಘೋಷಣೆಯಾಗಿದ್ದು ಮುಂದಿನ ವರ್ಷದ ಬಜೆಟ್‌ನಲ್ಲಿಯೆ.

ಮೈಸೂರು ರಾಜ್ಯದಲ್ಲಿಯೇ ನಿರ್ಮಾಣವಾದ ಚಿತ್ರಗಳಿಗೆ ೫೦,೦೦೦ ರೂಪಾಯಿಗಳ ಸಹಾಯಧನ ನೀಡುವುದು, ಉತ್ತಮವಾದ ಕನ್ನಡ ಚಿತ್ರಗಳಿಗೆ ವಾರ್ಷಿಕ ಪ್ರಶಸ್ತಿಗಳನ್ನು ಕೊಡುವುದು ಈ ಹೊಸ ನೀತಿಯ ಪ್ರಧಾನ ಅಂಶಗಳು. ಪೂರ್ತಿ ಉದ್ದದ ಚಿತ್ರಗಳಿಗೆ ಸಬ್ಸಿಡಿ ನೀಡುವ ಬಗ್ಗೆ ನಿಯಮಗಳನ್ನು ಪ್ರಕಟಿಸಲು ಇನ್ನಷ್ಟು ತಡವಾಯಿತು. ಆಗಸ್ಟ್ ೧೯೬೭ರಲ್ಲಿ ಪ್ರಕಟವಾದ ಈ ನಿಯಮಗಳ ಪ್ರಕಾರ ಸಬ್ಸಿಡಿಯ ನೀಡಿಕೆ ೩೫ ಎಂ.ಎಂ.ನ ಕನಿಷ್ಠ ಮೂರು ಸಾವಿರ ಮೀಟರುಗಳಿರುವ ಚಿತ್ರಗಳಿಗೆ ಮಾತ್ರ ಸೀಮಿತವಾಯಿತು. ಡಬ್ ಆದ ಅಥವಾ ರೀಮೇಕ್ ಆದ ಚಿತ್ರಗಳಿಗೆ ಸಬ್ಸಿಡಿ ಇಲ್ಲವೆಂಬ ನಿಯಮ ಈ ಘೋಷಣೆಯ ಒಂದು ಹೆಚ್ಚಳ. ಸಬ್ಸಿಡಿಗೆ ಅರ್ಹವಾದ ಚಿತ್ರಗಳು ಮೈಸೂರು ರಾಜ್ಯದಲ್ಲಿಯೇ ಪ್ರೋಸೆಸ್ ಆಗಿರಬೇಕೆಂಬ ನಿಯಮವನ್ನು ಮಾತ್ರ ಒಂದು ವರ್ಷದ ಮಟ್ಟಿಗೆ ಸಡಿಲಿಸಲಾಯಿತು. ಇದಕ್ಕೆ ಕಾರಣ ರಾಜ್ಯದಲ್ಲಿ ತೃಪ್ತಿಕರವಾದ ಸಂಸ್ಕರಣ ಸೌಲಭ್ಯಗಳು ಇಲ್ಲದಿದ್ದುದು.

ಈ ಸಂದರ್ಭದಲ್ಲಿ ಕೆಲವು ಅನಗತ್ಯ ಗೊಂದಲಗಳೂ ಆದವು. ಒಂದು, ಸಬ್ಸಿಡಿ ನೀಡಿಕೆಗೆ ಸಂಬಂಧಪಟ್ಟ ಸರ್ಕಾರಿ ಆಜ್ಞೆ ಇಂಗ್ಲಿಷ್‌ನಲ್ಲಿದ್ದುದರಿಂದ ಅನುವಾದ ಚಿತ್ರಗಳನ್ನು ರೀಮೇಕ್ ಚಿತ್ರಗಳು ಎಂದು ಕರೆಯುವ ಬದಲು ರೀಟೇಕ್ ಚಿತ್ರಗಳೆಂದು ಕರೆಯಲಾಗಿತ್ತು. ಈ ಬಗ್ಗೆ ಸಾಕಷ್ಟು ಜಿಜ್ಞಾಸೆಯೇ ನಡೆಯಿತು. ಇನ್ನೊಂದು ಗೊಂದಲವೆಂದರೆ ಸರ್ಕಾರಿ ಆಜ್ಞೆಯಲ್ಲಿ ಸಬ್ಸಿಡಿಯ ಮೊತ್ತ ೫೦,೦೦೦ ರೂ.ಗಳವರೆಗೆ ಎಂದು ನಮೂದಿಸಲಾಗಿತ್ತು. ಅಂದ ಮೇಲೆ ಕೆಲವು ಚಿತ್ರಗಳಿಗೆ ಅದಕ್ಕಿಂತ ಕಡಿಮೆ ಸಹಾಯಧನ ಸಿಗುವ ಸಂಭವವೂ ಇದೆಯೆ ಎಂಬ ಬಗ್ಗೆ ಸ್ವಲ್ಪ ಕಾಲ ವಾದ ವಿವಾದಗಳೂ ಆದವು. ನಂತರ ಅರ್ಥಮಂತ್ರಿ ಹೆಗಡೆಯವರು ಸಹಾಯಧನದ ಮೊತ್ತ ೫೦,೦೦೦ ರೂಪಾಯಿಗಳಿಗಿಂತ 'ಚಿಕ್ಕಾಸು' ಕೂಡ ಕಡಿಮೆಯಾಗುವುದಿಲ್ಲವೆಂಬ ಸ್ಪಷ್ಟೀಕರಣವನ್ನು ವಿಧಾನಮಂಡಲದಲ್ಲಿಯೇ ಕೊಡಬೇಕಾಯಿತು. ಮೂರನೆಯದಾಗಿ ೧೯೬೭ರ ಏಪ್ರಿಲ್ ೧ರಿಂದ ೧೯೬೮ರ ಮಾರ್ಚ್ ೩೧ರವರೆಗೆ ತಯಾರಾದ ಕನ್ನಡ ಚಿತ್ರಗಳಿಗೆ ವಿವಿಧ ಪ್ರಶಸ್ತಿಗಳನ್ನು ನೀಡಲು ಸರ್ಕಾರ ನ್ಯಾಯಮೂರ್ತಿ ಎಸ್.ಎಸ್.ಮಳೀಮಠ್ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯೊಂದನ್ನು ರಚಿಸಿ, ಅದೇ ಸಮಿತಿ ಅದೇ ಸಾಲಿನಲ್ಲಿ ಸಬ್ಸಿಡಿಗೆ ಅರ್ಹವಾದ ಕನ್ನಡ ಚಿತ್ರಗಳನ್ನೂ ಆರಿಸುವುದೆಂದು ಮಾಡಿದ ಪ್ರಕಟಣೆಗೆ ತೀವ್ರ ವಿರೋಧ ವ್ಯಕ್ತವಾಯಿತು. ಇಂತಹ ಸಮಿತಿಯೊಂದಕ್ಕೆ ಸಬ್ಸಿಡಿಗೆ ಅರ್ಹವೆನಿಸುವ ಚಿತ್ರಗಳನ್ನು ಆರಿಸುವ ಜವಾಬ್ದಾರಿ ನೀಡಿದರೆ ಈ ಯೋಜನೆಗೆ ಗುಣಮಟ್ಟದ ಕಡಿವಾಣ ಹಾಕಿದಂತಾಗುತ್ತದೆಯೆಂಬ ವಾದವನ್ನು ನಂತರ ಸರ್ಕಾರ ಒಪ್ಪಿ ಈ ಜವಾಬ್ದಾರಿಯನ್ನು ಸಮಿತಿಯಿಂದ ಹಿಂತೆಗೆದುಕೊಳ್ಳಬೇಕಾಯಿತು. ಸಬ್ಸಿಡಿಗೂ ಗುಣಮಟ್ಟಕ್ಕೂ ಸಂಬಂಧವಿಲ್ಲವೆಂಬ ಸ್ಪಷ್ಟನೆಯನ್ನು ಹೆಗಡೆಯವರು ಕೊಡಬೇಕಾಯಿತು.

ರಾಜ್ಯ ಸರ್ಕಾರ ನೇಮಿಸಿದ ಮೊಟ್ಟಮೊದಲ ಚಲನಚಿತ್ರ ಪ್ರಶಸ್ತಿ ಸಮಿತಿಯಲ್ಲಿ ಭಾರತೀಯ ಚಿತ್ರರಂಗದ 'ಮೊದಲ ಮಹಿಳೆ' ಯೆನಿಸಿದ್ದ ದೇವಿಕಾರಾಣಿ ರೋರಿಚ್ ಹಾಗೂ ಸಾಹಿತಿ ಶಿವರಾಮ ಕಾರಂತರಿದ್ದದ್ದು ಒಂದು ವಿಶೇಷ. ಮೊದಲನೆಯ ವರ್ಷವೇ ಸಮಿತಿಯು ಅವಗಾಹನೆಗೆ ಬಂದ ಚಿತ್ರಗಳ ಸಂಖ್ಯೆ ಇಪ್ಪತ್ತು(೨೦). ಸರ್ಕಾರ ಚಲನಚಿತ್ರಗಳಿಗೆ ಸಂಬಂಧಿಸಿದ ವಿಷಯಗಳ ಜವಾಬ್ದಾರಿಯನ್ನು ನಿಭಾಯಿಸಲೆಂದೇ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಚಲನಚಿತ್ರ ವಿಭಾಗ (Film Unit) ವನ್ನು ಸ್ಥಾಪಿಸಿದ್ದು ಕೂಡ ಅದೇ ವರ್ಷವೆ.

ರಾಜ್ಯದಲ್ಲಿ ಸುಸಜ್ಜಿತ ಸ್ಟುಡಿಯೋ ಸ್ಥಾಪನೆ, ಉತ್ತಮ ಚಿತ್ರಗಳಿಗೆ ಪ್ರಶಸ್ತಿಗಳ ನೀಡಿಕೆ, ಚಲನಚಿತ್ರ ಶಿಕ್ಷಣ ಸಂಸ್ಥೆಯ ಸ್ಥಾಪನೆ, ಚಿತ್ರೋದ್ಯಮಕ್ಕೆ ಸಹಾಯಧನ ನೀಡಿಕೆಯಂತಹ ವಿಷಯಗಳೆಲ್ಲವೂ ಈ ಚಲನಚಿತ್ರ ವಿಭಾಗದ ವ್ಯಾಪ್ತಿಗೆ ಬಂದವು. ರಾಜ್ಯ ಸರ್ಕಾರ ತನ್ನ ಸ್ವಂತ ಪರಿಶ್ರಮದಿಂದ ನಂದಿ ಬೆಟ್ಟದ ರಸ್ತೆಯಲ್ಲಿ ವಿಶಾಲವಾದ ಪ್ರದೇಶವೊಂದರಲ್ಲಿ ಅತ್ಯಾಧುನಿಕ ಸ್ಟುಡಿಯೋವೊಂದನ್ನು ಸ್ಥಾಪಿಸುವ ಬೃಹತ್ ಯೋಜನೆಯ ಬಗ್ಗೆ ಕೂಡ ಸಚಿವರಿಂದ, ಅಧಿಕಾರಿಗಳಿಂದ ಆಗಾಗ್ಗೆ ಪ್ರಸ್ತಾಪಗಳು ಬರುತ್ತಲೇ ಇದ್ದವು. ಆದರೆ ಈ ಯೋಜನೆ ಕೊನೆಗೂ ಕಲ್ಪನೆಯಲ್ಲಿಯೇ ಉಳಿಯಿತು.

ಸಬ್ಸಿಡಿ ನಿಯಮಗಳು ಪ್ರಕಟವಾದ ಕೆಲವೇ ದಿನಗಳಲ್ಲಿ ವಾರ್ಷಿಕ ಚಲನಚಿತ್ರ ಪ್ರಶಸ್ತಿಗಳ ನಿಯಮಗಳೂ ಪ್ರಕಟವಾದವು. ಇಲ್ಲಿಯೂ ಡಬ್ ಆದ ಚಿತ್ರಗಳಿಗೂ, ಅನುವಾದ ಚಿತ್ರಗಳಿಗೂ, ಇನ್ನೊಂದು ಭಾಷೆಯ ಚಿತ್ರವನ್ನು ಆಧರಿಸಿ ತೆಗೆದ ಚಿತ್ರಗಳಿಗೂ ಪ್ರವೇಶವಿಲ್ಲವೆಂದು ಸ್ಪಷ್ಟಪಡಿಸಲಾಯಿತು.

೧೯೬೮ರಲ್ಲಿ ಪರಿಷ್ಕೃತವಾದ ಸಬ್ಸಿಡಿ ನಿಯಮಗಳ ಪ್ರಕಾರ ಒಂದು ವರ್ಷ ಕಾಲ ಮಾತ್ರ ರಾಜ್ಯದ ಹೊರಗಡೆ ಶಬ್ದಗ್ರಹಣ, ಡೆವಲಪಿಂಗ್, ಪ್ರೋಸೆಸಿಂಗ್, ಪ್ರಿಂಟಿಂಗ್, ಸ್ಪೆಷಲ್ ಎಫೆಕ್ಟ್ಸ್, ರೀ ರಿಕಾರ್ಡಿಂಗ್, ಬ್ಯಾಕ್ ಪ್ರೊಜೆಕ್ಷನ್ ಮುಂತಾದ ವಿಶೇಷ ಸೇವೆಗಳನ್ನು ಪಡೆದ ಚಿತ್ರಗಳಿಗೂ ಸಹಾಯಧನವನ್ನು ನೀಡಬಹುದೆಂದು ಆಜ್ಞೆ ಮಾಡಲಾಯಿತು.

ರಾಜ್ಯದಲ್ಲಿ ಪ್ರಥಮ ಬಾರಿಗೆ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ಸ್ಥಾಪನೆಯಾಗಿದ್ದು ೧೯೬೮ರಲ್ಲಿ. ಆಗ ವಾರ್ತಾ ಸಚಿವರಾಗಿದ್ದ ದೇವರಾಜ ಅರಸು ಅಧ್ಯಕ್ಷತೆಯಲ್ಲಿ ಸ್ಥಾಪಿತವಾದ ಈ ನಿಗಮದ ಕಾರ್ಯ ನಿರ್ವಾಹಕ ನಿರ್ದೇಶಕರಾಗಿ ಚಲನಚಿತ್ರ ವಿಭಾಗದ ವಿಶೇಷಾಧಿಕಾರಿ ಶಾಂತೇಶ ಪಾಟೀಲರು ವ್ಯವಸ್ಥಾಪಕ ನಿರ್ದೇಶಕರಾಗಿ ನೇಮಕವಾದರು. ಪ್ರಥಮ ನಿರ್ದೇಶಕರ ಮಂಡಳಿಗೆ ಭಾರತ ಚಿತ್ರರಂಗದಲ್ಲಿ ಖ್ಯಾತನಾಮರಾದ ವಿ.ಶಾಂತಾರಾಂ ಮತ್ತು ಎಲ್.ವಿ.ಪ್ರಸಾದ್ ಇಬ್ಬರೂ ಸ್ಥಳೀಯ ಚಿತ್ರೋದ್ಯಮದ ಪ್ರತಿನಿಧಿಗಳಾದ ಬಿ.ಸರೋಜಾದೇವಿ, ಕೃಷ್ಣಕಾಂತ್ ದೇಸಾಯಿ, ಎಂ.ವಿ.ಕೃಷ್ಣಸ್ವಾಮಿ ಮತ್ತು ಕೆ.ವೆಂಕಟಸ್ವಾಮಿಯವರೊಂದಿಗೆ ನಾಮ ನಿರ್ದೇಶಿತರಾಗಿದ್ದು ಒಂದು ವಿಶೇಷ.

ಬೆಂಗಳೂರಿನಲ್ಲಿ ಅತ್ಯಾಧುನಿಕ ಸ್ಟುಡಿಯೋ ನಿರ್ಮಾಣ, ರಾಜ್ಯದಲ್ಲಿ ತಯಾರಾಗುವ ಚಿತ್ರಗಳಿಗೆ ಸಹಾಯಧನ ಮತ್ತು ಪ್ರಶಸ್ತಿಗಳನ್ನು ನೀಡುವ ಜವಾಬ್ದಾರಿಯನ್ನು ಈ ನಿಗಮಕ್ಕೆ ಬಿಡಲಾಗಿದೆಯೆಂದು ಪ್ರಕಟಣೆಯಾದರೂ ನಿಗಮ ಕೈಗೊಂಡ ಕೆಲಸಗಳೇ ಬೇರೆ. ಇವಕ್ಕೂ ಮುಂಚೆ ಈ ನಿಗಮ ಚಿತ್ರೋದ್ಯಮಿಗಳಿಗಾಗಿಯೇ ಒಂದು ಬಡಾವಣೆಯನ್ನು ನಿರ್ಮಿಸಬೇಕು, ರಾಜ್ಯದಲ್ಲಿ ಹೊರಾಂಗಣ ಚಿತ್ರಣಕ್ಕೆ ಬರುವ ಹೊರನಾಡಿನ ಚಿತ್ರಸಂಸ್ಥೆಗಳಿಗೆ ನೆರವಾಗಬೇಕು, ರಾಜ್ಯದಲ್ಲಿ ಚಿತ್ರಗಳನ್ನು ತೆಗೆಯಲು ಪ್ರಶಸ್ತವಾಗಿರುವ ಪ್ರದೇಶಗಳ ಬಗ್ಗೆ ಒಂದು ಡಾಕ್ಯುಮೆಂಟರಿ ಚಿತ್ರವನ್ನು ತೆಗೆಯಬೇಕು ಎಂಬೆಲ್ಲ ಯೋಜನೆಗಳೂ ಇದ್ದವು. ಆದರೆ ಈ ಸಂಸ್ಥೆಯ ಮೂಲ ಉದ್ದೇಶಗಳೇನು, ಅದು ಹೊರಬೇಕಾದ ಜವಾಬ್ದಾರಿಗಳೇನು ಎಂಬ ಬಗ್ಗೆ ಗೊಂದಲ ಮುಂದುವರಿದುಕೊಂಡೇ ಬಂದು ಪ್ರಾದೇಶಿಕ ಚಲನಚಿತ್ರೋದ್ಯಮಕ್ಕೆ ಅದರ ಕೊಡುಗೆ ಪ್ರಶ್ನಾರ್ಥಕ ಚಿಹ್ನೆಯಾಗಿಯೇ ಉಳಿಯಿತು.

ನಿಗಮ ರಾಜ್ಯದ ಚಿತ್ರೋದ್ಯಮದ ಅಭಿವೃದ್ಧಿಗಾಗಿ ಅನೇಕ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿ ಚಲನಚಿತ್ರ ನಗರಿಯೊಂದನ್ನು ರೂಪಿಸಬೇಕೆಂಬ ದೃಷ್ಟಿಯಿಂದ ಸರ್ಕಾರ ಆ ಸಂಸ್ಥೆಗೆ ಹೆಸರಘಟ್ಟದ ರಮಣೀಯ ಪ್ರದೇಶದಲ್ಲಿ ೩೪೭ ಎಕರೆ ಜಮೀನನ್ನು ೯೯ ವರ್ಷಗಳ ಗುತ್ತಿಗೆಯ ಮೇಲೆ ನೀಡಿತು. ಆದರೆ ಆ ಪ್ರದೇಶದ ಬೆಳವಣಿಗೆ ಇನ್ನೂ ಕನಸಾಗಿಯೇ ಉಳಿದಿದೆ. ಚಿತ್ರನಗರಿಯಂತೂ ಗಗನಕುಸುಮವೇ ಆಗಿದೆ.

(ವರ್ಷಗಳು ಕಳೆದಂತೆ ಸರ್ಕಾರದ ಸಬ್ಸಿಡಿ ನಿಯಮಗಳಲ್ಲಿಯೂ ಅನೇಕ ಬದಲಾವಣೆಗಳಾಗುತ್ತ ಬಂದು ಸಬ್ಸಿಡಿಯ ಮೊತ್ತ ಕೂಡ ಏರುತ್ತಲೇ ಬಂತು. ಏತನ್ಮಧ್ಯೆ ಸರ್ಕಾರ ಮನರಂಜನೆ ತೆರಿಗೆ ನೀತಿಯಲ್ಲಿಯೂ ಉದಾರವಾದ ಬದಲಾವಣೆಗಳನ್ನು ಮಾಡಿಕೊಂಡು ಮೊದಲು ರಾಜ್ಯದಲ್ಲಿಯೇ ನಿರ್ಮಾಣವಾದ, ರೀಮೇಕ್ ಅಲ್ಲದ ಕನ್ನಡ ಚಿತ್ರಗಳಿಗೆ ಶೇ.೫೦ರಷ್ಟು ತೆರಿಗೆ ವಿನಾಯಿತಿ ನೀಡಿ ನಂತರ ಅವುಗಳಿಗೆ ಮನರಂಜನೆ ತೆರಿಗೆಯನ್ನು ಸಂಪೂರ್ಣವಾಗಿಯೇ ರದ್ದು ಮಾಡಿ ಹೊಸ ವಿಕ್ರಮವನ್ನು ಸ್ಥಾಪಿಸಿತು.)

ನಿರೀಕ್ಷೆಯಂತೆಯೇ ಸರ್ಕಾರ ಸಬ್ಸಿಡಿ ಯೋಜನೆಯನ್ನು ಘೋಷಿಸಿದ ಕೂಡಲೇ ಕನ್ನಡ ಚಿತ್ರೋದ್ಯಮದಲ್ಲಿ ಒಂದು ಹೊಸ ಹುರುಪು ಮತ್ತು ಆಶಾಭಾವನೆ ಮೂಡಿ ಬಂತು. ಆದರೆ ಮದರಾಸಿನಲ್ಲಿ ಭದ್ರವಾಗಿ ತಳವೂರಿದ್ದ ಪ್ರಖ್ಯಾತ ನಿರ್ಮಾಪಕರು ಯಾರೂ ಒಡನೆಯೇ ಮೈಸೂರು ರಾಜ್ಯಕ್ಕೆ ಸ್ಥಳಾಂತರಗೊಳ್ಳುವ ಯಾವ ಸೂಚನೆಯನ್ನೂ ತೋರಲಿಲ್ಲ. ಅವರಲ್ಲೆಲ್ಲ ಕಂಡಿದ್ದು ಕಾದು ನೋಡುವ ಪ್ರವೃತ್ತಿ. ಆದರೂ ರಾಜಕುಮಾರ್ ಪ್ರಕಾರ ಈ ಬೆಳವಣಿಗೆಯ ಬಗ್ಗೆ ಅವರಾರೂ ಲಘುವಾಗಿಯೇನೂ ಪ್ರತಿಕ್ರಿಯಿಸಲಿಲ್ಲ. ಉದ್ಯಮದ ಇನ್ನೊಬ್ಬ ಪ್ರಮುಖರ ಪ್ರಕಾರ ತಮ್ಮ ತಾಯ್ನಾಡಿನ ಬಗ್ಗೆ ಅವರಿಗೆ ಅಂತಹ ಭಾವೋದ್ವೇಗವೇನೂ ಇರಲಿಲ್ಲ. ನಂತರ ಮೈಸೂರು ರಾಜ್ಯಕ್ಕೆ ತಮ್ಮ ಕಾರ್ಯಕ್ಷೇತ್ರವನ್ನು ಬದಲಾಯಿಸಿವಾಗಲೂ ಅವರಿಂದ ಕನ್ನಡ ನಾಡು, ನುಡಿಗಳಿಗೆ ಯಾವುದೇ ದೊಡ್ಡ ಕೊಡುಗೆಯನ್ನು ನೀಡಲು ಈ ಸ್ಥಳಾಂತರದಿಂದ ಅನುಕೂಲವಾಗುತ್ತದೆಯೆಂಬ ಭ್ರಮೆ ಕೂಡ ಅವರಲ್ಲಿ ಇರಲಿಲ್ಲ.

ಮದರಾಸಿನಲ್ಲಿ ಆಗ ಎಲ್ಲ ಭಾಷೆಗಳವರ ಬಗ್ಗೆಯೂ ಸಮಾನವಾದ ಗೌರವವೇ ಇದ್ದುದರಿಂದ, ಹಾಗೂ ಕೆಲವು ಪ್ರತಿಭಾವಂತ ಕನ್ನಡ ಕಲಾವಿದರಿಗೆ ತಮಿಳು, ತೆಲುಗು ಚಿತ್ರರಂಗಗಳು ಅತೀವ ವಿಶ್ವಾಸದಿಂದ ಕೆಂಪು ಕಂಬಳಿಯನ್ನು ಹಾಸಿದ್ದರಿಂದ ಸಬ್ಸಿಡಿ ಯೋಜನೆ ಜಾರಿಗೆ ಬಂದ ಮೇಲೆ ಕ್ರಮೇಣವಾಗಿ ಕನ್ನಡ ಚಿತ್ರೋದ್ಯಮದ ಬುನಾದಿ ಕನ್ನಡ ನಾಡಿಗೆ ಸ್ಥಳಾಂತರಗೊಂಡರೂ ಮದರಾಸಿನ 'ಉಸಿರುಗಟ್ಟುವ' ವಾತಾವರಣದಿಂದ ಉದ್ಯಮಕ್ಕೆ ಮುಕ್ತಿ ದೊರೆತಂತಾಯಿತೆಂದು ಉದ್ಯಮದ ಪ್ರಮುಖರು ಯಾರೂ ಒಪ್ಪುವುದಿಲ್ಲ. ಬದಲಾಗಿ ಎಲ್ಲ ವಿಷಯಗಳಲ್ಲಿಯೂ ಸ್ವಾವಲಂಬಿಯಾಗಿದ್ದ ಮದರಾಸಿನ ಉದ್ಯಮದಿಂದ ದೂರ ಬಂದು ಕನ್ನಡ ನಾಡಿನಲ್ಲಿ ನೆಲೆಸಿದ ಕನ್ನಡ ಚಿತ್ರರಂಗಕ್ಕೆ ಅನೇಕ ಅಗತ್ಯಗಳನ್ನು ಪೂರೈಸಿಕೊಳ್ಳುವುದೇ ದುಸ್ತರವಾಯಿತೆನ್ನುವವರೇ ಹೆಚ್ಚು. ಮೈಸೂರು ರಾಜ್ಯದಲ್ಲಿ ಉದ್ಯಮ ತನ್ನ ಹೊಸ ಅಸ್ತಿತ್ವವನ್ನು ಓನಾಮದಿಂದ ಪ್ರಾರಂಭಿಸಬೇಕಾದ್ದರಿಂದ ಈ ಪರಿಸ್ಥಿತಿ ಅನಿವಾರ್ಯವೂ ಆಗಿತ್ತು. ಆದರೆ ಈ ಸ್ಥಿತ್ಯಂತರವಾದ ನಂತರ ತಮಿಳು ನಾಡಿನ ಬಗ್ಗೆ ದ್ವೇಷದ ಮಾತುಗಳನ್ನಾಡುವುದು ಸಾಧುವಲ್ಲವೆಂದು ಉದ್ಯಮದ ಅನೇಕ ನಾಯಕರು ಒಪ್ಪುತ್ತಾರೆ.

ನುರಿತ ನಟ-ನಿರ್ಮಾಪಕ ಎಸ್.ಶಿವರಾಂ ಈ ವಿಷಯವನ್ನು ಬೇರೊಂದು ಕೋನದಿಂದಲೂ ವಿಶ್ಲೇಷಿಸುತ್ತಾರೆ. ಕನ್ನಡ ಚಿತ್ರರಂಗ ಕನ್ನಡ ನಾಡಿನಲ್ಲಿಯೇ ನೆಲೆಸಿದ ತರುಣದಲ್ಲಿ ಅದಕ್ಕೆ ಯಾವುದೇ ಮೇಲ್ಪಂಕ್ತಿಯೇ ಇಲ್ಲವಾಯಿತೆನ್ನುವ ಅವರು ಉದ್ಯಮ ಮದರಾಸಿನಲ್ಲಿದ್ದಷ್ಟು ಕಾಲವೂ ಕನ್ನಡ ಚಿತ್ರೋದ್ಯಮಿಗಳಿಗೆ ಇತರ ಭಾಷಾ ಚಿತ್ರರಂಗಗಳ ದಿಗ್ಗಜಗಳು ಆದರ್ಶವಾಗಿದ್ದರು. ಅವರೆಲ್ಲರಲ್ಲಿದ್ದ ಅಮೋಘವಾದ ಶಿಸ್ತು ಕನ್ನಡ ನಟ-ನಟಿಯರ, ನಿರ್ಮಾಪಕರ ಹಾಗೂ ತಂತ್ರಜ್ಞರ ಮೇಲೆ ಬಹಳ ಪ್ರಭಾವವನ್ನೇ ಬೀರಿತ್ತು, ಆದರೆ ಉದ್ಯಮ ಕನ್ನಡ ರಾಜ್ಯದಲ್ಲಿ ನೆಲೆಸಿದ ಮೇಲೆ ಅದರ ಶಿಸ್ತು ಗಮನೀಯವಾಗಿ ಕಡಿಮೆಯಾಯಿತು ಎನ್ನುವ ಶಿವರಾಂ ಇಂದಿಗೂ ಕನ್ನಡ ಚಿತ್ರೋದ್ಯಮವನ್ನು ಕಾಡುತ್ತಿರುವ ಕೊರತೆಗಳನ್ನು ವಸ್ತುನಿಷ್ಠವಾಗಿ ಎತ್ತಿ ತೋರಿಸುತ್ತಾರೆ. ಈ ಹಲವು ಹತ್ತು ಕೊರತೆಗಳಿಂದಾಗಿಯೇ ಮದರಾಸಿನಲ್ಲಿ ತಯಾರಾಗುತ್ತಿದ್ದ ಕನ್ನಡ ಚಿತ್ರಗಳಲ್ಲಿ ನಮಗೆ ಕಾಣುತ್ತಿದ್ದ ಕನ್ನಡ ಸಂಸ್ಕೃತಿ ಈ ರಾಜ್ಯದಲ್ಲಿ ತಯಾರಾದ ಚಿತ್ರಗಳಲ್ಲಿ ಪೇಲವವಾಯಿತು ಎಂದೂ ಅವರು ವಿಶ್ಲೇಷಿಸುತ್ತಾರೆ.

ವಾಸ್ತವವಾಗಿ ಇಂತಹ ಬದಲಾವಣೆ ಆಗ ಇಡೀ ಭಾರತದ ಚಿತ್ರರಂಗವನ್ನೇ ಆಕ್ರಮಿಸಿತ್ತು. ಇದನ್ನು '೬೦ನೇ ದಶಕದ ತಳಮಳ' ಎಂದೇ ಕರೆಯುತ್ತಾರೆ. ಅಲ್ಲಿಯವರೆಗೆ ನಡೆದು ಬಂದ ಸ್ಟುಡಿಯೋ ಮಾಲೀಕರೇ ಚಿತ್ರಗಳನ್ನು ನಿರ್ಮಿಸುವ ಸಂಪ್ರದಾಯ ಕ್ಷೀಣಿಸಿ ಸ್ವತಂತ್ರ ನಿರ್ಮಾಪಕರ ಸಂಖ್ಯೆ ಹೆಚ್ಚುತ್ತ ಬಂದಂತೆ ಎಲ್ಲ ಭಾಷೆಗಳ ಚಿತ್ರಗಳೂ ಹಾಡು, ಕುಣಿತಗಳ ರಂಜನೆಯತ್ತ ವಾಲಿದವು. 'ಬೂಟ್ ಪಾಲಿಷ್' ಮತ್ತು ಅದರ ಹಿಂದೆ ಕೆಲವು ಶ್ರೇಷ್ಠ ಚಿತ್ರಗಳನ್ನು ತೆರೆಗಿತ್ತ ರಾಜಕಪೂರ್ ಸಹ ದಿಕ್ಕು ಬದಲಾಯಿಸಿದರು. ಶಾಂತಾರಾಂರವರ ಚಿತ್ರಗಳು ಸೋಲಲಾರಂಭಿಸಿದವು. ಶಮ್ಮಿ ಕಪೂರ್‌ನಂತಹ ಸಮೂಹರಂಜಕ ನಟನ ಪ್ರವೇಶವಾಯಿತು. ಈ ಬದಲಾವಣೆಗಳೆಲ್ಲ ದೇಶದ ಇತರ ಭಾಷಾ ಚಿತ್ರಗಳ ಮೇಲೆಯೂ ತಮ್ಮ ಪ್ರಭಾವವನ್ನು ಬೀರಿದವು.

ಈ ಹಿನ್ನೆಲೆಯಲ್ಲಿ ಮದರಾಸಿನಲ್ಲಿ ಕನ್ನಡ ಚಿತ್ರಗಳ ನಿರ್ಮಾಣ ಕ್ರಮದ ಬಗ್ಗೆ ಕೆಲವು ಅಭಿಮಾನದ ಮಾತುಗಳನ್ನಾಡುವುದು ಆವಶ್ಯಕ. ಆಗ ಕನ್ನಡದಲ್ಲಿ ಹೆಚ್ಚು ಚಿತ್ರಗಳು ತಯಾರಾಗುತ್ತಿರಲಿಲ್ಲವಾದ್ದರಿಂದ ಅಚ್ಚುಕಟ್ಟಾಗಿ ಒಳ್ಳೆಯ ಚಿತ್ರಗಳನ್ನು ಮಾಡುವ ಕಡೆ ವಿಶೇಷವಾದ ಗಮನವಿತ್ತು. ಅಂದಿನ ಕನ್ನಡ ಚಿತ್ರಗಳಲ್ಲಿ ಹೆಚ್ಚಿನ ಪ್ರಾದೇಶಿಕತೆಯಿತ್ತು. ''ಒಬ್ಬ ಕಲಾವಿದನನ್ನು ಮೊದಲಿನಿಂದ ಕೊನೆಯವರೆಗೂ ಕಣ್ಣು ತುಂಬಾ ನೋಡಬಹುದಾಗಿತ್ತು, ಈಗಿನಂತಲ್ಲ,'' ಎಂದು ರಾಜಕುಮಾರ್ ನೆನೆಯುತ್ತಾರೆ. ಒಂದು ಚಿತ್ರಕಥೆಯನ್ನು ರಚಿಸಲು ಚಿತ್ರ ಸಾಹಿತಿಗಳು, ನಿರ್ಮಾಪಕರು, ನಿರ್ದೇಶಕರು ಎಷ್ಟು ದಿನಗಳಾದರೂ ಕೂರುತ್ತಿದ್ದರು. ಎಲ್ಲರಿಗೂ ಮನಸ್ಸಿಗೆ ತೃಪ್ತಿಯಾದ ನಂತರವೇ ನಿರ್ಮಾಣದ ಮುಂದಿನ ಘಟ್ಟಗಳಿಗೆ ಹೋಗುವ ಮಾತು. ಆಗ ನಿರ್ಮಾಪಕನಿಗೂ ತಾನು ಮಾಡುವ ಚಿತ್ರ ಎಂಥದ್ದು, ಅದರಲ್ಲಿ ಏನಿರುತ್ತದೆ ಎನ್ನುವುದು ಪೂರ್ಣವಾಗಿ ಗೊತ್ತಿತ್ತು. ಈಗಿನಂತೆ ನಿರ್ಮಾಪಕ ಕೇವಲ ಹಣ ವಿತರಣೆ ಮಾಡುವ ವ್ಯಕ್ತಿಯಾಗಿರಲಿಲ್ಲ, ಅಂದು ಚಿತ್ರ ನಿರ್ಮಾಣವೆಂದರೆ ಒಂದು ಸಾಮೂಹಿಕ, ಕ್ರಿಯಾತ್ಮಕ ಚಟುವಟಿಕೆಯಾಗಿತ್ತು ಎನ್ನುವುದು ಅಂದು ಉದ್ಯಮದ ಮುಂಚೂಣಿಯಲ್ಲಿದ್ದ ಎಲ್ಲರ ಅಭಿಪ್ರಾಯ.

ಬಿ.ಆರ್.ಪಂತುಲು, ಬಿ.ಎಸ್.ರಂಗಾ, ಆರ್.ನಾಗೇಂದ್ರರಾಯರಂತಹ ಅಧ್ವರ್ಯುಗಳು ತಮ್ಮದೇ ಆದ ಸಂಸ್ಥಾನಗಳನ್ನು ಕಟ್ಟಿಕೊಂಡು ತಮ್ಮ ನಿಯತ್ತು ಮತ್ತು ಸಾಹಸಪ್ರಿಯತೆಗಳಿಂದ ಕನ್ನಡ ಚಿತ್ರರಂಗದಲ್ಲಿ ಕೆಲವು ಹೊಸ ದಾಖಲೆಗಳನ್ನು ನಿರ್ಮಿಸಿದ್ದು ಅಂತಹ ಸೃಜನಶೀಲ ವಾತಾವರಣದಲ್ಲಿಯೇ. ಅವರು ಆರ್ಥಿಕ ಒತ್ತಡಗಳಿಂದಾಗಿ ಎಷ್ಟೋ ಜವಾಬ್ದಾರಿಗಳನ್ನು ತಾವೇ ಹೊತ್ತುಕೊಳ್ಳುತ್ತಿದ್ದರೂ ಆ ಜವಾಬ್ದಾರಿಗಳಿಗೆ ಹೆಚ್ಚಿನ ಅನ್ಯಾಯವಾಗದಂತೆ ನೋಡಿಕೊಂಡಿದ್ದು ಕೂಡ ಅವರ ಔದ್ಯಮಿಕ ಮತ್ತು ವೈಯಕ್ತಿಕ ಪರಿಪೂರ್ಣತೆಗೆ ಪೂರಕವಾಯಿತು.

ಮೈಸೂರು ರಾಜ್ಯ ಸರ್ಕಾರ ತನ್ನ ಅನೇಕ ಯೋಜನೆಗಳ ಮೂಲಕ ಕನ್ನಡ ಚಿತ್ರೋದ್ಯಮದ ಬೇರುಗಳನ್ನು ಕನ್ನಡ ರಾಜ್ಯದ ಕಡೆಗೆ ಎಳೆದುಕೊಂಡಿದ್ದು ಪ್ರಾಯಶಃ ಕನ್ನಡವನ್ನೇ ನಂಬಿ ಕುಳಿತಿದ್ದ ಕಲಾವಿದರಿಗೆ ವರದಾನವಾಯಿತು. ಅವರಲ್ಲಿ ಬಹುಪಾಲು ಜನಕ್ಕೆ ಅಂದಿನ ದಿನಗಳಲ್ಲಿ ಕೇವಲ ಅಹನ್ಯಹನಿ ಕಾಲಕ್ಷೇಪ. ಕೈಗೆ ದಕ್ಕಿದ್ದರಲ್ಲೇ ಅವರು ಅಲ್ಪ ತೃಪ್ತಿಯನ್ನು ಕಂಡುಕೊಂಡರೆಂಬ ಅಂಶ ಬೇರೆ. ಒಂದು ಚಿಕ್ಕ ಷೆಡ್ಡು, ಒಂದೆರಡು ಹಗ್ಗದ ಮಂಚಗಳೇ ಪೀಠೋಪಕರಣಗಳೆನಿಸಿದ್ದ 'ಗುಗ್ಗು ಮಹಲ್' ೧೯೫೦-೬೦, ೬೦-೭೦ರ ದಶಕಗಳಲ್ಲಿ ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಲೀನವಾಗಿ ಹೋದ ಒಂದು ಮಧುರ ನೆನಪು. ರಾಜಕುಮಾರ್‌ರನ್ನು ಮೊದಲುಗೊಂಡು ಅನೇಕ ಕನ್ನಡ ನಟನಟಿಯರು ಚಿತ್ರಣವಿಲ್ಲದಿದ್ದಾಗ ಕಾಲಕ್ಷೇಪ ಮಾಡುತ್ತಿದ್ದುದು ವಿಡಂಬನಾತ್ಮಕವಾಗಿ ಕರೆಸಿಕೊಂಡಿದ್ದ ಈ 'ಮಹಲ್'ನಲ್ಲಿಯೇ. ಈ 'ಮಹಲ್'ನ ಒಡೆಯ 'ಗುಗ್ಗು' ಶ್ರೀಮಂತರೇನೂ ಅಲ್ಲ. ಆದರೆ ಇತರರ ಕಷ್ಟ-ಕಾರ್ಪಣ್ಯಗಳನ್ನು ಕಂಡರೆ ಅವರ ಎದೆ ಮಿಡಿಯುತ್ತಿತ್ತು. ಅನೇಕ ಚಿತ್ರಗಳಲ್ಲಿ ಸಣ್ಣ-ಪುಟ್ಟ ಹಾಸ್ಯ ಪಾತ್ರಗಳನ್ನು ನಿರ್ವಹಿಸಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದ 'ಗುಗ್ಗು' (ಅಶ್ವತ್ಥನಾರಾಯಣ ಶೆಟ್ಟಿ) ತಮ್ಮ ಪುಡಿಕಾಸಿನ ಸಂಪಾದನೆಯನ್ನೇ ಇತರ ಸಂತ್ರಸ್ತರೊಂದಿಗೆ ಹಂಚಿಕೊಳ್ಳುತ್ತಿದ್ದುದೂ ಉಂಟು. 'ಗುಗ್ಗು' ಎಲ್ಲರ ಸ್ನೇಹಿತ, ವೇದಾಂತಿ ಹಾಗೂ ಮಾರ್ಗದರ್ಶಕ. ಈ ಕಲಾವಿದರೆಲ್ಲ ತಮ್ಮ ಕನಸುಗಳನ್ನು, ಆಸೆ-ಆಕಾಂಕ್ಷೆಗಳನ್ನು, ನಿರಾಸೆಗಳನ್ನು ನಿರಾಳವಾಗಿ ಹಂಚಿಕೊಳ್ಳುತ್ತಿದ್ದುದು ಈ 'ಮಹಲ್'ನಲ್ಲಿಯೆ.

ಆಗ ಮದರಾಸಿನಲ್ಲಿ ಕನ್ನಡ ಕಲಾವಿದರು ವಾಸಿಸುತ್ತಿದ್ದ ಇನ್ನೂ ಎರಡು ಮೂರು ವಠಾರಗಳಿದ್ದವು. ತಮ್ಮ ಸ್ವಂತ ಮನೆಗಳನ್ನು ಹೊಂದಿದ್ದ ಕಲಾವಿದರು ಬೆರಳೆಣಿಸುವಷ್ಟೂ ಇರಲಿಲ್ಲ. ಆಗ ಅವರಿಗೆಲ್ಲ ಸಿಕ್ಕಿದ್ದೇ ಸೀರುಂಡೆ. ಇನ್ನೂ ಹೆಚ್ಚಿನ ವಿಷಾದವೆಂದರೆ ಈ ವಠಾರಗಳಲ್ಲಿಯೂ ಜೀವನ ನಡೆಸಲು ಅಸಮರ್ಥರಾಗಿದ್ದ ಕೆಲವು ಕಲಾವಿದರೂ ಇದ್ದದ್ದು. ತನ್ನ ಸೀಮಿತ ಮಾರುಕಟ್ಟೆಯಿಂದಾಗಿ ವಿದೇಶಿ ವಿನಿಮಯ ಗಳಿಸಲಾಗದೆ ತನಗೆ ಸಾಕಷ್ಟು ಕಚ್ಚಾ ಫಿಲಂ ಅಗತ್ಯವನ್ನು ಪೂರೈಸಲಾಗದ ಕನ್ನಡ ಚಿತ್ರರಂಗದಲ್ಲಿ ಹೆಚ್ಚು ಚಿತ್ರಗಳ ನಿರ್ಮಾಣ ಸಾಧ್ಯವಾಗದಿದ್ದುದು ಬೇರೆ ಈ ಬಡ ಕಲಾವಿದರ ಬವಣೆಗಳನ್ನು ಇನ್ನಷ್ಟು ಹೆಚ್ಚಿಸಿತ್ತು.

ತಮ್ಮ ಹೆಂಗಸರು ಮಕ್ಕಳನ್ನು ಬೆಂಗಳೂರು, ಮೈಸೂರುಗಳಲ್ಲಿಯೇ ಬಿಟ್ಟು ಮದರಾಸಿನಲ್ಲಿ ಇಂತಹ ಬಡತನದ ಬಾಳನ್ನು ಅನುಭವಿಸುತ್ತಿದ್ದ ಕಲಾವಿದರಿಗೆ ಕನ್ನಡ ನಾಡಿನಲ್ಲಿ ಚಿತ್ರೋದ್ಯಮ ಕ್ರಮೇಣ ಬೇರೂರಲು ಸಾಧ್ಯವಾಗಿದ್ದು ಒಂದು ವರವಾಗಿ ಪರಿಣಮಿಸಿತು. ೧೯೬೦ರ ದಶಕ ಮುಗಿಯುವ ವೇಳೆಗೆ ಮೈಸೂರು ರಾಜ್ಯದಲ್ಲಾದ ಕೆಲವು ಉಪಯುಕ್ತ ಬೆಳವಣಿಗೆಗಳಿಂದಾಗಿ ಕನ್ನಡ ಚಿತ್ರಗಳ ನಿರ್ಮಾಣ ಇಲ್ಲಿಯೇ ಹೆಚ್ಚಿ ೭೦ರ ದಶಕ ಪ್ರಾರಂಭವಾಗುವ ವೇಳೆಗೆ ಪರಿಸ್ಥಿತಿ ಗಮನೀಯವಾಗಿ ಸುಧಾರಿಸಿತು.

ರಾಜ್ಯ ಸರ್ಕಾರ ಜಾರಿಗೆ ತಂದ ಸಬ್ಸಿಡಿ ನೀತಿ ಕನ್ನಡ ಚಿತ್ರ ನಿರ್ಮಾಣದ ಮೇಲೆ ಸಾಕಷ್ಟು ತೀವ್ರ ಪರಿಣಾಮವನ್ನೇ ಬೀರಿತೆಂಬುದಕ್ಕೆ ಅವುಗಳ ಸಂಖ್ಯೆ ೧೯೬೭ರಿಂದಲೇ ಕಣ್ಣಿಗೆ ಕಟ್ಟುವಂತೆ ಏರಿದ್ದೇ ಸಾಕ್ಷಿ. ೧೯೬೬ರಲ್ಲಿ ೨೦ ಕನ್ನಡ ಚಿತ್ರಗಳು ಬಿಡುಗಡೆಯಾಗಿದ್ದರೆ ೧೯೬೭ರಲ್ಲಿ ಈ ಸಂಖ್ಯೆ ೨೬ಕ್ಕೇರಿತು. ಅವುಗಳಲ್ಲಿ ೧೨ ಚಿತ್ರಗಳು ಮೈಸೂರಿನ ಪ್ರೀಮಿಯರ್ ಸ್ಟುಡಿಯೋವಲ್ಲಿಯೇ ನಿರ್ಮಾಣವಾಗಿದ್ದು ಗಮನಾರ್ಹ. ೧೯೬೮ರಲ್ಲಿ ತಯಾರಾದ ಕನ್ನಡ ಚಿತ್ರಗಳ ಸಂಖ್ಯೆ ೩೩ಕ್ಕೇರಿತು. ಮುಂದಿನ ವರ್ಷ ೩೭ ಚಿತ್ರಗಳು ತೆರೆ ಕಂಡವು. ಅವುಗಳಲ್ಲಿ ಮೈಸೂರು, ಬೆಂಗಳೂರುಗಳಲ್ಲಿ ತಯಾರಾದವೇ ಬಹುಪಾಲು ಚಿತ್ರಗಳು.

ಈ ಅವಧಿಯಲ್ಲಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ವೀರೇಂದ್ರ ಪಾಟೀಲ್, ಅರ್ಥಸಚಿವರಾಗಿದ್ದ ರಾಮಕೃಷ್ಣ ಹೆಗಡೆ ಮತ್ತು ವಾರ್ತಾಮಂತ್ರಿಗಳಾಗಿದ್ದ ಎಂ.ರಾಜಶೇಖರಮೂರ್ತಿ ಅಂದಿನ ಆಡಳಿತ ಪಕ್ಷದ ಮೂರು ಆಧಾರ ಸ್ತಂಭಗಳು. ಅವರಿಗೆಲ್ಲ ಚಲನಚಿತ್ರ ಮಾಧ್ಯಮ ಮತ್ತು ಚಿತ್ರೋದ್ಯಮದಲ್ಲಿ ವಿಶೇಷವಾದ ಆಸಕ್ತಿಯಿದ್ದುದರಿಂದ ಅವರ ಮೇಲ್ವಿಚಾರಣೆಯಲ್ಲಿ ಕನ್ನಡ ಚಿತ್ರರಂಗದ ಶ್ರೇಯಸ್ಸು ತುಂಬಾ ಸುಲಭವೆಂಬ ವಾತಾವರಣವೂ ನಿರ್ಮಾಣವಾಯಿತು.

ಅದೇ ಸಮಯದಲ್ಲಿ ರಾಜ್ಯದಲ್ಲಿ ಸ್ಟುಡಿಯೋ ನಿರ್ಮಾಣದತ್ತ ಕೂಡ ಅನೇಕ ಉದ್ಯಮಿಗಳ ಕಣ್ಣು ಬಿದ್ದಿದ್ದು ಸಹಜವೆ. ಮೈಸೂರು ಪ್ರೀಮಿಯರ್ ಸ್ಟುಡಿಯೋಸ್ ಬಸವರಾಜಯ್ಯನವರಂತೂ ಕನ್ನಡ ಚಿತ್ರೋದ್ಯಮದಲ್ಲಿ ಮೂಡಿದ ಹೊಸ ಚೈತನ್ಯದಿಂದ ಉತ್ತೇಜಿತರಾಗಿ ತಮ್ಮ ಸ್ಟುಡಿಯೋದ ವಿಸ್ತರಣೆಗೆ ಭಾರಿ ಯೋಜನೆಯನ್ನೇ ಹಾಕಿಕೊಂಡರು. ಒಟ್ಟು ಮೂವತ್ತು ಚಿತ್ರಗಳ ನಿರ್ಮಾಣಕ್ಕೆ ಕಾರಣವಾಗಿ ಕೆಲವು ವರ್ಷಗಳು ಕನ್ನಡ ನಾಡಿನಲ್ಲಿ ಚಿತ್ರೋದ್ಯಮದ ಬೆಳವಣಿಗೆಗೆ ಪ್ರತೀಕವೆನಿಸಿದ್ದ ನವಜ್ಯೋತಿ ಸ್ಟುಡಿಯೋ ತೀವ್ರವಾದ ಆರ್ಥಿಕ ಸಂಕಟಕ್ಕೆ ಸಿಲುಕಿ ೧೯೬೩ರಲ್ಲಿಯೇ ಮುಚ್ಚಿ ಹೋಗಿದ್ದರಿಂದ ಇಡೀ ಮೈಸೂರು ನಗರದಲ್ಲಿ ಪ್ರೀಮಿಯರ್ ಏಕೈಕ ಸ್ಟುಡಿಯೋ ಆಯಿತು. ೧೯೬೭ರ ವೇಳೆಗಾಗಲೇ ಐದು ಫ್ಲೋರ್‌ಗಳೊಂದಿಗೆ ಸುಸಜ್ಜಿತವಾದ ಈ ಸ್ಟುಡಿಯೋ ಬಸವರಾಜಯ್ಯನವರ ದೂರದರ್ಶಿತ್ವದಿಂದಾಗಿ ಡೆವಲಪಿಂಗ್, ಪ್ರಿಂಟಿಂಗ್ ಮತ್ತು ಎಡಿಟಿಂಗ್ ಸೌಲಭ್ಯಗಳನ್ನೂ ನಿರ್ಮಾಪಕರಿಗೆ ನೀಡಿತು. ಜೊತೆಗೆ ಬಸವರಾಜಯ್ಯನವರು ಎಷ್ಟೋ ನಿರ್ಮಾಪಕರ ಆರ್ಥಿಕ ಸಮಸ್ಯೆಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸಿದ್ದೂ ಕೂಡ ಪ್ರೀಮಿಯರ್‌ನ ಉಪಯುಕ್ತತೆಯನ್ನು ಹೆಚ್ಚಿಸಿತು.

ಇತ್ತ ಬೆಂಗಳೂರಿನಲ್ಲಿ ನಟ ಬಾಲಕೃಷ್ಣ ತಮ್ಮ ಅಭಿಮಾನ್ ಸ್ಟುಡಿಯೋವನ್ನು ನಿರ್ಮಿಸಲು ಶತಪ್ರಯತ್ನ ಪಟ್ಟು ಅಷ್ಟೋ ಇಷ್ಟೋ ಕೂಡಿಸಿದ ಹಣದ ಸಹಾಯದಿಂದ ೧೯೬೮ರ ಅಕ್ಟೋಬರ್ ತಿಂಗಳಲ್ಲಿ ಸ್ಟುಡಿಯೋವನ್ನು ಭಾಗಶಃ ಪ್ರಾರಂಭಿಸುವುದರಲ್ಲಿ ಯಶಸ್ವಿಯಾದರು. ಆ ವೇಳೆಗೆ ನಟ ರಾಜಕುಮಾರ್‌ರಿಗೂ, ಪ್ರೀಮಿಯರ್‌ನ ಬಸವರಾಜಯ್ಯನವರಿಗೂ ನಡುವೆ ವಿರಸ ಹುಟ್ಟಿಕೊಂಡಿದ್ದರಿಂದ ಬೆಂಗಳೂರಿನ ಅಭಿಮಾನ್ ಸ್ಟುಡಿಯೋ ಇನ್ನೂ ಅಪೂರ್ಣವಾಗಿದ್ದರೂ ಅಲ್ಲಿರುವ ಸೌಲಭ್ಯಗಳನ್ನೇ ಉಪಯೋಗಿಸಿಕೊಂಡು ತಮ್ಮ 'ಮಾರ್ಗದರ್ಶಿ' ಚಿತ್ರದ ಚಿತ್ರೀಕರಣವನ್ನು ರಾಜಕುಮಾರ್ ಪ್ರಧಾನ ಪಾತ್ರಾಭಿನಯದಲ್ಲಿ ಅಲ್ಲಿಯೇ ನಡೆಸಲು ಶ್ರೀಕಾಂತ್ ಮತ್ತು ಶ್ರೀಕಾಂತ್ ಸಂಸ್ಥೆಯವರು ನಿರ್ಧರಿಸಿದರು. ಬಾಲಣ್ಣ ಇದನ್ನು ಕೇವಲ ಪ್ರಯೋಗಾತ್ಮಕ ಚಿತ್ರಣವೆಂದು ಕರೆದು ಅದೇ ಡಿಸೆಂಬರ್ ಕೊನೆಯೊಳಗೆ ಅಭಿಮಾನ್ ಸುಸಜ್ಜಿತ ಸ್ಟುಡಿಯೋ ಆಗಿ ಬೆಳೆಸುವ ಆಶ್ವಾಸನೆ ನೀಡಿದರು. ಆದರೆ ಅಂತಹ ಪರಿಪೂರ್ಣ ಸ್ಟುಡಿಯೋ ಆಗುವ ಭಾಗ್ಯ ಅಭಿಮಾನ್‌ಗೆ ಬರಲೇ ಇಲ್ಲ. ಆದರೂ ಅದು ಇನ್ನೂ ಜೀವಂತವಾಗಿದೆ ಎನ್ನುವುದೊಂದೇ ಸಮಾಧಾನ.

ಮದರಾಸಿನಲ್ಲಿಯೇ ಬಹಳ ವರ್ಷಗಳ ವಾಸ್ತವ್ಯದ ನಂತರ ಬೆಂಗಳೂರು, ಮೈಸೂರುಗಳಲ್ಲಿಯೂ ಅಭಿನಯಿಸಲು ಪ್ರಾರಂಭಿಸಿದ್ದ ರಾಜಕುಮಾರ್ ಮತ್ತು ಪ್ರೀಮಿಯರ್ ಸ್ಟುಡಿಯೋಸ್ ಮಾಲೀಕ ಬಸವರಾಜಯ್ಯನವರ ನಡುವೆ ವಿರಸ ಆರಂಭವಾಗಿದ್ದು ಮೇಲ್ನೋಟಕ್ಕೆ ತೀರಾ ಕ್ಷುಲ್ಲಕವೆನಿಸುವ ಕಾರಣದಿಂದಾಗಿ. ರಾಜಕುಮಾರ್ ಅಭಿನಯಿಸುತ್ತಿದ್ದ ಚಿತ್ರವೊಂದರ ಚಿತ್ರಣವನ್ನು ನೋಡಲು ದೊಡ್ಡ ಸಂಖ್ಯೆಯಲ್ಲಿ ಅವರ ಅಭಿಮಾನಿಗಳು ಧಾವಿಸಿದಾಗ ಸ್ಟುಡಿಯೋದಲ್ಲಿ ಶಿಸ್ತಿನ ಕಾರ್ಯ ಚಟುವಟಿಕೆಗಳಿಗೆ ಭಂಗ ಬರುವುದೆಂಬ ತಕರಾರನ್ನೆತ್ತಿ ಬಸವರಾಜಯ್ಯ ಅಭಿಮಾನಿಗಳು ಸೆಟ್‌ನೊಳಗೆ ಹೋಗಲು ಅಪ್ಪಣೆಯನ್ನು ನಿರಾಕರಿಸಿದರು. ಸೆಟ್ ಮೇಲೆ ಹೊರಗಿನವರನ್ನು ಬಿಡಬಹುದೋ ಇಲ್ಲವೋ ಎಂಬ ನಿರ್ಧಾರವನ್ನು ಮಾಡಬೇಕಾದವರು ಚಿತ್ರದ ನಿರ್ಮಾಪಕರೇ ಹೊರತು ಸ್ಟುಡಿಯೋ ಮಾಲೀಕರಲ್ಲವೆಂಬ ನಿಲುವನ್ನು ತಾಳಿದ ರಾಜಕುಮಾರ್‌ರಿಗೆ ಬಸವರಾಜಯ್ಯನವರ ಬಗ್ಗೆ ಇನ್ನೂ ಒಂದು ತೀವ್ರ ಅಸಮಾಧಾನವಿತ್ತು. ಪ್ರೀಮಿಯರ್ ಸ್ಟುಡಿಯೋದ ಒಳಗಿದ್ದ ಫ್ಲೋರ್‌ಗಳವರೆಗೆ ಯಾವುದೇ ವಾಹನ ಹೋಗುವುದನ್ನು ಬಸವರಾಜಯ್ಯ ನಿಷೇಧಿಸಿದ್ದರು. ಆದರೆ ಸ್ಟುಡಿಯೋದ ಮುಂದಿನ ತಂಗುದಾಣದಿಂದ ಫ್ಲೋರುಗಳಿಗೆ ನಡೆದು ಹೋಗಲು ಸ್ವಲ್ಪ ದೂರವಿದ್ದುದರಿಂದ ತಮ್ಮ ಕಾರನ್ನು ಫ್ಲೋರ್‌ವರೆಗೂ ಕರೆದೊಯ್ಯಲು ಅನುಮತಿ ಕೊಡಬೇಕೆಂದು ರಾಜಕುಮಾರ್ ಆಗ್ರಹ ಪಡಿಸಿದಾಗ ಬಸವರಾಜಯ್ಯ ಅದನ್ನು ನಿರಾಕರಿಸಿದರು. ಇದು ಕನ್ನಡ ಕಲಾವಿದರಿಗೆಲ್ಲ ಬಸವರಾಜಯ್ಯ ತೋರಿದ ಅನಾದರವೆಂದು ವಿಶ್ಲೇಷಿಸಿದ ರಾಜಕುಮಾರ್ ಇನ್ನು ಮುಂದೆ ತಾವು ಪ್ರೀಮಿಯರ್‌ಗೆ ಕಾಲಿಡುವುದಿಲ್ಲವೆಂದು ಪಣ ತೊಟ್ಟರು. ಈ ವಿರಸ ಅನೇಕ ತಿಂಗಳುಗಳೇ ಮುಂದುವರಿಯಿತು.

ಆ ವೇಳೆಗಾಗಲೇ ೧೯೬೩ರಲ್ಲಿ ಡಾ।ರಾಮದಾಸ್ ಎಂಬ ಗಣಿ ಉದ್ಯಮಿಯೊಬ್ಬರ ಪ್ರಯತ್ನದಿಂದಾಗಿ ಇಂದಿನ ಕೋರಮಂಗಲ ಪ್ರದೇಶದಲ್ಲಿ ಸ್ಥಾಪಿತವಾಗಿದ್ದ ಓಂಕಾರ್ ಸ್ಟುಡಿಯೋ ಅಸ್ತಿತ್ವಕ್ಕೆ ಬಂದ ಭರಾಟೆಯ ನಡುವೆಯೇ ನಂದಿಹೋಗಿತ್ತು. ಆ ಸ್ಟುಡಿಯೋದಲ್ಲಿ ಸಂಪೂರ್ಣವಾಗಿ ನಿರ್ಮಾಣವಾದ ಚಿತ್ರ 'ಜಾಣರ ಜಾಣ' ಮತ್ತು 'ಸೇಡಿನ ಕಿಡಿ'. ತೆಲುಗಿನ ಸತ್ಯಂ ನಿರ್ದೇಶಿಸಿದ ಈ ಚಿತ್ರ ಕೆಲವು ಕಾರಣಗಳಿಂದಾಗಿ ಒಂದು ಉಲ್ಲೇಖನೀಯ ಚಿತ್ರವೆನಿಸಿತು. ಓಂಕಾರ್‌ನಲ್ಲಿ ರಾಜ್ಯದ ಪ್ರಮುಖ ರಾಜಕಾರಣಿ ಎಸ್.ಬಂಗಾರಪ್ಪನವರು ನಾಯಕ ನಟರಾಗಿ ಅಭಿನಯಿಸಬೇಕಾಗಿದ್ದ ಚಿತ್ರವೊಂದನ್ನು ಮೊದಲುಗೊಂಡು ಇನ್ನೂ ಒಂದೆರಡು ಚಿತ್ರಗಳ ಮುಹೂರ್ತಗಳು ನಡೆದುವಾದರೂ ಆ ಯಾವ ಚಿತ್ರಗಳೂ ತಯಾರಾಗಲಿಲ್ಲ. ಗೀತಪ್ರಿಯ ನಿರ್ದೇಶನದ ಪ್ರಮುಖ ಚಿತ್ರ 'ಮಣ್ಣಿನ ಮಗ' ಈ ಸ್ಟುಡಿಯೋದಲ್ಲಿ ಭಾಗಶಃ ಚಿತ್ರಣವಾದದ್ದು ಒಂದು ವಿಶೇಷ.

ಕನ್ನಡ ಚಿತ್ರೋದ್ಯಮಿಗಳಿಗೆ ಅಂದಿನ ಮುಖ್ಯಮಂತ್ರಿ ನಿಜಲಿಂಗಪ್ಪನವರು ಪದೇ ಪದೇ ಹಾಕುತ್ತಿದ್ದ ಸವಾಲುಗಳಿಂದ ಪ್ರಚೋದಿತವಾಗಿದ್ದ ಕಂಠೀರವ ಸ್ಟುಡಿಯೋ ೧೯೬೬ರಿಂದಲೇ ಮೈ ಕೊಡವಿಕೊಂಡು ಕಾರ್ಯ ಪ್ರವೃತ್ತವಾದರೂ ಅದು ಚಿತ್ರ ನಿರ್ಮಾಣಕ್ಕೆ ತನ್ನ ಬಾಗಿಲನ್ನು ತೆಗೆದಿದ್ದು ೧೯೭೧ರ ಜನವರಿ ತಿಂಗಳಲ್ಲಿಯೆ. ಬೆಂಗಳೂರಿನ ಹೊರ ವಲಯದಲ್ಲಿ ವಿಶಾಲವಾದ ಪ್ರದೇಶದಲ್ಲಿ ಪ್ರಾರಂಭವಾದ ಈ ಸ್ಟುಡಿಯೋ ಕೆಲವು ವರ್ಷಗಳ ನಂತರ ಸರ್ಕಾರಿ ಸ್ವಾಮ್ಯಕ್ಕೆ ಬಂತು. ಕನ್ನಡ ಚಿತ್ರೋದ್ಯಮ ಅಲ್ಲಿ ಹಲವಾರು ಚಿತ್ರಗಳನ್ನು ನಿರ್ಮಿಸಿದ್ದರೂ ಕಾಲ ಕ್ರಮೇಣ ಕ್ಷೀಣಗೊಂಡಿತು. ಇಂದು ಆರ್ಥಿಕ ಸಮಸ್ಯೆಗಳ ಆಗರವಾಗಿರುವ ಈ ಸ್ಟುಡಿಯೋ ತನ್ನ ವಿಮೋಚನೆಗಾಗಿ ಮತ್ತೆ ಖಾಸಗಿ ವಲಯವನ್ನೇ ನಂಬಿ ಕುಳಿತಿರುವುದು ದುರ್ದೈವ. ಅದರ ಭವಿಷ್ಯದ ಬಗ್ಗೆ ಅನೇಕ ಸರ್ಕಾರಿ ಸಮಿತಿಗಳು ತಮ್ಮ ಸಲಹೆಗಳನ್ನು ನೀಡಿದ್ದರೂ ಅವುಗಳೊಂದೂ ಅನುಷ್ಠಾನಕ್ಕೆ ಬರದೆ ಈ ಸುಸಜ್ಜಿತ ಸ್ಟುಡಿಯೋ ತನ್ನ ನೆಲೆಯೇನೆಂಬುದನ್ನೇ ಕಂಡುಕೊಳ್ಳದ ದುಃಸ್ಥಿತಿಯಲ್ಲಿದೆ. ಆದರೂ ಕೆಲವು ಖಾಸಗಿ ನಿರ್ಮಾಪಕರು ತಮ್ಮ ಚಿತ್ರಗಳ ಶೂಟಿಂಗ್‌ಗಾಗಿ ಈ ಸ್ಟುಡಿಯೋವನ್ನು ಉಪಯೋಗಿಸುತ್ತಲೇ ಇದ್ದಾರೆ. ಖಾಸಗಿ ಟೆಲಿವಿಷನ್ ಜಾಲಗಳೂ ಸ್ಟುಡಿಯೋವನ್ನು ಜೀವಂತವಾಗಿಟ್ಟಿವೆ.

ಈ ದಶಕದಲ್ಲಿ ಪ್ರಾರಂಭವಾದ ರಾಜ್ಯ ಚಲನಚಿತ್ರ ಅಭಿವೃದ್ಧಿ ನಿಗಮದ ಗತಿಯೂ ಹಾಗೆಯೇ ಆಗಿದೆ. ಇಡೀ ದೇಶದಲ್ಲಿ ಪ್ರಥಮವಾಗಿ ಅಸ್ತಿತ್ವಕ್ಕೆ ಬಂದ ಈ ನಿಗಮ ಯಾವುದೇ ಉಲ್ಲೇಖನಾರ್ಹ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗದೆ ಬಳಲುತ್ತಿದ್ದರೆ ಅದಕ್ಕೆ ಅನೇಕ ಚಾರಿತ್ರಿಕ ಕಾರಣಗಳೂ ಇವೆ. ಕಂಠೀರವದಂತೆಯೇ ಈ ಸಂಸ್ಥೆಯಲ್ಲಿಯೂ ಖಾಸಗಿ ಬಂಡವಾಳವಿದೆ. ಆದರೆ ಇದು ಕೂಡ ಸರ್ಕಾರಿ ಸ್ವಾಮ್ಯದ ಸಂಸ್ಥೆ. ಆರಂಭದಿಂದಲೇ ಕಾರ್ಯಗತವಾಗಲು ಅಸಾಧ್ಯವಾದ ಅವಾಸ್ತವಿಕ ಯೋಜನೆಗಳಿಂದಾಗಿ ಆಡಳಿತ ವರ್ಗಗಳವರು ಕೈಗೊಂಡ ಅನೇಕ ವಿವಾದಾತ್ಮಕ ನಿರ್ಧಾರಗಳಿಂದಾಗಿ ಈ ನಿಗಮ ಡೋಲಾಯಮಾನವೆನಿಸುವ ಪರಿಸ್ಥಿತಿಯನ್ನು ಮುಟ್ಟಿದೆ.

ರಾಜ್ಯ ಸರ್ಕಾರ ತನ್ನ ಸಬ್ಸಿಡಿ ಯೋಜನೆಯನ್ನು ಘೋಷಿಸಿದ ತರುಣದಲ್ಲಿಯೇ ಸ್ಫುಟಗೊಂಡ ಕನ್ನಡ ಚಿತ್ರಗಳ ನಿರ್ಮಾಣ ಸಂಖ್ಯೆಯಿಂದ ಉತ್ತೇಜಿತರಾದ ಕೆಲವು ಪ್ರಮುಖರು ತಾವೇ ಖಾಸಗಿ ವಲಯದಲ್ಲಿ ಸ್ಟುಡಿಯೋ ಕಟ್ಟುವ ಯೋಜನೆಗಳನ್ನು ಪ್ರಕಟಿಸಿದರು. ಕನ್ನಡದ ಬಿ.ಸರೋಜಾದೇವಿ, ತೆಲುಗಿನ ಭಾವನಾರಾಯಣ, ಕನ್ನಡದ ಶಿಲ್ಪಶ್ರೀ ಪ್ರೊಡಕ್ಷನ್ಸ್ ಅವರಲ್ಲಿ ಪ್ರಮುಖರು. ಭಾವನಾರಾಯಣ ಸ್ಟುಡಿಯೋಗಾಗಿ ಬೆಂಗಳೂರಿನಲ್ಲಿ ಐದು ಎಕರೆ ಜಮೀನನ್ನು ಕೊಂಡಿದ್ದಾರೆಂಬ ಸುದ್ದಿಯೂ ಇತ್ತು. ಆದರೆ

ಈ ಯೋಜನೆಗಳಾವುವೂ ಕಾರ್ಯಗತವಾಗಲಿಲ್ಲ. ರಾಜ್ಯದಲ್ಲಿ ಚಲನಚಿತ್ರ ಸ್ಟುಡಿಯೊ, ಲಾಭದಾಯಕ ಉದ್ಯಮವೆಂಬ ಭರವಸೆಯನ್ನೂ ಉಂಟು ಮಾಡಲಿಲ್ಲ.

ಸರ್ಕಾರದ ಸಬ್ಸಿಡಿ ಮತ್ತು ಚಲನಚಿತ್ರ ಪ್ರಶಸ್ತಿ ಯೋಜನೆಗಳು ಜಾರಿಗೆ ಬರುತ್ತಿದ್ದಂತೆಯೇ ಅವುಗಳಿಗೆ ಸಂಬಂಧಪಟ್ಟ ವಿವಾದಗಳೂ ಸಮಾನಾಂತರವಾಗಿ ಹುಟ್ಟಿಕೊಂಡಿದ್ದು ತುಂಬಾ ಸ್ವಾರಸ್ಯದ ಸಂಗತಿ. ಮೊದಲು ಸಬ್ಸಿಡಿ ನೀಡಿಕೆಯಲ್ಲಿ ಆದ ಸುದೀರ್ಘ ತಡದ ಬಗ್ಗೆ ಚಿತ್ರೋದ್ಯಮದಲ್ಲಿ ಗುಲ್ಲು ಪ್ರಾರಂಭವಾಯಿತು. ಮೀನಮೇಷ ಎಣಿಸಿ ಈ ರಿಯಾಯಿತಿಗಳನ್ನು ಘೋಷಿಸಿದ್ದ ಸರ್ಕಾರಕ್ಕೆ ಸಬ್ಸಿಡಿ ನೀಡಿಕೆಯಲ್ಲಿ ಆಗುತ್ತಿದ್ದ ವಿಳಂಬದ ಬಗ್ಗೆ ಸಮಜಾಯಿಷಿ ನೀಡುವುದೇ ಒಂದು ದೊಡ್ಡ ಕೆಲಸವಾಯಿತು. ಆದರೆ ಈ ವಿಳಂಬ ಚಿತ್ರ ನಿರ್ಮಾಣದ ಗತಿಯನ್ನೇನೂ ಕುಂಠಿತಗೊಳಿಸಲಿಲ್ಲ. ಒಂದು ಘಟ್ಟದಲ್ಲಿ ಈ ಹೆಚ್ಚಿದ ನಿರ್ಮಾಣ ಚಟುವಟಿಕೆಯೇ ಕೆಲವು ಸಮಸ್ಯೆಗಳನ್ನು ಹುಟ್ಟು ಹಾಕಿತು.

ಕೇವಲ ಸಬ್ಸಿಡಿ ಆಸೆಗಾಗಿಯೇ ಕೆಸುಬು ಗೊತ್ತಿಲ್ಲದ ಅನೇಕರು ಚಿತ್ರ ನಿರ್ಮಾಣಕ್ಕೆ ನುಗ್ಗುತ್ತಿದ್ದಾರೆಂಬ ಆರೋಪ ಒಂದು ಕಡೆಯಾದರೆ, ತಯಾರಾದ ಎಲ್ಲ ಕನ್ನಡ ಚಿತ್ರಗಳಿಗೂ ಪ್ರದರ್ಶನಾವಕಾಶ ಸಿಗುತ್ತಿಲ್ಲವೆಂಬ ಕೂಗು ಇನ್ನೊಂದು ಕಡೆ ಪ್ರಾರಂಭವಾಯಿತು. ಈ ಪ್ರಮಾಣದಲ್ಲಿ ಕನ್ನಡ ಚಿತ್ರಗಳ ತಯಾರಿಕೆ ಹೆಚ್ಚುವುದೆಂದು ನಿರೀಕ್ಷಿಸದಿದ್ದ ಹಾಗೂ ಪರಭಾಷಾ ಚಿತ್ರಗಳ ಬಗ್ಗೆ ತನ್ನ ಅತೀವ ಒಲವನ್ನು ಇನ್ನೂ ಬಿಟ್ಟು ಕೊಡದಿದ್ದ ಪ್ರದರ್ಶನ ವಲಯ ಕನ್ನಡ ಚಿತ್ರಗಳನ್ನು ಯಾವುದೇ ಕಾರಣಕ್ಕೂ ಉಪೇಕ್ಷಿಸಬಾರದೆಂಬ ಉದ್ಯಮದ ಮತ್ತು ಸರ್ಕಾರದ ತೀವ್ರ ಒತ್ತಡಕ್ಕೆ ಸಿಕ್ಕಿತು. ಮುಖ್ಯಮಂತ್ರಿಗಳಾದಿಯಾಗಿ ಅನೇಕ ಮಂತ್ರಿಗಳು ಈ ಬಗ್ಗೆ ಚಿತ್ರಮಂದಿರಗಳ ಮಾಲೀಕರನ್ನು ಎಚ್ಚರಿಸಲೂ ಪ್ರಾರಂಭಿಸಿದರು. ಈ ಪರಿಸ್ಥಿತಿ ಅಂದಿನ ಮುಖ್ಯಮಂತ್ರಿ ವೀರೇಂದ್ರ ಪಾಟೀಲರ ಆಕ್ರೋಶಕ್ಕೂ ಪಾತ್ರವಾಯಿತು. ಒಂದು ಕಡೆ ಇಳಿಯುತ್ತಿರುವ ಚಿತ್ರಗಳ ಗುಣಮಟ್ಟ, ಇನ್ನೊಂದು ಕಡೆ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಚಿತ್ರಮಂದಿರಗಳ ತೀವ್ರ ಅಭಾವ - ಈ ಎರಡು ಸಮಸ್ಯೆಗಳಿಗೂ ಪಾಟೀಲರು ತಕ್ಷಣ ಸ್ಪಂದಿಸಿದರು.

ಹೊಸ ಚಿತ್ರಮಂದಿರಗಳನ್ನು ಕಟ್ಟುವವರು ಲಿಖಿತ ರೂಪದಲ್ಲಿ ವರ್ಷದಲ್ಲಿ ಎಂಟು ತಿಂಗಳಾದರೂ ಕನ್ನಡ ಚಿತ್ರಗಳನ್ನು ಪ್ರದರ್ಶಿಸುತ್ತೇವೆಂದು ಬದ್ಧರಾದರೆ ಮಾತ್ರ ಸರ್ಕಾರ ಲೈಸೆನ್ಸ್ ಕೊಡುವುದಾಗಿ ಬೆದರಿಕೆ ಹಾಕಿದ ಪಾಟೀಲರು ಸಬ್ಸಿಡಿ ಯೋಜನೆಯನ್ನು ಸರಿಯಾಗಿ ಬಳಸಿಕೊಳ್ಳದೆ ಹೆಚ್ಚು ಸಂಖ್ಯೆಯಲ್ಲಿ ಕಳಪೆ ಚಿತ್ರಗಳನ್ನು ತಯಾರಿಸಲಾರಂಭಿಸಿದ ದೋಷವನ್ನು ನಿರ್ಮಾಪಕರ ಮೇಲೆಯೇ ಹೊರಿಸಿದರು. ಸಬ್ಸಿಡಿ ಯೋಜನೆ ಪ್ರಸಕ್ತ ಅರ್ಥವರ್ಷದ ಕೊನೆಯವರೆಗೆ ಇರುತ್ತದೆಯೆಂದ ಅವರು ಯೋಜನೆಯನ್ನು ಸದುಪಯೋಗ ಪಡಿಸಿಕೊಳ್ಳುವುದು, ಬಿಡುವುದು ನಿರ್ಮಾಪಕರಿಗೆ ಬಿಟ್ಟಿದ್ದೆಂದು ಎಚ್ಚರಿಸಿದರು. ಉದ್ಯಮದಲ್ಲಿ ಅನೇಕ ಪ್ರತಿಭಾವಂತರಿದ್ದರೂ ಕನ್ನಡದಲ್ಲಿ ಒಳ್ಳೆಯ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಏಕೆ ಬರುತ್ತಿಲ್ಲ ಎಂದು ತೀಕ್ಷ್ಣವಾಗಿ ಪ್ರಶ್ನಿಸಿದ ಅವರು ಕನ್ನಡ ಚಿತ್ರೋದ್ಯಮದಲ್ಲಿ ಮುಜುಗರದ ಅಲೆಯನ್ನೇ ಎಬ್ಬಿಸಿದರು.

ಅಂದಿನ ಶಿಕ್ಷಣ ಮಂತ್ರಿಗಳಾಗಿದ್ದ ಕೆ.ವಿ.ಶಂಕರೇಗೌಡರು (ಕಂಠೀರವ ಸ್ಟುಡಿಯೊ ಯೋಜನೆಯ ಕೇಂದ್ರವ್ಯಕ್ತಿ ಕೂಡಾ) ಸಮಾರಂಭವೊಂದರಲ್ಲಿ ಮಾತನಾಡುತ್ತ ಇನ್ನು ಮುಂದೆ ಉತ್ತಮ ಚಿತ್ರಗಳಿಗೆ ಮಾತ್ರ ಸಬ್ಸಿಡಿ ನೀಡಬೇಕೆಂಬ ಪ್ರಸ್ತಾಪ ಸರ್ಕಾರದ ಮುಂದೆ ಇದೆಯೆಂದು ಪ್ರಕಟಿಸಿದಾಗ ಉದ್ಯಮದಲ್ಲಿ ಒಂದು ಕಾಡ್ಗಿಚ್ಚೇ ಎದ್ದಿತು.

ಈ ಕಾಡ್ಗಿಚ್ಚು ದಶಕಗಳು ದಾಟಿದರೂ ಶಮನವಾಗಲಿಲ್ಲ. ಅನೇಕ ವರ್ಷಗಳ ಅನಿಶ್ಚಯತೆಯ ನಂತರ ೧೯೯೯ರಲ್ಲಿ ರಾಜ್ಯ ಸರ್ಕಾರ ಕೊನೆಗೂ ಸಬ್ಸಿಡಿಗೆ ಗುಣಮಟ್ಟದ ಕಡಿವಾಣ ಹಾಕಿ ವರ್ಷಕ್ಕೆ ಗರಿಷ್ಠ ೨೦ ಚಿತ್ರಗಳಿಗೆ ತಲಾ ೧೦ ಲಕ್ಷ ರೂಪಾಯಿಗಳ ಸಹಾಯಧನವನ್ನು ಅಂತಹ ಚಿತ್ರಗಳನ್ನು ಆಯ್ಕೆ ಮಾಡಲೆಂದೇ ರಚಿತವಾಗುವ ಸಮಿತಿಯೊಂದರ ಶಿಫಾರಸಿನಂತೆ ನೀಡುವುದಾಗಿ ಪ್ರಕಟಿಸಿ ಎರಡು ವರ್ಷಗಳಿಗೆ ಸಬ್ಸಿಡಿಗೆ ಅರ್ಹವೆನಿಸಿದ ಚಿತ್ರಗಳ ಆಯ್ಕೆಯಾಗಿದ್ದರೂ ಈ ವಿಷಯದಲ್ಲಿ ಗೊಂದಲ ಮಾತ್ರ ನಿಂತಿಲ್ಲ. ಇಂತಹ ಕಡಿವಾಣ ಅಗತ್ಯವೆಂದು ಒಂದು ಬಣ ಒಪ್ಪಿದರೆ ಇನ್ನೊಂದು ಬಣ ಅಷ್ಟೇ ಬಿರುಸಿನಿಂದ ಈ ನೀತಿಯನ್ನು ವಿರೋಧಿಸುತ್ತಲೇ ಬಂದಿದೆ. ಕನ್ನಡ ಚಿತ್ರರಂಗ ಸರ್ಕಾರದ ಕೃಪಾಕಟಾಕ್ಷದಿಂದ ದೂರ ಸರಿಯುವ ಮನೋಭಾವವನ್ನೇ ತೋರುತ್ತಿಲ್ಲ.

ಹಾಗೆ ನೋಡಿದರೆ ೨೧ನೆಯ ಶತಮಾನದ ಮೊದಲಿನಲ್ಲಿ ಕನ್ನಡ ಚಿತ್ರರಂಗವನ್ನು ಆವರಿಸಿರುವ ಯಾವ ಸಮಸ್ಯೆಯಾಗಲಿ, ವಿವಾದವಾಗಲಿ ಹೊಸದಲ್ಲ. ಈ ವಿವಾದಗಳಲ್ಲಿ ತುಂಬಾ ಪ್ರಮುಖವಾದದ್ದು ರೀಮೇಕ್ ಚಿತ್ರಗಳನ್ನು ಕುರಿತದ್ದು. ರೀಮೇಕ್ ಚಿತ್ರಗಳು ಕನ್ನಡಕ್ಕೆ ಹೊಸದಲ್ಲವೇ ಅಲ್ಲ. ವಾಸ್ತವವಾಗಿ ಅದು ಐದು ದಶಕಗಳಿಂದಲೂ ಕನ್ನಡ ಚಿತ್ರೋದ್ಯಮದೊಂದಿಗೇ ಬೆಳೆದು ಬಂದಿರುವ ಬೃಹತ್ ಸಮಸ್ಯೆ. ೧೯೬೭ರಲ್ಲಿ ಸರ್ಕಾರ ಸಬ್ಸಿಡಿ ನಿಯಮಗಳನ್ನು ರಚಿಸಿದಾಗ ಇಂತಹ ಚಿತ್ರಗಳಿಗೆ ಸಹಾಯಧನವನ್ನು ಕೊಡುವುದಿಲ್ಲವೆಂಬ ನಿಯಮವನ್ನು ಹೇರಿದಾಗಿನಿಂದ ಈ ವಿವಾದ ಪ್ರಖರವಾಗಿಯೇ ಬೆಳೆದು ಬಂದಿತು.

೧೯೫೮ರಲ್ಲಿ ಬಿ.ಆರ್.ಪಂತುಲು ನಿರ್ದೇಶಿಸಿದ 'ಸ್ಕೂಲ್‌ಮಾಸ್ಟರ್' ಕನ್ನಡ ಚಿತ್ರರಂಗದ ಅತ್ಯಂತ ಪ್ರಮುಖ ಚಿತ್ರಗಳಲ್ಲೊಂದು. ಅದೇ ವರ್ಷ ತಯಾರಾದ ಇನ್ನೊಂದು ಜನಪ್ರಿಯ ಚಿತ್ರ ಕು.ರ.ಸೀತಾರಾಮಶಾಸ್ತ್ರಿ ನಿರ್ದೇಶನದ 'ಅಣ್ಣ-ತಂಗಿ'. ಎರಡೂ ಅನುವಾದ ಚಿತ್ರಗಳೇ. ಅವುಗಳ ಯಶಸ್ಸು ಇನ್ನಷ್ಟು ರೀಮೇಕ್ ಚಿತ್ರಗಳ ತಯಾರಿಕೆಗೆ ಸ್ಫೂರ್ತಿ ನೀಡಿತು. ಇದರಿಂದಾಗಿ ಡಬ್ಬಿಂಗ್ ಸಂಸ್ಕೃತಿ ಮತ್ತೆ ಹಿಂಬಾಗಿಲಿನಿಂದ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿತೆಂದು ಒಂದು ವರ್ಗದ ವೀಕ್ಷಕರು ಹಾಗೂ ಉದ್ಯಮಿಗಳು ಟೀಕಿಸಿದರೆ ಚಲನಚಿತ್ರದಂತಹ ಸೃಜನಾತ್ಮಕ ಪ್ರಕ್ರಿಯೆಯಲ್ಲಿ ಇಂತಹ ವರ್ಗೀಕರಣ ಸಾಧುವಲ್ಲವೆಂದು ರೀಮೇಕ್ ಪರವಾದ ವರ್ಗ ಬಲವಾಗಿ ವಾದಿಸಿತು. ೧೯೬೦ರ ದಶಕವಲ್ಲಂತೂ ಈ ವಿವಾದ ಎಲ್ಲ ಪತ್ರಿಕೆಗಳಲ್ಲಿಯೂ ವಿಜೃಂಭಿಸಿತು. ಸರ್ಕಾರ ರೀಮೇಕ್ ಚಿತ್ರಗಳಿಗೆ ಸಹಾಯಧನ ಕೊಡುವುದಿಲ್ಲವೆಂದು ನಿರ್ಧರಿಸಿದಾಗ ಅನುವಾದ ಚಿತ್ರಗಳಿಗೆ ವಿರುದ್ಧವಾಗಿದ್ದ ಲಾಬಿಗೆ ಸ್ವಲ್ಪಮಟ್ಟಿಗೆ ಸಮಾಧಾನವಾದರೂ ಈ ನಿರ್ಧಾರ ಆಗಾಗ ಸಡಿಲವಾಗುತ್ತ ಹೋದದ್ದು ವಿವಾದ ಇನ್ನಷ್ಟು ಉಲ್ಬಣಾವಸ್ಥೆಗೆ ಹೋಗಲು ಕಾರಣವಾಯಿತು. ಈ ನಿಯಮ ವಿಧಿವತ್ತಾಗಿ ಅನುಷ್ಠಾನಕ್ಕೆ ಬರಲು ಬಹಳ ಕಾಲವೇ ಹಿಡಿಯಿತು.

ಕನ್ನಡ ಚಿತ್ರರಂಗದಲ್ಲಿ ಒಳ್ಳೆಯ ಚಿತ್ರಕಥಾ ಲೇಖಕರ ತೀವ್ರ ಅಭಾವವಿರುವುದರಿಂದ ರೀಮೇಕ್‌ಗಳ ತಯಾರಿಕೆ ಅನಿವಾರ್ಯವೆಂದು ಕೆಲವು ನಿರ್ದೇಶಕರು ವಾದಿಸಲಾರಂಭಿಸಿದಾಗ ಅಂತಹವರ ವಿರುದ್ಧ ನಿಂದನೆ, ದೂಷಣೆಗಳ ಸಮರವೇ ಪ್ರಾರಂಭವಾಯಿತು. ಕನ್ನಡ ಚಿತ್ರೋದ್ಯಮಕ್ಕೆ ಕ್ರಮೇಣವಾಗಿ ಸರ್ಕಾರಿ ಸವಲತ್ತುಗಳು ಹೆಚ್ಚುತ್ತ ಹೋದಂತೆಲ್ಲ ರೀಮೇಕ್ ವಿರೋಧಿ ಗುಂಪು ಒಂದು ದೊಡ್ಡ ಆಂದೋಲನವನ್ನೇ ನಡೆಸಿ ಬಹಳ ಮಟ್ಟಿಗೆ ಯಶಸ್ವಿಯಾಯಿತು.

ರೀಮೇಕ್ ಚಿತ್ರಗಳಲ್ಲಿಯೂ ಎರಡು ರೀತಿಗಳಿದ್ದವು. ಒಂದು, ಬೇರೊಂದು ಭಾಷೆಯ ಚಿತ್ರದ ಹಕ್ಕುಗಳನ್ನು ಪಡೆದು ಒಂದಿಷ್ಟು ಬದಲಾವಣೆಯೂ ಇಲ್ಲದೆ ಮೂಲ ಚಿತ್ರವನ್ನು ಇದ್ದ ಹಾಗೆಯೇ ಭಟ್ಟಿಯಿಳಿಸುವುದು. ಇನ್ನೊಂದು, ಮೂಲಚಿತ್ರದ ಚಿತ್ರಕಥೆಯ ಹಂದರವನ್ನು ಹಾಗೆಯೇ ಉಳಿಸಿಕೊಂಡು ಕನ್ನಡ ಸಂಸ್ಕೃತಿಗೆ, ಕನ್ನಡ ಜನರ ಜೀವನ ಕ್ರಮಕ್ಕೆ ಅನುಗುಣವಾದ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುವುದು. ಆದರೆ ಇಂತಹ ಬದಲಾವಣೆಗಳನ್ನು 'ಒಣ ಪ್ರತಿಷ್ಠೆ'ಯೆಂದು ಕರೆದ ರೀಮೇಕ್ ತಜ್ಞರೂ ಇದ್ದರು. ಅವರ ದೃಷ್ಟಿಯಲ್ಲಿ ಅಂತಹ ಬದಲಾವಣೆಗಳೆಲ್ಲ ಅನವಶ್ಯಕ. ಆದರೆ ಮೊದಲಿಂದಲೂ ಕನ್ನಡ ಚಿತ್ರೋದ್ಯಮಕ್ಕೆ ಬೆಂಗಾವಲಾಗಿ ನಿಂತ ಪತ್ರಿಕೆಗಳಂತೂ ಈ ಎರಡೂ ವಿಧಗಳ ರೀಮೇಕ್‌ಗಳ ವಿರುದ್ಧ ಸ್ಪಷ್ಟವಾದ ನಿಲುವನ್ನು ತಾಳುತ್ತಲೇ ಬಂದು ಈ ವಿವಾದದಲ್ಲಿ ತಾವೂ ತೊಡಗಿಕೊಂಡವು.

ಅಂದಿನ ದಿನಗಳಲ್ಲಿ ರೀಮೇಕ್ ಚಿತ್ರಗಳ ಪರವಾಗಿ ಬಲವಾಗಿ ನಿಂತವರು ಕು.ರ.ಸೀತಾರಾಮಶಾಸ್ತ್ರಿ, ಎಸ್.ಕೆ.ಎ.ಚಾರಿ, ಎಂ.ಎಸ್.ನಾಯಕ್‌ರಂತಹ ಹಿರಿಯರು. (ಈ ವಿವಾದ ಪ್ರಾರಂಭವಾದ ದಿನದಿಂದ ಕನ್ನಡ ಚಿತ್ರರಂಗದ ಅನೇಕ ಪ್ರತಿಷ್ಠಿತರು ಈ ವಿಷಯದಲ್ಲಿ ಪರ ಅಥವಾ ವಿರೋಧಿ ಧೋರಣೆಯನ್ನು ತಾಳುತ್ತಲೇ ಬಂದಿರುವುದರಿಂದ ಈ ವಿವಾದವೇ ಒಂದು ಬತ್ತದ ಕೆರೆಯಂತಾಗಿದೆ. ಸ್ವಾರಸ್ಯವೆಂದರೆ ಸರ್ಕಾರ ರೀಮೇಕ್ ಚಿತ್ರಗಳಿಗೆ ತನ್ನ ಸವಲತ್ತುಗಳನ್ನು ನಿರಾಕರಿಸುತ್ತಲೇ ಬಂದಿದ್ದರೂ ನಮ್ಮ ನಿರ್ಮಾಪಕರಲ್ಲಿ ಅವುಗಳ ಮೇಲಿನ ಮಮತೆ ಮಾಸಿಲ್ಲ.)

೧೯೬೦ರ ದಶಕ ಅನೇಕ ಪ್ರಮುಖ ಸಮಸ್ಯೆಗಳ ಹಾಗೂ ವಿವಾದಗಳ ಆಗರವೇ ಆಗಿತ್ತು. ತೀವ್ರ ಕಚ್ಚಾ ಫಿಲಂ ಅಭಾವವಂತೂ ಅನೇಕ ವರ್ಷಗಳ ಕಾಲ ಉದ್ಯಮವನ್ನು ಕಿತ್ತು ತಿಂದ ಸಮಸ್ಯೆ.

ಈ ಭೀಕರ ಸಮಸ್ಯೆ ಇಡೀ ದಕ್ಷಿಣ ಭಾರತ ಚಿತ್ರರಂಗವನ್ನೇ ತಟ್ಟಿತಾದರೂ ಕನ್ನಡ ಚಿತ್ರರಂಗ ತಮಿಳು-ತೆಲುಗು ಚಿತ್ರರಂಗಗಳಿಗಿಂತ ಹೆಚ್ಚಾಗಿ ನರಳಿತು. ೧೯೬೫ರಲ್ಲಿ ಕೇಂದ್ರ ಸರ್ಕಾರ ಕೊಡಕ್ ಸಂಸ್ಥೆಯಿಂದ ಕಚ್ಚಾ ಫಿಲಂ ಆಮದು ಮಾಡಿಕೊಳ್ಳಲು ಕೊಡುತ್ತಿದ್ದ ಪರವಾನಗಿಯನ್ನು ಸಂಪೂರ್ಣವಾಗಿ ನಿಲ್ಲಿಸಿತು. ದಕ್ಷಿಣದ ನಾಲ್ಕು ಭಾಷಾ ಚಿತ್ರರಂಗಗಳ

ಜಂಘಾಬಲವೇ ಇದರಿಂದ ಉಡುಗಿ ಹೋಗುವಂತಾಯಿತು. ಆರು ತಿಂಗಳ ಕಾಲ ಈ ನಿರ್ಬಂಧ ಮುಂದುವರಿಯುವುದೆಂದು ಸರ್ಕಾರ ನಿರ್ಧರಿಸಿದ್ದರಿಂದ ತುರ್ತಿಗೆ ಬೇಕಾದರೆ ಸ್ವಲ್ಪ ಪ್ರಮಾಣದಲ್ಲಿ ಪೂರ್ವ ಜರ್ಮನಿಯಿಂದ ಆರ್ವೋ ಕಚ್ಚಾ ಫಿಲಂ ಅನ್ನು ಆಮದು ಮಾಡಿಕೊಳ್ಳಲು ಅನುಮತಿ ನೀಡಿತು. ಇದಕ್ಕೆ ಕಾರಣ ಆಗ ಭಾರತ ಮತ್ತು ಪೂರ್ವ ಜರ್ಮನಿ ಸರ್ಕಾರಗಳ ನಡುವೆ ಇದ್ದ ಒಪ್ಪಂದದಂತೆ ಭಾರತ ಆ ದೇಶದಿಂದ ಆಮದು ಮಾಡಿಕೊಳ್ಳುವ ವಸ್ತುಗಳನ್ನು ಭಾರತೀಯ ರೂಪಾಯಿಗಳನ್ನೇ ಕೊಟ್ಟು ಕೊಳ್ಳಬಹುದಿತ್ತು. ಆದರೆ ದೇಶ ಎದುರಿಸುತ್ತಿದ್ದ ತೀವ್ರವಾದ ವಿದೇಶಿ ವಿನಿಮಯದ ಕೊರತೆಯ ಸಮಸ್ಯೆಯಿಂದಾಗಿ - ಅಮೆರಿಕಾಗೆ ಡಾಲರ್, ಇಂಗ್ಲೆಂಡಿಗೆ ಪೌಂಡ್ ಮತ್ತು ದಕ್ಷಿಣ ಜರ್ಮನಿಗೆ ಡ್ಯೂಷ್ ಮಾರ್ಕ್‌ಗಳನ್ನು ಕೊಟ್ಟು ವಸ್ತುಗಳನ್ನು ಕೊಳ್ಳಲು - ಸಾಧ್ಯವಿರಲಿಲ್ಲ. ಅನಗತ್ಯವೆನಿಸುವ ಅನೇಕ ವಸ್ತುಗಳನ್ನು ಆ ದೇಶಗಳಿಂದ ಆಮದು ಮಾಡಿಕೊಳ್ಳುವುದನ್ನೇ ನಿಲ್ಲಿಸುವುದೂ ಅನಿವಾರ್ಯವಾಗಿತ್ತು. ಕಚ್ಚಾ ಫಿಲಂ ಆಮದಿಗೆ ಆಗ ಆದ್ಯತೆಯಿರಲಿಲ್ಲ.

ಕೇವಲ ೩೦೦ ರೋಲು ಕೊಡಕ್ ಹಾಗೂ ೧೦೦ ರೋಲು ಆರ್ವೋ ಫಿಲಂ ಅನ್ನು ನಂಬಿಕೊಂಡು ದಕ್ಷಿಣ ಭಾರತ ಚಿತ್ರರಂಗ ವರ್ಷವಿಡೀ ಕಾಲಹರಣ ಮಾಡಬೇಕಾದ ಸ್ಥಿತಿ ಹುಟ್ಟಿಕೊಂಡಿತು. ಮೊದಲೇ ತೂಕಡಿಸುತ್ತಿದ್ದ ಕನ್ನಡ ಚಿತ್ರರಂಗ ಹೆಚ್ಚು ಕಡಿಮೆ ಪೂರ್ತಿ ನಿದ್ರಾವಸ್ಥೆಗೆ ಹೋಗುವಂತಾಯಿತು. ಒಂದು ಘಟ್ಟದಲ್ಲಿ 'ಸತಿ ಅನುಸೂಯ' ಒಂದೇ ನಿರ್ಮಾಣದಲ್ಲಿದ್ದ ಚಿತ್ರವೆನಿಸುವಂತೆ ಆಯಿತು. ಈ ಪರಿಸ್ಥಿತಿಯಿಂದಾಗಿ ಅನಿವಾರ್ಯವಾಗಿಯೇ ಕಾಳಸಂತೆಕೋರರೂ ಹುಟ್ಟಿಕೊಂಡರು. ಆಮದಿನ ಪ್ರಮಾಣ ಹೆಚ್ಚಿಸಬೇಕು, ಇಲ್ಲವೆ ಮುಕ್ತವಾಗಿ ಕಚ್ಚಾ ಫಿಲಂ ಆಮದು ಮಾಡಿಕೊಳ್ಳುವಂತೆ ಸರ್ಕಾರ ನಿರ್ಮಾಪಕರಿಗೆ ಅನುಕೂಲ ಒದಗಿಸಬೇಕು ಎಂಬ ಚಿತ್ರೋದ್ಯಮದ ಮೊರೆಗೆ ಸಕಾರಾತ್ಮಕವಾದ ಪ್ರತಿಕ್ರಿಯೆ ಸಿಗಲಿಲ್ಲ. ಕೈಯಲ್ಲಿದ್ದ ಕಚ್ಚಾ ಫಿಲಂ ಅನ್ನೇ ಬಳಸಿಕೊಂಡು ಕಡಿಮೆ ಉದ್ದದ ಚಿತ್ರಗಳ ನಿರ್ಮಾಣಕ್ಕೂ, ಚಿತ್ರಗಳ ಪ್ರತಿಗಳ ಮೇಲಿನ ನಿಯಂತ್ರಣಕ್ಕೂ ಸರ್ಕಾರ ತಕ್ಕ ಕ್ರಮಗಳನ್ನು ಕೈಗೊಳ್ಳಬೇಕೆಂಬ ಉದ್ಯಮದ ಆಗ್ರಹಕ್ಕೆ ಸಿಕ್ಕಿದ ಪ್ರತಿಕ್ರಿಯೆಯೂ ನಿರಾಶಾದಾಯಕವಾಗಿತ್ತು. ಕನ್ನಡ ಚಿತ್ರೋದ್ಯಮದಲ್ಲಿ ಭೀಕರ ನಿರುದ್ಯೋಗ ತಲೆಯೆತ್ತಿತ್ತು. ಕನ್ನಡ ಚಿತ್ರಗಳಿಗೆ ವಿದೇಶಿ ವಿನಿಮಯ ಗಳಿಸುವ ಶಕ್ತಿಯಿರಲಿಲ್ಲವಾದ್ದರಿಂದ ಅದರ ಮಟ್ಟಿಗೆ ಈ ಸಮಸ್ಯೆ ಇನ್ನಷ್ಟು ಬಿಗಡಾಯಿಸಿತ್ತು.

(ಚಿತ್ರ ೭) ಪ್ರಶಸ್ತಿ ವಿವಾದಗಳಿಗೆ ನಾಂದಿಯಾದ 'ನಾಂದಿ' ಚಿತ್ರದಲ್ಲಿ ಹರಿಣಿ ಮತ್ತು ರಾಜಕುಮಾರ್

ಉದಕಮಂಡಲದಲ್ಲಿ ಕೇಂದ್ರ ಸರ್ಕಾರ ಸ್ಥಾಪಿಸಿದ ಹಿಂದೂಸ್ತಾನ್ ಫೋಟೋ ಫಿಲಂಸ್ ಸಂಸ್ಥೆ ಮುಂದಿನ ಒಂದೆರಡು ವರ್ಷಗಳಲ್ಲಿ ತನ್ನ ಕಾಲಿನ ಮೇಲೆ ತಾನು ನಿಲ್ಲುವ ಸ್ಥಿತಿ ತಲುಪಿದಾಗ ಈ ಸಮಸ್ಯೆಗೆ ಬಹಳ ಮಟ್ಟಿಗೆ ಪರಿಹಾರ ಸಿಕ್ಕಿತು.

೧೯೬೦ರ ದಶಕದಲ್ಲಿ ಚಿತ್ರಪ್ರೇಮಿಗಳ ಹಾಗೂ ಮಾಧ್ಯಮಗಳ ವಿಶೇಷ ಗಮನ ಸೆಳೆದ ಬೃಹತ್ ವಿವಾದವೆಂದರೆ ೧೯೬೪ರ ಸಾಲಿನ ಕೇಂದ್ರ ಚಲನಚಿತ್ರ ಪ್ರಶಸ್ತಿಗಳಲ್ಲಿ ಕರ್ನಾಟಕದಾದ್ಯಂತ ತನ್ನ ವಿಭಿನ್ನತೆಯಿಂದ ಸದಭಿರುಚಿಯ ಪ್ರೇಕ್ಷಕರಲ್ಲಿ ತೀವ್ರ ಆಸಕ್ತಿಯನ್ನು ಕೆರಳಿಸಿದ್ದ ಎನ್.ಲಕ್ಷ್ಮೀನಾರಾಯಣ್ ನಿರ್ದೇಶನದ 'ನಾಂದಿ' ಚಿತ್ರಕ್ಕೆ ಆದ ಅನ್ಯಾಯಕ್ಕೆ ಸಂಬಂಧಿಸಿದ್ದು. ಆ ವೇಳೆಗಾಗಲೇ 'ನಾಂದಿ' ಕನ್ನಡ ಚಿತ್ರರಂಗದ ಹಿರಿಮೆಯನ್ನು ಹೆಚ್ಚಿಸಿದ್ದ ಪ್ರಯೋಗಾತ್ಮಕ ಚಿತ್ರವೆಂಬ ಹೆಗ್ಗಳಿಕೆಗೆ ಪಾತ್ರವಾಗಿ ಮದರಾಸಿನ ಚಿತ್ರಪ್ರೇಮಿಗಳ ಸಂಘದಿಂದ ವರ್ಷದ ಅತ್ಯುತ್ತಮ ಕನ್ನಡ ಚಿತ್ರವೆಂಬ ಪ್ರಶಸ್ತಿಯನ್ನು ಪಡೆದಿತ್ತು. ಚಿತ್ರ ಬೆಂಗಳೂರು ಮತ್ತು ಮೈಸೂರುಗಳಲ್ಲಿ ಮಾತ್ರ ತೃಪ್ತಿಕರವಾಗಿ ಪ್ರದರ್ಶಿತವಾಗಿದ್ದರೂ ಕನ್ನಡದಲ್ಲಿ ಹೊಸ ಪ್ರಜ್ಞೆಯನ್ನು ಮೂಡಿಸಿದ ಚಿತ್ರವೆಂಬ ಪ್ರಶಂಸೆಯನ್ನು ಪಡೆದಿತ್ತು. ಆದರೆ ಆ ವರ್ಷ ಕೇಂದ್ರ ಸರ್ಕಾರದ ಚಲನಚಿತ್ರ ಪ್ರಶಸ್ತಿ ಸಮಿತಿಗೆ ದಕ್ಷಿಣ ಭಾರತದಿಂದ ಅರ್ಹವಾದ ಪ್ರಶಸ್ತಿ ವಿಜೇತರನ್ನು ಶಿಫಾರಸು ಮಾಡಲು ನೇಮಕಗೊಂಡಿದ್ದ ಪ್ರಾದೇಶಿಕ ಪ್ರಶಸ್ತಿ ಸಮಿತಿಯ ದೃಷ್ಟಿಯಲ್ಲಿ 'ನಾಂದಿ'ಯು ಪ್ರಶಸ್ತಿಗೆ ಅರ್ಹವಾದ ಚಿತ್ರವೆನಿಸಲಿಲ್ಲ. ಇಡೀ ಕನ್ನಡ ಚಿತ್ರರಂಗವನ್ನು ಚಕಿತಗೊಳಿಸಿದ ಸಂಗತಿಯಿದು. ಈ ಚಿತ್ರ ಪ್ರಶಸ್ತಿಯಿಂದ ವಂಚಿತವಾಗಿದ್ದು ಇಡೀ ಕನ್ನಡ ನಾಡಿನಲ್ಲಿ ಒಂದು ದೊಡ್ಡ ಕೋಲಾಹಲವನ್ನೇ ಎಬ್ಬಿಸಿತು. ಪ್ರಾಯಶಃ ಕನ್ನಡ ಚಿತ್ರಪ್ರೇಮಿಗಳು ಇಂತಹ ಒಗ್ಗಟ್ಟಿನಿಂದ ಇನ್ನಾವ ಚಿತ್ರದ ಪರವಾಗಿಯೂ ನಿಂತ ನಿದರ್ಶನ ಇನ್ನೊಂದಿಲ್ಲ.

ದಕ್ಷಿಣ ಭಾರತ ಚಿತ್ರರಂಗದ ಖ್ಯಾತ ನಿರ್ದೇಶಕ ಬಿ.ಎನ್.ರೆಡ್ಡಿ ಪ್ರಾದೇಶಿಕ ಪ್ರಶಸ್ತಿ ಸಮಿತಿಯ ಅಧ್ಯಕ್ಷರು, ಮತ್ತೊಬ್ಬ ಖ್ಯಾತ ತೆಲುಗು ನಿರ್ಮಾಪಕ-ನಿರ್ದೇಶಕ ಪಿ.ಪುಲ್ಲಯ್ಯ ಸದಸ್ಯರಲ್ಲೊಬ್ಬರು. ಆದರೆ ಆ ಇಬ್ಬರು ಪ್ರತಿಷ್ಠಿತರಿಗೂ 'ನಾಂದಿ' ಪಥ್ಯವಾಗದ ಸುದ್ದಿ ಬೆಂಕಿಯಂತೆ ಹರಡಿದಾಗ ಇಡೀ ರಾಜ್ಯದಲ್ಲಿಯೇ ತೀವ್ರ ಕೋಲಾಹಲವೆದ್ದಿತು. ಅವರಿಬ್ಬರ ದೃಷ್ಟಿಯಿಂದಲೂ 'ನಾಂದಿ' ಒಂದು ಸಪ್ಪೆ ಚಿತ್ರ. ಈ ತೀರ್ಪಿನಿಂದಾಗಿ ನಿರ್ಮಾಪಕರಾದ ವಾದಿರಾಜ್-ಜವಾಹರ್ ಮತ್ತು ಪ್ರಥಮ ಬಾರಿಗೆ ಸ್ವತಂತ್ರ ನಿರ್ದೇಶಕರಾಗಿ ಕಾರ್ಯವಹಿಸಿದ್ದ ಎನ್.ಲಕ್ಷ್ಮೀನಾರಾಯಣ್ ಗಾದ ಆಘಾತವನ್ನು ರಾಜ್ಯದಾದ್ಯಂತ ಚಿತ್ರಪ್ರೇಮಿಗಳು ಹಂಚಿಕೊಂಡಿದ್ದೊಂದು ಐತಿಹಾಸಿಕ ಪ್ರಸಂಗ.

ರಾಷ್ಟ್ರಪ್ರಶಸ್ತಿ ವಿತರಣೆಯ ನಿಯಮಾವಳಿಗಳ ಪ್ರಕಾರ ಪ್ರಾದೇಶಿಕ ಸಮಿತಿಯ ನಿರ್ಧಾರದ ವಿರುದ್ಧ ಯಾವುದೇ ಚಿತ್ರದ ನಿರ್ಮಾಪಕರು ಕೇಂದ್ರ ಸಮಿತಿಗೆ ಮೇಲ್ಮನವಿ ಸಲ್ಲಿಸಿದ್ದು ಕೂಡ ಅದೇ ಮೊದಲು. ಈ ಸುದ್ದಿ ಮುಟ್ಟಿದ ಕೂಡಲೇ ಅನೇಕ ಸಂಘ ಸಂಸ್ಥೆಗಳು ಕೇಂದ್ರ ಸರ್ಕಾರದ ಅಂದಿನ ವಾರ್ತಾ ಮಂತ್ರಿಯಾಗಿದ್ದ ಇಂದಿರಾ ಗಾಂಧಿಯವರಿಗೆ ತಂತಿಗಳ ಮೂಲಕ ತಮ್ಮ ಪ್ರತಿಭಟನೆಯನ್ನು ಮುಟ್ಟಿಸುವ ಅಪೂರ್ವ ಪ್ರಸಂಗವೂ ನಡೆಯಿತು.

ಈ ವಿವಾದ ಬಡಪೆಟ್ಟಿಗೆ ನಿಲ್ಲಲಿಲ್ಲ. ಅನೇಕ ವಾರಗಳ ಕಾಲ ಪತ್ರಿಕೆಗಳಿಗೆ ಈ ಸಂಬಂಧದ ಬೆಳವಣಿಗೆಗಳೇ ಗ್ರಾಸವಾದವು. ಓದುಗರಂತೂ ತಮ್ಮ ಆಕ್ರೋಶದಿಂದ ಪತ್ರಿಕೆಗಳಲ್ಲಿ ವಾಚಕರ ಪುಟಗಳನ್ನು ತುಂಬಿದರು. ಅಷ್ಟೇ ಅಲ್ಲ, 'ನಾಂದಿ' ಚಿತ್ರಕ್ಕೆ ಆದ ಈ ಅನ್ಯಾಯದ ವಿರುದ್ಧ ರಾಜ್ಯದ ಅನೇಕ ಕಡೆಗಳಲ್ಲಿ ಚಿತ್ರಪ್ರೇಮಿಗಳು ಮೆರವಣಿಗೆಗಳನ್ನು ನಡೆಸಿದರು. ಈ ಬೆಳವಣಿಗೆಯಿಂದಾಗಿ ಕೇಂದ್ರ ಪ್ರಶಸ್ತಿ ಮಂಡಳಿ ಪ್ರಾದೇಶಿಕ ಸಮಿತಿಯಿಂದ ತಿರಸ್ಕೃತವಾದ ಈ ಚಿತ್ರವನ್ನು ನೋಡಲು ನಿರ್ಧರಿಸಿ ಚಿತ್ರದ ಪ್ರತಿಯೊಂದನ್ನು ದೆಹಲಿಗೆ ಕಳುಹಿಸಬೇಕೆಂದು ನಿರ್ಮಾಪಕರಿಗೆ ಕೊನೆಯ ನಿಮಿಷದ ಕರೆ ಕಳುಹಿಸಿತು. ಆದರೆ ವಿಪರ್ಯಾಸವೆಂದರೆ ಈ ಕರೆ ತಂತಿ ಮೂಲಕ ಮಂಗಳವಾರದಂದು ಬಂದ ಕೂಡಲೇ ನಿರ್ಮಾಪಕರು ಚಿತ್ರದ ಪ್ರತಿಯನ್ನು ವಿಮಾನದಲ್ಲಿ ರವಾನಿಸಿದರೂ ಮಾರನೆಯ ದಿನವೇ ಕೇಂದ್ರ ಸಮಿತಿ ತನ್ನ ಆಯ್ಕೆಯ ಪ್ರಶಸ್ತಿಗಳನ್ನು ಪ್ರಕಟಿಸಿತು. ಆ ಪಟ್ಟಿಯಲ್ಲಿ 'ನಾಂದಿ' ಇಲ್ಲದಿದ್ದದ್ದು ವಿವಾದ ಇನ್ನಷ್ಟು ಉಲ್ಬಣಗೊಳ್ಳುವಂತಾಯಿತು. ಕನ್ನಡ ಚಿತ್ರಪ್ರೇಮಿಗಳ ಕಣ್ಣೊರೆಸುವುದಕ್ಕಾಗಿಯೇ ಕೇಂದ್ರ ಸಮಿತಿ ಚಿತ್ರದ ಪ್ರತಿಯೊಂದನ್ನು ಕಳುಹಿಸಲು ಕೊನೆಯ ನಿಮಿಷದಲ್ಲಿ ಕೇಳಿತೆಂಬ ಗುಲ್ಲು ರಾಜ್ಯದಾದ್ಯಂತ ಹಬ್ಬಿತು. ಆ ವರ್ಷ 'ಚಂದವಳ್ಳಿಯ ತೋಟ'ಕ್ಕೆ ಪ್ರಾದೇಶಿಕ ಬೆಳ್ಳಿಯ ಪದಕ ಲಭ್ಯವಾದರೆ, ವಾದಿರಾಜ್-ಜವಾಹರ್‌ರವರ ಇನ್ನೊಂದು ಉತ್ತಮ ಚಿತ್ರ 'ನವಜೀವನ' ಮತ್ತು ರೀಮೇಕ್ ಚಿತ್ರ 'ಮನೆ ಅಳಿಯ'ಗಳಿಗೆ ಪ್ರಶಸ್ತಿ ಪತ್ರಗಳು ಲಭಿಸಿದವು.

ಇದು ಕೇವಲ 'ನಾಂದಿ'ಯ ಪ್ರಶ್ನೆಯಲ್ಲ. ಕನ್ನಡದಲ್ಲಿ ಕಲಾತ್ಮಕ ಚಿತ್ರಗಳ ಅಳಿವು ಉಳಿವಿನ ಪ್ರಶ್ನೆಯೆಂಬ ಕೂಗು ಕೂಡ ಎದ್ದು ಈ ಪರಿಸ್ಥಿತಿಯಲ್ಲಿ ರಾಜ್ಯ ಸರ್ಕಾರ ತೋರಿದ ನಿಷ್ಕ್ರಿಯತೆಯ ಬಗ್ಗೆಯೂ ಚಿತ್ರಪ್ರೇಮಿಗಳು ಪ್ರತಿಭಟನೆ ತೋರಿದರು. ಆದರೆ ಈ ವಿವಾದದ ನಡುವೆಯೇ ಪ್ರಾದೇಶಿಕ ಸಮಿತಿಯ ಪ್ರಮುಖ ಸದಸ್ಯರಲ್ಲೊಬ್ಬರಾಗಿದ್ದ ಬಿ.ಎನ್.ರೆಡ್ಡಿ ಬೆಂಗಳೂರಿಗೆ ಬಂದಿದ್ದಾಗ ಕನ್ನಡ ಪ್ರಾಥಮಿಕ ಸಮಿತಿಯಲ್ಲಿ ನಾಲ್ವರು ಅಚ್ಚ ಕನ್ನಡಿಗರು ಸದಸ್ಯರಾಗಿದ್ದರೆಂದೂ ಅವರಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿ ಉತ್ತಮ ಅಭಿರುಚಿ ಪಡೆದಿದ್ದ ಇಬ್ಬರು ಹಿರಿಯ ನಿವೃತ್ತ ಸರ್ಕಾರಿ ಅಧಿಕಾರಿಗಳೇ

ಇದ್ದರೆಂದೂ, ಅವರೆಲ್ಲ 'ನಾಂದಿ'ಗೆ ನಾಲ್ಕನೆಯ ಸ್ಥಾನವನ್ನು ಕೊಟ್ಟರೆಂದೂ ತಿಳಿಸಿದಾಗ ವಿವಾದ ಬೇರೊಂದು ಸ್ವರೂಪವನ್ನೇ ಪಡೆಯಿತು. ಪ್ರಾಥಮಿಕ ಸಮಿತಿಯ ಈ ನಿರ್ಧಾರವನ್ನು ಬದಲಾಯಿಸಲು ಪ್ರಾದೇಶಿಕ ಸಮಿತಿಗೆ ಯಾವ ಅಗತ್ಯವೂ ಕಾಣಲಿಲ್ಲವೆಂದೂ ರೆಡ್ಡಿ ತಿಳಿಸಿದರು. ಯಾವುದೇ ಚಿತ್ರಕ್ಕೆ ಈ ರೀತಿ ಪುರಸ್ಕಾರ ಸಿಗದಿದ್ದಾಗ ನಿರ್ಮಾಪಕರು ಮುಖ ಕಹಿ ಮಾಡಿಕೊಳ್ಳದೆ ಸರ್ಕಾರ ನೇಮಿಸಿದ್ದ ಜವಾಬ್ದಾರಿಯುತ ಸಮಿತಿಯ ನಿರ್ಧಾರಗಳನ್ನು ಒಪ್ಪುವುದು ಚಿತ್ರೋದ್ಯಮದ ಹಿತದಿಂದ ಒಳಿತೆಂದು ರೆಡ್ಡಿಯವರು ಕಿವಿಮಾತು ಹೇಳಿ, 'ನಾಂದಿ' ವಿಚಾರದಲ್ಲಿ ರಾಜ್ಯದಾದ್ಯಂತ ನಡೆದ ಪ್ರದರ್ಶನಗಳು, ಪ್ರತಿಭಟನಾ ಸಭೆಗಳಂತಹ ಉಗ್ರ ಕ್ರಮಗಳು ಅನಗತ್ಯವೆಂದಾಗ ಪ್ರತಿಭಟನಾಕಾರರ ಮುನಿಸು ಅವರ ಮೇಲೆ ತಿರುಗಿತು. ಆದರೆ ಈ ಎಲ್ಲ ಹಗರಣಗಳಾದ ಕೆಲವೇ ದಿನಗಳಲ್ಲಿ ಕನ್ನಡ ಚಿತ್ರಪ್ರೇಮಿಗಳ ಸಂಘದ ವಾರ್ಷಿಕ ಪ್ರಶಸ್ತಿಗಳ ಘೋಷಣೆಯಾದಾಗ 'ನಾಂದಿ'ಯ ಪರವಾಗಿ ಚಿತ್ರಪ್ರೇಮಿಗಳು ತೆಗೆದುಕೊಂಡಿದ್ದ ನಿಲುವಿಗೆ ವ್ಯತಿರಿಕ್ತವಾಗಿ ಆ ಚಿತ್ರಕ್ಕೆ ಸಂಘದಿಂದಲೂ ಅತ್ಯುತ್ತಮ ಚಿತ್ರಪ್ರಶಸ್ತಿ ಲಭ್ಯವಾಗದಿದ್ದುದೊಂದು ಸೋಜಿಗವೆನಿಸಿತು. ಅತ್ಯುತ್ತಮ ಸಂಗೀತ, ಹಿನ್ನೆಲೆ ಗಾಯನ, ಪೋಷಕ ನಟಿ ಮತ್ತು ಹಾಸ್ಯ ನಟರ ಪ್ರಶಸ್ತಿಗಳು ಮಾತ್ರ 'ನಾಂದಿ'ಗೆ ಸಂದವು.

ಆದರೂ 'ನಾಂದಿ' ಕನ್ನಡ ಚಲನಚಿತ್ರ ಇತಿಹಾಸದಲ್ಲೊಂದು ಮೈಲಿಗಲ್ಲಾಗಿ ನಿಂತಿತು. ನಿರ್ದೇಶಕ ಲಕ್ಷ್ಮೀನಾರಾಯಣ್ ಕನ್ನಡ ಚಿತ್ರರಂಗದಲ್ಲಿ ಹೊಸ ಪ್ರಜ್ಞೆಯೊಂದರ ರೂವಾರಿಯೆಂಬ ಹೆಗ್ಗಳಿಕೆಯನ್ನು ಗಳಿಸಿದರು. ಲಕ್ಷ್ಮೀನಾರಾಯಣ್ ಅದೇ ದಶಕದಲ್ಲಿ ಇನ್ನೊಂದು ದೊಡ್ಡ ವಿವಾದದಲ್ಲಿಯೂ ಸಿಕ್ಕಿಕೊಂಡರು.



(ಚಿತ್ರ ೮) ದೇಶ ವಿದೇಶಗಳಲ್ಲಿ ಸುದ್ದಿ ಮಾಡಿದ 'ಸಂಸ್ಕಾರ' ಚಿತ್ರದಲ್ಲಿ ಗಿರೀಶ್ ಕಾರ್ನಾಡ್

೧೯೬೯-೭೦ರ ಸಾಲಿನ ರಾಜ್ಯ ಚಲನಚಿತ್ರ ಪ್ರಶಸ್ತಿಗಳ ಬಗ್ಗೆ ದೊಡ್ಡ ಬಿರುಗಾಳಿಯೇ ಎದ್ದಿತು. ಬಿ.ಆರ್.ಪಂತುಲು ನಿರ್ಮಿಸಿ ನಿರ್ದೇಶಿಸಿದ 'ಶ್ರೀ ಕೃಷ್ಣದೇವರಾಯ'ದಲ್ಲಿ ನಾಮಪಾತ್ರಧಾರಿಯಾಗಿದ್ದವರು ರಾಜಕುಮಾರ್. ಮಹಾಮಂತ್ರಿ ತಿಮ್ಮರಸು ಪಾತ್ರದಲ್ಲಿ ಬಿ.ಆರ್.ಪಂತುಲು ನೀಡಿದ ಅಮೋಘ ಅಭಿನಯಕ್ಕಾಗಿ ಅವರಿಗೆ ಆ ವರ್ಷದ ಅತ್ಯುತ್ತಮ ನಟ ಪ್ರಶಸ್ತಿ ಲಭ್ಯವಾಯಿತು. ಆದರೆ ತಾವು ಆ ಚಿತ್ರದ ನಾಯಕ ನಟನಾಗಿರಲಿಲ್ಲವಾದ್ದರಿಂದ ಪ್ರಶಸ್ತಿ ರಾಜಕುಮಾರ್‌ಗೇ ಸಲ್ಲಬೇಕೆಂಬ ನಿಲುವನ್ನು ತಾಳಿದ ಪಂತುಲು ತಮಗೆ ಬಂದ ಪ್ರಶಸ್ತಿಯನ್ನು ನಿರಾಕರಿಸಿದರು. ಪ್ರಶಸ್ತಿ ಸಮಿತಿ ಚಿತ್ರಕಥೆ ಆಧಾರದ ಮೇಲೆ ಚಿತ್ರದ ನಾಯಕ ಯಾರೆಂಬುದನ್ನು ನಿರ್ಧರಿಸಿತೆಂಬ ಸಮಿತಿ ಸದಸ್ಯ ವಿ.ಎಸ್.ಸುಬ್ಬರಾವ್ ಅವರ ಸ್ಪಷ್ಟನೆಯನ್ನು ಪಂತುಲು ಒಪ್ಪಲಿಲ್ಲ. ಅದೇ ಸಮಯದಲ್ಲಿ ತಾವು ನಿರ್ದೇಶಿಸಿದ 'ಉಯ್ಯಾಲೆ' ಮತ್ತು 'ಮುಕ್ತಿ' ಚಿತ್ರಗಳು ಆ ವರ್ಷದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಹಂಚಿಕೊಳ್ಳಬೇಕಾದಾಗ ಲಕ್ಷ್ಮೀನಾರಾಯಣ್ ಅವರು ಪ್ರಶಸ್ತಿ ಸಮಿತಿಯ ಈ ತೀರ್ಪಿನ ವಿರುದ್ಧ ತೀವ್ರವಾದ ಅಸಮಾಧಾನವನ್ನು ತೋರಿ ಪ್ರಶಸ್ತಿಯನ್ನು ನಿರಾಕರಿಸಿದರು. ಅಷ್ಟೇ ಅಲ್ಲ, ಪ್ರಶಸ್ತಿಗಳನ್ನು ನಿರ್ಧರಿಸಲು ಆ ಸಮಿತಿಯೇ ಅನರ್ಹವೆಂಬ ಕಟುವಾದ ನಿಲುವನ್ನೂ ತಾಳಿದರು. ಇದರಿಂದಾಗಿ ರಾಜ್ಯದಾದ್ಯಂತ ಇನ್ನೊಂದು ದೊಡ್ಡ ವಿವಾದ ಹರಡಿಕೊಂಡಿತು. ಜನತೆ ಹಾಗೂ ಪತ್ರಿಕೆಗಳೇ ತಮ್ಮ ಅಂತಿಮ ನ್ಯಾಯಾಲಯಗಳೆಂದು ಲಕ್ಷ್ಮೀನಾರಾಯಣ್ ಘೋಷಿಸಿದರು.

ಪ್ರಶಸ್ತಿ ಸಮಿತಿಯಲ್ಲಿ ಚಲನಚಿತ್ರ ತಜ್ಞರಾಗಲೀ ಅಥವಾ ನಿರ್ದೇಶಕರಾಗಲಿ ಇಲ್ಲದಿದ್ದುದರಿಂದ ಸಮಿತಿ ಅಪೂರ್ಣವಾಗಿದ್ದು ಚಿತ್ರಗಳ ಗುಣಮಟ್ಟವನ್ನು ನಿರ್ಧರಿಸುವ ಅರ್ಹತೆಯನ್ನು ಕಳೆದು ಕೊಂಡಿದೆಯೆಂದು ವಾದಿಸಿದ ಲಕ್ಷ್ಮೀನಾರಾಯಣ್ ಸಿನಿಮಾ ತಜ್ಞರು ತಮ್ಮ ಚಿತ್ರಗಳಿಗೆ ನೀಡುವ ಯಾವುದೇ ತೀರ್ಪನ್ನು ತಾವು ಒಪ್ಪಿಕೊಳ್ಳಲು ಸದಾ ಸಿದ್ಧರೆಂದು ಹೇಳಿ ರಾಜ್ಯದಲ್ಲಿ ಮತ್ತೊಂದು ಪ್ರಮುಖ ವಿವಾದಕ್ಕೆ ನಾಂದಿ ಹಾಡಿದರು.

ಪಂತುಲುರವರಿಗೆ ಪ್ರಶಸ್ತಿ ಮಂಡಳಿ ಅತ್ಯುತ್ತಮ ನಟ ಪ್ರಶಸ್ತಿಯನ್ನು ನೀಡಿದ ಬಗ್ಗೆ ಮಾತ್ರ ಅಸಮಾಧಾನವಾಗಲಿಲ್ಲ. ಕರ್ನಾಟಕದ ಭವ್ಯ ಸಂಸ್ಕೃತಿಯನ್ನು ನಿರೂಪಿಸಿ, ಅತ್ಯಧಿಕ ವೆಚ್ಚದಲ್ಲಿ ತಾವು ತಯಾರಿಸಿದ 'ಶ್ರೀಕೃಷ್ಣದೇವರಾಯ' ಅಪಾರ ಜನಪ್ರಿಯತೆ ಗಳಿಸಿದ್ದರೂ, ಆ ಚಿತ್ರಕ್ಕೆ ರಾಜ್ಯ ಸರ್ಕಾರ ಮನರಂಜನೆ ತೆರಿಗೆ ವಿನಾಯಿತಿ ನೀಡಿ ಗೌರವಿಸಿದ್ದರೂ ಪ್ರಶಸ್ತಿ ಮಂಡಳಿ ಚಿತ್ರವನ್ನು ಕಥಾಚಿತ್ರಗಳ ಯಾವ ಪ್ರಶಸ್ತಿಗೂ ಗಣನೆಗೆ ತೆಗೆದುಕೊಳ್ಳದಿದ್ದುದರ ಬಗ್ಗೆ ಅವರು ತೀವ್ರ ಅತೃಪ್ತಿ ತೋರಿದರು. ಜನತೆಯ ಮನ್ನಣೆ ಪಡೆದ ಚಿತ್ರವೊಂದಕ್ಕೆ ಜನತಾ ಸರ್ಕಾರದ ಮನ್ನಣೆ ಸಿಗದಿದ್ದುದು ದುರದೃಷ್ಟಕರವೆಂಬ ಅವರ ಹೇಳಿಕೆಯ ಸುತ್ತ ದಿನಗಟ್ಟಲೆ ವಾದ ವಿವಾದಗಳು ಬೆಳೆಯುತ್ತ ಹೋದವು.

ಅದುವರೆಗೆ ಬಿಡುಗಡೆಯೇ ಆಗದಿದ್ದ 'ಮುಕ್ತಿ' ಚಿತ್ರ ಕೂಡ ಪ್ರಶಸ್ತಿಯೊಂದಕ್ಕೆ ಅರ್ಹವೆನಿಸಿಕೊಂಡಿದ್ದು ಪಂತುಲುರವರನ್ನು ಮತ್ತಷ್ಟು ರೊಚ್ಚಿಗೆಬ್ಬಿಸಿತು. ಜನತೆಗೆ ಆ ಚಿತ್ರದ ಅರ್ಹತೆಯನ್ನು ನಿರ್ಧರಿಸುವ ಅವಕಾಶವೇ ಸಿಗದಿದ್ದಾಗ ಅದಕ್ಕೆ ಪ್ರಶಸ್ತಿಯಾದರೂ ಹೇಗೆ ಸಿಕ್ಕಿತು ಎಂದು ಅವರು ತೀಕ್ಷ್ಣವಾಗಿ ಪ್ರಶ್ನಿಸಿದರು.

ಆ ವರ್ಷ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದದ್ದು 'ಗೆಜ್ಜೆಪೂಜೆ'. 'ಶ್ರೀಕೃಷ್ಣದೇವರಾಯ'ಕ್ಕೆ ಲಭಿಸಿದ್ದು ಅತ್ಯುತ್ತಮ ನಟ, ಅತ್ಯುತ್ತಮ ನಟಿ ಮತ್ತು ಅತ್ಯುತ್ತಮ ಸಂಗೀತ ನಿರ್ದೇಶಕ ಪ್ರಶಸ್ತಿಗಳು ಮಾತ್ರ. 'ಉಯ್ಯಾಲೆ' ಮತ್ತು 'ಕಪ್ಪು-ಬಿಳುಪು' ಚಿತ್ರಗಳಲ್ಲಿ ಕಲ್ಪನಾ ತೋರಿದ ಪ್ರೌಢ ಅಭಿನಯಕ್ಕಾಗಿ ಆಕೆಗೆ ಮನ್ನಣೆ ಸಿಗದಿದ್ದ ಬಗ್ಗೆ ಕೂಡ ಅನೇಕ ಚಿತ್ರಪ್ರೇಮಿಗಳು ಪತ್ರಿಕೆಗಳ ಮೂಲಕ ತಕರಾರು ಹೂಡಿದರು. ಆದರೆ ಬಿಡುಗಡೆಯೇ ಆಗದ ಚಿತ್ರವೊಂದಕ್ಕೆ ಪ್ರಶಸ್ತಿ ಸಂದ ಬಗ್ಗೆ ಪಂತುಲುರವರು ಎತ್ತಿದ ತಗಾದೆಗೆ ಮನ್ನಣೆ ಸಿಗಲಿಲ್ಲ. ಕಾರಣ, ಯಾವುದೇ ಚಿತ್ರ ಒಂದು ನಿರ್ದಿಷ್ಟ ಅವಧಿಯ ಒಳಗೆ ಸೆನ್ಸಾರ್ ಆಗಿದ್ದರೆ ಸಾಕು, ಅದು ಪ್ರಶಸ್ತಿ ಪಡೆಯಲು ಅರ್ಹತೆ ಪಡೆಯುತ್ತದೆ ಎಂಬ ನಿಯಮವೇ ಇತ್ತು. ಆದರೆ ಕೊನೆಗೂ ಪಂತುಲುರವರಾಗಲಿ, ಲಕ್ಷ್ಮೀನಾರಾಯಣ್‌ರಾಗಲಿ ತಮ್ಮ ಪ್ರಶಸ್ತಿಗಳನ್ನು ಸ್ವೀಕರಿಸಲೇ ಇಲ್ಲ.

೧೯೭೦ರಲ್ಲಿ ಕನ್ನಡ ಚಿತ್ರರಂಗವನ್ನು ಮತ್ತೊಂದು ಪ್ರಮುಖ ವಿವಾದ ಆವರಿಸಿ ಹೊರರಾಜ್ಯಗಳಿಗೂ ಹಬ್ಬಿ ವಿದೇಶಗಳಲ್ಲಿಯೂ ಸುದ್ದಿ ಮಾಡಿತು. 'ಸಂಸ್ಕಾರ' ಬುದ್ಧಿಜೀವಿಗಳ ಮತ್ತು ಕಲಾತ್ಮಕ ಚಿತ್ರಗಳ ಆರಾಧಕರ ಅತೀವ ನಿರೀಕ್ಷೆಯ ನಡುವೆ ಬಿಡುಗಡೆಯಾದ ಚಿತ್ರ. ಆದರೆ ಆಗಿನ್ನೂ ಕರ್ನಾಟಕಕ್ಕೆ ಪರಿಚಿತರಲ್ಲದ ಪಟ್ಟಾಭಿರಾಮ ರೆಡ್ಡಿಯವರು ನಿರ್ಮಿಸಿ, ನಿರ್ದೇಶಿಸಿದ ಈ ಚಿತ್ರದ ಬಿಡುಗಡೆ ಒಂದು ಪರ್ವತ ಪ್ರಸವವೇ ಆಯಿತು. ಕಾರಣ ಅದಕ್ಕೆ ಸೆನ್ಸಾರ್ ಸಮಿತಿಯವರು ಹಾಕಿದ ಅಡ್ಡಗಾಲು. ಆಗಿನ್ನೂ ಕನ್ನಡ ಚಿತ್ರಗಳು ಮದರಾಸಿನಲ್ಲಿಯೇ ಸೆನ್ಸಾರ್ ಆಗುತ್ತಿದ್ದವು. ಅಲ್ಲಿನ ಪ್ರಾದೇಶಿಕ ಮಂಡಳಿ 'ಸಂಸ್ಕಾರ'ಕ್ಕೆ ಸೆನ್ಸಾರ್ ಪರವಾನಗಿಯನ್ನು ನಿರಾಕರಿಸಿತು. ಯು.ಆರ್.ಅನಂತಮೂರ್ತಿಯವರ ಅದೇ ಹೆಸರಿನ ವಿಚಾರಪೂರ್ಣ ಕಾದಂಬರಿಯ ಆಧಾರದ ಮೇಲೆ ತಯಾರಾದ ಆ ಚಿತ್ರ ವಿವಾದಾಸ್ಪದ ಕಥೆಯನ್ನು ಹೊಂದಿದ್ದು ಒಂದು ವರ್ಗದ (ಅಂದರೆ ಬ್ರಾಹ್ಮಣರ) ಭಾವನೆ ಹಾಗೂ ಸಂಪ್ರದಾಯಗಳನ್ನು ಪ್ರಚೋದಕವಾಗಿ ಕಣಕುವುದೆಂಬ ಕಾರಣದಿಂದ ಮಂಡಳಿ ಈ ನಿಷೇಧವನ್ನು ಹೇರಿದರೂ ಈ ಬಗ್ಗೆ ಅಧಿಕೃತ ವಿವರಣೆಯೇನೂ ಬರಲಿಲ್ಲ. ಈ ನಿರ್ಧಾರದಿಂದಾಗಿ ದೇಶದ ಅನೇಕ ಭಾಗಗಳಲ್ಲಿ ತೀವ್ರವಾದ ಪ್ರತಿಭಟನೆಯ ದಳ್ಳುರಿಯೇ ಎದ್ದಿತು. ನಂತರದ ವರ್ಷಗಳಲ್ಲಿ ಸೆನ್ಸಾರ್ ಮಂಡಳಿಯ ಅನೇಕ ನಿರ್ಧಾರಗಳ ಬಗ್ಗೆ ಇಂತಹ

ವಿವಾದಗಳು ಸಾಮಾನ್ಯವೆನಿಸಿದರೂ 'ಸಂಸ್ಕಾರ'ದ ಸಂದರ್ಭದಲ್ಲಿ ಚಿತ್ರವೊಂದಕ್ಕೆ ಸೆನ್ಸಾರ್ ಸರ್ಟಿಫಿಕೇಟ್ ನಿರಾಕರಣೆ ಸಾರ್ವಜನಿಕ ಅಭಿಪ್ರಾಯವನ್ನು ಅಷ್ಟು ಪ್ರಬಲವಾಗಿ ಕಲಕಿದ್ದು ಅದೇ ಮೊದಲು.

ಈ ಘಟನೆಯ ಬಗ್ಗೆ ನಿರ್ಮಾಪಕ ನಿರ್ದೇಶಕ ಪಟ್ಟಾಭಿರಾಮ ರೆಡ್ಡಿ ಕೇಂದ್ರ ವಾರ್ತಾ ಸಚಿವಾಲಯಕ್ಕೆ ಸಲ್ಲಿಸಿದ ಮನವಿ ತಿಂಗಳುಗಟ್ಟಲೆ ದೆಹಲಿಯಲ್ಲಿ ಧೂಳು ತಿನ್ನುತ್ತಿದ್ದಂತೆ ದೆಹಲಿಯ ೧೫ ಪ್ರಮುಖ ಬುದ್ಧಿಜೀವಿಗಳು ಒಂದು ಹೇಳಿಕೆಯನ್ನಿತ್ತು ಈ ನಿಷೇಧವನ್ನು ತೀವ್ರವಾಗಿ ಖಂಡಿಸಿದರು. 'ಸಂಸ್ಕಾರ'ದ ಚಿತ್ರ ಸಾಹಿತ್ಯಕ್ಕೆ ಶೃಂಗೇರಿ ಜಗದ್ಗುರುಗಳು ಮನ್ನಣೆ ನೀಡಿದ ನಂತರವೇ ಅವರದೇ ಪ್ರಭಾವವಲ್ಲಿದ್ದ ಮಲೆನಾಡಿನ ಗ್ರಾಮವೊಂದರಲ್ಲಿ ಚಿತ್ರದ ಚಿತ್ರೀಕರಣ ನಡೆದ ಉಲ್ಲೇಖವೂ ಆ ಹೇಳಿಕೆಯಲ್ಲಿತ್ತು. ಈ ನಿಷೇಧದ ಬಗ್ಗೆ ಸಂಸತ್ತಿನಲ್ಲಿ ಕೂಡ ಪ್ರಸ್ತಾಪವಾಗಿದ್ದೊಂದು ವಿಶೇಷ. ಪ್ರಾದೇಶಿಕ ಸೆನ್ಸಾರ್ ಸಮಿತಿಯ ನಿರ್ಧಾರವನ್ನು ಕೇಂದ್ರ ಸೆನ್ಸಾರ್ ಮಂಡಳಿಯೂ ಎತ್ತಿ ಹಿಡಿದಿದ್ದರಿಂದ ಈ ಬಗ್ಗೆ ಅಂತಿಮ ನಿರ್ಧಾರವನ್ನು ಕೈಗೊಳ್ಳುವುದು ಕೇಂದ್ರ ಸರ್ಕಾರದ ಜವಾಬ್ದಾರಿಯೇ ಆಗಿತ್ತು. ಅಂದಿನ ಕೇಂದ್ರ ವಾರ್ತಾ ಮಂತ್ರಿ ಐ.ಕೆ.ಗುಜ್ರಾಲ್‌ರವರೆಗೂ ಪಟ್ಟಾಭಿರಾಮ ರೆಡ್ಡಿ ತಮ್ಮ ಅಹವಾಲನ್ನು ಕೊಂಡೊಯ್ದರು. ದೆಹಲಿಯಲ್ಲಿ ಅನೇಕ ವಿಚಾರವಂತರೂ ಖಾಸಗಿ ಪ್ರದರ್ಶನಗಳಲ್ಲಿ ಈ ಚಿತ್ರವನ್ನು ವೀಕ್ಷಿಸಿ ರೆಡ್ಡಿಯವರ ಪ್ರತಿಭಟನೆಗೆ ದನಿಗೂಡಿಸಿದರು.

ಮೈಸೂರು ಚಲನಚಿತ್ರ ವಾಣಿಜ್ಯ ಮಂಡಳಿಯೂ ರೆಡ್ಡಿಯವರ ಬೆಂಬಲಕ್ಕೆ ನಿಂತಿತು. ಅವೇ ತಾನೆ ಜಾಗೃತಗೊಳ್ಳುತ್ತಿದ್ದ ಕನ್ನಡ ಚಿತ್ರರಂಗಕ್ಕೆ ಸೆನ್ಸಾರ್ ಅಧಿಕಾರಿಗಳು ತಂದ ಈ ತೀವ್ರ ಆಘಾತ ತಮ್ಮ ಸಂಸ್ಥೆಯನ್ನು ದಿಗ್ಭ್ರಮೆಗೊಳಿಸಿದೆ ಎಂದು ಮಂಡಳಿಯ ಅಧ್ಯಕ್ಷ ವಿ.ಜಿ.ಚೌಟಿ ಹೇಳಿದರು. ಒಂದು ಭಾಷೆಯಲ್ಲಿ ಲಕ್ಷಾಂತರ ಪ್ರಬುದ್ಧರು ಓದಿ ಮೆಚ್ಚಿಕೊಂಡ ಜನಪ್ರಿಯ ಕಾದಂಬರಿಯ ಆಧಾರದ ಮೇಲೆ ನಿರ್ಮಿತವಾದ ಈ ಚಿತ್ರದ ಬಗ್ಗೆ ಸೆನ್ಸಾರ್ ಮಂಡಳಿ ತೋರಿದ ವರ್ತನೆ ವಿರೋಧಾಭಾಸವಾಗಿದೆಯೆಂದು ಟೀಕಿಸಿದರು. ಅಲ್ಲದೆ ಚಿತ್ರವನ್ನು ನಿಷೇಧಿಸಿದ್ದಕ್ಕೆ ಮಂಡಳಿ ಯಾವುದೇ ರೀತಿಯ ಅಧಿಕೃತ ವಿವರಣೆಯನ್ನು ನೀಡದಿದ್ದುದು ಈ ಹಗರಣವನ್ನು ಮತ್ತಷ್ಟು ಬಗ್ಗಡಗೊಳಿಸಿದೆಯೆಂದೂ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರು ಕಟುವಾಗಿಯೇ ದೂರಿದರು. ಕನ್ನಡ ಚಿತ್ರವೊಂದರ ಸೆನ್ಸಾರ್ ಸಮಸ್ಯೆಯ ಬಗ್ಗೆ ವಾಣಿಜ್ಯ ಮಂಡಳಿ ಕೇಂದ್ರ ಸರ್ಕಾರದೊಂದಿಗೆ ಈ ರೀತಿ ಸಕ್ರಿಯವಾಗಿ ವ್ಯವಹರಿಸಿದ್ದು ಅದೇ ಮೊದಲು.

ಕನ್ನಡ ನಾಡಿನ ಪತ್ರಿಕೆಗಳಲ್ಲಂತೂ 'ಸಂಸ್ಕಾರ'ದ ನಿಷೇಧದ ಬಗೆಯ ತೀವ್ರ ವಿರೋಧ ಪುಟಗಟ್ಟಲೆ ರಾರಾಜಿಸಿತು. ಎಷ್ಟೋ ವಿಚಾರ ಸಂಕಿರಣಗಳಲ್ಲಿ ಈ ಹಗರಣ ಪ್ರಧಾನವಾಗಿ ಪ್ರಸ್ತಾಪವಾಗುತ್ತಲೇ ಹೋಯಿತು. ಕೊನೆಗೂ ೧೯೭೦ರ ಜನವರಿ ಚಿತ್ರಕ್ಕೆ ಸೆನ್ಸಾರ್ ಮುಷ್ಟಿಯಿಂದ ಮುಕ್ತಿ ಸಿಕ್ಕಿತು.

ವೈಶಿಷ್ಟ್ಯವೆಂದರೆ ಕೊನೆಗೂ ಸೆನ್ಸಾರ್ ಬಾಧೆಯಿಂದ ಪಾರಾದ ನಂತರ 'ಸಂಸ್ಕಾರ'ಕ್ಕೆ ಹಿನ್ನೆಲೆ ಸಂಗೀತವನ್ನು ಅಳವಡಿಸಲಾಯಿತು. ಉಸ್ತಾದ್ ಅಲಿ ಅಕ್ಬರ್ ಖಾನ್‌ರ ಶಿಷ್ಯ ಅಚ್ಚ ಕನ್ನಡಿಗ ಹಾಗೂ ಸರೋದ್ ಪಟು ಡಾ|ರಾಜೀವ ತಾರಾನಾಥ್ ಸಂಗೀತ ನೀಡಿದ ಪ್ರಥಮ ಚಿತ್ರ ಇದು. ಇದಾದ ನಂತರ ಚಿತ್ರಕ್ಕೆ 'ಎ' ಸರ್ಟಿಫಿಕೇಟ್ ಕೊಡಬೇಕೆಂದು ಕೇಂದ್ರ ಸರ್ಕಾರ ನಿರ್ಧರಿಸಿತು. ಈ ಬಗ್ಗೆ ಲೋಕಸಭೆಯಲ್ಲಿ ಅಧಿಕೃತ ಹೇಳಿಕೆ ನೀಡಿದ ವಾರ್ತಾ ಸಚಿವ ಗುಜ್ರಾಲ್ ಮಾಧ್ವ ಯುವಕ ಸಂಘದ ಅಹವಾಲಿನ ಆಧಾರದ ಮೇಲೆ ಸೆನ್ಸಾರ್ ಮಂಡಳಿ ಚಿತ್ರಕ್ಕೆ ಸರ್ಟಿಫಿಕೇಟ್ ನಿರಾಕರಿಸಿತ್ತೆಂದು ವಿವರಿಸಿದರು.

ಆದರೆ ಗುಜ್ರಾಲ್‌ರವರ ಹಸ್ತಕ್ಷೇಪದಿಂದಾಗಿ 'ಸಂಸ್ಕಾರ'ಕ್ಕೆ 'ಎ' ಸರ್ಟಿಫಿಕೆಟ್ ಲಭ್ಯವಾದ ನಂತರವೂ ಚಿತ್ರದ ಬಗ್ಗೆ ಮಾಧ್ವ ಯುವಕ ಸಂಘದ ಪ್ರತಿಭಟನೆ ನಿಲ್ಲಲಿಲ್ಲ. ಸಂಘ ಸರ್ಟಿಫಿಕೇಟ್ ನೀಡಿಕೆಯ ವಿರುದ್ಧವಾಗಿ ಹೇಳಿಕೆಗಳನ್ನು ಕೊಡುತ್ತಲೇ ಹೋಯಿತು. ಆದರೆ ಕೊನೆಗೂ ಚಿತ್ರ ೧೯೭೦ರ ಜುಲೈ ೩ರಂದು ರಾಜಧಾನಿ ಬೆಂಗಳೂರಿನಲ್ಲಿ ಬಿಡುಗಡೆಯಾಗಿ ಕನ್ನಡ ಚಿತ್ರರಂಗದಲ್ಲೊಂದು ಹೊಸ ಮೈಲಿಗಲ್ಲನ್ನೇ ಸ್ಥಾಪಿಸಿತು. ಚಿತ್ರದ ಬಿಡುಗಡೆಯ ದಿನ ಸೆನ್ಸಾರ್‌ನಿಂದ ಅದರ ವಿಮುಕ್ತಿಗಾಗಿ ವಿಶೇಷ ಶ್ರಮವಹಿಸಿದ್ದ ಗುಜ್ರಾಲ್ ಅವರೇ ಮುಖ್ಯ ಅತಿಥಿಯಾಗಿ ಬಂದರು.

ಆದರೆ 'ಸಂಸ್ಕಾರ'ಕ್ಕೆ ಉದ್ಯಮದ ಎಲ್ಲಾ ವಲಯಗಳಿಂದಲೂ ಸರ್ವಾನುಮತದ ಪುರಸ್ಕಾರವೇನೂ ದೊರಕಲಿಲ್ಲ. ಅದು ಬ್ರಾಹ್ಮಣರನ್ನು ನಿಂದಿಸಲೆಂದೇ ತಯಾರಾದ ಚಿತ್ರವೆನ್ನುವ ಟೀಕೆ ತಣ್ಣಗಾಗಲೂ ಇಲ್ಲ. ಆ ವೇಳೆಗಾಗಲೇ ಉದ್ಯಮದಲ್ಲಿ ಪ್ರಥಮ ಶ್ರೇಣಿಯ ನಿರ್ದೇಶಕರೆಂದು ಹೆಸರು ಗಳಿಸಿದ್ದ ಪುಟ್ಟಣ್ಣ ಕಣಗಾಲ್ ಅವರಿಗೆ ಈ ಚಿತ್ರದಲ್ಲಿ ಯಾವ ವೈಶಿಷ್ಟ್ಯವೂ ಕಾಣಲಿಲ್ಲ. ನಟ ಉದಯಕುಮಾರ್ ಕೂಡ ಚಿತ್ರದ ವಿರುದ್ಧ ಘೋಷಣೆ ಮಾಡಿದರು. ಈ ಹೇಳಿಕೆಗಳಿಗೆ ಹೇರಳವಾಗಿ ಖಂಡನೆಗಳು, ಸಮರ್ಥನೆಗಳು ಬಂದವು.

ಚಿತ್ರದ ಟೈಟಲ್ ಕಾರ್ಡಿನಲ್ಲಿ ಚಿತ್ರಕ್ಕೆ ಶೃಂಗೇರಿ ಜಗದ್ಗುರುಗಳು ಆಶೀರ್ವಾದ ನೀಡಿದ್ದಾರೆಂದು ಮಾಡಿದ್ದ ಒಕ್ಕಣಿಕೆ ಕೂಡ ಇನ್ನೊಂದು ವಿವಾದಕ್ಕೆ ಕಾರಣವಾಯಿತು. ಬೆಂಗಳೂರು ಶಂಕರಮಠದ ಮುಖ್ಯಾಧಿಕಾರಿಯಾಗಿದ್ದ ಭಾಸ್ಕರರಾವ್ ಈ ಬಗ್ಗೆ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿ ಪ್ರಕಟಣೆಯೊಂದನ್ನೂ ಕೊಟ್ಟರು. ಆದರೆ ಪಟ್ಟಾಭಿರಾಮ ರೆಡ್ಡಿಯವರು ತಮ್ಮ ಬಳಿ ಚಿತ್ರಣದ ಪ್ರಾರಂಭದಲ್ಲಿಯೇ ಶೃಂಗೇರಿಯ ಶ್ರೀಗಳು ಬರೆದಿದ್ದ ಆಶೀರ್ವಾದ ಪತ್ರ ಇದೆಯೆಂದು ಹೇಳಿ ನೇರವಾಗಿಯೇ ಅಖಾಡಕ್ಕಿಳಿದರು. ಆದರೆ ಇಷ್ಟೆಲ್ಲ ಗೊಂದಲಗಳ ನಡುವೆ ಬಿಡುಗಡೆಯಾದ 'ಸಂಸ್ಕಾರ' ಕನ್ನಡ ನಾಡಿನಲ್ಲಿ ಮಾತ್ರವಲ್ಲ, ದೇಶ-ವಿದೇಶಗಳಲ್ಲಿ ಜಯಭೇರಿ ಬಾರಿಸಿ ಅತ್ಯುತ್ತಮ ಚಿತ್ರಕ್ಕಾಗಿ ಭಾರತ ಸರ್ಕಾರದ ಸ್ವರ್ಣಕಮಲವನ್ನು ತನ್ನದಾಗಿಸಿಕೊಂಡಿತು. ಈ ಹಿರಿಮೆಗೆ ಪಾತ್ರವಾದ ಮೊದಲ ಕನ್ನಡ ಚಿತ್ರ ಅದು. ಅನೇಕ ಅಂತರರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಪ್ರದರ್ಶನವನ್ನು ಕಂಡ ಈ ಚಿತ್ರ ಅನೇಕ ದೇಶಗಳಲ್ಲಿ ವ್ಯಾಪಾರಿ ಯಶಸ್ಸನ್ನು ಗಳಿಸಿತು. ಕನ್ನಡದ ಇನ್ನಾವ ಚಿತ್ರವೂ 'ಸಂಸ್ಕಾರ'ದಷ್ಟು ವ್ಯಾಪಕವಾಗಿ ವಿದೇಶಗಳಲ್ಲಿ ಪ್ರದರ್ಶಿತವಾಗಿಲ್ಲ.

೧೯೬೧-೭೦ರ ದಶಕದಲ್ಲಿ ಟೆಲಿವಿಷನ್ ಯುಗವಿನ್ನೂ ಪ್ರಾರಂಭವಾಗಿರಲಿಲ್ಲ. ಆಗ ಕನ್ನಡ ಚಿತ್ರ ಸಂಗೀತಕ್ಕೆ ಪ್ರಚಾರ ಸಿಗಬೇಕಾದರೆ ಭಾರತದ ಆಕಾಶವಾಣಿ ಮತ್ತು ರೇಡಿಯೋ ಸಿಲೋನ್‌ಗಳಿಂದ ಮಾತ್ರ. ಆದರೂ ಈ ಎರಡೂ ಮಾಧ್ಯಮಗಳಲ್ಲಿ ಕನ್ನಡ ಚಿತ್ರಗೀತೆಗಳಿಗೆ ಸಿಗುತ್ತಿದ್ದ ಪ್ರಾತಿನಿಧ್ಯದ ಬಗ್ಗೆ ಚಿತ್ರಪ್ರೇಮಿಗಳಲ್ಲಿ ತೀವ್ರವಾದ ಅಸಮಾಧಾನವಿತ್ತು. ಈ ಅಸಮಾಧಾನ ಆಗಾಗ ಭುಗಿಲೇಳುತ್ತಲೇ ಇತ್ತು. ಆಗ ಮುಂಬಯಿ ವಿವಿಧ ಭಾರತಿ ಕೇಂದ್ರದಿಂದ ಪ್ರತಿದಿನ ಆರು ಕನ್ನಡ ಗೀತೆಗಳು ಪ್ರಸಾರವಾದರೆ, ಬೆಂಗಳೂರು ಕೇಂದ್ರದಿಂದ ವಾರಕ್ಕೆ ಕೇವಲ ಹತ್ತು ಹಾಡುಗಳು ಪ್ರಸಾರವಾಗುತ್ತಿದ್ದವು. ಅವುಗಳಲ್ಲಿಯೂ ಹೆಚ್ಚು ಹಾಡುಗಳು ಕೆಟ್ಟದಾಗಿರುತ್ತಿದ್ದುದು ಶ್ರೋತೃಗಳ ಅತೃಪ್ತಿಗೆ ಕಾರಣವಾಗಿತ್ತು. ಅದೂ ಅಲ್ಲದೆ ಅಂತಹ ಕೆಟ್ಟ ಹಾಡುಗಳನ್ನೇ ಮತ್ತೆ ಮತ್ತೆ ಮರು ಪ್ರಸಾರ ಮಾಡುತ್ತಿದ್ದ ಪರಿಪಾಠ ಬೇರೆ ಈ ಅತೃಪ್ತಿಯನ್ನು ಹೆಚ್ಚಿಸಿತ್ತು. ಇದಕ್ಕೆಲ್ಲ ಕಾರಣ ಬೆಂಗಳೂರು ಕೇಂದ್ರದ ನಿರ್ದೇಶಕರು ಬಹುತೇಕ ಕನ್ನಡೇತರರೇ ಆಗಿದ್ದುದೂ ಹೌದು. ಕೇಂದ್ರದ ಕನ್ನಡಿಗ ಅಧಿಕಾರಿಗಳೂ ಈ ಬಗ್ಗೆ ಯಾವ ಕಾಳಜಿಯನ್ನೂ ತೋರುತ್ತಿರಲಿಲ್ಲ. ಜೊತೆಗೆ ಚಿತ್ರರಂಗದ ಪ್ರಮುಖರೊಂದಿಗೆ ಸಂದರ್ಶನಗಳಾಗಲಿ, ವಿಚಾರ ವಿನಿಮಯವಾಗಲಿ ನಡೆಯುತ್ತಿರಲಿಲ್ಲ. ಹೀಗಾಗಿ ಕನ್ನಡ ಚಿತ್ರರಂಗ ಮತ್ತು ಬಾನುಲಿಗಳ ನಡುವೆಯ ನಂಟು ಉದ್ಯಮಕ್ಕೆ ಅನುಕೂಲವಾಗಿದ್ದರೂ ಗಟ್ಟಿಯಾಗಿರಲಿಲ್ಲ. ಈ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಸುಧಾರಿಸಬೇಕಾದರೆ ಸಾಕಷ್ಟು ಸಮಯವೇ ಹಿಡಿಯಿತು.

ಆದರೆ ಈ ದಶಕ ಸ್ಮರಣೀಯವೆನಿಸಿದ್ದು ಈ ಪ್ರಮುಖ ವಿವಾದಗಳು ಮತ್ತು ಇನ್ನೂ ಕೆಲವು ಸಣ್ಣ-ಪುಟ್ಟ ವಿವಾದಗಳಿಂದಾಗಿ ಮಾತ್ರವಲ್ಲ. ಕ್ರಿಯಾತ್ಮಕವಾಗಿ ಅನೇಕ ಹೊಸ ದಾಖಲೆಗಳನ್ನು ನಿರ್ಮಿಸಿ ಕನ್ನಡ ಚಿತ್ರರಂಗಕ್ಕೆ ಹೆಮ್ಮೆ ತಂದ ದಶಕ ಇದು. ಈ ದಶಕವನ್ನು ಕನ್ನಡ ಚಿತ್ರರಂಗದ 'ಸುವರ್ಣ ಯುಗ'ವೆಂದು ವಿಶ್ಲೇಷಿಸುವವರೂ ಇದ್ದಾರೆ. ಆದರೆ ಈ ವಿಶ್ಲೇಷಣೆ ಸ್ವಲ್ಪ ಉತ್ಪ್ರೇಕ್ಷಿತವೆಂದೇ ಹೇಳಬೇಕು.

ಖ್ಯಾತ ನಿರ್ದೇಶಕರೊಬ್ಬರ ಪ್ರಕಾರ ಅನೇಕ ಚೇತನಗಳ ಆಸೆಗಳು, ಅಭಿಲಾಷೆಗಳು ಗರಿಕಟ್ಟಿಕೊಂಡ ದಶಕ ಇದು. ಈ ದಶಕದಲ್ಲಿ ಹೊಸ ಪೀಳಿಗೆಯ ಅನೇಕ ಪ್ರತಿಭೆಗಳು ಬೆಳಕಿಗೆ ಬಂದು ಅವರ ಕನಸುಗಳನ್ನು, ಆದರ್ಶಗಳನ್ನು ಚಿತ್ರಪ್ರೇಮಿಗಳ ಮುಂದಿಟ್ಟರು. ಎಲ್ಲರಿಗೂ ಏನಾದರೂ ಸಾಧನೆ ಮಾಡಬೇಕೆಂಬ ತುಡಿತ ಹುಟ್ಟಿತು. ಈ ಅನೇಕ ಆದರ್ಶಗಳಿಗೆ ಪ್ರತಿಫಲ ಸಿಕ್ಕಿದ್ದು ಮುಂದಿನ ದಶಕದಲ್ಲಿಯೇ ಆದರೂ ಇದೇ ದಶಕದಲ್ಲಿ ಅನೇಕ ನಿರ್ಮಾಪಕರು, ನಿರ್ದೇಶಕರು, ತಂತ್ರಜ್ಞರು, ನಟ-ನಟಿಯರು ಕನ್ನಡ ಚಿತ್ರರಂಗದ ಮುಂದಿನ ಸಾಧನೆಗಳಿಗೆ ಭದ್ರವಾದ ಬುನಾದಿ ಹಾಕಿದರು.

ಈ ದಶಕದಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ೨೨೯ ಮಾತ್ರ. ಆದರೆ ೧೯೫೧-೬೦ರ ದಶಕದಲ್ಲಿ ಬಿಡುಗಡೆಯಾದ ಚಿತ್ರಗಳಿಗಿಂತ ಇದು ಮೂರು ಪಟ್ಟು ಹೆಚ್ಚು ಎನ್ನುವುದೂ ಗಮನಾರ್ಹ. ೧೯೬೧ರಲ್ಲಿ ಕೇವಲ ಎಂಟು ಚಿತ್ರಗಳು ತೆರೆ ಕಂಡರೂ ೧೯೭೦ರಲ್ಲಿ ೩೫ ಚಿತ್ರಗಳು ಬಿಡುಗಡೆಯಾದವು. ಅದರ ಹಿಂದಿನ ವರ್ಷ ಬಿಡುಗಡೆಯಾದ ಚಿತ್ರಗಳ ಸಂಖ್ಯೆ ೩೭.

೧೯೫೧-೬೦ರ ದಶಕದಲ್ಲಿ ತಯಾರಾದ ಸಾಮಾಜಿಕ ಚಿತ್ರಗಳ ಸಂಖ್ಯೆ ಕೇವಲ ೨೮. ಕನ್ನಡ ಚಿತ್ರರಂಗ ಆಗ ಪೌರಾಣಿಕ ಮತ್ತು ಜಾನಪದ ಚಿತ್ರಗಳನ್ನೇ ಹೆಚ್ಚಾಗಿ ಅವಲಂಬಿಸಿದ್ದುದೇ ಇದಕ್ಕೆ ಮೂಲ ಕಾರಣ. ಆದರೆ ೧೯೬೧-೭೦ರ ದಶಕದಲ್ಲಿ ಆ ಜಾಡಿನ ಚಿತ್ರಗಳ ಸಂಖ್ಯೆ ಗಣನೀಯವಾಗಿ ೫೦ಕ್ಕೆ ಇಳಿದು ಸಾಮಾಜಿಕ ಚಿತ್ರಗಳ ಮುನ್ನಡೆಗೆ ದಾರಿ ಮಾಡಿಕೊಟ್ಟವು. ಅದರಲ್ಲಿಯೂ ಪ್ರಕಟಿತ ಕಾದಂಬರಿಯೊಂದರ ಆಧಾರದ ಮೇಲೆ ಚಿತ್ರಗಳನ್ನು ತಯಾರಿಸುವ ಪರಿಪಾಠವೂ ಈ ದಶಕದಲ್ಲಿಯೇ ಪ್ರಾರಂಭವಾಗಿ ಕನ್ನಡ ಸಾಹಿತ್ಯರಂಗಕ್ಕೂ, ಚಲನಚಿತ್ರರಂಗಕ್ಕೂ ಹೊಸ ಸಾಮೀಪ್ಯ ಬೆಳೆಯಿತು.

ಆದರೂ ಕನ್ನಡ ಚಿತ್ರರಂಗ ಅಳವಡಿಸಿಕೊಂಡ ಸಾಹಿತ್ಯ ಹೆಚ್ಚು ಸೃಜನಾತ್ಮಕವಾಗಲಿ, ಸೂಕ್ಷ್ಮವೇದಿಯಾಗಲಿ ಆಗಿರಲಿಲ್ಲ. ಅಂದಿನ ಜನಜೀವನದಲ್ಲಿ ಸಂಕೀರ್ಣತೆಗಳಿಗೆ ಸ್ಪಂದಿಸುವ ಪ್ರಯತ್ನಗಳು ತೀರಾ ಕಡಿಮೆಯಾಗಿಯೇ ಇದ್ದಿದ್ದರಿಂದ ಎಲ್ಲೋ ಕೆಲವು ಕನ್ನಡ ಚಿತ್ರಗಳನ್ನು ಬಿಟ್ಟರೆ ಮಿಕ್ಕವು ಅಂದಿನ ಆರ್ಥಿಕ ಅಥವಾ ರಾಜಕೀಯ ಪರಿಸರಕ್ಕೆ ಹೊಂದಿಕೊಳ್ಳಲು ಅಸಮರ್ಥವಾಗಿ ತಮ್ಮ ಪ್ರಸ್ತುತತೆಗೆ ತಾವೇ ಚ್ಯುತಿ ತಂದುಕೊಂಡಂತಾಯಿತು. ಬಹುತೇಕ ಮಾನವ ಸಂಬಂಧಗಳೇ ಈ ಚಿತ್ರಗಳಿಗೆ ಗ್ರಾಸವಾದವು. ಒಂದು ಕುಟುಂಬದ ನಾಲ್ಕು ಗೋಡೆಗಳಿಂದಾಚೆ ಹೋಗುವ ಪ್ರಯತ್ನವನ್ನೇನೂ ಹೆಚ್ಚು ಚಿತ್ರಗಳು ಮಾಡಲಿಲ್ಲ. ಈ ದೃಷ್ಟಿಯಿಂದ ಅಂದಿನ ಕನ್ನಡ ಚಿತ್ರಗಳು ತಮಿಳು, ತೆಲುಗು ಮತ್ತು ಮಲಯಾಳಂ ಚಿತ್ರಗಳಿಗಿಂತ ವಿಭಿನ್ನವೆನಿಸಿದವು.

ಇದಕ್ಕೆ ಪ್ರಾಯಶಃ ಒಂದು ಮುಖ್ಯ ಕಾರಣ ಆ ರಾಜ್ಯಗಳಲ್ಲಿಯಂತೆ ಕರ್ನಾಟಕದಲ್ಲಿ ಪ್ರಭಾವಶಾಲಿಗಳೆನಿಸುವ ಸಾಮಾಜಿಕ ಅಥವಾ ರಾಜಕೀಯ ಅಂದೋಲನಗಳಾವುವೂ ನಡೆಯಲಿಲ್ಲ. ಅಂತಹ ಅಂದೋಲನಗಳಿಂದ ಉದ್ಭವಿಸಿದ ಕೆಲವು ಪ್ರತಿಭೆಗಳಿಗೆ ಅಂದಿನ ತಮಿಳು, ತೆಲುಗು, ಮಲಯಾಳಂ ಚಿತ್ರರಂಗಗಳನ್ನು ಪ್ರವೇಶಿಸಿ ಚಿತ್ರ ಸಾಹಿತಿಗಳಾಗಿ, ನಿರ್ದೇಶಕರಾಗಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದರಿಂದ ಅಲ್ಲಿಯ ಚಿತ್ರಗಳಲ್ಲಿ ಸೈದ್ಧಾಂತಿಕ ಕಥಾವಸ್ತುಗಳ ಬಳಕೆ ಸಾಧ್ಯವಾಯಿತು. ಆದರೆ ಈ ಹಿನ್ನೆಲೆಯಲ್ಲಿ ಕನ್ನಡ ಚಿತ್ರಗಳು ಕಥಾಂಶದ ದೃಷ್ಟಿಯಿಂದ ಪೇಲವವಾಗಿಯೇ ಕಂಡವು. ಈ ಮಿತಿಯನ್ನು ಮೆಟ್ಟಿನಿಂತ ಚಿತ್ರಗಳ ಸಂಖ್ಯೆ ಕನ್ನಡ ಚಿತ್ರರಂಗದ ಒಟ್ಟಾರೆ ಅಂತಃ ಸತ್ವವನ್ನು ವೃದ್ಧಿಸುವುದರಲ್ಲಿ ಅಷ್ಟೇನೂ ಪ್ರಯೋಜನಕಾರಿಯಾಗಲಿಲ್ಲ. ಆದರೆ ಬಿಡಿಬಿಡಿಯಾಗಿ ನೋಡಿದಾಗ ಕನ್ನಡ ಚಿತ್ರೋದ್ಯಮದ ಚೌಕಟ್ಟಿನಲ್ಲಿ ಇವೆಲ್ಲ ಉಲ್ಲೇಖನಾರ್ಹವಾಗಿಯೇ ಕಂಡವು. ಅವುಗಳಿಂದ ಆಳವಾದ ಜೀವನ ದರ್ಶನವೇನೂ ಆಗದಿದ್ದರೂ ಅವುಗಳ ನಿರ್ದೇಶಕರಲ್ಲಿ ಏನಾದರೂ ಹೊಸದನ್ನು ಮಾಡಬೇಕೆಂಬ ತುಡಿತವಂತೂ ಕಾಣುತ್ತಿತ್ತು. ಕೇವಲ ಮನರಂಜನೆಯೇ ಉದ್ಯಮದ ಮೂಲ ಪ್ರೇರಣೆಯಾಗಿದ್ದ ಸನ್ನಿವೇಶದಲ್ಲಿ ಅಂತಹ ಚಿತ್ರಗಳು ಓಯಸಿಸ್‌ಗಳಂತೆ ಕಂಡಿದ್ದೂ ಹೌದು.

ಆದರೂ ಯಾವುದೇ ಅತಿರೇಕಕ್ಕೆ ಹೋಗದೆ ನಿರೂಪಣೆಯಲ್ಲಿ ಹಿತವೆನಿಸುವ ಒಂದು ಗಾಂಭೀರ್ಯವನ್ನು ಕಾಪಾಡಿಕೊಂಡು ಬಂದಿದ್ದು ಅಂದಿನ ಮೂಲವಾಹಿನಿ ಚಿತ್ರಗಳ ಸಾಧನೆಯೆ ಎನ್ನುವಂತಾಯಿತು.

ಈ ದಶಕದ ಪೂರ್ವಾರ್ಧದಲ್ಲಿ, ಅಂದರೆ ಹೆಚ್ಚು ಕಡಿಮೆ ರಾಜ್ಯ ಸರ್ಕಾರ ತನ್ನ ಸಬ್ಸಿಡಿ ಮತ್ತು ವಾರ್ಷಿಕ ಪ್ರಶಸ್ತಿಗಳ ಯೋಜನೆಗಳನ್ನು ಜಾರಿಗೆ ತರುವವರೆಗೆ, ಕನ್ನಡದಲ್ಲಿ ಪೌರಾಣಿಕ, ಐತಿಹಾಸಿಕ ಹಾಗೂ ಜಾನಪದ ಚಿತ್ರಗಳೇ ಅದ್ಯತೆ ಪಡೆದವು. ಆದರೆ ಈ ಯೋಜನೆಗಳು ಜಾರಿಗೆ ಬಂದು ಕನ್ನಡ ನಾಡಿನಲ್ಲಿಯೇ ಹೆಚ್ಚು ಸಂಖ್ಯೆಯಲ್ಲಿ ಚಿತ್ರಗಳು ತಯಾರಾಗಲು ಪ್ರಾರಂಭವಾದ ನಂತರ ನಿರ್ಮಾಪಕರ ಗಮನ ಹೆಚ್ಚು ಹೆಚ್ಚಾಗಿ ಸಾಮಾಜಿಕ ಕಥಾವಸ್ತುಗಳತ್ತ ಹೊರಳಲು ಪ್ರಾರಂಭವಾಯಿತು. ಪ್ರಾಯಶಃ ಮದರಾಸಿನಲ್ಲಿಯಂತೆ ಬೆಂಗಳೂರು, ಮೈಸೂರು ಸ್ಟುಡಿಯೋಗಳಲ್ಲಿ ಪೌರಾಣಿಕ ಹಾಗೂ ಜಾನಪದ ಚಿತ್ರಗಳಿಗೆ ಮೊದಲೇ ತಯಾರಾದ ಭರ್ಜರಿ ಸೆಟ್‌ಗಳು ಕಡಿಮೆ ಬೆಲೆಯಲ್ಲಿ ಚಿತ್ರಣಕ್ಕೆ ಸಿಗದೆ ಹೋದದ್ದೂ ಇದಕ್ಕೆ ಕಾರಣವಿದ್ದಿರಬಹುದು. ಜೊತೆಗೆ ಆ ವೇಳೆಗಾಗಲೇ ಪ್ರೇಕ್ಷಕರ ಅಭಿರುಚಿ ಕೂಡ ಸಾಕಷ್ಟು ಬದಲಾಗಿತ್ತು.

೧೯೬೧-೭೦ರ ದಶಕದ ಒಂದು ವಿಶೇಷವೆಂದರೆ ಪ್ರತಿ ವರ್ಷವೂ ಕನ್ನಡ ಚಿತ್ರಗಳಿಗೆ ಒಂದಲ್ಲ ಒಂದು ರಾಷ್ಟ್ರಪ್ರಶಸ್ತಿ ಸಿಕ್ಕಿದ್ದು. ಅವುಗಳಲ್ಲಿ ಬಹುಪಾಲು ಪ್ರಾದೇಶಿಕ ಪ್ರಶಸ್ತಿಗಳೇ ಆಗಿದ್ದರೂ ಒಂದು ಚಿತ್ರಕ್ಕೆ (ಸಂಸ್ಕಾರ) ರಾಷ್ಟ್ರಪ್ರಶಸ್ತಿಗಳ ಸುವರ್ಣ ಪದಕ ಮತ್ತು ಇನ್ನೊಂದು ಚಿತ್ರಕ್ಕೆ (ಗೆಜ್ಜೆಪೂಜೆ) ರಾಷ್ಟ್ರೀಯ ಮಟ್ಟದಲ್ಲಿ ಅತ್ಯುತ್ತಮ ಚಿತ್ರಕಥೆಗೆ ಪ್ರಶಸ್ತಿ ಲಭ್ಯವಾದದ್ದು ಗಮನಾರ್ಹ. ಪ್ರಾದೇಶಿಕ ಬೆಳ್ಳಿ ಪದಕ ಪಡೆದ ಚಿತ್ರಗಳು 'ಸಂತ ತುಕಾರಾಂ' (೧೯೬೪), 'ಚಂದವಳ್ಳಿಯ ತೋಟ' (೧೯೬೫), 'ಸತ್ಯ ಹರಿಶ್ಚಂದ್ರ' (೧೯೬೬), 'ಸಂಧ್ಯಾರಾಗ' (೧೯೬೭), 'ಬಂಗಾರದ ಹೂವು' (೧೯೬೮) ಮತ್ತು 'ಗೆಜ್ಜೆಪೂಜೆ' (೧೯೭೦). ಪ್ರಾದೇಶಿಕ ಪ್ರಶಂಸಾ ಪತ್ರಗಳನ್ನು ಪಡೆದ ಚಿತ್ರಗಳು - 'ಜಗಜ್ಯೋತಿ ಬಸವೇಶ್ವರ' (೧೯೬೦), 'ಭಕ್ತ ಕನಕದಾಸ' (೧೯೬೧), 'ಕಿತ್ತೂರು ಚೆನ್ನಮ್ಮ' (೧೯೬೨), 'ನಂದಾದೀಪ' (೧೯೬೩), 'ನವಜೀವನ' (೧೯೬೫), 'ಮನೆ ಅಳಿಯ' (೧೯೬೫), 'ಮಿಸ್ ಲೀಲಾವತಿ' (೧೯೬೬) ಮತ್ತು 'ಮದುವೆ ಮಾಡಿ ನೋಡು' (೧೯೬೬). ೧೯೬೯ರಲ್ಲಿ 'ಮಣ್ಣಿನ ಮಗ'ಕ್ಕೆ ತಾಂತ್ರಿಕ ಪ್ರಶಸ್ತಿ ಸಿಕ್ಕಿತು.

ಈ ದಶಕದಲ್ಲಿ ಕನ್ನಡ ಚಿತ್ರರಂಗ ತಯಾರಿಸಿದ ಅತ್ಯಂತ ಉಲ್ಲೇಖನಾರ್ಹ ಚಿತ್ರಗಳೇ ಅವು. ಜೊತೆಗೆ ರಾಷ್ಟ್ರಪ್ರಶಸ್ತಿಯಿಂದ ವಂಚಿತವಾದ 'ನಾಂದಿ'. ಆದರೆ ಮೇಲಿನ ಪಟ್ಟಿಯಲ್ಲಿ ಎರಡು ರೀಮೇಕ್‌ಗಳೂ (ಮನೆ ಅಳಿಯ ಮತ್ತು ಮದುವೆ ಮಾಡಿ ನೋಡು) ಸೇರಿರುವುದು ಸೋಜಿಗ. ದೂರದ ದೆಹಲಿಯವರಿಗೆ ನೇರ ಚಿತ್ರಗಳ ಮತ್ತು ರೀಮೇಕ್‌ಗಳ ನಡುವೆಯ ವ್ಯತ್ಯಾಸವೇನೂ ಕಂಡಂತಿಲ್ಲ. ಆದರೆ ಆಗ ರೀಮೇಕ್ ಚಿತ್ರಗಳಿಗೆ ಪ್ರಶಸ್ತಿ ಕೊಡಬಾರದೆಂಬ ನಿಯಮವೇನೂ ಇರಲಿಲ್ಲ. ಈ ನಿಯಮ ಜಾರಿಗೆ ಬಂದಿದ್ದು ೮೦ರ ದಶಕದಲ್ಲಿ.

೧೯೫೧-೬೦ರ ದಶಕದಲ್ಲಿ ಅಂದು ಮುಂಚೂಣಿಯಲ್ಲಿದ್ದ ನಿರ್ದೇಶಕರಾರೂ ಚಲನಚಿತ್ರ ಮಾಧ್ಯಮ ಅಥವಾ ಪರಿಭಾಷೆಗಳಲ್ಲಿ ಯಾವ ಪ್ರಯೋಗಗಳನ್ನೂ ಮಾಡುವ ಗೋಜಿಗೆ ಹೋಗಲಿಲ್ಲ. ಅಗಿನ್ನೂ ಕನ್ನಡ ಚಿತ್ರರಂಗ ೧೦೦ಕ್ಕಿಂತ ಕಡಿಮೆ ಚಿತ್ರಗಳನ್ನೇ ತಯಾರಿಸಿದ್ದರಿಂದ, ಹಾಗೂ ಪ್ರೇಕ್ಷಕರಲ್ಲಿ ಕೂಡ ಅಂತಹ ಪ್ರಯೋಗಶೀಲತೆಯ ಬಗ್ಗೆ ಕಾಳಜಿಯೇನೂ ಇರಲಿಲ್ಲವಾದ್ದರಿಂದ ಇಂತಹ ಪರಿವರ್ತನೆಗಳಾಗುವುದು ಸಾಧ್ಯವೂ ಇರಲಿಲ್ಲ. ನಿರೂಪಣೆಯಲ್ಲಿನ ಮಾರ್ದವತೆಯ ದೃಷ್ಟಿಯಿಂದ ಪಂತುಲುರವರ 'ಸ್ಕೂಲ್‌ಮಾಸ್ಟರ್' ಒಂದೆರಡು ಹೆಜ್ಜೆ ಮುಂದೆ ಹೋಯಿತೆನ್ನುವುದನ್ನು ಬಿಟ್ಟರೆ ಆ ದಶಕದ ಇನ್ನಾವ ಚಿತ್ರವೂ ರಂಗಭೂಮಿಯ ಚೌಕಟ್ಟಿನಿಂದ ಹೆಚ್ಚು ಈಚೆ ಬಂದಿರಲಿಲ್ಲ. 'ಮಹಾಕವಿ ಕಾಳಿದಾಸ' ಮತ್ತು 'ಅಣ್ಣ-ತಂಗಿ'ಗಳಲ್ಲಿ ಕು.ರ.ಸೀತಾರಾಮಶಾಸ್ತ್ರಿ ತಾವು ವಿದೇಶಗಳಲ್ಲಿ ಕಲಿತಿದ್ದ ಕೆಲವು ಚಲನಚಿತ್ರ ಮಾಧ್ಯಮದ ತಂತ್ರಗಳನ್ನು ಅಳವಡಿಸಿಕೊಳ್ಳುವುದರಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ವಿಯಾಗಿದ್ದರು. ಹೀಗಾಗಿ ಅಲ್ಪ ಸ್ವಲ್ಪ ಚಿಂತನಶೀಲತೆಗಾಗಿ ಕನ್ನಡ ಚಿತ್ರರಂಗ ೧೯೬೧-೭೦ರ ದಶಕಕ್ಕಾಗಿ ಕಾಯಬೇಕಾಯಿತು.

ಹಿಂದಿನ ದಶಕದಲ್ಲಿ 'ದಳ್ಳಾಳಿ', 'ಆಷಾಢಭೂತಿ'ಗಳಂತಹ ಚಿತ್ರಗಳಲ್ಲಿ ಕಥಾವಸ್ತು ಅಂದಿನ ನಿಜಜೀವನದ ಕೆಲವು ಘಟನೆಗಳಿಂದಲೇ ಪ್ರೇರಿತವಾಗಿದ್ದರೂ, 'ಕನ್ಯಾದಾನ', 'ಮೊದಲ ತೇದಿ', 'ಸ್ಕೂಲ್ ಮಾಸ್ಟರ್' ಮತ್ತು 'ಅಣ್ಣ-ತಂಗಿ'ಗಳಲ್ಲಿ ನಮ್ಮ ಕುಟುಂಬಗಳಲ್ಲಿ ಸಾಮಾನ್ಯವಾಗಿ ನಾವು ಅನುಭವಿಸುವ ಬವಣೆಗಳ ಮನೋಜ್ಞವಾದ ಚಿತ್ರಣವಿದ್ದರೂ ಕನ್ನಡ ಚಿತ್ರಗಳು ಹೆಚ್ಚು ಸ್ವೋಪಜ್ಞವಾಗತೊಡಗಿದ್ದು ೧೯೬೧-೭೦ರ ದಶಕದಲ್ಲಿಯೆ. ೧೯೬೧ರಲ್ಲಿ 'ಕಿತ್ತೂರು ಚೆನ್ನಮ್ಮ' ಮತ್ತು 'ವಿಜಯನಗರದ ವೀರಪುತ್ರ'ದಂತಹ ಎರಡು ಸಾಹಸಶೀಲ ಐತಿಹಾಸಿಕ ಚಿತ್ರಗಳನ್ನು ಕೊಟ್ಟ ಕನ್ನಡ ಚಿತ್ರರಂಗ ೧೯೬೨ರಲ್ಲಿ ಜಿ.ವಿ.ಅಯ್ಯರ್ ಆವರ 'ಭೂದಾನ'ದ ಮೂಲಕ ಅಂದಿನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂಕೀರ್ಣತೆಗಳತ್ತ ತನ್ನ ಗಮನವನ್ನು ಹರಿಸಲಾರಂಭಿಸಿತು. ಆದರೂ ಪ್ರಸ್ತುತತೆಯ ದೃಷ್ಟಿಯಿಂದ ಕನ್ನಡ ಚಿತ್ರಗಳು ಮಿಕ್ಕೆಲ್ಲ ಭಾಷೆಗಳ ಚಿತ್ರಗಳಿಗಿಂತ ಸಾಕಷ್ಟು ಹಿಂದೆ ಬಿದ್ದಿರುವುದೊಂದು ಕಟು ಸತ್ಯ. ೧೯೭೦ರಲ್ಲಿ ಅರಳಿ ಸ್ವಲ್ಪ ಕಾಲ ವಿಜೃಂಭಿಸಿದ ಹೊಸ ಅಲೆಯ ಚಿತ್ರಗಳು ಕೂಡ ಈ ಟೀಕೆಯಿಂದ ಹೊರತಲ್ಲ.

೧೯೬೧-೭೦ರ ದಶಕದಲ್ಲಿ ಕನ್ನಡ ಚಿತ್ರರಂಗಕ್ಕೆ ಅನೇಕ ಹೊಸ ಪ್ರತಿಭೆಗಳ ಪ್ರವೇಶವಾಯಿತು. ಅನೇಕ ವರ್ಷಗಳ ಕಾಲ ಉದ್ಯಮದ ಪ್ರಥಮ ಶ್ರೇಣಿಯಲ್ಲಿ ಮೆರೆದ ನಿರ್ದೇಶಕರಾದ ಎಂ.ಆರ್.ವಿಠಲ್, ಎಸ್.ಲಕ್ಷ್ಮೀನಾರಾಯಣ್, ಕೆ.ಎಸ್.ಎಲ್.ಸ್ವಾಮಿ (ರವೀ), ಪುಟ್ಟಣ್ಣ ಕಣಗಾಲ್, ದೊರೆ-ಭಗವಾನ್, ಗೀತಪ್ರಿಯ ಮತ್ತು ಸಿದ್ಧಲಿಂಗಯ್ಯನವರು ಸ್ವತಂತ್ರ ನಿರ್ದೇಶಕರಾಗಿದ್ದು ಇದೇ ದಶಕದಲ್ಲಿಯೆ. ಹಾಗೆಯೇ ಕಲಾವಿದರಾದ ಅರುಣ್‌ಕುಮಾರ್, ಆರ್.ಎನ್.ಸುದರ್ಶನ್, ಎಂ.ಪಿ.ಶಂಕರ್, ದಿನೇಶ್, ಉಮೇಶ್, ಶ್ರೀನಾಥ್, ಗಂಗಾಧರ್, ರಾಜೇಶ್, ಕಲ್ಪನಾ, ಜಯಂತಿ, ಭಾರತಿ, ಬಿ.ವಿ.ರಾಧಾ, ಆರ್.ಟಿ.ರಮಾ, ಚಂದ್ರಕಲಾ, ವಜ್ರಮುನಿ, ರಂಗಾ ಹಾಗೂ ಲೋಕನಾಥ್‌ರವರು ಕೂಡ. ಪ್ರತಿಭಾವಂತ ಸಂಗೀತ ನಿರ್ದೇಶಕರೆನಿಸಿದ ಎಂ.ರಂಗರಾವ್, ಎಂ.ವೆಂಕಟರಾಜು ಮತ್ತು ಸತ್ಯಂರವರು ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ್ದು ಕೂಡ ಇದೇ ದಶಕದಲ್ಲಿ. ಜೊತೆಗೆ ಎರಡು ದಶಕಗಳಿಗೂ ಹೆಚ್ಚು



(ಚಿತ್ರ ೯) 'ಕಿತ್ತೂರು ಚೆನ್ನಮ್ಮ' ಚಿತ್ರದಲ್ಲಿ ಎಂ.ವಿ.ರಾಜಮ್ಮ, ರಾಜಕುಮಾರ್ ಮತ್ತು ಬಿ.ಸರೋಜಾದೇವಿ

ಅವಧಿಯಲ್ಲಿ ಕನ್ನಡ ಚಿತ್ರರಂಗದ ಅತ್ಯಂತ ಬೇಡಿಕೆಯ ಕಥಾ ಲೇಖಕ, ಚಿತ್ರಕಥಾ ಲೇಖಕ ಮತ್ತು ಸಂಭಾಷಣಾಕಾರರಾಗಿ ಉದ್ಯಮದ ಮೇಲೆ ತಮ್ಮ ವಿಶಿಷ್ಟವಾದ ಛಾಪನ್ನು ಒತ್ತಿ ಹೋದ ಚಿ.ಉದಯಶಂಕರ್ ಕೂಡ ಬೆಳಕಿಗೆ ಬಂದರು. ಈ ಅವಧಿಯಲ್ಲಿ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ ಪ್ರತಿಭಾವಂತ ತಂತ್ರಜ್ಞರು ಅನೇಕರು. ಡಿ.ವಿ.ರಾಜಾರಾಂ, ಆರ್.ಎನ್.ಕೃಷ್ಣಪ್ರಸಾದ್, ಚಿಟ್ಟಿಬಾಬು. ಎನ್.ಜಿ.ರಾವ್, ಶ್ರೀಕಾಂತ್‌ರಂತಹ ಛಾಯಾಗ್ರಾಹಕರಿಗೆ ಈ ದಶಕದಲ್ಲಿ ತಾರಾವರ್ಚಸ್ಸು ಬಂತು.

ಈ ದಶಕದಲ್ಲಿ ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ಇಬ್ಬರು ಪ್ರತಿಭಾವಂತ ಹಿನ್ನೆಲೆ ಗಾಯಕಿಯರನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದರು - 'ಕಣ್ತೆರೆದು ನೋಡು'ನಲ್ಲಿ (೧೯೬೧) ಬೆಂಗಳೂರು ಲತಾ ಮತ್ತು 'ಕವಲೆರಡು ಕುಲವೊಂದು'ನಲ್ಲಿ (೧೯೬೪) ಬಿ.ಕೆ.ಸುಮಿತ್ರಾ.

೧೯೬೧ರಲ್ಲಿ ಬಿಡುಗಡೆಯಾದ 'ಕಿತ್ತೂರು ಚೆನ್ನಮ್ಮ', ಕನ್ನಡ ಚಿತ್ರರಂಗದಲ್ಲಿ ಒಂದು ಅವಿಸ್ಮರಣೀಯ ಚಿತ್ರವೆನಿಸಿಕೊಳ್ಳಲು ಕಾರಣ ಬಿ.ಆರ್.ಪಂತುಲು ಅದರಲ್ಲಿ ತೋರಿದ ಅಸಾಧಾರಣವೆನಿಸಬಹುದಾದ ಸಾಹಸಶೀಲತೆ. ಈ ಸಾಹಸಶೀಲತೆ ಕನ್ನಡ ಚಿತ್ರರಂಗದಂತಹ ತೀರಾ ಸೀಮಿತ ಮಾರುಕಟ್ಟೆಯ ಆರ್ಥಿಕ ವ್ಯಥೆಗಳನ್ನು ಮೀರಿ ನಿಂತು ಉತ್ತರ ಕರ್ನಾಟಕದ ಭಾಗದಲ್ಲಿ ಬ್ರಿಟಿಷ್ ಆಳರಸರ ಅಧಿಕಾರ ಲಾಲಸೆಯನ್ನು ಬಗ್ಗು ಬಡಿದ ಕಿತ್ತೂರು ಚೆನ್ನಮ್ಮನ ಸಾಹಸಗಳ ಸ್ಫೂರ್ತಿದಾಯಕ ನಿರೂಪಣೆಯಾಗಿತ್ತು. ಪಂತುಲು ತಮ್ಮ ನಿರೂಪಣೆಯಲ್ಲಿ ಹೊಸ ತಂತ್ರಗಳನ್ನಾಗಲಿ, ಶೈಲಿಯನ್ನಾಗಲಿ ಅಳವಡಿಸದಿದ್ದರೂ, ಈ ನಿರೂಪಣೆ ಬಹುತೇಕವಾಗಿ ರಂಗಭೂಮಿಯ ಪ್ರಭಾವದಿಂದ ಮುಕ್ತವಾಗದಿದ್ದರೂ ನಾಮಪಾತ್ರದಲ್ಲಿ ಬಿ.ಸರೋಜಾದೇವಿಯವರ ಅಮೋಘ ಅಭಿನಯದಿಂದಾಗಿ, ಸಂಭಾಷಣೆಗಳ ರೋಚಕತೆಯಿಂದಾಗಿ ಹಾಗೂ ದೃಶ್ಯವೈಭವದಿಂದಾಗಿ ಕನ್ನಡ ಚಿತ್ರರಂಗದ ಒಂದು ವಿಭಿನ್ನ ಚಿತ್ರವೆಂಬ ದಾಖಲೆಯನ್ನು ಸ್ಥಾಪಿಸಿತು. ಆದರೂ ಸೋಜಿಗವೆಂದರೆ ತಾವು ಈ ಚಿತ್ರವನ್ನು ಯಾವುದೇ ಆದರ್ಶದಿಂದ ತೆಗೆದುದಾಗಿ ಪಂತುಲು ಎಂದೂ ಸಾರಿಕೊಳ್ಳಲಿಲ್ಲ. ಈ ಚಿತ್ರದ ನಿರ್ಮಾಣದಲ್ಲಿ ಸಂಪೂರ್ಣವಾಗಿ ತೊಡಗಿಕೊಂಡಿದ್ದ ಜಿ.ವಿ.ಅಯ್ಯರ್ ಪ್ರಕಾರ ಪಂತುಲುರವರು ಆಗಲೇ ತಮಿಳಿನಲ್ಲಿ ಅವರ ಮೇರು ಚಿತ್ರ 'ಕಟ್ಟ ಬೊಮ್ಮನ್' ಅನ್ನು ಯಶಸ್ವಿಯಾಗಿ ಬಿಡುಗಡೆ ಮಾಡಿದ್ದರಿಂದ ಆ ಚಿತ್ರದ ಭವ್ಯವಾದ ಉಡುಗೆ-ತೊಡುಗೆಗಳು ಹಾಗೂ ಸೆಟ್‌ಗಳನ್ನು ಬಳಸಿಕೊಂಡು ಕನ್ನಡದಲ್ಲಿ ಕೂಡ ಒಂದು ಚಾರಿತ್ರಿಕ ಚಿತ್ರವನ್ನು ತಯಾರಿಸಬೇಕೆಂಬ ಅಪೇಕ್ಷೆ 'ಕಿತ್ತೂರು ಚೆನ್ನಮ್ಮ'ದ ನಿರ್ಮಾಣಕ್ಕೆ ಪ್ರೇರಕವಾಯಿತು. 'ಕಟ್ಟ ಬೊಮ್ಮನ್'ನಲ್ಲಿ ದೇಶಪ್ರೇಮವನ್ನು ಉಕ್ಕಿಸುವ ಅನೇಕ ಪ್ರಭಾವಶಾಲಿ ಸಂಭಾಷಣೆಗಳೂ ಇದ್ದುದರಿಂದ ಅವುಗಳನ್ನೂ ಕನ್ನಡಕ್ಕೆ ಅಳವಡಿಸಿಕೊಂಡು 'ಕಿತ್ತೂರು ಚೆನ್ನಮ್ಮ'ದಲ್ಲಿ ಉಪಯೋಗಿಸಲಾಯಿತು. ಆದರೆ 'ಕಿತ್ತೂರು ಚೆನ್ನಮ್ಮ'ದ ಯುದ್ಧ ದೃಶ್ಯಗಳಲ್ಲಿ ಪಂತುಲು ಭವ್ಯತೆ ಮತ್ತು ನೈಜತೆಗಳ ಬಗ್ಗೆ ತಮಗಿದ್ದ ಒಲವನ್ನು ಪರಿಣಾಮಕಾರಿಯಾಗಿ ಪ್ರದರ್ಶಿಸಿದರು. ಸಂಗೀತ ನಿರ್ದೇಶಕರು ಅಕ್ಕ ಮಹಾದೇವಿಯ ವಚನಗಳನ್ನು ಬಳಸಿಕೊಂಡ ರೀತಿ ಈ ಚಿತ್ರದ ಹೆಚ್ಚುಗಾರಿಕೆಗಳಲ್ಲೊಂದೆನಿಸಿತು.

'ಕಿತ್ತೂರು ಚೆನ್ನಮ್ಮ'ದ ಅಪೂರ್ವ ಯುದ್ಧ ದೃಶ್ಯಗಳ ಬಗ್ಗೆ ಉಲ್ಲೇಖನೀಯವಾದ ಒಂದು ಅಂಶವಿದೆ. ಆಗಿನ್ನೂ ವಿಸ್ತಾರವಾದ ಫ್ರೇಂ ಇರುವ ವೈಡ್ ಆ್ಯಂಗಲ್ ಲೆನ್ಸ್‌ಗಳು ಬಳಕೆಗೆ ಬಂದಿರಲಿಲ್ಲ. ಇಂತಹ ಭವ್ಯವಾದ ದೃಶ್ಯಗಳ ಚಿತ್ರಣಕ್ಕೆ ಕೂಡ ಸಾಂಪ್ರದಾಯಿಕ ಲೆನ್ಸ್‌ಗಳನ್ನೇ ಬಳಸಬೇಕಾಗಿತ್ತು. ಆದರೆ 'ಕಿತ್ತೂರು ಚೆನ್ನಮ್ಮ'ದ ಯುದ್ಧ ದೃಶ್ಯಗಳಲ್ಲಿ ಅಪರೂಪವೆನಿಸುವ ಶ್ರೀಮಂತಿಕೆ ಕಾಣುವಂತಿತ್ತು.

'ಕಿತ್ತೂರು ಚೆನ್ನಮ್ಮ' ಪಂತುಲು ಅವರಿಗೆ ಧಾರಾಳವಾಗಿ ಒಳ್ಳೆಯ ಹೆಸರು ಹಾಗೂ ಒಂದು ರೀತಿಯಲ್ಲಿ ಕನ್ನಡ ಜನತೆಯ ಕೃತಜ್ಞತೆಯನ್ನೂ ತಂದುಕೊಟ್ಟಿತಲ್ಲದೆ ಆರ್ಥಿಕವಾಗಿ ಕೂಡ ತುಂಬಾ ಯಶಸ್ವಿ ಚಿತ್ರವಾಯಿತು. ೧೯೭೦ರಲ್ಲಿ 'ಶ್ರೀಕೃಷ್ಣದೇವರಾಯ'ದಂತಹ ಮತ್ತೊಂದು ಮೈಲಿಗಲ್ಲನ್ನು ಕನ್ನಡ ತೆರೆಗೆ ಅರ್ಪಿಸುವವರೆಗೂ ನೆನಪಿನಲ್ಲಿ ಉಳಿಯಬಹುದಾದ ಯಾವ ಚಿತ್ರವನ್ನೂ ಅವರು



(ಚಿತ್ರ ೧೦) 'ಕಿತ್ತೂರು ಚೆನ್ನಮ್ಮ' ಚಿತ್ರದಲ್ಲಿ ಬಿ.ಸರೋಜಾದೇವಿ

ಮಾಡದಿದ್ದುದು ಒಂದು ಸೋಜಿಗವೇ ಸರಿ. ಮುಂದಿನ ವರ್ಷಗಳಲ್ಲಿ ಅವರ ಶ್ರಮವೆಲ್ಲ 'ಗಾಳಿಗೋಪುರ' (೧೯೬೨), 'ಸಾಕುಮಗಳು' (೧೯೬೩), 'ಚಿನ್ನದ ಗೊಂಬೆ' (೧೯೬೪), 'ದುಡ್ಡೇ ದೊಡ್ಡಪ್ಪ' (೧೯೬೬), 'ಎಮ್ಮೆ ತಮ್ಮಣ್ಣ' (೧೯೬೬), 'ಗಂಗೆ-ಗೌರಿ' (೧೯೬೭), 'ಬೀದಿ ಬಸವಣ್ಣ' (೧೯೬೭), 'ಚಿನ್ನಾರಿ ಪುಟ್ಟಣ್ಣ' (೧೯೬೮), 'ಅಮ್ಮ' (೧೯೬೯), 'ಗಂಡೊಂದು ಹೆಣ್ಣಾರು' (೧೯೬೯) ಇಂತಹ ಮಾಮೂಲು ಮಸಾಲೆ ಚಿತ್ರಗಳನ್ನು, ಮೆಲೋಡ್ರಾಮಗಳನ್ನು ನಿರ್ಮಿಸುವುದರಲ್ಲಿಯೇ ವ್ಯರ್ಥವಾಯಿತು. ಈ ಬಗ್ಗೆ ಪಂತುಲುರವರನ್ನೇ ಪ್ರಶ್ನಿಸಿದಾಗ ಬರಬರುತ್ತ ಕೆಡುತ್ತಿದ ಜನಗಳ ಅಭಿರುಚಿಯೇ ಅದಕ್ಕೆ ಕಾರಣವೆಂಬ ಅಸಂಬದ್ಧವೆನಿಸುವ ವಿವರಣೆ ಬಂತು.

ಆದರೆ ಆರ್.ನಾಗೇಂದ್ರರಾಯರಿಗೆ ಇದು ಸಾರ್ಥಕ ದಶಕವೆನಿಸಿತು. ನಟರಾಗಿ, ನಿರ್ದೇಶಕರಾಗಿ ರಾಯರು ಈ ದಶಕದಲ್ಲಿ ಕೆಲವು ವಿಶಿಷ್ಟ ಸಾಧನೆಗಳನ್ನು ಮಾಡಿದರು. ೧೯೬೧ರಲ್ಲಿ ಅವರು ನಿರ್ದೇಶಿಸಿದ 'ವಿಜಯನಗರದ ವೀರಪುತ್ರ' ಅವರು ಶಕ್ತಿ ಮೀರಿ ನಿರ್ಮಿಸಿದ ಅಕ್ಕರೆಯ ಕೂಸು. ರಾಯರು ಎಂದಿಗೂ ಸಂಪನ್ಮೂಲಗಳ ಕೊರತೆಯ ನಡುವೆಯೇ ಚಿತ್ರಗಳನ್ನು ಮಾಡಿದವರು. ಅವರಿಗೆ ಪಂತುಲು ಅಥವಾ ರಂಗಾ ಅವರಂತಹ ಸಾಹಸಪ್ರಿಯತೆಯಿರಲಿಲ್ಲ, ವ್ಯವಹಾರ ಚಾತುರ್ಯವೂ ಇರಲಿಲ್ಲ. ಆದರೆ ಏನನ್ನಾದರೂ ಹೊಸತನ್ನು ಮಾಡುವ ಕಾತರವಿತ್ತು. ಸಿನಿಮಾ ಮಾಧ್ಯಮದಲ್ಲಿ ಹೊಸ ಆವಿಷ್ಕಾರಗಳನ್ನೇನೂ ಅವರು ಪ್ರಯತ್ನಿಸಲಿಲ್ಲ. ಆದರೆ ತಾವು ಮಾಡುವ ಕೆಲಸದಲ್ಲಿ ಚೊಕ್ಕತನ, ತಮ್ಮ ಚಿತ್ರಗಳಲ್ಲಿ ವಾಸ್ತವಿಕತೆಯಿರಬೇಕೆಂಬ ಹಿರಿಯಾಸೆ ಅವರದ್ದಾಗಿತ್ತು. ಅವರು ಅಪರೂಪಕ್ಕಾಗಿ ಸಾಹಸ ಮಾಡಿ ನಿರ್ಮಿಸಿದ ಚಿತ್ರ 'ವಿಜಯನಗರದ ವೀರಪುತ್ರ'.

ಇದೊಂದು ಸಂಪೂರ್ಣ ಐತಿಹಾಸಿಕ ಚಿತ್ರವೆಂದೇನೂ ನಾಗೇಂದ್ರರಾಯರು ಹೇಳಿಕೊಳ್ಳಲಿಲ್ಲ. ಅದರ ಕಥೆಯಲ್ಲಿ ಅರ್ಧ ಚರಿತ್ರೆಯಾದರೆ ಇನ್ನರ್ಧ ಕಾಲ್ಪನಿಕ. ಈ ಸ್ಪಷ್ಟನೆ ಚಿತ್ರದ ಮೂಲ ಶೀರ್ಷಿಕೆಗಳಲ್ಲೇ ಇತ್ತು. ಚಿತ್ರಕಥೆಯನ್ನು ರಚಿಸುವಾಗಲೇ ರಾಯರು ವಿಶೇಷ ಶ್ರಮ ವಹಿಸಿದ್ದರು. ಇದೊಂದು ರೀತಿಯ ಕುಟುಂಬ ಪ್ರಯತ್ನ ಕೂಡ. ರಾಯರ ಎರಡನೆಯ ಮಗ ಆರ್.ಎನ್.ಕೃಷ್ಣಪ್ರಸಾದ್ ಛಾಯಾಗ್ರಾಹಕರಾದರೆ, ಮೂರನೆಯ ಮಗ ಆರ್.ಎನ್.ಜಯಗೋಪಾಲ್ ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ಬರೆದರು. ನಾಲ್ಕನೆಯ ಮಗ ಆರ್.ಎನ್.ಸುದರ್ಶನ್ ನಾಯಕ ನಟರಾಗಿ ಮೊದಲು ಪ್ರವೇಶ ಮಾಡಿದ್ದು ಈ ಚಿತ್ರದಿಂದಲೆ. ಯಾರೇ ಮೆಚ್ಚುವಂತಹ ಅಂಗಸೌಷ್ಠವವನ್ನು



(ಚಿತ್ರ ೧೧) 'ವಿಜಯನಗರದ ವೀರಪುತ್ರ' ಚಿತ್ರದಲ್ಲಿ ಸುದರ್ಶನ್ ಮತ್ತು ಬಿ.ಸರೋಜಾದೇವಿ

ಹೊಂದಿದ್ದ ಸುದರ್ಶನ್‌ಗೆ ಆ ಪಾತ್ರಕ್ಕೆ ಅಗತ್ಯವಾದ ಎಲ್ಲ ವಿಷಯಗಳಲ್ಲಿಯೂ ವಿಶೇಷವಾದ ತಯಾರಿ ನೀಡಲಾಗಿತ್ತು - ಕುದುರೆ ಸವಾರಿ, ಕತ್ತಿ ವರಸೆ, ಮಲ್ಲಯುದ್ಧ ಇತ್ಯಾದಿ. ಈ ಚಿತ್ರದಲ್ಲಿ ಕೃಷ್ಣದೇವರಾಯನಾಗಿ ಉದಯಕುಮಾರ್ ತೋರಿದ ತೇಜಸ್ಸು ಅದರ ಪ್ರಿಯವಾದ ಅಂಶಗಳಲ್ಲಿ ಒಂದೆನಿಸಿತು. ನಾಗೇಂದ್ರರಾಯರೇ ಸಾಮಂತ ರಾಜ ಗುರುವರಾಯ. ಸುದರ್ಶನ್, ಚಿತ್ರದಲ್ಲಿಯೂ ಅವರ ಮಗ. ಕಣ್ಣು ಕೋರೈಸುವ ದೃಶ್ಯಾವಳಿ, ಸಮರ ಸನ್ನಿವೇಶಗಳಲ್ಲಿ ಶ್ರೀಮಂತಿಕೆ, ವಾತಾವರಣದಲ್ಲಿ ನೈಜತೆಗಳೆಲ್ಲವನ್ನೂ ಪಡೆದುಕೊಂಡಿದ್ದ 'ವಿಜಯನಗರದ ವೀರಪುತ್ರ'ದಲ್ಲಿ ಕಸಿವಿಸಿಯೆನಿಸಿದ ಒಂದು ನ್ಯೂನತೆಯೆಂದರೆ ತೀರಾ ನಾಟಕೀಯವೆನಿಸಿದ ಸಂಭಾಷಣೆ. ಆದರೆ ತನ್ನ ಓಘದಿಂದ ನೋಡಿಸಿಕೊಂಡು ಹೋದ ಚಿತ್ರ ಇದು.

ಐತಿಹಾಸಿಕ ಹಂಪಿಯಲ್ಲಿಯೇ ಬಹು ಪಾಲು ಚಿತ್ರಣವಾದ 'ವಿಜಯನಗರದ ವೀರಪುತ್ರ'ದಲ್ಲಿ ದೊಡ್ಡ ತಾರಾಗಣವೇ ಇತ್ತು. ಬಿ.ಸರೋಜಾದೇವಿ ಚಿತ್ರದ ನಾಯಕಿ. ನಟ ಕೆ.ಎಸ್.ಅಶ್ವತ್ಥ್ ಚಿತ್ರಕ್ಕೆ ಹಿನ್ನೆಲೆಯಲ್ಲಿ ಕಾಮೆಂಟರಿ ಕೊಟ್ಟಿದ್ದೊಂದು ವಿಶೇಷ. ಚಿತ್ರ ಕಪ್ಪು-ಬಿಳುಪಿನಲ್ಲಿದ್ದರೂ ಕೃಷ್ಣಪ್ರಸಾದ್‌ರವರ ಛಾಯಾಗ್ರಹಣ ವಿಶೇಷ ಗಮನ ಸೆಳೆಯುವಂತಿತ್ತು. ಜೊತೆಗೆ ವಿಶ್ವನಾಥನ್-ರಾಮಮೂರ್ತಿ ನಿರ್ದೇಶನದ ಸುಶ್ರಾವ್ಯ ಸಂಗೀತ ಇತ್ತು. 'ಅಪಾರ ಕೀರ್ತಿ ಗಳಿಸಿ ಮೆರೆವ ಭವ್ಯ ನಾಡಿದು', 'ಮಧುರಾ ಮೋಹನ ವೀಣಾವಾದನ'' ದಂತಹ ಗೀತೆಗಳು ನೆನಪಿನಿಂದ ಮಾಸುವಂತೆಯೇ ಇಲ್ಲ. 'ಮಧುರಾ ಮೋಹನ ವೀಣಾವಾದನ...' ಬಳಕೆಯಾದದ್ದು ಸರೋಜಾದೇವಿಯವರ ನೃತ್ಯ ಸನ್ನಿವೇಶವೊಂದಕ್ಕಾಗಿ. ಅದರ ಧ್ವನಿಮುದ್ರಣದಲ್ಲಿ ಸಂಗೀತ ನಿರ್ದೇಶಕರು ಸಂಪೂರ್ಣವಾಗಿ ಸ್ತ್ರೀಯರ ವಾದ್ಯಗೋಷ್ಠಿಯನ್ನೇ ಬಳಸಿದ್ದೊಂದು ಹೆಚ್ಚಳ.

ಆಗಿನ್ನೂ ಫಿಲಂ ಫೈನಾನ್ಸ್ ಕಾರ್ಪೊರೇಷನ್ ಎನಿಸಿಕೊಂಡಿದ್ದ ಸಂಸ್ಥೆ ನಂತರ ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮವಾಯಿತು. ಕೇಂದ್ರ ಸರ್ಕಾರದ ಈ ಪ್ರತಿಷ್ಠಿತ ಸಂಸ್ಥೆ ಆರ್ಥಿಕ ನೆರವು ನೀಡಿದ ಪ್ರಪ್ರಥಮ ಕನ್ನಡ ಚಿತ್ರ 'ವಿಜಯನಗರದ ವೀರಪುತ್ರ'. ರಾಯರು ತೀವ್ರ ಆರ್ಥಿಕ ಮುಗ್ಗಟ್ಟಿನಲ್ಲಿಯೇ ಈ ಚಿತ್ರದ ನಿರ್ಮಾಣಕ್ಕೆ ಕೈಯಿಟ್ಟು ಚಿತ್ರಣ ಅರ್ಧಕ್ಕೆ ನಿಂತುಹೋಗಬೇಕಾಯಿತು. ಆದರೆ ಚಿತ್ರದ ಸಾಂಸ್ಕೃತಿಕ ಪ್ರಾಮುಖ್ಯವನ್ನು ಗಮನಿಸಿ ಅದನ್ನು ಪೂರ್ಣಗೊಳಿಸಲು ಫಿಲಂ ಫೈನಾನ್ಸ್ ಕಾರ್ಪೊರೇಷನ್ ನೆರವಿಗೆ ಬಂತು. ಚಿತ್ರ ಗಲ್ಲಾ ಪೆಟ್ಟಿಗೆಯಲ್ಲಿ ಸೋಲನ್ನಪ್ಪಿ ನಾಗೇಂದ್ರರಾಯರಿಗೆ ತೀವ್ರ ಆಘಾತವನ್ನೇ ಉಂಟುಮಾಡಿತು. ಎಫ್.ಎಫ್.ಸಿ.ಯ ಸಾಲ ಮತ್ತು ಬಡ್ಡಿಯ ಹೊರೆಯೂ ಬೆಳೆಯುತ್ತ ಹೋಯಿತು, ರಾಯರು ಕಂಗಾಲಾದರು. ೧೯೬೩ರಲ್ಲಿ 'ಆನಂದ ಬಾಷ್ಪ' ಮತ್ತು ೧೯೬೪ರಲ್ಲಿ 'ಪತಿಯೇ ದೈವ' ಚಿತ್ರಗಳನ್ನು ಅವರು ತಮ್ಮ ಸ್ವಂತ ಬ್ಯಾನರಿನಲ್ಲಿಯೇ ತಯಾರಿಸಿದರೂ ಆರ್ಥಿಕವಾಗಿ ಅವರು ಸೋತರು. ಮುಂದೆ

ಮತ್ತೆ ನಿರ್ಮಾಣಕ್ಕೆ ಕೈ ಹಾಕಲಿಲ್ಲ. ಕೆಲವು ಮನನೀಯ ಚಿತ್ರಗಳಲ್ಲಿ ನಿರ್ದೇಶನ ಮತ್ತು ಅಭಿನಯ ಮಾತ್ರ ಅವರ ಪಾಲಿಗೆ ಉಳಿಯಿತು.

೧೯೬೧ರಲ್ಲಿ ತೆರೆಕಂಡ ಚಿತ್ರಗಳಲ್ಲಿ 'ಕಣ್ತೆರೆದು ನೋಡು' ಗಮನ ಸೆಳೆದ ಚಿತ್ರ. ಸೊಗಸಾದ ಹಾಡುಗಳಿದ್ದವು. ಕುರುಡನಾಗಿ ರಾಜಕುಮಾರ್ ಅವರ ಮುಖ್ಯ ಅಭಿನಯ, ವಂಚಕನಾಗಿ ಬಾಲಕೃಷ್ಣರ ಅಭಿನಯ ಮರೆಯುವಂಥದ್ದಲ್ಲ. ಈ ಚಿತ್ರಕ್ಕೆ ಜಿ.ಕೆ.ವೆಂಕಟೇಶ್ ಅವರೇ ಹಾಡಿದ ಗೀತೆ ಮತ್ತು ರಾಜಕುಮಾರ್, ಲೀಲಾವತಿಯವರ ಮೇಲೆ ಚಿತ್ರಿಸಿದ 'ಬಂಗಾರದೊಡವೆ ಬೇಕೇ ನೀರೇ....' ಮತ್ತು 'ಹೂವೊಂದೆ ಬೇರೆ ನಾರೊಂದೆ ಬೇರೆ...' ಗೀತೆಗಳು ಮಧುರವೂ ಧ್ವನಿಪೂರ್ಣವೂ ಆಗಿದ್ದವು. ವಿಶಿಷ್ಟವಾದ ಒಂದು ಪಾತ್ರದಲ್ಲಿ ಗಮನ ಸೆಳೆದವರು ನರಸಿಂಹರಾಜು.

'ಕೈವಾರ ಕ್ಷೇತ್ರ ಮಹಾತ್ಮೆ' ಚಿತ್ರವನ್ನು ಗಣಿ ಮಾಲೀಕ ನಾರಾಯಣಸಿಂಗ್ ನಿರ್ಮಿಸಿದರು. ಕನ್ನಡಪರ ನಿಲುವು, ಸಂಘಟನೆಗಳಿಗೆ ಪ್ರೋತ್ಸಾಹ ಎಂತಲೇ ಬಹುಪಾಲು ಆಸಕ್ತಿ ವಹಿಸಿದ್ದ ಸಿಂಗ್ ಅವರ ಈ ಚಿತ್ರ ಕೈವಾರ ಒಂದು ಪ್ರಾಂತ್ಯಕ್ಕೆ ಸೀಮಿತವಾಗಿ ಕರ್ನಾಟಕದಲ್ಲೇ ಇನ್ನಿತರ ಸ್ಥಳಗಳಿಗೆ ತಿಳಿಯದ್ದಾಗಿದ್ದರಿಂದ ಸೊರಗಿತು. ಮತ್ತೆ ಇವರೇ ನಿರ್ಮಿಸಿದ 'ಕರಗ ಮಹಾತ್ಮೆ' ಚಿತ್ರ ಪೂರ್ತಿಯಾಗಲಿಲ್ಲ.

'ನಾಗಾರ್ಜುನ' ಮುಂದೆ ಬೆಂಗಳೂರಿನ ಮೇಯರ್ ಆದ ನಂದಿ ನಾಗಣ್ಣನವರು ನಿರ್ಮಿಸಿದ್ದು. ಚಿತ್ರದಲ್ಲಿ ವಿಶೇಷವೇನೂ ಇರಲಿಲ್ಲ.



(ಚಿತ್ರ ೧೨) 'ಭೂದಾನ' ಚಿತ್ರದಲ್ಲಿ ಕುಮಾರತ್ರಯರು : ಕಲ್ಯಾಣ್‌ಕುಮಾರ್, ರಾಜಕುಮಾರ್, ಉದಯಕುಮಾರ್

೧೯೬೨, ಕನ್ನಡ ಚಿತ್ರರಂಗ ಪ್ರಚಲಿತ ಸಾಮಾಜಿಕ ಸಮಸ್ಯೆಯೊಂದರ ವಿಶ್ಲೇಷಣೆಗೆ ಕೈ ಹಾಕಿದ ಮೊದಲ ವರ್ಷ. ಕೇವಲ ಸಂಪ್ರದಾಯಬದ್ಧ ಕಥಾವಸ್ತುಗಳನ್ನೇ ನಂಬಿ ಕುಳಿತಿದ್ದ ಈ ಉದ್ಯಮಕ್ಕೆ ಈ ಹೊಸ ತಿರುವು ಕೊಟ್ಟವರು ನಟ-ಸಾಹಿತಿ-ನಿರ್ದೇಶಕ ಜಿ.ವಿ.ಅಯ್ಯರ್. ಆ ವರ್ಷ ಅವರು ನಿರ್ಮಿಸಿ, ನಿರ್ದೇಶಿಸಿದ 'ಭೂದಾನ' ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಚರ್ಚೆಯಾಗುವಂಥ ಚಿತ್ರ. ಈ ಚಿತ್ರದಲ್ಲಿ ಅಂದು ಜನಪ್ರಿಯ ನಟರಾಗಿದ್ದ ಮೂವರು ಕುಮಾರರೂ - ರಾಜಕುಮಾರ್, ಕಲ್ಯಾಣಕುಮಾರ್, ಉದಯಕುಮಾರ್ - ಒಟ್ಟಿಗೆ ಅಭಿನಯಿಸಿದ್ದರು.[೧] ಆ ಕಾಲದಲ್ಲಿ ಇಡೀ ದೇಶದಲ್ಲಿಯೇ ಕೋಲಾಹಲವನ್ನೆಬ್ಬಿಸಿದ್ದ ಆಚಾರ್ಯ ವಿನೋಬಾ ಭಾವೆಯವರ ವಿಶಿಷ್ಟ ಭೂದಾನ ಚಳವಳಿಯಿಂದ ಪ್ರೇರಿತವಾದ ಕಥೆ 'ಭೂದಾನ'ದ್ದು. ಪ್ರಥಮದಾಗಿ ಅಯ್ಯರ್‌ರವರಿಗ ಈ ಚಿತ್ರವನ್ನು ತೆರಗೆ ತರಲು ಸ್ಫೂರ್ತಿ ನೀಡಿದ್ದು ಶಿವರಾಮ ಕಾರಂತರ ಖ್ಯಾತ ಕಾದಂಬರಿ 'ಚೋಮನ ದುಡಿ'. ೧೯೭೫ರಲ್ಲಿ ಆ ಕಾದಂಬರಿಯನ್ನು ಬಿ.ವಿ.ಕಾರಂತರು ಅದೇ ಹೆಸರಿನ ಚಿತ್ರ ರೂಪದಲ್ಲಿ ತಂದರು.

ಇರುವವರು ಇಲ್ಲದವರೊಂದಿಗೆ ತಮ್ಮ ಸಂಪತ್ತನ್ನು ಹಂಚಿಕೊಳ್ಳುವುದೇ ಒಂದು ಧರ್ಮವೆಂಬ ಸಿದ್ಧಾಂತದ ಆಧಾರದ ಮೇಲೆ ಗಾಂಧಿ ವಾದಿ ಆಚಾರ್ಯ ವಿನೋಬಾ ಭಾವೆಯವರು ಪ್ರಾರಂಭಿಸಿ ಅನುಷ್ಠಾನಕ್ಕೆ ತಂದ ಭೂದಾನ ಆಂದೋಲನ ಈ ಚಿತ್ರದಲ್ಲಿ ಒಂದು ಪ್ರಮುಖ ಪಾತ್ರ ವಹಿಸಿದ್ದು ಅನ್ವರ್ಥವೇ ಆಗಿತ್ತು. ಚಿತ್ರದಲ್ಲಿ ಭಾವೆಯವರ ಮತ್ತು ಈ ಆಂದೋಲನದ ನೇರವಾದ ಪ್ರಸ್ತಾಪವೂ ಇದ್ದು ಅದರ ಪ್ರಸ್ತುತತೆಯನ್ನು ಹೆಚ್ಚಿಸಿತು. ಅಂದಿನ ಜನಜೀವನದ ಮೇಲೆ ನೇರವಾಗಿ ಪ್ರಭಾವ ಬೀರಿದ ಚಳವಳಿಯೊಂದರ ಸ್ಫೂರ್ತಿಯಿಂದ ತಯಾರಾದ ಇಂತಹ ಚಿತ್ರಗಳು ಕನ್ನಡದಲ್ಲಿ ವಿರಳ. 'ಭೂದಾನ' ತಯಾರಾದ ಕಾಲದಲ್ಲಂತೂ ಅಂತಹ ಒಂದು ಪ್ರಸಂಗವೇ ಅಪರೂಪ.

ಸಂಪ್ರದಾಯದ ಮಧ್ಯೆಯೇ ಬೆಳೆದು ಅದಕ್ಕೆ ಸಂಪೂರ್ಣವಾಗಿ ಮಾರುಹೋಗದೆ ತಮ್ಮ ಪ್ರಯೋಗಶೀಲತೆ, ದೂರದೃಷ್ಟಿ ಮತ್ತು ಅಧ್ಯಯನಶೀಲತೆಗಳಿಂದ ತಮ್ಮತನವನ್ನು ಕಾಪಾಡಿಕೊಂಡು ಬಂದಿದ್ದ ಅಯ್ಯರ್‌ರಿಗೆ ಸಾಹಿತ್ಯ ಸಂವೇದನೆಯಿತ್ತು. ತಮ್ಮ ಚಿತ್ರಗಳ ಮೂಲಕ ಉನ್ನತ ಮೌಲ್ಯಗಳನ್ನು ಪ್ರತಿಪಾದಿಸುವ ಕಾತರವಿತ್ತು. ತಮ್ಮ ವೃತ್ತಿ-ಪ್ರವೃತ್ತಿಗಳ ನಡುವೆ ಅನುಕರಣೀಯವೆನಿಸುವ ಸಾಮರಸ್ಯವನ್ನು ಸಾಧಿಸಿದ ಅಯ್ಯರ್‌ರಿಗೆ ಕಾರಂತರ 'ಚೋಮನ ದುಡಿ'ಯಷ್ಟೇ ಪ್ರೇಮಚಂದರ 'ಗೋದಾನ'ವೂ ಬೌದ್ಧಿಕವಾಗಿ ಆಕರ್ಷಕವೆನಿಸಿತು. ಕೃಷ್ಣಚಂದರ 'ಭೂದಾನ' ಅವರ ಆಸಕ್ತಿಯನ್ನು ಕೆರಳಿಸಿದ ಇನ್ನೊಂದು ಚಿಂತನಶೀಲ ಕೃತಿ. ಈ ಮೂರು ಕಾದಂಬರಿಗಳ ಪ್ರಭಾವ ಮುಪ್ಪುರಿಗೊಂಡು ಅಯ್ಯರ್‌ರ 'ಭೂದಾನ'ದ ಚಿತ್ರಕಥೆ ಸಿದ್ಧವಾಯಿತು. ಆದರೂ 'ಚೋಮನ ದುಡಿ'ಯ ಪ್ರಭಾವವೇ ಹೆಚ್ಚಾಗಿದ್ದುದ್ದರಿಂದ ತಮ್ಮ ಚಿತ್ರಕಥೆಯನ್ನು ಕಾರಂತರಿಗೆ ತೋರಿಸಿದರು. ''ಇದು ನಿಮ್ಮದೇ ಸ್ವಂತ ನಿರ್ಮಿತಿ. ನನ್ನ 'ಚೋಮನ ದುಡಿ'ಯಲ್ಲ. ಇದರ ನಿರ್ಮಾಣಕ್ಕೆ ನನ್ನ ಅನುಮತಿಯೇನೂ ಬೇಕಿಲ್ಲ'' ಎಂದರು ಕಾರಂತರು.

'ಭೂದಾನ' ತನ್ನ ಕಥಾವಸ್ತು ಹಾಗೂ ಸಾಮಾಜಿಕ ಕಾಳಜಿಗಳ ದೃಷ್ಟಿಯಿಂದ ಕನ್ನಡ ಚಿತ್ರರಂಗದಲ್ಲಿ ಒಂದು ಹೊಸ ಹಾದಿಯನ್ನು ತುಳಿಯಿತಾದರೂ ಅಯ್ಯರ್ ಅವರ ನಿರೂಪಣಾ ಶೈಲಿಯಲ್ಲಿ ಕೊರತೆಗಳಿದ್ದವು. ಅಲ್ಲಿ ನಾಟಕೀಯತೆ ಮತ್ತು ನಾಜೂಕುಗಳ ಅಸಹಜ ಮಿಶ್ರಣ ಇತ್ತು. ಕೆಲವೊಂದು ಚಿತ್ರಿಕೆಗಳಲ್ಲಿ ಅಯ್ಯರ್ ೧೯೭೦ರಿಂದ ಆಚೆಗೆ ತಾವು ತೋರಿದ ವಿಭಿನ್ನ ನಿರೂಪಣಾ ತಂತ್ರದ ಕೆಲವು ಸೂಚನೆಗಳನ್ನು ಇಲ್ಲಿ ಬಳಸಲಾದ ಒಂದೆರಡು ಸೂಕ್ಷ್ಮ ಸಂಕೇತಗಳಲ್ಲಿ ಕಾಣಬಹುದು. ಜೀತದಾಳುಗಳ ಭೀಕರ ಸಮಸ್ಯೆ, ಪ್ರಜಾಪ್ರಭುತ್ವದಲ್ಲಿಯೂ ಕಾಲಿಟ್ಟಿದ್ದ ರಾಜ ಪರಂಪರೆಯ ಛಾಯೆಯ ಬಗ್ಗೆ ಅಸಮಾಧಾನ, ಕುಟುಂಬ ನಿಯಂತ್ರಣದ ಬಗ್ಗೆ ಕಾಳಜಿ - ಇವೆಲ್ಲ 'ಭೂದಾನ'ದ ಸಾಮಾಜಿಕ ಮೌಲ್ಯವನ್ನು ಹೆಚ್ಚಿಸಿದವು. ಆದರೂ 'ಭೂದಾನ' ಯಾವುದೇ ಪ್ರಶಸ್ತಿಗೆ ಅರ್ಹವಾದ ಪ್ರಯತ್ನವೆನಿಸಿಕೊಳ್ಳಲಿಲ್ಲ. ಆರ್ಥಿಕವಾಗಿಯೂ ಗೆಲ್ಲದ ಈ ಚಿತ್ರ ಕನ್ನಡ ಚಿತ್ರರಂಗದ ಒಂದು ಉಲ್ಲೇಖನಾರ್ಹ ಚಿತ್ರವಾಗಿಯಂತೂ ಉಳಿಯಿತು. ಸ್ಟುಡಿಯೋಗಳ ಕೃತಕ ವಾತಾವರಣದಿಂದ ದೂರ ಬಂದು ನಿಜವಾದ ಸ್ಥಳಗಳಲ್ಲಿ ಚಿತ್ರಣ ನಡೆಸುವ ಪರಿಪಾಠವೂ ಕನ್ನಡ ಚಿತ್ರರಂಗದಲ್ಲಿ ಪ್ರಾರಂಭವಾಗಿದ್ದು ಈ ಚಿತ್ರದಿಂದಲೇ ಎಂದೂ ಹೇಳಬಹುದು. 'ಭೂದಾನ'ದಲ್ಲಿ ರಾಜಕುಮಾರ್ ತಂದೆಯಾಗಿ ಹಾಗೂ ಉದಯಕುಮಾರ್ ಮತ್ತು ಕಲ್ಯಾಣಕುಮಾರ್ ಮಕ್ಕಳಾಗಿ ಅಭಿನಯಿಸಿದ್ದು ಒಂದು ವಿಶೇಷ. ತಮ್ಮ ವೃತ್ತಿಜೀವನ ಪ್ರಾರಂಭವಾದ ಕೆಲವೇ ವರ್ಷಗಳಲ್ಲಿ ರಾಜಕುಮಾರ್‌ರವರು ಇಬ್ಬರು ಬೆಳೆದ ಮಕ್ಕಳ ತಂದೆಯ ಪಾತ್ರದಲ್ಲಿ ಕಾಣಿಸಿಕೊಳ್ಳಲು ಒಪ್ಪಿದ್ದು ಚಿತ್ರರಂಗದ ಒಂದು ಅಸಾಮಾನ್ಯ ಘಟನೆಯೆಂದೇ ಹೇಳಬೇಕು. ಇದೇ ರೀತಿ ಮಹಬೂಬ್‌ರವರ ಚಿರಸ್ಮರಣೀಯ ಹಿಂದಿ ಚಿತ್ರ 'ಮದರ್ ಇಂಡಿಯಾ'ದಲ್ಲಿ ಅಂದಿನ ಜನಪ್ರಿಯ ತಾರೆಯಾಗಿದ್ದ ನರ್ಗೀಸ್, ರಾಜೇಂದ್ರ ಕುಮಾರ್ ಮತ್ತು ಸುನಿಲ್‌ದತ್‌ರವರ ತಾಯಿಯ ಪಾತ್ರದಲ್ಲಿ ಅಭಿನಯಿಸಿದ ಅಪವಾದಸದೃಶ ಘಟನೆಯನ್ನು ಇದು ನೆನಪಿಗೆ ತರುತ್ತದೆ. ಆದರೆ ಬಡತನದ ಬೇಗೆಯಲ್ಲಿ ಬೆಂದು ಒಂದು ಹೊತ್ತಿನ ಕೂಳಿಗೂ ಗತಿಯಿಲ್ಲದ ಜೀತದಾಳುಗಳ ಪಾತ್ರಗಳಲ್ಲಿ ಕಲ್ಯಾಣ್ ಮತ್ತು ಉದಯ್‌ರಂತಹ ದಷ್ಟಪುಷ್ಟ ವ್ಯಕ್ತಿಗಳು ಕಂಡಿದ್ದು ಒಂದು ಆಭಾಸವೇ ಆಗಿತ್ತು.

'ಭೂದಾನ'ದಲ್ಲಿ ಕುಟುಂಬದ ಮುಖ್ಯಸ್ಥನ ಸೊಸೆ ಹಸುವಿಗೆ ವಿಷ ಹಾಕಿ ಸಾಯಿಸುವ ದಾರುಣ ದೃಶ್ಯವೊಂದಿದೆ. ಈ ದೃಶ್ಯ ಪ್ರೇಕ್ಷಕರಿಗೆ ಸೆಂಟಿಮೆಂಟಲ್ ಕಾರಣಗಳಿಂದಾಗಿ ಪಥ್ಯವಾಗಲಿಲ್ಲ. 'ಭೂದಾನ'ಕ್ಕಿಂತಲೂ ಮಿಗಿಲಾಗಿ ಬೇರು ಬಿಟ್ಟ ಗೋವಿನ ಬಗೆಗಿನ ಭಕ್ತಿಗೆ ಈ ಸನ್ನಿವೇಶ ವಿರುದ್ಧವಾಗಿತ್ತು. ಚಿತ್ರ ಆರ್ಥಿಕವಾಗಿ ಅಯಶಸ್ವಿಯಾಗಿದಕ್ಕೆ ಈ ದೃಶ್ಯ ಪ್ರೇಕ್ಷಕರಲ್ಲಿ ಉಂಟುಮಾಡಿದ ಅಸಹ್ಯ ಭಾವನೆಯೇ

೧. ದಾಖಲೆಗಳಲ್ಲಿರುವಂತೆ ಅವರು ಒಟ್ಟಿಗೆ ಅಭಿನಯಿಸಿದ ಮೊದಲ ಚಿತ್ರ 'ಭೂದಾನ' ಅಲ್ಲವೇ ಅಲ್ಲ - ಆ ಚಿತ್ರ ಬಿ.ಆರ್.ಪಂತುಲುರವರ 'ಗಾಳಿಗೋಪುರ'. ಆದರೆ ಆ ಚಿತ್ರದಲ್ಲಿ ಮೂವರಿಗೂ ಸಮಾನವಾದ ಪಾತ್ರಗಳಿರಲಿಲ್ಲ, ಅಷ್ಟೆ.



(ಚಿತ್ರ ೧೩) 'ಕರುಣೆಯೇ ಕುಟುಂಬದ ಕಣ್ಣು' ಚಿತ್ರದಲ್ಲಿ ರಾಜಕುಮಾರ್

ಒಂದು ದೊಡ್ಡ ಕಾರಣವಾಯಿತೆಂಬ ವಿಶ್ಲೇಷಣೆಯೂ ಇತ್ತು.

'ಭೂದಾನ' ತಮಿಳಿನಲ್ಲಿ 'ಪಳನಿ' ಎಂಬ ಹೆಸರಿನಿಂದ ರೀಮೇಕ್ ಆಯಿತು. ಶಿವಾಜಿ ಗಣೇಶನ್, ಎಸ್.ಎಸ್.ರಾಜೇಂದ್ರನ್ ಮತ್ತು ಶ್ರೀರಾಮ. ಕನ್ನಡದಲ್ಲಿ ಕುಮಾರತ್ರಯರು ಮಾಡಿದ ಪಾತ್ರಗಳಲ್ಲಿದ್ದರು.

ಅದೇ ವರ್ಷ ಅಯ್ಯರ್ ನಿರ್ಮಿಸಿ, ನಿರ್ದೇಶಿಸಿದ 'ತಾಯಿ ಕರುಳು' ಹೊಟ್ಟೆ ಪಾಡಿಗಾಗಿ ಮಾಡಲಾದ ಇನ್ನೊಂದು ಚಿತ್ರವೆನಿಸಿತೇ ಹೊರತು 'ಭೂದಾನ' ಹುಟ್ಟುಹಾಕಿದಂತಹ ಆಸಕ್ತಿಯನ್ನೇನೂ ಉಂಟು ಮಾಡಲಿಲ್ಲ. "...'ತಾಯಿಕರುಳು' ಚಿತ್ರಕ್ಕೆ ನಿರಂಜನ್ ದಾಸ್ ಗುಪ್ತ ಅವರ 'ಉಲ್ಕ' ಕೃತಿ ಆಧಾರ. 'ಭೂದಾನ'ಕ್ಕೆ ತದ್ವಿರುದ್ಧವಾಗಿ ಪೊಯೆಟಿಕ್ ಆಗಿಬಿಟ್ಟಿತು. ಕಥೆಯೇ ನಾಟಕೀಯವಾಗಿತ್ತು. ಪೂರ್ತಿ ಮದರಾಸಿನಲ್ಲಿ ಚಿತ್ರಿಸಿದ್ದು..." ಎಂದಿದ್ದಾರೆ ಜಿ.ವಿ.ಅಯ್ಯರ್.

೧೯೬೨ರಲ್ಲಿ ಕನ್ನಡ ಚಿತ್ರರಂಗ ಪ್ರಥಮ ಬಾರಿಗೆ ಸಾಮಾಜಿಕ ಕಾಳಜಿಯತ್ತ ಹೊರಳಿದಂತೆಯೇ ಕಾದಂಬರಿಯಾಧಾರಿತ ಚಿತ್ರಗಳ ಸಂಪ್ರದಾಯವನ್ನು ಪ್ರಾರಂಭಿಸಿತು. 'ಭೂದಾನ' ಮೂರು ಬೇರ ಬೇರೆ ಕಾದಂಬರಿಗಳಿಂದ ಸ್ಫೂರ್ತಿಗೊಂಡ ಚಿತ್ರವಾದರೆ ಎ.ಸಿ.ನರಸಿಂಹಮೂರ್ತಿ ನಿರ್ಮಿಸಿ ಟಿ.ವಿ.ಸಿಂಗ್ ಠಾಕೂರ್ ನಿರ್ದೇಶಿಸಿದ 'ಕರುಣೆಯೇ ಕುಟುಂಬದ ಕಣ್ಣು', ಕೃಷ್ಣಮೂರ್ತಿ ಪುರಾಣಿಕರ 'ಧರ್ಮ ದೇವತೆ' ಕಾದಂಬರಿಯ ಆಧಾರದ ಮೇಲೆ ತಯಾರಾದ ಚಿತ್ರ. ಆದರೆ ಕಾದಂಬರಿಯಾಧಾರಿತ ಚಿತ್ರಗಳಿಗೆ ನಾಂದಿ ಹಾಡಿದ್ದೊಂದೇ ಅದರ ಹೆಚ್ಚುಗಾರಿಕೆಯಾಯಿತೇ ಹೊರತು ಕಥಾ ದೃಷ್ಟಿಯಿಂದ ಆ ಕಾಲದ ಇತರ ಚಿತ್ರಗಳಿಗಿಂತ ಅದು ಹೆಚ್ಚು ಭಿನ್ನವಾಗಿಯೇನೂ ಇರಲಿಲ್ಲ. ಕಾದಂಬರಿಯೊಂದನ್ನು ಚಲನಚಿತ್ರಕ್ಕೆ ರೂಪಾಂತರಗೊಳಿಸಬಹುದೆಂಬ ಅರಿವು ಮೂಡಿದ್ದು ಮಾತ್ರ ಈ ಚಿತ್ರದಿಂದಲೇ. ಅ.ನ.ಕೃಷ್ಣರಾಯರಿಗೆ ತಮ್ಮ 'ಸಂಧ್ಯಾರಾಗ'ವೇ ಚಿತ್ರವಾಗಿ ಪರಿವರ್ತಿತವಾಗುವ ಮೊದಲ ಚಿತ್ರವಾಗಬೇಕೆನ್ನುವ ಬಯಕೆಯಿತ್ತಂತೆ. ಆದರೆ ಅದಕ್ಕಾಗಿ ಅವರು ಸ್ವಲ್ಪ ಸಮಯವೇ ಕಾಯಬೇಕಾಯಿತು.

ತಾವು ಕನ್ನಡ ಚಿತ್ರರಂಗದಲ್ಲಿ ಮಾಡಿದ ಈ ಕ್ರಾಂತಿಯ ಮಹತ್ವಕ್ಕೆ ಒತ್ತು ಕೊಡಲೋ ಏನೋ ನಿರ್ಮಾಪಕ ನರಸಿಂಹಮೂರ್ತಿಗಳು[1] ತಮ್ಮ ಪುಸ್ತಕ ಭಂಡಾರದಿಂದ ಪುರಾಣಿಕರ 'ಧರ್ಮ ದೇವತೆ' ಕಾದಂಬರಿಯ ಪ್ರತಿಯೊಂದನ್ನು ಈಚೆ ತೆಗೆದು ಓದಲಾರಂಭಿಸುತ್ತಾರೆ. ಹಿನ್ನೆಲೆಯಲ್ಲಿ ಚಿತ್ರದ ಟೈಟಲ್ ಗೀತೆ ಗುನುಗುತ್ತಿರುತ್ತದೆ.

ನಟ ರಾಜಕುಮಾರ್‌ರವರು ಈ ಚಿತ್ರದಲ್ಲಿ ನಕಾರಾತ್ಮಕ ಪಾತ್ರವೊಂದರಲ್ಲಿ ಅಭಿನಯಿಸಿ ದಿಕ್ಕು ತಪ್ಪಿದ ಯುವಕನೊಬ್ಬನ ಪಾತ್ರವನ್ನು ಜೀವಂತಗೊಳಿಸಿದ್ದು ಒಂದು ಹೆಚ್ಚಳ. ಮುಂದೆ ಈ ನಟ ತಮ್ಮ ಚಿತ್ರಗಳಲ್ಲಿ ಪಾತ್ರಾಭಿನಯಕ್ಕೂ ಕೂಡ ಸಿಗರೇಟು ಸೇದುವುದನ್ನು, ಮದ್ಯ ಸೇವಿಸುವುದನ್ನು ನಿಲ್ಲಿಸಿದರು. ಪ್ರಾರಂಭದ ದಿನಗಳಲ್ಲಿ ಆಯ್ಕೆಯ ಸ್ವಾತಂತ್ರ್ಯ ಇರುವುದಿಲ್ಲ. ಈ ಚಿತ್ರದಲ್ಲಿ ಎಲ್ಲ ದುಶ್ಚಟಗಳೂ ಇರುವಂಥ ಯುವಕನ ಪಾತ್ರ ಮಾಡಲೇಬೇಕಿತ್ತು. ಹರಿಣಿ ಚಡಗಿಯ ಪಾತ್ರದಲ್ಲಿ ಕಾಣಿಸಿಕೊಂಡಿದ್ದರು. ಜಿ.ಕೆ.ವೆಂಕಟೇಶ್ ಸಂಯೋಜಿಸಿದ ಈ ಚಿತ್ರದ ಎಲ್ಲ ಹಾಡುಗಳೂ ಚಿರಸ್ಮರಣೀಯವೆನಿಸಿದವು. 'ನಿಜವೋ ಸುಳ್ಳೋ ನಿರ್ಧರಿಸಿ...', 'ಆಶಾಗಾನಾ ಮೋಹನ...', 'ಕಣ್ಣೆರಡೂ ಕಾಣೋಲ್ಲ...' ಅವುಗಳಲ್ಲಿ ಕೆಲವು. ಚಿತ್ರ ಆರ್ಥಿಕವಾಗಿ ಯಶಸ್ವಿಯಾಯಿತು. ಭಾರತ್ ಚಿತ್ರಮಂದಿರದಲ್ಲಿ ಡಿ.ವಿ.ಜಿ. ಅವರಿಂದ ಚಿತ್ರದ ಪ್ರದರ್ಶನ ಆರಂಭವಾಗಿತ್ತು.

೧೯೬೨ರಲ್ಲಿ ನಿರ್ಮಾಣವಾದ 'ರತ್ನಮಂಜರಿ' ಅತ್ಯಂತ ಯಶಸ್ವೀ ಚಿತ್ರ. ಜಾನಪದ ಕಥೆಯನ್ನು ಚೊಕ್ಕವಾಗಿ ಅಳವಡಿಸಿದ್ದರು. ಹುಣಸೂರು ಕೃಷ್ಣಮೂರ್ತಿ ಅವರೇ ನಿರ್ಮಾಪಕರು ಕೂಡಾ. ಈ ಚಿತ್ರದಲ್ಲಿ ನರಸಿಂಹರಾಜು ಹಾಗೂ ಎಂ.ಎನ್.ಲಕ್ಷ್ಮೀದೇವಿ ಅವರ ಮೇಲೆ ಚಿತ್ರಿತವಾದ ಒಂದು ಗೀತೆ 'ಯಾರು ಯಾರು ನೀನ್ಯಾರು ಎಲ್ಲಿಂದ ಬಂದೆ ಯಾವೂರು...' ದ್ವಂದ್ವಾರ್ಥವಿದ್ದು ಹಾಗೆ ತೋರದ ಹಾಗೆ ಜಾಣತನದಿಂದ ಕೂಡಿತ್ತು. ಉದಯಕುಮಾರ್ ಅವರು ಒರಟು ವ್ಯಕ್ತಿಯಂತೆ ಅಭಿನಯಿಸಿದ್ದು, 'ಅನುರಾಗದಾ ಅಮರಾವತಿ...' ಗೀತೆ ಮೊದಲಾದವು ಅತ್ಯಂತ ಜನಮನ್ನಣೆ ಗಳಿಸಿದ್ದವು.

ಅದೇ ವರ್ಷ ತೆರಗೆ ಬಂದ 'ಗಾಳಿಗೋಪುರ' ಚಿತ್ರದಲ್ಲಿ ಆರ್.ನಾಗೇಂದ್ರರಾಯರು ಪ್ರಾರಂಭದಲ್ಲಿ ಕುಂಟನಾಗಿ, ಅನಂತರ ಖಳನಾಗಿ ಅಭಿನಯಿಸಿದ್ದು ಅಪರೂಪದ ಅನುಭವವಾಗಿತ್ತು. 'ಯಾರಿಗೆ ಯಾರೊ ನಿನಗ್ಯಾರೊ...' ಮೊದಲಾದ ಗೀತೆಗಳು ಮನನೀಯವಾಗಿದ್ದುವು.

೧೯೬೨ರಲ್ಲಿ ತೆರಗ ಬಂದ 'ಸ್ವರ್ಣಗೌರಿ' ಚಿತ್ರದ ಸಾಹಿತ್ಯ ನಿರ್ವಹಿಸಿದವರು ಎಸ್.ಕೆ.ಕರೀಂ ಖಾನ್. ಸೊಗಸಾದ ಸಾಹಿತ್ಯ, ಅದಕ್ಕಾಗಿ ಬರೆದ 'ನಟವರ ಗಂಗಾಧರ...' ಗೀತೆಯಂತೂ ಇಂದಿಗೂ ಒಂದು ಜನಪದ ಗೀತೆಯ ಹಾಗೆ ಎಲ್ಲರ ನಾಲಿಗೆಯಲ್ಲಾಡುತ್ತಿರುತ್ತದೆ. ನಾರದ-ಗಿರಿಜೆಯರು ಶಿವ ಹೆಚ್ಚೋ ಹರಿ ಹೆಚ್ಚೋ ಎಂದು ವಾದಿಸುವ ಪ್ರಸಂಗವೊಂದನ್ನು ಗೀತೆಯಲ್ಲೇ ತರಲಾಗಿತ್ತು. ಈ ಗೀತೆಯಂತೂ ಅದರ ಮಾಧುರ್ಯ, ಸಾಹಿತ್ಯ ಬಂಧ, ವಿಶಿಷ್ಟ ಭಾವಾರ್ಥಗಳಿಂದಾಗಿ ಜನಾನುರಾಗಿಯಾಗಿತ್ತು. ಚಿತ್ರವು ಕೂಡಾ ವೈ.ಆರ್.ಸ್ವಾಮಿ ಅವರ ನಿರ್ದೇಶನದಲ್ಲಿ ಚೆನ್ನಾಗಿಯೇ ಮೂಡಿ ಬಂದಿತ್ತು. ಶಿವರಾತ್ರಿಯ ದಿನಕ್ಕೆ ಇಂದೂ ಇದೇ ಚಿತ್ರ ಎಲ್ಲ ಕಡೆ ಪ್ರದರ್ಶಿತವಾಗುವುದು.

ಇದೇ ವರ್ಷ ತೆರಗೆ ಬಂದ 'ದೇವಸುಂದರಿ' ಸಿಲೋನಿನ ಮೂನಾಸ್ ಎಂಬುವವರ ನಿರ್ಮಾಣವಾಗಿತ್ತು. ಈ ಚಿತ್ರದಲ್ಲಿ ಬಿ.ಸರೋಜಾದೇವಿ-ಕಲ್ಯಾಣ್‌ಕುಮಾರ್ ಜೋಡಿ ಎರಡನೆಯ ಬಾರಿ ಅಭಿನಯಿಸಿತ್ತು. 'ವಿಧಿ ವಿಲಾಸ'ದಲ್ಲಿ ಲೀಲಾವತಿಯವರೊಂದಿಗ ರಾಜಕುಮಾರ್ ಅಭಿನಯಿಸಿದ್ದರು. 'ತೇಜಸ್ವಿನಿ' ಚಿತ್ರದಲ್ಲಿ ರಾಜಕುಮಾರ್ ಅವರು ಖಳನಾಗಿ ಅದ್ವಿತೀಯವೆನ್ನಿಸುವಂಥ ಅಭಿನಯ ನೀಡಿದ್ದರು.

೧೯೬೨ರಲ್ಲಿ ಚೀನಾದೊಂದಿಗೆ ಯುದ್ಧವಾದ ಹಿನ್ನೆಲೆಯಲ್ಲಿ ಈ ದಶಕದಲ್ಲಿ ತಯಾರಾದ ಒಂದೆರಡು ಚಿತ್ರಗಳಲ್ಲಿ ಯುದ್ಧದ ಪ್ರಸ್ತಾಪವಿದೆ, ಕೆಲವು ಯುದ್ಧದ ದಾಸ್ತಾನು ಚಿತ್ರಿಕೆಗಳನ್ನು ಬಳಸಲಾಗಿದೆ.



(ಚಿತ್ರ ೧೪) ಕಾದಂಬರಿಕಾರ ಕೃಷ್ಣಮೂರ್ತಿ ಪುರಾಣಿಕರಿಗೆ 'ಕರುಣೆಯೇ ಕುಟುಂಬದ ಕಣ್ಣು' ನಿರ್ಮಾಪಕರಿಂದ ಸನ್ಮಾನ. ಚಿತ್ರದಲ್ಲಿ ಪುರಾಣಿಕ್, ಎಸ್.ಕೆ.ಭಗವಾನ್, ಅ.ನ.ಕೃ., ನಿರ್ಮಾಪಕರಾದ ಎ.ಸಿ.ನರಸಿಂಹಮೂರ್ತಿ ಮತ್ತು ದ್ವಾರಕಾನಾಥ್ ಅವರನ್ನು ಕಾಣಬಹುದು.

---

೧. ಅವರು ಬೆಂಗಳೂರಿನಲ್ಲಿ ಚಲನಚಿತ್ರ ಪ್ರಚಾರ ಸಂಸ್ಥೆಯೊಂದನ್ನು ನಡೆಸುತ್ತಿದ್ದು ಅವರ ಹತ್ತಿರದ ಸ್ನೇಹಿತ ಚಲನಚಿತ್ರ ತಂತ್ರಜ್ಞ ಟಿ.ದ್ವಾರಕಾನಾಥ್‌ರವರ ಸಹಯೋಗದೊಂದಿಗೆ ಚಿತ್ರ ನಿರ್ಮಾಣಕ್ಕೂ ಇಳಿದಿದ್ದರು



(ಚಿತ್ರ ೧೫)'ನಂದಾದೀಪ' ಚಿತ್ರದಲ್ಲಿ ಹರಿಣಿ ಮತ್ತು ಅಶ್ವತ್ಥ್

ಇದೇ ಅವಧಿಯಲ್ಲಿ ಪೂರ್ವ ಪಾಕಿಸ್ತಾನವು ಭಾರತೀಯ ಚಿತ್ರಗಳನ್ನು ಬಹಿಷ್ಕರಿಸಿತು. ೧೯೫೨ರಲ್ಲೇ ಪಶ್ಚಿಮ ಪಾಕಿಸ್ತಾನ ಈ ಕ್ರಮ ತೆಗೆದುಕೊಂಡಾಗಿತ್ತು. ಅದರಿಂದಾಗಿ ಬಂಗಾಳಿ ಚಿತ್ರರಂಗಕ್ಕೆ ಭಾರೀ ಪೆಟ್ಟು ಬಿದ್ದಿತ್ತು. ಇದೇ ಹೊತ್ತಿನಲ್ಲಿ ಸಿಲೋನ್ ರೇಡಿಯೋ ಸಿನಿಮಾ ಹಾಡು, ಸಿನಿಮಾ ಸಂಬಂಧಿ ಕಾರ್ಯಕ್ರಮಗಳನ್ನು ಹೆಚ್ಚಿಸಿದ್ದರಿಂದ ನಮ್ಮ ಆಲ್ ಇಂಡಿಯಾ ರೇಡಿಯೋ ಶಾಸ್ತ್ರೀಯ ಸಂಗೀತಕ್ಕೇ ಒತ್ತು ಕೊಟ್ಟಿದ್ದರಿಂದ ನಮ್ಮ ಸಿನಿಮಾ ಸಂಗೀತಕ್ಕೆ ಶ್ರೋತೃಗಳು ಸಿಗುವುದೇ ಕಷ್ಟವಾಗಿದ್ದೂ ಉಂಟು. ಕಲ್ಕತ್ತೆಯಲ್ಲಿ ಇಂಡಿಯಾ ಫಿಲಂ ಜರ್ನಲ್ ಪ್ರಾರಂಭವಾಯಿತು.

೧೯೬೩ರಲ್ಲಿ ಕನ್ನಡ ಚಿತ್ರರಂಗಕ್ಕೆ ಶುಭಾರಂಭ ತಂದ 'ನಂದಾದೀಪ' ಸದಭಿರುಚಿಯ ಹೊಸ ನಿರ್ಮಾಪಕದ್ವಯರನ್ನು ಹಾಗೂ ಹೊಸ ನಿರ್ದೇಶಕರೊಬ್ಬರನ್ನು ಬರಮಾಡಿಕೊಂಡಿತು. ಸಮಾನ ಮನಸ್ಕರ ತಂಡ ನಿರ್ಮಿಸಿದ ಈ ಚಿತ್ರ ಅನೇಕರ ದೃಷ್ಟಿಯಲ್ಲಿ ಪರೋಕ್ಷವಾಗಿ ಕನ್ನಡದಲ್ಲಿ ಹೊಸ ಅಲೆಯ ಪ್ರಜ್ಞೆಯನ್ನು ಬಿತ್ತಿದ ಚಿತ್ರ. ಆದರೆ ಈ ಬಗ್ಗೆ ಅಭಿಪ್ರಾಯ ಭೇದಕ್ಕೆ ಅವಕಾಶವಿದೆ. ವಾದಿರಾಜ್ ಮತ್ತು ಜವಾಹರ್ ಆ ವೇಳೆಗಾಗಲೇ ಉದ್ಯಮದಲ್ಲಿ ಬೇರೂರಿ ನಿಂತಿದ್ದ ನಾಯಕ ನಟಿ ಹರಿಣಿಯವರ ಸೋದರರು. ಅವರು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದ ನಿರ್ದೇಶಕ ಎಂ.ಆರ್.ವಿಠಲ್‌ರವರು ಕು.ರ.ಸೀತಾರಾಮಶಾಸ್ತ್ರಿಗಳ ನಂತರ ವಿದೇಶಗಳಲ್ಲಿ ಚಿತ್ರ ನಿರ್ಮಾಣ ಹಾಗೂ ನಿರ್ದೇಶನವನ್ನು ಅಧ್ಯಯನ ಮಾಡಿ, ವ್ಯವಸಾಯ ಮಾಡಿ ತಾಯ್ನಾಡಿಗೆ ಮರಳಿ ಬಂದ ಎರಡನೆಯ ಕನ್ನಡಿಗರು. ವಿಠಲ್‌ರವರು ಇಂಜಿನಿಯರಿಂಗ್ ವೃತ್ತಿಯಲ್ಲಿದ್ದು, ನಂತರ ಲಾಹೋರಿನಲ್ಲಿ ಧ್ವನಿಮುದ್ರಕರಾಗಿ ಸೇರಿಕೊಂಡು, ದಾದಾಸಾಹೇಬ್ ಫಾಲ್ಕೆಯವರ ಪ್ರೇರಣೆಯಿಂದ ಅರ್ಧ ತಯಾರಾಗಿದ್ದ ಪಂಜಾಬಿ-ಮರಾಠಿ ಭಾಷೆಯ ಚಿತ್ರವೊಂದನ್ನು ನಿರ್ದೇಶಿಸಿ, ನಂತರ ಜರ್ಮನಿಯಲ್ಲಿ ಅನೇಕ ಸಾಕ್ಷ್ಯಚಿತ್ರಗಳನ್ನು ನಿರ್ದೇಶಿಸಿದವರು. ನಡೆದು ಬಂದ ದಾರಿಯಿಂದ ದೂರ ಸರಿದು ಬೇರೊಂದು ಮಾರ್ಗವನ್ನು ಕಂಡುಕೊಳ್ಳುವ ತುಡಿತ ಅವರೆಲ್ಲರಲ್ಲಿಯೂ ಇದ್ದುದರಿಂದ 'ನಂದಾದೀಪ'ದಂತಹ ಉತ್ತಮ ಮೌಲ್ಯಗಳ ಚಿತ್ರದ ತಯಾರಿಕೆ ಸಾಧ್ಯವಾಯಿತು.

ವಾಸ್ತವವಾಗಿ ಈ ಚಿತ್ರದಲ್ಲಿ ವಿಠಲ್ ಅದುವರೆಗೆ ಜನಪ್ರಿಯವೆನಿಸಿದ್ದ ಯಾವುದೇ ನಿರೂಪಣಾ ಸೂತ್ರಗಳನ್ನೂ ವರ್ಜಿಸಲಿಲ್ಲ. ಉದಾಹರಣೆಗೆ ಆ ಕಾಲದಲ್ಲಿ ಮೂಲಕಥೆಗೆ ಸಮಾನಾಂತರವಾಗಿಯೇ ಹರಿದು ಬರುತ್ತಿದ್ದ ಹಾಸ್ಯವಾಹಿನಿ. ಈ ಚಿತ್ರದಲ್ಲಿ ಒಂದಲ್ಲ, ಎರಡು ಹಾಸ್ಯ ಜೋಡಿಗಳು ಇದ್ದವು. ಆದರೆ 'ನಂದಾದೀಪ' ಯಾಕೆ ವಿಭಿನ್ನವೆನಿಸಿತೆಂದರೆ ಅಲ್ಲಿನ ಪಾತ್ರಗಳು ನಿಜ ಜೀವನಕ್ಕೆ ತೀರ ಹತ್ತಿರವಾಗಿದ್ದು ಅವುಗಳ ಪೋಷಣೆ ಕೂಡ ಪ್ರಬುದ್ಧವಾಗಿದ್ದುದರಿಂದ. ಯಾವುದೇ ಅತಿರೇಕವಿಲ್ಲದ ನಿರೂಪಣೆ ಮತ್ತು ಅಭಿನಯ ಕನ್ನಡ ತೆರೆಯ ಮೇಲೆ ಪ್ರಪ್ರಥಮ ಬಾರಿಗೆ ಚಿತ್ರಿತವಾದ ವಿವಾಹೇತರ ಗಂಡು ಹೆಣ್ಣಿನ ಸಂಬಂಧವನ್ನು ಕುರಿತ ಈ ಕಥೆಗೆ ಮೆರುಗು ಕೊಟ್ಟಿತು. ರಾಜಕುಮಾರ್, ಅಶ್ವತ್ಥ್ ಮತ್ತು ಹರಿಣಿ ತಮ್ಮ ಅಭಿನಯದಲ್ಲಿ ಆರೋಗ್ಯಕರ ಸ್ಪರ್ಧೆಯಿಂದಾಗಿ ನಿಂತು ಎಷ್ಟೋ ಕಡೆಗಳಲ್ಲಿ ಚಿತ್ರದ ಇತರ ಕೆಲವು ನ್ಯೂನತೆಗಳನ್ನು ಮುಚ್ಚಿಡಲೂ ಸಹಾಯಕವಾದರು. 'ಭಕ್ತ ಕನಕದಾಸ'ದಿಂದ ಕನ್ನಡ ಚಿತ್ರರಂಗದಲ್ಲಿ ಹೊಸ ಚೇತನವನ್ನುಂಟುಮಾಡಿದ್ದ ಎಂ.ವೆಂಕಟರಾಜು ಈ ಚಿತ್ರದಲ್ಲಿ ಮತ್ತೆ ತಮ್ಮ ಸಂಗೀತ ನಿರ್ದೇಶನದ ವೈಶಿಷ್ಟ್ಯವನ್ನು ತೋರಿದರು. ಅವರು ಸಂಯೋಜಿಸಿದ 'ಗಾಳಿಗೋಪುರ ನಿನ್ನಾಶಾ ತೀರ ಸಾಳಿ ನೋಡುವಾ...' ಗೀತೆ ವರ್ಷಾಂತರಗಳಿಂದ ಕನ್ನಡ ಪ್ರೇಕ್ಷಕರ ಮನಗಳಲ್ಲಿ ಅಚ್ಚಳಿಯದೆ ನಿಂತಿರುವ ಹಾಡು. ಈ ಚಿತ್ರ ಕನ್ನಡ ಚಿತ್ರೋದ್ಯಮಕ್ಕೆ ಕೊಡುಗೆಯನ್ನಾಗಿತ್ತ ಇನ್ನೊಂದು ಪ್ರತಿಭೆ, ಸಾಹಿತಿ-ನಟ ಸೋರಟ್ ಅಶ್ವತ್ಥ್.

ಆದರೆ 'ನಂದಾದೀಪ' ಹಾಕಿಕೊಟ್ಟ ಮಾರ್ಗವನ್ನು ತಕ್ಷಣ ಯಾರೂ ಅನುಕರಿಸದಿದ್ದುದು ಕನ್ನಡ ಚಿತ್ರರಂಗ ಆ ದಿನಗಳಲ್ಲಿ ಓಲೈಸಿದ ಸಂಪ್ರದಾಯ ಬದ್ಧತೆಗೆ ಸಾಕ್ಷಿ. ಹಳೆಯ ಜಾಡನ್ನು ಮುರಿದು ಹೊಸ ದಾರಿಯೊಂದನ್ನು ಹುಡುಕುವ ತಮ್ಮ ತವಕವನ್ನು ವಾದಿರಾಜ್-ಜವಹರ್‌ರವರೇ ಮತ್ತೆ ಒಂದು ವರ್ಷದ ನಂತರ 'ನವಜೀವನ' ಮತ್ತು 'ನಾಂದಿ' ಚಿತ್ರಗಳಲ್ಲಿ ಪ್ರದರ್ಶಿಸಬೇಕಾಯಿತು. ಹೆಚ್ಚು ಸಂಪನ್ಮೂಲಗಳ ಅನುಕೂಲವಿಲ್ಲದೆ ತಮ್ಮ ಆದರ್ಶಗಳನ್ನೂ ಬಿಟ್ಟುಕೊಡದ ಛಲವನ್ನು ಮತ್ತೆ ಪ್ರದರ್ಶಿಸಿದವರೇ ಈ ಸಹೋದರರು ಮತ್ತು ಅವರ ಕ್ರಿಯಾಶೀಲತೆಯನ್ನು ಹಂಚಿಕೊಂಡ ಅವರ ಸೋದರಿ ಹರಿಣಿ. ಅವರನ್ನು ಉತ್ತೇಜಿಸುವಂತೆ 'ನಂದಾದೀಪ' ಭಾರಿ 'ಹಿಟ್' ಎನಿಸದಿದ್ದರೂ ಅವರಿಗೆ ಒಂದಿಷ್ಟು ಲಾಭವನ್ನು ಗಳಿಸಿಕೊಟ್ಟಿತ್ತು. ಅದು 'ನವಜೀವನ' ಚಿತ್ರ ನಿರ್ಮಾಣಕ್ಕೆ ಪ್ರೇರಣೆಯಾಯಿತು. ಸದಭಿರುಚಿಯ ಚಿತ್ರ ನಿರ್ಮಾಣದ ಹುಮ್ಮಸ್ಸಿನಲ್ಲಿ ಮದರಾಸಿನ ಒಂದು ಸ್ಟುಡಿಯೋವನ್ನೇ ದೀರ್ಘಕಾಲದ ಗುತ್ತಿಗೆಗೆ ಪಡೆದು ಸಿದ್ಧತೆ ಮಾಡಿಕೊಂಡಿದ್ದ ಈ ಸಹೋದರರಿಗೆ ಅನಂತರದ ಕೆಲವು ಸಂಗತಿಗಳಿಂದಾಗಿ ಭ್ರಮನಿರಸನಗೊಳ್ಳುವಂತಾಯಿತು.

'ನವಜೀವನ' ಆ ಕಾಲಕ್ಕೆ ಒಂದು ಸಾಹಸವೇ ಸರಿ. ಅಂದಿನ ಚಿತ್ರಗಳಲ್ಲಿದ್ದ ನಿರೂಪಣೆಯ ಪರಿಭಾಷೆಯನ್ನು 'ನಂದಾದೀಪ'ಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಮೂಡಿಸಿದ ಚಿತ್ರ ಇದು. ಜೊತೆಗೆ ಈ ಚಿತ್ರದಲ್ಲಿ ಅಂದಿನ ಸಾಮಾಜಿಕ ಜೀವನದ ಇತರ ಮಗ್ಗುಲುಗಳನ್ನೂ ಹುಡುಕುವ ಪ್ರಯತ್ನವಿತ್ತು. ಚಿತ್ರದ ಕಥಾ ಹಂದರವೇ ವಿಭಿನ್ನವಾಗಿತ್ತು. ಒಂದೇ ಒಂದು ಸ್ಥಳದಲ್ಲಿ ಕೇವಲ ನಾಲ್ಕು ದಿವಸಗಳಲ್ಲಿ ನಡೆಯುವ ವಿದ್ಯಮಾನಗಳೇ ಕಥೆಯ ತಿರುಳು. ಆದರೆ ಇದು ಸಾಂಪ್ರದಾಯಿಕವಾದ ಕಥೆಯೂ ಅಲ್ಲ. ತಮಿಳು ಪತ್ರಿಕೆಯೊಂದರಲ್ಲಿ ಪ್ರಕಟವಾದ ಧಾರಾವಾಹಿ ಕಾದಂಬರಿಯೊಂದರಿಂದ ಸ್ಫೂರ್ತಿ ಈ ಚಿತ್ರದ ಕಥಾವಸ್ತು. ಕಷ್ಟ ಬಂದಾಗ ಎಲ್ಲರೂ ಒಂದಾಗುತ್ತಾರೆ ಎನ್ನುವುದೇ ಅದರ ಸಾರಾಂಶ. ಆದರೆ ಈ ಚಿತ್ರದಲ್ಲಿ ಮಾಮೂಲಿ ಕಥಾ ರೇಖೆಯಿರಲಿಲ್ಲ. ಪ್ರಕೃತಿಯ ವಿಕೋಪಕ್ಕೆ ಸಿಕ್ಕಿದ ಕೆಲವು ಪ್ರಯಾಣಿಕರು ತಮ್ಮ ಪ್ರಯಾಣವನ್ನು ಮುಂದುವರಿಸಲಾಗದೆ ಅತಿಥಿ ಗೃಹವೊಂದರಲ್ಲಿ ನಾಲ್ಕು ದಿನಗಳು ಕಳೆಯಬೇಕಾದ ಸನ್ನಿವೇಶದಲ್ಲಿ ಪ್ರತಿಯೊಂದು ಪಾತ್ರದ ಹಿಂದೆಯೂ ಒಂದು ವಿಭಿನ್ನ ಜೀವನಾನುಭವವಿರುವುದು ಗೋಚರವಾಗುತ್ತದೆ. ಅವನ್ನೆಲ್ಲ ಹೆಣೆದಾಗ



(ಚಿತ್ರ ೧೬)'ನವಜೀವನ' ಚಿತ್ರದಲ್ಲಿ ಸುದರ್ಶನ್, ಅಶ್ವತ್ಥ್ ಮತ್ತು ಬಸವರಾಜು

ಅಪರಿಚಿತರಾಗಿದ್ದ ಅವರೆಲ್ಲ ಒಂದೇ ಕುಟುಂಬದವರಂತಾಗುತ್ತಾರೆ. ಗುಂಪಿನಲ್ಲಿದ್ದ ಕ್ರೈಸ್ತ ಪಾದ್ರಿಯೊಬ್ಬರು ಈ ಎಲ್ಲ ಪಾತ್ರಗಳನ್ನೂ ಆಕರ್ಷಿಸುವ ಅಯಸ್ಕಾಂತವಾಗುತ್ತಾರೆ. ಕೊನೆಗೆ ಚಿತ್ರದಿಂದ ಮಾನವ ಸಂಬಂಧಗಳಲ್ಲಿನ ಸಂಕೀರ್ಣತೆಗಳ ಸಮ್ಯಕ್ ದರ್ಶನವಾಗುತ್ತದೆ.

'ನವಜೀವನ'ದಲ್ಲಿ ಎದ್ದು ತೋರಿದ ಸಾಮಾಜಿಕ ಕಾಳಜಿಗಳು ಅನೇಕ. ಅಂದಿನ ಕೇಂದ್ರ ಗ್ರಾಮಾಭಿವೃದ್ಧಿ ಮತ್ತು ವಿಕಾಸ ಮಂತ್ರಿಯಾಗಿದ್ದ ಸಿ.ಸುಬ್ರಹ್ಮಣ್ಯಂ ಗ್ರಾಮಗಳ ಸ್ವಚ್ಛತೆ ಮತ್ತಿತರ ಸಮಸ್ಯೆಗಳ ಪರಿಹಾರಕ್ಕಾಗಿ ಗ್ರಾಮಸ್ಥರೇ ಸ್ವತಃ ಆಸಕ್ತಿ ತೋರಿ ಸರ್ಕಾರವನ್ನೇ ಸಂಪೂರ್ಣವಾಗಿ ಅವಲಂಬಿಸದೆ ಸ್ವಯಂ ಸೇವಕರಾಗಿ ಕಾರ್ಯಪ್ರವೃತ್ತರಾಗಬೇಕೆಂಬ ಯೋಜನೆಯನ್ನು ಪ್ರತಿಪಾದಿಸಿದ್ದರು. ಜೊತೆಗೆ ವಿನೋಬಾ ಭಾವೆಯವರ ಶ್ರಮದಾನ ಚಳವಳಿಯೂ ಗ್ರಾಮೀಣ ಜೀವನವನ್ನು ತಟ್ಟಿತ್ತು. 'ನವಜೀವನ'ದ ಚಿತ್ರಕಥೆ ಈ ಅಂಶಗಳನ್ನು ಪರಿಣಾಮಕಾರಿಯಾಗಿ ಮೈಗೂಡಿಸಿಕೊಂಡಿತ್ತು.

'ನಂದಾದೀಪ'ದ ನಿರ್ದೇಶಕ ವಿಠಲ್ ಅವರೇ ಈ ಚಿತ್ರವನ್ನು ನಿರ್ದೇಶಿಸಬೇಕಿತ್ತು. ಆದರೆ ಅವರಿಗೆ ಒದಗಿದ ಅನಾನುಕೂಲದಿಂದಾಗಿ ನಿರ್ದೇಶನದ ಜವಾಬ್ದಾರಿ ಸಂಕಲನಕಾರ ಪಿ.ಎಸ್.ಮೂರ್ತಿಯವರ ಪಾಲಿಗೆ ಬಂತು. ಹೀಗಾಗಿ ಕನ್ನಡಕ್ಕೆ ಮತ್ತೊಬ್ಬ ಸೃಜನಶೀಲ ನಿರ್ದೇಶಕನ ಪರಿಚಯವೂ ಆಯಿತು. 'ನಂದಾದೀಪ'ದ ಸಂಕಲನಕಾರರೂ ಅವರೇ.



(ಚಿತ್ರ ೧೭) 'ನಾಂದಿ' ಚಿತ್ರದಲ್ಲಿ ಹರಿಣಿ ಮತ್ತು ರಾಜಕುಮಾರ್

೧೯೬೫ರಲ್ಲಿ ಕೇಂದ್ರ ಸರ್ಕಾರದಿಂದ ಪ್ರಶಸ್ತಿ ಪಡೆದ 'ನವಜೀವನ' 'ನಂದಾದೀಪ'ದಲ್ಲಿನ ಸಂಯಮವರಿತ ಅಭಿನಯದ ಶೈಲಿಗೆ ಇನ್ನಷ್ಟು ಮೆರುಗು ನೀಡಿದ ಚಿತ್ರ. ಅಶ್ವತ್ಥ್ ಮತ್ತು ಪಂಢರಿಬಾಯಿ ಈ ದೃಷ್ಟಿಯಿಂದ ಹೊಸದೊಂದು ದಾಖಲೆಯನ್ನೇ ಸ್ಥಾಪಿಸಿದರೆನ್ನಬೇಕು. ಜೊತೆಗೆ 'ನಂದಾದೀಪ'ದಂತೆಯೇ ಇಲ್ಲಿಯೂ ಛಾಯಾಗ್ರಹಣ ವಿಶೇಷ ಗಮನ ಸೆಳೆದದ್ದು ಮಧು ಅವರ ವಿಶೇಷ ಬೆಳಕು, ವಿನ್ಯಾಸ, ಅಲ್ಲಿನ ಫ್ರೇಮಿಂಗ್ ಮತ್ತು ಕ್ಲೋಸ್-ಅಪ್‌ಗಳ ಅರ್ಥಪೂರ್ಣ ಬಳಕೆಯಿಂದಾಗಿ.

ಮತಾಂಧತೆಯ ಆಧಾರದ ಮೇಲೆಯೇ ಭಾರತೀಯ ಸಮಾಜ ನಿರ್ಮಾಣವಾಗಿರುವ ಹಿನ್ನೆಲೆಯಲ್ಲಿ ಯಾವ ಅಬ್ಬರವೂ ಇಲ್ಲದೆ 'ನವಜೀವನ' ಸಾರಿದ ಮತ ಸಹಿಷ್ಣುತೆಯ ಸಂದೇಶ ಆಪ್ಯಾಯಮಾನವಾಗಿ ಮೂಡಿ ಬಂತು. ನಾಲ್ಕಾರು ಸಾಮಾಜಿಕ ಸಮಸ್ಯೆಗಳ ಬಗ್ಗೆ ಒಂದೇ ಚಿತ್ರದಲ್ಲಿ ಪ್ರಸ್ತಾಪವಿದ್ದರೂ ಚಿತ್ರಕಥೆಯನ್ನು ಹೆಣೆದ ರೀತಿಯಿಂದಾಗಿ ಯಾವುದೂ ಕೃತಕವೆನಿಸಲಿಲ್ಲ. ರಾಜನ್-ನಾಗೇಂದ್ರ ಕೆಲವು ಸುಶ್ರಾವ್ಯ ಹಾಡುಗಳನ್ನು ಸಂಯೋಜಿಸಿದರು. 'ದಯೆಯಿಲ್ಲದ ಧರ್ಮವು ಯಾವುದಯ್ಯ...', ಮತ್ತು ಮುಸ್ಲಿಮರ ಪ್ರಾರ್ಥನೆ ಬಹಳ ಕಾಲ ನೆನಪಿನಲ್ಲಿ ಉಳಿಯುವಂಥವು.

'ನವಜೀವನ' ಬೆಂಗಳೂರು, ಮೈಸೂರುಗಳನ್ನುಳಿದರೆ ಇನ್ಯಾವ ನಗರದಲ್ಲೂ ಪ್ರೇಕ್ಷಕರನ್ನು ಆಕರ್ಷಿಸಲಿಲ್ಲ. ಆದರೂ ತಮ್ಮ ಛಲವನ್ನು ಬಿಟ್ಟುಕೊಡದ ವಾದಿರಾಜ್-ಜವಹರ್ ಮುಂದಿನ ಪ್ರಯತ್ನವಾದ 'ನಾಂದಿ' ಚಿತ್ರದ ಮೂಲಕ ಕನ್ನಡ ಚಿತ್ರರಂಗದಲ್ಲಿ ಮತ್ತೊಂದು ಮೈಲಿಗಲ್ಲನ್ನು ಸ್ಥಾಪಿಸಿ ತಮ್ಮ ಹಿರಿಮೆಯನ್ನು ರಾಷ್ಟ್ರದಾದ್ಯಂತ ವಿಸ್ತರಿಸಿದರು.

'ನಾಂದಿ' ಅದುವರೆಗೆ ನಾಗೇಂದ್ರರಾಯರೊಂದಿಗೆ ಸಹನಿರ್ದೇಶಕರಾಗಿದ್ದ ಎನ್.ಲಕ್ಷ್ಮೀನಾರಾಯಣ್‌ರಿಗೆ ಸ್ವತಂತ್ರ ನಿರ್ದೇಶಕನ ಪಟ್ಟ ಕಟ್ಟಿದ ಚಿತ್ರ. ಲಕ್ಷ್ಮೀನಾರಾಯಣ್ ಅಂತರರಾಷ್ಟ್ರೀಯ ವ್ಯಾಪ್ತಿಯ ಮೊಟ್ಟಮೊದಲ ಕನ್ನಡ ನಿರ್ದೇಶಕರಾಗಿದ್ದು ವಾದಿರಾಜ್-ಜವಹರ್ ಸೋದರರ ಧೈರ್ಯದಿಂದಲೆ. ಲಕ್ಷ್ಮೀನಾರಾಯಣ್ ಸತ್ಯಜಿತ್ ರಾಯ್‌ರವರ ಚಿತ್ರಗಳಲ್ಲಿನ ವಾಸ್ತವಿಕತೆ ಮತ್ತು ಸರಳ ನಿರೂಪಣೆಗಳಿಂದ ವಿಶೇಷವಾಗಿ ಪ್ರಭಾವಿತರಾದವರು.

ರಾಯ್ ಚಿತ್ರಗಳಲ್ಲಿ ಜೀವನವನ್ನು ಅತಿ ಸೂಕ್ಷ್ಮವಾಗಿ ಅವಲೋಕಿಸುವ ರೀತಿ ಅವರಿಗೆ ಮಾರ್ಗದರ್ಶಕವಾಯಿತು. ಅವರು ರಾಯ್ ಅವರ ನಿರೂಪಣಾ ವಿಧಾನದಲ್ಲಿ ಮೂಲಭೂತವಾಗಿ ಕಂಡ ವೈಶಿಷ್ಟ್ಯ ಚಿತ್ರಕಥೆಯ ರಚನೆ. ಇಂತಹ ವಿಧಾನ ಚಿತ್ರವನ್ನು ಗೊಂದಲವಿಲ್ಲದೆ ಅನುಸರಿಸಿಕೊಂಡು ಹೋಗುತ್ತದೆಯೆಂದು ಮೆಚ್ಚಿದ ಅವರು ಪ್ರಯತ್ನಪೂರ್ವಕವಾಗಿ 'ನಾಂದಿ'ಯಲ್ಲಿ ಇದೇ ಧಾಟಿಯ ನಿರೂಪಣೆಯನ್ನು ಬಳಸಿದ್ದಾಗಿ ಹೇಳಿಕೊಂಡಿದ್ದರು. ಚಿತ್ರದ ಪ್ರತಿಯೊಂದು ಸನ್ನಿವೇಶವೂ ಮೂಲಪಾತ್ರದ ಸುತ್ತ ಬೆಳೆಯುವ ಅವರ ತಂತ್ರ ಅವರ ಮುಂದಿನ ಚಿತ್ರಗಳಲ್ಲಿಯೂ ಕಂಡು ಬಂತು.

''ರಾಯ್ ಚಿತ್ರಗಳಲ್ಲಿ ಪ್ರಧಾನ ವ್ಯಕ್ತಿಗಳು ಜೀವನವಿಡೀ ನೊಂದಿರುತ್ತಾರೆ. ಆದರೆ ಹತಾಶರಾಗದೆ ಹೊಸ ಬಾಳಿನ ನಿರೀಕ್ಷೆಯೊಡನೆ ಮುಂದುವರಿಯುತ್ತಾರೆ. ಸೂಕ್ಷ್ಮವಾಗಿ ನೋಡಿದರೆ ನನ್ನ 'ನಾಂದಿ', 'ಉಯ್ಯಾಲೆ', ಮತ್ತು 'ಮುಕ್ತಿ' ಚಿತ್ರಗಳ ಅಂತಿಮ ದೃಶ್ಯಗಳಲ್ಲಿಯೂ ಇದೇ ತತ್ವ ಕಾಣುತ್ತದೆ'' ಎಂದು ಲಕ್ಷ್ಮೀನಾರಾಯಣ್ ಹೇಳಿಕೊಂಡಿದ್ದರು. ಅವರು ಕರ್ನಾಟಕದ ಸತ್ಯಜಿತ್ ರಾಯ್ ಎಂದು ಹೆಸರು ಗಳಿಸಲು ಕೂಡ ಈ ದ್ರೋಣಾಚಾರ್ಯ-ಏಕಲವ್ಯ ಸಮಾನ ಗುರು-ಶಿಷ್ಯ ಸಂಬಂಧವೇ ಕಾರಣ. ಆದರೂ ಲಕ್ಷ್ಮೀನಾರಾಯಣ್‌ರವರ ಎಲ್ಲ ಚಿತ್ರಗಳೂ ರಾಯ್‌ರವರ ಚಿತ್ರಗಳೊಂದಿಗೆ ಹೋಲಿಕೆಗೇನೂ ಸಿಗಲಿಲ್ಲ. ಒಮ್ಮೊಮ್ಮೆ ವಾಸ್ತವತೆಯ ಕ್ಯಾಮರಾ ನಿರೂಪಣೆ ಒಂದು ತಳ ಮುಟ್ಟದೆ ತೀರಾ ಸರಳವಾಗಿ ಬಿಡುತ್ತಿದುದೂ ಹೌದು. ಅದೂ ಅಲ್ಲದೆ ಲಕ್ಷ್ಮೀನಾರಾಯಣ್ ವ್ಯಾಪಾರಿ ಚಿತ್ರೋದ್ಯಮದ ಚೌಕಟ್ಟಿನಲ್ಲಿಯೇ ಚಿತ್ರಗಳನ್ನು ಮಾಡಬೇಕಾದ ಅನಿವಾರ್ಯತೆಯೂ ಇದ್ದುದರಿಂದ ಆ ಚೌಕಟ್ಟಿಗೆ ಅಗತ್ಯವಾದ ಹಾಸ್ಯ, ಹಾಡುಗಳು ಎಲ್ಲವನ್ನೂ ತಮ್ಮ ಮೊದಲ ಎರಡು ಮೂರು ಚಿತ್ರಗಳಲ್ಲಾದರೂ ಬಳಸಲೇ ಬೇಕಾಯಿತು.

ಚಿತ್ರಮಾಧ್ಯಮದಲ್ಲಿ ನಿರ್ದೇಶಕನ ಸ್ಥಾನಕ್ಕೆ ಹೆಚ್ಚು ಒತ್ತು ಕೊಟ್ಟು ಜನಪ್ರಿಯತೆಯ ಅಂಶಗಳು ಮತ್ತು ಚಿತ್ರಮಾಧ್ಯಮದ ಸಾಧ್ಯತೆಗಳೆರಡನ್ನೂ ಬೆರೆಸಿದಂತಹ ಚಿತ್ರಗಳನ್ನು ನಿರ್ದೇಶಿಸಿದ ಪೀಳಿಗೆ ಲಕ್ಷ್ಮೀನಾರಾಯಣ್‌ರಿಂದ ಪ್ರಾರಂಭವಾಯಿತೆಂದರೂ ತಪ್ಪಲ್ಲ. 'ನಾಂದಿ' ಇದೇ ಕಾರಣದಿಂದ ಕನ್ನಡ ಚಿತ್ರರಂಗದ ಮೈಲಿಗಲ್ಲುಗಳಲ್ಲೊಂದು.

ಶಬ್ದವೈಭವವೇ ಹೆಚ್ಚಾಗಿ ಮೆರೆಯುತ್ತಿದ್ದ ಕನ್ನಡ ಚಿತ್ರರಂಗದಲ್ಲಿ 'ನಾಂದಿ' ಚಿತ್ರದಲ್ಲಿ ಕಿವುಡು-ಮೂಗಿಯೊಬ್ಬಳನ್ನು ಪ್ರಧಾನ ಪಾತ್ರವಾಗಿಟ್ಟುಕೊಂಡು ಹಾಸ್ಯ ಸನ್ನಿವೇಶಗಳನ್ನು ಹೊರತು ಪಡಿಸಿ ಮಿಕ್ಕ ಸನ್ನಿವೇಶಗಳಲ್ಲಿ ಮಾತನ್ನು ಮಿತವಾಗಿ ಬಳಸಿದರು ಲಕ್ಷ್ಮೀನಾರಾಯಣ್. ನಾಯಕಿಗೆ ಮಾತು ಬಾರದಿದ್ದು, ಕಿವಿಯೂ ಕೇಳುತ್ತಿರಲಿಲ್ಲವಾದ್ದರಿಂದ ಅವರು ಶಬ್ದಗ್ರಹಣದಲ್ಲಿ ಕೆಲವು ಹೊಸ ಪ್ರಯೋಗಗಳನ್ನು ಮಾಡಬೇಕಾಯಿತು. ಈ ಪ್ರಯೋಗಗಳ ಯಶಸ್ಸು ಜನಸಾಮಾನ್ಯರಿಗೆ ಎಷ್ಟರ ಮಟ್ಟಿಗೆ ವೇದ್ಯವಾಯಿತೋ, ವಿಮರ್ಶಕರ ಮತ್ತು ಚಲನಚಿತ್ರಜ್ಞರ ಮೆಚ್ಚುಗೆಗಂತೂ ಪಾತ್ರವಾಯಿತು. ಈ ಪಾತ್ರದಲ್ಲಿ ಮನೋಜ್ಞವಾಗಿ ಅಭಿನಯಿಸಿದ ಹರಿಣಿ, ಪ್ರತಿದಿನವೂ

ತಮ್ಮ ಸೋದರರೊಂದಿಗೆ ಮದರಾಸಿನ ಜೆಮಿನಿ ಸ್ಟುಡಿಯೋ ಪಕ್ಕದಲ್ಲಿದ್ದ ಕಿವುಡು ಮೂಕರ ಶಾಲೆಗೆ ಭೇಟಿ ಕೊಟ್ಟು, ಅಲ್ಲಿ ಅಂತಹ ನತದೃಷ್ಟರ ಹಾವ-ಭಾವಗಳನ್ನು, ಜೀವನಕ್ರಮವನ್ನು ಅಧ್ಯಯನ ಮಾಡಿ ತಮ್ಮ ಅಭಿನಯದಲ್ಲಿ ಅಳವಡಿಸಿಕೊಂಡರು. ಅವರೊಂದಿಗೆ ಸಾಮಾನ್ಯ ಶಾಲಾ ಅಧ್ಯಾಪಕನಾಗಿ ರಾಜಕುಮಾರ್ ನೀಡಿದ ಸಂಯಮದ ಅಭಿನಯ ಲಕ್ಷ್ಮೀನಾರಾಯಣ್‌ರವರ ನಿರೂಪಣಾ ಶೈಲಿಗೆ ಸೊಗಸಾಗಿ ಸ್ಪಂದಿಸಿತು. ಹಾಸ್ಯಪಾತ್ರಗಳಲ್ಲಿ ಬಾಲಕೃಷ್ಣರವರ ಅಬ್ಬರ ವಿಪರೀತವಾಯಿತಾದರೂ, ನಿರ್ಮಾಪಕ ವಾದಿರಾಜ್ ಮತ್ತೊಂದು ಹಾಸ್ಯ ಪಾತ್ರದಲ್ಲಿ ಸವಿರಾಗ ಅಭಿನಯಿಸಿ ಕುಸಿದ ಹಾಸ್ಯ ಸನ್ನಿವೇಶಗಳನ್ನು ಒಂದಷ್ಟು ಮೇಲಕ್ಕೆ ಎತ್ತಿದರು.

'ನಾಂದಿ'ಯಲ್ಲಿ ಇನ್ನೂ ಒಂದು ಸ್ವಾರಸ್ಯಕರ ಅಂಶವಿದೆ. ಆ ಚಿತ್ರದಲ್ಲಿನ ಐದು ಹಾಡುಗಳನ್ನು ಲಕ್ಷ್ಮೀನಾರಾಯಣ್ ತಮ್ಮ 'ಪಂಚಮಹಾ ಪಾತಕ'ಗಳೆಂದು ಕರೆದು ಅವುಗಳನ್ನು ಬಳಸಿ ತಾವು ಮಾಧ್ಯಮಕ್ಕೆ ಯಾವುದೋ ದೊಡ್ಡ ಅಪಚಾರ ಮಾಡಿದಂತೆ ಕೊನೆಯವರೆಗೂ ಮಾತನಾಡುತ್ತಲೇ ಇದ್ದರು. ಆದರೂ ವಿಜಯಭಾಸ್ಕರ್ ಸಂಗೀತ ನಿರ್ದೇಶನದ ಆ ಹಾಡುಗಳೆಲ್ಲವೂ ವ್ಯಾಪಕವಾಗಿ ಜನಪ್ರಿಯತೆ ಪಡೆದವು. ಹಾಗೆ ನೋಡುವುದಾದರೆ ಸಂಗೀತದ ದೃಷ್ಟಿಯಿಂದ 'ನಾಂದಿ'ಗೆ ಒಂದು ವಿಶಿಷ್ಟ ಸ್ಥಾನವೇ ಸಂದಿತು.



(ಚಿತ್ರ ೧೯) 'ಸಂತ ತುಕಾರಾಂ' ಚಿತ್ರದಲ್ಲಿ ಲೀಲಾವತಿ ಮತ್ತು ರಾಜಕುಮಾರ್

'ನಾಂದಿ' ಚಿತ್ರವನ್ನು ಆಯ್ದ ವಿಮರ್ಶಕರು, ಕಲಾವಿದರು, ಆಹ್ವಾನಿತರಿಗೆ ಮದರಾಸಿನಲ್ಲಿ ಪ್ರದರ್ಶಿಸಿದಾಗ ಕನ್ನಡ ಚಿತ್ರರಂಗದ ಮೂವರು ಕುಮಾರರು ಒಟ್ಟಾಗಿ ಕುಳಿತು ಚಿತ್ರವನ್ನು ವೀಕ್ಷಿಸಿದ್ದಲ್ಲದೆ ಪ್ರಸಿದ್ಧ ತಮಿಳು ವಿಮರ್ಶಕರಿಂದ ಅದಕ್ಕೆ ಅಪರೂಪದ ಪ್ರಶಂಸೆ ಕೂಡ ಸಿಕ್ಕಿತು. ''ಕನ್ನಡ ಚಿತ್ರರಂಗ ಬಂಗಾಳದ ಹಾಗೆ ಮುಂದುವರೆದಿದೆ. ಮೊದಲ ಹೆಂಡತಿ ಸತ್ತಾಗ ರಾಜಕುಮಾರರ ಹಿತಮಿತ, ನಯವಾದ ಅಭಿನಯ, ಚೀತ್ಕಾರ ಮಾಡುವುದೇ ನಟನೆಯೆಂದು ಭಾವಿಸುವ ತಮಿಳು ಹೀರೋಗಳಿಗೆ ಮಾದರಿಯಾಗಬೇಕು'' ಎಂದು ಶ್ಲಾಘಿಸಿದ ವಿಮರ್ಶಕರು ವಾದಿರಾಜ್ ತಮ್ಮ ಪಾತ್ರದಲ್ಲಿ ತಬಲಾ ನುಡಿಸುವಾಗ ಅನುಸರಿಸುವ ಶೈಲಿ ಕೂಡ ಅಮೋಘವೆಂದರು. ಇಂತಹ ಕನ್ನಡ ಚಿತ್ರದಿಂದ ತಮಿಳಿನವರು ಕಲಿಯುವುದು ಬಹಳವಿದೆಯೆಂಬ ಅವರ ಉದ್ಗಾರ ಅನೇಕರಲ್ಲಿ ಪ್ರತಿಧ್ವನಿಸಿತು.

ಲಕ್ಷ್ಮೀನಾರಾಯಣ್ ಆಗಲೇ ಬ್ರಿಟಿಷ್ ಫಿಲಂ ಇನ್ಸ್‌ಟಿಟ್ಯೂಟ್ ಅನುದಾನದಿಂದ 'ಬ್ಲಿಸ್' ಎಂಬ ಎಂಟು ನಿಮಿಷದ ಕಿರುಚಿತ್ರವೊಂದನ್ನು ತಯಾರಿಸಿ ಅನೇಕ ರಾಷ್ಟ್ರಗಳಲ್ಲಿ ವಿಮರ್ಶಕರ ಗಮನವನ್ನು ಸೆಳೆದಿದ್ದರು. ಭಾರತದಲ್ಲಿಯೇ ಕೇಂದ್ರ ಸರ್ಕಾರದ ಪ್ರಶಸ್ತಿಯಿಂದ 'ನಾಂದಿ' ಚಿತ್ರ ವಂಚಿತವಾದರೂ ಅದನ್ನು ೧೯೬೫ರಲ್ಲಿ ಲಂಡನ್‌ನಲ್ಲಿ ನಡೆದ ಕಾಮನ್‌ವೆಲ್ತ್ ಚಲನಚಿತ್ರೋತ್ಸವದಲ್ಲಿ ಪ್ರದರ್ಶಿಸಲು ಭಗೀರಥ ಪ್ರಯತ್ನ ನಡೆಯಿತು. ಕೊನೆಗೂ ಉತ್ಸವದಲ್ಲಿ ಪ್ರದರ್ಶಿತವಾಗಲು ಆಯ್ಕೆಯೂ ಆಯಿತು. ಆದರೆ ಈ ಆಯ್ಕೆಯ ಬಗ್ಗೆ ನಿರ್ಮಾಪಕರಿಗೆ ಸುದ್ದಿ ತಲುಪಿದ್ದೇ ಉತ್ಸವ ಪ್ರಾರಂಭವಾದ ನಂತರ. ಇದರಿಂದಾಗಿ ಚಿತ್ರದ ಪ್ರತಿ ಲಂಡನ್‌ಗೆ ರವಾನೆಯಾಗುವುದು ತಡವಾಯಿತು. ದುರದೃಷ್ಟವೆಂಬಂತೆ ಆ ಪ್ರತಿಯೂ ಸುಂಕದ ಕಟ್ಟೆಯಲ್ಲಿ ಸಿಕ್ಕಿಕೊಂಡಿತು. ಕೊನೆಗೆ ಲಂಡನ್ನಿನ ನ್ಯಾಷನಲ್ ಫಿಲಂ ಥಿಯೇಟರ್‌ನಲ್ಲಿ ಪ್ರದರ್ಶನಾವಕಾಶ ಸಿಕ್ಕಿ, ವಿದೇಶದಲ್ಲಿ ಪ್ರದರ್ಶಿತವಾದ ಪ್ರಥಮ ಕನ್ನಡ ಚಿತ್ರವೆಂಬ ಹಿರಿಮೆ 'ನಾಂದಿ'ಯದಾಯಿತು. ಈ ಚಿತ್ರದ ಮೂಲಕ ಕನ್ನಡ ಚಿತ್ರರಂಗಕ್ಕೆ ಪ್ರತಿಭಾವಂತ ನಟ ದಿನೇಶ್‌ರ ಪ್ರವೇಶವಾಯಿತು. ಗುಬ್ಬಿ ವೀರಣ್ಣ ಮತ್ತು ಹಿರಣ್ಣಯ್ಯನವರ ನಾಟಕದ ಕಂಪೆನಿಯಲ್ಲಿ ಜನಪ್ರಿಯ ಕಲಾವಿದರಾಗಿದ್ದ ದಿನೇಶ್ ನೀಡಿದ ಹದವರಿತ ಅಭಿನಯ ಅವರ ಭವಿಷ್ಯಕ್ಕೆ ಭದ್ರವಾದ ಬುನಾದಿ ಹಾಕಿತು. ಚಿತ್ರಕ್ಕೆ ಅದ್ಭುತ ಪ್ರಚಾರ ಸಿಕ್ಕಿದರೂ 'ನವಜೀವನ'ದಂತೆಯೇ ಅದು ಜನಸಾಮಾನ್ಯರನ್ನು ಆಕರ್ಷಿಸುವುದರಲ್ಲಿ ವಿಫಲವಾಯಿತು. ವಾದಿರಾಜ್-ಜವಹರ್ ಜನಸಾಮಾನ್ಯರನ್ನು ಹೆಚ್ಚು ಸುಲಭವಾಗಿ ತಲುಪಬಲ್ಲ, ಆದರೆ ಉತ್ತಮ ಅಭಿರುಚಿಯನ್ನು ಬಿಟ್ಟುಕೊಡದ ಚಿತ್ರಗಳ ನಿರ್ಮಾಣದತ್ತ ಗಮನ ಹರಿಸಿದರು.

೧೯೬೩ರಲ್ಲಿ ತೆರೆಗೆ ಬಂದ ಯಶಸ್ವಿ ಚಿತ್ರ ಎಸ್.ಕೆ.ಎ.ಚಾರಿ ನಿರ್ದೇಶಿತ 'ಗೌರಿ' ಪ್ರಪ್ರಥಮ ಬಾರಿಗೆ ಕನ್ನಡ ಚಿತ್ರವೊಂದರಲ್ಲಿ ಕುವೆಂಪು ಅವರ 'ಯಾವ ಜನ್ಮದ ಮೈತ್ರಿ...', ಕೆ.ಎಸ್.ನರಸಿಂಹಸ್ವಾಮಿ ಅವರ 'ಇವಳು ಯಾರು ಬಲ್ಲೆಯೇನು...' ಕವಿ ಗೀತೆಗಳನ್ನು ಬಳಸುವ ಮೂಲಕ ವಿಶೇಷ ಗಮನ ಸೆಳೆಯಿತು. ರೀಮೇಕ್ ಚಿತ್ರಗಳ ಪರವಾಗಿ ಬಲವಾಗಿ ವಾದಿಸಿ ವಿವಾದದ ಪ್ರಚಂಡ ಬಿರುಗಾಳಿಯೆಬ್ಬಿಸಿದ್ದ ಚಾರಿ ಈ ಚಿತ್ರದ ಪ್ರಥಮಾರ್ಧವನ್ನು ಮಾತ್ರ ರೀಮೇಕ್ ಎಂದು ಕರೆದು ಎರಡನೆಯ ಭಾಗವನ್ನು ಮೂಲ ಕಥೆಯನ್ನು ಬೇರೊಂದು ರೀತಿಯೇ ಹಿಗ್ಗಿಸಿರುವುದಾಗಿ ಹೇಳಿ ಸುದ್ದಿ ಮಾಡಿದರು. ಅತ್ಯಂತ ಜನಪ್ರಿಯ ಚಿತ್ರಗಳ ಸಾಲಿಗೆ ಸೇರಿದ 'ಗೌರಿ' ಚಾರಿಯವರ ಜನಪ್ರಿಯತೆಯನ್ನು ಗಟ್ಟಿಗೊಳಿಸಿತು. ರಂಗಭೂಮಿ ಮತ್ತು ಚಿತ್ರರಂಗಗಳಲ್ಲಿಯೂ ಪರಿಶ್ರಮ ಸಾಧಿಸಿದ್ದ ಸಾಹಿತಿ ಸಿ.ಕೆ.ನಾಗರಾಜರಾಯರು ಈ ಚಿತ್ರದ ಸಹನಿರ್ದೇಶಕರಾಗಿದ್ದುದು ಅದರ ಸಾಹಿತ್ಯಕ ಮೌಲ್ಯಗಳನ್ನು ಹೆಚ್ಚಿಸಿತು.

'ನಂದಾದೀಪ'ವನ್ನುಳಿದರೆ ಇನ್ನಾವುದೂ ವಿಶೇಷವಾಗಿ ಉಲ್ಲೇಖನಾರ್ಹವಾದ ಚಿತ್ರಗಳು ೧೯೬೩ರಲ್ಲಿ ತೆರೆ ಕಾಣಲಿಲ್ಲ. ಆದರೆ ಭಕ್ತಿ ಪ್ರಧಾನ ಚಿತ್ರಗಳ ಸಾಲಿನಲ್ಲಿ ಸುಂದರರಾವ್ ನಾಡಕರ್ಣಿ ನಿರ್ದೇಶಿಸಿದ 'ಸಂತ ತುಕಾರಾಂ' ಪ್ರಚಂಡ ಜನಪ್ರಿಯತೆ ಗಳಿಸಿತು. ಸುಂದರರಾಯರು ಹಳೆಯ ಮೈಸೂರಿನ ಸಾಗರದಲ್ಲಿಯೇ ಜನಿಸಿದ್ದರೂ ಮಹಾರಾಷ್ಟ್ರ ಮತ್ತು ಮದರಾಸುಗಳಲ್ಲಿಯೇ ವೃತ್ತಿಜೀವನದ ಹೆಚ್ಚು ಭಾಗವನ್ನು ಕಳೆದಿದ್ದರಿಂದ ಕನ್ನಡಿಗರಿಗೆ ಹೊರಗಿನವರಾಗಿಯೇ ಉಳಿದಿದ್ದರು. 'ಸಂತ ತುಕಾರಾಂ' ಅವರು ನಿರ್ದೇಶಿಸಿದ ಮೊದಲ ಚಿತ್ರ. ಚಿತ್ರರಂಗದ ಪ್ರಾರಂಭಿಕ ದಿನಗಳಿಂದಲೇ ದಾದಾ ಸಾಹೇಬ್ ಫಾಲ್ಕೆಯವರ ಸಾಂಗತ್ಯವನ್ನು ಬೆಳೆಸಿಕೊಂಡು ಉತ್ತಮ ತಂತ್ರಜ್ಞರಾಗಿ ಬೆಳೆದಿದ್ದ ಅವರಿಗೆ 'ಸಂತ ತುಕಾರಾಂ' ಭಾರಿಯಾದ ಹೆಸರನ್ನೇ ತಂದುಕೊಟ್ಟಿತು. ಚಿತ್ರಕ್ಕೆ



(ಚಿತ್ರ ೧೮) 'ಗೌರಿ' ಚಿತ್ರದಲ್ಲಿ ರಾಜಕುಮಾರ್ ಮತ್ತು ಲೀಲಾವತಿ

ರಾಷ್ಟ್ರಮಟ್ಟದ ಪ್ರಶಸ್ತಿ ಸಿಗುವುದರೊಂದಿಗೆ ಸುಂದರರಾಯರಿಗೆ ರಾಜ್ಯ ನಾಟಕ ಅಕಾಡೆಮಿ ಪ್ರಶಸ್ತಿಯೂ ಲಭ್ಯವಾಯಿತು. ವಿಜಯಭಾಸ್ಕರ್‌ರ ಮನಮುಟ್ಟುವ ಸಂಗೀತ ಅವರ ಜನಪ್ರಿಯತೆಯನ್ನು ಇನ್ನಷ್ಟು ವೃದ್ಧಿಸಿತು. ಭಕ್ತಿ ಪ್ರಧಾನ ಪಾತ್ರಗಳಲ್ಲಿ ರಾಜಕುಮಾರ್ ಅವಿಸ್ಮರಣೀಯವಾಗಿ ಅಭಿನಯಿಸಿದ ಇನ್ನೊಂದು ಚಿತ್ರ ಇದು.

ಸುಂದರರಾವ್ ನಾಡಕರ್ಣಿ ಅವರು ಹಿರಿಯರು, ಪ್ರಸಿದ್ಧರು. ಒಂದು ರೀತಿಯಲ್ಲಿ ತನ್ಮಯರಾಗುವ ಸ್ವಭಾವ. ಅಭಂಗ್‌ಗಳನ್ನು ರಚಿಸಿದ ತುಕಾರಾಮನನ್ನು ಪಂಚಾಯಿತಿಯಲ್ಲಿ ದೋಷಿ ಎಂದು ತೀರ್ಪಿತ್ತರು. ಅವನು ಬರೆದ ದೇವರನಾಮ ಸಂಕೀರ್ತನೆಯಾದ ಅಭಂಗ್‌ಗಳನ್ನು ನದಿಯ ನೀರಿನಲ್ಲಿ ತೇಲಿ ಬಿಡಲು ಹೇಳಿದರು. ಕೊಲ್ಹಾಪುರದ ನದಿಯಲ್ಲಿ ಕೊರೆಯುವ ಚಳಿಯಲ್ಲಿ ರಾಜಕುಮಾರ್ ನೀರಿಗಿಳಿದರು. ಮುಂದಿನ ಭಾಗ ಹೇಳುವ ಬದಲು ನಿರ್ದೇಶಕರು ಚಿತ್ರೀಕರಣ ನೋಡಲು ಬಂದು ಸುತ್ತ ನೆರೆದ ಜನರಿಗೆ ಸಂತ ತುಕಾರಾಮನ ಮಹತ್ವವನ್ನು ವಿವರಿಸುತ್ತ ನಿಂತರು. ನದಿಯಲ್ಲಿದ್ದ ರಾಜಕುಮಾರ್‌ರಿಗೆ ಚಳಿ. ಮೈಯೆಲ್ಲ ಬೆಂಡಾಗಿ, ರಕ್ತ ಚಲನೆಯೇ ನಿಂತಂಥ ಸ್ಥಿತಿ. ಮನಸ್ಸು ಅಸಹನೆಗೆ ಪ್ರೇರಿಸಿದರೂ ವಿವೇಚನೆ 'ಇಲ್ಲಿ ಬೇಕಾದ್ದು ಸಹನೆ, ತಾಳ್ಮೆಯಿಂದಿರು' ಎಂದಿತ್ತು. ಇದು ಒಂದು ಸೃಜನಶೀಲ ಪ್ರಕ್ರಿಯೆಯಲ್ಲಿ ಪರಿಪೂರ್ಣತೆ ತರಲು ಅಗತ್ಯವಾಗಿ ಇರಬೇಕಾದ ಗುಣವಿರಬೇಕು'' ಎಂದು ವಿವರಿಸುತ್ತಾರೆ ರಾಜಕುಮಾರ್. ಅದೇ ಚಿತ್ರದಲ್ಲಿ ''...'ಭಿಕ್ಷಾ ಪಾತ್ರ ಅವಲಂಬನಾ ನರನ ಬಾಳಿಗ ಅಪಮಾನಾ ಇದೇ ಹರಿಯ ಮಹಾ ಶಾಸನಾ...' ಅನ್ನುವ ಗೀತೆಗೆ ಅಭಿನಯಿಸುವಾಗ ಅದಾವುದೋ ವೀರೋಚಿತ ಆವೇಶ, ಗತ್ತು ಬಂದಿತ್ತು. ಬೇರಾವ ಪಾತ್ರಕ್ಕೂ ಹೀಗೆ ಆಗಿರಲಿಲ್ಲ. ಈ ಚಿತ್ರದ ಬಹಳಷ್ಟು ಸನ್ನಿವೇಶಗಳಲ್ಲಿ ಒಳ ಹೊಕ್ಕಾಗ ಸಿಗುವ ತತ್ವಗಳು ಪರವಶವಾಗಿಸಿದ್ದವು'' ಎನ್ನುತ್ತಾರೆ. ಆ ಸಂದರ್ಭದಲ್ಲಿ ನಡೆದ ಘಟನೆಗಳು ರಾಜಕುಮಾರ್ ಅವರ ನೆನಪಿನಿಂದ ಮಾಸಿಲ್ಲ :

ಒಂದು ಭಕ್ತಿಯ ಪರಾಕಾಷ್ಠೆಯ ಸನ್ನಿವೇಶ,
'ಆದಿ ಬೀಜ ಒಂದೆನೆ
ಒಂದೇ ಬೀಜ ಮೊಳೆತು ವೃಕ್ಷ ಕೋಟಿ
ಜನ್ಮ ತಳೆದು ನಿಂತುವೆಂತನೆ...'

ಎಂದು ಹಾಡುತ್ತಾ ಭಕ್ತಿ ಭಾವದಲ್ಲಿ ಮರೆತು 'ವಿಠ್ಠಲ ವಿಠ್ಠಲ ಜೈ ಜೈ ವಿಠ್ಠಲ..' ಎಂದು ಕಣ್ಮುಚ್ಚಿಕೊಂಡು ಸ್ತುತಿಸುತ್ತಿದ್ದಾಗ, ಇಂಥಾ ಒಂದು ಸಂದರ್ಭಕ್ಕೇ ಹೊಂಚುಹಾಕುತ್ತಿದ್ದ ಕೆಲವು ಕುಯುಕ್ತಿಗರು ಆ ಜೋಳದ ಹೊಲಕ್ಕೆ ಬೆಂಕಿ ಇಡುತ್ತಾರೆ. 'ಹೊಲ' ಸಂಪೂರ್ಣವಾಗಿ ಧಗಧಗನೆ ಉರಿಯಲು ಪ್ರಾರಂಭಿಸುತ್ತದೆ. ಈ ಉರಿ ಕ್ರಮೇಣ ತುಕಾರಾಂ ಕುಳಿತಿದ್ದ 'ಪರಣೆ'ಯ ತನಕ ಬರುತ್ತದೆ. ಆ ಜ್ವಾಲೆ ತುಕಾರಾಂ ಅವರ ಮೈಗೂ ತಗುಲುತ್ತದೆ. ಇದೇ ರೀತಿಯಲ್ಲಿ ಚಿತ್ರೀಕರಣವೂ ಶುರುವಾಯಿತು. ನಾನೂ ಹೊಲದ ಮಧ್ಯದಲ್ಲಿ ಅಳವಡಿಸಿದ್ದ 'ಪರಣೆ'ಯನ್ನು ಹತ್ತಿ ಕುಳಿತೆ. 'ವಿಠ್ಠಲ ವಿಠ್ಠಲ ಜೈ ಜೈ ವಿಠ್ಠಲ..' ಎನ್ನುತ್ತಾ ಯಾವುದೋ ಒಂದು ಅಪೂರ್ವ ಅನುಭವದಲ್ಲಿ ಹಾಗೇ ಮೈ ಮರತೆ. ಹೊರಾಂಗಣ, ಗಾಳಿಯ ಜೋರು ಉರಿ ವೇಗವಾಗಿ ಮುನ್ನುಗ್ಗಿ ಬಿಟ್ಟಿತು. ನನಗೆ ಇದಾವುದರ ಪರಿವೆಯೂ ಇಲ್ಲ. ಇದ್ದಕ್ಕಿದ್ದಂತೆ ನನ್ನ ಮೇಲೆ ನೀರು ಸುರಿದಾಗ ಥಟ್ಟನೆ ಕಣ್ಣು ಬಿಟ್ಟೆ. ಬಿಂದಿಗೆಗಳಲ್ಲಿ ನೀರು ಹಿಡಿದುಕೊಂಡು ತಾಂತ್ರಿಕ ವರ್ಗದವರು ನಿಂತಿದ್ದಾರೆ. 'ಏನು ? ಏನಾಯಿತು ?' ಎಂದು ಕೇಳಿದೆ. ಅವರಿಗೆಲ್ಲ ಆಶ್ಚರ್ಯ... ಅನಂತರ ವಿಷಯ ಅರ್ಥವಾದಾಗ ನನ್ನ ಒಂದು ಕಡೆಯ ಹುಬ್ಬು ಹಾಗೂ ಅಂಟಿಸಿದ್ದ ದಪ್ಪ ಮೀಸೆಯಲ್ಲಿ ಅರ್ಧ ಮೀಸೆ ಬೆಂಕಿಗೆ ಆಹುತಿಯಾಗಿತ್ತು. ಆ ಪಾತ್ರದಲ್ಲಿ ಒಳಹೊಕ್ಕು ತಲ್ಲೀನನಾದೆನೇ ಎಂದರೆ ಹಾಗಲ್ಲ, ಆ ಪಾತ್ರವೇ ನನ್ನಲ್ಲಿ ಪರಕಾಯ ಪ್ರವೇಶ ಮಾಡಿದೆ ಎನ್ನುತ್ತೇನೆ. ಎಲ್ಲ ಪಾಂಡುರಂಗನ ಕರುಣೆ - ಇಲ್ಲವಾದರೆ ನನಗೆ ಆ ಪಾತ್ರದಲ್ಲಿ ಅಂಥ ತೃಪ್ತಿ, ಸಮಾಧಾನ ಖಂಡಿತ ಸಿಗುತ್ತಿರಲಿಲ್ಲ ಎಂದೇ ನನ್ನ ಭಾವನೆ.''

ಕಣಗಾಲ್ ಪ್ರಭಾಕರ ಶಾಸ್ತ್ರಿ ತಾವೇ ನಿರ್ಮಿಸಿ ನಿರ್ದೇಶಿಸಿದ 'ಸತಿಶಕ್ತಿ' ಮತ್ತು ವೈ.ಆರ್.ಸ್ವಾಮಿ ನಿರ್ದೇಶನದ 'ಜೇನುಗೂಡು' ಆ ವರ್ಷ ಬಹಳ ಜನಪ್ರಿಯವಾದ ಎರಡು ಚಿತ್ರಗಳು. 'ಜೇನುಗೂಡು' ಇಡೀ ಕುಟುಂಬಗಳನ್ನೇ ಹುಚ್ಚೆಬ್ಬಿಸಿದರೆ 'ಸತಿಶಕ್ತಿ'ಯಲ್ಲಿ ಪ್ರಥಮ ಬಾರಿಗೆ ರಾಜಕುಮಾರ್ ದ್ವಿಪಾತ್ರಗಳಲ್ಲಿ (ನಾಯಕ ಮತ್ತು ಖಳನಾಯಕ) ನೀಡಿದ ವಿಶಿಷ್ಟ ಅಭಿನಯ ಆ ಚಿತ್ರದ ಜನಪ್ರಿಯತೆಯನ್ನು ಇನ್ನಷ್ಟು ಮೇಲೆತ್ತಿತ್ತು. 'ಸತಿಶಕ್ತಿ'ಗೆ ದೇವಿ ಫಿಲಂಸ್ ಸಂಸ್ಥೆ ಹಣ ಹೂಡಿತ್ತು. ಶ್ರೀಮಂತವಾಗಿ ಚಿತ್ರ ನಿರ್ಮಿಸಲು ಎಲ್ಲ ನೆರವನ್ನು ಕೊಡಲಾಗಿತ್ತು. ಆದರೆ ಪ್ರಭಾಕರ ಶಾಸ್ತ್ರಿಗಳು ಅವರೊಂದಿಗೆ ಮನಸ್ತಾಪ ಮಾಡಿಕೊಂಡುದರಿಂದ ಚಿತ್ರದ ಹಕ್ಕುಗಳು ದೇವಿ ಫಿಲಂಸ್‌ನವರದಾಯಿತು. ಪ್ರಭಾಕರ ಶಾಸ್ತ್ರಿ ಪೂರ್ತಿ ಮಾಡದೇ ಉಳಿದ ಕೆಲಸಗಳನ್ನೆಲ್ಲ ನಿರ್ವಹಿಸಿದವರು ಸಿ.ವಿ.ರಾಜು ಮತ್ತು ಸಂಕಲನಕಾರ/ನಿರ್ದೇಶಕ ರಾಮಮೂರ್ತಿ.

ಚಿತ್ರದಲ್ಲಿ ಸಾಹುಕಾರ್ ಜಾನಕಿ ಅವರ ಪಾತ್ರ, ಧ್ವನಿಪೂರ್ಣ ಸಾಹಿತ್ಯ, ಸೊಗಸಾದ ರಾಗ ಸಂಯೋಜನೆಯಿದ್ದ ಗೀತೆ 'ಜಾರಿ ಬಿದ್ದೀಯೆ ಓ ಜಾಣ...' 'ಈ ವಿಲಾಸಿ ನಿನ್ನ ಚರಣದಾಸಿ..' ಮೊದಲಾದ ಗೀತೆಗಳು ಮತ್ತು ಅಷ್ಟೇ ಜನಪ್ರಿಯವಾದ 'ಅಚ್ಚ ಮಲ್ಲಿಗೆ ಹೂವು ಮೆಚ್ಚಿಕೋ ಮಲ್ಲಯ್ಯ..' ಇಂದಿಗೂ ನೆನಪಿನಲ್ಲುಳಿಯುತ್ತವೆ. ಖಳ ಅಥವಾ ಮಾಂತ್ರಿಕನ ಪಾತ್ರದಲ್ಲಿ ಪ್ರವೇಶಿಸುವ ರಾಜಕುಮಾರ್ ಅವರ ವೇಷ, ಮೇಕಪ್ ಮತ್ತು ಪ್ರವೇಶಿಸುವಾಗಲೇ ಅವರು ಹೇಳುವ ಶ್ಯಾಮಲಾ ದಂಡಕದ ಅಪರೂಪವೆನಿಸುವಂಥ ಸಾಲುಗಳು, ಆತ ಕ್ರುದ್ಧನಾಗಿ ಮಂತ್ರ-ತಂತ್ರ ಪ್ರಯೋಗಿಸುವಾಗ ಹೇಳುವ ಙಞಣನಮ, ಕಚಟತಪ, ಯ-ರ-ಲ-ವ-ಕ್ಷ ಎಂಬ ಅಕ್ಷರ ಮಾಲೆಯ ಆಯ್ದ ಸಾಲುಗಳು ಬಹು ಕಾಲ ಜನಮನದಲ್ಲಾಡುತ್ತಿತ್ತು. ಚಿತ್ರದಲ್ಲಿ ದೇವಿಯ ಗರ್ಭಗುಡಿಯ ಬಾಗಿಲುಗಳು ತೆರೆದುಕೊಳ್ಳುವ ಚಿತ್ರಣ, ಸರ್ಪಯಾಗದ ಸನ್ನಿವೇಶ ಇತ್ಯಾದಿಗಳು ರೋಮಾಂಚಕ. ಮಗನು ಹೇಳುವ 'ತಾಯಿಗಿಂತ ಮಿಗಿಲಾದ ದೇವರಿಲ್ಲ....' ಪದ್ಯವೂ ಎಳೆ ಮಕ್ಕಳಿಂದ ಹೇಳಿಸಿ ಕೇಳುವಷ್ಟು ಜನಪ್ರಿಯವಾಗಿತ್ತು. ಆದರೆ ಶಾಸ್ತ್ರಿಗಳು ಮುಂದೆ ನಿರ್ದೇಶಕರಾಗಿ ಅದೇ ಮಟ್ಟದ ಯಶಸ್ಸನ್ನು ಕಾಣಲಿಲ್ಲ.

ರಾಜಕುಮಾರ್‌ರ ಸೋದರ ಎಸ್.ಪಿ.ವರದರಾಜ್ (ವರದಪ್ಪ) ಪೋಷಕ ಪಾತ್ರವೊಂದರಲ್ಲಿ ನೀಡಿದ ಅಭಿನಯ ಈ ಚಿತ್ರದಲ್ಲಿ ವಿಶೇಷವಾಗಿ ಗಮನ ಸೆಳೆಯಿತು.

ತಮ್ಮ 'ಬಂಗಾರಿ'ಯಲ್ಲಿ ಜಿ.ವಿ.ಅಯ್ಯರ್ ಗುರುದತ್‌ರವರ 'ಸಾಹಿಬ್ ಬೀಬಿ ಔರ್ ಗುಲಾಮ್'ನಿಂದ ಪ್ರೇರಿತರಾಗಿ ಚಿತ್ರಕ್ಕೆ ಭೂತಪ್ರೇತಗಳ ಮಸಾಲೆಯನ್ನೂ ಸೇರಿಸಿದರು.

'...ತಾಂತ್ರಿಕವಾಗಿ ಶ್ರೀಮಂತವಾಗಿತ್ತು. ದೊಡ್ಡ ಅರಮನೆ ಸೆಟ್ ಹಾಕಿದ್ದೆವು. ದಿನವಿಡೀ ಲೈಟಿಂಗ್ ಮಾಡಿದ್ದೆವು. ಒಂದೊಂದು ಚಿತ್ರಿಕೆ ೩೫೦-೩೬೦ ಅಡಿ ಕೂಡಾ ಇತ್ತು. ಕ್ಯಾಮರಾಮನ್ ದೊರೆ ಇದ್ದರು. ಕ್ರೇನ್‌ನ ಬಳಕೆ ಆಗಿತ್ತು'' ಎನ್ನುತ್ತಾರೆ ಜಿ.ವಿ.ಅಯ್ಯರ್.



(ಚಿತ್ರ ೨೦) 'ಸತಿಶಕ್ತಿ' ಚಿತ್ರದಲ್ಲಿ ಸಾಹುಕಾರ್ ಜಾನಕಿ ಮತ್ತು ರಾಜಕುಮಾರ್



(ಚಿತ್ರ ೨೧) 'ಸಾಕು ಮಗಳು' ಚಿತ್ರದಲ್ಲಿ ರಾಜಾಶಂಕರ್ ಮತ್ತು ಕಲ್ಪನಾ

ಚಿತ್ರದ ಗೀತೆಗಳು ಸೊಗಸಾಗಿದ್ದವು. ಕಲ್ಯಾಣ್ ಆಗಲೇ ವಿವಾದಕ್ಕೆ ಒಳಗಾಗಿದ್ದರು. ಅವರನ್ನು ಕನ್ನಡಿಗರು ಒಪ್ಪಿಕೊಳ್ಳುವಂತೆ ಒಂದು ಗೀತೆ 'ನಾ ಹುಟ್ಟಿ ಬೆಳೆದದ್ದು ಕನ್ನಡನಾಡು, ನನ್ನ ನರನಾಡಿ ಕನ್ನಡ ನಾಡು...' ಎಂತ ಬರೆದಿದ್ದರು. ಮೊದಲ ಚಿತ್ರಿಕೆ 'ಜಿಸ್ ದೇಶ್ ಮೆ ಗಂಗಾ ಬಹತೀ ಹೈ'ನ ಪ್ರಭಾವದ್ದು, ಗೀತೆಯೂ ಅದೇ ಧಾಟಿಯದ್ದು.

ಜಿ.ವಿ.ಅಯ್ಯರ್ ಅವರ 'ಲಾಯರ ಮಗಳು' ಒಂದು ಅರ್ಥದಲ್ಲಿ ಹಾಸ್ಯ ಪ್ರಧಾನ ಚಿತ್ರ. ಕರಿ ಹೆಣ್ಣನ್ನು ಬಿಳಿ ಹೆಣ್ಣು ಮಾಡುವ ವ್ಯಂಗ್ಯವೂ ಇತ್ತು.

'ಕನ್ಯಾರತ್ನ' ಚಿತ್ರದಲ್ಲಿ ರಾಜಾಶಂಕರ್, ಸಾಹುಕಾರ್ ಜಾನಕಿ ಜೋಡಿ ಅಭಿನಯಿಸಿತ್ತು. ಕು.ರ.ಸೀ ಅವರ 'ಬಿಂಕದ ಸಿಂಗಾರಿ ಮೈ ಡೊಂಕಿನ ವಯ್ಯಾರಿ...' ಗೀತೆ ಆ ಕಾಲಕ್ಕೆ ಸಭ್ಯತೆಯಾಚೆಗೆ ಅನ್ನಿಸಿದ್ದರೂ ಅದರ ಛಂದಸ್ಸು, ಲಯ, ಪದಲಾಲಿತ್ಯ ಮತ್ತೆ ಮತ್ತೆ ಕೇಳುವಂಥದ್ದಾಗಿತ್ತು.

ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ ಆಧರಿತ 'ಕುಲವಧು' ಚಿತ್ರದಲ್ಲಿ ವಿ.ಸೀತಾರಾಮಯ್ಯನವರ ಕವಿತೆಯೊಂದು ಹೆಣ್ಣನ್ನು ಮನೆ ತುಂಬಿಸಿಕೊಳ್ಳುವ ಆಚರಣೆಯ ಸನ್ನಿವೇಶದಲ್ಲಿ ಬಳಸಿದ್ದು ಇಂದಿಗೂ ಅದೇ ರೀತಿ - ಅದು ಕವಿ ಗೀತೆ ಎಂದು ತಿಳಿಯದೆ ಕೂಡಾ - ಬಳಕೆಯಾಗುತ್ತದೆ. ಚಿತ್ರದಲ್ಲಿ ಲೀಲಾವತಿ-ರಾಜಕುಮಾರ್ ಜೋಡಿಯ ಅಭಿನಯ, ಸೊಗಸಾದ ಗೀತೆಗಳ ಬಳಕೆ ಇತ್ತು.

'ಕಲಿತರೂ ಹೆಣ್ಣೆ' ಚಿತ್ರ ಬಾಲಕೃಷ್ಣರ ನಿರ್ಮಾಣ-ನಿರ್ದೇಶನ. ಅವರ ಉತ್ಸುಕತ್ಸಾಹ ಎಲ್ಲ ಹೊಣೆಯನ್ನು ಅವರೇ ಹೊತ್ತುಕೊಳ್ಳುವಷ್ಟು. ಚಿತ್ರಕ್ಕೆ ಮೊದಲಿಟ್ಟ ಹೆಸರು ಬೇರೆಯದಾಗಿತ್ತು. ಅನಂತರ 'ಕಲಿತರೂ ಹೆಣ್ಣೆ' ಎಂದು ಕರೆದರು. ಚಿತ್ರ ಯಶಸ್ವಿಯಾಗಲಿಲ್ಲ.

'ವೀರಕೇಸರಿ' ಮತ್ತೊಂದು ಜನಪದ ಕಥೆ. ಅತ್ಯಂತ ಮನೋರಂಜನಾತ್ಮಕ, ಸಾಹಸ, ಪ್ರೇಮಗಳಿದ್ದ ಕಥೆ. ಮುಖ್ಯವಾಗಿ ಭಾಗಶಃ ವರ್ಣದಲ್ಲಿ ತೆಗೆಯಲಾಗಿತ್ತು. ಆ ಕಾಲಕ್ಕೆ ಅದೊಂದು ಸಡಗರ-ಸಂಭ್ರಮ ಪ್ರೇಕ್ಷಕರಿಗೆ. ರಾಜಕುಮಾರ್ ಅವರು ವಿಶೇಷ ಮೇಕಪ್‌ನಲ್ಲಿ ರಂಗುರಂಗಾಗಿ ಸಾಹಸ ದೃಶ್ಯದಲ್ಲಿ ಕಾಣಿಸಿಕೊಂಡರು.

'ಮನ ಮೆಚ್ಚಿದ ಮಡದಿ' ಚಿತ್ರದಿಂದ ಬಹುಕಾಲ ಹೊರನಾಡಿನಲ್ಲೇ ಇದ್ದ ಕು.ರ.ಸೀ. ಮರಳಿ ಬಂದರು. ಸೊಗಸಾದ ಸಂಭಾಷಣೆ, ಗೀತೆಗಳು ಇದ್ದ ಚಿತ್ರ. 'ಅನಂದಭಾಷ್ಪ' ಆರ್.ನಾಗೇಂದ್ರರಾಯರ ಚಿತ್ರ. ಅವರೇ ಸೊಗಸಾಗಿ ಅಭಿನಯಿಸಿಯೂ ಇದ್ದರು.

'ಶ್ರೀರಾಮಾಂಜನೇಯ ಯುದ್ಧ'ದಲ್ಲಿ ಉದಯಕುಮಾರ್ ಅವರ ಅಭಿನಯವಂತೂ 'ನಭೂತೊ..' ಎನ್ನುವಂಥದ್ದು.

ಇದೇ ವರ್ಷ ಎಸ್.ಕೃಷ್ಣಸ್ವಾಮಿ ಮತ್ತು ಎರಿಕ್ ಬಾರ್ನೋರವರ 'ಇಂಡಿಯನ್ ಫಿಲಂ' ಇತಿಹಾಸ ಗ್ರಂಥ ಬಿಡುಗಡೆಯಾಯಿತು.

೧೯೬೩ ಇನ್ನೂ ಒಂದು ಕಾರಣಕ್ಕಾಗಿ ಉಲ್ಲೇಖನೀಯವಾದ ವರ್ಷವೆನಿಸಿತು. ಬಿ.ಆರ್.ಪಂತುಲುರವರು ತಮ್ಮ 'ಸಾಕುಮಗಳು' ಮೂಲಕ ಕನ್ನಡ ಚಿತ್ರರಂಗಕ್ಕೆ ಕಲ್ಪನಾರಂತಹ ವಿಶಿಷ್ಟ ವ್ಯಕ್ತಿತ್ವದ ಬಹುಮುಖ ಪ್ರತಿಭೆಯ ನಟಿಯನ್ನು ಪರಿಚಯ ಮಾಡಿಸಿಕೊಟ್ಟರು. ಆದರೆ ಕಲ್ಪನಾ ನಿಜವಾದ ಅರ್ಥದಲ್ಲಿ ಬೆಳಕಿಗೆ ಬಂದಿದ್ದು ಲಕ್ಷ್ಮೀನಾರಾಯಣ್‌ರವರ 'ನಾಂದಿ'ಯಿಂದಲೆ.

'ಜೇನುಗೂಡು' ಚಿತ್ರದ ಮೂಲಕ ಚಲನಚಿತ್ರರಂಗವನ್ನು ಪ್ರವೇಶಿಸಿದ ಚಂದ್ರಕಲಾ ಶಾಸ್ತ್ರೀಯ ನೃತ್ಯದಲ್ಲಿ ಪರಿಣತಿ ಪಡೆದವರು. ಪ್ರಸಿದ್ಧ ನೃತ್ಯಪಟು ಬಾಲಸರಸ್ವತಿ ಆಕೆಯ ಮೊದಲ ಗುರು. ಚಂದ್ರಕಲಾ ಕೆಲವು ಕಾಲ ಕೌಟುಂಬಿಕ ಚಿತ್ರಗಳಲ್ಲಿ ಮುಖ್ಯ ಪಾತ್ರಗಳನ್ನು ನಿರ್ವಹಿಸಿದರು.

ವಿಶೇಷವೆಂದರೆ ಖ್ಯಾತ ನಟಿ ಜಯಂತಿ ಕೂಡ ಚಿತ್ರರಂಗಕ್ಕೆ ಬಂದಿದ್ದು ಈ ಚಿತ್ರದಿಂದಲೆ. ಆಕೆಯ ಪ್ರತಿಭೆ ಸರಿಯಾಗಿ ಪ್ರಕಟವಾದದ್ದು ಮುಂದಿನ ವರ್ಷ ಬಿಡುಗಡೆಯಾದ ಜನಪ್ರಿಯ ಚಿತ್ರ 'ಚಂದವಳ್ಳಿಯ ತೋಟ'ದಲ್ಲಿ.

೧೯೬೪ರಲ್ಲಿ ಕನ್ನಡ ಚಿತ್ರರಂಗಕ್ಕೆ ಇತರ ಭಾಷಾ ಚಿತ್ರರಂಗಗಳಂತೆಯೇ ಕಚ್ಚಾ ಫಿಲಂ ಅಭಾವದ ಬಿಸಿ ತಟ್ಟಿ ಚಿತ್ರಗಳ ತಯಾರಿಕೆ ಮತ್ತೊಮ್ಮೆ ಕುಸಿಯಿತು. ಇದರಿಂದಾಗಿ ಅನೇಕ ಕಲಾವಿದರು - ಕೆಲವು ಪ್ರಥಮ ಶ್ರೇಣಿಯ ನಟ-ನಟಿಯರು ಕೂಡ - ಮತ್ತೊಮ್ಮೆ ರಂಗಭೂಮಿಗೆ ಶರಣಾಗಬೇಕಾಯಿತು. ತಾವು ತೆರೆಯ ಮೇಲೆ ಆ ವೇಳೆಗೆ ಗಳಿಸಿಕೊಂಡಿದ್ದ ಜನಪ್ರಿಯತೆಯನ್ನು ರಂಗಭೂಮಿಯಲ್ಲಿ ಬಳಸಿಕೊಂಡು ತಮ್ಮ ಆರ್ಥಿಕ ತೊಂದರೆಗಳನ್ನು ಕಡಿಮೆ ಮಾಡಿಕೊಳ್ಳುವುದು ಅವರಿಗೆ ಅನಿವಾರ್ಯವಾಯಿತು. ಆದರೆ ಇದರಿಂದ ಚಿತ್ರಣದ ಸಮಯದಲ್ಲಿ ಕೆಲವು ಗಂಭೀರವಾದ ಸಮಸ್ಯೆಗಳೂ ಎದ್ದವು. ಸೆಟ್ ಹಾಕಿದ ಚಿತ್ರಗಳಿಗೂ ನಟ-ನಟಿಯರ ಕಾಲ್‌ಷೀಟ್ ಸಮಸ್ಯೆ ತಟ್ಟಿತು. ಒಬ್ಬ ಕಲಾವಿದರು ಚಿತ್ರಣಕ್ಕೆ ಸಿಕ್ಕಿದರೆ ಇನ್ನೊಬ್ಬರು ಸಿಗಲಾರದ ಪರಿಸ್ಥಿತಿ ಬಂತು. ಈ ಗೊಂದಲದ ನಡುವೆ ಈ ವರ್ಷದಲ್ಲಿ ಬಿಡುಗಡೆಯಾದ ಚಿತ್ರಗಳ ಸಂಖ್ಯೆ ೨೧ರಿಂದ ೧೭ಕ್ಕಿಳಿಯಿತು. ಆದರೂ ಈ ಅವಧಿಯಲ್ಲಿ ಕೆಲವು ಹೆಸರಿಸಬಹುದಾದ ಚಿತ್ರಗಳು ನಿರ್ಮಾಣವಾಗಿದ್ದೊಂದೇ ತೃಪ್ತಿ.

ವಾದಿರಾಜ್-ಜವಹರ್ ಸೋದರರ 'ನಂದಾದೀಪ' ಮತ್ತು 'ನಾಂದಿ' ಬಿಡುಗಡೆಯಾಗಿದ್ದು ಇದೇ ವರ್ಷದಲ್ಲಿಯೆ. ಅವುಗಳನ್ನುಳಿದು ಈ ವರ್ಷ ತೆರೆಗೆ ಬಂದ ಪ್ರಮುಖ ಚಿತ್ರಗಳು 'ಮಂಗಳ ಮುಹೂರ್ತ', 'ಚಂದವಳ್ಳಿಯ ತೋಟ', 'ವೀರಸಂಕಲ್ಪ', 'ಕಲಾವತಿ', 'ಅನ್ನಪೂರ್ಣ', 'ತುಂಬಿದ ಕೊಡ', 'ಪೋಸ್ಟ್ ಮಾಸ್ಟರ್' ಮತ್ತು 'ಮನೆ ಅಳಿಯ'. ಅಂದರೆ ಇವೆಲ್ಲವೂ ಗುಣಮಟ್ಟದ ಆಧಾರದ ಮೇಲೆಯೇ ಉಲ್ಲೇಖನೀಯವಾಗಲಿಲ್ಲ- ಆದರೆ ಬೇರೆ ಕೆಲವು ಕಾರಣಗಳಿಗಾಗಿ. ಅವುಗಳ ಪೈಕಿ 'ಚಂದವಳ್ಳಿಯ ತೋಟ' ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಒಂದು ದಾಖಲೆಯ ಚಿತ್ರವೆನಿಸಿತು.

ಕನ್ನಡ ತೆರೆಯ ಮೇಲೆ ಮೊಟ್ಟ ಮೊದಲ ಬಾರಿ ಸಂಪೂರ್ಣ ವರ್ಣ ಚಿತ್ರವೊಂದು ತಯಾರಾದದ್ದು ಇದೇ ವರ್ಷದಲ್ಲಿಯೆ. ಬಿ.ಎಸ್.ರಂಗಾ ನಿರ್ಮಿಸಿ, ನಿರ್ದೇಶಿಸಿದ 'ಅಮರಶಿಲ್ಪಿ ಜಕಣಾಚಾರಿ' ಕನ್ನಡ ಚಿತ್ರರಂಗದ ಅತ್ಯಂತ ಹೆಮ್ಮೆಯ ಚಿತ್ರಗಳಲ್ಲೊಂದು.



(ಚಿತ್ರ ೨೨) 'ಚಂದವಳ್ಳಿಯ ತೋಟ' ಚಿತ್ರದಲ್ಲಿ ಉದಯಕುಮಾರ್, ರಾಜಕುಮಾರ್, ಜಯಶ್ರೀ ಮತ್ತು ಬಸವರಾಜ್

'ಕರುಣೆಯೇ ಕುಟುಂಬದ ಕಣ್ಣು'ಚಿತ್ರವನ್ನು ನಿರ್ದೇಶಿಸಿದ ಟಿ.ವಿ.ಸಿಂಗ್ ಠಾಕೂರ್ ಅವರೇ ಇನ್ನೊಂದು ಕಾದಂಬರಿ ಆಧಾರಿತ ಚಿತ್ರ 'ಚಂದವಳ್ಳಿಯ ತೋಟ'ವನ್ನು ನಿರ್ದೇಶಿಸಿದ್ದು ಅವರ ಪ್ರಾಮುಖ್ಯವನ್ನು ಹೆಚ್ಚಿಸಿದ ಅಂಶ. ಮೌಲಿಕವಾಗಿ 'ಚಂದವಳ್ಳಿಯ ತೋಟ' ಠಾಕೂರ್ ಅವರ ಹಿಂದಿನ ಚಿತ್ರಕ್ಕೆ ಪ್ರೇರಣೆ ನೀಡಿದ 'ಧರ್ಮದೇವತೆ'ಗಿಂತ ಉತ್ತಮ ಸಾಹಿತ್ಯ ಕೃತಿ. ಅದರಲ್ಲಿ ಗ್ರಾಮೀಣ ಜೀವನದ ಮತ್ತು ಆ ಜೀವನದ ಹಿನ್ನೆಲೆಯಲ್ಲಿ ರೈತ ಕುಟುಂಬವೊಂದರಲ್ಲಿ ಮಾನವ ಸಂಬಂಧಗಳ ಸಂಕೀರ್ಣತೆಗಳ ಬಗ್ಗೆ ಪ್ರಾಮಾಣಿಕ ಚಿಂತನೆಯಿತ್ತು. ಕುಟುಂಬ ವಿಘಟನೆಯಿಂದಾಗುವ ದುಷ್ಪರಿಣಾಮಗಳನ್ನು ಕೊಂಚ ಭಾವನಾತ್ಮಕವಾಗಿ ಈ ಚಿತ್ರ ಒತ್ತಿ ಹೇಳಿತು. ಮೂಲ ಕೃತಿಯನ್ನು ರಚಿಸಿದ ತ.ರಾ.ಸುಬ್ಬರಾಯರೇ ಚಿತ್ರದ ತಾಜಾ ಸಂಭಾಷಣೆಗಳಿಗೆ ಕಾರಣರಾದರು. ಚಿತ್ರದ ವಾತಾವರಣ ಹಾಗೂ ಮಾತುಗಳಲ್ಲಿ ಗ್ರಾಮೀಣ ಜೀವನದ ಸೊಗಡಿತ್ತು. ಉದಯಕುಮಾರ್‌ರ ಅಭಿನಯ ಕಲೆಯ ಶ್ರೇಷ್ಠತೆಗೆ ದ್ಯೋತಕವಾಗಿದ್ದ ಈ ಚಿತ್ರ ಎಷ್ಟೇ ಅತಿರೇಕಗಳಿಂದ ಕೂಡಿದ್ದರೂ ಪ್ರೇಕ್ಷಕರಿಗೆ ಅದು ನೀಡಿದ ಅನುಭವದ ಉತ್ಕಟತೆ ಆ ಅತಿರೇಕಗಳನ್ನೆಲ್ಲ ಮುಚ್ಚಿತು. ಈ ಚಿತ್ರದಲ್ಲಿ ಗಮನ ಸೆಳೆಯುವಂಥ ಪಾತ್ರವೊಂದರಲ್ಲಿ ಕಂಡ ಅಶ್ವತ್ಥನಾರಾಯಣ್ ಕಾರ್ಖಾನೆಯೊಂದರಲ್ಲಿ ಕಾರ್ಮಿಕರು. ಮುಂದೆಯೂ ಅವರಿಗೆ ಸಿನಿಮಾದಲ್ಲಿ ಅವಕಾಶ ದೊರೆತರೂ ತೀರಾ ಚಿಕ್ಕ ಪುಟ್ಟವು. 'ಚಂದವಳ್ಳಿಯ ತೋಟ'ದ ಪಾತ್ರ ಅವರ ಸಿನಿಮಾ ಬದುಕಿನಲ್ಲೇ ವಿಶೇಷ ಪಾತ್ರವೆನ್ನಬಹುದು. 'ಚಂದವಳ್ಳಿಯ ತೋಟ' ಕೇಂದ್ರ ಸರ್ಕಾರದಿಂದ ಪ್ರಾದೇಶಿಕ ಬೆಳ್ಳಿಯ ಪದಕದ ಪ್ರಶಸ್ತಿಗೂ ಪಾತ್ರವಾಯಿತು.

ಇದೇ ವರ್ಷ ಹುಣಸೂರು ಕೃಷ್ಣಮೂರ್ತಿ ನಿರ್ಮಿಸಿ ನಿರ್ದೇಶಿಸಿದ 'ವೀರ ಸಂಕಲ್ಪ' ಅನೇಕ ಕಾರಣಗಳಿಂದಾಗಿ ಒಂದು ವಿಶೇಷ ಸ್ಥಾನವನ್ನು ಪಡೆದಿರುವ ಚಿತ್ರ. ದ್ವಾರಕೀಶ್, ಎಂ.ಪಿ.ಶಂಕರ್, ಬಿ.ಎಂ.ವೆಂಕಟೇಶ್ ಮತ್ತು ವಾಣಿಶ್ರೀಯವರಂತಹ ಕಲಾವಿದರನ್ನು ಬೆಳಕಿಗೆ ತಂದ ಚಿತ್ರ ಇದು. ವೆಂಕಟೇಶ್ ಚಿತ್ರದ ನಾಯಕ, ವಾಣಿಶ್ರೀ ನಾಯಕಿ. ನಂತರ ವೆಂಕಟೇಶ್ ಪ್ರಸಿದ್ಧ ನಿರ್ಮಾಪಕರೂ ಆದರು. ವಾಣಿಶ್ರೀ ತೆಲುಗು ಚಿತ್ರರಂಗದ ಸೂಪರ್‌ಸ್ಟಾರ್ ಆದರೆ, ದ್ವಾರಕೀಶ್ ಮತ್ತು ಎಂ.ಪಿ.ಶಂಕರ್ ನಟರಾಗಿ, ನಿರ್ಮಾಪಕರಾಗಿ, ನಿರ್ದೇಶಕರಾಗಿ ಕನ್ನಡ ಚಿತ್ರರಂಗಕ್ಕೆ ಸಮಗ್ರವಾದ ಸೇವೆಯನ್ನು ಸಲ್ಲಿಸುತ್ತಲೇ ಬಂದಿದ್ದಾರೆ. ಸ್ವಾರಸ್ಯವೆಂದರೆ ಈ ಚಿತ್ರದಲ್ಲಿ ತಾವು ವಿಶ್ವಾಮಿತ್ರ ಸೃಷ್ಟಿ ಮಾಡಿ ರಾಜಕುಮಾರ್ ತರಹದ ನಾಯಕ ನಟನನ್ನು, ನರಸಿಂಹರಾಜು ತರಹದ ಹಾಸ್ಯ ನಟನನ್ನು, ಉದಯಕುಮಾರ್‌ಗೆ ಸರಿಗಟ್ಟುವ ಖಳನಾಯಕನನ್ನು ಸೃಷ್ಟಿ ಮಾಡುತ್ತೇನೆ ಎಂದಿದ್ದರು. ಅವರ ಅಭೀಷ್ಟ ನೆರವೇರಿದಂತೆಯೇ ಆಯಿತು.

'ವಿಜಯನಗರದ ವೀರಪುತ್ರ'ದ ನಂತರ ವಿಜಯನಗರದ ಭವ್ಯ ಇತಿಹಾಸದ ಒಂದು ತುಣುಕನ್ನು ತೆರೆಗೆ ತಂದ ಚಿತ್ರ 'ವೀರಸಂಕಲ್ಪ'. ಕನ್ನಡ ಕಡುಗಲಿಯೆಂದೇ ಹೆಸರಾದ ಲಕ್ಷ್ಮಣ ನಾಯಕನ ಜೀವನದ ಸುತ್ತ ಹೆಣೆಯಲಾದ ನಾಟಕ 'ಎಚ್ಚಮನಾಯಕ' ಜನಪ್ರಿಯವಾಗಿ ರಂಗಕ್ಕೆ ಬಂದಿತ್ತು. ಈ ಕಥೆಗೆ ಹುಣಸೂರರೇ ಚಿತ್ರಕಥೆ, ಸಂಭಾಷಣೆಗಳನ್ನು ಬರೆದರು. ಚಿತ್ರವನ್ನು ಐತಿಹಾಸಿಕವಾಗಿ ಸಾಕಷ್ಟು ನೈಜವೆನಿಸಲು ಅವರು ವಿಷಯ ಸಂಗ್ರಹಣೆಗೆ ವಿಶೇಷ ಯೋಜನೆಯೊಂದನ್ನು ಹಾಕಿಕೊಂಡು ನೂರಕ್ಕೂ ಹೆಚ್ಚು ಐತಿಹಾಸಿಕ ಕೃತಿಗಳನ್ನು ಓದಿದರು. ಹಿಂದಿನ ವಿಜಯನಗರ ಸಾಮ್ರಾಜ್ಯವನ್ನು ಶ್ರೀಮಂತಗೊಳಿಸಿದ್ದ ಅನೇಕ ಸುಂದರ ತಾಣಗಳಲ್ಲಿ ಚಿತ್ರಣ ನಡೆಯಿತು. ಚಂದ್ರಗಿರಿ, ಜಿಂಜಿ, ಹಂಪಿಗಳಲ್ಲಿ ಚಿತ್ರಿತವಾದ ಯುದ್ಧ ದೃಶ್ಯಗಳಿಗೆ ಆಗಿನ ಕಾಲದಲ್ಲಿ ೨೦,೦೦೦ ರೂಪಾಯಿಗಳಷ್ಟು ಖರ್ಚಾಗಿದ್ದು ದೊಡ್ಡ ಸುದ್ದಿಯಾಗಿತ್ತು. ಉಡುಗೆ ತೊಡಿಗೆಗಳಿಗಾಗಿಯೂ ಅಂದಿನ ಸಂದರ್ಭದಲ್ಲಿ ಅಪಾರ ವೆಚ್ಚವೇ ಆಗಿತ್ತು. ಕಾಳಗದ ದೃಶ್ಯಗಳಿಗೆ ಉಳ್ಳಿ, ಬನಾಟಿ, ಕರ್ನಾಟಕ ಸ್ವೋರ್ಡ್ ಡಿಸ್‌ಪ್ಲೇ, ಫ್ರೀ ಸ್ಟೈಲ್ ಕುಸ್ತಿಗಳನ್ನು ಅಳವಡಿಸಲಾಯಿತು. ರಾಜನ್-ನಾಗೇಂದ್ರ ಅವರ ಸಂಗೀತಕ್ಕೆ ಜಾನಪದ ಶೈಲಿಯ ಬಲವಾದ ಬುನಾದಿಯಿತ್ತು. ಚಿತ್ರದ ಇನ್ನೊಂದು ವಿಶೇಷವೆಂದರೆ ಹುಣಸೂರರು ಸೃಷ್ಟಿಸಿದ ಚೆನ್ನಿ ಪಾತ್ರ. ಇದು ಚಿತ್ರದ ವಿವಿಧ ತಿರುವುಗಳಿಗೆ ಕೊಂಡಿಯಾದ ಪಾತ್ರವಾಗಿ ಹೊಸ ನಟಿ ರತ್ನಕುಮಾರಿ ವಿಶೇಷ ಗಮನ ಸೆಳೆದರು. ಹುಣಸೂರರೇ ಮುಖ್ಯ ಪಾತ್ರವೊಂದರಲ್ಲಿ ಕಾಣಿಸಿಕೊಂಡರು. ಸಂಭಾಷಣೆ ಹೇಳುವ ರೀತಿ ಇತ್ಯಾದಿಗಳಿಂದ ಹುಣಸೂರರು ಅತ್ಯುತ್ತಮ ಆಯ್ಕೆಯೇ ಆದರೂ ವೀರನಾಯಕನೊಬ್ಬನಾಗಿ ಕಾಣಲು ಹುಣಸೂರರ ಆಕಾರ, ವಯಸ್ಸು ಹೊಂದಲಿಲ್ಲ. ಚಲನಚಿತ್ರ ಮಾಧ್ಯಮ ಬೇಡುವ ಭಾವಾಭಿನಯ ನೀಡುವುದು ಹುಣಸೂರರಿಂದ ಸಾಧ್ಯವಾಗಲಿಲ್ಲ. ಇಡೀ ಚಿತ್ರಕ್ಕೆ ಹುಣಸೂರರು ಪಾತ್ರವಹಿಸಿದುದೇ ಒಂದು ತೊಡಕಾಯಿತು ಎನ್ನಬಹುದು. ಇಷ್ಟಾದರೂ 'ವೀರಸಂಕಲ್ಪ' ಒಂದು ಗಂಭೀರವಾಗಿ ಚರ್ಚಿಸಬಹುದಾದ ಚಿತ್ರವಾಗಿತ್ತು.

'ಅಮರಶಿಲ್ಪಿ ಜಕಣಾಚಾರಿ' ಕನ್ನಡ ಚಿತ್ರರಂಗದ ಮೇರು ಚಿತ್ರಗಳಲ್ಲೊಂದು. ಈ ರಂಗದಲ್ಲಿ ವರ್ಣಯುಗಕ್ಕೆ ನಾಂದಿ ಹಾಡಿದ್ದೊಂದೇ ಈ ಚಿತ್ರದ ಹೆಚ್ಚಳವಲ್ಲ. ಕನ್ನಡ



(ಚಿತ್ರ ೨೩) 'ವೀರಸಂಕಲ್ಪ' ಚಿತ್ರದಲ್ಲಿ ಬಿ.ಎಂ.ವೆಂಕಟೇಶ್ ಮತ್ತು ಹುಣಸೂರು ಕೃಷ್ಣಮೂರ್ತಿ

ಚಿತ್ರಗಳಿಗೆ ಬಣ್ಣ ಬರಬೇಕಾದರೆ ತೀರಾ ಮಾಮೂಲಿ ಚಿತ್ರವೊಂದರಿಂದ ಈ ಪರಿವರ್ತನೆಯಾಗುವುದು ಸಮಂಜಸವಾಗಿರಲಿಲ್ಲ. ಕಪ್ಪು-ಬಿಳುಪಿನಿಂದ ವರ್ಣಕ್ಕೆ ಬರುವಾಗ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ತದ್ವತ್ತಾಗಿ ಬಣ್ಣಗಳನ್ನು ತೋರಿಸಿಬಿಡುತ್ತಿದ್ದುದರಿಂದ ಮೇಕಪ್, ಸೆಟ್ಸ್, ಉಡುಗೆ-ತೊಡುಗೆ ಎಲ್ಲ ನೆಲೆಯಿಂದಲೂ ಎಚ್ಚರ ವಹಿಸಬೇಕಾಗಿತ್ತು. ಇದಾವ ಸಿದ್ಧತೆಯೂ ಇಲ್ಲದೆಯೇ ವರ್ಣದತ್ತ ತಿರುಗಿದಾಗ ದಟ್ಟವಾದ ಬಣ್ಣಗಳನ್ನು ಬಳಸಿ ಕಣ್ಣಿಗೆ ರಾಚುವಂತೆ ಮಾಡಿಕೊಂಡದ್ದೇ ಅಧಿಕ. ಆದರೆ ಕನ್ನಡ ಚಿತ್ರರಂಗ ಆ ಮಟ್ಟಿಗೆ ಎಚ್ಚರದ ಹೆಜ್ಜೆಯನ್ನೇ ಇಟ್ಟಿತು. 'ಅಮರ ಶಿಲ್ಪಿ ಜಕಣಾಚಾರಿ'ಗೆ ಆಯ್ದ ಹೊರಾಂಗಣವಾಗಲಿ, ಹಾಕಿದ ಸೆಟ್ಸ್ ಆಗಲಿ ಕೆತ್ತನೆಯ ಕಲ್ಲಿನ ವರ್ಣವನ್ನೇ ತರಬೇಕಾದಂಥದಾಗಿತ್ತು. ಏಕೆಂದರೆ ಅದು ಶಿಲ್ಪಿಯೊಬ್ಬನ ಸುತ್ತ ಹೆಣೆದ ಕಥೆ. ಹೀಗಾಗಿ ಇಲ್ಲಿ ಕಡು ಬಣ್ಣಗಳ ಬಳಕೆ ಸಾಧ್ಯವೇ ಇರಲಿಲ್ಲ. ವೃತ್ತಿನಿಷ್ಠೆ, ಸಹಜತೆಯಲ್ಲಿ ನಂಬಿಕೆಯಿದ್ದ ನಿಮಾಯ್‌ಘೋಷ್ ಛಾಯಾಗ್ರಾಹಕರೂ ಆದದ್ದು ಕನ್ನಡದ ಸೌಭಾಗ್ಯ. ಹೆಜ್ಜೆ ಇಡುವಾಗಲೇ ಅತ್ಯಂತ ಎಚ್ಚರದ ಅಡಿಯಂತೂ ಇಟ್ಟೆವು ಎನ್ನುವುದಕ್ಕೆ 'ಅಮರ ಶಿಲ್ಪಿ ಜಕಣಾಚಾರಿ' ಒಂದು ಉದಾಹರಣೆ ಮತ್ತು ಪ್ರಾರಂಭ ಕೂಡಾ. ಅದುವರೆಗೂ ಬಿ.ಎಸ್.ರಂಗಾರವರು ಅಂತಹ ಕಲಾತ್ಮಕ ಚಿತ್ರಗಳನ್ನೇನೂ ತಯಾರಿಸಿರಲಿಲ್ಲ. ಆದ್ದರಿಂದಲೇ ಅವರ



(ಚಿತ್ರ ೨೪) 'ಅಮರಶಿಲ್ಪಿ ಜಕಣಾಚಾರಿ' ಚಿತ್ರದಲ್ಲಿ ಕಲ್ಯಾಣ್‌ಕುಮಾರ್ ಮತ್ತು ಸರೋಜಾದೇವಿ

ಪತಿಯಿಂದ ಇಂತಹ ಉತ್ತಮ ಸಾಂಸ್ಕೃತಿಕ ಮತ್ತು ತಾಂತ್ರಿಕ ಮೌಲ್ಯಗಳನ್ನು ಹೊಂದಿದ ಚಿತ್ರವೊಂದು ಬಂದಿದ್ದು ಕನ್ನಡ ಚಿತ್ರಪ್ರೇಮಿಗಳಿಗೊಂದು ಆಶ್ಚರ್ಯ ಮಿಶ್ರಿತ ಅನುಭವವೇ ಆಯಿತು. ಹೊಸದೊಂದು ದಾಖಲೆ ಮಾಡುವ ರಂಗಾರವರ ಕಾತರಕ್ಕೆ ಉತ್ತಮವಾದ ಚಿತ್ರಕಥೆ ಮತ್ತು ಸಂಭಾಷಣೆಗಳ ಇಂಬು ಕೊಟ್ಟವರು ಚಿ.ಸದಾಶಿವಯ್ಯನವರು. ಚಿತ್ರದಲ್ಲಿ ಶ್ರೀಮಂತವಾದ ದೃಶ್ಯ ಸಂಯೋಜನೆಯಿತ್ತು, ಬೇಲೂರಿನಲ್ಲಿ ಚಿತ್ರಣಕ್ಕೆ ಅನುಮತಿ ಸಿಗದ ಕಾರಣ ಸ್ಟುಡಿಯೋದಲ್ಲಿ ದೇವಾಲಯದ ಭವ್ಯವಾದ ಸೆಟ್ ನಿರ್ಮಿಸಲಾಯಿತು. ಖ್ಯಾತ ಛಾಯಾಗ್ರಾಹಕ ನಿಮಾಯ್ ಘೋಷ್ ಕೇವಲ ವರ್ಣ ವೈಭವಕ್ಕೆ ಮಾರು ಹೋಗದೆ ಆಯಾ ವಸ್ತುಗಳ ಸಹಜ ಬಣ್ಣಗಳೇ ಬರುವಂತೆ ಫಿಲ್ಟರ್‌ಗಳನ್ನು ಉಪಯೋಗಿಸಿ ಚಿತ್ರಿಸಿಕೊಂಡಿದ್ದು ಒಂದು ವಿಶೇಷ. ಅವರ ಅದ್ಭುತವಾದ ನೆರಳು-ಬೆಳಕಿನ ಸಂಯೋಜನೆ ಮತ್ತು ಫ್ರೇಮಿಂಗ್ ಉತ್ತಮ ಅಭಿರುಚಿಯ ತಂತ್ರಜ್ಞರ ಮೆಚ್ಚುಗೆಗೆ ಪಾತ್ರವಾಯಿತು.

ಕಲ್ಯಾಣಕುಮಾರ್ ಮತ್ತು ಬಿ.ಸರೋಜಾದೇವಿ ಚಿತ್ರದ ನಾಯಕ-ನಾಯಕಿಯಾಗಿ ಉತ್ಕೃಷ್ಟ ಅಭಿನಯವನ್ನು ನೀಡಿ ಚಿತ್ರವನ್ನು ಸ್ಮರಣೀಯವೆನಿಸಿದರು. ಆದರೆ ರಾಷ್ಟ್ರೀಯ ಮಟ್ಟದ ಯಾವ ಪ್ರಶಸ್ತಿಗೂ ಈ ಚಿತ್ರ ಭಾಜನವಾಗದಿದ್ದುದು ಸೋಜಿಗ. ಶಾಸ್ತ್ರೀಯ ಸಂಗೀತವನ್ನು ಚಲನಚಿತ್ರ ಮಾಧ್ಯಮಕ್ಕೆ ಪರಿಣಾಮಕಾರಿಯಾಗಿ ಅಳವಡಿಸುವುದರಲ್ಲಿ ಸಿದ್ಧಹಸ್ತರೆನಿಸಿದ ಎಸ್.ರಾಜೇಶ್ವರರಾಯರು ಸಂಗೀತ ನಿರ್ದೇಶಕರಾಗಿ ಈ ಚಿತ್ರಕ್ಕೆ ನೀಡಿದ ನೆರವು ಗಮನಾರ್ಹವಾಗಿತ್ತು.

ಈ ಚಿತ್ರ ತೆಲುಗು ಮತ್ತು ಕನ್ನಡ ಎರಡು ಭಾಷೆಗಳಲ್ಲೂ ತಯಾರಾಯಿತು. ಕನ್ನಡದಲ್ಲಿ ಕಲ್ಯಾಣ್‌ಕುಮಾರ್ ಅಭಿನಯಿಸಿದ ಪಾತ್ರವನ್ನು ತೆಲುಗಿನಲ್ಲಿ ಎ.ನಾಗೇಶ್ವರರಾವ್ ನಿರ್ವಹಿಸಿದ್ದರು. ಮಾರುಕಟ್ಟೆಯ ವ್ಯಾಪ್ತಿಯನ್ನು ಆಧರಿಸಿ ವೆಚ್ಚವೂ ಇರುತ್ತದೆ. ವೆಚ್ಚ ಚಿತ್ರದ ಶ್ರೀಮಂತಿಕೆಗಾಗಿ ಅಗತ್ಯ. ಅಂಥ ಕಾರಣಗಳಿಂದಲೇ ಈ ಎರಡು ಭಾಷೆಗಳಲ್ಲಿ ಚಿತ್ರಿಸುವ ಪರಿಪಾಠವೂ ಬಂದಿತು ಎನ್ನಬಹುದು.

'ಅಮರ ಶಿಲ್ಪಿ ಜಕಣಾಚಾರಿ' ಚಿತ್ರದ ಸಂಗೀತದ ಬಗ್ಗೆ ಆಕ್ಷೇಪಗಳಿದ್ದುವು. ಶ್ರೀಮಂತವಾಗಿಸುವುದು ಅತ್ಯಗತ್ಯ, ಅನಿವಾರ್ಯ. ಆ ಹಣ ಹಿಂದೆ ಬರುವುದೂ ಬಹುತೇಕ ಖಚಿತವಿತ್ತು. ಕನ್ನಡದಲ್ಲಿ ಅಂಥ ದೊಡ್ಡ ಮಾರುಕಟ್ಟೆಯೂ ಇಲ್ಲ, ಹಣ ಹಿಂದೆ ಬರುವುದು ಖಚಿತವೂ ಇಲ್ಲ. ಹೀಗಾದಾಗ ಮಿತವ್ಯಯ ಸಹಜ. ಬಿ.ಎಸ್.ರಂಗಾ ಅವರ ಸ್ಟುಡಿಯೋದಲ್ಲೇ ಹಾಡುಗಳ ಧ್ವನಿಮುದ್ರಣವಾಯಿತು. ಇದು ದರಲ್ಲೇ ಕಡಿಮೆ ಖರ್ಚು ಮಾಡಿದರು. ತೆಲುಗು ಅವತರಣಿಕೆಯ ಸಂಗೀತಕ್ಕೆ ಹೋಲಿಸಿದರೆ ಕನ್ನಡ ಕೊಂಚ ಸಾಮಾನ್ಯ ಅನ್ನಿಸಿರಬಹುದು. ಆದರೂ ಅಲ್ಲಿದ್ದ ಸಾಹಿತ್ಯ, ರಾಗ ಸಂಯೋಜನೆಯ ಶ್ರೀಮಂತಿಕ ತಳ್ಳಿ ಹಾಕುವಂಥದ್ದಲ್ಲ.

ಕನ್ನಡ ಚಿತ್ರರಂಗದ ಸಂಗೀತ ನಿರ್ದೇಶಕರ ಪೈಕಿ ನೇರವಾಗಿ ಚಿತ್ರ ತಯಾರಿಕೆಗೆ ಇಳಿದವರು ಜಿ.ಕೆ.ವೆಂಕಟೇಶ್ ಒಬ್ಬರೆ. ಅವರು ನಿರ್ಮಿಸಿದ ಮೊದಲ ಚಿತ್ರ 'ತುಂಬಿದ ಕೊಡ'. ಸಂಕಲನಕಾರ ಎಸ್.ಸಿ.ರಾಜನ್ ನಿರ್ದೇಶಿಸಿದ ಈ ಚಿತ್ರದಲ್ಲಿ ಅನ್ವರ್ಥವಾಗಿ ವಿಶೇಷ ಗಮನ ಸೆಳೆದಿದ್ದು ವೆಂಕಟೇಶ್‌ರವರ ಸಂಗೀತ ನಿರ್ದೇಶನವೆ. ಕಾಲೇಜು ದಿನಾಚರಣೆ ಸನ್ನಿವೇಶವೊಂದರಲ್ಲಿ 'ಅಂತಿಂಥ ಹೆಣ್ಣು ನೀನಲ್ಲ ನಿನ್ನಂಥ ಹೆಣ್ಣು ಇನ್ನಿಲ್ಲ...' ಎಂಬ ಹಾಡನ್ನು ಸ್ವಯಂ ಪಿ.ಕಾಳಿಂಗರಾಯರನ್ನೇ ತೆರೆಯ ಮೇಲೆ ತಂದು ಹಾಡಿಸಿದ್ದರು. ಈ ಸನ್ನಿವೇಶದಲ್ಲಿ ಅ.ನ.ಕೃ. ಮೊದಲಾದ ಖ್ಯಾತ ಸಾಹಿತಿಗಳನ್ನು ತೆರೆಯ ಮೇಲೆ ತಂದು ಮೆಚ್ಚುಗೆ ಪಡೆದರು.

ಆ ವರ್ಷ ಬಿಡುಗಡೆಯಾದ ಚಿತ್ರಗಳಲ್ಲಿ 'ಮಂಗಳ ಮುಹೂರ್ತ' ಮತ್ತು ಜಯಲಲಿತ ನಟಿಸಿದ್ದ 'ಮನೆ ಅಳಿಯ' ರೀಮೇಕ್ ಚಿತ್ರಗಳಾದರೂ ಅವುಗಳಿಗೆ ಕೇಂದ್ರ ಸರ್ಕಾರದ ಪ್ರಶಸ್ತಿಗಳು ಸಿಕ್ಕಿದ್ದೇ ಒಂದು ಹೊಸ ರೀತಿಯ ದಾಖಲೆಯಾಯಿತು.

'ನವಕೋಟಿ ನಾರಾಯಣ' ಚಿತ್ರ ಕೆಲವು ಕಾರಣಗಳಿಗಾಗಿ ಮುಖ್ಯ. ಒಂದೇ ಕಾಲಕ್ಕೆ ಒಂದೇ ವಸ್ತುವನ್ನು ಇಟ್ಟು ಇಬ್ಬರು ಚಿತ್ರ ನಿರ್ಮಿಸಿದರು. ಪಂಢರಿಬಾಯಿ ಅವರು ಮೊದಲಿನಿಂದಲೂ ಭಕ್ತೆ. ಭಕ್ತಿ ಪ್ರಧಾನವಾದ ಚಿತ್ರ ಮಾಡುವಲ್ಲಿ ಆಸಕ್ತರು. ಆಕೆ ಪುರಂದರದಾಸ ಚಿತ್ರ ಮಾಡುತ್ತಿರುವಾಗಲೇ ಡಿ.ಆರ್.ನಾಯ್ಡು 'ನವಕೋಟಿ ನಾರಾಯಣ' ಪ್ರಾರಂಭಿಸಿಬಿಟ್ಟರು. ಹಿಂದೆ ನಂಬಿಕೆ-ನಂಬಿಯಕ್ಕಗಳಾದ ಹಾಗೇ ಮತ್ತೆ ಅಂಥದೇ ಸಂದರ್ಭದ ಮರುಕಳಿಕೆ. ಈ ಚಿತ್ರದಿಂದ ಬಿ.ವಿ.ರಾಧಾ ಚಿತ್ರರಂಗ ಪ್ರವೇಶಿಸಿದರು.

"ಚಿತ್ರದಲ್ಲಿ ರಾಜಕುಮಾರ್, ಸಾಹುಕಾರ್ ಜಾನಕಿ ಇದ್ದರು. ಜಾನಕಿ ಅವರು ಕೊಡುವ ಪತ್ರವೊಂದನ್ನು 'ಮಹಾರಾಣಿಯವರು ಕಳುಹಿಸಿದ್ದಾರೆ' ಅಂತ ಹೇಳಿ ಕೊಡುವುದು. ಅದೇ ಮೊದಲ ಶಾಟ್. ಸಖಿಯ ಪಾತ್ರಕ್ಕೆ ಫ್ರಿಲ್ ಇರುವಂಥ ದೊಡ್ಡ ಲಂಗ, ತುಂಡು ರವಿಕೆ, ಜರಿ ಎಲ್ಲ ಹಾಕಿ ಶ್ರೀಮಂತವಾಗಿ ಕಾಣುವ ಹಾಗೆ ಮಾಡಿದ್ದರು. ಪುಟ್ಟಿ ದಾವಣಿ ಹಾಕಿದ್ದರು..." ಎಂಬೆಲ್ಲ ವಿವರಗಳನ್ನು ಬಿ.ವಿ.ರಾಧಾ ಹೇಳುತ್ತಾರೆ.

'ಕಲಾವತಿ' ಚಿತ್ರ ಒಬ್ಬ ನೃತ್ಯಗಾತಿಯ ಬದುಕಿನ ಸುತ್ತ ಹೆಣೆಯಲಾಗಿತ್ತು. ಬಹಳಷ್ಟು ನಿರೀಕ್ಷೆಯೂ ಇತ್ತು. ಬಿ.ಜಯಮ್ಮನವರ ಮಗಳು ಕಲಾ ಅವರೇ ನಾಯಕಿಯಾಗಿದ್ದರು. ವಿಶೇಷವಾದ ನೃತ್ಯ ಸಂಯೋಜನೆಯಿದ್ದೂ ಚಿತ್ರ ಹದ ತಪ್ಪಿತ್ತು.

'ಪೋಸ್ಟ್ ಮಾಸ್ಟರ್' ಜಿ.ವಿ.ಅಯ್ಯರ್ ನಿರ್ಮಿಸಿ, ನಿರ್ದೇಶಿಸಿದ ಚಿತ್ರ. 'ಪೋಸ್ಟ್ ಮಾಸ್ಟರ್' ಚಿತ್ರದ ನೆಗೆಟಿವ್ ರೈಟ್ಸ್ ಪ್ರೀಮಿಯರ್ ಬಸವರಾಜಯ್ಯನವರದ್ದೆಂದು ತಿಳಿದು ಬರುತ್ತದೆ. ದತ್ತಧರ್ಮಾಧಿಕಾರಿ ನಿರ್ದೇಶನದ 'ಕೊಣಾಲ ಭಾಗಾಸ' ಎಂಬ ಮರಾಠಿಯ ಜನಪ್ರಿಯ ಚಿತ್ರದ ರೀಮೇಕ್ ಎನ್ನಬಹುದು.



(ಚಿತ್ರ ೨೫) 'ತುಂಬಿದ ಕೊಡ' ಚಿತ್ರದಲ್ಲಿ ಲೀಲಾವತಿ ಮತ್ತು ಉದಯಕುಮಾರ್

'ಪೋಸ್ಟ್ ಮಾಸ್ಟರ್'ರೊಬ್ಬರ ಶ್ರದ್ಧೆ, ನಿಷ್ಠೆ, ಪರಿಶುದ್ಧವಾದ ಬದುಕು, ಸಮಯಪ್ರಜ್ಞೆ ಇತ್ಯಾದಿಗಳ ಸುತ್ತ ಭಾವನಾಮಯ ಸನ್ನಿವೇಶಗಳನ್ನು ಸೇರಿಸಿ ಹೆಣೆಯಲಾಗಿದೆ. ಪ್ರತಿಯೊಂದು ಸಂಭಾಷಣೆಯೂ ಜನಜೀವನ, ಸ್ವಭಾವ, ದೈವ ಕಲ್ಪನೆಯ ಬಗ್ಗೆ ವ್ಯಾಖ್ಯಾನಿಸುತ್ತದೆ. ಪಾರಮಾರ್ಥ ಅರ್ಥಗಳ ಹೊಳಹೂ ಇದೆ. ಚಿತ್ರದ ಕೊನೆಯ ದೃಶ್ಯ 'ಪ್ಯಾಸಾ' ಚಿತ್ರದ ಅಂತ್ಯ ದೃಶ್ಯವನ್ನು ನೆನಪಿಸುವಂತಿದೆ. ಗೀತೆಗಳು ಮಧುರ, ಅರ್ಥಪೂರ್ಣ. 'ಸ್ಕೂಲ್ ಮಾಸ್ಟರ್' ಜೋಡಿ ಪಂತುಲು-ಎಂ.ವಿ.ರಾಜಮ್ಮ ಜೋಡಿಯೇ ಈ ಚಿತ್ರದಲ್ಲೂ ಇದೆ. ಆ ಚಿತ್ರದಲ್ಲಿದ್ದ ಹಾಗೇ ದೇವರ ಮನೆಯಲ್ಲಿ ಪ್ರಾರ್ಥಿಸಿದಂತೆ 'ನಿನ್ನೊಲುಮೆ ನಮಗಿರಲಿ ತಂದೆ...' ಗೀತೆಯನ್ನು ಎರಡು ಬಾರಿ ಬಳಸಿದ್ದಾರೆ.

ಯುದ್ಧದ ಗಡಿಬಿಡಿಯ ದಿನಗಳಾದ್ದರಿಂದ ಸೈನ್ಯಕ್ಕೆ ಸೇರುವ ಸಂಗತಿ, ಯುದ್ಧ ದೃಶ್ಯಗಳ ದಾಸ್ತಾನು ಚಿತ್ರಗಳು ಇವೆ. ರಷ್ಯಾದಲ್ಲಿ ಬಾಳೆಹಣ್ಣಿಗೆ ಡಿಮ್ಯಾಂಡಿದೆ ಎಂಬ ಮಾತು, ಒಂದೆರಡು ಕಡೆ ಪ್ರಸ್ತಾಪವಾಗುವ 'ಟೋಪಿವಾಲಾ' ಪದ ಪ್ರಯೋಗ, ಕುಟುಂಬದವರೇ ಪ್ರಾರಂಭಿಸುವ 'ಆ್ಯಂಟಿ ಕರಪ್ಷನ್ ಕಮಿಟಿ' ಮೊದಲಾದವು ಆ ಹೊತ್ತಿನ ಸಾಮಾಜಿಕ ಸ್ಥಿತಿಯನ್ನು ಹೇಳಿದರೆ, ಮತ್ತು ಬಾಲಕೃಷ್ಣ ಅವರ ಪಾತ್ರದ ಕುತಂತ್ರ, ದೇಶದ್ರೋಹದ ಸಂಚು ಇತ್ಯಾದಿಗಳು ಅರ್ಥಪೂರ್ಣವಾಗಿವೆ.

ನರ್ತಕಿಯೊಬ್ಬಳು ಹಾಡುವ 'ಮುತ್ತಿನ ನತ್ತೊಂದು ಮೂಗಿಂದ ಜಾರಿತು...' ಗೀತೆಯಲ್ಲಿ ಕರ್ನಾಟಕದ ಪ್ರಮುಖ ಪ್ರಾಂತ್ಯಗಳನ್ನೆಲ್ಲ ಹೆಸರಿಸಲಾಗಿದೆ.

ಡಾ|ಮೋದಿಯವರ ಕಣ್ಣಿನ ಆಪರೇಷನ್ ವಿವರಗಳನ್ನು ತುಂಬ ವಿವರವಾಗಿ ಚಿತ್ರಿಸಲಾಗಿದೆ. 'ಇದೇನು ಹುಣ್ಣಿಮೆಯೊ...', 'ಎರಡು ರೆಂಬೆಯ ನಡುವೆ ಬೆಳೆದ ಬಿಳಿ ಗುಲಾಬಿಯ ಹೂವಿದು...', 'ನಾನೆಷ್ಟೋ ಸಲ ನೋಡಿದ...' ಸೊಗಸಾದ ಗೀತೆಗಳು.

ಪೋಸ್ಟ್ ಮಾಸ್ಟರ್ ಪಾತ್ರದ ಒಳತೋಟಿ, ಆತಂಕ, ಭಯಗಳನ್ನು ಬಿಂಬಿಸುವ ಸಲುವಾಗಿ ಹಲವು ಮುಖಗಳ ಮಾಂಟಾಜ್ ಬಳಸಿದ್ದಾರೆ. ಪೇಟ ತೊಟ್ಟ, ಪೇಟವಿಲ್ಲದ, ಅನಂತರ ಜೈಲಿನ ಉಡುಗೆ ಇತ್ಯಾದಿಗಳನ್ನು ಬಳಸಿರುವ ರೀತಿ ಅರ್ಥಪೂರ್ಣವಾಗಿದೆ. 'ಇದೇನು ಹುಣ್ಣಿಮೆಯೊ...' ಗೀತೆಯ ಚಿತ್ರೀಕರಣದಲ್ಲಿ ಕಾಮನಬಿಲ್ಲಿನ ಮೇಲೆ ಸಪ್ತ ಕನ್ಯೆಯರು, ವೀಣೆಯ ಮೇಲೆ ಒರಗುವ ಹುಡುಗಿ ಅವೆಲ್ಲದರ ಪ್ರತಿಫಲನ ಇತ್ಯಾದಿ ಚಿತ್ರಿಕೆಗಳು ಮತ್ತು ಹೂವುಗಳು ರಿವರ್ಸ್ ಆಗುವ ಚಿತ್ರಿಕೆ ವಿಶೇಷ ಅರ್ಥಗಳನ್ನು ಕೊಡುತ್ತವೆ. ಮನೆಯ ಸೆಟ್‌ನಲ್ಲಿ ತೂಗು ಹಾಕಿರುವ ರವಿವರ್ಮನ ಪೈಂಟಿಂಗ್ಸ್ ಸಹ ಕಾಲ-ಅಭಿರುಚಿಯನ್ನು ಹೇಳುತ್ತದೆ. ಮುಖ್ಯವಾಗಿ ಅದೇ ತಾನೇ ನಿಧನರಾದ ನೆಹರೂ ಅವರಿಗೆ ಶ್ರದ್ಧಾಂಜಲಿಯೋ ಎಂಬಂತೆ ನೆಹರೂ ನಿಂತಿರುವ ಭಂಗಿ, ಹಿನ್ನೆಲೆಯಲ್ಲಿ 'ಜನಿಸಿ ಬಾ ಮರಳಿ....' ಗೀತೆ, ಪುಷ್ಪಾಂಜಲಿ ಬರುತ್ತದೆ.

''ಪೋಸ್ಟ್ ಮಾಸ್ಟರ್' ಚಿತ್ರ ಚೆನ್ನಾಗಿತ್ತು. ವಿತರಿಸಲು ಯಾರೂ ಮುಂದೆ ಬರಲಿಲ್ಲ. ಮುಂದೆ ಬಂದವರ ಬಳಿ ವ್ಯವಹಾರ ಕುದುರಲಿಲ್ಲ. ಪ್ರೀಮಿಯರ್ ಬಸವರಾಜಯ್ಯನವರು ನೆರವಾಗಿದರು. ಅವರು ವ್ಯವಹಾರದಲ್ಲಿ ನಿಷ್ಠುರವಾಗಿದ್ದು ಬಿಟ್ಟರು. ಹೀಗಾಗಿ ಚಿತ್ರ ಸರಿಯಾಗಿ ವಿತರಣೆ ಆಗಲಿಲ್ಲ. ಇಷ್ಟಾದರೂ ಬಸವರಾಜಯ್ಯನವರು ಮದರಾಸಿನ ನನ್ನ ಮನೆಯನ್ನು ನಲವತ್ತು ಸಾವಿರಕ್ಕೆ ಬರೆಸಿಕೊಂಡಿದ್ದರು. ಅದೆಲ್ಲ ಸೆಟ್ಲ್‌ಮೆಂಟ್ ಆದದ್ದು ಈಚೆಗೆ ೧೯೭೦ರ ದಶಕದಲ್ಲಿ'' ಎನ್ನುತ್ತಾರೆ ಜಿ.ವಿ.ಅಯ್ಯರ್.


(ಚಿತ್ರ ೨೬) 'ಸರ್ವಜ್ಞಮೂರ್ತಿ' ಚಿತ್ರದಲ್ಲಿ ರಾಜಕುಮಾರ್

ಜಿ.ವಿ.ಅಯ್ಯರ್ ಅವರ ಕಠೋರ ಎನ್ನಿಸುವಂಥ ನಿಲುವುಗಳ ಬಗ್ಗೆ, ಕಲಾವಿದರ ವಿಷಯದಲ್ಲಿ ಅವರು ನಡೆದುಕೊಳ್ಳುತ್ತಿದ್ದ ರೀತಿಯ ಬಗ್ಗೆ ಹಲವು ದಂತಕಥೆಗಳೇ ಇವೆ. ಈ ಮಾತಿಗೆ ಬಂದರೆ ಅಯ್ಯರ್ ''ಅನ್ಯಾಯವಾಯ್ತು ಅನ್ನಿಸಿದರ ನನಗೆ ಕೋಪ ತಡೀತಿರಲಿಲ್ಲ. ನನ್ನ ಚಿತ್ರದ ಕಲಾವಿದೆ ರಾಜಶ್ರೀನ ರೂಮಿನಲ್ಲಿ ಕೂಡಿ ಬೀಗ ಹಾಕಿ 'ಯಾರ್ ಬರ್‍ತಾರೆ ಬರಲಿ' ಅಂತ ಹೇಳಿದ್ದೂ ಉಂಟು. ನನಗೆ ಡೇಟ್ಸ್ ಕೊಟ್ಟು ಬೇರೆ ಬ್ಯಾನರ್‌ಗೆ ಕೆಲಸ ಮಾಡಿದ್ದು ನನಗೆ ಸರಿಬರಲಿಲ್ಲ. ಇನ್ನೂ ಕ್ರೂರವಾಗಿ ನಡೆದುಕೊಂಡ ಉದಾಹರಣೆಗಳೂ ಇವೆ. ನಾನೂ ಒಬ್ಬ ಕಲಾವಿದನೇ. ಹಣವಾಗಲಿ, ಥಿಯೇಟರ್ ಆಗಲಿ ನನ್ನ ಹತ್ತಿರ ಇರಲಿಲ್ಲ. ಇದ್ದಿದ್ದು ಕಲೆ ಮಾತ್ರ. ಒಂದಿಷ್ಟು ಬುದ್ಧಿ ಇತ್ತು ಅಂತ ಒಪ್ಪೋದಾದರೆ ಅದೂ ಇತ್ತು. ಹೀಗಿರೋವಾಗ ಕೆಲಸ ಆಗಬೇಕು ಅಂದರ ಕಠಿಣವಾಗಿ ಇರಲೇಬೇಕಿತ್ತು...' ಎನ್ನುತ್ತಾರೆ.

೧೯೬೪ರಲ್ಲಿ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್ ಪ್ರಾರಂಭವಾಯಿತು. ಮುಂದೆ ೧೯೭೦ರ ಹೊತ್ತಿಗೆ ಬಂದ ಹೊಸ ಜಾಡಿಗೆ ಇದು ನಾಂದಿ ಎನ್ನಬಹುದು. ಮತ್ತು ದಕ್ಷಿಣ ಭಾರತ ಫಿಲಂ ಚೇಂಬರ್ ಮೊದಲಿಗೆ ಫಿಲಂ ಇನ್‌ಸ್ಟಿಟ್ಯೂಟ್ ಸ್ಥಾಪಿಸಿತು. ಇಲ್ಲಿ ತರಬೇತಿ ಪಡೆದವರಲ್ಲಿ ರಜನೀಕಾಂತ್, ಅಶೋಕ್ ಮುಖ್ಯರು. ಅದೇ ಸಮಯದಲ್ಲಿ ಮದರಾಸಿನ ಅಡಯಾರ್‌ನಲ್ಲೂ ಫಿಲಂ ಇನ್‌ಸ್ಟಿಟ್ಯೂಟ್ ಸ್ಥಾಪಿತವಾಯಿತು.

೧೯೬೫ರಲ್ಲಿ ತೆರೆಗೆ ಬಂದ ೨೦ ಚಿತ್ರಗಳಲ್ಲಿ ಪ್ರಮುಖವೆನಿಸಿಕೊಂಡಿದ್ದು ಆರು ಚಿತ್ರಗಳು -'ಸರ್ವಜ್ಞಮೂರ್ತಿ', 'ಸತ್ಯ ಹರಿಶ್ಚಂದ್ರ', 'ಇದೇ ಮಹಾಸುದಿನ', 'ಬೆಟ್ಟದ ಹುಲಿ', 'ಮಿಸ್ ಲೀಲಾವತಿ', 'ನನ್ನ ಕರ್ತವ್ಯ' ಮತ್ತು 'ಮದುವೆ ಮಾಡಿ ನೋಡು'. ಆದರೆ ಅವುಗಳ ಗುಣಮಟ್ಟದ ಆಧಾರದ ಮೇಲೆ ಮಾತ್ರವಲ್ಲ, ಅವುಗಳಲ್ಲಿ ಕೆಲವು ಬೇರೆ ಬೇರೆ ಕಾರಣಗಳಿಂದ ಸಾಕಷ್ಟು ವಿವಾದದ ಧೂಳೆಬ್ಬಿಸಿದ್ದರಿಂದ ಕೂಡ.

೧೯೬೫ರಲ್ಲಿ ತೆರೆಗೆ ಬಂದ ಎಂ.ನರೇಂದ್ರಬಾಬು ಮಹಾತ್ವಾಕಾಂಕ್ಷೆಯ ಚಿತ್ರ 'ಸರ್ವಜ್ಞಮೂರ್ತಿ'. ಆರೂರು ಪಟ್ಟಾಭಿ ಅವರ ನಿರ್ದೇಶನ. ಕನ್ನಡ ನಾಡಿನ ಮಹಾಸಂತನ ಕಥೆ. ಉತ್ತಂಗಿ ಚೆನ್ನಪ್ಪ ಮೊದಲಾದ ಮಹನೀಯರನ್ನು ಕಂಡು ಮಾತಾಡಿ ಸಾಮಗ್ರಿ ಸೇರಿಸಿ ಸರ್ವಜ್ಞನ ಬದುಕಿನ ಹಿನ್ನೆಲೆಯಲ್ಲಿ ಸಂತನೊಬ್ಬನ ಉದಯ, ಲೋಕ ಕಲ್ಯಾಣದ ಕಥೆಯನ್ನು ಎಳೆ ಎಳೆಯಾಗಿ ಬಿಡಿಸಿಟ್ಟ ಚಿತ್ರ. ನರೇಂದ್ರಬಾಬು ಅವರವೇ ಶೋಧ ನಿರಂಜನ್ ಅವರ ನೆರವಿನಿಂದ 'ನಿರಂಜನ ಚಿತ್ರ' ಲಾಂಛನದಲ್ಲಿ ಚಿತ್ರಿಸಿದರು. ನಿರಂಜನ ಅವರೂ ಶ್ರೀಮಂತ ವ್ಯಾಪಾರಿಯ ಪಾತ್ರದಲ್ಲಿ ಅಭಿನಯಿಸಿದ್ದಾರೆ. ಸರ್ವಜ್ಞನ ಹುಟ್ಟಿನ ಹಿನ್ನೆಲೆಯಲ್ಲಿಯೇ ಏಳುವ ಸಂದೇಹಗಳು, ತಾಯಿಯೇ ತನ್ನ ಮಗನನ್ನು ಒಪ್ಪಿಕೊಳ್ಳಲಾರದ ಸಂಕಟಗಳು, ಹೊರ ಜಗತ್ತಿನ ವ್ಯಕ್ತಿ-ಸಂಬಂಧಗಳಿಂದ ಹೊರಗುಳಿದವನು ತನ್ನ ಒಳಗು-ಭಾವನೆಗಳು ಎಲ್ಲದರಿಂದಲೂ ಹೊರಬಂದು ಬಯಲಾಗಿ ನಿಂತು ಬಿಡುವ ಮಹಾ ಚೇತನ ಸರ್ವಜ್ಞ ಎಂದು ಹೇಳುವ ಕಥೆ.

ಅವನು ಹೆಡ್ಡನಲ್ಲ, ಹುಚ್ಚನಲ್ಲ. ಅವನಿಗೆ ಲೋಕದ ಬಗ್ಗೆ ಗೊತ್ತು, ಸ್ಪಂದಿಸುತ್ತಾನೆ. ಆದರೆ ನಿರ್ಭಾವುಕನಾಗಿರುತ್ತಾನೆ. ನಗುತ್ತಿರುವನೋ, ಮುಗ್ಧನೋ, ಅರೆ ಹುಚ್ಚನೋ ಎಂಬ ಗೊಂದಲ ಹುಟ್ಟಿಸುವಂಥ ವ್ಯಕ್ತಿತ್ವ. ಈ ಪಾತ್ರವನ್ನು ಇದಕ್ಕೆ ಮಿಗಿಲಾದುದು ಇನ್ನೊಂದಿಲ್ಲ ಎಂಬಂತೆ ನಿರ್ವಹಿಸಿದ್ದಾರೆ ರಾಜಕುಮಾರ್. ಎಲ್ಲವನ್ನೂ ಕಣ್ಣುಗಳಲ್ಲಿ ಕೇಂದ್ರಿಕರಿಸಿಯೂ ಅವು ಭಾವರಹಿತವಾಗಿರುವಂತೆ ನೋಡಿಕೊಂಡಿರುವುದೇ ಒಂದು ಅನನ್ಯ ಸಾಧನೆ.

ಚಿತ್ರದ ಛಾಯಾಗ್ರಹಣ ನಿರ್ವಹಿಸಿರುವ ಜಾನಕಿರಾಂ ಅವರ ಪರಿಶ್ರಮ ಪ್ರತಿ ಫ್ರೇಂನಲ್ಲೂ ಅರಿವಿಗೆ ಬರುತ್ತದೆ. ಸರ್ವಜ್ಞ ತುಂಡು ಪಂಚೆಯನ್ನೂ ತ್ಯಜಿಸಿ, ಅರೆನಗ್ನವಾಗಿ ಒಂದು ಕಂಬಳಿ, ಕಪಾಲ, ದಂಡ ಹಿಡಿದು ಹೊರಟಾಗಿನ ದೃಶ್ಯಗಳು, ಸೂರ್ಯನಿಗೆ ಮುಖ ಮಾಡಿ ಅನಂತದಲ್ಲಿ ಲೀನವಾಗಿ ಹೋದನೋ ಎಂಬಂತೆ ಸಾಗುವ ಚಿತ್ರಿಕೆಗಳಲ್ಲಿ ರಾಜಕುಮಾರ್ ಅವರ ಅಭಿನಯಕ್ಕೆ ಸಮಸಮನಾಗಿ ಛಾಯಾಗ್ರಹಣವೂ ಮೆರೆದಿದೆ. ಒಂದು ಅಪರೂಪದ ನೋಟ - ಧನ್ಯತೆ ಇಲ್ಲಿ ಸಿಗುತ್ತದೆ. ಒಮ್ಮೆ ರಾಮಕೃಷ್ಣರಂತೆ, ಮತ್ತೊಮ್ಮೆ ಬುದ್ಧನ ಹಾಗೆ, ಮುಂದೊಮ್ಮೆ ಶ್ರವಣನ ಹಾಗೆ, ಇನ್ನೊಮ್ಮೆ ವಿದ್ಯಾಪತಿಯ ಪ್ರೇಮ ತುಂಬಿದ ಭಕ್ತಿ.. ಒಪ್ಪಿಸಿಕೊಳ್ಳುವಿಕೆ, ಅಲ್ಲಮನ ತುರೀಯ ಸ್ಥಿತಿ ಹೀಗೆ ಒಂದು ಅಸೂಹ್ಯ ಸಂಕೀರ್ಣತೆಯನ್ನು ತುಂಬಿಕೊಡುವ ಪಾತ್ರ ಚಿತ್ರಣ. ಅಷ್ಟೇ ಸಮರ್ಪಕ ಅಭಿನಯ. ಈ ಚಿತ್ರದಲ್ಲಿ ರಾಜಕುಮಾರ್ ಅವರ ಸಹೋದರ ವರದರಾಜ್ ಅವರೂ ಅಭಿನಯಿಸಿದ್ದಾರೆ. ರಾಜ್ಯದ ದೊರೆಯಾಗಿ ಸರ್ವಜ್ಞನೆಂಬ ಸಂತನ ಸಾಕ್ಷಾತ್ಕಾರಕ್ಕೆ, ಜ್ಞಾನಕ್ಕೆ ಹಲುಬುವ ವಿಶಿಷ್ಟ ಪಾತ್ರದಲ್ಲಿ ಉದಯಕುಮಾರ್ ಇದ್ದಾರೆ. ಅನೇಕ ಹಿರಿಯ ನಟ-ನಟಿಯರನ್ನು ಕಾಣುತ್ತೇವೆ. ನರ್ತಕಿಯ ಪಾತ್ರದಲ್ಲಿ ಮೈನಾವತಿ ಅವರು ರಂಜಿಸುತ್ತಾರೆ. ಸಂತ ಸರ್ವಜ್ಞನನ್ನು 'ತನ್ನ ಮಗನಲ್ಲ' ಎನ್ನುವ ತಾಯಿ ಒಂದು ಕಡೆಯಾದರೆ, ತಾಯಿಗೆ

(ಚಿತ್ರ ೨೨) 'ಸರ್ವಜ್ಞಮೂರ್ತಿ' ಚಿತ್ರೀರಕಣದ ಸಂದರ್ಭದಲ್ಲಿ 'ದ್ವಿತೀಯ ಸರ್ವಜ್ಞ'ರೆನಿಸಿದ ರೆ।ಚೆನ್ನಪ್ಪ ಉತ್ತಂಗಿಯವರೊಡನೆ (ಕುಳಿತಿರುವವರು) ಹುಬ್ಬಳ್ಳಿಯ ಚಿತ್ರವಿತರಕ ದೀನನಾಥ್, ಸಾಹಿತಿ-ನಿರ್ಮಾಪಕ ನರೇಂದ್ರಬಾಬು, ನಿರ್ದೇಶಕ ಆರೂರು ಪಟ್ಟಾಭಿ ಮತ್ತು ನಟ ನಿರಂಜನ

'ನಾನು ನಿನ್ನ ಮಗಳಲ್ಲ' ಎನ್ನುವ ನರ್ತಕಿ ಇನ್ನೊಂದೆಡೆ. ಇದು ಬದುಕಿನ ವಿರೋಧಾಭಾಸಗಳನ್ನು ಸೂಕ್ಷ್ಮವಾಗಿ ಹೇಳುವ ಕ್ರಮ.

ಐವತ್ತು ಸರ್ವಜ್ಞ ವಚನಗಳು ಜಿ.ಕೆ.ವೆಂಕಟೇಶ್ ಅವರ ಸಂಯೋಜನೆಯಲ್ಲಿ ಅಪ್ತವಾಗುತ್ತವೆ. ಶಿಶುನಾಳ ಷರೀಫನನ್ನು ಕಲ್ಪಿಸಿದ ನಾಗಾಭರಣರಿಗಿಂತ ಮೊದಲೇ ಇಂಥದೊಂದು ಅಪರೂಪದ ಪ್ರಯತ್ನ ಮಾಡಿ, ಸದ್ದು ಮಾಡದೆ ತನ್ನ ಕಾಲಕ್ಕಿಂತ ಬಹಳ ಮುಂದೆ ಹೋಗಿದ್ದರು ನರೇಂದ್ರಬಾಬುಗಳು ಎನ್ನಿಸುತ್ತದೆ. ಅವರಿಗೆ ಸರಿಸಾಟಿಯಾಗಿ ನಿಂತು ತನ್ಮಯವಾಗಿ ಬಹು ಕ್ಲಿಷ್ಟವಾದ ಆ ಪಾತ್ರವನ್ನು ನಿರ್ವಹಿಸಿದ್ದರು ರಾಜಕುಮಾರ್. ಅವರಿಗೆ ನಿಜವಾದ ಪೈಪೋಟಿ ಕೊಡುವವರು ಬಾಲಕೃಷ್ಣ. ಅವರ ಪಾತ್ರ ನಿರ್ವಹಣೆ, ಗಾಯನದ ರೇಂಜ್ ಎಣೆಯಿಲ್ಲದ್ದು. ಚಿತ್ರದ ಮೇಕಪ್, ಕಲಾನಿರ್ದೇಶನ ಸಹ ಅಷ್ಟೇ ಗಮನಾರ್ಹ. ''ಅದರ ಸ್ಕ್ರಿಪ್ಟ್ ಮಾತ್ರ ಇದೆ. ಇಂದು ನೋಡಲು ಲಭ್ಯವಿಲ್ಲ'' ಎನ್ನುತ್ತಿದ್ದರು ನರೇಂದ್ರಬಾಬು. ''ಅದು ನಾನು ಬಹುವಾಗಿ ಪ್ರೀತಿಸಿದ್ದ ಪಾತ್ರ. ಒಂದಿಷ್ಟು ಚಂಚಲತೆ ಬಾರದ ಹಾಗೆ ಕಣ್ಣುಗಳಲ್ಲೇ ಅಭಿನಯಿಸಬೇಕಿತ್ತು'' ಎಂದು ರಾಜಕುಮಾರ್ ಅವರು ಈ ಗ್ರಂಥಕ್ಕೆಂದೇ ನೀಡಿದ ಸಂದರ್ಶನದಲ್ಲಿ ಹೇಳಿದ್ದರು.

ಚಿತ್ರ ಆ ದಿನಗಳಲ್ಲಿ ಜನರನ್ನು ಆಕರ್ಷಿಸಲಿಲ್ಲ. ಪ್ರಾಯಶಃ ಕೆಲವು ಘಟನೆ, ಸ್ವಭಾವಗಳಿಗೆ ಸರಿಯಾದ ಕಾರಣಗಳನ್ನು ಕೊಡುವಲ್ಲಿ ಚಿತ್ರಕಥೆ ಸೋತಿದೆ ಎನ್ನಿಸುತ್ತದೆ. ಮುಖ್ಯವಾಗಿ ತಾಯಿ ಮಗನನ್ನು ಒಪ್ಪಿಕೊಳ್ಳದೇ ಹೋಗುವುದು ಇತ್ಯಾದಿ. ಸರ್ವಜ್ಞನನ್ನು ಮನಸಾ ಒಪ್ಪಿ ಬಂದ ಹರಿಣಿಯವರ ಪಾತ್ರ, ಅಶ್ವತ್ಥ್ ಅವರ ಪಾತ್ರ ಮೊದಲಾದವಕ್ಕೆ ಒಂದು ಪೂರ್ಣತೆ ಸಿಕ್ಕಿಲ್ಲ. ಆಕಸ್ಮಾತ್ತಾಗಿ ಚಿತ್ರದ ಪ್ರಿಂಟ್ ಸಿಕ್ಕಿದ್ದರಿಂದ ಅದನ್ನು ನೋಡಲು ಸಾಧ್ಯವಾಯಿತು. ಇದೊಂದು ಅಭ್ಯಾಸಯೋಗ್ಯ ಚಿತ್ರ.

೧೯೬೫ರಲ್ಲಿ ಬಿಡುಗಡೆಯಾದ 'ಸರ್ವಜ್ಞಮೂರ್ತಿ' ಕನ್ನಡದಲ್ಲೇ ಅಲ್ಲ, ಭಾರತೀಯ ಚಿತ್ರರಂಗದಲ್ಲೇ ಒಂದು ಅಪರೂಪದ ಪ್ರಯತ್ನ. ನರೇಂದ್ರಬಾಬುಗಳಿಗೆ ಹಿಂದೆಯೇ ವಿದ್ಯಾಗುರು ವಿ.ಸೀ. ಅವರು ಕೊಟ್ಟಿದ್ದ ಸರ್ವಜ್ಞನ ಪದಗಳು, ಪುಸ್ತಕ ಮತ್ತೆ ಮತ್ತೆ ಏನಾದರೂ ಮಾಡು ಎಂದು ಕಾಡುತ್ತಿತ್ತು. ಚಾರಿ ಅವರನ್ನು ಕೇಳಿದರು. ಏಕೋ ಹಿಂದೇಟು. ಮತ್ತೆ ಕೆಲ ಕಾಲ ಸರಿದ ಮೇಲೆ ಆಕಸ್ಮಿಕವಾಗಿ ಅದೇ ಪುಸ್ತಕ ಓದಿ ಅತ್ತ ಅವರ ಮನಸ್ಸೂ ಸೆಳೆಯಿತು. ಯಾವುದೇ ಅಪೂರ್ಣ ಚಿತ್ರಕ್ಕೆ ಪೂರ್ತಿ ಮಾಡಲಿ ಅಂತ ಬಂಧುಗಳು ಕೊಟ್ಟ ೨೦,೦೦೦ ರೂಪಾಯಿಗಳೇ ಮೂಲಧನ.

'ಸಾಲವನು ಕೊಂಬಾಗ ಹಾಲೋಗರುಂಡಂತೆ' ಎಂಬ ಕವಿತೆ ಬರೆದ ಕವಿ ಸರ್ವಜ್ಞನೇ. ಆಗಲಿ ಬಿಡಿ ಎಂದು ನಗು ನಗುತ್ತಾ ರಾಜಕುಮಾರ್ ಅಭಿನಯಿಸಲು ಒಪ್ಪಿದರು. ಬದುಕೆಲ್ಲ ಸರ್ವಜ್ಞನನ್ನು ಕಂಡುಕೊಳ್ಳಲು, ಕಾಣಿಸಲು ಶ್ರಮಿಸಿದ್ದ ರೆವರೆಂಡ್ ಉತ್ತಂಗಿ ಚೆನ್ನಪ್ಪನವರು 'ಜೀವಂತ ಸರ್ವಜ್ಞ' ಎಂದೇ ಹೆಸರಾದವರು. ಅವರ ಬಳಿ ಮಾಹಿತಿ, ಅನುಮತಿ, ನೆರವು ಎಲ್ಲ ಪಡೆಯಲು ಹೋದಾಗ ಪ್ರಶ್ನೆಗಳ ಸುರಿಮಳೆ ಹಾಕಿದರು. ಉತ್ತರದಿಂದ ಸಮಾಧಾನ ಅನ್ನಿಸಿದ ಮೇಲೆ ಎಂಭತ್ತೆರಡರ ಪ್ರಾಯದ ಉತ್ತಂಗಿ ಚೆನ್ನಪ್ಪನವರು ಮಾತನಾಡಲೂ ಶಕ್ಯವಿಲ್ಲದ ಸ್ಥಿತಿಯಲ್ಲಿದ್ದವರು ಥಟ್ಟನೆ ವಿದ್ಯುತ್ ಸಂಚಾರವಾದಂತೆ ಪಟಪಟನೆ ಮಾತಾಡತೊಡಗಿದರು. ಸರ್ವಜ್ಞನ ಬಗ್ಗೆ ಖಚಿತ ಮಾಹಿತಿಯಿಲ್ಲ. ಆದರೆ ಅವನ ಒಂದು ತ್ರಿಪದಿಯನ್ನು ಆಧರಿಸಿ ಪಂಡಿತ ಶಿವಮೂರ್ತಿಶಾಸ್ತ್ರಿಗಳು ಬರೆದಿದ್ದ ಜೀವನ ಚಿತ್ರವನ್ನು ಆಧರಿಸಿ ಒಂದು ಕಥೆಯ ಹಂದರವನ್ನು ಚೆನ್ನಪ್ಪನವರೇ ಸಿದ್ಧ ಮಾಡಿಕೊಟ್ಟರು.

ಚಿತ್ರ ಮದರಾಸಿನ ಮೆಜೆಸ್ಟಿಕ್ ಸ್ಟುಡಿಯೋದಲ್ಲಿ ಪ್ರಾರಂಭವಾಯಿತು. ಅನಂತರ ಸರ್ವಜ್ಞನ ಹುಟ್ಟಿದ ಊರಾದ ಧಾರಾವಾಡ ಜಿಲ್ಲೆ ಹಿರೇಕೆರೂರ್ ತಾಲ್ಲೂಕಿನ ಅಬಲೂರು, ಅವನ ತಂದೆಯವರ ಊರಾದ ಮಾಸೂರು, ಕರ್ಜಗಿಯ ವರದಾ ನದಿ ಮೊದಲಾದ ಕಡೆಗಳಲ್ಲಿ ಚಿತ್ರೀಕರಣ ಮಾಡಿದರು. ಪ್ರಾರಂಭದ ದೃಶ್ಯಕ್ಕೆ ಉತ್ತಂಗಿ ಅವರನ್ನು ಕಂಡು ರಾಜಕುಮಾರ್, ಬಾಬುಗಳು, ಆಚಾರಿಯವರು ಆಶೀರ್ವಾದ ಪಡೆದಿದ್ದರು. ಅದಾದ ತಿಂಗಳಿಗೆ ಚೆನ್ನಪ್ಪನವರು ತೀರಿಕೊಂಡರು.

ಕೃಷ್ಣದಾಸ್ ದಲ್ವಾನಿ ಎಂಬುವವರು ಈ ಕಥಾವಸ್ತುವಿನಲ್ಲಿ ಆಸಕ್ತಿ ತೋರಿ ವಿತರಿಸಲು ಒಪ್ಪಿ ಕೊಂಚ ಹಣದ ನೆರವೂ ಕೊಟ್ಟರು. ಅನಂತರ ಏಕೋ ಅಸಹಕಾರ ತೋರಿದರು. ಮತ್ತು ಒಂದೂವರೆ ವರ್ಷದ ನಂತರ ಬಂದು ಮುಂದುವರೆಸಿ ಅಂದರು. ಫಿಲಂ ಸೆಂಟರ್‌ನಲ್ಲಿ ಮತ್ತೆ ಕೆಲಸ ಪ್ರಾರಂಭವಾಯಿತು. ತಡವಾದರೂ ಚಿತ್ರ ಕಡೆಗೂ ಮುಗಿಯಿತು. ಎರಡು ಲಕ್ಷ ಮೂವತ್ತೆಂಟು ಸಾವಿರ ರೂಪಾಯಿ ಖರ್ಚಾಯಿತು. ಮೂರು ಪ್ರಿಂಟ್‌ಗಳನ್ನು ಹಾಕಿದ್ದರು. ಬೆಂಗಳೂರಿನ ಮೂವಿಲ್ಯಾಂಡ್ ಥಿಯೇಟರ್‌ನಲ್ಲಿ ಚಿತ್ರ ಐದು ವಾರ ನಡೆಯಿತು. ಒಳ್ಳೆಯ ವಿಮರ್ಶೆಗಳು ಬಂದಿದ್ದವು. ಈ ಚಿತ್ರ ಬಿಡುಗಡೆಯಾದಾಗಲೇ ಕೆಲವು ಜನಪ್ರಿಯ ಚಿತ್ರಗಳು ತೆರೆಗೆ ಬಂದಿದ್ದರಿಂದ ಈ ಚಿತ್ರ ಹೆಚ್ಚು ಲಾಭ ತರಲಿಲ್ಲ. ಬಾಬುಗಳು ನಷ್ಟಗೊಂಡರು. ಮೈಸೂರಿನ ಮನೆ ಮಾರಿದರು. ಆದರೆ ಅಂಥದೊಂದು ಚಿತ್ರ ಮಾಡಿದೆನೆಂಬ ತೃಪ್ತಿ ದೊಡ್ಡದು.

''ಅತಿ ಕಡಿಮೆ ಉಡುಪು, ಲಂಗೋಟಿ, ಮೇಲೊಂದು ತುಂಡು ಕಂಬಳಿ ಧರಿಸಿ ಇತಿಹಾಸ ಮಾಡಿದರು ರಾಜಕುಮಾರ್'' ಎನ್ನುತ್ತಾರೆ ನರೇಂದ್ರಬಾಬು. ಆ ಬಗ್ಗೆ ಕೇಳಿದವರಿಗೆ ರಾಜಕುಮಾರ್ ''...ನಾನೊಬ್ಬ ಕಲಾವಿದ, ಶ್ರವಣಬೆಳಗೊಳದ ಗೊಮ್ಮಟನ ಚಿತ್ರ ಮಾಡಲು ಯಾರಾದರೂ ಬಂದರೆ ಗೊಮ್ಮಟನೂ ಆಗಲು ಸಂಕೋಚವಿಲ್ಲ...'' ಎಂದಿದ್ದರು. ಅವರು ''ನನ್ನ ಜೀವನದಲ್ಲೇ ನೆನಪಿನಲ್ಲಿರುವ ಚಿತ್ರ, ಸರ್ವಜ್ಞನ ಕೆಲವಾದರೂ ನೀತಿಗಳನ್ನು ನನ್ನ ಜೀವನದಲ್ಲಿ ಅನುಷ್ಠಾನಕ್ಕೆ ತಂದಿದ್ದೇನೆ'' ಎಂದು ಹಲವು ಸಂದರ್ಶನಗಳಲ್ಲಿ ಹೇಳಿಕೊಂಡಿದ್ದಾರೆ.

ಅಂದಿನವರೆಗಿನ ಕನ್ನಡ ಚಿತ್ರರಂಗದ ದಾಖಲೆಗಳಲ್ಲಿ ಅತ್ಯಂತ ವೈಭವದ, ಅತ್ಯಧಿಕ ವೆಚ್ಚದಲ್ಲಿ ತಯಾರಾದ ಚಿತ್ರವೆಂದು (ತಯಾರಿಕಾ ವೆಚ್ಚ : ಎಂಟು ಲಕ್ಷಕ್ಕೂ ಹೆಚ್ಚು ರೂಪಾಯಿಗಳು) ದೊಡ್ಡ ಹೆಸರು ಮಾಡಿ ಅಬ್ಬರದ ಪ್ರಚಾರದೊಂದಿಗೆ ತೆರೆಗೆ ಬಂದ ಖ್ಯಾತ ಸಂಸ್ಥೆ ವಿಜಯಾ ಪ್ರೊಡಕ್ಷನ್ಸ್‌ರವರ ಮೊದಲ ಕನ್ನಡ ಚಿತ್ರ 'ಸತ್ಯ ಹರಿಶ್ಚಂದ್ರ' ಅದ್ದೂರಿಯಿಂದಲೇ ರಾಜ್ಯದಾದ್ಯಂತ ಪ್ರದರ್ಶಿತವಾಗಿ ತನ್ನ ರಜತೋತ್ಸವ ವಾರವನ್ನು ಸಡಗರದಿಂದ ಆಚರಿಸಿಕೊಂಡಿತು. ಆದರೆ ಚಿತ್ರಕ್ಕೆ ಪತ್ರಿಕೆಗಳ ಪ್ರಶಂಸೆಯೇನೂ ಅದೇ ಪ್ರಮಾಣದಲ್ಲಿ ಸಿಗಲಿಲ್ಲ. ತಮ್ಮ ೩೦ ವರ್ಷಗಳ ಸೇವಾವಧಿಯಲ್ಲಿ ತಾವು ಸಂಗ್ರಹಿಸಿದ ಅನುಭವ ಮತ್ತು ತೋರಿದ ಪ್ರತಿಭೆಗಳ ಪ್ರತಿ ಅಣುವನ್ನೂ ಈ ಚಿತ್ರದಲ್ಲಿ ವಿನಿಯೋಗಿಸಿದ್ದಾಗಿ ನಿರ್ದೇಶಕ ಹುಣಸೂರು ಕೃಷ್ಣಮೂರ್ತಿ ಹೇಳಿಕೊಂಡರು. ಆದರೆ ಈ ಹೇಳಿಕೆ ಸ್ವಲ್ಪ ಮಟ್ಟಿಗೆ ಉತ್ಪ್ರೇಕ್ಷೆಯೆನಿಸಿದ್ದು ಹೌದು.

ಚಿತ್ರದಲ್ಲಿ ಬಳಸುವ ಸಲುವಾಗಿ ಐದು ಕಾಡುಗಳನ್ನು ಮದರಾಸಿನ ವಾಹಿನಿ ಸ್ಟುಡಿಯೋದಲ್ಲಿ ಕೃತಕವಾಗಿ ನಿರ್ಮಿಸಿದ್ದು ಒಂದು ಗಮನೀಯ ಅಂಶ. ಉಳಿದವರು ಬೇಡವೆಂದರೂ ನೈಜತೆಗಾಗಿ ಉರಿವ ಕಾಡಿನ ಮಧ್ಯೆ ಮಿಸುಕದೆ ನಾಯಕಿ ಪಂಢರಿಬಾಯಿಯವರು ಅಭಿನಯಿಸಿದ್ದು ಇನ್ನೊಂದು, ರಾಜಕುಮಾರ್‌ರ ವೃತ್ತಿ ಜೀವನದಲ್ಲಿ ಈ ಚಿತ್ರ ಒಂದು ಮೈಲಿಗಲ್ಲು ಎನಿಸಿದಂತೆಯೇ ಕನ್ನಡ ಚಿತ್ರೋದ್ಯಮದ ಇತಿಹಾಸದಲ್ಲಿ ಕೂಡ ನಾಟಕೀಯತೆಯಂತಹ ತನ್ನ ಎಲ್ಲ ನ್ಯೂನತೆಗಳ ನಡುವೆಯೂ ಒಂದು ಹೊಸ ಅಧ್ಯಾಯವನ್ನು ತೆರೆದ ಹೆಗ್ಗಳಿಕೆಗೆ 'ಸತ್ಯ ಹರಿಶ್ಚಂದ್ರ' ಪಾತ್ರವಾಯಿತು. ಚಿತ್ರದ ಶ್ರೀಮಂತಿಕೆಯಂತೂ ಕನ್ನಡ ಚಿತ್ರರಂಗದ ಆರ್ಥಿಕ ಮಿತಿಗಳನ್ನು ಮೆಟ್ಟಿ ನಿಂತಿತು.

ಆ ವರ್ಷದ ಅತ್ಯಂತ ವಾದಗ್ರಸ್ತ, ಆದರೆ ಬಹಳ ಜನಪ್ರಿಯವೆನಿಸಿದ ಚಿತ್ರವೆಂದರೆ 'ಬೆಟ್ಟದ ಹುಲಿ'. ಈ ಚಿತ್ರದಿಂದ ನಟಿ ಜಯಂತಿಗೆ 'ಸೆಕ್ಸ್ ಬಾಂಬ್' ಎಂಬ ಹಣೆ ಪಟ್ಟಿ ದೊರಕಿದ್ದು ಆಕೆ ಮೈ ಚಳಿ ಬಿಟ್ಟು ಅಭಿನಯಿಸಿದ, ಸಭ್ಯತೆಯ ಎಲ್ಲೆ ಮೀರಿದ ಕೆಲವು ದೃಶ್ಯಗಳಿಂದ. ಈ ಅತಿರೇಕ ಪತ್ರಿಕೆಗಳ ಅವಕೃಪೆಗೆ ಪಾತ್ರವಾಗಿ ದೊಡ್ಡ ರಾಡಿಯನ್ನೇ ಎಬ್ಬಿಸಿತು. ಒಂದು ಕನ್ನಡ ಚಿತ್ರದಲ್ಲಿ ಹೆಣ್ಣಿನ ಅಂಗಾಂಗ ಪ್ರದರ್ಶನ ಎಷ್ಟರ ಮಟ್ಟಿಗೆ ಸಹ್ಯವೆಂಬ ಬಗ್ಗೆ ಒಂದು ದೊಡ್ಡ ಚರ್ಚೆಯೇ ನಡೆಯಿತು. ನಿರ್ದೇಶಕ ಎ.ವಿ.ಶೇಷಗಿರಿರಾಯರು ಇದರಿಂದಾಗಿ ದೊಡ್ಡ ವಿವಾದವೊಂದರ ಕೇಂದ್ರ ಬಿಂದುವೂ ಆದರು. ಆದರೆ ಚಿತ್ರ ಪಡೆದ ಆರ್ಥಿಕ ಯಶಸ್ಸು ಹೊಸ ನಿರ್ಮಾಪಕ, ಅನ್ಯ ಭಾಷೆಯ ಎಸ್.ಎನ್.ಪಾಲ್‌ರನ್ನು ಕನ್ನಡ ಚಿತ್ರರಂಗಕ್ಕೆ ಅಂಟಿಕೊಳ್ಳುವಂತೆ ಪ್ರೇರೇಪಿಸಿತು. ಪಾಲ್ ಕನ್ನಡ ಚಿತ್ರರಂಗ ಕಂಡ ಅಪರೂಪದ ವ್ಯಕ್ತಿಗಳಲ್ಲೊಬ್ಬರೆನಿಸಿದರು. ಅವರ ನಾಲಿಗೆಯ ಹರಿತ, ನಿಸೂರಾದ ಮಾತುಗಳು ಮತ್ತು ವ್ಯಾಪಾರದಲ್ಲಿ ಅವರು ಚಾಚೂ ತಪ್ಪದೆ ಅನುಸರಿಸಿಕೊಂಡು ಬಂದ ಶಿಸ್ತು ಮತ್ತು ನಿಯತ್ತು ಅವರಿಗೆ ಎಷ್ಟು ಅಭಿಮಾನಿಗಳನ್ನು ತಂದು ಕೊಟ್ಟವೋ ಅಷ್ಟೇ ನಿಂದಕರನ್ನೂ ಸಂಪಾದಿಸಿ ಕೊಟ್ಟವು. ಪಾಲ್ ಕೆಲವು ಕಾಲದ ನಂತರ ಕನ್ನಡ ಚಿತ್ರೋದ್ಯಮದಲ್ಲಿನ ಅಶಿಸ್ತಿನ ಬಗ್ಗೆ ಬೇಸತ್ತು ಈ ಕ್ಷೇತ್ರಕ್ಕೇ ವಿದಾಯ ಹೇಳಿದ್ದು ಚಿತ್ರರಂಗಕ್ಕಾದ ನಷ್ಟ.

'ಇದೇ ಮಹಾ ಸುದಿನ' ನಟ ಉದಯಕುಮಾರ್ ಸ್ವಂತವಾಗಿ ನಿರ್ಮಿಸಿದ ಮೊದಲ ಚಿತ್ರವೆಂಬ ಏಕೈಕ ಕಾರಣದಿಂದ ದಾಖಲೆಗೆ ಅರ್ಹವಾಯಿತು. ಅದರಿಂದಾಗಿ ಈ ಪ್ರತಿಭಾವಂತ ಕಲಾವಿದರಿಗೆ ಪ್ರತಿಷ್ಠೆ ಹಾಗೂ ಹಣಗಳೆರಡೂ ನಷ್ಟವಾದುವೇ ಹೊರತು ಅದರಿಂದ ಯಾವ ಸಾಧನೆಯೂ ಆಗಲಿಲ್ಲ.

'ನಂದಾದೀಪ'ದ ಮೂಲಕ ಕನ್ನಡ ಚಿತ್ರರಂಗದಲ್ಲಿ ಹೊಸದೊಂದು ಪ್ರಜ್ಞೆಯನ್ನು ಮೂಡಿಸಿದ್ದ ಎಂ.ಆರ್.ವಿಠಲ್, 'ಮಿಸ್ ಲೀಲಾವತಿ' ಚಿತ್ರದ ಮೂಲಕ ಇನ್ನೊಂದು ಸ್ವಾರಸ್ಯಕರ ದಾಖಲೆಯನ್ನು ಸ್ಥಾಪಿಸಿದರು. ಸಂಪ್ರದಾಯಬದ್ಧ ಕನ್ನಡ ಚಲನಚಿತ್ರಗಳ ಪರಿಸರದಲ್ಲಿ ಕೊರಟಿ ಶ್ರೀನಿವಾಸರಾಯರ ಕಾದಂಬರಿಯನ್ನು ಆಧರಿಸಿ ವಿಠಲ್ ನಿರ್ದೇಶಿಸಿದ ಈ ಚಿತ್ರ ಒಂದು ರೀತಿಯ 'ಸಾಂಸ್ಕೃತಿಕ ಷಾಕ್' ನೀಡಿದ್ದರಲ್ಲಿ ಆಶ್ಚರ್ಯವಿಲ್ಲ. ಸಾಂಪ್ರದಾಯಿಕ ಜಾಡಿನಲ್ಲಿಯೇ ಸ್ತ್ರೀಯರನ್ನು ಚಿತ್ರಿಸುತ್ತ ಬರುತ್ತಿದ್ದ ರಂಗಭೂಮಿ, ಚಲನಚಿತ್ರಗಳ ಜಾಡಿನಿಂದ ಬೇರೆಯಾದ ಸ್ತ್ರೀ ಪ್ರಧಾನ ಕಥಾವಸ್ತುವನ್ನು ವಿಠಲ್ ಆಯ್ಕೆ ಮಾಡಿದರು. 'ಮಿಸ್ ಲೀಲಾವತಿ' ಶ್ರೀನಿವಾಸರಾವ್ ಕೊರಟಿ ಅವರ ಅದೇ ಹೆಸರಿನ ಕಾದಂಬರಿಯನ್ನು ಆಧರಿಸಿ ಆ ಕಾಲಕ್ಕೆ ಕನ್ನಡ ಚಿತ್ರರಂಗದ ಸಂದರ್ಭದಲ್ಲಿ ಕೊಂಚ ದಿಟ್ಟ ಅನ್ನಿಸುವಂಥ ಸ್ತ್ರೀ ಪಾತ್ರವನ್ನು ತೆರೆಗಿತ್ತರು. ಇಬ್ಸನ್ನನ ನೋರ ಆದರ್ಶವನ್ನು ಒಪ್ಪಿಕೊಂಡ, ವಿವಾಹವೇ ಸ್ತ್ರೀಯ ಬದುಕಿನ ಗುರಿಯಲ್ಲ ಎಂಬ ನಂಬಿಕೆಯಿಂದ ಬದುಕನ್ನು ರೂಪಿಸಿಕೊಳ್ಳಲು ಹೊರಟ ಹೆಣ್ಣಿನ ಕಥೆ. ಆಕೆಯ ಬದುಕಿನಲ್ಲಿ ಒದಗಿದ ಅನಿವಾರ್ಯಗಳು, ಅಧಿಕಾರ, ಪುರುಷ ಶಕ್ತಿ ಹೇಗೆ ಸ್ತ್ರೀಯಳ ಆದರ್ಶವನ್ನು ಕೊಂದು ಶೋಷಿಸುತ್ತವೆ ಎಂಬ ಅಂಶವನ್ನು ಹೇಳುವ ಪ್ರಯತ್ನ ಈ ಚಿತ್ರದಲ್ಲಿತ್ತು. ವಿಠಲ್ ಅವರ ನಿರೂಪಣೆಯಲ್ಲಿ ಎಷ್ಟೇ ಮಂದಗತಿಯಿದ್ದರೂ ನಿರ್ದೇಶನದಲ್ಲಿ ಅವರು ತೋರಿದ ಸಂಯಮ ಚಿತ್ರರಂಗದ ಒಬ್ಬ ವಿಭಿನ್ನ ರೀತಿಯ ನಿರ್ದೇಶಕರೆಂಬ ಸ್ಥಾನವನ್ನು ಅವರಿಗೆ ತಂದುಕೊಟ್ಟಿತು. 'ಬೆಟ್ಟದ ಹುಲಿ'ಯ ಹುಡುಗಾಟಗಳನ್ನು ಬದಿಗೊತ್ತಿ ಈ ಚಿತ್ರದಲ್ಲಿ ಪ್ರೌಢ ಅಭಿನಯ ನೀಡಿದ ಜಯಂತಿ ನಿರ್ದೇಶಕರ ಆಶೋತ್ತರಗಳಿಗೆ ಸಮರ್ಥವಾಗಿ ಸ್ಪಂದಿಸಿದರು. ಕುವೆಂಪು ಅವರ



(ಚಿತ್ರ ೨೮) 'ಸತ್ಯ ಹರಿಶ್ಚಂದ್ರ' ಚಿತ್ರದಲ್ಲಿ ನರಸಿಂಹರಾಜು, ಉದಯಕುಮಾರ್, ರಾಜಕುಮಾರ್, ಪಂಢರಿಬಾಯಿ



(ಚಿತ್ರ ೨೯) 'ಚಿಟ್ಟದ ಹುಲಿ' ಚಿತ್ರದಲ್ಲಿ ಎಂ.ಪಿ.ಶಂಕರ್, ರಾಜಕುಮಾರ್, ಪಂಢರಿಬಾಯಿ



(ಚಿತ್ರ ೩೦) 'ಮಿಸ್ ಲೀಲಾವತಿ' ಚಿತ್ರದಲ್ಲಿ ಜಯಂತಿ, ಅಶ್ವತ್ಥ್, ವಾಣಿಶ್ರೀ

ಜನಾನುರಾಗಿ ಕವನ 'ದೋಣಿ ಸಾಗಲಿ ಮುಂದೆ ಹೋಗಲಿ...'ಯನ್ನು ವಿಠಲ್ ಚಿತ್ರಿಸಿದ ರೀತಿ ಪ್ರೇಕ್ಷಕರ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿಯಿತು. ಈ ಹಾಡಿನ ಚಿತ್ರೀಕರಣಕ್ಕಾಗಿ ವಿಠಲ್ ಒಂದು ಹೊಸ ತಂತ್ರವನ್ನೇ ಬಳಸಬೇಕಾಯಿತು. ಚಲಿಸುತ್ತಿರುವ ದೋಣಿಯಲ್ಲಿ ಜಯಂತಿ ಮತ್ತು ರಮೇಶ್ ಹಾಡಿಗೆ ಅಭಿನಯ ನೀಡುತ್ತ ಹೋದಂತೆ ಅವರ ಚಿತ್ರಣಕ್ಕೆ ಟ್ರಾಲಿಯನ್ನು ಬಳಸುವ ಬದಲು ಎರಡು ದೋಣಿಗಳನ್ನು ಒಂದಕ್ಕೊಂದು ಕಟ್ಟಿ ಒಂದರಲ್ಲಿ ಕಲಾವಿದರು, ಇನ್ನೊಂದರಲ್ಲಿ ಕ್ಯಾಮರಾ ಇಟ್ಟು ಚಿತ್ರಣ ನಡೆಸಲಾಯಿತು. ಕನ್ನಡ ಚಿತ್ರವೊಂದು ತಮಿಳುನಾಡಿನ ಕೊಡೈಕೆನಾಲ್‌ನಲ್ಲಿ ಚಿತ್ರಣಗೊಂಡಿದ್ದು ಅದೇ ಪ್ರಥಮ. 'ಮಿಸ್ ಲೀಲಾವತಿ'ಗೆ ಕೇಂದ್ರ ಸರ್ಕಾರದ ಪ್ರಶಸ್ತಿ ಪತ್ರ ಲಭ್ಯವಾಯಿತು. ಈ ಚಿತ್ರದ ನಿರ್ಮಾಪಕರು ಕೆ.ಎಸ್.ಜಗನ್ನಾಥ್. ಖ್ಯಾತ ಛಾಯಾಗ್ರಾಹಕ ಶ್ರೀಕಾಂತ್ ತಾವು ಚಿತ್ರಿಸಿದ ಅನೇಕ ಕಪ್ಪು-ಬಿಳುಪು ಚಿತ್ರಗಳ ಪೈಕಿ 'ಮಿಸ್ ಲೀಲಾವತಿ'ಗೆ ವಿಶೇಷ ಸ್ಥಾನ ಕೊಡುತ್ತಾರೆ.

'ನನ್ನ ಕರ್ತವ್ಯ' ಚಿತ್ರವನ್ನು ಸತ್ಯನಾರಾಯಣ ಅವರು ನಿರ್ಮಿಸಿದರು. ಇವರು ಇವತ್ತಿನ ಜನಪ್ರಿಯ ಕಲಾವಿದೆ ಸೌಂದರ್ಯ ಅವರ ತಂದೆ. ಜಯಲಲಿತಾ ಅವರನ್ನು ಚಿತ್ರರಂಗಕ್ಕೆ ಪರಿಚಯಿಸಿದವರು ಸತ್ಯನಾರಾಯಣ. ತೆಲುಗು ಚಿತ್ರರಂಗದ ಪ್ರಮುಖ ನಿರ್ದೇಶಕರಲ್ಲೊಬ್ಬರಾಗಿದ್ದ ವೇದಾಂತಂ ರಾಘವಯ್ಯ ನಿರ್ದೇಶಿಸಿದ ಈ ಚಿತ್ರ ವಿಧವಾ ವಿವಾಹದಂತಹ ಸಾಮಾಜಿಕ ಸಮಸ್ಯೆಯೊಂದರ ವಿಶ್ಲೇಷಣೆಯಾಗಿದ್ದು ತನ್ನ ಗಂಭೀರವಾದ ನಿರೂಪಣೆಯಿಂದ ಒಂದು ವರ್ಗದ ಪ್ರೇಕ್ಷಕರನ್ನು ತನ್ನ ಕಡೆಗೆ ಸೆಳೆದುಕೊಂಡರೂ ಆರ್ಥಿಕವಾಗಿ ಯಶಸ್ವಿಯಾಗಲಿಲ್ಲ. ಆದರೆ ಇದರಿಂದ ಜಯಲಲಿತಾ ಚಿತ್ರರಂಗವನ್ನು ಪ್ರವೇಶಿಸಿದ್ದು ಒಂದು ಮಹತ್ವದ ಬೆಳವಣಿಗೆಯೆನಿಸಿತು. ಆಕೆಯ ತಾಯಿ ಸಂಧ್ಯಾ ಆಗಲೇ ಕನ್ನಡ ಚಿತ್ರರಂಗದಲ್ಲಿ ಪ್ರತಿಷ್ಠಿತ ನಟಿಯಾಗಿದ್ದರು. ಅವರೆ ಅಪ್ಪಟ ಕನ್ನಡದವರೇ ಆಗಿದ್ದರೂ ಜಯಲಲಿತಾರವರನ್ನು ತಮಿಳು ಚಿತ್ರರಂಗ ಬೇಗನೇ ಕೈ ಬೀಸಿ ಕರೆಯಿತು. ನಂತರ ಆಕೆ ಅಲ್ಲಿ ಅನೇಕ ವರ್ಷಗಳ ಕಾಲ ಸಾಮ್ರಾಜ್ಞಿಯಾಗಿ ಮೆರೆದು, ಎಂ.ಜಿ.ರಾಮಚಂದ್ರನ್ ಒಡನಾಟದಿಂದಾಗಿ ತಮಿಳುನಾಡಿನ ರಾಜಕೀಯ ಕ್ಷೇತ್ರವನ್ನು ಅಲುಗಾಡಿಸುವಷ್ಟು ಬೆಳೆದರು. ಎರಡು ಬಾರಿ ಆ ರಾಜ್ಯದ ಮುಖ್ಯಮಂತ್ರಿಯಾದ ಆಕೆ ನೆರೆರಾಜ್ಯವೊಂದರಲ್ಲಿ ರಾಜಕೀಯ ತಾರೆಯಾಗಿ ವಿಜೃಂಭಿಸಿದ ಪ್ರಥಮ ಕನ್ನಡತಿಯೆಂಬ ಹೆಗ್ಗಳಿಕೆಯನ್ನು ಗಳಿಸಿದ್ದು ಇತಿಹಾಸ.

ಕೇಂದ್ರದ ಹಿಂದಿ ಭಾಷೆಯ ಹೇರಿಕೆಯನ್ನು ವಿರೋಧಿಸಿ ಚಳವಳಿಗಳಾದವು. ಬಹಳ ಸುದ್ದಿ ಮಾಡಿದ ಹೊಸತನಕ್ಕೆ ದಾರಿ ಮಾಡಿದ ರಾಮು ಕಾರಿಯತ್‌ರ 'ಚೆಮ್ಮೀನ್' ತೆರೆಗೆ ಬಂತು. ಹೃಷಿಕೇಶ್ ಮುಖರ್ಜಿಯವರ ಸಂಕಲನದ ಬಗ್ಗೆ ಬಹಳಷ್ಟು ಮಾತಿತ್ತು. ಅದೇ ಮುಂದೆ ಅವರು ಕನ್ನಡ ಚಿತ್ರದ ಸಂಕಲನಕ್ಕೆ ಬರಲು ಕಾರಣವೇನೋ. ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ಸ್ಪರ್ಧಾತ್ಮಕವಾದದ್ದೂ ಇದೇ ವರ್ಷ. ಮುಂದೆ ಶಂಕರ್‌ನಾಗ್ ಪ್ರಶಸ್ತಿ ಪಡೆದದ್ದು ಇಂಥ ಉತ್ಸವದಲ್ಲೇ.

೧೯೬೬ರಲ್ಲಿ ನೆನಪಿನಲ್ಲಿ ಉಳಿಯಬಹುದಾದಂಥ ಚಿತ್ರಗಳು ತಯಾರಾಗಿದ್ದು ತೀರಾ ಕಡಿಮೆ. ಪ್ರಾಯಶಃ ಅ.ನ.ಕೃಷ್ಣರಾಯರ ಜನಪ್ರಿಯ ಕಾದಂಬರಿಯ ಆಧಾರದ ಮೇಲೆ ಎ.ಸಿ.ನರಸಿಂಹಮೂರ್ತಿ - ಎಸ್.ಕೆ.ಭಗವಾನ್ ನಿರ್ದೇಶಿಸಿದ 'ಸಂಧ್ಯಾರಾಗ'ವೊಂದೇ ಈ ಮಾತಿಗೆ ಹೊರತು. ಆದರೆ ಈ ವರ್ಷವಲ್ಲಿ ಕನ್ನಡ ಚಿತ್ರರಂಗಕ್ಕೆ ಪ್ರವೇಶ ಮಾಡಿದ ಹೊಸ ಪ್ರತಿಭೆಗಳು ಹಲವಾರು. ಅವರಲ್ಲಿ ಕೆಲವರು ಮುಂದೆ ಕನ್ನಡ ಚಿತ್ರರಂಗದ ಪ್ರಗತಿಗೆ ಗಮನಾರ್ಹ ಕೊಡುಗೆಯನ್ನಿತ್ತವರಾದ್ದರಿಂದ ಕ್ರಿಯಾತ್ಮಕವಾಗಿ ಅಷ್ಟೇನೂ ಗಮನೀಯವಲ್ಲದ ಈ ವರ್ಷ ಈ ದೃಷ್ಟಿಯಿಂದ ಮಾತ್ರ ಪ್ರಾಮುಖ್ಯ ಪಡೆಯುತ್ತದೆ.

'ಎಂದೂ ನಿನ್ನವನೆ' ಮೂಲಕ ನಾಯಕ ನಟ ಕಲ್ಯಾಣ್‌ಕುಮಾರ್ ನಿರ್ಮಾಪಕ ಹಾಗೂ ನಿರ್ದೇಶಕರಾದರು. 'ಮನೆ ಕಟ್ಟಿ ನೋಡು' ಮೂಲಕ ಚಿತ್ರಸಾಹಿತಿ ಸಿ.ವಿ.ಶಿವಶಂಕರ್ 'ಶ್ರೀ ಸದ್ಗುರು' ಎಂಬ ಹೆಸರಿನಲ್ಲಿ ನಿರ್ಮಾಪಕರೂ, ನಿರ್ದೇಶಕರೂ ಆದರು. 'ತೂಗುದೀಪ'ದ ಮುಖಾಂತರ ಕೆ.ಎಸ್.ಎಲ್.ಸ್ವಾಮಿ (ರವೀ) ಸ್ವತಂತ್ರವಾಗಿ ನಿರ್ದೇಶನಕ್ಕಿಳಿದರು. ಸಾಹಿತಿ ಜ್ವಾಲನಯ್ಯನವರು 'ಮಹಾಶಿಲ್ಪಿ' ಚಿತ್ರವನ್ನು ನಿರ್ಮಿಸಿ, ದೊರೆಸ್ವಾಮಿ ಅವರ ನಿರ್ದೇಶನದಲ್ಲಿ ನಟರ ಸ್ಥಾನಕ್ಕೂ ಬಂದರು. 'ಸುಬ್ಬಾಶಾಸ್ತ್ರಿ' ಹಿಂದೆ 'ಭಾರತಿ' ಚಿತ್ರದ ನಾಯಕ ನಟರಾಗಿದ್ದ ಬುದ್ಧಿಜೀವಿ ತರುಣ ಎಂ.ವಿ.ಕೃಷ್ಣಸ್ವಾಮಿಯವರನ್ನು ನಿರ್ದೇಶಕರನ್ನಾಗಿ ಪರಿವರ್ತಿಸಿತು. ಆ ಚಿತ್ರದ ನಿರ್ಮಾಪಕರೂ ಅವರೇ. 'ಲವ್ ಇನ್ ಬೆಂಗಳೂರು' ಚಿತ್ರದ ಮೂಲಕ ಭಾರತಿ ಚಿತ್ರರಂಗವನ್ನು ಪ್ರವೇಶಿಸಿದರು. 'ಸ್ಕೂಲ್ ಮಾಸ್ಟರ್' ಮತ್ತು 'ಕಿತ್ತೂರು ಚೆನ್ನಮ್ಮ'ನಂತರ ಸ್ಮರಣೀಯ ಚಿತ್ರಗಳನ್ನು ತೆರೆಗಿತ್ತ ಬಿ.ಆರ್.ಪಂತುಲುರವರು 'ಮದ್ವೇ ಮೊಡ್ಡಪ್ಪ' ಹಾಗೂ 'ಎಮ್ಮೆ ತಮ್ಮಣ್ಣ'ದಂತಹ ನಿರರ್ಥಕ ಚಿತ್ರಗಳನ್ನು ನಿರ್ಮಿಸಿ ಉತ್ತಮ ಅಭಿರುಚಿಯ ಪ್ರೇಕ್ಷಕರಿಂದ ತೀವ್ರವಾದ ತರಾಟೆಗೆ ಒಳಗಾದರು.

ಅ.ನ.ಕೃ. ಅವರ ಕಾದಂಬರಿ ಆಧರಿಸಿದ 'ಸಂಧ್ಯಾರಾಗ' ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ನಿಂತ ಚಿತ್ರ. ಈ ಚಿತ್ರದಿಂದ ಭಗವಾನ್ ಸಹಾಯಕ



(ಚಿತ್ರ ೩೧) 'ನನ್ನ ಕರ್ತವ್ಯ' ಚಿತ್ರದಲ್ಲಿ ಜಯಲಲಿತಾ ಮತ್ತು ಸಂಧ್ಯಾ



(ಚಿತ್ರ ೩.೨) 'ಸಂಧ್ಯಾರಾಗ' ಚಿತ್ರದಲ್ಲಿ ರಾಜಕುಮಾರ್ ಮತ್ತು ಜೂನಿಯರ್ ರೇವತಿ

ನಿರ್ದೇಶಕ ಸ್ಥಾನದಿಂದ ಸಹ ನಿರ್ದೇಶಕ ಸ್ಥಾನಕ್ಕೆ ಏರಿದ್ದು ಒಂದು ಪ್ರಮುಖ ಬೆಳವಣಿಗೆ. ಭಗವಾನ್ ಛಾಯಾಗ್ರಾಹಕ-ನಿರ್ದೇಶಕ ದೊರೆರಾಜ್‌ರೊಂದಿಗೆ ಮುಂದೆ ಅನೇಕ ಸದಭಿರುಚಿಯ ಕಾದಂಬರಿ ಆಧಾರಿತ ಚಿತ್ರಗಳನ್ನು ನಿರ್ದೇಶಿಸಲು 'ಸಂಧ್ಯಾರಾಗ' ಸ್ಫೂರ್ತಿಯನ್ನು ಒದಗಿಸಿದ್ದೂ ಹೌದು. ಈ ಚಿತ್ರಕ್ಕೆ ಆ ವರ್ಷದ ಅತ್ಯುತ್ತಮ ಚಿತ್ರವೆಂಬ ರಾಷ್ಟ್ರಪ್ರಶಸ್ತಿ ಸಿಕ್ಕಿದರೂ ರಾಜ್ಯಮಟ್ಟದಲ್ಲಿ ಮಾತ್ರ ಅದಕ್ಕೆ ಲಭಿಸಿದ್ದು ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಮಾತ್ರ.

ಉತ್ತೇಜನಕ್ಕಾಗಿ ಹಾತೊರೆದು ಕೊನೆಗೂ ತನ್ನ ಆಶೋತ್ತರಗಳಿಗೆ ಧ್ವನಿಗೂಡಿಸಿದ ಗುರು, ಪತ್ನಿಯರನ್ನು ಪಡೆದುಕೊಂಡು ಸಂಗೀತ ಕ್ಷೇತ್ರದಲ್ಲಿ ಅಪಾರ ಸಾಧನೆ ಮಾಡಿದರೂ ತನ್ನ ವೈಯಕ್ತಿಕ ಜೀವನದಲ್ಲಿ ಕಹಿಯನ್ನೇ ಉಂಡುಕೊಂಡು ಬಂದ ತರುಣನೊಬ್ಬನ ಕರುಣಾಜನಕ ಕಥೆಯನ್ನು ಹೊಂದಿದ್ದ 'ಸಂಧ್ಯಾರಾಗ'ದ ಜೀವಾಳವೇ ಸಂಗೀತವಾಗಿತ್ತು. ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ಅವರ ಸ್ಮರಣೀಯ ಸಾಧನೆಗಳಲ್ಲೊಂದು ಈ ಚಿತ್ರ. ಉತ್ತರಾದಿ ಸಂಗೀತಕ್ಕೆ ಭೀಮಸೇನ್ ಜೋಷಿ ಮತ್ತು ದಕ್ಷಿಣಾದಿ ಸಂಗೀತಕ್ಕೆ ಬಾಲಮುರಳಿಕೃಷ್ಣರವರು ಹಾಡಿದ ಶಾಸ್ತ್ರೀಯ ಗೀತಗಳು 'ಸಂಧ್ಯಾರಾಗ'ದ ಮಟ್ಟವನ್ನು ಅವರ ನಿರೂಪಣೆಯ ಇತಿಮಿತಿಗಳಿಂದ ಎತ್ತರಕ್ಕೆ ಕೊಂಡೊಯ್ದರೂ ಈ ಎರಡೂ ಶೈಲಿಗಳ ಸಂಗೀತವನ್ನು ಬಳಸುವುದರಲ್ಲಿ ನಿರ್ದೇಶಕರು ತೋರಿದ ಗೊಂದಲ ಅವರಿಗೆ ಶೋಭೆ ತರಲಿಲ್ಲ. ರಾಜಕುಮಾರ್ ಮತ್ತು ಭಾರತಿ ಕನ್ನಡ ಚಿತ್ರರಂಗದ ಅತ್ಯಂತ ಜನಪ್ರಿಯ ಜೋಡಿಯಾಗಿ ಬೆಳೆಯಲು 'ಸಂಧ್ಯಾರಾಗ' ಭದ್ರವಾದ ಬುನಾದಿ ಹಾಕಿತು. ಅವರ ಅಭಿನಯದಲ್ಲಿನ ಮಾರ್ದವತೆ ಚಿತ್ರದ ಇತರ ದೋಷಗಳನ್ನು ಮಟ್ಟಿ ನಿಂತ ಮತ್ತೊಂದು ಗುಣ.

'ಮನೆ ಕಟ್ಟಿ ನೋಡು' ಚಿತ್ರದಲ್ಲಿ ಸಿ.ವಿ.ಶಿವಶಂಕರ್ ಬಳಸಿದ ಹಾಡು 'ಬೆಳೆದಿದೆ ನೋಡ ಬೆಂಗಳೂರು ನಗರ...' ಎಷ್ಟು ಜನಪ್ರಿಯವಾಯಿತೆಂದರೆ ದೋಷಗಳು ಹೇರಳವಾಗಿದ್ದ ಆ ಚಿತ್ರಕ್ಕೆ ಅದು ಶ್ರೀರಕ್ಷೆಯೇ ಆಯಿತು. ಶಿವಶಂಕರ್ ಅವರೇ ಚಿತ್ರದ ನಾಯಕನಟರಾಗಿ ಅಭಿನಯಿಸಿದ್ದು ಒಂದು ವಿಶೇಷ. ಆದರೆ ನಟರಾಗಿ ಅವರು ಹೆಚ್ಚು ಕಾಲ ಉಳಿಯಲಿಲ್ಲ. ಶಿವಶಂಕರ್‌ರಿಗೆ ಸಮಕಾಲೀನ ಜೀವನ ಮತ್ತು ಅದರ ಸಮಸ್ಯೆಗಳ ಬಗ್ಗೆ ಇದ್ದ ಆಸಕ್ತಿ ಈ ಚಿತ್ರದಲ್ಲಿ ಪ್ರತಿಬಿಂಬಿತವಾಯಿತು. ಹೊಟ್ಟೆ ಬಟ್ಟೆ ಕಟ್ಟಿ ತಾವು ನಿರ್ಮಿಸಿದ ಈ ಚಿತ್ರದಲ್ಲಿ ಎದ್ದು ಕಾಣುತ್ತಿದ್ದ ಜಡತನದಿಂದಾಗಿ ಚಿತ್ರ ಯಶಸ್ವಿಯಾಗುವುದಿಲ್ಲವೆಂದು ಸ್ನೇಹಿತರೊಬ್ಬರು ಭವಿಷ್ಯ ನುಡಿದರು. ಶಿವಶಂಕರ್ ಚಿತ್ರ ಕನಿಷ್ಠ ೫೦ ದಿನಗಳಾದರೂ ಓಡುವಂತೆ ಮಾಡುವ ವಿಧಾನ ತಮಗೆ ಗೊತ್ತೆಂದು ಸವಾಲು ಹಾಕಿದರು. ಬೆಂಗಳೂರು ಮಹಾನಗರದ ಅಪಾರವಾದ ಬೆಳವಣಿಗೆಯ ಬಗ್ಗೆ ಅದುವರೆಗೆ ಬೇರೆಯ ನಿರ್ಮಾಪಕರು ಯಾರೂ ಗಮನ ಹರಿಸಿರಲಿಲ್ಲವಾದ್ದರಿಂದ ನಗರದ ವೈಭವವನ್ನು ಹೊಗಳುವ ಹಾಡೊಂದರ ಮೂಲಕವೇ ಚಿತ್ರವನ್ನು ಜನಪ್ರಿಯಗೊಳಿಸುವ ನಿರ್ಧಾರ ಮಾಡಿ, ನಗರದ ನಾನಾ ಕಡೆಗಳಲ್ಲಿ 'ಬೆಳೆದಿದೆ ನೋಡಾ ಬೆಂಗಳೂರು ನಗರ...' ಹಾಡನ್ನು ಸೈಕಲ್ ಸವಾರರ ಒಂದು ಗುಂಪಿನ ಮೇಲೆ ಚಿತ್ರಿಸಿ ತಮ್ಮ ಸವಾಲಿನಲ್ಲಿ ಗೆದ್ದರು. ಈ ಹಾಡಿನ ಚಿತ್ರೀಕರಣಕ್ಕೆ ಸರ್ಕಾರದಿಂದ ಪರವಾನಗಿಯನ್ನು ಪಡೆಯಲೂ ಅವರಲ್ಲಿ ಹಣವಿಲ್ಲದಾಗಿತ್ತಂತೆ. ಅಂತೂ ಪೊಲೀಸರ ಕಣ್ಣಿಗೆ ಮಣ್ಣೆರಚಿ ಚಿತ್ರಿಸಿದ ಈ ಹಾಡು ಆ ಕಾಲದ ಅತ್ಯಂತ ಜನಪ್ರಿಯ ಹಾಡುಗಳಲ್ಲಿ ಒಂದೆನಿಸಿತು. ಶಿವಶಂಕರ್ ಅವರೇ ರಚಿಸಿದ ಗೀತೆ ಅದು. ಚಿತ್ರೀಕರಣದ ವೇಳೆ ಸಂಚರಿಸಿರಬಹುದಾದ ವಾಹನಗಳು, ವ್ಯಕ್ತಿಗಳು ತಮ್ಮ ಆ ದೃಶ್ಯದಲ್ಲಿ ಸೇರಿ ಹೋದವು. ಅವನ್ನು ನೋಡಲೆಂದೇ ಜನ ಬಂದರು. ಈ ಚಿತ್ರದಲ್ಲಿ ಯುದ್ಧದ ಸನ್ನಿವೇಶವನ್ನು ಸೇರಿಸಲು ಬಳಸಿದ ಕೆಲವು ಸ್ಟಾಕ್ ಶಾಟ್ಸ್ ಸಹ ಆ ದಿನಗಳಲ್ಲಿ ವಿಶೇಷ ಎನಿಸಿದ್ದವು, ಜನರನ್ನೂ ಆಕರ್ಷಿಸಿದವು.

'ಮನೆ ಕಟ್ಟಿ ನೋಡು ಮದುವೆ ಮಾಡಿ ನೋಡು ಕನ್ನಡದ ಗಾದೆಯಿದು ತಿಳಿದೆಯಾ..' ಎಂಬ ಇನ್ನೊಂದು ಹಾಡು ಕೂಡ ಜನಪ್ರಿಯವಾಯಿತು. ಆರ್.ರತ್ನ ಈ ಚಿತ್ರದ ಸಂಗೀತ ನಿರ್ದೇಶಕರು. 'ಕಾಲುಗೆಜ್ಜೆ ಘಲಕ್ಕು...' ರೀತಿಯದೇ 'ಜಾರಿ ಬಿದ್ದೆ ಜಲಕ್ಕ ಲಜ್ಜೆ ನಿನ್ನ ಮುಖಕ್ಕೆ...' ಎಂಬ ಗೀತೆ ದ್ವಾರಕೀಶ್‌ಗೆ ಡ್ಯೂಯೆಟ್ ಆಗಿ ಬರುತ್ತದೆ. ಮುಖ್ಯ ಪಾತ್ರದಲ್ಲೇ ಇದ್ದಾರೆ ದ್ವಾರಕೀಶ್. ಹಾಗೇ ಈ ಚಿತ್ರದಲ್ಲೇ ತೂಗುದೀಪ ಶ್ರೀನಿವಾಸ್ ಕೂಡಾ ಅಭಿನಯಿಸಿದ್ದರು. ಪ್ರಾರಂಭದಲ್ಲಿ ಸಿ.ವಿ.ಶಿವಶಂಕರ್ ಅವರೇ ಮಾತಾಡುತ್ತಾರೆ. ಗೀತೆಯೊಂದು ಮುಗಿದ ಮೇಲೆ ಶೀರ್ಷಿಕೆಗಳನ್ನು ತರುತ್ತಾರೆ. ಚಿತ್ರದ ಪರಾಕಾಷ್ಠೆಯಲ್ಲಿ ಬರುವ ಹೊಡೆದಾಟವನ್ನು ವಿನೋದಮಯಗೊಳಿಸಲಾಗಿದೆ. ಈ ಚಿತ್ರದ ಒಂದು ಗೀತೆಯ ರಾಗ ಸಂಯೋಜನೆಯು 'ಯಾವ ಜನ್ಮದ ಮೈತ್ರಿ...'ಯ ರಾಗ ಸಂಯೋಜನೆಯನ್ನೇ ಹೋಲುತ್ತದೆ.

ಭಕ್ತಿರಸ ಪ್ರಧಾನ ಚಿತ್ರಗಳ ಪರಂಪರೆಯಲ್ಲಿ ಒಂದು ಹೊಸ ಅಧ್ಯಾಯವನ್ನು ತೆರೆದ ಚಿತ್ರ ಟಿ.ವಿ.ಸಿಂಗ್ ಠಾಕೂರ್ ನಿರ್ದೇಶನದ 'ಮಂತ್ರಾಲಯ ಮಹಾತ್ಮೆ'. ರಾಘವೇಂದ್ರ ಸ್ವಾಮಿಗಳ ಪಾತ್ರಕ್ಕೆ ತಮ್ಮ ಪ್ರೌಢ ಅಭಿನಯದಿಂದ ಜೀವ ತುಂಬಿದವರು ರಾಜಕುಮಾರ್. ಜಯಂತಿ ಮತ್ತು ಉದಯಕುಮಾರ್ (ಅವರೇ ರಾಜಕುಮಾರ್‌ರವರ ತಂದೆ, ವೈಣಿಕ) ಅವರಲ್ಲ ತಮ್ಮ ಹದವರಿತ ಅಭಿನಯದಿಂದ ಚಿತ್ರಕ್ಕೆ ವಿಶೇಷ ಮೆರುಗು



(ಚಿತ್ರ ೩.೩) 'ಮಂತ್ರಾಲಯ ಮಹಾತ್ಮೆ' ಚಿತ್ರದಲ್ಲಿ ರಾಜಕುಮಾರ್, ರಾಮಚಂದ್ರಶಾಸ್ತ್ರಿ



(ಚಿತ್ರ ೩೪) 'ಸುಬ್ಬಾಶಾಸ್ತ್ರಿ' ಚಿತ್ರದಲ್ಲಿ ಅರುಣ್ ಕುಮಾರ್, ಹರಿಣಿ, ಮೈನಾವತಿ, ಚಂದ್ರಕಲ, ಕೆ.ಎಸ್.ಅಶ್ವತ್ಥ್

ಕೊಟ್ಟರು. ನಿರ್ದೇಶಕರಾಗಿ ಸಿಂಗ್ ಠಾಕೂರ್‌ರ ಸ್ಥಾನವನ್ನು ಮತ್ತಷ್ಟು ಗಟ್ಟಿಗೊಳಿಸಿದ ಚಿತ್ರ 'ಮಂತ್ರಾಲಯ ಮಹಾತ್ಮೆ'.

'ಎಂದೂ ನಿನ್ನವನೆ'ಯ ನಿರ್ದೇಶನದ ಜವಾಬ್ದಾರಿಯನ್ನು ಹೊತ್ತ ಕಲ್ಯಾಣ್‌ಕುಮಾರ್ ತಮ್ಮ ವೃತ್ತಿಜೀವನದಲ್ಲಿ ತಾವೇ ಅಳವಡಿಸಿಕೊಂಡಿದ್ದ ರೊಮಾಂಟಿಸಿಸಂಗೆ ಈ ಚಿತ್ರದ ಮೂಲಕ ಇನ್ನೊಂದು ರೀತಿಯ ಅಭಿವ್ಯಕ್ತಿ ಕೊಡಲು ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನದಲ್ಲಿ ಪರಿಣತಿಯ ಅಭಾವವಿದ್ದುದರಿಂದ ಚಿತ್ರ ಯಾವ ವರ್ಗವನ್ನೂ ತೃಪ್ತಿಪಡಿಸಲಿಲ್ಲ. ಮುಂದೆ ಕಲ್ಯಾಣ್‌ಕುಮಾರ್ ಇನ್ನೂ ಎರಡು ಚಿತ್ರಗಳನ್ನು ನಿರ್ದೇಶಿಸಿದರು. 'ಪ್ರವಾಸಿ ಮಂದಿರ'ದಲ್ಲಿ ಒಂದೇ ಸೆಟ್‌ಗೆ ನಿರೂಪಣೆಯನ್ನು ಸೀಮಿತಗೊಳಿಸಿ ತಮ್ಮ ಪ್ರಯೋಗಶೀಲತೆಯನ್ನು ತೋರಿದರು. ಆದರೆ ನಟರಾಗಿ ಅವರ ಪಾಲಿಗೆ ಬಂದ ಪ್ರತಿಭೆ, ನಿರ್ದೇಶಕರಾಗಿ ಅವರಿಗೆ ಲಭ್ಯವಾಗದೆ, ಕಲ್ಯಾಣ್ ಮುಂದೆ ನಿರ್ದೇಶನಕ್ಕೆ ವಿದಾಯ ಹೇಳಬೇಕಾಯಿತು.

ಚಿತ್ರ ನಿರ್ಮಾಣದ ಎಲ್ಲ ಪ್ರಕಾರಗಳ ಬಗ್ಗೆಯೂ ಆಳವಾದ ಅಧ್ಯಯನ ನಡೆಸಿ, ರಾಬರ್ಟೋ ರೋಸಲೆನಿಯವರಂತಹ ವಿಶ್ವ ವಿಖ್ಯಾತ ನಿರ್ದೇಶಕರೊಂದಿಗೆ ನಿಕಟವಾಗಿ ಕೆಲಸ ಮಾಡಿ ತಮ್ಮದೇ ಆದ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಅಂದಿನ ಕನ್ನಡ ಚಿತ್ರೋದ್ಯಮದ ಮೂಲ ವಾಹಿನಿಯಿಂದ ಬೌದ್ಧಿಕವಾಗಿ ಸಾಕಷ್ಟು ದೂರವೇ ಉಳಿದಿದ್ದ ಪ್ರತಿಭಾವಂತ ಎಂ.ವಿ.ಕೃಷ್ಣಸ್ವಾಮಿಗಳು 'ಸುಬ್ಬಾಶಾಸ್ತ್ರಿ'ಯ ನಿರ್ಮಾಣದಲ್ಲಿ ತೊಡಗಿಸಿಕೊಂಡದ್ದು ಅಂದಿನ ಜನಪ್ರಿಯ ನಟ-ನಟಿಯರನ್ನೇ. ಆದರೂ ಇತರ ತಾಂತ್ರಿಕ ವಿಭಾಗಗಳಲ್ಲಿ ಮಾತ್ರ ಚಿತ್ರರಂಗಕ್ಕೆ ಸಂಬಂಧವೇ ಇಲ್ಲದಿದ್ದ ಖ್ಯಾತ ವೈಣಿಕ ವಿ.ದೊರೆಸ್ವಾಮಿ ಅಯ್ಯಂಗಾರ್ ಮುಂತಾದವರನ್ನು ತಂದರು. ಚಿತ್ರದ ಹಾಡುಗಳನ್ನು ಹಾಡಿದವರು ಕೂಡ ಶ್ರೀರಂಗಂ ಗೋಪಾಲರತ್ನಂ, ಬಾಲಮುರಳಿ ಕೃಷ್ಣರಂತಹ ಶಾಸ್ತ್ರೀಯ ಗಾಯಕರು. ಅಂದಿನವರೆಗೆ ಕೃಷ್ಣಸ್ವಾಮಿಗಳ ಅನೇಕ ಡಾಕ್ಯುಮೆಂಟರಿಗಳಿಗೆ ಛಾಯಾಗ್ರಾಹಕರಾಗಿದ್ದು, ನಂತರ ಟೆಲಿವಿಷನ್‌ನಲ್ಲಿ ನೈಪುಣ್ಯ ಸಂಪಾದಿಸಿದ ಎಚ್.ಎಂ.ಕೆ.ಮೂರ್ತಿಯವರು ಛಾಯಾಗ್ರಾಹಕರು.

ಮೋಲಿಯರ್‌ನ ನಾಟಕವೊಂದರ ಆಧಾರದ ಮೇಲೆ ಎ.ಎನ್.ಮೂರ್ತಿರಾಯರು ರಚಿಸಿದ 'ಆಷಾಢಭೂತಿ' ನಾಟಕವನ್ನು ಆಧರಿಸಿ ತಾವು ನಿರ್ದೇಶಿಸಿದ ಈ ಚಿತ್ರದಲ್ಲಿ ಕೃಷ್ಣಸ್ವಾಮಿಗಳು ಬಳಸಿದ್ದು ಕೂಡ ರಂಗಭೂಮಿಯ ತಂತ್ರಗಳನ್ನೇ. ಆದರಿಂದ 'ಸುಬ್ಬಾಶಾಸ್ತ್ರಿ' ಪ್ರೇಕ್ಷಕರ ನಿರೀಕ್ಷೆಗೆ ಸ್ಪಂದಿಸಲಿಲ್ಲ. ನಕಾರಾತ್ಮಕ ಪಾತ್ರದಲ್ಲಿ ಕಲ್ಯಾಣ್‌ಕುಮಾರ್ ನಿರಾಗಿ ಅಭಿನಯಿಸಿದ್ದು ಈ ಚಿತ್ರದ ಅತ್ಯಂತ ಉಲ್ಲೇಖನೀಯ ಅಂಶವೆನಿಸಿತು. ೧೯೬೬ರಲ್ಲಿ ಬಿಡುಗಡೆಯಾದ ೨೦ ಚಿತ್ರಗಳಲ್ಲಿ ನಿಜಜೀವನಕ್ಕೆ ಅತ್ಯಂತ ಹತ್ತಿರವೆನಿಸಿದ ಚಿತ್ರ 'ಸುಬ್ಬಾಶಾಸ್ತ್ರಿ'. ಒಟ್ಟಿನಲ್ಲಿ ಇದೊಂದು ನಿರರ್ಥಕ ವರ್ಷವೇ ಆಯಿತು.

ಇದೇ ವರ್ಷ ರೂಪಾಯಿ ಅಪಮೌಲ್ಯಗೊಂಡು (೬.೬.೬೬) ಆರ್ಥಿಕ ಸ್ಥಿತಿ ಏರುಪೇರಾಯಿತು. ಚಿತ್ರರಂಗದ ಮೇಲೆ ಇದರ ಪರಿಣಾಮ ಇತ್ತು. ಪ್ರತಿಭಟನೆ, ಚಳವಳಿಗಳಾದವು. ಅಧಿಕವಾಗಿ ಹಿಂಸೆಗೂ ತಿರುಗಿದ್ದು ಇದೇ ವರ್ಷ. ಮುಂದೆ ಇವೆಲ್ಲ ಚಿತ್ರಗಳಿಗೂ ವರ್ಗಾವಣೆ ಆದವು. ಕೇಂದ್ರದಲ್ಲಿ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಪ್ರಾರಂಭವಾದ ವರ್ಷವೂ ಇದೇ ಆಗಿತ್ತು.

೧೯೬೭ ಕನ್ನಡ ಚಿತ್ರರಂಗದಲ್ಲೊಂದು ಪರ್ವ ವರ್ಷ. ೧೯೬೬ರಲ್ಲಿ ರಾಜ್ಯ ಸರ್ಕಾರ ಮನರಂಜನೆ ತೆರಿಗೆಯ ಮೇಲೆ ಅಧಿಭಾರ ಹೇರಿ ಅದರಿಂದ ಬಂದ ವರಮಾನವನ್ನು ರಾಜ್ಯದಲ್ಲಿಯೇ ಕನ್ನಡ ಚಿತ್ರರಂಗ ತಳವೂರುವಂತೆ ಮಾಡಲು ಉದ್ಯಮಕ್ಕೆ ನೆರವು ನೀಡಲು ವಿನಿಯೋಗಿಸುವುದಾಗಿ ಘೋಷಿಸಿತ್ತು. ೧೯೬೭ರಲ್ಲಿ ಈ ಘೋಷಣೆ ರಾಜ್ಯದಲ್ಲಿಯೇ ತಯಾರಾದ ಪ್ರತಿ ಚಿತ್ರಕ್ಕೆ ೫೦,೦೦೦ ರೂಪಾಯಿಗಳ ಸಹಾಯಧನ ನೀಡುವ ಯೋಜನೆಯ ಮೂಲಕ ಕಾರ್ಯಗತವಾಯಿತು. ಇದಾದ ಕೆಲವೇ ದಿನಗಳಲ್ಲಿ ಸರ್ಕಾರ ವಾರ್ಷಿಕ ಚಲನಚಿತ್ರ ಪ್ರಶಸ್ತಿ ಯೋಜನೆಯನ್ನೂ ಜಾರಿಗೆ ತಂದಿತು. ಈ ಎರಡೂ ಯೋಜನೆಗಳಿಂದ ತಕ್ಷಣ ಯಾವ ಪವಾಡವೂ ನಡೆಯದಿದ್ದರೂ ಕನ್ನಡ ಚಿತ್ರರಂಗ ಮದರಾಸಿನಿಂದ ಕನ್ನಡ ನಾಡಿಗೆ ಬಂದು ನೆಲೆಸುವ ಪ್ರಕ್ರಿಯೆಯಂತೂ ಪ್ರಾರಂಭವಾಯಿತು. ಇದೊಂದೇ ವರ್ಷದಲ್ಲಿ ಕನ್ನಡದಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ೨೦ರಿಂದ ೨೭ಕ್ಕೇರಿದ್ದು ಕೇವಲ ಕಾಕತಾಳೀಯವೇನೂ ಅಲ್ಲ. ಜೊತೆಗೆ ಕನ್ನಡ ಚಿತ್ರರಂಗದ ಹಿರಿಮೆಯನ್ನು ಗಮನೀಯವಾಗಿ ಹೆಚ್ಚಿಸಿದ ಕೆಲವು ಚಿತ್ರಗಳೂ ಈ ವರ್ಷದಲ್ಲಿ ತಯಾರಾದವು.

ಇವುಗಳಲ್ಲಿ ಹೆಚ್ಚು ಉಲ್ಲೇಖನಾರ್ಹವೆನಿಸಿದ ಚಿತ್ರಗಳು ಪುಟ್ಟಣ್ಣ ಕಣಗಾಲ್ ನಿರ್ದೇಶನದ ಚೊಚ್ಚಲ ಚಿತ್ರ 'ಬೆಳ್ಳಿಮೋಡ', ಎಂ.ಆರ್.ವಿಠಲ್ ನಿರ್ದೇಶಿಸಿದ 'ನಕ್ಕರೆ ಅದೇ ಸ್ವರ್ಗ', 'ಪೇಕೇಟಿ ಶಿವರಾಂ ನಿರ್ದೇಶನದ 'ಚಕ್ರತೀರ್ಥ', ಎನ್.ಸಿ.ರಾಜನ್‌ರವರ 'ಇಮ್ಮಡಿ ಪುಲಿಕೇಶಿ' ಮತ್ತು ಆರ್.ನಾಗೇಂದ್ರರಾಯರು ಕೆಲವು ತಿಂಗಳ ಅಜ್ಞಾತವಾಸದಿಂದ ಹೊರಬಂದು ನಿರ್ದೇಶಿಸಿದ 'ಪ್ರೇಮಕ್ಕೂ ಪರ್ಮಿಟ್ಟೆ', ಅವುಗಳಲ್ಲದೆ ಹೆಚ್ಚು ದಿನ ಬದುಕದ ಬೆಂಗಳೂರಿನ ಓಂಕಾರ್ ಸ್ಟುಡಿಯೋದಲ್ಲಿಯೇ ಸಂಪೂರ್ಣವಾಗಿ ಚಿತ್ರಿತವಾದ 'ಜಾಣರ ಜಾಣ' ಕೂಡ ತೆರೆಗೆ ಬಂದಿದ್ದು ಈ ವರ್ಷವೆ. ಇದೇ ವರ್ಷ ಉತ್ತರ ಕರ್ನಾಟಕದ ಕೆಲವು ಆಸಕ್ತರನ್ನು ಸೇರಿಸಿ ಅನಂತ ಹಿರೇ ಗೌಡರು ನಿರ್ಮಿಸಿದ 'ಸಂಗೊಳ್ಳಿ ರಾಯಣ್ಣ'ದಲ್ಲಿ ಕಾಮಿನಿ ಕದಂ, ಅಭಿ ಭಟ್ಟಾಚಾರ್ಯರಂತಹ ಖ್ಯಾತ ಹಿಂದಿ ಕಲಾವಿದರನ್ನು ಕನ್ನಡ ಚಿತ್ರರಂಗಕ್ಕೆ ತಂದಿದ್ದು ಕೂಡ ಒಂದು ಮುಖ್ಯ ಬೆಳವಣಿಗೆ. ಇದೇ ಸಾಲಿನಲ್ಲಿ ಎಂ.ಎಸ್.ನಾಯಕ್ ನಿರ್ದೇಶಿಸಿದ ರೀಮೇಕ್ ಚಿತ್ರ 'ಒಂದೇ ಬಳ್ಳಿಯ ಹೂಗಳು' ಜಯಭೇರಿ ಹೊಡೆದು ರೀಮೇಕ್ ಚಿತ್ರಗಳ ತಯಾರಿಕೆಗೆ ಇನ್ನಷ್ಟು ಕುಮ್ಮಕ್ಕು ನೀಡಿತು.

ವರ್ಷ ಕಳೆದಂತೆ ಕನ್ನಡ ಚಿತ್ರಗಳ ಸಂಖ್ಯೆ ಗಣನೀಯವಾಗಿ ಏರಿ ಸೆಪ್ಟೆಂಬರ್ ತಿಂಗಳ ವೇಳೆಗೆ ಕನ್ನಡ ಚಿತ್ರರಂಗಕ್ಕೆ ಅತಿವೃಷ್ಟಿಯ ಚಿಂತೆ ತಟ್ಟಿತು. ಅದರೊಂದಿಗೆ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಚಿತ್ರಮಂದಿರಗಳ ಅಭಾವದ ಸಮಸ್ಯೆಯೂ ತೀವ್ರ ಸ್ವರೂಪ ಪಡೆದು ನಿರ್ಮಾಪಕ-ವಿತರಕರ ಹಾಗೂ ಪ್ರದರ್ಶಕರ ನಡುವೆ ಶೀತಲ ಸಮರ ಪ್ರಾರಂಭವಾಯಿತು. ಡಿಸೆಂಬರ್ ೧೯೬೭ರ ವೇಳೆಗೆ ಕಾದಂಬರಿಗಳ ಚಿತ್ರಣದ ಹಕ್ಕುಗಳಿಗೆ ಇದ್ದಕ್ಕಿದ್ದಂತೆ ಬೇಡಿಕೆ ವಿಪರೀತವಾಗಿ ಏರಿತು. ಇದಕ್ಕೆ ತ್ರಿವೇಣಿಯವರ ಕಾದಂಬರಿ 'ಬೆಳ್ಳಿಮೋಡ'ದ ಚಲನಚಿತ್ರ ಅವತರಣಿಕೆ ಗಳಿಸಿದ ಅಪಾರ ಜನಪ್ರಿಯತೆಯೂ ಒಂದು ಕಾರಣವಾಗಿರಬಹುದು.

೧೯೬೬ರವರೆಗೆ ಕನ್ನಡದಲ್ಲಿ ಭಕ್ತಿರಸ ಪ್ರಧಾನ, ಪೌರಾಣಿಕ ಹಾಗೂ ಜಾನಪದ ಚಿತ್ರಗಳಿಗೆ ಮಾತ್ರ ಆದ್ಯತೆಯಿದ್ದು ೧೯೬೭ರಲ್ಲಿ ಈ ಪರಂಪರೆ ಬದಲಾಗುತ್ತ ಬಂತು. ಈ ವರ್ಷ ೧೭ ಸಾಮಾಜಿಕ ಚಿತ್ರಗಳು ತಯಾರಾದದ್ದು ಈ ಬದಲಾವಣೆಗೆ ತೋರುಬೆರಳಾದರೂ ಈ ಚಿತ್ರಗಳಲ್ಲಿ ಕೊರತೆಗಳೂ ಇದ್ದವು. ಈ ವರ್ಷದಲ್ಲಿ ಬಿಡುಗಡೆಯಾದ ೨೬ ಚಿತ್ರಗಳಲ್ಲಿ ೧೨ ಚಿತ್ರಗಳು ಮೈಸೂರಿನಲ್ಲಿಯೇ ತಯಾರಾಗಿದ್ದು ಕೂಡ ಒಂದು ಗಮನಾರ್ಹ ಬೆಳವಣಿಗೆ.

೧೯೬೭ರಲ್ಲಿ ಹಿರಿಯ ಬಿ.ಆರ್.ಪಂತುಲು ಎರಡು ವಿವಾದಗಳ ಕೇಂದ್ರಬಿಂದುವಾದರು. ಇದರಲ್ಲಿ ಒಂದು ವಿವಾದ ಒಂದು ರೀತಿಯಲ್ಲಿ ವಿಚಿತ್ರವೆ. ಬಿ.ಎಸ್.ರಂಗಾರವರು ಆ ವೇಳೆಗಾಗಲೇ ಕನ್ನಡದ ಪ್ರಥಮ ವರ್ಣ ಚಿತ್ರ 'ಅಮರಶಿಲ್ಪಿ

ಅಮರ ಶಿಲ್ಪಿ ಜಕಣಾಚಾರಿ (೧೯೬೪)
ಬಿ. ಸರೋಜಾದೇವಿ - ಕಲ್ಯಾಣ್ ಕುಮಾರ್



ಶ್ರೀ ಕೃಷ್ಣದೇವರಾಯ (೧೯೭೦)
ರಾಜಕುಮಾರ್ - ಬಿ. ಆರ್. ಪಂತಲು



ಸಿಪಾಯಿ ರಾಮು (೧೯೭೨) ರಾಜಕುಮಾರ್ - ಅಶ್ವತ್ಥ್



ಸುಭದ್ರಾಕಲ್ಯಾಣ (೧೯೭೨) ಕಲ್ಪನಾ

ಎಡಕಲ್ಲು ಗುಡ್ಡದ ಮೇಲೆ (೧೯೭೩)
ಜಯಂತಿ - ಚಂದ್ರಶೇಖರ್





ಗಂಧದಗುಡಿ (೧೯೭೩)
ಪ್ರಭಾಕರ್ - ರಾಜಕುಮಾರ್

ಬಂಗಾರದ ಮನುಷ್ಯ (೧೯೭೨)
ಭಾರತಿ - ರಾಜಕುಮಾರ್



ಬೂತಯ್ಯನ ಮಗ ಅಯ್ಯು
(೧೯೭೪)
ವಿಷ್ಣುವರ್ಧನ್ - ಲೋಕೇಶ್

ನಾಗರಹಾವು (೧೯೭೨) ಶುಭಾ - ವಿಷ್ಣುವರ್ಧನ್

ಎರಡು ಕನಸು (೧೯೭೪) ರಾಜಕುಮಾರ್ - ಬಾಲಕೃಷ್ಣ - ಮಂಜುಳಾ



ಕಳ್ಳ - ಕುಳ್ಳ (೧೯೭೫)
ದ್ವಾರಕೀಶ್ - ವಿಷ್ಣುವರ್ಧನ್



ಬಬ್ರುವಾಹನ (೧೯೭೫) ರಾಜಕುಮಾರ್ - ಬಿ.ಸರೋಜಾದೇವಿ



ನಾಗರಹೊಳೆ (೧೯೭೭) ಭಾರತಿ - ವಿಷ್ಣುವರ್ಧನ್

↓ ಸಂಪತ್ತಿಗೆ ಸವಾಲ್ (೧೯೭೪) ಎಂ ವಿ ರಾಜಮ್ಮ - ಬಾಲಕೃಷ್ಣ - ವಜ್ರಮುನಿ

ನಾ ನಿನ್ನ ಮರೆಯಲಾರೆ (೧೯೭೬) ಶುಭಾ - ರಾಜಕುಮಾರ್ - ಲಕ್ಷ್ಮಿ

ಕಾಕನಕೋಟೆ (೧೯೭೭)
ರಾಜಕುಮಾರ್ - ರಾಣಿ

ಸೊಸೆ ತಂದ ಸೌಭಾಗ್ಯ (೧೯೭೭)
ವಿಷ್ಣುವರ್ಧನ್ - ಮಂಜುಳಾ
←




ಮುಯ್ಯಿ (೧೯೭೯) ಲೋಕೇಶ್ - ಬಿ.ಆರ್.ಜಯರಾಂ ↑

ಜೇಡರ ಬಲೆ (೧೯೬೮) ರಾಜಕುಮಾರ್ ↓





ಬಿಳೀ ಹೆಂಡ್ತಿ (೧೯೭೫) ಲೀಲಾವತಿ - ಮಾರ್ಗರೆಟ್ - ಆರತಿ - ಅನಿಲ್‌ಕುಮಾರ್



ಹಂಸಗೀತೆ (೧೯೭೭)
ರೇಖಾರಾವ್ - ಅನಂತನಾಗ್

↓ ಒಂದಾನೊಂದು ಕಾಲದಲ್ಲಿ (೧೯೭೮) ಶಂಕರ್‌ನಾಗ್ - ಅಕ್ಷತಾರಾವ್

ಹುಲಿಯ ಹಾಲಿನ ಮೇವು (೧೯೭೯)
ರಾಜಕುಮಾರ್





ಚಿತೆಗೂ ಚಿಂತೆ (೧೯೭೮) ರಾಮ್‌ಪ್ರಕಾಶ್ - ಪೌಲಾ ಲಿಂಡ್ಸೆ ಮತ್ತಿತರರು ↑

ತಬ್ಬಲಿಯು ನೀನಾದೆ ಮಗನೆ (೧೯೭೭) ಮಾನು - ಪೌಲಾ ಲಿಂಡ್ಸೆ ↓



ಹೊಂಬಿಸಿಲು (೧೯೭೮)
ವಿಷ್ಣುವರ್ಧನ್ - ಶಿವರಾಂ - ವೈಶಾಲಿ

ಆಪರೇಶನ್ ಡೈಮಂಡ್ ರ್‍ಯಾಕೆಟ್ (೧೯೭೮) ರಾಜಕುಮಾರ್ - ಪದ್ಮಪ್ರಿಯಾ ಮತ್ತಿತರರು

ಪಡುವಾರಳ್ಳಿ ಪಾಂಡವರು (೧೯೭೯) ಜೈಜಗದೀಶ್ - ರಾಮಕೃಷ್ಣ - ಅಂಬರೀಷ್ - ಶಾಂತಲಾ ↑

↓ ಸಿಂಗಾಪುರದಲ್ಲಿ ರಾಜಾಕುಳ್ಳ (೧೯೭೮) ಮಂಜುಳಾ - ವಿಷ್ಣುವರ್ಧನ್ - ದ್ವಾರಕೀಶ್ - ಲೀನಾ



ಮಿಂಚಿನ ಓಟ (೧೯೮೦) ಪ್ರಿಯಾ - ಲೋಕನಾಥ್ - ಅನಂತನಾಗ್ - ಶಂಕರನಾಗ್



ಚಂದನದ ಗೊಂಬೆ (೧೯೮೦) ಲಕ್ಷ್ಮಿ - ಅನಂತನಾಗ್ ↑

ಕಿಲಾಡಿ ಜೋಡಿ (೧೯೮೦) ಶ್ರೀನಾಥ್ - ಲಕ್ಷ್ಮಿ - ವಿಷ್ಣುವರ್ಧನ್ ↓

ಹೇಮಾವತಿ (೧೯೭೯) ಜಿ ವಿ ಅಯ್ಯರ್ - ಉದಯಕುಮಾರ್ - ಶರಪಂಜರ ಅಯ್ಯಂಗಾರ್ - ಗುಗ್ಗು - ಯೋಗಾನರಸಿಂಹ ಮತ್ತಿತರರು





ನಾ ನಿನ್ನ ಬಿಡಲಾರೆ (೧೯೭೯) ಅನಂತನಾಗ್ - ಲಕ್ಷ್ಮಿ

ಸೀತಾರಾಮು (೧೯೭೯) ಸುಂದರಕೃಷ್ಣ ಅರಸ್ - ಶಂಕರನಾಗ್



ಭಕ್ತ ಸಿರಿಯಾಳ (೧೯೮೦) ಬೇಬಿ ರೇಖ



ಸಾವಿತ್ರಿ (೧೯೮೦) ಅಶ್ವಿನಿ - ವಸಂತಕುಮಾರ್ - ಶಾಂತಾರಾಂ

ನಾರದ ವಿಜಯ (೧೯೮೦) ಅನಂತನಾಗ್

ಜಕಣಾಚಾರಿ'ಯನ್ನು ತಯಾರಿಸಿದ್ದರೂ ಉದ್ಯಮದ ಮತ್ತೊಬ್ಬ ಸಾಹಸಿ ಬಿ.ಆರ್.ಪಂತುಲುರವರು ವರ್ಣ ಚಿತ್ರಗಳ ತಯಾರಿಕೆಗೆ ಕೈ ಹಾಕದಿದ್ದುದು ಅವರ ಅಭಿಮಾನಿಗಳನ್ನು ಕೆರಳಿಸಿತ್ತು. ''ಕನ್ನಡದಲ್ಲಿ ವರ್ಣ ಚಿತ್ರ ತಯಾರಿಸದಿರುವ ಪಂತುಲುರವರಿಗೆ ಧಿಕ್ಕಾರ. ಅವರ ಚಿತ್ರಗಳನ್ನು ಬಹಿಷ್ಕರಿಸಿ'' ಎಂದು ಕರೆಕೊಟ್ಟ ಭಿತ್ತಿಪತ್ರಗಳನ್ನು ಕನ್ನಡಾಭಿಮಾನಿಗಳ ಹೆಸರಿನಲ್ಲಿ ರಾಜ್ಯವ್ಯಾದ್ಯಂತ ಹಂಚಲಾಯಿತು. ಎಲ್ಲ ಕನ್ನಡ ಕಲಾವಿದರಿಗೂ ಈ ಭಿತ್ತಿಪತ್ರಗಳ ವಿತರಣೆಯಾಯಿತು. ಆದರೆ ಸರ್ಕಾರ ಕನ್ನಡ ವರ್ಣಚಿತ್ರಗಳಿಗೆ ಕಚ್ಚಾ ಫಿಲಂ ನೀಡುವುದಿಲ್ಲವೆಂದು ನಿರ್ಬಂಧ ಹೇರಿದ್ದರಿಂದ ಹೀಗಾಗಿದೆಯೆಂದು ಪಂತುಲು ವಿವರಣೆ ನೀಡಿದರು. ಆಗಿನ ನಿಯಮದಂತೆ ವರ್ಣ ಚಿತ್ರಗಳಿಗೆ ಕಚ್ಚಾ ಫಿಲಂ ನೀಡುವುದು ಅಂತಹ ಚಿತ್ರಗಳು ಹೊರರಾಷ್ಟ್ರಗಳಿಗೆ ರಫ್ತಾಗಿ ವಿದೇಶಿ ವಿನಿಮಯವನ್ನು ಗಳಿಸಿದರೆ ಮಾತ್ರ. ಆದರೆ ಕನ್ನಡ ನಾಡಿನಲ್ಲಿಯೇ ಸರಿಯಾದ ಮಾರುಕಟ್ಟೆ ಕಾಣದ ಕನ್ನಡ ಚಿತ್ರಗಳಿಗೆ ವಿದೇಶಿ ಮಾರುಕಟ್ಟೆ ಸಿಗುವುದು ಕನಸಿನ ಮಾತೇ ಆಗಿತ್ತು. ಅದೂ ಅಲ್ಲದೆ ತಮ್ಮ ಚಿತ್ರ ಖಂಡಿತವಾಗಿ ವಿದೇಶಿ ವಿನಿಮಯವನ್ನು ಗಳಿಸಿಕೊಳ್ಳುತ್ತದೆಯೆಂಬ ಆಶ್ವಾಸನೆ ಕೊಟ್ಟು ಅದಕ್ಕೆ ತಗಲುವ ಸಂಪೂರ್ಣ ಹಣವನ್ನು ಠೇವಣಿ ಇಡಬೇಕಾಗಿತ್ತು. ಚಿತ್ರ ವಿದೇಶಿ ವಿನಿಮಯ ಗಳಿಸದಿದ್ದರೆ ಠೇವಣಿಯನ್ನು ವಾಪಸು ಪಡೆಯುವಂತಿರಲಿಲ್ಲ. ಹೀಗಾಗಿ ಪಂತುಲು ಆ ಘಟ್ಟದಲ್ಲಿ ವರ್ಣಚಿತ್ರಗಳ ತಯಾರಿಕೆಯ ಬಗ್ಗೆ ಯೋಚಿಸುವಂತೆಯೂ ಇರಲಿಲ್ಲ.

'ಸ್ಕೂಲ್ ಮಾಸ್ಟರ್' ಮತ್ತು 'ಕಿತ್ತೂರು ಚೆನ್ನಮ್ಮ'ಗಳ ನಂತರ ಪಂತುಲು ಉತ್ತಮ ಅಭಿರುಚಿಯ ಚಿತ್ರಗಳನ್ನು ತಯಾರಿಸದಿದ್ದ ಬಗ್ಗೆ ಕೂಡ ಅವರ ಅಭಿಮಾನಿಗಳು ಕೋಪದಿಂದ ಪ್ರತಿಭಟಿಸಿದರು. ಆದರೆ ಜನಗಳಿಗೆ ಯಾವುದು ಮೆಚ್ಚುಗೆಯಾಗುತ್ತದೆಯೋ ಅಂತಹ ಚಿತ್ರಗಳನ್ನು ಮಾತ್ರ ತಾವು ತಯಾರಿಸಲು ಸಾಧ್ಯವೆಂಬ ಪ್ರತಿವಾದವನ್ನು ಪಂತುಲು ಒಡ್ಡಿದರು. ''ಇಂದಿನ ಸಂದರ್ಭದಲ್ಲಿ ಜನರು ಗಂಭೀರವಾದ ವಿಷಯಗಳನ್ನೊಳಗೊಂಡ ಚಿತ್ರಗಳನ್ನು ನೋಡಲು ತಯಾರಾಗಿಲ್ಲ'' ಎಂದು ವಾದಿಸಿದರು. ಆದರೂ ಅದೇ ಪಂತುಲು ಕೆಲವೇ ಸಮಯದಲ್ಲಿ 'ಶ್ರೀಕೃಷ್ಣದೇವರಾಯ'ದಂತಹ ಗಂಭೀರ, ಶ್ರೀಮಂತ ವರ್ಣ ಚಿತ್ರವನ್ನು ತಯಾರಿಸಿದರು.

ಪುಟ್ಟಣ್ಣ ೧೯೫೭ರಲ್ಲಿ 'ರತ್ನಗಿರಿ ರಹಸ್ಯ'ದಲ್ಲಿ ಬಿ.ಆರ್.ಪಂತುಲು ಅವರ ಸಹಾಯಕ ನಿರ್ದೇಶಕನಾಗಿ ವೃತ್ತಿಜೀವನವನ್ನು ಆರಂಭಿಸಿ ಒಂಬತ್ತು ವರ್ಷಗಳಾಗಿದ್ದವು. ತೆಲುಗಿನ 'ಪಕ್ಕಲೊ ಬಲ್ಲೆಂ' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. ತ್ರಿವೇಣಿಯವರ 'ಬೆಕ್ಕಿನ ಕಣ್ಣು' ಕನ್ನಡ ಕಾದಂಬರಿ ಆಧಾರದ ಮೇಲೆ ತಯಾರಾದ ಮಲಯಾಳಿ ಚಿತ್ರ 'ಪೂಚ್ಚೆ ಕಣ್ಣಿ'. ಪುಟ್ಟಣ್ಣ ಕಣಗಾಲ್ ೧೯೬೭ರಲ್ಲಿ 'ಬೆಳ್ಳಿಮೋಡ'ದ ಮೂಲಕ ಸ್ವತಂತ್ರ ನಿರ್ದೇಶಕರಾಗಿ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ್ದು ಕನ್ನಡ ಚಿತ್ರೋದ್ಯಮದಲ್ಲಿ ಒಂದು ಉಜ್ವಲ ಅಧ್ಯಾಯವನ್ನೇ ತೆರೆಯಿತು. ಈ ಚಿತ್ರವನ್ನು ನಿರ್ಮಿಸಿದವರು ಶ್ರೀನಿವಾಸನ್ ಎಂಬ ತಮಿಳರು. ಈ ಪ್ರತಿಭಾವಂತ ತರುಣನ ವಿದ್ಯಾಭ್ಯಾಸ ನಡೆದದ್ದು ಮೈಸೂರಿನಲ್ಲಿ. ಆದರೆ ಹೇಳಿಕೊಳ್ಳುವಂತಹ ಔಪಚಾರಿಕ ವಿದ್ಯಾಭ್ಯಾಸವೇನೂ ಅಲ್ಲ. ಸೋರಟ್ ಅಶ್ವತ್ಥ್‌ರವರ ಕಲಾ ಸಂಘ ನಾಟಕ ತಂಡದಲ್ಲಿ ನಟರಾಗಿದ್ದ ಪುಟ್ಟಣ್ಣ ಒಳ್ಳೆಯ ಸ್ಥಿರಚಿತ್ರ ಛಾಯಾಗ್ರಾಹಕರೂ ಆಗಿದ್ದರು. ಅವರ ಎಲ್ಲ ಚಿತ್ರಗಳಲ್ಲಿಯೂ ಛಾಯಾಗ್ರಹಣ ಹೆಚ್ಚಳವಾಗಿಯೇ ಎದ್ದು ಕಂಡಿದ್ದಕ್ಕೆ ಇದೂ ಕಾರಣವಿರಬಹುದು. ಅಂದಿನ ಸಾಹಿತ್ಯ ಕೃತಿಗಳನ್ನು ಶ್ರದ್ಧೆಯಿಂದ ಓದುತ್ತಾ ಬಂದ ಅವರಿಗೆ ಹೆಚ್ಚಿನ ಸ್ಫೂರ್ತಿ ತಂದ ಕಾದಂಬರಿ 'ಬೆಳ್ಳಿಮೋಡ'. ಮಧ್ಯಮ ವರ್ಗದ ಚಿತ್ರಾಸಕ್ತರನ್ನು, ಅದರಲ್ಲಿಯೂ ಮಹಿಳೆಯರನ್ನು, ದೊಡ್ಡ ರೀತಿಯಲ್ಲಿ ಆಕರ್ಷಿಸಿದ ಮೊದಲ ಕನ್ನಡ ನಿರ್ದೇಶಕ ಪುಟ್ಟಣ್ಣ. ಸ್ತ್ರೀ ಪಾತ್ರಗಳಿಗೆ ಪ್ರಾಧಾನ್ಯವಿತ್ತು ತಮ್ಮ ನಿರೂಪಣೆಗೆ ಭಾವುಕತೆಯ ತೀವ್ರ ಒತ್ತನ್ನು ಕೊಟ್ಟು ಕನ್ನಡ ಚಿತ್ರರಂಗದಲ್ಲಿ ಒಂದು ದೊಡ್ಡ ಕ್ರಾಂತಿಯನ್ನೇ ಎಬ್ಬಿಸಿದರು. ನಾಯಕಪ್ರಧಾನ ಚಿತ್ರರಂಗದಲ್ಲಿ ನಿರ್ದೇಶಕ ಕೂಡ ಸಮಾನಾಂತರವಾಗಿ ನಿಲ್ಲಬಲ್ಲ ಎಂಬುದನ್ನು ತೋರಿಸಿಕೊಟ್ಟರು. ಕಲ್ಪನಾ, ಆರತಿ, ಶಿವರಾಂರಂತಹ ಪ್ರತಿಭಾವಂತ ಕಲಾವಿದರನ್ನು ಚಿತ್ರರಂಗಕ್ಕೆ ತಂದ ಹಿರಿಮೆ ಅವರದ್ದು. ಅವರು ನಿಧನರಾದ ಮೇಲೆ ರಾಜ್ಯ ಸರ್ಕಾರ ಅವರ ಹೆಸರಿನಲ್ಲಿ ಪ್ರತಿವರ್ಷ ಪ್ರತಿಷ್ಠಿತ ಪ್ರಶಸ್ತಿಯೊಂದನ್ನು ನೀಡಲು ಪ್ರಾರಂಭಿಸಿದ್ದು, ರಾಜ್ಯ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಯ ಸ್ವಾಮ್ಯದ ಚಿತ್ರಮಂದಿರವೊಂದಕ್ಕೆ ಅವರ ಹೆಸರನ್ನಿಟ್ಟಿದ್ದು ಕನ್ನಡ ಚಲನಚಿತ್ರ ನಿರ್ದೇಶಕನೊಬ್ಬನಿಗೆ ಸಂದ ಅಪರೂಪದ ಗೌರವ.

ಪುಟ್ಟಣ್ಣ ನಿರ್ದೇಶಿಸಿದ 'ಬೆಳ್ಳಿಮೋಡ' ಕನ್ನಡ ಚಿತ್ರರಂಗದಲ್ಲಿ ಒಂದು ಹೊಸ ಅನುಭವವನ್ನೇ ಉಂಟುಮಾಡಿ ಚಿತ್ರಪ್ರೇಮಿಗಳಲ್ಲಿ ವಿದ್ಯುತ್ ಸಂಚಾರವಾಗುವಂತೆ ಮಾಡಿತು. ಕಲ್ಪನಾ ಈ ಚಿತ್ರದ ಮೂಲಕ ಪ್ರಥಮ ಬಾರಿಗೆ ನಾಯಕ ನಟಿಯಾಗಿ ಬಂದ ನಂತರ ಹಲವಾರು ವರ್ಷಗಳು ಕನ್ನಡ ಚಿತ್ರರಂಗದಲ್ಲಿ ತಮ್ಮ ಅಸಾಧಾರಣ ಪ್ರತಿಭೆಯಿಂದ ಮೆರೆದರು. ಕಾದಂಬರಿ ಸಾಹಿತ್ಯದಿಂದ ಆಯ್ದ ಅನೇಕ ಸ್ತ್ರೀ ಪಾತ್ರಗಳನ್ನು ತಮ್ಮದೇ ಆದ ಶೈಲಿಯಲ್ಲಿ ಜೀವಂತವಾಗಿಸಿದ ವಿಶಿಷ್ಟ ಅಭಿನೇತ್ರಿ ಆಕೆ. ಕೊನೆಗೂ ಆಕೆ ದುರ್ಮರಣಕ್ಕೆ ಈಡಾಗಿದ್ದು ಕನ್ನಡ ಚಿತ್ರರಂಗದ ಮರೆಯಲಾಗದ ದುರಂತಗಳಲ್ಲೊಂದು. ಈ ಚಿತ್ರದಲ್ಲಿ ಅವರೊಂದಿಗೆ ನಾಯಕನಾಗಿ ಅಭಿನಯಿಸಿ ಬಹುಮುಖ ಕಲಾವಿದನೊಬ್ಬನಿಗೆ ನಕಾರಾತ್ಮಕ ಪಾತ್ರಗಳೂ ಗುಣಾತ್ಮಕವೇ ಆಗುತ್ತವೆಂಬುದನ್ನು ತೋರಿಸಿಕೊಟ್ಟವರು ಕಲ್ಯಾಣಕುಮಾರ್.

'ಬೆಳ್ಳಿಮೋಡ' ಕನ್ನಡ ಚಿತ್ರರಂಗದಲ್ಲಿ ಒಂದು ಮೈಲಿಗಲ್ಲಾಗಿ ನಿಂತಿದ್ದು ಪುಟ್ಟಣ್ಣ ಕಣಗಾಲ್ ಅದರಲ್ಲಿ ಅಳವಡಿಸಿದ ವಿಭಿನ್ನ ನಿರೂಪಣಾ ಶೈಲಿಯಿಂದಾಗಿ. ಅದುವರೆಗೆ ಹೆಚ್ಚು ಕಡಿಮೆ ಎಲ್ಲ ಕನ್ನಡ ಚಿತ್ರಗಳಲ್ಲಿಯೂ ಅಬ್ಬರವೇ ಪ್ರಧಾನವಾಗಿತ್ತು. ಅಂತಹ ಪರಿಸರದಲ್ಲಿ ಪುಟ್ಟಣ ಕಣಗಾಲ್ 'ಬೆಳ್ಳಿಮೋಡ'ದ ನಿರೂಪಣೆಯಲ್ಲಿ ತಂದ ನವಿರು ಉತ್ತಮ ಅಭಿರುಚಿಯ ಪ್ರೇಕ್ಷಕರನ್ನು ಬೆರಗುಗೊಳಿಸಿತು. ಆದರೆ ಈ ಚಿತ್ರದ ಹಾಸ್ಯ ದೃಶ್ಯಗಳನ್ನು ಈ ಆಬ್ಬರದಿಂದ ಹೊರತರಲು ಮಾತ್ರ ಅವರಿಗೆ ಸಾಧ್ಯವಾಗಲಿಲ್ಲ. ಚಿತ್ರದ ಗಂಭೀರ ಸನ್ನಿವೇಶಗಳನ್ನು ಅವರು ತದೇಕ ಚಿತ್ತದಿಂದ ನಿರ್ದೇಶಿಸಿ ಮಾನವ ಸಂಬಂಧಗಳ ಸೂಕ್ಷ್ಮತೆಗಳನ್ನು ಹೃದಯಸ್ಪರ್ಶಿಯಾದ ರೀತಿಯಲ್ಲಿ ಸೆರೆ ಹಿಡಿದರು. ಅವರ ಈ ಪ್ರಯತ್ನಕ್ಕೆ ದೊಡ್ಡ ನೆರವು ಸಿಕ್ಕಿದ್ದು ವಿಜಯಭಾಸ್ಕರ್‌ರ ಸರಳ ಸುಂದರ ಸಂಗೀತದಿಂದ ಮತ್ತು ಆರ್.ಎನ್.ಕೃಷ್ಣಪ್ರಸಾದ್‌ರ ಕಲಾತ್ಮಕ ಕಪ್ಪು-ಬಿಳುಪು ಛಾಯಾಗ್ರಹಣದಿಂದ. ದ.ರಾ.ಬೇಂದ್ರೆಯವರ 'ಮೂಡಲ ಮನೆಯ ಮುತ್ತಿನ ನೀರಿನ ಎರಕವಾ ಹೊಯ್ದಾ...' ಕವನಕ್ಕೆ ವಿಜಯಭಾಸ್ಕರ್ ನೀಡಿದ ಸ್ವರ ಸಂಯೋಜನೆ ಅತ್ಯಂತ ಚೇತೋಹಾರಿಯಾಗಿದ್ದು ಅವರ ಮತ್ತು ಪುಟ್ಟಣ್ಣನವರ ದೀರ್ಘ ಕಾಲದ ವೃತ್ತಿ ಸಂಬಂಧಕ್ಕೆ ಭದ್ರವಾದ ತಳಪಾಯ ಹಾಕಿತು. 'ಬೆಳ್ಳಿಮೋಡ' ಕನ್ನಡ ಚಿತ್ರರಂಗಕ್ಕೆ ಹೊಸದೊಂದು ತಿರುವನ್ನು ಕೊಟ್ಟು ಕನ್ನಡ ಚಿತ್ರಪ್ರೇಮಿಗಳ ಹಾಗೂ ಪುಟ್ಟಣ್ಣ ಕಣಗಾಲ್‌ರವರ ನಡುವೆ ಒಂದು ರೀತಿಯ ಅಪರೂಪವಾದ ಸಂಬಂಧವನ್ನು ಸೃಷ್ಟಿಸಿತು.

'ಬೆಳ್ಳಿಮೋಡ' ಕನ್ನಡ ಚಿತ್ರಗಳ ತಾಂತ್ರಿಕ ಪ್ರಗತಿಗೂ ನಾಂದಿ ಹಾಡಿತೆಂದರೂ ಉತ್ಪ್ರೇಕ್ಷೆಯಲ್ಲ. ಪುಟ್ಟಣ್ಣ ಕಣಗಾಲ್ ಈ ಚಿತ್ರದಲ್ಲಿ ಬಳಸಿದ ಫ್ರೀಜ್ ಫ್ರೇಂಗಳಾಗಲಿ, ಮಾಂಟಾಜ್‌ಗಳಾಗಲಿ ನಿರೂಪಣೆಗೆ ಹೊಸ ಅರ್ಥ ತರುವುದರಲ್ಲಿ ಯಶಸ್ವಿಯಾದವು. ಚಿತ್ರದ ಕ್ಲೈಮಾಕ್ಸ್ ದೃಶ್ಯದಲ್ಲಿ ನಾಯಕಿ ಮರ ಕತ್ತರಿಸಲು ಹೋದಾಗ ಅಲ್ಲೇ ಫ್ರೀಜ್ ಮಾಡಿ ನಿಲ್ಲಿಸುವ ತಂತ್ರ ಕನ್ನಡ ಚಿತ್ರಪ್ರೇಮಿಗಳಿಗೆ ತೀರಾ ಹೊಸ ಅನುಭವವೊಂದನ್ನೇ



(ಚಿತ್ರ ೩೫) 'ಬೆಳ್ಳಿಮೋಡ' ಚಿತ್ರದಲ್ಲಿ ಕಲ್ಪನಾ ಮತ್ತು ಕಲ್ಯಾಣ್‌ಕುಮಾರ್



(ಚಿತ್ರ ೩೬) 'ನಕ್ಕರೆ ಅದೇ ಸ್ವರ್ಗ'ದಲ್ಲಿ ನರಸಿಂಹರಾಜು ಮತ್ತು ಆರ್.ನಾಗೇಂದ್ರರಾವ್

ಉಂಟುಮಾಡಿತು. ಮುಂದೆ ಏನಾಯಿತೆಂದು ಹೇಳುವ ಬದಲು ಕಥೆಯ ಅಂತ್ಯವನ್ನು ಪ್ರೇಕ್ಷಕರ ಊಹೆಗೇ ಬಿಡುವ ಈ ತಂತ್ರ ನಿರ್ದೇಶಕರಾಗಿ ಪುಟ್ಟಣ್ಣನವರ ವಿಭಿನ್ನತೆಗೆ ಒತ್ತು ಕೊಟ್ಟಿತು. ನಂತರ ತಾಂತ್ರಿಕ ಬೆಳವಣಿಗೆಗಳನ್ನು ತಮ್ಮ ಚಿತ್ರಗಳಲ್ಲಿ ಅಳವಡಿಸಿಕೊಳ್ಳುವುದರಲ್ಲಿ, ಸೃಜನ ಶೀಲವಾಗಿ ಅಭಿವ್ಯಕ್ತಿಗೊಳಿಸುವಲ್ಲಿ ಪುಟ್ಟಣ್ಣ ಅಗ್ರಗಣ್ಯರೆನಿಸಿದರು.

ಒಂದು ಇಡೀ ಚಿತ್ರದ ಸಂಭಾಷಣೆಗಳನ್ನು ಶೂಟಿಂಗ್ ಮುಗಿದ ನಂತರ ಡಬ್ ಮಾಡುವ ಸಂಪ್ರದಾಯವನ್ನು ಪುಟ್ಟಣ್ಣ 'ಬೆಳ್ಳಿಮೋಡ' ದಿಂದ ಪ್ರಾರಂಭಿಸಿದರು. ಒಟ್ಟು ಚಿತ್ರದ ಸಂಭಾಷಣೆಗಳಲ್ಲಿ ತಾಂತ್ರಿಕ ಸಮತೋಲನವನ್ನು ತರುವುದು ಅವರ ಉದ್ದೇಶ. ಈ ಡಬ್ಬಿಂಗ್ ಆದ ನಂತರ ಚಿತ್ರದ ರಿ-ರಿಕಾರ್ಡಿಂಗ್ ಕಾರ್ಯವನ್ನು ಕೈಗೆತ್ತಿಕೊಂಡರು. ಈಗ ಇದು ಎಲ್ಲ ಚಿತ್ರಗಳಿಗೂ ಅನಿವಾರ್ಯವಾಗಿಬಿಟ್ಟಿದೆ. ಕನ್ನಡ ಚಿತ್ರರಂಗದಲ್ಲಿ ಹೊರಾಂಗಣ ಚಿತ್ರಣಕ್ಕೆ ಪ್ರಾಧಾನ್ಯ ಹೆಚ್ಚುವಂತೆ ಮಾಡಿದ ಚಿತ್ರ 'ಬೆಳ್ಳಿಮೋಡ'.

೧೯೭೦ರಲ್ಲಿ ಬಿಡುಗಡೆಯಾದ ಪುಟ್ಟಣ್ಣನವರ ಇನ್ನೊಂದು ಪ್ರಮುಖ ಚಿತ್ರ 'ಗೆಜ್ಜೆಪೂಜೆ'ಯ ಛಾಯಾಗ್ರಹಣ ಮಾಡಿದ ಖ್ಯಾತ ಛಾಯಾಗ್ರಾಹಕ ಶ್ರೀಕಾಂತ್ ''ಪುಟ್ಟಣ್ಣನವರ ಪ್ರತಿಭೆಯನ್ನಂತೂ ವರ್ಣಿಸಲು ಸಾಧ್ಯವೇ ಇಲ್ಲ. ಅವರು ಒಂದು ವಿಷಯವನ್ನು ಹೇಗೆ ಚಿತ್ರಿಸುತ್ತಾರೆ, ಹೇಗೆ ಪ್ರಾರಂಭಿಸುತ್ತಾರೆ, ಹೇಗೆ ಮುಗಿಸುತ್ತಾರೆ ಎಂದು ಊಹಿಸಲು ಸಾಧ್ಯವೇ ಇಲ್ಲ. ಅವರ ಚಿತ್ರೀಕರಣದ ವಿಧಾನ ಯಾವ ಸಂಪ್ರದಾಯಕ್ಕೂ ಸಿಗುವುದಿಲ್ಲ. ಅವರು ಚಿತ್ರಿಸುವ ಷಾಟ್‌ಗಳು ತಾವೇ ತಾವಾಗಿ ಯಾಂತ್ರಿಕವಾಗಿ ಮನೋಹರವಾಗಿ ಕೊನೆಯವರೆಗೂ ಬದಲಾವಣೆಗೆ ಒಳಗಾಗುತ್ತಾ ರೂಪುಗೊಳ್ಳುತ್ತವೆ'' ಎನ್ನುತ್ತಾರೆ. 'ಬೆಳ್ಳಿಮೋಡ'ದಲ್ಲಿಯೇ ಪುಟ್ಟಣ್ಣ ತಮ್ಮ ಈ ಸೃಜನಶೀಲತೆಯನ್ನು ಪ್ರೇಕ್ಷಕರಿಗೆ ಪರಿಚಯ ಮಾಡಿಸಿಕೊಟ್ಟಿದ್ದರು.

ಅದೇ ವರ್ಷ ತೆರೆಗೆ ಬಂದ ಎಂ.ಆರ್.ವಿಠಲ್ ನಿರ್ದೇಶನದ 'ನಕ್ಕರೆ ಅದೇ ಸ್ವರ್ಗ' ಈ ನಿರ್ದೇಶಕರ ಇನ್ನೊಂದು ಮುಖವನ್ನು ಪರಿಣಾಮಕಾರಿಯಾಗಿ ಪರಿಚಯಗೊಳಿಸಿದ ಚಿತ್ರ. ಅದುವರೆಗೆ ಯಾರಿಗೂ ಹಾಸ್ಯನಟ ನರಸಿಂಹರಾಜು ಚಿತ್ರವೊಂದರ ನಾಯಕ ನಟನಾಗಬಹುದೆನ್ನುವ ಕಲ್ಪನೆಯೇ ಇರಲಿಲ್ಲ. ಅವರಿಗೆ ಅಂತಹ ಪಾತ್ರವೊಂದನ್ನು ನೀಡಿ ಗಂಭೀರ ಪಾತ್ರಗಳಲ್ಲಿಯೂ ಹೃದಯ ಮುಟ್ಟುವಂತೆ ಅಭಿನಯಿಸಬಲ್ಲ ಅವರ ಸುಪ್ತ ಪ್ರತಿಭೆಯನ್ನು ಹೊಡೆದೆಬ್ಬಿಸಿದವರು ವಿಠಲ್. ಅವರ ಈ ಧೈರ್ಯಕ್ಕೆ ಸಹಕಾರ ನೀಡಿದವರು ಶ್ರೀಕಾಂತ್ ಮತ್ತು ಶ್ರೀಕಾಂತ್ ಸಂಸ್ಥೆಯವರು.

ವರ್ಗ ಸಂಘರ್ಷ, ಐಷಾರಾಮಿ ಜೀವನದ ಏರು ಪೇರುಗಳು ಮತ್ತು ದರ್ಪದ ನಡುವೆಯೂ ಶ್ರೀಮಂತ ವರ್ಗದ ಉದಾರವಾದಿ ಧೋರಣೆಯನ್ನು ಎತ್ತಿ ಹಿಡಿಯುವಂಥ ಚಿತ್ರಗಳೇ ಸಾಲು ಸಾಲಾಗಿ ಬರುತ್ತಿದ್ದ ದಿನಗಳವು. ಈ ಚಿತ್ರವೂ ಅಂಥದೇ ಎಳೆಯನ್ನು ಹೊಂದಿತ್ತು. ಆದರೆ ನಿರೂಪಣೆ ಮತ್ತು ಅಂಥ ಪಾತ್ರಗಳಿಗೆ ಕಲಾವಿದರು ಹೇಗಿರಬೇಕೆಂದು ಇದ್ದ ಗೊತ್ತಾದ ಮಾದರಿಯನ್ನು ಭೇದಿಸಿ ನರಸಿಂಹರಾಜು ಅಂಥವರನ್ನು ನಾಯಕನಾಗಿಸಿದ್ದು ಮೊದಲಾದ ಕಾರಣಗಳಿಗಾಗಿ ಇದೊಂದು ವಿಭಿನ್ನ ಚಿತ್ರವಾಯಿತು. ಸಹಜವಾಗಿಯೇ ನರಸಿಂಹರಾಜು ಅವರಲ್ಲಿದ್ದ ಟೈಮಿಂಗ್ ಸೆನ್ಸ್ ಅನ್ನು ತುಂಬಾ ಚೆನ್ನಾಗಿ ಬಳಸಿಕೊಳ್ಳಲಾಗಿತ್ತು. ಅವರ ಮತ್ತು ನಾಗೇಂದ್ರರಾಯರ ನಡುವೆ ಅಭಿನಯದಲ್ಲಿ ನಡೆದ ಪೈಪೋಟಿ ಪ್ರೇಕ್ಷಕರಿಗೂ ಅನೇಕ ಮನನೀಯ ಕ್ಷಣಗಳನ್ನು ಉಣಬಡಿಸಿತು. ಎಂ.ರಂಗರಾಯರ ಹಿತವಾದ ಸಂಗೀತ ಚಿತ್ರದ ಮೂಡ್‌ಗೆ ಹೊಂದಿಕೊಂಡಂತಿದ್ದು ಬೌದ್ಧಿಕ ಮಟ್ಟದಲ್ಲಿ ಖುಷಿ ಕೊಟ್ಟ ಚಿತ್ರ 'ನಕ್ಕರೆ ಅದೇ ಸ್ವರ್ಗ'. ಚಿತ್ರಕ್ಕೆ 'ನಕ್ಕರೆ ಅದೇ ಸ್ವರ್ಗ' ಎಂಬ ಹೆಸರು ಕೊಟ್ಟಿದ್ದರ ಔಚಿತ್ಯವನ್ನು ಸ್ಪಷ್ಟಪಡಿಸಲಾಗಲಿಲ್ಲ.

'ನಕ್ಕರೆ ಅದೇ ಸ್ವರ್ಗ' ಕನ್ನಡ ಚಿತ್ರರಂಗಕ್ಕೆ ಇಬ್ಬರು ವಿಶಿಷ್ಟ ಪ್ರತಿಭೆಗಳನ್ನೂ ಪರಿಚಯ ಮಾಡಿಸಿಕೊಟ್ಟಿತು. ಇದು ಸಂಗೀತ ನಿರ್ದೇಶಕ ಎಂ.ರಂಗರಾಯರ ಮೊದಲ ಚಿತ್ರ. ಆಂಧ್ರದವರಾದ ರಂಗರಾಯರು ಪರಿಣತ ವೈಣಿಕರಾಗಿದ್ದರು. ಅನೇಕ ಚಿತ್ರಗಳ ಹಾಡುಗಳಿಗೆ ಸುಶ್ರಾವ್ಯವಾಗಿ ವೀಣೆಯನ್ನು ನುಡಿಸಿ ಹೆಸರು ಗಳಿಸಿದ್ದರು. ಅವರು ನಂತರ ಕನ್ನಡ ಚಿತ್ರರಂಗದ ಪ್ರಮುಖ ಸಂಗೀತ ನಿರ್ದೇಶಕರಲ್ಲೊಬ್ಬರಾಗಿ ಬೆಳೆದು ಶಾಸ್ತ್ರೀಯ ಸಂಗೀತವನ್ನು ಆಧರಿಸಿ ಸಂಯೋಜಿಸಿದ ಅಸಂಖ್ಯಾತ ಹಾಡುಗಳಿಂದ ಕನ್ನಡಿಗರ ಜನಮನವನ್ನು ಗೆದ್ದರು. ಇಂದು ಇಡೀ ಭಾರತೀಯ ಚಿತ್ರರಂಗದಲ್ಲಿಯೇ ಮುಂಚೂಣಿಯಲ್ಲಿರುವ ಪ್ರತಿಭಾವಂತ ಹಿನ್ನೆಲೆ ಗಾಯಕ ಎಸ್.ಪಿ.ಬಾಲಸುಬ್ರಹ್ಮಣ್ಯಂ ಕನ್ನಡಕ್ಕೆ ಪರಿಚಯವಾದದ್ದು 'ನಕ್ಕರೆ ಅದೇ ಸ್ವರ್ಗ'ದಿಂದಲೇ. ಈ ಚಿತ್ರಕ್ಕಾಗಿ ಹಾಡಿದ 'ನಗಬೇಕು ನಗಿಸಬೇಕು ಇದೇ ನನ್ನ ಧರ್ಮ...' ಅವರ ಮೊದಲ ಹಾಡು.

ಪತ್ರಕರ್ತರಾಗಿ, ಕನ್ನಡಪರ ಹೋರಾಟಗಾರರಾಗಿ ಹೆಸರು ಗಳಿಸಿ ನಂತರ ಚಿತ್ರರಂಗಕ್ಕೂ ಕಾಲಿಟ್ಟ ಬಿ.ಎ.ಅರಸುಕುಮಾರ್‌ರ ಚೊಚ್ಚಲ ಚಿತ್ರ 'ಬಂಗಾರದ ಹೂವು' ಅವರ ನಿರ್ದೇಶನದಲ್ಲಿಯೇ ತಯಾರಾಯಿತು. ಅವರ ಮೊದಲ ಚಿತ್ರದಲ್ಲಿಯೇ ರಾಜಕುಮಾರ್, ಉದಯಕುಮಾರ್, ಕಲ್ಪನಾ, ಬಾಲಕೃಷ್ಣ, ಪಂಢರಿಬಾಯಿ, ಶೈಲಶ್ರೀ, ನರಸಿಂಹರಾಜುರಂತಹ ದೊಡ್ಡ ಕಲಾವಿದರನ್ನೇ ಕಲೆ ಹಾಕಿದ್ದರು.

ಕುಷ್ಠ ರೋಗಿಗಳಿಗೆ ಸಮಾಜ ಅನೌಪಚಾರಿಕ ಬಹಿಷ್ಕಾರ ಹಾಕುವ ಅನ್ಯಾಯವನ್ನು ಖಂಡಿಸಿದ ಚಿತ್ರ. ಆದರೆ ಈ ಹೊಸ ನಿರ್ದೇಶಕರ ಆದರ್ಶಗಳಿಗೂ ಅವರ ನಿರೂಪಣಾ ತಂತ್ರಕ್ಕೂ ಹೊಂದಾಣಿಕೆಯಾಗದ್ದರಿಂದ ಅವರಿಗೆ ಚಿತ್ರ ಹೆಚ್ಚು ಫಲ ಕೊಡಲಿಲ್ಲ. ಕುಷ್ಠ ರೋಗದ ನಿವಾರಣೆ ಸಾಧ್ಯವೆಂಬ ಸಂದೇಶವನ್ನು ಈ ಚಿತ್ರ ಸಾರಿದರೂ ನಿರ್ದೇಶನದ ಇತಿಮಿತಿಗಳಿಂದಾಗಿ ಈ ಸಂದೇಶ ಜನರಿಗೆ ಪರಿಣಾಮಕಾರಿಯಾಗಿ ಮುಟ್ಟಲು ಸಾಧ್ಯವಾಗಲಿಲ್ಲ. ಆದರೂ ಕಥಾವಸ್ತುವಿನ ಬಲದಿಂದಲೇ ಚಿತ್ರಕ್ಕೆ ಕೇಂದ್ರ ಸರ್ಕಾರದ ರಜತ ಪದಕ ಪ್ರಾಪ್ತವಾಯಿತು. ಆ ವರ್ಷದ ಅತ್ಯುತ್ತಮ ನಟರೆಂದು ರಾಜಕುಮಾರ್,



(ಚಿತ್ರ ೩೭) 'ಬಂಗಾರದ ಹೂವು' ಚಿತ್ರದಲ್ಲಿ ಕಲ್ಪನಾ



(ಚಿತ್ರ ೩೮) 'ಚಕ್ರತೀರ್ಥ' ಚಿತ್ರದಲ್ಲಿ ಜಯಶ್ರೀ, ರಾಜಕುಮಾರ್ ಮತ್ತು ಉದಯಕುಮಾರ್

೧೯೬೭-೬೮ರ ತೃತೀಯ ಅತ್ಯುತ್ತಮ ಚಿತ್ರವೆಂದೂ ರಾಜ್ಯ ಸರ್ಕಾರದ ಪ್ರಶಸ್ತಿ ಸಮಿತಿ ನಿರ್ಧರಿಸಿತು.

'ಬೆಟ್ಟದ ಹುಲಿ'ಯಿಂದಾಗಿ ವಿಮರ್ಶಕರಿಂದ ತೀವ್ರ ನಿಂದನೆಯನ್ನು ಗಳಿಸಿಕೊಂಡ ನಿರ್ಮಾಪಕ ಪಾಲ್‌ರವರು ತ.ರಾ.ಸು.ಅವರ ಜನಾನುರಾಗಿ ಕಾದಂಬರಿ 'ಚಕ್ರತೀರ್ಥ'ದ ಚಿತ್ರಣದ ಹಕ್ಕನ್ನು ಪಡೆದು ಅವರನ್ನೇ ಚಿತ್ರದ ಸಂಭಾಷಣಕಾರರಾಗಿಯೂ ಗೊತ್ತು ಮಾಡಿ ಯಶಸ್ವಿ ಚಿತ್ರವೊಂದನ್ನು ನಿರ್ಮಿಸಿದರು. ಸಿರಿತನ-ಬಡತನಗಳ ನಡುವೆಯ ಪರಂಪರಾಗತ ಘರ್ಷಣೆಯನ್ನೇ ಮೂಲ ಕಥಾವಸ್ತುವನ್ನಾಗಿಟ್ಟುಕೊಂಡ ಈ ಚಿತ್ರ ಹಣದ ವ್ಯಾಮೋಹದಿಂದ ಕುಟುಂಬದಲ್ಲಾಗುವ ಒಡಕುಗಳನ್ನು ಒತ್ತಿ ಹೇಳುವುದರ ಜೊತೆಗೆ ಪ್ರತೀಕಾರ ಮನೋಭಾವದಿಂದ ಎಳೆಯರ ಬದುಕಿನ ಮೇಲಾಗುವ ಪರಿಣಾಮಗಳನ್ನೂ ರೋಚಕವಾಗಿ ನಿರೂಪಿಸಿತು.

ತೆಲುಗರಾದ ಪೇಕೇಟಿ ಶಿವರಾಂ ನಿರ್ದೇಶಿಸಿದ ಮೊದಲ ಚಿತ್ರ ಇದು. ಚಿತ್ರ ಅವರಿಗೆ ಕನ್ನಡ ಚಿತ್ರರಂಗದಲ್ಲಿ ಸ್ವಲ್ಪ ಕಾಲ ಭದ್ರವಾದ ಸ್ಥಾನವನ್ನೇ ಗಳಿಸಿಕೊಟ್ಟಿತು. ಅಭಿನಯದಲ್ಲಿ ಮತ್ತೊಮ್ಮೆ ಉದಯಕುಮಾರ್ ಮೇಲುಗೈ ಸಾಧಿಸಿದರು. ಪ್ರಶಸ್ತಿಗಳನ್ನೇನೂ ಗಳಿಸದ ಈ ಚಿತ್ರ ಜನಾನುರಾಗವನ್ನು ಮಾತ್ರ ಗೆದ್ದಿತು.

೧೯೬೭ರಲ್ಲಿ ತನ್ನ ತಾಂತ್ರಿಕ ಕೌಶಲ್ಯದಿಂದ ವಿಮರ್ಶಕರ ವಿಶೇಷ ಗಮನವನ್ನು ಸೆಳೆದ ಚಿತ್ರ 'ಜಾಣರ ಜಾಣ'. ಕನ್ನಡೇತರ ಸಂಸ್ಥೆಯೊಂದು ಕನ್ನಡೇತರರೊಬ್ಬರ ನಿರ್ದೇಶನದಲ್ಲಿ ಬೆಂಗಳೂರಿನ ಓಂಕಾರ್ ಸ್ಟುಡಿಯೋಸ್‌ನಲ್ಲಿ ಚಿತ್ರಿಸಿದ ಈ ಚಿತ್ರ ಕುತೂಹಲಜನಕ ಕಥೆಯೊಂದನ್ನು ಹೊಂದಿದ್ದು ಮಲ್ಲಯುದ್ಧಗಳ ಬದಲು ರಿವಾಲ್ವರ್ ಕದನ ಮತ್ತು ಚೇಸ್‌ಗಳ ಬಲದಿಂದಲೇ ವಿನೂತನ ಸ್ವರೂಪವನ್ನು ಪಡೆಯಿತು. ಹಾಡುಗಳ ಚಮತ್ಕಾರಯುತ ಚಿತ್ರಣ ಒಂದು ಹೆಚ್ಚಳವೆನಿಸಿದ ಈ ಚಿತ್ರದಲ್ಲಿ ಸಂಪೂರ್ಣವಾಗಿ ಒಂದು ಕಾರಿನಲ್ಲಿಯೇ ನಿರ್ಭಿಡೆಯಿಂದ ಚಿತ್ರಿತವಾದ ಪ್ರಣಯ ಗೀತೆಯೊಂದು ಇಡೀ ದೇಶದಲ್ಲಿಯೇ ಪ್ರಥಮ ಪ್ರಯೋಗವೆನಿಸಿತು. ಇಡೀ ಚಿತ್ರದಲ್ಲಿ ಆಧುನಿಕತೆಯನ್ನು ಮೂಡಿಸುವ ತುಡಿತವಿತ್ತು. ವಾಣಿಶ್ರೀ ಮತ್ತು ರಾಜಾಶಂಕರ್ ಪ್ರಧಾನ ಪಾತ್ರಗಳಲ್ಲಿದ್ದರು. ಆದರೆ ಜನಮನ್ನಣೆ ಗಳಿಸದೆ ಈ ಉತ್ತಮ ಪ್ರಯತ್ನ ಸೊರಗಿತು.

ಸಂಪೂರ್ಣವಾಗಿ ಉತ್ತರ ಕರ್ನಾಟಕದ ಪ್ರತಿಭೆಗಳೇ ನಿರ್ಮಿಸಿದ 'ಸಂಗೊಳ್ಳಿ ರಾಯಣ್ಣ' ಅದೇ ಕಾರಣದಿಂದಾಗಿ ಒಂದು ಉಲ್ಲೇಖನೀಯ ಚಿತ್ರ. ಬ್ರಿಟಿಷರ ವಿರುದ್ಧ ಹೋರಾಡಿದ ಜನಪದ ನಾಯಕನೊಬ್ಬನ ಜೀವನಗಾಥೆ ಇದು. ನವೀನಚಂದ್ರ ಎಂಬ ನಾಮಾಂಕಿತದಲ್ಲಿ ರಂಗಭೂಮಿಯ ನಟ ಎಂ.ಎಸ್.ಪಾಟೀಲ್ ರಾಯಣ್ಣನ ಪಾತ್ರವಹಿಸಿದರು. ಚಿತ್ರಣ ನಡೆದಿದ್ದು ಕೊಲ್ಹಾಪುರದ ಜಯಪ್ರಭಾ ಸ್ಟುಡಿಯೋದಲ್ಲಿ. ಅನೇಕ ವರ್ಷಗಳ ಕಾಲ ತಯಾರಿಕೆಯಲ್ಲಿಯೇ ಇದ್ದು ಅನೇಕ ಕಷ್ಟಕಾರ್ಪಣ್ಯಗಳ ನಡುವೆಯೇ ಬಿಡುಗಡೆಯಾದ ಈ ಚಿತ್ರದಲ್ಲಿ ಲತಾ ಮಂಗೇಶ್ಕರ್ ಮತ್ತು ಅವರ ಸೋದರಿಯರಾದ ಆಶಾ ಭೋಸ್ಲೆ, ಉಷಾ ಮಂಗೇಶ್ಕರ್, ಮನ್ನಾ ಡೇ, ಭೀಮಸೇನ ಜೋಷಿ ಅವರಂತಹ ಖ್ಯಾತನಾಮರು ಹಾಡಿದ್ದು ಇನ್ನೊಂದು ವಿಶೇಷ. ಆದರೆ ಚಿತ್ರ ಯಶಸ್ವಿಯಾಗದೆ ಉತ್ತರ ಕರ್ನಾಟಕದಲ್ಲಿ ಕನ್ನಡ ಚಿತ್ರ ನಿರ್ಮಾಣದ ಬಗ್ಗೆ ಕಾತರ ಬೇಗನೇ ಕಮರಿ ಹೋಗುವಂತಾಯಿತು. ಚಿತ್ರದಲ್ಲಿ ಸಂಪೂರ್ಣವಾಗಿ ಉತ್ತರ ಕರ್ನಾಟಕದ ಭಾಷೆಯನ್ನೇ ಅಳವಡಿಸಿಕೊಂಡಿದ್ದು ಕೂಡ ಪ್ರಾಯಶಃ ಅವರ ಸೋಲಿಗೆ ಕಾರಣವಾಗಿರಬಹುದು. ಏಕೆಂದರೆ ಆವರೆಗೆ ಚಿತ್ರಮಾಧ್ಯಮ ಪ್ರಾದೇಶಿಕ ಭಾಷಾಶೈಲಿಯನ್ನು ಬಳಸುವ ಪ್ರಯೋಗ ಮಾಡಿರಲಿಲ್ಲ. ಪ್ರೇಕ್ಷಕನಿಗ ಸಿದ್ಧತೆಯೇ ಇರಲಿಲ್ಲ.

ಅನಂತ ಹಿರೇಗೌಡರ್ ನಿರ್ಮಿಸಿ, ಬಾಬೂರಾವ್ ಅಥಣಿಯವರೊಂದಿಗೆ ಸಹನಿರ್ದೇಶಕರೂ ಆಗಿದ್ದ ಈ ಚಿತ್ರದಲ್ಲಿ ಕಾಮಿನಿ ಕದಂ, ಅಭಿ ಭಟ್ಟಾಚಾರ್ಯರಂತಹ ಹಿಂದಿ/ಮರಾಠಿ ಕಲಾವಿದರು ಅಭಿನಯಿಸಿದ್ದರು. ಅವರಲ್ಲಿ ಹೆಚ್ಚು ಹಣವಿಲ್ಲದಿದ್ದರಿಂದ ಅನೇಕ ಸ್ನೇಹಿತರಿಂದ ನೂರು, ಸಾವಿರಗಳನ್ನು ಎರವಲಾಗಿ ಪಡೆದು ಚಿತ್ರವನ್ನು ನಿರ್ಮಿಸಬೇಕಾದ ಅನಿವಾರ್ಯ ಒದಗಿತು. ಅದರಿಂದಾಗಿ ೧೯೬೦ರಲ್ಲಿ ತಯಾರಿಕೆ ಪ್ರಾರಂಭಿಸಿದ ಚಿತ್ರ ೧೯೬೭ರಲ್ಲಿ ಬಿಡುಗಡೆಯಾಗಬೇಕಾಯಿತು. ಉತ್ತರ ಕರ್ನಾಟಕದಲ್ಲಿ ಚಿತ್ರ ನಿರ್ಮಾಣಕ್ಕೆ ಹಣ ತೊಡಗಿಸುವ ಫೈನಾನ್ಸರುಗಳಿರಲಿಲ್ಲ. ಅದೂ ಅಲ್ಲದೆ ಕೆಲವು ವರ್ಷಗಳ ಹಿಂದೆ ಶಾಂತೇಶ ಪಾಟೀಲರ ನೇತೃತ್ವದಲ್ಲಿ 'ಚಂದ್ರಹಾಸ' ಚಿತ್ರ ಕೂಡ ಇದೇ ರೀತಿ ಹತ್ತಾರು ಜನರಿಂದ ಕೈ ಸಾಲ ಪಡೆದು ತಯಾರಾಗಿದ್ದು, ಯಾರಿಗೂ ತಮ್ಮ ಹಣ ಮರುಸಂದಾಯವಾಗಿಲ್ಲದ್ದರಿಂದ ಚಿತ್ರ ನಿರ್ಮಾಣಕ್ಕೆ ಹಣ ನೀಡಲು ಜನರು ಹಿಂಜರಿಯುವ ಪರಿಸ್ಥಿತಿಯೂ ಒದಗಿತ್ತು. 'ಸಂಗೊಳ್ಳಿ ರಾಯಣ್ಣ' ಚಿತ್ರಕ್ಕೆ ಒಟ್ಟು ಸಂದ ವೆಚ್ಚ ೭೫,೦೦೦ ರೂಪಾಯಿಗಳು ಮಾತ್ರ. ಎಲ್ಲ ಕಲಾವಿದರೂ, ತಂತ್ರಜ್ಞರೂ ಸಂಭಾವನೆಯನ್ನೇ ಪಡೆಯದೆ ಕೆಲಸ ಮಾಡಿದ್ದರಿಂದ ಈ ಪವಾಡ ಸಾಧ್ಯವಾಯಿತು.

ಆ ಸಮಯದಲ್ಲಿ ಕನ್ನಡ ಚಿತ್ರೋದ್ಯಮದಲ್ಲಿ ಪ್ರಥಮ ಶ್ರೇಣಿಯ ಸಂಗೀತ ನಿರ್ದೇಶಕರಾಗಿದ್ದ ಜಿ.ಕೆ.ವೆಂಕಟೇಶ್ ಒಬ್ಬ ಸಾಹಸಿ. ಅವರು ಮೊದಲು ನಿರ್ಮಿಸಿದ ಚಿತ್ರ 'ತುಂಬಿದ ಕೊಡ', ಅವರಿಗೆ ನಷ್ಟ ತಂದಿದ್ದರೂ ಅಳುಕದೆ ತಮ್ಮ ಮುಂದಿನ ಚಿತ್ರಕ್ಕೆ ಇಮ್ಮಡಿ ಪುಲಿಕೇಶಿಯ ಜೀವನ ಚರಿತ್ರೆಯನ್ನು ಆಯ್ದುಕೊಂಡರು. ಪ್ರಸಿದ್ಧ ಸಾಹಿತಿ



(ಚಿತ್ರ ೩೯) 'ಸಂಗೊಳ್ಳಿರಾಯಣ್ಣ' ಚಿತ್ರದಲ್ಲಿ ಸಿದ್ದಣ್ಣ ಮತ್ತು ರಾಜಶೇಖರ್

(ಚಿತ್ರ ೪೦) 'ಇಮ್ಮಡಿ ಪುಲಿಕೇಶಿ' ಚಿತ್ರದಲ್ಲಿ ಉದಯಕುಮಾರ್, ಶಕ್ತಿಪ್ರಸಾದ್, ಬಿ.ಜಯಮ್ಮ ಮತ್ತು ರಾಜಕುಮಾರ್

ವೀರಕೇಸರಿ ಸೀತಾರಾಮಶಾಸ್ತ್ರಿಗಳ ಜನಪ್ರಿಯ ಕೃತಿ 'ಮಲ್ಲಿಗೆ' ಈ ಸಾಹಸಕ್ಕೆ ಆಧಾರ. ತಮಿಳು ಚಿತ್ರರಂಗದ ಖ್ಯಾತ ಛಾಯಾನಿರ್ದೇಶಕ ರೆಹಮಾನ್ ಈ ಚಿತ್ರದ ಛಾಯಾನಿರ್ದೇಶನಕ್ಕೆ ಆಯ್ಕೆಯಾಗಿದ್ದೇ ಅದರ ಹಿರಿಮೆಯನ್ನು ಹೆಚ್ಚಿಸಿತು. ಹೆಚ್ಚು ಸಂಪನ್ಮೂಲಗಳಿಲ್ಲದ ನಿರ್ಮಾಪಕನೊಬ್ಬ ಇಷ್ಟು ಕ್ಲಿಷ್ಟವಾದ, ಶ್ರೀಮಂತವಾದ ಕಥಾವಸ್ತುವನ್ನು ಆಯ್ದುಕೊಳ್ಳುವುದೇ ಒಂದು ಮಹಾ ಸಾಹಸವೆನಿಸುವಂತಿತ್ತು. ಆದರೂ ವೆಂಕಟೇಶ್ ಎದೆಗುಂದದೆ ಇಂತಹ ವೈಭವದ ಕಥೆಯೊಂದರ ನಿರೂಪಣೆಗೆ ಬೇಕಾದ ಪರಿಕರಗಳನ್ನೆಲ್ಲ ಧೈರ್ಯದಿಂದ ಹೊಂದಿಸಿಕೊಂಡರು. ಸಂಕಲನಕಾರ ಎಸ್.ಸಿ.ರಾಜನ್ ನಿರ್ದೇಶಿಸಿದ ಚಿತ್ರ ಇದು. ಉತ್ಕಟ ಕನ್ನಡಾಭಿಮಾನದ ವೆಂಕಟೇಶ್ ಈ ಚಿತ್ರದಲ್ಲಿ ಕನ್ನಡಿಗರ ಕೆಚ್ಚನ್ನು ಉದ್ರೇಕಿಸುವ ಕೆಲವು ಪ್ರಭಾವಶಾಲಿ ಸಂಭಾಷಣೆಗಳನ್ನೂ ಬಳಸಿದರು, ಕಥೆಯ ಶ್ರೀಮಂತಿಕೆಗೆ ತಕ್ಕಂತೆ ದೃಶ್ಯಾವಳಿಗಳನ್ನು, ವೇಷಭೂಷಣಗಳನ್ನು ಧಾರಾಳವಾಗಿ ಸಂಯೋಜಿಸಲಾಯಿತು. ಭಾರಿ ಯುದ್ಧ ದೃಶ್ಯವೊಂದರ ಚಿತ್ರಣಕ್ಕೆ ಅದ್ದೂರಿಯಿಂದ ಷೂಟಿಂಗ್ ನಡೆಸಿದ್ದುದೇ ಅಲ್ಲದೆ ಒಂದು ವಿನೂತನ ರೀತಿಯ 'ಟೇಬಲ್ ಟಾಪ್' ಸೆಟ್ ಕೂಡ ನಿರ್ಮಾಣವಾಗಿತ್ತು. ಕನ್ನಡ ಚಿತ್ರವೊಂದರಲ್ಲಿ ಅಂತಹ ಪ್ರಯೋಗ ನಡೆದದ್ದು ಅದೇ ಮೊದಲು.

ಚಿತ್ರಕ್ಕೆ ಸಮರ ದೃಶ್ಯಗಳ ಚಿತ್ರಣ ನಡೆದಿದ್ದು ಐಹೊಳೆ, ಬಾದಾಮಿ, ನಂಜನಗೂಡುಗಳಂತಹ ಐತಿಹಾಸಿಕ ಸ್ಥಳಗಳಲ್ಲಿ. ಚಿತ್ರಣಕ್ಕಾಗಿ ೧೫ ಆನೆಗಳು, ೩೦ ಕುದುರೆಗಳು ಮತ್ತು ೫೦೦ರಷ್ಟು ಜ್ಯೂನಿಯರ್ ಕಲಾವಿದರನ್ನು ಬಳಸಿದ್ದು ಒಂದು ವಿಶೇಷ. ಮದರಾಸಿನ ವೀನಸ್ ಸ್ಟುಡಿಯೋದಲ್ಲಿ ಈ ಚಿತ್ರಕ್ಕಾಗಿಯೇ ನಿರ್ಮಿತವಾಗಿದ್ದ ವೈಭವೋಪೇತ ಆಸ್ಥಾನದ ಸೆಟ್ ಒಂದರಲ್ಲಿ ಜಿ.ವಿ.ಅಯ್ಯರ್ ರಚಿಸಿದ ಜನಪ್ರಿಯ ಗೀತೆ 'ಕನ್ನಡದ ಕುಲತಿಲಕ ಪರಮೇಶ್ವರ...'ದ ಅದ್ದೂರಿ ನೃತ್ಯ ಸನ್ನಿವೇಶ ನಾಯಕಿ ಕಲ್ಪನಾ ಅವರ ಮೇಲೆ ಚಿತ್ರಿತವಾಯಿತು. ಸಂಪೂರ್ಣವಾಗಿ ಶಾಸ್ತ್ರೀಯವೆನಿಸುವಂತಹ ಈ ಹಾಡು ನಾಲ್ಕೂವರ ನಿಮಿಷಗಳ ಅವಧಿಯದ್ದು. ಚಿತ್ರಕ್ಕೆ ಈ ಸನ್ನಿವೇಶ ಕಲಶಪ್ರಾಯವೆನಿಸಿತು. ಕೇವಲ ಎರಡು ದಿನಗಳಲ್ಲಿ ಚಿತ್ರಿತವಾದ ರಾಜಗುರುಗಳ ಹತ್ಯೆಯ ಸನ್ನಿವೇಶಕ್ಕಾಗಿ ಮತ್ತೊಂದು ಭವ್ಯ ಸೆಟ್ ಕೂಡ ನಿರ್ಮಿಸಲಾಗಿತ್ತು. ವೀನಸ್ ಸ್ಟುಡಿಯೋ ಚಿತ್ರಣಾಗಾರದಲ್ಲಿಯೇ ಬೃಹದಾಕಾರದ ಶಿವಾಲಯವೊಂದರ ನಿರ್ಮಾಣವಾಗಿ ದೊಡ್ಡ ಸುದ್ದಿ ಮಾಡಿತ್ತು. ಮತ್ತೂ ಒಂದು ಅದ್ದೂರಿ ಸೆಟ್‌ನಲ್ಲಿ ಚೀನಾ ರಾಯಭಾರಿಗಳಾದ ಹ್ಯೂಯನ್‌ತ್ಸಾಂಗ್ ಮತ್ತು ಫಾಹಿಯಾನರನ್ನು ವೈಭವದಿಂದ ರಾಜಾಸ್ಥಾನಕ್ಕೆ ಸ್ವಾಗತಿಸುವ ದೃಶ್ಯದ ಚಿತ್ರಣ ನಡೆಯಿತು. ಅವರಿಗಾಗಿಯೇ ಮಾಡಿದ ವಿಶೇಷ ಉಡುಗೆ-ತೊಡುಗೆಗಳ ವಿನ್ಯಾಸ ಅತ್ಯಂತ ವಾಸ್ತವವೆನಿಸುವಂತಿತ್ತು. ಪುಲಿಕೇಶಿ ಮೊದಲಾದ ರಾಜ ಮನೆತನದವರ ವೇಷಭೂಷಣಗಳಿಗೆ ಶಿಲಾ ಶಾಸನಗಳಲ್ಲಿ ಕೆತ್ತಿರುವ ಚಿತ್ರಗಳು ಆಧಾರವಾಗಿದ್ದವು. ಸಾಧ್ಯವಾದಷ್ಟು ಅಂದಿನ ಕಾಲ (period)ವನ್ನು ಪುನರ್‌ಸೃಷ್ಟಿ ಮಾಡಲು ಪ್ರಯತ್ನಿಸಲಾಗಿತ್ತು. ಚಿತ್ರದಲ್ಲಿ ಸಹೋದರನ ಪಾತ್ರದಲ್ಲಿ ಉದಯಕುಮಾರ್ ಅವರಿಗೆ ಒಂದು ಬಗೆಯ ಗೂನು ಬೆನ್ನನ್ನು ರೂಪಿಸಿದ್ದ ಮೇಕಪ್‌ನ ವಿಶೇಷವಿತ್ತು. ವಿದೇಶೀ ರಾಯಭಾರಿಗಳು (ಫಾಹಿಯಾನ್, ಹ್ಯೂಯನ್‌ತ್ಸಾಂಗ್) ಆಸ್ಥಾನ ಪ್ರವೇಶಿಸುವಾಗ ಹಿನ್ನೆಲೆ ಸಂಗೀತಕ್ಕೆ ಆಯಾ ದೇಶದ ಸಂಗೀತವನ್ನೇ ಬಳಸಿದ್ದರು.

ರಾಜಕುಮಾರ್ ಅವರಿಗಿದ್ದ ನಾಯಕನ ಇಮೇಜಿಗೆ ವಿಭಿನ್ನವಾಗಿ ಅವರು ತ್ಯಾಗಮಯಿಯಾಗಿ ಚಿತ್ರಿಸಲ್ಪಟ್ಟರು. ಯುದ್ಧ ಭೂಮಿಯಲ್ಲಿ ಅನಾರೋಗ್ಯ, ಸಾವು ಇವೆಲ್ಲ ಕಥೆಗೆ ನಿಷ್ಠವಾದ ಸಂಗತಿಗಳಾದರೂ ತಮ್ಮ ನಾಯಕನ ಶೌರ್ಯವನ್ನು ಕಾಣದೆ ಪ್ರೇಕ್ಷಕ ನಿರಾಶನಾದ. ಚಿತ್ರದ ಅಂತ್ಯದಲ್ಲಿ ರಾಜಕುಮಾರ್ ಅಭಿನಯದ ಪುಲಿಕೇಶಿಯ ಪಾತ್ರದ ಸಾವಿನ ದೃಶ್ಯ ಅನನ್ಯವಾಗಿ ಮೂಡಿ ಬಂದಿತ್ತು.

'ಇಮ್ಮಡಿ ಪುಲಿಕೇಶಿ'ಗೆ ಚಿತ್ರಕಥೆ, ಸಂಭಾಷಣೆಗಳನ್ನು ಬರೆದ ಜಿ.ವಿ.ಅಯ್ಯರ್ ಚಿತ್ರದ ನಿರ್ಮಾಣದಲ್ಲಿ ಇನ್ನಿತರ ವಿಭಾಗಗಳಲ್ಲಿಯೂ ತೊಡಗಿದ್ದರು. ದೇಶದಲ್ಲಿ ಆಗಲೇ ಇದ್ದ ಒಗ್ಗಟ್ಟಿನ ಅಭಾವ, ಕನ್ನಡ ನಾಡನ್ನು ಒಂದುಗೂಡಿಸಬೇಕಾದ ಅಗತ್ಯ ಇತ್ಯಾದಿ ರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ವಿಶೇಷವಾದ ಕಾಳಜಿಯನ್ನು ತೋರಿದ ಈ ಚಿತ್ರದಲ್ಲಿ 'ಜಯ ಕರ್ನಾಟಕ' ಎಂಬ ಘೋಷಣೆ ಪ್ರಮುಖವಾದದ್ದು. "ಭಾರತ ಮಾತೆಯ ಮಕ್ಕಳು ಶತ್ರುಗಳಲ್ಲ. ಅವರೆಲ್ಲ ಹೃದಯದಿಂದ ಒಂದಾಗಬೇಕು. ಐಕಮತ್ಯವೇ ರಾಷ್ಟ್ರಬಲ. ವಿದೇಶಿಯರಿಗೆ ವಿಶೇಷವಾಗಿ ಕಣ್ಣು ಕುಕ್ಕುವ ಕೀರ್ತಿ ನಮ್ಮದು. ಆದರೆ ನಾವೇ ಬಡಿದಾಡುವ ಸ್ಥಿತಿಯಿದೆ." ಎಂಬೆಲ್ಲ ಮಾತುಗಳು ಈ ಚಿತ್ರದ ಸಮಕಾಲೀನತೆಗೆ ಒತ್ತು ಕೊಟ್ಟವು. ರಾಷ್ಟ್ರಪ್ರೇಮವನ್ನು ಉಕ್ಕಿಸುವ ಸನ್ನಿವೇಶಗಳು, ಸಂಭಾಷಣೆಗಳು 'ಇಮ್ಮಡಿ ಪುಲಿಕೇಶಿ'ಯಲ್ಲಿ ರಾರಾಜಿಸಿ ಚಿತ್ರದ ಸಂಬಂಧದಲ್ಲಿದ್ದ



(ಚಿತ್ರ ೪೧) 'ಲಗ್ನ ಪತ್ರಿಕೆ' ಚಿತ್ರದಲ್ಲಿ ಟಿ.ಉದಯಶಂಕರ್

ವಾತಾವರಣವನ್ನು ಪರಿಣಾಮಕಾರಿಯಾಗಿ ಪ್ರತಿಬಿಂಬಿಸಿದವು.

'ಇಮ್ಮಡಿ ಪುಲಿಕೇಶಿ' ನಟ ಬಾಲಕೃಷ್ಣರವರ ನೂರನೆಯ ಚಿತ್ರ.

ಅನ್ಯ ಕ್ಷೇತ್ರಗಳಲ್ಲಿ ತಾವು ಗಳಿಸಿದ ಹಣವನ್ನು ಕನ್ನಡ ಚಿತ್ರ ತಯಾರಿಕೆಗೆ ತೊಡಗಿಸಿ ಸಾರ್ಥಕ್ಯ ಕಾಣಲೆತ್ನಿಸಿದ ಕೆಲವೇ ಉದ್ಯಮಿಗಳಲ್ಲಿ ಒಬ್ಬರಾದ ಎ.ಎಂ.ಸಮೀವುಲ್ಲಾ ನಿರ್ಮಾಣಕ್ಕೆ ಇಳಿದುದು ಇದೇ ವರ್ಷದಲ್ಲಿ. ಅವರ ಚೊಚ್ಚಲ ಚಿತ್ರ 'ಲಗ್ನ ಪತ್ರಿಕೆ' ಒಂದು ಪೂರ್ಣ ಪ್ರಮಾಣದ ಹಾಸ್ಯ ಚಿತ್ರ. ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ (ರವೀ) ಈ ಚಿತ್ರದಲ್ಲಿ ಹೊಸ ಹಾಸ್ಯ ಜೋಡಿಯೊಂದನ್ನು ಕನ್ನಡ ತೆರೆಗಿತ್ತರು. ಹಾಸ್ಯ ನಟ ಶಿವರಾಂ ಮತ್ತು ಸಾಹಿತಿ ಚಿ.ಉದಯಶಂಕರ್‌ರವರ ಸುಬ್ಬು-ಸೀನು ಹಾಸ್ಯಜೋಡಿ ಹಾಗೂ ಗೀತೆ ಕೆಲವು ಕಾಲ ಅಪಾರ ಜನಪ್ರಿಯತೆ ಗಳಿಸಿತು.

೧೯೬೭ರಲ್ಲಿ ಹಿಂದೂಸ್ತಾನ್ ಫೋಟೋ ಫಿಲಂ ಕಂಪನಿಯು ಕಪ್ಪು-ಬಿಳುಪು ಮತ್ತು ಸೌಂಡ್ ನೆಗೆಟಿವ್ ತಯಾರಿಸಿತು. ಭಾರತ ಆ ಮಟ್ಟಿಗೆ ಸ್ವಾವಲಂಬಿಯಾದ ವರ್ಷವಿದು. ವರ್ಣ ಫಿಲಂ ಮಾತ್ರ ಆಮದು ಮಾಡಿಕೊಂಡು, ಇಲ್ಲಿಯೇ ಪರ್ಫರೇಟ್ ಮಾಡಿಕೊಂಡವು. ಮೊದಲ ೭೦ ಎಂ.ಎಂ. ಹಿರಿದೆರೆಗೆ ಬಂದದ್ದು ಈ ವರ್ಷದ ವಿಶೇಷ. ಮುಂಬಯಿ, ಪುಣೆ ಮೊದಲಾದ ಕೆಲವು ಪ್ರದೇಶಗಳಲ್ಲಿ ಆಕಾಶವಾಣಿಯು 'ವಿವಿಧಭಾರತಿ' ಪ್ರಾರಂಭಿಸಿ ವಾಣಿಜ್ಯೀಕರಣ ಗೊಳಿಸಿತು. ಇದರಿಂದಾಗಿ ಮುಂದಿನ ವರ್ಷಗಳಲ್ಲಿ ಸಿನಿಮಾ ಪ್ರಚಾರದ ಪ್ರಬಲ ಸಾಧನವಾಯಿತು. ವಿವಿಧಭಾರತಿ. ಪ್ರಾಯೋಜಿತ ಸೀರಿಯಲ್‌ಗಳು, ಹಾಡುಗಳ ಸ್ಪರ್ಧೆ, ಸೌಂಡ್‌ಟ್ರ್ಯಾಕ್‌ಗಳು ಪ್ರಸಾರವಾಗಲು ಕಾರಣವಾಯಿತು.

ಆ ವರ್ಷ ಬಹಳ ಯಶಸ್ವಿಯಾಗಿ ಪ್ರದರ್ಶಿತವಾದ ಇನ್ನೊಂದು ಹಾಸ್ಯಪ್ರಧಾನ ಚಿತ್ರ 'ಪ್ರೇಮಕ್ಕೂ ಪರ್ಮಿಟ್ಟೆ'ನಲ್ಲಿ ನಿರ್ದೇಶಕ ಆರ್.ನಾಗೇಂದ್ರರಾಯರ ಕೈಚಳಕವಿದ್ದು, ಪ್ರಮುಖ ಪಾತ್ರವೊಂದರಲ್ಲಿ ಅವರ ವಿಶಿಷ್ಟ ಅಭಿನಯ ಕೂಡ ಎಲ್ಲ ವರ್ಗಗಳ ಪ್ರೇಕ್ಷಕರನ್ನೂ ರಂಜಿಸಿತು. ಅದುವರಗೆ ಕೆಲವು ಗಂಭೀರ ಪಾತ್ರಗಳಲ್ಲಿ ಪ್ರೇಕ್ಷಕರ ಹೃದಯ ಹಿಂಡಿದ್ದ ರಾಯರು ಈ ಚಿತ್ರದಲ್ಲಿ ತರುಣನಂತೆ ಸಹಜವಾದ ಲವಲವಿಕೆಯನ್ನು ತೋರಿ ತಮ್ಮ ಬಹುಮುಖ ಪ್ರತಿಭೆಯ ಸ್ಮರಣೀಯ ಪ್ರದರ್ಶನ ನೀಡಿದರು.

೧೯೬೮ ರಾಜ್ಯ ಸರ್ಕಾರದ ಸಬ್ಸಿಡಿ ಮತ್ತು ವಾರ್ಷಿಕ ಪ್ರಶಸ್ತಿಗಳ ಸಂಪೂರ್ಣ ಫಾಯಿದೆ ಪಡೆದವೇ ಅಲ್ಲದ ಒಂದಲ್ಲ ಒಂದು ಕಾರಣಕ್ಕಾಗಿ ಉಲ್ಲೇಖನಾರ್ಹವೆನಿಸುವ ೧೦-೧೨ ಚಿತ್ರಗಳನ್ನು ನೀಡಿತು. ಈ ವರ್ಷ ಕನ್ನಡ ಚಿತ್ರಗಳ ತಯಾರಿಕೆ ೩೨ಕ್ಕೇರಿದ್ದು ಒಂದು ವಿಶೇಷ.

ಈ ವರ್ಷ ಪ್ರಾರಂಭವಾಗಿದ್ದೇ ಪ್ರಮುಖ ಬೆಳವಣಿಗೆಯೊಂದರಿಂದ. ವರ್ಷದ ಮೊದಲ ಚಿತ್ರ 'ಜೇಡರ ಬಲೆ', ಕನ್ನಡದಲ್ಲಿ ಜೇಮ್ಸ್ ಬಾಂಡ್ ಶೈಲಿಯ ಪ್ರಪ್ರಥಮ ಚಿತ್ರ. ಬಾಂಡ್ ಪಾತ್ರ ವಹಿಸಿ ತಮ್ಮ ಅದುವರೆಗಿನ ಜಾಡಿನಿಂದ ಸಂಪೂರ್ಣವಾಗಿ ಈಚೆ ಬಂದವರು ರಾಜಕುಮಾರ್. ಅವರಿಗೆ ಸಾಹಸ ದೃಶ್ಯಗಳ, ಅದರಲ್ಲಿಯೂ ಹೊಡೆದಾಟದ ಸನ್ನಿವೇಶಗಳ ಚಿತ್ರಣ ತುಂಬಾ ಆಪ್ಯಾಯಮಾನ. 'ಜೇಡರ ಬಲೆ'ಯಲ್ಲಿ ಅಂತಹ ದೃಶ್ಯಗಳಿಗೆ ಸಂಪೂರ್ಣ ಅವಕಾಶವಿದ್ದಿದ್ದರಿಂದ ಅವರು ಚಿತ್ರದುದ್ದಕ್ಕೂ ಕನ್ನಡದ ಬಾಂಡ್ ಆಗಿ ಮೆರೆದರು. ಅದುವರೆಗೆ ಕೇವಲ ಛಾಯಾಗ್ರಾಹಕರಾಗಿದ್ದ ದೊರೆರಾಜ್ ಆಗಲೇ ಎರಡು ಚಿತ್ರಗಳಿಗೆ ಸಹನಿರ್ದೇಶಕರಾಗಿದ್ದ ಭಗವಾನ್‌ರ ಜೊತೆಗೂಡಿದರು. ಕನ್ನಡ ಚಿತ್ರರಂಗ ನಂತರದ ವರ್ಷಗಳಲ್ಲಿ ಕಂಡ ಅತ್ಯಂತ ಯಶಸ್ವಿ ನಿರ್ದೇಶಕ ಜೋಡಿಯಾದರು. 'ಜೇಡರ ಬಲೆ'ಯ ನಿರ್ಮಾಣವೂ ಅವರದ್ದೆ. ರಾಜಕುಮಾರ್ ಅವರನ್ನು ಬಾಂಡ್ ಪಾತ್ರದಲ್ಲಿ ಅಭಿನಯಿಸುವುದಕ್ಕಾಗಿ ಒಪ್ಪಿಸಲು ಅವರು ವಿಶೇಷವಾದ ಶ್ರಮವನ್ನೇನೂ ಪಡಬೇಕಾಗಲಿಲ್ಲ. ರಾಜಕುಮಾರ್ ಅವರಿಗೆ ಬಹಳಷ್ಟು ಚಿತ್ರಗಳನ್ನು ನೋಡುವ ಅಭ್ಯಾಸವಿತ್ತು. ತೆರೆ ಕಂಡ ವಿದೇಶೀ ಚಿತ್ರಗಳು, ಅಲ್ಲಿಯ ಕಲಾವಿದರು, ಅಭಿನಯ ಶೈಲಿ ಇತ್ಯಾದಿ ಕುರಿತು ಚರ್ಚಿಸಿದ ಸಂಗತಿಗಳು ಪತ್ರಿಕೆಗಳಲ್ಲಿ ಉಲ್ಲೇಖಗೊಂಡಿವೆ. ಈ ವೀಕ್ಷಿಸುವ, ವಿಮರ್ಶಿಸುವ ಅಭ್ಯಾಸ ಇದ್ದುದರಿಂದ ಎಂಥ ಪಾತ್ರಗಳನ್ನೂ ನಿರ್ವಹಿಸುವುದು ಅವರಿಗೆ ಕಷ್ಟವೆನಿಸಲಿಲ್ಲ. ಅಲ್ಲದೆ ಅಂದಿನವರೆಗೆ ರಾಜಕುಮಾರ್ ಹೆಚ್ಚು ಕಡಿಮೆ ಎಲ್ಲ ರೀತಿಯ ಪಾತ್ರಗಳಲ್ಲಿಯೂ ಅಭಿನಯಿಸಿ ಕನ್ನಡ ಚಿತ್ರರಂಗದಲ್ಲಿ ಅಜರಾಮರರಾಗಿ ಮೆರೆಯುತ್ತಿದ್ದುದರಿಂದ ಸೂಟು ಬೂಟು ಹಾಕಿಕೊಂಡು ಪಿಸ್ತೂಲು ಕೈಯಲ್ಲಿ ಹಿಡಿದು ಹತ್ತಾರು ಮೋಹನಾಂಗಿಯರ ಜೊತೆಗೆ ರಾರಾಜಿಸುವ ಪಾತ್ರವೊಂದನ್ನು ವಹಿಸಿಬಿಟ್ಟರೆ ಅವರ ಅಪೂರ್ವ ಪ್ರತಿಭೆಗೆ ಕಳಶವಿಟ್ಟಂತಾಗುತ್ತದೆ ಎಂದು ಅವರ ಅಭಿಮಾನಿಗಳೂ ಆ ವೇಳೆಗೆ ದುಂಬಾಲು ಬಿದ್ದಿದ್ದರಿಂದ ಅವರು ಈ ಆಗ್ರಹಕ್ಕೆ ಸ್ಪಂದಿಸಿದಂತೆಯೂ ಆಯಿತು. ರಾಜಕುಮಾರ್‌ರ ಈ ಪರಿವರ್ತನೆ ಭಾರಿ ಜನಪ್ರಿಯತೆ ಗಳಿಸಿತು.

೧೯೬೮ರ ಇನ್ನೊಂದು ಪ್ರಧಾನ ಬೆಳವಣಿಗೆಯೆಂದರೆ ಖ್ಯಾತ ಸಾಹಿತಿ ಎಂ.ಸುಬ್ರಹ್ಮಣ್ಯರಾಜ ಅರಸು (ಚದುರಂಗ) ರವರು ಚಿತ್ರ ನಿರ್ಮಾಣ ಹಾಗೂ ನಿರ್ದೇಶನಕ್ಕೆ ಕೈ ಹಾಕಿದ್ದು. 'ಸರ್ವಮಂಗಳಾ' ಅವರು ರಚಿಸಿದ ಉನ್ನತ ಮಟ್ಟದ ಸಾಹಿತ್ಯ ಕೃತಿ. ಗ್ರಾಮೀಣ ಸೊಗಡನ್ನು ವಿಪುಲವಾಗಿ ಹೊಂದಿದ್ದ ದುರಂತ ಕಥಾನಕ ಅದು. ತಮ್ಮ ಚಿಂತನೆಗಳ ಅಭಿವ್ಯಕ್ತಿಗೆ ಚಲನಚಿತ್ರ ಮಾಧ್ಯಮವನ್ನು ಹೆಚ್ಚು ಪರಿಣಾಮಕಾರಿಯಾಗಿ ಬಳಸಿಕೊಳ್ಳಬಹುದೆಂಬ ಭರವಸೆಯಿಂದ ಚದುರಂಗರು ಈ ಸಾಹಸಕ್ಕೆ ಕೈ ಹಾಕಿ ರಾಜಕುಮಾರ್, ಕಲ್ಪನಾ, ಅಶ್ವತ್ಥ್, ಸಂಪತ್‌ರಂತಹ ಪ್ರತಿಭಾವಂತ ಕಲಾವಿದರ ನೆರವನ್ನು ಪಡೆದರು. ತಾವೇ ಸಂಭಾಷಣೆಗಳನ್ನು ಬರೆದರು. ಆದರೆ ಅವರಿಗೆ ಈ ಒಂದೇ ಚಿತ್ರವನ್ನು ನಿರ್ಮಿಸಿ-ನಿರ್ದೇಶಿಸಿದ ಅನುಭವ ಸಾಕು ಸಾಕೆನಿಸಿತು. ಚಿತ್ರದ ರೀ-ರಿಕಾರ್ಡಿಂಗ್ ಮುಗಿಯುವ ಮೊದಲೇ ತಾವು ಇನ್ನೊಂದು ಚಿತ್ರದ ನಿರ್ಮಾಣಕ್ಕೆ ಕೈ ಇಡುವುದಿಲ್ಲವೆಂದು ಪ್ರಕಟಿಸಿದ್ದು ಒಂದು ದುರಂತ. ಬರಹಗಾರನಾಗಿಯೇ ಉಳಿದುಕೊಂಡು ಕೈಲಾದಷ್ಟು ಮಟ್ಟಿಗೆ ಸಾಹಿತ್ಯ ಕ್ಷೇತ್ರದಲ್ಲಿಯೇ ಮುಂದುವರಿಯಲು ಅವರು ನಿರ್ಧರಿಸಲು ಕಾರಣ 'ಸರ್ವಮಂಗಳಾ'ದಲ್ಲಿ ಅವರಿಗಾದ ಕಹಿ ಅನುಭವ. ಹಾಕಿದ ಹಣವನ್ನು ಗಳಿಸಿ ಋಣಮುಕ್ತನಾದರೆ ಸಾಕೆಂಬ ಸ್ಥಿತಿಗೂ ಅವರು ಬರಬೇಕಾಯಿತು. ಚಿತ್ರರಂಗದಲ್ಲಿನ ಅನೇಕ ಇತಿಮಿತಿಗಳ ವಿರಾಟ ದರ್ಶನ ಅವರಿಗೆ ಆಗಲೇ ಆಗಿತ್ತು. ಸಾಹಿತ್ಯ ಓದಬಲ್ಲವರನ್ನು ಮಾತ್ರ ಮುಟ್ಟಿದರೆ ಚಿತ್ರ ಮಾಧ್ಯಮ ಅನಕ್ಷರಸ್ಥರನ್ನೂ ತಲುಪಬಲ್ಲದಾದ್ದರಿಂದ ಅದು ಇನ್ನೂ ಹೆಚ್ಚು ಪ್ರಭಾವಿ ಮಾಧ್ಯಮವೆನಿಸಿದರೂ ದುರದೃಷ್ಟದಿಂದ ಈ ಮಾಧ್ಯಮ ಗಲ್ಲಾ



(ಚಿತ್ರ ೪೨) 'ಜೇಡರಬಲೆ' ಚಿತ್ರದಲ್ಲಿ ರಾಜಕುಮಾರ್



(ಚಿತ್ರ ೪೩) 'ಸರ್ವಮಂಗಳಾ' ಚಿತ್ರದಲ್ಲಿ ಕಲ್ಪನಾ ಮತ್ತು ರಾಜಕುಮಾರ್

ಪೆಟ್ಟಿಗೆಯ ಮೋಹಕ್ಕೆ ಒಳಗಾದ್ದನ್ನು ಅವರು ನೊಂದ ಮನಸ್ಸಿನಿಂದ ಕಂಡುಕೊಂಡರು. ಅತಿ ಶೀಘ್ರವಲ್ಲಿ ಚಿತ್ರರಂಗಕ್ಕೆ ವಿದಾಯ ಹೇಳಿದರು. ಅನೇಕ ವರ್ಷಗಳ ನಂತರ ಎಸ್.ಲಕ್ಷ್ಮೀನಾರಾಯಣ್ ಚದುರಂಗರ ಇನ್ನೊಂದು ಪ್ರಬುದ್ಧ ಕಾದಂಬರಿ 'ಉಯ್ಯಾಲೆ'ಯನ್ನು ತೆರೆಗೆ ತಂದರಷ್ಟೆ.

ಮೈಸೂರಿನಲ್ಲಿಯೇ ಚಿತ್ರಿತವಾಗಿದ್ದ ಹಾಲಿವುಡ್ ಚಿತ್ರ 'ಟಾರ್ಜಾನ್'ನ ಚಿತ್ರಕಥೆಯ ರಚನೆಯಲ್ಲಿ ಸ್ವಲ್ಪ ಕೈಯಾಡಿಸಿ ಅಲ್ಲಿಯೇ ತಯಾರಾದ ಇನ್ನೊಂದು ಚಿತ್ರ 'ಮಾಯಾ'ಕ್ಕೂ ಕೆಲಸ ಮಾಡಿದ್ದರಿಂದ ಚದುರಂಗರಿಗೆ ತಾವೇ ಚಿತ್ರವನ್ನು ನಿರ್ಮಿಸುವ ಆಸೆ ಮೂಡಿತ್ತು. ಆದರೆ ಕನ್ನಡ ನಾಡಿನ ಹಳ್ಳಿಯೊಂದರ ಮುಗ್ಧ ವಾತಾವರಣವನ್ನು ಸೃಷ್ಟಿಸುವುದರಲ್ಲಿ ಅವರು ತೋರಿದ ಶ್ರದ್ಧೆ ಮತ್ತು ವ್ಯಾಪಾರಿ ಚಿತ್ರಗಳಲ್ಲಿ ಅನಿವಾರ್ಯವೆನಿಸಿದ್ದ ಅನೇಕ ಪರಿಕರಗಳನ್ನು ವರ್ಜಿಸುವುದರಲ್ಲಿ ಅವರು ಗಳಿಸಿದ ಯಶಸ್ಸುಗಳನ್ನುಳಿದರೆ ಜಾಳು ಜಾಳು ನಿರೂಪಣೆಯ 'ಸರ್ವಮಂಗಳಾ' ಯಾವ ವರ್ಗದ ಜನರನ್ನೂ ಮುಟ್ಟದಾಯಿತು. ಚದುರಂಗರು ಚಲನಚಿತ್ರ ನಿರ್ದೇಶನಕ್ಕೆ ತೀರಾ ಹೊಸಬರೆಂದು ಅರ್ಥವಾಗುತ್ತಿತ್ತು. ಈ ಚಿತ್ರ ಕೇವಲ ಸೆಂಟಿಮೆಂಟಲ್ ಕಾರಣಕ್ಕಾಗಿ ನೆನಪಿನಲ್ಲಿ ಉಳಿಯುವ ಪ್ರಯೋಗವಾಯಿತು.

'ಹಣ್ಣೆಲೆ ಚಿಗುರಿದಾಗ' ೧೯೬೮ರ, ಅಷ್ಟೇ ಅಲ್ಲದೆ ಇದೇ ೬೦ರ ದಶಕದ ಒಂದು ಸ್ಮರಣೀಯ ಚಿತ್ರ. ಇದು ಕೂಡ ಕಾದಂಬರಿಯಾಧಾರಿತ ಚಿತ್ರವೆ. ಪ್ರತಿಭಾವಂತ ನಿರ್ದೇಶಕ ಎಂ.ಆರ್.ವಿಠಲ್‌ರಿಗೆ ಸ್ಫೂರ್ತಿ ನೀಡಿದ್ದು ತ್ರಿವೇಣಿಯವರ ಅದೇ ಹೆಸರಿನ ಜನಾನುರಾಗಿ ಕಾದಂಬರಿ. ಈ ಚಿತ್ರವನ್ನು ನಿರ್ದೇಶಿಸಬೇಕೆಂದು ಬಯಸಿದ್ದ ಆರ್.ನಾಗೇಂದ್ರರಾಯರು ಕೇವಲ ಮುಖ್ಯ ಪಾತ್ರವನ್ನು ನಿರ್ವಹಿಸುವುದರಲ್ಲಿಯೇ ತೃಪ್ತರಾಗಬೇಕಾಯಿತು. ಆದರೆ ಆ ಪಾತ್ರದಲ್ಲಿ ಅವರು ನೀಡಿದ ಅಭಿನಯ ಅನನ್ಯ. ರಂಗಭೂಮಿಯ ಹಿನ್ನೆಲೆಯಿಂದ ಬಂದ ಕಲಾವಿದರೊಬ್ಬರು ಆಧುನಿಕ ಚಿತ್ರ ಮಾಧ್ಯಮದ 'ಅಂಡರ್ ಪ್ಲೇ' ತಂತ್ರಕ್ಕೆ ಅಷ್ಟು ಸೊಗಸಾಗಿ ಹೊಂದಿಕೊಂಡ ನಿದರ್ಶನಗಳು ಅಪರೂಪ. ಅವರೆದುರು ಕಲ್ಪನಾರ ಮನಮಿಡಿಯುವ ಅಭಿನಯದ ಮೆರುಗು ಬೇರೆ. ಅವರ ನಡುವೆಯ ಪರೋಕ್ಷ ಪೈಪೋಟಿ ಪ್ರೇಕ್ಷಕರ ನಾಡಿ ಮಿಡಿತವನ್ನು ಚಿತ್ರದುದ್ದಕ್ಕೂ ವೇಗಗೊಳಿಸಿ, ಇಡೀ ಚಿತ್ರವೇ ಒಂದು ಸೊಗಸಾದ ಭಾವನಾತ್ಮಕ ಅನುಭವವಾಯಿತು. ಆದರೆ ಚಿತ್ರದ ಇನ್ನೊಂದು ಸೊಗಸೆಂದರೆ ಅದರಲ್ಲಿನ ಲಘು ಸನ್ನಿವೇಶಗಳು. ಎಪ್ಪತ್ತಕ್ಕೆ ಅರುಳು-ಮರುಳಾದ ವೃದ್ಧನ ಆ ಪಾತ್ರ ನಾಗೇಂದ್ರರಾಯರಿಗೆ ಹೇಳಿ ಮಾಡಿಸಿದಂತಿತ್ತು. ಪ್ರಾಯಶಃ ರಾಜಕುಮಾರ್‌ರಂತಹ ಮೇರು ಕಲಾವಿದರೂ ಪಿಚ್ಚೆನಿಸಿದ ಕೆಲವೇ ಚಿತ್ರಗಳಲ್ಲಿ ಇದೂ ಒಂದು. ಈ ಚಿತ್ರ ಪ್ರಾಜ್ಞರಿಂದ, ವಿಮರ್ಶಕರಿಂದ ಎಷ್ಟು ಮೆಚ್ಚುಗೆ ಪಡೆಯಿತೋ ಅಷ್ಟೇ ಮೆಚ್ಚುಗೆಯನ್ನು ಜನಸಾಮಾನ್ಯರಿಂದಲೂ ಪಡೆದುಕೊಂಡಿದ್ದು ವಿಮರ್ಶೆ ಮತ್ತು ಗಲ್ಲಾಪೆಟ್ಟಿಗೆಗಳ ನಡುವೆ ದೊಡ್ಡ ಅಂತರವಿರುವುದು ಅನಿವಾರ್ಯವೇನೂ ಅಲ್ಲವೆಂಬುದನ್ನು ತೋರಿಸಿತು. ಎಂ.ರಂಗರಾಯರ ಅರ್ಥಪೂರ್ಣ ಸಂಗೀತ ಚಿತ್ರಕ್ಕೆ ಮತ್ತೊಂದು ರೀತಿಯ ಮೆರುಗು ತಂದಿತು. 'ಹೂವು ಚೆಲುವೆಲ್ಲ ತಂದೆಂದಿತು...' ಕನ್ನಡ ಚಿತ್ರರಂಗದ ಅತ್ಯಂತ ಸ್ಮರಣೀಯ ಹಾಡುಗಳಲ್ಲೊಂದಾಯಿತು.

ಈ ಚಿತ್ರ ಅನಿರೀಕ್ಷಿತವಾಗಿ ಹೊಸದೊಂದು ರೀತಿಯ ವಿವಾದದಲ್ಲಿ ಸಿಕ್ಕಿಕೊಂಡಿದ್ದೊಂದು ಸ್ವಾರಸ್ಯ. ವಿಧವಾ ವಿವಾಹದಂತಹ ಸೂಕ್ಷ್ಮ ವಸ್ತುವನ್ನು ಹೊಂದಿದ್ದ ಈ ಸ್ಮರಣೀಯ ಚಿತ್ರದಲ್ಲಿ ಕಲ್ಪನಾ ವಿಧವೆಯಾಗಿ ಶುಭ್ರವಾದ ಬಿಳಿ ಬಟ್ಟೆಯನ್ನೇ ಧರಿಸಿದ್ದರೂ ಆಕೆ ಹೊಕ್ಕಳಿನ ಕೆಳಗೆ ಸೀರೆಯುಟ್ಟಿದ್ದು ಕೆಲವು ವಿಮರ್ಶಕರ ಕಟು ಪ್ರತಿಕ್ರಿಯೆಗೆ ಕಾರಣವಾಯಿತು. ಆಕೆ ಆ ರೀತಿ ಸೀರೆಯುಟ್ಟಿದ್ದು ನಿರ್ದೇಶಕ ವಿಠಲ್‌ರವರಿಗೂ ಪಥ್ಯವಾಗಿರಲಿಲ್ಲ. ಆದರೆ ಕಲ್ಪನಾ ಹಠಗಾತಿಯಾದ್ದರಿಂದ ಈ ವಿಷಯದಲ್ಲಿ ಅವರು ಅಸಹಾಯಕರೂ ಆಗಿದ್ದರು. ಈ ಬಗ್ಗೆ ಬಂದ ಕಹಿ ವಿಮರ್ಶೆಗಳಿಂದ ಕಲ್ಪನಾ ಕಂಡಾಮಂಡಲವಾಗಿ ಜನಪ್ರಿಯ ಚಲನಚಿತ್ರ ಪತ್ರಿಕೆ 'ಮೇನಕಾ'ದಲ್ಲಿ ತಮ್ಮ ನಿಲುವನ್ನು ಸಮರ್ಥಿಸಿಕೊಂಡು ದೀರ್ಘವಾದ ಲೇಖನವೊಂದನ್ನು ಬರೆದರು. ಅದೊಂದು ಅಪರೂಪವಾದ ಪ್ರಸಂಗ.

ಅದೇ ವರ್ಷ ತೆರೆಗೆ ಬಂದ ರವೀ ನಿರ್ದೇಶನದ 'ಭಾಗ್ಯದ ಬಾಗಿಲು' ರಾಜಕುಮಾರ್ ಅಭಿನಯದ ೧೦೦ನೆಯ ಚಿತ್ರ. ಆ ಚಿತ್ರದ ಬಗ್ಗೆ ರಾಜಕುಮಾರ್ ಅನೇಕ ಸಾರಿ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ. ಆದರೆ ರಾಜಕುಮಾರ್ ೧೦೦ ಚಿತ್ರಗಳ ಗಡಿಯನ್ನು ದಾಟಿದ್ದು ಅವರ ಅಸಂಖ್ಯಾತ ಅಭಿಮಾನಿಗಳಿಗೆ ಒಂದು ಚರಿತ್ರಾರ್ಹ ಘಟನೆಯೆನಿಸಿತು. ಅವರ ನೂರನೆಯ ಚಿತ್ರ ಯಾವುದೆಂಬುದರ ಬಗ್ಗೆಯೇ ದೊಡ್ಡ ಜಿಜ್ಞಾಸೆ ನಡೆಯುತ್ತಿದ್ದಾಗ ಆ ಚಿತ್ರ ಯಾವುದೇ ಆಗಲಿ ತಮಗೆ ತೃಪ್ತಿ ತರುವ ಚಿತ್ರವಲ್ಲವೆಂದು ಅವರೇ ಬಹಿರಂಗ ಹೇಳಿಕೆಯೊಂದನ್ನು ನೀಡಿದರು. ಆದರೆ ಅವರಿಗೆ ಈ ಸಂದರ್ಭದಲ್ಲಿ ಅಪೂರ್ವರೀತಿಯ ಸನ್ಮಾನವನ್ನು ನೀಡಲಂತೂ ಭಾರಿ ಸಿದ್ಧತೆಗಳು ನಡೆದು ರಾಜ್ಯದ ಉಪ ಹಣಕಾಸು ಮಂತ್ರಿ ಅಬ್ದುಲ್ ಗಫಾರ್‌ರವರ ಅಧ್ಯಕ್ಷತೆಯಲ್ಲಿ ಸನ್ಮಾನ ಸಮಿತಿಯೊಂದರ ರಚನೆಯೂ ಆಯಿತು. ಬೆಂಗಳೂರಿನ ಕಂಠೀರವ ಕ್ರೀಡಾಂಗಣದಲ್ಲಿ ಲೋಕೋಪಯೋಗಿ ಶಾಖೆ ಸಚಿವ ಕೆ.ಮಲ್ಲಪ್ಪನವರ ಅಧ್ಯಕ್ಷತೆಯಲ್ಲಿ ಈ ಸಮಾರಂಭ ನಡೆಯುವುದೆಂದು ತೀರ್ಮಾನವೂ ಆಯಿತು. ಈ ಸಮಾರಂಭ 'ನಭೂತೋ...' ಎಂಬ ರೀತಿಯಲ್ಲಿ ನಡೆದಿದ್ದು ಒಂದು ಐತಿಹಾಸಿಕ ದಾಖಲೆ. ನಗರ ಎಂದೂ ಕಂಡರಿಯದಂತಹ ಮೆರವಣಿಗೆಯೊಂದರಲ್ಲಿ ಎಲ್ಲ ಜನಪ್ರಿಯ ನಟ-ನಟಿಯರೂ ಭಾಗವಹಿಸಿದರೆ ಕಂಠೀರವ ಕ್ರೀಡಾಂಗಣದಲ್ಲಿ ೫೦,೦೦೦ಕ್ಕೂ ಹೆಚ್ಚು ಜನ ನೆರೆದರು.

ಈ ದಶಕದಲ್ಲಿ ಶತಚಿತ್ರಗಳಲ್ಲಿ ಅಭಿನಯಿಸಿದ್ದಕ್ಕಾಗಿ ಸಾರ್ವಜನಿಕ ಸಮಾರಂಭವೊಂದರಲ್ಲಿ ಅಭಿನಂದನೆಗೆ ಪಾತ್ರರಾದವರು ಸುಮಾರು ಮೂರು ದಶಕಗಳ ಕಾಲ ಹೆಚ್ಚು ಕಡಿಮೆ ಪ್ರತಿ ಕನ್ನಡ ಚಿತ್ರದಲ್ಲಿಯೂ ಅನಿವಾರ್ಯವೆನಿಸಿ ಕೊಂಡಿದ್ದ ವಿಶಿಷ್ಟ



(ಚಿತ್ರ ೪೪) 'ಹಣ್ಣೆಲೆ ಚಿಗುರಿದಾಗ' ಚಿತ್ರದಲ್ಲಿ ನಾಗೇಂದ್ರರಾವ್, ಜಾರ್ಜ್ ಇಂದಿರಾ, ಕಲ್ಪನಾ, ರಾಜಕುಮಾರ್



(ಚಿತ್ರ ೪೫) 'ಭಾಗ್ಯದ ಬಾಗಿಲು' ಚಿತ್ರದಲ್ಲಿ ಬಿ.ವಿ.ರಾಧ ಮತ್ತು ರಾಜಕುಮಾರ್

ಹಾಸ್ಯನಟ ನರಸಿಂಹರಾಜು. ವಾಸ್ತವವಾಗಿ ಅವರು ಇಡೀ ದಕ್ಷಿಣ ಭಾರತ ಚಲನಚಿತ್ರರಂಗದಲ್ಲಿ ಇಂತಹ ದಾಖಲೆಯನ್ನು ಸ್ಥಾಪಿಸಿದ ಪ್ರಪ್ರಥಮ ನಟರು. ಅವರಿಗೆ ೧೯೬೭ರಲ್ಲಿ ಮದರಾಸಿನ ಕನ್ನಡಿಗರು ಆತ್ಮೀಯವಾದ ಸನ್ಮಾನ ಸಮಾರಂಭವನ್ನು ಏರ್ಪಡಿಸಿದ್ದರು. ಈ ಸಮಾರಂಭದಲ್ಲಿ ಇತರ ಭಾಷೆಗಳ ಕೆಲವು ಪ್ರತಿಷ್ಠಿತ ಕಲಾವಿದರೂ ಪಾಲ್ಗೊಂಡು ಕನ್ನಡ ಚಿತ್ರರಂಗಕ್ಕೆ ನರಸಿಂಹರಾಜು ಸಲ್ಲಿಸಿದ ಸೇವೆಯನ್ನು ಮುಕ್ತಕಂಠದಿಂದ ಕೊಂಡಾಡಿದರು. ಅದರ ಮುಂದಿನ ವರ್ಷ ಬೆಂಗಳೂರಿನಲ್ಲಿ ರಾಜಕುಮಾರ್ ಅವರಿಗೆ ಅದೇ ಕಾರಣಕ್ಕಾಗಿ ನಡೆದ ಸನ್ಮಾನವೊಂದು ಹೊಸ ಆಯಾಮವನ್ನೇ ಪಡೆದು ಅವರನ್ನು ಕನ್ನಡ ತೆರೆಯ ಅನಭಿಷಿಕ್ತ ನಟಸಾರ್ವಭೌಮನ ಸ್ಥಾನಕ್ಕೇರಿಸಿತು.

ಈ ಸಂದರ್ಭದಲ್ಲಿ ಭಾರತ್ ಎಂಟರ್‌ಪ್ರೈಸಸ್ ಸಂಸ್ಥೆ ಆರೂರು ಪಟ್ಟಾಭಿಯವರ ನಿರ್ದೇಶನದಲ್ಲಿ ರಾಜಕುಮಾರ್ ಅಭಿನಯಿಸಿದ ಎಲ್ಲ ಚಿತ್ರಗಳಿಂದ ಆಯ್ದ ತುಣುಕುಗಳನ್ನು ಸೇರಿಸಿ 'ನಟಸಾರ್ವಭೌಮ' ಎಂಬ ಹೆಸರಿನಲ್ಲಿ ತಯಾರಿಸಿದ ಚಿತ್ರ ಯಾವುದೇ ಕಲಾವಿದನೊಬ್ಬನಿಗೆ ಸಿನಿಮಾ ಮಾಧ್ಯಮದಲ್ಲೇ ಸಂದ ಅಂತಹ ಪ್ರಪ್ರಥಮ ಗೌರವವೆನಿಸಿತು. ಇಂಥದೊಂದು ಪರಂಪರೆಯೇ ಪ್ರಾರಂಭವಾಗಿ, ಪ್ರತಿಭಾವಂತ ನಟ ಮುಸುರಿ ಕೃಷ್ಣಮೂರ್ತಿ ಬಗ್ಗೆ ಇಂಥದ್ದೇ ಇನ್ನೊಂದು ಚಿತ್ರ ತಯಾರಾಯಿತು. ಅದೇ ರೀತಿ ಖ್ಯಾತ ನಟ ಬಾಲಕೃಷ್ಣರ ಬಗ್ಗೆ ತಯಾರಾದ ಇನ್ನೊಂದು ಚಿತ್ರ 'ಕಲಾಭಿಮಾನಿ'.

೧೯೬೮ರಲ್ಲಿ ಬಿಡುಗಡೆಯಾದ ಬಿ.ಆರ್.ಪಂತುಲು ಅವರ 'ಚಿನ್ನಾರಿ ಪುಟ್ಟಣ್ಣ', ಅವರ ಅತ್ಯಂತ ನಿರರ್ಥಕ ಚಿತ್ರವೆಂಬ ಕಟು ಟೀಕೆಗೆ ಪಾತ್ರವಾಗಿ ಆ ಮಹಾ ಸಾಹಸಿಯ ಇಮೇಜ್‌ಗೆ ಸಾಕಷ್ಟು ಧಕ್ಕೆ ತಂದಿತು.

ಅದೇ ವರ್ಷ ತೆರೆಗೆ ಬಂದ 'ನಮ್ಮ ಊರು' ಚಿತ್ರ ಪ್ರಥಮ ಬಾರಿಗೆ ನಟ ರಾಜೇಶ್‌ರನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿ ಅವರ ವೃತ್ತಿಜೀವನವನ್ನು ಸಾಕಷ್ಟು ಯಶಸ್ವಿಯಾಗಿ ಅರಳಲು ನಾಂದಿ ಹಾಡಿತು. ಅನೇಕ ಚಿತ್ರಗಳಲ್ಲಿ ನಾಯಕ ನಟರಾಗಿ ಅಭಿನಯಿಸಿ ತಮ್ಮ ಉತ್ಕಟ ಅಭಿವ್ಯಕ್ತಿಯಿಂದ ತಮ್ಮದೇ ಆದ ಶೈಲಿಯನ್ನು ರೂಪಿಸಿಕೊಂಡ ರಾಜೇಶ್ ಮುಂದೆ ಕೆಲವು ಪ್ರಮುಖ ಚಿತ್ರಗಳಲ್ಲಿ 'ಕ್ಯಾರೆಕ್ಟರ್' ನಟರಾಗಿಯೂ ವಿಶೇಷ ಗಮನ ಸೆಳೆದರು. ಹಿಂದಿಯ ರಾಜಕುಮಾರ್‌ರಂತೆ ರಾಜೇಶ್‌ರವರೂ ಚಿತ್ರವೊಂದರಲ್ಲಿ ಅಭಿನಯಿಸುವುದೇ ಒಂದು ಪ್ರಮುಖ ಘಟನೆಯೆಂಬ ವಾತಾವರಣವೂ ನಿರ್ಮಾಣವಾಯಿತು. 'ನಮ್ಮ ಊರು' ಚಿತ್ರ ಗ್ರಾಮೀಣ ಬದುಕಿನ ಮಹತ್ವವನ್ನು ಹೇಳುವ ಚಿತ್ರ. ಕೈಗಾರಿಕೀಕರಣ ಅಧಿಕ ಮಹತ್ವ ಪಡೆದು, ಗ್ರಾಮದ ಜನತೆ ಪಟ್ಟಣಗಳಿಗೆ ವಲಸೆ ಹೋಗಲಾರಂಭಿಸಿದ ದಿನಗಳಲ್ಲಿ ಗ್ರಾಮೀಣ ಬದುಕಿನತ್ತ ಮನವೊಲಿಸುವ ಪ್ರಯತ್ನಗಳಾಗುತ್ತಿದ್ದ ದಿನಗಳವು. ಈ ಚಿತ್ರ ಅಂಥದೊಂದು ತತ್ವವನ್ನು ಹೇಳಲು ಪ್ರಯತ್ನಿಸಿತ್ತು. 'ಹೋಗದಿರೀ ಬಂಧುಗಳೇ..' ಗೀತೆ ಚಿತ್ರದ ಒಟ್ಟು ಆಶಯವನ್ನು ಹೇಳುವಂತೆ ರಚಿತವಾಗಿತ್ತು. ಜನಪ್ರಿಯ ಗೀತೆಯೂ ಆಯಿತು. ಈ ಚಿತ್ರ ನೂರು ದಿನಗಳ ಪ್ರದರ್ಶನ ಕಂಡಿತು.

'ಚಕ್ರತೀರ್ಥ'ದಂತಹ ಪ್ರಥಮ ಶ್ರೇಣಿಯ ಚಿತ್ರವನ್ನು ನಿರ್ಮಿಸಿದ ಎಸ್.ಎನ್.ಪಾಲ್ ಮತ್ತೊಮ್ಮೆ ರಾಜಕುಮಾರ್ ನಾಯಕತ್ವದಲ್ಲಿಯೇ ಕನ್ನಡದಲ್ಲಿ ಪ್ರಪ್ರಥಮ ಬಾರಿಗೆ ಸರ್ಕಸ್‌ನ ಹಿನ್ನೆಲೆಯ ಚಿತ್ರ 'ಧೂಮಕೇತು' ನಿರ್ಮಿಸಿದರು. ಮೊಟ್ಟಮೊದಲ ಬಾರಿಗೆ ಚಿತ್ರಸಾಹಿತಿ ಆರ್.ಎನ್.ಜಯಗೋಪಾಲ್‌ರಿಗೆ ನಿರ್ದೇಶಕರಾಗುವ ಅವಕಾಶವನ್ನು ಕಲ್ಪಿಸಿಕೊಟ್ಟರು.

ಈ ವರ್ಷದಲ್ಲಿ ಇನ್ನೂ ಮೂರು 'ಪ್ರಥಮ'ಗಳೂ ದಾಖಲೆಯಾದವು. 'ಪ್ರವಾಸಿ ಮಂದಿರ'ವನ್ನು ನಿರ್ಮಿಸಿ ನಿರ್ದೇಶಿಸಿದ ಕಲ್ಯಾಣಕುಮಾರ್ ತಮ್ಮ ಈ ಚಿತ್ರವನ್ನು ಸಂಪೂರ್ಣವಾಗಿ ಹೊರಾಂಗಣದಲ್ಲಿಯೇ ಚಿತ್ರಿಸಿ ಒಂದು ಹೊಸ ಸಂಪ್ರದಾಯವನ್ನು ಪ್ರಾರಂಭಿಸಿದರು. ಚಿತ್ರದಲ್ಲಿ ದೊಡ್ಡ ತಾರಾಗಣವೇ ಇತ್ತು.

೧೯೬೮ರಲ್ಲಿ ಕನ್ನಡ ಚಿತ್ರರಂಗಕ್ಕೆ ಬಹಳ ವಿಶಿಷ್ಟ ವ್ಯಕ್ತಿತ್ವದ ಕಥಾಲೇಖಕ ಮತ್ತು ನಿರ್ಮಾಪಕನ ಪ್ರವೇಶವಾಯಿತು. ಕೈಯಲ್ಲಿ ಕರಣೆ ಹಿಡಿದು ಸಣ್ಣ ಪುಟ್ಟ ಮನೆಗಳ ನಿರ್ಮಾಣದಲ್ಲಿ ಗಾರೆ ಕೆಲಸದವರಾಗಿ ದುಡಿಯುತ್ತಿದ್ದ ಶ್ರಮಜೀವಿ ಎ.ಎಲ್.ಅಬ್ಬಾಯಿನಾಯ್ಡು ಮುಂದೆ ಕನ್ನಡ ಚಿತ್ರೋದ್ಯಮದಲ್ಲಿ ಅವರಂತಹ ಸಾಧಾರಣ ಮನುಷ್ಯನಿಗೆ ಎಟುಕಲಾರದಂತಹ ಕೆಲವು ಸಾಧನೆಗಳನ್ನು ಮಾಡಿ ಉದ್ಯಮದಲ್ಲಿ ತಮ್ಮ ಹೆಸರನ್ನು ಶಾಶ್ವತವಾಗಿ ಉಳಿಸಿ ಹೋದರು. ೧೯೯೯ರಲ್ಲಿ ಅವರು ನಿಧನರಾಗುವ ವೇಳೆಗೆ ಅವರ ಕನಸಿನ ಮಧು ಸ್ಟುಡಿಯೋ ಕೂಡ ಸುಮಾರು ಎರಡು ಕೋಟಿ ರೂಪಾಯಿಗಳ ವೆಚ್ಚದಲ್ಲಿ ತಲೆಯೆತ್ತಿತ್ತು. ಆದರೆ ಅದನ್ನು ನಡೆಸಿಕೊಂಡು ಹೋಗುವ ಭಾಗ್ಯ ಮಾತ್ರ ಅವರದಾಗಲಿಲ್ಲ. ತುಂಬಾ ಸರಳ, ಮುಗ್ಧ ವ್ಯಕ್ತಿತ್ವದ ಅಬ್ಬಾಯಿನಾಯ್ಡುರವರ ಹುಂಬತನವೇ ಅವರನ್ನು ಒಬ್ಬ ಆಕರ್ಷಕ ವ್ಯಕ್ತಿಯನ್ನಾಗಿಸಿತ್ತು. ತಾವೇ ಶ್ರಮಜೀವಿಯಾದ್ದರಿಂದ ಶ್ರಮಜೀವಿ ವರ್ಗದ ಬಗ್ಗೆ ಅವರಿಗೆ ಅಪಾರವಾದ ಕಾಳಜಿ. ಜೊತೆಗೆ ತಮ್ಮ ಜೀವನದಲ್ಲಿ ತಾವು ಅನುಭವಿಸಿದ ತಾಯಿಪ್ರೇಮವನ್ನು ತಮ್ಮ ಬಹುತೇಕ ಚಿತ್ರಗಳ ಹೆಗ್ಗುರುತು ಮಾಡಿದವರೂ ಅಬ್ಬಾಯಿಯವರೆ. ಅವರ ಮೊದಲ ಚಿತ್ರ 'ಹೂವು ಮುಳ್ಳು' ಎ.ವಿ.ಶೇಷಗಿರಿರಾಯರ ನಿರ್ದೇಶನದಲ್ಲಿ ೧೯೬೮ರಲ್ಲಿ ತೆರೆಗೆ ಬಂದು ಸಾಕಷ್ಟು ಜನಪ್ರಿಯತೆ ಗಳಿಸಿ ಅವರಿಗೆ ಕನ್ನಡ ಚಿತ್ರರಂಗದಲ್ಲಿ ಒಂದು ಪ್ರತಿಷ್ಠಿತ ಸ್ಥಾನವನ್ನು ಗಳಿಸಿಕೊಟ್ಟಿತು. ಈ ಚಿತ್ರದ ವಿಶೇಷವೆಂದರೆ ಡಕಾಯಿತರ ಬಗ್ಗೆ ಕನ್ನಡದಲ್ಲಿ ತಯಾರಾದ ಮೊದಲ ಚಿತ್ರವಾಯಿತು. ಆ ವೇಳೆಗೆ ಹಿಂದಿಯಲ್ಲಿ ಮಧ್ಯಪ್ರದೇಶದ ಚಂಬಲ್ ಕಣಿವೆಯಲ್ಲಿನ ಡಕಾಯಿತರ ಜೀವನದ ಹಿನ್ನೆಲೆಯಲ್ಲಿ ಕೆಲವು ಚಿತ್ರಗಳು ತಯಾರಾಗಿದ್ದವು. ಅಬ್ಬಾಯಿನಾಯ್ಡು ಕನ್ನಡ ಚಿತ್ರರಂಗದಲ್ಲಿ ಹೊಸತನವಿರಲೆಂದು ಅಂತಹ ಕಥಾವಸ್ತುವನ್ನು ತಾವೇ ಸಿದ್ಧಪಡಿಸಿ ಒಂದು ವರ್ಜಿಯ ಚಿತ್ರಗಳ ಸಾಲಿನಲ್ಲಿ ಮೊದಲಿಗರೆನಿಸಿಕೊಂಡರು. ಕೆಲವು ಕಾಲದ ನಂತರ ಹಿಂದಿಯ ಮೇರು ಚಿತ್ರ 'ಷೋಲೆ' ರಾಮನಗರದಲ್ಲಿ ವ್ಯಾಪಕವಾಗಿ ಚಿತ್ರಿತವಾದಾಗ ಅಲ್ಲಿನ ಬೆಟ್ಟ-ಗುಡ್ಡಗಳು ಇಡೀ ವಿಶ್ವದ ಗಮನ ಸೆಳೆದರೂ, ಅಲ್ಲಿ ಚಿತ್ರಿತವಾದ ಮೊಟ್ಟಮೊದಲ ಚಿತ್ರ 'ಹೂವು ಮುಳ್ಳು'.

ಈ ವರ್ಷದ ಕೊನೆಯ ಚಿತ್ರ 'ಮಣ್ಣಿನ ಮಗ' ಕನ್ನಡ ಚಿತ್ರರಂಗದ ಮತ್ತೊಬ್ಬ ಪ್ರತಿಭಾವಂತ ನಿರ್ದೇಶಕರನ್ನು ಹುಟ್ಟುಹಾಕಿತು. ನಿಜಜೀವನದಲ್ಲಿ ಲಕ್ಷ್ಮಣರಾವ್ ಮೋಹಿತೆಯಾಗಿದ್ದು ಹವ್ಯಾಸಿ ರಂಗಭೂಮಿಯಲ್ಲಿ ಸಾಕಷ್ಟು ಪಳಗಿದ್ದ ಅವರು 'ಗೀತಪ್ರಿಯ' ಎಂಬ ಹೆಸರಿನಿಂದ ಈ ಚಿತ್ರವನ್ನು ನಿರ್ದೇಶಿಸಿ ತಮ್ಮ ಚೊಚ್ಚಲ ಚಿತ್ರದಲ್ಲಿಯೇ ಚಿತ್ರ ವಿಮರ್ಶಕರ ಮತ್ತು ಪ್ರೇಕ್ಷಕರ ಗಮನ ಸೆಳೆದರು. ಆ ವೇಳೆಗಾಗಲೇ ಕನ್ನಡದಲ್ಲಿ ಸಾಕಷ್ಟು ಗ್ರಾಮಾಂತರ ಜೀವನವನ್ನಾಧರಿಸಿದ ಚಿತ್ರಗಳು ತೆರೆಗೆ ಬಂದಿದ್ದರೂ 'ಭೂದಾನ'ದ ನಂತರ ಪ್ರಾಯಶಃ ಗ್ರಾಮ ಮತ್ತು ಪಟ್ಟಣಗಳ ಜೀವನದ ನಡುವೆಯ ಸಾಂಸ್ಕೃತಿಕ ಸಂಘರ್ಷಗಳನ್ನು ವಿಶ್ಲೇಷಿಸಲು ಪ್ರಾಮಾಣಿಕ ಪ್ರಯತ್ನ ನಡೆದಿದ್ದು ಈ ಚಿತ್ರದಲ್ಲಿಯೇ. ಈ ವಿಶ್ಲೇಷಣೆ ಒಮ್ಮೊಮ್ಮೆ ತೀರಾ ಸರಳವೆನಿಸಿದ್ದು ಬೇರೆಯ ಮಾತು. ಆದರೆ ಚಿತ್ರದಲ್ಲಿ ಗೀತಪ್ರಿಯರ ಸಾಮಾಜಿಕ ಕಾಳಜಿಯಂತೂ ಎದ್ದು ಕಾಣುತ್ತಿತ್ತು. ಕಲ್ಪನಾರವರ ಪಾತ್ರ ಈ ಕಾಳಜಿಗೆ ಮೂರ್ತ ಸ್ವರೂಪ ಕೊಟ್ಟಿದ್ದು ತುಂಬಾ ಜನಪ್ರಿಯವಾದ 'ಇದೇನು ಸಭ್ಯತೆ, ಇದೇನು ಸಂಸ್ಕೃತಿ...' ಹಾಡಿನಿಂದ. ಬೆವರು ಸುರಿಸಿ ದುಡಿದು ರೈತನಾಗಿ ತನ್ನ ಜೀವನಕ್ಕೆ ಒಂದು ಅರ್ಥವನ್ನು ಕಂಡುಕೊಂಡ ನಾಯಕನ ಪಾತ್ರದಲ್ಲಿ ರಾಜಕುಮಾರ್ ಇನ್ನೊಮ್ಮೆ ಜನಾಕರ್ಷಕವಾಗಿ ಅಭಿನಯಿಸಿದರು. ಗೀತಪ್ರಿಯರು ಈ ಚಿತ್ರದ ನಂತರ ಅನೇಕ ಸುಸಂಸ್ಕೃತ ಚಿತ್ರಗಳನ್ನು ನಿರ್ದೇಶಿಸಿ 'ಪುಟ್ಟಣ್ಣ ಕಣಗಾಲ್ ಪ್ರಶಸ್ತಿ'ಯನ್ನು ಪಡೆದರು. 'ಮಣ್ಣಿನ ಮಗ'ನಿಗೆ ರಾಷ್ಟ್ರ ಹಾಗೂ ರಾಜ್ಯ ಮಟ್ಟದ ಪ್ರಶಸ್ತಿಗಳು ಲಭ್ಯವಾದವು. ಈ ಚಿತ್ರದಲ್ಲಿ ಚಂದ್ರಕಲಾ ಉತ್ತಮವಾಗಿ ಅಭಿನಯಿಸಿದರು.



(ಚಿತ್ರ ೪೬) 'ಮಣ್ಣಿನ ಮಗ' ಚಿತ್ರದಲ್ಲಿ ಕಲ್ಪನಾ, ರಾಜಕುಮಾರ್

ಪ್ರತಿಭೆಗಳು - ನಟ ವಜ್ರಮುನಿ (ಮಲ್ಲಮ್ಮನ ಪವಾಡ), ನಟ ಶ್ರೀನಾಥ್ (ಮಧುರ ಮಿಲನ), ನಿರ್ದೇಶಕ ಸಿದ್ದಲಿಂಗಯ್ಯ (ಮೇಯರ್ ಮುತ್ತಣ್ಣ), ನಟಿ ಸುರೇಖ (ಆಪರೇಷನ್ ಜಾಕ್‌ಪಾಟ್) ಮತ್ತು ನಟ ನಾಗಪ್ಪ (ಆಪರೇಷನ್ ಜಾಕ್‌ಪಾಟ್). ತೆಲುಗು ಚಿತ್ರರಂಗದಿಂದ ಹಿಂದಿ ಚಿತ್ರರಂಗಕ್ಕೆ ತೆರಳಿ ಅಲ್ಲಿ ಅನೇಕ ವರ್ಷಗಳ ಕಾಲ ಸೂಪರ್ ಸ್ಟಾರ್ ಆಗಿ ವಿಜೃಂಭಿಸಿದ ರೇಖಾ, ಜೆಮಿನಿ ಗಣೇಶನ್-ಪುಷ್ಪವಲ್ಲಿಯ ಮಗಳು. ಆಕೆ 'ಆಪರೇಷನ್ ಜಾಕ್‌ಪಾಟ್' ಚಿತ್ರದಲ್ಲಿ ನಿರ್ದೇಶಕದ್ವಯ ದೊರೆ-ಭಗವಾನ್‌ರಿಂದ ಪರಿಚಯಗೊಂಡಿದ್ದು ಒಂದು ವಿಶೇಷ.

ಈ ವರ್ಷ ೩೭ ಚಿತ್ರಗಳು ತಯಾರಾಗಿ ರಾಜ್ಯ ಸರ್ಕಾರದ ಸಬ್ಸಿಡಿ ಯೋಜನೆ ಫಲ ಬಿಡಲು ಪ್ರಾರಂಭಿಸಿದ್ದನ್ನು ಪ್ರುತಪಡಿಸಿತು. ಇವುಗಳಲ್ಲಿ ಉಲ್ಲೇಖನೀಯವಾದ ಚಿತ್ರಗಳು 'ನಮ್ಮ ಮಕ್ಕಳು', 'ಕಾಡಿನ ರಹಸ್ಯ', 'ಮಲ್ಲಮ್ಮನ ಪವಾಡ', 'ಕಪ್ಪು-ಬಿಳುಪು', 'ಎರಡು ಮುಖ', 'ಕಲ್ಪವೃಕ್ಷ', 'ಉಯ್ಯಾಲೆ', 'ಮೇಯರ್ ಮುತ್ತಣ್ಣ', 'ಚೌಕದ ದೀಪ' ಮತ್ತು 'ಆಪರೇಷನ್ ಜಾಕ್‌ಪಾಟ್'. ೩೯ ಚಿತ್ರಗಳಲ್ಲಿ ಈ ಸಂಖ್ಯೆಯೇನೂ ದೊಡ್ಡದಲ್ಲ. ಆದರೂ ನಾನಾ ಕಾರಣಗಳಿಗಾಗಿ ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ದಾಖಲಾಗಲು ಅರ್ಹವಾದ ಚಿತ್ರಗಳು ಇವು.

ಇದೇ ವರ್ಷ ತೆರೆಕಂಡ 'ಬೇಡಿ ಬಂದವಳು' ನೀಳಾದೇವಿಯವರ ಕಾದಂಬರಿಯನ್ನು ಆಧರಿಸಿದ್ದಾಗಿತ್ತು. ರವೀ ನಿರ್ದೇಶನದ 'ಗಾಂಧಿನಗರ' ಲವಲವಿಕೆಯ ನಿರೂಪಣೆ, ಸಹಜ ಹಾಸ್ಯಕ್ಕಾಗಿ ಜನಪ್ರಿಯವಾಯಿತು. ಆರ್.ಟಿ.ರಮಾ ವಿಶಿಷ್ಟ ಪಾತ್ರದಲ್ಲಿ ಗಮನ ಸೆಳೆದರು. 'ಬೆಂಗಳೂರು ಮೈಲ್' ಚಿತ್ರದ ವಿಶೇಷ ಸಾಹಸಗಳು, ಸೆಟ್‌ಗಳು ಗಮನ ಸೆಳೆದವು. ಗಾಜುಗಳನ್ನು ಒಡೆದು ನುಗ್ಗುವ ಸಾಹಸ ಪ್ರಥಮ ಬಾರಿಗೆ ಬಳಕೆಯಾಗಿತ್ತು. ಭಾಗವಹಿಸಿದ್ದ ಸಾಹಸಿಗಳು, ಸಹನಿರ್ದೇಶಕರುಗಳಿಗೆ ಅಪಾಯಗಳೂ ಎದುರಾಗಿದ್ದವು. ಹುಣಸೂರು ಕೃಷ್ಣಮೂರ್ತಿಗಳು 'ಅಡ್ಡದಾರಿ' ಚಿತ್ರವನ್ನು ನಿರ್ಮಿಸಿ ನಿರ್ದೇಶಿಸಿದರು. ಮತ್ತೊಂದು ಪತ್ತೇದಾರಿ ಚಿತ್ರ 'ಗೋವಾದಲ್ಲಿ ಸಿ.ಐ.ಡಿ. ೯೯೯' ತೆರೆಗೆ ಬಂದು ಯಶಸ್ವಿಯೂ ಆಯಿತು. ಕ್ಯಾಬರೆ ನರ್ತನಕ್ಕೆ ತಾರಾಮೌಲ್ಯ ತಂದುಕೊಟ್ಟ ಚಿತ್ರ 'ಬೆಂಗಳೂರು ಮೈಲ್'. ಆ ಕಾಲದಲ್ಲಿ ಯಾವುದಾದರೊಂದು ಚಿತ್ರ ಸುಮಾರು ಎನಿಸಿದರೆ ಅವರಲ್ಲಿ ಜ್ಯೋತಿಲಕ್ಷ್ಮಿ ಕ್ಯಾಬರೆಯೊಂದನ್ನು ತುರುಕಲು ಗಾಂಧಿನಗರದ ಹಂಚಿಕೆದಾರರು ಸಲಹೆ ಮಾಡುತ್ತಿದ್ದರು.

೧೯೬೮ರಲ್ಲಿ ಜಿ.ಡಿ.ಖೋಸ್ಲಾ ಸಮಿತಿಯು ಸಿನಿಮಾ ಸೆನ್ಸಾರ್‌ಶಿಪ್‌ನ ವರದಿ ಸಲ್ಲಿಸಿ, ಸೆನ್ಸಾರ್ ನಿಯಮಾವಳಿಯನ್ನು ಟೀಕಿಸಿತು. ಅಬ್ಬಾಸ್ ಮೊದಲಾದವರು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವ ಈ ನಿಯಮಾವಳಿಗಳನ್ನು ಸಂವಿಧಾನ ವಿರೋಧ ಎಂದು ತೀವ್ರವಾಗಿ ಟೀಕಿಸಿದರು.

೧೯೬೯ ಬ್ಯಾಂಕುಗಳು ನ್ಯಾಷನಲೈಸ್ ಆದವು. ಎಫ್.ಎಫ್.ಸಿ.ಯಿಂದ 'ಭುವನ್ ಶೋಮ್', 'ಉಸ್ಕಿ ರೋಟಿ' ಚಿತ್ರಗಳಿಗೆ ನೆರವು, ನ್ಯೂ ಇಂಡಿಯನ್ ಸಿನಿಮಾದ ಉದ್ಘಾಟನೆ, ಮಲೆಯಾಳದಲ್ಲಿ 'ಓಲವುಂ ತೀರವುಂ' ಹೊಸ ಅಲೆ ಚಿತ್ರ ಬಂದಿತು. ಬುದ್ಧಿಜೀವಿಗಳ ಹೊಸ ಆಲೋಚನೆಗಳು, ಬರಹಗಳು, ಚರ್ಚೆಗಳು ಪ್ರಾರಂಭವಾದವು. ಹಳೆಯ ಮೌಲ್ಯಗಳನ್ನು ಪ್ರಶ್ನಿಸತೊಡಗಿದರು. ಇಂಥ ಹೊತ್ತಿನಲ್ಲೇ 'ಸಂಸ್ಕಾರ'ದಂಥ ಕನ್ನಡ ನ್ಯೂ ಇಂಡಿಯನ್ ಸಿನಿಮಾ ಹೊರ ಬರುವ ಸಿದ್ಧತೆ ಮಾಡಿತು. ಇದೇ ವರ್ಷ ಫಿರೋಜ್ ರಂಗೂನ್ ವಾಲಾ ಅವರ 'ಮೂಕಿ ಮತ್ತು ಟಾಕಿ ಸಿನಿಮಾ' ಗ್ರಂಥ ಬಿಡುಗಡೆಯಾಗಿ ಸಾಕಷ್ಟು ಹೊಸ ಆಲೋಚನೆಗೆ ದಾರಿ ಮಾಡಿತು.

೧೯೭೦ ಕನ್ನಡ ಚಿತ್ರರಂಗದಲ್ಲಿ ಇನ್ನೊಂದು ಫಲಪ್ರದ ವರ್ಷ. ಈ ವರ್ಷ ತೆರೆಗೆ ಹೊಸದಾಗಿ ಪರಿಚಯವಾದ

'ನಮ್ಮ ಮಕ್ಕಳು' ಕೆಲವು ಹೊಸ ಜಾಡಿನ ಚಿತ್ರಗಳನ್ನು ನಿರ್ಮಿಸಿ ಆಗಲೇ ಚಿತ್ರರಂಗದಲ್ಲಿ ಒಂದು ಪ್ರತಿಷ್ಠಿತ ಸ್ಥಾನವನ್ನು ಗಳಿಸಿಕೊಂಡಿದ್ದ ವಾದಿರಾಜ್-ಜವಹರ್ ಸಹೋದರರು ನಿರ್ಮಿಸಿದ ತೀರಾ ವಿಭಿನ್ನ ರೀತಿಯ ಚಿತ್ರ. ಮಧ್ಯಮ ವರ್ಗದ ಕುಟುಂಬವೊಂದರ ನೋವು ನಲಿವುಗಳಿಗೆ ನೇರವಾಗಿ ಸ್ಪಂದಿಸುವಂತಹ ಹೃದಯಸ್ಪರ್ಶಿ ಕಥೆಯನ್ನು ಹೊಂದಿದ ಈ ಚಿತ್ರ ಬೆಂಗಳೂರಿನಲ್ಲಿ ೩೧ ವಾರ ಪ್ರದರ್ಶಿತವಾಗಿ, ಭಾರಿ ಜನಪ್ರಿಯತೆಯನ್ನು ಗಳಿಸಿದ್ದೇ ಅಲ್ಲದೆ ಒಂದು ಮಾದರಿ ಚಿತ್ರವೂ ಆಯಿತು. ಹಿರಿಯ ಆರ್.ನಾಗೇಂದ್ರರಾಯರು ನಟರಾಗಿ ಮತ್ತು ನಿರ್ದೇಶಕರಾಗಿ ಮೆರೆದು ಪ್ರೇಕ್ಷಕರಿಗೆ ಒಂದು ವಿಭಿನ್ನ ಅನುಭವವನ್ನು ತಂದುಕೊಟ್ಟ ಚಿತ್ರ ಇದು. ಮಡಿಯುವ ತಂದೆಯ ಆರ್ಥಿಕ ಇತಿಮಿತಿಗಳನ್ನು ಅರ್ಥ ಮಾಡಿಕೊಳ್ಳದೆ ಬೇಜವಾಬ್ದಾರಿಯಿಂದ ವರ್ತಿಸಿ ಸಕಲ ಸೌಕರ್ಯಗಳೂ ತಮ್ಮದೇ ಆಗಬೇಕೆಂದು ಆಗ್ರಹಿಸುವ ಮಕ್ಕಳ ಮನೋಭೂಮಿಕೆಯನ್ನು ನಿಕಟವಾಗಿ ಅರ್ಥ ಮಾಡಿಕೊಂಡ ಈ ಚಿತ್ರದ ಕಥೆ ಸಂಸಾರವನ್ನು ನಿಭಾಯಿಸುವ ಜವಾಬ್ದಾರಿಯನ್ನು ಆ ಮಕ್ಕಳಿಗೇ ಬಿಟ್ಟು ಅಪರೂಪವಾದ ಒಂದು ಪರಿಸರವನ್ನು ಸೃಷ್ಟಿಸುತ್ತದೆ. ಇದು ಯಾರ ಸೋಲು-ಗೆಲುವಿನ ಪ್ರಶ್ನೆಯೂ ಅಲ್ಲ, ಜೀವನದ ಗಾಢತೆಯ ಅರಿವಿನ ಪ್ರಶ್ನೆ. ಇಂತಹ ಗಂಭೀರವಾದ ಕಥಾವಸ್ತುವಿಗೆ ಹಾಸ್ಯದ



(ಚಿತ್ರ ೪೭) 'ನಮ್ಮ ಮಕ್ಕಳು' ಚಿತ್ರದಲ್ಲಿ ಪಂಢರಿಬಾಯಿ, ಕೆ.ಎಸ್.ಅಶ್ವತ್ಥ್ ಮತ್ತು ಮಾ।ಚಂದ್ರಶೇಖರ್



(ಚಿತ್ರ ೪೮) 'ಕಾಡಿನ ರಹಸ್ಯ' ಚಿತ್ರದಲ್ಲಿ ಸುದರ್ಶನ್ ಮತ್ತು ಶೈಲಶ್ರೀ

ಲೇಪನ ಹಚ್ಚಿದ್ದರೂ ಈ ಚಿತ್ರ ಕಲಾತ್ಮಕವಾಗಿ ಕೂಡ ಯಶಸ್ವಿಯೆನಿಸಿದ್ದು ಅದರ ಸಾಧನೆ. ಚಿತ್ರದಲ್ಲಿ ಅಭಿನಯ ಕೂಡ ಅದರ ನಿರೂಪಣೆಯಷ್ಟೇ ಸೈಜವಾಗಿತ್ತು. 'ನಮ್ಮ ಮಕ್ಕಳು' ಚಿತ್ರ ಕ್ಕೆ ರಾಜ್ಯ ಸರ್ಕಾರದಿಂದ ೧೯೬೮-೬೯ರ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಸಿಗುವುದರ ಜೊತೆಗೆ ಅಶ್ವತ್ಥ್‌ರಿಗೆ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ, ಪಂಥರಿಬಾಯಿಯವರಿಗೆ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಹಾಗೂ ಆರ್.ಎನ್.ಜಯಗೋಪಾಲ್‌ರಿಗೆ ಅತ್ಯುತ್ತಮ ಸಂಭಾಷಣೆ ಪ್ರಶಸ್ತಿಗಳೂ ಲಭ್ಯವಾದವು. ಈ ಚಿತ್ರದಿಂದ ಚಂದ್ರಶೇಖರ್ ಎಂಬ ಬಾಲನಟನ ಪ್ರವೇಶವಾಯಿತು. ಮುಂದೆ ಅವರು 'ಎಡಕಲ್ಲು ಗುಡ್ಡದ ಮೇಲೆ' ಚಿತ್ರದ ನಾಯಕನಟರೂ ಆದರು. ಈ ಚಿತ್ರ ತಮಿಳಿನಲ್ಲೂ ರೀಮೇಕ್ ಆಗಿ ಯಶಸ್ವಿಯಾಯಿತು.

ಅಭಿನಯ ಕ್ಷೇತ್ರದಿಂದ ನಿರ್ಮಾಣ ಕ್ಷೇತ್ರಕ್ಕೆ ಬಂದು ನಟರಾಗಿಯೂ ಉದ್ಯಮದಲ್ಲಿ ಉಳಿದುಕೊಂಡವರ ಪೈಕಿ ಮುಖ್ಯರಾದವರು ಎಂ.ಪಿ.ಶಂಕರ್. ಹುಣಸೂರು ಕೃಷ್ಣಮೂರ್ತಿಗಳ 'ವೀರಸಂಕಲ್ಪ'ದಲ್ಲಿ ಖಳನಾಯಕನಾಗಿ ಚಿತ್ರರಂಗವನ್ನು ಪ್ರವೇಶಿಸಿದ ಈ ಆಜಾನುಬಾಹು, ವನ್ಯಜೀವಿ ಪ್ರಿಯ. ಕಾಡುಮೇಡುಗಳು ಅವರ ವಿಶೇಷ ಆಸಕ್ತಿಯನ್ನು ಕೆರಳಿಸಿದ್ದರಿಂದ ಶ್ರೀ ಭರಣಿ ಚಿತ್ರಾಲಯ ಲಾಂಛನದಲ್ಲಿ ಅವರು ನಿರ್ಮಿಸಿದ ಮೊದಲ ಚಿತ್ರ 'ಕಾಡಿನ ರಹಸ್ಯ' ಕೂಡ ಅದೇ ಪರಿಸರವನ್ನು ಕುರಿತದ್ದಾಯಿತು. ಈ ಚಿತ್ರದ ನಿರ್ದೇಶಕರೂ ಗೀತಪ್ರಿಯರೆ. ನಾಗರಹೊಳೆ, ಬಂಡೀಪುರಗಳ ವಿಪುಲವಾದ ಅರಣ್ಯ ಸಂಪತ್ತನ್ನು ಉಪಯೋಗಿಸಿಕೊಂಡು ಕಣ್ಣಿಗೆ ರಮ್ಯವಾದ, ಜೊತೆಗೆ ಹೃದಯಕ್ಕೆ ನಾಟುವ ಚಿತ್ರಗಳನ್ನು ತಯಾರಿಸುವ ಪರಂಪರೆಯನ್ನು ಆರಂಭಿಸಿದವರು ಶಂಕರ್. ಈ ಪ್ರಯೋಗ ಬಹಳ ಯಶಸ್ವಿಯೆನಿಸಿ ಅವರು ಇದೇ ಪರಂಪರೆಯ ಅನೇಕ ಚಿತ್ರಗಳನ್ನು ಮುಂದೆಯೂ ನಿರ್ಮಿಸುವುದರೊಂದಿಗೆ ನಿರ್ದೇಶಕರೂ ಆದರು.

೧೯೬೯ರಲ್ಲಿ ಪುಟ್ಟಣ್ಣ ಕಣಗಾಲ್ ನಿರ್ದೇಶಿಸಿದ ಎರಡು ಚಿತ್ರಗಳು ಒಂದಾದ ಮೇಲೊಂದು ಬಿಡುಗಡೆಯಾಗಿದ್ದು ಕೇವಲ ಆಕಸ್ಮಿಕ. 'ಬೆಳ್ಳಿಮೋಡ' ಕನ್ನಡ ಪ್ರೇಕ್ಷಕರ ಮೇಲೆ ಗಹನವಾದ ಪರಿಣಾಮವನ್ನು ಬೀರಿದರೂ ಅವರು ತಮ್ಮ ಮುಂದಿನ ಚಿತ್ರವನ್ನು ನಿರ್ದೇಶಿಸಲು ಎರಡು ವರ್ಷಗಳು ಕಾಯಬೇಕಾಗಿ ಬಂದಿದ್ದು ಉತ್ತಮ ಪ್ರತಿಭೆಗಳಿಗ ಪುರಸ್ಕಾರ ನೀಡುವುದರಲ್ಲಿ ಕನ್ನಡ ಚಿತ್ರರಂಗ ಅನುಸರಿಸಿಕೊಂಡು ಬಂದಿರುವ ಮಂದಗತಿಗ ಇನ್ನೊಂದು ನಿದರ್ಶನವಾಯಿತು. ಪ್ರಾಯಶಃ ವ್ಯಾಪಾರಿ ಸೂತ್ರಗಳನ್ನೇ ಆರಾಧಿಸುವ ನಿರ್ಮಾಪಕರಿಗ ಪುಟ್ಟಣ್ಣನವರಂತಹ ನಿರ್ದೇಶಕರ ಕ್ರತುಶಕ್ತಿ ಲಾಭದಾಯಕವೆನಿಸಲಿಲ್ಲ. ಆದರೂ ಕನ್ನಡೇತರ ನಿರ್ಮಾಪಕರೊಬ್ಬರು ಅವರಿಗೆ ತಮ್ಮ ಎರಡನೆಯ ಚಿತ್ರವನ್ನು ನಿರ್ದೇಶಿಸುವ ಅವಕಾಶ ಮಾಡಿಕೊಟ್ಟರು. ಎ.ಎಲ್.ಶ್ರೀನಿವಾಸನ್ ನಿರ್ಮಿಸಿದ 'ಮಲ್ಲಮ್ಮನ ಪವಾಡ' ರಾಜಕುಮಾರ್ ಮತ್ತು ಬಿ.ಸರೋಜಾದೇವಿಯವರನ್ನು ಪ್ರಧಾನ ತಾರಾಗಣದಲ್ಲಿ ಹೊಂದಿದ ಚಿತ್ರ. ಬಿ.ಪುಟ್ಟಸ್ವಾಮಯ್ಯನವರ ಕಾದಂಬರಿಯ ಆಧಾರದ ಮೇಲೆ ನಿರ್ಮಿತವಾದ ಈ ಚಿತ್ರಕ್ಕೆ ನ್ಯೂ ಥಿಯೇಟರ್ಸ್ ಸಂಸ್ಥೆ ತಯಾರಿಸಿ ತುಂಬಾ ಯಶಸ್ವಿಯೆನಿಸಿದ್ದ ಬಂಗಾಳಿ ಚಿತ್ರ 'ಪರಿಣೀತಾ' ಮತ್ತು ತೆಲುಗು ಚಿತ್ರ 'ಅರ್ಧಾಂಗಿ' ಸ್ಫೂರ್ತಿ ನೀಡಿದ್ದು ಕೂಡ ಸ್ಪಷ್ಟವಾಗಿತ್ತು. ಮಂದಮತಿಯಾಗಿದ್ದ ಗಂಡನನ್ನು ಸುಸಂಸ್ಕೃತ ಮನುಷ್ಯನನ್ನಾಗಿ ಪರಿವರ್ತಿಸುವ ಹೆಣ್ಣಿನ ಕಥೆ ಇದು. ಪುಟ್ಟಣ್ಣನವರ ನಿರೂಪಣೆ 'ಬೆಳ್ಳಿಮೋಡ'ದ ನಿರೂಪಣೆಯ ಜಾಡನ್ನೇ ಹಿಡಿದಿತ್ತು. 'ಮಲ್ಲಮ್ಮನ ಪವಾಡ' ಚಿತ್ರದಲ್ಲಿ ಖಳನಾಯಕನಾಗಿ ಮೊದಲನೆಯ ಬಾರಿ ಚಿತ್ರರಂಗವನ್ನು ಪ್ರವೇಶಿಸಿದ ವಜ್ರಮುನಿ ನೀಡಿದ ಹದವರಿತ ಅಭಿನಯ ಅವರು ಮುಂದೆ ರೂಢಿಸಿಕೊಂಡ ಅಬ್ಬರದ ಶೈಲಿಗೆ ತೀರಾ ವ್ಯತಿರಿಕ್ತವಾಗಿತ್ತು.

ಪುಟ್ಟಣ್ಣನವರೇ ನಿರ್ದೇಶಿಸಿದ 'ಕಪ್ಪು-ಬಿಳುಪು' ಗಳಿಸಿದ ಜನಪ್ರಿಯತೆ ಅವರನ್ನು ಆರ್ಥಿಕವಾಗಿಯೂ ಯಶಸ್ವಿಯಾದ ನಿರ್ದೇಶಕರ ಸಾಲಿಗೆ ಸೇರಿಸಿ ಕಲೆ ಮತ್ತು ವ್ಯಾಪಾರಗಳು ಒಂದೇ ಚಿತ್ರದಲ್ಲಿ ಹೊಂದಿಕೊಂಡಿರುವುದು ಅಸಾಧ್ಯವೇನೂ ಅಲ್ಲವೆಂಬ ಸತ್ಯವನ್ನು ಮತ್ತೊಮ್ಮೆ ಒತ್ತಿ ಹೇಳಿತು. ತಮ್ಮ ಸಂಸ್ಥೆ ವಿಪರೀತ ನಷ್ಟವನ್ನನುಭವಿಸಿ, ಮುಚ್ಚುವ ಸ್ಥಿತಿ ಬಂದಿದ್ದಾಗ ಅದಕ್ಕೆ ಹೊಸ ಜೀವ ನೀಡಿದ ಚಿತ್ರ ಇದೆಂದು ಪಾರಿಜಾತದ ಮಾರುತಿ ನೆನೆಸಿಕೊಳ್ಳುತ್ತಾರೆ. ಆರ್ಯಾಂಬ ಪಟ್ಟಾಭಿಯವರ ಕಾದಂಬರಿಯೊಂದರ ಆಧಾರದ ಮೇಲೆ ನಿರ್ಮಿತವಾದ ಈ ಚಿತ್ರದಲ್ಲಿ ಕಲ್ಪನಾಗೆ ದ್ವಿಪಾತ್ರವಿತ್ತು - ಒಂದು ಉತ್ತರ ಧ್ರುವವಾದರೆ ಇನ್ನೊಂದು ದಕ್ಷಿಣ ಧ್ರುವ. ಚಿಕ್ಕಮ್ಮನ ಆಸರೆಯಲ್ಲಿ ಬೆಳೆದ ಹಳ್ಳಿಯ ಹುಡುಗಿ ಮತ್ತು ನಗರದ ಎಲ್ಲ ಆಕರ್ಷಣೆಗಳಿಗೂ ಬಲಿಯಾಗಿ ತನ್ನ ಜೀವನವನ್ನು ಕ್ಲಿಷ್ಟಗೊಳಿಸಿಕೊಂಡ ಆಧುನಿಕ ತರುಣಿಯ ಪಾತ್ರಗಳಲ್ಲಿ ಕಲ್ಪನಾ ಕಾಣಿಸಿಕೊಂಡರು. ನಗರವಾಸಿಯ ಪಾತ್ರ ನಿರೂಪಣೆಯಲ್ಲಿಯ ಕೃತಕತೆ, ಹಳ್ಳಿಯ ಹೆಣ್ಣಿನ ಪಾತ್ರ ಪೋಷಣೆಯಲ್ಲಿನ ವಾಸ್ತವತೆಗೆ ತದ್ವಿರುದ್ಧವಾಗಿತ್ತು. ಆರ್.ರತ್ನ ಅವರು ಪ್ರಥಮ ಶ್ರೇಣಿಯ ಸಂಗೀತ ನಿರ್ದೇಶಕರೇನೂ ಆಗಿರದಿದ್ದರೂ ಈ ಚಿತ್ರದಲ್ಲಿ ಅವರು ಸಂಯೋಜಿಸಿದ ಹಾಡುಗಳೆಲ್ಲವೂ ಅಪಾರ ಜನಪ್ರಿಯತೆ ಗಳಿಸಿದವು. ಚಿತ್ರದ ಮೊದಲ ಹಾಡು 'ಅಮ್ಮ ನಿನ್ನ ತೋಳಿನಲ್ಲಿ ಕಂದ ನಾನು....' ಚಿತ್ರೀಕರಣ ಪುಟ್ಟಣ್ಣ ತಮ್ಮ ವೃತ್ತಿಜೀವನದ ಹೊಸತಿನಲ್ಲಿಯೇ ಚಿತ್ರಮಾಧ್ಯಮದ ಮೇಲೆ ಸಾಧಿಸಿದ್ದ ಹಿಡಿತಕ್ಕೆ ಉತ್ತಮ ಉದಾಹರಣೆಯೆನಿಸಿತು. ಆ ಹಾಡನ್ನು ಅವರು ಚಿತ್ರಿಸಿದ ರೀತಿ ಅವರಲ್ಲಿದ್ದ ಶ್ರೇಷ್ಠ ತಂತ್ರಜ್ಞನನ್ನು ಬಹಿರಂಗಗೊಳಿಸಿತ್ತು.

ಮೇಲ್ನೋಟಕ್ಕೆ 'ಕಪ್ಪು-ಬಿಳುಪು'ಗೆ ಸಾಮ್ಯವಿದ್ದ, ಆದರೆ ಅದಕ್ಕಿಂತ ವಿಭಿನ್ನವಾದ ಚಿತ್ರ, ಆ ಚಿತ್ರದ ಬಗಲಿನಲ್ಲಿಯೇ ಬಿಡುಗಡೆಯಾದ ಎಂ.ಆರ್.ವಿಠಲ್ ನಿರ್ದೇಶನದ 'ಎರಡು ಮುಖ'. ಈ ಸಾಮ್ಯ ಯಾಕೆ ಕಂಡಿತೆಂದರೆ 'ಕಪ್ಪು-ಬಿಳುಪು'ನಲ್ಲಿ ಕಲ್ಪನಾ ದ್ವಿಪಾತ್ರಗಳಲ್ಲಿ ಅಭಿನಯಿಸಿದ್ದರೆ, 'ಎರಡು ಮುಖ'ದಲ್ಲಿ ಜಯಂತಿ ಛಿದ್ರವಾದ ವ್ಯಕ್ತಿತ್ವಕ್ಕೆ ತುತ್ತಾದ ಹೆಣ್ಣೊಬ್ಬಳ ಪಾತ್ರದಲ್ಲಿ ಎರಡು ವಿಭಿನ್ನ ವ್ಯಕ್ತಿತ್ವಗಳನ್ನು



(ಚಿತ್ರ ೪೯) 'ಕಪ್ಪು-ಬಿಳುಪು' ಚಿತ್ರದಲ್ಲಿ ಕಲ್ಪನಾ



(ಚಿತ್ರ ೫೦) 'ಎರಡು ಮುಖ' ಚಿತ್ರದಲ್ಲಿ ರಾಜೇಶ್ ಮತ್ತು ಜಯಂತಿ

ನಿರೂಪಿಸಿದ್ದರಿಂದ. ಸ್ಕಿಝೋಫ್ರೇನಿಯಾ ಒಂದು ಮಾನಸಿಕ ರೋಗ. ಈ ರೋಗದ ಬಗ್ಗೆ ಜನಸಾಮಾನ್ಯರಿಗೆ ಹೆಚ್ಚು ಅರಿವಿಲ್ಲ. ವ್ಯಾಪಾರಿ ಚಿತ್ರಗಳ ಸಂದರ್ಭದಲ್ಲಿ ಅದು ಜನಸಾಮಾನ್ಯರು ಒಪ್ಪಬಹುದಾದ ಕಥಾವಸ್ತುವೂ ಅಲ್ಲ. ಇದು ಆರ್ಯಾಂಬ ಪಟ್ಟಾಭಿಯವರ ಕಾದಂಬರಿ ಆಧರಿಸಿದ್ದಾಗಿತ್ತು. ನಿರ್ಮಾಪಕರಾದ ಶ್ರೀನಿವಾಸ್ ಮತ್ತು ಪ್ರಸಾದ್ ಹಾಗೂ ಎಂ.ಆರ್.ವಿಠಲ್ ಧೈರ್ಯ ಮಾಡಿ ತೆಗೆದ ಚಿತ್ರ ಇದು. ವಿಠಲ್‌ರವರ ನಿರ್ದೇಶನ ಕೆಲವೊಮ್ಮೆ ತೀರಾ ಸರಳವಾಗಿತ್ತು ಎನಿಸಿದರೂ ಮೆಲೊಡ್ರಾಮಾಗೆ ಮಾರು ಹೋಗದೆ ಕುತೂಹಲಕಾರಿಯಾಗಿ ಕಥೆಯನ್ನು ಹೇಳಿಕೊಂಡು ಹೋಗುವುದರಲ್ಲಿ ಅವರು ಯಶಸ್ವಿಯಾದರು. ಜಯಂತಿ ಅವರಿಗೆ ಸಮರ್ಥವಾಗಿ ನೆರವಾದರು. ಮನೋವೈದ್ಯರ ಪಾತ್ರದಲ್ಲಿ ಸಂಪತ್ ಗಂಭೀರವಾಗಿ ಅಭಿನಯಿಸಿ ಚಿತ್ರದ ಘನತೆಯನ್ನು ಹೆಚ್ಚಿಸಿದರು.

'ಉಯ್ಯಾಲೆ' ಲಕ್ಷ್ಮೀನಾರಾಯಣ್ ಚಿತ್ರಗಳಲ್ಲಿ ಸಾಮಾನ್ಯ ಜನರಿಗೆ ಅತ್ಯಂತ ಹತ್ತಿರ ಹೋದ ಚಿತ್ರ. ಮದುವೆಯಾದ ಹೆಣ್ಣೊಬ್ಬಳು ಮತ್ತೊಬ್ಬ ಗಂಡಸಿನಲ್ಲಿ ಅನುರಕ್ತಳಾಗುವ ಕಥೆಯಿದ್ದ ಈ ಚಿತ್ರಕ್ಕೆ ಚದುರಂಗರ ಜನಪ್ರಿಯ ಕಾದಂಬರಿಯೊಂದರ ಆಧಾರವಿತ್ತು. ಚಿತ್ರದಲ್ಲಿ ಮತ್ತೆ ಕಲ್ಪನಾ, ರಾಜಕುಮಾರ್ ಮತ್ತು ಅಶ್ವತ್ಥ್‌ರಂತಹ ಸೂಕ್ಷ್ಮ ಸಂವೇದನೆಯ ಕಲಾವಿದರಿದ್ದರು. ತಮ್ಮ ಇಷ್ಟಕ್ಕೆ ವಿರುದ್ಧವೇ ಲಕ್ಷ್ಮೀನಾರಾಯಣ್ ಈ ಚಿತ್ರದಲ್ಲಿಯೂ ಹಾಡುಗಳನ್ನು ಬಳಸಿದರು. ಆದರೆ 'ನಾಂದಿ'ಯ ಹಾಡುಗಳಂತೆಯೇ ಈ ಚಿತ್ರದ ಹಾಡುಗಳೂ ಜನಪ್ರಿಯವಾದವು. ಆದರೂ ತಮ್ಮ ಚಿತ್ರಗಳಲ್ಲಿ ಹಾಡುಗಳ ಬಳಕೆಯ ಬಗ್ಗೆ ಲಕ್ಷ್ಮೀನಾರಾಯಣ್‌ರ ನಿರಾಸಕ್ತಿಯಂತೂ ಕಡಿಮೆಯಾಗಲಿಲ್ಲ.

ಮತ್ತೊಮ್ಮೆ ಹಾಸ್ಯ ಸನ್ನಿವೇಶಗಳಲ್ಲಿ ಸಂಯಮ ಕಳೆದುಕೊಂಡಿದ್ದರು ಲಕ್ಷ್ಮೀನಾರಾಯಣ್. ಆದರೆ ಚಿತ್ರದ ಮೂವರು ಪ್ರಮುಖ ಪಾತ್ರಗಳ ನಡುವೆಯ ಸಂಬಂಧದ ಸೂಕ್ಷ್ಮಗಳನ್ನು ನಿರೂಪಿಸುವಲ್ಲಿ ಸಂಯಮ ತೋರಿದರು. ಪ್ರವಾಸಿ ಮಂದಿರದಲ್ಲಿ ವಿವಾಹಿತ ಹೆಣ್ಣು ತನ್ನ ಪ್ರಿಯಕರನೊಂದಿಗೆ ಸಖ್ಯ ಬೆಳೆಸಲು ಹಾತೊರೆಯುವ ಮತ್ತು ಮುಚ್ಚಿದ ಬಾಗಿಲ ಹಿಂದಿನಿಂದಲೇ ಆತ ತೀವ್ರ ವೇದನೆಯಿಂದ ಆಕೆಯೊಂದಿಗೆ ಸ್ಪಂದಿಸುವ ದೃಶ್ಯ ಮತ್ತು ನಾಯಕಿ ಉಯ್ಯಾಲೆಯಲ್ಲಿ ಕುಳಿತು ತನ್ನ ಜೀವನದಲ್ಲಿನ ದ್ವಂದ್ವಗಳನ್ನು ಪ್ರತಿಬಿಂಬಿಸುವ ದೃಶ್ಯಗಳು ತಮ್ಮ ಭಾವಗಳ ತೀವ್ರತೆಯಿಂದ ವಿಶೇಷ ಗಮನ ಸೆಳೆದವು. ನಾಯಕಿಯ ಪತಿನಿಷ್ಠೆಯನ್ನು ಮೀರಿ ಇನ್ನೊಬ್ಬನಲ್ಲಿಯ ಆಸಕ್ತಿಗೆ ಬಲವಾದ ಕಾರಣಗಳನ್ನು ಹೊಂದಿಸಿದ್ದರೂ ಅಂತಿಮ ದೃಶ್ಯದಲ್ಲಿ ರೈಲಿನಲ್ಲಿ ಹಳ್ಳಿಗೆ ಹೊರಟ, ತಾನು ಬಯಸಿದ ಯುವಕನಿಗಾಗಿ ಓಡುತ್ತಿದ್ದ ನಾಯಕಿಯನ್ನು ಸಮೀಪಿಸಿದ ಆಕೆಯ ಪತಿ ಸಮಾಧಾನದ ಮಾತಾಡಿ ಹಿಂದೆ ಕರೆದೊಯ್ಯುತ್ತಾರೆ. ಆ ಮಾತಿನ ಹಿಂದೆ ಆಕೆ ಗರ್ಭಿಣಿ ಇರಬಹುದೆಂಬ ಸೂಚನೆ. ಅದನ್ನು ಮೀರಿ ಎಲ್ಲ ತಿಳಿದೂ ತುಸುವೂ ಉದ್ರೇಕಗೊಳ್ಳದೆ ಆಕೆಯನ್ನು 'ಪ್ರೀತಿ'ಯಿಂದಲೇ ಕಾಣುವ ಪತಿಯ ಚಿತ್ರಣ ಕೊಡುವ, ತೀರ್ಮಾನ ಪ್ರೇಕ್ಷಕನಿಗೇ ಬಿಡುವ ಕೊನೆಯ ದೃಶ್ಯ ವಿಶೇಷವೆನಿಸಿತ್ತು. ಆದರೆ 'ಉಯ್ಯಾಲೆ'ಗೆ ಕೇಂದ್ರ ಪ್ರಶಸ್ತಿಯೂ ಸಿಗದೆ ರಾಜ್ಯ ಮಟ್ಟದಲ್ಲಿಯೂ ತಮ್ಮದೇ ಆದ 'ಮುಕ್ತಿ'ಯೊಂದಿಗೆ ೧೯೬೯-೭೦ರ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರದ ಪ್ರಶಸ್ತಿಯನ್ನು ಹಂಚಿಕೊಳ್ಳಬೇಕಾಗಿ ಬಂದಾಗ ವ್ಯಗ್ರರಾದ ಲಕ್ಷ್ಮೀನಾರಾಯಣ್ ಮಾಮೂಲಿ ಸೂತ್ರಗಳನ್ನೊಳಗೊಂಡ ಚಿತ್ರಗಳ ನಿರ್ದೇಶನಕ್ಕೆ ವಿದಾಯ ಹೇಳಿದರು. ಅತಿರೇಕದ ಮೆಲೊಡ್ರಾಮ ಎಂದು ಅವರು ಟೀಕಿಸಿದ್ದ 'ಗೆಜ್ಜೆಪೂಜೆ'ಗೆ ಆ ವರ್ಷದ ಅತ್ಯುತ್ತಮ ಚಿತ್ರದ ಪ್ರಶಸ್ತಿ ಬಂದಿದ್ದು ಕೂಡ ಅವರಿಗೆ ಪಥ್ಯವಾಗದೆ ಪ್ರಶಸ್ತಿ ಮಂಡಳಿಯ ಸದಸ್ಯರ ಯೋಗ್ಯತೆಯನ್ನೇ ಪ್ರಶ್ನಿಸಿ ದೊಡ್ಡ ಹಗರಣವನ್ನೇ ಸೃಷ್ಟಿಸಿದರು.

ನಟ-ನಿರ್ಮಾಪಕ ದ್ವಾರಕೀಶ್ ಮತ್ತು ರಾಜಕುಮಾರ್ ನಡುವೆ ಅನೇಕ ವರ್ಷಗಳ ಕಾಲ ಬೆಳೆದ ಸಂಬಂಧ ಕನ್ನಡ ಚಿತ್ರೋದ್ಯಮದ ಅತ್ಯಂತ ಪ್ರಮುಖ ಬಾಂಧವ್ಯಗಳಲ್ಲೊಂದು. ಈ ಸಂಬಂಧವನ್ನು ಗಟ್ಟಿಯಾಗಿ ಕುದುರಿಸಿದ ಚಿತ್ರ ದ್ವಾರಕೀಶ್ ಅವರೇ ತಯಾರಿಸಿದ 'ಮೇಯರ್ ಮುತ್ತಣ್ಣ'. ಈ ಚಿತ್ರದ ಮೂಲಕವೇ ಕನ್ನಡದ ಖ್ಯಾತ ನಿರ್ದೇಶಕ ಸಿದ್ಧಲಿಂಗಯ್ಯ ಸ್ವತಂತ್ರ ನಿರ್ದೇಶಕರಾಗಿ ಗರಿ ಕಟ್ಟಿಕೊಂಡಿದ್ದು. ಸುಮಾರು ವರ್ಷಗಳ ಕಾಲ ಬಿ.ವಿಠಲಾಚಾರ್ಯರೊಂದಿಗೆ ಸಹಾಯಕ ನಿರ್ದೇಶಕರಾಗಿ ದುಡಿದಿದ್ದ ಸಿದ್ಧಲಿಂಗಯ್ಯನವರಿಗೆ ಚಿತ್ರವೊಂದನ್ನು ನಿರ್ದೇಶಿಸಲು ಮೊದಲು ಅವಕಾಶ ಕೊಟ್ಟಿದ್ದು ದ್ವಾರಕೀಶ್. ಆ ವೇಳೆಗೆ ನಟರಾಗಿ ದ್ವಾರಕೀಶ್ ಅಲ್ಪ ಸ್ವಲ್ಪ ಸಂಪಾದಿಸಿಕೊಂಡಿದ್ದರೂ ಈ ಚಿತ್ರದ ತಯಾರಿಕೆಗೆ ಅಷ್ಟು ಹಣ ಖಂಡಿತವಾಗಿಯೂ ಸಾಕಾಗಲಿಲ್ಲ. ಸ್ವಲ್ಪ ಕಾಲ ಶೂಟಿಂಗ್ ನಡೆದ ಮೇಲೆ ಕೆಲಸ ಸ್ಥಗಿತಗೊಳ್ಳುವ ಪರಿಸ್ಥಿತಿ ಉಂಟಾಯಿತು. ಕೆಲವು ಸ್ನೇಹಿತರು ದ್ವಾರಕೀಶ್‌ರಿಗೆ ಸ್ವಲ್ಪ ಹಣವನ್ನು ಕೈ ಸಾಲವಾಗಿ ಕೊಟ್ಟಿದ್ದರು. ಅಂದಿನ ಯಶಸ್ವಿ ಹಂಚಿಕೆದಾರರಲ್ಲೊಬ್ಬರಾದ ಹೆಚ್.ಎನ್.ಮುದ್ದುಕೃಷ್ಣ ಆಗಾಗ ಶೂಟಿಂಗ್ ನೋಡಲು ಕೂಡ ಬರುತ್ತಿದ್ದರು. ಅವರಿಗೆ ಈ ಚಿತ್ರ ಯಶಸ್ವಿಯಾಗಬಹುದೆಂದು ಅನ್ನಿಸಿ ಅದರ ಸಂಪೂರ್ಣ (ಜೀವನಪರ್ಯಂತ) ಹಕ್ಕುಗಳನ್ನು ಪಡೆದುಕೊಳ್ಳಲು ಮುಂದಾದ್ದರಿಂದ ಚಿತ್ರ ಪ್ರಗತಿ ಸಾಧಿಸುವುದು ಸಾಧ್ಯವಾಯಿತು. ಬಿಡುಗಡೆಗೆ ಮುಂಚೆಯೇ ದ್ವಾರಕೀಶ್‌ರಿಗೆ ೫೦,೦೦೦ ರೂಪಾಯಿ ಲಾಭವೂ ದಕ್ಕಿತು. ಈ ರೀತಿ ಸಂಪೂರ್ಣವಾಗಿ ಮಾರಾಟವಾದ ಮೊದಲ ಕನ್ನಡ ಚಿತ್ರ 'ಮೇಯರ್ ಮುತ್ತಣ್ಣ'. ನಿರೂಪಣೆಯಲ್ಲಿ ನವಿರಿರಲಿಲ್ಲ, ಆದರೆ ಅದರ ಕಚ್ಚಾತನದಲ್ಲಿಯೇ ಅಡಗಿದ್ದ ಕೆಲವು ರಂಜನೀಯ ಅಂಶಗಳು ಚಿತ್ರಕ್ಕೆ ಭಾರಿ ಜನಪ್ರಿಯತೆಯನ್ನು ತಂದುಕೊಟ್ಟವು. ಒಂದು ಕ್ಯಾಲೆಂಡರ್‌ನಲ್ಲಿನ ಚಿತ್ರದಿಂದ ಪ್ರಭಾವಿತವಾದ ಚಿತ್ರದ ಕಥೆಗೆ ಚಿ.ಉದಯಶಂಕರ್ ಪೋಷಣೆ ಕೊಟ್ಟರು. ರಾಜಕುಮಾರ್‌ರ ನಿಜವಾದ ಹೆಸರು ಮುತ್ತುರಾಜ್ ಆಗಿದ್ದರಿಂದ ಬೆಂಗಳೂರಿನಂತಹ ಬೃಹತ್ ನಗರದ ಮೇಯರ್ ಸ್ಥಾನಕ್ಕೇರಿದ ಹಳ್ಳಿ ಹೈದನ ಕಥೆಯ ಈ ಚಿತ್ರಕ್ಕೆ 'ಮೇಯರ್ ಮುತ್ತಣ್ಣ' ಎಂಬ ಹೆಸರನ್ನೇ ಇಡಲಾಯಿತು. ಕನ್ನಡ ಚಿತ್ರೋದ್ಯಮದ ವಾಣಿಜ್ಯ ಚರಿತ್ರೆಯಲ್ಲಿ 'ಮೇಯರ್ ಮುತ್ತಣ್ಣ'ಕ್ಕೆ ಒಂದು ವಿಶೇಷ ಸ್ಥಾನವಿದೆ. ಮುಂದೆ ಸಿದ್ಧಲಿಂಗಯ್ಯನವರು ಗ್ರಾಮೀಣ ಕಥಾವಸ್ತುವನ್ನುಳ್ಳ ಚಿತ್ರಗಳ ನಿರ್ದೇಶನದಲ್ಲಿ ಸಿದ್ಧಹಸ್ತರೆನಿಸಿದರು. ಇದೇ ಹೊತ್ತಿನಲ್ಲಿ ಸತ್ಯಜಿತ್ ರಾಯ್ ಚಿತ್ರಗಳು ಭಾರತೀಯ ಸಂಸ್ಕೃತಿಗಿಂತ ಬಡತನವನ್ನೇ ವೈಭವೀಕರಿಸುತ್ತಿವೆ ಎಂಬ ತಕರಾರನ್ನು ಸಂಸತ್ತಿನಲ್ಲಿ ಎತ್ತಿದ್ದರು ತಾರೆ ನರ್ಗಿಸ್. ಆ ಹಿನ್ನೆಲೆಯಲ್ಲಿ 'ಮೇಯರ್ ಮುತ್ತಣ್ಣ'ದಲ್ಲಿ ಕೆಲವು ದೃಶ್ಯಗಳು, ಮಾತುಗಳು ಸೇರಿದ್ದವು.



(ಚಿತ್ರ ೫೧) 'ಉಯ್ಯಾಲೆ' ಚಿತ್ರದಲ್ಲಿ ಕಲ್ಪನಾ, ರಾಜಕುಮಾರ್, ಅಶ್ವತ್ಥ್

ತಮ್ಮ ಚಿತ್ರಗಳ ಜನಪ್ರಿಯತೆಗಾಗಿ ಪ್ರತಿಭಾವಂತ ಸಾಹಿತಿ-ನಿರ್ದೇಶಕ ಜಿ.ವಿ.ಅಯ್ಯರ್ ಎಷ್ಟೇ ರಾಜಿಗಳನ್ನು ಮಾಡಿಕೊಂಡಿದ್ದರೂ ಅವರಿಗಿದ್ದ ಸಾಮಾಜಿಕ ಕಳಕಳಿ ಗೌಣವೇನಲ್ಲ. ಹೀಗಾಗಿ ಅವರು 'ಚೌಕದ ದೀಪ'ದಲ್ಲಿ ವೇಶ್ಯಾ ಸಮಸ್ಯೆಯನ್ನು ಕೈಗೆತ್ತಿಕೊಂಡು ಯಾವೊಂದು ಅಂಕೆಯೂ ಇಲ್ಲದ ವಿಷಯ ನಿರೂಪಣೆಗೆ ಪ್ರಯತ್ನಿಸಿದರು. ವೇಶ್ಯೆಯೊಬ್ಬಳ ಜೀವನದಲ್ಲಿ ರಂಗುಗಳಿಲ್ಲದ ಇನ್ನೊಂದು ಮುಖವೂ ಇದೆಯೆಂಬುದನ್ನು ತೋರಿಸುವುದು ಅವರ ಮುಖ್ಯ ಉದ್ದೇಶ. ಡೆಂಕರ್ ಲೀನ್ಸ್‌ರ 'ಹಾರ್ಡ್ ಫ್ಯಾಕ್ಟ್ಸ್' ಎಂಬ ಸಾಹಿತ್ಯ ಕೃತಿ ಈ ಚಿತ್ರಕ್ಕೆ ಮೂಲ ಸ್ಫೂರ್ತಿಯಾಯಿತು. ಜೊತೆಗೆ ಕನ್ನಡ ಕೃತಿ 'ಕನ್ಯಾಬಲಿ'ಯಿಂದ ಕೆಲವು ಅಂಶಗಳನ್ನು ಕಥೆಗೆ ಸೇರಿಸಿಕೊಂಡರು. ತಂದೆಯೇ ತನ್ನ ಸ್ವಂತ ಮಗಳೊಂದಿಗೆ ಅನೈತಿಕ ಸಂಬಂಧವನ್ನು ಹೊಂದಿದ ಈ ಚಿತ್ರದಲ್ಲಿನ ಒಂದು ಸನ್ನಿವೇಶ ಪ್ರೇಕ್ಷಕರ ತೀವ್ರ ಆಕ್ರೋಶಕ್ಕೆ ಕಾರಣವಾಯಿತು. ಈ ಚಿತ್ರ ತನ್ನ ಕಾಲಕ್ಕಿಂತ ಮುಂದೆ ಇತ್ತೆಂದೂ ಇಷ್ಟು ಬೇಗ ಮಾಡಬಾರದಾಗಿತ್ತೆಂದು ಅವರಿಗೆ ಅನ್ನಿಸಿತು.



(ಚಿತ್ರ ೫೨) 'ಮೇಯರ್ ಮುತ್ತಣ್ಣ' ಚಿತ್ರದಲ್ಲಿ ರಾಜಕುಮಾರ್, ದ್ವಾರಕೀಶ್

'ಚೌಕದ ದೀಪ'ದ ಮೂಲಕ ಕನ್ನಡ ಚಿತ್ರರಂಗಕ್ಕೆ ನಾಯಕ ನಟ ಗಂಗಾಧರ್ (ಆ ಚಿತ್ರದಲ್ಲಿ ಅವರ ಹೆಸರು ರಾಜೇಂದ್ರಕುಮಾರ್) ಮತ್ತು ಪೋಷಕ ನಟ ಅನಂತರಾಂ ಮಚ್ಚೇರಿಯವರ ಪ್ರವೇಶವಾಯಿತು. ಅವರಿಬ್ಬರೂ ರಂಗಭೂಮಿಯಿಂದ ಬಂದವರು. ಅಯ್ಯರ್‌ರವರೇ ಈ ಚಿತ್ರದಲ್ಲಿ ಪ್ರಮುಖ ಪಾತ್ರವೊಂದನ್ನು ನಿರ್ವಹಿಸಿದ್ದರು.

ಆ ವರ್ಷದ ಕೊನೆಯ ಚಿತ್ರ 'ಅಪರೇಷನ್ ಜಾಕ್‌ಪಾಟ್ - ಸಿ.ಐ.ಡಿ. ೯೯೯' ದೊರೆ-ಭಗವಾನ್‌ರ ಜೇಮ್ಸ್ ಬಾಂಡ್ ಚಿತ್ರ. 'ಜೇಡರ ಬಲೆ'ಯ ಜಾಡನ್ನೇ ಹಿಡಿದರೂ ಅದರಲ್ಲಿನ ವಿಶಿಷ್ಟ ರೀತಿಯ ಸಾಹಸ ದೃಶ್ಯಗಳಿಂದ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡರು. ಇನ್ನೂ ನಿರ್ಮಾಣದಲ್ಲಿದ್ದ ಬಹು ಅಂತಸ್ತಿನ ಕಟ್ಟಡವೊಂದರಲ್ಲಿ ರಾಜಕುಮಾರ್ ತಮ್ಮ ವೈರಿಗಳೊಂದಿಗೆ ಭೀಕರವಾಗಿ ಹೋರಾಡುವ ದೃಶ್ಯ ಪ್ರೇಕ್ಷಕರ ಹಾಗೂ ವಿಮರ್ಶಕರ ವಿಶೇಷ ಪ್ರಶಂಸೆಗೆ ಪಾತ್ರವಾಯಿತು. ಆಗ ದಕ್ಷಿಣ ಭಾರತ ಚಿತ್ರರಂಗದಲ್ಲಿ ಖ್ಯಾತನಾಮರಾಗಿದ್ದ ಪುಷ್ಪವಲ್ಲಿಯವರ ಮಗಳು ರೇಖಾ ಅನಿರೀಕ್ಷಿತವಾಗಿ ಈ ಕನ್ನಡ ಚಿತ್ರದ ನಾಯಕಿಯ ಪಾತ್ರಕ್ಕೆ ಗೊತ್ತಾಗಿ ಈ ಚಿತ್ರದ ಷೂಟಿಂಗ್ ಮುಗಿಯುವ ವೇಳೆಗೆ ನಾಲ್ಕು ಹಿಂದಿ ಚಿತ್ರಗಳಲ್ಲಿ ಅಭಿನಯಿಸುವುದಕ್ಕೆ ಗೊತ್ತಾಗಿದ್ದೊಂದು ಸ್ವಾರಸ್ಯಕರ ಸಂಗತಿ.

ಇದು ರಾಜಕುಮಾರ್‌ರಿಗೆ ಖುಷಿ ಕೊಟ್ಟ ಚಿತ್ರ. ಅದರ ಬಗ್ಗೆ ಅವರು ತುಂಬಾ ಆಸಕ್ತಿ ವಹಿಸಿದರು ಕೂಡ. ಚಿತ್ರದ ಮುಹೂರ್ತ ನಡೆದಿದ್ದು ಮದರಾಸಿನಲ್ಲಿ. ಆದರೆ ಹಿಂದಿನ ರಾತ್ರಿ ೧.೩೦ರವರೆಗೆ ಅವರು ದೂರದ ಮೈಸೂರಿನಲ್ಲಿ ಚಿತ್ರಣದಲ್ಲಿ ನಿರತರಾಗಿದ್ದರು. ಅಂದು ರಾತ್ರಿಯ ಷೂಟಿಂಗ್ ಮುಗಿಸಿ ರಾತ್ರೋ ರಾತ್ರಿ ಬೆಂಗಳೂರಿಗೆ ಕಾರಿನಲ್ಲಿ ದೌಡಾಯಿಸಿ ಬೆಳಿಗ್ಗೆ ವಿಮಾನ ಹಿಡಿದು ಮದರಾಸಿನಲ್ಲಿ ಬಂದಿಳಿದ ಅವರು ವಿಮಾನ ನಿಲ್ದಾಣದಿಂದ ನೇರವಾಗಿ ಹೋಗಿದ್ದು ಒಂದು ಸೆಲೂನ್‌ಗೆ. ಅವರು ತಮ್ಮ ಚಿತ್ರಗಳಲ್ಲಿ ಸಾಧಾರಣವಾಗಿ ವಿಗ್ ಬಳಸುತ್ತಿದ್ದರು. ಆದರೆ ಈ ಚಿತ್ರದಲ್ಲಿ ಜೇಮ್ಸ್ ಬಾಂಡ್ ವೇಷಧಾರಿಯಾದ್ದರಿಂದ 'ಕ್ಲೋಸ್ ಕ್ರಾಪ್' ಅಗತ್ಯವಾಗಿತ್ತು. ಆದ್ದರಿಂದಲೇ ಅವರು ಈ ಪಾತ್ರದಲ್ಲಿ ತೀರಾ ವಿಭಿನ್ನವಾಗಿ ಕಂಡರು. ವಾಸ್ತವವಾಗಿ ೧೯೬೭ರಲ್ಲಿ ತೆರೆಗೆ ಬಂದ 'ಜಾಣರ ಜಾಣ'ದಲ್ಲಿಯೇ ಜೇಮ್ಸ್ ಬಾಂಡ್ ಚಿತ್ರಗಳ ನಿರೂಪಣಾ ತಂತ್ರವನ್ನು ಗಮನೀಯವೆನಿಸುವ ಜಾಣ್ಮೆಯಿಂದ ಬಳಸಲಾಗಿತ್ತು. ಕಾರುಗಳನ್ನು ಉರುಳಿಸಿ ಸುಡುವುದು, ಧಾರಾಳವಾಗಿ ಪಿಸ್ತೂಲುಗಳ ಪ್ರಯೋಗ, ಇವೆಲ್ಲ ಅಂದು ಕನ್ನಡ ಚಿತ್ರವೊಂದಕ್ಕೆ ವಿಶೇಷವಾದ ಪರಿಕರಗಳಾಗಿದ್ದವು. ಇಂತಹ ಸಾಹಸ ಪ್ರಧಾನ ಚಿತ್ರಗಳಿಗೆ ತುಂಬಾ ಅಗತ್ಯವಾದ ಚುರುಕಾದ ಸಂಕಲನ ಈ ಚಿತ್ರದ ಮತ್ತೊಂದು ಹೆಚ್ಚಳವಾಯಿತು. ಆದರೂ ಅದ್ದೂರಿ ತಾರಾಗಣವಿಲ್ಲದ ಆ ಚಿತ್ರಕ್ಕೆ ನಂತರ ದೊರೆ-ಭಗವಾನ್ ನಿರ್ಮಿಸಿದ ಜೇಮ್ಸ್ ಬಾಂಡ್ ಶೈಲಿಯ ಚಿತ್ರಗಳಷ್ಟು ಪ್ರಾಮುಖ್ಯ ಸಿಗದಾಯಿತು.

'ಸಿ.ಐ.ಡಿ. ೯೯೯' ಗೆ ಕಲಾ ನಿರ್ದೇಶಕ ಚಲಂರವರು ನಿರ್ಮಿಸಿದ ಸೆಟ್‌ಗಳೇ ಆಗ ವಿಶೇಷವಾಗಿ ಸುದ್ದಿ ಮಾಡಿದವು. ಟ್ರಾಪ್ ಡೋರ್‌ಗಳು, ಸುರಂಗಗಳು, ಅನೇಕ ವಿಚಿತ್ರ ಸಾಧನಗಳಿರುವ ಕಿಟಕಿಗಳು ಮತ್ತು ಬಾಗಿಲುಗಳು, ಒಂದು ಭವ್ಯವಾದ ಆದರೆ ಅಪಾಯಕಾರಿಯೆನಿಸುವ ಬಾತ್ ರೂಂ - ಈ ಸೆಟ್‌ಗಳ ಮೇಲೆ ಸಂಪೂರ್ಣ ಸೂಟುಧಾರಿ ರಾಜಕುಮಾರ್‌ರೊಂದಿಗೆ ಚಡ್ಡಿ-ಬನಿಯನ್ ಹಾಕಿಕೊಂಡ ಕೇಡಿಗಳು ಹೊಡೆದಾಡುವ ದೃಶ್ಯಗಳು ತುಂಬಾ ರೋಚಕವಾದ ಅನುಭವವನ್ನೇ ನೀಡಿದವು. ಜಿ.ಕೆ.ವೆಂಕಟೇಶ್ ಮತ್ತು ಹೆನ್ರಿ ಡೇನಿಯಲ್ ಜೊತೆಗೂಡಿ ಸಂಗೀತವನ್ನು ಸಂಯೋಜಿಸಿದರು.



(ಚಿತ್ರ ೫೩) 'ಅಪರೇಷನ್ ಜಾಕ್‌ಪಾಟ್ - ಸಿ.ಐ.ಡಿ. ೯೯೯' ಚಿತ್ರದಲ್ಲಿ ನರಸಿಂಹರಾಜು, ರಾಜಕುಮಾರ್, ರೇಖಾ

ತೆರೆಕಂಡ ಸುಮಾರೆನಿಸುವ ಚಿತ್ರಗಳ ಮಧ್ಯೆ 'ಭಲೇ ಬಸವ' ಕೂಡಾ ಒಂದು. ಈ ಚಿತ್ರದಲ್ಲಿ ದ್ವಂದ್ವಾರ್ಥ ಎನ್ನಿಸಿದರೂ ಒಗಟುಗಳನ್ನು ಬಳಸಿ ಕಟ್ಟಿದ ಹಾಡು ವಿಶೇಷವೆನಿಸಿತ್ತು. ರಾಜಕುಮಾರ್ ಅವರ ದೇಹದಾರ್ಢ್ಯದ ಪ್ರದರ್ಶನವೂ ಆಯಿತು. ಮುಂದೆ ಹಲವಾರು ಚಿತ್ರಗಳಲ್ಲಿ ಇಂಥ ಅಂಶಗಳು ಬಳಕೆಯಾಗತೊಡಗಿದವು.

ಈ ದಶಕದ ಕೊನೆಯ ವರ್ಷ ೧೯೭೦ರಲ್ಲಿ ಬಿಡುಗಡೆಯಾದ ಕನ್ನಡ ಚಿತ್ರಗಳ ಸಂಖ್ಯೆ ಹಿಂದಿನ ವರ್ಷದ ೩೭ರಿಂದ ೩೫ಕ್ಕೆ ಇಳಿದರೂ 'ಸಂಸ್ಕಾರ', 'ಗೆಜ್ಜೆಪೂಜೆ' ಮತ್ತು 'ಶ್ರೀಕೃಷ್ಣದೇವರಾಯ'ದಂತಹ ಮೈಲಿಗಲ್ಲುಗಳನ್ನು ಬೆಳಕಿಗೆ ತಂದ ಸಾರ್ಥಕ ವರ್ಷ ಇದಾಯಿತು.

'ಸಂಸ್ಕಾರ' ಮತ್ತು 'ಶ್ರೀಕೃಷ್ಣದೇವರಾಯ' ಚಿತ್ರಗಳು ಎಬ್ಬಿಸಿದ ವಿವಾದಗಳ ಬಿರುಗಾಳಿಯ ಬಗ್ಗೆ ಈಗಾಗಲೇ ವಿವರಗಳನ್ನು ನೀಡಲಾಗಿದೆ. ಆದರೆ ಈ ವಿವಾದಗಳು ಮಾತ್ರ ಆ ಚಿತ್ರಗಳನ್ನು ಮೈಲಿಗಲ್ಲುಗಳನ್ನಾಗಿಸಲಿಲ್ಲ, ಈ ಎರಡು ಚಿತ್ರಗಳಿಗೂ ಕನ್ನಡ ಚಲನಚಿತ್ರ ಇತಿಹಾಸದಲ್ಲಿ ವಿಶೇಷವಾದ ಸ್ಥಾನ ಮೀಸಲಾಗಿದೆ. 'ಸಂಸ್ಕಾರ'ವಂತೂ ಒಂದು ವಿಶ್ವಮಾನ್ಯ ಚಿತ್ರ.

೧೯೫೫ರಲ್ಲಿ ಬಿಡುಗಡೆಯಾದ ಸತ್ಯಜಿತ್ ರಾಯ್‌ರವರ 'ಪಥೇರ್ ಪಾಂಚಾಲಿ' ಇಡೀ ವಿಶ್ವದ ಚಲನಚಿತ್ರ ರಂಗದಲ್ಲಿಯೇ ಯಾವ ರೀತಿಯ ಕೋಲಾಹಲವನ್ನುಂಟು ಮಾಡಿತೋ, ೧೯೭೦ರಲ್ಲಿ ಕನ್ನಡ ಚಿತ್ರ 'ಸಂಸ್ಕಾರ' ಭಾರತೀಯ ಚಲನಚಿತ್ರರಂಗದಲ್ಲಿ



(ಚಿತ್ರ ೫೪) 'ಸಂಸ್ಕಾರ' ಚಿತ್ರದಲ್ಲಿ ಲಂಕೇಶ್ ಮತ್ತು ಸ್ನೇಹಲತಾರೆಡ್ಡಿ

ಅದೇ ರೀತಿಯ ಕೋಲಾಹಲವನ್ನೆಬ್ಬಿಸಿ ನಂತರ ಅದರ ಕೀರ್ತಿಯನ್ನು ವಿಶ್ವದಾದ್ಯಂತ ಹಬ್ಬಿಸಿಕೊಂಡಿತು. ಅಷ್ಟೇ ಅಲ್ಲ, ಕನ್ನಡದಲ್ಲಿ ಹೊಸ ಅಲೆಯ ಚಿತ್ರಗಳ ಆಂದೋಲನಕ್ಕೆ ನಾಂದಿ ಕೂಡ ಹಾಡಿತು. ಜಾಗತಿಕ ಮಟ್ಟದಲ್ಲಿ ಇನ್ನಾವ ಕನ್ನಡ ಚಿತ್ರವೂ 'ಸಂಸ್ಕಾರ'ದಷ್ಟು ವ್ಯಾಪಕವಾಗಿ ಪ್ರದರ್ಶಿತವಾಗಿಲ್ಲ. ಬಲಪಂಥೀಯ ರಾಷ್ಟ್ರಗಳಾಗಲಿ, ಎಡ ಪಂಥೀಯ ರಾಷ್ಟ್ರಗಳಾಗಲಿ, ತೃತೀಯ ವಿಶ್ವದ ರಾಷ್ಟ್ರಗಳಾಗಲಿ ಈ ಚಿತ್ರಕ್ಕೆ ಸಮಾನವಾದ ಪುರಸ್ಕಾರವನ್ನು ನೀಡಿದವು.

ಕನ್ನಡ ಸಾರಸ್ವತ ಪ್ರಪಂಚದ ಅನೇಕ ಪ್ರತಿಭೆಗಳು 'ಸಂಸ್ಕಾರ'ದ ನಿರ್ಮಾಣಕ್ಕೆ ಟೊಂಕ ಕಟ್ಟಿ ನಿಂತವು. ಅದರೆ ಆ ಚಿತ್ರದಲ್ಲಿ ಕೆಲವು ವಿದೇಶೀ ತಂತ್ರಜ್ಞರು ಕೂಡ ತಮ್ಮನ್ನು ತೊಡಗಿಸಿಕೊಂಡಿದ್ದೊಂದು ವಿಶೇಷ. ಚಿತ್ರದ ಛಾಯಾಗ್ರಾಹಕ ಟಾಂ ಕೋವನ್ ಆಸ್ಟ್ರೇಲಿಯಾದವರು. ಸಂಕಲನಕಾರ ಸ್ಟೀವನ್ ಕಾರ್ಥ್ಯೂ.

'ಸಂಸ್ಕಾರ'ವನ್ನು ನಿರ್ಮಿಸಿ, ನಿರ್ದೇಶಿಸಿದ ಪಟ್ಟಾಭಿರಾಮರೆಡ್ಡಿಯವರೇ ಕನ್ನಡಿಗರಿಗ, ಕನ್ನಡ ಚಿತ್ರರಂಗಕ್ಕೆ ಅಪರಿಚಿತರಾಗಿದ್ದರು. ಆಂಧ್ರದವರಾದ ಅವರು ತೆಲುಗಿನಲ್ಲಿ ಹೆಸರು ಮಾಡಿದ ಕವಿ ಹಾಗೂ ಚಿಂತಕ. ಆದರೆ ಅವರು ಬೆಂಗಳೂರನ್ನೇ ತಮ್ಮ ವಾಸಸ್ಥಾನವಾಗಿ ಮಾಡಿಕೊಂಡರು. ಅವರಿಗೆ ಪ್ರಚಲಿತ ಕನ್ನಡ ಸಾಹಿತ್ಯ ಮತ್ತು ರಂಗಭೂಮಿಗಳಲ್ಲಿ ದೊಡ್ಡ ಹೆಸರು ಗಳಿಸಿಕೊಂಡಿದ್ದ ಡಾ।ಅನಂತಮೂರ್ತಿ, ಗಿರೀಶ್ ಕಾರ್ನಾಡ್, ಪಿ.ಲಂಕೇಶ್ ಮುಂತಾದವರು ಬೆನ್ನೆಲುಬಾಗಿ ನಿಂತರು. ರೆಡ್ಡಿಯವರ ಪತ್ನಿ ಸ್ನೇಹಲತಾರೆಡ್ಡಿ ಕೂಡ ಒಬ್ಬ ವಿಚಾರವಾದಿ. ಈ ಎಲ್ಲ ಪ್ರತಿಭೆಗಳ ಸಂಗಮವಾದ 'ಸಂಸ್ಕಾರ' ಕೇವಲ ಕನ್ನಡ ಚಿತ್ರರಂಗದಲ್ಲಿ ಮಾತ್ರವಲ್ಲದೆ ಇಡೀ ಭಾರತೀಯ ಚಿತ್ರರಂಗದಲ್ಲಿ ಹೊಸ ಪ್ರಜ್ಞೆಯನ್ನುಂಟುಮಾಡಿದ ವಿಶಿಷ್ಟ ಚಿತ್ರ. ಅವರೆಲ್ಲರೊಂದಿಗೆ ಅಂದಿನ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿದ್ದ ಅನೇಕ ನಟನಟಿಯರು ಕೂಡಾ ಸೇರಿ ತಮ್ಮ ಸಂಭಾವನೆಗಳಿಗೂ ಆಸೆ ಪಡದೆ ಇಂತಹ ಒಂದು ವಿಭಿನ್ನ ಚಿತ್ರದ ತಯಾರಿಕೆಯಲ್ಲಿ ತಮ್ಮ ಪಾಲು ಕೂಡ ಇರಲೆಂಬ ಸಹಕಾರಾತ್ಮಕ ಮನೋಭಾವದಿಂದ ರೆಡ್ಡಿಯವರ ಹಿಂದೆ ನಿಂತರು. ಅವರೆಲ್ಲರ ಒಂದೇ ಅಭೀಷ್ಟೆ ಸಾರ್ಥಕವೆನಿಸಿತು.

'ಸಂಸ್ಕಾರ'ದ ಕಥೆಯನ್ನು ಕೇವಲ ಒಂದು ವರ್ಗದ ಜನರ ಸಂಪ್ರದಾಯಗಳ ಬಗ್ಗೆ ನಕಾರಾತ್ಮಕ ವಿಶ್ಲೇಷಣೆಯೆನ್ನುವುದಕ್ಕಿಂತ ಒಂದು ತಲೆಮಾರಿನವರ ಬಹಿರಂಗ ನಂಬಿಕೆಗಳ, ಅಂತರಂಗದ ಹಿಂಜರಿತಗಳ ವಸ್ತುನಿಷ್ಠ ವಿಶ್ಲೇಷಣೆಯೆನ್ನುವ ಮಾತೇ ಹೆಚ್ಚು ನಿಜವಾದರೂ ಚಿತ್ರಕ್ಕೆ ಬ್ರಾಹ್ಮಣವಿರೋಧಿಯೆಂಬ ಹಣೆಪಟ್ಟಿಯಂತೂ ತಪ್ಪಲಿಲ್ಲ. ಈ ಚಿತ್ರದಿಂದಾಗಿಯೇ ಮುಂದೆ ಹೊಸ ಅಲೆಯಿಂದ ಉದ್ಭವವಾದ - ಇಲ್ಲವೆ ಹೊಸ ಅಲೆಯ ಪ್ರಭಾವವನ್ನು ಪರೋಕ್ಷವಾಗಿ ಒಪ್ಪಿಕೊಂಡರೂ ಅನೇಕ ಬಾರಿ ರೂಕ್ಷವಾಗಿ ಮೂಡಿಬಂದ - ಅನೇಕ ಚಿತ್ರಗಳು ಹಳೆಯ ಕಾಲ ಕಂದಾಚಾರಗಳ, ಮೂಢನಂಬಿಕೆಗಳ, ಮೌಲ್ಯಗಳ ಅರೆಬೆಂದ ಚಿತ್ರಣವೆನಿಸಿದ್ದು ಕೂಡ ಒಂದು ಕಟುಸತ್ಯ. ಆದರೆ 'ಸಂಸ್ಕಾರ' ಮಾತ್ರ ತನ್ನದೇ ಆದ ವ್ಯಕ್ತಿತ್ವವನ್ನು ಗಳಿಸಿಕೊಂಡು ಎತ್ತರದಲ್ಲಿ ನಿಂತ ಚಿತ್ರ.

ನಂತರದ ವರ್ಷಗಳಲ್ಲಿ ಅನೇಕ ಸದಭಿರುಚಿಯ ಜನಪ್ರಿಯ ಚಿತ್ರಗಳನ್ನು ನಿರ್ದೇಶಿಸಿದ ಕನ್ನಡಿಗರೇ ಆದ ಸಿಂಗೀತಂ ಶ್ರೀನಿವಾಸರಾಯರು ಪಟ್ಟಾಭಿರಾಮರೆಡ್ಡಿಯವರ ಸಹನಿರ್ದೇಶಕರಾಗಿದ್ದರು. ನಿರ್ಮಾಣದ ಘಟ್ಟದಿಂದಲೇ ಚಿತ್ರಮಾಧ್ಯಮದ ಆರಾಧಕರಲ್ಲಿ ತೀವ್ರ ಕುತೂಹಲವನ್ನು ಕೆರಳಿಸಿದ್ದ ಈ ಚಿತ್ರ ಉತ್ಸಾಹದಿಂದಲೇ ಬಿಡುಗಡೆಯಾಗಿ ಅದ್ಧೂರಿಯ ಪ್ರಥಮ ಪ್ರದರ್ಶನವನ್ನೂ ಕಂಡುಕೊಂಡಿತು. ಜನಸಾಮಾನ್ಯರಿಗೆ ಚಿತ್ರದ ನಿಧಾನಗತಿ ಇಷ್ಟವಾಗಲಿಲ್ಲವಾದರೂ ಗಂಭೀರವಾದ ಪ್ರೇಕ್ಷಕರಿಗೆ ಅದೇ ಒಂದು ಹೊಸ ರೀತಿಯ ಅನುಭವವೆನಿಸಿದ್ದೂ ಹೌದು.

'ಸಂಸ್ಕಾರ' ರಾಷ್ಟ್ರಮಟ್ಟದಲ್ಲಿ ರಾಷ್ಟ್ರಾಧ್ಯಕ್ಷರ ಸ್ವರ್ಣಪದಕವನ್ನು ಪಡೆದು ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಅನೇಕ ಪ್ರಶಸ್ತಿಗಳಿಗೆ ಭಾಜನವಾಯಿತಾದರೂ ರಾಜ್ಯ ಸರ್ಕಾರದ ಚಲನಚಿತ್ರ ಪ್ರಶಸ್ತಿ ಮಂಡಳಿ ಅದಕ್ಕೆ ನೀಡಿದ್ದು ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು. ಬಂಡುಕೋರ ನಾರಾಯಣಪ್ಪನ ಪಾತ್ರದಲ್ಲಿ ಪಿ.ಲಂಕೇಶ್, ಆತ ಸತ್ತಾಗ ಇಡೀ ಸಮಾಜದಿಂದ ಬಹಿಷ್ಕೃತನಾದ ಆತನ ಶವಸಂಸ್ಕಾರವನ್ನು ಯಾರು ಮಾಡಬೇಕೆಂಬ ಜಿಜ್ಞಾಸೆಗೆ ಸಿಕ್ಕಿದ ಪ್ರಾಣೇಶಾಚಾರ್ಯರ ಪಾತ್ರದಲ್ಲಿ ಗಿರೀಶ್ ಕಾರ್ನಾಡ್, ನಾರಣಪ್ಪನ ಪ್ರೇಯಸಿ ಚಂದ್ರಿಯ ಪಾತ್ರದಲ್ಲಿ ಸ್ನೇಹಲತಾರೆಡ್ಡಿ - ಮೂವರೂ ನೀಡಿದ ಅಭಿನಯ ಮತ್ತು ರೆಡ್ಡಿಯವರ ಸಂವೇದನಾತ್ಮಕ ನಿರೂಪಣೆ, ಜೊತೆಗೆ ಅನಂತಮೂರ್ತಿಯವರ ಹರಿತವಾದ ಸಂಭಾಷಣೆ ಮತ್ತು ಟಾಂ ಕೋವನ್‌ರ ಕ್ರಿಯಾತ್ಮಕ ಕಪ್ಪು-ಬಿಳುಪು ಛಾಯಾಗ್ರಹಣ ಚಿತ್ರದ ಮೌಲ್ಯವನ್ನು ಎತ್ತಿ ಹಿಡಿದ ಅಂಶಗಳು. ಈ ಚಿತ್ರದಿಂದಾಗಿ ಸರೋದ್ ಪಟು ರಾಜೀವ್ ತಾರಾನಾಥ್ ಅನೇಕ ಹೊಸ ಅಲೆಯ ಚಿತ್ರಗಳಿಗೆ ಸಂಗೀತ ನಿರ್ದೇಶಕರಾಗಿ ಉಳಿದು ಪಕ್ಕದ ಮಲೆಯಾಳಂ ಚಿತ್ರರಂಗಕ್ಕೂ ತಮ್ಮ ಪ್ರತಿಭೆಯನ್ನು ಹಬ್ಬಿದರು.

ದಾಶರಥಿ ದೀಕ್ಷಿತ್, ಬಿ.ಆರ್.ಜಯರಾಂ, ಗೋದಾ ರಾಮಕುಮಾರ್, ಸಿ.ಆರ್.ಸಿಂಹ ಮುಂತಾದ ಹವ್ಯಾಸಿ ಕಲಾವಿದರಿಗೆ ಚಿತ್ರರಂಗದಲ್ಲಿ ಅವಕಾಶ ಮಾಡಿಕೊಟ್ಟ ಮೊದಲ ಚಿತ್ರ 'ಸಂಸ್ಕಾರ'.

'ಶ್ರೀಕೃಷ್ಣದೇವರಾಯ'ದಲ್ಲಿ ತಿಮ್ಮರಸುವಿನ ಪಾತ್ರದಲ್ಲಿ ತಮ್ಮ ಅಭಿನಯಕ್ಕಾಗಿ ಸಂದ ಅತ್ಯುತ್ತಮ ನಟ ಪ್ರಶಸ್ತಿಯನ್ನು ಬಿ.ಆರ್.ಪಂತುಲು ನಿರಾಕರಿಸಿ ಭಾರಿ ಬಹಿರಂಗ ವಿವಾದಕ್ಕೆ ಕಾರಣರಾದರೂ ತಾವೇ ನಿರ್ದೇಶಿಸಿದ ಈ ಚಿತ್ರದಲ್ಲಿ ಕೃಷ್ಣದೇವರಾಯನ ಪಾತ್ರಕ್ಕಿಂತ ತಿಮ್ಮರಸುವಿನ ಪಾತ್ರವೇ ಅತಿ ಹೆಚ್ಚು ಪ್ರಧಾನವಾಗಿ ಎದ್ದು ನಿಂತಿದ್ದಂತೂ ನಿಜ. ಅನೇಕ ಪ್ರಮುಖ ವಿಮರ್ಶಕರೂ ಈ ವಿವಾದ ಪ್ರಾರಂಭವಾಗುವುದಕ್ಕೆ ಮುಂಚೆಯೇ ಇದೇ ಅಭಿಪ್ರಾಯಕ್ಕೆ ಬಂದಿದ್ದೂ ಹೌದು. ಆದರೆ ಇದರಿಂದ ಚಿತ್ರದ ಮೌಲ್ಯಕ್ಕೆ ಹೇಳಿಕೊಳ್ಳುವಂತಹ ಧಕ್ಕೆಯೇನೂ ಆಗಲಿಲ್ಲವೆನ್ನುವುದೂ ನಿಜ. ಚಿತ್ರದ ಅನೇಕ ಕಡೆ ನಿರೂಪಣೆಯಲ್ಲಿ ನಾಟಕೀಯತೆ ಸುಳಿದರೂ ಒಟ್ಟಿನಲ್ಲಿ ಪ್ರೇಕ್ಷಕರಲ್ಲಿ ಮೊದಲಿನಿಂದ ಕೊನೆಯವರೆಗೆ ಆಸಕ್ತಿಯನ್ನು ಕೆರಳಿಸಿಕೊಂಡು ಹೋದ ಚಿತ್ರ ಇದು. ಪಂತುಲು ತಮ್ಮ ಸರ್ವಸ್ವವನ್ನೂ ಈ ಚಿತ್ರದ ಮೇಲೆ ಹಾಕಿ ಈ ವರ್ಣಚಿತ್ರವನ್ನು ಭವ್ಯಗೊಳಿಸಿದ್ದರು. ಚಿತ್ರಮಧ್ಯಕ್ಕೂ ದೃಶ್ಯ ಶ್ರೀಮಂತಿಕೆಯಿತ್ತು. ಜೊತೆಗೆ



(ಚಿತ್ರ ೫೫) 'ಶ್ರೀಕೃಷ್ಣದೇವರಾಯ' ಚಿತ್ರದಲ್ಲಿ ಭಾರತಿ, ರಾಜಕುಮಾರ್, ಜಯಂತಿ

ಟಿ.ಜಿ.ಲಿಂಗಪ್ಪನವರ ಸುಶ್ರಾವ್ಯ ಹಾಡುಗಳ ಮೋಡಿಯಿತ್ತು. ರಾಜಕುಮಾರ್, ಭಾರತಿ, ಜಯಂತಿ, ಬಿ.ಆರ್.ಪಂತುಲು, ಎಂ.ವಿ.ರಾಜಮ್ಮ ಮುಂತಾದವರನ್ನೊಳಗೊಂಡ ಅದ್ದೂರಿ ತಾರಾಗಣವಿತ್ತು. ಚಿತ್ರ ಅಪಾರ ಜನಮನ್ನಣೆ ಗಳಿಸಿ ತನ್ನ ರಜತ ಮಹೋತ್ಸವವನ್ನು ಉತ್ಸಾಹದಿಂದ ಆಚರಿಸಿಕೊಂಡು ಉದ್ಯಮದಲ್ಲಿ ಕೂಡ ಆರ್ಥಿಕವಾಗಿ ಹೊಸದೊಂದು ಆಸಕ್ತಿಯನ್ನು ಕೆರಳಿಸಿತು. ಪಂತುಲು ಅವರಿಗೆ ಅತ್ಯುತ್ತಮ ನಟ ಪ್ರಶಸ್ತಿಯನ್ನು ತಂದುಕೊಡುವುದರೊಂದಿಗೆ ಈ ಚಿತ್ರ ರಾಜನರ್ತಕಿ ಚಿನ್ನಾದೇವಿ ಪಾತ್ರದಲ್ಲಿ ಅಭಿನಯಿಸಿದ ಭಾರತಿಯವರಿಗೆ ಅತ್ಯುತ್ತಮ ನಟಿ ಪ್ರಶಸ್ತಿಯನ್ನೂ ಟಿ.ಜಿ.ಲಿಂಗಪ್ಪನವರಿಗೆ ಅತ್ಯುತ್ತಮ ಸಂಗೀತ ನಿರ್ದೇಶನ ಪ್ರಶಸ್ತಿಯನ್ನೂ ಗಳಿಸಿಕೊಟ್ಟಿತು. ಲಿಂಗಪ್ಪನವರು ಚಿತ್ರದ ಕಥೆ ಮತ್ತು ಕಾಲಘಟ್ಟಕ್ಕೆ ಅನುರೂಪವಾಗಿ ತಮ್ಮ ಸಂಗೀತಕ್ಕೆ ಶಾಸ್ತ್ರೀಯ ರಾಗಗಳನ್ನು ಸಮರ್ಥವಾಗಿ ಬಳಸಿಕೊಂಡರು.

'ಗೆಜ್ಜೆಪೂಜೆ' ನಿರ್ದೇಶಕ ಪುಟ್ಟಣ್ಣ ಕಣಗಾಲ್‌ರ ವೃತ್ತಿಜೀವನದಲ್ಲಿ ಇನ್ನೊಂದು ಮೈಲಿಗಲ್ಲೆನಿಸಿತು. ಈ ಸಮರ್ಥ ನಿರ್ದೇಶಕರು ಈ ಚಿತ್ರದಲ್ಲಿ ಹೆಚ್ಚು ಭಾವಾತಿರೇಕಕ್ಕೆ ಒಳಗಾಗದಿದ್ದುದು ಅದರ ಮೌಲ್ಯವನ್ನು ಇನ್ನಷ್ಟು ಹಿಗ್ಗಿಸಿತು. ಎಂ.ಕೆ.ಇಂದಿರಾ ಅವರ ಅದೇ ಹೆಸರಿನ ಕಾದಂಬರಿಯೊಂದರ ಆಧಾರದ ಮೇಲೆ ರಾ.ಶಿ. ಸಹೋದರರು ನಿರ್ಮಿಸಿ, ವಿತರಕ ಸೋದರರಾದ ಎಚ್.ಎನ್.ಮುದ್ದುಕೃಷ್ಣ ಮತ್ತು ಹೆಚ್.ಎನ್.ಮಾರುತಿ ವಿಶೇಷ ಆಸಕ್ತಿಯನ್ನು ತಳೆದು ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡ ಈ ಚಿತ್ರ ವೇಶ್ಯಾ ಜೀವನದ ಘೋರ ದುರಂತವನ್ನು ಹೃದಯಂಗಮವಾಗಿ ನಿರೂಪಿಸಿದ ಮೂರು ತಲೆಮಾರುಗಳ ಕಥೆಯನ್ನು ಹೊಂದಿತ್ತು. ದೇವದಾಸಿ ಪದ್ಧತಿಯನ್ನು ವಿಧಿವತ್ತಾಗಿ ಅನುಸರಿಸಿಕೊಂಡು ಬಂದ ತಾಯಿ ವಿಧಿಯಿಲ್ಲದೆ ಇಂತಹ ಜೀವನಕ್ಕೆ ಹೊಂದಿಕೊಂಡು ಬಂದರೂ ತನ್ನ ಮಗಳಿಗೂ ತನ್ನ ಜೀವನದಲ್ಲಿ ಇದೇ ಪಾಡು ಬರುವುದು ಬೇಡವೆಂದು ಹಂಬಲಿಸಿ ಮಗಳನ್ನು ಎಲ್ಲ ವಿಟರ ಕ್ರೂರದೃಷ್ಟಿಯಿಂದ ಕಾಪಾಡಿಕೊಂಡು ಬಂದ ಮಗಳು, ತಾನೂ ವೇಶ್ಯಾ ಜೀವನಕ್ಕೆ ಮಣಿಯಲು ಸುತಾರಾಂ ಒಪ್ಪದೆ ಬಂಡಾಯವೆದ್ದು, ಆದರೆ ಅಂತಹ ಬಂಡಾಯ ನಿರರ್ಥಕವೆಂದು ಅರಿವಾದಾಗ ಆತ್ಮಹತ್ಯೆಯೊಂದೇ ಮಾರ್ಗವೆಂದು ನಿರ್ಧರಿಸಿ ಸಾವಿನಲ್ಲಿ ಸಾರ್ಥಕತೆ ಕಂಡುಕೊಂಡ ಮೊಮ್ಮಗಳು ಈ ಚಿತ್ರದ ಸ್ಮರಣೀಯ ಪಾತ್ರಗಳು. ಈ ಹೆಣ್ಣಿನ ಅಜ್ಜಿಯಾಗಿ ಅನ್ನಪೂರ್ಣಮ್ಮನವರ ಅಭಿನಯ ಜನಪ್ರಿಯವಾದರೂ ಅದರಲ್ಲಿ ಸಾಕಷ್ಟು ಕೃತಕತೆ ತಲೆ ಹಾಕಿದ್ದೂ ಹೌದು. ಇದೇ ರೀತಿಯ ಕೃತಕತೆ ಕಲ್ಪನಾ ಅಭಿನಯದಲ್ಲಿ ಕೂಡ ಅಲ್ಲಲ್ಲಿ ಕಾಣಿಸಿಕೊಂಡರೂ ಇನ್ನು ಕೆಲವು ದೃಶ್ಯಗಳಲ್ಲಿ ಆಕೆ ತೋರಿದ ಸಂಯಮ ಹಿತವಾಗಿತ್ತು. ಆದರೆ ಲೀಲಾವತಿಯವರಂತೂ ಮೊದಲಿನಿಂದ ಕೊನೆಯವರೆಗೆ ತಮ್ಮ ಸಂಯಮದ ಅಭಿನಯದಿಂದ ಪ್ರೇಕ್ಷಕರ ಹೃದಯಗಳಿಗೆ ಹತ್ತಿರವಾದರು. ಪುಟ್ಟಣ್ಣ ಚಿತ್ರದಲ್ಲಿನ ಮಾನವೀಯ ಅಂಶಗಳೊಂದಿಗೆ ಸೊಗಸಾಗಿ ಸ್ಪಂದಿಸಿ ಹೃದಯಕ್ಕೆ ಮುಟ್ಟುವ ರೀತಿಯಲ್ಲಿ ನಿರ್ದೇಶಿಸಿದರು. ಚಿತ್ರಕ್ಕೆ ರಾಜ್ಯ ಸರ್ಕಾರದಿಂದ ಆ ವರ್ಷದ ಅತ್ಯುತ್ತಮ ಚಿತ್ರ ಪ್ರಶಸ್ತಿ, ಅತ್ಯುತ್ತಮ ಸಂಭಾಷಣೆಗಾಗಿ ನವರತ್ನ ರಾಮ್‌ಗೆ ಪ್ರಶಸ್ತಿ ಲಭ್ಯವಾಯಿತು. ಆದರೆ ರಾಮ್‌ರ ಪ್ರತಿಭೆಯನ್ನು ಕನ್ನಡ ಚಿತ್ರೋದ್ಯಮ ನಂತರ ಸರಿಯಾಗಿ ಉಪಯೋಗಿಸಿಕೊಳ್ಳಲಿಲ್ಲ.

'ಗೆಜ್ಜೆಪೂಜೆ'ಗಾಗಿ ಎಸ್.ವಿ.ಶ್ರೀಕಾಂತ್‌ರಿಗೆ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿ ಬಂತು. ಚಿತ್ರ ಕಪ್ಪು-ಬಿಳುಪಿನಲ್ಲಿದ್ದುದೇ ಹೆಚ್ಚು ಪರಿಣಾಮಕಾರಿಯೆನಿಸುತ್ತಿತ್ತು. ಕಪ್ಪು-ಬಿಳುಪು ಚಿತ್ರಗಳ ಛಾಯಾಗ್ರಹಣದಲ್ಲಿ ತಮಗೆ ಅತ್ಯಂತ ಹೆಚ್ಚು ತೃಪ್ತಿ ತಂದುಕೊಟ್ಟ ಚಿತ್ರಗಳಲ್ಲಿ ಇದೊಂದು ಎಂದು ಶ್ರೀಕಾಂತ್ ಪತ್ರಿಕಾ ಸಂದರ್ಶನಗಳಲ್ಲಿ ಹೇಳಿದರು. ಅಷ್ಟೇ ಅಲ್ಲ, ಒಂದು ಸಂದರ್ಶನದಲ್ಲಿ ಅವರು ಹೇಳಿದ ಈ ಮಾತುಗಳು ಗಮನಾರ್ಹ: ''...'ಗೆಜ್ಜೆಪೂಜೆ' ತೆರೆ ಕಾಣುವವರೆಗೂ ನಾನಿದ್ದ ನನ್ನ ಅಣ್ಣನ ಮನೆಯನ್ನು ಎಲ್ಲರೂ ಲಾಯರ ಮನೆ ಎನ್ನುತ್ತಿದ್ದರು, 'ಗೆಜ್ಜೆಪೂಜೆ' ತೆರೆಕಂಡ ಮೇಲೆ ಕ್ಯಾಮರಾಮನ್ ಶ್ರೀಕಾಂತ್ ಮನೆ ಎಂದು ಕರೆಯಲು ಪ್ರಾರಂಭಿಸಿದರು''.

ಹವ್ಯಾಸಿ ರಂಗಭೂಮಿಯಲ್ಲಿ ಆಗ ಸಕ್ರಿಯವಾಗಿದ್ದ ಲೋಕನಾಥ್ ಮತ್ತು ಜಿ.ಎಸ್.ನಾರಾಯಣರಾವ್ ಅವರಿಗೆ ಮೊದಲ ಬಾರಿಗೆ ಚಿತ್ರವೊಂದರಲ್ಲಿ ಅಭಿನಯಿಸುವ ಅವಕಾಶ 'ಗೆಜ್ಜೆಪೂಜೆ'ಯಿಂದ ಲಭ್ಯವಾಯಿತು. ನಂತರ ಲೋಕನಾಥ್‌ರಂತೂ ಕನ್ನಡ ಚಿತ್ರರಂಗದಲ್ಲಿ ನಟರಾಗಿ ಬೇರೂರಿ ನಿಂತರು.

'ಗೆಜ್ಜೆಪೂಜೆ'ಯಲ್ಲಿ ಕ್ರಿಯಾತ್ಮಕವಾಗಿ ಮೂಡಿಬಂದ ಇನ್ನೊಂದು ಪರಿಕರವೆಂದರೆ ವಿಜಯಭಾಸ್ಕರ್ ಸಂಗೀತ. 'ಪಂಚಮವೇದ ಪ್ರೇಮದ ನಾದ...', 'ಗಗನವು ಎಲ್ಲೋ ಭೂಮಿಯು ಎಲ್ಲೋ...' ಮುಂತಾದ ಹಾಡುಗಳು ಕನ್ನಡ ಚಲನಚಿತ್ರ ಸಂಗೀತದಲ್ಲಿ ಹೊಸ ದಾಖಲೆಗಳನ್ನು ಸೃಷ್ಟಿಸಿದವು. ಪುಟ್ಟಣ್ಣ ಈ ಹಾಡುಗಳ ಚಿತ್ರೀಕರಣದಲ್ಲಿ ತೋರಿದ ಸೃಜನಶೀಲತೆ ಚಲನಚಿತ್ರ ಮಾಧ್ಯಮದ ಬಳಕೆಯಲ್ಲಿ ಅವರು ತೋರಿದ ಹೊಸತನವನ್ನು ಎತ್ತಿ ಹಿಡಿಯಿತು.

ಅದೇ ಪುಟ್ಟಣ್ಣ ಅದೇ ವರ್ಷ ತೆರೆಗೆ ಬಂದ ಅವರದೇ ನಿರ್ದೇಶನದ ಚಿತ್ರ 'ಕರುಳಿನಕರೆ'ಯಲ್ಲಿ ವ್ಯಾಪಾರಿ ಚಿತ್ರರಂಗದ ಅನೇಕ ಫಾರ್ಮುಲಾಗಳಿಗೆ ಶರಣಾದರು. ರಾಜಕುಮಾರ್ ಮತ್ತು ಕಲ್ಪನಾ ಮುಖ್ಯ ಪಾತ್ರಗಳಲ್ಲಿ ಕಾಣಿಸಿಕೊಂಡ ಈ ಚಿತ್ರ ನಿರ್ಮಾಪಕರಾದ ಶ್ರೀಕಾಂತ್ ಮತ್ತು ಶ್ರೀಕಾಂತ್ ಎಂಟರ್‌ಪ್ರೈಸಸ್ ಅವರಿಗೆ ಸ್ವಲ್ಪ



(ಚಿತ್ರ ೫೬) 'ಕರುಳಿನ ಕರೆ' ಚಿತ್ರದಲ್ಲಿ ಕಲ್ಪನಾ, ರಾಜಕುಮಾರ್, ರೇಣುಕಾ



(ಚಿತ್ರ ೫೭)'ಗಜ್ಜೆಪೂಜೆ' ಚಿತ್ರದಲ್ಲಿ ಗಂಗಾಧರ್, ಕಲ್ಪನಾ

ನಿರ್ದೇಶಕನಾಗುವ ಅವರ ಸಾಮರ್ಥ್ಯವನ್ನು ಗುರುತಿಸಿತು. 'ಸೀತಾ' ಚಿತ್ರದ ಮೂಲಕ ಲೇಖಕ-ಅಂಕಣಕಾರ ಮಹೇಶ್‌ಸ್ವಾಮಿ ನಟರಾಗಿ ಕೂಡ ಪ್ರೇಕ್ಷಕರಿಗೆ ಪರಿಚಯವಾದರು. ಖಳನಾಯಕನ ಪಾತ್ರಕ್ಕೆ ಒಪ್ಪುವಂತಹ ಮುಖಚರ್ಯೆ ಅವರದ್ದು, ಸಹಜವಾದ ಅಭಿನಯವೂ ಇತ್ತು. ಚಿತ್ರದ ಪ್ರಥಮಾರ್ಧದಲ್ಲಿ ಮಾತಿನ ಹಾವಳಿ ಹೆಚ್ಚಾದರೂ ವಾದಿರಾಜ್ ದ್ವಿತಿಯಾರ್ಧದಲ್ಲಿ ದೃಶ್ಯ ಪರಿಕಲ್ಪನೆಗೆ ಹೆಚ್ಚು ಒತ್ತುಕೊಟ್ಟರು.

ಈ ವರ್ಷ ತೆರೆಗೆ ಬಂದ ಇನ್ನೂ ಮೂರು ಉತ್ತಮ ಪ್ರಯತ್ನಗಳು ಬಾಬೂರಾವ್ ಎಂಬ ಹೊಸ ನಿರ್ದೇಶಕರು ವಿಜಯ ಪಿಕ್ಚರ್ಸ್ ಸರ್ಕ್ಯೂಟ್ ಸಂಸ್ಥೆಗಾಗಿ ನಿರ್ದೇಶಿಸಿದ 'ನನ್ನ ತಮ್ಮ' (ರಾಜಕುಮಾರ್ - ಜಯಂತಿ - ಗಂಗಾಧರ್), ವಿಜಯ ಸತ್ಯಂ ನಿರ್ದೇಶನದ 'ಸುಖ ಸಂಸಾರ' (ರಾಜಕುಮಾರ್ - ಲೀಲಾವತಿ - ದಿನೇಶ್ - ಶ್ರೀನಾಥ್ - ಉದಯಚಂದ್ರಿಕಾ - ರಾಜೇಶ್) ಮತ್ತು ರವೀ ನಿರ್ದೇಶಿಸಿದ 'ಆರು ಮೂರು ಒಂಬತ್ತು' (ಉದಯಕುಮಾರ್ - ರಮೇಶ್ - ಲೀಲಾವತಿ - ಬಿ.ವಿ.ರಾಧಾ). ಆದರೆ ಈ ಚಿತ್ರಗಳ ನಿರೂಪಣೆಯಲ್ಲಿ ವಿಪರೀತ ಏರುತಗ್ಗುಗಳಿದ್ದುದರಿಂದ ಅವುಗಳಲ್ಲಿ ಇನ್ನಿತರ ಕೆಲವು ಒಳ್ಳೆಯ ಗುಣಗಳಿದ್ದರೂ ಅವುಗಳು ಜನಪ್ರಿಯವಾಗಿ ಓಡಲು ಸಾಧ್ಯವಾಗಲಿಲ್ಲ.

'ಆರು ಮೂರು ಒಂಬತ್ತು' ಹೊಸ ಧಾಟಿಯ ನಿರೂಪಣೆಯ ಚಿತ್ರವಾಗಿತ್ತು. ಗೆಳೆಯನ ಈ ಪ್ರಯೋಗವನ್ನು ಪುಟ್ಟಣ್ಣ ಬಹುವಾಗಿ ಮೆಚ್ಚಿಕೊಂಡಿದ್ದರು.

ಮಟ್ಟಿಗೆ ಹಣ ತಂದುಕೊಟ್ಟಿತಾದರೂ ಪುಟ್ಟಣ್ಣನವರಿಗೆ ಯಾವ ರೀತಿಯಲ್ಲಿಯೂ ವಿಶೇಷ ಶ್ರೇಯಸ್ಸನ್ನಂತೂ ಗಳಿಸಿಕೊಡಲಿಲ್ಲ. ಈ ಚಿತ್ರದಲ್ಲಿ ದಿನೇಶ್ ನೀಡಿದ ಹದವರಿತ ಅಭಿನಯ ಮಾತ್ರ ಎಲ್ಲರ ಗಮನ ಸೆಳೆಯಿತು.

ಹಳ್ಳಿಯ ಮುಗ್ಧನೊಬ್ಬ ಬೆಂಗಳೂರಿನಂತರ ಮಹಾನಗರಕ್ಕೆ ಮೊದಲ ಬಾರಿಗೆ ಕಾಲಿಟ್ಟಾಗ ಆಗುವ ವಿಚಿತ್ರ ಅನುಭವಗಳನ್ನು ಹಸಿಹಸಿಯಾಗಿಯೇ ಹೇಳಲು ಹೊರಟ ಬಿ.ಎ.ಅರಸುಕುಮಾರ್ ಅವರ 'ಬೋರೇಗೌಡ ಬೆಂಗಳೂರಿಗೆ ಬಂದ' ಅನಿರೀಕ್ಷಿತವಾಗಿ ಸೆನ್ಸಾರ್ ಸಮಸ್ಯೆಗೆ ಸಿಕ್ಕಿಕೊಂಡಿತು. ಈ ಚಿತ್ರದ ಪ್ರದರ್ಶನಕ್ಕೆ ಅನುಮತಿಯನ್ನು ನಿರಾಕರಿಸಿದ ರಾಜ್ಯದಲ್ಲಿನ ಸೆನ್ಸಾರ್ ಪ್ರಮಾಣೀಕರಣ ಸಮಿತಿ ಈ ನಿಷೇಧಕ್ಕೆ ಕಾರಣಗಳನ್ನೇನೂ ಕೊಡಲಿಲ್ಲ. ಬೆಂಗಳೂರಿನ ಜೀವನದ ಸಂಕೀರ್ಣತೆಗಳನ್ನು ವಿಕೃತಗೊಳಿಸಲಾಗಿದೆಯೆಂಬುದೇ ಈ ನಿಷೇಧಕ್ಕೆ ಕಾರಣವೆನ್ನುವುದನ್ನೂ ಅನಧಿಕೃತವಾಗಿ ಮಾತನಾಡಿಕೊಳ್ಳಲಾಯಿತು. ಅಂತೂ ಅರಸುಕುಮಾರ್ ಮೇಲ್ಮನವಿ ಸಲ್ಲಿಸಿ ಚಿತ್ರಕ್ಕೆ ಸೆನ್ಸಾರ್ ಸರ್ಟಿಫಿಕೇಟ್ ಪಡೆದುಕೊಂಡಿದ್ದಾಯಿತು. ರಾಜೇಶ್‌ರಿಗೆ ಈ ಚಿತ್ರದಲ್ಲಿ ವಿಶೇಷವಾದ ಪಾತ್ರವೊಂದಿತ್ತು. ಬಿಡುಗಡೆಯಾದಾಗ ಚಿತ್ರಕ್ಕೆ ಪ್ರೇಕ್ಷಕರಿಂದ ಪುರಸ್ಕಾರವೇನೂ ದೊರೆಯಲಿಲ್ಲ.

ಇದೇ ವರ್ಷ ಬಿಡುಗಡೆಯಾದ 'ಸೀತಾ' ಮೂಲಕ ಸದಭಿರುಚಿಯ ಚಿತ್ರಗಳ ನಿರ್ಮಾಪಕ ವಾದಿರಾಜ್ ನಿರ್ದೇಶಕರಾದರು. ಅವರು ಕಲ್ಪನಾರಿಂದ ಚಿತ್ರದ ಅನೇಕ ಕಡೆಗಳಲ್ಲಿ ಪಡೆದುಕೊಂಡ ಸಂಯಮದ ಅಭಿನಯ ಗಮನಾರ್ಹ. ಚಿತ್ರ ಒಬ್ಬ ಉತ್ತಮ

ಸ್ಥಿರ ಛಾಯಾಗ್ರಹಣದಲ್ಲಿ ಪರಿಣತರೂ ಆಗಿದ್ದು, ಬಹುಕಾಲ ಚಿತ್ರೋದ್ಯಮದಲ್ಲಿ ಸಹನಿರ್ದೇಶಕರೂ ಆಗಿ ಶ್ರಮಿಸಿದ ನಾಗೇಶ್ ಬಾಬಾ ಅವರು ನಿರ್ಮಿಸಿ ನಿರ್ದೇಶಿಸಿದ ಚಿತ್ರ 'ಅನಿರೀಕ್ಷಿತ' - ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ ಆಧಾರ. ಬಾಬಾ ಅವರ ಸಾಹಿತ್ಯದಲ್ಲಿಯ ಅಭಿರುಚಿ, ಸಾಹಿತಿಗಳೊಂದಿಗಿದ್ದ ನಿಕಟತೆಯಿಂದಾಗಿ ಜಿ.ಪಿ.ರಾಜರತ್ನಂ ಅವರ ಕವಿತೆಯನ್ನು ಬಳಸಿದರು. ಮತ್ತು ಇವರಿಗಾಗಿಯೇ ಕೆ.ಎಸ್.ನರಸಿಂಹಸ್ವಾಮಿ, ಗೋಪಾಲಕೃಷ್ಣ ಅಡಿಗರು ಕವಿತೆಗಳನ್ನು ಬರೆದುಕೊಟ್ಟರು. ಅಭಿರುಚಿ ಮೇಲ್ಮಟ್ಟದ್ದು, ನಿರೂಪಣೆಯಲ್ಲಿ ಬಿಗುವು ಸಾಲದಾಯಿತು. ಚಿತ್ರ ಸೋತುಹೋಯಿತು.

ಭಾರತ್ ಎಂಟರ್ ಪ್ರೈಸಸ್ ಸಂಸ್ಥೆಯು ಮ.ನ.ಮೂರ್ತಿಯವರ ಕಾದಂಬರಿ 'ಮೀನಾ' ಆಧರಿಸಿ 'ದೇವರ ಮಕ್ಕಳು' ಚಿತ್ರವನ್ನು ತೆರೆಗಿತ್ತರು. ವೈ.ಆರ್.ಸ್ವಾಮಿ ನಿರ್ದೇಶನ. ಮ.ನ.ಮೂರ್ತಿಯವರು 'ಕನ್ನಡ ಚಿತ್ರ ರಸಿಕರ ಸಂಘ'ದ ಪ್ರಥಮ



(ಚಿತ್ರ ೫೮)'ಸೀತಾ' ಚಿತ್ರದಲ್ಲಿ ಕಲ್ಪನಾ, ಅಶ್ವತ್ಥ್



(ಚಿತ್ರ ೫೯)'ಅನಿರೀಕ್ಷಿತ' ಚಿತ್ರದಲ್ಲಿ ಬಿ.ವಿ.ರಾಧ, ಬಾಲಕೃಷ್ಣ

ಅಧ್ಯಕ್ಷರೂ ಆಗಿದ್ದರು. ಅವರದೊಂದು ಕಾದಂಬರಿ ಚಿತ್ರವಾಗಲೆಂಬ ಅಪೇಕ್ಷೆಯ ಹಿನ್ನೆಲೆಯಲ್ಲಿ 'ಮೀನಾ' ಆಯ್ದುಕೊಂಡರು. ಆದರೆ ವಸ್ತು ನಿರ್ವಹಣೆಯ ಕೆಲವು ಅಂಶಗಳು ಆ್ಯಂಟಿಸೋಷಿಯಲ್ ಆಗುತ್ತವೆಂಬ ಕಾರಣಕ್ಕೆ ಸಾಕಷ್ಟು ಬದಲಾವಣೆ ಮಾಡಿಕೊಳ್ಳಬೇಕಾಯಿತು. ಈ ಚಿತ್ರದ ಸಂಸ್ಕರಣ ಕಾರ್ಯವನ್ನು ಆಗಷ್ಟೇ ಪ್ರಾರಂಭವಾಗಿದ್ದ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಮಾಡಿಸಿದರು. ಅಲ್ಲಿ ಸಂಸ್ಕರಣಗೊಂಡ ಪ್ರಥಮ ಚಿತ್ರ 'ದೇವರ ಮಕ್ಕಳು'. ಚಿತ್ರ ಬಿಡುಗಡೆಯಾದಾಗ ಸರಿಯಾಗಿ ಬಿಂಬಗಳು ಮೂಡದೆ ದೊಡ್ಡ ರಾದ್ಧಾಂತವೇ ಆಗಿಹೋಯಿತು. ಸಂಗಂ ಚಿತ್ರಮಂದಿರದ ಮಾಲೀಕರಾದ ಆರ್.ಎಸ್.ಮಾಂಡ್ರೆ ಪ್ರೋಸೆಸಿಂಗ್ ಸರಿಯಿಲ್ಲವೆಂದರೆ, ಚಾಮುಂಡೇಶ್ವರಿಯ ಶ್ರೀರಾಮುಲುನಾಯಿಡು ನಿಮ್ಮ ಪ್ರೊಜೆಕ್ಷನ್ ಸರಿಯಿಲ್ಲ ಎಂದು ವಾದಿಸತೊಡಗಿದರು. ಕಡೆಗೆ ಮಧ್ಯೆ ಪ್ರವೇಶಿಸಿದ ನಿರ್ಮಾಪಕರಾದ ಗೋಪಾಲ್-ಲಕ್ಷ್ಮಣ್ ಅವರುಗಳು ಅವರಿಬ್ಬರಿಗೂ ಸಮಾಧಾನ ಹೇಳಿ, ಹಾಗಾಗಲು ಕಾರಣವನ್ನು ಪರಿಶೀಲಿಸಿದಾಗ ಚಿತ್ರಕ್ಕೆ ಬಳಸಿದ್ದ ಆಗ್ಫಾ ಫಿಲಂ ಬಹಳ ತೆಳುವಾಗಿರುತ್ತದೆ, ಸಂಗಂನ ದೊಡ್ಡ ಪರದೆಗೆ ವಿಸ್ತರಿಸಿಕೊಳ್ಳುವಷ್ಟು ಶಕ್ತವಲ್ಲದ್ದರಿಂದ ಬಿಂಬಗಳು ಪಲ್ಲಟಗೊಂಡು ಚದುರಿಹೋಗುತ್ತಿದ್ದವು ಎಂದು ತಿಳಿದುಬಂತು. ಮತ್ತೆ ಚಿತ್ರಮಂದಿರ-ಸ್ಟುಡಿಯೋ ಸಂಬಂಧ ಬೆಸೆಯಿತು.

ಈ ಚಿತ್ರಕ್ಕಾಗಿ ಚಿ.ಉದಯಶಂಕರ್ ಅವರು ರಚಿಸಿದ್ದ 'ಬೇಕೇನು ಸಾಮಾನು....' ಗೀತೆಯ ದ್ವಂದ್ವಾರ್ಥ ಬಹುದೊಡ್ಡ ವಿವಾದಕ್ಕೆ ಎಡೆ ಮಾಡಿತು. ಪ್ರತಿಷ್ಠಿತ ಸಂಸ್ಥೆಯ ನಿರ್ಮಾಣದಲ್ಲಿ ಇಂಥ ದ್ವಂದ್ವಾರ್ಥದ ಸಾಹಿತ್ಯವೇ ಎಂಬ ತೀವ್ರವಾದ ಆಕ್ಷೇಪಣೆ ಪತ್ರಿಕೆಗಳಲ್ಲಿ ಬಂತು.

ತಮಿಳು ಕಥೆಯೊಂದನ್ನು ಆಧರಿಸಿದ್ದ 'ಲಕ್ಷ್ಮಿ-ಸರಸ್ವತಿ' ವಿಶಿಷ್ಟವಾದ ಕಥೆಯಾಗಿತ್ತು. ರವೀ ಅವರ ನಿರ್ದೇಶನದಲ್ಲಿ ಚೆನ್ನಾಗಿಯೂ ಮೂಡಿ ಬಂದಿತ್ತು.

'ಭಲೇ ಜೋಡಿ' ಕೆ.ಸಿ.ಎನ್. ಸಂಸ್ಥೆ ನಿರ್ಮಾಣ ರಂಗಕ್ಕೆ ಇಳಿದ ಪ್ರಥಮ ಚಿತ್ರ. ವೈ.ಆರ್.ಸ್ವಾಮಿ ನಿರ್ದೇಶನದಲ್ಲಿ ರಾಜಕುಮಾರ್ ಅಭಿನಯಿಸಿದ್ದರು.

'ಬಾಳು ಬೆಳಗಿತು' ಚಿತ್ರಶ್ರೀ ಸಂಸ್ಥೆಗೆ ಸಿದ್ಧಲಿಂಗಯ್ಯ ನಿರ್ದೇಶಿಸಿದ ಕುತೂಹಲಕಾರಿ ಚಿತ್ರ. ರಾಜಕುಮಾರ್-ಭಾರತಿ ಜೋಡಿಯ ಅಭಿನಯವಿತ್ತು. ಯಶಸ್ವಿ ಚಿತ್ರ.

ಒಟ್ಟಿನಲ್ಲಿ ೧೯೬೧-೭೦ ಕನ್ನಡ ಚಿತ್ರೋದ್ಯಮ ತನ್ನ ಹೊಸ ಬೇರುಗಳು, ಬಿಳಲುಗಳನ್ನು ಹುಡುಕಿಕೊಂಡು ಅಲ್ಲೊಂದು ಇಲ್ಲೊಂದು ಹೆಜ್ಜೆಗಳ ಮೂಲಕ ತನ್ನ ಕಲವು ವಿಶಿಷ್ಟತೆಗಳನ್ನು ಮೈಗೂಡಿಸಿಕೊಂಡು ತಾಂತ್ರಿಕವಾಗಿ ಹಾಗೂ ಔದ್ಯೋಗಿಕವಾಗಿ ಸಫಲತೆಯತ್ತ ಮಂದಗತಿಯಿಂದಲೇ ಮುಂದುವರಿದ ದಶಕ. ಈ ದಶಕದ ಸಿಂಹಾವಲೋಕನ ಮಾಡಿದಾಗ ಎದ್ದು ಕಾಣುವ ಅಂಶವೆಂದರೆ ಮಿಕ್ಕೆಲ್ಲ ಕ್ಷೇತ್ರಗಳಿಗಿಂತ ಸಂಗೀತ ಕ್ಷೇತ್ರದಲ್ಲಿ ಅದು ಕಂಡುಕೊಂಡ ಸಾರ್ಥಕತೆ. ಮಾಧುರ್ಯಕ್ಕೆ, ಅರ್ಥಪೂರ್ಣ ಗೀತರಚನೆಗೆ ಈ ದಶಕ ನೀಡಿದ ಒತ್ತು ಮುಂದಿನ ದಶಕದಲ್ಲಿಯೂ ಮುಂದುವರಿದು ಕನ್ನಡ ಚಿತ್ರ ಸಂಗೀತ ತನ್ನದೇ ಆದ ಒಂದು ವೈವಿಧ್ಯಮಯ ಪರಂಪರೆಯನ್ನು ಬೆಳೆಸುವುದರಲ್ಲಿ ಯಶಸ್ವಿಯಾಯಿತು. ಹಿಂದಿನ ದಶಕದಲ್ಲಿ ಹೆಚ್ಚಾಗಿ ಪರಭಾಷಾ ಹಿನ್ನೆಲೆ ಗಾಯಕರ ನೆರವನ್ನೇ ಪಡೆದು ಕೊಂಡು ಬಂದಿದ್ದ ಕನ್ನಡ ಚಿತ್ರರಂಗಕ್ಕೆ ಬಿ.ಕೆ.ಸುಮಿತ್ರ ಮತ್ತು ಬೆಂಗಳೂರು ಲತಾರಂತಹ ಅಚ್ಚ ಕನ್ನಡದ ವೃತ್ತಿಪರ ಗಾಯಕಿಯರ ಪರಿಚಯವಾಗಿದ್ದು ಕೂಡ ಈ ದಶಕದಲ್ಲಿಯೆ. ಈ ದಶಕದಲ್ಲಿ ಸಂಯೋಜಿತವಾದ ಸುಮಾರು ೧೦೦೦೦ ಹಾಡುಗಳಲ್ಲಿ ಬಹು ಪಾಲು ಹಾಡುಗಳು ಬಾನುಲಿ, ದೂರದರ್ಶನ ಹಾಗೂ ಸಾರ್ವಜನಿಕ ಸಂಗೀತ ಕಾರ್ಯಕ್ರಮಗಳ ಮೂಲಕ ತಮ್ಮ ಅಪಾರ ಜನಪ್ರಿಯತೆಯನ್ನು ದಶಕಗಳ ಗಟ್ಟಲೆ ಕಾಪಾಡಿಕೊಂಡು ಬಂದಿರುವುದೇ ಆ ಸಾಲಿನ ಸಂಗೀತ ನಿರ್ದೇಶಕರು ಮತ್ತು ಗೀತ ರಚನೆಕಾರರು ಮಾಡಿದ ಪ್ರಶಂಸಾರ್ಹ ಸಾಹಸಗಳಿಗೆ ದ್ಯೋತಕ.



(ಚಿತ್ರ ೬೦) 'ದೇವರ ಮಕ್ಕಳು' ಚಿತ್ರದಲ್ಲಿ ರಾಜಕುಮಾರ್, ನಾಗಪ್ಪ, ಜಯಂತಿ

ಈ ದಶಕದಲ್ಲಿ ತಯಾರಾದ ಅನೇಕ ಕನ್ನಡ ಚಿತ್ರಗಳ ಉತ್ತಮ ಗುಣಮಟ್ಟಕ್ಕೆ ಅಂದಿದ್ದ ಆರ್ಥಿಕ ವ್ಯವಸ್ಥೆಯೂ ಪ್ರಧಾನ ಕಾರಣವೆಂದು ಉದ್ಯಮದ ಅನೇಕ ಪ್ರಮುಖರು ಅಭಿಪ್ರಾಯ ಪಡುತ್ತಾರೆ. ಅಂದಿನ ಚಲನಚಿತ್ರ ವಿತರಣೆ ಬೆಂಗಳೂರಿನ ಕೆಲವು ಪ್ರತಿಷ್ಠಿತ ಸಂಸ್ಥೆಗಳಲ್ಲಿ ಕೇಂದ್ರೀಕೃತವಾಗಿತ್ತು. ಈ ಸಂಸ್ಥೆಗಳ ಮತ್ತು ಹೆಚ್ಚಾಗಿ ಮದರಾಸಿನಲ್ಲಿಯೇ ನೆಲೆಯೂರಿದ್ದ ನಿರ್ಮಾಪಕರ ನಡುವೆಯ ಸಂಬಂಧ ಅತ್ಯಂತ ಹಾರ್ದಿಕವಾಗಿದ್ದು ಪ್ರತಿ ಚಿತ್ರದ ನಿರ್ಮಾಣದ ವಿವಿಧ ಹಂತಗಳಲ್ಲಿ ಹಂಚಿಕೆದಾರರ ಹಾಗೂ ನಿರ್ಮಾಪಕರ ನಡುವೆ ಅರ್ಥಪೂರ್ಣ ಸಮಾಲೋಚನೆಗಳು ನಡೆಯುತ್ತಿದ್ದುದರಿಂದ ನಿರ್ಮಾಣ ವಲಯದಲ್ಲಿ ಮೂಡಿ ಬಂದ ಶಿಸ್ತು ೧೯೪೦ರ ದಶಕದಲ್ಲಿ ಜಿಲ್ಲಾವಾರು ಹಂಚಿಕೆಯ ವ್ಯವಸ್ಥೆ ಕಾಲಿಟ್ಟಾಗ ಉಳಿದುಕೊಳ್ಳಲಿಲ್ಲವೆಂದು ಅಂದಿನ ಪ್ರಮುಖರ ವಾದ. ಒಂದು ಚಿತ್ರದ ಬಜೆಟ್ ನಿರ್ಧಾರವಾದ ನಂತರ ನಿರ್ಮಾಣ ವೆಚ್ಚದಲ್ಲಿ ನಿರ್ಮಾಪಕನ ಪಾಲೆಷ್ಟು, ಹಂಚಿಕೆದಾರನ ಪಾಲೆಷ್ಟು ಎಂದು ನಿರ್ಧಾರವಾದ ನಂತರ ತನ್ನ ಪಾಲಿನ ಹಣವನ್ನು ಹಂಚಿಕೆದಾರ ನಿರ್ಮಾಪಕನಿಗೆ ಚಿತ್ರಣದ ಪ್ರಗತಿಯನ್ನನುಸರಿಸಿ ಹಂತ ಹಂತವಾಗಿ ಬಿಡುಗಡೆ ಮಾಡುತ್ತ ಬರುತ್ತಿದ್ದುದರಿಂದ ಪ್ರತಿ ಘಟ್ಟದಲ್ಲಿಯೂ ಚಿತ್ರದ ಗುಣಮಟ್ಟದ ಮೇಲೆ ನಿಗಾ ಇಡುವುದೂ ಸಾಧ್ಯವಾಗುತ್ತಿತ್ತು ಎಂದು ಅಂದಿನ ಹಂಚಿಕೆದಾರರು ಹೇಳಿಕೊಂಡರೂ ವಾಸ್ತವವಾಗಿ ನಿರ್ಮಾಪಕರ ಮತ್ತು ಹಂಚಿಕೆದಾರರ ನಡುವೆಯ ಸಂಬಂಧ ಅಷ್ಟೇನೂ ಸೌಹಾರ್ದಯುತವಾಗಿರಲಿಲ್ಲ. ತಮ್ಮ ಹಣವನ್ನು ಪೋಲು ಮಾಡಿ ತಯಾರಕರು ತಮಗೆ ಮೋಸ ಮಾಡಿ ತಮ್ಮ ಮನೆ ಹಾಳು ಮಾಡುತ್ತಿದ್ದಾರೆಂದು ಹಂಚಿಕೆದಾರರು ಬಹಿರಂಗವಾಗಿ ಕತ್ತಿ ಮಸೆಯುತ್ತಿದ್ದಾಗಲೇ ಕನ್ನಡ ಚಿತ್ರ ನಿರ್ಮಾಪಕರು ತಮ್ಮದೇ ಆದ ಸಂಘಟನೆಗಾಗಿ ಅನೇಕ ಪ್ರಯತ್ನಗಳನ್ನೂ ಮಾಡಿದರು. ಆಗ ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿ ಬಹುತೇಕ ಪ್ರದರ್ಶಕರ ಕೂಟವಾಗಿದ್ದುದು ಕೂಡಾ ಈ ಪ್ರಯತ್ನಗಳಿಗೆ ಪ್ರೇರಣೆಯಾಯಿತು. ಆದರೆ ಈ ಪ್ರಯತ್ನಗಳಾವುವೂ ಸಫಲವಾಗಲಿಲ್ಲ. ಇದಕ್ಕೆ ಮೂಲ ಕಾರಣ ಪ್ರಮುಖ ನಿರ್ಮಾಪಕರು ಮದರಾಸಿನಲ್ಲಿ ಹರಿದು ಹಂಚಿ ಹೋಗಿದ್ದು.

ರಾಜ್ಯ ಸರ್ಕಾರ ನೀಡಿದ ಅನೇಕ ರಿಯಾಯಿತಿ ಮತ್ತು ಉತ್ತೇಜನಗಳಿಂದಾಗಿ ೧೯೬೧-೭೦ರ ದಶಕದ ಕೊನೆಯ ವೇಳೆಗೆ ಕನ್ನಡ ಚಿತ್ರರಂಗದ ಚಟುವಟಿಕೆಗಳು ಕನ್ನಡ ರಾಜ್ಯದಲ್ಲಿಯೇ ಬೇರೂರಲು ಪ್ರಾರಂಭಿಸಿ ಉದ್ಯಮಕ್ಕೆ ಅನೇಕ ಹೊಸ ಚೇತನಗಳು ಪ್ರವೇಶಿಸಿದಾಗ ಅವರ ಅನೇಕ ಕನಸುಗಳು ಟಿಸಿಲೊಡೆದವು. ಈ ಕನಸುಗಳ ಫಲಶ್ರುತಿಗಾಗಿ ೧೯೭೧-೮೦ರ ದಶಕ ಸಿದ್ಧವಾಗಿ ನಿಂತಿತು.



(ಚಿತ್ರ ೧) ಬೆಂಗಳೂರಿನಲ್ಲಿ ಒಂದೇ ಚಿತ್ರಮಂದಿರದಲ್ಲಿ ಸತತವಾಗಿ ೩ ವರ್ಷಗಳ ಕಾಲ ಪ್ರದರ್ಶನಗೊಂಡು ದಾಖಲೆ ಸ್ಥಾಪಿಸಿದ 'ಬಂಗಾರದ ಮನುಷ್ಯ' ಚಿತ್ರದಲ್ಲಿ ರಾಜಕುಮಾರ್




# ಬಂಗಾರದ ಬದುಕು

೧೯೭೦ರ ದಶಕ ಹಾಗೂ ಮುಂದಿನ ಐದು ವರ್ಷಗಳನ್ನು ಕನ್ನಡ ಚಿತ್ರರಂಗದ ಸುವರ್ಣ ಶಕೆ ಎಂದೇ ಬಣ್ಣಿಸುತ್ತಾರೆ. ಇದಕ್ಕೆ ಮುಖ್ಯ ಕಾರಣ, ಈ ಅವಧಿಯಲ್ಲಿ ಅನೇಕ ಕನ್ನಡ ಚಿತ್ರಗಳು ಅಂತರರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಭಾಗವಹಿಸಿ ಮನ್ನಣೆ ಗಳಿಸಲಾರಂಭಿಸಿದ್ದು. ರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಪ್ರಶಸ್ತಿಗಳನ್ನು ಗೆದ್ದು ರಾಜ್ಯದ ಹೊರಗೂ ಚಿತ್ರಮಾಧ್ಯಮವನ್ನು ಗಂಭೀರವಾಗಿ ಪರಿಗಣಿಸುವವರ ಗಮನ ಸೆಳೆದದ್ದು. ಮತ್ತು ಇದೇ ಅವಧಿಯಲ್ಲಿ ಹೊಸ ಅಲೆ ಎಂಬ ಹಣೆಪಟ್ಟಿ ಹೊತ್ತು ಅನೇಕ ಚಿತ್ರಗಳು ತೆರೆ ಕಂಡವು.

೧೯೭೦ರ ದಶಕದ ಇನ್ನೊಂದು ವೈಶಿಷ್ಟ್ಯವೆಂದರೆ ಅದು ಏಕಕಾಲದಲ್ಲಿ ಹಲವು ಆಯಾಮಗಳಲ್ಲಿ ಬೆಳೆಯಲಾರಂಭಿಸಿದ್ದು. ಸಾಮಾನ್ಯ ಅರ್ಥದಲ್ಲಿ ಇದೇ ಮಾತನ್ನು ಯಾವುದೇ ದಶಕದ ಚಿತ್ರರಂಗಕ್ಕೆ ಅನ್ವಯಿಸಿ ಹೇಳಬಹುದಾದರೂ ಈ ದಶಕದಲ್ಲಿ ಅದು ಸ್ಪಷ್ಟವಾಗಿ ಕಾಣಿಸಿಕೊಂಡಿತು.

ಈ ದಶಕದ ಇನ್ನೊಂದು ಆಯಾಮ ಕನ್ನಡ ಚಿತ್ರರಂಗ ಕ್ರಮೇಣ ಕನ್ನಡ ನಾಡಿನಲ್ಲಿಯೇ ಪಸರಿಸಿಕೊಂಡಿದ್ದು. ೧೯೬೭ರಲ್ಲಿ ರಾಜ್ಯ ಸರ್ಕಾರ ಆರಂಭಿಸಿದ ಸಹಾಯಧನ, ಪ್ರಶಸ್ತಿ ಯೋಜನೆಗಳು ಅರ್ಥಪೂರ್ಣವಾಗಿ ಫಲ ಬಿಟ್ಟ ದಶಕ ಇದು. ಅಷ್ಟೇ ಅಲ್ಲ, ೧೯೭೨ರಿಂದ ೮೦ರವರೆಗೆ ರಾಜ್ಯದ ಮುಖ್ಯಮಂತ್ರಿಯಾಗಿ ಸತತವಾಗಿ ಅಧಿಕಾರದಲ್ಲಿದ್ದ ದೇವರಾಜ ಅರಸರು ಬೆಂಗಳೂರನ್ನು ಹಾಲಿವುಡ್ ಮಾದರಿಯ ಚಲನಚಿತ್ರ ನಗರಿಯನ್ನಾಗಿ ಬೆಳೆಸುವ ಕನಸನ್ನೂ ಕಂಡರು.

ಹಾಲಿವುಡ್‌ನಲ್ಲಿ ಅಮೆರಿಕಾದ ಚಿತ್ರೋದ್ಯಮ ನೆಲೆಗೊಳ್ಳಲು ಮುಖ್ಯ ಕಾರಣ ಬೆಂಗಳೂರಿನವಕ್ಕೆ ಹೋಲುವ ಹಿತಕರವಾದ ಬಿಸಿಲಿನ ಹವೆ. ಅದು ಚಿತ್ರಜಗತ್ತಿಗ ರಾಜಧಾನಿಯಾಗಿ ಬೆಳೆದುದು ಇಂಗ್ಲಿಷ್ ಭಾಷೆಯ ವ್ಯಾಪಕತೆ ಹಾಗೂ ಅಮೆರಿಕಾದ ಶ್ರೀಮಂತಿಕೆಯ ಪ್ರಭಾವದಿಂದ ಎನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಬೆಂಗಳೂರನ್ನು ಹಾಲಿವುಡ್ ಮಾದರಿಯಲ್ಲಿ ಬೆಳೆಸುವ ಯೋಜನೆ ಭ್ರಮೆಯಾಗಿಯೇ ಉಳಿಯಬೇಕಾಯಿತು.

೧೯೭೦ರ ದಶಕವನ್ನು ಸ್ಥೂಲವಾಗಿ ಅವಲೋಕಿಸುವುದಾದರೆ ಸಹಾಯಧನ, ರಾಜ್ಯ ಪ್ರಶಸ್ತಿ, ಚಿತ್ರರಂಗಕ್ಕೆ ಹವ್ಯಾಸಿ ರಂಗಭೂಮಿಯ ಕಲಾವಿದರ ಭಾರಿ ವಲಸೆ, ಪ್ರೀಮಿಯರ್ ಸ್ಟುಡಿಯೋ ವಿಸ್ತರಣೆ, ಬೆಂಗಳೂರಿನಲ್ಲಿ ನಾಲ್ಕು ಸ್ಟುಡಿಯೋಗಳ ಸ್ಥಾಪನೆ, ರಾಜ್ಯದ ಪ್ರಮುಖ ನಗರಗಳಲ್ಲಿ ವೈಭವೋಪೇತ ಚಿತ್ರಮಂದಿರಗಳ ನಿರ್ಮಾಣ, ಇವೆಲ್ಲ ಬೆಳವಣಿಗೆಗಳ ಈ ದಶಕ ಕನ್ನಡ ಚಿತ್ರರಂಗದ ಸುವರ್ಣಯುಗವೆನ್ನುವ ನಂಬಿಕೆಗೆ ಕಾರಣವಾಯಿತು.

ಈ ದಶಕದ ಪ್ರಾರಂಭದವರೆಗ ಕೇವಲ ಪ್ರದರ್ಶಕರ ಹಿತಾಸಕ್ತಿಗಳನ್ನು ಕಾಪಾಡುತ್ತಿದ್ದ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಹೊಚ್ಚ ಹೊಸ ರೂಪ ತಾಳಿ, ಉದ್ಯಮದ ಎಲ್ಲ ಅಂಗಗಳ ಪ್ರಾತಿನಿಧಿಕ, ಅಧಿಕಾರಯುತ ಪ್ರತಿನಿಧಿಯಾಗಿ ಬೆಳೆದು ಉದ್ಯಮದ ಅಗತ್ಯಗಳ ಮತ್ತು ಸಮಸ್ಯೆಗಳ ಬಗ್ಗೆ ರಾಜ್ಯ ಸರ್ಕಾರದೊಂದಿಗೆ ಶಕ್ತಿಯುತವಾಗಿ ವ್ಯವಹರಿಸಲು ಪ್ರಾರಂಭಿಸಿದ್ದು ಇನ್ನೊಂದು ಹೆಚ್ಚಳ.

ಹಿಂದಿನ ದಶಕದಲ್ಲಿ ಸಾಕಷ್ಟು ವಿವಾದಗಳಿಗೆ ಕೇಂದ್ರವಾಗಿದ್ದ ಕನ್ನಡ ಚಿತ್ರರಂಗ ಈ ದಶಕದಲ್ಲಿಯೂ ಅದೇ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿತು. ಈ ಅನೇಕ ವಿವಾದಗಳಿಗೆ ರಾಜ್ಯ ಸರ್ಕಾರ ಮತ್ತು ಅದರಿಂದ ಸ್ಥಾಪಿತವಾದ ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮವೂ ಕಾರಣವಾದವು.

ಕನ್ನಡ ಚಿತ್ರೋದ್ಯಮಕ್ಕೆ ಮದರಾಸಿನ ಸೆಳೆತವನ್ನು ತಪ್ಪಿಸಲೆಂದೇ ಸರ್ಕಾರ ಅನೇಕ ಉತ್ತೇಜನಕಾರಿ ಯೋಜನೆಗಳನ್ನು ಜಾರಿಗೆ ತಂದಿದ್ದೆಂಬ ಅಂಶವನ್ನು ಹಿಂದಿನ ದಶಕದ ಅವಲೋಕನದಲ್ಲಿಯೇ ಕಂಡಿದ್ದಾಗಿದೆ. ೧೯೩೦ರಷ್ಟು ಹಿಂದೆಯೇ ಕನ್ನಡ ನಾಡಿನಲ್ಲಿ ಆರಂಭವಾದ ಚಿತ್ರೋದ್ಯಮ ಇಲ್ಲಿ ಖಾಯಂ ಆಗಿ ನೆಲೆಸಬೇಕೆಂಬ ತುಡಿತ ಆ ದಶಕದಲ್ಲಿ ತೀವ್ರವಾಗಿ ಉಂಟಾಗಲು ಸಾಕಷ್ಟು ಐತಿಹಾಸಿಕ ಕಾರಣಗಳಿದ್ದವು. ಅವುಗಳಲ್ಲಿ (೧) ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಾಗಿನಿಂದ ಬೆಂಗಳೂರಿನಲ್ಲಿ ಅನೇಕ ಕೇಂದ್ರ ಉದ್ಯಮಗಳು ನೆಲೆಯೂರಿ ಬೆಂಗಳೂರು ಕೈಗಾರಿಕಾ ನಗರವಾಗಿದ್ದುದು, (೨) ೧೯೫೩ರಲ್ಲಿ ವಾಹಿನಿ ಪ್ರಕಾಶನದ ಕಿಸೆಪುಸ್ತಕ ಚಳವಳಿಯಿಂದಾಗಿ ಕನ್ನಡ ಸಾಹಿತ್ಯ, ಭಾಷೆ ಮುಂತಾದುವುಗಳ ಬಗ್ಗೆ ಜಾಗೃತಿಯುಂಟಾಗಿದ್ದುದು, (೩) ಆಂಧ್ರಪ್ರದೇಶದಲ್ಲಿ ಪೊಟ್ಟಿ ಶ್ರೀರಾಮುಲು ಬಲಿದಾನದಿಂದ ಭಾಷಾವಾರು ಪ್ರಾಂತ್ಯಗಳ ರಚನೆಗೆ ಕೇಂದ್ರದ ಮನ್ನಣೆ ಕೊನೆಗೂ ದೊರಕಿ ೧೯೫೬ರಲ್ಲಿ ಹೈದರಾಬಾದು ಕರ್ನಾಟಕ, ಮುಂಬೈ ಕರ್ನಾಟಕ, ಮದರಾಸಿನ ಕನ್ನಡ ಪ್ರದೇಶಗಳು ಮತ್ತು ಹಳೆಯ ಮೈಸೂರು ವಿಲೀನವಾಗಿ ಕರ್ನಾಟಕ ರಾಜ್ಯ ರೂಪುಗೊಂಡಿದ್ದು ಮತ್ತು (೪) ೧೯೬೨ರಲ್ಲಿ ಅ.ನ.ಕೃ, ಮ.ರಾಮಮೂರ್ತಿ, ನಾಡಿಗೇರ ಕೃಷ್ಣರಾಯ ಅವರುಗಳು ಆರಂಭಿಸಿದ ಕನ್ನಡ ಚಳವಳಿಯಿಂದಾಗಿ ಕನ್ನಡಿಗರಲ್ಲಿ ಸ್ವಾಭಿಮಾನ ಮೂಡಿಬಂದದ್ದು.

೧೯೬೭ರಿಂದ ೭೧ರವರೆಗಿನ ಐದು ವರ್ಷಗಳು ಕನ್ನಡ ಹವ್ಯಾಸಿ ನಾಟಕರಂಗದ ದೃಷ್ಟಿಯಿಂದ ತೀವ್ರ ಚಟುವಟಿಕೆಯ ವರ್ಷಗಳಾಗಿದ್ದವು. ಕೈಲಾಸಂ ಅವರ ನಂತರ ಪರ್ವತವಾಣಿ, ಕ್ಷೀರಸಾಗರ, ರಾಜಾರಾವ್ ಮುಂತಾದವರ ಸಂಪ್ರದಾಯಸ್ಥ ನಾಟಕಗಳ ಸ್ಥಾನದಲ್ಲಿ ಶ್ರೀರಂಗರ ವೈಚಾರಿಕ ನಾಟಕಗಳು, ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ, ಲಂಕೇಶ್, ಮೊದಲಾದವರ ನವ್ಯ, ಅಮೂರ್ತ ನಾಟಕಗಳು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಪ್ರದರ್ಶಿತವಾಗಲು ಆರಂಭಿಸಿದ್ದವು.

೧೯೩೪ರಲ್ಲಿ ಆರಂಭವಾದ ಮೊದಲ ಕೆಲವು ವರ್ಷಗಳು ಡೋಲಾಯಮಾನವಾಗಿದ್ದು ನಂತರ ಪ್ರಥಮ ವಿಶ್ವಸಮರ ಸಮಯದಲ್ಲಿ ಸ್ಥಗಿತವಾಗಿ ಮುಂದೆ ಕ್ರಮವಾಗಿ ಬೆಳೆಯುತ್ತ ಬಂದ ಕನ್ನಡ ಚಿತ್ರರಂಗ ೧೯೫೪ರಲ್ಲಿ ರಾಜಕುಮಾರ್, ಕಲ್ಯಾಣ್‌ಕುಮಾರ್, ಉದಯಕುಮಾರ್ ಇವರುಗಳ ಪ್ರವೇಶದ ವೇಳೆಗೆ ಸ್ವಲ್ಪಮಟ್ಟಿಗೆ ಸುಭದ್ರ ಸ್ಥಿತಿಯಲ್ಲಿಯೇ ಇದ್ದದ್ದನ್ನು ಈಗಾಗಲೇ ದಾಖಲಿಸಲಾಗಿದೆ. ಅನಂತರ ಎಂ.ಆರ್.ವಿಠಲ್, ಪುಟ್ಟಣ್ಣ ಕಣಗಾಲ್, ಎನ್.ಲಕ್ಷ್ಮೀನಾರಾಯಣ್‌ರಂತಹ ಪ್ರತಿಭಾವಂತ ನಿರ್ದೇಶಕರು ಕನ್ನಡ ಚಿತ್ರಗಳನ್ನು ವೃತ್ತಿರಂಗಭೂಮಿಯ ಕ್ಲೀಷೆಗಳಿಂದ ತಪ್ಪಿಸುವ ಪ್ರಯತ್ನ ಮಾಡಿದ್ದರ ದೆಸೆಯಿಂದ ಕಾದಂಬರಿಯಾಧಾರಿತ ಚಿತ್ರಗಳ ಸಂಖ್ಯೆಯೂ ಬೆಳೆಯುತ್ತ ಬಂದು ಉದ್ಯಮದಲ್ಲಿ ಸಮಕಾಲೀನತೆಗೆ ಒತ್ತು ಬಂದಿತ್ತು. ೧೯೭೦ರ ದಶಕದಲ್ಲಿ ಅದು ಮತ್ತೊಂದು ಹಂತಕ್ಕೆ ಜಿಗಿಯಬೇಕಿತ್ತು.

ಕೆಲವು ಕನ್ನಡ ಚಿತ್ರೋದ್ಯಮಿಗಳಲ್ಲಿ ಮತ್ತು ಚಿತ್ರಪ್ರಿಯರ ಒಂದು ವರ್ಗದಲ್ಲಿ ಚಲನಚಿತ್ರ ಮಾಧ್ಯಮದಲ್ಲಿ ಹೊಸ ಅರ್ಥವೊಂದನ್ನು ಕಂಡುಕೊಳ್ಳುವ ಪ್ರಾಮಾಣಿಕ ಕಾಳಜಿ ೧೯೭೦ರ ದಶಕದ ಮೊದಲಲ್ಲಿ ರಾಜ್ಯದ ಪ್ರಥಮ ಚಲನಚಿತ್ರ ಸಮಾಜ 'ಫಿಲಂ ಸೊಸೈಟಿ ಆಫ್ ಬ್ಯಾಂಗಳೂರ್' ಅಸ್ತಿತ್ವಕ್ಕೆ ಬರಲು ಪ್ರೇರಣೆ ನೀಡಿತು. ಈ ಸಂಘಟನೆಯಲ್ಲಿ ಗಂಭೀರ ಚಿತ್ರಾಸಕ್ತರೇ ಅಲ್ಲದೆ ವ್ಯಾಪಾರಿ ಚಿತ್ರೋದ್ಯಮದ ಪ್ರಮುಖರೂ ಕೈಜೋಡಿಸಿದ್ದು ಒಂದು ವಿಶೇಷ. ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ಆಡಳಿತ ನಿರ್ದೇಶಕರೂ, ರಾಜ್ಯ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರೂ ಆಗಿದ್ದ ಶಾಂತೇಶ ಪಾಟೀಲರು ಅಧ್ಯಕ್ಷರಾಗಿದ್ದು,

ಅಲಂಕಾರ್ ಚಿತ್ರಮಂದಿರದ ಒಡೆಯ ಕೃಷ್ಣಕಾಂತ್ ದೇಸಾಯಿ ಉಪಾಧ್ಯಕ್ಷರಾಗಿದ್ದು, ಅಕಾಡೆಮಿಕ್ ಹಿನ್ನೆಲೆಯ ನಿರ್ದೇಶಕ ಎಂ.ವಿ.ಕೃಷ್ಣಸ್ವಾಮಿ ಮತ್ತು ಪತ್ರಕರ್ತ ವಿ.ಎನ್.ಸುಬ್ಬರಾವ್ ಕಾರ್ಯದರ್ಶಿಗಳಾಗಿದ್ದರು. ಈ ಚಿತ್ರಸಮಾಜ ದೇಶದಲ್ಲಿ ಟೆಲಿವಿಷನ್ ಮಾಧ್ಯಮದ ಅದ್ಭುತ ಸಾಧ್ಯತೆಗಳನ್ನು ಆ ಕಾಲದಲ್ಲಿಯೇ ಗಮನಿಸಿ ಖ್ಯಾತ ಚಲನಚಿತ್ರಜ್ಞ ರೋಜರ್ ಮ್ಯಾನ್‌ವೆಲ್ ಸಾರಥ್ಯದಲ್ಲಿ ಟೆಲಿವಿಷನ್ ಬಗ್ಗೆ ಒಂದು ವಾರದ ಕಾರ್ಯಾಗಾರವನ್ನು ನಡೆಸುವುದರ ಜೊತೆಗೆ ಉತ್ತಮ ಅಭಿರುಚಿಯ ದೇಶೀಯ ಮತ್ತು ವಿದೇಶೀಯ ಚಿತ್ರಗಳ ಪ್ರದರ್ಶನ ಮತ್ತು ಅವುಗಳ ಬಗ್ಗೆ ಚರ್ಚಾಗೋಷ್ಠಿಗಳನ್ನು ಏರ್ಪಡಿಸಿ ರಾಜ್ಯದಲ್ಲಿ ಮೂಡುತ್ತಿದ್ದ ಹೊಸ ಪ್ರಜ್ಞೆಗೆ ಸ್ಪಂದಿಸಿತು. ಈ ಸಂಸ್ಥೆ ತನ್ನ ಚಟುವಟಿಕೆಗಳನ್ನು ನಿಲ್ಲಿಸಿದ ನಂತರ ಇದೇ ದಶಕದಲ್ಲಿ 'ಮಯೂರ ಫಿಲಂ ಸೊಸೈಟಿ' ಈ ಕೆಲಸವನ್ನು ಮುಂದುವರಿಸಿಕೊಂಡು ಹೋಯಿತು. ನಂತರ ಪ್ರಾರಂಭವಾದದ್ದು ಎಡೆಬಿಡದೆ ತನ್ನ ಚಟುವಟಿಕೆಗಳನ್ನು ೨೦ ವರ್ಷಗಳಿಗೂ ಮೀರಿ ನಡೆಸಿಕೊಂಡು ಬರುತ್ತಿರುವ 'ಸುಚಿತ್ರ ಫಿಲಂ ಸೊಸೈಟಿ'. ಇವೆಲ್ಲ ಸಂಸ್ಥೆಗಳೂ ಕರ್ನಾಟಕದ ಚಿತ್ರಪ್ರೇಮಿಗಳಲ್ಲಿ ಚಲನಚಿತ್ರ ಸಂಸ್ಕೃತಿಯ ಬಗ್ಗೆ ಹೊಸ ಪ್ರಜ್ಞೆಯನ್ನು ಹುಟ್ಟಿಸಿದ ಸಾರ್ಥಕ ಪ್ರಯತ್ನಗಳು. ಬೆಂಗಳೂರು ಮಾತ್ರವಲ್ಲದೆ ಇತರ ಕೆಲವು ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿಯೂ ಚಿತ್ರ ಸಮಾಜಗಳು ಪ್ರಾರಂಭವಾದದ್ದು ಒಂದು ಮುಖ್ಯ ಬೆಳವಣಿಗೆ.

ಕನ್ನಡ ಚಿತ್ರರಂಗವನ್ನು ನಾಟಕರಂಗದ ಪ್ರಭಾವದಿಂದ ಬಿಡಿಸಿ ಅದಕ್ಕೆ ತನ್ನದೇ ಆದ ನುಡಿಗಟ್ಟನ್ನು ಒದಗಿಸಿಕೊಡುವುದರಲ್ಲಿ ಮಹತ್ತರ ಪಾತ್ರ ವಹಿಸಿದ ಹೊಸ ಅಲೆಯ ಚಿತ್ರಗಳ ಮಹಾಪೂರದ ಈ ಹಂತದ ಬಗ್ಗೆ ತಿಳಿಯಲು ಆಗಿನ ಸಾಹಿತ್ಯಕ, ಸಾಂಸ್ಕೃತಿಕ ವಾತಾವರಣದ ಪರಿಚಯ ಅಗತ್ಯ. ೨೦ನೆಯ ಶತಮಾನದ ಎರಡನೆಯ ದಶಕದಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಕುವೆಂಪು, ವಿ.ಕೃ.ಗೋಕಾಕ್, ಕೆ.ಎಸ್.ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ ಮುಂತಾದವರುಗಳಿಂದ ಸಮೃದ್ಧವಾಗಿ ಬೆಳೆದ ನವೋದಯ ಸಾಹಿತ್ಯ ಹೊಸ ಮನ್ವಂತರವೊಂದರ ಕನಸು ಕಾಣುತ್ತಿದ್ದರೂ ಅದು ಸಾಮಾಜಿಕ ಮೌಲ್ಯಗಳ ಮಟ್ಟಿಗೆ ಬಹಳ ಮಟ್ಟಿಗೆ ರೂಢಿಗತವಾದುವನ್ನೇ ಆಧರಿಸಿತ್ತು. ಮಾರ್ಕ್ಸ್, ಎಂಗೆಲ್ಸ್ ಅವರ ಕಮ್ಯೂನಿಸ್ಟ್ ಸಿದ್ಧಾಂತದ ಬೆಳಕಿನಲ್ಲಿ ಈ ಮೌಲ್ಯಗಳನ್ನು ಪ್ರಶ್ನಿಸಿ ಬೆಳೆದುಬಂದಿದ್ದ ನಿರಂಜನ, ಬಸವರಾಜ ಕಟ್ಟೀಮನಿ, ತ.ರಾ.ಸು. ಮುಂತಾದವರು ಪಾಲ್ಗೊಂಡಿದ್ದ ಪ್ರಗತಿಶೀಲ ಸಾಹಿತ್ಯ. ಇದು ಈ ಶತಮಾನದ ಸುಮಾರು ಐದನೆಯ ದಶಕದವರೆಗೆ ಅನಿರ್ಬಾಧಿತವಾಗಿಯೇ ಬೆಳೆದು ಬಂತು. ಅನಂತರ ಮುಖ್ಯವಾಗಿ ಐರೋಪ್ಯ ಚಿಂತಕರಾದ ಕಾಫ್ಕ, ಕಾಮು, ಸಾರ್ತ್ರೆ ಅವರುಗಳು ತಮ್ಮ ದೇಶಗಳಲ್ಲಿ ದ್ವಿತೀಯ ವಿಶ್ವ ಸಮರಾನಂತರದ ವಿನಾಶದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಒಂದು ಇಡೀ ಜನಾಂಗವನ್ನೇ ವ್ಯಾಪಿಸಿದ ನಿರುದ್ಯೋಗ, ಹತಾಶ ಮನೋಭಾವ, ಅನಾಥ ಪ್ರಜ್ಞೆ ಮುಂತಾದುವುಗಳಿಂದಾಗಿ ಅಸ್ತಿತ್ವವಾದವನ್ನು ನೆಲೆಗಟ್ಟಾಗಿಟ್ಟುಕೊಂಡು ಬರೆದ ಸಾಹಿತ್ಯ ಕನ್ನಡದ ಮೇಲೂ ದಟ್ಟ ಪ್ರಭಾವ ಬೀರಿತು. ವಾಸ್ತವವಾಗಿ ಭಾರತದಲ್ಲಿ ಎಂದೂ ಅಂತಹ ಸಮರೋತ್ತರ ಪರಿಸ್ಥಿತಿ ಇಲ್ಲದಿದ್ದರೂ ಇಲ್ಲಿನ ಸಾಂಸ್ಕೃತಿಕ, ತಾತ್ವಿಕ ದೃಷ್ಟಿಕೋನವೇ ಬೇರೆಯಾಗಿದ್ದರೂ ಆಂಗ್ಲ ಸಾಹಿತ್ಯ ಪ್ರಭಾವಿತ ಕನ್ನಡ ಲೇಖಕರಿಗೆ ಅಸ್ತಿತ್ವವಾದವೇ ಒಂದು ಫ್ಯಾಷನ್ ಆಗಿ ಬೆಳೆದುಬಂತು.

ಹೀಗೆ ಬಂದದ್ದು ನವ್ಯ ಸಾಹಿತ್ಯ. ಇಲ್ಲಿ ಸಹ ಎರಡು ಬಿಳಲುಗಳನ್ನು ಕಾಣಬಹುದಾಗಿತ್ತು. ಒಂದು, ಹೊಸ ಮೌಲ್ಯಗಳ ಅನ್ವೇಷಣೆಯಲ್ಲಿಯೂ ಪರಂಪರಾಗತ ಚಿಂತನೆಯನ್ನು ಪೂರ್ಣವಾಗಿ ಕೈಬಿಡದೆ, ಅದರಲ್ಲಿನ ಉತ್ತಮ ಮೌಲ್ಯಗಳ ಗಟ್ಟಿ ತಳಪಾಯವನ್ನಾಧರಿಸಿ, ಸಾಹಿತ್ಯದ ಬಂಧದಲ್ಲಿ ತಮ್ಮದೇ ಮಾರ್ಗವನ್ನನುಸರಿಸಿದ ಗೋಪಾಲಕೃಷ್ಣ ಅಡಿಗ, ವಿ.ಕೃ.ಗೋಕಾಕರದು. ಇನ್ನೊಂದು, ಸಾಹಿತ್ಯದ ಬಂಧ, ಚಿಂತನೆ ಎಲ್ಲದರಲ್ಲೂ ಐರೋಪ್ಯ ಸಾಹಿತ್ಯಕ್ಕೇ ಅಂಟಿಕೊಂಡ ಲಂಕೇಶ್, ಅನಂತಮೂರ್ತಿ ಮುಂತಾದವರದು. ಇವರೆಲ್ಲರೂ ಇಂಗ್ಲಿಷ್ ಅಧ್ಯಾಪಕರೇ ಆಗಿದ್ದುದು ಆಗಿನ ಕಾಲದ ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್‌ನ ದಟ್ಟ ಪ್ರಭಾವಕ್ಕೆ ಕಾರಣ.

ಅಂದಿನ ಸಾಹಿತ್ಯದ ಪ್ರಮುಖರಾದ ಅಡಿಗ, ಲಂಕೇಶ್, ಅನಂತಮೂರ್ತಿ ಅವರನ್ನೆಲ್ಲ ಕೂಡಿಸಿದ ಮತ್ತೊಂದು ಪ್ರಮುಖ ತಂತುವಿತ್ತು. ಅದೆಂದರೆ, ಭಾರತದಲ್ಲಿ ಜಯಪ್ರಕಾಶ್ ನಾರಾಯಣ್, ಆಚಾರ್ಯ ಕೃಪಲಾನಿ, ನರೇಂದ್ರದೇವ ಮುಂತಾದವರ ಸಮಾಜವಾದಿ ಚಿಂತನೆಯಿಂದ ಸಿಡಿದು ಬಂದು ತಮ್ಮದೇ ಆದ ಮಾರ್ಗದಲ್ಲಿ ನಡೆದ ರಾಮ್ ಮನೋಹರ್ ಲೋಹಿಯಾ ಅವರ ಅನುಯಾಯಿಯಾದ ಶಾಂತವೇರಿ ಗೋಪಾಲಗೌಡರದು. ಮೂಲತಃ ತೀರ್ಥಹಳ್ಳಿಯವರಾದ ಇವರು ತಮ್ಮನ್ನು ಲೋಹಿಯಾ ಸೋಷಲಿಸ್ಟರೆಂದು ಗುರುತಿಸಿಕೊಳ್ಳುವ ಗುಂಪಿನ ಮುಂದಾಳಾಗಿದ್ದರು. ಸುಮಾರು ಐವತ್ತರ ದಶಕದ ನಂತರದ ನಾಡಿನ ಸಾಹಿತ್ಯಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಜೀವನದಲ್ಲಿ ಗಾಢ ಪ್ರಭಾವ ಬೀರಿದ ಈ ಗುಂಪಿನಲ್ಲಿ ಹೆಸರಾದ ಪತ್ರಕರ್ತ-ಬರಹಗಾರರಾದ ಖಾದ್ರಿ ಶಾಮಣ್ಣ, ಬಾ.ಸು.ಕೃಷ್ಣಮೂರ್ತಿ, ಕೆ.ಸತ್ಯನಾರಾಯಣ, ರಾಜಕಾರಣಿಗಳಾದ ಎಂ.ಎಸ್.ಗುರುಪಾದಸ್ವಾಮಿ, ಕೋಣಂದೂರು ಲಿಂಗಪ್ಪ, ಕಾಗೋಡು ತಿಮ್ಮಪ್ಪ, ಎಸ್.ಬಂಗಾರಪ್ಪ, ಸಾಹಿತಿಗಳಾದ ಪೂರ್ಣಚಂದ್ರ ತೇಜಸ್ವಿ, ಎಂ.ಎಸ್.ಕೆ.ಪ್ರಭು, ಸೂ.ರಮಾಕಾಂತ, ಸಾಮಾಜಿಕ ಕಾರ್ಯಕರ್ತರಾದ ಕೆ.ವಿ.ಸುಬ್ಬಣ್ಣ ಮುಂತಾದವರಿದ್ದರು. ಒಂದು ರಾಜಕೀಯ ಪಕ್ಷವಾಗಿ ಲೋಹಿಯಾರವರ ಪ್ರಜಾ ಸಮಾಜವಾದಿ ಪಕ್ಷ ಬೆಳೆಯದಿದ್ದರೂ ಲೋಹಿಯಾ ವಿಚಾರಧಾರೆಯಿಂದ ಪ್ರಭಾವಿತರಾದ ಇವರುಗಳಲ್ಲಿ ಕೆಲವರು ಹಿನ್ನೆಲೆಯಲ್ಲಿಯೇ ಉಳಿದರೂ ಸಾಮೂಹಿಕವಾಗಿ ನಾಡಿನ ಸಾಂಸ್ಕೃತಿಕ ದಿಕ್ಕನ್ನೇ ಬದಲಾಯಿಸಿದರು. ಇವರಲ್ಲಿ ಅನೇಕರು ಚಿತ್ರರಂಗದೊಂದಿಗೆ ನೇರವಾದ ಅಥವಾ ನಿಕಟವಾದ ಸಂಪರ್ಕ ಹೊಂದಿರದಿದ್ದರೂ ಕನ್ನಡದ ಹೊಸ ಅಲೆಯ ಚಿತ್ರಗಳು ಒಂದು ದೊಡ್ಡ ಚಳವಳಿಯಾಗಿ ಬೆಳೆಯುವುದಕ್ಕೆ ಅಗೋಚರ ಕಾರಣಕರ್ತರೂ ಆಗಿದ್ದರು. ಇಲ್ಲಿ ಹೆಸರಿಸಿರುವುದು ಅಂಥ ಕೆಲವರನ್ನು ಮಾತ್ರ. ಹೆಸರಿಸದಿರುವುದು ಇದಕ್ಕೆ ಬಹುಶಃ ಹತ್ತು ಪಟ್ಟು ಮಂದಿ.

ಈ ದಶಕದಲ್ಲಿ ಕನ್ನಡ ಚಿತ್ರರಂಗದಲ್ಲಿ ಹೊಸ ಅಲೆಯನ್ನು ರೂಪಿಸಿದ ಇನ್ನೊಂದು ಅಂಶವೆಂದರೆ ನವ್ಯ ಸಾಹಿತ್ಯ ಚಳವಳಿ. ರಂಗಕರ್ಮಿ ಬಿ.ವಿ.ಕಾರಂತರು ದೆಹಲಿಯಿಂದ ಬೆಂಗಳೂರಿಗೆ ಬಂದು ನೆಲೆಸಿದ ನಂತರ ಅವರು ಹಮ್ಮಿಕೊಂಡ ಹವ್ಯಾಸಿ ರಂಗಭೂಮಿ ಚಳವಳಿ ಕೂಡ ಹೊಸ ಅಲೆಗೆ ಪ್ರೇರಣೆಯಾಯಿತು. ಹೊಸ ಅಲೆಯ ಪ್ರಾರಂಭಿಕ ದಿನಗಳಲ್ಲಿ ಈ ಚಳವಳಿಯ ಮುಂಚೂಣಿಯಲ್ಲಿ ನಿಂತವರು ಕಾರಂತರು ಮತ್ತು ಅವರ ಒಡನಾಡಿಗಳು. ಬಾದಲ್ ಸರ್ಕಾರ್, ಮಹಾರಾಷ್ಟ್ರದ ವಿಜಯತೆಂಡೂಲ್ಕರ್ ಅವರ ಹೊಸ ಬಗೆಯ ನಾಟಕಗಳೂ ಪ್ರಭಾವ ಬೀರಿದವು. ಸತ್ಯಜಿತ್ ರಾಯ್ ಅವರಂತೂ ಯುವ ಪೀಳಿಗೆಗೆ ಸ್ಫೂರ್ತಿಯೇ ಆದರು.

ಇತ್ತ ವ್ಯಾಪಾರಿ ಚಿತ್ರೋದ್ಯಮದ ಪರಿಸರದಲ್ಲಿಯೇ ಕೆಲವು ಉತ್ತಮ ಸಾಹಿತ್ಯಕ, ಸಾಂಸ್ಕೃತಿಕ ಮತ್ತು ತಾಂತ್ರಿಕ ಮೌಲ್ಯಗಳನ್ನು ಅಳವಡಿಸಿಕೊಂಡು ಮಧ್ಯಮ ಸೂತ್ರದ ಚಿತ್ರಗಳನ್ನು ತಯಾರಿಸುವ ಪರಿಪಾಠ ಬೆಳೆದಿದ್ದು ಕೂಡ ಇದೇ ದಶಕದಲ್ಲಿ. ಒಂದು ಕಡೆ ಗಲ್ಲಾ ಪೆಟ್ಟಿಗೆಯ ಸೂತ್ರಗಳಿಗೆ ಸಂಪೂರ್ಣವಾಗಿ ಶರಣಾಗಿ ಯಾವ ಗಟ್ಟಿತನವೇ ಆಗಲಿ, ಹೊಸತನವೇ ಆಗಲಿ ಇಲ್ಲದ ಚಿತ್ರಗಳ ಭರಾಟೆ ಹೆಚ್ಚುತ್ತಿದ್ದಂತೆ ಇನ್ನೊಂದು ಕಡೆ ಹೊಸ ಅಲೆಯೆಂಬ ಹಣೆಪಟ್ಟಿಯ ಚಳವಳಿಯ ನಡುವೆ ಇಂತಹ ಮಧ್ಯಮ ಮಾರ್ಗದ ಚಿತ್ರಗಳ ಅಗತ್ಯವೂ ಹೆಚ್ಚತೊಡಗಿತು. ಹೆಚ್ಚು ಹೆಚ್ಚು ಕನ್ನಡ ಚಲನಚಿತ್ರ ನಿರ್ಮಾಪಕರು ಕಾದಂಬರಿ ಸಾಹಿತ್ಯದ ಬೆನ್ನು ಹತ್ತಿ ಹೋಗಲಾರಂಭಿಸಿದ್ದು ಈ ಹಿನ್ನೆಲೆಯಲ್ಲಿಯೆ. 'ಕರುಣೆಯೇ ಕುಟುಂಬದ ಕಣ್ಣು', 'ಸಂಧ್ಯಾರಾಗ', 'ಚಿತ್ರಶೀರ್ಷ', 'ಬೆಳ್ಳಿಮೋಡ', 'ಮಿಸ್ ಲೀಲಾವತಿ' ಮುಂತಾದ ಚಿತ್ರಗಳು ಈ ಪರಂಪರೆಗೆ ಭದ್ರವಾದ ಬುನಾದಿ ಹಾಕಿದ್ದವು. ಎ.ಎನ್.ಮೂರ್ತಿರಾಯರ 'ಆಷಾಢಭೂತಿ' ನಾಟಕದ ಆಧಾರದ ಮೇಲೆ ಎಂ.ವಿ.ಕೃಷ್ಣಸ್ವಾಮಿಯವರು ಚಿತ್ರಿಸಿದ 'ಸುಬ್ಬಾಶಾಸ್ತ್ರಿ' ಮತ್ತು ಎನ್.ಲಕ್ಷ್ಮೀನಾರಾಯಣ್ ಅವರು ತಮ್ಮ ಚಿತ್ರಕಥೆಯನ್ನಾಧರಿಸಿ ನಿರ್ದೇಶಿಸಿದ 'ನಾಂದಿ' ಕನ್ನಡದಲ್ಲಿ ಮೆಲುಸ್ತರದ ನಿರೂಪಣೆಗೆ ಅಡಿಪಾಯ ಹಾಕಿದ್ದವು. ಮುಂದೆ ಈ ಮೂರೂ ಪಂಥದ ಚಿತ್ರಗಳು ಪ್ರವರ್ಧಮಾನಕ್ಕೆ ಬಂದ ದಶಕ ಇದು.

ಈಗ ಹಿನ್ನೋಟದಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾದಂತೆ ಹೊಸ ಅಲೆಯ ಮುಖ್ಯ ಲಕ್ಷಣಗಳು ಎರಡು. ಮೊದಲನೆಯದು, ಹೊಸ ಅಲೆಯ ನಾಯಕ-ನಾಯಕಿಯರು ಅ.ನ.ಕೃ, ತ್ರಿವೇಣಿ, ತ.ರಾ.ಸು.ರವರ ಕಾದಂಬರಿಗಳ ಬ್ರಾಹ್ಮಣ ಹಿನ್ನೆಲೆಯ ನಾಯಕ-ನಾಯಕಿಯರಂತೆ ತಮ್ಮ ಪ್ರಶ್ನೆಗಳಿಗೆ ಸಾಂಪ್ರದಾಯಿಕ ಸಮಾಜದ ಚೌಕಟ್ಟಿನೊಳಗೆ ಉತ್ತರ ಹುಡುಕಬಯಸದೆ ತಮ್ಮದೇ ಆದ ಮಾರ್ಗಗಳನ್ನು ಹುಡುಕುವ ಪ್ರಯತ್ನ ಮಾಡಿದುದು. ಎರಡನೆಯದಾಗಿ ಇವುಗಳ ನಿರೂಪಣಾ ಶೈಲಿಯಲ್ಲಿ ಸಹ ಅದುವರೆಗಿನ ಸಂಪ್ರದಾಯವನ್ನು ಬಿಟ್ಟು ನಿರ್ದೇಶಕನ ಸ್ವಂತ ಅಭಿವ್ಯಕ್ತಿಗೆ ಪ್ರಾಧಾನ್ಯ ನೀಡಿದುದು. ಆದರೆ ಐರೋಪ್ಯ ರಾಷ್ಟ್ರಗಳ ಕಲಾಪ್ರಕಾರಗಳಲ್ಲಿ ರಿಯಲಿಸ್ಟ್, ಸರ್ರಿಯಲಿಸ್ಟ್ ಮುಂತಾಗಿ ನಾನಾ ಪಂಥಗಳು ನಿರ್ದಿಷ್ಟವಾಗಿ ಗುರುತಿಸಬಹುದಾದ ರೀತಿಯಲ್ಲಿ ಬಂದಂತೆ ಹೊಸ ಅಲೆಯ ಚಿತ್ರಗಳು ಬರಲಿಲ್ಲ.

'ಸಂಸ್ಕಾರ'ದಂತಹ ಗಂಭೀರ ಚಿತ್ರದಿಂದ ೬೦ರ ದಶಕದ 'ಚಿತೆಗೂ ಚಿಂತೆ'ಯಂತಹ ವಿಡಂಬನೆಯವರೆಗೆ ಎಲ್ಲವೂ ಹೊಸ ಅಲೆಯ ವ್ಯಾಪ್ತಿಯಲ್ಲೇ ಬಂದವು. ಎಂದರೆ ಅವರ ವೈವಿಧ್ಯವನ್ನು ಗುರುತಿಸಿದಂತಾಗಬಹುದು.

ಈ ದಶಕದಲ್ಲಿ ಹೇರಳವಾಗಿಯೇ ತೆರೆಗೆ ಬಂದ ಹೊಸ ಅಲೆಯ ಚಿತ್ರಗಳಲ್ಲಿ ಅನೇಕವು ಮೂಲವಾಹಿನಿಯ ಚಿತ್ರಗಳ ನಿರ್ಮಾಣ ಮತ್ತು ವಿತರಣೆಯಲ್ಲಿಯೇ ಹೆಚ್ಚಾಗಿ ತೊಡಗಿಕೊಂಡಿದ್ದ ವ್ಯಾಪಾರಿ ಮನೋವೃತ್ತಿಯ ಉದ್ಯಮಿಗಳ ಆರ್ಥಿಕ ನೆರವಿನಿಂದಲೇ ತಯಾರಾದರೂ ಹೊಸ ಅಲೆ ಮತ್ತು ವ್ಯಾಪಾರಿ ಚಿತ್ರಗಳ ನಡುವಣ ಕಂದಕ ಹಾಗೆಯೇ ಉಳಿಯಿತು. ವ್ಯಾಪಾರಿ ಚಿತ್ರಗಳಿಗೆ ಸಂಬಂಧಿಸಿದ ಅನೇಕ ಸಮಸ್ಯೆಗಳ ಬಗ್ಗೆ ಹೊಸ ಅಲೆಯ ಪಂಥದವರು ತಲೆ ಕೆಡಿಸಿಕೊಳ್ಳಲಿಲ್ಲ. ಹೊಸ ಅಲೆಯ ಚಿತ್ರಗಳ ಸಮಸ್ಯೆಗಳ ಬಗ್ಗೆ ವ್ಯಾಪಾರಿ ಬಣ ಅದೇ ತರಹದ ಉಪೇಕ್ಷೆಯನ್ನು ತೋರಿಸಿತು. ಹೀಗಾಗಿ ಅಲ್ಲಿಯೂ ಸಲ್ಲಲು, ಇಲ್ಲಿಯೂ ಸಲ್ಲಲು ಪ್ರಯತ್ನಿಸಿದ ಕೆಲವು ಚಿತ್ರಗಳ ನಿರ್ಮಾಪಕರು ಮತ್ತು ನಿರ್ದೇಶಕರು ಈ ಕಂದಕವನ್ನು ಒಡೆಯಲು ಪ್ರಾಮಾಣಿಕ ಪ್ರಯತ್ನಗಳನ್ನೇ ಮಾಡಿದರೂ ಅವರಿಗೆ ಅಷ್ಟೇನೂ ಯಶಸ್ಸು ಸಿಗಲಿಲ್ಲ. ಆದರೆ ಪುಟ್ಟಣ್ಣ ಕಣಗಾಲ್, ಎನ್.ಲಕ್ಷ್ಮೀನಾರಾಯಣ್, ಸಿದ್ಧಲಿಂಗಯ್ಯನವರಂತಹ ನಿರ್ದೇಶಕರು ಹಳೆಯ ಜಾಡನ್ನು ಬಿಟ್ಟು ಹೊಸ ಜಾಡನ್ನು ತುಳಿಯುವ ತಮ್ಮ ಪ್ರಯತ್ನಗಳಿಂದ ವಿಶೇಷ ಗಮನ ಸೆಳೆದರು.

ಏತನ್ಮಧ್ಯೆ ಆಗ ತಾನೆ ಕ್ರಮೇಣ ಮದರಾಸಿನಿಂದ ಕರ್ನಾಟಕಕ್ಕೆ ಸ್ಥಳಾಂತರಗೊಳ್ಳುತ್ತಿದ್ದ ಕನ್ನಡ ಚಿತ್ರೋದ್ಯಮ ಕನ್ನಡ ನಾಡಿನಲ್ಲಿಯೇ ಬೇರೂರುವ ಪ್ರಯತ್ನದಲ್ಲಿ ಅನೇಕ ಸವಾಲುಗಳನ್ನು, ಸಮಸ್ಯೆಗಳನ್ನು ಎದುರಿಸುವುದು ಅನಿವಾರ್ಯವಾಯಿತು. ಎಲ್ಲಕ್ಕಿಂತ ಹೆಚ್ಚಾಗಿ ರಾಜ್ಯದಲ್ಲಿಯೇ ತಯಾರಾದ ಕನ್ನಡ ಚಿತ್ರಗಳಿಗೆ ಸಬ್ಸಿಡಿ ಯೋಜನೆಯನ್ನು ಜಾರಿಗೆ ತಂದಿದ್ದ ರಾಜ್ಯ ಸರ್ಕಾರ ಈ ಸಹಾಯಧನವನ್ನು ಉತ್ತಮ ಗುಣಮಟ್ಟದ ಚಿತ್ರಗಳಿಗೆ ಮಾತ್ರ ಸೀಮಿತಗೊಳಿಸಬೇಕೆಂದು ಪ್ರಯತ್ನಿಸುತ್ತಿತ್ತು. ಇದು ಉದ್ಯಮದ ತೀವ್ರ ಪ್ರತಿಭಟನೆಗೆ ಒಳಗಾಯಿತು. ಸರ್ಕಾರ ಸಹಾಯಧನವನ್ನು ನೀಡುತ್ತಿದ್ದುದು ರಾಜ್ಯದಲ್ಲಿಯೇ ಚಿತ್ರೋದ್ಯಮ ಭದ್ರವಾಗಿ ಬೇರೂರಲೆಂದೋ ಅಥವಾ ಕನ್ನಡ ಚಿತ್ರಗಳ ಗುಣಮಟ್ಟ ಹೆಚ್ಚು ಸುಧಾರಿಸಲೆಂದೋ ಎನ್ನುವ ಬಗ್ಗೆಯೇ ಬಿರುಸಾದ ವಾದ-ವಿವಾದಗಳು ಪ್ರಾರಂಭವಾದವು. ಈ ವಿವಾದ ಮೂರು ದಶಕಗಳಿಗೂ ಮೀರಿಯೇ ಮುಂದುವರಿದುಕೊಂಡು ಬಂದು ಕೊನೆಗೆ ೧೯೯೬ರಲ್ಲಿ ಉದ್ಯಮ ಒಲ್ಲದ ಮನಸ್ಸಿನಿಂದ ಸಬ್ಸಿಡಿಗೆ ಗುಣಮಟ್ಟದ ನಿರ್ಬಂಧವನ್ನು ಹೇರುವ ಸರ್ಕಾರದ ನೀತಿಯನ್ನು ಒಪ್ಪಿಕೊಳ್ಳಬೇಕಾಯಿತು.

ಕೇಂದ್ರ ಸರ್ಕಾರ ರಚಿಸಿದ 'ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮ' ತನ್ನ ಆರಂಭಿಕ ದಿನಗಳಲ್ಲಿ ಉತ್ತಮ ಮೌಲ್ಯದ ಚಿತ್ರಗಳ ನಿರ್ಮಾಣಕ್ಕೆ ಧನಸಹಾಯ ಮಾಡುವ ನಿಲುವಿನಿಂದ ಗಲ್ಲಾಪೆಟ್ಟಿಗೆ ಸಂಪ್ರದಾಯಗಳನ್ನು ಧಿಕ್ಕರಿಸಿ ಹೊಸ ಹಾದಿಯನ್ನು ಹುಡುಕಿಕೊಂಡ ಸೃಜನಶೀಲ, ಪ್ರಗತಿಪರ ನಿರ್ದೇಶಕರ ಚಿತ್ರಗಳಿಗೆ ಉತ್ತೇಜನ ಕೊಡುವ ಪರಿಪಾಠವನ್ನು ಪ್ರಾರಂಭಿಸಿತು. ಅದು (ಅನೇಕ ವರ್ಷಗಳ ನಂತರ ನಾಡಿನ ಪ್ರಧಾನಮಂತ್ರಿಯಾದ) ಇಂದ್ರಕುಮಾರ್ ಗುಜ್ರಾಲ್ ಕೇಂದ್ರ ವಾರ್ತಾ ಮಂತ್ರಿಗಳಾಗಿದ್ದ ಕಾಲ, ಇಂದಿರಾಗಾಂಧಿ ಆಗಿನ ಪ್ರಧಾನಮಂತ್ರಿ. ಇಂತಹ ನಿಗಮವೊಂದನ್ನು ಸ್ಥಾಪಿಸಬೇಕೆಂದು ಶಿಫಾರಸು ಮಾಡಿದ್ದು ಶಿವರಾಮಕಾರಂತರ ನೇತೃತ್ವದ ಸಮಿತಿ. ಹೊಸದೊಂದು ಚಲನಚಿತ್ರ ಸಂಸ್ಕೃತಿಯನ್ನು ಬೆಳೆಸುವ ಉದಾತ್ತ ಧ್ಯೇಯದಿಂದ ಸರ್ಕಾರಿ ಸ್ವಾಮ್ಯದ ಸಂಸ್ಥೆಯೊಂದು ಮಾಮೂಲಾಗಿ ಪಾಲಿಸಲೇಬೇಕಾದ ಕೆಲವು ನಿಯಮಗಳನ್ನು, ಆರ್ಥಿಕ ಪದ್ಧತಿಗಳನ್ನು ಬದಿಗೊತ್ತಿದ ಅಂದಿನ ಫಿಲಂ ಫೈನಾನ್ಸ್ ಕಾರ್ಪೊರೇಷನ್ (ರಾಷ್ಟ್ರೀಯ ಚಲನಚಿತ್ರ ಹಣಕಾಸು ನಿಗಮ) ವಿಶ್ವದ ಮಟ್ಟಕ್ಕೆ ನಿಲ್ಲಬಲ್ಲ ಅನೇಕ ಪ್ರಭಾವಶಾಲಿ ನಿರ್ದೇಶಕರನ್ನು ಬೆಳಕಿಗೆ ತಂದಿತು. ಆದರೆ ಕರ್ನಾಟಕದಲ್ಲಿ ಸ್ಥಳೀಯ ಚಿತ್ರೋದ್ಯಮದ ಅಭಿವೃದ್ಧಿಗಾಗಿ ಸರ್ಕಾರ ರಚಿಸಿದ ನಿಗಮ ಅನುಸರಿಸಿದ ನೀತಿಗಳೆಲ್ಲ ಆ ನಿಗಮದ ನೀತಿಗಳಿಗೆ ವಿರುದ್ಧವಾಗಿದ್ದವು. ಇಲ್ಲಿನ ಸೃಜನಶೀಲ ನಿರ್ದೇಶಕರಿಗೂ, ಸಂಸ್ಥೆಗೂ ಭಾವನಾತ್ಮಕ ಸಂಬಂಧವೂ ಇಲ್ಲದಂತಾಯಿತು. ರಾಜ್ಯ ಸರ್ಕಾರಕ್ಕೆ ಕೂಡ ಇಂತಹ ನಿಗಮವೊಂದು ಮಾಡಬೇಕಾದ ಕೆಲಸವೇನೆಂಬುದರ ಬಗ್ಗೆಯೇ ದಿಕ್ಸೂಚಿಯಿರಲಿಲ್ಲ. ಜಾಳುಜಾಳಾದ ಕಲ್ಪನೆಗಳು, ಅಪ್ರಕೃತವಾದ ಯೋಜನೆಗಳು ಈ ನಿಗಮವನ್ನು ಅದರ ಪ್ರಾರಂಭದ ದಿನಗಳಿಂದಲೇ ಅಹಿತಕರವಾದ ವಿವಾದಗಳಿಗೆ ನೂಕಿದವು. ನಿಗಮದಿಂದ ಅತ್ತ ಉದ್ಯಮದ ಬೆಳವಣಿಗೆಗಾಗಲಿ, ಇತ್ತ ಸೃಜನಶೀಲತೆಗಾಗಲಿ ಯಾವ ಪ್ರಯೋಜನವೂ ಆಗದೆ ನಿಗಮ ತಪ್ಪು ಕಾರಣಗಳಿಗಾಗಿಯೇ ಅಪಪ್ರಚಾರದ ಕೇಂದ್ರ ಬಿಂದುವಾಗುವ ಪರಿಸ್ಥಿತಿ ಉಂಟಾಯಿತು. ವಿಪರ್ಯಾಸವೆಂದರೆ ಕನ್ನಡ ಚಿತ್ರೋದ್ಯಮದ ಬೆಳವಣಿಗೆಗೆ ಸರ್ಕಾರ ಅನುಸರಿಸಿದ ಯಾವ ಯೋಜನೆಗಳಿಗೂ ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮಕ್ಕೂ ಯಾವುದೇ ಸಂಬಂಧವಿಲ್ಲದಾಯಿತು. ಇಂತಹ ಗೊಂದಲ ಇದೇ ರೀತಿಯ ನಿಗಮಗಳನ್ನು ಸ್ಥಾಪಿಸಿದ ಯಾವ ನೆರೆರಾಜ್ಯಗಳಲ್ಲಿಯೂ ಕಾಣಿಸಿಕೊಳ್ಳಲಿಲ್ಲ. ಅದರಿಂದಾಗಿಯೇ ಆ ನಿಗಮಗಳು ಕರ್ನಾಟಕದ ನಿಗಮಕ್ಕಿಂತ ಹೆಚ್ಚು ತೃಪ್ತಿಕರವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಯಿತು. ವರ್ಷಗಳು ಕಳೆದರೂ ಕರ್ನಾಟಕದಲ್ಲಿ ಮಾತ್ರ ಈ ಪರಿಸ್ಥಿತಿ ಸುಧಾರಿಸಲೇ ಇಲ್ಲ.

ಕನ್ನಡ ಚಲನಚಿತ್ರರಂಗಕ್ಕೂ, ರಾಜ್ಯ ಸರ್ಕಾರಕ್ಕೂ ಚಲನಚಿತ್ರೋದ್ಯಮದ ವಿಷಯಗಳಲ್ಲಿ ಸಂಪರ್ಕ ಸೇತುವೆಯಾಗಿ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಪ್ರತ್ಯೇಕ ಘಟಕವೊಂದರ ನಿರ್ಮಾಣವಾಯಿತೇ ಹೊರತು ನಿಗಮ ಈ ಜವಾಬ್ದಾರಿಯಿಂದ ಬೇರೆಯಾಗಿಯೇ ಉಳಿಯಿತು. ಈ ಘಟಕ ಅಸ್ತಿತ್ವಕ್ಕೆ ಬಂದಿದ್ದು ಈ ದಶಕದಲ್ಲಿಯೆ. ವಾರ್ಷಿಕ ಚಲನಚಿತ್ರ ಪ್ರಶಸ್ತಿಗಳನ್ನು ನೀಡುವ ಜವಾಬ್ದಾರಿಯೂ ಈ ಘಟಕಕ್ಕೇ ಸಂದಿತು.

ಸಹಾಯಧನ, ವಾರ್ಷಿಕ ಪ್ರಶಸ್ತಿಗಳು, ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮ - ಇವೆಲ್ಲ ಒಂದಲ್ಲ ಒಂದು ವಿವಾದಕ್ಕೆ ತುತ್ತಾಗಿ ಉದ್ಯಮವನ್ನು ಗೊಂದಲಕ್ಕೆ ತಳ್ಳಿದ್ದು ಈ ದಶಕದ ವಿಶೇಷ.

ದಶಕ ಪ್ರಾರಂಭವಾದದ್ದೇ ೧೯೭೦-೭೧ರ ಸಾಲಿನ ರಾಜ್ಯ ಸರ್ಕಾರದ ಸಬ್ಸಿಡಿಗೆ ಗುಣಮಟ್ಟದ ಕಡಿವಾಣವನ್ನು ಹಾಕುವ ಸರ್ಕಾರದ ಪ್ರಸ್ತಾವದ ಬಗ್ಗೆ ಭುಗಿಲೆದ್ದ ವಿವಾದದಿಂದ.

ರಾಜ್ಯ ಸರ್ಕಾರದ ಸಬ್ಸಿಡಿ ಯೋಜನೆಯನ್ನು ಜಾರಿಗೆ ತಂದ ಮೂರೇ ವರ್ಷಗಳಲ್ಲಿ ಈ ಯೋಜನೆಯಿಂದಾಗಿ ಅರ್ಹತೆಯಿಲ್ಲದಿರುವವರೆಲ್ಲ ಚಿತ್ರ ನಿರ್ಮಾಣಕ್ಕೆ ಧಾವಿಸಿ ಬಂದು ಕನ್ನಡ ಚಿತ್ರಗಳ ಗುಣಮಟ್ಟ ಕುಸಿಯುತ್ತಿದೆಯೆಂಬ ಕೂಗು ಸಾರ್ವಜನಿಕರಿಂದ ಮತ್ತು ಸರ್ಕಾರದಿಂದ ಕೇಳಿಬರಲು ಆರಂಭಿಸಿದ್ದು ಒಂದು ವಿಪರ್ಯಾಸ. ಆಗ ಸಬ್ಸಿಡಿ ಯೋಜನೆಗೆ ಒಮ್ಮೊಮ್ಮೆ ಒಂದೊಂದು ವರ್ಷದ ಅವಧಿ ಮಾತ್ರವಿತ್ತು. ಎಂದರೆ ಪ್ರತಿ ವರ್ಷದ ಆಯವ್ಯಯ ಪಟ್ಟಿಯಲ್ಲಿಯೂ ಈ ಯೋಜನೆಗೆ ಜೀವದಾನ ಮಾಡಬೇಕಾಗಿತ್ತು. ಆದ್ದರಿಂದ ಯೋಜನೆಯ ಮುಂದುವರಿಕೆಯ ಬಗ್ಗೆ ಅನಿಶ್ಚಿತ ಸ್ಥಿತಿ ಉದ್ಯಮಿಗಳ ನೆತ್ತಿಯ ಮೇಲೆ ತೂಗಾಡುತ್ತಲೇ ಇತ್ತು. ೧೯೭೧ರ ಜನವರಿಯಲ್ಲಿ ಚಿತ್ರರಂಗಕ್ಕೆ ಸಂಬಂಧಿಸಿದ ಸಮಾರಂಭವೊಂದರಲ್ಲಿ ಆಗಿನ ಮುಖ್ಯಮಂತ್ರಿ ವೀರೇಂದ್ರಪಾಟೀಲರು ಇನ್ನು ಮುಂದೆ ಗುಣಮಟ್ಟದ ಆಧಾರದ ಮೇಲೆ ಮಾತ್ರ ಚಿತ್ರಗಳಿಗೆ ಸಬ್ಸಿಡಿ ನೀಡುವ ನೀತಿಯ ಬಗ್ಗೆ ತಮ್ಮ ಇಂಗಿತವನ್ನು ತೋರಿದಾಗ ಉದ್ಯಮದಲ್ಲಿ ತಲ್ಲಣವುಂಟಾಯಿತು. ಉದ್ಯಮದೊಳಗೆ ಈ ಬಗ್ಗೆ ಅತೃಪ್ತಿ ಅಂತರ್ಗಾಮಿಯಾಗಿ ಹರಿಯಲು ಪ್ರಾರಂಭವಾಯಿತು.

ಆದರೆ ಸರ್ಕಾರ ತನ್ನ ಪಟ್ಟನ್ನು ಬಿಟ್ಟುಕೊಡಲಿಲ್ಲ. ಸಬ್ಸಿಡಿ ಮುಂದುವರಿಕೆಯ ಪ್ರಶ್ನೆಯನ್ನು ಸಮಗ್ರವಾಗಿ ಪರಿಶೀಲಿಸಿ ವರದಿ ಸಲ್ಲಿಸಲು ಮೂವರು ಹಿರಿಯ ಸಚಿವರ ಸಮಿತಿಯೊಂದನ್ನು ರಚಿಸಿತು. ಸಬ್ಸಿಡಿ ಯೋಜನೆಗೆ ಕಾರಣಕರ್ತರಾದ ರಾಮಕೃಷ್ಣ ಹೆಗಡೆಯವರೂ ಆ ಸಮಿತಿಯಲ್ಲಿದ್ದರು. ಈ ನಿರ್ಧಾರಕ್ಕೆ ಉದ್ಯಮದಿಂದ ಪ್ರತಿಭಟನೆ ವ್ಯಕ್ತವಾದದ್ದರಲ್ಲಿ ಆಶ್ಚರ್ಯವೇನೂ ಇಲ್ಲ, ಏಕೆಂದರೆ ಸಬ್ಸಿಡಿಯನ್ನೇ ನಂಬಿಕೊಂಡು ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ ರಾಜ್ಯದಲ್ಲಿ ಕೆಲವು ಮೂಲಭೂತ ಸೌಕರ್ಯಗಳು ತಲೆಯೆತ್ತಿದ್ದವು. ಸಬ್ಸಿಡಿ ನಿಂತರೆ ಆ ಸೌಲಭ್ಯಗಳೆಲ್ಲ ಮಣ್ಣು ಪಾಲಾಗುವುದೆಂಬ ಪ್ರಾಮಾಣಿಕ ಚಿಂತೆ.

ಸರ್ಕಾರ ೧೯೭೧-೭೨ರ ಆಯ-ವ್ಯಯ ಪಟ್ಟಿಯಲ್ಲಿ ಚಿತ್ರಗಳಿಗೆ ಸಬ್ಸಿಡಿ ನೀಡಿಕೆಗಾಗಿ ೧೨ ಲಕ್ಷ ರೂಪಾಯಿಗಳನ್ನು ಮೀಸಲಾಗಿಟ್ಟಾಗ ಒಂದು ವರ್ಷದ ಮಟ್ಟಿಗಾದರೂ ಈ ಅನಿಶ್ಚಿತ ಸ್ಥಿತಿ ನಿಲ್ಲುವಂತಾಯಿತು. ಆದರೆ ಆ ಸಾಲಿನ ಬಜೆಟ್‌ಗೇ ಕುತ್ತೊದಗಿ ಬಂತು. ರಾಜ್ಯದಲ್ಲಿ ಅನಿರೀಕ್ಷಿತವಾಗಿ ಆದ ರಾಜಕೀಯ ಬದಲಾವಣೆಗಳಿಂದಾಗಿ ವೀರೇಂದ್ರಪಾಟೀಲರ ಸರ್ಕಾರ ಮಾರ್ಚ್ ೧೯೭೧ರಲ್ಲಿ ರಾಜೀನಾಮೆ ಕೊಡುವ ಸಂದರ್ಭವೂ ಒದಗಿ ಬಂತು. ಇದರಿಂದಾಗಿ ಸಬ್ಸಿಡಿ ಮುಂದುವರಿಕೆ ಪ್ರಶ್ನೆಯನ್ನು ಪರೀಕ್ಷಿಸಲು ರಚನೆಯಾಗಿದ್ದ ಸಚಿವತ್ರಯರ ಸಮಿತಿಯೂ ಅನೂರ್ಜಿತವಾಯಿತು. ಹೀಗಾಗಿ ಸಬ್ಸಿಡಿ ಬಗ್ಗೆ ಅನಿಶ್ಚಿತ ಸ್ಥಿತಿ ಮುಂದುವರಿಯಿತು.

ರಾಜ್ಯದಲ್ಲಿ ಶೀಘ್ರವೇ ರಾಷ್ಟ್ರಪತಿ ಆಡಳಿತ ಜಾರಿಗೆ ಬಂದು ರಾಜ್ಯಪಾಲ ಧರ್ಮವೀರರರವರು ಅಧಿಕಾರಕ್ಕೆ ಬಂದರು. ಅವರ ಪ್ರಥಮ ಪತ್ರಿಕಾಗೋಷ್ಠಿಯೇ ಕನ್ನಡ ಚಲನಚಿತ್ರೋದ್ಯಮಕ್ಕೆ ಅಪಥ್ಯವಾಯಿತು. ಇನ್ನು ಮುಂದೆ ಉತ್ತಮ ಗುಣಮಟ್ಟದ ಚಿತ್ರಗಳಿಗೆ ಮಾತ್ರ ಸಹಾಯಧನ ಸಲ್ಲುವುದೆಂದು ಘೋಷಿಸಿದ ರಾಜ್ಯಪಾಲರು ರಾಜ್ಯದ ಬೊಕ್ಕಸದಿಂದ ಅಸಂಬದ್ಧ, ಅಸಹ್ಯ ಚಿತ್ರಗಳಿಗೆ ಉತ್ತೇಜನ ಧನಸಹಾಯ ಸಿಗುವ ಪ್ರಶ್ನೆಯೇ ಇಲ್ಲವೆಂದು ಸ್ಪಷ್ಟಪಡಿಸಿದರು. ಹಿಂದಿನ ಚುನಾಯಿತ ಸರ್ಕಾರ ರಚಿಸಿದ್ದ ಸಚಿವತ್ರಯರ ಸಮಿತಿ ಈಗ ಮೂವರು ಹಿರಿಯ ಅಧಿಕಾರಿಗಳ ಸಮಿತಿಯಾಗಿ ಪರಿವರ್ತಿತವಾಗಿದೆಯೆಂದು ಪ್ರಕಟಿಸಿ, ಸಮಿತಿ ಶೀಘ್ರದಲ್ಲಿಯೇ ತನ್ನ ವರದಿಯನ್ನು ಸಲ್ಲಿಸಬೇಕೆಂದು ಆದೇಶಿಸಲಾಗಿದೆಯೆಂದರು. ಆದರೆ ಸಬ್ಸಿಡಿ ಯೋಜನೆ ಇಡಿಯಾಗಿ ರದ್ದಾಗಲಿಲ್ಲವೆಂಬ ಸ್ಪಷ್ಟನೆಯೂ ಅವರಿಂದ ಬಂತು.

ಇದರಿಂದ ಚಿತ್ರೋದ್ಯಮದಲ್ಲಿ ಕಳವಳ ಮರುಕಳಿಸಿ ಉದ್ಯಮ ಮತ್ತೆ ಮದರಾಸಿಗೆ ಹೋಗುವ ಸೂಚನೆಗಳು ಗೋಚರವಾಗತೊಡಗಿದವು. ಮೈಸೂರು ರಾಜ್ಯ ಚಲನಚಿತ್ರ ನಿರ್ಮಾಪಕರ ಸಂಘ ಸರ್ಕಾರದ ವಿರುದ್ಧ ಪ್ರತಿಭಟನೆಯ ಮುಂಚೂಣಿಯಲ್ಲಿ ನಿಂತಿತು. ನಂತರ ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿ ಸರ್ಕಾರಕ್ಕೆ ಸುದೀರ್ಘ ಮನವಿಪತ್ರವೊಂದನ್ನು ಸಲ್ಲಿಸಿ ಈ ಬಗ್ಗೆ ಅವರ ಧೋರಣೆಯನ್ನು ಖಂಡಿಸಿತು. ಚಿತ್ರಗಳ ಗುಣಮಟ್ಟದ ಮಾತು ಅಸ್ಪಷ್ಟವೆಂದೂ ವಾದಿಸಿತು.

ಆ ವರ್ಷ ಮೊಟ್ಟಮೊದಲ ಬಾರಿಗೆ ಎಂ.ಭಕ್ತವತ್ಸಲ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿ ಆಯ್ಕೆಯಾದರು. ಸರ್ಕಾರದ ಸಬ್ಸಿಡಿ ಧೋರಣೆಯ ವಿರುದ್ಧ ಹೋರಾಡಲು ನಿರ್ಧರಿಸಿದರು. ಚಿತ್ರವೊಂದರ ವಿವಿಧ ವಿಭಾಗಗಳಿಗೆ ಅಂಕಗಳನ್ನು ಕೊಟ್ಟು ಅದರ ಗುಣಮಟ್ಟವನ್ನು ನಿರ್ಧರಿಸುವ ಪದ್ಧತಿ ಅಶಾಸ್ತ್ರೀಯವೆಂದು ವಾದಿಸಿದರು. ರಾಜ್ಯದಲ್ಲಿ ತಯಾರಾದ ಕನ್ನಡ ಚಿತ್ರಗಳಿಗೆ ಸವಲತ್ತುಗಳನ್ನು ಒದಗಿಸಲೆಂದೇ ಸರ್ಕಾರ ಮನರಂಜನೆ ತೆರಿಗೆಯ ಮೇಲೆ ವಿಧಿಸಿದ್ದ ಅಧಿಭಾರವನ್ನು ಮುಂದುವರಿಸಿಕೊಂಡು ಹೋಗುವ ಔಚಿತ್ಯವನ್ನು ಕೂಡ ಉದ್ಯಮ ಪ್ರಶ್ನಿಸಲು ಆರಂಭಿಸಿತು.

ಕೊನೆಗೂ ರಾಜ್ಯಪಾಲರು ನೇಮಿಸಿದ್ದ ಅಧಿಕಾರಿಗಳ ಸಮಿತಿ ಗುಣಮಟ್ಟದ ಚಿತ್ರಗಳಿಗೆ ಮಾತ್ರ ಸಹಾಯಧನ ದೊರೆಯಬೇಕೆಂಬ ನೀತಿಯನ್ನೇ ಪ್ರತಿಪಾದಿಸಿತು. ರಾಜ್ಯ ಸರ್ಕಾರ ಕೂಡಲೇ ಸಮಿತಿಯ ಶಿಫಾರಸನ್ನು ಒಪ್ಪಿ ಈ ನಿಯಮವನ್ನು ಘೋಷಿಸಿ ಸಬ್ಸಿಡಿ ನೀಡಿಕೆಗೆ ಅರ್ಹವಾದ ಚಿತ್ರಗಳನ್ನು ಗುರುತಿಸುವ ಜವಾಬ್ದಾರಿಯನ್ನು ವಿಧಾನಸಭೆಯ ಸಭಾಪತಿ ಎಸ್.ಡಿ.ಕೊತಾವಳೆ ನೇತೃತ್ವದ ರಾಜ್ಯ ಚಲನಚಿತ್ರ ಪ್ರಶಸ್ತಿ ಆಯ್ಕೆ ಸಮಿತಿಗೆ ಬಿಡಲು ನಿರ್ಧರಿಸಿತು. ಆದರೆ ಈ ನಿರ್ಧಾರ ಉದ್ಯಮದ ಪ್ರತಿಭಟನೆಗೆ ಒಳಗಾಯಿತು. ಚಲನಚಿತ್ರ ವಾಣಿಜ್ಯ ಮಂಡಳಿ, ರಾಜ್ಯ ಚಲನಚಿತ್ರ ನಿರ್ಮಾಪಕರ ಗಿಲ್ಡ್ ಒಕ್ಕೊರಲಿನಿಂದ ತಮ್ಮ ವಿರೋಧವನ್ನು ಸೂಚಿಸಿದವು. ಉದಕಮಂಡಲದಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ರಾಜ್ಯಪಾಲರನ್ನು ಗಿಲ್ಡ್‌ನ ನಿಯೋಗವೊಂದು ಭೇಟಿ ಮಾಡಿ ತನ್ನ ವಿರೋಧವನ್ನು ಮಂಡಿಸಿತು. ಆದರೆ ಧರ್ಮವೀರರರವರು ಅವರ ಪ್ರತಿಭಟನೆಗೆ ಸೊಪ್ಪು ಹಾಕಿದಂತೇನೂ ಕಾಣಲಿಲ್ಲ. ಕೊನೆಗೆ ವಾಣಿಜ್ಯ ಮಂಡಳಿ ಮತ್ತು ಗಿಲ್ಡ್‌ಗಳು ಸೇರಿ ಜೂನ್ ೨೮ರಂದು 'ಕರಾಳ ದಿನ'ವನ್ನಾಗಿ ಆಚರಿಸುವ ನಿರ್ಧಾರವನ್ನು ಕೈಗೊಂಡವು.

ಕೆಲವೇ ದಿನಗಳಲ್ಲಿ ಧರ್ಮವೀರ ಸರ್ಕಾರ ತನ್ನ ಬಿಗಿ ನಿಲುವನ್ನು ಸ್ವಲ್ಪಮಟ್ಟಿಗೆ ಸಡಿಲಿಸಿ ೧೯೭೧ರ ಮೇ ೧೮ರ ನಂತರ ಪ್ರಾರಂಭವಾದ ಚಿತ್ರಗಳಿಗೆ ಮಾತ್ರ ಗುಣಮಟ್ಟದ ನಿರ್ಬಂಧವನ್ನು ಹಾಕಲು ನಿರ್ಧರಿಸಿತು. ಅದಕ್ಕೆ ಹಿಂದೆ ತಯಾರಿಕೆಯನ್ನು ಪ್ರಾರಂಭಿಸಿದ ಚಿತ್ರಗಳಿಗೆ ಸಬ್ಸಿಡಿ ಖಂಡಿತ ಸಿಗುವ ಭರವಸೆಯಿದ್ದಿದ್ದರಿಂದ ಆ ಚಿತ್ರಗಳ ಮಟ್ಟಿಗೆ ಹಿಂದಿನಂತೆ ಸಬ್ಸಿಡಿ ನೀಡುವುದು ಸೂಕ್ತವೆಂದು ಸರ್ಕಾರ ನಿರ್ಧರಿಸಿತು. ಆದರೆ ಉದ್ಯಮಿಗಳಿಗೆ ಈ ನಿಲುವು ಕೂಡ ಒಪ್ಪಿಗೆಯಾಗಲಿಲ್ಲ. ಇದೇ ರೀತಿ ಸಹಾಯಧನ ಪಡೆಯುತ್ತಿದ್ದ ಇತರ ಅನೇಕ ಉದ್ಯಮಗಳಿಗೆ ಗುಣಮಟ್ಟದ ನಿರ್ಬಂಧ ಇಲ್ಲದಿರುವಾಗ ಚಿತ್ರರಂಗಕ್ಕೆ ಮಾತ್ರ ಯಾಕೆ ಇಂತಹ ನಿರ್ಬಂಧ ಅನ್ವಯವಾಗಬೇಕೆಂದು ಅವರು ತೀಕ್ಷ್ಣವಾಗಿ ಪ್ರಶ್ನಿಸಿದರು. ಸ್ವಾರಸ್ಯವೆಂದರೆ ಆಗ ಅಧಿಕಾರದಿಂದ ಇಳಿದಿದ್ದ ವೀರೇಂದ್ರಪಾಟೀಲ್ ಮತ್ತು ರಾಮಕೃಷ್ಣ ಹೆಗಡೆಯವರು ಉದ್ಯಮದ ಪ್ರತಿಭಟನೆಗೆ ದನಿಗೂಡಿಸಿ ಈ ಬಗ್ಗೆ ಯಾವ ಬದಲಾವಣೆಯೂ ಸಲ್ಲದೆಂದು ಪ್ರಬಲವಾಗಿ ವಾದಿಸಿದ್ದು.

ಮುಂದಿನ ವಾರ ರಾಜ್ಯ ಸರ್ಕಾರ ತನ್ನ ಬಿಗಿ ನಿಲುವಿನಿಂದ ಇನ್ನೂ ಒಂದು ಹೆಜ್ಜೆ ಹಿಂದೆ ಸರಿಯಿತು. ಪ್ರಶಸ್ತಿ ಮತ್ತು ಸಬ್ಸಿಡಿಗಳಿಗಾಗಿ ರಚಿಸಲಾಗಿದ್ದ ಸಮಿತಿಯಲ್ಲಿ ಚಿತ್ರೋದ್ಯಮದ ಪ್ರತಿನಿಧಿಗಳನ್ನು ಸೇರಿಸುವ ನಿರ್ಧಾರವನ್ನು ಧರ್ಮವೀರ ಪ್ರಕಟಿಸಿದರು. ಅಷ್ಟೇ ಅಲ್ಲ, ಕನ್ನಡ ಚಿತ್ರೋದ್ಯಮದ ಸಮಸ್ಯೆಗಳ ಅಧ್ಯಯನಕ್ಕಾಗಿ ಬಲ್ಲವರ ಸಮಿತಿಯೊಂದನ್ನು ರಚಿಸಲು ತಾವು ಸಿದ್ಧರಾಗಿರುವುದಾಗಿಯೂ ಹೇಳಿದರು. ಉದ್ಯಮ ನಿಯೋಜಿಸಿದ್ದ 'ಕರಾಳ ದಿನ' ರದ್ದಾಯಿತು.

೧೯೭೧ರ ಆಗಸ್ಟ್ ತಿಂಗಳಿನಲ್ಲಿ ರಾಜ್ಯ ಸರ್ಕಾರದ ಸಲಹಾ ಸಮಿತಿ ೧೯೭೨ರ ಮಾರ್ಚ್ ೩೧ರೊಳಗಾಗಿ ತಯಾರಾದ ಎಲ್ಲ ಕನ್ನಡ ಚಿತ್ರಗಳಿಗೂ ಅನಿರ್ಬಂಧಿತವಾಗಿ ಸಹಾಯಧನವನ್ನು ನೀಡಬೇಕೆಂದು ಶಿಫಾರಸು ಮಾಡಿತು.

ರಾಜ್ಯ ಚಲನಚಿತ್ರೋದ್ಯಮದ ಅಭಿವೃದ್ಧಿಯ ಬಗ್ಗೆ ಅಧ್ಯಯನ ನಡೆಸಲು ಈ ಸಲಹಾ ಸಮಿತಿಯ ಉಪಸಮಿತಿಯೊಂದರ ರಚನೆಯಾಯಿತು. ಆ ಉಪಸಮಿತಿಯಲ್ಲಿ ವಾಣಿಜ್ಯ ಮಂಡಳಿ ಮತ್ತು ನಿರ್ಮಾಪಕರ ಗಿಲ್ಡ್‌ನ ಅಧ್ಯಕ್ಷರೂ ಸದಸ್ಯರಾಗಿ ಸೇರಿದರು. ಆದರೆ ಈ ಉಪಸಮಿತಿಯನ್ನು ಬಾಲಗ್ರಹ ಬಾಧೆ ಪೀಡಿಸಿತು.

೧೯೭೨ರಲ್ಲಿ ಕರ್ನಾಟಕದಲ್ಲಿ ಇನ್ನೊಂದು ರಾಜಕೀಯ ಸ್ಥಿತ್ಯಂತರವಾಯಿತು. ೧೯೬೯ರಲ್ಲಿ ಕಾಂಗ್ರೆಸ್ ಇಬ್ಭಾಗವಾದ ನಂತರ ದೇವರಾಜ ಅರಸರ ನಾಯಕತ್ವದಲ್ಲಿ ಇಲ್ಲಿ ಇಂದಿರಾ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂತು. ೧೯೭೨ರಲ್ಲಿ ರಾಜ್ಯ ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ನಡೆದು ಇಂದಿರಾ ಕಾಂಗ್ರೆಸ್ ಸಂಸ್ಥಾ ಕಾಂಗ್ರೆಸ್ಸನ್ನು ಭಾರೀ ಬಹುಮತದಿಂದ ಸೋಲಿಸಿ ಅರಸುರವರ ಮುಖ್ಯಮಂತ್ರಿತ್ವದಲ್ಲಿಯೇ ಅಧಿಕಾರಕ್ಕೆ ಬಂತು. ಹೊಸ ಮುಖ್ಯಮಂತ್ರಿಗಳು ಆ ವರ್ಷದ ಏಪ್ರಿಲ್ ತಿಂಗಳಲ್ಲಿ ಮೈಸೂರು ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿಯ ರಜತೋತ್ಸವ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡುತ್ತ ಸಬ್ಸಿಡಿ ವಿಷಯದಲ್ಲಿ ಹೊಸ ಸರ್ಕಾರ ಪರಿಷ್ಕೃತ ಧೋರಣೆಯನ್ನು ತಳೆಯಬಹುದೆಂಬ ಉದ್ಯಮದ ನಿರೀಕ್ಷೆಗೆ ಬರೆಯೆಳೆದರು. ಸಬ್ಸಿಡಿ ನೀಡುವಾಗ ಚಿತ್ರಗಳ ಗುಣಮಟ್ಟವನ್ನು ಗಣನೆಗೆ ತೆಗೆದುಕೊಳ್ಳಬಾರದೆಂಬ ಆಗ್ರಹವನ್ನು ಅವರು ನಿರಾಕರಿಸಿ, ಚಿತ್ರಗಳ ಗುಣಮಟ್ಟ ಸುಧಾರಿಸಲು ಕೈಗೊಳ್ಳಬೇಕಾದ ಕ್ರಮಗಳನ್ನು ಹುಡುಕುವ ಹೊಣೆಗಾರಿಕೆಯನ್ನು ಉದ್ಯಮಕ್ಕೇ ಬಿಟ್ಟರು. ಉದ್ಯಮದಲ್ಲಿ ಮತ್ತೆ ಕೋಲಾಹಲ ಉಂಟಾಯಿತು. ರಾಜ್ಯದ ಐದು ಸ್ಟುಡಿಯೋಗಳಲ್ಲಿ ನಿರ್ಮಾಣ ಚಟುವಟಿಕೆಗಳಿಗೆ ಗರ ಬಡಿಯಿತು.

ಸರ್ಕಾರ ಬದಲಾವಣೆಯಾದ ನಂತರ ರಾಜ್ಯ ಚಲನಚಿತ್ರ ಸಲಹಾ ಸಮಿತಿಗೆ ಅಧ್ಯಕ್ಷ ಕೊತಾವಳೆ ರಾಜೀನಾಮೆಯಿತ್ತರು. ಸಮಿತಿ ಮತ್ತು ಅದು ರಚಿಸಿದ್ದ ಉಪಸಮಿತಿಯ ಕಾರ್ಯಕಲಾಪಗಳು ಸ್ಥಗಿತಗೊಂಡವು. ಸ್ವಲ್ಪ ದಿನಗಳಲ್ಲಿಯೇ ಗೃಹ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಹೊಸ ಸಲಹಾ ಸಮಿತಿಯೊಂದರ ರಚನೆಯಾಯಿತು. ಪ್ರಶಸ್ತಿಗಳಿಗಾಗಿ ಆಯ್ಕೆ ಹಾಗೂ ಸಬ್ಸಿಡಿಗೆ ಅರ್ಹವಾದ ಚಿತ್ರಗಳ ಆಯ್ಕೆ ಈ ಸಮಿತಿಯ ಕಾರ್ಯವ್ಯಾಪ್ತಿಗೆ ಬಂದವು.

೧೯೭೨ರ ಆಗಸ್ಟ್ ತಿಂಗಳಲ್ಲಿ ಕನ್ನಡ ಚಿತ್ರ ಪ್ರಗತಿ ಸಂಘದ ಆಶ್ರಯದಲ್ಲಿ ಬೆಂಗಳೂರಿನಲ್ಲಿ ಬೃಹತ್ ಕನ್ನಡ ಚಲನಚಿತ್ರೋದ್ಯಮ ಸಮ್ಮೇಳನ ನಡೆಯಿತು. ಅಲ್ಲಿ ಅಂದಿನ ಶಿಕ್ಷಣ ಮಂತ್ರಿ ಎ.ಆರ್.ಬದರಿನಾರಾಯಣ್‌ರವರೇ ಸರ್ಕಾರದ ಸಬ್ಸಿಡಿ ನೀತಿಯ ವಿರುದ್ಧವಾಗಿ ಮಾತನಾಡಿ ಸಹಾಯಧನ ನೀಡಿಕೆಗೆ ಗುಣಮಟ್ಟದ ಕಡಿವಾಣ ಸಲ್ಲದೆಂಬ ತಮ್ಮ 'ವೈಯಕ್ತಿಕ' ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೊಂದು ಹೆಚ್ಚಳ.

ಆದರೆ ಮುಖ್ಯಮಂತ್ರಿ ದೇವರಾಜ ಅರಸರು ಈ ಬಗ್ಗೆ ತಮ್ಮ ನಿಲುವನ್ನು ಬದಲಾಯಿಸಲಿಲ್ಲ. ಈ ಗೊಂದಲದಲ್ಲಿ ೧೯೭೨ರಲ್ಲಿ ಕನ್ನಡ ಚಿತ್ರಗಳ ನಿರ್ಮಾಣ ಹಿಂದಿನ ವರ್ಷದ ೩೨ರಿಂದ ೨೪ಕ್ಕೆ ಇಳಿಯಿತು. ಕೊನೆಗೂ ಅಳೆದು, ಸುರಿದು ರಾಜ್ಯ ಸರ್ಕಾರ ೧೯೭೩ರಿಂದ ಎರಡು ವರ್ಷಗಳ ಕಾಲ ಸಬ್ಸಿಡಿ ನೀಡಿಕೆಗಿದ್ದ ಗುಣಮಟ್ಟದ ನಿರ್ಬಂಧವನ್ನು ರದ್ದುಗೊಳಿಸುವುದಾಗಿ ಮಾಡಿದ ಪ್ರಕಟಣೆ ಉದ್ಯಮದಲ್ಲಿ ಭಾರಿ ನೆಮ್ಮದಿಯನ್ನುಂಟುಮಾಡಿತು. ಹೀಗಾಗಿ ಈ ಬಗೆಗಿನ ವಿವಾದಕ್ಕೆ ಅರ್ಧವಿರಾಮ ಬಿತ್ತು. ಈ ಅರ್ಧ ವಿರಾಮ ೨೫ ವರ್ಷಗಳ ನಂತರ ಕೊನೆಗೊಂಡಿತು.

ರಾಜ್ಯ ಸರ್ಕಾರ ಕನ್ನಡ ಚಿತ್ರರಂಗದ ಬೆಳವಣಿಗೆಯ ವಿಷಯದಲ್ಲಿ ಕಾಳಜಿ ತೋರಿದರೂ ನಾನಾ ಕಾರಣಗಳಿಂದಾಗಿ ಈ ಸಂಬಂಧದಲ್ಲಿ ಅದರ ಚಟುವಟಿಕೆ ವಿವಾದಾತೀತವಾಗಿ ನಡೆಯಲಿಲ್ಲವೆನ್ನುವುದಕ್ಕೆ ಈ ಗೊಂದಲಗಳೇ ನಿದರ್ಶನ. ಅದೇ ರೀತಿ ಕರ್ನಾಟಕ ಚಲನಚಿತ್ರೋದ್ಯಮ ನಿಗಮದ ವಿದ್ಯಮಾನಗಳು ಕೂಡ ಅದು ಅಸ್ತಿತ್ವಕ್ಕೆ ಬಂದಾಗಿನಿಂದ ಗೊಂದಲ, ಅನಿಶ್ಚಿತ ಸ್ಥಿತಿಯಲ್ಲೇ ಮುಳುಗಿದ್ದು ೧೯೭೦ರ ದಶಕದಲ್ಲಿ ನಿಗಮ ಕೆಲವು ಕಹಿ ವಿವಾದಗಳಿಂದಾಗಿ ಗಮನ ಸೆಳೆಯಿತು.

ನಿಗಮದ ಭವ್ಯ ಕನಸುಗಳಿಗೆ ಎಂದೂ ಕೊರತೆಯಿರಲಿಲ್ಲ. ರಚನೆಯಾದ ಮೊದಲ ಮೂರು ವರ್ಷಗಳು ನಿಷ್ಕ್ರಿಯವಾಗಿದ್ದ ಅದಕ್ಕೆ ಸರ್ಕಾರ ದೀರ್ಘಾವಧಿ ಗುತ್ತಿಗೆಯ ಮೇಲೆ ಕೊಟ್ಟಿದ್ದ ೩೪೭ ಎಕರೆ ಜಮೀನನ್ನು ಅದೇ ಸರ್ಕಾರ ಸಂಸ್ಥೆಯ ನಿಷ್ಕ್ರಿಯತೆಯಿಂದಾಗಿ ವಾಪಸು ಪಡೆದೂ ಆಗಿತ್ತು. ಆದರೆ ಧರ್ಮವೀರರು ರಾಜ್ಯಪಾಲರಾಗಿ ರಾಷ್ಟ್ರಪತಿ ಆಡಳಿತ ಅವಧಿಯಲ್ಲಿ ಅವರ ಪರ ಸರ್ಕಾರವನ್ನು ವಹಿಸಿಕೊಂಡ ಮೇಲೆ ನಿಗಮದ ನಿರ್ದೇಶಕರು ಅವರ ಬಳಿ ನಿಯೋಗ ಹೋಗಿ ನಿಗಮಕ್ಕೆ ಕಾಯಕಲ್ಪ ಮಾಡುವ ಬಗ್ಗೆ ಆಗ್ರಹಪಡಿಸಿದರು. ತತ್ಫಲವಾಗಿ ಆ ಜಮೀನನ್ನು ನಿಗಮಕ್ಕೇ ವಾಪಸು ಕೊಡಬೇಕೆಂಬ ನಿರ್ಧಾರವೂ ಆಯಿತು. ಜೊತೆಗೆ ಸರ್ಕಾರ ೪೬ ಲಕ್ಷ ರೂಪಾಯಿಗಳ ಷೇರು ಬಂಡವಾಳ ಹಾಕಲೂ ರಾಜ್ಯಪಾಲರು ಒಪ್ಪಿದರು. ನಿಗಮಕ್ಕೆ ನಿಗದಿಯಾಗಿದ್ದ ಒಟ್ಟು ಷೇರು ಬಂಡವಾಳ ಒಂದು ಕೋಟಿ ರೂಪಾಯಿ. ಉಳಿದ ಹಣವನ್ನು ಖಾಸಗಿಯವರಿಂದ ಸಂಗ್ರಹ ಮಾಡಬೇಕಾಗಿತ್ತು. ಬೆಂಗಳೂರಿನಲ್ಲಿ ಚಲನಚಿತ್ರನಗರಿ ಸ್ಥಾಪಿಸುವ ನಿಗಮದ ಯೋಜನೆಯನ್ನು ರಾಜ್ಯಪಾಲರೊಂದಿಗೆ ಈ ಭೇಟಿಯ ನಂತರ ಆಡಳಿತ ನಿರ್ದೇಶಕ ಕೆ.ಕೆ.ಮೂರ್ತಿಯವರು ಮೊದಲ ಬಾರಿಗೆ ಪ್ರಕಟಿಸಿದರು. ವಾರ್ತಾ ಮಂತ್ರಿ ದೇವರಾಜ ಅರಸರು ನಿಗಮದ ಅಧ್ಯಕ್ಷರಾಗಿ ಮುಂದುವರಿದಿದ್ದರು.

ಆದರೆ ಈ ಪ್ರಕಟಣೆಯಾದ ಸುಮಾರು ಐದು ತಿಂಗಳ ನಂತರ ರಾಜ್ಯ ಸರ್ಕಾರ ನಿಗಮಕ್ಕೆ ಷೇರು ಬಂಡವಾಳದ ರೂಪದಲ್ಲಿ ಬಿಡುಗಡೆ ಮಾಡಿದ ಹಣ ಕೇವಲ ೫ ಲಕ್ಷ. ಒಂದು ವರ್ಷದ ಅವಧಿಯಲ್ಲಿ ನಿಗಮ ಖಾಸಗಿ ಕ್ಷೇತ್ರದಿಂದ ಸಾಕಷ್ಟು ಮೂಲಧನವನ್ನು ಕೂಡಿಸಬೇಕೆಂದು ರಾಜ್ಯಪಾಲರು ಆದೇಶವಿತ್ತರು. ಬ್ಯಾಂಕುಗಳಿಂದ ಹಾಗೂ ಇತರ ಆರ್ಥಿಕ ಸಂಸ್ಥೆಗಳಿಂದ ಸಾರ್ವಜನಿಕ ಡಿಬೆಂಚರ್‌ಗಳನ್ನು ರೂಢಿಸಲು ನಿಗಮಕ್ಕೆ ಅಧಿಕಾರವಿತ್ತರು. ಈ ೫ ಲಕ್ಷ ಮೊದಲ ಕಂತಿನ ನೀಡಿಕೆ ಮಾತ್ರ. ನಂತರ ನಿಗಮ ಸಾರ್ವಜನಿಕರಿಂದ ಎಷ್ಟು ಹಣ ಶೇಖರಿಸುತ್ತದೆಯೋ ಅಷ್ಟು ಹಣವನ್ನು ಸರ್ಕಾರ ಕೂಡ ಷೇರು ಬಂಡವಾಳಕ್ಕೆ ನೀಡುತ್ತ ಹೋಗುವುದೆಂದೂ ನಿರ್ಧಾರವಾಯಿತು.

೧೯೭೨ರ ಮಾರ್ಚ್ ೧೧ರಂದು ಉದ್ದೇಶಿತ ಚಿತ್ರನಗರಿಯ ಶಂಕುಸ್ಥಾಪನಾ ಕಾರ್ಯಕ್ರಮವೂ ನಡೆಯಿತು. ಚಿತ್ರನಗರಿಯಲ್ಲಿ ಒಂದು ಸುಸಜ್ಜಿತ ಸ್ಟುಡಿಯೋ, ಚಲನಚಿತ್ರರಂಗಕ್ಕೆ ಸಂಬಂಧಿಸಿದ ವ್ಯಕ್ತಿಗಳ ತರಬೇತಿ ಕೇಂದ್ರ, ಕಲಾವಿದರಿಗೆ ಮತ್ತು ತಂತ್ರಜ್ಞರಿಗೆ ವಸತಿ ಸೌಕರ್ಯ ಇವೆಲ್ಲದರ ಬಗ್ಗೆ ಕೆ.ಕೆ.ಮೂರ್ತಿ ಆಶ್ವಾಸನೆ ನೀಡಿದರು. ಅದೇ ಸಮಯದಲ್ಲಿ ಎಂ.ವಿ.ಕೃಷ್ಣಸ್ವಾಮಿ ಯೋಜನೆಯ ತಾಂತ್ರಿಕ ಸಲಹೆಗಾರರಾಗಿ ನೇಮಕಗೊಂಡರು. ಆದರೆ ಅವುಗಳಲ್ಲಿ ಒಂದು ಯೋಜನೆಯೂ ಹೊಸ ಸಹಸ್ರಮಾನದವರೆಗೆ ಕೈಗೂಡದೆ ಉಳಿದಿದ್ದೇ ಒಂದು ವಿಶೇಷವೆನಿಸಿತು. ನಂತರ ಈ ಎಲ್ಲ ಯೋಜನೆಗಳೂ ನೆನೆಗುದಿಗೆ ಬಿದ್ದಂತಾಯಿತು.

ನಿಗಮಕ್ಕೆ ಸ್ವಲ್ಪ ಕಾಲದಲ್ಲಿಯೇ ೧೨ ನಿರ್ದೇಶಕರ ಮಂಡಳಿಯೊಂದು ಲಭ್ಯವಾಯಿತು. ಮೂರು ಹಂತಗಳಲ್ಲಿ ಕಾರ್ಯರೂಪಕ್ಕೆ ಬರಬೇಕಾಗಿದ್ದ ಕರಡು ಯೋಜನೆಯೊಂದು ತಯಾರಾಗುತ್ತಿದೆಯೆಂದ ಮೂರ್ತಿಯವರು, ಯೋಜನೆಯ ಪ್ರತಿ ಹಂತವೂ ಸ್ವಚಾಲಿತವಾಗಲಿರುವ ಭರವಸೆ ಕೊಟ್ಟರು. ಚಿತ್ರನಗರಿಯಲ್ಲಿ 'ಅಮ್ಯೂಸ್‌ಮೆಂಟ್ ಪಾರ್ಕ್' ನಿರ್ಮಾಣವೂ ಆಗಬಹುದೆಂದರು. ಅವರು ಘೋಷಿಸಿದ ಯೋಜನೆಗಳಲ್ಲಿ ಯಾವುದೂ ಕಾರ್ಯಗತವಾಗಲಿಲ್ಲ.

ಕನ್ನಡ ಚಿತ್ರರಂಗಕ್ಕೆ ಇವು ಯಾವುವೂ ಆಗ ಇಲ್ಲಿ ಲಭ್ಯವಿರಲಿಲ್ಲವಾದ್ದರಿಂದ ಅತ್ಯಗತ್ಯ ಎಂಬುದು ಸ್ಪಷ್ಟ. ಹೊರಾಂಗಣ ಚಿತ್ರೀಕರಣ ಸಾಮಗ್ರಿಗಳ ಪೂರೈಕೆ, ಎಡಿಟಿಂಗ್ ಕೊಠಡಿಗಳು ಮತ್ತು ಪ್ರೀವ್ಯೂ ಥಿಯೇಟರ್ ನಿರ್ಮಾಣ, ಒಂದು ವರ್ಣ ಲ್ಯಾಬೊರೇಟರಿ, ಎರಡು ಫ್ಲೋರ್‌ಗಳು,ರಿಕಾರ್ಡಿಂಗ್ ಮತ್ತು ರೀ-ರಿಕಾರ್ಡಿಂಗ್ ಥಿಯೇಟರ್, ೭೫ ಸಂಸಾರಗಳಿಗೆ ವಸತಿಗೃಹಗಳು - ಇವೆಲ್ಲದರ ನಿರ್ಮಾಣ ಮೂರ್ತಿಯವರು ಘೋಷಿಸಿದ ಯೋಜನೆಯ ಮೊದಲನೆಯ ಹಂತದಲ್ಲಿ ಇರಬೇಕಾಗಿದ್ದ ಕಾರ್ಯಕ್ರಮಗಳು. ಎರಡನೆಯ ಹಂತದಲ್ಲಿ 'ಅಮ್ಯೂಸ್‌ಮೆಂಟ್ ಪಾರ್ಕ್' ಮತ್ತು ಮೂರನೆಯ ಹಂತದಲ್ಲಿ ಬೃಹತ್ ಪಂಚತಾರಾ ಹೋಟೆಲೊಂದರ ನಿರ್ಮಾಣವಾಗಬೇಕಿತ್ತು. ಆದರೆ ಇವೆಲ್ಲ ಕೇವಲ ಭರವಸೆಗಳಾಗಿಯೇ ಉಳಿದವು.

ಕೆಲವೇ ದಿನಗಳಲ್ಲಿ ನಿಗಮದ ಆಡಳಿತ ಮಂಡಳಿ ಹಿಂದಿ ಚಿತ್ರರಂಗದ ದಿಗ್ಗಜಗಳಿಂದ ನಿಗಮಕ್ಕೆ ಷೇರು ಬಂಡವಾಳದ ಸಂಗ್ರಹಕ್ಕಾಗಿ ಮುಂಬಯಿಗೆ ತೆರಳಿತು. ಅಲ್ಲಿಯ ಪ್ರತಿಷ್ಠಿತರು ಬಂಡವಾಳ ಹೂಡಲು ಆಸಕ್ತಿ ತೋರಿದ್ದಾರೆಂದು ಮೂರ್ತಿಯವರು ಪ್ರಕಟಿಸಿದರು.

ಆ ಸಮಯದಲ್ಲಿ ಅವರಿಂದ ಇನ್ನೂ ಒಂದು ಯೋಜನೆ ಪ್ರಕಟವಾಯಿತು. ನಿಗಮ ಕರ್ನಾಟಕದಾದ್ಯಂತ ಚಿತ್ರಮಂದಿರಗಳಿಲ್ಲದ ಕಡೆ ೧೫೦ ಸಣ್ಣ ಚಿತ್ರಮಂದಿರಗಳನ್ನು ನಿರ್ಮಿಸುವುದು. ಆದರೆ ಅದೇ ಜೂನ್‌ನಲ್ಲಿ ಬೆಂಗಳೂರಿನಲ್ಲಿ ನಡೆದ ಆಡಳಿತ ಮಂಡಳಿಯ ಸಭೆಯಲ್ಲಿ 'ತಕ್ಷಣ' ರಾಜ್ಯದಲ್ಲಿ ೧೦ ಮಿನಿ ಚಿತ್ರಮಂದಿರಗಳನ್ನು ನಿರ್ಮಿಸುವ ನಿರ್ಧಾರವಾಯಿತು. ನಿಗಮದ ಮಿಕ್ಕೆಲ್ಲ ಯೋಜನೆಗಳಿಗೂ ಮಂಡಳಿ ಸಮ್ಮತಿ ನೀಡಿತು.

ಆಡಳಿತ ಮಂಡಳಿಯ ಮುಂಬಯಿ ಯಾತ್ರೆಯ ಫಲಶ್ರುತಿಯೆಂದರೆ ಕೆಲವೇ ವಾರಗಳಲ್ಲಿ ನಿಗಮದ ನಿರ್ದೇಶಕರಾಗಿ ದಿಲೀಪ್ ಕುಮಾರ್, ನಿರ್ಮಾಪಕ-ನಿರ್ದೇಶಕ ಬಿ.ಆರ್.ಛೋಪ್ರ ಮತ್ತು ಹಿಂದಿ ಚಿತ್ರರಂಗದೊಂದಿಗೆ ನಿಕಟ ಸಂಪರ್ಕ ಹೊಂದಿದ್ದ ಬೆಂಗಳೂರಿನ ವಿತರಕ ಆರ್.ಎನ್.ಮಾಂತ್ರೆ ನಾಮನಿರ್ದೇಶಿತರಾಗಿದ್ದು.

ಏತನ್ಮಧ್ಯೆ ಉದ್ಯಮಕ್ಕೆ ಅಪ್ರಸ್ತುತ ಹಗರಣದಲ್ಲಿ ನಿಗಮದ ನಿರ್ದೇಶನಾಧಿಕಾರಿಯವರು ಪಾಲ್ಗೊಂಡರು. ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ಆಡಳಿತ ನಿರ್ದೇಶಕ ಕೆ.ಕೆ.ಮೂರ್ತಿ ೧೯೭೨ರ ದಸರಾ ಉತ್ಸವದ ಸಾಂಸ್ಕೃತಿಕ ಉಪಸಮಿತಿಯ ಅಧ್ಯಕ್ಷರಾಗಿ ನೇಮಕಗೊಂಡರು. ಅವರ ಪ್ರಯತ್ನದಿಂದ ದೇಶದ ಸಾಂಸ್ಕೃತಿಕ ಜಗತ್ತಿನ ಅನೇಕ ಜನಪ್ರಿಯ ಕಲಾವಿದರು ಉತ್ಸವದಲ್ಲಿ ನೃತ್ಯ, ಸಂಗೀತ ಪ್ರದರ್ಶನಗಳನ್ನು ಕೊಡಬೇಕೆಂದು ಗೊತ್ತಾಯಿತು. ಅಂತಹ ಕಲಾವಿದರಲ್ಲೊಬ್ಬರು ಅಂದು ದಕ್ಷಿಣ ಭಾರತ ಚಿತ್ರರಂಗದಲ್ಲಿ ನಟಿಯಾಗಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಜಯಲಲಿತಾ. ಆಕೆ ನೃತ್ಯ ಪ್ರದರ್ಶನ ನೀಡಲೆಂದು ಗೊತ್ತಾಗಿದ್ದ ದಿನ ಮುಂದಕ್ಕೆ ಹೋಯಿತು. ಆದರೆ ಅಷ್ಟರಲ್ಲಿ ಆಕೆ ಸಂದರ್ಶನವೊಂದರಲ್ಲಿ ತಾವು ಕನ್ನಡಿಗರಲ್ಲವೆಂದೂ, ತಾವು ಮಂಡ್ಯಂ ಅಯ್ಯಂಗಾರ್ ಆದ್ದರಿಂದ ತಮಿಳರೆಂದು ಹೇಳಿಕೊಂಡಿದ್ದರೆಂದೂ ವರದಿಯಾಯಿತು. ಇದರಿಂದ ಕನ್ನಡ ಚಳವಳಿಗಾರರು ಕೆರಳಿದರು. ನೃತ್ಯ ಪ್ರದರ್ಶನ ಸಮಯದಲ್ಲಿ ತಮಗೆ ದೈಹಿಕ ಹಾನಿಯುಂಟುಮಾಡುವರೆಂಬ ಕಾರಣ ಹೇಳಿ ಜಯಲಲಿತಾ ತಮ್ಮ ಕಾರ್ಯಕ್ರಮವನ್ನೇ ರದ್ದುಗೊಳಿಸಿದರು. ಇದರಿಂದ ಕೆ.ಕೆ.ಮೂರ್ತಿ ಆಕ್ರೋಶಗೊಂಡು ಪೊಲೀಸರಿಗೆ ದೂರು ಸಲ್ಲಿಸಿದಾಗ ಪೊಲೀಸರು ಆಕೆಯನ್ನು ಆಕೆಯ ಚಿತ್ರೀಕರಣ ನಡೆಯುತ್ತಿದ್ದ ಮೈಸೂರಿನ ಪ್ರೀಮಿಯರ್ ಸ್ಟುಡಿಯೋಸ್‌ನಲ್ಲಿ ಬಂಧಿಸಿ ಪೊಲೀಸ್ ಠಾಣೆಗೆ ಕರೆದೊಯ್ದಾಗ ಪ್ರಕರಣ ಪ್ರಕೋಪಕ್ಕೆ ಹೋಯಿತು. ಜಯಲಲಿತಾ ನೃತ್ಯ ಪ್ರದರ್ಶನಕ್ಕಾಗಿ ಉಪಸಮಿತಿಯಿಂದ ೫,೫೦೦ ರೂಪಾಯಿಗಳ ಮುಂಗಡ ಹಣ ಪಡೆದಿದ್ದರು. ಅದನ್ನು ಆಕೆ ವಾಪಸು ಕೊಡುವ ಕ್ರಮದ ಬಗ್ಗೆಯೇ ಆಕೆಗೂ ಮೂರ್ತಿಗಳಿಗೂ ಕಾನೂನಿನ ಸಮರ ಪ್ರಾರಂಭವಾಯಿತು. ನಂತರ ಜಯಲಲಿತಾ ಈ ಪ್ರಕರಣದ ಬಗ್ಗೆ ಪ್ರಧಾನಮಂತ್ರಿಗಳಿಗೂ ಲಿಖಿತ ದೂರು ಸಲ್ಲಿಸಿದರು. ಹೀಗಾಗಿ ಅದು ಕೇಂದ್ರ ಸರ್ಕಾರದ ಗಮನವನ್ನು ಸೆಳೆಯಿತು. ಇತ್ತ ರಾಜ್ಯದಲ್ಲಿ ಪ್ರಕರಣ ವಿಧಾನಸಭೆಯನ್ನು ಪ್ರವೇಶಿಸಿ ಮುಖ್ಯಮಂತ್ರಿ ದೇವರಾಜ ಅರಸರನ್ನು ಪೇಚಿಗೆ ಸಿಕ್ಕಿಸಿತು. ಈ ಪ್ರಕರಣದಲ್ಲಿ ಮೂರ್ತಿಗಳು ಉದ್ಧಟತನದಿಂದ ವರ್ತಿಸಿದ್ದರೆ ಅವರಿಗೂ ಶಿಕ್ಷೆಯಾಗಲೇಬೇಕೆಂದು ಅವರು ತಾಳಿದ ನಿಲುವು ಪ್ರಾಯಶಃ ಅವರು ಮುಂದೆ ಮೂರ್ತಿಗಳನ್ನು ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದಿಂದ ದೂರವಿಡುವಂತಹ ವಾತಾವರಣವನ್ನು ನಿರ್ಮಿಸಲೂ ಪ್ರೇರೇಪಿಸಿತು. ಕೆಲವು ಸಮಯದ ನಂತರ ಇದೆಲ್ಲವೂ ತಣ್ಣಗಾಯಿತು. ಆದರೆ ಅರಸು ಮತ್ತು ಮೂರ್ತಿಯವರ ನಡುವೆ ಉಂಟಾದ ಕಸಿವಿಸಿ ಬೆಳೆಯುತ್ತಲೇ ಹೋಯಿತು.

ಈ ಘಟನೆಯ ನಂತರವೂ ಮೂರ್ತಿಯವರೇನೋ ಹುರುಪಿನಿಂದಲೇ ಮುಂದುವರಿದರು. ನಿಗಮದ ವಿಸ್ತೃತ ಆಡಳಿತ ಮಂಡಳಿ ಗ್ರಾಮಾಂತರ ಪ್ರದೇಶಗಳಲ್ಲಿ ಅಲ್ಪ ಖರ್ಚಿನಲ್ಲಿ ಚಿತ್ರಮಂದಿರಗಳನ್ನು ನಿರ್ಮಿಸಲು, ಹಾಗೂ ನಿರ್ಮಾಪಕರಿಗೆ ಕನ್ನಡ ಚಿತ್ರಗಳನ್ನು ತಯಾರಿಸಲು ಧನಸಹಾಯ ನೀಡುವ ನಿರ್ಧಾರಗಳನ್ನು ಕೈಗೊಂಡು ಬಳ್ಳಾರಿ ಜಿಲ್ಲೆಯ ಚಿಕ್ಕಜೋಗಿಹಳ್ಳಿ(ಕೆ.ವೆಂಕಟಸ್ವಾಮಿಗಳು ನಿರ್ಮಿಸಿದ ಮಾದರಿಗ್ರಾಮ)ಯಲ್ಲಿ ಪ್ರಥಮ ಚಿತ್ರಮಂದಿರ ನಿರ್ಮಾಣಕ್ಕೆ ಪರವಾನಗಿಯನ್ನು ಕೊಟ್ಟಿತು. ಚಿತ್ರನಿರ್ಮಾಣಕ್ಕೆ ತಲಾ ಮೂರರಿಂದ ಎಂಟು ಲಕ್ಷ ರೂಪಾಯಿಗಳಂತೆ ಒಟ್ಟು ೫೦ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲು ಮಂಡಳಿ ಅನುಮೋದನೆ ಕೊಟ್ಟಿತು. ಮಿನಿ ಚಿತ್ರಮಂದಿರಗಳನ್ನು ಕಟ್ಟಲು ನಿರುದ್ಯೋಗಿ ಇಂಜಿನಿಯರ್‌ಗಳಿಗೆ ಗುತ್ತಿಗೆ ನೀಡುವ ಯೋಜನೆಯನ್ನು ಮೂರ್ತಿ ಬಹಿರಂಗಪಡಿಸಿದರು. ಈ ಎಲ್ಲ ಸಂಭ್ರಮದಿಂದ ಆಕರ್ಷಿತರಾದ ಕೆಲವು ರಾಜ್ಯ ಸರ್ಕಾರಗಳು ನಿಗಮದ ಯೋಜನೆಗಳ ಬಗ್ಗೆ ವಿವರಗಳನ್ನು ಕೋರಿ ಪತ್ರಗಳನ್ನು

ಬರೆಯುವ ಮಟ್ಟಿಗೂ ನಿಗಮಕ್ಕೆ ರಾಷ್ಟ್ರಮಟ್ಟದ ಪ್ರಚಾರ ಸಿಕ್ಕಿತು. ಪಂಜಾಬ್ ರಾಜ್ಯದ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಬೆಂಗಳೂರಿಗೇ ಬಂದು, ಕರ್ನಾಟಕದ ನಿಗಮ ಹಾಕಿಕೊಂಡಿದ್ದ ಅನೇಕ ಯೋಜನೆಗಳನ್ನು ತಮ್ಮ ನಿಗಮವೂ ಅನುಸರಿಸುವುದಾಗಿ ಘೋಷಿಸಿದ್ದೂ ಆಯಿತು. ನವೆಂಬರ್ ೧೯೭೩ರಲ್ಲಿ ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣವಾದ ತರುಣದಲ್ಲಿ ನಿಗಮದ ಹೊರಾಂಗಣ ಘಟಕದ ಉದ್ಘಾಟನೆ ನಡೆಯಿತು. ಈ ಹಿಂದೆಯೇ ನಿಗಮದ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದ್ದ ಮುಖ್ಯಮಂತ್ರಿ ದೇವರಾಜ ಅರಸರು ಘಟಕವನ್ನು ಉದ್ಘಾಟಿಸಿದರು. ನಂತರ ನಿರ್ಮಾಪಕರಿಗೆ ಸಾಲ ನೀಡುವ ನಿಗಮದ ಯೋಜನೆಗೆ ರಿಸರ್ವ್ ಬ್ಯಾಂಕ್ ಅಡ್ಡಗಾಲು ಹಾಕಿದ್ದರಿಂದ ನಿಗಮ ಹಣಕ್ಕಾಗಿ ರಾಜ್ಯ ಸರ್ಕಾರವನ್ನೇ ಮೊರೆ ಹೋಗುವ ಅನಿವಾರ್ಯ ಉಂಟಾಯಿತು. ಆದರೂ ನಿಗಮ ಈ ಯೋಜನೆಯನ್ನು ಕಾರ್ಯಗತಗೊಳಿಸಿಯೇ ತೀರುವ ನಿರ್ಧಾರ ತಾಳಿತು.

ನಿಗಮದ ಈ ಎಲ್ಲ ಯೋಜನೆಗಳಿಗೂ ಮುಖ್ಯಮಂತ್ರಿ ಅರಸು ಮತ್ತು ಅವರ ಸರ್ಕಾರದ ಸಂಪೂರ್ಣ ಸಮ್ಮತಿ ಮತ್ತು ಒತ್ತಾಸೆಗಳಿದ್ದಂತೆಯೇ ಕಂಡಿತು. ಕೆಲವು ಯೋಜನೆಗಳು ಭಾಗಶಃ ಕಾರ್ಯಗತವಾದವು. ಇನ್ನು ಕೆಲವು ಕನ್ನಡಿಯೊಳಗಿನ ಗಂಟಿನಂತೆ ಹಾಗೇ ಇದ್ದವು. ಆದರೂ ೧೯೭೪ರ ಏಪ್ರಿಲ್ ತಿಂಗಳಿನಲ್ಲಿ ಅಪಸ್ವರವೊಂದು ಕೇಳಿ ಬಂತು. ನಿಗಮದಲ್ಲಿ ಆದುವರೆಗೆ ಶೇ.೪೯ ರಷ್ಟು ಷೇರುಗಳನ್ನು ಮಾತ್ರ ಹೊಂದಿದ್ದ ಸರ್ಕಾರ ಈ ಪ್ರಮಾಣವನ್ನು ಶೇ.೫೧ ಕ್ಕೆ ಏರಿಸಿ ನಿಗಮವನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳುವ ಪ್ರಸ್ತಾವನೆಯನ್ನು ತಂದಾಗ ಅಂದಿನ ಆಡಳಿತ ವರ್ಗಕ್ಕೆ ಇದು ಪಥ್ಯವಾಗಲಿಲ್ಲ. ಕೆ.ಕೆ.ಮೂರ್ತಿಯವರೇನೋ ಈ ಪ್ರಸ್ತಾವನೆಯನ್ನು ಸ್ವಾಗತಿಸಿ ಸಾರ್ವಜನಿಕ ಸಮಾರಂಭವೊಂದರಲ್ಲಿ ಭಾಷಣ ಮಾಡಿದರು. ಆದರೆ ಕೆಲವೇ ದಿನಗಳಲ್ಲಿ ಅವರು ತಮ್ಮ ಹುದ್ದೆಗೆ ರಾಜೀನಾಮೆ ನೀಡಿದಾಗ ಉದ್ಯಮದಲ್ಲಿ ಆಶ್ಚರ್ಯವಾಯಿತು. ಆದರೆ ಮುಖ್ಯಮಂತ್ರಿಗಳ ಆದೇಶದ ಮೇರೆಗೆ ಅವರು ರಾಜೀನಾಮೆ ನೀಡಬೇಕಾಯಿತೆಂದು ತಿಳಿದು ಬಂದಾಗ ಈ ಪ್ರಕರಣಕ್ಕೆ ರಾಜಕೀಯ ವ್ಯಾಖ್ಯಾನಗಳಾಗುವುದು ಅನಿವಾರ್ಯವಾಯಿತು. ನಿಗಮದ ಆಡಳಿತವನ್ನು ತಾನೇ ವಹಿಸಿಕೊಳ್ಳಲು ಸರ್ಕಾರ ತೀರ್ಮಾನಿಸಿದ ಬಗ್ಗೆ ಮೂರ್ತಿಗಳ ಅಸಮಾಧಾನ ಈ ರಾಜೀನಾಮೆಗೆ ಕಾರಣವಾಯಿತೆಂದು ನಂತರ ತಿಳಿದು ಬಂದಿತು. ಆದರೂ ಸ್ವಲ್ಪ ಕಾಲ ಮೂರ್ತಿಯವರು ನಿಗಮದ ನಿರ್ದೇಶಕರಲ್ಲೊಬ್ಬರಾಗಿ ಮುಂದುವರಿದರು. ನಂತರ ಆ ಸ್ಥಾನದಿಂದಲೂ ದೂರವಾದರು.

ಕೆಲವೇ ದಿನಗಳಲ್ಲಿ ದೇವರಾಜ ಅರಸುರವರೇ ನಿಗಮದ ಕಾರ್ಯವೈಖರಿಯನ್ನು ತರಾಟೆಗೆ ತೆಗೆದುಕೊಂಡು, ನಿಗಮ ಆದುವರೆಗೆ ವೆಚ್ಚ ಮಾಡಿದ್ದ ೧೩ ಲಕ್ಷ ರೂಪಾಯಿಗಳು ನೀರಿನಲ್ಲಿ ಹೋಮ ಮಾಡಿದಂತಾಯಿತೆಂದೂ, ಸಣ್ಣ ಪುಟ್ಟ ಯೋಜನೆಗಳನ್ನು ಕಾರ್ಯಗತ ಮಾಡಿರುವುದನ್ನು ಬಿಟ್ಟರೆ ನಿಗಮ ಫಲಪ್ರದವೆನಿಸುವ ಯಾವುದೇ ಕೆಲಸವನ್ನೂ ಸಾಧಿಸಲಿಲ್ಲವೆಂದೂ ಬಹಿರಂಗವಾಗಿ ಟೀಕಿಸಿದಾಗ ಆದುವರೆಗೆ ಅವರ ಮತ್ತು ಕೆ.ಕೆ.ಮೂರ್ತಿಗಳ ನಡುವೆ ನಡೆಯುತ್ತಿದ್ದ ಶೀತಲ ಸಮರ ಸ್ಫೋಟಗೊಂಡಿತು. ನಿಗಮದಿಂದ ಕನ್ನಡ ಚಿತ್ರೋದ್ಯಮಕ್ಕೆ ಎಳ್ಳಷ್ಟೂ ಪ್ರಯೋಜನವಾಗಲಿಲ್ಲವೆಂದು ಅರಸುರವರೇ ಟೀಕಿಸಿದಾಗ ವಿವಾದಕ್ಕೆ ಇನ್ನೊಂದು ಆಯಾಮವೂ ಬಂತು.

ಈ ವಿವಾದದ ಮುಂದಿನ ಘಟ್ಟ ಮುಖ್ಯಮಂತ್ರಿ ದೇವರಾಜ ಅರಸರ ತಮ್ಮಂದಿರೂ ಕನ್ನಡ ಚಿತ್ರರಂಗದ ನಟ-ನಿರ್ಮಾತೃ-ನಿರ್ದೇಶಕರೂ ಆಗಿದ್ದ ಡಿ.ಕೆಂಪರಾಜ ಅರಸರು ನಿಗಮದ ನಿರ್ದೇಶಕರಾಗಿದ್ದು. "ನನ್ನ ಜೀವಮಾನದಲ್ಲಿ ದುಡಿದು ಸಂಪಾದಿಸಿದ ೧೦,೦೦೦ ರೂಪಾಯಿಗಳಿಂದ ನಿಗಮದ ಷೇರುಗಳನ್ನು ಪಡೆದು ನಾನು ನಿಗಮದ ನಿರ್ದೇಶಕನಾಗಿ ಆಯ್ಕೆಗೊಂಡೆ" ಎಂದು ಅವರು ಸಮಾರಂಭವೊಂದರಲ್ಲಿ ವಿವರಣೆಯನ್ನಿತ್ತರು.

ಮೂರ್ತಿಯವರು ತಮ್ಮ ಹುದ್ದೆಗೆ ರಾಜೀನಾಮೆಯಿತ್ತು ಮೂರು ತಿಂಗಳು ಕಳೆದರೂ ಅವರ ಜಾಗಕ್ಕೆ ಬೇರೆ ಯಾರ ನೇಮಕವೂ ಆಗದೆ ಮೊದಲೇ ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದ ನಿಗಮ ಒಂದೆರಡು ಸಣ್ಣ ಪುಟ್ಟ ಕೆಲಸಗಳನ್ನು ನೋಡಿಕೊಳ್ಳುವುದನ್ನು ಬಿಟ್ಟರೆ ಹೆಚ್ಚು ಕಡಿಮೆ ನಿಷ್ಕ್ರಿಯವೇ ಆಯಿತು. ಚಿತ್ರೋದ್ಯಮ ಈ ಪರಿಸ್ಥಿತಿಯ ವಿರುದ್ಧ ಪ್ರತಿಭಟನೆಯ ದನಿಯೆತ್ತಿತು.

ಆದರೆ ಅಷ್ಟರಲ್ಲಿ ಆಗ ತಾನೆ ನಿಗಮಕ್ಕೆ ನಿರ್ದೇಶಕರಾಗಿದ್ದ ಕೆಂಪರಾಜ ಅರಸರು ವ್ಯವಸ್ಥಾಪಕ ನಿರ್ದೇಶಕರ ಅನುಪಸ್ಥಿತಿಯಲ್ಲಿ ತಾವೇ ಆ ಹುದ್ದೆಯ ಜವಾಬ್ದಾರಿಗಳನ್ನೆಲ್ಲ ನಿರ್ವಹಿಸಲು ಪ್ರಾರಂಭಿಸಿದಾಗ ನಿಗಮದಲ್ಲಿ ಹಾಗೂ ಉದ್ಯಮದಲ್ಲಿ ಒಂದು ಗುಲ್ಲೇ ಎದ್ದಿತು. ಆದರೆ ಸಮಾರಂಭವೊಂದರಲ್ಲಿ ಮುಖ್ಯಮಂತ್ರಿಯವರಾಗಿದ್ದ ಅವರ ಅಣ್ಣನವರೇ ಈ ಜವಾಬ್ದಾರಿಯನ್ನು ತಾವು ವಹಿಸಿಕೊಳ್ಳಬೇಕೆಂದು ಕೇಳಿದರೆಂದು ಕೆಂಪರಾಜ ಅರಸು ಘೋಷಿಸಿದಾಗ ಸರ್ಕಾರದೊಳಗಿನ ರಹಸ್ಯ ವಿದ್ಯಮಾನಗಳು ಬಯಲಿಗೆ ಬರಲಾರಂಭಿಸಿದವು. ಆದರೆ ಕನ್ನಡ ಚಿತ್ರಗಳಿಗೆ ಸಬ್ಸಿಡಿ ಕೊಡುವ ಯೋಜನೆಯನ್ನು ಕೈಬಿಡಬೇಕೆಂದು ಕೆಂಪರಾಜರು ಬಾಯಿಬಿಟ್ಟು ಹೇಳಿದಾಗ ಉದ್ಯಮದಲ್ಲಿನ ಖೇದ ಹಾಗೂ ಆಶ್ಚರ್ಯಗಳಿಗೆ ಎಣೆಯೇ ಇಲ್ಲದಂತಾಯಿತು. ನಂತರ ನಡೆದ ಇನ್ನೊಂದು ಸಮಾರಂಭದಲ್ಲಿ ಅರಸರು ನಿಗಮದ ಹಳೆಯ ಆಡಳಿತ ಮಂಡಳಿಯ ಕಾರ್ಯವೈಖರಿಯ ಮೇಲೆ ಇನ್ನಷ್ಟು ಮೂದಲಿಕೆಗಳನ್ನು ಹೇರಿ ಆ ಆಡಳಿತ ವ್ಯವಸ್ಥೆ ಕೂಸು ಹುಟ್ಟುವ ಮುಂಚೆ ಕುಲಾವಿ ಹೊಲಿಸಿದಂತೆ ಮಾಡಿತೆಂದು ಖಾರವಾಗಿ ಟೀಕಿಸಿದರು. ಯಾವ ಲಂಗುಲಗಾಮೂ ಇಲ್ಲದೆ ನಿಗಮಕ್ಕೆ ಹಣ ಸುರಿಯುವುದಕ್ಕಾಗುವುದಿಲ್ಲವೆಂದೂ ಅವರು ಸ್ಪಷ್ಟಪಡಿಸಿದರು.

ಇದರಿಂದಾಗಿ ಅರಸರ ಮತ್ತು ಮೂರ್ತಿಗಳ ನಡುವೆ ಹೇಳಿಕೆ-ಮರುಹೇಳಿಕೆಗಳ ಸಮರ ಪ್ರಾರಂಭವಾಯಿತು. ನಿಷ್ಫಲವೆಂದು ಅರಸರು ದೂರುತ್ತಿದ್ದ ಪ್ರತಿಯೊಂದು ಯೋಜನೆಯೂ ಅವರ ಅಣ್ಣ ದೇವರಾಜ ಅರಸರ ಕಲ್ಪನೆಯ ಕೂಸೇ ಎಂದೂ, ಮುಖ್ಯಮಂತ್ರಿಗಳು ಅಧ್ಯಕ್ಷತೆ ವಹಿಸಿದ್ದ ಆಡಳಿತ ಮಂಡಳಿ ಸಭೆಗಳಲ್ಲಿಯೇ ಈ ಎಲ್ಲ ಯೋಜನೆಗಳ ಬಗ್ಗೆ ನಿಗಮ ಅಂತಿಮ ನಿರ್ಧಾರಗಳನ್ನು ಕೈಗೊಂಡಿತ್ತೆಂದು ಹಂಗಿಸಿದ ಮೂರ್ತಿಗಳು ತಮ್ಮ ಈಗ ಅಣ್ಣನನ್ನೇ ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತಿರುವುದು ಸೋಜಿಗವೆಂದು ಅಣಕವಾಡಿದರು. ಜೊತೆಗೆ ಪದೇ ಪದೇ ನಿಗಮದ ಯೋಜನೆಗಳನ್ನು ಕೆಂಪರಾಜ ಅರಸರು ಬಹಿರಂಗವಾಗಿ ಟೀಕಿಸಲು ಪ್ರಾರಂಭಿಸಿದ್ದರಿಂದ ಬ್ಯಾಂಕುಗಳಿಂದ ನಿಗಮಕ್ಕೆ ದೊರೆಯಬಹುದಾಗಿದ್ದ ಆರ್ಥಿಕ ನೆರವಿಗೂ ಕಲ್ಲು ಬಿದ್ದಂತಾಯಿತೆಂದೂ ಮೂರ್ತಿಗಳು ಆಪಾದಿಸಿದರು.

ಏತನ್ಮಧ್ಯೆ ನಿಗಮದ ಆಡಳಿತ ಮಂಡಳಿಯಿಂದ ಮುಂಬೈ ಚಿತ್ರರಂಗದ ಅಧ್ವರ್ಯುಗಳಾಗಿದ್ದ ಶಾಂತಾರಾಂ, ಛೋಪ್ರಾ ಮತ್ತು ದಿಲೀಪ್ ಕುಮಾರ್‌ರಂತಹವರನ್ನು ಕೈಬಿಟ್ಟದ್ದು ಮೂರ್ತಿಗಳ ಗಾಯಕ್ಕೆ ಬರೆಯೆಳೆದಂತಾಯಿತು.

ಕೆಲವೇ ದಿನಗಳಲ್ಲಿ ಕೆಂಪರಾಜ ಅರಸರು ನಿಗಮದ ಮ್ಯಾನೇಜಿಂಗ್ ಡೈರೆಕ್ಟರ್ ಎನಿಸಿಕೊಂಡು ಕಂಠೀರವ ಸ್ಟುಡಿಯೋ ಆಡಳಿತ ಮಂಡಳಿಯ ಅಧ್ಯಕ್ಷ ಸ್ಥಾನಕ್ಕೂ ಬಂದಾಗ ಅಂದಿನ ರಾಜ್ಯ ಸರ್ಕಾರದ ಒಲವು ಯಾರ ಕಡೆ ಇದ್ದಿತೆಂಬುದು ಸ್ಪಷ್ಟವಾಯಿತು.

ಅರಸರ ಜೊತೆಯಲ್ಲಿಯೇ ಇನ್ನೂ ಮೂವರು ಕಂಠೀರವದ ಆಡಳಿತ ಮಂಡಳಿಗೆ ಸರ್ಕಾರಿ ನಿರ್ದೇಶಕರಾಗಿ ನೇಮಕಗೊಂಡರು. ಕಂಠೀರವದಲ್ಲಿ ಸಾಕಷ್ಟು ಖಾಸಗಿ ಬಂಡವಾಳವಿದ್ದರೂ ಸರ್ಕಾರ ೫ ಲಕ್ಷ ರೂಪಾಯಿಗಳನ್ನು ಷೇರು ಬಂಡವಾಳವಾಗಿ ನೀಡಿ ೧೨ ಲಕ್ಷ ರೂಪಾಯಿಗಳ ಸಾಲವನ್ನೂ ಕೊಟ್ಟಿತ್ತು. ಆ ಸಾಲದ ಮೇಲೆ ಆಗಲೇ ೫ ಲಕ್ಷ ರೂಪಾಯಿಗಳಷ್ಟು ಬಡ್ಡಿ ಬೆಳೆದಿತ್ತು. ಈ ಇಡೀ ಹಣವನ್ನು ಸ್ಟುಡಿಯೋದಲ್ಲಿ ಸರ್ಕಾರದ ಬಂಡವಾಳವೆಂದು ಪರಿಗಣಿಸಲೂ ಸರ್ಕಾರ ತೀರ್ಮಾನಿಸಿತು. ಕಂಠೀರವ ನಿಗಮದ ಒಂದು ಅಂಗವಾಗುವುದಿಲ್ಲವೆಂಬ ನಿರ್ಧಾರವನ್ನು ಸ್ಟುಡಿಯೋದ ಆಡಳಿತ ಮಂಡಳಿ ತೆಗೆದುಕೊಂಡಿತು.

ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ವಾದಗ್ರಸ್ತ ವಿದ್ಯಮಾನಗಳು ವಿಧಾನಮಂಡಲದಲ್ಲಿ ಚರ್ಚೆಗೆ ಗ್ರಾಸವಾದವು. ವಿಧಾನಪರಿಷತ್ತಿನಲ್ಲಿ ಈ ಬಗ್ಗೆ ಚರ್ಚೆಯನ್ನಾರಂಭಿಸಿ ನಿಗಮವನ್ನು ತರಾಟೆಗೆ ತೆಗೆದುಕೊಂಡವರು ತಾವು ಹಣಕಾಸಿನ ಮಂತ್ರಿಗಳಾಗಿದ್ದಾಗ ನಿಗಮದ ರಚನೆಗೆ ಕಾರಣರಾಗಿದ್ದು, ಈಗ ಪರಿಷತ್ತಿನಲ್ಲಿ ವಿರೋಧ ಪಕ್ಷಗಳ ನಾಯಕರಾಗಿದ್ದ ರಾಮಕೃಷ್ಣ ಹೆಗಡೆಯವರು. ತಾವು ಯಾವುದನ್ನು ಗಣಪತಿ ಮಾಡಲು ಹೊರಟಿದ್ದರೋ ಆ ಸಂಸ್ಥೆ ಇಂದು ಮಂಗವಾಗಿ ಮಾರ್ಪಾಡಾಗಿದೆಯೆಂದರು. ಕೆಂಪರಾಜ ಅರಸರನ್ನು ನಿಗಮದೊಳಗೆ ತಂದು ಅವರಿಗೆ ಅಧಿಕಾರವನ್ನೊಪ್ಪಿಸಿ ಮುಖ್ಯಮಂತ್ರಿಗಳು ಸ್ವಜನ ಪಕ್ಷಪಾತ ಮಾಡಿದರೆಂದು ಆಪಾದಿಸಿದ ಹೆಗಡೆಯವರು ನಿಗಮದ ವೈಫಲ್ಯಗಳನ್ನು ಎಳೆಎಳೆಯಾಗಿ ಬಿಚ್ಚಿಟ್ಟರು. ಕೆಂಪರಾಜ ಅರಸರು ನಿಗಮವನ್ನು ತಮ್ಮ ಸ್ವಂತ ಆಸ್ತಿಯನ್ನಾಗಿ ಮಾಡಿಕೊಂಡು ತಮ್ಮ ಅಧಿಕಾರವನ್ನು ಸರ್ವ ರೀತಿಗಳಲ್ಲೂ ದುರುಪಯೋಗ ಪಡಿಸಿಕೊಂಡಿದ್ದಾರೆಂಬ ಅವರ ಟೀಕೆ ಸರ್ಕಾರದ ಪ್ರತಿಭಟನೆಗೆ ಪ್ರಚೋದನೆಯಾಯಿತು. ನಿಗಮದ ರೆಫ್ರಿಜರೇಟರ್ ರಾತ್ರೋರಾತ್ರಿ ಅರಸರ ಮನೆ ಸೇರಿತು ಎಂಬ ಹೆಗಡೆಯವರ ಆರೋಪ ಆಡಳಿತ ಪಕ್ಷ

ಮತ್ತು ವಿಪಕ್ಷಗಳ ನಡುವೆ ಮಾತಿನ ಚಕಮಕಿಗೆ ಅವಕಾಶ ಮಾಡಿಕೊಟ್ಟಿತು. ಸದನವಲ್ಲಿ ಪ್ರತಿಪಕ್ಷಗಳ ಸಭಾತ್ಯಾಗವೂ ಆಯಿತು.

ಚರ್ಚೆಗೆ ಉತ್ತರಿಸಿದ ಮುಖ್ಯಮಂತ್ರಿಗಳು ನಿಗಮದ ವಿರುದ್ಧ ಬಂದಿದ್ದ ಆರೋಪಗಳನ್ನು ಸದನದ ಸಾರ್ವಜನಿಕ ಉದ್ದಿಮೆಗಳ ಸಮಿತಿಗೆ ಒಪ್ಪಿಸಿ ವಿಚಾರಣೆ ನಡೆಸುವುದಾಗಿ ಆಶ್ವಾಸನೆ ಕೊಡುವುದರೊಂದಿಗೆ ಒಂದು ವೇಳೆ ತಮ್ಮ ಸೋದರ ತಪ್ಪುಗಳನ್ನು ಮಾಡಿರುವುದು ನಿಜವೇ ಆಗಿದ್ದಲ್ಲಿ ಅವರಿಗೂ ಶಿಕ್ಷೆ ಆಗಲೆಂದರು. ಅದೇ ಸಮಯದಲ್ಲಿ 'ಐವತ್ತು ಅರವತ್ತು ಸಾವಿರ ರೂಪಾಯಿಗಳನ್ನು ನುಂಗಿಕೊಂಡರೂ ಯಾವ ಕೆಲಸವನ್ನೂ ಮಾಡದ' ನಿಗಮದ ಹಿಂದಿನ ನಿರ್ದೇಶಕರ ಮೇಲೆ ಕಿಡಿಯನ್ನು ಕಾರಿದರು. ತಮಗೆ ರಾಜಕೀಯವಾಗಿ ಹತ್ತಿರವಾಗಿದ್ದ ಅಬ್ಕಾರಿ ಉದ್ಯಮಿ ಎಚ್.ಆರ್.ಬಸವರಾಜರನ್ನು ನಿಗಮದ ಆಡಳಿತ ಮಂಡಳಿಗೆ ಸೇರಿಸಿದ್ದರ ಹಿಂದೆ ಯಾವ ಸ್ವಾರ್ಥವೂ ಇಲ್ಲವೆಂಬ ಸ್ಪಷ್ಟನೆಯೂ ಅವರಿಂದ ಬಂತು. ನಿಗಮದಲ್ಲಿ ತನಗಿದ್ದ ಶೇ.೪೬ರಷ್ಟು ಷೇರುಗಳನ್ನು ಶೇ.೫೧ಕ್ಕೆ ಏರಿಸಿಕೊಳ್ಳುವ ಒಂದೇ ಉದ್ದೇಶದಿಂದ ಬಸವರಾಜರ ಮೂಲಕ ೨೫,೦೦೦ ರೂಪಾಯಿಗಳ ಮೌಲ್ಯದ ಷೇರುಗಳನ್ನುಕೊಳ್ಳಲಾಯಿತೆಂದೂ ಅದರಿಂದ ಬಸವರಾಜರಿಗೆ ಒಂದು ಸ್ಥಾನ ಕಲ್ಪಿಸುವ ಉದ್ದೇಶ ತಮಗಿರಲಿಲ್ಲವೆಂದೂ ದೇವರಾಜ ಅರಸರು ವಾದಿಸಿದರು. ನಿಗಮದ ಹಿಂದಿನ ಕೆಲವು ನಿರ್ದೇಶಕರು ಸಂಸ್ಥೆಯ ಹಿತಾಸಕ್ತಿಗೆ ವಿರುದ್ಧವಾಗಿ ಕೆಲಸ ಮಾಡುತ್ತಿದ್ದುದರಿಂದ ಸಂಸ್ಥೆಯನ್ನು ಸರ್ಕಾರಿ ಹತೋಟಿಗೆ ತೆಗೆದುಕೊಳ್ಳುವುದು ಅನಿವಾರ್ಯವಾಯಿತೆಂದು ಮುಖ್ಯಮಂತ್ರಿಗಳು ವಿವರಿಸಿದರು.

ಮುಂದಿನ ವಾರ ರಾಜ್ಯದ ಚಲನಚಿತ್ರೋದ್ಯಮದ ಎಲ್ಲ ಮಗ್ಗುಲುಗಳನ್ನು ಅಧಿಕೃತವಾಗಿ ಪ್ರತಿನಿಧಿಸುವ ಸಂಸ್ಥೆ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಅಭಿವೃದ್ಧಿ ನಿಗಮದ ಯೋಜನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಅವುಗಳನ್ನು ಅವಾಸ್ತವಿಕ ಮತ್ತು ನಿರರ್ಥಕವೆಂದು ವರ್ಣಿಸಿದಾಗ ಉದ್ಯಮ ಮತ್ತು ನಿಗಮದ ನಡುವೆಯ ನಂಟು ಯಾವ ರೀತಿ ಎರಡು ಕಡೆಗಳಿಗೂ ಪ್ರಯೋಜನವಾಗಲಿಲ್ಲವೆಂಬ ಸತ್ಯ ಸಾಬೀತಾಯಿತು.

ಅದಾದ ನಂತರ ಎರಡೂ ಸಂಸ್ಥೆಗಳ ಪ್ರತಿನಿಧಿಗಳ ಸಮಾಲೋಚನಾ ಸಭೆಯೊಂದು ನಡೆಯಿತು. ನಿಗಮದಲ್ಲಿ ವಾಣಿಜ್ಯ ಮಂಡಳಿಗೆ ಪ್ರಾತಿನಿಧ್ಯ ಕೊಡಬೇಕೆಂಬ ಪ್ರಸ್ತಾಪವೂ ಚರ್ಚೆಗೆ ಬಂತು. ನಿಗಮದ ಯೋಜನೆಗಳ ಬಗ್ಗೆ ವಿಚಾರ ವಿನಿಮಯವೂ ನಡೆಯಿತು. ಆದರೆ ಈ ಎರಡು ಸಂಸ್ಥೆಗಳ ನಡುವೆಯ ಪ್ರತಿಕೂಲ ಸಂಬಂಧವನ್ನು ಸರಿಪಡಿಸುವ ವಾತಾವರಣವೇನೂ ನಿರ್ಮಾಣವಾಗಲಿಲ್ಲ.




(ಚಿತ್ರ ೨) ಕರ್ನಾಟಕ ಚಲನಚಿತ್ರ ಅಭಿವೃದ್ಧಿ ನಿಗಮದಿಂದ ತಲಾ ಎಂಟು ಲಕ್ಷ ಸಾಲ ಪಡೆದ ನಾಲ್ಕು ಚಿತ್ರಗಳ ಸಾಮೂಹಿಕ ಮುಹೂರ್ತ ಮುಖ್ಯಮಂತ್ರಿ ದೇವರಾಜ ಅರಸರ ಅಧ್ಯಕ್ಷತೆಯಲ್ಲಿ ನಡೆಯಿತು.

೧೯೭೪ರ ಆಗಸ್ಟ್ ತಿಂಗಳಲ್ಲಿ ರಾಜ್ಯ ವಾರ್ತಾಮಂತ್ರಿ ಆರ್.ಗುಂಡೂರಾಯರು ನಿಗಮದ ಅಧ್ಯಕ್ಷ ಸ್ಥಾನಕ್ಕೆ ಬಂದರು. ಅದುವರೆಗೆ ಅಧ್ಯಕ್ಷರಾಗಿದ್ದವರು ಹಿರಿಯ ಸರ್ಕಾರಿ ಅಧಿಕಾರಿ ರೆಬೆಲೋ. ಹೊಸ ಅಧ್ಯಕ್ಷರು ಅಧಿಕಾರ ಮಂಡಳಿಯನ್ನು ಪುನರ್ವ್ಯವಸ್ಥೆಗೊಳಿಸಲು ಅನುಕೂಲವಾಗುವಂತೆ ನಿಗಮದ ನಿರ್ದೇಶಕರೆಲ್ಲ ರಾಜೀನಾಮೆ ಕೊಡಬೇಕೆಂಬ ಸಲಹೆ ವಾಣಿಜ್ಯ ಮಂಡಳಿಯ ಅಧ್ಯಕ್ಷ ಭಕ್ತವತ್ಸಲಂರವರಿಂದ ಬಂತು. ನಂತರದ ದಿನಗಳಲ್ಲಿ ನಿಗಮ ಒಂದು ವಿವಾದಾಸ್ಪದ ಚಟುವಟಿಕೆಯಿಂದ ಇನ್ನೊಂದಕ್ಕೆ ಹಾದು ಹೋಗುತ್ತ ಅಹನ್ಯಹನಿ ಕಾಲಕ್ಷೇಪ ಮಾಡುತ್ತಲೇ ಮುಂದುವರಿದುಕೊಂಡು ಬಂದಿದ್ದಾಯಿತು. ನಾನಾ ಸಮಿತಿಗಳಿಂದ ನಿಗಮದ ನಿರರ್ಥಕತೆಯ ಬಗ್ಗೆ ವಿಶ್ಲೇಷಣೆ ನಡೆಯಿತು. ನಿಗಮ ಮತ್ತು ಕಂಠೀರವ ಸ್ಟುಡಿಯೋಗಳನ್ನು ವಿಲೀನಗೊಳಿಸಬೇಕೆನ್ನುವ ಪ್ರಸ್ತಾವನೆಯೂ ಪದೇ ಪದೇ ಬಂದಿತಾದರೂ ಕಂಠೀರವ ಸ್ಟುಡಿಯೋಗೆ ೧೭ ಎಕರೆಗಳ ಅಮೂಲ್ಯವಾದ ಆಸ್ತಿಯಿರುವುದರಿಂದ ಷೇರುಗಳ ಮುಖಬೆಲೆಯಷ್ಟು ಹಣವನ್ನೇ ವಾಪಸು ಪಡೆದು ಸ್ಟುಡಿಯೋದಿಂದ ನಿರ್ಗಮಿಸಲು ಖಾಸಗಿ ಷೇರುದಾರರು ಸುತರಾಂ ಒಪ್ಪದಿದ್ದುದರಿಂದ ಈ ಪ್ರಸ್ತಾವನೆಯನ್ನು ಕೈಬಿಡಲಾಯಿತು. ಆದರೆ ಚಿತ್ರೋದ್ಯಮ ಅಭಿವೃದ್ಧಿ ನಿಗಮದ ಖಾಸಗಿ ಷೇರುದಾರರು ತಮ್ಮ ಷೇರುಗಳ ಮುಖಬೆಲೆಯಷ್ಟೇ ಹಣ ತಮಗೆ ಸಂದಾಯವಾಗುವುದಾದರೆ ನಿಗಮದಿಂದ ನಿರ್ಗಮಿಸಲು ಸಿದ್ಧರಿದ್ದರೂ ಅದಕ್ಕೆ ಆಗತ್ಯವಾದ ೧೨ ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಲು ರಾಜ್ಯ ಸರ್ಕಾರ ಮುಂದೆ ಬರಲಿಲ್ಲ. ಹೀಗಾಗಿ ನಿಗಮದ ಭವಿಷ್ಯ ತೂಗುಯ್ಯಾಲೆಯಲ್ಲಿಯೇ ಉಳಿದುಕೊಂಡಿತು. ನಿಗಮವನ್ನು ಮುಚ್ಚಿಯೇ ಬಿಡಬೇಕೆಂಬ ಸೂಚನೆಯೂ ಸರ್ಕಾರದ ಕಡೆಯಿಂದ ಆಗಾಗ ಬರುತ್ತಲೇ ಇದ್ದರೂ ಈ ಬಗ್ಗೆಯೂ ಯಾವುದೇ ಅಂತಿಮ ನಿರ್ಧಾರವಾಗದೆ ಅನಿಶ್ಚಯತೆ ಇನ್ನೂ ಮುಂದುವರಿಯುತ್ತಲೇ ಬಂತು.

ಕೆಂಪರಾಜ ಅರಸರ ಕಾಲದಲ್ಲಿ ನಿಗಮ ಅದರ ಆರ್ಥಿಕ ದುಃಸ್ಥಿತಿಗೆ ಮುಂದೆ ಕಾರಣವಾದ ಎರಡು ನಿರ್ಧಾರಗಳನ್ನು ತೆಗೆದುಕೊಂಡಿತು. ಒಂದು, ನಾಲ್ಕು ಕನ್ನಡ ಚಿತ್ರಗಳ ನಿರ್ಮಾಣಕ್ಕೆ ತಲಾ ಎಂಟು ಲಕ್ಷ ರೂಪಾಯಿಗಳನ್ನು ನೀಡಿ ಆ ಚಿತ್ರಗಳ ಹಂಚಿಕೆಯ ಜವಾಬ್ದಾರಿಯನ್ನು ತಾನೇ ಹೊತ್ತಿದ್ದು. ಆದರೆ ನಿಗಮದಲ್ಲಿ ತನ್ನದೇ ಆದ ಹಂಚಿಕೆಯ ವ್ಯವಸ್ಥೆಯಿರಲಿಲ್ಲವಾದ್ದರಿಂದ ಖಾಸಗಿ ಹಂಚಿಕೆದಾರರೊಂದಿಗೆ ವ್ಯಾಪಾರ ಮಾಡುವ ಅನಿವಾರ್ಯವೂ ಇತ್ತು. ಈ ನಾಲ್ಕು ಚಿತ್ರಗಳಲ್ಲಿ ಯಾವುದೂ ಜನಪ್ರಿಯ ಅಂಶಗಳನ್ನೊಳಗೊಂಡಿರಲಿಲ್ಲವಾದ್ದರಿಂದ ಮೂರು ಚಿತ್ರಗಳಿಗೆ ಹಂಚಿಕೆದಾರರು ಸಿಕ್ಕಿದರೂ ಒಂದು ಚಿತ್ರವೂ ಯಶಸ್ವಿಯಾಗಿ ಪ್ರದರ್ಶನಗೊಳ್ಳಲಿಲ್ಲ. ನಿಗಮಕ್ಕೆ ಇದರಿಂದಾಗಿ ಹೂಡಿದ ಹಣವೆಲ್ಲ ನಷ್ಟವೇ ಆಯಿತು. ನಾಲ್ಕರಲ್ಲಿ ಒಂದು ಚಿತ್ರವಂತೂ ಬಿಡುಗಡೆಯೇ ಆಗಲಿಲ್ಲ. ಹೀಗಾಗಿ ಅಪಾರ ನಷ್ಟವನ್ನನುಭವಿಸಿದ ನಿಗಮ ಮುಂದೆ ಚಿತ್ರ ನಿರ್ಮಾಣಕ್ಕೆ ಧನಸಹಾಯ ಒದಗಿಸುವುದಿರಲಿ, ಸಾಲ ಕೊಡುವ ಯೋಚನೆಯನ್ನು ಮಾಡಲೂ ಸಾಧ್ಯವಾಗದೆ ಈ ಯೋಜನೆಗೆ ಚಾಲಗ್ರಹ ಬಡಿಯಿತು (ಈ ನಾಲ್ಕು ಚಿತ್ರಗಳು – 'ಸದಾನಂದ', 'ಸುಳಿ', 'ಲಕ್ಷ್ಮೀಪ್ರಸನ್ನ' ಮತ್ತು 'ಪ್ರೇಮಜ್ವಾಲೆ'). ನಾಲ್ಕು ಚಿತ್ರಗಳಿಗೂ ಒಟ್ಟಿಗೇ ಮುಹೂರ್ತ ದೇವರಾಜ ಅರಸರ ನೇತೃತ್ವದಲ್ಲಿಯೇ ನಡೆದಿತ್ತು. ನಾಲ್ಕು ಚಿತ್ರಗಳಿಗೂ ನುರಿತ ನಿರ್ಮಾಪಕರು ಅಥವಾ ನಿರ್ದೇಶಕರೇ ಇದ್ದರು. 'ಸದಾನಂದ' ಚಿತ್ರದ ನಿರ್ಮಾಪಕರು ಹೊನ್ನಪ್ಪ ಭಾಗವತರ್ ಮತ್ತು ನಿರ್ದೇಶಕರು

ಅನಂತ ಹೀರೇಗೌಡರ್, 'ಸುಳಿ'ಯ ನಿರ್ಮಾಪಕ-ನಿರ್ದೇಶಕ ಬಿ.ಎಸ್.ರಂಗಾ, 'ಲಕ್ಷ್ಮೀಪ್ರಸನ್ನ'ದ ನಿರ್ದೇಶಕರು ಎ.ವಿ.ಶೇಷಗಿರಿರಾವ್, 'ಪ್ರೇಮಜ್ವಾಲೆ'ಯ ನಿರ್ದೇಶಕರು ಗೀತಪ್ರಿಯ. ಧನಸಹಾಯಕ್ಕಾಗಿ ಈ ಚಿತ್ರಗಳನ್ನು ಆಯ್ಕೆ ಮಾಡಿದ ರೀತಿಯ ಬಗ್ಗೆಯೇ ಪತ್ರಿಕೆಗಳಲ್ಲಿ, ಉದ್ಯಮದ ವಲಯಗಳಲ್ಲಿ ತೀವ್ರ ವಿವಾದಗಳು ನಡೆದವು. ಕೆಂಪರಾಜ ಅರಸು ಮತ್ತೊಮ್ಮೆ ಈ ವಿವಾದದ ಕೇಂದ್ರಬಿಂದುವಾದರು. ಇಷ್ಟೆಲ್ಲ ನಡೆದಿದ್ದು ೧೯೬೬ರಲ್ಲಿ.

ನಿಗಮ ಅದೇ ಸಮಯದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಅರೆಖಾಯಂ ಚಿತ್ರಮಂದಿರಗಳ ನಿರ್ಮಾಣಕ್ಕೆ ಕೂಡ ಸಾಲ ನೀಡುವ ಯೋಜನೆಯನ್ನು ಜಾರಿಗ ತಂದಿತು. ಆದರೆ ಈ ಯೋಜನೆ ಕೂಡ ನೆಲ ಕಚ್ಚಿ ನಿಗಮಕ್ಕೆ ಲಕ್ಷಾಂತರ ರೂಪಾಯಿಗಳ ಆರ್ಥಿಕ ಹಾನಿಯನ್ನುಂಟು ಮಾಡಿತು. ಇದಕ್ಕೆ ಮುಖ್ಯ ಕಾರಣ ಈ ಚಿತ್ರಮಂದಿರಗಳನ್ನು ಕಟ್ಟಲು ನಿಗಮ ಆಯ್ದ ಸ್ಥಳಗಳು ಸೂಕ್ತವಾಗಿರಲಿಲ್ಲ. ಜೊತೆಗೆ ಸಾಲ ಪಡೆದ ಅನೇಕರಿಗೆ ಈ ಕ್ಷೇತ್ರದಲ್ಲಿ ಯಾವುದೇ ಅನುಭವವೂ ಇರದೆ ಚಿತ್ರಮಂದಿರಗಳನ್ನು ನಡೆಸುವುದೇ ದುಸ್ತರವಾಯಿತು. ನಿಗಮಕ್ಕೆ ಸಾಲದ ಕಂತು ಮತ್ತು ಬಡ್ಡಿಗಳನ್ನು ಕೊಡುವುದು ಕೂಡ ಅಸಾಧ್ಯವೆನಿಸಿ ನಿಗಮ ಕೋರ್ಟಿನ ಮೆಟ್ಟಿಲನ್ನೂ ಹತ್ತಬೇಕಾಯಿತು. ಅರಸರ ಅವಧಿ ಮುಗಿದ ಮೇಲೆ ಅನೇಕ ವರ್ಷಗಳ ಕಾಲ ಮುಂದೆ ಬಂದ ಆಡಳಿತ ಮಂಡಳಿಗಳಿಗೆ ಇದು ದೊಡ್ಡ ತಲೆ ನೋವಾಗಿ ಪರಿಣಮಿಸಿ, ಗೋಜಲಾಗಿಯೇ ಉಳಿಯಿತು. ಕೊನೆಗೂ ನಾಲ್ಕೈದು ಚಿತ್ರಮಂದಿರಗಳಿಂದ ಬರಬೇಕಾಗಿದ್ದ ಬಾಕಿ ವಸೂಲಿ ಆಗಲೇ ಇಲ್ಲ. ಹೀಗಾಗಿ ಈ ಯೋಜನೆ ಕೂಡ ನಿಗಮ ಕೈಗೊಂಡ ನಿರರ್ಥಕ ಚಟುವಟಿಕೆಗಳಲ್ಲಿ ಒಂದೆನಿಸಿ ವ್ಯಾಪಕ ಟೀಕೆಗಳಿಗೆ ಗುರಿಯಾಯಿತು.

ನಿಗಮ ಕಂಠೀರವ ಸ್ಟುಡಿಯೋದಿಂದ ಗುತ್ತಿಗೆಯಾಗಿ ಪಡೆದಿದ್ದ ಸ್ವಲ್ಪ ಜಾಗದಲ್ಲಿ ರಿಕಾರ್ಡಿಂಗ್ ಥಿಯೇಟರ್ ಕಟ್ಟುವ ಸಾಹಸಕ್ಕೂ ಕೈ ಹಾಕಿತು. ಆಡಳಿತ ಮಂಡಳಿಗೇ ಈ ಬಗ್ಗೆ ಸ್ಪಷ್ಟ ಕಲ್ಪನೆಯಿಲ್ಲದಿದ್ದರಿಂದ ಈ ಥಿಯೇಟರ್ ಅಗತ್ಯಕ್ಕಿಂತ ಹೆಚ್ಚು ಘಟಾಕಾರದಲ್ಲಿ ತಲೆಯೆತ್ತಿ ನಿಂತಾಗ ಕಟ್ಟಡ ಯಾವ ಪ್ರಯೋಜನಕ್ಕೂ ಬರದಾಯಿತು. ಆಗ ಅದನ್ನು ಇಬ್ಭಾಗ ಮಾಡಿ ಎರಡು ಪ್ರತ್ಯೇಕ ಥಿಯೇಟರ್‌ಗಳನ್ನು ನಿರ್ಮಿಸುವ ಪ್ರಯತ್ನವೂ ನಡೆಯಿತು. ಅದೂ ಸಫಲವಾಗಲಿಲ್ಲ. ಲಕ್ಷಾಂತರ ರೂಪಾಯಿಗಳ ವೆಚ್ಚ ಆಯಿತು. ಯೋಜನೆ ಹಾಗೆಯೇ ಸ್ಥಗಿತವಾಯಿತು. ನಂತರ ೮೦ನೆಯ ದಶಕದಲ್ಲಿ ಅಧಿಕಾರಕ್ಕೆ ಬಂದ ಆಡಳಿತ ವರ್ಗ ಈ ಅರೆನಿರ್ಮಿತ ಕಟ್ಟಡವನ್ನು ಮದರಾಸಿನ ಖ್ಯಾತ ಸಂಸ್ಥೆ ಪ್ರಸಾದ್ ಸ್ಟುಡಿಯೋಗೆ ಮೂವತ್ತು ವರ್ಷಗಳ ಗುತ್ತಿಗೆಗೆ ನೀಡಿತು. ಆ ಸಂಸ್ಥೆ ಕಟ್ಟಡವನ್ನು ಪುನರ್ನಿರ್ಮಿಸಿ, ಅಕ್ಟೋಬರ್ ೧೦, ೧೯೮೮ರಂದು ಒಂದು ಸುಸಜ್ಜಿತ ರಿಕಾರ್ಡಿಂಗ್ ಥಿಯೇಟರ್ ಮತ್ತು ಒಂದು ಆಧುನಿಕ ಡಬ್ಬಿಂಗ್ ಥಿಯೇಟರನ್ನು ಸಂಪೂರ್ಣಗೊಳಿಸಿತು.

ಮುಂದೆ ೮೦ರ ದಶಕದಲ್ಲಿ ನಿಗಮ ಬೆಂಗಳೂರು ಮಹಾನಗರ ಪಾಲಿಕೆ ಜಯನಗರದ ಆಧುನಿಕ ವಾಣಿಜ್ಯ ಸಂಕೀರ್ಣದಲ್ಲಿ ನಿರ್ಮಿಸಿದ್ದ ಪೂರ್ಣ ಚಿತ್ರಮಂದಿರವನ್ನು ಗುತ್ತಿಗೆಗೆ ಪಡೆದು ಚಿತ್ರಮಂದಿರಕ್ಕೆ 'ಪುಟ್ಟಣ್ಣ ಚಿತ್ರಮಂದಿರ'ವೆಂದು ನಾಮಕರಣ ಮಾಡಿ, ಆ ಪ್ರತಿಭಾವಂತ ನಿರ್ದೇಶಕರ ಹೆಸರನ್ನು ಉಳಿಸಿಕೊಂಡು ಬಂದಿದ್ದು ಅದರ ಕೆಲವೇ ಸಾಧನೆಗಳಲ್ಲೊಂದು. ಆದರೂ ಈ ಚಿತ್ರಮಂದಿರವನ್ನು ನಿಗಮ ನಡೆಸಿಕೊಂಡು ಬಂದ ರೀತಿ ಸಮರ್ಪಕವಾಗದೆ ಅದು ಪ್ರದರ್ಶನ ಕ್ಷೇತ್ರದಲ್ಲಿ ಒಂದು ಉತ್ತಮ ಸ್ಥಾನವನ್ನು ಪಡೆಯುವಲ್ಲಿ ನಿಷ್ಫಲವಾಯಿತು. ಮೊದಮೊದಲು ಕೇವಲ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಮಾತ್ರ ಮೀಸಲಾಗಿದ್ದು ಈ ಚಿತ್ರಗಳನ್ನು ಶೇಕಡಾವಾರು ಗಳಿಕೆಯ ಆಧಾರದ ಮೇಲೆಯೇ ನಡೆಸಿಕೊಂಡು ಬಂದ ಪುಟ್ಟಣ್ಣ ಚಿತ್ರಮಂದಿರ ಸ್ವಲ್ಪ ಕಾಲದ ನಂತರ ಈ ಎರಡೂ ನೀತಿಗಳನ್ನು ಕೈ ಬಿಟ್ಟಿತು.

ನಿಗಮ ನಂತರ ಸ್ಥಾಪಿಸಿದ ವಿಡಿಯೋ ಕೇಂದ್ರ ಅದರ ಇನ್ನೊಂದು ದುಸ್ಸಾಹಸ ಎನಿಸಿತು. ಹೀಗಾಗಿ ನಿಗಮ ಲಕ್ಷಾಂತರ ರೂಪಾಯಿಗಳನ್ನು ಚೆಲ್ಲಿ ಪ್ರಾರಂಭಿಸಿದ ಹೆಚ್ಚು ಕಡಿಮೆ ಎಲ್ಲ ಯೋಜನೆಗಳೂ ನಷ್ಟವನ್ನನುಭವಿಸಿ ಅನೇಕ ಅಪಾತ್ರ ದಾನಗಳಿಗೆ ಹೆಸರಾಯಿತು. ಇಂತಹ ನಿಗಮವೊಂದನ್ನು ಸ್ಥಾಪಿಸಿದ ಪ್ರಥಮ ರಾಜ್ಯ ಕರ್ನಾಟಕ. ಆದರೆ ಅದೊಂದೇ ಅದರ ಹೆಗ್ಗಳಿಕೆಯಾಯಿತು. ನಿಗಮ ರಾಜ್ಯ ಸರ್ಕಾರದ ಅನೇಕ ನಿರರ್ಥಕ ಉದ್ದಿಮೆಗಳ ದಾರಿಯನ್ನೇ ಹಿಡಿಯಿತು.

ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಿಗಾಗಿ ನಿಗಮ ಕೆಲವು ಡಾಕ್ಯುಮೆಂಟರಿ ಚಿತ್ರಗಳನ್ನು, ಪ್ರಮೋಷನಲ್ ಕಿರುಚಿತ್ರಗಳನ್ನು ತಯಾರಿಸಿತಾದರೂ ಅವುಗಳ ಗುಣಮಟ್ಟದ ಬಗ್ಗೆ ಭಿನ್ನಾಭಿಪ್ರಾಯಗಳು ಬೆಳೆದುಕೊಂಡೇ ಬಂದವು. ನಿಗಮ ಮೊದಲಿನಿಂದ ಪ್ರಚಾರ ಕೊಡುತ್ತಲೇ ಬಂದ ಎಲ್ಲ ಬೃಹತ್ ಯೋಜನೆಗಳೂ ಮೂಲೆಗುಂಪಾಗಿ ಕರ್ನಾಟಕದಲ್ಲಿ ಚಲನಚಿತ್ರೋದ್ಯಮ ಆರೋಗ್ಯಕರ ಬೆಳವಣಿಗೆಗೆ ಆ ಸಂಸ್ಥೆಯಿಂದ ಹೇಳಿಕೊಳ್ಳುವಂಥ ಯಾವ ಪ್ರಯೋಜನವೂ ಆಗಲಿಲ್ಲ.

ಈ ದಶಕ ಇನ್ನೂ ಕೆಲವು ವಿವಾದಗಳನ್ನು ಕಂಡಿತು - ಅವುಗಳಲ್ಲಿ ಕೆಲವು ತಾತ್ವಿಕ ಹಾಗೂ ಇನ್ನು ಕೆಲವು ವೈಯಕ್ತಿಕ.

೧೯೭೦-೭೧ರ ಸಾಲಿನ ರಾಜ್ಯ ಸರ್ಕಾರದ ಚಲನಚಿತ್ರ ಪ್ರಶಸ್ತಿಗಳಲ್ಲಿ ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಶರಪಂಜರ'ಕ್ಕೆ ಪ್ರಥಮ ಸ್ಥಾನವೂ, ಪಟ್ಟಾಭಿರಾಮ ರೆಡ್ಡಿಯವರ ಪ್ರಯೋಗಾತ್ಮಕ ಚಿತ್ರ 'ಸಂಸ್ಕಾರ'ಕ್ಕೆ ಎರಡನೆಯ ಸ್ಥಾನ ಹಾಗೂ ರಾಜಕುಮಾರ್ ಅಭಿನಯದ 'ಕುಲಗೌರವ'ಕ್ಕೆ ತೃತೀಯ ಸ್ಥಾನ ಬಂತು. 'ಸಂಶಯಫಲ'ಕ್ಕಾಗಿ ಕನ್ನಡಿಗರಲ್ಲದ ಸಲಿಲ್ ಚೌಧರಿಯವರಿಗೆ ಅತ್ಯುತ್ತಮ ಸಂಗೀತ ನಿರ್ದೇಶಕ ಪ್ರಶಸ್ತಿ ಬಂದದ್ದು ಚಿತ್ರಪ್ರೇಮಿಗಳಿಗೆ ಅತೃಪ್ತಿಯೆನಿಸಿತ್ತು. ಮುಂದೆ 'ಸಂಸ್ಕಾರ' ರಾಷ್ಟ್ರೀಯ ಮಟ್ಟದಲ್ಲಿ ರಾಷ್ಟ್ರಪತಿಗಳ ಸ್ವರ್ಣಕಮಲ ಪ್ರಶಸ್ತಿಯನ್ನು ಪಡೆದು ದೇಶ-ವಿದೇಶಗಳಲ್ಲಿ, ಅನೇಕ ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲೂ ಪ್ರಶಸ್ತಿಗಳನ್ನು ಪಡೆದಾಗ ಆ ಚಿತ್ರಕ್ಕೆ ರಾಜ್ಯ ಸರ್ಕಾರದಿಂದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಬಂದದ್ದು ಸರಿಯಲ್ಲವೆಂದೇ ಚಿತ್ರಪ್ರಿಯರು ವಾದಿಸಿದರು.

ಹಿಂದಿನ ವರ್ಷದ ರಾಜ್ಯ ಪ್ರಶಸ್ತಿಗಳಿಂದ ಎನ್.ಲಕ್ಷ್ಮೀನಾರಾಯಣ್‌ರಂತಹ ಪ್ರಾಮಾಣಿಕ, ಸೃಜನಶೀಲ ನಿರ್ದೇಶಕರಿಗೆ ಉಂಟಾದ ವೇದನೆಯನ್ನು ಈ ಬಾರಿ ಪ್ರಶಸ್ತಿ ಸಮಿತಿ ಪಟ್ಟಾಭಿರಾಮರೆಡ್ಡಿಯವರಂತಹ ಮಾಧ್ಯಮಶೀಲ, ಪ್ರತಿಭಾವಂತ ನಿರ್ದೇಶಕರಿಗೆ ಉಂಟುಮಾಡಿತೆಂಬ ಟೀಕೆ ಪ್ರೇಕ್ಷಕರಿಂದಲೂ ಕೇಳಿ ಬಂತು. ಕೆಲವರು ಅತ್ಯುತ್ತಮ ಸಂಗೀತ ನಿರ್ದೇಶಕರಾಗಿ ಸಲಿಲ್ ಚೌಧರಿಯವರು ಆಯ್ಕೆಯಾಗಿದ್ದರಲ್ಲಿ 'ರಾಜಕೀಯ'ವನ್ನು ಕಂಡರು. ವಿದೇಶೀಯರಾದ ಟಾಂ ಕೋವನ್‌ರಿಗೆ 'ಸಂಸ್ಕಾರ'ಕ್ಕಾಗಿ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿ ದಕ್ಕಿದ್ದು ಕೂಡ ಅದೇ ರೀತಿ ಅಸಮಾಧಾನಕ್ಕೆ ಕಾರಣವಾಯಿತು.

ನವಂಬರ್ ೧೯೭೧ರಲ್ಲಿ ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಸಾಕ್ಷಾತ್ಕಾರ' ಬಿಡುಗಡೆಯಾಯಿತು. ರಾಜಕುಮಾರ್, ಹಿಂದಿ ಚಿತ್ರರಂಗದ ಪೃಥ್ವಿರಾಜ್ ಕಪೂರ್ ಮತ್ತು ದಕ್ಷಿಣ ಭಾರತದ ಖ್ಯಾತನಟಿ ಜಮುನಾರೊಂದಿಗೆ ನಿರ್ಮಾಪಕ ಮಲ್ಲಿಕ್‌ರವರಿಗಾಗಿ ಪುಟ್ಟಣ್ಣ ನಿರ್ದೇಶಿಸಿದ್ದರು. ಸತ್ವಹೀನ ಕಥೆ, ಬಿಗಿಯಿಲ್ಲದ ಚಿತ್ರಕಥೆ, ನಿರೂಪಣೆಯಲ್ಲಿ ಕಲ್ಪನೆಯ ಕೊರತೆ ಮತ್ತು ಪ್ರಾಸಕ್ಕಾಗಿಯೇ ಬರೆದ ಪ್ರಭಾಕರಶಾಸ್ತ್ರಿಗಳ ಸಂಭಾಷಣೆಗಳನ್ನು ವಿಮರ್ಶಕರು ಟೀಕಿಸಿದರು. ಇದು ಪುಟ್ಟಣ್ಣನವರು ಅದುವರೆಗೆ ತೋರಿದ್ದ ಪ್ರತಿಭೆಗೆ ಕಳಂಕ ತರುವಂತಹ ಚಿತ್ರವೆಂದರು. ಈ ಚಿತ್ರದ 'ಒಲವೆ ಜೀವನ ಸಾಕ್ಷಾತ್ಕಾರ...' ಹಾಡು (ಸಂಗೀತ ನಿರ್ದೇಶಕರು : ಎಂ.ರಂಗರಾವ್) ತನ್ನ ಸುಶ್ರಾವ್ಯತೆಯಿಂದ ಪ್ರೇಕ್ಷಕರ ಮೇಲೆ ಪರಿಣಾಮ ಬೀರಿದರೂ ಚಿತ್ರದಲ್ಲಿ ಪ್ರಭಾಕರ ಶಾಸ್ತ್ರಿಗಳು ನೂರಾರು ಬಾರಿ 'ಒಲವು' ಎಂಬ ಪದವನ್ನು ಸಂಭಾಷಣೆಗಳಲ್ಲಿ ಪುನರಾವರ್ತಿಸಿದ್ದು ಟೀಕಾಕಾರರ ಅಪಹಾಸ್ಯಕ್ಕೆ ಪಾತ್ರವಾಯಿತು. ಕಣಗಾಲ್ ಸಹೋದರರು ಬಹಿರಂಗ ಸಭೆಗಳಲ್ಲಿ ಪತ್ರಿಕೆ, ಪತ್ರಕರ್ತರನ್ನು ಟೀಕಿಸಿದರು. ಇದರಿಂದ ಉಭಯತ್ರರ ನಡುವೆ ವಿರಸ ಹೆಚ್ಚಿತು. ಚಿತ್ರದ ನಿರ್ಮಾಪಕ ಮಲ್ಲಿಕ್‌ರವರು ಈ ಸಂಘರ್ಷದಲ್ಲಿ ಸಿಕ್ಕಿಕೊಳ್ಳದೆ ದೂರವೇ ಉಳಿದರು. ವಾಸ್ತವವಾಗಿ ಅವರಿಗೂ ಮತ್ತು ಪೃಥ್ವಿರಾಜ್‌ರವರಿಗೂ ಇದ್ದ ಸ್ನೇಹವೇ ಪೃಥ್ವಿರಾಜ್‌ರನ್ನು ಕನ್ನಡ ಚಿತ್ರರಂಗಕ್ಕೆ ತಂದು ಈ ಚಿತ್ರವನ್ನು ತಯಾರಿಸಲು ಪ್ರೇರೇಪಿಸಿದ್ದು. ಆದರೆ ವಿಮರ್ಶೆಗಳ ಬಗ್ಗೆ ಉಂಟಾದ ಈ ರಾಡಿಯಿಂದಾಗಿ ಈ ಅಂಶ ತನ್ನ ಪ್ರಾಮುಖ್ಯವನ್ನು ಕಳೆದುಕೊಂಡಿತು.

ಇಷ್ಟಾದರೂ ಪುಟ್ಟಣ್ಣ ಕಣಗಾಲ್ ಮತ್ತು ಪತ್ರಕರ್ತರ ನಡುವೆಯ ಮಧುರ ಬಾಂಧವ್ಯಕ್ಕೆ ದೀರ್ಘಾವಧಿಯ ಊನವೇನೂ ಉಂಟಾಗಲಿಲ್ಲ. ಒಬ್ಬ ಸೃಜನಶೀಲ ನಿರ್ದೇಶಕ ಮತ್ತು ಪತ್ರಕರ್ತರು ಬಹಳ ಕಾಲ ದೂರ ಉಳಿಯುವುದು ಸಾಧ್ಯವೂ ಇರಲಿಲ್ಲ. ಆದರೆ ಪ್ರಭಾಕರಶಾಸ್ತ್ರಿಗಳ ವಿಷಯದಲ್ಲಿ ಹಾಗಾಗಲಿಲ್ಲ.

'ಸಾಕ್ಷಾತ್ಕಾರ' ಬಿಡುಗಡೆಯಾದ ಕೆಲವೇ ತಿಂಗಳಲ್ಲಿ ಶಾಸ್ತ್ರಿಗಳು ಚಾಮುಂಡೇಶ್ವರಿ ಸ್ಟುಡಿಯೋ ಸಂಸ್ಥೆಗಾಗಿ ಅದರ ಚೊಚ್ಚಲ ತಯಾರಿಕೆ 'ಸುಭದ್ರಾ ಕಲ್ಯಾಣ'ವನ್ನು ಅದ್ದೂರಿಯಾಗಿ ನಿರ್ದೇಶಿಸಿದರು. ಚಿತ್ರಕಥೆ, ನಿರೂಪಣೆ, ಅಭಿನಯಗಳಲ್ಲಿ ನಿರ್ದೇಶಕನ ಮುದ್ರೆ ಎಂಬುದು ಇರಲಿಲ್ಲ. ಚಿತ್ರದಲ್ಲಿ ಪತ್ರಕರ್ತರನ್ನು ಬೆರಳಿಟ್ಟು ತೋರಿ ಆಕ್ಷೇಪಿಸಿದ್ದರು. ಈ ಪ್ರಸಂಗ ಕೂಡ ಪತ್ರಿಕಾ ಕ್ಷೇತ್ರದಲ್ಲಿ ಭಾರಿ ವಿವಾದಕ್ಕೆ

ಗ್ರಾಸವಾಯಿತು. 'ಸುಭದ್ರಾ ಕಲ್ಯಾಣ' ಗಲ್ಲಾಪೆಟ್ಟಿಗೆಯ ದೃಷ್ಟಿಯಿಂದ ಭಾರಿ ಸೋಲನ್ನಪ್ಪಿತು. ಶಾಸ್ತ್ರಿಗಳು ಎರಡು ವರ್ಷಗಳ ನಂತರ 'ಭಲೇ ಭಟ್ಟ' ಎಂಬ ಯಾರ ಮನಸ್ಸಿನಲ್ಲಿಯೂ ಉಳಿಯದ ಚಿತ್ರವೊಂದನ್ನು ನೀಡಿ ನಿರ್ದೇಶನ ರಂಗದಿಂದ ವಿರಮಿಸಿದರು. ಪ್ರಭಾಕರ ಶಾಸ್ತ್ರಿಗಳು ಸುಲಭರಲ್ಲ. ಅವರಿಂದ ಚಿತ್ರಗಳಿಗೆ ಸಾಹಿತ್ಯ ಬರೆಸುವುದೆಂದರೆ ಪರ್ವತಪ್ರಸವ ಎಂಬ ಮಾತಿತ್ತು. ಆದರೆ ಅವರ ಬರಹಕ್ಕೆ ಶಕ್ತಿಯಿತ್ತು. ಪ್ರಭಾಕರಶಾಸ್ತ್ರಿಗಳು ಎಷ್ಟು ನಿಷ್ಠುರವಾದಿಯೋ ಅಷ್ಟೇ ಸ್ನೇಹಮಯಿ. ರಂಗಭೂಮಿಯಲ್ಲಿ ಹಿರಿದಾದ ಕಾರ್ಯ ನಿರ್ವಹಿಸಿದ್ದರು. ಅಂಥವರು ಚಿತ್ರರಂಗದಿಂದ ನಿರ್ಗಮಿಸಿದ್ದು ವಿಷಾದದ ಸಂಗತಿಯೇ. ಚಾಮುಂಡೇಶ್ವರಿ ಸ್ಟುಡಿಯೋದ ಮಾಲೀಕರಾದ ರಾಮಾನಾಯಿಡು ಅವರು ಸ್ಟುಡಿಯೋದ ಸಾಮರ್ಥ್ಯವನ್ನು ಉದ್ಯಮಕ್ಕೆ ತೋರಿಸಲು ಮತ್ತು ಮುಂದೆ ಕನ್ನಡದಲ್ಲಿ ಚಿತ್ರ ನಿರ್ಮಿಸುವ ಯೋಜನೆಯಿಂದ 'ಸುಭದ್ರಾ ಕಲ್ಯಾಣ' ತಯಾರಿಸಿದರು. ಚಿತ್ರದ ಸೋಲು ಕೇವಲ ಹಣ ಗಳಿಕೆಯ ದೃಷ್ಟಿಯಿಂದಲ್ಲ, ಎಲ್ಲ ರೀತಿಯಿಂದಲೂ ಅಸಮಾಧಾನ ತಂದ ಚಿತ್ರವಾಗಿದ್ದರಿಂದ ಅವರ ಉತ್ಸಾಹವೇ ಉಡುಗಿತು. ಕನ್ನಡ ಚಿತ್ರರಂಗ ಒಬ್ಬ ಶ್ರೀಮಂತ-ಸಮರ್ಥ ನಿರ್ಮಾಪಕನನ್ನು ಕಳೆದುಕೊಂಡಿತು.




(ಚಿತ್ರ ೩) ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ಆರ್.ಎನ್.ಆರ್. ಪ್ರಶಸ್ತಿ ವಿತರಣೆ ಮಾಡಿ, ೧೪ ಪ್ರಶಸ್ತಿ ವಿಜೇತರನ್ನು ಕುರಿತ ಕಿರುಹೊತ್ತಿಗೆಗಳನ್ನು ಬಿಡುಗಡೆ ಮಾಡಿತು. ಇದೇ ಸಂದರ್ಭದಲ್ಲಿ ತೆಲುಗು ನಟ ಎ.ನಾಗೇಶ್ವರರಾವ್ ಅವರಿಂದ ಜಿ.ವಿ.ಅಯ್ಯರ್ ಅವರಿಗೆ ಆರ್.ಎನ್.ಆರ್. ಪ್ರಶಸ್ತಿ ನೀಡಿಕೆ.

'ಗಂಧದ ಗುಡಿ' ಚಿತ್ರ ರಾಜಕುಮಾರ್ ಅವರ ೧೫೦ನೇ ಚಿತ್ರವಾಗಿತ್ತು. ಈ ಸಂದರ್ಭದಲ್ಲಿ ಅದ್ದೂರಿಯಾದ ಸಮಾರಂಭವೊಂದು ಕಂಠೀರವ ಸ್ಟೇಡಿಯಂನಲ್ಲಿ ಏರ್ಪಾಡಾಗಿತ್ತು. ಆ ಅಂತರದಲ್ಲಿ ಬಂದ ಕೆಲವು ಪತ್ರಿಕಾ ಬರಹಗಳ ಬಗ್ಗೆ ರಾಜಕುಮಾರ್ ಅವರು ಬಹಿರಂಗವಾಗಿ ಆಕ್ಷೇಪಿಸಿದರು. ವಜ್ರಮುನಿಯವರೂ ಕಟುವಾಗಿ ಮಾತನಾಡಿದರು.

ಪ್ರೀಮಿಯರ್ ಸ್ಟುಡಿಯೋದಲ್ಲಿ ಕೂಡಾ ಪತ್ರಕರ್ತರ ಬಗ್ಗೆ ಕೆಲವು ಕ್ರೂರ ಅನ್ನಿಸುವಂಥ ಪ್ರಸಂಗಗಳು ನಡೆದಿದ್ದವು. ಈ ಎಲ್ಲ ಪ್ರಸಂಗಗಳೇ ನೇರವಾಗಿ ಕಾರಣವಲ್ಲದೇ ಹೋದರೂ ಚಲನಚಿತ್ರ ಪತ್ರಕರ್ತರು ಸಂಘಟಿತರಾಗುವ ಮೂಲಕ ತಮಗೆ ತಾವೇ ಕೆಲವು ಸಂಹಿತೆಗಳನ್ನು ಹಾಕಿಕೊಳ್ಳುವ, ಸ್ವವಿಮರ್ಶೆಗೆ ಗುರಿಪಡಿಸಿಕೊಳ್ಳುವ, ಉದ್ಯಮದ ವಿಷಯದಲ್ಲೂ ಯಾವುದೇ ತೀರ್ಮಾನವನ್ನು ಒಟ್ಟಾರೆ ತೆಗೆದುಕೊಳ್ಳಬೇಕೆಂಬ ಹಲವಾರು ಕಾರಣಗಳನ್ನು ಗಂಭೀರವಾಗಿ ಪರಿಗಣಿಸಿ 'ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು' ಪ್ರಾರಂಭವಾಯಿತು. ೧೯೭೧ರಲ್ಲೇ ಇಂಥದೊಂದು ಸಂಘಟನೆ ಪ್ರಾರಂಭವಾಗಿದ್ದರೂ ಕ್ರಿಯಾಶೀಲವಾಗಲಿಲ್ಲ. ಈಗ ಪ್ರಾರಂಭವಾದ ಪರಿಷತ್ತು ಸಾಕಷ್ಟು ಗಂಭೀರವಾದ ಕೆಲಸಗಳನ್ನು ಮಾಡಿತು. ಇದೇ ಸಮಯದಲ್ಲೇ ಪ್ರಜಾವಾಣಿ ಸಾಪ್ತಾಹಿಕ ಪುರವಣಿಯ ಸಂಪಾದಕರಾಗಿದ್ದ ಬಿ.ವಿ.ವೈಕುಂಠರಾಜು ಅವರು 'ಕರ್ನಾಟಕ ಚಲನಚಿತ್ರ ಪತ್ರಕರ್ತರ ಸಂಘ'ವನ್ನು ಪ್ರಾರಂಭಿಸಿದರು. ವರ್ಷದ ಅತ್ಯುತ್ತಮ ಚಲನಚಿತ್ರವನ್ನಾಯ್ದು ವಿಮರ್ಶಕ ಪ್ರಶಸ್ತಿ ಕೊಡುವ ಪರಿಪಾಠ ಪ್ರಾರಂಭಿಸಿತು. ಒಂದೆರಡು ವರ್ಷ ಮಾತ್ರ ಕೆಲಸ ಮಾಡಿತು.

ಅಭಿಪ್ರಾಯ ಭೇದಗಳು ಯಾರನ್ನೂ ಬಿಟ್ಟಿದ್ದಲ್ಲ. ಪತ್ರಕರ್ತರಲ್ಲೂ ಅದು ಸಹಜ. ಇವೆಲ್ಲ ನಡೆದ ಹತ್ತಿಪ್ಪತ್ತು ವರ್ಷಗಳ ನಂತರ ಮತ್ತೆ ಸಂಘಟನೆ ಇಬ್ಭಾಗವಾಗಿ 'ಚಲನಚಿತ್ರ ಪತ್ರಕರ್ತರ ವೇದಿಕೆ'ಯು ಹಿರಿಯ ಪತ್ರಕರ್ತ ವಿ.ಎನ್.ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. (ನೋಡಿ : 'ಪತ್ರಿಕೋದ್ಯಮ' ಲೇಖನ)

ಚಿತ್ರೋದ್ಯಮದ ಒಳಗಿದ್ದವರ ನಡುವೆಯೇ ಇದ್ದ ವೈಮನಸ್ಸುಗಳು ಕೂಡ ಕೆಲವು ಘಟನೆಗಳ ಮೂಲಕ ಈ ದಶಕದಲ್ಲಿ ಬೆಳಕಿಗೆ ಬಂದದ್ದುಂಟು. ಉದ್ಯಮ ಬೆಳೆಯುತ್ತ ಹೋದಂತೆ ಅದರೊಳಗಿನ ಸಾಮರಸ್ಯಕ್ಕೆ ಕೂಡ ಭಂಗ ಬಂದು ಕೆಲವು ಸೃಜನಾತ್ಮಕ ಪ್ರತಿಭೆಗಳು ಒಟ್ಟಿಗೇ ಸೇರಿ ಇನ್ನೂ ಉತ್ತಮ ಮೌಲ್ಯದ ಚಿತ್ರಗಳನ್ನು ನಿರ್ಮಿಸಲು ಸಾಧ್ಯವಾಗಲಿಲ್ಲ. ಇಂತಹ ಪ್ರತಿಭಾವಂತರ ವೈಯಕ್ತಿಕ ಪ್ರತಿಷ್ಠೆಗಳು ಪರಸ್ಪರ ಸಹಕಾರ ಸಾಧ್ಯವಾಗದಂತೆ ಮಾಡಿದ್ದೂ ಹೌದು. ಇಂತಹ ಗುಲ್ಲುಗಳಿಗೆ ಬಹಿರಂಗವಾಗಿ ಸಮರ್ಥನೆ ಸಿಕ್ಕಿದ ಪ್ರಸಂಗವೊಂದು ೧೯೭೪ರಲ್ಲಿ ನಡೆಯಿತು. ಆ ವೇಳೆಗಾಗಲೇ ಪುಟ್ಟಣ್ಣ ಕಣಗಾಲ್ ಮತ್ತು ಕಲ್ಪನಾ ಕನ್ನಡ ಚಿತ್ರರಂಗದ ಮೈಲಿಗಲ್ಲೆನಿಸುವ ಕೆಲವು ಚಿತ್ರಗಳಲ್ಲಿ ಒಟ್ಟಾಗಿ ಕೆಲಸ ಮಾಡಿ ಜನ ಮೆಚ್ಚುವ ಜೋಡಿಯೆನಿಸಿದ್ದರು. ಪುಟ್ಟಣ್ಣ ಮತ್ತು ರಾಜಕುಮಾರ್‌ರಂತಹ ಪ್ರತಿಭಾವಂತರು ಇನ್ನೂ ಹೆಚ್ಚು ಚಿತ್ರಗಳಲ್ಲಿ ಬೆರೆತು ಕೆಲಸ ಮಾಡಬೇಕೆಂಬ ಚಿತ್ರಪ್ರೇಮಿಗಳ ಬಯಕೆ 'ಸಾಕ್ಷಾತ್ಕಾರ'ದಲ್ಲಿ ಸ್ವಲ್ಪಮಟ್ಟಿಗೆ ಈಡೇರಿದ್ದರೂ ಆ ಚಿತ್ರ ಆರ್ಥಿಕವಾಗಿ ಕೂಡ ಭಾರಿ ಸೋಲನ್ನನುಭವಿಸಿತ್ತು. ಚಿತ್ರಗಳಲ್ಲಿ ಕಲ್ಪನಾ ಮತ್ತು ರಾಜಕುಮಾರ್ ಒಟ್ಟಿಗೆ ಯಾಕೆ ಅಭಿನಯಿಸುತ್ತಿಲ್ಲ ಎನ್ನುವುದು ಕೂಡ ಅಂದಿನ ಪತ್ರಿಕೆಗಳಲ್ಲಿ ಒಂದು ದೊಡ್ಡ ಪ್ರಶ್ನೆಯಾಗಿತ್ತು.

'ಭಲೇ ಹುಚ್ಚ' ಚಿತ್ರದ ಶತದಿನೋತ್ಸವ ಸಮಾರಂಭದಲ್ಲಿ ಈ ಮೂವರನ್ನು ಮುಖ್ಯ ಅತಿಥಿಗಳನ್ನಾಗಿ ಆಹ್ವಾನಿಸಿದ್ದು ಇಂತಹ ಗುಸುಗುಸುಗಳಿಗೆ ಉತ್ತರ ಹೇಳಲೆಂಬಂತೆಯೇ ಇತ್ತು. ಆ ವೇಳೆಗೆ ಪುಟ್ಟಣ್ಣ ತಮ್ಮ 'ನಾಗರಹಾವು' ಚಿತ್ರದಲ್ಲಿ ಮಾರ್ಗರೆಟ್ ಪಾತ್ರಕ್ಕೆ ಕಲ್ಪನಾರವರನ್ನು ಆರಿಸದ ಬಗ್ಗೆಯೂ ಇದೇ ರೀತಿ ಗುಲ್ಲುಗಳು ಪ್ರಾರಂಭವಾಗಿದ್ದವು. ಈ ಎಲ್ಲ ಗುಲ್ಲುಗಳೂ ಬಹಿರಂಗವಾಗಿ ವಿಶ್ಲೇಷಣೆಗೆ ಬಂದಿದ್ದರಿಂದ ಇದೊಂದು ವಿಶೇಷ ಸಂದರ್ಭವೆನಿಸಿತು. ಅದುವರೆಗೆ ರಾಜಕುಮಾರ್ ಅಭಿನಯಿಸಿದ ಮೂರು ಚಿತ್ರಗಳನ್ನು ಪುಟ್ಟಣ್ಣ ನಿರ್ದೇಶಿಸಿದ್ದರು. ಆದರೆ ತಾವು ನಿರ್ದೇಶಿಸುವ ಎಲ್ಲ ಚಿತ್ರಗಳಿಗೂ ಅವರ ಕಾಲ್‌ಷೀಟ್‌ಗೆ ಕಾಯ್ದರೆ ತಮ್ಮ ಜೀವನ ನಡೆಯುವುದು ಹೇಗೆ ಎಂದು ಅವರು ಆ ಸಮಾರಂಭದಲ್ಲಿ ಮುಕ್ತವಾಗಿ ಕೇಳಿದ ಪ್ರಶ್ನೆ. 'ನಾಗರಹಾವು' ನಾಯಕ ರಾಜಕುಮಾರ್ ಆಗಿದ್ದರೆ ಆ ಪಾತ್ರದಲ್ಲಿ ಪ್ರೇಕ್ಷಕರು ರಾಜಕುಮಾರ್‌ನನ್ನೇ ಕಾಣುತ್ತಿದ್ದರೇ ವಿನಾ ರಾಮಾಚಾರಿಯನ್ನಲ್ಲ ಎಂಬುದು ಅವರ ವಾದ. ಮಾರ್ಗರೆಟ್ ಪಾತ್ರಕ್ಕೆ ಕಲ್ಪನಾ ಸರಿ ಹೊಂದುತ್ತಿರಲಿಲ್ಲವಾದ್ದರಿಂದ ಅಕೆಯನ್ನೂ ಆ ಚಿತ್ರದಿಂದ ಕೈ ಬಿಟ್ಟಿದ್ದಾಗಿ ವಿವರಣೆ ಕೊಟ್ಟರು.

ಇಷ್ಟೆಲ್ಲಾ ಹೇಳಿದ ನಂತರ ಪುಟ್ಟಣ್ಣನವರು ರಾಜಕುಮಾರ್ ಹೆಸರನ್ನು ದುರುಪಯೋಗಪಡಿಸುವ ನಿರ್ಮಾಪಕರನ್ನು ತರಾಟೆಗೆ ತೆಗೆದುಕೊಂಡರು. ''ನಿರ್ಮಾಪಕರು ರಾಜಕುಮಾರ್ ಚಿತ್ರಗಳನ್ನು ತಯಾರಿಸುವುದು ಕಲೆಗಾಗಿ ಎಂದು ಹೇಳಿದರೆ ಅದು ಶುದ್ಧ ಹಿಪಾಕ್ರಸಿ. ಅದು ದುಡ್ಡಿಗೆ'' ಎಂದು ದಬಾಯಿಸಿದರು. ಮೇರೆ ಮೀರಿದ ವ್ಯಕ್ತಿಪೂಜೆ ತಮಗೆಂದೂ ಇಷ್ಟವಿಲ್ಲವೆಂದರು. 'ಬಂಗಾರದ ಮನುಷ್ಯ' ಎರಡು ವರ್ಷ ಒಂದೇ ಚಿತ್ರಮಂದಿರದಲ್ಲಿ ಸತತವಾಗಿ ಪ್ರದರ್ಶಿತವಾಗಿದ್ದನ್ನು ದೈವದತ್ತ ಎಂದು ವರ್ಣಿಸಿದರು.

ಇದೇ ಸಮಾರಂಭದಲ್ಲಿ ರಾಜಕುಮಾರ್ ಹೇಳಿದ್ದು : ''ರಾಜಕುಮಾರ್ ಅಭಿನಯ ಚೆನ್ನಾಗಿದೆಯೆಂದು ರಾಜಕುಮಾರ್ ಅವರೇ ಒಪ್ಪಿಕೊಂಡಿಲ್ಲ, ಜನತೆ ಒಪ್ಪಿಕೊಂಡಿದೆ ಅಷ್ಟೆ. ರಾಜಕುಮಾರ್‌ನನ್ನು ಮೀರಿಸುವಂಥ ಕಲಾವಿದರು ಬರಬೇಕೂಂತ ನನ್ನ ಆಸೆ.''

'ಭಲೇ ಹುಚ್ಚ' ಸಮಾರಂಭದಲ್ಲಿ ಭಾಗವಹಿಸಿದ್ದ ವಾಟಾಳ್ ನಾಗರಾಜ್ ಅವರೂ ಸಹ ಅಬ್ಕಾರಿ ಕಂಟ್ರಾಕ್ಟರುಗಳೆಲ್ಲಾ ಸಿನಿಮಾ ಮಾಡಿದರೆ ಸಂಸ್ಕೃತಿ ಎಲ್ಲಿ ಮೂಡುತ್ತೆ ಎಂತ ಟೀಕಿಸಿ ಮಾತನಾಡಿದ್ದರು. ಇವೆಲ್ಲಕ್ಕಿಂತ ಮಿಗಿಲಾದ ಸಂಗತಿಯೆಂದರೆ ತಾರಾಪಟ್ಟದ ಉತ್ತುಂಗದಲ್ಲಿದ್ದ ಕಲ್ಪನಾ ಅವರು ಕಾರ್ಯಕ್ರಮವನ್ನು ನಿರೂಪಿಸಲು ಒಪ್ಪಿದ್ದು ಮತ್ತು ಯಾವುದೇ ವೃತ್ತಿನಿರತ ನಿರೂಪಕರನ್ನೂ ಮೀರಿಸುವ ಹಾಗೆ ಸಂದರ್ಭಕ್ಕೆ ತಕ್ಕ ಸಂಸ್ಕೃತ ಶ್ಲೋಕಗಳು, ನುಡಿಗಟ್ಟುಗಳನ್ನು ಬಳಸಿ ಕಾರ್ಯಕ್ರಮ ನಿರೂಪಿಸಿದ್ದು ಉದ್ಯಮ, ಮಾಧ್ಯಮಗಳಲ್ಲಿ ಮೆಚ್ಚುಗೆ ಪಡೆಯಿತು.

ಇದಾದ ಕೆಲವು ತಿಂಗಳ ನಂತರ ಆ ವರ್ಷ ದಕ್ಷಿಣ ಭಾರತ ಚಿತ್ರರಂಗದ ಅತ್ಯುತ್ತಮ ನಿರ್ದೇಶಕನೆಂದು ನಿರ್ದೇಶಕರ ಸಂಘದಿಂದ ಆಯ್ಕೆಯಾದ ಪುಟ್ಟಣ್ಣ ಮಾಸ್ಕೋದಲ್ಲಿ ನಡೆದ ಚಲನಚಿತ್ರೋತ್ಸವವೊಂದರಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಲು ತೆರಳಿದರು. ಮದರಾಸಿನ ವಿಮಾನ ನಿಲ್ದಾಣದಲ್ಲಿ ಅವರನ್ನು ಬೀಳ್ಕೊಡಲು ಹೋದ ಉದ್ಯಮದವರಲ್ಲಿ ರಾಜಕುಮಾರ್ ಪ್ರಮುಖವಾಗಿ ಕಂಡರು. ಕಲ್ಮಶವಿಲ್ಲದ ಮನಸ್ಸುಗಳಿದ್ದ ಕಾಲವದು.

ರಾಜಕುಮಾರ್‌ರನ್ನು ಆ ಘಟ್ಟದಲ್ಲಿ ಜನಪ್ರಿಯತೆಯ ಉತ್ತುಂಗಕ್ಕೆ ಕೊಂಡೊಯ್ದ 'ಬಂಗಾರದ ಮನುಷ್ಯ' ಬೆಂಗಳೂರಿನ ಸ್ಟೇಟ್ಸ್ ಚಿತ್ರಮಂದಿರದಲ್ಲಿ ಸತತವಾಗಿ ಎರಡು ವರ್ಷಗಳು ಪ್ರದರ್ಶನಗೊಂಡಿದ್ದು ಸುಗಮವಾಗಿಯೇನೂ ಅಲ್ಲ. ಈ ಚಿತ್ರ ಆ ಚಿತ್ರಮಂದಿರದಲ್ಲಿ ೫೨ ವಾರಗಳು ಪ್ರದರ್ಶಿತವಾದ ಕೂಡಲೇ ಸ್ಟೇಟ್ಸ್‌ನ ಆಡಳಿತ ವರ್ಗ ಚಿತ್ರ ಗಳಿಕೆ ಕಡಿಮೆಯಾಗುತ್ತಿದೆಯೆಂಬ ಕಾರಣ ಹೇಳಿ ಅದರ ಪ್ರದರ್ಶನವನ್ನು ಅಷ್ಟಕ್ಕೇ ನಿಲ್ಲಿಸಲು ನಿರ್ಧರಿಸಿ ಮುಂದಿನ ಚಿತ್ರದ ಜಾಹಿರಾತುಗಳೂ ಪತ್ರಿಕೆಗಳಲ್ಲಿ ಪ್ರಕಟವಾದಾಗ ಪ್ರೇಕ್ಷಕರು ಕ್ರುದ್ಧರಾಗಿ ಪ್ರತಿಭಟಿಸಿದರು. ಚಿತ್ರಮಂದಿರಕ್ಕೆ ಕಲ್ಲು ತೂರಾಟವಾಯಿತು, ಭಾರಿ ಗಲಭೆಯೂ ಆಗಿ ಪೊಲೀಸರಿಂದ ಲಾಠಿಪ್ರಹಾರವೂ ನಡೆಯಿತು. ಕೆಂಪೇಗೌಡ ರಸ್ತೆಯಲ್ಲಿ ಆಸುಪಾಸಿನಲ್ಲಿ ಓಡಾಡುತ್ತಿದ್ದ ಹತ್ತಾರು ವಾಹನಗಳಿಗೆ ಜಖಂ ಆಯಿತು. ಆಗ ಶಾಸಕರಾಗಿದ್ದು ಚಿತ್ರೋದ್ಯಮದಲ್ಲಿ ಭಾರಿ ಆಸಕ್ತಿಯಿಟ್ಟಿದ್ದ ಎಸ್.ಬಂಗಾರಪ್ಪನವರು ಮಧ್ಯೆ ಪ್ರವೇಶಿಸಿದ ನಂತರ ಚಿತ್ರಮಂದಿರದ ಆಡಳಿತ ವರ್ಗ ಚಿತ್ರದ ಪ್ರದರ್ಶನವನ್ನು ಮುಂದುವರಿಸಿತು. ಇಲ್ಲದಿದ್ದರೆ ದೊಡ್ಡ ಅನಾಹುತವೇ ನಡೆದು ಹೋಗುತ್ತಿತ್ತು. ಆದರೆ 'ಬಂಗಾರದ ಮನುಷ್ಯ' ಅದೇ ಚಿತ್ರಮಂದಿರದಲ್ಲಿ ಇನ್ನೊಂದು ವರ್ಷ ಯಶಸ್ವಿಯಾಗಿ ಪ್ರದರ್ಶಿತವಾಗಿ ಫೆಬ್ರವರಿ ೧೯೭೪ರಲ್ಲಿ ಒಂದೇ ಚಿತ್ರಮಂದಿರದಲ್ಲಿ ಎರಡು ವರ್ಷ ನಡೆದ ಹೊಸ ದಾಖಲೆ ಸ್ಥಾಪಿಸಿತು.

ಆ ದಶಕದಲ್ಲಿ ನಡೆದ ಇನ್ನೊಂದು ವಿವಾದ ರಾಜಕುಮಾರ್‌ರವರ ಮಧ್ಯಸ್ಥಿಕೆಯಿಂದ ಪರಿಹಾರವಾಯಿತು. ತಾವು ತಮಿಳಿನಲ್ಲಿ ನಿರ್ಮಿಸಿದ್ದ 'ಸಂದನಕಾಡು' ಚಿತ್ರವನ್ನು ಕದ್ದು ನಟ-ನಿರ್ಮಾಪಕ ಎಂ.ಪಿ.ಶಂಕರ್ ತಮ್ಮ 'ಗಂಧದಗುಡಿ'ಯನ್ನು ತಯಾರಿಸುತ್ತಿದ್ದಾರೆಂದು ಆಪಾದಿಸಿದ ಈಶ್ ಈ ವಿಷಯವಲ್ಲಿ ಉಪವಾಸ ಮುಷ್ಕರವನ್ನು ಹೂಡಿದರು. ಆದರೆ ಈ ಆರೋಪವನ್ನು ಸಂಪೂರ್ಣವಾಗಿ ತಳ್ಳಿ ಹಾಕಿದ ಶಂಕರ್ ಏನೇ ಆದರೂ ಚಿತ್ರದ ಷೂಟಿಂಗ್ ನಿಲ್ಲಿಸುವುದಿಲ್ಲವೆಂದು ಹಠ ಹಿಡಿದರು. 'ಗಂಧದಗುಡಿ'ಯ ನಾಯಕ ನಟರೂ ಹಾಗೂ ಶಂಕರ್‌ರವರ ಹಿತೈಷಿಗಳೂ ಆಗಿದ್ದ ರಾಜಕುಮಾರ್ ಮಧ್ಯೆ ಪ್ರವೇಶಿಸಿ ಈ ಬಿಕ್ಕಟ್ಟಿನ ನಿವಾರಣೆಗೆ ಕಾರಣರಾದರು.

೧೯೭೩ರಲ್ಲಿ 'ಗಂಧದಗುಡಿ' ತನ್ನ ಶತದಿನೋತ್ಸವವನ್ನು ವೈಭವದಿಂದ ಆಚರಿಸಿಕೊಂಡಿತು. ಆ ದಶಕದ ಜನಪ್ರಿಯ ಚಿತ್ರಗಳಲ್ಲಿ ಒಂದೆನಿಸಿದ ಅದು ಸಮಾರಂಭದ ಮುಖ್ಯ ಅತಿಥಿಯಾಗಿದ್ದ ಅಂದಿನ ಕೈಗಾರಿಕಾ ಸಚಿವ ಎಸ್.ಎಂ.ಕೃಷ್ಣರ ಪ್ರಶಂಸೆಗೆ ಪಾತ್ರವಾಯಿತು. ''ಹಿಂದೊಮ್ಮೆ ಇತರ ಭಾಷಾ ಚಿತ್ರಗಳಿಗೆ ನಮ್ಮ ಚಿತ್ರಗಳನ್ನು ಹೋಲಿಸಿಕೊಂಡು ನಾಚಿಕೊಳ್ಳುತ್ತಿದ್ದೆವು. ಈಗ ನಮ್ಮ ಚಿತ್ರಗಳನ್ನು ಅವುಗಳಿಗೆ ಹೋಲಿಸಿದಾಗ ಅವು ನಾಚುವ ಪರಿಸ್ಥಿತಿ ಬಂದಿದೆ'' ಎಂದು ಕೃಷ್ಣ ಹೇಳಿದರು. ಸಿದ್ಧತೆ, ಸಮಾರಂಭ ಇತ್ಯಾದಿಗಳನ್ನು ಚಿತ್ರೀಕರಿಸಿಕೊಂಡು ಚಿತ್ರ ಪ್ರದರ್ಶನದ ಮಧ್ಯೆ ಸೇರಿಸಿ ಪ್ರದರ್ಶಿಸಿದ್ದೊಂದು ಪ್ರತ್ಯೇಕ ಆಕರ್ಷಣೆಯಾಗಿತ್ತು. ಆಗಿನ್ನೂ ಸಹನಿರ್ದೇಶಕರಾಗಿದ್ದ ಭಾರ್ಗವ ಈ ಚಿತ್ರೀಕೃತ ಭಾಗವನ್ನು ಸೊಗಸಾಗಿ ಸಂಯೋಜಿಸಿದ್ದರು ಮತ್ತು ಆಗ ಆಕಾಶವಾಣಿಯಲ್ಲಿ ಈರಣ್ಣನೆಂದೇ ಜನಪ್ರಿಯವಾಗಿದ್ದ ಎ.ಎಸ್.ಮೂರ್ತಿಯವರ ಕಂಚು ಕಂಠದ ನಿರೂಪಣೆ ಕೂಡಾ ಆಕರ್ಷಣೆಯ ಸಂಗತಿಯಾಗಿತ್ತು. ಇದೆಲ್ಲ ಚಿತ್ರಕ್ಕೆ ಮತ್ತಷ್ಟು ಹೊಸ ಪ್ರೇಕ್ಷಕರನ್ನು ಕರೆತಂದವು.

ಫೆಬ್ರವರಿ ೧೯೭೫ರಲ್ಲಿ ರಾಜಕುಮಾರ್ ಮತ್ತು ಪ್ರೀಮಿಯರ್ ಸ್ಟುಡಿಯೋ ಮಾಲೀಕ ಬಸವರಾಜಯ್ಯನವರ ನಡುವೆ ಎರಡು ವರ್ಷಗಳಿಂದ ಎದ್ದಿದ್ದ ವಿರಸ ಅಂತ್ಯಗೊಂಡಿತು. ''ನಾವೆಲ್ಲ ಹಳೆಯ ದುರ್ಘಟನೆಗಳನ್ನು ಮರೆತಿದ್ದೇವೆ'' ಎಂದು ಬಸವರಾಜಯ್ಯನವರು ಘೋಷಿಸಿದರೆ ರಾಜಕುಮಾರ್ ಇನ್ನು ಮುಂದೆ ಮೈಸೂರಿನ ಆ ಸ್ಟುಡಿಯೋದಲ್ಲಿ ತಮ್ಮ ಚಿತ್ರಗಳ ಷೂಟಿಂಗ್ ನಡೆಯಲು ತಮಗೇನೂ ಅಭ್ಯಂತರವಿಲ್ಲವೆಂದು ಪ್ರಕಟಿಸಿದರು. ರಾಜಕುಮಾರ್ ಹೊರಾಂಗಣ ಚಿತ್ರಣಕ್ಕೆ ಮಾತ್ರ ಬರುತ್ತಿದ್ದರು. ಅನೇಕ ತಿಂಗಳ ನಂತರ ರಾಜಕುಮಾರ್ ಚಿತ್ರಣಕ್ಕಾಗಿ ಕರ್ನಾಟಕಕ್ಕೆ ವಾಪಸಾದಂತಾಯಿತು.

ಈ ಅವಧಿಯಲ್ಲಿ ಬೆಂಗಳೂರು ಮತ್ತು ಮೈಸೂರು ಸ್ಟುಡಿಯೋಗಳಲ್ಲಿ ಚಿತ್ರಣ ಕಾರ್ಯ ಕುಂಠಿತವಾಗಿದ್ದು ಸರ್ಕಾರ ರಾಜ್ಯದಲ್ಲಿಯೇ ಕನ್ನಡ ಚಿತ್ರರಂಗದ ಚಟುವಟಿಕೆಗಳು ಕೇಂದ್ರೀಕೃತವಾಗಬೇಕೆಂಬ ದೃಷ್ಟಿಯಿಂದ ಇಲ್ಲಿ ಉದ್ಯಮದ ಬೆಳವಣಿಗೆಗೆ ನಾನಾ ರಿಯಾಯಿತಿ ಮತ್ತು ಸವಲತ್ತುಗಳನ್ನು ನೀಡಿದ್ದರೂ ಕೆಲವು ಬಲಶಾಲಿ ನಿರ್ಮಾತೃಗಳು ಮತ್ತು ಕಲಾವಿದರು ಮತ್ತೆ ಮದರಾಸಿನ ಬಗ್ಗೆಯೇ ತಮ್ಮ



(ಚಿತ್ರ ೪) ಮಾಸ್ಕೋ ಚಿತ್ರೋತ್ಸವದಲ್ಲಿ ಭಾಗವಹಿಸಿದ್ದ ಪ್ರತಿನಿಧಿಗಳೊಡನೆ ಪುಟ್ಟಣ್ಣ (ಕೊನೆಯಲ್ಲಿ ನಿಂತಿರುವವರು).

ಒಲವನ್ನು ತಳೆದಿರುವುದು, ಅವಸಾನ ಸ್ಥಿತಿಗೆ ಬರುತ್ತಿದ್ದ ರಾಜ್ಯದಲ್ಲಿನ ಸ್ಟುಡಿಯೋಗಳ ಬಗ್ಗೆ ಸ್ವಲ್ಪವೂ ಕಾಳಜಿಯನ್ನು ತೋರದಿರುವುದು ಅಸಮರ್ಥನೀಯವೆಂದು ಸರ್ಕಾರದ ಕೆಲವು ಹಿರಿಯ ಮಂತ್ರಿಗಳೂ ಟೀಕಿಸಲು ಪ್ರಾರಂಭಿಸಿದರು. ಇದೇ ಸಮಯದಲ್ಲಿ ಅವರು ಉದ್ಯಮದಲ್ಲಿ ತಲೆಯೆತ್ತುತ್ತಿದ್ದ 'ಏಕಸ್ವಾಮ್ಯ' ಮನೋಭಾವವನ್ನು ಖಂಡಿಸಿದರು. ಆದರೆ ತಾವು ಕರ್ನಾಟಕದಲ್ಲಿ ಎಲ್ಲಿ ಬೇಕಾದರೂ ಷೂಟಿಂಗ್‌ಗೆ ಬರಲು ಸಿದ್ಧವೆಂದು ರಾಜಕುಮಾರ್ ಹೇಳುತ್ತಲೇ ಬಂದರು. ಈ ಹಿನ್ನೆಲೆಯಲ್ಲಿ ಅವರ ಮತ್ತು ಬಸವರಾಜಯ್ಯನವರ ನಡುವೆ ತಲೆದೋರಿದ್ದ ವಿರಸ ಅಂತ್ಯಗೊಂಡಿದ್ದು ಒಳ್ಳೆಯದೇ ಆಯಿತು.

ಈ ದಶಕದಲ್ಲಿ ಕನ್ನಡ ಚಿತ್ರರಂಗವನ್ನು ಪ್ರಬಲವಾಗಿ ಕಲಕಿದ ಇನ್ನೊಂದು ಪ್ರಮುಖ ವಿವಾದ ಪುಟ್ಟಣ್ಣನವರ 'ನಾಗರಹಾವು' ಚಿತ್ರ ಹಾಗೂ ಕಾದಂಬರಿಕಾರರಿಗೆ ಸಂಬಂಧಿಸಿದ್ದು. ಎನ್.ವೀರಾಸ್ವಾಮಿ ನಿರ್ಮಿಸಿ, ಪುಟ್ಟಣ್ಣ ನಿರ್ದೇಶಿಸಿದ ಚಿತ್ರ ಇದು. ಚಿತ್ರದ ನಾಯಕನ ಪಾತ್ರಕ್ಕೆ 'ವಂಶವೃಕ್ಷ'ದ ಕೊನೆಯ ದೃಶ್ಯವೊಂದರಲ್ಲಿ ಮಾತ್ರ ಕಾಣಿಸಿಕೊಂಡರೂ ಪ್ರೇಕ್ಷಕರಿಗೆ ತನ್ನ ವಿಶಿಷ್ಟ ವ್ಯಕ್ತಿತ್ವದಿಂದ ಮೋಡಿ ಹಾಕಿದ ಕುಮಾರ್ ಎಂಬ ಯುವಕನನ್ನು ಆಯ್ದು, ಆತನಿಗೆ ವಿಷ್ಣುವರ್ಧನ್ ಎಂಬ ಹೊಸ ಹೆಸರನ್ನು ಕೊಟ್ಟು ಸುದ್ದಿ ಮಾಡಿದ್ದ ಪುಟ್ಟಣ್ಣ ಕಣಗಾಲ್ ತ.ರಾ.ಸು. ಕಾದಂಬರಿಯ ಆಧಾರದ ಮೇಲೆ ಈ ಚಿತ್ರವನ್ನು ನಿರ್ದೇಶಿಸಲು ಹೊರಟಾಗ ಚಿತ್ರದ ಬಗ್ಗೆ ಉದ್ಯಮದಲ್ಲಿ, ಪ್ರೇಕ್ಷಕರಲ್ಲಿ ತುಂಬಾ ಕುತೂಹಲವೇ ಹುಟ್ಟಿತ್ತು. ಚಿತ್ರದುರ್ಗದ ಚಾರಿತ್ರಿಕ ಕೋಟೆಯಲ್ಲಿ ಚಿತ್ರಣಕ್ಕೆ ಅನುಮತಿಯನ್ನು ನಿರಾಕರಿಸಿದ್ದ ಕೇಂದ್ರ ಸರ್ಕಾರ ಕೊನೆಗೂ ಕೆಲವು ಪ್ರಭಾವಶಾಲಿ ರಾಜಕಾರಣಿಗಳ ಹಸ್ತಕ್ಷೇಪದಿಂದ ಅನುಮತಿಯನ್ನು ನೀಡಿದ್ದು ಚಿತ್ರದ ಬಗ್ಗೆ ಪ್ರಚಾರವನ್ನು ದ್ವಿಗುಣಗೊಳಿಸಿತ್ತು. ಇದು ಕನ್ನಡ ಚಿತ್ರರಂಗದ ಪ್ರಮುಖ ಚಿತ್ರಗಳಲ್ಲೊಂದೆನಿಸುವ ಸೂಚನೆಗಳೂ ಇದ್ದವು.

ತ.ರಾ.ಸು. ಅವರಿಗೆ ನಿರ್ಮಾತೃ ವೀರಾಸ್ವಾಮಿ ಕೊಟ್ಟಿದ್ದ ಗೌರವಧನ ಅದುವರೆಗೆ ಕನ್ನಡ ಲೇಖಕರೊಬ್ಬರಿಗೆ ನಿರ್ಮಾಪಕರು ಕೊಟ್ಟ ಅತಿ ದೊಡ್ಡ ಮೊತ್ತವಾಗಿತ್ತು. ತ.ರಾ.ಸು. ರವರ ಪುಸ್ತಕವನ್ನು ಹಲವು ಪಟ್ಟು ಹೆಚ್ಚು ಜನರು ಓದುವಂತಾಯಿತು. ಆದರೆ ಚಿತ್ರಮಾಧ್ಯಮಕ್ಕೆಂದು ಪುಟ್ಟಣ್ಣ ಮಾಡಿಕೊಂಡಿದ್ದ ಬದಲಾವಣೆಗಳನ್ನು ಒಪ್ಪದ ತ.ರಾ.ಸು. "ನಾನು ಬರೆದಿದ್ದು 'ನಾಗರಹಾವು', ಆದರೆ ಪುಟ್ಟಣ್ಣ ಮಾಡಿದುದು ಕೇರೆಹಾವು. ಚಿತ್ರದಲ್ಲಿ ಮೂಲಕಥೆಗೆ ಸಂಪೂರ್ಣವಾಗಿ ಮಾನಭಂಗವಾಯಿತು, ಚಿತ್ರ ಅದ್ದೂರಿಯಾಗಿದ್ದರೂ ಕಾದಂಬರಿಯ ಕೊಲೆ ಆಯಿತು, ಅವರ ಚಿತ್ರದ ಒಂದು ಪಾತ್ರವೂ ಮೂಲಕಥೆಯಲ್ಲಿನ ಪಾತ್ರದಂತಿಲ್ಲ. ಸನ್ನಿವೇಶಗಳು, ಸಂಭಾಷಣೆಗಳು ನನ್ನ ಸಾಹಿತ್ಯ ಕೃತಿಗೆ ದ್ರೋಹ ತಂದಿವೆ. ರಾಮಾಚಾರಿ ಪಾತ್ರವೇ ಒಂದು ಅಪಭ್ರಂಶವಾಯಿತು" ಎಂದರು. ಈ ಬಗ್ಗೆ ಪತ್ರಿಕೆಗಳಲ್ಲಿ, ಉದ್ಯಮದಲ್ಲಿ ಹೇಳಿಕೆ, ಮರುಹೇಳಿಕೆಗಳ ಸಮರವೇ ನಡೆಯಿತು.



(ಚಿತ್ರ ೫) ಬೈಲೋರಷ್ಯಾದಲ್ಲಿ ನಡೆದ ಕನ್ನಡ ಚಿತ್ರೋತ್ಸವಕ್ಕೆ ತೆರಳಿದ ಕನ್ನಡ ನಿಯೋಗದ ಸದಸ್ಯೆ ಕಲ್ಪನಾ ಅವರಿಗೆ ಪುಟ್ಟಣ್ಣನವರಿಂದ ಆತ್ಮೀಯ ಬೀಳ್ಕೊಡುಗೆ.

ಆದರೆ ಮುಂದೆ 'ನಾಗರಹಾವು' ರಜತ ಮಹೋತ್ಸವ ಸಮಾರಂಭದಲ್ಲಿ ತ.ರಾ.ಸು. ಭಾಗವಹಿಸಿ ನಿರ್ಮಾಪಕರ ಬಗ್ಗೆ ತಮಗೆ ಯಾವ ಶತ್ರುತ್ವವೂ ಇಲ್ಲವೆಂದು ಬಹಿರಂಗವಾಗಿಯೇ ಸ್ಪಷ್ಟಪಡಿಸಿದರು. ಸಾಹಿತಿ-ಚಿತ್ರ ಮಾಧ್ಯಮದ ನಡುವೆ ಇದೊಂದು ನಿರಂತರ ತಿಕ್ಕಾಟ. ಸಾಹಿತಿಗಳು ಸೃಷ್ಟಿಸಿದ ಈ ವಿವಾದಗಳೇನೇ ಇರಲಿ, ಚಿತ್ರದ ನಾಯಕ ವಿಷ್ಣುವರ್ಧನ್ ಇಲ್ಲಿಂದ ಮುಂದೆ ಕನ್ನಡ ಚಿತ್ರರಂಗದ ಪ್ರಥಮಶ್ರೇಣಿಯ ನಾಯಕರಲ್ಲೊಬ್ಬರಾಗಿ ಪ್ರತಿಷ್ಠಾಪಿತರಾದರು.

ಆದರೆ ಕೇವಲ ವಿವಾದಗಳೇ ಈ ದಶಕದ ಹೆಚ್ಚಳವಾಗಿರಲಿಲ್ಲ. ಹೊಸ ಅಲೆಯ ಚಿತ್ರಗಳೆಂಬ ಹಣೆಪಟ್ಟಿ ಹಚ್ಚಿಕೊಂಡ ಅನೇಕ ಚಿತ್ರಗಳು ಹಾಗೂ ವ್ಯಾಪಾರಿ ಚೌಕಟ್ಟಿನಲ್ಲಿಯೇ ತಯಾರಾದ ಕೆಲವು ಉತ್ತಮ ಅಭಿರುಚಿಯ, ಮಧ್ಯಮಾರ್ಗದ ಚಿತ್ರಗಳು ತೆರೆಗೆ ಬಂದ ದಶಕವಿದು. ಹಾಗೆಯೇ ಮದರಾಸಿನಿಂದ ಮೈಸೂರು, ಬೆಂಗಳೂರುಗಳಿಗೆ ತನ್ನ ನೆಲೆಯನ್ನು ಸ್ಥಳಾಂತರಗೊಳಿಸಿಕೊಂಡ ಕನ್ನಡ ಚಿತ್ರರಂಗ ಔದ್ಯಮಿಕವಾಗಿ ಸಹ ಚಲನಚಿತ್ರ ವಾಣಿಜ್ಯ ಮಂಡಳಿಯ ಸತತ ಪ್ರಯತ್ನಗಳ ಮೂಲಕ ಭದ್ರವಾದ ಬುನಾದಿಯನ್ನು ಹಾಕಿಕೊಂಡಿತು. ವಾಣಿಜ್ಯ ಮಂಡಳಿ ತನ್ನ ಅದುವರೆಗಿನ ಇತಿ-ಮಿತಿಗಳನ್ನು ಒಡೆದು ಮುಂದೆ ನುಗ್ಗಿ ನಿರ್ಮಾಣ, ಸ್ವಯಂ ನಿಯಂತ್ರಣ ನೀತಿ ಸಂಹಿತೆಯನ್ನು ಜಾರಿಗೆ ತಂದು ರಾಜ್ಯದ ಇಡೀ ಚಿತ್ರೋದ್ಯಮವನ್ನು ಅಧಿಕಾರವಾಣಿಯಿಂದ ಪ್ರತಿನಿಧಿಸುವ ಮಾತೃಸಂಸ್ಥೆಯಾಗಿ ರೂಪುಗೊಂಡಿದ್ದು ಕೂಡ ಈ ಘಟ್ಟದಲ್ಲಿಯೆ.

೧೯೭೧ರಲ್ಲಿ ಪ್ರಥಮ ಬಾರಿಗೆ ವಿದೇಶವೊಂದರಲ್ಲಿ ಕನ್ನಡ ಚಿತ್ರೋತ್ಸವವೊಂದು ನಡೆಯಿತು. ಭಾರತ-ಸೋವಿಯತ್ ಸಾಂಸ್ಕೃತಿಕ ಸಂಸ್ಥೆಯ ರಾಜ್ಯ ಘಟಕದ ಪ್ರಯತ್ನದಿಂದಾಗಿ ಸೋವಿಯತ್ ಒಕ್ಕೂಟದ ಒಂದು ಪ್ರಾಂತ್ಯವಾಗಿದ್ದ ಬೈಲೋರಷ್ಯಾದ ಸಾಂಸ್ಕೃತಿಕ ನಿಯೋಗವೊಂದು ಬೆಂಗಳೂರಿಗೆ ಭೇಟಿ ನೀಡಿದ್ದಾಗ ಅಲ್ಲಿನ ಕೆಲವು ಚಿತ್ರಗಳ ಉತ್ಸವವೊಂದು ಏರ್ಪಾಡಾಗಿತ್ತು. ಅದೇ ಸಮಯದಲ್ಲಿ ಬೆಂಗಳೂರು ಮತ್ತು ಬೈಲೋರಷ್ಯಾದ ರಾಜಧಾನಿ ಮಿನ್ಸ್ಕ್ ನಗರಗಳನ್ನು ಸೋದರ ನಗರಗಳೆಂದೂ ಘೋಷಿಸಲಾಗಿತ್ತು. ಈ ಬೆಳವಣಿಗೆಗಳ ಫಲಶ್ರುತಿಯಾಗಿ ಬೈಲೋರಷ್ಯಾದಲ್ಲಿ ಕನ್ನಡ ಚಲನಚಿತ್ರೋತ್ಸವವೊಂದು ನಡೆಯಬೇಕೆಂಬ ತೀರ್ಮಾನವೂ ಆಯಿತು. ಈ ಉತ್ಸವಕ್ಕೆ ಕನ್ನಡ ಚಿತ್ರಗಳನ್ನು ಮತ್ತು ಕನ್ನಡ ಚಿತ್ರರಂಗದ ನಿಯೋಗವೊಂದನ್ನು ಆರಿಸುವ ಜವಾಬ್ದಾರಿಯನ್ನು ಭಾರತ-ಸೋವಿಯತ್ ಸಾಂಸ್ಕೃತಿಕ ಸಂಸ್ಥೆಯ ರಾಜ್ಯ ಘಟಕವೇ ವಹಿಸಿಕೊಂಡು ಈ ಬಗ್ಗೆ ಸಮಿತಿಯೊಂದನ್ನು ರಚಿಸಿತು. ಆ ಸಮಿತಿ ಉತ್ಸವದಲ್ಲಿ ಪಾಲ್ಗೊಳ್ಳಲು ಆರಿಸಿದ ಆರು ಚಿತ್ರಗಳು - 'ಸಂಸ್ಕಾರ', 'ಗೆಜ್ಜೆಪೂಜೆ', 'ಸುಬ್ಬಾಶಾಸ್ತ್ರಿ', 'ನಮ್ಮ ಮಕ್ಕಳು', 'ಚಕ್ರತೀರ್ಥ' ಮತ್ತು 'ಉಯ್ಯಾಲೆ'. ಬೈಲೋರಷ್ಯಾದಲ್ಲಿ ಚಿತ್ರಪ್ರೇಮಿಗಳು ಎಂತಹ ಚಿತ್ರಗಳನ್ನು ಪುರಸ್ಕರಿಸುತ್ತಾರೆಂಬ ಅಂದಾಜಿನ ಮೇಲೆ ಆ ಚಿತ್ರಗಳನ್ನು ಆರಿಸಲಾಯಿತು.

ಬೈಲೋರಷ್ಯಾದ ಮಿನ್ಸ್ಕ್ ಮತ್ತಿತರ ಕೆಲವು ಪ್ರಮುಖ ನಗರಗಳಲ್ಲಿ ಈ ಚಿತ್ರಗಳನ್ನು ಪ್ರದರ್ಶಿಸಲು ನಿಯೋಜಿಸಲಾಯಿತು. ಕನ್ನಡ ಚಿತ್ರರಂಗ ಮತ್ತು ಭಾರತ-ಸೋವಿಯತ್ ಸಾಂಸ್ಕೃತಿಕ ಸಂಸ್ಥೆಗಳನ್ನು ಪ್ರತಿನಿಧಿಸುವ ಮೂವರು ಸದಸ್ಯರ ನಿಯೋಗಕ್ಕೆ ಸಾಂಸ್ಕೃತಿಕ ಸಂಸ್ಥೆಯ ರಾಜ್ಯ ಘಟಕದ ಅಧ್ಯಕ್ಷ ಡಾ|ಜಿ.ರಾಮಕೃಷ್ಣ ಅಧ್ಯಕ್ಷರಾಗಿ ಮತ್ತು 'ಗೆಜ್ಜೆಪೂಜೆ', 'ನಮ್ಮ ಮಕ್ಕಳು' ಮತ್ತು 'ಉಯ್ಯಾಲೆ' ಚಿತ್ರಗಳ ನಾಯಕಿ ಕಲ್ಪನಾ ಹಾಗೂ 'ಸುಬ್ಬಾಶಾಸ್ತ್ರಿ' ಚಿತ್ರದ ನಿರ್ದೇಶಕ ಎಂ.ವಿ.ಕೃಷ್ಣಸ್ವಾಮಿ ಸದಸ್ಯರಾಗಿ ಆಯ್ಕೆಯಾದರು. ಉತ್ಸವ ೧೯೭೧ರ ಅಗಸ್ಟ್ ೧೪ರಿಂದ ಒಂದು ವಾರ ಕಾಲ ನಡೆಯಬೇಕೆಂದು ನಿಗದಿಯಾಯಿತು. ನಿಯೋಗ ಬೈಲೋರಷ್ಯಾಗೆ ತೆರಳುವ ಮುಂಚೆ ಬೆಂಗಳೂರಿನಲ್ಲಿ ಸಾರ್ವಜನಿಕ ಸನ್ಮಾನ ಸಮಾರಂಭವೊಂದು ಸಹ ಏರ್ಪಾಡಾಯಿತು. ಅಂದಿನ ಮೇಯರ್ ಜೆ.ಲಿಂಗಯ್ಯನವರ ನೇತೃತ್ವದಲ್ಲಿ ನಿಯೋಗಕ್ಕೆ ಭೋಜನ ಕೂಟವೊಂದನ್ನು ಏರ್ಪಡಿಸಲಾಯಿತು.

ಸೋವಿಯತ್ ಒಕ್ಕೂಟದ ತಾಷ್ಕೆಂಟ್ ಮತ್ತಿತರ ನಗರಗಳಲ್ಲಿ ನಿಯೋಗಕ್ಕೆ ಅದ್ದೂರಿಯ ಸತ್ಕಾರ ಕೂಟಗಳೂ ನಡೆದವು. ವಿಪರ್ಯಾಸವೆಂದರೆ ಉತ್ಸವದಲ್ಲಿ ಪ್ರದರ್ಶಿತವಾದ ಚಿತ್ರಗಳ ಆಯ್ಕೆ ಮಾತ್ರವಲ್ಲದೆ ನಿಯೋಗದ ಸದಸ್ಯರ ಆಯ್ಕೆ ಕೂಡ ವಿವಾದಕ್ಕೆ ತುತ್ತಾದವು. ಚಿತ್ರಗಳಾಗಲಿ, ನಿಯೋಗವಾಗಲಿ ಪ್ರಾತಿನಿಧಿಕವಾಗಿರಲಿಲ್ಲ ಎನ್ನುವುದು ಈ ಟೀಕೆಗಳ ಪ್ರಧಾನ ಪ್ರೇರಣೆ. ಆದರೆ ಬೈಲೋರಷ್ಯಾದಲ್ಲಂತೂ ಈ ಎಲ್ಲ ಚಿತ್ರಗಳೂ ಜನಪ್ರಿಯವಾಗಿ ಪ್ರದರ್ಶಿತವಾದವು.

ಆ ವೇಳೆಗಾಗಲೇ ರಾಜಕಪೂರ್ ಸೋವಿಯತ್ ಒಕ್ಕೂಟದ ಉದ್ದಗಲ ಪ್ರಚಂಡ ಜನಪ್ರಿಯತೆ ಪಡೆಯುವುದರ ಜೊತೆಗೆ ಭಾರತೀಯ ಸ್ತ್ರೀಯರ ಬಗ್ಗೆ ರಷ್ಯನ್ನರಿಗೆ

ಅಪಾರವಾದ ವಿಶ್ವಾಸ, ಗೌರವಗಳೂ ಉಂಟಾಗಿದ್ದವು. ಬೈಲೋರಷ್ಯಾಗೆ ತೆರಳಿದ ಕನ್ನಡ ನಿಯೋಗದ ಸದಸ್ಯರು ಬೆಂಗಳೂರಿಗೆ ವಾಪಸಾದ ನಂತರ ಸ್ಥಳೀಯ ಪತ್ರಿಕೆಗಳಲ್ಲಿ ಸರಣಿಯಾಗಿ ಬರೆದ ವಿಶೇಷ ಲೇಖನಗಳು ಅಲ್ಲಿ ಕನ್ನಡ ಚಿತ್ರಗಳಿಗೆ ಮತ್ತು ತಮಗೆ ಸಿಕ್ಕಿದ ಅತ್ಯಂತ ಸಕಾರಾತ್ಮಕ ಪ್ರತಿಕ್ರಿಯೆಯ ಬಗ್ಗೆ ವಿವರಗಳನ್ನಿತ್ತವು.

ಈ ದಶಕದಲ್ಲಿ ಇನ್ನೂ ಒಂದು ಬೆಳವಣಿಗೆಯಾಯಿತು. ಮೈಸೂರಿನಲ್ಲಿ ಪ್ರತಿ ವರ್ಷ ನಡೆಯುವ ವಿಶ್ವವಿಖ್ಯಾತ ದಸರಾ ಉತ್ಸವದಲ್ಲಿ ಪ್ರಥಮ ಬಾರಿಗೆ ಚಲನಚಿತ್ರೋತ್ಸವವೊಂದನ್ನು ನಡೆಸುವ ಪರಿಪಾಠವೂ ೧೯೭೧ರಲ್ಲಿಯೇ ಪ್ರಾರಂಭವಾಯಿತು. ಪುಣೆಯ ಚಲನಚಿತ್ರ ಭಂಡಾರದಿಂದ ಆಯ್ದ ೪೫ ದೇಶೀಯ ಮತ್ತು ವಿದೇಶೀಯ ಚಿತ್ರಗಳನ್ನು ಈ ಉತ್ಸವದಲ್ಲಿ ಪ್ರಥಮ ಬಾರಿಗೆ ಪ್ರದರ್ಶಿಸಲಾಯಿತು. ಈ ಹೊಸ ಸಂಪ್ರದಾಯವನ್ನು ಉದ್ಘಾಟಿಸಿದವರು ಗುಬ್ಬಿವೀರಣ್ಣ. ಈ ಉತ್ಸವದಲ್ಲಿ ಪ್ರದರ್ಶಿತವಾದ ಮೂರು ಪ್ರಶಸ್ತಿ ವಿಜೇತ ಕನ್ನಡ ಚಿತ್ರಗಳು - 'ನಮ್ಮ ಮಕ್ಕಳು', 'ಮಣ್ಣಿನ ಮಗ', 'ಸರ್ವಮಂಗಳ'. ಜೊತೆಗೆ ರಾಜ್ಯ ಸರ್ಕಾರಕ್ಕಾಗಿ ಗುಬ್ಬಿ ವೀರಣ್ಣನವರ ಬಗ್ಗೆ ಎಂ.ಎಸ್.ಸತ್ಯು ತಯಾರಿಸಿದ್ದ ಸಾಕ್ಷ್ಯಚಿತ್ರ ಕೂಡ. ಈ ಸಂಪ್ರದಾಯ ನಂತರದ ವರ್ಷಗಳಲ್ಲಿ ಮುಂದುವರಿಯಿತು.

ಇದೇ ದಶಕದಲ್ಲಿ 'ಸಂಸ್ಕಾರ', 'ವಂಶವೃಕ್ಷ' ಮತ್ತು 'ಮುಕ್ತಿ' ಚಿತ್ರಗಳು ಅಮೆರಿಕಾದಲ್ಲಿ ವಿದ್ಯಾರ್ಥಿಗಳಿಗಾಗಿಯೇ ವಿಶೇಷವಾಗಿ ಪ್ರದರ್ಶಿತವಾಗಲು ಆಯ್ಕೆಯಾದ ೨೩ ಭಾರತೀಯ ಚಿತ್ರಗಳಲ್ಲಿ ಪ್ರಮುಖವೆನಿಸಿದವು. ನ್ಯೂಯಾರ್ಕ್ ವಿಶ್ವವಿದ್ಯಾಲಯದ ಸ್ಟೇಟ್ ಎಜುಕೇಷನಲ್ ಇಲಾಖೆಯ ಅಂಗಸಂಸ್ಥೆಯೊಂದು ಖುದ್ದಾಗಿ ಆಯ್ದ ಚಿತ್ರಗಳು ಇವು.

ಈ ಎಲ್ಲ ಬೆಳವಣಿಗೆಗಳಿಂದಾಗಿ ಈ ದಶಕದಲ್ಲಿ ಕನ್ನಡ ಚಿತ್ರರಂಗ ವಿಶ್ವದ ಗಮನ ಸೆಳೆಯಿತು.

ಈ ದಶಕದ ಪ್ರಮುಖ ಬೆಳವಣಿಗೆಗಳಲ್ಲಿ ಒಂದೆಂದರೆ ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿ ತಳೆದ ಹೊಸ ಸ್ವರೂಪ ಮತ್ತು ಕನ್ನಡ ಚಿತ್ರೋದ್ಯಮದ ಬೆಳವಣಿಗೆಯಲ್ಲಿ ವಹಿಸಿದ ಪಾತ್ರ.

೧೯೭೧ರ ಮೇ ತಿಂಗಳಲ್ಲಿ ಅದುವರೆಗೆ ವಾಣಿಜ್ಯ ಮಂಡಳಿಯ ಉಪಾಧ್ಯಕ್ಷರಾಗಿದ್ದ ಎಂ.ಭಕ್ತವತ್ಸಲ ಪ್ರಥಮ ಬಾರಿಗೆ ಅಧ್ಯಕ್ಷರಾಗಿ ಚುನಾಯಿತರಾದರು. ಅವರು ಅಧಿಕಾರ ವಹಿಸಿಕೊಂಡಿದ್ದೇ ತಡ, ಸಂಸ್ಥೆಯ ಚಟುವಟಿಕೆಗಳಿಗೆ ಹೊಸ ಚಾಲನೆಯನ್ನು ಕೊಟ್ಟು ಸ್ವಲ್ಪ ಕಾಲದಲ್ಲಿಯೇ ಅದನ್ನೊಂದು ಜೀವಂತ, ಸಕ್ರಿಯ ಸಂಸ್ಥೆಯನ್ನಾಗಿ ಮಾರ್ಪಡಿಸಿದರು. ಅವರ ನಾಯಕತ್ವಕ್ಕೆ ಚಿತ್ರೋದ್ಯಮ ಸ್ಪಂದಿಸಿತು.

ಭಕ್ತವತ್ಸಲ ಅಧಿಕಾರಕ್ಕೆ ಬಂದ ಕೂಡಲೇ ಉದ್ಯಮದ ವಿವಿಧ ವಲಯಗಳಲ್ಲಿ ಸಾಮರಸ್ಯ ಬೆಳೆದು ಅವು ತಮ್ಮೊಳಗಿನ ಭಿನ್ನಾಭಿಪ್ರಾಯಗಳನ್ನು ಮರೆಯುವ ಅಗತ್ಯವನ್ನು ಒತ್ತಿ ಹೇಳಿದರು. ಇದೇ ಮುಂದೆ ವಾಣಿಜ್ಯ ಮಂಡಳಿಯಲ್ಲಿ ಎಲ್ಲ ವಲಯಗಳಿಗೂ ಸಮಾನ ಪ್ರಾತಿನಿಧ್ಯ ದೊರೆತು ಉದ್ಯಮದಲ್ಲಿನ ಔದ್ಯಮಿಕ ಸಮಸ್ಯೆಗಳನ್ನು ಉದ್ಯಮದ ಪ್ರಾತಿನಿಧಿಕ ಸಮಿತಿಗಳ ಸಹಾಯದಿಂದಲೇ ನಿರ್ವಹಿಸಿಕೊಳ್ಳುವ ವ್ಯವಸ್ಥೆಯನ್ನು ಜಾರಿಗೆ ತರುವುದಕ್ಕೂ ನಾಂದಿಯಾಯಿತು. ಇದು ಇಂತಹ ವ್ಯವಸ್ಥೆಯೊಂದನ್ನು ಜಾರಿಗೆ ತಂದ ಮೊದಲ ಪ್ರಾದೇಶಿಕ ವಾಣಿಜ್ಯ ಮಂಡಳಿಯಾಯಿತು.

ಆ ವೇಳೆಗೆ ನಿರ್ಮಾಣ ವಲಯವನ್ನು ಪ್ರತಿನಿಧಿಸುವ ಸಂಸ್ಥೆ ಕನ್ನಡ ಚಿತ್ರ ನಿರ್ಮಾಪಕರ ಗಿಲ್ಡ್ ಅಸ್ತಿತ್ವಕ್ಕೆ ಬಂದು ಲವಲವಿಕೆಯಿಂದಲೇ ಕೆಲಸ ಮಾಡುತ್ತಿತ್ತು. ಭಕ್ತವತ್ಸಲ ವಾಣಿಜ್ಯ ಮಂಡಳಿಯ ಅಧ್ಯಕ್ಷರಾದ ನಂತರ ಕೆಲವು ಕಾಲ ಮಂಡಳಿ ಗಿಲ್ಡ್‌ನ ಸಹಯೋಗದಿಂದಲೇ ಕೆಲಸ ಮಾಡಿತು. ಗಿಲ್ಡ್ ಅಧ್ಯಕ್ಷ ಡಿ.ರಾಜಗೋಪಾಲ್ ಮತ್ತು ಭಕ್ತವತ್ಸಲ (ಭಕ್ತ)ರವರು ಆ ಕಾಲದಲ್ಲಿ ಕೇಂದ್ರ ಸರ್ಕಾರದ ಉದ್ದಿಮೆ ಹಿಂದೂಸ್ತಾನ್ ಮೆಷಿನ್ ಟೂಲ್ಸ್‌ನಲ್ಲಿ ಸಹೋದ್ಯೋಗಿಗಳಾಗಿದ್ದು ಕೂಡ ಈ ಸಮನ್ವಯಕ್ಕೆ ಇಂಬು ಕೊಟ್ಟಿರಬಹುದು.

ವಿವಾದಕ್ಕೆ ತುತ್ತಾಗಿದ್ದ ರಾಜ್ಯ ಸರ್ಕಾರದ ಸಬ್ಸಿಡಿ ನೀತಿಯ ವಿರುದ್ಧ ಈ ಎರಡೂ ಸಂಸ್ಥೆಗಳು ಸೆಟೆದು ನಿಂತವು. ಉತ್ತಮ ಗುಣಮಟ್ಟದ ಚಿತ್ರಗಳಿಗೆ ಮಾತ್ರ ಸಹಾಯಧನವನ್ನು ನೀಡಬೇಕೆಂಬ ಸರ್ಕಾರದ ಯೋಚನೆಯನ್ನು ಅವು 'ಏಕಪಕ್ಷೀಯ'ವೆಂದು ಖಂಡಿಸಿದವು. ಭಕ್ತವತ್ಸಲ ಮತ್ತು ರಾಜಗೋಪಾಲ್ ಇಬ್ಬರೂ ಆಗ ಉದಕಮಂಡಲದಲ್ಲಿ ತಂಗಿದ್ದ ರಾಜ್ಯಪಾಲ ಧರ್ಮವೀರರನ್ನು ಭೇಟಿ ಮಾಡಿ ತಮ್ಮ ಪ್ರತಿಭಟನೆಯನ್ನು ದಾಖಲಿಸಿದರು. ಚರ್ಚೆಯ ಸಮಯದಲ್ಲಿ ಸಾಕಷ್ಟು ಚಕಮಕಿಗಳೂ ನಡೆದು ಅದು ಫಲ ಕೊಡದಿದ್ದಾಗ ಎರಡು ಸಂಸ್ಥೆಗಳೂ ಕನ್ನಡ ಚಿತ್ರ ನಿರ್ಮಾಪಕರ, ಪ್ರದರ್ಶಕರ ಮತ್ತು ವಿತರಕರ ಜಂಟಿ ಸಭೆಯೊಂದನ್ನು ಏರ್ಪಡಿಸಿದವು. ಜೂನ್ ೧೮ರಂದು 'ಕರಾಳ ದಿನ'ವೆಂದು ಘೋಷಿಸಿ ಆಚರಿಸಬೇಕೆಂಬ ನಿರ್ಧಾರವನ್ನು ಕೈಗೊಂಡಿದ್ದು ಇದೇ ಸಭೆಯಲ್ಲಿ. ಸಬ್ಸಿಡಿಗೆ ಅರ್ಹವೆನಿಸುವ ಚಿತ್ರಗಳನ್ನು ಆರಿಸಲು ಮತ್ತು ವಾರ್ಷಿಕ ರಾಜ್ಯ ಚಲನಚಿತ್ರ ಪ್ರಶಸ್ತಿಗಳನ್ನು ನಿರ್ಧರಿಸಲು ರಾಜ್ಯ ಸರ್ಕಾರ ನೇಮಿಸಿದ್ದ ಸಮಿತಿಗೆ ಬಹಿಷ್ಕಾರ ಹಾಕಲೂ ಸಭೆ ತೀರ್ಮಾನಿಸಿತು.

ರಾಜ್ಯದ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳನ್ನು ಕಡ್ಡಾಯವಾಗಿ ಪ್ರದರ್ಶಿಸಲೇಬೇಕೆಂಬ ನಿಯಮವನ್ನು ಜಾರಿಗೆ ತರಲು ಯೋಚಿಸುತ್ತಿದ್ದ ರಾಜ್ಯಪಾಲ ಧರ್ಮವೀರ ಈ ಕಾರಣಕ್ಕೆ ಕೂಡ ಈ ಎರಡು ಸಂಸ್ಥೆಗಳ ಮುನಿಸಿಗೆ ಪಾತ್ರರಾದರು. ಈ ಬಗ್ಗೆ ಎರಡು ಸಂಸ್ಥೆಗಳೂ ಜಂಟಿಯಾಗಿ ರಚಿಸಿದ್ದ ತ್ರಿಸದಸ್ಯರ ಸಮಿತಿಯೊಂದು ಪರಿಶೀಲನೆ ನಡೆಸುತ್ತಿರುವ ಸಮಯದಲ್ಲಿ ಸರ್ಕಾರದ ಹಸ್ತಕ್ಷೇಪ ಬೇಡವೆನ್ನುವ ನಿಲುವು ಅವರದ್ದಾಯಿತು. ಅದೂ ಅಲ್ಲದೆ ಈ ಹಿಂದೆ ಸರ್ಕಾರ ಈ ಬಗ್ಗೆ ಕೈಗೊಳ್ಳಲು ಪ್ರಯತ್ನಿಸಿದ ಕ್ರಮಗಳು ನ್ಯಾಯಾಲಯಗಳಲ್ಲಿ ಪರಾಭವವನ್ನು ಅನುಭವಿಸಿದ್ದವು.

ಕೆಲವೇ ದಿನಗಳಲ್ಲಿ ರಾಜ್ಯ ಚಲನಚಿತ್ರ ಸಲಹಾ ಮಂಡಳಿಯಲ್ಲಿ ಚಿತ್ರೋದ್ಯಮಿಗಳಿಗೂ ಪ್ರಾತಿನಿಧ್ಯ ಕೊಡಲು ರಾಜ್ಯಪಾಲರು ನಿರ್ಧರಿಸಿದ್ದಕ್ಕೆ ಈ ಎರಡು ಸಂಸ್ಥೆಗಳ ಬಿಗಿ ಪಟ್ಟೇ ಕಾರಣವಾಯಿತು. ಹೀಗಾಗಿ ಕನ್ನಡ ಚಲನಚಿತ್ರೋದ್ಯಮ ತನ್ನ ಸಮಸ್ಯೆಗಳ ಪರಿಹಾರಕ್ಕೆ ಕಠಿಣ ಮಾರ್ಗಗಳನ್ನು ಅನುಸರಿಸುವ ಸಂಪ್ರದಾಯಕ್ಕೆ ನಾಂದಿಯಾಯಿತು. ಈ ಸಮಸ್ಯೆಗಳನ್ನು ವಿಶ್ಲೇಷಿಸಲು ಸರ್ಕಾರ ವಾಣಿಜ್ಯ ಮಂಡಳಿಯ ಸಹಕಾರವನ್ನು ಪಡೆಯುವುದೂ ಅನಿವಾರ್ಯವಾಯಿತು.

ತನ್ನ ಕಾರ್ಯಕಾರಿ ಸಮಿತಿಯ ಸಭೆಗಳನ್ನು ಪ್ರತಿ ತಿಂಗಳೂ ರಾಜ್ಯದ ಬೇರೆ ಬೇರೆ ಪಟ್ಟಣಗಳಲ್ಲಿ ನಡೆಸಿ ಅದರ ವ್ಯವಹಾರಗಳಲ್ಲಿ ಸ್ಥಳೀಯ ಉದ್ಯಮಿಗಳನ್ನು ಸಕ್ರಿಯವಾಗಿ ತೊಡಗಿಸುವ ನಿರ್ಧಾರವನ್ನು ವಾಣಿಜ್ಯ ಮಂಡಳಿ ಕೈಗೊಂಡು ೧೯೭೧ರ ಸೆಪ್ಟೆಂಬರ್ ತಿಂಗಳಲ್ಲಿ ಇಂತಹ ಮೊದಲ ಸಭೆಯನ್ನು ಮೈಸೂರಿನಲ್ಲಿ ನಡೆಸಿತು. ಈ ಎರಡೂ ಸಂಘಟನೆಗಳ ಪರಸ್ಪರ ಸಹಕಾರ ಎಷ್ಟು ಪರಿಣಾಮಕಾರಿಯಾಯಿತೆಂದರೆ ೧೯೬೮-೬೯ರ ಸಾಲಿನ ರಾಜ್ಯ ಚಲನಚಿತ್ರ ಪ್ರಶಸ್ತಿಗಳ ವಿತರಣಾ ಸಮಾರಂಭಕ್ಕೆ ಉದ್ಯಮದ ಅನೇಕ ಪ್ರಮುಖರಿಗೆ ಆಹ್ವಾನ ಪತ್ರಿಕೆಗಳನ್ನು ನೀಡಲಿಲ್ಲವೆಂಬ ಒಂದೇ ಕಾರಣದಿಂದ ವಾಣಿಜ್ಯ ಮಂಡಳಿ ಮತ್ತು ಗಿಲ್ಡ್ ಸಮಾರಂಭಕ್ಕೆ ಬಹಿಷ್ಕಾರ ಹಾಕಿದವು.

ಆದರೆ ಈ ಸಂಸ್ಥೆಗಳು ತಮ್ಮ ಸಂಘಟನಾ ಶಕ್ತಿಯನ್ನು ಕೇವಲ ಪ್ರತಿಭಟನೆಗಳಿಗೆ, ಚಳವಳಿಗೆ ಮೀಸಲಾಗಿಡಲಿಲ್ಲ. ಫೆಬ್ರವರಿ ೧೯೭೨ರಲ್ಲಿ ಅವು ಸಾಹಸವೊಂದಕ್ಕೆ ಕೈಹಾಕಿದವು. ಭಾರತ-ಪಾಕಿಸ್ತಾನಗಳ ನಡುವೆ ನಡೆದ ಯುದ್ಧದ ತರುಣದಲ್ಲಿ ದೇಶದಾದ್ಯಂತ ರಾಷ್ಟ್ರೀಯ ರಕ್ಷಣಾ ನಿಧಿಗೆ ಹಣ ಸಂಗ್ರಹದ ಕಾರ್ಯ ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಾರಂಭವಾಯಿತು. ಭಾರತೀಯ ಚಲನಚಿತ್ರೋದ್ಯಮ ಕೂಡ ಈ ದೇಶಪ್ರೇಮದ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಲು ಮುಂದಾಯಿತು. ಮೈಸೂರು ರಾಜ್ಯದಾದ್ಯಂತ ಕನ್ನಡ ಚಲನಚಿತ್ರ ನಟ-ನಟಿಯರ ಪಾದಯಾತ್ರೆ ಮತ್ತು ತಾರಾಮೇಳಗಳು ವಾಣಿಜ್ಯ ಮಂಡಳಿ ಮತ್ತು ಗಿಲ್ಡ್‌ಗಳ ಮೂಲಕ ನಿಯೋಜಿತವಾದವು. ಐದು ದಿನಗಳ ಕಾಲ ರಾಜ್ಯದಲ್ಲಿ ೨,೦೦೦ ಮೈಲಿಗಳಷ್ಟು ಸಂಚಾರ ಮಾಡಿ ಕನಿಷ್ಠ ೧೦ ಲಕ್ಷ ರೂಪಾಯಿಗಳನ್ನು ನಿಧಿಗೆ ಸಂಗ್ರಹಿಸುವ ಯೋಜನೆ ಸಿದ್ಧವಾಯಿತು. ಈ ಅಭಿಯಾನದ ನಾಯಕತ್ವ ರಾಜಕುಮಾರ್‌ರವರಿಗೆ ಸಂದಿತು. ಸುಮಾರು ೧೦೦ ಕಲಾವಿದರು, ಗಾಯಕರು, ಸಂಗೀತ ನಿರ್ದೇಶಕರು, ತಂತ್ರಜ್ಞರು ಈ ಬೃಹತ್ ಯಾತ್ರೆಯಲ್ಲಿ ಪಾಲ್ಗೊಳ್ಳಲು ಮುಂದಾದರು. ದಾವಣಗೆರೆ, ಹುಬ್ಬಳ್ಳಿ, ಶಿವಮೊಗ್ಗ, ಬೆಂಗಳೂರು ಮತ್ತು ತುಮಕೂರು ನಗರಗಳಲ್ಲಿ ರಸಮಂಜರಿ ಕಾರ್ಯಕ್ರಮಗಳು ಹಾಗೂ ಚಿತ್ರದುರ್ಗ, ಹಾವೇರಿ, ರಾಣೆಬೆನ್ನೂರು, ಭದ್ರಾವತಿ, ತರೀಕೆರೆ, ಬೀರೂರು, ಕಡೂರು, ತಿಪಟೂರು ಮತ್ತು ಬೆಂಗಳೂರುಗಳಲ್ಲಿ ಪಾದಯಾತ್ರೆ ಕಾರ್ಯಕ್ರಮಗಳು ನಡೆದವು. ಇದೇ ಸಂದರ್ಭದಲ್ಲಿ ವಾಣಿಜ್ಯ ಮಂಡಳಿಯ ರಜತಮಹೋತ್ಸವ ಸ್ಮರಣ ಸಂಚಿಕೆಯ ಬಿಡುಗಡೆಯ ಸಮಾರಂಭದೊಂದಿಗೆ ಆ ವರ್ಷದ ರಾಷ್ಟ್ರಪ್ರಶಸ್ತಿ ವಿಜೇತ 'ಸಂಸ್ಕಾರ'ದ ತಂಡಕ್ಕೆ ಅಭಿನಂದನಾ ಸಮಾರಂಭವೂ ನಡೆಯಿತು.

ಕಾರ್ಯಕ್ರಮವೇನೋ ಯಶಸ್ವಿಯಾಗಿ, ಗೊಂದಲವಿಲ್ಲದೆ ನಡೆಯಿತು. ಸಂಘಟನಾತ್ಮಕವಾಗಿ ನೆರವೇರಿದ ಈ ಕಾರ್ಯಕ್ರಮ ೧೯೬೧ರಲ್ಲಿ ಉದ್ಯಮ ಪ್ರವಾಹ ಪರಿಹಾರ ನಿಧಿಗೆ ಹಣ ಕೂಡಿಸಲು ಪ್ರಥಮ ಬಾರಿ ನಡೆಸಿಕೊಟ್ಟ ಇಂಥದ್ದೇ




(ಚಿತ್ರ ೬) ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಸಾರಥ್ಯದಲ್ಲಿ ಬೆಂಗಳೂರಿನಲ್ಲಿ ನಡೆದ ರಾಷ್ಟ್ರಮಟ್ಟದ ಬೃಹತ್ ಚಿತ್ರೋದ್ಯಮದ ಸಮ್ಮೇಳನ ಹಾಗೂ ವಾಣಿಜ್ಯ ಮಂಡಳಿಯ ರಜತೋತ್ಸವ ಆಚರಣೆ ವಿಜೃಂಭಣೆಯಿಂದ ನಡೆಯಿತು.

ಅಭಿಯಾನವನ್ನು ನೆನಪಿಗೆ ತಂದಿತು. ಕನ್ನಡ ಚಿತ್ರರಂಗದ ಅಂದಿನ ಪ್ರತಿಷ್ಠಿತರೆಲ್ಲ ಕರ್ತವ್ಯಪ್ರಜ್ಞೆಯಿಂದ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಈ ಕಾರ್ಯಕ್ರಮದಿಂದ ಆದ ಇನ್ನೊಂದು ಲಾಭವೆಂದರೆ ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿ ಮತ್ತು ಕನ್ನಡ ಚಿತ್ರೋದ್ಯಮದ ಬಾಂಧವ್ಯ ಬೆಳೆದಿದ್ದು. ಪ್ರದರ್ಶಕರು ಮತ್ತು ಹಂಚಿಕೆದಾರರೇ ವಾಣಿಜ್ಯ ಮಂಡಳಿಯ ಆಧಾರಸ್ತಂಭಗಳಾಗಿದ್ದ ದಿನಗಳಲ್ಲಿ ಇಂತಹ ಭಾವನಾತ್ಮಕ ಬಾಂಧವ್ಯದ ಅಭಾವ ಎದ್ದು ಕಾಣುತ್ತಿತ್ತು. ಆ ದೃಷ್ಟಿಯಿಂದ ಕೂಡ ಈ ಅಭಿಯಾನ ಕನ್ನಡ ಚಿತ್ರರಂಗದಲ್ಲಿ ಒಂದು ಮೈಲಿಗಲ್ಲಾಯಿತು. ಆಗಿನಿಂದ ವಾಣಿಜ್ಯ ಮಂಡಳಿ ಇಡೀ ಕನ್ನಡ ಚಿತ್ರೋದ್ಯಮದ ಮುಖವಾಣಿಯೆನಿಸುವ ಅರ್ಹತೆಯನ್ನು ಪಡೆದುಕೊಂಡಿತೆಂದರು.

ಅದೇ ವರ್ಷದ ಮೇ ೨ ರಂದು ವಾಣಿಜ್ಯ ಮಂಡಳಿಯ ಸಾರಥ್ಯದಲ್ಲಿ ಬೆಂಗಳೂರಿನಲ್ಲಿ ರಾಷ್ಟ್ರಮಟ್ಟದ ಬೃಹತ್ ಚಿತ್ರೋದ್ಯಮ ಸಮ್ಮೇಳನವೊಂದು ಸುವ್ಯವಸ್ಥಿತವಾಗಿ ಜರುಗಿದ್ದು ಮಂಡಳಿಯ ಇನ್ನೊಂದು ದೊಡ್ಡ ಸಾಧನೆಯೆನಿಸಿತು. ಅದೇ ಸಂದರ್ಭದಲ್ಲಿ ವಾಣಿಜ್ಯ ಮಂಡಳಿಯ ರಜತ ಮಹೋತ್ಸವದ ಆಚರಣೆ ಕೂಡ ವೈಭವೋಪೇತವಾಗಿ ನಡೆಯಿತು. ಮಂಡಳಿಗೆ ಅದರ ಅಧ್ಯಕ್ಷ ಭಕ್ತವತ್ಸಲರವರು ಕೊಟ್ಟ ಹೊಸ ತಿರುವಿಗೆ ಈ ಎರಡೂ ಕಾರ್ಯಕ್ರಮಗಳು ದ್ಯೋತಕವಾಗಿದ್ದವು.

ಈ ಸಂದರ್ಭದಲ್ಲಿ ಪ್ರಮುಖ ಬೆಳವಣಿಗೆಯೊಂದಾಯಿತು - ನಿರ್ಮಾಪಕರ ಗಿಲ್ಡ್ ವಾಣಿಜ್ಯ ಮಂಡಳಿಯೊಂದಿಗೆ ವಿಧ್ಯುಕ್ತವಾಗಿ ವಿಲೀನವಾಯಿತು. ಅದರಿಂದ ಮಂಡಳಿಯ ಕೈ ಇನ್ನಷ್ಟು ಬಲವಾದಂತಾಯಿತು. ನಿರ್ಮಾಪಕರು ಮಂಡಳಿಯಲ್ಲಿ ಹೆಚ್ಚು ಸಕ್ರಿಯವಾಗಿ ಮತ್ತು ಅರ್ಥಪೂರ್ಣವಾಗಿ ಭಾಗವಹಿಸಲು ಈ ವಿಲೀನದಿಂದ ಅನುಕೂಲವಾಯಿತು.

ಭಾರತ ಚಿತ್ರರಂಗದ ದಿಗ್ಗಜಗಳೆಲ್ಲ ಉತ್ಸಾಹದಿಂದ ಭಾಗವಹಿಸಿದ ರಾಷ್ಟ್ರಮಟ್ಟದ ಚಿತ್ರೋದ್ಯಮ ಸಮ್ಮೇಳನದಲ್ಲಿ ವಿಶೇಷವಾಗಿ ಸೆನ್ಸಾರ್ ನೀತಿಯ ಬಗ್ಗೆ ಗಂಭೀರವಾದ ಚರ್ಚೆ ನಡೆದು ಉದ್ಯಮ ಸರ್ಕಾರಕ್ಕೆ ಸೆನ್ಸಾರ್ ವಿಧಾನಗಳ ಪರಿಷ್ಕರಣದ ಬಗ್ಗೆ ಉಪಯುಕ್ತ ಸಲಹೆಗಳನ್ನು ನೀಡಿತು. ಖೋಸ್ಲಾ ಸಮಿತಿಯ ವರದಿಯ ಬಗ್ಗೆಯೂ ಸುದೀರ್ಘ ಚರ್ಚೆಯಾಗಿ ಆ ವರದಿಯ ಬಗ್ಗೆ ಫಿಲಂ ಫೆಡರೇಷನ್ ಆಫ್ ಇಂಡಿಯಾ ಸಂಸ್ಥೆ ಆಳವಾದ ಅಧ್ಯಯನ ಮಾಡಬೇಕೆಂಬ ಒಟ್ಟಾರೆ ಅಭಿಪ್ರಾಯ ಮೂಡಿತು. ಉದ್ಯಮ ಸ್ವಯಂ ಸೆನ್ಸಾರ್ ಪದ್ಧತಿಯನ್ನು ಅಳವಡಿಸುವ ಸಾಧ್ಯತೆಯ ಬಗ್ಗೆ ಒಮ್ಮತ ಮೂಡಲಿಲ್ಲ.

ಅದೇ ಆಗಸ್ಟ್ ತಿಂಗಳಲ್ಲಿ ಭಕ್ತವತ್ಸಲ ಭಾರತ ಚಿತ್ರೋದ್ಯಮದ ಮೇರು ಸಂಸ್ಥೆ ಫಿಲಂ ಫೆಡರೇಷನ್ ಆಫ್ ಇಂಡಿಯಾದ ಉಪಾಧ್ಯಕ್ಷರಾಗಿ ಆಯ್ಕೆಯಾದರು. ಮೈಸೂರು ರಾಜ್ಯದ ಚಿತ್ರೋದ್ಯಮಿಯೊಬ್ಬರಿಗೆ ಈ ಗೌರವ ಸಿಕ್ಕಿದ್ದು ಅದೇ ಮೊದಲು.

ಆಗಸ್ಟ್ ತಿಂಗಳಿನಲ್ಲಿಯೇ ಮೈಸೂರು ವಾಣಿಜ್ಯ ಮಂಡಳಿ ಇನ್ನೊಂದು ಹೊಸ ದಾಖಲೆಯನ್ನು ಸ್ಥಾಪಿಸಿತು. ಅದುವರೆಗೆ ಚಿತ್ರಮಂದಿರಗಳ ಅಧಿಕ ಬಾಡಿಗೆಯ ಭಾರದಿಂದ ನರಳುತ್ತಿದ್ದ ಕನ್ನಡ ಚಿತ್ರಗಳಿಗೆ ಸಾಂತ್ವನ ಹೇಳುವಂತೆ ಮಂಡಳಿಯ ಕಾರ್ಯಕಾರಿ ಸಮಿತಿ ರಾಜ್ಯದಾದ್ಯಂತ ಅಲ್ಲವಾದರೂ ಬೆಂಗಳೂರು ನಗರದ ಚಿತ್ರಮಂದಿರಗಳಿಗೆ ಅನ್ವಯಿಸುವಂತೆ ಕನ್ನಡ ಚಿತ್ರಗಳನ್ನು ಶೇಕಡಾವಾರು ಗಳಿಕೆಯ ಆಧಾರದ ಮೇಲೆ ಪ್ರದರ್ಶಿಸ ಬೇಕೆಂಬ ನಿರ್ಣಯವನ್ನು ಕೈಗೊಂಡಾಗ ಉದ್ಯಮ ಅದನ್ನು ಉತ್ಸಾಹದಿಂದ ಸ್ವಾಗತಿಸಿತು. ಆ ವೇಳೆಯಲ್ಲಿ ಅದೊಂದು ಐತಿಹಾಸಿಕ ನಿರ್ಣಯವೆಂದೇ ಎನಿಸಿತು.

ರಾಜ್ಯದ ಹೆಸರನ್ನು ಮೈಸೂರಿನಿಂದ ಕರ್ನಾಟಕಕ್ಕೆ ಬದಲಾಯಿಸಬೇಕೇ ಬೇಡವೇ ಎಂಬ ಸುದೀರ್ಘ ಜಿಜ್ಞಾಸೆ ಕೊನೆಗೂ ಮುಗಿದು, ಮುಖ್ಯಮಂತ್ರಿ ದೇವರಾಜ ಅರಸು ನವೆಂಬರ್ ೧, ೧೯೭೩ರಿಂದ ಈ ಬದಲಾವಣೆಯನ್ನು ತಂದರು. ಇದರಿಂದಾಗಿ ಮೊದಲು ಎಲ್ಲರೂ ಶಂಕಿಸಿದ್ದಂತೆ ಹಳೆಯ ಮೈಸೂರು ಪ್ರದೇಶದಲ್ಲಿ ಯಾವ ಪ್ರತಿಭಟನೆಯೂ ಕಂಡು ಬರಲಿಲ್ಲ. ರಾಜ್ಯದ ಜನತೆ ಕರ್ನಾಟಕ ಎಂಬ ಹೆಸರನ್ನು ಸ್ವಾಗತಿಸಿತು. ಆದರೆ ಇದಕ್ಕೂ ಮೊದಲು ಒಂದು ವರ್ಷದ ಹಿಂದೆಯೇ ಮೈಸೂರು ಚಲನಚಿತ್ರ ವಾಣಿಜ್ಯ ಮಂಡಳಿ ತನ್ನ ಹೆಸರನ್ನು 'ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ'ಯೆಂದು ಬದಲಾಯಿಸಿಕೊಂಡಿತ್ತು.

೧೯೭೩ರ ಮಾರ್ಚ್ ತಿಂಗಳಲ್ಲಿ ವಾಣಿಜ್ಯ ಮಂಡಳಿ ತನ್ನ ಸ್ವರೂಪವನ್ನು ಸಂಪೂರ್ಣವಾಗಿ ಬದಲಾಯಿಸಿಕೊಂಡಿತು. ಸಂಸ್ಥೆಗೆ ಹೊಸ ಅಂಗರಚನೆಯೊಂದನ್ನು ಜಾರಿಗೆ ತಂದು ಕಾರ್ಯಕಾರಿ ಸಮಿತಿಯಲ್ಲಿ ನಿರ್ಮಾಪಕರು, ಹಂಚಿಕೆದಾರರು ಮತ್ತು ಪ್ರದರ್ಶಕರಿಗೆ ಸಮಾನ ಪ್ರಾತಿನಿಧ್ಯವನ್ನು ನೀಡಲಾಯಿತು. ಜೊತೆಗೆ ವಾಣಿಜ್ಯ ಮಂಡಳಿಯಲ್ಲಿಯೇ ಒಂದು ನಿರ್ಮಾಪಕರ ವಲಯ ಸಮಿತಿ, ಒಂದು ಹಂಚಿಕೆದಾರರ ವಲಯ ಸಮಿತಿ ಮತ್ತು ಒಂದು ಪ್ರದರ್ಶಕರ ವಲಯ ಸಮಿತಿಗಳು ರಚಿತವಾದವು. ತಮ್ಮ ತಮ್ಮ ವಲಯಗಳಿಗೆ ಸೇರಿದ ಸಮಸ್ಯೆಗಳನ್ನು ಈ ಸಮಿತಿಗಳೇ ನೋಡಿಕೊಳ್ಳುವ ವ್ಯವಸ್ಥೆಯೊಂದು ನಿರ್ಮಾಣವಾಗಿ ನೀತಿಗೆ ಸಂಬಂಧಿಸಿದ ವಿಷಯಗಳು ಮಾತ್ರ ವಾಣಿಜ್ಯ ಮಂಡಳಿಯ ಕಾರ್ಯಕಾರಿ ಸಮಿತಿಯ ಅವಗಾಹನೆಗೆ ಹೋಗಬೇಕೆಂದು ನಿರ್ಧಾರವಾಯಿತು.

೧೯೭೩ರ ಏಪ್ರಿಲ್ ೧ರಿಂದ ಸಂಪೂರ್ಣ ಸ್ವಯಂ ನಿಯಂತ್ರಣ ಪದ್ಧತಿಯನ್ನು ಜಾರಿಗೆ ತಂದಿದ್ದು ವಾಣಿಜ್ಯ ಮಂಡಳಿಯ ಇನ್ನೊಂದು ಸಾಧನೆ. ಈ ಪದ್ಧತಿಯ ಮೇರೆಗೆ ಮಂಡಳಿಯ ಸದಸ್ಯರಲ್ಲದವರಾರೂ ಒಬ್ಬರೊಂದಿಗೆ ಒಬ್ಬರು ವ್ಯವಹರಿಸುವಂತಿಲ್ಲ, ಅವರ ನಡುವೆಯ ಎಲ್ಲ ವಿವಾದಗಳನ್ನೂ ಮಂಡಳಿಯಲ್ಲಿಯೇ ಪಂಚಾಯಿತಿ ವ್ಯವಸ್ಥೆಯ ಮೂಲಕ ಇತ್ಯರ್ಥವಾಗಬೇಕೆಂದೂ ಸದಸ್ಯರಾರೂ ನ್ಯಾಯಾಲಯಗಳ ಮೆಟ್ಟಿಲನ್ನು ಹತ್ತಬಾರದೆಂದೂ ಸರ್ವಸದಸ್ಯರ ಸಭೆಯಲ್ಲಿ ನಿರ್ಧಾರವಾಯಿತು. ಈ ಬದಲಾವಣೆಗಳು ವಾಣಿಜ್ಯ ಮಂಡಳಿಯನ್ನು ಪ್ರಭಾವಶಾಲಿ ಸಂಸ್ಥೆಯನ್ನಾಗಿ ಮಾರ್ಪಡಿಸಿದವು. ಇತರ ರಾಜ್ಯಗಳ ಚಲನಚಿತ್ರ ವಾಣಿಜ್ಯ ಮಂಡಳಿಗಳಿಗೆ ಮಾರ್ಗದರ್ಶಕವೂ ಆದವು.

ರಾಜ್ಯದಲ್ಲಿಯೇ ತಯಾರಾದ ಎಲ್ಲ ಕನ್ನಡ ಚಿತ್ರಗಳಿಗೂ ಸಂಪೂರ್ಣ ಮನರಂಜನಾ ತೆರಿಗೆ ವಿನಾಯಿತಿ ಜಾರಿಗೆ ಬಂದಿದ್ದು ೧೯೮೫ರಲ್ಲಿಯೇ ಆದರೂ ಈ ಬಗ್ಗೆ ಮೊದಲ ಆಗ್ರಹ ಬಂದಿದ್ದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಿಂದಲೇ - ೧೯೭೪ರಲ್ಲಿ ಇತರ ಅನೇಕ ಭಾಷಾ ಚಿತ್ರಗಳೊಂದಿಗೆ ಪೈಪೋಟಿಗೆ ನಿಲ್ಲಬೇಕಾದ ಅಲ್ಪ ವೆಚ್ಚ, ಚಿಕ್ಕ ಮಾರುಕಟ್ಟೆಯ ಕನ್ನಡ ಚಿತ್ರಗಳನ್ನು ಆರ್ಥಿಕ ಹಾನಿಯಿಂದ ಕಾಪಾಡಲು

ಇದೊಂದೇ ಮಾರ್ಗವೆಂದು ಮೊದಲು ಧ್ವನಿಯೆತ್ತಿದವರು ಎಂ.ಭಕ್ತವತ್ಸಲ. ಆದರೆ ಅಂದಿನ ಸರ್ಕಾರ ಈ ಸಲಹೆಗೆ ಮನ್ನಣೆ ಕೊಡಲಿಲ್ಲ.

ಕನ್ನಡ ಚಿತ್ರಗಳ ಆರ್ಥಿಕ ಭದ್ರತೆಯನ್ನು ಹೆಚ್ಚಿಸುವ ಮತ್ತೊಂದು ಮೊದಲ ಪ್ರಯತ್ನವನ್ನು ವಾಣಿಜ್ಯ ಮಂಡಳಿ ೧೯೭೪ರ ಮಾರ್ಚ್‌ನಲ್ಲಿ ಮಾಡಿತು. ಬೆಂಗಳೂರಿನ ಎಲ್ಲ ಪ್ರಥಮ ದರ್ಜೆಯ ಚಿತ್ರಮಂದಿರಗಳೂ ಚಿತ್ರಗಳನ್ನು ಗಳಿಕೆಯ ಶೇಕಡಾವಾರು ಹಂಚಿಕೆಯ ಆಧಾರದ ಮೇಲೆಯೇ ಪ್ರದರ್ಶಿಸಬೇಕೆಂಬ ನಿಯಮವನ್ನು ಜಾರಿಗೆ ತಂದಿತು. ಈ ಚಿತ್ರಮಂದಿರಗಳು ನಿರ್ಮಾಪಕರಿಗೆ ಹೊರಿಸುತ್ತಿದ್ದ ಬಾಡಿಗೆ ಭಾರ ದುರ್ಭರವಾಗಿತ್ತೆಂಬ ಕೂಗು ಪದೇ ಪದೇ ಕೇಳಿ ಬರುತ್ತಿದ್ದ ಹಿನ್ನೆಲೆಯಲ್ಲಿ ಮಂಡಳಿ ಈ ನಿರ್ಧಾರವನ್ನು ಕೈಗೊಂಡಿತು. ಆ ಸಮಯಕ್ಕೆ ಇದೊಂದು ಕ್ರಾಂತಿಕಾರಕ ಹೆಜ್ಜೆಯೇ ಎನಿಸಿದರೂ ಈ ನಿಯಮ ಕೆಲವೇ ವಾರಗಳಲ್ಲಿ ಕೈ ಜಾರಿ ಹೋಯಿತೆನ್ನುವ ಮಾತು ಬೇರೆ. ಈ ಬಗ್ಗೆ ವಾಣಿಜ್ಯ ಮಂಡಳಿಯ ಪ್ರಯತ್ನವಂತೂ ಪ್ರಾಮಾಣಿಕವಾಗಿತ್ತು. ಈ ಯೋಜನೆ ಕೈಗೂಡದಿದ್ದಕ್ಕೆ ಮುಖ್ಯ ಕಾರಣ ನಿರ್ಮಾಪಕರಲ್ಲಿ ಒಮ್ಮತ ಇಲ್ಲದೆ ಇದ್ದಿದ್ದು.

ಆದರೆ ಅದೇ ಸಮಯದಲ್ಲಿ ರಾಜ್ಯ ಸರ್ಕಾರ ಮನರಂಜನೆ ತೆರಿಗೆಯ ಮೇಲಿನ ಅಧಿಭಾರವನ್ನು ಶೇ. ೬೦ರಿಂದ ೧೦೦ಕ್ಕೆ ಏರಿಸಿದ್ದು ಉದ್ಯಮಕ್ಕೆ ಬರಸಿಡಿಲು ಬಡಿದಂತಾಯಿತು. ಈ ಹೆಚ್ಚಳದ ವಿರುದ್ಧ ವಾಣಿಜ್ಯ ಮಂಡಳಿ ಪ್ರತಿಭಟಿಸಿತು.ಸರ್ಕಾರ ಮೊದಲು ಮಾತು ಕೊಟ್ಟಿದ್ದಂತೆ ಅಧಿಭಾರದಿಂದ ಬಂದ ಸಂಪೂರ್ಣ ವರಮಾನವನ್ನು ಕನ್ನಡ ಚಲನಚಿತ್ರೋದ್ಯಮದ ಅಭಿವೃದ್ಧಿಗೆಂದೇ ಮೀಸಲಾಗಿರಿಸಲಿಲ್ಲ. ಇದು ಉದ್ಯಮದ ಸಿಟ್ಟಿಗೆ ಕಾರಣವಾಗಿತ್ತು. ಅದೇ ಸಮಯದಲ್ಲಿ ಪಕ್ಕದ ಮಹಾರಾಷ್ಟ್ರ ಸರ್ಕಾರ ಮರಾಠಿ ಚಿತ್ರಗಳಿಂದ ಉತ್ಪತ್ತಿಯಾದ ಮನರಂಜನೆ ತೆರಿಗೆಯನ್ನು ಸಂಪೂರ್ಣವಾಗಿ ಉದ್ಯಮಕ್ಕೇ ಹಿಂದಿರುಗಿಸಲಾಗುವುದೆಂದು ಘೋಷಣೆ ಮಾಡಿತ್ತು. ಇದು ಕನ್ನಡ ಚಿತ್ರೋದ್ಯಮಿಗಳ ಅತೃಪ್ತಿಯನ್ನು ಹೆಚ್ಚಿಸಿತು. ಇದರಿಂದ ಸರ್ಕಾರ ಮತ್ತು ಉದ್ಯಮದ ನಡುವೆ ಇನ್ನೊಂದು ಸುತ್ತಿನ ಸಂಘರ್ಷ ಆರಂಭವಾಯಿತು. ವಾಣಿಜ್ಯ ಮಂಡಳಿ ಉದ್ಯಮದ ಪರವಾಗಿ ಈ ಸಂಘರ್ಷದ ನಾಯಕತ್ವವನ್ನು ವಹಿಸಿತು.

ಅಧಿಭಾರದ ಏರಿಕೆಯಿಂದಾಗಿ ಕೆಲವೇ ದಿನಗಳಲ್ಲಿ ಚಿತ್ರಮಂದಿರಗಳಲ್ಲಿ ಟಿಕೆಟ್ ದರ ಕೂಡ ಏರಿತು. ಕನ್ನಡ ಚಿತ್ರಗಳಿಗಾದರೂ ಸ್ವಲ್ಪಕಾಲ ಸಂಪೂರ್ಣ ಮನರಂಜನೆ ತೆರಿಗೆ ವಿನಾಯಿತಿ ನೀಡಬೇಕೆಂದು ವಾಣಿಜ್ಯ ಮಂಡಳಿ ಈ ಬಾರಿ ಅಧಿಕೃತವಾಗಿ ಸರ್ಕಾರವನ್ನು ಒತ್ತಾಯ ಪಡಿಸಿತು. ಈ ಬಗ್ಗೆ ಸರ್ಕಾರಕ್ಕೆ ಮನವಿ ಪತ್ರವೊಂದನ್ನೂ ಸಲ್ಲಿಸಿತು. ಅಂದಿನ ಮುಖ್ಯಮಂತ್ರಿ ದೇವರಾಜ ಅರಸು ಅವರು ಈ ಸಲಹೆಯನ್ನು ತಳ್ಳಿ ಹಾಕಿ ಸಂಪೂರ್ಣ ತೆರಿಗೆ ವಿನಾಯಿತಿಯಿಂದ ಕನ್ನಡ ಚಿತ್ರೋದ್ಯಮಕ್ಕೆ ಯಾವುದೇ ಪ್ರಯೋಜನವೂ ಆಗುವುದಿಲ್ಲವೆಂದೂ ಉತ್ತಮ ಕನ್ನಡ ಚಿತ್ರಗಳಿಗೆ ರಾಜ್ಯ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಯಿಂದ ಧನಸಹಾಯ ಮಾಡುವುದೊಂದೇ ಉದ್ಯಮದ ಒಳಿತಿಗೆ ಸಹಾಯಕವಾಗುವುದೆಂದೂ ವಾದಿಸಿದರು. ಕನ್ನಡ ಚಿತ್ರರಂಗದಲ್ಲಿ ನಡೆಯಲಾಗುತ್ತಿದೆಯೆಂದು ಹೇಳಲಾದ ಶೋಷಣೆಯನ್ನು ನಿಲ್ಲಿಸುವುದು ಮತ್ತು ರಾಜ್ಯದ ಎಲ್ಲ ಚಿತ್ರಮಂದಿರಗಳಲ್ಲಿಯೂ ಕನ್ನಡ ಚಿತ್ರಗಳನ್ನು ಕಡ್ಡಾಯವಾಗಿ ಪ್ರದರ್ಶಿಸಬೇಕೆಂಬ ನಿರ್ಬಂಧಗಳು ಉದ್ಯಮದ ಉದ್ಧಾರಕ್ಕೆ ಅಗತ್ಯವಾದ ಇತರ ಕ್ರಮಗಳೆಂದರು.

೧೯೭೫ರ ಮೇ ತಿಂಗಳಲ್ಲಿ ವಾಣಿಜ್ಯ ಮಂಡಳಿ ಮಹತ್ತರವಾದ ನಿರ್ಧಾರವೊಂದನ್ನು ಕೈಗೊಂಡು ಇತರ ಭಾಷೆಗಳಿಂದ ಡಬ್ ಆದ ಕನ್ನಡ ಚಿತ್ರಗಳ ಮೇಲೆ ಸಂಪೂರ್ಣವಾದ ನಿರ್ಬಂಧವನ್ನು ಹಾಕಿತು. ಈ ನಿರ್ಬಂಧ ಎರಡು ವರ್ಷಗಳ ಕಾಲ ಜಾರಿಯಲ್ಲಿರುವುದೆಂದೂ ಮಂಡಳಿ ನಿರ್ಧರಿಸಿತು.

ಅದೇ ವರ್ಷ ವಾಣಿಜ್ಯ ಮಂಡಳಿಯ ಮುಂದೆ ಮತ್ತೂ ಒಂದು ಸಮಸ್ಯೆ ಬೃಹದಾಕಾರವಾಗಿ ನಿಂತಿತು. ಕನ್ನಡ ಚಿತ್ರಗಳ ತಯಾರಿಕೆ ಇದ್ದಕ್ಕಿದ್ದಂತೆ ಏರಿದರಿಂದ ಅವುಗಳನ್ನು ಪ್ರದರ್ಶಿಸಲು ಚಿತ್ರಮಂದಿರಗಳ ಕೊರತೆ ತಲೆಯೆತ್ತಿತು. ಈ ಸಮಸ್ಯೆ ಉಲ್ಬಣಾವಸ್ಥೆಗೆ ಬಂದು ಇತ್ತೀಚೆಗೆ ತಾನೆ ಎಲ್ಲ ವಲಯಗಳ ನಡುವೆ ಗಮನೀಯ ಸಾಮರಸ್ಯವನ್ನುಂಟುಮಾಡಿದ್ದ ಸಂಸ್ಥೆ ಮುರಿಯುವ ಸ್ಥಿತಿಗೂ ಬಂತು. ಆದರೆ ಎಲ್ಲ ವಲಯಗಳ ಜಂಟಿ ಸಭೆಯೊಂದು ನಡೆದು ರಾಜ್ಯದ ಎಲ್ಲ ಚಿತ್ರಮಂದಿರಗಳಲ್ಲಿಯೂ ವರ್ಷಕ್ಕೆ ಕನಿಷ್ಠ ೧೨ ವಾರಗಳು ಕನ್ನಡ ಚಿತ್ರಗಳನ್ನು ಪ್ರದರ್ಶಿಸಲೇಬೇಕೆಂಬ ನಿಯಮವನ್ನು ಮಂಡಳಿ ಜಾರಿಗೆ ತಂದಿತು. ಆದರೆ ಈ ನಿಯಮ ಪರಿಣಾಮಕಾರಿಯಾಗಿ ಜಾರಿಗೆ ಬರದೆ ಪದೇ ಪದೇ ಕನ್ನಡ ಚಿತ್ರಗಳು ಪ್ರದರ್ಶನಾವಕಾಶಕ್ಕಾಗಿ ಪರದಾಡಬೇಕಾದ ಪರಿಸ್ಥಿತಿಯಂತೂ ಬದಲಾಗಲಿಲ್ಲವೆನ್ನುವುದು ಬೇರೆಯ ಮಾತು. ಸಮಸ್ಯೆ ಸರ್ಕಾರದವರೆಗೂ ಮುಟ್ಟಿತು. ಪ್ರದರ್ಶಕರಿಗೆ ಆಗಾಗ ಎಚ್ಚರಿಕೆಗಳನ್ನು ನೀಡಲಾಯಿತು. ಆದರೆ ಉದ್ಯಮದೊಂದಿಗೇ ಬೆಳೆದು ಬಂದ ಈ ಸಮಸ್ಯೆ ಆಗಾಗ ಬಿಗಡಾಯಿಸುವುದು, ಆಗಾಗ ಪರಿಹಾರವಾಗುವುದು ಸಾಮಾನ್ಯವೆನಿಸತೊಡಗಿತು.

ನವಂಬರ್ ೧೯೭೫ರಲ್ಲಿ ಇನ್ನೊಂದು ಕುತೂಹಲಕರ ಘಟನೆ ನಡೆಯಿತು. ನಿರ್ಮಾಪಕರು ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಸ್ಥಾಪಿತವಾಗಿದ್ದ ಗಿಲ್ಡ್, ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿಯೊಂದಿಗೆ ವಿಲೀನವಾಗಿ ವಾಣಿಜ್ಯ ಮಂಡಳಿ ಉದ್ಯಮದ ಎಲ್ಲ ವಲಯಗಳನ್ನೂ ಪ್ರತಿನಿಧಿಸುವ ಬಲಿಷ್ಠ ಸಂಸ್ಥೆಯಾಗಿ ಬೆಳೆದಿದ್ದರೂ ಈಗ ಮತ್ತೊಮ್ಮೆ ನಿರ್ಮಾಪಕರ ಪ್ರತ್ಯೇಕ ಸಂಘಟನೆಯೊಂದು ಉದಯವಾಯಿತು. 'ರಾಜ್ಯ ಚಲನಚಿತ್ರ ತಯಾರಕರ ಫೋರಂ' ಎಂಬ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದ ಈ ಸಂಸ್ಥೆ ವಾಣಿಜ್ಯ ಮಂಡಳಿಯ ಹಿತದ ವಿರುದ್ಧ ಏನನ್ನೂ ಮಾಡುವುದಿಲ್ಲವೆಂಬ ಆಶ್ವಾಸನೆಯನ್ನು ಅದನ್ನು ಪ್ರಾರಂಭಿಸಿದ ಉದ್ಯಮದ ಕೆಲವು ಪ್ರಮುಖರು ಕೊಟ್ಟರು. ಆದರೆ ಅದೇ ಸಮಯದಲ್ಲಿ ವಾಣಿಜ್ಯ ಮಂಡಳಿಯ ಕೆಲವು ನಿಯಮಗಳು ನಿರ್ಮಾತೃಗಳ ಸಮಸ್ಯೆಗಳ ಕ್ಷಿಪ್ರ ಶಮನಕ್ಕೆ ಅಡ್ಡಿ ತರುವುದೆಂಬ ಟೀಕೆಯನ್ನು ಪದಾಧಿಕಾರಿಗಳು ಮಾಡಿದರು. ಇದರಿಂದ ಮಂಡಳಿಯಲ್ಲಿ ಅಂದಿನ ನಾಯಕತ್ವದ ವಿರುದ್ಧದ ಗುಂಪೊಂದು ಹುಟ್ಟಿಕೊಂಡಂತೆ ಆಯಿತು.

ಫೋರಂ ಸ್ಥಾಪನೆಗೆ ಮೊದಮೊದಲು ವಾಣಿಜ್ಯ ಮಂಡಳಿಯ ಪ್ರತಿಕ್ರಿಯೆ ಪ್ರತಿಕೂಲವಾಗಿಯೇ ಇತ್ತು. ಈ ಬೆಳವಣಿಗೆಯಿಂದ ವಿಚಲಿತರಾದ ಮಂಡಳಿಯ ಕೆಲವು ಪದಾಧಿಕಾರಿಗಳು ಬಿಕ್ಕಟ್ಟನ್ನು ಅಂತ್ಯಗೊಳಿಸುವ ದೃಷ್ಟಿಯಿಂದ ಎರಡೂ ಸಂಸ್ಥೆಗಳ ಪದಾಧಿಕಾರಿಗಳ ಜಂಟಿ ಸಭೆಯೊಂದನ್ನು ಏರ್ಪಡಿಸಿದಾಗ ಅಲ್ಲಿ ಬಿಕ್ಕಟ್ಟು ಅಂತ್ಯಗೊಂಡಿತು. ವಾಣಿಜ್ಯ ಮಂಡಳಿಯ ಸ್ವಯಂ ನಿಯಂತ್ರಣ ಸಂಹಿತೆಯ ಆಧಾರದ ಮೇಲೆಯೇ ಉದ್ಯಮದ ಎಲ್ಲ ವಲಯಗಳ ಸಮಸ್ಯೆಗಳೂ ಪರಿಹಾರವಾಗಬೇಕೆಂದು ಈ ಸಭೆಯಲ್ಲಿ ತೀರ್ಮಾನವಾಗಿ ಫೋರಂನ ಕಾರ್ಯಕಾರಿ ಸಮಿತಿಯ ಸದಸ್ಯರೆಲ್ಲರೂ ಮಂಡಳಿಯ ನಿರ್ಮಾಪಕರ ವಲಯ ಕೌನ್ಸಿಲ್‌ನ ಸದಸ್ಯರಾಗಲೂ ಅವಕಾಶವಾಯಿತು. ಆಗ ತಾನೇ ಪ್ರಧಾನಿ ಇಂದಿರಾಗಾಂಧಿಯವರು ದೇಶದಾದ್ಯಂತ ಜಾರಿಗೆ ತಂದಿದ್ದ ತುರ್ತು ಪರಿಸ್ಥಿತಿಯಿಂದಾಗಿ ದೇಶದ ನಾನಾ ಕ್ಷೇತ್ರಗಳಲ್ಲಿ ಶಿಸ್ತು ನೆಲೆಸಿದ್ದರೂ ಚಿತ್ರೋದ್ಯಮದಲ್ಲಿ ಮಾತ್ರ ಇಂತಹ ಶಿಸ್ತು ಉಂಟಾಗಲೇ ಇಲ್ಲ ಎಂದು ಈ ವಿಲೀನದ ನಂತರವೂ ಮಂಡಳಿಯ ಅಧ್ಯಕ್ಷ ಭಕ್ತವತ್ಸಲರವರು ಬಹಿರಂಗವಾಗಿ ಟೀಕೆ ಮಾಡಿದರು. ಇದು ಸಾಮರಸ್ಯದ ಅಭಾವದ ಸಮಸ್ಯೆ ದೈಹಿಕವಾಗಿ ಪರಿಹಾರವಾಗಿದ್ದರೂ ಮಾನಸಿಕವಾಗಿ ಆಗಿರಲಿಲ್ಲ ಎಂಬುದನ್ನು ಎತ್ತಿ ತೋರಿಸಿತು.

ಈ ದಶಕದಲ್ಲಿ ದೇಶದ ಎಲ್ಲ ಭಾಷಾ ಚಿತ್ರಗಳಂತೆಯೇ ಕನ್ನಡ ಚಿತ್ರಗಳೂ ಕಚ್ಚಾ ಫಿಲಂ ಅಭಾವದಿಂದ ತತ್ತರಿಸಿಕೊಂಡೇ ನಡೆದು ಬಂದಿದ್ದು ಒಂದು ವಿಶೇಷ. ಈ ಸಮಸ್ಯೆ ೧೯೭೧ರಲ್ಲಿ ದಕ್ಷಿಣ ಭಾರತ ಚಿತ್ರೋದ್ಯಮವನ್ನೇ ಕಾಡಿ, ಉದ್ಯಮ ಹೆಚ್ಚು ಕಡಿಮೆ ಸ್ಥಗಿತಗೊಳ್ಳುವ ಸ್ಥಿತಿಯೇ ಉಂಟಾಯಿತು. ಶೂಟಿಂಗ್ ಮತ್ತಿತರ ಘಟ್ಟಗಳನ್ನು ದಾಟಿ ಬಂದ ಅನೇಕ ಚಿತ್ರಗಳು ಪಾಸಿಟಿವ್ ಇಲ್ಲದೆ ಪರದಾಡುವಂತಾಗಿ ಬಿಡುಗಡೆಯಾಗುವುದೇ ಪ್ರಯಾಸವಾಯಿತು. ಕನ್ನಡಕ್ಕೂ ಇದರ ಕಾವು ತಟ್ಟಿತು. ಮದರಾಸಿನಲ್ಲಿನ ಅನೇಕ ಲ್ಯಾಬೊರೇಟರಿಗಳು ಮುಚ್ಚುವ ಸ್ಥಿತಿಗೆ ಬಂದವು. ಸಾವಿರಾರು ಮಂದಿ ನಿರುದ್ಯೋಗಿಗಳಾಗುವ ಅಪಾಯ ಒದಗಿ ಬಂದಿತು. ಕಚ್ಚಾ ಫಿಲಂ ಆಮದಿನ ಮೇಲಿನ ನಿರ್ಬಂಧವನ್ನು ತೆಗೆದು ಖಾಸಗಿಯವರಿಗೂ ಆಮದು ಮಾಡಿಕೊಳ್ಳಲು ಅವಕಾಶ ಕೊಡಬೇಕೆಂಬ ಮನವಿಯನ್ನು ಸರ್ಕಾರ ಮಾನ್ಯ ಮಾಡಲಿಲ್ಲ. ಸರ್ಕಾರ ಇಡೀ ದೇಶಕ್ಕೆ ೪೦,೦೦೦ ರೋಲುಗಳನ್ನು ಆಮದು ಮಾಡಿಕೊಳ್ಳಲು ಅನುಮತಿ ನೀಡಿ, ಅದರಲ್ಲಿ ೨೪,೦೦೦ ರೋಲುಗಳನ್ನು ದಕ್ಷಿಣ ಭಾರತ ಚಿತ್ರರಂಗಕ್ಕೆ ಮೀಸಲಾಗಬೇಕೆಂದು ಆದೇಶಿಸಿತು. ಆದರೆ ಸರಬರಾಜಾಗಿದ್ದು ೧೬,೦೦೦ ರೋಲುಗಳು. ಇದರಿಂದಾಗಿ ಕಾಳಸಂತೆ ವೃದ್ಧಿಯಾಯಿತು. ಈ ಪರಿಸ್ಥಿತಿ ಸಾಕಷ್ಟು ಕಾಲ ಮುಂದುವರಿದುಕೊಂಡೇ ಬಂದಿದ್ದು ಚಿತ್ರ ನಿರ್ಮಾಣದ ಕುಸಿತಕ್ಕೆ ಕಾರಣವಾಯಿತು. ಮೈಸೂರಿನ ಪ್ರೀಮಿಯರ್ ಸ್ಟುಡಿಯೋದಲ್ಲಂತೂ ಆರು ಫ್ಲೋರುಗಳಲ್ಲಿ ಕೇವಲ ಒಂದೆರಡು ದಿನ ಮಾತ್ರ ಚಿತ್ರೀಕರಣ ನಡೆಯುವ ಪರಿಸ್ಥಿತಿ ಉದ್ಭವವಾಯಿತು.

ಈ ಎಲ್ಲ ಸಮಸ್ಯೆಗಳ, ಕಷ್ಟ-ನಷ್ಟಗಳ ನಡುವೆಯೂ ಈ ದಶಕದಲ್ಲಿ ಕೆಲವು ಉಲ್ಲೇಖನಾರ್ಹ ಚಿತ್ರಗಳು ತೆರೆಗೆ ಬಂದು ಕನ್ನಡ ಚಿತ್ರರಂಗವನ್ನು ರಾಷ್ಟ್ರೀಯ ಚಲನಚಿತ್ರರಂಗದ ನಕ್ಷೆಗೆ ಸೇರಿಸಿದ್ದು ಒಂದು ವಿಶೇಷವೆಂದೇ ಹೇಳಬೇಕು.

೧೯೭೧ರಿಂದ ೧೯೮೦ರವರೆಗೆ ಕನ್ನಡದಲ್ಲಿ ಒಟ್ಟು ೩೪೮ ಚಿತ್ರಗಳು ತಯಾರಾದವು. ಈ ದಶಕದಲ್ಲಿ ಕನ್ನಡ ಚಿತ್ರರಂಗ ಎಷ್ಟು ಏರಿಳಿತಗಳನ್ನು ಕಂಡಿತೆನ್ನುವುದಕ್ಕೆ ಪ್ರತಿ ವರ್ಷ ಚಿತ್ರ ತಯಾರಿಕೆಯಲ್ಲಿ ಆದ ಈ ಏರುಪೇರುಗಳೇ ಸಾಕ್ಷಿ : ೧೯೭೧ - ೩೫, ೧೯೭೨ - ೨೪, ೧೯೭೩ - ೨೩, ೧೯೭೪ - ೨೩, ೧೯೭೫ - ೩೦, ೧೯೭೬ - ೩೫, ೧೯೭೭ - ೫೧, ೧೯೭೮ - ೪೮, ೧೯೭೯ - ೪೨, ೧೯೮೦ - ೫೬.

ಕನ್ನಡದಲ್ಲಿ ಹೊಸ ಅಲೆಯ ಯುಗಕ್ಕೆ ನಾಂದಿ ಹಾಡಿ ಆ ಚಳವಳಿಯನ್ನು ಬೆಳೆಸಿಕೊಂಡು ಹೋದ ಈ ಅವಧಿಯಲ್ಲೇ ಹಿಂದಿನ ದಶಕದಲ್ಲಿ ಕನ್ನಡ ಚಿತ್ರರಂಗಕ್ಕೆ ಕಾಲಿಟ್ಟ ಪ್ರಧಾನವಾಹಿನಿ ಚಿತ್ರೋದ್ಯಮದ ಕೆಲವು ನಿರ್ದೇಶಕರು ಕನ್ನಡಕ್ಕೆ ಕೆಲವು ಯಶಸ್ವಿ ವ್ಯಾಪಾರಿ ಚಿತ್ರಗಳನ್ನು ನೀಡಿದರು. ಆದರೆ ಬಿ.ಆರ್.ಪಂತುಲು, ಬಿ.ಎಸ್.ರಂಗಾ ಮತ್ತು ಆರ್.ನಾಗೇಂದ್ರರಾಯರಂತಹ ಹಿರಿಯರು ತಮ್ಮ ಕ್ರತುಶಕ್ತಿಯನ್ನು ಗಮನೀಯವಾಗಿ ಕಳೆದುಕೊಂಡು ಕೆಲವು ಕಳಪೆ ಚಿತ್ರಗಳನ್ನು ತಯಾರಿಸಿದ್ದೂ ಈ ಅವಧಿಯಲ್ಲೇ.

ಕನ್ನಡ ಚಿತ್ರರಂಗವನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ದ 'ಸಂಸ್ಕಾರ' ೧೯೭೦ರಲ್ಲಿಯೇ ತೆರೆ ಕಂಡಿತಾದರೂ ಆ ಪರಂಪರೆಯ ಚಿತ್ರಗಳು ತಕ್ಷಣವೇ ಕನ್ನಡ ನಿರ್ಮಾಪಕರನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಕರ್ಷಿಸಲಿಲ್ಲ. ೧೯೭೪-೭೫ರವರೆಗೆ ವರ್ಷಕ್ಕೆ ಈ ಜಾಡಿನ ಕೇವಲ ಒಂದೆರಡು ಚಿತ್ರಗಳು ಮಾತ್ರ ನಿರ್ಮಾಣವಾದವು. ೧೯೭೧ರಲ್ಲಿ ಹೊಸ ಅಲೆಯ ಚಿತ್ರವೆನಿಸಿಕೊಳ್ಳಬಹುದಾದ ಯಾವ ಚಿತ್ರವೂ ತೆರೆ ಕಾಣದಿದ್ದರೂ ಎಸ್.ಲಕ್ಷ್ಮೀನಾರಾಯಣ್ ನಿರ್ದೇಶನದ 'ಮುಕ್ತಿ', ಪುಟ್ಟಣ್ಣ ಕಣಗಾಲ್‌ರ 'ಶರಪಂಜರ', 'ದೊರೆ-ಭಗವಾನ್‌ರ 'ಎರಡು ಕನಸು' ಮತ್ತು ಆರ್.ಎನ್.ಕೃಷ್ಣಪ್ರಸಾದ್‌ರವರ 'ನಗುವ ಹೂ' ಅಲ್ಲಿಯೂ ಸಲ್ಲುವ, ಇಲ್ಲಿಯೂ ಸಲ್ಲುವ ಚಿತ್ರಗಳೆನಿಸಿಕೊಂಡವು.

ಈ ದಶಕದಲ್ಲಿ ಕನ್ನಡ ಚಿತ್ರಗಳು ಅಂತರರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಭಾಗವಹಿಸಿ ಮನ್ನಣೆ ಗಳಿಸಿದವು. ಇದೇ ಅವಧಿಯಲ್ಲೇ ಹೊಸ ಅಲೆ ಎಂಬ ಹಣೆ ಪಟ್ಟಿ ಹೊತ್ತು ಹಲವು ಚಿತ್ರಗಳು ಬಂದವು. ಇಲ್ಲಿ ಹೊಸ ಅಲೆ ಎಂದರೆ ಏನು ಎಂಬ ಪ್ರಶ್ನೆಯನ್ನೇ ಸ್ವಲ್ಪ ವಿವೇಚಿಸಬೇಕಾಗುತ್ತದೆ. ಅನೇಕ ಚಿತ್ರಗಳು ಹಾಡು, ನೃತ್ಯ, ಹೊಡೆದಾಟ ಇಲ್ಲದುದನ್ನೇ ಒಂದು ವಿಶೇಷವೆಂದು ಭಾವಿಸಿ ಹೊಸ ಅಲೆಯ ಪಟ್ಟಿಯಲ್ಲಿ ಸೇರಬಯಸಿದವು. ಇನ್ನು ಕೆಲವರು 'ಸಂಸ್ಕಾರ', 'ವಂಶವೃಕ್ಷ', 'ಗ್ರಹಣ', 'ಘಟಶ್ರಾದ್ಧ' ಚಿತ್ರಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಅವುಗಳ ಮೂಲ ಉದ್ದೇಶವಾದ ಆತ್ಮವಿಮರ್ಶೆಯನ್ನು ತಿರುಚಿ, ಬ್ರಾಹ್ಮಣಧರ್ಮವನ್ನು ಜರಿಯುವುದೇ ಹೊಸ ಅಲೆಯ ಚಿತ್ರಗಳ ಲಕ್ಷಣವೆಂದು ವ್ಯಂಗ್ಯಾರ್ಥದಲ್ಲಿ ಹೇಳಲಾರಂಭಿಸಿದರು. ಒಂದಲ್ಲ ಒಂದು ಕಾರಣದಿಂದ ಹೊಸ ಅಲೆಯ ಪಟ್ಟಿಯಲ್ಲಿ ಹೇಗೆಯೋ ಸೇರಿಕೊಂಡ ಕೆಲವು ಚಿತ್ರಗಳಂತೂ ತಾಂತ್ರಿಕವಾಗಿ ಎಷ್ಟು ಕಳಪೆಯಾಗಿದ್ದುವೆಂದರೆ 'ಚಿತ್ರಮಾಧ್ಯಮದ ಮೇಲೆ ಕಿಂಚಿತ್ತೂ ಹಿಡಿತವಿಲ್ಲದವರು ಮಾಡುವ ಚಿತ್ರವೇ ಹೊಸ ಅಲೆ' ಎಂದು ಉದ್ಯಮದವರು ಹಾಸ್ಯ ಮಾಡುವಂತಾಯಿತು. ಆರಂಭದಲ್ಲಿ ಹೊಸ ಅಲೆ ಚಿತ್ರಗಳನ್ನು ಪ್ರೋತ್ಸಾಹಿಸಿದವರೂ ವ್ಯಾಪಾರಿ ಚಿತ್ರೋದ್ಯಮಿಗಳೇ ಎನ್ನುವುದು ಗಮನಾರ್ಹ.

ಕನ್ನಡ ಚಿತ್ರರಂಗದ ಆಧಾರಸ್ತಂಭಗಳಲ್ಲಿ ಒಬ್ಬರೆನಿಸಿದ್ದ ಬಿ.ಆರ್.ಪಂತುಲು 'ಶ್ರೀಕೃಷ್ಣದೇವರಾಯ' ನಂತರ ಕನ್ನಡದಲ್ಲಿ ಮತ್ತೆ ಮಹತ್ವಾಕಾಂಕ್ಷೆಯ ಚಿತ್ರಗಳನ್ನೇನೂ ತಯಾರಿಸಲಿಲ್ಲ, ತಯಾರಿಸುವುದು ಸಾಧ್ಯವಿಲ್ಲವೆಂಬ ಹೇಳಿಕೆಯೊಂದನ್ನು ಕೊಟ್ಟರು. ಅನಂತರ 'ಅಳಿಯ ಗೆಳೆಯ', 'ಮಾಲತಿ ಮಾಧವ', 'ಒಂದು ಹೆಣ್ಣಿನ ಕಥೆ' ಮುಂತಾದ ಯಾವುದೇ ರೀತಿಯಲ್ಲೂ ವಿಶೇಷವೆನಿಸದ ಚಿತ್ರಗಳನ್ನು ಕೊಟ್ಟರು. ಹಿಂದಿನ ದಶಕದಲ್ಲಿ 'ವಿಜಯನಗರದ ವೀರಪುತ್ರ' ಚಿತ್ರವನ್ನು ಫಿಲಂ ಫೈನಾನ್ಸ್ ಕಾರ್ಪೊರೇಷನ್ ನೆರವು ಪಡೆದು ತಯಾರಿಸಿ ಕೈ ಸುಟ್ಟುಕೊಂಡಿದ್ದ ನಾಗೇಂದ್ರರಾವ್ 'ನಾಡಿನ ಭಾಗ್ಯ' ಎಂಬ ವಿಲಕ್ಷಣ ಚಿತ್ರವೊಂದನ್ನು ನೀಡಿ ಚಿತ್ರರಂಗದಿಂದ ನಿರ್ಗಮಿಸಿದರು. ಒಂದು ಕಾಲದಲ್ಲಿ ಕನ್ನಡದ ಎರಡು ಭವ್ಯ ಲಾಂಛನಗಳೆನಿಸಿದ್ದ ಈ ಹಿರಿಯರಿಬ್ಬರ ನೇತೃತ್ವದಲ್ಲಿದ್ದ ಸಂಸ್ಥೆಗಳ ನಿರ್ಗಮನವೂ ೧೯೭೦ರ ದಶಕದಲ್ಲಿಯೇ ಆಯಿತು.

ಈ ದಶಕದಲ್ಲಿ ಕನ್ನಡ ಚಿತ್ರರಂಗವನ್ನು ವ್ಯಾಪಾರಿ ಮತ್ತು ಕಲಾತ್ಮಕ ಸ್ತರಗಳಲ್ಲಿ ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಹೊತ್ತವರು ಪುಟ್ಟಣ್ಣ ಕಣಗಾಲ್, ಎಸ್.ಲಕ್ಷ್ಮೀನಾರಾಯಣ್, ಸಿದ್ದಲಿಂಗಯ್ಯ, ದೊರೆ-ಭಗವಾನ್, ಗಿರೀಶ್ ಕಾರ್ನಾಡ್, ಬಿ.ವಿ.ಕಾರಂತ್, ವೈ.ಆರ್.ಸ್ವಾಮಿ, ಗೀತಪ್ರಿಯ, ದ್ವಾರಕೀಶ್, ವಾದಿರಾಜ್-ಜವಾಹರ್, ಜಿ.ವಿ.ಅಯ್ಯರ್, ಹುಣಸೂರು ಕೃಷ್ಣಮೂರ್ತಿ, ಎಂ.ಆರ್.ವಿಠಲ್, ವಿಜಯ್, ರವೀ, ಪಿ.ಲಂಕೇಶ್, ಕಾಶೀನಾಥ್, ಎಂ.ಎಸ್.ಸತ್ಯು, ಗಿರೀಶ್ ಕಾಸರವಳ್ಳಿ, ನಾಗಾಭರಣ, ವಿ.ಸೋಮಶೇಖರ್, ವಿ.ಆರ್.ಕೆ.ಪ್ರಸಾದ್, ಶಂಕರ್‌ನಾಗ್ ಮುಂತಾದ ಪ್ರತಿಭಾವಂತರು.

ಟಿ.ಎಸ್.ರಂಗಾ, ಕೆ.ಎಂ.ಶಂಕರಪ್ಪ, ಚಂದ್ರಶೇಖರ ಕಂಬಾರ, ಕಟ್ಟೆ ರಾಮಚಂದ್ರ, ಕೆ.ವಿ.ಜಯರಾಂ, ಬರಗೂರು ರಾಮಚಂದ್ರಪ್ಪ, ಪಿ.ಎಸ್.ಶ್ರೀನಿವಾಸ್, ಸಿ.ಆರ್.ಸಿಂಹ, ವಿಶುಕುಮಾರ್, ಪಿ.ವಿ.ನಂಜರಾಜ ಅರಸ್ ಮುಂತಾದ ಸೃಜನಾತ್ಮಕ ನಿರ್ದೇಶಕರ ಪ್ರವೇಶವಾದದ್ದೂ ಈ ದಶಕದಲ್ಲಿಯೆ. ಆದರೆ ಅವರಲ್ಲಿ ಕೆಲವರು ಮಾತ್ರ ಚಿತ್ರರಂಗದಲ್ಲಿ ಉಳಿದುಕೊಂಡರು.

ಸಾಹಿತಿ ಶಿವರಾಮ ಕಾರಂತರು ಪ್ರಾರಂಭದಲ್ಲೇ ಮೂಕಿ ಚಿತ್ರಗಳನ್ನು ತಯಾರಿಸಿದ್ದರು. ಚಲನಚಿತ್ರ ಕ್ಷೇತ್ರದಲ್ಲೂ ಅಧ್ಯಯನ ಮಾಡಿ ಲೇಖನಗಳನ್ನು ಬರೆದಿದ್ದಾರೆ. ಅವರು 'ಕುಡಿಯರ ಕೂಸು' ಕಾದಂಬರಿಯನ್ನು ಆಧರಿಸಿ ಚಿತ್ರಿಸಿದರು. ಕುಡಿಯರ ಜನಾಂಗದ ಜೀವನವನ್ನು ಕುರಿತ ಘಟ್ಟದ ಕೆಳಗಿನ, ಘಟ್ಟದ ಮೇಲಿನ ಜನರ ನಡವಳಿಕೆಗಳನ್ನು ಕುರಿತ ಕಥಾವಸ್ತು. ಚಿತ್ರಕ್ಕೆ 'ಮಲೆಯ ಮಕ್ಕಳು' ಎಂದು ಹೆಸರಿಸಲಾಗಿತ್ತು. ಶಿವರಾಮ ಕಾರಂತರು ಇಲ್ಲಿಯೂ ಧ್ವನಿಗ್ರಹಣಕ್ಕೆ ಸಂಬಂಧಿಸಿದಂತೆ ಕೆಲವು ಪ್ರಯೋಗಗಳನ್ನು ಮಾಡಲು ಹೋಗಿ ವಿಫಲರಾದರು.

ಕಳೆದ ದಶಕದಲ್ಲಿ ಕನ್ನಡ ಚಿತ್ರರಂಗಕ್ಕೆ ಜೇಮ್ಸ್ ಬಾಂಡ್ ಚಿತ್ರಗಳ ಜಾಡನ್ನು ಆಮದು ಮಾಡಿ ಹೆಸರು ಮಾಡಿದ್ದ ದೊರೆ-ಭಗವಾನ್ ಜೋಡಿ ೧೯೭೦ರ ದಶಕದಲ್ಲಿ ಗಂಭೀರವಾದ ಸಾಮಾಜಿಕ ಚಿತ್ರಗಳ ಕಡೆಗೆ ಗಮನ ಹರಿಸಿತು. ಜನಪ್ರಿಯ ಕಾದಂಬರಿಗಳ ಆಧಾರದ ಮೇಲೆ ಚಿತ್ರಕಥೆಗಳನ್ನು ಹೆಣೆದು ಕನ್ನಡ ಸಾಹಿತ್ಯ ಪ್ರಪಂಚ ಮತ್ತು ಚಲನಚಿತ್ರ ಪ್ರಪಂಚಗಳ ನಡುವೆ ನಂಟನ್ನು ಭದ್ರಪಡಿಸಿತು. ಅವರು ೧೯೭೧ರಲ್ಲಿ ತೆರೆಗಿತ್ತ 'ಕಸ್ತೂರಿ ನಿವಾಸ' ಕನ್ನಡ ಚಿತ್ರೋದ್ಯಮ ನೆನೆಯುವ ಚಿತ್ರಗಳಲ್ಲೊಂದು. ಈ ಚಿತ್ರ ದೊರೆ-ಭಗವಾನ್‌ರವರ ವೃತ್ತಿಜೀವನದಲ್ಲೂ ಒಂದು ಮೈಲಿಗಲ್ಲಾಯಿತು. ಮುಂದೆ ದೀರ್ಘಕಾಲ ಅವರು ರಾಜ್ ಸಂಸ್ಥೆಯ ನೆಚ್ಚಿನ ನಿರ್ದೇಶಕ ಜೋಡಿಯಾಗಿ ಉಳಿದರು.

ವಾಸ್ತವವಾಗಿ ಅಸಹಜ ಕಥೆ ಮತ್ತು ಸನ್ನಿವೇಶಗಳಿಂದ ಸೊರಗಿದ ಈ ಚಿತ್ರದ ನಿರೂಪಣೆಯಲ್ಲಿ ಯಾಂತ್ರಿಕತೆಯಿತ್ತು. ಪ್ರೇಕ್ಷಕರು ಕಣ್ಣೆದುರಿಗೇ ನೋಡಿದ ಸಂಗತಿಗಳನ್ನು ಅನಗತ್ಯ ಸಂಭಾಷಣೆಯ ಮೂಲಕ ಮತ್ತೆ ಮತ್ತೆ ವಿವರಿಸುವುದು, ಎಲ್ಲ ಪಾತ್ರಗಳೂ ನಾಯಕನ ದುಃಸ್ಥಿತಿಯನ್ನು ಪದೇ ಪದೇ ವರ್ಣಿಸುವುದು ಇತ್ಯಾದಿ ನ್ಯೂನತೆಗಳು ಇದ್ದವು. ರಾಜಕುಮಾರ್‌ರವರ ಅಭಿನಯದ ಜೊತೆಗೆ ಪ್ರಮುಖವಾಗಿ ಎದ್ದು ನಿಂತಿದ್ದೆಂದರೆ ಚಿ.ಉದಯಶಂಕರ್‌ರ ಗೀತೆಗಳು. 'ಆಡಿಸಿ ನೋಡು ಬೀಳಿಸಿ ನೋಡು ಉರುಳಿ ಹೋಗದು....' ಒಂದು ಜನಪದ ಗೀತೆಯಾಗಿಯೇ ಉಳಿಯಬಹುದಾದಷ್ಟು ಅರ್ಥಪೂರ್ಣವಾಗಿತ್ತು. ಚಿತ್ರದ ಸಂಗೀತ ನಿರ್ದೇಶಕರು ಜಿ.ಕೆ.ವೆಂಕಟೇಶ್. ಆದರೆ ಹಿನ್ನೆಲೆ ಸಂಗೀತದಲ್ಲಿ ಅವರು ಮೂಲಕಥೆಯ ಸಂವೇದನೆಗೆ ತಕ್ಕ ಸೂಕ್ಷ್ಮತೆಗಳನ್ನು ತರುವ ಪ್ರಯತ್ನದಲ್ಲಿ ಅಷ್ಟಾಗಿ ಯಶಸ್ವಿಯಾಗಲಿಲ್ಲ. ಚಿತ್ರದ ಧ್ವನಿಮುದ್ರಣವೂ ಸಮರ್ಪಕವಾಗಿರಲಿಲ್ಲ. ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ಸ್ವತಃ ಒಂದು ಗೀತೆಯನ್ನು ಹಾಡಿದ್ದು ಈ ಚಿತ್ರದ ಹೆಚ್ಚಳ.

ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಶರಪಂಜರ' ಕನ್ನಡ ಚಿತ್ರೋದ್ಯಮದ ಮೈಲಿಗಲ್ಲುಗಳಲ್ಲಿ ಒಂದೆಂದು ಗುರುತಿಸಲಾದ ಚಿತ್ರ. ೧೯೭೧ರಲ್ಲಿ ಹೊರಬಂದ ಈ ಚಿತ್ರ ವರ್ಣದಲ್ಲಿ ಹತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗಿದೆ ಅಂದು ಉದ್ಯಮದಲ್ಲಿ ಒಂದು ದಾಖಲೆ. ಇಂತಹ ಸಾಹಸಕ್ಕೆ ಪ್ರೇರಕಶಕ್ತಿಯಾಗಿ ನಿಂತವರು ದೊಡ್ಡಬಳ್ಳಾಪುರದ ಪ್ರಮುಖ ರೇಷ್ಮೆ ಉದ್ಯಮಿ, ಕನ್ನಡ ಚಿತ್ರರಂಗದಲ್ಲಿ ಭದ್ರವಾಗಿ ನೆಲೆಯೂರಿದ ಕೆ.ಸಿ.ಎನ್.ಗೌಡರು. 'ಬೆಳ್ಳಿಮೋಡ', 'ಕಪ್ಪು-ಬಿಳುಪು', 'ಗೆಜ್ಜೆಪೂಜೆ' ಚಿತ್ರಗಳಿಂದಾಗಿ ಕನ್ನಡ ಚಿತ್ರರಂಗದಲ್ಲಿ ಅತ್ಯಂತ ಜನಪ್ರಿಯ ತ್ರಿವಳಿಗಳೆನಿಸಿಕೊಂಡಿದ್ದ ತ್ರಿವೇಣಿ-ಪುಟ್ಟಣ್ಣ-ಕಲ್ಪನಾ ಅವರುಗಳ ಮೇಲಿನ ನಂಬಿಕೆ ಗೌಡರಿಗೆ ಈ ಭಾರಿ ಸಾಹಸವನ್ನು ಕೈಗೊಳ್ಳಲು ಧೈರ್ಯ ತಂದಿರಬಹುದು.

ಮಡಿಕೇರಿ, ಬಿಳಿಗಿರಿರಂಗನ ಬೆಟ್ಟ, ಶ್ರೀರಂಗಪಟ್ಟಣಗಳಲ್ಲಿ ಶ್ರೀಮಂತವಾಗಿ ಚಿತ್ರಿತವಾದ 'ಶರಪಂಜರ' ಪುಟ್ಟಣ್ಣನವರ ಮುಂಚಿನ ಚಿತ್ರಗಳಂತೆಯೇ ಹಾಡುಗಳ ಅರ್ಥಪೂರ್ಣ ಚಿತ್ರಣದಿಂದಾಗಿ ವಿಶೇಷವಾಗಿ ಗಮನ ಸೆಳೆಯಿತಲ್ಲದೆ ಅಂದಿಗೆ ಅಪರೂಪವಾಗಿದ್ದ ಮನೋವಿಶ್ಲೇಷಣಾತ್ಮಕ ಕಥಾವಸ್ತುವನ್ನು ಹೊಂದಿತ್ತು. ಸುಪ್ತಪ್ರಜ್ಞೆಯಲ್ಲುಳಿದ ಏರುಯೌವನದಲ್ಲಿನ ಅಚಾತುರ್ಯದ ನೆನಪಿನಿಂದಾಗಿ ಮನೋವೈಕಲ್ಯಕ್ಕೆ ಗುರಿಯಾದ ಹೆಣ್ಣೊಬ್ಬಳು ಮುಂದೆ ಸೂಕ್ತ ಮಾನಸಿಕ ಚಿಕಿತ್ಸೆಯಿಂದ

ಎಲ್ಲರಂತಾದರೂ ಸಮಾಜ ಆಕೆಯನ್ನು ಎಂದಿನಂತೆ ನೋಡದೆ ಆಕೆಯ ವಿಷಯದಲ್ಲಿ ಅನುಮಾನ ಮತ್ತು ಕ್ರೌರ್ಯಗಳಿಂದ ವರ್ತಿಸಿ ಆಕೆಯನ್ನು ಮತ್ತೆ ಮನೋವೈಕಲ್ಯಕ್ಕೆ ಗುರಿ ಮಾಡುವ ಕಥೆಯನ್ನು ಪ್ರಭಾವಶಾಲಿಯಾಗಿ ಹೇಳುವುದರಲ್ಲಿ ಪುಟ್ಟಣ್ಣ ಸಮರ್ಥರಾದರು. ಆದರೆ ಹಿನ್ನೋಟದಲ್ಲಿ ನೋಡುವುದಾದರೆ ಈ ಚಿತ್ರ ಮನೋವೈಕಲ್ಯಕ್ಕೆ ಸಂಬಂಧಿಸಿದಂತೆ ಪ್ರಗತಿಪರ ಧೋರಣೆಗಳನ್ನು ಹೊಂದಿತ್ತಾದರೂ ಹೆಣ್ಣಿನ ಶೀಲ ಎಂಬುದರ ಬಗ್ಗೆ ಸಾಮಾಜಿಕವಾಗಿ ಗತಕಾಲದ ಅರ್ಥವನ್ನೇ ಕೊಡುವುದಾಗಿದ್ದು ಆ ಮಟ್ಟಿಗೆ 'ಸಂಸ್ಕಾರ', 'ವಂಶವೃಕ್ಷ' ಚಿತ್ರಗಳಿಗೆ ವಿರುದ್ಧ ಧೋರಣೆಯನ್ನು ಹೊಂದಿತ್ತು. ಶ್ರೀರಂಗಪಟ್ಟಣದ ಕಾವೇರಿ ತೀರದಲ್ಲಿನ 'ಕಳಕೊಂಡೆ ಕಳಕೊಂಡೆ....' ದೃಶ್ಯವನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ಹೆಣ್ಣಿಗೆ ಶೀಲವೇ ಆಭರಣ, ವೈವಾಹಿಕ ಜೀವನದ ಸಫಲತೆಯಲ್ಲೇ ಆಕೆಯ ಸಾರ್ಥಕ್ಯ, ಆಧುನಿಕ ಜೀವನಕ್ಕೆ ಮನಸೋತ ಹೆಣ್ಣಿನ ಬಾಳು ಸರ್ವನಾಶ ಎಂಬಿತ್ಯಾದಿ ಪುಟ್ಟಣ್ಣನವರ ಕೆಲವು ಪ್ರಿಯವಾದ ಧೋರಣೆಗಳಿಗೆ ಈ ಚಿತ್ರವೂ ಪ್ರತೀಕವಾಗಿ ಉಳಿಯಿತು. ಅದೂ ಅಲ್ಲದೆ ದೃಕ್‌ಶ್ರವಣ ಮಾಧ್ಯಮದಲ್ಲಿ ಸನ್ನಿವೇಶಗಳು ಸೂಚ್ಯವಾಗಿದ್ದಷ್ಟೂ ಪರಿಣಾಮಕಾರಿ ಎಂಬ ತತ್ತ್ವ ಪುಟ್ಟಣ್ಣನವರ ಸಿನಿಮಾ ಮೀಮಾಂಸೆಗೆ ಸುಲಭವಾಗಿ ಎಟುಕುತ್ತಿರಲಿಲ್ಲ ಎಂಬುದನ್ನೂ ಚಿತ್ರ ತೋರಿತು. 'ಹದಿನಾಲ್ಕು ವರ್ಷ ವನವಾಸದಿಂದ ಮರಳಿ ಬಂದಳು ಸೀತೆ....' ಶ್ರಾವ್ಯತೆಯ ದೃಷ್ಟಿಯಿಂದ ಜನಪ್ರಿಯವಾಯಿತು.

'ಶರಪಂಜರ' ಮುಂದಿನ ಕನ್ನಡ ಚಿತ್ರರಂಗದ ನಿರ್ಮಾಣ ಮೌಲ್ಯಗಳ ಮೇಲೆ ದಟ್ಟವಾದ ಪರಿಣಾಮವನ್ನು ಬೀರಿತೆಂಬುದನ್ನು ಅಲ್ಲಗಳೆಯುವಂತಿಲ್ಲ. ವಿಶೇಷವಾಗಿ ಮಡಿಕೇರಿಯಲ್ಲಿ ಪುಟ್ಟಣ್ಣನವರು 'ಸಂದೇಶ, ಮೇಘಸಂದೇಶ.....' ಹಾಡಿನ ಸನ್ನಿವೇಶವಲ್ಲಿ ಬಳಸಿದ ಸಹಸ್ರಾರು ಕಿತ್ತಲೆ ಹಣ್ಣುಗಳ ಉರುಳುವಿಕೆಯ ದೃಶ್ಯ ಕನ್ನಡ ಚಿತ್ರರಂಗವಲ್ಲಿ ಆನಂದ, ಉತ್ಸಾಹ, ಕನಸುಗಳಿಗೆ ಒಂದು ಮುಡಿಗಟ್ಟಾಗಿ ನಿಂತಿತು.

ಚಿತ್ರದ ತುಂಬ ದುಗುಡವೇ ತುಂಬಿದ್ದರೂ ಆಡುಗೆ ಭಟ್ಟನಾಗಿ ವಿಶಿಷ್ಟ ಹಾಸ್ಯ ಪಾತ್ರವೊಂದರಲ್ಲಿ ಮಿಂಚಿ ಜನಪ್ರಿಯತೆಯ ಉತ್ತುಂಗವನ್ನೇರಿದ ಬಹುಮುಖ ಪ್ರತಿಭೆಯ ನಟ ಶಿವರಾಂ ಈ ಚಿತ್ರದಿಂದಾಗಿ 'ಶರಪಂಜರ ಶಿವರಾಂ' ಆಗಿಬಿಟ್ಟರು.

ಪುಟ್ಟಣ್ಣ ತಮ್ಮ ಚಿತ್ರಗಳಲ್ಲಿ ಸ್ವೈಜತೆಗೆ, ಸಣ್ಣ ಪುಟ್ಟ ವಿವರಗಳಿಗೆ ಬಹಳ ಗಮನ ಕೊಟ್ಟ ನಿರ್ದೇಶಕ. ಅವರು ಅರಣ್ಯ ಪ್ರದೇಶದಲ್ಲಿ 'ಶರಪಂಜರ'ಕ್ಕೆ ಚಿತ್ರೀಕರಣ ನಡೆಸುತ್ತಿದ್ದಾಗ ಕಾಡಿಗೆ ಇದ್ದಕ್ಕಿದ್ದಂತೆ ಬೆಂಕಿ ಹತ್ತಿತು. ತಂಡದವರೆಲ್ಲ ಓಡಿಹೋಗಲು ಪ್ರಾರಂಭಿಸಿದರು. ಆದರೆ ಪುಟ್ಟಣ್ಣ ಧೃತಿಗೆಡದೆ ಅಲ್ಲಿಯೇ ನಿಂತು ಕಾಡ್ಗಿಚ್ಚನ್ನು ಚಿತ್ರೀಕರಿಸುವಂತೆ ಛಾಯಾಗ್ರಾಹಕ ಡಿ.ವಿ.ರಾಜಾರಾಂ ಅವರಿಗೆ ಹೇಳಿದರು. ರಾಜಾರಾಂ ಸುಂದರವಾಗಿ ದೃಶ್ಯವನ್ನು ಸೆರೆ ಹಿಡಿದರು. ಮುಂದೆ 'ಬೆಟ್ಟದಾ ಕಾಡ್ಗಿಚ್ಚು ದೀಪವೇ, ಬಿರುಗಾಳಿ ಕೆಂಧೂಳಿ ಧೂಪವೇ.....' ಗೀತೆಗೆ ಈ ದೃಶ್ಯದಿಂದ ಅನುಕೂಲವಾಯಿತು. ಕೊಡಗಿನಲ್ಲಿ ನಡೆಯುವ ಮದುವೆಯ ದೃಶ್ಯವೊಂದರ ಚಿತ್ರಣಕ್ಕೆ ಪುಟ್ಟಣ್ಣ ಕೊಡಗಿನ ವಾದ್ಯಗಳನ್ನೇ ಬಳಸಿ, ವಾದ್ಯ ಕಲಾವಿದರನ್ನೆಲ್ಲ ಮದರಾಸಿಗೇ ಕರೆಸಿಕೊಂಡರು.

'ಶರಪಂಜರ'ದ ಮೊದಲ ಪ್ರತಿ ಮದರಾಸಿನಲ್ಲಿ ಪ್ರದರ್ಶಿತವಾದಾಗ ಚಿತ್ರಮಂದಿರ ಭರ್ತಿಯಾಗಿತ್ತು. ಅನೇಕ ಹಿಂದಿ, ತೆಲುಗು ಕಲಾವಿದರು ಚಿತ್ರವನ್ನು ನೋಡಿ ಮೆಚ್ಚಿಕೊಂಡರು. ಅವರ ಪೈಕಿ ನಾಯಕಿ ಲೀನಾ ಚಂದಾವರ್ಕರ್ ಚಿತ್ರವನ್ನು ಹಿಂದಿಯಲ್ಲಿ ತಯಾರಿಸಲು ಬಯಸಿ ಕಲ್ಪನಾ ಅಭಿನಯಿಸಿದ ಪಾತ್ರವನ್ನು ತಾವೇ ಅಭಿನಯಿಸ ಬಯಸಿದರು.

(ಚಿತ್ರ ೭) 'ಶರಪಂಜರ' ಚಿತ್ರದಲ್ಲಿ ಕಲ್ಪನಾ

'ಶರಪಂಜರ'ಕ್ಕೆ ೧೯೭೧ರ ಅತ್ಯಂತ ಶ್ರೇಷ್ಠ ಚಿತ್ರವೆಂಬ ರಾಜ್ಯ ಪ್ರಶಸ್ತಿಯ ಜೊತೆಗೆ ಇನ್ನೂ ಹತ್ತಾರು ಪ್ರಶಸ್ತಿಗಳು ಲಭ್ಯವಾಗಿ ಆರ್ಥಿಕವಾಗಿ ಕೂಡ ಚಿತ್ರ ಯಶಸ್ವಿಯಾಯಿತು. ಬೆಂಗಳೂರಿನ ಸ್ಟೇಟ್ಸ್ ಚಿತ್ರಮಂದಿರದಲ್ಲಿ ಸತತವಾಗಿ ೨೫ ವಾರಗಳು ಪ್ರದರ್ಶಿತವಾಗಿ ಲಾಲ್‌ಬಾಗ್‌ನ ಗಾಜಿನ ಮನೆಯಲ್ಲಿ ರಾಜ್ಯಪಾಲ ಧರ್ಮವೀರರ ಉಪಸ್ಥಿತಿಯಲ್ಲಿ, ರಾಜಕುಮಾರ್‌ರವರ ಅಧ್ಯಕ್ಷತೆಯಲ್ಲಿ ಸಂಭ್ರಮದಿಂದ ರಜತೋತ್ಸವವನ್ನೂ ಆಚರಿಸಿಕೊಂಡಿತು. ವಿಶೇಷವೆಂದರೆ ಸಮಾರಂಭದಲ್ಲಿ ಚಿತ್ರ ಸಾಹಿತಿಗಳಿಗೆ ಮೊದಲು ಪ್ರಶಸ್ತಿ ನೀಡಿದ್ದು. ದಿ।ತ್ರಿವೇಣಿಯವರ ಮಗಳು ಮೀರಾ ಪ್ರಶಸ್ತಿಯನ್ನು ಸ್ವೀಕರಿಸಿದ್ದರು.

ಪುಟ್ಟಣ್ಣ ನಿರ್ದೇಶನದ ಚಿತ್ರ 'ಸಾಕ್ಷಾತ್ಕಾರ' ತೆರೆಗೆ ಬಂದಿದ್ದೂ ಅದೇ ವರ್ಷದಲ್ಲಿಯೆ. ಸಂಪ್ರದಾಯಶೀಲತೆ, ಅದಕ್ಕೊಪ್ಪುವ ಮೌಲ್ಯಗಳು, ಇವೆಲ್ಲ ಆಯಾ ವ್ಯಕ್ತಿಯ ವೈಯಕ್ತಿಕ ನಂಬಿಕೆಯ, ಬದ್ಧತೆಯ ವಿಷಯಗಳು. ಇವನ್ನು ಚಿತ್ರಗಳಲ್ಲಿ ತರಬಾರದೆಂಬ ಯಾವ ನಿಯಮವೂ ಇಲ್ಲ. ಆದರೆ ಪ್ರಶ್ನೆ ಬರುವುದು ಹೇಗೆ ತರುತ್ತೇವೆಂಬುದರಲ್ಲಿ. ಅಂದರೆ ನಿರ್ದೇಶಕ ತನ್ನ ವೈಯಕ್ತಿಕ ಅಭಿಪ್ರಾಯಗಳನ್ನು ಪ್ರೇಕ್ಷಕನ ಮೇಲೆ ಹೇರದೆ ಪ್ರೇಕ್ಷಕನೇ ಚಿತ್ರವೊಂದನ್ನು ನೋಡಿದ ನಂತರ ತನ್ನಲ್ಲಿನ ವೈಚಾರಿಕತೆಯಿಂದಾಗಿಯೇ ಆ ಬಗ್ಗೆ ಸಹಾನುಭೂತಿಯನ್ನು ಹೊಂದುವಂತಾದರೂ ಮಾಡಿದರೆ ಆಗ ಅದು ಶ್ರೇಷ್ಠ ಚಿತ್ರವೆನಿಸಿಕೊಳ್ಳುವುದು ಸಾಧ್ಯ. ಆದರೆ ಪುಟ್ಟಣ್ಣನವರಿಗೆ ಈ ತತ್ತ್ವದ ಬಗ್ಗೆ ನಂಬಿಕೆಯಿತ್ತೆ ಎಂಬ ಸಂದೇಹವನ್ನು 'ಸಾಕ್ಷಾತ್ಕಾರ' ಮೂಡಿಸಿತು.

ಮೂಲಭೂತವಾಗಿ ಒಂದು ಮನೆತನದ ವಿಘಟನೆಯ ಚಿತ್ರವಾದ ಇದರಲ್ಲಿ ಪುಟ್ಟಣ್ಣನವರು ಪ್ರತಿಯೊಬ್ಬರೂ ತಮ್ಮ ಕರ್ಮಫಲವನ್ನು ಅನುಭವಿಸಲೇಬೇಕೆಂಬ ಭಾರತೀಯ ನಂಬಿಕೆಯನ್ನು ನಿರೂಪಿಸಲು ಯತ್ನಿಸಿದರು. ಆದರೆ ಅದಕ್ಕೆ ಅವರು ಅನುಸರಿಸಿದ ಶೈಲಿಯಲ್ಲಿ ಪ್ರಬುದ್ಧತೆಯ ಕೊರತೆಯಿತ್ತು. ಪಾತ್ರಗಳ ಚಿತ್ರಣದಲ್ಲಿ ಸಹ ಅವರು ಪ್ರತಿ ವ್ಯಕ್ತಿಯಲ್ಲಿಯೂ ಕಪ್ಪು-ಬಿಳುಪಿನ ನಡುವಣ ಬೂದು ಬಣ್ಣದ ಕೆಲವು ಛಾಯೆಗಳಿರುತ್ತವೆ ಎಂಬುದನ್ನು ಮರೆತರು. 'ಬೆಳ್ಳಿಮೋಡ'ದಲ್ಲಿ ಸ್ವಾರ್ಥವೇ ಪ್ರಧಾನವಾಗಿದ್ದ ಒಬ್ಬ ಮನುಷ್ಯನ ವ್ಯಕ್ತಿತ್ವದ ಹಲವು ಪದರಗಳನ್ನು ನವಿರಾಗಿ ಬಿಂಬಿಸಿದ ಪುಟ್ಟಣ್ಣ 'ಸಾಕ್ಷಾತ್ಕಾರ'ದಲ್ಲಿ ಆ ನವಿರನ್ನು ಸಂಪೂರ್ಣವಾಗಿ ಮರೆತರು. ಪೃಥ್ವೀರಾಜ್ ಕಪೂರ್, ನಾಗೇಂದ್ರರಾವ್, ರಾಜಕುಮಾರ್, ಜಮುನಾರಂತಹ ಪರಿಣತ ನಟ-ನಟಿಯರಿದ್ದೂ, ಬಿಡಿ ದೃಶ್ಯಗಳ ಕಲ್ಪನೆಯಲ್ಲಿ ಪುಟ್ಟಣ್ಣನವರ ಎಂದಿನ ಕೌಶಲ್ಯವಿದ್ದೂ ಚಿತ್ರ ತನ್ನ ಮೂಲಭೂತ ದೋಷಗಳಿಂದಾಗಿ ಕಟು ಟೀಕೆಗೆ ತುತ್ತಾಯಿತು.

ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ಬರೆದ ಪುಟ್ಟಣ್ಣನವರ ಅಣ್ಣ ಕಣಗಾಲ್ ಪ್ರಭಾಕರಶಾಸ್ತ್ರಿಗಳು 'ಗಂಡಸು ಪುಂಡಪೋಕರಿಯಾಗಲಿ, ಕರ್ಮಚಂಡಾಲನಾಗಿರಲಿ, ಹೆಂಡತಿ ಪ್ರತಿದಿನ ಮಾಡುವ ತುಳಸೀ ಪೂಜೆ ಸಾವಿರ ವರ್ಷಗಳ ತಪಸ್ಸಿನ ಪುಣ್ಯವನ್ನು ನೀಡುತ್ತದೆ' ಎಂದು ಹೇಳಿ ಗಂಡಸಿನ ಪೋಕರಿತನಕ್ಕೆ, ಕರ್ಮಚಾಂಡಾಲತ್ವಕ್ಕೆ ಪರವಾನಗಿ ನೀಡಿದರೆಂಬ ಅಪವಾದಕ್ಕೆ ಒಳಗಾದರು. ಉಳುವವನಿಗೆ ಭೂಮಿ, ಸಮಾಜವಾದ, ಕನ್ನಡತನಗಳ ಉಪದೇಶಗಳೂ ಚಿತ್ರದಲ್ಲಿ ಧಾರಾಳವಾಗಿದ್ದವು. 'ಬೆಳ್ಳಿಮೋಡ', 'ಗೆಜ್ಜೆಪೂಜೆ', 'ಶರಪಂಜರ'ದಂತಹ ಉತ್ಕೃಷ್ಟ ಚಿತ್ರಗಳನ್ನು ನಿರ್ದೇಶಿಸಿದ ಪುಟ್ಟಣ್ಣನವರೇ ಈ ಚಿತ್ರವನ್ನೂ ನಿರ್ದೇಶಿಸಿದರೇ ಎಂಬ ಅನುಮಾನ ಹುಟ್ಟುವಂತಾಯಿತು. 'ಸಾಕ್ಷಾತ್ಕಾರ' ಅರ್ಥಪೂರ್ಣವಾಗಿ ವಿಕಾಸಗೊಳ್ಳುತ್ತಿದ್ದ ಅವರ



(ಚಿತ್ರ ೮) 'ಸಾಕ್ಷಾತ್ಕಾರ' ಚಿತ್ರದಲ್ಲಿ ರಾಜಕುಮಾರ್ ಮತ್ತು ಪೃಥ್ವಿರಾಜ್‌ಕಪೂರ್

ವೃತ್ತಿಜೀವನಕ್ಕೊಂದು ಕಪ್ಪು ಚುಕ್ಕೆಯಾಯಿತು. ವ್ಯಾಪಾರದ ದೃಷ್ಟಿಯಿಂದಲೂ 'ಸಾಕ್ಷಾತ್ಕಾರ' ಗೆಲ್ಲಲಿಲ್ಲ.

ಪುಟ್ಟಣ್ಣನವರಿಗೆ ಈ ಚಿತ್ರದ ಸೋಲು ಸವಾಲಾಗಿ ಪರಿಣಮಿಸಿತು. ಹಾಗೆ ನೋಡಿದರೆ ವೈಯಕ್ತಿಕ ಜೀವನದಲ್ಲೇ ಆಗಲಿ, ವೃತ್ತಿಜೀವನದಲ್ಲೇ ಆಗಲಿ ಛಲವೇ ಅವರ ಪ್ರಧಾನ ಗುಣವಾಗಿತ್ತು. ಇದೇ ಗುಣವೇ ಅವರ ಮುಂದಿನ ಜೀವನದ ಎರಡೂ ಮಜಲಿನ ಏಳುಬೀಳುಗಳೆರಡಕ್ಕೂ ಕಾರಣವಾಯಿತು. ಈ ಛಲದ ಪ್ರತಿಫಲ ಅವರು ಮುಂದಿನ ವರ್ಷ ನಿರ್ದೇಶಿಸಿದ ಇನ್ನೊಂದು ಚಿತ್ರ 'ನಾಗರಹಾವು'.

ಹಿಂದಿನ ದಶಕದಲ್ಲಿಯೇ 'ಸುಬ್ಬಾಶಾಸ್ತ್ರಿ'ಯನ್ನು ನಿರ್ದೇಶಿಸಿದ ಎಂ.ವಿ.ಕೃಷ್ಣಸ್ವಾಮಿ ಕಪಾಲಿ ಚಿತ್ರಮಂದಿರದ ಮಾಲೀಕರಾಗಿದ್ದ ಉದ್ಯಮಿ ಡಿ.ರಾಜಗೋಪಾಲ್ ಅವರಿಗಾಗಿ ಪ್ರೊ|ವಿ.ಸೀತಾರಾಮಯ್ಯ ಅವರ 'ಶ್ರೀಶೈಲ ಮಹಾತ್ಮೆ' ನಾಟಕವನ್ನು ಆಧರಿಸಿ ೧೯೭೧ರಲ್ಲಿ 'ಪಾಪ ಪುಣ್ಯ' ಚಿತ್ರವನ್ನು ನಿರ್ದೇಶಿಸಿದರು. ವಿ.ಸೀ. ಅವರು ಸಕ್ರಿಯವಾಗಿ ತೊಡಗಿಕೊಂಡ ಚಿತ್ರ ಇದು. 'ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮಂ ನಲಭ್ಯತೆ' ಎಂಬ ಸಂಸ್ಕೃತ ಉಕ್ತಿಯೊಂದು ಈ ಚಿತ್ರಕ್ಕೆ ಮುಖ್ಯ ಪ್ರೇರಣೆ. ಕಲ್ಯಾಣ್‌ಕುಮಾರ್, ಬಿ.ಸರೋಜಾದೇವಿ ಪಾತ್ರ ವಹಿಸಿದ್ದರು. ಅವರಿಬ್ಬರ ಅಭಿನಯದ ಮಟ್ಟಿಗೆ ಲೋಪವೆಣಿಸುವಂತಿರಲಿಲ್ಲ. ಈ ಚಿತ್ರದಲ್ಲೂ ಕೃಷ್ಣಸ್ವಾಮಿಗಳು ತಮ್ಮ ಪ್ರಯೋಗ ಶೀಲತೆಯನ್ನು ಬಿಡದೆ ಕನ್ನಡ ಚಿತ್ರರಂಗದಲ್ಲಿ ಪ್ರಥಮ ಬಾರಿಗೆ ಖ್ಯಾತ ನೃತ್ಯಪಟುಗಳಾದ ಯು.ಎಸ್.ಕೃಷ್ಣರಾವ್ ಮತ್ತು ಅವರ ಮಡದಿ ಚಂದ್ರಭಾಗಾದೇವಿ ಅವರುಗಳಿಂದ ನೃತ್ಯ ನಿರ್ದೇಶನ ಮಾಡಿಸಿದರು. ಪಿಟೀಲು ವಿದ್ವಾನ್ ಎ.ಪಿ.ಕೃಷ್ಣಮಾಚಾರ್ (ಪದ್ಮಚರಣ್)ರನ್ನು ಸಂಗೀತ ನಿರ್ದೇಶಕರಾಗಿ ಆಯ್ದರು. 'ನಾವು ಬಂದೇವ ಶ್ರೀಶೈಲ ನೋಡಲಿಕೆ.. ಗೀಯ ಗೀಯ...' ಗೀಗೀ ಪದವನ್ನು ಯಶಸ್ವಿಯಾಗಿ ಅಳವಡಿಸಿಕೊಂಡರು. ಈ ಹಾಡು ಇಂದಿಗೂ ಜನಪ್ರಿಯ. ಸಾಹಿತಿ ಮಹದೇವ ಬಣಕಾರರು ಚಿತ್ರದ ಹಾಡುಗಳನ್ನು ರಚಿಸಿದರು.

ಆದರ ಮಸಾಲೆಭರಿತ ವ್ಯಾಪಾರಿ ಚಿತ್ರ ಕೃಷ್ಣಸ್ವಾಮಿಗಳ ಪ್ರವೃತ್ತಿಗೆ ಅನುಗುಣವಾಗಿರಲಿಲ್ಲ. ಒಂದು ಸುಸಂಬದ್ಧ ಚಿತ್ರಕಥೆಯನ್ನು ರಚಿಸುವುದರಲ್ಲೇ ಅವರು ಸೋತರು. ಎಚ್.ಎಂ.ಕೆ.ಮೂರ್ತಿಯವರ ಛಾಯಾಗ್ರಹಣದಲ್ಲಿನ ಕೆಲವು ಸಂಯೋಜನೆಗಳು ಮಾತ್ರ ನೆನಪಿನಲ್ಲಿ ಉಳಿಯುವಂತಾದವು. ಈ ಚಿತ್ರದ ನಂತರ ಕೃಷ್ಣಸ್ವಾಮಿಗಳು ಯಾವ ಚಿತ್ರವನ್ನೂ ನಿರ್ದೇಶಿಸಲಿಲ್ಲ. ಸಾಕ್ಷ್ಯಚಿತ್ರಗಳತ್ತ ಹೊರಳಿದರು.

೧೯೭೧ರಲ್ಲಿ ಎನ್.ವೀರಾಸ್ವಾಮಿಗಳು ತಮ್ಮ ಈಶ್ವರಿ ಸಂಸ್ಥೆಯಿಂದ ನಿರ್ಮಿಸಿದ ಪೆಕೇಟಿ ಶಿವರಾಂ ನಿರ್ದೇಶಿಸಿದ 'ಕುಲಗೌರವ' ಕನ್ನಡ ಚಿತ್ರರಂಗದಲ್ಲಿ ಪ್ರಪ್ರಥಮ ಬಾರಿಗೆ ಒಬ್ಬ ಕಲಾವಿದ ಮೂರು ವಿವಿಧ ಪಾತ್ರಗಳಲ್ಲಿ ಅಭಿನಯಿಸಿದ ಹೊಸತನದಿಂದ ಮಾತ್ರ ಉಲ್ಲೇಖನೀಯವೆನಿಸಿತು. ಮಗ, ತಂದೆ, ತಾತನ ಮೂರೂ ಪಾತ್ರಗಳಲ್ಲಿ ನಿರಾಯಾಸವಾಗಿ ಅಭಿನಯಿಸಿದರು ರಾಜಕುಮಾರ್. ಚಿತ್ರದ ಕಥೆಯಲ್ಲಿ ವಿಶೇಷವೇನೂ ಇರಲಿಲ್ಲ. ಆದರೆ ಕೆಲವು ಜಾಣ್ಮೆಯ ಮಾಸ್ಕ್ ಷಾಟ್‌ಗಳ ಚಮತ್ಕಾರದಿಂದಾಗಿ ಚಿತ್ರ ಆಸಕ್ತಿ ಕೆರಳಿಸಿತು. ಕೆಲವು ಡೈಲಾಗ್ ಕಟ್‌ಗಳೂ ಸಮರ್ಥವಾಗಿದ್ದವು. ಪೋಷಕ ನಟಿ ಎಂ.ಎನ್.ಲಕ್ಷ್ಮೀದೇವಿ ವಿಶೇಷ ಗಮನ ಸೆಳೆದ ಚಿತ್ರ ಇದು. ಚಿತ್ರದಲ್ಲಿ ಮಾಸ್ಕ್ ಷಾಟ್‌ಗಳನ್ನು ತೆಗೆದದ್ದು ಛಾಯಾಗ್ರಾಹಕ ಮಧು ಸಾಧನೆ.

ಇದೇ ವರ್ಷ ಆರ್.ನಾಗೇಂದ್ರರಾಯರ ಪುತ್ರ ಆರ್.ಎನ್.ಸುದರ್ಶನ್ 'ನಗುವ ಹೂವು' ಚಿತ್ರ ನಿರ್ಮಿಸಿದರು. ಈ ಚಿತ್ರವನ್ನು ಆರ್.ಎನ್.ಕೃಷ್ಣಪ್ರಸಾದ್ ನಿರ್ದೇಶಿಸಿದರು. ಸುದರ್ಶನ್ ತಮ್ಮ ತಾಯಿ ಕ್ಯಾನ್ಸರ್‌ನಿಂದ ಮಡಿದುದನ್ನು ಕೇಂದ್ರವಾಗಿಟ್ಟುಕೊಂಡು 'ನಗುವ ಹೂವು' ಚಿತ್ರಿಸಿದರು. ಅವರ ಹೆಂಡತಿ ಶೈಲಶ್ರೀಯವರು ಕಥೆ ಬರೆದರು. ಇದು ಕ್ಯಾನ್ಸರ್‌ನಿಂದ ನರಳುತ್ತಿದ್ದು ಕೊನೆಯ ದಿನಗಳನ್ನು ಎಣಿಸುವ ಒಬ್ಬ ರೋಗಿ, ಆತನ ಹೆಂಡತಿ ಮತ್ತು ಆಕೆಯ ಮಾಜಿ ಪ್ರಿಯಕರ ಡಾಕ್ಟರ್ - ಇವರ ಪ್ರಣಯ ತ್ರಿಕೋನದ ಕಥೆಯನ್ನು 'ಅಂಡರ್ ಪ್ಲೇ' ತಂತ್ರವನ್ನು ಉಪಯೋಗಿಸಿ ನಿರೂಪಿಸುವ ಪ್ರಯತ್ನವಾಗಿತ್ತು. ಚಿತ್ರಕ್ಕೆ ಶ್ರೀಧರ್ ನಿರ್ದೇಶನದ 'ನೆಂಜಿಲ್ ಒರು ಆಲಯಂ' ಸ್ಫೂರ್ತಿಯನ್ನಿತ್ತಿದ್ದು ಸ್ಪಷ್ಟವಾಗಿತ್ತು. ಇಡೀ ಚಿತ್ರ ಒಂದೇ ಆಸ್ಪತ್ರೆಯ ಪರಿಸರದಲ್ಲಿ ಚಿತ್ರಿತವಾದದ್ದು ಕನ್ನಡದ ಮಟ್ಟಿಗೆ ಹೊಸ ಅನುಭವ. ಭಾವನಾತ್ಮಕ ಸನ್ನಿವೇಶಗಳ ಕೊರತೆ ಮತ್ತು ಪಾತ್ರಗಳ ಕೃತಕತೆ, ವಾಚಾಳಿತನದಿಂದಾಗಿ ಚಿತ್ರ ಯಾವುದೇ ಉತ್ಕಟ ಅನುಭವವನ್ನು ನೀಡುವುದರಲ್ಲಿ ವಿಫಲವಾಯಿತು. ನೆನಪಿನಲ್ಲಿ ಉಳಿದಿದ್ದು ಜಿ.ಕೆ.ವೆಂಕಟೇಶ್‌ರವರ ಹಿತವಾದ ಸಂಗೀತ ಮಾತ್ರ.

ಹಿಂದಿನ ದಶಕದಲ್ಲಿ 'ಮೇಯರ್ ಮುತ್ತಣ್ಣ' ಚಿತ್ರದಿಂದ ಪೂರ್ಣಪ್ರಮಾಣದ ನಿರ್ದೇಶಕರಾಗಿ ಕನ್ನಡ ಚಿತ್ರರಂಗ ಪ್ರವೇಶ ಮಾಡಿದ್ದ ಸಿದ್ದಲಿಂಗಯ್ಯನವರು ೧೯೭೧ರಲ್ಲಿಯೇ ಮೂರು ಅತ್ಯಂತ ಯಶಸ್ವಿ ಸಮೂಹರಂಜನೆಯ ಚಿತ್ರಗಳನ್ನು ಕನ್ನಡ ತೆರೆಗಿತ್ತರು. ಕೌಟುಂಬಿಕ ಪ್ರೇಕ್ಷಕರಿಗೆ ಪ್ರಿಯವೆನಿಸುವ ಮೆಲೋಡ್ರಾಮಾಗಳ ಮೇಲೆ ಅವರು ತಮ್ಮ ಹಿಡಿತವನ್ನು ಸಾಧಿಸಿದ ವರ್ಷ ಇದು. ರಾಜಕುಮಾರ್-ಭಾರತಿ ಜೋಡಿಯನ್ನು ಅತ್ಯಂತ ಜನಪ್ರಿಯ ಜೋಡಿಯನ್ನಾಗಿ ಮಾಡಿದ ನಿರ್ದೇಶಕರೂ ಇವರೇ.

ಶ್ರೀಕಾಂತ್ ಮತ್ತು ಶ್ರೀಕಾಂತ್ ಸಂಸ್ಥೆಗಾಗಿ ಸಿದ್ದಲಿಂಗಯ್ಯನವರು ನಿರ್ದೇಶಿಸಿದ 'ನಮ್ಮ ಸಂಸಾರ'ದಲ್ಲಿ ಒಂದು ಕುಟುಂಬದಲ್ಲಿನ ಪ್ರೀತಿ ವಾತ್ಸಲ್ಯಗಳು, ಈರ್ಷ್ಯೆಗಳು, ಒಡೆದ ಸಂಬಂಧಗಳು, ಮುಂತಾದ ದೈನಂದಿನ ವಿವರಗಳ ನಿರೂಪಣೆಯಿತ್ತು.



(ಚಿತ್ರ ೯) 'ಕುಲಗೌರವ' ಚಿತ್ರದಲ್ಲಿ ತಾತ, ತಂದೆ ಹಾಗೂ ಮಗನ ಪಾತ್ರಗಳಲ್ಲಿ ರಾಜಕುಮಾರ್



(ಚಿತ್ರ ೧೦) 'ನಗುವ ಹೂವು' ಚಿತ್ರದಲ್ಲಿ ಶೈಲಶ್ರೀ

ಜೈನ್ ಮೂವೀಸ್ ಲಾಂಛನದಲ್ಲಿ ಬಂದ 'ತಾಯಿ ದೇವರು' ಚಿತ್ರದಲ್ಲಿ ರಂಜನೆಯೇ ಪ್ರಧಾನವಾಗಿತ್ತು. ವಿಶ್ವನಾಥನ್ ಅವರ ಕಥೆ, ಜಿ.ಬಾಲಸುಬ್ರಹ್ಮಣ್ಯಂ ಅವರ ಚಿತ್ರನಾಟಕವಿದ್ದ ಈ ಚಿತ್ರದ ನಿರ್ದೇಶಕರು ಸಿದ್ದಲಿಂಗಯ್ಯ. ಚಿಟ್ಟಿಬಾಬು ಛಾಯಾಗ್ರಹಣ, ಜಿ.ಕೆ.ವೆಂಕಟೇಶ್‌ರ ಸಂಗೀತ ಉತ್ತಮವಾಗಿದ್ದವು. ಭಾರತೀಯತೆ, ಭಾರತ ನಾರಿಯನ್ನು ಕುರಿತ ಉದ್ದುದ್ದ ಭಾಷಣಗಳು ತುಂಬಿಹೋಗಿದ್ದವು. ರಾಜಕುಮಾರ್- ಭಾರತಿ ಜೋಡಿ ಪಾತ್ರಗಳು ಹೆಜ್ಜೆ ಹೆಜ್ಜೆಗೂ ಆದರ್ಶಗಳನ್ನು ಕುರಿತು ಹೇಳುತ್ತಿದ್ದವು. ತಾಯಿಯ ಸೆಂಟಿಮೆಂಟ್‌ಗೇ ಆದ್ಯತೆ ಇದ್ದ ದಿನಗಳವು. ಆದಾಗಲೇ 'ತಾಯಿ'ಯ ಇಮೇಜ್‌ನಲ್ಲಿ ಜನಮನ ಸೆಳೆದಿದ್ದ ಅಭಿನೇತ್ರಿ ಎಂ.ವಿ.ರಾಜಮ್ಮನವರೇ ತಾಯಿಯಾಗಿ ಅಭಿನಯಿಸಿದ್ದರು. ಈ ಚಿತ್ರದಿಂದ ಕನ್ನಡ ಚಿತ್ರೋದ್ಯಮಕ್ಕೆ ಚಂದೂಲಾಲ್ ಜೈನ್‌ರಂಥ ಗಟ್ಟಿಯಾದ ನಿರ್ಮಾಪಕರು ದಕ್ಕಿದರು. ಜೈನ್ ಅವರು ಮದರಾಸಿನಲ್ಲಿ ವ್ಯಾಪಾರ ಮಾಡುತ್ತಿದ್ದವರು. ಅವರಿಗೆ ರಾಜಕುಮಾರ್, ಅವರ ಕುಟುಂಬದ ಪರಿಚಯವಾದದ್ದು ಈ ವ್ಯಾಪಾರದಿಂದಲೇ. ಆ ಸ್ನೇಹ ಅವರ ಕಾಲ್‌ಶೀಟ್ ಪಡೆದು ಚಿತ್ರ ನಿರ್ಮಿಸುವಷ್ಟು ದೂರಕ್ಕೆ ಹೋಯಿತು. ತುಸು ರೂಕ್ಷ ಚಿತ್ರಣವೆನ್ನಿಸಿದರೂ 'ತಾಯಿ ದೇವರು' ಚಂದೂಲಾಲ್ ಜೈನ್ ಅವರ ಮೊದಲ ನಿರ್ಮಾಣ ಎಂಬ ಕಾರಣಕ್ಕೆ, ಅನಂತರ ಅವರು ಕನ್ನಡ ಚಿತ್ರರಂಗಕ್ಕೆ ಕೊಟ್ಟ ಅಪರೂಪದ ಚಿತ್ರಗಳ ಹಿನ್ನೆಲೆಯಲ್ಲಿ ಈ ಪ್ರಥಮ ಹೆಜ್ಜೆಯೂ ಮುಖ್ಯವಾಗುತ್ತದೆ.

ಸಿದ್ದಲಿಂಗಯ್ಯನವರಿಗೆ ಆ ವರ್ಷ ಯಶಸ್ಸಿನ ಹ್ಯಾಟ್ರಿಕ್ ತಂದುಕೊಟ್ಟ ಚಿತ್ರ 'ನ್ಯಾಯವೇ ದೇವರು'. ನಟ ಬಿ.ಎಂ.ವೆಂಕಟೇಶ್ ಸ್ವತಃ ತಯಾರಿಸಿದ ಪ್ರಥಮ ಚಿತ್ರ ಇದು. ಈ ಚಿತ್ರದಲ್ಲಿಯೂ ರಾಜಕುಮಾರರೇ ನಾಯಕ ನಟ. ಈ ಬಾರಿ ನಾಯಕಿಯ ಪಾತ್ರ ವಹಿಸಿದವರು ಮಾತ್ರ ಬಿ.ಸರೋಜಾದೇವಿ.

ಕೃತಿಯ ಆಯ್ಕೆ, ನಿರೂಪಣೆಯ ಧಾಟಿ, ಕಲಾವಿದರೇ ಮೊದಲಾದ ವಿಷಯಗಳಲ್ಲಿ ಸಿದ್ದಲಿಂಗಯ್ಯನವರು ತಮ್ಮ ಹಿಂದಿನ ಕ್ರಮವನ್ನೇ ಅನುಸರಿಸಿದ್ದರೂ ಈ ಚಿತ್ರದಲ್ಲಿ ಅವರ ನಿರ್ದೇಶನದ ಮಟ್ಟ ಗಮನೀಯವಾಗಿ ಏರಿತ್ತು. ಪಾತ್ರ ಕಲ್ಪನೆಯಲ್ಲಿ ಸ್ವಲ್ಪಮಟ್ಟಿನ ಸಹಜತೆ, ಸಂಭಾಷಣೆಗಳಲ್ಲಿನ ಚುರುಕುತನ, ಚಿತ್ರನಾಟಕದಲ್ಲಿನ ಒಳ್ಳೆಯ ತಿಟಗಳಿಂದ ಸಿದಲಿಂಗಯ್ಯ ತಮ್ಮ ಹಿಂದಿನ ನಿರೂಪಣಾ ಶೈಲಿಗಿಂತ ಭಿನ್ನವಾಗಿದ್ದುದನ್ನು ಕಾಣಬಹುದಿತ್ತು. ಅವರು ಈ ಚಿತ್ರದಲ್ಲಿ ಸಿನಿಮಾ ಮಾಧ್ಯಮಕ್ಕೆ ಇನ್ನಷ್ಟು ಹತ್ತಿರವಾದರೆಂದು ತೋರಿಸಿದ ಒಂದು ದೃಶ್ಯ - ನ್ಯಾಯಾಧೀಶ ಅಶ್ವತ್ಥ್ ಕನ್ನಡಿಯ ಮುಂದೆ ನಿಂತು ತಮ್ಮ ಆಂತರಿಕ ಭಾವನೆಗಳನ್ನು ವ್ಯಕ್ತಪಡಿಸುವಂಥದ್ದು. ಸಾಮಾನ್ಯವಾಗಿ ಇತರ ನಿರ್ದೇಶಕರು ಮಾಡುವಂತೆ ಸಿದ್ದಲಿಂಗಯ್ಯನವರು ಕನ್ನಡಿಯಲ್ಲಿನ ಪ್ರತಿಬಿಂಬ ಮಾತನಾಡುವಂತ ಮಾಡದೆ ಅವರ ಧ್ವನಿಯನ್ನು ಅವರ ಆಕೃತಿಯ ಮೇಲೆ ಹಾಕಿ ಚಿತ್ರೀಕರಿಸಿದರು. ಹೀಗೆಯೇ ಇನ್ನೂ ಹಲವಾರು ದೃಶ್ಯಗಳ ಚಿತ್ರೀಕರಣದಲ್ಲಿ ಅವರು ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಿದರು. ಈ ಮೂರು ಯಶಸ್ವಿ ಚಿತ್ರಗಳಿಂದಾಗಿ ಸಿದಲಿಂಗಯ್ಯನವರು ಕನ್ನಡ ಚಿತ್ರರಂಗದಲ್ಲಿ ಪ್ರಥಮ ಸಾಲಿನ ನಿರ್ದೇಶಕರಾಗಿ ಬೇರೂರಿದರು. ಜೊತೆಗೆ ರಾಜನ್ ನಾಗೇಂದ್ರ ಸಂಗೀತ ನಿರ್ದೇಶನದ 'ಆಕಾಶವೆ ಬೀಳಲಿ ಮೇಲೆ ನಾನೆಂದು ನಿನ್ನವನು...' ಮತ್ತು 'ಪರಮಾತ್ಮ ಆಡಿಸಿದಂತೆ ಆಡುವೆ ನಾನು...' ಹಾಡುಗಳು ಅರ್ಥ, ಭಾವ ಮತ್ತು ಸಾಂದರ್ಭಿಕವಾದ ಚಿತ್ರೀಕರಣದಿಂದಾಗಿ ಬಹುಕಾಲ ಜನ-ಮನದಲ್ಲಿ ಉಳಿದವು. ತಾಂತ್ರಿಕವಾಗಿ ಕೂಡ ಆ ಕಾಲದ ಅತ್ಯಂತ ಸಮರ್ಥ ಚಿತ್ರಗಳಲ್ಲೊಂದೆಂಬ ಹೆಗ್ಗಳಿಕೆಯನ್ನೂ ಈ ಚಿತ್ರ ಗಳಿಸಿಕೊಂಡಿತು.

೧೯೭೧ರಲ್ಲಿ ತಯಾರಾದ ಇನ್ನೊಂದು ಉಲ್ಲೇಖನಾರ್ಹ ಚಿತ್ರ ಎನ್.ಲಕ್ಷ್ಮೀನಾರಾಯಣ್ ನಿರ್ದೇಶನದ 'ಮುಕ್ತಿ'. ಅಬ್ಬರ, ಆಡಂಬರಗಳಿಂದ ಮುಕ್ತಿ ಪಡೆದ ಈ ಚಿತ್ರ ವಿ.ಎಂ.ಇನಾಂದಾರರ ಜನಪ್ರಿಯ ಕಾದಂಬರಿ 'ಶಾಪ'ದ ಆಧಾರದ ಮೇಲೆ ತಯಾರಾದದ್ದು. ನವೋದಯ ಚಿತ್ರ ಲಾಂಛನದಡಿ ತಯಾರಾದ 'ಮುಕ್ತಿ'ಯ ಪ್ರಧಾನ ಪ್ರೇರಕ ಶಕ್ತಿ ಅಂದಿನ ಪ್ರಮುಖ ಚಲನಚಿತ್ರ ಪತ್ರಕರ್ತ ಕೆ.ಎಸ್.ನಾರಾಯಣಸ್ವಾಮಿ. ತೀವ್ರ ಆರ್ಥಿಕ ಸಮಸ್ಯೆಗಳ ನಡುವೆ ನಿರ್ಮಾಣವಾದ ಈ ಚಿತ್ರ ಸಂಪೂರ್ಣಗೊಳ್ಳಲು ಮೂರೂವರೆ ವರ್ಷಗಳು ಓಡಿದವು. ಅದರ ಅನೇಕ ನ್ಯೂನತೆಗಳ ನಡುವೆಯೂ ಗಮನ ಸೆಳೆದ ಚಿತ್ರವಿದು.

ಇನಾಂದಾರರ 'ಶಾಪ' ಕಾದಂಬರಿಯ ಹೆಸರನ್ನು ಬದಲಾಯಿಸಲು ಕಾರಣ ಅದು ಶುಭಸೂಚಕವಲ್ಲವೆಂಬ ಭಾವನೆ. ಚಿತ್ರದ ಅಂತಿಮ ದೃಶ್ಯದಲ್ಲಿ ನಾಯಕಿ ಪಾರಿವಾಳಗಳನ್ನು ಹಾರಿಬಿಡುವ ದೃಶ್ಯ ನಿರ್ದೇಶಕರ ಜೀವನಪರವಾದ ನಿಲುವನ್ನು ಮತ್ತು ಅವರು ಚಿತ್ರಕ್ಕೆ ಕೊಟ್ಟ 'ಮುಕ್ತಿ'ಯ ಶೀರ್ಷಿಕೆಯನ್ನು ಸಮರ್ಥಿಸುವಂಥದಾಗಿತ್ತು. ಪ್ರಧಾನ ಪಾತ್ರಧಾರಿ ಕಾಲೇಜು ವಿದ್ಯಾರ್ಥಿಯ ವಯಸ್ಸಿನವನೇ ಆಗಿರಬೇಕೆಂದು ಲಕ್ಷ್ಮೀನಾರಾಯಣ್ ಹೊಸದಾಗಿ ಪರಿಚಯಿಸಿದ ಕೆ.ಬಿ.ರಾಜಶೇಖರ್ ಅಭಿನಯ ಪಾತ್ರಕ್ಕೆ ನ್ಯಾಯ ಸಲ್ಲಿಸಲಿಲ್ಲ. ಲಕ್ಷ್ಮೀನಾರಾಯಣ್ ಅಂತರರಾಷ್ಟ್ರೀಯ ಚಿತ್ರೋತ್ಸವಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅನುಸರಿಸುತ್ತಿದ್ದ ನಿರೂಪಣಾಶೈಲಿ ವ್ಯಾಪಾರಿ ಚಿತ್ರೋದ್ಯಮಿಗಳಿಗೆ ನೀರಸ ಎನಿಸಿತು. ನಾಯಕನಟ ತನ್ನ ತಂದೆಯ ಅಕ್ರಮ ಸಂಬಂಧದಿಂದ ಹುಟ್ಟಿದಾಕೆಯನ್ನು - ತಿಳಿಯದೆ - ಪ್ರೇಮಿಸುವುದನ್ನು ಸಮಾಜ ವಿರೋಧಿ ಎಂದು ಭಾವಿಸಿದ್ದರಿಂದ ಚಿತ್ರವನ್ನು ವಿತರಿಸಲು ಯಾರೂ ಮುಂದೆ ಬರಲಿಲ್ಲ. ಕಡೆಗೆ ಸದಭಿರುಚಿಯ ಚಿತ್ರಗಳಲ್ಲಿ ಒಲವಿದ್ದ ಭಕ್ತವತ್ಸಲ ಅವರೇ ಚಿತ್ರವನ್ನು ವಿತರಿಸಿದರು. ಆ ಹೊತ್ತಿಗೆ ವೇಶ್ಯಾ ಸಮಸ್ಯೆಯನ್ನು ಅತ್ಯಂತ ಶ್ರೀಮಂತವಾಗಿ ಚಿತ್ರಿಸಿದ್ದ ಪುಟ್ಟಣ್ಣನವರ 'ಗೆಜ್ಜೆಪೂಜೆ' ತೆರೆಗೆ ಬಂದಾಗಿತ್ತು. 'ಮುಕ್ತಿ' ವಿಫಲವಾಯಿತು.



(ಚಿತ್ರ ೧೧) 'ತಾಯಿ ದೇವರು' ಚಿತ್ರದಲ್ಲಿ ಎಂ.ವಿ.ರಾಜಮ್ಮ ಮತ್ತು ರಾಜಕುಮಾರ್



(ಚಿತ್ರ ೧೨) 'ನ್ಯಾಯವೇ ದೇವರು' ಚಿತ್ರದಲ್ಲಿ ರಾಜಕುಮಾರ್

ಇದಿಷ್ಟು ಸಾಲದೆಂಬಂತೆ 'ಮುಕ್ತಿ' ಬಿಡುಗಡೆಯಾದ ಸಂದರ್ಭದಲ್ಲಿ ಭಾರತ-ಪಾಕಿಸ್ತಾನ ಸಮರದಿಂದಾಗಿ ಬೆಂಗಳೂರಿನಲ್ಲಿ ಸಂಜೆ ಹೊತ್ತು ಬ್ಲ್ಯಾಕೌಟ್ ಘೋಷಣೆಯಾಗಿ ಅದೂ ಸಹ ಚಿತ್ರದ ಆರಂಭಿಕ ಗಳಿಕೆಗೆ ತಡೆಯನ್ನೊಡ್ಡಿತು. ಅಲ್ಲದೆ ಲಕ್ಷ್ಮೀನಾರಾಯಣ್ ತಮ್ಮ ಚಿತ್ರದಲ್ಲಿ ಏನೇನನ್ನು ಹೊಸತೆಂದು ಭಾವಿಸಿದ್ದರೋ ಅವೆಲ್ಲವೂ - ಅಂದರೆ ಹೊಸ ನಾಯಕನಟ, ವೇಶ್ಯಾ ಸಮಸ್ಯೆ, ನಾಯಕನ ಮನೋಸ್ಥಿತಿ ತಿರುಗು-ಮುರುಗು ಆಗುವುದನ್ನು ತೋರಲು ನೆಗೆಟಿವ್ ಬಳಕೆ ಮುಂತಾದುವೆಲ್ಲಾ ಆ ವೇಳೆಗಾಗಲೇ ಕನ್ನಡ ಚಿತ್ರಗಳಲ್ಲಿ ಬಳಕೆಯಾಗಿದ್ದರಿಂದ ತಮ್ಮ ನಾವೀನ್ಯವನ್ನು ಕಳೆದುಕೊಂಡಿದ್ದವು. ಆದರೆ ಇಲ್ಲಿಂದ ಮುಂದೆ ಲಕ್ಷ್ಮೀನಾರಾಯಣ್ ಅವರ ಚಿತ್ರಗಳಲ್ಲಿ ವ್ಯಾಪಾರಿ ಚಿತ್ರೋದ್ಯಮಕ್ಕೆ ಒಗ್ಗುವ ಮನೋಭಾವ ಹೋಗಿ ಅವರದೇ ಆದ ಶೈಲಿ ಇನ್ನಷ್ಟು ಸ್ಪಷ್ಟವಾಗಿ ಕಾಣಿಸಿಕೊಂಡಿತು. ಕನ್ನಡ ಚಿತ್ರರಂಗದ ಮೇಲೆ ಹೊಸ ಅಲೆ ಬೀರಿದ ಪರಿಣಾಮವೂ ಅವರ ಈ ನಿರ್ಧಾರಕ್ಕೆ ಕಾರಣವಾಗಿತ್ತೆಂಬುದೂ ಸ್ಪಷ್ಟ.

ವಸ್ತು ಮತ್ತು ಭಾವನೆಗಳ ತೀವ್ರತೆಗೆ ಒತ್ತು ಕೊಡದೆ ಅವುಗಳನ್ನು ದಮನಗೊಳಿಸುವ ಲಕ್ಷ್ಮೀನಾರಾಯಣ್‌ರವರ ನಿರೂಪಣಾ ತಂತ್ರ ಕೂಡ 'ಮುಕ್ತಿ'ಗೆ ಮುಳುವಾಯಿತು. ಆದರೆ ಅವರು ತಮ್ಮ ನಿಜವಾದ ಸಾಮರ್ಥ್ಯವನ್ನು ತೋರಿದ್ದು ಉತ್ತರ ಕರ್ನಾಟಕದ ಪರಿಸರವನ್ನು ಸೆರೆ ಹಿಡಿಯುವುದರಲ್ಲಿ. ಕರ್ನಾಟಕದ ಆ ಭಾಗದಲ್ಲಿ ಚಿತ್ರೀಕರಣವಾದ ಕೆಲವೇ ಚಿತ್ರಗಳಲ್ಲಿ 'ಮುಕ್ತಿ'ಯೂ ಒಂದು. ನಾಯಕಿ ಕಲ್ಪನಾ ಚಿತ್ರದ ಹೆಚ್ಚುಗಾರಿಕೆಗಳಲ್ಲೊಂದಾಗಿ ಉಳಿದುಕೊಂಡರು. ಸಾಮಾನ್ಯವಾಗಿ ಭಾವುಕತೆಗೆ ಶರಣಾಗುತ್ತಿದ್ದ ಉದಯಕುಮಾರ್‌ರವರ ಸಂಯಮದ ಅಭಿನಯ ಬಹಳ ಕಾಲ ನೆನಪಿನಲ್ಲಿ ಉಳಿಯುವಂತಾಯಿತು. ಚಿತ್ರದ ಕಲಾತ್ಮಕತೆಯನ್ನು ಎತ್ತಿ ಹಿಡಿದ ಇನ್ನೊಂದು ಅಂಶ ವಿಜಯಭಾಸ್ಕರ್‌ರವರ ಗಂಭೀರ ಹಾಗೂ ಪರಿಣಾಮಕಾರಿಯಾದ ಸಂಗೀತ. ಲಕ್ಷ್ಮೀನಾರಾಯಣ್ ಅವರಿಗೆ ಚಿತ್ರದಲ್ಲಿ ಹಾಡುಗಳ ಬಳಕೆಯಲ್ಲಿ ಒಲವಿಲ್ಲದ್ದರಿಂದ 'ಎಂಥ ಕಣ್ಣು ಎಂಥ ಕಣ್ಣು ನಿನ್ನದೇ...' ನಂತಹ ಸುಶ್ರಾವ್ಯವಾದ ಹಾಡು ಕೂಡ ಅರೆಮನಸ್ಸಿನ ಚಿತ್ರೀಕರಣದಿಂದಾಗಿ ತನ್ನ ಸತ್ವವನ್ನೇ ಕಳೆದುಕೊಂಡಿತು.



(ಚಿತ್ರ ೧೩) 'ಮುಕ್ತಿ' ಚಿತ್ರದಲ್ಲಿ ರಾಜಶೇಖರ್ ಮತ್ತು ಕಲ್ಪನಾ

ಇದೇ ವರ್ಷ ಕಲಾತ್ಮಕವಾಗಿ ಗಮನ ಸೆಳೆದ ಕೆಲವು ಚಿತ್ರಗಳು ಬಿಡುಗಡೆಯಾದವು. ಅವುಗಳಲ್ಲಿ ಮುಖ್ಯವಾದದ್ದು ರಮೇಶ್ ಎಂಬ ಒಬ್ಬ ವಿದ್ಯಾರ್ಥಿ ನಿರ್ಮಿಸಿ, ಬಸವರಾಜ ಕೆಸ್ತೂರು, ಎಂ.ವಿ.ವರದರಾಜ್ ನಿರ್ದೇಶಿಸಿದ 'ಹೆಣ್ಣು ಹೊನ್ನು ಮಣ್ಣು'. ನವ್ಯ ಪ್ರಯೋಗದ ಈ ಚಿತ್ರವನ್ನು ಸಾಮಾನ್ಯ ಮಟ್ಟದ ಅಭಿರುಚಿಯ ಜನರು ಅರ್ಥ ಮಾಡಿಕೊಳ್ಳುವುದು ಕಷ್ಟವಾಯಿತು. ಹೊಡೆದಾಟ ಬಡಿದಾಟಗಳಿಲ್ಲದೆ ಕುತೂಹಲಕಾರಿಯಾಗಿ ನಿರೂಪಣೆಯಾದ ವಿನೂತನ ಚಿತ್ರ ಇದು. ಮುಖ್ಯ ಕಥೆಯನ್ನಷ್ಟೇ ಚಿತ್ರೀಕರಿಸಿದ ನಂತರ ಚಿತ್ರದ ಉದ್ದ ಸಬ್ಸಿಡಿ ಪಡೆಯಲು ೩,೦೦೦ ಮೀಟರುಗಳಿಗಿಂತ ಕಡಿಮೆಯಿರುವುದು ಕಂಡು ಬಂದಿತಂತೆ. ಆಮೇಲೆ ನಿರ್ಮಾಪಕ, ನಿರ್ದೇಶಕರು ಹಣ ಹಾಕುವವರನ್ನು ಹುಡುಕಿಕೊಂಡು ಹೊರಟು, ಸಪ್ಲಿಮೆಂಟರಿ ಕಥೆಯನ್ನು ಸೇರಿಸಿ ಚಿತ್ರವನ್ನು ಲಂಬಿಸಿದರಂತೆ. ಇದರಿಂದಾಗಿ ಚಿತ್ರದ ಓಘಕ್ಕೆ ಊನ ಬಂತು. ಚಿತ್ರದಲ್ಲಿ ಹಾಡುಗಳಿರಲಿಲ್ಲ.

೧೯೭೧ರಲ್ಲಿ ರಾಜಕಾರಣಿಯೊಬ್ಬರು ದಿಢೀರೆಂದು ಚಿತ್ರರಂಗವನ್ನು ಪ್ರವೇಶಿಸಿ ಅಷ್ಟೇ ಶೀಘ್ರವಾಗಿ ಮಾಯವಾದರು. ಅವರೇ ದಕ್ಷಿಣ ಬೆಂಗಳೂರಿನಲ್ಲಿ ಸುಜಾತಾ ಸ್ಟುಡಿಯೋವನ್ನು ಅರೆಬರೆಯಾಗಿ ನಿರ್ಮಿಸಿದ್ದ ಕಾಂಗ್ರೆಸ್ಸಿಗ ಆರ್.ದಯಾನಂದ ಸಾಗರ್. ಅದೇ ಸ್ಟುಡಿಯೋದಲ್ಲಿ ಅವರು ಚಿತ್ರೀಕರಿಸಿದ್ದು ಅವರ ಮೊದಲ ಮತ್ತು ಕೊನೆಯ ಚಿತ್ರ 'ಪೂರ್ಣಿಮಾ'. ಅವರು ಈ ಚಿತ್ರದಲ್ಲಿ ವಕೀಲರೊಬ್ಬರ ಪಾತ್ರದಲ್ಲಿ ಅಭಿನಯಿಸಿದರು. ಶ್ರೀಮಂತನೊಬ್ಬ ಕೊನೆಗೆ ತನ್ನ ಆಸ್ತಿಯನ್ನೆಲ್ಲ ತ್ಯಾಗ ಮಾಡುವ ಕಥೆಯನ್ನು ಸಾಗರ್‌ರವರೇ ನಿರ್ದೇಶಿಸಿದರು. ಚಿತ್ರದಲ್ಲಿ ಕೆಲವು ಗಂಭೀರ ರಾಜಕೀಯ ಚಿಂತನೆಗಳನ್ನು ಪ್ರತಿಪಾದಿಸುವ ಪ್ರಯತ್ನವೂ ಇತ್ತು. ಆದರೆ ಈ ಚಿಂತನೆಗಳು ಇಂದಿರಾಗಾಂಧಿಯವರ ಕಾಂಗ್ರೆಸ್ ಪಕ್ಷದ ಪ್ರಚಾರದ ಮಟ್ಟದಲ್ಲೇ ಇದ್ದವು. ಅಂದು ದಕ್ಷಿಣ ಭಾರತ ಚಿತ್ರರಂಗದಲ್ಲಿ ಅತ್ಯಂತ ಪ್ರಮುಖ ನೃತ್ಯ ತಾರೆಗಳೆನಿಸಿಕೊಂಡಿದ್ದ ರಾಗಿಣಿ ಮತ್ತು ಅಂಬಿಕಾರವರ ನೃತ್ಯ ಸನ್ನಿವೇಶವೊಂದನ್ನೂ ಸಾಗರ್ ಅವರು ಚಿತ್ರದ ಜನಪ್ರಿಯತೆಯ ದೃಷ್ಟಿಯಿಂದ ಸೇರಿಸಿದರು. ಆದರೆ ಕ್ಷೀಣವಾಗಿ ಕಂಡ ಈ ಚಿತ್ರಕ್ಕೆ ಆ ಪರಿಕರಗಳಾವುವೂ ಪೂರಕವಾಗಲಿಲ್ಲ.

'ಒಂದೇ ಕುಲ ಒಂದೇ ದೈವ' ಶಂಕರ್‌ಸಿಂಗ್ ಅವರ ಚಿತ್ರ. ಜಾತಿ, ಮತ, ಭೇದವನ್ನು ವಿರೋಧಿಸಿ ಮನುಜರೆಲ್ಲ ಒಂದೇ ಎಂಬ ತತ್ವವನ್ನು ಪ್ರತಿಪಾದಿಸುವ ಚಿತ್ರವಿದು. ಕಲ್ಪನಾ ಅವರು ಶಂಕರ್‌ಸಿಂಗ್ ಅವರ ನಿರ್ದೇಶನದಲ್ಲಿ ಅಭಿನಯಿಸಿದ್ದು, ವಿಭಿನ್ನ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸಿದ್ದು ಗಮನಿಸಲೇಬೇಕಾದ ಅಂಶ. 'ಸಿಗ್ನಲ್‌ಮ್ಯಾನ್ ಸಿದ್ದಪ್ಪ' ಹಿರಿಯ ಪತ್ರಕರ್ತ ತೆಕ್ಕಟ್ಟೆ ನಾಗರಾಜ ಅವರು ನಿರ್ದೇಶಿಸಿದ ಚಿತ್ರ. ರೈಲ್ವೆ ಇಲಾಖೆಯ ಕಾರ್ಮಿಕನನ್ನು ಕುರಿತ ಕಥೆ. ಸ್ಟುಡಿಯೋಗಳಿಲ್ಲದ್ದರಿಂದ ವೈಟ್‌ಫೀಲ್ಡ್ ಬಳಿ ಇದ್ದ ಎರಡು, ಮೂರು ಫ್ಯಾಕ್ಟರಿಗಳು, ಗೋಡೌನ್‌ಗಳನ್ನು ಬಿಡಿಸಿಕೊಂಡು, ಸೆಟ್‌ಗಳನ್ನು ಹಾಕಿ ಚಿತ್ರಿಸಿದ್ದರು.

'ಕಾಸಿದ್ರೆ ಕೈಲಾಸ' ರಾಜಕುಮಾರ್ ಅವರ ಅಭಿನಯದ ಚಿತ್ರ. ಜಾನಕಿರಾಮ್ ನಿರ್ದೇಶಿಸಿದ್ದರು. ಚಿತ್ರವನ್ನು ಸಂಪೂರ್ಣವಾಗಿ ನಿರ್ಮಾಪಕರೇ ಪೂರ್ತಿ ಮಾಡಿದ ಮೇಲೆ, ಅದರ ನೆಗೆಟಿವ್ ರೈಟ್ಸ್ ಅನ್ನು ಒಬ್ಬರಿಗೇ ಮಾರಾಟ ಮಾಡಿದ್ದು, ಕೆ.ಸಿ.ಎನ್.ಸಂಸ್ಥೆ ಪ್ರಾರಂಭಿಸಿದ ಹೊಸ ವ್ಯವಸ್ಥೆಗೆ ಕಾರಣರಾದವರು ಗೋಪಾಲ್-ಲಕ್ಷ್ಮಣ್ ಮತ್ತು ಎಸ್.ಪಿ.ವರದರಾಜ್.

ಈ ವರ್ಷ ಶ್ರೀಮಂತವಾಗಿ ನಿರ್ಮಾಣವಾದ ಇನ್ನೊಂದು ಚಿತ್ರ 'ಸಂಶಯಫಲ'. ವರ್ಷದ ಅತ್ಯುತ್ತಮ ಸಂಗೀತ ನಿರ್ದೇಶನಕ್ಕಾಗಿ ಬಂಗಾಳದ ಸಲೀಲ್ ಚೌಧರಿ ರಾಜ್ಯಪ್ರಶಸ್ತಿಯನ್ನು ಪಡೆಯುವುದರ ಮೂಲಕ ಈ ಚಿತ್ರ ಗಮನ ಸೆಳೆಯಿತಾದರೂ ಅದರಲ್ಲಿನ ಅಂತಃಸತ್ವದಿಂದಲ್ಲ. ನಿರ್ಮಾಪಕ ಸಮೀವುಲ್ಲಾ ತಾವೇ ನಿರ್ದೇಶಿಸಿದ ಪ್ರಥಮ ಚಿತ್ರ ಇದು. ನಿರೂಪಣೆ ಹಳೆಯ ಜಾಡಿನಲ್ಲೇ ಇತ್ತು.

ನಿರ್ಮಾಪಕ ಕೆ.ಎಸ್.ಜಗನ್ನಾಥ್‌ರಿಗಾಗಿ ಕಲಾನಿರ್ದೇಶಕರಾಗಿದ್ದ ಬಿ.ಕೃಷನ್ 'ಸೇಡಿನ ಕಿಡಿ'ಯನ್ನು ನಿರ್ದೇಶಿಸಿದರು. ಆಂಗ್ಲಭಾಷೆಯ 'ಕ್ಲ್ಯಾಸಿಕ್'ಗಳಲ್ಲಿ ಒಂದೆನಿಸಿದ 'ದಿ ಮ್ಯಾಗ್ನಿಫಿಸೆಂಟ್ ಸೆವೆನ್' ಆಧಾರದ ಮೇಲೆ ತಯಾರಾದ ಈ ಚಿತ್ರ ಮೂಲ ಚಿತ್ರದ ತಳವನ್ನೂ ಮುಟ್ಟದಂತಾಯಿತು. ಬಹುತೇಕ ಹೊರಾಂಗಣದಲ್ಲೇ



(ಚಿತ್ರ ೧೪) ಸುಚಿತ್ರಾ ಫಿಲಂ ಸೊಸೈಟಿಯ ಉದ್ಘಾಟನೆ. ಕಾರ್ಯದರ್ಶಿ ನರಹರಿರಾವ್, ಅಧ್ಯಕ್ಷ ಬಿ.ಎನ್.ನಾರಾಯಣ್ (ನಾಣಿ), ಸಮಾರಂಭದ ಅಧ್ಯಕ್ಷ ವಿ.ಎನ್.ಸುಬ್ಬರಾವ್, ಮತ್ತು ಚಿತ್ರ ನಿರ್ದೇಶಕ ಎನ್.ಲಕ್ಷ್ಮೀನಾರಾಯಣ್

ಚಿತ್ರಿತವಾಗಿ ಕೆಲವು ಉತ್ತಮ ತಾಂತ್ರಿಕ ಮೌಲ್ಯಗಳನ್ನು ಹೊಂದಿದ್ದ 'ಸೇಡಿನ ಕಿಡಿ'ಯಲ್ಲಿ ಗಮನ ಸೆಳೆದಿದ್ದು ಕಲ್ಯಾಣ್‌ಕುಮಾರ್ ಮತ್ತು ಎಂ.ಪಿ.ಶಂಕರ್ ನಡುವಣ ಸಾಹಸ ದೃಶ್ಯಗಳು ಮಾತ್ರ. ಇನ್ನೊಂದು ಪ್ರಯೋಗ ಹಾಲಿವುಡ್‌ನ ಕೌಬಾಯ್ ಚಿತ್ರಗಳ ಪರಂಪರೆಯಲ್ಲಿ ತಯಾರಾದ 'ಪ್ರತಿಧ್ವನಿ'. ರಾಜಕುಮಾರ್ ನಾಯಕರಾಗಿ ಅಭಿನಯಿಸಿದ ಈ ಚಿತ್ರದಲ್ಲಿ ರಾಜೇಶ್ ಖಳನಾಯಕ. ಕನ್ನಡದ ಪ್ರಥಮ ಕೌಬಾಯ್ ಚಿತ್ರವೆಂಬುದೊಂದೇ ಅದರ ಹೆಚ್ಚಳ.

ಬಿ.ಆರ್.ಪಂತುಲುರವರ ೫೦ನೆಯ ಚಿತ್ರ 'ಮಾಲತಿ-ಮಾಧವ' ಇದೇ ವರ್ಷವೇ ತೆರೆಗೆ ಬಂತು. ಪಂತುಲುರವರಿಗೆ ಮಾಧ್ಯಮದ ಮೇಲೆ ಹಿಡಿತ ತಪ್ಪಿತ್ತು. ಚಿತ್ರ ಅಸಂಬದ್ಧವಾಗಿತ್ತು. ಕನ್ನಡದ ಪ್ರಪ್ರಥಮ ಆರ್ವೋ ವರ್ಣಚಿತ್ರ 'ಭಲೇ ಅದೃಷ್ಟವೋ ಅದೃಷ್ಟ' (ನಿರ್ದೇಶಕ : ರವೀ) ತಯಾರಾದದ್ದು ಕೂಡ ಈ ವರ್ಷದಲ್ಲಿ. ಈ ಚಿತ್ರದಲ್ಲಿ ಮೈಸೂರು ದಸರಾ ಮೆರವಣಿಗೆಯನ್ನು ಯಥಾವತ್ತಾಗಿ ಚಿತ್ರಿಸಿ ಸೇರಿಸಲಾಗಿತ್ತು. ಸಂಗೀತ ರವೀ ಅವರ ಅಭಿರುಚಿಯನ್ನು ಎತ್ತಿ ಹಿಡಿದಿತ್ತು. 'ಕಲ್ಪನಾ... ರೂಪರಾಶಿ...' ಹಾಡು ಕಲ್ಪನಾ ಮೇಲಿನ ಅಭಿಮಾನದಿಂದ ಮೂಡಿಬಂದಿತೆಂಬುದು ಟೀಕೆಗೆ ಒಳಗಾಯಿತು. ಆದರೆ ಆ ಗೀತೆಯ ಚಿತ್ರೀಕರಣ ಚೆನ್ನಾಗಿತ್ತು.

ವರ್ಷದ ಕೊನೆಗೆ ಸಿದ್ಧವಾದ 'ಶ್ರೀಕೃಷ್ಣ ರುಕ್ಮಿಣಿ ಸತ್ಯಭಾಮಾ' ಕೂಡಾ ಬಹುತಾರಾಗಣ, ಶ್ರೀಮಂತಿಕೆಯಿಂದ ಮೆರೆದ ಚಿತ್ರ.

೧೯೭೧ರಲ್ಲಿ ಚಿತ್ರಮಾಧ್ಯಮದ ಅಸಂಖ್ಯ ಸಾಧ್ಯತೆಗಳ ಬಗ್ಗೆ ಕಾಳಜಿ, ಕುತೂಹಲಗಳಿದ್ದ ಆಸಕ್ತರಿಗೆ ಪ್ರಿಯವೆನಿಸುವ ಬೆಳವಣಿಗೆಯೊಂದು ನಡೆಯಿತು. ಅದೆಂದರೆ ಸುಚಿತ್ರ ಫಿಲಂ ಸೊಸೈಟಿಯ ಉದ್ಘಾಟನೆ. ಈ ಚಿತ್ರಸಮಾಜದ ವೈಶಿಷ್ಟ್ಯವೆಂದರೆ ಮೂರು ದಶಕಗಳ ಕಾಲ ನಿರಂತರವಾದ ಸಾರ್ಥಕ ಬದುಕನ್ನು ಕಂಡಿದ್ದು. ಕರ್ನಾಟಕದಲ್ಲಿ ಮಾತ್ರವಲ್ಲದೆ ದೇಶದಲ್ಲಿಯೇ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮೈಲಿಗಲ್ಲುಗಳೆನಿಸಿದ ಅನೇಕ ಕಾರ್ಯಕ್ರಮಗಳನ್ನು ನಿಯೋಜಿಸಿದ ಸುಚಿತ್ರ ಸಿನಿಮಾ ಸಮಾಜಗಳ ಇತಿಹಾಸದಲ್ಲೇ ಒಂದು ಹೊಸ ದಾಖಲೆಯನ್ನು ಸ್ಥಾಪಿಸಿತು.

ಕನ್ನಡ ಚಿತ್ರರಂಗದ ಹಿತರಕ್ಷಣೆಯನ್ನೇ ತನ್ನ ಮೂಲ ಉದ್ದೇಶವನ್ನಾಗಿಸಿದ ಕನ್ನಡ ಚಿತ್ರರಸಿಕರ ಸಂಘವೂ ಇದೇ ವರ್ಷದಲ್ಲಿ ಅಸ್ತಿತ್ವಕ್ಕೆ ಬಂತು. ಮುಂದೆ ಈ ಸಂಸ್ಥೆ ಕನ್ನಡ ಚಿತ್ರೋದ್ಯಮದ ಅನೇಕ ಪ್ರತಿಭಾವಂತರಿಗೆ ಸನ್ಮಾನಗಳನ್ನು ಏರ್ಪಡಿಸಿದ್ದಲ್ಲದೆ, ಅನೇಕ ವರ್ಷಗಳ ಕಾಲ ಆಯಾ ವರ್ಷದ ಚಿತ್ರರಂಗದ ಶ್ರೇಷ್ಠರಿಗೆ ಪ್ರಶಸ್ತಿಗಳನ್ನು ವಿತರಿಸುವ ಪರಿಪಾಠವನ್ನೂ ಹಾಕಿಕೊಂಡಿತು.

ರಾಜ್ಯದಲ್ಲಿ ಪ್ರಪ್ರಥಮವಾಗಿ ಚಲನಚಿತ್ರ ಪತ್ರಕರ್ತರ ಸಂಘಟನೆಯಾಗಿದ್ದೂ ಈ ವರ್ಷದಲ್ಲಿಯೇ. ರಾಜ್ಯ ಸರ್ಕಾರವು ಸಬ್ಸಿಡಿ, ವಾರ್ಷಿಕ ಪ್ರಶಸ್ತಿಗಳು ಮುಂತಾದ ಉತ್ತೇಜಕ ಯೋಜನೆಗಳನ್ನು ಜಾರಿಗೆ ತಂದ ಮೇಲೆ ಇವೆಲ್ಲ ಸಂಸ್ಥೆಗಳು ಹುಟ್ಟಿಕೊಂಡಿದ್ದು ಅದಕ್ಕೆ ಪೂರಕವಾಯಿತು.

'ಶರಪಂಜರ' ೧೯೭೦-೭೧ರ ಅತ್ಯುತ್ತಮ ಕನ್ನಡ ಚಿತ್ರ ಪ್ರಶಸ್ತಿಯನ್ನು ರಾಜ್ಯ ಸರ್ಕಾರದಿಂದ ಪಡೆದರೆ, 'ಸಂಸ್ಕಾರ' ಎರಡನೆಯ ಅತ್ಯುತ್ತಮ ಚಿತ್ರ ಪ್ರಶಸ್ತಿಗೂ, 'ಕುಲಗೌರವ' ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಗೂ ಭಾಜನವಾದವು. 'ಕುಲಗೌರವ'ದಲ್ಲಿ ಮೂರು ಪಾತ್ರಗಳಲ್ಲಿ ಅಭಿನಯಿಸಿದ ರಾಜಕುಮಾರ್ ವರ್ಷದ ಅತ್ಯುತ್ತಮ ನಟ ಪ್ರಶಸ್ತಿಯನ್ನು ಪಡೆದರೆ, 'ಶರಪಂಜರ'ದ ಕಲ್ಪನಾ ವರ್ಷದ ಅತ್ಯುತ್ತಮ ನಟಿಯೆನಿಸಿದರು. 'ಶರಪಂಜರ'ದ ಚಿತ್ರಕಥೆಗಾಗಿ ಪುಟ್ಟಣ್ಣ ಕಣಗಾಲ್‌ರಿಗೆ ಪ್ರಶಸ್ತಿ ಬಂತು. 'ಕುಲಗೌರವ'ದ ಅತ್ಯುತ್ತಮ ಸಂಭಾಷಣಾಕಾರ ಚಿ.ಉದಯಶಂಕರ್, ಅತ್ಯುತ್ತಮ ಧ್ವನಿಗ್ರಾಹಕ ಶ್ರೀನಿವಾಸನ್ ಮತ್ತು ಅತ್ಯುತ್ತಮ ಸಂಕಲನಕಾರ ಪಿ.ಭಕ್ತವತ್ಸಲ ಪ್ರಶಸ್ತಿಯನ್ನು ಗಳಿಸಿದರು. 'ಅಮರ ಭಾರತಿ'ಯಲ್ಲಿನ ತಮ್ಮ ಪ್ರಬುದ್ಧ ಅಭಿನಯಕ್ಕಾಗಿ ಜಯಶ್ರೀಯವರಿಗೆ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಬಂತು.

೧೯೭೨ರಲ್ಲಿ ತೆರೆಕಂಡ ಕನ್ನಡ ಚಿತ್ರಗಳ ಸಂಖ್ಯೆ ಕಳೆದ ವರ್ಷಕ್ಕೆ ಹೋಲಿಸಿದರೆ ೩೬ರಿಂದ ದಿಢೀರೆಂದು ೨೪ಕ್ಕೆ ಇಳಿಯಿತು. ಆದರೆ ಗುಣಮಟ್ಟದ ದೃಷ್ಟಿಯಿಂದ ಈ ವರ್ಷ ಚಿತ್ರೋದ್ಯಮಕ್ಕೆ ಹೆಚ್ಚಿನ ಹರ್ಷ ತಂದಿದ್ದು ಹೌದು. ಜೊತೆಗೆ ಎರಡು ಚಿತ್ರಗಳು ಆಚರಿಸಿಕೊಂಡ ರಜತೋತ್ಸವ ಮತ್ತು ಒಂದು ಚಿತ್ರ ಆಚರಿಸಿಕೊಂಡ ಶತದಿನೋತ್ಸವ ಉದ್ಯಮದ ಆತ್ಮವಿಶ್ವಾಸವನ್ನು ಹಿಗ್ಗಿಸಿದವು. ಈ ಚಿತ್ರಗಳಲ್ಲಿ ವಿಶೇಷ ಮಾನ್ಯತೆ ಪಡೆದ ಹೊಸ ಅಲೆಯ 'ವಂಶವೃಕ್ಷ' ಕೂಡ ಸೇರಿದ್ದೊಂದು ವಿಶೇಷ. ಐದು ವರ್ಷಗಳ ದೀರ್ಘ ಅಜ್ಞಾತವಾಸದಿಂದ ಹೊರಬಂದು ಜಿ.ವಿ.ಅಯ್ಯರ್‌ರವರು ಎಸ್.ಎಲ್.ಭೈರಪ್ಪನವರ ಅದೇ ಹೆಸರಿನ ಕಾದಂಬರಿಯನ್ನಾಧರಿಸಿ ನಿರ್ಮಿಸಿದ ಈ ಚಿತ್ರವನ್ನು ತಾವೇ ನಿರ್ದೇಶಿಸಲಿಲ್ಲ, ಬದಲಾಗಿ ಪ್ರತಿಭಾವಂತ ಜೋಡಿ ಗಿರೀಶ್ ಕಾರ್ನಾಡ್ ಮತ್ತು ಬಿ.ವಿ.ಕಾರಂತರಿಗೆ ಈ ಜವಾಬ್ದಾರಿಯನ್ನು ಕೊಟ್ಟರು. ಅವರಿಬ್ಬರೂ ಚಿತ್ರದಲ್ಲಿ ಪ್ರಮುಖ ಪಾತ್ರಗಳನ್ನು ನಿರ್ವಹಿಸಿ, ನಿರ್ದೇಶಿಸಿದರು.

ಭೈರಪ್ಪನವರು ಎಂದೂ ನವೋದಯ, ಪ್ರಗತಿಶೀಲ, ನವ್ಯ, ಮುಂತಾದ ಯಾವುದೇ ಹಣೆಪಟ್ಟಿಯನ್ನು ಹಾಕಿಕೊಂಡವರಲ್ಲ. ನವ್ಯ ಸಾಹಿತ್ಯದ ಪ್ರಭಾವದ ಗುಂಪು ಅವರ ಕಾದಂಬರಿಗಳಿಗೆ ಜೀವವಿರೋಧಿ ಎಂಬ ಹಣೆಪಟ್ಟಿ ಕಟ್ಟಿದ್ದರೂ ವಾಸ್ತವವಾಗಿ ಅವರು ತಮ್ಮ 'ವಂಶವೃಕ್ಷ' ಕಾದಂಬರಿಯಲ್ಲಿ ಸಾಂಪ್ರದಾಯಿಕ (ಶ್ರೋತ್ರಿ ಮತ್ತು ಪತ್ನಿ), ಆಧುನಿಕ (ಗಿರೀಶ್ ಕಾರ್ನಾಡ್ ಮತ್ತು ಕಾತ್ಯಾಯಿನಿ) ಮತ್ತು ಪ್ಲೆಟಾನಿಕ್ (ಪ್ರೊ. ರಾಜಾರಾವ್ ಮತ್ತು ಶ್ರೀಲಂಕಾ ಮಹಿಳೆ) ಈ ಮೂರೂ ನೆಲೆಗಳಲ್ಲಿ ಗಂಡು-ಹೆಣ್ಣಿನ ಸಂಬಂಧದ ಸಾರ್ಥಕತೆಯನ್ನೇ ಪ್ರಶ್ನಿಸಿದ್ದಾರೆನಿಸುತ್ತದೆ. ಈ ಮೂರು ಬಗೆಯ ಸಂಬಂಧಗಳೂ ದುಃಖಾಂತ್ಯವೇ ಆಗುವುದನ್ನು ಗಮನಿಸಬಹುದು. ಅಂತಿಮವಾಗಿ ಈ ಚಿತ್ರದ ಶ್ರೋತ್ರಿ ಸಹ 'ಸಂಸ್ಕಾರ'ದ ಪ್ರಾಣೇಶಾಚಾರ್ಯರಂತೆ ಅನುಭವದಿಂದಲೇ ಜೀವನದ ಸತ್ಯವನ್ನು ಕಂಡುಕೊಳ್ಳುತ್ತಾನೆ.

'ಸಂಸ್ಕಾರ'ದ ನಂತರ 'ವಂಶವೃಕ್ಷ' ಮತ್ತೊಂದು ಪ್ರಾಯೋಗಿಕ ಚಿತ್ರವೆನಿಸಿ, ರಾಷ್ಟ್ರಮಟ್ಟದಲ್ಲಿ ಕೂಡ ಗಿರೀಶ್ ಕಾರ್ನಾಡ್-ಕಾರಂತ್ ಜೋಡಿಗೆ ಶ್ರೇಷ್ಠ ನಿರ್ದೇಶಕರ ಪ್ರಶಸ್ತಿ ತಂದುಕೊಟ್ಟಿತು. ಹೊಸ ಅಲೆ ಚಿತ್ರಗಳ ನಿರ್ದೇಶಕರು ತುಳಿಯಬಹುದಾದ ಪಾತ್ರಗಳ ಮತ್ತು ಸನ್ನಿವೇಶಗಳ ಜೀವಂತಿಕೆಯನ್ನೇ ಕಿತ್ತು ಹಾಕುವ ಅತಿರೇಕವಾಗಲಿ ಮತ್ತು ಜನಕ್ಕೆ ಅರ್ಥ ಮಾಡಿಸುವ ನೆಪದಿಂದ ಅತಿ ವಾಚ್ಯ ನಿರೂಪಣೆಗೆ ಕೈ ಹಾಕುವ ವ್ಯಾಪಾರಿ ಚಿತ್ರಗಳ ನಿರ್ದೇಶಕರ ಹಾದಿಯಾಗಲಿ ಅಲ್ಲದ ಮಧ್ಯದ ಹಾದಿಯನ್ನು ಅವರಿಬ್ಬರೂ ಈ ಚಿತ್ರದಲ್ಲಿ ತುಳಿದರು. ಆದರೆ ಕ್ಯಾಮರಾ ಮೂಲಕವಾಗಿಯಾಗಲಿ,

ಇತರ ದೃಷ್ಟಿಗಳಿಂದಾಗಲಿ ಚಿತ್ರದಲ್ಲಿ ಯಾರಿಗೇ ಆಗಲಿ ಪ್ರಾಧಾನ್ಯವನ್ನು ನೀಡಿಲ್ಲವೆಂಬ ನಿರ್ದೇಶಕದ್ವಯರ ಹೇಳಿಕೆ ಸತ್ಯ ದೂರವಾಗಿತ್ತು. ಚಿತ್ರದಲ್ಲಿ ಪ್ರಾಮುಖ್ಯ ಸಿಕ್ಕಿದ್ದು ಕಾತ್ಯಾಯಿನಿ ಮತ್ತು ಹಿರಿಯ ಶ್ರೋತ್ರೀಯರಿಗೆ ಮಾತ್ರ. ಮಿಕ್ಕ ಪಾತ್ರಗಳು ಅಷ್ಟಾಗಿ ಗಮನಕ್ಕೆ ಬರಲಿಲ್ಲ. ಶ್ರೋತ್ರೀಗಳ ಪಾತ್ರದಲ್ಲಿ ಮೊಟ್ಟಮೊದಲ ಬಾರಿಗೆ ತೆರೆಯ ಮೇಲೆ ಕಾಣಿಸಿಕೊಂಡ ರಂಗಾನುಭವಿ ವೆಂಕಟರಾವ್ ತಲಗೇರಿಯವರ ಅಭಿನಯ ಮತ್ತು ಕಾತ್ಯಾಯಿನಿ ಪಾತ್ರದಲ್ಲಿ ಎಲ್.ವಿ.ಶಾರದಾ ಪ್ರದರ್ಶಿಸಿದ ಅಭಿನಯ ಪ್ರೌಢಿಮೆ ವಿಶೇಷವಾಗಿ ಗಮನ ಸೆಳೆದವು. ಅವರಿಬ್ಬರಿಗೂ ಪ್ರಶಂಸೆ, ಪ್ರಶಸ್ತಿಗಳು ಸಂದವು. ಈ ಚಿತ್ರಕ್ಕೆ ಅರುಣಾ-ವಿಕಾಸ್‌ರವರ ಸಂಕಲನವಿತ್ತು.

ಚಿತ್ರದಲ್ಲಿ ನೇರವಾಗಿ ಚಲನಚಿತ್ರರಂಗಕ್ಕೆ ಸಂಬಂಧಿಸದ ಕೆಲವು ಕ್ರಿಯಾಶೀಲರ ಸಹಯೋಗವಿತ್ತು. ಅವರಲ್ಲಿ ಮುಖ್ಯರಾದವರು 'ಸಂಸ್ಕಾರ'ಕ್ಕೆ ಕಲಾನಿರ್ದೇಶನ ಮಾಡಿದ ಖ್ಯಾತ ಕಲಾವಿದ ಎಸ್.ಜಿ.ವಾಸುದೇವ್ ಮತ್ತು ಆಗ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಸಂಗೀತ ವಿಭಾಗವಲ್ಲಿ ಪ್ರಾಧ್ಯಾಪಕರಾಗಿದ್ದ ಭಾಸ್ಕರ್ ಚಂದಾವರ್ಕರ್ 'ವಂಶವೃಕ್ಷ'ಕ್ಕೆ ಸಂಗೀತ ನಿರ್ದೇಶಕರಾಗಿದ್ದರು.

'ವಂಶವೃಕ್ಷ' ಕನ್ನಡ ಚಿತ್ರರಂಗಕ್ಕೆ ವಿಷ್ಣುವರ್ಧನ್‌ರಂತಹ ಪ್ರತಿಭಾವಂತ ನಟರನ್ನು ಪರಿಚಯ ಮಾಡಿಕೊಟ್ಟ ಚಿತ್ರ. ಆದರೆ ಇಲ್ಲಿ ಅವರ ನಿಜನಾಮ ಕುಮಾರ್ ಎಂತಲೇ ಇತ್ತು. ಚಿತ್ರದ ಕೊನೆಯ ದೃಶ್ಯದಲ್ಲಿ ಇದ್ದಕ್ಕಿದ್ದಂತೆ ವಿಶೇಷ ರೀವಿಯಿಂದ ಕಾಣಿಸಿಕೊಂಡು ಪ್ರೇಕ್ಷಕರ ಮೇಲೆ ಪರಿಣಾಮ ಬೀರಿದ ಕುಮಾರ್ ಅನಂತರ 'ನಾಗರಹಾವು' ಮೂಲಕ ತಮ್ಮ ಚಿತ್ರರಂಗದ ವಿಷ್ಣುವರ್ಧನ್ ಎಂಬ ಅಭಿದಾನ ಪಡೆದು ಕನ್ನಡ ಚಿತ್ರೋದ್ಯಮದ ಜನಾನುರಾಗಿ ನಟರಲ್ಲೊಬ್ಬರಾಗಿ ಉತ್ತುಂಗಸ್ಥಾನಕ್ಕೆ ಬಂದರು.

ನಿಜವಾದ ಒಂದು ಪವಾಡವೆಂದರೆ 'ವಂಶವೃಕ್ಷ' ಸ್ಟೇಟ್ಸ್ ಚಿತ್ರಮಂದಿರದಲ್ಲಿ ಸತತವಾಗಿ ೨೫ ವಾರಗಳು ಪ್ರದರ್ಶಿತವಾಯಿತೆಂಬುದು. 'ಸಂಸ್ಕಾರ'ಕ್ಕೆ ವ್ಯಾಪಕವಾದ ವಿದೇಶಿ ಮಾರುಕಟ್ಟೆ ದೊರೆತರೆ, ಈ ಚಿತ್ರ ಹುಟ್ಟಿದ ಮಣ್ಣಿನಲ್ಲಿಯೇ ಆರ್ಥಿಕವಾಗಿ ಕೂಡ ಸಾಮರ್ಥ್ಯ ಪಡೆಯಿತು.

೧೯೭೨ರಲ್ಲಿ ಬಿಡುಗಡೆಯಾಗಿ ಒಂದೇ ಚಿತ್ರಮಂದಿರದಲ್ಲಿ ಎರಡು ವರ್ಷಗಳ ಕಾಲ ಸತತವಾಗಿ ಪ್ರದರ್ಶಿತವಾಗಿ ಹೊಸ ದಾಖಲೆ ನಿರ್ಮಿಸಿದ ಚಿತ್ರ ಗೋಪಾಲ್-ಲಕ್ಷ್ಮಣ್‌ರವರ ಚೊಚ್ಚಲ ತಯಾರಿಕೆ 'ಬಂಗಾರದ ಮನುಷ್ಯ'. ಈ ಚಿತ್ರವನ್ನು ಕೆಲವು ದೃಷ್ಟಿಗಳಿಂದ ಒಂದು ಪವಾಡವೆಂದೇ ಕರೆಯಬಹುದು.

ಸಿದ್ದಲಿಂಗಯ್ಯನವರು ನಿರ್ದೇಶಿಸಿದ ಈ ಚಿತ್ರಕ್ಕೆ ಟಿ.ಕೆ.ರಾಮರಾಯರ ಸಾಮಾನ್ಯ ಕೌಟುಂಬಿಕ ಕಾದಂಬರಿಯೊಂದು ಆಧಾರ. ಗ್ರಾಮೀಣ ಹಿನ್ನೆಲೆಯ ಒಂದು ಮನೆತನದ ಘನತೆ ಗೌರವಗಳಿಗಾಗಿ ತನ್ನ ಜೀವನವನ್ನೇ ಮುಡಿಪಾಗಿರಿಸಿದ ಒಬ್ಬಾತ ಕೊನೆಗೆ ಮನೆಯಲ್ಲಿನ ಕಿರಿಯರ ಸ್ವಾರ್ಥ, ಸಂಕುಚಿತ ಭಾವನೆಗಳಿಂದ ಮನ ನೊಂದು ಹೊರಟು ಹೋಗುವುದು ಚಿತ್ರದ ಕಥಾವಸ್ತು. ಮೂಲತಃ ಇದರ ನಾಯಕ ನಟ ರಾಜಕುಮಾರ್‌ರವರ ಪಾತ್ರ ಅವರ ಜನಪ್ರಿಯ ಇಮೇಜ್‌ಗೆ ಹೊಂದಿಕೊಳ್ಳುವಂತಿತ್ತು. ದಶಕದ ಮೊದಲನೆಯ ವರ್ಷವೇ ಬಂದ ದೊರೆ-ಭಗವಾನ್‌ರವರ 'ಕಸ್ತೂರಿನಿವಾಸ' ಚಿತ್ರಕ್ಕಿಂತ ತುಂಬ ಭಿನ್ನವಾದದ್ದೇನಲ್ಲ. ಆದರೆ ಚಿತ್ರ ಅತ್ಯಂತ ಶ್ರೀಮಂತವಾಗಿತ್ತು. ಆಶ್ಚರ್ಯವೆನಿಸುವ ಮಟ್ಟದಲ್ಲಿ ಜನಾನುರಾಗ ಗಳಿಸಿತು. ಅದೇ ಸಮಯದಲ್ಲಿ ಸದಭಿರುಚಿಯ ಚಿತ್ರಗಳಿಗಾಗಿ ಪ್ರೇಕ್ಷಕರ ಹಸಿವು ಎಷ್ಟು ತೀಕ್ಷ್ಣವಾಗಿದ್ದಿತೆಂಬುದನ್ನು ನಿರೂಪಿಸಿತು.

ಒಮ್ಮೆ ಚಿತ್ರದ ನಿರ್ಮಾಪಕರಲ್ಲೊಬ್ಬರಾದ ಗೋಪಾಲ್ ಅವರು ತಮ್ಮ ಚಿತ್ರದ ಅಸಾಧಾರಣ ಯಶಸ್ಸಿಗೆ ಕಾರಣವನ್ನು ವಿಶ್ಲೇಷಿಸುತ್ತಾ ತಮ್ಮ ಸಹ ನಿರ್ಮಾಪಕರಾದ ಲಕ್ಷ್ಮಣ್ ಅವರಿಗೆ ಭಾರತ್ ಚಿತ್ರಮಂದಿರದ ಮ್ಯಾನೇಜರಾಗಿ ಪ್ರದರ್ಶನ ವಲಯದಲ್ಲಿ ನಡೆಯುವ ಕೆಲವು ಅನೈತಿಕ ವ್ಯವಹಾರಗಳ ಪರಿಚಯ ಚೆನ್ನಾಗಿದ್ದುದರಿಂದ ಕನ್ನಡ ಚಳವಳಿಗಾರರಾಗಿದ್ದ ತಾವು ತಮ್ಮ ಪ್ರಭಾವವನ್ನು ಉಪಯೋಗಿಸಿ ಅಂಥ ಸೋರಿಕೆಯನ್ನು ಎಲ್ಲ ಚಿತ್ರಮಂದಿರಗಳಲ್ಲೂ ತಡೆಗಟ್ಟಿದ್ದರಿಂದ ಚಿತ್ರ ಬಿಡುಗಡೆಯಾದ ಎಲ್ಲೆಡೆಗಳಿಂದ ಪೂರ್ಣ ಗಳಿಕೆಯು ಮೂರೂ ವಲಯದವರಿಗೆ ನ್ಯಾಯಬದ್ಧವಾಗಿ ದಕ್ಕಿತೆಂದು ನುಡಿದರು. ತಾವು ಹಾಕಿದ ಹಣಕ್ಕೆ ಸ್ವಲ್ಪವೂ ಮೋಸವಾಗದಂತೆ ನೋಡಿಕೊಂಡಿದ್ದು ನಿರ್ಮಾಪಕರಾದ ಗೋಪಾಲ್-ಲಕ್ಷ್ಮಣ್‌ರವರ ಸಾಧನೆ ಎನಿಸಿತು. ಜಿ.ಕೆ.ವೆಂಕಟೇಶ್‌ರವರ ಜನಾನುರಾಗಿ ಹಾಡುಗಳು ಚಿತ್ರದ ಜನಪ್ರಿಯತೆಗೆ ಸಾಕಷ್ಟು ಕಾರಣವಾದವು. 'ನಗು ನಗುತಾ ನಲೀ ನಲೀ....' ಮತ್ತು 'ಬಾಳ ಬಂಗಾರ ನೀನು....' ಮುಂತಾದ ಹಾಡುಗಳಲ್ಲಿ ಸಾಮಾನ್ಯ ಜನರಿಗೆ ಒಪ್ಪಿಗೆಯಾಗುವ ಜೀವನ ದರ್ಶನವಿತ್ತು. ಚಿತ್ರವೇ ಆದರ್ಶಪೂರ್ಣವಾಗಿದ್ದರೂ ಉಪದೇಶಗಳನ್ನು ಸಂಭಾಷಣೆಯಲ್ಲಿ ನೇರವಾಗಿ ತರದಿದ್ದುದು ಒಂದು ಗಮನಾರ್ಹ ಅಂಶವೆನಿಸಿತು.

ಈ ಚಿತ್ರ ಕ್ಕೆ ಕೆಲಸ ಮಾಡಿದ ಎಲ್ಲ ತಂತ್ರಜ್ಞರನ್ನೂ ಚಿತ್ರೀಕರಣ ನಡೆಯುವ ಸ್ಥಳಗಳಿಗೆ ಶೂಟಿಂಗ್ ನಡೆಯುವ ಮುಂಚೆಯೇ ಕರೆದುಕೊಂಡು ಹೋಗಿ ಅವರಿಗೆ ಈ ಸ್ಥಳಗಳ ಪೂರ್ವ ಪರಿಚಯವನ್ನು ಮಾಡಿಕೊಡಲಾಯಿತು. ಅಲ್ಲದೆ ಕನ್ನಡ ಚಿತ್ರರಂಗದ ಖ್ಯಾತ ಸಾಹಿತಿಗಳೆಲ್ಲರನ್ನೂ ಈ ಚಿತ್ರೀಕರಣ ನಡೆಯುವ ಮುಂಚೆ ಎಲ್ಲೆಲ್ಲಿ ಯಾವ ದೃಶ್ಯಗಳನ್ನು ತೆಗೆಯಬೇಕೆನ್ನುವ ಬಗ್ಗೆ ಅವರೊಂದಿಗೆ ಚರ್ಚಿಸಿ ನಂತರ ಅಂತಿಮ ನಿರ್ಧಾರವನ್ನು ಕೈಗೊಳ್ಳಲಾಯಿತು. ಈ ಚಿತ್ರ ಅದ್ಭುತ ಯಶಸ್ಸು ಕಂಡಿತು. ಒಂದು ವಲಯದಲ್ಲಿ ವಿವಾದವನ್ನು ಎಬ್ಬಿಸಿತು.

ರಷ್ಯಾಕ್ಕೆ ತೆರಳಲಿದ್ದ ಪುಟ್ಟಣ್ಣ ಕಣಗಾಲರಿಗೆ ಮೈಸೂರಿನಲ್ಲಿ ಕಲ್ಪನಾ ಅವರು ಕೊಟ್ಟ ಔತಣಕೂಟದ ಸಮಾರಂಭದಲ್ಲಿ ಬರಹಗಾರ ಆಲನಹಳ್ಳಿ ಕೃಷ್ಣ ಅವರು ನಾಯಕನಟನನ್ನು ವೈಭವಿಸುವ ಸಡಗರದಲ್ಲಿ ಜನತೆಯನ್ನು ಅಪಮಾನಿಸಲಾಗಿದೆ ಎಂದರು. ಮತ್ತು ಮೊದಲ ಚಿತ್ರಿಕೆಯೇ ನಾಯಕನಟರ 'ಚಪ್ಪಲಿ'ಯನ್ನು ತೋರಿಸಿದ್ದನ್ನು ಎತ್ತಿ ಆಡಿದರು. ಈ ವಿವಾದದ ಅನಂತರ 'ಬಂಗಾರದ ಮನುಷ್ಯ'ದಂಥ ಚಿತ್ರಗಳು ಬಹಳ ಸುಲಭದಲ್ಲಿ ವ್ಯಕ್ತಿಯೊಬ್ಬ ಶ್ರೀಮಂತನಾಗಬಹುದೆಂಬ ಭ್ರಮೆಯನ್ನು ಹುಟ್ಟಿಸುತ್ತವೆ ಎಂಬ ನೆಲೆಯಲ್ಲಿ ಮತ್ತು ಹಲವು ಅಂಶಗಳುಳ್ಳ ಸುದೀರ್ಘ ಲೇಖನವನ್ನೇ ಬರೆದರು ಹಿರಿಯ ಲೇಖಕ ಡಾ|ಯು.ಆರ್.ಅನಂತಮೂರ್ತಿ. (ನೋಡಿ : ಯು.ಆರ್.ಅನಂತಮೂರ್ತಿಯವರ 'ಪ್ರಜ್ಞೆ ಮತ್ತು ಪರಿಸರ' ಗ್ರಂಥ)

ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ನಾಗರಹಾವು' ೧೯೭೨ರಲ್ಲಿ ತೆರೆಗೆ ಬಂದ ಇನ್ನೊಂದು ಪ್ರಮುಖ ಚಿತ್ರ, ಕನ್ನಡ ಚಿತ್ರರಂಗದಲ್ಲಿ ಮೈಲಿಗಲ್ಲಾಗಿ ನಿಂತಿತು.



(ಚಿತ್ರ ೧೫) 'ವಂಶವೃಕ್ಷ' ಚಿತ್ರದಲ್ಲಿ ಚಂದ್ರಶೇಖರ್ ಮತ್ತು ಎಲ್.ವಿ.ಶಾರದಾ



(ಚಿತ್ರ ೧೬) 'ಬಂಗಾರದ ಮನುಷ್ಯ' ಚಿತ್ರದಲ್ಲಿ ಕಲಾ, ರಾಜಕುಮಾರ್, ಅಶ್ವತ್ಥ ನಾರಾಯಣ್, ವಜ್ರಮುನಿ, ಆದವಾನಿ ಲಕ್ಷ್ಮೀದೇವಿ

ವೀರ ರಮಣಿಯ...' ಸನ್ನಿವೇಶದ ಚಿತ್ರಣಕ್ಕೆ ಹೈದರಾಲಿ ಮತ್ತು ಮದಕರಿ ನಾಯಕನ ಸೈನ್ಯಗಳಾಗಿ ಒಟ್ಟು ೨೨೦ ಮಂದಿ ಹೋಂ ಗಾರ್ಡ್‌ಗಳನ್ನು ಬಳಸಿದರು. ಚಿತ್ರದುರ್ಗದ ಕೋಟೆಯ ತಪ್ಪಲಲ್ಲಿ ಹಾಕಿದ್ದ ಮಾರ್ಗರೆಟ್ ಮನೆಯ ಸೆಟ್‌ಗೆ, ಹಾಗೂ ಅಕ್ಕಪಕ್ಕ ಎಫೆಕ್ಟ್‌ಗಾಗಿ ಹಾಕಿದ್ದ ಎರಡು ಪುಟ್ಟ ಮನೆಗಳ ಸೆಟ್‌ಗೆ ಆಗಿನ ಕಾಲದಲ್ಲಿಯೇ ೧೩,೦೦೦ ರೂಪಾಯಿಗಳು ಖರ್ಚಾದವು. ಕನ್ನಡ ಚಿತ್ರಕ್ಕೆ ಸತತವಾಗಿ ೪೫ ದಿನಗಳು ಒಂದೇ ಷೆಡ್ಯೂಲ್‌ನಲ್ಲಿ ಚಿತ್ರಣ ನಡೆದಿದ್ದು ಅದೇ ಮೊದಲು.

ತ.ರಾ.ಸು.ರವರ ಮೂರು ಕಾದಂಬರಿಗಳಾದ 'ನಾಗರಹಾವು', 'ಎರಡು ಹೆಣ್ಣು, ಒಂದು ಗಂಡು' ಮತ್ತು 'ಸರ್ಪಮತ್ಸರ'ಗಳನ್ನು ಆಧರಿಸಿ ಈ ಚಿತ್ರದ ಕಥೆಯನ್ನು ಹೆಣೆಯಲಾಯಿತು. ಪುಸ್ತಕಗಳಲ್ಲಿ ನಾಲ್ಕು ಗೋಡೆಗಳ ನಡುವೆ ನಡೆಯುವ ಕಥೆಯನ್ನು ಚಿತ್ರದಲ್ಲಿ ಪುಟ್ಟಣ್ಣ ಸಂಪೂರ್ಣವಾಗಿ ದುರ್ಗದ ಹಿನ್ನೆಲೆಯಲ್ಲಿ ಹೇಳಿ ಒಂದು ವಿಕ್ರಮವನ್ನೇ ಸಾಧಿಸಿದರು. ವಿಜಯಭಾಸ್ಕರ್ ಸಂಯೋಜಿಸಿದ 'ನಾಗರಹಾವು' ಚಿತ್ರದ ಹಾಡುಗಳಂತೂ ಚಿರಸ್ಮರಣೀಯವಾದವು. ನಾಯಕನ ಪ್ರೇಯಸಿ ಅಲಮೇಲು ಲಫಂಗ ಗಂಡನಕೈಗೆ ಸಿಕ್ಕಿ ಪಟ್ಟ ಮಾನಸಿಕ ಯಾತನೆ ಮತ್ತು ಬವಣೆಗಳನ್ನು 'ಕಥೆ ಹೇಳುವೆ ನನ್ನ ಕಥೆ ಹೇಳುವೆ....' ಹಾಡಿನ ಮೂಲಕ ನಿರೂಪಿಸಿದ ಪುಟ್ಟಣ್ಣನವರ ಕಲೆಗಾರಿಕೆ ಚಲನಚಿತ್ರ ಮಾಧ್ಯಮದ ಸರಿಯಾದ ಬಳಕೆ ಎಂದು ಮೆಚ್ಚುಗೆ ಗಳಿಸಿತು. ಚಿಟ್ಟಿಬಾಬು ಅವರ ಛಾಯಾಗ್ರಹಣದಲ್ಲಿ - ತಾಂತ್ರಿಕ ಸೌಲಭ್ಯ ಇಲ್ಲದಾಗಲೂ - ವಿಶಿಷ್ಟ ಪರಿಣಾಮ ಮೂಡಿಸುವ ಜಾಣ್ಮೆ ಬಳಸಿದ ಚಿತ್ರಿಕೆಗಳು ಬೆರಗುಗೊಳಿಸಿದವು. ಹಾಡುಗಳು ಸುಶ್ರಾವ್ಯವಾಗಿದ್ದುದು ಮಾತ್ರವಲ್ಲ, ಹಿನ್ನೆಲೆ ಸಂಗೀತದಲ್ಲಿ ವಿಜಯಭಾಸ್ಕರ್ ತೋರಿದ ಕ್ರಿಯಾಶೀಲತೆ ಮತ್ತು ಅರ್ಥಪೂರ್ಣತೆ ಚಿತ್ರದ ಕಲಾತ್ಮಕ ಮೌಲ್ಯಗಳನ್ನು ಗಮನೀಯವಾಗಿ ಹೆಚ್ಚಿಸಿತು.

ಇದುವರೆಗೆ ಪುಟ್ಟಣ್ಣನವರು ರಾಜಕುಮಾರ್ ನಾಯಕತ್ವದ 'ಮಲ್ಲಮ್ಮನ ಪವಾಡ' ಮತ್ತು 'ಕರುಳಿನ ಕರೆ' ಚಿತ್ರಗಳನ್ನು ನಿರ್ದೇಶಿಸಿದ್ದರೂ, 'ಬೆಳ್ಳಿಮೋಡ', 'ಕಪ್ಪು-ಬಿಳುಪು', 'ಗೆಜ್ಜೆಪೂಜೆ' ಮತ್ತು 'ಶರಪಂಜರ' ಚಿತ್ರಗಳಿಂದಾಗಿ ಸಾಹಿತಿ ತ್ರಿವೇಣಿ, ನಟಿ ಕಲ್ಪನಾ ಹಾಗೂ ನಾಯಕಿಪ್ರಧಾನ ಚಿತ್ರಗಳು ಅವರ ಯಶಸ್ಸಿಗೆ ಮೂಲ ಕಾರಣವೆಂಬ ಭಾವನೆ ಜನರಲ್ಲಿ ಬಂದಿತ್ತು. ಅಥವಾ ಅವರಿಗೇ ಜನರು ಹಾಗೆಂದುಕೊಂಡಿರಬಹುದು ಎನಿಸಿತ್ತು. ಈ ಹಿನ್ನೆಲೆಯಿಂದಾಗಿ ಅವರು 'ನಾಗರಹಾವು' ನಾಯಕ ಪಾತ್ರಕ್ಕೆ ಹೊಸ ನಟ ವಿಷ್ಣುವರ್ಧನ್‌ರನ್ನು, ಇಬ್ಬರು ನಾಯಕಿಯರಾಗಿ 'ಗೆಜ್ಜೆಪೂಜೆ'ಯಲ್ಲಿ ಒಂದು ಸಣ್ಣ ಪಾತ್ರದಲ್ಲಿ ಕಾಣಿಸಿಕೊಂಡಿದ್ದ ಆರತಿ ಮತ್ತು ಮದರಾಸಿನ ನಟಿ ಶುಭಾರನ್ನು ಆರಿಸಿದರು. ವಿಷ್ಣುವಿನ ಆಯ್ಕೆಗೆ ಕಾರಣ ಹೇಳುತ್ತಾ ''ಆತನ ಕಣ್ಣುಗಳನ್ನು ನೋಡಿದರೆ, ಕತ್ತು ತಿರುಗಿಸುವ ಧಾಟಿ ನೋಡಿದರೆ ನಾಗರಹಾವನ್ನು ನೋಡಿದಂತೆಯೇ ಆಗುತ್ತದೆ'' ಎಂದಿದ್ದರು. ಈ ಚಿತ್ರದ ಬಹುಪಾಲು ಚಿತ್ರೀಕರಣವನ್ನು ಕಥೆ ನಡೆಯುವ ಚಿತ್ರದುರ್ಗದ ಕೋಟೆಯಲ್ಲಿಯೇ ನಡೆಸಬೇಕಾಗಿದ್ದು ಕೇಂದ್ರ ಪ್ರಾಚ್ಯ ಸಂಶೋಧನಾ ಇಲಾಖೆಯವರು ಚಿತ್ರಣಕ್ಕೆ ಅನುಮತಿ ನೀಡದೆ ಅದಕ್ಕೇ ಒಂದೆರಡು ತಿಂಗಳ ಕಾಲ ಕಾಯಬೇಕಾಯಿತು. ಆದರೆ ಹಾಗೆ ಕಾದದ್ದು ಕೊನೆಗೂ ಸಾರ್ಥಕವೆನಿಸಿತು. 'ನಾಗರಹಾವು' ಬಿಡುಗಡೆಯ ನಂತರ ದೀರ್ಘಕಾಲ ಚಿತ್ರದುರ್ಗ ಕೋಟೆಯನ್ನು ಜನ ಇದು 'ನಾಗರಹಾವು' ಚಿತ್ರೀಕರಣ ನಡೆದ ಸ್ಥಳವೆಂದೇ ಗುರುತಿಸುವಂತಾಯಿತು. ಆಗ ಕೇಂದ್ರ ಸಚಿವರಾಗಿದ್ದ ಎಸ್.ಎಂ.ಕೃಷ್ಣರವರು ಕೇಂದ್ರ ಸರ್ಕಾರದ ಮೇಲೆ ಪ್ರಭಾವ ಬೀರದಿದ್ದರೆ ಚಿತ್ರಣಕ್ಕೆ ಅನುಮತಿ ಸಿಗುವುದು ದುಸ್ತರವೇ ಆಗುತ್ತಿತ್ತು.

ಈ ಚಿತ್ರದಲ್ಲಿ ಜಲೀಲ್ ಎಂಬ ಪೋಲಿ ಹುಡುಗನಾಗಿ ಕಾಣಿಸಿಕೊಂಡ ಅಂಬರೀಷ್ ಮುಂದೆ ಕನ್ನಡ ಚಿತ್ರರಂಗದ ಖಳನಾಗಿ, ನಾಯಕನಟನಾಗಿ ಮಿಂಚಿ, ನಂತರ ರಾಜಕೀಯ ಪ್ರವೇಶಿಸಿ ಸಂಸತ್ ಸದಸ್ಯರೂ ಆದರು. ರಾಮಾಚಾರಿಯ ಮೇಷ್ಟ್ರ ಪಾತ್ರದಲ್ಲಿ ಅಶ್ವತ್ಥ್ ಶ್ರೇಷ್ಠ ಮಟ್ಟದ ಅಭಿನಯ ನೀಡಿದರು. ಕಲ್ಪನಾರವರು ತಮ್ಮ ಘನತೆಗೆ ಕಡಿಮೆಯೆಂದು ನಿರಾಕರಿಸಿದ ಒನಕೆ ಓಬವ್ವಳ ಪಾತ್ರವನ್ನು ಜಯಂತಿಯವರು ಜನ ಮರೆಯಲಾರದಷ್ಟು ಪ್ರಭಾವಶಾಲಿಯಾಗಿ ನಿರ್ವಹಿಸಿದರು. ಗರಡಿಯೊಂದರ ಮಾಲೀಕನ ಪಾತ್ರದಲ್ಲಿ ಎಂ.ಪಿ.ಶಂಕರ್ ಮತ್ತು ಎಂ.ಎನ್.ಲಕ್ಷ್ಮೀದೇವಿಯವರ ಒಂದು ಸಣ್ಣ ಪಾತ್ರವೂ ಚಿರಸ್ಮರಣೀಯವೆನಿಸಿದವು. ಇದರಲ್ಲಿ ಕಥೆಗೆ ಅಗತ್ಯವಾಗಿ, ಪೂರಕವಾಗಿ ಬೇಕಾಗಿದ್ದ ಚುಂಬನದ ದೃಶ್ಯವನ್ನು ಬಹಳ ಸಂಯಮದಿಂದ, ತಾಂತ್ರಿಕ ಕೌಶಲ್ಯದಿಂದ ಚಿತ್ರಿಸಿದರು. ಪುಟ್ಟಣ್ಣನವರ ಚಿತ್ರದಲ್ಲಿ ಪಾತ್ರ ದೊರೆತರೆ ತಮ್ಮ ಪ್ರತಿಭೆ ಪೂರ್ಣವಾಗಿ ಹೊರಬರುತ್ತದೆಂದು ಕಲಾವಿದರು ಹಂಬಲಿಸುವಂತಾಯಿತು.

'ನಾಗರಹಾವು' ಅನೇಕ ಕಾರಣಗಳಿಂದಾಗಿ ಗಮನಾರ್ಹ ಚಿತ್ರವೆನಿಸಿತು. ನಿರೂಪಣೆಯಲ್ಲಿ ನೈಜತೆಗಾಗಿ ಶ್ರಮಿಸಿದ ಪುಟ್ಟಣ್ಣ ಒನಕೆ ಓಬವ್ವನ 'ಕನ್ನಡ ನಾಡಿನ

'ನಾಗರಹಾವು' ಕೇಂದ್ರ ಮತ್ತು ರಾಜ್ಯ ಸರ್ಕಾರದ ಪ್ರಶಸ್ತಿಗಳನ್ನು ಪಡೆದುಕೊಂಡು ಆರ್ಥಿಕವಾಗಿ ಕೂಡ ಯಶಸ್ಸನ್ನು ಪಡೆದುಕೊಂಡಿತು. ಹಿನ್ನೋಟದಲ್ಲಿ ಚಿತ್ರದ ನಿರೂಪಣೆಯಲ್ಲಿ ನವಿರಿನ ಅಭಾವ ಕಾಣುವುದೂ ಅದರಲ್ಲಿನ ಒರಟುತನ ಎದ್ದು ತೋರುವುದೂ ಸಹಜ. ಆದರೆ ಈ ಒರಟುತನದ ಅಂತರಂಗದಲ್ಲಿ ಅವರು ಮೂಡಿಸಿರುವ ಮಾರ್ಮಿಕತೆ ಅವರ ನಿರೂಪಣೆಯ ಸಬಲತೆಯನ್ನು ಎತ್ತಿ ಹಿಡಿಯುವುದೂ ಅಷ್ಟೇ ನಿಜ. ಇದು ಟಿ.ಉದಯಶಂಕರ್ ಸಾಹಿತ್ಯ ಒದಗಿಸಿದ



(ಚಿತ್ರ ೧೭) 'ನಾಗರಹಾವು' ಚಿತ್ರದಲ್ಲಿ ವಿಷ್ಣುವರ್ಧನ್



(ಚಿತ್ರ ೧೮) 'ನಾಗರಹಾವು' ಚಿತ್ರದಲ್ಲಿ ವಿಷ್ಣುವರ್ಧನ್. ಓಬವ್ವಳ ಸಾಹಸಗಾಥೆಯನ್ನು ವರ್ಣಿಸುವ ಸಂದರ್ಭ. ಚಿತ್ರದುರ್ಗದ ಹಿನ್ನೆಲೆಯನ್ನು ಸಮರ್ಥವಾಗಿ ಬಳಸಿಕೊಂಡ ಚಿತ್ರ.

೫೦ನೆಯ ಚಿತ್ರವೂ ಆಯಿತು. ಅವರ ಚುರುಕಾದ ಸಂಭಾಷಣೆಗಳು ತ.ರಾ.ಸು. ಅವರ ಮೆಚ್ಚುಗೆ ಗಳಿಸಿದವು.

ಅದೇ ವರ್ಷ ಅನೇಕ ಹೊಸತನಗಳನ್ನು ಮೈಗೂಡಿಸಿಕೊಂಡು ವ್ಯಾಪಾರಿ ಚಿತ್ರರಂಗದಲ್ಲಿ ಕೆಲವು ಆವಿಷ್ಕಾರಗಳನ್ನು ಮಾಡಿ, ಆರ್ಥಿಕವಾಗಿ ಜಯಭೇರಿ ಹೊಡೆದ ಚಿತ್ರ ದ್ವಾರಕೀಶ್‌ರವರು ನಿರ್ಮಿಸಿ ರವೀ (ಕೆ.ಎಸ್.ಎಲ್.ಸ್ವಾಮಿ) ನಿರ್ದೇಶಿಸಿದ 'ಕುಳ್ಳ ಏಜೆಂಟ್ ೦೦೦'.

ಗಿಡ್ಡ ದ್ವಾರಕೀಶ್ ಚಿತ್ರವೊಂದರ ನಾಯಕನಟನಾಗುವುದು ಸಾಧ್ಯವೆ ಎಂದು ಯಾರೂ ನಂಬದ ಕಾಲದಲ್ಲಿ ಅವರು ತಾವೇ 'ಕುಳ್ಳ ಏಜಂಟ್'ನ ಪ್ರಧಾನ ಪಾತ್ರ ವಹಿಸಲು ತೀರ್ಮಾನಿಸಿ ಕನ್ನಡ ಚಿತ್ರರಂಗದಲ್ಲಿ ಕುಳ್ಳನ 'ಕಲ್ಟ್'ಗೆ ಚಾಲನೆ ಕೊಟ್ಟರು. ಹಾಲಿವುಡ್‌ನ ಹಾಸ್ಯ ಮತ್ತು ಸಾಹಸ ಪ್ರಧಾನ ಚಿತ್ರ 'ಆಪರೇಷನ್ ಲವ್ ಬರ್ಡ್ಸ್' ಈ ಚಿತ್ರಕ್ಕೆ ಸ್ಫೂರ್ತಿ ನೀಡಿತೆಂದು ಅವರೇ ಹೇಳುತ್ತಾರೆ. ಅವರು ಮದರಾಸಿನ ಚಿತ್ರಮಂದಿರವೊಂದರಲ್ಲಿ ಆ ಚಿತ್ರವನ್ನು ನೋಡಿ ಮನೆಗೆ ಹೋಗುವುದರೊಳಗಾಗಿ ಮನಸ್ಸಿನಲ್ಲೇ 'ಕುಳ್ಳ ಏಜೆಂಟ್ ೦೦೦'ನ ಹಂದರ ಸಿದ್ಧವಾಯಿತಂತೆ. ತಮಗಿಂತ ಕನಿಷ್ಠ ಒಂದೂವರೆಯಷ್ಟು ಎತ್ತರವಾಗಿದ್ದು, ಅದುವರೆಗೆ ದಕ್ಷಿಣ ಭಾರತದ ಅನೇಕ ಚಿತ್ರಗಳಲ್ಲಿ ಕ್ಲಬ್ ನರ್ತಕಿಯಾಗಿ ಮಾತ್ರ ಕಾಣಿಸಿಕೊಂಡು ತುಂಬಾ ಜನಪ್ರಿಯರಾಗಿದ್ದ ಅಂದಿನ 'ಸೆಕ್ಸ್ ಬಾಂಬ್' ಜ್ಯೋತಿಲಕ್ಷ್ಮೀಯನ್ನು ಚಿತ್ರದ ನಾಯಕಿಯನ್ನಾಗಿ ಆಯ್ದುಕೊಂಡಿದ್ದು ದ್ವಾರಕೀಶ್ ತೆಗೆದುಕೊಂಡ ಇನ್ನೊಂದು ಧೈರ್ಯದ ಹೆಜ್ಜೆ. ಅದರೆ ಈ ಆಯ್ಕೆ ಚಿತ್ರದ ಯಶಸ್ಸಿಗೆ ಕಾರಣವೂ ಆಯಿತು. ಹೀಗೆಯೇ ಚಿತ್ರಕ್ಕೆ ಇನ್ನಷ್ಟು ವಿಶಿಷ್ಟ ಪರಿಕರಗಳನ್ನು ತುಂಬಲು ನಿರ್ಧರಿಸಿದ ದ್ವಾರಕೀಶ್ ಮತ್ತು ರವೀ ಕನ್ನಡದಲ್ಲಿ ಪ್ರಪ್ರಥಮ ಬಾರಿಗೆ ಹಿಂದಿ ಚಿತ್ರರಂಗದ ಅತ್ಯಂತ ಜನಪ್ರಿಯ ಹಿನ್ನೆಲೆ ಗಾಯಕರಾಗಿದ್ದ ಕಿಶೋರ್ ಕುಮಾರ್‌ರಿಂದ ಹಾಡಿಸಿದರು. ಎಂ.ಜಿ.ರಾಮಚಂದ್ರನ್‌ರವರ ಚಿತ್ರಗಳ ಸಾಹಸ ದೃಶ್ಯಗಳನ್ನು ಸಂಯೋಜಿಸಿ ಹೆಸರು ಗಳಿಸಿದ್ದ ಕನ್ನಡಿಗ ಶಾಂಸುಂದರ್‌ರವರನ್ನು ಮೊದಲ ಬಾರಿಗೆ ಕನ್ನಡ ಚಿತ್ರರಂಗಕ್ಕೆ ಕರೆತಂದು ಅವರಿಂದ ಚಿತ್ರದ ಸ್ಟಂಟ್‌ಗಳನ್ನು ವಿನ್ಯಾಸಗೊಳಿಸಿದರು.

ದ್ವಾರಕೀಶ್ ತಮ್ಮ ಸಂಸ್ಥೆಯ ಲಾಂಛನದಲ್ಲಿ ಎಂ.ಜಿ.ಎಂ. ಚಿತ್ರಗಳ ವಿಶ್ವವಿಖ್ಯಾತ ಸಿಂಹಘರ್ಜನೆಯನ್ನು ಅನುಕರಿಸಿ ತಾವೇ ಸಿಂಹದಂತೆ ಹೂಂಕರಿಸಿದರು. ಕನ್ನಡ ಚಿತ್ರವೊಂದರಲ್ಲಿ ಟೈಟಲ್ ಕಾರ್ಡ್‌ಗಳಿಗೆ ಸಂಪೂರ್ಣವಾಗಿ ಕಾರ್ಟೂನ್‌ಗಳನ್ನು ಪ್ರಯೋಗಿಸಿದವರಲ್ಲಿ ಕೂಡ ದ್ವಾರಕೀಶ್ ಮೊದಲಿಗರು. ಚಿತ್ರ ಕನ್ನಡದಲ್ಲಿ ಯಶಸ್ವಿಯಾಯಿತು. ಹಿಂದಿ, ತೆಲುಗು, ತಮಿಳು, ಮರಾಠಿ, ಗುಜರಾತಿ ಭಾಷೆಗಳಿಗೆಲ್ಲ ಡಬ್ ಆಗಿ ಅದ್ಭುತ ಜನಪ್ರಿಯತೆ ಗಳಿಸಿತು. ದ್ವಾರಕೀಶ್‌ರನ್ನು ಕನ್ನಡ ಚಿತ್ರರಂಗದ ಅತ್ಯಂತ ಸಾಹಸಿ, ಪ್ರಯೋಗಶೀಲ ನಿರ್ಮಾಪಕರಲ್ಲೊಬ್ಬರನ್ನಾಗಿ ದಾಖಲಿಸಿತು. ಈ ಚಿತ್ರ ತನ್ನ 'ಆಕಾರ'ವನ್ನೇ ಬಂಡವಾಳ ಮಾಡಿಕೊಳ್ಳುತ್ತ ಹೊರಟ ದ್ವಾರಕೀಶ್ ಸಾಹಸಿ ಮಾತ್ರವಲ್ಲ, ಜಾಣ, ನಿರುಪದ್ರವಿ ಎಂಬುದನ್ನು ನಿರೂಪಿಸಿತು.

೧೯೭೨ರಲ್ಲಿ ರಾಶಿ ಸಹೋದರರು ಚಿತ್ರ ನಿರ್ದೇಶನಕ್ಕೆ ಇಳಿದರು. ಕನ್ನಡ ಚಿತ್ರರಂಗದಲ್ಲಿ ಅಪಾರ ಗೌರವಾದರಗಳಿಗೆ ಪಾತ್ರರಾಗಿರುವ, ಮುಂಬೈ ಚಿತ್ರರಂಗದಲ್ಲಿ ಹೆಸರಾಗಿರುವ ಎಸ್.ರಾಮನಾಥ್ 'ಮಹಾಕವಿ ಕಾಳಿದಾಸ' ಚಿತ್ರದ ಸಹನಿರ್ದೇಶಕರಾಗಿ ಚಿತ್ರರಂಗ ಪ್ರವೇಶಿಸಿದ್ದರು. ಮೂಲತಃ ರಂಗಭೂಮಿಯ ಕಲಾವಿದರು. ತಮಿಳು, ಹಿಂದಿ ಚಿತ್ರಗಳನ್ನು ನಿರ್ದೇಶಿಸಿ, ನಿರ್ಮಿಸಿದವರು. ಕನ್ನಡದಲ್ಲಿ ಮೊದಲ ಬಾರಿಗೆ ತಮ್ಮ ಸಹೋದರ, ಖ್ಯಾತ ಚಿತ್ರನಟ ಶಿವರಾಮ್ ಜೊತೆಗೂಡಿ 'ಹೃದಯ ಸಂಗಮ' ಚಿತ್ರವನ್ನು ನಿರ್ದೇಶಿಸಿದರು. ಪಾರಿಜಾತ ಸಂಸ್ಥೆಯ ಎಚ್.ಎಸ್.ಮುದ್ದುಕೃಷ್ಣ, ಜಯಸಿಂಹ, ಮಾರುತಿ ನಿರ್ಮಿಸಿದ ಈ ಚಿತ್ರಕ್ಕೆ ರಾಜ್ಯ ಸರ್ಕಾರದ ನಾಲ್ಕನೆಯ ಅತ್ಯುತ್ತಮ ಚಿತ್ರ ಪ್ರಶಸ್ತಿಯೂ ಬಂದಿತ್ತು.



(ಚಿತ್ರ ೧೯) 'ಕಳ್ಳ ಏಜೆಂಟ್ ೦೦೦' ಚಿತ್ರದಲ್ಲಿ ಜ್ಯೋತಿಲಕ್ಷ್ಮಿ ಮತ್ತು ದ್ವಾರಕೀಶ್

ಆಂಧ್ರಪ್ರದೇಶದ ನೀರಾವರಿ ತಜ್ಞ ಕೆ.ಎಲ್.ರಾವ್ ಪಂಡಿತ ಜವಾಹರಲಾಲ್ ನೆಹರೂ ಸಂಪುಟದಲ್ಲಿ ಕೇಂದ್ರ ನೀರಾವರಿ ಸಚಿವರಾಗಿದ್ದಾಗ ಉತ್ತರದ ಗಂಗಾ ಮತ್ತು ದಕ್ಷಿಣದ ಕಾವೇರಿ ನದಿಗಳನ್ನು ಕಾಲುವೆಗಳ ಮೂಲಕ ಒಂದುಗೂಡಿಸಿ, ದಕ್ಷಿಣ ಭಾರತದಲ್ಲಿ ವರ್ಷದ ೩೬೫ ದಿನಗಳೂ ಜಲ ಸಮೃದ್ಧಿಯಿರುವಂತೆ ಮಹಾಯೋಜನೆಯೊಂದನ್ನು ರೂಪಿಸಿದ್ದರು. ಇವರಿಗೂ ಮುಂಚೆ ಇದೇ ಕನಸನ್ನು ಕಂಡಿದ್ದವರು ಸರ್. ಎಂ.ವಿಶ್ವೇಶ್ವರಯ್ಯನವರು. ಕ್ರಮೇಣ ಈ ಯೋಜನೆ ನೆನೆಗುದಿಗೆ ಬಿತ್ತು. ಆದರೆ ಕನ್ನಡ ಚಿತ್ರವೊಂದರ ನಿರ್ಮಾಣಕ್ಕೆ ಅದರಿಂದ ಸ್ಫೂರ್ತಿ ಸಿಕ್ಕಿತು. ಅನೇಕ ಕನ್ನಡ ಚಿತ್ರಗಳ ಯಶಸ್ಸಿಗೆ ನೇಪಥ್ಯದಿಂದಲೇ ಕಾರಣರಾಗಿದ್ದ ಪ್ರತಿಭಾವಂತ ವಿಜಯಾ ಸತ್ಯಂ ನಿರ್ದೇಶಿಸಿದ 'ಉತ್ತರ-ದಕ್ಷಿಣ' ಚಿತ್ರ ಯಾವ ಅತಿರೇಕಗಳೂ, ಉತ್ಪ್ರೇಕ್ಷೆಗಳೂ ಇಲ್ಲದೆ ಮೂಡಿ ಬಂದಿದ್ದರಿಂದ ಪ್ರಾಯಶಃ ಅದು ಜನಪ್ರಿಯವಾಗಲಿಲ್ಲ. ಇಂತಹ ಗಂಭೀರವಾದ ವಸ್ತುವಿನ ಹಿನ್ನೆಲೆಯಲ್ಲಿ ನವಿರಾದ ಪ್ರಣಯ ಕಥೆಯೊಂದನ್ನು ಹೆಣೆಯುವ ಪ್ರಾಮಾಣಿಕ ಪ್ರಯತ್ನವಂತೂ ನಡೆಯಿತು. ಚಿತ್ರದಲ್ಲಿ ಅಂದಿನ ಜನಪ್ರಿಯ ನಟ ರಮೇಶ್ ಮತ್ತು ನಾಯಕಿ ಕಲ್ಪನಾ ಇಬ್ಬರೂ ಇಂಜಿನಿಯರುಗಳಾಗಿ ಅಭಿನಯಿಸಿದರು. ಕಲ್ಪನಾ ಉತ್ತರ ಭಾರತದವರು, ರಮೇಶ್ ದಕ್ಷಿಣದವರು. ಬಾಲ್ಯವಿವಾಹ, ಅಸ್ಪೃಶ್ಯತೆ, ವಿಧವಾ ವಿವಾಹ ಹಾಗೂ ಭ್ರಷ್ಟಾಚಾರಗಳ ಬಗ್ಗೆ ಟೀಕೆಗಳು ಈ ಚಿತ್ರದ ವ್ಯಾಪ್ತಿಗೆ ಬರುತ್ತವೆ. ಒಂದೇ ಚಿತ್ರದಲ್ಲಿ ಇಷ್ಟೊಂದು ಸಮಸ್ಯೆಗಳ ಒಕ್ಕಣೆಯೇ ಚಿತ್ರಕ್ಕೆ ಕುತ್ತಾಯಿತೇನೋ.

ಖಳನಾಯಕರೆಂದು ಹೆಸರು ಗಳಿಸಿ ಖ್ಯಾತರಾಗಿದ್ದ ಉತ್ತಮ ನಟ ನಾಗಪ್ಪನವರ ಅಭಿನಯದ ಕೊನೆಯ ಚಿತ್ರ 'ಉತ್ತರ ದಕ್ಷಿಣ'. ನಾಗಪ್ಪನವರು ೧೯೭೭ರಲ್ಲಿ ರಸ್ತೆ ಅಪಘಾತವೊಂದರಲ್ಲಿ ಮರಣ ಹೊಂದಿದರು.

ಕನ್ನಡ ಚಿತ್ರೋದ್ಯಮ ತನ್ನ ಹರವನ್ನು ವಿಸ್ತರಿಸಿಕೊಳ್ಳುತ್ತ ಹೋದಂತೆ ಕರ್ನಾಟಕವನ್ನು ಬಿಟ್ಟು ಹೊರರಾಜ್ಯಗಳಲ್ಲಿ ಕೂಡ ಕನ್ನಡ ಚಿತ್ರಗಳನ್ನು ಚಿತ್ರಿಸುವ ಸಾಹಸಶೀಲರೂ ಸಾಕಷ್ಟು ಸಂಖ್ಯೆಯಲ್ಲಿ ಹುಟ್ಟಿಕೊಂಡರು. ಬಂಗಾಳದಿಂದ ಬಂದು ಆ ದಿನಗಳಲ್ಲಿ ಕನ್ನಡದ ಗಟ್ಟಿ ನಿರ್ಮಾಪಕರಲ್ಲೊಬ್ಬ ರೆನಿಸಿಕೊಂಡಿದ್ದ ಶ್ರೀ ಭಗವತಿ ಪ್ರೊಡಕ್ಷನ್ಸ್‌ನ ಎಸ್.ಎನ್.ಪಾಲ್‌ರವರು ಎನ್.ಪಂಕಜಾರವರ 'ಬರಲಿ ಇನ್ನು ಯಮುನೆ' ಕಾದಂಬರಿಯನ್ನಾಧರಿಸಿದ 'ಸಿಪಾಯಿ ರಾಮು' ಚಿತ್ರವನ್ನು ಮಧ್ಯಪ್ರದೇಶದಲ್ಲಿ ಕುಖ್ಯಾತ ಡಕಾಯಿತರಿಗೆ ಅಡಗುಮನೆಯಾಗಿದ್ದ ಚಂಬಲ್ ಕಣಿವೆಯಲ್ಲೇ ಚಿತ್ರಿಸಿದರು. ಈ ಚಿತ್ರದ ಕಥೆ ಅಂದಿನ ದಿನಗಳಲ್ಲಿ ಇಡೀ ವಿಶ್ವದಲ್ಲಿಯೇ ಕುಖ್ಯಾತಿಯನ್ನು ಗಳಿಸಿದ್ದ ಡಕಾಯಿತರನ್ನೇ ಕುರಿತದ್ದಾಗಿದ್ದು, ಚಿತ್ರಣ ಅಲ್ಲಿಯೇ ನಡೆಯುವುದು ಅಗತ್ಯವಾಗಿತ್ತು. ಹೀಗಾಗಿ ಚಿತ್ರದ ವಾತಾವರಣ ಹೆಚ್ಚಾಗಿ ಉತ್ತರ ಭಾರತದ್ದೇ ಆಗಿತ್ತು. ಕೆಲವು ವರ್ಷಗಳ ಅಂತರದಲ್ಲಿ ಜನಪ್ರಿಯ ರಾಜಕುಮಾರ್-ಲೀಲಾವತಿ ಜೋಡಿ ಈ ಚಿತ್ರದಲ್ಲಿ ಮತ್ತೊಮ್ಮೆ ಅಭಿನಯಿಸಿತ್ತು. ಹಾಸ್ಯನಟ ಶಿವರಾಂಗೆ ಜೋಡಿಯಾಗಿ ಆರತಿ ಅಭಿನಯಿಸಿದರು. ಅವರಿಬ್ಬರ ಮೇಲೆ ಚಿತ್ರಿತವಾದ 'ಪ್ಯಾರೆ ಮೇರೆ ಮುರುಗ...' ಕೋಳಿ ಕಾಳಗದ ಹಾಡು ಜನಪ್ರಿಯ ಹಾಡುಗಳಲ್ಲಿ ಒಂದೆನಿಸಿತ್ತು. 'ಸಿಪಾಯಿ ರಾಮು' ತಯಾರಾದ ಕಾಲದಲ್ಲಿ ಹಿಂದಿಯಲ್ಲಿ ಹತ್ತಾರು ಡಕಾಯಿತರನ್ನು ಕುರಿತ ಚಿತ್ರಗಳು ತೆರೆಗೆ ಬಂದಿದ್ದು ಉಲ್ಲೇಖನೀಯ. ಅವೆಲ್ಲ ಚಿತ್ರಿತವಾಗಿದ್ದು ಚಂಬಲ್‌ನಲ್ಲಿಯೆ. ಆದರೆ ಕನ್ನಡ ಚಿತ್ರ ತಂಡವೊಂದು ಆ ತಾಣಕ್ಕೆ ಹೋಗಿದ್ದು ಆ ಕಾಲದ ಸಾಹಸಗಳಲ್ಲಿ ಒಂದೆಂದೇ ದಾಖಲಾಯಿತು. ಉಪೇಂದ್ರಕುಮಾರ್‌ರ ಸಂಗೀತ ಉತ್ತಮವಾಗಿತ್ತು. ವೈ.ಆರ್.ಸ್ವಾಮಿ ನಿರ್ದೇಶಿಸಿದ ಈ ಚಿತ್ರಕ್ಕೆ ಚಿಟ್ಟಿಬಾಬುರವರ ಛಾಯಾಗ್ರಹಣವಿತ್ತು. ಹಿಂದಿ ನೃತ್ಯತಾರೆ ಮಧುಮತಿ ಈ ಚಿತ್ರದಲ್ಲಿ ಒಂದು ಜಾನಪದ ನೃತ್ಯ ಸನ್ನಿವೇಶದಲ್ಲಿ ವಿಶೇಷ ಗಮನ ಸೆಳೆದರು. ಡಕಾಯಿತನಲ್ಲದಿದ್ದರೂ ಕರ್ಮ-ಧರ್ಮ ಸಂಯೋಗದಿಂದ ಡಕಾಯಿತರ ಗುಂಪಿನೊಂದಿಗೆ ಗುರುತಿಸಿಕೊಳ್ಳಬೇಕಾಗಿ ಬಂದ ಯುವಕನ ಪಾತ್ರದಲ್ಲಿ ರಾಜಕುಮಾರ್ ಹದವರಿತ ಅಭಿನಯ ನೀಡಿದ್ದು ಚಿತ್ರದ ಜನಪ್ರಿಯತೆಯನ್ನು ಇನ್ನಷ್ಟು ಹಿಗ್ಗಿಸಿತು. ತೂಗುದೀಪ ಶ್ರೀನಿವಾಸ್ ಪೂರ್ಣ ಪ್ರಮಾಣದ ಖಳನಾಯಕನಾಗಿ ಅಭಿನಯಿಸಿದ ಚಿತ್ರ 'ಸಿಪಾಯಿ ರಾಮು'.

ತಮಿಳುನಾಡಿನ ಕೊಯಮುತ್ತೂರಿನಿಂದ ಬೆಂಗಳೂರಿಗೆ ಬಂದು ಇಲ್ಲಿ ಉತ್ತಮ ಮಟ್ಟದ ಚಾಮುಂಡೇಶ್ವರಿ ಸ್ಟುಡಿಯೋವನ್ನು ಸ್ಥಾಪಿಸಿ, ತಮ್ಮ ಸಂಸ್ಥೆಯ ವೃತ್ತಿಪರತೆಯನ್ನು ಕನ್ನಡ ಚಿತ್ರೋದ್ಯಮದಲ್ಲಿ ತರಲು ಸಾಕಷ್ಟು ಶ್ರಮಿಸಿದ ಕೆ.ಕುಪ್ಪುಸ್ವಾಮಿ ನಾಯ್ಡುರವರು ಚಿತ್ರ ನಿರ್ಮಿಸುವ ಸಾಹಸಕ್ಕೆ ಕೈ ಹಾಕಿದರು. ಚಿತ್ರ 'ಸುಭದ್ರಾ ಕಲ್ಯಾಣ'. ಇದರ ತಯಾರಿಕೆ ಸಮಯದಲ್ಲಿ ಅವರು ಪತ್ರಕರ್ತರೊಡನೆ ಮಾತನಾಡುತ್ತ ಚಿತ್ರನಿರ್ಮಾಣದ ಯಾವುದೇ ವಿಷಯದಲ್ಲೂ ಮದರಾಸನ್ನು ಅವಲಂಬಿಸದೆ ತಾವು ಈ ಚಿತ್ರವನ್ನು ತಯಾರಿಸುತ್ತಿರುವುದಾಗಿ ನುಡಿದರು. ಈ ಮಟ್ಟಿಗೆ ಚಿತ್ರ ಒಂದು ಸಾರ್ಥಕ ಪ್ರಯತ್ನವಾಗಿತ್ತು. ಉಳಿದಂತೆ ಪ್ರಭಾಕರಶಾಸ್ತ್ರಿಗಳು ನಿರ್ದೇಶಿಸಿದ ಈ ಚಿತ್ರದಲ್ಲಿ ಚಿತ್ರಕಥೆ, ನಿರೂಪಣೆ, ಅಭಿನಯ ಮುಂತಾದ ಯಾವುದೇ ಪ್ರಕಾರದಲ್ಲೂ ನಿರ್ದೇಶಕನ ಮುದ್ರೆ ಎಂಬುದು ಇರಲಿಲ್ಲ.



(ಚಿತ್ರ ೨೦) 'ಸಿಪಾಯಿ ರಾಮು' ಚಿತ್ರದಲ್ಲಿ ರಾಜಕುಮಾರ್

೧೯೭೭ರಲ್ಲಿ ನಿರ್ದೇಶಕ ಗೀತಪ್ರಿಯ ಎರಡು ಯಶಸ್ವಿ ಚಿತ್ರಗಳನ್ನು ತೆರೆಗಿತ್ತರು. 'ಯಾವ ಜನ್ಮದ ಮೈತ್ರಿ' ಸದಭಿರುಚಿಯ ಚಿತ್ರ. ಈ ಚಿತ್ರ ತೆಲುಗು, ತಮಿಳು, ಹಿಂದಿ ಭಾಷೆಗಳಲ್ಲಿ ರೀಮೇಕ್ ಆಗಿ ಆ ಅವತರಣಿಕೆಗಳೆಲ್ಲ ಪ್ರಚಂಡ ಯಶಸ್ಸು ಗಳಿಸಿದವು. ಅಲ್ಲದೆ ತೆಲುಗು ಅವತರಣಿಕೆ ನಾಯಕಿ ಶಾರದಾ ಮೂಲ ಕನ್ನಡ ಚಿತ್ರದಲ್ಲಿನ ಕಲ್ಪನಾ ಅಭಿನಯದ ಮುಂದೆ ತಮ್ಮ ಅಭಿನಯ ಪೇಲವವಾಯಿತೆಂದು ಆಕೆಯೇ ಹೇಳಿಕೆ ಕೊಟ್ಟರು. ಆದರೆ ಆ ಚಿತ್ರಕ್ಕಾಗಿ ಶಾರದಾಗೆ ರಾಷ್ಟ್ರೀಯ ಮಟ್ಟದಲ್ಲಿ ಊರ್ವಶಿ ಪ್ರಶಸ್ತಿ ಲಭಿಸಿತು. ಕಲ್ಪನಾರಿಗೆ ರಾಜ್ಯ ಮಟ್ಟದಲ್ಲಿ ಕೂಡಾ ಸರ್ಕಾರದ ಪ್ರಶಸ್ತಿ ದೊರೆಯಲಿಲ್ಲ, ದೊರೆತಿದ್ದೆಲ್ಲ ಒಂದೆರಡು ಖಾಸಗಿ ಪ್ರಶಸ್ತಿಗಳು ಮಾತ್ರ. ಆದರಿಂದ ಆಕೆ ತೀರಾ ಮನನೊಂದರು. ಈ ಚಿತ್ರ ಕೂಡ ಮನೋವೈಕಲ್ಯಕ್ಕೆ ತುತ್ತಾದ ಹೆಣ್ಣೊಬ್ಬಳ ಕಥೆ. ಮದುವೆಯಾದ ಮರುದಿನವೇ ತನ್ನ ಗಂಡ ಸತ್ತು, ಆತನ ತರಹವೇ ಇರುವ ಇನ್ನೊಬ್ಬನನ್ನು ಗಂಡನೆಂದು ಭ್ರಮಿಸುವ ಹೆಣ್ಣಿನ ಕಥೆಯಿದು. ಆಗ ಪತ್ತೇದಾರಿ ಕಾದಂಬರಿ ಕ್ಷೇತ್ರದಲ್ಲಿ ದೊಡ್ಡ ಹೆಸರೆನಿಸಿದ್ದ ಮಾ.ಭೀ.ಶೇಷಗಿರಿರಾಯರ ಈ ಸಾಮಾಜಿಕ ಕಾದಂಬರಿಯನ್ನು ಆರಿಸುವುದಕ್ಕೆ ಖ್ಯಾತ

ಸಾಹಿತಿಗಳಾಗಿದ್ದ ಬೀಚಿ, ಮ.ರಾಮಮೂರ್ತಿ, ನಾಡಿಗೇರ ಕೃಷ್ಣರಾಯರು ಪ್ರೇರಕರು. ಆಗುಂಬೆಯ ಪ್ರಕೃತಿ ಸಿರಿ ಮನೋಹರ್‌ರವರ ಕಪ್ಪು-ಬಿಳುಪು ಛಾಯಾಗ್ರಹಣದಲ್ಲಿ ಸೊಗಸಾಗಿ ಮೂಡಿಬಂತು. ಹೃದಯಸ್ಪರ್ಶಿಯೆನಿಸಿದ ಈ ಚಿತ್ರದಲ್ಲಿ ವಿಜಯಭಾಸ್ಕರ್ ಸಂಯೋಜಿಸಿದ ನಾಲ್ಕು ಹಾಡುಗಳೂ ಬಹಳ ಕಾಲ ನೆನಪಿನಲ್ಲಿ ಉಳಿದವು. ಗಂಗಾಧರ್ ನಾಯಕನಟರಾಗಿ ಅಭಿನಯಿಸಿದ್ದ 'ಯಾವ ಜನ್ಮದ ಮೈತ್ರಿ' ಬೆಂಗಳೂರಿನ ಮಹಾತ್ಮಗಾಂಧಿ ರಸ್ತೆಯಲ್ಲಿ ವೈಭವೋಪೇತವಾಗಿ ನಿರ್ಮಿತವಾಗಿದ್ದ ಬ್ಲೂಮೂನ್ ಚಿತ್ರಮಂದಿರದಲ್ಲಿ ಪ್ರಥಮ ಪ್ರದರ್ಶನವನ್ನು ಕಂಡಿದ್ದೊಂದು ವಿಶೇಷ. ಚಿತ್ರದ ಕೊನೆಯ ದೃಶ್ಯದಲ್ಲಿ ಕಲ್ಪನಾ ವಿಧವೆಯಾಗಿ ಬಿಳಿಯ ಬಟ್ಟೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ವಿಧವೆಯರಿಗೆ ಬಿಳಿ ಬಟ್ಟೆ ಉಡಿಸುವುದು ನಮ್ಮ ಸಂಪ್ರದಾಯವಲ್ಲ. ಅದಕ್ಕೆ ನಿರ್ದೇಶಕ ಗೀತಪ್ರಿಯ ಕೊಟ್ಟ ಸಮಜಾಯಿಷಿ : "ಆಕೆಯ ಇಡೀ ಜೀವನವೇ ಒಂದು ರೀತಿಯಲ್ಲಿ ಬ್ಲೀಚ್ ಆಯಿತು. ಕುಂಕುಮವಿಲ್ಲ, ಹಣೆ ಬೋಳು. ಬದುಕಿಗೆ ಬಣ್ಣವೇ ಇಲ್ಲ. ಚಿತ್ರ ಕಪ್ಪು-ಬಿಳುಪಿನಲ್ಲಿಯೇ ಇದ್ದಿದ್ದರಿಂದ ನಾಯಕಿಯ ಜೀವನದ ದುರಂತಕ್ಕೆ ಒತ್ತು ಕೊಡಲೆಂದು ಆ ರೀತಿ ಮಾಡಿದೆವು."



(ಚಿತ್ರ ೨೧) 'ಸುಭದ್ರಾ ಕಲ್ಯಾಣ' ಚಿತ್ರದಲ್ಲಿ ಗಂಗಾಧರ್ ಮತ್ತು ಕಲ್ಪನಾ

ಗೀತಪ್ರಿಯರು ಕೇವಲ ಸಾಂಸಾರಿಕ ಚಿತ್ರಗಳಲ್ಲಿಯೇ ತಮ್ಮನ್ನು ತೊಡಗಿಸಿಕೊಂಡರೆಂದೇನೂ ಇಲ್ಲ. ಅವರು ೧೯೬೨ರಲ್ಲಿ ನಿರ್ದೇಶಿಸಿದ 'ನಾರಿ ಮುನಿದರೆ ಮಾರಿ' ಸ್ತ್ರೀ ಸಾಹಸ ಪ್ರಧಾನವಾದದ್ದು. ದಟ್ಟವಾದ ಭಾವಗಳನ್ನು ಪ್ರತಿಬಿಂಬಿಸುವ ಪಾತ್ರಗಳಲ್ಲಿ ತಮ್ಮ ಪರಿಣತಿಯನ್ನು ಸಾಧಿಸಿದ್ದ ಕಲ್ಪನಾ ಈ ಚಿತ್ರದಲ್ಲಿ ದ್ವಿಪಾತ್ರದಲ್ಲಿ ಅಭಿನಯಿಸಿ ತಮ್ಮ ಅಭಿನಯ ಕೌಶಲ್ಯಕ್ಕೆ ಹೊಸ ಮೆರುಗು ಕೊಟ್ಟರು. ಪಾತ್ರ ವಿವಾಹದ ದಿನವೇ ತನ್ನ ಗಂಡನನ್ನು ಕೊಂದ ಕೊಲೆಪಾತಕರ ಮೇಲೆ ತಾನೇ ಸೇಡು ತೀರಿಸಿಕೊಳ್ಳುವ ಹೆಣ್ಣಿನದು. ಕಲ್ಪನಾ ಈ ಪಾತ್ರಕ್ಕಾಗಿಯೇ ಕುದುರೆ ಸವಾರಿ ಕಲಿತರು, ಫೈಟಿಂಗ್ ಕಲಿತರು, ಸಿಂಹದ ಜೊತೆ ಹೋರಾಟವನ್ನು ಮಾಡಿದರು. ಇಷ್ಟೆಲ್ಲ ಇದ್ದರೂ ಚಿತ್ರದಲ್ಲಿ ಮಾಮೂಲಿ ಪ್ರಣಯವಾಗಲಿ, ಯುಗಳ ಗೀತೆಗಳಾಗಲಿ ಇರಲಿಲ್ಲ. ತುಂಬಾ ವಿಭಿನ್ನವಾಗಿ ಮೂಡಿ ಬಂದ ಈ ಚಿತ್ರವನ್ನು ಜನ ಉತ್ಸಾಹದಿಂದ ಸ್ವೀಕರಿಸಿದರು. ಗೀತಪ್ರಿಯ ಹಾಗೂ ಕಲ್ಪನಾ ಇಬ್ಬರಿಗೂ ಒಂದು ಹೊಸ ಇಮೇಜ್ ಸಿಕ್ಕಿತು.

ಈ ಚಿತ್ರದಲ್ಲಿ ಗೀತಪ್ರಿಯರ ಚಿತ್ರವೊಂದಕ್ಕೆ ಪ್ರಥಮ ಬಾರಿಗೆ ರಾಜನ್-ನಾಗೇಂದ್ರ ಸಂಗೀತ ನೀಡಿದರು. ತಾವೇ ನಿರ್ಮಿಸಿದ 'ಕಾಡಿನ ರಹಸ್ಯ'ದಂತೆಯೇ ಎಂ.ಪಿ.ಶಂಕರ್ ಈ ಚಿತ್ರಕ್ಕೂ ಬಹಳ ಭಾಗವನ್ನು ಬಂಡೀಪುರದ ಅರಣ್ಯದಲ್ಲಿಯೇ ಚಿತ್ರಿಸಿದರು. ಅರಣ್ಯ ದೃಶ್ಯಗಳ ಚಿತ್ರಣ ಸೊಗಸಾಗಿ ಮೂಡಿಬಂತು. ಹಾಗೆಯೇ ಚಿತ್ರದಲ್ಲಿ ಹೆಚ್ಚು ಮೆಚ್ಚುಗೆಯಾದ ಇನ್ನೊಂದು ಅಂಶವೆಂದರೆ ಕಲ್ಪನಾರನ್ನು ದರೋಡೆಕೋರರಿಂದ ರಕ್ಷಿಸಿ, ಅನಂತರ ಆಕೆ ಛಲ ತೀರಿಸಿಕೊಳ್ಳಲು ಪ್ರೋತ್ಸಾಹ ನೀಡುವ ಕರುಣಾಳುವಿನ ಪಾತ್ರದಲ್ಲಿ ಉದಯಕುಮಾರ್‌ರವರ ಸಂಯಮದ ಅಭಿನಯ.

'ನಾ ಮೆಚ್ಚಿದ ಹುಡುಗ' ಇದೇ ವರ್ಷ ತೆರೆಕಂಡು ಸದಭಿರುಚಿಯ ಪ್ರೇಕ್ಷಕರಿಂದ ಸಂಭ್ರಮದ ಸ್ವಾಗತವನ್ನು ಸ್ವೀಕರಿಸಿದ ಚಿತ್ರ. ಮದರಾಸಿನಲ್ಲಿ 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯಲ್ಲಿ ಉಪಸಂಪಾದಕರಾಗಿದ್ದ ವೈದ್ಯನಾಥನ್ ಅವರು ಬರೆದ 'ಡೈವೋರ್ಸ್ ಇಂಡಿಯನ್ ಸ್ಟೈಲ್' ಎಂಬ ಕಥೆಯ ಆಧಾರದ ಮೇಲೆ ತಯಾರಾದ ಈ ಚಿತ್ರದ ನಿರ್ಮಾಪಕಿ ನಟಿ ಹರಿಣಿ. ವಿಜಯಭಾರತಿ ಲಾಂಛನದಲ್ಲಿ ತೆರೆಗೆ ಬಂದ 'ನಾ ಮೆಚ್ಚಿದ ಹುಡುಗ' ಚಿತ್ರವನ್ನು ಆರ್.ಎನ್.ಜಯಗೋಪಾಲ್ ನಿರ್ದೇಶಿಸಿದರು. ಆರ್.ನಾಗೇಂದ್ರರಾಯರಿಗೆ ಒಂದು ಸೊಗಸಾದ ಪಾತ್ರವಿತ್ತು. ಕಲ್ಪನಾ, ರಮೇಶ್ ಪ್ರಧಾನ ಪಾತ್ರಗಳಲ್ಲಿದ್ದ ಚಿತ್ರದಲ್ಲಿ ಹಾಸ್ಯ ಕಲಾವಿದರ ದೊಡ್ಡ ಸಂಖ್ಯೆಯೇ ಇತ್ತು. ಈ ಚಿತ್ರದಲ್ಲಿ ಮದುವೆ ಒಂದು ಪವಿತ್ರ ಬಂಧವೆಂಬುದನ್ನು, ವಿವಾಹ ವಿಚ್ಛೇದನ ಭಾರತೀಯರಾದ ನಮಗೆ ಬೇಕಿಲ್ಲವೆಂಬುದನ್ನು ಯಾವುದೇ ಉಪದೇಶವನ್ನು ಮಾಡದೆ ಒಂದು ಸಮರ್ಥ ಕಥೆಯ ಮೂಲಕ ಮನವರಿಕೆ ಮಾಡಿಕೊಡುವ ಪ್ರಯತ್ನ ನಡೆಯಿತು. ಚಿತ್ರದಲ್ಲಿ ಮಾತುಗಳಿಗೆ ಹೆಚ್ಚು ಪ್ರಾಮುಖ್ಯವಿತ್ತು. ಹರಿಣಿ ಮತ್ತು ಅವರ ಸಹೋದರರು ನಿರ್ಮಿಸಿದ ಇತರ ಚಿತ್ರಗಳಲ್ಲಿಯಂತೆಯೇ 'ನಾ ಮೆಚ್ಚಿದ ಹುಡುಗ'ದಲ್ಲಿಯೂ ವಿಜಯಭಾಸ್ಕರ್ ಸಂಗೀತ ಜನಪ್ರಿಯವಾಯಿತು.

'ಕ್ರಾಂತಿವೀರ' ರಾಜಕುಮಾರ್ ಅವರು ತುಂಬ ಸಲೀಸಾಗಿ ವಿಭಿನ್ನ ವೇಷ-ಭೂಷಣ ಧರಿಸಿ ಕೌಬಾಯ್‌ನಂತೆ ಅಭಿನಯಿಸಿದ ಚಿತ್ರ. ಆರ್.ರಾಮಮೂರ್ತಿ ನಿರ್ಮಿಸಿ, ನಿರ್ದೇಶಿಸಿದ್ದರು. ಚಿತ್ರದಲ್ಲಿ ಬಳಸಲಾಗಿದ್ದ 'ಮೊಳಗಲಿ, ಕ್ರಾಂತಿ ಕಹಳೆ...', 'ಯಾರು ಏನು ಮಾಡುವರು...' ಗೀತೆಗಳು ಅತ್ಯಂತ ಜನಪ್ರಿಯವಾದವು. 'ಯಾರು ಏನು ಮಾಡುವರು...' ಗೀತೆಯಂತೂ ಅದು ಚಿತ್ರದ ಸನ್ನಿವೇಶಕ್ಕೆ ಪೂರಕವಾಗಿಯೇ ಇದ್ದರೂ ಕೂಡಾ ತಮ್ಮ ವಿರುದ್ಧ ಸಂಚು ಮಾಡಿದ ಅಥವಾ ಮಾಡುವ ಜನರಿಗೆ ರಾಜಕುಮಾರ್ ಉತ್ತರ ಕೊಟ್ಟಂತೆ ಇದೆಯೆಂದು ಸುದ್ದಿಯಾಗಿತ್ತು. ಮುಂದೆ ಇಂಥದೊಂದು ಪರಂಪರೆಯೇ ಪ್ರಾರಂಭವಾಯಿತೆಂದರೂ ತಪ್ಪಿಲ್ಲ.

ಬಹುಶಃ ಅಂದಿನ ಅಮೆರಿಕಾದ ಖ್ಯಾತ ವಕೀಲ-ಬರಹಗಾರ ಅರ್ಲ್ ಸ್ಟ್ಯಾನ್ಲಿ ಗಾರ್ಡನರ್ ಅವರ ಕೃತಿಗಳಿಂದ ಸ್ಫೂರ್ತಿ ಪಡೆದು, ಮುಖ್ಯವಾಗಿ 'ವಿಟ್‌ನೆಸ್ ಫಾರ್ ದಿ ಪ್ರಾಸಿಕ್ಯೂಷನ್' ಚಿತ್ರದ ಪ್ರಭಾವದಿಂದ ಹಿರಿಯ ನಿರ್ದೇಶಕ ಎಂ.ಆರ್.ವಿಠಲ್‌ರವರು ನ್ಯಾಯಾಲಯದ ಸೆಟ್ಟೊಂದರಲ್ಲೇ ಸಂಪೂರ್ಣವಾಗಿ ಚಿತ್ರೀಕರಿಸಿದ್ದು 'ಯಾರ ಸಾಕ್ಷಿ ?'. ನ್ಯಾಷನಲ್ ಕಾಲೇಜಿನ ಬಿ.ಎಸ್‌ಸಿ. ವಿದ್ಯಾರ್ಥಿನಿ ಮಂಜುಳಾರವರು ಪ್ರಥಮವಾಗಿ ಅಭಿನಯಿಸಿದ ಚಿತ್ರ ಇದು.

ಗಂಭೀರವಾಗಿ, ಯಾವುದೇ ಏರುತಗ್ಗುಗಳಿಲ್ಲದೆ, ಸಂಭಾಷಣೆಗಳನ್ನೇ ಅವಲಂಬಿಸಿ ವಿಠಲ್‌ರವರು ನಿರೂಪಿಸಿದ ಈ ಚಿತ್ರ ಗಲ್ಲಾಪೆಟ್ಟಿಗೆಯಲ್ಲಿ ಅಪಯಶಸ್ಸು ಪಡೆದು ಕ್ರಿಯಾಶಾಲಿ ನಿರ್ಮಾಪಕರ ಉತ್ಸಾಹಕ್ಕೆ ಧಕ್ಕೆ ತಂದಿತು. 'ಯಾರ ಸಾಕ್ಷಿ ?'ಯನ್ನು ಗುಬ್ಬಿ ವೀರಣ್ಣನವರ ಮಗ ಮೂಲತಃ ರಂಗಕರ್ಮಿ ಜಿ.ವಿ.ಶಿವಾನಂದ್ ಅವರು ನಾಟಕ ರೂಪದಲ್ಲಿ ಪ್ರಕಟಿಸಿದ್ದಾರೆ. ಚಿತ್ರಕ್ಕೆ ಅವರೇ ಸಂಭಾಷಣೆ ಬರೆದು, ಸಹ ನಿರ್ದೇಶಕರಾಗಿಯೂ ಕೆಲಸ ಮಾಡಿದರು.



(ಚಿತ್ರ ೨೨) 'ನಾರಿ ಮುನಿದರೆ ಮಾರಿ' ಚಿತ್ರದಲ್ಲಿ ಕಲ್ಪನಾ



(ಚಿತ್ರ ೨೩)'ನಾ ಮೆಚ್ಚಿದ ಹುಡುಗ' ಚಿತ್ರದಲ್ಲಿ ಶಿವರಾಮ್, ಕಲ್ಪನಾ ಮತ್ತು ರಮೇಶ್



(ಚಿತ್ರ ೨೪)'ಕ್ರಾಂತಿವೀರ' ಚಿತ್ರದಲ್ಲಿ ರಾಜಕುಮಾರ್ ಮತ್ತು ಜಯಂತಿ

ಸೂಪರ್ ಹಿಟ್ ಆದ 'ಬಂಗಾರದ ಮನುಷ್ಯ' ಬಿಡುಗಡೆಯಾದ ಈ ವರ್ಷವೇ ತೆರೆಗೆ ಬಂದ ನಿರ್ಮಾಪಕದ್ವಯ ಗೋಪಾಲ್-ಲಕ್ಷ್ಮಣ್‌ರವರ 'ಭಲೇ ಹುಚ್ಚ' ರಾಜಕುಮಾರ್ ನಾಯಕತ್ವದಲ್ಲಿ ೧೦೦ ದಿನಗಳಿಗೂ ಮಿಕ್ಕಿ ಪ್ರದರ್ಶಿತವಾಯಿತು. ತಮಿಳಿನ ಶ್ರೀಧರ್ ೩೬ ದಿನಗಳಲ್ಲಿ ಚಿತ್ರ ಮುಗಿಸಿದರೆಂಬ ಮಾತು ಬಂದಾಗ ನಿರ್ಮಾಪಕ ಗೋಪಾಲ್ ''ಕಲಾವಿದರು ಸಹಕರಿಸಿದರೆ ನನಗೂ ಸಾಧ್ಯ'' ಎಂದರು. ''ಸಹಕಾರ ಕೊಡಲು ನಾವು ಸಿದ್ಧ'' ಎಂದರು ರಾಜಕುಮಾರ್. ಹೀಗೆಂದು ಸವಾಲಿನ ಮೇಲೆ ಚಿತ್ರ ಪ್ರಾರಂಭವಾಯಿತು. ಕಥೆಗಾಗಿ ಅಲೆಯದೆ, ಚಿ.ಉದಯಶಂಕರ್ ಬಳಿ ಇದ್ದ ಚಿಕ್ಕದೊಂದು 'ಸ್ಕಿಟ್' ಅನ್ನೇ ಆಯ್ದು ವಿಸ್ತರಿಸಲಾಯಿತು. ಏಕಕಾಲದಲ್ಲಿ ಕಂಠೀರವದ ಎರಡು ಫ್ಲೋರ್‌ಗಳಲ್ಲಿ ೨-೩ ಸೆಟ್‌ಗಳನ್ನು ಹಾಕಲಾಗಿತ್ತು. ಕೇವಲ ೩೪ ದಿನಗಳಲ್ಲಿ ಚಿತ್ರ ಮುಗಿಸಿದ್ದರು. ಹಲಂ ಅವರಿಗಿದು ಪ್ರಥಮ ಚಿತ್ರವಾದರೆ, ಹೆಲೆನ್ ಅವರನ್ನು ಕನ್ನಡಕ್ಕೆ ಕರೆತಂದ ಹೆಗ್ಗಳಿಕೆಯೂ ಸೇರಿತು. ರಷ್ಯನ್ ಬ್ಯಾಲೆಯೊಂದರ ಸ್ಫೂರ್ತಿಯಿಂದ ವಿಶೇಷವಾದ ನೃತ್ಯವೊಂದನ್ನು ಸಂಯೋಜಿಸಲಾಗಿತ್ತು.

'ಬಾಂಧವ್ಯ' ಸೋರಟ್ ಅಶ್ವತ್ಥ್, ರತ್ನಾಕರ್, ಮಧು ಜೊತೆಯಾಗಿ ನಿರ್ಮಿಸಿದ ಚಿತ್ರ. ಅಶ್ವತ್ಥ್ ಅವರೇ ಪೂರ್ತಿ ಸಾಹಿತ್ಯ ವಿಭಾಗ ನಿರ್ವಹಿಸಿದರು. ರತ್ನಾಕರ್-ಮಧು ಚಿತ್ರವನ್ನು ನಿರ್ದೇಶಿಸಿದರು. ಮಧು ಅವರದೇ ಛಾಯಾಗ್ರಹಣವಿತ್ತು. ಸೋರಟ್ ಅಶ್ವತ್ಥ್ ಅವರ ಮಗಳು ಜ್ಯೋತಿ ಪ್ರಥಮ ಬಾರಿಗೆ ಹಿನ್ನೆಲೆ ಗಾಯಕಿಯಾಗಿ ಪರಿಚಯವಾದರು. 'ಜಗ ಮೆಚ್ಚಿದ ಮಗ' ಪೇಕೇಟಿ ಶಿವರಾಂ ಅವರ ನಿರ್ದೇಶನದ ಚಿತ್ರ. ಅಮ್ಲೂರಿಯಾಗಿತ್ತು. ಮುಖ್ಯವಾಗಿ ರಾಜಕುಮಾರ್ ಅಭಿನಯದ ಚಿತ್ರವು ರಾಜ್ಯದ ಹೊರಗೆ ಹೋಗಿ ಚಿತ್ರೀಕರಣ ಮಾಡಿತು.

ರೀಮೇಕ್ ಚಿತ್ರಗಳ ನಿರ್ದೇಶನದಲ್ಲಿ ಸಿದ್ಧಹಸ್ತರೆನಿಸಿದ್ದ ಎಸ್.ಕೆ.ಎ.ಚಾರಿ ನಿರ್ದೇಶನದ 'ಸೋತು ಗೆದ್ದವಳು' ಅದೇ ವರ್ಷ ತೆರೆಗೆ ಬಂದ ಇನ್ನೊಂದು ಜನಪ್ರಿಯ ಚಿತ್ರ. ಮದರಾಸಿನ ಹೆಸರಾಂತ ಎ.ಎಲ್.ಎಸ್.ಪ್ರೊಡಕ್ಷನ್ಸ್‌ರವರ ಪ್ರಶಸ್ತಿ ವಿಜೇತ 'ಶಾರದ' ಚಿತ್ರದ ರೀಮೇಕ್ ಇದು. ಮದುವೆಯಾದ ನಂತರ ತನ್ನ ಗಂಡನಿಂದ ಪಡೆಯಬೇಕಾದ ಸುಖವನ್ನು ಪಡೆಯಲಾಗದ ಒಬ್ಬ ಅಭಾಗಿನಿಯ ಕರುಣಾಜನಕ ಕಥೆಯೇ ಚಿತ್ರದ ವಸ್ತು. ಚೆಲ್ಲು ಹುಡುಗಿಯ ಪಾತ್ರದಲ್ಲಿ ಕಲ್ಪನಾ, ಅಸಹಾಯಕ ಗಂಡನಾಗಿ ಗಂಗಾಧರ್ - 'ಶರಪಂಜರ'ದ ಜನಪ್ರಿಯ ತಾರಾಜೋಡಿ ಈ ಚಿತ್ರದಲ್ಲೂ ಇದ್ದು ಮತ್ತೊಮ್ಮೆ ಪ್ರೇಕ್ಷಕರನ್ನು ಮೆಚ್ಚಿಸಿತು. ಮಾಮೂಲಿ ಮಸಾಲೆಗಳಿಂದ ದೂರವಾಗಿ ಸುಂದರವಾದ ಸಾಮಾಜಿಕ ಕಥೆಯನ್ನು ಹೊಂದಿದ ಈ ಚಿತ್ರವನ್ನು ಉದ್ಯಮವೂ ಒಪ್ಪಿತು.

ಅದೇ ವರ್ಷ ಹಿರಿಯ ನಿರ್ಮಾತೃ-ನಿರ್ದೇಶಕ ಬಿ.ಆರ್.ಪಂತುಲು ತಾವು ಈಚಿನ ವರ್ಷಗಳಲ್ಲಿ ನಿರ್ಮಿಸಿದ ಕೆಲವು ಕಳಪೆ ಚಿತ್ರಗಳ ಜಾಡನ್ನು ಮುರಿದು ವಯಸ್ಕರಿಗಾಗಿಯೇ ಒಂದು ಪ್ರಬುದ್ಧ ಕಥಾವಸ್ತು ಇರುವ 'ಒಂದು ಹೆಣ್ಣಿನ ಕಥೆ'ಯನ್ನು ತೆರೆಗಿತ್ತರು. ಆದರೆ ಈ ಚಿತ್ರ ಪಂಡಿತ ಪಾಮರರ ದೃಷ್ಟಿಗೆ ಬೀಳಲೇ ಇಲ್ಲ. ಈಗಿನ ಸಮಾಜದಲ್ಲಿ ವ್ಯಭಿಚಾರ ಹೇಗ ಮತ್ತು ಯಾವ ಮಾರ್ಗವಾಗಿ ನಡೆಯುತ್ತದೆ ಎಂಬುದನ್ನು ಪಂತುಲುರವರು ಪರಿಣಾಮಕಾರಿಯಾಗಿಯೇ ನಿರೂಪಿಸಿದ್ದರು. ತನ್ನ ಮನೆಯ ಕಷ್ಟ, ಬಡತನಗಳ ಬಗ್ಗೆ ಜಿಗುಪ್ಸೆಗೊಂಡು ತನ್ನ ಸಂಸಾರವನ್ನು ಮುಳುಗಿಸದೆ ಮೇಲೆತ್ತಲು ಮನೆಯ ಮಗಳು ವ್ಯಭಿಚಾರಕ್ಕಿಳಿಯುವ ಹೃದಯಸ್ಪರ್ಶಿ ಕಥೆಯಿದು. ವ್ಯಭಿಚಾರಿಣಿಯ ಪಾತ್ರದಲ್ಲಿ ಜಯಂತಿ ಮನೋಜ್ಞವಾಗಿ ಅಭಿನಯಿಸಿದ್ದರು. ಸಂಭಾಷಣೆ ಕೂಡ ಕರುಳಿಗೆ ಚುರುಕು ಮುಟ್ಟಿಸುವಂತಿತ್ತು.

೧೯೬೨ರಲ್ಲಿ 'ಭಲೇ ರಾಣಿ' ಬೇರೊಂದು ಕಾರಣಕ್ಕಾಗಿ ಗಮನ ಸೆಳೆಯಿತು. 'ಬೆಳ್ಳಿ ಮೋಡ' ಚಿತ್ರದಲ್ಲಿ ಪ್ರೇಕ್ಷಕರಿಗೆ ಪ್ರಿಯವೆನಿಸಿದ ಬಾಲಕಿ ಬೇಬಿ ರಾಣಿ ಹೆಸರಿನಲ್ಲಿ ಅವಳ ತಂದೆ ನಿರ್ಮಿಸಿದ ಚಿತ್ರ ಇದು - ಆ ಹುಡುಗಿಯೇ ಇಲ್ಲಿ ಒಂದು ಮುಖ್ಯ ಪಾತ್ರವನ್ನು ನಿರ್ವಹಿಸಿದ್ದಳು. ಉದ್ಯಮದ ಪ್ರಮುಖರೊಬ್ಬರ ಪ್ರಕಾರ ಆ ಹುಡುಗಿ ಬಾಲನಟಿಯಾಗಿ ಅದುವರೆಗೆ ಗಳಿಸಿ ಕೂಡಿಟ್ಟಿದ್ದ ಹಣವೆಲ್ಲ ಈ ಚಿತ್ರದಲ್ಲಿ ಕೊಚ್ಚಿಹೋಯಿತು. ಚಿತ್ರದ ವಿಶೇಷವೆಂದರೆ ತೆಲುಗಿನ ಪ್ರಖ್ಯಾತ ನಟಿ ದೇವಿಕಾ ಮತ್ತು ರಮೇಶ್ ಶರ್ಮ ಅದರ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದ್ದು. 'ಉತ್ತರ-ದಕ್ಷಿಣ'ದಂತಹ ಸಾಮಾಜಿಕ ಕಾಳಜಿಯ ಚಿತ್ರವನ್ನು ನಿರ್ದೇಶಿಸಿದ ವಿಜಯ ಸತ್ಯಂರವರೇ ಚಿತ್ರದ ನಿರ್ದೇಶಕರು.

ಅದೇ ರೀತಿ ಗೀತಪ್ರಿಯ ನಿರ್ದೇಶನದ 'ಜೀವನ ಜೋಕಾಲಿ' ಒಂದು ಅಯಶಸ್ವಿ ಚಿತ್ರ. ಮ.ನ.ಮೂರ್ತಿಯವರ ಕಾದಂಬರಿ ಆಧರಿಸಿದ 'ವಿಷಕನ್ಯಾ' ಕೂಡಾ ಅದೇ ಸಾಲಿಗೆ ಸೇರಿತು.

೧೯೬೨ರಲ್ಲಿ ಕನ್ನಡ ಚಿತ್ರರಂಗವನ್ನು ವರ್ಣ ಇನ್ನೂ ಗಮನೀಯವಾಗಿ ಪ್ರವೇಶಿಸಿರಲಿಲ್ಲ. ಆ ವರ್ಷ ತೆರೆ ಕಂಡ ವರ್ಣಚಿತ್ರಗಳು ಕೇವಲ ನಾಲ್ಕು. ಹಾಗೆಯೇ



(ಚಿತ್ರ ೨೫)'ಭಲೇ ಹುಚ್ಚ' ಚಿತ್ರದಲ್ಲಿ ಆರತಿ ಮತ್ತು ರಾಜಕುಮಾರ್

ಇತರ ಭಾಷೆಗಳಿಂದ ರೀಮೇಕ್ ಆದ ಅನುವಾದ ಚಿತ್ರಗಳೂ ೨೪ರಲ್ಲಿ ನಾಲ್ಕು ಮಾತ್ರ ಇದ್ದವು. ಸಾಮಾಜಿಕ ಚಿತ್ರಗಳ ಸಂಖ್ಯೆ ೨೧ಕ್ಕೆ ಏರಿ, ಜಾನಪದ ಚಿತ್ರಗಳು ಕೇವಲ ಮೂರು ಇದ್ದವು. ವರ್ಷದಲ್ಲಿ ಬಿಡುಗಡೆಯಾದ ೨೪ ಚಿತ್ರಗಳಲ್ಲಿ ಹತ್ತು ಚಿತ್ರಗಳನ್ನು ಹೊಸಬರೇ ನಿರ್ಮಿಸಿದರು. ಅವರಲ್ಲಿ ಎಂಟು ಜನಕ್ಕೆ ಹಾಕಿದ ಹಣ ವಾಪಸು ಬಂದಿದು ಹೊಸಬರಲ್ಲಿ ಉತ್ಸಾಹ ಮೂಡಿಸಿದ ಅಂಶ. ಮತ್ತೊಂದು ಗಮನಾರ್ಹ ವಿಷಯವೆಂದರೆ ಮದರಾಸಿನಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ಕಳೆದ ವರ್ಷದ ೧೧ ರಿಂದ ೫ ಕ್ಕೆ ಇಳಿದದ್ದು. ಬೆಂಗಳೂರಿನಲ್ಲಿ ಎಂಟು ಚಿತ್ರಗಳು ತಯಾರಾದರೆ, ಮೈಸೂರಿನಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ೧೧.

ಈ ವರ್ಷ ಕನ್ನಡ ಚಿತ್ರವೊಂದಕ್ಕೆ ಅಂತರರಾಷ್ಟ್ರೀಯ ಚಿತ್ರೋತ್ಸವದಲ್ಲಿ ಪ್ರಪ್ರಥಮ ಬಾರಿಗೆ ಪ್ರಶಸ್ತಿ ಸಿಕ್ಕಿತು. ಈ ವಿಕ್ರಮ ಸಾಧಿಸಿದ ಚಿತ್ರ 'ಸಂಸ್ಕಾರ'. ಸ್ವಿಟ್ಜರ್‌ಲೆಂಡಿನ ಲೊಕಾರ್ನೋ ಅಂತರರಾಷ್ಟ್ರೀಯ ಚಿತ್ರೋತ್ಸವದ ತೀರ್ಪುಗಾರರ ಮಂಡಳಿ 'ಸಂಸ್ಕಾರ'ವನ್ನು ಉತ್ಸವದಲ್ಲಿ ಪ್ರದರ್ಶಿತವಾದ ಮೂರನೆಯ ಅತ್ಯುತ್ತಮ ಚಿತ್ರವೆಂದು ತೀರ್ಮಾನಿಸಿತು.

'ವಂಶವೃಕ್ಷ'ದ ನಿರ್ದೇಶಕದ್ವಯರಾದ ಗಿರೀಶ್ ಕಾರ್ನಾಡ್ ಮತ್ತು ಬಿ.ವಿ.ಕಾರಂತರು ಆ ವರ್ಷ ಕೇಂದ್ರ ಸರ್ಕಾರದಿಂದ ರಾಷ್ಟ್ರಮಟ್ಟದಲ್ಲಿ ೧೯೭೧ರ ಅತ್ಯುತ್ತಮ ನಿರ್ದೇಶಕರ ಪ್ರಶಸ್ತಿಗೆ ಪಾತ್ರರಾದರು. ಆದರೆ ಆ ಚಿತ್ರಕ್ಕಾಗಿ ರಾಜ್ಯ ಸರ್ಕಾರ 'ವಂಶವೃಕ್ಷ' ಕಾದಂಬರಿ ಕರ್ತೃ, ಶ್ರೇಷ್ಠ ಸಾಹಿತಿ ಎಸ್.ಎಲ್.ಭೈರಪ್ಪನವರಿಗೆ ೧೯೭೧ರ ಅತ್ಯುತ್ತಮ ಕಥಾ ಲೇಖಕರ ಪ್ರಶಸ್ತಿಯನ್ನು ನೀಡಿದಾಗ ಅವರು ಅದನ್ನು ನಿರಾಕರಿಸಿದರು. ತಾವು ಸಿನಿಮಾಗಾಗಿ ಕಥೆ ಬರೆಯಲಿಲ್ಲವೆಂದೂ ತಮ್ಮ ಕಥೆಯನ್ನು ಸಿನಿಮಾ ಕಥೆಯಂತೆ ಪರಿಗಣಿಸಿರುವುದು ತಮಗೆ ಅವಮಾನವೇ ಆಗಿದೆಯೆಂದೂ ಹೇಳುವ ಧಾಟಿಯಲ್ಲಿ ಭೈರಪ್ಪನವರು ಬಹಿರಂಗ ಹೇಳಿಕೆಯೊಂದನ್ನು ನೀಡಿದರು. ಅವರ ಈ ಧೋರಣೆಗೆ ಪ್ರತಿಭಟನೆಗಿಂತ ಹೆಚ್ಚಾಗಿ ಪುರಸ್ಕಾರವೇ ಸಿಕ್ಕಿತು.

ಈ ವರ್ಷ ಕನ್ನಡ ಚಿತ್ರೋದ್ಯಮದ ಮೂಲಭೂತ ಸೌಕರ್ಯಗಳಿಗೆ ಇನ್ನೊಂದು ಸೌಕರ್ಯವೂ ಸೇರಿತು - ಬೆಂಗಳೂರು ಫಿಲಂ ಲ್ಯಾಬೊರೇಟರಿ ನಗರದ ಕೇಂದ್ರ ಭಾಗ ಶೇಷಾದ್ರಿಪುರದಲ್ಲಿ ಸ್ಥಾಪಿತವಾಯಿತು. ಮೆಜೆಸ್ಟಿಕ್ ಪ್ರದೇಶದಲ್ಲಿ ದೊಡ್ಡ ಫೋಟೋ ಸ್ಟುಡಿಯೋವೊಂದನ್ನು ನಡೆಸುತ್ತಿದ್ದ ರಾಮರಾಯರು ಈ ಸಾಹಸದ ಕೇಂದ್ರ ಬಿಂದು. ಅವರಿಗೆ ಚಲನಚಿತ್ರ ತಂತ್ರಜ್ಞರಾಗಿ ಮುಂಬೈನಲ್ಲಿ ಸಾಕಷ್ಟು ಅನುಭವವಾಗಿತ್ತು. ಅವರು ಒಂದೆರಡು ಕನ್ನಡ ಚಿತ್ರಗಳನ್ನು ತಯಾರಿಸಿದರು ಕೂಡ. ಕನ್ನಡ ಚಿತ್ರೋದ್ಯಮದಲ್ಲಿ ಬಣ್ಣ ಭದ್ರವಾಗಿ ನೆಲೆಯೂರುವವರೆಗೆ ಈ ಲ್ಯಾಬೊರೇಟರಿ ತುಂಬಾ ಯಶಸ್ವಿಯಾಗಿ ಅಲ್ಲದಿದ್ದರೂ ಸಾಮಾನ್ಯವಾಗಿಯೇ ನಡೆದುಕೊಂಡು ಹೋಯಿತು. ಹೆಚ್ಚಾಗಿ ಸಣ್ಣ ನಿರ್ಮಾಪಕರಿಗೆ ರಾಮರಾಯರು ಒಂದು ರೀತಿಯಲ್ಲಿ ಆಶ್ರಯದಾತರೂ ಆಗಿದ್ದರು.

೧೯೭೨ರಲ್ಲಿ ಕನ್ನಡ ಚಿತ್ರರಂಗ ಮೂವರು ಪ್ರತಿಷ್ಠಿತರ ನಿಧನದಿಂದ ತತ್ತರಿಸಿತು. ಅವರಲ್ಲಿ ಇಬ್ಬರಂತೂ ಈ ರಂಗಕ್ಕೆ ಪ್ರಾರಂಭಿಕ ದಿನಗಳಿಂದಲೂ ಅದ್ಭುತವಾದ ಸೇವೆ ಸಲ್ಲಿಸಿ ಕನ್ನಡ ರಂಗಭೂಮಿಗೂ ಆಧಾರಸ್ತಂಭಗಳಂತಿದ್ದವರು.

ಅವರಲ್ಲಿ ಮೊದಲು ತೀರಿಕೊಂಡವರು ಕನ್ನಡದ ಮೊದಲ ಸಾಮಾಜಿಕ ಚಿತ್ರ 'ಸಂಸಾರನೌಕ'ದ ನಿರ್ದೇಶಕ ಹಾಗೂ ೧೯೫೪ರಲ್ಲಿ ಜನಾನುರಾಗಿ ಚಿತ್ರ 'ಬೇಡರ ಕಣ್ಣಪ್ಪ' ಮೂಲಕ ರಾಜಕುಮಾರ್ ಅವರನ್ನು ಬೆಳಕಿಗೆ ತಂದ ಕನ್ನಡ ರಂಗಭೂಮಿ ಹಾಗೂ ಚಿತ್ರರಂಗಗಳ ಹಿರಿಯರಾದ ಹೆಚ್.ಎಲ್.ಎನ್.ಸಿಂಹ. ಆಗ ಅವರಿಗೆ ೬೮ ವರ್ಷ. ಕನ್ನಡ ಚಿತ್ರರಂಗಕ್ಕೆ ಅನೇಕ ಮಹತ್ತರ ತಿರುವುಗಳನ್ನು ನೀಡಿದ ಈ ನಟ-ಸಾಹಿತಿ-ನಿರ್ಮಾತೃ-ನಿರ್ದೇಶಕ ಕೊನೆಯವರೆಗೂ ಪೂರ್ಣ ಚಟುವಟಿಕೆಯಿಂದಲೇ ಇದ್ದರು. ಅವರು ಕಾಲವಾದಾಗ ಇನ್ನೊಂದು ಚಿತ್ರದ ತಯಾರಿಕೆಗೆ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದರು. ಕೆಲವು ತಿಂಗಳಿನಿಂದ ಅಸ್ವಸ್ಥರಾಗಿದ್ದರೂ ಅವರು ಈ ಪ್ರಯತ್ನವನ್ನು ಮಾತ್ರ ಬಿಟ್ಟಿರಲಿಲ್ಲ. ಬಂಧುವೊಬ್ಬರ ವಿವಾಹಕ್ಕಾಗಿ ಮೈಸೂರಿನಿಂದ ಬೆಂಗಳೂರಿಗೆ ಆಗಮಿಸಿ ಜರ್ನಲಿಸ್ಟ್ ಕಾಲೋನಿಯಲ್ಲಿ ತಮ್ಮ ಮಗನ ಮನೆಯಲ್ಲಿ ತಂಗಿದ್ದಾಗ ಹೃದಯಾಘಾತಕ್ಕೆ ಬಲಿಯಾದರು.

ಇದೇ ವರ್ಷದ ಸೆಪ್ಟೆಂಬರ್ ೧೫ರಂದು ಖ್ಯಾತ ನಿರ್ಮಾತೃ-ನಿರ್ದೇಶಕ ಸುಂದರರಾವ್ ನಾಡಕರ್ಣಿ ಮದರಾಸಿನಲ್ಲಿ ತೀರಿಕೊಂಡರು. ಅವರಿಗ ಆಗ ೬೩ ವರ್ಷ. ಮೂಕಿ ಚಿತ್ರಗಳ ಕಾಲದಿಂದಲೂ ಚಿತ್ರರಂಗದಲ್ಲಿದ್ದು, ಅನೇಕ ತಮಿಳು, ಹಿಂದಿ ಚಿತ್ರಗಳೊಂದಿಗೆ ಸಂಪರ್ಕ ಪಡೆದಿದ್ದ ಸುಂದರರಾಯರು ಕನ್ನಡದಲ್ಲಿ 'ಗೌರಿಗಂಡ' ಚಿತ್ರವನ್ನು ನಿರ್ದೇಶಿಸಿದ್ದರು. ಅದರ ನಿರ್ಮಾಪಕರೂ ಅವರೇ. ಇದೇ ಅವರ ಕೊನೆಯ



(ಚಿತ್ರ ೨೬) 'ಯಾರ ಸಾಕ್ಷಿ ?' ಚಿತ್ರದಲ್ಲಿ ಸಂಪತ್

ಕನ್ನಡ ಚಿತ್ರ. ಅವರು ನಿರ್ದೇಶಿಸಿ ಕನ್ನಡ ಚಿತ್ರರಂಗದಲ್ಲಿ ಸಾಕಷ್ಟು ಜನಪ್ರಿಯತೆಯನ್ನು ಪಡೆದಿದ್ದ 'ಸಂತ ತುಕಾರಾಂ' ಚಿತ್ರಕ್ಕೆ ಕೇಂದ್ರ ಸರ್ಕಾರದ ಬೆಳ್ಳಿಯ ಪದಕ ಲಭ್ಯವಾಗಿತ್ತು. ಅದು ರಾಜಕುಮಾರ್‌ರ ೫೦ನೆಯ ಚಿತ್ರ ಕೂಡ.

ಸುಂದರರಾಯರೊಂದಿಗೆ ಕೆಲಸ ಮಾಡುವ ಅವಕಾಶ ಪಡೆದಿದ್ದ ಕನ್ನಡ ಕಲಾವಿದರಾದ ರಾಜಕುಮಾರ್, ವಿಜಯಭಾಸ್ಕರ್, ಜಿ.ಉದಯಶಂಕರ್ ಮುಂತಾದವರೆಲ್ಲ ಅವರ ಕಾರ್ಯತತ್ಪರತೆಯನ್ನು ಶ್ಲಾಘಿಸುತ್ತಿದ್ದರು.

ಕನ್ನಡ ಚಿತ್ರರಂಗ ಹಾಗೂ ನಾಟಕರಂಗಗಳ ಭೀಷ್ಮಾಚಾರ್ಯರೆನಿಸಿದ್ದ ಗುಬ್ಬಿ ವೀರಣ್ಣನವರು ೧೯೭೨ನೇ ಅಕ್ಟೋಬರ್ ೧೯ರಂದು ವೃದ್ಧಾಪ್ಯದಿಂದ ನಿಧನರಾದರು. ಜೀವನದಲ್ಲಿ ಅನುಭವಿಸಬೇಕಾದ ಕಷ್ಟ-ಸುಖಗಳೆಲ್ಲವನ್ನೂ ಉತ್ಕಟ ರೀತಿಯಲ್ಲಿ ಅನುಭವಿಸಿದ್ದ, ಹಾಗೂ ವೃದ್ಧಾಪ್ಯದಲ್ಲಿಯೂ ನಗರದಲ್ಲಿನ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪತ್ನಿ ಜಯಮ್ಮನವರೊಂದಿಗೆ ಉತ್ಸಾಹದಿಂದ ಭಾಗವಹಿಸುತ್ತಿದ್ದ ಅವರದು ಪೂರ್ಣವಾದ ಬಾಳೆನಿಸಿಕೊಂಡಿತ್ತು. ಪತ್ನಿ ಜಯಮ್ಮ, ಪುತ್ರರಾದ ಚೆನ್ನಬಸಪ್ಪ, ಶಿವಾನಂದ್, ಪುತ್ರಿಯರಾದ ಸ್ವರ್ಣಮ್ಮ, ಮಾಲತಮ್ಮ, ಲತಾ, ಮೊಮ್ಮಕ್ಕಳಾದ ನಟರಾಜ್, ಬಿ.ಜಯಶ್ರೀ, ಸುಂದರಶ್ರೀ - ಹೀಗೆ ಅವರ ಮನೆತನದವರೆಲ್ಲ ಉನ್ನತ ಮಟ್ಟದ ಕಲಾವಿದರೆನಿಸಿಕೊಂಡವರು.

ವೀರಣ್ಣನವರು ನಿಧನರಾದ ಹಿಂದಿನ ದಿನದ ಒಂದು ಹೃದಯಸ್ಪರ್ಶಿ ಘಟನೆಯನ್ನು ಇಲ್ಲಿ ನೆನೆಯಬಹುದು. ನಗರದ ಸೈಂಟ್ ಮಾರ್ಥಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ಅವರ ಸಮೀಪದ ವಾರ್ಡ್‌ನಲ್ಲಿಯೇ ಕನ್ನಡ ಸಾಹಿತ್ಯಲೋಕದ ಸವ್ಯಸಾಚಿಯೆನಿಸಿದ್ದ ಡಿ.ವಿ.ಗುಂಡಪ್ಪನವರು ಚಿಕಿತ್ಸೆ ಪಡೆಯುತ್ತಿದ್ದರು. ಇಬ್ಬರಿಗೂ ಎಂಬತ್ತು ದಾಟಿತ್ತು. ಗುಂಡಪ್ಪನವರು ಸಮೀಪದಲ್ಲಿಯೇ ಇರುವ ವಿಷಯ ತಿಳಿದ ಕೂಡಲೇ ವೀರಣ್ಣನವರು ಆ ರುಗ್ಣಾವಸ್ಥೆಯಲ್ಲಿಯೂ ಎದ್ದು ಅವರ ವಾರ್ಡಿಗೆ ನಡೆದು ಹೋಗಿ ''ನನಗೆ ಟಿಕೆಟ್ ಬಂದಾಯ್ತು ದೇವ್ರೂ. ನಿಮಗೆ ಅಂತಿಮ ನಮನ ಸಲ್ಲಿಸಲು ಬಂದೆ. ನೀವಿನ್ನೂ ಬಹಳ ಕಾಲ ಬದುಕಿ ಕನ್ನಡಕ್ಕೆ ಸೇವೆ ಸಲ್ಲಿಸಬೇಕು'' ಎಂದು ಹೇಳಿ ನಮಸ್ಕಾರ ಮಾಡಿದರು. ಮರಳಿ ವಾರ್ಡಿಗೆ ಬಂದ ಕೆಲವೇ ಘಂಟೆಗಳಲ್ಲಿ ನಿಧನರಾದರು. ಬೆಂಗಳೂರಿನಿಂದ ಗುಬ್ಬಿಯಲ್ಲಿನ ಅವರ ತೋಟದಲ್ಲಿ ಅಂತ್ಯಕ್ರಿಯೆ ನಡೆಯುವವರೆಗೂ ಪ್ರತಿ ಹಳ್ಳಿಯಲ್ಲೂ ದಾರಿಯುದ್ದಕ್ಕೂ ಜನ ನಿಂತಿದ್ದು ಅವರಿಗೆ ಗೌರವಾರ್ಪಣೆ ಮಾಡಿದರು. ಸುಮಾರು ೩೦,೦೦೦ ಶೋಕಪೂರಿತ ಜನರ ನಡುವೆ ವೀರಣ್ಣನವರ ಹಿರಿಯ ಪುತ್ರ ಚನ್ನಬಸವಣ್ಣ ಪಾರ್ಥಿವ ಶರೀರವನ್ನು ಸಮಾಧಿಗಿಳಿಸಿದರು.

ಗುಣಮಟ್ಟ ಮತ್ತು ಆರ್ಥಿಕ ಯಶಸ್ಸು, ಈ ಎರಡೂ ದೃಷ್ಟಿಗಳಿಂದ ೧೯೭೩ ಕನ್ನಡ ಚಿತ್ರರಂಗಕ್ಕೆ ಕಳೆದ ವರ್ಷದಷ್ಟು ಶೋಭೆ ತರಲಿಲ್ಲ. ತಯಾರಾದ ಚಿತ್ರಗಳ ಸಂಖ್ಯೆಯೂ ಅಷ್ಟೆ - ೨೪ರಿಂದ ೨೩ಕ್ಕೆ ಇಳಿಯಿತು. ಅವುಗಳಲ್ಲಿ ನಿರ್ಮಾಪಕರಿಗೆ ಬಂಡವಾಳವನ್ನು ವಾಪಸು ತಂದುಕೊಟ್ಟವು ಕೇವಲ ಆರು.

೧೯೭೩ ಕನ್ನಡ ಜನತೆಗೆ ಚಿರಸ್ಮರಣೀಯ ವರ್ಷ. ಹರಿದು ಹಂಚಿಹೋಗಿದ್ದ ಕನ್ನಡ ಮಾತನಾಡುವ ಪ್ರದೇಶಗಳನ್ನು ಒಂದುಗೂಡಿಸಿ, ಭಾಷಾವಾರು ಆಧಾರದ ಮೇಲೆ

೧೯೫೬ರಲ್ಲಿಯೇ ಹಳೆಯ ಮೈಸೂರು ಪ್ರದೇಶವನ್ನು ವಿಸ್ತರಿಸಿದರೂ, ಹೊಸ ರಾಜ್ಯಕ್ಕೆ 'ಕರ್ನಾಟಕ'ವೆಂದು ಅದುವರೆಗೆ ನಾಮಕರಣವಾಗಿರಲಿಲ್ಲ. ಸುದೀರ್ಘ ಕಾಲದ ನಂತರ ಕೊನೆಗೂ ಕರ್ನಾಟಕವೆಂದು ಹೆಸರು ಬಂದಿದ್ದು ಈ ೧೯೭೩ನೇ ವರ್ಷದಲ್ಲಿಯೆ - ದೇವರಾಜ ಅರಸರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು.

ಈ ನಾಮಕರಣದ ಸವಿನೆನಪಿಗಾಗಿ ರಾಜ್ಯ ಸರ್ಕಾರ ಕನ್ನಡ ಚಿತ್ರರಂಗದ ಖ್ಯಾತ ನಟ ರಾಜಕುಮಾರ್‌ರಿಗೆ ವಿಶೇಷ ರಾಜ್ಯಪ್ರಶಸ್ತಿಯೊಂದನ್ನು ನೀಡಿತು. ಕರ್ನಾಟಕ ರಾಜ್ಯ ಎಂದಾದ ಮೇಲೆ ಬಿಡುಗಡೆಯಾದ ಮೊದಲ ಕನ್ನಡ ಚಿತ್ರ ಪುಟ್ಟಣ್ಣ ಕಣಗಾಲ್ ನಿರ್ದೇಶನದ ಶ್ರೀಕಾಂತ್ ಅಂಡ್ ಶ್ರೀಕಾಂತ್ ತಯಾರಿಕೆ 'ಎಡಕಲ್ಲು ಗುಡ್ಡದ ಮೇಲೆ'.

ಆ ವೇಳೆಗಾಗಲೇ ಕನ್ನಡದ ಹೆಮ್ಮೆಯ ಚಿತ್ರಗಳೆನಿಸಿಕೊಂಡಿದ್ದ 'ಸಂಸ್ಕಾರ', 'ವಂಶವೃಕ್ಷ' ಮತ್ತು 'ಮುಕ್ತಿ' ಅಮೆರಿಕಾದಲ್ಲಿ ಚಲನಚಿತ್ರ ಮಾಧ್ಯಮ ವಿದ್ಯಾರ್ಥಿಗಳಿಗೆ ತೋರಿಸಲು ಶಿಫಾರಸಾದ ೨೩ ಭಾರತೀಯ ಚಿತ್ರಗಳಲ್ಲಿ ಮೂರಾಗಿದ್ದು, ಕನ್ನಡ ಚಿತ್ರರಂಗಕ್ಕೆ ವಿಶೇಷವಾಗಿ ಸಂತಸವನ್ನುಂಟು ಮಾಡಿದ ಸಂಗತಿ. ಇದು ನ್ಯೂಯಾರ್ಕ್ ವಿಶ್ವವಿದ್ಯಾನಿಲಯದ ಸ್ಟೇಟ್ ಎಜುಕೇಷನಲ್ ಡಿಪಾರ್ಟ್‌ಮೆಂಟ್‌ನ ಅಂಗಸಂಸ್ಥೆಯಾದ ಎಜುಕೇಷನಲ್ ರಿಸೋರ್ಸ್ ಸೆಂಟರ್‌ನ ಆಯ್ಕೆ.

ಕನ್ನಡಿಗರೊಬ್ಬರು ಪ್ರಥಮ ಬಾರಿಗೆ ಪುಣೆಯ ಫಿಲಂ ಮತ್ತು ಟೆಲಿವಿಷನ್ ಶಿಕ್ಷಣ ಸಂಸ್ಥೆಯ ಪ್ರಾಂಶುಪಾಲರಾಗಿ ಕೇಂದ್ರ ಸರ್ಕಾರದಿಂದ ಆಯ್ಕೆಯಾಗಿದ್ದು ಇನ್ನೊಂದು ಉಲ್ಲೇಖನೀಯ ಬೆಳವಣಿಗೆ. ೧೯೭೩, ಸೆಪ್ಟೆಂಬರ್‌ನಲ್ಲಿ ಈ ಪುರಸ್ಕಾರ ಸಿಕ್ಕಿದ್ದು ನಟ-ನಿರ್ದೇಶಕ ಹಾಗೂ ಕ್ರಿಯಾಶೀಲ ಸಾಹಿತಿ ಗಿರೀಶ್ ಕಾರ್ನಾಡ್‌ರಿಗೆ.

ಹಿಂದಿನ ವರ್ಷ ತಮ್ಮ 'ನಾಗರಹಾವು' ಚಿತ್ರದಿಂದ ಕನ್ನಡ ಚಿತ್ರರಂಗದ ಪ್ರಥಮ ಶ್ರೇಣಿಯ ನಿರ್ದೇಶಕರಾಗಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡ ನಿರ್ದೇಶಕ ಪುಟ್ಟಣ್ಣ ಕಣಗಾಲ್ ೧೯೭೩ರಲ್ಲಿ ಮತ್ತೊಂದು ಉತ್ತಮ ಕಾದಂಬರಿಯನ್ನಾರಿಸಿಕೊಂಡು 'ಎಡಕಲ್ಲು ಗುಡ್ಡದ ಮೇಲೆ' ಚಿತ್ರವನ್ನು ಶ್ರೀಕಾಂತ್ ಅಂಡ್ ಶ್ರೀಕಾಂತ್ ಸಂಸ್ಥೆಗಾಗಿ ನಿರ್ದೇಶಿಸಿದರು. ಹಿಂದೆ 'ಉಯ್ಯಾಲೆ'ಯಲ್ಲಿ ನಿರ್ದೇಶಕ ಲಕ್ಷ್ಮೀನಾರಾಯಣ್ ವಿವಾಹೋತ್ತರ ಪ್ರಣಯಗಳಂತಹ ಕ್ಲಿಷ್ಟ, ಸೂಕ್ಷ್ಮ ಕಥಾವಸ್ತುವನ್ನು ಆರಿಸಿಕೊಂಡಿದ್ದರು. ಅದರ ನಂತರ ಅದೇ ವಸ್ತುವಿಗೆ ಕೈ ಹಾಕಿದ್ದು ಪುಟ್ಟಣ್ಣನವರು. ಡಿ.ಹೆಚ್.ಲಾರೆನ್ಸ್‌ರ ವಿಶ್ವವಿಖ್ಯಾತ ಕಾದಂಬರಿ 'ಲೇಡಿ ಚಾಟರ್ಲೀಸ್ ಲವರ್'ನ ಸ್ಥೂಲ ಹಂದರವನ್ನು ಅನುಸರಿಸಿ ಭಾರತೀಸುತ ಅವರು ಬರೆದ ಕಾದಂಬರಿ 'ಎಡಕಲ್ಲು ಗುಡ್ಡದ ಮೇಲೆ'. ತನ್ನ ಪುರುಷತ್ವವನ್ನು ಕಳೆದುಕೊಂಡು ಸಮರಭೂಮಿಯಿಂದ ಮರಳಿ ಬಂದ ಯೋಧನೊಬ್ಬನ ಪತ್ನಿ ಒಬ್ಬ ಕಿಶೋರನ ಮೋಹಪಾಶಕ್ಕೆ ಬೀಳುವುದು ಈ ಚಿತ್ರದ ವಸ್ತು. ಕಿಶೋರನ ಪಾತ್ರಕ್ಕೆ ಅದುವರೆಗೆ 'ನಮ್ಮ ಮಕ್ಕಳು' ಮುಂತಾದ ಚಿತ್ರಗಳಲ್ಲಿ ಬಾಲನಟನಾಗಿ ಕಾಣಿಸಿಕೊಂಡಿದ್ದ ಚಂದ್ರಶೇಖರ್‌ರನ್ನು ಆರಿಸಿದರು.

'ಎಡಕಲ್ಲು ಗುಡ್ಡದ ಮೇಲೆ' ಹೊರಾಂಗಣಕ್ಕೆ ಕಥೆ ನಡೆಯುವ ಸ್ಥಳವಾದ ವೈನಾಡಿನ ಆಚೆಯ ಸುಲ್ತಾನ ಬತೇರಿ ಬಳಿಯ ಎಡಕಲ್ಲು ಗುಡ್ಡವನ್ನೇ ಪುಟ್ಟಣ್ಣನವರು ಆರಿಸಿದರು. ಅದು ಅತಿ ಕಡಿದಾದ ಗುಡ್ಡವಾಗಿದ್ದು, ಅಲ್ಲಿನ ಚಿತ್ರೀಕರಣ ಸಾಹಸಮಯವೇ ಆಗಿತ್ತು. ಆದರೆ ಕಲಾ ನಿರ್ದೇಶಕ ಚಲಂ ನಿರ್ಮಿಸಿದ ಗುಹೆಯ ಸೆಟ್ ಅಷ್ಟೇನೂ ನೈಜವಾಗಿ ಕಾಣುವಂತಿರಲಿಲ್ಲ. ಜೊತೆಗೆ ರೋಷಕ್ಕೆ ಕೆಂಪು, ಶಾಂತಕ್ಕೆ ನೀಲಿ, ಮುಂತಾದ ಪಾತ್ರಗಳ ಭಾವನೆಗಳ ಪ್ರಕಟಣೆಗೆ ಪುಟ್ಟಣ್ಣನವರು ಬಳಸಿದ ವರ್ಣ ಸಂಯೋಜನೆ ಹೊಸತೇನೂ ಆಗಿರಲಿಲ್ಲ. ಆದರೆ ವಸ್ತು, ಹಾಡು (ಎಂ.ರಂಗರಾವ್), ಛಾಯಾಗ್ರಹಣ (ಶ್ರೀಕಾಂತ್), ಒಟ್ಟಾರೆ ನಿರೂಪಣೆ, ಮುಂತಾದ ಎಲ್ಲ ಅಂಶಗಳಿಂದಾಗಿ ಚಿತ್ರ ಯಶಸ್ವಿಯಾಯಿತು.

'ಸನ್ಯಾಸಿ ಸನ್ಯಾಸಿ...', 'ಇವ ಯಾರವ್ವಾ ಏನ್ ಚಂದ ಕಾಣಿಸ್ತಾನೆ...', 'ಸಂಗೀತ ಸಂಗೀತ...', 'ವಿರಹಾ ವಿರಹಾ...', 'ನಿಲ್ಲು ನಿಲ್ಲೇ ಪತಂಗ...' ಇತ್ಯಾದಿ ಹಾಡುಗಳು ಮತ್ತು ಅವುಗಳ ಚಿತ್ರೀಕರಣದಲ್ಲಿ ಪುಟ್ಟಣ್ಣ ತೋರಿಸಿದ ಲವಲವಿಕೆ ಅವುಗಳನ್ನು ಆಕರ್ಷಣೀಯಗೊಳಿಸಿದವು. ನರೇಂದ್ರಬಾಬು ಬರೆದ ಚಟಪಟಗುಟ್ಟುವ ಸಂಭಾಷಣೆ ಚಿತ್ರದ ಒಂದು ಮುಖ್ಯ ಆಕರ್ಷಣೆಯೆನಿಸಿತು. ಒಟ್ಟಿನಲ್ಲಿ ಈ ಚಿತ್ರ ಕಾದಂಬರಿಯ ಪಾತ್ರಗಳನ್ನು ಇನ್ನಷ್ಟು ಉದಾತ್ತಗೊಳಿಸಿ ಗೌರವವನ್ನು ಗಳಿಸಿತು ಎನ್ನುವುದು ಸಾಮಾನ್ಯ ಅಭಿಪ್ರಾಯವಾಯಿತು. ಮುಖ್ಯ ಪಾತ್ರದ ನಿರೂಪಣೆಯಲ್ಲಿ ಜಯಂತಿ ತೋರಿದ ಪ್ರೌಢಿಮೆ ಈ ಅಭಿಪ್ರಾಯವನ್ನು ದೃಢಪಡಿಸಿತು.

ಇದೇ ವರ್ಷ ಎನ್.ಲಕ್ಷ್ಮೀನಾರಾಯಣ್ ಕೂಡ ತಮ್ಮ 'ಅಬಚೂರಿನ ಪೋಸ್ಟ್ ಆಫೀಸ್' ಚಿತ್ರಕ್ಕೆ ಕನ್ನಡದ ಸಾಹಿತ್ಯ ಕೃತಿಯನ್ನೇ ಆರಿಸಿಕೊಂಡರು. 'ಉಯ್ಯಾಲೆ' ಚಿತ್ರದಲ್ಲಿಯೂ ಕೆಲವು ಮಾಮೂಲಿ ವ್ಯಾಪಾರಿ ಸೂತ್ರಗಳನ್ನು ತಮ್ಮ ಇಚ್ಛೆಗೆ ವ್ಯತಿರಿಕ್ತವಾಗಿಯೇ ಅಳವಡಿಸಿಕೊಂಡಿದ್ದ ಲಕ್ಷ್ಮೀನಾರಾಯಣ್ ಮುಂದೆ ಅವರದೇ ಆದ ನಿರೂಪಣಾಶೈಲಿಗೆ ಹೆಚ್ಚು ಒತ್ತು ಕೊಡಲು ನಿರ್ಧರಿಸಿದರು. ಕನ್ನಡ ಚಿತ್ರರಂಗದ ಮೇಲಿನ ಹೊಸ ಅಲೆಯ ಪರಿಣಾಮವೂ ಅವರ ಈ ನಿರ್ಧಾರಕ್ಕೆ ಕಾರಣವಾಗಿತ್ತೆಂದು ಅವರು ಹೇಳದಿದ್ದರೂ ಅದು ಸ್ಪಷ್ಟವಾಗಿಯೇ ಇತ್ತು. ಅವರು ಆರಿಸಿಕೊಂಡ 'ಅಬಚೂರಿನ ಪೋಸ್ಟಾಫೀಸ್' ಪೂರ್ಣಚಂದ್ರ ತೇಜಸ್ವಿಯವರ ಅದೇ ಹೆಸರಿನ ಕಥೆಯನ್ನಾಧರಿಸಿತ್ತು. ಮಲೆನಾಡಿನ ಕುಗ್ರಾಮವೊಂದರಲ್ಲಿನ ಅಳ್ಳೆದೆಯವನಾದರೂ ನಿಷ್ಠಾವಂತನಾದ ಅಂಚೆ ವಿತರಕನೊಬ್ಬ ತನ್ನ ಕಾರ್ಯನಿರ್ವಹಣೆಯಲ್ಲಿ ತುಂಬ ಪ್ರಾಮಾಣಿಕನಾಗಿರಬಯಸಿದ್ದು, ಅದೇ ಕಾರಣಕ್ಕಾಗಿಯೇ ಗ್ರಾಮಸ್ಥರ ತಪ್ಪು ಕಲ್ಪನೆಯೊಂದಕ್ಕೆ ಗುರಿಯಾಗಿ, ಕೊನೆಗೆ ಬೇಸರದಿಂದ ಆ ಹಳ್ಳಿಯನ್ನೇ ಬಿಟ್ಟು ಹೊರಡುವ ನಿರ್ಧಾರ ಕೈಗೊಳ್ಳುವುದು ಕಥೆಯ ತಿರುಳು. ಕನ್ನಡದ ಸೂಕ್ಷ್ಮಸಂವೇದನೆಯ ಬರಹಗಾರರಲ್ಲೊಬ್ಬರಾದ ಪೂರ್ಣಚಂದ್ರ ತೇಜಸ್ವಿಯವರ ಕಥೆಯನ್ನು ತೆರೆಗಿಳಿಸುವುದರಲ್ಲಿ ಲಕ್ಷ್ಮೀನಾರಾಯಣ್ ತಮ್ಮ ಗ್ರಹಿಕೆಯ ಚಲನಚಿತ್ರ ವ್ಯಾಕರಣಕ್ಕೆ ತುಂಬ ಬದ್ಧರಾಗಿದ್ದರೂ ಮೂಲಕೃತಿಯಲ್ಲಿನ ವಿಡಂಬನೆಯನ್ನು, ಆಯಾ



(ಚಿತ್ರ ೨೭) 'ಎಡಕಲ್ಲು ಗುಡ್ಡದ ಮೇಲೆ' ಚಿತ್ರದಲ್ಲಿ ಚಂದ್ರಶೇಖರ್, ಆರತಿ

ರಂಗಾ, ಜಯಂತಿ, ಆರತಿ ಮತ್ತು ಚಂದ್ರಶೇಖರ್



(ಚಿತ್ರ ೨೮) 'ಅಬಚೂರಿನ ಪೋಸ್ಟಾಫೀಸ್' ಚಿತ್ರದಲ್ಲಿ ನಾಣಿ ಮತ್ತು ಗಿರಿಜಾ

ಪಾತ್ರಗಳ ವ್ಯಕ್ತಿತ್ವದ ಹಲವು ಪದರಗಳನ್ನು ಸಮರ್ಥವಾಗಿ ಬಿಂಬಿಸುವುದರಲ್ಲಿ ಯಶಸ್ವಿಯಾಗಲಿಲ್ಲ. ಉದಾಹರಣೆಗೆ, ಮೂಲಕಥೆಯಲ್ಲಿ ಅಂಚೆ ವಿತರಕ ಹಳ್ಳಿಯವರಿಂದ ಏಟು ತಿಂದು ಆ ಗಲಭೆಯ ನಡುವೆಯೇ ಪರಾರಿಯಾಗಿಬಿಡುತ್ತಾನೆ. ಆದರೆ ಚಿತ್ರದಲ್ಲಿ ಇದು ಆತ ನಿರ್ವಿಕಾರ ಮನಸ್ಸಿನಿಂದ ಕೂಲಂಕಷವಾಗಿ ಹೆಂಡತಿಯೊಂದಿಗೆ ಯೋಚಿಸಿ ಕೈಗೊಳ್ಳುವ ನಿರ್ಧಾರವಾಗುತ್ತದೆ. ಇದು ಆತನ ವ್ಯಕ್ತಿತ್ವಕ್ಕೆ ನಡೆಸಿದ ಅಪಚಾರವೆನಿಸುತ್ತದೆ. ಅದೇನೇ ಆದರೂ ಹಿರಿಯ ನಿರ್ದೇಶಕ ಎಂ.ಆರ್.ವಿಠಲ್ ಹೇಳಿದಂತೆ 'ಅಬಚೂರಿನ ಪೋಸ್ಟ್ ಆಫೀಸ್' ಕನ್ನಡ ಚಿತ್ರರಂಗಕ್ಕೆ ಹೊಸತಾದ ಒಂದು ಪ್ರಬಂಧ ರೂಪದ ಚಿತ್ರವಾಗಿತ್ತು. ಚಿತ್ರ 'ಮೇಕಪ್ ನಾಣಿ'ಯೆಂದೇ ಹವ್ಯಾಸಿ ನಾಟಕರಂಗದಲ್ಲಿ ಸುಪ್ರಸಿದ್ಧರಾಗಿದ್ದ ಬಿ.ಎನ್.ನಾರಾಯಣ್ ಅವರನ್ನು ಪ್ರಥಮ ಬಾರಿಗೆ ಪ್ರಧಾನ ಪಾತ್ರದಲ್ಲಿ ಚಿತ್ರರಂಗಕ್ಕೆ ಪರಿಚಯ ಮಾಡಿಸಿತು.

ಈ ಚಿತ್ರವನ್ನು ನಿರ್ಮಿಸಿದವರು ಚಿತ್ರರಂಗಕ್ಕೇ ಹೊಸಬರಾದ ಚಿಕ್ಕಮಗಳೂರು ಜಿಲ್ಲೆಯ ಕಾಫಿ ಪ್ಲಾಂಟರ್ ಪತ್ರೆ ಸಿ.ವಿನಾಯಕ್. ಚಿತ್ರದಲ್ಲಿ ಹಾಡುಗಳಿರಲಿಲ್ಲ, ವಿಜಯಭಾಸ್ಕರ್ ಹಿನ್ನೆಲೆ ಸಂಗೀತವನ್ನು ಮಾತ್ರ ನೀಡಿದರು. ಅಂದಿನ ಹವ್ಯಾಸಿ ರಂಗಭೂಮಿಯ ಅನೇಕ ಪ್ರತಿಭೆಗಳಾದ ದಾಶರಥಿ ದೀಕ್ಷಿತ್, ಬಿ.ಎಸ್.ರಾಮರಾವ್, ಗಿರಿಜ, ಶಾಂತ, ರಮೇಶ್‌ಭಟ್, ಸೀತಾರಾಂ ಮತ್ತಿತರರು ಪಾತ್ರವರ್ಗದಲ್ಲಿದ್ದರು. ನವರತ್ನರಾಂ ಅವರ ಚುರುಕಾದ ಸಂಭಾಷಣೆಯೇನೋ ಅಲ್ಲಲ್ಲಿ ಮಿಂಚಿತು. ಆದರೆ ಪಾತ್ರಪೋಷಣೆಯಲ್ಲಿನ ಅಪಕ್ವತೆ ಈ ಗುಣವನ್ನು ಮುಚ್ಚಿತು. ಚಿತ್ರ ಗಲ್ಲಾಪೆಟ್ಟಿಗೆಯಲ್ಲಿ ಸೋಲನ್ನು ಕಂಡಿತು. ವಿನಾಯಕ್‌ರವರು ಚಿತ್ರ ನಿರ್ಮಾಣದಿಂದ ನಿರ್ಗಮಿಸಿದರು. ಚಿತ್ರವೇನೋ ರಾಷ್ಟ್ರಮಟ್ಟದಲ್ಲಿ ಪ್ರಾದೇಶಿಕ ಪ್ರಶಸ್ತಿಯನ್ನು ಪಡೆದುಕೊಂಡಿತು.

೧೯೭೦ರ ದಶಕ ಕರ್ನಾಟಕ ಮಾತ್ರವಲ್ಲ, ಇಡೀ ಭಾರತದಲ್ಲಿ ಬಾಬಾ, ಭಗವಾನ್, ಮಹರ್ಷಿಗಳು ಪ್ರಜ್ವಲಿಸಿದ ಕಾಲ. ಇಂಗ್ಲೆಂಡ್‌ನಲ್ಲಿ ಬೀಟಲ್‌ಗಳೆಂದು ಪ್ರಸಿದ್ಧರಾಗಿದ್ದ ಸಂಗೀತಗಾರರ ಗುಂಪನ್ನು ಅತೀಂದ್ರಿಯ ಧ್ಯಾನದತ್ತ ಆಕರ್ಷಿಸಿ ಪ್ರಖ್ಯಾತರಾಗಿದ್ದ ಮಹರ್ಷಿ ಮಹೇಶ ಯೋಗಿ, ಪುಣೆಯಲ್ಲಿ ಮುಕ್ತಕಾಮವೂ ಸೇರಿದಂತೆ ನಾನಾ ವಿಧವಾದ ಮನೋದೈಹಿಕ ಅಭ್ಯಾಸಗಳ ಮೂಲಕ ಆತ್ಮಸಾಕ್ಷಾತ್ಕಾರ ಮಾಡಿಸುವ ಹೊಸ ಚಿಂತನೆಯ ಭಗವಾನ್ ರಜನೀಶ್, ಪವಾಡಗಳಿಂದ ಅಸಂಖ್ಯಾತ ಜನರನ್ನು ಆಕರ್ಷಿಸುತ್ತಿದ್ದ ಪುಟ್ಟಪರ್ತಿಯ ಸಾಯಿಬಾಬಾ ಇವರುಗಳು ವಿಶೇಷವಾಗಿ ಸುದ್ದಿಯಲ್ಲಿದ್ದರು. ಇವರ ಋಜುತ್ವದ ಬಗ್ಗೆ ಅಂದಿನ ವಾದ-ವಿವಾದಗಳೇನೇ ಇದ್ದರೂ, ಇದೇ ಸಮಯದಲ್ಲಿ ದಿನಕ್ಕೊಬ್ಬರಂತೆ ಠಕ್ಕ ಬಾಬಾ, ಭಗವಾನ್ ಮಹರ್ಷಿಗಳು ಹುಟ್ಟಿಕೊಳ್ಳುತ್ತಿದ್ದುದಂತೂ ಸುಶಿಕ್ಷಿತರೆಲ್ಲರೂ ಕಂಡಂಥ ವಿದ್ಯಮಾನವಾಗಿತ್ತು. ಈ ಹಿನ್ನೆಲೆಯಲ್ಲಿ ಬಂದಿದ್ದು ಕ್ಷಿತಿಜ ಫಿಲಂಸ್ ಲಾಂಛನದಲ್ಲಿ ಪಿ.ವಿ.ನಂಜರಾಜೇ ಅರಸ್ ನಿರ್ದೇಶಿಸಿದ 'ಸಂಕಲ್ಪ'. ನಂಬಿಕೆ ಮತ್ತು ವಿಚಾರವಾದದ ನಡುವಣ ಸಂಘರ್ಷವನ್ನು ಆದಷ್ಟು ವಸ್ತುನಿಷ್ಠವಾಗಿ, ಯಾವುದೇ ಪಾತ್ರವನ್ನು ಕೆಟ್ಟ ಅಥವಾ ಒಳ್ಳೆಯ ಎಂದು ವರ್ಗೀಕರಿಸದ, ಕಪ್ಪು ಮತ್ತು ಬಿಳುಪಿನ ಮಾಧ್ಯಮದ ಬೂದು ಬಣ್ಣದ ಛಾಯೆಗಳಲ್ಲಿ ನಿರೂಪಿಸಲೆತ್ನಿಸಿದ ಪ್ರಥಮ ಕನ್ನಡ ಚಿತ್ರ ಇದಾಗಿತ್ತು. ಈ ಚಿತ್ರದಲ್ಲಿನ ಸನ್ಯಾಸಿ ಭಕ್ತಿ ಮತ್ತು ನಂಬಿಕೆಯಿಂದ ರೋಗಗಳನ್ನು ವಾಸಿ ಮಾಡಬಹುದೆನ್ನುತ್ತಾ ಎಳೆಯ ಮಗುವೊಂದಕ್ಕೆ ಡಿಫ್ತೀರಿಯಾ ಬಂದಾಗ ಅದಕ್ಕೆ ಸೂಕ್ತ ವೈದ್ಯಕೀಯ ಚಿಕಿತ್ಸೆ ಕೊಡಿಸುವುದಕ್ಕೆ ಅಡ್ಡಿಯಾಗುತ್ತಾನೆ. ಅನಂತರ ತನ್ನ ತಪ್ಪಿನ ಮನವರಿಕೆಯಾಗಿ ಸ್ಥಳ ಬಿಟ್ಟು ಹೊರಟು ಹೋಗುತ್ತಾನೆ. ಹಿಂದಿ ನಾಟಕವೊಂದು ಮತ್ತು ಸ್ವಲ್ಪಮಟ್ಟಿಗೆ 'ಆಷಾಢಭೂತಿ' ನಾಟಕ ಕೂಡಾ ಚಿತ್ರ ಕಥೆಯ ಹಿನ್ನೆಲೆಗಿದ್ದಿರಬಹುದು.

'ಸಂಕಲ್ಪ' ಚಿತ್ರದ ಬಗ್ಗೆ ಜಿ.ವಿ.ಅಯ್ಯರ್ ಅವರು 'ಚೌಕದದೀಪ'ದಲ್ಲಿ ಹೊಸ ರೀತಿಯಲ್ಲಿ ನಿರೂಪಿಸಲು ಹೋಗಿ ಸೋತಿದ್ದರೆಂದೂ ಅನಂತರ 'ವಂಶವೃಕ್ಷ' ನಿರ್ಮಿಸಿ ಕಾರಂತ್-ಕಾರ್ನಾಡ್ ನಿರೂಪಣೆಯ ವಿಧಾನವನ್ನು ಗಮನಿಸಿದರೆಂದೂ 'ಹಂಸಗೀತೆ' ತಾವೇ ನಿರ್ದೇಶಿಸುವುದಕ್ಕೆ ಪೂರ್ವಭಾವಿಯಾಗಿ ಒಂದು ಪ್ರಯೋಗಭೂಮಿಯಂತೆ 'ಸಂಕಲ್ಪ'ದ ನಿರ್ದೇಶನದಲ್ಲಿ ತೊಡಗಿಕೊಂಡರೆಂದೂ ಹೇಳಿಕೊಂಡಿದ್ದುಂಟು. ಮುಂದೆ ಅನಂತ್‌ನಾಗ್ ಎಂದೇ ಹೆಸರಾಗಿ ಇಡೀ ನಾಡಿನ ಪ್ರತಿಭಾವಂತ ನಟರಲ್ಲೊಬ್ಬರಾಗಿ ಬೆಳೆದು ಅಭಿನಯ ಕ್ಷೇತ್ರದಲ್ಲಿ ಕನ್ನಡ ಚಿತ್ರರಂಗವನ್ನು ರಾಷ್ಟ್ರೀಯಮಟ್ಟದಲ್ಲಿಯೂ ಮೆರೆಸಿದ ಅನಂತ ನಾಗರಕಟ್ಟೆಯವರ ಪ್ರಥಮ ಚಿತ್ರ 'ಸಂಕಲ್ಪ'. ಅನಂತ್ ಮುಂಬಯಿಯಲ್ಲಿ ಬ್ಯಾಂಕ್ ನೌಕರನಾಗಿದ್ದರು. ಅವರ ತಮ್ಮ ಶಂಕರನಾಗ್ ಕೂಡ ಅವರಂತೆಯೇ ಬ್ಯಾಂಕ್ ನೌಕರರು. ಮುಂಬಯಿಯಲ್ಲಿ ಹವ್ಯಾಸಿ ರಂಗಭೂಮಿಯಲ್ಲಿ ಸಾಕಷ್ಟು ನುರಿತು, ಪ್ರಚಲಿತ ವಿದ್ಯಮಾನಗಳಲ್ಲಿ ತೀವ್ರ ಆಸಕ್ತಿ ತಾಳಿ ಬುದ್ಧಿಜೀವಿಯಾಗಿ ಬೆಳೆದಿದ್ದ ಅನಂತ್ ತಮ್ಮ ಮೊದಲ ಚಿತ್ರದಲ್ಲಿಯೇ ಸಾಕಷ್ಟು ಗಾಢವಾದ ಪರಿಣಾಮ ಬೀರಿದರು. ಆಗ ತಾನೆ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಿಂದ ಡಿಪ್ಲೊಮಾ ಪಡೆದು ಬಂದಿದ್ದ ಎಸ್.ರಾಮಚಂದ್ರರವರ ಕಪ್ಪು-ಬಿಳುಪು ಛಾಯಾಗ್ರಹಣ 'ಸಂಕಲ್ಪ'ದ ಆಕರ್ಷಣೆಗಳಲ್ಲೊಂದೆನಿಸಿತು. ಔಟ್‌ಫೋಕಸ್ ತಂತ್ರವನ್ನು ತುಂಬಾ ಸಮರ್ಥವಾಗಿ ಬಳಸಿದ ರಾಮಚಂದ್ರ ಮುಂದೆ ಅನೇಕ ಹೊಸ ಅಲೆ ಚಿತ್ರಗಳ ನಿರ್ದೇಶಕರಿಗೆ ಆಧಾರಸ್ತಂಭವೆನಿಸಿದರು. ಚಿತ್ರದಲ್ಲಿ ಬಾಬಾ ಪಾತ್ರವಹಿಸಿದ ಸಿ.ಆರ್.ಸಿಂಹರವರು ಆ ವೇಳೆಗಾಗಲೇ ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ಪಳಗಿದ್ದವರು, 'ಸಂಸ್ಕಾರ' ಮೊದಲಾದ ಚಿತ್ರಗಳಲ್ಲೂ ನಟಿಸಿದ್ದರು. ಜನಪ್ರಿಯ ಸಂಗೀತ ನಿರ್ದೇಶಕ ವಿಜಯಭಾಸ್ಕರ್ ಹಿನ್ನೆಲೆ ಸಂಗೀತ ನೀಡಿದ ಕೆಲವು ಹೊಸ ಅಲೆಯ ಚಿತ್ರಗಳ ಸಾಲಿನಲ್ಲಿ ಇದೇ ಮೊದಲನೆಯದು. ಈ ಚಿತ್ರದ ಸಂಕಲನಕ್ಕೆ ತಮ್ಮ ಪ್ರಥಮ ಪ್ರಯತ್ನದಲ್ಲಿಯೇ ರಾಜ್ಯ ಪ್ರಶಸ್ತಿ ಪಡೆದವರು ಫಿಲಂ ಇನ್‌ಸ್ಟಿಟ್ಯೂಟ್ ಪದವೀಧರ ಉಮೇಶ್ ಕುಲಕರ್ಣಿ. ಧ್ವನಿಮುದ್ರಣಕ್ಕಾಗಿ ಸೀತಾರಾಂ, ಅತ್ಯುತ್ತಮ ಬಾಲನಟರಾಗಿ ಬೇಬಿ ವೃಂದಾ ಕೂಡ ಪ್ರಶಸ್ತಿಗಳನ್ನು ಪಡೆದರು. ಅತ್ಯುತ್ತಮ ಪ್ರಥಮ ನಿರ್ದೇಶನಕ್ಕಾಗಿ ಪ್ರಶಸ್ತಿ ಪಡೆದವರು ಪಿ.ವಿ.ನಂಜರಾಜ ಅರಸರು.

ಇದೇ ವರ್ಷ ಕನ್ನಡ ಚಿತ್ರರಂಗಕ್ಕೆ ಇಂಜಿನಿಯರಿಂಗ್ ಹಿನ್ನೆಲೆಯಿಂದ ಬಂದ ಒಬ್ಬ ಆದರ್ಶವಾದಿ ನಿರ್ಮಾಪಕರ ಪ್ರವೇಶವಾಯಿತು. ದೂರಸಂಪರ್ಕ ತಂತ್ರಜ್ಞಾನದಲ್ಲಿ ಪರಿಣತಿ ಪಡೆದಿದ್ದು, ನವದೆಹಲಿಯಲ್ಲಿ ಅನೇಕ ವರ್ಷಗಳು ಸರ್ಕಾರಿ ನೌಕರರಾಗಿ ದುಡಿದು, ಬೆಂಗಳೂರಿನಲ್ಲಿ ದೊಡ್ಡ ಹೋಲ್‌ಸೇಲ್ ಬಟ್ಟೆ ವ್ಯಾಪಾರವನ್ನು ಕುಟುಂಬದ ಬಳುವಳಿಯಾಗಿ ಹೊಂದಿದ್ದ ಟಿ.ಎಸ್.ನರಸಿಂಹನ್‌ರಿಗೆ ಚಿತ್ರ ನಿರ್ಮಾಣದಲ್ಲಿಯೂ ಆಸಕ್ತಿ. ನರಸಿಂಹನ್ ನಿರ್ಮಿಸಿದ ಮೊದಲನೆಯ ಚಿತ್ರ ವೇಶ್ಯಾ ಸಮಸ್ಯೆಗೆ ಸಂಬಂಧಿಸಿದ್ದು. ಆರ್.ಎನ್.ಜಯಗೋಪಾಲ್ ನಿರ್ದೇಶನದಲ್ಲಿ ತಯಾರಾದ ಈ ಚಿತ್ರದ ನಾಯಕಿ ಕಲ್ಪನಾ, ನಾಯಕ ಮುಂದೆ ಮಾತಿಲ್ಲದ ಚಿತ್ರ 'ಪುಷ್ಪಕ ವಿಮಾನ'ವನ್ನು ತಯಾರಿಸಿದ ಸ್ಥಿರಚಿತ್ರ ಛಾಯಾಗ್ರಾಹಕ ಶೃಂಗಾರ್ ನಾಗರಾಜ್.



(ಚಿತ್ರ ೨೯) 'ಸಂಕಲ್ಪ' ಚಿತ್ರದಲ್ಲಿ ಸಿ.ಆರ್.ಸಿಂಹ ಮತ್ತು ಬಿಂದು ಜಯದೇವ್

ಮತ್ತೊಬ್ಬ ಕಲಾವಿದೆ ನೃತ್ಯ ಪರಿಣತೆ ಸುರೇಖ. ನರಸಿಂಹನ್ ಚಿತ್ರಕ್ಕೆ ಆರಿಸಿದ ಕಥಾವಸ್ತು, ಕಲಾವಿದರ ಆಯ್ಕೆ ಗಮನಿಸಿದಾಗ ಅವರು ಒಂದು ವಿಭಿನ್ನ ಜಾಡನ್ನೇ ಹಿಡಿಯಲು ಸಿದ್ಧರಾಗಿದ್ದರೆಂದು ತೋರುತ್ತದೆ. ಚಿತ್ರ 'ಕೆಸರಿನ ಕಮಲ' ಇದಕ್ಕಾಗಿ ಮುಂಬಯಿನ 'ಕೆಂಪು ದೀಪ' ಪ್ರದೇಶಗಳಲ್ಲಿಯೂ ಚಿತ್ರಣ ನಡೆಯಿತು. ಛಾಯಾಗ್ರಾಹಕರು ಎಸ್.ಜಿ.ರಾವ್. ಆದರೆ ಚಿತ್ರ ತಾನು ಪ್ರೇಕ್ಷಕರ ಮುಂದಿಟ್ಟ ಭರವಸೆಗಳನ್ನೆಲ್ಲ ಈಡೇರಿಸಲು ಅಸಮರ್ಥವಾಗಿ ಗಲ್ಲಾ ಪೆಟ್ಟಿಗೆಯಲ್ಲಿ ಸೋತಿತು. ನರಸಿಂಹನ್ ಆ ದಿನಗಳಲ್ಲಿ 'ಕೆಸರಿನ ಕಮಲ'ದ ಇಂಗ್ಲಿಷ್ ಅವತರಣಿಕೆಯನ್ನು ತಯಾರಿಸುವುದಾಗಿಯೂ, ಅದರಲ್ಲಿ ವಿಖ್ಯಾತ ನಟ ಮಾರ್ಲನ್ ಬ್ರಾಂಡೋ ಅಭಿನಯಿಸುತ್ತಾರೆಂದೂ ಪ್ರಕಟಿಸಿದ್ದರು. ಆದರೆ ಆ ಯೋಜನೆ ಕೈಗೂಡಲಿಲ್ಲ.

'ಕುಳ್ಳ ಏಜೆಂಟ್ ೦೦೦'ನಂತಹ ಪ್ರಯೋಗದಲ್ಲಿ ಪ್ರಚಂಡ ಯಶಸ್ಸು ಗಳಿಸಿದ್ದ ನಟ-ನಿರ್ಮಾಪಕ ದ್ವಾರಕೀಶ್ ಮತ್ತೊಂದು ಯಶಸ್ವಿ ಚಿತ್ರವನ್ನು ತೆರೆಗಿತ್ತರು. 'ಕೌಬಾಯ್ ಕುಳ್ಳ' ದ್ವಾರಕೀಶ್ ತಮ್ಮ ಸ್ವಂತ ಕುಳ್ಳನ ಇಮೇಜ್‌ನಲ್ಲಿ ಮತ್ತೊಮ್ಮೆ ಬೀಗಿದ ಚಿತ್ರ. ಆದರೆ ಈ ಬಾರಿ ಅವರು ನಿರ್ದೇಶನಕ್ಕಾಗಿ ಆಯ್ದುಕೊಂಡವರು ಸಮೂಹಾಕರ್ಷಣೆಯ ಚಿತ್ರಗಳಿಗೆ ತಕ್ಕ ತಾಂತ್ರಿಕ ಶ್ರೀಮಂತಿಕೆಯನ್ನು, ಚುರುಕುತನವನ್ನು ತರುವ ಚಾಕಚಕ್ಯತೆಯನ್ನು ಪಡೆದಿದ್ದ ವಿಜಯ್ ಅವರನ್ನು. ಆದರೆ 'ಕುಳ್ಳ ಏಜೆಂಟ್ ೦೦೦'ಯಲ್ಲಿನ ಲವಲವಿಕೆ, ಸರಾಗವಾದ ಓಟ ಈ ಚಿತ್ರದಲ್ಲಿರಲಿಲ್ಲ. ದ್ವಾರಕೀಶ್ ಚಿತ್ರದ ನಾಯಕಿ ಪಾತ್ರಕ್ಕೆ ಮತ್ತೆ ಜ್ಯೋತಿಲಕ್ಷ್ಮಿಯನ್ನೇ ತಂದರು. ಚಿತ್ರದ ಸಾಹಸ ದೃಶ್ಯಗಳು ಮಕ್ಕಳಿಗೆ ವಿಶೇಷವಾಗಿ ಹಿಡಿಸಿದಂತಿದ್ದು, ಇಡೀ ಚಿತ್ರವೇ ಒಂದು ಮಕ್ಕಳ ಚಿತ್ರವೆನಿಸಿಕೊಂಡಿದ್ದರಲ್ಲಿ ಸೋಜಿಗವೇನೂ ಇಲ್ಲ. ಕೆಲವು ವಿಶಿಷ್ಟ ಕೋನಗಳಿಂದ ಛಾಯಾಗ್ರಾಹಕ ಪ್ರಕಾಶ್ ಚೇತೋಹಾರಿಯಾಗಿ ತೆಗೆದ ಚಿತ್ರಿಕೆಗಳು ಚಿತ್ರದ ಹೆಚ್ಚಳವೆನಿಸಿದವು.

ರಾಜ್ಯದ ಅರಣ್ಯ ಪ್ರದೇಶಗಳಲ್ಲಿ ದಶಕಗಳ ಗಟ್ಟಲೆ ಒಂದು ಜ್ವಲಂತ ಸಮಸ್ಯೆಯಾಗಿಯೇ ಉಳಿದಿರುವ ಅರಣ್ಯೋತ್ಪನ್ನಗಳ ಕಳ್ಳ ಸಾಗಾಣಿಕೆ ಬಗ್ಗೆ ಸ್ವಯಂ ಪರಿಸರ ಪ್ರೇಮಿ ಮತ್ತು ವನ್ಯಪ್ರಾಣಿಗಳ ಬಗ್ಗೆ ಅಪಾರ ಕಾಳಜಿಯನ್ನುಳ್ಳ ನಟ-ನಿರ್ಮಾಪಕ ಎಂ.ಪಿ.ಶಂಕರ್ ಬಹಳ ಆಸ್ಥೆ ವಹಿಸಿ, ವಿಜಯ್ ನಿರ್ದೇಶನದಲ್ಲಿ ತಯಾರಿಸಿದ ಚಿತ್ರ 'ಗಂಧದ ಗುಡಿ'. ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಈ ಚಿತ್ರಕ್ಕೆ ತನ್ನದೇ ಆದ ಸ್ಥಾನವೊಂದು ತಾನಾಗಿಯೇ ಲಭಿಸಲು ಕಾರಣ ಅದರ ಹಿಂದಿರುವ ಪ್ರಾಮಾಣಿಕತೆ ಮತ್ತು ಸಾಮಾಜಿಕ ಬದ್ಧತೆ. ಚಿತ್ರ ಕಣ್ಣಿಗೆ ಎಷ್ಟು ಮೋಹಕವಾಗಿತ್ತೋ, ಅಷ್ಟೇ ವಿಚಾರ ಪ್ರಚೋದಕವಾಗಿಯೂ ಇತ್ತು. ಸಾಧಾರಣವಾಗಿ ಇಂತಹ ಚಿತ್ರಗಳಿಗೆ ಕಥೆಯೇ ಗೌಣ. ಆದರೆ ಇಲ್ಲಿ ಶಂಕರ್ ಒಂದು ಒಳ್ಳೆಯ ಕಥೆಯನ್ನು ನೀಡಿದರು. ವಿಜಯ್ ಆ ಕಥೆಯನ್ನು ಡಿ.ವಿ.ರಾಜಾರಾಂರ ಸುಂದರ ಛಾಯಾಗ್ರಹಣದ ನೆರವಿನಿಂದ ಆಕರ್ಷಕವಾಗಿ ಹೇಳಿದರು. ಸಹಜವಾಗಿಯೇ ಬಹುಭಾಗ ಚಿತ್ರಣ ಕಾಡಿನಲ್ಲಿಯೇ ನಡೆಯಿತು. ಆ ಕಾಲಕ್ಕೆ ಅದೇ ಒಂದು ದೊಡ್ಡ ಸಾಹಸವೆನಿಸಿತು. ರಾಜಕುಮಾರ್, ವಿಷ್ಣುವರ್ಧನ್, ಕಲ್ಪನಾ ಮತ್ತು ಸ್ವಯಂ ಎಂ.ಪಿ.ಶಂಕರ್ ತಾರಾಗಣದಲ್ಲಿದ್ದ 'ಗಂಧದಗುಡಿ' ರಾಜ್ಯದಾದ್ಯಂತ ಭರ್ಜರಿಯಾಗಿ ಓಡಿ ಶಂಕರ್‌ರವರಿಗೆ ಕೀರ್ತಿ, ಹಣ ಎರಡನ್ನೂ ತಂದಿತು. ಅನೇಕ ವರ್ಷಗಳ ನಂತರ ಈ ಚಿತ್ರದ ಧಾಟಿಯಲ್ಲಿಯೇ ಶಂಕರ್ ರಾಜಕುಮಾರ್‌ರವರ ತಾರಾಪುತ್ರ ಶಿವರಾಜಕುಮಾರ್ ನಾಯಕತ್ವದಲ್ಲಿ 'ಗಂಧದಗುಡಿ ೨' ಚಿತ್ರವನ್ನು ನಿರ್ಮಿಸಿದ್ದು, ಆ ಚಿತ್ರದಲ್ಲಿ ರಾಜಕುಮಾರ್ ಕೂಡ ಒಂದು ಪಾತ್ರ ವಹಿಸಿ, ಅಪಾರ ಜನಪ್ರಿಯತೆ ಗಳಿಸಿದ 'ನಾವಾಡುವ ನುಡಿಯೇ ಕನ್ನಡ ನುಡಿ....' ಗೀತೆಯನ್ನು ಹಾಡಿದ್ದನ್ನು ಸ್ಮರಿಸಬಹುದು. ರಾಜನ್-ನಾಗೇಂದ್ರ ಸಂಗೀತವಿದ್ದ 'ಗಂಧದಗುಡಿ'ಯ ಎಲ್ಲ ಹಾಡುಗಳೂ ಒಂದಲ್ಲ ಒಂದು ಕಾರಣಕ್ಕೆ ಜನಪ್ರಿಯವೆನಿಸಿ, ದೀರ್ಘಕಾಲ ನೆನಪಿನಲ್ಲಿ ನಿಂತವು.

ಕಾಕನಕೋಟೆ ಅರಣ್ಯದಲ್ಲಿ 'ಗಂಧದಗುಡಿ'ಯ ಚಿತ್ರಣ ನಡೆಯುತ್ತಿದ್ದಾಗ ನಡೆದ ಒಂದು ಘಟನೆ ಹಲವಾರು ಬುಡವಿಲ್ಲದ ಪುಕಾರುಗಳನ್ನು ಹಬ್ಬಿಸತೊಡಗಿತು. ಮೊದಲು ಬಂದ ಇಂತಹ ಪುಕಾರುಗಳ ಪ್ರಕಾರ ರಾಜಕುಮಾರ್ ಅವರ ಚಿತ್ರವೊಂದರಲ್ಲಿ ಅವರೊಂದಿಗೆ ಪ್ರಥಮ ಬಾರಿಗೆ ಪಾತ್ರ ವಹಿಸುತ್ತಿದ್ದ ವಿಷ್ಣುವರ್ಧನ್ ಹುಸಿ ಗುಂಡಿದ್ದ ರಿವಾಲ್ವರ್ ಬದಲು ನಿಜವಾದ ಗುಂಡಿದ್ದುದನ್ನು ಹಾರಿಸಿದಾಗ ರಾಜ್ ಅವರು ಯಾವುದೇ ಅಪಾಯವಿಲ್ಲದೆ ಪಾರಾದರು. ಬೆಂಗಳೂರಿನ ಗಾಂಧಿನಗರದಲ್ಲಿ ಈ ಬಗ್ಗೆ ಗುಸುಗುಸು ಪ್ರಾರಂಭವಾಯಿತು. ಕೊನೆಗೆ ಖಚಿತವಾಗಿ ಬಂದ ಸುದ್ದಿಯ ಪ್ರಕಾರ ನಿರ್ಮಾಪಕ ಶಂಕರ್‌ರವರು ಕಾಡು ಪ್ರದೇಶದಲ್ಲಿ ಚಿತ್ರೀಕರಣವನ್ನು ನಡೆಸುವಾಗ ಸಮಯಕ್ಕಿರಲೆಂದು ತಮ್ಮೊಂದಿಗೆ ಒಂದು ಕೋವಿಯನ್ನು ಇರಿಸಿಕೊಂಡಿದ್ದರು. ಅಂದು ಆ ಕೋವಿಯನ್ನು ತೆಗೆದುಕೊಂಡ ನಟ ಬಾಲಕೃಷ್ಣ ಅದರಲ್ಲಿ ಗುಂಡಿರುವುದನ್ನು ತಿಳಿಯದೆ ಅದನ್ನಿಟ್ಟುಕೊಂಡು ನೋಡುತ್ತಿದ್ದಾಗ ಆಕಸ್ಮಾತ್ತಾಗಿ ಟ್ರಿಗರ್‌ಗೆ ಕೈ ತಗಲಿ ಗುಂಡು ಹಾರಿತು. ಯಾರಿಗೂ ಅಪಾಯವಾಗಲಿಲ್ಲ. ಇಂಥದಕ್ಕೆಂದೇ ಕಾಯುತ್ತಿರುವ ಜನರಿಂದ ಅನಂತರ ಈ ಘಟನೆಗೆ ರೆಕ್ಕೆ ಪುಕ್ಕ ಬಂದಿತು.

ಇದೇ ಚಿತ್ರದ ಚಿತ್ರಣದ ಸಮಯದಲ್ಲಿ ಇನ್ನೊಂದು ದುರ್ಘಟನೆಯೂ ನಡೆಯಿತು. ಚಿತ್ರದ ಕಥೆಯ ಪ್ರಕಾರ ಕಾಡಿಗೆ ಯಾರೇ ಹೊಸ ಅಧಿಕಾರಿ ಬಂದರೂ ದಂತಚೋರರು ಆತನನ್ನು ಸಂಚು ಮಾಡಿ ಕೊಲ್ಲುತ್ತಾರೆ. ಆತ ಕಾಡಿನ ತಪಾಸಣೆಗೆ ಬಂದಾಗ ಆತನನ್ನು ಸುತ್ತುವರಿದು ಆತನ ಮೇಲೆ ಪೆಟ್ರೋಲ್ ಸುರಿದು ಬೆಂಕಿ ಹಚ್ಚುವುದು ಅವರ ತಂತ್ರ. ಈ ದೃಶ್ಯದ ಚಿತ್ರಣಕ್ಕಾಗಿ ಸ್ಟಂಟ್ ಕಲಾವಿದರೊಬ್ಬರನ್ನು ಮದರಾಸಿನಿಂದ ಕರೆಸಲಾಗಿತ್ತು. ಚಿತ್ರಣಕ್ಕೆ ಎಲ್ಲ ಸಿದ್ಧತೆಗಳೂ ಆದವು. ಆತನ ಮೇಲೆ ಪೆಟ್ರೋಲನ್ನೂ ಸುರಿಯಲಾಯಿತು. ಆತನ ದೇಹಕ್ಕೆ ಕವಚವನ್ನೂ ಹೊದಿಸಲಾಗಿತ್ತು. ಆದರೆ ಸ್ವಲ್ಪ ಪ್ರಮಾಣದಲ್ಲಿ ಪೆಟ್ರೋಲ್ ಆತನ ದೇಹವನ್ನು ಪ್ರವೇಶಿಸಿತು. ಆದರೆ ಆತ ನಿರ್ದೇಶಕರಿಗೆ ಈ ವಿಷಯವನ್ನು ತಿಳಿಸಲಿಲ್ಲ. ಆತನಿಗೆ ಅಗ್ನಿ ಸ್ಪರ್ಶ ಮಾಡಿದ್ದೂ ಆಯಿತು. ಬೆಂಕಿ ಆತನ ಒಳದೇಹವನ್ನು ದಹಿಸತೊಡಗಿ ಆತ ಬೊಬ್ಬೆಯಿಡಲು ಪ್ರಾರಂಭಿಸಿದಾಗ ಚಿತ್ರಣವನ್ನು ತಕ್ಷಣ ನಿಲ್ಲಿಸಿ ಆತನನ್ನು ಆಸ್ಪತ್ರೆಗೆ ಸಾಗಿಸಲಾಯಿತು. ಆತ ಬದುಕಿಕೊಂಡ. ಆದರೆ ಇದರಿಂದ ಚಿತ್ರದ ಇಡೀ ತಂಡಕ್ಕೆ ಆದ ಆತಂಕ ಹೇಳತೀರದು.



(ಚಿತ್ರ ೩೦) 'ಕೌಬಾಯ್ ಕುಳ್ಳ' ಚಿತ್ರದಲ್ಲಿ ದ್ವಾರಕೀಶ್



(ಚಿತ್ರ ೩೧) 'ಗಂಧದ ಗುಡಿ' ಚಿತ್ರದಲ್ಲಿ ಎಂ.ಪಿ.ಶಂಕರ್ ಮತ್ತು ರಾಜಕುಮಾರ್

ಇದೇ ವರ್ಷ ವೈ.ಆರ್.ಸ್ವಾಮಿ ನಿರ್ದೇಶಿಸಿ, ರಾಜಕುಮಾರ್ ಅಭಿನಯಿಸಿದ ಎರಡು ಚಿತ್ರಗಳು 'ಬಿಡುಗಡೆ' ಮತ್ತು 'ಸ್ವಯಂವರ' ತೆರೆಕಂಡವು. ಈ ಎರಡು ಚಿತ್ರಗಳೂ ಬಹಳ ಜನಾನುರಾಗ ಗಳಿಸಿ ಸ್ವಾಮಿಯವರನ್ನು ದಿಗ್ದರ್ಶಕರ ಪೈಕಿ ಪ್ರಥಮ ಶ್ರೇಣಿಗೆ ತಂದವು. ಎರಡು ಚಿತ್ರಗಳಲ್ಲಿಯೂ ಭಾರತಿಯವರೇ ನಾಯಕಿ. ಇದೇ ವರ್ಷ ಬಿಡುಗಡೆಯಾದ ಸಿದ್ಧಲಿಂಗಯ್ಯ ನಿರ್ದೇಶನದ 'ದೂರದ ಬೆಟ್ಟ' ರಾಜಕುಮಾರ್-ಭಾರತಿ ಒಟ್ಟಾಗಿ ಅಭಿನಯಿಸಿದ ಕೊನೆಯ ಚಿತ್ರವಾಯಿತು.

ಕಾನೂನು ಪದವಿ ಪಡೆದ ಬಡ ಯುವಕನೊಬ್ಬ ಪತ್ರಕರ್ತನಾಗಿ, ಮರಣ ದಂಡನೆ ಶಾಸನ ರದ್ದಾಗಬೇಕೆಂಬ ಆಂದೋಳನದ ಮುಂಚೂಣಿಗೆ ಬರುವ. ಆದರೆ ಆತನ ತಂದೆಯೇ ವಿನಾಕಾರಣ ಈ ಕರಾಳ ಶಾಸನದ ಹಿಡಿತಕ್ಕೆ ಸಿಗುವ ದುರಂತ ಕಥೆಯುಳ್ಳ ಚಿತ್ರ 'ಬಿಡುಗಡೆ'. ಕಥೆಯಲ್ಲಿ ಪ್ರಯೋಗಶೀಲತೆಯಿದ್ದರೂ ಸ್ವಾಮಿಯವರ ನಿರೂಪಣೆ ಅದಕ್ಕೆ ತಕ್ಕ ನ್ಯಾಯವನ್ನು ಒದಗಿಸಲಿಲ್ಲವೆಂಬ ಟೀಕೆಗ ತುತ್ತಾಯಿತು. ಆದರೂ ಹೆಚ್ಚು ಭಾವುಕತೆಯಿಲ್ಲದೆ ಸಾಗಿದ ಚಿತ್ರದಲ್ಲಿ ಚಿ.ಉದಯಶಂಕರ್ ಅವರ ಸರಳ, ಪರಿಣಾಮಕಾರಿ ಸಂಭಾಷಣೆಯಿತ್ತು. ಮುಖ್ಯ ತಾರಾಜೋಡಿಗಿಂತ ಮಿಗಿಲಾಗಿ ಅಭಿನಯದಲ್ಲಿ ವಿಶೇಷ ಪ್ರತಿಭೆ ತೋರಿದವರು ತಂದೆಯ ಪಾತ್ರ ವಹಿಸಿದ ಕೆ.ಎಸ್.ಅಶ್ವತ್ಥ್. ಮೊಟ್ಟಮೊದಲ ಬಾರಿಗೆ ಕನ್ನಡ ಚಿತ್ರಕ್ಕೆ ಉತ್ತರ ಪ್ರದೇಶದ ಡಾರ್ಜಿಲಿಂಗ್‌ನಲ್ಲಿ ಹಾಡೊಂದರ ಚಿತ್ರೀಕರಣವಾಯಿತು. ಅಣ್ಣಯ್ಯನವರ ಚೇತೋಹಾರಿ ಛಾಯಾಗ್ರಹಣ ಪ್ರಶಂಸೆ ಪಡೆಯಿತು.

'ಬಿಡುಗಡೆ'ಯ ವಿಶೇಷವೆಂದರೆ ನಿರ್ದೇಶಕರು ಎರಡು ವಿಭಿನ್ನ ಕ್ಲೈಮ್ಯಾಕ್ಸ್‌ಗಳನ್ನು ಚಿತ್ರಿಸಿಕೊಂಡಿದ್ದು. ಚಿತ್ರವನ್ನು ಯಾವ ರೀತಿ ಕೊನೆಗಾಣಿಸಿದರೆ ಪ್ರೇಕ್ಷಕರು ಒಪ್ಪಬಹುದೆಂಬ ಬಗ್ಗೆ ಎದ್ದ ಜಿಜ್ಞಾಸೆಯೇ ಇದಕ್ಕೆ ಕಾರಣ. ಒಂದು ಕ್ಲೈಮ್ಯಾಕ್ಸ್‌ನ ಪ್ರಕಾರ ಮರಣ ದಂಡನೆ ಶಿಕ್ಷೆಗೆ ಒಳಗಾದ ಅಶ್ವತ್ಥ್ ಗಲ್ಲೇರುತ್ತಾರೆ, ಇನ್ನೊಂದರ ಪ್ರಕಾರ, ಬಿಡುಗಡೆಯಾಗುತ್ತಾರೆ. ಚಿತ್ರದ ಹೆಸರೇ ಮಗನ ಆಂದೋಳನದಿಂದಾಗಿ ತಂದೆ ಬಿಡುಗಡೆಯಾಗುತ್ತಾರೆಂದು ಸೂಚಿಸಿದರೂ ಕೊನೆಯಲ್ಲಿ ಹಾಗಾಗುವುದಿಲ್ಲ. ಚಿತ್ರಕ್ಕೆ ಈ ಅಂತ್ಯವನ್ನು ಕೊಟ್ಟಿದ್ದೇ ಅದರ ಜನಪ್ರಿಯತಗೆ ಕಾರಣವಾಯಿತು. ಈ ದೃಷ್ಟಿಯಿಂದ ನಿರ್ದೇಶಕರು ಸೂಕ್ತವಾದ ನಿರ್ಧಾರವನ್ನೇ ತೆಗೆದುಕೊಂಡರು. ಹಾಗೆಂದ ಮೇಲೆ ನಿರೂಪಣೆಯಲ್ಲಿ ಸಸ್ಪೆನ್ಸ್ ಸೊಗಸಾಗಿ ಮೂಡಿ ಬಂದಿತೆನ್ನುವುದು ಸ್ವಯಂ ವೇದ್ಯ.

ಮ.ನ.ಮೂರ್ತಿಯವರ ಕಾದಂಬರಿಯೊಂದರ ಆಧಾರದ ಮೇಲೆ ವೈ.ಆರ್.ಸ್ವಾಮಿ ಅವರೇ ನಿರ್ದೇಶಿಸಿದ 'ಸ್ವಯಂವರ' ಕಲವೊಮ್ಮೆ 'ಬಿಡುಗಡೆ'ಯೊಂದಿಗೆ ಗೊಂದಲವನ್ನು ಉಂಟು ಮಾಡಿದರೆ, ಅದಕ್ಕೆ ಕಾರಣ ಈ ಚಿತ್ರದಲ್ಲಿಯೂ ಮರಣ ದಂಡನೆಯ ಪ್ರಸಂಗವಿರುವುದು. ಗಲ್ಲಿಗೇರಲು ಇನ್ನು ಒಂದೇ ದಿನ ಉಳಿದಿದ್ದ ಮರಣ ದಂಡನೆಗೆ ಗುರಿಯಾದ ಖೈದಿಯೊಬ್ಬನೊಡನೆ ಶ್ರೀಮಂತ ತರುಣಿಯೊಬ್ಬಳು ತಾನೇ ಬಯಸಿ ವಿವಾಹವಾಗುವ ಅಪರೂಪದ ಕಥೆ. ತಮಿಳಿನ 'ಕಣವನ್' ಮತ್ತು ಹಿಂದಿಯ 'ಮೊಹಬ್ಬತ್ ಜಿಂದಗಿ ಹೈ' ಚಿತ್ರಗಳಲ್ಲಿ ಇದೇ ರೀತಿಯ ಕಥೆಯಿತ್ತು. ಅವೆರಡೂ ಅತ್ಯಂತ ಯಶಸ್ವಿಯೆನಿಸಿದ ಚಿತ್ರಗಳು. ಆದರೆ ಕಥೆಯನ್ನು ಆಕರ್ಷಕವಾಗಿ ಹೇಳಿಕೊಂಡು ಹೋಗುವುದರಲ್ಲಿ ನಿರ್ದೇಶಕ ಸ್ವಾಮಿ ಎಡವಿದರು. ರಾಜಕುಮಾರ್ ತಮ್ಮ ಕ್ಲಿಷ್ಟವಾದ ಪಾತ್ರವನ್ನು ಲೀಲಾಜಾಲವಾಗಿ ಅಭಿನಯಿಸಿದ್ದರಿಂದ ಚಿತ್ರಕ್ಕೆ ತಕ್ಕಮಟ್ಟಿನ ಜೀವ ಬಂತು, ಚಿತ್ರದ ಜನಪ್ರಿಯತೆಗೇನೂ ಭಂಗ ಬರಲಿಲ್ಲ. ಚಿತ್ರಕ್ಕಾಗಿ ಗಣಿಯೊಂದರ ಸೆಟ್ಟನ್ನು ಬೆಂಗಳೂರಿನ ಕಂಠೀರವ ಸ್ಟುಡಿಯೋದಲ್ಲಿ ನಿರ್ಮಿಸಲಾಗಿತ್ತು. ತುಂಬಾ ನೈಜವಾಗಿ ಕಂಡ ಈ ಸೆಟ್ ಸ್ಟುಡಿಯೋದ ಪ್ರತಿಷ್ಠೆಯನ್ನು ಹೆಚ್ಚಿಸಿತು.

೧೯೭೩ರಲ್ಲಿ 'ಬೀಸಿದ ಬಲೆ'ಯ ಮೂಲಕ ರಾಜ್ಯದ ಪ್ರಮುಖ ಸಣ್ಣ ಕೈಗಾರಿಕೋದ್ಯಮಿಯೊಬ್ಬರು ನಿರ್ಮಾಪಕರಾಗಿ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದರು. ಆದರೆ ಫಿಲಿಪ್ ಲೂಯಿಸ್‌ರ ಈ ಸಾಹಸ ಅವರಿಗೆ ಭ್ರಮನಿರಸನವನ್ನೇ ತಂದಿತು. ಬಿ.ಎ.ಅರಸುಕುಮಾರ್‌ರವರೇ ಕಥೆ, ಸಂಭಾಷಣೆಗಳನ್ನು ಬರೆದು ಅವರೊಂದಿಗೆ ನಿರ್ಮಾಪಕ ಲೂಯಿಸ್ ಕೂಡ ಚಿತ್ರವನ್ನು ನಿರ್ದೇಶಿಸಿದರು. ಈ ಚಿತ್ರದ ಮೂಲ ಉದ್ದೇಶ ಕನ್ನಡದ ಕಡಲ ತೀರದ ಮೊಗವೀರರ ಸ್ವಾರಸ್ಯಕರ ಜೀವನವನ್ನು ನಿರೂಪಿಸುವುದೆಂದು ಮೊದಲು ಹುಟ್ಟಿದ ಭರವಸೆ ನಂತರ ಕಮರಿ ಹೋಗುವಂತಾಯಿತು. ಅಲ್ಲಿಯ ಜನಜೀವನವನ್ನು ವಾಸ್ತವವಾಗಿ ಪ್ರತಿಬಿಂಬಿಸುವುದಕ್ಕೆ ಬದಲಾಗಿ ಅಲ್ಲಿಯ ಜನರ ಕೆಟ್ಟ ಚಾಳಿಗಳನ್ನೇ ಹೆಚ್ಚಾಗಿ ತೋರಿಸಿದ್ದು ಚಿತ್ರಕ್ಕೆ ಯಾವ ರೀತಿಯ ಗಟ್ಟಿತನವನ್ನೂ ಕೊಡಲಿಲ್ಲ. ಚಿತ್ರಕಥೆಯೇ ತನ್ನ ಬದುಕಿಗೆ ನಾಲ್ಕಾರು ಚಿತ್ರಗಳ ಕಥೆಗಳ ಮೇಲೆ ಬಲೆ ಬೀಸಿದಂತಿದ್ದು, ವಿಶ್ವವಿಖ್ಯಾತಿ ಹೊಂದಿದ ಮಲಯಾಳಿ ಚಿತ್ರ 'ಚೆಮ್ಮೀನ್' ಅನ್ನು ಅನುಕರಿಸುವ ರೀತಿಯಲ್ಲಿ ಮುಕ್ತಾಯಗೊಂಡಿತು. ಚಿತ್ರದಲ್ಲಿ ರಾಮಗೋಪಾಲ್, ಜಯಲಕ್ಷ್ಮೀಯವರಂತಹ ಹೊಸಬರೇ ಮುಖ್ಯ ಪಾತ್ರಗಳಲ್ಲಿದ್ದುದೊಂದೇ ವಿಶೇಷವೆನಿಸಿತು. ಫಿಲಿಪ್ ಲೂಯಿಸ್ ಇದೊಂದೇ ಚಿತ್ರದ ನಂತರ ತಾವು ಅಡಿಯಿಟ್ಟ ಹೊಸ ಉದ್ಯಮದಿಂದ ನಿರ್ಗಮಿಸಿದರು.

'ಶರಪಂಜರ' ಮತ್ತು 'ಬಂಗಾರದ ಮನುಷ್ಯ'ದಂತಹ ಶ್ರೇಷ್ಠ ಚಿತ್ರಗಳನ್ನು ಕನ್ನಡ ತೆರೆಗಿತ್ತ ಕೆ.ಸಿ.ಎನ್.ಗೌಡರು ನಿರ್ಮಿಸಿ ಸಿದ್ಧಲಿಂಗಯ್ಯನವರು ನಿರ್ದೇಶಿಸಿದ 'ದೂರದ ಬೆಟ್ಟ' ಪ್ರೇಕ್ಷಕರ ಕುತೂಹಲದ ನಿರೀಕ್ಷೆಯನ್ನು ಭಗ್ನಗೊಳಿಸಿತ್ತು. ಕೆಟ್ಟು ಪಟ್ಟಣ ಸೇರಿದ ಹಳ್ಳಿಯ ಮುಗ್ಧ ಯುವಕ ಪಟ್ಟಣದ ತೀರದ ಕಷ್ಟಗಳಿಂದ ವಾಪಸು ಹಳ್ಳಿಗೆ ಬರುವುದೇ ಚಿತ್ರದ ಕಥಾವಸ್ತು - ಸರಕು ಹಳೆಯದೇ ಆಯಿತು.



(ಚಿತ್ರ ೩೨) 'ಬಿಡುಗಡೆ' ಚಿತ್ರದಲ್ಲಿ ರಾಜಕುಮಾರ್, ಭಾರತಿ ಮತ್ತು ಸಂಪತ್



(ಚಿತ್ರ ೩೩) 'ಸ್ವಯಂವರ' ಚಿತ್ರದಲ್ಲಿ ಜಯಲಕ್ಷ್ಮಿ, ಭಾರತಿ ಮತ್ತು ರಾಜಕುಮಾರ್

ಈ ಕಪ್ಪು-ಬಿಳುಪು ಚಿತ್ರದಲ್ಲಿ ಸಿದ್ದಲಿಂಗಯ್ಯ ಒಂದು ಕಾಮನ ಹಬ್ಬದ ಸನ್ನಿವೇಶ ಮತ್ತು ಇನ್ನೊಂದು, ನಾಯಕ ರಾಜಕುಮಾರ್ ಮತ್ತು ಉಷಾ ಚವಾಣ್‌ರ ನಡುವಣ 'ಸವಾಲ್ ಜವಾಬ್' ತಮಾಷಾ ನೃತ್ಯ ಸನ್ನಿವೇಶಗಳನ್ನು ವರ್ಣದಲ್ಲಿ ರಮ್ಯವಾಗಿ ಚಿತ್ರಿಸಿದ್ದೊಂದೇ 'ದೂರದ ಬೆಟ್ಟ'ದ ಪ್ರಮುಖ ಆಕರ್ಷಣೆಯೆನಿಸಿತು. ಗ್ರಾಮೀಣ ಬದುಕನ್ನು ನೈಜವಾಗಿ ನಿರೂಪಿಸುವುದರಲ್ಲಿ ಪರಿಣತರೆನಿಸಿದ್ದ ಸಿದ್ದಲಿಂಗಯ್ಯ ಈ ಚಿತ್ರದಲ್ಲಿ ಹಳ್ಳಿ ಮನೆಯ ಹಾಗೂ ಪಟ್ಟಣದ ರಸ್ತೆಯ ಸೆಟ್‌ಗಳನ್ನು ಸ್ಟುಡಿಯೋದಲ್ಲಿಯೇ ನಿರ್ಮಿಸಿದ್ದು ಕೃತಕವೆನಿಸಿತು. 'ಪ್ರೀತಿಯೇ ಆ ದ್ಯಾವ್ರು ತಂದ ಆಸ್ತಿ ನಮ್ಮ ಬಾಳಿಗೆ.....' ಎಂಬ ಹಾಡು ತುಂಬಾ ಜನಪ್ರಿಯವಾಯಿತು. ಈ ಚಿತ್ರದ ನೆನಪನ್ನು ಉಳಿಸಿದ್ದು ಆ ಹಾಡೊಂದೇ.

'ಭಾರತ(ದ) ರತ್ನ' ಚಿತ್ರವನ್ನು ಜಯದೇವಕುಮಾರ್ ನಿರ್ಮಿಸಿದರು. ಸಿಂಗ್‌ಠಾಕೂರ್ ಅವರ ನಿರ್ದೇಶನ. 'ಭಾರತ ರತ್ನ' ಎಂಬ ಶೀರ್ಷಿಕೆ ಕೂಡದೆಂದು ಸೆನ್ಸಾರ್‌ನವರು ತಕರಾರು ಮಾಡಿದರು. ಮಧ್ಯೆ 'ದ' ಸೇರಿಸಿ 'ಭಾರತದ ರತ್ನ' ಮಾಡಿದರು. ಚಿತ್ರ ಮತ್ತದೇ ಗ್ರಾಮೀಣ ಬದುಕು, ಊರ ಪಟೇಲ, ಶಾನುಭೋಗರ ದಬ್ಬಾಳಿಕೆಯನ್ನು ಕುರಿತು ಹೇಳಿತು. ಆದರೆ ಆಧುನಿಕ ವಿದ್ಯಾಭ್ಯಾಸ ಮಾಡಿಕೊಂಡು ಬಂದ ಯುವ ಪೀಳಿಗೆ ಹೊಸ ವಿಚಾರಗಳಿಗೆ ತೆರೆದುಕೊಳ್ಳುತ್ತದೆ ಎಂಬುದರತ್ತ ಒತ್ತುಕೊಟ್ಟು, ಗ್ರಾಮೋದ್ಧಾರ, ಹರಿಜನೋದ್ಧಾರ, ಅಂತರ್ಜಾತೀಯ ವಿವಾಹ, ಸೇವಾಶ್ರಮಗಳಂಥವರ ಅಗತ್ಯ ಮೊದಲಾದ ಅನೇಕ ಸುಧಾರಣೆಯ ಅಂಶಗಳನ್ನು ಸೇರಿಸಿ ರಚಿಸಲಾದ ಚಿತ್ರಕಥೆಯಾದ್ದರಿಂದ ವಿಶೇಷವೆನಿಸುತ್ತದೆ.

ಎ.ವಿ.ಶೇಷಗಿರಿರಾವ್ ನಿರ್ದೇಶಿಸಿ, ಜಯಂತಿ ದ್ವಿಪಾತ್ರದಲ್ಲಿದ್ದ 'ಜಯ ವಿಜಯ' ಹಿಂದಿಯಲ್ಲಿ ಭಾರಿ ಜಯ ಗಳಿಸಿದ 'ಸೀತಾ ಔರ್ ಗೀತಾ'ದ ತಿರುಚಿದ ಅನುಕರಣೆ. ಈ ಚಿತ್ರದಲ್ಲಿ ರೈಲೊಂದರ ಲೂಟಿ, ಕ್ಯಾಬರೆ, ವಿಪರೀತ ಹೊಡೆದಾಟ, ಮಾನಭಂಗ, ವಿಗ್ರಹ ಅಪಹರಣ, ಕುದುರೆ ಓಟ, ಪ್ರಣಯ - ಇವೆಲ್ಲ ಧಾರಾಳವಾಗಿತ್ತು. ವಿಜಯಭಾಸ್ಕರ್ ಹಿನ್ನೆಲೆ ಸಂಗೀತ, ಪ್ರಕಾಶ್ ಅವರ ಛಾಯಾಗ್ರಹಣ ಮತ್ತು ಪಿ.ಭಕ್ತವತ್ಸಲಂರ ಸಂಕಲನ ಆ ಕಲಸುಮೇಲೋಗರವನ್ನು ಹದಗೊಳಿಸಲು ಪ್ರಯತ್ನಿಸಿದವು.

ಇದೇ ವರ್ಷ ರಾಜಕುಮಾರ್ ಅಮೋಘವಾಗಿ ಅಭಿನಯಿಸಿದ ಪೌರಾಣಿಕ ಚಿತ್ರ 'ಮೂರೂವರೆ ವಜ್ರಗಳು' ದ.ಆರ್.ಸ್ವಾಮಿಯವರ ನಿರ್ದೇಶನದಲ್ಲಿ ತಯಾರಾಗಿ ಅಪಾರ ಜನಪ್ರಿಯತೆ ಗಳಿಸಿತು. ಈ ಚಿತ್ರ ಬಿಡುಗಡೆಯಾಗುವ ವೇಳೆಗಾಗಲೇ ಕನ್ನಡ ಚಿತ್ರರಂಗದಲ್ಲಿ ಸಾಮಾಜಿಕ ಚಿತ್ರಗಳ ಪ್ರಾಮುಖ್ಯ ಗಮನೀಯವಾಗಿ ಹೆಚ್ಚಿತ್ತು. ಹೀಗಾಗಿ ಈ ಪೌರಾಣಿಕ ಚಿತ್ರ ಸ್ವಾಗತಾರ್ಹವೆನಿಸಿದ ಬದಲಾವಣೆಯನ್ನೇ ತಂದು ಚಿತ್ರಕ್ಕೆ ಅನುಕೂಲವಾದರೂ 'ಮೂರೂವರೆ ವಜ್ರಗಳು' ತನ್ನ ಉತ್ತಮ ತಾಂತ್ರಿಕ ಮೌಲ್ಯಗಳಿಂದ ವಿಜೃಂಭಿಸಿದ್ದೂ ಹೌದು.

ಛಾಯಾಗ್ರಾಹಕ ಶ್ರೀಕಾಂತ್ ನಿರ್ದೇಶಿಸಿದ 'ಮನೆ ಬೆಳಗಿದ ಸೊಸೆ' ಚಿತ್ರವು 'ನಾಗರಹಾವು' ನಂತರ ವಿಷ್ಣುವರ್ಧನ್‌ರಿಗೆ ಸುಪುಷ್ಟ ಪಾತ್ರವೊಂದನ್ನು ಕೊಟ್ಟ ಚಿತ್ರ. ಬಾಲಕೃಷ್ಣ ಮತ್ತು ಆ ವೇಳೆಗೆ ದಿವಂಗತರಾಗಿದ್ದ ರಂಗಾರವರ ಅಭಿನಯದಿಂದ ಸಾಕಷ್ಟು ಶೋಭಿಸಿತು. ಇದು ಮುಂದೆ ಸತಿ-ಪತಿಗಳಾದ ಭಾರತಿ ಮತ್ತು ವಿಷ್ಣುವರ್ಧನ್ ಒಟ್ಟಾಗಿ ಅಭಿನಯಿಸಿದ ಮೊದಲ ಚಿತ್ರ.

ಈ ವರ್ಷ ನಿರಾಸೆ ತಂದ ಇನ್ನೊಂದು ಚಿತ್ರ ವಾದಿರಾಜ್ ನಿರ್ದೇಶನದ 'ಸೀತೆಯಲ್ಲ ಸಾವಿತ್ರಿ'. ಯಾವ ಘಟ್ಟದಲ್ಲೂ ಒಂದಿಷ್ಟೂ ಆಸಕ್ತಿಯನ್ನು ಹುಟ್ಟಿಸದೆ ನೀರಸವಾಗಿ ಸಾಗಿದ ಈ ಚಿತ್ರ ಅವರ ವಿಜಯಭಾರತಿ ಸಂಸ್ಥೆಯ ಪ್ರತಿಷ್ಠೆಯನ್ನು ಉಳಿಸಲಿಲ್ಲ. ವಿಷ್ಣುವರ್ಧನ್, ಅಂಬರೀಷ್, ಕಲ್ಪನಾ, ಬಾಲಕೃಷ್ಣ, ಲಕ್ಷ್ಮೀದೇವಿಯವರಂತಹ ಕಲಾವಿದರಿದ್ದರೂ ತನ್ನ ಶಿಥಿಲತೆಯಿಂದ ಸೊರಗಿ ಜನಪ್ರಿಯತೆಯನ್ನು ಕಾಣದೆ ಹೋದ ಚಿತ್ರ ಇದಾಯಿತು.

ಈಗಾಗಲೇ 'ಜಗನ್ಮೋಹಿನಿ', 'ಪಾತಾಳಮೋಹಿನಿ'ಗಳನ್ನು ನಿರ್ಮಿಸಿದ್ದ ಮಹಾತ್ಮಾ ಪಿಕ್ಚರ್ಸ್‌ನ ಡಿ.ಶಂಕರಸಿಂಗ್ ಈ ವರ್ಷ 'ಜ್ವಾಲಾಮೋಹಿನಿ'ಯನ್ನು ತೆರೆಗೆ ತಂದರು. ಅವರು ಬದಲಾದ ಕಾಲದ ಜೊತೆಗೆ ಹೊಂದಿಕೊಳ್ಳುವ ಪ್ರಯತ್ನ ಮಾಡಲಿಲ್ಲ. ಚಿತ್ರ ಸೋತಿತು.

ಸದಭಿರುಚಿಯ ನಿರ್ದೇಶಕರೆಂದು ಹೆಸರು ಗಳಿಸಿದ್ದ ರವೀ 'ದೇವರು ಕೊಟ್ಟ ತಂಗಿ' ರಿಮೇಕ್ ಚಿತ್ರ ನಿರ್ದೇಶಿಸಿದರು. ಅತಿ ಭಾವುಕತೆ, ಅಪ್ರಬುದ್ಧತೆ, ಹಾಸ್ಯ ಸನ್ನಿವೇಶಗಳಲ್ಲಿ ಕೀಳುಮಟ್ಟದವಾಗಿದ್ದರಿಂದ ಪ್ರಬುದ್ಧ ಪ್ರೇಕ್ಷಕರ ನಿಂದನೆಗಳಿಗೊಗಾದವು. ಚಿತ್ರದಲ್ಲಿ ತಲೆಯೆತ್ತಿ ನಿಂತ ಒಂದೇ ಅಂಶವೆಂದರೆ ರಾಜಕುಮಾರ್ ಅಭಿನಯ. ರವೀಯವರೇ ನಿರ್ದೇಶಿಸಿದ ವರ್ಷದ ಇನ್ನೊಂದು ಚಿತ್ರ 'ಸಿ.ಐ.ಡಿ. ೭೨' ಸಹ ಅವರಿಗೆ ಶೋಭೆ ತರದಂತಾಯಿತು.

ಪ್ರಸಾದ್ ನಿರ್ದೇಶನದ 'ತ್ರಿವೇಣಿ' ಚಿತ್ರದ ಒಂದೇ ಹೆಚ್ಚಳವೆಂದರೆ, ಅದರಲ್ಲಿ ಮೊಟ್ಟಮೊದಲ ಬಾರಿಗೆ ಹಂಸಲೇಖಾರ ಚಿತ್ರಗೀತೆಯೊಂದನ್ನು ಬರೆದಿದ್ದು. 'ನೀನಾ ಭಗವಂತ...' ಬಹಳ ಜನಪ್ರಿಯತೆ ಗಳಿಸಿದ ಹಾಡು, ಉಪೇಂದ್ರಕುಮಾರ್ ಸಂಗೀತ ನಿರ್ದೇಶಕರು. ಡಾ|ಎಸ್.ಲಲಿತಾ, ಕುಂದಾನಿ ಸತ್ಯನ್ ಮತ್ತು ನಾಡಿಗೇರ ಕೃಷ್ಣರಾಯರು ಸೇರಿ ಈ ಚಿತ್ರದ ಸಂಭಾಷಣೆಗಳನ್ನು ಬರೆದಿದ್ದೊಂದು ವಿಶೇಷ. ಆದರೆ ಮೂವರ ಲೇಖನಿಗಳೂ ಮೂರು ದಾರಿಗಳನ್ನು ಹಿಡಿದಂತಿತ್ತು.



(ಚಿತ್ರ ೩೪) 'ದೂರದ ಬೆಟ್ಟ' ಚಿತ್ರದಲ್ಲಿ ಎಂ.ಪಿ.ಶಂಕರ್ ಮತ್ತು ರಾಜಕುಮಾರ್



(ಚಿತ್ರ ೩೫) 'ಮೂರೂವರೆ ವಜ್ರಗಳು' ಚಿತ್ರದಲ್ಲಿ ರಾಜಾಶಂಕರ್, ರಾಜಕುಮಾರ್ ಮತ್ತು ಜಾರ್ಜ್ ಇಂದಿರಾ

'ಸಹಧರ್ಮಿಣಿ' ತೆಲುಗು ಸೂಪರ್‌ಸ್ಟಾರ್ ಕೃಷ್ಣ ನಿರ್ಮಿಸಿದ ಮೊದಲ ಕನ್ನಡ ಚಿತ್ರವೆಂಬ ಕಾರಣಕ್ಕೆ ಮಾತ್ರ ಉಲ್ಲೇಖನೀಯ. ಇಂದು ತೆಲುಗು ಸೂಪರ್‌ಸ್ಟಾರ್ ಆಗಿರುವ ಸೌಂದರ್ಯರವರ ತಂದೆ ಸತ್ಯನಾರಾಯಣ ಅವರು ನಿರ್ದೇಶಿಸಿದ ಈ ಚಿತ್ರ ಯಶಸ್ವಿಯಾಗಿಯೇ ಪ್ರದರ್ಶಿತವಾಯಿತು.

೧೯೭೩ರಲ್ಲಿ ಕನ್ನಡ ಚಿತ್ರರಂಗ ಕೆಲವು ಪ್ರಮುಖ ವ್ಯಕ್ತಿಗಳನ್ನು ಕಳೆದುಕೊಂಡಿತು. 'ಎಡಕಲ್ಲು ಗುಡ್ಡದ ಮೇಲೆ' ಚಿತ್ರದಲ್ಲಿನ ತಮ್ಮ ಪ್ರತಿಭಾವಂತ ಅಭಿನಯದಿಂದ ತಮ್ಮ ಜನಪ್ರಿಯತೆಯನ್ನು ಗಮನೀಯವಾಗಿ ವೃದ್ಧಿಸಿಕೊಂಡಿದ್ದ ನಟ ರಂಗಾ ರಸ್ತೆ ಅಪಘಾತವೊಂದರಲ್ಲಿ ಮರಣ ಹೊಂದಿದ್ದರು. ತಮ್ಮ ವೃತ್ತಿಜೀವನದಲ್ಲಿ ಒಂದು ಹೊಸ ಅಧ್ಯಾಯವನ್ನೇ ತೆರೆಯುವ ನಿಟ್ಟಿನಲ್ಲಿದ್ದಾಗ ಅವರು ೧೯೭೩, ಜುಲೈ ೨೩ರಂದು ಸ್ನೇಹಿತರೊಬ್ಬರ ಸ್ಕೂಟರ್‌ನ ಹಿಂದಿನ ಆಸನದಲ್ಲಿ ಕುಳಿತು ಶಾಂತಿನಗರದಿಂದ ವಿಲ್ಸನ್ ಗಾರ್ಡನ್‌ನ ತಮ್ಮ ಮನೆಗೆ ತೆರಳುತ್ತಿದ್ದಾಗ ನಡೆದ ಅಪಘಾತದಲ್ಲಿ ಅಸು ನೀಗಿದರು. ಕೇವಲ ೩೮ ವರ್ಷಗಳ ವಯಸ್ಸಿನಲ್ಲಿ ಸಾವನ್ನಪ್ಪಿದ ರಂಗಾ 'ಎಡಕಲ್ಲು ಗುಡ್ಡದ ಮೇಲೆ', 'ಜ್ವಾಲಾಮೋಹಿನಿ', 'ಕೌಬಾಯ್ ಕುಳ್ಳ' ಮತ್ತು 'ಮನೆ ಬೆಳಗಿದ ಸೊಸೆ' ಚಿತ್ರಗಳ ತಮ್ಮ ಕೆಲಸವನ್ನು ಮುಗಿಸಿದ್ದರು. ಈಶ್ವರಿ ಪ್ರೊಡಕ್ಷನ್ಸ್‌ನ ಎನ್.ವೀರಾಸ್ವಾಮಿ ಹಿಂದಿನ ದಿನ ತಾನೆ ತಮ್ಮ ಮುಂದಿನ ವರ್ಣಚಿತ್ರದಲ್ಲಿ ಅವರನ್ನು ಪ್ರಮುಖ ಪಾತ್ರವೊಂದಕ್ಕೆ ಗೊತ್ತು ಮಾಡಿ, 'ಕಾಂಟ್ರಾಕ್ಟ್' ಕೂಡ ಸಿದ್ಧಪಡಿಸಿದ್ದರು. ಸುಮಾರು ೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಹಾಸ್ಯನಟನಾಗಿ, ನಾಯಕನಾಗಿ, ಖಳನಾಯಕನಾಗಿ, ದುರಂತ ನಾಯಕನಾಗಿ ಅಭಿನಯಿಸಿದ್ದ ಅವರಿಗೆ 'ನಾಗರಹಾವು' ಚಿತ್ರದಲ್ಲಿ ಒಂದು ಸಣ್ಣ ಪಾತ್ರವಿದ್ದರೂ ಅದರಲ್ಲಿ ಮಿಂಚಿದ್ದರು. ಇಷ್ಟಾದರೂ ಅವರು ತೀರಿಕೊಂಡ ನಂತರ ಉದ್ಯಮದ ಅವರ ಮಿತ್ರರು ಮತ್ತು ಹಿತೈಷಿಗಳು ಅವರ ಕುಟುಂಬದ ಪರಿಹಾರಕ್ಕಾಗಿ ನಿಧಿಯೊಂದನ್ನು ಸ್ಥಾಪಿಸುವ ಅನಿವಾರ್ಯತೆ ಉಂಟಾಗಿದ್ದು ಉದ್ಯಮದಲ್ಲಿನ ತೀವ್ರ ಅಸ್ಥಿರತೆಯನ್ನು ಮತ್ತೊಮ್ಮೆ ತೋರಿಸಿತು.

ಇದೇ ವರ್ಷದ ನವೆಂಬರ್ ತಿಂಗಳಲ್ಲಿ ವಿಷ್ಣುವರ್ಧನ್‌ರ ತಂದೆ ಹೆಚ್.ಎಲ್.ನಾರಾಯಣರಾಯರು ನಿಧನರಾದರು. ಅವರು ಅನೇಕ ಚಿತ್ರಗಳಿಗೆ ಕಥೆ, ಸಂಭಾಷಣೆ ಬರೆದವರು. ಬಹುತೇಕ ಮಹಾತ್ಮಾ ಪಿಕ್ಚರ್ಸ್‌ನ ಶಂಕರಸಿಂಗ್, ವಿಠಲಾಚಾರ್ಯರಿಗೆ ಸಾಹಿತ್ಯ ವಿಭಾಗದಲ್ಲಿ ದುಡಿದವರು. ಬೆಂಗಳೂರು ಮತ್ತು ಇತರ ಕೆಲವು ನಗರಗಳಲ್ಲಿ ಅನೇಕ ಚಿತ್ರಮಂದಿರಗಳ ಒಡೆಯರಾಗಿದ್ದ ದೊಡ್ಡ ಅಬ್ಕಾರಿ ಗುತ್ತಿಗೆದಾರರಾದ ಮೂಲಾರಂಗಪ್ಪನವರೂ ತೀರಿಕೊಂಡರು. ಅವರು ಆಗ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದ ಎಂ.ಭಕ್ತವತ್ಸಲರವರ ತಂದೆಯವರು.

೧೯೭೪ರಲ್ಲಿಯೂ ಕೇವಲ ೨೩ ಚಿತ್ರಗಳು ಬಿಡುಗಡೆಯಾಗಿ ಅವುಗಳಲ್ಲಿ ಕಲವೇ ಚಿತ್ರಗಳು ಉಲ್ಲೇಖನೀಯವೆನಿಸಿಕೊಂಡರೂ ಅವೆಲ್ಲ ಬಹಳ ಗಟ್ಟಿಯಾದ ಚಿತ್ರಗಳಾಗಿದ್ದುದು ಮತ್ತು ಕಳೆದ ವರ್ಷ ಬಿಡುಗಡೆಯಾದ ಐದು ಚಿತ್ರಗಳು ತಮ್ಮ ರಜತೋತ್ಸವ ಮತ್ತು ಶತದಿನೋತ್ಸವಗಳನ್ನು ಆಚರಿಸಿಕೊಂಡಿದ್ದು ಅದನ್ನೊಂದು ಸ್ಮರಣೀಯ ವರ್ಷವನ್ನಾಗಿಸಿತು.

ಆದರ ಇದ್ದಕ್ಕಿದ್ದಂತೆ ಬೆಂಗಳೂರು ಮತ್ತು ಮೈಸೂರುಗಳಲ್ಲಿ ಚಿತ್ರ ನಿರ್ಮಾಣಕ್ಕೆ ಸೌಕರ್ಯಗಳು ಸಾಲದೆಂಬ ಕಾರಣ ಹೇಳಿ ಕೆಲವು ಪ್ರಮುಖ ನಿರ್ಮಾಪಕರು ತಮ್ಮ ಚಿತ್ರಗಳ ತಯಾರಿಕೆಯನ್ನು ಮತ್ತೆ ಮದರಾಸಿಗೆ ರವಾನಿಸಿದ್ದು ಇಲ್ಲಿಯ ಸ್ಟುಡಿಯೋಗಳಲ್ಲಿ ತಲ್ಲಣವನ್ನುಂಟು ಮಾಡಿತು. ಇದರಿಂದ ಉಂಟಾದ ವಿವಾದದಲ್ಲಿ ಅಂದು ಉದ್ಯಮದ ಮುಂಚೂಣಿಯಲ್ಲಿದ್ದ ನಟ ರಾಜಕುಮಾರ್ ಪ್ರತಿಭಟನಕಾರರಿಗೆ ಗುರಿಯಾಗಿದ್ದು ಒಂದು ಪ್ರಮುಖ ಘಟನೆ. ಅದೇ ಸಮಯದಲ್ಲಿ 'ವ್ಯಕ್ತಿಪೂಜೆ'ಯ ವಿರುದ್ಧ ಕೆಲವು ಮಂತ್ರಿಗಳೇ ಬಹಿರಂಗವಾಗಿ ಟೀಕೆಗಳನ್ನು ಮಾಡತೊಡಗಿದ್ದು ಕೂಡ ರಾಜಕುಮಾರ್ ಅವರನ್ನು ಮತ್ತಷ್ಟು ವಾದಗ್ರಸ್ತರನ್ನಾಗಿಸಿತು. ಮದರಾಸಿನಲ್ಲಿ ತಯಾರಾದ ಕನ್ನಡ ಚಿತ್ರಗಳಿಗೆ ಬಹಿಷ್ಕಾರ ಹಾಕುವ ಬೆದರಿಕೆಯನ್ನು ಕನ್ನಡ ಚಿತ್ರರಸಿಕರ ಸಂಘ ಮುಂದೊಡ್ಡಿದ್ದೂ ಅಷ್ಟೇ ಮುಖ್ಯವಾದ ಬೆಳವಣಿಗೆಯಾಯಿತು.

ನೇರವಾಗಿ ರಾಜಕುಮಾರ್‌ರವರ ಹೆಸರನ್ನೂ ಹೇಳದೆ ಕೆಲವರು ''ಇಂಥವರನ್ನೇ ನಟ-ನಟಿಯರನ್ನಾಗಿ ತೆಗೆದುಕೊಳ್ಳಬೇಕು. ಇಂಥವರನ್ನೇ ನಿರ್ದೇಶಕರನ್ನಾಗಿ ನೇಮಿಸಬೇಕು'' ಎಂದು ಒತ್ತಾಯ ತರುವ ನಟರ ಬಗ್ಗೆ ಬಹಿರಂಗವಾಗಿ ಖಂಡಿಸಿದರು. ಇದನ್ನು ಖಂಡಿಸಿ ಚಲನಚಿತ್ರ ಪತ್ರಿಕೆಗಳಲ್ಲಿ ಹೇಳಿಕೆಗಳು, ವಾಚಕರ ಪತ್ರಗಳು ಅವ್ಯಾಹತವಾಗಿ ಪ್ರಕಟವಾದವು. ಕರಪತ್ರಗಳ ಹಂಚಿಕೆಯ ಮೂಲಕ ಈ ವಿವಾದ ಬೀದಿಗೂ ಇಳಿಯಿತು. ಕೆಲವು ಸಂದರ್ಭಗಳಲ್ಲಿ ರಾಜಕುಮಾರ್ ತಮ್ಮ ಮೇಲಿನ ಇಂತಹ ಅಪವಾದಗಳ ಬಗ್ಗೆ ಪರೋಕ್ಷವಾಗಿ ಪ್ರಸ್ತಾಪಿಸಿ ಅವುಗಳನ್ನು ತಳ್ಳಿ ಹಾಕಿದರು.

ಇಷ್ಟೆಲ್ಲ ಆದರೂ ಆ ವರ್ಷ ಮೂರು ಯಶಸ್ವಿ ಚಿತ್ರಗಳಲ್ಲಿ ರಾಜಕುಮಾರ್ ನಾಯಕನ ಪಾತ್ರದಲ್ಲಿ ಉತ್ತಮ ಅಭಿನಯ ನೀಡಿದ್ದರು. 'ಭಕ್ತ ಕುಂಬಾರ', 'ಎರಡು ಕನಸು' ಮತ್ತು 'ಸಂಪತ್ತಿಗೆ ಸವಾಲ್' ಬಾಕ್ಸ್ ಆಫೀಸ್‌ನಲ್ಲಿಯೂ ಗೆದ್ದ ಚಿತ್ರಗಳು. ಅವುಗಳಲ್ಲಿ ರಾಜಕುಮಾರ್ ಅಭಿನಯಿಸಿದ್ದು ವಿಭಿನ್ನ ಪಾತ್ರಗಳಲ್ಲಿ. ಮೂರೂ ಶತದಿನೋತ್ಸವಗಳನ್ನು ಆಚರಿಸಿದವು.

'ಭಕ್ತ ಕುಂಬಾರ' ಕನ್ನಡ ಚಿತ್ರರಂಗದಲ್ಲಿ ಒಂದು ಮೈಲಿಗಲ್ಲನ್ನೇ ಸ್ಥಾಪಿಸಿತು. ಭಕ್ತಿರಸಪ್ರಧಾನ ಚಿತ್ರಗಳ ಸಾಲಿನಲ್ಲಿ ಈ ಚಿತ್ರಕ್ಕೆ ವಿಶೇಷವಾದ ಸ್ಥಾನ ಸಲ್ಲುತ್ತದೆ. ಭಕ್ತಿ ಪಾತ್ರಗಳಲ್ಲಿನ ಅಭಿನಯದಲ್ಲಿ ರಾಜಕುಮಾರ್ ಅಸದೃಶರೆಂದು ಮತ್ತೆ ಸಾಬೀತು



(ಚಿತ್ರ ೩೬) 'ಮನೆ ಬೆಳಗಿದ ಸೊಸೆ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಭಾರತಿ



(ಚಿತ್ರ ೩.೭) 'ಭಕ್ತ ಕುಂಬಾರ' ಚಿತ್ರದಲ್ಲಿ ಲೀಲಾವತಿ ಮತ್ತು ರಾಜಕುಮಾರ್

ಮಾಡಿದ ಚಿತ್ರ ಇದು. ಅದರಲ್ಲಿಯೂ 'ಮಾನವ ಮೂಳೆ ಮಾಂಸದ ತಡಿಕೆ...' ಗೀತೆಯ ಚಿತ್ರಣದಲ್ಲಿ ತೋರಿದ ತಲ್ಲೀನತೆ ಮತ್ತು ಭಾವಪರವಶತೆ ಅವರ ಅಭಿನಯವನ್ನು ಉತ್ತುಂಗಕ್ಕೇರಿಸಿತ್ತು. ಪಾಂಡುರಂಗನ ಅನನ್ಯ ಭಕ್ತ ಗೋರ ಕುಂಬಾರನ ಕಥೆಯನ್ನಾಧರಿಸಿದ ಎರಡನೆಯ ಕನ್ನಡ ಚಿತ್ರ ಇದು. ಎರಡು ದಶಕಗಳ ಹಿಂದೆ ಹೊನ್ನಪ್ಪ ಭಾಗವತರು ಇದೇ ಕಥೆಯ ಆಧಾರದ ಮೇಲೆ ಹೃದಯಸ್ಪರ್ಶಿ ಚಿತ್ರವೊಂದನ್ನು ನಿರ್ಮಿಸಿ ಕುಂಬಾರನ ಪಾತ್ರದಲ್ಲಿ ತಾವೇ ಅಭಿನಯಿಸಿದ್ದರು. ಆ ಚಿತ್ರ ಕಪ್ಪು-ಬಿಳುಪಿನಲ್ಲಿದ್ದರೂ ಕೇವಲ ತನ್ನ ಆಂತರಿಕ ಶಕ್ತಿಯಿಂದ ಭಕ್ತಿರಸಪ್ರಧಾನ ಚಿತ್ರಗಳ ಸಾಲಿನಲ್ಲಿ ಒಂದು ವಿಕ್ರಮವನ್ನು ಸ್ಥಾಪಿಸಿತ್ತು. ಆದರೆ ಹುಣಸೂರು ಕೃಷ್ಣಮೂರ್ತಿ ನಿರ್ದೇಶಿಸಿದ ಈ ಹೊಸ ಅವತರಣಿಕೆಯಲ್ಲಿ ಈಸ್ಟ್‌ಮನ್ ವರ್ಣದ ಶ್ರೀಮಂತಿಕೆಯಿತ್ತು, ಚಲನಚಿತ್ರ ಮಾಧ್ಯಮದ ಹೆಚ್ಚು ಸಮರ್ಥವಾದ ಬಳಕೆಯಿತ್ತು. ಪೌರಾಣಿಕ ಚಿತ್ರಗಳಲ್ಲಿ ಸಾಮಾನ್ಯವಾದ ಪವಾಡಗಳ ಹಿಡಿತದಿಂದ ಈ ಚಿತ್ರ ಪಾರಾಗದಿದ್ದರೂ ಭಕ್ತಿಪ್ರಧಾನ ಸನ್ನಿವೇಶಗಳಲ್ಲಿ ಹುಣಸೂರರು ತಂದ ತಾದಾತ್ಮ್ಯದಿಂದಾಗಿ ಹೊಸವೊಂದು ಅನುಭವವನ್ನೇ ನೀಡಿತು. ರಾಜಕುಮಾರ್ ತಮ್ಮ ಪಾತ್ರವನ್ನು ಯಾವುದೇ ಅತಿರೇಕವಾಗಲಿ, ಕೃತಕತೆಯಾಗಲಿ ಇಲ್ಲದೆ ಶ್ರೀಮಂತಗೊಳಿಸಿದರೆ, ಅವರ ಪತ್ನಿಯ ಪಾತ್ರದಲ್ಲಿ ಲೀಲಾವತಿ ತೋರಿದ ಅಭಿನಯ ಪ್ರೌಢಿಮೆ ಚಿತ್ರವನ್ನು ಒಂದು ಮನನೀಯ ಅನುಭವವಾಗಿಸಿತ್ತು.

ಹಾಡುಗಳು ಮತ್ತು ಹಿನ್ನೆಲೆ ಸಂಗೀತದಲ್ಲಿ ಜಿ.ಕೆ.ವೆಂಕಟೇಶ್ ತಂದ ಶಾಸ್ತ್ರೀಯ ಸಂಗೀತದ ಸೊಬಗು ಮತ್ತು ಹುಣಸೂರರೇ ಬರೆದ ಸಂಭಾಷಣೆಗಳ ಹೃದಯಸ್ಪರ್ಶಿ ಗುಣ ಚಿತ್ರದ ಮೌಲ್ಯವನ್ನು ಹೆಚ್ಚಿಸಿದ್ದವು. ದೋಷವೆನಿಸಿದ್ದು ಹಾಸ್ಯ ಸನ್ನಿವೇಶಗಳ ಅಬ್ಬರದಲ್ಲಿ ಮತ್ತು ಕೆಲವು ಪೋಷಕ ಕಲಾವಿದರ ಅತಿ ನಾಟಕೀಯ ಅಭಿನಯದಲ್ಲಿ.

ದೊರೆ-ಭಗವಾನ್ ನಿರ್ದೇಶನದ 'ಎರಡು ಕನಸು' ರಾಜಕುಮಾರ್ ಇಬ್ಬರು ನಾಯಕಿಯರೊಂದಿಗೆ ಅಭಿನಯಿಸಿದ, ಹೆಂಗೆಳೆಯರನ್ನು ವಿಶೇಷವಾಗಿ ಆಕರ್ಷಿಸಿದ ಚಿತ್ರ. ಈ ಚಿತ್ರದಲ್ಲಿ ಕಲ್ಪನಾರದ್ದು ವಿಷಮ ದಾಂಪತ್ಯದ ಕಾರಣ ನರಳುವ ಪಾತ್ರವಾಗಿತ್ತು. ಮಂಜುಳಾ ಇನ್ನೊಬ್ಬ ನಾಯಕಿ. ರಾಜಕುಮಾರ್ ಪ್ರೇಮಿಸಿದ್ದು ಮಂಜುಳಾ, ಮದುವೆಯಾದದ್ದು ಕಲ್ಪನಾ. ಒಂದು ಮುಗ್ಧ, ಸರಳ ಚಿತ್ರವಾಗಿದ್ದ ಇದು ಶತದಿನೋತ್ಸವ ಕಂಡಿತು. ಕನ್ನಡದಲ್ಲಿನ ಅತ್ಯಂತ ಯಶಸ್ವಿ ಚಿತ್ರಗಳಲ್ಲಿ ಒಂದೆನಿಸಿತು. ಇದೂ ಒಂದು ಕಾದಂಬರಿಯಾಧಾರಿತ ಚಿತ್ರ. ಅದರ ಮೂಲ ವಾಣಿಯವರ ಕಾದಂಬರಿ 'ಎರಡು ಕನಸು'. ಪ್ರಬುದ್ಧ ಪ್ರೇಕ್ಷಕರು ಚಿತ್ರದ ಬಗ್ಗೆ ಅಪಸ್ವರವೆಳೆದರು. ಆದರೆ ಸಾಮಾನ್ಯ ಪ್ರೇಕ್ಷಕರು ಅದನ್ನು ಅಪ್ಪಿಕೊಂಡರು. ಬಹುಶಃ ಕನ್ನಡ ಚಿತ್ರರಂಗದಲ್ಲಿ ಇತರ ಎಲ್ಲ ನಿರ್ದೇಶಕರಿಗಿಂತ ಸತತವಾಗಿ ಉತ್ತಮ ಅಭಿರುಚಿ ಹಾಗೂ ಗಲ್ಲಾಪೆಟ್ಟಿಗೆಯಲ್ಲಿಯೂ ಯಶಸ್ವಿಯೆನಿಸಿದ ಅತಿ ಹೆಚ್ಚು ಚಿತ್ರಗಳನ್ನಿತ್ತ ದೊರೆ-ಭಗವಾನ್ ತಮ್ಮ ಅನುಪಮ್ ಮೂವೀಸ್ ಲಾಂಛನದಲ್ಲಿ ನಿರ್ಮಿಸಿ, ನಿರ್ದೇಶಿಸಿದ ಚಿತ್ರ ಇದು. ಅವರ ನಿರೂಪಣೆಯಲ್ಲಿ ಕೆಲವೊಮ್ಮೆ ಅಸಹಜತೆಗಳೂ ಇದ್ದವು. ರಾಜನ್-ನಾಗೇಂದ್ರ ಸಂಗೀತ ನಿರ್ದೇಶನದಲ್ಲಿ ಸಂಯೋಜಿಸಿದ ಪ್ರತಿಯೊಂದು ಹಾಡೂ ಜನಪ್ರಿಯವಾಯಿತು.

ಕೆಲವು ಸನ್ನಿವೇಶಗಳಲ್ಲಿ ಕಲ್ಪನಾ ಅತಿಯೆನಿಸಿದ ಅಭಿನಯ ನೀಡಿದರೆಂಬ ಟೀಕೆಗೆ ಒಳಗಾದರೂ, ತಿಂಗಳುಗಟ್ಟಲೆ ತನ್ನನ್ನು ಉಪೇಕ್ಷಿಸಿಕೊಂಡೇ ಬಂದ ತನ್ನ ಲೆಕ್ಚರರ್ ಗಂಡನ ಉದಾಸೀನದ ವಿರುದ್ಧ ನಾಯಕಿ ತಿರುಗಿ ಬಿದ್ದು ಆತನನ್ನು ತನ್ನ ವೈಸ್ಯದಿಂದಲೇ ತರಾಟೆಗೆ ತೆಗೆದುಕೊಂಡ ದೃಶ್ಯದಲ್ಲಿ ಆಕೆಯ ಅಭಿನಯ ಅವಿಸ್ಮರಣೀಯವೆನಿಸಿತು. ಈ ಸನ್ನಿವೇಶದಲ್ಲಿ ಸುದೀರ್ಘವಾಗಿ ಒಂದೇ ಉಸಿರಿನಲ್ಲಿ ಕಲ್ಪನಾ ಸಂಭಾಷಣೆಗಳನ್ನು ವಿವಿಧ ಭಾವಗಳೊಂದಿಗೆ ಒಪ್ಪಿಸಬೇಕಾಯಿತು. ಈ ಸವಾಲನ್ನು ಆಕೆ ತುಂಬಾ ಸಮರ್ಥವಾಗಿ ನಿರ್ವಹಿಸಿದರು. ಇದೇ ಸನ್ನಿವೇಶದಲ್ಲಿ ರಾಜಕುಮಾರ್ ಪಾತ್ರ ಒಂದೂ ಮಾತಾಡದೆ ಕಣ್ಣು, ಮುಖದ ಭಾವಾಭಿವ್ಯಕ್ತಿಯಿಂದ ಕಲ್ಪನಾರನ್ನು ಮೀರಿಸಿದ್ದರು. ಹೀಗೆ ರಾಜಕುಮಾರ್ ಚಿತ್ರದುದ್ದಕ್ಕೂ ತಮ್ಮ ಸಂಯಮವನ್ನು ಕಾಪಾಡಿಕೊಂಡು ತಮ್ಮ ಪಾತ್ರವನ್ನು ನಿಜಜೀವನದ ತುಂಬಾ ಹತ್ತಿರಕ್ಕೆ ತಂದರು. ಈ ಚಿತ್ರದಲ್ಲಿ ಪೋಷಕ ಪಾತ್ರದ ರಾಜಾನಂದ್ ಕೂಡಾ ಉತ್ತಮ ಅಭಿನಯ ನೀಡಿದ್ದರು.

ಆ ವರ್ಷ ರಾಜಕುಮಾರ್ ಅಭಿನಯಿಸಿದ ಇನ್ನೊಂದು ಯಶಸ್ವಿ ಚಿತ್ರ 'ಸಂಪತ್ತಿಗೆ ಸವಾಲ್'. ಈ ಚಿತ್ರ ಇನ್ನೊಂದು ದೃಷ್ಟಿಯಿಂದಲೂ ಉಲ್ಲೇಖನಾರ್ಹ. ನಂತರದ ವರ್ಷಗಳಲ್ಲಿ ಅತ್ಯಂತ ಪ್ರತಿಭಾವಂತ ಗಾಯಕರಾಗಿಯೂ ಬೆಳೆದ ರಾಜಕುಮಾರ್ ತಮ್ಮ ಪಾತ್ರಕ್ಕೆ ತಾವೇ ಹಾಡಿದ ಪ್ರಥಮ ಚಿತ್ರ ಇದು. ಈ ಚಿತ್ರದ 'ಎಮ್ಮೆಯ ಹಾಡು' ಕನ್ನಡ ಚಿತ್ರರಂಗದಲ್ಲಿ ವಿಶೇಷ ಸ್ಥಾನ ಪಡೆಯಿತು. ಅದುವರೆಗೆ ರಾಜಕುಮಾರ್‌ರ ಎಲ್ಲ ಪಾತ್ರಗಳಿಗೂ ಹಾಡುತ್ತಿದ್ದವರು ಪಿ.ಬಿ.ಶ್ರೀನಿವಾಸ್. ಹಿಂದಿಯಲ್ಲಿ ರಾಜಕಪೂರ್ ಪಾತ್ರಗಳಿಗೆ ಮುಖೇಶ್ ಕಂಠ ಅನಿವಾರ್ಯವಾಗಿದ್ದ ರೀತಿಯಲ್ಲಿಯೇ, ರಾಜ್‌ರವರಿಗೆ ಪಿ.ಬಿ.ಶ್ರೀನಿವಾಸ್ ಕಂಠವೂ ಅನಿವಾರ್ಯವಾಗಿತ್ತು. ನವಜ್ಯೋತಿ ಸ್ಟುಡಿಯೋಸ್ ಕಾಲದಲ್ಲೇ ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ರಾಜಕುಮಾರ್‌ರಿಂದ ಹಾಡಿಸಿದ್ದರು. ಮತ್ತೊಂದು ಸಂದರ್ಭದಲ್ಲಿ ಡ್ಯೂಯೆಟ್,



(ಚಿತ್ರ ೩.೮) 'ಎರಡು ಕನಸು' ಚಿತ್ರದಲ್ಲಿ ರಾಜಕುಮಾರ್



(ಚಿತ್ರ ೬೯) 'ಸಂಪತ್ತಿಗೆ ಸವಾಲ್' ಚಿತ್ರದಲ್ಲಿ ರಾಜಕುಮಾರ್

ಶ್ಲೋಕಗಳನ್ನು ಹಾಡಿದ್ದರೂ, ಅವರು ಹಿನ್ನೆಲೆ ಗಾಯನದಲ್ಲಿ ಆಸಕ್ತಿ ತೋರದೆ ಪಿ.ಬಿ.ಶ್ರೀನಿವಾಸ್‌ರಿಂದಲೇ ತಮ್ಮ ಎಲ್ಲಾ ಚಿತ್ರಗಳಿಗೆ ಹಾಡಿಸುತ್ತಿದ್ದು "ನನ್ನದು ಶರೀರ, ಪಿ.ಬಿ.ಯವರದು ಶಾರೀರ" ಎನ್ನುತ್ತಿದ್ದರು. ಆದರೆ 'ಸಂಪತ್ತಿಗೆ ಸವಾಲ್'ನಲ್ಲಿ ರಾಜಕುಮಾರ್ ಎಮ್ಮೆಯ ಮೇಲೆ ಕುಳಿತುಕೊಂಡು ಹಾಡಿದ 'ಯಾರೇ ಕೂಗಾಡಲಿ ಊರೇ ಹೋರಾಡಲಿ...' ಅತ್ಯಂತ ಜನಪ್ರಿಯವೆನಿಸಿತು. ನಂತರ ರಾಜಕುಮಾರ್ ತಮ್ಮ ಚಿತ್ರಗಳಲ್ಲಿ ತಾವೇ ಹಾಡಲಾರಂಭಿಸಿದರು. ವಯಸ್ಸಾದಂತೆ ಪಿ.ಬಿ.ಯವರೂ ಹಿನ್ನೆಲೆ ಗಾಯನದಿಂದ ವಿರಮಿಸಿದರು. 'ಸಂಪತ್ತಿಗೆ ಸವಾಲ್'ನಲ್ಲಿ ಸಾಮಾನ್ಯ ಯುವಕನೊಬ್ಬ ಹಣದ ಮದದಿಂದ ಕೊಬ್ಬಿದ ಹಳ್ಳಿಯ ಜಮೀನ್ದಾರನ ಮಗಳನ್ನು ಪ್ರೇಮಿಸಿ ಅವಳ ಸೊಕ್ಕಿಳಿಸುವುದು ಕಥೆ. ಮಂಜುಳಾ ಬಜಾರಿ ನಾಯಕಿಯಾಗಿ, ವಜ್ರಮುನಿ ಜಮೀನ್ದಾರನಾಗಿ ಅಭಿನಯಿಸಿದ್ದರು. 'ಸಂಪತ್ತಿಗೆ ಸವಾಲ್' ಚಿತ್ರವನ್ನು ನಿರ್ದೇಶಿಸಿದವರು ಎ.ವಿ.ಶೇಷಗಿರಿರಾಯರು. ಉತ್ತರ ಕರ್ನಾಟಕದ ಜನಪ್ರಿಯ ನಾಟಕವೊಂದು ಅದಕ್ಕೆ ಸ್ಫೂರ್ತಿ. ರಜತೋತ್ಸವ ವಾರವನ್ನು ಆಚರಿಸಿಕೊಂಡಿದ್ದು ಈ ಚಿತ್ರದ ಸಾಧನೆ. ಉತ್ತರ ಕರ್ನಾಟಕದಲ್ಲಂತೂ ಈ ಚಿತ್ರ ಪಡೆದ ಜನಪ್ರಿಯತೆ ಅಪಾರ. ಆ ಭಾಗದ ಅನೇಕ ಕೇಂದ್ರಗಳಲ್ಲಿ ಒಂದು ನೂರು ದಿನಗಳು ಪ್ರದರ್ಶಿತವಾದ ಚಿತ್ರ ಬಿಜಾಪುರದಲ್ಲಂತೂ ಹೊಸ ವಿಕ್ರಮವನ್ನೇ ಸ್ಥಾಪಿಸಿತು. ಈ ಚಿತ್ರಕ್ಕೆ ಧುತ್ತರಗಿ ಅವರ ಅತ್ಯಂತ ಜನಪ್ರಿಯ ರಂಗನಾಟಕ ಆಧಾರವಾಗಿತ್ತು.

ಸಿದ್ಧಲಿಂಗಯ್ಯನವರು ನಿರ್ದೇಶಿಸಿದ 'ಬೂತಯ್ಯನ ಮಗ ಅಯ್ಯು' ಕನ್ನಡ ಚಿತ್ರರಂಗದ ಇನ್ನೊಂದು ಮೈಲಿಗಲ್ಲು. ಗಳಿಕೆಯಲ್ಲಿ ಅಪಾರ ಯಶಸ್ಸು ಗಳಿಸಿದ ಈ ಚಿತ್ರ ನಿರೂಪಣೆಯಲ್ಲಿಯೂ ಪ್ರೇಕ್ಷಕರ ಮನ ಮುಟ್ಟಿತು. ತಾವು ಗ್ರಾಮೀಣ ಸಂಸ್ಕೃತಿಯ ಒಬ್ಬ ಯಶಸ್ವಿ ಪ್ರತಿನಿಧಿಯೆಂದು ಆಗಲೇ 'ಬಂಗಾರದ ಮನುಷ್ಯ' ಮತ್ತು 'ನ್ಯಾಯವೇ ದೇವರು' ಚಿತ್ರಗಳಿಂದ ಸಾಬೀತುಪಡಿಸಿದ್ದ ಸಿದ್ಧಲಿಂಗಯ್ಯನವರು ಈ ಚಿತ್ರದಲ್ಲಿ ನವಿರನ್ನೇ ಅಪೇಕ್ಷಿಸುವ ಪ್ರೇಕ್ಷಕರಿಗೆ ತರ್ಕರಹಿತವೆನ್ನುವ ಕೆಲವು ಸನ್ನಿವೇಶಗಳನ್ನು ಅವುಗಳ ಭಾವುಕ ಪರಿಣಾಮಕ್ಕಾಗಿ ಉಪಯೋಗಿಸಿಕೊಂಡಿದ್ದರೂ ನೇರವಾಗಿ ಹೃದಯಕ್ಕೆ ನಾಟುವ ಚಿತ್ರಿಕೆಗಳೂ ಇಲ್ಲಿ ಇದ್ದವು. ಅವುಗಳಲ್ಲಿ ಕೆಲವೆಲ್ಲ ಇಂದೂ ನೆನಪಿನಲ್ಲಿ ಉಳಿದಿರುವಂತಹವು. ಉದಾಹರಣೆಗೆ : ಬೂತಯ್ಯನ ಜಿಪುಣತನವನ್ನು ತೋರಿಸಲು ನಿರ್ದೇಶಕರು ಉಪಯೋಗಿಸಿರುವ ಕೆಲವು ಚಿತ್ರಿಕೆಗಳು, ಲೋಕನಾಥ್ ಮರೆಯಲಾಗದ ಅನುಭವವನ್ನು ನೀಡಿದ ಉಪ್ಪಿನಕಾಯಿ ಊಟದ ಸನ್ನಿವೇಶ, ನ್ಯಾಯಾಲಯದ ವಿದ್ಯಮಾನಗಳನ್ನು ತೋರಿಸದೆಯೇ 'ವಿರಸವೆಂಬ ವಿಷಕೆ ಬಲಿಯಾದ ಮಾನವ...'ನ ಮೇಲೆ ಕೋರ್ಟಿನ ಮೆಟ್ಟಲು ಹತ್ತಿದ ನಂತರ ಅಮಾಯಕರ ಮೇಲೆ ಆಗುವ ಪರಿಣಾಮವನ್ನು ಅವರು ಪರೋಕ್ಷವಾಗಿ ನಿರೂಪಿಸಿರುವ ಶೈಲಿ, ಅವರು ಬಿತ್ತರಿಸಿರುವ ಗ್ರಾಮೀಣ ಪರಿಸರ, ಇತ್ಯಾದಿ.

ಚಿತ್ರದ ಅಂತಿಮ ಹಂತದ ಪ್ರವಾಹ ದೃಶ್ಯವಂತೂ ಕನ್ನಡ ಚಿತ್ರರಂಗದಂತಹ ಸೀಮಿತ ಮಾರುಕಟ್ಟೆಯ ಕ್ಷೇತ್ರದಲ್ಲಿಯೇ ಇಂತಹ ಪವಾಡ ಸಾಧ್ಯವೆ ಎಂದು ಪ್ರೇಕ್ಷಕ ಉದ್ಗಾರವೆಳೆಯುವಷ್ಟು ಪರಿಣಾಮಕಾರಿಯಾಗಿತ್ತು. ಮಾನವ ಸಂಬಂಧಗಳು ಎಷ್ಟು ಕ್ಲಿಷ್ಟವೋ ಅಷ್ಟೇ ಸೂಕ್ಷ್ಮವೆನ್ನುವ ಸಂದೇಶವನ್ನು ಕಣ್ಣಿಗೆ ಕಟ್ಟುವಂತೆ, ಹೃದಯಕ್ಕೆ ಮುಟ್ಟುವಂತೆ ನೀಡಿದ ಸ್ಮರಣೀಯ ಸನ್ನಿವೇಶ ಇದು. ಕನ್ನಡ ಪ್ರೇಕ್ಷಕರ ಮಟ್ಟಿಗೆ ಈ



(ಚಿತ್ರ ೪೦) 'ಸಂಪತ್ತಿಗೆ ಸವಾಲ್' ಚಿತ್ರದಲ್ಲಿ ರಾಜಕುಮಾರ್ ಮತ್ತು ಮಂಜುಳಾ

ಪರಾಕಾಷ್ಠೆ ಸನ್ನಿವೇಶದ ಚಿತ್ರೀಕರಣ ಅವಿಸ್ಮರಣೀಯವಾಗಿತ್ತು. ತಾಂತ್ರಿಕವಾಗಿ ಛಾಯಾಗ್ರಾಹಕ ಡಿ.ವಿ.ರಾಜಾರಾಂರವರ ಸಾಧನೆ ದೊಡ್ಡದು. ನಾಗರಾಜರಾಯರ ಕಲಾನಿರ್ದೇಶನದ ಮಿನಿಯೇಚರ್ಸ್ ಪವಾಡವನ್ನೇ ಮಾಡಿದ್ದವು.

'ಬೂತಯ್ಯನ ಮಗ ಅಯ್ಯು'ವಿನಲ್ಲಿ 'ವಂಶವೃಕ್ಷ'ದ ಕಲಾವಿದರಾದ ಎಲ್.ವಿ.ಶಾರದಾ, ತಲಗೇರಿ ವೆಂಕಟರಾವ್ ಅವರಿದ್ದದ್ದು ಕಾಕತಾಳೀಯ ಎನಿಸಿದರೂ, ಅವರು ಮೂವರಿಗೂ ವ್ಯಾಪಾರಿ ಚಿತ್ರವೊಂದರಲ್ಲಿ ತಮ್ಮ ಪ್ರತಿಭಾ ಪ್ರದರ್ಶನಕ್ಕೆ ಸೊಗಸಾದ ಅವಕಾಶವನ್ನು ಕಲ್ಪಿಸಿದ ಚಿತ್ರ ಇದು. ನಟಿ ಭವಾನಿಯ ಮೊದಲ ಚಿತ್ರ ಕೂಡ. ಪ್ರಧಾನ ಸ್ತ್ರೀ ಪಾತ್ರಧಾರಿಗಳಿಗೆ ಸಿದ್ದಲಿಂಗಯ್ಯ ಯಾರೇ ಪ್ರಥಮ ಶ್ರೇಣಿಯ ನಟಿಯರನ್ನು ಆಯ್ದುಕೊಳ್ಳದಿದ್ದುದೇ ಚಿತ್ರದ ದೃಷ್ಟಿಯಿಂದ ಒಳ್ಳೆಯದೆನಿಸಿತು. ಬೂತಯ್ಯನಾಗಿ ಎಂ.ಪಿ.ಶಂಕರ್, ಅಯ್ಯುವಾಗಿ ಲೋಕೇಶ್, ಗುಳ್ಳನಾಗಿ ವಿಷ್ಣುವರ್ಧನ್ ಸ್ವಲ್ಪ ನಾಟಕೀಯವೆನಿಸಿದರೂ, ಪರಿಣಾಮಕಾರಿಯೆನಿಸಿದ ಅಭಿನಯದಿಂದ ಚಿತ್ರಕ್ಕೆ ಜೀವ ತುಂಬಿದರು. ಜಿ.ಕೆ.ವೆಂಕಟೇಶ್ ಜನಪ್ರಿಯ ಹಾಡುಗಳಲ್ಲಿ ಗ್ರಾಮೀಣ ಸೊಗಡಿತ್ತು. 'ಮಲೆನಾಡ ಹೆಣ್ಣ ಮೈಬಣ್ಣ...' ಇವುಗಳ ಪೈಕಿ ಉಲ್ಲೇಖನೀಯ. ಸಂಪೂರ್ಣವಾಗಿ ಹೊರಾಂಗಣಗಳಲ್ಲಿಯೇ ಚಿತ್ರಿತವಾದ ಚಿತ್ರ 'ಬೂತಯ್ಯ'. ಎಸ್.ವೀರಾಸ್ವಾಮಿ, ಚಂದೂಲಾಲ್ ಜೈನ್, ಸಿದ್ದಲಿಂಗಯ್ಯ ಮತ್ತು ವರದಪ್ಪನವರು ಜಂಟಿಯಾಗಿ ನಿರ್ಮಿಸಿದ ಈ ಚಿತ್ರ ಕನ್ನಡದಲ್ಲಿ ದೊಡ್ಡ ಯಶಸ್ಸು ಗಳಿಸಿದರೂ ಜೆಮಿನಿ ಸಂಸ್ಥೆ ತಯಾರಿಸಿದ ತಮಿಳು ಮತ್ತು ತೆಲುಗು ಅವತರಣಿಕೆಗಳು ನೆಲಕಚ್ಚಿದವು.

೧೯೭೦ರ ದಶಕದಲ್ಲಿ ಮಾಮೂಲು ಮಸಾಲೆಗಳಿಲ್ಲದ ಚಿತ್ರಗಳನ್ನು ತಯಾರಿಸುವ ಪೂರ್ವಾಪರಗಳನ್ನು ಲೆಕ್ಕಿಸದೆ ಸಾಹಸ ಮಾಡಿದ ನಿರ್ಮಾಪಕರು ಲಕ್ಷ್ಮೀಪತಿ ಮತ್ತು ನಾರಾಯಣ್. ಅವರು ಒಟ್ಟಾಗಿ ಸೇರಿ ಕನ್ನಡ ತೆರೆಗಿತ್ತ 'ಕಾಡು' ಹೊಸ ಅಲೆಯ ಚಿತ್ರಗಳ ಪೈಕಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿತು. ಇಂತಹ ಚಿತ್ರಗಳಲ್ಲಿ ನಿರ್ದೇಶಕರಿಗೆ ಪ್ರೊಫೆಷನಲಿಸಂ ಇರುವುದು ಎಷ್ಟು ಮುಖ್ಯವೆಂಬುದನ್ನು ಪರಿಣಾಮಕಾರಿಯಾಗಿ ನಿರೂಪಿಸಿತು.

ಈ ಚಿತ್ರವನ್ನು ಬೆಂಗಳೂರಿನಲ್ಲಿ ವೀಕ್ಷಿಸಿದ ಖ್ಯಾತ ಸೋವಿಯತ್ ನಿರ್ದೇಶಕ ಅಲಿ ಖಮರೇವ್ "'ಕಾಡು' ಚಿತ್ರದ ಎಲ್ಲ ವಿಭಾಗಗಳೂ ನನ್ನನ್ನು ದಂಗು ಬಡಿಸಿವೆ. ಅದರ ನಿರ್ದೇಶನ, ಅಭಿನಯ, ಸಂಗೀತ ಮತ್ತು ಅದ್ಭುತ ಛಾಯಾಗ್ರಹಣ, ಎಲ್ಲವೂ" ಎಂದು ಮನಸಾರೆ ಪ್ರಶಂಸಿಸಿದರು.

ಕನ್ನಡದ ಪ್ರತಿಭಾವಂತ ಲೇಖಕರಲ್ಲೊಬ್ಬರಾಗಿದ್ದ ಶ್ರೀಕೃಷ್ಣ ಆಲನಹಳ್ಳಿಯವರ ಕಿರುಕಾದಂಬರಿ ಈ ಚಿತ್ರಕ್ಕೆ ಆಧಾರ. ಜೀವನದ ಒಳಿತು ಕೆಡುಕುಗಳನ್ನು ಕಾಡೊಂದರಿಂದ ಬೇರ್ಪಟ್ಟ ಎರಡು ಹಳ್ಳಿಗಳ ಹಿನ್ನೆಲೆಯಲ್ಲಿ ಕೃಷ್ಣ ವಿಶ್ಲೇಷಿಸಿದರು. ಚಿತ್ರಕಥೆ ಬರೆದ ಗಿರೀಶ್ ಕಾರ್ನಾಡ್ ಎಂಟು ವರ್ಷಗಳ ಮುಗ್ಧ ಬಾಲಕನೊಬ್ಬನ ಕಣ್ಣುಗಳ ಮೂಲಕ ಈ ಎರಡು ಹಳ್ಳಿಗಳ ವಿದ್ಯಮಾನವನ್ನು ಮಾರ್ಮಿಕವಾಗಿ ಚಿತ್ರಿಸಿದರು. ಕೃಷ್ಣರವರಿಗೇನೋ ಗ್ರಾಮೀಣ ಜೀವನದ ನೋವು-ನಲಿವುಗಳು, ಸಂಕೀರ್ಣತೆಗಳ ಬಗ್ಗೆ ನಿಕಟವಾದ ಪರಿಚಯವಿತ್ತು. ಆದರೆ ಸ್ವಯಂ ನಗರವಾಸಿಯಾಗಿ ಬಹುಪಾಲು ಮೇಲ್ ಸ್ತರದ ಜನರೊಂದಿಗೇ ಹೆಚ್ಚಿನ ಸಂಪರ್ಕವಿದ್ದ ಗಿರೀಶ್‌ಕಾರ್ನಾಡ್‌ರವರು ಈ ಚಿತ್ರದಲ್ಲಿ ಗ್ರಾಮೀಣ ಪರಿಸರದ ಸೂಕ್ಷ್ಮಗಳನ್ನು, ಕ್ಲಿಷ್ಟತೆಗಳನ್ನು ಗ್ರಹಿಸಿದ ರೀತಿ ಆಶ್ಚರ್ಯವೆನಿಸುವಂತಿತ್ತು. ಆದರೆ ಕಾದಂಬರಿಯಲ್ಲಿನ ಹಳ್ಳಿಯ ವರ್ಗಭೇದವನ್ನು ಬೇರ್ಪಡಿಸಿ ಹಳ್ಳಿಯ ಪತನಕ್ಕೆ ಕಾರಣವಾಗುವ ಮಾನವೀಯ ಮೌಲ್ಯಗಳನ್ನು ಮಾತ್ರ ಚಿತ್ರಿಸಿದ್ದರು. ನಿರ್ದೇಶಕರ ಮುಖವಾಣಿಯಾಗುವ ಹುಡುಗ ಕಿಟ್ಟಿ ತನ್ನ ಸುತ್ತಲಿನ ವಿದ್ಯಮಾನಗಳನ್ನು ನಿಷ್ಪಕ್ಷಪಾತವಾಗಿ ಅವಲೋಕಿಸಬಲ್ಲವನು. ಆತ ಘಟನೆಯಿಂದ ಘಟನೆಗೆ, ಸ್ಥಳದಿಂದ ಸ್ಥಳಕ್ಕೆ, ಪಾತ್ರದಿಂದ ಪಾತ್ರಕ್ಕೆ ಜಿಗಿಯುತ್ತಾನೆ. ಇವೆಲ್ಲ ಒಂದಕ್ಕೊಂದು ಸಂಬಂಧವಿಲ್ಲವೆಂದು ತೋರಿದರೂ ವಾಸ್ತವವಾಗಿ ಅವು ಸಮಗ್ರ ಜ್ವಾಲೆಗೆ ಕಾರಣವಾಗುವ ಪ್ರತ್ಯೇಕ ಕಿಡಿಗಳು. ಚಿತ್ರದಲ್ಲಿ ಬರುವ ಸೌಂಡ್ ಎಫೆಕ್ಟ್ಸ್ ಇತ್ಯಾದಿಗಳನ್ನೆಲ್ಲ ಚಾಮುಂಡೇಶ್ವರಿ ಸ್ಟುಡಿಯೋದಲ್ಲೇ ಸುಂದರರಾಜ್, ನಾಗಾಭರಣ ಅವರುಗಳು ತಮಗ ತಿಳಿದಂತೆ ನಿರ್ವಹಿಸಿದ್ದರು. ಅಲ್ಲಿಯ ಧ್ವನಿ ತಜ್ಞರು ಇದಕ್ಕಾಗಿ ತೆಗೆದುಕೊಂಡ ಶ್ರಮ ಇಂದಿಗೂ ನೆನೆಯುವಂಥದ್ದು. ಕೊನೆಯಲ್ಲಿ 'ಆ...ಳು...ಕೂಗಿನ ಹಕ್ಕಿ' ಎಂಬ ಕೂಗು, ಅದು ಒಂದಲ್ಲ ಹಲವು ಎಂಬಂತೆ ಪ್ರತಿಧ್ವನಿ ರೀತಿಯಲ್ಲಿ ಬರುವುದನ್ನು ಕೂಡಾ ಗಿರೀಶ್ ಕಾರ್ನಾಡ್‌ರೇ ಕೂಗಿ ಕೂಗಿ ಶ್ರಮದಿಂದ ಶಬ್ದಗ್ರಹಣ ಮಾಡಿದ್ದರು. ಅಲ್ಲಲ್ಲಿ ಸತ್ಯಜಿತ್ ರಾಯ್ ಅವರ 'ಪಥೇರ್ ಪಾಂಚಾಲಿ'ಯ ಛಾಯೆ ಕಂಡರೂ 'ಕಾಡು' ಒಂದು ಗಟ್ಟಿಯಾದ ಚಿತ್ರಕಥೆಯನ್ನು ಹೊಂದಿದ್ದ ಚಿತ್ರ.

ಈ ಪಾತ್ರದಲ್ಲಿ ಮೊದಲ ಬಾರಿಗೆ ಅಭಿನಯಿಸಿದ ಪ್ರತಿಭಾವಂತ ಬಾಲಕ ನಟರಾಜ್ ಗುಬ್ಬಿ ವೀರಣ್ಣನವರ ಮೊಮ್ಮಗ, ನಟ ಜಿ.ವಿ.ಶಿವಾನಂದ್‌ರ ಮಗ. ಚಿತ್ರದಲ್ಲಿಯೇ ಈ ಬಾಲಕ ಅಚ್ಚರಿಯೆನಿಸುವ ರೀತಿಯಲ್ಲಿ ತನ್ನ ಪಾತ್ರಕ್ಕೆ ನ್ಯಾಯ ಸಲ್ಲಿಸಿದ. ಹಳ್ಳಿಯ ಗೌಡನ ಪಾತ್ರದಲ್ಲಿ ಅಭಿನಯಿಸಿದವರು ಹಿಂದಿ ಚಿತ್ರರಂಗದ ಅಮರೀಶ್ ಪುರಿ. ಆ ಪಾತ್ರಕ್ಕೆ ಅವರ ಆಯ್ಕೆ ಸಮಂಜಸವಾಗಿತ್ತು.

ಅಂದು ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದ ಎಂ.ಭಕ್ತವತ್ಸಲರವರ ಪತ್ನಿ ಪ್ರೇಮಾರವರು ನಂದಿನಿ ಎಂಬ ಹೆಸರಿನಲ್ಲಿ ಗೌಡಿತಿಯ ಪಾತ್ರದಲ್ಲಿ ಅಭಿನಯಿಸಿ



(ಚಿತ್ರ ೪೧) 'ಬೂತಯ್ಯನ ಮಗ ಅಯ್ಯು' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಎಲ್.ವಿ.ಶಾರದಾ



(ಚಿತ್ರ ೪೨)'ಕಾಡು' ಚಿತ್ರದಲ್ಲಿ ನಂದಿನಿ

ರಾಷ್ಟ್ರಮಟ್ಟದಲ್ಲಿ ಅತ್ಯುತ್ತಮ ಅಭಿನಯಕ್ಕಾಗಿ ಊರ್ವಶಿ ಪ್ರಶಸ್ತಿಯನ್ನು ಪಡೆದು ಚಿತ್ರೋದ್ಯಮವನ್ನು ವಿಸ್ಮಯಗೊಳಿಸಿದರು. ಚಿತ್ರದಲ್ಲಿ ಆಕೆಯ ಪಾತ್ರಕ್ಕೆ ಸಿ.ಕೆ.ನಾಗರಾಜರಾಯರ ಮಗಳು ಸಿ.ಎನ್.ಮಂಗಳಾ ಕಂಠದಾನ ಮಾಡಿದ್ದರು. ನಮ್ಮ ಚಿತ್ರಗಳಲ್ಲಿ ಅಭಿನಯಿಸುವುದು ಕಂಠವೇ ಆದ್ದರಿಂದ ಪ್ರಶಸ್ತಿಗಳು ಯಾವಾಗಲೂ ವಿವಾದಕ್ಕೆ ಒಳಗಾಗುತ್ತವೆ. ಈಗಲೂ ಅದೇ ವಿವಾದ ಎದ್ದಿತು. ಜೊತೆಗೆ ರಾಷ್ಟ್ರ ಪ್ರಶಸ್ತಿ ಸಮಿತಿಯಲ್ಲಿ ನಂದಿನಿ ಅವರ ಪತಿ ಎಂ.ಭಕ್ತವತ್ಸಲ ಅವರೂ ಒಬ್ಬ ಸದಸ್ಯರಾಗಿದ್ದುದು ಚರ್ಚೆಗೆ ಮತ್ತಷ್ಟು ಗ್ರಾಸ ಒದಗಿಸಿತ್ತು.

'ಕಾಡು' ಚಿತ್ರದ ಛಾಯಾಗ್ರಹಣಕ್ಕೆ ಗಿರೀಶ್‌ಕಾರ್ನಾಡ್ ಹಿಂದಿ ಚಿತ್ರರಂಗದ ಪ್ರತಿಭಾವಂತ ಛಾಯಾಗ್ರಾಹಕ ಗೋವಿಂದ ನಿಹಲಾನಿಯವರನ್ನು ತಂದರು. ಗೋವಿಂದ ನಿಹಲಾನಿ ಬೆಂಗಳೂರಿನ ಎಸ್.ಜೆ.ಪಾಲಿಟೆಕ್ನಿಕ್‌ನಲ್ಲಿ ಛಾಯಾಗ್ರಹಣ ವಿಭಾಗದಲ್ಲಿ ಕಲಿತವರು. ಅವರ ಕಪ್ಪು-ಬಿಳುಪು ಛಾಯಾಗ್ರಹಣ ಚಿತ್ರಕ್ಕೊಂದು ಹೊಸ ಆಯಾಮವನ್ನೇ ಕೊಟ್ಟಿತು. ಸಂಪೂರ್ಣ ತೆರಿಗೆ ವಿನಾಯಿತಿಯೊಂದಿಗೆ ಬಿಡುಗಡೆಯಾದ ಈ ಕಲಾತ್ಮಕ ಚಿತ್ರ ಅನೇಕ ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಿಗೂ ಭಾರತದ ಪ್ರತಿನಿಧಿಯಾಗಿ ಹೋಯಿತು. ಬರ್ಲಿನ್‌ನಲ್ಲಿ ಚಿತ್ರೋತ್ಸವದ ಸ್ಪರ್ಧಾ ವಿಭಾಗದಲ್ಲಿ ಪ್ರವೇಶವನ್ನು ಪಡೆಯಿತು. ಆದರೆ ಚಿತ್ರದ ಪ್ರತಿ ಭಾರತದಿಂದ ರವಾನೆಯಾದರೂ ಅದು ಅಲ್ಲಿಗೆ ತಲುಪದೆ, ಪಿಷ್ಕನ್ ಚಲನಚಿತ್ರೋತ್ಸವದಲ್ಲಿ ಭಾಗವಹಿಸಲಾಗಲಿಲ್ಲ.

ರಾಷ್ಟ್ರಮಟ್ಟದಲ್ಲಿ 'ಕಾಡು' ವರ್ಷದ ದ್ವಿತೀಯ ಅತ್ಯುತ್ತಮ ಚಿತ್ರವಾಗಿ ಆಯ್ಕೆಯಾಗಿ ನಂದಿನಿಯವರಿಗೆ ಅತ್ಯುತ್ತಮ ನಟಿ ಪ್ರಶಸ್ತಿಯನ್ನು ತಂದುಕೊಡುವುದರೊಂದಿಗೆ ಮಾ।ನಟರಾಜ್‌ಗೆ ವರ್ಷದ ಅತ್ಯುತ್ತಮ ಬಾಲನಟ ಪ್ರಶಸ್ತಿಯನ್ನೂ ತಂದುಕೊಟ್ಟಿತು. ಹಿಂದಿನ ನಾಲ್ಕು ವರ್ಷಗಳಲ್ಲಿ ಈ ಪ್ರಶಸ್ತಿಗಳನ್ನು ಯಾರಿಗೂ ಕೊಟ್ಟೇ ಇರಲಿಲ್ಲ.

ಅದೇ ವರ್ಷ ಬಿಡುಗಡೆಯಾಗಿ ಜನಪ್ರಿಯತೆ ಗಳಿಸಿದ ಪುಟ್ಟಣ್ಣ ಕಣಗಾಲ್ ನಿರ್ದೇಶನದ ಸಂಗೀತ ಪ್ರಧಾನ ಚಿತ್ರ 'ಉಪಾಸನೆ'. ಇದರಲ್ಲಿ ಪ್ರಥಮ ಬಾರಿಗೆ ಚಿತ್ರರಂಗಕ್ಕೆ ಬಂದ ಹವ್ಯಾಸಿ ರಂಗಭೂಮಿಯ ನಟ ಸೀತಾರಾಂ ಈ ಚಿತ್ರದಲ್ಲಿ ತಮ್ಮ ಮನೋಜ್ಞ ಅಭಿನಯದಿಂದಾಗಿ ಶರಪಂಜರ ಶಿವರಾಂರಂತೆ 'ಉಪಾಸನೆ ಸೀತಾರಾಂ' ಎಂಬ ಹೆಸರನ್ನೇ ಪಡೆದುಕೊಂಡರು. ಹುಬ್ಬಳ್ಳಿಯ ಹವ್ಯಾಸಿ ರಂಗಭೂಮಿ ನಟ ಡಾ।ಮಣ್ಣೂರ್ ನಾಯಕನಾಗಿ ಸಪ್ಪೆಯೆನಿಸುವ ಅಭಿನಯವನ್ನೇ ನೀಡಿದರು. ಕನ್ಯಾಕುಮಾರಿಯಲ್ಲಿ ಚಿತ್ರಿತವಾದ ಮೊಟ್ಟ ಮೊದಲ ಕನ್ನಡ ಚಿತ್ರ ಇದು. ಅಲ್ಲಿ ಹೊಸದಾಗಿ ನಿರ್ಮಿತವಾಗಿದ್ದ ವಿವೇಕಾನಂದ ಸ್ಮಾರಕದಲ್ಲಿ 'ಭಾರತ ಭೂಶಿರ ಮಂದಿರ ಸುಂದರಿ ಕನ್ಯಾಕುಮಾರಿ....' ಚಿತ್ರಿತವಾಯಿತು. ಚಿತ್ರಕ್ಕೆ ಮೂಲ ದೇವಕಿಮೂರ್ತಿಯವರ ಅದೇ ಹೆಸರಿನ ಕಾದಂಬರಿ. ಸೀತಾರಾಂ ಗುರುವಿನ ಪಾತ್ರದಲ್ಲಿದ್ದರೆ, ಆರತಿ ನಾಯಕಿಯಾಗಿ ವಿಶಿಷ್ಟವಾದ ಪಾತ್ರವನ್ನು ಪಡೆದುಕೊಂಡರು. ಗುಬ್ಬಿ ವೀರಣ್ಣನವರ ಕುಟುಂಬದ ಇನ್ನೊಬ್ಬ ಪ್ರತಿಭಾವಂತ ನಟಿ ಜಿ.ವಿ.ಶಾರದಾ (ಆಕೆಯ ಮಗಳು ಪಂಚಮಿ ಕೂಡ ಮುಂದೆ ಚಲನಚಿತ್ರ ಮತ್ತು ಟೆಲಿವಿಷನ್ ನಟಿಯಾದರು) ರಂಗಭೂಮಿಯಿಂದ ಚಿತ್ರರಂಗಕ್ಕೆ ಪ್ರಥಮ ಬಾರಿಗೆ ಬಂದ ಚಿತ್ರವಿದು. ಚಿತ್ರದಲ್ಲಿ ಸ್ವರ್ಣಮ್ಮನವರ ಗಯ್ಯಾಳಿ ಪಾತ್ರ ಎಷ್ಟು ಪರಿಣಾಮಕಾರಿಯಾಗಿ ಮೂಡಿ ಬಂದಿತೆಂದರೆ, ಆಕೆಯನ್ನು ಕುರಿತಾದ 'ಆಚಾರವಿಲ್ಲದ ನಾಲಿಗೆ ನೀಚ ಬುದ್ಧಿಯ ಬಿಡು ನಾಲಿಗೆ...' ವಿಶೇಷ ಜನಪ್ರಿಯತೆ ಪಡೆಯಿತು. ಸಂಗೀತ ನಿರ್ದೇಶಕ ವಿಜಯಭಾಸ್ಕರ್ ಈ ಚಿತ್ರದಲ್ಲಿ ತಮಗೆ ಶಾಸ್ತ್ರೀಯ ಸಂಗೀತದ ಮೇಲಿದ್ದ ಹಿಡಿತವನ್ನು ಬಹಳ ಪರಿಣಾಮಕಾರಿಯಾಗಿ ಪ್ರದರ್ಶಿಸಿದರು.

ಈ ವರ್ಷ ಜನಪ್ರಿಯ ಹಾಸ್ಯನಟ ನರಸಿಂಹರಾಜು ತಮ್ಮ ಸ್ವಂತ ಚಿತ್ರ 'ಪ್ರೊಫೆಸರ್ ಹುಚ್ಚೂರಾಯ' ನಿರ್ಮಿಸುವ ನಿರ್ಧಾರವನ್ನು ಕೈಗೊಂಡು, ತಾವೇ ಅದರಲ್ಲಿ ಮುಖ್ಯ ಪಾತ್ರವನ್ನು ವಹಿಸಲೂ ನಿರ್ಧರಿಸಿದರು. ಆದರೆ ತಮ್ಮ ಎಂದಿನ ಚಿತ್ರಗಳಂತಲ್ಲದೆ ಅವರು ತಮ್ಮ 'ಗೆಟಪ್' ಸಂಪೂರ್ಣವಾಗಿ ಬದಲಾಯಿಸಿಕೊಂಡು ಆಬ್ಸೆಂಟ್ ಮೈಂಡೆಡ್ ಪ್ರೊಫೆಸರ್‌ಗಳೆಂದರೆ ಜನರಿಗಿರುವ ಕಲ್ಪನೆಯಂತೆ ಸೂಟು, ಬೂಟು, ಹ್ಯಾಟುಗಳನ್ನೇ ಧರಿಸಿ, ತಮ್ಮ ಬಗ್ಗೆ ತಾವೇ ಒಂದು ಹೊಸ ಪ್ರಯೋಗವನ್ನು ಮಾಡಿಕೊಂಡರು. ನಿರ್ದೇಶಕರಾಗಿ ಅವರು ಆಯ್ದುದ್ದು ಎಂ.ಆರ್.ವಿಠಲ್‌ರನ್ನು. ಹಾಸ್ಯ ಚಿತ್ರಗಳ ನಿರ್ದೇಶನದಲ್ಲಿ ಅಷ್ಟೇನೂ ಪರಿಣತಿಯಿಲ್ಲದಿದ್ದ ವಿಠಲ್ ಪ್ರಾಯಶಃ ಈ ಚಿತ್ರದ ಹಾಸ್ಯ ದೃಶ್ಯಗಳ ನಿರೂಪಣೆಯಲ್ಲಿ ನುರಿತ ಹಾಸ್ಯನಟ ನರಸಿಂಹರಾಜುರನ್ನೇ ಅವಲಂಬಿಸಿದ್ದಿರಬಹುದು. ಆದರೆ ವಿಠಲ್ ನಿರ್ದೇಶಕರಾಗಿ ಮಿಂಚಿದ್ದು ಚಿತ್ರದ ನವಿರಾದ ವಿಡಂಬನಾತ್ಮಕ ಸನ್ನಿವೇಶಗಳಲ್ಲಿ. ದಿನನಿತ್ಯದ ಸಾಮಾನ್ಯ ಘಟನೆಗಳ ಬಗ್ಗೆಯೂ ವಿಠಲ್ ಅವರ ಸೂಕ್ಷ್ಮ ನೋಟಗಳಿದ್ದವು. ಅವು ನೋಡುವವರನ್ನು ತನ್ನ ಬದುಕಿಗೆ, ತನ್ನ ನಡವಳಿಕೆಗೆ ಅನ್ವಯ ಮಾಡಿಕೊಂಡು ಮುಗುಳ್ನಗುವಂತೆ ಮಾಡುತ್ತಿದ್ದವು. ಆದರೆ ಈ ಹಾಸ್ಯದ ಹೊದಿಕೆಯಲ್ಲಿ ಮಧ್ಯಮ ವರ್ಗದ ಕುಟುಂಬಗಳನ್ನು ಕಾಡುವ ದುರಂತವಿತ್ತು. ನೋಡಲು ತೀರಾ ಸರಳವಾಗಿದ್ದು ಎಷ್ಟು ವರ್ಷಗಳಾದರೂ ಗಂಡ ಸಿಗದೆ ತೊಳಲುತ್ತಿದ್ದ ಹೆಣ್ಣಿನ ಪಾತ್ರದ ಮೂಲಕ ಈ ದುರಂತ



(ಚಿತ್ರ ೪೩)'ಉಪಾಸನೆ' ಚಿತ್ರದಲ್ಲಿ ಸೀತಾರಾಮ್ ಮತ್ತು ಆರತಿ



(ಚಿತ್ರ ೪೪) 'ಪ್ರೊಫೆಸರ್ ಹುಚ್ಚೂರಾಯ' ಚಿತ್ರದಲ್ಲಿ ವೈಶಾಲಿ, ಲೀಲಾವತಿ, ನರಸಿಂಹರಾಜು, ದ್ವಾರಕೀಶ್, ನಾಗೇಂದ್ರರಾಯರು

ಅಭಿವ್ಯಕ್ತವಾಯಿತು. ಈ ಪಾತ್ರದಲ್ಲಿ ತಮ್ಮ ಸಹಜವಾದ ಅಭಿನಯದಿಂದ ಎದ್ದು ಕಂಡವರು ರಂಗಭೂಮಿಯ ನಟಿ ಭಾರ್ಗವಿ ನಾರಾಯಣ್. ಆಕೆಗೆ ಅತ್ಯುತ್ತಮ ಪೋಷಕನಟಿ ಪ್ರಶಸ್ತಿಯೂ ಬಂದಿತು. ಅವರೊಂದಿಗೆ ವಿಶೇಷ ಗಮನ ಸೆಳೆದ ಮತ್ತೊಬ್ಬ ರಂಗಭೂಮಿಯ ನಟಿ ವೈಶಾಲಿ. ನಂತರದ ಅನೇಕ ಚಿತ್ರಗಳಲ್ಲಿ ತುಂಬಾ ಗಂಭೀರವಾದ ಪಾತ್ರಗಳನ್ನು ನಿರ್ವಹಿಸಿದ ವೈಶಾಲಿಗೆ ಈ ಚಿತ್ರದಲ್ಲಿ ಜೇಬುಕಳ್ಳಿಯ ಹಾಸ್ಯಪಾತ್ರವನ್ನು ನೀಡಲಾಗಿತ್ತು. ಅವರು ಮತ್ತು ಚಿತ್ರದಲ್ಲಿ ಆವರ ಪಾಲುದಾರ ದ್ವಾರಕೀಶ್ ಭಾರಿ ಖುಷಿ ಕೊಟ್ಟರೆ, ಪ್ರಣಯಿಗಳಾಗಿ ಮೊಟ್ಟಮೊದಲಿಗೆ ಒಂದೇ ಚಿತ್ರದಲ್ಲಿ ಒಟ್ಟಾಗಿ ಅಭಿನಯಿಸಿದ ವಿಷ್ಣುವರ್ಧನ್ ಮತ್ತು ಮಂಜುಳಾರಲ್ಲಿ ಕಂಡದ್ದು ಲವಲವಿಕೆಯ ನಡೆ. ರಾಜನ್-ನಾಗೇಂದ್ರ ಸಂಯೋಜನೆಯ ಹೆಚ್ಚು ಕಡಿಮೆ ಎಲ್ಲ ಹಾಡುಗಳೂ ಪ್ರೇಕ್ಷಕರು ಗುಣುಗುಡುವಷ್ಟು ಚೆನ್ನಾಗಿದ್ದವು. ಕೊನೆಗೂ ನರಸಿಂಹರಾಜು ಪಾತ್ರ ಈ ಚಿತ್ರದಲ್ಲಿ ಲೀಲಾವತಿಯ ಪಾತ್ರವನ್ನು ಮದುವೆಯಾಗಿದ್ದು ಒಂದು ಕುತೂಹಲಕಾರಿ ತಿರುವಾಯಿತು. ನಗೆನಟನ ಚಿತ್ರದಿಂದ ನಿರೀಕ್ಷಿಸಿದ ಪಕ್ಕೆ ಹುಣ್ಣಾಗುವಷ್ಟು ನಗೆ ಇರಲಿಲ್ಲ. ಆದರೆ ಅಭಿನಯದಲ್ಲಿ ಒಬ್ಬರನ್ನೊಬ್ಬರು ಮೀರಿಸಿದ್ದರು. ಅದು ಗಂಭೀರ ಚಿತ್ರವೇ ಆಗಿತ್ತು.

೧೯೭೦ರ ದಶಕದಲ್ಲಿ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ವ್ಯಾಸಂಗ ಮುಗಿಸಿ ಬಂದ ಕರ್ನಾಟಕದ ಪ್ರತಿಭಾವಂತ ತರುಣರು ವಿಶೇಷ ಆಸಕ್ತಿಯನ್ನು ಕೆರಳಿಸಿದ್ದರು. ಅವರಲ್ಲಿ ಒಬ್ಬರಾದ ಕೆ.ಎಂ.ಶಂಕರಪ್ಪ ಉತ್ಸಾಹದಿಂದಲೇ ತಮ್ಮ ಪ್ರಥಮ ಕನ್ನಡ ಚಿತ್ರದ ನಿರ್ದೇಶನಕ್ಕೆ ಕೈ ಹಾಕಿದರು. ಅದಕ್ಕಾಗಿ ಅವರು ಆಧರಿಸಿದ ಕಾದಂಬರಿ ಬಸವರಾಜ ಕಟ್ಟೀಮನಿಯವರ 'ಮಾಡಿ ಮಡಿದವರು'. ಸ್ವಾತಂತ್ರ್ಯ ಹೋರಾಟದ ಬಗ್ಗೆ ಬಂದ ಪೂರ್ಣಪ್ರಮಾಣದ ಪ್ರಥಮ ರೂಪಕ ಚಿತ್ರ ಇದು. ಪುಣೆಯ ಚಲನಚಿತ್ರ ಶಾಲೆಯಲ್ಲಿದ್ದಾಗಲೇ ಡಿಪ್ಲೊಮಾ ಕಿರುಚಿತ್ರ 'ನಲ್ಲಿಯಲ್ಲಿ ನೀರು ಬಂತು'ವಿನಿಂದಾಗಿ ಸೃಜನಶೀಲರೆಂದು ಹೆಸರು ಗಳಿಸಿದ್ದ ಶಂಕರಪ್ಪ 'ಮಾಡಿ ಮಡಿದವರು' ನಿರೂಪಣೆಯಲ್ಲಿ ಯಾವ ಸೂತ್ರಗಳಿಗೂ ಜೋತು ಬೀಳದೆ ತಮ್ಮ ಮಾರ್ಗವನ್ನು ಅನುಸರಿಸಿ ಹೊಸ ಅಲೆಯ ಚಿತ್ರಗಳ ಪಟ್ಟಿಯಲ್ಲಿ ಸೇರಿಸಿದರು. ಉತ್ತರ ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮವನ್ನು ನಿರೂಪಿಸಿದ ಈ ಚಿತ್ರದಲ್ಲಿ ಸಂಭಾಷಣೆ ಸಹ ಉತ್ತರ ಕರ್ನಾಟಕದ ಕನ್ನಡದಲ್ಲೇ ಇತ್ತು. ಆದರೆ ವ್ಯಾಪಾರದ ದೃಷ್ಟಿಯಿಂದ ಯಶಸ್ವಿಯಾಗಲಿಲ್ಲ. ಈ ಚಿತ್ರ ಶಂಕರಪ್ಪನವರ ಒಂದೇ ರೂಪಕ ಚಿತ್ರವಾಯಿತು.

ಈ ಚಿತ್ರವನ್ನು ಮಾಡಿದ್ದು ಶಂಕರಪ್ಪನವರ ಪಾಲಿಗೆ ದೊಡ್ಡ ಸಾಹಸವೆ. ಕೇವಲ ಜನಾಕರ್ಷಣೆಯ ದೃಷ್ಟಿಯಿಂದ ನೋಡಿದರೆ ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತ ಯಾವುದೇ ಚಿತ್ರದ ಬಗ್ಗೆ ಪ್ರೇಕ್ಷಕರ ಆಸಕ್ತಿ ಕಡಿಮೆಯೆ. 'ಮಾಡುವೆವು, ಇಲ್ಲ ಮಡಿಯುವೆವು' ಭಾರತದ ಸ್ವಾತಂತ್ರ್ಯ ಪ್ರೇಮಿಗಳು ಅಂದು ತೊಟ್ಟ ದೀಕ್ಷೆ. ಕರ್ನಾಟಕದಲ್ಲಿ ಕೂಡ ಆಗ ಈ ಅಂತರ್ಗಾಮಿ ಚಳವಳಿ ಬಹಳ ಯಶಸ್ವಿಯಾಗಿಯೇ ನಡೆಯಿತು. ಮೈಚಳಿ ಬಿಟ್ಟು ಕೆಲವು ಹಿಂಸಾತ್ಮಕ ದೃಶ್ಯಗಳನ್ನು ನಿರೂಪಿಸಿದ್ದರೆ ಅದರ ಜನಪ್ರಿಯತೆ ಸಾಕಷ್ಟು ಹೆಚ್ಚುವುದು ಸಾಧ್ಯವಿತ್ತು. ಆದರೆ ಶಂಕರಪ್ಪ ತೀರಾ ಮೇಲುಸ್ತರದ ನಿರೂಪಣೆಯ ಬಗ್ಗೆಯೇ ಒಲವು ತೋರಿದ್ದರಿಂದ ಒಟ್ಟಾರೆ ಪರಿಣಾಮ ಅಷ್ಟಾಗಿ ಹಿತವಾಗಿರಲಿಲ್ಲ. ಅಂದಿನ ಜನಾನುರಾಗಿ ನಟ ಏಣಗಿ ಬಾಳಪ್ಪನವರು ಈ ಚಿತ್ರದಲ್ಲಿ ಮಾಸ್ತರರಾಗಿ ಮುಖ್ಯ ಪಾತ್ರವೊಂದರಲ್ಲಿ ಅಭಿನಯಿಸಿದ್ದೊಂದು ವಿಶೇಷ. ಇದಲ್ಲದೆ ಧಾರವಾಡ ಆಕಾಶವಾಣಿ ಕೇಂದ್ರದ ನೀಲಗಾರ್ ಹಿರೇಮಠ ಮುಂಬೈನ ಕ್ರಿಯಾಶಾಲಿ ಸಂಗೀತ ನಿರ್ದೇಶಕ ಭಾಸ್ಕರ್ ಚಂದಾವರ್ಕರ್ ಸಂಗೀತ ನೀಡಿದ ಈ ಚಿತ್ರಕ್ಕೆ ಖ್ಯಾತ ಸುಗಮ ಸಂಗೀತಜ್ಞ ಮೈಸೂರು ಅನಂತಸ್ವಾಮಿ ಮತ್ತು ಚಂದ್ರಶೇಖರ ಕಂಬಾರರು ಹಿನ್ನೆಲೆ ಗಾಯಕರಾಗಿದ್ದೊಂದು ವಿಶೇಷ. ಆಗೆಲ್ಲ ಹೊಸ ಅಲೆಯ ಚಿತ್ರಗಳೆಂದರೆ ಮಂದಗತಿಯ ಚಿತ್ರಗಳು. ಕಟ್ಟೀಮನಿಯವರ ಕಾದಂಬರಿಯಲ್ಲಿನ ಗಂಡುತನ ಚಿತ್ರದಲ್ಲಿ ಕಾಣಬರದಿದ್ದುದೇ ಅವರ ವೈಫಲ್ಯಕ್ಕೆ ಮೂಲ ಕಾರಣವಾಯಿತು. ಚಿತ್ರದಲ್ಲಿ ಬಳಸಿದ್ದ ಗೋಪಾಲಕೃಷ್ಣ ಅಡಿಗರ ಕವಿತೆ 'ನೆನೆ ನೆನೆ ಆ ದಿನವ ...' ಅನಂತಸ್ವಾಮಿ ಅವರ ಕಂಠದಲ್ಲಿ ಉತ್ಸಾಹ ಉಕ್ಕಿಸುವಂತಿತ್ತು. ಉಷಾದಾತಾರ್ ಅವರ ನೃತ್ಯ ಸಂಯೋಜನೆ ಶಾಸ್ತ್ರಬದ್ಧವೂ ಸಹಜವೂ ಆಗಿ ಮೂಡಿ ಬಂದಿತ್ತು. ತಾರಾಗಣದಲ್ಲಿದ್ದ ಜಿ.ವಿ.ಶಿವಾನಂದ್, ಗಿರಿಜಾ (ಗಿರಿಜಾಲೋಕೇಶ್) ಮೊದಲಾದವರು ಆದಾಗಲೇ ಇದ್ದ ಜಾಡನ್ನು ಬಿಟ್ಟು ಅಭಿನಯಿಸಿದ ವಿಶೇಷವಿತ್ತು. ಈ ಚಿತ್ರದಿಂದ ಮುಂದೆ ಅತ್ಯಂತ ಜನಪ್ರಿಯ ನಟರೆನಿಸಿದ ಸುಧೀರ್ ಇನ್ಸ್‌ಪೆಕ್ಟರ್ ಪಾತ್ರದಿಂದ ಪ್ರವೇಶಿಸಿದರು.

'ಖ್ಯಾತ ಕವಿ ಡಾ|ಡಿ.ವಿ.ಜಿ. ಆಶೀರ್ವಾದ ಪಡೆದ ಮೊಟ್ಟಮೊದಲನೆಯ ಕನ್ನಡ ಚಿತ್ರ' ಎಂಬ ಶೀರ್ಷಿಕೆಯಡಿಯ ಜಾಹಿರಾತುಗಳನ್ನು ಹೊತ್ತು ತೆರೆಗೆ ಬಂದ ಮಾರುತಿ ಚಿತ್ರರವರ 'ಮಹಾತ್ಯಾಗ' ಕನ್ನಡ ಸಾಹಿತ್ಯರಂಗದ ಹಿರಿಯ ಚೇತನ ಎಂ.ಆರ್.ಶ್ರೀನಿವಾಸಮೂರ್ತಿಯವರ ಅದೇ ಹೆಸರಿನ ಕಾದಂಬರಿಯನ್ನು ಆಧರಿಸಿದ ಚಿತ್ರ. ನಾಲ್ವರು ನಿರ್ಮಾಪಕರು (ಎಂ.ಎಸ್.ರಾಮಸ್ವಾಮಿ, ಎಂ.ಎನ್.ಭೀಮರಾವ್, ಎಂ.ಶಿವರಾಂ, ಎ.ಶಿವರಾಂ) ಸೇರಿ ನಿರ್ಮಿಸಿದ ಈ ಚಿತ್ರದ ನಿರ್ದೇಶಕರು ಮಾರುತಿ ಶಿವರಾಂ ಅವರು. ಹಳೆಯ ಕಥೆ. ಅದನ್ನು ಸಮಕಾಲೀನತೆಗೆ ಹೊಂದುವಂತಹ ಚಿತ್ರಕಥೆಯನ್ನಾಗಿ ಪರಿವರ್ತಿಸುವ ಜವಾಬ್ದಾರಿ ಹೊತ್ತ ಶಿವರಾಂ ಆ ಕೆಲಸವನ್ನೇನೋ ಸಾಕಷ್ಟು ಸಮರ್ಪಕವಾಗಿಯೇ ನಿರ್ವಹಿಸಿದರು. ಇದೇ ಅವರ ಮೊದಲ ಚಿತ್ರ. ಈ



(ಚಿತ್ರ ೪೫) 'ಮಾಡಿ ಮಡಿದವರು' ಚಿತ್ರದಲ್ಲಿ ಗಿರಿಜಾ ಮತ್ತು ಕೋದಂಡರಾಮ್

ದೃಷ್ಟಿಯಿಂದ ಅವರ ಚೊಚ್ಚಲ ಪ್ರಯತ್ನ ಭರವಸೆ ಮೂಡಿಸುವಂತೆಯೇ ಇತ್ತು. ನಂದಕಿಶೋರ್ ಎಂಬ ನವನಟನ ಪರಿಚಯ ಈ ಚಿತ್ರದಿಂದಾಯಿತು. ಅವರು ಬಹಳ ಕಾಲ ಚಿತ್ರರಂಗದಲ್ಲಿ ನಿಲ್ಲಲಿಲ್ಲ. ಆದರೆ ಆರತಿಯವರ ಪ್ರೌಢ ಅಭಿನಯ ಶಿವರಾಂರವರ ನಿಷ್ಠೆಯ ಪ್ರಯತ್ನವನ್ನು ಸಾರ್ಥಕಗೊಳಿಸಿತು. ಮುಂದೆ 'ಪರಸಂಗದ ಗೆಂಡೆತಿಮ್ಮ'ದಂತಹ ಪ್ರಮುಖ ಚಿತ್ರವೊಂದನ್ನು ನಿರ್ದೇಶಿಸಿದ ಕೀರ್ತಿ ಮಾರುತಿ ಶಿವರಾಂರದ್ದಾಯಿತು. ಈ ಎರಡು ಪ್ರಯತ್ನಗಳೂ ಕನ್ನಡದಲ್ಲಿ ಕಾದಂಬರಿಯಾಧಾರಿತ, ಸದಭಿರುಚಿಯ ಚಿತ್ರಗಳನ್ನು ನಿರ್ದೇಶಿಸುವುದರಲ್ಲಿ ಅವರು ಪರಿಣತಿ ಪಡೆದು ಗಟ್ಟಿಯಾಗಿ ನಿಲ್ಲುವ ಭರವಸೆಯನ್ನು ಹುಟ್ಟಿಸಿದರೂ ವಾಸ್ತವವಾಗಿ ಹಾಗಾಗಲಿಲ್ಲ.

ಅದೇ ವರ್ಷ ತೆರೆಗೆ ಬಂದ ರಾಜಕುಮಾರ್ ನಾಯಕರಾಗಿದ್ದ 'ಬಂಗಾರದ ಪಂಜರ' ಮುಂದೆ ಕನ್ನಡ ಚಿತ್ರರಂಗದ ಪ್ರಮುಖ ವ್ಯಾಪಾರಿ ಚಿತ್ರಗಳ ನಿರ್ದೇಶಕರಾಗಿ ತಮ್ಮ ಸ್ಥಾನವನ್ನು ಗಟ್ಟಿ ಮಾಡಿಕೊಂಡ ವಿ.ಸೋಮಶೇಖರ್‌ರವರ ಪ್ರಥಮ ಚಿತ್ರ. ಈ ವರ್ಣ ಚಿತ್ರದಲ್ಲಿ ಸೋಮಶೇಖರ್ ಪ್ರಥಮ ಬಾರಿಗೆ ಕನ್ನಡ ಚಿತ್ರವೊಂದಕ್ಕೆ ಖ್ಯಾತ ಗಾಯಕಿ ಆಶಾ ಭೋಂಸ್ಲೆ ಹಾಡಿದ ಹಾಡೊಂದನ್ನು ಮುಂಬೈನಲ್ಲಿಯೇ ಧ್ವನಿಮುದ್ರಿಸಿಕೊಂಡಿದ್ದರು. ಇದು ಮರಾಠಿ ನಟ ದಾದಾ ಕೋಂಡ್ಕೆಯವರ 'ಏಕ್‌ತಾ ಜೀವ ಸದಾಶಿವ' ಎಂಬ ಚಿತ್ರವನ್ನು ಆಧರಿಸಿದ ಚಿತ್ರ. ಈ ಚಿತ್ರದ ವಸ್ತುವಿನ ಆಯ್ಕೆಯ ಹಿನ್ನಲೆಯಲ್ಲಿ ವೈಶಾಲಿ ಕಾಸರವಳ್ಳಿಯವರ ತಂದೆ ಚಿಟಗೋಪಿ ಅವರ ಪಾತ್ರವೂ ಇತ್ತು.

'ಮಣ್ಣಿನ ಮಗಳು' ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿಯೊಂದರ ಆಧಾರದ ಮೇಲೆ ಬಿ.ಎಸ್.ರಂಗಾ ನಿರ್ಮಿಸಿ, ನಿರ್ದೇಶಿಸಿದ ಚಿತ್ರ. ಕಥೆಗೆ ಮೆಹಬೂಬ್‌ರವರ ಚಿರಸ್ಮರಣೀಯ ಹಿಂದಿ ಚಿತ್ರ 'ಮದರ್ ಇಂಡಿಯಾ'ವೇ ಮೂಲ. ಆದರೆ ಮೂಲ ಚಿತ್ರಕ್ಕೂ ಈ ಚಿತ್ರಕ್ಕೂ ಹೋಲಿಕೆ ಅಲ್ಲಿಯೇ ನಿಂತಿತು. ಗಲ್ಲಾಪೆಟ್ಟಿಗೆಯಲ್ಲಿಯೂ ಚಿತ್ರ ಗಮನೀಯವಾಗಿ ಸೋತಿತು. ಜಯಂತಿಯವರ ಅಭಿನಯವೊಂದೇ ಜೀವಾಳ.

ಹೇಳುವಂಥ ವಿಶೇಷಗಳಿಲ್ಲವಾದರೂ ಕೊರಟಿ ಶ್ರೀನಿವಾಸರಾಯರ ಕಾದಂಬರಿ ಆಧರಿಸಿದ 'ಗೃಹಿಣಿ' ಮತ್ತು ಸಿ.ಜಿ.ಹಂಪಣ್ಣ ಅವರ ಕೃತಿ ಆಧರಿಸಿದ 'ಪ್ರೇಮಪಾಶ' ಚಿತ್ರಗಳು ತೆರೆಗೆ ಬಂದವು.

ರಾಜಕುಮಾರ್ ಅವರ ಅಭಿನಯದ ಬಹುತಾರಾಗಣವಿದ್ದ 'ಶ್ರೀನಿವಾಸ ಕಲ್ಯಾಣ' ಕೂಡಾ ಅತ್ಯಂತ ಶ್ರೀಮಂತ ಚಿತ್ರವಾಗಿ ಜನರಂಜನೆ ಒದಗಿಸಿತ್ತು.

'ಶ್ರೀನಿವಾಸ ಕಲ್ಯಾಣ' ಚಿತ್ರವು ಪಾರ್ವತಮ್ಮ ರಾಜಕುಮಾರ್ ಅವರ ಸಹೋದರ ಎಸ್.ಎ.ಶ್ರೀನಿವಾಸ್ ನಿರ್ಮಾಣದಲ್ಲಿ ತೆರೆಗೆ ಬಂತು. ವಿಜಯ್ ನಿರ್ದೇಶಿಸಿದ್ದರು. ಆ ಹೊತ್ತಿಗಾಗಲೇ ತೆಲುಗಿನಲ್ಲಿ ಎರಡು ಬಾರಿ ತೆರೆಗೆ ಬಂದಿದ್ದ ಕಥೆಯನ್ನು ಕನ್ನಡದಲ್ಲಿ ನಿರ್ಮಿಸುವ ತೀರ್ಮಾನವೇ ಸಾಹಸದ್ದಾಗಿತ್ತು. ಅದ್ದೂರಿಯಾಗಿ ತಯಾರಾದ ಚಿತ್ರ. ಮುಖ್ಯವಾಗಿ ಈ ಚಿತ್ರದಿಂದ ರಾಜಕುಮಾರ್ ಅವರ ನಿರ್ಮಾಣ ಸಂಸ್ಥೆ ವ್ಯಾವಹಾರಿಕ ಕ್ಷೇತ್ರಕ್ಕೂ ಕಾಲಿಟ್ಟು ಒಂದು ವ್ಯವಸ್ಥಿತ ಸ್ವರೂಪವನ್ನು ತಂದುಕೊಡಲು ಪ್ರಯತ್ನಿಸಿತು ಎಂಬುದು ಆ ಸಂಸ್ಥೆಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಗಮನಿಸಬೇಕಾದ ಸಂಗತಿ. ಚಿಟ್ಟಿಬಾಬು ಅವರ ಛಾಯಾಗ್ರಹಣ ಕಣ್ಣಿಗೆ ಹಬ್ಬವನ್ನುಂಟು ಮಾಡಿತ್ತು. ರಾಜಕುಮಾರ್ ಪದ್ಮಾವತಿ ಪರಿಣಯದ ಮೊದಲು ಸರಸ ಸನ್ನಿವೇಶಗಳಲ್ಲಿ ಲವಲವಿಕೆಯಿಂದ ಅಭಿನಯಿಸಿದ್ದರು. ಕೊರವಂಜಿಯಾಗಿ ಅವರ ಅಭಿನಯ ಚಿತ್ರ ಪ್ರೇಕ್ಷಕನನ್ನು ಹುಚ್ಚೆಬ್ಬಿಸುವಷ್ಟು ಸೊಗಸಾಗಿತ್ತು. ರಾಜಕುಮಾರ್ ಹಾಡಿದ್ದ ಹಾಡುಗಳೂ ಜನಪ್ರಿಯವಾದವು. ಚಿ.ಉದಯಶಂಕರ್, ಸದಾಶಿವಯ್ಯನವರ ಗೀತೆಗಳು, ಶ್ಲೋಕಗಳು ರಾಜನ್-ನಾಗೇಂದ್ರ ಸಂಗೀತದಲ್ಲಿ ರಮ್ಯವಾಗಿದ್ದವು. ಬಿ.ಸರೋಜಾದೇವಿ ಲಕ್ಷ್ಮೀಯಾಗಿ, ಮಂಜುಳಾ ಪದ್ಮಾವತಿಯಾಗಿ ರಂಜಿಸಿದರು. ಬದಿಯ ಪಾತ್ರಗಳಾದರೂ ಅಣ್ಣಮಾಚಾರ್ಯನಾಗಿ ರಾಜಾಶಂಕರ್, ಬಕುಳಾದೇವಿಯಾಗಿ ಆದವಾನಿ ಲಕ್ಷ್ಮೀದೇವಿ ಎದ್ದು ಕಾಣುವಂತೆ ನಿರ್ವಹಣೆಯಾಗಿತ್ತು. ಭೃಗುಮುನಿಯಾಗಿ ನಾರಾಯಣನ ಎದೆಗೊದ್ದು ಅಹಂಕಾರದ ಕಣ್ಣು ಮುರಿಸಿಕೊಂಡವರು ವಜ್ರಮುನಿ. ಇವರೆಲ್ಲ ಸಾಮಾಜಿಕ ವಸ್ತುವಿನಲ್ಲಿ ಕಂಡ ರೀತಿಗಿಂತ ಭಿನ್ನವಾಗಿ ಇಂಥ ಕಥಾವಸ್ತುವಿಗೆ ಒಗ್ಗಿಕೊಂಡದ್ದೇ ಒಂದು ವಿಶೇಷ. ಚಿತ್ರ ಶ್ರೀನಿವಾಸ ಆರ್ಟ್ ಕಂಬೈನ್ಸ್ ಲಾಂಛನದಲ್ಲಿ ತಯಾರಾಗಿತ್ತು.

೧೯೭೪ರಲ್ಲಿ ಸಿದ್ಧವಾದ 'ಹೇಮರೆಡ್ಡಿ ಮಲ್ಲಮ್ಮ' ಎರಡನೆಯ ಬಾರಿ ಸಿದ್ಧವಾದ ಚಿತ್ರ. ಹಿಂದೆ ಗುಬ್ಬಿವೀರಣ್ಣ ನಿರ್ಮಿಸಿದ್ದರು. ಬಿ.ಜಯಮ್ಮ ಮೊದಲಾದವರ ಅಭಿನಯವಿತ್ತು. ಈ ಚಿತ್ರದಲ್ಲಿ ಪಂಢರಿಬಾಯಿ, ರಾಜಾಶಂಕರ್ ಮೊದಲಾದವರಿದ್ದರು. ವೇಶ್ಯೆಯ ಪಾತ್ರದಲ್ಲಿ ಮೊದಲ ಚಿತ್ರದಲ್ಲಿ ನಂಜನಗೂಡಿನ ಜಯಮ್ಮ ಎಂಬುವವರಿದ್ದರೆಂದೂ, ಒಂದು ವಿಶೇಷ ಸನ್ನಿವೇಶದಲ್ಲಿ ಆಕೆಯ 'ನಗ್ನ'ತೆಯನ್ನು ತೋರಿಸಿದ್ದು, ಬಹುವಾಗಿ ಟೀಕೆಗಳು ಬಂದಿದ್ದುವೆಂದು ಈ ಹಿಂದೆಯೇ ಸೂಚಿಸಲಾಗಿದೆಯಷ್ಟೆ. ಈ ಚಿತ್ರದಲ್ಲಿ ಅಂಥ ಸನ್ನಿವೇಶ ಬಂದಾಗ ವೇಶ್ಯೆಯ ಪಾತ್ರಧಾರಿಯು ನರ್ತಿಸುತ್ತಿರುವಾಗಲೇ ಬಣ್ಣಗೆಟ್ಟು ಕಪ್ಪಾಗಿ, ಅಸ್ಥಿಪಂಜರದಂತಾಗುವ ರೀತಿಯಲ್ಲಿ ತೋರಿಸಲಾಗಿತ್ತು. ಅಂಥದೊಂದು ಪ್ರಸಂಗದಿಂದ ರಸಿಕನಾಗಿದ್ದ ಯುವಕ ವೈರಾಗ್ಯದಿಂದ ಹೊರಟು ಹೋಗುತ್ತಾನೆಂದು ಹೇಳಲಾಗಿದೆ. ಪಂಢರಿಬಾಯಿಯವರ ಪಾತ್ರ ಮುಗ್ಧ-ಪೆದ್ದ ಗಂಡನನ್ನು ಸರಿಹೊಂದಿಸಿಕೊಂಡು, ಅತ್ತೆಯ ಕಾಟವನ್ನು ಸಹಿಸಿಕೊಂಡು, ದೈವಲೀಲೆ-ಪರೀಕ್ಷೆಗಳಿಗೆ ಒಡ್ಡಿಕೊಂಡು, ತನ್ನ ಶೀಲವನ್ನು ಶಂಕಿಸಿ ಬಂದ ಅಪವಾದಗಳನ್ನು ಸಹಿಸಿ ದೈವಭಕ್ತಿಯಿಂದ ಎಲ್ಲ ಸಂಕಟಗಳಿಂದ ಪಾರಾಗುವ ಕಥೆಯಿದು. ಈ ಕಾಲಕ್ಕೆ ಒಂದು ಫ್ಯಾಂಟಸಿಯಾಗಿ ಕೂಡಾ ಇದನ್ನು ಪ್ರೇಕ್ಷಕ ಸ್ವೀಕರಿಸಲಿಲ್ಲವೆನ್ನಿಸುತ್ತದೆ.

ದಕ್ಷಿಣ ಭಾರತ ಚಿತ್ರರಂಗದ ಪ್ರಮುಖರಲ್ಲೊಬ್ಬರೂ, ಕನ್ನಡ ಚಿತ್ರರಂಗದ ಅಪ್ರತಿಮ ಸಾಹಸಿಗಳಲ್ಲೊಬ್ಬರೂ ಆಗಿದ್ದ ಬಿ.ಆರ್.ಪಂತುಲು ೧೯೭೪ರಲ್ಲಿ ನಿಧನರಾಗಿ ಕನ್ನಡ ಚಿತ್ರೋದ್ಯಮದ ಒಂದು ಸುವರ್ಣ ಅಧ್ಯಾಯವನ್ನೇ ಅಂತ್ಯಗೊಳಿಸಿದರು. ಅವರಿಗಾಗ ಕೇವಲ ೬೪ ವರ್ಷಗಳು. ಆದರೆ ಅವರು ಮಾಡಿದ ಸಾಧನೆಗಳು ಅಪಾರ. ತಮ್ಮ ಪದ್ಮಿನಿ ಪಿಕ್ಚರ್ಸ್‌ನ ಬೆಳ್ಳಿ ಹಬ್ಬದ ನೆನಪಿಗಾಗಿ ತಾವೇ ನಿರ್ಮಿಸಿ, ತಮ್ಮ ಶಿಷ್ಯ ಪುಟ್ಟಣ್ಣ ಕಣಗಾಲ್ ನಿರ್ದೇಶಿಸಲಿದ್ದ ಬಿ.ಜಿ.ಎಲ್.ಸ್ವಾಮಿಯವರ ವಿಡಂಬನಾತ್ಮಕ ಕೃತಿ 'ಕಾಲೇಜುರಂಗ'ದ ಬಗ್ಗೆ ಪುಟ್ಟಣ್ಣನವರೊಡನೆ ಚರ್ಚಿಸಲೆಂದೇ ಮದರಾಸಿನಿಂದ ಬೆಂಗಳೂರಿಗೆ ಬಂದಿದ್ದ ಅವರಿಗೆ ವುಡ್‌ಲ್ಯಾಂಡ್ಸ್ ಹೋಟಲಿನ ತಮ್ಮ ಕೋಣೆಯಲ್ಲಿಯೇ



(ಚಿತ್ರ ೪೬) 'ಶ್ರೀನಿವಾಸ ಕಲ್ಯಾಣ' ಚಿತ್ರದಲ್ಲಿ ರಾಜಕುಮಾರ್

ಹೃದಯಾಘಾತವಾಯಿತು. ಪುಟ್ಟಣ್ಣ ಆಗ ತಾನೇ ಮುಂಬಯಿನಿಂದ ಬೆಂಗಳೂರಿಗೆ ಬರಬೇಕಾಗಿತ್ತು. ಆದರೆ ಅವರು ಬರುವ ಮುಂಚೆಯೇ ಪಂತುಲು ತೀರಿಕೊಂಡರು.

ಅದೇ ವರ್ಷ ತೆಲುಗು ಚಿತ್ರರಂಗದ ಖ್ಯಾತ ಸಂಗೀತ ನಿರ್ದೇಶಕ ಮತ್ತು ಗಾಯಕ ಘಂಟಸಾಲ ಕೂಡ ನಿಧನರಾದರು. ೧೯೭೦ರ ದಶಕದ ಒಂದೆರಡು ಕನ್ನಡ ಚಿತ್ರಗಳಿಗೂ ಅವರ ಸೇವೆ ಸಂದಿತ್ತು.

ಕನ್ನಡ ರಂಗಭೂಮಿ ಮತ್ತು ಸಾಹಿತ್ಯ ರಂಗಗಳಲ್ಲಿ ದೊಡ್ಡ ಹೆಸರಾಗಿ ಬೆಳೆದು 'ಸಂಸ್ಕಾರ' ಮೊದಲುಗೊಂಡು ಕೆಲವು ಉತ್ಕೃಷ್ಟ ಹೊಸ ಅಲೆಯ ಚಿತ್ರಗಳಲ್ಲಿ ತೊಡಗಿಕೊಂಡ ಗಿರೀಶ್ ಕಾರ್ನಾಡ್‌ರಿಗೆ ಈ ವರ್ಷ ಭಾರತ ಸರ್ಕಾರದಿಂದ ಪದ್ಮಶ್ರೀ ಪ್ರಶಸ್ತಿ ಲಭ್ಯವಾಯಿತು. ರಾಜಕುಮಾರ್‌ರಿಗೆ ಅವರ ಅಭಿಮಾನಿಗಳು 'ರಸಿಕರ ರಾಜ' ಪ್ರಶಸ್ತಿಯನ್ನಿತ್ತು ಗೌರವಿಸಿದರು. 'ಬೂತಯ್ಯನ ಮಗ ಅಯ್ಯು', 'ಎರಡು ಕನಸು', 'ಸಂಪತ್ತಿಗೆ ಸವಾಲ್' ಮತ್ತು 'ಭಕ್ತ ಕುಂಬಾರ' ಚಿತ್ರಗಳು ಶತದಿನೋತ್ಸವಗಳನ್ನು ವೈಭವದಿಂದ ಆಚರಿಸಿಕೊಂಡವು.

೧೯೭೫ರಲ್ಲಿ ಬಿಡುಗಡೆಯಾದ ಕನ್ನಡ ಚಿತ್ರಗಳ ಸಂಖ್ಯೆ ಕಳೆದ ವರ್ಷದ ೨೩ರಿಂದ ೩೦ಕ್ಕೇರಿತು. ಅಷ್ಟೇ ಅಲ್ಲ, 'ಚೋಮನ ದುಡಿ' ಮತ್ತು 'ಹಂಸಗೀತೆ'ಗಳಂತಹ ಜಾಗತಿಕ ಚಿತ್ರರಂಗದ ಗಮನವನ್ನು ಸೆಳೆದ ಹೊಸ ಅಲೆಯ ಚಿತ್ರಗಳು ತೆರೆಕಂಡ ವರ್ಷವೂ ಇದೇ. ಜೊತೆಗೆ ಇದೇ ವರ್ಷ ಆರ್ಥಿಕವಾಗಿ ತುಂಬಾ ಯಶಸ್ವಿಯೆನಿಸಿದ ಐದಾರು ಚಿತ್ರಗಳೂ ತೆರೆಗೆ ಬಂದವು.



(ಚಿತ್ರ ೪೭) 'ಹೇಮರೆಡ್ಡಿ ಮಲ್ಲಮ್ಮ' ಚಿತ್ರದಲ್ಲಿ ರಾಜಾಶಂಕರ್, ಎ.ನಾಗಯ್ಯ, ಪಂಢರಿಬಾಯಿ, ಪಾಪಮ್ಮ ಮತ್ತು ರಮಾ

ದಶಕದ ಮೊದಲನೆಯ ವರ್ಷದಲ್ಲಿ ನಡೆದ 'ಸಾಕ್ಷಾತ್ಕಾರ' ಹಗರಣದಿಂದ ಈಚೆ ಬಂದು, ನಂತರ ಉತ್ತಮ ಚಿತ್ರಗಳನ್ನೇ ನಿರ್ದೇಶಿಸಿ, ಕನ್ನಡ ಚಿತ್ರರಂಗದಲ್ಲಿ ನಿರ್ದೇಶಕರ ಪೈಕಿ ಪ್ರಥಮರ ಸಾಲಿಗೆ ಬಂದು ನಿಂತ ಪುಟ್ಟಣ್ಣ ಕಣಗಾಲ್ ಇದೇ ವರ್ಷ 'ಶುಭಮಂಗಳ'ದಂತಹ ಗಲ್ಲಾಪೆಟ್ಟಿಗೆಯಲ್ಲಿ ಭರ್ಜರಿ ಯಶಸ್ಸನ್ನು ಪಡೆದ ಚಿತ್ರವನ್ನು ತೆರೆಗಿತ್ತು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಕಾದಂಬರಿಯಿಂದ ಎರಡು ಪುಟ ಹರಿದು ಅದನ್ನು ಆಧರಿಸಿ ಚಿತ್ರ ಮಾಡಿರುವೆನೆಂಬ ಸಾಹಸದ ಹೇಳಿಕೆ ನೀಡಿದರು ಪುಟ್ಟಣ್ಣ.

ಈ ಚಿತ್ರ ಆ ವೇಳೆಗೆ ಪುಟ್ಟಣ್ಣನವರ ವೈಯಕ್ತಿಕ ಜೀವನದ ಒಂದು ಅಂಗವೇ ಆಗಿದ ಆರತಿಯವರಿಗಾಗಿಯೇ ತಯಾರಿಸಿದಂತಿದ್ದರೂ ಅದು ತಮ್ಮ ವೃತ್ತಿಜೀವನದಲ್ಲಿ ಕವಲುದಾರಿಗೆ ಬಂದಿದ್ದ ನಾಯಕ ನಟ ಶ್ರೀನಾಥ್‌ರನ್ನು ಮತ್ತೆ ಮೇಲೆತ್ತಿತು. 'ಶುಭಮಂಗಳ'ದಲ್ಲಿ ದೃಶ್ಯ ವೈಭವದ ದೃಷ್ಟಿಯಿಂದ ಪುಟ್ಟಣ್ಣ ಕೆಲವು ಅಪರಿಚಿತ ಹೊರಾಂಗಣಗಳನ್ನು ಹುಡುಕಿ ಚಿತ್ರಿಸಿದರು. ಮೈಸೂರಿನ ಪ್ರೀಮಿಯರ್ ಸ್ಟುಡಿಯೋದಲ್ಲಿಯೇ ಸೃಜಿಸಿಸಿದ ಸಮುದ್ರ ತೀರದ ಮನೆಯ ಸೆಟ್ ಒಂದನ್ನು ಹಾಕಿಸಿದರು. ಅದು ಸುಂದರವೂ, ಶ್ರೀಮಂತವೂ ಆಗಿತ್ತು, ಸ್ವಜವಾಗಿತ್ತು. ಉಡುಪಿ ಬಳಿಯ ಸೇಂಟ್ ಮೇರಿ ದ್ವೀಪದಲ್ಲಿ ಚಿತ್ರಿತವಾದ ಈ ಚಿತ್ರ ಮುಖ್ಯವಾಗಿ ಆ ದ್ವೀಪದ ಸೌಂದರ್ಯದ ಬಗ್ಗೆ ಕನ್ನಡಿಗರ ಗಮನ ಸೆಳೆದು ಇಂದಿಗೂ ಅದನ್ನು ಒಂದು ಜನಪ್ರಿಯ ಪ್ರವಾಸಿ ಕೇಂದ್ರವನ್ನಾಗಿ ಮಾಡಿದೆ.

'ಶುಭಮಂಗಳ'ದಲ್ಲಿ ಸಂಗೀತ ನಿರ್ದೇಶಕ ವಿಜಯಭಾಸ್ಕರ್ ಕೆಲವು ವಿಶಿಷ್ಟ ಹಾಡುಗಳನ್ನು ಸಂಯೋಜಿಸಿದ್ದಾರೆ. 'ಸೂರ್ಯಂಗು ಚಂದ್ರಂಗು ಬಂದಾರ ಮುನಿಸು ನಗುತಾದ ಭೂತಾಯಿ ಮನಸು...' ಸಂಯೋಜನೆಯು ಎಷ್ಟು ವಿನೂತನವಾಗಿತ್ತೋ ಪುಟ್ಟಣ್ಣನವರ ಚಿತ್ರೀಕರಣದಲ್ಲಿಯೂ ಅಷ್ಟೆ ಕೌಶಲವಿತ್ತು. ಈ ಹಾಡು ನಿರ್ಮಾಪಕ-ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ (ರವೀ) ಅವರನ್ನು ಒಬ್ಬ ಪ್ರಭಾವಿ ಗಾಯಕನನ್ನಾಗಿ ಪರಿಚಯಿಸಿತು. 'ನಾಕೊಂದ್ಲ ನಾಕು...' ಈ ಚಿತ್ರದ ಮತ್ತೊಂದು ಜನಪ್ರಿಯ ಗೀತೆ. ಈ ಎರಡೂ ಗೀತೆಗಳನ್ನು ಈ ಚಿತ್ರದ ಮೂಲಕವೇ ಪರಿಚಿತರಾದ ಎಂ.ಎನ್.ವ್ಯಾಸರಾವ್ ರಚಿಸಿದ್ದರು. ಈ ಹಾಡಿನ ಚಿತ್ರೀಕರಣವೂ ಗಮನ ಸೆಳೆಯಿತು. ಆದರೂ ಸರಳ ಸ್ನೇಹವೇ ಪ್ರಧಾನವಾದ ಕಥೆಯನ್ನು ಆತ್ಮೀಯವಾಗಿ ನಿರೂಪಿಸಿದ ಈ ಚಿತ್ರದಲ್ಲಿ ಎನ್.ಜಿ.ರಾಯರ ವರ್ಣ ಛಾಯಾಗ್ರಹಣ ಗಮನಾರ್ಹ ಅಂಶಗಳಲ್ಲಿ ಒಂದೆನಿಸಿತು. ಬಣ್ಣಗಳ ಬಳಕೆಯಲ್ಲಿ ರಾಯರು ಜಾಗರೂಕತೆ ವಹಿಸಿದರು. ಒಬ್ಬ ತೈಲ ಚಿತ್ರಕಾರ ವಿವಿಧ ವರ್ಣಗಳಿಂದ ಅಂದವಾದ, ಚೇತೋಹಾರಿಯಾದ ಚಿತ್ರವನ್ನು ರೂಪಿಸುವಂತೆ ತಾವು ಈ ಚಿತ್ರದಲ್ಲಿ ಬಣ್ಣಗಳನ್ನು ಉಪಯೋಗಿಸಿದ್ದಾಗಿ ವಿವರಿಸಿದ ಅವರು ಅನೇಕ ವರ್ಣ ಚಿತ್ರಗಳಲ್ಲಿ ಸಾಮಾನ್ಯವಾಗಿ ಕಾಣುವ ನಾಯಕ-ನಾಯಕಿಯರ ಮೇಲೆ ಹರಿಯುವ ಅತಿ ಬಣ್ಣಗಳನ್ನು ಬಳಸಲಿಲ್ಲ. ಎಲ್ಲ ಕಲಾವಿದರ 'ಸ್ಕಿನ್ ಟೋನ್'ಗೆ ತಕ್ಕಂತೆ, ದೃಶ್ಯದ ಕಲ್ಪನೆಗೆ ಹೊಂದಿಕೊಂಡಂತೆ ಬಣ್ಣ ಮತ್ತು ಬೆಳಕುಗಳನ್ನು ಉಪಯೋಗಿಸಿದರು. ಇದಲ್ಲದೆ ಹೊರಾಂಗಣ ಮತ್ತು ಒಳಾಂಗಣ ದೃಶ್ಯಗಳನ್ನು ಅವರು ಹೊಂದಿಸಿದ ರೀತಿ ಅವರಿಗೆ ವಿಶೇಷ ಪ್ರಶಂಸೆಯನ್ನು ತಂದುಕೊಟ್ಟಿತು.

ಅತ್ಯಂತ ಸ್ವಾಭಿಮಾನಿ ಸ್ತ್ರೀಯೊಬ್ಬಳನ್ನು ಚಿತ್ರಿಸುವ ಪ್ರಯತ್ನವಿತ್ತು. ಅಂಥ ಅವಕಾಶವನ್ನು ಬಳಸಿಕೊಂಡು ಸ್ವಾವಲಂಬನೆಯಂಥ ಪರಿಕಲ್ಪನೆಯೇ ಸ್ತ್ರೀಯರಿಗೆ ಸಲ್ಲ. ಆಕೆ ಎಂದೂ ಅಧೀನಳು ಎಂಬ ಧ್ವನಿಯನ್ನು ಕೊಟ್ಟರು ಪುಟ್ಟಣ್ಣ. ಚಿತ್ರದಲ್ಲಿ ನಾಯಕಿಯ ಜೊತೆಗೆ ಬಾಡಿಗಾರ್ಡ್‌ಗಳ ಹಾಗೆ ಸದಾ ಇರುವ, ಸಮಸ್ಯೆ ಎದುರಾದಾಗ ಹೊಡೆದಾಡಿ ಸರಿಪಡಿಸುವ ಇಬ್ಬರು ಧಾಂಡಿಗರನ್ನಿಟ್ಟರು. ಅವರಲ್ಲೊಬ್ಬ ಮೂಗ. 'ಈ ಶತಮಾನದ 'ಮಾದರಿ ಹೆಣ್ಣು....' ಎಂಬ ಗೀತೆಯ ಚಿತ್ರೀಕರಣವನ್ನು ಉದಾಹರಿಸಿ ಆ ಪರಿಕಲ್ಪನೆಯನ್ನೇ ಟೀಕಿಸಿದವು ಪತ್ರಿಕೆಗಳು.

''ಎರಡು ಸೀನ್ ಇದೆ, ನಿಮ್ಮಿಂದ ರಾಜಹಾಸ್ಯ ಬೇಕು. ಅದೇನು ಮಾಡ್ತೀರೋ ಹ್ಯಾಗೆ ಮಾಡ್ತೀರೊ ಗೊತ್ತಿಲ್ಲ ಅಂದು ಬಿಟ್ಟರು ಪುಟ್ಟಣ್ಣ. ನಾನು ಹಾಸ್ಯ ಪಾತ್ರ ಮಾಡಿದೋನೇ ಅಲ್ಲ. ಇನ್ನು ರಾಜಹಾಸ್ಯವಂತೆ... ಆ ಪದವೇ ಕೇಳಿರ್ಲಿಲ್ಲ. ಎಂದೋ ಒಂದು ಸ್ಕಿಟ್ ನೋಡಿದ್ದು ನೆನಪು ಮಾಡಿಕೊಂಡೆ. ಅದರಲ್ಲಿ ವೈದ್ಯನೇ ರೋಗಿ. ಪುಟ್ಟಣ್ಣ ಹೇಳಿದ್ದೂ ವೈದ್ಯನಾಗಿ ಬರುವ ದೃಶ್ಯವೇ ಆಗಿತ್ತು. ಸಂಭಾಷಣೆ ಜಾಸ್ತಿ ಇರೋದಿಲ್ಲ. ಏನಾದರೂ ಮ್ಯಾನರಿಸಂ ಮಾಡಬೇಕು, ಜನರ ಮನಸ್ಸಿನಲ್ಲಿ ಅದು ನಾಟುವ ಹಾಗಿರಬೇಕು. ಮೇಕಪ್ ವೀರಾಸ್ವಾಮಿಯನ್ನು ಕರೆದೆ. ಅವನಾಗಲೇ ಮಾಡಿದ್ದ ಮೇಕಪ್ ಎಲ್ಲ ತೆಗೀ ಅಂದೆ. ಆತನಿಗೆ ಭಯ, ಡೈರೆಕ್ಟ್ರು ಹೇಳಿದಾರೆ ಅಂದ. ಬಲವಂತ ಮಾಡಿ ಕ್ರಾಪು, ಮೀಸೆ ಎಲ್ಲ ಬದಲಾಯಿಸಿ ಬೇರೆ ಥರಾನೇ ಹೋಗಿ ನಿಂತೆ. ಇದೇನು ವೇಷಾನೇ ಬದಲಾಗಿ ಹೋಗಿದೆ ಅಂತ ಅವರಿಗೆ ಆಶ್ಚರ್ಯ. ನಾನೇ ಪೇಷೆಂಟು ಸಾರ್, ನಾನೇ ಸರಳ್ತಾ ಇರ್ತೀನಿ. ಮಾಮೂಲಿ ಅಶ್ವತ್ ಬಿಟ್ಟು ಬೇರೆ ಥರಾ ಗೂರ್ಲು..ಯೊಯ್...ಯೋ ಯ್ ವ್ ವ್.. ಅಂತ ಮಾಡಿ ತೋರಿಸೇಬಿಟ್ಟೆ. ಅವರಿಗೆ ನಗು ತಡೆಯೋಕ್ಕಾಗ್ಲಿಲ್ಲ ನೋಡಿ. ಚಿತ್ರೀಕರಣ ಮುಗಿಯಿತು. ಎರಡೇ ಚಿತ್ರಿಕೆಗಳು. ಪುಟ್ಟಣ್ಣ-ಯೂನಿಟ್‌ನೋರು ಹಾಗಿರಲಿ ಚಿತ್ರ ತೆರೆಗೆ ಬಂದ ಮೇಲೆ ನನ್ನ ಆ ಪುಟ್ಟ ಪಾತ್ರಾನೇ ಬಹಳವಾಗಿ ಹೇಳ್ತಾ ಇದ್ರಲ್ಲ...'' ಎಂದು ನೆನಪು ಮಾಡಿಕೊಳ್ಳುತ್ತಾರೆ ನಟ ಕೆ.ಎಸ್.ಅಶ್ವತ್ಥ್. ಚಿಕ್ಕದಾದರೂ 'ಶುಭಮಂಗಳ'ದ ವೈದ್ಯನ ಪಾತ್ರದಲ್ಲಿ ಅವರು ಜನಮನ ಗೆದ್ದಿದ್ದರು.

ಇದೇ ವರ್ಷ ಪುಟ್ಟಣ್ಣನವರ ನಿರ್ದೇಶನದಲ್ಲಿ ಇನ್ನೂ ಒಂದು ಚಿತ್ರ ತೆರೆಗೆ ಬಂತು. 'ಶುಭಮಂಗಳ' ವಾಣಿಯವರ ಕಾದಂಬರಿಯನ್ನು ಆಧರಿಸಿದ ಚಿತ್ರವಾದರೆ, ಅವರ 'ಬಿಳೀ ಹೆಂಡ್ತಿ'ಗೆ ಮ.ನ.ಮೂರ್ತಿಯವರ ಅದೇ ಹೆಸರಿನ ಕಾದಂಬರಿ ಮೂಲ. ಈ ಚಿತ್ರ ಪುಟ್ಟಣ್ಣನವರ ಪ್ರತಿಭೆಯನ್ನು ಗಮನಾರ್ಹವಾಗಿ ಹೆಚ್ಚಿಸಲಿಲ್ಲವಾದರೂ, ಕೆಲವು ಅಂಶಗಳಲ್ಲಿ ಹೊಸ ಅನುಭವವನ್ನು ನೀಡಿತು. ವಿದೇಶಿ ಹುಡುಗಿಯನ್ನು ಮದುವೆಯಾಗಿ ಮನೆಗೆ ಕರೆತಂದರೆ ಸಂಪ್ರದಾಯಬದ್ಧ ಕುಟುಂಬವೊಂದರಲ್ಲಿ ಆಗುವ ನಿತ್ಯ ಜೀವನದ ಏರು-ಪೇರುಗಳನ್ನು ಚಿತ್ರಿಸಿದ 'ಬಿಳೀ ಹೆಂಡ್ತಿ'ಯಲ್ಲಿ ಆಗ ಮೈಸೂರಿನ ಮಾನಸಗಂಗೋತ್ರಿಯಲ್ಲಿ ಓದುತ್ತಿದ್ದ ಅಮೆರಿಕನ್ ಹುಡುಗಿ ಮಾರ್ಗರೆಟ್ ಥಾಂಸನ್ ಹಾಗೂ ಅದೇ ತಾನೇ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಿಂದ ಪದವಿ ಪಡೆದು ಬಂದಿದ್ದ ಜೈಪುರದ ಅನಿಲ್ ಕುಮಾರ್‌ರನ್ನು ಪುಟ್ಟಣ್ಣ ಮುಖ್ಯ ಪಾತ್ರಗಳಲ್ಲಿ ಹಾಕಿಕೊಂಡರು. ಪುಟ್ಟಣ್ಣನವರ ಚಿತ್ರಗಳಲ್ಲಿ ಪಾತ್ರ ವಹಿಸಲಿಲ್ಲವೇಕೆ ಎಂಬ ಪ್ರಶ್ನೆಯನ್ನು ಪದೇ ಪದೇ ಎದುರಿಸುತ್ತಿದ್ದ ಉದಯಕುಮಾರ್ ಈ ಚಿತ್ರದಲ್ಲಿ ಒಬ್ಬ ಶ್ರೋತ್ರಿಯ ಬ್ರಾಹ್ಮಣನ ಪಾತ್ರದಲ್ಲಿ ಮಿಂಚಿದರು. ಈ ಚಿತ್ರಕ್ಕೆ ವಿದೇಶಿ ನಟಿಯೊಬ್ಬಳನ್ನು ಹುಡುಕುವುದೇ ಒಂದು ದೊಡ್ಡ ಪ್ರಯಾಸದ ಕೆಲಸವಾಯಿತು. ಈ ನಟಿಯ ಆಯ್ಕೆಯಾಗುವ ಮುಂಚೆಯೇ ಒಂದು ಸುತ್ತಿನ ಚಿತ್ರೀಕರಣವೂ ಮುಗಿದಿತ್ತು. ಆದರೂ ನಾಯಕಿ ಸಿಗದೆ ಚಿತ್ರದ ತಯಾರಿಕೆಯನ್ನೇ ಕೈ ಬಿಡಬೇಕಾದ ಪರಿಸ್ಥಿತಿಯೂ ಬಂತು. ಪುಟ್ಟಣ್ಣ ತಮ್ಮ ಮುಂದಿನ ಚಿತ್ರ 'ಕಥಾಸಂಗಮ'ವನ್ನೂ ಆರಂಭಿಸಿ ಅದರ ಚಿತ್ರೀಕರಣಕ್ಕಾಗಿ ಧಾರವಾಡಕ್ಕೆ ಹೊರಟೂ ಬಿಟ್ಟರು. ಆದರೆ ಮೈಸೂರಿನಲ್ಲಿ ಆಕಸ್ಮಾತ್ತಾಗಿ ಸಂತೋಷಕೂಟವೊಂದರಲ್ಲಿ ಮಾರ್ಗರೆಟ್ ಥಾಂಸನ್‌ರನ್ನು ನೋಡಿದ ಗೆಳೆಯರೊಬ್ಬರು ಆಕೆಯ ಚಿತ್ರವನ್ನು ಧಾರವಾಡಕ್ಕೆ ಕಳುಹಿಸಿ ಪುಟ್ಟಣ್ಣನವರ ಒಪ್ಪಿಗೆ ಪಡೆಯಬೇಕಾಯಿತು. ಚೂಟಿ ಹುಡುಗಿ ಮಾರ್ಗರೆಟ್ ಕೆಲವೇ ದಿನಗಳಲ್ಲಿ ಕನ್ನಡ ಕಲಿತು ತಮ್ಮ ಸಂಭಾಷಣೆಗಳನ್ನು ತಾವೇ ನಿಭಾಯಿಸಿದರು.

ಚಿತ್ರದ ನೃತ್ಯ ಸನ್ನಿವೇಶವೊಂದಕ್ಕ ನೃತ್ಯ ನಿರ್ದೇಶಕರಾಗಿ ಪುಟ್ಟಣ್ಣನವರೇ ನಿಂತಿದ್ದರು. ಸುರಿಯುವ ಮಳೆಯಲ್ಲಿ ಈ ಹಾಡಿನ ಚಿತ್ರೀಕರಣಕ್ಕೆ ಆರು ದಿನಗಳು ಹಿಡಿದವು. ಈ ಹಾಡು 'ರಂಗೇನ ಹಳ್ಳಿಯಾಗೆ...' ಜನಪ್ರಿಯವಾಯಿತು. ಮದುವೆಯ ದಿಬ್ಬಣವೊಂದನ್ನು ಈ ಹಾಡಿನ ಚಿತ್ರೀಕರಣದಲ್ಲಿ ತಂದರು. ಮದುವೆ ಗಂಡು ಅಂಬರೀಷ್. ಹಾಗೇ 'ಶುಭಮಂಗಳ'ದಲ್ಲಿ ಆತನಿಗೆ ಮೂಗನ ಪಾತ್ರ. ಇದ್ದ ಕೆಲವು ಚಿತ್ರಿಕೆಗಳಲ್ಲೇ ಆ ಪಾತ್ರ ನೋಟಕನಿಗೆ ಆತ್ಮೀಯನಾಗುವಷ್ಟು ಚೆನ್ನಾಗಿ ಸಂಯೋಜಿಸುತ್ತಿದ್ದರು ಪುಟ್ಟಣ್ಣ. ಅಂಬರೀಷ್ ಈ ಎರಡೂ ಚಿತ್ರದ ಪಾತ್ರಗಳಿಂದ ಯಾರು ಈ ಪ್ರತಿಭಾವಂತ ಕಲಾವಿದ ಎನ್ನುವಂತೆ ಕಂಡರು. ಅದೇ ಪುಟ್ಟಣ್ಣನ ಶೈಲಿಯ ವೈಶಿಷ್ಟ್ಯ.

'ಮಾಡಿ ಮಡಿದವರು' ನಿರ್ದೇಶಕ ಶಂಕರಪ್ಪನವರ ವಾರಿಗೆಯವರೇ ಆದ ಎಂ.ಬಿ.ಎಸ್.ಪ್ರಸಾದ್ 'ಸುಬ್ಬಾಶಾಸ್ತ್ರಿ' ಕಾಲದಿಂದ ಎಂ.ವಿ.ಕೃಷ್ಣಸ್ವಾಮಿಯವರಿಗೆ ಸಹಾಯಕರಾಗಿದ್ದು, ೧೯೬೭ರಲ್ಲಿ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನ ಒಂದು ತಿಂಗಳ



(ಚಿತ್ರ ೪೮) 'ಶುಭಮಂಗಳ' ಚಿತ್ರದಲ್ಲಿ ಆರತಿ ಮತ್ತು ಶ್ರೀನಾಥ್

ಚಲನಚಿತ್ರ ರಸಗ್ರಹಣ ಬೇಸಿಗೆ ಶಿಬಿರದಲ್ಲಿ ಭಾಗವಹಿಸಿ ಬಂದಿದ್ದರು. ಬೆಂಗಳೂರಿನ ಮ್ಯಾಕ್ಸ್ ಮುಲ್ಲರ್ ಭವನದ ನಿರ್ದೇಶನಾಧಿಕಾರಿಯಾಗಿದ್ದ ಹಮ್‌ಜು ಇಮಾಂ ಚಲನಚಿತ್ರ ಕಲೆಯಲ್ಲಿ ಅಭಿರುಚಿ ಹೊಂದಿದವರಾಗಿದ್ದು ಕನ್ನಡದಲ್ಲಿ ಹೊಸತನದ ಚಿತ್ರವೊಂದನ್ನು ಮಾಡಲು ನಿರ್ಧರಿಸಿದಾಗ ಅವರು ಮತ್ತು ಅವರೊಂದಿಗೆ ಈ ಸಾಹಸಕ್ಕೆ ಕೈ ಹಾಕಿದ ಸ್ನೇಹಿತರು ನಿರ್ದೇಶನಕ್ಕೆ ಆಯ್ಕೆ ಮಾಡಿದ್ದು ಪ್ರಸಾದ್ ಅವರನ್ನೇ.

ಜನಪ್ರಿಯ ಕಾದಂಬರಿಗಾರ್ತಿ ತ್ರಿವೇಣಿಯವರ 'ಕಂಕಣ' ಮಾಮೂಲು ನಾಯಕ-ನಾಯಕಿ ಕೇಂದ್ರಿತವಾಗಿರದೆ, ಭವ್ಯ ಕನಸುಗಳನ್ನು ಹೊತ್ತು ಅದೇ ತಾನೆ ಕಾಲೇಜಿನಿಂದ ಹೊರಬಂದ ಒಂದು ತಲೆಮಾರಿನ ಸುಶಿಕ್ಷಿತ ತರುಣಿಯರ ಜೀವನ ಸಂಗ್ರಾಮವನ್ನು ಕುರಿತದ್ದಾಗಿತ್ತು. ತುಂಬಾ ವಿಸ್ತಾರವಾದ ಹರವುಳ್ಳ ಈ ಚಿತ್ರದ ನಿರೂಪಣೆಯಲ್ಲಿ ಹಳೆಯ ಮೈಸೂರಿನ ವಾತಾವರಣ ಯಥಾವತ್ತಾಗಿ ಬಿಂಬಿತವಾಯಿತು. ಚಿತ್ರ ಕೇಂದ್ರ ಸರ್ಕಾರದ ಪ್ರಾದೇಶಿಕ ಪ್ರಶಸ್ತಿಯನ್ನೂ ಪಡೆದುಕೊಂಡಿತು. ಆದರೆ ಆರ್ಥಿಕವಾಗಿ ಯಶಸ್ವಿಯಾಗಲಿಲ್ಲ, ವಿಮರ್ಶಕರನ್ನೂ ಅಷ್ಟಾಗಿ ಮೆಚ್ಚಿಸಲಿಲ್ಲ.

ಡಾ|ಯು.ಆರ್.ಅನಂತಮೂರ್ತಿ 'ಕಂಕಣ'ದ ಚಿತ್ರಕಥೆ ಹಾಗೂ ಸಂಭಾಷಣೆಗಳನ್ನು ಬರೆದಿದ್ದೊಂದು ವಿಶೇಷ. ಆದರೆ ಹಮ್‌ಜು ಇಮಾಂರೇ ಹೇಳಿಕೊಂಡಂತೆ ಚಿತ್ರದಲ್ಲಿ ಭಾವನೆಗಳನ್ನು ಅಂಡರ್ ಪ್ಲೇ ಮಾಡುವ ತಂಡದ ತಂತ್ರ ಈ ಭಾವನೆಗಳನ್ನು ಸಾಕಷ್ಟು ದಮನಗೊಳಿಸುವ ಪರಿಣಾಮ ಬೀರಿದ್ದರಿಂದ ಎಲ್ಲ ಕಲಾವಿದರೂ ಮಾತನಾಡುವ ಶೈಲಿಯಲ್ಲಿನ ಏಕತಾನತೆಯಿಂದ ಅವರ



(ಚಿತ್ರ ೪೯) 'ಬಿಳೀ ಹೆಂಡ್ತಿ' ಚಿತ್ರದಲ್ಲಿ ಮಾರ್ಗರೇಟ್ ಥಾಂಸನ್, ಲೀಲಾವತಿ, ಆರತಿ ಮತ್ತು ಸೀತಾರಾಮ್



(ಚಿತ್ರ ೫೦) 'ಬಿಳೀ ಹೆಂಡ್ತಿ'ಯ ಹೊರಾಂಗಣ ಚಿತ್ರೀಕರಣ - ಮಾರ್ಗರೇಟ್ ಥಾಂಸನ್, ಪುಟ್ಟಣ್ಣ ಮತ್ತು ನಿರ್ಮಾಪಕ ಹೆಚ್.ಎನ್.ಮಾರುತಿ

(ಚಿತ್ರ ೫೧) 'ಕಂಕಣ' ಚಿತ್ರದಲ್ಲಿ ರೇವತಿ ಮತ್ತು ಶಾಂತಾ

ಸಂಭಾಷಣೆಯಲ್ಲಿ ಇದ್ದಿರಬಹುದಾದ ಕೆಲವೊಂದು ಒಳ್ಳೆಯ ಅಂಶಗಳೂ ಕಮರಿ ಹೋಗುವಂತಾಯಿತು. ಮೊದಲಿನಿಂದ ಕೊನೆಯವರೆಗೆ ಚಿತ್ರದ ಕಥೆ ಒಂದು ನೇರ ಗೆರೆಯ ಮೇಲೆ ನಡೆಯುವಂತಾಯಿತು. ಮೌನವಾಗಿಯೇ ಭಾರಿ ನಿರೀಕ್ಷೆಯನ್ನುಂಟು ಮಾಡಿದ್ದ ಚಿತ್ರ ಅನೇಕರಿಗೆ ಭಾರಿ ನಿರಾಸೆಯನ್ನೇ ತಂದು ಕೊನೆಗೆ ಈ ಪ್ರಯತ್ನದ ಹಿಂದಿನ ಪ್ರಾಮಾಣಿಕತೆ ಮಾತ್ರ ಎದ್ದು ಕಾಣುವಂತಾಯಿತು.

ಆರು ತರುಣಿಯರು ಜೀವನದ ಬಗ್ಗೆ ವಿವಿಧ ಕಲ್ಪನೆಗಳನ್ನು, ಭಾವನೆಗಳನ್ನು ಹೊಂದಿದ್ದು, ಅವುಗಳನ್ನು ತಮ್ಮ ತಮ್ಮಲ್ಲಿಯೇ ಹಂಚಿಕೊಳ್ಳುತ್ತ ಹೋದಂತೆಲ್ಲ ವಾಸ್ತವವಾಗಿ ನಿಜಜೀವನದಲ್ಲಿ ನಡೆಯುವುದೇ ಬೇರೆಯೆಂಬ ಅನುಭವ ಪಡೆಯುತ್ತಾರೆ. ಈ ಪಾತ್ರಗಳಲ್ಲಿ ಅಭಿನಯಿಸಿದವರೆಲ್ಲ ಹೊಸಬರೆ. ಇದರಲ್ಲಿ ಸುರೇಶ್ ಹೆಬ್ಳೀಕರ್ ಪ್ರಥಮ ಬಾರಿಗೆ ಅಭಿನಯಿಸಿದರು. ನಿರ್ಮಾಪಕರಲ್ಲಿ ಒಬ್ಬರಾಗಿದ್ದ ಯಜಮಾನ್ ಅತ್ಯುತ್ತಮ ಪೋಷಕನಟ ಪ್ರಶಸ್ತಿ ಪಡೆದರು. ಆದರೆ ಅವರಲ್ಲಿ ಗಮನ ಸೆಳೆದವರು ರೇವತಿ ಮಾತ್ರ. ಆಕೆ ರಾಜ್ಯ ಸರ್ಕಾರದಿಂದ ಅತ್ಯುತ್ತಮ ನಟಿ ಪ್ರಶಸ್ತಿ ಪಡೆದರೂ ಮುಂದೆ ಯಾವ ಚಿತ್ರದಲ್ಲಿಯೂ ಅಭಿನಯಿಸಲಿಲ್ಲ. ಹಾಗೆಯೇ ಮಾಮೂಲು ಸೂತ್ರಗಳೊಂದಿಗೆ ರಾಜಿ ಮಾಡಿಕೊಳ್ಳಲು ನಿರಾಕರಿಸಿದ ನಿರ್ದೇಶಕ ಎಂ.ಬಿ.ಎಸ್.ಪ್ರಸಾದ್ ಕೂಡ ಮುಂದೆ ಯಾವ ಚಿತ್ರವನ್ನೂ ಮಾಡಲಿಲ್ಲ.

ಪಾಶ್ಚಾತ್ಯ ಸಂಗೀತದಲ್ಲಿ ಸಾಕಷ್ಟು ಪರಿಣತಿ ಪಡೆದಿದ್ದ ಇಮಾಂರವರೇ ಚಿತ್ರಕ್ಕೆ ಅರ್ಥಪೂರ್ಣ ಹಿನ್ನೆಲೆ ಸಂಗೀತವನ್ನು ನೀಡಿದರು. ಎಸ್.ರಾಮಚಂದ್ರರ ಕಪ್ಪು-ಬಿಳುಪು ಛಾಯಾಗ್ರಹಣ ಕತೆಯ ಮೂಡ್‌ಗೆ ಹೊಂದಿಕೊಂಡು ಹೋಯಿತು. 'ಕಂಕಣ' ಅಂತರರಾಷ್ಟ್ರೀಯ ಮಹಿಳಾ ವರ್ಷದಲ್ಲಿ ಬಿಡುಗಡೆಯಾಗಿ ಬರ್ಲಿನ್ ಚಿತ್ರೋತ್ಸವದಲ್ಲಿ ಭಾಗವಹಿಸಿ, ಆ ವರ್ಷಕ್ಕೆ ಒಂದು ಸೂಕ್ತ ಕೊಡುಗೆಯೂ ಆಯಿತು. ಮಯೂರ ಫಿಲಂ ಸೊಸೈಟಿಯ ೫೦ ಸದಸ್ಯರು ಹಣ ಹೂಡಿದ ಸಹಕಾರಿ ಪ್ರಯತ್ನ ಇದು.

ಕನ್ನಡ ಚಿತ್ರರಂಗವನ್ನು ಆ ದಿನಗಳಲ್ಲಿ ಅಪ್ಪಳಿಸಿದ್ದ ಹೊಸ ಅಲೆಯಿಂದ ಪ್ರೇರಣೆ ಪಡೆದ ಚಿತ್ರ 'ಕಂಕಣ'. ೧೯೭೫ರಲ್ಲಿ ಬಿಡುಗಡೆಯಾದ ಇನ್ನೆರಡು ಇದೇ ಜಾಡಿನ ಚಿತ್ರಗಳು ವಿಶ್ವಖ್ಯಾತಿಯನ್ನೇ ಪಡೆದು ಕಲಾತ್ಮಕ ಚಿತ್ರಗಳನ್ನು ಆರಾಧಿಸುವ ಇತರ ದೇಶಗಳಲ್ಲಿ ಕನ್ನಡ ಚಿತ್ರರಂಗದ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿದವು.

ಕನ್ನಡ ರಂಗಭೂಮಿ ಮತ್ತು ಸಂಗೀತ ಕ್ಷೇತ್ರಗಳಲ್ಲಿನ ತಮ್ಮ ಅನೇಕ ಪ್ರಯೋಗಗಳಿಂದ ಕಲಾಪ್ರಪಂಚದ ವಿಶೇಷ ಗಮನವನ್ನು ಸೆಳೆದಿದ್ದ ಬಿ.ವಿ.ಕಾರಂತರಿಗೆ ತಾವೇ ಒಂದು ಚಿತ್ರವನ್ನು ಸ್ವತಂತ್ರವಾಗಿ ನಿರ್ದೇಶಿಸುವ ಸರದಿ ಬಂತು. ದಕ್ಷಿಣ ಕನ್ನಡದ ಕಾಪು ಕ್ಷೇತ್ರದ ಶಾಸಕರಾಗಿ ಒಮ್ಮೆ ಚುನಾಯಿತರಾಗಿದ್ದ ಅಬ್ಕಾರಿ ಉದ್ಯಮಿ ಮುದ್ದು ಸುವರ್ಣ ಸಾಹಿತ್ಯ ಪ್ರಿಯರು ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಪೋಷಕರೂ ಆಗಿದ್ದರು. ಶಿವರಾಮ ಕಾರಂತರ ಪ್ರಖ್ಯಾತ ಕಾದಂಬರಿ 'ಚೋಮನ ದುಡಿ'ಯನ್ನು ಕನ್ನಡ ತೆರೆಯ ಮೇಲೆ ತರಬೇಕೆಂಬ ಹಂಬಲದಿಂದ ಅವರು ಈ ಜವಾಬ್ದಾರಿಯನ್ನು ಬಿ.ವಿ.ಕಾರಂತರಿಗೆ ಒಪ್ಪಿಸಿದರು. ಶಿವರಾಮ ಕಾರಂತರು ಎಲ್ಲ ನಿರ್ದೇಶಕರಿಗೂ ತಮ್ಮ ಕಥೆಗಳನ್ನು ಚಲನಚಿತ್ರಕ್ಕೆ ಅಳವಡಿಸಿಕೊಳ್ಳಲು ಒಪ್ಪಿಗೆ ಕೊಡುತ್ತಿರಲಿಲ್ಲ. ಆದರೆ ಬಿ.ವಿ.ಕಾರಂತರಂತಹ ಕ್ರಿಯಾಶೀಲರು ಅವರ ಈ ಕಟ್ಟುಪಾಡಿಗೆ ಹೊರತಾಗಿದ್ದರು. ''ಬೇರೆಯವರು ನನ್ನ ಕಾದಂಬರಿಯನ್ನು ಚಿತ್ರಿಸಿ ಅದನ್ನು ಕೆಡಿಸುವುದು ನನಗೆ ಬೇಕಿಲ್ಲ'' ಎಂದು ಶಿವರಾಮ ಕಾರಂತರು ಬಹಿರಂಗವಾಗಿಯೇ ಹೇಳಿದ್ದರು. ಆದರೆ ಬಿ.ವಿ.ಕಾರಂತರಲ್ಲಿ ಅವರಿಟ್ಟ ಭರವಸೆ ಫಲಪ್ರದವೇ ಆಯಿತು. 'ಚೋಮನ ದುಡಿ' ಚಲನಚಿತ್ರ ಮಾಧ್ಯಮವನ್ನು ಗಂಭೀರವಾಗಿ ಪರಿಗಣಿಸುವ ಆಸಕ್ತರಿಂದಲೂ ಪ್ರಶಂಸೆ ಪಡೆದದ್ದೇ ಅಲ್ಲದೆ, ರಾಷ್ಟ್ರ ಮಟ್ಟದಲ್ಲಿ ಕೂಡ ಕೇಂದ್ರ ಸರ್ಕಾರದಿಂದ ಆ ವರ್ಷದ ಅತ್ಯುತ್ತಮ ಚಲನಚಿತ್ರವೆಂದು ಸುವರ್ಣ ಪದಕವನ್ನೂ ಗಳಿಸಿಕೊಂಡಿತು. ಆದರೆ ಶಿವರಾಮ ಕಾರಂತರು ಮಾತ್ರ ''ಹರಿಬ್ರಹ್ಮನೇ ಪ್ರಶಸ್ತಿ ನೀಡಿದರೂ ಅದು ಉತ್ತಮ ಚಿತ್ರವಲ್ಲ'' ಎಂದು ಗುಡುಗಿದ್ದರು.

'ಚೋಮನ ದುಡಿ'ಯಲ್ಲಿ ಬಿ.ವಿ.ಕಾರಂತರು ಮೂಲ ಕೃತಿಗೆ ನಿಷ್ಠರಾಗಿದ್ದು ಚಿತ್ರಕಥೆಯ ರಚನೆಯಲ್ಲಿ ಬಹುತೇಕ ಅದನ್ನೇ ಅನುಸರಿಸಿದರು. ಇದರಲ್ಲಿ ನಿರ್ದೇಶಕನ ವ್ಯಾಖ್ಯಾನವೆನ್ನುವುದೇನೂ ಇರಲಿಲ್ಲ. ಇದ್ದುದೆಲ್ಲಾ ನಿರ್ದೇಶಕನ ವಸ್ತುನಿಷ್ಠ ಧೋರಣೆ, ಶೋಷಣೆಯ ರುದ್ರ ಸಂಗೀತವೆಂಬ ಪ್ರಶಂಸೆಯನ್ನು ವಿಮರ್ಶಕರಿಂದ ಪಡೆದ ಈ ಚಿತ್ರ ಒತ್ತೆಯಾಳುಗಳ ಜೀವನದ ದುರ್ಭರತೆ, ಅಮಾನುಷತೆಗಳನ್ನು ಹೃದಯಂಗಮವಾಗಿ ನಿರೂಪಿಸಿತು. ಬಿ.ವಿ.ಕಾರಂತರು ನಿರೂಪಣೆಯಲ್ಲಾಗಲಿ, ತಂತ್ರಜ್ಞಾನದ ಬಳಕೆಯಲ್ಲಾಗಲಿ ಯಾವುದೇ 'ಗಿಮಿಕ್'ಗಳನ್ನು ಉಪಯೋಗಿಸಲಿಲ್ಲ. ಅತಿಯಾದ ಪ್ರತಿಮೆ, ಸಂಕೇತಗಳ ಬಳಕೆಯಿಂದ ಚಿತ್ರದ ಸಂವಹನ ಶಕ್ತಿಯನ್ನು ಕುಂಠಿತಗೊಳಿಸಲೂ ಇಲ್ಲ.

ಕಾರಂತರ ನಿರೂಪಣೆಯಲ್ಲಿ 'ನಾಟಕೀಯತೆ' ಹೆಚ್ಚಿತ್ತು. ಚಿತ್ರದ ಶೀರ್ಷಿಕೆಯಿಂದಲೇ ಪ್ರಾರಂಭವಾಗುವ ದುಡಿಯ ಶಬ್ದ, ಇಡೀ ಚಿತ್ರದ ಕೇಂದ್ರವೆಂಬತೆ 'ಲೇ.. ಲೇ...' ಗಾಯನದ ರಿಂಗಣ ಆವರಿಸುತ್ತದೆ. ರಂಗತಜ್ಞ ಬನ್ಸಿಕೌಲ್ ಅವರ ಕಲಾನಿರ್ದೇಶನವಿತ್ತು. ನೈಜವೆನ್ನಿಸುವಂಥ ಗುಡಿಸಲುಗಳಿವೆ. ಅವುಗಳ ಒಳಾಂಗಣದಲ್ಲಿ ಹೆಚ್ಚು ಚಿತ್ರಿಕೆಗಳನ್ನು ತೆಗೆಯಲು ಆದಂತಿಲ್ಲ. ಚಿತ್ರೀಕರಣಕ್ಕೆ ಸಾಧ್ಯವಾಗುವ ಹಾಗೆ ಗುಡಿಸಲುಗಳು ನಿರ್ಮಾಣ ಆಗಿಲ್ಲ ಅನ್ನಿಸುತ್ತದೆ. ಶಿವರಾಮ ಕಾರಂತರೇ ಸಂಭಾಷಣೆ ಬರೆದರೂ ಪಾತ್ರಧಾರಿಗಳೆಲ್ಲ ಒಂದು ಭಾಷೆಗೆ ಹೊಂದಿ ಮಾತನಾಡಿದಂತಿಲ್ಲ. ಈ ಚಿತ್ರದ ವಿಶೇಷವೆಂದರೆ ಬಿ.ವಿ.ಕಾರಂತರ ಸಂಗೀತ, ಮುಖ್ಯವಾಗಿ ವಿಶೇಷ ಶಬ್ದಗಳ ಬಳಕೆ. ಉದಾಹರಣೆಗೆ ಚೋಮನ ಮಗಳನ್ನು ಇಂಗ್ಲಿಷ್ ದೊರೆಯ ಹತ್ತಿರ ಕರೆತಂದಾಗ ಒಂದು ರೈಲಿನ ಕೂಗು ಶಿಳ್ಳೆಯಂಥ ಶಬ್ದ ಒಂದು ಬಗೆಯ ಅಸಹಾಯಕತೆಯನ್ನು ಹೇಳುವ ಕಿರಿಚುವಿಕೆಯ ಅನುಭವ ತರುತ್ತದೆ. ಇಂಥ ಹಲವು ಗುಣಗಳಿವೆ ಈ ಚಿತ್ರದಲ್ಲಿ. ''ಶೋಷಣೆಯ ನಗ್ನ ಸತ್ಯವನ್ನು ಚಿತ್ರಿಸುವ ಇವರ ವಾಸ್ತವಿಕ ಶೈಲಿ ಮುಖಕ್ಕೆ ಹೊಡೆಯುವಷ್ಟು ತೀವ್ರವಾಗಿದೆ'' ಎಂದು ವಿಮರ್ಶಕರೊಬ್ಬರು ಪ್ರಶಂಸಿಸಿದರು. ಆದರೆ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಈ ಚಿತ್ರ ಪ್ರದರ್ಶಿತವಾದಾಗ ಕೇಂದ್ರ ಸರ್ಕಾರದ ಒತ್ತಾಯದ ಮೇರೆಗೆ ''ಈಗ ಭಾರತದಲ್ಲಿ ಜಮೀನ್ದಾರಿ ಪದ್ಧತಿ ಜಾರಿಯಲ್ಲಿಲ್ಲ'' ಎಂಬ ಶೀರ್ಷಿಕೆಯನ್ನು ಸೇರಿಸಲಾಯಿತು.

ಚೋಮನ ಪಾತ್ರದಲ್ಲಿ ನುರಿತ ರಂಗಭೂಮಿ ನಟ ಎಂ.ವಿ.ವಾಸುದೇವರಾವ್ ತಮ್ಮ ಅಭಿನಯಕ್ಕೆ ರಾಷ್ಟ್ರಮಟ್ಟದಲ್ಲಿ ಅತ್ಯುತ್ತಮ ನಟ ಪ್ರಶಸ್ತಿಯನ್ನು ಪಡೆದರು. ಆದರೆ 'ವಂಶವೃಕ್ಷ'ದ ವೆಂಕಟರಾವ್ ತಲಗೇರಿಯವರಂತೆ ಅವರು ತಮ್ಮ ಮುಂದಿನ ಯಾವ ಚಿತ್ರದಲ್ಲಿಯೂ ಇಷ್ಟೇ ಪರಿಣಾಮಕಾರಿ ಎನಿಸಲಿಲ್ಲ. ಹೆಚ್ಚು ಕಡಿಮೆ ಅವರ ಎಲ್ಲ ಪಾತ್ರಗಳಲ್ಲಿಯೂ ಚೋಮನ ಛಾಪೇ ಉಳಿಯಿತು. ಶಿವರಾಮ ಕಾರಂತರು ಚಿತ್ರಕಥೆಗೆ ನೆರವಾಗಿದರು. ಸಂಭಾಷಣೆ ಅವರದೇ. ಈ ಚಿತ್ರಕ್ಕೆ ಇನ್ನೂ ಪುಣೆಯಲ್ಲಿ ಚಲನಚಿತ್ರ ಅಧ್ಯಯನ ಮಾಡುತ್ತಿದ್ದ ಗಿರೀಶ್ ಕಾಸರವಳ್ಳಿ ಸಹನಿರ್ದೇಶಕರಾಗಿದ್ದರು.

ಮೂರು ವರ್ಷಗಳ ಅಜ್ಞಾತವಾಸದ ನಂತರ ಜಿ.ವಿ.ಅಯ್ಯರ್ ಇದ್ದಕ್ಕಿದ್ದಂತೆ ವ್ಯಾಪಾರಿ ಜಾಡನ್ನು ಬದಲಾಯಿಸಿ, ತಾವು ತಯಾರಿಸಿದ 'ವಂಶವೃಕ್ಷ'ದ ಮೂಲಕ ಕನ್ನಡದಲ್ಲಿ ಹೊಸ ಅಲೆಯ ಆಂದೋಳನಕ್ಕೆ ಗಟ್ಟಿತನವನ್ನು ತಂದುಕೊಟ್ಟಿದ್ದು ಸರಿಯಷ್ಟೆ. ತಮ್ಮ ಅಜ್ಞಾತವಾಸದ ಸಮಯದಲ್ಲಿ ವಿಶ್ವದ ಖ್ಯಾತ ನಿರ್ದೇಶಕರ ಚಿತ್ರಗಳನ್ನು ವೀಕ್ಷಿಸಿ, ಚಲನಚಿತ್ರ ಮಾಧ್ಯಮದ ಬಗ್ಗೆ ಹಗಲು ರಾತ್ರಿ ಗ್ರಂಥಗಳನ್ನು ಓದಿ, ಹೊಸ ಚಿತ್ರವೊಂದರ ನಿರ್ದೇಶನಕ್ಕೆ ನುಗ್ಗಿದ್ದು ತಮ್ಮದೇ ಸ್ವಂತ ತಯಾರಿಕೆಯಾದ 'ಹಂಸಗೀತೆ'ಯಿಂದ.

'ಹಂಸಗೀತೆ' ಅಂದಿನ ಇತರ ಅನೇಕ ಹೊಸ ಅಲೆಯ ಚಿತ್ರಗಳಂತೆ ಯಾವುದೇ ಧರ್ಮವನ್ನು ಜರೆಯುವ, ಅಥವಾ ಯಾವುದೇ ಸಿದ್ಧಾಂತಗಳನ್ನು ಪ್ರಜ್ಞಾಪೂರಕವಾಗಿ



(ಚಿತ್ರ ೫೨) 'ಚೋಮನ ದುಡಿ'ಯಲ್ಲಿ ಪದ್ಮಾಕುಮುಟ



(ಚಿತ್ರ ೫೩) 'ಚೋಮನ ದುಡಿ'ಯಲ್ಲಿ ವಾಸುದೇವರಾವ್

ತಿರುಚುವ ಪ್ರಯತ್ನಕ್ಕೆ ಕೈ ಹಾಕಲಿಲ್ಲ. ಬದಲಾಗಿ ಇಡೀ ಚಿತ್ರದ ಕಥಯನ್ನೇ ಮುಖ್ಯವಾಗಿ ಸಂಗೀತದ ಮೂಲಕ ನಿರೂಪಿಸುವ ಹೊಚ್ಚ ಹೊಸ ತಂತ್ರದಿಂದಾಗಿ ತನ್ನದೇ ಆದ ಹೊಸ ಅಲೆಯೊಂದನ್ನು ಸೃಷ್ಟಿಸಿತು. ಇಡೀ ಚಿತ್ರದಲ್ಲಿ ಸಂಭಾಷಣೆಯಿದ್ದದ್ದು ಕೇವಲ ೧೮ ನಿಮಿಷಗಳು ಮಾತ್ರ. ಮಾತಿಗಿಂತ ಮೌನವೇ ಹೆಚ್ಚು, ಮೌನವಿಲ್ಲದಿದ್ದಾಗ ಹಾಡುಗಳದ್ದೇ ವೈಭವ. ಕಾದಂಬರಿಕಾರ ತ.ರಾ.ಸುಬ್ಬರಾಯರ ಕಾದಂಬರಿಯನ್ನು ಚಿತ್ರಕ್ಕಾಗಿ ಅಳವಡಿಸಿಕೊಂಡ ಅಯ್ಯರ್ ಸಾಂಪ್ರದಾಯಿಕವೆನಿಸುವ ಚಿತ್ರಕಥೆಯನ್ನೇನೂ ರಚಿಸಲಿಲ್ಲ. ಬದಲಾಗಿ ದೃಶ್ಯಾವಳಿ ಮತ್ತು ಸಂಗೀತಗಳಿಗೆ ಹೆಚ್ಚಿನ ಒತ್ತು ಕೊಟ್ಟು ಒಂದು ಹೊಸ ಅನುಭವವನ್ನೇ ಉಂಟುಮಾಡಿದರು.

ಅಯ್ಯರ್ ಈ ಚಿತ್ರವನ್ನು ಸಂಯೋಜಿಸಿದ ರೀತಿಯ ಬಗ್ಗೆ ಒಂದು ಮಾತನ್ನು ಹೇಳಲೇಬೇಕು. ಸತ್ಯಜಿತ್ ರಾಯ್‌ರ ಸಂಪ್ರದಾಯದಂತೆ ಅವರು ಚಿತ್ರಕಥೆಯನ್ನು ಫ್ರೇಂನಿಂದ ಫ್ರೇಂಗೆ ರೇಖಾಚಿತ್ರಗಳಲ್ಲಿ ರಚಿಸಿಕೊಂಡಿದ್ದರು. ನಂತರವೂ ತಮ್ಮ ಎಲ್ಲ ಚಿತ್ರಗಳಲ್ಲೂ ಇದೇ ಶಿಸ್ತನ್ನು ಅನುಸರಿಸಿಕೊಂಡು ಬಂದರು. ಸಂಕೇತಗಳ ಬಳಕೆಯಂತೂ ಹೇರಳವಾಗಿತ್ತು. ಉದಾಹರಣೆಗೆ ನಾಯಕನಿಗೆ ಆತನ ಗುರು ಆತ ಮಾಡಬೇಕಾದ ಅಗಾಧವಾದ ಸಾಧನೆಯ ಬಗ್ಗೆ ಹೇಳಿದ ನಂತರ ಆತ ಕ್ರಮಿಸುವ ಹಾದಿಯಲ್ಲಿ ಎರಡು ಅಗಾಧ ಬಂಡೆಗಳು ಸಾಂಕೇತಿಕವಾಗಿ ಕಂಡುಬರುತ್ತವೆ. ಹಾಗೆಯೇ ನಾಯಕನಲ್ಲಿ ದುರಹಂಕಾರ, ವಿಲಾಸಿ ಜೀವನದತ್ತ ವಾಲಿಕೆ ಬರುವುದನ್ನು ಕೆಲವೇ ನಿಮಿಷಗಳ ದೃಶ್ಯಾವಳಿ ಹಾಗೂ ಪ್ರಭಾವಶಾಲಿ ಹಿನ್ನೆಲೆ ಸಂಗೀತದಿಂದ ಚಿತ್ರಿಸಿದ್ದಾರೆ.

ಸಂಗೀತ ಸಾಧಕ ತನ್ನ ಪ್ರೀತಿಯ ರಾಗವನ್ನು ಹಿಡಿತದಲ್ಲಿಡಲು, ಒಲಿಸಿಕೊಳ್ಳಲು ಪ್ರಯತ್ನಿಸುವುದು, ಹುಡುಕಾಡುವುದು ಇಂಥದನ್ನೆಲ್ಲ ಆಟವಾಡುವ ಮಕ್ಕಳು ತಿಳಿನೀರಿನಲ್ಲಿ ಜೀಳುವ, ಏಳುವ, ಓಡುವ ಚಿತ್ರಿಕೆಗಳ ಮೂಲಕ ಸೊಗಸಾಗಿ ಚಿತ್ರಿಸಿದ್ದರು.

'ಹಂಸಗೀತೆ'ಯಲ್ಲಿ ಶಾಸ್ತ್ರೀಯ ಸಂಗೀತದ ವೈಭವವಿತ್ತು. ಆದರೆ ಈ ಸಂಗೀತ ನೀಡಿದವರ ಬಗ್ಗೆಯೇ ಒಂದು ಕಥೆಯಿದೆ. ಅಯ್ಯರ್‌ರವರೇ ಹೇಳುವ ಪ್ರಕಾರ ಚಿತ್ರಕ್ಕೆ ಮುಕ್ಕಾಲು ಭಾಗ ಸಂಗೀತ ರಚಿಸಿದವರೇ ಟಿ.ಜಿ.ಲಿಂಗಪ್ಪ. ಆಮೇಲೆ ಬಿ.ವಿ.ಕಾರಂತರನ್ನು ಸಂಗೀತ ವಿಭಾಗಕ್ಕೆ ಸೇರಿಸಿಕೊಳ್ಳಬೇಕೆಂದು ಅವರಿಗೆ ಅನ್ನಿಸಿತು. ಆದರೆ ಲಿಂಗಪ್ಪನವರು ಅದಕ್ಕೊಪ್ಪಲಿಲ್ಲ. "ಸರಿ, ನಿಮ್ಮ ಕೆಲಸ ಸಾಕು. ನಿಮ್ಮ ದುಡ್ಡು ತಗೊಳ್ಳಿ ಅಂತ ಹೇಳಿ ಅವರನ್ನು ಕಳುಹಿಸಿಬಿಟ್ಟೆ. ಕಾರಂತರು ಸ್ವಲ್ಪ ಮುಂದುವರಿಸಿದರು. ಲಿಂಗಪ್ಪ ಸೂಚಿಸಿದ್ದ ರಾಗಗಳನ್ನು ಅನುಸರಿಸಿ ವಿಸ್ತರಿಸಿ ಬಾಲಮುರಳಿಕೃಷ್ಣ ಹಾಡಿದರು. ಆದ್ದರಿಂದ ಬಾಲಮುರಳಿ 'ನನ್ನ ಹೆಸರನ್ನೂ ಹಾಕಿ' ಅಂದರು, ಹಾಕಿದೆ. ಸಂಗೀತಕ್ಕೆ ಪ್ರಶಸ್ತಿಗಳೂ ಬಂದವು. ಆದರೆ ಪಾಪ, ಲಿಂಗಪ್ಪನವರಿಗೆ ಆ ಭಾಗ್ಯ ಇರಲಿಲ್ಲ." ಎನ್ನುತ್ತಾರೆ ಅಯ್ಯರ್.

ಇದರಲ್ಲಿ ಬುವಾ ಪಾತ್ರವನ್ನು ಕಾಡುವ ಪ್ರೇಯಸಿಯ ಕಂಠವಾಗಿ ಹಿಂದೂಸ್ತಾನಿ ಗಾಯಕಿ ಶ್ಯಾಮಲಾಭಾವೆಯವರ ಆಲಾಪವನ್ನು ಬಳಸಲಾಯಿತು. ಬಿ.ವಿ.ಕಾರಂತರು ಬುವಾ ಪಾತ್ರದಲ್ಲಿದ್ದರು.

ಹೆಚ್ಚು ಸಂಭಾಷಣೆಗಳೇ ಇಲ್ಲದೆ ತಮ್ಮ ಭಾವನೆಗಳನ್ನು ಪರಿಣಾಮಕಾರಿಯಾಗಿ ಕಲಾವಿದರು ಅಭಿವ್ಯಕ್ತಿಗೊಳಿಸಬೇಕಾದ ಅನಿವಾರ್ಯವಿದ್ದ ಈ ಚಿತ್ರದಲ್ಲಿ ಭೈರವಿ ವೆಂಕಟಸುಬ್ಬಯ್ಯನಾಗಿ ಅನಂತ್‌ನಾಗ್, ಆತನ ಗುರುವಾಗಿ ಬಿ.ವಿ.ಕಾರಂತ್, ಪ್ರೇಯಸಿಯಾಗಿ ರೇಖಾರಾವ್ ಮತ್ತು ತಂದೆಯಾಗಿ ನವದೆಹಲಿಯ ನುರಿತ ರಂಗಕರ್ಮಿ ಹಾಗೂ ಕೇಂದ್ರ ಸರ್ಕಾರದ ಅಧಿಕಾರಿ ಎಂ.ವಿ.ನಾರಾಯಣರಾವ್ ಸ್ಮರಣೀಯವೆನಿಸುವ ಸಂವೇದನೆಯಿಂದ ಅಭಿನಯಿಸಿದರು. 'ನಾಗರಹಾವು' ನಂತರ ಸಂಪೂರ್ಣವಾಗಿ ಚಿತ್ರದುರ್ಗದ ಕೋಟೆಯಲ್ಲಿಯೇ ಚಿತ್ರಿತವಾದ 'ಹಂಸಗೀತೆ'ಯಲ್ಲಿ ಖ್ಯಾತ ಛಾಯಾಗ್ರಾಹಕ ನಿಮಾಯ್ ಘೋಷ್‌ರವರ ಕಲೆಗಾರಿಕೆಯಿತ್ತು. ಕೃಷ್ಣಮೂರ್ತಿಯವರ ಕಲಾನಿರ್ದೇಶನದಲ್ಲಿ ವಿಸ್ಮಯಗೊಳಿಸುವ ನೈಜತೆಯಿತ್ತು. ಕೃಷ್ಣಮೂರ್ತಿ ಅವರ ಕಲಾನಿರ್ದೇಶನದಲ್ಲಿ ಒಂದು 'ಕಾಲ' (ಪೀರಿಯಡ್)ವನ್ನು ಮರುಸೃಷ್ಟಿಸುವ, ಅದನ್ನು ಶ್ರೀಮಂತವೂ ಆಗಿಸುವ ಕೌಶಲವಿದೆ. ಅನಂತರವೂ ಅಯ್ಯರ್ ನಿರ್ದೇಶನದ ಚಿತ್ರಗಳಿಗೆ ಆತನ ಅಪೂರ್ವ ಕಲಾನಿರ್ದೇಶನವಿದೆ.



(ಚಿತ್ರ ೫೪) 'ಹಂಸಗೀತೆ' ಚಿತ್ರದಲ್ಲಿ ರೇಖಾರಾವ್ ಮತ್ತು ಅನಂತ್‌ನಾಗ್

೧೯೭೫ರಲ್ಲಿ ತೆರೆಗೆ ಬಂದು ವ್ಯಾಪಕವಾದ ಜನಪ್ರಿಯತೆ ಪಡೆದ ನಾಲ್ಕು ವ್ಯಾಪಾರಿ ಚಿತ್ರಗಳು - 'ಕಳ್ಳ-ಕುಳ್ಳ', 'ಮಯೂರ', 'ಭಾಗ್ಯಜ್ಯೋತಿ' ಮತ್ತು 'ದಾರಿ ತಪ್ಪಿದ ಮಗ'. 'ದಾರಿ ತಪ್ಪಿದ ಮಗ' ಚಿತ್ರದಲ್ಲಿ ರಾಜಕುಮಾರ್ ಮತ್ತೊಮ್ಮೆ ದ್ವಿಪಾತ್ರಗಳಲ್ಲಿ ಅಭಿನಯಿಸಿದರು.

'ಕಳ್ಳ ಕುಳ್ಳ' ಹೊಸ ಬಡಾವಣೆಗಳ ವಿನ್ಯಾಸ ಮತ್ತು ನಿರ್ಮಾಣಗಳಲ್ಲಿ ವಿಶೇಷ ಪರಿಣತಿ ಪಡೆದು ಬೆಂಗಳೂರಿನಲ್ಲಿ ಅನೇಕ ಗೃಹ ನಿರ್ಮಾಣ ಸಹಕಾರ ಸಂಘಗಳು ಸುಪುಷ್ಟವಾಗಿ ಬೆಳೆಯಲು ಕಾರಣರಾದ ಸಿ.ವಿ.ಎಲ್.ಶಾಸ್ತ್ರಿಗಳು ಅದೇ ವ್ಯಾಪಾರದಲ್ಲಿ ಅವರೊಂದಿಗಿದ್ದ ಡಿ.ಟಿ.ಎಸ್.ರಾಯರೊಂದಿಗೆ ಸೇರಿ ತಯಾರಿಸಿದ ಮೊದಲ ಚಿತ್ರ. ಇದರ ನಿರ್ಮಾಣದಲ್ಲಿ ನಿರ್ಮಾತೃ-ನಟ ದ್ವಾರಕೀಶ್‌ರವರ ಒತ್ತಾಸೆಯೂ ಇತ್ತು. ಚಿತ್ರದಲ್ಲಿ ವಿಷ್ಣುವರ್ಧನ್ ಕಳ್ಳ, ದ್ವಾರಕೀಶ್ ಸಹಜವಾಗಿಯೇ ಕುಳ್ಳ. ಅವರಿಬ್ಬರ ಅನೇಕ ಸಾಹಸಗಳ ಮನರಂಜಕ ನಿರೂಪಣೆಯಾದ ಈ ಚಿತ್ರದ ಬಹು ಭಾಗದ ಚಿತ್ರಣ ಮಂಗಳೂರು ಬಂದರಿನ ಬಳಿ ಹಡಗೊಂದರಲ್ಲಿ ನಡೆದಿದ್ದೊಂದು ವಿಶೇಷ. ವಾಸ್ತವವಾಗಿ ಮುಂದೆ ಅನೇಕ ಏರುಪೇರುಗಳನ್ನು ಕಂಡ ಅವರಿಬ್ಬರ ಸ್ನೇಹವನ್ನು ಬೆಸೆದಿದ್ದೇ ಈ ಚಿತ್ರ. ಕೆ.ಎಸ್.ಆರ್.ದಾಸ್ ನಿರ್ದೇಶಿಸಿದ ಈ ವೇಗದ ಓಟವಿರುವ ಚಿತ್ರದಲ್ಲಿ ಕೆಲವು ನ್ಯೂನತೆಗಳೂ ಇದ್ದವು. ಆದರೂ ದಾಸ್‌ರವರ ಚುರುಕಾದ ನಿರ್ದೇಶನ ಮತ್ತು ಚಿಟ್ಟಿಬಾಬುರವರ ಅತಿವೇಗದ ಚಲನೆಯ ಛಾಯಾಗ್ರಹಣ ಚಿತ್ರಕ್ಕೊಂದು ವಿಶೇಷ ಓಘವನ್ನು ತಂದುಕೊಟ್ಟವು. ರಾಜನ್-ನಾಗೇಂದ್ರ ಇಂತಹ

(ಚಿತ್ರ ೫೫) 'ಕಳ್ಳ ಕುಳ್ಳ' ಚಿತ್ರದಲ್ಲಿ ವಿಷ್ಣುವರ್ಧನ್, ವಜ್ರಮುನಿ ಮತ್ತು ದ್ವಾರಕೀಶ್

ಸಾಹಸಪ್ರಧಾನ ಚಿತ್ರದಲ್ಲಿಯೂ ತಮ್ಮ ಕೈಚಳಕವನ್ನು ತೋರಿ ಮೂರು ನಾಲ್ಕು ಜನಪ್ರಿಯ ಹಾಡುಗಳನ್ನು ಸಂಯೋಜಿಸುವುದರೊಂದಿಗೆ ಚಿತ್ರದ ಓಟವನ್ನು ಇನ್ನಷ್ಟು ಹೆಚ್ಚಿಸಿದ ಹಿನ್ನೆಲೆಯ ಸಂಗೀತವನ್ನು ನೀಡಿದರು. ಮುಂಬಯಿನ ಸಾಹಸ ಕಲಾವಿದ ಫೈಟರ್ ಶೆಟ್ಟಿಯವರು ತಮ್ಮ ಸ್ಟಂಟ್‌ಗಳಿಂದ ಚಿತ್ರಕ್ಕೆ ಮಸಾಲೆಯನ್ನು ತುಂಬಿದರು. ಖ್ಯಾತ ಕಥಕ್ ನೃತ್ಯಪಟು ಗೋಪಿಕೃಷ್ಣರ 'ರತಿಮನ್ಮಥ' ನೃತ್ಯನಾಟಕ ಈ ಚಿತ್ರದ ಒಂದು ಆಕರ್ಷಣೆಯಾಯಿತು. ಈ ಚಿತ್ರ ಇಂಗ್ಲಿಷ್‌ನಲ್ಲಿ 'ಸಬ್ ಟೈಟಲ್' ಆಗಿ ಕೆಲವು ಅರಬ್ಬಿ ದೇಶಗಳಲ್ಲಿಯೂ ಜನಪ್ರಿಯತೆ ಪಡೆಯಿತು. ಅದರ ಯಶಸ್ಸಿನಿಂದ ಉತ್ತೇಜಿತರಾಗಿ ಶಾಸ್ತ್ರಿಗಳು ನಿರ್ಮಾಪಕರಾಗಿ ಉದ್ಯಮದಲ್ಲೇ ಉಳಿದುಕೊಂಡು ಮುಂದೆ ಅನೇಕ ಚಿತ್ರಗಳನ್ನು ನಿರ್ಮಿಸಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಹಾಗೂ ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘಗಳ ಅಧ್ಯಕ್ಷರೂ ಆದರು.

ದಲಿತರ ಜೀವನದ ದುರ್ಭರತೆಯ ಸಮಸ್ಯೆ ಕೇವಲ ಗ್ರಾಮಗಳಿಗೆ ಸೀಮಿತವಾಗಿಲ್ಲ, ಪ್ರಗತಿಪರವೆಂದು ಹೇಳಿಕೊಳ್ಳುವ ನಗರಗಳಲ್ಲಿ ಕೂಡ ದಲಿತರ ವಿರುದ್ಧ ಅನೂಚಾನವಾಗಿ ನಡೆದುಕೊಂಡು ಬಂದಿರುವ ಪದ್ಧತಿಗಳು, ಸಂಪ್ರದಾಯಗಳು ಇನ್ನೂ ಮಾಸಿಲ್ಲವೆಂಬ ವಸ್ತುವನ್ನು ಹೊಂದಿದ ಮಂಗಳಾ ಸತ್ಯನ್‌ರವರ ಅದೇ ಹೆಸರಿನ ಕಾದಂಬರಿಯನ್ನು ಆಧರಿಸಿ ಕೆ.ಎಸ್.ಎಲ್.ಸ್ವಾಮಿ ನಿರ್ದೇಶಿಸಿದ ಜನಪ್ರಿಯ ಚಿತ್ರ 'ಭಾಗ್ಯಜ್ಯೋತಿ'ಯನ್ನು ಗೋಪಾಲ್-ಲಕ್ಷ್ಮಣ್ ನಿರ್ಮಿಸಿದರು. ಈ ಚಿತ್ರದ ನಾಯಕ ಉನ್ನತ ವರ್ಗಕ್ಕೆ ಸೇರಿದವನು. ದಲಿತರ ಮೇಲಿನ ಅಮಾನುಷ ಧೋರಣೆಯ ವಿರುದ್ಧ ಸೆಟೆದು ನಿಲ್ಲುತ್ತಾಳೆ ನಾಯಕಿ. ಮೇಲ್ವರ್ಗದವರು ಯಾವ ಮೌಲ್ಯಗಳಿಂದ ತಮ್ಮ ಶ್ರೇಷ್ಠತೆಯನ್ನು ಸಾರಿಕೊಳ್ಳುತ್ತಾರೆಯೋ ಅದೇ ಮೌಲ್ಯಗಳನ್ನು ಅನುಷ್ಠಾನಕ್ಕೆ ತಂದು ಅವರಿಗೆ ಸರಿಸಮನಾಗಿ ನಿಲ್ಲುವ ಸವಾಲು ಹಾಕಿ ವಿಜಯಿಯಾಗುತ್ತಾಳೆ. ಈ ಪಾತ್ರದಲ್ಲಿ ಭಾವುಕವಾಗಿ ಅಭಿನಯಿಸಿದವರು ಭಾರತಿ. ಆರಂಭದಲ್ಲಿ ಜುಟ್ಟು ಬಿಟ್ಟಿದ್ದ ವಿಷ್ಣುವರ್ಧನ್ ಚಿತ್ರದ ನಾಯಕ. ಬಿ.ಸರೋಜಾದೇವಿಯವರಿಗೆ ಒಂದು ಮುಖ್ಯ ಪಾತ್ರವಿತ್ತು. ಚಿತ್ರ ಸಮಸ್ಯೆಯನ್ನು ತೀರಾ ಮೇಲ್‌ಸ್ತರದಲ್ಲಿ ನೋಡಿತ್ತು. ನಾಯಕಿ ಎಸ್.ಎಲ್.ಭೈರಪ್ಪನವರ ಕಾದಂಬರಿಯನ್ನು ಶೀರ್ಷಿಕೆ ಕಾಣುವಂತೆ ಹಿಡಿದಿರುವುದೇ ಅವಳ ಸಾಮಾಜಿಕ ಕಾಳಜಿಯ ಸಂಕೇತವೆಂಬಂತೆ ತೋರಿಸಲಾಗಿತ್ತು. ಸಮಸ್ಯೆಯ ಅಧ್ಯಯನ ಇಲ್ಲವೆನಿಸಿದರೂ ಅದೊಂದು ಪ್ರಾಮಾಣಿಕ ಪ್ರಯತ್ನ. ಚಿತ್ರದಲ್ಲಿ ಬರುವ ತಲಕಾಡು ಮಾಲಿಂಗಿ ಕುರಿತ ನೃತ್ಯನಾಟಕ ಅದ್ಭುತ ಸಂಯೋಜನೆಯಾಗಿತ್ತು.

ಇದೊಂದು ಸಾಮಾಜಿಕ ಕಾಳಜಿಯಿರುವ ಚಿತ್ರವೆಂಬ ಕಾರಣದಿಂದ ರಾಜ್ಯ ಸರ್ಕಾರ 'ಭಾಗ್ಯಜ್ಯೋತಿ'ಗೆ ಸಂಪೂರ್ಣ ತೆರಿಗೆ ವಿನಾಯಿತಿ ನೀಡಿತು. ಆದರೆ ವಿಪರ್ಯಾಸವೆಂಬಂತೆ ಉತ್ತರ ಕರ್ನಾಟಕದ ಭಾಗದಲ್ಲಿ ಇದು ತಮ್ಮ ಜಾತಿಯನ್ನು ಅವಹೇಳನ ಮಾಡಿದ ಚಿತ್ರವೆಂದು ಅಲ್ಲಿಯ ಬ್ರಾಹ್ಮಣ ಸಮುದಾಯದವರು ಚಿತ್ರದ ವಿರುದ್ಧ ತೀವ್ರ ಪ್ರತಿಭಟನೆಯನ್ನು ತೋರಿದರು. ಅಷ್ಟೇ ಅಲ್ಲ, ಸರ್ಕಾರ ಚಿತ್ರವನ್ನು ಮುಟ್ಟುಗೋಲು ಹಾಕಬೇಕೆಂಬ ಒತ್ತಾಯವನ್ನೂ ತಂದರು. ಈ ಬಗ್ಗೆ ಸಾಕಷ್ಟು ದಿನಗಳೇ ಸಂಘರ್ಷಗಳು ನಡೆದರೂ ಚಿತ್ರ ಯಶಸ್ವಿಯಾಗಿ ಪ್ರದರ್ಶಿತವಾಯಿತು.

ಸಂಗೀತ ನಿರ್ದೇಶಕ ವಿಜಯಭಾಸ್ಕರ್ ಈ ಚಿತ್ರದಲ್ಲಿ ಮೊಟ್ಟ ಮೊದಲ ಬಾರಿಗೆ ತಮ್ಮದೇ ಆರ್ಕೆಸ್ಟ್ರಾ ಹೊಂದಿದ್ದ ಕಸ್ತೂರಿ ಶಂಕರ್ ಅವರನ್ನು ಕನ್ನಡ ಚಿತ್ರರಂಗಕ್ಕೆ ಹಿನ್ನೆಲೆ ಗಾಯಕಿಯಾಗಿ ಪರಿಚಯ ಮಾಡಿಸಿದರು. ಇನ್ನೊಂದು ವಿಶೇಷವೆಂದರೆ ಕಾಲೇಜು ಅಧ್ಯಾಪಕರಾಗಿದ್ದು ತಮ್ಮ ಕವನ ಮತ್ತು ಲೇಖನಗಳಿಂದ ಆಗಲೇ ಸಾಹಿತ್ಯಾಸಕ್ತರ ಗಮನ ಸೆಳೆದಿದ್ದ ದೊಡ್ಡರಂಗೇಗೌಡರು ಕೂಡ ಈ ಚಿತ್ರದ ಮೂಲಕ ಗೀತರಚನಕಾರರಾಗಿ ಚಿತ್ರರಂಗಕ್ಕೆ ಇಳಿದಿದ್ದು. ನಂತರ ವಿಜಯಭಾಸ್ಕರ್-ದೊಡ್ಡರಂಗೇಗೌಡರ ಜೋಡಿ ಅನೇಕ ಕನ್ನಡ ಚಿತ್ರಗಳಲ್ಲಿ ಸಫಲವಾಗಿ ಕೆಲಸ ಮಾಡಿತು.

ಯಾವುದೇ ಚಿತ್ರದಲ್ಲಿ ಸ್ವಲ್ಪವಾದರೂ ಯಾವುದಾದರೂ ಸಾಮಾಜಿಕ ಸಂದೇಶ ಅಡಗಿದ್ದರೆ ಸಂಪೂರ್ಣ ತೆರಿಗೆ ವಿನಾಯಿತಿಗಾಗಿ ನಿರ್ಮಾಪಕರು ರಾಜ್ಯ ಸರ್ಕಾರದ ಬಳಿಗೆ ಓಡುತ್ತಿದ್ದ ಕಾಲ ಅದು. ೧೯೭೫ರ ಇನ್ನೊಂದು ಚಿತ್ರ 'ಕೂಡಿ ಬಾಳೋಣ'. ಹೆಸರೇ ಸೂಚಿಸುವಂತೆ ಗ್ರಾಮೀಣ ಜೀವನದಲ್ಲಿ ಐಕ್ಯತೆಯ ಅಗತ್ಯವನ್ನು ಒತ್ತಿ ಹೇಳಿದ ಚಿತ್ರ. ಮಂಡ್ಯ ಜಿಲ್ಲೆಯ ರಾಜಕೀಯ ಮುತ್ಸದ್ದಿ ಕೆ.ವಿ.ಶಂಕರೇಗೌಡರು ತಮ್ಮ ಉತ್ತಮ ಆದರ್ಶಗಳಿಗೆ ಹೆಸರಾದವರು. ತಾವು ಆಡಿದ್ದನ್ನು ಕೃತಿಯಲ್ಲಿ ತೋರಿಸಿ ತಮ್ಮ ಇಡೀ ಜಿಲ್ಲೆಗೆ ಒಂದು ಹೊಸ ರೂಪ ಕೊಟ್ಟವರು. ಅಂತಹ ರಚನಾತ್ಮಕ ರಾಜಕಾರಣಿಗೆ ಸಮಾಜ ಸುಧಾರಣೆಗೆ ಚಲನಚಿತ್ರದಂತಹ ಪ್ರಭಾವಶಾಲಿ ಮಾಧ್ಯಮವನ್ನು ಬಳಸಿಕೊಳ್ಳುವ ಇರಾದೆ ಹುಟ್ಟಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಅವರೇ ಹಿಂದೆ ನಿಂತು ಕೆ.ವಿ.ಎಸ್.ಪ್ರೊಡಕ್ಷನ್ಸ್ ಲಾಂಛನದಲ್ಲಿ ಈ ಚಿತ್ರದ ನಿರ್ಮಾಣಕ್ಕೆ ಪ್ರೇರಕಶಕ್ತಿಯಾದರು. ಆ ವೇಳೆಗಾಗಲೇ ಕೆಲವು ಉತ್ತಮ ಮೌಲ್ಯದ ಚಿತ್ರಗಳನ್ನು ನೀಡಿದ್ದ ಹಿರಿಯ ಎಂ.ಆರ್.ವಿಠಲ್‌ರನ್ನು ನಿರ್ದೇಶಕರನ್ನಾಗಿ ಆರಿಸಿದರು. ಆದರೆ ಚಿತ್ರ ಸುಭಾಷಿತಗಳ ಸರಮಾಲೆಯೇ ಆಗಿದ್ದರಿಂದ, ತಮ್ಮ ನಿರ್ದೇಶನದಲ್ಲಿ ವಿಠಲ್ ಹಳೆಯದಾದ ತಂತ್ರಗಳನ್ನೇ ಅಳವಡಿಸಿಕೊಂಡಿದ್ದರಿಂದ ಚಿತ್ರ ಯಾವ ವರ್ಗದ ಪ್ರೇಕ್ಷಕರಿಗೂ ಹಿಡಿಸಲಿಲ್ಲ. ಶಂಕರೇಗೌಡರೇ ಚಿತ್ರಕ್ಕೆ ಉದ್ದುದ್ದ ಭಾಷಣಗಳಂತಿದ್ದ ಸಂಭಾಷಣೆಗಳನ್ನು ಬರೆದಿದ್ದರು. ಸುಗಮ ಸಂಗೀತ ಗಾಯಕ ಸಿ.ಅಶ್ವತ್ಥ್‌ರವರು ಹಾಡಿದ ಮೊದಲ ಚಿತ್ರ. ಕೆಲವು ಕಾಲದ ನಂತರ ಗೌಡರ ಮಗ ಸಚ್ಚಿದಾನಂದ ಅವರು ರಾಜಕಾರಣಿಯಾಗಿಯೂ ಬೆಳೆಯುವುದರೊಂದಿಗೆ ತಂದೆಯಂತೆಯೇ ಚಿತ್ರ ನಿರ್ಮಾಣಕ್ಕೂ ಇಳಿದು, 'ಬಾಡದ ಹೂ' ಎಂಬ ಉತ್ತಮ ಅಭಿರುಚಿಯ ಚಿತ್ರವನ್ನು ಕನ್ನಡ ತೆರೆಗೆ ನೀಡಿದರು.

೧೯೭೫ರಲ್ಲಿ ಆ ಕಾಲಕ್ಕೆ ಬಹಳ ಅದ್ದೂರಿಯೆನಿಸಿಕೊಂಡ ಚಾರಿತ್ರಿಕ ಚಿತ್ರವೊಂದು ತಯಾರಾಗಿ ಆರ್ಥಿಕವಾಗಿ ಭಾರಿ ಜಯ ಗಳಿಸಿತು. ದೇವುಡು ನರಸಿಂಹಶಾಸ್ತ್ರಿಗಳ ಜನಪ್ರಿಯ ಕಾದಂಬರಿ 'ಮಯೂರ'ವನ್ನು ಆಧರಿಸಿ, ರಾಜಕುಮಾರ್ ನಾಯಕರಾಗಿ, ವಿಜಯ್ ನಿರ್ದೇಶನದಲ್ಲಿ ರಮೇಶ್ ಮೂವೀಸ್ ಲಾಂಛನದಲ್ಲಿ ಟಿ.ಪಿ.ವೇಣುಗೋಪಾಲ್ ನಿರ್ಮಿಸಿದ ಚಿತ್ರ ಇದು. "ಕನ್ನಡಿಗರು ಸ್ವಾಭಿಮಾನಿಗಳು, ಕೆಚ್ಚೆದೆಯ ಕಲಿಗಳು, ಮಹಾ ಸಾಹಸಿಗಳು, ಸ್ವಾತಂತ್ರ್ಯ ಪ್ರೇಮಿಗಳು, ಎಲ್ಲಕ್ಕೂ ಹೆಚ್ಚಾಗಿ



(ಚಿತ್ರ ೫೬) 'ಭಾಗ್ಯಜ್ಯೋತಿ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಭಾರತಿ

ಕ್ಷಮಾಶೀಲರು, ಸ್ನೇಹಪರರು ಎಂಬುದನ್ನು ಪ್ರತ್ಯಕ್ಷ ಪ್ರಮಾಣವಾಗಿ ತೋರಿಸುವ ಇತಿಹಾಸ ಪ್ರಸಿದ್ಧ ಪುರುಷನ ಕಥೆ'' ಎಂಬ ಜಾಹಿರಾತು ಹೊತ್ತು ತೆರೆಗೆ ಬಂದ ಈ ಚಿತ್ರದಲ್ಲಿ ಆವೇಶ, ಆಕ್ರೋಶಗಳು ಧಾರಾಳವಾಗಿದ್ದವು. ಮಯೂರವರ್ಮನ ಪಾತ್ರದಲ್ಲಿ ರಾಜಕುಮಾರ್ ಭಾರಿ ಪ್ರಶಂಸೆ ಗಳಿಸಿದರು. ಆದರೆ ನಿರ್ದೇಶಕ ವಿಜಯ್‌ಗೆ ಕನ್ನಡ ಭಾಷೆಯ ಪರಿಚಯ ಅಷ್ಟು ಗಾಢವಾಗಿ ಇಲ್ಲದಿದ್ದರಿಂದ ಚಿತ್ರದಲ್ಲಿ ಇನ್ನೂ ಮೂಡಿಬರಬಹುದಾಗಿದ್ದ ಕನ್ನಡದ ಕಸುವು ಸಾಲದಾಯಿತು.

ಕದಂಬ ಮತ್ತು ಪಲ್ಲವರ ಕಾಲದ ಈ ಕಥೆಯ ಚಿತ್ರಣಕ್ಕೆ ತೀರಾ ಭಿನ್ನವಾದ ಶಿಲ್ಪಶೈಲಿಯ ರೀತ್ಯ ನಿರ್ಮಿತವಾದ ಮೈಸೂರು ಮತ್ತು ಬೆಂಗಳೂರಿನ ಅರಮನೆಗಳನ್ನು ಬಳಸಿಕೊಂಡಿದ್ದು ತೀಕ್ಷ್ಣ ಟೀಕೆಗೆ ಗುರಿಯಾಯಿತು. ಜೊತೆಗೆ ಆಧುನಿಕ ಕಾಲದ ದೀಪಾಲಂಕಾರಗಳೂ ಈ ಅರಮನೆಯ ಪರಿಸರದಲ್ಲಿ ಚಿತ್ರದೊಳಕ್ಕೆ ನುಗ್ಗಿದ್ದವು. ನೋಡುವವರ ಕಣ್ಣಿಗೆ ಇವೆಲ್ಲ ಬಹಳ ಭವ್ಯವಾಗಿ ಕಂಡರೂ ಐತಿಹಾಸಿಕವಾಗಿ ನೋಡಿದಾಗ ಅಭಾಸಗಳೂ ಎದ್ದು ಕಂಡವು. ಆದರೆ ತಂದೆ ಅಣ್ಣಯ್ಯ ಮತ್ತು ಮಗ ಮಲ್ಲಿಕ್‌ರವರ ಛಾಯಾಗ್ರಹಣ ಕಣ್ಣಿಗೆ ಕಟ್ಟುವಷ್ಟು ಸುಂದರವಾಗಿತ್ತು. ಜಿ.ಕೆ.ವೆಂಕಟೇಶ್‌ರ ಸಂಗೀತದಲ್ಲಿ ಐತಿಹಾಸಿಕ ಚಿತ್ರವೊಂದರಲ್ಲಿ ಇರಬೇಕಾಗಿದ್ದ ಕಸುವು ಇರಲಿಲ್ಲ. ಆದರೆ 'ನಾನಿರುವುದೆ ನಿಮಗಾಗಿ.....' ಗೀತೆ ಜನಪ್ರಿಯವಾಯಿತು. ಗೋಕಾಕ್ ಚಳವಳಿಯ ಸಂದರ್ಭದಲ್ಲಿ ರಾಜಕುಮಾರ್ ಅವರಿಗೆ ತಾರಕಮಂತ್ರದ ಹಾಗೆ ನೆರವಿಗೆ ಬಂದಿತ್ತು.

ನಿರ್ದೇಶಕ ವಿಜಯ್ ಮೈಸೂರಿನ ಇಡೀ ಅರಮನೆಯನ್ನು ಒಂದೇ ನೋಟಕ್ಕೆ ಸಿಗುವಂತೆ ಚಿತ್ರಿಸಲು ಪ್ರಯತ್ನ ಪಟ್ಟರು. ಆದರೆ ಆಗ ಕನ್ನಡ ಚಿತ್ರರಂಗ ಇನ್ನೂ ಸಿನಿಮಾಸ್ಕೋಪ್ ಯುಗಕ್ಕೆ ಕಾಲಿಟ್ಟಿರಲಿಲ್ಲ. ಆದರೂ ತಮ್ಮ ಹಟ ಬಿಡದ ನಿರ್ದೇಶಕರು ನಂ.೧೮ ಲೆನ್ಸ್ ಬಳಸಿದರೆ ಅರಮನೆಯ ಶೇ. ೭೫ರಷ್ಟು ಭಾಗವನ್ನಾದರೂ ಒಂದೇ ಫ್ರೇಮ್‌ನಲ್ಲಿ ಚಿತ್ರಿಸಲು ಸಾಧ್ಯ ಎಂದು ಯೋಚಿಸಿದರು. ಆದರೆ ಈ ಲೆನ್ಸ್‌ನ ಬಳಕೆಯಿಂದ ಕಲಾವಿದರೆಲ್ಲರೂ ವಿಕಾರವಾಗಿ ಕಾಣುವುದು ಖಂಡಿತ. ಆದರೆ ಛಾಯಾಗ್ರಾಹಕರು ಇದೇ ಲೆನ್ಸ್ ಬಳಸಿ ಕಲಾವಿದರೂ ಸುಂದರವಾಗಿ ಕಾಣುವಂತೆ ಯಶಸ್ವಿಯಾಗಿ ಚಿತ್ರಿಸಿದರು.

ಗೀತಪ್ರಿಯ ನಿರ್ದೇಶನದ 'ಬೆಳುವಲದ ಮಡಿಲಲ್ಲಿ' ಅದೇ ವರ್ಷ ತೆರೆಗೆ ಬಂದ ಚಿತ್ರ. ದೇವೀರಪ್ಪನವರ ಕಾದಂಬರಿಯ ಆಧಾರದ ಮೇಲೆ ತಯಾರಾದ ಈ ಚಿತ್ರ ಅದೇ ನಿರ್ದೇಶಕರ 'ಯಾವ ಜನ್ಮದ ಮೈತ್ರಿ'ಯ ನಂತರ ಬಂದಿದ್ದರಿಂದ, ಮತ್ತು ಅವರೇ ನಿರ್ದೇಶಿಸಿದ 'ಮಣ್ಣಿನ ಮಗ' ಚಿತ್ರದಲ್ಲಿ ಅವರು ಗ್ರಾಮೀಣ ಜೀವನದ ಅವನತಿಯ ಬಗ್ಗೆ ತೋರಿದ್ದ ಕಾಳಜಿ ಪ್ರೇಕ್ಷಕರ ನೆನಪಿನಲ್ಲಿ ಇನ್ನೂ ಉಳಿದುಕೊಂಡಿದ್ದರಿಂದ, ಅದರ ಬಗ್ಗೆ ಕುತೂಹಲ ಕೆರಳಿದ್ದು ಸಹಜವೆ. ಆದರೆ ಚಿತ್ರದ ನಿರೂಪಣೆಯಲ್ಲಿ ನಿರ್ದೇಶಕರು ಪ್ರಯೋಗಿಸಿದ ಅಬ್ಬರದ ಶೈಲಿ ಈ ನಿರೀಕ್ಷೆಗಳನ್ನು ಹುಸಿಗೊಳಿಸಿತು. ನಿರುಪಮ ಮೂವೀಸ್ ಲಾಂಛನದಲ್ಲಿ ವನಜಾಕ್ಷಿ ದೇವರಾಜ್ ನಿರ್ಮಿಸಿದ ಈ ಚಿತ್ರದಲ್ಲಿ ವಿಶೇಷ ಗಮನ ಸೆಳೆದವರು ರಾಜೇಶ್ ಒಬ್ಬರೆ. ಮೂರು ತಲೆಮಾರುಗಳ ಈ ಚಿತ್ರಕಥೆಯಲ್ಲಿ ಅವರಿಗೆ ವಿಶಿಷ್ಟವಾದ ಪಾತ್ರವೊಂದಿತ್ತು. ಅವರ ಅಭಿನಯವೂ ಚಿತ್ರದ ಗದ್ದಲದ ಪರಿಸರಕ್ಕೇ ಹೆಚ್ಚು ಹೊಂದಿಕೊಂಡರೂ ಪರಿಣಾಮಕಾರಿಯಾಗಿತ್ತು.

ಇದೇ ವರ್ಷ ಮತ್ತೂ ಒಂದು ಗ್ರಾಮೀಣ ಪರಿಸರದ ಚಿತ್ರ ತೆರೆಗೆ ಬಂತು. ಯುವ ನಿರ್ದೇಶಕ ಬಸವರಾಜ ಕೆಸ್ತೂರರ 'ಸಂಜುಂಡ ನಕ್ಕಾಗ'ದಲ್ಲಿ ಪ್ರಚಲಿತ ಹಳ್ಳಿಯ ಜೀವನವನ್ನು ವಿಡಂಬನೆ ಮಾಡುವ ಪ್ರಯತ್ನ ಇತ್ತು. ಆದರೆ ಪರಿಣಾಮಕಾರಿಯಾಗಲಿಲ್ಲ. ಕಾರಣ 'ಕೂಡಿ ಬಾಳೋಣ'ದಲ್ಲಿಯಂತೆಯೇ ಇಲ್ಲಿಯೂ ನೀತಿಬೋಧೆ ಅಸಹನೀಯವೆನಿಸುವಷ್ಟು ಹೆಚ್ಚಾಗಿದ್ದದ್ದು. ''ನನ್ನಲ್ಲಿ ನಿನ್ನಲ್ಲಿ ಎಲ್ಲರ ಮನದಲ್ಲಿ ನೆಲೆಸಿಹ ದೇವರೂ ಒಂದೇ - ಶಿವವಾರ, ಜನಿವಾರ, ಅವನಿಗಿಲ್ಲ ವ್ಯವಹಾರ. ಅವನಿಗೆ ಎಲ್ಲರೂ ಒಂದೇ'' ಎಂಬ ಸಂದೇಶವನ್ನು ಸಾರಲು ಪ್ರಯತ್ನಿಸಿದ ಈ ಚಿತ್ರ ಗುರಿ ಮುಟ್ಟುವುದರಲ್ಲಿ ಅಸಮರ್ಥವಾಯಿತು.

'ನಾಗಕನ್ಯೆ' ಎಸ್.ವಿ.ರಾಜೇಂದ್ರಸಿಂಗ್ (ಬಾಬು) ನಿರ್ದೇಶಿಸಿದ ಪ್ರಥಮ ಚಿತ್ರ. ಹಿಂದೆ ಮಹಾತ್ಮಾ ಪಿಕ್ಚರ್ಸ್ ತಯಾರಿಸಿದ್ದ ಯಶಸ್ವಿ ಚಿತ್ರ 'ನಾಗಕನ್ನಿಕಾ'ದ ಪುನರವತರಣಿಕೆ. ಆದರೆ ಮುಂದೆ ದೊಡ್ಡ ರೀತಿಯಲ್ಲಿ ಬೆಳೆಯುವ ಯಾವ ಸೂಚನೆಯನ್ನೂ ಬಾಬು ಈ ಚಿತ್ರದಲ್ಲಿ ಕೊಡಲಿಲ್ಲ. ಗಲ್ಲಾ ಪೆಟ್ಟಿಗೆಯಲ್ಲಿಯೂ ಚಿತ್ರ ಸೋತಾಗ ಈ ಹೊಸ ನಿರ್ದೇಶಕರ ಉತ್ಸಾಹಕ್ಕೆ ಸಾಕಷ್ಟು ಭಂಗವೇ ಉಂಟಾಯಿತು.



(ಚಿತ್ರ ೫೭) 'ಮಯೂರ' ಚಿತ್ರದಲ್ಲಿ ರಾಜಾನಂದ್ ಮತ್ತು ರಾಜಕುಮಾರ್

ಪೇಕೇಟಿ ಶಿವರಾಂ ನಿರ್ದೇಶನದ 'ದಾರಿ ತಪ್ಪಿದ ಮಗ'ದಲ್ಲಿಯೂ ರಾಜಕುಮಾರ್‌ರಿಗೆ ದ್ವಿಪಾತ್ರಗಳು. ಎಲ್ಲ ಬಾಕ್ಸ್ ಆಫೀಸ್ ಸೂತ್ರಗಳನ್ನು ಅಳವಡಿಸಿಕೊಂಡ ಈ ಚಿತ್ರದ ಉದ್ದೇಶ ಸಾರ್ಥಕವಾಯಿತು. ಒಬ್ಬ ಮಾನವ ಒಳ್ಳೆಯ ಮಾನವನಾಗಿ ಬಾಳಲು ಒಳ್ಳೆಯ ಪರಿಸರವೂ ಮುಖ್ಯವೆಂಬ ಸಂದೇಶ ಈ ಚಿತ್ರದಲ್ಲಿ ಅಡಗಿತ್ತು.

'ದಾರಿ ತಪ್ಪಿದ ಮಗ' ಚಿತ್ರದ ಬಗ್ಗೆ ಪೇಕೇಟಿ ಶಿವರಾಂ ಬಹಳಷ್ಟು ಹೇಳುತ್ತಾರೆ. ಮುಖ್ಯವಾಗಿ ಈ ಚಿತ್ರದ ದ್ವಿಪಾತ್ರದಲ್ಲಿ ರಾಜಕುಮಾರ್ ಒಂದು ಮರೆಗುಳಿ ಪ್ರೊಫೆಸರ್ ಹಾಗೂ ದುಷ್ಟನಾಗಿ ಮತ್ತೊಂದು ಪಾತ್ರ ನಿರ್ವಹಿಸಿದ್ದಾರೆ. ಈ ಪಾತ್ರ ಸ್ತ್ರೀಯರನ್ನು ಕುರಿತು, ಕೆಲವು ದುಷ್ಟಟಗಳ ಬಗ್ಗೆ ಆಡುವ ಕೆಲವು ಮಾತುಗಳನ್ನು ಪ್ರೇಕ್ಷಕರು ಆಕ್ಷೇಪಿಸಿದರು. ಆ ಹೊತ್ತಿಗಾಗಲೇ ರಾಜಕುಮಾರ್ ಅವರಿಗೆ ತಾರಾ ಇಮೇಜ್ ಬಹಳ ಜೋರಾಗಿ ರೂಪುಗೊಂಡಿತ್ತು. ಅವರು 'ಖಳ' ಪಾತ್ರದಲ್ಲಿ ಕೂಡಾ ಸ್ತ್ರೀಯರ ಬಗ್ಗೆ, ದುರ್ಬಲ ವರ್ಗದವರ ಬಗ್ಗೆ ಹೀನವಾಗಿ ಮಾತಾಡಕೂಡದೆಂದಿತು ಜನತೆ. ಮುಂದೆ ಅವರ ಪಾತ್ರಗಳಲ್ಲಿ ಇಂಥ ಅಂಶಗಳು ನುಸುಳದ ಹಾಗೆ ಎಚ್ಚರ ವಹಿಸಬೇಕಾಯಿತು ಅವರ ಸಂಸ್ಥೆ - ಬಳಗದವರು.

'ಭಾಗ್ಯಜ್ಯೋತಿ'ಯ ಜಾಡಿನಲ್ಲಿಯೇ ರಾಜಕಾರಣಿ ಹೆಚ್.ಎನ್.ರೆಡ್ಡಿ ನಿರ್ಮಿಸಿ ನಿರ್ದೇಶಿಸಿದ 'ಕಾವೇರಿ' ನತದೃಷ್ಟ ಚಿತ್ರಗಳ ಸಾಲಿಗೆ ಸೇರಿತು. ಇಲ್ಲಿಯೂ ಬ್ರಾಹ್ಮಣರು ಶೋಷಕರು, ದಲಿತರು ಶೋಷಿತರು. ಆದರೆ ಚಿತ್ರ ಸರಿಯಾಗಿ ಓಡಲಿಲ್ಲವಾದ್ದರಿಂದ 'ಭಾಗ್ಯಜ್ಯೋತಿ' ಚಿತ್ರದ ಸುತ್ತ ಸುತ್ತಿಕೊಂಡ ಬಹಿರಂಗ ಪ್ರತಿಭಟನೆಯ ಜಾಲ ಈ



(ಚಿತ್ರ ೫೮) 'ದಾರಿ ತಪ್ಪಿದ ಮಗ' ಚಿತ್ರದಲ್ಲಿ ರಾಜಕುಮಾರ್ (ದ್ವಿಪಾತ್ರಗಳಲ್ಲಿ)

ಚಿತ್ರಕ್ಕೇನೂ ಸುತ್ತಿಕೊಳ್ಳಲಿಲ್ಲ. ರಾಜಕಾರಣಿಗಳು ಚಿತ್ರಗಳನ್ನು ಮಾಡುವಾಗ ಕೇವಲ ಆದರ್ಶಗಳು, ಘೋಷಣೆಗಳು ಮಾತ್ರ ಅವರ ಸರಕಾಗಿರುವುದು ಸಾಲದೆಂಬ ಸತ್ಯವನ್ನು ಈ ಚಿತ್ರ ಮತ್ತೊಮ್ಮೆ ಒತ್ತಿ ಹೇಳಿತು.

ಇದೇ ವರ್ಷ ಗಮನ ಸೆಳೆದ ಇನ್ನೊಂದು ಚಿತ್ರ ಶ್ರೀರಾಮ ಎಂಟರ್‌ಪ್ರೈಸಸ್ ಲಾಂಛನದಲ್ಲಿ ಆರ್.ರಾಮಮೂರ್ತಿ ನಿರ್ದೇಶಿಸಿದ 'ದೇವರ ಗುಡಿ'. ಗಂಡನೇ ದೇವರು, ಗಂಡನ ಮನೆಯೇ ದೇವರ ಗುಡಿ ಎನ್ನುವ ಸಾಂಪ್ರದಾಯಿಕ ಸಂದೇಶವನ್ನು ನೀಡಿದ ಈ ಚಿತ್ರ ಹೆಂಗೆಳೆಯರಿಗೆ ಪ್ರಿಯವಾಗಿ, ಬೆಂಗಳೂರಿನಲ್ಲಿ ನೂರು ದಿನಗಳ ಪ್ರದರ್ಶನದಿಂದ ವಂಚಿತವಾದರೂ, ಹುಬ್ಬಳ್ಳಿಯಲ್ಲಿ ಶತದಿನೋತ್ಸವವನ್ನು ಆಚರಿಸಿಕೊಂಡಿತು. ಮತ್ತೊಮ್ಮೆ ರಾಜೇಶ್ ಮುಖ್ಯ ಪಾತ್ರದಲ್ಲಿ ತಮ್ಮ ಪ್ರತಿಭೆಯನ್ನು ತೋರಿದರು.

ದಕ್ಷಿಣ ಭಾರತದ ಪ್ರತಿಭಾವಂತ ನಿರ್ದೇಶಕ ಶ್ರೀಧರ್ 'ನಿನಗಾಗಿ ನಾನು' ಎನ್ನುವ ತಮ್ಮ ಮೊಟ್ಟಮೊದಲ ಕನ್ನಡ ಚಿತ್ರವನ್ನು ನಿರ್ದೇಶಿಸಿದರು. ಆದರೆ ಇಂತಹ ಪ್ರಥಮ ಶ್ರೇಣಿಯ ನಿರ್ದೇಶಕರೊಬ್ಬರು ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ ಬಗ್ಗೆ ಚಿತ್ರಪ್ರೇಮಿಗಳಲ್ಲಿ ಮತ್ತು ಉದ್ಯಮದಲ್ಲಿ ಕಂಡುಬಂದ ಉತ್ಸಾಹ ಕಮರಿ ಹೋಗಲು ಹೆಚ್ಚು ಕಾಲವೇನೂ ಹಿಡಿಯಲಿಲ್ಲ. ಚಿತ್ರದಲ್ಲಿ ದೃಶ್ಯ ಶ್ರೀಮಂತಿಕೆಯಿತ್ತು. ಆದರೆ ಶ್ರೀಧರ್‌ರವರ ಚಿತ್ರಗಳಲ್ಲಿ ಕಾಣುತ್ತಿದ್ದ ಅವರ 'ತನ್ನತನ'ವೇ ಇರಲಿಲ್ಲ. ಚಿತ್ರ ಅತ್ತ ವಿಮರ್ಶಕರನ್ನೂ ತೃಪ್ತಿ ಪಡಿಸದೆ, ಇತ್ತ ಪ್ರೇಕ್ಷಕರ ವಿಶ್ವಾಸವನ್ನೂ ಪಡೆಯದಾಯಿತು. ಜನಪ್ರಿಯ ತಾರಾಜೋಡಿ ಶ್ರೀನಾಥ್-ಮಂಜುಳಾರವರೇನೋ ತಮ್ಮ ಲವಲವಿಕೆಯ ಅಭಿನಯದಿಂದ ಮೆಚ್ಚುಗೆ ಪಡೆದರು.

ರಾಜಕುಮಾರ್ ಅಭಿನಯದ ಅವರ ಸಂಸ್ಥೆ ಸ್ವತಂತ್ರವಾಗಿ ನಿರ್ಮಿಸಿದ ಮೊದಲ ಚಿತ್ರ 'ತ್ರಿಮೂರ್ತಿ'. ''ರಾಜಕುಮಾರ್ ಚಿತ್ರಗಳನ್ನು ನಿರ್ಮಿಸುವುದೆಂದರೆ ವಿಪರೀತ ಖರ್ಚು, ಅಷ್ಟು ಹಣ ಹಿಂತಿರುಗೋದು ಕಷ್ಟ ಅಂತೆಲ್ಲ ಮಾತಾಡುತ್ತಿದ್ದರು. ನಮ್ಮದು ದೊಡ್ಡ ತಂಡವೇ ಇರುತ್ತೆ. ಅವರನ್ನೆಲ್ಲ ಸಾಕೋದು ಕಷ್ಟವಾಗಿರಬಹುದು. ಹಾಗಂತ ನಮ್ಮವರು ಎಲ್ಲರನ್ನೂ ಬಿಟ್ಟುಬಿಡಲು ಒಪ್ಪುವುದಿಲ್ಲ. ಅದೇನು ಖರ್ಚು ನಾನೇ ನಿಭಾಯಿಸಿ ಬಿಡೋಣ ಅನ್ನಿಸಿತು. ಅದೇ ಹೊತ್ತಿಗೆ ಕೆಲವು ದಿನಗಳ ಕಾಲ ರಾಜಕುಮಾರ್ ಕಾಲ್‌ಶೀಟ್ ಕೂಡಾ ಉಳಿದು ಹೋಯಿತು. ಆರತಿ ಪುಟ್ಟಣ್ಣನವರ ಚಿತ್ರಕ್ಕೆ ಹೋದರು. ಅವು ನಮ್ಮ ಚಿತ್ರದ ಡೇಟ್ಸ್ ಆಗಿದ್ದವು. ಹೀಗಾಗಿ ಆ ಡೇಟ್ಸ್‌ನಲ್ಲಿ 'ತ್ರಿಮೂರ್ತಿ' ಮಾಡಿದೆವು'' ಎನ್ನುತ್ತಾರೆ ಪಾರ್ವತಮ್ಮ ರಾಜಕುಮಾರ್. ಇಂಥ ಸವಾಲುಗಳಿಂದಾಗಿ ಪಾರ್ವತಮ್ಮನವರಂಥ ಸಮರ್ಥ ನಿರ್ಮಾಪಕಿಯೊಬ್ಬರು ಕನ್ನಡ ಚಿತ್ರರಂಗಕ್ಕೆ ಬಂದಂತಾಯಿತು.

ಈ ವರ್ಷ ಕನ್ನಡ ಚಿತ್ರರಂಗದಲ್ಲಿ ಇಬ್ಬರು ತಾರೆಯರ ಮತ್ತು ಒಬ್ಬ ಖ್ಯಾತ ನಿರ್ದೇಶಕರ ವಿವಾಹಗಳು ವಿಜೃಂಭಣೆಯಿಂದ ನಡೆದವು. ನಾಯಕ ನಟ ವಿಷ್ಣುವರ್ಧನ್ ಮತ್ತು ನಟಿ ಭಾರತಿಯವರ ವಿವಾಹವಂತೂ ಅತಿ ಗದ್ದಲದಲ್ಲಿ, ನಿಯಂತ್ರಣಕ್ಕೇ ಬಾರದ ಅಭಿಮಾನಿಗಳ ವಿಪರೀತ ನೂಕುನುಗ್ಗಲಿನ ನಡುವೆ ನಡೆಯಿತು. ನಟ ಲೋಕೇಶ್ ಮತ್ತು



(ಚಿತ್ರ ೫೯) 'ತ್ರಿಮೂರ್ತಿ' ಚಿತ್ರದಲ್ಲಿ ಜಾರ್ಜ್ ಇಂದಿರಾ, ರಾಜಕುಮಾರ್, ಸಂಪತ್, ಜಯಮಾಲ

ನಟಿ ಗಿರಿಜಾ ಇವರ ವಿವಾಹ ನಡೆದದ್ದು ರಂಗಭೂಮಿಯ ಮೇಲೆ. ನಾಟಕ ನಡೆಯುತ್ತಿರುವಾಗಲೇ ಮದುವೆಯ ಘೋಷಣೆ ಮಾಡಿದರು. ಅದೇ ದಿನ ಅವರಿಬ್ಬರೂ ನಟಿಸಬೇಕಿದ್ದ ಚಿತ್ರವೊಂದಕ್ಕೆ ತೆರಳಿದರು. ಎನ್.ಲಕ್ಷ್ಮೀನಾರಾಯಣ್ ಮತ್ತು ಶಾಲಾ ಅಧ್ಯಾಪಕಿ ಜಯಶ್ರೀಯವರ ವಿವಾಹವೂ ಉದ್ಯಮದ, ಚಿತ್ರಪ್ರೇಮಿಗಳ ಆಸಕ್ತಿಯನ್ನು ಸಾಕಷ್ಟು ಕೆರಳಿಸಿತು.

ಈ ದಶಕದ ಮೊದಲ ಐದು ವರ್ಷಗಳು ರಾಜಕುಮಾರ್ ಯುಗವೆಂದು ಜಿ.ವಿ.ಅಯ್ಯರ್ ವರ್ಣಿಸುತ್ತಾರೆ. ಮುಂದಿನ ಐದು ವರ್ಷಗಳೂ ಈ ಮಾತಿಗೆ ಹೊರತಾಗೇನೂ ಇರಲಿಲ್ಲ. ಆದರೆ ಮತ್ತಷ್ಟು ಪ್ರತಿಭೆಗಳೂ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿ ಹೊಸ ಅಲೆಯ ಆಂದೋಲನ ಕೆಲವು ಹೊಸ ಆಯಾಮಗಳನ್ನು ಪಡೆದುಕೊಂಡ ಅವಧಿ ಅದು.

೧೯೭೬ರಲ್ಲಿ ಪುಟ್ಟಣ್ಣಕಣಗಾಲ್ ನಿರ್ದೇಶಿಸಿದ ಮೂರು ಚಿತ್ರಗಳು ಒಂದೇ ವರ್ಷ ಬಿಡುಗಡೆಯಾಗಿದ್ದೊಂದು ವಿಶೇಷ. ಈ ಮೂರು ಚಿತ್ರಗಳಲ್ಲಿಯೂ ಆ ವೇಳೆಗೆ ಜನಪ್ರಿಯತೆಯ ಉತ್ತುಂಗದಲ್ಲಿದ್ದ ಪುಟ್ಟಣ್ಣನವರು ಒಂದಲ್ಲ ಒಂದು ಹೊಸದನ್ನು ಮಾಡಲು ಪ್ರಯತ್ನಿಸಿದರೂ ಆರ್ಥಿಕ ದೃಷ್ಟಿಯಿಂದ ಅವೆಲ್ಲ ಸೋತಿದ್ದು ಅವರ ಭವ್ಯವಾದ ವೃತ್ತಿಜೀವನದ ಬೆಳವಣಿಗೆಗೆ ಕಡಿವಾಣ ಹಾಕಿದಂತಾಯಿತು. ಒಂದು ಕಡೆ ಹೊಸ ಅಲೆಯ ಚಿತ್ರಗಳು ರಾಜ್ಯದ ಬುದ್ಧಿಜೀವಿಗಳ ಮೇಲೆ ವಿಶೇಷ ಪರಿಣಾಮ



(ಚಿತ್ರ ೬೦) ಮೂರು ಕಿರುಚಿತ್ರಗಳಿಂದ ಕೂಡಿದ 'ಕಥಾಸಂಗಮ'ದ 'ಮುನಿತಾಯಿ' ಚಿತ್ರದಲ್ಲಿ ರಜನೀಕಾಂತ್, ಎಂ.ಎಸ್.ಉಮೇಶ್ ಮತ್ತು ಆರತಿ

ಬೀರಲು ಆರಂಭಿಸಿದಾಗ ಪುಟ್ಟಣ್ಣನವರಿಗೆ ಮುಂದೆ ತಾವು ಯಾವ ಹಾದಿ ಹಿಡಿಯಬೇಕೆಂಬುದರ ಬಗ್ಗೆ ಒಂದು ರೀತಿಯ ಗೊಂದಲ ಪ್ರಾರಂಭವಾಗಿದ್ದೂ ಹೌದು. ಅವರಂತಹ ಪ್ರತಿಭಾವಂತ ನಿರ್ದೇಶಕರಿಗೆ ಈ ಬಗೆಯ ಐಡೆಂಟಿಟಿ ಕ್ರೈಸಿಸ್ ಉಂಟಾಗುವ ಅಗತ್ಯವೇನೂ ಇರಲಿಲ್ಲ. ಆದರೆ ವೈಯಕ್ತಿಕ ಜೀವನದಲ್ಲಿನ ಕೆಲವು ಸಮಸ್ಯೆಗಳು ಮತ್ತು ಉದ್ಯಮ ಬೆಳೆಯುತ್ತ ಹೋದಂತೆ ಅದರಲ್ಲಿ ತೊಡಗಿಕೊಂಡವರಿಗೆ ವಾಸ್ತವವಾಗಿಯೇ ಉಂಟಾಗುವ ಅಭದ್ರತೆಗಳು ಪುಟ್ಟಣ್ಣನವರಂತಹ ಖ್ಯಾತನಾಮರನ್ನೂ ಬಿಡಲಿಲ್ಲ.

ಭಾವನಾತ್ಮಕವಾಗಿ ಹಾಗೂ ತಾತ್ವಿಕವಾಗಿ ಸಂಪ್ರದಾಯವಾದಿಯೇ ಆದ ಪುಟ್ಟಣ್ಣನವರಿಗೂ ಹೊಸ ಅಲೆಯ ದಿನಗಳಲ್ಲಿ ತಮ್ಮ ಸಹಜ ಸಿನಿಮಾ ತಂತ್ರಗಳಿಗೆ ಹೊರತಾದ 'ಕಥಾಸಂಗಮ' ತ್ರಿವಳಿ ಕಥೆಯ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಲು ಪ್ರೇರಣೆಯಾಯಿತು. ಇಲ್ಲಿ ಸಾಮಾಜಿಕ ಮೌಲ್ಯಗಳ ದೃಷ್ಟಿಯಿಂದ ತುಂಬ ಹೊಸದೆನ್ನುವುದೇನೂ ಕಂಡುಬರಲಿಲ್ಲ. ಗಿರಡ್ಡಿ ಗೋವಿಂದರಾಜರ 'ಹಂಗು', ವೀಣಾ ಎಲಬುರ್ಗಿಯವರ 'ಅತಿಥಿ', 'ಈಶ್ವರಚಂದ್ರರವರ 'ಮುನಿತಾಯಿ' ಕಿರುಗಥೆಗಳನ್ನು ಒಂದೇ ಚಿತ್ರದಲ್ಲಿ ತೆರೆಗೆ ತರುವುದರಲ್ಲಿ ಒಂದು ಅನಿವಾರ್ಯವೂ ಇತ್ತು. ಮೊದಲು ಕುರುಡಿ ಹೆಂಗಸೊಬ್ಬಳ ಬವಣೆಯನ್ನು ಕುರಿತಾದ 'ಮುನಿತಾಯಿ'ಯನ್ನೇ ಪ್ರತ್ಯೇಕವಾಗಿ ತೆರೆಗೆ ತರುವ ಯೋಜನೆಯಿತ್ತು. ಆದರೆ ಅದೊಂದು ಕಿರುಕಾದಂಬರಿ ಆಗಿದ್ದರಿಂದ ಅಗತ್ಯಕ್ಕಿಂತ ಹಿಗ್ಗಿಸಿ ಪೂರ್ಣ ಪ್ರಮಾಣದ ಚಿತ್ರ ಮಾಡಲು ಸಾಧ್ಯವಿರಲಿಲ್ಲ. ನಂತರ ಇನ್ನೆರಡು ಕಥೆಗಳೂ ಸೇರಿಕೊಂಡು ಸತ್ಯಜಿತ್ ರಾಯ್‌ರವರ 'ತೀನ್ ಕನ್ಯಾ'ದಂತೆ ಈ ಚಿತ್ರಕ್ಕೇ ಒಂದು ಹೊಸ ಸ್ವರೂಪ ಬಂತು. ಆದರೆ ಕೊನೆಯಲ್ಲಿ ಪ್ರೇಕ್ಷಕರ ಮೇಲೆ ಹೆಚ್ಚು ಪ್ರಭಾವ ಬೀರಿದ್ದು ಮುನಿತಾಯಿಯೇ. ಒಬ್ಬ ಗಂಡ ಲೈಂಗಿಕ ದೌರ್ಜನ್ಯಕ್ಕೆ ಗುರಿಯಾದ ತನ್ನ ಅಂಧ ಪತ್ನಿಯನ್ನು ಮತ್ತೆ ಸ್ವೀಕರಿಸುವುದು ಅಂಥ ಕ್ರಾಂತಿಕಾರಕ ಧೋರಣೆಯೇನೂ ಆಗಿರದಿದ್ದರೂ, ಪುಟ್ಟಣ್ಣನವರ ಇತರ ಚಿತ್ರಗಳ ಹಿನ್ನೆಲೆಯಲ್ಲಿ ನೋಡಿದರೆ ಅವರ ಮಾಮೂಲು ಧೋರಣೆಗಿಂತ ವಿಭಿನ್ನವಾಗಿಯೇ ಇತ್ತು. 'ಮುನಿತಾಯಿ'ಯಲ್ಲಿ ಪ್ರಥಮ ಬಾರಿಗೆ ರಜನಿಕಾಂತ್ ಅಭಿನಯಿಸಿದರು (ಮುಂದೆ ರಜನಿಕಾಂತ್ ತಮಿಳು ಚಿತ್ರರಂಗದ ಸೂಪರ್‌ಸ್ಟಾರ್ ಆದರು). ಈ ಚಿತ್ರದಲ್ಲಿ ಅಭಿನಯಿಸಿದ ಎಂ.ಎಸ್.ಉಮೇಶ್ ರಾಜ್ಯ ಸರ್ಕಾರದಿಂದ ಅತ್ಯುತ್ತಮ ನಟ ಪ್ರಶಸ್ತಿಯನ್ನು ಪಡೆದರು. ಅಂಧ ಹೆಣ್ಣಿನ ಪಾತ್ರದಲ್ಲಿ ಆರತಿಯವರ ಅಭಿನಯ ಸಾಕಷ್ಟು ಪ್ರಶಂಸೆ ಗಳಿಸಿಕೊಂಡಿತು. 'ಹಂಗು'ನಲ್ಲಿ ಜಿ.ಕೆ.ಗೋವಿಂದರಾವ್ ಮತ್ತು 'ಅತಿಥಿ'ಯಲ್ಲಿ ಕಲ್ಯಾಣಕುಮಾರ್ ಮತ್ತು ಸರೋಜಾದೇವಿ ಮುಖ್ಯ ಪಾತ್ರಗಳಲ್ಲಿ ಅಭಿನಯಿಸಿದರು. ಈ ಮೂರು ಕಥೆಗಳ ನಿರೂಪಣೆಯಲ್ಲಿಯೂ ಪುಟ್ಟಣ್ಣ ಸಾಕಷ್ಟು ಸಂಯಮ ತೋರಿ ಹೊಸ ಅಲೆಯ ಚಿತ್ರಗಳಿಗೆ ಹತ್ತಿರ ಹೋಗುವ ಪ್ರಯತ್ನ ಮಾಡಿದರು. ಚಿತ್ರ ಪ್ರಾರಂಭವಾಗುವ ಮುನ್ನ ತಮ್ಮ ಈ ಪ್ರಯತ್ನದ ಬಗ್ಗೆ ತಾವೇ ಪ್ರಾಸ್ತಾವಿಕವಾಗಿ ತೆರೆಯ ಮೇಲೆ ಮಾತನಾಡಿ ನಂತರ ಮೂರೂ ಕಥೆಗಳ ಲೇಖಕರನ್ನು ಪ್ರೇಕ್ಷಕರಿಗೆ ಪರಿಚಯ ಮಾಡಿಕೊಟ್ಟಿದ್ದು (ಹಿಂದೆ 'ಚಕ್ರತೀರ್ಥ' ಚಿತ್ರದ ಪ್ರಾರಂಭದಲ್ಲಿ ತ.ರಾ.ಸು. ಅವರೇ ಕಥಾವಸ್ತು ಕುರಿತು ಹೇಳುವ ಕೆಲವು ಮಾತುಗಳನ್ನು ಚಿತ್ರೀಕರಿಸಿದ್ದನ್ನು ಬಿಟ್ಟರೆ) ಒಂದು ಹೊಸ ವಿಧಾನ.

'ಕಾಲೇಜುರಂಗ' ಈ ವರ್ಷ ಪುಟ್ಟಣ್ಣ ನಿರ್ದೇಶನದಲ್ಲಿ ತೆರೆಕಂಡ ಎರಡನೆಯ ಚಿತ್ರ. ಅವರ ಗುರು ಪಂತುಲುರವರು ಜೀವಂತವಾಗಿದ್ದಾಗಲೇ ಪುಟ್ಟಣ್ಣ ಈ ಚಿತ್ರವನ್ನು ನಿರ್ದೇಶಿಸಬೇಕೆಂಬ ಬಯಕೆ ಅವರದ್ದಾಗಿತ್ತು. ಈ ಬಗ್ಗೆ ಪುಟ್ಟಣ್ಣನವರೊಂದಿಗೆ ಚರ್ಚಿಸಲೆಂದೇ ಅವರು ಮದರಾಸಿನಿಂದ ಬೆಂಗಳೂರಿಗೆ ಬಂದಾಗ ಇಲ್ಲಿಯ ವುಡ್‌ಲ್ಯಾಂಡ್ಸ್ ಹೋಟೆಲಿನಲ್ಲಿ ಅವರು ತೀರಿಕೊಂಡರು. ಹೀಗಾಗಿ ಈ ಚಿತ್ರದೊಂದಿಗೆ ಪುಟ್ಟಣ್ಣನವರಿಗೆ ಒಂದು ಭಾವನಾತ್ಮಕ ಸಂಬಂಧವೇ ಬೆಳೆಯಿತು. ಆದರೂ ಪಂತುಲುರವರು ನಿಧನರಾದ ನಂತರ 'ಕಾಲೇಜುರಂಗ' ತೆರೆಗೆ ಬರುತ್ತದೆಯೋ ಇಲ್ಲವೋ ಎನ್ನುವುದರ ಬಗ್ಗೆಯೇ ಅನಿಶ್ಚಯತೆ ತಲೆದೋರಿತು. ಕೊನೆಗೂ ಪಂತುಲುರವರು ಪ್ರೀತಿ, ಶ್ರದ್ಧೆಗಳಿಂದ ಕಟ್ಟಿ ಬೆಳೆಸಿದ ಪದ್ಮಿನಿ ಪಿಕ್ಚರ್ಸ್ ಲಾಂಛನದ ಕೊನೆಯ ಚಿತ್ರವಾಗಿ ಇದು ನಿರ್ಮಾಣವಾಗಲೇಬೇಕೆಂದು ತೀರ್ಮಾನವಾಯಿತು.ಆದರೆ ಚಿತ್ರ ಬಿಡುಗಡೆಯಾದ ನಂತರ ಇಷ್ಟೆಲ್ಲ ನಿರೀಕ್ಷೆ, ಆತಂಕಗಳು ವ್ಯರ್ಥವಾಗಿದ್ದು ಪುಟ್ಟಣ್ಣನವರಂತಹ ಸೂಕ್ಷ್ಮಮತಿಗೆ ದೊಡ್ಡ ಆಘಾತ.

ಡಿ.ವಿ.ಗುಂಡಪ್ಪನವರ ಮಗ ಪ್ರೊ. ಬಿ.ಜಿ.ಎಲ್.ಸ್ವಾಮಿ ಒಬ್ಬ ಪ್ರತಿಭಾವಂತ ಬರಹಗಾರರು. ಕಾಲೇಜಿನ ಪ್ರಾಧ್ಯಾಪಕರಾಗಿ ಅವರು ವಿಶ್ವವಿದ್ಯಾನಿಲಯಗಳಲ್ಲಿ ತೀವ್ರವಾಗಿ ಕುಸಿದು ಬಿದ್ದ ಮೌಲ್ಯಗಳ ಬಗ್ಗೆ ಅತ್ಯಂತ ತೀಕ್ಷ್ಣವಾಗಿ, ವಿಡಂಬನಾತ್ಮಕವಾಗಿ ವಿಶ್ಲೇಷಿಸಿದ 'ಕಾಲೇಜುರಂಗ' ಕನ್ನಡ ಸಾಹಿತ್ಯರಂಗದ ಅಪರೂಪದ ಕೃತಿಗಳಲ್ಲೊಂದು. ಆದರೆ ಅದನ್ನು ತೆರೆಗೆ ಅಳವಡಿಸಿಕೊಳ್ಳುವಾಗ ಪುಟ್ಟಣ್ಣನವರಿಗೆ ಈ ತೀಕ್ಷ್ಣತೆಯೇ ಎಟುಕದೆ, ಅವರ ಹಿಂದಿನ ವಿಡಂಬನೆಯ ಪ್ರಖರತೆಯೂ ತಟ್ಟದೆ, ಅವರು ಚಿತ್ರವನ್ನು ಹಸಿಹಸಿಯಾಗಿ ಮಾಡಿಟ್ಟಿದ್ದು ಅವರ ಕಟ್ಟಾ ಅಭಿಮಾನಿಗಳನ್ನು ದಿಗ್ಭ್ರಮೆಗೊಳಿಸಿತು. ಚಿತ್ರಕಥೆಯ ರಚನೆಯಲ್ಲಿ ಕೂಡ ಸಾಕಷ್ಟು ಪೂರ್ವ ಸಿದ್ಧತೆಗಳಿಲ್ಲದೆ ಮೂಲಕೃತಿಯಲ್ಲಿನ ಚುರುಕಾದ ವಿಡಂಬನೆ ಇಲ್ಲಿ ಪೇಲವವಾದ ಹಾಸ್ಯವಾಯಿತು. ಜೊತೆಗೆ ಕಾಲೇಜು ವಾತಾವರಣವನ್ನು ಮೂಡಿಸುವುದರಲ್ಲಿಯೂ ಪುಟ್ಟಣ್ಣ ಸಫಲರಾಗಲಿಲ್ಲ. ನಾಟಕರಂಗದ ಯೋಗಣ್ಣ ಈ ಚಿತ್ರದಲ್ಲಿ ಪ್ರಥಮ ಬಾರಿಗೆ ಸಂಭಾಷಣೆ ಬರೆದಿದ್ದು ಮಾತ್ರವಲ್ಲದೆ ಅಭಿನಯಿಸಿದ್ದೂ ಒಂದು ವಿಶೇಷವಾಯಿತು.

ಆರತಿಯವರ ಸೋದರರಿಗಾಗಿ ಪುಟ್ಟಣ್ಣ ನಿರ್ದೇಶಿಸಿದ 'ಫಲಿತಾಂಶ' ನಿರ್ಮಾಣದ ಹಂತದಲ್ಲಿಯೇ ಸುದ್ದಿ ಮಾಡಿದ ಚಿತ್ರ. ಈ ಚಿತ್ರದಲ್ಲಿ ಹೊಸ ನಾಯಕನೊಬ್ಬನನ್ನು ತೆರೆಗೆ ತರುವ ಉದ್ದೇಶದಿಂದ ಪುಟ್ಟಣ್ಣ ಪತ್ರಿಕೆಗಳಲ್ಲಿ ಜಾಹಿರಾತು ಮೂಲಕ ಆಸಕ್ತರಿಂದ ಅರ್ಜಿಗಳನ್ನು ಕರೆದು ಅವರೆಲ್ಲ ಬೆಂಗಳೂರಿನ ಏರ್‌ಲೈನ್ಸ್ ಹೋಟೆಲಿನಲ್ಲಿ ಸಂದರ್ಶನಕ್ಕೆ ಹಾಜರಾಗಬೇಕೆಂದು ಪ್ರಕಟಿಸಿದರು. ಅವರ ನಿರೀಕ್ಷೆಯನ್ನೂ ಮೀರಿ ಐದಾರು ಸಾವಿರ ಅಭ್ಯರ್ಥಿಗಳು ಹೋಟೆಲಿಗೆ ಮುತ್ತಿಗೆ ಹಾಕಿದಾಗ ಅವರನ್ನು ನಿಯಂತ್ರಿಸಲು ಪೊಲೀಸರ ಸಹಾಯವನ್ನು ಪಡೆಯಬೇಕಾಯಿತು. ಆದರೆ ವಿಪರ್ಯಾಸವೆಂದರೆ ಈ ಕಸರತ್ತಿನಿಂದ ಪುಟ್ಟಣ್ಣನವರಿಗೆ ಹೊಸ ನಾಯಕ ಯಾರೂ ಲಭ್ಯವಾಗಲಿಲ್ಲ. ಕೊನೆಗೆ ನಟ ರಾಮಕೃಷ್ಣರವರನ್ನು ನಾಯಕ ಪಾತ್ರಕ್ಕೆ



(ಚಿತ್ರ ೬೧) 'ಕಾಲೇಜುರಂಗ' ಚಿತ್ರದಲ್ಲಿ ಲೀಲಾವತಿ, ಜಿ.ಕೆ.ಗೋವಿಂದರಾವ್ ಮತ್ತು ಬಿ.ಆರ್.ಜಯರಾಮ್

ಆರಿಸಿಕೊಳ್ಳಬೇಕೆಂಬ ಪುಟ್ಟಣ್ಣನವರ ನಿರ್ಧಾರ ಸಫಲವಾಗಲಿಲ್ಲ. ರಾಮಕೃಷ್ಣ ಮತ್ತೊಂದು ಚಿತ್ರದ ಶೂಟಿಂಗ್‌ನಲ್ಲಿ ನಿರತರಾಗಿದ್ದರಿಂದ ಅವರನ್ನು ಈ ಚಿತ್ರಕ್ಕಾಗಿ ಕರೆಸಲು ಪುಟ್ಟಣ್ಣ ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ಕೊನೆಗೂ 'ಫಲಿತಾಂಶ'ಕ್ಕ ಹೊಸ ನಾಯಕನಟರೊಬ್ಬರೇ ದೊರೆತರು. ಏರ್‌ಲೈನ್ಸ್ ಹೋಟಲಿಗೂ ಹೋಗಿ ಬಂದಿದ್ದ ಜೈಜಗದೀಶ್ ನಂತರ ಪುಟ್ಟಣ್ಣನವರ ದೃಷ್ಟಿಗೆ ಬಿದ್ದರು. ಆದರೆ ಮುಂದೆ ಅವರು ನಾಯಕ ನಟರಾಗಿಯೇ ಉಳಿದುಕೊಳ್ಳುವ ಹಟ ಮಾಡದೆ ಖಳನಾಯಕನೂ ಆದರು, ನಿರ್ಮಾಪಕರೂ ಆದರು.

ಆರತಿ 'ಫಲಿತಾಂಶ' ಚಿತ್ರದಲ್ಲಿ ಜೈಜಗದೀಶ್‌ರವರ ನಾಯಕಿಯಾದರು. ಹಿಂದೆ 'ಸಾಕ್ಷಾತ್ಕಾರ'ಕ್ಕಾಗಿ ಹಿಂದಿ ಚಿತ್ರರಂಗದ ದಿಗ್ಗಜ ಪೃಥ್ವೀರಾಜ್ ಕಪೂರರನ್ನು ಕರೆತಂದಿದ್ದ ಪುಟ್ಟಣ್ಣ ಈ ಸಾರಿ ಇಬ್ಬರು ಹಿಂದಿ ಕಲಾವಿದರ ನೆರವು ಪಡೆದರು. ಮುಘಲ್ ದೊರೆಯೊಬ್ಬನ ಪಾತ್ರ ನಿರ್ವಹಣೆಗೆ ಉತ್ತರ ಭಾರತದ ನಟರೊಬ್ಬರಿದ್ದರೆ ಚೆನ್ನವೆಂಬ ದೃಷ್ಟಿಯಿಂದ ಖ್ಯಾತ ಹಿಂದಿ ನಟ ಅಮರೀಶ್ ಪುರಿಯವರನ್ನೂ, ಮುಘಲ್ ಆಸ್ಥಾನದ ನರ್ತಕಿ ಕೂಡ ಉತ್ತರ ಭಾರತದವರೇ ಆದರೆ ಸೂಕ್ತವೆಂಬ ದೃಷ್ಟಿಯಿಂದ ಅರುಣಾ ಇರಾನಿಯವರನ್ನೂ ಪುಟ್ಟಣ್ಣ ಪ್ರಮುಖವಾಗಿ ತಾರಾಗಣಕ್ಕ ಹೊಂದಿಸಿಕೊಂಡರು. ಕನ್ನಡದ ವೈಶಾಲಿಗೂ ಒಬ್ಬ ಬೆಡಗುಗಾತಿಯ ಮುಖ್ಯ ಪಾತ್ರವಿತ್ತು.

ಬಿಜಾಪುರದ ಚರಿತ್ರಾರ್ಹ ಕಟ್ಟಡ ಗೋಲ್‌ಗುಂಬಜ್‌ನ ಹಿನ್ನೆಲೆಯಲ್ಲಿ ಚಿತ್ರಣ ನಡೆದರೂ ಗುಂಬಜ್‌ನೊಳಗೆ ಚಿತ್ರಣಕ್ಕೆ ಅನುಮತಿ ಇಲ್ಲವಾಗಿದರಿಂದ ಬೆಂಗಳೂರಿನ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಈ ಭವ್ಯ ಕಟ್ಟಡದ ಒಳಾಂಗಣ ಸೆಟ್ ಅನ್ನು ಪುಟ್ಟಣ್ಣ ನಿರ್ಮಿಸಿದರು. ಚಿತ್ರ ತನ್ನ ದೃಶ್ಯವೈಭವದಿಂದ ಪುಟ್ಟಣ್ಣನವರ ತಾಂತ್ರಿಕ ಚಾತುರ್ಯವನ್ನು ಎತ್ತಿ ಹಿಡಿಯಿತು. ಗೋಲ್‌ಗುಂಬಜ್‌ನ ಪ್ರತಿಕೃತಿಯನ್ನೇ ನಿರ್ಮಿಸಿದ ಕಲಾನಿರ್ದೇಶಕ ನಾಗರಾಜರಾಯರ ಕೌಶಲ ಅದ್ಭುತವೆನ್ನಿಸಿತ್ತು. ಶ್ರೀನಿವಾಸ ಕುಲಕರ್ಣಿಯವರ ಸಣ್ಣ



(ಚಿತ್ರ ೬೨) 'ಫಲಿತಾಂಶ' ಚಿತ್ರದಲ್ಲಿ ವೈಶಾಲಿ ಮತ್ತು ಜೈಜಗದೀಶ್

ಕಥೆಯೊಂದರ ಆಧಾರದ ಮೇಲೆ ನಿರ್ಮಿತವಾಗಿದ್ದ 'ಫಲಿತಾಂಶ'ಕ್ಕೆ ಪ್ರೇಕ್ಷಕರು ಸಾಕಷ್ಟು ಸ್ಪಂದಿಸಲಿಲ್ಲ.

'ಬೆಸುಗೆ' ಜನಪ್ರಿಯ ನಿರ್ದೇಶಕ ಗೀತಪ್ರಿಯರ ಮೊದಲ ವರ್ಣಚಿತ್ರ. ಕೇವಲ ಕಪ್ಪು-ಬಿಳುಪು ಚಿತ್ರಗಳನ್ನೇ ಮಾಡಿ ಅಭ್ಯಾಸವಾಗಿದ್ದ ಅವರಿಗೆ ಈ ಬದಲಾವಣೆ ಸ್ವಲ್ಪ ಕಷ್ಟಕರವಾಗಿಯೇ ಕಂಡಿತು. ಆದರೆ ನಿರ್ಮಾಪಕರಾದ ಗೋಪಾಲ್-ಲಕ್ಷ್ಮಣ್ ಅವರ ಜೊತೆಗೆ ಚೆನ್ನಾಗಿ ಹೊಂದಿಕೊಂಡು ಹೋಗಿದ್ದರಿಂದ ಈ ಸಮಸ್ಯೆ ಅಷ್ಟೇನೂ ಗಂಭೀರವಾಗಿ ಪರಿಣಮಿಸಲಿಲ್ಲ. ಉದಾಹರಣೆಗೆ ಮೈಸೂರಿನ ಪ್ರೀಮಿಯರ್ ಸ್ಟುಡಿಯೋದ ಒಂದು ದೊಡ್ಡ ಫ್ಲೋರ್‌ನಲ್ಲಿ ಸಂಪೂರ್ಣವಾಗಿ ಗಾಜಿನಿಂದಲೇ ನಿರ್ಮಿತವಾದ ಬೃಹತ್ ಸೆಟ್ ಒಂದನ್ನು ಅಪಾರ ವೆಚ್ಚದಲ್ಲಿ ಹಾಕಿಸಿದಾಗಿತ್ತು. ಆದರೆ ಚಿತ್ರದ ಛಾಯಾಗ್ರಾಹಕರಾದ ಎಸ್.ಜಿ.ರಾಯರು ಆ ಸೆಟ್ ಅನ್ನು ನೋಡಿದ ಕೂಡಲೇ ಗಾಬರಿಯಾದರು. ಕ್ಯಾಮರಾವನ್ನು ಎಲ್ಲಿಟ್ಟರೂ ಗಾಜಿನ ಮೂಲಕ ಪ್ರತಿಬಿಂಬ ಕಾಣುತ್ತಿದ್ದುದರಿಂದ ಅವರಿಗೆ ದಿಕ್ಕೇ ತೋಚದಾಯಿತು. ಜೊತೆಗೆ ಸೆಟ್‌ನ ಎತ್ತರ ಬೇರೆ ಕಡಿಮೆಯಿತ್ತು. ಅದು ಸಮಸ್ಯೆಯನ್ನು ಇನ್ನಷ್ಟು ಹೆಚ್ಚಿಸಿತು. ಈ ಎಲ್ಲ ನ್ಯೂನತೆಗಳನ್ನು ಸರಿಪಡಿಸುವ ವೇಳೆಗೆ ಸಮಯ, ಹಣ ಎರಡೂ ವ್ಯಯವಾಗಿತ್ತು. ಕೊನೆಗೂ ಈ ಸಮಸ್ಯೆಯನ್ನು ಸರಿಪಡಿಸಿಕೊಂಡು ಗೀತಪ್ರಿಯ ಮತ್ತು ರಾಯರ ನಡುವೆ ಸಾಮರಸ್ಯ ಏರ್ಪಟ್ಟು ಚಿತ್ರಣ ಪ್ರಾರಂಭವಾಯಿತು. ನಂತರ ಎಲ್ಲಾ ಸುಸೂತ್ರವಾಗಿಯೇ ನಡೆಯಿತು. "...'ಫಲಿತಾಂಶ'ದ ಸೆಟ್‌ನಲ್ಲೂ ಇಂಥದೇ ಸಮಸ್ಯೆ ಎದುರಾಗಿತ್ತು. ಎಲ್ಲೆಲ್ಲೂ ಇದ್ದ ಗಾಜುಗಳಲ್ಲಿ ಪ್ರತಿಫಲನಗೊಂಡು ಛಾಯಾಗ್ರಹಣಕ್ಕೆ ತೊಡಕಾಯಿತು. ಸೆಟ್‌ಗೆ ಬಂದಿದ್ದ ಎಸ್.ಜಿ.ರಾವ್ ಅವರೇ ಸಮಸ್ಯೆಯ ಮೂಲ ತಿಳಿಸಿ, ಇಂಥ ಕಡೆ ಕ್ರಾಸ್‌ಲೈಟಿಂಗ್ ಮಾಡಿದರೆ ಸರಿಯಾಗುತ್ತದೆ ಎಂದಿದ್ದರು. 'ಫಲಿತಾಂಶ'ದ ಛಾಯಾಗ್ರಾಹಕರಿಗೆ ತಿಳಿಯದು ಅಂತಲ್ಲ, ಆ ಭವ್ಯವಾದ ಸೆಟ್, ಪುಟ್ಟಣ್ಣನ ಕಿರಿಚಾಟಗಳ ಮಧ್ಯೆ ಯೋಚಿಸೋಕೂ ಆಗಿರಲಾರದು.." ಎಂದು ನೆನಪು ಮಾಡಿಕೊಳ್ಳುತ್ತಾರೆ ನಿರ್ದೇಶಕ ರವೀ.

ಆದರೆ ಗೀತಪ್ರಿಯರು ತಮ್ಮ ನಿರೂಪಣೆಯಲ್ಲಿ ಇನ್ನೊಂದು ದೊಡ್ಡ ಸವಾಲನ್ನು ಎದುರಿಸಬೇಕಾಯಿತು. ಅಶ್ವಿನಿಯವರ ಮೂಲ ಕಾದಂಬರಿ ಪ್ರಕಾರ ನಾಯಕ-ನಾಯಕಿಯರಿಬ್ಬರೂ ಅಂತರ್ಮುಖಿಗಳು. ಕಥೆಯಲ್ಲಿ ಕಲ್ಪನೆಯ ಪಾತ್ರ ದೊಡ್ಡದು. ಅದನ್ನು ದೃಶ್ಯರೂಪಕ್ಕೆ ತರುವುದು ಹೇಗೆ ? ಚಿತ್ರಕಥೆ ಬರೆಯಲು ಚಲನಚಿತ್ರ ಸಾಹಿತಿಗಳನ್ನು ಮದರಾಸಿನಿಂದ ಕರೆಸಬೇಕಾಯಿತು. ಪದೇ ಪದೇ ತಿದ್ದಿದ್ದೂ ಆಯಿತು. ಗೀತಪ್ರಿಯ ಚಿತ್ರಕ್ಕೆ ಎರಡು ಮೂರು ರೀತಿಯ ಕ್ಲೈಮ್ಯಾಕ್ಸ್ ದೃಶ್ಯಗಳನ್ನು ಸೃಷ್ಟಿಸಿದರು. ತಮಗೆ ನಿರ್ಮಾಪಕರ ಸಹಕಾರವಿದ್ದಿದ್ದರಿಂದ ಇಷ್ಟೆಲ್ಲ ಯಾತನೆಗಳನ್ನು ಸಹಿಸಿಕೊಳ್ಳುವುದು ಸಾಧ್ಯವಾಯಿತು ಎನ್ನುತ್ತಾರೆ ಗೀತಪ್ರಿಯರು.

ಜನಪ್ರಿಯ ತಾರಾಜೋಡಿ ಶ್ರೀನಾಥ್ ಮತ್ತು ಮಂಜುಳಾ ಪ್ರಧಾನ ಪಾತ್ರಗಳಲ್ಲಿದ್ದ 'ಬೆಸುಗೆ'ಯಲ್ಲಿ ಬಹಳ ಕಾಲದ ನಂತರ ಎಂ.ವಿ.ರಾಜಮ್ಮ ಮತ್ತೆ ತೆರೆಯ ಮೇಲೆ ಕಾಣಿಸಿಕೊಂಡರು. ಅಂತಹ ಹಿರಿಯ ನಟಿಗೆ ಯಾವ ರೀತಿ ಅಭಿನಯಿಸಬೇಕೆಂದು ನಿರ್ದೇಶಕ ಗೀತಪ್ರಿಯರು ಪದೇ ಪದೇ ಹೇಳುತ್ತಾ ಹೋಗಿದ್ದರಿಂದ ಆಕೆಗೆ ಸಾಕಷ್ಟು ಮುಜುಗರವೇ ಆಯಿತಂತೆ. ಇದು ಚಿತ್ರದ ತಂಡ ಅನುಭವಿಸಬೇಕಾಗಿ ಬಂದ ಇನ್ನೊಂದು ಸಮಸ್ಯೆ. ಕೊನೆಗೂ ಯಶಸ್ವಿಯೆನಿಸಿದ ಈ ಚಿತ್ರಕ್ಕೆ ವಿಜಯಭಾಸ್ಕರ್ ಜನಪ್ರಿಯವೆನಿಸಿದ ಹಾಡುಗಳನ್ನು ನೀಡಿದರು. ಪತ್ರಕರ್ತ ಶ್ಯಾಮಸುಂದರ ಕುಲಕರ್ಣಿ ಅವರು ರಚಿಸಿದ 'ಹೂವೊಂದು ಬಳಿ ಬಂದು ಸೋಕಿತು ನನ್ನೆದೆಯ...' ಗೀತೆ, ಚಿತ್ರೀಕರಣ ಜನಮನ್ನಣೆ ಪಡೆಯಿತು. ಶ್ಯಾಮಸುಂದರ ಕುಲಕರ್ಣಿ 'ಛಲಗಾರ'ಚಿತ್ರಕ್ಕೆ ಮೊದಲು ಗೀತೆ ಬರೆದರು. ಚಿತ್ರ ಬರಲಿಲ್ಲ. ಅನಂತರ 'ತೀರದ ಬಯಕೆ' ಚಿತ್ರಕ್ಕೆ ಬರೆದರು. 'ಬೆಸುಗೆ'ಯ ಈ ಗೀತೆಯೂ ಅವರಿಗೆ ತುಂಬ ಹೆಸರು ತಂದಿತು. ಗೀತಪ್ರಿಯರೇ ಬರೆದ 'ಬೆಸುಗೆ ಬೆಸುಗೆ...' ಗೀತೆಯೂ ಜನಪ್ರಿಯವಾಯಿತು. ಎಷ್ಟು 'ಬೆಸುಗೆ' ಶಬ್ದಗಳು ಗೀತೆಯಲ್ಲಿ ಬಳಕೆ ಆಗಿವೆ ಎಂಬುದೇ ಒಂದು ಚರ್ಚೆಯ ವಿಷಯವಾಗುವಷ್ಟು ವಿಪುಲವಾಗಿ 'ಬೆಸುಗೆ' ಶಬ್ದ ಬಳಸಿದ್ದರು. ಸೊಗಸಾದ ರಾಗ ಸಂಯೋಜನೆಯಿತ್ತು.

ಹೊಸ ಅಲೆಯಿಂದ ಚಿತ್ರರಂಗಕ್ಕೆ ಬಂದ ಅನಂತ್‌ನಾಗ್ ಆ ಜಾಡಿನ ಚಿತ್ರಗಳಿಗೆ ಮಾತ್ರ ಮೀಸಲಾದ ನಟನೆಂದು ಹಣೆಪಟ್ಟಿ ಪಡೆಯುವುದನ್ನು ಯಶಸ್ವಿಯಾಗಿ ತಡೆಗಟ್ಟಿದ ಚಿತ್ರ ದೊರೆ-ಭಗವಾನ್ ನಿರ್ಮಿಸಿ, ನಿರ್ದೇಶಿಸಿದ ಯಶಸ್ವಿ ಚಿತ್ರ 'ಬಯಲು ದಾರಿ'. ಅದುವರೆಗೆ ಈ ಜೋಡಿ ನಿರ್ದೇಶಿಸಿದ ಚಿತ್ರಗಳಲ್ಲೆಲ್ಲ ರಾಜಕುಮಾರ್‌ರವರೇ ನಾಯಕನಟರು. ಆದರೆ ಈ ಬಾರಿ ಅವರು ಅನಂತ್‌ನಾಗ್‌ರವರನ್ನು ನಾಯಕನ ಪಾತ್ರಕ್ಕೆ



(ಚಿತ್ರ ೬೩) 'ಬಿಸಾಗೆ' ಚಿತ್ರದಲ್ಲಿ ಮಂಜುಳಾ, ಶ್ರೀನಾಥ್ ಮತ್ತು ಜಯಲಕ್ಷ್ಮಿ

ಆರಿಸಿದಾಗ ಉದ್ಯಮದಲ್ಲಿ ಗುಲ್ಲೆದ್ದಿತು. ಈ ಬಗ್ಗೆ ಭಗವಾನ್ ಒಂದು ವಿವರಣೆಯನ್ನೇ ನೀಡಬೇಕಾಯಿತು. 'ಎರಡು ಕನಸು' ತೆರೆಗೆ ಬಂದ ಮೇಲೆ ಮತ್ತೊಂದು ಚಿತ್ರಕ್ಕೆ ರಾಜಕುಮಾರ್‌ರವರ ಕಾಲ್‌ಷೀಟನ್ನು ಕೇಳಿದಾಗ ಅವರ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ ಅವರ ಪತ್ನಿ ಪಾರ್ವತಮ್ಮನವರು ಇನ್ನೂ ಎರಡು ವರ್ಷ ಅವರ ಕಾಲ್‌ಶೀಟ್‌ಗಳು ಲಭ್ಯವಾಗುವುದು ಸಾಧ್ಯವಿಲ್ಲದ ಅನಿವಾರ್ಯತೆಯನ್ನು ವಿವರಿಸಿ ಅಲ್ಲಿಯವರೆಗೆ ಕಾಯದೆ ಬೇರೆ ಯಾರೇ ಕಲಾವಿದರೊಂದಿಗೆ ತಮ್ಮ ಮುಂದಿನ ಚಿತ್ರವನ್ನು ಮಾಡಬೇಕೆಂದು ಹುರಿದುಂಬಿಸಿದರೆಂದೂ, ಆ ಚಿತ್ರದ ಮುಹೂರ್ತದಲ್ಲಿ ತಾವೇ (ಪಾರ್ವತಮ್ಮನವರೇ) ಕ್ಲ್ಯಾಪ್ ಮಾಡುವುದಾಗಿ ಕೂಡ ಹೇಳಿದರೆಂದೂ ಭಗವಾನ್ ಸಮಜಾಯಿಷಿ ಕೊಡುತ್ತಾರೆ. ಅಷ್ಟೇ ಅಲ್ಲ, ಆ ಚಿತ್ರಕ್ಕೆ ತಾವೇ ಹಣ ಹೂಡಿಸುವುದಾಗಿಯೂ ಆಕೆ ಭರವಸೆ ನೀಡಿದರಂತೆ.

ರಾಜಕುಮಾರ್ ಅನುಪಸ್ಥಿತಿಯಲ್ಲಿ ತಮ್ಮ ಮುಂದಿನ ಚಿತ್ರಕ್ಕೆ ನಾಯಕಿ ಪ್ರಧಾನ ಕಥೆಯೊಂದನ್ನೇ ಆಯ್ದು ದೊರೆ-ಭಗವಾನ್ 'ಬಯಲುದಾರಿ'ಯ ಕಥೆಯನ್ನು ಸಿದ್ಧ ಮಾಡಿದರು. ಕಥೆ ಪಾರ್ವತಮ್ಮನವರಿಗೂ ಒಡಿಸಿತು. ಅಂತೂ ಈ ಶುದ್ಧ ಕೌಟುಂಬಿಕ ಚಿತ್ರದಲ್ಲಿ ಅನಂತ್‌ನಾಗ್-ಕಲ್ಪನಾ ಜೋಡಿ ಅತ್ಯಂತ ಜನಪ್ರಿಯವೆನಿಸಿತು. ಈ ಚಿತ್ರದಲ್ಲಿ 'ಎಲ್ಲಿರುವೆ ಮನವ ಕಾಡುವ ರೂಪಸಿಯೇ...' ಎಂಬ ಜನಾನುರಾಗಿ ಹಾಡಿಗೆ ಕನ್ನಡ ಚಿತ್ರರಂಗದಲ್ಲಿಯೇ ಪ್ರಥಮ ಬಾರಿ ಹೆಲಿಕಾಪ್ಟರ್ ಬಳಸಲಾಯಿತು. ಇದೇ ಚಿತ್ರಕ್ಕೆ ದೊಡ್ಡ ಪ್ರಚಾರವನ್ನೂ ಗಿಟ್ಟಿಸಿಕೊಟ್ಟಿತು.

ಅದೇ ವರ್ಷ ಇನ್ನೊಂದು ಚಿತ್ರದಲ್ಲಿ ರಾಜಕುಮಾರ್-ಲಕ್ಷ್ಮೀ ಜೋಡಿ ಕೂಡ ಚಿತ್ರಪ್ರೇಮಿಗಳನ್ನು ಹುಚ್ಚೆಬ್ಬಿಸಿತು. ಎನ್.ವೀರಾಸ್ವಾಮಿ ನಿರ್ಮಿಸಿದ, ವಿಜಯ್ ನಿರ್ದೇಶಿಸಿದ 'ನಾ ನಿನ್ನ ಮರೆಯಲಾರೆ' ಪ್ರೇಮಕಥೆಗಳಿಗೆ ಹೊಸದೊಂದು ತೀಕ್ಷ್ಣತೆಯನ್ನು ತಂದುಕೊಟ್ಟು ಪ್ರಚಂಡ ಯಶಸ್ಸನ್ನು ಗಳಿಸಿತು. ಪ್ರಣಯ ದೃಶ್ಯಗಳಲ್ಲಿ ಲೀಲಾಜಾಲವಾಗಿ ಅಭಿನಯಿಸಿದ ರಾಜಕುಮಾರ್ ಮತ್ತು ಲಕ್ಷ್ಮೀ ಒಂದು ರೀತಿಯಲ್ಲಿ ಕನ್ನಡ ಚಿತ್ರಗಳಲ್ಲಿ ಇಂತಹ ದೃಶ್ಯಗಳಿಗೆ ಒಂದು ಹೊಸ ಆಯಾಮವನ್ನೇ ತಂದುಕೊಟ್ಟರು. ಈ ಚಿತ್ರದಲ್ಲಿ ವಿಶೇಷವಾಗಿ ಅಳವಡಿಸಲಾಗಿದ್ದ ಮೋಟಾರ್ ಬೈಕ್ ರೇಸ್‌ನ ರೋಮಾಂಚಕ ಮತ್ತು

ಅದಕ್ಕಾಗಿ ಗ್ರಾಮ, ತಾಲ್ಲೂಕು ಮಟ್ಟದಲ್ಲಿ ಅಸಂಖ್ಯಾತ ಪ್ರೇಕ್ಷಕರು ಬರುವಂತೆ ಮಾಡಿ ಚಿತ್ರೀಕರಿಸಿದ್ದು ಒಂದು ದಂತಕಥೆಯ ಹಾಗೆ ಸುದ್ದಿಯಾಗಿತ್ತು.

ಕೆಲವು ಚಿತ್ರಗಳ ಚಿತ್ರಣವನ್ನು ಕೇವಲ ೧೫ ದಿನಗಳಲ್ಲಿ ಮುಗಿಸುವ ಪವಾಡವೂ ನಡೆಯುವ ಸಮಯದಲ್ಲಿ ಈ ಚಿತ್ರದ ಸಾಹಸ ದೃಶ್ಯಗಳಿಗೆ ಮಾತ್ರ ೧೫ ದಿನಗಳ 'ರಿಹರ್ಸಲ್ ಚಿತ್ರಣ' ನಡೆದಿದ್ದೊಂದು ವಿಶೇಷ. ಈ ಚಿತ್ರಣದಲ್ಲಿ ಡ್ಯೂಪ್ ಕಲಾವಿದರನ್ನು ಮಾತ್ರ ಉಪಯೋಗಿಸಿಕೊಳ್ಳಲಾಯಿತು. ನಂತರ ಈ ದೃಶ್ಯಗಳ ನೆಗೆಟಿವ್‌ಗಳ ಪ್ರಿಂಟ್ ಹಾಕಿಸಿ ಎಲ್ಲೆಲ್ಲಿ ಬಿಗಿಗೊಳಿಸಬೇಕೆಂದು ನಿರ್ಧರಿಸಿ ನಂತರ ಮುಖ್ಯ ಕಲಾವಿದರನ್ನು ಕರೆದು ಈ ದೃಶ್ಯಗಳನ್ನೂ ಅಂತಿಮವಾಗಿ ಚಿತ್ರಿಸಲಾಯಿತು. ಈ ರೀತಿಯ ಚಿತ್ರಣ ನಡೆದಿದ್ದು ಇಡೀ ಕನ್ನಡ ಚಿತ್ರರಂಗದಲ್ಲಿಯೇ ಪ್ರಾಯಶಃ ಮೊದಲ ಬಾರಿ.

ಈ ಚಿತ್ರದ ಜನಪ್ರಿಯ ದೃಶ್ಯಗಳಲ್ಲೊಂದಾದ ನಾಯಕ ತನ್ನ ಮೋಟಾರ್ ಸೈಕಲ್‌ನಲ್ಲಿ ರೈಲ್ವೆ ಲೆವೆಲ್ ಕ್ರಾಸಿಂಗ್ ಹಾರುವ ದೃಶ್ಯದ ಚಿತ್ರಣಕ್ಕ ಐದು ದಿನಗಳು ಹಿಡಿದವು. ತಾಂತ್ರಿಕ ವರ್ಗದವರು ಮತ್ತು ನಿರ್ದೇಶಕ ವಿಜಯ್ ಏನೇನೋ ಪ್ರಯೋಗಗಳನ್ನು ಮಾಡಿದರೂ ಸರಿಹೋಗಲಿಲ್ಲ. ಕೊನೆಗೆ ರಷ್ಯಾದ ಕೆಲವು ಪುಸ್ತಕಗಳನ್ನು ಓದಿ ಅವುಗಳಲ್ಲಿ ಸೂಚಿಸಲಾದ ಕೆಲವು ಎಡಿಟಿಂಗ್ ತಂತ್ರಗಳನ್ನು ಅಳವಡಿಸಿಕೊಂಡು ಅವುಗಳ ಪ್ರಕಾರ ಅಂತಿಮವಾಗಿ ಚಿತ್ರೀಕರಣ ನಡೆಸಲಾಯಿತು. ಕಲಾವಿದ ತನ್ನ ಬೈಕ್‌ನಲ್ಲಿ ಲೆವೆಲ್ ಕ್ರಾಸಿಂಗ್ ಅನ್ನು ಹಾರಿದ ಶಾಟ್‌ಗಳನ್ನು ಮೊದಲು ಚಿತ್ರಿಸಿ ನಂತರ ರೈಲ್ವೆ ಕ್ರಾಸಿಂಗ್ ದಾಟುವ ಶಾಟ್‌ಗಳನ್ನು ಪ್ರತ್ಯೇಕವಾಗಿ ಚಿತ್ರಿಸಿ ನಂತರ 'ಫಾಗ್' ಆದ ಕಚ್ಚಾ ಫಿಲಂ ಅನ್ನು ಡೆವಲಪ್ ಮಾಡಿ ಬ್ಲಾಕ್ ಫಿಲಂ ಮಾಡಿ ಎರಡು ಫ್ರೇಂಗಳನ್ನು ಉಪಯೋಗಿಸಿ 'ಜರ್ಕ್' ಬರದಂತೆ ಮಾಡಲಾಯಿತು. ಇನ್ನೊಂದು ಸಾಹಸ ದೃಶ್ಯದಲ್ಲಿ ೨೦ ಕಾರುಗಳ ಮೇಲೆ ನಾಯಕನ 'ಡ್ಯೂಪ್' ಕಲಾವಿದ ತನ್ನ ಬೈಕ್ ಓಡಿಸಿಕೊಂಡು ಬರುತ್ತಾನೆ. ಈ ಚಿತ್ರಿಕೆಯ ಚಿತ್ರಣಕ್ಕೆ ಐದು ಕ್ಯಾಮರಾಗಳು ಬೇಕಾದವು. ಇಬ್ಬರು ಸ್ಟಂಟ್ ಕಲಾವಿದರು ಕೆಳಗೆ ಬಿದ್ದು ಕೈ ಕಾಲು ಮುರಿದುಕೊಂಡರು. ಕೊನೆಗೆ ಮೂರನೆಯ ಕಲಾವಿದರು ಯಶಸ್ವಿಯಾಗಿ ತಮ್ಮ ಕೆಲಸವನ್ನು ನಿರ್ವಹಿಸಿದರು. ಚಿತ್ರಣವನ್ನು ನೋಡಲು ಸಹಸ್ರಾರು ಪ್ರೇಕ್ಷಕರು ನೆರೆದಿದ್ದರು. ಮೂರು ದಿನಗಳು ನಡೆದ ಈ ದೃಶ್ಯದ ಚಿತ್ರಣಕ್ಕೆ ಹಣ ನೀರಿನಂತೆ ಖರ್ಚಾಯಿತು.

೧೯೭೬ರಲ್ಲಿ ಕನ್ನಡ ಚಿತ್ರರಂಗಕ್ಕೆ ಮತ್ತೊಬ್ಬ ಸೃಜನಶೀಲ ನಟ-ನಿರ್ಮಾಪಕ-ನಿರ್ದೇಶಕರ ಪ್ರವೇಶವಾಯಿತು. ಹಾಸ್ಯಮಯ, ಸದಭಿರುಚಿಯ ಚಿತ್ರ 'ಅಪರೂಪದ



(ಚಿತ್ರ ೬೪) 'ಬಯಲುದಾರಿ' ಚಿತ್ರದಲ್ಲಿ ಅನಂತ್‌ನಾಗ್ ಮತ್ತು ಕಲ್ಪನಾ



(ಚಿತ್ರ ೭೫) 'ನಾ ನಿನ್ನ ಮರೆಯಲಾರೆ' ಚಿತ್ರದಲ್ಲಿ ಲಕ್ಷ್ಮೀ ಮತ್ತು ರಾಜಕುಮಾರ್

ಅತಿಥಿಗಳು' ಕಾಶೀನಾಥ್‌ರವರ ಮೊದಲ ಚಿತ್ರ. ನಂತರದ ದಿನಗಳಲ್ಲಿ ಕಾಶೀನಾಥ್ ನಿರ್ದೇಶಿಸಿದ ಹೆಚ್ಚು ಕಡಿಮೆ ಎಲ್ಲ ಚಿತ್ರಗಳೂ ಸೆನ್ಸಾರ್ ಬಾಧೆಗೆ ಸಿಕ್ಕಿಕೊಂಡಿದ್ದರಿಂದ ಅವರ ಪ್ರತಿಭೆ ಅಷ್ಟಾಗಿ ಬೆಳಕಿಗೆ ಬಾರದಂತಾಗಿದ್ದು ಒಂದು ದುರಂತವೆಂದೇ ಹೇಳಬೇಕು. ಅದಕ್ಕೆ ಸ್ವಲ್ಪಮಟ್ಟಿಗೆ ಅವರೇ ಕಾರಣ ಕೂಡ. ವಾಸ್ತವವಾಗಿ ಕಾಶೀನಾಥ್ ದಾಖಲೆಗೆ ಅರ್ಹವಾದ ಕೆಲವು ಪ್ರಯೋಗಗಳನ್ನು ಮಾಡಿದವರು. ಸೆಕ್ಸ್ ಬಗ್ಗೆ ಸಾಮಾನ್ಯ ಜನರಿಗಿರುವ ಸಲ್ಲದ ಬಿಂಕದ ವಿರುದ್ಧ ಸೆಟೆದೆದ್ದ ಅವರು ಈ ಪ್ರಯತ್ನದಲ್ಲಿ ಸಂಪ್ರದಾಯಸ್ಥರನ್ನು ದಿಗ್ಭ್ರಮೆಗೊಳಿಸುವುದರ ಜೊತೆಗೆ ಕೆಲವೊಮ್ಮೆ ಅಂಕೆ ತಪ್ಪಿ ಹೋಗಿದ್ದೂ ಹೌದು. ಆದರೆ ಅವರು 'ಅಪರೂಪದ ಅತಿಥಿಗಳು' ಚಿತ್ರವನ್ನು ತೆರೆಗೆ ತಂದಾಗ ಅವರು ಮುಂದೆ ಇಷ್ಟು ವಿವಾದಾಸ್ಪದ ನಿರ್ದೇಶಕರಾಗುತ್ತಾರೆಂಬ ಯಾವ ಸೂಚನೆಯೂ ಇರಲಿಲ್ಲ. ಸ್ಥಿರಚಿತ್ರಗ್ರಾಹಕ ಸುಂದರನಾಥ್ ಸುವರ್ಣ ಚಲನಚಿತ್ರಗಳಿಗೆ ಛಾಯಾಗ್ರಾಹಕರಾಗಿದ್ದು ಈ ಚಿತ್ರದಿಂದಲೆ.

'ಅಪರೂಪದ ಅತಿಥಿಗಳು' ಚಿತ್ರೀಕರಣ ೮ x ೯ ಅಡಿಯಷ್ಟು ಸಣ್ಣ ಕೊಠಡಿಯೊಂದರಲ್ಲಿ ನಡೆಯಿತು. ಒಂದು ಮೂಲೆಯಲ್ಲಿ ಝೂಂ ಲೆನ್ಸ್ ಸಹಿತವಾದ ಆ್ಯರಿಫ್ಲೆಕ್ಸ್ ಕ್ಯಾಮರಾ, ಒಂದು ಮಂಚ, ಅದರ ಮೇಲೆ ಕಲಾವಿದರು - ಇದು ಚಿತ್ರಣವಾದ ಒಂದು ರಸಮಯ ಸನ್ನಿವೇಶ. ಐವರು ಹುಡುಗರು ಬೆಂಗಳೂರಿಗೆ ತಮ್ಮ ಸ್ನೇಹಿತನನ್ನು ನೋಡಲು ಬರುತ್ತಾರೆ. ಆದರೆ ಆ ಗೆಳೆಯ ತುರ್ತು ಕೆಲಸದ ಮೇಲೆ ಬೇರೆ ಊರಿಗೆ ಹೋಗಿದ್ದಾನೆ. ಮನೆ ಸ್ನೇಹಿತರ ಕೈಗೆ ಬಂದಾಗ ಅವರು ಮಾಡುವ ಅನೇಕ ಫಜೀತಿಗಳ ಹಾಸ್ಯಮಯ ನಿರೂಪಣೆ ಈ ಚಿತ್ರದಲ್ಲಿತ್ತು. ಕ್ಷಣಕ್ಷಣಕ್ಕೂ ಪ್ರೇಕ್ಷಕರನ್ನು ನಗಿಸಿದ ತೀರಾ ಕಡಿಮೆ ವೆಚ್ಚದಲ್ಲಿ ತಯಾರಾದ ಈ ಚಿತ್ರ ಅದರ ನಿರ್ಮಾಪಕರ ನಿರೀಕ್ಷೆಯನ್ನೇ ಮೀರಿ ಯಶಸ್ವಿಯಾಯಿತು. ಹಾಸ್ಯನಟರಾಗಿ ಕಾಶೀನಾಥ್‌ರಿಗೆ ಒಂದು ವಿಶಿಷ್ಟ ಸ್ಥಾನವನ್ನು ತಂದುಕೊಟ್ಟಿತು. ತುಂಬಾ ಕಚ್ಚಾತನದ ಈ ಚಿತ್ರ ಪ್ರತ್ಯೇಕವಾಗಿ ನಿಲ್ಲದಿದ್ದರೂ ಮುಂದೆ ಕಾಶೀನಾಥ್ ಬೆಳೆಯಲು ಒಂದು ಮುಖ್ಯ ಹೆಜ್ಜೆಯಾಯಿತು. ಈ ಚಿತ್ರಕ್ಕೆ ಕಲಾನಿರ್ದೇಶಕರಾಗಿ ಕಲಾವಿದ ಚಂದ್ರನಾಥ್ ಕೆಲಸ ಮಾಡಿದ್ದರು. ಮುಖ್ಯವಾಗಿ ಮೊದಲ ಬಾರಿಗೆ ಪೋಸ್ಟರ್ಸ್, ಹೋರ್ಡಿಂಗ್ಸ್ ಇತ್ಯಾದಿ ಎಲ್ಲ ಕಡೆ ಕಾರ್ಟೂನ್‌ಗಳನ್ನು ಬಳಸಿ ಪ್ರಚಾರದಲ್ಲೂ ಹೊಸತನ ಮೂಡಿಸಲಾಗಿತ್ತು. ಕಾಶೀನಾಥ್ ತಮ್ಮ ವೃತ್ತಿಜೀವನದಲ್ಲಿ ಮೊದಲು ಅಂಬೆಗಾಲಿಟ್ಟಿದ್ದು ಅಸೀಮಾ ಎಂಬ ಕಿರುಚಿತ್ರ ತಯಾರಕರ ಪ್ರಾಯೋಗಿಕ ತಂಡವೊಂದರಲ್ಲಿ.

ಕಲಾವಿದ ಕುಂಚವಾಡಿಸಿದಾಗ ಸೃಷ್ಟಿಯಾಗುವ ಕಲಾಕೃತಿ, ಅದೇ ರೀತಿ ಕವಿ ಸೃಷ್ಟಿಸುವ ಕಾವ್ಯಗಳಂತೆಯೇ ಅತ್ಯಂತ ಸೃಜನಾತ್ಮಕ ಮಾಧ್ಯಮವಾದ ಚಲನಚಿತ್ರ ಕೂಡ ಯಾಕೆ ಆಗಬಾರದು ? ವೈಯಕ್ತಿಕ ಅನುಭವದ, ಭಾವನೆಯ, ಚಿಂತನೆಯ ಪ್ರತೀಕ ಚಲನಚಿತ್ರವೇಕೆ ಆಗಬಾರದು ಎಂಬ ಪ್ರಶ್ನೆಯನ್ನು ಕೇಳಿಕೊಂಡ ರಾಮಚಂದ್ರ ಅಸೀಮದ ಸ್ಥಾಪನೆಗೆ ಕಾರಣರಾದರು. ಎಂಟು ಮಂದಿ ವಿವಿಧ ವೃತ್ತಿಯವರು ಸೇರಿ ಸ್ಥಾಪಿಸಿಕೊಂಡ ತಂಡ ಇದು. ಈ ತಂಡ ಹಲವಾರು ಕಿರುಚಿತ್ರಗಳನ್ನು ತಯಾರಿಸಿತು. ಪ್ರತಿ ಕಿರುಚಿತ್ರದ ಕಾಲಾವಧಿ ನಾಲ್ಕರಿಂದ ಐದು ನಿಮಿಷ. ತಂಡದ ಎಲ್ಲ ಸದಸ್ಯರಿಗೂ ಈ ಮಾಧ್ಯಮದ ಮೂಲಕ ತನಗನಿಸಿದನ್ನು ತಿಳಿಸುವ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಲಾಯಿತು. ನಂತರ ನಟರಾಗಿ, ನಿರ್ದೇಶಕರಾಗಿ, ನಿಸರ್ಗವಾದಿಯಾಗಿ ಹೆಸರು ಮಾಡಿದ ಸುರೇಶ್ ಹೆಬ್ಳೀಕರ್ ಕೂಡ ಅಸೀಮದ ಒಬ್ಬ ಸದಸ್ಯರಾಗಿದ್ದರು. ಕಾಶೀನಾಥ್ ಈ ತಂಡಕ್ಕಾಗಿ ನಿರ್ದೇಶಿಸಿದ ಕಿರುಚಿತ್ರ 'ಸ್ಲಿಪ್'.

ಅಸೀಮದ ಕಾರ್ಯವಿಧಾನವೂ ವೈಶಿಷ್ಟ್ಯಪೂರ್ಣ. ವಾರಕ್ಕೊಮ್ಮೆ ಸಭೆ. ಅಲ್ಲಿ ಸ್ಕ್ರಿಪ್ಟ್, ಚಲನಚಿತ್ರಗಳು ಮತ್ತು ನಿರ್ಮಾಣದ ಇತ್ತೀಚಿನ ಪ್ರವೃತ್ತಿಗಳನ್ನು ಕುರಿತು ಮುಕ್ತ ಚರ್ಚೆ. ಪ್ರತಿ ತಿಂಗಳೂ ತಂಡದ ಸದಸ್ಯರೊಬ್ಬರಿಂದ ಒಂದು ಕಿರುಚಿತ್ರದ ನಿರ್ಮಾಣ. ಅದಕ್ಕಾಗಿ ಚಂದಾಮೂಲಕ ಹಣ ಸಂಗ್ರಹ. ಆದರೆ ಸದಸ್ಯರೆಲ್ಲರೂ ಮುಂದೆ ಚಲನಚಿತ್ರರಂಗಕ್ಕೆ ಧುಮುಕಬೇಕೆಂಬ ಒತ್ತಾಯವೇನೂ ಇರಲಿಲ್ಲ. ಕಾಶೀನಾಥ್ ಮತ್ತು ಹೆಬ್ಳೀಕರ್ ಮಾತ್ರ ಇದಕ್ಕೆ ಹೊರತಾದರು, ಅಷ್ಟೆ. ಅಸೀಮಾ ಒಂದು ಪತ್ರಿಕೆಯನ್ನು ಹೊರತರುತ್ತಿತ್ತು. ಬಂದ ಕೆಲವೇ ಸಂಚಿಕೆಗಳಲ್ಲಿ ಅಪರೂಪದ ಲೇಖನಗಳಿದ್ದವು. 'ಸಂಸ್ಕಾರ'ದ ಛಾಯಾಗ್ರಾಹಕ ಟಾಂ ಕೋವನ್ ಮೊದಲಾದವರೊಂದಿಗೆ ಗಂಭೀರವಾದ ಚರ್ಚೆ, ಸಂದರ್ಶನ ಪ್ರಕಟವಾಗಿತ್ತು.

ಇದೇ ವರ್ಷ ನಡೆದ ಇನ್ನೊಂದು ಪ್ರಮುಖ ಬೆಳವಣಿಗೆ ಸಾಹಿತ್ಯದಲ್ಲಿ ವಿಶೇಷ ಸ್ಥಾನ ಗಳಿಸಿದ್ದ ಪಿ.ಲಂಕೇಶ್‌ರವರು ಚಿತ್ರ ನಿರ್ಮಾಣ ಮತ್ತು ನಿರ್ದೇಶನಕ್ಕೆ ಇಳಿದಿದ್ದು. ಅವರು ತಮ್ಮದೇ ಕಥೆಯನ್ನಾಧರಿಸಿ ನಿರ್ಮಿಸಿ, ನಿರ್ದೇಶಿಸಿದ 'ಪಲ್ಲವಿ' ಒಂದು ಮಹತ್ತರ ಘಟನೆ. ಹಾಗೆಂದರೆ ಅದೊಂದು ಸರ್ವಶ್ರೇಷ್ಠ ಚಿತ್ರವೆಂದೇನೂ ಅರ್ಥವಲ್ಲ. ವಾಸ್ತವವಾಗಿ ಈ ಚಿತ್ರ ಮುಂದೊಮ್ಮೆ ಕನ್ನಡ ಚಿತ್ರರಂಗದಲ್ಲಿ ವಾಡಿಕೆಗೆ ಬಂದ ಮಾತೊಂದರಂತೆ 'ನಾಟಕಕ್ಕಿಂತ ಹೆಚ್ಚು, ಸಿನಿಮಾಗಿಂತ ಕಡಿಮೆ' ಎನ್ನುವಂತೆಯೇ ಇತ್ತು. ಲಂಕೇಶ್ ತಮ್ಮ ಕಿರುಕಾದಂಬರಿ 'ಬಿರುಕು' ಕಥಾವಸ್ತುವನ್ನು ಸೇರಿಸಿಕೊಂಡು ಚಿತ್ರಿಸಿದ್ದರು. ತಾಂತ್ರಿಕವಾಗಿ ಚಿತ್ರವನ್ನು ಕಳಪೆಯೆಂದೇ ಭಾವಿಸಬಹುದಿತ್ತು. ಆದರೆ ಇದು ವಿಶಿಷ್ಟವಾಗಿ ನಿಂತಿದ್ದು ಲಂಕೇಶ್ ಅವರ ಸಾಹಿತ್ಯ ಕೃತಿಗಳಂತೆಯೇ ಅಂದಿನ ಸಮಾಜದ ಬಗ್ಗೆ ನಿರ್ದೇಶಕನ ನೇರ ವ್ಯಾಖ್ಯೆಯ ಗುಣದಿಂದಾಗಿ. ಒಂದರ್ಥದಲ್ಲಿ ಈ ಚಿತ್ರ ೧೯೭೦ರ ದಶಕದಲ್ಲಿ ಕನ್ನಡ ಚಿತ್ರರಂಗಕ್ಕೆ ನಾನಾ ರಂಗಗಳಿಂದ ಬಂದ ಕಲಾವಿದರ, ಚಿಂತಕರ ಮಹಾಪೂರಕ್ಕೆ ಸಂಕೇತದಂತೆಯೂ ಇತ್ತು.




(ಚಿತ್ರ ೭೬) 'ಅಪರೂಪದ ಅತಿಥಿಗಳು' ಚಿತ್ರದಲ್ಲಿ ಮಮತಾಶೆಣೈ, ಆನಂದ ಧಾರವಾಡ್

ಎಸ್.ರಾಮಚಂದ್ರರ ಛಾಯಾಗ್ರಹಣವಿದ್ದು, 'ಪಲ್ಲವಿ'ಗೆ ಸಂಗೀತ ನಿರ್ದೇಶಕ ಸರೋದ್ ಪಟು ರಾಜೀವ್ ತಾರಾನಾಥ್ ಸಂಗೀತ ನೀಡಿದರು. 'ಪಲ್ಲವಿ'ಯ ನಾಯಕಿಯಾಗಿ ಹವ್ಯಾಸಿ ರಂಗಭೂಮಿಯ ವಿಮಲಾನಾಯ್ಡು ಅಭಿನಯಿಸಿದರು. ಚಿತ್ರಕ್ಕೆ ಸಂಭಾಷಣೆಗಳನ್ನು ಲಂಕೇಶ್ ಬರೆದರು. ಲಂಕೇಶರೇ ಒಂದು ಪಾತ್ರದಲ್ಲಿ ಅಭಿನಯಿಸಿದರು. ಹವ್ಯಾಸಿ ರಂಗಭೂಮಿಯ ಜನಪ್ರಿಯ ಕಲಾವಿದರು, ಸ್ವಯಂ ನಾಟಕಕರ್ತರೂ ಆದ ಪರ್ವತವಾಣಿ ಮತ್ತು ಟಿ.ಎನ್.ಸೀತಾರಾಂ ಪಾತ್ರವರ್ಗದಲ್ಲಿದ್ದ ಇತರ ಪ್ರಮುಖರು. ಲಂಕೇಶ್ ಅವರ ಪಾತ್ರಕ್ಕೆ ಕಂಠದಾನ ಮಾಡಿದ ಟಿ.ಎಸ್.ರಂಗಾ ಲಂಕೇಶ್‌ರ ಹಾಗೇ ಮಾತಾಡಿದ್ದರು. ಚಿತ್ರದ ಒಂದು ಸನ್ನಿವೇಶದಲ್ಲಿ ಸ್ತ್ರೀಪಾತ್ರವೊಂದಕ್ಕೆ ಗಂಡುಧ್ವನಿ ಕೊಡಲಾಗಿತ್ತು. ಮತ್ತು ಅದಕ್ಕೆಲ್ಲ ವಿಶೇಷ ಅರ್ಥಗಳನ್ನು ಕಲ್ಪಿಸಲಾಯಿತು. ಈ ಚಿತ್ರದಲ್ಲಿ ಎಂ.ಜಿ.ನರಸಿಂಹಸ್ವಾಮಿ ಹಾಗೂ ಎಲ್.ವಿ.ಶಾರದಾ ಅವರ ಅಕ್ಕ ವಾಸಂತಿ ಜೋಡಿಯಾಗಿ ಅಭಿನಯಿಸಿದ್ದರು.


(ಚಿತ್ರ ೬೭) 'ಪಲ್ಲವಿ' ಚಿತ್ರದಲ್ಲಿ ವಿಮಲಾ ನಾಯ್ಡು

ವಿ.ಸೋಮಶೇಖರ್ ನಿರ್ದೇಶನದ 'ಪ್ರೇಮದ ಕಾಣಿಕೆ', ಎ.ವಿ.ಶೇಷಗಿರಿರಾವ್ ನಿರ್ದೇಶಿಸಿದ 'ಬದುಕು ಬಂಗಾರವಾಯಿತು', 'ಬಹದ್ದೂರ್ ಗಂಡು' ಮತ್ತು 'ರಾಜ ನನ್ನ ರಾಜ', ವಿಜಯ್ ನಿರ್ದೇಶನದ 'ಬಡವರ ಬಂಧು' - ಇವೆಲ್ಲ ೧೯೭೬ರಲ್ಲಿ ಯಶಸ್ವಿಯಾಗಿ ಪ್ರದರ್ಶಿತವಾದ ಚಿತ್ರಗಳು. ಆದರೆ ಎಲ್ಲ ಮಾಮೂಲಿ ಮಸಾಲೆ ಚಿತ್ರಗಳೆ.

ಅದೇ ವರ್ಷ ಬಿಡುಗಡೆಯಾದ 'ಹುಡುಗಾಟದ ಹುಡುಗಿ'ಯಲ್ಲಿ ಆರತಿ ಮಾಡಬೇಕಾಗಿದ್ದ ನಾಯಕಿಯ ಪಾತ್ರಕ್ಕೆ ಮಂಜುಳಾ ಆಯ್ಕೆಯಾದರು. ಶ್ರೀನಾಥ್-ಮಂಜುಳಾ ಜೋಡಿ ಬಹು ಮೆಚ್ಚುಗಳಿಸಿತು. ಮುಂದೆ ಆಕೆಗೂ ನಿರ್ದೇಶಕ ಅಮೃತಂಗೂ ಪ್ರೇಮಾಂಕುರವಾಗಿ ಅವರಿಬ್ಬರೂ ವಿವಾಹವಾದರು. 'ಪ್ರೇಮದ ಕಾಣಿಕೆ' ಚಿತ್ರಕ್ಕೆ ಸೋಮಶೇಖರ್ ಕರ್ನಾಟಕದ ಆಚೆ ಅನೇಕ ಸ್ಥಳಗಳಲ್ಲಿ ಹೊರಾಂಗಣ ಚಿತ್ರಣ ನಡೆಸಿದರು. ಇದರ ಚಿತ್ರಕಥೆಯನ್ನು ಮುಂಬಯಿಯ ಖ್ಯಾತ ಚಿತ್ರ ಸಾಹಿತಿ ಸಲೀಂ ಜಾವೇದ್‌ರಿಂದ ಪಡೆಯಲಾಯಿತು. 'ಬದುಕು ಬಂಗಾರವಾಯಿತು' ಮೂಲಕ ಉತ್ತರ ಕರ್ನಾಟಕದ ನಾಲ್ವರು ಮಿತ್ರರು ಎಸ್.ಡಿ.ಅಂಕಲಗಿ, ಹುಬ್ಳೀಕರ್, ಇಂಗಳೆ ಮತ್ತು ಚಾವಣ್ಣನವರ್ ತಂಡದ ಪ್ರವೇಶವಾಗಿ ಅವರು ಮುಂದೆ ಕನ್ನಡದ ಪ್ರಪ್ರಥಮ ಸಿನಿಮಾಸ್ಕೋಪ್ ಚಿತ್ರವನ್ನೂ ನಿರ್ಮಿಸಿದರು. ಈ ಚಿತ್ರದಲ್ಲಿ ಉತ್ತರ ಕರ್ನಾಟಕದ ಯಶಸ್ವಿ ನಾಟಕಗಳನ್ನು ತೆರೆಗೆ ತರುವ ಹೊಸ ಪರಿಪಾಠ ಪ್ರಾರಂಭವಾಯಿತು.

'ಬಹದ್ದೂರ್ ಗಂಡು' ಚಿತ್ರಕ್ಕೆ ಮೆಹಬೂಬ್‌ರ ಅದ್ದೂರಿ ಹಿಂದಿ ಚಿತ್ರ 'ಆನ್' ಸ್ಫೂರ್ತಿ ನೀಡಿತು. ಜಯಂತಿ ಈ ಚಿತ್ರದ ಸಾಹಸ ದೃಶ್ಯಗಳಲ್ಲಿ ವಿಶೇಷ ಗಮನ ಸೆಳೆದರು. 'ರಾಜ ನನ್ನ ರಾಜ' ರಾಜಕುಮಾರ್ ಪ್ರಧಾನ ಪಾತ್ರದಲ್ಲಿದ್ದ ಅಬ್ಬಯ್ಯನಾಯ್ಡು ನಿರ್ಮಾಣದ ಚಿತ್ರ.

'ಪರಿವರ್ತನೆ'ಗೆ ಖ್ಯಾತ ಹಿಂದಿ ನಿರ್ಮಾಪಕ-ನಿರ್ದೇಶಕ ವೀರೇಂದ್ರ ಸಿನ್ಹರ ಒತ್ತಾಸೆಯಿತ್ತು. ನಟಿ ವೈಶಾಲಿಯ ತಂದೆ ಡಾ।ಚಿಟಗೋಪಿ ನಿರ್ದೇಶಿಸಿದ ಏಕೈಕ ಚಿತ್ರ ಇದು. ಚಿತ್ರಕ್ಕೆ ಶ್ಯಾಮಲಾಭಾವೆಯ ಸಂಗೀತವಿತ್ತು. 'ಚಿರಂಜೀವಿ' ಖ್ಯಾತ ತಮಿಳು ನಿರ್ದೇಶಕ ಭೀಮಸಿಂಗ್ ನಿರ್ದೇಶಿಸಿದ ಎರಡೇ ಕನ್ನಡ ಚಿತ್ರಗಳಲ್ಲಿ ಒಂದು.

ಕೆ.ಎಸ್.ಆರ್.ದಾಸ್ ನಿರ್ದೇಶಿಸಿದ ವರ್ಣ ಚಿತ್ರ 'ಬಂಗಾರದ ಗುಡಿ'ಗೆ ಬೃಹತ್ ಆಂಗ್ಲ ಚಿತ್ರ 'ಮೆಕನಾಸ್ ಗೋಲ್ಡ್' ಸ್ಫೂರ್ತಿ. ದೃಶ್ಯವೈಭವದಿಂದ ಮೆರೆದ ಈ ಚಿತ್ರಕ್ಕೆ ಮೂಲ ಆಂಗ್ಲ ಚಿತ್ರದಲ್ಲಿರುವಂತೆ ಒಂದು ಭಾರಿ ಸೆಟ್ ನಿರ್ಮಿಸಲಾಗಿತ್ತು. ಈ ಚಿತ್ರಕ್ಕೆ ಕಾಶ್ಮೀರದಲ್ಲಿ ಪರಾಕಾಷ್ಠೆ ದೃಶ್ಯಗಳ ಚಿತ್ರಣವಾಯಿತು.

ವಿಜಯ್ ನಿರ್ದೇಶಿಸಿದ 'ಬಡವರ ಬಂಧು' ಮೊದಲನೆಯ ಸುತ್ತಿನ ಬಿಡುಗಡೆಯಲ್ಲಿ ಸ್ತಬ್ಧವಾಗಿತ್ತು. ಆದರೆ ಕೆಲವು ಸಮಯದ ನಂತರ ಮತ್ತೆ ಬಿಡುಗಡೆಯಾದಾಗ ಸೊಗಸಾಗಿ ಓಡಿತು. 'ಅಪರಾಧಿ?' ಹಿರಿಯ ನಿರ್ದೇಶಕ ವೈ.ಆರ್.ಸ್ವಾಮಿಯವರ ಮಗಳು ಸುನೀತಾ ಅಭಿನಯಿಸಿದ ಮೊದಲ ಮತ್ತು ಏಕೈಕ ಚಿತ್ರ.

೧೯೭೬ರಲ್ಲಿ ಚಿತ್ರರಂಗದ ನಾಲ್ವರು ಪ್ರಮುಖರು ಇನ್ನಿಲ್ಲವಾದರು. ಕನ್ನಡ ವೃತ್ತಿ ರಂಗಭೂಮಿ ಮತ್ತು ಚಿತ್ರರಂಗಗಳಿಗೆ ನಟರಾಗಿ ನಾಲ್ಕು ದಶಕಗಳಿಗೂ ಹೆಚ್ಚು ಸೇವೆ ಸಲ್ಲಿಸಿದ ಬೇಲೂರು ರಾಘವೇಂದ್ರರಾವ್, ಅದೇ ಹಿನ್ನೆಲೆಯಿಂದ ಬಂದು ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದ ನಟ ಎಚ್.ರಾಮಚಂದ್ರಶಾಸ್ತ್ರಿ, ನೆರೆರಾಜ್ಯ ತಮಿಳುನಾಡಿನಿಂದ ಬಂದು ಬೆಂಗಳೂರಿನಲ್ಲಿ ಸುಸಜ್ಜಿತವಾದ ಚಾಮುಂಡೇಶ್ವರಿ ಸ್ಟುಡಿಯೋ ಮತ್ತು ಲ್ಯಾಬೊರೇಟರಿಯನ್ನು ಸ್ಥಾಪಿಸಿದ ಶ್ರೀರಾಮುಲುನಾಯ್ಡು ಮತ್ತು ಉತ್ತರ ಕರ್ನಾಟಕದಲ್ಲಿ ಕನ್ನಡ ಚಿತ್ರಗಳನ್ನು ಜನಪ್ರಿಯಗೊಳಿಸಲು ಅಪಾರವಾಗಿ ಶ್ರಮಿಸಿದ ಗದಗಿನ ಶ್ರೀನಿವಾಸ ಪಿಕ್ಚರ್ಸ್ ಮಾಲೀಕರಾದ ಕೆ.ವಿ.ರಾಜು ನಿಧನರಾದರು. ಅವರವರ ಕ್ಷೇತ್ರದಲ್ಲಿ ನಿಜಕ್ಕೂ ಅನುಪಮ ಸೇವೆ ಸಲ್ಲಿಸಿದ್ದವರು. ಕನ್ನಡ ಚಿತ್ರೋದ್ಯಮದಲ್ಲಿ ಇತರರಿಗೆ ಸುಲಭವಾಗುವಂತೆ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋದವರು.

ಇದೇ ವರ್ಷ ಸೆಪ್ಟೆಂಬರ್‌ನಲ್ಲಿ ಮದರಾಸಿನಲ್ಲಿ ಕರ್ನಾಟಕ ಸರ್ಕಾರ ಮತ್ತು ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿಯ ಸಹಯೋಗದಲ್ಲಿ ಕನ್ನಡ ಚಲನಚಿತ್ರೋತ್ಸವವೊಂದು ನಡೆಯಿತು. ಆರಂಭದಲ್ಲಿ ಮದರಾಸಿನ ಆರೈಕೆಯಲ್ಲಿಯೇ ಬೆಳೆದ ಕನ್ನಡ ಚಿತ್ರೋದ್ಯಮ ಕನ್ನಡ ನಾಡಿಗೆ ತನ್ನ ಬೇರುಗಳನ್ನು ವರ್ಗಾಯಿಸಿದ ಮೇಲೆ ಎಂತಹ ಪ್ರಗತಿ ಸಾಧಿಸಿದೆಯೆಂಬುದರ ಅವಲೋಕನದಂತಿತ್ತು ಈ ಉತ್ಸವ. ಅಗ ರಾಜ್ಯ ಸರ್ಕಾರದ ವಾರ್ತಾ ಮಂತ್ರಿಗಳಾಗಿದ್ದ ಆರ್.ಗುಂಡೂರಾಯರು ಉದ್ಘಾಟನಾ ಸಮಾರಂಭದಲ್ಲಿ ಮಾತನಾಡಿ ಕನ್ನಡ ಚಿತ್ರಗಳ ಮೇಲಿನ ಮನರಂಜನೆ ತೆರಿಗೆಯನ್ನು ಐದು ವರ್ಷಗಳ ಕಾಲ ರದ್ದುಗೊಳಿಸುವಂತೆ ತಾವು ಸರ್ಕಾರಕ್ಕೆ ಶಿಫಾರಸು ಮಾಡಿರುವುದಾಗಿ ತಿಳಿಸಿದರು. ಆದರೆ ಅವರ ಈ ಯೋಜನೆ ಕಾರ್ಯಗತವಾಗಲಿಲ್ಲ. ಆರು ವರ್ಷಗಳ ನಂತರ ಗುಂಡೂರಾಯರೇ ರಾಜ್ಯದ ಮುಖ್ಯಮಂತ್ರಿಗಳಾದಾಗ ಅವರ ಸರ್ಕಾರ ರಾಜ್ಯದಲ್ಲಿಯೇ ತಯಾರಾದ ಎಲ್ಲ ಕನ್ನಡ ಚಿತ್ರಗಳಿಗೂ ಶೇ.೫೦ರಷ್ಟು ಮನರಂಜನೆ ತೆರಿಗೆ ವಿನಾಯಿತಿಯನ್ನು ನೀಡಿತು.

ಈ ವರ್ಷದ ಪ್ರಮುಖ ಘಟನೆಯೆಂದರೆ ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಚಿತ್ರರಂಗದ ಜನಪ್ರಿಯ ನಟ ರಾಜಕುಮಾರ್‌ಗೆ ಗೌರವ ಡಾಕ್ಟರೇಟ್ ನೀಡಿ ಗೌರವಿಸಿದ್ದು. ಆಗ ಪ್ರೊ।ಡಿ.ವಿ.ಅರಸು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದರು. ಅದೇ ಸಮಯದಲ್ಲಿ ಡಾಕ್ಟರೇಟ್ ಮೂಲಕ ಗೌರವಿಸಲ್ಪಟ್ಟವರು ಖ್ಯಾತ ಅಣು ವಿಜ್ಞಾನಿ ಡಾ।ಹೋಮಿಸೇಥ್ನಾ, ಶ್ರೇಷ್ಠ ಸಾಹಿತಿ ವಿ.ಸೀತಾರಾಮಯ್ಯ ಮತ್ತು ಖ್ಯಾತ ಅರ್ಥಶಾಸ್ತ್ರಜ್ಞ ಡಾ।ಎಂ.ಎಚ್.ಗೋಪಾಲ್. ಮೈಸೂರು ವಿಶ್ವವಿದ್ಯಾನಿಲಯದ ಈ ಕ್ರಮ ಕನ್ನಡ ಚಿತ್ರೋದ್ಯಮದಲ್ಲಿ ಒಂದು ರೀತಿಯ ವಿದ್ಯುತ್ ಸಂಚಾರವನ್ನೇ ಉಂಟುಮಾಡಿತು. ರಾಜಕುಮಾರ್‌ರವರು ನಂತರ ಡಾ।ರಾಜಕುಮಾರ್ ಎಂದೇ ಖ್ಯಾತನಾಮರಾದರು.

ಆ ಸಂದರ್ಭದಲ್ಲಿ ರಾಜಕುಮಾರ್ ಆಡಿದ ಮಾತುಗಳಿವು : ''ನನ್ನಂಥ ಅವಿದ್ಯಾವಂತನನ್ನು ಹೀಗೆ ಗೌರವಿಸಲು ವಿಶ್ವವಿದ್ಯಾನಿಲಯ ನಿರ್ಧರಿಸಿದ್ದಕ್ಕೆ ಏನು ಕಾರಣಗಳಿತ್ತೋ, ನಾನೇ ಅರಿಯೆ. ಆದರೆ ಅಣುಶಕ್ತಿ ವಿಜ್ಞಾನಿ ಡಾ।ಹೋಮಿ ಸೇಥ್ನಾ,


(ಚಿತ್ರ ೬೮) 'ಬದುಕು ಬಂಗಾರವಾಯಿತು' ಚಿತ್ರದಲ್ಲಿ ಅಶ್ವತ್ಥ್ ಮತ್ತು ಮಂಜುಳಾ



(ಚಿತ್ರ ೧೯) ಉಪಕುಲಪತಿ ಡಿ.ವಿ.ಅರಸು ಮತ್ತು ಡಾ|ಹಾ.ಮಾ.ನಾಯಕ್ ಅವರೊಂದಿಗೆ ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಪಡೆದ ರಾಜಕುಮಾರ್.

ಖ್ಯಾತ ಸಾಹಿತಿ ವಿ.ಸೀ., ಅರ್ಥತಜ್ಞ ಡಾ|ಎಂ.ಎಚ್.ಗೋಪಾಲ್‌ರಂತಹ ಮಹಾ ಮೇಧಾವಿಗಳ ಜೊತೆಯಲ್ಲಿ ನನಗೂ ಗೌರವ ಸಿಗುತ್ತಿರುವುದನ್ನು ಕಂಡು ರೋಮಾಂಚನವಾಗುತ್ತಿದೆ.''

ಅದೇ ವೇಳೆಗೆ ಕನ್ನಡ ಚಿತ್ರರಂಗದ ಹಿರಿಯ ಚೇತನ ಆರ್.ನಾಗೇಂದ್ರರಾಯರಿಗೆ ೬೦ರ ಹರೆಯದಲ್ಲಿ ಕೇಂದ್ರ ಸರ್ಕಾರದಿಂದ ಪದ್ಮಶ್ರೀ ಪ್ರಶಸ್ತಿ ಲಭ್ಯವಾಯಿತು. 'ಪದ್ಮ' ಪ್ರಶಸ್ತಿಗಳನ್ನು ಪಡೆದಿರುವ ಕನ್ನಡ ಚಿತ್ರೋದ್ಯಮದ ಪ್ರಮುಖರು ಗುಬ್ಬಿ ವೀರಣ್ಣ, ರಾಜಕುಮಾರ್, ಬಿ.ಸರೋಜಾದೇವಿ, ಗಿರೀಶ್ ಕಾರ್ನಾಡ್ ಮತ್ತು ಬಿ.ವಿ.ಕಾರಂತ್.

ಇದೇ ವರ್ಷ ಕನ್ನಡ ಚಿತ್ರೋದ್ಯಮ ಸಿನಿಮಾಸ್ಕೋಪ್ ಯುಗಕ್ಕೂ ಕಾಲಿಟ್ಟಿತು. 'ಬಬ್ರುವಾಹನ', 'ಭಾಗ್ಯವಂತರು', 'ಸನಾದಿ ಅಪ್ಪಣ್ಣ'ದಂತಹ ದೊಡ್ಡ ಬಾಕ್ಸ್ ಆಫೀಸ್ 'ಬ್ಲಾಕ್‌ಬಸ್ಟರ್'ಗಳೂ ಬಿಡುಗಡೆಯಾಗಿ ಕನ್ನಡ ಚಿತ್ರಗಳ ಮಾರುಕಟ್ಟೆಯನ್ನು ಗಮನೀಯವಾಗಿ ವಿಸ್ತರಿಸಿದವು.

ವ್ಯಾಪಾರಿ ಚಿತ್ರೋದ್ಯಮದ ಚೌಕಟ್ಟಿನಲ್ಲಿಯೇ ಕೆಲವು ಕಲಾತ್ಮಕ ಚಿತ್ರಗಳನ್ನು ಮಾಡುವ ತೀವ್ರ ಹಂಬಲವಿದ್ದ ವಾದಿರಾಜ್-ಜವಾಹರ್ ಸಹೋದರರು ಮುಂದೆ ನಿಂತು ನಿರ್ಮಿಸಿದ ಹೊಸ ಅಲೆಯ ತಲೆಮಾರಿನ ಚಿತ್ರ 'ಕಾಕನಕೋಟೆ'. ಈ ಹೊಸ ಅಲೆ ಹವ್ಯಾಸಿ ರಂಗಭೂಮಿಯ ಅನೇಕರನ್ನು ತನ್ನ ಕಡೆಗೆ ಸೆಳೆದುಕೊಂಡಿತ್ತಷ್ಟೆ. ಆರಂಭದಲ್ಲಿ ಹೊಸ ಅಲೆಯನ್ನು ಪ್ರೋತ್ಸಾಹಿಸಿದವರೂ ವ್ಯಾಪಾರಿ ಚಿತ್ರೋದ್ಯಮಿಗಳೇ ಎನ್ನುವುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ವ್ಯಾಪಾರಿ ಚಿತ್ರೋದ್ಯಮ ಮತ್ತು ಹೊಸ ಅಲೆಯ ಸಂಗಮಕ್ಕೆ 'ಕಾಕನಕೋಟೆ' ಮತ್ತೊಂದು ನಿದರ್ಶನವಾಯಿತು. ಹವ್ಯಾಸಿ ರಂಗಭೂಮಿಯ 'ತುಘಲಕ್' ಖ್ಯಾತಿಯ ನಟ ಸಿ.ಆರ್.ಸಿಂಹ 'ನಟರಂಗ' ಮೂಲಕ ತಾವು ಪ್ರದರ್ಶಿಸುತ್ತಿದ್ದ ಖ್ಯಾತ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ನಾಟಕ 'ಕಾಕನಕೋಟೆ'ಯನ್ನು ವಾದಿರಾಜ್-ಜವಾಹರ್‌ರವರ ಪ್ರೇರಣೆಯಿಂದ ಪ್ರಥಮ ಬಾರಿಗೆ ನಿರ್ದೇಶಿಸಿ ಚಿತ್ರರಂಗಕ್ಕೂ ಪ್ರವೇಶ ಮಾಡಿದರು. ಒಂದು ಹವ್ಯಾಸಿ ರಂಗತಂಡ ತನ್ನ ಜನಪ್ರಿಯ ನಾಟಕವನ್ನು ಅದೇ ತಂಡದ ಕಲಾವಿದರನ್ನು ಬಳಸಿ ತೆರೆಗೆ ತಂದ ಹೆಗ್ಗಳಿಕೆ ಈ ಚಿತ್ರದ್ದು. ಎಲ್ಲ ಸಾಧನೆಗಳ ಹಿಂದೆ ರಂಗಕರ್ಮಿ ಶ್ರೀನಿವಾಸ್ ಜಿ.ಕಪ್ಪಣ್ಣ ಸಾಹಸವಿತ್ತು. ಆತ ಎಲ್ಲರನ್ನೂ ಒಗ್ಗೂಡಿಸಿ, ನಿಭಾಯಿಸಿದ್ದರು. ಈ ಚಿತ್ರದ ತಾರಾಗಣದಲ್ಲಿದ್ದವರು ಹವ್ಯಾಸಿ ರಂಗಭೂಮಿಯಿಂದಲೇ ಬಂದು ಚಿತ್ರರಂಗದಲ್ಲಿ ಪ್ರತಿಷ್ಠಾಪಿತರಾಗಿದ್ದ ಶ್ರೀನಾಥ್, ಲೋಕೇಶ್, ವೆಂಕಟರಾವ್, ಲೋಕನಾಥ್. ಗಿರಿಜಾ ಮತ್ತು ರಾಣಿ ಎಂಬ ಎಲ್.ವಿ.ಶಾರದಾ ಅವರ ಸಂಬಂಧಿ ಮುಖ್ಯ ಪಾತ್ರದಲ್ಲಿದ್ದರು. ಅರಣ್ಯವಾಸಿಗಳು ಸರ್ಕಾರಿ ಅಧಿಕಾರಿಗಳ ಉಪಟಳಕ್ಕೆ ಗುರಿಯಾದಾಗ ಅಂದಿನ ಮಹಾರಾಜರೇ ಸ್ವತಃ ಅವರ ರಕ್ಷಣೆಗೆ ಬರುವ ಹಿನ್ನೆಲೆಯ 'ಕಾಕನಕೋಟೆ'ಗೆ ಜನಪದ ಧಾಟಿಯ ಸಂಗೀತ ನೀಡುವುದರ ಮೂಲಕ ಚಿತ್ರರಂಗ ಪ್ರವೇಶಿಸಿದವರು ಗಾಯಕ-ಸಂಗೀತ ಸಂಯೋಜಕ ಸಿ.ಅಶ್ವತ್ಥ್. 'ಗರಂ ಹವಾ' ಚಿತ್ರದ ನಿರ್ದೇಶಕ, ರಂಗಕರ್ಮಿ ಎಂ.ಎಸ್.ಸತ್ಯು ಈ ಚಿತ್ರಕ್ಕೆ ಕಾಕನಕೋಟೆ ಅರಣ್ಯ ಪ್ರದೇಶದಲ್ಲಿ ಅರಣ್ಯವಾಸಿಗಳ 'ಹಾಡಿ' (ಕಾಲೋನಿ)ಯೊಂದರ ಸೆಟ್ ನಿರ್ಮಿಸಿದ್ದರು. ಈ ಚಿತ್ರ ವಿಮರ್ಶಕರ ಮೆಚ್ಚುಗೆ ಗಳಿಸಿತು. ಆದರೆ ಆರ್ಥಿಕ ಯಶಸ್ಸು ಗಳಿಸಲಿಲ್ಲ. ವಾದಿರಾಜ್-ಜವಾಹರ್‌ರಿಗೆ ಚೆನ್ನಾಗಿಯೇ ಕೈ ಕಚ್ಚಿತು.

ಈ ಚಿತ್ರದ ಬೆನ್ನ ಹಿಂದೆಯೇ ಬಂದಿದ್ದು ಜಿ.ವಿ.ಅಯ್ಯರ್‌ರವರ ಶಿಷ್ಯ ಹಾಗೂ ಸಂಕಲನಕಾರ ವಿ.ಆರ್.ಕೆ.ಪ್ರಸಾದ್ ಮೊದಲ ಬಾರಿಗೆ ಸ್ವತಂತ್ರವಾಗಿ ನಿರ್ದೇಶಿಸಿದ 'ಋಷ್ಯಶೃಂಗ'. ಬರಗಾಲದ ಸಮಸ್ಯೆ ಕುರಿತ ಈ ಚಿತ್ರ ಜನಪ್ರಿಯ ದಂತಕಥೆಯೊಂದರ ಆಧಾರದ ಮೇಲೆ ನಿರ್ಮಾಣವಾಯಿತು. ಪ್ರಸಾದ್ ಅಮೂರ್ತ ಶೈಲಿಯಲ್ಲಿ ನಿರ್ದೇಶಿಸಿದ ಈ ಚಿತ್ರದಲ್ಲಿ ಸಂಕೇತಗಳ ಹೇರಳವಾದ ಬಳಕೆಯಿಂದಾಗಿ ವಿಮರ್ಶಕರಿಗೇ ಕಬ್ಬಿಣದ ಕಡಲೆಯಂತಾಯಿತು. ಎಸ್.ರಾಮಚಂದ್ರ ಬರಗಾಲದ ದೃಶ್ಯಗಳನ್ನು ರೋಚಕವಾಗಿ ಸೆರೆ ಹಿಡಿದರೆ ಬಿ.ವಿ.ಕಾರಂತರು ತಮ್ಮ ಪರಿಣಾಮಕಾರಿ ಹಿನ್ನೆಲೆ ಸಂಗೀತದಿಂದ ಕಥೆಯಲ್ಲಿನ ದುರಂತವನ್ನು ಮನ ಮುಟ್ಟುವಂತೆ ಪ್ರತಿಬಿಂಬಿಸಿದರು. ಚಂದ್ರಶೇಖರ ಕಂಬಾರರ ಅರ್ಥಪೂರ್ಣ ಗೀತೆಗಳಿದ್ದವು. ನಟ



(ಚಿತ್ರ ೨೦) 'ಕಾಕನ ಕೋಟೆ' ಚಿತ್ರದಲ್ಲಿ ಹವ್ಯಾಸಿ ರಂಗಭೂಮಿ ನಟರಾದ ರಾಣಿ, ರಾಜ್‌ಕುಮಾರ್, ಲೋಕನಾಥ್, ಶ್ರೀನಾಥ್, ಲೋಕೇಶ್ ಮತ್ತು ವೆಂಕಟರಾವ್



(ಚಿತ್ರ ೭೧) 'ಋಷ್ಯಶೃಂಗ' ಚಿತ್ರದಲ್ಲಿ ಸುಂದರಶ್ರೀ ಮತ್ತು ಸುರೇಶ್ ಹೆಬ್ಳೀಕರ್

ಸುರೇಶ್ ಹೆಬ್ಳೀಕರ್ ಈ ಚಿತ್ರದ ಮೂಲಕ ನಾಯಕನ ಪಟ್ಟವನ್ನೇರಿದರು. ನಾಯಕಿಯಾಗಿ ಸುಂದರಶ್ರೀ ಎಂಬ ರಂಗಭೂಮಿಯ ಪ್ರತಿಭೆ, ರಾಷ್ಟ್ರೀಯ ನಾಟಕ ಶಾಲೆಯ ಪದವೀಧರೆಯ ಪಾದಾರ್ಪಣವಾಯಿತು. ಗೌಡಿತಿಯಾಗಿ ಗಣಿತಶಾಸ್ತ್ರಜ್ಞೆ ಶಕುಂತಲಾದೇವಿಯವರ ಸಹೋದರಿ ವರಲಕ್ಷ್ಮೀ ಅಭಿನಯಿಸಿದ್ದರು. ಸುಮತೀಂದ್ರ ನಾಡಿಗ್, ಸಿಂಧುವಳ್ಳಿ ಅನಂತಮೂರ್ತಿ, ನ.ರತ್ನ, ಮೊದಲಾದ ಸಾಹಿತಿಗಳ ಭಾರಿ ದಂಡೇ ಚಿತ್ರದಲ್ಲಿತ್ತು. ಇದೊಂದು ಪ್ರಯೋಗಾತ್ಮಕ ಚಿತ್ರವಾಗಿದ್ದರಿಂದ ಅದಕ್ಕೆ ಬಂದ ಪ್ರತಿಕ್ರಿಯೆಗಳೂ ವಿಭಿನ್ನವಾಗಿಯೇ ಇದ್ದವು. ಈ ಚಿತ್ರ ರಾಷ್ಟ್ರೀಯ ಮಟ್ಟದಲ್ಲಿ ಛಾಯಾಗ್ರಾಹಕ ರಾಮಚಂದ್ರರಿಗೆ ಅತ್ಯುತ್ತಮ ವರ್ಣ ಛಾಯಾಗ್ರಹಣ ಪ್ರಶಸ್ತಿ ಮತ್ತು ಸಂಗೀತ ನಿರ್ದೇಶಕ ಬಿ.ವಿ.ಕಾರಂತರಿಗೆ ಅತ್ಯುತ್ತಮ ಸಂಗೀತ ನಿರ್ದೇಶನ ಪ್ರಶಸ್ತಿಗಳನ್ನು ತಂದುಕೊಟ್ಟಿತು. ಈ ಚಿತ್ರದ ಸಂದರ್ಭದಲ್ಲಿ ಪ್ರಸಾದ್ ತಮ್ಮ ಪ್ರಯೋಗಕ್ಕೆ 'ಪರ್ಸನಲ್ ಸಿನಿಮಾ' ಎಂದು ಕರೆದರು. ಮಾಂಟಾಜ್-ಸಂಕಲನ ಪದಪ್ರಯೋಗದ ಬಗ್ಗೆ ವಿಚಿತ್ರ ವಿವಾದಗಳಾದದ್ದೂ ಈ ಸಂದರ್ಭದಲ್ಲೇ. (ನೋಡಿ 'ಸಂಕಲನ')

ಆ ದಿನಗಳಲ್ಲಿ ಪ್ರಯೋಗಶೀಲತೆ ಮತ್ತು ವ್ಯಾಪಾರಿ ಉದ್ಯಮದ ಸಹಜೀವನಕ್ಕೆ ಮತ್ತೊಂದು ನಿದರ್ಶನವಾಗಿ ಬಂದ ಚಿತ್ರ ನಟ ಬಿ.ಎಂ.ವೆಂಕಟೇಶ್ ಮತ್ತು ನಿರ್ಮಾಪಕ ಚಂದೂಲಾಲ್ ಜೈನ್‌ರವರು ಮಹಾರಾಜಾ ಮೂವೀಸ್ ಲಾಂಛನದಲ್ಲಿ ನಿರ್ಮಿಸಿದ 'ತಬ್ಬಲಿಯು ನೀನಾದೆ ಮಗನೆ'. ಜನಪ್ರಿಯ ಧಾಟಿಯಿಂದ ಹೊರತಾದ 'ನವ್ಯ'ದ ಜಾಡಿಗೆ ಹೋಗದ ಹೊಸ ರೀತಿಯ ಕಾದಂಬರಿಕಾರ ಎಸ್.ಎಲ್.ಭೈರಪ್ಪನವರ ಕಾದಂಬರಿಯನ್ನು ಆಧರಿಸಲಾಗಿತ್ತು. ಗಿರೀಶ್ ಕಾರ್ನಾಡ್ ಮತ್ತು ಬಿ.ವಿ.ಕಾರಂತ್ ಮತ್ತೊಮ್ಮೆ ಜಂಟಿಯಾಗಿ ನಿರ್ದೇಶಿಸಿದ ಚಿತ್ರ ಇದು. ಅದುವರೆಗೆ ಕನ್ನಡದ ಅನೇಕ ಹೊಸ ಅಲೆಯ ಚಿತ್ರಗಳನ್ನು ಬಾಧಿಸಿದ್ದ ತಾಂತ್ರಿಕ ಅಸಾಮರ್ಥ್ಯಗಳನ್ನು ಮೆಟ್ಟಿ ನಿಂತ ಈ ಚಿತ್ರದಲ್ಲಿ ಹಿಂದಿ ನಟ ನಾಸಿರುದ್ದೀನ್ ಷಾ ದೇವಸ್ಥಾನದ ಅರ್ಚಕನ ಪ್ರಮುಖ ಪಾತ್ರವನ್ನು ವಹಿಸಿದರು. ನಟ ಮಾನು ವಿದೇಶಿ ನಟಿ ಪೌಲಾಲಿಂಡ್ಸೆಯೊಂದಿಗೆ ಪ್ರಧಾನ ಪಾತ್ರದಲ್ಲಿ ಅಭಿನಯಿಸಿದರು. ಅಮೆರಿಕಾಗೆ ಹೋದ ಯುವಕನೊಬ್ಬ ಆಂಗ್ಲ ಹುಡುಗಿಯನ್ನು ಮದುವೆಯಾಗಿ ತನ್ನ ಹಳ್ಳಿಗೆ ಹಿಂದಿರುಗಿದಾಗ ಅನುಭವಿಸುವ ಮೌಲ್ಯಗಳ ಘರ್ಷಣೆಯನ್ನು ಕುರಿತಾದ 'ತಬ್ಬಲಿಯು ನೀನಾದೆ ಮಗನೆ' ತೆರೆಯ ಮೇಲೆ ಲಘು ಮನರಂಜನೆಯನ್ನು ನೀಡುವ ಮಟ್ಟದಲ್ಲಿತ್ತೇ ವಿನಃ ಭೈರಪ್ಪನವರ ತಾತ್ವಿಕ ಚಿಂತನೆಯನ್ನು ಪ್ರಭಾವಶಾಲಿಯಾಗಿ ಬಿಂಬಿಸುವುದರಲ್ಲಿ ಸಾರ್ಥಕವಾಗಲಿಲ್ಲವೆಂಬ ಸಿನಿಮಾ ಮಾಧ್ಯಮದ ಪರಿಣತರ ಟೀಕೆಗೆ ಗುರಿಯಾಯಿತು. ಚಿತ್ರ ಪತ್ರಿಕೆಗಳ ಮೆಚ್ಚುಗೆಗೆ ಪಾತ್ರವಾಯಿತು. ಆದರೆ ನಿರ್ಮಾಪಕ ವೆಂಕಟೇಶ್ ಪ್ರಕಾರ ನಿರ್ಮಾಪಕರಿಗೆ ಮೆಡಲುಗಳನ್ನು ಮಾತ್ರ ತಂದುಕೊಟ್ಟಿತು, ಲಾಭವನ್ನಲ್ಲ. ಚಿತ್ರಕ್ಕೆ ಸಾಕಷ್ಟು ಪ್ರಶಸ್ತಿಗಳೇನೋ ಲಭಿಸಿದವು. ಚಿತ್ರದ ಹಿಂದಿ ಮತ್ತು ಕನ್ನಡ ಅವತರಣಿಕೆಗಳು ಒಟ್ಟಿಗೇ ಚಿತ್ರೀಕರಣಗೊಂಡವು. ಹಿಂದಿಯಲ್ಲಿ 'ಗೋಧೂಳಿ' ಎನ್ನಲಾಗಿತ್ತು. ಓಂಪುರಿ ಮೊದಲಾದ ಇವತ್ತಿನ ಜನಪ್ರಿಯ ನಟರನೇಕರು ಅಭಿನಯಿಸಿದ್ದರು. ಈ ಚಿತ್ರಕ್ಕೆ ಎ.ಕೆ.ಬೀರ್ ಛಾಯಾಗ್ರಹಣವಿತ್ತು. ಚಿತ್ರದ ಕಲಾನಿರ್ದೇಶನ ಮಾಡಿದವರು ಪ್ರೇಮಾಕಾರಂತ್. ನಾಸಿರುದ್ದೀನ್ ಷಾ ಪಾತ್ರಕ್ಕೆ ಕಂಠದಾನ ಮಾಡಿದವರು ಸುಂದರಕೃಷ್ಣ ಅರಸ್. ಗುತ್ತಿಗೇರಿ ಮಾನಪ್ಪ ನಾಯಕನಟನಾಗಿ ಅಭಿನಯಿಸಿದ್ದರು. ಚಿತ್ರದಲ್ಲಿ ಹಾಡುಗಳಿಲ್ಲ. ಆದರೆ ಶೀರ್ಷಿಕೆಯ ಜೊತೆ ಬರುವ 'ಧರಣಿ ಮಂಡಲ ಮಧ್ಯದೊಳಗೆ..' ಗೋವಿನ ಹಾಡಿಗೆ ಬಿ.ಕೆ.ಸುಮಿತ್ರಾ, ಪಿ.ಬಿ.ಶ್ರೀನಿವಾಸ್ ಮತ್ತು ಸಮೂಹ ಗಾಯನವಿತ್ತು. ಆ ಗೀತೆಗೆ ಹೊಂದಿಸಿದ್ದ ಬ್ಯಾಲೆಯು ಚಿತ್ರಕ್ಕೆ ಮುನ್ನುಡಿಯೆಂಬಂತೆ ಹೊಂದಿಕೊಂಡಿತ್ತು.

ಅಪಾರ ನಿರೀಕ್ಷೆಯಿಂದ ತಯಾರಾಗಿ ಭಾರಿ ಸೋಲನ್ನನುಭವಿಸಿದ ಇನ್ನೊಂದು ಅದ್ಧೂರಿ ಚಿತ್ರ 'ಕನ್ನೇಶ್ವರರಾಮ'. ಅನೇಕ ಪ್ರಯೋಗಶೀಲ ಚಿತ್ರಗಳ ಬಿಡುಗಡೆಗೆ ಉತ್ತೇಜನ ಕೊಟ್ಟು ಅವುಗಳಿಗೆ ಬೆನ್ನೆಲುಬಾಗಿ ನಿಂತಿದ್ದ ಎಂ.ಭಕ್ತವತ್ಸಲ ಅವರು ವ್ಯಂಗ್ಯ ಚಿತ್ರಕಾರ, ಕೊರವಂಜಿಯ ಬರಹಗಾರ ಎಸ್.ಕೆ.ನಾಡಿಗ್ ಅವರ ಕಾದಂಬರಿ 'ಕನ್ನೇಶ್ವರರಾಮ' ನಿರ್ಮಿಸಿದರು. ಎಂ.ಎಸ್.ಸತ್ಯು ನಿರ್ದೇಶಿಸಿದ ಈ ಚಿತ್ರದಲ್ಲಿ ಅನಂತನಾಗ್ ಬ್ರಿಟಿಷರ ಕಾಲದ ರಾಬಿನ್‌ಹುಡ್ ಮಾದರಿಯ ದರೋಡೆಕಾರ ಕನ್ನೇಶ್ವರರಾಮನ ಪಾತ್ರವನ್ನು ತುಂಬ ಪರಿಣಾಮಕಾರಿಯಾಗಿಯೇ ನಿರ್ವಹಿಸಿದರು. ಚಿತ್ರದಲ್ಲಿ ಹಿಂದಿ ಚಿತ್ರರಂಗದ ಅಮೋಲ್ ಪಾಲೇಕರ್ ಮತ್ತು ಶಬಾನಾ ಆಜ್ಮಿಯವರೂ ಪ್ರಮುಖ ಪಾತ್ರಗಳಲ್ಲಿದ್ದಿದ್ದು ಒಂದು ವಿಶೇಷ. ''ರಾಷ್ಟ್ರೀಯ ಮತ್ತು ಪ್ರಾದೇಶಿಕ ಪ್ರತಿಭೆಯ ಸಂಯೋಜನೆಯಲ್ಲಿ ಇದೊಂದು ಹೊಸ ಪ್ರಯೋಗ. ಸಣ್ಣದಾಗಿಟ್ಟಿರುವ ದಿಟ್ಟ, ದೊಡ್ಡ ಹೆಜ್ಜೆ'' ಎಂದು ಭಕ್ತವತ್ಸಲ ವರ್ಣಿಸಿದ್ದರು. ಹಾಗೆಯೇ ಅಪೂರ್ವ ವರ್ಣಚಿತ್ರಗಳ ಛಾಯಾಗ್ರಹಣದಲ್ಲಿ ನಿಷ್ಣಾತರೆನಿಸಿದ್ದ ಈಷಾನ್ ಆರ್ಯರವರನ್ನು ಚಿತ್ರದ ಛಾಯಾಗ್ರಹಣಕ್ಕೆ ತಂದರು. ಈ ಚಿತ್ರದಲ್ಲಿ ಬಿ.ವಿ.ಕಾರಂತರು ಜುಂಜ ಎಂಬ ಡಕಾಯಿತನ ಪಾತ್ರದಲ್ಲಿ ವಿಶಿಷ್ಟವಾಗಿ ಕಂಡರು. ಮಾಲತಿರಾವ್ ಅಭಿನಯವೂ ಗಮನ ಸೆಳೆದಿತ್ತು. ಚಿತ್ರದಲ್ಲಿ ಬರುವ ಸ್ವಾತಂತ್ರ್ಯ ಸಂಗ್ರಾಮದ ಗೀತೆಯೊಂದನ್ನು ಹಾಡುತ್ತ ಮೆರವಣಿಗೆಯಲ್ಲಿ ಖ್ಯಾತ ಗಾಯಕ ಬಾಳಪ್ಪ ಹುಕ್ಕೇರಿಯವರೇ ಬಂದಿದ್ದರು. ಅತ್ಯಂತ ಉತ್ಸಾಹದ ವಾತಾವರಣದಲ್ಲಿ ತಯಾರಾದ ಈ ಚಿತ್ರ ತನ್ನ ಗುರಿಯನ್ನು ಮಾತ್ರ ಮುಟ್ಟದಾಯಿತು. ಸ್ವಾತಂತ್ರ್ಯಪೂರ್ವ ಮಲೆನಾಡಿನ ಜನರಿಗೆ ಸಿಂಹಸ್ವಪ್ನವೆನಿಸಿದ ಕನ್ನೇಶ್ವರರಾಮನ ಕಥೆ ಭಕ್ತವತ್ಸಲರಿಗೆ ಆಸಕ್ತಿ ಹುಟ್ಟಿಸಲು ಒಂದು ಕಾರಣ ಇರಬಹುದು. ಆದರೆ ಉದ್ಯಮದ ಬೆನ್ನೆಲುಬಾದ



(ಚಿತ್ರ ೭೨) 'ತಬ್ಬಲಿಯು ನೀನಾದ ಮಗನೆ' ಚಿತ್ರದಲ್ಲಿ ಮಾನು ಮತ್ತು ಪೌಲಾಲಿಂಡ್ಸೆ



(ಚಿತ್ರ ೭೩) 'ಕನ್ನೇಶ್ವರರಾಮ' ಚಿತ್ರದಲ್ಲಿ ಅಮೋಲ್ ಪಾಲೇಕರ್, ಧೀರೇಂದ್ರಗೋಪಾಲ್, ಅನಂತ್‌ನಾಗ್

ಬಯಲುಸೀಮೆಯವರಿಗೆ ಆತನ ಖ್ಯಾತಿ ತಟ್ಟಿರಲಿಲ್ಲ, ತಟ್ಟುವಂತೆ ಮಾಡುವುದರಲ್ಲಿ ಸತ್ಯು ಸಫಲರಾಗಲಿಲ್ಲ. ಅಂತೂ ಈ ನಾಲ್ಕು ಚಿತ್ರಗಳ ಸೋಲು ಹೊಸ ಅಲೆಯ ಚಿತ್ರಗಳೆಂದರೆ ಉದ್ಯಮಿಗಳು ಸ್ವಲ್ಪ ಅನುಮಾನದಿಂದಲೇ ನೋಡುವಂತಾಯಿತು.

ಹೊಸ ಅಲೆ ತನ್ನ ಆರಂಭದ ದಿನಗಳ ತಾತ್ವಿಕ ತಳಹದಿಯನ್ನು ಕಳೆದುಕೊಂಡು ಕೇವಲ ವಿನೂತನತೆಗೆ ಮತ್ತೊಂದು ಹೆಸರಾಗಿ ಪರಿಣಮಿಸುತ್ತಿದ್ದ ಕಾಲದಲ್ಲಿ ಅದಕ್ಕೆ ಮತ್ತೆ ತನ್ನ ಹಿರಿಮೆಯನ್ನು ತಂದುಕೊಟ್ಟ ಚಿತ್ರ 'ಘಟಶ್ರಾದ್ಧ'. ಮಣಿಪಾಲದಲ್ಲಿ ಔಷಧಿ ವಿಜ್ಞಾನದಲ್ಲಿ ಪದವಿ ಪಡೆದ ನಂತರ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಚಿತ್ರ ನಿರ್ದೇಶನದ ಅಧ್ಯಯನ ಮಾಡಿದ ಗಿರೀಶ್ ಕಾಸರವಳ್ಳಿ ಡಾ|ಯು.ಆರ್.ಅನಂತಮೂರ್ತಿಯವರ ಕಥೆಯನ್ನು ಆಧರಿಸಿ ತಯಾರಿಸಿದ ಈ ಚಿತ್ರ ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟಗಳಲ್ಲಿ ಕೂಡ ಪ್ರಶಂಸೆಯನ್ನು, ಪ್ರಶಸ್ತಿ ಪದಕಗಳನ್ನು ಪಡೆದುಕೊಂಡು ಕಲಾತ್ಮಕ ಚಿತ್ರಗಳ ಸಾಲಿನಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿತು.



(ಚಿತ್ರ ೭೪) 'ಘಟಶ್ರಾದ್ಧ' ಚಿತ್ರದಲ್ಲಿ ಮೀನಾ, ಮಾ|ಅಜಿತ್‌ಕುಮಾರ್

'ಘಟಶ್ರಾದ್ಧ'ದ ಮೂಲ ಕಥಾವಸ್ತು ಬಾಲವಿಧವೆಯೊಬ್ಬಳನ್ನು ಕುರಿತದ್ದಾದರೂ, ಒಟ್ಟು ಗ್ರಹಿಕೆಯಲ್ಲಿ ಇಡೀ ಸಮಾಜದಲ್ಲಿನ ಕಂದಾಚಾರಗಳ ಪ್ರಬುದ್ಧ ವಿಶ್ಲೇಷಣೆಯಾಗಿತ್ತು. ತನ್ನ ತಲೆಗೂದಲನ್ನು ತೆಗೆಯುವುದನ್ನು ವಿರೋಧಿಸಿದ ಬಾಲವಿಧವೆ, ಚಿತ್ರದ ಅಂತ್ಯದಲ್ಲಿ ಸಮಾಜದ ಒತ್ತಾಯಕ್ಕೆ ಮಣಿದು, 'ಮಡಿ ಹೆಂಗಸಾಗಿ' ಆಲದ ಮರವೊಂದರ ಕೆಳಗೆ ಕುಳಿತಿರುವುದನ್ನು ತೋರಿದ ದೃಶ್ಯ ಸಮಾಜದ ಮೇಲೆ ಕಂದಾಚಾರಗಳ ಪ್ರಭಾವ ಎಷ್ಟು ಬೃಹತ್ತಾಗಿದೆಯೆನ್ನುವುದನ್ನು ಸಾಂಕೇತಿಕವಾಗಿ, ಆದರೆ ಅತ್ಯಂತ ಪರಿಣಾಮಕಾರಿಯಾಗಿ ತೋರಿಸಿತು. ಮಲೆನಾಡಿನ ಮನೆಗಳಲ್ಲಿ ಸಾಮಾನ್ಯವಾಗಿ ಕಾಣುವ ಕಂಬಗಳು, ಮರದ ಜಾಲರಿಗಳು ಮುಂತಾದವು ಕಂದಾಚಾರಗಳ ಕಟಕಟೆಗ ಸಾಂಕೇತಿಕವಾಗಿ ಚಿತ್ರದುದ್ದಕ್ಕೂ ಕಾಣಿಸಿಕೊಂಡವು.

'ಘಟಶ್ರಾದ್ಧ'ಕ್ಕೆ ರಾಷ್ಟ್ರಾಧ್ಯಕ್ಷರ ಸುವರ್ಣ ಪದಕ ಲಭ್ಯವಾಯಿತು. ಅದರೊಂದಿಗೇ ರಾಷ್ಟ್ರಮಟ್ಟದಲ್ಲಿ ಬಿ.ವಿ.ಕಾರಂತರಿಗೆ ಶ್ರೇಷ್ಠ ಸಂಗೀತ ನಿರ್ದೇಶನ ಮತ್ತು ಮಾಸ್ಟರ್ ಅಜಿತ್‌ಗೆ ಶ್ರೇಷ್ಠ ಬಾಲನಟ ಪ್ರಶಸ್ತಿಗಳೂ ಸಂದವು. ಆದರೆ ಸಮಾಜದ ಒಂದು ಭಾಗಕ್ಕೆ ಇದರಿಂದ ತುಂಬ ಸಂತೋಷವೇನೂ ಆಗಲಿಲ್ಲ. ಇದಕ್ಕೆ ಕಾರಣವಿಷ್ಟೆ. ಹೊಸ ಅಲೆಯ ಚಿತ್ರಗಳ ಪರಂಪರೆಯನ್ನು ಹುಟ್ಟು ಹಾಕಿ ಬೆಳೆಸಿಕೊಂಡು ಬಂದ 'ಸಂಸ್ಕಾರ', 'ವಂಶವೃಕ್ಷ', 'ಸಂಕಲ್ಪ', 'ತಬ್ಬಲಿಯು ನೀನಾದೆ ಮಗನೆ' ಮುಂತಾದುವೆಲ್ಲವೂ ಬ್ರಾಹ್ಮಣ ನಿರ್ದೇಶಕರಿಂದ ಬ್ರಾಹ್ಮಣ ಸಮಾಜವನ್ನು ಟೀಕಿಸುವ ಚಿತ್ರಗಳಾಗಿ ಈ ವರ್ಗಕ್ಕೆ ಕಂಡು ಬಂದಿತು. ಹೊಸ ಅಲೆಯ ಚಿತ್ರಗಳೆಂದರೆ ಬ್ರಾಹ್ಮಣರನ್ನು ಟೀಕಿಸುವ ಚಿತ್ರಗಳೆಂಬ ಕೂಗೂ ಪ್ರಬಲವಾಯಿತು. ಇದನ್ನು ಬ್ರಾಹ್ಮಣ ಬುದ್ಧಿಜೀವಿಗಳ ಆತ್ಮಶೋಧನೆಯ ಪ್ರಯತ್ನವೆಂದು ನೋಡಲು ಅವರು ಸಿದ್ಧರಿರಲಿಲ್ಲ. ಬ್ರಾಹ್ಮಣರು ಅಲ್ಪಸಂಖ್ಯಾತರಾಗಿದ್ದು ಅವರಲ್ಲಿ ಸಂಘಟನೆಯು ಕೊರತೆಯಿರುವುದು ಮಾತ್ರವಲ್ಲದೆ ರಾಜಕೀಯವಾಗಿಯೂ ಅವರು ಪ್ರಭಾವಶಾಲಿಗಳಲ್ಲದಿರುವುದು ಇಂತಹ ಚಿತ್ರಗಳಿಗೆ ಮೂಲ ಕಾರಣವೆಂಬ ಆರೋಪವೂ ಇತ್ತು. ಚಲನಚಿತ್ರವೊಂದರಲ್ಲಿನ ಪಾತ್ರಗಳನ್ನು ಮಾನವೀಯ ಮೌಲ್ಯಗಳ ಆಧಾರದ ಮೇಲೆ ವಿಶ್ಲೇಷಿಸಿ, ಆ ಮಟ್ಟಿಗೆ ಅದನ್ನು ಇಡೀ ಸಮಾಜಕ್ಕೆ ಅನ್ವಯಿಸಿ, ಅದರ ಔಚಿತ್ಯ, ಅನೌಚಿತ್ಯಗಳನ್ನು ನಿರ್ಧರಿಸುವ ಪ್ರವೃತ್ತಿಯನ್ನು ಅಂದಿನ ಅನೇಕ ಬ್ರಾಹ್ಮಣರು ತೋರಲಿಲ್ಲ. ಮುಂದಿನ ವರ್ಷಗಳಲ್ಲಿ ಇಂತಹ ಅನಿಷ್ಟಕರ ಧೋರಣೆ ಎಷ್ಟರಮಟ್ಟಿಗೆ ವಿಸ್ತರಿಸಿತೆಂದರೆ ನಿರ್ಮಾಪಕರು ತಮ್ಮ ಯಾವುದೇ ಪಾತ್ರಕ್ಕೂ ನಿರ್ದಿಷ್ಟ ಜಾತಿಯಾಗಲಿ, ಭಾಷೆಯಾಗಲಿ, ಪ್ರಾದೇಶಿಕತೆಯಾಗಲಿ, ವೃತ್ತಿಯಾಗಲಿ ಪ್ರಸ್ತುತವಾಗದಂತೆ ಎಚ್ಚರ ವಹಿಸುವಂತಹ ಸ್ಥಿತಿಯೂ ಬಂತು.

'ಘಟಶ್ರಾದ್ಧ' ಮ್ಯಾನ್‌ಹೇಂ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಎರಡು ಪ್ರಶಸ್ತಿಗಳನ್ನು ಗೆದ್ದುಕೊಂಡಿತು. ಪ್ಯಾರಿಸ್‌ನಲ್ಲಿ ನಡೆದ 'ಹೊಸ ಕಲೆ' ಸರಣಿಯಲ್ಲಿ ಪ್ರದರ್ಶಿತವಾದ ಮೊದಲ ಕನ್ನಡ ಚಿತ್ರ ಮತ್ತು ಐದನೆಯ ಭಾರತೀಯ ಚಿತ್ರವಾಗಿಯೂ ದಾಖಲೆಯಾಯಿತು. ಚಿತ್ರದ ಬಗ್ಗೆ ಒಂದೆರಡು ವಿಚಾರಗೋಷ್ಠಿಗಳೂ ನಡೆದುವಲ್ಲದೆ ಅದರ ಚಿತ್ರಕಥೆಯೇ ಒಂದು ಪುಸ್ತಕವಾಗಿ ಹೊರ ಬಂತು. ಕನ್ನಡದಲ್ಲಿ ಈ ಹೆಗ್ಗಳಿಕೆ ಪ್ರಥಮ ಮತ್ತು ಏಕೈಕ.

ಆಗ ಭಾರತದ ಪ್ರಧಾನಿಯಾಗಿದ್ದ ಇಂದಿರಾಗಾಂಧಿಯವರು ೧೯೭೫ರಲ್ಲಿ ಜಯಪ್ರಕಾಶ್ ನಾರಾಯಣ್ ಆರಂಭಿಸಿದ 'ಸಂಪೂರ್ಣ ಕ್ರಾಂತಿ' ಆಂದೋಳನದಿಂದ ತತ್ತರಿಸಿ, ದೇಶದ ಮೇಲೆ ತೀರಾ ವಿವಾದಾತ್ಮಕವಾದ ರೀತಿಯಲ್ಲಿ ತುರ್ತು ಪರಿಸ್ಥಿತಿಯನ್ನು ಹೇರಿದರು. ಹತ್ತೊಂಭತ್ತು ತಿಂಗಳ ಈ ತುರ್ತು ಪರಿಸ್ಥಿತಿಯಿಂದ ದೇಶದ ಜನತೆಗೆ ಮುಕ್ತಿ ಸಿಕ್ಕಿದ್ದು ೧೯೭೭ರ ಜನವರಿ ತಿಂಗಳಿನಲ್ಲಿ. ಈ ಅವಧಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಕಾಂಗ್ರೆಸ್ ವಿರೋಧಿ ರಾಜಕಾರಣಿಗಳು ಕಾರಾಗೃಹ ವಾಸವನ್ನು ಅನುಭವಿಸಿದ್ದೇ ಅಲ್ಲದೆ ದೇಶದಾದ್ಯಂತ ಅನೇಕ ಬುದ್ಧಿಜೀವಿಗಳು ಇಂದಿರಾಗಾಂಧಿಯವರ ವಿರುದ್ಧ ಅಂತರ್ಗಾಮಿ ಚಳವಳಿ ನಡೆಸಲು ಭೂಗತರಾದರು. ಬರೋಡಾದಲ್ಲಿ ವಿಧ್ವಂಸಕ ಕೃತ್ಯ ನಡೆಸಲು ಜಾರ್ಜ್‌ಫರ್ನಾಂಡಿಸ್‌ರ ನೇತೃತ್ವದಲ್ಲಿ ಡೈನಮೈಟ್ ಹಗರಣವೂ ನಡೆದು, ಕೋಲಾಹಲಕರವಾದ ರೀತಿಯಲ್ಲಿ ನ್ಯಾಯಾಲಯದ ಮೆಟ್ಟಿಲು ಹತ್ತಿತು. ಆಗ ಕರ್ನಾಟಕದಲ್ಲಿ ಜಾರ್ಜ್ ಫರ್ನಾಂಡಿಸ್ ಸಹವರ್ತಿಗಳಾಗಿದ್ದ 'ಸಂಸ್ಕಾರ' ನಿರ್ದೇಶಕ ಪಟ್ಟಾಭಿರಾಮರೆಡ್ಡಿ ಕುಟುಂಬ ತುರ್ತು



(ಚಿತ್ರ ೭೫) 'ಚಂಡಮಾರುತ' ಚಿತ್ರದಲ್ಲಿ ಅಕುಮಲ್ ರಾಮಚಂದ್ರ, ನಂದನಾರೆಡ್ಡಿ ಮತ್ತು ಅಶೋಕ್ ಮಂದಣ್ಣ

ಪರಿಸ್ಥಿತಿಯ ವಿರುದ್ಧ ಪರಿಣಾಮಕಾರಿಯಾದ ಚಿತ್ರವೊಂದನ್ನು ತಯಾರಿಸಲು ಹೊರಟಿದ್ದ ಫಲವೇ 'ಚಂಡಮಾರುತ'.

ಚಿತ್ರ ತಯಾರಾದಾಗ ಆಪತ್ಕಾಲೀನ ಪರಿಸ್ಥಿತಿ ಇನ್ನೂ ಜಾರಿಯಲ್ಲಿಯೇ ಇತ್ತು. ಕನ್ನಡ ಚಿತ್ರರಂಗದ ಕೆಲವು ಬುದ್ಧಿಜೀವಿಗಳು ಈ ಪ್ರಯತ್ನಕ್ಕೆ ಒತ್ತಾಸೆಯಾಗಿ ನಿಂತರು. ಅಂದಿನ ಪ್ರತಿಷ್ಠಿತ ವಿತರಕರಾಗಿದ್ದ ಶಾರದಾ ಮೂವೀಸ್‌ನ ಎಂ.ಭಕ್ತವತ್ಸಲ, ವಾಣಿ ಫಿಲಂಸ್‌ನ ಸುರೇಂದ್ರನಾಥ್ ಬ್ಯಾನರ್ಜಿ ಅವರಲ್ಲಿ ಪ್ರಮುಖರು. ಅವರಿಬ್ಬರೂ ಚಿತ್ರದಲ್ಲಿ ಅಭಿನಯಿಸಿದ್ದು ಕೂಡ ಒಂದು ವಿಶೇಷ. ಚಿತ್ರ 'ಸಂಸ್ಕಾರ'ದಂತೆಯೇ ಸೆನ್ಸಾರ್ ಸಮಸ್ಯೆಗೆ ಸಿಕ್ಕಿ ಮತ್ತೆ ಮತ್ತೆ ಪರಿಷ್ಕೃತವಾಗಿ ಕೊನೆಗೂ ತುರ್ತು ಪರಿಸ್ಥಿತಿ ಮುಗಿದ ನಂತರ ತೆರೆಗೆ ಬರಬೇಕಾದರೆ ಕೆಲವು ತಿಂಗಳುಗಳೇ ಹಿಡಿದವು. ಬೆಂಗಳೂರಿನ ಇಂಗ್ಲಿಷ್ ಮತ್ತು ಕನ್ನಡ ಹವ್ಯಾಸಿ ರಂಗಕರ್ಮಿಗಳು ಮತ್ತು ಕಲಾವಿದರು ಅಭಿನಯಿಸಿದ ಈ ಚಿತ್ರ ಕನ್ನಡ ಚಿತ್ರರಂಗದಲ್ಲಿ ಒಂದು ಮೈಲಿಗಲ್ಲು ಎನಿಸುವ ಅವಕಾಶವನ್ನು ಕಳೆದುಕೊಂಡಿದ್ದಕ್ಕೆ ಕಾರಣ ಸೂಕ್ಷ್ಮತೆಗಳಿಲ್ಲದ, ಹಸಿ ಹಸಿಯೆನಿಸಿದ ನಿರೂಪಣೆ. ಸೆನ್ಸಾರ್‌ನವರು ವ್ಯಾಪಕವಾಗಿ ಕತ್ತರಿ ಪ್ರಯೋಗ ಮಾಡಿದ್ದರಿಂದ ಚಿತ್ರದ ಲಯವೂ ತಪ್ಪಿತು. ಈ ಚಿತ್ರವನ್ನು ೧೬ ಮಿ.ಮೀ.ನಲ್ಲಿ ಚಿತ್ರಿಸಿ ಬ್ಲೋಅಪ್ ಮಾಡಲಾಗಿತ್ತು. ಪಿ.ಲಂಕೇಶರ 'ಕ್ರಾಂತಿ ಬಂತು ಕ್ರಾಂತಿ' ಮೊದಲಾದ ಕೃತಿಗಳು ಕಥಾವಸ್ತುವಿಗೆ ಸ್ಫೂರ್ತಿಯಾಗಿದ್ದವು.

'ಪಲ್ಲವಿ'ಯಿಂದ ಚಿತ್ರರಂಗವನ್ನು ನಿರ್ಮಾಪಕ-ನಿರ್ದೇಶಕರಾಗಿಯೂ ಪ್ರವೇಶಿಸಿ ಬುದ್ಧಿಜೀವಿಗಳ ಗಮನ ಸೆಳೆದಿದ್ದ ಪಿ.ಲಂಕೇಶ್ ಇದೇ ವರ್ಷ ತಮ್ಮ ಎರಡನೆಯ ಚಿತ್ರ 'ಅನುರೂಪ'ವನ್ನು ವರ್ಣದಲ್ಲಿ ತೆರೆಗೆ ತಂದರು. ತಾಂತ್ರಿಕವಾಗಿ ಈ ಚಿತ್ರ 'ಪಲ್ಲವಿ'ಗಿಂತ ಉತ್ತಮವಾಗಿತ್ತು. ಆರತಿ ಮತ್ತು ಅನಂತ್‌ನಾಗ್ ಜೋಡಿಯ ಅಭಿನಯವಿತ್ತು. ಅದರಲ್ಲಿನ ಹೊಡೆದಾಟದ ಸನ್ನಿವೇಶಗಳಲ್ಲಿ ನಿಜಜೀವನದಲ್ಲಿನ ಕೆಲವು ರೌಡಿಗಳೇ ಭಾಗವಹಿಸಿದ್ದರೆನ್ನುವ ವದಂತಿಗಳಿದ್ದವು. ಕುಂಗ್‌ಫು ಕಲೆಯನ್ನು ಚಿತ್ರದಲ್ಲಿ ಬಳಸಲಾಗಿತ್ತು. ರಾಜೀವ್ ತಾರಾನಾಥ್‌ರೊಂದಿಗೆ ಸಿ.ಅಶ್ವತ್ಥ್ ಚಿತ್ರದ ಸಂಗೀತ ನಿರ್ದೇಶಕರಾಗಿದ್ದರು.

ಈ ವರ್ಷ ತೆರೆಗೆ ಬಂದ 'ಹರಕೆ', 'ಸಂಘರ್ಷ', 'ಕರಾವಳಿ' ಮತ್ತು 'ಕೋಕಿಲ' ಚಿತ್ರಗಳನ್ನು ಮಧ್ಯಮವರ್ತಿ ಪ್ರಯತ್ನಗಳೆಂದು ಕರೆಯಬಹುದು. ಜನಪ್ರಿಯ ಸೂತ್ರಗಳನ್ನೆಲ್ಲ ಬಳಸಿಕೊಂಡೇ ಸಮಾಜದ ಕೆಲವು ಸಮಸ್ಯೆಗಳನ್ನು ವಿಶ್ಲೇಷಿಸಿ, ಸಾಮಾನ್ಯ ಜನರಿಗೂ ಮುಟ್ಟುವ ರೀತಿಯ ನಿರೂಪಣೆಯನ್ನು ಹೊಂದಿದ್ದು ಮೊದಲ ಮೂರು ಚಿತ್ರಗಳ ಪರಿಯಾದರೆ ನಿರೂಪಣಾ ಚಮತ್ಕಾರದಿಂದ ಹಳೆಯ ಕಥೆಯನ್ನೇ ಹೊಸ ರೀತಿಯಲ್ಲಿ ಎಲ್ಲ ವರ್ಗಗಳ ಪ್ರೇಕ್ಷಕರಿಗೂ ಮುಟ್ಟುವ ರೀತಿಯಲ್ಲಿ ಹೇಗೆ ಪ್ಯಾಕೇಜ್ ಮಾಡಬಹುದು ಎಂಬುದರ ನಿದರ್ಶನವಾಗಿ ನಿಂತ ಚಿತ್ರ 'ಕೋಕಿಲ'.

೧೯೭೦ರ ದಶಕದಲ್ಲಿ ಕನ್ನಡ ಚಿತ್ರರಂಗ ಮುಖ್ಯವಾಗಿ ಪ್ರಯೋಗಶೀಲತೆಯಿಂದ ಹೊರನಾಡಿನ ಅನೇಕ ಪ್ರತಿಭೆಗಳನ್ನು ಸೆಳೆಯಿತು. ಹಾಗೆ ಬಂದ ಪ್ರತಿಭಾವಂತರೊಬ್ಬರು ಛಾಯಾಗ್ರಾಹಕ-ನಿರ್ದೇಶಕ ಬಾಲು ಮಹೇಂದ್ರ. ಅವರೇ ನಿರ್ಮಿಸಿ, ನಿರ್ದೇಶಿಸಿದ 'ಕೋಕಿಲ' ಸ್ವಾರಸ್ಯಕರ ಚಿತ್ರವೆನಿಸಿದ್ದು ಅದರ ಲವಲವಿಕೆಯ ನಿರೂಪಣೆಯಿಂದಾಗಿ. ಈ ಚಿತ್ರದ ನಾಯಕನ ಪಾತ್ರ ವಹಿಸಿದವರು ಭಾರತ ಚಿತ್ರರಂಗದ ಕ್ರಿಯಾಶೀಲ ನಟರಲ್ಲೊಬ್ಬರಾದ ಕಮಲಹಾಸನ್. ಇತರ ತಾರಾಗಣದಲ್ಲಿದ್ದವರೂ ಅನ್ಯಭಾಷೆಯವರಾದ ಶೋಭಾ ಮತ್ತು ರೋಜಾ ರಮಣಿ. ಈ ಚಿತ್ರದ ಪೋಷಕ ಪಾತ್ರವೊಂದರಲ್ಲಿ ಗಮನ ಸೆಳೆದ ಹೊಸ ನಟ ಕನ್ನಡಿಗ ಮೋಹನ್ ಕೆಲವೇ ದಿನಗಳಲ್ಲಿ ತಮಿಳು ಚಿತ್ರರಂಗಕ್ಕೆ ಜಿಗಿದು 'ಕೋಕಿಲಾ ಮೋಹನ್' ನಾಮಾಂಕಿತವಲ್ಲಿ ತಮಿಳಿನ ಜನಪ್ರಿಯ ನಟರಲ್ಲೊಬ್ಬರಾದರು.

ಭಗ್ನ ಪ್ರಣಯದ ಕಥೆಯ 'ಕೋಕಿಲ' ತನ್ನ ಬೀಡುಬೀಸಾದ ನಿರೂಪಣೆಯಿಂದಾಗಿ ಜನಪ್ರಿಯತೆ ಪಡೆಯಿತು. ಈ ಚಿತ್ರಕ್ಕೆ ಸಹಾಯಕ ನಿರ್ದೇಶಕರಾಗಿ ಕನ್ನಡ ಬರದ ನಿರ್ದೇಶಕರ ಸಮಸ್ಯೆಗಳನ್ನೆಲ್ಲ ಹೆಗಲಿಗೇರಿಸಿಕೊಂಡವರು ಜಿ.ವಿ.ಶಿವಾನಂದ್. ನಂತರ ಬಾಲು ಮಹೆಂದ್ರ ಮತ್ತು ಶೋಭಾ ಮದುವೆಯಾದರು. ಶೋಭಾ ನಂತರ ಕನ್ನಡದ ಒಂದೆರಡು ಚಿತ್ರಗಳಲ್ಲಿ ಅಭಿನಯಿಸಿದರು. ಕೆಲವು ಕಾಲದ ನಂತರ ನಿಗೂಢವಾಗಿ ಮರಣ ಹೊಂದಿದರು. ಬಾಲು ಮಹೇಂದ್ರರಿಗೆ ಕರ್ನಾಟಕದ ಹೊರಾಂಗಣ ತಾಣಗಳು, ಅದರಲ್ಲಿಯೂ ನಂದಿಬೆಟ್ಟ ಬಹಳ ಜನಪ್ರಿಯವೆನಿಸಿ ಅನೇಕ ತಮಿಳು ಚಿತ್ರಗಳಲ್ಲಿ ಈ ತಾಣಗಳನ್ನು ಕೆಲವು ವಿಶಿಷ್ಟ ಕೋನಗಳಿಂದ ಸುಂದರವಾಗಿ, ಅರ್ಥಪೂರ್ಣವಾಗಿ ಚಿತ್ರಿಸಿದರು. ಪ್ರತಿಭಾವಂತ ಮಣಿರತ್ನಂ ನಿರ್ದೇಶಿಸಿದ ಮೊದಲ ಮತ್ತು ಏಕೈಕ ಕನ್ನಡ ಚಿತ್ರ 'ಪಲ್ಲವಿ ಅನುಪಲ್ಲವಿ'ಯ ಛಾಯಾಗ್ರಾಹಕರೂ ಬಾಲುಮಹೇಂದ್ರ. ಮೂಡ್ ಲೈಟಿಂಗ್‌ನಲ್ಲಿ ನಿಷ್ಣಾತರು. ಬಾಲು ಮಹೇಂದ್ರರವರ ಅನೇಕ ಚಿತ್ರಗಳು ತಮಿಳುನಾಡಿಗಿಂತ ಕರ್ನಾಟಕದಲ್ಲಿಯೇ ಜನಪ್ರಿಯವಾಗಿ ಪ್ರದರ್ಶಿತವಾಗಿದ್ದುಂಟು.

'ಹರಕೆ' ದೇವದಾಸಿ ಪದ್ಧತಿಯಂಥ ಆಚರಣೆಯನ್ನು ವಿಶ್ಲೇಷಿಸಲು ಪ್ರಯತ್ನಿಸಿದ ಚಿತ್ರ. ನಾಗೇಶ್ ಎಂಬ ಹೊಸಬರೊಬ್ಬರು ಈ ಚಿತ್ರವನ್ನು ನಿರ್ದೇಶಿಸಿ ಸುದ್ದಿ ಮಾಡಿದರು. ಈ ಪ್ರಗತಿಪರ ವಸ್ತುವು ತೆರೆಗೆ ಬರುವಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚ್ಯವಸ್ತು ಮತ್ತು ಕಲಾ ಇತಿಹಾಸದ ಪ್ರಧ್ಯಾಪಕರಾಗಿದ್ದ ಡಾ।ಎಸ್.ಶೆಟ್ಟರ್ ಅವರು ಬೆನ್ನ ಹಿಂದೆ ನಿಂತು ಮಹತ್ವದ ಪಾತ್ರವಹಿಸಿದ್ದರು. ಕಥಾವಸ್ತುವಿನಲ್ಲಿಯೇ ಹಾಸುಹೊಕ್ಕಾಗಿರುವ ಲೈಂಗಿಕತೆಗೆ ಹೆಚ್ಚು ಒತ್ತು ಕೊಡದೆ, ಒಂದು ಸಾಮಾಜಿಕ ಪಿಡುಗಿಗೆ ವಸ್ತುನಿಷ್ಠವಾಗಿ ಕನ್ನಡಿ ಹಿಡಿಯುವ ಪ್ರಯತ್ನದಲ್ಲಿ ನಾಗೇಶ್ ಸಾಕಷ್ಟು ಯಶಸ್ವಿಯಾದರೂ ಚಿತ್ರ ಆರ್ಥಿಕವಾಗಿ ಸೋತಿದ್ದರಿಂದ ಅವರು ಈ ಕ್ಷೇತ್ರದಲ್ಲಿ ಹೆಚ್ಚು ಕಾಲ ನಿಲ್ಲಲು ಸಾಧ್ಯವಾಗಲಿಲ್ಲ. ನಟಿ ಪ್ರಮೀಳಾ ಜೋಷಾಯ್‌ರ ಪ್ರಥಮ ಚಿತ್ರ ಇದು. ವಿಜಯಭಾಸ್ಕರ್ ನೀಡಿದ ಸಂಗೀತದಲ್ಲಿ ಈ ಕಥಾವಸ್ತುವಿಗಾಗಿಯೇ ವಿಶಿಷ್ಟವಾಗುವಂಥ ಸಂಯೋಜನೆಯಿತ್ತು. ಎಲ್ಲಮ್ಮನ ಭಕ್ತರು ಉಪಯೋಗಿಸುವ ಚೌಡಿಕೆ ವಾದ್ಯವನ್ನು ಪ್ರಧಾನವಾಗಿ ಬಳಸಿ ಚಿತ್ರದಲ್ಲಿ ನೈಜತೆ ಮೂಡಿಸಿದ್ದರು.

'ಮುಕ್ತಿ'ಯನ್ನು ನಿರ್ಮಿಸಿ ಹಣ ಕಳೆದುಕೊಂಡು ಪರದಾಡಿದ ಪತ್ರಕರ್ತ ಕೆ.ಎಸ್.ನಾರಾಯಣಸ್ವಾಮಿ ಸಾಹಿತಿ-ಪ್ರಕಾಶಕ ಮಾವಿನಕೆರೆ ರಂಗನಾಥ್ ಸಹಭಾಗಿತ್ವ ಮತ್ತು ಬಸವರಾಜ ಕೆಸ್ತೂರ್ ನಿರ್ದೇಶನದಲ್ಲಿ 'ಸಂಘರ್ಷ' ಚಿತ್ರವನ್ನು ಆರಂಭಿಸಿದರು. ಈ ಚಿತ್ರದ ಇಡೀ ಧೋರಣೆಯನ್ನು ಅದರ ಹಾಡೊಂದರಲ್ಲೇ ಹೇಳಬಹುದು.



(ಚಿತ್ರ ೭೬) 'ಕೋಕಿಲಾ' ಚಿತ್ರದಲ್ಲಿ ಕಮಲಹಾಸನ್ ಮತ್ತು ಶೋಭಾ



(ಚಿತ್ರ ೭೭) 'ಸಂಘರ್ಷ' ಚಿತ್ರದಲ್ಲಿ ಶ್ರೀಲಲಿತಾ ಮತ್ತು ರಾಜವರ್ಧನ್

'ಯೌವನದಾ ಹೊಳೆಯಲ್ಲಿ ಈಜಾಟವಾಡಿದರೆ ಸೋಲು ನಿನಗೆ ಗೆಳತಿ ಸೋಲು ನಿನಗೇ...' ತುಂಬ ಜನಪ್ರಿಯವಾದ ಈ ಹಾಡನ್ನು ಹಾಡಿದವರು 'ಸೂರ್ಯಂಗೂ ಚಂದ್ರಂಗೂ ಬಂದಾರೆ ಮುನಿಸು...' ಹಾಡಿನ ಖ್ಯಾತಿಯ ರವೀಯವರು. ಇಂದಿನ ಸ್ತ್ರೀವಾದಿಗಳು ಚಿತ್ರದ ಧೋರಣೆಯನ್ನು ಪುರುಷಪ್ರಧಾನ ಸಮಾಜದ ಪರವಾಗಿರುವುದೆಂದು ಪ್ರತಿಭಟಿಸಲಿಕ್ಕೂ ಸಾಧ್ಯ. ಆದರೆ ಚಿತ್ರ ಅಂದಿನ ಸಮಾಜದ ಹಾಗೂ ಬಹುಶಃ ನೈಸರ್ಗಿಕ ಕಾರಣಗಳಿಂದಾಗಿ ಎಂದಿಗೂ ಹಾಗೆಯೇ ಉಳಿಯುವ ವಾಸ್ತವಿಕತೆಯೊಂದನ್ನು ಸಮರ್ಥವಾಗಿ ನಿರೂಪಿಸಿತೆನ್ನಬಹುದು. ಚಿತ್ರದ ಯಶಸ್ಸಿಗೂ ಇದೇ ಕಾರಣವಿದ್ದಿರಲೂಬಹುದು. 'ಸಂಘರ್ಷ' ನಟಿ ಶ್ರೀಲಲಿತಾರವರ ಚೊಚ್ಚಲ ಚಿತ್ರ. ಇವರಲ್ಲಿನ ಕಾಲೇಜಿನ 'ರ್‍ಯಾಗಿಂಗ್' ದೃಶ್ಯಗಳು ನೈಜವಾಗಿ, ಕೆಲವೊಮ್ಮೆ ಕ್ರೂರವಾಗಿ ಮೂಡಿಬಂದು ಚಿತ್ರಕ್ಕೆ ಸೆನ್ಸಾರ್‌ಗಳಿಂದ 'ಎ' ಸರ್ಟಿಫಿಕೇಟ್ ಸಿಗುವಂತೆ ಮಾಡಿತು. ಕಡಿಮೆ ಬಜೆಟ್‌ನ ಈ ಚಿತ್ರ ಆಗ ಅಸ್ತಿತ್ವದಲ್ಲಿದ್ದ ಪ್ರಭಾತ್ ಚಿತ್ರಮಂದಿರವಲ್ಲಿ ಬೆಳಗಿನ ಪ್ರದರ್ಶನಗಳಲ್ಲಿಯೇ ಕೆಲವು ತಿಂಗಳುಗಳ ಕಾಲ ಪ್ರದರ್ಶಿತವಾಗಿ ಲಾಭ ತಂದಿತು.

ಈ ವರ್ಷ ಬಿಡುಗಡೆಯಾದ 'ಕರಾವಳಿ' ಅದರ ಗುಣಮಟ್ಟಕ್ಕಿಂತ ಹೆಚ್ಚಾಗಿ ಇತರ ಕಾರಣಗಳಿಂದಾಗಿ ಸುದ್ದಿಯನ್ನೇ ಮಾಡಿತು. ಆ ವೇಳೆಗಾಗಲೇ ತುಳು ಭಾಷೆಯಲ್ಲಿ 'ಕೋಟಿ ಚೆನ್ನಯ' ಚಿತ್ರವನ್ನು ನಿರ್ದೇಶಿಸಿ ಚಿತ್ರಕ್ಕೆ ರಾಜ್ಯ ಪ್ರಶಸ್ತಿಯೊಂದನ್ನೂ ತಂದುಕೊಟ್ಟಿದ್ದ ಸಾಹಿತಿ ವಿಶುಕುಮಾರ್ ನಿರ್ಮಿಸಿ ನಿರ್ದೇಶಿಸಿದ ಈ ಚಿತ್ರ ರಾಜ್ಯದ ಕರಾವಳಿ ಪ್ರದೇಶದ ಮೀನುಗಾರರ ಜೀವನವನ್ನು ಪ್ರತಿಬಿಂಬಿಸುವ ಪ್ರಯತ್ನ ಮಾಡಿತು. ಆದರೆ ನಿರ್ಮಾಣ ಪ್ರಾರಂಭವಾದ ಕ್ಷಣದಿಂದ ಒಂದಲ್ಲ ಒಂದು ವಿವಾದಕ್ಕೆ ಪಾತ್ರವಾಯಿತು. ವಿಶುಕುಮಾರ್‌ರವರೇ ಬರೆದ ಈ ಕಥೆ 'ಕನ್ನಡ ಪ್ರಭ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಲು ಪ್ರಾರಂಭವಾದ ಏಳೇ ದಿನಗಳಲ್ಲಿ ಅದರ ಪ್ರಕಟಣೆಯನ್ನು ತಕ್ಷಣ ನಿಲ್ಲಿಸಬೇಕೆಂದು ದಕ್ಷಿಣ ಕನ್ನಡದ ಮೊಗವೀರ ಸಮಾಜದವರು ಆಗ್ರಹಿಸಲು ಪ್ರಾರಂಭಿಸಿದ್ದರು.

ಧರ್ಮನಿರಪೇಕ್ಷತೆಯನ್ನು ಸಾರಲು ಪ್ರಾಮಾಣಿಕತೆಯಿಂದ ಪ್ರಯತ್ನಿಸಿದ ಕಥೆಯೇ ಮತಾಂಧರ ಪ್ರತಿಭಟನೆಗೆ ಗುರಿಯಾಯಿತೆಂದು ವಿಶುಕುಮಾರ್ ವ್ಯಥೆ ಪಟ್ಟರೂ ಅವರು ನಂತರ ಈ ಕಥೆಯನ್ನು ಕಾದಂಬರಿ ರೂಪದಲ್ಲಿ ಪ್ರಕಟಿಸಿದಾಗ ಅದಕ್ಕೆ ಓದುಗರಿಂದ ಪ್ರೋತ್ಸಾಹ ಸಿಕ್ಕಿತು. ನಂತರ ತಮ್ಮ ಕಥೆಯನ್ನು ಚಿತ್ರರೂಪದಲ್ಲಿ ತರಲು ವಿಶುಕುಮಾರ್ ನಿರ್ಧರಿಸಿದರು. ಇಲ್ಲಿಯೂ ಅವರಿಗೆ ಅನೇಕ ಅಡೆ-ತಡೆಗಳು ಎದುರಾದವು. ಮೀನುಗಾರರ ಸಂಘಟನೆಗಳು ಕರಾವಳಿ ಪ್ರದೇಶದಲ್ಲಿ ಚಿತ್ರಣಕ್ಕೆ ಅವಕಾಶ ಕೊಡಲಿಲ್ಲ. ನಂತರ ಪೊಲೀಸರ ಸಹಾಯ ಪಡೆದು ಶೂಟಿಂಗ್ ಮುಗಿಸಬೇಕಾಯಿತು. ಚಿತ್ರದ ನಾಯಕ ಮುಸ್ಲಿಂ ಆಗಿದ್ದನ್ನು ತಪ್ಪಿಸಿ ಹಿಂದೂವಾಗಿ ಪರಿವರ್ತನೆಗೊಳಿಸಬೇಕೆಂಬ ಪ್ರಚಂಡ ಒತ್ತಾಯವೇ ಬಂತು. ಆದರೆ ಈ ಬದಲಾವಣೆಗೂ ವಿಶುಕುಮಾರ್ ಒಪ್ಪಲಿಲ್ಲ. ನಂತರ ಚಿತ್ರ ಮುಗಿದಾಗ ಸೆನ್ಸಾರ್ ಬೋರ್ಡ್‌ನಿಂದ ತೊಂದರೆ ಒದಗಿತು. ಸೆನ್ಸಾರ್ ಮಂಡಳಿ ಚಿತ್ರವನ್ನು ರಾಜ್ಯ ಸರ್ಕಾರದ ಪರೀಕ್ಷೆಗೆ ಸಲ್ಲಿಸಿತು. ಅಷ್ಟರಲ್ಲಿ ವಿಶುಕುಮಾರ್ ಪತ್ರಕರ್ತರಿಗಾಗಿ ಚಿತ್ರದ ವಿಶೇಷ ಪ್ರದರ್ಶನವೊಂದನ್ನು ಏರ್ಪಡಿಸಿ ವಿವಾದವನ್ನು ಅವರ ವಿವೇಚನೆಗೂ ಬಿಟ್ಟರು. ಕೊನೆಗೆ ಪತ್ರಿಕೆಗಳಿಂದ ಚಿತ್ರದ ಪರವಾಗಿಯೇ ಅಭಿಪ್ರಾಯ ಬಂದಿತು. ಕೊನೆಗೊಮ್ಮೆ ವಿವಾದ ಅಂತ್ಯಗೊಳ್ಳುವಂತಾಯಿತು. ಪತನ್ಮಧ್ಯೆ ರಾಜ್ಯ ಸರ್ಕಾರ ಈ ಚಿತ್ರ ದಕ್ಷಿಣ ಕರ್ನಾಟಕವನ್ನುಳಿದು ರಾಜ್ಯದ ಇನ್ನೆಲ್ಲ ಕೇಂದ್ರಗಳಲ್ಲಿಯೂ ಬಿಡುಗಡೆಯಾಗಲು ಅನುಮತಿ ನೀಡಿತು. ಇದಕ್ಕೆ ಆ ಪ್ರದೇಶದ ರಾಜಕಾರಣಿಯೊಬ್ಬರು ಕಾರಣ ಎಂದು ಹೇಳಲಾಗಿತ್ತು. ಮದರಾಸಿನಲ್ಲಿನ ಸೆನ್ಸಾರ್ ಕಚೇರಿ ಕೇಂದ್ರ ಸೆನ್ಸಾರ್ ಮಂಡಳಿಗೆ ಚಿತ್ರವನ್ನೊಪ್ಪಿಸಿತು. ನಂತರ ಕೇಂದ್ರ ಬೋರ್ಡ್ ಚಿತ್ರವನ್ನು ಮುಕ್ತವಾಗಿ ಪ್ರದರ್ಶಿಸಲು ಅನುಮತಿಯಿತ್ತಿತು.

ದಕ್ಷಿಣ ಕನ್ನಡದಿಂದ ಮುಂಬೈಗೆ ಹೋಗಿ ಅಲ್ಲಿ ನೆಲೆಸಿರುವಾಗಲೇ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಅಭಿನಯ ಪದವಿ ಪಡೆದು ಕೆಲವು ಹಿಂದಿ ಚಿತ್ರಗಳಲ್ಲಿ ನಟಿಸಿದ್ದ ರೀಟಾ ಅಂಚನ್ ಚಿತ್ರದ ನಾಯಕಿ, ವಿಶುಕುಮಾರ್ ನಾಯಕರು. ಆದರೆ ಈ ಎಲ್ಲ ಘಟನೆಗಳಿಗೆ ಸಿಕ್ಕಿದ ವ್ಯಾಪಕ ಪ್ರಚಾರದಿಂದಾಗಿ ಅದರ ಬಾಕ್ಸ್ ಆಫೀಸ್ ಮೌಲ್ಯಗಳೇನೂ ಹೆಚ್ಚಲಿಲ್ಲ. ಹಿಂದಿ ಚಿತ್ರರಂಗದ ಖ್ಯಾತ ಸಂಗೀತ ನಿರ್ದೇಶಕ ಹೇಮಂತ್‌ಕುಮಾರ್ ಈ ಚಿತ್ರಕ್ಕೆ ಸಂಗೀತ ಕೊಟ್ಟಿದ್ದೊಂದು ವಿಶೇಷ. ಪತ್ರಕರ್ತ ಕೆ.ಎಸ್.ನಾರಾಯಣಸ್ವಾಮಿ ಸಂಭಾಷಣೆ ಬರೆದರು.

ಈ ವರ್ಷ ಭರ್ಜರಿಯಾಗಿ ತಯಾರಾಗಿ ಅಷ್ಟೇ ಭರ್ಜರಿಯಾಗಿ ಪ್ರದರ್ಶಿತವಾಗಿ ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಒಂದು ಮೈಲಿಗಲ್ಲೆಂದು ಯಾವ ಉತ್ಪ್ರೇಕ್ಷೆಯೂ ಇಲ್ಲದೆ ಕರೆಸಿಕೊಂಡ ಚಿತ್ರ ರಾಜಕಮಲ್ ಆರ್ಟ್ಸ್ ಲಾಂಛನದಲ್ಲಿ ಸಾಹಸಿ ಕೆ.ಸಿ.ಎನ್.ಗೌಡ ನಿರ್ಮಿಸಿ, ಹುಣಸೂರು ಕೃಷ್ಣಮೂರ್ತಿ ತಮ್ಮದೇ ಚಿತ್ರಕಥೆಯ ಆಧರಿಸಿ ನಿರ್ದೇಶಿಸಿದ ಪೌರಾಣಿಕ ಚಿತ್ರ 'ಬಬ್ರುವಾಹನ'.

ಈ ಚಿತ್ರದ ದೃಶ್ಯ ಶ್ರೀಮಂತಿಕೆ ಕಣ್ಣು ಕೋರೈಸುವಂತಿತ್ತು. ಝಗಝಗಿಸುವ ವೇಷಭೂಷಣಗಳು, ಅದ್ದೂರಿ ಸೆಟ್‌ಗಳು ಕನ್ನಡ ಚಿತ್ರೋದ್ಯಮಕ್ಕೆ ಇಷ್ಟು ದೊಡ್ಡ ವೆಚ್ಚದ ಚಿತ್ರವನ್ನು ಈ ಪ್ರಮಾಣದಲ್ಲಿ ನಿರ್ಮಿಸುವುದು ಸಾಧ್ಯವೇ ಎಂದು ಎಲ್ಲರೂ ವಿಸ್ಮಯ ಪಡುವಂತಿದ್ದವು. ಅದಕ್ಕೆ ಸರಿಯಾಗಿ ಆರ್ಥಿಕವಾಗಿ ಕೂಡ ಚಿತ್ರ ಭಾರಿ ಯಶಸ್ಸು ಗಳಿಸಿತು. ಬೆಂಗಳೂರಿನ ಹೊರವಲಯದ ರಾಮೋಹಳ್ಳಿಯಲ್ಲಿನ ದೊಡ್ಡ



(ಚಿತ್ರ ೭೮) 'ಬಬ್ರುವಾಹನ' ಚಿತ್ರದಲ್ಲಿ ರಾಜಕುಮಾರ್ ಮತ್ತು ಸರೋಜಾದೇವಿ



(ಚಿತ್ರ ೭೯) 'ನಾಗರಹೊಳೆ' ಚಿತ್ರದಲ್ಲಿ ಮಾ|ಭಾನುಪ್ರಕಾಶ್, ಮಾ|ಪ್ರಸಾದ್ ಮತ್ತು ಬೇಬಿ ಇಂದಿರಾ

ಆಲದ ಮರವಡಿಯಲ್ಲಿ 'ಬಬ್ರುವಾಹನ'ದ ಮುಹೂರ್ತ ಸಮಾರಂಭ ನಡೆದಾಗ ಹುಣಸೂರರು ತಮ್ಮ ಚಿತ್ರವನ್ನು 'ಜೈಮಿನಿ ಭಾರತ ವಿತ್ ಸಿನಿಮಾ ಮಸಾಲೆ' ಎಂದು ಬಣ್ಣಿಸಿದ್ದರು. ಇದು ಸಾಮಾನ್ಯವಾಗಿ ನಮ್ಮ ವ್ಯಾಪಾರಿ ಚಿತ್ರೋದ್ಯಮಿಗಳು ತಮ್ಮ ಯಾವುದೇ ಚಿತ್ರದ ಬಗ್ಗೆ ತೋರುವ ಧೋರಣೆ. ಆದರೆ ಹುಣಸೂರರ ಮಾತು ಸಂಪೂರ್ಣ ಸತ್ಯವಾಯಿತು. ಚಿತ್ರದ ಮುಹೂರ್ತಕ್ಕೆ ದೊಡ್ಡ ಆಲದ ಮರವನ್ನೇ ಏಕೆ ಆಯ್ಕೆ ಮಾಡಿದರೆಂಬುದನ್ನು ವಿವರಿಸುತ್ತ ಹುಣಸೂರರು ಅಲ್ಲಿ ದಕ್ಷ ಮಹರ್ಷಿಯು ಒಂದು ಯಜ್ಞ ಮಾಡಿದನೆಂದೂ, ಬ್ರಹ್ಮಾಂಡ ಪುರಾಣದಲ್ಲಿ ಅದರ ಉಲ್ಲೇಖ ಇರುವುದೆಂದೂ, ಇಂತಹ ವಿಷಯಗಳಿಗೆ ಆ ಪುರಾಣ ಒಂದು ವಿಶ್ವಕೋಶದಂತೆ ಎಂದೂ ಹೇಳಿದರು.

ಟಿ.ಜಿ.ಲಿಂಗಪ್ಪನವರ ಸಮರ್ಥ ಸಂಗೀತ ನಿರ್ದೇಶನದಲ್ಲಿ ಲೆಖ್ಖವಿಲ್ಲದಷ್ಟು ಕಂದಪದ್ಯಗಳು, ಸೀಸ ಪದ್ಯಗಳು ಚಿತ್ರವನ್ನು ತುಂಬಿ, ತೆಲುಗು ಪೌರಾಣಿಕ ಚಿತ್ರಗಳನ್ನು ನೆನಪಿಗೆ ತಂದಿತು. ಚಿತ್ರದಲ್ಲಿ ರಾಜಕುಮಾರ್ ಹಾಡಿದ ಶೈಲಿ, ದ್ವಿಪಾತ್ರಾಭಿನಯ ಎಂದೆಂದೂ ಜನರ ಮನಸ್ಸಿನಲ್ಲಿ ನೆಲೆಸಿಬಿಡುವಂಥದ್ದು. ವಿಶಿಷ್ಟ ಪಾತ್ರದಲ್ಲಿ ಕಾಂಚನಾ ಪ್ರಣಯ-ಪೌರುಷಗಳನ್ನು ತೋರುವ ರೀತಿಯೂ ವಿಭಿನ್ನವೆನಿಸಿತ್ತು. ಈ ಚಿತ್ರದಲ್ಲಿ ಕೃಷ್ಣನ ಪಾತ್ರದ ಮೂಲಕ ನಟ ರಾಮಕೃಷ್ಣ ಚಿತ್ರರಂಗವನ್ನು ಪ್ರವೇಶಿಸಿದರು.

ಎಸ್.ವಿ.ರಾಜೇಂದ್ರಸಿಂಗ್ (ಬಾಬು) ನಿರ್ದೇಶನದ 'ನಾಗರಹೊಳೆ' ತನ್ನದೇ ಆದ ರೀತಿಯಲ್ಲಿ ಕನ್ನಡ ಚಿತ್ರೋದ್ಯಮದ ಇನ್ನೊಂದು ಮೈಲಿಗಲ್ಲು. ಚಿಕ್ಕಮಗಳೂರು ಜಿಲ್ಲೆಯ ಕೆಲವು ಸಾಹಸಿ ಪ್ಲಾಂಟರುಗಳು ಮತ್ತು ವಾಣಿಜ್ಯೋದ್ಯಮಿಗಳು - ಅವರಲ್ಲಿ ಮುಖ್ಯರು ಎಫ್.ಕೆ.ಮಾಣಿಕ್‌ಚಂದ್, ಬಾಲಾಜಿಸಿಂಗ್ ಮತ್ತು ಪಾರ್ಶ್ವನಾಥ್ - ಸೇರಿ ಸೃಷ್ಟಿಸಿದ ಹೊಸ ಸಂಸ್ಥೆ ವರುಣ ಪಿಕ್ಚರ್ಸ್ ನಿರ್ಮಿಸಿದ ಚೊಚ್ಚಲ ಚಿತ್ರ ಇದು. ಅವರೆಲ್ಲರ ಸಾಹಸಪ್ರಿಯತೆಗೆ ತಕ್ಕ ಪ್ರತಿಫಲವೇ ಸಿಕ್ಕಿತು. ಒಂದು ಮಕ್ಕಳ ಚಿತ್ರವಾಗಿ, ಸಾಹಸಪ್ರಧಾನ ಚಿತ್ರವಾಗಿ 'ನಾಗರಹೊಳೆ' ರಾಜ್ಯದಲ್ಲಿ ಒಂದು ಸಣ್ಣ ಕೋಲಾಹಲವನ್ನೇ ಎಬ್ಬಿಸಿ, ಕನ್ನಡ ಚಿತ್ರರಂಗಕ್ಕೆ ಮತ್ತೊಬ್ಬ ಕ್ರಿಯಾಶೀಲ, ಸದಭಿರುಚಿಯ ನಿರ್ದೇಶಕರನ್ನು ಕೊಡುಗೆಯಾಗಿ ನೀಡಿತು. ಚಿತ್ರ ಬಿಡುಗಡೆಯಾಗಿ ೨೩ ವರ್ಷಗಳ ನಂತರ ಮರು ಬಿಡುಗಡೆಯಾದಾಗಲೂ ಪ್ರೇಕ್ಷಕರು ಅದನ್ನು ಉತ್ಸಾಹದಿಂದ ಬರಮಾಡಿಕೊಂಡಿದ್ದು ಅದರ ಜನಪ್ರಿಯತೆಯ ನಿದರ್ಶನ. ಚಿತ್ರದಲ್ಲಿ ಮೆಚ್ಚುವಂತಹ ನಿರ್ಮಾಣ ಮೌಲ್ಯಗಳಿದ್ದು ಮನರಂಜನೆ ಮತ್ತು ರೋಚಕ ಅನುಭವಗಳನ್ನು ನೀಡಿದ ವನ್ಯಜೀವನದ ಅನೇಕ ದೃಶ್ಯಗಳಿದ್ದವು. ಎಲ್ಲಕ್ಕಿಂತ ಹೆಚ್ಚಾಗಿ ಪ್ರಧಾನ ಪಾತ್ರಗಳಲ್ಲಿ ಅಭಿನಯಿಸಿದ ಪ್ರತಿಭಾವಂತ ಮಕ್ಕಳು (ಬೇಬಿ ಇಂದಿರಾ ಸೇರಿದಂತೆ) ತೋರಿದ ಮುಗ್ಧತೆ ಚಿತ್ರವನ್ನು ಒಂದು ವಾಸ್ತವಿಕ ಅನುಭವವನ್ನಾಗಿ ಮಾಡಿತು. ಸಮಾನಾಂತರವಾಗಿ ಹಿರಿಯ, ಜನಪ್ರಿಯ ಕಲಾವಿದರು ಅಭಿನಯಿಸಿದ ಕಥೆಯೊಂದು ಸೇರಿದ್ದನ್ನು ಬಿಟ್ಟರೆ, ಮಕ್ಕಳ ಚಿತ್ರವೊಂದಕ್ಕೆ ಬೇಕಾದ ತರ್ಕ, ವೈಜ್ಞಾನಿಕ ಚಿಂತನೆ, ಅವರ ತುಂಟತನ ಎಲ್ಲವೂ ಇದ್ದವು. ಆ ಕಾರಣಕ್ಕಾಗಿ ಬಹುಶಃ 'ನಾಗರಹೊಳೆ' ಕನ್ನಡದಲ್ಲಿ ಪ್ರಥಮ ಮಕ್ಕಳ ಚಿತ್ರವೆಂಬ ಹೆಗ್ಗಳಿಕೆಗೆ ಪಾತ್ರವಾಗುವಂಥದ್ದು.

ರಾಜಕುಮಾರ್ ವೃತ್ತಿಜೀವನದಲ್ಲಿ ಮಾತ್ರವಲ್ಲ, ಇಡೀ ಕನ್ನಡ ಚಿತ್ರರಂಗದ ಇತಿಹಾಸದಲ್ಲಿಯೇ ಇನ್ನೊಂದು ಮೈಲಿಗಲ್ಲೆನಿಸಿದ ಚಿತ್ರ 'ಸನಾದಿ ಅಪ್ಪಣ್ಣ'. ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿಯೊಂದರ ಆಧಾರದ ಮೇಲೆ ತಯಾರಾದ ಈ ಚಿತ್ರದ ನಿರ್ದೇಶಕರು ವಿಜಯ್. ನಿರ್ಮಾಪಕರು ವಿಕ್ರಂ ಶ್ರೀನಿವಾಸ್. ಚಿತ್ರಕ್ಕಾಗಿ ಆದ ಅಪಾರ ವೆಚ್ಚ ಸಾರ್ಥಕವೆನಿಸುವುದರ ಜೊತೆಗೆ ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ಪ್ರತಿಭೆಯ ಉತ್ತುಂಗವನ್ನೇ ಮುಟ್ಟಿದ್ದು ಕೂಡ ಚಿತ್ರದ ಪ್ರಾಮುಖ್ಯವನು ಹಿಗ್ಗಿಸಿತು. ವಿಶ್ವವಿಖ್ಯಾತ ಷಹನಾಯ್ ವಾದನ ಪಟು ಬಿಸ್ಮಿಲ್ಲಾ ಖಾನ್‌ರವರು ಕನ್ನಡ ಚಿತ್ರಪ್ರೇಮಿಗಳಿಗೆ ಉತ್ತರಾದಿ ಸಂಗೀತದ ಈ ದೈವಿಕ ವಾದ್ಯದ ಸವಿಯನು ಉಣಿಸಿದರು. ಜಯಪ್ರದ ರಾಜಕುಮಾರ್‌ರವರ ನಾಯಕಿ. ಅಶೋಕ್ ಅಪ್ಪ ತುಳಿದ ಹಾದಿಯನ್ನು ತಾನೂ ತುಳಿಯಲೊಲ್ಲದ ಮಗ. ಚಿತ್ರದಲ್ಲಿ ಅಭಿನಯವೂ ಹೃದಯ ಮುಟ್ಟುವಂತಿತ್ತು. ಯಾವುದೇ ಪಾತ್ರವಾದರೂ ಅಭ್ಯಾಸ ಮಾಡಿ ಕೈಗೆತ್ತಿಕೊಳ್ಳುವ ರಾಜಕುಮಾರ್ ಅವರು ಕೊಂಚ ಕಾಲ ಈ ಚಿತ್ರದ ಸಲುವಾಗಿ ಷಹನಾಯ್ ವಾದ್ಯ ನುಡಿಸಲು ಕಲಿತರು. ಶತದಿನೋತ್ಸವ ಸಮಾರಂಭದಲ್ಲಿ ಕೃಷ್ಣಮೂರ್ತಿ ಪುರಾಣಿಕರು ಉಪಸ್ಥಿತರಿದ್ದರು.

'ಸನಾದಿ ಅಪ್ಪಣ್ಣ' ಚಿತ್ರಣದ ಕಾಲದಲ್ಲಿ ಎರಡು ಅಪಘಾತಗಳು ನಡೆಯುವುದನ್ನು ತಂಡದ ಸದಸ್ಯರೆಲ್ಲರೂ ತಪ್ಪಿಸಿದ್ದು ಚಿರಸ್ಮರಣೀಯ. ತಮಿಳುನಾಡಿನ ಹೊಗೇನಕಲ್ ಜಲಪಾತದಲ್ಲಿ ಚಿತ್ರೀಕರಣಕ್ಕಾಗಿ ನದಿಯ ಮೇಲೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ದಾಟಲು ಹಗ್ಗಗಳ ಸೇತುವೆಯನ್ನು ನಿರ್ಮಿಸಲಾಗಿತ್ತು. ನದಿಯ ಎರಡು ದಡಗಳ ಮೇಲೆಯೂ ಬೇರೆ ಬೇರೆ ಗ್ರಾಮಗಳು. ಒಂದು ಗ್ರಾಮದಿಂದ ನಾಯಕ ರಾಜಕುಮಾರ್,



(ಚಿತ್ರ ೮೦) 'ಸನಾದಿ ಅಪ್ಪಣ್ಣ' ಚಿತ್ರದಲ್ಲಿ ರಾಜಕುಮಾರ್ ಮತ್ತು ಜಯಪ್ರದ

ಇನ್ನೊಂದು ಕಡೆಯಿಂದ ನಾಯಕಿ ಜಯಪ್ರದ ಓಡಿ ಬಂದು ಸೇತುವೆಯ ಮಧ್ಯದಲ್ಲಿ ಒಬ್ಬರನ್ನೊಬ್ಬರು ಸಂಧಿಸುವ ಸನ್ನಿವೇಶ. ಇನ್ನೇನು ಚಿತ್ರಿಕೆಯನ್ನು ತೆಗೆಯಬೇಕು ಎನ್ನುವ ವೇಳೆಗೆ ಸೇತುವೆಯ ಕೊನೆಯ ಹಗ್ಗ ಸುರುಳಿಯಂತೆ ಬಿಚ್ಚಿಕೊಳ್ಳುತ್ತಿದ್ದುದನ್ನು ಕಂಡ ಸಾಹಸ ನಿರ್ದೇಶಕ ಶಿವಯ್ಯ ಏನೂ ತೋಚದೆ ಚಕಿತರಾದರು. ಆದರೆ ಕಿರುಚಿಕೊಂಡರೆ ಎಲ್ಲರೂ ಗಾಬರಿಯಾಗಿ ಏನಾದರೂ ಹೆಚ್ಚು ಕಡಿಮೆಯಾಗಬಹುದೆಂಬ ಆತಂಕದಿಂದ ರಾಜಕುಮಾರ್‌ಗೆ ಮಾತ್ರ ಸೇತುವೆಯಿಂದ ಬೇಗ ವಾಪಸಾಗುವಂತೆ ಸನ್ನೆ ಮಾಡಿದರು. ತನಗೆ ಮತ್ತು ಜಯಪ್ರದರಿಗೆ ಪ್ರಾಣಭಯವಿದೆ ಎಂದು ಮನಗಂಡ ರಾಜಕುಮಾರ್ ಧೈರ್ಯ ತಂದುಕೊಂಡು ನಾಯಕಿಯನ್ನು ಕರೆದುಕೊಂಡು ಬೇಗ ಬೇಗ ನೆಲದ ಕಡೆಗೆ ಧಾವಿಸಿ ಬಂದರು. ಅವರು ದಡ ಸೇರಿದ್ದೇ ತಡ, ಹಗ್ಗ ಕಳಚಿಕೊಂಡು ಸೇತುವೆ ಕುಸಿಯಿತು. ನಿಜವಾಗಿ ನಡೆದಿದ್ದೇನೆಂದು ಎಲ್ಲರಿಗೂ ತಿಳಿದಿದ್ದು ಆಗಲೇ. ಶಿವಯ್ಯ ಸಮಯಪ್ರಜ್ಞೆಯನ್ನು ತೋರಿಸದಿದ್ದರೆ ರಾಜಕುಮಾರ್ ಮತ್ತು ಜಯಪ್ರದ ಜಲಸಮಾಧಿಯಾಗಬೇಕಾಗಿತ್ತು.



(ಚಿತ್ರ ೮೧) 'ಸೊಸೆ ತಂದ ಸೌಭಾಗ್ಯ' ಚಿತ್ರದಲ್ಲಿ ಜಯಶ್ರೀ, ಉಮಾಶಿವಕುಮಾರ್, ಮಂಜುಳಾ, ಬಾಲಕೃಷ್ಣ, ವಿಷ್ಣುವರ್ಧನ್, ವಿಜಯಲಲಿತಾ , ಅಶ್ವತ್ಥ್ ಮತ್ತು ರಾಜೇಶ್

ಆಗ ರಾಜಕುಮಾರ್ ಪುತ್ರ ಶಿವರಾಜಕುಮಾರ್ ೧೦ ವರ್ಷದ ಬಾಲಕ. ಅದೇ ದಿನ ಸ್ನೇಹಿತರ ಜೊತೆಗೆ ಆಟವಾಡುವ ಭರದಲ್ಲಿ ಆಕಸ್ಮಿಕವಾಗಿ ನೀರಿನಲ್ಲಿ ಜಾರಿ ಬಿದ್ದ. ಎಲ್ಲರೂ ದಿಗ್ಭ್ರಮೆಯಿಂದ ನೋಡುತ್ತಿದ್ದಂತೆಯೇ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದ ಬಾಲಕನನ್ನು ರಕ್ಷಿಸಿದ್ದು ಒಬ್ಬ ತೆಪ್ಪದವನು. ಆತ ತಕ್ಷಣ ನೀರಿಗೆ ಹಾರಿ ಶಿವರಾಜಕುಮಾರ್ ತಲೆಗೂದಲನ್ನು ಭದ್ರವಾಗಿ ಹಿಡಿದು ದಡ ಸೇರಿಸದಿದ್ದರೆ ಶಿವರಾಜಕುಮಾರ್ ಅಂದೇ ನದಿಯ ಪಾಲಾಗಬೇಕಾಗಿತ್ತು. ಇಬ್ಬರೂ ಒಂದೇ ದಿನ ಸಾವಿನಿಂದ ಪಾರಾಗಿದ್ದು ಒಂದು ಅವಿಸ್ಮರಣೀಯ ಘಟನೆ.

ಕನ್ನಡ ಚಿತ್ರೋದ್ಯಮ ಸಿನಿಮಾಸ್ಕೋಪ್ ಯುಗಕ್ಕೆ ಕಾಲಿಟ್ಟಿದ್ದು ಇದೇ ವರ್ಷದಲ್ಲಿಯೇ ಎಂಬುದನ್ನು ಈಗಾಗಲೇ ಹೇಳಿಯಾಗಿದೆ. ಆ ಕಾಲದಲ್ಲಿ ಈ ಸಾಹಸವನ್ನು ಮಾಡಿದವರು ಉದ್ಯಮದ ಹಳಬರಾರೂ ಅಲ್ಲ, ಆ ವೇಳೆಗೆ ಕೇವಲ ಒಂದು ಚಿತ್ರವನ್ನು ನಿರ್ಮಿಸಿದ್ದ ಭುವನೇಶ್ವರಿ ಆರ್ಟ್ ಪ್ರೊಡಕ್ಷನ್ಸ್‌ನ ಎಸ್.ಡಿ.ಅಂಕಲಗಿ ಮತ್ತು ಮಿತ್ರರು. ಅವರ ಮೊದಲ ಚಿತ್ರ 'ಬದುಕು ಬಂಗಾರವಾಯಿತು'ನಂತೆ 'ಸೊಸೆ ತಂದ ಸೌಭಾಗ್ಯ' ಚಿತ್ರವು ಕೂಡ ಉತ್ತರ ಕರ್ನಾಟಕದ ನಾಟಕವೊಂದರ ಆಧಾರದ ಮೇಲೆ ತಯಾರಾದ ಚಿತ್ರ. ಮತ್ತೆ ಎ.ವಿ.ಶೇಷಗಿರಿರಾಯರೇ ಚಿತ್ರವನ್ನು ನಿರ್ದೇಶಿಸಿದರು. ನಾಟಕಕ್ಕೂ ಚಿತ್ರಕ್ಕೂ ಹೆಚ್ಚೇನೂ ವ್ಯತ್ಯಾಸವಿಲ್ಲದಿದ್ದರೂ ಚಿತ್ರ ಯಶಸ್ವಿಯಾಗಿ ಪ್ರದರ್ಶಿತವಾಗಲು ಒಂದು ಮುಖ್ಯ ಕಾರಣ - ಸಿನಿಮಾಸ್ಕೋಪ್‌ನ ವಿಶಾಲ ತೆರೆಯ ಮೇಲೆ ಕನ್ನಡ ಚಿತ್ರವೊಂದನ್ನು ನೋಡಿದ ಹೊಸ ಅನುಭವ. ಆದರೂ ಈ ಚಿತ್ರ ವಿಶಾಲ ಪರದೆಯ ಅನುಕೂಲತೆಗಳನ್ನು ಪರಿಣಾಮಕಾರಿಯಾಗಿಯೇನೂ ಬಳಸಿಕೊಳ್ಳಲಿಲ್ಲ. ಈ ಎರಡೂ ಚಿತ್ರಗಳ ಯಶಸ್ಸು ಭುವನೇಶ್ವರಿ ಆರ್ಟ್ ಪ್ರೊಡಕ್ಷನ್ಸ್ ಲಾಂಛನವನ್ನು ಬೆಳೆಸಿತು. ಚಿತ್ರಕ್ಕೆ ಅಗತ್ಯವಿದ್ದ ಲೆನ್ಸ್‌ಗಾಗಿ ಪರದಾಡಿ, ಮುಂಬೈನಿಂದ ತರಿಸಿ ಚಿತ್ರಿಸಿದ್ದೇ ಆ ಮಟ್ಟಿಗೆ ದೊಡ್ಡ ಸಾಹಸವಾಗಿತ್ತು. ಸಿನಿಮಾಸ್ಕೋಪ್‌ನಂತಹ ಹೆದ್ದೆರೆಯನ್ನು ಪರಿಚಯಿಸಿದ ಕೀರ್ತಿ ಈ ಮಿತ್ರರಿಗೆ ಸಲ್ಲುತ್ತದೆ.

ಸಿದ್ದಲಿಂಗಯ್ಯ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ 'ಹೇಮಾವತಿ' ಕಾದಂಬರಿಯನ್ನು ಕೈಗೆತ್ತಿಕೊಂಡರು. ನಿರ್ಮಾಪಕ ಎಸ್.ವೀರಾಸ್ವಾಮಿಗಾಗಿ ಮಾಡಿದ ಚಿತ್ರ. ಅಂತರಜಾತೀಯ ವಿವಾಹ ಮತ್ತು ಧರ್ಮ, ಒಟ್ಟಾರೆ ಸನಾತನ ಸಂಪ್ರದಾಯ, ಆಚರಣೆಗಳಲ್ಲಿ ನಂಬಿಕೆ ಇದ್ದರೂ ಮನೋವೈಶಾಲ್ಯ, ಧರ್ಮದ ಸರಿಯಾದ ತಿಳಿವಳಿಕೆ, ಸಮಾನವಾದ ಬದುಕಿನಲ್ಲಿ ನಂಬಿಕೆ ಸಾಧ್ಯ ಎಂದು ಹೇಳುತ್ತಿದ್ದ ಚಿತ್ರ. ಸಿದ್ದಲಿಂಗಯ್ಯನವರ ನಿರೂಪಣೆಯಲ್ಲಿ ತಲೆ ಹಾಕಿದ ಉತ್ಪ್ರೇಕ್ಷೆಯಿಂದಾಗಿ, ಕೆಲವು ಪಾತ್ರಗಳು ಕ್ಯಾರಿಕೇಚರ್‌ಗಳಾದವು. ನಿರ್ದೇಶಕರಿಗೆ ಚಿತ್ರಕಥಾ ರಚನೆಯ ಮೇಲೆ ಹಿಡಿತವೂ ಸಿಗಲಿಲ್ಲ. ಜೊತೆಗೆ ಗ್ರಾಮೀಣ ಪ್ರದೇಶದ ಬ್ರಾಹ್ಮಣರ ಜೀವನ ಅರ್ಥವಾಗಲಿಲ್ಲವೆನ್ನುವುದನ್ನು ಚಿತ್ರ ತೋರಿಸಿತು. ಈ ಚಿತ್ರದಲ್ಲಿಯೂ 'ಬಂಗಾರದ ಮನುಷ್ಯ' ಮತ್ತು 'ಭೂತಯ್ಯನ ಮಗ ಅಯ್ಯು'ಗಳಂತೆಯೇ ಗ್ರಾಮೀಣ ಪರಿಸರದ ಚಿತ್ರಣ ಪರಿಣಾಮಕಾರಿಯಾಗಿಯೇ ಮೂಡಿಬಂದಿತಾದರೂ, ಒಟ್ಟಾರೆ ನಿರೂಪಣೆಯಲ್ಲಿ ನಿರ್ದೇಶಕರು ಸಂಯಮವನ್ನು ಮರೆತು, ವೈರುಧ್ಯಗಳ ಚಿತ್ರಣವನ್ನೇ ಅಧಿಕಗೊಳಿಸಿದ್ದರಿಂದಾಗಿ ಶ್ರೇಷ್ಠವೆನಿಸಬಹುದಾಗಿದ್ದ ಈ ಚಿತ್ರ ಯಾವ ಗಾಢವಾದ ಅನುಭವವನ್ನೂ ನೀಡದಂತಾಯಿತು.

ಇದೇ ವರ್ಷ ತೆರೆಗೆ ಬಂದ 'ಒಂದು ಪ್ರೇಮದ ಕಥೆ' ಜೋಸೈಮನ್ ನಿರ್ದೇಶನದ ಮೊದಲ ಚಿತ್ರ. ಇದೊಂದು ಆಫ್-ಬೀಟ್ ಚಿತ್ರ. ಯಾವುದೇ ಪ್ರಚಾರವಿಲ್ಲದೆ,



(ಚಿತ್ರ ೮೨) 'ವೀರ ಸಿಂಧೂರ ಲಕ್ಷ್ಮಣ' ಚಿತ್ರದಲ್ಲಿ ಗುಡಿಗೇರಿ ಬಸವರಾಜ್ ಮತ್ತು ಮಂಜುಳಾ

ಪತ್ರಿಕೆಗಳಲ್ಲೂ ಸುದ್ದಿಯಿಲ್ಲದೆ ಕೇವಲ ೧೨ ದಿನಗಳಲ್ಲಿ ತಯಾರಿಸಿರುವ ಸಿನಿಮಾಸ್ಕೋಪ್ ಚಿತ್ರವನ್ನು ಆರ್.ಎಸ್.ಆರ್. ಲಾಂಛನದಲ್ಲಿ ಎಚ್.ರಮೇಶ್ ಟಿ.ವಿ.ಆರ್.ಶಿವರಾಂ, ಟಿ.ರವಿ ನಿರ್ಮಿಸಿದರು. ಬಸವರಾಜ್ ಮತ್ತು ಮಾನಪ್ಪ ಸಂಭಾಷಣೆ ಬರೆದಿದ್ದರು. ಈ ಕಪ್ಪು-ಬಿಳುಪು ಚಿತ್ರ ೩೫ ಎಂ.ಎಂ.ನಿಂದ ಸಿನಿಮಾಸ್ಕೋಪ್‌ಗೆ ಬ್ಲೋ ಅಪ್ ಆಗಿದ್ದೊಂದು ವಿಶೇಷ. ಪ್ರಯೋಗವೇ ಪ್ರಥಮ. ಪುಟ್ಟಣ್ಣನವರ 'ಕಥಾಸಂಗಮ'ದಲ್ಲಿ ಒಂದು ಸಣ್ಣ ಪಾತ್ರವನ್ನು ವಹಿಸಿದ್ದ ರಜನೀಕಾಂತ್ ಈ ಚಿತ್ರದಲ್ಲಿ ಅಭಿನಯಿಸಿದ್ದರು. ಪ್ರಶಸ್ತಿ ಪುರಸ್ಕೃತೆ ಎಲ್.ವಿ.ಶಾರದಾ ಅಭಿನಯಿಸಿದ್ದರು. ಈ ಕಥೆ ಕವಿ ಜಿ.ಆರ್.ಲಕ್ಷ್ಮಣರಾವ್ ಬರೆದದ್ದು. ಚಿತ್ರದಲ್ಲಿ ಸಂಕೇತಗಳ ಬಳಕೆ ಧಾರಾಳವಾಗಿ ಇತ್ತು. ಜನಪ್ರಿಯ ಸಿನಿಮಾ ಪ್ರೇಕ್ಷಕರಿಗೆ ಅವು ಮುಖ್ಯವಾಗಲಿಲ್ಲ; ಹೊಸ ಅಲೆಯ ಚಿತ್ರ ಪ್ರೇಕ್ಷಕರಿಗೆ ಆ ಸಂಕೇತಗಳು ಕ್ಲೀಷೆಯಾದವು.

ಕನ್ನಡ ಚಿತ್ರರಂಗದ ಇತಿಹಾಸದ ಪುಟಗಳನ್ನು ತೆಗೆದರೆ ಅದರ ಬೆಳವಣಿಗೆಗೆ ಉತ್ತರ ಕರ್ನಾಟಕದ ನಿರ್ಮಾಪಕರ, ಕಲಾವಿದರ ಮತ್ತು ತಂತ್ರಜ್ಞರ ಕೊಡುಗೆ ಬಹಳ ಕಡಿಮೆ. ಈ ವಾಸ್ತವ ಸ್ಥಿತಿಗೆ ಅಪವಾದವೆಂಬಂತೆ ಆಗೊಮ್ಮೆ ಈಗೊಮ್ಮೆ ಮಾತ್ರ ಆ ಭಾಗದವರು ತಯಾರಿಸಿದ ಚಿತ್ರಗಳು ತೆರೆಗೆ ಬಂದಿವೆ. ಅವುಗಳಲ್ಲಿ ಒಂದು ೧೯೭೭ರಲ್ಲಿ ಬಿಡುಗಡೆಯಾದ 'ವೀರ ಸಿಂಧೂರ ಲಕ್ಷ್ಮಣ'. ಮುಂದೆ ಕಲ್ಪನಾ ಪತಿಯಾದ ಉತ್ತರ ಕರ್ನಾಟಕದ ರಂಗಭೂಮಿಯ ಖ್ಯಾತ ನಟ ಗುಡಿಗೇರಿ ಬಸವರಾಜ್ ಉತ್ತರ ಕರ್ನಾಟಕದ ಸ್ವಾತಂತ್ರ ಸಂಗ್ರಾಮದ ಯೋಧನೊಬ್ಬನ ಬಲಿದಾನದ ಹಿನ್ನೆಲೆಯಲ್ಲಿ 'ವೀರ ಸಿಂಧೂರ ಲಕ್ಷ್ಮಣ' ಚಿತ್ರವನ್ನು ನಿರ್ಮಿಸಿದರು. ಚಿತ್ರವನ್ನು ನಿರ್ದೇಶಿಸಿದವರು ಹುಣಸೂರು ಕೃಷ್ಣಮೂರ್ತಿ. ಸಂಗೀತ ನಿರ್ದೇಶಕರು ಟಿ.ಜಿ.ಲಿಂಗಪ್ಪ. ಮಂಜುಳಾ ನಾಯಕಿ. ಜೊತೆಗೆ ಅಶ್ವತ್ಥ್, ಸುಧೀರ್, ವಜ್ರಮುನಿ ಮತ್ತು ಲೀಲಾವತಿ ಮೊದಲಾದವರ ತಾರಾಗಣವಿತ್ತು. ಇಷ್ಟೆಲ್ಲ ಇದ್ದರೂ ಈ ಚಿತ್ರ ಜನಗಳನ್ನು ತಲುಪುವುದರಲ್ಲಿ ಅಸಮರ್ಥವಾಯಿತು. ವೃತ್ತಿ ರಂಗಭೂಮಿಯ ಛಾಯೆ ಚಿತ್ರದ ಮೇಲೆ ವ್ಯಾಪಕವಾಗಿ ಹರಡಿದ್ದು ಸ್ವಲ್ಪಮಟ್ಟಿಗೆ ಸಿನಿಮಾ ರಂಗಭೂಮಿಗಿಂತ ಬೇರೆ ಎಂದು ತಿಳಿದುಕೊಳ್ಳತೊಡಗಿದ್ದ ಪ್ರೇಕ್ಷಕನಿಗೆ ಪಥ್ಯವಾಗದ್ದು ಇದರ ಮುಖ್ಯ ಕಾರಣ.

ಈ ವರ್ಷ ಹೊಸಬರು ಕೆಲವರು ಸೇರಿ ಮತ್ತೊಬ್ಬ ಹೊಸಬ ವಿಜಯಕುಮಾರ್‌ರವರ ನಿರ್ದೇಶನದಲ್ಲಿ ತಯಾರಿಸಿದ 'ಋತುಗಾನ'ಕ್ಕೆ ಕನ್ನಡದ ಸಂಗೀತ-ನೃತ್ಯ ಪ್ರಧಾನ ಚಿತ್ರಗಳ ಸಾಲಿನಲ್ಲಿ ಒಂದು ಗಂಭೀರವಾದ ಸ್ಥಾನವಿದೆ. ಈ ಚಿತ್ರದಲ್ಲಿ ಸಾಮಾನ್ಯವಾಗಿ ಇತರ ಸಂಗೀತ ನಿರ್ದೇಶಕರಿಗೆ 'ಅರೇಂಜರ್' ಕೆಲಸ ಮಾಡುತ್ತಿದ್ದ ವೇಣುವಾದನ ಪಟು ಗುಣಸಿಂಗ್‌ರ ಮನಮುಟ್ಟುವ ಸಂಗೀತವಿದ್ದು, ಉತ್ತಮವಾದ ಶಾಸ್ತ್ರೀಯ ನೃತ್ಯಗಳೂ ಇದ್ದವು. ಈ ಚಿತ್ರದಿಂದಲೇ ಬೆಳಕಿಗೆ ಬಂದ ಹೊಸ ನಟಿ ಮಾಲ ತನ್ನ ಸ್ನಿಗ್ಧಸೌಂದರ್ಯ ಮತ್ತು ಮುಗ್ಧತೆಗಳಿಂದ ಗಮನ ಸೆಳೆದರು. ಮುಂದೆ ನಟಿಯಾಗಿ ಚಿತ್ರರಂಗದಲ್ಲಿ ನಿಲ್ಲಲಿಲ್ಲ. ದಿನೇಶ್ ನಾಯಕನಟನಾಗಿ ಅಭಿನಯಿಸಿದ ಎರಡನೆಯ ಚಿತ್ರ ಇದು.

ನಿರ್ಮಾಪಕರಾದ ಗೋಪಾಲ್-ಲಕ್ಷ್ಮಣ್ ಪಾಲಿಗೆ 'ಮಾಗಿಯ ಕನಸು' ಚಿತ್ರದಲ್ಲಿ ಕೈಗೆ ಬಂದ ತುತ್ತು ಬಾಯಿಗೆ ಬರದಂತಾಯಿತು. ಕಾಕೋಳು ಸರೋಜಾರಾವ್ ಅವರ ಅದೇ ಹೆಸರಿನ ಕಾದಂಬರಿಯ ಆಧಾರದ ಮೇಲೆ ಹೆಚ್.ವಿ.ಸುಬ್ಬರಾವ್ ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ಬರೆದು ರವೀ ನಿರ್ದೇಶಿಸಿದ ಈ ಚಿತ್ರದಲ್ಲಿ ಬುಡಕಟ್ಟಿನ ಜನಾಂಗಕ್ಕೆ ಸೇರಿದ ಹೆಣ್ಣೊಬ್ಬಳು ಕಾವ್ಯಮಯವಾಗಿ ಮಾತನಾಡುವ ಪ್ರತಿಭೆಯನ್ನು ಗಳಿಸಿದ್ದ ಕಥಾವಸ್ತುವಿತ್ತು. ಆಕೆಯ ಬಾಯಿಂದ ಬರುವ ಕವನಗಳನ್ನು ಬರೆಯಲೆಂದೇ ಚಂದ್ರಶೇಖರ ಕಂಬಾರರನ್ನು ಕರೆಸಿಕೊಳ್ಳಲಾಗಿತ್ತು. ಚಿತ್ರ ಸಾಕಷ್ಟು ಕಾವ್ಯಮಯವಾಗಿಯೇ ಮೂಡಿ ಬಂದು ಮದರಾಸಿನಲ್ಲಿ ಅದರ ಪೂರ್ವಪ್ರದರ್ಶನ ನಡೆದಾಗ ಅದನ್ನು ನೋಡಿದವರೆಲ್ಲ ಅದು ಪುಟ್ಟಣ್ಣ ಕಣಗಾಲ್‌ರವರ ಚಿತ್ರಗಳನ್ನೂ ಮೀರಿಸಿಬಿಡಬಹುದೆಂಬ ಭವಿಷ್ಯ ನುಡಿದಿದ್ದರಂತೆ. ಆದರೆ ಚಿತ್ರ ಬಿಡುಗಡೆಯಾದಾಗ ವಿಫಲವಾಯಿತು. ಶ್ರೀನಾಥ್, ಅಂಬರೀಷ್, ಆರತಿ, ಶುಭಾ ಮತ್ತು ಶಿವರಾಂರಂತಹ ಕಲಾವಿದರೆಲ್ಲ ಚಿತ್ರದಲ್ಲಿದ್ದು, ವಿಜಯಭಾಸ್ಕರ್‌ರವರು ಸುಶ್ರಾವ್ಯವಾದ ಹಾಡುಗಳನ್ನು ಸಂಯೋಜಿಸಿದ್ದರು. ದೊಡ್ಡರಂಗೇಗೌಡರ ಪ್ರವೇಶ, ಶಿವರಾಂ ಮೊದಲ ಬಾರಿಗೆ ಗಂಭೀರವಾದ ಪಾತ್ರದಲ್ಲಿ ಕಾಣಿಸಿಕೊಂಡಿದ್ದು ವಿಶೇಷ.

ರಾಜಕುಮಾರ್-ಜಯಮಾಲಾ ತಾರಾಜೋಡಿಯ 'ಗಿರಿಕನ್ಯೆ' ಈ ವರ್ಷದ ಜನಪ್ರಿಯ ಚಿತ್ರಗಳಲ್ಲಿ ಒಂದೆನಿಸಿ ರಾಜನ್-ನಾಗೇಂದ್ರರವರ ಸಂಗೀತ ಪ್ರೇಕ್ಷಕರನ್ನು ಹುಚ್ಚೆಬ್ಬಿಸಿತ್ತು. ಈ ತಾರಾಜೋಡಿ ಮತ್ತೆ ಸೇರಲಿಲ್ಲ. ಭಾರತಿಸುತರವರ ಕಾದಂಬರಿಯೊಂದರ ಆಧಾರದ ಮೇಲೆ ದೊರೆ-ಭಗವಾನ್ ನಿರ್ದೇಶಿಸಿದ ಈ ಚಿತ್ರದಲ್ಲಿ ಕೊಡಗಿನ ಜೀವನದ ಸ್ವಾರಸ್ಯಕರ ಹಿನ್ನೆಲೆಯಿತ್ತು. ಮೂಢನಂಬಿಕೆಗಳನ್ನು ವಿರೋಧಿಸಿ, ಮುಗ್ಧರಿಗೆ ತಿಳಿವಳಿಕೆ ಕೊಡುವ ಪ್ರಯತ್ನವೂ ಇತ್ತು. ಅಲ್ಲಿಯ ಜನರಿಗೆ ವಾಮಾಚಾರದಲ್ಲಿ ಇರುವ ನಂಬಿಕೆಗಳ ಚಿತ್ರಣವೂ ಇತ್ತು.

೧೯೭೭ರಲ್ಲಿ ಬೆಂಗಳೂರಿನಲ್ಲಿ ವಿಶಿಷ್ಟವೆನಿಸಿದ ಚಲನಚಿತ್ರೋತ್ಸವವೊಂದು ನಡೆಯಿತು. ಹೆಸರೇ ಸೂಚಿಸುವಂತೆ ಈ 'ನಾಸ್ಟಾಲ್ಜಿಯ' ಜಾಗತಿಕ ಮತ್ತು ಭಾರತೀಯ ಚಿತ್ರರಂಗದಲ್ಲಿ ಸ್ಮರಣೀಯವೆನಿಸಿದ ೭೦ಕ್ಕೂ ಹೆಚ್ಚು ಚಿತ್ರಗಳ ಒಂದು ಬೃಹತ್ ಉತ್ಸವ. ಕರ್ನಾಟಕದ ರಾಜಧಾನಿಯಲ್ಲಿ ಎರಡು ವಾರಗಳ ಕಾಲ ಐದು ಚಿತ್ರಮಂದಿರಗಳಲ್ಲಿ ಏಳು ಭಾಷೆಗಳ ಚಿತ್ರಗಳನ್ನು ಈ ಉತ್ಸವದಲ್ಲಿ ಪ್ರದರ್ಶಿಸಲಾಯಿತು. ಉತ್ಸವವನ್ನು ಏರ್ಪಡಿಸಿದವರು ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ಮತ್ತು ಸುಚಿತ್ರ ಫಿಲಂ ಸೊಸೈಟಿ. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಮತ್ತು ರಾಜ್ಯ ಸರ್ಕಾರ ಉತ್ಸವಕ್ಕೆ ಸಂಪೂರ್ಣ ಸಹಕಾರ ನೀಡಿದವು. ಉತ್ಸವದಲ್ಲಿ ಪ್ರದರ್ಶಿತವಾದ ಎಲ್ಲ ಚಿತ್ರಗಳಿಗೂ ಸರ್ಕಾರ ಸಂಪೂರ್ಣ ತೆರಿಗೆ ವಿನಾಯಿತಿ ನೀಡಿತು.

ಕನ್ನಡ ಚಲನಚಿತ್ರೋದ್ಯಮ ಈ ಉತ್ಸವದಲ್ಲಿ ಅತ್ಯಂತ ಉತ್ಸಾಹದಿಂದ ಭಾಗವಹಿಸಿತು. ಉತ್ಸವದಲ್ಲಿ ಉಲ್ಲೇಖನಾರ್ಹ ವೈಶಿಷ್ಟ್ಯಗಳಿದ್ದವು. ಹಿಂದಿ, ತೆಲುಗು, ತಮಿಳು, ಮಲಯಾಳಂ ಚಿತ್ರರಂಗಗಳಿಂದ ಭಾರತ ಚಲನಚಿತ್ರರಂಗಕ್ಕೆ ಅತ್ಯಂತ ಗಣನೀಯ ಸೇವೆ ಸಲ್ಲಿಸಿದ್ದ ಪ್ರಖ್ಯಾತ ನಟ-ನಟಿಯರನ್ನು ಬೆಂಗಳೂರಿಗೆ ಬರಮಾಡಿಕೊಂಡು ಕನ್ನಡ ನಟ-ನಟಿಯರ ಮೂಲಕ ಅವರನ್ನು



(ಚಿತ್ರ ೮೩) 'ಗಿರಿಕನ್ಯೆ' ಚಿತ್ರದಲ್ಲಿ ಜಯಮಾಲಾ ಮತ್ತು ರಾಜಕುಮಾರ್

ಸನ್ಮಾನಿಸಲಾಯಿತು. ಅವರ ಗೌರವಾರ್ಥವಾಗಿ ೧೯೩೦ ೪೦ ಮಾಡೆಲ್‌ಗಳ ೨೦ ಕಾರುಗಳನ್ನೊಳಗೊಂಡ ವೈಭವೋಪೇತ ಮೆರವಣಿಗೆಯನ್ನು ವೆಸ್ಟ್ ಎಂಡ್ ಹೋಟೆಲಿನಿಂದ ಉತ್ಸವ ಉದ್ಘಾಟನೆಯಾದ ರವೀಂದ್ರ ಕಲಾಕ್ಷೇತ್ರದವರೆಗೆ ಏರ್ಪಡಿಸಲಾಗಿತ್ತು. ಕಳೆದ ದಶಕಗಳ ಹತ್ತಾರು ತಾರೆಯರು ಈ ಕಾರುಗಳಲ್ಲಿ ಪ್ರಯಾಣಿಸಿ ಸಹಸ್ರಾರು ಜನರಿಗೆ ಮುದ ನೀಡಿದರು. ಭಾರತ ಚಿತ್ರರಂಗದ 'ಮೊದಲ ಮಹಿಳೆ' ದೇವಿಕಾರಾಣಿ ರೋರಿಚ್ ಉತ್ಸವವನ್ನು ಭವ್ಯವಾದ ಪರಿಸರದಲ್ಲಿ ಉದ್ಘಾಟಿಸಿದರು. ಮರುದಿನ ದಿನ ಬೆಳಿಗ್ಗೆ ರವೀಂದ್ರ ಕಲಾಕ್ಷೇತ್ರದಲ್ಲಿಯೇ ಈ ಹಳಬರ ಸಮ್ಮುಖದಲ್ಲಿ ವಿಚಾರ ಸಂಕಿರಣವೊಂದು ನಡೆಯಿತು. ಇದೇ ಸಮಯದಲ್ಲಿ ವಿಶ್ವೇಶ್ವರಯ್ಯ ಸ್ಮಾರಕ ಮ್ಯೂಸಿಯಂನಲ್ಲಿ ಚಲನಚಿತ್ರ ಮಾಧ್ಯಮ ಪ್ರಾರಂಭವಾದ ದಿನದಿಂದ ಅಂದಿನವರೆಗೆ ತಾಂತ್ರಿಕ ರಂಗದಲ್ಲಿ ಉಂಟಾದ ಬೆಳವಣಿಗೆಗಳನ್ನು ಪ್ರತಿಬಿಂಬಿಸುವ ವಸ್ತುಪ್ರದರ್ಶನವೊಂದು ಕೂಡ ಏರ್ಪಾಡಾಗಿತ್ತು. ಈ ಬೃಹದಾಕಾರದ ಉತ್ಸವ ಆರ್ಥಿಕವಾಗಿ ಸಾಕಷ್ಟು ಯಶಸ್ವಿಯಾಗಿದ್ದೊಂದು ವಿಶೇಷ. ಈ ಸಮಾವೇಶಕ್ಕೆ ಡೇವಿಡ್, ನರ್ಗಿಸ್‌ದತ್, ಕಾಮಿನಿ ಕೌಶಲ್, ಜೆಮಿನಿಗಣೇಶನ್ ರಾಜೇಂದ್ರಕುಮಾರ್ ಮುಂತಾದ ಹಳೆಯ ತಾರೆಯರು ಆಗಮಿಸಿದ್ದರು.

ಕಂಠೀರವ ಸ್ಟುಡಿಯೋ ಆವರಣದಲ್ಲಿ ಮುಂಬೈನ ವಾಣಿಜ್ಯೋದ್ಯಮಿ ಮನೋಹರಶೆಟ್ಟರು ಕ್ವಾಲಿಟಿ ವರ್ಣ ಸಂಸ್ಕರಣಾ ಕೇಂದ್ರವನ್ನು ಸ್ಥಾಪಿಸಿದರು.

ಈ ವರ್ಷ ಜಿ.ವಿ.ಅಯ್ಯರ್ ಮತ್ತೊಂದು ಪ್ರಯೋಗಕ್ಕೆ ಕೈ ಹಾಕಿದರು. ನಾಲ್ಕೂವರೆ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಮೂರು ವರ್ಣ ಚಿತ್ರಗಳನ್ನು ನಿರ್ಮಿಸುವ ಯೋಜನೆ. ಮೂರು ಚಿತ್ರಗಳಿಗೂ ಒಂದೇ ತಾರಾಗಣ, ಒಂದೇ ತಾಂತ್ರಿಕ ಸಿಬ್ಬಂದಿ, ಚಿತ್ರೀಕರಣ ನಡೆಯುವುದು ಒಂದೇ ಸ್ಥಳ, ಒಬ್ಬರೇ ಸಂಕಲನಕಾರರು, ಒಬ್ಬರೇ ಸಂಗೀತ ನಿರ್ದೇಶಕರು, ಆದರೆ ಮೂರು ಚಿತ್ರಗಳ ಕಥೆಗಳೂ ಬೇರೆ, ನಿರ್ದೇಶಕರೂ ಬೇರೆ, ಲಾಂಛನಗಳೂ ಬೇರೆ. ಈ ಎಲ್ಲ ಕಸರತ್ತಿಗೆ ಕಾರಣ ನಿಯಂತ್ರಣವಿಲ್ಲದೆ ಬೆಳೆಯುತ್ತಿದ್ದ ಕನ್ನಡ ಚಿತ್ರಗಳ ನಿರ್ಮಾಣ ವೆಚ್ಚಕ್ಕೆ ಕಡಿವಾಣ ಹಾಕುವುದು ಮತ್ತು ತಯಾರಿಕಾ ವೆಚ್ಚವನ್ನು ಹದ್ದುಬಸ್ತಿನಲ್ಲಿಟ್ಟರೆ ನಿರ್ಮಾಪಕರ ಕೈಯಿಂದಲೇ ಹಾಕಿದ ಹಣವನ್ನು ಖಂಡಿತ ವಾಪಸು ಪಡೆಯುವುದು ಸುಲಭವೆಂದು ತೋರಿಸಬೇಕೆಂಬ ಛಲ. ಹೀಗಾಗಿ ಅಯ್ಯರ್ ಸ್ವತಃ ನಿರ್ದೇಶಿಸಲಿದ್ದ 'ನಾಳೆಗಳನ್ನು ಮಾಡುವವರು', ವಿ.ಆರ್.ಕೆ.ಪ್ರಸಾದ್ ನಿರ್ದೇಶನದ 'ಪ್ರೇಮ-ಕಾಮ', 'ಎಸ್.ದಿವಾಕರ್ ನಿರ್ದೇಶನದ 'ಇತಿಹಾಸ' ಚಿತ್ರಗಳ ಜಂಟಿ ಮುಹೂರ್ತ ಮೈಸೂರಿನ ನಂಜರಾಜ ಅರಸು ಛತ್ರದಲ್ಲಿ ನಡೆಯಿತು. ಮೂರು ಚಿತ್ರಗಳಲ್ಲಿಯೂ ನಾಯಕಿ ರೇಖಾರಾವ್ ಅವರು.



(ಚಿತ್ರ ೮೪) ಬೆಂಗಳೂರಿನಲ್ಲಿ ನಡೆದ ನಾಸ್ಟಾಲ್ಜಿಯ ಚಿತ್ರೋತ್ಸವದಲ್ಲಿ ಭಾಗವಹಿಸಿದ ಹಿರಿಯ ಕಲಾವಿದರಲ್ಲಿ ಒಬ್ಬರಾದ ನರ್ಗೀಸ್‌ದತ್ ಅವರಿಗೆ ಕಲ್ಪನಾರವರಿಂದ ನೆನಪಿನ ಕಾಣಿಕೆ ನೀಡಿಕೆ.

'ನಾಳೆಗಳನ್ನು ಮಾಡುವವರು' ಮತ್ತು 'ಪ್ರೇಮ-ಕಾಮ ಚಿತ್ರಗಳು ಬಿಡುಗಡೆಯಾಗಿ ವಿಫಲವಾದವು. ಮೂರನೆಯ ಚಿತ್ರ 'ಇತಿಹಾಸ' ಬಹಿರಂಗವಾಗಿ ಪ್ರದರ್ಶನವಾಗಲೇ ಇಲ್ಲ. ಹೀಗಾಗಿ ಈ ಪ್ರಯೋಗವೇ ಒಂದು ವ್ಯರ್ಥ ಪ್ರಯತ್ನವಾಯಿತು. ಈ ಚಿತ್ರಗಳಿಗೆ ಸಂಗೀತ ನೀಡಿದವರು ಯೋಗಾನರಸಿಂಹ.

ಕೆಲವು ವರ್ಷಗಳ ನಂತರ ಬಹು ಪ್ರಯಾಸದಿಂದ 'ಇತಿಹಾಸ'ವನ್ನು ಸಬ್ಸಿಡಿ ಸಲುವಾಗಿ ಮುಗಿಸಿದ ಶಾಸ್ತ್ರ ಮಾಡಿದರು. ಈ ಚಿತ್ರಗಳ ಸಂಬಂಧವಾಗಿ ಸಿಂಡಿಕೇಟ್ ಬ್ಯಾಂಕ್‌ನಲ್ಲಿ ತೆಗೆದುಕೊಂಡ ಸಾಲ ತೀರಿಸಲಾಗಲಿಲ್ಲ. ಈ ಸಾಲಕ್ಕೆ 'ಶೂರಿಟಿ'ಯಾಗಿ ನಿಂತ ಕವಿ ಗೋಪಾಲಕೃಷ್ಣ ಅಡಿಗರು, ಸುಮತೀಂದ್ರ ನಾಡಿಗ್ ಮೊದಲಾದವರಿಗೆ ಬ್ಯಾಂಕಿನ ತಕರಾರು ವಿಚಿತ್ರ ಪರಿಸ್ಥಿತಿಗೆ ತಳ್ಳಿ ಕಂಗಾಲಾಗುವಂತೆ ಮಾಡಿತ್ತು. ಬಹು ಪ್ರಯಾಸದಿಂದ ಆ ಸಂಕಟದಿಂದ ಪಾರಾದರು. ಚಿತ್ರೋದ್ಯಮದ ಬಗ್ಗೆ ಸಾಹಿತಿಗಳು ಅವರು ಪ್ರೀತಿಸಿದ ಹೊಸ ಅಲೆ ಚಿತ್ರ ಸಂದರ್ಭದಲ್ಲೂ ಬೇಸರ ಪಡುವಂತಾಯಿತು.

'ಇತಿಹಾಸ' ಚಿತ್ರ ೧೯೮೮-೮೯ರ ರಾಜ್ಯಪ್ರಶಸ್ತಿಗೂ ಪ್ರವೇಶಪಾಯಿತು. ಇದಕ್ಕೆ ಹಾಗೂ ಇನ್ನು ಮೂರು ಚಿತ್ರಗಳಿಗೆ ತೀರ್ಪುಗಾರ ಮಂಡಲಿಯ ವಿಶೇಷ ಪ್ರಶಸ್ತಿಯನ್ನು ಶಿಫಾರಸು ಮಾಡಿದರೂ, ಆ ಪಟ್ಟಿಯಲ್ಲಿ ಮೊದಲ ಹೆಸರಾಗಿದ್ದ 'ಕೋಟೆ' ಚಿತ್ರದ ಗೀತರಚನೆಗೆ ಪ್ರಶಸ್ತಿ ಲಭಿಸಿತು. 'ಇತಿಹಾಸ' ಒಮ್ಮೆ ದೂರದರ್ಶನದಲ್ಲಿ ಪ್ರಸಾರವಾಯಿತು. ಸಾಹಿತಿ ದಿವಾಕರ್ ಅವರ ಸೂಕ್ಷ್ಮಸಂವೇದನೆ ಚಿತ್ರದಲ್ಲಿ ಕಂಡುಬರುತ್ತದೆಯಾದರೂ ತಾಂತ್ರಿಕವಾಗಿ ಕಳಪೆಯಾಗಿದ್ದ ಈ ಚಿತ್ರ ಪ್ರಶಸ್ತಿ ಮಂಡಲಿಯ ಉದ್ಯಮಿ ಸದಸ್ಯರ ಬಿರುನೋಟಕ್ಕೆ ಗುರಿಯಾಯಿತು.

ಇದೇ ವರ್ಷ ಇನ್ನೂ ಒಂದು ಪವಾಡವನ್ನು ನಡೆಸುವ ಪ್ರಯತ್ನ ನಡೆಯಿತು. ಮುಂಬಯಿನಲ್ಲಿಯೇ ನೆಲೆಸಿದ್ದ ಕನ್ನಡಿಗ ಶ್ರೀಧರ ಕ್ಷೀರಸಾಗರ ಕೇವಲ ಎಂಟೂವರೆ ದಿನಗಳಲ್ಲಿ ತಮ್ಮ 'ಕನಕಾಂಬರ' ಚಿತ್ರದ ಶೂಟಿಂಗ್ ಮುಗಿಸಿದರು. ೧೬ ಎಂ.ಎಂ.ನಲ್ಲಿ ಚಿತ್ರಣವಾದ 'ಕನಕಾಂಬರ'ವನ್ನು ೩೫ ಎಂ.ಎಂ.ಗೆ ಹಿಗ್ಗಿಸುವ ಯೋಜನೆ ಶ್ರೀಧರ್‌ರದ್ದು. ಅನೇಕ ಪ್ರತಿಭಾವಂತರನ್ನೇ ಚಿತ್ರಕ್ಕಾಗಿ ಅವರು ಕಲೆ ಹಾಕಿದರು. ಯಶವಂತ ಚಿತ್ತಾಲರ 'ಅಬೋಲಿನಾ' ಕಥೆಗೆ ಸಂಭಾಷಣೆಗಳನ್ನು ಬರೆದವರು ಗಿರೀಶ್ ಕಾರ್ನಾಡ್, ಬಿ.ವಿ.ಕಾರಂತ ಮತ್ತು ಪ್ರಕಾಶ್ ಗಾಂವಕರ್. ಛಾಯಾಗ್ರಾಹಕರು ಹಿಂದಿ ಚಿತ್ರ '೨೭ ಡೌನ್'ನ ಎ.ಕೆ.ಬೀರ್. ಫಿಲಂ ಇನ್‌ಸ್ಟಿಟ್ಯೂಟ್ ಪದವೀಧರೆಯಾದ ರಾಮೇಶ್ವರಿ ಮತ್ತು ರೀಟಾ ಅಂಚನ್ ಚಿತ್ರದ ಇಬ್ಬರು ನಾಯಕಿಯರು. ಇನ್ನೆಲ್ಲ ನಟ-ನಟಿಯರು ಉತ್ತರ ಕನ್ನಡ ಜಿಲ್ಲೆಯವರೆ. ಸಂಪೂರ್ಣ ಚಿತ್ರೀಕರಣ ನಡೆದದ್ದು ಉತ್ತರ ಕನ್ನಡ ಜಿಲ್ಲೆಯ ವಿವಿಧ ತಾಣಗಳಲ್ಲಿ. ಆ ಭಾಗದ ನೆಲ-ಜಲ-ಕಲೆಯ ಪರಿಚಯವನ್ನು ಪ್ರೇಕ್ಷಕರಿಗೆ ಮಾಡಿಕೊಡುವುದೇ ಶ್ರೀಧರ್ ಮೂಲ ಉದ್ದೇಶ. ಉತ್ತರ ಕನ್ನಡ ಜಿಲ್ಲೆಯ ಪ್ರೊ|ಎಸ್.ಆರ್.ನಾಯಕ್ ಸಂಗೀತ ನಿರ್ದೇಶಕರು. ಆ ಜಿಲ್ಲೆಯ ಜಾನಪದ ಸಾಹಿತ್ಯ ಮತ್ತು ಸಂಗೀತಗಳನ್ನು ಕುರಿತು ಸಂಶೋಧನೆ ನಡೆಸಿ ಡಾಕ್ಟರೇಟ್ ಪದವಿಯನ್ನು ಗಳಿಸಿದ್ದರು.

ಇಷ್ಟೆಲ್ಲ ಸಿದ್ಧತೆಗಳು ಮತ್ತು ವೈಶಿಷ್ಟ್ಯಗಳಿಂದ ತಯಾರಾದ 'ಕನಕಾಂಬರ'ದ ಚಿತ್ರಣ ಮುಗಿದರೂ ಚಿತ್ರ ಮಾತ್ರ ಬಿಡುಗಡೆಯಾಗಲೇ ಇಲ್ಲ. ಆದರೆ ಸಬ್ಸಿಡಿ ಪಡೆಯಿತು. ಇದರಲ್ಲಿ 'ಪ್ಯಾರಾ ಡಬ್ಬಿಂಗ್' ತರಿತ್ರದ ಬಳಕೆಯಾಗಿತ್ತು.

೧೯೭೭ರಲ್ಲಿ ಕನ್ನಡ ಚಿತ್ರರಂಗಕ್ಕೆ ದೊಡ್ಡ ನಷ್ಟವೊಂದು ಸಂಭವಿಸಿತು. 'ಮಹಾಕವಿ ಕಾಳಿದಾಸ'ದಿಂದ ಬೆಳಕಿಗೆ ಬಂದು, ಅನೇಕ ಸದಭಿರುಚಿಯ ಚಿತ್ರಗಳಿಗೆ ಸಾಹಿತ್ಯ ಬರೆದು, ನಿರ್ದೇಶಿಸಿ, ತಾವು ಬರೆದ ಹಾಡುಗಳ ಪ್ರೌಢಿಮೆ ಯಿಂದ ಚಿತ್ರೋದ್ಯಮದಲ್ಲಿ ಶ್ರೇಷ್ಠ ಕವಿಯೆನಿಸಿಕೊಂಡಿದ್ದ ಕು.ರ.ಸೀತಾರಾಮಶಾಸ್ತ್ರಿ ಈ ವರ್ಷದ ನವಂಬರ್‌ನಲ್ಲಿ ನಿಧನರಾದರು. 'ಅಂಕದ ಪರದೆ ಜಾರಿದ ಮೇಲೆ ನಾಟಕವಿನ್ನೂ ಉಳಿದಿಹುದೆ?' ಎಂಬ 'ಬೆರೆತ ಜೀವ'ಕ್ಕೆ ಅವರೇ ಬರೆದ ಗೀತೆ ಜನಪ್ರಿಯ, ಅರ್ಥಪೂರ್ಣ. ಅವರ ಜೀವನದ ಅಂಕದ ಪರದೆಯೂ ಜಾರಿದಾಗ ಚಿತ್ರರಂಗ ತನ್ನ ನಡುವೆಯ ಬುದ್ಧಿಜೀವಿಯೊಬ್ಬರನ್ನು ಕಳೆದುಕೊಂಡಿತು.



(ಚಿತ್ರ ೮೫) 'ಭಾಗ್ಯವಂತರು' ಚಿತ್ರದಲ್ಲಿ ಸರೋಜಾದೇವಿ ಮತ್ತಾ ರಾಜಕುಮಾರ್

ಇದೇ ವರ್ಷ ಸೆಪ್ಟೆಂಬರ್ ತಿಂಗಳಲ್ಲಿ 'ಸೋತು ಗೆದ್ದವಳು' ಮತ್ತು 'ಮನಸ್ಸಾಕ್ಷಿ' ಚಿತ್ರಗಳ ನಿರ್ಮಾಪಕರಾದ ಎ.ಎಲ್.ಶ್ರೀನಿವಾಸನ್ ತೀರಿಕೊಂಡರು. ತಮಿಳು ಚಿತ್ರರಂಗದಲ್ಲಿ ದೊಡ್ಡ ಹೆಸರಾಗಿದ್ದು ಉದ್ಯಮದ ಪ್ರಮುಖ ನಾಯಕರಲ್ಲೊಬ್ಬರಾಗಿ ಫಿಲಂ ಫೆಡರೇಷನ್ ಆಫ್ ಇಂಡಿಯಾ ಅಧ್ಯಕ್ಷ ಸ್ಥಾನಕ್ಕೂ ಏರಿದ್ದ ಶ್ರೀನಿವಾಸನ್ ಕನ್ನಡ ಚಿತ್ರೋದ್ಯಮದ ಉತ್ಕರ್ಷದಲ್ಲಿಯೂ ತೀವ್ರ ಆಸಕ್ತಿ ತೋರಿ, ಕರ್ನಾಟಕ ರಾಜ್ಯ ಸರ್ಕಾರಕ್ಕೆ ಈ ಬಗ್ಗೆ ಸಲಹೆಗಳನ್ನು ಕೊಡುತ್ತಿದ್ದರು. ಬೆಂಗಳೂರಿಗೆ ಆಗಾಗ ಬಂದು ಹೋಗುತ್ತಲೇ ಇದ್ದರು. ಇವರು ತಮಿಳು ಚಿತ್ರರಂಗದ ಖ್ಯಾತ ಕವಿ ಕಣ್ಣದಾಸ್‌ರ ಸೋದರರು. ಖ್ಯಾತ ನಟಿ ಎಸ್.ವರಲಕ್ಷ್ಮೀ ಅವರ ಪತ್ನಿ.

'ರೇಣುಕಾದೇವಿ ಮಹಾತ್ಮೆ' ಬಿ.ಸರೋಜಾದೇವಿ, ರಾಜೇಶ್ ಅಭಿನಯಿಸಿದ್ದ ಚಿತ್ರ. 'ಕಾಲ'ವನ್ನು ತರಲಾಗಲಿಲ್ಲ. ಪ್ಲಾಸ್ಟಿಕ್ ಹೂವುಗಳು, ಆಧುನಿಕ ಮಾದರಿ ಸೀರೆ ಇತ್ಯಾದಿಗಳು ಅಭಾಸವೆನ್ನಿಸಿದವು. ಚಿತ್ರವನ್ನು ಸಿ.ಎಸ್.ರಾವ್ ನಿರ್ದೇಶಿಸಿದ್ದರು. ಬಹಳ ಹಿಂದೆ ಇದೇ ಹೆಸರಿನ ಚಿತ್ರವನ್ನು ವೈ.ಆರ್.ಸ್ವಾಮಿ ನಿರ್ದೇಶಿಸಿದ್ದರು. ಪಂಢರಿಬಾಯಿ, ನಾಗೇಂದ್ರರಾಯರ ಅಭಿನಯವಿತ್ತು. ಅದಕ್ಕೆ ಹೋಲಿಸಿದಾಗ ಈ 'ರೇಣುಕಾ ಮಹಾತ್ಮೆ' ಅದೆಷ್ಟೇ ವರ್ಣಮಯ, ಶ್ರೀಮಂತವಾದರೂ ಆ ಚಿತ್ರವೇ ಚೆನ್ನಾಗಿತ್ತು ಅನ್ನಿಸಿತ್ತು.

'ಭಾಗ್ಯವಂತರು' ದ್ವಾರಕೀಶ್ ನಿರ್ಮಿಸಿದ ಚಿತ್ರ. ಭಾರ್ಗವ ಸ್ವತಂತ್ರ ನಿರ್ದೇಶಕರು. ಸರೋಜಾದೇವಿ-ರಾಜಕುಮಾರ್ ಅಭಿನಯ ಚೆನ್ನಾಗಿಯೇ ಇತ್ತು. ಚಿತ್ರವೂ ಸೊಗಸಾಗಿತ್ತು. ಆದರೂ ಯಶಸ್ವಿಯಾಗಲಿಲ್ಲ. ರಾಜಕುಮಾರ್ ಅವರ ಕಟ್ಟುನಿಟ್ಟಿನ ನಡತೆ, ಮಕ್ಕಳಿಂದ ಮೋಸಹೋಗುವುದು ಜನ ಸ್ವೀಕರಿಸಲಿಲ್ಲ.

೧೯೭೭ರಂತೆಯೇ ೧೯೭೮ ಕೂಡ ಕೆಲವು ಉಲ್ಲೇಖನೀಯ ಕಲಾತ್ಮಕ ಚಿತ್ರಗಳು ಮತ್ತು ಇನ್ನು ಕಲವು ದೊಡ್ಡ ವ್ಯಾಪಾರಿ ಚಿತ್ರಗಳು ತೆರೆಗ ಬಂದು ಮೆರೆದ ವರ್ಷ. ಇದು ಅನೇಕ ಸಾಧನೆಗಳ ಇನ್ನೊಂದು ವರ್ಷ.

'ಗೀಜಗನ ಗೂಡು', 'ಒಂದಾನೊಂದು ಕಾಲದಲ್ಲಿ', 'ಮಲೆಯ ಮಕ್ಕಳು', 'ಚಿತೆಗೂ ಚಿಂತೆ', 'ಸ್ಪಂದನ' ಮತ್ತು 'ಪ್ರೇಮ-ಕಾಮ'ದಂತಹ ಹೊಸ ಅಲೆಯ ಚಿತ್ರಗಳು ಬಂದವು. ಹೊಸ ಅಲೆಯ ಏಳು-ಬೀಳುಗಳ ಗ್ರಾಫ್ (graph)ನಲ್ಲಿ ಇಳಿತವೇ ಅಧಿಕ.

ಇದೇ ವರ್ಷ ಕೆಲವು ಭರ್ಜರಿ ಬಾಕ್ಸ್ ಆಫೀಸ್ ಚಿತ್ರಗಳೂ ತೆರೆಗೆ ಬಂದು ಉದ್ಯಮದ ಆರ್ಥಿಕ ಬಲವನ್ನು ವೃದ್ಧಿಸಿದವು. ರಾಜಕುಮಾರ್ ಪ್ರಧಾನ ಪಾತ್ರಗಳಲ್ಲಿದ್ದ 'ಶಂಕರ್ ಗುರು' ಅದುವರೆಗಿನ ಕನ್ನಡ ಚಿತ್ರಗಳ ಗಳಿಕೆಯಲ್ಲಿ ಒಂದು ಹೊಸ ವಿಕ್ರಮವನ್ನೇ ಸ್ಥಾಪಿಸಿದರೆ, ಅವರ ಜನಪ್ರಿಯತೆಯ ಲಾಭ ಪಡೆದ ಇನ್ನೊಂದು ಚಿತ್ರ 'ಆಪರೇಷನ್ ಡೈಮಂಡ್ ರ್‍ಯಾಕೆಟ್' ಕೂಡ ಯಶಸ್ಸು ಪಡೆಯಿತು. 'ಹೊಂಬಿಸಲು', 'ತಾಯಿಗೆ ತಕ್ಕ ಮಗ', 'ಪರಸಂಗದ ಗೆಂಡೆತಿಮ್ಮ', 'ಪಡುವಾರಳ್ಳಿ ಪಾಂಡವರು', 'ಕಿಲಾಡಿ ಜೋಡಿ', 'ತಪ್ಪಿದ ತಾಳ', 'ಅಪರಿಚಿತ' ಮತ್ತು 'ಸಿಂಗಪುರದಲ್ಲಿ ರಾಜಾಕುಳ್ಳ' ಈ ವರ್ಷ ಜನಪ್ರಿಯತೆ ಗಳಿಸಿದ ಇತರ ಚಿತ್ರಗಳು. ಇದೇ ಸಮಯದಲ್ಲಿ ಕರ್ನಾಟಕ ಚಲನಚಿತ್ರ ಅಭಿವೃದ್ಧಿ ಮಂಡಳಿ ಸಂಪೂರ್ಣವಾಗಿ ಹಣ ತೊಡಗಿಸಿದ ಚಿತ್ರಗಳ ಅಪಯಶಸ್ಸಿನ ಗಾಥೆ 'ಸುಳಿ' ಚಿತ್ರದಿಂದ ಪ್ರಾರಂಭವಾಯಿತು. ಕಡಿಮೆ ವೆಚ್ಚದಲ್ಲಿ ಮೂರು ವರ್ಣಚಿತ್ರಗಳನ್ನು ನಿರ್ಮಿಸುವ ಜಿ.ವಿ.ಅಯ್ಯರ್‌ರವರ ಸಾಹಸ ಕೂಡ 'ಪ್ರೇಮ-ಕಾಮ'ದಿಂದ ಪ್ರಾರಂಭವಾಗಿ ದಯನೀಯವಾಗಿ ನೆಲ ಕಚ್ಚಿತು. ಆರ್ಥಿಕವಾಗಿ ಯಶಸ್ವಿಯಾದ ಹಾಗೂ ವ್ಯಾಪಾರಿ ಚೌಕಟ್ಟಿನಲ್ಲಿಯೇ ಕೆಲವು ಪ್ರಯೋಗಗಳಾಗಿದ್ದು ಗಮನಾರ್ಹ.

'ಕಂಕಣ'ದ ಆರ್ಥಿಕ ಅಪಯಶಸ್ಸು ಹಂಜು ಇಮಾಂರವರನ್ನು ಧೃತಿಗೆಡಿಸಲಿಲ್ಲ. ಅವರು ಮತ್ತೊಂದು ಪ್ರಯೋಗಾತ್ಮಕ ಚಿತ್ರ 'ಗೀಜಗನ ಗೂಡು' ನಿರ್ಮಾಣಕ್ಕೂ ಪ್ರೇರಕರಾದರು. ಜವಾಬ್ದಾರಿಯನ್ನರಿತ ಸ್ವಾತಂತ್ರ್ಯಕ್ಕೂ, ಹೊಣೆಗಾರಿಕೆಯಿಲ್ಲದ ಸ್ವಚ್ಛಂದತೆಗೂ ವ್ಯತ್ಯಾಸವನ್ನರಿಯದ ಹುಡುಗಿಯೊಬ್ಬಳು ಮಧ್ಯವಯಸ್ಕನೊಬ್ಬನನ್ನು ತನ್ನ ಮೋಹಪಾಶದಲ್ಲಿ ಸಿಲುಕಿಸುವುದು ಈ ಚಿತ್ರದ ಕಥಾಹಂದರ. ಟಿ.ಎಸ್.ರಂಗಾ ಈ ಚಿತ್ರದ ನಿರ್ದೇಶಕರು. ಬಿ.ವಿ.ಕಾರಂತರೊಂದಿಗೆ ಪ್ರಯೋಗಶೀಲ ಹವ್ಯಾಸಿ ರಂಗಭೂಮಿಯಲ್ಲಿ ಕೆಲವು ಕಾಲ ಪಳಗಿದ್ದ ಈ ತರುಣರಿಗೆ ಡಾಕ್ಯುಮೆಂಟರಿಗಳೆಂದರೆ ವಿಶೇಷ ಆಸಕ್ತಿ. ವಾಸ್ತವವಾಗಿ ಅವರ ವೃತ್ತಿಜೀವನದಲ್ಲಿ ಅವರು ಹಣ ಮಾಡಿದ್ದೆಲ್ಲ ಡಾಕ್ಯುಮೆಂಟರಿಗಳಿಂದ, ಹಣ ಕಳೆದುಕೊಂಡಿದ್ದೆಲ್ಲ ಕಥಾಚಿತ್ರಗಳಿಂದ. 'ಗೀಜಗನ ಗೂಡು' ನಿರೂಪಣೆಯಲ್ಲಿ ಅವರು ನಿರ್ದಿಷ್ಟವಾಗಿ ಏನನ್ನೂ ಹೇಳದೆ, ಯಾವ ನಿಲುವನ್ನೂ ತೆಗೆದುಕೊಳ್ಳದೆ ಎಲ್ಲವನ್ನೂ ಪ್ರೇಕ್ಷಕರ ಗ್ರಹಿಕೆಗೇ ಬಿಟ್ಟಿದ್ದರು. ಉದಾಹರಣೆಗೆ, ತರುಣಿ ಮತ್ತು ಮಧ್ಯ ವಯಸ್ಕನ ನಡುವೆ ಲೈಂಗಿಕ ಸಂಬಂಧವಿತ್ತೆ ಎಂಬ ಪ್ರಶ್ನೆಗೆ ಪತ್ರಿಕಾಗೋಷ್ಠಿಯಲ್ಲಿ ಅವರು ಕೊಟ್ಟ ಉತ್ತರ : ''ಇದ್ದಿರಬಹುದು, ಇಲ್ಲದಿರಬಹುದು''. ಬಹುಶಃ ಪಾತ್ರ ಚಿತ್ರಣದಲ್ಲಿ ರಂಗ ಅವರು ತಮ್ಮ ಕಾಲಕ್ಕೆ ಬಹಳ ಮುಂದಿದ್ದಿರಬಹುದು. ಅಂತೂ ಅನೇಕ ಉತ್ತಮ ಅಂಶಗಳಿದ್ದರೂ ಚಿತ್ರ ಕನ್ನಡ ಪ್ರೇಕ್ಷಕನನ್ನು ಮುಟ್ಟುವುದರಲ್ಲಿ ವಿಫಲವಾಯಿತು. ಆದರೂ 'ಗೀಜಗನ ಗೂಡು' ಕನ್ನಡ ಚಿತ್ರರಂಗಕ್ಕೆ ಚಲನಚಿತ್ರ ಮಾಧ್ಯಮದ ಬಗ್ಗೆ ಕಾಳಜಿಯಿದ್ದ ಬುದ್ಧಿಜೀವಿ ತರುಣ ನಿರ್ದೇಶಕರೊಬ್ಬರನ್ನು ಪರಿಚಯ ಮಾಡಿಕೊಟ್ಟಿತು.

ಗಿರೀಶ್ ಕಾರ್ನಾಡ್ ನಿರ್ದೇಶಿಸಿದ 'ಒಂದಾನೊಂದು ಕಾಲದಲ್ಲಿ' ಅನೇಕ ಕಾರಣಗಳಿಂದಾಗಿ ಉಲ್ಲೇಖನಾರ್ಹ ಚಿತ್ರ. ತಾವು ಬಿ.ವಿ.ಕಾರಂತರ ಸಹಯೋಗದಲ್ಲಿ ನಿರ್ದೇಶಿಸಿದ 'ವಂಶವೃಕ್ಷ'ದಲ್ಲಿ ತಮ್ಮ ಮೇಲೆ ಸತ್ಯಜಿತ್ ರಾಯ್‌ರ ನಿಧಾನಗತಿಯ



(ಚಿತ್ರ ೮೬) 'ಗೀಜಗನ ಗೂಡು' ಚಿತ್ರದಲ್ಲಿ ಹಮ್‌ಜು ಇಮಾಂ ಮತ್ತಾ ಆರತಿ ಮುದ್ದಯ್ಯ



(ಚಿತ್ರ ೮೭) 'ಒಂದಾನೊಂದು ಕಾಲದಲ್ಲಿ' ಚಿತ್ರದಲ್ಲಿ ಅಕ್ಷತಾರಾವ್ ಮತ್ತು ಶಂಕರ್‌ನಾಗ್

ನಿರೂಪಣೆ ವಟ್ಟವಾದ ಪರಿಣಾಮವನ್ನು ಬೀರಿತ್ತೆಂದು ಒಪ್ಪಿಕೊಂಡಿದ್ದ ಗಿರೀಶ್ ಕಾರ್ನಾಡ್ ಈ ಚಿತ್ರದಲ್ಲಿ ಜಪಾನಿನ ಮಹಾನ್ ನಿರ್ದೇಶಕ ಅಕಿರಾ ಕುರಸೋವರ 'ಸೆವೆನ್ ಸಮುರಾಯ್' ಚಿತ್ರದಿಂದ ಪ್ರೇರಿತರಾದವರು. ಹೊಸ ಅಲೆಯ ಚೌಕಟ್ಟಿನ ಚಿತ್ರವೊಂದಕ್ಕೆ ನಿರ್ಮಾಪಕರಾದ ಲಕ್ಷ್ಮೀಪತಿ ಮತ್ತು ನಾರಾಯಣ್ ಅಪಾರವಾದ ಹಣವನ್ನು ಖರ್ಚು ಮಾಡಿದ್ದರು. ಹಾಗೆಯೇ ಅದರಿಂದ ಅವರಿಗೆ ನಷ್ಟ ಕೂಡ ಹೆಚ್ಚಾಗಿಯೇ ಆಯಿತು. ಅನೇಕ ಕನ್ನಡೇತರ ಪ್ರತಿಭೆಗಳು ಈ ಚಿತ್ರದಲ್ಲಿ ತೊಡಗಿಕೊಂಡವು. ಖ್ಯಾತ ಛಾಯಾಗ್ರಾಹಕ ಎ.ಕೆ.ಬೀರ್, ಸಂಗೀತ ನಿರ್ದೇಶಕ ಭಾಸ್ಕರ್ ಚಂದಾವರ್ಕರ್, ಕಲಾನಿರ್ದೇಶಕರಾದ ಜಯೂ ಮತ್ತು ನಚಿಕೇತ್ ಪಟವರ್ಧನ್‌ರನ್ನು ಗಿರೀಶ್ ಕಾರ್ನಾಡ್ ಈ ಚಿತ್ರಕ್ಕಾಗಿ ಆಯ್ದು ಅವರ ಪ್ರತಿಭೆಯನ್ನು ಕ್ರಿಯಾತ್ಮಕವಾಗಿ ಉಪಯೋಗಿಸಿಕೊಂಡರು. ಬೀರ್‌ರವರ ಛಾಯಾಗ್ರಹಣವಂತೂ ನೆರಳು-ಬೆಳಕಿನ ಸಂಯೋಜನೆಯಲ್ಲಿ ಅಪೂರ್ವವಾದ ಮೆರುಗನ್ನೇ ಪಡೆಯಿತು. ಸಾಹಿತಿ-ಪ್ರಕಾಶಕ ಜಿ.ಬಿ.ಜೋಷಿ ಸಂಭಾಷಣೆ ಬರೆದರೆ ಚಂದ್ರಶೇಖರ ಕಂಬಾರರು ಗೀತೆಗಳನ್ನು ರಚಿಸಿದರು. ಒಟ್ಟಿನಲ್ಲಿ ದೊಡ್ಡ ಪ್ರತಿಭಾ ಸಂಗಮವೇ ಈ ಚಿತ್ರದಲ್ಲಿತ್ತು.

ಎಲ್ಲಕ್ಕಿಂತ ಹೆಚ್ಚಾಗಿ 'ಒಂದಾನೊಂದು ಕಾಲದಲ್ಲಿ' ಮುಂದೆ ಕನ್ನಡ ಚಿತ್ರರಂಗದಲ್ಲಿ ಅಪರೂಪದ ಪ್ರತಿಭೆಯ ನಟ-ನಿರ್ದೇಶಕ-ಕನಸುಗಾರನಾಗಿ ಬೆಳೆದ ಶಂಕರ್‌ನಾಗ್‌ರನ್ನು ನಾಯಕನಟನ ಪಾತ್ರದಲ್ಲಿ ಮೊದಲ ಬಾರಿಗೆ ಪರಿಚಯ ಮಾಡಿಸಿತು. ಶಂಕರ್‌ನಾಗ್, ತಮ್ಮ ಹಿರಿಯ ಅಣ್ಣ ಅನಂತ್‌ನಾಗ್‌ರವರಂತೆಯೇ ಹವ್ಯಾಸಿ ರಂಗಭೂಮಿಯಿಂದ ಬಂದವರು. ಜೊತೆಗ ಬ್ಯಾಂಕ್ ನೌಕರರಾಗಿದ್ದವರು. ಶಂಕರ್ ತಮ್ಮ ಮೊದಲನೆಯ ಚಿತ್ರದಲ್ಲಿಯೇ ಲವಲವಿಕೆಯಿಂದ, ಭಾವನಾಪ್ರಧಾನವಾಗಿ ಅಭಿನಯಿಸಿ ೧೯೭೯ರ ಜನವರಿಯಲ್ಲಿ ನವದೆಹಲಿಯಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಅತ್ಯುತ್ತಮ ನಟ ಪ್ರಶಸ್ತಿಯನ್ನು ಪಡೆದುಕೊಂಡರು. ಹೀಗೆ ತಮ್ಮ ಪ್ರಥಮ ಚಿತ್ರದಲ್ಲಿಯೇ ಅಂತರರಾಷ್ಟ್ರೀಯ ಮಟ್ಟದಲ್ಲಿ ಅತ್ಯುತ್ತಮ ನಟ ಪ್ರಶಸ್ತಿ ಪಡೆದ ಭಾರತೀಯರಲ್ಲಿ ಅವರೇ ಮೊದಲು. ಸುಂದರಕೃಷ್ಣ ಅರಸ್‌ಗೆ ಈ ಚಿತ್ರದಲ್ಲಿ ಶಂಕರ್‌ನಾಗ್‌ರ ಎದುರಾಳಿಯ ಪಾತ್ರವಿತ್ತು. ಅವರಿಬ್ಬರ ನಡುವೆಯ ಪ್ರತಿಭಾ ಸಂಘರ್ಷ ಚಿತ್ರದ ಮೌಲ್ಯವನ್ನು ಗಮನೀಯವಾಗಿ ವೃದ್ಧಿಸಿತು. ಅರಸ್ ಆ ವರ್ಷದ ಅತ್ಯುತ್ತಮ ಪೋಷಕ ನಟ ರಾಜ್ಯ ಪ್ರಶಸ್ತಿಯನ್ನು ತಮ್ಮದಾಗಿಸಿಕೊಂಡರು.

೧೩ ಮತ್ತು ೧೪ನೆಯ ಶತಮಾನದ ಕನ್ನಡ ನಾಡು ಪಾಳೇಗಾರರು, ಪುಂಡರು, ಕಳ್ಳರಸರು, ಸಾಹಸಿಗಳ ಮಧ್ಯೆ ಹಂಚಿಹೋಗಿ, ಭುಜಬಲವೇ ನ್ಯಾಯವೆಂದು ಮೆರೆಯುತ್ತಿದ್ದ ಕಾಲ 'ಒಂದಾನೊಂದು ಕಾಲದಲ್ಲಿ' ಕಥೆಗೆ ಹಿನ್ನೆಲೆ. ಆ ಕಾಲದ ಪರಿಸರವನ್ನು ಸಮರ್ಥವಾಗಿ ಚಿತ್ರಿಸಿದ್ದು ಗಿರೀಶ್ ಕಾರ್ನಾಡ್‌ರ ಒಂದು ದೊಡ್ಡ ಸಾಧನೆ. ಚಿತ್ರದಲ್ಲಿ ಕಣ್ಣಿಗೆ ಕಾಣುವಂತೆ ಎದ್ದು ನಿಂತಿದ್ದು ಅವರಲ್ಲಿನ ಸಮರ ದೃಶ್ಯಗಳು. ಜಪಾನಿನ ಸಮರ ಕಲೆಗೂ ಕೇರಳದ 'ಕಲರಿಪಯಟ್ಟು' ಎಂಬ ರೋಮಾಂಚಕ ಹೋರಾಟ ತಂತ್ರಕ್ಕೂ ಇರುವ ಸಾಮ್ಯವನ್ನು ಎತ್ತಿ ತೋರಿ, ಅದರ ಮೂಲ ಇದೇ ಎಂಬ ಅಂಶದತ್ತ ಚಿತ್ರ ಬೆಳಕು ಚೆಲ್ಲಿತು. ತಾಂತ್ರಿಕವಾಗಿ ತುಂಬಾ ಮೇಲ್ಮಟ್ಟದಲ್ಲಿದ್ದ 'ಒಂದಾನೊಂದು ಕಾಲದಲ್ಲಿ' ಆ ವರ್ಷದ ಅತ್ಯುತ್ತಮ ಸಂಕಲನ (ಭಕ್ತ) ಮತ್ತು ಅತ್ಯುತ್ತಮ ಧ್ವನಿಮುದ್ರಣ (ಎಸ್.ಪಿ.ರಾಮನಾಥನ್) ಪ್ರಶಸ್ತಿಗಳನ್ನು ರಾಜ್ಯ ಸರ್ಕಾರದಿಂದ ಪಡೆದುಕೊಂಡಿತು. ಇಡೀ ಚಿತ್ರದ ಡಬ್ಬಿಂಗ್, ರೀ-ರಿಕಾರ್ಡಿಂಗ್, ಸ್ಪೆಷಲ್ ಎಫೆಕ್ಟ್ಸ್‌ಗಳನ್ನು ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ನಿರ್ವಹಿಸಿದರು. ಚಿತ್ರದಲ್ಲಿ ಬರುವ ಒಂದು 'ಮೃಗೀಯಕಾಮ'ದ ದೃಶ್ಯವನ್ನು ಸೆಟ್ ಹಾಕಿ ಚಿತ್ರಿಸಿ ಮ್ಯಾಚ್ ಮಾಡಿದರು. ಚಿತ್ರದ ಒಂದು ವಿಶೇಷ ಪಾತ್ರದಲ್ಲಿ ಬೆಳಕು ತಜ್ಞ ವಿ.ರಾಮಮೂರ್ತಿ ಅಭಿನಯಿಸಿದ್ದರು. ಚಿತ್ರದ ಹಾಡುಗಳು ಬಹುಕಾಲ ನೆನಪಿನಲ್ಲಿ ಉಳಿಯುವಂಥವಾಗಿದ್ದವು.

೧೯೭೮ರ ವಿಶೇಷವೆಂದರೆ ಮೂಕಿ ಚಿತ್ರಗಳ ಕಾಲದಲ್ಲೇ ಸ್ವತಂತ್ರವಾಗಿ ಚಿತ್ರ ನಿರ್ಮಾಣ-ನಿರ್ದೇಶನ ಸಾಹಸಕ್ಕಿಳಿದಿದ್ದ ಶಿವರಾಮ ಕಾರಂತರು ತಾವೇ ಬರೆದ 'ಕುಡಿಯರ ಕೂಸು' ಕಾದಂಬರಿಯನ್ನು ಆಧರಿಸಿ 'ಮಲೆಯ ಮಕ್ಕಳು' ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದ್ದು. "ಬೇರೆಯವರು ನನ್ನ ಕಾದಂಬರಿಯನ್ನು ಚಿತ್ರಿಸಿ ಅದನ್ನು ಕೆಡಿಸುವುದು ನನಗೆ ಬೇಕಿಲ್ಲ" ಎಂದು ಅವರೇ ಚಿತ್ರ ನಿರ್ಮಾಣದ ಸಂಬಂಧದ ಪತ್ರಿಕಾಗೋಷ್ಠಿಯಲ್ಲಿ ಹೇಳಿದ್ದರು. ಆದರೆ ಕಾರಂತರ ಈ ಚಿತ್ರ ಯಾರನ್ನೂ ಮೆಚ್ಚಿಸಲು ಸಾಧ್ಯವಾಗಲಿಲ್ಲ. ಇದೇ ಚಿತ್ರದಲ್ಲಿ ಸ್ಥಳದಲ್ಲಿಯೇ ಸಂಭಾಷಣೆಗಳನ್ನು ಧ್ವನಿಮುದ್ರಿಸಲಾಗಿತ್ತು. ಕಲಾವಿದರ ಅಭಿನಯದಲ್ಲಿಯೂ ಯಕ್ಷಗಾನದ ಛಾಪು ಇತ್ತು. ಪದ್ಮಚರಣ್ ಸಂಗೀತವಿತ್ತು. ಎಸ್.ಜೆ.ಪಿ.ಯಲ್ಲಿ ಧ್ವನಿಗ್ರಹಣ ಮಾಡಿದ್ದರು.

ಸಹ್ಯಾದ್ರಿಯ ಪಕ್ಕದ ತಪ್ಪಲಲ್ಲಿ ಇರುವ ಆದಿವಾಸಿ ಜನಾಂಗದ ಜನರು, ಅವರ ಜೀವನ, ವಿಶ್ವಾಸಗಳು, ಲೈಂಗಿಕ ಬಾಳ್ವೆ ಮೊದಲಾದವನ್ನು ಕುರಿತ ಕಾದಂಬರಿ 'ಕುಡಿಯರ ಕೂಸು'. ಆ ಕಾದಂಬರಿಯನ್ನು ವಸ್ತುನಿಷ್ಠವಾಗಿ ಚಿತ್ರ ಮಾಡಿರುವುದಾಗಿ ಹೇಳಿದ ಕಾರಂತರು "ನೋಡುವ ಜನಕ್ಕೆ ಚಿತ್ರ ನಿಧಾನವಾಗಿದೆ ಎನಿಸಬಹುದು. ಆದರೆ ನನ್ನ ಮಟ್ಟಿಗೆ ಸಂಪೂರ್ಣ ತೃಪ್ತಿ ತಂದುಕೊಟ್ಟಿದೆ' ಎಂದಿದ್ದರು. ಅದೇ ಸಮಯದಲ್ಲಿ ತಮಗೆ ಬಿ.ವಿ.ಕಾರಂತರು 'ಚೋಮನದುಡಿ'ಯನ್ನು ತೆರೆಯ ಮೇಲೆ ತಂದ ರೀತಿ ಸಮಾಧಾನ ತಂದಿಲ್ಲವೆಂದೂ ಹೇಳಿಕೊಂಡಿದ್ದರು. "ಈ ಚಿತ್ರ ನಮ್ಮ ಯೋಗ್ಯತೆಯ ಪ್ರದರ್ಶನ. ಪ್ರಾಮಾಣಿಕತೆ ಇದೆ. ಯಾರನ್ನೂ ಠಕ್ಕು ಮಾತಿನಿಂದ ಮೋಸಗೊಳಿಸುವುದಿಲ್ಲ. ನನಗೆ ಎಟುಕಿದ ಮಟ್ಟದಲ್ಲಿ ಸರಳವಾಗಿ ಮಲೆಯ ಮಕ್ಕಳ ಜೀವನ ಬಿಂಬಿಸಲು ಯತ್ನಿಸಿದ್ದೇನೆ. ಚಿತ್ರವನ್ನು ಸ್ವೀಕರಿಸುವುದು, ಬಿಡುವುದು ಸಮಾಜಕ್ಕೆ ಬಿಟ್ಟಿದ್ದು" ಎಂಬ ಧೋರಣೆಯನ್ನು ತಾಳಿದ್ದರು.



(ಚಿತ್ರ ೮೮) 'ಮಲೆಯ ಮಕ್ಕಳು' ಚಿತ್ರದಲ್ಲಿ ಕಲ್ಪನಾ

ಆದ್ದರಿಂದ ಚಿತ್ರ ಸೋತಾಗ ಅವರಿಗೆ ಅದರಿಂದ ಆಘಾತವೇನೂ ಆಗಲಿಲ್ಲ. ಮುಂದೆ ಚಿತ್ರ ತಯಾರಿಕೆಗೆ ಕೈ ಹಾಕಲಿಲ್ಲ. 'ಮಲೆಯ ಮಕ್ಕಳು' ಚಿತ್ರದಲ್ಲಿ ಕಲ್ಪನಾ ಒಬ್ಬರೇ ಚಿತ್ರರಂಗದ ವೃತ್ತಿಪರ ಕಲಾವಿದೆ. ಮಿಕ್ಕ ನಟ-ನಟಿಯರೆಲ್ಲ ಕನ್ನಡದ ಹವ್ಯಾಸಿ ಕಲಾವಿದರು. ಮುಂದೆ ವಿಶ್ವವಿಖ್ಯಾತ ನಿರ್ದೇಶಕರಾಗಿ ಬೆಳೆದ ಗಿರೀಶ್ ಕಾಸರವಳ್ಳಿ ಸಹನಿರ್ದೇಶಕರು. ಫಿಲಂ ಇನ್‌ಸ್ಟಿಟ್ಯೂಟ್ ಪದವೀಧರ ಎಸ್.ರಾಮಚಂದ್ರ ಛಾಯಾಗ್ರಾಹಕರು. ಇಷ್ಟೆಲ್ಲ ಪ್ರತಿಭೆಗಳಿದ್ದೂ ಚಿತ್ರ ತನ್ನ ಗುರಿ ಮುಟ್ಟದಿದ್ದುದು ಆಶ್ಚರ್ಯಕರ ಸಂಗತಿ.

ಈ ವರ್ಷ ತೆರೆಗೆ ಬಂದ ತೀರಾ ವಿಭಿನ್ನ ರೀತಿಯ ಚಿತ್ರ 'ಚಿತೆಗೂ ಚಿಂತೆ'. ಇದರ ನಿರ್ಮಾಪಕರು 'ಕಾಡು' ಮತ್ತು 'ಒಂದಾನೊಂದು ಕಾಲದಲ್ಲಿ' ಚಿತ್ರಗಳ ನಿರ್ಮಾಪಕರಲ್ಲೊಬ್ಬರಾದ ಜಿ.ಎನ್.ಲಕ್ಷ್ಮೀಪತಿ. ತಮ್ಮ 'ಗರಂ ಹವಾ' ಹಿಂದಿ ಚಿತ್ರದಿಂದ ಪ್ರಚಲಿತ ಚಿತ್ರಪ್ರಪಂಚದಲ್ಲಿ ಸಮಾಜ ಕಳಕಳಿ, ಧರ್ಮನಿರಪೇಕ್ಷತೆಯುಳ್ಳ ನಿರ್ದೇಶಕರೊಬ್ಬರೆಂದು ಹೆಸರು ಗಳಿಸಿದ್ದ ಎಂ.ಎಸ್.ಸತ್ಯು ಈ ಚಿತ್ರದ ನಿರ್ದೇಶಕರು.ಅವರೆ ಇದರಲ್ಲಿನ ತೀಕ್ಷ್ಣ ವಿಡಂಬನೆ ಸಾಮಾನ್ಯ ಕನ್ನಡ ಪ್ರೇಕ್ಷಕನಿಗೆ ಎಟುಕದಂತಾಯಿತು. ತುರ್ತು ಚಿಕಿತ್ಸಾ ವಿಭಾಗಕ್ಕೆ ದಾಖಲಾಗಿದ್ದು ಅಲ್ಲಿಂದಲೇ ದರ್ಬಾರು ಮಾಡುತ್ತಿದ್ದ ನಾಯಕ ಅಂದಿನ ಎಂ.ಜಿ.ಆರ್. ಅವರನ್ನು ತಕ್ಷಣಕ್ಕೆ ಹೋಲಿಸುವಂತಿದ್ದರೂ, ಭಾರತ-ಚೀನಾ ಘರ್ಷಣೆಯ ನಂತರ ಪಾರ್ಶ್ವವಾಯುವಿಗೆ ಗುರಿಯಾಗಿ, ನಂತರ ಹಲವು ತಿಂಗಳುಗಳ ಕಾಲ ಅವರ ವ್ಯಾಧಿಯ ತೀವ್ರ ಸ್ವರೂಪ



(ಚಿತ್ರ ೮೯) 'ಚಿತೆಗೂ ಚಿಂತೆ' ಚಿತ್ರದಲ್ಲಿ ಸಿ.ಆರ್.ಸಿಂಹ ಮತ್ತು ಸಹಕಲಾವಿದರು

ಹೊರಜಗತ್ತಿಗೆ ಗೊತ್ತಾಗದಂತೆಯೇ ಅಧಿಕಾರದಲ್ಲಿ ಉಳಿದುಕೊಂಡು ಬಂದ, ಅಥವಾ ಆಪ್ತರ ಸ್ವಾರ್ಥಸಾಧನೆಗಾಗಿ ಹಾಗೆ ಅಧಿಕಾರದಲ್ಲಿ ಉಳಿದುಕೊಳ್ಳಬೇಕಾಗಿ ಬಂದ ಅಂದಿನ ಜವಾಹರಲಾಲ್ ನೆಹರು, ನಂತರದ ರಿಚರ್ಡ್ ನಿಕ್ಸನ್, ಅದಕ್ಕೆ ಮುಂಚಿನ ಜೋಸೆಫ್ ಸ್ಟಾಲಿನ್, ಮಾವೋತ್ಸೆ ತುಂಗ್ ಸೇರಿದಂತೆ, ವರ್ತಮಾನದ ನಾಯಕರಿಗೂ ಮೆಟಫರ್ ಆಗಬಹುದಾದ ಈ ಚಿತ್ರ ಪ್ರಾಯಶಃ ಇನ್ನಷ್ಟು ವರ್ಷಗಳ ನಂತರ ತೆರೆ ಕಂಡಿದ್ದರೆ ಜನ ಅದನ್ನು ಹೆಚ್ಚು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತೇನೋ. ಚಿತ್ರ ನಿರೂಪಣಾ ಶೈಲಿಯಲ್ಲಿ ಹೊಸ ಆಯಾಮಗಳನ್ನು ಕಂಡುಕೊಂಡಿದ್ದಂತೂ ನಿಜ.

ಪೌಲಲಿಂಡ್ಸೆ ಎಂಬ ಜರ್ಮನ್ ತರುಣಿಯೊಬ್ಬಳು ಈ ಚಿತ್ರದಲ್ಲಿ ಅಭಿನಯಿಸಿದ್ದೊಂದು ವಿಶೇಷ. 'ಚಿತೆಗೂ ಚಿಂತೆ' ನಿರ್ಮಾಪಕ ಲಕ್ಷ್ಮೀಪತಿಯವರ ಮಗ ಕರಾಟೆ ಪ್ರವೀಣ ರಾಮ್‌ಪ್ರಕಾಶ್ ಅವರನ್ನೂ ಈ ಚಿತ್ರರಂಗಕ್ಕೆ ತಂದಿತು. ಚಿತ್ರದಲ್ಲಿನ ಕರಾಟೆ ದೃಶ್ಯಗಳು ಚೇತೋಹಾರಿಯಾಗಿದ್ದವು. ಆದರೆ ರಾಮ್‌ಪ್ರಕಾಶ್ ಚಿತ್ರರಂಗದಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ. ಸಿ.ಆರ್.ಸಿಂಹ, ಮಂಜುಳಾ, ಶಿವರಾಂ ಮತ್ತು ಉಮಾ ಶಿವಕುಮಾರ್‌ರಿಗೆ ಈ ಚಿತ್ರದಲ್ಲಿ ತೀರಾ ವಿಭಿನ್ನವಾದ ಪಾತ್ರಗಳೇ ಇದ್ದವು. ಇದರಲ್ಲಿ ಕರ್ನಾಟಕ ಚಲನಚಿತ್ರ ಅಭಿವೃದ್ಧಿ ಮಂಡಳಿಯ ಚಿತ್ರನಿರ್ಮಾಣ ಯೋಜನೆಯ ಲೇವಡಿಯೂ ಇತ್ತು. ಕನ್ನಡದ ಅನೇಕ ಬುದ್ಧಿಜೀವಿಗಳು ತಯಾರಿಸಿದ ಹೊಸ ಪ್ರಜ್ಞೆಯ ಚಿತ್ರಗಳಂತೆ ಈ ಚಿತ್ರಕ್ಕೂ ಕನ್ನಡೇತರರೊಬ್ಬರ ಛಾಯಾಗ್ರಹಣವೇ ಇತ್ತು. ಅಶೋಕ್ ಗುಂಜಾಲ್ ಛಾಯಾಗ್ರಾಹಕರಾಗಿದ್ದ ಈ ಚಿತ್ರದ ಕಥೆಯನ್ನು ಬರೆದವರೂ ಹಿಂದಿಯ ಪ್ರತಿಭಾವಂತ ಚಿತ್ರಸಾಹಿತಿ ಜಾವೇದ್. ಎಸ್.ರಾಮಸ್ವಾಮಿ ಎಂಬ ಸತ್ಯುರವರ ಗೆಳೆಯ ಸಂಭಾಷಣಾಕಾರರಾಗಿ ಪ್ರಶಂಸೆ ಗಳಿಸಿದರು. ಜನಪ್ರಿಯ ಸುಗಮ ಸಂಗೀತ ಗಾಯಕ ಬಿ.ಜಿ.ರಾಮನಾಥ್ ಪ್ರಥಮ ಬಾರಿಗೆ ಚಿತ್ರವೊಂದಕ್ಕೆ ಹಾಡುಗಳನ್ನು ನಿಯೋಜಿಸಿದರೂ 'ಚಿತೆಗೂ ಚಿಂತೆ'ಯ ಹಿನ್ನೆಲೆ ಸಂಗೀತ ಜಿ.ಕೆ.ವೆಂಕಟೇಶ್‌ರದ್ದೇ ಆಗಿತ್ತು. ಕಲ್ಪನೆ, ವಾಸ್ತವತೆ, ಫ್ಯಾಂಟಸಿಗಳ ಸ್ವಾರಸ್ಯಕರ ಮಿಶ್ರಣ ಈ ಚಿತ್ರ. ಬಿ.ಎಸ್.ಆಚಾರ್ ರೋಗಗ್ರಸ್ಥ ನಾಯಕನಾಗಿ ಬರೀ ಹೆಬ್ಬೆರಳನ್ನು ಆಡಿಸುತ್ತಲೇ ಅಧಿಕಾರ ನಡೆಸಿದ್ದು, ಶವದ ಮೆರವಣಿಗೆ ಇತ್ಯಾದಿಗಳಲ್ಲಿ ವಿಶಿಷ್ಟವಾಗಿ ಭಾಗವಹಿಸಿದರು. ಚಿತ್ರದಲ್ಲಿ ಅನೇಕ ಸ್ಪೆಷಲ್ ಎಫೆಕ್ಟ್‌ಗಳನ್ನು ಮಾಡಿ 'ಸೈ' ಎನಿಸಿಕೊಂಡವರು ಶಬ್ದಗ್ರಾಹಕ ಕೃಷ್ಣಮೂರ್ತಿ (ಕಿಟ್ಟಿ).

ತಮ್ಮ ಸುತ್ತ ಅನೇಕ ಕಲಾತ್ಮಕ, ಹೊಸ ಜಾಡಿನ ಚಿತ್ರಗಳು ನೆಲ ಕಚ್ಚುತ್ತಿದ್ದರೂ ಚಲನಚಿತ್ರ ಮಾಧ್ಯಮದಲ್ಲಿ ಏನಾದರೂ ಹೊಸದನ್ನು ಮಾಡಬೇಕೆನ್ನುವ ತುಡಿತ ಮಾತ್ರ ಕೆಲವು ಆದರ್ಶವಾದಿ ಯುವಕರನ್ನು ಬಿಡಲಿಲ್ಲ. ಅಂಥ ಮನೋಭಾವದ ಹಲವರು ಒಟ್ಟಿಗೆ ಸೇರಿ ಹೊಸ ಪ್ರಜ್ಞೆಯ ಚಿತ್ರಗಳನ್ನು ತಯಾರಿಸುವ ಪ್ರಯತ್ನಗಳು ನಿಲ್ಲಲಿಲ್ಲ. ಇಂಥದ್ದೊಂದು ಗುಂಪಿನ ನಾಯಕತ್ವ ವಹಿಸಿಕೊಂಡವರು ಆ ಕಾಲದಲ್ಲಿ ಕನ್ನಡ ಚಿತ್ರರಂಗದ ವಾಣಿಜ್ಯ ಕ್ಷೇತ್ರದಲ್ಲಿ ಪಿತಾಮಹರೆನಿಸಿದ್ದ ಎಲ್.ಎಸ್.ಅಯ್ಯರ್ ಅಳಿಯ ಕೃಷ್ಣರಾಜು. ಕೃಷ್ಣರಾಜು ಮೂಲತಃ ರಂಗಕರ್ಮಿ, ಅನೇಕ ನಾಟಕಗಳಲ್ಲಿ ಪಾತ್ರಧಾರಿ. ಈ ಗುಂಪು ನಿರ್ಮಿಸಿದ 'ಸ್ಪಂದನ' ಹೊಸ ಅಲೆಯ ಕ್ಷೇತ್ರದಲ್ಲಿಯೇ ಎಲ್ಲರ



(ಚಿತ್ರ ೯೦) 'ಸ್ಪಂದನ' ಚಿತ್ರದಲ್ಲಿ ಕೃಷ್ಣರಾಜು ಮತ್ತು ಅಪರ್ಣಾ ನಾರಂಗ್

ಕುತೂಹಲವನ್ನು ಕೆರಳಿಸಿತು. ಅವರೊಂದಿಗೆ ವಿವಿಧ ಕ್ಷೇತ್ರಗಳಿಂದ ಬಂದ ಕೆಲವು ಸಾಹಸಿಗಳೂ ಇದ್ದರು. ಅವರೆಲ್ಲ ಸೇರಿ ತಮ್ಮ ಕೈಲಾದಷ್ಟು ಹಣವನ್ನು ಸಂಗ್ರಹಿಸಿ ತಯಾರಿಸಿದ ಈ ಚಿತ್ರಕ್ಕೆ ನಿರ್ದೇಶಕರಾಗಿ ಆಯ್ಕೆಯಾದವರು ಇಸ್ರೋ ಸಂಸ್ಥೆಯಲ್ಲಿ ವಿಜ್ಞಾನಿಯಾಗಿ ಕೆಲಸ ಮಾಡುತ್ತಿದ್ದ ಪಿ.ಎನ್.ಶ್ರೀನಿವಾಸ್. ಪರಸ್ಪರ ಸ್ಪಂದನವಿಲ್ಲದ ದಂಪತಿಗಳನ್ನು ಕುರಿತುದಾಗಿದ್ದ ಈ ಚಿತ್ರದಲ್ಲಿ ಯಾವುದೇ ಗಿಮಿಕ್ಸ್ ಇಲ್ಲದೆ, ಭಾವಾತಿರೇಕವಿಲ್ಲದೆ ನೇರವಾಗಿ ಹೃದಯವನ್ನು ಸ್ಪರ್ಶಿಸುವ ನಿರೂಪಣೆಯಿತ್ತು.

ಕೃಷ್ಣರಾಜುರವರೇ ಈ ಚಿತ್ರದ ನಾಯಕನ ಪಾತ್ರ ವಹಿಸಿ, ನಿರ್ದೇಶಕ ಶ್ರೀನಿವಾಸ್ ಕೂಡ ಇನ್ನೊಂದು ಪ್ರಮುಖ ಪಾತ್ರದಲ್ಲಿ ಅಭಿನಯಿಸಿದರು. ಚಿತ್ರದ ನಾಯಕಿ ವೃತ್ತಿಪರ ಅಥವಾ ಹವ್ಯಾಸಿ ನಟಿಯೂ ಅಲ್ಲ, ಹೇಳಿಕೊಳ್ಳುವಂತಹ ಸುಂದರಿಯೂ ಅಲ್ಲ. ಆದರೆ ವಿವಾಹೇತರ ಪ್ರೇಮದ ಸುಳಿಯಲ್ಲಿ ಸಿಕ್ಕಿಕೊಂಡ ಅಸಹಾಯಕ ಹೆಣ್ಣಿನ ಸೂಕ್ಷ್ಮ ಸಂವೇದನೆಗಳನ್ನು ಮೂಡಿಸಿದ ಅಪರ್ಣಾ ನಾರಂಗ್‌ರಿಗೆ ಆ ವರ್ಷದ ಅತ್ಯುತ್ತಮ ನಟಿ ಪ್ರಶಸ್ತಿ ದೊರೆತಿದ್ದು ಆಶ್ಚರ್ಯವೆಂದೇನೂ ಎನಿಸಲಿಲ್ಲ. ರಾಜ್ಯದ ಖಾಸಗಿ ರಸ್ತೆ ಸಾರಿಗೆ ಸಂಸ್ಥೆಯೊಂದರ ಒಡತಿಯಾದ ಆಕೆ ಚಿತ್ರರಂಗದಲ್ಲಿ ನಿಲ್ಲಲಿಲ್ಲ.

'ಸ್ಪಂದನ' ಆ ವರ್ಷದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನೂ ರಾಜ್ಯ ಸರ್ಕಾರದಿಂದ ಪಡೆಯಿತು. ಚಿತ್ರಕ್ಕೆ ಆ ಸಾಲಿನ ಅತ್ಯುತ್ತಮ ಕಪ್ಪು-ಬಿಳುಪು ಛಾಯಾಗ್ರಹಣ ಪ್ರಶಸ್ತಿಯೂ ಬಂದು. ಅದಕ್ಕೆ ಭಾಜನರಾದವರು ಗೌರಿಶಂಕರ್. ಚಿತ್ರಕ್ಕೆ ದೊರೆತ ಇನ್ನೊಂದು ಪ್ರಶಸ್ತಿ ಅತ್ಯುತ್ತಮ ಸಂಗೀತಕ್ಕಾಗಿ - ಸಂಗೀತ ನಿರ್ದೇಶಕರು



(ಚಿತ್ರ ೯೧) 'ಆಪರೇಷನ್ ಡೈಮಂಡ್ ರ್‍ಯಾಕೆಟ್' ಚಿತ್ರದಲ್ಲಿ ರಾಜಕುಮಾರ್ ಮತ್ತು ಪದ್ಮಪ್ರಿಯ

ಸಿ.ಅಶ್ವತ್ಥ್. ಕೋಟೀಶ್ವರರಾವ್ ಅವರಿಗೆ ಇದೇ ಚಿತ್ರಕ್ಕಾಗಿ ಅತ್ಯುತ್ತಮ ಧ್ವನಿಮುದ್ರಣ ಪ್ರಶಸ್ತಿಯೂ ಸಂದಿತು. ಅಂತೂ ಇಷ್ಟೆಲ್ಲ ಪ್ರಶಸ್ತಿ, ಪುರಸ್ಕಾರಗಳಿಗೆ ಪಾತ್ರವಾದ ಈ 'ಪುಟ್ಟ' ಚಿತ್ರ ಬೆಂಗಳೂರಿನ ಅತ್ಯಂತ ದೊಡ್ಡ ಚಿತ್ರಮಂದಿರವಾದ ಕಪಾಲಿಯಲ್ಲಿ ಬಿಡುಗಡೆಯಾಗಿ ಯಶಸ್ವಿಯಾಗಿ ಪ್ರದರ್ಶಿತವಾಗಿದ್ದೂ ಒಂದು ಹೆಚ್ಚಳ. ಕವಿ ಎನ್.ಎಸ್.ಲಕ್ಷ್ಮೀನಾರಾಯಣಭಟ್ಟರ 'ಎಂಥ ಮರುಳಯ್ಯಾ...' ಮೊದಲಾದ ಗೀತೆಗಳು ಜನಪ್ರಿಯವಾದವು.

ಈ ಚಿತ್ರಕ್ಕೆ ವ್ಯತಿರಿಕ್ತವಾಗಿಯೇ ಬಂದಿದ್ದು ಸ್ವಲ್ಪಮಟ್ಟಿಗೆ ಅಬ್ಸರ್ಡ್ ಶೈಲಿಯದೇ ಎನ್ನಬಹುದಾದ 'ಪ್ರೇಮ-ಕಾಮ'. ಅತೃಪ್ತ ಕಾಮದ ಮೀಮಾಂಸೆಯಾಗ ಬಯಸಿ ಅಗ್ಗದ ಕೆಲವು ಸಂಕೇತಗಳನ್ನು ಬಳಸಿಕೊಂಡ ಈ ಚಿತ್ರ ಯಾವ ವರ್ಗದ ಪ್ರೇಕ್ಷಕನನ್ನೂ ತಲುಪದೆ ಒಂದು ವ್ಯರ್ಥ ಪ್ರಯೋಗವಾಗಿ ಉಳಿಯಿತು. ವಿ.ಆರ್.ಕೆ.ಪ್ರಸಾದ್ ಈ ಚಿತ್ರದ ನಿರ್ದೇಶಕರು. ಈ ಹಿಂದೆ 'ಋಷ್ಯಶೃಂಗ'ದಂತಹ ಗಮನಾರ್ಹ ಪ್ರಯೋಗಾತ್ಮಕ ಚಿತ್ರವನ್ನು ನಿರ್ದೇಶಿಸಿದವರು.

ಕಥಾ ದೃಷ್ಟಿಯಿಂದ 'ಶಂಕರ್ ಗುರು' ತೀರಾ ಸಾಮಾನ್ಯ ಚಿತ್ರವಾಗಬೇಕಾಗಿತ್ತು. ಅವಳಿ ಜವಳಿ ಮಕ್ಕಳು, ಕಳ್ಳತನ, ಕೊಲೆ, ದರೋಡೆ, ಪ್ರತೀಕಾರ, ದುಷ್ಟಶಿಕ್ಷಣ, ಶಿಷ್ಟರಕ್ಷಣ - ಇವೆಲ್ಲ ವ್ಯಾಪಾರಿ ಚಿತ್ರರಂಗದ ಮಾಮೂಲಿ ಸರಕುಗಳು. ಆದರೆ ರಾಜಕುಮಾರ್ ಕುಟುಂಬ ನಿರ್ಮಿಸಿದ ಈ ಚಿತ್ರ ಅದುವರೆಗಿನ ೪೪ ವರ್ಷಗಳ ಕನ್ನಡ ಚಿತ್ರೋದ್ಯಮದ ಎಲ್ಲ ದಾಖಲೆಗಳನ್ನೂ ಮುರಿದು ಗಲ್ಲಾಪೆಟ್ಟಿಗೆಯಲ್ಲಿ ಹೊಸ ವಿಕ್ರಮವನ್ನು ಸ್ಥಾಪಿಸಬೇಕಾದರೆ ಅದಕ್ಕೆ ಮುಖ್ಯ ಕಾರಣ ರಾಜಕುಮಾರ್ ಮೂರು ವಿಭಿನ್ನ ಪಾತ್ರಗಳಲ್ಲಿ ನೀಡಿದ ಅಭಿನಯ. ಆ ಕಾಲಕ್ಕೆ ಅಪಾರವಾದ ವೆಚ್ಚದಲ್ಲಿ ತಯಾರಾದ ಈ ಚಿತ್ರ ಕಾಶ್ಮೀರದಲ್ಲಿ ವ್ಯಾಪಕವಾಗಿ ಚಿತ್ರಿತವಾಯಿತು. ಸಾಮಾನ್ಯವಾಗಿ ಅದುವರೆಗೆ ಹಿಂದಿ ಚಿತ್ರಗಳು ಮಾತ್ರ ಆ ಸುಂದರ ತಾಣಗಳಲ್ಲಿ ಚಿತ್ರಿತವಾಗುತ್ತಿದ್ದವು. ವಿ.ಸೋಮಶೇಖರ್ ಚಿತ್ರದ ನಿರೂಪಣೆಗೆ ನಾಗಾಲೋಟವನ್ನಿತ್ತು ಅದರ ಪ್ರೇಕ್ಷಣೀಯತೆಯನ್ನು ಇಮ್ಮಡಿಗೊಳಿಸಿದರು. ಛಾಯಾಗ್ರಾಹಕ ಮಧು ಅವರಿಗೆ ಸರಿದೊರೆಯಾಗಿ ದುಡಿದು ಪೂರ್ಣತೆ ತಂದವರು ಸಂಕಲನಕಕಾರ ಭಕ್ತವತ್ಸಲ. ಒಬ್ಬನೇ ಕಲಾವಿದ ಮೂರು ಪಾತ್ರಗಳಲ್ಲಿ ಅಭಿನಯಿಸಿದ್ದನ್ನು ಬೆರಗುಗೊಳಿಸುವಂತಹ ಮಾಸ್ಕಿಂಗ್ ತಂತ್ರಗಳನ್ನು ಪ್ರಯೋಗಿಸಿ ಚಿತ್ರಿಸಿದ್ದರು. ಆಗಿಂದಾಗ್ಗೆ ರಾಜಕುಮಾರ್‌ರವರ ಚಿತ್ರಗಳು ವ್ಯಾಪಾರಿ ದೃಷ್ಟಿಯಿಂದ ಕನ್ನಡ ಚಿತ್ರರಂಗಕ್ಕೆ ಹೊಸ ಹೊಸ ತಿರುವುಗಳನ್ನು ನೀಡುತ್ತಿದ್ದ ಪರಂಪರೆ ಈ ಚಿತ್ರದಿಂದ ಇನ್ನಷ್ಟು ಗಟ್ಟಿಯಾಯಿತು. ಚಿ.ಉದಯಶಂಕರ್ ಚಿತ್ರಕ್ಕೆ ರೋಚಕವೆನಿಸುವ ಚಿತ್ರಕಥೆಯನ್ನು ರಚಿಸಿ, ಚುರುಕಾದ ಸಂಭಾಷಣೆಗಳನ್ನು ಬರೆದರು. ಉಪೇಂದ್ರಕುಮಾರ್ ಅವರ ಜನಾನುರಾಗಿ ಸಂಗೀತ ಚಿತ್ರದ ಇನ್ನೊಂದು ದೊಡ್ಡ ಆಕರ್ಷಣೆಯೆನಿಸಿತು. ಸೋಮಶೇಖರ್ ಅವರ ಕೆಲವು ದೃಶ್ಯ ಸಂಯೋಜನೆಯೂ ಸೂಕ್ಷ್ಮವಾಗಿ ಯೋಚಿಸಿ ಸಿದ್ಧಗೊಳಿಸಿದವಾಗಿದ್ದವು. ಅಭಿನಯದ ದೃಷ್ಟಿಯಿಂದ ಮತ್ತೆ ರಾಜಕುಮಾರ್-ಕಾಂಚನಾರನ್ನು ನೆನೆಯಬೇಕು.

ದೊರೆ-ಭಗವಾನ್ ನಿರ್ದೇಶಿಸಿದ ಮೂರು ಜೇಮ್ಸ್ ಬಾಂಡ್ ಶೈಲಿಯ ಚಿತ್ರಗಳ ಸರಣಿಯಲ್ಲಿ ಕೊನೆಯದು 'ಆಪರೇಷನ್ ಡೈಮಂಡ್ ರ್‍ಯಾಕೆಟ್'. ಅವರೇ ಚಿತ್ರದ ನಿರ್ಮಾಪಕರು ಕೂಡ. ಸಾಹಸ ದೃಶ್ಯಗಳ ಚಿತ್ರಣ ದೃಷ್ಟಿಯಿಂದ ಹಾಗೂ ಬೆಡಗಿನ ದೃಷ್ಟಿಯಿಂದ ಕಳೆದ ಎರಡು ಚಿತ್ರಗಳಿಗಿಂತ ಭಿನ್ನವಾದದ್ದು ಈ ಚಿತ್ರ. ಇದರಲ್ಲಿ ಹೆಚ್ಚಿನ ಓಟವಿತ್ತು, ಓಘವಿತ್ತು. ಜೊತೆಗೆ ತಾಂತ್ರಿಕ ಚಾಕಚಕ್ಯತೆಯಿತ್ತು. ಈ ಚಿತ್ರ ನೇಪಾಳದಲ್ಲಿ ವ್ಯಾಪಕವಾಗಿ ಚಿತ್ರಿತವಾದದ್ದು ಅದರ ದೃಶ್ಯವೈಭವಕ್ಕೆ ಸಹಾಯಕವಾಯಿತು. ಚಿತ್ರಕ್ಕೆ ಇಬ್ಬರು ನುರಿತ ಛಾಯಾಗ್ರಾಹಕರು - ಪಿ.ಎಸ್.ಪ್ರಕಾಶ್ ಮತ್ತು ಚಿಟ್ಟಿಬಾಬು. 'ಶಂಕರ್ ಗುರು'ನಲ್ಲಿ ರಾಜಕುಮಾರ್‌ರವರ ಜೋಡಿಯಾಗಿದ್ದ ಪದ್ಮಪ್ರಿಯ ಇಲ್ಲಿಯೂ ನಾಯಕಿ. ಈ ಚಿತ್ರದಲ್ಲಿ ನೇಪಾಳದ ಜನಪ್ರಿಯ 'ಲಿಂಬೋ ರಾಕ್ ಗ್ರೂಪ್'ನ ಕೆಲವು ಸದಸ್ಯರು ರೋಮಾಂಚಕ ಸ್ಟಂಟ್ ದೃಶ್ಯಗಳಲ್ಲಿ ಭಾಗವಹಿಸಿದರು. ಜೊತೆಗೆ ಮುಂಬಯಿನಿಂದ ಸೀಮಾ ಕಪೂರ್, ಕಲ್ಕತ್ತಾದಿಂದ ಬಾಬ್ಬಿ ಮತ್ತು ದೆಹಲಿಯಿಂದ ಕ್ಯಾಂಡಿ ಮತ್ತು ಪಾರ್ಟಿ



(ಚಿತ್ರ ೯೨) 'ಹೊಂಬಿಸಿಲು' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಆರತಿ



(ಚಿತ್ರ ೯೩) 'ಪಡುವಾರಳ್ಳಿ ಪಾಂಡವರು' ಚಿತ್ರದಲ್ಲಿ ಜೈಜಗದೀಶ್, ರಾಮಕೃಷ್ಣ, ಅಂಬರೀಷ್ ಮತ್ತು ಶಾಂತಲಾ

ಎಂಬ ಕ್ಯಾಬರೆ ನರ್ತಕಿಯರನ್ನು ಇದೇ ಚಿತ್ರಕ್ಕೆಂದು ಕರೆಸಲಾಗಿತ್ತು. ವೈ.ಶಿವಯ್ಯನವರ ಸಾಹಸ ದೃಶ್ಯಗಳು ವಿಶೇಷ ಗಮನ ಸೆಳೆದವು.

ಈ ಎರಡು ಚಿತ್ರಗಳೂ ಸಾಹಸಪ್ರಿಯರನ್ನು ವಿಶೇಷವಾಗಿ ಆಕರ್ಷಿಸಿದರೆ ಸಾಂಸಾರಿಕ ಪ್ರೇಕ್ಷಕರನ್ನು ತನ್ನ ಭಾವನಾತ್ಮಕ ಸನ್ನಿವೇಶಗಳಿಂದ ತನ್ನೆಡೆಗ ಸೆಳೆದುಕೊಂಡ ಸರಳವಾದ, ಆದರೆ ಹೃದಯಸ್ಪರ್ಶಿಯಾದ ಚಿತ್ರ ಗೀತಪ್ರಿಯ ನಿರ್ದೇಶನದ 'ಹೊಂಬಿಸಿಲು'. 'ಮಣ್ಣಿನ ಮಗ'ದ ನಂತರ ಒಂದು ದಶಕಕ್ಕೂ ಹೆಚ್ಚು ಕಾಲವಾದ ಮೇಲೆ ಗೀತಪ್ರಿಯರಿಗೆ ಅಂಥದ್ದೇ ಯಶಸ್ಸನ್ನು ತಂದುಕೊಟ್ಟ ಚಿತ್ರ ಇದು. ಉಷಾನವರತ್ನರಾಂರ ಕಾದಂಬರಿಯ ಆಧಾರದ ಮೇಲೆ ತಯಾರಾದ ಈ ಚಿತ್ರದ ಪ್ರಧಾನ ಕಲಾವಿದರು ವಿಷ್ಣುವರ್ಧನ್-ಆರತಿ. ಗೀತಪ್ರಿಯರ ಚಿತ್ರವೊಂದರಲ್ಲಿ ಆರತಿ ಅಭಿನಯಿಸಿದ್ದು ಅದೇ ಮೊದಲು. 'ಆ್ಯಕ್ಷನ್' ಚಿತ್ರಗಳಿಗೆ ಹೆಚ್ಚು ಹೆಸರಾಗಿದ್ದ ವಿಷ್ಣುವರ್ಧನ್ ಪುನಃ ಗಂಭೀರವಾದ ಪಾತ್ರವೊಂದರಲ್ಲಿ ಅಭಿನಯಿಸಿದ್ದರು. ಗೀತಪ್ರಿಯ ಚಿತ್ರಕಥೆ, ಸಂಭಾಷಣೆಗಳ ಜವಾಬ್ದಾರಿಯನ್ನೂ ಹೊತ್ತ ಈ ಚಿತ್ರವನ್ನು ಬಹಳ ವರ್ಷಗಳ ಕಾಲ ನೆನಪಿನಲ್ಲಿ ಉಳಿಯುವಂತೆ ಮಾಡಿದ್ದು ರಾಜನ್-ನಾಗೇಂದ್ರ ಅವರ ಸಂಗೀತ. ಚಿತ್ರದ ಎಲ್ಲ ಹಾಡುಗಳೂ ಸಂದರ್ಭೋಚಿತವಾಗಿದ್ದು, ಜನಪ್ರಿಯತೆಯಲ್ಲಿ ಹೊಸ ದಾಖಲೆಯನ್ನು ಸ್ಥಾಪಿಸಿದವು. ಬಿ.ಎಸ್.ಸೋಮಸುಂದರ್ ಮತ್ತು ಸಂಪತ್‌ರಾಜ್ ನಿರ್ಮಿಸಿದ ಚಿತ್ರ ಇದು. ಸೊಗಸಾದ ಛಾಯಾಗ್ರಹಣ ಮಾಡಿದವರು ಎಸ್.ರಾಮಚಂದ್ರ. ವಿಷ್ಣುವರ್ಧನ್ ಈ ಚಿತ್ರಕ್ಕೆ ಶ್ರೇಷ್ಠ ನಟ ಪ್ರಶಸ್ತಿ ಪಡೆದರು.



(ಚಿತ್ರ ೯೪) 'ಅಪರಿಚಿತ' ಚಿತ್ರದಲ್ಲಿ ಶ್ರೀಲಲಿತಾ ಮತ್ತು ಕೋಕಿಲಾ ಮೋಹನ್

ನಿರೂಪಣೆಯಲ್ಲಿ ನವಿರಿನ ಕೊರತೆ ಮತ್ತು ಅಬ್ಬರ, ಸೂಕ್ಷ್ಮವಾಗಿ ಹೇಳಬಹುದಾದ್ದನ್ನು ಕಚಗುಳಿ ಇಟ್ಟು ಹೇಳುವ ಹವ್ಯಾಸ ಮತ್ತು ಒಂದಲ್ಲ, ಒಂಬತ್ತು ಹಾಡುಗಳ ಭಾರ - ಇವು ಪುಟ್ಟಣ್ಣ ಕಣಗಾಲ್ ತಾವೇ ನಿರ್ಮಿಸಿ, ನಿರ್ದೇಶಿಸಿದ 'ಪಡುವಾರಳ್ಳಿ ಪಾಂಡವರು' ಚಿತ್ರದ ಮೂಲ ಪರಿಕರಗಳು. ಈ ಚಿತ್ರದಲ್ಲಿ ಪುಟ್ಟಣ್ಣನವರ ಹಿಂದಿನ ಮೋಡಿ ಗಮನೀಯವಾಗಿ ಕಡಿಮೆಯಾಗಿದ್ದ ಸತ್ಯ ಎದ್ದು ಕಾಣುತ್ತಿತ್ತು. ಆದರೆ ಈ ಪ್ರತಿಭಾವಂತ ನಿರ್ದೇಶಕರ ಹದ ತಪ್ಪಿದ ಈ ಚಿತ್ರ ರಾಜ್ಯವ್ಯಾದ್ಯಂತ ಜನಪ್ರಿಯವಾಗಿಯೇ, ಪ್ರಾಯಶಃ ಪುಟ್ಟಣ್ಣನವರ ಕಲ್ಪನೆಯನ್ನೂ ಮೀರಿ, ಯಶಸ್ವಿಯಾಗಿ ಪ್ರದರ್ಶಿತವಾಯಿತು. ಅಂಬರೀಷ್, ಜೈಜಗದೀಶ್, ರಾಮಕೃಷ್ಣ, ಧೀರೇಂದ್ರಗೋಪಾಲ್ ಮತ್ತು ಅನಂತರಾಂ ಮಚ್ಚೇರಿಯೊಂದಿಗೆ ಶ್ರೀಲಲಿತಾ, ಮಾಲಾ, ಶಾಂತಲಾ, ಮುಸುರಿ ಕೃಷ್ಣಮೂರ್ತಿ ತಾರಾಗಣದಲ್ಲಿದ್ದ ಈ ಚಿತ್ರದಲ್ಲಿ ಆಗಲೇ ಪುಟ್ಟಣ್ಣ ತಮ್ಮ ಮಾಮೂಲಿ ನಾಯಕಿಯರನ್ನು ಕೈ ಬಿಟ್ಟಿದ್ದರು. ಅವರು ತಮ್ಮ ಉದ್ವಿಗ್ನ ಮನೋಸ್ಥಿತಿಯಲ್ಲಿ ನಿರ್ದೇಶಿಸಿದ ಚಿತ್ರ ಇದು. ಗ್ರಾಮೀಣ ರಾಜಕಾರಣದ ಸಂಕೀರ್ಣತೆಗಳನ್ನು ವಿಶ್ಲೇಷಿಸುವ ಪ್ರಯತ್ನದಲ್ಲಿ ಪುಟ್ಟಣ್ಣ ಉತ್ಪ್ರೇಕ್ಷೆಗೆ ಮಾರುಹೋಗಿದ್ದೂ ಉಂಟು. ಕೆಲವು ಹೊಸ ಕಲಾವಿದರಿಗೆ ಅವಕಾಶ ಕೊಡುವ ದೃಷ್ಟಿಯಿಂದ ಬೆಂಗಳೂರು ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನ ಮಹದೇವ್ ಮತ್ತು ಮದರಾಸು ಫಿಲಂ ಇನ್‌ಸ್ಟಿಟ್ಯೂಟ್‌ನ ಚಂದ್ರಹಾಸ ಆಳ್ವರವರನ್ನು ಆಯ್ದರು. ಚಿತ್ರದ ಕಥೆಯನ್ನು ಪತ್ರಕರ್ತ ಬಾಬು ಕೃಷ್ಣಮೂರ್ತಿ ಬರೆದರು. ಕವಿ ಕಯ್ಯಾರ ಕಿಞ್ಞಣ್ಣ ರೈ ಒಂದೆರಡು ಹಾಡುಗಳನ್ನು ಬರೆದಿದ್ದರು. ವಿಜಯಭಾಸ್ಕರ್ ತಮ್ಮ ಸಂಗೀತ ನಿರ್ದೇಶನದ ಶೈಲಿಯನ್ನು ಮಾರ್ಪಡಿಸಿಕೊಂಡು ಒಂದೆರಡು ವೇಗದ ಹಾಡುಗಳನ್ನು ಸಂಯೋಜಿಸಿದರು. ಮಲೆನಾಡು ಪ್ರದೇಶದಲ್ಲಿಯೇ ವ್ಯಾಪಕವಾಗಿ ಚಿತ್ರಿತವಾದ 'ಪಡುವಾರಳ್ಳಿ ಪಾಂಡವರು' ಆರ್ಥಿಕವಾಗಿ ಪುಟ್ಟಣ್ಣನವರಿಗೆ ಯಶಸ್ಸನ್ನು ತಂದುಕೊಟ್ಟಿತು. ಚಿತ್ರದಲ್ಲಿ ಆರತಿ ಅತಿಥಿ ನಟಿಯಾಗಿ ಪತ್ರಕರ್ತೆಯ ಸಣ್ಣಪಾತ್ರದಲ್ಲಿ ಕಾಣಿಸಿಕೊಂಡರು.

ಈಗಾಗಲೇ 'ಅಪರೂಪದ ಅತಿಥಿಗಳು' ಚಿತ್ರದಿಂದ ವ್ಯಾಪಾರಿ ಚೌಕಟ್ಟಿನಲ್ಲಿಯೇ ಹೊಸ ಜಾಡನ್ನು ತುಳಿಯುವ ಭರವಸೆಯನ್ನು ಹುಟ್ಟಿಸಿದ್ದ ನಟ-ನಿರ್ದೇಶಕ ಕಾಶೀನಾಥ್ ಆ ಹಾಸ್ಯ ಚಿತ್ರವಾದ ಮೇಲೆ ವಿಭಿನ್ನ ರೀತಿಯ ರಹಸ್ಯಾತ್ಮಕ ವರ್ಣಚಿತ್ರ 'ಅಪರಿಚಿತ'ವನ್ನು ೧೯೭೮ರಲ್ಲಿ ಬಿಡುಗಡೆ ಮಾಡಿದರು. ಹಿಂದಿನ ಚಿತ್ರದಲ್ಲಿ ಸಂಪೂರ್ಣವಾಗಿ ಹೊಸ ನಟ-ನಟಿಯರಿಗೇ ಅವಕಾಶ ಕೊಟ್ಟಿದ್ದ ಅವರು ಇಲ್ಲಿ 'ಕೋಕಿಲಾ'ದ ಮೂಲಕ ಜನಪ್ರಿಯತೆ ಗಳಿಸಿದ್ದ ಶೋಭಾ-ಮೋಹನ್ ಜೋಡಿಯನ್ನು ಪ್ರಮುಖ ಪಾತ್ರಗಳಲ್ಲಿ ಮತ್ತೆ ಜೊತೆಗೂಡಿಸಿದರು. ಯಾವುದೇ ಸಾಮಾಜಿಕ ಕಾಳಜಿಯೂ ಇಲ್ಲದ, ವಿಶ್ಲೇಷಣೆಯಿಲ್ಲದ ಕಥೆಯನ್ನೂ ಕಲಾತ್ಮಕವಾಗಿ ಹೇಳಬಹುದೆನ್ನುವುದನ್ನು ಕಾಶೀನಾಥ್ ಈ ಚಿತ್ರದಲ್ಲಿ ತೋರಿಸಿಕೊಟ್ಟರು. ಸುರೇಶ್ ಹೆಬ್ಳೀಕರ್ ಈ ಚಿತ್ರದಿಂದ ನಾಯಕರಾದರು ಹಾಗೂ ಈ ಪತ್ತೇದಾರಿ ಕಥೆಯಲ್ಲಿ ನಿಗೂಢ ಪಾತ್ರವೊಂದನ್ನು ವಹಿಸಿ ಗಮನ ಸೆಳೆದರು. 'ಚೋಮನ ದುಡಿ'ಯಲ್ಲಿ ಅತ್ಯುತ್ತಮ ನಟ ಪ್ರಶಸ್ತಿಯನ್ನು ಸಂಪಾದಿಸಿಕೊಂಡಿದ್ದ ಎಂ.ವಿ.ವಾಸುದೇವರಾಯರಿಗೂ ಶ್ರೀಲಲಿತಾ



(ಚಿತ್ರ ೯೫) 'ಒಂದಾ ಊರಿನ ಕಥೆ' ಚಿತ್ರದಲ್ಲಿ ಮೈಲಾರಿರಾವ್ ಮತ್ತು ಲೋಹಿತಾಶ್ವ

ಮತ್ತು ಸುಂದರಕೃಷ್ಣ ಅರಸು ಅವರಿಗೂ ಪಾತ್ರವಿತ್ತು. ಚಿತ್ರಕಥೆಯ ಬಿಗಿಯಿಂದ ಹೇರಳವಾದ ಪ್ರಯೋಜನ ಪಡೆದ ಚಿತ್ರ ಇದು. ಕಾಶೀನಾಥ್‌ರವರದ್ದೇ ಚಿತ್ರಕಥೆ. ಜೊತೆಗೆ ವೈದಿ ಎಂದು ನಂತರ ಹೆಸರಾದ ಎಲ್.ವೈದ್ಯನಾಥನ್ ಚಿತ್ರಕ್ಕೆ ರೋಚಕವಾದ ಹಿನ್ನೆಲೆ ಸಂಗೀತ ನೀಡಿ, ಎರಡು ಉತ್ತಮ ಹಾಡುಗಳನ್ನೂ ಸಂಯೋಜಿಸಿದರು. ಚಿತ್ರ ಗಲ್ಲಾಪೆಟ್ಟಿಗೆಯಲ್ಲಿಯೂ ಯಶಸ್ವಿಯಾಗಿ ಕಾಶೀನಾಥ್‌ರಿಗೆ ಕನ್ನಡ ಚಿತ್ರರಂಗದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿತು.

'ಅಪರಿಚಿತ'ದ ನಂತರ ಬಿಡುಗಡೆಯಾದ 'ಪ್ರೇಮಾಯಣ' ಶುದ್ಧವಾದ ಸಂಪೂರ್ಣ ಹಾಸ್ಯ ಚಿತ್ರವೊಂದನ್ನು ನಿರ್ಮಿಸುವ ಪ್ರಯತ್ನ. ಗೀತಪ್ರಿಯ ನಿರ್ದೇಶನದ ಈ ಚಿತ್ರದ ತಯಾರಿಕೆಯ ಹಿಂದಿದ್ದವರು ಕೆಲವು ಪತ್ರಕರ್ತರು. ನಿರ್ಮಾಪಕರಲ್ಲಿ ಒಬ್ಬರಾದ ಎಸ್.ಕೆ.ಶೇಷಾದ್ರಿಯವರೇ ಬರೆದ ಕಥೆಗೆ ತಂಡದವರೆಲ್ಲ ಕೈಯಾಡಿಸಿ ಚಿತ್ರಕಥೆ, ಸಂಭಾಷಣೆಗಳನ್ನು ಬರೆದರು. ಯು.ಎಂ.ಎನ್.ಷರೀಫ್‌ರ ಛಾಯಾಗ್ರಹಣವಿದ್ದ ಈ ಚಿತ್ರದಲ್ಲಿ ವರ್ಣ ಮುದ್ರಣ ಹದ ತಪ್ಪಿ ತಾಂತ್ರಿಕವಾಗಿ ಪೇಲವವಾಗಿ ಕಂಡಿತು. ಇದಕ್ಕೆ ಮುಖ್ಯ ಕಾರಣ ಬೇರೆ ಬೇರೆ ಕಂಪನಿಯ ಚೌಚ್ತಾ ರಾಸ್ಟಾಕ್ ಒದಗಿಸಿದ್ದು ಕೂಡಾ ಎಂದು ಹೇಳಲಾಗುತ್ತದೆ. ಹೀಗಾದಾಗ ಸಂಸ್ಕರಣದಲ್ಲಿ ಗ್ರೇಡಿಂಗ್ ಕಷ್ಟವಾಗುತ್ತದೆ. ಅನಂತ್‌ನಾಗ್-ಆರತಿ ಜೋಡಿ ನಿರರ್ಗಳವಾಗಿ ಅಭಿನಯಿಸುವುದರೊಂದಿಗೆ ವಾದಿರಾಜ್ ಮತ್ತು ಶಿವರಾಂರವರಿಗೂ ಶುದ್ಧ ಹಾಸ್ಯಾಭಿನಯದ ಮೇಲೆ ತಮಗಿದ್ದ ಹಿಡಿತವನ್ನು ಪ್ರದರ್ಶಿಸಲು ಅವಕಾಶವಾಯಿತು.



(ಚಿತ್ರ ೯೬) 'ಪರಸಂಗದ ಗೆಂಡೆತಿಮ್ಮ' ಚಿತ್ರದಲ್ಲಿ ರೀಟಾ ಅಂಚನ್ ಮತ್ತು ಲೋಕೇಶ್

ಚಲನಚಿತ್ರ ಮಾಧ್ಯಮ ಕನ್ನಡ ನಾಡಿನ ಅನೇಕ ಬುದ್ಧಿಜೀವಿಗಳನ್ನು ತನ್ನೆಡೆಗೆ ಎಳೆದುಕೊಂಡಂತೆ ಸಾಹಿತಿ-ವಿಮರ್ಶಕ ಬರಗೂರು ರಾಮಚಂದ್ರಪ್ಪನವರನ್ನೂ ಎಳೆದುಕೊಂಡಿತು. ಬಂಡಾಯ ಸಾಹಿತ್ಯದ ರೂವಾರಿಗಳಲ್ಲೊಬ್ಬರಾದ ಬರಗೂರರು ತಮ್ಮ ಈ ಪ್ರಥಮ ಚಿತ್ರ 'ಒಂದು ಊರಿನ ಕಥೆ'ಯಲ್ಲಿ ಗ್ರಾಮೀಣ ಮಟ್ಟದ ರಾಜಕೀಯವನ್ನು ವಾಸ್ತವವೆನಿಸಿದ ಸನ್ನಿವೇಶಗಳ ಮೂಲಕ, ಪಾತ್ರಗಳ ಮೂಲಕ ತೀಕ್ಷ್ಣವಾಗಿ ವಿಶ್ಲೇಷಿಸಿದರು. ದಲಿತರಲ್ಲಿ ಎಡಗೈ, ಬಲಗೈ ಎಂದು ಗುರುತಿಸಿಕೊಳ್ಳುವ ಎರಡು ವರ್ಗಗಳಿದ್ದು ಅವುಗಳ ನಡುವಣ ಸಾಮಾಜಿಕ ಸಂಘರ್ಷಗಳ ಬಗ್ಗೆ ಯಾವುದೇ ಚಿತ್ರದಲ್ಲಿ ಪ್ರಸ್ತಾಪವಾಗಿದ್ದು ಅದೇ ಮೊದಲು, ಅದೇ ಕೊನೆ. ಬರಗೂರರೇ ಚಿತ್ರಕಥೆ ಮತ್ತು ಸಂಭಾಷಣೆಗಳನ್ನೂ ರಚಿಸಿ 'ಚೋಮನದುಡಿ'ಯ ವಾಸುದೇವರಾಯರನ್ನು ಹೊರತು ಪಡಿಸಿ ಬಹುತೇಕ ಹೊಸ ನಟ-ನಟಿಯರನ್ನೇ ಆಯ್ದುಕೊಂಡರು. ಬಿ.ವಿ.ಕಾರಂತರ ಸಂಗೀತವಿತ್ತು. ನಿರೂಪಣೆಯಲ್ಲಿ ಬರಗೂರರು ಅದುವರೆಗೆ ಬಂದು ಹೋದ ನಿಧಾನಗತಿಯ ಹೊಸ ಅಲೆ ಚಿತ್ರಗಳಿಂದಲೇ ಪ್ರೇರಿತರಾಗಿದ್ದು, "ಶೋಷಣೆಯನ್ನು ಕುರಿತ ವಿಶಿಷ್ಟ ಧ್ಯೇಯವುಳ್ಳ ಚಿತ್ರ ಇದು. ಇಲ್ಲಿ ಹಳೆಯ ಪಂಚಾಯಿತಿ ಕಟ್ಟೆಯೇ ವ್ಯವಸ್ಥೆಯ ಸಂಕೇತ. ಊರಿನ ವಿದ್ಯಮಾನಗಳನ್ನು, ಅವುಗಳ ಮುಖಾಂತರ ದೇಶದ ಸಮಸ್ಯೆಗಳನ್ನು ಪ್ರತಿಬಿಂಬಿಸುವ ಪ್ರಯತ್ನ ನನ್ನದು" ಎಂದಿದ್ದರು ಅವರು.

ಮಾರುತಿ ಶಿವರಾಂ ನಿರ್ದೇಶಿಸಿದ 'ಪರಸಂಗದ ಗೆಂಡೆತಿಮ್ಮ' ಕಲಾತ್ಮಕವಾಗಿಯೂ ಗಂಭೀರ ಮನೋಭಾವದ ಪ್ರೇಕ್ಷಕರನ್ನು ಆಕರ್ಷಿಸಿ, ಬಾಕ್ಸ್ ಆಫೀಸ್‌ನಲ್ಲಿಯೂ ಕೋಲಾಹಲವನ್ನೆಬ್ಬಿಸಿದ ಚಿತ್ರ. ಹೊಸ ಪೀಳಿಗೆಯ ಪ್ರಭಾವಶಾಲಿ ಲೇಖಕರಲ್ಲಿ ಒಬ್ಬರಾಗಿದ್ದ ಆಲನಹಳ್ಳಿ ಕೃಷ್ಣ ಅವರ ಕಾದಂಬರಿಯನ್ನಾಧರಿಸಿದ ಈ ಚಿತ್ರ ತನ್ನ ಅರ್ಥಪೂರ್ಣ ಹೆಸರಿನಿಂದಲೇ ಪ್ರಥಮತಃ ಉಲ್ಲೇಖನಾರ್ಹ. 'ಪರಸಂಗ' ಎಂದರೆ ನಗರ ಭಾಷೆಯಲ್ಲಿ 'ಅನ್ಯ ಸ್ತ್ರೀಯ ಸಂಗ' ಎನ್ನುವ ಅರ್ಥವಾಗುತ್ತದೆ. ಆದರೆ ಗ್ರಾಮ್ಯ ಭಾಷೆಯಲ್ಲಿ ಇದಕ್ಕೆ 'ಪ್ರಸಂಗ' ಅಥವಾ 'ಒಂದು ಪ್ರಕರಣ' ಅಥವಾ 'ಒಂದು ಕಥೆ' ಎಂದೂ ಅರ್ಥವಾಗುತ್ತದೆ. ಹಳ್ಳಿಯ ಜೀವನಕ್ಕೆ ನಗರದ ನಾಗರಿಕತೆ ಕ್ರಮೇಣವಾಗಿ ಪ್ರವೇಶಿಸಲು ಆರಂಭವಾದಾಗ ಆ ಹಳ್ಳಿಯಲ್ಲಿ ಉಂಟಾಗುವ ಕೋಲಾಹಲ ಮತ್ತು ಹುಟ್ಟಿಕೊಳ್ಳುವ ಸಾಂಸಾರಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಅರ್ಥಪೂರ್ಣವಾಗಿ ನಿರೂಪಿಸುವ ಈ ಕಥೆಯ ನಾಯಕ ಗೆಂಡೆತಿಮ್ಮ ಒಬ್ಬ ಬಳೆ ವ್ಯಾಪಾರಿ. ಆ ವೃತ್ತಿಗೆ ಸಾಮಾನ್ಯವಾಗಿರುವಂತೆ ಆತ ಹಳ್ಳಿಯಿಂದ ಹಳ್ಳಿಗೆ ಹೋಗುವಾಗ ಅನೇಕ ರಸವತ್ತಾದ ಕಥೆಗಳನ್ನು ಹಳ್ಳಿಯ ಮುಗ್ಧ ಜನರಿಗೆ ಬಣ್ಣಿಸುತ್ತಿದ್ದು ಕೊನೆಗೆ ಸ್ವತಃ ಅಂಥ ಕಥೆಯೊಂದಕ್ಕೆ ತಾವೇ ಕಾರಣನಾಗುತ್ತಾನೆ. ಈ ಪಾತ್ರದಲ್ಲಿ ಅದೇ ತಾನೆ ಪ್ರವರ್ಧಮಾನಕ್ಕೆ ಬರುತ್ತಿದ್ದ ಲೋಕೇಶ್ ಅಭಿನಯ ಚೇತೋಹಾರಿಯಾಗಿತ್ತು. ಇನ್ನೆರಡು ಮುಖ್ಯ ಪಾತ್ರಗಳಲ್ಲಿದ್ದವರು ಮಾನು ಮತ್ತು ರೀಟಾ ಅಂಚನ್. ಇಡೀ ಚಿತ್ರವನ್ನು ಬೆಂಗಳೂರು-ಮೈಸೂರು ಹೆದ್ದಾರಿಯ ಬಳಿಯ ಹಳ್ಳಿಯೊಂದರಲ್ಲಿ ಚಿತ್ರಿಸಿದ್ದು ಗ್ರಾಮೀಣ ಪರಿಸರದ ನೈಜ ನಿರೂಪಣೆಗೆ ಕಾರಣವಾಯಿತು. ರಾಜನ್-ನಾಗೇಂದ್ರರ ಜಾನಪದ ಸಂಗೀತದ ಆಧಾರಿತ ಹಾಡುಗಳಂತೂ ಪ್ರೇಕ್ಷಕರ ಪ್ರಶಂಸೆಗೆ ಪಾತ್ರವಾದವು. ಅಂಥ ಗೀತೆಗಳನ್ನು ರಚಿಸಿದ ಪ್ರತಿಭಾವಂತ ಕವಿ ದೊಡ್ಡರಂಗೇಗೌಡರು ತಮಗೇ ತಿಳಿಯದಂತೆ ಒಂದು ಹೊಸ ಚಿತ್ರ ಪರಂಪರೆ ಹುಟ್ಟಲು ಕಾರಣರಾದರು.

'ಕಿಲಾಡಿ ಜೋಡಿ' ಕೇವಲ ಮನರಂಜನೆಗಾಗಿಯೇ ತಯಾರಾಗಿ ಆ ಕೆಲಸವನ್ನು ತುಂಬಾ ಯಶಸ್ವಿಯಾಗಿ ನಿರ್ವಹಿಸಿದ ಚಿತ್ರ. ಕ್ಲಾಸ್, ಮಾಸ್ ಎಂಬ ವರ್ಗೀಕರಣದ ಬಗ್ಗೆ ತಲೆ ಕೆಡಿಸಿಕೊಳ್ಳದೆ ಜನರನ್ನು ನಗಿಸುವ ಏಕೈಕ ದೃಷ್ಟಿಯಿಂದ ಎಸ್.ವಿ.ರಾಜೇಂದ್ರಸಿಂಗ್ (ಬಾಬು) ನಿರ್ದೇಶಿಸಿದ ಈ ಚಿತ್ರ ಸಿನಿಮಾಸ್ಕೋಪ್‌ನಲ್ಲಿ ತಯಾರಾಗಿ ದೊಡ್ಡ ತಾರಾಗಣವನ್ನೂ ಹೊಂದಿತ್ತು. ನಟಿ ಲಕ್ಷ್ಮೀ ಈ ಚಿತ್ರವಲ್ಲಿ ದ್ವಿಪಾತ್ರಗಳಲ್ಲಿ ಕಾಣಿಸಿಕೊಂಡಿದ್ದೊಂದು ವಿಶೇವ. ಚಿತ್ರದ ಕಿಲಾಡಿಗಳು ವಿಷ್ಣುವರ್ಧನ್ ಮತ್ತು ಶ್ರೀನಾಥ್. ವಿಧವಿಧವಾದ ಪೋಷಾಕುಗಳಲ್ಲಿ, ಭಂಗಿಗಳಲ್ಲಿ ಇಬ್ಬರೂ ಕುಣಿದು, ನಲಿದರು. ಅವರಿಬ್ಬರೂ ನಿರ್ವಹಿಸಿದ್ದು ಇಬ್ಬರು ಕಳ್ಳರ ಪಾತ್ರಗಳನ್ನು. ಪಾಪದ ಶ್ರೀಮಂತರು ಜೋಪಾನವಾಗಿ ಬಚ್ಚಿಟ್ಟ ಕಪ್ಪು ಹಣವನ್ನು ಚಾಕಚಕ್ಯತೆಯಿಂದ ಲಪಟಾಯಿಸಿ, ಅವರಿಗೆ ನಾಮ ಹಾಕುವ ಠಕ್ಕರು ಅವರು. ಈ ಇಬ್ಬರು ನಾಯಕ ನಟರನ್ನು ಇಮೇಜ್ ಸಮಸ್ಯೆ ಬಾಧಿಸಲೇ ಇಲ್ಲ. ದ್ವಾರಕೀಶ್ ಮತ್ತು ಅಂಬರೀಶ್ ಗೌರವ ಪಾತ್ರಗಳಲ್ಲಿ ಕಾಣಿಸಿಕೊಂಡು ಇನ್ನಷ್ಟು ಹುಡುಗಾಟಕ್ಕೆ ಇಂಬುಗೊಟ್ಟರು. ಸಹಾಯಕ ಪಾತ್ರಧಾರಿಗಳೂ ಲವಲವಿಕೆಯನ್ನು ಇನ್ನಷ್ಟು ಹಿಗ್ಗಿಸಿದರು. ಹೆಚ್.ವಿ.ಸುಬ್ಬರಾಯರ ಚುರುಕಾದ ಸಂಭಾಷಣೆಯೂ ಪೂರಕವಾಯಿತು. ರಾಜನ್-ನಾಗೇಂದ್ರರ ವೇಗದ ಹಾಡುಗಳೂ ಅಷ್ಟೆ. ಫೈನಾನ್ಷಿಯರ್ ವೆಂಕಟೇಶ್ ದತ್ ನಿರ್ಮಿಸಿದ ಈ ಚಿತ್ರಕ್ಕೆ ಬಾಬು ಸಹ ನಿರ್ಮಾಪಕರು. ಗೋವೆಯಲ್ಲಿ ವ್ಯಾಪಕ ಚಿತ್ರೀಕರಣ ನಡೆಯಿತು. ಚಿತ್ರದಲ್ಲಿ ಅಂಬರೀಷ್‌ಗಾಗಿ ರಚಿಸಿ, ಸಂಯೋಜಿತವಾಗಿದ್ದ 'ಆಡಬೇಕು ಕರಾಟೆ ಆಡಬೇಕು...' ಗೀತೆಯ ಚಿತ್ರೀಕರಣ ಆ ಚಿತ್ರದ ಹೈಲೈಟ್ ಅನ್ನುವಷ್ಟು ಚೆನ್ನಾಗಿತ್ತು. ಅಂಬರೀಪ್ ಅವರ ಜನಪ್ರಿಯತೆಯನ್ನೂ ಹೆಚ್ಚಿಸಿತ್ತು.

'ತಪ್ಪಿದ ತಾಳ'ದ ಮೂಲಕ ಖ್ಯಾತ ತಮಿಳು ನಿರ್ದೇಶಕ ಕೆ.ಬಾಲಚಂದರ್ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದರು. ತಮಿಳು ನಟ ರಜನೀಕಾಂತ್ (ಅವರು ಮೂಲತಃ



(ಚಿತ್ರ ೯೭) 'ಕಿಲಾಡಿ ಜೋಡಿ' ಚಿತ್ರದಲ್ಲಿ ಲಕ್ಷ್ಮೀ, ಶ್ರೀನಾಥ್ ಮತ್ತು ವಿಷ್ಣುವರ್ಧನ್



(ಚಿತ್ರ ೯೮) 'ತಪ್ಪಿದ ತಾಳ' ಚಿತ್ರದಲ್ಲಿ ಕಮಲಹಾಸನ್ ಮತ್ತು ಸರಿತ



(ಚಿತ್ರ ೯೯) 'ಸಿಂಗಪುರದಲ್ಲಿ ರಾಜಾಕುಳ್ಳ' ಚಿತ್ರದಲ್ಲಿ ದ್ವಾರಕೀಶ್, ಮಂಜುಳಾ ಮತ್ತು ವಿಷ್ಣುವರ್ಧನ್

ಕನ್ನಡಿಗರೆ)ಮತ್ತು ಸರಿತಾ ಈ ಚಿತ್ರದ ಪ್ರಮುಖ ಪಾತ್ರಧಾರಿಗಳು. ಮತ್ತೊಬ್ಬ ತಮಿಳು ನಟ ಕಮಲಹಾಸನ್ 'ಕೋಕಿಲಾ' ನಂತರ ಈ ಚಿತ್ರದಲ್ಲಿ ಅತಿಥಿ ನಟರಾಗಿ ಅಭಿನಯಿಸಿದರು. ಬಾಲಚಂದರ್‌ರವರೇ ಕಥೆ ಮತ್ತು ಚಿತ್ರಕಥೆಯನ್ನು ಬರೆದು, ಸಂಭಾಷಣೆಯನ್ನು ಹುಣಸೂರು ಕೃಷ್ಣಮೂರ್ತಿಗಳು ರಚಿಸಿದರು.ತಾರೆ ಸರಿತಾ ಕನ್ನಡ ಚಿತ್ರೋದ್ಯಮವನ್ನು ಪ್ರವೇಶಿಸಿದ್ದು ಕೂಡ ಈ ಚಿತ್ರದ ಮೂಲಕವೆ. ಬಿ.ಎಂ.ವೆಂಕಟೇಶ್, ಚಂದೂಲಾಲ್ ಜೈನ್ ಮತ್ತು ಪಂಡಿತ ರಾಮಾನುಜಾಚಾರ್ಯ ತಯಾರಿಸಿದ ಈ ಚಿತ್ರದ ಸಂಗೀತ ನಿರ್ದೇಶಕರು ವಿಜಯಭಾಸ್ಕರ್. ಕೆಲವು ಯಶಸ್ವಿ ಚಿತ್ರಗಳನ್ನು ತಯಾರಿಸಿದ ನಂತರ ಚಂದೂಲಾಲ್ ಜೈನ್ ಸೋಲನ್ನು ಕಂಡಿದ್ದು ಈ ಚಿತ್ರದಲ್ಲಿಯೆ.

ನಟ-ನಿರ್ಮಾಪಕ ದ್ವಾರಕೀಶ್ ಸಾಹಸ ಪ್ರವೃತ್ತಿಗೆ ಮತ್ತು ಏನಾದರೂ ಹೊಸದನ್ನು ಮಾಡುವ ತುಡಿತಕ್ಕೆ ಹೆಸರಾದವರು. ವಿದೇಶಗಳಲ್ಲಿ ಚಿತ್ರಿತವಾದ ಕನ್ನಡ ಚಿತ್ರವೊಂದನ್ನು ಮೊದಲ ಬಾರಿಗೆ ನಿರ್ಮಿಸುವ ಸಾಹಸವನ್ನು ಮಾಡಿದವರೂ ಅವರೇ. ಅವರ 'ಸಿಂಗಪುರದಲ್ಲಿ ರಾಜಾಕುಳ್ಳ' ಗಲ್ಲಾಪೆಟ್ಟಿಗೆಯಲ್ಲಿ ಯಶಸ್ಸನ್ನು ಗಳಿಸಲು ಈ ಅಂಶ ಕಾರಣವಾಯಿತು. ಜೊತೆಗೆ ಸಿ.ವಿ.ರಾಜೇಂದ್ರನ್ ನಿರ್ದೇಶನದಲ್ಲಿ ರಾಜನಾಗಿ ವಿಷ್ಣುವರ್ಧನ್ ಮತ್ತು ಕುಳ್ಳನಾಗಿ ದ್ವಾರಕೀಶ್ (ಆ ವೇಳೆಗಾಗಲೇ ಅವರು ಕುಳ್ಳ ಪಂಚಟ್‌ರಾಗಿ ಭಾರಿ ಜನಪ್ರಿಯತೆ ಗಳಿಸಿದ್ದರು) ಲೀಲಾಜಾಲವಾಗಿ ಅಭಿನಯಿಸಿದ್ದು ಕೂಡ ಈ ಮಟ್ಟದ ಜನಪ್ರಿಯತೆಗೆ ಕಾರಣವಾಯಿತು. ಸಿಂಗಪುರ, ಮಲೇಷಿಯ ಮತ್ತು ಕೌಲಾಲಾಂಪುರಗಳಲ್ಲಿ ಚಿತ್ರಕ್ಕೆ ವ್ಯಾಪಕ ಚಿತ್ರಣ ನಡೆದು, ಕೆಲವರು ಚೀನೀ ಮಾರಾಮಾರಿ ಪ್ರವೀಣರು ಮತ್ತು ಹುಡುಗಿಯರು ಕೂಡ ಚಿತ್ರದಲ್ಲಿ ಅಭಿನಯಿಸಿ ಪ್ರೇಕ್ಷಕರಿಗೆ ಖುಷಿ ಕೊಟ್ಟರು. ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ದ್ವಾರಕೀಶ್ ಇಬ್ಬರು ಚಾಲಾಕಿ ಗೆಳೆಯರು. ಅವರ ಸಾಹಸಗಳೇ ಕಥೆಯ ಸತ್ವ. ಐವತ್ತೆರಡು ಅಂತಸ್ತುಗಳ ಗಗನಚುಂಬಿ ಕಟ್ಟಡವೊಂದರ ಮೇಲೆ ಅವರಿಬ್ಬರ ಹೊಡೆದಾಟದ ದೃಶ್ಯವೊಂದರ ರೋಮಾಂಚಕ ಚಿತ್ರೀಕರಣ ಚಿತ್ರದ 'ಹೈಲೈಟ್' ಆಯಿತು. ಮಂಜುಳಾ ಮತ್ತು ಚೀನೀ ತಾರೆ ಫೆಲಿನಾ ನಾಯಕಿಯರಾಗಿ ಅಭಿನಯಿಸಿದ್ದರು. ಚಿತ್ರಕ್ಕೆ



(ಚಿತ್ರ ೧೦೦) 'ತಾಯಿಗೆ ತಕ್ಕ ಮಗ' ಚಿತ್ರದಲ್ಲಿ ರಾಜಕುಮಾರ್ ಮತ್ತು ಸಾವಿತ್ರಿ

ರಾಜನ್-ನಾಗೇಂದ್ರ ಕೊಟ್ಟ ವಿಶಿಷ್ಟ ಸಂಗೀತವೂ ಒಂದು ಪ್ರಧಾನ ಆಕರ್ಷಣೆಯಾಯಿತು.

ರಾಜಕುಮಾರ್ ಕುಟುಂಬ ತಯಾರಿಸಿ ಈ ವರ್ಷ ಅದ್ಭುತ ಯಶಸ್ಸು ಗಳಿಸಿದ ಇನ್ನೊಂದು ಚಿತ್ರ 'ತಾಯಿಗೆ ತಕ್ಕ ಮಗ'. ಬಾಕ್ಸರ್ ಒಬ್ಬನನ್ನು ನಾಯಕನನ್ನಾಗಿ ಹೊಂದಿದ ಪ್ರಥಮ ಚಿತ್ರ ಇದು. ರಾಜಕುಮಾರ್‌ರೊಂದಿಗೆ ಮುಖ್ಯ ಪಾತ್ರವೊಂದರಲ್ಲಿ ಅವರ ಕೊನೆಯ ಪುತ್ರ ಲೋಹಿತ್ (ನಂತರ ಅವರು ಪುನೀತ್ ಆದರು) ಇದ್ದರು. ತೆಲುಗು ಚಿತ್ರರಂಗದ ಖ್ಯಾತ ನಟಿ ಸಾವಿತ್ರಿ ಈ ಚಿತ್ರದಲ್ಲಿ ಸಾಹುಕಾರ್ ಜಾನಕಿಯವರೊಂದಿಗೆ ಪ್ರಮುಖ ಪಾತ್ರವೊಂದರಲ್ಲಿದ್ದರು. ಚಿತ್ರಕ್ಕೆ ವಿಶೇಷವಾಗಿ ಕಾಶಿ ಪುಣ್ಯಕ್ಷೇತ್ರದಲ್ಲಿ ಚಿತ್ರೀಕರಣವಾಯಿತು. 'ವಿಶ್ವನಾಥನು ತಂದೆಯಾದರೆ ವಿಶಾಲಾಕ್ಷಿ ತಾಯಿಯಲ್ಲವೆ?...' ಎಂಬ ಗೀತೆ ಸನ್ನಿವೇಶಕ್ಕೆ ಅರ್ಥಪೂರ್ಣವಾಗಿ ಸೇರಿಕೊಂಡಿತ್ತು, ಜನಪ್ರಿಯವೂ ಆಯಿತು. ವಿ.ಸೋಮಶೇಖರ್ ನಿರ್ದೇಶಿಸಿದ ಈ ಚಿತ್ರ ಅವರ ಜನಪ್ರಿಯತೆಯನ್ನು ಇನ್ನಷ್ಟು ವೃದ್ಧಿಸಿತು.

ಕನ್ನಡ ರಂಗಭೂಮಿಯ ಜನಪ್ರಿಯ ನಾಟಕಗಳಲ್ಲೊಂದಾದ 'ದೇವದಾಸಿ' ಈ ವರ್ಷ ಚಲನಚಿತ್ರವಾಗಿ ಮಾರ್ಪಾಡಾಯಿತು. ಬಹಳ ಕಾಲದ ಅನಂತರ ಹಿರಿಯರಾದ ಸಿ.ವಿ.ರಾಜು ನಿರ್ದೇಶಿಸಿದ ಚಲನಚಿತ್ರ ಇದು. ಮಾಸ್ಟರ್ ಹಿರಣ್ಣಯ್ಯನವರೇ ಮುಖ್ಯ ಪಾತ್ರ ವಹಿಸಿದರು. ಡಿ.ವಿ.ಜಿ. ಅವರ ಮಂಕುತಿಮ್ಮನ ಕಗ್ಗದಿಂದ ಆಯ್ದ ಪದ್ಯಗಳನ್ನು ಬಳಸಿದ್ದರು. ಆದರೆ ತೆರೆಯ ಮೇಲೆಯೂ ನಾಟಕವಾಗಿಯೇ ಮೂಡಿ ಬಂದ ಈ ಕೃತಿ ಸೋಲನ್ನೇ ಅನುಭವಿಸಿತು.

ಇದೇ ವರ್ಷ ತೆರೆಗೆ ಬಂದ 'ವಂಶಜ್ಯೋತಿ' ಖ್ಯಾತ ತಮಿಳು ನಿರ್ದೇಶಕ ಎ.ಭೀಮಸಿಂಗ್ ನಿರ್ದೇಶಿಸಿದರೆಂಬ ಒಂದೇ ಕಾರಣದಿಂದ ಮುಖ್ಯವಾಯಿತು. ಅದೇ ರೀತಿ 'ಸಿರಿತನಕ್ಕೆ ಸವಾಲ್' ಚಿತ್ರವನ್ನು ತಮಿಳಿನ ಸೂಪರ್‌ಸ್ಟಾರ್ ಟಿ.ಆರ್.ರಾಜಕುಮಾರಿಯವರ ಸೋದರ ಟಿ.ಆರ್.ರಾಮಣ್ಣ ನಿರ್ದೇಶಿಸಿದರು. ಈ ಚಿತ್ರವೂ ಅಪಯಶಸ್ಸನ್ನೇ ಪಡೆಯಿತು.

ವಾಸ್ತವವಾಗಿ 'ಹೊಯ್ಸಳ'ದಂತಹ ಚಿತ್ರ ಅದ್ದೂರಿಯಾಗಿ ತಯಾರಾಗಬೇಕಾದ್ದು. ಆದರ ಹೆಚ್ಚು ಆರ್ಥಿಕ ಅನುಕೂಲವಿಲ್ಲದ ಸಿ.ವಿ.ಶಿವಶಂಕರ್ ಈ ಚಿತ್ರವನ್ನು ಕಡಿಮೆ ವೆಚ್ಚದಲ್ಲಿ ತಯಾರಿಸಿದ್ದರಿಂದ ಅದಕ್ಕಿರಬೇಕಾಗಿದ್ದ ದೃಶ್ಯ ಹಾಗೂ ಉಡುಗೆ-ತೊಡುಗೆಗಳ ವೈಭವದಿಂದ ಅದು ವಂಚಿತವಾಯಿತು. ಆದರೂ ಮಹಾರಾಜ ವಿಷ್ಣುವರ್ಧನನು ಸಿಂಹದೊಂದಿಗೆ ಸೆಣಸಾಡುವ ದೃಶ್ಯವನ್ನು ಅವರು ರೋಮಾಂಚನಕಾರಿಯಾಗಿಯೇ ಚಿತ್ರಿಸಿದರು. ಈ ಚಿತ್ರದಲ್ಲಿ ಜೂನಿಯರ್ ರಾಜನ್ ಎಂಬ ಹೊಸ ನಟನ ಪರಿಚಯವಾಯಿತು.

ಅಷ್ಟೇನೂ ಗಮನ ಸೆಳೆಯಲಿಲ್ಲವಾದರೂ ಬೇರೆ ಬೇರೆ ಕಾರಣಗಳಿಗಾಗಿ ಗುರುತಿಸಬೇಕಾದ ಕೆಲವು ಚಿತ್ರಗಳು ೧೯೭೮ರಲ್ಲಿ ತೆರೆಕಂಡವು. ಗೌರಿಸುಂದರ್ ನಿರ್ದೇಶಿಸಿದ 'ಸಂಘರ್ಷ' ಆ ಹೊತ್ತಿಗೆ ಜನಪ್ರಿಯವಾಗಿದ್ದ ಬಿ.ವಿ.ವೈಕುಂಠರಾಜು ಅವರ ಅದೇ ಹೆಸರಿನ ನಾಟಕ ರಂಗದ ಮೇಲೆ ಪ್ರದರ್ಶನಗೊಳ್ಳುತ್ತಿದ್ದು ಅದೇ ಹೆಸರನ್ನು ಚಿತ್ರಕ್ಕೆ ಇಟ್ಟಿದ್ದು ಕೆಲವರಿಗೆ ಇರಿಸು ಮುರಿಸಾಗಿತ್ತು. ಈ ಚಿತ್ರದಲ್ಲಿ ಗಿರೀಶ್ ಕಾರ್ನಾಡ್, ಭಾರತಿ, ತಮಿಳಿನ ಜೆಮಿನಿ ಗಣೇಶನ್ ಮೊದಲಾದವರು ಅಭಿನಯಿಸಿದ್ದರು. ಈ ಚಿತ್ರಕ್ಕೆ ಎಸ್.ಪಿ.ಬಾಲಸುಬ್ರಹ್ಮಣ್ಯಂ ಸಂಗೀತ ನಿರ್ದೇಶಿಸಿದರು.



(ಚಿತ್ರ ೧೦೧) 'ಖಂಡವಿದೆಕೋ ಮಾಂಸವಿದೆಕೋ' ಚಿತ್ರದಲ್ಲಿ ಜಯಮಾಲಾ, ರೂಪಾಚಕ್ರವರ್ತಿ

ಇದು ಅವರ ಸಂಗೀತ ನಿರ್ದೇಶನದ ಪ್ರಥಮ ಚಿತ್ರ. ಪುರಂದರದಾಸರ ತಮಾಷೆಯಂತಿರುವ "ಎಲ್ಲಿ ನನ್ನಾ ಕುದುರೆ ಹೋಯ್ತು ವೆಂಕೂಬಾಯಿ ಹುಡುಕಲೆ..." ಹಾಡಿನ ಮೂಲಕ ಎ.ಎಂ.ಗೌರಿ ಗಾಯಕಿಯಾಗಿ ಪರಿಚಯವಾದರು. ಈ ಚಿತ್ರದ ನಾಯಕಿ ಭಾರತಿ ಯಾವುದೋ ಭಿನ್ನಾಭಿಪ್ರಾಯದ ಕಾರಣ 'ಡಬ್ಬಿಂಗ್'ಗೇ ಬರಲಿಲ್ಲ. ಇಡೀ ಕಥೆ ಫ್ಲಾಶ್ ಬ್ಯಾಕ್‌ನಲ್ಲಿ ನಡೆಯುವಂತೆ ಯೋಜಿಸಿ, ಕಲ್ಪನಾರನ್ನು ಒಪ್ಪಿಸಿ ಕೆಲವು ಚಿತ್ರಿಕೆಗಳನ್ನು ಆಕೆ ಕಾದಂಬರಿಗಾರ್ತಿಯಾಗಿ ತನ್ನ ಕಾದಂಬರಿಯನ್ನು ಬರೆಯುತ್ತಲೇ ವಿವರಗಳನ್ನು ಹೇಳುತ್ತ ಹೋಗುವ ಹಾಗೆ ಮಾಡಿ, ಇಡೀ ಚಿತ್ರವನ್ನು ಕಲ್ಪನಾ ಅವರ ಮಾತುಗಳ ಹಿನ್ನೆಲೆಯಲ್ಲಿ ನಡೆಯುವಂತೆ ಮಾಡಿದ್ದರು. ಅದು ಜಾಣತಂತ್ರವಾದರೂ ನಿಜಕ್ಕೂ ವಿಶೇಷವೆನ್ನಿಸಿದ ಪ್ರಯೋಗ. ಚಿತ್ರ ತೆರೆಕಂಡು ಕೆಲ ದಿನಗಳ ಕಾಲ ಚೆನ್ನಾಗಿಯೇ ನಡೆಯಿತು. ವಿತರಕರ ಕಾರಣದಿಂದ ಮೂಲೆ ಸೇರಿತು. ಚಿತ್ರದ ಛಾಯಾಗ್ರಾಹಕರು ಸುಂದರನಾಥ ಸುವರ್ಣ. ಗೌರಿಸುಂದರ್ ಆಮೇಲೂ ಮೂರ್‍ನಾಲ್ಕು ಚಿತ್ರ ತೆಗೆಯಲು ಹೋಗಿ ಅರ್ಧದಲ್ಲಿ ನಿಂತವು. ಒಂದು ಚಿತ್ರಕ್ಕೆ ಅವರು ಮುಂಚೆ ಚಿತ್ರರಂಗದ ಜನಪ್ರಿಯ ನಟ ಸಂಜೀವ್ ಕುಮಾರ್‌ರನ್ನೇ ಕರೆತಂದು ಮುಹೂರ್ತ ಮಾಡಿದ್ದರು. ಸುಂದರ್ ಇಂಟರ್‌ನ್ಯಾಷನಲ್ಸ್ ಎಂಬ ಸಂಸ್ಥೆಯನ್ನು ಪ್ರಾರಂಭಿಸಿದ್ದರು.

ಲಲಿತಮ್ಮ ಎಂಬ ನಿರ್ಮಾಪಕಿಯೊಬ್ಬರು ರವೀ ಅವರ ನಿರ್ದೇಶನದಲ್ಲಿ 'ಮುಗ್ಧ ಮಾನವ' ಚಿತ್ರ ತೆಗೆದಿದ್ದರು. ಚಿತ್ರ ಸೋತು ಆಕೆ ಕಂಗಾಲಾಗಿದ್ದರು. ಚಿತ್ರದಲ್ಲಿ ಅಭಿನಯಿಸಿದ್ದ ಶ್ರೀನಾಥ್ ಮೊದಲಾದ ಕಲಾವಿದರೆಲ್ಲ ಆಕೆಗೆ ಇನ್ನೊಂದು ಚಿತ್ರ ಮಾಡಿ ನಾವೆಲ್ಲ ಉಚಿತವಾಗಿ ಅಭಿನಯಿಸುತ್ತೇವೆ ಎಂದರು. ಹಾಗೆ ಆಕೆ ಬಹು ಪ್ರಯಾಸದಿಂದ ಮಾಡಿದ ಇನ್ನೊಂದು ಚಿತ್ರ 'ಹಾವಿನ ಹೆಜ್ಜೆ'. ರವೀ ಅವರ ಬಳಿ ಸಹನಿರ್ದೇಶಕರಾಗಿದ್ದ ಮಣಿ ಮುರುಘನ್ ಅವರನ್ನು ನಿರ್ದೇಶಿಸಲು ಕೋರಿದರು. ಚಿತ್ರ ಯಶಸ್ವಿಯಾಯಿತು. ಮಣಿಮುರುಘನ್ 'ಹಾವಿನ ಹೆಜ್ಜೆ' ಮೂಲಕ ಸ್ವತಂತ್ರ ನಿರ್ದೇಶಕರಾದರು. ಅದರ ಯಶಸ್ಸಿನಿಂದಾಗಿ ಅನೇಕ ಚಿತ್ರಗಳೂ ಕೈಗೆ ಬಂದವು. ಆತ ಬಹಳ ಬೇಗಯಾಗಿಯೇ ಬೆಳೆದರು. ಕೆಲ ಕಾಲದ ಮೇಲೆ ಅಷ್ಟೇ ವೇಗವಾಗಿ ಕಳಗಿಳಿದರು.

ಅಲನಹಳ್ಳಿ ಕೃಷ್ಣ ಅವರ ಕಿರುಗತೆ ಆಧರಿಸಿ ತೆಗೆದದ್ದು 'ಫೀನಿಕ್ಸ್'. ಮದನ್‌ಗೋಪಾಲ್, ಶಿವರಾಮೇ ಗೌಡ ನಿರ್ಮಿಸಿದರು. ಉಗ್ರನರಸಿಂಹ ನಿರ್ದೇಶನ. ಇಲ್ಲಿಯೂ ಸುಂದರನಾಥ ಸುವರ್ಣರ ಹರಸಾಹಸವೇ ಇತ್ತು. ರಾಜನ್-ನಾಗೇಂದ್ರರ ಸಂಗೀತವಿತ್ತು. ಗೀತರಚನೆ ಚಿ.ಉದಯಶಂಕರ್ ಅವರದು. ಕಥಾವಸ್ತುವೇ ವಿಭಿನ್ನ. ಚಲನಚಿತ್ರ ಮಾಧ್ಯಮಕ್ಕೆ ಅದನ್ನು ಒಗ್ಗಿಸಿದ್ದೇ ಅಶ್ಚರ್ಯದ ಸಂಗತಿ. ಒಂದು ಸನ್ನಿವೇಶದಲ್ಲಂತೂ ಕಥಾ ನಾಯಕಿ ಬೆತ್ತಲಾಗುವ ಪ್ರಸಂಗವೂ ಇತ್ತು. ಸೆನ್ಸಾರ್‌ನಿಂದ ಬಚಾವಾಗಿ ಬಂದದ್ದೇ ಒಂದು ಪವಾಡ.

ಭಾರಿ ತಾರಾಗಣ ಕೊಂಚ ಅಪರೂಪವಾಗಿದ್ದ ಆ ದಿನಗಳಲ್ಲಿ ಕೃಷ್ಣರಾಜು 'ಮುಯ್ಯಿಗೆ ಮುಯ್ಯಿ' ಚಿತ್ರ ತೆಗದರು. ಚಿತ್ರದ ಮೊದಲ ಚಿತ್ರಿಕೆಯಲ್ಲೇ ಶಂಕರ್‌ನಾಗ್ ಪಾತ್ರವನ್ನು ಪರಿಚಯಿಸಿದ ರೀತಿಯೂ ಭಿನ್ನವಾಗಿತ್ತು. ವಿಧಾನಸೌಧ-ಹೈಕೋರ್ಟ್‌ಗಳ ಮುಂದೆ ಚಿತ್ರಿಸಿದ್ದರು. ಆಗ್ಗೆ ತುಂಬಾ ಶ್ರೀಮಂತವೆನಿಸಿತ್ತು.

'ಹುಲಿ ಬಂತು ಹುಲಿ' ಚಿತ್ರವನ್ನು ಚಂದ್ರಶೇಖರ್ ಎಂಬ ತರುಣ ತೆರೆಗೆ ತಂದರು. ಹೊಸ ಧಾಟಿಯ ಚಿತ್ರಗಳು, ಸಾಕ್ಷ್ಯಚಿತ್ರಗಳಿಗೆ ಬಹುವಾಗಿ ಕೆಲಸ ಮಾಡಿದ್ದ ತರುಣ ಹೊಸ ರೀತಿಯಲ್ಲೇ ಚಿತ್ರಿಸಿದ್ದರು. ಚಿತ್ರ ಸಾಧಾರಣ ಕಥೆಯನ್ನು ಹೊಂದಿದ್ದರೂ ಚಿತ್ರಿಸಿದ ರೀತಿ, ಕಾಡಿನ ಜನರ ಬದುಕಿನ ಸಹಜತೆಯ ಕಾರಣಕ್ಕೆ ಪ್ರಿಯವಾಗಿತ್ತು. ಮುಂದೆ ಚಂದ್ರಶೇಖರ್‌ಗೆ ಹುಲಿ ಚಂದ್ರಶೇಖರ್ ಎಂತಲೇ ಕರೆಯುವಂತಾಯಿತು.

'ಅನುರಾಗ ಬಂಧನ' ಬಸಂತಕುಮಾರ್ ಪಾಟೀಲ್ ನಿರ್ಮಾಣದ ಚಿತ್ರ. ಗೀತಪ್ರಿಯ ನಿರ್ದೇಶಿಸಿದ್ದರು. ಆರತಿಯೊಂದಿಗೆ ಬಸಂತ್ ಕುಮಾರ್ ಪಾಟೀಲ್ ಸಹ ಅಭಿನಯಿಸಿದ್ದರು. ಚಿತ್ರ ಚೆನ್ನಾಗಿಯೇ ಓಡಿತು. ಚಿತ್ರೀಕರಣದ ಮಧ್ಯೆ ಕಲಾವಿದರು, ತಂತ್ರಜ್ಞರ ಸಂಭಾವನೆ ಕುರಿತಂತೆ ಎದ್ದ ಒಂದು ಆಕ್ಷೇಪದ ಹಿನ್ನೆಲೆಯಲ್ಲಿ ನ್ಯಾಯಾಲಯಕ್ಕೆ ಹೋಗಿ ಬಂದರು ಬಸಂತ್ ಕುಮಾರ್ ಪಾಟೀಲ್.

'ಸುಳಿ' ಕಂಪರಾಜ ಅರಸರು ಚಲನಚಿತ್ರ ಅಭಿವೃದ್ಧಿ ನಿಗಮದಿಂದ ಧನ ಸಹಾಯ ಮಾಡಿ ನಿರ್ಮಿಸಿದ ಚಿತ್ರ. ನಾಲ್ಕರಲ್ಲಿ ತರೆಗೆ ಬಂದ ಮೂರೇ ಚಿತ್ರಗಳಲ್ಲಿ 'ಸುಳಿ'ಯೂ ಒಂದು. ಚಿತ್ರ ಪರವಾಗಿಲ್ಲ, ಬೇರೆ ಬೇರ ಕಾರಣಗಳಿಂದಾಗಿ ಜನರನ್ನು ಸರಿಯಾಗಿ ತಲುಪಲಿಲ್ಲ ಎನ್ನಬಹುದು.

'ಅಳುಕು' ರವೀ ಹೊಸ ಧಾಟಿಯ ಚಿತ್ರ ನಿರ್ಮಾಣ ಮಾಡುವ ಹಂಬಲದಿಂದ ತೆಗೆದ ಚಿತ್ರ. ಸುಧಾ ಸಿಂಧೂರ್ ಹಾಗೂ ರಮೇಶ್ ಭಟ್ ಜೋಡಿ ನಟಿಸಿತ್ತು. ಇಬ್ಬರೂ ಮೊದಲ ಬಾರಿಗೆ ಪ್ರಧಾನ ಪಾತ್ರದಲ್ಲಿ ಕಂಡರು. ಕೆಲವು ಸಂಕೇತ-ಪ್ರತಿಮೆಗಳನ್ನು ತರುವ ಪ್ರಯತ್ನ ಮಾಡಿ, ಅವು ಕ್ಲೀಷೆ, ವಾಚ್ಯ ಆಗಿದ್ದು ಈ ಚಿತ್ರದ ದುರಂತ. ರವೀಯವರ ಮಹಾತ್ವಾಕಾಂಕ್ಷೆಯ ಮೂಲವನ್ನಂತೂ ಕಾಣಬಹುದಿತ್ತು.

'ಅಮರನಾಥ್' ಅಂಬರೀಷ್ ನಾಯಕನಟನಾದ ಚಿತ್ರ. ಮಣಿಮುರುಘನ್ ನಿರ್ದೇಶಿಸಿದರು. ಅಮರನಾಥ್, ಅಂಬರೀಷ್‌ರ ಮೊದಲ ಹೆಸರು. ಅಂಬರೀಷ್‌ರ ಹೆಚ್ಚು ಸಹಕಾರ ಇಲ್ಲದಾಗಲೂ ಬಿಂಬಗಳನ್ನು ಸ್ಕ್ರೀನ್ ಮೇಲೆ ಚಲಿಸುವಂತೆ ಮಾಡಿ, ಧ್ವನಿ ಕೊಡುತ್ತ ಅನೇಕ ದೃಶ್ಯಗಳನ್ನು ಸಂಯೋಜಿಸಿ ಆ ಮಟ್ಟಿಗೆ ವಿಭಿನ್ನ ಸಾಹಸ ಅನ್ನಿಸುವಂಥ ಚಿತ್ರವನ್ನು ಮಾಡಿದ್ದರು ಮಣಿಮುರುಘನ್.

೧೯೭೮ರಲ್ಲಿ ಕನ್ನಡ ಚಿತ್ರರಂಗದ ಮೂವರು ಪ್ರಮುಖರು ಇನ್ನಿಲ್ಲವಾದರು. ಸುಮಾರು ಮೂರು ದಶಕಗಳ ಕಾಲ ಉದ್ಯಮದಲ್ಲಿದ್ದು ಉತ್ತಮ ಸಂಕಲನಕಾರರಾಗಿ ಹೆಸರು ಪಡೆದು ನವಜ್ಯೋತಿ ಸ್ಟುಡಿಯೋಗಾಗಿ ಪ್ರಥಮ ಚಿತ್ರ 'ಕೃಷ್ಣಲೀಲಾ'ವನ್ನು ನಿರ್ದೇಶಿಸಿದ, ತಮ್ಮ ಸ್ವಂತ ಚಿತ್ರ 'ನಟಶೇಖರ'ದಲ್ಲಿ ನಾಯಕನಟ ಕಲ್ಯಾಣಕುಮಾರ್‌ರನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯ ಮಾಡಿಸಿದ, ಜನಪ್ರಿಯ ನಾಟಕ 'ದೇವದಾಸಿ'ಯನ್ನು ತೆರೆಗೆ ತಂದ ಸಿ.ವಿ.ರಾಜು ನಿಧನರಾದರು. ನಿನ್ನೆಗಳ ಜೊತೆಗಿದ್ದ ವರ್ತಮಾನದ ಕೊಂಡಿಗಳಲ್ಲಿ ಸಿ.ವಿ.ರಾಜು ನಿಧನ ನಿಜಕ್ಕೂ ನಷ್ಟದ ಸಂಗತಿ.

ಅದೇ ವರ್ಷ 'ವಂಶವೃಕ್ಷ'ದ ಮೂಲಕ ತೆರೆಗೆ ಬಂದು ವಿಶೇಷ ಗಮನ ಸೆಳೆದ ಮತ್ತೆ ಕೆಲವು ಚಿತ್ರಗಳಲ್ಲಿ ಅಭಿನಯಿಸಿದ ನಟ ತಲಗೇರಿ ವೆಂಕಟರಾಯರೂ ತೀರಿಕೊಂಡರು.

೧೯೭೬-೭೭ರ ಸಾಲಿನ ಅತ್ಯುತ್ತಮ ಛಾಯಾಗ್ರಾಹಕರೆಂದು 'ಋಷ್ಯಶೃಂಗ' ಚಿತ್ರಕ್ಕಾಗಿ ರಾಜ್ಯ ಸರ್ಕಾರದಿಂದ ಪ್ರಶಸ್ತಿ ಪಡೆದ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್ ಪದವೀಧರ ಎಸ್.ರಾಮಚಂದ್ರ ತಮ್ಮ ಪ್ರಶಸ್ತಿಯನ್ನು ನಿರಾಕರಿಸಿ ಮುಖ್ಯವಾದ ವಿಷಯವೊಂದರ ಮೇಲೆ ಸರ್ಕಾರದ ಹಾಗೂ ಸಾರ್ವಜನಿಕರ ಗಮನ ಸೆಳೆದರು. ಶ್ರೇಷ್ಠ ನಟ ಮತ್ತು ನಟಿಗೆ ನಾಲ್ಕು ಸಾವಿರ ರೂಪಾಯಿಗಳ ನಗದು ಬಹುಮಾನ ಮತ್ತು ರಜತ ಪದಕ ನೀಡುವ ಪದ್ಧತಿಯನ್ನು ಪ್ರಸ್ತಾಪಿಸಿ, ಶ್ರೇಷ್ಠ ತಂತ್ರಜ್ಞರೆಂದು ಪ್ರಶಸ್ತಿ ಪಡೆದವರಿಗೆ ಕೇವಲ ಒಂದು ಸಾವಿರ ರೂಪಾಯಿಗಳ ನಗದು ಬಹುಮಾನವನ್ನು ಕೊಡುವುದರ ಔಚಿತ್ಯವನ್ನು ಪ್ರಶ್ನಿಸಿ ಅವರು ತಮಗೆ ನೀಡಿದ ಪ್ರಶಸ್ತಿಯನ್ನು ತಿರಸ್ಕರಿಸಿದರು. ಅವರು ಈ ವಿಷಯವನ್ನೆತ್ತಿದ್ದ ಕೆಲವು ವರ್ಷಗಳಾದ ನಂತರ ಮಾತ್ರ ತಂತ್ರಜ್ಞರಿಗೆ ನೀಡುವ ಪ್ರಶಸ್ತಿಗಳ ನಗದು ಮೊತ್ತವನ್ನು ಹೆಚ್ಚಿಸಲು ಸರ್ಕಾರ ನಿರ್ಧರಿಸಿತು.

ಹೊಸ ಅಲೆಯ ಚಿತ್ರಗಳು ಪ್ರತಿ ವರ್ಷ ನೆಲ ಕಚ್ಚುತ್ತಲೇ ಹೋದರೂ ಕೆಲವು ಹವ್ಯಾಸಿಗಳಿಗಂತೂ ಅವುಗಳ ಬಗ್ಗೆ ಮಮಕಾರ ಮಾಯವಾಗಲೇ ಇಲ್ಲ. ಜೊತೆಗೆ ಇಂತಹ ಚಿತ್ರಗಳಿಗೆ ಹಣ ನೀಡಲು ಗಾಂಧಿನಗರದ ಉದ್ಯಮಿಗಳೇ ಕೆಲವರು



(ಚಿತ್ರ ೧೦೨) 'ಕಾಡು ಕುದುರೆ' ಚಿತ್ರದಲ್ಲಿ ಸುಂದರಶ್ರೀ

ಮುಂದಾಗುವ ಪವಾಡವೂ ನಿಲ್ಲಲಿಲ್ಲ. ಹೀಗಾಗಿ ೧೯೭೮ರಲ್ಲಿ ಕೂಡ ಈ ವರ್ಗಕ್ಕೆ ಸೇರಿದ ಐದು ಚಿತ್ರಗಳು ನಿರ್ಮಾಣವಾದವು. ಆದರೆ ಈ ಚಿತ್ರಗಳಿಗೆ ಸ್ಥಳೀಯ ಮಾರುಕಟ್ಟೆಯೇ ಆಗಲಿ, ಇಲ್ಲವೆ ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಮಾರುಕಟ್ಟೆಯೇ ಆಗಲಿ ಲಭ್ಯವಾಗದೆ ಅವುಗಳೆಲ್ಲ ಹವ್ಯಾಸಿ ಪ್ರಯೋಗಗಳಾಗಿಯೇ ಉಳಿಯುವಂತಾಯಿತು. ಈ ವರ್ಷ ಒಟ್ಟು ೪೨ ಚಿತ್ರಗಳು ಬಿಡುಗಡೆಯಾದವು.

೧೯೭೮ರಲ್ಲಿ ಭಾರತದ ಅಂತರರಾಷ್ಟ್ರೀಯ ಚಿತ್ರೋತ್ಸವ ಮದರಾಸಿನಲ್ಲಿ ಜರುಗಿತು. ಆ ವರ್ಷ ಪ್ರಥಮ ಬಾರಿಗೆ ಭಾರತೀಯ ಚಿತ್ರಗಳ ಪನೋರಮಾ ವಿಭಾಗವನ್ನು ಪ್ರಾರಂಭಿಸಲಾಯಿತು. ಆ ವರ್ಷ ಕನ್ನಡದ ಐದು ಚಿತ್ರಗಳು - 'ಘಟಶ್ರಾದ್ಧ', 'ಪಲ್ಲವಿ', 'ಗೀಜಗನ ಗೂಡು', 'ಋಷ್ಯಶೃಂಗ' ಮತ್ತು 'ತಬ್ಬಲಿಯು ನೀನಾದೆ ಮಗನೆ' - ಈ ವಿಭಾಗದಲ್ಲಿ ಪ್ರದರ್ಶಿತವಾದವು.

'ಪಲ್ಲವಿ' ಮತ್ತು 'ಅನುರೂಪ' ಚಿತ್ರಗಳನ್ನು ತಾವೇ ನಿರ್ಮಿಸಿ ನಿರ್ದೇಶಿಸಿದ್ದ ಲಂಕೇಶ್‌ರಿಗೆ ಈ ವರ್ಷ ಹೊರಗಿನ ನಿರ್ಮಾಪಕರ ನೆರವು ಸಿಕ್ಕಿತು. ಅವರ ಮೂರನೆಯ ಚಿತ್ರ 'ಖಂಡವಿದೆಕೋ ಮಾಂಸವಿದೆಕೋ' ತಯಾರಿಕೆಗೆ ಆ ವೇಳೆಗಾಗಲೇ ವಿತರಕರಾಗಿ ತಳವೂರಿದ್ದ ಪ್ರಭಾಕರರೆಡ್ಡಿ ಮತ್ತು ಅವರ ಸ್ನೇಹಿತ ರವೀ ಮತ್ತು ಸೋಮಸುಂದರಂ ಮುಂದಾದರು. ಈ ಚಿತ್ರ ಕೂಡ ಅಲ್ಲಲ್ಲಿ ಮಿಂಚಿದ ನಿರ್ದೇಶನ ಚಾತುರ್ಯದ ವಿನಾ ಒಟ್ಟಾರೆಯಾಗಿ ಆಳವಾದ ಪರಿಣಾಮ ಬೀರಲಿಲ್ಲ. ಲಂಕೇಶ್ ತಮ್ಮ ಸಾಹಿತ್ಯದಲ್ಲಿನ ಸವುರನ್ನು ಚಿತ್ರಮಾಧ್ಯಮಕ್ಕೆ ತರುವುದರಲ್ಲಿ ಯಶಸ್ವಿಯಾಗಲಿಲ್ಲ. ಮತ್ತೆ ಈ ಚಿತ್ರದಲ್ಲಿ ಲಂಕೇಶ್ ಮತ್ತು ಸಂಗೀತ ನಿರ್ದೇಶಕ ರಾಜೀವ್ ತಾರಾನಾಥ್ ಜೊತೆಗೂಡಿದರು. ವ್ಯಾಪಾರಿ ಚಿತ್ರಗಳಲ್ಲಿ ಹೆಸರು ಗಳಿಸಿದ್ದ ಜಯಮಾಲ ಅಭಿನಯಿಸಿದ ಮೊದಲ ಹೊಸ ಅಲೆಯ ಚಿತ್ರ ಇದು. ಸುರೇಶ್ ಹೆಬ್ಳೀಕರ್ ಮತ್ತು ರೂಪಾ ಪ್ರಧಾನ ಪಾತ್ರಗಳಲ್ಲಿದ್ದ ಈ ಚಿತ್ರ ವ್ಯಭಿಚಾರಕ್ಕೆ ಸಂಬಂಧಿಸಿದು . ರೂಪಾ ಆಗಿನ್ನೂ 'ಸುಳಿ' ಚಿತ್ರದಲ್ಲಿ ಬಾಲನಟಿಯಾಗಿ ಪ್ರಥಮ ಬಾರಿಗೆ ಕ್ಯಾಮರಾ ಮುಂದೆ ಕಾಣಿಸಿಕೊಂಡಿದ್ದರು. ಆಗ ಆಕೆಯ ಹೆಸರು ಭಾರತಿ. ಸ್ನೇಹಿತರೊಬ್ಬರು ಆಕೆಯನ್ನು ಲಂಕೇಶ್‌ರಿಗೆ ಪರಿಚಯ ಮಾಡಿಸಿದರು. ರೂಪಾ (ಚಕ್ರವರ್ತಿ) ರವರೇ ಪತ್ರಿಕಾ ಸಂದರ್ಶನವೊಂದರಲ್ಲಿ ಹೇಳಿಕೊಂಡಂತೆ ಚಿತ್ರದಲ್ಲಿ ಚುಂಬನ ಮತ್ತು ಅರೆನಗ್ನ ದೃಶ್ಯಗಳಿದ್ದರೆ ಹಿಂಜರಿಯುವುದಿಲ್ಲ ತಾನೆ ಎಂಬ ಅರ್ಥ ಬರುವ ಪ್ರಶ್ನೆಯನ್ನು ನೇರವಾಗಿ ಲಂಕೇಶ್ ಕೇಳಿದರಂತೆ. ಆದರೆ ಈ ೧೩ ವರ್ಷದ ಹುಡುಗಿಗೆ ಅದರಲ್ಲಿ ತಪ್ಪೇನೂ ಕಾಣಲಿಲ್ಲ, ತಕ್ಷಣ ಒಪ್ಪಿಕೊಂಡಳು. ನಿರ್ಮಾಪಕರಲ್ಲೊಬ್ಬರಾಗಿದ್ದ ರವೀ ನ್ಯೂಮರಾಲಜಿ ಪ್ರಕಾರ ಲೆಕ್ಕ ಹಾಕಿ ಭಾರತಿಗೆ ರೂಪಾ ಎಂದು ಮರುನಾಮಕರಣ ಮಾಡಿದರು. ಲಂಕೇಶ್ ಆಕೆಗೆ ಹೇಳಿದ್ದಂತೆಯೇ ಚುಂಬನ ಮತ್ತು ಅರೆನಗ್ನಾವಸ್ಥೆಯಲ್ಲಿದ್ದ ಬೆಡ್‌ರೂಂ ದೃಶ್ಯಗಳೂ ಚಿತ್ರಿತವಾದವು. ಈ ಬಗ್ಗೆ ಕೆಲವು ಪತ್ರಿಕೆಗಳಲ್ಲಿ ಗುಸುಗುಸು ಸುದ್ದಿಗಳೂ ಪ್ರಕಟವಾಗಿ ಒಂದು ವರ್ಗದ ಪತ್ರಕರ್ತರ ಹಾಗೂ ಲಂಕೇಶ್‌ರ ನಡುವೆ ವಾದ-ವಿವಾದಗಳೂ ನಡೆದವು. ನಂತರ ಚಿತ್ರದ ಬಿಡುಗಡೆಯ ಸಮಯದಲ್ಲಿ ಲಂಕೇಶ್ ಆಕೆಯನ್ನು ಪತ್ರಿಕಾಗೋಷ್ಠಿಯಲ್ಲಿ "ನನ್ನ ಚಿತ್ರದಲ್ಲಿ ಬೋಲ್ಡ್ ಗರ್ಲ್ ನಾಯಕಿ ಪಾತ್ರಧಾರಿಣಿ" ಎಂದು ಪರಿಚಯ ಮಾಡಿಕೊಟ್ಟರು. ಈ ರೀತಿ ಪ್ರಚೋದಕವಾದ ಪ್ರಚಾರ ಹೇರಳವಾಗಿ ಸಿಕ್ಕಿದರೂ 'ಖಂಡವಿದೆಕೋ ಮಾಂಸವಿದೆಕೋ' ಆರ್ಥಿಕವಾಗಿ ಆಗಲಿ, ಕಲಾತ್ಮಕವಾಗಿ ಆಗಲಿ ಫಲಕಾರಿಯಾಗಲಿಲ್ಲ.

ಚಂದ್ರಶೇಖರ ಕಂಬಾರರ ನಿರ್ದೇಶನದಲ್ಲಿ ಅದೇ ವರ್ಷ ತೆರೆಗೆ ಬಂದ 'ಕಾಡು ಕುದುರೆ' ಈ ಖ್ಯಾತ ಸಾಹಿತಿಯ ಹಿನ್ನೆಲೆಗೆ ತಕ್ಕಂತೆ ಜಾನಪದ ಕಥಾವಸ್ತುವನ್ನು ಹೊಂದಿದ ಚಿತ್ರ. ಈ ಚಿತ್ರದಿಂದ ಕಂಬಾರರು 'ಋಷ್ಯಶೃಂಗ'ದ ಸುಂದರಶ್ರೀಯನ್ನು ನಾಯಕಿಯ ಪಾತ್ರಕ್ಕೆ ಆಯ್ದರು. ಮಾಸು ನಾಯಕ ನಟನಾಗಿದ್ದ ಈ ಫ್ಯಾಂಟಸಿ ಜಾಳುಜಾಳಾಗಿಯೇ ನಿರೂಪಿತವಾದ್ದರಿಂದ ಕಲಾಭಿಜ್ಞ ಪ್ರೇಕ್ಷಕರ ಮೇಲೆಯೂ ಗಾಢವಾದ ಪರಿಣಾಮವನ್ನೇನೂ ಬೀರಲಿಲ್ಲ. ಕಂಬಾರರೇ ಜಾನಪದ ಸಂಗೀತವನ್ನು ನೀಡಿದ ಈ ಚಿತ್ರ ಸುದ್ದಿ ಮಾಡಿದ್ದು - ಗಾಯಕ ಶಿವಮೊಗ್ಗ ಸುಬ್ಬಣ್ಣ ಹಾಡಿದ ಶೀರ್ಷಿಕೆ ಗೀತೆಗಾಗಿ ಅವರಿಗೆ ರಾಷ್ಟ್ರ ಮಟ್ಟದಲ್ಲಿ ಅತ್ಯುತ್ತಮ ಹಿನ್ನೆಲೆ ಗಾಯಕ ಪ್ರಶಸ್ತಿ ಬಂದಾಗ. ಇದರಿಂದಾಗಿ ಸುಬ್ಬಣ್ಣ ರಾಜ್ಯದಲ್ಲಿ ಬೆಳಕಿಗೆ ಬಂದರು. ಅವರು ಅದುವರೆಗೆ ಸುಗಮ ಸಂಗೀತ ಗಾಯಕರಾಗಿ ಸೀಮಿತವಾದ ಜನಪ್ರಿಯತೆ ಗಳಿಸಿದ್ದರಷ್ಟೆ. ಕಲಾತ್ಮಕ ಹಿಂದಿ ಚಿತ್ರಗಳಿಗ ಚಿತ್ರಕಥೆಯನ್ನು ಬರೆದಿದ್ದ ಎಂ.ಎಸ್.ಸತ್ಯುರವರ ಪತ್ನಿ ಶಮಾ ಜೈದಿ ಈ ಚಿತ್ರಕ್ಕೂ ಅದೇ ಜವಾಬ್ದಾರಿ ಹೊತ್ತರು. ಚಿತ್ರದಲ್ಲಿನ ಜಾನಪದ ಸೊಗಡು ಮಾತ್ರ ಉಳಿದುಕೊಂಡಿತು. ಸುಂದರನಾಥ್ ಸುವರ್ಣರ ವರ್ಣ ಛಾಯಾಗ್ರಹಣ ವೈಭವಕ್ಕೆ ಮಾರು ಹೋಗದೆ, ಬಣ್ಣಗಳ ಬಳಕೆಯಲ್ಲಿ ಸಂಯಮವನ್ನು ತೋರಿತು.

ಕಡಿಮೆ ವೆಚ್ಚದಲ್ಲಿ ಮೂರು ವರ್ಣ ಚಿತ್ರಗಳನ್ನು ಒಟ್ಟಾರೆ ನಿರ್ಮಿಸುವ ಜಿ.ವಿ.ಅಯ್ಯರ್‌ರವರ ವಿಶಿಷ್ಟ ಯೋಜನೆಯಡಿಯಲ್ಲಿ ಬಿಡುಗಡೆಯಾದ ಎರಡನೆಯ ಚಿತ್ರ 'ನಾಳೆಗಳನ್ನು ಮಾಡುವವರು'. ಅಯ್ಯರ್ ನಿರ್ದೇಶಿಸಿದ ಈ ಚಿತ್ರದಲ್ಲಿ ಕೂಡ ರೇಖಾರಾವ್ ಅವರೇ ನಾಯಕಿ. ಛಾಯಾಪತಿ ಮತ್ತು ದೇವದಾಸ್ ಎಂಬ ಹೊಸ ರಂಗಭೂಮಿಯ ಕಲಾವಿದರ ಪರಿಚಯವಾಗುವುದರೊಂದಿಗೆ ಬಿ.ವಿ.ಕಾರಂತರ ಗರಡಿಯ ನಿರ್ದೇಶಕ ಟಿ.ಎಸ್.ರಂಗಾರಿಗೂ ಚಿತ್ರದಲ್ಲಿ ಮುಖ್ಯ ಪಾತ್ರವೊಂದಿತ್ತು. ನುರಿತ ರಂಗಭೂಮಿಯ ನಟ ಹಾಗೂ ಸಾಹಿತಿ ಯೋಗಾನರಸಿಂಹ (ಯೋಗಣ್ಣ) ಪ್ರಥಮ ಬಾರಿ ಚಿತ್ರವೊಂದಕ್ಕೆ ಸಂಗೀತ ನಿರ್ದೇಶನ ಮಾಡಿದ್ದೊಂದು ವಿಶೇಷ. ಆದರೆ ತ್ರಿವಳಿಗಳಲ್ಲಿ ಒಂದು ಚಿತ್ರವಾದ 'ಪ್ರೇಮ-ಕಾಮ'ದಂತೆಯೇ ಈ ಚಿತ್ರ ಕೂಡ ಯಾರ ಗಮನಕ್ಕೂ ಬಾರದಂತಾಯಿತು.

ನಿರ್ದೇಶಕ ಲಕ್ಷ್ಮೀನಾರಾಯಣ್ ತಮ್ಮ ಮುಂದಿನ ಚಿತ್ರಕ್ಕೆ ಖ್ಯಾತ ವಿಮರ್ಶಕ ಎಲ್.ಎಸ್.ಶೇಷಗಿರಿರಾಯರ 'ಮುಯ್ಯಿ' ಕಥೆಯನ್ನಾಧರಿಸಿದರು. ಆ ವೇಳೆಗಾಗಲೇ ಅವರು ವ್ಯಾಪಾರಿ ಚಿತ್ರರಂಗದ ಎಲ್ಲ ಪರಿಕರಗಳನ್ನೂ ತಮ್ಮ ಚಿತ್ರಗಳಲ್ಲಿ ವರ್ಜಿಸಲು ಮನಸ್ಸು ಮಾಡಿದ್ದಾಗಿತ್ತು. ಈ ಚಿತ್ರದ ವಸ್ತು ಬಸ್ ಚಾಲಕನೊಬ್ಬ ತನಗೆ ಹಿಂದೆ ಅನ್ಯಾಯ ಮಾಡಿದ್ದ ಹಳೆಯ ವೈರಿಯೊಬ್ಬನ ಮೇಲೆ ಸೇಡು ತೀರಿಸಿಕೊಳ್ಳಲು ಸಿಕ್ಕಿದ ಅನಿರೀಕ್ಷಿತ ಅವಕಾಶವನ್ನು ಉಪಯೋಗಿಸಿಕೊಳ್ಳುವ ಪ್ರಯತ್ನದಲ್ಲಿ ಕೊನೆಯ ನಿಮಿಷದಲ್ಲಿ ತಾನೇ ಸಾವನ್ನಪ್ಪಿ, ತನ್ನ ವೈರಿಯನ್ನು ಮತ್ತು ಬಸ್ಸಿನಲ್ಲಿದ್ದ ಮದುವೆ ದಿಬ್ಬಣವನ್ನು ಉಳಿಸುವುದಾಗಿತ್ತು. ತೀವ್ರತರವಾದ ಭಾವನೆಗಳ ಪ್ರದರ್ಶನವೇ ಪ್ರಮುಖವಾಗಬೇಕಾಗಿದ್ದ ಈ ಚಿತ್ರದಲ್ಲಿ ಲಕ್ಷ್ಮೀನಾರಾಯಣ್ ಕಲ್ಪನೆಯ ಸಂಯಮದ




(ಚಿತ್ರ ೧೦೩) 'ಮುಯ್ಯಿ' ಚಿತ್ರದಲ್ಲಿ ಲೋಕೇಶ್ ಮತ್ತು ಬಿ.ಆರ್.ಜಯರಾಮ್



(ಚಿತ್ರ ೧೦೪) 'ಅರಿವು' ಚಿತ್ರದಲ್ಲಿ ಜಿ.ಕೆ.ಗೋವಿಂದರಾವ್, ಮಾನು



(ಚಿತ್ರ ೧೦೫) 'ನಾ ನಿನ್ನ ಬಿಡಲಾರೆ' ಚಿತ್ರದಲ್ಲಿ ಲಕ್ಷ್ಮೀ

ನಿರೂಪಣೆ ಚಿತ್ರಕ್ಕೆ ಭಾರಿ ಕೊರತೆಯೇ ಆಯಿತು. ಇಂತಹ ಕಥೆಗೆ ಅಷ್ಟು ನೀರಸವಾದ ಚಿತ್ರೀಕರಣ ಸಮಂಜಸವಾಗಿರಲಿಲ್ಲ. ಅಲ್ಲದೆ ಕೈಲಾಸಂ ಅವರ 'ನಂ ತಿಪ್ಪಾರಳ್ಳಿ ಬಲು ದೂರ...' ಹಾಡನ್ನು ಚಿತ್ರಕ್ಕೆ ಆಯ್ಕೆ ಮಾಡಿಕೊಂಡು ಅದನ್ನು ಚಿತ್ರದಲ್ಲಿ ಹಾಡಿಸಿದ ಲಕ್ಷ್ಮೀನಾರಾಯಣ್‌ಗೆ ಆ ಹಾಡನ್ನು ಕಥೆಯಲ್ಲಿನ ಮದುವೆ ಗಂಡಿನ ಭಾವನೆಗಳಿಗೆ ಸಂಕೇತವಾಗಿ ಬಳಸಿಕೊಳ್ಳಬಹುದೆಂಬ ಕಲ್ಪನೆಯೂ ಮೂಡಿದಂತ ಕಾಣಲಿಲ್ಲ. ಆ ಗೀತೆಯನ್ನು ಹಾಡಿ, ನಟಿಸಿದ ಜಿ.ಎಸ್.ರಾಮರಾಯರು ಕೈಲಾಸಂ ಅವರ ಆಪ್ತ ಗೆಳೆಯ. ಅಂಥವರನ್ನು ತೆರೆಗೆ ತಂದದ್ದೇ ಎನ್ನೆಲ್ ಅವರ ಪಾಲಿಗೆ ವಿಶೇಷವಾಗಿ ಹೋಗಿತ್ತು. ಹೀಗೆ ಏಕಮುಖಿ ದೃಷ್ಟಿಕೋನ ಅವರ ಚಿತ್ರಗಳಿಗೆ ಒಂದು ವೈಶಿಷ್ಟ್ಯ ತಂದಂತೆಯೇ ಅದೇ ಒಂದು ಕೊರತೆಯೂ ಆಯಿತು.

ಮಲೆನಾಡು ಪ್ರದೇಶದ ಗಿರಿಕಂದರಗಳಲ್ಲಿ ಚಿತ್ರಿತವಾದ 'ಮುಯ್ಯಿ'ಯ ಛಾಯಾಗ್ರಾಹಕ ಎಸ್.ಜಿ.ರಾಯರು ಚಲಿಸುವ ಬಸ್ಸಿನಲ್ಲಿಯೇ ಹೆಚ್ಚು ಕಡಿಮೆ ಇಡೀ ಚಿತ್ರದ ಶೂಟಿಂಗ್ ನಿರ್ವಹಿಸಲು ಸಾಕಷ್ಟು ಪರದಾಡುವಂತಾಯಿತು. ಇದರಿಂದ ಬಸ್ಸಿನಲ್ಲಿ ಕ್ಯಾಮರಾ ಇಟ್ಟರೆ ಅದು ಸ್ಥಿರವಾಗಿ ನಿಲ್ಲಲು ಸಾಧ್ಯವಾಗದೆ ಚಿತ್ರದ 'ಫ್ರೇಂ'ಗಳು ಮೇಲೆ-ಕೆಳಗೆ ನರ್ತನ ಮಾಡುವಂತಿತ್ತು. ಈ ಆಭಾಸವನ್ನು ತಡೆಗಟ್ಟಲು ಅವರು ಹೊಸ ಸಲಕರಣೆಯೊಂದನ್ನೇ ಕಂಡು ಹಿಡಿಯಬೇಕಾಯಿತು. ಚಿತ್ರದ ಪ್ರಚಾರಕ್ಕಾಗಿ ಲಕ್ಷ್ಮೀನಾರಾಯಣ್ ಈ ಅಂಶವನ್ನು ಸಾಕಷ್ಟು ಬಳಸಿಕೊಂಡರು. ಲೋಕೇಶ್ ಬಸ್ಸಿನ ಚಾಲಕನಾಗಿ ಲಕ್ಷ್ಮೀನಾರಾಯಣ್‌ರ ಸಂಯಮವನ್ನು ಹತ್ತಿಕ್ಕಿ ಅದಷ್ಟು ಪರಿಣಾಮಕಾರಿಯಾಗಿ ಅಭಿನಯಿಸಿದರು. ಆದರೆ ಚಿತ್ರ ಜನಪ್ರಿಯವಾಗಲಿಲ್ಲ. ಮುಖ್ಯಮಂತ್ರಿ ಚಂದ್ರು ಈ ಚಿತ್ರದ ನಂತರ ವಾಣಿಜ್ಯ ಚಿತ್ರರಂಗದವರ ಗಮನ ಸೆಳೆದರು. ಗಾಯಕಿಯಾಗಿದ್ದ ರತ್ನಮಾಲಾ (ಜಯಮಾಲಾ ಅವರ ಸೋದರಿ) ಹಾಗೂ ಪುರಂದರ ಈ ಚಿತ್ರದಲ್ಲಿ ಅಭಿನಯಿಸಿದರು. ಅವರು ಅನಂತರ ದಂಪತಿಗಳಾದರು.

ಹವ್ಯಾಸಿ ರಂಗಭೂಮಿಯಲ್ಲಿ ಬ್ರೆಕ್ಟ್ ಪ್ರಭಾವ ದಟ್ಟವಾಗಿದ್ದ ದಿನಗಳು ಇವು. ಅದೇ ಹಿನ್ನೆಲೆಯಲ್ಲಿ ಬಂದ ಕಟ್ಟೆ ರಾಮಚಂದ್ರ ಅವರು ಜಿ.ಕೆ.ಗೋವಿಂದರಾವ್ ಮತ್ತು ಮಾನು ತಾರಾಗಣದಲ್ಲಿ ನಿರ್ದೇಶಿಸಿದ ಚಿತ್ರ 'ಅರಿವು'. ಜೇಮ್ಸ್ ಜಾಯ್ಸ್‌ನ ಪ್ರಜ್ಞಾಪ್ರವಾಹ (Stream of Conciousness) ಶೈಲಿಯ ಪ್ರಭಾವವನ್ನು ಒಳಗೊಂಡಿತ್ತು. ಬ್ಯಾಂಕ್ ನೌಕರರಾಗಿದ್ದೂ ಅಭಿನಯ ಮತ್ತು ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದ ಪದ್ಮಾ ಕುಮಟ ಮತ್ತು ಆಕೆಯ ಪತಿ ಸುರೇಶ್ ಕೆಲಸ ಮಾಡುವ ಬ್ಯಾಂಕಿನಿಂದಲೇ ಸಾಲಪಡೆದು ನಿರ್ಮಿಸಿದ ಚಿತ್ರ ಇದು. ಪದ್ಮಾ ಅವರಿಗೆ ಆ ವೇಳೆಗೆ 'ಚೋಮನದುಡಿ' ಚಿತ್ರದ ಮುಖ್ಯ ಪಾತ್ರದಲ್ಲಿ ಅಭಿನಯಿಸಿದ ಅನುಭವವೂ ಇತ್ತು. ಪದ್ಮಾ ಚಿತ್ರದಲ್ಲಿ ಪ್ರಮುಖ ಪಾತ್ರವೊಂದನ್ನೂ ನಿರ್ವಹಿಸಿದರು. ಅಮೂರ್ತ ಶೈಲಿಯ ನಿರೂಪಣೆಯಿದ್ದ ಚಿತ್ರ ಮೇಲ್ನೋಟಕ್ಕೆ ಮಕ್ಕಳ ಚಿತ್ರದಂತೆ ಕಂಡರೂ, ಸಾಮಾನ್ಯ ಪ್ರೇಕ್ಷಕರಿಗೆ ಕಬ್ಬಿಣದ ಕಡಲೆಯೇ ಆಗಿತ್ತು. ಆಗ ಸಾಮಾನ್ಯವಾಗಿ ಎಲ್ಲ ಹೊಸ ಅಲೆ ಚಿತ್ರಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡ ಬಿ.ವಿ.ಕಾರಂತರು 'ಅರಿವು' ಚಿತ್ರಕ್ಕೆ ಸಂಗೀತ ನೀಡಿದರು. ಬುದ್ಧಿಮಾಂದ್ಯವಿದ್ದ ತರುಣನ ಪಾತ್ರದಲ್ಲಿ ಮಾನುವಿನ ಅಭಿನಯ ಶೈಲಿ ವಿಮರ್ಶಕರನ್ನು ಮೆಚ್ಚಿಸಿತು. ಚಿತ್ರಕ್ಕೆ ರಾಷ್ಟ್ರೀಯ ಮಟ್ಟದಲ್ಲಿ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಮತ್ತು ರಾಜ್ಯ ಮಟ್ಟದಲ್ಲಿ ೧೯೭೯-೮೦ರ ಅತ್ಯುತ್ತಮ ಚಿತ್ರ ಪ್ರಶಸ್ತಿಗಳು ಲಭ್ಯವಾದವು. ಈ ಚಿತ್ರದ ಯಶಸ್ಸಿಗೆ ಹವ್ಯಾಸಿ ರಂಗಭೂಮಿಯಲ್ಲಿ ಖ್ಯಾತಿಗಳಿಸಿದ ಟಿ.ಎನ್.ನರಸಿಂಹನ್ ಕಥೆ, ಚಿತ್ರಕಥೆ ಮತ್ತು ಸಂಭಾಷಣೆ ರಚಿಸಿದ್ದರು. ಈ ಚಿತ್ರದಲ್ಲಿ ಬಳಸಿಕೊಂಡ ಕಾಮನಹಬ್ಬದ ಕಾಮನನ್ನು ಸುಡುವ ದೃಶ್ಯವೊಂದು ವಿಶೇಷವಾಗಿತ್ತು, ಸಾಂಕೇತಿಕವಾಗಿತ್ತು.

ಕನ್ನಡ ಚಿತ್ರರಂಗದ ವ್ಯಾಪಾರಿ ಚಿತ್ರಗಳ ಸಾಲಿನಲ್ಲಿ 'ನಾ ನಿನ್ನ ಬಿಡಲಾರೆ'ಗೆ ಒಂದು ವಿಶೇಷ ಸ್ಥಾನವಿದೆ. ಅನಂತನಾಗ್-ಲಕ್ಷ್ಮೀ ತಾರಾಜೋಡಿಯನ್ನು ಜನಪ್ರಿಯತೆಯ ಉತ್ತುಂಗಕ್ಕೆ ಏರಿಸಿದ ಚಿತ್ರವಿದು. ಅವರಿಬ್ಬರೂ ಒಟ್ಟಾಗಿ ಅಭಿನಯಿಸಿದ್ದು ಮೊದಲು ಈ ಚಿತ್ರದಲ್ಲಿಯೇ. ನಾಸ್ತಿಕ ಗಂಡ ಮತ್ತು ಗುರು ರಾಘವೇಂದ್ರರಲ್ಲಿ ಅಪಾರ ನಂಬಿಕೆಯಿಟ್ಟು ತನ್ನ ಜೀವನವನ್ನು ಸಾಗಿಸಿದ ಹೆಣ್ಣೊಬ್ಬಳ ಪಾತ್ರಗಳಲ್ಲಿ ಅವರಿಬ್ಬರೂ ಅಭಿನಯಿಸಿದ ರೀತಿ ಅವರನ್ನು ಜನ ಬೇಡುವಂತಹ ಜೋಡಿಯನ್ನಾಗಿ ಮಾಡಿತು. ಈ ಸಾಮಾಜಿಕ ಚಿತ್ರದಲ್ಲಿ ಕೆಲವು ಪವಾಡಗಳು ಇದ್ದು ಹೆಂಗೆಳೆಯರಿಗೆ ವಿಶೇಷವಾಗಿ ಪ್ರಿಯವಾದವು. ಅದೇ ಸಮಯದಲ್ಲಿ ಮೂಢನಂಬಿಕೆಗಳನ್ನು ಪ್ರತಿಪಾದಿಸುವ ಚಿತ್ರವೆಂಬ ತೆಗಳಿಕೆಗೂ ಪಾತ್ರವಾಯಿತು. ನಿರ್ದೇಶಕ ವಿಜಯ್ ತಮ್ಮ ಯಶಸ್ವಿ ಚಿತ್ರಗಳ ಸಾಲಿಗೆ ಈ ಚಿತ್ರವನ್ನೂ ಸೇರಿಸಿದರು. ಕೆ.ವಿಜಯಾ ಈ ಚಿತ್ರದಲ್ಲಿ



(ಚಿತ್ರ ೧೦೬) 'ಸೀತಾರಾಮು' ಚಿತ್ರದಲ್ಲಿ ಮಂಜುಳಾ ಮತ್ತು ಶಂಕರ್‌ನಾಗ್



(ಚಿತ್ರ ೧೦೭)'ಹಾಲಿಯ ಹಾಲಿನ ಮೇವು' ಚಿತ್ರದಲ್ಲಿ ತೂಗುದೀಪ ಶ್ರೀನಿವಾಸ್, ಬಾಲಕೃಷ್ಣ, ಶ್ರೀನಿವಾಸಮೂರ್ತಿ, ರಾಜಕುಮಾರ್ ಮತ್ತು ಸಂಪತ್

ಖಳನಾಯಕಿಯ ಪಾತ್ರ (ಪ್ರೇತ ರೂಪ)ದಲ್ಲಿ ಎಷ್ಟು ಪರಿಣಾಮಕಾರಿಯಾಗಿ ಅಭಿನಯಿಸಿದರೆಂದರೆ ಆಕೆ ಮಹಿಳಾ ಪ್ರೇಕ್ಷಕರ ಕೋಪಕ್ಕೆ ತುತ್ತಾದರು. ಸಿ.ಜಯರಾಂ ಈ ಜನಪ್ರಿಯ ಚಿತ್ರದ ನಿರ್ಮಾಪಕರು.

ನೋಡುವುದಕ್ಕೆ ಮುಗ್ಧರಂತೆ ಕಾಣುತ್ತಿದ್ದರೂ ಕಥೆಗಳ ವಿಷಯದಲ್ಲಿ ಸಾಮಾನ್ಯ ಪ್ರೇಕ್ಷಕರ ನಾಡಿಯನ್ನು ಚೆನ್ನಾಗಿ ತಿಳಿದುಕೊಂಡಿದ್ದವರು ನಿರ್ಮಾಪಕ ಅಬ್ಬಾಯಿನಾಯ್ಡು. ತಾವೇ ನಿರ್ಮಿಸಿದ 'ಸೀತಾರಾಮು' ಚಿತ್ರದಲ್ಲಿ ಅವರು ಒಂದು ದೊಡ್ಡ ಆವಿಷ್ಕಾರವನ್ನೇ ಮಾಡಿದರು. ಸಾಹಸಪ್ರಿಯ ನಾಯಕ ಸತ್ತ ಮೇಲೆ ಆತನ ಮಿದುಳನ್ನು ನಾಯಕಿಗೆ ಸ್ಥಳಾಂತರ ಮಾಡಿದರೆ ? ಮೇಲ್ನೋಟಕ್ಕೆ ಬಾಲಿಶವಾಗಿ ಕಾಣುವ ಈ ಕಲ್ಪನೆ ಚಿತ್ರೀಕರಣದಲ್ಲಿ ವಿಶಿಷ್ಟ ಕ್ಯಾಮರಾ ಕೋನಗಳು ಮತ್ತು ಸಂಕಲನ ತಂತ್ರಗಳಿಂದಾಗಿ ಗಂಭೀರವಾದ ಪರಿಣಾಮ ಬೀರಿತು. ಈ ಚಿತ್ರ ಅವರಿಗೆ ಆಶ್ಚರ್ಯಕರವೆನಿಸುವ ಆರ್ಥಿಕ ಯಶಸ್ಸನ್ನು ತಂದುಕೊಟ್ಟಿತು. ನಿರ್ದೇಶಕ ಸೋಮಶೇಖರ್ ಲೆಕ್ಕಕ್ಕೆ ಸೇರಿದ ಇನ್ನೊಂದು ಜಾಕ್‌ಪಾಟ್ ಈ ಚಿತ್ರ. ಎಂ.ಡಿ.ಸುಂದರ್ ಮೂಲಕಥೆಯನ್ನು ಬರೆದು, ಚಿತ್ರಕಥೆ ಮತ್ತು ಸಂಭಾಷಣೆಯನ್ನು ಚಿ.ಉದಯಶಂಕರ್ ನಿರ್ವಹಿಸಿದರು. ಶಂಕರ್‌ನಾಗ್-ಮಂಜುಳಾ ಪ್ರಧಾನ ಪಾತ್ರಗಳಲ್ಲಿದ್ದು ಸಾಹಸ ದೃಶ್ಯಗಳೇ ವಿಜೃಂಭಿಸಿದ ಈ ಚಿತ್ರದ ಯಶಸ್ಸು ನಿರ್ಮಾಪಕರಿಗೇ ಆಶ್ಚರ್ಯ ತಂದಿತು. ಮಂಜುಳಾರಂತೂ ಈ ಚಿತ್ರದಿಂದಾಗಿ ಒಂದು ಹೊಸ ಇಮೇಜನ್ನೇ ಗಳಿಸಿಕೊಂಡರು. ಮೊದಲ ಬಾರಿಗೆ ಶಂಕರ್‌ನಾಗ್ ವಾಣಿಜ್ಯ ಚಿತ್ರರಂಗ ಪ್ರವೇಶಿಸಿದರು. ಅಲ್ಲಿಯ ನೃತ್ಯ, ವೇಷ-ಭೂಷಣಗಳ ಇರಿಸು-ಮುರಿಸನ್ನು ರಂಜನೀಯವಾಗಿ ಬಹುಕಾಲ ಹೇಳುತ್ತಿದ್ದುದುಂಟು. ಅಬ್ಬಾಯಿನಾಯ್ಡು ಅವರು ಇಂಥ ಹೊಸಬರನ್ನು ಪ್ರಧಾನ ಪಾತ್ರದಲ್ಲಿ ತರುವುದೇ ಮೊದಲಾದ ವಿಚಿತ್ರ ಸಾಹಸ ಮಾಡುತ್ತಲೇ ಬಂದರು. ಅದರಿಂದ ಅವರಿಗೆ ಯಶಸ್ಸೂ ಸಿಕ್ಕಿತು. ಮಿಗಿಲಾಗಿ ಅವರು ಪರಿಚಯಿಸಿದ-ಪ್ರೋತ್ಸಾಹಿಸಿದ ಕಲಾವಿದರು ಪ್ರವರ್ಧಮಾನಕ್ಕೆ ಬಂದಾಗ ಅವರು ಅಗಣಿತ ಆತ್ಮತೃಪ್ತಿಯನ್ನು ಅನುಭವಿಸುತ್ತಿದ್ದರು.

ತಮ್ಮ ಚಿತ್ರಗಳನ್ನು ಆದಷ್ಟೂ ಅದ್ದೂರಿಯಾಗಿ ನಿರ್ಮಿಸುವ ಜೊತೆಗೆ ಕರ್ನಾಟಕದ ಅನೇಕ ವೈಶಿಷ್ಟ್ಯಗಳು ಮತ್ತು ಪರಂಪರೆಗಳನ್ನೂ ಅವುಗಳಲ್ಲಿ ಪರಿಣಾಮಕಾರಿಯಾಗಿ ಪ್ರತಿಬಿಂಬಿಸುವ ಗುರಿಯನ್ನಿಟ್ಟುಕೊಂಡಿದ್ದ ನಿರ್ಮಾಪಕ ಕೆ.ಸಿ.ಎನ್.ಗೌಡರು ಶ್ರಮ ವಹಿಸಿ ತಯಾರಿಸಿದ ಚಿತ್ರ 'ಹುಲಿಯ ಹಾಲಿನ ಮೇವು'. ಕೊಡಗು ಸ್ವತಂತ್ರ ರಾಜ್ಯವಾಗಿದ್ದಾಗ ನಡೆಯಿತೆಂದು ಹೇಳಲಾದ ಅಲ್ಲಿಯ ಅರಮನೆಯೊಳಗಿನ ಸಂಚುಗಳು, ಗುಂಪುಗಾರಿಕೆಯನ್ನು ಕುರಿತು ಭಾರತೀಸುತ ರಚಿಸಿದ ಕಾದಂಬರಿಯ ಆಧಾರದ ಮೇಲೆ ವಿಜಯ್ ನಿರ್ದೇಶಿಸಿದ ಸಿನಿಮಾಸ್ಕೋಪ್ ಚಿತ್ರ ಇದು. ಕೊಡವರ ವಿಶಿಷ್ಟ ಜೀವನ ಶೈಲಿ ಈ ಚಿತ್ರದಲ್ಲಿ ಪ್ರಾಮಾಣಿಕವಾಗಿ ಮೂಡಿ ಬಂತು. ಚಿತ್ರಕಥೆಯ ರಚನೆಯ ಹಿಂದೆ ಪ್ರದೀಪ್, ಶ್ರಮಗಳೂ ಕಂಡವು. ರಾಜಕುಮಾರ್‌ರೊಂದಿಗೆ ಜಯಪ್ರದ ಮತ್ತು ಜಯಚಿತ್ರ ಅಭಿನಯಿಸಿದರು.

ಕನ್ನಡ ಚಿತ್ರರಂಗ ಹಲವು ಉತ್ತುಂಗ ಶಿಖರಗಳನ್ನೇರಿದ ಈ ವರ್ಷಗಳಲ್ಲೇ ನಾಗರಹೊಳೆ ಅರಣ್ಯ ಪ್ರದೇಶದಲ್ಲಿ ಚಿತ್ರ ತಂಡ ಮತ್ತು ಅರಣ್ಯಾಧಿಕಾರಿಗಳ ಅಚಾತುರ್ಯದಿಂದ ಎಂದೂ ಮರೆಯಲಾಗದ ದುರಂತ ಸಂಭವಿಸಿತು. ಈ ಅದ್ದೂರಿ ಚಿತ್ರಕ್ಕೆ ಹಲವು ಆನೆಗಳನ್ನೊಳಗೊಂಡ ಕಾಡ್ಗಿಚ್ಚಿನ ಒಂದು ಸನ್ನಿವೇಶವನ್ನು ಯೋಜಿಸಲಾಗಿತ್ತು. ಅದರ ಪ್ರಕಾರ ಆನೆಗಳನ್ನು ವೃತ್ತಾಕಾರದ ಹುಲ್ಲಿನ ನಡುವೆ ನಿಲ್ಲಿಸಿ, ಹುಲ್ಲಿಗೆ ಬೆಂಕಿ ಹಚ್ಚಿದಾಗ ಅವು ಹೊರಬರಲು ಒಂದೆಡೆ ಮಾತ್ರ ಅವಕಾಶ ಕಲ್ಪಿಸಲಾಗಿತ್ತು. ಆದರೆ ಬೆಂಕಿ ಹಚ್ಚಿದ ಕೂಡಲೇ ಅಸಾಧ್ಯ ಹೊಗೆ ತುಂಬಿಕೊಂಡು ಹಲವು ಆನೆಗಳು ಹೊರಗಡೆ ಬರುವ ಮಾರ್ಗ ಕಾಣದೆ ಪ್ರಾಣಾಂತಿಕ ಗಾಯಗಳಿಗೆ ಗುರಿಯಾದವು. ಈ ದೃಶ್ಯಕ್ಕೆ ನಿರ್ಮಾಪಕ ಕೆ.ಸಿ.ಎನ್.ಗೌಡರು ನೂರು ಆನೆಗಳನ್ನು ಅಪಾರ ವೆಚ್ಚದಲ್ಲಿ ಕಲೆಹಾಕಿದ್ದರೆಂದು ನಿರ್ದೇಶಕ ವಿಜಯ್ ಹೇಳುತ್ತಾರೆ. ಆನೆಗಳಿಗೆ ಕಾಲಿಗೆ ಹಾಕಿದ್ದ ಸರಪಣಿಗಳನ್ನು ಬಿಚ್ಚಿಸಿ ತಾವು ಚಿತ್ರಣ ನಡೆಸಲು ಸಿದ್ಧತೆ ಮಾಡಿಕೊಂಡಿದ್ದರೂ ಆನೆಗಳು ಓಡಿಹೋಗುವ ಭಯದಿಂದ ಮಾವುತರು ಆ ಆನೆಗಳ ಕಾಲಿಗೆ ಸರಪಣಿಯನ್ನು ಕಟ್ಟಿದ್ದರಿಂದ ಬೆಂಕಿಯಿಂದ ಬೆದರಿದ ಆನೆಗಳು ಓಡಿಹೋಗಲು ಸಾಧ್ಯವಾಗಲಿಲ್ಲ. ಹೀಗಾಗಿ ದೊಡ್ಡ ದುರಂತವೇ ಜರುಗಿತು. ಈ ದುರ್ಘಟನೆ ರಾಜ್ಯದಾದ್ಯಂತ ದೊಡ್ಡ ಕೋಲಾಹಲವನ್ನೇ ಎಬ್ಬಿಸಿ, ಅಂದಿನಿಂದ ಬಹಳ ಕಾಲ ಕಾಡುಗಳಲ್ಲಿ ಚಿತ್ರೀಕರಣ ನಡೆಸಲು ಅನುಮತಿ ಪಡೆಯುವುದಕ್ಕೆ ಶತಪ್ರಯತ್ನ ಮಾಡಬೇಕಾಯಿತು. ಇದೇ ಚಿತ್ರದ ಒಂದು ಸನ್ನಿವೇಶದಲ್ಲಿ ರಾಜಕುಮಾರ್‌ಗೆ ಆನೆಯೊಂದರಿಂದ ಪ್ರಾಣಾಪಾಯ ಒದಗಿತ್ತು. ಚಿತ್ರದಲ್ಲಿ ಮುಖ್ಯ ಪಾತ್ರ ಎಂದು ಭಾವಿಸುವ ಮಹಾರಾಜನಾಗಿ ಎಂ.ಪಿ.ಶಂಕರ್ ಇದ್ದರು. ಅವರ ಬಳಿ ಅಧೀನ ಹುದ್ದೆಯಲ್ಲಿ ರಾಜಕುಮಾರ್ ಪಾತ್ರವಿತ್ತು. ರಾಜನನ್ನು ಉಳಿಸಲು ತಾನೇ ಪ್ರಾಣತ್ಯಾಗ ಮಾಡುವ ಸನ್ನಿವೇಶ. ಅಭಿನಯಕ್ಕೆ, ಸಾಹಸಕ್ಕೆ ಅವಕಾಶಗಳಿದ್ದರೂ ಪಾತ್ರದ ಸ್ಥಾನ-ಮಾನದ ಹಿನ್ನೆಲೆಯಲ್ಲಿ ಪ್ರೇಕ್ಷಕರು ರಾಜ್ ಪಾತ್ರವನ್ನು ಒಪ್ಪಿಕೊಳ್ಳಲಿಲ್ಲ.

ಇದೇ ವರ್ಷ ತೆರೆಗೆ ಬಂದು ಭಾರಿ ಯಶಸ್ಸನ್ನು ಗಳಿಸಿದ ಚಿತ್ರ 'ಚಂದನದ ಗೊಂಬೆ'. ಜನಪ್ರಿಯ ನಿರ್ದೇಶಕ ಜೋಡಿ ದೊರೆ-ಭಗವಾನ್‌ರವರು ಕಾದಂಬರಿ ಸಾಹಿತ್ಯವನ್ನು ಪರಿಣಾಮಕಾರಿಯಾಗಿ ತೆರೆಗೆ ತರುವುದರಲ್ಲಿ ಸಿದ್ಧಹಸ್ತರೆಂಬುದನ್ನು ಮತ್ತೆ



(ಚಿತ್ರ ೧೦೮)'ಚಂದನದ ಗೊಂಬೆ' ಚಿತ್ರದಲ್ಲಿ ಲಕ್ಷ್ಮೀ



(ಚಿತ್ರ ೧೦೯) 'ಪುಟಾಣಿ ಏಜೆಂಟ್ ೧, ೨, ೩' ಚಿತ್ರದಲ್ಲಿ ಮಾ।ರಾಮಕೃಷ್ಣ ಹೆಗ್ಡೆ, ಬೇಬಿ ಇಂದಿರಾ ಮತ್ತು ಮಾ।ಭಾನು ಪ್ರಕಾಶ್

ತೋರಿಸಿಕೊಟ್ಟರು. ತ.ರಾ.ಸುಬ್ಬರಾಯರ ಸಾಂಸಾರಿಕ ಕಥೆ ಇದು. ಈ ಚಿತ್ರ ತೆರೆಗೆ ಬರುವ ವೇಳೆಗೆ ಅನಂತ್‌ನಾಗ್-ಲಕ್ಷ್ಮೀ ಜೋಡಿ ಕೂಡ ತುಂಬಾ ಜನಪ್ರಿಯವಾಗಿತ್ತು. ಅಂತೆಯೇ ತ.ರಾ.ಸು.ರವರ ಕೆಲವು ಸಾಮಾಜಿಕ ಕಾದಂಬರಿಗಳೂ ಅವರಿಗೆ ಹೇಳಿ ಮಾಡಿಸಿದಂತಿದ್ದವು. ಚಿತ್ರದ ಆರಂಭದಲ್ಲಿ ಅನಂತ್‌ನಾಗ್ ಅವರ ವಿನೋದಾತ್ಮಕ ಪಾತ್ರಾಭಿನಯದಿಂದ ರಂಜಿಸಿದರೂ ಒಂದು ಆಕಸ್ಮಿಕದಲ್ಲಿ ಆತ ತೀರಿಕೊಂಡ ನಂತರ ದುಃಖಕರವಾಗಿ ತಿರುಗುತ್ತದೆ. ಇಡೀ ಚಿತ್ರ ಅಂದಿನ ಸಮಾಜದಲ್ಲಿ ಒಂಟಿ ಹೆಣ್ಣಿನ ಬಾಳಿನ ವಸ್ತುಸ್ಥಿತಿಯನ್ನು ಸಮರ್ಥವಾಗಿ ಪ್ರತಿಬಿಂಬಿಸುವಂತಿತ್ತು. ಈ ಚಿತ್ರದಲ್ಲಿ ಲಕ್ಷ್ಮೀಯ ಅಭಿನಯ ಉತ್ತಮವಾಗಿತ್ತು. ಮತ್ತೊಮ್ಮೆ ದೊರೆ-ಭಗವಾನ್, ಅನಂತ್‌ನಾಗ್-ಲಕ್ಷ್ಮೀ ಮತ್ತು ರಾಜನ್-ನಾಗೇಂದ್ರರವರ ಸಹಯೋಗ ಫಲಕಾರಿಯಾಯಿತು. ಎಸ್.ವಿ.ವತ್ಸಲನ್ ಅವರು ತಯಾರಿಸಿದ ಈ ಚಿತ್ರದಲ್ಲಿ ಇನ್ನೊಂದು ಆಕರ್ಷಣೆಯೆಂದರೆ ಚಿ.ಉದಯಶಂಕರ್‌ರವರ ಪರಿಸರ ಸಹಜವಾದ ಸಂಭಾಷಣೆ. ಲೋಕೇಶ್ ಗಂಭೀರವಾದ ಪಾತ್ರವೊಂದರಲ್ಲಿ ಮೆಚ್ಚುಗೆ ಗಳಿಸಿದರು.

೧೯೭೮ರಲ್ಲಿ ಮೂರು ಮಕ್ಕಳ ಚಿತ್ರಗಳು ಬಿಡುಗಡೆಯಾಗಿದ್ದೊಂದು ವಿಶೇಷ. 'ನಾಗರಹೊಳೆ'ಯನ್ನು ನಿರ್ಮಿಸಿದ ಸಾಹಸಿ ಪ್ಲಾಂಟರುಗಳ ತಂಡದಲ್ಲಿ ಒಬ್ಬರಾಗಿದ್ದ ಎಂ.ಕೆ.ಬಾಲಾಜಿಸಿಂಗ್ ಮತ್ತು ಅವರ ಕೆಲವು ಮಿತ್ರರು ತಯಾರಿಸಿದ 'ಪುಟಾಣಿ ಏಜೆಂಟ್ಸ್ ೧, ೨, ೩' ವರುಣ ಫಿಲಂಸ್ ಲಾಂಛನದಲ್ಲಿ ತಯಾರಾಗಿ, ತನ್ನ ಹೆಸರಿನಿಂದಾಗಿ ಮತ್ತು ನಿರ್ದೇಶಕ ಗೀತಪ್ರಿಯರು ಈ ಸಾಹಸಮಯ ಕಥೆಯ ನಿರೂಪಣೆಯಲ್ಲಿ ಕೆಲವು ಬಾಲಕಲಾವಿದರನ್ನು ತೊಡಗಿಸಿಕೊಂಡ ರೀತಿಯಿಂದಾಗಿ ಜನಪ್ರಿಯವಾಯಿತು. 'ನಾಗರಹೊಳೆ'ಯ ಹೆಚ್.ವಿ.ಸುಬ್ಬರಾವ್ ಈ ಚಿತ್ರಕ್ಕೂ ಚಿತ್ರಕಥೆ ಮತ್ತು ಸಂಭಾಷಣೆಯನ್ನು ಬರೆದರು. ಆ ಸಣ್ಣ ವಯಸ್ಸಿನಲ್ಲಿಯೇ ಬಾಡಿ ಬಿಲ್ಡರ್, ಕರಾಟೆ ಪಟು ಆಗಿದ್ದ ರಾಮಕೃಷ್ಣ ಹೆಗಡೆ ಎಂಬ ಹುಡುಗ, 'ನಾಗರಹೊಳೆ'ಯಲ್ಲಿ ಅಭಿನಯಿಸಿದ್ದ ಪ್ರತಿಭಾವಂತ ಬಾಲಕ ಭಾನುಪ್ರಕಾಶ್ ಮತ್ತು ಆ ವೇಳೆಗಾಗಲೇ ಅನೇಕ ಚಿತ್ರಗಳಲ್ಲಿ ಅಭಿನಯಿಸಿ ಹೆಸರು ಗಳಿಸಿದ್ದ ಬೇಬಿ ಇಂದಿರಾ ಈ ಚಿತ್ರದ 'ಪುಟಾಣಿ ಏಜೆಂಟ್'ಗಳು. ಹೊಸ ಹುಡುಗ ರಾಮಕೃಷ್ಣ ಹೆಗಡೆಗೆ ಚಲನಚಿತ್ರ ಅಭಿನಯದಲ್ಲಿ ತರಬೇತಿ ಕೊಡುವುದು ಪ್ರಯಾಸವೇ ಆಯಿತೆಂದು ಗೀತಪ್ರಿಯ ಹೇಳುತ್ತಾರೆ. ಒಟ್ಟಿನಲ್ಲಿ ಚಿತ್ರದ ತಯಾರಿಕೆಯೇ ಕಷ್ಟಕರವಾಗಿತ್ತು. ಆದರೆ ಎಲ್ಲ ವರ್ಗದ ಜನರಿಗೂ ಶುದ್ಧ ಮನರಂಜನೆ ದೊರಕಿಸುವ ಉದ್ದೇಶದೊಂದಿಗೆ ನಿರಪರಾಧಿಗಳನ್ನೂ ಸುಳ್ಳು ಆರೋಪಗಳಿಗೆ ಗುರಿಪಡಿಸುವ ಅಮಾನುಷತೆಯ ಕಡೆಗೆ ಪ್ರೇಕ್ಷಕರ ಗಮನ ಸೆಳೆಯುವ ಉದ್ದೇಶವೂ ಇದ್ದುದರಿಂದ ಈ ಎಲ್ಲ ಕಷ್ಟಗಳನ್ನು ಭರಿಸುವುದು ಸುಲಭವಾಯಿತು ಎಂದೂ ಹೇಳುತ್ತಾರೆ. ಈ ಚಿತ್ರಕ್ಕಾಗಿಯೇ ವಿಶೇಷ ವಿನ್ಯಾಸದ ಒಂದು ಸೈಕಲ್ ಅನ್ನು (೩ ಜನ ಕುಳಿತುಕೊಳ್ಳುವಂಥದು) ಮಾಡಿಸಲಾಗಿತ್ತು. ಈ ಚಿತ್ರ ಹಿಂದಿಯಲ್ಲೂ ('ಅನ್‌ಮೋಲ್ ಸಿತಾರೆ') ತಯಾರಾಯಿತು.

ಮಕ್ಕಳಿಗೆ ಪ್ರಿಯವಾಗುವ ಅಂಶಗಳ ಬಗ್ಗೆ ತಮಗೂ ಲೆಕ್ಕಾಚಾರವಿದ್ದಿದ್ದರಿಂದ ಅವರಿಗೆ ಈ ಚಿತ್ರ ನೀಡಿದ ಸವಾಲುಗಳನ್ನು ನಿಭಾಯಿಸುವುದು ಅಷ್ಟೇನೂ ಪ್ರಯಾಸವಾಗಲಿಲ್ಲ. ಪಾತ್ರವರ್ಗದಲ್ಲಿ ಶ್ರೀನಾಥ್, ಅಂಬರೀಷ್, ಉದಯಕುಮಾರ್ ಮತ್ತು ಮಂಜುಳಾರಂತಹ ಪ್ರತಿಭಾವಂತ ನಟ-ನಟಿಯರೂ ಇದ್ದು ಇದೊಂದು ರೀತಿಯ ಅಪೂರ್ವ ಪ್ರತಿಭಾ ಸಂಗಮವೇ ಆಯಿತು. ಜೊತೆಗೆ ಲಕ್ಕಿ (ನಾಯಿ), ಸಾವಿತ್ರಿ (ಕೋತಿ) ಬೇರೆ.

ನಟ-ನಿರ್ಮಾಪಕ ವಾದಿರಾಜ್‌ರವರಿಗೆ ಮೊದಲಿನಿಂದ ಮಕ್ಕಳ ಚಿತ್ರಗಳ ಬಗ್ಗೆ ಆಕ್ಕರ. ಅವರೇ ನಿರ್ಮಿಸಿ ಆರ್.ನಾಗೇಂದ್ರರಾಯರು ನಿರ್ದೇಶಿಸಿದ 'ನಮ್ಮ ಮಕ್ಕಳು' ಚಿತ್ರದಲ್ಲಿ ಹಂಚಿಕೆದಾರರ ಬಲವಂತದಿಂದ ಅವರೂ ಬಾಲಕಲಾವಿದರೊಂದಿಗೆ ಏಳೆಯುವವರಾಗಿಯೇ ಅಭಿನಯಿಸುವ ಅನಿವಾರ್ಯವೂ ಒದಗಿತ್ತು. ತಮ್ಮ ರಂಗಭೂಮಿಯ ದಿನಗಳಿಂದಲೂ ಅವರಿಗೆ ಮಕ್ಕಳ ಚಿತ್ರವೊಂದನ್ನು ತಾವೇ ತಮ್ಮ ಅಭಿರುಚಿಯಂತೆ ನಿರ್ದೇಶಿಸುವ ಹಂಬಲವೂ ಇತ್ತು. ಅವರ ಈ ಹಂಬಲವನ್ನು ಕಾರ್ಯಗತಗೊಳಿಸಿದವರು ಆಗಲೇ 'ಕೆಸರಿನ ಕಮಲ' ಚಿತ್ರವನ್ನು ನಿರ್ಮಿಸಿದ್ದ ಟಿ.ಎಸ್.ನರಸಿಂಹನ್. ಮಕ್ಕಳಲ್ಲಿ ಚಿತ್ರಸಂಸ್ಕೃತಿಯನ್ನು ಬೆಳೆಸುವ ಬಗ್ಗೆ ನರಸಿಂಹನ್‌ರಿಗೆ ಇದ್ದ ಆಸಕ್ತಿ 'ದಂಗೆಯೆದ್ದ ಮಕ್ಕಳು' ಚಿತ್ರವನ್ನು ನಿರ್ಮಿಸಲು ಪ್ರೇರೇಪಿಸಿತು. ಈ ಚಿತ್ರ ಕೆಲವು ಅಂತರರಾಷ್ಟ್ರೀಯ ಮಕ್ಕಳ ಚಲನಚಿತ್ರೋತ್ಸವಗಳಲ್ಲಿಯೂ ಪ್ರದರ್ಶನಗೊಂಡು ವಿಮರ್ಶಕರ ಗಮನ ಸೆಳೆಯಿತು. ನರಸಿಂಹನ್ ನಂತರ ಕೇಂದ್ರ ಮಕ್ಕಳ ಚಿತ್ರ ಸಮಾಜದ ನಿರ್ದೇಶಕರಲ್ಲೊಬ್ಬರಾಗಿ ಬೆಂಗಳೂರಿನಲ್ಲಿ ಅಂತರರಾಷ್ಟ್ರೀಯ ಮಟ್ಟದ ಮಕ್ಕಳ ಚಿತ್ರ ಸಂಕೀರ್ಣವೊಂದನ್ನು ಈ ಸಮಾಜದ ವತಿಯಿಂದ ಸ್ಥಾಪಿಸಬೇಕೆಂದು ಬಹಳ ಶ್ರಮಿಸಿದರು. ಆದರೆ ಅವರ ಈ ಶ್ರಮ ಸಾರ್ಥಕವಾಗಲಿಲ್ಲ.

'ದಂಗೆಯೆದ್ದ ಮಕ್ಕಳು' ವರ್ಣದಲ್ಲಿಯೇ ತಯಾರಾದ ಚಿತ್ರ. ಅದರಲ್ಲಿ ಹೇಳಿಕೊಳ್ಳುವಂತಹ ತಾರಾಗಣವೇನೂ ಇರಲಿಲ್ಲ. ಆದರೆ ವಾದಿರಾಜ್‌ರ ಚುರುಕಾದ ನಿರೂಪಣೆಯಿತ್ತು. ಹೆಸರೇ ಸೂಚಿಸುವಂತೆ ವ್ಯವಸ್ಥೆಯ ವಿರುದ್ಧ ಮಕ್ಕಳು ಬಂಡಾಯವೇಳುವ ಕಥೆ ಈ ಚಿತ್ರದ್ದು. ನಿರ್ಮಾಪಕರಾದ ನರಸಿಂಹನ್ ಮತ್ತು ಅವರ ಪಾಲುದಾರ ಸೋಮಸುಂದರ್ ಕಥೆಯನ್ನು ಬರೆದರು. ತಮ್ಮ ಹಾಸ್ಯಾಭಿನಯಕ್ಕೆ ಹೆಸರಾಗಿದ್ದ ನಾಟಕಕಾರರೂ ಆದ ಎಸ್.ಎಸ್.ರಾವ್ ಸಂಭಾಷಣೆ ಬರೆದರು. ರಂಗಭೂಮಿಯ ಅನೇಕ ಜನಪ್ರಿಯ ಕಲಾವಿದರೂ ಪಾತ್ರದಲ್ಲಿದ್ದರು - ಎಂ.ವಿ.ವಾಸುದೇವರಾವ್, ಜಗದೀಶ್, ನಾಗರತ್ನಮ್ಮ, ಶಾಂತಾ, ಪರ್ವತವಾಣಿ ಮುಂತಾದವರು. ಈ ಚಿತ್ರಕ್ಕೆ ವಿಜಯಭಾಸ್ಕರ್ ಸಂಗೀತ ನೀಡಿದರು. ಛಾಯಾಗ್ರಾಹಕರು ಎಸ್.ರಾಮಚಂದ್ರ. ಈ ಚಿತ್ರ ೧೯೮೦ರಲ್ಲಿ ರಾಷ್ಟ್ರಮಟ್ಟದಲ್ಲಿ ವರ್ಷದ ಅತ್ಯುತ್ತಮ ಮಕ್ಕಳ ಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿತು.

ಮಕ್ಕಳ ಸಾಹಸವನ್ನು ಕುರಿತ 'ದೊಂಬರ ಕೃಷ್ಣ' ಇದೇ ವರ್ಷ ತೆರೆಗೆ ಬಂತು. ಆದರೆ ಈ ಚಿತ್ರ 'ಪುಟಾಣಿ ಏಜೆಂಟ್ ೧, ೨, ೩' ಮತ್ತು 'ದಂಗೆಯೆದ್ದ ಮಕ್ಕಳು' ಗಳಿಸಿದ ಜನಪ್ರಿಯತೆಯನ್ನು ತನ್ನದಾಗಿಸಿಕೊಳ್ಳಲಿಲ್ಲ. ಈ ಚಿತ್ರವನ್ನು ನಿರ್ಮಿಸಿ



(ಚಿತ್ರ ೧೧೦) 'ದೊಂಬರ ಕೃಷ್ಣ' ಚಿತ್ರದಲ್ಲಿ ಮುಸುರಿ ಕೃಷ್ಣಮೂರ್ತಿ ಮತ್ತು ಮಾ।ಸುರೇಶ್



(ಚಿತ್ರ ೧೧೧) 'ಮರಳು ಸರಪಣಿ' ಚಿತ್ರದಲ್ಲಿ ಶಕ್ತಿಪ್ರಸಾದ್ ಮತ್ತು ಸುಚಿತ್ರಾ

ನಿರ್ದೇಶಿಸಿದವರು 'ಸುಬ್ಬಾಶಾಸ್ತ್ರಿ' ಛಾಯಾಗ್ರಾಹಕ ಹೆಚ್.ಎಂ.ಕೆ.ಮೂರ್ತಿ. ಸಾಹಸವೊಂದೇ ಕಥೆಯ ಅಂಶವಾಗಿರದೆ, ಸಮಾಜ ಸುಧಾರಣೆಯ ಆದರ್ಶವೂ ಅದರಲ್ಲಿತ್ತು. ಅರಣ್ಯದ ಪರಿಸರದಲ್ಲಿ ಸ್ವಚ್ಛಂದವಾಗಿ ಬೆಳೆದ ಬಿಬ್ಬ ಕೆಳವರ್ಗದ ಬಾಲಕ ವನ್ಯಮೃಗಗಳ ಸ್ನೇಹಿತ ಕೂಡ. ಜೊತೆಗೆ ದೊಂಬರಾಟ ಅವನ ಕುಲ ಕಸುಬು. ಈ ಕಲೆಯನ್ನು ಕರಗತ ಮಾಡಿಕೊಂಡ ಆತ ಶಿಶುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡಿದ್ದ ನತದೃಷ್ಟ. ತಂದೆಯೇ ಆತನಿಗೆ ಗುರು ಮತ್ತು ಮಾರ್ಗದರ್ಶಕ. ಅವರಿಬ್ಬರ ಹವ್ಯಾಸಗಳಿಂದಾಗಿ ಅವನ ಮನೆಯೇ ಒಂದು ಪ್ರಾಣಿ ಸಂಗ್ರಹಾಲಯವಾಗುತ್ತದೆ. ಕೊನೆಗ ತಂದೆಯನ್ನೂ ಕಳೆದುಕೊಂಡಾಗ ಒಬ್ಬಂಟಿಯಾದರೂ ತನ್ನ ವಿಶಿಷ್ಟ ಗುಣಗಳಿಂದ ದೊಂಬರ ಹುಡುಗರ ನಾಯಕ ಪಟ್ಟಕ್ಕೆ ಏರಿ ಅವರಲ್ಲಿ ಅನೇಕ ಸುಧಾರಣೆಗಳನ್ನು ತರುತ್ತಾನೆ.

ವನ್ಯಮೃಗಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದ ಈ ಚಿತ್ರ ತ.ಪು.ವೆಂಕಟರಾಮ್ ಅವರ ಕಾದಂಬರಿಯ ಆಧಾರದ ಮೇಲೆ ತಯಾರಾಯಿತು. ನಿರ್ಮಾಪಕರು ಮೂರ್ತಿ, ಶಶಿಕಲಾ ಎಂ.ಶೆಟ್ಟಿ ಮತ್ತು ಟಿ.ಎಸ್.ಪರಮಶಿವಯ್ಯ. ಸಾಹಿತಿ ಎಸ್.ಕೆ.ಕರೀಂಖಾನ್ ಚಿತ್ರಕ್ಕೆ ಸಂಭಾಷಣೆ ಮತ್ತು ಹಾಡುಗಳನ್ನು ಬರೆದರು. ಕೇರಳದ ರವಿವರ್ಮರಾಜರವರನ್ನು ಛಾಯಾಗ್ರಾಹಕರನ್ನಾಗಿ ಆರಿಸಿಕೊಂಡ ನಿರ್ದೇಶಕ ಮೂರ್ತಿಗಳು ಸಂಗೀತ ನಿರ್ದೇಶನಕ್ಕಾಗಿ ಹಿಂದಿ ಚಿತ್ರರಂಗದ ರಾಮಲಾಲ್ ಸೆಹ್ರಾರವರನ್ನು ಕರೆತಂದರು. ಚಿತ್ರದ ವರ್ಣ ಸಂಸ್ಕರಣವೂ ಮುಂಬಯಿನ ಆಡ್‌ಲ್ಯಾಬ್ಸ್‌ನಲ್ಲಿಯೇ ಆಯಿತು. ಮಾ।ಸುರೇಶ್ ದೊಂಬರ ಕೃಷ್ಣನಾಗಿದ್ದ ಈ ಚಿತ್ರದಲ್ಲಿ ಮಾ।ಅರುಣಕುಮಾರ್ ಮತ್ತು ಮಾ।ಶಶಿಕುಮಾರ್ ಎಂಬ ಇಬ್ಬರು ಬಾಲನಟರೂ, ಮಕ್ಕಳ ಚಿತ್ರಗಳಲ್ಲಿ ಅನಿವಾರ್ಯವೆನಿಸಿದ ಬೇಬಿ ಇಂದಿರಾಳೊಂದಿಗೆ ಪ್ರಧಾನ ಪಾತ್ರವರ್ಗದಲ್ಲಿ ಅಭಿನಯಿಸಿದರು. ಬೇಬಿ ಲೀಲಾವತಿ, ಕುಮಾರಿ ರೂಪಾ ಮೊದಲಾದವರು ಮತ್ತು ಹಿರಿಯ ಕಲಾವಿದರಾದ ಎಂ.ವಿ.ವಾಸುದೇವರಾವ್, ಸುಂದರಕೃಷ್ಣ ಅರಸ್, ಮುಸುರಿ ಕೃಷ್ಣಮೂರ್ತಿ ಅವರೂ ಇದ್ದರು. ಒಂದು ಆನೆ, ಕೋತಿಗೂ ಪ್ರಮುಖವಾದ ಪಾತ್ರವಿತ್ತು. ಸಂಪೂರ್ಣವಾಗಿ ಹೊರಾಂಗಣಗಳಲ್ಲಿಯೇ ಚಿತ್ರಿತವಾದ 'ದೊಂಬರ ಕೃಷ್ಣ'ದ ತಯಾರಿಕೆಯು ಹಿಂದೆ ಮಕ್ಕಳ ಚಿತ್ರವೊಂದಕ್ಕೆ ಅನಿವಾರ್ಯವಾದ ಪರಿಶ್ರಮವಿತ್ತು.

ತಮ್ಮ ವೃತ್ತಿಜೀವನದಲ್ಲಿ ಒಂದು ಘಟ್ಟವಾದ ಮೇಲೆ ಪುಟ್ಟಣ್ಣ ಕಣಗಾಲ್ ತಮ್ಮ ನಿರೂಪಣಾ ಶೈಲಿಯಲ್ಲಿ ಸಲ್ಲದ ಅಬ್ಬರವನ್ನು ಮೈಗೂಡಿಸಿಕೊಂಡರು. ತಾವೇ ನಿರ್ಮಿಸಿದ ಚಿತ್ರ 'ಧರ್ಮಸೆರೆ', ಅವರ ನಿರ್ದೇಶನದ ಅನೇಕ ಅತಿರೇಕಗಳಿಂದ ಸೋತಿತು. ಮುಸುರಿ ಕೃಷ್ಣಮೂರ್ತಿಗಳ ಅತಿ ನಾಟಕೀಯತೆ ಈ ಅತಿರೇಕಗಳಿಗೆ ಪೂರಕವಾದಂತಿತ್ತು. ಮೂಗಿಯಾದ ಆರತಿ ಈ ಚಿತ್ರದ ನಾಯಕಿ. ಅಪರೂಪಕ್ಕೊಮ್ಮೆ ಪುಟ್ಟಣ್ಣನವರ ಚಿತ್ರವೊಂದಕ್ಕೆ ಉಪೇಂದ್ರಕುಮಾರ್ ಸಂಗೀತ ನೀಡಿದರು. ಜಡಭರತರ ಅದೇ ಹೆಸರಿನ ಕಾದಂಬರಿ ಆಧಾರದ ಮೇಲೆ ತಯಾರಾದ ಈ ಚಿತ್ರದಲ್ಲಿ ಕರಾವಳಿಯ ಸುಂದರ ಚಿತ್ರಣವಿತ್ತು. ಹೆಣ್ಣು ಮಗುವಿನ ವಿವಾಹ ಅನಿವಾರ್ಯ. ಕನ್ಯಾಸೆರೆ ಬಿಡಿಸಿಕೊಳ್ಳಬೇಕು ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಮೂಗಿ ಹುಡುಗಿಯನ್ನು ವಿವಾಹ ಮಾಡಿಕೊಟ್ಟು ಅದೇ ಗಂಡಿಗೆ ಆ ಹುಡುಗಿಯ ಸೋದರಿಯನ್ನೇ ಮರು ಮದುವೆ ಮಾಡಿಕೊಡುತ್ತಾರೆ. ಮಾತನಾಡುವ ಹೆಂಡತಿಗಿಂತ ಮಾತು ಬಾರದ ಹುಡುಗಿಯೇ ನಿಜವಾದ ಪ್ರೀತಿ ತೋರುತ್ತಾಳೆ. ಆರತಿ ಅವರಿಗೆ ಭಾವಾಭಿನಯಕ್ಕೆ ಹೆಚ್ಚು ಅವಕಾಶವಿತ್ತು. ಆಕೆಯ ಗಂಡನಾಗಿ ಶ್ರೀನಾಥ್ ಅಷ್ಟೇ ಪ್ರಮಾಣದ ಸವಾಲನ್ನು ಎದುರಿಸಿದ್ದರು.

ಮುಂದೆ ಕಾದಂಬರಿ ಆಧಾರಿತ ಚಿತ್ರಗಳ ಸರಳ ನಿರೂಪಣೆಯಿಂದಾಗಿ ಕನ್ನಡ ಚಿತ್ರರಂಗದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡ ಕೆ.ವಿ.ಜಯರಾಂ ಸ್ವತಂತ್ರ ನಿರ್ದೇಶಕರಾಗಿ ವೃತ್ತಿಜೀವನವನ್ನು ಆರಂಭಿಸಿದ್ದು ಸಸ್ಪೆನ್ಸ್ ಚಿತ್ರವೊಂದರಿಂದ. ಅವರು ನಿರ್ದೇಶಿಸಿದ ಪ್ರಥಮ ಚಿತ್ರ 'ಮರಳು ಸರಪಣಿ' ೧೯೭೯ರಲ್ಲಿ ಬಿಡುಗಡೆಯಾದ ಕೊನೆಯ ಚಿತ್ರ. ಟಿ.ಕೆ.ರಾಮರಾಯರ ಅದೇ ಹೆಸರಿನ ಕಾದಂಬರಿ ಈ ಚಿತ್ರಕ್ಕೆ ಆಧಾರ.

ಕನ್ನಡ ಚಿತ್ರವೊಂದರಲ್ಲಿ ಸಮ್ಮೋಹಿನಿ ವಿದ್ಯೆಯನ್ನು ವೈಜ್ಞಾನಿಕವಾಗಿ ಪರಿಚಯ ಮಾಡಿಕೊಟ್ಟ ಪ್ರಥಮ ಚಿತ್ರ ಕೂಡ ಇದು. ಅಷ್ಟೇ ಅಲ್ಲ, ನಂತರ ಕಾರ್ಮಿಕ ನಾಯಕರಾಗಿ ಬೆಳೆದು ಅಭಿನಯಕ್ಕೆ ದ್ವಿತೀಯ ಆದ್ಯತೆ ಕೊಟ್ಟ ಅಶೋಕ್‌ರವರು ಅಭಿನಯಿಸಿದ್ದ ಚಿತ್ರ ಕೂಡ. ಅವರೇ ಈ ಚಿತ್ರದ ನಾಯಕ. ಜೊತೆಗೆ ಗೀತರಚನಕಾರ ದೊಡ್ಡರಂಗೇಗೌಡ ಸಂಭಾಷಣೆಯನ್ನು ಬರೆದಿದ್ದು ಈ ಚಿತ್ರದಲ್ಲಿಯೇ. 'ಬೆಳ್ಳಿಮೋಡ'ದ ನಂತರ ಮೊದಲ ಬಾರಿಗ ಕಲ್ಯಾಣ್‌ಕುಮಾರ್ 'ಮರಳು ಸರಪಣಿ'ಯಲ್ಲಿ ನೆಗಟಿವ್ ಪಾತ್ರವೊಂದರಲ್ಲಿ ಕಾಣಿಸಿಕೊಂಡರು.

ಆಗೆಲ್ಲ ರಸ್ತೆಗಳಲ್ಲಿ ವಾಹನಗಳಲ್ಲಿ ಹೋಗುವ ದೃಶ್ಯಗಳನ್ನು 'ಬ್ಯಾಕ್ ಪ್ರೊಜೆಕ್ಷನ್' ತಂತ್ರವನ್ನು ಉಪಯೋಗಿಸಿ ಚಿತ್ರೀಕರಿಸಲಾಗುತ್ತಿತ್ತು. ಅಂದರೆ ವಾಹನ ಚಲಿಸುತ್ತಿರಲಿಲ್ಲ, ಹಿನ್ನೆಲೆಯಲ್ಲಿ ಮಾತ್ರ ಮೊದಲೇ ಚಿತ್ರಿತವಾದ ಚಲಿಸುವ ದೃಶ್ಯಗಳನ್ನು ಒಂದು ತೆರೆಯ ಹಿಂದಿನಿಂದ ಬಿಂಬಿಸಲಾಗುತ್ತಿತ್ತು. ಆದರೆ ಇಂತಹ ಚಿತ್ರಣವಾಗಬೇಕಾಗಿದ್ದ ಒಂದು ದಿನ ಛಾಯಾ ನಿರ್ದೇಶಕ ಡಿ.ವಿ.ರಾಜಾರಾಂ ಬಂದಿರಲಿಲ್ಲವಾದ್ದರಿಂದ ತಂಡದಲ್ಲಿದ್ದ ಅವರ ಸಹಾಯಕರ ಸಹಾಯದಿಂದಲೇ 'ಬ್ಯಾಕ್ ಪ್ರೊಜೆಕ್ಷನ್' ಇಲ್ಲದೆ ಹಾಗೆಯೇ ಸಹಜವಾಗಿ ಚಲಿಸುತ್ತಿರುವ ಕಾರಿನೊಳಗೇ ಕ್ಯಾಮರಾವನ್ನಿಟ್ಟು ದೃಶ್ಯವನ್ನು ಚಿತ್ರಿಸಲು ಜಯರಾಂ ದಿಢೀರೆಂದು ನಿರ್ಧರಿಸಿದರು. ಕಾರಿನೊಳಗ ಈ ಚಿತ್ರಣಕ್ಕಾಗಿ ವಿಶೇಷವಾದ ಬೆಳಕಿನ ಸಂಯೋಜನೆಯನ್ನು ಮಾಡಬೇಕಾಯಿತು. ಆದರೆ ಚಿತ್ರಿಕೆಯಲ್ಲಿ ಯಾವ ದೋಷವೂ ಕಾಣಲಿಲ್ಲ. ಜಯರಾಂ ಮುಂದೆ 'ಬ್ಯಾಕ್ ಪ್ರೊಜೆಕ್ಷನ್' ತಂತ್ರವನ್ನು ಬಳಸಲೇ ಇಲ್ಲ. ಕೌತುಕಪ್ರಧಾನವಾದ ಈ ಚಿತ್ರದಲ್ಲಿ ಸ್ತ್ರೀ ಪಾತ್ರಧಾರಿಗಳಿಗೆ ಹೆಚ್ಚಿನ ಕೆಲಸವೇನೂ ಇರಲಿಲ್ಲ. ಪದ್ಮಪ್ರಿಯಾ ನಾಯಕಿಯಾಗಿದ್ದರು. ನಿರ್ದೇಶಕರ ಮೊದಲ ಚಿತ್ರವನ್ನು ಪ್ರೇಕ್ಷಕರು ಉತ್ಸಾಹದಿಂದಲೇ ಸ್ವೀಕರಿಸಿದರು. ಕೆ.ವಿ.ಜಯರಾಂ ಬಹಳಷ್ಟು ಚಿತ್ರಗಳಿಗ ಹಿನ್ನೆಲೆಯಲ್ಲಿ ಕೆಲಸ ಮಾಡಿದ್ದವರು. ಆ ಅನುಭವ, ಪ್ರಯೋಗಶೀಲತೆ 'ಮರಳು ಸರಪಣಿ'ಯಂಥ ಕಥಾವಸ್ತುವಿಗೂ ನೆರವಾಯಿತು.

೧೯೭೯ರಲ್ಲಿ ಕೆಲವು ಖ್ಯಾತ ತಮಿಳು, ತೆಲುಗು, ಮಲಯಾಳಂ ಚಿತ್ರಗಳ ನಿರ್ದೇಶಕರು ಒಂದೊಂದೇ ಕನ್ನಡ ಚಿತ್ರವನ್ನು ನಿರ್ದೇಶಿಸಿದರು. ಆದರೆ ಅವುಗಳಲ್ಲಿ ಯಾವ ಚಿತ್ರವೂ ಜನಕ್ಕೆ ಹಿಡಿಸಲಿಲ್ಲ ಎನ್ನುವುದು ಉಲ್ಲೇಖನಾರ್ಹ. ಈ ಎಲ್ಲ ಚಿತ್ರಗಳ ನ್ಯೂನತೆಯೆಂದರೆ ಅವುಗಳಲ್ಲಿನ ಮಣ್ಣಿನ ವಾಸನೆಯ ಕೊರತೆ.

ಆ ದಿನಗಳಲ್ಲಿ ಜನಪ್ರಿಯತೆಯ ಉತ್ತುಂಗದಲ್ಲಿದ್ದ ಎಸ್.ಪಿ.ಮುತ್ತುರಾಮನ್ 'ಪ್ರಿಯ' ವರ್ಣಚಿತ್ರವನ್ನು ನಿರ್ದೇಶಿಸಿದರು. ಎಸ್.ಪಿ.ಟಿ.ಫಿಲಂಸ್ ತಯಾರಿಸಿದ ಈ ಚಿತ್ರಕ್ಕೆ ಇಳಯರಾಜ ಸಂಗೀತ ನಿರ್ದೇಶಕರು. ರಜನೀಕಾಂತ್ ಮತ್ತು ಅಂಬರೀಷ್ ಇಬ್ಬರೂ ನಾಯಕ ನಟರು. ಶ್ರೀದೇವಿ ನಾಯಕಿ. ಹೊರದೇಶಗಳಲ್ಲಿ ಈ ಚಿತ್ರ ಸುಂದರವಾಗಿ ಚಿತ್ರಿತವಾಯಿತು. ಆದರೆ ಜನ ಅದನ್ನು ಸ್ವೀಕರಿಸಲಿಲ್ಲ.

ಆ ವೇಳೆಗಾಗಲೇ ಕೆಲವು ಕಲಾತ್ಮಕ ಚಿತ್ರಗಳನ್ನೂ, 'ಬೂತಯ್ಯನ ಮಗ ಅಯ್ಯು'ನಂತಹ ಜನಪ್ರಿಯ ಚಿತ್ರವನ್ನೂ ನಿರ್ಮಿಸಿದ್ದ ಚಂದೂಲಾಲ್ ಜೈನ್ ತಮ್ಮ ಚಿತ್ರಗಳ ಕಥೆಗಳಲ್ಲಿ ಮತ್ತು ನಿರೂಪಣಾ ಶೈಲಿಯಲ್ಲಿ ನುಸುಳಿದ ಏಕತಾನತೆಯಿಂದ ಆಚೆ ಬರಲು ಏನಾದರೂ ಹೊಸದನ್ನು ಮಾಡಬೇಕೆಂಬ ಬಯಕೆಯಿಂದ ತಯಾರಿಸಿದ ಚಿತ್ರ 'ಭೂಲೋಕದಲ್ಲಿ ಯಮರಾಜ'. ಹೆಸರೇ ಸೂಚಿಸುವಂತೆ ಈ ಕಲಿಕಾಲದಲ್ಲಿ ಭೂಲೋಕದಲ್ಲಿ ಆಗಿರುವ ಅಪಾರವಾದ ಬದಲಾವಣೆಗಳನ್ನು ಕಣ್ಣಾರೆ ನೋಡುವ ಅವಕಾಶವೊಂದು ಯಮರಾಜನಿಗೆ ಬರುತ್ತದೆ; ಆಗ ಆತ ಭೂಲೋಕದ ಕಟ್ಟಾ ಅಭಿಮಾನಿಯಾಗಿ, ತನ್ನ ಲೋಕಕ್ಕೆ ಹಿಂದಿರುಗುವುದರಲ್ಲಿಯೇ ನಿರಾಸಕ್ತನಾಗುತ್ತಾನೆ.



(ಚಿತ್ರ ೧೧೨) 'ಮಲ್ಲಿಗೆ ಸಂಪಿಗೆ' ಚಿತ್ರದಲ್ಲಿ ಬಿ.ಎಂ.ವೆಂಕಟೇಶ್ ಮತ್ತು ಸಹಕಲಾವಿದರು

ಸಿದ್ಧಲಿಂಗಯ್ಯನವರಿಗೂ ಈ ಹಗುರವಾದ ಹುಡುಗಾಟಿಕೆಯ ಚಿತ್ರ ಹೊಸ ಅನುಭವವೇ ಆಯಿತು. ಲೋಕೇಶ್, ಎಂ.ಪಿ.ಶಂಕರ್‌ರಂತಹ ಹಳಬರೊಂದಿಗೆ ಅನೇಕ ಹೊಸ ಕಲಾವಿದರಿಗೂ ಅವಕಾಶ ಕೊಟ್ಟು, ಅದುವರೆಗೆ ಯಾವ ವ್ಯಾಪಾರಿ ಚಿತ್ರಕ್ಕೂ ಸಂಗೀತ ನೀಡದಿದ್ದ ಸಿ.ಅಶ್ವತ್ಥ್‌ರಿಗೆ ಸಂಗೀತ ನಿರ್ದೇಶನದ ಜವಾಬ್ದಾರಿಯಿತ್ತ ಪ್ರಯೋಗಾತ್ಮಕ ಚಿತ್ರ ಇದು. ಆದರೆ ಆರ್ಥಿಕವಾಗಿ ಅದು ಜಯಭೇರಿ ಹೊಡೆದಾಗ ನಿರ್ಮಾಪಕರಿಗೇ ಆಶ್ಚರ್ಯವಾಗಿದ್ದೂ ಹೌದು.

'ಸ್ಪಂದನ'ದಂತಹ ಹೊಸ ಪ್ರಜ್ಞೆಯ ಚಿತ್ರವನ್ನು ನಿರ್ದೇಶಿಸಿದ ಪಿ.ಎಸ್.ಶ್ರೀನಿವಾಸ್ ಮಧ್ಯಮ ವರ್ಗದ ಕುಟುಂಬದ ದಿನನಿತ್ಯದ ಸಮಸ್ಯೆ, ಬವಣೆಗಳ ಬಗ್ಗೆ ವಿಡಂಬನಾತ್ಮಕ ದೃಷ್ಟಿ ಬೀರಿದ 'ಏನೇ ಬರಲಿ ಪ್ರೀತಿ ಇರಲಿ' ಚಿತ್ರವನ್ನು ನಿರ್ದೇಶಿಸಿದರು. ಸಿ.ವಿ.ಎಲ್.ಶಾಸ್ತ್ರಿ 'ಕಳ್ಳ ಕುಳ್ಳ'ದ ನಂತರ ವೈ.ಆರ್.ಸ್ವಾಮಿಯ ನಿರ್ದೇಶನದಲ್ಲಿ 'ಪಕ್ಕಾ ಕಳ್ಳ' ಚಿತ್ರವನ್ನು ನಿರ್ಮಿಸಿದರು. 'ಚಿತೆಗೂ ಚಿಂತೆ'ಯಲ್ಲಿ ಕೈ ಕಚ್ಚಿಸಿಕೊಂಡ ಜಿ.ಎಸ್.ಲಕ್ಷ್ಮೀಪತಿ ಸಾವನ್ ಮೂವೀಸ್ ಲಾಂಛನದಲ್ಲಿಯೇ 'ನೆಂಟರೋ ಗಂಟು ಕಳ್ಳರೋ' ಎಂಬ ವ್ಯಾಪಾರಿ ಚಿತ್ರವನ್ನು ವಿಷ್ಣುವರ್ಧನ್ ಮತ್ತು ಆರತಿಯವರನ್ನು ತಾರಾಗಣಕ್ಕೆ ಸೇರಿಸಿಕೊಂಡು ಕೇವಲ ೧೫ ದಿನಗಳಲ್ಲಿ ಚಿತ್ರಿಸಿ, ನಿರ್ಮಿಸಿದರು. ಆದರೆ ಈ ಯಾವ ಚಿತ್ರಗಳೂ ಯಶಸ್ಸನ್ನು ಕಾಣಲಿಲ್ಲ.

ಚಲನಚಿತ್ರ ಅಭಿವೃದ್ಧಿ ನಿಗಮದ ನೆರವಿನಿಂದ ತಯಾರಾದ ಎಂ.ಕೆ.ಇಂದಿರಾ ಅವರ ಕಾದಂಬರಿ ಆಧರಿಸಿದ 'ಸದಾನಂದ' ತೆರೆಗೆ ಬಂತು. ಹೊನ್ನಪ್ಪ ಭಾಗವತರು ನಿರ್ಮಿಸಿ ಅನಂತ ಹೀರೇಗೌಡ ನಿರ್ದೇಶಿಸಿದ ಚಿತ್ರ. ನಿಗಮದ ನೆರವು ಪಡೆದ ಚಿತ್ರಗಳು ತೆರೆಯವರೆಗೆ ಬಂದುದೇ ಒಂದು ಪ್ರಯಾಸದ ಸಂಗತಿಯಾಗಿತ್ತು.

'ಉಡುಗೊರೆ' ಜಾನಕಿ ಚಂದರ್ ನಿರ್ಮಿಸಿದ ಚಿತ್ರ. ಮಹತ್ವಾಕಾಂಕ್ಷೆಯ ದಂಪತಿಗಳು ಜಾನಕಿ ಮತ್ತು ಚಂದರ್. ಕಲ್ಯಾಣ್ ಕುಮಾರ್ ಅಭಿನಯಿಸಿದ್ದರು. ಮಹೇಶ್ ನಿರ್ದೇಶನ. ಚಿತ್ರ ಮುಗಿದು ತೆರೆಗೆ ಬಂದುದೇ ವಿಶೇಷ.

'ಸವತಿಯ ನೆರಳು' ಚಿತ್ರವನ್ನು ವೈ.ಆರ್.ಸ್ವಾಮಿ ನಿರ್ದೇಶಿಸಿದರು. ಆರ್ಯಾಂಬ ಪಟ್ಟಾಭಿಯ ಅದೇ ಹೆಸರಿನ ಕಾದಂಬರಿ. ರೆಬೆಕ್ಕಾದ ಸ್ಫೂರ್ತಿಯಿಂದ ರಚಿತವಾದುದು. ಕಲವು ಹೊರಾಂಗಣ ಹಾಗೂ ಹಾಳು ಬಿದ್ದ ಮನೆಯ ಒಂದು ಭಾಗ ಇತ್ಯಾದಿ ಕೆಲವು ದೃಶ್ಯಗಳು ಸೊಗಸಾಗಿ ಚಿತ್ರಿತವಾಗಿದ್ದವು. ಸ್ವಲ್ಪಮಟ್ಟಿಗೆ ಪುನರ್ಜನ್ಮ ಅಥವಾ ಪ್ರೇತದ ಕಲ್ಪನೆ ಇದ್ದು, ಯಾವುದೋ ಕೊಲೆಯೊಂದರ ನಿಗೂಢತೆಯನ್ನು ತೆರೆದುಕೊಳ್ಳುವ ಕಥೆಗೆ ಬೇಕಾದ ಹಿನ್ನೆಲೆಯನ್ನಂತೂ ಹೊಂದಿಸಲಾಗಿತ್ತು.

'ಮಧುಚಂದ್ರ' ವಾಣಿಜ್ಯೋದ್ಯಮಿ ರಮೇಶ್ ನಿರ್ದೇಶಿಸಿದ ಪ್ರಥಮ ಚಿತ್ರ. ಕೆಲವು ಉತ್ತಮ ಎನ್ನುವಂಥ ಚಿತ್ರಿಕೆಗಳಿದ್ದವು. ರಮೇಶ್ ಬಿ.ಸರೋಜಾದೇವಿಯವರ ಸಂಬಂಧಿ. ಸಿನಿಮಾ ರಂಗ ಹೊಸದೇನಲ್ಲ. ರಮೇಶ್ ಒಮ್ಮೆಲೇ ಚಿತ್ರ ನಿರ್ದೇಶನಕ್ಕೆ ಇಳಿದರು. ಮತ್ತೆ ಅದೇ ಆಸಕ್ತಿಯನ್ನು ಉಳಿಸಿಕೊಳ್ಳಲಿಲ್ಲ.

'ಮಲ್ಲಿಗೆ ಸಂಪಿಗೆ' ಬಿ.ಎಂ.ವೆಂಕಟೇಶ್ ನಿರ್ಮಿಸಿದ ಚಿತ್ರ. ಬಹಳ ಕಾಲದ ನಂತರ ಬಿ.ಎಂ.ವೆಂಕಟೇಶ್ ಮತ್ತೆ ಅಭಿನಯಿಸಿದರೆಂಬುದೇ ಸುದ್ದಿಯಲ್ಲಿತ್ತು. ಮಣಿಮುರುಘನ್ ನಿರ್ದೇಶನದ ಚಿತ್ರ. ಭಾರಿ ತಾರಾಗಣವೇ ಇತ್ತು. ಸಾಮಾನ್ಯವಾದ ಯಶಸ್ಸನ್ನೂ ಕಂಡಿತು.

'ಮುತ್ತು ಒಂದು ಮುತ್ತು' ಎಂ.ಕೆ.ಇಂದಿರಾ ಅವರ ಕಾದಂಬರಿ ಆಧರಿಸಿದ್ದು. ಬಹಳ ದಿನಗಳ ನಂತರ ಆರ್.ಎನ್.ಜಯಗೋಪಾಲ್ ನಿರ್ದೇಶನಕ್ಕೆ ಬಂದರು. ಕಥೆಯ ಕೆಲವು ಅಂಶಗಳು ಜನಪ್ರಿಯ ಮಾಧ್ಯಮದಲ್ಲಿ ಸಮೂಹಕ್ಕೆ ಅಪಥ್ಯವಾಗಬಹುದೆನಿಸಿದ್ದರಿಂದ ಕೆಲವು ಬದಲಾವಣೆ ಮಾಡಿಕೊಂಡರು. ಆ ಬದಲಾವಣೆ ಕಥೆಗೆ ಹೊಂದಿಕೊಳ್ಳಲಿಲ್ಲ. ಒಂದೆರಡು ಗೀತೆಗಳು, ಮುಖ್ಯವಾಗಿ ಮೂಗಿ ಹುಡುಗಿಯಾಗಿ ರೂಪಾಚಕ್ರವರ್ತಿಯನ್ನು ದುಡಿಸಿಕೊಂಡ ರೀತಿ ಚೆನ್ನ ಎನ್ನಿಸಿತ್ತು.

೧೯೭೯ರಲ್ಲಿ ಕನ್ನಡ ಚಿತ್ರರಂಗ ಅನೇಕ ಪ್ರತಿಭಾವಂತರನ್ನು ಕಳೆದುಕೊಂಡಿತು. 'ಬೆಳ್ಳಿಮೋಡ'ದಿಂದ ನಾಯಕಿಯ ಪಾತ್ರಗಳಲ್ಲಿ ಪ್ರಾಧಾನ್ಯಕ್ಕೆ ಬಂದು ಅನೇಕ ಸ್ಮರಣೀಯ ಚಿತ್ರಗಳಲ್ಲಿ ತಮ್ಮದೇ ಆದ ಅಭಿನಯ ಶೈಲಿಯಿಂದ ಮೆರೆದು ರಾಜ್ಯದಾದ್ಯಂತ ಅಪಾರವಾದ ಜನಾನುರಾಗವನ್ನು ಗಳಿಸಿಕೊಳ್ಳುವುದರ ಜೊತೆಗೆ ಅನೇಕ ವಿವಾದಗಳಿಗೂ ತುತ್ತಾಗಿ, ಆದರೂ ತಮ್ಮತನ ಬಿಟ್ಟುಕೊಡದೆ ವಿಶಿಷ್ಟವಾದ ವ್ಯಕ್ತಿತ್ವವನ್ನು ಬೆಳೆಸಿಕೊಂಡು ನಾಡಿನ ಸಾಂಸ್ಕೃತಿಕ ಜೀವನದ ಮೇಲೆ ತಮ್ಮದೇ ಆದ ಛಾಪನ್ನು ಒತ್ತಿದ ಕಲ್ಪನಾ ೧೯೭೯ರ ಮೇ ೧೧ರಂದು ಸಂಶಯಾಸ್ಪದವಾದ ರೀತಿಯಲ್ಲಿ ಮರಣ ಹೊಂದಿದರು. ಅಂದಿನ ತಮ್ಮ ಪತಿ ಗುಡಿಗೇರಿ ಬಸವರಾಜರ ಕಂಪೆನಿಯ ನಾಟಕಗಳಲ್ಲಿ ಅಭಿನಯಿಸಲು ಹೋಗಿದ್ದರು. ಬೆಳಗಾವಿ ಜಿಲ್ಲೆಯ ಸಂಕೇಶ್ವರದ ಬಳಿಯ ಗೋಟೂರು ಎಂಬಲ್ಲಿ ಇನ್‌ಸ್ಪೆಕ್ಷನ್ ಬಂಗಲೆಯ ಕೋಣೆಯಲ್ಲಿ ಆಕೆಯ ಮೃತದೇಹ ಪತ್ತೆಯಾಯಿತು. ಈ ನಿಗೂಢ ಸಾವಿಗೆ ಕಾರಣ ಆತ್ಮಹತ್ಯೆಯೋ, ಕೊಲೆಯೋ ಎನ್ನುವುದು ಕೊನೆಗೂ ದೃಢಪಡಲೇ ಇಲ್ಲ. ಒಬ್ಬ ವರ್ಣಮಯ, ಪ್ರತಿಭಾಶಾಲಿ ಕಲಾವಿದೆ ಇತಿಹಾಸದಲ್ಲಿ ಲೀನವಾದರು.

ಇದೇ ವರ್ಷದ ಜುಲೈ ೧೧ರಂದು ಎರಡು ದಶಕಗಳಿಗೂ ಹೆಚ್ಚು ಕಾಲ ತಮ್ಮ ಅಪೂರ್ವ ಪ್ರತಿಭೆಯಿಂದ ಕನ್ನಡ ಚಿತ್ರರಂಗದಲ್ಲಿ ಶೋಭಿಸಿದ ಹಾಸ್ಯನಟ ನರಸಿಂಹರಾಜು ಹೃದಯಾಘಾತದಿಂದ ನಿಧನರಾದರು. 'ಬೇಡರ ಕಣ್ಣಪ್ಪ'ನಿಂದ ಇನ್ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ವಿಭಿನ್ನ ಹಾಸ್ಯಪಾತ್ರಗಳಲ್ಲಿ ಲಕ್ಷಾಂತರ ಪ್ರೇಕ್ಷಕರನ್ನು ನಗಿಸಿ, ಕೆಲವೊಮ್ಮೆ ಚಿಂತನೆಗೂ ಈಡು ಮಾಡಿ ತಮ್ಮ ವಿಶಿಷ್ಟ ವ್ಯಕ್ತಿತ್ವದಿಂದ ಅಜಾತಶತ್ರುವೆನಿಸಿಕೊಂಡ ಅವರು ನಾಟಕರಂಗದಲ್ಲಿಯೂ ಮಾಡಿದ ಸಾಧನೆಗಳು ಹಲವಾರು.

ಇದೇ ಫೆಬ್ರವರಿಯಲ್ಲಿ ಅನೇಕ ಚಿತ್ರಗಳಲ್ಲಿ ಲವಲವಿಕೆಯಿಂದ ಅಭಿನಯಿಸಿ ಕನ್ನಡ ಚಿತ್ರಗಳ ನಾಯಕರ ಸಾಲಿನಲ್ಲಿ ಅತ್ಯಂತ ಸುಸಂಸ್ಕೃತರಲ್ಲೊಬ್ಬರು ಎನಿಸಿಕೊಂಡಿದ್ದ ರಮೇಶ್ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡರು. ಡಿಸೆಂಬರ್‌ನಲ್ಲಿ ಮತ್ತೊಬ್ಬ ನಾಯಕ ನಟ ರಾಮ್‌ಗೋಪಾಲ್ ನಿಧನರಾದರು. ಅವರು ೭೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದರು.

೧೯೭೯ರ ಸೆಪ್ಟೆಂಬರ್ ೧೮ರಂದು ಕನ್ನಡ ಚಿತ್ರರಂಗದ ಆರಂಭಿಕ ದಿನಗಳಿಂದಲೂ ಅದರ ಬೆಳವಣಿಗೆಗೆ ಆಧಾರಸ್ತಂಭವಾಗಿದ್ದು, ಅನೇಕ ಸಾಹಸಗಳನ್ನು ಮಾಡಿ, ಖ್ಯಾತ ಸಂಸ್ಥೆ ಮಹಾತ್ಮಾ ಪಿಕ್ಚರ್ಸ್ ಲಾಂಛನದಲ್ಲಿ ೨೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ಮಿಸಿದ ಡಿ.ಶಂಕರಸಿಂಗ್ ವೆಲ್ಲೂರಿನಲ್ಲಿ ನಿಧನರಾದರು. ಮೈಸೂರಿನಲ್ಲಿ ಕನ್ನಡ ಚಿತ್ರೋದ್ಯಮ ಬೇರೂರುವುದರಲ್ಲಿ ಅವರ ಪಾಲು ದೊಡ್ಡದು. ಅವರ ಹೆಂಡತಿ ನಟಿ ಪ್ರತಿಮಾದೇವಿ. ನಿರ್ದೇಶಕ ಎಸ್.ವಿ.ರಾಜೇಂದ್ರಸಿಂಗ್ (ಬಾಬು), ನಿರ್ಮಾಪಕ-ನಿರ್ದೇಶಕ ನಾಗರಾಜಸಿಂಗ್ ಮತ್ತು ನಿರ್ಮಾಪಕ ಸಂಗ್ರಾಮ್‌ಸಿಂಗ್ ಅವರ ಪುತ್ರರು.

ದಶಕದ ಕೊನೆಯ ವರ್ಷ ೧೯೮೦ರಲ್ಲಿ ಬಿಡುಗಡೆಯಾದ ಚಿತ್ರಗಳ ಸಂಖ್ಯೆ ಇದ್ದಕ್ಕಿದ್ದಂತೆ ೫೬ಕ್ಕೆ ಏರಿತು. ಆದರೆ ಗುಣಮಟ್ಟದ ದೃಷ್ಟಿಯಿಂದ ತೃಪ್ತಿಕರವೆಂದು ಹೇಳಬಹುದಾದ ವರ್ಷವೇನೂ ಇದಾಗಿರಲಿಲ್ಲ. ಇನ್ನೂ ಬತ್ತದ ಹೊಸ ಅಲೆಯೇನೋ ಕುಟುಕು ಜೀವವನ್ನಿಟ್ಟುಕೊಂಡೇ ಬದುಕಿತು. ಆದರೆ ಮೂಲವಾಹಿನಿಯ ಚಿತ್ರಗಳು ಹಿಂದಿನ ಕೆಲವು ವರ್ಷಗಳಲ್ಲಿಯಂತೆ ಕುಟುಂಬ ಮನರಂಜನೆಯತ್ತ ಹೆಚ್ಚು ಗಮನ ಹರಿಸದೆ ಬೇರೆ ಬೇರೆ ಅಭಿರುಚಿಗಳನ್ನು ತೃಪ್ತಿಪಡಿಸುವ ಪ್ರಯತ್ನಕ್ಕೆ ಕೈಹಾಕಿದವು. ಹೊಸ ಪ್ರತಿಭೆಗಳೇನೂ ಹೆಚ್ಚಾಗಿ ಉದ್ಯಮಕ್ಕೆ ಬರಲಿಲ್ಲ. ಹಳೆಯ ನಿರ್ದೇಶಕರೇ ಹಲವರು ಇನ್ನೂ ಸಕ್ರಿಯರಾಗಿದ್ದರೂ ಏನಾದರೂ ಹೊಸದನ್ನು ಮಾಡುವ ತುಡಿತ ಯಾರಲ್ಲಿಯೂ ಕಾಣಲಿಲ್ಲ.



(ಚಿತ್ರ ೧೧೩) 'ಆಕ್ರಮಣ' ಚಿತ್ರದಲ್ಲಿ ವೈಶಾಲಿ

ಹೊಸ ಅಲೆಯ ನಿರ್ದೇಶಕರ ಪೈಕಿ ಗಿರೀಶ್ ಕಾಸರವಳ್ಳಿ ಆಗಲಿ, ಪಿ.ಲಂಕೇಶ್ ಮತ್ತು ಟಿ.ಎಸ್.ರಂಗಾ ತಮ್ಮ ಹಿಂದಿನ ಆರ್ಥಿಕ ಅಪಯಶಸ್ಸಿನಿಂದ ಧೃತಿಗೆಡಲಿಲ್ಲ. ಮೂವರೂ ತಲಾ ಒಂದೊಂದು ಚಿತ್ರವನ್ನು ನಿರ್ದೇಶಿಸಿದರು. ಗಿರೀಶ್ ಕಾಸರವಳ್ಳಿ ಈ ಸಾರಿ ಪತ್ರಕರ್ತ ಬಿ.ವಿ.ವೈಕುಂಠರಾಜು ಅವರ 'ಆಕ್ರಮಣ' ಕಾದಂಬರಿಯನ್ನು ಆಯ್ದುಕೊಂಡರು. ಗಿರೀಶ್ ಕಾಸರವಳ್ಳಿಯ ಪತ್ನಿ ವೈಶಾಲಿಯವರೇ ಈ ಚಿತ್ರದ ನಾಯಕಿ. ನಾಯಕನಟನಾಗಿ ಮೊದಲ ಬಾರಿಗೆ ವಿಜಯಕಾಶಿ ತೆರೆಗೆ ಬಂದರು. ಕಾಸರವಳ್ಳಿಯವರ ಎರಡನೆಯ ಚಿತ್ರವಾದ ಇದು ಮೊದಲ ಚಿತ್ರ 'ಘಟಶ್ರಾದ್ಧ'ದಷ್ಟು ಸುದ್ದಿ ಮಾಡದಿದ್ದರೂ, ಅವರು ಚಿತ್ರಮಾಧ್ಯಮದ ಬಗ್ಗೆ ಪೂರ್ಣ ಬದ್ಧತೆಯುಳ್ಳ ನಿರ್ದೇಶಕರೆಂಬುದನ್ನು ಒತ್ತಿ ಹೇಳಿತು.

ವೈಶಾಲಿಯಂತೆಯೇ ವಿಜಯಕಾಶಿ ಕೂಡ ಹವ್ಯಾಸಿ ನಾಟಕರಂಗದಿಂದ ಬಂದವರು. ಅವರ ಮೊದಲನೆಯ ಚಿತ್ರದಲ್ಲಿಯೇ ಅವರಿಗೆ ದೊರಕಿದ್ದು ಒಂದು ಸಂಕೀರ್ಣ ಪಾತ್ರ. ಇಬ್ಬರು ನಿಗೂಢ ವ್ಯಕ್ತಿತ್ವದ ಯುವತಿಯರನ್ನು ಒಬ್ಬರಾದ ಮೇಲೆ ಇನ್ನೊಬ್ಬರನ್ನಾಗಿ ಎದುರಿಸಿ ಆ ಇಬ್ಬರನ್ನೂ ಅವರನ್ನು ಆವರಿಸಿಕೊಂಡಿದ್ದ 'ವೃತ್ತ'ದಿಂದ ಬಿಡಿಸುವುದರಲ್ಲಿ ವಿಫಲನಾದ ಈ ಯುವಕ ಈ ಎರಡು ಸೋಲುಗಳ ನಂತರವೂ ಮತ್ತೆ ಹೊಸದಾಗಿ ಸಮಸ್ಯೆಗಳನ್ನು ಎದುರಿಸುವ ಸಿದ್ಧತೆಯಲ್ಲಿ ಚಿತ್ರ ಮುಗಿಯುತ್ತದೆ. ವೈಶಾಲಿಗೆ ಈ ಚಿತ್ರದಲ್ಲಿನ ಸೂಕ್ಷ್ಮ ಅಭಿವ್ಯಕ್ತಿಗಾಗಿ ಆ ವರ್ಷದ ಅತ್ಯುತ್ತಮ ನಟಿ ಪ್ರಶಸ್ತಿ ಸಿಕ್ಕಿತು. ನಾಯಕನ ಭಾವನೆಗಳನ್ನು ಕೆಣಕಿದ ಇನ್ನೊಬ್ಬ ಹುಡುಗಿಯ ಪಾತ್ರದಲ್ಲಿದ್ದವರು ಪದ್ಮಶ್ರೀ. ಕಾಸರವಳ್ಳಿ ತಮ್ಮ ಮೊದಲ ಚಿತ್ರ 'ಘಟಶ್ರಾದ್ಧ'ದಲ್ಲಿಯಂತೆ ಸಂಕೇತಗಳನ್ನು ಬಳಸಲಿಲ್ಲ. ಆದರೆ ಚಿತ್ರದಲ್ಲಿ ಬರುವ ಕನಸಿನಂಥ ಸನ್ನಿವೇಶವೊಂದು ಹಲವು ಆಯಾಮ, ಧ್ವನಿಗಳನ್ನು ಇಡಿಯಾಗಿ ಕೊಡಬಲ್ಲುದಾಗಿತ್ತು. ಆದರೆ ಕಥಾವಸ್ತುವಿನಲ್ಲಿನ ಕ್ಲಿಷ್ಟತೆಯೇ ಅವರ ನಿರೂಪಣೆಯಿಂದ ಒಂದು ಮಟ್ಟದ ಪ್ರಬುದ್ಧತೆಯನ್ನು ಅಪೇಕ್ಷಿಸಿತು. ಈ ಚಿತ್ರಕ್ಕೆ ಪಿಷ್ಟನ್ ಚಲನಚಿತ್ರೋತ್ಸವದಲ್ಲಿ ಪ್ರಶಸ್ತಿ ಬಂದಿತು.

ಕನ್ನಡದಲ್ಲಿ ಹೊಸ ಅಲೆ ಪ್ರಾರಂಭವಾಗಿ ಬೇರೂರಬೇಕಾದರೆ ಅದರಲ್ಲಿ ಪತ್ರಕರ್ತರ ಪಾತ್ರ ಸಾಕಷ್ಟು ಉಲ್ಲೇಖನೀಯ ಎಂದು ಈ ಸಮಯದಲ್ಲಿ ಹೇಳಲೇಬೇಕು. ಆ ವರ್ಷಗಳಲ್ಲಿ ಸಾಹಿತ್ಯ ಪ್ರಪಂಚದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು, ಹವ್ಯಾಸಿ ರಂಗಭೂಮಿಗೂ ಒತ್ತಾಸೆಯಾಗಿದ್ದುಕೊಂಡು, ಕನ್ನಡ ಚಲನಚಿತ್ರರಂಗ ಕೂಡ ತನ್ನ ಫಾರ್ಮುಲಾ ಸಂಕೋಲೆಗಳಿಂದ ಮುಕ್ತವಾಗಿ ಹೊಸ ಹಾದಿಯನ್ನು ಹುಡುಕಬೇಕೆಂಬ ಕಾಳಜಿಯಿಂದ ಆ ರಂಗಗಳಿಂದ ಅನೇಕ ಪ್ರತಿಭಾವಂತರು ಚಿತ್ರಮಾಧ್ಯಮಕ್ಕೆ ಧುಮುಕಲು ಉತ್ತೇಜನ ನೀಡಿದ ಪತ್ರಕರ್ತರ ಪೈಕಿ 'ಪ್ರಜಾವಾಣಿ' ಗುಂಪಿನ ವೈ.ಎನ್.ಕೆ., ಬಿ.ವಿ.ವೈಕುಂಠರಾಜು ಮತ್ತು ಜಿ.ಎಸ್.ಸದಾಶಿವ ಪ್ರಮುಖರು. 'ಆಕ್ರಮಣ'ಕ್ಕೆ ವೈಕುಂಠರಾಜುರವರ ಮೂಲ ಕಥೆಯಿತ್ತು, ಸದಾಶಿವರವರ ಚಿತ್ರಕಥೆ ಮತ್ತು ಸಂಭಾಷಣೆಯಿತ್ತು. ಆದರೆ ರಾಜ್ಯ ಸರ್ಕಾರ ನೇಮಿಸಿದ್ದ ಪ್ರಶಸ್ತಿ ಸಮಿತಿ ಆ ಸಾಲಿಗೆ ವೈಶಾಲಿಗೆ ಅತ್ಯುತ್ತಮ ನಟಿ ಪ್ರಶಸ್ತಿಯನ್ನು ಕೊಡುವುದನ್ನು ಬಿಟ್ಟರೆ ಇನ್ಯಾವ ಪ್ರಶಸ್ತಿಯನ್ನು ಕೊಡದಿದ್ದಾಗ ವೈಕುಂಠರಾಜು ವ್ಯಗ್ರರಾಗಿ ಕೋರ್ಟಿನ ಮೆಟ್ಟಿಲನ್ನು ಹತ್ತಿದರು. ರಾಜ್ಯದ ಶ್ರೇಷ್ಠ ನ್ಯಾಯಾಲಯ ಈ ಸಮಿತಿ ನಿರ್ಧರಿಸಿದ ಯಾವ ಪ್ರಶಸ್ತಿಯನ್ನೂ ಈ ರಿಟ್ ಅರ್ಜಿ ಇತ್ಯರ್ಥವಾಗುವವರೆಗೆ ವಿತರಿಸತಕ್ಕದ್ದಲ್ಲವೆಂದು ಆಜ್ಞೆ ಮಾಡಿತು. ಜೊತೆಗೆ ಅದುವರೆಗೆ ರಾಜ್ಯ ಸರ್ಕಾರ ಮುಂದಿನ ಯಾವ ಚಲನಚಿತ್ರ ಪ್ರಶಸ್ತಿಗಳನ್ನೂ ಕೊಡುವಂತಿಲ್ಲವೆಂದೂ ಹೇಳಿತು. ಹೀಗಾಗಿ ಮುಂದೆ ನಾಲ್ಕು ವರ್ಷಗಳು ರಾಜ್ಯ ಚಲನಚಿತ್ರ ಪ್ರಶಸ್ತಿಗಳ ವಿತರಣೆಯ ಪ್ರಕ್ರಿಯೆಯೇ ಸ್ಥಗಿತವಾಯಿತು. ಶ್ರೇಷ್ಠ ನ್ಯಾಯಾಲಯ ಕೂಡ ವೈಕುಂಠರಾಜು ಅರ್ಜಿಯ ಬಗ್ಗೆ ಬೇಗ ನಿರ್ಧಾರ ಕೈಗೊಳ್ಳಲಿಲ್ಲ. ಆ ವೇಳೆಗೆ ವೈಕುಂಠರಾಜು 'ವಾರಪತ್ರಿಕೆ'ಯನ್ನು ಪ್ರಾರಂಭಿಸಿದ್ದರಿಂದ ಮೊಕದ್ದಮೆಯಲ್ಲಿ ಆಸಕ್ತಿಯನ್ನು ಕಳೆದುಕೊಂಡರು. ಇಂಡೋನೇಷಿಯಾದಲ್ಲಿ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ 'ಆಕ್ರಮಣ'ದ ಚಿತ್ರಕಥೆಗೆ ಪ್ರಶಸ್ತಿ ಬಂದಿತು.

'ಆಕ್ರಮಣ'ದಲ್ಲಿ ಡಾ।ಹಾ.ಮಾ.ನಾಯಕ, ಡಾ।ಸಿಂಧುವಳ್ಳಿ ಅನಂತಮೂರ್ತಿ, ಡಾ।ರತ್ನ ಮತ್ತು ಪ್ರೊ।ಗಜರಾಜ್‌ರಂತಹ ಶ್ರೇಷ್ಠ ಸಾಹಿತಿ-ಶಿಕ್ಷಕರು ಅತಿಥಿ ನಟರಾಗಿ ಅಭಿನಯಿಸಿದ್ದು ಒಂದು ವಿಶೇಷ. ಶ್ರೀಸಾಯಿನಾಥ ಪ್ರೊಡಕ್ಷನ್ಸ್ ಲಾಂಛನದಲ್ಲಿ ತಯಾರಾದ ಈ ಚಿತ್ರದ ನಿರ್ಮಾಪಕ ಶರತ್‌ಕುಮಾರ್ ಎಸ್.ರಾವ್.

ಪತ್ರಕರ್ತ ಜಿ.ಎಸ್.ಸದಾಶಿವ ಚಿತ್ರಕಥೆಯನ್ನು ರಚಿಸಿದ ಇನ್ನೊಂದು ಚಿತ್ರ ಪಿ.ಲಂಕೇಶರ 'ಎಲ್ಲಿಂದಲೋ ಬಂದವರು'. ಇದು ಲಂಕೇಶ್‌ರ ನಾಲ್ಕನೆಯ ಮತ್ತು ಕೊನೆಯ ಚಿತ್ರ. ಇದಾದ ನಂತರ ಅವರು ಚಲನಚಿತ್ರ ಕ್ಷೇತ್ರವನ್ನೇ ತೊರೆದು, ತಮ್ಮ ಅಧ್ಯಾಪಕ ವೃತ್ತಿಯಿಂದಲೂ ಸ್ವಯಂ ಪ್ರೇರಣೆಯಿಂದ ನಿವೃತ್ತರಾಗಿ, ತಮ್ಮದೇ ಹೆಸರಿನ 'ಲಂಕೇಶ್ ಪತ್ರಿಕೆ'ಯನ್ನು ಪ್ರಾರಂಭಿಸಿ ಟ್ಯಾಬ್ಲಾಯ್ಡ್ ಪತ್ರಿಕೋದ್ಯಮದಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಿದರು.

ಮಾನವ ಸಂಬಂಧಗಳ ಸಂಕೀರ್ಣತೆಗಳ ವಿಶ್ಲೇಷಣೆ 'ಎಲ್ಲಿಂದಲೋ ಬಂದವರು' ಚಿತ್ರವನ್ನು ಕುತೂಹಲಕಾರಿಯನ್ನಾಗಿ ಮಾಡಿತ್ತು. ಒಬ್ಬ ಆಗಂತುಕ ಒಂದು ಇಡೀ ಸಂಸಾರದಲ್ಲಿ ಉಂಟುಮಾಡುವ ಪರಿವರ್ತನೆಯನ್ನು ನಿರೂಪಿಸುವ ಈ ಕಥೆ ಜೀವನದಲ್ಲಿ ನಿಷ್ಠೆ ಮತ್ತು ದುಡಿಮೆಗಳಲ್ಲಿ ಇರಬೇಕಾದ ಅಚಲ ನಂಬಿಕೆಯ ಅಗತ್ಯವನ್ನೂ ತೋರಿಸಿತು. ಲಂಕೇಶ್ ನಿರ್ದೇಶಿಸಿದ ಈ ಚಿತ್ರದ ಸಂಭಾಷಣೆಗೆ ಆ ವರ್ಷದ ರಾಜ್ಯ ಪ್ರಶಸ್ತಿಯೂ ಬಂತು. ಲೋಕೇಶ್ 'ಎಲ್ಲಿಂದಲೋ ಬಂದವರು' ಚಿತ್ರದಲ್ಲಿ ಆಗಂತುಕನಾಗಿ ನಿಯಂತ್ರಿತ ಅಭಿನಯದಲ್ಲಿ ತಮಗಿದ್ದ ಶ್ರದ್ಧೆಯನ್ನು ಎತ್ತಿ ತೋರಿದರು. 'ಪಲ್ಲವಿ'ಯ ವಿಮಲಾನಾಯ್ಡು ಪ್ರಧಾನ ಮಹಿಳಾ ಪಾತ್ರದಲ್ಲಿ ಅಭಿನಯಿಸುವುದರ ಜೊತೆಗೆ ಚಿತ್ರದ ಕಲಾನಿರ್ದೇಶನವನ್ನೂ ಮಾಡಿದರು. ಸುರೇಶ್ ಹೆಬ್ಳೀಕರ್ ಆಗಂತುಕನ ಪ್ರಭಾವಕ್ಕೆ ಒಳಗಾದ ನಿರುದ್ಯೋಗಿ ಯುವಕನ ಪಾತ್ರ ವಹಿಸಿದರು. ಆಗಾಗ್ಗೆ ಹೊಸ ಅಲೆಯ ಚಿತ್ರಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡ ಸಂಗೀತ ನಿರ್ದೇಶಕ ವಿಜಯಭಾಸ್ಕರ್ ಸಂಯೋಜಿಸಿದ 'ಕೆಂಪಾದವೋ ಎಲ್ಲಾ ಕೆಂಪಾದವೋ....', 'ಎಲ್ಲಿದ್ದೆ ಈ ತನಕ ಎಲ್ಲಿಂದ ಬಂದ್ಯವ್ವ...' ಮತ್ತು 'ಕರಿಯಮ್ಮನ ಗುಡಿತಾವ ಅರಳ್ಯಾವ ಬಿಳಿ ಹೂವು...' ಹಾಡುಗಳಲ್ಲಿ ಜಾನಪದ



(ಚಿತ್ರ ೧೧೪) 'ಎಲ್ಲಿಂದಲೋ ಬಂದವರು' ಚಿತ್ರದಲ್ಲಿ ಸುರೇಶ್ ಹೆಬ್ಳೀಕರ್ ಮತ್ತು ಲೋಕೇಶ್



(ಚಿತ್ರ ೧೧೫)'ಸಾವಿತ್ರಿ'ಚಿತ್ರದಲ್ಲಿ ಅಶ್ವಿನಿ ಮತ್ತು ಶಾಂತಾರಾಮ್

ಸಂಗೀತದ ಸೊಗಡಿದ್ದು ತುಂಬಾ ಜನಪ್ರಿಯವಾದವು. ಆಗಂತುಕನಿಗೆ ಹಾಡುವ ಹುಚ್ಚಿದ್ದುದರಿಂದ ಚಿತ್ರದಲ್ಲಿ ಈ ಹಾಡುಗಳನ್ನು ಅಳವಡಿಸಿಕೊಳ್ಳಲು ಅವಕಾಶವಾಯಿತು.

ಆ ವೇಳೆಗಾಗಲೇ 'ಕಂಕಣ' ಮತ್ತು 'ಗೀಜಗನ ಗೂಡು' ಚಿತ್ರಗಳ ನಿರ್ಮಾಣದಲ್ಲಿ ಹಣ ತೊಡಗಿಸಿ ಕೈ ಕಚ್ಚಿಸಿಕೊಂಡಿದ್ದರೂ ಹಮ್‌ಜು ಇಮಾಂ ಹೊಸ ಅಲೆಯ ಗೀಳನ್ನು ಸುಲಭಕ್ಕೆ ಬಿಡಲಿಲ್ಲ. ೧೯೭೫ರಲ್ಲಿ ಬಿಡುಗಡೆಯಾದ 'ಸಾವಿತ್ರಿ' ಅವರದ್ದೇ ತಯಾರಿಕೆ. ಟಿ.ಎಸ್.ರಂಗಾ ಈ ಚಿತ್ರವನ್ನು ನಿರ್ದೇಶಿಸಿದವರು. ನಂತರ ಅವರಿಬ್ಬರೂ ಇನ್ನಾವುದೇ ಚಿತ್ರಕ್ಕೂ ಕೈ ಹಾಕಲಿಲ್ಲ. ರಂ.ಶಾ.ರ ಕಾದಂಬರಿಯೊಂದರ ಆಧಾರದ ಮೇಲೆ ತಯಾರಾದ 'ಸಾವಿತ್ರಿ' ಉತ್ತರ ಕರ್ನಾಟಕದ ವಾಡೆಯೊಂದರಲ್ಲಿ ಸಂಪೂರ್ಣವಾಗಿ ಚಿತ್ರಿತವಾದ ಮೊದಲ ಕನ್ನಡ ಚಿತ್ರ. ಪಾಳೆಗಾರಿಕೆ ಮನೋಭಾವಕ್ಕೆ ಸೆರೆಯಾದ ಅಮಾಯಕ ಹೆಣ್ಣು ಮಗಳೊಬ್ಬಳು ಕೊನೆಗೂ ಈ ವ್ಯವಸ್ಥೆಯ ವಿರುದ್ಧ ತಿರುಗಿ ಬೀಳುವ ಕಥೆ ಈ ಚಿತ್ರದ್ದು. 'ಹೇಮಾವತಿ' ಚಿತ್ರದ ನಾಯಕಿಯಾಗಿದ್ದ ಅಶ್ವಿನಿ ಈ ಚಿತ್ರದ ನಾಯಕಿ. ನಂತರ ಆಕೆ ಟಿ.ಎಸ್.ರಂಗಾ ಅವರನ್ನೇ ಮದುವೆಯಾದರು. ಕೆಲವು ತಮಿಳು ಚಿತ್ರಗಳಲ್ಲಿನ ವಿಶಿಷ್ಟ ಪಾತ್ರಗಳಲ್ಲಿ ಅಭಿನಯಿಸಿ ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದರೂ ಚಿತ್ರರಂಗಕ್ಕೆ ವಿದಾಯ ಹೇಳಿ ಬೆಂಗಳೂರಿಗೆ ವಾಪಸಾಗಿ ಗೃಹಿಣಿಯಾದರು. ಟಿ.ಎಸ್.ರಂಗಾರವರಿಗೆ ಅನೇಕ ಉತ್ತಮ ಸಾಕ್ಷ್ಯ ಚಿತ್ರಗಳನ್ನು ನಿರ್ದೇಶಿಸುವುದರಲ್ಲಿ ಸಹಾಯವೂ ಆದರು. ಕೊನೆಯದಾಗಿ ಮಲೆಯಾಳದ ಶ್ರೇಷ್ಠ ನಿರ್ದೇಶಕ ಷಾಜಿ ಕರುಣ್ ಅವರ ಚಿತ್ರದಲ್ಲಿ ಅಭಿನಯಿಸಿದರು. ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್ ಪಧವೀಧರ, ಸೃಜನಶೀಲ ಛಾಯಾಗ್ರಾಹಕ ಬರುಣ್ ಮುಖರ್ಜಿ 'ಸಾವಿತ್ರಿ'ಯಲ್ಲಿ 'ಲೋ ಕೀ' ವರ್ಣ ಛಾಯಾಗ್ರಹಣವನ್ನು ಪರಿಣಾಮಕಾರಿಯಾಗಿ ಪ್ರಯೋಗಿಸಿದರು. ಕನ್ನಡದ ಹೆಚ್.ಜಿ.ಸೋಮಶೇಖರರಾವ್ ಮತ್ತು ಹಿಂದಿ ಹಾಗೂ ಮರಾಠಿ ರಂಗಭೂಮಿ ಮತ್ತು ಚಲನಚಿತ್ರ ನಟ ಹುಬ್ಬಳ್ಳಿಯ ಅನಿಲ್‌ಠಕ್ಕರ್ ಎರಡು ದೃಷ್ಟಿಕೋನಗಳನ್ನು ಪ್ರತಿನಿಧಿಸುವ ಹಳ್ಳಿಯ ಮುಖ್ಯಸ್ಥರಾಗಿ ಎರಡು ಶೈಲಿಯ ಅಭಿನಯವನ್ನು ಪ್ರದರ್ಶಿಸಿದರು. ಅಂತಿಮ ದೃಶ್ಯದಲ್ಲಿ ಯಾವುದೇ ಸನ್ನಿವೇಶದ ಚಿತ್ರಿಕೆಗಳೂ ಇಲ್ಲದೆಯೂ ನಡೆದಿರಬಹುದಾದ ಮಹಾಕಾರ್ಯವೊಂದನ್ನು ಊಹಿಸಿಯೇ ನಡುಗಿ ಹೋಗುವಂಥ ಪರಿಣಾಮಕಾರಿಯಾದ ಒಂದು ಚಿತ್ರಿಕೆಯನ್ನು ಹಿನ್ನೆಲೆ ಸಂಗೀತದ ಮೂಲಕ ಮೂಡಿಸಿದರು ರಂಗಾ. ಈ ಚಿತ್ರದಲ್ಲಿ ಹುಚ್ಚನ ಪಾತ್ರ ನಿರ್ವಹಿಸಿದ ಶಾಂತಾರಾಂ ಮುಂದೆ ನಿರ್ದೇಶಕರಾಗಿ ಹೆಸರು ಮಾಡಿದರು.

ರಂಗಕರ್ಮಿಗಳನೇಕರು ಭಾಗವಹಿಸಿದ್ದ ಈ ಚಿತ್ರದಲ್ಲಿ ಶ್ರೀನಿವಾಸ ತಾವರಗೇರಿ ಎಂಬ ಪ್ರಸಿದ್ಧ ರಂಗಕರ್ಮಿಯೂ ಪಾತ್ರ ನಿರ್ವಹಿಸಿದರು. ಕಲಾವಿದ ಕೃಷ್ಣಪೊದ್ದಾರ್ ಕಲಾನಿರ್ದೇಶನ ಮಾಡಿದ್ದರು. ಪ್ರಚಾರ ನಿರ್ವಹಣೆ ಮಾಡಿದವರು ಈ ರಂಗಕ್ಕೆ ಹೊಸಬರಾದ ಪುಸ್ತಕ ವ್ಯಾಪಾರಿ ಶ್ರೀನಿವಾಸರು. 'ಸಾವಿತ್ರಿ' ವಿಮರ್ಶಕರ ಪ್ರಶಂಸೆಯನ್ನು ಪಡೆಯಿತಾದರೂ ಜನಸಾಮಾನ್ಯರನ್ನು ತಲುಪಲಾಗಲಿಲ್ಲ.

''ನನಗೂ 'ಮಿಂಚಿನ ಓಟ'ಕ್ಕೂ ಯಾವುದೋ ಜನ್ಮದ ನಂಟು ಇರಬೇಕು. ಚಿತ್ರರಂಗಕ್ಕ ಬಂದದ್ದು, ಹೆಸರು ಮಾಡಿದ್ದು, ಮೊದಲ ಚಿತ್ರದಲ್ಲಿಯೇ ಅಂತರರಾಷ್ಟ್ರೀಯ ಮಟ್ಟದ ಪ್ರಶಸ್ತಿ ಪಡೆದಿದು, ಬಹು ದಿನದ ಬಯಕೆಯಾಗಿದ್ದಂತೆ ಚಿತ್ರ ನಿರ್ದೇಶಿಸಿದು, ಎಲ್ಲವೂ ನನ್ನ ಪಾಲಿಗೆ ಕೇವಲ ಒಂದು ವರ್ಷದ ಅವಧಿಯಲ್ಲಿ ಪ್ರಾಪ್ತವಾದದ್ದನ್ನು ನನೆಸಿಕೊಂಡಾಗ ಈ ಮಾತು ಎಷ್ಟೊಂದು ನಿಜ ಎನಿಸುತ್ತದೆ ನನಗೆ. ಕನ್ನಡ ಚಿತ್ರರಂಗದಲ್ಲಿನ ಈ ನನ್ನ ಮಿಂಚಿನ ಓಟವೇ ನನ್ನ ನಿರ್ದೇಶನದ ಪ್ರಥಮ ಚಿತ್ರಕ್ಕೂ 'ಮಿಂಚಿನ ಓಟ' ಎಂದು ನಾಮಕರಣ ಮಾಡಲು ಅಗೋಚರವಾಗಿ ಪ್ರಚೋದನೆ ನೀಡಿದೆ'' ಎಂದಿದ್ದರು ಶಂಕರ್‌ನಾಗ್.

''ಮಿಂಚಿನ ಓಟ' ಅದರ ನಿರ್ಮಾಣದುದ್ದಕ್ಕೂ ಮಿಂಚಿನಂತೆಯೇ ಸುದ್ದಿ ಮಾಡಿ ಬಿಡುಗಡೆಯ ನಂತರವೂ ಮಿಂಚಿನಂತೆ ವಿವಾದಕ್ಕೆ ಸಿಕ್ಕಿಕೊಂಡಿತು. ಈ ಚಿತ್ರಕ್ಕೆ ಆರು ರಾಜ್ಯ ಪ್ರಶಸ್ತಿಗಳು ಸಂದಾಗ ಅನೇಕರ ಹುಬ್ಬುಗಳೇರಿದವು. ವಿಷಯ ಕೋರ್ಟಿನ ಮಟ್ಟಕ್ಕೂ ಹೋಯಿತು. ಇದರಲ್ಲಿ ಅನ್ಯಾಯ ನಡೆದಿದೆಯೆಂಬ ಆರೋಪವೂ ಕೇಳಿ ಬಂತು. ನಂತರ ತಣ್ಣಗಾಯಿತು. ೧೯೭೯-೮೦ರ ದ್ವಿತೀಯ ಅತ್ಯುತ್ತಮ ಚಿತ್ರದ ಪ್ರಶಸ್ತಿಯೊಂದಿಗೆ ಈ ಚಿತ್ರಕ್ಕೆ ಸಂದ ಇತರ ಪ್ರಶಸ್ತಿಗಳು ಅತ್ಯುತ್ತಮ ನಟ (ಅನಂತ್‌ನಾಗ್), ಅತ್ಯುತ್ತಮ ಪೋಷಕ ನಟ (ಲೋಕನಾಥ್), ಅತ್ಯುತ್ತಮ ಕಥೆ (ಶಂಕರ್‌ನಾಗ್/ಮರಿಯಮ್ ಜೇತ್‌ಪುರ್‌ವಾಲ), ಅತ್ಯುತ್ತಮ ಛಾಯಾಗ್ರಹಣ (ಗೌರಿಶಂಕರ್) ಮತ್ತು ಅತ್ಯುತ್ತಮ ಸಂಕಲನ (ಪಿ.ಭಕ್ತವತ್ಸಲಂ).

'ಮಿಂಚಿನ ಓಟ' ಒಂದು ವಿಭಿನ್ನ ರೀತಿಯ ಚಿತ್ರ. ಅದರಲ್ಲಿ ವ್ಯಾಪಾರಿ ಚಿತ್ರಗಳ ಹಾಗೂ ಹೊಸ ಅಲೆ ಚಿತ್ರಗಳ ಫಾರ್ಮುಲಾಗಳ ಹಿತವಾದ ಮಿಶ್ರಣವಿತ್ತು. ನಂತರದ ದಿನಗಳಲ್ಲಿ ಜನಪ್ರಿಯವಾದ 'ಬ್ರಿಡ್ಜ್ ಸಿನಿಮಾ'ದ ಪ್ರವರ್ತಕರಲ್ಲೊಬ್ಬರೆನಿಸಿದರು ಶಂಕರ್‌ನಾಗ್. ನಿಜಜೀವನದಲ್ಲಿ ನಡೆದ ಒಂದು ಕಥೆಯ ಆಧಾರದ ಮೇಲೆ ಮರಿಯಮ್ ಜೇತ್‌ಪುರ್‌ವಾಲ ಚಿತ್ರಕಥೆಯನ್ನು ರಚಿಸಿದರು. ಜೈಲಿನಿಂದ ಹೊರಬಂದ ಇಬ್ಬರು ನಿತ್ಯ ಜೀವನದಲ್ಲಿ ಎದುರಿಸಬೇಕಾಗಿ ಬಂದ ಪಡಿಪಾಟಲು ಕಥಾವಸ್ತು. ಸಾಕಷ್ಟು ಹಾಸ್ಯವಿತ್ತು, ವಿಡಂಬನೆಯಿತ್ತು, ನೋವಿತ್ತು, ಮಿಂಚಿನ ಓಟವಿತ್ತು. ಚಿತ್ರವನ್ನು



(ಚಿತ್ರ ೧೧೬)'ಮಿಂಚಿನ ಓಟ' ಚಿತ್ರದಲ್ಲಿ ಲೋಕನಾಥ್, ಶಂಕರ್‌ನಾಗ್, ಅನಂತ್‌ನಾಗ್



(ಚಿತ್ರ ೧೧೭) 'ಭಕ್ತ ಸಿರಿಯಾಳ'ದಲ್ಲಿ ಸಾಯಿಕುಮಾರ್, ಪ್ರಮೀಳಾ ಜೋಷಾಯ್, ಮುಸುರಿ ಕೃಷ್ಣಮೂರ್ತಿ, ಲೋಕೇಶ್, ಆರತಿ ಮತ್ತು ಬೇಬಿ ರೇಖಾ

ಶಂಕರ್ ಮತ್ತು ಅಣ್ಣ ಅನಂತ್‌ನಾಗ್ ಒಟ್ಟಿಗೆ ನಿರ್ಮಿಸಿದರು. ದೃಶ್ಯ ದೃಶ್ಯಕ್ಕೂ ನಿರೂಪಣೆ ಹೇಗಿರಬೇಕು ಎನ್ನುವ ವಿಷಯದಲ್ಲಿ ಶೂಟಿಂಗ್ ಸಮಯದಲ್ಲಿ ಇಬ್ಬರ ನಡುವೆಯೂ ವಾಗ್ವಾದ ತಪ್ಪಿದ್ದೇ ಇಲ್ಲವಂತೆ. ಅದರೂ ಅದರಿಂದ ಚಿತ್ರದ ಗುಣಮಟ್ಟಕ್ಕೆ ಅನುಕೂಲವೇ ಆಯಿತು. ಬೆಳಗಾವಿಯ ಚರಿತ್ರಾರ್ಹ ಕಾರಾಗೃಹದಲ್ಲಿ ಚಿತ್ರದ ಅನೇಕ ಪ್ರಮುಖ ದೃಶ್ಯಗಳು ಚಿತ್ರಿತವಾದವು. ಸ್ಟುಡಿಯೋ ಬಳಕೆಯಿಲ್ಲದೆಯೇ ಚಿತ್ರಣವಾದ 'ಮಿಂಚಿನ ಓಟ'ದಲ್ಲಿ ತುಂಬಾ ಪ್ರಿಯವೆನಿಸುವ ನೈಜತೆಯಿತ್ತು. ಈ ಚಿತ್ರದಿಂದ ಶಂಕರ್‌ನಾಗ್ ಒಬ್ಬ ಕ್ರಿಯಾಶೀಲ ನಿರ್ದೇಶಕರೆನಿಸಿ ತಮ್ಮ ಮುಂದಿನ ಚಿತ್ರಗಳಲ್ಲಿಯೂ ಅದೇ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದರು. ಈ ಚಿತ್ರದಲ್ಲಿ ವಿಜಯ ತೆಂಡೂಲ್ಕರ್ ಅವರ ಮಗಳು ಪ್ರಿಯಾ ತೆಂಡೂಲ್ಕರ್ ಅಭಿನಯಿಸಿದ್ದರು. ಮೇಕಪ್ ನಿರ್ವಹಿಸಿದ ರಾಮಕೃಷ್ಣ ವಾಣಿಜ್ಯ ಚಿತ್ರಗಳಲ್ಲೂ ಗ್ಲಾಮರ್‌ಗೆ ಮಾತ್ರವಲ್ಲದೆ, ಬೇರೆ ಬೇರೆ ಕಾರಣಕ್ಕೆ ನೈಜತೆಗೆ ಹತ್ತಿರವಾಗುವಂತೆ ಪ್ರಸಾಧನ ಮಾಡುವುದು ಸಾಧ್ಯ ಮತ್ತು ಅದು ಏಕತಾನತೆಯನ್ನು ಮುರಿಯುತ್ತದೆ ಎಂಬುದನ್ನು ತೋರಿಸಿದ್ದರು. ಒಂದು ಹೊಸ ಪರಂಪರೆಯೇ ಈ ಕ್ಷೇತ್ರದಲ್ಲಿ ಉಂಟಾಯಿತು. ಅನಂತರ ಬಂದ ಮೇಕಪ್ ಕಲಾವಿದರನ್ನು, ಕಾರ್ಯವಿಧಾನವನ್ನು ಗಮನಿಸಿದರೆ ಈ ಮಾತಿಗೆ ಪುಷ್ಟಿ ದೊರೆಯುತ್ತದೆ.

೧೯೮೦ರಲ್ಲಿ 'ಭಕ್ತ ಸಿರಿಯಾಳ', 'ನಾರದ ವಿಜಯ', 'ಕಾಳಿಂಗ', 'ಆಟೋ ರಾಜ', 'ಪಾಯಿಂಟ್ ಪರಿಮಳ', 'ಹುಣ್ಣಿಮೆಯ ರಾತ್ರಿಯಲ್ಲಿ', 'ವಸಂತಗೀತ'ದಂತಹ ಚಿತ್ರಗಳು ಆರ್ಥಿಕವಾಗಿ ಯಶಸ್ಸು ಗಳಿಸಿದರೂ ಅವುಗಳಲ್ಲಿ ನೆನಪಿನಲ್ಲಿ ಉಳಿಯುವಂತಹ, ದಾಖಲೆಯ ದೃಷ್ಟಿಯಿಂದ ಉಲ್ಲೇಖನೀಯವೆನಿಸುವ ಚಿತ್ರಗಳು. ಕುಟುಂಬ ಮನರಂಜನೆಗಿಂತ ಸಮೂಹ ಮನರಂಜನೆಗೆ ಒತ್ತು ಬಂದಂತಾಯಿತು. ಮಾನವ ಸಂಬಂಧಗಳ, ದಿನ ನಿತ್ಯದ ಆಗುಹೋಗುಗಳ ನಿರೂಪಣೆಗಿಂತ ಹೆಚ್ಚಾಗಿ ಪಲಾಯನವಾದಕ್ಕೆ ಪ್ರಾಮುಖ್ಯ ಸಿಗುತ್ತ ಹೋಯಿತು. ಮುಂದೆ ೮೦,೯೦ರ ದಶಕಗಳಲ್ಲಿ ಕೂಡ ಇದೇ ಪ್ರವೃತ್ತಿ ಬೆಳೆಯುತ್ತ ಬಂದು ಕನ್ನಡ ಚಿತ್ರರಂಗ ತಾನು ಅದುವರೆಗೆ ಉಳಿಸಿಕೊಂಡು ಬಂದಿದ್ದ ತನ್ನತನವನ್ನು ಕ್ರಮೇಣ ಕಳೆದುಕೊಳ್ಳುತ್ತ ಹೋಗುವಂತಾಯಿತು.

'ಭಕ್ತ ಸಿರಿಯಾಳ' ಅದರ ನಿರ್ಮಾಣ ಘಟ್ಟದಲ್ಲಿ ಯಾರಿಗೂ ಬೇಡವಾದ ಚಿತ್ರವಾಗಿತ್ತು. ಈ ಮಾತನ್ನು ನಿರ್ಮಾಪಕ ಚಂದೂಲಾಲ್ ಜೈನ್‌ರವರೇ ಒಪ್ಪಿಕೊಳ್ಳುತ್ತಾರೆ. ಅದರೆ ಕೊನೆಗೆ ಈ ಚಿತ್ರ ಬಾಕ್ಸ್ ಆಫೀಸ್‌ನ ಒಂದು ಪವಾಡವೆನಿಸಿತು. ಮೂಢನಂಬಿಕೆಗಳು ಈ ಚಿತ್ರದಲ್ಲಿ ಮೇಳೈಸಿದವು. ನಾಮಪಾತ್ರದಲ್ಲಿ ಅಭಿನಯಿಸಲು ಲೋಕೇಶ್ ಮೊದಲು ನಿರಾಕರಿಸಿದ್ದೂ ಆಯಿತು. ಬೇರೆ ಒಬ್ಬಿಬ್ಬರು ನಿರ್ದೇಶಿಸಲೊಲ್ಲದ ಈ ಚಿತ್ರವನ್ನು ನಿರ್ದೇಶಿಸಲು ಹುಣಸೂರು ಕೃಷ್ಣಮೂರ್ತಿಗಳು ಒಪ್ಪಿ ತಾವೇ ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ಬರೆದರು. ಕಡಿಮೆ ವೆಚ್ಚದ ಈ ಚಿತ್ರಕ್ಕೆ ಚಂದೂಲಾಲರು ಹಾಕಿಕೊಂಡ ಬಜೆಟ್ ಎಂಟು ಲಕ್ಷ. ಆದರೆ ಆದ ವೆಚ್ಚ ಏಳೂವರೆ ಲಕ್ಷ ಮಾತ್ರ. ಬಿಡುಗಡೆಯಾದ ದಿನ ಯಾವ ಊರಿನ ಚಿತ್ರಮಂದಿರಗಳಲ್ಲಿಯೂ ಜನರೇ ಇಲ್ಲ. ಗಾಬರಿಯಿಂದ ಹಣಕಾಸು ಮಂತ್ರಿ ವೀರಪ್ಪಮೊಯ್ಲಿಯವರ ಬಳಿ ಚಂದೂಲಾಲರು ಹೋಗಿ ಚಿತ್ರಕ್ಕೆ ಸಂಪೂರ್ಣ ತೆರಿಗೆ ವಿನಾಯಿತಿ ಕೊಡುವಂತೆ ಕೋರಿದರು. ಶಿವನ ಪಾತ್ರ ವಹಿಸಿದ್ದ ಅರುಣ್‌ಕುಮಾರ್ ಪ್ರಭಾವದಿಂದ ತೆರಿಗೆ ವಿನಾಯಿತಿ ಸಿಕ್ಕಿ ಚಿತ್ರ ಬಚಾವಾದದ್ದು ಮಾತ್ರವಲ್ಲ, ರಾಜ್ಯದಾದ್ಯಂತ ಜಯಭೇರಿ ಹೊಡೆಯಿತು. ಜೊತೆಗೆ ಹಿಂದಿ, ತೆಲುಗು, ತಮಿಳು ಭಾಷೆಗಳಲ್ಲಿಯೂ ರೀಮೇಕ್ ಆಯಿತು. ತಾವು ಬೇಡವೆಂದಿದ್ದ ಸಿರಿಯಾಳನ ಪಾತ್ರ ಲೋಕೇಶ್‌ರವರಿಗೆ ಹೇರಳವಾದ ಜನಪ್ರಿಯತೆ ತಂದುಕೊಟ್ಟಿತು. ಸಿರಿಯಾಳನ ಹೆಂಡತಿಯ ಪಾತ್ರ ವಹಿಸಿದ ಆರತಿಯವರ ಪಾಲಿಗೆ ಕೂಡ ಇದೊಂದು ಹೊಸ ಅನುಭವವೆನಿಸಿತು. ಟಿ.ಜಿ.ಲಿಂಗಪ್ಪನವರು ಸಂಯೋಜಿಸಿದ 'ಶಿವ ಶಿವ ಎಂದರೆ ಭಯವಿಲ್ಲ ಶಿವ ನಾಮಕೆ ಸಾಟಿ ಬೇರಿಲ್ಲ....' ಬಹಳ ಕಾಲ ಜನಾನುರಾಗ ಉಳಿಸಿಕೊಂಡ ಹಾಡಾಯಿತು.

ಮಹಾಭಕ್ತ ಸಿರಿಯಾಳನನ್ನು ಪರೀಕ್ಷೆಗೆ ಒಳಪಡಿಸಲು ಶಿವ ಆತನ ಮಗನನ್ನೇ ರುಬ್ಬಿ ತನಗೆ ಬಡಿಸಬೇಕೆಂಬ ಭೀಕರವಾದ ಇಕ್ಕಟ್ಟಿಗೆ ಸಿಕ್ಕಿಸಿದರೂ ಸಿರಿಯಾಳ ಮಿಸುಕದೆ ಆ ರೀತಿಯೇ ಮಾಡಿದ ದೃಶ್ಯ ವಿವಾದಕ್ಕೆ ಸಿಕ್ಕಿದರೂ ಚಿತ್ರವನ್ನು ತೃಪ್ತಿಯಿಂದ ಸ್ವೀಕರಿಸಿದ ಜನ ಅದೇ ದೃಶ್ಯವನ್ನು ಮೆಚ್ಚಿಕೊಂಡರು. ಅನಿರೀಕ್ಷಿತವಾಗಿ ಈ ಚಿತ್ರದಿಂದ ಬಂದ ಹೇರಳವಾದ ಲಾಭವನ್ನು ಚಂದೂಲಾಲ್ ದಾನ, ಧರ್ಮಗಳಿಗೆ ವಿನಿಯೋಗಿಸಿದರು. ಚಿತ್ರದಲ್ಲಿ ಬಳಸಲಾದ ಕಂಚಿನ ತಟ್ಟೆಯೊಂದನ್ನು ಪೂಜಾ ಸಾಮಗ್ರಿಯೋ ಎಂಬಂತೆ ಜೋಪಾನ ಮಾಡಿದ್ದರು.

'ಭೂಲೋಕದಲ್ಲಿ ಯಮರಾಜ'ದಲ್ಲಿ ಯಮನನ್ನು ಭೂಮಿಗೆ ತಂದ ಸಿದ್ದಲಿಂಗಯ್ಯನವರು 'ನಾರದ ವಿಜಯ'ದಲ್ಲಿ ನಾರದನನ್ನು ಆಧುನಿಕ ನಗರ ಬೆಂಗಳೂರಿಗೆ ಕರೆತಂದರು. ಆದರೆ ಇಲ್ಲಿ ನಾರದ ಭೂಲೋಕಕ್ಕೆ ಬಂದಿದ್ದು ಪೌರಾಣಿಕ ಚಿತ್ರಗಳಲ್ಲಿನ ನಾರದನಂತಲ್ಲ, ಗೂಢಚಾರಿಯಾಗಿ. ನಾರದ ಭೂಲೋಕಕ್ಕೆ ಬಂದು ತನ್ನ ಪ್ರತಿಸ್ಪರ್ಧಿ ಜೇಮ್ಸ್ ಬಾಂಡ್‌ನನ್ನು ಕಂಡುಕೊಳ್ಳುವ ಮನರಂಜಕ ಕಥೆ ಇದು. ಅನಂತ್‌ನಾಗ್ ಈ ಎರಡು ಪಾತ್ರಗಳಲ್ಲಿಯೂ ಅಭಿನಯಿಸಿ ಖುಷಿ ಕೊಟ್ಟರು. ಮತ್ತೊಮ್ಮೆ ಛಾಯಾಗ್ರಾಹಕ ಮಧುರವರ 'ಮಾಸ್ಕಿಂಗ್' ಚಾತುರ್ಯ ಈ ಚಿತ್ರದಲ್ಲಿ ಪರಿಣಾಮಕಾರಿಯಾಗಿ ಪ್ರಯೋಗವಾಯಿತು. ಹಾಸ್ಯಮಯವಾಗಿದ್ದ 'ನಾರದ ವಿಜಯ'ದಲ್ಲಿ ಅನಂತ್‌ರನ್ನುಳಿದು ಇನ್ನಾವ ಪಾತ್ರಧಾರಿಗಳೂ ಲೆಕ್ಕಕ್ಕೆ ಬರಲಿಲ್ಲ. ಎಂ.ಡಿ.ಸುಂದರ್ ಬರೆದ ಕಥೆಯಲ್ಲಿ ಅರ್ಥಪೂರ್ಣ ವಿಡಂಬನೆಗೂ ಅವಕಾಶವಿತ್ತು. 'ಬೂತಯ್ಯನ ಮಗ ಅಯ್ಯು'ವಿನ ಎಸ್.ವೀರಾಸ್ವಾಮಿ, ವರದಪ್ಪ, ಸಿದ್ದಲಿಂಗಯ್ಯ ಮತ್ತು ಚಂದೂಲಾಲ್ ಜೈನ್ ನಿರ್ಮಿಸಿದ ಈ ಚಿತ್ರ ನಿರ್ಮಾಪಕರಿಗೆ ಲಾಭ ತಂದುಕೊಡುವುದರ ಜೊತೆಗೆ ವ್ಯಾಪಾರಿ ಕನ್ನಡ ಚಿತ್ರಗಳ ಸಾಲಿನಲ್ಲಿ ಜ್ಞಾಪಿಸಿಕೊಳ್ಳಬಹುದಾದ ಪ್ರಯತ್ನವಾಗಿಯೂ ಉಳಿಯಿತು. ನಾರದಮುನಿ



(ಚಿತ್ರ ೧೧೮) 'ನಾರದ ವಿಜಯ' ಚಿತ್ರದಲ್ಲಿ ಅನಂತ್‌ನಾಗ್ (ದ್ವಿಪಾತ್ರ)

ಪಾಲ್ಗೊಂಡ ಸಾಹಸ ದೃಶ್ಯಗಳು ಮನರಂಜನೆ ನೀಡಿದವು. ಅನಂತ್‌ರ ಜನಪ್ರಿಯತೆ ಹಿಗ್ಗಿತು.

ಪುನರ್ಜನ್ಮವನ್ನು ಕಥಾವಸ್ತುವನ್ನಾಗಿ ಹೊಂದಿದ ಎರಡು ಚಿತ್ರಗಳು ಹೆಚ್ಚು ಕಡಿಮೆ ಒಂದೇ ಸಮಯದಲ್ಲಿ ತೆರೆಗೆ ಬಂದಿದ್ದೊಂದು ವಿಶೇಷ. ಈ ಚಿತ್ರಗಳನ್ನೂ ನಿರ್ದೇಶಿಸಿದವರು ಪ್ರತಿಭಾವಂತರೆ. 'ಬಂಗಾರದ ಜಿಂಕೆ'ಯ ನಿರ್ದೇಶಕರು ಟಿ.ಎಸ್.ನಾಗಾಭರಣ, 'ಜನ್ಮ ಜನ್ಮದ ಅನುಬಂಧ'ವನ್ನು ನಿರ್ದೇಶಿಸಿದವರು ಶಂಕರ್‌ನಾಗ್.

'ದಂಗೆಯೆದ್ದ ಮಕ್ಕಳು' ನಿರ್ಮಾಪಕರಾದ ಟಿ.ಎಸ್.ನರಸಿಂಹನ್ ಮತ್ತು ಸೋಮಸುಂದರಂ ತಯಾರಿಸಿದ 'ಬಂಗಾರದ ಜಿಂಕೆ' ಚಿತ್ರಕ್ಕೆ ಕಾದಂಬರಿಗಾರ್ತಿ ಉಷಾನವರತ್ನರಾಮ್ ಸಂಭಾಷಣೆ ಬರೆದರು. ಆಕೆ ಚಿತ್ರವೊಂದಕ್ಕೆ ಸಂಭಾಷಣೆ ಬರೆದಿದ್ದು ಅದೇ ಮೊದಲ ಬಾರಿ. ತುಮಕೂರು ಜಿಲ್ಲೆಯ ಚನ್ನರಾಯದುರ್ಗದ ಹೊರಾಂಗಣದಲ್ಲಿ ಬೆಟ್ಟಗುಡ್ಡಗಳ ಹಿನ್ನೆಲೆಯಲ್ಲಿ ಕಲಾನಿರ್ದೇಶಕ ಶ್ರೀನಿವಾಸವರ್ಮ ಹಳ್ಳಿ ಕಡೆಯ ಮನೆ, ಗುಹೆ, ಕೋಟೆ-ಕೊತ್ತಲಗಳ ಸೆಟ್‌ಗಳನ್ನು ಸ್ವಾಭಾವಿಕವೆಂಬಂತೆ ನಿರ್ಮಿಸಿದ್ದರು. ಈ ಚಿತ್ರದಲ್ಲಿ ವಿಷ್ಣುವರ್ಧನ್‌ರದು ಎರಡು ಪಾತ್ರ - ಒಂದು ಜನ್ಮದ ಪ್ರೇಯಸಿ ಭಾರತಿ, ಇನ್ನೊಂದು ಜನ್ಮದ ಪ್ರೇಯಸಿ ಆರತಿ. ಎಸ್.ರಾಮಚಂದ್ರ ಛಾಯಾಗ್ರಾಹಕರು. 'ಬಂಗಾರದ ಜಿಂಕೆ'ಯಲ್ಲಿ ನಾಗಾಭರಣ ತಮಗೆ ಒಗ್ಗಿದ್ದ ಹೊಸ ಅಲೆಯ ಚಿತ್ರಗಳ ಮಂದಗತಿಯಿಂದ ತುಂಬಾ ದೂರ ಸರಿಯಲಾಗಲಿಲ್ಲ. ವಿಜಯಭಾಸ್ಕರ್‌ರವರ ಸಂಗೀತ ಕೂಡ ಅವರ ಲಯಕ್ಕೆ ತಕ್ಕಂತೆಯೇ ಇತ್ತು.

ಹಾಗೆಯೇ 'ಜನ್ಮ ಜನ್ಮದ ಅನುಬಂಧ'ದಲ್ಲಿ ಪುನರ್ಜನ್ಮವೆತ್ತಿ ಬಂದ ಅನಂತ್‌ನಾಗ್‌ಗೆ ಮಂಜುಳಾ, ಜಯಂತಿ ಇಬ್ಬರೂ ಪ್ರೇಯಸಿಯರು. ನಿರೂಪಣಾ ಶೈಲಿಯಲ್ಲಿ ಎರಡು ಚಿತ್ರಗಳೂ ವಿಭಿನ್ನವಾಗಿದ್ದು, 'ಜನ್ಮ ಜನ್ಮದ ಅನುಬಂಧ'ದಲ್ಲಿ ಶಂಕರ್‌ನಾಗ್‌ರ ಎಂದಿನ ಚುರುಕು ಮತ್ತು ಲವಲವಿಕೆಯಿತ್ತು. ಈ ಲವಲವಿಕೆಗೆ ತಕ್ಕಂತೆ ಇದ್ದದ್ದು ಇಳಯರಾಜ ಸಂಗೀತ. ಶಂಕರ್‌ರವರ ರಂಗಭೂಮಿಯ ಒಡನಾಡಿ ಟಿ.ಎಸ್.ನರಸಿಂಹನ್ ಈ ಚಿತ್ರಕ್ಕೆ ಸಂಭಾಷಣೆ ಬರೆದರು. ಆದರೆ ಈ ಎರಡು ಚಿತ್ರಗಳೂ ಪ್ರೇಕ್ಷಕರಿಗೆ ಅಷ್ಟಾಗಿ ಪಥ್ಯವಾಗಲಿಲ್ಲ.

ಗುರು ರಾಘವೇಂದ್ರರ ಮಹಿಮೆಯನ್ನು ಕುರಿತ ಎರಡು ಚಿತ್ರಗಳು ಬಂದವು ಒಂದು 'ಶ್ರೀ ರಾಘವೇಂದ್ರ ಕರುಣೆ', ಇನ್ನೊಂದು 'ಶ್ರೀ ರಾಘವೇಂದ್ರ ವೈಭವ'. ೧೯೮೧ರಲ್ಲಿ ತೆರೆಕಂಡ 'ಶ್ರೀರಾಘವೇಂದ್ರ ವೈಭವ'ವನ್ನು ನಿರ್ದೇಶಿಸಿದವರು ಮನೋಜ್ ಕುಮಾರ್‌ರವರೊಂದಿಗೆ ಹಿಂದಿ ಚಿತ್ರವೊಂದಕ್ಕೆ ಕೆಲಸ ಮಾಡಿ ಚಲನಚಿತ್ರ ಮಾಧ್ಯಮದ ಬಗ್ಗೆ ಸ್ವಲ್ಪ ಅನುಭವ ಪಡೆದು ಬಂದಿದ್ದ ಪತ್ರಕರ್ತ ಬಾಬುಕೃಷ್ಣಮೂರ್ತಿ. ಮುಂಬಯಿಯಲ್ಲಿ ಅವರಿದ್ದಾಗ ಅವರಿಗೆ ಅಲ್ಲಿಯ ಕನ್ನಡಿಗ ಉದ್ಯಮಿ ಆರ್.ಎಲ್.ಎನ್.ವಿಜಯನಗರ್ ಪರಿಚಯವಾಗಿತ್ತು. ಗುರು ರಾಘವೇಂದ್ರರ ಬಗ್ಗೆ ಚಿತ್ರವೊಂದನ್ನು ನಿರ್ಮಿಸಬೇಕೆಂಬ ತೀರ್ಮಾನವಾಗಿದ್ದು ಆಗಲೆ. ವಿಜಯನಗರ್ ಈ ಚಿತ್ರವನ್ನು ಉದ್ಯಮವೊಂದನ್ನು ನಡೆಸುವ ತಮ್ಮ ಕಾರ್ಯಕ್ಷಮತೆಯನ್ನೇ ಪ್ರಯೋಗಿಸಿ ನಿರ್ಮಿಸಿದರು. ಚಿತ್ರದಲ್ಲಿ ಭಕ್ತಿ, ನಿಷ್ಠೆಗಳಿಗೇನೂ ಕೊರತೆಯಿರಲಿಲ್ಲ. ಆದರೆ ಜನಪ್ರಿಯತೆ ಗಳಿಸಲಿಲ್ಲ. ನಾಯಕನಟ ಶ್ರೀನಾಥ್‌ರ ವೃತ್ತಿಜೀವನಕ್ಕೆ ಮಾತ್ರ ಒಂದು ಹೊಸ ತಿರುವು ಕೊಟ್ಟಿತು. ಚಿತ್ರದ ಶೂಟಿಂಗ್ ಸಮಯದಲ್ಲಿ ಶ್ರೀನಾಥ್ ತಮ್ಮ ಎಲ್ಲ ಹವ್ಯಾಸ, ಚಟಗಳನ್ನು ಬಿಟ್ಟು, ಅವರ ವ್ಯಕ್ತಿತ್ವದಲ್ಲಿಯೇ ಒಂದು ಮೂಲಭೂತ ಬದಲಾವಣೆಯನ್ನೂ ಮಾಡಿಕೊಂಡರು. ಆ ಪಾತ್ರ ಅವರ ನಿಲುವು, ರೂಪುಗಳಿಗೆ ಚೆನ್ನಾಗಿ ಒಪ್ಪುತ್ತಿತ್ತು. ಅವರಿಗೆ ರಾಜ್ಯ ಸರ್ಕಾರದಿಂದ ಆ ವರ್ಷದ ಅತ್ಯುತ್ತಮ ನಟ ಪ್ರಶಸ್ತಿಯೂ ಬಂದಿತು.

'ಶ್ರೀ ರಾಘವೇಂದ್ರ ವೈಭವ' ಗುರುರಾಯರ ಜೀವನ ಚಿತ್ರವಾಗಿದ್ದರೆ, 'ಶ್ರೀ ರಾಘವೇಂದ್ರ ಕರುಣೆ' ಗುರುರಾಯರ ಪವಾಡಗಳನ್ನು ಚಿತ್ರಿಸುವ ಒಂದು ಸಾಮಾಜಿಕ ಚಿತ್ರ. ಹುಣಸೂರು ಕೃಷ್ಣಮೂರ್ತಿ ನಿರ್ದೇಶಿಸಿದ 'ಗುರು ಸಾರ್ವಭೌಮ ಶ್ರೀ ರಾಘವೇಂದ್ರ ಕರುಣೆ'ಯಲ್ಲಿ ರಾಜೇಶ್ ರಾಘವೇಂದ್ರಸ್ವಾಮಿಗಳ ಪಾತ್ರ ಧರಿಸಿ ಚಿತ್ರಣವಾದ ಕಾಲದಲ್ಲಿ ತಾವೂ ನೇಮ ನಿಷ್ಠೆಗಳನ್ನು ಜಾರಿಗೆ ತಂದುಕೊಂಡರು. ಈ ಚಿತ್ರದಲ್ಲಿ ದೊಡ್ಡ ತಾರಾಗಣವೇ ಇತ್ತು - ಬಿ.ಸರೋಜಾದೇವಿ, ಜಮುನ, ಗಂಗಾಧರ್, ಮಾನು ಎಲ್ಲರೂ ಇದ್ದರು. ಆದರೂ ಈ ಚಿತ್ರ ಜನಪ್ರಿಯವೆನಿಸಲಿಲ್ಲ.

'ಮಕ್ಕಳ ಸೈನ್ಯ' ೧೯೮೦ರ ಉಲ್ಲೇಖನೀಯ ಚಿತ್ರಗಳಲ್ಲಿ ಒಂದಾಗಲು ಕಾರಣ ಖ್ಯಾತ ನಟಿ ಲಕ್ಷ್ಮೀ ಅದನ್ನು ನಿರ್ದೇಶಿಸಿದ್ದು. ದಕ್ಷಿಣ ಭಾರತದ ಎಲ್ಲ ಭಾಷೆಗಳ ಚಿತ್ರಗಳಲ್ಲಿಯೂ ಅಭಿನಯಿಸಿ, ತಮ್ಮ ಬೆಡಗು ಹಾಗೂ ಭಾವಪೂರ್ಣ ಅಭಿನಯಗಳಿಂದಾಗಿ ಜನಪ್ರಿಯತೆ ಗಳಿಸಿದ್ದ ಈ ತಾರೆಗೆ ಈ ಚಿತ್ರ ಒಂದು ಸವಾಲೇ ಆಯಿತು. ಆಕೆ ಈ ಚಿತ್ರದಲ್ಲಿ ಅಭಿನಯಿಸಲಿಲ್ಲ. ಬದಲಿಗೆ ಸುಮಿತ್ರರವರನ್ನು



(ಚಿತ್ರ ೧೧೯) 'ಬಂಗಾರದ ಜಿಂಕೆ' ಚಿತ್ರದಲ್ಲಿ ವಿಷ್ಣುವರ್ಧನ್, ಸುಂದರರಾಜ್ , ಲೀಲಾವತಿ



(ಚಿತ್ರ ೧೨೦) 'ರಾಮ ಲಕ್ಷ್ಮಣ' ಚಿತ್ರದಲ್ಲಿ ಮಾ॥ಸತ್ಯಪ್ರಕಾಶ್



(ಚಿತ್ರ ೧೨೧) 'ಆಟೋ ರಾಜ' ಚಿತ್ರದಲ್ಲಿ ಶಂಕರ್‌ನಾಗ್, ಗಾಯತ್ರಿ

ವಿಷ್ಣುವರ್ಧನ್‌ರೊಂದಿಗೆ ನಾಯಕಿಯನ್ನಾಗಿ ಆರಿಸಿಕೊಂಡರು. ಕೆ.ಬಾಲಚಂದರ್‌ಗೆ ನಿರ್ದೇಶನದ ಮೇಲ್ವಿಚಾರಣೆ ಕೊಟ್ಟಿದ್ದು ಇದು ತಮ್ಮ ಪ್ರಥಮ ನಿರ್ದೇಶನವಾದ್ದರಿಂದ ಹೆಚ್ಚಿನ ಆಭಾಸಗಳೇನೂ ಆಗದಿರಲಿ ಎಂದು. ಆದರೆ ಲಕ್ಷ್ಮೀಯವರ ನಿರ್ದೇಶನ ಶೈಲಿ ಕನ್ನಡ ಪ್ರೇಕ್ಷಕರಿಗೆ ಸ್ವಲ್ಪ ಒರಟಾಗಿಯೇ ಕಂಡು ಚಿತ್ರ ಪ್ರೇಕ್ಷಕರನ್ನು ಮೆಚ್ಚಿಸಲು ವಿಫಲವಾಯಿತು. ಬಾಲಚಂದರ್‌ರವರನ್ನು ಲಕ್ಷ್ಮೀ ಹೆಚ್ಚು ಆಶ್ರಯಿಸಲಿಲ್ಲವೆನ್ನುವುದು ನಂತರ ತಿಳಿದು ಬಂದ ವಿಷಯ. ಆಕೆ ನಂತರ ಇನ್ನಾವ ಚಿತ್ರದ ನಿರ್ದೇಶನಕ್ಕೂ ಕೈ ಹಾಕಲಿಲ್ಲ.

ಈ ಚಿತ್ರದಲ್ಲಿ ಡಿ.ರಾಜೇಂದ್ರಬಾಬು ಸಹಾಯಕ ನಿರ್ದೇಶಕ ಮತ್ತು ಸಂಭಾಷಣೆ ಲೇಖಕರು. ಡಿ.ರಾಜೇಂದ್ರಬಾಬು ಮತ್ತು ನಾಯಕಿ ಸುಮಿತ್ರರವರ ನಡುವೆ ಸ್ನೇಹ ಬೆಳೆದು ಅನುರಾಗಕ್ಕೆ ತಿರುಗಿದ್ದು ಈ ಚಿತ್ರದ ನಿರ್ಮಾಣದ ಸಮಯದಲ್ಲಿಯೇ. ನಂತರ ಅವರಿಬ್ಬರೂ ಮದುವೆಯಾದರು.

ತಮ್ಮ ಕುಳ್ಳನ ಇಮೇಜ್‌ನಿಂದ ಸಂಪೂರ್ಣವಾದ ಲಾಭ ಪಡೆದುಕೊಂಡ ಚಾಣಾಕ್ಷ ದ್ವಾರಕೀಶ್. ಆ ಕಾಲಕ್ಕೆ ಕನ್ನಡ ಚಿತ್ರರಂಗದಲ್ಲಿ ಕೂಡ ತುಂಬಾ ಯಶಸ್ವಿ ಎನಿಸಿಕೊಂಡಿದ್ದ ಎಂ.ಡಿ.ಸುಂದರ್ ದ್ವಾರಕೀಶ್‌ರ ಈ ಇಮೇಜಿಗೆ ತಕ್ಕಂತೆ ರಸವತ್ತಾದ ಕಥೆಗಳನ್ನೂ ಬರೆದುಕೊಡುತ್ತಿದ್ದರು. ಜೊತೆಗೆ ತೆಲುಗು ನಟಿ ಜಯಚಿತ್ರ ತಮ್ಮ ಎತ್ತರಕ್ಕೆ ತಕ್ಕಂತಿದ್ದು ಹಾಸ್ಯ ಪಾತ್ರಗಳಲ್ಲಿ ಮಿಂಚುವ ಪ್ರತಿಭೆಯನ್ನು ಹೊಂದಿದ್ದರಿಂದ ತಮ್ಮ ಅನೇಕ ಚಿತ್ರಗಳಲ್ಲಿ ಆಕೆಯನ್ನೇ ನಾಯಕಿಯನ್ನಾಗಿ ಆಯ್ಕೆ ಮಾಡಿಕೊಂಡರು. ಅವರು ನಾಯಕ-ನಾಯಕಿಯರಾಗಿ ಅಭಿನಯಿಸಿ ಯಶಸ್ವಿಯೆನಿಸಿದ ಇನ್ನೊಂದು ಚಿತ್ರ 'ಕುಳ್ಳ-ಕುಳ್ಳಿ'. ಅವರ ಇತರ ಅನೇಕ ಚಿತ್ರಗಳಲ್ಲಿಯಂತೆ ಸಾಹಸ ದೃಶ್ಯಗಳಿಗೆ ದ್ವಾರಕೀಶ್ ಒತ್ತು ಕೊಟ್ಟರು. 'ಕುಳ್ಳ-ಕುಳ್ಳಿ'ಯ ಕಾರ್ ಚೇಸಿಂಗ್ ದೃಶ್ಯಗಳು ರೋಮಾಂಚಕವಾಗಿದ್ದು, ಛಾಯಾಗ್ರಾಹಕ ಡಿ.ವಿ.ರಾಜಾರಾಂರಿಗೆ ತಮ್ಮ ಚಾಕಚಕ್ಯತೆಯನ್ನು ತೋರಿಸಲು ಅವಕಾಶವನ್ನು ನೀಡಿತು. ಕೆಲವು ವಿವಿಧ ಮಾದರಿಯ ಕಾರುಗಳನ್ನು ಈ ದೃಶ್ಯಗಳಿಗಾಗಿ ಉಪಯೋಗಿಸಲಾಯಿತು.

ರಾಮನೆನ್ನುವ ಹುಡುಗ, ಲಕ್ಷ್ಮಣನೆನ್ನುವ ಹುಲಿಮರಿಯ ನಡುವೆಯ ಬಾಂಧವ್ಯದ ಕಥೆಯನ್ನು ಹೊಂದಿದ 'ರಾಮ-ಲಕ್ಷ್ಮಣ' ಅರಣ್ಯ ಜೀವನದ ಆರಾಧಕ ಎಂ.ಪಿ.ಶಂಕರ್ ಬಹಳ ಶ್ರಮ ವಹಿಸಿ ನಿರ್ಮಿಸಿದ ಇನ್ನೊಂದು ಸಾಹಸಮಯ ಚಿತ್ರ. ಈ ಚಿತ್ರವನ್ನು ಅವರು ಕೆ.ಎಸ್.ಎಲ್.ಸ್ವಾಮಿ (ರವೀ)ಯೊಂದಿಗೆ ನಿರ್ದೇಶಿಸಿದರು. ಈ ಚಿತ್ರದ ಹಾಡುಗಳೆಲ್ಲವೂ ಜನಪ್ರಿಯವೆನಿಸಿದವು. ಚಿತ್ರದಲ್ಲಿ ವನ್ಯಜೀವನದ ವೈಭವವೂ ಇತ್ತು. ಆದರೂ ನಿರೀಕ್ಷಿಸಿದ ಮಟ್ಟಕ್ಕೆ ಯಶಸ್ವಿಯಾಗಲಿಲ್ಲ. ಚಿಕ್ಕಮಗಳೂರಿನ ಬಳಿಯ ಕಳಸಾಪುರದಲ್ಲಿ ಶಂಕರ್ ಒಂದು ವಿಶೇಷವಾದ ಸಂತೆಯನ್ನೇ ವ್ಯವಸ್ಥೆ ಮಾಡಿದರು. ನೈಜತೆಯ ದೃಷ್ಟಿಯಿಂದ ಚಿತ್ರೀಕರಣದಲ್ಲಿ ಹುಲಿ ಮರಿಯ ಜತೆಗೆ ಸುಮಾರು ಆರು ಸಾವಿರ ದನಗಳನ್ನೂ ಸಂಗ್ರಹಿಸಲಾಗಿತ್ತು. ಪಕ್ಕದಲ್ಲೇ ಪ್ರಾಣಿಗಳ ಬಿಡಾರವೂ ಸಿದ್ಧವಾಗಿತ್ತು. ಹುಲಿಯಲ್ಲದೆ, ಆನೆ, ಹೆಬ್ಬಾವು, ಚಿರತೆ, ನಾಯಿ - ಹೀಗೆ ಎಲ್ಲ ಪ್ರಾಣಿಗಳೂ ತಂಡದೊಂದಿಗೆ ಸಂಚಾರಿ ಮೃಗಾಲಯದಂತೆ ಸಾಗಿದವು. ಇಡೀ ತಂಡ ಈ ಪ್ರಾಣಿಸಂಕುಲವನ್ನು ಎಷ್ಟು ಅಕ್ಕರೆಯಿಂದ ನೋಡಿಕೊಂಡಿತೆಂದರೆ ನಿರ್ದೇಶಕರೇ ಪತ್ರಿಕಾ ಸಂದರ್ಶನವೊಂದರಲ್ಲಿ ಹೇಳಿದ್ದರು : ''ಸಾಮಾನ್ಯವಾಗಿ ಕ್ಯಾಮರಾಗೆ ಕರ್ಪೂರದಾರತಿ ಮಾಡಿ ಕೆಲಸ ಆರಂಭಿಸುವುದು ಸಂಪ್ರದಾಯ. ಈಗ ನಮಗೆ ಅದರ ಜತೆಗೆ ಇನ್ನೊಂದು ಕೆಲಸ ಕ್ಯಾಮರಾ ಕಣ್ಣು ತೆರೆಯುವುದಕ್ಕೆ ಮುನ್ನ ಮೊದಲ ಕರ್ಪೂರದ ಆರತಿ, ಈಡುಗಾಯಿ ನಮ್ಮೊಂದಿಗೆ ಸಂಗಾತಿಗಳಾಗಿ ಕಾಡಿನ ಮಧ್ಯೆ ಅಡ್ಡಾಡುತ್ತಿರುವ ನಮ್ಮ ಪ್ರಾಣಿ ನಟರಿಗೆ, ನಂತರ ಕ್ಯಾಮರಾಗೆ.''

ನಿರ್ದೇಶಕ ವಿ.ಸೋಮಶೇಖರ್ ಪಾಲಿಗೆ ನಿರ್ಮಾಪಕ ಹೆಚ್.ಆರ್.ಪ್ರಭಾಕರ ರೆಡ್ಡಿಯ 'ಪಾಯಿಂಟ್ ಪರಿಮಳ' ಇನ್ನೊಂದು ಉಲ್ಲೇಖನಾರ್ಹ ದಾಖಲೆ. ಆ ವೇಳೆಗಾಗಲೇ ಅಂತಹ ಪಾತ್ರಗಳಲ್ಲಿ ತಮ್ಮ ಅಭಿಮಾನಿಗಳನ್ನು ಆಕರ್ಷಿಸಿದ್ದ ನಾಯಕಿ ಮಂಜುಳಾಗೆ ಈ ಚಿತ್ರದಿಂದಾಗಿ 'ಬಜಾರಿ' ಇಮೇಜ್ ಅಂಟಿಕೊಂಡಿತು. ಜೊತೆಗೆ ಅವರ ಮತ್ತು ಶ್ರೀನಾಥ್ ಜೋಡಿ ಇನ್ನಷ್ಟು ಜನಪ್ರಿಯವಾಯಿತು. ಮಾತುಮಾತಿಗೆ 'ಪಾಯಿಂಟ್' ಎನ್ನುವ ಸೈಕಲ್ ಅಂಗಡಿಯ ಗಯ್ಯಾಳಿ ಒಡತಿಯ ಪಾತ್ರ ಮಂಜುಳಾರದ್ದು.

ಸಿ.ಜಯರಾಂ ನಿರ್ಮಿಸಿದ ಯಶಸ್ವಿ ಚಿತ್ರ 'ಆಟೋ ರಾಜ'ದ ಮೂಲಕ ಕನ್ನಡ ಚಿತ್ರರಂಗಕ್ಕೆ ಪಂಜಾಬಿ ಹುಡುಗಿ ಗಾಯತ್ರಿಯ ಪ್ರವೇಶವಾಯಿತು. (ಇಲ್ಲಿಯೇ ಭದ್ರವಾಗಿ ನೆಲೆಸಿದ ಗಾಯತ್ರಿ ಅನಂತ್‌ನಾಗ್‌ರನ್ನು ವಿವಾಹವಾಗಿ, ನಂತರ ಅಭಿನಯಕ್ಕೆ ವಿದಾಯ ಹೇಳಿದರು.) ಈ ಚಿತ್ರದಲ್ಲಿ ಆಕೆಯೊಂದಿಗೆ ಅಭಿನಯಿಸಿದವರು ಶಂಕರ್‌ನಾಗ್. ಆಟೋ ಚಾಲಕನಾದರೂ ಪ್ರಚಲಿತ ರಾಜಕೀಯ ಮತ್ತು ಆರ್ಥಿಕ ಸಿದ್ಧಾಂತಗಳನ್ನು ಅರಿತಿದ್ದ ತರುಣನ ಪಾತ್ರ ಅವರದ್ದು. ಗಾಯತ್ರಿ ಈ ಚಿತ್ರದಲ್ಲಿ ಅಭಿನಯಿಸುವಾಗಲೇ ಆಕೆಗೆ ಅನಂತ್‌ನಾಗ್ ಪರಿಚಯವಾಗಿದ್ದು. ಈ ಚಿತ್ರದ ಒಂದು ದೃಶ್ಯದ ಶೂಟಿಂಗ್‌ಗೆ ನಿರ್ಮಾಪಕ ಜಯರಾಂ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಹಾಕಿದ್ದ ಸೆಟ್‌ನಲ್ಲಿ ೧೫೦ ಹಾವುಗಳನ್ನು, ಮಾರನೆ ದಿನ ಮತ್ತೊಂದು ದೃಶ್ಯದ ಚಿತ್ರಣಕ್ಕೆ ಸುಮಾರು ೮೦ ಆಟೋರೀಕ್ಷಾಗಳನ್ನು ಕಲೆ ಹಾಕಿದ್ದರು.



(ಚಿತ್ರ ೧೨೨) 'ವಸಂತಗೀತ' ಚಿತ್ರದಲ್ಲಿ ಗಾಯತ್ರಿ, ರಾಜಕುಮಾರ್ ಮತ್ತು ಪುನೀತ್



(ಚಿತ್ರ ೧೨೩) 'ಡ್ರೈವರ್ ಹನುಮಂತು' ಚಿತ್ರದಲ್ಲಿ ಶಿವರಾಂ ಮತ್ತು ತ್ರಿವೇಣಿ

ಆ ವರ್ಷ ಶಂಕರ್‌ನಾಗ್ ಅಭಿನಯಿಸಿದ ಇನ್ನೊಂದು ಜನಪ್ರಿಯ ಚಿತ್ರ 'ಮೂಗನ ಸೇಡು'. ತಮ್ಮದೇ ಆದ ಕಥೆಯ ಆಧಾರದ ಮೇಲೆ ಎ.ಎಲ್.ಅಬ್ಬಾಯಿನಾಯ್ಡು ನಿರ್ಮಿಸಿ, ತೆಲುಗು ನಿರ್ದೇಶಕ ಬಿ.ಸುಬ್ಬರಾವ್ ನಿರ್ದೇಶಿಸಿದ ಈ ಚಿತ್ರ ಶಂಕರ್‌ನಾಗ್‌ರ ಜನಪ್ರಿಯತೆಯನ್ನು ಇನ್ನಷ್ಟು ಗಟ್ಟಿಗೊಳಿಸಿತು. ಹಳ್ಳಿಯ ಮುಖ್ಯಸ್ಥರೆನಿಸಿಕೊಂಡವರ ಅನಾಚಾರಗಳ ವಿರುದ್ಧ ದಂಗೆಯೆದ್ದ ಮೂಗನೊಬ್ಬನ ಕುತೂಹಲಕಾರಿ ಕಥೆಯ ಚಿತ್ರವಿದು.

'ಆಟೋ ರಾಜ'ವಲ್ಲಿ ಗಮನ ಸೆಳೆದ ಗಾಯತ್ರಿ ಅದೇ ವರ್ಷ ರಾಜಕುಮಾರ್‌ರೊಂದಿಗೂ ಅಭಿನಯಿಸಿದರು. ಅವರಿಬ್ಬರ ತಾರಾಜೋಡಿಯ 'ವಸಂತಗೀತ' ರಾಜಕುಮಾರ್ ಕುಟುಂಬದ ತಯಾರಿಕೆ. ಈ ಸಾಂಸಾರಿಕ ಚಿತ್ರ ಆ ವರ್ಷದ ಇನ್ನೊಂದು ಯಶಸ್ವಿ ಚಿತ್ರವೆನಿಸಿತು. ರಾಜಕುಮಾರ್‌ರ ಚಿಕ್ಕ ಮಗ ಮಾ।ಪುನೀತ್‌ಗೆ ಚಿತ್ರದಲ್ಲಿ ಒಂದು ಪಾತ್ರವಿತ್ತು. ಸಂಶಯದ ಸುಳಿಗೆ ಸಿಕ್ಕಿ ಅದರಿಂದಾಗುವ ಎಲ್ಲ ಕ್ರಿಯೆಗಳಿಗೂ ಅಕಾರಣವಾಗಿ ಗುರಿಯಾದ ಗಂಡ, ಹಣವಂತ ಹಠಮಾರಿ ಹೆಂಡತಿಯರ ನಡುವೆ ಸಿಕ್ಕಿ ನರಳುವ ಮುಗ್ಧ ಮನಸ್ಸಿನ ಮಗುವಾಗಿ ಪುನೀತ್ ಪ್ರೇಕ್ಷಕರ ಮೇಲೆ ಪರಿಣಾಮ ಬೀರಿದರು. ಇಂಗ್ಲಿಷ್ ಚಿತ್ರವೊಂದರ ಸ್ಫೂರ್ತಿ ಇದ್ದರೂ ನೆಲದ ಜಾಯಮಾನಕ್ಕೆ ಒಗ್ಗಿಸಿದ್ದು ಚೆನ್ನ.

ಸಿದ್ದಲಿಂಗಯ್ಯ ನಿರ್ದೇಶಿಸಿದ ಸಿನಿಮಾಸ್ಕೋಪ್ ಚಿತ್ರ 'ಬಿಳಿಗಿರಿಯ ಬನದಲ್ಲಿ' ಸೋಲಿಗರ ಜೀವನವನ್ನು ಚಿತ್ರಿಸುವ ಒಂದು ಯತ್ನ. ತ.ಪು.ವೆಂಕಟರಾಮ್ ಅವರ ಕಾದಂಬರಿಯೊಂದರ ಆಧಾರದ ಮೇಲೆ ನಿರ್ಮಿಸಿದ ಈ ಚಿತ್ರದಲ್ಲಿ ತಾಯಿ-ಮಗನಾಗಿ ಕಾಂಚನಾ-ವಿಷ್ಣುವರ್ಧನ್ ಅಭಿನಯಿಸಿದ್ದರು. ನಿರೂಪಣೆಯಲ್ಲಿ ನಾವೀನ್ಯದ ಕೊರತೆಯಿತ್ತು. ಕರಾವಳಿ ಪ್ರದೇಶದಲ್ಲಿ ನದಿಯ ಮೇಲೆ ನಿರ್ಮಿಸಿದ್ದ ತೇಲುವ ಸೆಟ್‌ನಲ್ಲಿ ಖಳನಾಯಕ ಎಂ.ಪಿ.ಶಂಕರ್ ಹುಟ್ಟು ಹಬ್ಬದ ಆಚರಣೆಗೆ ಸಂಬಂಧಿಸಿದ ಹಾಡೊಂದನ್ನು ನೃತ್ಯ ಸಮೇತ ಚಿತ್ರಿಸಿದ್ದೊಂದು ವಿಶೇಷ. ಈ ಚಿತ್ರದಲ್ಲಿ ಕೂಡ ಹುಲಿ, ಕರಡಿಗಳನ್ನೊಳಗೊಂಡ ಸಾಹಸ ದೃಶ್ಯಗಳಿದ್ದವು. ಒಂದು ಕೋಮಿನವರು ಪ್ರಾಸಂಗಿಕವಾಗಿ ಬರುವ ಒಂದು ಶಬ್ದವನ್ನೇ ದೊಡ್ಡದು ಮಾಡಿ ಅವಮಾನವಾಗಿದೆ ಎಂದು ತಕರಾರೆತ್ತಿದರು.

ರಾಶಿ ಸಹೋದರರ 'ಡ್ರೈವರ್ ಹನುಮಂತು' ರೀಮೇಕ್ ಚಿತ್ರವಾದರೂ ಹಾಸ್ಯನಟ ಎಸ್.ಶಿವರಾಂ ಪೂರ್ಣ ಪ್ರಮಾಣದ ನಾಯಕನಟನಾಗಿ ಅಭಿನಯಿಸಿದ ಮೊದಲ ಚಿತ್ರ. ಟ್ಯಾಕ್ಸಿ ಚಾಲಕನೊಬ್ಬ ದಿನನಿತ್ಯ ನೋಡುವ ವಿವಿಧ ರೀತಿಯ ಜನಗಳ ಬಗ್ಗೆ ಒಂದು ವಿಡಂಬನೆ ಈ ಚಿತ್ರ. ಮುಖವಾಡದ ಮರೆಯಲ್ಲಿ ಬದುಕುವ ಜನರೇ ಹೇರಳವಾಗಿರುವಾಗ ಮುಗ್ಧ ಮಂದಿಗೆ ಕಕ್ಕಾಬಿಕ್ಕಿಯಾಗುವುದು ಸಹಜ. ಅಂತಹ ಮುಗ್ಧ ಈ ಚಾಲಕ. ತ್ರಿವೇಣಿಯೆಂಬ ಹೊಸ ನಟಿ ಈ ಚಿತ್ರದಲ್ಲಿ ಬೆಳಕಿಗೆ ಬಂದರು. ವಿಷ್ಣುವರ್ಧನ್ ವಿಶೇಷ ಪಾತ್ರವೊಂದರಲ್ಲಿ ಅತಿಥಿ ನಟರಾಗಿ ಅಭಿನಯಿಸಿದರು. ನಾಟಕಕಾರ ಪತ್ರಕರ್ತ ಎ.ಎಸ್.ಮೂರ್ತಿ ಸಂಭಾಷಣೆ ಬರೆದರು. ಅವರೊಂದಿಗೆ ಹವ್ಯಾಸಿ ರಂಗಭೂಮಿಯ ಇನ್ನೂ ಅನೇಕರು ಈ ಚಿತ್ರದಲ್ಲಿ ತೊಡಗಿಕೊಂಡರು. ಇದು ಈ ದಶಕದ ಕೊನೆಯ ಚಿತ್ರ.

'ಸುಬ್ಬಿ ಸುಬ್ಬಕ್ಕ ಸುವ್ವಲಾಲಿ'ಯಲ್ಲಿನ ಪ್ರಧಾನ ಪಾತ್ರದಲ್ಲಿ ಅಭಿನಯಿಸಲು ನಿರ್ದೇಶಕ ಧನಂಜಯ (ದತ್ತು) ಮುಂಬೈನಿಂದ ಖ್ಯಾತ ನಟ ಅಮರೀಶ್ ಪುರಿಯನ್ನು ಕರೆ ತಂದರು. ಇದು ದತ್ತುರವರು ಸ್ವತಂತ್ರವಾಗಿ ನಿರ್ದೇಶಿಸಿದ ಪ್ರಥಮ ಚಿತ್ರ. ಅವರು ತಾರೆ ಆರತಿಯವರ ಸೋದರ. 'ಸುಬ್ಬಿ ಸುಬ್ಬಕ್ಕ ಸುವ್ವಲಾಲಿ' ಗಮನ ಸೆಳೆದ ಚಿತ್ರವಾಯಿತು.

'ವಾತ್ಸಲ್ಯಪಥ' ಕಾಲೇಜು ಅಧ್ಯಾಪಕರುಗಳು ಸೇರಿ ಬಹು ಪ್ರಯಾಸದಿಂದ ನಿರ್ಮಿಸಿದ ಚಿತ್ರ. ವ್ಯಾಸರಾಯ ಬಲ್ಲಾಳರ ಅದೇ ಹೆಸರಿನ ಕಾದಂಬರಿ ಆಧಾರವಾಗಿತ್ತು. ಎಲ್.ವಿ.ಶಾರದಾ ಉತ್ತಮ ಅಭಿನಯ ನೀಡಿದ್ದರು. ಮೀನಾಕ್ಷಿ ಎಂಬ ಹೊಸ ಕಲಾವಿದೆ ಪರಿಚಯವಾದರು. ಈ ಚಿತ್ರದ ಛಾಯಾಗ್ರಾಹಕ ಎಸ್.ರಾಮಚಂದ್ರರನ್ನು ಆಕೆ ವಿವಾಹವಾದರು. ಇದೇ ವರ್ಷ ಬಲ್ಲಾಳರ 'ಅನುರಕ್ತೆ' ಕಾದಂಬರಿಯೂ ತೆರೆಗೆ ಬಂತು. ಯಾವುದೂ ಲೇಖಕರ ಆಶಯವನ್ನು ಬಿಂಬಿಸಲಿಲ್ಲ. ಯಾವ ಹೊಸ ಅರ್ಥವನ್ನೂ ಹೊರಡಿಸಲಿಲ್ಲ.

ಈ ಅವಧಿಯಲ್ಲಿ ಗಿರಿಬಾಬು ನಿರ್ದೇಶನದ 'ವಜ್ರದ ಜಲಪಾತ', ವಾದಿರಾಜ್-ಜವಾಹರ್ ಅವರ 'ನಮ್ಮಮ್ಮನ ಸೊಸೆ', ಜೋಸೈಮನ್ ನಿರ್ದೇಶನದ 'ನನ್ನ ರೋಷ ನೂರು ವರುಷ', ಬಿ.ಕೃಷನ್ ನಿರ್ದೇಶನದ 'ಹಂತಕನ ಸಂಚು' ಮೊದಲಾಗಿ ಹಲವು ಚಿತ್ರಗಳು ಬಂದಿವೆ. ಗಮನಾರ್ಹ ಎನ್ನುವಂಥದೇನೂ ಇಲ್ಲ. ವಿಶುಕುಮಾರ್ ನಿರ್ದೇಶನ-ಅಭಿನಯದ 'ಅಖಂಡ ಬ್ರಹ್ಮಚಾರಿಗಳು' ಕಳಪೆ ವಸ್ತು-ನಿರ್ವಹಣೆ ಇದ್ದ ಚಿತ್ರವಾಗಿ ತೆರೆಗೆ ಬಂತು. ಅವರ 'ಮದರ್' ಇದ್ದುದರಲ್ಲಿ ಉತ್ತಮ ನಿರೂಪಣೆ-ವಸ್ತುವಿದ್ದ ಚಿತ್ರವಾಗಿತ್ತು.

'ಹುಣ್ಣಿಮೆಯ ರಾತ್ರಿಯಲ್ಲಿ' ರಾತ್ರಿಯ ಎಫೆಕ್ಟ್‌ನಲ್ಲಿ ತೆಗೆದ ಚಿತ್ರಿಕೆಗಳು, ವಿಶಿಷ್ಟ ಜನಪದ ಕಥೆ, ಲೊಕೇಶ್‌ಗೆ ಬಳಸಿದ ವಿಶೇಷ ಮೇಕಪ್ ಇತ್ಯಾದಿಗಳಿಂದಾಗಿ ಗಮನ ಸೆಳೆದ ಚಿತ್ರ.

ಮಾವಿನಕೆರೆ ರಂಗನಾಥನ್ ಅವರ 'ಮಿಥುನ' ಹೊಸತನವಿದ್ದು ನಿರ್ವಹಣೆಯಲ್ಲಿ ವೈಶಿಷ್ಟ್ಯವಿಲ್ಲದ್ದಾಗಿತ್ತು. ಉತ್ತರ ಕರ್ನಾಟಕದ ಜನಪ್ರಿಯ ನಾಟಕಗಳನ್ನೇ ಆಯ್ದುಕೊಳ್ಳುತ್ತಿದ್ದ ಅಂಕಲಗಿ ಗೆಳೆಯರು ತೆರೆಗಿತ್ತ 'ಪಟ್ಟಣಕ್ಕೆ ಬಂದ ಪತ್ನಿಯರು' ಕೂಡಾ ನಾಟಕವನ್ನೇ ಆಧರಿಸಿತ್ತು. ರೂಕ್ಷವಾದರೂ ಕೆಲವು ಜನಪ್ರಿಯ ಅಂಶಗಳು, ನಾಟಕೀಯತೆಯ ಕಾರಣದಿಂದಾಗಿ ಅವರ ಅದ್ದೂರಿ ಚಿತ್ರ 'ಅತ್ತೆಗೆ ತಕ್ಕ ಸೊಸೆ'ಗಿಂತ ಚೆನ್ನಾಗಿಯೇ ಜನ ಮನ್ನಣೆ ಪಡೆಯಿತು.

ಬಹುತೇಕ ಕುತೂಹಲ ಇರುವ, ಪತ್ತೇದಾರಿ ಎನ್ನುವಂಥ ಕಥೆಗಳೂ ತೆರೆಗೆ ಬಂದವು.



(ಚಿತ್ರ ೧೨೪) ಬೆಂಗಳೂರಿನಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಉದ್ಘಾಟನೆ ದೇವಿಕಾರಾಣಿಯವರಿಂದ. ಚಿತ್ರದಲ್ಲಿ ಕೇಂದ್ರ ಚಲನಚಿತ್ರೋತ್ಸವ ನಿರ್ದೇಶಕ ಎಂ.ಕೆ.ರೈನಾ, ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷ ಭಕ್ತವತ್ಸಲ ಮತ್ತು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷ ಎನ್.ವೀರಾಸ್ವಾಮಿ



(ಚಿತ್ರ ೧೨೫) ಮುಖ್ಯಮಂತ್ರಿ ಗುಂಡೂರಾಯರಿಂದ 'ಕನ್ನಡ ಕಲಾವಿದರ ಸಂಘ'ದ ಉದ್ಘಾಟನೆ (ಎಡಗಡೆ ಚಿತ್ರ). ಗುಂಡೂರಾಯರು, ರಾಜಕುಮಾರ್, ಬಿ.ಸರೋಜಾದೇವಿ, ರಜನೀಕಾಂತ್, ಶ್ರೀನಾಥ್, ಲೋಕನಾಥ್, ಶಂಕರ್‌ನಾಗ್, ಅನಂತ್‌ನಾಗ್, ವಿಷ್ಣುವರ್ಧನ್ ಮತ್ತಿತರರು.

೧೯೮೦ರಲ್ಲಿ ಪ್ರಪ್ರಥಮ ಬಾರಿಗ ಬೆಂಗಳೂರಿನಲ್ಲಿ ಅಧಿಕೃತ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ 'ಫಿಲ್ಮೋತ್ಸವ್' ನಡೆಯಿತು. ಅದರಿಂದಾಗಿ ಬೆಂಗಳೂರು ನಗರಕ್ಕೆ ಒಂದು ಪ್ರಮುಖ ಚಿತ್ರ ತಯಾರಿಕಾ ಕೇಂದ್ರವೆಂಬ ಮನ್ನಣೆ ಸಿಕ್ಕಿದಂತಾಯಿತು. ಸಂಘಟನೆಯ ದೃಷ್ಟಿಯಿಂದ ಬೇರೆ ಇನ್ನಾವ ಕೇಂದ್ರದಲ್ಲಿ ನಡೆದ 'ಫಿಲ್ಮೋತ್ಸವ'ಗಳಿಗಿಂತ ಯಾವ ರೀತಿಯಲ್ಲೂ ಕಡಿಮೆಯೆನಿಸದ ಈ ಉತ್ಸವದಲ್ಲಿ ಕನ್ನಡ ಚಲನಚಿತ್ರೋದ್ಯಮ ತುಂಬು ಉತ್ಸಾಹದಿಂದ ಭಾಗವಹಿಸಿತು. ಉತ್ಸವದ ಅದ್ದೂರಿ ಉದ್ಘಾಟನೆ ನಗರದ ಅತ್ಯಂತ ವಿಶಾಲವಾದ ಚಿತ್ರಮಂದಿರ ಕಪಾಲಿಯಲ್ಲಿ ನಡೆಯಿತು. ನಲವತ್ತೆರಡು ರಾಷ್ಟ್ರಗಳು ಭಾಗವಹಿಸಿದ್ದ ಉತ್ಸವದಲ್ಲಿ ೧೨೦ಕ್ಕೂ ಹೆಚ್ಚು ಚಿತ್ರಗಳು ಪ್ರದರ್ಶಿತವಾಗಿ ಅದುವರೆಗ ಚಿತ್ರ ಸಮಾಜಗಳು ಏರ್ಪಡಿಸುತ್ತಿದ್ದ ಸೀಮಿತ ಚಲನಚಿತ್ರೋತ್ಸವಗಳಲ್ಲಿ ಮಾತ್ರ ಅಂತರರಾಷ್ಟ್ರೀಯ ಮಟ್ಟದ ಕೆಲವು ಚಿತ್ರಗಳನ್ನು ಆಗಾಗ್ಗೆ ನೋಡಲು ಅವಕಾಶ ಸಿಗುತ್ತಿದ್ದ ರಾಜ್ಯದ ಚಲನಚಿತ್ರ ಮಾಧ್ಯಮಾಸಕ್ತರಿಗೆ ಒಂದೇ ಬಾರಿ ಇಷ್ಟು ಬೃಹತ್ ಪ್ರಮಾಣದ ವಿದೇಶಿ ಚಿತ್ರಗಳನ್ನು ನೋಡಲು ಸಾಧ್ಯವಾಯಿತು. ಭಾರತ ಚಿತ್ರರಂಗದ 'ಪ್ರಥಮ ಮಹಿಳೆ' ದೇವಿಕಾರಾಣಿ ಫಿಲ್ಮೋತ್ಸವವನ್ನು ಉದ್ಘಾಟಿಸಿದರು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಉತ್ಸವದಲ್ಲಿ ಸಕ್ರಿಯವಾಗಿ ಭಾಗವಹಿಸಿತು. ಆಗ ಎನ್.ವೀರಾಸ್ವಾಮಿ ಮಂಡಳಿಯ ಅಧ್ಯಕ್ಷರಾಗಿದ್ದರು. ಫಿಲ್ಮೋತ್ಸವದ-ಚಿತ್ರೋದ್ಯಮ ಸಮಿತಿಯ ಅಧ್ಯಕ್ಷರೂ ಆದ, ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರೂ ಆಗಿದ್ದ ಎಂ.ಭಕ್ತವತ್ಸಲ ಮಾತನಾಡಿ ''ಇತ್ತೀಚಿನ ದಿನಗಳಲ್ಲಿ ವಿಶಿಷ್ಟ ಬಗೆಯ ಚಿತ್ರ ನಿರ್ಮಾಣ ಚಟುವಟಿಕೆಗೆ ಬೆಂಗಳೂರು ಕೇಂದ್ರವಾಗುತ್ತಿದೆ. ದೆಹಲಿ ತಿಳಿದಿರುವಂತೆ ದಕ್ಷಿಣವೆನ್ನುವುದು ಕೇವಲ ಒಂದು ದಿಕ್ಕಲ್ಲ. ವಿಶಿಷ್ಟ, ವಿಭಿನ್ನ ಚಿತ್ರ ಸಂಸ್ಕೃತಿ ಹೊಂದಿರುವ ನಾಲ್ಕು ಪ್ರದೇಶಗಳು ಅವು. ಇದನ್ನು ಕೇಂದ್ರ ಮನಗಾಣಬೇಕು'' ಎಂದರು. ಈ ಉತ್ಸವದಲ್ಲಿ ಸತ್ಯಜಿತ್ ರಾಯ್ ಅವರು ಭಾಗವಹಿಸಿದ್ದರು. ಈ ಚೊಚ್ಚಲ ಉತ್ಸವದ ನಂತರ ಬೆಂಗಳೂರಿನಲ್ಲಿ ೨೦ ವರ್ಷಗಳ ಅವಧಿಯಲ್ಲಿ ಇನ್ನೂ ಎರಡು ಫಿಲ್ಮೋತ್ಸವಗಳು ನಡೆದವು.

೧೯೮೦ರ ಸೆಪ್ಟೆಂಬರ್ ೧೪ರಂದು ಕನ್ನಡ ಚಲನಚಿತ್ರ ಕಲಾವಿದರ ಸಂಘ ಅಸ್ತಿತ್ವಕ್ಕೆ ಬಂತು. ಕನ್ನಡ ಚಿತ್ರೋದ್ಯಮದ ಹಿತೈಷಿಗಳಾಗಿದ್ದ ಮುಖ್ಯಮಂತ್ರಿ ಆರ್.ಗುಂಡೂರಾಯರು ಬೆಂಗಳೂರಿನ ಕಂಠೀರವ ಸ್ಟೇಡಿಯಂನಲ್ಲಿ ಆ ಸಂಘವನ್ನು ಉದ್ಘಾಟಿಸಿದರು. ಇನ್ನೂರಕ್ಕೂ ಹೆಚ್ಚು ಕಲಾವಿದರು ಭಾಗವಹಿಸಿದ್ದ ಬೃಹತ್ ರಸಮಂಜರಿ ಕಾರ್ಯಕ್ರಮ ಉದ್ಘಾಟನಾ ಸಮಾರಂಭಕ್ಕೆ ಕಳೆಯನ್ನು ತಂದುಕೊಟ್ಟಿತು. ರಾಜಕುಮಾರ್ ಸಂಘದ ಪ್ರಥಮ ಅಧ್ಯಕ್ಷರಾಗಿ ಆಯ್ಕೆಯಾಗಿ ೧೯೯೮ರಲ್ಲಿ ಅವರ ಉತ್ತರಾಧಿಕಾರಿಯಾಗಿ ಅಂಬರೀಷ್ ಚುನಾಯಿತರಾಗುವವರೆಗೆ ಅದೇ ಸ್ಥಾನದಲ್ಲಿ ಮುಂದುವರಿದರು. ಪ್ರತಿ ವರ್ಷ ನವಂಬರ್ ೧ರಂದು ಕನ್ನಡ ರಾಜ್ಯೋತ್ಸವವನ್ನು ವೈಭವದಿಂದ ಆಚರಿಸಿ, ಹಿರಿಯ ಕಲಾವಿದರೊಬ್ಬರನ್ನು ಗೌರವಿಸುವ ಸಂಪ್ರದಾಯವನ್ನು ಸಂಘ ಹಾಕಿಕೊಂಡಿತು.

ಜೂನ್ ೧೯೮೦ರಲ್ಲಿ ಸಂಗೀತ ನಿರ್ದೇಶಕ ಎಸ್.ಹನುಮಂತರಾಯರು ನಿಧನರಾದರು. ಕನ್ನಡದ ಜನಪ್ರಿಯ ಚಿತ್ರಸಾಹಿತಿ ಚಿ.ಉದಯಶಂಕರ್ ಬರೆದ ಮೊದಲನೆಯ ಚಿತ್ರ ಗೀತೆಗೆ ರಾಗ ಸಂಯೋಜನೆ ಮಾಡಿದವರು ಅವರು. 'ಶಿವರಾತ್ರಿ ಮಹಿಮೆ' ಚಿತ್ರದ 'ಮನಮೋಹಿನಿ ಸರಿಸೆಯಾ ನಾಚಿಕೆಯಾ ತೆರೆಯಾ...' ಹಾಡನ್ನು ಪಿ.ಬಿ.ಶ್ರೀನಿವಾಸ್ ಹಾಡಿದ್ದರು. 'ಚಂದ್ರಹಾಸ', 'ಪ್ರತಿಜ್ಞೆ', 'ಶಿವಭಕ್ತ' ಮತ್ತು 'ಚಾಮುಂಡೇಶ್ವರಿ ಮಹಾತ್ಮೆ' ಚಿತ್ರಗಳಿಗೆ ಸಂಗೀತ ನೀಡಿದ ಹನುಮಂತರಾಯರು ಪ್ರಸಿದ್ಧ ತೆಲುಗು ಸಂಗೀತ ನಿರ್ದೇಶಕ ಎಸ್.ರಾಜೇಶ್ವರರಾಯರ ತಮ್ಮ.

೧೯೭೦ರ ದಶಕವನ್ನು ಮತ್ತೊಮ್ಮೆ ಸ್ಥೂಲವಾಗಿ ಅವಲೋಕಿಸುವುದಾದರೆ ಸರ್ಕಾರದ ಸಬ್ಸಿಡಿ ಯೋಜನೆಯಿಂದಾಗಿ ಕನ್ನಡ ಚಿತ್ರೋದ್ಯಮ ಮದರಾಸಿನಿಂದ ವಲಸೆ ಬಂದು ಬೆಂಗಳೂರು, ಮೈಸೂರುಗಳಲ್ಲಿಯೇ ತಳವೂರಿದ್ದು, ಹೊಸ ಅಲೆ ವಿಸ್ತಾರವಾದ ಹರವನ್ನು ಕಂಡುಕೊಂಡಿದ್ದು, ಚಿತ್ರರಂಗಕ್ಕೆ ಹವ್ಯಾಸಿ ರಂಗಭೂಮಿಯ ಕಲಾವಿದರ ಭಾರಿ ವಲಸೆ, ಪ್ರೀಮಿಯರ್ ಸ್ಟುಡಿಯೋ ವಿಸ್ತರಣೆ, ಬೆಂಗಳೂರಿನಲ್ಲಿ ಕಂಠೀರವ, ಅಭಿಮಾನ್, ಚಾಮುಂಡೇಶ್ವರಿ ಸ್ಟುಡಿಯೋಗಳ ಜೊತೆಗೆ ಸುಜಾತಾ ಸ್ಟುಡಿಯೋ ಸ್ಥಾಪನೆ, ಬೆಂಗಳೂರಿನಂತೆ ಮೈಸೂರಿನಲ್ಲಿ ಸಂಗಂ, ಲಿಡೋ ಮುಂತಾದ ವೈಭವೋಪೇತ ಚಿತ್ರಮಂದಿರಗಳ ನಿರ್ಮಾಣ - ಇವೆಲ್ಲವುಗಳಿಂದಾಗಿ ಇದು ಕನ್ನಡ ಚಿತ್ರರಂಗದ ಸುವರ್ಣ ದಶಕವೆನಿಸಿಕೊಂಡಿತು. ಅಲ್ಲಿಯವರೆಗೆ ಕೇವಲ ಕಾರ್ಬನ್ ವಿತರಣೆಯಲ್ಲಿ ಮಾತ್ರ ತೊಡಗಿಕೊಂಡಿದ್ದ ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿ ಹೊಸ ರೂಪವನ್ನು ತಾಳಿ, ಕೇವಲ ಏಳು ವರ್ಷಗಳಲ್ಲಿ ಸ್ವಂತ ಕಟ್ಟಡವನ್ನು ಹೊಂದುವ ಮಟ್ಟಕ್ಕೆ ಬೆಳೆದಿದ್ದು ಕೂಡ ಈ ದಶಕದ ಮಹತ್ವದ ಸಾಧನೆ.

ಉದ್ಯಮ ಬೆಳೆದಂತೆ ವ್ಯಾಪಾರಿ ಕನ್ನಡ ಚಿತ್ರಗಳು ತಮ್ಮ ಹಿಂದಿನ ಪ್ರಾದೇಶಿಕತೆ ಮತ್ತು ತನ್ನತನಗಳನ್ನು ಕ್ರಮೇಣ ಕಳೆದುಕೊಳ್ಳುತ್ತ ಹೋಗಿದ್ದು ಪ್ರಾಯಶಃ ಭೌತಿಕ ಬೆಳವಣಿಗೆಗ ಅದು ತೆತ್ತ ಬೆಲೆ. ಮುಂದಿನ ದಶಕದಲ್ಲಿ ಈ ಉದ್ಯಮ ಹೆಚ್ಚು ಕಡಿಮೆ ತನ್ನ ಸಂಪೂರ್ಣ ಗಮನವನ್ನು ವಾಣಿಜ್ಯದ ಕಡೆಗೇ ಹರಿಸಿದ್ದು ಒಂದು ದೃಷ್ಟಿಯಿಂದ ಅನಿವಾರ್ಯ, ಇನ್ನೊಂದು ದೃಷ್ಟಿಯಿಂದ ದುರದೃಷ್ಟಕರ.



(ಚಿತ್ರ ೧) 'ಅಂತ' ಚಿತ್ರದಲ್ಲಿ ಲಕ್ಷ್ಮಣ್, ಅಂಬರೀಶ್ ಮತ್ತು ಶಕ್ತಿಪ್ರಸಾದ್




# ಹೂವು ಚೆಲ್ಲಿದ ಹಾದಿಯಲ್ಲಿ ರಕ್ತದ ಓಕುಳಿ

'ತುರ್ತು ಪರಿಸ್ಥಿತಿ' ಸೃಷ್ಟಿಸಿದ್ದ ಕರಾಳ ನೆನಪುಗಳಿಂದ ದೇಶದ ಸಾಮಾನ್ಯ ಜನರು ಇನ್ನೂ ಹೊರಬಂದಿರಲಿಲ್ಲ. ಸುಶಿಕ್ಷಿತ ಜನರು 'ತುರ್ತುಸ್ಥಿತಿ'ಯ ಹೇರಿಕೆಯನ್ನು ವ್ಯಕ್ತಿ ಸ್ವಾತಂತ್ರ್ಯಕ್ಕೆ ಬಗೆದ ದ್ರೋಹವೆಂದೇ ಭಾವಿಸಿದ್ದರು. ಮನಸ್ಸಿನ ಯಾವುದೋ ಮೂಲೆಯಲ್ಲಿ 'ತಾವು ಸರ್ವತಂತ್ರ ಸ್ವತಂತ್ರರಲ್ಲ' ಎಂಬ ನೋವು ಸೂಕ್ಷ್ಮ ಮನಸ್ಸಿನವರನ್ನೆಲ್ಲ ಕಾಡುತ್ತಿತ್ತು. ಆದರೆ ಇನ್ನೊಂದು ಕಡೆ ಇಂದಿರಾ ಗಾಂಧಿಯವರ ೨೦ ಅಂಶಗಳ ಕಾರ್ಯಕ್ರಮಕ್ಕೆ ಸಿಗುತ್ತಿದ್ದ ಪ್ರಚಾರ ದೇಶದ ತುರ್ತು ಅಭಿವೃದ್ಧಿಗಾಗಿ ತುರ್ತು ಪರಿಸ್ಥಿತಿಯ ಅಗತ್ಯವಿತ್ತೇನೋ ಎಂಬ ಭಾವನೆಯನ್ನು ಕೂಡ ಜನಸಾಮಾನ್ಯರಲ್ಲಿ ಮೂಡಿಸಿತ್ತು.

೧೯೮೦-೮೫ರ ದಿನಗಳಲ್ಲಿ ಬಂಧುಗಳ ಬಗ್ಗೆ ತಿಳಿಯದವರಿರಬಹುದು, ಆದರೆ ೨೦ ಅಂಶಗಳ ಕಾರ್ಯಕ್ರಮದ ಬಗ್ಗೆ ತಿಳಿಯದವರಿರಲಿಲ್ಲ. ಎಲ್ಲಾ ಕಡೆ ಒಂದೇ ಬಗೆಯ ಪ್ರಚಾರ. ಇನ್ನೇನು ದೇಶದ ಅಭಿವೃದ್ಧಿ ಆಗಿಯೇ ಹೋಯಿತು ಎಂದು ಭ್ರಮಿಸುವಂಥ ವಾಸ್ತವ. ಬಡವರೆಲ್ಲ ಶ್ರೀಮಂತರಾಗಿಬಿಡುತ್ತಿದ್ದಾರೆಂಬ ಕಳವಳದಲ್ಲಿ ಶ್ರೀಮಂತರು ಇನ್ನಷ್ಟು ಹಣ ಮಾಡಿಕೊಳ್ಳುವ ಆತುರಕ್ಕೆ ಒಳಗಾದರು. ಮಠಗಳ ದೇವರುಗಳು ಇನ್ನಷ್ಟು ಆಳಕ್ಕೆ ಇಳಿಯತೊಡಗಿದವು. ಮಠಾಧಿಪತಿಗಳ ಚಟುವಟಿಕೆಗಳು ತೀವ್ರಗೊಂಡವು. ಕಾಲೇಜುಗಳು, ಶಿಕ್ಷಣ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ಹೆಚ್ಚತೊಡಗಿದವು. ತಾಂತ್ರಿಕ, ವೈದ್ಯಕೀಯ, ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳಿಗೆ ಬಿರುಸು ಬಂತು. ಎಲ್ಲಾ ಕಡೆ, ಎಲ್ಲರಲ್ಲಿ ಪ್ರಗತಿ, ಅಭಿವೃದ್ಧಿ, ಬೆಳವಣಿಗೆಯ ಆಕಾಂಕ್ಷೆ ಗರಿಗೆದರಿ ನರ್ತಿಸತೊಡಗಿತ್ತು. ಸಮಾಜದ ಒಟ್ಟು ವಾತಾವರಣವೇ ಹೀಗೆ ಬದಲಾದ ಪರಿಸ್ಥಿತಿಯಲ್ಲಿ ಅದರದೇ ಬಿಂಬವಾದ 'ಚಲನಚಿತ್ರ' ಕೂಡ ಹಿಂದೆ ಬೀಳಲಿಲ್ಲ. ಕಥಾವಸ್ತು, ನಿರ್ಮಾಣ ವಿಧಾನ, ಮೌಲ್ಯ ಪ್ರಜ್ಞೆ, ತಂತ್ರಜ್ಞಾನ- ಎಲ್ಲವೂ ಆಮೂಲಾಗ್ರ ಬದಲಾವಣೆಗೆ ಒಳಗಾಯಿತು.

೧೯೭೧ ರಿಂದ ೮೦ರವರೆಗಿನ ಹತ್ತು ವರ್ಷಗಳಲ್ಲಿ ೨೬೨ ಚಿತ್ರಗಳು ತಯಾರಾಗಿದ್ದರೆ, ೧೯೮೧-೯೦ ರಲ್ಲಿ ೮೩೮ ಚಿತ್ರಗಳು ನಿರ್ಮಾಣವಾದವು. ಚಿತ್ರೋದ್ಯಮದಲ್ಲಿ ತೊಡಗಿಸಲಾದ ಬಂಡವಾಳದ ದೃಷ್ಟಿಯಿಂದ ಇದನ್ನು ತೀವ್ರತರದ ಬೆಳವಣಿಗೆ ಎನ್ನಬಹುದು.

ವರ್ಣ ಚಿತ್ರಗಳ ತಯಾರಿಕೆ ಕ್ರಮೇಣ ಹೆಚ್ಚತೊಡಗಿದ್ದು ೧೯೭೫ರ ನಂತರ. ಹಾಗೆ ನೋಡಿದರೆ ಕನ್ನಡದಲ್ಲಿ ಬಣ್ಣದ ಪ್ರವೇಶ ಆಗಿದ್ದು ೧೯೫೫ ರಲ್ಲಿ ತೆರೆಕಂಡ 'ಸ್ತ್ರೀರತ್ನ' ಚಿತ್ರದ ಮೂಲಕ. ಈ ಚಿತ್ರವು ಭಾಗಶಃ ವರ್ಣದಲ್ಲಿತ್ತು. ನಂತರ ೧೯೬೩ ರಲ್ಲಿ ಬಿಡುಗಡೆಯಾದ ಚಿತ್ರಗಳಲ್ಲಿ ನಾಲ್ಕು ಭಾಗಶಃ ವರ್ಣದಲ್ಲಿದ್ದವು. ಪ್ರಥಮ ಪೂರ್ಣ ಪ್ರಮಾಣದ ವರ್ಣ ಚಿತ್ರ ೧೯೬೪ ರಲ್ಲಿ ತೆರೆಕಂಡ 'ಅಮರಶಿಲ್ಪಿ ಜಕಣಾಚಾರಿ'. ವಿದೇಶಿ ವಿನಿಮಯದ ಸಮಸ್ಯೆಗಳು ಎದುರಾದ್ದರಿಂದ ಕಚ್ಚಾ ಫಿಲಂ ಪೂರೈಕೆಯ ಕೊರತೆಯುಂಟಾಗಿ ೧೯೬೫ ರಿಂದ ೧೯೬೯ ರವರೆಗೆ ನಾಲ್ಕು ವರ್ಷಗಳ ಅಂತರದಲ್ಲಿ ಕೇವಲ ಒಂದೇ ಒಂದು ವರ್ಣ ಚಿತ್ರ ಮಾತ್ರ ತಯಾರಾಗಿತ್ತು. ೧೯೭೦ ರ ನಂತರ ವರ್ಷಕ್ಕೆ ಎರಡು ಮೂರು ಚಿತ್ರಗಳಂತೆ ನಿರ್ಮಾಣವಾಗಿ ೧೯೭೨ ರಲ್ಲಿ ಪೂರ್ಣ ಪ್ರಮಾಣದ ವರ್ಣ ಯುಗದ ಉದಯವಾಯಿತು. ಈ ಬೆಳವಣಿಗೆ ಕನ್ನಡ ಸಿನಿಮಾಗಳು ಹೆಚ್ಚು ಜನಪ್ರಿಯವಾಗಲು ಕಾರಣವಾಯಿತು. ೩೦ ವರ್ಷಗಳಿಂದ ಕಪ್ಪು-ಬಿಳುಪು ಚಿತ್ರಗಳಿಗೆ ಹೊಂದಿಕೊಂಡಿದ್ದ ಪ್ರೇಕ್ಷಕರ ಕಣ್ಣುಗಳು ತಮ್ಮ ಮೆಚ್ಚಿನ ತಾರೆಯರನ್ನು ಬಣ್ಣದ ಚಿತ್ರಗಳಲ್ಲಿ ನೋಡುತ್ತಾ ಸಂಭ್ರಮಿಸಲು ಆರಂಭಿಸಿದ್ದವು. ೧೯೮೦ ರ ಹೊತ್ತಿಗೆ ಕಪ್ಪು-ಬಿಳುಪು ಚಿತ್ರಗಳ ತಯಾರಿಕೆಯು ಸಂಪೂರ್ಣವಾಗಿ ಸ್ಥಗಿತವಾಗಿತ್ತು. 'ಗ್ರಹಣ', 'ಮೂರು ದಾರಿಗಳು' ಮುಂತಾದ ನಾಲ್ಕೈದು ಕಪ್ಪು-ಬಿಳುವು ಚಿತ್ರಗಳು ೧೯೮೧ ರಲ್ಲಿ ತೆರೆಕಂಡಿದ್ದರೂ ಇವುಗಳ ನಿರ್ಮಾಣವಾಗಿದ್ದುದು ೧೯೭೯-೮೦ ರಲ್ಲಿ. ಈ ಹಿನ್ನೆಲೆಯಲ್ಲಿ ೧೯೮೧ ರಿಂದ ಆರಂಭವಾಗುವ ಚಲನಚಿತ್ರದ ಇತಿಹಾಸ ವರ್ಣಮಯ ಎನ್ನಬಹುದು.

೧೯೮೦ ರಿಂದೀಚೆಗೆ ವರ್ಣ ಚಿತ್ರಗಳ ಸಂಖ್ಯೆ ಹೆಚ್ಚುತ್ತಿದ್ದಂತೆ ಕನ್ನಡ ಚಿತ್ರಗಳ ಮಾರುಕಟ್ಟೆಯೂ ವಿಸ್ತಾರಗೊಂಡಿದ್ದು ಬಹುಮುಖ್ಯವಾದ ಬೆಳವಣಿಗೆ. ಇದು ಹೊಸ ಬಂಡವಾಳಗಾರರನ್ನು ಆಕರ್ಷಿಸಲು ಕಾರಣವಾಯಿತು. ಪತ್ರಿಕಾ ಮಾಧ್ಯಮಗಳು ಸಿನಿಮಾ ಸುದ್ದಿಗಳನ್ನು ಮುದ್ರಿಸಲು ಹೆಚ್ಚು ಪುಟ ಅಥವಾ ಜಾಗವನ್ನು ಮೀಸಲಿಡಲು ಆರಂಭಿಸಿದವು. ಇದೆಲ್ಲದರಿಂದಾಗಿ ಸಿನಿಮಾ ಚಟುವಟಿಕೆಗಳು ಸಾರ್ವಜನಿಕವಾಗ ತೊಡಗಿ ಅದರ ವ್ಯಾವಹಾರಿಕ 'ಶಕ್ತಿ' ಬಲಗೊಂಡಿತು. ಹಣ, ಖ್ಯಾತಿ, ಆಕರ್ಷಣೆ, ಮಾನ್ಯತೆ ಹೆಚ್ಚುತ್ತಿದ್ದಂತೆ ಮಡಿವಂತರಲ್ಲಿ ಸಿನಿಮಾ ಜನರ ಬಗ್ಗೆ ಇದ್ದ ಕೀಳು ಭಾವನೆ ಗಮನಾರ್ಹವಾಗಿ ಕಡಿಮೆಯಾಯಿತು. ಮೈಸೂರು, ಮಂಗಳೂರು ವಿಶ್ವವಿದ್ಯಾಲಯಗಳಲ್ಲಿ ಸಿನಿಮಾ ಅಧ್ಯಯನದ ವಿಭಾಗಗಳು ಆರಂಭಗೊಂಡವು. ಸಿನಿಮಾ ರಂಗದಲ್ಲಿ ಹಣ ಸುರಿದು ಗಳಿಸಿದ ಖ್ಯಾತಿಯನ್ನು ರಾಜಕೀಯದಲ್ಲಿ ಬಳಸುವ ಹವ್ಯಾಸ ಕೆಲವರಲ್ಲಿ ಕಾಣಿಸಿಕೊಂಡಿತು. ಇದೆಲ್ಲಕ್ಕಿಂತ ವಿಶೇಷವೆಂದರೆ, ಚಲನಚಿತ್ರಗಳಲ್ಲಿ ಅಭಿನಯಿಸುವ ಕಲಾವಿದೆಯರ ಬಗ್ಗೆ ಸಮಾಜದಲ್ಲಿ ಕಾಣುತ್ತಿದ್ದಂಥ ಅನುಮಾನ, ಹೇವರಿಕೆಯ ಮನೋಭಾವ ೧೯೮೧-೯೦ ರ ದಶಕದಲ್ಲಿ ಕಡಿಮೆಯಾಗಿತ್ತು.

ಕನ್ನಡ ಚಿತ್ರೋದ್ಯಮ ತೀವ್ರ ಬೆಳವಣಿಗೆಯೊಂದಿಗೆ ಸಾಮಾಜಿಕ ಬದ್ಧತೆಯನ್ನು ಹಾಗೂ ಗುಣಮಟ್ಟದ ಚಿಂತನೆಯನ್ನು ಕಳೆದುಕೊಳ್ಳುತ್ತಾ ಬಂದಿತು. ವ್ಯಾವಹಾರಿಕ ಯಶಸ್ಸಿನೊಂದಿಗೆ ಗುಣಮಟ್ಟಕ್ಕಾಗಿ ಶ್ರಮಿಸುತ್ತಿದ್ದಂಥ ಮನೋಭಾವ ಕ್ರಮೇಣ ಕಾಣದಾಯಿತು. ಕೇವಲ ಆರ್ಥಿಕ ಯಶಸ್ಸೇ ಪ್ರಧಾನ ಆಸಕ್ತಿಯಾಗಿ ವಿಜೃಂಭಿಸತೊಡಗಿತು. ಸರ್ಕಾರದಿಂದ ಸವಲತ್ತುಗಳನ್ನು ಪಡೆದುಕೊಳ್ಳುವ ಬಯಕೆ ಹೆಚ್ಚುತ್ತಾ ಹೋಯಿತು. ಹಣ ಗಳಿಕೆಯೇ ಪ್ರಧಾನ ಗುರಿಯಾಗುತ್ತಾ ಬಂದದ್ದರಿಂದ ಸೆನ್ಸಾರ್ ಜೊತೆಗಿನ ಘರ್ಷಣೆಗಳು ಹೆಚ್ಚಿದವು. ಒಬ್ಬನೇ ನಿರ್ಮಾಪಕ ವ್ಯಾವಹಾರಿಕ ಅನುಕೂಲಕ್ಕಾಗಿ ತನ್ನ ಚಿತ್ರಗಳನ್ನು ಬೇರೆ ಬೇರೆ ಲಾಂಛನಗಳನ್ನು ಹುಟ್ಟುಹಾಕಿ ನಿರ್ಮಿಸುವಂಥ ಪರಂಪರೆಯೂ ಈ ದಶಕದಲ್ಲಿ ಹೆಚ್ಚಾಯಿತು.

ಇಂದಿರಾ ಗಾಂಧಿಯವರು ಮತ್ತೆ ಅಧಿಕಾರಕ್ಕೆ ಬಂದರು. ಈ ಅವಧಿಯಲ್ಲಿ ದೂರದರ್ಶನದಲ್ಲಿ ವರ್ಣದಲ್ಲಿ ಪ್ರಸಾರ ಪ್ರಾಯೋಗಿಕವಾಗಿ ಪ್ರಾರಂಭವಾಯಿತು. ೧೯೮೨ನೇ ಜುಲೈ ೧೮ ರಿಂದ ವರ್ಣ ಹಾಗೂ ವಾಣಿಜ್ಯೀಕರಣಗೊಳಿಸುತ್ತೇವೆಂದು ಕೇಂದ್ರದ ಪ್ರಸಾರ ಇಲಾಖೆ ಹೇಳಿಕೊಂಡಿತು. ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆಯಿಂದ ಚಲನಚಿತ್ರ ಕ್ಷೇತ್ರಕ್ಕೆ ಎಂಥ ಅಪಾಯ ಕಾದಿದೆಯೋ ಎಂಬ ಆತಂಕವಂತೂ ಶುರುವಾಯಿತು. ಈ ಅವಧಿಯಲ್ಲಿ ಇಡೀ ಭಾರತದಲ್ಲಿ ೬೩೬೮ ಪೂರ್ಣ ಹಾಗೂ ೪೦೨೪ (ತಾತ್ಕಾಲಿಕ) ಸಂಚಾರಿ ಚಿತ್ರಮಂದಿರಗಳಿದ್ದವು. ಇದೇ ಹೊತ್ತಿನಲ್ಲಿ ಮೋಷನ್ ಪಿಕ್ಚರ್ಸ್ ಎಕ್ಸ್‌ಪೋರ್ಟ್ ಕಾರ್ಪೋರೇಷನ್ ಎಫ್.ಎಫ್.ಸಿ. ಜೊತೆಯಲ್ಲಿ ಮಿಳಿತಗೊಂಡು ನ್ಯಾಷನಲ್ ಫಿಲಂ ಡೆವಲಪ್‌ಮೆಂಟ್ ಕಾರ್ಪೋರೇಷನ್ ಆಯಿತು. ಇದು ಮುಂದೆ ಚಲನಚಿತ್ರ ಕ್ಷೇತ್ರದಲ್ಲಿ ಪ್ರಮುಖ ಪಾತ್ರ ವಹಿಸಿತು.

ಇದೇ ವರ್ಷ ಶಿವರಾಮ ಕಾರಂತರ ಸಮಿತಿ ಸಲ್ಲಿಸಿದ್ದ ಚಲನಚಿತ್ರ ರಾಷ್ಟ್ರೀಯ ನೀತಿಯ ಕರಡು ಪ್ರಕಟವಾಯಿತು. ವರದಿಯಲ್ಲಿ ಚಿತ್ರೋದ್ಯಮದ ಸಲುವಾಗಿ ಉಪಯುಕ್ತ ಸಲಹೆಗಳನೇಕವು ಇದ್ದವು. ಚಲನಚಿತ್ರ ಅಕಾಡಮಿಯನ್ನು ಇನ್ನಿತರ

ಸಾಹಿತ್ಯ, ಸಂಗೀತ, ನಾಟಕ ಮೊದಲಾದ ಅಕಾಡಮಿಗಳ ಹಾಗೇ ಪ್ರಾರಂಭಿಸಬೇಕೆಂದೂ ಈ ಅಕಾಡಮಿಯ ವ್ಯಾಪ್ತಿಗೆ ಡೈರೆಕ್ಟರೇಟ್ ಆಫ್ ಫಿಲಂ ಫೆಸ್ಟಿವಲ್ಸ್ ಮತ್ತು ರಾಷ್ಟ್ರೀಯ ಚಲನಚಿತ್ರ ಭಂಡಾರ ಮೊದಲಾದವೂ ಬರಬೇಕೆಂದೂ ಸೂಚಿಸಲಾಗಿತ್ತು. ಚಿತ್ರ ಸಮಾಜಗಳಿಗೆ ಆರ್ಥಿಕ ನೆರವು ನೀಡುವ ಮೂಲಕ ಚಲನಚಿತ್ರ ಕುರಿತ ಸಂಶೋಧನೆ ಮತ್ತು ಶಿಕ್ಷಣ ಇತ್ಯಾದಿಗಳಿಗೆ ನೆರವಾಗಬೇಕೆಂದೂ ಹೇಳಲಾಗಿತ್ತು. ಆದರೆ ಭಾರತ ಸರ್ಕಾರ ಈ ವರದಿಯನ್ನು ನಿರ್ಲಕ್ಷಿಸಿತು.

ರಾಷ್ಟ್ರೀಯ ದೂರದರ್ಶನ ಕಾರ್ಯಕ್ರಮ ಪ್ರಾರಂಭವಾಯಿತು. ಸತ್ಯಜಿತ್ ರಾಯ್ ಅವರ 'ಸದ್ಗತಿ' ಮತ್ತು 'ಶತ್‌ರಂಜ್ ಕೆ ಖಿಲಾಡಿ' ಚಿತ್ರಗಳ ಪ್ರಥಮ ಪ್ರದರ್ಶನ ದೂರದರ್ಶನದ ಮೂಲಕವೇ ಆಯಿತು. ಆಂಧ್ರದಲ್ಲಿ ಎನ್.ಟಿ.ರಾಮರಾಯರು ತೆಲುಗುದೇಶಂ ಪಕ್ಷ ಪ್ರಾರಂಭಿಸಿದರು. ಈ ಎಲ್ಲಾ ಸಂಗತಿಗಳ ಪ್ರತ್ಯಕ್ಷ ಪರೋಕ್ಷ ಪ್ರಭಾವ ನಮ್ಮ ಚಿತ್ರಗಳ ಮೇಲೆ ಆಗಿವೆ.

ಕನ್ನಡ ಚಿತ್ರರಂಗದ ಕುಟುಂಬನಿಷ್ಠ ಕಾದಂಬರಿ ಯುಗ ಮುಗಿದು ರಾಜಕೀಯ ನಿಷ್ಠ ವರ್ಣಯುಗ ಉದಯವಾದದ್ದು ೧೯೮೦ರಲ್ಲಿ. ಬದಲಾಗುತ್ತಿದ್ದ ಸಮಾಜವನ್ನು ಇದ್ದಂತೆಯೇ ಹಸಿ ಹಸಿಯಾಗಿ ತೋರಿಸುವ ಪ್ರವೃತ್ತಿ ದಟ್ಟವಾಗಿ ಕಾಣಿಸಿಕೊಂಡಿತು. ಅನ್ಯಾಯ, ಅಕ್ರಮ, ದಬ್ಬಾಳಿಕೆ, ದೌರ್ಜನ್ಯ, ಹಿಂಸೆ, ಮೋಸ, ವಂಚನೆ ಇವೆಲ್ಲ ತುಂಬಿರುವ ರಾಜಕೀಯ ಚಿತ್ರಗಳ ಪ್ರವಾಹದಲ್ಲಿ ಕೇವಲ ಕೆಲವರು ಮಾಡಿರುವ ಒಳ್ಳೆಯ ಪ್ರಯತ್ನಗಳು ಗಟ್ಟಿಯಾಗಿ ನಿಲ್ಲಲಾಗದಂಥ ದುರಂತ ಕಂಡುಬರುತ್ತದೆ.

ಸ್ವಾತಂತ್ರ್ಯಪೂರ್ವ ರಾಜಕೀಯ ಸಂದರ್ಭದ ಗಾಂಧಿ ಆದರ್ಶಗಳು ಮುಖ್ಯವಾಗಿ ಆಯ್ದ ಕೆಲವು ಸಾಮಾಜಿಕ ಸುಧಾರಣೆಯ ಅಂಶಗಳಿಗೆ ಮಹತ್ವ ಕೊಡಲಾಗಿತ್ತು. ಈ ಮಧ್ಯೆ ಎಡಪಂಥೀಯ ಒಲವುಗಳೂ ನುಸುಳಿದವು. ಭಾರತೀಯ ಚಿತ್ರರಂಗ ಇವನ್ನೆಲ್ಲ ಒಳಗೊಂಡಿದೆ. ಆದರೆ ಪ್ರಾದೇಶಿಕ ಚಿತ್ರರಂಗ, ಅದರಲ್ಲೂ ಕನ್ನಡ ಚಿತ್ರರಂಗ, ಇವನ್ನೆಲ್ಲ ಕೊಂಚ ತಡವಾಗಿ ಅಳವಡಿಸಿಕೊಂಡಿತು. ತೆಲುಗು ಚಿತ್ರರಂಗದ ಪ್ರಭಾವವೂ ಸಾಕಷ್ಟು ಇತ್ತು. ಸ್ವಾತಂತ್ರ್ಯಪೂರ್ವದಲ್ಲಿ ಇಂಥ ಪ್ರಯತ್ನಗಳು ಕೇವಲ ಬೆರಳೆಣಿಕೆಯಷ್ಟು ಆಗಿದ್ದವು. ಆದರೂ ಕೌಟುಂಬಿಕ ಕಥಾವಸ್ತುವುಳ್ಳ ಸ್ತ್ರೀಯ ತ್ಯಾಗ, ಶೀಲ ಇತ್ಯಾದಿಗಳಿಗೇ ಹೆಚ್ಚಿನ ಗಮನ ಹರಿಸಿತು. ತಾಯಿ, ತೊಟ್ಟಿಲು, ತವರು, ತಾಳಿಗಳು ವಿಜೃಂಭಿಸಿದವು. ಇಷ್ಟಾದರೂ ಸಿನಿಮಾ ಎಂದರೆ ಮನೋರಂಜನೆ ಎಂಬ ಗಟ್ಟಿ ನಿಲುವಿನ ಹಿನ್ನೆಲೆಯಲ್ಲಿ ವರ್ಣಮಯ, ಆಧುನಿಕ ವೇಷ-ಭೂಷಣಗಳತ್ತ ಹೆಚ್ಚು ಗಮನ ಕೊಟ್ಟರು.

ರಾಜಕೀಯ ಭ್ರಷ್ಟಾಚಾರದ ವಿರೋಧ ಜನರ ಮನಸ್ಸಿನ ಮೂಲಕ ತೊಡಗಿದಾಗ ಚಿತ್ರರಂಗ ಅದನ್ನು ಬಳಸಿಕೊಳ್ಳಲು ಮುಂದಾಯಿತು. ರಾಜಕಾರಣಿಗಳು ಖಳರಂತೆಯೂ, ನಾಯಕನಟರು ಆಕ್ರಾಂತ ಯುವಕರಾಗಿಯೂ ಮೂಡಿಬಂದರು. ಇಂಥ ಮನೋಧರ್ಮದ ಹಿಂದೆ ಆದರ್ಶಗಳು ಉದಾತ್ತವಾಗುವ ದಿಕ್ಕಿನಿಂದ ಬೇರೆಯಾಗಿ, ಅವುಗಳ ಪಲ್ಲಟ ಮತ್ತು ಸಮಸ್ಯೆಗಳಿಗೆ ಶೀಘ್ರ ಪರಿಹಾರ ದೊರಕಿಸುವ ತವಕ, ಅದಕ್ಕಾಗಿ ತೀವ್ರವಾದ ಆಕ್ರೋಶ ಕಂಡುಬಂದಿತು. ನಮ್ಮ ವಾಣಿಜ್ಯ ಚಿತ್ರಗಳಿಗೆ ಅದು ಒಂದು ಮಾದರಿಯಾಗಿ ಸೂಕ್ತವಾಗಿ ಸಿಕ್ಕಿಬಿಟ್ಟಿತು.

''...ಕನ್ನಡ ಚಿತ್ರಗಳ ಸಂದರ್ಭದಲ್ಲಿ 'ಅಂತ' ಇಂಥ ಪರಂಪರೆಗೆ ನಾಂದಿ ಎನ್ನಬಹುದು. ತುರ್ತು ಪರಿಸ್ಥಿತಿಯ ಕರಾಳದಿನಗಳು ನಮ್ಮನ್ನು ಬಹುವಾಗಿ ಕಾಡಿವೆ. ಈ ಹಂತದಲ್ಲಿ ನಮ್ಮ ಅನೇಕ ಆದರ್ಶಗಳು, ಭರವಸೆಗಳು ಕರಗಿಹೋದವು. ತುರ್ತು ಪರಿಸ್ಥಿತಿಯೊಂದೇ ಅಲ್ಲ, ಆ ಹಂತದಲ್ಲಿ 'ಒಂದು ಪರ್ಯಾಯ ವ್ಯವಸ್ಥೆ'ಯೇ ಎನ್ನುವ ಹಾಗೆ ಬಂದ ಜನತಾಪಾರ್ಟಿಯ ಪ್ರಯೋಗ ವೈಫಲ್ಯಗಳು, ಜನಸಾಮಾನ್ಯ ಹತಾಶ ಸ್ಥಿತಿ ತಲುಪಿದ, ಪರಿಹಾರಕ್ಕಾಗಿ ತಡಕಾಡುವ ಸ್ಥಿತಿ. ಅವನಿಗೆ ಗೊತ್ತಿರುವ ತನ್ನ ಶಕ್ತಿ ಎಂದರೆ ಓಟು. ಆ ಮಟ್ಟಿಗೆ ಆ ಓಟಿನ ಶಕ್ತಿಯ ಮುಂದೆ ಅಧಿಕಾರ ಬಲಹೀನ ಎಂತ ಗೊತ್ತಾಗಿದೆ. ಆದರೆ ಅದು ನಿಧಾನವಾದ ಪ್ರಕ್ರಿಯೆ. ಅಲ್ಲಿಯೂ ಭ್ರಷ್ಟತೆಯೇ ಕೆಲಸ ಮಾಡಿಬಿಡಬಹುದು ಎಂಬ ಆತಂಕ. ಆಗ ಆತ ಕಂಡುಕೊಂಡದ್ದು ಹೊಡಿ, ಬಡಿ, ಕೊಲ್ಲುಗಳನ್ನು. ಇವೆಲ್ಲ ಅವನ ಮನಸ್ಸಿನ ಬಯಕೆಗಳು. 'ಮಿಸ್ಟರ್ ಇಂಡಿಯಾ' ಸಿನಿಮಾದಲ್ಲಿಯ ಹಾಗೆ ಒಬ್ಬ ಅಗೋಚರ ವ್ಯಕ್ತಿ ಬೇಕು. ಅವನು ಎಲ್ಲ ಸಮಸ್ಯೆಗಳನ್ನೂ ಬಗೆಹರಿಸಬಲ್ಲ. ಅವನು ರಾಮನೂ ಹೌದು, ಕೃಷ್ಣನೂ ಹೌದು. ಎಲ್ಲ ಸಚ್ಚಾರಿತ್ರ್ಯಗಳೂ ಇದ್ದು, ನಾಯಕಿಯೊಂದಿಗೆ ಖುಷಿ ಕೊಡುವ ಹಾಗೆ ಚಕ್ಕಂದ ಮಾಡುವ ರಸಿಕನೂ ಆಗಿರುತ್ತಾನೆ. ಇಂಥವು ಒಂದು ಪಾಸಿಟಿವ್ ಇಮೇಜ್‌ನ ಹುಡುಕಾಟ... ಪ್ರಯತ್ನ ಆಗಿರುತ್ತದೆ'' ಎಂದು ಜನಪ್ರಿಯ ಸಿನಿಮಾ ಕುರಿತ ಚರ್ಚೆಯೊಂದರಲ್ಲಿ ಗಿರೀಶ್ ಕಾಸರವಳ್ಳಿ ವಿಶ್ಲೇಷಿಸುತ್ತಾರೆ.

'ಅಂತ' ಕಾದಂಬರಿಯನ್ನು ಬರೆದ ಎಚ್.ಕೆ.ಅನಂತರಾವ್ ''...ಸುದ್ದಿಯ ತುಣುಕೊಂದನ್ನು ಓದಿದಾಗ ನನ್ನಲ್ಲಿ ಹುಟ್ಟಿದ ರೋಷವೇ 'ಅಂತ' ಕಾದಂಬರಿಯಾಯಿತು. 'ಅಂತ'ದ ಅನೇಕ ಪಾತ್ರಗಳು ನಿಜವಾದವುಗಳು. ಅದರಲ್ಲೂ ಪಿ.ಜಿ.ಕರುಣಾಕರನ್ ಪಾತ್ರ, ಅತ ಈ ಘಟನೆಯಲ್ಲಿ ಇನ್ವಾಲ್ವ್ ಆಗಿದ್ದವರು. ಆದರಿಂದಲೇ ನಿಜವಾದ ವಿಲನ್-ಹೀರೋಗಳನ್ನು ಜನ ಬಯಸುತ್ತಾರೆ ಅನ್ನಿಸುತ್ತೆ. ಅದಕ್ಕೇ ಇಂಥ ಸಂಗತಿಗಳನ್ನೇ ಹುಡುಕಿ ಸಿನಿಮಾಗೆ ಬರೀತಾರೆ. ಅವೇ ಬಾಕ್ಸಾಫೀಸ್‌ನಲ್ಲೂ ಗೆಲ್ಲುತ್ತವೆ ಅನ್ನಿಸುತ್ತೆ'' ಎನ್ನುತ್ತಾರೆ.

ಜನಪ್ರಿಯ ಸಾಹಸ ಪ್ರಧಾನ ಚಿತ್ರಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದ ಪ್ರಭಾಕರ್ ಹೀಗೆಂದಿದ್ದರು :

''ಎಮರ್ಜೆನ್ಸಿ ಘೋಷಣೆ ಆದಾಗ ಕಠಿಣವಾದ ನಿಯಮಗಳು ಬಂದವು. ಚಿತ್ರಗಳಲ್ಲಿ ಫೈಟ್ಸ್ ಕೂಡದು ಅಂದರು. ನೂರಾರು ಸಾಹಸ ಕಲಾವಿದರಿಗೆ ಕೆಲಸವೇ ಇರಲಿಲ್ಲ. ಈ ಕಠಿಣ ನಿಯಮದಿಂದಾಗಿ ಮನರಂಜನೆ ಹೋಗಿ ಗೋಳುಕರೆಯ ಸಿನಿಮಾಗಳು ಬಂದವು. ಆಗ ಹುಟ್ಟಿದ ಜನತಾಪಕ್ಷ ಕೊಂಚ ರಿಲ್ಯಾಕ್ಸ್ ಮಾಡಿತು. ಬಹಳ ದಿನ ಉಳಿಯಲಿಲ್ಲ. ಆದರೆ ಪಕ್ಷದಲ್ಲಿ ಒಳ ಜಗಳ, ಭ್ರಷ್ಟಾಚಾರ ಹೆಚ್ಚಾದ್ದರಿಂದ ಅವ್ಯವಸ್ಥೆ, ಅನ್ಯಾಯ ತುಂಬಿಕೊಂಡಿತು. ಈ ಹಂತದಲ್ಲಿ ಹೀರೋ ಮುಖ್ಯನಾದ. ಎಲ್ಲರನ್ನೂ ಸದೆಬಡಿದು, ಸರಿ ಮಾಡಿ ಬಿಡುತ್ತಾನೆ ಅನ್ನುವ ಹಾಗೆ ರೂಪಿಸಿದ್ದರು. ಅದು ಪ್ರೀತಿಯ ಲೋಕ. ಆದರೂ ಜನರ ಮನಸ್ಸಿನ ಭಾವನೆಗಳಿಗೆ ಕ್ರಿಯೆಯ ರೂಪ ಈ ಹೀರೋ ಆಗಿರುತ್ತಿದ್ದ. ಈ ರೀತಿ ಖಾಕಿ ಮತ್ತು ಖಾದಿ ಸಿನಿಮಾದೊಳಗೆ ಧಾರಾಳವಾಗಿ ಬಂದಿತು. ಸಿ.ಐ.ಡಿ. ಆಫೀಸರ್, ಪೊಲೀಸ್ ಆಫೀಸರ್ ಕಡ್ಡಾಯವಾಗಿ ಸಿನಿಮಾದೊಳಗೆ ಸೇರ್ಪಡೆಗೊಂಡರು. ಇವು ಪ್ರೊಟೆಕ್ಟೆಡ್ ಫೇಸಸ್, ಅವು ದಾರಿ ತಪ್ಪಿದರೆ ಜನ ಸಹಿಸಲ್ಲ. ಅದನ್ನೇ ಟೀಕಿಸಿದಾಗ ಖುಷಿ ಪಡುತ್ತಾರೆ''.

ಈ ಹಿನ್ನೆಲೆಯಲ್ಲಿ 'ಅಂತ'(೧೯೮೧) ಮತ್ತು 'ಬರ'(೧೯೮೨) ಮುಖ್ಯವಾಗುತ್ತವೆ.

ಸ್ವಾತಂತ್ರ್ಯೋತ್ತರ ಭಾರತದ ರಾಜಕಾರಣದ ಅವಸ್ಥೆಯನ್ನು ಅತ್ಯಂತ ಸಮರ್ಥವಾಗಿ ಬಿಂಬಿಸಿದ ಈ ದಶಕದ ಎರಡು ಚಿತ್ರಗಳು 'ಬರ' ಹಾಗೂ 'ಅಂತ'. ರಾಜಕೀಯ ವ್ಯವಸ್ಥೆಯ ಕುಟಿಲತೆ, ತಂತ್ರಗಾರಿಕೆಯನ್ನು ಎರಡು ಭಿನ್ನ ಶೈಲಿಯಲ್ಲಿ ಈ ಚಿತ್ರಗಳು ಬಿಡಿಸಿಟ್ಟವು. ಇದರೊಂದಿಗೆ ಈ ಎರಡು ಚಿತ್ರಗಳೇ ಕನ್ನಡದಲ್ಲಿ ರಾಜಕೀಯ ಚಿತ್ರಗಳ ಸುದೀರ್ಘ ಪರಂಪರೆಗೆ ಬುನಾದಿ ಹಾಕಿದವು.

ಹಾಗೆ ನೋಡಿದರೆ ಸೆನ್ಸಾರ್ ನಿಯಮಾವಳಿಗಳಿಗೆ ಈ ಎರಡು ಚಿತ್ರಗಳೂ ವಿರುದ್ಧವಾಗಿದ್ದವು. ಆದರೆ 'ಬರ' ತಕರಾರಿಲ್ಲದೆ ಪ್ರದರ್ಶನಾನುಮತಿ ಪಡೆಯಿತು. 'ಅಂತ' ಅದರ ತೀವ್ರ ಭಾವುಕತೆ ಹಾಗೂ ಅತಿ ಎನಿಸುವಂಥ ಹಿಂಸಾತ್ಮಕ ದೃಶ್ಯಗಳಿಂದ ಸೆನ್ಸಾರ್‌ನ ತಡೆಗೋಡೆ ಎದುರಿಸಿತು. ಕತ್ತರಿಸಿದ ಭಾಗಗಳನ್ನು ಮರುಜೋಡಣೆ ಮಾಡಿ ಪ್ರದರ್ಶಿಸಲಾಗುತ್ತಿದೆ ಎಂಬ ಸೆನ್ಸಾರ್ ಮಂಡಳಿಯ ಆರೋಪದ ಹಿನ್ನೆಲೆಯಲ್ಲಿ ಚಿತ್ರದ ಪ್ರದರ್ಶನವನ್ನು ನಿಷೇಧಿಸಲಾಯಿತು. ಈ ದೃಷ್ಟಿಯಿಂದ ಸರ್ಕಾರದಿಂದ ನಿಷೇಧಗೊಂಡ ಪ್ರಥಮ ಕನ್ನಡ ಚಿತ್ರವಿದು. ರಾಜ್ಯ ಸರ್ಕಾರದ ಗೃಹಾಡಳಿತ ಕಮಿಷನರ್‌ರವರ ಆಜ್ಞೆಯ ಮೇರೆಗೆ ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳೂ ತಮ್ಮ ಸುಪರ್ದಿನಲ್ಲಿರುವ ನಗರಗಳಲ್ಲಿ ಪ್ರದರ್ಶನವಾಗುತ್ತಿದ್ದ ಚಿತ್ರದ ಪ್ರತಿಗಳನ್ನು ಮುಟ್ಟುಗೋಲು ಹಾಕಿಕೊಂಡರು. ಆದರೆ ರಾಜ್ಯದ ಸೆಷನ್ಸ್ ನ್ಯಾಯಾಲಯ ಬೆಂಗಳೂರಿನಲ್ಲಿ ಪ್ರತಿಗಳನ್ನು



(ಚಿತ್ರ ೨) 'ಬರ' ಚಿತ್ರದಲ್ಲಿ ಸಿ.ಆರ್.ಸಿಂಹ



(ಚಿತ್ರ ೩) 'ಅಂತ' ಚಿತ್ರದಲ್ಲಿ ಪ್ರಭಾಕರ್, ಸುಂದರಕೃಷ್ಣ ಅರಸ್, ಲಕ್ಷ್ಮೀ, ಅಂಬರೀಷ್, ವಜ್ರಮುನಿ

ಮುಟ್ಟುಗೋಲು ಹಾಕಿದ್ದು ನ್ಯಾಯಬಾಹಿರವೆಂದು ತೀರ್ಪು ನೀಡಿತು. ಆದರೆ ಸೆನ್ಸಾರ್ ಮಂಡಳಿ ಮ್ಯಾಜಿಸ್ಟ್ರೇಟ್ ಕೋರ್ಟಿನ ಈ ತೀರ್ಪಿನ ವಿರುದ್ಧ ಹೈಕೋರ್ಟಿಗೆ ಮೇಲ್ಮನವಿ ಸಲ್ಲಿಸಿತು (ಹೆಚ್ಚಿನ ವಿವರಗಳು 'ಸೆನ್ಸಾರ್' ಲೇಖನದಲ್ಲಿ). ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಪುನರ್ ನಿರ್ಮಾಣಗೊಂಡ ಈ ಚಿತ್ರ ಅತ್ಯಾಚಾರ, ಅಶ್ಲೀಲ, ವಿಕೃತ ಹಿಂಸೆ ಹಾಗೂ ವಿವಾದಗಳಿಂದಾಗಿ ಸುಮಾರು ಆರು ತಿಂಗಳ ಕಾಲ ದೇಶಾದ್ಯಂತ ಸುದ್ದಿಯಲ್ಲಿತ್ತು. ಕೊನೆಕೊನೆಗೆ ಈ ಚಿತ್ರದ ಮೂಲಕ ಆರಂಭಗೊಂಡ ವಿವಾದ ಎಷ್ಟು ತೀವ್ರ ಸ್ವರೂಪವನ್ನು ಪಡೆದುಕೊಂಡಿತೆಂದರೆ, ಕೇಂದ್ರದ ವಾರ್ತಾ ಇಲಾಖೆ ಸೆನ್ಸಾರ್ ಮಂಡಳಿಯೊಂದಿಗೆ ಹಲವಾರು ಸಭೆಗಳನ್ನು ನಡೆಸಿತು; ತಕ್ಷಣದಿಂದಲೇ ತನ್ನ ಕಾರ್ಯ ನಿರ್ವಹಣೆಯಲ್ಲಿ ವಿಪರೀತ ಎಚ್ಚರದಿಂದಿರುವಂತೆ ಪ್ರಾದೇಶಿಕ ಕಚೇರಿಗಳಿಗೆ ಸೂಚಿಸಿತು. ಈ ಹಗರಣದ ನಂತರ ಸುಮಾರು ವರ್ಷಗಳ ಕಾಲ ಸೆನ್ಸಾರ್ ಮಂಡಳಿ ತಳೆದ ಬಿಗಿ ಧೋರಣೆಯಿಂದಾಗಿ ಬಹಳ ನಿರ್ಮಾಪಕರು ಹಲವಾರು ರೀತಿಯ ಕಷ್ಟನಷ್ಟಗಳನ್ನು ಅನುಭವಿಸಿದರು.

'ಅಂತ' ಚಿತ್ರದ ಮೂಲಕ ಅಂಬರೀಷ್ ಪೂರ್ಣ ಪ್ರಮಾಣದ ರೊಚ್ಚು, ರೋಷದ ನಾಯಕನ ವರ್ಚಸ್ಸು ಗಳಿಸಿಕೊಂಡು ಕನ್ನಡ ಚಿತ್ರರಂಗದ ಪ್ರಮುಖ ನಾಯಕ ನಟರಾಗಿ ನೆಲೆನಿಂತರು. ನಿರ್ದೇಶಕ ಎಸ್.ವಿ.ರಾಜೇಂದ್ರಸಿಂಗ್ ಬಾಬು ಕನ್ನಡದ ಉತ್ತಮ ನಿರ್ದೇಶಕರೆನಿಸಿಕೊಂಡು ತಾರಾವರ್ಚಸ್ಸು ಗಳಿಸಿದರು. ಈ ಚಿತ್ರದ ಅತ್ಯುತ್ತಮ ಚಿತ್ರನಾಟಕಕ್ಕಾಗಿ ಬಾಬು ಅವರಿಗೆ ೧೯೮೧-೮೨ರ ರಾಜ್ಯಸರ್ಕಾರದ ಪ್ರಶಸ್ತಿ ಲಭಿಸಿತು. ಹಿರಿಯ ಕಲಾವಿದ ಥಿಕ್ಕಿ ಮಾಧವರಾವ್‌ರವರಿಗೆ ಇದೇ ಕೊನೆಯ ಚಿತ್ರವಾಯಿತು. ಈ ಚಿತ್ರದ ವಿವಾದ ಹಾಗೂ ಯಶಸ್ಸು ಮೂಲ ಕಾದಂಬರಿಯ ಲೇಖಕ ಹೆಚ್.ಕೆ.ಅನಂತರಾವ್ ಅವರಿಗೆ ಅಪಾರ ಖ್ಯಾತಿ ಗಳಿಸಿಕೊಟ್ಟಿತು. ಪರಿಮಳ ಆರ್ಟ್ಸ್ ಲಾಂಛನದಲ್ಲಿ ಖ್ಯಾತ ವಿತರಕರಾದ ಹೆಚ್.ಎಸ್.ಮಾರುತಿ ನಿರ್ಮಿಸಿದ 'ಅಂತ' ಕನ್ನಡ ಚಿತ್ರರಂಗದಲ್ಲಿ ಅವರಿಗೆ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಟ್ಟಿತು. ಈ ಚಿತ್ರದ ಯಶಸ್ಸಿನ ಸ್ಫೂರ್ತಿಯಿಂದ ಅವರು ನಂತರ ಪರಿಮಳ ಆರ್ಟ್ಸ್ ಲಾಂಛನದಲ್ಲಿಯೇ 'ಅ'ಕಾರದಿಂದ ಆರಂಭವಾಗುವ 'ಅಜಿತ್', 'ಅಸಂಭವ' ಚಿತ್ರಗಳನ್ನು ನಿರ್ಮಿಸಿದರು.

'ಬರ' ನಿರೂಪಣೆಯಲ್ಲಿ ಅತ್ಯಂತ ವೈವಿಧ್ಯಮಯ ಸಾಧ್ಯತೆಯನ್ನು ತೋರಿದ ಚಿತ್ರ. ಭೀಕರ ಕ್ಷಾಮಕ್ಕೆ ತುತ್ತಾಗಿರುವ ಬೀದರ್ ಜಿಲ್ಲೆಗೆ ನೆರವು ನೀಡಿದರೆ ಅದೇ ಕ್ಷೇತ್ರದವನೇ ಆದ ತನ್ನ ಸಂಪುಟದ ಗೃಹಮಂತ್ರಿ ರುದ್ರಪ್ಪನ ವರ್ಚಸ್ಸು ಹೆಚ್ಚುತ್ತದೆಂದು ಮುಖ್ಯಮಂತ್ರಿ ಭಾವಿಸುತ್ತಾನೆ. ಪರಿಹಾರ ನೀಡುವುದಕ್ಕೆ ಅವನೇ ಅಡ್ಡಿ ಎಂಬ ಸುಳ್ಳನ್ನು ಹಬ್ಬಿಸಿ ಅವನ ವಿರುದ್ಧ ಸ್ಥಳೀಯರನ್ನು ಎತ್ತಿಕಟ್ಟಿ ಸ್ವಾರ್ಥದ ರಾಜಕೀಯ ಮಾಡುತ್ತಾನೆ. ರಾಜಕೀಯ ಅಸ್ತಿತ್ವಕ್ಕಾಗಿ ಮುಖ್ಯಮಂತ್ರಿ ಮತ್ತು ಗೃಹಮಂತ್ರಿಗಳಿಬ್ಬರೂ ಸೃಷ್ಟಿಸುವ ಗಲಭೆಗಳ ನಡುವೆ ಜಿಲ್ಲಾಧಿಕಾರಿ ಅಸಹಾಯಕ. ಈ ಬಗೆಯ ಕಥೆ ಕನ್ನಡ ತೆರೆಗೆ ತೀರಾ ಹೊಸದಾಗಿತ್ತು. ಅನಂತ್‌ನಾಗ್, ಸಿ.ಆರ್.ಸಿಂಹರ ಅಭಿನಯ ಅತ್ಯುತ್ತಮವಾಗಿತ್ತು.

ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮದ ಆರ್ಥಿಕ ನೆರವಿನಿಂದ ತಯಾರಾದ ಈ ಚಿತ್ರ ೧೯೮೧ರ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂದು ರಾಷ್ಟ್ರ ಪ್ರಶಸ್ತಿ ಗಳಿಸಿತು. ೧೯೮೧ರ ಸೆಪ್ಟೆಂಬರ್ ತಿಂಗಳಲ್ಲಿ ಚಿತ್ರ ಸೆನ್ಸಾರ್ ಆಯಿತಾದರೂ ಬಿಡುಗಡೆಯ ವ್ಯವಸ್ಥೆಯಾಗದೆ ಒಂದು ವರ್ಷಕಾಲ ಪೆಟ್ಟಿಗೆಯಲ್ಲೇ ಇತ್ತು. ಕೊನೆಗೆ ಚಿತ್ರದ ನಾಯಕನಟ ಅನಂತ್‌ನಾಗ್ ಸದಭಿರುಚಿಯ ಚಿತ್ರಗಳನ್ನು ಪ್ರೋತ್ಸಾಹಿಸಲು ಹಂಚಿಕೆದಾರನಾಗುವ ತೀರ್ಮಾನ ಕೈಗೊಂಡಿದ್ದರಿಂದ ಸೆಪ್ಟೆಂಬರ್ ೮೨ ರಲ್ಲಿ ತೆರೆಗೆ ಬಂದು 'ಸ್ವಪ್ನ' ಮಿನಿ ಚಿತ್ರಮಂದಿರದಲ್ಲಿ ೧೦೦ ದಿನಗಳ ಪ್ರದರ್ಶನ ಕಂಡಿತು.

'ಅಂತ'-'ಬರ' ಚಿತ್ರಗಳ ಬಿಡುಗಡೆಗೆ ಸಾಕಷ್ಟು ಅಂತರವಿತ್ತು. 'ಅಂತ' ರಾಜಕೀಯ ಚಿತ್ರಗಳಿಗೆ ತಳಹದಿ ಹಾಕಿತು. 'ಬರ' ಹೇಳುವ ರಾಜಕೀಯದ ಸೂಕ್ಷ್ಮಗಳನ್ನು ಗ್ರಹಿಸಬಲ್ಲ ಪ್ರೇಕ್ಷಕ ಸಿದ್ಧವಾಗಿದ್ದ.

ಚಿತ್ರದ ಕಥೆಗಾರರಾದ ಡಾ।ಯು.ಆರ್.ಅನಂತಮೂರ್ತಿ ಕನ್ನಡ ತೆರೆಗೆ ಮತ್ತೊಂದು ಸೂಕ್ಷ್ಮ ಸಂವೇದಿ ಕಥೆಯನ್ನು ಕೊಟ್ಟ ಕೀರ್ತಿಗೆ ಕಾರಣರಾದರು. ಈ ಚಿತ್ರದ್ದು ಇನ್ನೊಂದು ಹೆಗ್ಗಳಿಕೆಯೂ ಇದೆ. ಕಾರ್ಯಾಂಗ ರಾಜಕಾರಣಿಗಳ ಹಿತಾಸಕ್ತಿಗೆ ಬಲಿಯಾಗಿ ಹೇಗೆ ನಿಷ್ಕ್ರಿಯವಾಗುತ್ತದೆ ಎಂಬುದನ್ನು ನೋಡಿ ಪ್ರತಿಕ್ರಿಯೆ ನೀಡಲಿ ಎಂದು ಐ.ಎ.ಎಸ್, ಐ.ಪಿ.ಎಸ್. ಸೇರಿದಂತೆ ವಿವಿಧ ಇಲಾಖೆಗಳ ಸುಮಾರು ೧೦೦ ಮಂದಿ ಉನ್ನತ ಅಧಿಕಾರಿಗಳನ್ನು ಸೇರಿಸಿ ಈ ಚಿತ್ರದ ವಿಶೇಷ ಪ್ರದರ್ಶನವನ್ನು ಸೆನ್ಸಾರ್ ಮಂಡಳಿ ಮದರಾಸಿನಲ್ಲಿ ಏರ್ಪಡಿಸಿತ್ತು. ಹಿಂದಿಯ 'ಗರಂ ಹವಾ' ಚಿತ್ರದ ನಂತರ ಕನ್ನಡಿಗ ಎಂ.ಎಸ್.ಸತ್ಯು ಅವರು ನಿರ್ಮಿಸಿ, ನಿರ್ದೇಶಿಸಿದ ಚಿತ್ರಗಳಲ್ಲಿ 'ಬರ'ಕ್ಕೆ ವಿಶೇಷ ಸ್ಥಾನವಿದೆ.

ಬಿಡುಗಡೆಯ ಒಂದು ವರ್ಷದ ವಿಳಂಬದಿಂದಾಗಿ ನಿರ್ಮಾಪಕ ಎಂ.ಎಸ್.ಸತ್ಯು ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮಕ್ಕೆ ೭೫,೦೦೦ ರೂಪಾಯಿ ಬಡ್ಡಿ ತೆರಬೇಕಾಯಿತು. ಇಷ್ಟೆಲ್ಲ ಕಷ್ಟಗಳ ನಡುವೆ 'ಬರ' ಯಶಸ್ಸು ಕಂಡಿತಲ್ಲದೆ, 'ಬಿ' ಮತ್ತು 'ಸಿ' ಕೇಂದ್ರಗಳಲ್ಲೂ ಉತ್ತಮ ಫಲಿತಾಂಶ ನೀಡಿತು. ನಿರ್ದೇಶಕ ಎಂ.ಎಸ್.ಸತ್ಯು ಅವರು ಈ ಚಿತ್ರದ ಬಗ್ಗೆ ಮಾತಾಡುತ್ತಾ, ''...ತುಂಬ ರಿಸರ್ಚ್ ಮಾಡಿ ಬರೆದ ಕಥೆ, ನಾವೂ ಚಿತ್ರಕ್ಕಾಗಿ ಸ್ಥಳಗಳಿಗೇ ಹೋಗಿ ಚಿತ್ರನಾಟಕ ಮಾಡಿಕೊಂಡೆವು. ಗ್ಲೋರಿಫೈ ಮಾಡದೆ ತುಂಬ ರಿಯಲಿಸ್ಟಿಕ್ ಆಗಿದ್ದ ಚಿತ್ರ. ಅಧಿಕಾರಿಗಳಿಗೆ ವಾಸ್ತವವನ್ನು ಹೇಳಿದಂತಾಗುತ್ತೆ ಅಂತ ಪ್ರದರ್ಶಿಸ್ತಾರೆ. ಈವತ್ತಿಗೂ ಡೆಹರಾಡೂನ್‌ನಲ್ಲಿರುವ ಮಸ್ಸೂರಿಯಲ್ಲಿ 'ಬರ'ದ ಹಿಂದಿ ಅವತರಣಿಕೆ 'ಸೂಖಾ'ದ ಪ್ರಿಂಟ್ ಒಂದನ್ನು ಅವರೇ ಇಟ್ಟುಕೊಂಡು ಪದೇ ಪದೇ ಅಧಿಕಾರಿಗಳಿಗೆ ತೋರಿಸ್ತಾರೆ. ಇದರ ಬಗ್ಗೆ ಯಾರೂ ನೇರವಾಗಿ ನನಗೆ ಪ್ರತಿಕ್ರಿಯೆ ಅಂತ ಏನೂ ಹೇಳಿಲ್ಲ. ಒಬ್ಬಿಬ್ಬರಿಗೆ ಸಹಾಯಕವಾಗಿರಬಹುದು. ಆದರ್ಶವಾದಿ ಅಧಿಕಾರಿಯಾಗಿ ಅನಂತ್‌ನಾಗ್ ನೀಡಿದ ಅಭಿನಯ ಇವತ್ತಿಗೂ ನೆನೆದರೆ ತುಂಬ ಸಂತೋಷ ತರುತ್ತದೆ. ಹಾಗೆ ನೋಡಿದರೆ ಅಂಥ ಅದ್ಭುತ ನಟನಿಗೆ ಕೇಂದ್ರದ ಪ್ರಶಸ್ತಿಗಳೇ ಬಂದಿಲ್ಲ. ಬಾಲ್‌ರಾಜ್ ಸಹಾನಿಗೂ ಹಾಗೆಯೇ ಆಯಿತು. ಏನೋ ಆಗಿಬಿಡುತ್ತೆ ನೋಡಿ...'' ಅಂದಿದ್ದಾರೆ.

೧೯೮೧ರ ಹೊತ್ತಿಗೆ ಚಿತ್ರಗಳು ಸಂಖ್ಯೆಯ ದೃಷ್ಟಿಯಿಂದ ಹೆಚ್ಚಳವಾಗಿ ಗುಣದ ದೃಷ್ಟಿಯಿಂದ ಅಷ್ಟೇನೂ ಆಶಾದಾಯಕವಾಗಿರಲಿಲ್ಲ. ಇದು ಆರೋಗ್ಯಕರ ಲಕ್ಷಣವಲ್ಲ ಎಂಬ ಆಕ್ಷೇಪವೂ ಜೊತೆಗೇ ಪ್ರಾರಂಭವಾಗಿತ್ತು. ಚಿತ್ರರಂಗದ ಪ್ರಾಥಮಿಕ ತಿಳಿವಳಿಕೆಯೂ ಇಲ್ಲದವರು, ಸಂಪೂರ್ಣ ಬಂಡವಾಳ ಹಾಕಿ, ಪೂರೈಸಲಾಗದೆ ವಿತರಕರ ಮರ್ಜಿ ಕಾಯುವವರು ಹೆಚ್ಚಾಗಿದ್ದರು. ಕಚ್ಚಾ ಫಿಲಂ ಬೆಲೆ ಗಗನಕ್ಕೇರಿತ್ತು. ನಿರ್ಮಾಣ ವೆಚ್ಚವೂ ಏರಿತ್ತು; ತೆರಿಗೆಯೂ ಅಧಿಕವಾಗಿತ್ತು. ಕೊಂಚ ಎಚ್ಚರ ತೆಗೆದುಕೊಂಡು ಮುಂದಿನ ಹೆಜ್ಜೆ ಇಡಿ ಎಂದು ಚಿತ್ರರಂಗದ ಅರ್ಥಶಾಸ್ತ್ರಜ್ಞರು ಹೇಳುತ್ತಲೇ ಇದ್ದರು.

'ಬರ'ದಂಥ ವಿಭಿನ್ನ ಚಿತ್ರಕ್ಕಷ್ಟೇ ಅಲ್ಲ, ಇತರ ಕನ್ನಡ ಚಿತ್ರಗಳಿಗೂ ಚಿತ್ರಮಂದಿರಗಳು ಅಲಭ್ಯವಾಗಿವೆ ಎಂಬುದು ನಿರ್ಮಾಪಕರ ನಿರಂತರ ಅಳಲು. ಇದರೊಂದಿಗೆ ಚಿತ್ರಮಂದಿರಗಳಲ್ಲಿ ದುಡಿಯುವ ಕಾರ್ಮಿಕರದು ಮತ್ತೊಂದು ಗೋಳು. ತಮಗೆ ಬೇಕಾದಂತೆ ಬಾಡಿಗೆಗಳನ್ನು ಹೆಚ್ಚಿಸುತ್ತಿರುವ ಥಿಯೇಟರ್ ಮಾಲೀಕರು ತಮ್ಮ ಸಂಬಳವನ್ನು ಮಾತ್ರ ಹೆಚ್ಚಿಸುತ್ತಿಲ್ಲ ಎಂದು ೧೯೮೧ರ ಡಿಸೆಂಬರ್ ೨೭ ರಂದು ದಿಢೀರ್ ಮುಷ್ಕರ ಹೂಡಿ ಚಿತ್ರ ಪ್ರದರ್ಶನ ನಿಲ್ಲಿಸಿದರು. ಇದು ಉದ್ಯಮಕ್ಕೆ ಅನಿರೀಕ್ಷಿತವಾಗಿತ್ತು. ಕಾರ್ಮಿಕರ ಸಂಘಟನೆಗಳು ಕೊಟ್ಟಿದ್ದ ಪತ್ರಿಕಾ ಪ್ರಕಟಣೆಗಳನ್ನು ಯಾರೂ ಗಂಭೀರವಾಗಿ ಗಣನೆಗೆ ತೆಗೆದುಕೊಂಡಿರಲಿಲ್ಲ. ಇದರಿಂದ ಎಂದಿನಂತೆ ಭಾನುವಾರದ ರಂಜನೆಗೆ ಥಿಯೇಟರ್‌ಗಳ ಬಳಿ ಬಂದ ಚಿತ್ರರಸಿಕರಿಗೆ ಅಪಾರ ನಿರಾಸೆಯಾಯಿತು. ಕಾರ್ಮಿಕರೊಂದಿಗೆ ಚಿತ್ರಮಂದಿರಗಳ ಮ್ಯಾನೇಜರ್‌ಗಳು ಕೂಡ ಬಂದ್‌ನಲ್ಲಿ ಭಾಗವಹಿಸಿದ್ದರಿಂದ ಅಂದಿನ ಪ್ರತಿಭಟನೆಗೆ ಹೆಚ್ಚಿನ ಬಲ ಬಂದಿತ್ತು. ವೇತನವನ್ನು ಪರಿಷ್ಕರಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಲು ನಡೆದ ಈ ಚಳವಳಿಯನ್ನು ಸರ್ಕಾರ ಕೂಡ ಗಂಭೀರವಾಗಿ ಪರಿಗಣಿಸಿ, ವೇತನ ಪರಿಷ್ಕರಣ ಮಾಡಿ ೧೯೮೨ರ ಮಾರ್ಚ್ ೫ರಂದು ಆಜ್ಞೆ ಹೊರಡಿಸಿತು. ಈ ಹಿಂದೆ ೧೯೭೩, ೭೬ ಮತ್ತು ೭೮ ರಲ್ಲಿ ಪರಿಷ್ಕರಣೆಗೊಂಡಿದ್ದ ವೇತನ ನಾಲ್ಕು ವರ್ಷಗಳ ನಂತರ ೧೯೮೨ ರಲ್ಲಿ ಮರುಪರಿಷ್ಕರಣೆಗೊಳಗಾಯಿತು. ಸರ್ಕಾರದ ನಿರ್ಧಾರದಿಂದ ಕಾರ್ಮಿಕರು ಹಾಗೂ ಚಿತ್ರಮಂದಿರದ ಮಾಲೀಕರಿಬ್ಬರಿಗೂ ಸಮಾಧಾನ ಆಗಲಿಲ್ಲ. ಆದರೆ ತನ್ನ ನಿರ್ಧಾರದಿಂದ ಸರ್ಕಾರ ಹಿಂದೆ ಸರಿಯಲಿಲ್ಲ. ಎಂದಿನಂತೆ ಪ್ರದರ್ಶಕರು ಥಿಯೇಟರ್‌ಗಳ ಪ್ರದರ್ಶನ ದರವನ್ನು ಸರ್ಕಾರ ತನ್ನ ಬಜೆಟ್‌ನಲ್ಲಿ ಏರಿಸಿದ ಮನರಂಜನಾ ತೆರಿಗೆಗೆ ಅನುಸಾರವಾಗಿ ಹೆಚ್ಚಿಸಿದರು.




(ಚಿತ್ರ ೪) ಮುಖ್ಯಮಂತ್ರಿ ಗುಂಡೂರಾಯರ ಅಧ್ಯಕ್ಷತೆಯಲ್ಲಿ ಬೆಂಗಳೂರಿನಲ್ಲಿ ನಡೆದ ಭಾರತೀಯ ವಾಕ್ಚಿತ್ರದ ಸುವರ್ಣ ಮಹೋತ್ಸವ ಸಮಾರಂಭ. ವೇದಿಕೆಯಲ್ಲಿ ಸನ್ಮಾನಿತರಾದ ಚಿತ್ರೋದ್ಯಮಕ್ಕೆ ವಿಶಿಷ್ಟ ಸೇವೆ ಸಲ್ಲಿಸಿದ ೫೦ ಮಂದಿ ಗಣ್ಯರಲ್ಲದೆ ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷ ಭಕ್ತವತ್ಸಲ, ವೀರಪ್ಪ ಮೊಯಿಲಿ ಮತ್ತಿತರರನ್ನು ಕಾಣಬಹುದು.



(ಚಿತ್ರ ೫) 'ರಂಗನಾಯಕಿ' ಚಿತ್ರದಲ್ಲಿ ಆರತಿ, ಅಶೋಕ್ ಮತ್ತು ಮುಸುರಿ ಕೃಷ್ಣಮೂರ್ತಿ

ಈ ಚಿತ್ರ ಉಂಟುಮಾಡಿದ ವಿವಾದ, ಆರ್ಥಿಕ ನಷ್ಟ ಪುಟ್ಟಣ್ಣನವರನ್ನು ಜರ್ಝರಿತಗೊಳಿಸಿತು. ಸುಮಾರು ಒಂದೂವರೆ ವರ್ಷ ಕಾಲ ನಿರ್ದೇಶನಕ್ಕೆ ಚಿತ್ರಗಳಿಲ್ಲದೆ ತೀವ್ರ ತಳಮಳವನ್ನು ಅನುಭವಿಸಿದರು. ಈ ದಿನಗಳಲ್ಲೇ ಅಂದರೆ ಜನವರಿ ೧೯೮೨ರ ಮೂರನೆಯ ವಾರ ಅವರ ನಿರ್ದೇಶನದ 'ಬೆಳ್ಳಿ ಮೋಡ' ನಗರದ ಎರಡು ಚಿತ್ರಮಂದಿರಗಳಲ್ಲಿ ಮರು ಬಿಡುಗಡೆಗೊಂಡು ಯಶಸ್ವಿಯಾಗಿ ಪ್ರದರ್ಶನವಾಯಿತು. ಸಾಕಷ್ಟು ಯಶಸ್ವಿ ಚಿತ್ರಗಳನ್ನು ಕೊಟ್ಟಿದ್ದರೂ ಉದ್ಯಮದಲ್ಲಿದ್ದ ಇಂಥ ಪ್ರತಿಭಾವಂತರ ಬಗ್ಗೆ ಅನಾದರ, ಚಿತ್ರರಂಗ ಕಾಲಾಂತರದಲ್ಲಿ ಎಷ್ಟೊಂದು ವ್ಯಾವಹಾರಿಕವಾಗುತ್ತಿದೆ ಅನ್ನುವುದಕ್ಕೆ ಸೂಚನೆಯಾಗಿದೆ. ಸರಿಸುಮಾರು ಇದೇ ದಿನಗಳಲ್ಲಿಯೇ ಕಲ್ಯಾಣ್‌ಕುಮಾರ್‌ರವರು ಕೂಡ ಬೆಳ್ಳಿತೆರೆಯಿಂದ ಮರೆಯಾಗಿ ಐದು ವರ್ಷಗಳಾಗಿತ್ತು. ಅವರು ಆಗಾಗ್ಯೆ ಮದರಾಸಿನಿಂದ ಕರ್ನಾಟಕಕ್ಕೆ ಬಂದು ಉತ್ತರ ಕರ್ನಾಟಕದ ಬೇರೆ ಬೇರೆ ಕಂಪನಿಗಳ ನಾಟಕಗಳಲ್ಲಿ ಅಭಿನಯಿಸುತ್ತಾ ಜೀವನ ನಿರ್ವಹಣೆ ಮಾಡುತ್ತಿದ್ದರು. ಚಿತ್ರಗಳ ಸಂಖ್ಯೆ ಹೆಚ್ಚುತ್ತಾ ಬಂದರೂ ಪ್ರದರ್ಶನದ ವ್ಯಾಪ್ತಿ ವಿಸ್ತಾರಗೊಂಡರೂ ಇಂಥ ಅನಿಶ್ಚಿತ ಸ್ಥಿತಿ ಆಗಿಂದಾಗ್ಗೆ ಕಾಣಿಸಿಕೊಂಡಿದೆ.

ಉದ್ಯಮದ ಇಂಥ ಪರಿಳಿತಗಳ ನಡುವೆ ೮೦ರ ದಶಕ ಆರಂಭವಾದದ್ದು ಭಾರತೀಯ ವಾಕ್ಚಿತ್ರದ ಸುವರ್ಣ ಮಹೋತ್ಸವದಿಂದ. ಈ ಐತಿಹಾಸಿಕ ಸಂಭ್ರಮವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಇವುಗಳಲ್ಲಿ ನಾಲ್ಕು ಸಮಾರಂಭಗಳು ದಕ್ಷಿಣ ಭಾರತದಲ್ಲಿ ನಡೆದವು. ಅಖಿಲಭಾರತ ಮಟ್ಟದ ಮೊದಲ ಸಮಾರಂಭ ಮದರಾಸಿನಲ್ಲಿ ಪ್ರಾರಂಭವಾಗಿ ನಂತರ ಹೈದರಾಬಾದ್, ಬೆಂಗಳೂರು, ಎರ್ನಾಕುಲಂಗಳಲ್ಲಿ ನಡೆದು ೧೯೮೧ರ ಡಿಸೆಂಬರ್ ೫ ರಂದು ಪ್ರಧಾನಮಂತ್ರಿ ಇಂದಿರಾಗಾಂಧಿಯವರ ಅಧ್ಯಕ್ಷತೆಯಲ್ಲಿ ಮುಂಬೈನ ಟಾಟಾ ಭವನದಲ್ಲಿ ಮುಕ್ತಾಯವಾಯಿತು. ಮದರಾಸಿನಲ್ಲಿ ನಡೆದ ಸಮಾರಂಭದಲ್ಲಿ ದಕ್ಷಿಣ ಭಾರತೀಯ ಚಿತ್ರೋದ್ಯಮದ ಹಿರಿಯರಿಗೆ ಪದಕಗಳನ್ನಿತ್ತು ಗೌರವಿಸಲಾಯಿತು. ಈ ವೇದಿಕೆಯಲ್ಲಿ ಕನ್ನಡ ಚಿತ್ರರಂಗದ ಎಂ.ವಿ.ರಾಜಮ್ಮ, ಬಿ.ಜಯಮ್ಮ, ಹೊನ್ನಪ್ಪ ಭಾಗವತರ್, ಡಿ.ಕೆಂಪರಾಜ ಅರಸು ಅವರುಗಳನ್ನು ಗೌರವಿಸಲಾಯಿತು. ಚೌಡಯ್ಯ ಹಾಲ್‌ನಲ್ಲಿ ನಡೆದ ಬೆಂಗಳೂರಿನ ಸಮಾರಂಭವನ್ನು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ವಿಭಿನ್ನವಾಗಿ ಸಂಯೋಜಿಸಿತ್ತು. ಮುಖ್ಯಮಂತ್ರಿ ಗುಂಡೂರಾಯರ ಅಧ್ಯಕ್ಷತೆಯಲ್ಲಿ ನಡೆದ ಅದ್ದೂರಿ ಸಮಾರಂಭದಲ್ಲಿ ಹಳೆಯ ತಲೆಮಾರಿನ ೫೦ ಮಂದಿ ಸಾಹಿತಿ, ಉದ್ಯಮಿ, ತಂತ್ರಜ್ಞ, ಕಲಾವಿದರನ್ನು ರಜತ ಪದಕದೊಂದಿಗೆ ಶಾಲು ಹೊದಿಸಿ ಸನ್ಮಾನಿಸಲಾಯಿತು.

ಎಂದಿನಂತೆ ಈ ದಿನಗಳಲ್ಲೂ ಕಲಾವಿದರು ಮತ್ತು ತಂತ್ರಜ್ಞರಲ್ಲಿ ಅನಿಶ್ಚಿತ, ಅಸ್ಥಿರ ಭಾವನೆ ಒಂದು ಸಾಮಾನ್ಯ ಸಂಗತಿ ಎಂಬಂತಾಗಿತ್ತು. ಜಿಲ್ಲಾವಾರು ಹಂಚಿಕೆ ವ್ಯವಸ್ಥೆ ಜಾರಿಗೆ ಬಂದರೂ ಕನ್ನಡ ಚಿತ್ರರಂಗದ ಆರ್ಥಿಕ ಸ್ಥಿತಿ ಸಾಕಷ್ಟು ಸುಧಾರಿಸಿದ್ದರೂ ಪುಟ್ಟಣ್ಣ ಕಣಗಾಲ್, ಕಲ್ಯಾಣ್‌ಕುಮಾರ್‌ರಂತಹ ಪ್ರತಿಭಾವಂತರು ಮನೆಯಲ್ಲಿ ಕುಳಿತಿರಬೇಕಾದ ಸ್ಥಿತಿ ಇತ್ತು. 'ರಂಗನಾಯಕಿ'ಯನ್ನು ರೂಪಿಸುವಾಗ ಪುಟ್ಟಣ್ಣನವರಲ್ಲಿ ಅಪಾರ ಉತ್ಸಾಹ ಇತ್ತು. ಈ ಚಿತ್ರದ ನಿರ್ಮಾಣದ ವಿವಿಧ ಹಂತದ ಸುದ್ದಿಗಳನ್ನು ಚಿತ್ರರಸಿಕರು ಕುತೂಹಲದಿಂದ ಗಮನಿಸುತ್ತಿದ್ದರು. ಕರ್ನಾಟಕದ ವೃತ್ತಿ ರಂಗಭೂಮಿಯ ಒಳಲೋಕವನ್ನು ಪರಿಚಯಿಸಲು ಪುಟ್ಟಣ್ಣ 'ರಂಗನಾಯಕಿ'ಯಲ್ಲಿ ಪಟ್ಟ ಶ್ರಮ ಸಾರ್ಥಕವಾಗಿತ್ತು. ರಾಜ್ಯ ಸರ್ಕಾರದ ೧೯೮೦-೮೧ರ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ ಗಳಿಸಿದ್ದಲ್ಲದೆ ಅತ್ಯಂತ ಉತ್ತಮವಾಗಿ ಅಭಿನಯಿಸಿದ್ದ ಆರತಿ ಶ್ರೇಷ್ಠ ನಟಿಯಾಗಿ, ರಾಮಕೃಷ್ಣ ಅತ್ಯುತ್ತಮ ಪೋಷಕ ನಟರಾಗಿ ಪುರಸ್ಕೃತರಾದರು. ಈ ಸದುದ್ದೇಶದ ಚಿತ್ರ ನಿರ್ಮಿಸಿದ ಅಶೋಕ್ ಆರ್ಟ್ಸ್ ಸಂಸ್ಥೆಯನ್ನು ಪ್ರೋತ್ಸಾಹಿಸಲು ಸರ್ಕಾರ ೧೯೮೧ರ ಸೆಪ್ಟೆಂಬರ್ ೨೫ ರಿಂದ ಜಾರಿಗೆ ಬರುವಂತೆ ಒಂದು ವರ್ಷಕಾಲದ ಸಂಪೂರ್ಣ ಮನೋರಂಜನೆ ತೆರಿಗೆ ವಿನಾಯಿತಿ ನೀಡಿತು.

'ರಂಗನಾಯಕಿ' ಚಿತ್ರದಲ್ಲಿ 'ಮಂದಾರ ಪುಷ್ಪವು ನೀನು...' ಸೊಗಸಾದ ಗೀತೆ. ಜಯಚಂದ್ರನ್-ಎಸ್.ಪಿ.ಶೈಲಜಾರ ಕಂಠವೂ ಚೆನ್ನ. 'ಜಯ ಜಗದಂಬೆ...' ಗೀತೆ ಕೆಲವೆಡೆ ಹಿಂದೂಸ್ಥಾನಿ ಅನ್ನಿಸುತ್ತದೆ. ತಬಲ ತರಂಗ್, ಮೃದಂಗ ಎರಡರ ಮಿಡಿತವೂ ಇದ್ದು, ವಿಶಿಷ್ಟ ವಾತಾವರಣ ಮೂಡಿಸುತ್ತದೆ. ಎಂ.ರಂಗರಾವ್ ಅವರ ಪ್ರತಿಭೆ ಇಲ್ಲಿ ಮಿಂಚಿದೆ. ಚಿತ್ರಕ್ಕೆ ಪುಟ್ಟಣ್ಣನವರು ತುಂಬಲು ಬಯಸಿದ ಶ್ರೀಮಂತಿಕೆಯ ಸಲುವಾಗಿ ಅಳತೆ ಮೀರಿ ಖರ್ಚು ಮಾಡಬೇಕಾಯಿತು. ವ್ಯವಹಾರ ತಿಳಿಯದ 'ರಂಗನಾಯಕಿ' ಚಿತ್ರದ ನಿರ್ಮಾಪಕರಾದ ತಿಮ್ಮಣ್ಣನವರು ಅಪಾರ ನಷ್ಟಕ್ಕೆ ಒಳಗಾದರು. ಆ ಕೊರಗಿನಲ್ಲೇ ಅವರು ನಿಧನರಾದರೆಂಬುದು ವಿಷಾದದ ಸಂಗತಿ. ಇಷ್ಟೆಲ್ಲದರ ನಡುವೆ

೧೯೮೨ರ ಕೊನೆಯ ವೇಳೆಗೆ ಜಿಲ್ಲಾವಾರು ಹಂಚಿಕಾ ವ್ಯವಸ್ಥೆ ಒಂದು ನಿರ್ದಿಷ್ಟ ರೂಪ ಪಡೆದುಕೊಳ್ಳತೊಡಗಿತು. ಮೂರು ನಾಲ್ಕು ಜಿಲ್ಲೆಗಳು ಅಥವಾ ಎರಡು ಜಿಲ್ಲೆಗಳು ಸೇರಿ ಒಂದೊಂದು ಹಂಚಿಕಾ ಘಟಕವಾಯಿತು. ಕ್ರಮೇಣ ಜಿಲ್ಲೆಯೇ ಒಂದೊಂದು ಪ್ರತ್ಯೇಕ ಘಟಕವಾಗುತ್ತಾ ಬಂದಿತು. ಅದಾಗಲೇ ಕೆಲವಾರು ಜಿಲ್ಲೆಗಳಲ್ಲಿ ಉದ್ಯಮದ ಹಲವು ಬಲಾಢ್ಯ ಹಂಚಿಕಾ ಕಚೇರಿಗಳ ಉಪಹಂಚಿಕಾ ಸಂಸ್ಥೆಗಳು ಅಸ್ತಿತ್ವದಲ್ಲಿದ್ದು ಕ್ರಮೇಣ ಇವುಗಳ ಸಂಖ್ಯೆ ಹೆಚ್ಚಾಗುತ್ತಾ ಬಂತು. ಈ ಬೆಳವಣಿಗೆಯಿಂದ ಪ್ರಸಿದ್ಧ ನಿರ್ಮಾಪಕರು ಅಥವಾ ಬಹುತಾರಾಗಣದ ಚಿತ್ರಗಳ ನಿರ್ಮಾಪಕರು ಚಿತ್ರದ ತಯಾರಿಕೆಯನ್ನು ಆರಂಭಿಸುವ ಮೊದಲೇ ಆಯಾ ಪ್ರದೇಶಕ್ಕೆ ಹಂಚಿಕೆಗೆ ಕೊಡುವ ಕರಾರು ಮಾಡಿಕೊಂಡು ಮುಂಗಡ ಹಣ ಪಡೆಯುವ ಪದ್ಧತಿ ಆಂಶಿಕವಾದರೂ ರೂಢಿಗೆ ಬಂತು. ಈ ಹೊಸ ವ್ಯವಸ್ಥೆ ನಿರ್ಮಾಪಕರಲ್ಲಿ ಹೊಸ ಚಿತ್ರಗಳನ್ನು ಆರಂಭಿಸುವ ಉತ್ಸಾಹ ಮೂಡಿಸಿತಲ್ಲದೆ, ಈ ದಶಕದಲ್ಲಿ ಒಟ್ಟು ೬೩೩ಕ್ಕೂ ಹೆಚ್ಚು ಚಿತ್ರಗಳ ಹುಲುಸು ಬೆಳೆ ಬೆಳೆಯಿತು. ಆದರೆ ಈ ಬೆಳೆಯಲ್ಲಿ ಸುಮಾರು ೩೮೦ಕ್ಕೂ ಹೆಚ್ಚು ರೀಮೇಕ್ ಚಿತ್ರಗಳಿದ್ದವು. ಹಿಂದಿನ ಎರಡು ದಶಕದ ರೀಮೇಕ್ ಚಿತ್ರಗಳ ನಿರ್ಮಾಣ ಎಷ್ಟು ಆಗಿದೆಯೋ ಅಷ್ಟು ಇದೊಂದೇ ದಶಕದಲ್ಲಿ ಆಗಿತ್ತು.

ರೀಮೇಕ್ ಚಿತ್ರಗಳ ಹೆಚ್ಚಳದ ಜೊತೆಗೆ ವರ್ಣ ಚಿತ್ರಗಳ ಸಂಖ್ಯೆ ಕೂಡ ವೃದ್ಧಿಸುತ್ತಾ ಬಂತು. ಕಪ್ಪು-ಬಿಳುಪು ಚಿತ್ರಗಳನ್ನು ನೋಡುವ ಪ್ರೇಕ್ಷಕರ ಆಸಕ್ತಿ ೧೯೭೦ರ ದಶಕದ



(ಚಿತ್ರ ೬) 'ಗ್ರಹಣ' ಚಿತ್ರದಲ್ಲಿ ಶೋಭಾ ಜೋಶಿ, ಮಲ್ಲಿಕಾ ಐಸಾಕ್

ಪೂರ್ವಾರ್ಧದಲ್ಲಿ ಕುಗ್ಗುತ್ತಾ ಬಂದು ೧೯೮೦ರ ದಶಕದ ಆರಂಭದಲ್ಲಿ ಸಂಪೂರ್ಣವಾಗಿ ನಿಂತಂತಾಯಿತು. ಹೊಸ ಬಗೆಯ ಚಿಂತನೆ, ಗಂಭೀರ ಚಿತ್ರಗಳ ಸಂಖ್ಯೆ ಗಮನಾರ್ಹವಾಗಿ ಕಡಿಮೆಯಾಯಿತು. 'ಗ್ರಹಣ' ನಾಗಾಭರಣರ ಪ್ರಥಮ ಚಿತ್ರ. ಯುವಕ ಕೋಡಳ್ಳಿ ಶಿವರಾಂ ಸಾಹಸದ ನಿರ್ಮಾಣ. ಇದರ ವಸ್ತು ಅಸ್ಪೃಶ್ಯರು ಒಂದು ದಿನದ ಮಟ್ಟಿಗೆ ಸ್ಪೃಶ್ಯರಾಗುವ ಆಚರಣೆಯನ್ನು ಕುರಿತದ್ದು. ಜಾತಿ ಪದ್ಧತಿ ಹೇಗೆ ಹೀನಾಯವಾದ ನಡಾವಳಿಗಳನ್ನು ಹುಟ್ಟುಹಾಕಿ ಮುಗ್ಧ ಹಾಗೂ ತುಳಿತಕ್ಕೊಳಗಾದ ಜನತೆಯನ್ನು ತನ್ನ ಕಪಿಮುಷ್ಟಿಯಲ್ಲಿ ಬಂಧಿಸಿ ಸಮಾಜದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿಯನ್ನು ಉಂಟುಮಾಡುತ್ತಿದೆ ಎಂಬುದನ್ನು ಅತ್ಯಂತ ಪ್ರಭಾವಶಾಲಿಯಾಗಿ ನಿರೂಪಿಸುತ್ತದೆ.

'ಗ್ರಹಣ'ದ ನಿರೂಪಣೆ ಹೊಸತನದಿಂದ ಕೂಡಿದ್ದುದಲ್ಲದೆ ಕನ್ನಡ ತೆರೆಗೆ ಹೊಸದೆನ್ನಿಸಿತು. ವಿಜಯಭಾಸ್ಕರ್‌ರ ಸಂಗೀತ ಕಥೆಗೆ ಜೀವ ತುಂಬುವಷ್ಟು ಪರಿಣಾಮಕಾರಿಯಾಗಿದ್ದು ಚಿತ್ರಕ್ಕೆ ಹಲವಾರು ಪ್ರಶಸ್ತಿಗಳನ್ನು ಗಳಿಸಿಕೊಡಲು ನೆರವಾಯಿತು. ಕೇಂದ್ರದ ರಾಷ್ಟ್ರೀಯ ಏಕತಾ ವಸ್ತುವಿನ ಚಿತ್ರವೆಂದು ರಜತಕಮಲ, ಅತ್ಯುತ್ತಮ ಚಿತ್ರನಾಟಕಕ್ಕಾಗಿ ಟಿ.ಎಸ್.ರಂಗಾ ಮತ್ತು ಟಿ.ಎಸ್.ನಾಗಾಭರಣರಿಗೆ ರಜತ ಪದಕ ಪ್ರಶಸ್ತಿ ಲಭ್ಯವಾಯಿತು. ರಾಜ್ಯದ ೧೯೭೮-೭೯ರ ಪ್ರಥಮ ಅತ್ಯುತ್ತಮ ಚಿತ್ರ ಪುರಸ್ಕಾರ ಹಾಗೂ ಅತ್ಯುತ್ತಮ ಕಪ್ಪು-ಬಿಳುಪು ಛಾಯಾಗ್ರಹಣಕ್ಕಾಗಿ ಎಸ್.ರಾಮಚಂದ್ರ



(ಚಿತ್ರ ೭) 'ಮೂರು ದಾರಿಗಳು' ಚಿತ್ರದಲ್ಲಿ ಸಿ.ವಿಶ್ವನಾಥರಾವ್, ಶ್ರೀರಂಗ ಕೃಷ್ಣಸ್ವಾಮಿ

ಪ್ರಶಸ್ತಿ ಪಡೆದರು. ರಾಜ್ಯ ಪ್ರಶಸ್ತಿಗಳನ್ನು ಪಡೆದ ಎರಡು ವರ್ಷಗಳ ನಂತರ ಈ ಚಿತ್ರ ತೆರೆಗೆ ಬಂತು. ಈ ಚಿತ್ರಕ್ಕೆ ಸಹನಿರ್ದೇಶಕರಾಗಿ ಗಿರೀಶ್ ಕಾಸರವಳ್ಳಿ ದುಡಿದಿದ್ದರು. ಜರ್ಮನಿಯ ಮ್ಯಾನ್‌ಹೀಮ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಚಿತ್ರೋತ್ಸವದಲ್ಲಿ ಪ್ರದರ್ಶನವಾಗಿ 'ದ ಮ್ಯಾನ್‌ಹೀಮ್ ಕ್ರಿಟಿಕ್ಸ್ ಪೂಲ್' ಪ್ರಶಸ್ತಿ ಗಳಿಸಿತು. ಇಂಡಿಯನ್ ಪನೋರಮಕ್ಕೆ ಆಯ್ಕೆಯಾಗಿತ್ತಲ್ಲದೆ, ಚೀನಾ ಅಂತರರಾಷ್ಟ್ರೀಯ ಚಿತ್ರೋತ್ಸವ ಹಾಗೂ ಇನ್ನಿತರ ಚಿತ್ರೋತ್ಸವಗಳಿಗೆ ಆಯ್ಕೆಯಾಗಿತ್ತು.

ಸಾಕ್ಷ್ಯಚಿತ್ರದ ಶೈಲಿಯನ್ನು ಅಳವಡಿಸಿಕೊಂಡ ಕಥಾಚಿತ್ರದ ವಿಶಿಷ್ಟ ಪ್ರಥಮ ಪ್ರಯೋಗ ಈ ಚಿತ್ರದ್ದು. ನಾಗಾಭರಣ ಎರಡು ತಲೆಮಾರಿನ ಶ್ರೇಷ್ಠ ನಿರ್ದೇಶಕರೊಂದಿಗೆ ಕೆಲಸ ಮಾಡಿರುವ ಅನುಭವಿ. ಜಿ.ವಿ.ಅಯ್ಯರ್ ಅವರೊಂದಿಗೆ 'ಆದಿಶಂಕರಾಚಾರ್ಯ'ದಲ್ಲಿ ನಟ 'ಮೃತ್ಯು'ವಾಗಿ ಹಾಗೂ ಸಹನಿರ್ದೇಶಕರಾಗಿ ದುಡಿದರು. ೧೯೭೧ ರಲ್ಲಿ 'ಕಾಡು' ಮೂಲಕ ಚಿತ್ರರಂಗಕ್ಕೆ ಕಾಲಿಟ್ಟಾಗ ಬಿ.ವಿ.ಕಾರಂತರೊಂದಿಗೆ ಉಡುಪು ವಿನ್ಯಾಸ, ಕಲಾನಿರ್ದೇಶನ ಹಾಗೂ ನಿರ್ದೇಶನದಲ್ಲಿ ಸಹಾಯಕರಾಗಿದ್ದರು. ಇದರ ನಂತರ ಹಿಂದಿ, ಕನ್ನಡದಲ್ಲಿ ತಯಾರಾದ 'ತಬ್ಬಲಿಯು ನೀನಾದೆ ಮಗನೆ', 'ಒಂದಾನೊಂದು ಕಾಲದಲ್ಲಿ', 'ಚೋಮನ ದುಡಿ'ಯಂಥ ವಿಶಿಷ್ಟ ಚಿತ್ರಗಳಿಗೆ ನಿರ್ಮಾಣದ ಎಲ್ಲಾ ವಿಭಾಗಗಳಲ್ಲಿಯೂ ಕೆಲಸ ಮಾಡಿ ಅನುಭವ ಗಳಿಸಿದರು. ಇದರೊಂದಿಗೆ ಹಿಂದೂಸ್ತಾನಿ ಸಂಗೀತ ಹಾಗೂ ಸಂಕಲನ ತಂತ್ರವನ್ನು ಅಭ್ಯಾಸ ಮಾಡಿದರು. ಗಿರೀಶ್ ಕಾರ್ನಾಡ್ ಹಾಗೂ ಬಿ.ವಿ.ಕಾರಂತರೊಂದಿಗೆ ರಂಗಭೂಮಿ ಮತ್ತು ಚಿತ್ರರಂಗ ಎರಡೂ ಮಾಧ್ಯಮಗಳಲ್ಲಿ ದುಡಿಯುತ್ತಾ ಬಹಳ ಬೇಗ ತಮ್ಮದೇ ಶೈಲಿಯನ್ನು ಗುರುತಿಸಿಕೊಂಡು ನಂತರದ ವರ್ಷಗಳಲ್ಲಿ ಗಂಭೀರವಾದ ಪ್ರಯೋಗಗಳಲ್ಲಿ ತೊಡಗಿಸಿಕೊಂಡರು.

'ಮೂರು ದಾರಿಗಳು' ಯಶವಂತ ಚಿತ್ತಾಲರ ಕಾದಂಬರಿಯನ್ನು ಆಧರಿಸಿತ್ತು. ವಿದ್ಯಾರ್ಥಿನಿಯೊಬ್ಬಳ ಮೇಲೆ ವೃಥಾ ಅಪವಾದಗಳು ಬರುತ್ತವೆ. ಅಲ್ಲಿಂದಾಚೆಗೆ ಆಕೆಯ ಬಗ್ಗೆ ಹಲವರು, ಆಕೆಯನ್ನು ಮದುವೆಯಾಗಬೇಕಿದ್ದ ಹುಡುಗ ಕೂಡಾ ತಪ್ಪಾಗಿದ್ದರೂ ಕ್ಷಮಿಸಿ ಸ್ವೀಕರಿಸುತ್ತೇನೆ ಎಂಬಂಥ ಔದಾರ್ಯ ತೋರಿದಾಗ ಆಕೆ ತನ್ನನ್ನು ತಾನೇ ಕೊಂದುಕೊಳ್ಳುವ ಮೂಲಕ ವ್ಯವಸ್ಥೆಯನ್ನು ಪ್ರತಿಭಟಿಸುತ್ತಾಳೆ, ಒಂದು ಕಥೆಯಾಗಿಬಿಡುತ್ತಾಳೆ. ನೋಟಕನಿಗೆ ತಲ್ಲಣ, ಶಾಕ್. ನಿಧಾನವಾಗಿ ಆ ಪ್ರಸಂಗವನ್ನು ಕುರಿತು ಯೋಚಿಸುವ ಹಾಗೆ ಮಾಡುವ ತಿರುವುಗಳನ್ನುಳ್ಳ ನಿರೂಪಣೆಯಿತ್ತು. 'ಮೂರು ದಾರಿಗಳು' ಅತ್ಯುತ್ತಮ ಕಪ್ಪು-ಬಿಳುಪು ಛಾಯಾಗ್ರಹಣಕ್ಕಾಗಿ ೧೯೮೧ರ ಕೇಂದ್ರ ಹಾಗೂ ರಾಜ್ಯ ಪ್ರಶಸ್ತಿಗಳನ್ನು ಎಸ್.ಆರ್.ಭಟ್ ಅವರಿಗೆ ತಂದುಕೊಟ್ಟಿತು. ಇದರೊಂದಿಗೆ ರಾಜ್ಯ ಸರ್ಕಾರದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಹಾಗೂ ಅತ್ಯುತ್ತಮ ಸಂಕಲನಕ್ಕೆ ಸುರೇಶ್ ಅರಸ್‌ರವರಿಗೆ ಪ್ರಶಸ್ತಿ ಲಭ್ಯವಾಯಿತು.

ಇಲ್ಲಿಂದಾಚೆಗೆ ಆರಂಭವಾದದ್ದು ಕನಸುಗಳಿಗೆ ಕನಸು ಒತ್ತಾಸೆಯೆಂಬಂಥ ವರ್ಣಮಯ ಕಾಲ. ವರ್ಣ ಚಿತ್ರಗಳ ನಿರ್ಮಾಣ ೧೯೭೦ ರಿಂದಲೇ ಹೆಚ್ಚುತ್ತಾ ಬಂದಿದ್ದರೂ ಬಣ್ಣದ ನೆಗೆಟಿವ್‌ನ ಸಾಧ್ಯತೆಗಳನ್ನು ಬಳಸಿಕೊಳ್ಳುವ ಪ್ರಯತ್ನಗಳಾದದ್ದು



(ಚಿತ್ರ ೮) 'ಕುರುಬರ ಲಕ್ಕ' ಚಿತ್ರದಲ್ಲಿ ಚಿತ್ರಾ ಮತ್ತು ಶಶಿಕಲಾ

೮೦ರ ದಶಕದ ಆರಂಭದ ದಿನಗಳಲ್ಲಿ. ಛಾಯಾಗ್ರಾಹಕರಿಗೆ ಈ ದಿನಗಳು ಅತ್ಯಂತ ಸವಾಲಿನವಾಗಿದ್ದವು. ವರ್ಣ ಚಿತ್ರಗಳ ನಿರ್ಮಾಣ ಪ್ರಾರಂಭವಾಗಿ ಆಗಲೇ ನಾಲ್ಕು ವರ್ಷಗಳಾಗಿದ್ದರೂ 'ಅಂತ', 'ರಂಗನಾಯಕಿ' ಚಿತ್ರಗಳು ತಮ್ಮ ವೈಶಿಷ್ಟ್ಯ, ಯಶಸ್ಸಿನೊಂದಿಗೆ ವರ್ಣಕ್ಕೆ ಒಗ್ಗುತ್ತಿದ್ದ ಪ್ರೇಕ್ಷಕರ ಕಣ್ಣು, ಮನಸ್ಸು, ಹೃದಯಗಳ ವರ್ಣಸ್ವೀಕರಣ ಗ್ರಹಿಕೆಗೆ ಸ್ಥಿರತೆ ತಂದುಕೊಡುವುದರಲ್ಲಿ ವಿಶೇಷ ಪ್ರಭಾವ ಬೀರಿರುವುದು ಕಾಣುತ್ತದೆ.

೧೯೭೦ರ ದಶಕದಲ್ಲಿ ವರ್ಣ ಚಿತ್ರಗಳ ಬೆಳವಣಿಗೆಯೊಂದಿಗೆ ಉತ್ತಮ ಚಿತ್ರಗಳ ಸಂಖ್ಯೆ ಕೂಡ ಪ್ರತಿ ವರ್ಷವೂ ಕಡಿಮೆಯಾಗುತ್ತಾ ಬಂತು. ಆದರೂ ಕಳೆದ ದಶಕದ ಚಿತ್ರಗಳು ಒಂದು ವರ್ಗದಲ್ಲಿ ಬೆಳೆಸಿದ್ದ ಉತ್ತಮ ಅಭಿರುಚಿ ಕೆಲವು ಚಿತ್ರಗಳ ಯಶಸ್ಸನ್ನು ರೂಪಿಸಿದಂತಿದೆ. ೧೯೮೧ ರಲ್ಲಿ ಹೊಸ ಅಲೆಯ ಲಕ್ಷಣದ ೫ ಚಿತ್ರಗಳು ತೆರೆಕಂಡರೂ ಅದೇ ವರ್ಷ ನಿರ್ಮಾಣವಾದದ್ದು ಎರಡು ಮಾತ್ರ. ಉಳಿದ ಮೂರು ಚಿತ್ರಗಳು ಹಿಂದಿನ ಎರಡು ವರ್ಷಗಳಲ್ಲಿ ನಿರ್ಮಾಣವಾಗಿದ್ದಂಥವು. 'ಬರ' ಹಾಗೂ 'ಅಮರ ಮಧುರ ಪ್ರೇಮ' ಯಾವುದೇ ಮಸಾಲೆ ಇಲ್ಲದೆಯೂ ಜನರ ಗಮನ ಸೆಳೆದದ್ದು ಮತ್ತು ಇದೇ ವೇಳೆಯಲ್ಲಿ ರಾಜಕುಮಾರ್ ಹಾಗೂ ಪುಟ್ಟಣ್ಣ ಕಣಗಾಲರ ಹಳೆಯ ಚಿತ್ರಗಳು ಮರುಪ್ರದರ್ಶನದಲ್ಲಿ ಯಶಸ್ವಿಯಾದದ್ದು ಪ್ರೇಕ್ಷಕರು ಉತ್ತಮ ಚಿತ್ರಗಳ ನಿರೀಕ್ಷೆಯಲ್ಲಿ ಇದ್ದರೆಂಬುದಕ್ಕೆ ಸಾಕ್ಷಿ.

ದೊಡ್ಡ ಉದ್ದೇಶ, ಉತ್ಸಾಹಗಳಿಂದ ಆರಂಭವಾದ ಹೊಸ ಅಲೆ ಚಿತ್ರ ಪರಂಪರೆ ಕ್ರಮೇಣ ನಶಿಸಿದ್ದಕ್ಕೆ ಇರುವ ಕಾರಣಗಳಲ್ಲಿ ಮುಖ್ಯವಾದದ್ದು ನಿರ್ಮಾಣ ವೆಚ್ಚದ ವಿಪರೀತ ಹೆಚ್ಚಳ. ಒಂದು ಅಂದಾಜಿನ ಪ್ರಕಾರ ಈ ಏರಿಕೆ ವರ್ಷಕ್ಕೆ ಶೇಕಡಾ ೨೫ ರಷ್ಟು. ಅಂದರೆ ಹಿಂದಿನ ವರ್ಷ ೧೦ ಲಕ್ಷ ರೂಪಾಯಿ ವೆಚ್ಚದಲ್ಲಿ ಒಂದು ಚಿತ್ರ ತಯಾರಾಗಿದ್ದರೆ

ಅದೇ ಚಿತ್ರಕ್ಕೆ ಈ ವರ್ಷ ಹನ್ನೆರಡೂವರೆ ಲಕ್ಷ ರೂಪಾಯಿಗಳು ಬೇಕಾಗುತ್ತವೆ. ಇದಕ್ಕೆ ದೇಶದ ಆರ್ಥಿಕ ಪರಿಸ್ಥಿತಿ ಮತ್ತು ಹಣದುಬ್ಬರದ ಸನ್ನಿವೇಶ ಕಾರಣ. ಇನ್ನೊಂದು ಕಾರಣ ಕಲಾವಿದರು ಮತ್ತು ತಂತ್ರಜ್ಞರ ಸಂಭಾವನೆ. ಕಲಾವಿದರೇ ಆಗಲಿ, ತಂತ್ರಜ್ಞರೇ ಆಗಲಿ ಒಮ್ಮೆ ಯಾವುದೋ ಒಂದು ಕಾರಣಕ್ಕೆ ಹೆಚ್ಚಿನ ಸಂಭಾವನೆಯನ್ನು ತೆಗೆದುಕೊಂಡರೆ ಅದನ್ನೇ ಸ್ಥಿರಗೊಳಿಸಿಕೊಳ್ಳುತ್ತಾರೆ.

ಇದೆಲ್ಲವರೊಂದಿಗೆ ಕೆಲವು ವರ್ಷಗಳಿಂದ ಸರ್ಕಾರದ ರಿಯಾಯಿತಿ ನೀತಿ ಮತ್ತು ಕಡಿಮೆ ಬಜೆಟ್‌ನಲ್ಲಿ ನಿರ್ಮಿಸಬಹುದೆಂಬ ಆಕರ್ಷಣೆಗೆ ಇತರ ಭಾಷೆಗಳ ನಿರ್ಮಾಪಕರು ಕನ್ನಡ ಚಿತ್ರರಂಗಕ್ಕೆ ಬರುವುದು ಹೆಚ್ಚಿತು. ಇವರು ಕನ್ನಡ ಚಿತ್ರ ತಯಾರಿಕೆಯನ್ನು ಒಂದು ಜೂಜಿನಂತೆ ಭಾವಿಸಿದರು. ಬಂದರೆ ಲಾಭ, ಹೋದರೆ ತಮ್ಮ ಸಂಸ್ಥೆಯ ಲೆಕ್ಕ ಪತ್ರಗಳಲ್ಲಿ ೧೦-೧೨ ಲಕ್ಷ ರೂ.ಗಳ ನಷ್ಟ ತೋರಿಸಬಹುದೆಂಬ ಉದ್ದೇಶ.

ಉದ್ಯಮದ ಆಕರ್ಷಣೆ, ಶಕ್ತಿ, ವ್ಯಾಪ್ತಿ ಹೆಚ್ಚುತ್ತಿದ್ದಂತೆ ಅರ್ಪಣಾ ಮನೋಭಾವ, ಪ್ರಯೋಗಶೀಲತೆ, ಹೊಸತನ ಕಡಿಮೆಯಾಗುತ್ತ ಬಂತು. ಇತರ ಭಾಷೆಯ ಹೆಸರಾಂತ ನಿರ್ದೇಶಕರು, ಹೊಸಬರು ಉದ್ಯಮಕ್ಕೆ ಬರುತ್ತಿದ್ದರಾದರೂ ಯಾರಿಂದಲೂ ಉತ್ತಮ ಅಥವಾ ಶ್ರೇಷ್ಠ ಕೃತಿಗಳ ಸೃಷ್ಟಿ ಆಗಲಿಲ್ಲ. ವರ್ಷದಿಂದ ವರ್ಷಕ್ಕೆ ಅಗತ್ಯ ಮೀರಿ ಹೆಚ್ಚುತ್ತಿದ್ದ ಚಿತ್ರಗಳ ಸಂಖ್ಯೆಯಲ್ಲಿ 'ಇದ್ದುದರಲ್ಲಿ ಉತ್ತಮ' ಎಂದು ಗುರುತಿಸಬೇಕಾದ ವಾತಾವರಣ ಇತ್ತು.


(ಚಿತ್ರ ೯) 'ರಾಘವೇಂದ್ರ ವೈಭವ' ಚಿತ್ರದಲ್ಲಿ ಶ್ರೀನಾಥ್

ತೆಲುಗಿನ ಅತ್ಯಂತ ಯಶಸ್ವಿ ನಿರ್ದೇಶಕರೆಂದು ಖ್ಯಾತಿ ಗಳಿಸಿರುವ ದಾಸರಿ ನಾರಾಯಣರಾವ್ ೧೯೮೧ರಲ್ಲಿ ತಮ್ಮ ಪ್ರಥಮ ಕನ್ನಡ ಚಿತ್ರ 'ಸಪ್ನಾ' ಹಾಗೂ ೧೯೮೪ರಲ್ಲಿ 'ಪೊಲೀಸ್ ಪಾಪಣ್ಣ' ಚಿತ್ರಗಳನ್ನು ನಿರ್ದೇಶಿಸಿದ್ದರೂ ಇವು ಅವರದೇ ತೆಲುಗು ಚಿತ್ರದ ಅವತರಣಿಕೆಗಳು. ಹಾಗೆಯೇ 'ಮನೆ ಮನೆ ಕಥೆ'ಯ ಮೂಲಕ ಕನ್ನಡಕ್ಕೆ ಬಂದ ರಾಜಾಚಂದ್ರ ತಂದ ಕಥೆ ಕೂಡ ಎರವಲಿನದೆ. ಕೆ.ಬಾಲಚಂದರ್ ಕನ್ನಡದಲ್ಲಿ ಐದು ಚಿತ್ರಗಳನ್ನು ನಿರ್ದೇಶಿಸಿದ್ದು ಇವು ಕೂಡ ತಮಿಳಿನಲ್ಲಿ ಅವರೇ ನಿರ್ಮಾಣ, ನಿರ್ದೇಶನ ಮಾಡಿದ ಚಿತ್ರಗಳು. ಒಂದು ಸಮಾಧಾನವೆಂದರೆ ಉತ್ತಮ ಕಥಾವಸ್ತು ಇದ್ದು ಕೆಲವು ಬದಲಾವಣೆಗಳೊಂದಿಗೆ ಈ ಚಿತ್ರಗಳು ರೂಪುಗೊಂಡಿವೆ. ತಾಂತ್ರಿಕವಾಗಿ ಚೊಕ್ಕತನ ಹಾಗೂ ಸಿನಿಮಾ ಭಾಷೆಯ ಪ್ರಬುದ್ಧ ನಿರ್ವಹಣೆ ಇದ್ದುದರಿಂದ ಮಾಧ್ಯಮದ ಬಗ್ಗೆ ಹೊಸಬರಿಗೆ ಅಷ್ಟಿಷ್ಟು ಅರಿವು ಉಂಟುಮಾಡುವಲ್ಲಿ ಈ ಚಿತ್ರಗಳು ಸಹಕಾರಿಯಾಗಿವೆ. ಹಾಗೆಯೇ ಪ್ರೇಕ್ಷಕರಿಗೆ ಉತ್ತಮ ಚಿತ್ರ ನೋಡಿದ ತೃಪ್ತಿ ಕೊಡುವಲ್ಲೂ ಸಫಲವಾಗಿವೆ.

ಕನ್ನಡ ಚಿತ್ರರಂಗಕ್ಕೆ ಬರುವ ಹೊಸಬರಲ್ಲಿ ಸಾಹಸ ಪ್ರವೃತ್ತಿ ಕಡಿಮೆ ಎಂಬ ಮಾತನ್ನು ಸುಲಭವಾಗಿ ಹೇಳುವುದರ ಜೊತೆಗೆ ಅಂಥ ಸಾಹಸಕ್ಕೆ ಅಗತ್ಯವಾದ ವಾತಾವರಣ ಇತ್ತೆ ಎಂಬುದನ್ನು ಕೂಡ ಯೋಚಿಸಬೇಕಾಗುತ್ತದೆ. ೧೯೮೧ ರಲ್ಲಿ ತೆರೆಕಂಡ 'ಕುರುಬರ ಲಕ್ಕ' ಕಪ್ಪು-ಬಿಳುಪು ಚಿತ್ರದ ಮೂಲಕ ನಟನಾಗಿಯೇ ಬೆಳೆಯಬೇಕೆಂದು ಚಿತ್ರರಂಗಕ್ಕೆ ಬಂದ ಡಿ.ರಾಜೇಂದ್ರಬಾಬು ಅನಿವಾರ್ಯವಾಗಿ ನಿರ್ದೇಶಕರಾದರು. ಇಂಥ ವೈರುಧ್ಯದ ವಾತಾವರಣ ಚಿತ್ರರಂಗದ್ದು. ಆದರೆ ತಾವು ಸಾಧಿಸುವುದೇನಿದ್ದರೂ ಇದೇ ರಂಗದಲ್ಲಿ ಎಂದು ಸಂಕಲ್ಪ ಮಾಡಿದ ಕೆಲವರು ತಮ್ಮ ಕ್ರಿಯಾಶಕ್ತಿಯನ್ನು ಚಲನಚಿತ್ರದ ಬೇರೆ ಬೇರೆ ವಿಭಾಗಗಳಲ್ಲೂ ನಿರೂಪಿಸಿದ್ದಾರೆ. ಇಂಥವರಲ್ಲಿ ಡಿ.ರಾಜೇಂದ್ರಬಾಬು ಮುಖ್ಯರು. ಇವರು ಚಿತ್ರರಂಗಕ್ಕೆ ಕಾಲಿಟ್ಟ ಕೆಲವೇ ವರ್ಷಗಳಲ್ಲಿ ಯಶಸ್ವಿ ನಿರ್ದೇಶಕರೆನಿಸಿಕೊಂಡು ಎರಡು ದಶಕಗಳಿಂದ ಕಾರ್ಯಶೀಲರಾಗಿರುವುದೇ ಇದಕ್ಕೆ ಉದಾಹರಣೆ. 'ಕುರುಬರ ಲಕ್ಕ' ಜೀತದಾಳೊಬ್ಬನ ಸುತ್ತ ಹೆಣೆದ ಕಥೆ. ಆಲನಹಳ್ಳಿಕೃಷ್ಣ ಅವರ 'ಕುರುಬರ ಲಕ್ಕನೂ ಎಲಿಜಬೆತ್ ರಾಣಿಯೂ' ಸಣ್ಣ ಕಥೆಯನ್ನು ಎಚ್.ಎಂ.ಕೃಷ್ಣಮೂರ್ತಿ ನಿರ್ದೇಶಿಸಿದ್ದರು. ಹುಣಸೂರು ಕೃಷ್ಣಮೂರ್ತಿಯವರೇ ಚಿತ್ರಕಥೆ ಬರೆದರೂ ಆ ಬಗೆಯ ಕಥೆಯನ್ನು ಕಟ್ಟುವುದು ಅವರ ಜಾಯಮಾನಕ್ಕೆ ಒಗ್ಗಿದಂತಿಲ್ಲ. ಶ್ಯಾಮಸುಂದರ ಕುಲಕರ್ಣಿಯವರ ಗೀತೆಗೆ ಸುಖದೇವ್ ನೀಡಿದ್ದ ಸಂಗೀತ ಗಮನ ಸೆಳೆವ ಹಾಗಿತ್ತು. ಎಲ್ಲ ಹೊಸಬರ ಪ್ರಯತ್ನ. ಆದರೆ ಒಂದು ಒಳ್ಳೆಯ ಕಥೆ ಸರಿಯಾಗಿ ತಲುಪಲಿಲ್ಲ.

'ಶ್ರೀ ರಾಘವೇಂದ್ರ ವೈಭವ' ಮೂಲಕ ನಿರ್ದೇಶಕರಾದ ಪತ್ರಕರ್ತ ಬಾಬುಕೃಷ್ಣಮೂರ್ತಿ ಮತ್ತೆ ಅವಕಾಶಗಳಿಗಾಗಿ ಪ್ರಯತ್ನಿಸದೆ ಈ ರಂಗದಿಂದ ದೂರ ಉಳಿದರು. 'ಶ್ರೀ ರಾಘವೇಂದ್ರ ವೈಭವ' ಚಿತ್ರಕ್ಕೆ ಶ್ರೀನಾಥ್‌ರ ಅಭಿನಯವೊಂದೇ ಬಂಡವಾಳ. ಚಿತ್ರಕಥೆಯನ್ನು ಹೊಂದಿಸುವಾಗ ಸರ್ವ ಜನಪ್ರಿಯವಾಗುವ ಮನೋಧರ್ಮ ಇರಲಿಲ್ಲವೆನ್ನಿಸಿತ್ತು. ಯಾವುದೇ ತತ್ವಕ್ಕೆ ಸರಳವಾಗಿ ಜನರನ್ನು ತಲುಪುವುದೇ ಉದ್ದೇಶವಾಗಿರುತ್ತದೆ. ಎಲ್ಲ ತತ್ವವೂ ಜನಹಿತ ಕಾಯಲೆಂದೇ ಇರುತ್ತದೆ ಎಂಬುದು ಸರಳ ಸತ್ಯ. ಈ ಚಿತ್ರ ಕೆಲವೊಮ್ಮೆ 'ಪವಾಡ'ವನ್ನು ವೈಭವಿಸಲು ಹೊರಟದ್ದು, ಬ್ಯಾಲೆಯೊಂದು ತೂರಿಕೊಂಡದ್ದು, ಆಡುಮಾತಿನಲ್ಲಿ ಗ್ರಾಂಥಿಕದ ಕಲಬೆರಕೆಯಾದದ್ದು ಹೀಗೆ ಅನೇಕ ಆಕ್ಷೇಪಗಳನ್ನು ಎದುರಿಸಿತು. ಅದೇನೇ ಇದ್ದರು ಮುಂಬೈನಿಂದ ಬಂದ ಧಾರಾಳಿ ನಿರ್ಮಾಪಕರು ಹಾಗೂ ತನ್ನ ಮಟ್ಟಿಗೆ ಶ್ರದ್ಧೆ, ಪ್ರಾಮಾಣಿಕತೆಯಿಂದಲೇ ಮಾಧ್ಯಮವನ್ನು ದುಡಿಸಿಕೊಳ್ಳಲು ಪ್ರಯತ್ನಿಸಿದ್ದ ಬಾಬುಕೃಷ್ಣಮೂರ್ತಿಯವರ ಶ್ರಮ ಶ್ಲಾಘನೀಯವೆ. ಚಿತ್ರದ ಎಲ್ಲ ವಿಭಾಗದಲ್ಲೂ ಪ್ರತಿಭಾವಂತರು ದುಡಿದಿದ್ದರು. ಗೀತೆ-ಗಾಯನಗಳಂತೂ ಅದ್ವಿತೀಯವೆನಿಸಿದವು. ಶ್ರೀನಾಥ್‌ಗೆ ೧೯೮೧ರ ಶ್ರೇಷ್ಠ ನಟ ಪ್ರಶಸ್ತಿ ದೊರಕಿಸಿತು. ವೀಣಾ ಚಿಟ್ಟಿಬಾಬು ಸಂಗೀತ ನೀಡಿದ್ದರು.

'ಅನುಪಮಾ' ಮುಂದೆ ಉತ್ತಮ ನಿರ್ದೇಶಕರೆಂದು ಜನಪ್ರಿಯರಾದ ರೇಣುಕಾಶರ್ಮರ ಮೊದಲ ಚಿತ್ರ. ಈ ಚಿತ್ರದ ಮೂಲಕ ಕನ್ನಡ ಚಿತ್ರರಂಗಕ್ಕೆ ಪರಿಚಿತರಾದ ತಮಿಳು ನಟಿ ಮಾಧವಿ, 'ಜೀವನ ಚೈತ್ರ'ದವರೆಗೆ ಸುಮಾರು ೧೮ ವರ್ಷಗಳ ಕಾಲ ಬೇಡಿಕೆಯಲ್ಲಿದ್ದರು. 'ಅನುಪಮಾ' ಚಿತ್ರದಲ್ಲಿ 'ಒಲುಮೆ ಪೂಜೆಗೆಂದೆ...' ಯುಗಳಗೀತೆ, 'ಅನುಪಮ ಚೆಲುವು...' ಸೋಲೋ ಗೀತೆ ಉತ್ತಮವಾಗಿದೆ. ಸಂಗೀತ-ಸಾಹಿತ್ಯಗಳು ಗೀತೆಗಳಲ್ಲಿ ತುಂಬ ಸೊಗಸಾಗಿ ಅಳವಡಿಕೆಯಾಗಿತ್ತು. ಹಾಡಿಕೆಯೂ ಚೆನ್ನಾಗಿತ್ತು. 'ನನ್ನ ಮೊರೆಯು ಕೇಳದೇನೋ ಶ್ರೀಹರಿ...' ಗೀತೆಯು ಹಳೆಯ ರೀತಿಯ ಪ್ರಾರ್ಥನೆ. ಆದರ ಅರ್ಥ ಭಾವಗಳು ಸೊಗಸಾಗಿ ಪ್ರತಿಬಿಂಬಿಸಿದವು. ಮೊದಲ ತರಗತಿಯ ವಾದ್ಯವೃಂದ ಮತ್ತು ರೈಲುಬಂಡಿಯ ವೇಗದ 'ಲಯ'ವನ್ನು ಸಂಗೀತ-ಸ್ವರಗಳ ಮೂಲಕ ಸಂಯೋಜಿಸಿದ್ದ ಗೀತೆ 'ಬೆರ್ತಾಳೆ ಕನಸಿನ ರಾಣಿ...' ಬಂಗಾಳಿ-ಹಿಂದಿ ಜನಪ್ರಿಯ ಗೀತೆಗಳ ಹೋಲಿಕೆ ಎನ್ನಿಸಿದರೂ ಅದು ಚೆನ್ನಾಗಿತ್ತು. ಅನಂತ್‌ನಾಗ್, ಮಾಧವಿ, ಬಾಲಕೃಷ್ಣ ಪಾತ್ರಗಳಿಗೆ ಜೀವ ತುಂಬಿದ್ದರು. ಉತ್ತರ ಕರ್ನಾಟಕ ರಂಗಭೂಮಿಯ ಜನಪ್ರಿಯ ನಾಟಕ ಸಂಸ್ಥೆ ಕೆ.ಬಿ.ಆರ್. ಡ್ರಾಮಾ ಕಂಪನಿಯ ಮುಖ್ಯರಲ್ಲೊಬ್ಬರಾದ ಚಿಂದೋಡಿ ಬಂಗಾರೇಶ್ 'ರೈತನ ಮಕ್ಕಳು' ಚಿತ್ರವನ್ನು ನಿರ್ದೇಶಿಸಿದರು. ಇದು ವೃತ್ತಿ ರಂಗಭೂಮಿ ಹಾಗೂ ಕನ್ನಡ ಚಿತ್ರರಂಗ ಸಂಪರ್ಕದ ಆರಂಭದ ದಿನಗಳನ್ನು ನೆನಪಿಸುವ ಪ್ರಯತ್ನವಾಯಿತು. ಸಹ ನಿರ್ದೇಶಕರಾಗಿ ಉದ್ಯಮ ಪ್ರವೇಶಿಸಿದ ಇವರು ಈ ಚಿತ್ರ ತೆರೆಕಂಡ ೧೪ ವರ್ಷಗಳ ನಂತರ ೧೯೯೫ರಲ್ಲಿ 'ಗಾನಯೋಗಿ ಪಂಚಾಕ್ಷರ ಗವಾಯಿ'ಯಂಥ ಉತ್ತಮ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು.

'ಆಲೆಮನೆ' ಭಿನ್ನ ಕಥೆ ಹಾಗೂ ಕೌತುಕಮಯ ಅಂಶಗಳ ವಿಭಿನ್ನ ಪ್ರಯತ್ನವಾಗಿ ಗಮನ ಸೆಳೆಯಿತು. ಹಾಗೆ ನೋಡಿದರೆ ಈ ಚಿತ್ರದಲ್ಲಿ 'ಅಪರಿಚಿತ' ಚಿತ್ರದ ಪಾತ್ರ, ಸನ್ನಿವೇಶಗಳನ್ನೇ ಅನುಕರಿಸಲಾಗಿದೆ. ಈ ಚಿತ್ರದ ನಿರ್ದೇಶಕ ಮೋಹನ್ ಕುಮಾರ್ ಬೆಂಗಳೂರಿನ ಬಿ.ಇ.ಎಲ್. ಕಾರ್ಖಾನೆಯ ಕಾರ್ಮಿಕರು. ನಾಟಕ ಬರೆದು, ಆಡಿಸುವ ಹವ್ಯಾಸಿ ಕಲಾವಿದರಾದ ಇವರು ತಮ್ಮ 'ಕೋಲ್ಬೇಟೆ' ನಾಟಕದಿಂದ ಸ್ಫೂರ್ತಿ ಪಡೆದು ಗೆಳೆಯರ ಜತೆಗೂಡಿ ಈ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು. ೨೨ ದಿನಗಳಲ್ಲಿ ತಯಾರಾದ ಈ ಚಿತ್ರದ ಹಂಚಿಕೆಗೆ ಒಂದು ವರ್ಷ ಕಾಲ ಹಿಡಿಯಿತು. ಕೆಲವಾರು


(ಚಿತ್ರ ೧೦) 'ನಂಬರ್ ಐದೂ ಎಕ್ಕ' ಚಿತ್ರದಲ್ಲಿ ಮುಸುರಿ ಕೃಷ್ಣಮೂರ್ತಿ


(ಚಿತ್ರ ೧೧) 'ಪಲ್ಲವಿ ಅನುಪಲ್ಲವಿ' ಚಿತ್ರದಲ್ಲಿ ಲಕ್ಷ್ಮೀ ಮತ್ತು ಅನಿಲ್ ಕಪೂರ್

ದೃಶ್ಯಗಳು ಹೊಸತನದಿಂದ ಕೂಡಿದ್ದು ಪತ್ತೇದಾರಿ ಕಥೆಯನ್ನು ನಿರೂಪಿಸುವುದರಲ್ಲಿ ವಿಭಿನ್ನತೆ ತೋರಿದ್ದ ಮೋಹನ್ ಕುಮಾರ್ ಮತ್ತೆ ಚಿತ್ರ ನಿರ್ದೇಶಿಸುವ ಸಾಹಸ ಮಾಡಲಿಲ್ಲ. ಆದರೆ 'ಅಲೆಮನೆ' ತೆರೆಕಂಡ ನಾಲ್ಕು ವರ್ಷಗಳ ನಂತರ ಎನ್.ಲಕ್ಷ್ಮೀನಾರಾಯಣ್ ನಿರ್ದೇಶನದ 'ಬೆಟ್ಟದ ಹೂವು' ಚಿತ್ರದಲ್ಲಿ ಪುನೀತ್ ತಂದೆಯ ಪಾತ್ರದಲ್ಲಿ ಕಾಣಿಸಿಕೊಂಡು ಉತ್ತಮ ಅಭಿನಯ ನೀಡಿದರು. 'ಅಲೆಮನೆ' ಚಿತ್ರದಲ್ಲಿ ಗೌರಿಶಂಕರ್‌ರವರ ಛಾಯಾಗ್ರಹಣ ಉತ್ತಮವಾಗಿದ್ದು 'ನಮ್ಮೂರ ಮಂದಾರ ಹೂವೇ' ಹಾಡು ಅತ್ಯಂತ ಜನಪ್ರಿಯವಾಯಿತು.

ಗಾಯಕರೂ ಆಗಿದ್ದ ಮುಸುರಿ ಕೃಷ್ಣಮೂರ್ತಿ ವೃತ್ತಿರಂಗಭೂಮಿಯ ಹಿನ್ನೆಲೆಯಿಂದ ಬಂದವರು. ಚಿತ್ರರಂಗಕ್ಕೆ ಕಾಲಿಟ್ಟ ಒಂದೆರಡು ವರ್ಷದಲ್ಲೇ ತಮ್ಮ ಮಾತಿನ ಶೈಲಿ, ವಿಚಿತ್ರ ಮ್ಯಾನರಿಸಂಗಳಿಂದ ಒಂದು ವರ್ಗದ ತಾರೆಯಾಗಿ ಬೆಳಗಿದವರು. 'ನಂಬರ್ ಐದೂ ಎಕ್ಕ' ಮುಸುರಿ ಕೃಷ್ಣಮೂರ್ತಿಯವರು ತಾವು ಜನಪ್ರಿಯತೆಯ ಉತ್ತುಂಗದಲ್ಲಿದ್ದಾಗ ನಿರ್ಮಿಸಿದ ಚಿತ್ರ. ಇದು ಬಿಡುಗಡೆಯಾದಾಗ ಥಿಯೇಟರ್‌ಗಳ ತುಂಬ ಪ್ರೌಢಶಾಲೆ, ಪಿ.ಯು.ಸಿ. ಓದುವ ಹುಡುಗರು ತುಂಬಿಕೊಂಡಿದ್ದರು. ಶಿವಕುಮಾರ್ ನಿರ್ದೇಶಿಸಿದ ಈ ಚಿತ್ರದಲ್ಲಿ ಎಂ.ರಂಗರಾವ್ ಸಂಗೀತದಲ್ಲಿ ಮುಸುರಿಯವರು ಹಾಡಿದ 'ನಿಲ್ಲೆ ನಿಲ್ಲೆ ನೀಲವೇಣಿ ನಾಗವೇಣಿ' ಹಾಡು ಅತ್ಯಂತ ಜನಪ್ರಿಯವಾಯಿತು. ಇದರ ಹಾಡುಗಳಲ್ಲೂ ಅದೇ ಹಾಸ್ಯ ತುಂಬಲು ಪ್ರಯತ್ನಿಸಿದ್ದಾರೆ. ಆದರೆ ಆ ಎಫೆಕ್ಟ್‌ಗೆ 'ಅಬ್ಬರ'ವನ್ನು ಆರಿಸಿಕೊಂಡದ್ದು ಸರಿಯಾಗಲಿಲ್ಲ. ಇಲ್ಲಿ ಬರುವ ಗೀತಗಾಯನಕ್ಕೆ ಹಾಸ್ಯದ ಒತ್ತು ಇಲ್ಲದಿದ್ದರೆ ಇನ್ನೂ ಚೆನ್ನಾಗಿರುತ್ತಿದ್ದವು. ಶ್ಯಾಮಸುಂದರ ಕುಲಕರ್ಣಿಯವರ ಗೀತರಚನೆಯಲ್ಲೇ ಇಂಥ ಕಾಮಿಕ್ ಎಫೆಕ್ಟ್ಸ್‌ಗೆ ಅವಕಾಶವಿಲ್ಲವಾದ್ದರಿಂದ ಆ ಗೀತೆ ಚೆನ್ನಾಗಿದೆ ಎಂದು ವಿಮರ್ಶೆಗಳು ಹೇಳಿದವು. ಮುಸುರಿಯವರು ಚಿತ್ರದಲ್ಲಿ ಕಂಪನಿ ನಾಟಕ ಶೈಲಿಯ ಹಾಸ್ಯಕ್ಕೆ ಮೊರೆಹೋಗಿದ್ದು ಹಾಗೂ ಸಡಿಲ ಚಿತ್ರಕಥೆಯಿಂದಾಗಿ ಚಿತ್ರ ನಿರೀಕ್ಷಿಸಿದಷ್ಟು ಯಶಸ್ವಿಯಾಗಲಿಲ್ಲ. ಮುಸುರಿಯವರ ಮಕ್ಕಳು ತಂದೆಯ ನೆರಳಿನಲ್ಲಿ ಚಿತ್ರರಂಗ ಪ್ರವೇಶಿಸಲು ಸಾಧ್ಯ ಮಾಡಿದ್ದಷ್ಟೇ ಇದರ ಸಾಧನೆ.

ಈ ಅವಧಿಯ ಹೊಸಬರ ಪ್ರಯತ್ನಗಳನ್ನು ಉಲ್ಲೇಖಿಸುವಾಗ ೧೯೮೩ ರಲ್ಲಿ ತೆರೆಕಂಡ 'ಪಲ್ಲವಿ ಅನುಪಲ್ಲವಿ' ಮುಖ್ಯವಾಗಿ ಕಾಣುತ್ತದೆ. ನಂತರದ ವರ್ಷಗಳಲ್ಲಿ ರಾಷ್ಟ್ರದ ಪ್ರತಿಭಾವಂತ ನಿರ್ದೇಶಕರಲ್ಲೊಬ್ಬರಾಗಿ ಬೆಳೆದು ನಿಂತ ತಮಿಳಿನ ಮಣಿರತ್ನಂ ಕನ್ನಡದಲ್ಲಿ ನಿರ್ದೇಶಿಸಿದ ಏಕೈಕ ಚಿತ್ರ. ಗಂಡು-ಹೆಣ್ಣುಗಳ ನಡುವಿನ ಪ್ರೀತಿ, ಆಕರ್ಷಣೆಯ ಒಂದು ಸುಸಂಬದ್ಧ ವಿಶ್ಲೇಷಣೆ ಈ ಚಿತ್ರದಲ್ಲಿದೆ. ಪ್ರೀತಿ ಮತ್ತು ವಿಶ್ವಾಸ ಬೇರೆ ಬೇರೆಯವು. ಆದರೆ ಪ್ರೀತಿಯ ಹುಚ್ಚಿನ ಹೊಳೆಯಲ್ಲಿ ತೇಲುವ ಯುವಕರು ಇದನ್ನು ಅರ್ಥಮಾಡಿಕೊಳ್ಳದೆ ಎಡವುತ್ತಾರೆ ಎಂಬುದನ್ನು ಹೇಳಲು ಮಣಿರತ್ನಂ ಪ್ರಯತ್ನಿಸಿದ್ದಾರೆ. ಯಾವುದೇ ಮಸಾಲೆ ಸೂತ್ರಕ್ಕೆ ಮಣಿಯದೆ ಸರಳ ಹಾಗೂ ನೇರವಾದ ನಿರೂಪಣೆಯನ್ನು ಅನುಸರಿಸಿದ ಮಣಿರತ್ನಂ ಹೊಸಶೈಲಿಯ ಹರಿಕಾರರಾಗಿ ಪ್ರಕಟವಾದರು. ಎಲ್ಲಿಯೂ ಎಡವದೆ, ತಡವರಿಸದೆ ಸರಾಗವಾಗಿ ಓಡುವ ಕಥೆಯಲ್ಲಿ ಪ್ರತಿಯೊಂದು ಪಾತ್ರವೂ ಜೀವಂತವಾಗಿತ್ತು. ಇಷ್ಟೇ ಅಲ್ಲ, ತಾವೊಬ್ಬ ಭವಿಷ್ಯದ ಅನಿವಾರ್ಯ ನಿರ್ದೇಶಕ ಎಂಬುದಕ್ಕೆ ಸಾಕಷ್ಟು ಸಮರ್ಥನೆಗಳನ್ನು ಮಣಿರತ್ನಂ ಈ ಚಿತ್ರದಲ್ಲಿ ಒದಗಿಸಿದ್ದರು.

'ಪಲ್ಲವಿ ಅನುಪಲ್ಲವಿ' ಮುಂದಿನ ಕೆಲವೇ ವರ್ಷಗಳಲ್ಲಿ ಹಿಂದಿಯ ಜನಪ್ರಿಯ ನಾಯಕ ನಟನಾಗಿ ಬೆಳೆದ ಅನಿಲ್ ಕಪೂರ್ ಅವರ ಮೊದಲ ಚಿತ್ರ. ಲಕ್ಷ್ಮೀ ಗಂಭೀರವಾಗಿ ಅಭಿನಯಿಸಿ ಪಾತ್ರಕ್ಕೆ ಜೀವ ತುಂಬಿದ್ದರು. ಬಾಲು ಮಹೇಂದ್ರ ಸನ್ನಿವೇಶದ ಭಾವಕ್ಕೆ ಪುಷ್ಟಿ ಕೊಡುವ ಮೋಹಕ ಛಾಯಾಗ್ರಹಣ ನೀಡಿದ್ದರು. ಆರ್.ಎನ್.ಜಯಗೋಪಾಲ್ ಅರ್ಥಪೂರ್ಣವಾದ ಸಂಭಾಷಣೆ ನೀಡಿದ್ದರು. ಅವರು ಮುಖ್ಯವಾಗಿ ಚಿತ್ರಿಕೆಗಳ ಆಳತೆಗೆ ಹೊಂದುವಷ್ಟೇ ಸಂಭಾಷಣೆ ನೀಡಿ ವಿಶಿಷ್ಟವಾದ ಮಿತ-ಹಿತ ಸಾಧಿಸಿದ್ದರು. ಇಳಯರಾಜ ಅವರ ಪರಿಣಾಮಕಾರಿ ಸಂಗೀತದಲ್ಲಿ ಎರಡು ಹಾಡುಗಳು ಮಧುರವಾಗಿದ್ದು ಮೆಲುಕು ಹಾಕುವಂತಿದ್ದವು.

ಕನ್ನಡ ತೆರೆಗೆ ಅತ್ಯಂತ ಹೊಸದೆನಿಸಿದ ಈ ಚಿತ್ರಕ್ಕೆ ೧೯೮೨-೮೩ರ ಸಾಲಿನ ಮೂರು ರಾಜ್ಯ ಪ್ರಶಸ್ತಿ ಲಭಿಸಿತು. ಅತ್ಯುತ್ತಮ ಚಿತ್ರಕಥೆ, ಸಂಭಾಷಣೆ, ಛಾಯಾಗ್ರಹಣ ವಿಭಾಗಗಳು ಅವುಗಳ ಶ್ರೇಷ್ಠತೆಗಾಗಿ ಸರ್ಕಾರದಿಂದ ಪುರಸ್ಕೃತಗೊಂಡವು. ಈ ಚಿತ್ರದ ನಂತರ ಮಣಿರತ್ನಂ ಮತ್ತೆಂದೂ ಕನ್ನಡ ಚಿತ್ರವನ್ನು ನಿರ್ದೇಶಿಸಲಿಲ್ಲ. ಕನ್ನಡ ಒಂದು ಚಿಮ್ಮುಹಲಗೆಯಾಯಿತು, ಅಷ್ಟೇ.

ಮೇಲೆ ಪ್ರಸ್ತಾಪಿಸಿದ ಚಿತ್ರಗಳು ವೈವಿಧ್ಯಮಯ ಅಭಿರುಚಿಯ ಕೆಲವು ಮಾದರಿಗಳಾಗಿ ತೋರುತ್ತವೆ. ಈ ಚಿತ್ರಗಳನ್ನು ನಿರ್ದೇಶಿಸಿರುವವರು ಹೊಸಬರೆಂಬುದು ಗಮನಾರ್ಹ. ಇತರರಿಗಿಂತ ಭಿನ್ನವಾಗಿ ಹಣ ಗಳಿಕೆಯನ್ನೇ ಏಕೈಕ ಗುರಿಯನ್ನಾಗಿಸಿಕೊಂಡವರ ಸಂಖ್ಯೆ ಮೇಲುಗೈ ಸಾಧಿಸಿರುವುದು ಕಾಣುತ್ತದೆ. ವಾಸ್ತವವಾಗಿ ಚಲನಚಿತ್ರದ ಆರಂಭದ ದಿನಗಳಲ್ಲಿ ಕನ್ನಡ ಚಿತ್ರಗಳಿಗೆ ಮಾರುಕಟ್ಟೆಯೇ ಇರಲಿಲ್ಲ. ಪರಿಸ್ಥಿತಿ ಸುಧಾರಿಸಿದ್ದು ೧೯೮೦ರ ನಂತರವೇ. ತುಮಕೂರು ಒಂದು ಜಿಲ್ಲಾ ಕೇಂದ್ರವಾಗಿದ್ದರೂ ಅಲ್ಲಿ ಒಂದು ಚಿತ್ರಕ್ಕೆ ೧೦೦೦ ರೂಪಾಯಿ ಪಾಲು ಬರುವುದೂ ಕಷ್ಟವಾಗಿತ್ತು. ಆದರೆ ೧೯೮೦ರ ನಂತರದಲ್ಲಿ ಸಾಧಾರಣ ಯಶಸ್ಸಿನ ಚಿತ್ರವೊಂದು ಒಂದು ಲಕ್ಷ ರೂಪಾಯಿಯನ್ನು ನಿರೀಕ್ಷಿಸುವಂತೆ ಮಾಡಿತು. ೮೦ರ ದಶಕದ ಕೊನೆಯವರೆಗೂ ಮುಂಬೈ ಕರ್ನಾಟಕ ಪ್ರದೇಶದಿಂದ ಕನ್ನಡ ಚಿತ್ರಗಳ ಗಳಿಕೆ ೨೦-೩೦ ಸಾವಿರ ರೂಪಾಯಿಗಳನ್ನು ಮೀರುತ್ತಿರಲಿಲ್ಲ. ೧೯೮೩ ರಲ್ಲಿ ಅಲ್ಲಿಂದ ೨-೩ ಲಕ್ಷ ರೂಪಾಯಿಯಷ್ಟು ಗಳಿಕೆ ಸಾಧ್ಯವಾಗತೊಡಗಿತು. ಇಂಥ ಬೆಳವಣಿಗೆಗೆ ಕೆಲವು ಜನಪ್ರಿಯ ಚಿತ್ರಗಳ ಜೊತೆಗೆ ಜಿಲ್ಲಾವಾರು ಹಂಚಿಕಾ ವ್ಯವಸ್ಥೆಯೂ ಕಾರಣವಾಯಿತು. ೧೯೮೧ ರಲ್ಲಿ 'ತಾಯಿಯ ಮಡಿಲಲ್ಲಿ' ಹಾಗೂ 'ಗುರು ಶಿಷ್ಯರು' ಜಿಲ್ಲಾವಾರು ಹಂಚಿಕಾ ವ್ಯವಸ್ಥೆಯ ಸಂಪೂರ್ಣ ಲಾಭವನ್ನು ಪಡೆದುಕೊಂಡ ಎರಡು ಚಿತ್ರಗಳು.

'ಗುರು ಶಿಷ್ಯರು' ಕನ್ನಡ ಚಿತ್ರಗಳಲ್ಲಿ ಪೌರಾಣಿಕ ವಾತಾವರಣ ಮರೆಯಾಗಿದ್ದ ಸಂದರ್ಭದಲ್ಲಿ ದ್ವಾರಕೀಶ್ ನಿರ್ಮಿಸಿದ ಅದ್ದೂರಿ ಚಿತ್ರ. ಬಣ್ಣಬಣ್ಣದ ಬಟ್ಟೆಗಳು, ಅದ್ದೂರಿ ಸೆಟ್‌ಗಳು, ನಿರ್ಮಾಣ ಶ್ರೀಮಂತಿಕೆಯಿಂದ ಈ ಚಿತ್ರ ಯಶಸ್ಸು ಕಂಡಿತು.



(ಚಿತ್ರ ೧೨) 'ಗುರು ಶಿಷ್ಯರು' ಚಿತ್ರದಲ್ಲಿ ರಾಜಾನಂದ್, ಸತ್ಯಭಾಮಾ ಮತ್ತು ದ್ವಾರಕೀಶ್

ಇದು ತೆಲುಗಿನ 'ಪರಮಾನಂದಯ್ಯ ಶಿಷ್ಯುಲ ಕಥ' ಚಿತ್ರದಿಂದ ಸ್ಫೂರ್ತಿ ಪಡೆದಿದ್ದರೂ ಬೇರೆಯೇ ಆಗಿ ಕಾಣುವಷ್ಟು ಭಿನ್ನವಾಗಿತ್ತು. ಇದರಿಂದಾಗಿಯೇ ಮತ್ತೆ ತೆಲುಗಿಗೆ ಡಬ್ ಆಗಿ ಅಲ್ಲೂ ಯಶಸ್ವಿಯಾಯಿತು. ಕನ್ನಡದಲ್ಲಿ ಕೂಡ 'ಭಕ್ತ ಸಿರಿಯಾಳ'ದ ನಂತರ ಬೇರ್‍ಯಾವ ಕನ್ನಡ ಚಿತ್ರವೂ ಮಾಡದಷ್ಟು ಕೋಲಾಹಲವನ್ನು ಈ ಚಿತ್ರ ಉಂಟುಮಾಡಿತು. ೧೮ ಪ್ರಿಂಟ್‌ಗಳ ಮೇಲೆ ಹಂಚಿಕೆದಾರರಿಗೆ ತೆರಿಗೆ ಇತ್ಯಾದಿ ಎಲ್ಲವನ್ನು ಕಳೆದು ಮೊದಲನೆಯ ವಾರ ಸಂದಾಯವಾದ ಹಣ ೪.೫೬ ಲಕ್ಷ ರೂಪಾಯಿ. ಬೆಂಗಳೂರು ನಗರದಿಂದ ದೊರೆತ ಪಾಲು ೨.೦೫ ಲಕ್ಷ. ಇವೆರಡೂ ಆಗ ಹೊಸ ದಾಖಲೆಗಳು. ಇದೇ ಅನುಪಾತದಲ್ಲಿ ಜಿಲ್ಲಾವಾರು ಹಂಚಿಕೆಯಲ್ಲಿ ಸಂಗ್ರಹವಾದ ವಾರ್ಷಿಕ ಗಳಿಕೆ ೩೦ ಲಕ್ಷ ರೂಪಾಯಿಗಳನ್ನು ದಾಟಿತು. ಇದು ಜಿಲ್ಲಾವಾರು ಹಂಚಿಕಾ ವ್ಯವಸ್ಥೆಯಲ್ಲಿ ಕನ್ನಡ ಚಿತ್ರವೊಂದು ಯಶಸ್ವಿಯಾದರೆ ಆಗಲಿರುವ ಲಾಭವನ್ನು ತೋರಿಸಿತಲ್ಲದೆ, ರಾಜ್ಯದಲ್ಲಿ ವಿಸ್ತಾರಗೊಂಡಿರುವ ಚಲನಚಿತ್ರ ಮಾರುಕಟ್ಟೆಯ ಚಿತ್ರವನ್ನು ಎದುರು ನಿಲ್ಲಿಸಿತು.

'ಗುರು ಶಿಷ್ಯರು' ತೆರೆಕಂಡ ನಂತರ ೧೯೮೨ರ ವೇಳೆಗೆ ದ್ವಾರಕೀಶ್ ಕನ್ನಡದ ಯಶಸ್ವಿ ನಿರ್ಮಾಪಕರೆನಿಸಿಕೊಂಡು ಸಂಭ್ರಮದಲ್ಲಿದ್ದರು. ಎಲ್ಲರೂ ಅವರತ್ತ ತಿರುಗಿ ನಿಲ್ಲುವಷ್ಟು ಸುದ್ದಿಯ ಕೇಂದ್ರವಾಗಿದ್ದರು. ಇಷ್ಟಾಗಿಯೂ ಅವರು ಅದುವರೆಗೆ ತಯಾರಿಸಿದ ಚಿತ್ರಗಳಲ್ಲಿ ಮೊದಲ ಬಾರಿಗೆ ಶತದಿನೋತ್ಸವ ಆಚರಿಸಿದ್ದು 'ಗುರು ಶಿಷ್ಯರು' ಚಿತ್ರವೇ. ನರ್ತಕಿ ಚಿತ್ರಮಂದಿರದಲ್ಲಿ ೧೧ನೆಯ ವಾರದಲ್ಲಿ ನಡೆಯುತ್ತಿದ್ದಾಗ ತೆಗೆದು ಕೆಂಪೇಗೌಡಕ್ಕೆ ಬದಲಾಯಿಸಲಾಯಿತು. ಇಲ್ಲಿ ೧೦೦ ದಿನ ಪೂರೈಸಿತು. ಈ ಚಿತ್ರದ ಶತದಿನೋತ್ಸವ ಸಮಾರಂಭದಲ್ಲಿ ಮುಖ್ಯಮಂತ್ರಿ ಗುಂಡೂರಾವ್ ಮುಖ್ಯ ಅತಿಥಿ. ಅಲ್ಲಿಗ ಒಂದೆರಡು ಬಾಂಬ್ ಬೆದರಿಕೆಯ ಅನಾಮಿಕ ಕರೆಗಳು ಬಂದು ಸ್ವಲ್ಪಕಾಲ ಆತಂಕದ ಪರಿಸ್ಥಿತಿ ನಿರ್ಮಾಣವಾಗಿತ್ತು. ಇದು ಕೂಡ ನಂತರ ಬಹಳ ದೊಡ್ಡ ಸುದ್ದಿಯಾಯಿತು.

'ಗುರು ಶಿಷ್ಯರು' ಚಿತ್ರಕ್ಕೆ ಸಂಬಂಧಿಸಿದಂಥ ಮತ್ತೊಂದು ಪ್ರಕರಣವನ್ನು ಇಲ್ಲಿ ಪ್ರಸ್ತಾಪಿಸಬೇಕಾಗುತ್ತದೆ. ಬೆಂಗಳೂರಿನ ಮಲ್ಲೇಶ್ವರದ ಸಂಪಿಗೆ ಚಿತ್ರಮಂದಿರದಲ್ಲಿ ಈ ಚಿತ್ರ ಪ್ರದರ್ಶನವಾಗುತ್ತಿತ್ತು. ನಿರುಪಮಾ ಆರ್ಟ್ಸ್ ಕಂಬೈನ್ಸ್ ಸಂಸ್ಥೆಯ 'ಭಾಗ್ಯವಂತ' ಚಿತ್ರದ ಬಿಡುಗಡೆಯ ಪತ್ರಿಕಾ ಜಾಹಿರಾತುಗಳಲ್ಲಿ ಸಂಪಿಗೆ ಚಿತ್ರಮಂದಿರದ ಹೆಸರನ್ನೂ ಪ್ರಕಟಿಸಲಾಗಿತ್ತು. 'ಗುರು ಶಿಷ್ಯರು' ವಿತರಕರಾದ ವೇದಪ್ರದ ಪಿಕ್ಚರ್ಸ್‌ನವರು ತಮ್ಮ ಚಿತ್ರದ ಗಳಿಕೆ ಉತ್ತಮವಾಗಿರುವುದರಿಂದ ತೆಗೆಯುವುದಿಲ್ಲ ಎಂದು ನಿರಾಕರಿಸಿದರು. ಇದರಿಂದ ಕೆರಳಿದ ಕೆಲವು ಮಂದಿ ಚಿತ್ರರಸಿಕರು ವೇದಪ್ರದ ಕಚೇರಿಯಿದ್ದ ಮಾಂಡ್ರೆ ಪಿಕ್ಚರ್ಸ್ ಹಂಚಿಕಾ ಕಚೇರಿಗೆ ನುಗ್ಗಿ ಹೂವಿನ ಕುಂಡಗಳನ್ನು ಒಡೆದು ಹಾಕಿದರು. ಚಿತ್ರದ ಬ್ಯಾನರ್‌ಗಳನ್ನು ಹರಿದು ಧ್ವಂಸ ಮಾಡಿದರು. ಸಂಪಿಗೆ ಚಿತ್ರಮಂದಿರ ಹಾಗೂ ಚಿತ್ರದ ಸ್ಥಿರ ಚಿತ್ರ ಛಾಯಾಗ್ರಹಣ ಮಾಡಿದ ಗಾಂಧಿನಗರದ ಪ್ರಗತಿ ಸ್ಟುಡಿಯೊದ ಗ್ಲಾಸುಗಳು ಕೂಡ ದಾಳಿಗೆ ಬಲಿಯಾದವು. ಈ ಘಟನೆ ಹಾಗೂ ಇದಕ್ಕೂ ಮುಂಚಿನ ಕೆಲವು ಪ್ರಸಂಗಗಳ ಬಗ್ಗೆ ದ್ವಾರಕೀಶ್ ಕೆಲವಾರು ಸಂದರ್ಭಗಳಲ್ಲಿ ಅಸಮಾಧಾನ ವ್ಯಕ್ತಪಡಿಸಿದ್ದರು. ಇದಾದ ಸುಮಾರು ನಾಲ್ಕು ತಿಂಗಳ ನಂತರ ಅವರ ಕುಟುಂಬವನ್ನು ಬೆಂಗಳೂರಿನ ತ್ಯಾಗರಾಜನಗರದಿಂದ ಮದರಾಸಿಗೆ ಸ್ಥಳಾಂತರಿಸಿದರು. ಈ ಬಗ್ಗೆ ಅವರು ಯಾರೋ ತಮ್ಮ ಮನೆಯ ಮೇಲೆ ಕಲ್ಲು ತೂರುವುದು, ದೂರವಾಣಿ ಮೂಲಕ ಬೆದರಿಸುವುದು ಮಾಡುತ್ತಿದ್ದಾರೆಂದೂ ಕುಟುಂಬದ ನೆಮ್ಮದಿಗಾಗಿ ಮದರಾಸಿಗೆ ಹೋಗುತ್ತಿರುವುದಾಗಿಯೂ ಹೇಳಿದರು.

ಇಂಥ ಕೆಲವು ಘಟನೆ, ಸುದ್ದಿ-ಗದ್ದಲಗಳ ನಡುವೆ ೧೯೮೧ ರಲ್ಲಿ ೬೫ ಚಿತ್ರಗಳು ತೆರೆಕಂಡವು. ಸಂಖ್ಯೆಯಲ್ಲಿ ಆಗ ಇದು ಹೊಸ ದಾಖಲೆ. ಚಿತ್ರಮಂದಿರಗಳ ಕೊರತೆ ಇಲ್ಲದಿದ್ದಲ್ಲಿ ಬಿಡುಗಡೆಗೆ ಸಿದ್ಧವಾದ ಚಿತ್ರಗಳ ಪೈಕಿ ಇನ್ನೂ ಹತ್ತು ಚಿತ್ರಗಳಾದರೂ ತೆರೆ ಕಾಣಬೇಕಾಗಿತ್ತು. ಹಾಗೆ ನೋಡಿದರೆ ಗುಣಮಟ್ಟದ ದೃಷ್ಟಿಯಿಂದ ಈ ಸಂಖ್ಯೆ ಸಮಾಧಾನ ಕೊಡುವಂಥದ್ದೇನಾಗಿರಲಿಲ್ಲ. ಅಲ್ಲದೆ ಆರ್ಥಿಕವಾಗಿ ಲಾಭ ಗಳಿಸಿದ ಚಿತ್ರಗಳನ್ನಷ್ಟೇ ಗಮನಿಸಿದರೆ 'ಭಾಗ್ಯವಂತ', 'ತಾಯಿಯ ಮಡಿಲಲ್ಲಿ', 'ಗಣೇಶನ ಮಹಿಮೆ' ಮುಂತಾದ ಆರೇಳು ಚಿತ್ರಗಳು ಮಾತ್ರ ಮುಖ್ಯವಾಗುತ್ತವೆ.

೧೯೮೧ ರಲ್ಲಿ 'ಭಾಗ್ಯವಂತ' ಚಿತ್ರದ್ದು ಹುಟ್ಟಿದಾಗಲೇ ತಂದೆ-ತಾಯಿಯನ್ನು ಕಳೆದುಕೊಂಡು, ಎಲ್ಲರಿಂದ ಅನಿಷ್ಟದ ಕೂಸೆಂದು ಅವಹೇಳನಕ್ಕೆ ಗುರಿಯಾದ ಬಾಲಕನ ಕಥೆ. ಈ ಬಾಲಕನ ದೌರ್ಭಾಗ್ಯ ಅವನು ಹುಟ್ಟಿದ ಕೆಟ್ಟ ಗಳಿಗೆಯಲ್ಲಿದೆ ಎಂದೇ ಎಲ್ಲ ನಂಬಿರುತ್ತಾರೆ. ಆದರೆ ಮಂತ್ರಾಲಯದ ಗುರುಗಳು ''ರಾಯರ ಅನುಗ್ರಹ ನಿನ್ನ ಮೇಲಿದೆ, ನೀನು ಭಾಗ್ಯವಂತನಾಗುತ್ತೀಯಾ'' ಎಂದು ಹೇಳಿದ ಮೇಲೆ ಅವನಿಂದಾಗಿ ಹಲವಾರು ಪವಾಡ ಸದೃಶ ಘಟನೆಗಳು ಸಂಭವಿಸುತ್ತವೆ. ಅವನನ್ನು ಟೀಕಿಸಿದವರೇ 'ಭಾಗ್ಯವಂತ' ಎಂದು ಕರೆಯುತ್ತಾರೆ. ಚಿತ್ರ ಮೇಲ್ನೋಟಕ್ಕೆ ಮೂಢನಂಬಿಕೆಯನ್ನು ಅಲ್ಲಗಳೆಯುತ್ತದೆ ಅನ್ನಿಸಿದರೂ ಮತ್ತೊಂದು ಬಗೆಯ ನಂಬಿಕೆಗೆ ಮೊರೆ ಹೋಗಿದೆ. ರಾಜಕುಮಾರ್ ಈ ಚಿತ್ರದಲ್ಲಿ ದಾಸರಂತೆ ಹಾಡುತ್ತಾ ಬರುತ್ತಾರೆ. ಅವರು 'ಮಂತ್ರಾಲಯ ಮಹಾತ್ಮೆ' ತೆರೆಕಂಡ ೧೫ ವರ್ಷಗಳ ನಂತರ ಮತ್ತೊಮ್ಮೆ ರಾಘವೇಂದ್ರ ಸ್ವಾಮಿಗಳ ಪಾತ್ರದಲ್ಲಿ ಕಾಣಿಸಿಕೊಂಡರು. ಟಿ.ಜಿ.ಲಿಂಗಪ್ಪನವರ ಉತ್ತಮ ಸಂಗೀತದಲ್ಲಿ ಚಿ.ಉದಯಶಂಕರ್ ರಚಿಸಿ ರಾಜಕುಮಾರ್ ಹಾಡಿದ 'ವಾರ ಬಂತಮ್ಮ...' ಗೀತೆ ಭಾರಿ ಜನಪ್ರಿಯತೆ ಪಡೆದು ಪ್ರತಿ ಮನೆ, ದೇವಸ್ಥಾನಗಳ ಸೂರ್ಯೋದಯದ ಖಾಯಂ ಗೀತೆಯಾಗಿತ್ತು.



(ಚಿತ್ರ ೧೩) 'ಭಾಗ್ಯವಂತ' ಚಿತ್ರದಲ್ಲಿ ಮಾ। ಲೋಹಿತ್ (ಪುನೀತ್) ಮತ್ತು ಕೆ.ಎಸ್.ಅಶ್ವತ್ಥ್

೧೯೮೧ ರಲ್ಲಿ ತೆರೆಕಂಡ 'ತಾಯಿಯ ಮಡಿಲಲ್ಲಿ' ಕೇವಲ ಯಶಸ್ಸಿನ ಕಾರಣದಿಂದಲ್ಲದೆ ಮತ್ತೂ ಹಲವಾರು ಸಂಗತಿಗಳಿಂದ ಮುಖ್ಯ ಚಿತ್ರ. ಇದು ಮುಂದೆ ಯಶಸ್ವಿ ಕಥೆಗಾರರಾಗಿ ಐದು ವರ್ಷಗಳ ಕಾಲ ನೆಲೆನಿಂತ ನಿರ್ಮಾಪಕ ಅಬ್ಬಾಯಿನಾಯ್ಡುರವರ ಪ್ರಥಮ ಕಥೆಯಾಧಾರಿತ ಚಿತ್ರ. ಈ ಚಿತ್ರಕ್ಕೆ ಮುಂಚೆ ಇವರು ತಮ್ಮ ನಿರ್ಮಾಣದ ಚಿತ್ರಗಳ ಕತೆಗಾಗಿ ಎಂ.ಡಿ.ಸುಂದರ್, ಹಿಂದಿಯ ಚಿತ್ರರಂಗದ ಸಲೀಂ-ಜಾವೇದ್‌ರನ್ನು ಅವಲಂಬಿಸಿದ್ದರು. ಜನಪ್ರಿಯ ಕಥೆಗಾರರನ್ನು ಓಲೈಸುತ್ತಾ ಅವರ ಬಳಿ ಅಲೆದಾಡುವುದರ ಬೇಸರ ಹಾಗೂ ತಮ್ಮೊಳಗಿನ ಕಥೆಗಾರನ ತುಡಿತದಿಂದ ಕೊನೆಗೆ ತಾವೇ ಕಥೆಯನ್ನು ಹೆಣೆಯಲು ಆರಂಭಿಸಿ ಆ ಚಿತ್ರಗಳು ಯಶಸ್ವಿಯಾಗುತ್ತಿದ್ದಂತೆ ಹೆಚ್ಚು ಹೆಚ್ಚು ಜನಪ್ರಿಯರಾದರು. 'ತ' ಅಕ್ಷರದಿಂದ ಆರಂಭವಾಗುವ ಹೆಸರುಗಳನ್ನೇ ಇಡುತ್ತಾ ಬಂದ ಇವರು ಈ ಬಗ್ಗೆ ಬಂದ ಟೀಕೆಗಳಿಂದ 'ತ' ಕಾರವನ್ನು ಕೈಬಿಟ್ಟು ವಿಷ್ಣುವರ್ಧನ್ ನಾಯಕತ್ವದ 'ಕಾರ್ಮಿಕ ಕಳ್ಳನಲ್ಲ' ನಿರ್ಮಿಸಿದರು. ಚಿತ್ರ ವಿಫಲವಾಯಿತು. ಇದರಿಂದ ಮತ್ತೆ 'ತ'ಕಾರಕ್ಕೆ ಮರಳಿದರು. ಇವರು ತಮ್ಮ ಕಥೆಗಳಲ್ಲಿ ಮಹಿಳಾ ಪ್ರೇಕ್ಷಕರ ಭಾವನೆಗಳನ್ನು ಬಡಿದೆಬ್ಬಿಸುವ ಘಟನೆಗಳಿಗೆ ಹೆಚ್ಚು ಪ್ರಾಮುಖ್ಯ ಕೊಡುತ್ತಿದ್ದರು. ಇದು ಅವರಿಗೆ ಹಣ ಹಾಗೂ ಅಪೂರ್ವ ಯಶಸ್ಸನ್ನು ದೊರಕಿಸಿತು. ಆದರೆ ಒಂದೇ ಬಗೆಯ ವಸ್ತುವಿನಿಂದಾಗಿ ಬಹುಬೇಗ ಏಕತಾನತೆ ಬಂದದ್ದರಿಂದ ಇವರ ಚಿತ್ರಗಳು ವಿಫಲವಾಗತೊಡಗಿದವು. ಈ ಹಂತದಲ್ಲಿ ಕೌಟುಂಬಿಕ ವಸ್ತುವಿನಲ್ಲಿ ಪ್ರಾಣಿಗಳನ್ನು ಹೊಂದಿಸಿ ಕಥೆ ಹೆಣೆಯಲು ಆರಂಭಿಸಿದರು. ಈ ಸೂತ್ರ ಕೂಡ ಎಲ್ಲ ಕಾಲಕ್ಕೂ ಯಶಸ್ಸು ತರಲಿಲ್ಲ. ಇಷ್ಟೆಲ್ಲದರ ನಡುವೆಯೂ ಇವರು ನಿರ್ಮಿಸಿದ ೨೨ ಚಿತ್ರಗಳಲ್ಲಿ ಕೆಲವಾರು ಚಿತ್ರಗಳು ಶತದಿನ, ರಜತೋತ್ಸವ ಹಾಗೂ ೪೦ ವಾರಗಳ ಪ್ರದರ್ಶನ ಕಂಡು ಅಬ್ಬಾಯಿನಾಯ್ಡುರವರಿಗೆ ಕನ್ನಡ ಚಲನಚಿತ್ರ ಇತಿಹಾಸದಲ್ಲಿ ಒಂದು ನಿಶ್ಚಿತವಾದ ಸ್ಥಾನ ಕಲ್ಪಿಸಿಕೊಟ್ಟಿವೆ. 'ತಾಯಿಯ ಮಡಿಲಲ್ಲಿ' ಬಿಜಾಪುರದ ಜಯಶ್ರೀ ಚಿತ್ರಮಂದಿರದಲ್ಲಿ ೪೦ ವಾರ ಪ್ರದರ್ಶನವಾಯಿತು. ಇದು ಕನ್ನಡ ಚಿತ್ರರಂಗದಲ್ಲಿ ಒಂದು ದಾಖಲೆ. ಬೆಂಗಳೂರು, ಮೈಸೂರು, ದಾವಣಗೆರೆಗಳಲ್ಲಿ ೧೦೦ ದಿನ ಪ್ರದರ್ಶನ ಕಂಡಿತು.



(ಚಿತ್ರ ೧೪) 'ಗಣೇಶನ ಮಹಿಮೆ' ಚಿತ್ರದಲ್ಲಿ ಅಶೋಕ್ ಮತ್ತು ಬೇಬಿ ರೇಖಾ

'ಗಣೇಶನ ಮಹಿಮೆ' ಮರಾಠಿ ಚಿತ್ರವೊಂದರ ಸ್ಫೂರ್ತಿಯ ಸಾಮಾಜಿಕ-ಪೌರಾಣಿಕ ಚಿತ್ರ. ಇದು ಮುಗ್ಧರ ಮೇಲೆ ದುಷ್ಪರಿಣಾಮ ಬೀರುವಷ್ಟು ಮೂಢನಂಬಿಕೆಗಳನ್ನು ಒಳಗೊಂಡಿದೆ. ಇದು ಒಂದು ಅತ್ಯಂತ ಯಶಸ್ವೀ ಚಿತ್ರ. ಇದರ ಯಶಸ್ಸು ಇಂಥ ಹಲವು ಚಿತ್ರಗಳನ್ನು ತೆಗೆಯಲು ಪ್ರೇರಿಸಿತ್ತು. ಹಾಗೆ ಬಂದ ಚಿತ್ರಗಳೆಲ್ಲ ಇದೇ ಯಶಸ್ಸನ್ನು ಪಡೆಯಲಿಲ್ಲವಾದರೂ ಚಿತ್ರದ ಒಳಗೆ, ಹೊರಗೆ, ಕಲಾವಿದರ ಮನೆ-ಮನಸ್ಸುಗಳಲ್ಲಿ ಕೂಡಾ ಗಣೇಶ ಒಂದು ವಿಚಿತ್ರ ಪ್ರಭಾವ ಬೀರಿದ್ದ. ಪೂರ್ವಾರ್ಧದಲ್ಲಿ ಕಾಯಕವೇ ಮುಖ್ಯವೆಂದು ನಂಬಿ ತರ್ಕ, ವೈಜ್ಞಾನಿಕ ವಿಚಾರಗಳ ಜಾಡು ಹಿಡಿದು ಮಾತನಾಡುವ ನಾಯಕನಿಗೆ ಅನೇಕ ಕಷ್ಟ-ನಷ್ಟಗಳು ಎದುರಾಗಿ, ಪಾರ್ಶ್ವವಾಯುವೂ ಸೋಕಿ ಗಣೇಶನನ್ನು ಭಜಿಸಿದ ಮೇಲೆಯೇ ಸರಿಯಾಗುತ್ತದೆ ಎಂಬ ತತ್ವ. ಮಾಧ್ಯಮಗಳಲ್ಲಿ 'ಪವಾಡ'ಗಳನ್ನು ತರಕೂಡದು ಎಂಬುದು ನಿಯಮ. ಕಥೆಯೋ ಒಬ್ಬ ಸಂತನೋ, ಜಾನಪದವೋ ಆದರೆ ಆಗ 'ಮಿಥ್'ಗಳ ಬಳಕೆಗೆ ಬೇರೆಯದೇ ಆಯಾಮವಿರುತ್ತದೆ. ಸಾಮಾಜಿಕ ಕಥೆಯಲ್ಲಿ ದೈವಭಕ್ತಿಯ ನೆಪದಲ್ಲಿ ಪವಾಡಗಳನ್ನು ಸೇರಿಸುವುದು ಸರಿಯೇ? ಇಂಥ ಪ್ರಶ್ನೆಗಳಿಗೆ ಯಾರೂ ಉತ್ತರಿಸಿಲ್ಲ, ಉತ್ತರಿಸುವುದೂ ಇಲ್ಲ. ಒಟ್ಟಾರೆ ಚಿತ್ರ ಯಶಸ್ವಿಯಾಯಿತು, ನಿರ್ಮಾಪಕ ಬದುಕಿದ. ಅದಕ್ಕೆ ಗಣೇಶನ ಮಹಿಮೆಯೇ ಕಾರಣ ಎಂಬ ನಿಲುವು. ಚಿತ್ರಕಥೆಯ ಚೌಕಟ್ಟು ಬಿಗಿಯಾಗಿತ್ತು. ಅಭಿನಯದಲ್ಲಿ ಸೊಗಸಿತ್ತು. ಹೀಗಾಗಿ ಚಿತ್ರ ಗೆದ್ದಿತು. ನಿರ್ದೇಶಕ ಮಣಿಮುರುಗನ್ ಅವರಿಗೆ ಮತ್ತೊಂದು ಕೋಡು ಮೂಡಿತು. ಚಿತ್ರದಲ್ಲಿ ಗಣೇಶನೇ ಬಂದು ಬಿಡುವ ದೃಶ್ಯವೊಂದಿದೆ. "ಆ ಪಾತ್ರಕ್ಕೆ ಮುಸ್ಲಿಂ ಬಂಧುವೊಬ್ಬರನ್ನು ಬಳಸಿದ್ದೇನೆ" ಎಂದು ಮಣಿಮುರುಗನ್ ಸುದ್ದಿ ಮಾಡಿದ್ದರು. ಚಿತ್ರದಲ್ಲಿ ಸುಂದರಕೃಷ್ಣ ಅರಸ್, ಅಶೋಕ್ ಅಭಿನಯ ಚೆನ್ನಾಗಿತ್ತು. ಇಂಥ ನಂಬಿಕೆ-ಭಕ್ತಿ ಇರುವ ಚಿತ್ರದಲ್ಲೂ ಅಶ್ಲೀಲದ ಜಾಡಿನಲ್ಲಿ ಹಾಸ್ಯನಟರ ಸಂಭಾಷಣೆ ರಚಿತವಾಗುವುದು ಒಂದು ವಿಪರ್ಯಾಸವಷ್ಟೇ.

ಅಂತೂ ಮತ್ತೆ ಒಂದು ಪರಂಪರೆಗೆ ನಾಂದಿ ಹಾಡಿದ ಚಿತ್ರವಾಗಿ 'ಗಣೇಶನ ಮಹಿಮೆ'ಗೆ ಅವರದೇ ಆದ ಸ್ಥಾನವಂತೂ ಇದೆ. ಈ ಚಿತ್ರದ ನಿರ್ದೇಶಕ ಮಣಿಮುರುಗನ್, ಕೆ.ಎಸ್.ಎಲ್.ಸ್ವಾಮಿ ಬಳಿ 'ಅರಿಶಿನ ಕುಂಕುಮ' ಚಿತ್ರದಿಂದ ಆರಂಭಿಸಿ ೧೦-೧೫ ಚಿತ್ರಗಳಿಗೆ ಸಹಾಯಕ ನಿರ್ದೇಶಕರಾಗಿ ದುಡಿದವರು. ಮಣಿಮುರುಗನ್ ಸ್ವತಂತ್ರ ನಿರ್ದೇಶಕರಾದದ್ದರ ಹಿಂದೆ ಒಂದು ರೋಚಕ ಕಥೆಯೇ ಇದೆ. ರವೀ ನಿರ್ದೇಶನದ 'ಮುಗ್ಧಮಾನವ' ಚಿತ್ರ ಲಲಿತಮ್ಮನವರು ನಿರ್ಮಿಸಿದ್ದು ದಯನೀಯ ಸೋಲು ಕಂಡಿತು. ಆಕೆಯ ಬಗ್ಗೆ ಸಹಾನುಭೂತಿ ಹೊಂದಿದ ಶ್ರೀನಾಥ್ ಮತ್ತು ಇಡೀ ತಂಡ ಇನ್ನೊಂದು ಚಿತ್ರ ನಿರ್ಮಿಸಿದರೆ ತಾವು ಯಾರೂ ಹಣ ತೆಗೆದುಕೊಳ್ಳದೆ ಕೆಲಸ ಮಾಡುತ್ತೇವೆಂದರು. ಆಗ ರವೀ ಅವರ ಸಹಾಯಕರಾಗಿದ್ದ ಮಣಿಮುರುಗನ್‌ರನ್ನು ನಿರ್ದೇಶಕರಾಗಿ ಗೊತ್ತುಮಾಡಿ ನಿರ್ಮಿಸಿದ ಚಿತ್ರ 'ಹಾವಿನ ಹೆಜ್ಜೆ'. ಯಶಸ್ವಿಯಾಯಿತು. ಮುಂದೆ ಮಣಿಮುರುಗನ್‌ರ ಚಿತ್ರ ಬದುಕು ಉಜ್ವಲವಾಯಿತು. ಅಂಬರೀಷ್‌ರನ್ನು ಖಳನಿಂದ ನಾಯಕ ಪಟ್ಟಕ್ಕೇರಿಸಿ ಅವರ ಮೂಲನಾಮ 'ಅಮರನಾಥ್' ಶೀರ್ಷಿಕೆಯಡಿ ಚಿತ್ರ ತೆಗೆದದ್ದೂ ಮಣಿಮುರುಗನ್ ಅವರೇ. ೧೯೭೮ ರಲ್ಲಿ ತೆರೆಕಂಡ 'ಹಾವಿನ ಹೆಜ್ಜೆ' ಮೂಲಕ ಕನ್ನಡ ಚಿತ್ರರಂಗಕ್ಕೆ ಬಂದು ಸುಮಾರು ಆರು ವರ್ಷಗಳ ಕಾಲ ಚಲಾವಣೆಯಲ್ಲಿದ್ದು ೧೨ ಚಿತ್ರಗಳನ್ನು ನಿರ್ದೇಶಿಸಿದರು. ಇವುಗಳಲ್ಲಿ ಕೆಲವು ವ್ಯಾಪಾರಿ ದೃಷ್ಟಿಯಿಂದ ಯಶಸ್ವಿಯಾದವು. ಇದೇ ವರ್ಗಕ್ಕೆ ಸಲ್ಲುವ ಇವರ ನಿರ್ದೇಶನದ 'ಏಟು ಎದಿರೇಟು' ವಾಮಾಚಾರ ಕುರಿತ ಪ್ರಥಮ ಕನ್ನಡ ಚಿತ್ರ. ಇದು ತೆಲುಗಿಗೆ 'ಮಂತ್ರಶಕ್ತಿ ದೈವಭಕ್ತಿ' ಹೆಸರಿನಲ್ಲಿ ಡಬ್ ಆಗಿ ಆಂಧ್ರದ ಐದು ಕೇಂದ್ರಗಳಲ್ಲಿ ಶತದಿನೋತ್ಸವ ಆಚರಿಸಿತು.



(ಚಿತ್ರ ೧೫) 'ಏಟು ಎದಿರೇಟು' ಚಿತ್ರದಲ್ಲಿ ಸುಂದರಕೃಷ್ಣ ಅರಸ್

ಈ ಚಿತ್ರದಲ್ಲಿ ದೊಡ್ಡರಂಗೇಗೌಡರ 'ನಗುವ ಸ್ನೇಹ ಮೋಹ...' ಗೀತೆಗೆ ಸಂಗೀತ ನಿರ್ದೇಶಕ ಸತ್ಯಂ ಅವರು ಪಾಶ್ಚಾತ್ಯ ಹಾಗೂ ಭಾರತೀಯ ಧಾಟಿಯಲ್ಲಿ ರಾಗ ಸಂಯೋಜನೆ ಮಾಡಿ, ಎಸ್.ಜಾನಕಿ, ಎಸ್.ಪಿ.ಬಾಲಸುಬ್ರಹ್ಮಣ್ಯಂ ಸೊಗಸಾಗಿ ಹಾಡಿದ್ದಾರೆ. ಅದೇ ಚಿತ್ರದ 'ಢಮ ಢಮ ಡಮರುಗ...' ಒಂದು ರೀತಿಯ ಗದ್ದಲವಿರುವಂಥದ್ದು. ಏನೋ ಕಿರಿಚಾಟದ ಸದ್ದು, ಜೊತೆಗೆ 'ಆವಾಹಯಾಮಿ' ಮಂತ್ರಪಠಣ

ಸೇರಿಕೊಂಡಂತೆ ಬರುವ ವಾಣಿಜಯರಾಂ ಅವರ 'ಮನಸೋತೆನೋ...' ಎಂಬ ಸಾಲಿನ ಗಾಯನ ಕೊಂಚ ಗದ್ದಲ ಅನ್ನಿಸುತ್ತದೆ. ಆದರೆ ಅದು ಆ ಸನ್ನಿವೇಶಕ್ಕೆ ಅಗತ್ಯವೂ ಆಗಿರಬಹುದು. ನಂಬಿಕೆಯ, ವಿಜ್ಞಾನದ ಪ್ರಶ್ನೆ ಏನೇ ಇರಲಿ, ಒಂದು ಮೋಡಿ ವಿದ್ಯೆ ಕುರಿತ ಕಥೆಯನ್ನೇ ಆಯ್ದು ಚಿತ್ರಿಸಿದಾಗ ಆ ದೃಷ್ಟಿಯಿಂದ ಚಿತ್ರ ಎಷ್ಟು ಸರಿ ಎಂದು ಯೋಚಿಸಿದರೆ ಈ ಚಿತ್ರ ಹೆಚ್ಚಿನಂಶ ನ್ಯಾಯ ಸಲ್ಲಿಸಿತ್ತು. ಒಂದು ಸನಾತನ ಕಲೆ ಮೋಡಿವಿದ್ಯೆ. ಇದನ್ನು ಸಾಧಿಸಿ, ರೂಢಿಸಿಕೊಂಡವರ ಬಗ್ಗೆ ಯುಗ ಯುಗಗಳೇ ಉರುಳಿದರೂ ರೋಚಕ ಕಥೆಗಳು ಮೂಡಿಬರುತ್ತಲೇ ಇವೆ. ಸಾಹಿತ್ಯದಲ್ಲೂ ಇಂಥ ಅನೇಕ ಕೃತಿಗಳು ಬಂದಿವೆ. 'ಏಟು ಎದಿರೇಟು' ಅಂಥದೊಂದು ಒಳಿತು-ಕೆಡುಕು ಶಕ್ತಿಯ ಬಲಾಬಲದ ಸಂಘರ್ಷವನ್ನು ತೋರುವ ಚಿತ್ರ. ಒಬ್ಬ ಉಗ್ರ ಚೌಡೇಶ್ವರಿ ಆರಾಧಕ. ಸಿದ್ಧಿಯನ್ನು ಲೋಕಕಲ್ಯಾಣಕ್ಕೆ ಬಳಸದೆ ತಾನೇ ದೈವವೆಂದು ಮೆರೆದು ಗ್ರಾಮದಲ್ಲಿ ಭಯದ ವಾತಾವರಣ ತಂದ. ವಿದೇಶದಲ್ಲಿ ಕಲಿತು ಬಂದ ತರುಣ ವಿಜ್ಞಾನ-ತರ್ಕ ಮೀರಿದ ಮಂತ್ರವಾದಿಯ ಶಕ್ತಿಗೆ ಆದರ ಮೂಲಕವೇ ಉತ್ತರಿಸಲು ಆಂಜನೇಯನ ಉಪಾಸಕನಾಗುವ ಕಥೆ. ನಿರೂಪಣೆಯಲ್ಲಿ ಅನೇಕ ರಸಮಯ, ಭೀಕರ ಘಟ್ಟಗಳು ಬರುತ್ತವೆ. ಎಚ್.ವಿ.ಸುಬ್ಬರಾವ್ ಅವರು ಕಥೆ, ಚಿತ್ರಕಥೆ, ಸಂಭಾಷಣೆ ನಿರ್ವಹಿಸಿದ್ದರು. ಅವರ ಶಬ್ದ ಸಾಮರ್ಥ್ಯ ಹೆಜ್ಜೆಹೆಜ್ಜೆಗೂ ವ್ಯಕ್ತವಾಗುವಷ್ಟು ಸೊಗಸಾದ ಸಾಹಿತ್ಯವಿತ್ತು. ಚಿತ್ರಕಥೆಯೂ ಬಿಗಿಯಾಗಿತ್ತು. ಮಣಿಮುರುಗನ್ ನಿರ್ದೇಶನದಲ್ಲಿ ಹೊರಬಂದ ಚಿತ್ರ. ಏನೆಲ್ಲ ಇದ್ದೂ ಚಿತ್ರ ಓಡಲಿಲ್ಲ. ಜನ ಬಯಸುವ ಚಮತ್ಕಾರ-ಸಾಹಸ ಇರಲಿಲ್ಲ. ವಸ್ತುವಿನ ನೈಜತೆಗೆ ಒತ್ತು ಕೊಟ್ಟಿದ್ದರ ಫಲವಿದು. ಸುಂದರಕೃಷ್ಣಅರಸ್ ಶ್ರೇಷ್ಠ ಅಭಿನಯ ನೀಡಿದ್ದರು. ಆರ್.ಎಫ್.ಮಾಣಿಕ್‌ಚಂದ್‌ರಂಥ ನಿರ್ಮಾಪಕರು ಆರ್ಥಿಕವಾಗಿ ಮುಗ್ಗರಿಸಿ ಬಹಳ ಕಾಲ ತಲ್ಲಣಿಸುವಂತಾಗಿತ್ತು.

'ಲೀಡರ್ ವಿಶ್ವನಾಥ್' ಮಣಿಮುರುಗನ್ ನಿರ್ದೇಶಿಸಿದ್ದ ಚಿತ್ರ. ಆಕರ್ಷಣೆಯ ಸಂಗತಿ ಎಂದರೆ 'ಪ್ರೀಮಿಯರ್ ಸಿನಿ ಟೆಕ್ನಿಕಲ್ ಅಸೋಸಿಯೇಟ್ಸ್' ಲಾಂಛನದಲ್ಲಿ ಕಾರ್ಮಿಕರೇ ಸಂಘಟಿತರಾಗಿ ಚಿತ್ರ ನಿರ್ಮಿಸಿದ್ದು. ಕಾರ್ಮಿಕರ ಬಗ್ಗೆ ಯಾವಾಗಲೂ ಸಹಾನುಭೂತಿ ಇರುವ ಅಂಬರೀಷ್ ಮುಖ್ಯ ಪಾತ್ರ ವಹಿಸಿದ್ದರು. ಕಾರ್ಮಿಕರ ಸಮಸ್ಯೆಗಳು, ಅಸಂಘಟಿತರಾದಾಗ ಮಾಲೀಕ ವರ್ಗ ಅವರನ್ನು ಹೇಗೆ ಬಳಸಿಕೊಳ್ಳುತ್ತದೆ, ಶೋಷಣೆಯ ಹಲವು ಮಗ್ಗಲುಗಳು, ಕಾರ್ಮಿಕರ ಸುಸ್ಥಿತಿಗೆ ಅಗತ್ಯವಾಗಿ ಆಗಬೇಕಾದ ಸುಧಾರಣೆಗಳು-ನಿಯಮಗಳು ಏನೆಂಥವು ಇತ್ಯಾದಿ ವಿಚಾರಗಳನ್ನು ಜನಪ್ರಿಯತೆಗೆ ಬೇಕಾದ ಅಂತಃಕರಣ ಕಲಕುವಂಥ ಸನ್ನಿವೇಶಗಳ ಜೊತೆಗೇ ಹೇಳುವ ಪ್ರಯತ್ನ. ಮಣಿಮುರುಗನ್ ಅವರೇ ಕತೆಯನ್ನು ಹೆಣೆದಿದ್ದರು. ಕಾರ್ಮಿಕ ವರ್ಗದ ಬಗ್ಗೆ ವಿಶೇಷ ಆಸ್ಥೆ ಇದ್ದವರಾದ ಎನ್.ಎಸ್.ರಾವ್ ಚುರುಕಾದ ಸಂಭಾಷಣೆ ಬರೆದಿದ್ದರು. ಅಂಥದೇ ಆಲೋಚನೆ, ಬರವಣಿಗೆ ಇದ್ದ, ಒಂದರ್ಥದಲ್ಲಿ ರೋಷಗಾರರು, ಬಂಡಾಯಗಾರರು ಎಂದೇ ಗುರುತಿಸಲ್ಪಡುತ್ತಿದ್ದ ಭಂಗೀ ರಂಗ, ಬಸವರಾಜ ಕೆಸ್ತೂರ್ ಅವರ ಗೀತೆಗಳೂ ರೋಷ, ಭೀಷಣಗಳಿಂದ ಕೂಡಿದ್ದವು. ಪ್ರೇಮ, ಭಾವನಾತ್ಮಕತೆಯನ್ನು ಸೂಚಿಸುವ ಕಡೆಗೆ ಚಿ.ಉದಯಶಂಕರ್ ಇದ್ದರು. ಚಿತ್ರ ನಿರೀಕ್ಷಿಸಿದಷ್ಟು ಯಶಸ್ವಿ ಆಗದಿದ್ದರೂ ಜನ ತಿರಸ್ಕರಿಸಿರಲಿಲ್ಲ. ಕಾರ್ಮಿಕ ವರ್ಗವೇ ನೋಡುತ್ತದೆಂಬ ನಂಬಿಕೆ ಹುಸಿಯಾಯಿತು. ಅಥವಾ ಅಂಥ ಪ್ರಚಾರ ಆಗಲಿಲ್ಲ ಎನ್ನಬಹುದು.

'ಮನೆ ಮನೆ ಕಥೆ' ಮತ್ತೊಂದು ಪುನರವತರಣಿಕೆಯೇ. ಆದರೆ ತುಂಬ ಚೆನ್ನಾಗಿ ನಿರೂಪಿತವಾಗಿತ್ತು. ತೀರಾ ನಮ್ಮ ನಿಮ್ಮ ನಡುವೆ ನಡೆಯುವ ಸಂಗತಿಗಳು, ಸಣ್ಣ ಸಣ್ಣ ವಿವರಗಳು ಇದ್ದುದರಿಂದ ಆಪ್ತವಾಗುತ್ತಿತ್ತು. ಎಚ್.ಆರ್.ಪ್ರಭಾಕರರೆಡ್ಡಿ ಮತ್ತು ದ್ವಾರಕೀಶ್ ಜೋಡಿಯಾಗಿ ನಿರ್ಮಿಸಿದ್ದರು. ಫೈಟಿಂಗ್ ಇಲ್ಲ, ಕ್ಯಾಬರೆ ಇಲ್ಲ ಎಂಬ ಹೇಳಿಕೆಯೊಂದಿಗೇ ಪ್ರಾರಂಭವಾಗಿದ್ದ ಚಿತ್ರ. ಚಿ.ಉದಯಶಂಕರ್ ಮಧ್ಯಮ ವರ್ಗದ ಬದುಕು, ಪ್ರೇಮ-ಸಂಘರ್ಷ ಎಂದರೆ ವಿಜೃಂಭಿಸಿ ಬರೆಯಬಲ್ಲರು. ಅವರ ನಾಲ್ಕು ಗೀತೆಗಳು ಅಂಥ ನೈಜತೆಯಿಂದ ಕೂಡಿದ್ದವು. ಸಂಭಾಷಣೆಯು ಅಷ್ಟೇ ಚುರುಕು, ಹಾಸ್ಯ ಲೇಪಿತವಾಗಿತ್ತು. ಡಿ.ವಿ.ರಾಜಾರಾಂ ಛಾಯಾಗ್ರಾಹಕರು. ರಾಜಾಚಂದ್ರ ನಿರ್ದೇಶನದ ಚಿತ್ರದಲ್ಲಿ ವಿಷ್ಣುವರ್ಧನ್, ಶ್ರೀನಿವಾಸಮೂರ್ತಿ ಇವರಿಬ್ಬರೂ ಸೊಗಸಾದ ಅಭಿನಯ ನೀಡಿದ್ದರು. ಚಿತ್ರ ಸುಮಾರಾಗಿ ಯಶಸ್ವಿಯೇ ಆಯಿತು. ತಮಿಳಿನಲ್ಲಿ ಇಂಥ ಚಿತ್ರಗಳ ಸಾಲು ಸಾಲೇ ಬರುತ್ತಿದ್ದಾಗ ನಾವೂ ಅತ್ತ ವಾಲುವುದು ಸಹಜ. ಕನ್ನಡ ನೆಲದ ಸೊಗಡೇ ಆಗಿದ್ದರೆ ಮತ್ತೂ ಚೆನ್ನಿತ್ತು ಎಂಬುದು ಒಳಗಿನ ವ್ಯಥೆ. ಆದರೂ 'ಮನೆ ಮನೆ ಕಥೆ' ಸಿಳ್ಳೆ ಹಾಕುವಂಥ ಚಿತ್ರವೇನಲ್ಲ. 'ಮನೆ ಮನೆ ಕಥೆ'ಗೆ ದ್ವಾರಕೀಶ್ ಪ್ರಾರಂಭದಲ್ಲಿ ಕರ್ನಾಟಕ ತೋರಿಸಿದವರು, ಆದರೆ ನಿರ್ದೇಶಕರು ರಾಜಾಚಂದ್ರ, ನಾಯಕಿ ಜಯಚಿತ್ರಾ. ಇದು ಕನ್ನಡಪರ ನಿಲುವೇ ಎಂದು ಕನ್ನಡ ಪ್ರೇಮಿಗಳು, ಭಾಷಿಕರು ಆಕ್ಷೇಪಿಸಿದ್ದರು. ಎಲ್ಲವೂ ಸೆಟ್‌ಗಳಾದ್ದರಿಂದ 'ಅಸಹಜ'ವೆನಿಸುತ್ತಿತ್ತು. ಚಿತ್ರ ನಿರ್ಮಾಣ ಇಷ್ಟು ಸುಲಭ ಆಗುವುದೇ ಒಂದು ರೀತಿಯ ಕಸಿವಿಸಿ ಅನ್ನಿಸುತ್ತದೆ ಎಂಬ ಆಕ್ಷೇಪವೂ ಬಂತು.

'ಚಂಚಲ' ಕಪ್ಪು-ಬಿಳುಪಿನಲ್ಲಿ ಮೈಸೂರು ಗಿರೀಶ್ ನಿರ್ದೇಶಿಸಿದ ಚಿತ್ರ. ವಾಸುದೇವ ಗಿರಿಮಾಜಿಯಂಥವರು ಸಹನಿರ್ದೇಶಕರು. ಅಂದರೆ ಕಾಸಿದ್ದವನು ಬುದ್ಧಿವಂತನನ್ನು ಕೊಂಡುಕೊಳ್ಳುತ್ತಾನೆ ಎಂಬುದಷ್ಟೇ ಇದರರ್ಥ. ಚಿತ್ರದ ಕೇಂದ್ರ ಪಾತ್ರದಲ್ಲಿ ಬಿ.ವಿ.ರಾಧಾರಂಥ ಕಲಾವಿದೆ ಇದ್ದರು. ಅಸಂಬದ್ಧ ಕಥೆ, ಅರ್ಥಹೀನ ನಿರೂಪಣೆ ಉತ್ತಮ ಕಲಾವಿದೆಯೊಬ್ಬರ ಶ್ರಮವನ್ನು ಅಸಾರ್ಥಕಗೊಳಿಸಲಾಗಿತ್ತು. ಬಿ.ವಿ.ರಾಧಾ 'ನವಕೋಟಿ ನಾರಾಯಣ' ಚಿತ್ರದಿಂದಲೂ ಕನ್ನಡ ಚಿತ್ರರಂಗದಲ್ಲಿ ಕೆಲಸ ಮಾಡುತ್ತಾ ಬಂದವರು. ಸದ್ದಿಲ್ಲದೆ ತನ್ನ ಪಾಲಿಗೆ ಬಂದುದನ್ನು ಸ್ವೀಕರಿಸುವ ಪ್ರವೃತ್ತಿ. ನೃತ್ಯ ಗೊತ್ತು, ಅಭಿನಯದಲ್ಲಿ ಯಾರಿಗೂ ಕಡಿಮೆ ಇಲ್ಲ. ಆದರೂ ಆಕೆಯ ಅನಿವಾರ್ಯಗಳನ್ನು ಸ್ವಾರ್ಥಕ್ಕೆ ಬಳಸಿಕೊಂಡ ಉದ್ಯಮ ಆಕೆಗಾಗಿಯೇ ಚಿತ್ರದ ಪಾತ್ರವನ್ನು ಕೊಟ್ಟಿದ್ದು ಇಲ್ಲವೇ ಇಲ್ಲ. ಬಹುಕಾಲದವರೆಗೆ ಆಕೆ ಅಂಥ ಯಾವ 'ಗಾಡ್ ಫಾದರ್' ಅನ್ನೂ ಹೊಂದಿರಲಿಲ್ಲ. ಆಕೆಯ ಪಾಲಿಗೆ ತಡವಾಗಿ ಪತಿಯಾಗಿ ಬಂದ ನಿರ್ದೇಶಕ ರವೀ ಕೂಡಾ ಆಕೆಗಾಗಿಯೇ ಚಿತ್ರ ನಿರ್ಮಿಸುವ ಇತರರ ಪರಂಪರೆಯನ್ನು ಅನುಸರಿಸಲಿಲ್ಲ. ವೈಯಕ್ತಿಕ ಬದುಕು ಬೇರೆ, ವೃತ್ತಿ ಬೇರೆ ಎಂಬುದೇ ಅವರ ಪಲ್ಲವಿ-ಚರಣ ಎಲ್ಲವೂ. ರಾಧಾ ಬಹಳಷ್ಟು ಚಿತ್ರಗಳಲ್ಲಿ ನೃತ್ಯಗಾತಿಯಾಗಿ, ಕೆಲವೊಮ್ಮೆ ನಾಯಕಿಯಾಗಿ, ಹಿಂದೆಯೇ ಪೋಷಕಿಯಾಗಿ ಕಾಣಿಸಿಕೊಂಡರು. ಯಾವ ಇಮೇಜ್‌ಗೂ ತಲೆ ಬಾಗದೆ ಎಲ್ಲವನ್ನೂ ಚೊಕ್ಕವಾಗಿ ನಿರ್ವಹಿಸಿದರು. ಅಭಿನಯ ರಂಗಕ್ಕೆ ಬಂದ ಸುಮಾರು ೨೫ ವರ್ಷಗಳ



(ಚಿತ್ರ ೧೬) 'ಲೀಡರ್ ವಿಶ್ವನಾಥ್' ಚಿತ್ರದಲ್ಲಿ ಲೀಲಾವತಿ ಮತ್ತು ಅಂಬರೀಷ್

ನಂತರವೂ ಕಿರುತೆರೆಯ ಧಾರಾವಾಹಿಗಳ ಮೂಲಕ ಮನೆಮನೆಯನ್ನು ಮುಟ್ಟಿ ಜನಪ್ರಿಯತೆಯ ಉತ್ತುಂಗವನ್ನೇರಿದರು.

'ತೀರದ ಬಯಕೆ' ಬೇಲೂರ್ ಫಿಲಂಸ್ ಲಾಂಛನದಲ್ಲಿ ತೆರೆಗೆ ಬಂತು. ಬೇಲೂರು ಕೃಷ್ಣಮೂರ್ತಿಯವರ ಕಾದಂಬರಿ 'ಕಂಬನಿ' ಆಧಾರ. ಕನ್ನಡ ಸಂಸ್ಕೃತಿಯಲ್ಲಿ ಆಸಕ್ತರಾದ ರೋಟೇರಿಯನ್, ಸರ್ಕಾರಿ ಅಧಿಕಾರಿ ಜಿ.ಆರ್. ಶ್ರೀನಿವಾಸ್ ಈ ಚಿತ್ರದ ಹಿಂದಿದ್ದ ಶಕ್ತಿ. ಅವರೇ ಮ್ಯಾನೇಜಿಂಗ್ ಪಾರ್ಟ್‌ನರ್ ಆದರು. ಅವರೂ ಒಂದು ಪಾತ್ರದಲ್ಲಿದ್ದರು. ಆದರೆ ರಾಜು ನಿರ್ದೇಶನದಲ್ಲಿ ಚಿತ್ರ ಸತ್ವಪೂರ್ಣವಾಗಿ ಮೂಡಿ ಬರಲಿಲ್ಲ. ವಿಜಯಕಲಾ ಮೊದಲಾದವರು ನಟಿಸಿದ್ದರು. ಈ ಅನುಭವ ಮುಂದೆ ವಿಜಯಕಲಾ ಅವರಿಗೆ ತಾವೇ ಒಂದು ಚಿತ್ರ ನಿರ್ದೇಶನ ಮಾಡುವಷ್ಟು ಧೈರ್ಯ ತಂದುಕೊಟ್ಟಿತು. ಲೇಖಕ ಬೇಲೂರು ಕೃಷ್ಣಮೂರ್ತಿ ದ್ವಿಪಾತ್ರದಲ್ಲಿ ಅಭಿನಯಿಸಿದ್ದರು. ಈ ಚಿತ್ರದ ಒಂದು ದೃಶ್ಯದಲ್ಲಿ ಹಾವು-ನಾಯಿ ಕಾದಾಟ ತರಲಾಗಿದೆ. ಆಶ್ಚರ್ಯಕರ ರೀತಿಯಲ್ಲಿ ನಾಯಿಯೇ ಸಾಯುತ್ತದೆ. ಇದು ಇಡೀ ಚಿತ್ರದ ಆಶಯವನ್ನು ಸಂಕೇತಿಸುತ್ತದೆ ಎಂದಿದ್ದರು. ಬಹು ದೀರ್ಘಕಾಲ ತೆಗೆದುಕೊಂಡ ಚಿತ್ರ, ತೆರೆಗೆ ಬರುವ ಹೊತ್ತಿಗೆ ವಸ್ತು, ನಿರೂಪಣೆ ಎಲ್ಲವೂ ಹಳಸಲಾಗಿತ್ತು. ಪತ್ರಕರ್ತ ಶ್ಯಾಮಸುಂದರ ಕುಲಕರ್ಣಿ ಗೀತರಚನೆ ಮಾಡಿದ್ದರು. 'ಛಲಗಾರ'ದ ನಂತರ ಈ ಚಿತ್ರಕ್ಕೆ ಬರೆದರು. 'ಛಲಗಾರ'ಕ್ಕೂ ಮೊದಲು ಈ ಚಿತ್ರ ಬಿಡುಗಡೆ ಆಯಿತು. ವಿತರಕರಿಗೆ ಮೋಸವಿಲ್ಲ. ನಿರ್ಮಾಪಕರಿಗೆ ಕಾಸು ಬರಲಿಲ್ಲ. ೧೯೭೫ ರಲ್ಲಿ ಪ್ರಾರಂಭಿಸಿದ ಚಿತ್ರ ೧೯೭೮ ರಲ್ಲಿ ಸೆನ್ಸಾರ್ ಆಗಿ ೧೯೮೧ರಲ್ಲಿ ತೆರೆಕಂಡಿತು. ಪ್ರಭಾತ್ ಮತ್ತು ಇತರ ೧೧



(ಚಿತ್ರ ೧೭) 'ಹಾವಿನ ಹೆಡೆ' ಚಿತ್ರದಲ್ಲಿ ರಾಜಕುಮಾರ್ ಮತ್ತು ತೂಗುದೀಪ ಶ್ರೀನಿವಾಸ್

ಚಿತ್ರಮಂದಿರಗಳಲ್ಲಿ ಆರು ಪ್ರಿಂಟ್‌ಗಳನ್ನು ಓಡಾಡಿಸಿದರು. ಏಕಕಾಲದಲ್ಲಿ ಮಂಗಳೂರಿನಲ್ಲೂ ಬಿಡುಗಡೆ ಆಯಿತು. ಚಿತ್ರ ತೀರಾ ಕಳಪೆಯಲ್ಲ. ಆದರೆ ಸರಿಯಾಗಿ ಅದನ್ನು ಪ್ರಚಾರ ಮಾಡಿ, ಪ್ರದರ್ಶಿಸುವ ವ್ಯವಸ್ಥೆ ಆಗಲಿಲ್ಲ.

'ಕುಲಪುತ್ರ' ಶಂಕರ್‌ನಾಗ್, ಉದಯಕುಮಾರ್, ಲೀಲಾವತಿ, ದ್ವಾರಕೀಶ್, ಗಾಯತ್ರಿಯರಂಥ ಕಲಾವಿದರಿದ್ದಾರೆಂಬ ಕುತೂಹಲ ಬಿಟ್ಟರೆ ಕನ್ನಡೇತರರು ಹೊಸೆದ, ನೆಲದ ಸೊಗಡಿಲ್ಲದ ಚಿತ್ರ. ಸಾಹುಕಾರ್ ಜಾನಕಿಯಂಥ ಕಲಾವಿದೆಯನ್ನು ಕರೆತಂದು ಏನೂ ಸಾಧಿಸಲಿಲ್ಲ. ಈ ದಿನಗಳಲ್ಲಿ ಅವಸರದ ಚಿತ್ರಗಳು, ಕನ್ನಡೇತರರನ್ನು ಕರೆತಂದದ್ದು, ಅಥವಾ ತೆರಿಗೆ ವಿನಾಯಿತಿ ಸಲುವಾಗಿ ಸರ್ಕಾರದ ಯೋಜನೆಗಳನ್ನು ತುರುಕುವುದು ಇಂಥ ಅಸಡ್ಡಾಳತನಗಳು ಬಹಳವಾಗಿದ್ದವು. ಉದ್ಯಮ ಉಳಿಯಲಾಗಲೀ, ಕಲೆ ವಿಕಸನಗೊಳ್ಳುವುದಕ್ಕಾಗಲೀ ಯಾವ ವಾತಾವರಣವೂ ಇಲ್ಲವಾಗಿತ್ತು. ಅಗ ಈಗ ಒಂದು 'ರಂಗನಾಯಕಿ'ಯೋ ಮತ್ತೊಂದೋ ಬಂದರೆ ಅದೇ ಪರಮ ಭಕ್ಷ್ಯ.

'ಛಲಗಾರ' ಚಿತ್ರ ಬಹುಕಾಲ ಕಾಯಿಸಿ ಅಂತೂ ತೆರೆಗೆ ಬಂತು. ಆ ವೇಳೆಗೆ ಚಿತ್ರದ ಹಾಡುಗಳು ಜನಪ್ರಿಯವಾಗಿದ್ದವು. ಒಂದು-ಎರಡು ದಿನಕ್ಕಿಂತ ಹೆಚ್ಚು ಪ್ರದರ್ಶನವಾಗಲಿಲ್ಲ. ಚಿತ್ರಕ್ಕೆ ಕಥೆ, ಚಿತ್ರಕಥೆ, ಸಂಭಾಷಣೆ, ಗೀತೆ ಎಲ್ಲವನ್ನೂ ಪತ್ರಕರ್ತ ಶ್ಯಾಮಸುಂದರ ಕುಲಕರ್ಣಿ ನಿರ್ವಹಿಸಿದ್ದರು. ವಿಜಯಭಾಸ್ಕರ್ ಸಂಗೀತ ನಿರ್ದೇಶನ ಇತ್ತು. ಬಹುಕಾಲ ನೆನಪಿನಲ್ಲುಳಿದಂಥ ಸಾಹಿತ್ಯ, ರಾಗ ಸಂಯೋಜನೆ. 'ಮೂಡಣದಾ ರವೀ...', 'ಹೇಳಲೀ ನಾ ನಿನಗೆ...' ಮರೆಯಲಾಗದ, ಮರೆಯಬಾರದ ಹಾಡುಗಳು. ಇವರ ನಿರ್ದೇಶಕರು ಮೇಕಪ್ ರಾಜು.

'ಹಾವಿನ ಹೆಡೆ' ಪಾರ್ವತಮ್ಮ ರಾಜಕುಮಾರ್ ನಿರ್ಮಿಸಿದ ಚಿತ್ರ. ಕಥೆ-ಚಿತ್ರಕಥೆ ಆ ದಿನಗಳಲ್ಲಿ ಜನಪ್ರಿಯ ಬರಹಗಾರ ಎಂ.ಡಿ.ಸುಂದರ್ ನಿರ್ವಹಿಸಿದ್ದರು. ವಿ.ಸೋಮಶೇಖರ್ ಅವರ ಬಿಗಿಯಾದ ನಿರೂಪಣೆಯಿತ್ತು. ಜಿ.ಕೆ.ವೆಂಕಟೇಶ್ ಸಂಗೀತ, ಉದಯಶಂಕರ್ ಗೀತರಚನೆಗಳು ಸೊಗಸಾಗಿ ಸಮ್ಮಿಳಿತವಾಗಿದ್ದವು. ರಾಜಕುಮಾರ್‌ರ ಹಿಡುಗಾಲದ ಗೆಳೆಯ ಕುಂದಾನಿ ಸತ್ಯನ್ ಅವರ ಸಹನಿರ್ದೇಶನ, ಅಭಿನಯಗಳಿದ್ದವು. ಮುಂದೆ ಜನಪ್ರಿಯ ಚಿತ್ರನಿರ್ದೇಶಕರಾದ ಎಂ.ಎಸ್.ರಾಜಶೇಖರ್ ಸಹನಿರ್ದೇಶನ ಹಾಗೂ ಅಭಿನಯ ನಿರ್ವಹಿಸಿದ್ದರು. ಸಾಹಸವೇ ಅಧಿಕವಾಗಿದ್ದರಿಂದ ಹಲವು ಆಕ್ಷೇಪಗಳನ್ನು ರಾಜ್ ಅಭಿನಯದ ಚಿತ್ರಗಳ ಪ್ರೇಕ್ಷಕರಿಂದ ನಿರೀಕ್ಷಿಸಬೇಕಾಯಿತು. ಕೆಲವರು ಬದಲಾದ ಹಾದಿ ಎಂದು ಸ್ವಾಗತಿಸಿದ್ದೂ ಉಂಟು. ಹಳ್ಳಿಯ ಮುಗ್ಧನಾದಾಗ 'ಮುತ್ತಣ್ಣ' ಎಂದೂ ನಾಗರಿಕನಾದ ಮೇಲೆ 'ರಾಜ್' ಎಂದೂ ಬದಲಾಗುವುದು ಆಗ್ಗೆ ವಿಶೇಷ ಸಂಗತಿ. ರಾಜಕುಮಾರ್ ಸಹ ಅವರ ಪೂರ್ವಾಶ್ರಮವನ್ನು ನೆನೆದರೋ ಏನೋ ತನ್ಮಯರಾಗಿ ಮುಗ್ಧತೆಯನ್ನು ಪ್ರದರ್ಶಿಸಿದ್ದರು. ಈ ಚಿತ್ರದಲ್ಲಿಯ ಮತ್ತೊಂದು ವಿಶೇಷವೆಂದರೆ ನೃತ್ಯ-ಸಾಹಸಗಳ ಸಮ್ಮಿಲನ. 'ಬಿಸಿ ಬಿಸಿ ಕಜ್ಜಾಯ....' ಗೀತೆಗೆ ಶಾಸ್ತ್ರೀಯ ನೃತ್ಯದ ಲಯ, ಆಂಗಿಕ ಅಭಿನಯ - ಜೊತೆಗೇ ಹೊಂದಿಸಿದ ಹೊಡೆದಾಟ ಅತ್ಯಂತ ರಂಜನೀಯವೆನಿಸಿತ್ತು. ಈ ಸಾಂಗತ್ಯಕ್ಕೆ ಕೊಂಚ ಕಷ್ಟಪಟ್ಟಿದ್ದೂ ಹೌದು. 'ಹೂವಿಂದ ಬರೆದಾ ಕಥೆಯಾ...' ಮತ್ತು 'ಮೈ ನೇಮ್ ಈಸ್ ರಾಜ್...' ಗೀತೆಗಳು ಸೊಗಸಾಗಿದ್ದವು. ಅಪೂರ್ವ ಛಾಯಾಗ್ರಹಣ ಕೌಶಲ ಮಧು ಅವರಿಂದ ಕಾಣಬಹುದಿತ್ತು. ಮಧು ಎಂದರೆ ತಂತ್ರವಿಶೇಷ ಎಂಬುದರ ಹೊರತಾಗಿ ಕೂಡಾ ಅವರು ಗಮನ ಸೆಳೆದರು. ಹೊಸ ಹುಡುಗಿ ಸುಲಕ್ಷಣಾ ತೀರಾ ಎಳಸು ಅನ್ನಿಸಿತ್ತು. ಆ ಆಯ್ಕೆ ಬಗ್ಗೆ ರಾಜ್ ಸಂಸ್ಥೆ ಸಾಕಷ್ಟು ಆಕ್ಷೇಪಗಳನ್ನು ಕೇಳಬೇಕಾಯಿತು. ಬಹಳ ಕಾಲದಿಂದ ದೂರವೇ ಇದ್ದ ಕೆಲವರು ಒಳ ಬಂದದ್ದು, ಆವರೆಗಿನ ನಿರೂಪಣಾ ವಿಧಾನಕ್ಕಿಂತ ಬೇರೆಯಾಗಿದ್ದು ಈ ಚಿತ್ರದ ವಿಶೇಷ ಮತ್ತು ಹೊಸ ತಿರುವು.

'ಗಾಳಿಮಾತು' ತ.ರಾ.ಸು. ಅವರ ಕಾದಂಬರಿ ಆಧರಿಸಿದ ಚಿತ್ರ. ಯಶಸ್ವಿ ನಿರ್ದೇಶಕ ಜೋಡಿ ದೊರೈ-ಭಗವಾನ್ ತಮ್ಮ ಅನುಪಮ ಮೂವೀಸ್ ಲಾಂಛನದಲ್ಲಿ ತಯಾರಿಸಿದರು. ಒಂದು ಕಾಲಕ್ಕೆ ಹೊಂದುವ ಕಥೆ. ತೆರೆಗೆ ಬಂದ ಹೊತ್ತಿಗೆ ೧೯೮೧ರ ಸಮಾಜ, ವ್ಯಕ್ತಿಗಳು ಬಹಳ ಮುಂದೆ ಇದ್ದರು. ಆದರೂ ಈ ನಿರ್ದೇಶಕರ ಕಥೆ ಹೇಳುವ ಕಲೆಯೇ ಖುಷಿ ತರುತ್ತದೆ. ಕನ್ನಡವೆಂಬ ಸೊಗಡು ಪ್ರತಿಯೊಂದು ಹೆಜ್ಜೆಗೂ ತುಂಬಿಕೊಡುವ ರೀತಿಯೇ ಚೆನ್ನ. ಪಾತ್ರಗಳ ಇರುಸರಿಕೆ, ವೇಷ ಭೂಷಣ ಎಲ್ಲವೂ ಸರಾಗವಾಗಿದ್ದವು. ಆದರೆ ಒಂದು ನಾಟಕೀಯ ಅನುಭವ ಅಯಿತಾಗಲೀ ಸಿನಿಮಾ ಅನ್ನಿಸಿರಲಿಲ್ಲ. ಚಿತ್ರದಲ್ಲಿ ಒಂದರ್ಥದಲ್ಲಿ ನಾಯಕನಟರಾಗಿದ್ದವರು ಜೈಜಗದೀಶ್. ಕೋಕಿಲಾ ಮೋಹನ್ ಸಹ ಇದ್ದರು. 'ಒಮ್ಮೆ ನಿಮ್ಮನ್ನು ಕಣ್ತುಂಬ ನೋಡುವಾಸೆ...' ಮತ್ತು ಕೋಕಿಲಾ ಮೋಹನ್ ಭಾಗವಹಿಸಿದ್ದ ನೃತ್ಯ ನಾಟಕ ಗೀತೆ 'ನಮ್ಮೂರ ಸಂತೇಲಿ ಮುಸ್ಸಂಜೆ ಹೊತ್ತಲ್ಲಿ...' ನೆನಪಿನಲ್ಲುಳಿಯುವಂಥವು.

'ನಾರಿ ಸ್ವರ್ಗಕ್ಕೆ ದಾರಿ' ಸಿದ್ಧಲಿಂಗಯ್ಯ ನಿರ್ದೇಶನದ ಚಿತ್ರ. ಸೃಜನಶೀಲ ಕೃತಿಗಳು ಆಯಾ ಘಟ್ಟದಲ್ಲಿ ಕೃತಿಕಾರನ ಮನೋಧರ್ಮವನ್ನು ಸ್ವಲ್ಪ ಮಟ್ಟಿಗಾದರೂ ಪ್ರಕಟಿಸಿಬಿಡುತ್ತವೆ ಎಂಬ ಮಾತನ್ನು ಸಿದ್ದಲಿಂಗಯ್ಯನವರೂ ಒಪ್ಪುತ್ತಾರೆ. ಅವರ ಬದುಕಿನ, ಪರಿಸರದ ಯಾವುದೋ ಅಂಶ ವಿವೇಕವನ್ನು ಮೀರಿ ವಿಜೃಂಭಿಸಿದಾಗ ಕೊಂಚ ಹಸಿ, ಮೇಲ್‌ಸ್ತರ ಅನ್ನಿಸುವಂಥ ನಿರೂಪಣೆಗಳು ಆಗಿಬಿಟ್ಟಿವೆ. ಅದಕ್ಕೆ ಉದಾಹರಣೆ 'ನಾರಿ ಸ್ವರ್ಗಕ್ಕೆ ದಾರಿ'. ತಮಿಳಿನ ಐಕಣ್ಣು ಅವರ ಕಥೆಯನ್ನು ಅಧರಿಸಿ ಈಶ್ವರೀ



(ಚಿತ್ರ ೧೮) 'ಗಾಳಿಮಾತು' ಚಿತ್ರದಲ್ಲಿ ಲಕ್ಷ್ಮೀ ಮತ್ತು ಜೈಜಗದೀಶ್



(ಚಿತ್ರ ೧೯) 'ಪ್ರಚಂಡ ಪುಟಾಣಿಗಳು' ಚಿತ್ರದಲ್ಲಿ ಮಾ। ನವೀನ್, ಬೇಬಿ ಇಂದಿರಾ, ಮಾ। ರಾಮಕೃಷ್ಣಹೆಗಡೆ, ಮತ್ತು ಮಾ।ಭಾನುಪ್ರಕಾಶ್

ಪಿಕ್ಚರ್ಸ್‌ನವರಿಗಾಗಿ ಸಿದ್ಧ ಮಾಡಿದರು. ಎಂ.ಡಿ.ಸುಂದರ್ ಅವರ ಚಿತ್ರಕಥೆಯಿದ್ದೂ ಬಿಗುವಿರಲಿಲ್ಲ. 'ರಾಮ'ನಂಥ ಗಂಡನು, ಅವನ ಮಾತಿಗೆ ತಿರುಗಿಲ್ಲ. ಆದ್ದರಿಂದ ಭ್ರೂಣಹತ್ಯೆಗೂ ಸಿದ್ಧವಾಗುವ ಸೀತೆಯಂಥ ಹೆಂಡತಿ. ಇಂಥ ವೈಭವೀಕರಣದಿಂದಲೇ ಸ್ತ್ರೀತ್ವದ ಹೆಚ್ಚಳ ಹೇಳುವ ಪ್ರಯತ್ನ. ಅಸಹಜ-ಅಮಾನವೀಯ ಎನಿಸಿತ್ತು. ಚಿತ್ರದಲ್ಲಿ ಸಂಯಮದಿಂದ ಅಭಿನಯಿಸಿದ್ದ ಶ್ರೀನಿವಾಸಮೂರ್ತಿ ಅವರಿಗೆ ಪೋಷಕ ನಟ ಪ್ರಶಸ್ತಿ ಬಂದಿತ್ತು.

ಇವೆಲ್ಲದರ ನಡುವೆ ಒಂದು 'ಛಾಯೆ', ಇನ್ನೊಂದು 'ಪ್ರಿಯತಮೆ' ಕೂಡಾ ತೆರೆಗೆ ಬಂದು ಹೋಗಿವೆ.

'ಪ್ರಚಂಡ ಪುಟಾಣಿಗಳು' ಎಂ.ಕೆ.ಬಾಲಾಜಿಸಿಂಗ್ ನಿರ್ಮಿಸಿದ ಚಿತ್ರ. ಬಾಲಾಜಿಸಿಂಗ್ ಒಲವು ಬಹುತೇಕ ಮಕ್ಕಳ ಚಿತ್ರಗಳ ಕಡೆಗೇ ಇತ್ತು. 'ನಾಗರಹೊಳೆ', 'ಪುಟಾಣಿ ಏಜೆಂಟ್ ೧ ೨ ೩' ಇತ್ಯಾದಿ ಚಿತ್ರಗಳ ನಿರ್ಮಾಣದಲ್ಲಿ ಅವರ ಪಾತ್ರವಿತ್ತು. ಹೃದಯವಂತ, ಸ್ನೇಹಮಯಿ, ಸಾಹಸಿ ನಿರ್ಮಾಪಕರಿವರು. ಚಿತ್ರಗಳು ಸೋತದ್ದಾಗಲೀ, ತೆರೆಗೇ ಬರದೆ ನಿಂತುಹೋದುದಾಗಲೀ ಅವರ ಪ್ರಯತ್ನಗಳಿಗೆ ತಡೆ ಮಾಡಲಿಲ್ಲ. ನಿರಂತರವಾಗಿ ತಾನು ಬದುಕಿರುವವರೆಗೂ ಚಿತ್ರ ನಿರ್ಮಿಸುತ್ತಲೇ ಹೋದರು. ಹೊಸ ಹೊಸ ಬಾಲನಟರು, ನಟ-ನಟಿಯರನ್ನು ತೆರೆಗೆ ಪರಿಚಯಿಸಿದ ರಿಸ್ಕ್ ಸಹ ತೆಗೆದುಕೊಂಡರು. ಚಿಕ್ಕಮಗಳೂರಿನವರಾದ ಬಾಲಾಜಿಸಿಂಗ್ ಅವರನ್ನು 'ಮಕ್ಕಳ ರಾಜ' ಎಂಬ ಬಿರುದು ಕೊಟ್ಟು ಗೌರವಿಸಿತ್ತು 'ಕನ್ನಡ ಸಂಘ'. 'ಪ್ರಚಂಡ ಪುಟಾಣಿಗಳು' ಚಿತ್ರದಲ್ಲಿ ಜನಪ್ರಿಯ ತಾರೆಯರು ಮಕ್ಕಳ ಜೊತೆಗೆ ಅಭಿನಯಿಸಿದರು. ಗೀತಪ್ರಿಯರ ನಿರ್ದೇಶನದಲ್ಲಿ ಹೊರ ಬಂದ ಯಶಸ್ವಿ ಚಿತ್ರ.

ಬಾಲಾಜಿಸಿಂಗ್ ಅವರೇ ಬರೆದ ಕಥೆ. ಮಕ್ಕಳ ಸಾಹಸವೇ ಪ್ರಧಾನ. ಚಿತ್ರಕಥೆ-ಸಂಭಾಷಣೆ ಟಿ.ಎಸ್.ನರಸಿಂಹನ್ ಅವರದು. ಶೇಖರ್ ಛಾಯಾಗ್ರಹಣ ಮಾಡಿದರು. ಉಪೇಂದ್ರಕುಮಾರ್ ರಾಗಸಂಯೋಜನೆಯಲ್ಲಿ ಗೀತಪ್ರಿಯ, ವಿಜಯನಾರಸಿಂಹ, ಆರ್.ಎನ್.ಜಯಗೋಪಾಲ್, ಟಿ.ಎಸ್.ನರಸಿಂಹನ್, ದೊಡ್ಡರಂಗೇಗೌಡ ಬರೆದ ಸೊಗಸಾದ ಗೀತೆಗಳಿದ್ದವು. 'ಜೈ ಜೈ ಹನುಮಂತ, ಜೈ ಜೈ ಧೀಮಂತ....' ತುಂಬ ಜನಪ್ರಿಯವಾದ ಗೀತೆ. 'ಪ್ರಚಂಡ ಪುಟಾಣಿಗಳು ನಾವು ಪುಂಡರ ಹಿಡಿಯಲು ಹೊರಟಿಹೆವು...' ಶೀರ್ಷಿಕೆ ಗೀತೆ 'ಚಿನ್ನದ ನಾಡಿನ ಚಿಗುರೆಗಳೆ ಗಂಧದ ನಾಡಿನ ಮುತ್ತುಗಳೇ...' ಮತ್ತು 'ಟಾಮಿ ಟಾಮಿ ಫಾಲೋ ಮಿ...' ಎಂಬ ತಮಾಷೆಯಾದ ಹಾಡೊಂದಿತ್ತು. 'ಈ ಪರಪಂಚವೊಂದು ಸಂತೆಯಾಗಿದೆ, ಠಕ್ಕ ಠಿಕ್ಕಿ ಮಾಡಿಕೊಂಡು...' ಎಂಬ ಜಾನಪದ ಧಾಟಿಯ ಪಾರಮಾರ್ಥವನ್ನು ಸೂಚಿಸುವ ಗೀತೆಯೊಂದಿತ್ತು. ಇವೆಲ್ಲವೂ ಸೊಗಸಾಗಿ ಚಿತ್ರಿತವಾಗಿದ್ದವು. ಮಾ।ರಾಮಕೃಷ್ಣ ಹೆಗಡೆ, ಬೇಬಿ ಇಂದಿರಾ, ಮಾ।ಭಾನುಪ್ರಕಾಶ್, ಮಾ।ನವೀನ್ ಲವಲವಿಕೆಯಿಂದ ಅಭಿನಯಿಸಿದರು. ಕನ್ನಡದಲ್ಲಿ ಮಕ್ಕಳ ಚಿತ್ರ ತೆಗೆಯುವ ಸಾಹಸಿಗರೇ ವಿರಳ. ಒಂದೆ ಒಂದೆರಡು ಪ್ರಯತ್ನ ಬಿಟ್ಟರೆ ಬಾಲಾಜಿಸಿಂಗ್ ಮತ್ತವರ ಮಿತ್ರರು ಮಾಡಿದ ಸಾಹಸಗಳು, ಅನಂತರ ಟಿ.ಎಸ್.ನರಸಿಂಹನ್ ಅವರ ಪ್ರಯೋಗಗಳು ವಿಶೇಷವಾಗಿ ಹೇಳಬಹುದಾಗಿದೆ. ಇಂಥ ಚಿತ್ರಗಳ ನಿರ್ದೇಶಕರಲ್ಲಿ ಕೂಡಾ ಗೀತಪ್ರಿಯ-ವಾದಿರಾಜ್ ವಿಶೇಷವಾಗಿ ಗಮನ ಸೆಳೆಯುತ್ತಾರೆ. ಚಿತ್ರಗಳ ಯಶಸ್ಸಿನ ಮಾತು ಏನೇ ಇರಲಿ, ಇಂಥ ಪ್ರಯತ್ನವೇ ತುಂಬ ಮುಖ್ಯವಾದ್ದು.

'ನಾಗ ಕಾಳ ಭೈರವ' ಚಿತ್ರದಲ್ಲಿ 'ಭೈರವ' ಎಂಬ ನಾಯಿಯನ್ನು ಬಳಸಲಾಗಿತ್ತು. ಅಭ್ಯಾಸವಾಗಿದರೂ ಏಕೋ ಕೆರಳಿ ಚಂದ್ರಶೇಖರ್ ಅವರ ಮೇಲೆ ಹಾರಿ ಒಂದಿಷ್ಟು ಮಾಂಸ ಕಿತ್ತುಹಾಕಿತ್ತು. ಇಂಜೆಕ್ಷನ್ ನೋವು, ಆದ ಗಾಯದ ನೋವು ಸೇರಿ ಚಂದ್ರಶೇಖರ್ ಒದ್ದಾಡಿಬಿಟ್ಟರು. ದೃಶ್ಯವೊಂದರಲ್ಲಿ ಎಲ್ಲಿ ನೋಡಿದರೂ ಹಾವುಗಳಿದ್ದವು. ಧೀರೇಂದ್ರಗೋಪಾಲ್‌ರಿಗೆ ಈ ಬಗೆಯ ಜೀವಿಗಳೆಂದರೆ ಭಯ. ನಿರ್ದೇಶಕ ತಿಪಟೂರು ರಘು ಅವರು ಆ್ಯಕ್ಷನ್ ಎಂದಾಗ ಮೇಲೆ ತೂಗುದೀಪಕ್ಕೆ ಸುತ್ತಿದ್ದ ಹಾವು ಪಟಕ್ಕನೆ ಕೆಳಗೆ ಬಿದ್ದು ಮತ್ತಷ್ಟು ಹೆದರಿದರು. "ಏನಾದರೂ ಮಾಡಿ ನೆಪ ಹೇಳಿ ಈ ಚಿತ್ರದಿಂದ ತಪ್ಪಿಸಿಕೊಳ್ಳಬೇಕೆಂದರೂ ಆಗಲಿಲ್ಲ" ಎಂದು ಪೇಚಾಡಿಕೊಂಡಿದ್ದರು ಧೀರೇಂದ್ರಗೋಪಾಲ್. ಈ ಚಿತ್ರದಲ್ಲಿ ನಾಯಿ, ಹಾವು, ಗೂಳಿಗಳೇ ಮುಖ್ಯ. ಗೂಳಿ ವಿಷ್ಣುವರ್ಧನ್ ಅವರ ಜೊತೆ ಸೆಣಸುವ ದೃಶ್ಯವೂ ಇತ್ತು. ಛಾಯಾಗ್ರಾಹಕ ಬೆಂಜಮಿನ್ ಸಹ ವಿಚಿತ್ರ ದೃಶ್ಯಗಳನ್ನು ಸಾಹಸದಿಂದಲೇ ಸೆರೆ ಹಿಡಿಯಬೇಕಾಗಿತ್ತು. ಜಯಂತಿ, ಪ್ರಭಾಕರ್, ದಿನೇಶ್, ಮುಸುರಿ, ಜಯಮಾಲಾ ಮೊದಲಾದವರ ತಾರಾಗಣವೂ ಇತ್ತು. ಪ್ರಸಿದ್ಧ ಗೀತರಚನಕಾರರು ಹಾಡು ಬರೆದಿದ್ದರು. 'ನಗುವುದೆ ಸ್ವರ್ಗ ಅಳುವುದೆ ನರಕ...' ಚಿ.ಉದಯಶಂಕರ್ ಅವರ ಗೀತೆಯನ್ನು ವಿಷ್ಣುವರ್ಧನ್ ಹಾಡಿದ್ದರು. ಥೀಮ್ ಪದಗಳು ಬೇರೆ ಬೇರೆ ರೀತಿಯಲ್ಲಿ ಪುನರಾವರ್ತನೆ ಮಾಡುತ್ತ ಗಿಟಾರ್ ಧ್ವನಿ ಕೊಟ್ಟಿದ್ದು ಚೆನ್ನ. ವಿಷ್ಣುವರ್ಧನ್ ಜಾನಕಿ ಹಾಡಿದ ಗೀತಗ ಗದ ಲಿ ಹೆಚ್ಚೆನಿಸಿದರೂ ಭಾವನೆಗಳನ್ನು ಮೀಟುವಂತಿತ್ತು. ವಿಜಯನಾರಸಿಂಹರ ಮೂರು ರಚನೆಗಳಿದ್ದವು. 'ಚಿಮ್ಮಿತು...' ಗೀತ ಚೆನ್ನಾಗಿದ್ದರೂ ವಾದ್ಯ ಧ್ವನಿ ಹೆಚ್ಚೆನಿಸಿತ್ತು. 'ನಮ್ಮೀ ಬಾಳೆ..' ಜೇಸುದಾಸ್ ಹಾಗೂ ಬಹಳ ದಿನಗಳ ನಂತರ ಬೆಂಗಳೂರು ಲತಾ ಹಾಡಿದ್ದರು.



(ಚಿತ್ರ ೨೦) 'ನಾರಿ ಸ್ವರ್ಗಕ್ಕೆ ದಾರಿ' ಚಿತ್ರದಲ್ಲಿ ಆರತಿ



(ಚಿತ್ರ ೨೧) 'ಗೀತಾ' ಚಿತ್ರದಲ್ಲಿ ಅಕ್ಷತಾರಾವ್ ಮತ್ತು ಶಂಕರ್‌ನಾಗ್

'ಹಣ ಬಲವೋ ಜನ ಬಲವೋ' ಚಿತ್ರದ ನಿರ್ಮಾಪಕರು ಛಾಯಾಗ್ರಾಹಕ ವಿ.ಕೆ.ಕಣ್ಣನ್. ಅವರೇ ಛಾಯಾಗ್ರಹಣವನ್ನು ನಿರ್ವಹಿಸಿದ್ದ ಈ ಚಿತ್ರಕ್ಕೆ ಎಂ.ಡಿ.ಸುಂದರ್ ಅವರ ಕಥೆ-ಚಿತ್ರಕಥೆಯಿತ್ತು. ವಿಜಯ್ ನಿರ್ದೇಶನವಿತ್ತು. ಶಂಕರ್‌ನಾಗ್, ಎಂ.ಪಿ.ಶಂಕರ್, ಮಾಧವಿ, ಲೀಲಾವತಿ ಇವರುಗಳನ್ನು ಬಿಟ್ಟರೆ ಭಾರಿ ಎನ್ನುವಂಥ ತಾರಾಗಣವಿರಲಿಲ್ಲ. ವಿಶ್ವಸಾಗರ್ ಅವರನ್ನು ಹೊಸದಾಗಿ ಪರಿಚಯಿಸಲಾಗಿತ್ತು. ಒಂದು ಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಧನವಂತನೊಬ್ಬನ ಅಟ್ಟಹಾಸವನ್ನು ಮಣಿಸಲು ಗ್ರಾಮಸ್ಥರನ್ನೇ ಒಂದುಗೂಡಿಸಿಕೊಂಡು ಪ್ರತಿಭಟಿಸುವ ಒಳ್ಳೆಯದೊಂದು ಆಲೋಚನೆ. ಚಿತ್ರ ಸರಿಯಾಗಿ ಜನಮನ ತಲುಪಲಿಲ್ಲವೆಂಬುದೊಂದು ದುರಂತ. ಹೇಳಬೇಕಾದ ಮಾತು ದೃಶ್ಯವಾಗಿ ಬರದೆ ಕರಪತ್ರವಾದರೆ ಏನಾಗಬಹುದೋ ಅದೇ ಇಲ್ಲೂ ಆಯಿತು. ವಿಜಯ್‌ರಂಥ ಸಾಹಸ ಸಂಯೋಜಕರಿದ್ದೂ ವಿಶೇಷವಾದ್ದೇನೂ ಸಾಧಿತವಾಗಲಿಲ್ಲ.

ಎಸ್.ಭಕ್ತವತ್ಸಲನ್-ಎ.ಎಸ್.ಮೂರ್ತಿಗಾಗಿ ಶಂಕರ್‌ನಾಗ್ ನಿರ್ದೇಶಿಸಿದ ಚಿತ್ರ 'ಗೀತಾ'. ಪ್ರಣಯ ಪ್ರಧಾನ ಕಥೆ. ಗಾಯಕನ ಫ್ಯಾನ್, ಪ್ರೇಯಸಿಯಾಗಿ, ಮುಂದೆ ಕ್ಯಾನ್ಸರ್‌ಗೆ ತುತ್ತಾಗುವ ದುರಂತ. ಶಂಕರ್‌ನಾಗ್‌ಗೆ ಜನನಾಡಿ ಹಿಡಿಯುವ ಜಾಣತನ ಇತ್ತು. ಚಿತ್ರ ಕೊಂಚ ಭಿನ್ನ ಶೈಲಿಯದು. ಗತಿ ನಿಧಾನ, ಆದರೆ ಬೇರೆ ಬೇರೆ ಆಕರ್ಷಕ ಅಂಶಗಳಿಂದಾಗಿ ಸಹನೀಯ. ಶಂಕರ್‌ನಾಗ್ ನಾದಿನಿ ಅಕ್ಷತಾರಾವ್ ಚಿತ್ರದ ನಾಯಕಿ. ಮುದ್ದು ಮುದ್ದಾದ ಗೊಂಬೆಗಳನ್ನು ನೋಡಿ ಅಭ್ಯಾಸವಾದ ಕಣ್ಣುಗಳಿಗೆ ಈಕೆಯ ಮುಖ, ಮಾತು ಕೊಂಚ ಕಷ್ಟವಾಗಿತ್ತು. ಆದರೆ ಪಾತ್ರ ಬೆಳೆದಂತೆ, ಖಾಯಿಲೆಯ ವಿವಿಧ ಹಂತಗಳನ್ನು ಬೇರೆ ಬೇರೆ ಮೇಕಪ್‌ನಲ್ಲಿ ತೋರಿಸುವ ರೀತಿ ಪಾತ್ರಕ್ಕೆ ಬದುಕಿನ ಬಗ್ಗೆ ಇದ್ದ ಪ್ರೀತಿ, ಕುತೂಹಲ ತಂದು ಎಲ್ಲ ಕೊರತೆಯನ್ನು ಮರೆಸಿಬಿಡುತ್ತಿತ್ತು. ಚಿತ್ರದಲ್ಲಿ ಹೊಸಬರಾಗಿ ಕಂಡ ಲೋಹಿತಾಶ್ವ ಗಮನ ಸೆಳೆದರು. ಚಿತ್ರದ ಪ್ರಮುಖ ಅಂಶಗಳೆಂದರೆ ಇಳಯರಾಜ ಸಂಗೀತದ 'ಜೊತೆಯಲಿ ಜೊತೆ ಜೊತೆಯಲಿ...' ಮುಂತಾದ ಹಾಡುಗಳು ಮತ್ತು ಗೌರಿಶಂಕರ್ ಛಾಯಾಗ್ರಹಣ. ಒಂದು ಯಶಸ್ವಿ ಚಿತ್ರ 'ಗೀತಾ'. ಜನಪ್ರಿಯ ಧಾಟಿಯಲ್ಲಿ ವಿಭಿನ್ನ ನಿರೂಪಣೆಯನ್ನು ತರುವ ಸಾಧ್ಯತೆಯನ್ನು ತೋರಿದ ಚಿತ್ರ.

'ಕೂಡಿ ಬಾಳಿದರೆ ಸ್ವರ್ಗ ಸುಖ' ಎಂ.ಕೆ.ಜಯಲಕ್ಷ್ಮೀಯವರ ಕಾದಂಬರಿಯನ್ನು ಆಧರಿಸಿತ್ತು. ಶ್ರೇಷ್ಠ ನಿರ್ದೇಶಕ ಸಿದ್ದಲಿಂಗಯ್ಯನವರೇ ಚಿತ್ರಕಥೆ ಹಾಗೂ ನಿರ್ದೇಶನ ಮಾಡಿದ್ದುದಲ್ಲದೆ, ಎಸ್.ಎನ್.ಪಾರ್ಥನಾಥ್ ಅವರೊಂದಿಗೆ ನಿರ್ಮಾಪಕರೂ ಆಗಿ ಚಿತ್ರವನ್ನು ತಯಾರಿಸಿದ್ದರು. ಈ ಚಿತ್ರಕ್ಕೆ ಖ್ಯಾತ ಶಾಸ್ತ್ರೀಯ ನೃತ್ಯಪಟು ಉಷಾದಾತಾರ್ ನೃತ್ಯ ಸಂಯೋಜಿಸಿದ್ದರು. ಚಿತ್ರದಲ್ಲಿ ಸಿದ್ದಲಿಂಗಯ್ಯನವರೇ ತೆರೆಗೆ ತಂದ ಶ್ರೀನಿವಾಸಮೂರ್ತಿ ಅಭಿನಯಿಸಿದ್ದರು. ಗ್ರಾಮೀಣ ಬದುಕಿನ ಒಳಾಂಗಣಗಳನ್ನು ಸೊಗಸಾಗಿ ಚಿತ್ರಿಸಿದ್ದರು ಸಿದ್ದಲಿಂಗಯ್ಯ. ರಾಷ್ಟ್ರೀಯ ನಾಟಕಶಾಲೆಯ ಪದವೀಧರೆ ಕೆ.ಎನ್.ಭಾರತಿ ಮೊದಲಾದವರು ಇದ್ದರು. ಎನ್.ಎಸ್.ರಾವ್-ಭಂಗೀರಂಗ ಗ್ರಾಮೀಣ ಭಾಷೆಯನ್ನು ಬಳಸಿ ಸಂಭಾಷಣೆ ರಚಿಸಿದ್ದರು. ಗ್ರಾಮೀಣ ಜಾನಪದ ಕಲೆಗಳನ್ನೆಲ್ಲ ದುಡಿಸಿಕೊಳ್ಳಲಾಗಿತ್ತು. ಸಿದ್ದಲಿಂಗಯ್ಯನವರು ಗ್ರಾಮೀಣ ಪರಿಸರವನ್ನು ಸೊಗಸಾಗಿ ಹಿಡಿದಿಡಬಲ್ಲರು. ಅವರು ಪಾತ್ರ ಪೋಷಣೆಯಲ್ಲಿ ಸ್ತ್ರೀಯರ ಪರವಾಗಿಲ್ಲ, ಭ್ರೂಣಹತ್ಯೆಯನ್ನೇಕೋ ಪದೇ ಪದೇ ಬೆಂಬಲಿಸುತ್ತಾರೆ ಎನ್ನುವ ಆಕ್ಷೇಪ ಈ ಚಿತ್ರದ ಬಗೆಗೂ ಇತ್ತು. ಬದಲಾಗುತ್ತಿರುವ ಮೌಲ್ಯಗಳು ಗ್ರಾಮೀಣ ಬದುಕಿನ ಆಳವನ್ನೇನೂ ಹೊಕ್ಕಿಲ್ಲ. ಇಲ್ಲಿ ಇನ್ನೂ ಸೇಡು, ಪ್ರತೀಕಾರ, ಸ್ವಪ್ರತಿಷ್ಠೆಗಳಿಗಾಗಿ ಮಾನವೀಯ ಮೌಲ್ಯಗಳು - ಮುಗ್ಧತೆಯ ಬಲಿಯಾಗುತ್ತಿದೆ ಎಂದು ಹೇಳುವ ಪ್ರಯತ್ನ ಮಾಡಿದ್ದರು ಸಿದ್ದಲಿಂಗಯ್ಯ. ಸಾಮಾನ್ಯವಾಗಿ ಪ್ರಣಯ ಸನ್ನಿವೇಶದಲ್ಲಿ ನವಿಲಿನ ನರ್ತನ, ಕೋಗಿಲೆಯ ಕುಕಿಲುಗಳ ಕ್ಲೀಷೆಯನ್ನು ಬಿಟ್ಟು ಮೇಕೆಯ ಕೂಗನ್ನು ಬಳಸಲಾಗಿತ್ತು. ಶಬ್ದಗಳನ್ನು ಆಯಾ ಪರಿಸರಕ್ಕೆ ಹೊಂದುವಂತೆ ಅದಾಗಲೇ ಇದ್ದ 'ಮಾದರಿ'ಗಳನ್ನು ಮುರಿದು ಹೊಸತಾಗಿ ತರುವ ಈ ವಿಧಾನ ವಿಶೇಷವಾಗಿತ್ತು. ಮೊದಲ ಬಾರಿಗೆ ನಾಯಕನಟನಾಗಿ ಶ್ರೀನಿವಾಸಮೂರ್ತಿ ಸೊಗಸಾಗಿ ಅಭಿನಯಿಸಿದ್ದರು. ಉದಯ ಜಾದೂಗಾರ್, 'ಶಂಕರಾಭರಣಂ' ಚಿತ್ರದ ಬಾಲನಟಿಯಾಗಿದ್ದ, ಈಗ ನಿರ್ದೇಶಕ ಶಿವಮಣಿ ಅವರ ಮಡದಿಯೂ ಆಗಿರುವ ರಾಜಲಕ್ಷ್ಮೀ ಈ ಚಿತ್ರದಲ್ಲಿ ಅಭಿನಯಿಸಿದ್ದರು. ಸರ್ಕಾರೀ ಅಧಿಕಾರಿ, ರಂಗಕಲಾವಿದ ರಾಜಾರಾಂ ಪೋಷಕ ಪಾತ್ರದಲ್ಲಿ ಗಮನ ಸೆಳೆದರೆ, ಲೋಕನಾಥ್ ಅಭಿನಯದ ಏರುಮಜಲುಗಳು ಇಲ್ಲಿ ಕಾಣಸಿಕೊಂಡವು. ಇಷ್ಟಾದರೂ ಅನೇಕ ಅಸಹಜ, ಅತಾರ್ಕಿಕ ಅಂಶಗಳೂ ಇದ್ದವೆಂಬುದು ಒಂದು ಕೊರತೆ.



(ಚಿತ್ರ ೨೨) 'ಕೂಡಿ ಬಾಳಿದರೆ ಸ್ವರ್ಗ ಸುಖ' ಚಿತ್ರದಲ್ಲಿ ರಾಜಲಕ್ಷ್ಮೀ ಮತ್ತು ಶ್ರೀನಿವಾಸಮೂರ್ತಿ



(ಚಿತ್ರ ೨೩) 'ಕೆರಳಿದ ಸಿಂಹ' ಚಿತ್ರದಲ್ಲಿ ರಾಜಕುಮಾರ್, ಶ್ರೀನಿವಾಸಮೂರ್ತಿ, ಸರಿತಾ ಮತ್ತು ಪಂಢರಿಬಾಯಿ

ಡಾ।ಚಂದ್ರಶೇಖರ ಕಂಬಾರರ ನಿರ್ದೇಶನದ 'ಸಂಗೀತಾ' ವಿವಿಧ ವಿಭಾಗಗಳಲ್ಲಿ ೧೯೮೦-೮೧ರ ಸಾಲಿನ ಐದು ರಾಜ್ಯ ಪ್ರಶಸ್ತಿಗಳನ್ನು ಗಳಿಸಿತು. ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಹಾಗೂ ಕಂಬಾರರಿಗೆ ಅತ್ಯುತ್ತಮ ಕಥೆ, ಸಂಗೀತ, ಚಿತ್ರಕಥೆಗಾಗಿ ಮೂರು ಪ್ರಶಸ್ತಿಗಳು ಬಂದವು. ಪ್ರಮಿಳಾ ಜೋಷಾಯ್ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಪಡೆದರು. 'ಸಂಗೀತಾ' ಚಂದ್ರಶೇಖರ ಕಂಬಾರರ 'ನಾಯಿಕತೆ' ನಾಟಕ ಕೃತಿಯನ್ನು ಆಧರಿಸಿದ್ದು. ಜೀತ ಪದ್ಧತಿಯ ಹಿನ್ನೆಲೆಯಿದ್ದರೂ ಹಿಂಸೆಯು ಅತಿರೇಕವಾದಾಗ ಇಲಿಯೂ ಬೆಕ್ಕಿಗೆ ತಿರುಗಿ ಬೀಳುತ್ತದೆ ಎಂಬಂತೆ, ದುರ್ಬಲರೂ ಪ್ರತಿಭಟಿಸಬಲ್ಲರು ಎಂಬುದನ್ನು ಹೇಳಲಾಗಿದೆ. ನಾಯಿಯು ಹಾಗೆ ಸೇವೆ ಮಾಡುವ ಜೀತದಾಳಿನ ಹೆಂಡತಿಯ ಜೊತೆಗೇ ಸರಸವಾಡುವ ಜಮೀನ್ದಾರನ ಕ್ರೂರ ನಡವಳಿಕೆ, ಜೀತದಾಳಿನ ಹೆಂಡತಿಯೇ ಗಂಡನಲ್ಲಿ ಕ್ರೌರ್ಯ ತುಂಬಿ ಪ್ರತಿಭಟಿಸುವಂತೆ ಮಾಡುವುದು ಇತ್ಯಾದಿಗಳ ಮೂಲಕ ಬಡವರ ಆಕ್ರೋಶದ ಒಳ ಮುಖಗಳನ್ನು ತೆರೆದಿಡುವ ಪ್ರಯತ್ನವಿದೆ. ಲೋಕೇಶ್, ಜಯಮಾಲಾ ಅಭಿನಯದಲ್ಲಿ ವಿಶೇಷವಿತ್ತು.

'ಕಾಕನ ಕೋಟೆ' ಚಿತ್ರದ ಸಿ.ಆರ್.ಸಿಂಹ ಮಸಾಲೆ ಬೆರೆತ ಸಾಹಸ ಪ್ರಧಾನ ಚಿತ್ರ 'ಶಿಕಾರಿ' ನಿರ್ದೇಶಿಸುತ್ತಾರೆಂದಾಗ ಅಪಾರ ಕುತೂಹಲವಿತ್ತು. ಇದು ನಟ ಶ್ರೀನಾಥ್‌ರ ನಿರ್ಮಾಣದ ಪ್ರಥಮ ಚಿತ್ರ. ಆದರೆ ಯಾವ ಬಗೆಯ ಹೊಸತನವೂ ಇಲ್ಲದೆ ನಿರಾಸೆಗೊಳಿಸಿತು. ಈ ಚಿತ್ರದಲ್ಲಿ ಶ್ರೀನಾಥ್ ಕೊಲೆಗಾರ / ಇನ್ಸ್‌ಪೆಕ್ಟರ್ ಆಗಿ ದ್ವಿಪಾತ್ರದಲ್ಲಿ ಅಭಿನಯಿಸಿದ್ದರು. "ಕಥೆ ತುಂಬ ಇಷ್ಟವಾಯಿತು. ನನ್ನ ಅಣ್ಣನಿಗೆ ನಿರ್ದೇಶನದ ಅನುಭವವೂ ಇತ್ತು. ಸೇರಿಕೊಂಡೆವು" ಎಂದಿದ್ದರು ಶ್ರೀನಾಥ್. ಈ ಚಿತ್ರದಲ್ಲಿ ಒಂದು ಅರಬ್ಬಿ ಶೈಲಿಯ ಬ್ಯಾಲೆ ಮತ್ತು ಅದಕ್ಕೆ ಬಳಸಿಕೊಂಡ ಪಾಪ್ ಗೀತೆ ಮುಖ್ಯವಾಗಿ ನೆನೆಯಬೇಕಾದವು. ಅಭಿಮಾನ್ ಸ್ಟುಡಿಯೋದಲ್ಲಿ ಹೊಸ ವಿನ್ಯಾಸದಲ್ಲಿ ಭಾರಿ ಡೆನ್ ಸೆಟ್ ಹಾಕಿ, ಮಂಜುಳಾ ಹಾಡುತ್ತಿದ್ದ ಪಾಪ್ ಗೀತೆಗೆ ಸಮೂಹ ನೃತ್ಯವನ್ನು ಸಂಯೋಜಿಸಿದ್ದರು. ರಂಗಭೂಮಿಯ ಟಿ.ಎನ್.ನರಸಿಂಹನ್ ಸಂಭಾಷಣೆಗಳು ಚುರುಕಾಗಿದ್ದವು.

"...'ಶಿಕಾರಿ' ಚಿತ್ರದಲ್ಲಿ ಮಾಡಿದಂಥ ಪಾತ್ರ ನನ್ನ ಕೆರಿಯರ್‌ನಲ್ಲಿ ನಾನು ಮಾಡಿಲ್ಲ. ಈವರೆಗೆ ನಾನು ಮಾಡಿದ ಚಿತ್ರಗಳಲ್ಲಿ ನನಗೆ ಅತ್ಯಂತ ತೃಪ್ತಿ ತಂದುಕೊಟ್ಟ ಪಾತ್ರ ಅದು. ಮನುಷ್ಯ ಕೊಲೆಗಾರನೇ ಆದರೂ ಅವನಲ್ಲಿ ಭಾವನೆಗಳು ಸಾಯುವುದಿಲ್ಲ. ಸಂದರ್ಭ ಅವನನ್ನು ಕೊಲೆಗಾರನನ್ನಾಗಿಸುತ್ತದೆ. ಈ ಪಾತ್ರದಲ್ಲಿ ಭಾವನೆಗಳನ್ನು ತುಂಬ ಕಂಟ್ರೋಲ್ಡ್ ಆಗಿ ತೋರಿಸಬೇಕಾಯ್ತು. ಅದು ನನಗೆ ಛಾಲೆಂಜ್ ಆಗಿತ್ತು. ಯಾಕೇಂದ್ರೆ ನನಗೆ ಎಮೋಷನ್ (Emotion)ನ ಒಂದೇ ಸಮನೆ ಜೋರಾಗಿ ಹೊರಹಾಕುವುದು... ಎಮೋಷನಲ್ ಔಟ್‌ಬರ್ಸ್ಟ್ ಆಗುವುದು ಸುಲಭ.. ಕಂಟ್ರೋಲ್ಡ್ ಆಗಿ ಅಭಿನಯಿಸೋದು ಕಷ್ಟ. ಆ ಮಟ್ಟಿಗೆ ಆ ಪಾತ್ರ ಯಶಸ್ವಿಯಾಗಿ ನಿರ್ವಹಿಸಿದೀನಿ ಅನ್ನಿಸಿದೆ..". ಎನ್ನುತ್ತಾರೆ ಶ್ರೀನಾಥ್.

'ಕೆರಳಿದ ಸಿಂಹ' - 'ಸಾಹಸ ಸಿಂಹ', ಸುಮಾರು ಎರಡು ವರ್ಷಗಳ ಕಾಲ ವಿಪರೀತ ಸದ್ದು, ಗದ್ದಲಕ್ಕೆ ಕಾರಣವಾದ ಎರಡು ಚಿತ್ರಗಳ ಹೆಸರುಗಳು. ಇವು ವಸ್ತುವಿನ ದೃಷ್ಟಿಯಿಂದ ತೀರಾ ಸಾಧಾರಣವಾಗಿದ್ದರೂ ಇವುಗಳಲ್ಲಿ ಅಭಿನಯಿಸಿದ್ದ ನಾಯಕ ನಟರ ಅಭಿಮಾನಿಗಳ ಅತಿರೇಕದ ವರ್ತನೆಯಿಂದಾಗಿ ರಾಜ್ಯದಲ್ಲಿ ಆತಂಕದ ವಾತಾವರಣ ನಿರ್ಮಿಸಿದ್ದವು. ಇಲ್ಲಿಂದಾಚೆಗೆ ಅಭಿಮಾನಿಗಳ ಚಟುವಟಿಕೆಗಳಲ್ಲಿ ತೀವ್ರತೆ, ವೇಗ ಕಾಣಿಸಿಕೊಂಡಿತು. ೧೯೮೨-೮೩ ರಲ್ಲಿ ಪ್ರತಿ ಜಿಲ್ಲೆ, ತಾಲ್ಲೂಕು, ಹೋಬಳಿ, ಊರುಗಳಲ್ಲೆಲ್ಲಾ ಅಭಿಮಾನಿ ಸಂಘಗಳು ಹುಟ್ಟುತ್ತಾ ಹೋದವು. ೧೯೮೪ರ ವೇಳೆಗೆ ರಾಜ್ಯದಲ್ಲಿ ರಾಜಕುಮಾರ್ ಅಭಿಮಾನಿ ಸಂಘಗಳ ಸಂಖ್ಯೆ ೨,೫೪೦ ದಾಟಿದರೆ ವಿಷ್ಣುವರ್ಧನ್ ಅಭಿಮಾನಿ ಸಂಘಗಳ ಸಂಖ್ಯೆ ೨,೦೦೦ ಮುಟ್ಟಿತು. ಯುವಕರ ಅಭಿಮಾನಕ್ಕೆ ಸಂಘಟಿತ ರೂಪ ಬರುತ್ತಿದ್ದಂತೆ ಅವರ ಅಭಿಮಾನದ ನಟರ ಚಿತ್ರಗಳ ಬಿಡುಗಡೆ ಹಾಗೂ ಹೆಸರಿಗೆ ಸಂಬಂಧಿಸಿದಂತೆ ಗದ್ದಲಗಳು ಹೆಚ್ಚಿದುವು. ಊರಿನ ಪ್ರಮುಖ ಬೀದಿಗಳಲ್ಲಿ ನಕ್ಷತ್ರಗಳ ಮೆರವಣಿಗೆ ಮಾಡಿ ಅವನ್ನು ಥಿಯೇಟರ್‌ಗೆ ತೂಗು ಹಾಕುವುದು, ಕಟೌಟ್‌ಗಳ ಮೇಲೆ ಹಾಲು ಸುರಿಯುವುದು, ಹೂವಿನ ಅಲಂಕಾರ ಮಾಡುವುದು ಸೇರಿದಂತೆ, ಸಗಣಿ ಎರಚುವುದು, ಪೋಸ್ಟರ್ ಹರಿಯುವುದು, ಕಟೌಟ್ ಮುರಿಯುವಂಥ ಚಟುವಟಿಕೆಗಳವರೆಗೆ ಹಬ್ಬಿತು.

ಸಮಾನ ಅರ್ಥದ ಈ ಹೆಸರಿನ ಚಿತ್ರಗಳ ಗದ್ದಲ ಯಾವ ಹಂತ ತಲುಪಿತ್ತೆಂದರೆ ಅದಕ್ಕೊಂದು ಉದಾಹರಣೆಯಿದೆ. 'ಕೆರಳಿದ ಸಿಂಹ'ದ ಯಶಸ್ಸಿನ ನಂತರ ಒಂದಿಬ್ಬರು ನಿರ್ಮಾಪಕರು 'ಸಿಂಹ' ಹೆಸರಿನ ಒಂದೆರಡು ಚಿತ್ರಗಳ ಚಿತ್ರೀಕರಣ ಆರಂಭಿಸಿದ್ದರು. ಆದರೆ ಇದ್ದಕ್ಕಿದ್ದಂತೆ ಮೈಸೂರಿನಲ್ಲಿ 'ಸಾಹಸ ಸಿಂಹ'ದ ನಿರ್ದೇಶಕ ಜೋಸೈಮನ್‌ರವರ ಮೇಲೆ ಕೆಲವರು ಕೈ ಮಾಡಿದ ಪ್ರಸಂಗ ನಡೆಯಿತು. ಆಗ ಅವರು ಚಿತ್ರಕ್ಕೆ ಹೆಸರಿಡುವುದರಲ್ಲಿ ತಮ್ಮ ಪಾತ್ರ ಏನೂ ಇಲ್ಲವೆಂದು ಹೇಳಿಕೆ ಕೊಟ್ಟರು. ಜೊತೆಗೆ ಈ 'ಸಾಹಸ ಸಿಂಹ' ಮನು ಅವರ 'ಚಕ್ರವ್ಯೂಹ' ಕಾದಂಬರಿಯನ್ನು ಆಧರಿಸಿದ್ದು, ಚಿತ್ರಕ್ಕೆ ಅದೇ ಹೆಸರನ್ನು ಇಡಬೇಕೆಂದುಕೊಂಡಿದ್ದಾಗಿಯೂ, ಆದರೆ ಅಷ್ಟರಲ್ಲಿ ಆ ಹೆಸರನ್ನು ಬೇರೆಯವರು ದಾಖಲಿಸಿಕೊಂಡಿದ್ದರಿಂದ ಹೆಸರು ಬದಲಾಯಿಸಲಾಯಿತಷ್ಟೆ ಎಂದೂ ವಿವರಿಸಿದರು. ಜೋಸೈಮನ್‌ರ ಸ್ಪಷ್ಟನೆಯಿಂದ ಅಭಿಮಾನಿಗಳು ಸಂತುಷ್ಟರಾಗಲಿಲ್ಲ. ಆದರ ಇಂಥ ಪರಿಸ್ಥಿತಿ ಸೃಷ್ಟಿಯಾಗಬಹುದೆಂಬ ಅರಿವಿಲ್ಲದ ಒಂದಿಬ್ಬರು ನಿರ್ಮಾಪಕರು 'ಸಿಂಹ ಘರ್ಜನೆ' ಹಾಗೂ 'ರಾಜ ಸಿಂಹ' ಎಂಬ ಹೆಸರುಗಳನ್ನಿಟ್ಟುಕೊಂಡು ಚಿತ್ರಗಳನ್ನು ಆರಂಭಿಸಿದ್ದರು. ನಿಜವಾದ 'ಸಿಂಹ'ಗಳ ಘರ್ಜನೆ ಎಲ್ಲಾ ಕಡೆ ಅನುರಣಿಸತೊಡಗಿದಾಗ 'ರಾಜ ಸಿಂಹ'ದ ಹೆಸರು ಬದಲಾಗಿ 'ರಾಜಾ ಮಹಾರಾಜ' ಆಯಿತು. 'ಸಿಂಹ ಘರ್ಜನೆ' ಕರಗಿ 'ಊರಿಗೆ ಉಪಕಾರಿ' ಆಯಿತು. ಹಾಗೆ ನೋಡಿದರೆ 'ಕರಳಿದ ಸಿಂಹ', 'ಸಾಹಸ ಸಿಂಹ' ಚಿತ್ರಗಳ ಕಥೆಯಲ್ಲಿ ಅಂಥ ವೈಶಿಷ್ಟ್ಯವೇನಿರಲಿಲ್ಲ. 'ಸಾಹಸ ಸಿಂಹ' ವಿದ್ರೋಹಿಗಳ ಗುಂಪೊಂದರ ಕೈಗೆ ಸಿಕ್ಕಿ ನರಳುವ ಬಾಲಕನೊಬ್ಬ ನಿಷ್ಠಾವಂತ ಪೊಲೀಸ್ ಅಧಿಕಾರಿಯೊಬ್ಬನ ಬಳಿ ಬೆಳೆದು ಪ್ರಾಮಾಣಿಕ ಸಿ.ಐ.ಡಿ. ಅಧಿಕಾರಿಯಾಗುವ ಕಥೆ. ಆಕಸ್ಮಿಕವಾಗಿ ಸಿಗುವ ಡೈರಿಯಿಂದ ಅವನ ಹೀನಸ್ಥಿತಿಗೆ ಕಾರಣರಾದವರು ಮುಂಬೈನಲ್ಲಿರುವುದು ಪತ್ತೆಯಾಗುತ್ತದೆ. ಅಲ್ಲಿಗೆ ವರ್ಗ ಮಾಡಿಸಿಕೊಂಡು ದುಷ್ಟರ ವ್ಯೂಹವನ್ನು ಭೇದಿಸುತ್ತಾನೆ. ಇದರ ನಡುವೆ ಎಂದಿನ ಪ್ರಣಯ, ಹಾಡು, ರೇಪ್ ಎಲ್ಲದರ ಮಿಶ್ರಣವಿದೆ. ಈ ಚಿತ್ರದ ಕೆಲವು ಘಟನೆಗಳ ಮೇಲೆ 'ಅಂತ' ದ ಪ್ರಭಾವವಿತ್ತು. ಇದನ್ನು ಹೊರತುಪಡಿಸಿ ನೋಡಿದರೆ 'ನಾಗರ ಹಾವು' ನಂತರ ವಿಷ್ಣು ಅಭಿನಯಿಸಿದ ರೋಷಗಾರನ ಪಾತ್ರಕ್ಕೆ ವೇಗದ ನಿರೂಪಣೆ ಪೂರಕವಾಗಿ ಒದಗಿ ಬಂದಿತ್ತು. ಈ ಚಿತ್ರವನ್ನು ತಯಾರಿಸಿದವರಿಗೆ ಆ ದಿನಗಳಲ್ಲಿ ಅತ್ಯಂತ ಜನಪ್ರಿಯವಾಗಿದ್ದ ಬ್ರೂಸ್ ಲೀ ಅಭಿನಯದ 'ಎಂಟರ್ ದಿ ಡ್ರಾಗನ್' ಮುಂತಾದ ಚಿತ್ರಗಳ ಸ್ಫೂರ್ತಿ ಇರುವುದು ಸ್ಪಷ್ಟವಾಗುತ್ತದೆ. ಈ ಚಿತ್ರದ ಸಾಹಸ ಸಂಯೋಜನೆಯಲ್ಲಿ ಸಾಹಸ ನಿರ್ದೇಶಕ ವಿಜಯ್‌ರ ವಿಶೇಷ ಶ್ರಮ ಕಾಣುತ್ತಿತ್ತು. ಜೊತೆಗೆ ಕೆಲವು ದೃಶ್ಯಗಳನ್ನು ಕೋಲಾರದ ಚಿನ್ನದ ಗಣಿಯಲ್ಲಿ ೫,೦೦೦ ಅಡಿಗಳ ಆಳದ ಸುರಂಗದಲ್ಲಿ ಕೇಬಲ್‌ಗಳನ್ನು ಎಳೆದು ಅತ್ಯಂತ ಶ್ರಮದಿಂದ ಚಿತ್ರೀಕರಿಸಲಾಗಿತ್ತು. ತಮಿಳು ಚಿತ್ರರಂಗದವರಾದ ವಿಜಯ್ ಈ ಚಿತ್ರದ ಮೂಲಕ ಕನ್ನಡ ಚಿತ್ರರಂಗದಲ್ಲಿ ಅಪಾರ ಬೇಡಿಕೆ ಸೃಷ್ಟಿಸಿಕೊಂಡರು. ಅನೇಕ ಚಿತ್ರಗಳಿಗೆ ಸಾಹಸ ನಿರ್ದೇಶನ ಮಾಡಿದರು. ಕೆಲವೇ ವರ್ಷಗಳಲ್ಲಿ 'ಪವಿತ್ರ ಪಾಪಿ' ಎಂಬ ಚಿತ್ರವನ್ನು ಪಾಲುದಾರಿಕೆಯಲ್ಲಿ ನಿರ್ಮಿಸಿ, ನಿರ್ದೇಶಿಸಿದರು.

'ಕೆರಳಿದ ಸಿಂಹ'ದ್ದು ಅಣ್ಣ-ತಮ್ಮಂದಿರಿಬ್ಬರಲ್ಲಿ ಒಬ್ಬ ಪೊಲೀಸ್ ಇನ್ಸ್‌ಪೆಕ್ಟರ್ ಆಗುವ ಕಥೆ. ನೇರವಾದ ನಿರೂಪಣೆಯ ಈ ಚಿತ್ರದಲ್ಲಿ ಹೊಡೆದಾಟದ ದೃಶ್ಯಗಳು ಉತ್ತಮವಾಗಿದ್ದು ಮಧು ಛಾಯಾಗ್ರಹಣ ವಿಶೇಷವಾಗಿತ್ತು. ಈ ಚಿತ್ರ ಬೆಂಗಳೂರು,



(ಚಿತ್ರ ೨೪) 'ಸಾಹಸ ಸಿಂಹ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಕಾಜಲ್ ಕಿರಣ್

ಮೈಸೂರು ಹಾಗೂ ಕರ್ನಾಟಕದ ನಾಲ್ಕು ಕೇಂದ್ರಗಳಲ್ಲಿ ೧೦೦ ದಿನಗಳ ಪ್ರದರ್ಶನ ಕಂಡಿದೆ. ಇದು ಮತ್ತು ಇದರ ಹಿಂದಿನ ಕೆಲವು ರಾಜ್ ಚಿತ್ರಗಳು ಹೊಸತನದ ಕೊರತೆಯಿಂದಾಗಿ ಸೊರಗಿದ್ದವು. ಎಂ.ಡಿ.ಸುಂದರ್‌ರ ಅಸಹಜ ಕಥೆಗಳು ರಾಜಕುಮಾರ್ ಚಿತ್ರಗಳ ಮಹತ್ವವನ್ನು ಕುಗ್ಗಿಸಿದ್ದವು.

'ಸಿಂಹದ ಮರಿ ಸೈನ್ಯ', 'ನಾಗರಹೊಳೆ' ನಿರ್ದೇಶಿಸಿದ ರಾಜೇಂದ್ರಸಿಂಗ್ ಬಾಬು ಅವರ ನಿರ್ದೇಶನವೆಂಬ ಕುತೂಹಲವನ್ನು ತಣಿಸಿತ್ತು. ಕಾಡಿನ ವೈಭವ, ಅದಕ್ಕೊಂದು ಚೊಕ್ಕ ರೂಪ ಕೊಡುವಂತೆ ತಾಂತ್ರಿಕತೆಯನ್ನು ಬಳಸಿಕೊಳ್ಳುವ ನಿರ್ದೇಶಕ-ಛಾಯಾಗ್ರಾಹಕರು ಮತ್ತಷ್ಟು ಮುದ ತಂದಿದ್ದರು. ಅರ್ಜುನ್ ಸರ್ಜಾ ಅಭಿನಯಿಸಿದ್ದರು. ಅದಾಗಲೇ ಅವರಲ್ಲಿದ್ದ ಸ್ನಾಯುಬಲಕ್ಕೆ ಅಭಿನಯದ ಸೂಕ್ಷ್ಮ ತುಂಬುವ ಪ್ರಯತ್ನ ಸಫಲವಾಯಿತು. ಮುಂದೆ ಅರ್ಜುನ್ ಬಹಳ ಎತ್ತರಕ್ಕೆ ಬೆಳೆಯಲು ಇಂಥ ಪ್ರಥಮ ಪ್ರಯೋಗಗಳು ನೆರವಿಗೆ ಬಂದವು. ಚಿತ್ರದ ಕೆಲವು ಸನ್ನಿವೇಶಗಳಲ್ಲಿಯ ಹಾಸ್ಯ ಹೊಸತನದಿಂದ ಕೂಡಿತ್ತು. ಅಮರೀಶ್‌ಪುರಿ ಮತ್ತು ಸುಂದರಕೃಷ್ಣ ಅರಸ್ ಮುಖಾಮುಖಿಯಾಗಿ 'ಒಂದೇ ಕಂಠ'ದಲ್ಲಿ ಮಾತಾಡಿದ್ದು ಆ ದಿನಗಳಲ್ಲಿ ಸುದ್ದಿ.

'ನೀ ನನ್ನ ಗೆಲ್ಲಲಾರೆ' ರಾಜಕುಮಾರ್ ಅವರ ವೈಷ್ಣವೀ ಸಂಸ್ಥೆಯ ತಯಾರಿಕೆ. ಎಸ್.ಎ.ಶ್ರೀನಿವಾಸ್ ನಿರ್ಮಾಪಕರು. ಪಾರ್ವತಮ್ಮ ರಾಜಕುಮಾರ್ ಸಹೋದರ ಶ್ರೀನಿವಾಸ್ ಹಲವಾರು ಚಿತ್ರಗಳಿಗೆ ಸಹನಿರ್ದೇಶಕರಾಗಿ ದುಡಿದಿದ್ದಾರೆ. ಸ್ವತಃ ನಿರ್ದೇಶಿಸಬಲ್ಲ ಸಾಮರ್ಥ್ಯವಿದ್ದೂ ಅಂಥ ಸಾಹಸಕ್ಕೆ ಹೋಗಲಿಲ್ಲ. ಒಂದು ರೀತಿಯ ತಣ್ಣನೆಯ ಸ್ವಭಾವ. ಆರಕ್ಕೆ ಏರುವುದಿಲ್ಲ, ಮೂರಕ್ಕೆ ತಗ್ಗುವುದಿಲ್ಲ. ಸೋಲೋ ಗೆಲುವೋ ಪಾಲಿಗೆ ಬಂದದ್ದೆಲ್ಲ ನಗುನಗುತ್ತ ಸ್ವೀಕರಿಸುವ, ಯಾವ ಕಾರಣಕ್ಕೂ ಗೊಣಗದೆ ಮುನ್ನುಗ್ಗುವ ಸ್ವಭಾವ. ಶ್ರೀನಿವಾಸ್ ಸ್ವತಂತ್ರವಾಗಿ, ಇತರರೊಂದಿಗೆ ಸೇರಿಕೊಂಡೂ ಸಹ ಕೆಲವು ಚಿತ್ರಗಳನ್ನು ನಿರ್ಮಿಸಿದ್ದಾರೆ. ಬಹುತೇಕ ಅವರ ಸಹೋದರ ಎಸ್.ಎ.ಚಿನ್ನೇಗೌಡರ ಜೊತೆ ಸೇರಿ ನಿರ್ಮಿಸಿದರು. 'ನೀ ನನ್ನ ಗೆಲ್ಲಲಾರೆ' ಚಿತ್ರದ ವಿಶೇಷವೇ ಅದರ ಕಥೆ. ಮಾತೆತ್ತಿದರೆ ಛಾಲೆಂಜ್‌ಗಳನ್ನು ಹಾಕುತ್ತ ತಮಾಷೆಗಳೆಲ್ಲ ಸಮಸ್ಯೆಯಾದಾಗ ಪರದಾಡುವ ಸಂಗತಿಗಳು. ಈ ಚಿತ್ರದ ಮತ್ತೊಂದು ವಿಶೇಷವೆಂದರೆ ಮಂಜುಳಾ ಬಹಳ ಕಾಲದ ನಂತರ ಮತ್ತೆ ರಾಜಕುಮಾರ್‌ರೊಂದಿಗೆ ಅಭಿನಯಿಸಿದ್ದು. ಆ ಜೋಡಿಯ ಬಗ್ಗೆ ಅಭಿಮಾನವಿಟ್ಟುಕೊಂಡಿದ್ದ ಪ್ರೇಕ್ಷಕ ವರ್ಗ ಬಹು ಕಾತರದಿಂದ ಚಿತ್ರವನ್ನು ಬರಮಾಡಿಕೊಂಡಿತ್ತು. ಚಿತ್ರ ಶೀರ್ಷಿಕೆಗೂ, ಆ ತಾರಾಜೋಡಿಯ ಹಳೆಯ ವಿರಸಕ್ಕೂ ತಾಳೆ ಹಾಕಿ ಮಾತಾಡಿದವರೂ ಇದ್ದರು. ಭಾರಿ ತಾರಾಗಣವೂ ಇತ್ತು. ಛಾಲೆಂಜ್ ಹಾಕುತ್ತಾ ಖುಷಿ ಪಡುವ ತಂದೆ-ಮಗಳನ್ನು ಅವರ ಛಾಲೆಂಜ್‌ಗ ಉತ್ತರಿಸುತ್ತಲೇ ಮಣಿಸುವ ಪಾತ್ರದಲ್ಲಿ ರಾಜಕುಮಾರ್ ಇದ್ದರು. ನೃತ್ಯದ ಮೂಲಕ ಪಂದ್ಯ ಕಟ್ಟಿ, ಅಂತಿಮ ಹಂತದಲ್ಲಿ ತನ್ನ ಉಡುಪನ್ನೆಲ್ಲ ಕಳಚುತ್ತಾ ಹೋಗುವ ನಾಯಕನೆದುರು ಸ್ತ್ರೀ ಸಹಜ ಸಂಕೋಚದಿಂದಾಗಿ ಹಾಗೆ ಮಾಡಲಾಗದೆ ಸೋಲನ್ನು ಒಪ್ಪಿಕೊಳ್ಳುವ ನಾಯಕಿ. ವಿಮರ್ಶೆಗಳು ಅದನ್ನು 'ಸೋಲು' ಎಂದು ಒಪ್ಪಲಿಲ್ಲವಾದರೂ ಪ್ರೇಕ್ಷಕರು ಹಲವು ಅಂಶಗಳನ್ನು ಮೆಚ್ಚಿಕೊಂಡಿದ್ದರು. ಚಿತ್ರವನ್ನು ವಿಜಯಾರೆಡ್ಡಿ ನಿರ್ದೇಶಿಸಿದ್ದರು. ಇಳಯರಾಜಾ ಸಂಗೀತ ನಿರ್ದೇಶನದಲ್ಲಿ 'ಜೀವ ಹೂವಾಗಿದೆ ಭಾವ ಜೇನಾಗಿದೆ...', 'ಅನುರಾಗ ಏನಾಯ್ತು...' ಹಾಡುಗಳು ಜನಪ್ರಿಯವಾದವು.

ಗೀತಪ್ರಿಯರು ಓ ಹೆನ್ರಿಯ 'ನೆಕ್ಲೇಸ್' ಕತೆಯನ್ನು ಹೋಲುವ ಕಥೆಯನ್ನು ಆಯ್ದು 'ಬಾಳು ಬಂಗಾರ'ವನ್ನು ಚಿತ್ರಿಸಿದ್ದರು. ಮಧ್ಯಮ ವರ್ಗದ ಸಂಸಾರಗಳ ಬವಣೆಯನ್ನು ಹೇಳುವ ಪ್ರಯತ್ನ. ವಿಜಯಭಾಸ್ಕರ್ ಅವರ ಸಂಗೀತದಲ್ಲಿ ಒಂದೆರಡು ಹಾಡುಗಳು ಚೆನ್ನಾಗಿದ್ದವು. 'ಯಾವ ಹೂವು ಯಾರ ಮುಡಿಗೋ?' ಚಿತ್ರ ಎ.ಎಸ್.ರೊಡ್ರಿಗ್ಸ್ ಅವರು ನಿರ್ಮಿಸಿದ, ಬಾಬು ವೆಂಕಟರಾಂ ನಿರ್ದೇಶನದ ಚಿತ್ರ. ಸದ್ದಿಲ್ಲದೆ ಬಂದು ಇದ್ದಲ್ಲೇ ಅಡಗಿತು. ಈ ಚಿತ್ರಕ್ಕೆ ದೊಡ್ಡರಂಗೇಗೌಡರು, ಎನ್.ಎಸ್.ಲಕ್ಷ್ಮೀನಾರಾಯಣಭಟ್ಟರು ಗೀತೆಗಳನ್ನು ರಚಿಸಿದರೆಂಬುದೊಂದೇ ವಿಶೇಷ. 'ಪ್ರೇಮಾನುಬಂಧ' ಆರ್.ರಾಮಮೂರ್ತಿಯವರೇ ನಿರ್ಮಿಸಿ, ನಿರ್ದೇಶಿಸಿದ ಚಿತ್ರ. ಕಣ್ಣನ್ ನಿರ್ದೇಶನದೊಂದಿಗೆ ಸಂಕಲನವನ್ನೂ ನಿರ್ವಹಿಸಿದ್ದರು. ಪ್ರಣಯ ತ್ರಿಕೋನ, ಆಕಸ್ಮಿಕಗಳು, ತ್ಯಾಗ ಇತ್ಯಾದಿ ಸರಳವಾದ ಸೂತ್ರಗಳೇ ಆದರೂ ಮಂಜುಳಾ, ಶ್ರೀನಾಥ್ ಅಭಿನಯ ಮೆಚ್ಚುಗೆ ಪಡೆದಿತ್ತು. ವಿಶಿಷ್ಟವಾದೊಂದು ಬುರುಡೆ ಹೊಡೆಯುವವನ ಪಾತ್ರದಲ್ಲಿ ದಿನೇಶ್ ಇದ್ದರು. ಮುಂದೆ ಇಂಥ ಕಥಾವಸ್ತು, ದಿನೇಶ್ ನಿರ್ವಹಿಸಿದಂಥ ಪಾತ್ರ ಬಹಳಷ್ಟು ಬಂದುವು. ಇದಕ್ಕೆ ಈ ಚಿತ್ರದ ಯಶಸ್ಸು ಒಂದು ಅರ್ಥದಲ್ಲಿ ಪ್ರೇರಣೆ ಎನ್ನಬಹುದು.

ಜೋಸೈಮನ್ ನಿರ್ದೇಶನದ 'ಮಹಾ ಪ್ರಚಂಡರು'ಗೆ ವಿಜಯ ಸಾಸನೂರರ 'ವಿಗ್ರಹಚೋರರು' ಕಾದಂಬರಿ ಆಧರಿಸಲಾಗಿತ್ತು. ಎಂದಿನಂತೆ ಜೋಸೈಮನ್-ವಿಷ್ಣುವರ್ಧನ್ ಜೋಡಿಯೇ ಆಕರ್ಷಣೆ. ಈ ಚಿತ್ರದಲ್ಲಿ ಖಳರ ಹಾವಳಿಯೇ ಹೆಚ್ಚು. ದಿನೇಶ್, ಸುಧೀರ್, ಪ್ರಭಾಕರ್, ಮುಸುರಿ ಕೃಷ್ಣಮೂರ್ತಿ ಮೊದಲಾದವರಿದ್ದರು. ಈ ಚಿತ್ರದಲ್ಲಿ ವಿನಯ ಎಂಬ ಹೆಸರಿನ ತಾರೆಯೊಬ್ಬರನ್ನು



(ಚಿತ್ರ ೨೫) 'ಸಿಂಹದ ಮರಿ ಸೈನ್ಯ' ಚಿತ್ರದಲ್ಲಿ ಬೇಬಿ ಇಂದಿರಾ, ಮಾ। ಅರ್ಜುನ್ ಸರ್ಜಾ, ಬೇಬಿ ಅರುಣ, ಮಾ। ಪ್ರಸನ್ನ ಕುಮಾರ್, ಮಾ।ಭಾನುಪ್ರಕಾಶ್, ಮಾ। ದಿನೇಶ್ ಬಾಬು



(ಚಿತ್ರ ೨೬) 'ನೀ ನನ್ನ ಗೆಲ್ಲಲಾರೆ' ಚಿತ್ರದಲ್ಲಿ ಸುದರ್ಶನ್, ಆಶಾಲತಾ, ಉಮಾಶಿವಕುಮಾರ್, ಸುಭಾಷಿಣಿ, ರಾಜಕುಮಾರ್ ಮತ್ತು ಅಶ್ವತ್ಥ್

ಪರಿಚಯಿಸಲಾಯಿತು. ಆಕೆ ಮುಂದೆ ಚಿತ್ರರಂಗದಲ್ಲಿ ನಾಯಕಿಯಾಗಿ ಮುಂದುವರೆಯಲಿಲ್ಲ. ನಾಲ್ಕು ಜನ ನಿರ್ಮಾಪಕರಿದ್ದ ಚಿತ್ರವು ಕಥೆಯಿಂದ ಮಾತ್ರವಲ್ಲ, ನಿರ್ಮಾಣದಲ್ಲೂ ಸಾಹಸವೇ ಆಗಿತ್ತು. ಹೆಚ್.ಜಿ.ರಾಜು ಛಾಯಾಗ್ರಹಣವಿತ್ತು.

ಇದೇ ವರ್ಷ ಪತ್ರಕರ್ತ ದ್ವಾರಕಾನಾಥ್, ಆಕಾಶವಾಣಿಗೆ ಸಿನಿಮಾ ಜಾಹಿರಾತುಗಳನ್ನು ನಿರ್ವಹಿಸುತ್ತಿದ್ದ ಶ್ಯಾಂ, 'ಮಹಾಪ್ರಚಂಡರು' ನಿರ್ಮಾಪಕರಲ್ಲಿ ಒಬ್ಬರಾದ ತಿಮ್ಮಯ್ಯ ನಿಧನರಾದರು. ಪಿ.ಕಾಳಿಂಗರಾಯರ ನಿಧನವೂ ಇದೇ ವರ್ಷವೇ ಆಯಿತು (ಅಕ್ಟೋಬರ್ ೧೯೮೧).

ಮನೋವಿಕಲ್ಪವಿದ್ದವನನ್ನು ಹೇಗೆ ನಡೆಸಿಕೊಳ್ಳಬೇಕೆಂಬ ಬಗ್ಗೆ ಹೇಳಲು ಹೊರಟು ತಪ್ಪು ವ್ಯಾಖ್ಯಾನ ಮಾಡಿಕೊಂಡ ಹೊಸಬರೇ ಸೇರಿ ತಯಾರಿಸಿದ 'ಜಾಲ' - ರಾಮಚಂದ್ರರ ಛಾಯಾಗ್ರಹಣ ವಿನಾ - ವಿಫಲ ಪ್ರಯತ್ನ.

ಸೋಮಶೇಖರ್ ನಿರ್ದೇಶನದ 'ದೇವರ ಆಟ' ಚಿತ್ರವನ್ನು ಎಂ.ಪಿ.ಶಂಕರ್ ಅವರ ಪಕ್ವವಾದ ಅಭಿನಯಕ್ಕಾಗಿ ನೆನೆಯಬೇಕಷ್ಟೆ. ಮತ್ತೆ ಮತ್ತೆ ಅವಳಿಗಳ ಕಥೆ ಬೆಳೆಸುತ್ತಲೇ ಹೋಯಿತು ಚಿತ್ರರಂಗ.

'ಭೂಮಿಗೆ ಬಂದ ಭಗವಂತ' ಮಹತ್ವಾಕಾಂಕ್ಷೆಯ ಚಿತ್ರವಾಗಿತ್ತು. 'ಟೈ' ರಾಜಗೋಪಾಲ್‌ಗಾಗಿ (ಯಾವಾಗಲೂ 'ಟೈ' ಧರಿಸುತ್ತಲೇ ಇದುದರಿಂದ ಅವರಿಗೆ ಈ ಹೆಸರೇ ಲಭ್ಯವಾಯಿತು) ಒಂದು ಜನಪದ ಕಥೆಯನ್ನು ಆರಿಸಿ ಮೊದಲು ವಿಷ್ಣುವರ್ಧನ್, ಜಯಂತಿ, ಅಂಬರೀಷ್ ಮೊದಲಾದವರನ್ನಿಟ್ಟು ಚಿತ್ರಿಸಿ ಅರ್ಧಕ್ಕೇ ನಿಲ್ಲಿಸಿದ್ದರು. ರಷಸ್ ನೋಡಿ ಇಷ್ಟವಾದ ವರದಪ್ಪ, ಚಂದೂಲಾಲ್ ಪುನಃ ತಾರಾಗಣ ಬದಲಾಯಿಸಿದರು ಲೋಕೇಶ್, ಲಕ್ಷ್ಮೀ, ಜೈಜಗದೀಶ್ ಮೊದಲಾದವರನ್ನು ತರಲಾಯಿತು. ಪುನೀತ್ ರಾಜಕುಮಾರ್ ಬಾಲಕೃಷ್ಣನಾಗಿ ಅಭಿನಯಿಸಿದ್ದು, ಹಿಮಾಲಯದ ಮಂಜುಗಡ್ಡೆಯ ಮೇಲೆ ನಗುನಗುತ್ತಾ ಬರಿಗಾಲಲ್ಲಿ ನಡೆದು ಬಂದ ಧೈರ್ಯ ಆ ಬಾಲಕನ ಬಗ್ಗೆ ಅನೂಹ್ಯ ಕುತೂಹಲ ಹುಟ್ಟಿಸಿತ್ತು. ಮೊದಲು ಯೋಚಿಸಿದ ಕಥೆಯಲ್ಲಿದ್ದ ಫ್ಯಾಂಟಸಿಗಳನ್ನು ಕೈಬಿಟ್ಟು ನೇರವಾದ ಕಥೆಯನ್ನು ಹೇಳಿದ್ದರು. ಕಠಿಣ, ಒರಟು ವ್ಯಕ್ತಿಯೊಬ್ಬನ ಮನಸ್ಸನ್ನು ಮೃದುಗೊಳಿಸಿ, ಪಾರಮಾರ್ಥಕ್ಕೆ ಒಯ್ಯುವ ಪ್ರಯತ್ನವಿತ್ತು. ಒರಟ ಡಕಾಯಿತನಾಗಿ ಲೋಕೇಶ್, ಆತನನ್ನು ಎದುರಿಸಿ ನಿಂತ ತರುಣಿಯನ್ನೇ ಒಲಿದ. ಆದರೆ ಅದು ಪ್ರೀತಿಯಾಗಿರಲಿಲ್ಲ. ಆಕೆ ವಿವಾಹವಾದವಳು. ಅವರ ಗಂಡನದು ಅತಿಯಾದ ಹಿಂಸೆ. ಈ ಒರಟ ಆಕೆಯನ್ನು ಹೊತ್ತು ತಂದ. ''ರಾವಣ ಹೆಂಡತಿ ಇದ್ದರೂ ಸೀತೆಯನ್ನು ಹೊತ್ತು ತಂದ. ನಾನು ಹೆಂಡತಿ ಇಲ್ಲದವ, ಅಲ್ಲದೆ ಆಕೆಗೆ ಗಂಡ ಹಿಂಸಿಸುತ್ತಾನೆ. ನಾನು ಹೊತ್ತು ತಂದಿದ್ದರಲ್ಲಿ ತಪ್ಪೇ ಇಲ್ಲ'' ಎಂಬುದು ಅವನ ವಾದ. ಆಕೆಗಾಗಿ ಬಾಲಕೃಷ್ಣನನ್ನೇ ಹೊತ್ತು ತಂದ ಸಾಹಸ-ಸಹನೆ. ಈ ಘಟ್ಟಗಳ ನಡುವೆ ಅನೇಕ ವಿವರಗಳಿವೆ. ಎಲ್ಲವೂ ವಿಶೇಷ 'ಧ್ವನಿ'ಯನ್ನು ಕೊಡುವಂಥ ದೃಶ್ಯಗಳು-ಮಾತುಗಳು. 'ಅಲ್ಲಿಂದು ಕರಿಬೆಟ್ಟ, ಅದರ ನಂತರ ಬಿಳಿಬೆಟ್ಟ, ಅಲ್ಲಿ ದೈವ' ಎಂಬ ಮಾತಿನ ಹಿಂದೆ ಕಷ್ಟಗಳು ಕಳೆದರೆ ಬೆಳಕುಂಟು, ಅಲ್ಲಿ ಸತ್ಯವುಂಟು ಎಂಬ ಧ್ವನಿ ಇದೆ. ಕೃಷ್ಣನನ್ನೇ ಹೊತ್ತು ತಂದವನಿಗೀಗ ಹೆಣ್ಣು ಬೇಕಿಲ್ಲ, ಅದರಾಚೆಗಿನ ಸತ್ಯ ದರ್ಶನವಾಗಿದೆ. ಇಂಥ ಅಪರೂಪದ ಅಂಶಗಳು ಇದ್ದೂ ಜನ ತೆಗೆದುಕೊಳ್ಳಲಿಲ್ಲ. ಸೊಗಸಾದ ಛಾಯಾಗ್ರಹಣವಿತ್ತು. ಅಲ್ಲಲ್ಲಿ ಬಳಸಲಾದ ಶ್ಲೋಕಗಳು, ಕೆಲವು ಹಾಡುಗಳು ಸೊಗಸಾಗಿದ್ದವು. ''...ಕಲಾವಿದರ ಆಯ್ಕೆಯಲ್ಲಿ ಎಡವಿದ್ದೆವು. ಮುಖ್ಯವಾಗಿ ಲಕ್ಷ್ಮೀಯನ್ನು ಜನಪದ ತೊಡುಗೆಯಲ್ಲಿ ಜನ ಒಲ್ಲರು. ಎಲ್ಲಕ್ಕೂ ಮಿಗಿಲಾಗಿ ಎಂಥದೇ ತರ್ಕವನ್ನಿಟ್ಟರೂ ವಿವಾಹಿತ ಸ್ತ್ರೀಯನ್ನು ಹೊತ್ತು ತಂದು ಸಮರ್ಥಿಸಿಕೊಳ್ಳುವ ಕಲ್ಪನೆಯೇ ಜನರಿಗೆ ಬೇಕಾಗಲಿಲ್ಲ. ಇಂಥ ಕಥೆಗಳಾದಾಗ ಇರಬೇಕಾದ 'ಚಮತ್ಕಾರ'ಗಳನ್ನು ಇಡದೇ ಹೋದೆವು. ಇಂಥ ತಪ್ಪುಗಳು ನಮ್ಮಿಂದಲೇ ಆಗಿವೆ'' ಎನ್ನುತ್ತಾರೆ ನಿರ್ದೇಶಕ ರವೀ ಅವರು.

'ಗಣೇಶನ ಮಹಿಮೆ'ಯಂಥ ಚಿತ್ರದ ಹಿಂದೆಯೇ ಬಂದ 'ರಾಜೇಶ್ವರಿ' ಸಾತ್ವಿಕ, ವಾಮಾಚಾರದ ರುದ್ರಶಕ್ತಿ ಎರಡನ್ನೂ ಕುರಿತು ಮಾತಾಡುತ್ತದೆ. ಆದರೆ ನಿರ್ದೇಶಕರ ವಿವೇಚನೆ ಈ ಎರಡನ್ನೂ ಕುರುಡಾಗಿ ನಂಬದೆ ತರ್ಕ ಮಾಡುತ್ತದೆ. ಕಾಕತಾಳೀಯಗಳನ್ನು ದಾಖಲಿಸುತ್ತದೆ. ಆ ದಿನಗಳಲ್ಲಿ ಬಾಬಾ ಲಕ್ಷ್ಮಣಗಿರಿ ಎಂಬಾತ ಬೆಂಗಳೂರಿನಲ್ಲಿ ಮಕ್ಕಳನ್ನು ಅಪಹರಿಸಿ ಕೊಲೆ ಮಾಡುತ್ತಿದ್ದ ಜಾಲವೊಂದು ಸುದ್ದಿಯಾಗಿತ್ತು. ಇಂಥ ವಸ್ತುವಿನ ಜಾಡಿನಲ್ಲಿ ಕಲ್ಪನೆಯ ಕಥೆಯೊಂದನ್ನು ಎಚ್.ಎಂ.ಕೆ.ಮೂರ್ತಿ ನಿರ್ಮಿಸಿ, ನಿರ್ದೇಶಿಸಿದ್ದ ಚಿತ್ರ. ಆಶಯವೇನೋ ಒಳ್ಳೆಯದೇ. ಚಿತ್ರ ಜನರನ್ನು ತಲುಪುವಲ್ಲಿ ಸೋತಿತು.

'ಸಹೋದರರ ಸವಾಲ್' ಚಿತ್ರದ ಯಶಸ್ಸಿನ ನಂತರ ಕೆ.ಎಸ್.ಆರ್.ದಾಸ್ ('ಕಿಲಾಡಿ ಕಿಟ್ಟು' ತೆಗೆದು, ಅದರ ಸೋಲಿನಿಂದ ಮುಜುಗರಗೊಂಡಿದ್ದರು) ಬಹಳ ಕಾಲ ತೆರೆಯ ಹಿಂದೆ ಸರಿದರು. ಮತ್ತೆ ಕನ್ನಡ ಚಿತ್ರರಂಗದಲ್ಲಿ 'ಸ್ನೇಹಿತರ ಸವಾಲ್' ಮೂಲಕ ಸುದ್ದಿಯಾದರು. ಎರಡೂ ಚಿತ್ರದ ಕಥೆಯಲ್ಲಿ ಹೆಚ್ಚು ವ್ಯತ್ಯಾಸವಿರಲಿಲ್ಲ. ಒಂದೆಡೆ ಸಹೋದರನಾದರೆ, ಇನ್ನೊಂದರಲ್ಲಿ ಸ್ನೇಹಿತ ಅಷ್ಟೇ. ಚಿತ್ರಕ್ಕೆ ಬೆಂಗಳೂರಿನಲ್ಲಿ ಜರುಗಿದ ಭಾರಿ ಸರ್ಕಸ್ ದುರಂತದ ಹಿನ್ನೆಲೆಯನ್ನು ಸೇರಿಸಿದ್ದು ವಿಹಿತವಾಗಿತ್ತು. ಜಾತೀಯತೆಯ ಬಗ್ಗೆ ಅತಿಯಾಗಿ ಮಾತನಾಡಿದ್ದು, ಮುಸುರಿ-ದಿನೇಶ್‌ರ ಮೇಲೆ ಚಿತ್ರಿಸಿದ ಕೆಟ್ಟ ಹಾಸ್ಯ



(ಚಿತ್ರ ೨೭) 'ಭೂಮಿಗೆ ಬಂದ ಭಗವಂತ' ಚಿತ್ರದಲ್ಲಿ ಲೋಕೇಶ್ ಮತ್ತು ಮಾ|ಲೋಹಿತ್



(ಚಿತ್ರ ೨೮) 'ಭರ್ಜರಿ ಬೇಟೆ' ಚಿತ್ರದಲ್ಲಿ ಅಂಬರೀಷ್ ಮತ್ತು ಶಂಕರ್‌ನಾಗ್

ಇತ್ಯಾದಿಗಳು ಚಿತ್ರವನ್ನು ಅಸಹನೀಯವಾಗಿಸಿದ್ದವು. ಆದರೂ ದಾಸ್ ಅವರ ಪುನರಾಗಮನವನ್ನು ಕನ್ನಡ ಜನತೆ-ಉದ್ಯಮ ಮುಕ್ತ ಮನಸ್ಸಿನಿಂದ ಒಪ್ಪಿಕೊಂಡಿತ್ತು. ಚಿತ್ರದಲ್ಲಿ ದಾಸ್ ಅವರ ಪರಮ ಶಿಷ್ಯರೆಲ್ಲ - ಮುಖ್ಯವಾಗಿ ಪ್ರಭಾಕರ್ - ಇದ್ದರು. ಅಜಂತಾ ಕಂಬೈನ್ಸ್ ಅವರ ಮಹತ್ವಾಕಾಂಕ್ಷೆಯ ಅದ್ದೂರಿ ಚಿತ್ರ ಕೈ ಕಚ್ಚಿಸಿತು.

'ಭರ್ಜರಿ ಬೇಟೆ' ಎಸ್.ವಿ.ರಾಜೇಂದ್ರಸಿಂಗ್ ಬಾಬು ನಿರ್ದೇಶನದ ಚಿತ್ರ. ಮಹಾತ್ಮಾ ಪಿಕ್ಚರ್ಸ್ ಸಂಸ್ಥೆಗಾಗಿ ಪ್ರತಿಮಾದೇವಿ ನಿರ್ಮಿಸಿದರು. ಸಿಂಗ್‌ಬಾಬು ಉತ್ತಮ ತಂತ್ರಜ್ಞರು ಎಂಬುದು ಮತ್ತೊಮ್ಮೆ ಸಾಬೀತಾಗಿತ್ತು. ಶಂಕರ್‌ನಾಗ್-ಅಂಬರೀಷ್ ಜೋಡಿ ವಿಶೇಷವಿತ್ತು. ವಾಸುದೇವ ಗಿರಿಮಾಜಿಯವರನ್ನು ಮತ್ತೆ ಅವರ ಇಳಿವಯಸ್ಸಿನಲ್ಲಿ ತೆರೆಗೆ ತಂದದ್ದು, ಅದೂ ವಿದೇಶೀ ಚಿತ್ರಗಳಲ್ಲಿ ನಾವು ಕಾಣುವ ವಿಶಿಷ್ಟ ಮುಖ, ಸೊಣಕಲು ಕೈ, ಕಾಲುಗಳ ವಿಚಿತ್ರ ರೂಪದ ಖಳನ ಪಾತ್ರದಲ್ಲಿ ತಂದದ್ದು, ಆ ಪ್ರಯೋಗ ಯಶಸ್ವಿಯೂ ಆದದ್ದು ಆ ದಿನಗಳಲ್ಲಿ ಸಾಕಷ್ಟು ಪ್ರಚಾರದಲ್ಲಿದ್ದ ಸಂಗತಿ. ಬಾಬು ಸಾಮಾನ್ಯವಾಗಿ ಸವಕಲು ಮಾದರಿಗಳನ್ನು ಮುರಿಯುವ ಸ್ವಭಾವದವರು ಮತ್ತು ಅಂಥ ರಿಸ್ಕ್ ತೆಗೆದುಕೊಂಡಾಗ ಅದನ್ನು ಗಿಟ್ಟಿಸಿಕೊಳ್ಳುವ ಎಲ್ಲ ಪ್ರಯತ್ನ ಮಾಡುವವರು. ಆದ್ದರಿಂದಲೇ ಈ ಚಿತ್ರದಲ್ಲಿ ಗಿರಿಮಾಜಿ ಖಳನಾದರೆ ವಜ್ರಮುನಿ, ರಾಜಾನಂದ್ ತುಂಬ ಬೇರೆಯಾಗಿ ಕಾಣುತ್ತಾರೆ. ಸೊಗಸಾದ ಗೀತೆಯೊಂದನ್ನು ಕೊಂಚ ತಮಿಳಿನ ಛಾಯೆ ಇದ್ದರೂ ವಜ್ರಮುನಿ ಮೇಲೆ ಚಿತ್ರಿಸಲಾಗಿತ್ತು. ಅದು ಇಳಯರಾಜಾ ಅವರೇ ಹಾಡಿದ 'ಹಕ್ಕಿ ಗೂಡು ಒಂದೂ ಮುದ್ದುಮರಿ ಎರಡೂ...' ಎಂಬ ಗೀತೆ. ಯಾವುದೋ ಕಾರಣಕ್ಕಾಗಿ ಹೆಸರಿನ ಹಿಂದೆ 'ಭಾರಿ' ಸೇರಿಸಿ 'ಭಾರಿ ಭರ್ಜರಿ ಬೇಟೆ' ಎಂದು ಕರೆದರು. ಚಿತ್ರದಲ್ಲಿ ನಿರ್ಮಾಪಕಿ ಪ್ರತಿಮಾದೇವಿಯವರೂ ಒಂದು ಮುಖ್ಯವಾದ ಪಾತ್ರದಲ್ಲಿದ್ದರು. ಸಿಂಗ್‌ಬಾಬು ಯಶಸ್ಸಿನ ಕಿರೀಟಕ್ಕೆ ಮತ್ತೊಂದು ಗರಿಯೇ ಆಯಿತು ಈ ಚಿತ್ರ.

'ಮುನಿಯನ ಮಾದರಿ' ಅಶ್ವತ್ಥರ ಕಾದಂಬರಿ ಆಧರಿಸಿ ದೊರೆ-ಭಗವಾನ್ ನಿರ್ಮಿಸಿ, ನಿರ್ದೇಶಿಸಿದ ಚಿತ್ರ. ವಿಶಿಷ್ಟವಾದ ಜೀತದಾಳಿನ ಪಾತ್ರದಲ್ಲಿ ಶಂಕರ್‌ನಾಗ್ ತುಂಬ ತಲ್ಲೀನರಾಗಿ ಅಭಿನಯಿಸಿದ್ದರು. ಕೋಕಿಲಾ ಮೋಹನ್ ಸಲೀಸಾಗಿ ಅಭಿನಯಿಸಿ ನರ್ತಿಸಿದ್ದರು. ಜೈಜಗದೀಶ್ ಚಿತ್ರದಲ್ಲಿ ನ್ಯಾಯಾಧೀಶನಾಗಿ ಅತ್ಯಂತ ಸಂಕೀರ್ಣ ಪರಿಸ್ಥಿತಿಯನ್ನು ಎದುರಿಸುತ್ತಾರೆ. ಅಂಥ ಕಡೆ ಅವರ ಅಭಿನಯದಲ್ಲಿ ಸೂಕ್ಷ್ಮತೆ ಇತ್ತು. ತೀರಾ ಆದರ್ಶಮಯ ಪಾತ್ರವಾಗುವುದರಿಂದ ಶಂಕರ್‌ನಾಗ್ ಪಾತ್ರದಲ್ಲಿ ಆಕ್ರೋಶಕ್ಕಿಂತ ಸುಧಾರಣಾವಾದವೇ ಎದ್ದು ಕಂಡು ಸಂಘರ್ಷಗಳು ಸಾಲದಾದುವು. ದೊರೆ-ಭಗವಾನ್ ಅವರ ಚಿತ್ರವೆಂದರೆ ಅದೊಂದು ಸಭ್ಯ, ಸಾಮಾಜಿಕ ಕಳಕಳಿಯ ಚಿಂತನೆಗಳ ಸಂಗಮ ಎಂಬ ನಂಬಿಕೆಯನ್ನು ಅವರು ಉಳಿಸಿಕೊಳ್ಳುತ್ತಲೇ ಹೋದರು. 'ಮುನಿಯನ ಮಾದರಿ' ಕೂಡಾ ಅಖಂಡವಾಗಲ್ಲದಿದ್ದರೂ ಅವರ ಅಭಿರುಚಿಯನ್ನು ಎತ್ತಿ ಹಿಡಿವ ಮಟ್ಟಕ್ಕೆ ಇತ್ತು. ಲೋಹಿತಾಶ್ವರಂಥ ರಂಗನಟರು ಇಂಥ ಚಿತ್ರಗಳಲ್ಲಿ ಹೆಚ್ಚು ತೊಡಗಿಸಿಕೊಳ್ಳುತ್ತಾರೆ. ಅದು ಅವರ ಮನೋಧರ್ಮದಲ್ಲಿರುವ ಬದ್ಧತೆಯ ಕಾರಣವೂ ಇರಬಹುದು. ಲೋಹಿತಾಶ್ವ ಒಂದು ಗೊತ್ತಾದ ರೀತಿಯ ಪಾತ್ರಗಳಲ್ಲಿ ಮಿಂಚಿದರು. ಪ್ರಧಾನವಾಗಿ ಆಳುವ ವರ್ಗವಾದ ಪಟೇಲ, ಯಜಮಾನ, ಶ್ರೀಮಂತ ವ್ಯಾಪಾರಿ ಇತ್ಯಾದಿ. ಎಲ್ಲಕ್ಕಿಂತ ಮಿಗಿಲಾಗಿ ಅವರು ಒಪ್ಪವಾಗಿ ಕಂಡದ್ದು ಸಿನಿಮಾದ ರಾಜಕಾರಣಿ, ಮಂತ್ರಿ ಪದವಿಗಳಲ್ಲಿ. ಮುಖ್ಯಮಂತ್ರಿಗೆ ಅವರೇ ಒಂದು ರೋಲ್ ಮಾಡೆಲ್ ಆಗಿಬಿಟ್ಟರು ಒಂದು ಹಂತದಲ್ಲಿ.

'ಮರೆಯದ ಹಾಡು' ಆರ್.ಎನ್.ಜಯಗೋಪಾಲ್ ನಿರ್ದೇಶಿಸಿದ ಚಿತ್ರ. ಆರ್.ಎನ್.ಕೃಷ್ಣಪ್ರಸಾದ್ ಛಾಯಾಗ್ರಹಣವಿತ್ತು. ಸ್ನೇಹ, ಪ್ರೇಮ, ತ್ಯಾಗಗಳ ದ್ವಂದ್ವವನ್ನು ಹೇಳುತ್ತಾರೆ. ಸುಂದರಕೃಷ್ಣ ಅರಸ್ ಮುಖ್ಯವಾದ ಪಾತ್ರದಲ್ಲಿ ಅಭಿನಯಿಸಿದ್ದರು. ಇವರಿಗೆ ಅಭಿನಯವಿದೆ, ಸೊಗಸಾದ ಕಂಠವಿದೆ. ಆದರೆ ಅದಾವುದನ್ನು ಸರಿಯಾಗಿ ಬಳಸಲಿಲ್ಲ. ಪಾತ್ರವನ್ನು ಆರಾಧಿಸಬೇಕು, ನಿರ್ಲಕ್ಷ್ಯ ಸಲ್ಲ, ಸುಂದರಕೃಷ್ಣ ಅರಸ್ ಚಿತ್ರವಿಡೀ ತೊದಲುತ್ತಾರೆ. ಸರಿಯಾಗಿ ಡಬ್ ಮಾಡಿಲ್ಲ ಎಂಬ ತೀವ್ರ ಆಕ್ಷೇಪ ಎದುರಿಸಿದರು.

'ಚದುರಿದ ಚಿತ್ರಗಳು' ಎಸ್.ಟಿ.ಜಯರಾಮರೆಡ್ಡಿ ನಿರ್ದೇಶನದ ಚಿತ್ರ. ಅವಕಾಶಗಳು ಸಿಗುವುದೇ ದುರ್ಲಭ. ಸಿಕ್ಕರೂ ಅವಶ್ಯಕತೆಗಳನ್ನು ಪೂರೈಸುವಂಥ ನಿರ್ಮಾಪಕರೂ ಬೇಕು. ಜಯರಾಮರೆಡ್ಡಿ ಮತ್ತು ಅದೇ ವಯೋಮಾನದ ಒಂದಷ್ಟು



(ಚಿತ್ರ ೨೯) 'ಮುನಿಯನ ಮಾದರಿ' ಚಿತ್ರದಲ್ಲಿ ರಾಜಲಕ್ಷ್ಮಿ ಮತ್ತು ಕೋಕಿಲಾ ಮೋಹನ್

ಪ್ರತಿಭಾವಂತರು ಯಾವ ಅವಕಾಶಗಳೂ ಇಲ್ಲದೇ ಪರಿತಪಿಸುವುದು ಸಹಜವಾಗಿ ಹೋಗಿತ್ತು. ರೆಡ್ಡಿಯವರ 'ಚದುರಿದ ಚಿತ್ರಗಳು' ನೋಡಿದಾಗ ನೆಲದ ವಾತಾವರಣವಿಲ್ಲ, ಯಾವುದರ ಮೂಲ ಇರಬಹುದು ಎಂಬ ಪ್ರಶ್ನೆಯಂತೂ ಏಳುತ್ತದೆ. ಅನೇಕ ಕೊರತೆಗಳ ನಡುವೆಯೂ 'ಚದುರಿದ ಚಿತ್ರಗಳು' ಗಮನ ಸೆಳೆಯುವಂಥ ಚಿತ್ರವಾಗಿತ್ತು. ಸಮುದ್ರದ ತೆರೆಗಳು ದಡಕ್ಕೆ ಬಡಿದು ಬಡಿದು ಹಿಂತಿರುಗುವ ಚಿತ್ರಿಕೆಗಳು, ಅದನ್ನೇ ನೋಡುತ್ತಾ ನಿಂತ ನಾಯಕಿಯ ತೊಳಲಾಟ ಇತ್ಯಾದಿ ಸೊಗಸಾಗಿ ಮೂಡಿದ್ದವು. ಸುಂದರಕೃಷ್ಣ ಅರಸ್ ಕಲಾವಿದನಾಗಿ ಗಂಭೀರವಾಗಿ ಕಂಡರು. ಚಿತ್ರದಲ್ಲಿ ಅವರು ಮಾಡುವ ಕಂಡೂ ಕಾಣದಂಥ ತಪ್ಪುಗಳಿಂದಾಗಿ ದೊಡ್ಡ ದುರಂತವೇ ಸಂಭವಿಸುತ್ತದೆ. ತಾರೆ ಆರತಿ ಬಹಳಷ್ಟು ಸಲ ಸಂದರ್ಶನಗಳಲ್ಲಿ ಈ ಚಿತ್ರದ ಬಗ್ಗೆ ಹೇಳಿದ್ದುಂಟು. ಚಿತ್ರದ ಸೋಲು-ಗೆಲುವಿನ ಸಂಗತಿಯೇ ಬೇರೆ. ಚಿತ್ರ ಬೇರೆ ಬೇರೆ ಕಾರಣಗಳಿಗಾಗಿ ಒಮ್ಮೆ ಯೋಚಿಸಬೇಕಾದ್ದು.

ಸಂಸ್ಕರಣ ಇತ್ಯಾದಿ ಸರಿಯಾಗದೆ ತಾಂತ್ರಿಕ ದೋಷವಿದ್ದ ವೇಣುಗೋಪಾಲ್ ನಿರ್ದೇಶನದ 'ಪ್ರೇಮ ಪಲ್ಲವಿ'ಯಲ್ಲಿ ಎಸ್.ಪಿ.ಬಾಲಸುಬ್ರಹ್ಮಣ್ಯಂ ಮತ್ತು ಜಾನಕಿ ಹಾಡಿರುವ ಯುಗಳಗೀತೆ 'ಮಲ್ಲಿಗೆ...' ಜನಪದ ಧಾಟಿಯದು. ಅದನ್ನು ಚಿತ್ರದ ಅತ್ಯಂತ ಉತ್ತಮ ಗೀತೆ ಎನ್ನಬಹುದಾಗಿತ್ತು. 'ನಮಗಾಗೇ....' ಯುಗಳಗೀತೆ ಚೆನ್ನ. ಜಾನಕಿ ಹಾಡಿರುವ 'ನೋಡುತ ನೋಡುತ...' ಗಾಯನದ ನಡುವೆ ಕೆಲವು ಎಲೆಕ್ಟ್ರಾನಿಕ್ಸ್ ಶಬ್ದಗಳು ನುಸುಳಿ ಕಿರಿ ಕಿರಿಯಾಗುತ್ತದೆಂದೂ, ಎಸ್.ಪಿ.ಬಾಲಸುಬ್ರಹ್ಮಣ್ಯಂ ಹಾಡಿರುವ 'ಕಣ್ಣು ಕೊಟ್ಟು...' ಗೀತೆ ಕೊಂಚ ಅತಿರೇಕವೆಂದೂ ವಿಮರ್ಶಕರು ಟೀಕಿಸಿದರು. ಅದೇ ಚಿತ್ರದ 'ನಿನ್ನ ಕಂಡೂ...' ಗೀತೆ ತುಂಬ ಮಧುರವಾಗಿದೆಯೆಂಬ ಮೆಚ್ಚುಗೆ ಗಳಿಸಿತ್ತು.

ಭಾರ್ಗವ ಅವರ ನಿರ್ದೇಶನದಲ್ಲಿ ಬಂದ 'ಅವಳ ಹೆಜ್ಜೆ' ಒಂದು ಉತ್ತಮ ಚಿತ್ರವಾಗಿತ್ತು. ಕಥೆ, ಚಿತ್ರಕಥೆ ಬರೆದವರು ಹೊರಗಿನವರು. ಆದರೆ ಭಾರ್ಗವ ನಿರ್ದೇಶನದಲ್ಲಿ ಕನ್ನಡದ ವಾತಾವರಣ ತುಂಬಿ ಬಂದಿತ್ತು. ಚಿತ್ರದಲ್ಲಿ ವಿಷ್ಣುವರ್ಧನ್, ಅಂಬರೀಷ್, ದ್ವಾರಕೀಶ್, ಲಕ್ಷ್ಮೀ ಮೊದಲಾದವರ ಭಾರಿ ತಾರಾಗಣವೇ ಇತ್ತು. ಕುತೂಹಲ, ಸಾಹಸ, ಮುಖ್ಯವಾಗಿ ಸ್ತ್ರೀಯೊಬ್ಬಳ ಸಂಕಷ್ಟಗಳನ್ನು ವಿಶಿಷ್ಟವಾಗಿ ನಿರೂಪಿಸಲಾಗಿತ್ತು. ಅಂಬರೀಷ್ ಇನ್ನೂ ಖಳನ ಇಮೇಜ್‌ನಲ್ಲಿ ಇದ್ದಂತೆ ತೋರಿದರೂ ಈ ಚಿತ್ರದಲ್ಲಿ ವಿಷ್ಣುವರ್ಧನ್-ಅಂಬರೀಷ್ ಇಬ್ಬರೂ ಮುಖ್ಯ ಪಾತ್ರದಲ್ಲಿದ್ದರು. ದ್ವಾರಕೀಶ್ ಬಟ್ಲರ್, ಕಾಂಪೌಂಡರ್ ಆದರೂ ತುಂಬ ಗಮನ ಸೆಳೆಯುವಂಥ, ಘಟನೆಗಳಿಗೆ ಮುಖ್ಯ ತಿರುವು ಕೊಡುವಂಥ ಪಾತ್ರವನ್ನು ನಿರ್ವಹಿಸಿದ್ದರು. ಸುಂದರಕೃಷ್ಣ ಅರಸ್ ಪೊಲೀಸ್ ಅಧಿಕಾರಿಯಾಗಿ ಗಂಭೀರವಾದ ಪಾತ್ರ ನಿರ್ವಹಿಸಿದ್ದರು. ಈ ಚಿತ್ರದಲ್ಲಿ ರಾಜನ್-ನಾಗೇಂದ್ರರ ಉತ್ತಮ ಸಂಗೀತವಿತ್ತು. ಬಹುಕಾಲ ನೆನಪಿನಲ್ಲಿ ಉಳಿದ, ಇದೇ ಚಿತ್ರದ ಒಳನೋಟವೇ ಸೂಚಿಸುವಂಥ ಗೀತೆ 'ದೇವರ ಆಟ ಬಲ್ಲವರಾರು, ಆತನ ಎದುರು ನಿಲ್ಲುವರಾರು..' ಆಗಿತ್ತು. ಚಿ.ಉದಯಶಂಕರ್ ರಚಿಸಿದ್ದ ಅರ್ಥಪೂರ್ಣ ಗೀತೆಗಳು, ಚುರುಕಾದ ಸಂಭಾಷಣೆಯೂ ಇತ್ತು. ಎಂದಿನಂತೆ ಛಾಯಾಗ್ರಾಹಕ ಡಿ.ವಿ.ರಾಜಾರಾಂ ಕಾಂಬಿನೇಷನ್ ಕೊಡುವ ಉತ್ತಮಗಳು ಇಲ್ಲೂ ಇದ್ದವು. ಮುಂದೆ ಸದಭಿರುಚಿಯ ಚಿತ್ರಗಳನ್ನು ನಿರ್ದೇಶಿಸಿದ ಚಂದ್ರಶೇಖರಶರ್ಮ ಈ ಚಿತ್ರಕ್ಕೆ ಸಹನಿರ್ದೇಶಕರು. ಸಂಪತ್ ಹಾಗೂ ಮೂಗೂರು ಸುಂದರ್ ಇಬ್ಬರೂ ನೃತ್ಯ ನಿರ್ದೇಶನ ಮಾಡಿದ್ದರು.

'ಶ್ರೀಮಾನ್' ಚಿತ್ರದ ನಿರ್ಮಾಪಕರು ಎಂ.ಪಿ.ಶಂಕರ್. ಈ ಚಿತ್ರದ ಒಂದು ಸನ್ನಿವೇಶದಲ್ಲಿ ಇಪ್ಪತ್ತು ಮೂವತ್ತು ಸಾವಿರ ದೊಡ್ಡ ಗಾತ್ರದ ಮೊಟ್ಟೆಗಳನ್ನು ಬಳಸಿದ್ದರು. ಅಮೂಲ್ಯವಾದ ಹರಳುಗಳನ್ನು ಅಡಗಿಸಿ ಸಾಗಿಸುತ್ತಿದ್ದಾರೆಂಬ ಶಂಕೆಯ ಮೇಲೆ ಪೊಲೀಸರು ಲಾರಿಗಳನ್ನು ತಡೆದಾಗ ಮೊಟ್ಟೆಗಳೆಲ್ಲ ಒಡೆದು ಹಳದಿಯಾದ ದ್ರವ ರಸ್ತೆಯಲ್ಲೆಲ್ಲ ಚೆಲ್ಲಾಡುತ್ತದೆ. ಪಾದಚಾರಿಗಳು, ದ್ವಿಚಕ್ರ ವಾಹನಗಳು ಜಾರುತ್ತವೆ. ಅಲ್ಲೇ ಬ್ಯಾಲೆ ಆರಂಭವಾಗುತ್ತದೆ. ಹೀಗೊಂದು ಸನ್ನಿವೇಶವನ್ನು ನಿರ್ದೇಶಕ ಗೀತಪ್ರಿಯ ಸೊಗಸಾಗಿ ಸಂಯೋಜಿಸಿದ್ದರು.

'ಪ್ರೀತಿಸಿ ನೋಡು' ಗೀತಪ್ರಿಯ ನಿರ್ದೇಶನದ ಚಿತ್ರ. ಅಂಗವಿಕಲರ ಸಮಸ್ಯೆಯನ್ನು ತೆಗೆದುಕೊಂಡು ಚಿತ್ರಿಸಿದ್ದೊಂದು ಹೆಗ್ಗಳಿಕೆ. ವಿಷ್ಣುವರ್ಧನ್ ಸಾಹಸದ ತೀವ್ರತೆಯನ್ನು ಬದಿಗಿಟ್ಟು ಭಾವಾಭಿನಯ, ಸೌಮ್ಯತೆ ತೋರಿಸಿದ್ದರು. ಆರತಿ, ಶ್ರೀನಿವಾಸಮೂರ್ತಿ ಉತ್ತಮ. ಗೀತಪ್ರಿಯರು ಬದಲಾಗುತ್ತಿದ್ದ ತಂತ್ರಜ್ಞಾನ, ಜನಾಭಿರುಚಿಯ ಜೊತೆಗೆ ಹೆಜ್ಜೆ ಹಾಕಲು ಒಲ್ಲರೇನೋ ಎಂಬಂತೆ ಅದೇ ನಾಟಕೀಯತೆ, ವಾಚಾಳಿತನಗಳಲ್ಲೇ ಉಳಿದರು. ಸದಭಿರುಚಿ, ಸಂಭ್ರಮ, ಚೊಕ್ಕತನ ಏನೇ ಇದ್ದರೂ ಕಥೆ ಹೇಳುವ ವಿಧಾನವೇ ಬದಲಾಗುತ್ತಿದ್ದ ಕಾಲದಲ್ಲೂ ಏನೋ ನಂಬಿಕೊಂಡದ್ದು ಮುಂದಿನ ಅವರ ಹೆಜ್ಜೆಗಳನ್ನು ಅಸ್ಥಿರಗೊಳಿಸಲು ನಾಂದಿಯಾಯಿತೇನೋ. ಚಿತ್ರ ನಿರ್ಮಿಸಿದ ಬಾಲಾಜಿಸಿಂಗ್, ಸುಕುಮಾರ್, ಲಕ್ಷ್ಮಣರಾವ್ ಅವರುಗಳು ಬರಿಗೈಯಾಗಲಿಲ್ಲ ಎಂಬುದೊಂದೇ ಸಮಾಧಾನದ ಅಂಶ. ವಿಜಯಭಾಸ್ಕರ್ ಸಂಗೀತ ನಿರ್ದೇಶನದಲ್ಲಿ ಕೆಲವು ಗೀತೆಗಳು ಗುನುಗುವಷ್ಟು ಚೆನ್ನ ಎನಿಸಿದವು.

ರಜನೀಕಾಂತ್ ಅಭಿನಯದ 'ಘರ್ಜನೆ', ಸರಿತಾ ದ್ವಿಪಾತ್ರದಲ್ಲಿದ್ದು ಖಳನಾಯಕಿಯೂ ಆಗಿದ್ದ ಕೆ.ಎಸ್.ಆರ್.ದಾಸ್ ನಿರ್ದೇಶನದ 'ಜೀವಕ್ಕೆ ಜೀವ', ಸ್ತ್ರೀ ಶೋಷಣೆಯನ್ನು ಹೇಳ ಹೊರಟ ಸಮೀಉಲ್ಲ ನಿರ್ದೇಶನದ 'ಹೆಣ್ಣಿನ ಸೇಡು', ಅಪಕ್ವ ನಿರೂಪಣೆಯ 'ಬಂಗಾರದ ಮನೆ', ರಾಜೇಶ್ ಕುಮಾರ್ ನಿರ್ದೇಶನದ 'ಮಂಗಳಸೂತ್ರ', ತೆಲುಗಿನ ನಿರ್ದೇಶಕರ ಕೊಡುಗೆ 'ಭಾಗ್ಯದ ಬೆಳಕು' ಚಿತ್ರಗಳು ವರ್ಷಾಂತ್ಯದಲ್ಲಿ ತೆರೆಗೆ ಬಂದವು. ಇವುಗಳಿಂದ ಚಿತ್ರೋದ್ಯಮಕ್ಕೆ ಕಲೆ, ಕಾಸು ಎರಡೂ ಸಿಗಲಿಲ್ಲ. ಕಲಾವಿದೆ ಗೀತಾಗೆ ಕಳಪೆ ಚಿತ್ರ ಚಿಮ್ಮು ಹಲಗೆಯಾದದ್ದು, ಒಂದಿಬ್ಬರು ಹೊಸ ನಿರ್ದೇಶಕರು ಬಂದದ್ದು ಗಮನಾರ್ಹ ಸಂಗತಿಗಳು. ಸಿ.ಚಂದ್ರಶೇಖರ್‌ರಂಥ ಚೊಕ್ಕವಾದ ಕೆಲಸಕ್ಕೆ ಹೆಸರಾದ ನಿರ್ದೇಶಕರು ಕೂಡಾ 'ನಮ್ಮಮ್ಮ ತಾಯಿ ಅಣ್ಣಮ್ಮ'ದಂಥ ಚಿತ್ರ ನಿರ್ದೇಶಿಸಿದರು. ಸಾಮಾನ್ಯವಾಗಿ ಜನರಿಗೆ ಪ್ರಿಯವೆನಿಸುವ ಕಾಸ್ಟ್ಯೂಮ್, ಸೆಟ್ಸ್, ಟ್ರಿಕ್ಸ್‌ಗಳ ಸೂತ್ರ ಬಳಸಿಯೂ ತಲುಪಲಿಲ್ಲ. ಇದೇ ಮಾತು



(ಚಿತ್ರ ೩೦) 'ಅವಳ ಹೆಜ್ಜೆ' ಚಿತ್ರದಲ್ಲಿ ಅಂಬರೀಷ್ ಮತ್ತು ಲಕ್ಷ್ಮೀ

'ಎಡೆಯೂರು ಶ್ರೀ ಸಿದ್ಧಲಿಂಗೇಶ್ವರಸ್ವಾಮಿ'ಗೂ ಅನ್ವಯವಾಗುತ್ತದೆ. ನದಿಯೇ ಇಬ್ಭಾಗವಾಗಿ ದಾರಿ ಬಿಡುವುದು ಇತ್ಯಾದಿ ಕ್ಯಾಮರಾ ಚಮತ್ಕಾರಗಳಿದ್ದವು. ಚಂದೂಲಾಲ್ ಜೈನ್ 'ಭಕ್ತ ಸಿರಿಯಾಳ'ದ ಹಾಗೆಯೇ ಭರ್ಜರಿ ಯಶಸ್ಸನ್ನು ನಿರೀಕ್ಷಿಸಿ ಬಸವಳಿದರು.

ಇವಿಷ್ಟು ೧೯೮೦ರ ಚಿತ್ರಗಳಾದರೆ, ೧೯೮೧ ರಲ್ಲಿ ಒಟ್ಟು ಬಿಡುಗಡೆ ಆದ ಚಿತ್ರಗಳು ೫೨. ಅವುಗಳಲ್ಲಿ ವರ್ಷದ ಮೊದಲ ಚಿತ್ರ 'ಹೊಸ ಬೆಳಕು'. ವಾಣಿಯವರ ಕಾದಂಬರಿ ಆಧರಿಸಿದ 'ಹೊಸ ಬೆಳಕು' ಕೆಲವಾರು ಅಂಶಗಳಲ್ಲಿ ಭಿನ್ನವಾಗಿತ್ತು. ತಾನು ಕೆಲಸ ಮಾಡುತ್ತಿದ್ದ ಸಂಸ್ಥೆಯ ಯಜಮಾನನ ಮಗಳನ್ನು ತ್ಯಜಿಸಿ, ತನ್ನ ಅಕ್ಕನ ಮನೆಯಲ್ಲಿ ಕಷ್ಟಗಳಿಂದ ತೊಳಲಾಡುತ್ತಿರುವ ಮಲಮಗಳನ್ನು ಮದುವೆಯಾಗುವ ತ್ಯಾಗಕೇಂದ್ರಿತ ಕಥೆಯ ಚಿತ್ರವಿದು. ಗೌರಿಶಂಕರ್ ಪ್ರಥಮ ಬಾರಿಗೆ ರಾಜಕುಮಾರ್‌ರ ಈ ಚಿತ್ರಕ್ಕೆ ಛಾಯಾಗ್ರಹಣ ಮಾಡಿದರು. ವಿದೇಶವೇನೋ ಅನ್ನಿಸುವಷ್ಟರ ಮಟ್ಟಿಗೆ ದೆಹಲಿಯ ಹೊರಾಂಗಣವನ್ನು ಅವರು ರಮ್ಯವಾಗಿ ಸೆರೆ ಹಿಡಿದಿದ್ದರು. ೨೫ ವಾರಗಳ ಯಶಸ್ವಿ ಪ್ರದರ್ಶನ ಕಂಡ ಈ ಚಿತ್ರದಲ್ಲಿ ಮಲಮಗಳ ಪಾತ್ರದಲ್ಲಿ ಅಭಿನಯಿಸಿದ್ದ ಸರಿತಾಗೆ ರಾಜ್ಯದ ೧೯೮೦ರ ಶ್ರೇಷ್ಠ ನಟಿ ಪ್ರಶಸ್ತಿ ಲಭಿಸಿತು. ಎಂ.ರಂಗರಾವ್‌ರ ಸಂಗೀತದಲ್ಲಿ ಕುವೆಂಪು ಅವರ 'ತೆರೆದಿದೆ ಮನೆ....', 'ಕಣ್ಣೀರ ಧಾರೆ ಇದೇಕೆ...' ಹಾಗೂ 'ಚೆಲುವೆಯೇ ನಿನ್ನ ನೋಡಲು....' ಗೀತೆಗಳು ಅತ್ಯಂತ ಜನಪ್ರಿಯವಾದವು. ಈ ಚಿತ್ರದ ವೇಳೆಗಾಗಲೇ ರಾಜಕುಮಾರ್ ಜನಪ್ರಿಯ ಗಾಯಕರಾಗಿ ಬೇರು ಬಿಟ್ಟಿದ್ದರಲ್ಲದೆ



(ಚಿತ್ರ ೩೧) 'ಹೊಸ ಬೆಳಕು' ಚಿತ್ರದಲ್ಲಿ ಜಾನಕಮ್ಮ, ರಾಜಕುಮಾರ್, ಮಾ। ಲೋಹಿತ್ ಮತ್ತು ಸರಿತಾ

ನಿರಂತರವಾಗಿ ಭಕ್ತಿ ಗೀತೆಗಳನ್ನು ಕೂಡ ಹಾಡಲು ಆರಂಭಿಸಿದ್ದರು. ಈ ಹಾಡುಗಳ ಸಂಖ್ಯೆ ೧೦೦ರ ಸಂಖ್ಯೆಯನ್ನು ದಾಟಿತ್ತು. ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳು, ಶೃಂಗೇರಿ ಶಾರದಾಂಬ, ಸ್ವಾಮಿ ಅಯ್ಯಪ್ಪ, ರಮಣ ಮಹರ್ಷಿಗಳು ಮತ್ತು ಪುರಂದರದಾಸರ ಕುರಿತು ಗೀತೆಗಳನ್ನು ಹಾಡಿದ್ದರು. ಈ ಭಕ್ತಿ ಗೀತೆಗಳ ಗಾಯನದಿಂದ ಬರುವ ಆದಾಯ ಡಾ.ರಾಜಕುಮಾರ್ ಟ್ರಸ್ಟಿಗೆ ಜಮೆಯಾಗುತ್ತಿತ್ತು. ಈ ಹಣವನ್ನು ಸಮಾಜದ ಹಾಗೂ ಬಡವರ ಸೇವೆಗಾಗಿ ವಿನಿಯೋಗಿಸಲಾಗುತ್ತಿತ್ತು.

೧೯೮೨ರ ಜೂನ್ ೧೮ ರಂದು 'ಹೊಸ ಬೆಳಕು' ಚಿತ್ರದ ಶತದಿನ ಸಮಾರಂಭ ಮೈಸೂರಿನಲ್ಲಿ ಅದ್ಧೂರಿಯಾಗಿ ಏರ್ಪಾಡಾಗಿತ್ತು. ಆದರೆ ರಾಜಕುಮಾರ್ ಅವರಿಗೆ ತಮ್ಮ ಚಿತ್ರದ ಯಶಸ್ಸಿನ ಸಂತೋಷವನ್ನು ಅನುಭವಿಸುವ ಮನಸ್ಥಿತಿ ಇರಲಿಲ್ಲ. ಏಕೆಂದರೆ ಇಂಗ್ಲಿಷ್‌ನ 'ಟ್ರೇಡ್‌ಗೈಡ್' ಪತ್ರಿಕೆ ಎರಡು ವಾರಗಳ ಹಿಂದೆಯಷ್ಟೇ ಅವರನ್ನು 'ಮರಿ ಹಿಟ್ಲರ್' ಎಂದು ಜರಿದು ಕೆಲವು ಅರೋಪಗಳನ್ನು ಹೊರಿಸಿ ಹೀಯಾಳಿಸಿತ್ತು. ಇದರಿಂದ ಅವರಿಗೆ ಎಷ್ಟು ನೋವಾಗಿತ್ತೋ ಅಷ್ಟೇ ಪ್ರಮಾಣದಲ್ಲಿ ಸಿಟ್ಟೂ ಇತ್ತು. ಆಗ್ಗೆ ಅವರು ತಮ್ಮ ಚಲನಚಿತ್ರ ಚಟುವಟಿಕೆಗಳನ್ನು ಮದರಾಸಿನಿಂದ ಬೆಂಗಳೂರಿಗೆ ವರ್ಗಾಯಿಸಿಕೊಂಡು ಕೇವಲ ಹತ್ತು ತಿಂಗಳೂ ಆಗಿರಲಿಲ್ಲ. ಆದರೆ ಇಷ್ಟರಲ್ಲಿ ಅವರಿಗೆ ಉದ್ಯಮದ ಅಂತರಂಗದ ತಳಮಳಗಳು ಅನುಭವಕ್ಕೆ ಬಂದಿದ್ದವು. ಚಿತ್ರೋದ್ಯಮದ ಆರ್ಥಿಕ ಏರುಪೇರುಗಳು, ಸರ್ಕಾರದ ನೀತಿ ಹಾಗೂ ಪ್ರದರ್ಶಕರ ಶೋಷಣೆ ಮತ್ತು ಅಸಹಕಾರ ಅವರಲ್ಲಿ ಅಪಾರ ಅಸಮಾಧಾನ ಹುಟ್ಟುಹಾಕಿತ್ತು. ಇವನ್ನು ಅವರು ಗೋಕಾಕ್ ಚಳವಳಿಯ ಸಾರ್ವಜನಿಕ ಸಭೆಗಳ ಭಾಷಣಗಳಲ್ಲಿ ಹೇಳುತ್ತಾ ಬಂದರು.

ಅದುವರೆಗೆ ಹೊರಗಿನವರ ನಿರ್ಮಾಣದ ಚಿತ್ರಗಳಲ್ಲಿ ಮಾತ್ರ ಅಭಿನಯಿಸುತ್ತಿದ್ದುದರಿಂದ ಹಂಚಿಕೆ ಮತ್ತು ಪ್ರದರ್ಶನದಲ್ಲಿದ್ದ ಲೋಪಗಳು ಹಾಗೂ ಒಳಸುಳಿಗಳ ಪರಿಚಯ ಅವರಿಗೆ ಸ್ಪಷ್ಟವಾಗಿ ಇರಲಿಲ್ಲ. ನಿರ್ಮಾಣ ಸೇರಿದಂತೆ ಚಿತ್ರದ ಎಲ್ಲ ಹಂತಗಳ ಚಟುವಟಿಕೆಗಳನ್ನು ಕುಟುಂಬದ ಸದಸ್ಯರೊಂದಿಗೆ ಸ್ವಂತವಾಗಿ ಆರಂಭಿಸಿದಾಗ ಸಹಜವಾಗಿ ಅವರಿಗೆ ದಿಗ್ಭ್ರಮೆಯಾಯಿತು. ಕನ್ನಡ ಚಿತ್ರರಂಗ ಹಾಗೂ ಕನ್ನಡ ಭಾಷೆ ನಾನಾ ರೀತಿಯ ಕುತ್ತುಗಳಿಂದ ಸೊರಗಿರುವುದಷ್ಟೇ ಅಲ್ಲದೆ ಪರಭಾಷಾಪ್ರಿಯ ಹಂಚಿಕೆದಾರರು ಹಾಗೂ ಪ್ರದರ್ಶಕರಿಂದ ಬಂಧನಕ್ಕೊಳಗಾಗಿದೆ ಎಂಬ ಸತ್ಯ ಮನವರಿಕೆಯಾಯಿತು. ಇದರಿಂದಾಗಿಯೇ ಗೋಕಾಕ್ ಚಳವಳಿಯ ಸಭೆಗಳಲ್ಲಿ ಅವರು ಕನ್ನಡ ಭಾಷೆಯ ಮಹತ್ವದ ಜೊತೆಗೆ ಎರಡು ಮೂರು ವಿಷಯಗಳನ್ನು ಪ್ರಸ್ತಾಪಿಸುತ್ತಿದ್ದರು. ಮಾತಿನ ಬಹುಭಾಗ ಗೋಕಾಕ್ ವರದಿಯ ಸಮಗ್ರ ಅನುಷ್ಠಾನದ ಕುರಿತಂತೆ ಇದ್ದರೆ ಉಳಿದಭಾಗ ಉದ್ಯಮದಲ್ಲಿನ ಕೆಲವು ಅಹಿತ ಪ್ರವೃತ್ತಿಗಳನ್ನು ಖಂಡಿಸುವುದಕ್ಕೆ ಮೀಸಲಾಗಿರುತ್ತಿತ್ತು.

ಗೋಕಾಕ್ ವರದಿಯ ಸಂಪೂರ್ಣ ಅನುಷ್ಠಾನಕ್ಕಾಗಿ ಚಳವಳಿ ಆರಂಭವಾದದ್ದು ೧೯೮೨ರ ಫೆಬ್ರವರಿ ಮೊದಲ ವಾರದಲ್ಲಿ. ಆರಂಭದ ಒಂದು ತಿಂಗಳ ಕಾಲ ವರದಿಯಲ್ಲಿನ ವಿವರಗಳ ಬಗ್ಗೆ ಕನ್ನಡಿಗರಿಗೆ ಸ್ಪಷ್ಟ ಕಲ್ಪನೆಯಿರಲಿಲ್ಲ. ಆದರೆ ದಿನ ಕಳೆದಂತೆ ಭಾಷಣ, ಲೇಖನಗಳ ಮೂಲಕ ವರದಿಯ ಸಂಪೂರ್ಣ ಪರಿಚಯ ಸಾರ್ವಜನಿಕರಿಗೆ ಆಗುತ್ತಾ ಬಂದಿತು. ಸಾಹಿತಿಗಳು, ಕಲಾವಿದರು ಪ್ರತಿಭಟನೆ, ಧರಣಿ ಸತ್ಯಾಗ್ರಹಗಳನ್ನು ಆರಂಭಿಸತೊಡಗಿದರು. ಇದೆಲ್ಲ ಶುರುವಾದ ಒಂದೂವರೆ ತಿಂಗಳ ನಂತರ ಹಿರಿಯ ಸಾಹಿತಿಗಳ ನಿಯೋಗವೊಂದು ರಾಜಕುಮಾರ್‌ರನ್ನು ಭೇಟಿಯಾಗಿ ಪರಿಸ್ಥಿತಿಯ ತೀವ್ರತೆಯನ್ನು ವಿವರಿಸಿ ಚಳವಳಿಯ ನೇತೃತ್ವ ವಹಿಸಿಕೊಳ್ಳುವಂತೆ ಕೋರಿತು. ಅದಾಗಲೇ ನಟಿ ಜಯಮಾಲಾ, ಲೋಕೇಶ್, ನಿರ್ಮಾಪಕರಾದ ಕೆ.ಎಸ್.ಜಗನ್ನಾಥ್, ಟಿ.ಜಿ.ಆರಾಧ್ಯ, ಮಾವಿನಕೆರೆ ರಂಗನಾಥನ್ ಮುಂತಾದವರು ಸಾಹಿತಿಗಳ ಜೊತೆ ಸರಣಿ ಉಪವಾಸದಲ್ಲಿ ಭಾಗವಹಿಸಿದ್ದರು. ಬೆಂಗಳೂರು ನಗರದಲ್ಲಿ ವರದಿಯ ಜಾರಿಗೆ ಒತ್ತಾಯಿಸಿ ರಾಜಕುಮಾರ್ ಅಭಿಮಾನಿಗಳ ಸಂಘದಿಂದ ಪ್ರಕಟಿಸಲಾದ ಪೋಸ್ಟರುಗಳು ವಿಜೃಂಭಿಸುತ್ತಿದ್ದವು. ಬುದ್ಧಿಜೀವಿಗಳ ಒತ್ತಾಯ, ಕನ್ನಡಿಗರ ಅಭಿಲಾಷೆ ಹಾಗೂ ಪರಿಸ್ಥಿತಿಯ ತೀವ್ರತೆ ಅರಿತು ಮದರಾಸಿನಲ್ಲಿ 'ಕವಿರತ್ನ ಕಾಳಿದಾಸ' ಚಿತ್ರೀಕರಣದಲ್ಲಿ ಭಾಗವಹಿಸಿದ್ದ ರಾಜಕುಮಾರ್ ಅಲ್ಲಿಂದಲೇ ಒಂದು ಪತ್ರಿಕಾ ಹೇಳಿಕೆ ನೀಡಿದರು. 'ಕನ್ನಡದ ಉಳಿವಿಗಾಗಿ ನಡೆಯುತ್ತಿರುವ ಚಳವಳಿಗೆ ತಾವು ಮಾನಸಿಕ ಹಾಗೂ ದೈಹಿಕ ಸೇವೆ ಸಲ್ಲಿಸಲು ಸದಾ ಸಿದ್ಧ' ಎಂದು ಘೋಷಿಸಿದರು. ಅದಾಗಲೇ ಅತ್ಯಂತ ಉತ್ಸಾಹದಿಂದ ಚಳವಳಿಯಲ್ಲಿ ತೊಡಗಿಕೊಂಡು ಸರದಿ ಉಪವಾಸವನ್ನು ಸಂಘಟಿಸಿದ್ದ ರಾಜಕುಮಾರ್ ಅಭಿಮಾನಿ ಸಂಘದ ಸದಸ್ಯರು ರಾಜಕುಮಾರ್ ಪತ್ರಿಕಾ ಹೇಳಿಕೆ ಕೊಟ್ಟ ಕೆಲವೇ ಗಂಟೆಗಳಲ್ಲಿ ಹೇಳಿಕೆಯ ಸಾವಿರಾರು ಪ್ರತಿಗಳನ್ನು ಮುದ್ರಿಸಿ ಸಾರ್ವಜನಿಕರಿಗೆ ಹಂಚಿ ಜಾಗೃತಿಯನ್ನು ಉಂಟುಮಾಡಿದರು. ಇದರೊಂದಿಗೆ ರಾಜಕುಮಾರ್, ಅನಂತ್‌ನಾಗ್, ಶ್ರೀನಾಥ್ ಮುಂತಾದವರು ಮೆರವಣಿಗೆಯಲ್ಲಿ ಭಾಗವಹಿಸುತ್ತಾರೆಂದು ಬರೆದ ಫಲಕವನ್ನು ಡೇರೆಯ ಮುಂದೆ ಇಟ್ಟು ಪ್ರಚಾರ ಮಾಡಿದರು. ಎಲ್ಲವೂ ಯೋಜಿಸಿದ್ದಕ್ಕಿಂತಲೂ ಅದ್ಭುತವಾಗಿ ನಡೆದು ಹೋಯಿತು.

ಮರುದಿನ ರಾಜಕುಮಾರ್ ಮೈಸೂರು ಬ್ಯಾಂಕ್ ವೃತ್ತದಿಂದ ಕಬ್ಬನ್ ಪಾರ್ಕ್‌ವರೆಗೆ ನಡೆದ ಬೃಹತ್ ಮೆರವಣಿಗೆಯ ನೇತೃತ್ವ ವಹಿಸಿ ನಡೆದು ಬಂದು ಕಬ್ಬನ್ ಪಾರ್ಕಿನಲ್ಲಿ ಸೇರಿದ್ದ ಭಾರಿ ಬಹಿರಂಗ ಸಭೆಯಲ್ಲಿ 'ಕನ್ನಡಕ್ಕಾಗಿ ಸರ್ವತ್ಯಾಗಕ್ಕೂ ಸಿದ್ಧ' ಎಂದರು. ಈ ಸಭೆಯಲ್ಲಿ ಅನಂತ್‌ನಾಗ್, ಅಂಬರೀಷ್, ಶಿವರಾಂ, ಶ್ರೀನಾಥ್, ಜೈಜಗದೀಶ್, ಶಂಕರ್‌ನಾಗ್, ಮುಸುರಿ ಕೃಷ್ಣಮೂರ್ತಿ, ಜಯಮಾಲ ಮುಂತಾದವರಿದ್ದರು.

ವಿಷ್ಣುವರ್ಧನ್ ಹೊರಾಂಗಣ ಚಿತ್ರೀಕರಣದ ಒತ್ತಡದಿಂದಾಗಿ ಬೆಂಗಳೂರಿನ ಮೆರವಣಿಗೆಯಲ್ಲಿ ಪಾಲ್ಗೊಳ್ಳಲಾಗದ್ದರ ಬಗ್ಗೆ ವಿಷಾದ ವ್ಯಕ್ತಪಡಿಸಿ ಮೈಸೂರಿನಿಂದ ಐದು ದಿನಗಳ ನಂತರ ಹೇಳಿಕೆ ನೀಡಿ, ರಾಜಕುಮಾರ್ ನಾಯಕತ್ವದ ಹೋರಾಟವನ್ನು ಬೆಂಬಲಿಸಿ ತಮ್ಮ ಅಭಿಮಾನಿಗಳೊಂದಿಗೆ ಉಪವಾಸ ಸತ್ಯಾಗ್ರಹ ನಡೆಯುತ್ತಿದ್ದ ಸ್ಥಳಕ್ಕೆ ಮೆರವಣಿಗೆಯಲ್ಲಿ ಹೋಗಿ ಭಾಷಣ ಮಾಡಿದರು. 'ಕೆರಳಿದ ಸಿಂಹ-ಸಾಹಸ ಸಿಂಹ' ಚಿತ್ರಗಳ ರಗಳೆಯ ವಾತಾವರಣ ಇನ್ನೂ ತಿಳಿಯಾಗದಿದ್ದುದರಿಂದ ಆರಂಭದ ದಿನಗಳಲ್ಲಿ ವಿಷ್ಣುವರ್ಧನ್ ಅಭಿಮಾನಿಗಳು ಚಳವಳಿಯಲ್ಲಿ ಭಾಗವಹಿಸಿರಲಿಲ್ಲ. ಈ ಬಗ್ಗೆ ಸಾಕಷ್ಟು ಅಸಮಾಧಾನ, ಟೀಕೆಗಳು ಕೇಳಿ ಬರಲಾರಂಭಿಸಿದ್ದವು. ಇದರೊಂದಿಗೆ ವಿಷ್ಣುವರ್ಧನ್ ಮತ್ತು ಮುಖ್ಯಮಂತ್ರಿ ಗುಂಡೂರಾವ್ ಇಬ್ಬರ ನಡುವೆ ಉತ್ತಮ ಸ್ನೇಹವಿದ್ದುದರಿಂದ ಗುಂಡೂರಾಯರಿಗೆ ಎದುರಾಗಿ ಅವರು ಚಳವಳಿಗೆ ಧುಮುಕಲಾರರು ಎಂಬ ಅಭಿಪ್ರಾಯವೂ ಇತ್ತು. ಆದರೆ ಕಬ್ಬನ್ ಪಾರ್ಕ್ ಸಭೆ ನಡೆದ ಐದು ದಿನಗಳ ನಂತರ ವಿಷ್ಣುವರ್ಧನ್ ಬಹಿರಂಗ ಹೇಳಿಕೆ ಕೊಟ್ಟ ಮೇಲೆ ಎಲ್ಲ ವದಂತಿಗಳಿಗೂ ತೆರೆ ಬಿತ್ತು. ಇದೆಲ್ಲಕ್ಕಿಂತ ಹೆಚ್ಚಾಗಿ ಆಗಿನ ವಾತಾವರಣ ಹೇಗಿತ್ತೆಂದರೆ ಕನ್ನಡ ಚಳವಳಿಯನ್ನು ಬೆಂಬಲಿಸದವರೆಲ್ಲ 'ಪರಮ ಕನ್ನಡ ದ್ರೋಹಿಗಳು' ಎಂಬಂತಾಗಿತ್ತು.

ಹಾಗೆ ನೋಡಿದರೆ ಈ ಚಳವಳಿ ಆರಂಭವಾದದ್ದು ಸಾಹಿತಿಗಳಿಂದ. ಮುಕ್ತಾಯಗೊಂಡಿದ್ದು ಮಾತ್ರ ಸಿನಿಮಾದವರಿಂದ. ಮೊದಲಿಗೆ ಧಾರವಾಡದಲ್ಲಿ

ಆರಂಭವಾದ ಈ ಚಳವಳಿಗೆ ಮೈಸೂರಿನಲ್ಲಿ ಭಾರಿ ಬೆಂಬಲ ಸಿಕ್ಕಿತು. ಇದನ್ನೆಲ್ಲಾ ಕಂಡು ಬೆಂಗಳೂರಿನ ಸಾಹಿತಿಗಳು ಸ್ವಲ್ಪ ತಡವಾಗಿ ಎಚ್ಚೆತ್ತುಕೊಂಡರು. ಆರಂಭದಲ್ಲಿ ಅಷ್ಟೇನೂ ಸಾರ್ವಜನಿಕ ಬೆಂಬಲ ಗಳಿಸಿಕೊಳ್ಳದಿದ್ದ ಈ ಭಾಷಾ ಚಳವಳಿ ಸಿನಿಮಾ ರಂಗದ ಬೆಂಬಲ ದೊರೆಯುತ್ತಿದ್ದಂತೆ ಉಗ್ರ ಸ್ವರೂಪ ತಳೆದು ಸಿನಿಮೀಯ ಅಂತ್ಯವನ್ನು ಮುಟ್ಟಿತು.

ಇಲ್ಲಿಂದಾಚೆಗೆ ನಡೆದದ್ದೆಲ್ಲ ಒಂದು ಮಹಾಯಾನ. ಕರ್ನಾಟಕದ ಚರಿತ್ರೆಯಲ್ಲಿ, ಕನ್ನಡದ ಭಾಷೆಯ ಇತಿಹಾಸದಲ್ಲಿ ಕನ್ನಡ ಚಿತ್ರರಂಗದ ದಾಖಲೆಗಳಲ್ಲಿ ಒಂದು ಅವಿಸ್ಮರಣೀಯ ಅಧ್ಯಾಯ. ಇಡೀ ಚಿತ್ರೋದ್ಯಮ ರಾಜಕುಮಾರ್ ನೇತೃತ್ವದಲ್ಲಿ ಒಗ್ಗೂಡಿ ನಿಂತಿತು. ಚಿತ್ರರಂಗದ ಪ್ರಾತಿನಿಧಿಕ ಸಂಸ್ಥೆಯಾದ ಚಲನಚಿತ್ರ ವಾಣಿಜ್ಯ ಮಂಡಳಿ ಸೇರಿದಂತೆ ಉದ್ಯಮದ ಹಲವಾರು ಅಂಗಸಂಸ್ಥೆಗಳು ನಾ ಮುಂದು, ತಾ ಮುಂದು ಎಂದು ಹೇಳಿಕೆಗಳನ್ನು ನೀಡಿ ಹೋರಾಟವನ್ನು ಬೆಂಬಲಿಸಿದವು. ಗೋಕಾಕ್ ವರದಿ ಜಾರಿಗೆ ಒತ್ತಾಯಿಸಿ ಕನ್ನಡಿಗರನ್ನು ಜಾಗೃತಗೊಳಿಸುವ ಮಹಾಜಾಥಾ ಅತ್ಯಂತ ವ್ಯವಸ್ಥಿತವಾಗಿ ರಾಜ್ಯದಾದ್ಯಂತ ಆರಂಭವಾಯಿತು. ನಾಡಿನ ಮೂಲೆ ಮೂಲೆಗಳಲ್ಲಿ ಲಕ್ಷಾಂತರ ಜನ ಜಮಾಯಿಸುತ್ತಿದ್ದಂತೆ ಗುಂಡೂರಾವ್ ನೇತೃತ್ವದ ಕಾಂಗ್ರೆಸ್ ಸರ್ಕಾರದೆದುರು ದೊಡ್ಡ ಪ್ರಪಾತ ಸೃಷ್ಟಿಯಾಗತೊಡಗಿತು.

ಈ ಹೋರಾಟಕ್ಕೆ ಸಿಕ್ಕ ಪ್ರಚಂಡ ಜನ ಬೆಂಬಲದಿಂದಾಗಿ ಉದ್ಯಮದಲ್ಲಿ ಹೊಸದೊಂದು ಬೆಳವಣಿಗೆ ಕಾಣಿಸಿಕೊಂಡಿತು. ಮೈಸೂರು ಬ್ಯಾಂಕಿನಿಂದ ಕಬ್ಬನ್ ಪಾರ್ಕಿನವರೆಗೆ ನಡೆದ ಮೊದಲ ಪ್ರತಿಭಟನಾ ಮೆರವಣಿಗೆಯ ಯಶಸ್ಸೇ ಈ ಆಲೋಚನೆಗೆ ಕಾರಣ. ಅಂದಿನ ಅಪಾರ ಜನಸ್ತೋಮದ ಉತ್ಸಾಹ ಕಂಡವರು ರಾಜಕುಮಾರ್‌ರ ಪ್ರಭಾವ, ಶಕ್ತಿ, ಜನಪ್ರಿಯತೆಗಳನ್ನು ಕನ್ನಡ ಚಿತ್ರರಂಗದ ಏಳಿಗೆಗೆ ಏಕೆ ಬಳಸಿಕೊಳ್ಳಬಾರದು ಎಂದು ಯೋಚಿಸಿದರು. ರಾಜಕುಮಾರ್ ಮನಸ್ಸು ಮಾಡಿದರೆ ಕನ್ನಡ ಚಿತ್ರರಂಗದ ಸಮಸ್ಯೆಗಳನ್ನು ಸುಲಭವಾಗಿ ಪರಿಹರಿಸಲು ಸಾಧ್ಯವಿದೆ ಎಂಬ ನಂಬಿಕೆಗೆ ಈಗ ಪುರಾವೆ ಸಿಕ್ಕಿತ್ತು. ಚಲನಚಿತ್ರ ಪ್ರದರ್ಶನ ವ್ಯವಸ್ಥೆಯ ಬಗ್ಗೆ ರಾಜಕುಮಾರ್‌ಗೂ ಅಸಮಾಧಾನವಿರುವುದರಿಂದ ಅದನ್ನು ಸರಿಪಡಿಸುವುದರಲ್ಲಿ ಅವರು ಮುಂದಾಗಬಹುದು ಎಂದು ಅನೇಕ ನಿರ್ಮಾಪಕರು, ಹಂಚಿಕೆದಾರರು ಭಾವಿಸಿದರು. ಗೋಕಾಕ್ ಚಳವಳಿ ಮುಗಿದ ಕೂಡಲೇ ಬೇರೊಂದು ಹೋರಾಟದ ನಿರೀಕ್ಷೆಯಲ್ಲಿ ಕೆಲವರು ಮಾತುಕತೆ, ಚರ್ಚೆಗಳಲ್ಲಿ ತೊಡಗಿದರು. ಆದರೆ ಗುಂಡೂರಾಯರ ಸರ್ಕಾರ ಗೋಕಾಕ್ ವರದಿಯನ್ನು ಕೈಬಿಟ್ಟು ತನ್ನದೇ ಒಂದು ಸೂತ್ರವನ್ನು ಪ್ರಕಟಿಸಿದಾಗ ಅದನ್ನು ಒಪ್ಪಬೇಕೇ, ಬೇಡವೇ ಎಂಬ ಬಗ್ಗೆ ಸಾರ್ವಜನಿಕರಲ್ಲಿ ಗೊಂದಲ ಉಂಟಾಯಿತು. ಸಾಹಿತಿ, ಬುದ್ಧಿಜೀವಿಗಳು ವಿಚಾರ ವಿನಿಮಯ, ಚರ್ಚೆಗಳನ್ನು ನಡೆಸತೊಡಗಿದರು. ಮುಂದಿನ ಕಾರ್ಯತಂತ್ರದ ಬಗ್ಗೆ ಯೋಚಿಸುವುದರಲ್ಲಿ ಸುಮಾರು ಎರಡು ತಿಂಗಳು ವಿಳಂಬವಾಯಿತು.

ಈ ಸಮಯಾವಕಾಶದಲ್ಲಿ ನಿರ್ಮಾಪಕರು ಖಾಸಗಿಯಾಗಿ ಮತ್ತು ಪ್ರತ್ಯೇಕವಾಗಿ ಹಲವಾರು ಸಭೆಗಳನ್ನು ನಡೆಸಿದ್ದಲ್ಲದೆ ಅತ್ಯಂತ ದೊಡ್ಡ ರೀತಿಯಲ್ಲಿ 'ನಿರ್ಮಾಪಕರ ಸಂಘ'ವನ್ನು ಕಟ್ಟುವ ಸಂಕಲ್ಪ ಮಾಡಿದರು. ಕನ್ನಡ ಚಲನಚಿತ್ರೋದ್ಯಮದ ಮಾತೃ ಸಂಸ್ಥೆಯಾದ ಚಲನಚಿತ್ರ ವಾಣಿಜ್ಯ ಮಂಡಳಿಯ ಒಳಗಿದ್ದುಕೊಂಡೇ ತಮ್ಮ ನ್ಯಾಯಯುತವಾದ ಹಕ್ಕುಗಳಿಗಾಗಿ ಹೋರಾಡುವುದು ತಮ್ಮ ಗುರಿ ಎಂದು ಹೇಳಿಕೊಂಡು ಸಂಘ ೧೯೮೨ರ ಜೂನ್ ೧೯ ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಸಂಘದ ಸ್ಥಾಪಕ ಪದಾಧಿಕಾರಿಗಳಾಗಿ ಇವರೆಲ್ಲರ ಆಯ್ಕೆ ನಡೆಯಿತು. ಸರ್ವಶಕ್ತಿ ಫಿಲಂಸ್‌ನ ಹೆಚ್.ಎಂ.ಕೆ.ಮೂರ್ತಿ ಅಧ್ಯಕ್ಷರಾಗಿಯೂ, ಸಪ್ತಸ್ವರ ಮೂವೀಸ್‌ನ ಸಿ.ಜಯರಾಂ ಉಪಾಧ್ಯಕ್ಷರಾಗಿಯೂ, ಕಲಾಕೀರ್ತಿ ಮೂವೀಸ್‌ನ ಟಿ.ಜಿ.ಆರಾಧ್ಯ ಪ್ರಧಾನ ಕಾರ್ಯದರ್ಶಿಯಾಗಿಯೂ, ವಾಲ್ಮೀಕಿ ಮೂವೀಸ್‌ನ ಸಿ.ನಾರಾಯಣ್ ಜಂಟಿ ಕಾರ್ಯದರ್ಶಿ ಮತ್ತು ಜೈನ್ ಕಂಬೈನ್ಸ್‌ನ ಚಂದೂಲಾಲ್ ಜೈನ್ ಖಜಾಂಚಿ. ಶ್ರೀನಿಧಿ ಸಂಸ್ಥೆಯ ಆರ್.ಲಕ್ಷ್ಮಣ್, ಸಾವನ್ ಮೂವೀಸ್‌ನ ಜಿ.ಎನ್.ಲಕ್ಷ್ಮೀಪತಿ, ಕೋಮಲ್ ಪ್ರೊಡಕ್ಷನ್ಸ್‌ನ ಟಿ.ಎಸ್.ನರಸಿಂಹನ್, ಶ್ರೀ ಸಾಯಿಗುರು ಚಿತ್ರದ ಎಂ.ಎಸ್.ಎಸ್.ಮೂರ್ತಿ, ಶ್ರೀರಾಂ ಫಿಲಂಸ್‌ನ ಜಾನಕಿರಾಂ, ಭುವನೇಶ್ವರಿ ಆರ್ಟ್ಸ್ ಪ್ರೊಡಕ್ಷನ್ಸ್‌ನ ಎಸ್.ಡಿ.ಅಂಕಲಗಿ, ಚಂದನ ಆರ್ಟ್ಸ್‌ನ ರಾಮದಾಸ್ ನಾಯ್ಡು ಮತ್ತು ವ್ಹೀಲ್ ಪ್ರೊಡಕ್ಷನ್ಸ್‌ನ ಎಸ್.ನಾರಾಯಣಸ್ವಾಮಿ ಕಾರ್ಯಕಾರಿ ಸಮಿತಿಯ ಸದಸ್ಯರುಗಳು.

ನಿರ್ಮಾಪಕರ ಸಂಘದ ಹುಟ್ಟಿಗೆ ಕಾರಣವಾದ ಮುಖ್ಯ ಅಂಶಗಳಲ್ಲಿ ಶೇಕಡಾವಾರು ಪದ್ಧತಿಯ ಪ್ರದರ್ಶನ ವ್ಯವಸ್ಥೆಯನ್ನು ಜಾರಿಗೆ ತರುವುದು ಪ್ರಮುಖವಾಗಿತ್ತು. ಹಾಗೆ ನೋಡಿದರೆ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ೧೯೭೯-೮೦ ರಲ್ಲಿಯೇ 'ಶೇಕಡಾವಾರು ಸೂತ್ರ'ವನ್ನು ರೂಪಿಸಿ ಅದರಂತೆ ಕನ್ನಡ ಚಿತ್ರಗಳನ್ನು ಪ್ರದರ್ಶಿಸಬೇಕೆಂಬ ನಿರ್ಣಯವನ್ನು ಕೈಗೊಂಡಿತ್ತು. ಆದರೆ ಅದು ಕಾರ್ಯಗತವಾಗಲಿಲ್ಲ. ಆಗ ಕೇವಲ ೧೨ ಮಂದಿ ಕನ್ನಡ ನಿರ್ಮಾಪಕರು ಮಾತ್ರ ಶೇಕಡಾವಾರು ಆಧಾರದ ಮೇಲೆ ತಮ್ಮ ಚಿತ್ರಗಳನ್ನು ಪ್ರದರ್ಶಿಸಿದ್ದರು. ಉಳಿದವರೆಲ್ಲ ಬಾಡಿಗೆ ಪದ್ಧತಿಯನ್ನೇ ಅನುಸರಿಸಿದ್ದರಿಂದ ಆ ಸೂತ್ರ ೧೯೮೨ ರಲ್ಲಿ ನಿಷ್ಕ್ರಿಯವಾಗಿತ್ತು. ನಿರ್ಮಾಪಕರ ಸಂಘ ಅಸ್ತಿತ್ವಕ್ಕೆ ಬರುತ್ತಿದ್ದಂತೆ ಸಂಘದ ಪದಾಧಿಕಾರಿಗಳು 'ಹಾಲು ಜೇನು' ಚಿತ್ರವನ್ನು ಶೇಕಡಾವಾರು ಪದ್ಧತಿಯಂತೆ ಪ್ರದರ್ಶಿಸಲು ಅದರ ನಿರ್ಮಾಪಕರನ್ನು ಒಪ್ಪಿಸಿದರು. ಹಾಗೆ ನೋಡಿದರೆ ಶೇಕಡಾವಾರು ಪದ್ಧತಿಯ ಆಧಾರದಲ್ಲಿ ರಾಜಕುಮಾರ್ ಅಭಿನಯಿಸಿದ ಚಿತ್ರವೊಂದು ತೆರೆಕಂಡದ್ದು ಅದೇ ಮೊದಲು. ರಾಜ್ ಸಂಸ್ಥೆಯ ಸಮ್ಮತಿಯೊಂದಿಗೆ ಅವರದೇ ಚಿತ್ರ ಬಿಡುಗಡೆಯಾಗುತ್ತಿರುವುದರಿಂದ ಪ್ರದರ್ಶನ ವ್ಯವಸ್ಥೆಯಲ್ಲಿದ್ದ ದೊಡ್ಡ ಸಮಸ್ಯೆ ನಿವಾರಣೆಯಾಯಿತೆಂದೇ ಎಲ್ಲರೂ ಭಾವಿಸಿದ್ದರು. ಏಕೆಂದರೆ ನಿರ್ಮಾಪಕರು ತಮ್ಮ ಜೀವನ್ಮರಣದ ಸ್ಥಿತಿಯಲ್ಲಿ ಈ ಸೂತ್ರವನ್ನು ರೂಪಿಸಿಕೊಂಡಿದ್ದರು. ಪ್ರದರ್ಶಕರ ಅವೈಜ್ಞಾನಿಕ ಬಾಡಿಗೆ ಪದ್ಧತಿಯಿಂದಾಗಿ ನಿರ್ಮಾಣ ಕ್ಷೇತ್ರ ಕುಟುಕು ಜೀವ ಹಿಡಿದುಕೊಂಡಿತ್ತು. ನಿರ್ಮಾಪಕರು ಅಂದು ಎದುರಿಸುತ್ತಿದ್ದ ಸಂಕಷ್ಟಕ್ಕೆ ಸಮರ್ಥನೆಯಾಗಿ ಇಲ್ಲೊಂದು ಉದಾಹರಣೆ ಇದೆ. ಸಾಗರ್ ಚಿತ್ರಮಂದಿರದಲ್ಲಿ 'ಶಂಕರ್ ಗುರು' ಚಿತ್ರ ೫೨ ವಾರಗಳ ಕಾಲ ಪ್ರದರ್ಶನ ಕಂಡಿತ್ತು. ಇದರ ಒಟ್ಟು ಗಳಿಕೆಯಲ್ಲಿ ಸರ್ಕಾರದ ತೆರಿಗೆಯನ್ನು ಕಳೆದರೆ ಉಳಿಯುವುದು ೧೦,೩೨,೯೩೦ ರೂಪಾಯಿ. ಇದರಲ್ಲಿ ಹಂಚಿಕೆದಾರ-ನಿರ್ಮಾಪಕರ ಪಾಲು ಕೇವಲ ೩,೭೪,೧೯೦ ರೂ. ಆದರೆ ಚಿತ್ರಮಂದಿರದ ಪಾಲು ೬,೫೮,೭೫೦ ರೂ.

ಪ್ರದರ್ಶನ ವ್ಯವಸ್ಥೆಯಲ್ಲಿನ ಇಂಥ ಅನ್ಯಾಯವನ್ನು ಸರಿಪಡಿಸಲು ವಾಣಿಜ್ಯ ಮಂಡಳಿ ಸೂಚಿಸಿದ ಸೂತ್ರ ಹೀಗಿದೆ. ಕೆಂಪೇಗೌಡ ರಸ್ತೆಯ ಚಿತ್ರಮಂದಿರಗಳ ಗಳಿಕೆ



(ಚಿತ್ರ ೩.೨) ಶಾಂತರಾಜು ಮತ್ತು ಸಾ.ರಾ.ಗೋವಿಂದು ಅವರ ಜೊತೆ ಗೋಕಾಕ್ ಚಳವಳಿಯ ಬಹಿರಂಗ ಸಭೆಯೊಂದಕ್ಕೆ ಆಗಮಿಸುತ್ತಿರುವ ರಾಜಕುಮಾರ್.



(ಚಿತ್ರ ೩೩) ಮುಖ್ಯಮಂತ್ರಿ ಗುಂಡೂರಾಯರಿಂದ ನಿರ್ಮಾಪಕರ ಸಂಘದ ಉದ್ಘಾಟನೆ. ಚಿತ್ರದಲ್ಲಿ ವೀರಪ್ಪಮೊಯಿಲಿ, ಟಿ.ಜಿ.ಆರಾಧ್ಯ, ಹೆಚ್.ಎಂ.ಕೆ.ಮೂರ್ತಿ, ರಾಜಕುಮಾರ್ ಮತ್ತು ಗುಂಡೂರಾವ್ ಅವರನ್ನು ಕಾಣಬಹುದು.

ಶೇಕಡಾ ೯೦ ರಿಂದ ೧೦೦ ರವರೆಗೆ ಇದ್ದರೆ ಪ್ರದರ್ಶಕರಿಗೆ ಶೇಕಡಾ ೩೫, ಹಂಚಿಕೆದಾರರಿಗೆ ಶೇಕಡಾ ೬೫ ಸಲ್ಲುತ್ತದೆ. ಚಿತ್ರಮಂದಿರದ ಗಳಿಕೆ ೮೦ ರಿಂದ ೯೦ ಇದ್ದರೆ ಪ್ರದರ್ಶಕರಿಗೆ ೪೦, ಹಂಚಿಕೆದಾರರಿಗೆ ೬೦ ತಲುಪುತ್ತದೆ. ಗಳಿಕೆ ಕಡಿಮೆಯಾಗುತ್ತಾ ಹೋದರೆ ಹಂಚಿಕೆಯ ಅನುಪಾತ ಪ್ರದರ್ಶಕರಿಗೆ ಏರುತ್ತಾ ಹೋಗಿ ಹಂಚಿಕೆದಾರರಿಗೆ ಕಡಿಮೆಯಾಗುತ್ತಾ ಹೋಗುತ್ತದೆ. ಉದಾಹರಣೆಗೆ ಗಳಿಕೆ ಶೇಕಡಾ ೩೫ ಕ್ಕಿಂತ ಕಡಿಮೆಯಾದಾಗ ಪ್ರದರ್ಶಕರಿಗೆ ೮೫, ಹಂಚಿಕೆದಾರರಿಗೆ ೧೫ ತಲುಪುತ್ತದೆ.

ಬೆಂಗಳೂರಿನ ಬಡಾವಣೆಗಳಲ್ಲಿ ಮತ್ತು ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳಲ್ಲಿರುವ ಚಿತ್ರಮಂದಿರಗಳ ಗಳಿಕೆಯ ಹಂಚಿಕಾ ಸೂತ್ರವೂ ಹೆಚ್ಚು ಕಡಿಮೆ ಮೇಲಿನದನ್ನೇ ಹೋಲುತ್ತದೆ. ಆದರೆ ಇಲ್ಲಿ ಗಳಿಕೆ ಶೇಕಡಾ ೯೦-೧೦೦ ರವರೆಗೆ ಇದ್ದರೆ ಪ್ರದರ್ಶಕರಿಗೆ ೩೦, ಹಂಚಿಕೆದಾರರಿಗೆ ೭೦ ಸಲ್ಲುತ್ತದೆ. ಹಂಚಿಕೆದಾರರು ನಿರ್ಮಾಪಕರಿಗೆ ಈ ವಲಯಗಳಲ್ಲಿ ಶೇಕಡಾ ೫ ರಷ್ಟನ್ನು ಹೆಚ್ಚಿಗೆ ಕೊಡಲಾಗಿದೆ.

ಈ ಸೂತ್ರದ ಬಗ್ಗೆ ಚಿಂತನೆ ನಡೆಯುತ್ತಿದ್ದ ಒಂದೆರಡು ವಾರಗಳಲ್ಲೇ ಪ್ರದರ್ಶಕರು ಮತ್ತು ಹಂಚಿಕೆದಾರರಿಗೆ ಸಲ್ಲಬೇಕಾದ ಪರ್ಸೆಂಟೇಜ್ ಬಗ್ಗೆ ತೀವ್ರ ಭಿನ್ನಾಭಿಪ್ರಾಯ ಉದ್ಭವಿಸಿತು. ಆಗ ಪ್ರದರ್ಶಕರು ತಾವೇ ಒಂದು ಸೂತ್ರವನ್ನು ರೂಪಿಸಿ ವಾಣಿಜ್ಯ ಮಂಡಳಿಯ ಮುಂದೆ ಇಟ್ಟರು. ಆದರೆ ಅದು ಕೂಡ ಅತ್ಯಂತ ಅವೈಜ್ಞಾನಿಕವಾಗಿದೆಯೆಂದು ನಿರ್ಮಾಪಕರು ಸಂಪೂರ್ಣವಾಗಿ ತಿರಸ್ಕರಿಸಿದರು. ಆಗ ಪ್ರದರ್ಶಕರು ಕೂಡ ಹಠದ ಮನೋಭಾವದಿಂದ 'ಹಾಲು ಜೇನು' ಚಿತ್ರದ ಗಳಿಕೆಯನ್ನು ಹಿಂದಿನ ದಿನ ಬಾಡಿಗೆ ಪದ್ಧತಿಯಂತೆ ಚೆಕ್ಕುಗಳ ಮೂಲಕ ವಿತರಕರಿಗೆ ಕಳುಹಿಸಿ ಕೊಟ್ಟರು. ಆದರೆ ಶೇಕಡಾವಾರು ಪದ್ಧತಿಯನ್ನು ಅಧರಿಸಿಯೇ ನಮಗೆ ಚೆಕ್ಕುಗಳು ಬೇಕು ಎಂದು ನಿರ್ಮಾಪಕರು ಅವೆಲ್ಲವನ್ನು ವಾಪಸ್ಸು ಕಳುಹಿಸಿದ್ದರು. ಪರಿಸ್ಥಿತಿ ಕಾವೇರಲು ಇಷ್ಟು ಸಾಕಾಗಿತ್ತು. ಸಂಘಟಿತರಾದ ಸಂಭ್ರಮದಲ್ಲಿದ್ದ ನಿರ್ಮಾಪಕರ ಸಂಘದ ಪ್ರತಿನಿಧಿಗಳು ೧೯೮೨ರ ಜೂನ್ ಬೆಳಗ್ಗೆ ಮಿನರ್ವ ಚಿತ್ರಮಂದಿರದ ಮುಂದೆ ಸಭೆ ಸೇರಿ ಕನ್ನಡ ಚಿತ್ರಗಳಿಗೆ ಆದ್ಯತೆ, ಕಡ್ಡಾಯ ಪ್ರದರ್ಶನ, ಶೇಕಡಾವಾರು ಪದ್ಧತಿ ಜಾರಿ, ಈ ಮೂರು ಅಂಶಗಳಿಗೆ ಒತ್ತಾಯಿಸಿ ಘೋಷಣೆಗಳನ್ನು ಕೂಗುತ್ತಾ ಮುಂದಿನ ಹೋರಾಟಕ್ಕೆ ನಾಂದಿ ಹಾಡಿಬಿಟ್ಟರು. ಸ್ವಲ್ಪ ಹೊತ್ತಿಗೆ ಪೊಲೀಸರಿಂದ ಬಂಧನಕ್ಕೂ ಒಳಗಾದರು.

ಚಿತ್ರಮಂದಿರದ ಮಾಲೀಕರು ತಮ್ಮ ಹಠವನ್ನು ಬಿಡದಿರುವುದಕ್ಕೆ ಅವರಿಗಿದ್ದ ಅಸಮಾಧಾನ ಕಾರಣವಾಗಿರಬಹುದು. ಆದರೆ ಅವರ ಬಿಗಿ ಹಠಕ್ಕೆ ನಿರ್ಮಾಪಕರು ಸಂಘಟಿತರಾದರಲ್ಲ ಎಂಬ ಸಿಟ್ಟು ಬೆರೆತಿತ್ತು. ಇದರೊಂದಿಗೆ ರಾಜಕುಮಾರ್ ಗೋಕಾಕ್ ಚಳವಳಿಯ ಸಭೆಗಳಲ್ಲಿ ಮಾಡುತ್ತಿದ್ದ ಭಾಷಣಗಳು ಹಿನ್ನೆಲೆಯಾಗಿದ್ದವು. 'ಹಾಲು ಜೇನು' ಚಿತ್ರದ ಬಿಡುಗಡೆಯ ಒಂದೆರಡು ವಾರಕ್ಕೆ ಮುಂಚೆ ಬೆಳಗಾವಿಯಿಂದ ಆರಂಭಿಸಿ ಬೆಂಗಳೂರಿಗೆ ಆಗಮಿಸಿದ ಗೋಕಾಕ್ ಚಳವಳಿಯ ಬೃಹತ್ ಜಾಥಾದಲ್ಲಿ ಸಮಾರೋಪ ಸಭೆ ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ಸಮಾವೇಶಗೊಂಡಿತ್ತು. ಅಂದಿನ ವೇದಿಕೆಯಲ್ಲಿ ರಾಜಕುಮಾರ್ ಅತ್ಯಂತ ಭಾವುಕರಾಗಿ ಮಾತನಾಡಿದರು. ಕಣ್ಣೀರು ಹಾಕುತ್ತಾ ಅಂದು ಅವರು ಆಡಿದ ಮಾತುಗಳು ಸಭಿಕರಲ್ಲಿ ತೀವ್ರವಾದ ಪರಿಣಾಮ ಬೀರಿದ್ದವು. ''ಬೆಂಗಳೂರು ನಗರದ ಸ್ಥಾಪಕ ಕೆಂಪೇಗೌಡರ ಹೆಸರನ್ನು ಪಡೆದಿರುವ ರಸ್ತೆಯಲ್ಲಿನ ಚಿತ್ರಮಂದಿರಗಳವರು ಕನ್ನಡ ಚಿತ್ರಗಳನ್ನು ಪ್ರದರ್ಶಿಸಲು ಹಿಂದೇಟು ಹಾಕುತ್ತಿದ್ದಾರೆ. ಹಾಗೊಮ್ಮೆ ಪ್ರದರ್ಶಿಸಲು ಒಪ್ಪಿಕೊಂಡರೆ ದುಬಾರಿ ಬಾಡಿಗೆ ಹೇಳುತ್ತಾರೆ. ಅತಿ ಹೆಚ್ಚು ಬಾಡಿಗೆ ಕೊಟ್ಟು ಕನ್ನಡ ಚಿತ್ರಗಳು ಉಳಿಯುವುದಾದರೂ ಹೇಗೆ ? ಇದೇ ಪರಿಸ್ಥಿತಿ ಮುಂದುವರಿದರೆ ಆ ರಸ್ತೆಗೆ ಬೇರೆ ಹೆಸರನ್ನೇ ಇಡಬೇಕಾದೀತು. ಈಗಲಾದರೂ ಕನ್ನಡ ಚಿತ್ರಮಂದಿರಗಳ ಮಾಲೀಕರು ಕನ್ನಡ ಚಿತ್ರಗಳಿಗೆ ಆದ್ಯತೆ ನೀಡಲಿ, ಅವರೂ ಉಳಿಯಲಿ, ನಾವೂ ಉಳಿಯಬೇಕು. ಮಾಲೀಕರು ಇದನ್ನು ಅರಿತು ನಡೆಯದಿದ್ದರೆ ಪರಿಣಾಮ ನೆಟ್ಟಗಾಗುವುದಿಲ್ಲ''.

ಕನ್ನಡ ಕ್ರಿಯಾ ಸಮಿತಿ ೧೯೮೨ರ ಮೇ ೧೬ ರಂದು ಭಾನುವಾರ ಬೆಳಗಾವಿಯಲ್ಲಿ ಈ ಮಹಾ ಜಾಥಾವನ್ನು ಉದ್ಘಾಟನೆ ಮಾಡಿದಾಗಲೂ ಅವರು ಮೇಲಿನ ಮಾತುಗಳನ್ನೇ ಇನ್ನಷ್ಟು ತೀವ್ರವಾಗಿ ಹೇಳಿದ್ದರು. ''ಕನ್ನಡ ನೆಲದಲ್ಲಿ ಚಿತ್ರಮಂದಿರಗಳ ಮಾಲೀಕರಾಗಿ ಹಣ ಸಂಪಾದನೆ ಮಾಡುತ್ತಿರುವ ನೀವೂ ಕೂಡ ಕನ್ನಡಿಗರೇ ಅಲ್ಲವೆ? ಆದರೂ ಕನ್ನಡವನ್ನು ಏಕೆ ದ್ವೇಷಿಸುತ್ತಿದ್ದೀರಿ ? ಯಾಕೆ ನಿರಾಸಕ್ತಿ, ತಾತ್ಸಾರ ತೋರುತ್ತಿದ್ದೀರಿ? ಇದೇ ರೀತಿಯ ಅಸಡ್ಡೆ ಮಾಡಿ ಕನ್ನಡ ಚಿತ್ರಗಳನ್ನು ಪ್ರದರ್ಶಿಸಲು ಹಿಂದೇಟು ಹೊಡೆದರೆ ಅದರ ಫಲವನ್ನು ನೀವೇ ಉಣ್ಣಬೇಕಾಗುತ್ತದೆ''.

ಪ್ರದರ್ಶಕರಿಗೆ ನೇರವಾದ ಎಚ್ಚರಿಕೆ ಕೊಡುವಂತೆ ರಾಜ್‌ರ ಮಾತುಗಳಿದ್ದವು. ಬೇರೆ ಬೇರೆ ಜಿಲ್ಲಾ ಕೇಂದ್ರಗಳ ಬೃಹತ್ ಸಭೆಗಳಲ್ಲೂ ಇವೇ ಮಾತುಗಳು ಬೇರೆ ಬೇರೆ ರೀತಿಯಲ್ಲಿ ಧ್ವನಿತವಾಗಿದ್ದವು. ಈ ಅರ್ಥದಲ್ಲಿ ಗೋಕಾಕ್ ಹೆಸರಿನ ಭಾಷಾ ಚಳವಳಿ ಕನ್ನಡ ಚಿತ್ರರಂಗದ ಚಳವಳಿಯೂ ಆಯಿತು. ರಾಜಕುಮಾರ್‌ರ ಮಾತುಗಳ ಪರಿಣಾಮ ತೀಕ್ಷ್ಣವಾಗಿತ್ತು. ಆ ತೀಕ್ಷ್ಣತೆಯ ಬಿಸಿ ನಿರ್ಮಾಪಕರ ಗುರಿಯಾಗಿದ್ದ ಕೆಂಪೇಗೌಡ ರಸ್ತೆ ಹಾಗೂ ಅಕ್ಕಪಕ್ಕದ ಚಿತ್ರಮಂದಿರಗಳಿಗೆ ಬಹಳ ಬೇಗ ತಾಕಿತು.

ಇದಕ್ಕೆ ಅಯಾಚಿತವಾಗಿ ಒಂದು ಸಂದರ್ಭ ಒದಗಿ ಬಂತು. 'ಹಾಲು ಜೇನು' ಚಿತ್ರದ ಬಿಡುಗಡೆ ಒಂದು ನೆಪವಾಯಿತು. ಏನೇ ನೆಪವೆಂದರೂ ಈ ಚಿತ್ರದೊಂದಿಗೆ ಕನ್ನಡಾಭಿಮಾನದ ಕೆಲವು ಸಂಗತಿಗಳು ತಳುಕು ಹಾಕಿಕೊಂಡಿವೆ. ಈ ಚಿತ್ರದ ಮುಹೂರ್ತ ನಡೆದದ್ದು ೧೯೮೧ ನವೆಂಬರ್ ೧ರ ರಾಜ್ಯೋತ್ಸವದಂದು. ಕನ್ನಡ ಭಾಷಾಭಿಮಾನಿಗಳಲ್ಲಿ ಅತ್ಯಂತ ಮಹತ್ವದ್ದಾದ ದಿನ ಆರಂಭವಾದ ಈ ಚಿತ್ರ ಬಿಡುಗಡೆಯ ದಿನದಂದು ಕೂಡ ಅದೇ ಅಭಿಮಾನದ ಅತಿರೇಕವನ್ನು ಕಂಡಿತು. ೨೮ ರಂದು ಬಿಡುಗಡೆಯಾಗುವ ಚಿತ್ರಕ್ಕೆ ೨೪ರ ಸೋಮವಾರದಿಂದಲೇ ಮುಂಗಡ ಟಿಕೆಟ್ ನೀಡಲಾಗುತ್ತದೆ ಎಂದು ಪ್ರಕಟಿಸಲಾಗಿತ್ತು. ಆದರೆ ಚಿತ್ರರಸಿಕರು ಐದು ದಿನಗಳ ಮುಂಚೆಯೇ ಅಂದರೆ ೨೩ರ ಭಾನುವಾರ ಸಂಜೆಯಿಂದಲೇ ಬೆಂಗಳೂರಿನ ಸಂತೋಷ್ ಚಿತ್ರಮಂದಿರದ ಬಳಿ ಸೇರಿ ಅಂದೇ ವಿತರಿಸುವಂತೆ ಒತ್ತಾಯಿಸ ತೊಡಗಿದರು. ಚಿತ್ರಮಂದಿರದ ವ್ಯವಸ್ಥಾಪಕರು ನಿರಾಕರಿಸಿದಾಗ ನಿರಾಸೆಗೊಂಡ ಅಭಿಮಾನಿಗಳು ಕೆರಳಿದರು. ಅಂಗಡಿ, ಬಸ್ಸುಗಳಿಗೆ ಕಲ್ಲು ಬಿದ್ದವು. ಚಿತ್ರಮಂದಿರದ ಗ್ಲಾಸುಗಳು, ರಸ್ತೆಯಲ್ಲಿ ನಿಲ್ಲಿಸಿದ್ದ ಸ್ಕೂಟರ್, ಕಾರುಗಳು ಪುಡಿ ಪುಡಿಯಾದವು. ಸ್ಕೂಟರೊಂದು

ಬೆಂಕಿಗೆ ಸಂಪೂರ್ಣ ಆಹುತಿಯಾಯಿತು. ಅಭಿಮಾನಿಗಳ ಸಿಟ್ಟಿಗೆ ಸಂತೋಷ್ ಚಿತ್ರಮಂದಿರ ಮಾತ್ರವಲ್ಲದೆ ಅಕ್ಕಪಕ್ಕದ ಚಿತ್ರಮಂದಿರಗಳು ಕೂಡ ಗುರಿಯಾದವು. ಗಲಭೆ ಕೆಲವೇ ನಿಮಿಷಗಳಲ್ಲಿ ಮೆಜೆಸ್ಟಿಕ್ ಪ್ರದೇಶದ ಇತರ ಭಾಗಗಳಿಗೂ ವ್ಯಾಪಿಸಿಕೊಂಡಿತು. ತೀರಾ ಅನಿರೀಕ್ಷಿತವಾಗಿ ಭುಗಿಲೆದ್ದ ಗದ್ದಲವನ್ನು ನಿಯಂತ್ರಿಸಲು ಪೊಲೀಸರು ಸಾಕಷ್ಟು ಹೆಣಗಿದರು. ಕೊನೆಗೆ ರಾತ್ರಿ ೧೨ ಗಂಟೆಯಲ್ಲಿ ಬಿಗಿಯಾದ ಪೊಲೀಸ್ ಬಂದೋಬಸ್ತ್‌ನಲ್ಲಿ ಮುಂಗಡ ಟಿಕೆಟ್ ವಿತರಿಸಿದ ಮೇಲೆಯೇ ಪರಿಸ್ಥಿತಿ ಹತೋಟಿಗೆ ಬಂದಿದ್ದು. ಮೇಲ್ನೋಟಕ್ಕೆ ಈ ಪ್ರಕರಣ ಟಿಕೆಟ್ ವಿತರಣೆಯ ಗದ್ದಲದಂತೆ ಕಂಡರೂ ಅದಕ್ಕೆ ಹಲವಾರು ಮುಖಗಳಿವೆ. ಮುಖ್ಯವಾಗಿ ಈ ಕೋಲಾಹಲದ ಹಿಂದೆ ಗೋಕಾಕ್ ಚಳವಳಿ ಉಂಟುಮಾಡಿದ್ದ ಆವೇಶವಿತ್ತು. ಎಂದಿನಿಂದಲೂ ಹಿಂದಿ ಚಿತ್ರಗಳ ಬಗ್ಗೆ ಮಾತ್ರ ಒಲವು ಇಟ್ಟುಕೊಂಡಿರುವ ಚಿತ್ರಮಂದಿರಗಳ ಮಾಲೀಕರ ಮೇಲಿನ ಅಸಮಾಧಾನವೂ ಇದಕ್ಕೆ ಕಾರಣವಾಗಿತ್ತು. ಇವೆಲ್ಲಕ್ಕೂ ಹೆಚ್ಚಾಗಿ ರಾಜಕುಮಾರ್‌ರವರ ಎಚ್ಚರಿಕೆಯ ಕರೆ ಕನ್ನಡಾಭಿಮಾನಿಗಳ ಕಿವಿಯಲ್ಲಿ 'ಸಮಯ'ಕ್ಕಾಗಿ ಕಾದು ಕುಳಿತಿತ್ತು. ಇವೆಲ್ಲ ಒಟ್ಟಿಗೆ ಸೇರಿಕೊಂಡು ಈ ಗದ್ದಲವನ್ನು ಯಾವ ಮಟ್ಟಕ್ಕೆ ಒಯ್ದಿತೆಂದರೆ ಇದೊಂದು ರಾಷ್ಟ್ರಮಟ್ಟದ ಚರ್ಚೆಯ ವಿಷಯವಾಯಿತು. ಅಮಿತಾಭ್ ಬಚ್ಚನ್ ಅಭಿನಯದ ಹಿಂದಿಯ 'ನಮಕ್ ಹಲಾಲ್' ಚಿತ್ರಕ್ಕೆ ಚಿತ್ರಮಂದಿರವನ್ನು ತಪ್ಪಿಸಿ ರಾಜಕುಮಾರ್‌ರವರು ಅತ್ಯಂತ ಒತ್ತಡದಿಂದ ತಮ್ಮ 'ಹಾಲು ಜೇನು' ಚಿತ್ರಕ್ಕೆ ಪಡೆದುಕೊಂಡಿದ್ದಾರೆಂಬ ಅರ್ಥದಲ್ಲಿ ಮುಂಬೈನ 'ಟ್ರೇಡ್ ಗೈಡ್' ಪತ್ರಿಕೆ ಬರಹ ಬರೆದು ರಾಜಕುಮಾರ್ ಅವರನ್ನು 'ಮಿನಿ ಹಿಟ್ಲರ್' ಎಂದು ಕರೆಯಿತು. ಕನ್ನಡ ಭಾಷಾ ಚಳವಳಿಯ ಉದ್ದೇಶವನ್ನು ತಪ್ಪಾಗಿ ಅರ್ಥೈಸಿದ್ದ 'ಟ್ರೇಡ್ ಗೈಡ್' ಬರಹದ ಹಿಂದೆ ಬೆಂಗಳೂರಿನ ಪರಭಾಷಾ ಪ್ರೇಮಿ ಪ್ರದರ್ಶಕರು ಹಾಗೂ ಒಂದಿಬ್ಬರು ನಿರ್ಮಾಪಕರ ಕೈವಾಡವಿದೆ ಎಂಬ ಹಿನ್ನೆಲೆಯಲ್ಲಿ ಇನ್ನಷ್ಟು ಗುದ್ದಾಟ, ಗದ್ದಲಗಳು ನಡೆದು ಅದೇ ಒಂದು ದೊಡ್ಡ ಇತಿಹಾಸವಾಯಿತು. ಅದನ್ನು ಪ್ರಸ್ತಾಪಿಸುವುದಕ್ಕಿಂತ ಮುಂಚೆ ಈ ಎಲ್ಲಾ ಘಟನೆಗಳಿಗೆ ನೆಪವಾದ 'ಹಾಲು ಜೇನು' ಮತ್ತು ನಂತರ ಬಿಡುಗಡೆಯಾದ ಚಿತ್ರಗಳ ಕುರಿತು ಕೆಲವು ಮಾತುಗಳನ್ನು ಬರೆಯಬೇಕಾಗುತ್ತದೆ.



(ಚಿತ್ರ ೩೪) 'ಹಾಲು ಜೇನು' ಚಿತ್ರದಲ್ಲಿ ರಾಜಕುಮಾರ್ ಮತ್ತು ಮಾಧವಿ

'ಹಾಲು ಜೇನು' ೨೫ ವಾರಗಳ ಪ್ರದರ್ಶನ ಕಂಡು ಅಖಿಲಭಾರತ ಮಟ್ಟದಲ್ಲಿ ಸುದ್ದಿ ಮಾಡಿದ ರಾಜಕುಮಾರ್ ಅವರ ಪ್ರಥಮ ಚಿತ್ರವಾಗಿರುವಂತೆಯೇ ಸಿಂಗೀತಂ ಶ್ರೀನಿವಾಸ್ ನಿರ್ದೇಶಿಸಿದ ಮೊದಲ ಕನ್ನಡ ಚಿತ್ರ ಕೂಡ. ರಾಜಕುಮಾರ್‌ರನ್ನು ಈ ಚಿತ್ರದಲ್ಲಿ ಕೆಳಮಧ್ಯಮ ವರ್ಗದ ಒಬ್ಬ ಸಾಮಾನ್ಯ ವ್ಯಕ್ತಿಯಂತೆ ಚಿತ್ರಿಸಲಾಗಿದೆ. ನೆಮ್ಮದಿಯಿಂದ ಬದುಕುತ್ತಿರುವ ಕುಟುಂಬದಲ್ಲಿ ತನ್ನ ಹೆಂಡತಿಗೆ ಕ್ಯಾನ್ಸರ್ ಇದೆಯೆಂದು ತಿಳಿದು ಗಂಡ ಕಂಗಾಲಾಗುತ್ತಾನೆ. ಹೇಗಾದರೂ ಮಾಡಿ ಪತ್ನಿಯನ್ನು ಉಳಿಸಿಕೊಳ್ಳಬೇಕೆಂಬ ಛಲದಿಂದ ಅನೇಕ ಮಾರ್ಗಗಳಿಂದ ಹಣ ಸಂಪಾದಿಸುತ್ತಾನೆ. ಆದರೂ ಪತ್ನಿ ಉಳಿಯುವುದಿಲ್ಲ. ಹಣದ ಅವಶ್ಯಕತೆ ಬಿದ್ದಾಗ ಕೆಳಮಧ್ಯಮ ವರ್ಗದ ಅಸಹಾಯಕ ಮನುಷ್ಯನೊಬ್ಬ ಯಾವ ಯಾವ ರೀತಿ ಯೋಚಿಸುತ್ತಾನೆಂಬುದನ್ನು ಸಿಂಗೀತಂ 'ಹಾಲು ಜೇನು' ಚಿತ್ರದ ಮೂಲಕ ಸೂಕ್ಷ್ಮವಾಗಿ ನಿರೂಪಿಸಿದ್ದರು. ಚಿತ್ರದ ಕೊನೆಯ ಹತ್ತು ನಿಮಿಷಗಳ ದೃಶ್ಯಗಳಲ್ಲಿ ರಾಜಕುಮಾರ್ ಅಭಿನಯ ತುಂಬ ಮೆಚ್ಚುಗೆಗೆ ಪಾತ್ರವಾಯಿತು. ಈ ಚಿತ್ರದ ನಂತರ ಸಿಂಗೀತಂ ಶ್ರೀನಿವಾಸರಾವ್ ೧೬ ವರ್ಷಗಳ ಕಾಲ ರಾಜ್ ಸಂಸ್ಥೆಯ ಖಾಯಂ ನಿರ್ದೇಶಕರಾಗಿ ಕೆಲವಾರು ಉತ್ತಮ ಚಿತ್ರಗಳನ್ನು ನಿರ್ದೇಶಿಸಿದರು. 'ಹಾಲು ಜೇನು' ರಾಜ್ಯದ ೮೨-೮೩ರ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನಲ್ಲದೆ ರಾಜಕುಮಾರ್‌ಗೆ ಅತ್ಯುತ್ತಮ ನಟ ಪ್ರಶಸ್ತಿ ಮತ್ತು ಪಿ.ಭಕ್ತವತ್ಸಲಂಗೆ ಅತ್ಯುತ್ತಮ ಸಂಕಲನಕಾರ ಪ್ರಶಸ್ತಿ ದೊರಕಿಸಿಕೊಟ್ಟಿತು.

೧೯೮೨ರ ಅವಧಿಯಲ್ಲಿ ತೆರೆಕಂಡ ಸಾಧಾರಣ ದರ್ಜೆಯ, ಸೀಮಿತ ಉದ್ದೇಶದ ಚಿತ್ರಗಳ ಅತಿವೃಷ್ಟಿಯಲ್ಲಿ 'ಪ್ರಾಯ ಪ್ರಾಯ ಪ್ರಾಯ', 'ಗರುಡ ರೇಖೆ', 'ಪರಾಜಿತ', 'ಟೋನಿ', 'ಮಾನಸ ಸರೋವರ', 'ಹಾಸ್ಯರತ್ನ ರಾಮಕೃಷ್ಣ' ಹಾಗೂ 'ಚೆಲ್ಲಿದ ರಕ್ತ' ಇವುಗಳನ್ನು ವಿಶೇಷ ಕಾರಣಗಳಿಗಾಗಿ ಪ್ರಸ್ತಾಪಿಸಬೇಕಾಗುತ್ತದೆ. ೧೯೮೨ರ ಹೊತ್ತಿಗೆ ರ್‍ಯಾಗಿಂಗ್ ಪಿಡುಗು ರಾಷ್ಟ್ರದಲ್ಲಿ ಅತ್ಯಂತ ಗಮನ ಸೆಳೆದ ವಿಷಯವಾಗಿತ್ತು. ಕಾಲೇಜು ಹಾಗೂ ಹಾಸ್ಟೆಲುಗಳಲ್ಲಿ ಶ್ರೀಮಂತ ವಿದ್ಯಾರ್ಥಿಗಳ ಮನೋವಿಕಾರದಿಂದ ಅಮಾಯಕ ವಿದ್ಯಾರ್ಥಿಗಳು ನರಳುತ್ತಿರುವ ಘಟನೆ, ಸುದ್ದಿಗಳನ್ನು ಕೇಳಿ, ಓದಿ ಜನ ತಲ್ಲಣಗೊಂಡಿದ್ದರು. 'ಗ್ರಹಣ'ದಿಂದ ಗಮನ ಸೆಳೆದಿದ್ದ ನಾಗಾಭರಣ ಆಗ್ಗೆ ಅತ್ಯಂತ ಪ್ರಚಲಿತವಾಗಿದ್ದ ಈ ವಿಷಯವನ್ನು ಆಧರಿಸಿ 'ಪ್ರಾಯ ಪ್ರಾಯ ಪ್ರಾಯ' ಚಿತ್ರ ನಿರ್ದೇಶಿಸಿದಾಗ ಸಹಜವಾಗಿ ಎಲ್ಲರಿಗೂ ಕುತೂಹಲವಿತ್ತು. ಆದರೆ ಚಿತ್ರದಲ್ಲಿ ರ್‍ಯಾಗಿಂಗ್‌ಗಿಂತ ಹೆಚ್ಚಾಗಿ ಹಣದಾಸೆಗೆ ಬಲಿಬಿದ್ದ ವಿದ್ಯಾರ್ಥಿಗಳು ರಾಜಕಾರಣಿಗಳ ಕೈಗೊಂಬೆಗಳಾಗಿ ನಡೆಸುವ ದಾದಾಗಿರಿ, ದೌರ್ಜನ್ಯಕ್ಕೆ ಹೆಚ್ಚು ಮಹತ್ವ ನೀಡಲಾಗಿತ್ತು. ರ್‍ಯಾಗಿಂಗ್‌ನಂಥ ಮಹಾಮಾರಿಯ ವಿಲಕ್ಷಣ ರೂಪ ಹಾಗೂ ಪರಿಣಾಮಗಳ ಚಿತ್ರಣಕ್ಕೆ ಒತ್ತು ನೀಡಿರಲಿಲ್ಲ. ಮಾಮೂಲಿ ಸಿನಿಮಾಗಳ ಕಥೆಗಿಂತ ಭಿನ್ನವಾದ ವಿದ್ಯಾರ್ಥಿಗಳ ಜೀವನದ ಕಥೆಯಿದೆ ಎಂಬುದರೊಂದಿಗೆ, ಪರಿಚಿತ ಮುಖಗಳನ್ನು ತಪ್ಪಿಸಿ ಹರೆಯದ ಹೊಸ ಮುಖಗಳ ದಂಡನ್ನು ಕಲೆಹಾಕಿದ್ದು ಮಾತ್ರ ಈ ಚಿತ್ರದ ವಿಶೇಷವೆನಿಸಿತು. ಚಂದೂಲಾಲ್ ಜೈನ್, ನಾಗಾಭರಣ ಸೇರಿ ಕಥೆ ರಚಿಸಿದ್ದರು. ಚಂದೂಲಾಲ್ ಜೈನ್, ಎಸ್.ಪಿ.ವರದರಾಜ್, ಎ.ಎಸ್.ನಿರಂಜನ್, ಮುದ್ದೇಗೌಡ, ರೇವಣ ಸಿದ್ದಪ್ಪ ನಿರ್ಮಾಪಕರು.

ಹಳ್ಳಿಯಿಂದ ಬಂದ ಯುವಕ ರಾಮಕೃಷ್ಣನನ್ನು ಕಾಲೇಜಿನ ಇತರ ಗುಂಪಿನ ನಾಯಕ ಸುಂದರರಾಜ್ ಮತ್ತಿತರರು ರೇಗಿಸಿ ಚುಡಾಯಿಸುತ್ತಾ ಸತಾಯಿಸುತ್ತಿರುತ್ತಾರೆ. ಇದರ ನಡುವೆ ಕಾಲೇಜ್ ಚುನಾವಣೆ, ಅಲ್ಲಾಗುವ ಗೊಂದಲ, ರಾಮಕೃಷ್ಣ-ವಿಜಯಲಕ್ಷ್ಮೀ ಪ್ರೇಮ ಪ್ರಕರಣ, ಪ್ರಶ್ನೆ ಪತ್ರಿಕೆ ಬಹಿರಂಗದ ಚಿತಾವಣೆಯಲ್ಲಿ ಪ್ರಿನ್ಸಿಪಾಲ್



(ಚಿತ್ರ ೩೫) 'ಪ್ರಾಯ ಪ್ರಾಯ ಪ್ರಾಯ' ಚಿತ್ರದಲ್ಲಿ ಸುಂದರರಾಜ್ ಮತ್ತು ಮಮತಾರಾವ್

ಸಿ.ಆರ್.ಸಿಂಹ ರಾಜೀನಾಮೆ ನೀಡಬೇಕಾಗುತ್ತದೆ. ಚಿತ್ರಕಥೆಯನ್ನು ನಾಗಾಭರಣ ಚೆನ್ನಾಗಿಯೇ ರಚಿಸಿದ್ದರು. ರಾಮಕೃಷ್ಣ, ಸುಂದರರಾಜ್, ವಿಜಯಲಕ್ಷ್ಮೀ ಸಿಂಗ್, ಮಮತಾ ರಾವ್ ತಮ್ಮ ಪಾತ್ರಗಳಿಗೆ ಜೀವ ತುಂಬಿದ್ದರು. ಪ್ರಾಂಶುಪಾಲರಾಗಿ ಸಿ.ಆರ್.ಸಿಂಹರದು ಅತ್ಯುತ್ತಮ ಅಭಿನಯ. ಮಮತಾ ರಾವ್ ಅವರಿಗೆ ೮೧-೮೨ನೇ ಸಾಲಿನ ಶ್ರೇಷ್ಠ ಪೋಷಕನಟಿ ರಾಜ್ಯ ಪ್ರಶಸ್ತಿ ಲಭ್ಯವಾಗಿದ್ದು ಮತ್ತೊಂದು ವಿಶೇಷ. ಉಪೇಂದ್ರಕುಮಾರ್ ಸಂಗೀತದಲ್ಲಿ 'ತಯ್ಯತಕ್ಕ ತಕ್ಕ ತಯ್ಯತಕ್ಕ ಕಾಲೇಜಿಗೆ ಬಂದನಯ್ಯ...' ಹಾಗೂ 'ಭೂಮಿತಾಯಾಣೆ ನೀನಿಷ್ಟ ಕಣೇ..' ಹಾಡುಗಳು ಜನಪ್ರಿಯವಾದವು.

'ಗರುಡರೇಖೆ' ಹತ್ತಾರು ಕಾರಣಗಳಿಗೆ ಮುಖ್ಯ ಎನ್ನಿಸುತ್ತದೆ. ಕೆಲವು ಆಸಕ್ತ ಮಿತ್ರರು ಸೇರಿ ಮಾಡಿದ ಚಿತ್ರ. ಮೇಕಪ್ ಪಟು ಮನ್ಮಥರಾವ್, ಚಲನಚಿತ್ರಗಳ ಕಾರ್ಯನಿರ್ವಾಹಕ ಶಿವಾಜಿರಾವ್, ಶೇಷಯ್ಯ, ವೆಂಕಟರೆಡ್ಡಿ ಇವರೆಲ್ಲ ಚಲನಚಿತ್ರ ಕಾರ್ಮಿಕರು. ಇವರೊಂದಿಗೆ ಅಘೋಷಿತವಾಗಿ ಶ್ರೀನಾಥ್ ನೆರವಿತ್ತು. ಗೀತಾ ಶ್ರೀನಾಥ್ ಹೆಸರಿನಲ್ಲೇ ಚಿತ್ರ ತೆರೆಗೆ ಅರ್ಪಣೆಯಾಗುವುದೆಂದು ತೀರ್ಮಾನಿಸಿದ್ದರು. ಕಥೆ, ಸಂಭಾಷಣೆ ಬರೆದ ಸೋಮು, ಸ್ವಲ್ಪಮಟ್ಟಿಗೆ ಎಂ.ಎಸ್.ಕಾರಂತರು ಚಿತ್ರಕ್ಕೆ ನೆರವಾಗಿದ್ದರು. ಒಂದರ್ಥದಲ್ಲಿ ಇವರೆಲ್ಲ ನಿರ್ಮಾಪಕರ ಸಾಲಿನಲ್ಲಿ ನಿಲ್ಲುವವರು. ಚಿತ್ರಕ್ಕೆ ಕೆಲಸ ಮಾಡಿದ ಎಲ್ಲರೂ ವರ್ಕಿಂಗ್ ಪಾರ್ಟ್‌ನರ್ಸ್ ಎಂದರೂ ಆದೀತು. ಹಿಂದಿಯ ಜನಪ್ರಿಯ ಚಿತ್ರ 'ನಾಗಿನ್' ಅನ್ನು ಹೋಲುವಂತಿದ್ದರೂ ಬೇರೆಯದೇ ಆದ ಅನೇಕ ಸನ್ನಿವೇಶಗಳನ್ನು ಜೋಡಿಸಿ, ನಿರೂಪಣೆಯಲ್ಲಿ ಹೊಸ ರೀತಿಯನ್ನು ಬಳಸಲಾಗಿತ್ತು. 'ತರಂಗಿಣಿ ಆರ್ಟ್ ಪ್ರೊಡಕ್ಷನ್ಸ್' ಲಾಂಛನದಲ್ಲಿ ತೆರೆಗೆ ಸಿದ್ಧ ಮಾಡಿದ್ದರು. ಸತ್ಯಂ ಅವರ ಸಂಗೀತ, ಉದಯಶಂಕರ್ ಬರೆದ ಗೀತೆಗಳಿಗೆ ಒಂದೊಂದೂ ಸೊಗಸಾದ ರಾಗಗಳು, ಹಿನ್ನೆಲೆಗಂತೂ ಸೊಗಸಾದ ನಾಗಸ್ವರವೇ ಪ್ರಧಾನವಾಗಿತ್ತು. ಉಡುಪಿ ಜಯರಾಂ ತಮ್ಮೆಲ್ಲ ಶ್ರಮ-ಪ್ರತಿಭೆ ಬಳಸಿ ನೃತ್ಯ ಸಂಯೋಜಿಸಿದ್ದರು. ಬಹಳ ಕಾಲ 'ಗರುಡರೇಖೆ'ಯ ನೃತ್ಯ-ಗೀತೆಗಳು ಸುದ್ದಿಯಲ್ಲಿದ್ದವು. 'ರವಿ ಜಾರಿದಾ ಶಶಿ ಮೂಡಿದಾ...' ಗೀತೆ, ಮಾಧವಿ ಸರ್ಪದ ಹಾಗೇ ಹೊರಳಿ ಹೊರಳಿ ನುಲಿದದ್ದು ಇಡೀ ಚಿತ್ರದ ಯಶಸ್ಸಿಗೆ ಕಾರಣವೆನ್ನಬಹುದಿತ್ತು. ನೃತ್ಯವೃಂದದ ಸಹಕಲಾವಿದರೂ ಅಧಿಕ ಸಂಖ್ಯೆಯಲ್ಲಿದ್ದರು. ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಗುಡ್ಡಗಾಡಿನ ಜನರು ವಾಸಿಸುವ ಗುಹೆಗಳು, ದ್ವೀಪ ಇತ್ಯಾದಿಗಳ ಸೆಟ್‌ಗಳನ್ನು ವಿಶೇಷ ವಿನ್ಯಾಸದಲ್ಲಿ ಅತ್ಯಧಿಕ ವೆಚ್ಚದಲ್ಲಿ ಹಾಕಲಾಗಿತ್ತು. ಚಿತ್ರದಲ್ಲಿ ಮೊದಲ ಬಾರಿಗೆ ಅಂಬಿಕಾ-ಶ್ರೀನಾಥ್ ಜೋಡಿ ಅಭಿನಯಿಸಿತ್ತು. ಅಂಬಿಕಾ ಇನ್ನೂ ಆ ಪ್ರಮಾಣದಲ್ಲಿ ಕನ್ನಡ ತೆರೆಯಲ್ಲಿ ಜನಪ್ರಿಯರಾಗಿರಲಿಲ್ಲ. ಶ್ರೀನಾಥ್ ಆಕೆಗೆ ಆ ದಿನಗಳಲ್ಲಿ ಗಾಡ್‌ಫಾದರ್‌ನಂತೆಯೇ ಆದರು. ಕಲಾವಿದರ ಭಾರಿ ದಂಡು ಪ್ರೀತಿಯಿಂದ ಕೆಲಸ ಮಾಡಿತ್ತು. ಪ್ರಭಾಕರ್-ಹೇಮಾಚೌಧುರಿ ಜೋಡಿ, ವಜ್ರಮುನಿ, ತೂಗುದೀಪ ಶ್ರೀನಿವಾಸ್, ಶಕ್ತಿಪ್ರಸಾದ್, ದಿನೇಶ್, ಲಕ್ಷ್ಮಣ್, ಶಶಿಕಲಾ, ಕೆ.ವಿಜಯ ಮೊದಲಾದವರಲ್ಲದೆ ಮಾ|ರೋಹಿತ್ ವಿಶೇಷವಾದ ಪಾತ್ರದಲ್ಲಿದ್ದರು. ಶ್ರೀನಾಥ್-ಮಾಧವಿ ನಿರ್ವಹಿಸಿದ ಪಾತ್ರಗಳಿಗೆ ವಿಶೇಷ ರೀತಿಯಲ್ಲಿ ಕಣ್ಣುಗಳಿಗೇ ಮೇಕಪ್ ಮಾಡಲಾಗಿತ್ತು. ಜನಪದ, ಕೌಟುಂಬಿಕ, ಸಾಮಾಜಿಕ ಅಂಶಗಳನ್ನೆಲ್ಲ ಮೈಗೂಡಿಸಿಕೊಂಡ ಒಂದು ಭ್ರಮೆ-ವಾಸ್ತವಗಳ ನಡುವಿನ ಸಮತೋಲನ ಕಾಪಾಡಿಕೊಂಡ ಕೃತಿಯಾಗಿತ್ತು. ಅತ್ಯಂತ ಜನಪ್ರಿಯ ಚಿತ್ರ. ಮುಂದೆ ಇಂಥ ಹಲವು ಚಿತ್ರಗಳ ಪರಂಪರೆಗೂ ದಾರಿ ಮಾಡಿದ ಚಿತ್ರ.

''ಹಾವು ಒಂದು ದೇವರು. ಅದು ತನ್ನ ತಂಟೆಗೆ ಬಂದವರ ಮೇಲೆ ಸೇಡು ತೀರಿಸಿಕೊಳ್ಳುತ್ತದೆ. ತನ್ನ ಪಾಡಿಗೆ ತನ್ನನ್ನು ಬಿಟ್ಟರೆ ಅಪಾಯ ಉಂಟುಮಾಡುವುದಿಲ್ಲ'' ಎನ್ನುವ ನಂಬಿಕೆಯನ್ನು ಆಧರಿಸಿದ 'ಗರುಡರೇಖೆ' ಮೂಢನಂಬಿಕೆಗಳನ್ನು ಪೋಷಿಸುತ್ತದೆ ಎಂಬ ಕಾರಣಕ್ಕಾಗಿ ಸೆನ್ಸಾರ್ ಮಂಡಳಿಯ ಆಕ್ಷೇಪಣೆಗೆ ಗುರಿಯಾದ ಚಿತ್ರ. ಅವರೆ ಚಿತ್ರದ ಸಾಹಿತ್ಯವನ್ನು ಸಿದ್ಧಪಡಿಸಿದಾಗಲೇ ಮಂಡಳಿಯ ಅಭಿಪ್ರಾಯವನ್ನು ಕೇಳಿದಾಗಿಯೂ ಆಗ ಏನೊಂದೂ ಹೇಳದೆ, ಅವರು ಈಗ ಪ್ರಮುಖ ಭಾಗಗಳನ್ನು ತೆಗೆಯಲು ಸೂಚಿಸುತ್ತಿದ್ದಾರೆಂದು ನಿರ್ಮಾಪಕರು ಆಕ್ಷೇಪಿಸಿದರು. ಆಗ್ಗೆ ತೆಲುಗು ಹಾಗೂ ಕನ್ನಡ ಭಾಷೆಯ ಚಿತ್ರರಂಗದಲ್ಲಿ ಪ್ರತಿಭಾವಂತ ಛಾಯಾಗ್ರಾಹಕರೆಂದು ತುಂಬಾ ಜನಪ್ರಿಯರಾಗಿದ್ದ ಪಿ.ಎಸ್.ಪ್ರಕಾಶ್ ನಿರ್ದೇಶಿಸಿದ ಪ್ರಥಮ ಚಿತ್ರವಿದು. ಚಿತ್ರರಂಗದಲ್ಲಿ ಅವರೊಂದಿಗೆ ದುಡಿಯುತ್ತಿದ್ದ ಕೆಲವು ಮಂದಿ ಸಮಾನ ಮನಸ್ಕ ತಾಂತ್ರಿಕ ವರ್ಗದವರನ್ನು ಒಂದುಗೂಡಿಸಿ ತಯಾರಿಸಲಾಗಿದ್ದ ಈ ಚಿತ್ರ ಈ ದೃಷ್ಟಿಯಿಂದ ಪ್ರಥಮ. ಇದರ ಮತ್ತೊಂದು ಹೆಗ್ಗಳಿಕೆ ಮಂಗಳೂರಿನ ಜ್ಯೋತಿ ಚಿತ್ರಮಂದಿರದಲ್ಲಿ ಶತದಿನ ಕಂಡಿದ್ದು. ಈ ಚಿತ್ರಮಂದಿರದ ೩೧ ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಯಾವ ಚಿತ್ರವೂ ಗಳಿಸದಷ್ಟು ಹಣ ಗಳಿಸಿ 'ಗುರುಡರೇಖೆ' ದಾಖಲೆ ಸೃಷ್ಟಿಸಿತು. ಇದರೊಂದಿಗೆ ೨೩ ವಾರಗಳ ನಿರಂತರ ಪ್ರದರ್ಶನ ಕಂಡಿತು.

ಹೆಸರಾಂತ ನಿರ್ದೇಶಕ ಸಿದ್ಧಲಿಂಗಯ್ಯ ನಿರ್ಮಿಸಿದ 'ಪರಾಜಿತ' ಕೂಡ 'ಗರುಡ ರೇಖೆ'ಯಂತೆ ೩-೪ ಸಾವಿರ ಅಡಿಗಳಷ್ಟು ಉದ್ದವನ್ನು ಸೆನ್ಸಾರ್ ಕತ್ತರಿಯಿಂದ ಕಳೆದುಕೊಂಡು ಬಿಡುಗಡೆಯಾದ ಚಿತ್ರ. 'ಅಂತ' ಹಗರಣದ ನಂತರ ಸೆನ್ಸಾರ್ ತಳೆದ ಬಿಗಿ ನಿಲುವಿಗೆ ಬಲಿಯಾದ ಪ್ರಥಮ ಚಿತ್ರವಿದು. ಹಾಗೆ ನೋಡಿದರೆ ಸೆನ್ಸಾರ್ ಕತ್ತರಿಸದೆ ಬಿಟ್ಟಿರುವ ಬಹಳಷ್ಟು ಭಾಗಗಳು ಕೂಡ ಪ್ರೇಕ್ಷಕರಿಗೆ ಮುಜುಗರ ಹುಟ್ಟಿಸುವಂತಿದ್ದವು. ಹೇರಳವಾದ ಅರೆಬೆತ್ತಲೆ ದೃಶ್ಯಗಳು, ದ್ವಂದ್ವಾರ್ಥ ಸಂಭಾಷಣೆಗಳನ್ನು ನೋಡಿದವರು ಸಿದ್ಧಲಿಂಗಯ್ಯನವರಂಥ ಸದಭಿರುಚಿಯ ನಿರ್ದೇಶಕರಿಂದ ಇದನ್ನೆಲ್ಲ ನಿರೀಕ್ಷಿಸಿರಲಿಲ್ಲವೆಂಬಂತೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದರು. ಬದಲಾಗುತ್ತಿರುವ ಅಭಿರುಚಿಗೆ ಹೊಂದಿಕೊಳ್ಳುವ ಆತುರದಲ್ಲಿ ತಮ್ಮ ಅಭಿರುಚಿಯನ್ನು ಬಲಿಗೊಟ್ಟಿದ್ದಾರೆ ಎಂಬ ಟೀಕೆಯನ್ನೂ ಅವರು ಎದುರಿಸಬೇಕಾಯಿತು. ಈ ಚಿತ್ರದ ಇನ್ಸ್‌ಪೆಕ್ಟರ್ ಪಾತ್ರದಲ್ಲಿ ಗಂಭೀರವಾಗಿ ಅಭಿನಯಿಸಿರುವ ಶ್ರೀನಿವಾಸಮೂರ್ತಿ ಮುಂದೆ ಉತ್ತಮ ಅವಕಾಶಗಳನ್ನು ಪಡೆದು ಶ್ರೇಷ್ಠ ಪೋಷಕ ನಟರಾಗಿ ನೆಲೆ ನಿಂತರು. ಪತ್ರಕರ್ತ ಶ್ಯಾಮಸುಂದರ ಕುಲಕರ್ಣಿ ಬರೆದಿದ್ದ 'ಸುತ್ತಮುತ್ತಲು ಸಂಜೆಗತ್ತಲು...' ಗೀತೆ ರಾಜನ್-ನಾಗೇಂದ್ರ ಅವರ ಸಂಯೋಜನೆಯಲ್ಲಿ ಹೆಚ್ಚು ಜನಪ್ರಿಯವಾಯಿತು.

ಇಂಥ ದಿನಗಳಲ್ಲಿ ಕನ್ನಡ ಚಿತ್ರಗಳ ಮಾತು ಬಂದಾಗ ಸಾಮಾನ್ಯವಾಗಿ ಜನರು ಮಾತನಾಡುತ್ತಿದ್ದುದು ಮಂಜುಳಾ ಬಗ್ಗೆ. ಇವರು ನಿರ್ವಹಿಸಿದ ಬಜಾರಿ ಪಾತ್ರಗಳನ್ನು ವರ್ಣಿಸಿಕೊಳ್ಳುತ್ತಾ ಜನ ಖುಷಿ ಪಡುತ್ತಿದ್ದರು. ಹಾಗೆ ನೋಡಿದರೆ ಮಂಜುಳಾ ೧೯೮೨ರ ಹೊತ್ತಿಗೆ ತಮ್ಮ ಐದು ವರ್ಷಗಳ 'ಕನ್ನಡದ ಅಗ್ರಗಣ್ಯ ನಾಯಕಿ' ಪಟ್ಟದಿಂದ ಒಂದೊಂದೇ ಮೆಟ್ಟಿಲು ಇಳಿಯುತ್ತಿದ್ದರು. ಈ ಸಂದರ್ಭದಲ್ಲಿ ಅವರ ಒಂದು ಮುಖ್ಯ ಚಿತ್ರ ಕೆ.ವಿ.ಜಯರಾಂ ನಿರ್ದೇಶನದ 'ಬೆತ್ತಲೆ ಸೇವೆ' ತೆರೆಕಂಡಿತು. ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ, ಚಿಂಚನಸೂರು, ಹವಳಗಿ ಹಾಗೂ ಬಳ್ಳಾರಿ ಜಿಲ್ಲೆಯ



(ಚಿತ್ರ ೩೬) 'ಗರುಡರೇಖೆ' ಚಿತ್ರದಲ್ಲಿ ಪ್ರಭಾಕರ್ ಮತ್ತು ಮಾಧವಿ



(ಚಿತ್ರ ೩೭) 'ಬೆತ್ತಲೆ ಸೇವೆ' ಚಿತ್ರದಲ್ಲಿ ಮುಸುರಿ ಕೃಷ್ಣಮೂರ್ತಿ, ವಜ್ರಮುನಿ, ಲೋಕೇಶ್

ಮಂಜುಳಾ

ಅನೇಕ ಹಳ್ಳಿಗಳಲ್ಲಿ ನಡೆಯುತ್ತಾ ಬಂದಿರುವ ಅಮಾನವೀಯವಾದ ಹರಕೆ ಪದ್ಧತಿಯನ್ನು ಆಧರಿಸಿ ಈ ಚಿತ್ರವನ್ನು ತಯಾರಿಸಲಾಗಿತ್ತು. ಇದನ್ನು ವೀಕ್ಷಿಸಿದ ಸೆನ್ಸಾರ್ ಮಂಡಳಿ ಸದರಿ ಆಚರಣೆಯ ಬಗ್ಗೆ ಸರ್ಕಾರ ರೂಪಿಸಿರುವ ಕಾನೂನುಗಳ ಪ್ರಸ್ತಾಪ ಚಿತ್ರದಲ್ಲಿ ಇಲ್ಲವೆಂಬ ಆಕ್ಷೇಪವೆತ್ತಿ ಪ್ರದರ್ಶನಕ್ಕೆ ಅಸಮ್ಮತಿ ಸೂಚಿಸಿ ಪುನರ್ ಪರಿಶೀಲನಾ ಸಮಿತಿಗೆ ಒಪ್ಪಿಸಿತು. ಈ ಸಮಿತಿ ಕೆಲವು ಕತ್ತರಿ ಪ್ರಯೋಗಗಳೊಡನೆ ಪ್ರದರ್ಶನಕ್ಕೆ ಸಮ್ಮತಿಸಿತು. ಹಳ್ಳಿಯ ಸುಂದರ ಯುವತಿ ದೇವಿಯನ್ನು ಒಲಿಸಿಕೊಳ್ಳಲು ಊರಿನ ಗೌಡ ಯತ್ನಿಸಿ ವಿಫಲನಾಗುತ್ತಾನೆ. ತನ್ನ ಆಸೆಯನ್ನು ಹೇಗಾದರೂ ಪೂರೈಸಿಕೊಳ್ಳಬೇಕೆಂಬ ಪ್ರಯತ್ನದಲ್ಲಿ 'ಬರಗಾಲ ಬಂದಿದೆ, ದೇವರು ಕೋಪಿಸಿಕೊಂಡಿದ್ದಾನೆ' ಎಂದು ಹೇಳಿ 'ಬೆತ್ತಲೆ ಸೇವೆ' ನಡೆಯಬೇಕೆಂದು ಆಜ್ಞೆ ಮಾಡುತ್ತಾನೆ. ಈ ಆಚರಣೆಯಲ್ಲಿ ಬಲವಂತವಾಗಿ ಭಾಗವಹಿಸಬೇಕಾಗಿ ಬಂದ ದೇವಿ ನೊಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ದೇವಿಯಾಗಿ ಮಂಜುಳಾ ಅಭಿನಯಿಸಿದ್ದರೆ ವಜ್ರಮುನಿ ಗೌಡನಾಗಿದ್ದರು. ಈ ಚಿತ್ರದಲ್ಲಿನ ವಜ್ರಮುನಿಯವರ ಅಭಿನಯಕ್ಕೆ ರಾಜ್ಯದ ೧೯೮೨-೮೩ರ ಶ್ರೇಷ್ಠ ಪೋಷಕ ನಟ ಪ್ರಶಸ್ತಿ ಬಂದಿತು. ಸರ್ಕಾರದ ಪ್ರಶಸ್ತಿಗಳ ಇತಿಹಾಸದಲ್ಲಿ 'ಖಳ ಪಾತ್ರ'ಕ್ಕೆ ಲಭ್ಯವಾದ ಮೊದಲ ಪ್ರಶಸ್ತಿ ಇದು. ಮಂಜುಳಾ ಅಭಿನಯದ ದೃಷ್ಟಿಯಿಂದ ಈ ಚಿತ್ರ 'ದೀಪಾ', 'ಕನಸು-ನನಸು', 'ಕುಂಕುಮ ರಕ್ಷೆ', 'ಮರೆಯಲಾಗದ ಕಥೆ', 'ಚಿತೆಗೂ ಚಿಂತೆ' ಚಿತ್ರಗಳ ಸಾಲಿಗೆ ಸೇರುತ್ತದೆ. ಈ ಚಿತ್ರದ ಹೊತ್ತಿಗೆ ಚೀಟಿಗೆ ಸಂಬಂಧಿಸಿದ ವ್ಯವಹಾರದಲ್ಲಿ ಮಂಜುಳಾ ಹೆಸರು ಸಿಲುಕಿಕೊಂಡಿತು. ಕನ್ನಡ ಚಿತ್ರರಂಗದ ಅದುವರೆಗಿನ ಚರಿತ್ರೆಯಲ್ಲಿ ಯಾರೂ ನಿರ್ವಹಿಸದಷ್ಟು ಬಜಾರಿ, ಗಂಡುಬೀರಿ ಪಾತ್ರಗಳಲ್ಲಿ ಕಾಣಿಸಿಕೊಂಡಿದ್ದ ಅವರೀಗ ಮತ್ತೆ ತಮ್ಮ ಹಳೆಯ ವೈಭವವನ್ನು ಗಳಿಸಿಕೊಳ್ಳುವ ಸ್ಥಿತಿಯಿರಲಿಲ್ಲ. ಆದರೂ ಜನರಲ್ಲಿ ಅವರ ಬಗ್ಗೆ ಇನ್ನೂ ಉತ್ಕಟವಾದ ಆಕರ್ಷಣೆ ಉಳಿದುಕೊಂಡಿತ್ತು.

ಮಂಜುಳಾ ಅವರನ್ನು ಹೊರತುಪಡಿಸಿದರೆ ಹೆಚ್ಚಾಗಿ ಚರ್ಚೆಯಾಗುತ್ತಿದ್ದದ್ದು ಪುಟ್ಟಣ್ಣನವರ ಖಾಸಗಿ ಬದುಕು. ಜನರಿಗೆ ಮಂಜುಳಾರಂತೆ ಪುಟ್ಟಣ್ಣನವರ ಚಟುವಟಿಕೆಯೂ ಕುತೂಹಲದ ವಿಷಯವಾಗಿತ್ತು. ಈ ಹಿನ್ನೆಲೆಯಲ್ಲಿಯೇ 'ಮಾನಸ ಸರೋವರ' ಚಿತ್ರಕ್ಕೆ ವಿಪರೀತ ಮಹತ್ವ ಬಂತು. ಪುಟ್ಟಣ್ಣನವರ ಖಾಸಗಿ ಬದುಕನ್ನು ಈ ಚಿತ್ರ ಆಧರಿಸಿದೆ ಎಂಬ ಮಾತುಗಳು ಎಲ್ಲಾ ಕಡೆಯಿಂದ ಕೇಳಿ ಬಂದಿದ್ದವು. ಆರತಿ-ಪುಟ್ಟಣ್ಣನವರ ನಡುವಿನ ಸಂಬಂಧ ಕೆಟ್ಟು ಅವರಿಬ್ಬರೂ ಬೇರೆ ಬೇರೆಯಾಗಿರುವುದರಿಂದ ತೀವ್ರವಾದ ಮಾನಸಿಕ ತೊಳಲಾಟಕ್ಕೆ ಒಳಗಾಗಿರುವ ಪುಟ್ಟಣ್ಣ ಅದೇ ಮನಸ್ಥಿತಿಯಲ್ಲಿ ಈ ಚಿತ್ರವನ್ನು ರೂಪಿಸಿದ್ದಾರೆಂದೇ ಈ ಚಿತ್ರಕ್ಕೆ ವಿಪರೀತ ಪ್ರಚಾರ ಸಿಕ್ಕಿತು. ತಮಗೆ ಮೋಸ ಮಾಡಿದ ಆರತಿ ಮೇಲೆ ಪುಟ್ಟಣ್ಣ ಈ ಚಿತ್ರದ ಮೂಲಕ ಸೇಡು ತೀರಿಸಿಕೊಂಡಿದ್ದಾರೆ ಎಂದು ಪತ್ರಿಕೆಗಳು ಬರೆಯುತ್ತಿದ್ದುದನ್ನು ಓದುಗರು ನಂಬಿದ್ದರು. ಚಿತ್ರದಲ್ಲಿನ 'ನೀನೇ ಸಾಕಿದ ಗಿಣಿ ನಿನ್ನ ಮುದ್ದಿನಾ ಗಿಣಿ ಹದ್ದಾಗಿ ಕುಕ್ಕಿತಲ್ಲೋ....' ಹಾಡನ್ನು ಆರತಿ ಮೇಲಿನ ಅಸಮಾಧಾನವನ್ನು ತೋರಿಸಲೆಂದೇ ಬರೆಸಿ ಚಿತ್ರಿಸಿದ್ದಾರೆಂಬ ಬಗ್ಗೆ ಸುದ್ದಿಯಾಯಿತು. ಇದನ್ನೆಲ್ಲ ಬದಿಗಿಟ್ಟು ನೋಡಿದರೂ ಚಿತ್ರವು ಪರಿಣಾಮಕಾರಿಯಾಗಿದೆ. ಸ್ವತಂತ್ರ ಕೃತಿಯಾಗಿ ರಂಜಿಸುತ್ತದೆ. ಚಿತ್ರದಲ್ಲಿನ ತೀವ್ರ ಭಾವುಕತೆ ಮತ್ತೆ ಪುಟ್ಟಣ್ಣನವರನ್ನು ತೆರೆಯಲ್ಲಿ ಕಾಣಿಸಿತು. ಶ್ರೀನಾಥ್ ತಮ್ಮ ವೃತ್ತಿ ಜೀವನದಲ್ಲೇ ವಿಶಿಷ್ಟವೆನಿಸುವಂಥ ಪಾತ್ರದಲ್ಲಿ ಅತ್ಯಂತ ಶ್ರಮವಹಿಸಿ ಉತ್ತಮವಾಗಿ ಅಭಿನಯಿಸಿ ಚಿತ್ರದ ಮೌಲ್ಯವನ್ನು ಹೆಚ್ಚಿಸಿದರು. ಪದ್ಮಾ ವಾಸಂತಿ ಈ ಚಿತ್ರದ ಮೂಲಕ ಪ್ರವೇಶ ಪಡೆದರು.

ರೀಮೇಕ್ ಚಿತ್ರಗಳ ಅಬ್ಬರದಲ್ಲಿ ಭಿನ್ನವಾಗಿ ಯೋಚಿಸುವವರ ಸಂಖ್ಯೆ ಗಮನಾರ್ಹವಾಗಿ ಇಳಿಮುಖವಾಗುತ್ತಿದ್ದ ಇಂಥ ದಿನಗಳಲ್ಲಿ ಬಂದ ಇನ್ನೊಂದು ಮುಖ್ಯ ಚಿತ್ರ 'ಹಾಸ್ಯರತ್ನ ರಾಮಕೃಷ್ಣ'. ಕನ್ನಡದಲ್ಲಿ ಪೂರ್ಣ ಪ್ರಮಾಣದ ಹಾಸ್ಯಚಿತ್ರಗಳೇ ಅಪರೂಪವಾಗಿದ್ದ ದಿನಗಳ ಹಿನ್ನೆಲೆಯಲ್ಲಿ ಅನಂತ್‌ನಾಗ್‌ರವರನ್ನು ಕೇಂದ್ರವಾಗಿಟ್ಟುಕೊಂಡು ಬಿ.ಎಸ್.ರಂಗಾ ಈ ಉತ್ತಮ ಚಿತ್ರವನ್ನು ನಿರ್ಮಿಸಿದರು. ವಿಜಯನಗರ ಸಾಮ್ರಾಜ್ಯದ ಒಡೆಯ ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ವಿಕಟಕವಿ ತೆನಾಲಿ ರಾಮಕೃಷ್ಣನ ಬಗ್ಗೆ ನಮ್ಮಲ್ಲಿ ಜನಜನಿತವಾಗಿರುವುದೆಲ್ಲ ಬರಿ ಉತ್ಪ್ರೇಕ್ಷಿತ ದಂತಕತೆಗಳು. ಇವನ್ನೇ ಆಧರಿಸಿದ್ದರೆ ಇದೊಂದು ಆಭಾಸದ ಚಿತ್ರವಾಗುತ್ತಿತ್ತು. ಆದರೆ ರಂಗಾ ಅವರು ತೆನಾಲಿ ರಾಮಕೃಷ್ಣನನ್ನು ಕೇವಲ ವಿಕಟಕವಿಯನ್ನಾಗಿ ಮಾತ್ರ ರೂಪಿಸದೆ ವಿನೋದಪ್ರಿಯ, ಸಾಹಿತಿ, ಕವಿ, ರಾಜಕಾರಣಿಯಾಗಿ ಚಿತ್ರಿಸಿ ಆತನ ವ್ಯಕ್ತಿತ್ವಕ್ಕೆ ಪರಿಪೂರ್ಣತೆ ತುಂಬಲು ಪ್ರಯತ್ನಿಸಿದ್ದರು. ಉದಯಶಂಕರ್ ಸಂಭಾಷಣೆ ಗಂಭೀರ ಹಾಗೂ ಚುರುಕಾದ ಎರಡೂ ಸ್ತರಗಳಲ್ಲಿಯೂ ಪರಿಣಾಮಕಾರಿಯಾಗಿತ್ತು. ರಾಜಕುಮಾರ್ ಚಿತ್ರಗಳನ್ನು ಹೊರತುಪಡಿಸಿದರೆ ಪ್ರತಿಭೆಗೆ ಸವಾಲಾಗುವ ಇಂಥ ಕೆಲವು ಚಿತ್ರಗಳಲ್ಲಿ ಉದಯಶಂಕರ್ ಆಗಾಗ ಅತ್ಯುತ್ತಮ ಕಾಣಿಕೆ ನೀಡಿದ್ದಾರೆ. ಅನಂತ್‌ನಾಗ್‌ರ ಶ್ರೇಷ್ಠ ಅಭಿನಯ ಈ ಚಿತ್ರದ ಮತ್ತೊಂದು ಮುಖ್ಯ ಅಂಶ.

ಈ ಚಿತ್ರದ ಚಿತ್ರೀಕರಣ ನಡೆಯುತ್ತಿದ್ದಾಗ ವಿವಾದವೊಂದು ಹುಟ್ಟಿಕೊಂಡಿತ್ತು. ಕೃಷ್ಣದೇವರಾಯನ ಪಾತ್ರಕ್ಕೆ ನಿರ್ದೇಶಕ-ನಿರ್ಮಾಪಕ ಬಿ.ಎಸ್.ರಂಗಾ ವಿಷ್ಣುವರ್ಧನ್‌ರನ್ನು ಆಯ್ಕೆ ಮಾಡಿದ್ದರು. ಆದರೆ ಅನಂತ್‌ನಾಗ್ ''ವಿಷ್ಣುವರ್ಧನ್ ಅಭಿನಯಿಸುವುದಾದರೆ ತಾನು ಚಿತ್ರದಿಂದ ಹೊರನಡೆಯುತ್ತೇನೆ'' ಎಂದು ಹಠ ಹಿಡಿದಿದ್ದಾಗಿ ಪತ್ರಿಕೆಗಳ ಮೂಲಕ ಸುದ್ದಿ ಹಬ್ಬಿತು. ಈ ಬಗ್ಗೆ ಉದ್ಯಮ, ಪತ್ರಿಕೆಗಳಲ್ಲಿ ಚರ್ಚೆ, ವಾದಗಳು ನಡೆದವು. ಇವಕ್ಕೆಲ್ಲ ಬಿ.ಎಸ್.ರಂಗಾ ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ. ಆರ್.ಎನ್.ಸುದರ್ಶನ್‌ರನ್ನು ಕೃಷ್ಣದೇವರಾಯನನ್ನಾಗಿಸಿ ಚಿತ್ರ ಪೂರ್ಣಗೊಳಿಸಿದರು. ಇದೆಲ್ಲ ರಗಳೆ ಮುಗಿದಾಗ ಅದುವರೆಗೆ ಏನೂ ಮಾತಾಡದಿದ್ದ ಅನಂತ್‌ನಾಗ್ ''ಹಾಗೆ ಹೇಳಿಲ್ಲ'' ಎಂಬ ಒಂದೇ ಮಾತಿನಲ್ಲಿ ತಮ್ಮ ವಿರುದ್ಧ



(ಚಿತ್ರ ೩೮) 'ಮಾನಸ ಸರೋವರ' ಚಿತ್ರದಲ್ಲಿ ಪದ್ಮಾ ವಾಸಂತಿ ಮತ್ತು ಶ್ರೀನಾಥ್



(ಚಿತ್ರ ೩೯) 'ಹಾಸ್ಯರತ್ನ ರಾಮಕೃಷ್ಣ' ಚಿತ್ರದಲ್ಲಿ ಅನಂತ್‌ನಾಗ್ ಮತ್ತು ಅಶ್ವತ್ಥ್

ಮಾಡಲಾಗಿದ್ದ ಆಪಾದನೆಯನ್ನು ನಿರಾಕರಿಸಿದರೆ, ವಿಷ್ಣುವರ್ಧನ್ "ನಾನಂತೂ ಒಪ್ಪಿದ್ದೆ... ಅನಂತರ ಬೇಡ ಅಂದರು. ಕಾರಣ ಗೊತ್ತಿಲ್ಲ" ಎಂದು ಹೇಳಿ ಏನು ನಡೆದಿರಬಹುದು ಎಂಬುದರ ಬಗ್ಗೆ ಅನುಮಾನ ಉಳಿಸಿದರು.

ಚಿತ್ರರಂಗದಲ್ಲಿ ಇಂಥ ವಿವಾದಗಳು ಯಾವುದೇ ಒಂದು ಚಿತ್ರಕ್ಕೆ ಅಥವಾ ವ್ಯಕ್ತಿಗೆ ಮಾತ್ರ ಸೀಮಿತವಾಗಿರಲಿಲ್ಲ. ಬಹಳ ಸಂದರ್ಭಗಳಲ್ಲಿ ಇಬ್ಬರು ನಟರ ನಡುವಿನದು ಮಾತ್ರ ಆಗಿ ಉಳಿಯುತ್ತಿರಲಿಲ್ಲ. ಚಿತ್ರ ಮಾಧ್ಯಮಕ್ಕೆ ಅದಕ್ಕಿರುವ ಶಕ್ತಿಯ ಜೊತೆಗೆ ನಿರಂತರವಾದ ರಗಳೆ, ವಿವಾದಗಳ ಬೆಂಬಲವೂ ಅನಿವಾರ್ಯವೇನೋ ಎನ್ನುವಂತೆ ಇವೆರಡೂ ಸಮಾನಾಂತರವಾಗಿಯೇ ಜತೆ ಜತೆಯಾಗಿಯೇ ಹೆಜ್ಜೆ ಹಾಕಿಕೊಂಡು ನಡೆದಂತಿದೆ. ವಿವಾದ, ಸುದ್ದಿ, ಗಾಳಿ ಸುದ್ದಿ, ಸ್ಫೋಟಗಳು ಚಲನಚಿತ್ರ ಉದ್ಯಮದ ಅನಿವಾರ್ಯ ಅಂಗಗಳು ಎಂಬುದು ಚರಿತ್ರೆ ನಡೆದು ಬಂದಿರುವ ದಾರಿಯನ್ನು ಅವಲೋಕಿಸಿದಾಗ ಕಾಣುತ್ತದೆ.

ಅನಂತ್‌ನಾಗ್ ಕೊಂಚ ಭಾವಜೀವಿ. ಆದರೆ ಒಳ್ಳೆಯದಕ್ಕೆ ಎಂದೂ ಆದ್ಯತೆ. ಕೆಲವು ಚಿತ್ರಗಳು ವಿತರಣೆಯಾಗದಾಗ ವಿತರಿಸುವ ಸಾಹಸ ಕೂಡ ಮಾಡಿದವರು. ಮೇಲುನೋಟಕ್ಕೆ ತನ್ನನ್ನು ತೆರೆದುಕೊಳ್ಳದ ಅಂತರ್ಮುಖಿ ಅನ್ನಿಸಿದರೂ ಅವರ ಒಳಜಗತ್ತಿನಲ್ಲಿ ಶುಭದ-ಯಶದ ಕಡೆಗಿನ ಒಲವು, ಅದಕ್ಕಾಗಿ ತನ್ನನ್ನು ತೆತ್ತುಕೊಳ್ಳುವ ಅಪೇಕ್ಷೆ ಸದಾ ಜಾಗೃತವಾಗಿರುತ್ತದೆ. 'ಫಣಿಯಮ್ಮ', 'ಬರ' ಮುಂತಾದ ಹಲವು ಚಿತ್ರಗಳನ್ನು ಅವರು ವಿತರಿಸಿದ್ದರು. ಹಾಗೆಯೇ 'ಹಾಸ್ಯರತ್ನ ರಾಮಕೃಷ್ಣ' ಕೂಡಾ ಅವರೇ ವಿತರಿಸಿದರು. ಈ ಹಿಂದೆ ಪ್ರಸ್ತಾಪಿಸಿದ ವಿಷ್ಣುವರ್ಧನ್ -ಅನಂತ್‌ನಾಗ್ ವಿಷಯದಲ್ಲಿ ಪುಟ್ಟದೊಂದು ವಿರಸವೂ ಏರ್ಪಟ್ಟಿದ್ದ ಹಿನ್ನೆಲೆಯಲ್ಲಿ 'ಹಾಸ್ಯರತ್ನ ರಾಮಕೃಷ್ಣ' ಅನಂತ್‌ನಾಗ್ ಅವರ ತಾರಾಮೌಲ್ಯಕ್ಕೇ ಒಂದು ಪ್ರತಿಷ್ಠೆಯ ಸಂಗತಿಯೂ ಆಗಿತ್ತು. ಈ ಚಿತ್ರವನ್ನು ಅವರು ವಿತರಿಸಲು ಪಡೆದಾಗ ಚಿತ್ರೋದ್ಯಮ ಬೆರಗಿನಿಂದ ನೋಡಿತ್ತು. ಚಿತ್ರ ನಿರೀಕ್ಷಿಸಿದ ಹಾಗೆ ಯಶಸ್ವಿಯಾಗಲಿಲ್ಲ. ಆದರೆ ಸಾಮಾನ್ಯವಾಗಿ ನಗರ ಪ್ರದೇಶವನ್ನೇ ಗಮನಿಸಿ ಈ ಮಾತು ಹೇಳುವುದು ಪರಿಪಾಠ. ಆದರೆ ಚಿತ್ರ 'ಬಿ', 'ಸಿ' ಕೇಂದ್ರಗಳಲ್ಲಿ ಚೆನ್ನಾಗಿಯೇ ನಡೆದಿತ್ತು. ಅನಂತ್ ಅಭಿನಯದ ಚಿತ್ರಗಳು ಆ ಕೇಂದ್ರಗಳಲ್ಲಿ ಓಡುವುದು ಕಷ್ಟ. ಆದರೆ ಇಲ್ಲಿ ತೆನಾಲಿ ರಾಮಕೃಷ್ಣನ ಕಥೆಯಿದೆ, ಕಾಸ್ಟ್ಯೂಮ್, ಸೆಟ್ಸ್‌ಗಳ ಅದ್ದೂರಿಯಿದೆ. ಅದನ್ನು 'ಬಿ', 'ಸಿ' ಕೇಂದ್ರಗಳು ಸ್ವೀಕರಿಸಿದವು.

ಇದೇ ಸಮಯದಲ್ಲಿ ತೆರೆಕಂಡ 'ಕೆಂಪು ಹೋರಿ' ಚಿತ್ರಕ್ಕೆ ಹೊರದೇಶದ ಚಿತ್ರಗಳ ಪ್ರಭಾವ ಅಧಿಕ. ಅಂಥದೇ ಒಂದು ಕಥೆ ಹೊಸೆದಿದ್ದರು. ಕ್ಲಿಂಟ್ ಈಸ್ಟ್‌ವುಡ್ ಅಥವಾ ಟೆಕ್ಸಾಸ್ ಮಾದರಿಯ ಸಾಹಸ ತರಲು ಹೋಗಿ 'ಗುಡ್ ಬ್ಯಾಡ್ ಅಂಡ್ ದಿ ಅಗ್ಲಿ' ಇಂಗ್ಲಿಷ್ ಚಿತ್ರದ ನಕಲು ಎಂಬಂತೆ ಚಿತ್ರಿಸಲಾಗಿತ್ತು. ಮುಖ್ಯ ಪಾತ್ರದಲ್ಲಿದ್ದ ಅಶೋಕ್‌ಗೆ ರಾಜಕುಮಾರ್ ಅನುಕರಣೆಯ ಪ್ರಭಾವಲಯದಿಂದ ಹೊರಬರಲಾಗದೆ ತಡಬಡಾಯಿಸಿ ವಿಮರ್ಶಕರಿಂದ ಆಕ್ಷೇಪಕ್ಕೆ ಒಳಗಾಗಿದ್ದರು. ನಿರ್ಮಾಪಕ ಮಹದೇವಯ್ಯನವರೇ ನಿರ್ದೇಶಕರು. ಕಥೆ, ಚಿತ್ರಕಥೆ, ಸಂಭಾಷಣೆ ಹೊಂದಿಸಿದ್ದ ಎಚ್.ವಿ.ಸುಬ್ಬರಾವ್ ಅವರ ಜಾಣ್ಮೆಯನ್ನು ಗುರುತಿಸಬಹುದಿತ್ತು. ಅಂಥ ಬರಹಗಾರರ ಪ್ರತಿಭೆಯೆಲ್ಲ ತೀರಾ ಸಾಮಾನ್ಯದಲ್ಲಿ ಸೇರಿಹೋಗುತ್ತಿದ್ದುದೊಂದು ವ್ಯಥೆಯ ಸಂಗತಿ. ಸುಬ್ಬರಾವ್ ಅಂಥ ಬರಹಗಾರರು ಆಗ ಈಗ ಕಂಡು, ಮರೆಗೆ ಸರಿಯುತ್ತ ಬರುವ ವಾತಾವರಣ ಏಕೆ, ಹೇಗೆ ಸೃಷ್ಟಿಯಾಗುತ್ತದೆ ಎಂಬುದು ನಿಗೂಢವಾಗಿಯೇ ಉಳಿಯುತ್ತದೆ.

'ಪೆದ್ದ ಗೆದ್ದ' ದ್ವಾರಕೀಶ್ ಚಿತ್ರ ಲಾಂಛನದಲ್ಲಿ ಎಚ್.ಆರ್.ಪ್ರಭಾಕರರೆಡ್ಡಿ ನಿರ್ಮಿಸಿದ ಚಿತ್ರ. ಭಾರ್ಗವ ನಿರ್ದೇಶಿಸಿದ್ದರು. ಚುರುಕಾದ ಓಟ ಈ ಚಿತ್ರದ ಕೂಡು ಅಂಶ. ಜನಪ್ರಿಯ ಕಲಾವಿದರಿದ್ದರು. ದ್ವಾರಕೀಶ್ ಪ್ರತಿ ಫ್ರೇಂನಲ್ಲೂ ಇರುವ ಹಾಗೆ ಚಿತ್ರನಾಟಕ ಹೆಣೆಯಲಾಗಿತ್ತು ಮತ್ತು ಅವರು ಹೆಚ್ಚು ಇಷ್ಟಪಟ್ಟು ಅಭಿನಯಿಸಿದ್ದ 'ಪೆದ್ದ'ನ ಪಾತ್ರ ಪ್ರೇಕ್ಷಕನನ್ನು ಒಲಿಸಿಕೊಂಡಿತು. ದ್ವಾರಕೀಶ್ ಕನ್ನಡದ ಪ್ರಭಾವೀ ನಿರ್ಮಾಪಕರಾಗಿ ಎರಡನೆಯ ಸ್ಥಾನದಲ್ಲಿ ನಿಲ್ಲಬಲ್ಲ ಶಕ್ತರು. ಕನ್ನಡತನ, ಕನ್ನಡ ಕಲಾವಿದರಿಗೆ ಆದ್ಯತೆ ಕೊಡಬೇಕು ಎಂಬ ಒತ್ತಾಯ ಪ್ರೇಕ್ಷಕರಿಂದ ಮತ್ತೆ ಬಂತು. ಮತ್ತು ಎಂಥ ನಿರ್ಮಾಪಕನೇ ಆದರೂ ನಾಯಕನಾಗಿ ಆರತಿ ಎದುರು ನಟಿಸಲು ಎಂಟೆದೆಯೇ ಎಂದವರೂ ಉಂಟು. ಎಷ್ಟೇ ಚೆನ್ನಾಗಿ ನಟಿಸಿದರೂ ತಾಯ್‌ನಾಗೇಶ್, ಸಂಗೀತಕ್ಕೆ ಕೆ.ವಿ.ಮಹದೇವನ್‌ರನ್ನು ಕರೆತಂದುದಕ್ಕೆ ದ್ವಾರಕೀಶ್ ಜನರ ಬಾಯಿಗೆ ಬೀಳಬೇಕಾಯಿತು. ಡಿ.ವಿ.ರಾಜಾರಾಂ ಛಾಯಾಗ್ರಹಣ, ರಾಜಾನಂದ್, ಲೋಕನಾಥ್, ಸುಂದರರಾಜ್ ಅಭಿನಯ, ಗೌರವನಟರಾಗಿ ಮಿಂಚಿದ ವಿಷ್ಣುವರ್ಧನ್-ಭಾರತಿ ಪ್ರಿಯವಾದರು. ಚಿತ್ರದಲ್ಲಿ ಅನೇಕ ಸಂಗತಿಗಳು ಕೊಂಡಿ ಕಳಚಿಕೊಂಡರೂ ಚಿತ್ರ ಗಲ್ಲಾಪೆಟ್ಟಿಗೆಯ ಯಶಸ್ವಿ ಸೂತ್ರಗಳನ್ನು ಆಧರಿಸಿತ್ತು. ಆ ಸೂತ್ರಗಳು ಜನರಿಗೆ ಆಪ್ತವಾಗಿದ್ದೂ ಮುಖ್ಯ.

ಅಬ್ಬಾಯಿನಾಯ್ಡು ತಾವೇ ಕಥಾವಿಭಾಗ ಪ್ರಾರಂಭಿಸಿ ಚಿತ್ರಕ್ಕೆ ಕಥೆಗಳನ್ನು ಬರೆಯತೊಡಗಿದ್ದರು. ಹತ್ತಾರು ಯಶಸ್ವಿ ಚಿತ್ರಗಳ ಪ್ರೇರಣೆಯಿಂದ ಭಾವನಾತ್ಮಕ, ಭಾವೋದ್ರೇಕ ಪೂರಿತ, ಸಾಹಸಮಯ ಸನ್ನಿವೇಶಗಳು, ಹೊಸ ತಿರುವುಗಳು ಇರುವಂತೆ ಕಥೆಯನ್ನು ಹೊಂದಿಸುವ ಜಾಣ್ಮೆ ಅವರಲ್ಲಿತ್ತು. ಅವರು ಅದನ್ನೊಂದು ತಪಸ್ಸಿನಂತೆ ನಿಭಾಯಿಸುತ್ತಿದ್ದರು. ಹಾಗೆ 'ಶೋಲೆ' ಮೊದಲಾದ ಚಿತ್ರಗಳ ಅಘೋಷಿತ ಪ್ರಭಾವದಿಂದ ಸಿದ್ಧವಾದ ಕಥೆ 'ಚೆಲ್ಲಿದ ರಕ್ತ'. ಎಂ.ಡಿ.ಸುಂದರ್ ಚಿತ್ರಕಥೆಯ ರಚನೆಯಲ್ಲಿ ಮಹಾ ಗಟ್ಟಿಗರೆಂದೇ ಪ್ರಸಿದ್ಧಿ. ಬಹುತೇಕ ಕನ್ನಡ ಚಿತ್ರಗಳಿಗೆ ಅವರ ಚಿತ್ರಕಥೆ ಇರುತ್ತಿತ್ತು. ಕನ್ನಡದಲ್ಲಿ ಚಿತ್ರಕಥೆ ಬರೆಯುವವರೇ ಇಲ್ಲ ಎಂಬ ರಾಗ ಇವತ್ತಿನವರೆಗೂ ಇದ್ದೇ ಇದೆ. ಆದರೂ ಈಚಿನ ವರ್ಷಗಳಲ್ಲಿ ಎಂ.ಡಿ.ಸುಂದರ್ ಅಂಥವರನ್ನು ಕರೆಸುವ ಅಗತ್ಯ ಬಿದ್ದಿಲ್ಲ. ನಿರ್ದೇಶಕನಾದವನು ಚಿತ್ರಕಥಾ ರಚನೆಯಲ್ಲಿ ಪರಿಣತನಾಗಿರಬೇಕು, ಅದೇ ಅವನ ಸಾಮರ್ಥ್ಯಕ್ಕೆ ನಿದರ್ಶನ. ಆದರೆ ಎಲ್ಲವೂ ಸಿದ್ಧವಾದರೆ ಸ್ಟಾರ್ಟ್-ಕಟ್ ಹೇಳುತ್ತೇವೆನ್ನುವವರೇ ಹೆಚ್ಚುತ್ತಿದ್ದ ದಿನಗಳಲ್ಲಿ ಚಿತ್ರಕಥೆಗೆ



(ಚಿತ್ರ ೪೦) 'ಚೆಲ್ಲಿದ ರಕ್ತ' ಚಿತ್ರದಲ್ಲಿ ಅಶೋಕ್ ಮತ್ತು ಮಂಜುಳಾ

ಕೂರುವ ವ್ಯವಧಾನ ಇರುತ್ತಿರಲಿಲ್ಲ. ಅರಕೆಗಳ ನಡುವೆ ಅವರಿವರು ಕೋದುಕೊಟ್ಟ ಮಾಲೆಯನ್ನೇ ಧರಿಸಬೇಕಾಗಿತ್ತು ಕನ್ನಡ ತಾಯಿ. ಅಬ್ಬಾಯಿನಾಯ್ಡು ಅಂಥ ಅವಿದ್ಯಾವಂತರಿಗೆ ತಾನು ಎಲ್ಲಿಂದಲೋ ಪ್ರೇರಣೆಗೊಂಡು ಕಥೆ ಜೋಡಿಸಿದರೂ ಅದಕ್ಕೆ ಕನ್ನಡತನ ತುಂಬಬೇಕೆಂಬ ಅರಿವಿತ್ತು. ಆ ಮಟ್ಟಿಗೆ ಅವರು ಪ್ರಾಮಾಣಿಕರಾಗಿದ್ದರು. ಅವರ ಆಲೋಚನೆಗಳನ್ನು ಗ್ರಹಿಸಿ ಮಾತು ಕೂಡಿಸಲು ಉದಯಶಂಕರ್ ನೆರವಾಗುತ್ತಿದ್ದರು. 'ಚೆಲ್ಲಿದ ರಕ್ತ'ದಂಥ ಚಿತ್ರದಲ್ಲಿ ಮಾರಾಮಾರಿಯೇ ಪ್ರಧಾನವಾದರೂ ಚುರುಕಾದ ಸಂಭಾಷಣೆ, ಅಂತಃಕರಣ ಕಲಕುವಂಥ ಸನ್ನಿವೇಶಗಳು ಮತ್ತು ಅತ್ಯುತ್ತಮ ಛಾಯಾಗ್ರಹಣ-ಸಂಕಲನಗಳಿಂದ ಗೆಲ್ಲುವ ಎಲ್ಲ ಶಕ್ತಿಯನ್ನೂ ತುಂಬಿಕೊಂಡಿತ್ತು. ಚಿತ್ರ ನಿರ್ಮಾಪಕರಿಗೆ ಮೋಸವಾಗಲಿಲ್ಲ. ಚಲನಚಿತ್ರದಲ್ಲಿ ಸಾಮಾನ್ಯವಾಗಿ ಪ್ರಾಣಿಗಳು ಅದರಲ್ಲೂ ನಾಯಿ, ಹಾವು, ಕುದುರೆಗಳಿಗೆ ವಿಶೇಷ ಸ್ವಾಗತವಿರುತ್ತದೆ. ಅಬ್ಬಾಯಿನಾಯ್ಡು ಅವರ ಚಿತ್ರಗಳಲ್ಲೂ ಇವೆಲ್ಲಾ ಇರುತ್ತಿದ್ದವು. 'ಚೆಲ್ಲಿದ ರಕ್ತ' ದಲ್ಲಿ ಕುದುರೆಗಳನ್ನು ವಿಶಿಷ್ಟವಾಗಿ ಬಳಸಿಕೊಂಡಿದ್ದರು. ಶಿವಯ್ಯನವರ ಸಾಹಸ ನಿರ್ದೇಶನ, ಸತ್ಯಂ ಅವರ ಸಂಗೀತ ವಿಜೃಂಭಿಸಿತ್ತು.



(ಚಿತ್ರ ೪೧) 'ಬಾಡದ ಹೂ' ಚಿತ್ರದಲ್ಲಿ ಪದ್ಮಪ್ರಿಯಾ

ಅಬ್ಬಾಯಿನಾಯ್ಡು ಚಿತ್ರವೆಂದರೆ ಕನ್ನಡ ಪ್ರೇಮ ತುಂಬಿಕೊಂಡ ಒಂದು ಗೀತೆ ಇರಬೇಕು. ಅದನ್ನು ಹಿರಿಯ ಬರಹಗಾರ, ನಿರ್ದೇಶಕ ಸಿ.ವಿ.ಶಿವಶಂಕರ್ ಅವರೇ ರಚಿಸಬೇಕು ಎಂಬುದು ನಡೆದು ಬಂದ ಪದ್ಧತಿ. ಈ ಚಿತ್ರಕ್ಕೆ ಶಿವಶಂಕರ್ ಬರೆದ ಅಂಥ ಹಾಡು ಇತ್ತು. ಚಿತ್ರ ನಿರ್ದೇಶಕ ಸುಬ್ಬರಾವ್ ಹಾಗೂ ನಿರ್ಮಾಪಕ ಅಬ್ಬಾಯಿಯವರ ಮೇಲೆ 'ಅಯ್ಯೋ ಅಬ್ಬಯ್ಯ ಬೇಡ ಸುಬ್ಬಯ್ಯ...' ಎಂಬ ತಮಾಷೆಯ ಗೀತೆಯೂ ಇತ್ತು. ಅಬ್ಬಾಯಿಯವರ ಜಾಡು ಆನೆ ನಡೆದ ಹಾದಿಯ ಹಾಗೆ. ಅಶೋಕ್, ಮಂಜುಳ, ರಾಮಕೃಷ್ಣ ಮುಖ್ಯ ಪಾತ್ರದಲ್ಲಿದ್ದು, ಪ್ರಭಾಕರ್ ಈ ಚಿತ್ರದಲ್ಲಿ ಬಸವಯ್ಯನ ಪಾತ್ರ ಮಾಡುವ ಮೂಲಕ ಮೊದಲ ಬಾರಿಗೆ ಖಳನಲ್ಲದ ಪಾತ್ರದಲ್ಲಿ ಜನಮನ ಸೆಳೆದರು. ಅವರಿಗಾಗಿಯೇ ಒಂದು ಹಾಡೂ ಇತ್ತು. ಶಿವರಾತ್ರಿಯ ಉತ್ಸವದಂದು ಶಿವನನ್ನು ಕುರಿತ 'ಶಿವನೊಲಿದರೆ ಭಯವಿಲ್ಲ...' ಹಾಡಿಗೆ ಪ್ರಭಾಕರ್ ಅಭಿನಯಿಸಿದ್ದರು. ಚಿತ್ರದುದ್ದಕ್ಕೂ ಗಮನ ಸೆಳೆವ ಪಾತ್ರಗಳೆಂದರೆ, ಉದಯಕುಮಾರ್, ಪ್ರಭಾಕರ್ ಹಾಗೂ ಮಂಜುಳಾ.

'ಅಂದದ ಅರಮನೆ' ವರ್ಣಶ್ರೀ ಫಿಲಂಸ್ ಲಾಂಛನದಲ್ಲಿ ತೆರೆಗೆ ಬಂತು. ಮನಶ್ಶಾಸ್ತ್ರೀಯ ಅಂಶಗಳುಳ್ಳ ಕಥೆ. ವಿ.ಸೋಮಶೇಖರ್ ನಿರ್ದೇಶನದಲ್ಲಿ ಪ್ರಾಯಃ ಅವರ ಮನೋಧರ್ಮಕ್ಕಿಂತ ಬೇರೆಯಾದ ವಸ್ತು, ನಿರೂಪಣೆಯ ಚಿತ್ರ. ವರ್ಣಶ್ರೀ ಫಿಲಂಸ್ ಲಾಂಛನದಲ್ಲಿ ಎಂ.ಎಸ್.ಕೇಶವ, ಶಿವಕುಮಾರ್, ವಿಜಯಕುಮಾರ್, ಪ್ರಮೀಳಾಶಂಕರ್ ನಾಲ್ವರು ನಿರ್ಮಾಪಕರು ತಯಾರಿಸಿದರು. ವರ್ಣ-ವಸ್ತ್ರಾಲಂಕಾರ ಪಟು ಅಶ್ವತ್ಥ್ ಮಗಳು ವರ್ಣಶ್ರೀ ಈ ಚಿತ್ರದಲ್ಲಿ ಮುಖ್ಯ ಪಾತ್ರವಲ್ಲಿದ್ದರು. ಚಿತ್ರಕ್ಕೆ ಅವರೂ ಪಾಲುದಾರರೆಂದು ಹೇಳಲಾಗಿತ್ತು. ಮಹಾತ್ಮಾ ಸಂಸ್ಥೆಯ ಪ್ರತಿಮಾದೇವಿ ಅಭಿನಯಿಸಿದ್ದು ವಿಶೇಷ. ವಸ್ತು ಮನಶ್ಶಾಸ್ತ್ರವನ್ನಾಧರಿಸಿದ್ದರಿಂದ ಸೋಮಶೇಖರ್ ಒಂದು ಬಗೆಯ ಕೆಂಪು ವರ್ಣವನ್ನು ವಿಶೇಷವಾಗಿ ಬಳಸಿದ್ದರು. ಒಂದು ವಿಶಿಷ್ಟ ವಾತಾವರಣ ಸೃಷ್ಟಿಯಾಗಿತ್ತು. ಇಂಥ ವಸ್ತು ಬೇಡುವ ಮಾನಸಿಕ ತುಮುಲ ಭಾವಾಭಿವ್ಯಕ್ತಿಯನ್ನು ತರುವಲ್ಲಿ ನಿರ್ದೇಶಕರು ವಿಫಲರಾದರು. ವಾಣಿಜ್ಯ ಪ್ರಧಾನ ಚಿತ್ರೋದ್ಯಮ ಇಂಥ ಗಂಭೀರ ವಸ್ತುವನ್ನು ಚಿತ್ರಿಸಲು ಮನ ಮಾಡಿದ್ದೇ ಆ ಚಿತ್ರದ ಹೆಗ್ಗಳಿಕೆ. ಅನಂತ್‌ನಾಗ್ ಕೆಲವು ಸನ್ನಿವೇಶಗಳಲ್ಲಿ ಪಾತ್ರವನ್ನು ಅರಿತು ಅಭಿನಯಿಸಿದ್ದರು. ಏನೇ ಆದರೂ ಸೋಮಶೇಖರ್‌ರಂಥ ನಿರ್ದೇಶಕರಿಗ ಮೂಗಿಗಿಂತ ಮೂಗುತಿ ಭಾರ ಎಂಬಂತಾಯಿತು.

'ಬಾಡದ ಹೂ' ಕೆ.ಎಸ್.ನಾರಾಯಣ್‌ಗಾಗಿ ಕೆ.ವಿ.ಜಯರಾಂ ನಿರ್ದೇಶಿಸಿದ ಚಿತ್ರ. ಸಾಯಿಸುತೆ ಅವರ ಕಾದಂಬರಿ ಆಧಾರ. ನಾಯಕಿಯ ಪಾತ್ರದ ಪದ್ಮಪ್ರಿಯಾ ಸೂಕ್ಷ್ಮವಾದ ಭಾವಗಳನ್ನು ಪ್ರಕಟಿಸಲು ಅಸಮರ್ಥರು. ನಿರ್ಮಾಪಕರು ಸದಭಿರುಚಿಯ ಚಿತ್ರ ಕೇಳುತ್ತಾರೆ. ಕ್ಯಾಬರೆ, ಫೈಟ್ಸ್ ಇಲ್ಲದ ಚಿತ್ರ ಮಾಡುತ್ತಿದ್ದೇನೆಂದು ಕೆ.ವಿ.ಜಯರಾಂ ಹೇಳಿದ್ದರು. ಮಧ್ಯಮ ವರ್ಗದ, ಉದ್ಯೋಗಸ್ಥ ತರುಣಿಯರ ಸಮಸ್ಯೆಗಳ ಸುತ್ತ ಅರಳಿಕೊಳ್ಳುವ ಕಥೆ. ಅನಂತ್‌ನಾಗ್ ಮತ್ತು ಕೆ.ಎಸ್.ಅಶ್ವತ್ಥ್‌ರ ಉತ್ತಮ ಅಭಿನಯವಿತ್ತು. ಅಶ್ವತ್ಥ್-ವೈದಿ ಸಂಗೀತಕ್ಕೆ ಇರಬೇಕಾದಷ್ಟು ಅವಕಾಶಗಳು ಇರಲಿಲ್ಲ. ಈ ಚಿತ್ರಕ್ಕೆ ರಾಜ್ಯ ಸರ್ಕಾರದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯೂ ಲಭಿಸಿತು.

'ಮರೆಯಲಾಗದ ಕಥೆ', ಜೆ.ಎನ್.ಗೋಪಾಲ್ ಅವರಿಗಾಗಿ ಸೋಮಶೇಖರ್ ನಿರ್ದೇಶಿಸಿದರು. ಎಂ.ಡಿ.ಸುಂದರ್ ಬರೆದ ಕಥೆ. ಮಂಜುಳಾ ತಮ್ಮ ಬಜಾರಿ ಇಮೇಜ್‌ನಿಂದ ಹೊರತಾಗಿ ಶಿಕ್ಷಕಿಯ ಪಾತ್ರದಲ್ಲಿ ಅಭಿನಯಿಸಿದ್ದರು. ಬದುಕಿನ ಪರಿಮಿತಿಗಳು, ನಿರೀಕ್ಷೆಯನ್ನು ಮೀರಿ ಲಭಿಸಿದ ಬೇರೆಯದೇ ಬದುಕು ದೊರೆತಾಗಿನ ಆಘಾತ ಇಂಥ ಸೂಕ್ಷ್ಮ ಸಂಗತಿಗಳಿಗೆ ಮಂಜುಳಾ ನೀಡಿದ ಭಾವಪೂರ್ಣ ಅಭಿನಯ ಅತ್ಯುತ್ತಮವೆನಿಸಿತ್ತು. ಅಂಥದೇ ಮೆಚ್ಚುಗೆಯು ಹೊಸತನ ತುಂಬಿ ಅಭಿನಯಿಸಿದ್ದ ಜೈಜಗದೀಶ್, ಸುಂದರಕೃಷ್ಣ ಅರಸ್ ಅವರಿಗೆ ಸಂದಿತು. ಸೋಮಶೇಖರ್ ದಿಢೀರನೆ ಬೇರಾವುದೋ ಧಾಟಿಗೆ ವಾಲಿದರು, ಏನೋ ವಿಭಿನ್ನವಾದ್ದನ್ನು ಕೊಡುವ ಜಾಡಿನಲ್ಲಿದ್ದರು ಎಂಬುದಂತೂ 'ಅಂದದ ಅರಮನೆ', 'ಮರೆಯಲಾಗದ ಕಥೆ'ಗಳಿಂದ ಸ್ಪಷ್ಟವಾಗಿತ್ತು.

'ಅರ್ಚನಾ' ತಿರುಮಲ ಫಿಲಂಸ್ ಲಾಂಛನದಲ್ಲಿ ಸುಮಾರು ೭-೮ ಜನ ನಿರ್ಮಾಪಕರು ಸೇರಿ ತಯಾರಿಸಿದ ಚಿತ್ರ. ಇವರ ಜೊತೆಗೆ ಚಂದೂಲಾಲ್ ಜೈನ್ ಸಹ ಇದ್ದರು. 'ಅರ್ಚನಾ' ವಿಚಿತ್ರ ರೀತಿಯಲ್ಲಿ ಸುದ್ದಿ ಮಾಡಿತ್ತು. ಹಿಂದಿಯಲ್ಲಿ 'ಸಿಲ್‌ಸಿಲಾ' ಚಿತ್ರ ಬಂದಾಗ ಅದರ ಕಥೆ ಅಮಿತಾಬ್ ಬಚ್ಚನ್ ಮತ್ತು ತಾರೆ ರೇಖಾ ಅವರ ವೈಯಕ್ತಿಕ ಬದುಕನ್ನು ಕುರಿತದ್ದು ಎಂದು ಪ್ರಚಾರ ಮಾಡಿದ್ದರು. ಅಂಥದೇ ಗಿಮಿಕ್ ಇಲ್ಲೂ ಬಳಸಿ ಇದೂ 'ಸಿಲ್‌ಸಿಲಾ' ಮಾದರಿಯ ಚಿತ್ರವೆಂದೂ ತಾರೆ ಆರತಿ ಅವರ ಬದುಕಿನ ಕಥೆಯನ್ನು ಹೇಳುತ್ತದೆಯೆಂದೂ ಪ್ರಚಾರವಾಗಿ ಹೋಗಿತ್ತು. ಚಿತ್ರದಲ್ಲಿ ಆರತಿ ಅವರೊಟ್ಟಿಗೆ ಅಶೋಕ್ ಇದ್ದರು. ಆರತಿಯ ಪತಿಯ ಪಾತ್ರದಲ್ಲಿ ಲೋಕೇಶ್ ಇದ್ದರು. ಜನರಿಗೆ ರಂಗು ರಂಗಾದ ಮಾತಿಗೆ ಗ್ರಾಸ ಸಿಕ್ಕಿತ್ತು. ಅಶೋಕ್ ಅವರೇ ಬರೆದ ಧ್ವನಿಪೂರ್ಣ ಮಾತುಗಳೂ ಪ್ರಚಾರದಲ್ಲಿ ಬಳಕೆ ಆದವು. ಇದೊಂದು ಪ್ರಚಾರ ವಿಧಾನ. ಆದರೆ ಅಷ್ಟೇನೂ ಸ್ವಾಗತಾರ್ಹ ರೀತಿಯಲ್ಲ. ಪ್ರೇಮ ತ್ರಿಕೋನವಿದ್ದ ಕಥೆ. ಪ್ರೇಮಿಸಿದವನು ಸತ್ತನೆಂದು ತಿಳಿದು, ಬೇರೆ ವಿವಾಹವಾದ ತರುಣಿಗೆ ಆ ಪ್ರೇಮಿ ಬದುಕಿ ಎದುರಿಗೆ ಬಂದಾಗ ಆಗುವ ಮಾನಸಿಕ ಯಾತನೆ ಒಳತೋಟಿಗಳು ಪ್ರಧಾನ. ಆ ಮಟ್ಟಿಗೆ 'ಅವಳ ಹೆಜ್ಜೆ'ಯನ್ನು ಹೋಲುತ್ತಿದ್ದ ಕಥೆ. ಲಕ್ಷ್ಮೀ ಅವರ ಹಾಗೆ ಸಂಕೀರ್ಣತೆಯನ್ನು ಅಭಿವ್ಯಕ್ತಿಸಲಾಗಲಿಲ್ಲ



(ಚಿತ್ರ ೪೨) 'ಅರ್ಚನಾ' ಚಿತ್ರದಲ್ಲಿ ಅಶೋಕ್ ಮತ್ತು ಶಂಕರ್‌ನಾಗ್



(ಚಿತ್ರ ೪೩) 'ಪ್ರೇಮ ಮತ್ಸರ' ಚಿತ್ರದಲ್ಲಿ ಅಂಬರೀಷ್ ಮತ್ತು ದ್ವಾರಕೀಶ್

ಆರತಿ ಅವರಿಗೆ. ನಿರ್ದೇಶಕರು ಪೂರ್ವಾರ್ಧದಲ್ಲಿ ಏಳುವ ಪ್ರಶ್ನೆಗಳಿಗೆ ಉತ್ತರಾರ್ಧದಲ್ಲಿ ಉತ್ತರಗಳನ್ನು ಬಿಡಿಸಿಡುವ ರೀತಿ ಚೆನ್ನಾಗಿತ್ತು. ಸಮಸ್ಯೆಗಳು, ಅದೂ ಸ್ತ್ರೀಯರು ಅಂದಾಗ ಪರಿಹಾರ ಸಾವಿನಲ್ಲೇ ಎಂಬ ನಿಲುವು. ತೀರಾ ಸಡಿಲಾದ ನಿರೂಪಣೆ. ಶಂಕರ್‌ನಾಗ್-ಮಂಜುಳಾ ಅತಿಥಿ ನಟರ ಹಾಗೆ ಬಂದರೂ ಲವಲವಿಕೆ ತುಂಬುತ್ತಾರೆ. 'ಬಿರುಗಾಳಿ ಮನದಲ್ಲಿ....' ಎಂಬ ಗೀತೆಯೊಂದು ಗುನುಗುವಂತಿತ್ತು ರಾಜನ್-ನಾಗೇಂದ್ರರ ಸಂಗೀತದಲ್ಲಿ.

'ರುದ್ರಿ' ನಾಯಕಿ ಪ್ರಧಾನ ಚಿತ್ರ. ದತ್ತರಾಜ್ ನಿರ್ದೇಶಿಸಿದ್ದರು. 'ಸಂಪತ್ತಿಗೆ ಸವಾಲ್' ಚಿತ್ರದಲ್ಲಿದ್ದ ದುರ್ಗಿಯೇ ಇಲ್ಲಿ ರುದ್ರಿಯಾಗಿದ್ದಾಳೆಂದರೆ ಸರಿಯಾದೀತು. ಎಮ್ಮೆ ಮೇಲೆ ಕೂತು ಹಾಡುವವರೆಗೆ ಒರಟಾಟ, ಮನಬಂದಂತೆ ಹೊಡೆದಾಡುವ ಮಂಜುಳಾಗಾಗಿಯೇ ಚಿತ್ರ ಸಿದ್ಧವಾದಂತಿತ್ತು.

'ಸ್ವರ್ಣಮಹಲ್ ರಹಸ್ಯ' ಒಂದು ಪತ್ತೇದಾರಿ ಧಾಟಿಯ ಚಿತ್ರವಾಗಿತ್ತು. ತಿಪಟೂರು ರಘು ನಿರ್ಮಾಪಕ ಎಂ.ಎಸ್.ಜಯಂತ್‌ಗಾಗಿ ನಿರ್ದೇಶಿಸಿದರು. ಎಂದೋ ಪ್ರಾರಂಭವಾಗಿ ತಡವಾಗಿ ತೆರೆಗೆ ಬಂದ ಚಿತ್ರ. ಹೀಗಾಗಿ ಚಿತ್ರದ ಕೆಲವು ಭಾಗಗಳಲ್ಲಿ ವ್ಯತ್ಯಾಸವಾಗಿದ್ದವು. ಪಾತ್ರಧಾರಿಗಳಲ್ಲೂ ಆ ಕಾಲಾಂತರದಲ್ಲಿ ಆಗಿರುವ ಬದಲಾವಣೆಯಿಂದಾಗಿ ಇಂಥ ವಿರೋಧಾಭಾಸಗಳು ಆಗಿರಬಹುದು. ಕೆಲವು ತರ್ಕರಹಿತ ಅಂಶಗಳು - ಅದೂ ಸಸ್ಪೆನ್ಸ್ ಚಿತ್ರವಾದಾಗ - ಹಲವು ಪ್ರಶ್ನೆಗಳನ್ನೆತ್ತುವಂತಿದ್ದವು. ಇದ್ದುದರಲ್ಲೇ ರಘು ಅವರು ಸರಿದೂಗಿಸಿಕೊಂಡು ಚಿತ್ರದ ಉದ್ದಕ್ಕೂ ಪ್ರೇಕ್ಷಕನ ಕುತೂಹಲವನ್ನು ಉಳಿಸಿಕೊಳ್ಳುತ್ತಾರೆ. ಅದೇ ಈ ಚಿತ್ರದ ಕೂಡು ಅಂಶ.

'ಗುಣ ನೋಡಿ ಹೆಣ್ಣು ಕೊಡು' ಭುವನೇಶ್ವರಿ ಆರ್ಟ್ಸ್ ಲಾಂಛನದಲ್ಲಿ ಸಿದ್ಧವಾದ ಚಿತ್ರ. ಅಂಕಲಗಿ ಮಿತ್ರರ ಸಾಹಸ. ನಿರ್ದೇಶನಕ್ಕೆ ಎ.ವಿ.ಶೇಷಗಿರಿರಾವ್, ಛಾಯಾಗ್ರಹಣಕ್ಕೆ ಅಣ್ಣಯ್ಯ-ಮಲ್ಲಿಕ್ ಎಂದಿನಂತೆ ಇದ್ದರು. ಹೆಚ್ಚು ಕಡಿಮೆ ಅವರ ಮೊದಲ ಸಿನಿಮಾಸ್ಕೋಪ್ ತಂಡವೇ ಇಲ್ಲಿಯೂ ಕೆಲಸ ಮಾಡಿತು. ಎಂ.ರಂಗರಾವ್ ಅವರ ಸಂಗೀತ ಸಂಯೋಜನೆಗೆ ಆರ್.ಎನ್.ಜಯಗೋಪಾಲ್, ದೊಡ್ಡರಂಗೇಗೌಡ, ಶ್ಯಾಮಸುಂದರ ಕುಲಕರ್ಣಿ ಗೀತರಚನೆ ಮಾಡಿದ್ದರು. ವಿಶೇಷವಾದ ಒಂದು ಡಿಸ್ಕೋ ಗೀತೆಗೆ ಶ್ರೀನಾಥ್, ಪ್ರಮಿಳಾ ಜೋಷಾಯ್ ಮೊದಲಾದವರ ನೃತ್ಯವಿತ್ತು. ಸುಬ್ಬಯ್ಯನವರ ಸಾಹಸ ನಿರ್ದೇಶನವಿತ್ತು. ಈ ಚಿತ್ರದಲ್ಲಿ ಬಾಲಕೃಷ್ಣ ಹೊಡೆದಾಡಿದ್ದರು. ಚಿತ್ರೀಕರಣ ನಡೆಸಿದ ಬೆಟ್ಟದ ಹಲಸೂರಿನ ಪ್ರಾಥಮಿಕ ಶಾಲೆಯ ಸ್ಥಿತಿ ನೋಡಿ ನೇರವಾಗಿ ಸಮಾಜ ಸುಧಾರಣೆ ಮಾಡಲು ಪ್ರಯತ್ನಿಸಿದ ಬಾಲಕೃಷ್ಣ ಮ್ಯಾನೇಜ್‌ಮೆಂಟ್‌ನಿಂದ ಲಾಯರ್ ನೋಟೀಸ್ ಕೊಡಿಸಿಕೊಂಡು ಎಲ್ಲರ ಅಪಹಾಸ್ಯಕ್ಕೆ ಗುರಿಯಾದ ಪ್ರಸಂಗವೂ ಈ ಚಿತ್ರದ ಸಂದರ್ಭದಲ್ಲೇ ಆಯಿತು.

'ಶಂಕರ್ ಸುಂದರ್' ಆರ್.ಎಫ್.ಮಾಣಿಕ್‌ಚಂದ್ ನಿರ್ಮಿಸಿದ ಚಿತ್ರ. ಹಿಂದೆ ಮಾಣಿಕ್‌ಚಂದ್ ಕನ್ನಡ ಚಿತ್ರರಂಗದಲ್ಲಿ ಸಜ್ಜನಿಕೆ, ಸ್ನೇಹಗಳಿಗೆ ಹೆಸರಾದ ವ್ಯಕ್ತಿ. ಹಿಂದೆ ಬಾಲಾಜಿಸಿಂಗ್ ಅವರೊಂದಿಗೆ ಮಕ್ಕಳ ಚಿತ್ರಗಳನ್ನು ನಿರ್ಮಿಸಿದ್ದರು. 'ಏಟು-ಎದಿರೇಟು' ಎಂಬ ವಾಮಶಕ್ತಿ ಪ್ರಧಾನವಾದ ಕಥಾವಸ್ತುವುಳ್ಳ ಚಿತ್ರವನ್ನು ನಿರ್ಮಿಸಿ ಕೈ ಸುಟ್ಟುಕೊಂಡಿದ್ದರು. ಆದರೆ ಅದೇ ಚಿತ್ರ ತೆಲುಗಿನಲ್ಲಿ ಶತಕ ಬಾರಿಸಿದ್ದೂ ಉಂಟು. ಮಾಣಿಕ್‌ಚಂದ್ ಎ.ಟಿ.ರಘು ಅವರಿಗೆ ನಿರ್ದೇಶನಕ್ಕೆ ಅವಕಾಶ ಮಾಡಿದರು. ಬಹುಕಾಲ ಸಹನಿರ್ದೇಶಕರಾಗಿ ಶ್ರಮಿಸಿದ್ದ ಎ.ಟಿ.ರಘು 'ನ್ಯಾಯ ನೀತಿ ಧರ್ಮ' ಚಿತ್ರದ ನಂತರ ಪ್ರಸಿದ್ಧರಾದರು. ಆ ಕಾಲದಲ್ಲಿ ನಟ ಅಂಬರೀಷ್‌ಗೆ ಬಹು ಬೇಕಾದವರಾಗಿದ್ದರು. ರಘು ಈ ಹೊತ್ತಿಗ 'ಚೆಂಡು ಚೆಂಡು' ಚಿತ್ರ ನಿರ್ದೇಶಿಸಿಯಾಗಿತ್ತು. ಚಿತ್ರ ತೆರೆಗೆ ಬಂದಿರಲಿಲ್ಲ. ಜನಪ್ರಿಯ ನಟರ ಶಿಫಾರಸ್ಸು, ಯುವಕನ ಉತ್ಸಾಹ, ಸಾಹಸಮಯ ಚಿತ್ರ ಮಾಡುವ ಸಾಮರ್ಥ್ಯ ಇದೆ ಅನಿಸಿಯೇ ಮಾಣಿಕ್‌ಚಂದ್ ಅವಕಾಶ ನೀಡಿದರು. ಚಿತ್ರಕ್ಕೆ ಶಾಂತರಾಜ್ ಕಥೆಯ ಎಳೆ ಹೊಂದಿಸಿದ್ದರು. ಎನ್.ಎಸ್.ರಾವ್ ಅದಕ್ಕೊಂದು ರೂಪ ಕೊಟ್ಟರು. ಅಂಬರೀಷ್ ದ್ವಿಪಾತ್ರದಲ್ಲಿ ಅಭಿನಯಿಸಿದ್ದರು. ಸಾಹಸವನ್ನು ಅಪರೂಪವೆಂಬಂತೆ ವಿಜಯ್ ಸಂಯೋಜಿಸಿದ್ದರು. ಸಪ್ನ-ಜಯಮಾಲಾ ಇಬ್ಬರು ಅಂಬರೀಷ್‌ಗೆ ಜೋಡಿಯಾಗಿದ್ದರು. ಮೂಗೂರು ಸುಂದರ್ ನೃತ್ಯ ಸಂಯೋಜನೆಯಲ್ಲಿ ವೇಗದ ಲಯಕ್ಕೆ ಆದ್ಯತೆ. ಅವು ಬೇಗನೇ ಜನನಾಡಿ ಹಿಡಿಯುವಂಥವೂ ಆಗಿದ್ದವು. ಸಾಮಾನ್ಯವಾಗಿ ಗೀತಪ್ರಿಯರ ನಿರ್ದೇಶನದ ಚಿತ್ರಗಳಿಗೆ ಛಾಯಾಗ್ರಹಣ ಮಾಡುತ್ತಿದ್ದ ಕುಲಶೇಖರ್‌ಗ ಈ ಚಿತ್ರದಲ್ಲಿ ಪ್ರಯೋಗಗಳಿಗೆ ಹೆಚ್ಚು ಅವಕಾಶವಿತ್ತು. ಶ್ಯಾಮಸುಂದರ ಕುಲಕರ್ಣಿ, ದೊಡ್ಡರಂಗೇಗೌಡ, ಜಯಗೋಪಾಲ್ ಮೊದಲಾದವರ ಗೀತಗಳು ಜನಪ್ರಿಯವಾದವು. ಬೇಕೆಂದೇ ತಮಿಳು-ತೆಲುಗು ಭಾಷೆಯ ಸಂಭಾಷಣೆ ಸೇರಿಸಿದ್ದರು. ಚಿತ್ರಕಥೆಯಲ್ಲಿ ಬಿಗಿ ತಪ್ಪಿತು. ದ್ವಿಪಾತ್ರ ಮಾಡುವಾಗ ಮ್ಯಾನರಿಸಂ ಅನ್ನು ಅದಲಿ ಬದಲಿ ಮಾಡಿಕೊಂಡುದರಿಂದಾಗಿ ನೋಟಕರಿಗೂ ಪಾತ್ರಗಳ ವ್ಯತ್ಯಾಸ ತಿಳಿಯದೆ ಗೋಜಲಾಯಿತು. ದ್ವಿಪಾತ್ರದ ಕಥೆಯಾದಾಗ ಬಿಗಿಯಾದ ತರ್ಕಬದ್ಧ ಚಿತ್ರಕಥೆಯ ಅಗತ್ಯವಿರುತ್ತದೆ. ಅಷ್ಟೇ ಮುಖ್ಯವಾದ್ದು ಸಂಕಲನ. ಚಿತ್ರದಲ್ಲಿ ಈ ಅಂಶಗಳು ಮುಗ್ಗರಿಸಿದವೆನ್ನಿಸಿತ್ತು. ಆದರೂ ಎ.ಟಿ.ರಘು ಅವರ ಪ್ರಾಮಾಣಿಕ ಪ್ರಯತ್ನ, ಆತನಿಗಾಗಿ ಕಲಾವಿದರ ಸಹಕಾರ ಮುಖ್ಯವಾಗಿ ನೆನೆಯಬೇಕಾದ್ದು.

'ಚೋಡಿ ಜೀವ' ಬಾಳಿಗ ಸಹೋದರರೆಂದೇ ಪ್ರಸಿದ್ಧರಾದ ಪಾಂಡುರಂಗ ಬಾಳಿಗ, ಸರ್ವೋತ್ತಮ ಬಾಳಿಗ, ಮೋಹನರಾವ್ ಬಾಳಿಗ ನಿರ್ಮಿಸಿದ ಚಿತ್ರ. ಅವರ ರಾಜರಾಜೇಶ್ವರಿ ಪ್ರೊಡಕ್ಷನ್ಸ್‌ಗಾಗಿ ಗೀತಪ್ರಿಯರು ನಿರ್ದೇಶಿಸಿದರು. ಮುಂದೆ ಹೆಸರಾದ ತಂತ್ರಜ್ಞ ಚಂದ್ರುದೊಡ್ಡಮನಿ ಸಹನಿರ್ದೇಶನವಿತ್ತು. ನಿರ್ಮಾಪಕರೇ ಕಲ್ಪಿಸಿದ ಕತೆಗೆ ಮಾರಾ ಚಿತ್ರಕಥೆಯನ್ನು ಸಿದ್ಧಮಾಡಿದ್ದರು. ಗೀತಪ್ರಿಯ ಗೀತೆ, ಸಂಭಾಷಣೆಯ ಹೊಣೆಯನ್ನು ಹೊತ್ತು ನಿರ್ದೇಶಿಸಿದರು. ವಿಜಯಭಾಸ್ಕರ್ ಸಂಗೀತ ನಿರ್ದೇಶನದಲ್ಲಿ ಚೊಕ್ಕತನವಂತೂ ಇತ್ತು. ಆದರೆ ಗೀತಪ್ರಿಯರ ಪ್ರಾಣಿ ಪ್ರೀತಿಯಿಂದಾಗಿ ಅಥವಾ ನಿರ್ಮಾಪಕರ ಅಂಥ ಒಲವಿನಿಂದಾಗಿ ಚಿತ್ರದ ಉದ್ದಕ್ಕೂ ನಾಯಿಯೊಂದು ಕೇಂದ್ರವಾಗಿ ಬಿಡುತ್ತದೆ. ಕಲಾವಿದರು, ಕಥೆಯನ್ನು ಅದಕ್ಕೆ ಸರಿಹೊಂದುವಂತೆ ದುಡಿಸಿಕೊಂಡಿಲ್ಲ. ಚಿತ್ರ ಬಾಳಿಗಾ ಸಹೋದರರ ಉತ್ಸಾಹದ ಪ್ರಯತ್ನ, ಪರಿಶ್ರಮ ಎಂಬ ಕಾರಣಕ್ಕಷ್ಟೇ ಮುಖ್ಯ.

'ಪ್ರೇಮ ಮತ್ಸರ' ರವಿಚಂದ್ರನ್ ನೇರವಾಗಿ ಚಿತ್ರ ನಿರ್ಮಿಸಲು ಪ್ರಾರಂಭಿಸಿದ್ದರ ಕುರುಹು. ರವಿ ಸಿನಿ ಕ್ರಿಯೇಷನ್ಸ್ ಲಾಂಛನದಲ್ಲಿ ಸ್ವತಂತ್ರವಾಗಿ ಚಿತ್ರ ನಿರ್ಮಿಸಿದರು. ಈಶ್ವರಿ ಎಂದರೆ ಉದ್ಯಮದ ಯಾರೂ ಮುಂದೆ ಬರುವಷ್ಟು ಪ್ರಸಿದ್ಧಿ-ಪ್ರೀತಿ ಇರಿಸಿಕೊಂಡ ಸಂಸ್ಥೆ. ಹಾಗಾಗಿ ಜನಪ್ರಿಯ ನಟರ ನೆರವೂ ಒದಗಿ ಬಂತು. ರವಿಚಂದ್ರನ್-ಅಂಬರೀಷ್ ಸ್ನೇಹವೂ ಅಷ್ಟೇ ಗಾಢವಾದ್ದು. ಹಾಗಾಗಿ ಯೋಜನಾಬದ್ಧವಾಗಿ ಹಾಕಿಕೊಂಡ ಲೆಕ್ಕಾಚಾರದಂತೆ ಮುಗಿಸಿದ ಚಿತ್ರ 'ಪ್ರೇಮ ಮತ್ಸರ'. ತಮಿಳು ಮೂಲ, ನಿರ್ದೇಶಕರೂ ಅಲ್ಲಿಯವರೆ ಸಿ.ವಿ.ರಾಜೇಂದ್ರನ್. ಹೆಚ್.ವಿ.ಸುಬ್ಬರಾವ್ ಸಾಹಿತ್ಯದಲ್ಲಿ ಕನ್ನಡತನ ತುಂಬಲು ಪ್ರಯತ್ನಿಸಿದ್ದರು. ಅಂಬರೀಷ್-ಜಯಮಾಲಾ ಜೋಡಿಯ ಅಭಿನಯ ಗಮನ ಸೆಳೆದಿತ್ತು. ದ್ವಾರಕೀಶ್, ಸುಂದರಕೃಷ್ಣ ಅರಸ್, ಪ್ರಭಾಕರ್, ರಾಮಕೃಷ್ಣ, ಮಾನು, ಹೇಮಾ ಚೌಧುರಿ ಮೊದಲಾದ ಹೇಮಾ ಹೇಮಿಗಳಿದ್ದರು. ಮತಿಭ್ರಮಣೆಗೊಳಗಾದವರಿಂದ ಒಂದು ವಿಶೇಷ ರೀತಿಯ ನೃತ್ಯ ಪ್ರಸಂಗವಿತ್ತು. ಆ ಸನ್ನಿವೇಶದಲ್ಲಿ ಎನ್.ಎಸ್.ರಾವ್, ಕಟ್ಟೆ ರಾಮಚಂದ್ರ, ಎ.ಎಸ್.ಮೂರ್ತಿ, ಅಶ್ವತ್ಥ ನಾರಾಯಣ್, ಹನುಮಂತಾಚಾರ್ ಮೊದಲಾದವರು ಭಾಗವಹಿಸಿದ್ದರು. ಚಿತ್ರಕ್ಕೆ ಸುಂದರವಾದ ಚೌಕಟ್ಟಿದೆ. ಒಳಗೆ ತಿರುಳಿಲ್ಲ ಎಂಬಂತಾಯಿತು. ಪ್ರೇಕ್ಷಕನನ್ನು ಸ್ಪಂದಿಸುವಂಥ ಸನ್ನಿವೇಶ, ಅಭಿನಯ ಇರಲಿಲ್ಲ. ಮೊದಲ ಪ್ರಯತ್ನದಲ್ಲೇ ರವಿಚಂದ್ರನ್ ಸುಂದರವಾದದ್ದನ್ನು ಹಿಡಿಯಬಲ್ಲ ಜಾಣ ಎಂದು ತೋರಿಸಿದ್ದರು. ಆದರೆ ಮುಖ್ಯವಾದ ಸತ್ವ ಅವರ ಹಿಡಿತಕ್ಕೆ ಸಿಗಲಿಲ್ಲ. ತಮಿಳಿನ 'ಉಚ್ಚಕಟ್ಟಂ' ಚಿತ್ರದ ಪ್ರತಿರೂಪ ಎಂಬ ಮಾತಿತ್ತು. ಪ್ರೇಮ-ದ್ವೇಷಗಳನ್ನು ಹೊಸ ತಿರುವುಗಳನ್ನಿಟ್ಟು ಹೇಳುವ ಪ್ರಯತ್ನವಾಗಿತ್ತು.



(ಚಿತ್ರ ೪೪) 'ಭಕ್ತ ಜ್ಞಾನದೇವ' ಚಿತ್ರದಲ್ಲಿ ಬೇಬಿ ಹೇಮಾ, ಮಾ। ಸಂಜಯ್, ಮಾ। ರಾಜೇಶ್, ಸೀತಾರಾಂ ಮತ್ತು ಬೇಬಿ

ಶ್ರೀನಿವಾಸಮೂರ್ತಿ, ಬ್ರಹ್ಮಾವರ ಮೊದಲಾದವರು ರಂಗಭೂಮಿಯ ಭಾವನಾತ್ಮಕ ಸನ್ನಿವೇಶಗಳನ್ನು ನೆನೆನೆನೆದು ಅನುಭವಿಸಿ ಅಭಿನಯಿಸಿದ್ದರು. ಇವರೊಂದಿಗೆ ಜಯಂತಿ, ರಾಮಕೃಷ್ಣ, ತೂಗುದೀಪ ಶ್ರೀನಿವಾಸ್, ಸೀತಾರಾಂ ಮೊದಲಾದವರ ವಿಭಿನ್ನ ಧಾಟಿಯ ಅಭಿನಯ ಸೇರಿತ್ತು. ಹುಣಸೂರರು ಈ ಚಿತ್ರದ ಹೊತ್ತಿಗೆ ವಯೋಮಾನ, ಮನೋಧರ್ಮಗಳಿಂದ ಕೂಡಾ ಬಹಳ ಬೇರೆಯಾಗಿದ್ದರು. ಆಧ್ಯಾತ್ಮದ ಎಳೆ ಅವರನ್ನು ಪ್ರತಿ ಮಾತಿನಲ್ಲೂ ಹಿಡಿದಿಡುತ್ತಿತ್ತು. 'ಭಕ್ತ ಜ್ಞಾನದೇವ'ದ ಸಂಭಾಷಣೆ ಅಂಥ ತತ್ವಗಳ ಆಗರವಾಯಿತು. ಆದರೆ ಇದು ಚಲನಚಿತ್ರ, ಮತ್ತು ಆ ಮಾತುಗಳನ್ನು ಆಡಬೇಕಾದವರು ಬಹುತೇಕ ಮಕ್ಕಳು. ಹೀಗಾಗಿ ಅರ್ಧ ಗ್ರಾಂಥಿಕ, ಅರ್ಧ ಆಡುಮಾತುಗಳ ನಡುವೆ ತಟ್ಟಾಡಿತು. ಚಿತ್ರದಲ್ಲಿ ಬರುವ ಕೆಲವು ಸನ್ನಿವೇಶಗಳು ಜನಸಾಮಾನ್ಯನಿಗೂ ತಿಳಿಹೇಳುವಂಥ ತತ್ವಗಳನ್ನು ತಲುಪದ ಹಾಗೆ ತಡೆಯುವ ಹಿತಾಸಕ್ತಿಗಳ ಸ್ವಾರ್ಥ ಪ್ರವೃತ್ತಿಯು ಕಾಲದಿಂದಲೂ ನಡೆದು ಬಂದಿದೆ ಎಂಬುದನ್ನು ಹೇಳುತ್ತಿತ್ತು. ಇತಿಹಾಸದ ದೃಷ್ಟಿಯಿಂದ ಇಂಥ ಅಂಶಗಳು ಮುಖ್ಯವಾಗುತ್ತವೆ. ಅಂಥ ಪ್ರತಿರೋಧ ಮಾಡುವ ಗುಂಪನ್ನು ನೇರವಾಗಿ ತಣ್ಣಗಾಗಿಸಲು ಸಾಧ್ಯವಾಗದೆ ಅತಿಮಾನುಷ ಶಕ್ತಿಯನ್ನು ಬಳಸಿದ್ದನ್ನು ಹೇಳುವುದರ ಹಿಂದೆ ಹತ್ತಿಕ್ಕಲ್ಪಟ್ಟ ಜನಸಾಮಾನ್ಯರ ಹೃದಯಾಂತರಾಳದ ಆಶಯಗಳನ್ನೇ ಹೇಳಿದಂತಿತ್ತು. 'ಭಕ್ತ ಜ್ಞಾನದೇವ' ಗಲ್ಲಾಪೆಟ್ಟಿಗೆಯ ದೃಷ್ಟಿಯಿಂದಲ್ಲವಾದರೂ ಅನೇಕ ಕಾರಣಗಳಿಗೆ ಮುಖ್ಯವಾದ ಚಿತ್ರವಾಗುತ್ತದೆ.

ಇದರ ನಂತರ ಬಂದ 'ಖದೀಮ ಕಳ್ಳರು' ಹಾಗೂ 'ಚಕ್ರವ್ಯೂಹ'ಗಳಲ್ಲಿ ರವಿಚಂದ್ರನ್ ಸಣ್ಣ ಪಾತ್ರಗಳಲ್ಲಿ ಕಾಣಿಸಿಕೊಂಡಿದ್ದರು. ಈ ಎರಡು ಚಿತ್ರಗಳಲ್ಲಿ ಆದರಲ್ಲೂ ವಿಶೇಷವಾಗಿ 'ಖದೀಮ ಕಳ್ಳರು'ನಲ್ಲಿ ಹಂತಕನ ಪಾತ್ರದಲ್ಲಿ ಕಾಣಿಸಿಕೊಂಡರು. ಸಾಹಸದ ಜೊತೆಗೆ ಒಂದು ಕಥೆ ಕೂಡ ಹದವಾಗಿ ಬೆರೆತ 'ಚಕ್ರವ್ಯೂಹ'ದ ಅದ್ಭುತ ಯಶಸ್ಸು ಹಾಗೂ ಗಳಿಕೆ ಯುವಕ ರವಿಚಂದ್ರನ್‌ರಲ್ಲಿ ಮಹತ್ವಾಕಾಂಕ್ಷೆಯ ಸೆಲೆಗಳನ್ನೇ ಸೃಷ್ಟಿಸಿತು. ಯೌವ್ವನದ ಹುಚ್ಚುಗಳು, ದಟ್ಟವಾದ ಬಣ್ಣಗಳು, ದೃಶ್ಯ ವಿಸ್ತಾರ, ಪ್ರೇಮದ ತೀವ್ರತೆ ಇವನ್ನೆಲ್ಲ ವೈಭವೀಕರಿಸುವ ತಾಂತ್ರಿಕ ಸಾಧ್ಯತೆಗಳ ಬಗ್ಗೆ ರವಿಚಂದ್ರನ್ ತೀವ್ರವಾಗಿ, ಗಂಭೀರವಾಗಿ ಇವೆರಡು ಚಿತ್ರಗಳ ನಿರ್ಮಾಣದಲ್ಲಿ ತೊಡಗಿಕೊಂಡಿದ್ದಾಗಲೇ ಯೋಚಿಸುತ್ತಿದ್ದರೆನಿಸುತ್ತದೆ. ಮುಂದೆ ನಿರ್ಮಾಣವಾದ 'ಪ್ರೇಮಲೋಕ' ಚಿತ್ರದಲ್ಲಿ ಏಕತ್ರವಾಗಿ ವಿಜೃಂಭಿಸಿದ ದೃಶ್ಯವೈಭವ ಈ ಚಿತ್ರಗಳಲ್ಲೆಲ್ಲಾ ಅಲ್ಲಲ್ಲಿ ತುಣುಕು ತುಣುಕುಗಳಾಗಿ ಚೆಲ್ಲಿಕೊಂಡಿರುವುದು ಕಾಣುತ್ತದೆ. ಆ ದಿನಗಳಲ್ಲಿ ಅವರು ಚಿತ್ರದ ಸುದ್ದಿ ಹಾಗೂ ಸ್ಥಿರ ಚಿತ್ರಗಳ ಹಿಂದೆ ಬರೆದು ಕಳುಹಿಸುತ್ತಿದ್ದ ಅವರ ಹೆಸರು 'ರವಿ ರಾಜ್'.

'ಭಕ್ತ ಜ್ಞಾನದೇವ' 'ಭಕ್ತ ಸಿರಿಯಾಳ'ದ ಯಶಸ್ಸಿನ ಹಿಂದೆ ಅದೇ ಜಾಡಿನಲ್ಲಿ ಸಿದ್ಧವಾದ ಚಿತ್ರ. ಹುಣಸೂರು ಕೃಷ್ಣಮೂರ್ತಿಗಳು ಇದ್ದರೇನೇ ಇಂಥ ಪೌರಾಣಿಕ ಚಿತ್ರಗಳಿಗೆ ಅಧಿಕೃತತೆ. ಅವರು ನಿರ್ದೇಶಿಸಿ, ಸಾಹಿತ್ಯ ನಿರ್ವಹಿಸಿದರೆ ಯಶಸ್ಸು ಗಟ್ಟಿ ಎಂಬ ನಂಬಿಕೆ ಉದ್ಯಮದಲ್ಲಿ ಬಂದುಬಿಟ್ಟಿತ್ತು. ಕೆ.ಸಿ.ಎನ್. ಸಂಸ್ಥೆಯ ಚಂದ್ರಶೇಖರ್ ಆ ಹೊತ್ತಿಗೆ ತಂದೆಯಂತೆಯೇ ಪ್ರತಿಷ್ಠಿತ ನಿರ್ಮಾಪಕ-ವಿತರಕ ಎಂದು ಹೆಸರಾದವರು. ಅದಾಗಲೇ ಅದ್ದೂರಿ ಚಿತ್ರಗಳಾದ 'ಹುಲಿಯ ಹಾಲಿನ ಮೇವು', 'ಬಬ್ರುವಾಹನ' ತೆರೆಗಿತ್ತ ಕೀರ್ತಿಯೂ ಇತ್ತು. ಅತಿ ಅಲ್ಲದ ಆದರೆ ಶ್ರೀಮಂತಿಕೆಯಲ್ಲಿ ಬಡವಾಯಿತು ಅನ್ನಿಸದ ಹಾಗೆ ಒಂದು ಹದವಾದ ಲೆಕ್ಕದಲ್ಲಿ ಈ ಪೌರಾಣಿಕ ವಸ್ತುವನ್ನು ಕೈಗೆತ್ತಿಕೊಂಡು ನಿರ್ಮಿಸಿದರು. ಎನ್.ಆರ್.ಕೆ.ಮೂರ್ತಿ ಛಾಯಾಗ್ರಹಣಕ್ಕೆ ಎಣೆಯಿಲ್ಲದ ಅವಕಾಶವಿತ್ತು. ಬಹಳ ಹಿಂದೆ ಮಹಾರಾಷ್ಟ್ರದ ಪ್ರಭಾತ್ ಸಂಸ್ಥೆ ಇದೇ ವಸ್ತುವನ್ನು ತೆರೆಗೆ ತಂದು ಕಪ್ಪು ಬಿಳುಪಿನಲ್ಲೇ ಗೋಡೆಯೇ ಎದ್ದು ಬರುವ ದೃಶ್ಯ ತೋರಿದಾಗ ಪ್ರೇಕ್ಷಕ ನಿಬ್ಬೆರಗಾಗಿದ್ದ. ಇನ್ನು ಆಧುನಿಕ ಕಾಲದ ಜ್ಞಾನದೇವದಲ್ಲಿ ಚಮತ್ಕಾರಗಳಿಗೆ ಕಡಿಮೆಯೆ. ಜಿ.ಕೆ.ವೆಂಕಟೇಶ್ ಮಧುರವಾದ ಸಂಗೀತ ಕೊಟ್ಟರು. 'ಪ್ರೀತಿ ಬನದ ಹೂವುಗಳೇ....' ಹಾಡು ಇಂಪಾಗಿತ್ತು. ಉಡುಪಿ ಜಯರಾಂ ಆ ದಿನಗಳಲ್ಲಿ ಅನೇಕ ಸಂದರ್ಶನಗಳಲ್ಲಿ ನೃತ್ಯ ಸಂಯೋಜಿಸಲು ಮನಸ್ಸು ಉಕ್ಕುವಂಥ ಸಂಗೀತವಿಂದಿದ್ದರು. ಪುಟಾಣಿಗಳಾದ ರೇಖಾ, ಸಂಜಯ್, ರಾಜೇಶ್, ಹೇಮಮಾಲಿನಿ ಮುಖ್ಯ ಪಾತ್ರದಲ್ಲಿದ್ದರು. ಚಿತ್ರದಲ್ಲಿ ಈ ಬಾಲನಟರದೇ ಮೇಲುಗೈ. ರಾಜಾನಂದ್,

'ಮುಳ್ಳಿನ ಗುಲಾಬಿ' ನವದುರ್ಗ ಪ್ರೊಡಕ್ಷನ್ಸ್ ಲಾಂಛನದಲ್ಲಿ ತೆರೆಗೆ ಬಂದ ಚಿತ್ರ. ಎಂ.ಡಿ.ಸುಂದರ್ ಅವರ ವಿಶಿಷ್ಟವಾದ ಕಥೆಯಿತ್ತು. ವಿಜಯಾರೆಡ್ಡಿ (ವಿಜಯ್) ನಿರ್ದೇಶನದ ಚಿತ್ರ. ಅನಂತ್‌ನಾಗ್, ಆರತಿ ಮುಖ್ಯ ಭೂಮಿಕೆಯಲ್ಲಿದ್ದರು. 'ಈ ಗುಲಾಬಿಯು ನಿನಗಾಗಿ...' ಹಾಡು ಹಿತವಾಗಿತ್ತು.

'ಮುತ್ತಿನಂಥ ಅತ್ತಿಗೆ' ಅಜಂತಾ ಕಂಬೈನ್ಸ್‌ನ ಎ.ಆರ್.ರಾಜು ನಿರ್ಮಿಸಿದ ಚಿತ್ರ. ರಾಜು ಚಿತ್ರ ನಿರ್ಮಾಣ ಎಂದರೆ ಅವರದೇ ಆದ ಕಥಾ ವಿಭಾಗವಿರುತ್ತದೆ. ಚಿತ್ರ ಪ್ರಾರಂಭವಾಗಿ ತೆರೆ ಕಾಣುವವರೆಗೆ ಯೋಜಿತ ಅಂಶಗಳು ಗೆರೆ ದಾಟುವುದಿಲ್ಲ. ಆನಂತರವೂ ಚಿತ್ರವನ್ನು ಪ್ರಶಸ್ತಿಗೆ ಕಳಿಸುವುದರಿಂದ ಮೊದಲುಗೊಂಡು ಎಲ್ಲ ಹೊಣೆ ಅವರ ನಿರ್ಮಾಣದ ಚಿತ್ರಗಳು ಎಂತಲೇ ಅಲ್ಲ, ಅವರು ವಿತರಣೆ ಮಾಡುವ ಚಿತ್ರಗಳ ಬಗ್ಗೆಯೂ ಅಷ್ಟೇ ಆಸ್ಥೆ ವಹಿಸುತ್ತಾರೆ. 'ಮುತ್ತಿನಂಥ ಅತ್ತಿಗೆ' ಪ್ರೇಮಾಲಯ ಲಾಂಛನದಲ್ಲಿ ಸಿದ್ಧವಾಯಿತು. ಎ.ಆರ್.ರಾಜು, ಎ.ಎಲ್.ಶ್ರೀನಿವಾಸಮೂರ್ತಿ



(ಚಿತ್ರ ೪೫) 'ಮುತ್ತಿನಂಥ ಅತ್ತಿಗೆ' ಚಿತ್ರದಲ್ಲಿ ಕೆ.ವಿಜಯ, ಜೈಜಗದೀಶ್ ಮತ್ತು ಅಶೋಕ್

ನಿರ್ಮಾಪಕರು. ಈ ಚಿತ್ರಕ್ಕೆ ಮೂಲ ತೆಲುಗಿನಿಂದ ಬಂದದ್ದು. ಜಯಂತಿಯವರೇ ತೆಲುಗಿನಲ್ಲೂ ನಟಿಸಿದ್ದರು. ಕನ್ನಡದಲ್ಲೂ ಆಕೆಯೇ ನಿರ್ವಹಿಸಿದರು. ಚಿತ್ರಕ್ಕೆ ಸಾಹಿತ್ಯ ನಿರ್ವಹಿಸಿದವರು ಕುಣಿಗಲ್ ನಾಗಭೂಷಣ್. ಆ ದಿನಗಳಲ್ಲಿ ಉದಯಶಂಕರ್ ಸಿಗದಿದ್ದರೆ ಎಸ್.ಎಸ್.ರಾವ್ ಎನ್ನುತ್ತಿದ್ದರು. ಕುಣಿಗಲ್ ನಾಗಭೂಷಣ್ ಅನಂತರ ಹೆಚ್ಚಾಗಿ ಕೇಳಿ ಬಂದ ಹೆಸರು. ಪ್ರಾರಂಭದಲ್ಲಿ ಅವರಿಗೆ ಅಧಿಕವಾಗಿ ಅವಕಾಶವಾದದ್ದು ಪುನರವತರಣಿಕೆ ಚಿತ್ರಗಳಲ್ಲೇ. ಇಂಥ ಕಡೆ ತಮ್ಮ ಸೃಜನಶೀಲತೆಗೆ ಅವಕಾಶವಿಲ್ಲವೆಂಬ ಕೊರಗೂ ಅವರನ್ನು ಕಾಡಿದ್ದುಂಟು. 'ಮುತ್ತಿನಂಥ ಅತ್ತಿಗೆ' ಚಿತ್ರಕ್ಕೆ ಗಿರಿಬಾಬು ನಿರ್ದೇಶಕರು. ಅವರ ಖಾಯಂ ಛಾಯಾಗ್ರಾಹಕ ನಾರಾಯಣ ಅಯ್ಯಂಗಾರ್ ಇದ್ದರು. ರಮೇಶ್‌ನಾಯ್ಡು ಅವರ ಸಂಗೀತ. ತೆಲುಗಿನ ಪುನರವತರಣಿಕೆಯಾದ್ದರಿಂದ ಗೀತೆಗಳೂ ಹಾಗೆಯೇ ಇದ್ದವು. ಚಿತ್ರದಲ್ಲಿ ಅಶೋಕ್, ಶ್ರೀನಿವಾಸಮೂರ್ತಿ, ಜೈಜಗದೀಶ್ ಮೂವರು ಸೋದರರಾಗಿ ಪಾತ್ರ ವಹಿಸಿದ್ದರು. ಜಯಂತಿ ಅವರೊಂದಿಗೆ ಜಯಮಾಲಾ, ಕೆ.ವಿಜಯ ಇದ್ದರು. ಧೀರೇಂದ್ರಗೋಪಾಲ್‌ಗೆ ವಿಶೇಷ ಪಾತ್ರ. ವಜ್ರಮುನಿ, ಪ್ರಭಾಕರ್, ದಿನೇಶ್, ಚೇತನ್ ರಾಮರಾವ್ ಜೊತೆಗೆ ಮಾ।ಮಂಜುನಾಥ್ ಮತ್ತು ಬೇಬಿ ರೇಖಾ ಇದ್ದರು.



(ಚಿತ್ರ ೪೬) 'ಕಳಸಾಪುರದ ಹುಡುಗರು' ಚಿತ್ರದಲ್ಲಿ ರಾಜಾಕಾಳೈ, ಮಂಜುನಾಥ್, ಮಾ। ಪಾಂಡು, ರಾಧಾ, ಮಾ। ಜಯಸಿಂಹ ಮತ್ತು ಸೋಮಶೇಖರ್

'ಅದೃಷ್ಟವಂತ' ದ್ವಾರಕೀಶ್ ನಾಯಕನಟನಾಗಿ ಅಭಿನಯಿಸಿದ ವಿಶೇಷ ಬಿಟ್ಟರೆ ಎಲ್ಲ ಹೊರಗಿನವರೇ ಇದ್ದ ಚಿತ್ರ. ಯಶಸ್ವಿಯೂ ಆಗಲಿಲ್ಲ. ಮುಖ್ಯವಾಗಿ ಗೋಕಾಕ್ ಚಳವಳಿಯಲ್ಲಿ ಭಾಗವಹಿಸಿ ಕನ್ನಡ ಕನ್ನಡ ಎನ್ನುತ್ತಿದ್ದವರ ಚಿತ್ರದಲ್ಲಿ ಕನ್ನಡ, ಕನ್ನಡದ ತಂತ್ರಜ್ಞರು, ಕಲಾವಿದರು ಇಲ್ಲವಲ್ಲ ಎಂಬ ಪ್ರಶ್ನೆಯಂತೂ ಇತ್ತು.

'ಬೆಂಕಿ ಚೆಂಡು' ಪ್ರೀಮಿಯರ್ ಸ್ಟುಡಿಯೋದ ಕಾರ್ಮಿಕರೆಲ್ಲ ಸೇರಿ ನಿರ್ಮಿಸಿದ ಚಿತ್ರ. 'ಪ್ರೀಮಿಯರ್ ಫಿಲಂ ಕಾರ್ಪೋರೇಷನ್' ಲಾಂಛನದಲ್ಲಿ ತೆರೆಗೆ ತಂದರು. ಎಚ್.ವಿ.ಸುಬ್ಬರಾವ್, ದೈವೀಶಕ್ತಿ ಸೇರಿಸಿ, ಚಮತ್ಕಾರ ತರಬಲ್ಲ ಕಥೆ ಬರೆದರು. ಕಾರ್ಮಿಕರ ಪ್ರಯತ್ನವಾದ್ದರಿಂದ ಎಲ್ಲರ ಬೆಂಬಲ-ಪ್ರೀತಿ ಈ ಚಿತ್ರದ ಹಿಂದೆ ಕೆಲಸ ಮಾಡಿತ್ತು. ಎ.ಟಿ.ರಘು ನಿರ್ದೇಶನದಲ್ಲಿ ಇತ್ತ ಪುರಾಣವಲ್ಲ, ಜನಪದವಲ್ಲ ಅದೊಂದು ಮಿಶ್ರಧಾಟಿಯ ಕಥೆಯನ್ನು ಮಿಶ್ರಧಾಟಿಯಲ್ಲೇ ನಿರೂಪಿಸಿದರು ರಘು. ಕಾಳಿಕಾದೇವಿಯ ಕತ್ತಿಯನ್ನು ತಂದು ದುಷ್ಟನನ್ನು ಸಂಹರಿಸಿ, ಅಂಥ ಭ್ರಷ್ಟರು, ಅನ್ಯಾಯಕಾರರನ್ನೆಲ್ಲ ಸದೆಬಡಿದು ಕಾಡಿನಲ್ಲಿರುವ ಕಾಳಿಕಾ ಮಾತೆಗೆ ಕತ್ತಿ ಒಂತಿರುಗಿಸುವ ಕಥೆ. ಕಲಾವಿದ ಶಂಕರ್‌ನಾಗ್‌ಗೆ ಇದೊಂದು ಮೋಜು, ಲೀಲಾಜಾಲವಾಗಿ ಅಭಿನಯಿಸಲು ಸಾಧ್ಯವಾಗುವಂಥದ್ದು. ಕುಲಶೇಖರ್ ಛಾಯಾಗ್ರಹಣಕ್ಕೆ, ಸುಂದರಂ ಕಲಾನಿರ್ದೇಶನಕ್ಕೆ ಸಾಕಷ್ಟು ಅವಕಾಶವಿದ್ದ ಚಿತ್ರ.

ಸುಬ್ಬರಾಯರ ಕಥೆ ಎಂದ ಮೇಲೆ ಕಾಡು, ಅಲ್ಲಿಯ ಜನ, ಅದಕ್ಕೆ ಹೊಂದುವ ಹಾಡು, ನೃತ್ಯ ಇರಲೇಬೇಕು. ಉಡುಪಿ ಜಯರಾಂ ಸಮೂಹ ನೃತ್ಯ ಸಂಯೋಜಿಸುವ ಸಡಗರಕ್ಕೆ ಬೇಕಾದಷ್ಟು ಅವಕಾಶವಿತ್ತು.

'ಕಾರ್ಮಿಕ ಕಳ್ಳನಲ್ಲ' ಎ.ಎಲ್.ಅಬ್ಬಾಯಿನಾಯ್ಡು ಮಧು ಆರ್ಟ್ ಫಿಲಂಸ್ ಮೂಲಕ ತೆರೆಗೆ ತಂದ ಚಿತ್ರ. ಮೂಲತಃ ಕಾರ್ಮಿಕರಾದ ಅಬ್ಬಾಯಿನಾಯ್ಡು ಅವರಿಗೆ ಕಾರ್ಮಿಕರ ಸಮಸ್ಯೆ ಕುರಿತ ಕಥೆ ಬಲು ಪ್ರಿಯವಾದ ಸಂಗತಿ. ಎಂ.ಡಿ.ಸುಂದರ್ ಬಳಿ ಚರ್ಚೆ ಮಾಡಿ ಕಥೆ-ಚಿತ್ರಕಥೆ ಸಿದ್ಧಮಾಡಿದರು. ವಿಷ್ಣುವರ್ಧನ್-ಶಂಕರ್‌ನಾಗ್ ಅಣ್ಣ-ತಮ್ಮಂದಿರಾಗಿ ಅಭಿನಯಿಸಿದ್ದ ಚಿತ್ರ. ಅಣ್ಣ ಕಾರ್ಮಿಕ, ಕಷ್ಟಪಟ್ಟು ದುಡಿದು ತಮ್ಮನನ್ನು ಮೇಲೆ ತಂದ. ಅಂಥ ಅಣ್ಣನೇ 'ಕಳ್ಳ'ನೆಂಬ ಆಪಾದನೆಗೆ ಸಿಕ್ಕು ತತ್ತರಿಸುವ ಪ್ರಸಂಗ. ಕಾರ್ಮಿಕರು ಶ್ರಮಿಕರೇ ವಿನಾ ಅವರೆಂದೂ 'ಕಳ್ಳ'ರಾಗುವುದೇ ಸಾಧ್ಯವಿಲ್ಲ ಎಂಬ ನಿಲುವು ತಾಳಿದ್ದರು ಅಬ್ಬಾಯಿ. ಅದನ್ನೇ ಮತ್ತಷ್ಟು ಗಟ್ಟಿಯಾಗಿ ಚಿತ್ರದಲ್ಲಿ ಹೇಳಿದರು. ಜಿ.ಕೆ.ವೆಂಕಟೇಶ್ ಸಂಗೀತದಲ್ಲಿ ಮಧುರವಾದ ಗೀತೆಗಳಿದ್ದವು. ಚಿತ್ರ ಭರ್ಜರಿಯಾಗಿ ಹೋಗಲಿಲ್ಲ. ಆದರೂ ಅದರ ಹಿಂದಿರುವ ಸದಾಶಯಕ್ಕಾಗಿ ಅಬ್ಬಾಯಿಯವರ ಶ್ರಮಕ್ಕಾಗಿ ಮುಖ್ಯವೆಂದು ಪರಿಗಣಿಸಬೇಕು.

'ಕಳಸಾಪುರದ ಹುಡುಗರು' ಆರ್.ಸುಶೀಲಾದೇವಿ ನಿರ್ಮಿಸಿದ ಚಿತ್ರ. ಎ.ಎಲ್.ಆಚಾರ್ಯರೊಂದಿಗೆ ಗುರುದಾಸ್ ಅವರೂ ಸೇರಿ ನಿರ್ದೇಶಿಸಿದ್ದ ಚಿತ್ರ. ಜನಪದ ಸಾಹಿತ್ಯ ಸಂಗ್ರಾಹಕ, ಬರಹಗಾರ ಮತಿಘಟ್ಟ ಕೃಷ್ಣಮೂರ್ತಿಗಳ ಕಥೆಯನ್ನು ಚಿತ್ರನಾಟಕವಾಗಿಸಿದವರು ಕಮೆಡಿಯನ್ ಗುಗ್ಗು. ಎಂ.ರಂಗರಾವ್ ಸಂಗೀತ ನಿರ್ದೇಶನದಲ್ಲಿ ದೊಡ್ಡರಂಗೇಗೌಡರ ಗೀತೆಗಳು ಮತ್ತೆ ಮತ್ತೆ ನೆನೆಯುವಷ್ಟು ಸೊಗಸಾಗಿ ಮೂಡಿ ಬಂದಿದ್ದವು. ಗ್ರಾಮದ ತುಂಟ, ಜವಾಬ್ದಾರಿರಹಿತ ಮಕ್ಕಳ ಮನಃಪರಿವರ್ತನೆಯಾಗಿ ಗ್ರಾಮೋದ್ಧಾರದ ಕೆಲಸಗಳಲ್ಲಿ ತೊಡಗಿ ಇತರರಿಗೆ ಮಾದರಿಯಾಗುವಂತೆ ಬದುಕಿದ ರೀತಿಯನ್ನು ಹೇಳಲಾಗಿತ್ತು. ಬಹುತೇಕ ಅತಿ ಆದರ್ಶ, ಬೋಧನೆ ಅನ್ನಿಸಿದರೂ ಇಡೀ ತಂಡದಲ್ಲಿದ್ದ ಕಷ್ಟಗಳನ್ನು ಮೀರಿ ನಿಂತ ಚಿತ್ರ ಮಾಡುವ ಉತ್ಸಾಹ ನಿಜಕ್ಕೂ ಪ್ರಶಂಸನೀಯ.

'ಮಾವ ಸೊಸೆ ಸವಾಲ್' ಸೆಲ್ವಂ ಅವರ ನಿರ್ಮಾಣ. ಅಮೃತಂ ನಿರ್ದೇಶಿಸಿದ್ದರು. (ಮುಂದೆ ಅಮೃತಂ ಅವರು ಮಂಜುಳಾ ಅವರನ್ನು ಮದುವೆ ಆದರು) ಅಂಬರೀಷ್, ಮಂಜುಳ, ಆರತಿ ಮೊದಲಾದವರು ಪಾತ್ರವಹಿಸಿದ್ದರು. ಉದಯಕುಮಾರ್ ವಿಭಿನ್ನ ರೀತಿಯಲ್ಲಿ ಮಾವನಾಗಿ ರಂಜಿಸಿದ್ದರು.

'ಬೂದಿ ಮುಚ್ಚಿದ ಕೆಂಡ' ಸಪ್ತಗಿರಿ ಕ್ರಿಯೇಶನ್ಸ್ ಲಾಂಛನದಲ್ಲಿ ಆರ್.ಪ್ರಭಾಕರನಾಯ್ಡು, ರಂಗಸ್ವಾಮಿ, ಬಾಸಿರೆಡ್ಡಿ ನಿರ್ಮಿಸಿದ ಚಿತ್ರ. ಜಿ.ಶಿವಮೂರ್ತಿ ನಿರ್ದೇಶಿಸಿದ್ದರು. ಶ್ರೀನಾಥ್ ಅಭಿನಯವಿತ್ತು. ಹೊಸ ತಂಡವಾದ್ದರಿಂದ ಸಹಜವಾಗಿಯೇ ಕೊಂಚ 'ಬಡತನ' ಇತ್ತು. ಆದರೂ ಕಲಾವಿದರು - ಚಂದ್ರಶೇಖರ್, ಶಕ್ತಿಪ್ರಸಾದ್, ಪ್ರಭಾಕರ್, ಬ್ರಹ್ಮಾವರ್, ರೂಪಾದೇವಿ ಮೊದಲಾದವರು - ಸಹಕರಿಸಿದ್ದರು. ಕೊಲೆಯ ಸುತ್ತ ಇದ್ದ ನಿಗೂಢಗಳನ್ನು ಬಿಡಿಸುತ್ತ ವಿಚಿತ್ರ ತಿರುವುಗಳನ್ನು ಪಡೆಯುವ ಕಥೆ. ಕುತೂಹಲವನ್ನು ಉಳಿಸಿಕೊಳ್ಳುವಷ್ಟು ಪ್ರಾಮಾಣಿಕ ಪ್ರಯತ್ನವಂತೂ ಇತ್ತು.

'ಸ್ನೇಹದ ಸಂಕೋಲೆ' 'ಟೈ' ರಾಜಗೋಪಾಲ್ ಅವರಿಗಾಗಿ ಕಾಶಿಲಿಂಗಂ ನಿರ್ದೇಶಿಸಿದರು. ಶ್ರೀನಾಥ್, ಅಂಬರೀಷ್, ದ್ವಾರಕೀಶ್, ವಜ್ರಮುನಿ, ಮಂಜುಳಾ ಮೊದಲಾದವರ ಭಾರಿ ತಾರಾಗಣವಿತ್ತು. ಆರ್.ಎನ್.ಜಯಗೋಪಾಲ್ ಚಿತ್ರಕಥೆ, ಸಂಭಾಷಣೆ, ಗೀತರಚನೆಯನ್ನು ನಿರ್ವಹಿಸಿದ್ದರು. ಹಾಡುಗಳು ಗುನುಗುವಂತಿದ್ದವು. ಜಿ.ಕೆ.ವೆಂಕಟೇಶ್ ಹಿನ್ನೆಲೆಯನ್ನು ಚೆನ್ನಾಗಿ ನಿರ್ವಹಿಸಿದ್ದರು. ಚಿತ್ರದ ಬಗ್ಗೆ ಮುಖ್ಯವಾಗಿ ಹೇಳಬೇಕೆಂದರೆ ಎ.ಟಿ.ರಘು ಸಹನಿರ್ದೇಶಕರಾಗಿ ದುಡಿದರು.

'ಅಂತ' ಚಿತ್ರವಾದ ಮೇಲೆ ಬಂದ ಅಷ್ಟೇ ಮಹತ್ವದ ಚಿತ್ರ 'ಅಜಿತ್'. ಇದನ್ನು ಎಚ್.ಎನ್.ಮಾರುತಿಯವರು ವೇಣುಗೋಪಾಲ್ ಸಹಯೋಗದಲ್ಲಿ ನಿರ್ಮಿಸಿದ್ದರು. ಪೊಲೀಸ್ ಅಧಿಕಾರಿ ವಿಜಯ ಸಾಸನೂರರು ಬರೆದ ಕಾದಂಬರಿ ಆಧಾರ. ಕಥೆಯಲ್ಲಿ



(ಚಿತ್ರ ೪೭) 'ಅಜಿತ್' ಚಿತ್ರದಲ್ಲಿ ಅಂಬರೀಷ್ ಮತ್ತು ಜಯಮಾಲ

ಪೊಲೀಸ್ ಅಧಿಕಾರಿಯ ಪ್ರೀತಿ-ವಿಶ್ವಾಸಕ್ಕೆ ಮಾರುಹೋದ ಅಪರಾಧಿಗಳು ಮನಃಪರಿವರ್ತನೆಗೊಂಡು ಸಜ್ಜನರಾಗುವ ಅಂಶವಿದೆ. ಸ್ವಲ್ಪಮಟ್ಟಿಗೆ ಶಾಂತಾರಾಮರ 'ದೊ ಆಂಖೆ ಬಾರಾ ಹಾತ್'ನ ಛಾಯೆ ಇರಬಹುದಾದರೂ ಅದೇ ಪ್ರಧಾನವಲ್ಲ. ಪೊಲೀಸ್ ಅಧಿಕಾರಿಯ ಸಾಹಸಗಳು ಮುಖ್ಯ ಮತ್ತು ಇಲ್ಲಿ ವಿಶೇಷ ರೀತಿಯಲ್ಲಿ ಗೋಮುಖ ಧರಿಸಿದ ವ್ಯಾಘ್ರನಂತೆ ಎಲ್ಲರ ನಡುವೆ 'ಧರ್ಮಪಾಲ'ನಾಗಿದ್ದು ದೇಶದ್ರೋಹ ಮಾಡುವ ದುಷ್ಟನನ್ನು ಹಿಡಿಯುವುದೇ ಮುಖ್ಯ. ಅಂಥ ಪಾತ್ರದಲ್ಲಿ ಸುಂದರಕೃಷ್ಣ ಅರಸ್ ಪರಿಣಾಮಕಾರಿಯಾಗಿ ಅಭಿನಯಿಸಿದ್ದರು. ಈ ಹಿಂದೆಯೇ ನಿರ್ದೇಶಕ ರಾಜೇಂದ್ರಸಿಂಗ್ ಬಾಬು ಇಂಥ ಪಾತ್ರಕ್ಕೆ ಇಂಥದೇ ಮೈಕಟ್ಟು, ಮುಖ, ಮೇಕಪ್ ಎಂಬ ಸೂತ್ರವನ್ನು ಕೈಬಿಟ್ಟು ಹೊಸ ರೀತಿಯನ್ನು ತಂದಿದ್ದರು. ಈ ಮುನ್ನವೇ ಸುಂದರಕೃಷ್ಣ ಅರಸ್‌ರಂಥ ಪೋಷಕ ಪಾತ್ರದ ನಟರೇ 'ಖಳ'ರಾಗುವ ಸಾಧ್ಯತೆಯನ್ನು 'ನಾಗರಹೊಳೆ'ಯಲ್ಲಿ ತೋರಿಸಿ, ಪ್ರೇಕ್ಷಕರಿಗೆ ಅದನ್ನು ಆಪ್ತವಾಗಿಸಿದ್ದರು. ಮುಂದೆಯೂ ಅವರು ವಾಸುದೇವ ಗಿರಿಮಾಜಿಯವರನ್ನು ವಿಶಿಷ್ಟವಾಗಿ ಬಳಸಿಕೊಂಡದ್ದಾಗಲಿ, ವಜ್ರಮುನಿಯಂಥವರನ್ನು ಜೀವನದಲ್ಲಿ ಸದಾ ನೆನಪಿರುವಂಥ ಸೌಮ್ಯ ಪಾತ್ರದಲ್ಲಿ ತೋರಿಸಿದ್ದಾಗಲಿ ಅವರ ಪ್ರಯೋಗ ಮತ್ತು ಸಾಧನೆಯ ಯಶಸ್ಸು. 'ಅಜಿತ್' ಚಿತ್ರದಲ್ಲಿ ಸುಂದರಕೃಷ್ಣರು ಧರ್ಮಪಾಲನಾಗಿ ಕಂಡದ್ದೂ ಹಾಗೆಯೇ. ಚಿತ್ರದಲ್ಲಿ ಪ್ರಭಾಕರ್, ಜೈಜಗದೀಶ್, ಶಕ್ತಿಪ್ರಸಾದ್, ಮುಸುರಿ ಕೃಷ್ಣಮೂರ್ತಿ ಅವರಂತಹ ಘಟಾನುಘಟಿಗಳೇ ಇದ್ದರು. ಪಂಢರಿಬಾಯಿ ಹಾಗೂ 'ಅಂತ'ದಿಂದ ವಿಶಿಷ್ಟ ಖ್ಯಾತಿಗೆ ಪಾತ್ರರಾದ ಜಯಮಾಲಾ ಅವರೂ ಬಾಂಡ್ ಶೈಲಿಯಲ್ಲೇ ಅಭಿನಯಿಸಿದ್ದರು. ಪಂಢರಿಬಾಯಿ ಅವರನ್ನು ಸಾಹಸಿಯಾಗಿ ನೋಡಲು ಪ್ರೇಕ್ಷಕನಿಗೆ ಮುಜುಗರವಾಗಿತ್ತು. ಅಂಬರೀಷ್ ಮುಖ್ಯ ಪಾತ್ರದಲ್ಲಿ ಹೊಸ ಇಮೇಜನ್ನು ಮುಂದುವರೆಸಿದರು. ಚಿತ್ರದ ಸಂಭಾಷಣೆ, ಚಿತ್ರಕಥೆ ಎಚ್.ವಿ.ಸುಬ್ಬರಾವ್ ನಿರ್ವಹಿಸಿದ್ದರು. ಪಿ.ಎಸ್.ಪ್ರಕಾಶ್ ಅವರ ಅಪರೂಪವೆನಿಸುವ ಛಾಯಾಗ್ರಹಣವಿತ್ತು. ಸಾಹಸಮಯ ದೃಶ್ಯಗಳಲ್ಲಿ, ಹೊರಾಂಗಣದಲ್ಲಿ ಛಾಯಾಗ್ರಹಣ ಬಹು ಮೆಚ್ಚುಗೆ ಪಡೆಯಿತು. ಮುಂದೆ ಪ್ರಸಿದ್ಧ ನಿರ್ದೇಶಕರಾಗಿ ಖ್ಯಾತರಾದ ಡಿ.ರಾಜೇಂದ್ರಬಾಬು ಅವರು ಈ ಚಿತ್ರದ ನಿರ್ದೇಶಕ ವಿ.ಸೋಮಶೇಖರ್ ಅವರಿಗೆ ಸಹಾಯಕ ನಿರ್ದೇಶಕರು. ಪರಂಪರೆಯನ್ನು ಮುಂದುವರಿಸಿದ ಚಿತ್ರವಾಗಿ ತುಂಬ ಮುಖ್ಯವಾಗುತ್ತದೆ 'ಅಜಿತ್'. ನಿರ್ದೇಶಕ ಸೋಮಶೇಖರ್ ಕೂಡಾ ಇಲ್ಲಿಂದಾಚೆಗೆ ಸಾಹಸ-ರಾಜಕೀಯ ಪ್ರಧಾನ ಚಿತ್ರಗಳ ಯಶಸ್ವಿ ನಿರ್ದೇಶಕರೆಂದೇ ಖ್ಯಾತರಾದರು.

'ಕಂಪನ' ಚಿತ್ರವನ್ನು ಎಲ್.ಕೆ.ಮುನಿಸ್ವಾಮಿ, ಡಿ.ಕೆ.ಚಂದ್ರಶೇಖರ್ ಅವರಿಗಾಗಿ ವಿ.ರಾಜನ್ ನಿರ್ದೇಶಿಸಿದರು. ಪಿ.ಎಸ್.ಶ್ರೀನಿವಾಸ್ ನಿರ್ದೇಶನದ 'ಸ್ಪಂದನ'ದ ನಾಯಕಿ ಅಪರ್ಣಾ ನಾರಂಗ್ ಅಭಿನಯಿಸಿದ್ದೊಂದೇ ವಿಶೇಷ. ಎಲ್ಲ ಹೊಸಬರ ಪಾರುಪತ್ಯವಾಗಿ ಚಿತ್ರ ಸದ್ದೇ ಮಾಡದೇ ಕರಗಿತು. ಚಿತ್ರ ನಿರ್ಮಾಣ ಸುಲಭ ಎಂದು ಓಡಿ ಬಂದ ಹಲವರ ಸಾಲಿಗೆ ಇವರೂ ಸೇರಿ ಹೋದರು.

ಜೋಸೈಮನ್ ನಿರ್ದೇಶನದ 'ಊರಿಗೆ ಉಪಕಾರಿ' ಚಿತ್ರವನ್ನು ಎ.ರಾಧಾಕೃಷ್ಣರಾಜು ಮತ್ತು ವಿ.ಎಲ್.ಶ್ರೀನಿವಾಸಮೂರ್ತಿ ನಿರ್ಮಿಸಿದರು. ದ್ವಾರಕೀಶ್-ಜ್ಯೋತಿಲಕ್ಷ್ಮೀ ಜೋಡಿ ಮತ್ತೆ ನಟಿಸಿದ್ದು ವಿಶೇಷ. ಈ ಚಿತ್ರದಲ್ಲಿ ಜೋಸೈಮನ್ ಸಂಯೋಜಿಸಿದ ಸಾಹಸ ದೃಶ್ಯವೊಂದು ವಿಶೇಷವಾಗಿತ್ತು. ಉಳಿದಂತೆ ಗ್ರಾಮೀಣ ಹಿನ್ನೆಲೆಯ ಯುವಕ ನ್ಯಾಯಕ್ಕಾಗಿ, ಊರ ಒಳಿತಿಗಾಗಿ ತನ್ನ ಬದುಕನ್ನೆಲ್ಲ ತೇದುಕೊಳ್ಳುವ ಆದರ್ಶಮಯತೆ ಇತ್ತು. ವಿಷ್ಣುವರ್ಧನ್ ಮುಗ್ಧತೆ, ಸಾಧುತ್ವ, ಸಾಹಸ ಎಲ್ಲವನ್ನೂ ಸಹನೀಯವಾಗಿ ಅಭಿನೀತಗೊಳಿಸಿದ್ದರು. ನಾಯಕಿ ಪದ್ಮಪ್ರಿಯಾ ಕೊಂಚ ತರಲೆಯಂಥ ಪಾತ್ರದಲ್ಲಿ ಚೆನ್ನಾಗಿಯೇ ಅಭಿನಯ ನೀಡಿದ್ದರು. ಗ್ರಾಮದಿಂದ ಊರಿಗೆ ಹೋದ ತರುಣನಿಗೆ ಉದ್ಯೋಗ ಸಿಗುವ ಪ್ರಸಂಗ ಮಾತ್ರ ವಿಶಿಷ್ಟವಾದದ್ದು. ಮಾಲೀಕನಿಗೆ ಪ್ರಚೋದಕ ಕಥೆ ಕೇಳುವ ಚಪಲ. ಅಂಥ ಕಥೆ ಅದೂ ಅದೇ ತಾನೇ ಮದುವೆಯಾಗಿ ಬಂದ ಹುಡುಗನ ಮೊದಲ ರಾತ್ರಿಯ ಕಥೆ ಹೇಳಲು ಒತ್ತಾಯ, ಹೇಳಿದರೆ ಮಾತ್ರ ಕೆಲಸ. ಇಂಥ ವಿಚಿತ್ರ ಪ್ರಸಂಗಗಳು, ಅದರಿಂದಾಗಿ ಏರ್ಪಡುವ ಸಮಸ್ಯೆಗಳು ಸೊಗಸಾಗಿ ಚಿತ್ರಿತವಾಗಿವೆ. ಗ್ರಾಮದೇವತೆಯ ಭಾರಿ ಗಾತ್ರದ ಬೊಂಬೆ-ಮೆರವಣಿಗೆ, ಗ್ರಾಮೀಣ ಜಾನಪದ ನೃತ್ಯ ವಿಶೇಷ ಇತ್ತು. ಭಾರಿ ತಾರಾಗಣವಿತ್ತು. ಗೌರವ ನಟರಾಗಿ ಪ್ರಭಾಕರ್ ಇದ್ದರು. ಮಗುವೊಂದು ಇವನೇ ತಂದೆ ಎಂದು ಸಾಧಿಸಿ ಗಂಡ-ಹೆಂಡಿರನ್ನು ಬೇರೆ ಮಾಡುವ ಪ್ರಸಂಗವಿದೆ. ಇಂಥವು ಹಲವು ಚಿತ್ರಗಳಲ್ಲಿ ಬಂದಿವೆ. ಕಥೆಯ ಬಗ್ಗೆ ಅಜಂತಾ ಕಥಾ ವಿಭಾಗ ಎಂದಿದ್ದರು. ಚಿತ್ರಕಥೆ ಮಾತ್ರ ಉಸೆಟ್ಟಿ ಲಕ್ಷ್ಮಣರಾವ್ ಅವರದ್ದು. ಮುಂದೆ ನಿರ್ದೇಶಕರಾಗಿ ಯಶಸ್ವಿ ಚಿತ್ರಗಳನ್ನಿತ್ತ ಎಸ್.ಉಮೇಶ್ ಸಹನಿರ್ದೇಶಕರಾಗಿದ್ದರು.

'ಜಿಮ್ಮಿಗಲ್ಲು' ನವನಿಧಿ ಚಿತ್ರ ಸಂಸ್ಥೆಯ ಲಕ್ಷ್ಮಣ್ ಅವರಿಗಾಗಿ ರವೀ ನಿರ್ದೇಶಿಸಿದ ಚಿತ್ರ. ಲಕ್ಷ್ಮಣ್ ಮಗಳು ಶಶಿರೇಖಾ ಈ ಚಿತ್ರದ ನಿರ್ಮಾಪಕಿ. ಇದು ಸಂಸ್ಥೆ ನಿರ್ಮಿಸಿದ ಎರಡನೆಯ ಚಿತ್ರ. ಒಳ್ಳೆಯ ಕಥೆಯನ್ನು ಚಿತ್ರಿಸುವ ಅಪೇಕ್ಷೆಯಿಂದ ತಡಕಾಡುತ್ತಲೇ ಇದ್ದ ರವೀ ಅವರಿಗೆ ಕಾಸರಗೋಡಿನ ಎಂ.ವ್ಯಾಸ ಅವರ ಕಥೆಯೊಂದು ಪ್ರಿಯವಾಗಿತ್ತು. ಆ ಹಾದಿಯಲ್ಲೇ ಅವರಿಗೆ ಪರಿಚಯವಾದ ವೇಣುಗೋಪಾಲ ಕಾಸರಗೋಡು ಅವರ ಅಪ್ರಕಟಿತ ಕಾದಂಬರಿಯೊಂದನ್ನು ಓದಿದರು. ಕೂಡಲೇ ಆ ಕಥಾವಸ್ತುವನ್ನು ಚಿತ್ರಿಸಲು ನವನಿಧಿ ಚಿತ್ರ ಮುಂದೆ ಬಂದಿತು. ಮಾರಾ ಮತ್ತು ಎಂ.ಡಿ.ಸುಂದರ್ ಚಿತ್ರಕಥೆ ಸಿದ್ಧ ಮಾಡಿದರು. ವಿಜಯಭಾಸ್ಕರ್ ಸಂಗೀತ ನಿರ್ದೇಶನದಲ್ಲಿ ವಾಣಿಜಯರಾಂ, ಬಾಲಸುಬ್ರಹ್ಮಣ್ಯಂ ಅಲ್ಲದೆ ನಾಯಕನಟ ವಿಷ್ಣುವರ್ಧನ್ ಕೂಡಾ ಒಂದು ಗೀತೆ ಹಾಡಿದ್ದರು. ಶ್ರೀಪ್ರಿಯಾ ವಿಶಿಷ್ಟ ಪಾತ್ರದಲ್ಲಿದ್ದರು. ಚಿತ್ರದ ಒಂದು ಸನ್ನಿವೇಶದಲ್ಲಿ ಜೈಲಿನಲ್ಲಿ ಖೈದಿಯನ್ನು ನೋಡಲು ಬರುವ ನ್ಯಾಯವಾದಿನಿ ಮಾತಿನ ಭರಾಟೆಯಲ್ಲಿ ಆಕೆಯ ಸರಿದ ಸೆರಗಿನ ಹಿಂದಿನ ವಕ್ಷಸ್ಥಳ.. ನಾಯಕನಟನ ಮನಸ್ಸನ್ನು ಪರಿವರ್ತಿಸುವ ಘಟ್ಟವಾಗುವುದು ಇತ್ಯಾದಿ ಇತ್ತು. ರವೀ ಅವರು ನೋಡಿದ್ದ ವಿದೇಶೀ ಚಿತ್ರವೊಂದರ ಒಂದು ಚಿತ್ರಿಕೆ ಇಂಥ ಸನ್ನಿವೇಶ ಸೃಷ್ಟಿಗೆ ಪ್ರೇರಣೆಯಾಗಿತ್ತು. ರವೀ ಅವರ



(ಚಿತ್ರ ೪೮) 'ಜಿಮ್ಮಿಗಲ್ಲು' ಚಿತ್ರದಲ್ಲಿ ಶ್ರೀಪ್ರಿಯ ಮತ್ತು ವಿಷ್ಣುವರ್ಧನ್



(ಚಿತ್ರ ೪೯) 'ನ್ಯಾಯ ಎಲ್ಲಿದೆ' ಚಿತ್ರದಲ್ಲಿ ಆರತಿ ಮತ್ತು ಶಂಕರ್‌ನಾಗ್

ಮಹತ್ವಾಕಾಂಕ್ಷೆಯ ಚಿತ್ರ ಇದು. ನಿರ್ಮಾಪಕರೂ ಧಾರಾಳಿ. ಆದರೂ ಚಿತ್ರ ಸೋರಗಿತು. ಶ್ರೀಪ್ರಿಯಾ ಅನಂತರವೂ ರವೀ ಅವರ ಚಿತ್ರಗಳಲ್ಲಿ ಅಭಿನಯಿಸುತ್ತಿದ್ದರು. ಮುಂದೊಮ್ಮೆ ಆಕೆಯೇ ಕನ್ನಡ ಚಿತ್ರ ನಿರ್ದೇಶಿಸಿದಾಗಲೂ ರವೀ ನೆರವಾದರು. ಒಮ್ಮೆ ಬೆಸೆದ ಸ್ನೇಹವನ್ನು ಕಡಿದುಕೊಳ್ಳದ ಪ್ರವೃತ್ತಿ ರವೀ ಅವರದು. ಚಿ.ಉದಯಶಂಕರ್ ಗೀತೆಗಳನ್ನು ಬರೆದಿದ್ದು, ಒಂದು ಗೀತೆ 'ತುತ್ತು ಅನ್ನ ತಿನ್ನೋಕೆ...' ನಾಯಕನಟ ವಿಷ್ಣುವರ್ಧನ್ ಹಾಡಿದ್ದಾರೆ. 'ಹಾಡು ಯಾವ ಹಾಡು....' ಹಿಂದಿನ ಕಾಲದ್ದು ಎಂಬ ಹಾಗೆ ಭಾಸವಾಗುತ್ತದೆ. ಸರಳ ರಚನೆ. 'ದೇವ ಮಂದಿರದಲ್ಲಿ...' ಎಂಬ ಗೀತೆ ಕೂಡಾ ಚೆನ್ನಾದ ಗೀತೆ. ವಿಜಯಭಾಸ್ಕರ್ ಸಂಗೀತ, ವಾಣಿಜಯರಾಂ ಹಾಡಿಕೆಯೆಂದರೆ ಏನೋ ವೈಶಿಷ್ಟ್ಯವಿದ್ದೇ ಇರುತ್ತದೆ. ತುಂಬು ಉತ್ಸಾಹ ಕಾಣುತ್ತದೆ. 'ವಯ್ಯಾರಿ ಮೊಗವ ನೋಡು, ವಯ್ಯಾರಿ ನಗುವ ನೋಡು.....' ನೃತ್ಯಕ್ಕೆ ಹೊಂದುವಂತೆ ಲಯ, ವಿನ್ಯಾಸ ಮಾಡಲಾದ ಗೀತೆ. ಮನಸ್ಸನ್ನು ಕುಣಿಸುತ್ತದೆ. ಇದರ ಹಿನ್ನೆಲೆಗೆ 'ಸಾಕಿ' ಮಾದರಿಯ ಚರಣವನ್ನು ವಾಣಿಜಯರಾಂ ಸೊಗಸಾಗಿ ಹಾಡಿದ್ದಾರೆ.

ವೈ.ಆರ್.ಅಶ್ವತ್ಥನಾರಾಯಣರಾವ್ ಅವರನ್ನು ಸಿ.ವಿ.ಎಲ್.ಶಾಸ್ತ್ರಿಗಳ ಆಪ್ತ ಮಿತ್ರನೆಂದೇ ಬಹಳ ಜನ ಗುರುತಿಸಿದ್ದುಂಟು. ಅಶ್ವತ್ಥನಾರಾಯಣ್ ಸ್ವತಂತ್ರವಾಗಿ ಚಿತ್ರಗಳನ್ನು ನಿರ್ಮಿಸಿದ್ದಾರೆ. ೨೦೦೦ನೇ ವರ್ಷದಲ್ಲೂ ಅವರು ತುಳು ಚಿತ್ರವೊಂದನ್ನು ನಿರ್ಮಿಸಿದರು. ಶಾಸ್ತ್ರಿಯವರೊಂದಿಗೆ ಪಾಲುದಾರರಾಗಿ ಚಿತ್ರ ನಿರ್ಮಿಸಿದ್ದೂ ಉಂಟು. ಅಶ್ವತ್ಥನಾರಾಯಣ್ ಬಹಳಷ್ಟು ಆಸ್ಥೆಯಿಂದ ಅದ್ದೂರಿಯಾಗಿ ನಿರ್ಮಿಸಿದ ಚಿತ್ರ 'ಹೆಣ್ಣು ಹುಲಿ'. ವಂಚನೆ, ಸೇಡು, ಪ್ರತೀಕಾರ ಇಂಥದೇ ವಸ್ತು. ಆದರೆ ಸ್ತ್ರೀಯೊಬ್ಬಳ ಸ್ವಾಭಿಮಾನ, ಸ್ವಸಂರಕ್ಷಣೆಗಾಗಿ ಎಂಥ ಸಾಹಸಕ್ಕೂ ಸೆಟೆದು ನಿಲ್ಲುವ ಗುಣಗಳನ್ನು ಎತ್ತಿ ಹಿಡಿಯಲಾಗಿತ್ತು. ಆಗಿನ ಮಲೆಯಾಳಿ ಚಿತ್ರಗಳ ಜನಪ್ರಿಯ ತಾರೆ ಶೀಲಾ ಅವರೇ ಪ್ರಧಾನ ಭೂಮಿಕೆಯಲ್ಲಿದ್ದರು. ಚಿತ್ರದಲ್ಲಿ ಕನ್ನಡದವರೇ ಕೆಲಸ ಮಾಡಿದ್ದರೂ ಕೇರಳದ ವಾಸನೆಯೇ ಹೆಚ್ಚಾಗಿ ಬರುತ್ತಿತ್ತು. ಕಥೆ, ಚಿತ್ರಕಥೆ, ನಿರ್ದೇಶನ ಮಾಡಿದ ಕೆ.ಜಿ.ರಾಜಶೇಖರ್ ಹೊಸಬರು. ಈ ಚಿತ್ರಕ್ಕೆ ಮುಂದೆ ಜನಪ್ರಿಯ ನಿರ್ದೇಶಕರೆಂದು ಪ್ರಸಿದ್ಧರಾದ ಸೋಮಶೇಖರ್ ಸಹನಿರ್ದೇಶನವಿತ್ತು. ಅಶ್ವತ್ಥನಾರಾಯಣ್ ನಿರ್ಮಾಪಕರಾದರು. ಸಹನಿರ್ಮಾಪಕರಾಗಿ ಸಿ.ವಿ.ಎಲ್.ಶಾಸ್ತ್ರಿಗಳ ಪತ್ನಿ ಶಾರದಾಶಾಸ್ತ್ರಿ ಅವರಿದ್ದರು. ಅವರ ಜೊತೆಗೆ ರುಕ್ಮಿಣಿರಾಮಚಂದ್ರ ಸಹನಿರ್ಮಾಪಕಿಯಾಗಿದ್ದರು. ಭಾರಿ ತಾರಾಗಣವೇ ಇತ್ತು.

'ನ್ಯಾಯ ಎಲ್ಲಿದೆ' ಒಂದು ಯಶಸ್ವಿ ರೀಮೇಕ್ ಚಿತ್ರ. ಹುಬ್ಬಳ್ಳಿಯಲ್ಲಿ ೨೫ ವಾರಗಳ ಸತತ ಪ್ರದರ್ಶನ ಕಂಡ ಈ ಚಿತ್ರದ ನಿರ್ಮಾಪಕರು ತಮ್ಮ ಚಿತ್ರದಲ್ಲಿ ಬೇರೆ ಚಿತ್ರದ ಹಾಡನ್ನು ಬಳಸಿದ್ದ ಕಾರಣಕ್ಕೆ ಕೋರ್ಟಿನ ಕಟಕಟೆಯಲ್ಲಿ ನಿಲ್ಲುವ ಪರಿಸ್ಥಿತಿ ಎದುರಾಯಿತು. ಅದರ ಹಿನ್ನೆಲೆ ಹೀಗಿದೆ. ಈ ಚಿತ್ರದಲ್ಲಿ ತಮ್ಮನೇ ಕೊಲೆಗಾರನೆಂದು ಇನ್ಸ್‌ಪೆಕ್ಟರ್ ಪಾತ್ರಧಾರಿಣಿ ಆರತಿಗೆ ತಿಳಿಯುತ್ತದೆ. ಆದರೆ ಅದನ್ನು ನಿರೂಪಿಸಲು ಅಗತ್ಯವಾದ ಸಾಕ್ಷ್ಯಾಧಾರಗಳು ಲಭ್ಯವಾಗುತ್ತಿರಲಿಲ್ಲ. ಸತ್ಯವನ್ನು ತಮ್ಮನ (ಶಂಕರ್‌ನಾಗ್) ಬಾಯಿಂದಲೇ ಹೊರಡಿಸಿ ಧ್ವನಿಮುದ್ರಿಸಿಕೊಳ್ಳುವ ತಂತ್ರ ಹೂಡುತ್ತಾಳೆ. ಆದರೆ ತಮ್ಮ ಅವಳ ತಂತ್ರಕ್ಕೆ ಪ್ರತಿತಂತ್ರ ಹೂಡಿರುತ್ತಾನೆ. ಕ್ಯಾಸೆಟ್ ಕೇಳಿದಾಗ ಅದರಲ್ಲಿ ಕೊಲೆಗಾರನ ಮಾತಿನ ಬದಲಿಗೆ ಎಷ್ಟು ಸಾರಿ ಹಾಕಿದರೂ 'ಸಂಪತ್ತಿಗೆ ಸವಾಲ್' ಚಿತ್ರದ 'ಯಾರೇ ಕೂಗಾಡಲಿ...' ಹಾಡೇ ಕೇಳಿಬರುತ್ತದೆ. ತಮ್ಮ ಚಿತ್ರದ ಹಾಡನ್ನು ಹೀಗೆ ಬಳಸಿರುವುದು ತಮ್ಮ ಹಕ್ಕುಗಳಿಗೆ ಭಂಗ ತಂದಿದೆ ಎಂದು ಚಿತ್ರದ ನಿರ್ಮಾಪಕರಾದ ದ್ವಾರಕಾನಾಥ್ ಚಿತ್ರವು ಬಿಡುಗಡೆಯಾಗುವುದಕ್ಕೆ ಮುನ್ನಾ ದಿನ ಕ್ರಿಮಿನಲ್ ಮೊಕದ್ದಮೆ ಹೂಡಿ 'ನ್ಯಾಯ ಎಲ್ಲಿದೆ' ಚಿತ್ರದ ಎಲ್ಲಾ ಪ್ರಿಂಟ್‌ಗಳನ್ನು ವಶಪಡಿಸಿಕೊಳ್ಳಲು ಆಜ್ಞೆ ಮಾಡುವಂತೆ ಕೋರಿದರು. ಆದರೆ ಅದಕ್ಕೊಪ್ಪದ ನ್ಯಾಯಾಧೀಶರು ಪ್ರತಿವಾದಿಗಳಿಗೆ ನೋಟೀಸನ್ನು ಮಾತ್ರ ಜಾರಿ ಮಾಡಿದರು. 'ನ್ಯಾಯ ಎಲ್ಲಿದೆ' ಚಿತ್ರದ ಪರವಾಗಿ ಹೆಸರಾಂತ ಕ್ರಿಮಿನಲ್ ಲಾಯರ್ ದೇವದಾಸ್ ವಾದ ಮಾಡಿದ್ದರು. ಈ ಚಿತ್ರದಲ್ಲಿರುವ ಹಾಸ್ಯ ಕಥೆಗೆ ಹೊಂದದಿದ್ದರೂ ಅತ್ಯಂತ ಗಮನ ಸಳೆಯಿತು. ಹಾಗೆ ನೋಡಿದರೆ ಈ ದಶಕದ ಬಹುತೇಕ ಚಿತ್ರಗಳಲ್ಲಿ ಹಾಸ್ಯವನ್ನು ಬಲವಂತವಾಗಿ ತುರುಕುವ ಪ್ರವೃತ್ತಿಯೇ ವಿಜೃಂಭಿಸಿದೆ. ವಿಶೇಷವಾಗಿ ತಮಿಳು ಭಾಷೆಯ ರೀಮೇಕ್ ಚಿತ್ರಗಳ ಮೂಲಕ ಇದು ಕನ್ನಡ ಚಿತ್ರರಂಗದ ಮೈಯನ್ನೆಲ್ಲಾ ವ್ಯಾಪಿಸಿಕೊಂಡಿತು. ಚಿತ್ರದ ವಸ್ತು ಎಷ್ಟೇ ಗಹನವಾದುದಾಗಿರಲಿ, ಸನ್ನಿವೇಶದ ತೀವ್ರತೆ ಎಂಥಾದ್ದೇ ಆಗಿರಲಿ ಅವರ ನಡುವೆ ಹಾಸ್ಯ ದೃಶ್ಯಗಳನ್ನು ಹೊಂದಿಸುವ ಪರಿಪಾಠ ಒಂದು ಪರಂಪರೆಯೇ ಆದದ್ದು ಈ ದಶಕದಲ್ಲಿ. ಇದರೊಂದಿಗೆ ಜನಪ್ರಿಯ ಹಾಸ್ಯಕಲಾವಿದರಿಗಾಗಿಯೇ ಚಿತ್ರಕಥೆಯಲ್ಲಿ ಪ್ರತ್ಯೇಕವಾದ ಹಾಸ್ಯ ಪಥವನ್ನು ಕೂಡ ಸೃಷ್ಟಿಸುವ ಪದ್ಧತಿ ಶುರುವಾಯಿತು. ೧೯೭೦ರ ದಶಕದಲ್ಲಿ ಎಲ್ಲೋ ಕೆಲವು ಚಿತ್ರಗಳಲ್ಲಿ ಮಾತ್ರ ಕಾಣುತ್ತಿದ್ದ ಈ ಪ್ರವೃತ್ತಿ ಇದ್ದಕ್ಕಿದ್ದಂತೆ ವಿಪರೀತ ಹೆಚ್ಚಿತು. ಇದಕ್ಕೆ ರೀಮೇಕ್ ಸಂಸ್ಕೃತಿ ಮಾತ್ರವಲ್ಲದೆ ತಮಿಳು, ತೆಲುಗಿನಿಂದ ಆಮದಾದ ನಿರ್ದೇಶಕರುಗಳು ಹಾಗೂ ಚಿತ್ರ ಸಾಹಿತಿಗಳು ಕೂಡ ಕಾರಣರಾದರು. ರಾಜಾಚಂದ್ರ, ಮಣಿಮುರುಗನ್, ಸಿ.ವಿ.ರಾಜೇಂದ್ರನ್, ಅಮೃತಂ, ಬಿ.ಸುಬ್ಬರಾವ್, ಕೆ.ಎಸ್.ಆರ್.ದಾಸ್, ಕುಟುಂಬರಾವ್, ಬಂಡಾರು ಗಿರಿಬಾಬು, ಎ.ಕಾಶಿಲಿಂಗಂ, ಎಸ್.ಎ.ಚಂದ್ರಶೇಖರ್, ಜಂಧ್ಯಾಲ, ಕೊಮ್ಮಿನೇನಿ, ಪೇರಾಲ, ಸಾಯಿಪ್ರಕಾಶ್, ಶ್ರೀನಿವಾಸರೆಡ್ಡಿ ಇವರೆಲ್ಲ ತೆಲುಗು, ತಮಿಳಿನ ಆಚಾರ-ವಿಚಾರ, ಉಡುಗೆ-ತೊಡುಗೆ ಹಾಗೂ ಅಲ್ಲಿನ ನಂಬಿಕೆ, ನಡವಳಿಕೆ, ಸಂಸ್ಕೃತಿಯ ಅತಿ ಹೆಚ್ಚು ಚಿತ್ರಗಳನ್ನು ಕನ್ನಡಿಗರಿಗೆ ಉಣಬಡಿಸಿದರು.

ಇದೇ ವೇಳೆಗೆ ಕೆಲವು ಯಶಸ್ವಿ ಚಿತ್ರಗಳಿಂದಾಗಿ ಕನ್ನಡದ ಅತಿ ಬೇಡಿಕೆಯ ಕಥೆ-ಚಿತ್ರಕಥೆಗಾರರಾಗಿ ತಮಿಳಿನ ಎಂ.ಡಿ.ಸುಂದರ್ ಅನಿವಾರ್ಯವಾಗಿದ್ದ ಸ್ಥಿತಿ ಇತ್ತು. ಸುಮಾರು ೧೦ ವರ್ಷಗಳ ಕಾಲ ಐವತ್ತಕ್ಕೂ ಹೆಚ್ಚು ಚಿತ್ರಗಳಿಗೆ ಕಥೆಗಳನ್ನು ಬರೆದರು. ಒಂದೆಡೆ ಹೆಚ್ಚು ಮಂದಿ ಪರಭಾಷಾ ನಿರ್ದೇಶಕರ ಯಶಸ್ವಿ ಚಿತ್ರಗಳ ನಕಲುಗಳನ್ನು ನೋಡುತ್ತಾ, ಇನ್ನೊಂದು ಕಡೆ ಎಂ.ಡಿ.ಸುಂದರ್ ಅವರ ಅವಾಸ್ತವಿಕ, ಅಸಹಜ ಕಟ್ಟುಕಥೆಗಳನ್ನು ಆಸ್ವಾದಿಸುತ್ತಾ ಕನ್ನಡ ಪ್ರೇಕ್ಷಕರು ತಾವು ಕಳೆದ ದಶಕದಲ್ಲಿ ಪಡೆದುಕೊಂಡಿದ್ದ ಅಪ್ಪಟ ಕನ್ನಡ ಚಿತ್ರಗಳ ಸುಂದರ ಅನುಭವದಿಂದ ದೂರವಾಗತೊಡಗಿದರು. ಕನ್ನಡ ಚಿತ್ರಗಳ ಸ್ವಂತಿಕೆಯ ಸ್ವರೂಪದ ಬಗ್ಗೆ ಇದ್ದ ಚಿತ್ರ ಈ ದಶಕದ ಆರಂಭದಿಂದಲೇ ಛಿದ್ರವಾಗತೊಡಗಿತು. ಕಥೆಗಳ ಆಯ್ಕೆ, ಕಥಾ ಸೃಷ್ಟಿ, ಗೀತ ರಚನೆ, ಚಿತ್ರಕಥಾ ರಚನೆ ಇವೆಲ್ಲದರ ಬಂಧ ಸಡಿಲವಾಗುತ್ತಾ ಬಂತು. ಆಂದಿನ ಒಟ್ಟಾರೆ ಪರಿಸ್ಥಿತಿ ಗೊಂದಲಮಯವಾಗಿ ಇದ್ದುದರಿಂದ ಕನ್ನಡದ ದ್ವಿತೀಯ ಸಾಲಿನ ನಿರ್ದೇಶಕರು ಹೆಚ್ಚೇನೂ ತಲೆ ಕೆಡಿಸಿಕೊಳ್ಳದೆ ಅವರಿವರು ನಡೆದ ದಾರಿಯಲ್ಲಿ ತಾವೂ ನಡೆಯತೊಡಗಿದರು. ಅಂಥ ಬಳಕೆಯ ದಾರಿಯನ್ನು ಧಿಕ್ಕರಿಸುತ್ತಲೇ ಬಂದಿದ್ದ ಕೆಲವೇ ಮಂದಿ ಪ್ರತಿಭಾವಂತರು ತಮ್ಮ ಒಳಗಿನ ಹಾಗೂ ಹೊರಗಿನ ಸಮಸ್ಯೆಗಳಿಂದಾಗಿ ಈ ಸಂದರ್ಭವನ್ನು ಎದುರಿಸಲು ಅಗತ್ಯವಾಗಿದ್ದ ದೈತ್ಯಶಕ್ತಿಯನ್ನು ಹೊಂದಿರಲಿಲ್ಲ. ಇನ್ನು ಆಗೊಮ್ಮೆ, ಈಗೊಮ್ಮೆ ಕಾಣಿಸಿಕೊಂಡ ಹೊಸಬರ ಪ್ರಯತ್ನಗಳಲ್ಲಿ ದಿಕ್ಕನ್ನು ಬದಲಿಸುವ ಅಥವಾ ಹೊಸ ಜಾಡನ್ನು ಸೃಷ್ಟಿಸುವಂಥ ತೇಜಸ್ಸು ಇರಲಿಲ್ಲ. ಇಂಥ ಹಿನ್ನೆಲೆಯಿಂದಾಗಿಯೇ ಸಾಧಾರಣ ಅಥವಾ ಉತ್ತಮ ಪ್ರಯತ್ನಗಳು ಕೂಡ ವಿಶೇಷವೆನ್ನುವಂತೆ ಕಾಣುತ್ತವೆ. ಪುಟ್ಟಣ್ಣನವರ ಚಿತ್ರಗಳನ್ನು ಎದುರು ನೋಡುವುದು, ವರ್ಷದಿಂದ ವರ್ಷಕ್ಕೆ ೪, ೩, ೨ರ ಸಂಖ್ಯೆಯಲ್ಲಿ ಕುಗ್ಗುತ್ತಾ ಬಂದ ರಾಜಕುಮಾರ್ ಚಿತ್ರಗಳಲ್ಲಿ ಹೊಸದೇನಾದರೂ ಇರಬಹುದು ಎಂದು ನಿರೀಕ್ಷಿಸುವುದು ಕನ್ನಡ ಪ್ರೇಕ್ಷಕರ ಸಾಮಾನ್ಯ ಸ್ಥಿತಿಯಾಗಿತ್ತು. ಇದನ್ನು ಹೊರತು ಪಡಿಸಿದರೆ ಹೊಸಬರ ಪ್ರಯತ್ನಗಳ ಬಗ್ಗೆ ಎಂದಿನಂತೆ ಕುತೂಹಲ ಇದ್ದೇ ಇರುವುದು ಕಾಣುತ್ತದೆ.

'ರಾಗ ತಾಳ' ಎಚ್.ಎಂ.ಕೃಷ್ಣಮೂರ್ತಿ ನಿರ್ದೇಶನದ ಚಿತ್ರ. ಬಿ.ಆರ್.ಇಷಾರಾ ಅವರ ಶಿಷ್ಯನೆಂದು ಸುದ್ದಿಯಲ್ಲಿದ್ದ ಈ ತರುಣ ಈ ಹಿಂದೆ 'ಕುರುಬರ ಲಕ್ಕ'



(ಚಿತ್ರ ೫೦) 'ಸುವರ್ಣ ಸೇತುವೆ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಆರತಿ

ನಿರ್ದೇಶಿಸಿದ್ದರು. 'ರಾಗ ತಾಳ'ಕ್ಕೆ ಕಥೆ, ಚಿತ್ರಕಥೆ, ಸಂಭಾಷಣೆಯನ್ನು ಅವರೇ ನಿರ್ವಹಿಸಿದ್ದರು. ಕೃಷ್ಣಮೂರ್ತಿಗೆ ಚಿತ್ರಮಾಧ್ಯಮದಲ್ಲಿ ಏನಾದರೂ ಉದ್ದೇಶವಿರಬೇಕು, ಏನಾದರೂ ಹೇಳಬೇಕು ಎಂಬ ಧ್ಯೇಯ. 'ಕುರುಬರ ಲಕ್ಕ'ದಲ್ಲಿ ಕೂಡಾ ಜೀತ ಪದ್ಧತಿ ಬಗ್ಗೆ ಪ್ರಶ್ನಿಸಿದ್ದರು. 'ರಾಗ ತಾಳ'ದಲ್ಲಿ ಅವರು ಎತ್ತಿಕೊಂಡದ್ದು ಬುಡುಬುಡಿಕೆ ಜನಾಂಗದ ಅಲೆಮಾರಿತನದ ಬವಣೆಯನ್ನು. ಸ್ವಾತಂತ್ರ್ಯಪೂರ್ವದಲ್ಲಿದ್ದ ಸ್ಥಿತಿಯೇ ಮುಂದುವರಿದಿದೆ. ಸಾಮಾಜಿಕ ನೆಲೆಯೇ ಕಾಣದೆ ಊರೂರು ಅಲೆಯುತ್ತಿರುವ ನಿರ್ಲಕ್ಷ್ಯಕ್ಕೊಳಗಾದ ಜನಾಂಗವಿದು ಎಂದು ಹೇಳುವ ಪ್ರಯತ್ನ. ಆದರೆ ಅವರು ಇಂಥ ಗಂಭೀರವಾದ ವಸ್ತುವಿಗೆ ಆಯ್ದ ಕಲಾವಿದರು, ಬಳಸಿದ ನಿರೂಪಣಾ ವಿಧಾನ ಹೊಂದಿಕೆಯಾಗುವುದು ಕಷ್ಟವಿತ್ತು. ಕಲಾವಿದರಿಗೆ ಅದಾಗಲೇ ಇರುವ ಇಮೇಜ್, ಎಲ್ಲಕ್ಕಿಂತ ಮಿಗಿಲಾಗಿ ಅವರು ತಾವು ಹೀಗೇ ಕಾಣಬೇಕೆಂದು ಬಯಸುತ್ತಾರೆ. ಗ್ಲಾಮರ್ ಇಲ್ಲದೆ ಅವರಿಗೆ ಅಸ್ತಿತ್ವವಿಲ್ಲ. ಅಂಥ ಕಲಾವಿದರನ್ನು ಆಮಸಯಿಸಿ ವೇಷಭೂಷಣಗಳಲ್ಲಿ ಕೊಂಚ ವಾಸ್ತವತೆಯ ಹತ್ತಿರಕ್ಕೆ ತಂದರು. ಆದರೆ ಅದನ್ನು 'ಗ್ಲಾಮರ್' ಆಗಿ ಮಾರ್ಪಡಿಸುವ ಜಾಣ ತಾರೆಯರಿಂದಾಗಿ ಬಡತನ ಹುಡುಕಿದರೂ ಸಿಗುತ್ತಿರಲಿಲ್ಲ. ರಂಗುರಂಗಾದ ಅರೆಬರೆ ಬಟ್ಟೆಗಳೂ 'ಪ್ರದರ್ಶನ'ಕ್ಕಾಗೇ ಎಂಬಂತಿದ್ದವು. ಜೊತೆಗೆ ಕಾಲ್ಪನಿಕ ಸನ್ನಿವೇಶಗಳನ್ನು ತಂದು ಶ್ರೀಮಂತ ಉಡುಗೆ, ಶಿಷ್ಟ ನೃತ್ಯ-ಗೀತೆ ಸೇರಿಸಲಾಗಿತ್ತು. ಇಂಥ ಅನೇಕ ಕಾರಣಗಳಿಂದಾಗಿ ನಿರ್ದೇಶಕರ ದೊಡ್ಡ ಉದ್ದೇಶ-ಪ್ರಯತ್ನ ಕರಗಿಹೋಯಿತು. ಎಂ.ರಂಗರಾವ್ ಸಂಗೀತದಲ್ಲಿ ಅಪೂರ್ವ ಶೈಲಿಯ ರಾಗಗಳು ಸೇರಿದ್ದವು. ಮೂಗೂರು ಸುಂದರ್ ಆ ಗೀತೆಗಳಿಗೆ ಸೊಗಸಾದ ನೃತ್ಯ ನೀಡಿದ್ದರೂ ಅಲ್ಲಿ ಶಾಸ್ತ್ರೀಯ, ಜನಪದಗಳ ಮಿಶ್ರಣವೂ ಇದ್ದವು. ಬೇಲೂರು-ಹಳೇಬೀಡಿನ ಸುಂದರ ಹೊರಾಂಗಣ, ಬಿ.ವೇದಪ್ರಭು ಅವರ ಸೊಗಸಾದ ಛಾಯಾಗ್ರಹಣ ಇತ್ತು. ಯುವನಟ ಪೃಥ್ವಿರಾಜ್‌ಸಾಗರ್-ಜಯಮಾಲಾ ಜೋಡಿಯ ಅಭಿನಯ ಹಾಗೂ ರಾಜಾಶಂಕರ್, ಸುಂದರಕೃಷ್ಣ ಅರಸ್, ಮುಸುರಿ ಕೃಷ್ಣಮೂರ್ತಿ, ಮಮತಾಶೆಣೈ, ಶಶಿಕಲಾ, ಶ್ರೀಗೌರಿ ಮುಖ್ಯವಾದ ಪಾತ್ರಗಳಲ್ಲಿದ್ದರು. ಈ ಚಿತ್ರವನ್ನು ವಿನೋದ್ ಮುಲಾನಿ, ಎಂ.ಎಚ್.ರಂಗನಾಥ್, ಇಂದಿರಾ ಶ್ರೀನಿವಾಸ್ ಅಂಬರ್‌ಕರ್, ಜಿ.ಬಸವರಾಜು, ಎಚ್.ಜೆ.ಸಮೀಉಲ್ಲಾಖಾನ್ ನಿರ್ಮಿಸಿದ್ದರು. ವಿನೋದ್ ಮುಲಾನಿ ಒಂದು ಪಾತ್ರದಲ್ಲಿ ಅಭಿನಯಿಸಿಯೂ ಇದ್ದರು.

'ಸುವರ್ಣ ಸೇತುವೆ' ನಿರ್ಮಿಸಿದ್ದ ಬಾಳಿಗಾ ಸಹೋದರರು 'ಜೋಡಿ ಜೀವ' ಚಿತ್ರವನ್ನು ನಿರ್ಮಿಸಿದರು. ಎಚ್.ಜಿ.ರಾಧಾದೇವಿಯವರ ಕಾದಂಬರಿಯನ್ನು ಆಧರಿಸಿ ಚಿತ್ರಕಥೆ ರಚಿಸಲಾಗಿತ್ತು. ಮಧ್ಯಮವರ್ಗದ, ಹೆಂಗೆಳೆಯರ ಮನಮಿಡಿಯುವ ಸಾಂಸಾರಿಕ ಕಥಾ ಭಾಗ, ಆರತಿ-ವಿಷ್ಣುವರ್ಧನ್ ಜೋಡಿ, ಆಗ ಅತ್ಯಂತ ಜನಪ್ರಿಯ ಬಾಲನಟಿಯಾಗಿದ್ದ ಬೇಬಿ ರೇಖಾ ಇದ್ದುದೇ ವಿಶೇಷ ಆಕರ್ಷಣೆ. ಗೀತಪ್ರಿಯರ ನಿರ್ದೇಶನ, ಸಂಭಾಷಣೆ ಇತ್ತು. ಬಹಳ ದಿನಗಳ ನಂತರ ಬೆಂಗಳೂರು ಲತಾ ಈ ಚಿತ್ರಕ್ಕಾಗಿ ಹಾಡಿದ್ದರು. ವಿಜಯಭಾಸ್ಕರ್ ಸಂಗೀತವಿತ್ತು. ವಾಣಿಜಯರಾಂ ಹಾಡಿರುವ 'ಮಲೆನಾಡಿನ ಮೂಲೆನಾಗೆ...' ಆಕರ್ಷಣೀಯವಾಗಿತ್ತು. ದೊಡ್ಡರಂಗೇಗೌಡರ ಜನಪದ ಶಬ್ದ ಸಂಪತ್ತಿಗೆ 'ದುಡಿ'ಯ ಲಯಗತಿಯನ್ನು ಕೊಡಲಾಗಿತ್ತು. ಪಿಟೀಲು, ಕೊಳಲು ಬಳಸಿ, ಅವು ಬೆರೆತು ಹೋಗದೆ ಪ್ರತ್ಯೇಕವಾಗಿ ಸಾಗಿ ಒಂದು ಹಂತದಲ್ಲಿ ಆಕರ್ಷಕವಾಗಿ ಒಂದುಗೂಡುತ್ತವೆ. ಕೋರಸ್‌ನ ಹಿನ್ನೆಲೆ ಇರುವ ಗೀತೆ. ಗೀತಪ್ರಿಯ ರಚಿಸಿರುವ 'ಸಾವಿರ ಹೂಗಳಲ್ಲಿ....' ಮತ್ತು 'ನಿನ್ನ ಕೊಂಕು ನೋಟವ...' ಪ್ರಣಯಗೀತೆಗಳು ಸೊಗಸಾಗಿದ್ದವು. 'ಪಿಂಕು ಪಿಂಕು...' ಎಂಬ ಗೀತೆಗೆ ಮಕ್ಕಳ ಕೋರಸ್‌ನಂತೆ ಅಳವಡಿಸಿ ಲತಾ, ಸುಲೋಚನಾ, ಮೋಹನ್ ಹಾಡಿದ್ದರು.

೧೯೮೨ರಲ್ಲಿ ತೆರೆಕಂಡ ರಾಜಕುಮಾರ್ ಚಿತ್ರಗಳಲ್ಲಿ ಕೊನೆಯದು 'ಚಲಿಸುವ ಮೋಡಗಳು'. ಇದು ಕೂಡ ರಜತೋತ್ಸವ ಆಚರಿಸಿತು. ಎಲ್ಲಕ್ಕಿಂತ ವಿಶೇಷವಾಗಿ ಮರಾಠಿ ಪ್ರಭಾವದ ಬೆಳಗಾವಿಯ ಸ್ವರೂಪ ಚಿತ್ರಮಂದಿರದಲ್ಲಿ ೨೫ ವಾರಗಳ ಸತತ ಪ್ರದರ್ಶನ ಕಂಡದ್ದಂತೂ ಒಂದು ಅಪೂರ್ವ ದಾಖಲೆ. ಗಡಿನಾಡ ಜಿಲ್ಲೆ ಬೆಳಗಾವಿಯಲ್ಲಿ ಒಟ್ಟು ೧೪ ಚಿತ್ರ ಮಂದಿರಗಳಿವೆ. ಇವುಗಳಲ್ಲಿ ಸ್ವರೂಪ, ರೂಪಾಲಿ, ನರ್ತಕಿ, ಚಿತ್ರಾ - ಈ ನಾಲ್ಕು ಚಿತ್ರಮಂದಿರಗಳಲ್ಲಿ ಮಾತ್ರ ಕನ್ನಡ ಚಿತ್ರಗಳು ಪ್ರದರ್ಶನವಾಗುತ್ತವೆ. ಉಳಿದ ೧೦ ಚಿತ್ರ ಮಂದಿರಗಳಲ್ಲಿ ಹಿಂದಿ ಚಿತ್ರಗಳು ನಡೆಯುತ್ತವೆ. ಇಂಥ ಮರಾಠಿ, ಹಿಂದಿಮಯ ವಾತಾವರಣದ ನಗರದಲ್ಲಿ ಈ ಚಿತ್ರ ರಜತೋತ್ಸವ ಆಚರಿಸಿದ್ದಕ್ಕೆ ಭಾಷಾ ಚಳವಳಿಯ ಪ್ರಭಾವ ಬಹುಮುಖ್ಯ ಕಾರಣವಾಗಿತ್ತು.

'ಚಲಿಸುವ ಮೋಡಗಳು' ಚಿತ್ರದ ಬಿಡುಗಡೆಯ ಸಂದರ್ಭದಲ್ಲಿ ರಾಜ್ಯದ ಎಲ್ಲಾ ಜಿಲ್ಲೆ ಹಾಗು ಪಟ್ಟಣಗಳಲ್ಲಿ ನಕ್ಷತ್ರಗಳ ಮೆರವಣಿಗೆ ಸ್ಪರ್ಧೆಗಳು ನಡೆದವು. ಪ್ರಥಮ ಪ್ರದರ್ಶನಗಳಲ್ಲಿ ಸಿಹಿ ಹಂಚುವ ಸಂಭ್ರಮ ನಡೆಯಿತು. ಈ ಚಿತ್ರದ ಕೌಟುಂಬಿಕ ಕಥೆಯಲ್ಲಿ ಅಂಥ ವಿಶೇಷವಿರಲಿಲ್ಲ. ಆದರೆ ನಿರೂಪಣೆಯಲ್ಲಿ ಬಿಗಿಯಿತ್ತು. ರಾಜನ್-ನಾಗೇಂದ್ರರ ಸಂಗೀತದಲ್ಲಿ ಮಾ|ಪುನೀತ್ ಹಾಡಿದ 'ಕಾಣದಂತೆ ಮಾಯವಾದನೋ...' ಹಾಗೂ 'ಜೇನಿನ ಹೊಳೆಯೋ', 'ನೀನೆಲ್ಲೋ ನಾನೆಲ್ಲೋ', 'ಮೈಲಾರ್ಡ್ ನನ್ನ ವಾದ' ಹಾಡುಗಳು ಅತ್ಯಂತ ಜನಪ್ರಿಯವಾದವು. ಮಾ|ಪುನೀತ್‌ಗೆ ರಾಜ್ಯ ಸರ್ಕಾರದ ೧೯೮೨-೮೩ರ ಶ್ರೇಷ್ಠ ಬಾಲನಟ ಪ್ರಶಸ್ತಿ ಹಾಗೂ ಪಾಂಡುರಂಗನ್ ಅವರಿಗೆ ಅತ್ಯುತ್ತಮ ಧ್ವನಿಗ್ರಾಹಕ ಪ್ರಶಸ್ತಿ ಲಭಿಸಿತು.

ಮನೆಮಂದಿಯೆಲ್ಲಾ ಕುಳಿತು ಮುಜುಗರವಿಲ್ಲದೆ ನೋಡುವಂತೆ ಅಚ್ಚುಕಟ್ಟಾಗಿರುತ್ತದೆ ಎಂಬ ಇಂಥ ರಾಜಕುಮಾರ್ ಚಿತ್ರಗಳು ಹಾಗೂ 'ಮಾನಸ ಸರೋವರ', 'ಜಿಮ್ಮಿಗಲ್ಲು', 'ಅಮರ ಮಧುರ ಪ್ರೇಮ' ಇವುಗಳು ತಮ್ಮ ಸಾಧಾರಣ ಗುಣಮಟ್ಟದ ಸ್ಥಿತಿಯಲ್ಲೂ ಗಮನ ಸೆಳೆಯುವುದಕ್ಕೆ ಕಾರಣ ಈ ಹಿಂದೆ ಪ್ರಸ್ತಾಪಿಸಿದ ಚಿತ್ರರಂಗದ ವಾತಾವರಣ ಪರಭಾಷಾ ಪ್ರಭಾವಗಳಿಂದ ಕಲುಷಿತಗೊಂಡಿರುವುದೆ.

ರಾಜಕುಮಾರ್ ಅವರ 'ರಾಜಕೀಯ ಪ್ರವೇಶ'ವೂ ಒಂದು ದೊಡ್ಡ ಪ್ರಸಂಗವಾಯಿತು. ಅವರನ್ನು ರಾಜಕೀಯಕ್ಕೆ ಆಹ್ವಾನಿಸುವುದು, ಬರಲೇಬೇಕೆಂದು ಒತ್ತಾಯಿಸುವುದು, ಅವರು ಬೇಡವೆಂದರೂ ಬೆನ್ನು ಬೀಳುವುದು, ಮತ್ತು ಅವರು ನಿರಾಕರಿಸುವುದು - ಇವೆಲ್ಲ ಅತ್ಯಂತ ತೀವ್ರವಾಗಿ ವರ್ಣರಂಜಿತವಾಗಿ ನಿರಂತರವೆನ್ನುವಂತೆ ಶುರುವಾದದ್ದು ಗೋಕಾಕ್ ಚಳವಳಿಯ ನಂತರದ ದಿನಗಳಲ್ಲಿ. ಈ ವೇಳೆಗೆ ಪಕ್ಕದ ಆಂಧ್ರಪ್ರದೇಶದಲ್ಲಿ ಎನ್.ಟಿ.ರಾಮರಾವ್, ತಮಿಳು ನಾಡಿನಲ್ಲಿ ಎಂ.ಜಿ.ರಾಮಚಂದ್ರನ್ ರಾಜಕಾರಣಕ್ಕಿಳಿದು ಆಯಾಯ ರಾಜ್ಯದ ಮುಖ್ಯಮಂತ್ರಿ



(ಚಿತ್ರ ೫೧) 'ಚಲಿಸುವ ಮೋಡಗಳು' ಚಿತ್ರದಲ್ಲಿ ಸರಿತಾ ಮತ್ತು ಮಾ| ಲೋಹಿತ್ (ಪುನೀತ್)

ಪದವಿಯನ್ನು ಅಲಂಕರಿಸಿದ್ದರು. ಅಂಥದೇ ಒಂದು ಅದ್ಭುತ ಪ್ರಸಂಗ ಕರ್ನಾಟಕದಲ್ಲಿ ಸಂಭವಿಸಬಹುದು ಎಂಬುದರ ಬಗ್ಗೆ ಬಹಳ ಜನಕ್ಕೆ ಕುತೂಹಲ, ನಿರೀಕ್ಷೆಯಿತ್ತು. ರಾಜಕುಮಾರ್‌ರನ್ನು ಬೇರೆ ಬೇರೆ ಕಾರಣಕ್ಕೆ ಭೇಟಿಯಾಗುತ್ತಿದ್ದ ರಾಜ್ಯದ ಕೆಲವು ಮಂದಿ ಪ್ರಮುಖ ರಾಜಕಾರಣಿಗಳು ನಂತರದ ಪತ್ರಿಕಾಗೋಷ್ಠಿಗಳಲ್ಲೋ, ಪತ್ರಕರ್ತರ ಭೇಟಿಗಳಲ್ಲೋ ''ಅವರಿಗೆ ರಾಜ್ಯದ ಪರಿಸ್ಥಿತಿಯನ್ನು ವಿವರಿಸಿದ್ದೇವೆ. ಕನ್ನಡಿಗರ ಹಿತ ಕಾಪಾಡುವ ತೀರ್ಮಾನ ಕೈಗೊಳ್ಳುತ್ತಾರೆಂಬ ವಿಶ್ವಾಸವಿದೆ...''. ಎಂಬ ಮಾತುಗಳನ್ನು ಆಡುತ್ತಿದ್ದುದರಿಂದ ಹಾಗೂ ರಾಜಕುಮಾರ್ ಅಂತರಂಗದಲ್ಲಿ ಏನಿದೆ ಎಂಬುದನ್ನು ತಿಳಿದುಕೊಂಡು ಸ್ಪಷ್ಟೀಕರಿಸಲು ಅವರೇ ಸಿಗುತ್ತಿರಲಿಲ್ಲವಾದ್ದರಿಂದ ಅವರು ರಾಜಕೀಯಕ್ಕೆ ಬಂದೇ ಬಿಡುತ್ತಾರೆಂಬುದನ್ನು ನಂಬುವಂಥ ವಾತಾವರಣ ೧೯೮೩ರ ಆರಂಭದ ದಿನಗಳಲ್ಲಿ ನಿರ್ಮಾಣವಾಗಿತ್ತು.



(ಚಿತ್ರ ೫೨) ರಾಜಕುಮಾರ್ ಅವರಿಗೆ ರಾಷ್ಟ್ರಪತಿ ಜೈಲ್‌ಸಿಂಗ್ ಅವರಿಂದ 'ಪದ್ಮಭೂಷಣ' ಪ್ರಶಸ್ತಿ ಪ್ರದಾನ

ರಾಜ್ಯಾದ್ಯಂತ ಆವರಿಸಿಕೊಂಡಿದ್ದ ಗೋಕಾಕ್ ಚಳವಳಿಯ ಸಭೆಗಳಲ್ಲಿ ಸೇರುತ್ತಿದ್ದ ಅಪಾರ ಜನಸ್ತೋಮ, ಕನ್ನಡದ ಅಭಿಮಾನಿಗಳ ಅತ್ಯುತ್ಸಾಹದ ಪ್ರತಿಕ್ರಿಯೆ, ರಾಜ್‌ರನ್ನು ಕಾಣಲು ಮೈಲಿಗಟ್ಟಲೆ ಎತ್ತಿನ ಗಾಡಿ, ಲಾರಿಗಳಲ್ಲಿ ಬರುತ್ತಿದ್ದದ್ದು, ರಾತ್ರಿಯೆಲ್ಲಾ ಮಲಗದೆ ವೃದ್ಧರು, ಮಹಿಳೆಯರು ಎದ್ದೇ ಇರುತ್ತಿದ್ದುದು - ಇವೆಲ್ಲವುಗಳ ರೋಚಕ ವಿವರ, ವಿಶ್ಲೇಷಣೆ, ವರದಿಗಳನ್ನು ಓದಿದ್ದವರಿಗೆ - ಇದೆಲ್ಲದರ ಲಾಭವನ್ನು ರಾಜಕುಮಾರ್ ಅವರು ರಾಜಕೀಯವಾಗಿ ಪಡೆದುಕೊಳ್ಳಬಹುದೆಂಬ ಬಗ್ಗೆ ಅಸ್ಪಷ್ಟವಾಗಿಯಾದರೂ ಗುಮಾನಿ ಇದ್ದದ್ದು ಸಹಜ. ಅಕ್ಕ-ಪಕ್ಕದ ಸೋದರ ರಾಜ್ಯಗಳ ಚಿತ್ರರಂಗದ ಸ್ನೇಹಿತರು ಮುಖ್ಯಮಂತ್ರಿಗಳಾದದ್ದು ಮತ್ತು ಅವರು ಕೂಡ ರಾಜಕುಮಾರ್‌ರನ್ನು ರಾಜಕೀಯಕ್ಕೆ ಬರುವಂತೆ ಒಂದೆರಡು ಬಾರಿ ಒತ್ತಾಯಿಸಿದ್ದುದು ರಾಜಕುಮಾರ್‌ಗೆ ಅವರ ನಿರ್ಧಾರ ಬದಲಾಯಿಸಿಕೊಂಡು ರಾಜಕೀಯ ಒಲವು ಬೆಳೆಸಿರಬಹುದೆಂದು ನಂಬಲು ಕಾರಣಗಳಾಗಿತ್ತು. ಜೊತೆಗೆ ಪ್ರತಿ ಊರು, ಹೋಬಳಿಗಳಲ್ಲಿ ದಿನೆ ದಿನೇ ತಲೆಯೆತ್ತುತ್ತಿದ್ದ ಅಭಿಮಾನಿ ಸಂಘಗಳ ಸಂಘಟಿತ ಶಕ್ತಿ ಸಹಾಯಕ್ಕೆ ಬರಬಹುದೆಂಬ ಅತೀವ ನಿರೀಕ್ಷೆಯೂ ಇತ್ತು. ಇಂಥ ನಿರೀಕ್ಷೆ ಪ್ರಯತ್ನಗಳು ಹೊಸತೇನೂ ಆಗಿರಲಿಲ್ಲ. ಎಪ್ಪತ್ತರ ದಶಕದಲ್ಲೇ ವೀರೇಂದ್ರಪಾಟೀಲರು ರಾಜಕುಮಾರ್‌ರನ್ನು ರಾಜಕೀಯಕ್ಕೆ ತರುವ ಪ್ರಯತ್ನ ಮಾಡಿದ್ದರು. ಆಗ ಗುಬ್ಬಿ ವೀರಣ್ಣ ರಾಯಭಾರ ವಹಿಸಿದ್ದರು.

ಆಗ್ಗೆ ಜನರ ನರನಾಡಿಗಳಲ್ಲಿ ಪ್ರವಹಿಸುತ್ತಿದ್ದ ಭಾಷಾ ಪ್ರೇಮ ಹಾಗೂ ಹಿಂದುಳಿದ ವರ್ಗಗಳ ಚಳವಳಿಯ ಪ್ರಭಾವಗಳು ಮತ್ತು ರಾಜ್ಯದ ರೈತನಿಗೆ ಧ್ವನಿಕೊಟ್ಟ ಪ್ರೊ।ಎಂ.ಡಿ.ನಂಜುಂಡಸ್ವಾಮಿ ನೇತೃತ್ವದ ಐತಿಹಾಸಿಕ ರೈತ ಚಳುವಳಿ - ಇವೆಲ್ಲದರ ಸಾಮಯಿಕ ಹಾಗೂ ಸಾವಯವ ಲಾಭ ರಾಜಕುಮಾರ್ ಪ್ರಾದೇಶಿಕ ಪಕ್ಷ ಕಟ್ಟಿದರೆ ಅವಕ್ಕೆ ಲಭಿಸುತ್ತದೆ ಎಂದು ಒಂದು ವರ್ಗ ಅಂದಾಜು ಮಾಡಿತು. ರಾಜ್ಯದ ರೈತ ಚಳವಳಿಯನ್ನು ಹತ್ತಿಕ್ಕುವ ಭರದಲ್ಲಿ ನಡೆದ ಗೋಲಿಬಾರ್‌ಗಳು, ಗೋಕಾಕ್ ಚಳವಳಿಯನ್ನು ಹತ್ತಿಕ್ಕಲು ನಡೆಸಿದ ಪ್ರಯತ್ನಗಳು ಗುಂಡೂರಾಯರ ನೇತೃತ್ವದ ಕಾಂಗ್ರೆ ಸರ್ಕಾರವನ್ನು ಖಂಡಿತ ಕೆಳಗಿಳಿಸುತ್ತವೆ ಎಂಬುದು ಅತ್ಯಂತ ಸಹಜವಾದ ಸಾಮಾನ್ಯ ನಿರೀಕ್ಷೆ. ಇದೆಲ್ಲದರ ಹಿನ್ನೆಲೆಯಲ್ಲಿಯೇ ರಾಜಕುಮಾರ್ ರಾಜಕೀಯಕ್ಕೆ ಕಾಲಿಡಲು ಇದಕ್ಕಿಂತ ಒಳ್ಳೆಯ ಮುಹೂರ್ತ ಇನ್ನೆಂದೂ ಬರಲಾರದೆಂದೇ ಕೆಲವರ ಒತ್ತಾಯದಲ್ಲಿ ಆತುರ ಕಾಣಿಸಿಕೊಂಡಿತು. ರಾಜ್ಯಮಟ್ಟದ ಬೇರೆ ಬೇರೆ ಪಕ್ಷಗಳ ಅತ್ಯಂತ ಹಿರಿಯ ವೃತ್ತಿನಿರತ ರಾಜಕಾರಣಿಗಳ ಒತ್ತಾಯ ಒತ್ತಟ್ಟಿಗಿರಲಿ, ಹಿರಿಯ ವಕೀಲ-ರಾಜಕಾರಣಿ

ಎ.ಕೆ.ಸುಬ್ಬಯ್ಯನವರು ''ರಾಜಕುಮಾರ್ ಸವಾರಿ ಮಾಡುವುದಾದರೆ ತಾವು ಕುದುರೆಯಾಗಲು ಸಿದ್ಧ'' ಎಂದು ಘೋಷಿಸಿದರು. ಆಗ್ಗೆ ಬಹಳ ಚರ್ಚೆಯಾದ ಸುಬ್ಬಯ್ಯನವರ ಇಂಥ ಘೋಷಣೆಗೆ ಅಂದು ಅವರಿದ್ದ ಪರಿಸ್ಥಿತಿ ಕಾರಣವಿರಬಹುದು. ಆಗ ತಾನೆ ಅವರು ಭ್ರಮನಿರಸನಗೊಂಡು ಬಿ.ಜೆ.ಪಿ.ಯಿಂದ ಹೊರಬಂದಿದ್ದರು. ಆ ತಕ್ಷಣಕ್ಕೆ ಅವರಿಗೆ ತಾವು ಪ್ರಮುಖ ಪಾತ್ರ ವಹಿಸಲು ಸಾಧ್ಯವಾಗುವಂಥ ಗಟ್ಟಿಯಾದ ರಾಜಕೀಯ ಪಕ್ಷವೊಂದರ ಅಗತ್ಯವಿತ್ತು. ಈ ಹಿನ್ನೆಲೆಯಲ್ಲಿಯೇ ತಮಗೊಂದು ನೆಲೆ ಸೃಷ್ಟಿಸಿಕೊಳ್ಳಲು ಅವರು ಹೀಗೆಲ್ಲ ಮಾತನಾಡುತ್ತಿದ್ದಾರೆ ಎಂದು ಅರ್ಥೈಸಲಾಯಿತು. ರಾಜಕುಮಾರ್ ಎಂದಿನಂತೆ ಇದ್ಯಾವುದಕ್ಕೂ ಪ್ರತಿಕ್ರಿಯಿಸಲಿಲ್ಲ. ಈ ಮೌನವನ್ನು ಸುಬ್ಬಯ್ಯನವರು ರಾಜಕುಮಾರ್ ತಮಗೆ ಮಾಡಿದ ಅವಮಾನ ಎಂದು ಭಾವಿಸಿದರು. ದುಡುಕಿಗೆ, ಹರಿತ ನಾಲಿಗೆಗೆ ಹೆಸರಾದ ಎ.ಕೆ. ಸುಬ್ಬಯ್ಯ ರಾಜಕುಮಾರ್‌ರನ್ನು ಬಹಿರಂಗವಾಗಿ ಹಾಗೂ ಪತ್ರಿಕೆಗಳ ಮೂಲಕ ಅತ್ಯಂತ ಲಘುವಾಗಿ ಟೀಕಿಸತೊಡಗಿದರು. ಅದೇ ಹುಮ್ಮಸ್ಸಿನಲ್ಲಿ 'ಕನ್ನಡ ನಾಡು' ಹೆಸರಿನ ರಾಜಕೀಯ ಪಕ್ಷವನ್ನು ಸಹ ರಚಿಸಿದರು. ಇಷ್ಟೆಲ್ಲಾ ಆದರೂ ರಾಜಕುಮಾರ್ ತಮ್ಮ ಮೌನ ಮುರಿಯಲಿಲ್ಲ. ಇದು ಅವರ ರಾಜಕೀಯ ಪ್ರವೇಶದ ಸಾಧ್ಯತೆಗಳ ಬಗ್ಗೆ ಇನ್ನಷ್ಟು ಚರ್ಚೆಗೆ ದಾರಿ ಮಾಡಿತು.

ರಾಜಕುಮಾರ್ ರಾಜಕೀಯಕ್ಕೆ ಬರುವುದಾದರೆ ಅದು ಯಾವ ಪಕ್ಷದ ಮೂಲಕ? ಅವರಿಗೆ ಆಳದಲ್ಲಿ ಕಾಂಗ್ರೆ ಒಲವಿದೆ ಎಂಬುದು ಬಹಳ ಹಿಂದಿನಿಂದ ಇರುವ ಒಂದು ಸಾಮಾನ್ಯ ಅಭಿಪ್ರಾಯ. ಅದೇ ಪಕ್ಷಕ್ಕೆ ಸೇರಿದರೆ ಅಲ್ಲಿ ಎದುರಿಸಬೇಕಾದ್ದು ಯಾರನ್ನು? ಅಲ್ಲಿ ಕೂಡಲೇ ನಾಯಕತ್ವ ದಕ್ಕಿಸಿಕೊಳ್ಳುವುದು ಹೇಗೆ ? ಅಧಿಕಾರದ ಹಸಿವಿನಿಂದ ಪ್ರತಿಯೊಬ್ಬರೂ ಬಳಲುತ್ತಿರುವ ಕಾಂಗ್ರೆಸ್‌ನಲ್ಲಿ ರಾಜಕುಮಾರ್‌ಗೆ ಮುಖ್ಯಮಂತ್ರಿ ಪಟ್ಟ ದಕ್ಕುತ್ತದೆಯೇ ? ಪ್ರಾದೇಶಿಕ ಪಕ್ಷ ಕಟ್ಟುವುದೇ ಆದರೆ ಇರುವ ಕಡಿಮೆ ಅವಧಿಯಲ್ಲಿ ಅದನ್ನು ಊರ್ಜಿತಗೊಳಿಸಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಬಹುದು ? ಇಂಥ ಚಿಂತನ-ಮಂಥನದಲ್ಲಿ ರಾಜಕುಮಾರ್‌ರನ್ನು ಬಿಟ್ಟು ಬೇರೆಲ್ಲರೂ ತೊಡಗಿದ್ದಾಗ ಕೇಂದ್ರದ ಪ್ರತಿಷ್ಠಿತ ಪ್ರಶಸ್ತಿ 'ಪದ್ಮ ಭೂಷಣ' ಪ್ರಕಟವಾಯಿತು. ಪ್ರಶಸ್ತಿ ವಿಜೇತರ ಯಾದಿಯಲ್ಲಿ ವಿಶ್ವವಿಖ್ಯಾತ 'ಗಾಂಧಿ' ಚಿತ್ರದ ನಿರ್ದೇಶಕ, ನಟ ರಿಚರ್ಡ್ ಅಟೆನ್ ಬರೋ, ವೈಣಿಕ ವಿದ್ವಾನ್ ಡಾ।ದೊರೆಸ್ವಾಮಿ ಅಯ್ಯಂಗಾರ್, ೬೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿ ವಿಶ್ವದಾಖಲೆಯನ್ನು ಸ್ಥಾಪಿಸಿರುವ ಮಲಯಾಳಂ ಚಿತ್ರರಂಗದ ನಾಯಕನಟ ಪ್ರೇಂ ನಜೀರ್ ಹಾಗೂ ರಾಜಕುಮಾರ್ ಹೆಸರುಗಳಿದ್ದವು. ಇಲ್ಲಿಂದಾಚೆಗೆ ಇನ್ನೊಂದು ಜಿಜ್ಞಾಸೆ ಆರಂಭವಾಯಿತು. ರಾಜಕುಮಾರ್ ರಾಜಕೀಯಕ್ಕೆ ಬರುವುದನ್ನು ತಡೆಯಲೆಂದೇ ಕೇಂದ್ರದ ಕಾಂಗ್ರೆ ಸರ್ಕಾರ ಪದ್ಮಭೂಷಣ ಪ್ರಶಸ್ತಿಯನ್ನು ನೀಡಿ ಓಲೈಸಿದೆ ಎಂದು ಅವರನ್ನು ಮನವೊಲಿಸುವಲ್ಲಿ ವಿಫಲರಾದವರು ಅಸಮಾಧಾನ ತೋಡಿಕೊಳ್ಳತೊಡಗಿದರು. ರಾಜಕುಮಾರ್ ಅವರ ನೆರಳಲ್ಲಿ ಅತ್ಯಂತ ಸುಲಭವಾಗಿ ಅಧಿಕಾರದ ಸವಿ ಉಣ್ಣಬಹುದೆಂದು ಲೆಕ್ಕಾಚಾರ ಹಾಕುತ್ತಿದ್ದ ಬಹಳ ಮಂದಿ ಅವರಿಗವರೇ ಚಡಪಡಿಕೆಗೆ ಒಳಗಾದರು.

ರಾಜ್ಯದಲ್ಲಿನ ರಾಜಕೀಯ ಹಾಗೂ ಸಾಂಸ್ಕೃತಿಕ ರಂಗದಲ್ಲಿ ನಡೆಯುತ್ತಿದ್ದ ಇಂಥ ಪ್ರಮುಖ ವಿದ್ಯಮಾನಗಳ ಸುದ್ದಿಗಳನ್ನು ಪತ್ರಿಕೆಗಳು ತಮ್ಮ ಸ್ವಂತ ಅಥವಾ ಮಾಲೀಕರ



(ಚಿತ್ರ ೫೩) 'ಕವಿರತ್ನ ಕಾಳಿದಾಸ' ಚಿತ್ರದಲ್ಲಿ ಜಯಪ್ರದಾ, ರಾಜಕುಮಾರ್, ಸುಧಾ ಸಿಂಧೂರ್ ಮತ್ತು ಶ್ರೀನಿವಾಸಮೂರ್ತಿ

ಆಸಕ್ತಿ, ಉದ್ದೇಶಗಳನ್ನು ಬೆರೆಸುತ್ತಾ ತಮ್ಮ ತಮ್ಮ ಮೂಗಿನ ನೇರಕ್ಕೆ ವರದಿ ಮಾಡುತ್ತಿದ್ದವು. ಕೆಲವು ಪ್ರಮುಖ ಪತ್ರಿಕೆಗಳ ಪತ್ರಕರ್ತರು ರಾಜಕುಮಾರ್ ರಾಜಕೀಯಕ್ಕೆ ಬರಬಾರದೆಂಬ ಇಂಗಿತವಿಟ್ಟುಕೊಂಡು ವಿಶ್ಲೇಷಣೆ, ಲೇಖನ, ಸುದ್ದಿಗಳನ್ನು ಬರೆಯುತ್ತಿದ್ದರು. ಇವೆಲ್ಲ ರಾಜಕುಮಾರ್‌ಗೆ ರಾಜಕಾರಣದ ಒಳಸುಳಿಗಳ ವಿರಾಟ್‌ದರ್ಶನ ಮಾಡಿಸಿರಬೇಕು. ಇದರೊಟ್ಟಿಗೆ ಸುಮಾರು ವರ್ಷಗಳಿಂದ ಚಲನಚಿತ್ರ ಪತ್ರಕರ್ತರಲ್ಲಿ ಕೆಲವರು ಅವರ ವಿರುದ್ಧ ಸಮರ ಸಾರಿದಂತೆ ಹೀಗಳೆದು ಬರೆಯುತ್ತಿದ್ದ ಕಹಿ ನೆನಪುಗಳಿಂದ ಅವರು ಹೊರಬಂದಿರಲಿಲ್ಲವೆನಿಸುತ್ತದೆ. ಆದರೆ ಅವರು ತಮ್ಮ ಅಸಮಾಧಾನ, ನೋವನ್ನು ಎಂದೂ ಬಹಿರಂಗವಾಗಿ ಹೇಳಿಕೊಳ್ಳುತ್ತಿರಲಿಲ್ಲ. ಅಷ್ಟೇ ಅಲ್ಲ, ಯಾವುದೇ ಪತ್ರಿಕಾ ಹೇಳಿಕೆಗಳನ್ನೂ ಕೊಡಲಿಲ್ಲ. ಪತ್ರಕರ್ತರಿಂದ ಸಾಧ್ಯವಾದಷ್ಟು ದೂರ ಇರಲು ಪ್ರಯತ್ನಿಸಿದರು; ಹಾಗೆಯೇ ಇದ್ದೂಬಿಟ್ಟರು.

ರಾಜಕಾರಣ ಪ್ರವೇಶದ ಇಂಥ ಬಿಸಿಬಿಸಿ ಚರ್ಚೆಗಳ ನಡುವೆಯೇ ಪದ್ಮಭೂಷಣ ಪ್ರಶಸ್ತಿಗಾಗಿ ರಾಜಕುಮಾರ್‌ರವರನ್ನು ಅವರ ಜನ್ಮದಿನವಾದ ೧೯೮೩ರ ಏಪ್ರಿಲ್ ೨೪ರಂದು ಅದ್ದೂರಿಯಾಗಿ ಸನ್ಮಾನಿಸಲು ಭರದಿಂದ ಸಿದ್ಧತೆಗಳು ನಡೆಯತೊಡಗಿದವು. ಆ ದಿನಗಳಲ್ಲಿ ರಾಜ್ಯದ ಹಿರಿಯ ರಾಜಕಾರಣಿಗಳ ಹೇಳಿಕೆಗಳಿಂದ, ಪದ್ಮಭೂಷಣದಂಥ ಅತ್ಯುನ್ನತ ಪುರಸ್ಕಾರದಿಂದ, 'ಕವಿರತ್ನ ಕಾಳಿದಾಸ' ಚಿತ್ರದ ಅಭೂತಪೂರ್ವ ಯಶಸ್ಸಿನಿಂದ ರಾಜಕುಮಾರ್ ಪತ್ರಿಕೆ ಮತ್ತು ಜನರ ನಡುವೆ ನಿರಂತರವಾಗಿ ಚರ್ಚೆಯ ವಿಷಯವಾಗಿದ್ದರು. ಕರ್ನಾಟಕ ರಾಜ್ಯ ಸರ್ಕಾರ ಸಹಾಯಧನವನ್ನು ಹೆಚ್ಚಿಸಿತು. ಕಪ್ಪು-ಬಿಳುಪು ಚಿತ್ರಗಳಿಗೆ ಒಂದು ಲಕ್ಷವನ್ನೂ ವರ್ಣ ಚಿತ್ರಗಳಿಗೆ ಒಂದೂವರೆ ಲಕ್ಷವನ್ನು ಕೊಡಲು ಒಪ್ಪಿತು. ಕರ್ನಾಟಕದಲ್ಲೇ ತಯಾರಾದ ಕನ್ನಡ ಚಿತ್ರಗಳಿಗೆ ಮಾತ್ರ ಎಂಬ ನಿಯಮ ಹಾಕಿತು. ಆದರೆ ಇನ್ನೂ ಸರಿಯಾದ ಮೂಲಸೌಭ್ಯವಿಲ್ಲದ್ದರಿಂದ ೧೯೮೭ರವರೆಗೆ ಗಡುವು ಕೊಡಲಾಯಿತು. ಇದರ ಫಲವಾಗಿ (ಆ ಅವಧಿಯ ಒಳಗೇ) ಆದಾಗಲೇ ಇದ್ದ ಚಾಮುಂಡೇಶ್ವರಿ, ವಸಂತ್ ಲ್ಯಾಬ್‌ಗಳು ಮತ್ತಷ್ಟು ಆಧುನೀಕರಣಗೊಂಡರೆ ಪ್ರಸಾದ್ ಮತ್ತು ಸಂಕೇತ್ ಸ್ಟುಡಿಯೋಗಳು ಆರಂಭವಾದವು.

೧೯೮೩ರಿಂದ ಉತ್ತಮ ಚಿತ್ರಗಳು ನಿರ್ಮಾಣವಾಗುವುದು ಕಡಿಮೆಯಾಗುತ್ತ ಬಂದಿದ್ದರಿಂದ ಚಿತ್ರರಸಿಕರು ಸಹಜವಾಗಿ ಚಿತ್ರೇತರ ಚಟುವಟಿಕೆಗಳಲ್ಲಿ ಹೆಚ್ಚು ಆಸಕ್ತಿ ವಹಿಸಿರುವುದು ಕಾಣುತ್ತದೆ. ಅವರವರ ಅಭಿಮಾನಿ ನಟರ ಹಿತಾಸಕ್ತಿಗಳನ್ನು ಕಾಯುವ ಕಾರ್ಯಕ್ರಮಗಳು ಪ್ರಧಾನವಾಗಿ ಗೋಚರಿಸುತ್ತವೆ. ಗೋಕಾಕ್ ಚಳವಳಿಯಲ್ಲಿ ರಾಜಕುಮಾರ್ ತೆರೆಯ ಮೇಲಿನಂತಲ್ಲದೆ ಒಂದು ಸರ್ಕಾರವನ್ನೇ ಎದುರಿಸಿದ ನಿಜ ಜೀವನದ ನಾಯಕನಂತೆಯೂ ಕಾಣಿಸಿದ್ದು ನಂತರದ ವರ್ಷಗಳಲ್ಲಿ ಅವರ ಎಲ್ಲಾ ಚಿತ್ರಗಳ ಬಗೆಗೆ ಕನ್ನಡಿಗರಲ್ಲಿ ಒಂದು ಸ್ಥಾಯಿಯಾದ ಒಲವು ಮೂಡಿಸುವುದರಲ್ಲಿ ಬಹುಮುಖ್ಯ ಪಾತ್ರ ವಹಿಸಿದೆ. ಗೋಕಾಕ್ ಚಳವಳಿಯ ಧಾರವಾಡದ ಬೃಹತ್ ಸಭೆಯಲ್ಲಿ ಭಾಗವಹಿಸುವ ಮುನ್ನ ಅವರು ಅಲ್ಲಿನ ಧಾರವಾಡ ಜಿಲ್ಲಾ ರಾಜಕುಮಾರ್ ಅಭಿಮಾನಿ ಸಂಘವನ್ನು ಸ್ವತಃ ಉದ್ಘಾಟಿಸಿದ್ದು ಅವರ ಅಭಿಮಾನಿಗಳಲ್ಲಿ ಸಾ.ರಾ.ಗೋವಿಂದುರವರ ಹೊಸ ನಾಯಕತ್ವದಡಿಯಲ್ಲಿ ನಮ್ಮನ್ನು ರಾಜಕುಮಾರ್ ಸ್ವೀಕರಿಸಿದ್ದಾರೆ ಎಂದು ನಂಬಿಸಿತಲ್ಲದೆ, 'ನಾವು - ರಾಜಕುಮಾರ್ - ಕನ್ನಡ ಎಲ್ಲವೂ ಒಂದೇ' ಎಂಬ ಆಪ್ತವಾದ ಭಾವವನ್ನು ಹುಟ್ಟುಹಾಕಿತು. ಇದರ ಪರಿಣಾಮ ಮುಂದಿನ ವರ್ಷಗಳಲ್ಲಿ ಕರ್ನಾಟಕದ ಸಾರ್ವಜನಿಕ ಜೀವನದಲ್ಲಷ್ಟೇ ಅಲ್ಲ, ಕನ್ನಡ ಚಲನಚಿತ್ರಗಳಲ್ಲೂ ಹಲವಾರು ರೀತಿಯಲ್ಲಿ ಪ್ರಕಟವಾಗುತ್ತಾ ಬಂತು. ಚಿತ್ರಗಳ ಸಂಭಾಷಣೆ, ಹಾಡುಗಳಲ್ಲಿ ಕನ್ನಡ ಭಾಷೆಯ ಹಿರಿಮೆ, ಹೆಗ್ಗಳಿಕೆ, ಅಭಿಮಾನಗಳು ಜಾಗ ಪಡೆದುಕೊಳ್ಳತೊಡಗಿದವು. ಪ್ರತಿಭಾವಂತ ಚಿ.ಉದಯಶಂಕರ್ ಅವರ ಕ್ರಿಯಾಶಕ್ತಿ, ಸೃಜನಶೀಲತೆ ಕನ್ನಡವನ್ನು ಕೇಂದ್ರವಾಗಿಟ್ಟುಕೊಂಡು ಅತ್ಯಂತ ಉತ್ಸಾಹದಿಂದ ಕಾರ್ಯಪ್ರವೃತ್ತವಾಯಿತು.

ಅಂದಿನ ದಿನಗಳಲ್ಲಿದ್ದ ಪರಭಾಷಾ ಚಿತ್ರ-ವ್ಯಕ್ತಿಗಳ ಸ್ಥಾಪಿತ ಪ್ರಭಾವ, ಕುಸಿಯುತ್ತಾ ನಡೆದಿದ್ದ ಚಿತ್ರಗಳ ಗುಣಮಟ್ಟದ ನಡುವೆ ಕನ್ನಡ ಚಿತ್ರಗಳಲ್ಲಿ 'ಕನ್ನಡದ ಆತ್ಮ'ವನ್ನು ಕಸಿ ಮಾಡಲು ಚಿ.ಉದಯಶಂಕರ್ ಪ್ರಜ್ಞಾಪೂರ್ವಕವಾಗಿಯೇ ತೊಡಗಿಕೊಂಡರು ಅನ್ನಿಸುತ್ತದೆ. ಏಕೆಂದರೆ ೧೯೮೩ರ ನಂತರ ಚಿತ್ರಗಳಿಗೆ ಇವರು ರಚಿಸಿದ ಹಾಡುಗಳಲ್ಲಿ, ಬರೆದಿರುವ ಸನ್ನಿವೇಶಗಳಲ್ಲಿ ಕರ್ನಾಟಕದ ಜನಜೀವನ, ನಂಬಿಕೆಗಳು ಹಾಗೂ ಕನ್ನಡದ ಸೊಗಡು ಕಾಣುತ್ತದೆ. ಇದೆಲ್ಲದರೊಂದಿಗೆ ಕನ್ನಡದ ಶ್ರೇಷ್ಠ ಕವಿಗಳ ಕಾವ್ಯದಲ್ಲಿರುವಂಥ ಹೊಳಹು, ಉಪಮೆ, ಹೋಲಿಕೆ, ಪದಪುಂಜಗಳ ಸರಳ ರೂಪವೊಂದು ಹರಳುಗಟ್ಟಿಕೊಂಡಿದೆ. ಇವರ ಗೀತೆ, ಸಂಭಾಷಣೆಯಲ್ಲಿ ಅನಕ್ಷರಸ್ಥರು ಕೇಳಿರದ ಗಣ್ಯರು, ಕವಿಗಳು, ಮಹಾಪುರುಷರ ಹೆಸರುಗಳು ನುಸುಳಿವೆ. ಚಿ.ಉದಯಶಂಕರ್ ಕನ್ನಡದ ಕಾವ್ಯ ಪರಂಪರೆ ಹಾಗೂ ಸಾಹಿತ್ಯದ ಬಗ್ಗೆ ಅಪಾರವಾದ ಪೂಜ್ಯ ಭಾವನೆಯನ್ನು ಹೊಂದಿದ್ದರಿಂದಾಗಿ ಇವರ ರಚನೆಯ ಬಹಳಷ್ಟು ಗೀತೆಗಳಲ್ಲಿ ಅವೆಲ್ಲವುಗಳ ಪ್ರಭಾವಗಳು ಕಂಡರೂ ಅವಕ್ಕೆ ಧ್ಯಾನದ, ನಮನದ ಭಾವ ಒದಗಿ ಬಂದಿದೆ. ಚಿ.ಉದಯಶಂಕರ್ ವ್ಯಕ್ತಿತ್ವದಲ್ಲೇ ಇದ್ದ ವಿನಯ ಸಂಪನ್ನತೆ ಅವರು ಸೃಷ್ಟಿಸಿರುವ ಕನ್ನಡವನ್ನು ಸರಳಗೊಳಿಸಿದೆ. ಜಾನಪದ ಗೀತೆ, ಲಾವಣಿ, ವಚನ ಸಾಹಿತ್ಯ, ಪುರಾಣ, ಇತಿಹಾಸ, ಮಂಕುತಿಮ್ಮನ ಕಗ್ಗ, ಕೈಲಾಸಂ ಕೃತಿಗಳು ಹೀಗೆ ಕನ್ನಡದ ಬಹುಮಾನ್ಯ ಸಾಹಿತ್ಯದ ಮುಖ್ಯ ಅಂಶಗಳೆಲ್ಲ ಚಿ.ಉದಯಶಂಕರ್ ಮೂಲಕ ಮರು ಪ್ರಸ್ತಾಪಗೊಳ್ಳುತ್ತಾ ಅತ್ಯಂತ ಜನಪ್ರಿಯತೆ ಪಡೆದಿವೆ. ಇದರೊಂದಿಗೆ ಮಧ್ಯಮ ಹಾಗೂ ಕೆಳಮಧ್ಯಮ ವರ್ಗದ ಜನರ ಬದುಕಿನ ಕೌಟುಂಬಿಕ ಸರಸ ವಿರಸಗಳನ್ನು ಪ್ರಣಯ, ಪ್ರೇಮ ಸಲ್ಲಾಪಗಳನ್ನು, ಭಕ್ತಿ, ಭಕ್ತನ ಪರವಶತೆಯನ್ನು ಅತ್ಯಂತ ಸರಳವಾಗಿ ಚಿತ್ರಗಳಿಗೆ ಅಳವಡಿಸಿದರು. ರಾಜಕುಮಾರ್ ಅವರನ್ನು ಯಾವ ಗುಣಗಳಿಗಾಗಿ ಜನ ಮೆಚ್ಚಿಕೊಂಡಿದ್ದಾರೋ ಅವಕ್ಕೆ ಗೌರವದ ಭಾಷೆಯಲ್ಲಿ ಅಭಿವ್ಯಕ್ತಿ ನೀಡಿದ್ದು ಇವರ ಗುಣವೋ, ದೋಷವೋ ಬೇರೆಯ ಮಾತು. ಆದರೆ ರಾಜಕುಮಾರ್ ಮತ್ತು ಉದಯಶಂಕರ್ ಉತ್ತಮ ಗೆಳೆಯರಾಗಿದ್ದುದು ಮಾತ್ರ ಹಲವಾರು ಚಿತ್ರಗಳಲ್ಲಿ ಕೆಲವಾರು ಉತ್ತಮ ದೃಶ್ಯ ಸನ್ನಿವೇಶಗಳ ಸೃಷ್ಟಿಗೆ ಕಾರಣವಾಗಿದೆ. ಇದೇನೇ ಇದ್ದರೂ ಉದಯಶಂಕರ್‌ರವರ ಲೇಖನಿ ರಾಜಕುಮಾರ್ ಅವರನ್ನು ಇಷ್ಟಪಡುತ್ತಿದ್ದವರ ಹೃದಯದಲ್ಲಿ ಅವರನ್ನು ಇನ್ನಷ್ಟು ಗಟ್ಟಿಯಾಗಿ ನೆಲೆ ನಿಲ್ಲಿಸುವಲ್ಲಿ ಬಹುಮುಖ್ಯ ಪಾತ್ರ ನಿರ್ವಹಿಸಿತು. ಉತ್ತಮ ಸ್ನೇಹದಿಂದುಂಟಾದ ಶ್ರದ್ಧೆಯ ಕಾರಣದಿಂದಲೇ ಅವರ ಚಿತ್ರಗಳ ಸಾಹಿತ್ಯ ಅಚ್ಚುಕಟ್ಟಾಗಿ ರೂಪುಗೊಳ್ಳುತ್ತಿತ್ತು. ಜೊತೆಗೆ ಸದಭಿರುಚಿಯನ್ನು ಬಿಟ್ಟು ದೂರ ಸರಿಯಬಾರದೆಂಬ ರಾಜಕುಮಾರ್ ಗಾಢವಾದ ನಂಬಿಕೆ ಅವರ ಬೆಳವಣಿಗೆಗೆ ಇನ್ನಷ್ಟು ಪೋಷಣೆಯನ್ನು ಒದಗಿಸಿದ್ದಲ್ಲದೆ ಅವರ ಪ್ರತಿ ಚಿತ್ರವೂ ಚೆನ್ನಾಗಿಯೇ ಇರುತ್ತದೆ ಎಂಬ ಭಾವನೆಯನ್ನು ಬಲವಾಗಿಸಿ ಅದನ್ನು ಸಾಧ್ಯ ಮಾಡಿಯೂ ತೋರಿಸಿತು. ತನ್ನ ಕಾವ್ಯಮಯವಾದ ನಿರೂಪಣೆಯಿಂದಾಗಿ 'ಕವಿರತ್ನ ಕಾಳಿದಾಸ' ಚಿತ್ರ ಒಂದು ಹೊಸ ಆಯಾಮವನ್ನೇ ಸೃಷ್ಟಿಸಿ ಮುನ್ನಡೆದಿತ್ತು. ೨೫ ವಾರಗಳ ಯಶಸ್ವಿ ಪ್ರದರ್ಶನವನ್ನು ಕಂಡ ೧೯೮೩ರ ಏಕೈಕ ಚಿತ್ರವಾಯಿತು. ಮದರಾಸಿನ

ಎ.ವಿ.ಎಂ.ಸ್ಟುಡಿಯೋದಲ್ಲಿ ನಿರ್ಮಿಸಲಾಗಿದ್ದ ಅರಮನೆಯ ವೈಭವದ ಸೆಟ್ಟುಗಳು, ಸುಂದರವಾದ ಛಾಯಾಗ್ರಹಣ, ಸುಮಧುರವಾದ ಹಾಡುಗಳು ಚಿತ್ರರಸಿಕರ ಮೆಚ್ಚುಗೆಗೆ ಪಾತ್ರವಾಗಿದ್ದವು. ಭೋಜರಾಜನ ಪಾತ್ರದಲ್ಲಿ ಶ್ರೀನಿವಾಸಮೂರ್ತಿ ರಾಜಕುಮಾರ್‌ಗೆ ಸರಿಸಾಟಿಯಾಗುವಂತೆ ಅಭಿನಯಿಸಿ ತಾವು ಒಬ್ಬ ಉತ್ತಮ ಕಲಾವಿದ ಎಂಬುದನ್ನು ಸಾಬೀತುಪಡಿಸಿಕೊಂಡಿದ್ದರು. ಪೆದ್ದ ಕುರುಬನಾಗಿ ಹಾಸ್ಯದ ಶೈಲಿಯಲ್ಲಿ, ಕಾಳಿದಾಸನಾಗಿ ಪಂಡಿತನ ಗಾಂಭೀರ್ಯದಲ್ಲಿ, ದುಷ್ಯಂತನ ಪಾತ್ರದಲ್ಲಿ ಸುಂದರ-ಗಂಭೀರವಾಗಿದ್ದ ರಾಜಕುಮಾರ್ ನಟನೆ ಈ ಚಿತ್ರವನ್ನು ಅವರ ಚಲನಚಿತ್ರ ಬದುಕಿನ ಮತ್ತೊಂದು ಮೈಲಿಗಲ್ಲನ್ನಾಗಿಸಿತು. ಹಾಗೆಯೇ ಕನ್ನಡ ಚಿತ್ರರಂಗದ ೬೦-೭೦ರ ದಶಕದ ಪ್ರಮುಖ ನಿರ್ದೇಶಕರ ಪಟ್ಟಿಯಲ್ಲಿ ರೇಣುಕಾಶರ್ಮರ ಹೆಸರನ್ನು ಶಾಶ್ವತವಾಗಿ ಪ್ರತಿಷ್ಠಾಪಿಸಿತು. ಪೌರಾಣಿಕ ರಂಗಭೂಮಿ ಸಂಸ್ಕೃತಿಯ ಸಾಂಪ್ರದಾಯಿಕ ಶೈಲಿಯಲ್ಲಿದ್ದ ಈ ಚಿತ್ರದ 'ಸದಾ ಕಣ್ಣಲಿ...', 'ಪ್ರಿಯತಮಾ...' ಹಾಡುಗಳು ಹೆಚ್ಚು ಜನಪ್ರಿಯತೆ ಗಳಿಸಿದವು. ಬಿ.ನಾಗರಾಜರಾವ್ ಹಾಗೂ ಪೇಕೇಟಿ ರಂಗಾ ಅವರ ಕಲಾ ನಿರ್ದೇಶನ ಈ ಚಿತ್ರದ ಮಹತ್ವವನ್ನು ಹೆಚ್ಚಿಸಿದ ಮುಖ್ಯ ಅಂಶಗಳಲ್ಲೊಂದು.

ಐತಿಹಾಸಿಕ ಅಂಶಗಳ ಇಂಥ ಅಪರೂಪದ ಚಿತ್ರದೊಂದಿಗೆ ಯುವ ಪ್ರಣಯ ಜೋಡಿಯೇ ಆಕರ್ಷಣೆಯಾದ 'ಆಶಾ' ಕೂಡ ಪರವಾಗಿಲ್ಲ ಅನ್ನಿಸುವಂಥ ಪ್ರಯತ್ನ. ಈ ಚಿತ್ರದ ಮೂಲಕ ಬೇಬಿ ಇಂದಿರಾ, ಕುಮಾರಿ ಇಂದಿರಾ ಆಗಿ ನಾಯಕಿಯಾದರು. ಆದರೆ ಮುಂದಿನ ದಿನಗಳು ಅವರಿಗೆ ಯಶಸ್ಸು ತರಲಿಲ್ಲ. ಈ ಚಿತ್ರದ ನಿರೂಪಣೆ, ಕಥೆ ನಡೆಯುವ ಪರಿಸರ ಭಿನ್ನವಾಗಿದ್ದು ನಿರ್ದೇಶಕ ಎ.ಟಿ.ರಘು ಅವರನ್ನು ಕನ್ನಡ ಚಿತ್ರರಂಗದ ಖಾಯಂ ನಿರ್ದೇಶಕರನ್ನಾಗಿಸಿತು.

ಸಾಹಸ ಚಿತ್ರಗಳ ನಿರ್ದೇಶನದಲ್ಲಿ ಹೆಸರಾದ ಕೆ.ಎಸ್.ಆರ್.ದಾಸ್ ಸಂಗ್ರಾಮ್‌ಸಿಂಗ್ ಮತ್ತು ಜಯರಾಜ್‌ಸಿಂಗ್ ಅವರಿಗಾಗಿ ನಿರ್ದೇಶಿಸಿದ ಚಿತ್ರ 'ತಿರುಗುಬಾಣ'. ಇದೂ ಒಂದು ಪುನರವತರಣಿಕೆ ಚಿತ್ರ. ಅಂಬರೀಷ್, ಆರತಿ, ಹೇಮಾಚೌಧರಿ, ವಜ್ರಮುನಿ, ದಿನೇಶ್, ಮಾ|ಅರ್ಜುನ್ ಪಾತ್ರವರ್ಗವಿತ್ತು. ಮುಖವಾಡ ಧರಿಸಿ ಕೊಲೆ ಮಾಡಿದ ವ್ಯಕ್ತಿಯೊಬ್ಬನನ್ನು ಕಂಡುಹಿಡಿಯುವ ಕುತೂಹಲ ಕೆರಳಿಸುವ ಚಿತ್ರ. ಆಗಾಗ ಬರುವ ಫೋನ್ ಕಾಲ್‌ಗಳಿಗೆ ಹೆದರುವ ಹೆಣ್ಣಾಗಿ ಆರತಿ ಅಭಿನಯ ಚೆನ್ನಾಗಿತ್ತು. ವಜ್ರಮುನಿ ಪೊಲೀಸ್ ಅಧಿಕಾರಿಯಾಗಿ ನಟಿಸಿದ್ದರು. ಚಿತ್ರದ ಒಂದು ಕ್ಲಬ್ ಡ್ಯಾನ್ಸ್‌ಗಾಗಿ ಮಾತ್ರ ಜಯಮಾಲ ಕಾಣಿಸಿಕೊಂಡರು. ಅವಕಾಶಗಳಿಲ್ಲದಾಗ ಎಂತಹ ಪಾತ್ರಗಳಿಗೂ ಒಪ್ಪಿಕೊಳ್ಳಬೇಕಾಗುತ್ತದೆ. ಇದೇ ಚಿತ್ರದಲ್ಲಿ ಸ್ವತಃ ಎಸ್.ಪಿ.ಬಾಲಸುಬ್ರಹ್ಮಣ್ಯಂ ಅವರೇ ಸ್ಟೇಜ್ ಒಂದರಲ್ಲಿ ಹಾಡುವ 'ಇದೇ ನಾಡು.. ಇದೇ ಭಾಷೆ...' ಹಾಡು ಅತ್ಯಂತ ಜನಪ್ರಿಯವಾಯಿತು. ಸತ್ಯಂ ಅವರು ಉತ್ತಮ ಸಂಗೀತ ಒದಗಿಸಿದರು.

ಪತ್ತೇದಾರಿ ಶೈಲಿಯ 'ಸಿಡಿದೆದ್ದ ಸಹೋದರ', 'ಕೆರಳಿದ ಹೆಣ್ಣು', 'ಚಂಡಿ ಚಾಮುಂಡಿ', 'ಒಂದೇ ಗುರಿ', 'ಜಗ್ಗು' ಇಂಥ ಚಿತ್ರಗಳು ರೀಮೇಕ್ ಹಾಗೂ ಅನ್ಯಭಾಷಾ ಚಿತ್ರಗಳಿಂದ ಸ್ಫೂರ್ತಿ ಪಡೆದು ವ್ಯಾಪಾರಿ ಯಶಸ್ಸಿಗಾಗಿ ಒಂದಾದ ಮೇಲೊಂದರಂತೆ ಮಾರುಕಟ್ಟೆಗೆ ಇಳಿಯುತ್ತಿದ್ದಂಥವು.

೫೦ ದಿನಗಳ ಪ್ರದರ್ಶನ ಕಂಡ 'ಒಂದೇ ಗುರಿ' ಯಂತೂ ನಮ್ಮ ಸಮಾಜ ಪರಿಸರಕ್ಕೆ ಹೊರತಾದ, ನಮ್ಮಲ್ಲಿ ನಡೆಯದಂಥ ಇಂಗ್ಲಿಷ್‌ನ 'ಮ್ಯಾಡ್ ಮ್ಯಾಕ್ಸ್' ಚಿತ್ರದ ನಕಲಾಗಿತ್ತು. ಹತ್ತು ಜನ ರೌಡಿಗಳು ರಸ್ತೆಯುದ್ದಕ್ಕೂ ದರೋಡೆ ಮಾಡಿಕೊಂಡು ಹೋಗುವ ಇಂಥ ಚಿತ್ರದಲ್ಲೂ ರಾಜನ್-ನಾಗೇಂದ್ರ ಅವರು 'ಈ ಭಾವಗೀತೆ ನಿನಗಾಗಿ ಹಾಡಿದೆ' ಯಂಥ ಮಧುರ ಗೀತೆಯನ್ನು ಸೃಷ್ಟಿಸಿರುವುದು ನಮ್ಮ ಎರಡನೆಯ ತಲೆಮಾರಿನ ಸಂಗೀತ ನಿರ್ದೇಶಕರ ಅಪೂರ್ವ ಶ್ರದ್ಧಾಶಕ್ತಿಗೆ ಶ್ರೇಷ್ಠ ಉದಾಹರಣೆಯಾಗಿದೆ. ೧೯೮೩ ರಲ್ಲಿ ತೆರೆಗೆ ಬಂದ 'ಆನಂದಸಾಗರ'ದಲ್ಲಿ ಮಾ|ಹಿರಣ್ಣಯ್ಯ ಅಭಿನಯಿಸಿದ್ದರು. ಈ ಚಿತ್ರದಲ್ಲಿ ಕೆಲವು ದೋಷಗಳು ನುಸುಳಿಕೊಂಡಿದ್ದವು. ಮುಖ್ಯವಾಗಿ ಧ್ವನಿಗ್ರಹಣವೇ ಸರಿ ಇರಲಿಲ್ಲ. ಕೆ.ವಿ.ಗುಪ್ತ ''ಚಿತ್ರಮಂದಿರದ ಎದುರು ಶಬ್ದಗ್ರಹಣ ಸರಿಯಿಲ್ಲ. ಅದನ್ನು ಸಹಿಸಿಕೊಳ್ಳಿ ಎಂತ ಬೋರ್ಡ್ ಬರೆಸಿ ಇಟ್ಟೆವು. ಆದರೂ ಚಿತ್ರ ೫೦ ದಿನದ ಮೇಲೆ ಓಡಿತು, ನಷ್ಟವಾಗಲಿಲ್ಲ'' ಎನ್ನುತ್ತಾರೆ.

ಹಾಡು, ಅತ್ಯಾಚಾರ, ದರೋಡೆ, ಕೊಲೆ, ಹಿಂಸೆಗಳೇ ತುಂಬಿದ ದೃಶ್ಯಗಳಿರುವ ಚಿತ್ರಗಳ ನಡುವೆ ಸಣ್ಣ ಅಬ್ಬರವೂ ಇಲ್ಲದ 'ಅನ್ವೇಷಣೆ' ಯಂಥ ಚಿತ್ರ ರೂಪುಗೊಳ್ಳುತ್ತದೆ ಎಂಬುದೇ ಕನ್ನಡ ಚಿತ್ರರಂಗ ತನ್ನೊಳಗೆ ಸಾಧಿಸಿಟ್ಟುಕೊಂಡಿದ್ದ ವೈವಿಧ್ಯವನ್ನು ಹೇಳುತ್ತದೆ. ಕನ್ನಡ ಚಿತ್ರರಂಗವನ್ನು ಅಗ್ಗದ, ವ್ಯಾಪಾರದ ಮಾರುಕಟ್ಟೆಯನ್ನಾಗಿಸುವ ಅನ್ಯ ಪ್ರಭಾವಗಳನ್ನು ಕೆಲವರಾದರೂ 'ಅನ್ವೇಷಣೆ' ಯಂಥ ಸಣ್ಣಪುಟ್ಟ ಪ್ರಯತ್ನಗಳ ಮೂಲಕ ತಡೆದು ನಿಲ್ಲಿಸಲು ಪ್ರಯತ್ನಿಸಿದ್ದಾರೆಂಬುದೇ ನಮ್ಮ ಚಿತ್ರರಂಗದ ವೈಶಿಷ್ಟ್ಯ. 'ಅಂತರಾಳ', 'ಬೆಂಕಿಯ ಬಲೆ', 'ಬ್ಯಾಂಕರ್ ಮಾರ್ಗಯ್ಯ', 'ಫಣಿಯಮ್ಮ', 'ನೋಡಿ ಸ್ವಾಮಿ ನಾವಿರೋದು ಹೀಗೆ', 'ಅಪರಂಜಿ', 'ಶೃಂಗಾರ ಮಾಸ', 'ಅನುಭವ', 'ಆಕ್ಸಿಡೆಂಟ್', ಈ ಬಗೆಯ ಚಿತ್ರಗಳು ೭೦-೮೦ರ ದಶಕದ ಉತ್ತಮ ಕಾರ್ಯದ ನೆನಪುಗಳು ಅನಾಮತ್ತಾಗಿ ಭಗ್ನಗೊಳ್ಳುವುದನ್ನು ತಡೆಯಲು ನಡೆಸಿದ ಕೊನೆಯ ಪ್ರಯತ್ನಗಳಂತೆ ಕಾಣುತ್ತವೆ. ಉದ್ಯಮಿಗಳಲ್ಲಿ ಕಡಿಮೆಯಾಗುತ್ತ ಬಂದ ಸಾಮಾಜಿಕ ಕಾಳಜಿ, ಸಾರ್ವಜನಿಕ ಜೀವನದಲ್ಲಿ ಭ್ರಷ್ಟಾಚಾರವು ಒಂದು ಮೌಲ್ಯ ಎಂಬಂತಾದದ್ದು ಬಹಳ ನಿರ್ಮಾಪಕರು ಚಿತ್ರನಿರ್ಮಾಣವನ್ನು ಲಘುವಾಗಿ, ಎಲ್ಲ ರೀತಿಯ ವ್ಯಾಪಾರದಂತೆ ಇದೂ ಕೂಡ ಎಂದು ಭಾವಿಸಲು ಪರೋಕ್ಷ ಪ್ರೇರಣೆ ನೀಡಿದೆ.



(ಚಿತ್ರ ೫೪) 'ಅನ್ವೇಷಣೆ' ಚಿತ್ರದಲ್ಲಿ ಗಿರೀಶ್ ಕಾರ್ನಾಡ್ ಸ್ಮಿತಾ ಪಾಟೀಲ್, ಬೇಬಿ ಅಮ್ಮ, ಕುಮಾರಿ ಜಯಾ

೧೯೭೨ ರಿಂದ ೧೯೮೦ ರವರೆಗೆ ರಾಜ್ಯದ ಇತಿಹಾಸದಲ್ಲಿ ಅತಿ ಹೆಚ್ಚು ಕಾಲ ಶಕ್ತಿಶಾಲಿ ಮುಖ್ಯಮಂತ್ರಿಯಾಗಿ ವಿಜೃಂಭಿಸಿದ ಡಿ.ದೇವರಾಜ ಅರಸು ಅವರು ಕ್ರಾಂತಿಕಾರಕವಾದ ಶ್ರೇಷ್ಠ ಆಡಳಿತವನ್ನು ನೀಡಿದ್ದರೂ ಭ್ರಷ್ಟಾಚಾರವನ್ನು ಅದರ ಜೊತೆಯಲ್ಲೇ ಪೋಷಿಸಿಕೊಂಡು ಬಂದ ಅಪಖ್ಯಾತಿಯನ್ನೂ ಪಡೆದುಕೊಂಡಿದ್ದರು. ''ಸರ್ಕಾರವನ್ನು ಉಳಿಸಿಕೊಳ್ಳಲು ಶಾಸಕರನ್ನು ಸಾಕಬೇಕಾಯಿತು'' ಎಂದು ಅವರು ತಮ್ಮ ಆಡಳಿತದ ಕೊನೆಯ ದಿನಗಳಲ್ಲಿ ಬಹಿರಂಗವಾಗಿ ಹೇಳಿದ್ದು ದುಡಿಮೆ-ಪ್ರಾಮಾಣಿಕತೆಯೇ ಬದುಕಿನ ಆದರ್ಶವೆಂದು ಭಾವಿಸಿರುವ ರೈತರು, ಅನಕ್ಷರಸ್ಥರು ಹಾಗೂ ಮಧ್ಯಮವರ್ಗದವರನ್ನು ಬೆಚ್ಚಿಬೀಳಿಸಿತ್ತು. ಅನೀತಿ, ಭ್ರಷ್ಟಾಚಾರದಲ್ಲಿ ಅತ್ಯಂತ ಗುಪ್ತವಾಗಿ, ಖಾಸಗಿಯಾಗಿ, ಅದೊಂದು ನಾಚಿಕೆಗೇಡಿನ ಸಂಗತಿ ಎಂಬಂತೆ ತೊಡಗಿಕೊಂಡಿದ್ದವರಿಗೆ ತಾವು ಮಾಡುತ್ತಿರುವುದು ಬದಲಾಗುತ್ತಿರುವ ಸಮಾಜದಲ್ಲಿ ಅಂಥ ಮಹಾಪರಾಧವಲ್ಲ ಅನ್ನಿಸಿತು. ಅಧಿಕಾರದಲ್ಲಿ ಉಳಿದುಕೊಳ್ಳಲು ಒಬ್ಬ ಮುಖ್ಯಮಂತ್ರಿಯೇ ಹೀಗೆ ಮಾಡಿರಬೇಕಾದ ಸಮಾಜದಲ್ಲಿ ತಾವು ತಪ್ಪಿತಸ್ಥರೇ ಅಲ್ಲ ಎಂಬ ಸಾರ್ವತ್ರಿಕ ಭಾವನೆ ಬೆಳೆದು ಬಂತು. ಅವಕಾಶ ಸೃಷ್ಟಿಸಿಕೊಳ್ಳುವುದು, ಸಿಕ್ಕಿದಾಗ ಹಣ ಮಾಡಿಕೊಳ್ಳುವುದು ಬದುಕಿನ ಒಂದು ಸಹಜ ಸಾಮಾನ್ಯ ಸಂಗತಿ ಎಂಬ ಭಾವನೆಗೆ ಮುಖ್ಯಮಂತ್ರಿಯ ಮಾತು ಅಧಿಕೃತ ಮನ್ನಣೆ ದೊರಕಿಸಿತು. ಜನರ ಇಂಥ ಮನೋಭಾವ ಅನಂತರದ ದಿನಗಳಲ್ಲಿ ಇನ್ನಷ್ಟು ಗಟ್ಟಿಯಾದದ್ದು ಕರ್ನಾಟಕದ ಒಂದು ದುರಂತ ಅಧ್ಯಾಯ. ಅರಸು ನಂತರ ಮುಖ್ಯಮಂತ್ರಿಯಾಗಿ ಬಂದ ಗುಂಡೂರಾಯರ ಸರ್ಕಾರದಲ್ಲೂ ಹಗರಣಗಳು, ಅಧಿಕಾರಶಾಹಿಯ ಸ್ವೇಚ್ಛಾವರ್ತನೆ, ಪೊಲೀಸ್ ವ್ಯವಸ್ಥೆಯಲ್ಲಿನ ದೌರ್ಜನ್ಯ, ಭ್ರಷ್ಟಾಚಾರದ ಪ್ರಕರಣಗಳು ಹೆಚ್ಚಿದವು. ಇಂಥವನ್ನೇ ಕಂಡು ಕೇಳುತ್ತಾ ಜನರಿಗೆ ಅತಂಕ ಹೆಚ್ಚಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಮೇಲಿಂದ ಮೇಲೆ ಒಂದೇ ಬಗೆಯ ಪಾತಕಗಳನ್ನು ಕೇಳುತ್ತಾ ನೋಡುತ್ತಿದ್ದುದರಿಂದ ಅವಕ್ಕೆ ಪ್ರಹಸನದ, ರಂಜನೆಯ ಲಕ್ಷಣಗಳು ಪ್ರಾಪ್ತವಾಗುತ್ತಾ ಬಂದವು. ಇದೆಲ್ಲ ಮಳೆಹೊಯ್ದಂತೆ ಸೃಷ್ಟಿಯಾಗುತ್ತಿದ್ದ ರಾಜಕೀಯ ಚಿತ್ರಗಳಲ್ಲಿ ಯಥಾವತ್ತಾಗಿ ಪ್ರತಿಫಲನಗೊಂಡಿತು. ೮೦-೯೦ರ ದಶಕದಲ್ಲಿ ಇದು ಎಂಥ ವಿಪರೀತಕ್ಕೆ ಹೋಯಿತೆಂದರೆ ಲಕ್ಷಾಂತರ ರೂಪಾಯಿಗಳ ಭ್ರಷ್ಟಾಚಾರದ ಪ್ರಕರಣವೊಂದು ಬಯಲಿಗೆ ಬಂದರೆ ಯಾರೂ ಆಶ್ಚರ್ಯ ಪಡುತ್ತಿರಲಿಲ್ಲ. ಕೋಟಿ ಅಥವಾ ಬಹುಕೋಟಿ ರೂಪಾಯಿಗಳ ಹಗರಣವಾದರೆ ಮಾತ್ರ ಜನರ ಹುಬ್ಬು ಅಷ್ಟಿಷ್ಟು ಮೇಲೇರುತ್ತಿತ್ತು. ಹೀಗೆ ರಾಜಕಾರಣಿಗಳ ಆಡಳಿತ ಶೈಲಿಯು ಸಾರ್ವಜನಿಕರ ನೈತಿಕ ಪ್ರಜ್ಞೆಯನ್ನು ಕ್ರಮೇಣ ಜಡ್ಡುಗಟ್ಟಿಸುತ್ತಾ ಬಂತು. ಇದೆಲ್ಲ ರಾಜಕೀಯ ಚಿತ್ರಗಳಲ್ಲಿ ತದ್ವತ್ತಾಗಿ ಅಥವಾ ಇನ್ನಷ್ಟು ಉತ್ಪ್ರೇಕ್ಷಿತವಾಗಿ ಚಿತ್ರಣಗೊಂಡವು. ಜಬ್ಬಾರ್ ಪಟೇಲ್‌ರ ಮರಾಠಿ ಚಿತ್ರ 'ಸಿಂಹಾಸನ್'ನ ನೇರ ಭಟ್ಟಿಯಾದ ಕನ್ನಡದ 'ಸಿಂಹಾಸನ' ಚಿತ್ರದಲ್ಲಿ ಮೂಲಕಥೆಯಲ್ಲಿಲ್ಲದ 'ಮುಖ್ಯಮಂತ್ರಿ ತುಲಾಭಾರ'ದ ಸನ್ನಿವೇಶವನ್ನು ಸೇರಿಸಿದ್ದರ ಹಿಂದೆ ನಿರ್ದೇಶಕ ಸಿ.ಆರ್.ಸಿಂಹ ಅವರಿಗೆ ಅಂದಿನ ರಾಜಕೀಯ ಹಿನ್ನೆಲೆಯ ಸ್ಫೂರ್ತಿ ಇತ್ತು. ಇದನ್ನು ಅಳವಡಿಸಿದಾಗ ಗುಂಡೂರಾವ್‌ರವರು ಮುಖ್ಯಮಂತ್ರಿಗಳಾಗಿದ್ದರು ಮತ್ತು ನಿರಂತರವಾಗಿ ತುಲಾಭಾರಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಇನ್ನು ಕೆಲವು ಚಿತ್ರಗಳಲ್ಲಿ ಇವರೇ ಹುಟ್ಟುಹಾಕಿದ ಸಂಸ್ಕೃತಿಯ ಫಲಗಳಾದ ಬೆಳ್ಳಿ ಗದೆ, ಕತ್ತಿ, ಗುರಾಣಿಗಳ ಸನ್ಮಾನಗಳು ಸೇರ್ಪಡೆಯಾದವು.

ಇಂಥದೇ ಇನ್ನೊಂದು ರಾಜಕೀಯ ಪ್ರಸಂಗ ಯಥಾವತ್ತಾಗಿ ೧೯೯೪ ರಲ್ಲಿ ತೆರೆಕಂಡ 'ಪ್ರಜಾಶಕ್ತಿ' ಚಿತ್ರದಲ್ಲಿತ್ತು. ಆಗ ಮುಖ್ಯಮಂತ್ರಿಗಳಾಗಿದ್ದ ಬಂಗಾರಪ್ಪ ಸಮಾರಂಭವೊಂದರಲ್ಲಿ ಡೊಳ್ಳು ಬಾರಿಸುತ್ತಾ ಕುಣಿದಿದ್ದರು. ಅದನ್ನು ಈ ಚಿತ್ರದಲ್ಲಿ ವಿಡಂಬನಾತ್ಮಕವಾಗಿ ಸೃಷ್ಟಿಸಲಾಗಿತ್ತು. ಕೇವಲ ೩೦ ವರ್ಷಗಳಷ್ಟು ಕಡಿಮೆ ಅವಧಿಯಲ್ಲಿ ಗಾಂಧೀಜಿ, ನೆಹರು, ಲಾಲ್ ಬಹದೂರ್ ಶಾಸ್ತ್ರಿ, ವಲ್ಲಭಭಾಯ್ ಪಟೇಲ್, ಕಡಿದಾಳ್ ಮಂಜಪ್ಪ, ನಿಜಲಿಂಗಪ್ಪ ಇವರುಗಳಂಥ ಮಾದರಿ ಮುತ್ಸದ್ದಿಗಳ ಪ್ರಭಾವಲಯದಿಂದ ಸಿನಿಮಾ ಮಾಧ್ಯಮ ಮುಕ್ತವಾಗತೊಡಗಿತು. ಹೀಗೆ ಕನ್ನಡ ಚಿತ್ರರಂಗ ಕಳೆದ ದಶಕಗಳಲ್ಲಿ ಪಡೆದುಕೊಂಡ ತನ್ನ ಅತ್ಯಂತ ಸೊಗಸಿನ, ಸಜ್ಜನಿಕೆಯ, ಸವಿರಾದ ಅಪ್ಪಟ ಕನ್ನಡದ ಸಾಂಸ್ಕೃತಿಕ ಆತ್ಮವನ್ನು ಸ್ವಲ್ಪ ಸ್ವಲ್ಪವೇ ಕಳೆದುಕೊಳ್ಳುತ್ತ ಸೇಡು, ದ್ವೇಷ, ತಂತ್ರ-ಕುತಂತ್ರಗಳ ರಾಜಕೀಯ ಆತ್ಮವನ್ನು ಧರಿಸಿಕೊಳ್ಳುತ್ತಾ ಬಂತು.

ಕೆಟ್ಟ ನಾಯಕತ್ವದ ಅಥವಾ ಆಡಳಿತ ಉಂಟುಮಾಡುವ ಪರಿಣಾಮ ಯಾವಾಗಲೂ ಒಂದು ವಲಯಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ''ಸಿಕ್ಕಾಗ ಸಿಕ್ಕಿದಷ್ಟು ಹೆಕ್ಕಬೇಕು'' ಎಂಬ ಮನೋಧರ್ಮ ಸಮಾಜದ ಎಲ್ಲ ವಲಯಗಳಲ್ಲೂ ಕಾಣಿಸಿಕೊಳ್ಳತೊಡಗಿತು. ಥಿಯೇಟರ್‌ಗಳ ಬಾಡಿಗೆ, ಕಲಾವಿದ-ಕಾರ್ಮಿಕರ ಸಂಭಾವನೆ, ವಾದ್ಯ ಸಂಯೋಜಕರ ಗೌರವ ಧನ ಪ್ರತಿವರ್ಷವೂ ಹೆಚ್ಚುತ್ತಾ ಹೋಗಿದ್ದಕ್ಕೆ ಯಾವ ನೈತಿಕ ಅಥವಾ ವಾಸ್ತವಿಕ ನೆಲೆಗಟ್ಟೂ ಇರಲಿಲ್ಲ. ಆಸೆ-ದುರಾಸೆಗಳ ನಡುವಿನ ಅತ್ಯಂತ ಸೂಕ್ಷ್ಮವಾದ ಗೆರೆ ಮರೆಯಾಗುತ್ತಾ ಬಂತು. ಜೀವನದ ಮೌಲ್ಯಗಳ ಅಪಮೌಲ್ಯೀಕರಣ ಅತ್ಯಂತ ವೇಗವಾಗಿ ಆಗ ತೊಡಗಿದ್ದಷ್ಟೇ ಅಲ್ಲ, ಯಾವುದೇ ಪುರಾಣ, ಇತಿಹಾಸ, ಧರ್ಮ, ವ್ಯಕ್ತಿ, ಸಿದ್ಧಾಂತಗಳ ಪ್ರಖರ ಪ್ರಭಾವ ಈ ದಶಕ ಮತ್ತು ನಂತರದ ದಶಕದಲ್ಲಿ ಆಗಿರುವುದಕ್ಕೆ ನಿದರ್ಶನಗಳಿಲ್ಲ. ಹೀಗೆ ಸಿನಿಮಾದಂಥ ಶ್ರೇಷ್ಠ ಮಾಧ್ಯಮ ಜನರ ನಡುವೆಯಿದ್ದರೂ ಅವರ ಸಾಂಸ್ಕೃತಿಕ ಪ್ರಜ್ಞೆಯಿಂದ ದೂರ ಸರಿಯುತ್ತ ಬಂದು, ರಾಜಕೀಯ ಮತ್ತು ವ್ಯಾವಹಾರಿಕ ನೆಲೆಗಳಲ್ಲಿ ಆಶ್ರಯ ಪಡೆಯಿತು.

ನಿರಾಶಾದಾಯಕವಾದ ಇಂಥ ಹಿನ್ನೆಲೆಯಲ್ಲಿ ಚಿತ್ರಗಳಿಗಿಂತ ಚಿತ್ರರಂಗದ ವ್ಯಕ್ತಿಗಳ ಸುತ್ತಮುತ್ತಲಿನ ಘಟನೆಗಳೂ ಹೆಚ್ಚು ಸದ್ದು ಗದ್ದಲ ಉಂಟುಮಾಡುತ್ತಿದ್ದುದು ಸಹಜವಾಗಿಯೇ ಇದೆ. ಚಿತ್ರ ಮಾಧ್ಯಮ ತನ್ನ ಭಾಷೆಯನ್ನು ಬೆಳೆಸಿಕೊಳ್ಳುತ್ತಿದ್ದುದರ ಜೊತೆಗೇ ಈ ನೆಲದ ಸಂಸ್ಕೃತಿಯ ಸೆಳೆತಗಳಿಂದ ದೂರ ಸರಿಯುತ್ತ ಹೋದದ್ದು ಈ ಸಂದರ್ಭದ ವಿಷಾದಕರ ಬೆಳವಣಿಗೆ. ಇದರಿಂದಾಗಿಯೇ ಅತ್ಯಂತ ಸಾಧಾರಣ ಚಿತ್ರಗಳಲ್ಲಿ ಇರಬಹುದಾದ ಉತ್ತಮ ಅಂಶಗಳನ್ನು ಗುರುತಿಸುವ ಅನಿವಾರ್ಯತೆ ಎದುರಾಗುತ್ತದೆ.

ನಾಗಾಭರಣ ನಿರ್ದೇಶನದ 'ಅನ್ವೇಷಣೆ' ಯಾವುದೇ ಹಿಂಸಾತ್ಮಕ ದೃಶ್ಯಗಳಿಲ್ಲದ ರಹಸ್ಯ ಶೋಧನೆಯ ಕುತೂಹಲಕರ ಕಥೆಯನ್ನು ಆಧರಿಸಿದೆ. ಮಧ್ಯಮ ವರ್ಗದ ಕುಟುಂಬದ ಮನೆಯೊಂದರಲ್ಲಿ ಕಾಣಿಸಿಕೊಳ್ಳುವ ಅಪರಿಚಿತ ವ್ಯಕ್ತಿಯ ಶವದ ಸುತ್ತ ಅನುಮಾನ, ಅಸಹನೆ, ಆತಂಕಗಳು ಬೆಳೆಯುತ್ತಾ ಹೋಗುವುದನ್ನು ಸರಳವಾಗಿ, ನೇರವಾಗಿ ನಿರೂಪಿಸಿದ ವಿಧಾನ ಆಗ್ಗೆ ಅತ್ಯಂತ ಹೊಸದಾಗಿದ್ದು ಗಮನ ಸೆಳೆಯಿತು. ಗಿರೀಶ್ ಕಾರ್ನಾಡ್, ಸ್ಮಿತಾ ಪಾಟೀಲ್, ಅನಂತ್‌ನಾಗ್‌ರಂಥ ಉತ್ತಮ ಕಲಾವಿದರ ಅಭಿನಯ ಚಿತ್ರದ ಪರಿಣಾಮವನ್ನು ಹೆಚ್ಚಿಸಿತ್ತು.

''...ಒಂದು ರೀತಿಯ ಬ್ಲಾಕ್ ಕಾಮಿಡಿಗೆ ಒತ್ತು ಕೊಟ್ಟಿದ್ದೆ. ನಟನ ಒಳಗಿನ ಭಯ, ಆತಂಕಗಳು, ಅಸಹಾಯಕತೆ ಎಲ್ಲಾ ಪ್ರೇಕ್ಷಕರಿಗೆ ತಮಾಷೆಯಾಗಿ ಕಾಣುತ್ತದೆ. ಅನಂತ್‌ನಾಗ್ ಮತ್ತು ಸ್ಮಿತಾ ಪಾಟೀಲ್ ಸಾಕಷ್ಟು ಚೆನ್ನಾಗಿ ಪಾತ್ರದ ಆಳಕ್ಕಿಳಿದು ಅಭಿನಯಿಸುತ್ತಿದ್ದರು. ನಾನು ಅದನ್ನು ಎಷ್ಟು ಬೇಕೋ ಅಷ್ಟನ್ನು ಮಾತ್ರ ಬಳಸಿಕೊಂಡಿದ್ದೇನೆ. ಹೀಗೆ ಬಳಸಿಕೊಳ್ಳುವಾಗ ಅದು 'ಸಂವಹನ' ಆಗದೆ ಹೋಗಬಹುದು. ಮಾಧ್ಯಮದ ದೃಷ್ಟಿಯಲ್ಲಿ ಚಿತ್ರದ ಒಟ್ಟು ಪರಿಣಾಮ ಮುಖ್ಯವಾಗುತ್ತದೆ..'' ಎನ್ನುತ್ತಾರೆ ನಾಗಾಭರಣ.

ಹಿಂದಿಯ ಜನಪ್ರಿಯ ತಾರೆ ಸ್ಮಿತಾಪಾಟೀಲ್ ಅಭಿನಯಿಸಿದ ಏಕೈಕ ಕನ್ನಡ ಚಿತ್ರವಿದು. ನಿರೂಪಣೆಯಲ್ಲಿ ನಿರ್ದೇಶಕರು ಬಿಗಿ ಸಾಧಿಸಿದ್ದರೂ ಚಿತ್ರದ ಅಂತಿಮ ದೃಶ್ಯ ಕೃತಕ ಅನ್ನಿಸಿತು. ಈ ಚಿತ್ರ ೧೯೮೨-೮೩ರ ತೃತೀಯ ಅತ್ಯುತ್ತಮ ಚಿತ್ರವೆಂದು ರಾಜ್ಯ ಪ್ರಶಸ್ತಿ ಗಳಿಸಿತು.

'ಅನ್ವೇಷಣೆ' ನಗರದ ಮಧ್ಯಮ ವರ್ಗದ ಕುಟುಂಬಗಳ ಜನರ ಮಾನಸಿಕ ಸ್ಥಿತಿಯ ದಾಖಲೆಯಾದರೆ 'ಅಂತರಾಳ' ಅದೇ ಮಧ್ಯಮ ವರ್ಗದ ಜನ ಭಾರಿ ನಗರಗಳಲ್ಲಿನ ಸ್ಪರ್ಧಾತ್ಮಕ ಬದುಕಿನಲ್ಲಿ ಕಳೆದು ಹೋಗುವುದರ ದುರಂತವನ್ನು ಚಿತ್ರಿಸುತ್ತದೆ. ಗಂಡು-ಹೆಣ್ಣಿನ ಸಂಬಂಧ, ಸ್ನೇಹ ಇವೆಲ್ಲವೂ ಎಂಥ ತೆಳು ತಂತಿಯ ಮೇಲೆ ನಡೆಯುತ್ತಿರುತ್ತವೆ ಎಂಬುದನ್ನು ಈ ಚಿತ್ರದ ಮೂಲಕ ಹೇಳಲು ಸುರೇಶ್ ಹೆಬ್ಳೀಕರ್ ಪ್ರಯತ್ನಿಸಿದ್ದಾರೆ. ಈ ವೇಳೆಗಾಗಲೇ ನಟರಾಗಿ ಪರಿಚಿತರಾಗಿದ್ದ ಹೆಬ್ಳೀಕರ್ 'ಅಂತರಾಳ'ದ ಮೂಲಕ ನಿರ್ದೇಶಕರೂ ಆದರು. ''ತಮ್ಮ ಜೀವನದ ಘಟನೆಗಳು, ಪಟ್ಟಣದ ಬಗ್ಗೆ ಇರುವ ಅನುಮಾನ, ಶಂಕೆಗಳು ಈ ಚಿತ್ರದ ನಿರ್ಮಾಣಕ್ಕೆ ಕಾರಣವಾದವು'' ಎಂದು ಹೇಳಿಕೊಂಡಿರುವ ಇವರು ಸಾನೆ ಗುರೂಜಿಯವರ ಕಥೆಯ ಆಧಾರದ ಮೇಲೆ ತಯಾರಾದ ಮರಾಠಿ ಚಿತ್ರ 'ಆಯಿ'ಯಿಂದ ಸ್ಫೂರ್ತಿ ಪಡೆದು ಕೇವಲ ೨೦೦ ರೂಪಾಯಿ ಬಂಡವಾಳ ಹಾಗೂ ಎರವಲು ಕ್ಯಾಮರಾದಿಂದ ಕಿರುಚಿತ್ರವೊಂದನ್ನು ನಿರ್ಮಿಸುವುದರ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದರು. ಅಭಿನಯದ ಪ್ರಥಮ ಚಿತ್ರ 'ಕಂಕಣ'. ನಂತರದ ವರ್ಷಗಳಲ್ಲಿ ತುಂಬಾ ಅಂತರದಲ್ಲಿ ಕೆಲವೇ ಚಿತ್ರಗಳನ್ನು ನಿರ್ದೇಶಿಸಿದರೂ ಇವರ ಪ್ರತಿಯೊಂದು ಚಿತ್ರದ ವಸ್ತುವಿನಲ್ಲಿ ಸಾಮಾಜಿಕ ಬದ್ಧತೆ ಇದೆ. ಆದರೆ ನಿರೂಪಣೆ ಮತ್ತು ತಾಂತ್ರಿಕ ಪರಿಣತಿಯಲ್ಲಿ ಪಕ್ವತೆ ಕಾಣುವುದಿಲ್ಲ. ಇತ್ತೀಚೆಗೆ ''ಉದ್ದೇಶದೊಂದಿಗೆ ಸಿನಿಮಾ'' ಎಂಬ ತತ್ವದಲ್ಲಿ ನಂಬಿಕೆ ಉಳ್ಳವರಾಗಿ ಇವರು ರೂಪಿಸಿರುವ ಚಿತ್ರಗಳು ಶೈಕ್ಷಣಿಕವಾಗಿವೆ ಮಾತ್ರವಲ್ಲ, ಚಿತ್ರ ಚರಿತ್ರೆಯಲ್ಲಿ ಬೇರೆಲ್ಲರಿಗಿಂತ ಭಿನ್ನವಾಗಿ ಅವರಿಗೊಂದು ನಿಶ್ಚಿತಸ್ಥಾನ ಕಲ್ಪಿಸಿಕೊಟ್ಟಿವೆ. ಮಕ್ಕಳು, ಮನೋರೋಗಿಗಳು, ಅನಕ್ಷರಸ್ಥರು, ಪರಿಸರ ಪ್ರೇಮ - ಇವೆಲ್ಲವನ್ನು ತಮ್ಮ ಒಂದೊಂದು ಚಿತ್ರದ ಮೂಲ ಕಾಳಜಿಯನ್ನಾಗಿಸಿಕೊಂಡಿರುವ ಇವರ ಚಿತ್ರಗಳು



(ಚಿತ್ರ ೫೫) 'ಅಂತರಾಳ' ಚಿತ್ರದಲ್ಲಿ ಮಮತಾರಾವ್ ಮತ್ತು ಸುರೇಶ್ ಹೆಬ್ಳೀಕರ್

ಕೆಲವಾರು ರಾಜ್ಯ, ರಾಷ್ಟ್ರ ಪ್ರಶಸ್ತಿಗಳನ್ನು ಗಳಿಸಿವೆ. ಜನಪ್ರಿಯ ಸಿನಿಮಾ ಪರಂಪರೆಯಲ್ಲಿ ನಿಂತುಕೊಂಡೇ ಎಲ್ಲಕ್ಕಿಂತ ಬೇರೆಯಾದ ಚಿಂತನೆಗಳಿಂದ ಪ್ರವಾಹಕ್ಕೆ ವಿರುದ್ಧವಾಗಿ ಈಜುವ ಪ್ರಯತ್ನದಲ್ಲಿ ಹೆಬ್ಳೀಕರ್‌ರವರು ಸೋತಿದ್ದರೂ ಧೈರ್ಯವಾಗಿ ಅಂಥ ಸಾಹಸಕ್ಕೆ ಇಳಿದ ಕೀರ್ತಿ ಅವರಿಗೆ ಸಲ್ಲುತ್ತದೆ. ತಮ್ಮ ಪ್ರತಿಯೊಂದು ಚಿತ್ರದಲ್ಲೂ ಏನಾದರೊಂದು ಅಂಶವನ್ನು ಅಳವಡಿಸಲು ಪ್ರಯತ್ನಿಸಿರುವ ಇವರು 'ಅಂತರಾಳ'ದಲ್ಲಿ ವಿದ್ಯಾರ್ಥಿಗಳಿಂದ ದಾಸರ ರಚನೆಯೊಂದನ್ನು ಹಾಡಿಸಿದ್ದಾರೆ. ಖ್ಯಾತ ಗಾಯಕ ಸಿ.ಎಸ್.ಜಯರಾಂ ಅವರ ಮಗ, ತಮಿಳು ಕವಿ ಸುಬ್ರಹ್ಮಣ್ಯ ಭಾರತಿಯವರ ಮೊಮ್ಮಗ ರಾಜಕುಮಾರ್ ಭಾರತಿಯವರನ್ನು ಈ ಚಿತ್ರದ ಮೂಲಕ ಹಿನ್ನೆಲೆ ಗಾಯಕರಾಗಿ ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದ್ದು ಹೆಬ್ಳೀಕರ್‌ರವರೇ. ಚಿತ್ರಕಥೆಯನ್ನು ಅಂದು 'ಮಯೂರ' ಮಾಸಿಕ ಪತ್ರಿಕೆಯ ಸಂಪಾದಕರಾಗಿದ್ದ ಜಿ.ಎಸ್.ಸದಾಶಿವ ಅವರಿಂದ ಬರೆಯಿಸಿದ್ದರು. ಇವರು ತಮ್ಮ ನಿರ್ದೇಶನದ ಎಲ್ಲಾ ಚಿತ್ರಗಳಲ್ಲಿ ತಾವೇ ನಾಯಕ ನಟರಾಗಿ ಅಭಿನಯಿಸಿರುವುದು ವಿಶೇಷ. ಕಾಶೀನಾಥ್‌ರವರು ಆರಂಭಿಸಿದ ಈ ಪರಂಪರೆಯನ್ನು ಹೆಬ್ಬೀಕರ್ ಅನುಸರಿಸಿದರು.

ಬದ್ಧತೆಯುಳ್ಳ ನಿರ್ದೇಶಕ ಸುರೇಶ್ ಹೆಬ್ಳೀಕರ್. ತಮ್ಮ ನಂಬಿಕೆಗಳಿಗೆ ಬದ್ಧರು. "...ಸಾಧಾರಣವಾಗಿ ಯಾವ ಒಳ್ಳೆಯ ನಿರ್ದೇಶಕನೂ ಸಮಾಜದ ದೃಷ್ಟಿಯಿಂದ ಬೇಜವಾಬ್ದಾರನಾಗಿ ಚಿತ್ರ ಮಾಡುವುದಿಲ್ಲ. ಅವನು ಸಮಾಜವನ್ನು ಗಮನದಲ್ಲಿಟ್ಟುಕೊಂಡೇ ಚಿತ್ರ ಮಾಡುವುದು. ಇನ್ನು ಕೆಲವು ಸಾರಿ ಚಿತ್ರಗಳಲ್ಲಿ ಕೆಲವರದು ವೈಯಕ್ತಿಕ ವಿಚಾರಗಳೂ ಮೂಡುವುದುಂಟು. ಅವು ಪ್ರೇಕ್ಷಕನನ್ನು ಭಾವುಕವಾಗಿಸುತ್ತವೆ. ಅದೇ ಅಜ್ಞಾನ ಅಥವಾ ಜವಾಬ್ದಾರಿರಹಿತವಲ್ಲ. ಕಲೆಯ ದೃಷ್ಟಿಯಿಂದ ಎಂದು ಹೇಳಬಹುದು. ಯಾವುದು ಕಲೆ ಯಾವುದು ಮಸಾಲೆ ಎಂದು ತಿಳಿಯುವ ಜನ ಅಜ್ಞಾನ ಹಾಗೂ ಬೇಜವಾಬ್ದಾರಿತನದಿಂದ ಮಾಡಿರುವ ಚಿತ್ರವನ್ನು ನಿರಾಕರಿಸುತ್ತಾರೆ.

"...'ಅಂತರಾಳ' ಮುಗಿಸಲು ೬-೭ ತಿಂಗಳು ಹಿಡಿದವು. ನನ್ನ ಬದುಕಿನ ಕೆಲವು ಘಟನೆಗಳನ್ನು ಸೇರಿಸಿದ್ದೇನೆ. ಪಟ್ಟಣದ ಬಗ್ಗೆ ಇರುವ ಅನುಮಾನಗಳು, ಶಂಕೆಗಳು, ಕುತೂಹಲಗಳು ಹಾಗೂ ಕನಸುಗಳು ನನ್ನನ್ನು ಯಾವಾಗಲೂ ಅಲುಕಿಸಿದ್ದವು. ಇವನ್ನೆಲ್ಲ ಚಿತ್ರಪಟದಲ್ಲಿ ತರುವ ಅಪೇಕ್ಷೆ. ನನ್ನ ಮಿತ್ರ ಸದಾಶಿವ (ಪತ್ರಕರ್ತ) ಎಲ್ಲ ಸೇರಿಸಿ ಒಂದು ಚಿತ್ರಕಥೆ ಮಾಡಿದರು. ನನಗೆ ಹಿನ್ನೆಲೆ ಸಂಗೀತ ಮುಖ್ಯ ಅನ್ನಿಸುತ್ತೆ. ಕಥೆ ಬರೆಯುವಾಗಲೇ ಯಾವ ಯಾವ ಕಡೆ ಯಾವ ಉಪಕರಣವನ್ನು ಬಳಸಿದರೆ ಸೂಕ್ತವೆಂದು ಯೋಚಿಸುತ್ತೇನೆ. ಎಷ್ಟೋ ಸಂಗತಿಗಳು ಹಣದ ಅಡಚಣೆಯಿಂದಾಗಿ ಕಾರ್ಯರೂಪಕ್ಕೆ ಬರುವುದಿಲ್ಲ" ಎನ್ನುತ್ತಾರೆ ಹೆಬ್ಳೀಕರ್.

ಈ ದಿನಗಳಲ್ಲಿಯೇ ಅತ್ಯಂತ ಅದ್ದೂರಿಯಾಗಿ ಸಂಭ್ರಮ, ಗದ್ದಲಗಳೊಂದಿಗೆ ಪದ್ಮಭೂಷಣ ಗೌರವಕ್ಕೆ ಪಾತ್ರರಾದ ರಾಜಕುಮಾರ್‌ರನ್ನು ಲಾಲ್‌ಬಾಗಿನ ಗಾಜಿನ ಮನೆ, ಕಂಠೀರವ ಕ್ರೀಡಾಂಗಣ ಹಾಗೂ ಮೈಸೂರು ನಗರದಲ್ಲಿ ಸನ್ಮಾನಿಸಲಾಯಿತು. ಗಾಜಿನ ಮನೆಯಲ್ಲಿ ೧೯೮೩ರ ಮಾರ್ಚ್ ೨೧ ರಂದು ಭಾನುವಾರ ನಡೆದ ಸಮಾರಂಭವನ್ನು ಚಲನಚಿತ್ರ ವಾಣಿಜ್ಯ ಮಂಡಳಿ ಹಾಗೂ ನಿರ್ಮಾಪಕರ ಸಂಘ ಒಟ್ಟಿಗೆ ಸೇರಿ ಸಂಘಟಿಸಿದ್ದವು. ಅದ್ದೂರಿಯಾಗಿ ನಡೆದ ಸಮಾರಂಭಕ್ಕೆ ಉತ್ತರದ ಚಿತ್ರರಂಗ ಪ್ರತಿನಿಧಿಯಾಗಿ ಅಮಿತಾಭ್ ಬಚ್ಚನ್, ತಮಿಳು ಚಿತ್ರರಂಗದ ಶಿವಾಜಿಗಣೇಶನ್, ರಜನೀಕಾಂತ್, ತೆಲುಗಿನ ನಟ-ನಿರ್ದೇಶಕ ದಾಸರಿ ನಾರಾಯಣರಾವ್, ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾದ ಎಲ್.ವಿ.ಪ್ರಸಾದ್, ಫಿಲಂ ಫೆಡರೇಷನ್ ಆಫ್ ಇಂಡಿಯಾದ ಅಧ್ಯಕ್ಷ ಶ್ರೀರಾಂಮೋಹ್ರಾ, ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮದ ಅಧ್ಯಕ್ಷ ಡಿ.ವಿ.ಎಸ್.ರಾಜು ಭಾಗವಹಿಸಿದ್ದರು. ನಟಸಾರ್ವಭೌಮ ನೆನಪಿನ ಗ್ರಂಥವನ್ನು ಅರ್ಪಿಸಲಾಯಿತು. ಇದನ್ನು ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಕೇಂದ್ರ ಸಚಿವ ಎಸ್.ಎಂ.ಕೃಷ್ಣ ಬಿಡುಗಡೆ ಮಾಡಿದರು. ಮೈಸೂರಿನಲ್ಲಿ ಮೇ ೮ ರಂದು ನಡೆದ ಸಮಾರಂಭವನ್ನು ಯೋಜಿಸಿದ್ದವರು ನಿರ್ಮಾಪಕ ಸದಾನಂದ. ರಾಜ್ ದಂಪತಿಗಳು ಅರಮನೆ ಗಣಪತಿ ದೇವಸ್ಥಾನದ ಮುಂಭಾಗದಲ್ಲಿ ನಂದಿ ಕಂಬಕ್ಕೆ ಪೂಜೆ ಮಾಡುವುದರ ಮೂಲಕ ಕಾರ್ಯಕ್ರಮವನ್ನು ಆರಂಭಿಸಿದರು. ನಂತರ ಹೊರಟ ಮೆರವಣಿಗೆಯಲ್ಲಿ ಅಲಂಕೃತ ಲಾರಿಯ ಮೇಲೆ ರಾಜಕುಮಾರ್, ಸರಿತಾ, ಕೆ.ಎಸ್.ಅಶ್ವತ್ಥ್ ಮುಂತಾದವರು ಕುಳಿತು ಜನರ ಅಭಿನಂದನೆ ಸ್ವೀಕರಿಸಿದರು. ಜೀವಣ್ಣರಾಯರ ಕಟ್ಟೆ ಮೈದಾನದಲ್ಲಿ ಬಾಲಗಂಗಾಧರನಾಥ ಸ್ವಾಮೀಜಿಯವರ ಸಮ್ಮುಖದಲ್ಲಿ ಸನ್ಮಾನ ನಡೆಯಿತು. 'ಕಲಾತಪಸ್ವಿ' ಪುಸ್ತಿಕೆಯನ್ನು ಸಚಿವ ರಘುಪತಿ ಬಿಡುಗಡೆ ಮಾಡಿದರು.

ಬೆಂಗಳೂರಿನ ಗಾಜಿನ ಮನೆಯಲ್ಲಿ ನಡೆದ ಸಮಾರಂಭ ಚಿತ್ರರಸಿಕರಿಗೆ, ಸಾರ್ವಜನಿಕರಿಗೆ ತೃಪ್ತಿಯನ್ನುಂಟುಮಾಡಲಿಲ್ಲ ಎಂಬ ಮಾತುಗಳು ಕೇಳಿ ಬಂದವು. ಏಕೆಂದರೆ ಅದನ್ನು ಕೇವಲ ನಾಲ್ಕೈದು ಸಾವಿರ ಜನರಷ್ಟೇ ನೋಡಲು ಸಾಧ್ಯವಾಗಿತ್ತು. ಹೀಗಾಗಿ ಒಂದು ಜನತಾ ಸಮಾರಂಭದ ಅಗತ್ಯವಿದೆ ಎಂಬ ಅನಿಸಿಕೆಗಳಿಗೆ ಚಾಲನೆ ಸಿಕ್ಕಿ ಅದು ದಿನೇ ದಿನೇ ಬೃಹತ್ ಕಲ್ಪನೆಯನ್ನು ಪಡೆದುಕೊಳ್ಳತೊಡಗಿತು. ಕೊನೆಗೆ ರಾಜಕುಮಾರ್ ಅವರ ಹುಟ್ಟುಹಬ್ಬದ ದಿನವಾದ ೧೯೮೩ರ ಏಪ್ರಿಲ್ ೨೪ ರಂದು ಈ ಕಾರ್ಯಕ್ರಮವನ್ನು ರಾಜ್ಯದ ಸಾರ್ವಜನಿಕ ಸಮಾರಂಭವೆನ್ನುವ ರೀತಿಯಲ್ಲಿ ಸಂಯೋಜಿಸಿದ್ದು ಒಂದು ವಿಶೇಷ. ಇದಕ್ಕಾಗಿ ಚಿತ್ರರಂಗದ ಗಣ್ಯರನ್ನೊಳಗೊಂಡ ಅಭಿನಂದನಾ ಸಮಿತಿಯನ್ನು ವಾಣಿಜ್ಯೋದ್ಯಮಿ ಸಿ.ವಿ.ಎಲ್.ಶಾಸ್ತ್ರಿ ಅಧ್ಯಕ್ಷತೆಯಲ್ಲಿ ರಚಿಸಲಾಗಿತ್ತು. ಸಮಗ್ರ ಖರ್ಚು-ವೆಚ್ಚ ಸಹ ಶಾಸ್ತ್ರಿಯವರೇ ವಹಿಸಿಕೊಂಡರು.

ಬೆಳಗಿನ ಅದ್ದೂರಿ ಮೆರವಣಿಗೆಯ ನಂತರ ಸಂಜೆಯ ಕಾರ್ಯಕ್ರಮ ಅಭಿಮಾನದ ನೆರೆ ಉಕ್ಕಿಸಿದ ಒಂದು ಮಧುರ ನೆನಪು. ಕ್ರೀಡಾಂಗಣದ ತುಂಬ ಚಿತ್ರರಸಿಕರು ತುಂಬಿದ್ದು ಅಲ್ಲಿ ಜಾಗವಿಲ್ಲದೆ ಸಾವಿರಾರು ಜನ ಹೊರಗಡೆಯೂ ನಿಂತಿದ್ದರು. ನೆರೆದಿದ್ದ ಜನಸ್ತೋಮದ ಮೇಲೆ ಹೆಲಿಕಾಪ್ಟರ್‌ನಿಂದ ಪುಷ್ಪವೃಷ್ಟಿ ಮಾಡಲಾಯಿತು. ವೇದಿಕೆಯಲ್ಲಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ, ವಾರ್ತಾ ಸಚಿವ ರಘುಪತಿ, ಕೆ.ಬಾಲಚಂದರ್, ಜಯಚಿತ್ರ, ಹಿಂದಿ ಚಿತ್ರರಂಗದ ಧರ್ಮೇಂದ್ರ, ಪ್ರಾಣ್, ಸಂಜಯ್‌ದತ್, ರತಿ ಅಗ್ನಿಹೋತ್ರಿ ಮುಂತಾದವರು ಉಪಸ್ಥಿತರಿದ್ದು ರಾಜಕುಮಾರ್‌ರನ್ನು ಅಭಿನಂದಿಸಿದರು. ಇದೇ ಸಂದರ್ಭದಲ್ಲಿ ಹಿರಿಯ ಚಲನಚಿತ್ರ ಪತ್ರಕರ್ತರು ಸಂಪಾದಿಸಿದ ಅಭಿನಂದನಾ ಗ್ರಂಥ 'ಪದ್ಮಭೂಷಣ' ಬಿಡುಗಡೆ ಆಯಿತು.

ವೈಭವೋಪೇತವಾಗಿ ಈ ಸಮಾರಂಭ ನಡೆದ ಮರುವಾರವೇ ವಿಷ್ಣುವರ್ಧನ್ ಅಭಿನಯದ 'ಕಲ್ಲುವೀಣೆ ನುಡಿಯಿತು' ಚಿತ್ರ ಬಿಡುಗಡೆಯಾಯಿತು. ಈ ಚಿತ್ರವನ್ನು ಕಲ್ಪನಾದಿಂದ ಒಂದೇ ವಾರಕ್ಕೆ ತೆಗೆಯಲಾಯಿತು. ಅಲ್ಲದೆ ಏಕಕಾಲಕ್ಕೆ ಮೈಸೂರಿನಲ್ಲಿ ಬಿಡುಗಡೆ ಆಗಲಿಲ್ಲ. ಅತ್ಯಂತ ಸಾಧಾರಣ ಕಥಾ ವಸ್ತುವಿನ ಈ ಚಿತ್ರದಲ್ಲಿ ವಿಷ್ಣುವರ್ಧನ್ ಪ್ರಥಮ ಬಾರಿಗೆ ಭರತನಾಟ್ಯ ಮಾಡಿದ್ದೊಂದು ವಿಶೇಷ.

ಅತಿ ನಿರೀಕ್ಷೆಯ 'ಧರಣಿ ಮಂಡಲ ಮಧ್ಯದೊಳಗೆ' ಚಿತ್ರ ವರ್ಗವ್ಯವಸ್ಥೆಯ ವೈಪರೀತ್ಯಗಳನ್ನು ಭಿನ್ನವಾಗಿ ಹೇಳುವ ಪ್ರಯತ್ನದಲ್ಲಿ ವಿಫಲವಾದರೆ 'ಬ್ಯಾಂಕರ್ ಮಾರ್ಗಯ್ಯ' ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸಹಕಾರ ಚಳವಳಿ ತನ್ನ ಗುರಿ ಸಾಧಿಸುವಲ್ಲಿ ಹೇಗೆ ವಿಫಲವಾಗಿದೆ ಎನ್ನುವುದನ್ನು ಹೇಳುವುದರಲ್ಲಿ ಸಫಲವಾದ ಚಿತ್ರ. ಇದರಲ್ಲಿ ಸಾಮಾಜಿಕ ಹಿನ್ನೆಲೆಯ ಮನೋವೈಜ್ಞಾನಿಕ ವಿಶ್ಲೇಷಣೆಯ ಇನ್ನೊಂದು ಆಯಾಮವೂ ಇದೆ. ಇಂಗ್ಲಿಷ್‌ನ 'ಫೈನಾನ್ಷಿಯಲ್ ಎಕ್ಸ್‌ಪರ್ಟ್' ಕಾದಂಬರಿಯನ್ನು ಆಧರಿಸಿದ್ದ ಈ ಚಿತ್ರಕ್ಕೆ ಆರಂಭದಲ್ಲಿ 'ಮಾಲ್ಗುಡಿ ಮಾರ್ಗಯ್ಯ' ಎಂದು ಹೆಸರಿಡಲಾಗಿತ್ತು. ರಾಷ್ಟ್ರದ ಹೆಸರಾಂತ ಲೇಖಕ, ಕನ್ನಡಿಗ ಆರ್.ಕೆ.ನಾರಾಯಣ್‌ರ ಚಲನಚಿತ್ರಕ್ಕೆ ಅಳವಡಿಸಿಕೊಳ್ಳಲಾದ ಕಾದಂಬರಿಗಳಲ್ಲಿ ಇದು ಮೂರನೆಯದು. ಈ ಹಿಂದೆ ಹಿಂದಿ ಭಾಷೆಯಲ್ಲಿ 'ಗೈಡ್' ಮತ್ತು 'ಮಿಸ್ಟರ್ ಸಂಪತ್'

ಕೃತಿಯನ್ನಾಧರಿಸಿದ ವಿಶಿಷ್ಟ ರೀತಿಯ ಚಿತ್ರವೊಂದನ್ನು ನೋಡಿದಂಥ ಅನುಭವವನ್ನು ಈ ಚಿತ್ರ ಉಂಟುಮಾಡುತ್ತದೆ. ೧೯೮೮ರ ತಾಷ್ಕೆಂಟ್ ಚಿತ್ರೋತ್ಸವದಲ್ಲಿ ಭಾರತದ ಅಧಿಕೃತ ಪ್ರವೇಶವಾಗಿ ಭಾಗವಹಿಸಿದ್ದು ಹಾಗೂ ಇದೇ ವರ್ಷದ ಕೇಂದ್ರದ ರಜತ ಕಮಲ ಪಡೆದದ್ದು ಚಿತ್ರದ ಉಲ್ಲೇಖನಾರ್ಹ ಹೆಗ್ಗಳಿಕೆ.

'ಧರಣಿ ಮಂಡಲ ಮಧ್ಯದೊಳಗೆ' ಚಿತ್ರದ ಕಥಾವಸ್ತುವಿನಲ್ಲಿ ಒಳ್ಳೆಯ ಸಂದೇಶವಿದ್ದರೂ ನಿರೂಪಣೆಯಲ್ಲಿ ಅದರ ಪ್ರತಿಫಲನವಾಗಿಲ್ಲ. ಉಂಡಾಡಿ ಯುವಕರನ್ನು ತಿದ್ದಲು ಪ್ರಯತ್ನಿಸಿ ಯಶಸ್ವಿಯಾಗುವ ಕಥೆಯಲ್ಲಿ ಅದಕ್ಕೆ ವಿರುದ್ಧವಾದ ದುರಂತ ಅಂತ್ಯವಿರುವುದರಿಂದ ಪರಿಣಾಮ ಹರಳುಗಟ್ಟುವ ಹಂತದಲ್ಲಿಯೇ ಛಿದ್ರಗೊಳ್ಳುತ್ತದೆ. ಪಶ್ಚಿಮ ಘಟ್ಟ ಖಂಡದ ಅತ್ಯಂತ ಎತ್ತರದ ಸೂಪಾ ಅಣೆಕಟ್ಟಿನ ನಿರ್ಮಾಣದ ಹಿನ್ನೆಲೆ ಮಾತ್ರ ಚಿತ್ರದಲ್ಲಿ ವಿಶೇಷವಾಗಿ ದಾಖಲಾಗಿದೆ. ಇಷ್ಟನ್ನು ಬಿಟ್ಟರೆ ಪುಟ್ಟಣ್ಣ ತಮ್ಮ ನಿರ್ದೇಶನದಲ್ಲಿ ಬಿಗಿ ಕಳೆದುಕೊಳ್ಳುತ್ತಿರುವುದರ ಉದಾಹರಣೆಯಾಗಿ ಮಾತ್ರ ಈ ಚಿತ್ರಕ್ಕೆ ಮಹತ್ವ. ಆಗ್ಗೆ ಕನ್ನಡ ಸಾಹಿತ್ಯ ಲೋಕದಲ್ಲಿ 'ದಲಿತ ಕವಿ' ಎಂದು ಅತ್ಯಂತ ಖ್ಯಾತರಾಗಿದ್ದ ಸಿದ್ಧಲಿಂಗಯ್ಯನವರಿಂದ ಮೊದಲ ಬಾರಿಗೆ ಪುಟ್ಟಣ್ಣ ಈ ಚಿತ್ರದ ಎಲ್ಲಾ ಹಾಡುಗಳನ್ನು ಬರೆಸಿದರು. ೧೯೮೦ರ ದಿನಗಳಲ್ಲಿ ಬಂಡಾಯ ಹಾಗೂ ದಲಿತ ಸಾಹಿತ್ಯ ಚಳವಳಿಯು ಅತ್ಯಂತ ಹುಮ್ಮಸ್ಸಿನಲ್ಲಿತ್ತು. ಇದರ ಮುಂಚೂಣಿಯಲ್ಲಿದ್ದವರಲ್ಲಿ ಸಿದ್ಧಲಿಂಗಯ್ಯ ಪ್ರಮುಖರು. ಕನ್ನಡ ಬಂಡಾಯ ಕಾವ್ಯದ ಪ್ರವರ್ತಕರೆನಿಸಿಕೊಂಡಿದ್ದ ಸಿದ್ಧಲಿಂಗಯ್ಯನವರು ಸಿನಿಮಾ ಹಾಡುಗಳನ್ನು ಬರೆಯುವುದು ಅವರ ಕಾವ್ಯಾಭಿಮಾನಿಗಳಿಗೆ, ಅವರನ್ನು ಅನುಸರಿಸುತ್ತಿದ್ದವರಿಗೆ ಇಷ್ಟವಿರಲಿಲ್ಲ. ಹಾಗೆಂದು ಪುಟ್ಟಣ್ಣನವರಂಥ ನಿರ್ದೇಶಕರು ಕೊಟ್ಟ ಅವಕಾಶವನ್ನು ತಿರಸ್ಕರಿಸಲು ಸಿದ್ಧಲಿಂಗಯ್ಯ ಸಿದ್ಧರಿದ್ದಂತಿರಲಿಲ್ಲ. ಇಕ್ಕಟ್ಟಿಗೆ ಕಾರಣವಾಗಿದ್ದ ಈ ಸಮಸ್ಯೆಯನ್ನು ಅವರು 'ಆದಿತ್ಯ' ಎಂಬ ಕಾವ್ಯನಾಮವನ್ನಿಟ್ಟುಕೊಂಡು ನಿವಾರಿಸಿಕೊಂಡರು. ನಂತರದ ಒಂದೆರಡು ಚಿತ್ರಗಳಲ್ಲೂ ಈ ಹೆಸರಿನಲ್ಲಿ ಹಾಡುಗಳನ್ನು ರಚಿಸಿದ್ದಾರೆ. ಸಿದ್ಧಲಿಂಗಯ್ಯ ಬರೆದ ಈ ಚಿತ್ರದ ಗೀತೆಗಳಲ್ಲಿ 'ಕಾಸನು ಬೀಸಿ...', ಹಾಗೂ 'ಗೆಳತಿ ಓ ಗೆಳತಿ ಅಪ್ಪಿಕೊ ಎನ್ನ ಅಪ್ಪಿಕೊ..' ಹಾಡುಗಳು ಅತ್ಯಂತ ಜನಪ್ರಿಯವಾದವು. ಈ ಚಿತ್ರದ 'ಕಾಸನು ಬೀಸಿ...' ಹಾಡಿಗಾಗಿ ಕವಿ ಸಿದ್ಧಲಿಂಗಯ್ಯನವರಿಗೆ ರಾಜ್ಯದ ೧೯೮೮ರ ಅತ್ಯುತ್ತಮ ಗೀತರಚನೆಕಾರ ಪ್ರಶಸ್ತಿ ಲಭ್ಯವಾಯಿತು. ಗೀತರಚನೆ, ಗಾಯನ ಇತ್ಯಾದಿ ಹಲವು ವಿಭಾಗಗಳಿಗೆ ಪ್ರಶಸ್ತಿ ಕೊಡುವ ಪರಿಪಾಠ ಇರಲಿಲ್ಲ. ಸಲಹಾಸಮಿತಿಯು ವಿಶೇಷವಾಗಿ ಪರಿಗಣಿಸಿ ಪ್ರಶಸ್ತಿಯನ್ನು ಘೋಷಿಸಿತ್ತು.



(ಚಿತ್ರ ೫೬) 'ಬ್ಯಾಂಕರ್ ಮಾರ್ಗಯ್ಯ' ಚಿತ್ರದಲ್ಲಿ ಮಾಧವರಾವ್, ಲೋಕೇಶ್ ಮತ್ತು ಸುಂದರಕೃಷ್ಣ ಅರಸ್

ಚಲನಚಿತ್ರಗಳಾಗಿ ತೆರೆಗೆ ಬಂದಿದ್ದವು. ಆಗ ನಾರಾಯಣ್ ಅವುಗಳನ್ನು ಸಂಬಂಧಿಸಿದವರು ಚಿತ್ರಿಸಿದ ರೀತಿಯ ಬಗ್ಗೆ ಸಾಕಷ್ಟು ಅಸಮಾಧಾನ ತೋಡಿಕೊಂಡಿದ್ದರು. ಆದರೆ 'ಬ್ಯಾಂಕರ್ ಮಾರ್ಗಯ್ಯ' ನೋಡಿ ತಮಗೆ ಅತೀವ ಸಂತೋಷವಾಯಿತೆಂದು ಪತ್ರ ಬರೆದು ಪ್ರಶಂಸಿಸಿದ್ದಲ್ಲದೆ ಚಿತ್ರದ ಬಿಡುಗಡೆಯ ದಿನ ಬೆಂಗಳೂರಿಗೆ ಬಂದು ಪತ್ರಕರ್ತರೊಂದಿಗೆ ತಮ್ಮ ಬರಹ-ಬದುಕಿನ ಅನುಭವಗಳನ್ನು ಹಂಚಿಕೊಂಡರು.

ಮಾರ್ಗಯ್ಯ ಒಬ್ಬ ಸಾಧಾರಣ ವ್ಯಕ್ತಿ. ಕಷ್ಟನಷ್ಟಗಳ ನಡುವೆ ಶ್ರೀಮಂತನಾಗುತ್ತಾನೆ. ಆದರೆ ಅವನಿಗೆ ಅವನು ಗಳಿಸಿದ ಶ್ರೀಮಂತಿಕೆ ಸುಖ ತರುವುದಿಲ್ಲ. ಇಷ್ಟರ ನಡುವೆ ಮಾರ್ಗಯ್ಯನ ಮಗ ಬಾಲು ಮತ್ತು ಪಾಲ್‌ನಿಂದಾಗಿ ದುಶ್ಚಟಗಳಿಗೆ ಬಲಿಯಾಗಿ ತಂದೆಗೆ ನುಂಗಲಾರದ ತುತ್ತಾಗುತ್ತಾನೆ. ಪಾಲ್‌ನ ಅಪಪ್ರಚಾರದಿಂದಾಗಿ ಮಾರ್ಗಯ್ಯನ ಖಾಸಗಿ ಲೇವಾದೇವಿ ವ್ಯವಹಾರದ ಯಶಸ್ವಿ ಸೌಧ ಕುಸಿದು ಬೀಳುತ್ತದೆ. ಇದೆಲ್ಲದರಿಂದ ಮಾರ್ಗಯ್ಯ ವಿಚಲಿತನಾಗುವುದಿಲ್ಲ. ತನ್ನ ಅಂತಃಶಕ್ತಿಯಿಂದ ಸಾಧಾರಣ ಮಟ್ಟದ ಹೊಸದೊಂದು ಜೀವನ ಆರಂಭಿಸುತ್ತಾನೆ. ಮಾನವೀಯತೆಯೇ ಹಣಕ್ಕಿಂತ ಮಿಗಿಲು ಎಂದು ಅನುಭವದಿಂದ ಅರಿತು ಇತರರಿಗೂ ತನ್ನ ಅನುಭವವನ್ನು ಮನದಟ್ಟು ಮಾಡುತ್ತಾನೆ. ಮೂಲ ಕತೆಯ ಆತ್ಮದಲ್ಲಿ ಆರ್.ಕೆ.ನಾರಾಯಣ್‌ರವರು ತುಂಬಿಟ್ಟಿರುವ ಜೀವಪರವಾದ ಆಶಯ ಚಿತ್ರದಲ್ಲೂ ಸಾಕಷ್ಟು ಪ್ರತಿಫಲನವಾಗಿದೆ.

ಮಾರ್ಗಯ್ಯನ ಪಾತ್ರದಲ್ಲಿ ಪ್ರಬುದ್ಧ ಅಭಿನಯ ನೀಡಿದ್ದ ಲೋಕೇಶ್ ರಾಜ್ಯದ ೧೯೮೮ರ ಅತ್ಯುತ್ತಮ ನಟ ಪ್ರಶಸ್ತಿ ಪಡೆದರು. "...ಈ ಚಿತ್ರದ ಮಾರ್ಗಯ್ಯನ ಪಾತ್ರದಲ್ಲಿ ಮೂರು ಹಂತದ ಬದಲಾವಣೆಯನ್ನು ನಡಿಗೆಯಲ್ಲಿ, ಸೂಕ್ಷ್ಮವಾದ ಆಂಗಿಕ ಚಲನೆಯಲ್ಲಿ ತರಲು ಪ್ರಯತ್ನಿಸಿದ್ದೇನೆ. ನಾನು ಅಭಿನಯಿಸುತ್ತಿರೋ ಪಾತ್ರಗಳು ಸಮಾಧಾನ ಕೊಡುವುದರಿಂದಾಗಿಯೇ ನಾನು ಅವುಗಳನ್ನು ಒಪ್ಪುತ್ತಿದ್ದೀನಿ. ನಾನೊಬ್ಬ ಕಲಾವಿದ. ಎಲ್ಲ ರೀತಿಯ ಪಾತ್ರಗಳನ್ನು ಮಾಡುವುದು ಇಷ್ಟಾನೇ. ಆದರೆ ನನ್ನನ್ನು ನಾನು ಹೆಚ್ಚು ಒಳಗೊಳ್ಳಿಸಿಕೊಂಡಂತಹ ಪಾತ್ರಗಳಲ್ಲಿ ಮಾರ್ಗಯ್ಯನೂ ಒಂದು. ಹಾಗೆ ಆ ಪಾತ್ರ ನನಗೆ ಖುಷಿ ಕೊಟ್ಟಿದೆ. ಆದರ ಚಿತ್ರೀಕರಣ ಕೊಪ್ಪದ ಹತ್ತಿರ ಆಯಿತು. ಒಂದು ಕೊಚ್ಚೆಗೆ ಬೀಳುವ ಸನ್ನಿವೇಶ ಇತ್ತು. ನೈಜವಾಗಿರ್‍ಲೀಂತ ಕೊಚ್ಚೆಗೇ ಬಿದ್ದು, ಆ ಅಸಹ್ಯದ ಗುಂಗು ನಾಲ್ಕೈದು ದಿನಾ ಆದರೂ ಹೋಗಿರಲಿಲ್ಲ.." ಎಂದು ತಮ್ಮ ಪಾತ್ರದ ಒಳಗೇ ಹೊಕ್ಕು ಬಿಡುವ ಅಭ್ಯಾಸವನ್ನು ವಿವರಿಸುತ್ತಾರೆ ಲೋಕೇಶ್.

ಹಾಸ್ಯಕ್ಕಾಗಿ ಪ್ರತ್ಯೇಕ ಪಾತ್ರಗಳನ್ನು ಸೃಷ್ಟಿಸದಿರುವುದು ಹಾಗೂ ಕಲ್ಪನೆಯ 'ಮಾಲ್ಗುಡಿ'ಯನ್ನು ತೆರೆಯಲ್ಲಿ ಸಮರ್ಥವಾಗಿ ಎಸ್.ರಾಮಚಂದ್ರ ಛಾಯಾಗ್ರಹಣದಲ್ಲಿ ಪ್ರತಿಬಿಂಬಿಸಿದ್ದು ಚಿತ್ರಕ್ಕೆ ಪುಷ್ಟಿ ನೀಡಿದ ಅಂಶಗಳು. ಆದರೆ ಕಥೆ ನಡೆಯುವ ಕಾಲದ ಬಗ್ಗೆ ಚಿತ್ರದಲ್ಲೆಲ್ಲೂ ನಿರ್ದಿಷ್ಟ ಮಾಹಿತಿಗಳಿಲ್ಲ. ಕಾಲದ ಬದಲಾವಣೆಯನ್ನು ತೋರಿಸಿರುವ ರೀತಿಯಲ್ಲೂ ಸಾಮರಸ್ಯವಿಲ್ಲ. ಆದರೆ ಒಂದು ಉತ್ತಮ ಸಾಹಿತ್ಯ



(ಚಿತ್ರ ೫೭) 'ಧರಣಿ ಮಂಡಲ ಮಧ್ಯದೊಳಗೆ' ಚಿತ್ರದಲ್ಲಿ ರೇಖಾರಾವ್, ಕಲ್ಪನಾರಾಣಿ ಮತ್ತು ಪದ್ಮಾ ವಾಸಂತಿ

ವಿಜಯಭಾಸ್ಕರ್ ನಾಲ್ಕನೆಯ ಬಾರಿಗೆ ಅತ್ಯುತ್ತಮ ಸಂಗೀತ ನಿರ್ದೇಶಕರೆಂದು ಪ್ರಶಸ್ತಿ ಸಮಿತಿ ಅಭಿಪ್ರಾಯ ಪಟ್ಟರೂ ಸರಕಾರದ ನಿಯಮದ ಕಾರಣ ವಿಜಯಭಾಸ್ಕರ್‌ಗೆ ಈ ಪ್ರಶಸ್ತಿ ಕೊಡಲಿಲ್ಲ.

ದ್ವಾರಕೀಶ್ ನಿರ್ಮಾಣದ ಚಿತ್ರ 'ಗೆದ್ದ ಮಗ'. ಎಸ್.ಎ.ಚಂದ್ರಶೇಖರ್ ನಿರ್ದೇಶಿಸಿದ್ದರು. ಅತ್ಯಂತ ಶ್ರೀಮಂತವೆನಿಸುವ ಹೊರಾಂಗಣ, ಸಾಹಸಗಳು ಇದರ ವೈಶಿಷ್ಟ್ಯ. ಶಂಕರ್‌ನಾಗ್ ಮೂರು ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ಚಿತ್ರದ ಮುಖ್ಯ ಅಂಶವೇ ಅಭಿನಯ. ಆ ದೃಷ್ಟಿಯಿಂದ ಚಿತ್ರಗಳನ್ನು ನೋಡುವುದು ಕಡಿಮೆ ಆಗುತ್ತಿದೆ. ಅಥವಾ ಅಭಿನಯ ಇರುವುದೂ ಅಪರೂಪ. ಅದಕ್ಕೆ ಅಪವಾದವೆಂಬಂತೆ ಆ ದಿಕ್ಕಿನಲ್ಲಿ ಕೊಂಚ ಶ್ರಮಪಟ್ಟಿದ್ದ. ಶಂಕರ್‌ನಾಗ್ ಮೂರು ಪಾತ್ರಗಳಲ್ಲಿ ವೈವಿಧ್ಯವನ್ನು ತರುವ ಪ್ರಯತ್ನ ಮಾಡಿದ್ದರು. ಅತ ನಿಜಕ್ಕೂ ಕಲಾವಿದನೇ ಅನ್ನಿಸಿತ್ತು. ಸರಿಯಾಗಿ ದುಡಿಸಿಕೊಳ್ಳಲು ಬಿಡುವಿಲ್ಲದ ವಾಣಿಜ್ಯೀಕರಣದಲ್ಲಿ ಆತನೂ ಒಂದು 'ಸರಕು' ಆಗುತ್ತಿದ್ದಾಗ ಅಷ್ಟೋ ಇಷ್ಟೋ ಪ್ರಯೋಗಕ್ಕೆ ಇಲ್ಲಿ ಅವಕಾಶವಾದಂತಿತ್ತು. ಆದರೆ ದ್ವಾರಕೀಶ್ ಅವರ ಉದ್ದೇಶವೇ ಜನರಂಜನೆ ಆದಾಗ ತರ್ಕ, ಸಂಯಮಗಳ ಅಭಾವ ಕೇವಲ ಸಹಜ. ಸಮುದ್ರ, ಸ್ಪೀಡ್ ಬೋಟ್‌ಗಳ ಬಳಕೆ ಮಾಡಿ ಸಾಹಸಗಳನ್ನು ಚೊಕ್ಕವಾಗಿ ಸಂಕಲಿಸಿದ್ದರಿಂದ ಅಂಥ ಅಂಶಗಳು ಗಮನ ಸೆಳೆದವು.



(ಚಿತ್ರ ೫೮) 'ಹೊಸ ತೀರ್ಪು' ಚಿತ್ರದಲ್ಲಿ ಅಂಬರೀಷ್, ಮಾ। ಮಂಜುನಾಥ್ ಮತ್ತು ಜಯಮಾಲ

'ಬೆಂಕಿಯ ಬಲೆ' ತ.ರಾ.ಸು. ಅವರ ಕಾದಂಬರಿ ಆಧರಿಸಿ ತೆಗೆದ ಚಿತ್ರ. ಅನಂತ್‌ನಾಗ್-ಲಕ್ಷ್ಮೀ ಜನಪ್ರಿಯ ಜೋಡಿಯೇ ಈ ಚಿತ್ರದಲ್ಲೂ ಇತ್ತು. 'ಕಸ್ತೂರಿ ನಿವಾಸ', 'ಚಂದನದ ಗೊಂಬೆ'ಯಂಥ ಸಾಂಸಾರಿಕ ಚಿತ್ರಗಳಲ್ಲಿ ಮನಗೆದ್ದಿದ್ದ ದೊರೆ-ಭಗವಾನ್ ಜೋಡಿ ಉತ್ತಮವಾಗಿಯೇ ಚಿತ್ರವನ್ನು ನಿರ್ದೇಶಿಸಿತ್ತು. ಪ್ರಾಥಮಿಕ ಶಾಲಾ ಶಿಕ್ಷಕನಾಗಿ ಅನಂತ್‌ನಾಗ್ ಹಾಗೂ ಲಕ್ಷ್ಮೀ ತಂದೆಯ ಪಾತ್ರದಲ್ಲಿ ಬಾಲಕೃಷ್ಣ ತಮ್ಮ ಪಾತ್ರಕ್ಕೆ ನ್ಯಾಯ ಸಲ್ಲಿಸಿದ್ದರು. ತೂಗುದೀಪ ಶ್ರೀನಿವಾಸ್‌ಗೂ ತುಂಬ ಒಳ್ಳೆಯ ಪಾತ್ರವಿತ್ತು. ರಾಜನ್-ನಾಗೇಂದ್ರ ಸಂಗೀತದಲ್ಲಿ 'ನನಗಾಗಿ ಬಂದಾ ಆನಂದ ತಂದಾ...' ಮತ್ತು 'ಬಿಸಿಲಾದರೇನು ಮಳೆಯಾದರೇನು...' ಹಾಡುಗಳು ಹಿತವಾಗಿವೆ. ದುಃಖಾಂತ ಚಿತ್ರವಾದರೂ ಪ್ರೇಕ್ಷಕರು ಚಿತ್ರವನ್ನು ಗೆಲ್ಲಿಸಿದರು.

ಜೋಸೈಮನ್ ಚಿತ್ರಗಳಲ್ಲಿ ಏನಾದರೂ ವಿಶೇಷವಿರುತ್ತದೆ. 'ನ್ಯಾಯ ಗೆದ್ದಿತು' ಚಿತ್ರವೂ ಅಂತಹದೆ ಒಂದು ಚಿತ್ರ. ಶಂಕರ್‌ನಾಗ್, ಪ್ರಭಾಕರ್, ಜಯಮಾಲ, ರೂಪಾದೇವಿ, ಆರತಿ, ಸೀತಾರಾಂ ಮುಂತಾದವರು ನಟಿಸಿದ್ದರು. ಎಂ.ಕೆ.ಬಾಲಾಜಿಸಿಂಗ್ ನಿರ್ಮಿಸಿದ್ದ ಈ ಚಿತ್ರದಲ್ಲಿ ಒಂದು ಕಪ್ಪು ಕಾರು ಅದೇ ಪಾತ್ರವೋ ಎಂಬಂತೆ ಬರುತ್ತದೆ. ಖಳನಾಯಕ ಆದರಲ್ಲಿ ಬಂದು ಅನೇಕ ತೊಂದರೆಗಳಿಗೆ ಕಾರಣನಾಗುತ್ತಿರುತ್ತಾನೆ. ಖಳ ಯಾರೆಂದೇ ತಿಳಿಯದಂತೆ ರಹಸ್ಯ ಕಾಪಾಡಿದ್ದರು. ಜ್ಯೂಡೋ ರತ್ನಂ ಸಾಹಸವನ್ನು ಬೇರೆ ರೀತಿಯಲ್ಲೇ ಸಂಯೋಜಿಸಿದ್ದರು. ಪ್ರಭಾಕರ್ ಖುದ್ದು ಸಾಹಸಗಳಲ್ಲಿ ಪಾಲ್ಗೊಂಡು ಫೈಟ್ ದೃಶ್ಯಗಳನ್ನು ನೈಜವಾಗಿಸಿದ್ದರು. ಇಳಯರಾಜ ಸಂಗೀತದಲ್ಲಿ ಹಾಡುಗಳು ಮಧುರವಾಗಿದ್ದರೂ ಹೆಚ್ಚಾಗಿ ಗಮನ ಸೆಳೆದದ್ದು 'ಸಾವಿರ ಜನುಮಗಳು...' ಹಾಡು.

ಎಸ್.ವಿ.ಆರ್.ಪಿಕ್ಚರ್ಸ್‌ನವರು ತಯಾರಿಸಿ ಶಂಕರ್‌ನಾಗ್ ನಿರ್ದೇಶಿಸಿದ ಚಿತ್ರ 'ಹೊಸ ತೀರ್ಪು'. ಅಂಬರೀಷ್, ಜಯಮಾಲ, ತೂಗುದೀಪ ಶ್ರೀನಿವಾಸ್, ಮಂಜುಳಾ ಅವರುಗಳ ಮುಖ್ಯ ಪಾತ್ರವಿತ್ತು. ಮೊದಲಿಗೆ ಅಂಬರೀಷ್ ಪಾತ್ರಕ್ಕೆ ಶಂಕರ್‌ನಾಗ್ ಅವರನ್ನೇ ಆರಿಸಿದ್ದರೂ ಹಲವು ಕಾರಣಗಳಿಂದ ಶಂಕರ್‌ನಾಗ್ ಅವರನ್ನು ಕೇವಲ ನಿರ್ದೇಶನಕ್ಕೆ ಸೀಮಿತಗೊಳಿಸಿ ಅಂಬರೀಷ್ ಅವರನ್ನು ಆಯ್ಕೆ ಮಾಡಲಾಯಿತು. ಕತೆಯಲ್ಲಿ ಹೊಸತನವಿತ್ತು. ಕೊಲೆ ಮಾಡಿದ ಒರಟನನ್ನು ಜೈಲಿಗೆ ಹಾಕಿ ಶಿಕ್ಷಿಸುವುದರ ಬದಲು ಗ್ರಾಮವೊಂದರಲ್ಲಿ ಆತನನ್ನು ತಿದ್ದಿ ಹೊಸ ಬದುಕು ನೀಡುವ ನೂತನ ಆಶಯವನ್ನು ಒಳಗೊಂಡಿತ್ತು. ಚಿತ್ರವೂ ಆ ನೆಲೆಯಲ್ಲಿ ಉತ್ತಮವಾಗಿಯೇ ಮೂಡಿಬಂತು.

ವ್ಯಕ್ತಿವೈಶಿಷ್ಟ್ಯದ ಮಾದರಿಗಳು ಎಂದು ಕರೆಯಬಹುದಾದ, ಅತಿರೇಕದ ತ್ಯಾಗವನ್ನು ವಿಜೃಂಭಿಸುವ 'ಕಾಮನ ಬಿಲ್ಲು' ಹಾಗೂ 'ತಾಯಿಯ ನುಡಿ' ಚಿತ್ರಗಳು ತೆರೆಕಂಡವು. 'ಕಾಮನ ಬಿಲ್ಲು' ಆಶ್ವಿನಿಯವರ 'ಮೃಗತೃಷ್ಣಾ' ಕಾದಂಬರಿಯನ್ನು ಆಧರಿಸಿದ್ದರೆ, 'ತಾಯಿಯ ನುಡಿ'ಯದ್ದು ಅಬ್ಬಾಯಿ ನಾಯ್ಡುರವರು ಹೆಣೆದ ಕಥೆ. ಸ್ನೇಹಿತನಿಗಾಗಿ ತನ್ನೆಲ್ಲ ಸಂತೋಷವನ್ನು ಕಳೆದುಕೊಂಡ ನಾಯಕನದು ಒಂದು ಚಿತ್ರವಾದರೆ, ತಾಯಿಯ ಮಾತನ್ನು ಪಾಲಿಸುವ ಸಲುವಾಗಿ ಕೇವಲ ತನ್ನ ಸುಖವನ್ನಷ್ಟೇ ಅಲ್ಲ, ಸಂಪತ್ತನ್ನೂ ಕಳೆದುಕೊಳ್ಳುವವನು ಇನ್ನೊಬ್ಬ ನಾಯಕ. ರಾಜಕುಮಾರ್ ಯುವಕನಾಗಿ, ಕಲ್ಯಾಣ್ ಕುಮಾರ್ ಹಿರಿಯ ಸೋದರನಾಗಿ ಕ್ರಮವಾಗಿ ಈ ಎರಡೂ ಚಿತ್ರಗಳ ಪ್ರಧಾನ ಭೂಮಿಕೆಯಲ್ಲಿದ್ದರು. 'ಕಾಮನಬಿಲ್ಲು' ಶೇಕಡಾ ೧೦೦ರ ತೆರಿಗೆ ವಿನಾಯ್ತಿಯೊಡನೆ ೧೦೦ ದಿನಗಳ ಪ್ರದರ್ಶನ ಕಂಡರೆ, ಅಬ್ಬಾಯಿನಾಯ್ಡುರವರ 'ತಾಯಿಯ ನುಡಿ' ಯಾವುದೇ ರೀತಿಯ ರಿಯಾಯಿತಿ ಇಲ್ಲದೆ ಶತದಿನ ಪ್ರದರ್ಶನ ಕಂಡಿತು.

'ಕಾಮನ ಬಿಲ್ಲು'ನಲ್ಲಿ ಸ್ನೇಹಿತನಿಗಾಗಿ ತನ್ನ ಪ್ರೇಯಸಿಯನ್ನು ತ್ಯಾಗಮಾಡಿ, ಅಂಗವಿಕಲೆಯನ್ನು ಮದುವೆಯಾಗುವ ರಾಜಕುಮಾರ್ ಅತಿರೇಕದ ತ್ಯಾಗವನ್ನು ಪ್ರೇಕ್ಷಕರು ಇಷ್ಟಪಡಲಿಲ್ಲ. 'ಬಂಗಾರದ ಮನುಷ್ಯ' ಚಿತ್ರದ ಕೆಲ ಅಂಶಗಳು ಚಿತ್ರದಲ್ಲಿ ಇದ್ದುವಾದರೂ ಅಲ್ಲಿಗೂ, ಇಲ್ಲಿಗೂ ಹೋಲಿಕೆ ಬರದಂತೆ ಎಚ್ಚರ ವಹಿಸಲಾಗಿತ್ತು. ಆದರೆ ಓಟದಲ್ಲಿ ಸರಾಗ ನಡೆಯಿಲ್ಲದ್ದರಿಂದ ಇದು ಕೂಡ ಫಲ ನೀಡಿರಲಿಲ್ಲ. ಅನಂತ್‌ನಾಗ್ ಅಭಿನಯದ ಒಂದು ಹಾಡು ಹಾಗೂ ಕೆಲವಾರು ದೃಶ್ಯಗಳನ್ನು ಕತ್ತರಿಸಿದ್ದುದರ ನಿಶ್ಚಿತ ಪರಿಣಾಮ ಚಿತ್ರದ ಮೇಲೆ ಆಗಿತ್ತು. ಮೇಲುಕೋಟೆಯ ಪರಿಸರದಲ್ಲಿ ಗೌರಿಶಂಕರ್‌ರವರ ಛಾಯಾಗ್ರಹಣ ಹಾಗೂ ರಾಜಕುಮಾರ್ ಯೋಗಾಸನದ ದೃಶ್ಯಗಳಷ್ಟೇ ಚಿತ್ರದ ಆಕರ್ಷಣೆಯ ಅಂಶಗಳಾಗಿದ್ದವು. ಕನ್ನಡಕ್ಕೆ ಬೆಂಗಾವಲಿಲ್ಲದ ಮಂಗಳೂರಿನ ಸುಚಿತ್ರ ಚಿತ್ರಮಂದಿರದಲ್ಲಿ ೧೯೮೩ರ ಮೇ ೨೬ ರಂದು



(ಚಿತ್ರ ೫೯) 'ಕಾಮನಬಿಲ್ಲು' ಚಿತ್ರದಲ್ಲಿ ರಾಜಕುಮಾರ್



Final Approval of Layout, Photos and Proof/ dated 8-12-2001



(ಚಿತ್ರ ೬೦) 'ತಾಯಿ ನುಡಿ' ಚಿತ್ರದಲ್ಲಿ ಕಲ್ಯಾಣ್‌ಕುಮಾರ್, ಚರಣ್‌ರಾಜ್ ಮತ್ತು ಆರತಿ

ಈ ಚಿತ್ರವನ್ನು ಅದ್ದೂರಿಯಾಗಿ ಬಿಡುಗಡೆ ಮಾಡಿದಾಗ ೪೫ ಬೃಹತ್ ಗಾತ್ರದ ನಕ್ಷತ್ರಗಳು ಹಾಗೂ ೨೦ ಬ್ಯಾನರ್‌ಗಳಿಂದ ಚಿತ್ರಮಂದಿರವನ್ನು ಅಲಂಕರಿಸಲಾಗಿತ್ತು.

ರಾಜಕುಮಾರ್ ಜನಪ್ರಿಯತೆಯ ಇಂಥ ಉತ್ಕರ್ಷದ ದಿನಗಳಲ್ಲಿ ಪುಟ್ಟಣ್ಣನವರ ಕೈಯಲ್ಲೂ ಒಂದೆರಡು ಚಿತ್ರಗಳಿದ್ದವು. ಇದೆಲ್ಲಕ್ಕಿಂತ ಹೆಚ್ಚಾಗಿ ಆಗೀಗ ವೃತ್ತಿರಂಗಭೂಮಿಯ ನಾಟಕಗಳಲ್ಲಿ ಅಭಿನಯಿಸುತ್ತಾ ನಿರಂತರವಾಗಿ ೧೪ ವರ್ಷಗಳ ಕಾಲ ಬೆಳ್ಳಿತೆರೆಯಿಂದ ದೂರವಾಗಿ ವನವಾಸ ಅನುಭವಿಸುತ್ತಿದ್ದ ಕಲ್ಯಾಣ್‌ಕುಮಾರ್ ಬಹು ದೊಡ್ಡ ಯಶಸ್ಸಿನೊಂದಿಗೆ ಪುನರಾಗಮಿಸಿದರು. ಕನ್ನಡಿಗರು ಬಹುಮಟ್ಟಿಗೆ ಮರೆತೇ ಹೋಗಿದ್ದ ಕಲ್ಯಾಣ್‌ಕುಮಾರ್‌ರವರನ್ನು 'ತಾಯಿಯ ನುಡಿ' ಮೂಲಕ ವಾಪಸ್ಸು ಕರೆತಂದ ಕೀರ್ತಿ ಅಬ್ಬಾಯಿನಾಯ್ಡುರವರಿಗೆ ಸಲ್ಲುತ್ತದೆ. ಈ ಚಿತ್ರದ 'ನೀ ಏನೇ ಮಾಡು ಹೆದರುವೆನೇನು...' ಹಾಡಿನಲ್ಲಿ ಕಲ್ಯಾಣ್‌ರವರು ಅಭಿನಯಿಸಿದ ರೀತಿ ಮನೋಜ್ಞವಾಗಿತ್ತು. ವನವಾಸದಲ್ಲಿ ಅದುಮಿಟ್ಟಿದ್ದ ಅಭಿನಯದ ಹಸಿವನ್ನು ಇಂಗಿಸಿಕೊಳ್ಳುವ ರೀತಿಯಲ್ಲಿ ಅವರು ಅತ್ಯಂತ ಭಾವುಕರಾಗಿ ನಟಿಸಿದ್ದರು. 'ಮನೆಯೆಂದರೆ ಹೀಗಿರಬೇಕು...' ಎಂಬ ಇನ್ನೊಂದು ಜನಪ್ರಿಯ ಗೀತೆಯಿದ್ದ ಈ ಚಿತ್ರದ ಮೂಲಕ ಕಲ್ಯಾಣ್‌ಕುಮಾರ್‌ರನ್ನು ಕನ್ನಡಿಗರು ಮತ್ತೆ ಸ್ವೀಕರಿಸಿದಂತಾಗಿತ್ತು. ಅವರಿಗೆ 'ತಾಯಿಯ ನುಡಿ' ನಂತರ ಐದಾರು ಚಿತ್ರಗಳಲ್ಲಿ ಅವಕಾಶಗಳು ದೊರೆತವು. ಬೆಂಗಳೂರಿನ ವುಡ್‌ಲ್ಯಾಂಡ್ಸ್ ಹೋಟೇಲಿನಲ್ಲಿ ೧೯೮೩ರ ಸೆಪ್ಟೆಂಬರ್ ೧೮ ರಂದು ಭಾನುವಾರ ನಡೆದ ಶತದಿನ ಸಮಾರಂಭದಲ್ಲಿ ಕಲ್ಯಾಣ್‌ಕುಮಾರ್ ಎಲ್ಲರನ್ನೂ ಅಭಿನಂದಿಸಿ ಹೀಗೆ ಕೃತಜ್ಞತೆ ಸಲ್ಲಿಸಿದರು, "೧೪ ವರ್ಷಗಳ ವನವಾಸದಲ್ಲಿದ್ದ ನನ್ನನ್ನು ಜನ ಮರೆತುಬಿಟ್ಟಿದ್ದರು. ಇಂತಹ ಸ್ಥಿತಿಯಲ್ಲಿ ಅವಕಾಶ ಕೊಡಲು ಯಾರೂ ಮುಂದೆ ಬರುವುದಿಲ್ಲ. ಆದರೆ ಅಬ್ಬಾಯಿನಾಯ್ಡುರವರು ಧೈರ್ಯವಾಗಿ ಅವಕಾಶ ಕೊಟ್ಟರು. ಈ ಚಿತ್ರ ಬಿಡುಗಡೆಯಾಗುವಾಗ ನನಗೆ ನನ್ನ ಮೊದಲ ಚಿತ್ರ 'ನಟ ಶೇಖರ' ಬಿಡುಗಡೆಯಾದಾಗಿನಕ್ಕಿಂತ ಹೆಚ್ಚು ಭಯವಾಗಿತ್ತು. ಏಕೆಂದರೆ ಈ ಚಿತ್ರ ಸೋತಿದ್ದರೆ ಎಲ್ಲಾ ಕೆಟ್ಟ ಹೆಸರು ನನಗೇ ಬರುತ್ತಿತ್ತು. ಆದರೆ ನನ್ನ ಅದೃಷ್ಟಕ್ಕೆ ಹಾಗಾಗಲಿಲ್ಲ. ಕನ್ನಡಿಗರು ಮೆಚ್ಚಿ ಆಶೀರ್ವದಿಸಿದರು."

ಕಲ್ಯಾಣ್‌ಕುಮಾರ್ ನಂತರದ ದಿನಗಳಲ್ಲಿ ನಾಯಕರಲ್ಲದಿದ್ದರೂ ಪ್ರಧಾನ ಪಾತ್ರದ ಅವಕಾಶಗಳನ್ನು ಪಡೆಯುತ್ತಾ ಸುಮಾರು ೧೦ ವರ್ಷಗಳ ಕಾಲ ಬೇಡಿಕೆಯಲ್ಲಿದ್ದರು. ಅವರಿಗೆ ಆರಂಭದ ದಿನಗಳ ವೈಭವ ಮರಳಿ ಬರಲಿಲ್ಲವಾದರೂ ಆ ವೈಭವದ ಸ್ಮರಣೆಯನ್ನು ಉಳಿಸುವಂಥ ತಾರಾವರ್ಚಸ್ಸು ಮುಂದುವರಿಯಿತು. ಚಿತ್ರಗಳ ಶೀರ್ಷಿಕೆಯಲ್ಲಿ ಅವರ ಹೆಸರನ್ನು ಆಗ ತಾನೇ ಉದ್ಯಮಕ್ಕೆ ಬಂದಿದ್ದ ಕಲಾವಿದರ ಹೆಸರುಗಳ ನಂತರ ತೋರಿಸುತ್ತಿದ್ದುದನ್ನು ಆಕ್ಷೇಪಿಸಿ ಓದುಗರು ಪತ್ರಿಕೆಗಳಿಗೆ ಪತ್ರಗಳನ್ನು ಬರೆಯುತ್ತಿದ್ದುದು ಕನ್ನಡಿಗರ ಅಂತರಂಗದಲ್ಲಿ ಕಲ್ಯಾಣ್‌ಕುಮಾರ್ ಬಗ್ಗೆ ಇದ್ದ ಶಾಶ್ವತ ಅಭಿಮಾನ, ಗೌರವದ ಸಂಕೇತವೆನ್ನಬಹುದು.

೧೯೮೦ ರಲ್ಲಿ ವಿಶ್ವದ ಎಲ್ಲೆಡೆಯಂತೆ ಕರ್ನಾಟಕಕ್ಕೂ ವೀಡಿಯೋ ಮಾಧ್ಯಮ ಕಾಲಿಟ್ಟಿತು. ಆರಂಭದಲ್ಲಿ ಇದರ ಬಗ್ಗೆ ಯಾರೂ ಅಷ್ಟಾಗಿ ತಲೆ ಕೆಡಿಸಿಕೊಂಡಿರಲಿಲ್ಲ. ಸಿನಿಮಾಗಳಲ್ಲಿ ದೊರಕದ ಅಶ್ಲೀಲ ಹಾಗೂ ಲೈಂಗಿಕ ದೃಶ್ಯಗಳನ್ನು ಟೇಪುಗಳ ಮೂಲಕ ಮನೆಯಲ್ಲಿ, ಖಾಸಗಿಯಾಗಿ ನೋಡಿಕೊಳ್ಳುವುದಕ್ಕಷ್ಟೇ ಅದು ಮಿತಿಗೊಳ್ಳುತ್ತದೆಂದು ಚಿತ್ರೋದ್ಯಮಿಗಳು ಭಾವಿಸಿದ್ದರು. ಈ ಭಾವನೆ ಎಷ್ಟು ಬಲವಾಗಿತ್ತೆಂದರೆ ಇಡೀ ರಾಜ್ಯದಲ್ಲಿ, ತಾಲ್ಲೂಕು ಕೇಂದ್ರಗಳಲ್ಲಿ ತಲೆಯೆತ್ತುತ್ತಿದ್ದ ವೀಡಿಯೋ ಪಾರ್ಲರುಗಳ ಬಗ್ಗೆ ಸುಮಾರು ಎರಡು ವರ್ಷಗಳವರೆಗೆ ಯಾರೂ ತಲೆ ಕೆಡಿಸಿಕೊಂಡಿರಲಿಲ್ಲ. ಏಕೆಂದರೆ ೨೫ ರಿಂದ ೧೦೦ ಮಂದಿಯವರೆಗೆ ಕೂರುವ ಪುಟ್ಟ ವೀಡಿಯೋ ಹಾಲ್‌ಗಳಲ್ಲಿ ಸಾಮಾನ್ಯವಾಗಿ ಪ್ರದರ್ಶನವಾಗುತ್ತಿದ್ದಂಥವು ಹಾರರ್ ಚಿತ್ರಗಳು, ಜೊತೆಗೆ 'ಎ' ಸರ್ಟಿಫಿಕೇಟ್ ಪಡೆದ ಹಿಂದಿ, ಮಲೆಯಾಳಿ ವಯಸ್ಕರ ಚಿತ್ರಗಳು. ಇದರ ಜೊತೆಗೆ ಇಂಗ್ಲಿಷಿನ ಸಿಂಗಲ್ ಎಕ್ಸ್, ಡಬ್ಬಲ್ ಎಕ್ಸ್ ಚಿತ್ರಗಳು ಸೇರಿಕೊಂಡವು. ದಿನಕಳೆದಂತೆ ಸ್ಥಳೀಯ ಪೊಲೀಸರ ಕಣ್ಣುಮುಚ್ಚಾಲೆಯಾಟದ ಮಧ್ಯೆ 'ತ್ರಿಬಲ್ ಎಕ್ಸ್' ಎಂದು ಕರೆಯಲ್ಪಡುವ ಅಪ್ಪಟ ನೀಲಿ ಚಿತ್ರಗಳು ಪ್ರದರ್ಶನವಾಗತೊಡಗಿ ಥಿಯೇಟರುಗಳಿಗೆ ಬರುತ್ತಿದ್ದ ಪ್ರೇಕ್ಷಕರ ಸಂಖ್ಯೆ ಗಮನಾರ್ಹವಾಗಿ ಕಡಿಮೆಯಾಯಿತು. ಈ ಹಂತದಲ್ಲಿ ಉದ್ಯಮ ಜಾಗೃತವಾಯಿತು. ಆದರೂ ಕೆಲವರು "ಅದೆಲ್ಲ ಎಷ್ಟು ದಿನ ನೋಡುತ್ತಾರೆ, ಅಸಹ್ಯವಾಗಿ ಮತ್ತೆ ಚಿತ್ರಮಂದಿರಗಳಿಗೆ ಬರುತ್ತಾರೆ" ಎನ್ನುತ್ತಾ ತಟಸ್ಥರಾಗಿದ್ದರು. ಅವರೆ ಈ ತಾಟಸ್ಥ್ಯ ಇದ್ದಕ್ಕಿದ್ದಂತೆ ಭಗ್ನವಾದದ್ದು ಕನ್ನಡದ ಹಳೆಯ ಶ್ರೇಷ್ಠ ಚಿತ್ರಗಳು ಹಾಗೂ ಹೊಚ್ಚ ಹೊಸ ಚಿತ್ರಗಳು ಕೂಡ ಪಾರ್ಲರ್‌ಗಳಲ್ಲಿ ಪ್ರದರ್ಶನವಾಗ ತೊಡಗಿದಾಗ. ರಾಜ್ಯದ ಪ್ರಮುಖ ನಗರಗಳಲ್ಲಿ ಬಿಡುಗಡೆಯಾಗುತ್ತಿದ್ದ ದೊಡ್ಡ ಬಜೆಟ್‌ನ ಅದ್ದೂರಿ ಚಿತ್ರಗಳು ಒಂದೇ ವಾರದ ಅಂತರದಲ್ಲಿ ತಾಲ್ಲೂಕು, ಹೋಬಳಿಗಳ ವೀಡಿಯೋ ಪಾರ್ಲರ್‌ಗಳಲ್ಲಿ ಪ್ರದರ್ಶನವಾಗಲಾರಂಭಿಸಿದವು. ಇದು ನಿರ್ಮಾಣ ಹಂತದಲ್ಲಿಯೇ ಮುಂಗಡ ಹಣ ಕೊಟ್ಟಿದ್ದ ಜಿಲ್ಲಾವಾರು ಹಂಚಿಕೆದಾರರನ್ನು ಬೆಚ್ಚಿ ಬೀಳಿಸಿತು. ಇಡೀ ಚಿತ್ರೋದ್ಯಮದ ಅರ್ಥ ವ್ಯವಸ್ಥೆಯೇ ಕುಸಿದು ಬೀಳಬಹುದು ಎಂಬ ಆತಂಕ ಎಲ್ಲೆಡೆ ಕಾಣಿಸಿಕೊಂಡಿತು. ಜೊತೆಗೆ ಮನರಂಜನಾ ತೆರಿಗೆಯ ಮೂಲಕ ಸರ್ಕಾರದ ಬೊಕ್ಕಸಕ್ಕೆ ಸಲ್ಲುತ್ತಿದ್ದ ಹಣದ ಪ್ರಮಾಣ ಕೂಡ ಗಮನಾರ್ಹವಾಗಿ ಕಡಿಮೆಯಾಯಿತು.

ವೈಜ್ಞಾನಿಕವಾಗಿ ಹೊಸ ಶೋಧನೆಯಾಗಿದ್ದ ಈ ವೀಡಿಯೋ ಮಾಧ್ಯಮವನ್ನು ನಿಯಂತ್ರಿಸಲು ಆಗ್ಗೆ ಕೇಂದ್ರ ಹಾಗೂ ರಾಜ್ಯಗಳಲ್ಲಿ ಪ್ರತ್ಯೇಕವಾದ ಕಾನೂನು ಇರಲಿಲ್ಲ. ಹೀಗಾಗಿ ನಿರ್ದಿಷ್ಟ ದೂರುಗಳಿಲ್ಲದೆ ತಾವು ಯಾವ ಕ್ರಮವನ್ನೂ ಕೈಗೊಳ್ಳಲಾಗುವುದಿಲ್ಲವೆಂದು ಪೊಲೀಸರು ಕೂಡ ಆರಂಭದಲ್ಲಿ ನಿರ್ಲಿಪ್ತರಾಗಿದ್ದರು. ಕಾನೂನಿನಲ್ಲಿನ ಇಂಥ ದೌರ್ಬಲ್ಯವನ್ನು ವೀಡಿಯೋ ದಂಧೆಯಲ್ಲಿ ತೊಡಗಿಕೊಂಡಿದ್ದವರು ಚೆನ್ನಾಗಿ ಬಳಸಿಕೊಂಡರು. ಜಿಲ್ಲಾ ಕೇಂದ್ರಗಳ ಪ್ರಮುಖ ಥಿಯೇಟರುಗಳಲ್ಲಿ ೨ನೆಯ ಆಟದ ವೇಳೆಯಲ್ಲಿ ಎಲ್ಲರ ಕಣ್ಣು ತಪ್ಪಿಸಿ ಈ ಕಳ್ಳ ಪ್ರಿಂಟುಗಳನ್ನು ಚಿತ್ರಿಸಿಕೊಳ್ಳಲಾಗುತ್ತಿದೆ ಎಂಬುದು ಬಹಿರಂಗವಾದಾಗ ನಿರ್ಮಾಪಕರು ಸಂಪೂರ್ಣವಾಗಿ ಎಚ್ಚರಗೊಂಡರು. ಈ ವೇಳೆಗಾಗಲೇ ವಸತಿ ಗೃಹಗಳಲ್ಲಿ, ಕ್ಲಬ್ಬುಗಳಲ್ಲಿ ಹಾಗೂ ದೂರ ಸಂಚಾರದ ಬಸ್ಸುಗಳಲ್ಲಿ 'ವೀಡಿಯೋ ಕೋಚ್' ಎಂದೇ ಜಾಹೀರು ಪಡಿಸಿಕೊಂಡು ಹೊಚ್ಚ ಹೊಸ ಚಿತ್ರಗಳನ್ನು ವೀಡಿಯೋ ಮೂಲಕ ಪ್ರದರ್ಶಿಸುವುದು ಸರ್ವೇಸಾಮಾನ್ಯವಾಗಿತ್ತು. ಇಷ್ಟು ಮಾತ್ರವಲ್ಲದೆ ಕನ್ನಡದ ೮೦ ಜನಪ್ರಿಯ ಚಿತ್ರಗಳ ವೀಡಿಯೋ ಟೇಪುಗಳು ಸಿಂಗಪೂರ್‌ನ ಅಂಗಡಿಗಳಲ್ಲಿ ಮಾರಾಟವಾಗುತ್ತಿರುವ ಖಚಿತ ವರ್ತಮಾನವಿತ್ತು. ಈ ಎಲ್ಲ ಬೆಳವಣಿಗೆಗಳು ಅನಧಿಕೃತ ಹಾಗೂ ಅಪರಾಧ ಅನ್ನಿಸುವಂಥ ಒಂದು ಸಾರ್ವತ್ರಿಕ ಅಭಿಪ್ರಾಯ ಮೂಡಿದ್ದು ಕನ್ನಡದ ಹಿರಿಯ ನಿರ್ಮಾಪಕ ಎನ್.ವೀರಾಸ್ವಾಮಿ ೧೯೮೩ರ ಮಧ್ಯ ಭಾಗದಲ್ಲಿ ಪೊಲೀಸ್ ಮಹಾನಿರ್ದೇಶಕರಿಗೆ ಮನವಿ ರೂಪದ ದೂರು ಸಲ್ಲಿಸಿದಾಗ.

ಬಿಜಾಪುರ ಜಿಲ್ಲೆಯ ಇಳಕಲ್ಲಿನಲ್ಲಿ 'ನಾ ನಿನ್ನ ಮರೆಯಲಾರೆ' ಚಿತ್ರ ವೀಡಿಯೋ ಪಾರ್ಲರೊಂದರಲ್ಲಿ ಬಹಳ ದಿನಗಳಿಂದಲೂ ಪ್ರದರ್ಶನವಾಗುತ್ತಿತ್ತು. ಈ ಬಗ್ಗೆ ಚಿತ್ರದ ಅಲ್ಲಿನ ಜಿಲ್ಲಾ ಹಂಚಿಕೆದಾರರು ಪೊಲೀಸರಿಗೆ ದೂರು ನೀಡಿ ಟೇಪುಗಳನ್ನು ವಶಪಡಿಸಿಕೊಂಡದ್ದಲ್ಲದೆ ತಡೆಯಾಜ್ಞೆ ತಂದು ಪಾರ್ಲರನ್ನು ಮುಚ್ಚಿಸಿದರು. ಈ ಪ್ರಕರಣ ಸಾರ್ವಜನಿಕವಾಗಿ ವ್ಯಾಪಕ ಪ್ರಚಾರ ಪಡೆಯಿತು. ಇದರೊಂದಿಗೆ ವೀರಾಸ್ವಾಮಿ ಈಗಾಗಲೇ ಇರುವ 'ಕಾಪಿರೈಟ್ ಕಾಯಿದೆ ಮತ್ತು ಪೊಲೀಸ್ ಕಾಯಿದೆ'ಯ ಅನ್ವಯ ಅಕ್ರಮ ವೀಡಿಯೋ ಹಾವಳಿಯನ್ನು ತಡೆಯಲು ಸಾಧ್ಯವಿದೆ ಎಂದು ವಾದಿಸಿ ಸಲ್ಲಿಸಿದ ಮನವಿ ಪೊಲೀಸ್ ಮಹಾನಿರ್ದೇಶಕರು ರಾಜ್ಯದ ಪೊಲೀಸ್ ಕೇಂದ್ರಗಳಿಗೆಲ್ಲಾ ಸೂಚನೆ ಕಳುಹಿಸುವಂತೆ ಮಾಡಿತು. ಈ ಎರಡು ಘಟನೆಗಳಿಂದಾಗಿ ವೀಡಿಯೋ ಮಾಧ್ಯಮ ಹಾಗೂ ಪ್ರದರ್ಶನಗಳ ಬಗ್ಗೆ ಅದೊಂದು ಕಾನೂನು ಬಾಹಿರ ಚಟುವಟಿಕೆ ಇರಬಹುದು ಎನ್ನುವಂಥ ಸಾರ್ವಜನಿಕ ಅಭಿಪ್ರಾಯ ರೂಪುಗೊಂಡಿತು. ಇವುಗಳಲ್ಲಿ ಅನೇಕ ಪಾರ್ಲರ್‌ಗಳು ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಕೃಪಾಕಟಾಕ್ಷದಲ್ಲಿದ್ದುದರಿಂದ ಈ ಅಭಿಪ್ರಾಯ ಇನ್ನಷ್ಟು ಹೆಚ್ಚಲು

ಕಾರಣವಾಯಿತು. ಈ ಹಂತದಲ್ಲಿ ವೀಡಿಯೋ ಪಿಡುಗಿನ ಬಗ್ಗೆ, ಅದರ ಸಾಧಕ ಬಾಧಕಗಳ ಬಗ್ಗೆ ವ್ಯಾಪಕವಾಗಿ ಚರ್ಚೆ ನಡೆಯತೊಡಗಿತು. ಒಂದು ಅಂದಾಜಿನ ಪ್ರಕಾರ ೧೯೮೪ರ ವೇಳೆಗಾಗಲೇ ಭಾರತದಲ್ಲಿ ೨೦೦೦ ವೀಡಿಯೋ ಕೋಚ್‌ಗಳು, ೧೦೦೦೦ ವೀಡಿಯೋ ಥಿಯೇಟರುಗಳು ಚಾಲ್ತಿಯಲ್ಲಿದ್ದು ಇವುಗಳ ಒಟ್ಟು ವಾರ್ಷಿಕ ವಹಿವಾಟು ೧೦೦ ಕೋಟಿ ರೂಪಾಯಿಗಳನ್ನು ದಾಟಿ ಬೆಳೆದಿತ್ತು. ಇದು ವೀಡಿಯೋ ಮಾಧ್ಯಮದ ಬೆಳವಣಿಗೆಯ ಆರಂಭದ ದಿನಗಳಲ್ಲಿದ್ದ ಸ್ಥಿತಿ.

ಭಾರತದಲ್ಲಿ ೧೯೮೪ರ ವೇಳೆಗೆ ೧೧,೭೫೪ ಚಲನಚಿತ್ರಮಂದಿರಗಳಿದ್ದವು. ಇದರಲ್ಲಿ ದಕ್ಷಿಣದ ನಾಲ್ಕು ರಾಜ್ಯಗಳಲ್ಲೇ ಶೇಕಡಾ ೫೬ ರಷ್ಟು ಅಂದರೆ ೬೫೬೭ ಇದ್ದವು. ಯುನೆಸ್ಕೋದ ಅಂದಿನ ಅಂದಾಜಿನ ಪ್ರಕಾರ ''ಭಾರತದಂತಹ ದೊಡ್ಡ ರಾಷ್ಟ್ರಕ್ಕೆ ಜನರ ಮನರಂಜನೆಗಾಗಿ ಇನ್ನೂ ೩೦,೦೦೦ ಚಿತ್ರಮಂದಿರಗಳಾದರೂ ಬೇಕು''. ಆದರೆ ಅದರ ಸಾಧ್ಯತೆ ಹೇಗೆ? ವೀಡಿಯೋ ಇಂತಹ ಪರಿಸ್ಥಿತಿಯಲ್ಲಿ ಭಾರತಕ್ಕೆ ಕಾಲಿಟ್ಟಿತು. ಇದರಿಂದ ಕನ್ನಡ ಚಿತ್ರೋದ್ಯಮ ದೊಡ್ಡ ಪ್ರಮಾಣದ ಹಾನಿ ಅನುಭವಿಸಿತು. ತಜ್ಞರು ಅಂದಾಜು ಮಾಡಿದರು. ಭಾರತದ ಚಲನಚಿತ್ರ ನಿರ್ಮಾಪಕರು ಈ ಅವಧಿಯಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಪ್ರತಿ ತಿಂಗಳು ೩೦,೦೦೦ ವಿ.ಸಿ.ಆರ್. ಗಳು ಕಸ್ಟಂಸ್ ಮೂಲಕ ಭಾರತಕ್ಕೆ ಬರುತ್ತಿದ್ದವು. ಕಳ್ಳ ಸಾಗಾಣಿಕೆಯ ಮೂಲಕ ಅದಕ್ಕಿಂತ ಕನಿಷ್ಠ ಎರಡು ಪಟ್ಟಾದರೂ ನುಸುಳುತ್ತಿರುವ ಸಾಧ್ಯತೆಗಳಿದ್ದವು. ಆದಾಗಲೇ ಐದು ಲಕ್ಷ ವಿ.ಸಿ.ಆರ್.ಗಳು ಭಾರತದಲ್ಲಿ ಬಳಕೆಯಲ್ಲಿದ್ದವು.

ಇವೆಲ್ಲದರ ಹಿನ್ನೆಲೆಯಲ್ಲಿ ಕೊನೆಗೂ ರಾಜ್ಯ ಸರ್ಕಾರ ದೃಢ ನಿಶ್ಚಯದಿಂದ ಬಿಗಿಯಾದ ನಿಯಮಗಳನ್ನು ರೂಪಿಸಿ 'ವೀಡಿಯೋ' ಮೇಲೆ ಗದಾಪ್ರಹಾರ ಮಾಡಿತು. ವ್ಯಾಪಾರಿ ವೀಡಿಯೋ ಚಲನಚಿತ್ರಗಳ ಪ್ರದರ್ಶನವನ್ನು ಸಿನಿಮಟೋಗ್ರಾಫ್ ಕಾನೂನಿನ ವ್ಯಾಪ್ತಿಗೆ ಒಳಪಡಿಸಿದ್ದು ಮೊದಲ ಮಹತ್ವದ ಹೆಜ್ಜೆ. ೧೯೮೪ರ ಜೂನ್ ೨೧ ರಿಂದ ಜಾರಿಗೆ ಬರುವಂತೆ ಆದೇಶಿಸಲಾದ ಈ ನಿಯಮದನ್ವಯ ಸಾರ್ವಜನಿಕ ಪ್ರದರ್ಶನಕ್ಕೆ ಯೋಗ್ಯವೆಂದು ಸೆನ್ಸಾರ್ ಮಂಡಳಿಯಿಂದ ಶಿಫಾರಸ್ಸು ಪಡೆಯಲಾದ ಪ್ರದರ್ಶನಾನುಮತಿಯನ್ನು ಪಡೆದಿರುವ ಚಿತ್ರಗಳು ಮಾತ್ರ ಪ್ರದರ್ಶನಕ್ಕೆ ಅರ್ಹವಾಗುತ್ತವೆ. ಹಾಗೆ ಶಿಫಾರಸು ಪಡೆದಿಲ್ಲದ ಮತ್ತು ಸಂಬಂಧಿಸಿದ ನಿರ್ಮಾಪಕರ ಲಿಖಿತ ಕರಾರು ಹೊಂದಿರದ ಚಿತ್ರಗಳನ್ನು ಪ್ರದರ್ಶಿಸಿ ನಿಯಮವನ್ನು ಉಲ್ಲಂಘಿಸಿದವರಿಗೆ ಐದು ವರ್ಷ ಕಾರಾಗೃಹ ವಾಸ ಅಥವಾ ೨೦,೦೦೦ ರೂಪಾಯಿ ದಂಡ ಅಥವಾ ಎರಡನ್ನೂ ವಿಧಿಸಲು ಈ ಕಾನೂನಿನಲ್ಲಿ ಅವಕಾಶವಿದೆ. ರಾಜ್ಯ ಸರ್ಕಾರ ಈ ಕಾನೂನು ರೂಪಿಸುವುದಕ್ಕೆ ಮಾದರಿಯಾದದ್ದು ೧೯೮೪ರ ಮಾರ್ಚಿ ತಿಂಗಳಲ್ಲಿ ಕೇಂದ್ರ ಸರ್ಕಾರ ಹೊರಡಿಸಿದ್ದ ಒಂದು ವಿಶೇಷ ಆಜ್ಞೆ. ಇದಿಷ್ಟೇ ಅಲ್ಲದೆ ಕೇಂದ್ರ ಸರ್ಕಾರ ವೀಡಿಯೋ ಚಿತ್ರಗಳಿಗೆಂದೇ ಪ್ರತ್ಯೇಕ ಸೆನ್ಸಾರ್ ವ್ಯವಸ್ಥೆಯನ್ನು ಕೂಡ ಜಾರಿಗೆ ತಂದಿತು. ಇದರಂತೆ ಚಿತ್ರಮಂದಿರಗಳಲ್ಲಿನ ರೂಪಕ ಚಿತ್ರಗಳಿಗೆ ಬಿಡುಗಡೆಗಾಗಿ ನೀಡುವ ಪ್ರದರ್ಶನಾನುಮತಿಯೇ ವೀಡಿಯೋ ಚಿತ್ರಗಳಿಗೂ ಅನ್ವಯಿಸುವುದಿಲ್ಲ. ವೀಡಿಯೋ ಚಿತ್ರಗಳು ಸೆನ್ಸಾರ್ ಮಂಡಳಿಯಿಂದ ಪ್ರತ್ಯೇಕವಾದ ಅನುಮತಿಯನ್ನು ಪಡೆಯಬೇಕು. ಪ್ರತಿಯೊಂದು ವೀಡಿಯೋ ಟೇಪು ಮತ್ತು ಅದರ ಕವಚದ ಮೇಲೆ ಸೆನ್ಸಾರ್ ಅನುಮತಿಯ ಸಂಖ್ಯೆ, ವರ್ಗ ಮುಂತಾದ ವಿವರಗಳೆಲ್ಲ ಕಡ್ಡಾಯವಾಗಿ ಇರಲೇಬೇಕು - ಈ ಅಂಶಗಳನ್ನು ಸೇರಿಸಿ ಸೆನ್ಸಾರ್ ನಿಯಮಾವಳಿಯನ್ನು ಸೂಕ್ಷ್ಮವಾಗಿ ತಿದ್ದುಪಡಿ ಮಾಡಿತು.

ವೀಡಿಯೋ ಮಾಧ್ಯಮದ ಆಗಮನದಿಂದಾಗಿ ಚಿತ್ರೋದ್ಯಮವು ಇಂಥ ಆತಂಕದ ದಿನಗಳನ್ನು ಕಳೆಯುತ್ತಿದ್ದಂತೆ ಇದೇ ವೀಡಿಯೋದ ಇನ್ನೊಂದು ಅನುಕೂಲಕರ ಮುಖವು ಅನಾವರಣಗೊಳ್ಳುತ್ತಾ ಬಂದಿತು. ವೀಡಿಯೋವನ್ನು ನಿರ್ಬಂಧಿಸಲು ನಿಯಮಗಳನ್ನು ರೂಪಿಸಿದ ಸೆನ್ಸಾರ್ ಮಂಡಳಿಯೇ ಮೊಟ್ಟ ಮೊದಲಿಗೆ ಅದರ ಪ್ರಯೋಜನವನ್ನು ಪಡೆದುಕೊಳ್ಳಲು ಪ್ರಯತ್ನಿಸಿತು. ಕೆಲವು ನಿರ್ಮಾಪಕರು ಸೆನ್ಸಾರ್ ಮಂಡಳಿ ಕತ್ತರಿಸಿದ ಆಕ್ಷೇಪಾರ್ಹ ಭಾಗಗಳನ್ನು ಮರುಜೋಡಣೆ ಮಾಡಿ ಪ್ರದರ್ಶಿಸುತ್ತಿದ್ದ ಅಪರಾಧಗಳ ನಿರ್ದಿಷ್ಟ ಉದಾಹರಣೆಗಳನ್ನು ಆಧರಿಸಿ ಈ ನಿಯಮವನ್ನು ಜಾರಿಗೆ ತರಲಾಯಿತು. ಅದರ ಪ್ರಕಾರ ಸೆನ್ಸಾರಾದ ತಮ್ಮ ಚಿತ್ರದ ಒಂದು ಪ್ರತಿಯನ್ನು ಪ್ರಾದೇಶಿಕ ಸೆನ್ಸಾರ್ ಕಚೇರಿಯಲ್ಲಿ ಇಡಬೇಕಾಗಿತ್ತು. ೧೯೮೨ರಲ್ಲಿ ಚಿತ್ರದ ಒಂದು ಪ್ರತಿಯನ್ನು ಮುದ್ರಿಸಲು ೨೫ ಸಾವಿರ ರೂಪಾಯಿ ವೆಚ್ಚ ತಗುಲುತ್ತಿತ್ತು. ಜೂನ್ ೧೯೮೩ ರಿಂದ ಈ ನಿಯಮವನ್ನು ಜಾರಿಗೆ ತರಲಾಯಿತು. ಈ ಚಿತ್ರವನ್ನು ಪೂರ್ಣಗೊಳಿಸುವುದರಲ್ಲಿ ಸಂಪೂರ್ಣವಾಗಿ ಬಸವಳಿದಿರುತ್ತಿದ್ದ ನಿರ್ಮಾಪಕನಿಗೆ ಇದೊಂದು ದೊಡ್ಡ ಹೊರೆಯಾಯಿತು. ಚಿತ್ರದ ಬಿಡುಗಡೆಗಾಗಿ ಒಂದೆರಡು ಹೆಚ್ಚಿನ ಪ್ರತಿಗಳನ್ನು ಮುದ್ರಿಸಲಾಗದಂಥ ಕಷ್ಟದ ಸ್ಥಿತಿಯಲ್ಲಿರುವ ನಿರ್ಮಾಪಕರು ಎಂದಿಗೂ ಉಪಯೋಗಿಸಲು ಸಾಧ್ಯವಾಗದಂಥ ಪ್ರತಿಯ ಮೇಲೆ ೨೫ ಸಾವಿರ ರೂಪಾಯಿಗಳನ್ನು ತೊಡಗಿಸುವುದು ಅನ್ಯಾಯವಷ್ಟೇ ಅಲ್ಲ, ಅಸಾಧ್ಯವೆಂಬ ತೀವ್ರ ಪ್ರತಿಕ್ರಿಯೆ ಕೇಳಿಬಂತು. ಎಲ್ಲ ಕಡೆಯಿಂದ ಒಂದೇ ರೀತಿಯ ಧ್ವನಿ, ಬಹುಬೇಗ ದೇಶಾದ್ಯಂತ ಅಸಮಾಧಾನದ ಅಲೆ ಎದ್ದಿತು. ಯಾರೋ ಕೆಲವರು ಮಾಡಿದ ತಪ್ಪಿಗೆ ಎಲ್ಲರನ್ನೂ ಅಪರಾಧಿಗಳಂತೆ ನೋಡುವುದು, ತಪ್ಪಿತಸ್ಥರನ್ನು ಶಿಕ್ಷಿಸಲಾಗದ ಸರ್ಕಾರದ ಅದಕ್ಷತೆಗೆ ನಿದರ್ಶನವೆಂದು ನಿರ್ಮಾಪಕರು ಉಗ್ರವಾಗಿ ಪ್ರತಿಭಟಿಸಿದರು. ಸರ್ಕಾರ ಬಹಳ ಬೇಗ ಮಣಿಯಿತು. ಕೆಲವೇ ವಾರಗಳಲ್ಲಿ ತನ್ನ ಆಜ್ಞೆಯನ್ನು ರದ್ದುಗೊಳಿಸಿತು. ಆದರೆ ಮತ್ತೆ ಇದೇ ಆಜ್ಞೆ ಮುಂದಿನ ವರ್ಷ ಜಾರಿಗೆ ಬಂದಿತು.



(ಚಿತ್ರ ೬೧) 'ಚಕ್ರವ್ಯೂಹ' ಚಿತ್ರದಲ್ಲಿ ಅಂಬರೀಷ್ ಮತ್ತು ರವಿಚಂದ್ರನ್

ಈ ಕಾನೂನು ಕೆಲವು ವಾರಗಳ ಮಟ್ಟಿಗೆ ಜಾರಿಯಲ್ಲಿದ್ದಾಗ 'ಚಕ್ರವ್ಯೂಹ' ಸೆನ್ಸಾರ್ ಎದುರಿಗೆ ಬಂದಿತ್ತು. ಆಗ ಸೆನ್ಸಾರ್ ಅಧಿಕಾರಿಗಳು ಚಿತ್ರದ ಪ್ರತಿಯನ್ನು ಒದಗಿಸದಿದ್ದರೆ ಪ್ರದರ್ಶನಕ್ಕೆ ಅನುಮತಿ ನೀಡುವುದಿಲ್ಲವೆಂದು ಚಿತ್ರದ ನಿರ್ಮಾಪಕರಿಗೆ ತಿಳಿಸಿದರು. ಆ ವೇಳೆಗೆ ವೀಡಿಯೋ ಪ್ರತಿ ಮಾಡುವ ತಂತ್ರಜ್ಞಾನ ಬಳಕೆಯಲ್ಲಿತ್ತು. ನಿರ್ಮಾಪಕರು ಅದನ್ನೇ ನೀಡಿದರು. ವೀಡಿಯೋ ಪ್ರತಿಯನ್ನು ಒಪ್ಪಿಕೊಂಡ ಸೆನ್ಸಾರ್ ಅಧಿಕಾರಿಗಳು ಅನುಮತಿ ಪತ್ರ ನೀಡಿದರು. ಕೇವಲ ಐದು ಸಾವಿರ ರೂಪಾಯಿ ವೆಚ್ಚದ ವೀಡಿಯೋ ಪ್ರತಿ ಸಲ್ಲಿಸಲು ಅವಕಾಶವಾದಾಗ ನಿರ್ಮಾಪಕರು ನಿಟ್ಟುಸಿರು ಬಿಟ್ಟರು. ಹೀಗೆ ಕ್ರಮೇಣ ವೀಡಿಯೋ ಮಾಧ್ಯಮವು ನಿರ್ಮಾಪಕರಿಗೆ ಲಾಭದಾಯಕ ಅಂಶವಾಗಿ ಪರಿವರ್ತನೆಯಾಗುತ್ತಾ ಹೋಯಿತು.

'ಚಕ್ರವ್ಯೂಹ' ವೀರಾಸ್ವಾಮಿ ನಿರ್ಮಿಸಿದ ಯಶಸ್ವಿ ಚಿತ್ರಗಳಲ್ಲಿ ಮುಖ್ಯವಾದದ್ದು. ಬೆಂಗಳೂರು, ಮೈಸೂರು, ದಾವಣಗೆರೆಗಳಲ್ಲಿ ಶತದಿನದ ಪ್ರದರ್ಶನ ಕಂಡ ಈ ಚಿತ್ರ ಆರ್ಥಿಕವಾಗಿ ಅದ್ಭುತ ಅನ್ನುವಂಥ ಯಶಸ್ಸು ಗಳಿಸಿತು. ಇದಕ್ಕೆ ಆಗಿನ ರಾಜಕೀಯ ಚಿತ್ರಗಳ ಟ್ರೆಂಡ್ ಕೂಡ ಕಾರಣ. ಚಿತ್ರದಲ್ಲಿ ಬಳಸಲಾದ ಪ್ರಣಯಿಗಳು ಮಳೆಯಲ್ಲಿ ನೆನೆಯುತ್ತ ಹಾಡಿ, ನರ್ತಿಸುವ ದೃಶ್ಯ ಜನಪ್ರಿಯವಾಯಿತು. ಮುಂದೆ ಆ ಪರಂಪರೆಯೇ ಪ್ರಾರಂಭವಾಯಿತು. ಎಂ.ಡಿ.ಸುಂದರ್‌ರವರ ಕಥೆ ಆಗ್ಗೆ ಚರ್ವಿತಚರ್ವಣವಾಗಿದ್ದ 'ಅಂತ', 'ಅಜಿತ್'ಗಳನ್ನೇ ಬಹುತೇಕ ಹೋಲುತ್ತಿತ್ತು. ಆದರೆ 'ಬರ', 'ಶಿಕಾರಿ',



(ಚಿತ್ರ ೬.೨) 'ಮತ್ತೆ ವಸಂತ' ಚಿತ್ರದಲ್ಲಿ ಶ್ರೀಪ್ರಿಯ ಮತ್ತು ಅಂಬರೀಷ್

'ಸಿಂಹಾಸನ'ಕ್ಕಿಂತ ರಂಜನೀಯವಾಗಿತ್ತು. ಭ್ರಷ್ಟಗೊಂಡ ರಾಜಕಾರಣವನ್ನು ಒರಟು ಕ್ರಮಗಳಿಂದಲೇ ಸುಧಾರಿಸಬೇಕು ಎಂಬುದು ಚಿತ್ರದ ಆಶಯ. ನಾಯಕನ ಪಾತ್ರಕ್ಕೆ ಅಂಬರೀಷ್‌ರವರ ರೂಪ, ನಿಲುವು, ವ್ಯಕ್ತಿತ್ವ ಚೆನ್ನಾಗಿ ಹೊಂದಿತು. ನ್ಯಾಯದ ಪರವಾಗಿ ಹೋರಾಡುವ ಯುವಕನಾಗಿ, ದಕ್ಷ ಅಧಿಕಾರಿಯಾಗಿ, ಅನಂತರ ರಾಜಕೀಯ ಚಕ್ರವ್ಯೂಹದಲ್ಲಿ ಸಿಲುಕಿದ ರಾಜಕಾರಣಿಯಾಗಿ ಲೀಲಾಜಾಲವಾಗಿ ಅಭಿನಯಿಸಿದ್ದ ಅಂಬರೀಷ್ ಅಷ್ಟು ಹೊತ್ತಿಗೆ ಬೆಳೆದಿದ್ದ ಅವರ ಕುಪಿತ ಯುವಕನ ವರ್ಚಸ್ಸನ್ನು ಈ ಚಿತ್ರದ ಮೂಲಕ ಇನ್ನಷ್ಟು ಹೆಚ್ಚಿಸಿಕೊಂಡರು.

''...ರಾಜಕೀಯದಲ್ಲಿ ಭ್ರಷ್ಟಾಚಾರ ಅಧಿಕವಿದೆ. ಇದು ಚಿತ್ರಗಳಿಗೆ ಒಟ್ಟು ಆಹಾರವಾಯ್ತು. ಅದನ್ನೇ ವಿಧ ವಿಧವಾಗಿ ಬಳಸಿಕೊಂಡೆವು. ಈ ಮೂಲಕ ಕೊಂಚ ಎಚ್ಚೆತ್ತುಕೊಳ್ಳಿ, ನಿಮ್ಮಿಂದ ಜನ ಬೇಸತ್ತಿದಾರೆ, ಯುವಶಕ್ತಿ ಸಿಟ್ಟಾಗಿದೆ ಅನ್ನೋ ಎಚ್ಚರಾನೂ ಕೊಟ್ಟಿಲ್ಲ ಅಂತೀರಾ ? ನಮ್ಮ ಜನರಿಗೆ ರಾಜಕೀಯ ಎಚ್ಚರ (Political Awareness) ಸಾಕಷ್ಟು ಇಲ್ಲ. ನೈಜವಾದ, ಸೂಕ್ಷ್ಮವಾಗಿ ವ್ಯಕ್ತ ಮಾಡುವ ರಾಜಕೀಯ ಚಿತ್ರ ಇಷ್ಟ ಆಗೋಲ್ಲ. ಇಲ್ಲಿ ಅಬ್ಬರ ಇರಬೇಕು. ಅವರಿಗೂ ದುಷ್ಟ ರಾಜಕಾರಣಿಗಳ ಸದೆ ಬಡೀಬೇಕು ಅನ್ನಿಸುತ್ತೆ. ಹೀರೋ ಆ ಕೆಲಸ ಮಾಡಿದರೆ ತೃಪ್ತಿಯಾಗುತ್ತೆ. ನನ್ನ 'ಚಕ್ರವ್ಯೂಹ' ಅದನ್ನೇ ಮಾಡಿದ್ದು. ಮನರಂಜನೆಯಲ್ಲೂ ಒಳ್ಳೇದು-ಕೆಟ್ಟದು ಇದೆ. ಹೆಚ್ಚು ಆಕರ್ಷಣೆ ಕೆಟ್ಟದು ಅಥವಾ ವಿಕೃತವಾದ್ದರ ಕಡೆ ಇರುತ್ತೆ'' ಎನ್ನುತ್ತಾರೆ ನಿರ್ದೇಶಕ ವಿ.ಸೋಮಶೇಖರ್.

'ಚಕ್ರವ್ಯೂಹ'ದಲ್ಲಿ ಅಂಬರೀಷ್ ವಿಧಾನಸಭಾ ಚುನಾವಣೆಯಲ್ಲಿ ಸ್ಪರ್ಧಿಸಿ ವಿಜಯಿಯಾಗುವ ದೃಶ್ಯವಿದೆ. ವಿಶೇಷವೆಂದರೆ ಅವರು ೧೫ ವರ್ಷಗಳ ನಂತರ ೧೯೯೭ರ ಫೆಬ್ರವರಿ ಎರಡು ನಡೆದ ರಾಮನಗರದ ಉಪಚುನಾವಣೆಯಲ್ಲಿ ಜನತಾದಳ ಪಕ್ಷದ ಉಮೇದುವಾರರಾಗಿ ನೇರವಾಗಿ ಚುನಾವಣೆಯಲ್ಲಿ ಸ್ಪರ್ಧಿಸಿ ಹಿರಿಯ ರಾಜಕಾರಣಿ ಸಿ.ಎಂ.ಲಿಂಗಪ್ಪನವರಿಂದ ಸೋಲನ್ನು ಅನುಭವಿಸಿದರು. ಹೆಚ್.ಡಿ.ದೇವೇಗೌಡರು ಪ್ರಧಾನಿಯಾಗಿ ಚುನಾಯಿತರಾಗಿದ್ದರಿಂದ ತೆರವಾಗಿದ್ದ ಕ್ಷೇತ್ರವಾಗಿ ಇಡೀ ದೇಶವೇ ಕುತೂಹಲದಿಂದ ಗಮನಿಸಿದ ಈ ಚುನಾವಣೆ ರಾಜಕಾರಣದ ಶಕ್ತಿ ಮತ್ತು ಚಿತ್ರರಂಗದ ಆಕರ್ಷಣೆಗಳ ಅಗ್ನಿಪರೀಕ್ಷೆಯಂತಿತ್ತು. ತಮ್ಮ ಅನಿರೀಕ್ಷಿತ ಸೋಲಿನಿಂದಾಗಿ ಆ ಸಂದರ್ಭದಲ್ಲಿ ಸಾಕಷ್ಟು ವಿಚಲಿತರಾಗಿದ್ದ ಅಂಬರೀಷ್ ಮತ್ತೆ ಸಹಜ ಸ್ಥಿತಿಗೆ ಮರಳಿದ್ದು ಕಾಂಗ್ರೆಸ್ ಪಕ್ಷವನ್ನು ಸೇರಿ ಪಕ್ಷದ ಟಿಕೆಟ್ ಪಡೆದು ಡಿಸೆಂಬರ್ ೧೯೯೯ರ ಲೋಕಸಭಾ ಚುನಾವಣೆಯಲ್ಲಿ ಗೆದ್ದು ಸಂಸತ್ ಸದಸ್ಯರಾದಾಗಲೇ.

ಅಂಬರೀಷ್‌ರ ವರ್ಚಸ್ಸನ್ನು ವೃದ್ಧಿಸಿದ 'ಚಕ್ರವ್ಯೂಹ' ಅವರ ಆ ದಿನಗಳ ಖಾಯಂ ಜೋಡಿಯಾಗಿ ಸಾಕಷ್ಟು ಜನಪ್ರಿಯತೆ ಗಳಿಸಿದ ಅಂಬಿಕಾರಿಗೂ ಸಾಕಷ್ಟು ಖ್ಯಾತಿ ತಂದುಕೊಟ್ಟಿತು. ಅನ್ಯಾಯ, ಅಕ್ರಮಗಳನ್ನು ಖಂಡಿಸಿ ತನ್ನ ಗಂಡನನ್ನೇ ದೂರ ಮಾಡುವ ಸನ್ನಿವೇಶದಲ್ಲಿ ಹಾಗೂ ಮಗುವಿನ ಬಗ್ಗೆ ಕನಸನ್ನು ಕಾಣುವ ಯುವತಿಯಾಗಿ ಅಂಬಿಕಾ ಉತ್ತಮವಾಗಿ ನಟಿಸಿದ್ದರು. 'ಚಾಣಾಕ್ಷ ರಾಜಕಾರಣಿ' ಶಂಕ್ರಪ್ಪನಾಗಿ ಮುಖ್ಯಮಂತ್ರಿ ಚಂದ್ರು ಪಾತ್ರ ಆಗ ಬಹಳ ಜನಪ್ರಿಯವಾಯಿತು. 'ಸಿಂಹಾಸನ' ಚಿತ್ರದ ಇಂಥದೇ ಪಾತ್ರದಲ್ಲಿ ಸೊರಗಿದ್ದ ಚಂದ್ರು ನಿರ್ದೇಶಕ ಸೋಮಶೇಖರ್ ನಿರೂಪಣೆಯಲ್ಲಿ ಮೈ ಚಳಿ ಬಿಟ್ಟು ಲೀಲಾಜಾಲವಾಗಿ ನಟಿಸಿ ತಮ್ಮದೇ ಅಭಿನಯ ಶೈಲಿಗೆ ಜನಪ್ರಿಯತೆ ತಂದುಕೊಂಡರು. ಶಂಕರ್-ಗಣೇಶ್‌ರ ಸಂಗೀತದಲ್ಲಿ 'ಚಳಿ ಚಳಿ' ಹಾಗೂ 'ಚಕ್ರವ್ಯೂಹ, ಇದು ಚಕ್ರವ್ಯೂಹ...' ಹಾಡುಗಳು ಅತಿ ಹೆಚ್ಚು ಜನಪ್ರಿಯವಾದವು.

ಸಂಗೀತದ ಬಗ್ಗೆ ಹೇಳುವಾಗ 'ಸಿಡಿದೆದ್ದ ಸಹೋದರ' ಚಿತ್ರವನ್ನು ಉಲ್ಲೇಖಿಸಬೇಕಾಗುತ್ತದೆ. ತಮಿಳಿನ 'ಕುಡಿಯಿರುಂದ ಕೋಯಿಲ್'ನ ರೀಮೇಕ್ ಆದ ಈ ಚಿತ್ರದಲ್ಲಿ ಸತ್ಯಂ ಸಂಗೀತದಲ್ಲಿ ವಿಷ್ಣುವರ್ಧನ್ ಹಾಡಿದ 'ಬೇಡಾ ಅನ್ನೋರು ಉಂಟೆ' ಹಾಗೂ 'ದುಡ್ಡು ಇದ್ರೆ ಜಗವೆಲ್ಲ' ಹಾಡುಗಳು ಕೂಡ ಅತ್ಯಂತ ಜನಪ್ರಿಯವಾದವು. ಎರಡನೆಯ ನಿಂದಾಸ್ತುತಿ ಶೈಲಿಯ 'ದುಡ್ಡು ಇದ್ರೆ...' ಗೀತೆಯನ್ನು ಬರೆದವರು ಗೀತಪ್ರಿಯ. ಸಾಮಾನ್ಯವಾಗಿ ಒಬ್ಬೊಬ್ಬ ಗೀತರಚನೆಕಾರರದು ಒಂದೊಂದು ಶೈಲಿ. ಕೆಲವು ಭಾವಗಳ ಅಭಿವ್ಯಕ್ತಿ ಕೆಲವರಿಗೆ ಸರಾಗ, ಕೆಲವರಿಗೆ ಕ್ಲಿಷ್ಟ. ಇದಕ್ಕೆ ಆಯಾ ಕವಿಗಳು ಬೆಳೆದ ಪರಿಸರ, ಮನಸ್ಥಿತಿಯೇ ಕಾರಣವೆನ್ನಬಹುದು. ಅಸಹಾಯಕತೆ, ವೇದನೆಗಳ ಅಭಿವ್ಯಕ್ತಿಯಲ್ಲಿ ಹಾಗೂ ರಮ್ಯ, ಪ್ರಣಯ ಭಾವಗಳ ಸೃಷ್ಟಿಯಲ್ಲಿ ಒಬ್ಬೊಬ್ಬರದು ಒಂದೊಂದು ರೀತಿ.

ಗೀತಪ್ರಿಯ ಮೇಲಿನ ಎರಡೂ ರೀತಿಯ ರಚನೆಗಳಲ್ಲಿ ಗುಣಮಟ್ಟವನ್ನು ಕಾಯ್ದುಕೊಂಡವರು. ವಿಶೇಷವಾಗಿ ದೇವರನ್ನು ನೇರವಾಗಿ ಟೀಕಿಸುವಂತೆ ತೋರುವ 'ನಿಂದಾಸ್ತುತಿ' ಗೀತೆಗಳಲ್ಲಿ ಅವರಿಗೆ ಯಶಸ್ಸು ಸಿಕ್ಕಿದೆ. 'ಸಿಡಿದೆದ್ದ ಸಹೋದರ' ಚಿತ್ರದ 'ದುಡ್ಡು ಇದ್ರೆ ಜಗವೆಲ್ಲ, ದುಡ್ಡು ಇಲ್ದೆ ಜಗವಿಲ್ಲ. ಹೇ ದೇವ ನೀನೇತಕೋ', 'ಎಲ್ಲರ ಕಾಯ್ವ ದ್ಯಾವ್ರೇ ನೀನು ಎಲ್ಲಿ ಕುಂತಿದ್ದೀ' (ಬೆಳುವಲದ ಮಡಿಲಲ್ಲಿ), 'ಅಳುತಿಹುದು ಮಾನವತೆ, ನಗುತಿಹುದು ದಾನವತೆ, ಸೋತೆಯಾ ಅಧರ್ಮಕೆ ಓ ಧರ್ಮದೇವತೆ' (ಮಣ್ಣಿನ ಮಗ), 'ಭಗವಂತನೆ ಕಸಿದುಕೋ ಲೇಖನಿಯ ವಿಧಿಯ ಕೈಯಿಂದ' (ಮದುವೆ ಮದುವೆ ಮದುವೆ) ಈ ಎಲ್ಲವೂ ದೃಶ್ಯಗಳಿಗೆ ಹೊಂದಿಸಿದ ಗೀತೆಗಳಾದರೂ ಅದಕ್ಕೂ ಮಿಗಿಲಾಗಿ ಕವಿಯ ಮನೋಧರ್ಮವನ್ನು, ಸ್ವತಂತ್ರ ಆತ್ಮವನ್ನು ಧರಿಸಿಕೊಂಡಿವೆ.

'ಮತ್ತೆ ವಸಂತ' ಬಿ.ವಿ.ರಾಧ ಮತ್ತು ರವೀಯವರು ರಾಧಾ ರವೀ ಚಿತ್ರ ಲಾಂಛನದಲ್ಲಿ ನಿರ್ಮಿಸಿದ ಮೊದಲ ಚಿತ್ರ. ಈ ಹಿರಿಯ ದಂಪತಿಗಳು ಕನ್ನಡ ಚಿತ್ರರಂಗಕ್ಕೆ ಕೆಲವು ಸದಭಿರುಚಿಯ ಚಿತ್ರಗಳನ್ನು ನೀಡಿದ ಗೌರವಕ್ಕೆ ಪಾತ್ರರಾಗಿದ್ದಾರೆ. ಬಿ.ವಿ.ರಾಧಾ ೧೯೬೫ರ ವೇಳೆಗಾಗಲೇ ಶತಚಿತ್ರಗಳನ್ನು ಪೂರೈಸಿದ್ದರು. ರವೀಯವರು ನಿರ್ದೇಶಕರಾಗಿ ಬಿಡುವಿಲ್ಲದಂತೆ ದುಡಿಯುತ್ತಿದ್ದರು. ಇಷ್ಟರ ನಡುವೆಯೂ ಇವರಿಬ್ಬರು ನಿರ್ಮಾಣ ರಂಗಕ್ಕೆ ಧುಮುಕಿದ್ದು ವಿಶೇಷ ಸಂಗತಿ. ರಾಧಾರವೀ ಚಿತ್ರ ಲಾಂಛನದ ಪ್ರಥಮ ಕಾಣಿಕೆಯಾದ 'ಮತ್ತೆ ವಸಂತ' ಅತ್ಯುತ್ತಮವಲ್ಲದಿದ್ದರೂ ಉತ್ತಮವಾಗಿತ್ತು.

ವಸಂತ ಒಬ್ಬ ವೇಶ್ಯೆ. ಆದರೆ ಅಬಲೆಯಲ್ಲ. ಯಾರ ಹಂಗಿನಲ್ಲೂ ಬದುಕ ಬಯಸದ ವಸಂತಳ ಬಗ್ಗೆ ಮೋಹನನಿಗೆ ಕುತೂಹಲ ಬೆಳೆಯುತ್ತದೆ. ಕುತೂಹಲ ಪ್ರೀತಿಯಾಗುತ್ತದೆ. ಪ್ರೀತಿ ಗೌರವವಾಗಿ ಕೊನೆಗೆ ಅಸಹ್ಯಕ್ಕೆ ತಿರುಗುತ್ತದೆ. ಆಶಯದ ಮಟ್ಟಿಗೆ ಭಿನ್ನವಾಗಿರುವ ಇಂಥ ವಸ್ತುವನ್ನು ನಿರ್ದೇಶಕ ರವೀ ವ್ಯಾಪಾರಿ ಸೂತ್ರಗಳಿಗೆ ಹೆಚ್ಚು ಒತ್ತು ಕೊಡುವುದರ ಮೂಲಕ ದುರ್ಬಲಗೊಳಿಸಿದ್ದರು. ಆದರೂ ವೇಶ್ಯೆಯರ ಬದುಕಿನ ಬಗ್ಗೆ ಅಲ್ಲಿಯವರೆಗೆ ಬಂದಿದ್ದ ಬಹುತೇಕ ಚಿತ್ರಗಳಲ್ಲಿ ಪಲಾಯನವಾದವೇ ಇರುವುದರಿಂದ ಹಾಗೂ ಈ ಚಿತ್ರದಲ್ಲಿ ಸಮಸ್ಯೆಗೆ ಪರಿಹಾರ ಹುಡುಕುವ ಪ್ರಯತ್ನವಿರುವುದರಿಂದ 'ಮತ್ತೆ ವಸಂತ' ವಿಶೇಷವೆನಿಸುತ್ತದೆ. ತಾನೊಮ್ಮೆ ಬಯಸಿದ್ದ ವೇಶ್ಯೆ ತನ್ನ ಅತ್ತಿಗೆಯಾಗಿ, ಗರತಿಯಾಗಿ ಕಾಣಿಸಿಕೊಂಡಾಗ ಸಹಿಸಲಾಗದ ಮೋಹನ ಆಕೆಯ ನಾಟಕವನ್ನೆಲ್ಲ ಬಯಲು ಮಾಡಲು ಹೆಣಗುವುದು ಗರತಿ-ವೇಶ್ಯೆ ಎಂಬ ಪದಗಳ ಮೂಲಕ ಸಮಾಜ ಕಲ್ಪಿಸಿಟ್ಟುಕೊಂಡಿರುವ ಟೊಳ್ಳನ್ನು ಬಯಲು ಮಾಡುತ್ತದೆ. ವಸಂತ ಹೊಟೇಲಿನ ಕೋಣೆಯಲ್ಲಿ ಗಿರಾಕಿಯೊಡನೆ ಇರುವಾಗ ಆವನು ಕೇಳುತ್ತಾನೆ'' ನಿನಗೆ ಈ ಜೀವನ ಹಿಡಿಸುತ್ತದೆಯೋ ?'' ''ಓಹೋ... ಯಾರದೋ ಹಣ, ಈ ಏರ್‌ಕಂಡೀಷನ್ ರೂಂ, ಬಿರಿಯಾನಿ ಊಟ..... ನನಗೆ ಚೆನ್ನಾಗಿ ಹಿಡಿಸಿದೆ'', ಅವಳು ಹಾಗನ್ನುತ್ತಿದ್ದಂತೆ ಪೊಲೀಸರು ಹೋಟೆಲಿನ ಮೇಲೆ ದಾಳಿ ಮಾಡುತ್ತಾರೆ. ತಕ್ಷಣ ವಸಂತ ಅಲ್ಲಿಂದ ತಪ್ಪಿಸಿಕೊಳ್ಳಲು ಪರದಾಡುತ್ತಾಳೆ. ಆ ಕ್ಷಣದಲ್ಲಿ ಅವಳು ತನಗೆ ಇಷ್ಟ ಎಂದು ಹೇಳುತ್ತಿದ್ದುದೆಲ್ಲ ಎಷ್ಟೊಂದು ಕ್ಷಣಿಕ ಎನ್ನುವಂತೆ ಕುಸಿದು ಹೋಗಿರುತ್ತದೆ. ಶ್ರೀಪ್ರಿಯಾ ವೇಶ್ಯೆಯಾಗಿ-ಗರತಿಯಾಗಿ ವಸಂತಳ ಪಾತ್ರದಲ್ಲಿ ಉತ್ತಮವಾಗಿ ಅಭಿನಯಿಸಿದ್ದರು. ಅಂಬರೀಷ್ ಕೂಡ ಒಂದೇ ರೀತಿ ಇರುತ್ತಿದ್ದ ಅವರ ಆ್ಯಕ್ಷನ್ ಚಿತ್ರಗಳ ನಡುವೆ ಪ್ರಣಯ ಪ್ರಧಾನ ಪಾತ್ರದಲ್ಲಿ ಗಮನ ಸೆಳೆದಿದ್ದರು.

'ಮತ್ತೆ ವಸಂತ' ಚಿತ್ರದ ನಂತರ ರವೀ ನಿರ್ಮಿಸಿದ ಇನ್ನೊಂದು ಚಿತ್ರ 'ಮುತ್ತೈದೆ ಭಾಗ್ಯ' ಹುಬ್ಬಳ್ಳಿಯ ಸಂಜೋತಾ ಚಿತ್ರಮಂದಿರದಲ್ಲಿ ಶತದಿನ ಹಾಗೂ ಬೆಂಗಳೂರಿನ

ಸ್ಟೇಟ್ಸ್ ಚಿತ್ರಮಂದಿರದಲ್ಲಿ ೨೫ ವಾರಗಳ ಪ್ರದರ್ಶನ ಕಂಡಿತು. ಅದುವರೆಗೆ ಖಳನಾಯಕನ ಪಾತ್ರಗಳಲ್ಲೇ ಅಭಿನಯಿಸುತ್ತಿದ್ದ ಪ್ರಭಾಕರ್ ಈ ಚಿತ್ರದ ಯಶಸ್ಸಿನೊಂದಿಗೆ ನಾಯಕ ನಟರಾಗಿ ಚಲಾವಣೆಗೆ ಬಂದರು.

''ತಮಿಳಿನಲ್ಲಿ ಶಿವಾಜಿ ಗಣೇಶನ್ ಮಾಡಿದ್ದ ಪಾತ್ರ ನಾನು ಕನ್ನಡದಲ್ಲಿ ಮಾಡಿದೆ. ನಮ್ಮಂಥ ಕಲಾವಿದರನ್ನು ಇದಕ್ಕೇ ಇಷ್ಟೇ ಅಂತ ಬ್ರ್ಯಾಂಡ್ ಮಾಡಿರ್ತಾರೆ. ಅದನ್ನು ಬ್ರೇಕ್ ಮಾಡೋದು ಕಷ್ಟ. ಆದರೆ 'ಮುತ್ತೈದೆ ಭಾಗ್ಯ' ಪಾತ್ರದಿಂದ ಇಮೇಜ್ ಬ್ರೇಕ್ ಆಯ್ತು. ಕಲಾವಿದ ಕೊಂಚ ರಿಸ್ಕ್ ತಗೋಬೇಕಾಗುತ್ತೆ. ಕಮರ್ಷಿಯಲ್ ಸಿನಿಮಾಗಳ ದೊಡ್ಡ ಸಮಸ್ಯೆನೇ ಈ ಇಮೇಜ್‌ನದ್ದು. ಒಂಥರಾ ಮಿಥ್ ಆಗಿಬಿಡುತ್ತೆ. ಆ ಮಿಥ್‌ನ ಒಡೆದು ಬೇರೆ ಆಗೋದೇ ಕಲಾವಿದನಿಗೊಂದು ಸವಾಲು'' ಎಂದು ನಟ ಪ್ರಭಾಕರ್ ಸಂದರ್ಶನವೊಂದರಲ್ಲಿ ಹೇಳಿದ್ದಾರೆ.

ರವೀ ತಮ್ಮ ಬಳಿ ಸಹಾಯಕರಾಗಿದ್ದ ಕೆ.ಎಸ್.ಚಂದ್ರಶೇಖರ ಶರ್ಮಾ ಅವರಿಗೆ ಈ ಚಿತ್ರದ ಮೂಲಕ ನಿರ್ದೇಶನಕ್ಕೆ ಅವಕಾಶ ಮಾಡಿಕೊಟ್ಟರು. ಇದು ಅವರ ನಿರ್ದೇಶನದ ಪ್ರಥಮ ಚಿತ್ರ. ಈ ಚಿತ್ರದಲ್ಲಿ ಅತಿಥಿ ನಟರಾಗಿ ಕಾಣಿಸಿಕೊಂಡ ವಿಷ್ಣುವರ್ಧನ್ ಕೂಡ ಯಶಸ್ಸಿಗೆ ಕಾರಣರು. ಸಮಾರಂಭದ ದಿನ ವಿಷ್ಣು ಅವರಿಗೆ ರವೀ ತೊಡಿಸಿದ ಚಿನ್ನದ ಸರದ ಹಿಂದೆ ಋಣ ಸಂದಾಯ, ಪ್ರೀತಿ ಎಲ್ಲವೂ ವ್ಯಕ್ತವಾಗಿತ್ತು.

ಕನ್ನಡದ ಬಹಳ ಮಂದಿ ನಿರ್ದೇಶಕರು ನಿರ್ದೇಶಿಸಲು ಹಿಂಜರಿಯುವಷ್ಟು ವಿವಾದ, ಗದ್ದಲಗಳನ್ನು ಉಂಟುಮಾಡಿದ ಈ ಅವಧಿಯ ಇನ್ನೊಂದು ಚಿತ್ರ 'ಕ್ರಾಂತಿಯೋಗಿ ಬಸವಣ್ಣ'. ಮಾತೆ ಮಹಾದೇವಿ ನಿರ್ಮಿಸಿದ ಈ ಚಿತ್ರ ತನ್ನೆಲ್ಲ ಪ್ರಚಾರವನ್ನು ಚಿತ್ರೀಕರಣ ಹಾಗೂ ಬಿಡುಗಡೆಗೆ ಮುನ್ನ ಪಡೆದು ನಂತರ ತಣ್ಣಗಾಯಿತು. ನಟ ಅಶೋಕ್ ಈ ಚಿತ್ರದಲ್ಲಿನ ಬಸವಣ್ಣನವರ ಪಾತ್ರದಲ್ಲಿ ಕಾಣಿಸಿಕೊಳ್ಳಲು ರಾಜಕುಮಾರ್ ಒಪ್ಪಿಗೆ ಕೊಟ್ಟು ಹುರಿದುಂಬಿಸಿದ್ದರೆಂದು ಹೇಳಲಾಗಿತ್ತು. ಬಸವಣ್ಣನವರ ಪಾತ್ರವನ್ನು ನಿರ್ವಹಿಸಲು ಅವರಿಗೆ ಇಷ್ಟವಿಲ್ಲದ್ದರಿಂದ ಅಶೋಕ್ ಆ ಪಾತ್ರದಲ್ಲಿ ಅಭಿನಯಿಸುವಂತೆ ಸೂಚಿಸಿದ್ದಾರೆಂಬ ಅರ್ಥ ಬರುವ ರೀತಿಯ ಸುದ್ದಿಗಳು ಪ್ರಕಟವಾಗ ತೊಡಗಿದವು. ಆದರೆ ರಾಜಕುಮಾರ್ ಆ ಪಾತ್ರವನ್ನು ಎಂದೂ ನಿರಾಕರಿಸಿರಲಿಲ್ಲ. ಅದಕ್ಕೆ ಬದಲು ಅದೇ ಪಾತ್ರವನ್ನು ಬೇರೊಬ್ಬ ನಿರ್ಮಾಪಕರು ತಯಾರಿಸುವ ಚಿತ್ರದಲ್ಲಿ ನಿರ್ವಹಿಸಲು ಸಮ್ಮತಿಸಿದ್ದರು ಎಂದು ಕೆಲವರು ಬರೆದರು. ಆದರೆ ಆ ಬೇರೊಬ್ಬ ನಿರ್ಮಾಪಕರ ಚಿತ್ರ ಆರಂಭವಾಗುವ ನಿರ್ದಿಷ್ಟ ಸಮಯ ನಿಗದಿಯಾಗಿರಲಿಲ್ಲವಾದ್ದರಿಂದ ಮಾತೆ ಮಹಾದೇವಿ ತಮ್ಮ ಯೋಜನೆಯೊಂದಿಗೆ ಮುಂದೆ ಬಂದಾಗ ಸಂದಿಗ್ಧದಲ್ಲಿದ್ದ ರಾಜಕುಮಾರ್ ''ನಿಮ್ಮ ಚಿತ್ರದ ಕೆಲಸವನ್ನು ಆರಂಭಿಸಿ'' ಎಂದು ಹೇಳಿದ್ದಾಗಿ ಕೆಲವರು ಮಾತನಾಡಿಕೊಂಡರು. ದಿನ ದಿನಕ್ಕೆ ಇದೊಂದು ಪ್ರತಿಷ್ಠೆ ಹಾಗೂ ಭಾವನಾತ್ಮಕ ಸಮಸ್ಯೆಯಾಗಿ ಪರಿಣಮಿಸಿತು. ನಾಡಿನ ಇತಿಹಾಸದಲ್ಲಿ ಕ್ರಾಂತಿಪುರುಷ ಬಸವಣ್ಣನವರಿಗೆ ಇರುವ ಅಗಾಧವಾದ ಮಹತ್ವವನ್ನು ಅರಿತವರು ರಾಜಕುಮಾರ್. ಅವರಂಥ ಮೇರುನಟರೇ ಈ ಮಹಾನುಭಾವನ ಪಾತ್ರವನ್ನು ನಿರ್ವಹಿಸಿದರೆ ಅದಕ್ಕೊಂದು ತೂಕವಿರುತ್ತದೆ ಎಂದುಕೊಂಡಿದ್ದು ಎಷ್ಟು ಸಹಜವೋ, ಅಶೋಕ್‌ರಂಥ ಉದಯೋನ್ಮುಖ ಕಲಾವಿದನಿಗೂ ಅಂಥ ಅವಕಾಶ ಸಿಕ್ಕಿದರೆ ಒಳ್ಳೆಯದಲ್ಲವೆ ಎಂಬ ಮಾತೂ ಅಷ್ಟೇ ಸಹಜವಾಗಿ ಹಲವರಿಗೆ ಆ ದಿನಗಳಲ್ಲಿ ತೋರಿತು.

ಈ ಎಲ್ಲ ವಾದ ವಿವಾದಗಳ ನಡುವೆ ಇದೊಂದು ಮಹತ್ವದ ಚಿತ್ರವಾಗಿ ರೂಪುಗೊಳ್ಳಬಹುದೆಂದೇ ಎಲ್ಲರೂ ಭಾವಿಸಿದ್ದರು. ಇಂಥ ಹಿನ್ನೆಲೆಯಲ್ಲಿ ಈ ಚಿತ್ರವನ್ನು ನಿರ್ದೇಶಿಸಲು ಬಹಳ ಮಂದಿ ಹಾತೊರೆಯಬೇಕು. ಆದರೆ ಹಾಗಾಗಲಿಲ್ಲ. ನಿರ್ಮಾಪಕರೊಂದಿಗೆ ಆರಂಭದಲ್ಲೇ ಭಿನ್ನಾಭಿಪ್ರಾಯ ಉಂಟಾಗಿ ಕೆಲಸ ಆರಂಭಿಸಿದ್ದ ಭಾರ್ಗವ ತಂಡದಿಂದ ದೂರ ಸರಿದರು. ಕೊನೆಗೆ ಇಂಥದ್ದಕ್ಕೆಲ್ಲ ಒಂದು ಹೆಜ್ಜೆ ಮುಂದಿಟ್ಟು ಎದೆ ಕೊಡುವ ಮೊಂಡು ಧೈರ್ಯಶಾಲಿ ಕೆ.ಎಸ್.ಎಲ್.ಸ್ವಾಮಿ (ರವೀ) ಅವರು ನಿಯೋಜಿಸಲ್ಪಟ್ಟರು. ಚಿತ್ರೀಕರಣ ನಡೆದಿರುವಾಗಲೇ ಸಹಾಯಕ ನಿರ್ದೇಶಕರ ಕೆನ್ನೆಗೆ ಬಾರಿಸಿದ ಲಿಂಗಾನಂದ ಸ್ವಾಮಿಗಳ ವರ್ತನೆ ಪ್ರತಿಭಟಿಸಲು ಕಾರ್ಮಿಕರು ಸಜ್ಜಾದರು. ಆದರೆ ರವೀ ಅವರ ಸಂಧಾನದಿಂದಾಗಿ ಮತ್ತೆಲ್ಲ ಸರಿಯಾಯಿತು. ಆ ಸಹನಿರ್ದೇಶಕರು ಕೆಲಸ ಮುಂದುವರಿಸಲಿಲ್ಲ, ''...ಅಂಥ ದೊಡ್ಡ ಕೆಲಸ ನಿಲ್ಲಬಾರದು. ಬಸವಣ್ಣನಂಥವರ ಚಿತ್ರ ಜನರ ಹತ್ತಿರ ಮತ್ತೆ ಮತ್ತೆ ಬರಲಿ ಎಂಬ ತುಡಿತ ಮಾತ್ರ ರವೀ ಅವರದಾಗಿತ್ತು. ಎಲ್ಲ ಸಹಿಸಿಕೊಂಡರು..'' ಎನ್ನುತ್ತಾರೆ ಆ ಸಹನಿರ್ದೇಶಕರು. ಈ ಸಂದರ್ಭದಲ್ಲಿಯೇ 'ಸುಧಾ' ವಾರ ಪತ್ರಿಕೆಯಲ್ಲಿ ಒಂದು ಬರಹ ಪ್ರಕಟವಾಯಿತು. 'ಕ್ರಾಂತಿಯೋಗಿ ಬಸವಣ್ಣ' ಚಿತ್ರಕ್ಕೆ ಸಂಬಂಧಿಸಿದಂತೆ ಒಟ್ಟು ವಿದ್ಯಮಾನಗಳ ವಿಶ್ಲೇಷಣೆಯಿದ್ದ ಇದರಲ್ಲಿ ರಾಜಕುಮಾರ್‌ರ ಉದ್ದದ ಮೂಗು ಬಸವಣ್ಣನವರ ಪಾತ್ರ ಕಲ್ಪನೆಗೆ ಹೊಂದುವುದಿಲ್ಲ ಎಂಬ ಅರ್ಥದಲ್ಲಿ ಬರೆಯಲಾಗಿದೆ ಎಂದು ಭಾವಿಸಿ ಅವರ ಅಭಿಮಾನಿಗಳು ಕೆರಳಿದರು. ಇದು ಒಂದೆರಡು ದಿನಗಳಲ್ಲಿ ವಿಪರೀತ ಕೋಲಾಹಲವನ್ನು ಉಂಟುಮಾಡಿತು. ಆ ಬರಹವನ್ನು ಬರೆದಿದ್ದ ಗಂಗಾಧರ ಮೊದಲಿಯಾರ್ ಹಾಗೂ ಛಾಯಾಗ್ರಾಹಕ ಶಿವಯೋಗಿ ಅವರನ್ನು ರಾಜಕುಮಾರ್ ತಂಡದವರು ಅಪಹರಿಸಿ ಜೀವ ಬೆದರಿಕೆ ಹಾಕಿದರು ಎಂದು ಹಬ್ಬಿದ ಸುದ್ದಿ ಉದ್ಯಮ ಹಾಗೂ ಪತ್ರಿಕಾಲಯಗಳಲ್ಲಿ ತಲ್ಲಣ ಉಂಟುಮಾಡಿತು. ಆದರೆ ''ನಾವು ಯಾರನ್ನೂ ಅಪಹರಿಸಿಲ್ಲ. ನಮ್ಮ ನೋವನ್ನು ಹೇಳಿಕೊಳ್ಳಲು ಚಾಮುಂಡೇಶ್ವರಿ ಸ್ಟುಡಿಯೋಗೆ ಕರೆಸಿಕೊಂಡಿದ್ದೆವು'' ಎಂದು ಸಂಸ್ಥೆ ಹೇಳಿಕೆ ಕೊಟ್ಟಿತು.

ಅಭಿಮಾನಿಗಳ ಅಸಹನೆ ಪತ್ರಕರ್ತರಿಬ್ಬರನ್ನು ಕರೆದೊಯ್ದುದ್ದಕ್ಕಷ್ಟೇ ತಣ್ಣಗಾಗಲಿಲ್ಲ. 'ಸುಧಾ', 'ಪ್ರಜಾವಾಣಿ', 'ಡೆಕ್ಕನ್ ಹೆರಾಲ್ಡ್' ಪತ್ರಿಕೆಗಳ ವಿರುದ್ಧ ಬೃಹತ್ ಮೆರವಣಿಗೆಯನ್ನು ಹೊರಡಿಸುವವರೆಗೂ ಮುಂದುವರಿಯಿತು. ಬೆಂಗಳೂರಿನ ಬಸವನಗುಡಿಯ ನ್ಯಾಷನಲ್ ಕಾಲೇಜಿನ ಮೈದಾನದಿಂದ ಹೊರಟ ಮೆರವಣಿಗೆ 'ಪ್ರಜಾವಾಣಿ' ಕಚೇರಿಯನ್ನು ತಲುಪಲು ಪೊಲೀಸರು ಅನುಮತಿ ನೀಡಲಿಲ್ಲ. ಹಾಗಾಗಿ ಪ್ರತಿಭಟನಾ ಭಾಷಣಗಳೊಂದಿಗೆ ಕಬ್ಬನ್ ಪಾರ್ಕಿನಲ್ಲಿಯೇ ಮುಕ್ತಾಯವಾಯಿತು. ಇದೆಲ್ಲ ನಡೆದದ್ದು ಚಿತ್ರ ಸಿದ್ಧವಾಗುವುದಕ್ಕೆ ಮುಂಚೆ. ಚಿತ್ರದ ಬಿಡುಗಡೆಯ ವೇಳೆ ಇನ್ನೊಂದು ರಾದ್ಧಾಂತ ನಡೆಯಿತು. ಈ ಚಿತ್ರಕ್ಕೆ ಸೂಕ್ತವಾದ ಚಿತ್ರಮಂದಿರ



(ಚಿತ್ರ ೬೩) 'ಮುತ್ತೈದೆ ಭಾಗ್ಯ' ಚಿತ್ರದಲ್ಲಿ ಸುಂದರರಾಜ್ ಮತ್ತು ಪ್ರಭಾಕರ್

ಸಿಗಲಿಲ್ಲವೆಂದು ಚಿತ್ರದ ಹಂಚಿಕೆದಾರರಾದ ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್ ಚಲನಚಿತ್ರ ವಾಣಿಜ್ಯ ಮಂಡಳಿಯನ್ನು ದೂರಿ ತಮ್ಮ ತೀವ್ರ ಅಸಮಾಧಾನವನ್ನು ವ್ಯಕ್ತಪಡಿಸಿದರು. ಈ ಸಂಬಂಧವಾಗಿ ಚರ್ಚಿಸಲು ಹಂಚಿಕೆದಾರ, ಪ್ರದರ್ಶಕ, ನಿರ್ಮಾಪಕರದೊಂದು ಸಭೆ ಏರ್ಪಾಡಾಯಿತು. ಅಲ್ಲಿ ನಡೆದ ಚರ್ಚೆ ತೀವ್ರ ವಿಕೋಪಕ್ಕೆ ತಿರುಗಿ ವಾಣಿಜ್ಯ ಮಂಡಳಿಯ ಸದಸ್ಯರ ನಡುವೆ ಮಾರಾಮಾರಿಯಾಗುವ ಹಂತ ತಲುಪಿತು. ೧೨ನೆಯ ಶತಮಾನದ ಕ್ರಾಂತಿಪುರುಷ ಬಸವಣ್ಣನವರ ಬದುಕು ಚಲನಚಿತ್ರವಾಗಿ ಬೆಳ್ಳಿತೆರೆಗೆ ಕಾಲಿಡುವ ಮೊದಲೇ ಚಿತ್ರರಂಗದಲ್ಲಿ ಹೀಗೆಲ್ಲ ಕೋಲಾಹಲವನ್ನುಂಟುಮಾಡಿ ನಂತರ ಸದ್ದಿಲ್ಲದೆ ಮೂಲೆಗುಂಪಾಯಿತು. ಬಸವಣ್ಣನವರ ಪಾತ್ರವನ್ನು ಶ್ರದ್ಧೆಯಿಂದ ಅಭಿನಯಿಸಿದ್ದ ಅಶೋಕ್ ಅವರಿಗಾಗಲಿ, ನಿರ್ದೇಶಕ ರವೀಯವರಿಗಾಗಲಿ ಚಿತ್ರಕ್ಕೆ ಸಾಕಷ್ಟು ಹಣ ತೊಡಗಿಸಿದ್ದ ಮಾತೆ ಮಹಾದೇವಿಯವರಿಗಾಗಲಿ ಅಥವಾ ಬಸವಣ್ಣನವರಿಗೆ ಆಗಲಿ ಚಿತ್ರದಿಂದ ಏನೇನೂ ಪ್ರಯೋಜನವಾಗಲಿಲ್ಲ. ಚಿತ್ರದ ಕೆಲವು ದೃಶ್ಯಗಳು ಶ್ರೀಮಂತವಾಗಿದ್ದವು. ಬಸವಣ್ಣನವರು ಲಿಂಗೈಕ್ಯರಾದರೆಂದು ಸೂಚಿಸುವ ಚಿತ್ರಿಕೆಯಂತೂ ನಿರ್ದೇಶಕರ ಸೊಗಸಾದ ಕಲ್ಪನೆಯನ್ನು ಮೆರೆಸಿತ್ತು. ಗೋಜಲುಗಳಿಲ್ಲವಾದರೆ ಅದೊಂದು ಸಾಧಾರಣ ಚಿತ್ರವಾಗಿಯೂ ನಿಲ್ಲುವ ಸೂಚನೆಗಳಿದ್ದವು. ಕೇವಲ ರಗಳೆ-ರಾದ್ಧಾಂತಗಳಲ್ಲೇ ನೀಗಿಕೊಂಡ ಈ ಐತಿಹಾಸಿಕ ಚಿತ್ರ ತಮ್ಮ ಕೊನೆಯ ದಿನಗಳಲ್ಲಿ ಬಸವಣ್ಣನವರು ಅನುಭವಿಸಿದ ರಾಜಕೀಯ ಹಿಂಸೆಯಂಥದ್ದೇ ಅಂತ್ಯ ಕಂಡು ಇತಿಹಾಸದ ನೆನಪಾಗಿ ಮಾತ್ರ ಉಳಿದುಹೋಯಿತು.

ಚಿತ್ರ ಹಾಗೂ ಚಿತ್ರಮಂದಿರದ ಇಂತಹ ಗದ್ದಲಗಳ ನಿರ್ವಹಣೆಯ ಜೊತೆಗೆ ವಾಣಿಜ್ಯ ಮಂಡಳಿ ರೂಢಿಯಲ್ಲಿದ್ದ ಪ್ರದರ್ಶನ ವ್ಯವಸ್ಥೆಯನ್ನು ಮಾರ್ಪಡಿಸುವ ಬಗ್ಗೆ ಗಂಭೀರವಾಗಿ ಚಿಂತಿಸಬೇಕಾದ ಅನಿವಾರ್ಯ ಸ್ಥಿತಿ ೧೯೮೩ರ ಪೂರ್ವಾರ್ಧದಲ್ಲಿ ಎದುರಾಯಿತು. ಬೆಳಗಿನ ಮತ್ತು ಮಧ್ಯಾಹ್ನದ ಪ್ರದರ್ಶನಗಳು ಜನಪ್ರಿಯವಾಗುತ್ತಿರುವ ಹಿನ್ನೆಲೆಯಲ್ಲಿ ಬೆಂಗಳೂರಿನಲ್ಲಿ ರಾತ್ರಿಯ ೯.೩೦ರ ೨ನೆಯ ಪ್ರದರ್ಶನಕ್ಕೆ ಜನ ಬರುವುದು ಸಾಕಷ್ಟು ಕಡಿಮೆಯಾಯಿತು. ರಾತ್ರಿ ೧ ಗಂಟೆಯ ನಂತರದಲ್ಲಿ ಸಮರ್ಪಕ ಸಾರಿಗೆ ವ್ಯವಸ್ಥೆ ಇಲ್ಲದಿದ್ದುದು ಇದಕ್ಕೆ ಪ್ರಮುಖ ಕಾರಣ. ನಗರದಲ್ಲಿ ದೊಡ್ಡ ರೀತಿಯಲ್ಲಿ ನಡೆದ ಒಂದೆರಡು ಹಲ್ಲೆ ಹಾಗೂ ದರೋಡೆಯ ಘಟನೆಗಳು ಕೂಡ ಜನರನ್ನು ರಾತ್ರಿಯ ಈ ಕೊನೆಯ ಪ್ರದರ್ಶನಕ್ಕೆ ಬರದಂತೆ ಮಾಡಿದವು. ಇಂಥ ಹಿನ್ನೆಲೆಯಿಂದ ಬದಲಾಗಿದ್ದ ಪ್ರದರ್ಶನ ವ್ಯವಸ್ಥೆಯಲ್ಲಿ ಮಧ್ಯಾಹ್ನ ೧.೩೦ರ ಪ್ರದರ್ಶನ ಸೃಷ್ಟಿಸಲ್ಪಟ್ಟು ಹಗಲಿನಲ್ಲಿ ಹೆಚ್ಚು ಪ್ರದರ್ಶನ ನಡೆಸುವ ವ್ಯವಸ್ಥೆ ಚಲಾವಣೆಗೆ ಬಂತು. ಅತ್ಯಂತ ಅವೈಜ್ಞಾನಿಕವಾಗಿದ್ದ ಈ ವ್ಯವಸ್ಥೆ ಕೂಡ ಹೊಸ ಸಮಸ್ಯೆಗಳನ್ನು ಸೃಷ್ಟಿಸಿತು. ಒಂದು ಪ್ರದರ್ಶನದಿಂದ ಇನ್ನೊಂದು ಪ್ರದರ್ಶನದ ನಡುವೆ ಅಂತರವೇ ಇಲ್ಲದಾಗಿ ಪ್ರೇಕ್ಷಕರು ಉಸಿರಾಡುವ ಗಾಳಿ ಕೂಡ ಹೊರಗೆ ಹೋಗುವ ಅವಕಾಶವಿರುತ್ತಿರಲಿಲ್ಲ. ಥಿಯೇಟರುಗಳ ಕೊಳಕಿನೊಂದಿಗೆ ಕೆಟ್ಟ ಗಾಳಿ ಬೆರೆತು ಪರಿಸರ ಪ್ರೇಕ್ಷಕರ ಒಟ್ಟು ಆರೋಗ್ಯಕ್ಕೆ ಹಾನಿ ಮಾಡುತ್ತಿತ್ತಲ್ಲದೆ ಮನಸ್ಸಿಗೆ ವಿಪರೀತ ಕಿರಿಕಿರಿ ಉಂಟುಮಾಡುತ್ತಿತ್ತು. "...ಇದು ಚಿತ್ರಮಂದಿರಗಳಿಗಿದ್ದ ಬೇಡಿಕೆಯ ಕಾರಣದಿಂದ ಆಯಿತು. 'ಕಿಟ್ಟು ಪುಟ್ಟು' ತೆಗೆಯಲಿಲ್ಲವೆಂದು 'ಕುದುರೆ ಮುಖ' ಚಿತ್ರವನ್ನು ಉಮಾ ಚಿತ್ರಮಂದಿರದಲ್ಲಿ ಬೆಳಗ್ಗೆ ಮತ್ತು ಮಧ್ಯಾಹ್ನದ ಪ್ರದರ್ಶನಕ್ಕೆ ಕೊಟ್ಟೆವು. ಪ್ರಾಯಃ ಇದೇ ಆ ವ್ಯವಸ್ಥೆಯ ಪ್ರಾರಂಭ ಕೂಡಾ.." ಎನ್ನುತ್ತಾರೆ ಕೆ.ವಿ.ಗುಪ್ತ.



(ಚಿತ್ರ ೬೪) 'ಕ್ರಾಂತಿಯೋಗಿ ಬಸವಣ್ಣ' ಚಿತ್ರದಲ್ಲಿ ಅಶೋಕ್ ಮತ್ತು ಆರತಿ

ಮುಂಚಿನ ಚಿತ್ರಮಂದಿರಗಳಲ್ಲಿ ಸಂಜೆಯ ಪ್ರದರ್ಶನಕ್ಕಾದರೂ ಕಿಟಕಿಗಳನ್ನು ತೆರೆದು ಗಾಳಿ ಚಾಲನೆಗೆ ಅನುವು ಮಾಡಿಕೊಡಲಾಗುತ್ತಿತ್ತು. ಆದರೆ ನಂತರ ಏರ್‌ಕಂಡೀಷನಿಂಗ್ ಹೆಸರಿನಲ್ಲಿ ಕಿಟಕಿಗಳಿಲ್ಲದ ಚಿತ್ರಮಂದಿರಗಳನ್ನು ನಿರ್ಮಿಸಿ, ಹವಾನಿಯಂತ್ರಣ ವ್ಯವಸ್ಥೆಗೂ ಚಾಲನೆ ಕೊಡದೆ ಚಿತ್ರಮಂದಿರಗಳನ್ನು 'ಬ್ಲ್ಯಾಕ್ ಹೋಲ್'ಗಳನ್ನಾಗಿ ಮಾಡಿದ ಸಂಪ್ರದಾಯ ಮುಂದುವರಿದುಕೊಂಡೇ ಬಂದಿದೆ.

೪೦ ವರ್ಷಗಳ ಹಿಂದೆ ಚಿತ್ರಗಳ ಪ್ರದರ್ಶನಕ್ಕಾಗಿ ಚಿತ್ರಮಂದಿರಗಳನ್ನು ನಿರ್ಮಿಸುವುದು ಆರಂಭವಾದ ಹೊಸದರಲ್ಲಿ ಸಂಜೆ ಮತ್ತು ರಾತ್ರಿಯ ಎರಡೇ ಪ್ರದರ್ಶನಗಳಿರುತ್ತಿದ್ದವು. ಚಿತ್ರವನ್ನು ಕತ್ತಲಿನಲ್ಲಿ ಪ್ರದರ್ಶಿಸಬೇಕಾಗಿದ್ದುದರಿಂದ ಆಗ ಇದು ಅನಿವಾರ್ಯವಾಗಿತ್ತು. ಅನಂತರ ೧೯೪೦ ರಿಂದ ೧೯೫೫ ರವರೆಗೆ ಶನಿವಾರ ಮತ್ತು ಭಾನುವಾರಗಳಲ್ಲಿ ಮಧ್ಯಾಹ್ನ ೨.೩೦ರ ಆಟಗಳು ರೂಢಿಗೆ ಬಂದವು. ಇದಾದ ಮೇಲೆ ಬೆಳಗಿನ ಪ್ರದರ್ಶನ ಪದ್ಧತಿ ಆರಂಭವಾಯಿತು. ಇದು ಶನಿವಾರ ಮತ್ತು ಭಾನುವಾರಗಳಲ್ಲಿ ಮಾತ್ರ. ಆದರೆ ೧೯೭೦ ರಿಂದ ಈಚೆಗೆ ಚಿತ್ರಗಳ ತಯಾರಿಕೆ ಹೆಚ್ಚಿದಂತೆ ಚಿತ್ರಮಂದಿರಗಳ ಸಂಖ್ಯೆ ಹೆಚ್ಚಲಿಲ್ಲ. ಇದರಿಂದಾಗಿ ಪ್ರದರ್ಶನ ವೇಳೆ ಸಾಕಾಗಲಿಲ್ಲ. ಹೀಗಾಗಿ ಪ್ರಮುಖ ನಗರಗಳಲ್ಲಿ ವಾರವಿಡೀ ಬೆಳಗಿನ ಪ್ರದರ್ಶನಗಳು ಆರಂಭವಾದವು. ೧೯೮೨ರ ಹೊತ್ತಿಗೆ ಬೆಂಗಳೂರು ನಗರದಲ್ಲಿ ೧.೩೦ರ ಮಧ್ಯಾಹ್ನದ ಪ್ರದರ್ಶನ ವ್ಯವಸ್ಥೆ ಬಂದು ಬಹುತೇಕ ಚಿತ್ರಮಂದಿರಗಳು ದಿನವೂ ಐದು ಪ್ರದರ್ಶನವನ್ನು ನಡೆಸತೊಡಗಿದವು. ಒಂದು ಕಾಲಕ್ಕೆ (೬೦-೭೦ರ ದಶಕದಲ್ಲಿ) ಬೆಳಗಿನ ಪ್ರದರ್ಶನಗಳಿಗೆ ಜನ ಬರುತ್ತಿರಲಿಲ್ಲ. ಆದ್ದರಿಂದ ಬೆಳಗಿನ ಪ್ರದರ್ಶನಗಳನ್ನು ರಿಯಾಯಿತಿ ದರದಲ್ಲಿ ನಡೆಸಲಾಗುತ್ತಿತ್ತು. ಆಗ ಸಾಮಾನ್ಯವಾಗಿ ಹಳೆಯ ಚಿತ್ರಗಳು ಮತ್ತು ಇಂಗ್ಲಿಷ್ ಚಿತ್ರಗಳು ಬೆಳಗಿನ ಹೊತ್ತು ಪ್ರದರ್ಶನವಾಗುತ್ತಿದ್ದವು. ಆದರೆ ೧೯೮೪ರ ವೇಳೆಗೆ ಬೆಳಗಿನ ಮತ್ತು ಮಧ್ಯಾಹ್ನದ ಪ್ರದರ್ಶನಗಳೇ ಅತಿ ಹೆಚ್ಚು ಜನಪ್ರಿಯವಾಗತೊಡಗಿದವು. ಇವರಿಂದಾಗಿ ಕೆಲವು ಹೊಸ ಚಿತ್ರಗಳು ಕೂಡ ಈ ಎರಡು ಪ್ರದರ್ಶನಗಳಲ್ಲಿ ಮಾತ್ರ ಬಿಡುಗಡೆಯಾಗುತ್ತಿದ್ದವು. ಇನ್ನು ಕೆಲವು ಚಿತ್ರಗಳು ಕೇವಲ ಬೆಳಗಿನ ಪ್ರದರ್ಶನವಾಗಿಯೇ ಬಿಡುಗಡೆಯಾದ ಉದಾಹರಣೆಯೂ ಇದೆ.

ಪ್ರದರ್ಶನಗಳ ವೇಳೆಯ ಬಗ್ಗೆ ಪ್ರೇಕ್ಷಕರ ಒಲವು ಆಸಕ್ತಿಯನ್ನು ಅನುಸರಿಸಿ ಚಿತ್ರಮಂದಿರಗಳ ಮಾಲೀಕರು ಬಾಡಿಗೆ ಪದ್ಧತಿಯನ್ನು ಪರಿಷ್ಕರಿಸಿದರು ಅಥವಾ ಪುನರ್ ರೂಪಿಸಿದರು. ಮಧ್ಯಾಹ್ನ, ಸಂಜೆ ಮತ್ತು ರಾತ್ರಿಯ ಆಟಗಳು ಮಾತ್ರ ಒಂದು ಘಟಕವಾಗಿ ಅದಕ್ಕೆ ಪ್ರತ್ಯೇಕವಾಗಿ ಬಾಡಿಗೆ ದರ ನಿಗದಿಯಾಯಿತು. ಬೆಳಗಿನ ಮತ್ತು ಮಧ್ಯಾಹ್ನದ ಪ್ರದರ್ಶನಗಳ ಗುತ್ತಿಗೆಯನ್ನು ಸಾಮಾನ್ಯವಾಗಿ ಬೇರೆಯವರಿಗೆ ವಹಿಸಿಕೊಡಲಾಯಿತು. ಪ್ರದರ್ಶನ ವ್ಯವಸ್ಥೆಯಲ್ಲಾದ ಈ ವಿಘಟನೆಯಿಂದಾಗಿ ನಿರ್ಮಾಪಕರು ಮತ್ತು ಹಂಚಿಕೆದಾರರು ಹಲವಾರು ಸಮಸ್ಯೆಗಳನ್ನು ಎದುರಿಸಿದ್ದಲ್ಲದೆ ನಷ್ಟವನ್ನು ಅನುಭವಿಸತೊಡಗಿದರು. ಇದು ಎಲ್ಲ ಪ್ರದರ್ಶಕರನ್ನು ಹೊರತುಪಡಿಸಿ ಉದ್ಯಮದ ಉಳಿದೆಲ್ಲರನ್ನೂ ಪ್ರದರ್ಶಕರ ವಿರುದ್ಧ ಸಂಘಟಿತರಾಗುವಂತೆ ಮಾಡಿತು. 'ಐದು ಪ್ರದರ್ಶನದ ವ್ಯವಸ್ಥೆ ಬೇಡ, ದಿನವೊಂದಕ್ಕೆ ನಾಲ್ಕು ಪ್ರದರ್ಶನಗಳು ಸಾಕು' ಎಂಬ ಒತ್ತಾಯ ಎಲ್ಲ ವಲಯಗಳಿಂದ ತೀವ್ರವಾಗತೊಡಗಿತು. ಉದ್ಯಮದ ಬಹುಸಂಖ್ಯಾತರ ಹಿತಾಸಕ್ತಿ ಹಾಗೂ ಪ್ರೇಕ್ಷಕರ ಆರೋಗ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ೧೯೮೧ ರಲ್ಲಿಯೇ ಚಿತ್ರಮಂದಿರಗಳಲ್ಲಿ ದಿನಕ್ಕೆ ನಾಲ್ಕು ಪ್ರದರ್ಶನಗಳನ್ನು ಮಾತ್ರ ನಡೆಸಬೇಕೆಂದು ಸರ್ಕಾರ ಆಜ್ಞೆ ಹೊರಡಿಸಿತು. ಆದರೆ ಚಿತ್ರಮಂದಿರಗಳ ಮಾಲೀಕರು ಈ ಆಜ್ಞೆಯ ಸಿಂಧುತ್ವವನ್ನು ಪ್ರಶ್ನಿಸಿ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ಸಲ್ಲಿಸಿದ್ದರು. ಇಬ್ಬರು ನ್ಯಾಯಾಧೀಶರು ಸರ್ಕಾರದ ಕ್ರಮವನ್ನು ಎತ್ತಿ ಹಿಡಿದರೆ ಇನ್ನೊಬ್ಬರು ಅದನ್ನು ಸಂವಿಧಾನಬಾಹಿರವೆಂದು ತೀರ್ಪಿತ್ತರು. ಇದರಿಂದಾಗಿ ಅರ್ಜಿಗಳು ಬೇರೊಬ್ಬ ನ್ಯಾಯಾಧೀಶರ ಮುಂದೆ ವಿಚಾರಣೆಗೆ ಬಂದವು. ಮೂರನೆಯ ನ್ಯಾಯಾಧೀಶರಾಗಿ ನ್ಯಾಯಮೂರ್ತಿ ರಾಮಾಜೋಯಿಸ್‌ರವರು ೧೯೮೪ರ ಅಕ್ಟೋಬರ್ ೧೨ ರಂದು ದಿನಕ್ಕೆ ನಾಲ್ಕು ಪ್ರದರ್ಶನಗಳು ಮಾತ್ರ ಇರಬೇಕೆಂಬ ಕರ್ನಾಟಕ ಸಿನಿಮಾ ಕಾಯಿದೆಯ ೪೧-ಎ ನಿಯಮವನ್ನು ಎತ್ತಿಹಿಡಿದು ತೀರ್ಪಿತ್ತರು. ಈ ತೀರ್ಮಾನವು ಕೂಡಲೇ ಜಾರಿಗೆ ಬರತಕ್ಕದ್ದೆಂದು ತೀರ್ಪಿನಲ್ಲಿ ಸೂಚಿಸಲಾಗಿತ್ತು. ಅದರಂತೆ ಬುಧವಾರದಿಂದ ಎಲ್ಲಾ ಚಿತ್ರಮಂದಿರಗಳೂ ದಿನಕ್ಕೆ ನಾಲ್ಕು ಪ್ರದರ್ಶನದ ವ್ಯವಸ್ಥೆಯನ್ನು ಜಾರಿಗೆ ತಂದವು. ಐದು ಪ್ರದರ್ಶನಗಳನ್ನು ನಡೆಸುತ್ತಿದ್ದ ಚಿತ್ರಮಂದಿರಗಳಲ್ಲಿ ಅಂದು ಬೆಳಗಿನ ಪ್ರದರ್ಶನವನ್ನು ರದ್ದುಮಾಡಿ ಮಧ್ಯಾಹ್ನ ೧.೩೦ ರಿಂದ ಪ್ರದರ್ಶನವನ್ನು ಆರಂಭಿಸಲಾಯಿತು. ಇದರಿಂದ ಬಹುತೇಕ ಹಂಚಿಕೆದಾರರಿಗೆ ಸಂತೋಷವಾಯಿತು. ಮಧ್ಯಾಹ್ನದ ಪ್ರದರ್ಶನದ ಆಸೆಯಿಂದ ಬೆಳಗಿನ ಮತ್ತು ರಾತ್ರಿಯ ೨ನೇ ಪ್ರದರ್ಶನದ ಗಳಿಕೆಯನ್ನು ಕಳೆದುಕೊಳ್ಳುತ್ತಾ ಅವರು ಕೊರಗುತ್ತಿದ್ದರು.

ಪ್ರದರ್ಶನ ವ್ಯವಸ್ಥೆಯಲ್ಲಿ ಸರ್ಕಾರ ಮತ್ತು ನ್ಯಾಯಾಲಯಗಳು ಈ ಹೊಸ ಬದಲಾವಣೆಯನ್ನು ರೂಪಿಸುತ್ತಿದ್ದ ದಿನಗಳಲ್ಲೇ ರಾಜಕುಮಾರ್ ಅತ್ಯಂತ ಮಹತ್ವಾಕಾಂಕ್ಷೆಯ ಚಿತ್ರ 'ಭಕ್ತ ಪ್ರಹ್ಲಾದ' ಬಿಡುಗಡೆಯಾಯಿತು. ಈ ಪೌರಾಣಿಕ ಚಿತ್ರವನ್ನು ನಿರ್ಮಿಸುವುದರ ಹಿಂದೆ ರಾಜಕುಮಾರ್‌ಗೆ ಅವರ ತಂದೆ ಸಿಂಗಾನಲ್ಲೂರು ಪುಟ್ಟಸ್ವಾಮಯ್ಯನವರು ಕಂಪನಿ ನಾಟಕಗಳಲ್ಲಿ ಭಾವುಕವಾಗಿ, ಸಮರ್ಥವಾಗಿ ನಿರ್ವಹಿಸುತ್ತಿದ್ದರೆಂದು ಹೇಳಲಾದ ಹಿರಣ್ಯಕಶಿಪು ಪಾತ್ರವನ್ನು ಪುನರ್‌ಸೃಷ್ಟಿಸುವ ಆಸೆಯಿತ್ತು. ಜೊತೆಗೆ ಪುತ್ರ ಲೋಹಿತ್‌ನ ವಯಸ್ಸಿಗೆ ಹೊಂದುತ್ತಿದ್ದ ಪ್ರಹ್ಲಾದನ ಪಾತ್ರದ ಮೂಲಕ ಲೋಹಿತ್‌ಗೆ ಒಂದು ಉತ್ತಮ ತಳಹದಿ ರೂಢಿಸಬೇಕೆಂಬ ಬಯಕೆಯೂ ಇತ್ತು. ಕನ್ನಡಿಗರು ಕೂಡ ರಾಜ್‌ರನ್ನು ಗರ್ವ, ದರ್ಪ, ಅಟ್ಟಹಾಸ, ಧಾರ್ಷ್ಟ್ಯ ಹಾಗು ದುಷ್ಟ 'ಗುಣ'ಗಳ ಪಾತ್ರದಲ್ಲಿ ನೋಡುವುದಕ್ಕಾಗಿ ಉತ್ಸುಕರಾಗಿದ್ದರು. ಈ ಚಿತ್ರವು ಕಪಾಲಿಯನ್ನು ಮುಖ್ಯ ಚಿತ್ರಮಂದಿರವನ್ನಾಗಿಸಿಕೊಂಡು ರಾಜ್ಯದಾದ್ಯಂತ ವೈಭವದಿಂದ ಬಿಡುಗಡೆಯಾಯಿತು. ಚಿತ್ರದ ಬಗ್ಗೆ ತಕ್ಷಣ ವ್ಯಕ್ತವಾದದ್ದು ಮಿಶ್ರ ಪ್ರತಿಕ್ರಿಯೆ. ರಾಜಕುಮಾರ್‌ರ ಅಭಿನಯ ಚೆನ್ನಾಗಿದೆ ಅನ್ನುತ್ತಿದ್ದವರು ಇನ್ನೇನೋ ಕೊರತೆಯಿದೆ

ಆನ್ನುತ್ತಾ ಆದನ್ನು ಗುರುತಿಸಲು ಹೆಣಗಾಡುತ್ತಿದ್ದರು. ಚಿತ್ರದ ಭವಿಷ್ಯದ ಬಗ್ಗೆ ಏನೊಂದೂ ಹೇಳಲಾಗದ ಪರಿಸ್ಥಿತಿಯಲ್ಲಿ ಎರಡು ವಾರ ಕಳೆಯಿತು. ಆಗ ಇದ್ದಕ್ಕಿದ್ದಂತೆ ಘೋರ ಅನಾಹುತವೊಂದು ಸಂಭವಿಸಿತು. ಕಪಾಲಿಯಲ್ಲಿ ಮಧ್ಯಾಹ್ನದ ಪ್ರದರ್ಶನ ನಡೆಯುತ್ತಿದ್ದಾಗ ಸಿಡಿಲು-ಗುಡುಗುಗಳು ಏಕೀಭವಿಸಿದಂತೆ ಭಯಂಕರ ಸದ್ದು ಸ್ಫೋಟಿಸಿತು. ಚಿತ್ರವನ್ನು ನೋಡುವುದರಲ್ಲಿ ತಲ್ಲೀನರಾಗಿದ್ದ ಪ್ರೇಕ್ಷಕರು ಏನಾಗುತ್ತಿದೆಯೆಂದು ಅರ್ಥವಾಗದೆ ಚಿತ್ರಮಂದಿರದಿಂದ ಬಾಗಿಲುಗಳನ್ನು ಹುಡುಕುತ್ತಾ ಓಡಿದರು. ನಡೆದದ್ದೇನೆಂದು ತಿಳಿದುಕೊಳ್ಳುವುದರ ಒಳಗೆ ಚಿತ್ರವನ್ನು ನೋಡುತ್ತಿದ್ದ ಇಬ್ಬರು ಅಮಾಯಕ ಪ್ರೇಕ್ಷಕರು ಸ್ಥಳದಲ್ಲೇ ಪ್ರಾಣ ಕಳೆದುಕೊಂಡಿದ್ದರು. ಹೊರಗೆ ಓಡಿ ಬಂದವರಿಗೆ ಕಪಾಲಿಗೆ ಅಂಟಿಕೊಂಡಿದ್ದ ಬಹುಮಹಡಿ ಕಟ್ಟಡ ಇಡಿಯಾಗಿ ಕುಸಿದು ಬಿದ್ದಿರುವುದು ಅಸ್ಪಷ್ಟವಾಗಿ ಕಾಣಿಸಿತು. ಆ ಕ್ಷಣದಲ್ಲಿ ಅಲ್ಲಿ ಆವರಿಸಿಕೊಂಡಿದ್ದ ಧೂಳಿನಲ್ಲಿ ಏನು ನಡೆದಿದೆ, ಯಾರು ಎಲ್ಲಿದ್ದಾರೆ ಏನೊಂದೂ ಕಾಣುತ್ತಿರಲಿಲ್ಲ. ಬೆಂಕಿಪೊಟ್ಟಣದ ಸಾಲಿನಂತೆ ರಸ್ತೆ ಎದುರಿಗೆ ಕುಸಿದು ಬಿದ್ದಿದ್ದ ಕಟ್ಟಡದ ಭಗ್ನವಾದ ಅವಶೇಷಗಳೊಂದಿಗೆ ಕಪಾಲಿ ಎದುರಿನ ರಸ್ತೆ ಸಂಪೂರ್ಣ ಮುಚ್ಚಿಹೋಗಿತ್ತು.



(ಚಿತ್ರ ೬೫) 'ಭಕ್ತ ಪ್ರಹ್ಲಾದ' ಚಿತ್ರದಲ್ಲಿ ಮಾ। ಲೋಹಿತ್ (ಪುನೀತ್), ರಾಜಕುಮಾರ್, ಸರಿತಾ ಮತ್ತು ಇತರರು

'ಗಂಗಾರಾಂ ಕಟ್ಟಡ ದುರಂತ' ಎಂದೇ ಖ್ಯಾತವಾದ ಈ ಘೋರ ಘಟನೆ ೧೯೮೦ರ ದಶಕದ ಅತ್ಯಂತ ಕಹಿ ನೆನಪಾಗಿ ಜನರ ನೆನಪಿನಲ್ಲಿ ಉಳಿಯಿತು. ಇದು ನಡೆದದ್ದು ೧೯೮೩ರ ಸೆಪ್ಟೆಂಬರ್ ೧೨ ರಂದು ಮಧ್ಯಾಹ್ನದ ಆಟದ ಸಮಯದಲ್ಲಿ.

ಈ ದುರಂತ ಘಟನೆಯಲ್ಲಿ ಮಡಿದವರ ಕುಟುಂಬಗಳಿಗೆ ರಾಜ್ಯಸರ್ಕಾರ, ಪ್ರಧಾನ ಮಂತ್ರಿಗಳ ಪರಿಹಾರ ನಿಧಿ, ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ಅನೇಕ ಸಂಘ ಸಂಸ್ಥೆಗಳಿಂದ ನೆರವನ್ನು ಒದಗಿಸಲಾಯಿತು. ೧೯೮೩ರ ಸೆಪ್ಟೆಂಬರ್ ೧೬ರ ಒಂದು ಪ್ರದರ್ಶನದ ಗಳಿಕೆಯನ್ನು ರಾಜ್ಯದ ಪ್ರಮುಖ ಕೇಂದ್ರಗಳ ಎಲ್ಲಾ ಚಿತ್ರಮಂದಿರಗಳು ಕೊಟ್ಟವು. ಈ ಒಂದು ಪ್ರದರ್ಶನಕ್ಕೆ ರಾಜ್ಯ ಸರ್ಕಾರವು ತೆರಿಗೆಯಿಂದ ವಿನಾಯಿತಿ ನೀಡಿತ್ತು. ಚಿತ್ರಮಂದಿರದಲ್ಲಿ ಪರದೆಯಿದ್ದ ಭಾಗ ಸಂಪೂರ್ಣವಾಗಿ ಕುಸಿದಿತ್ತಾದ್ದರಿಂದ ಪ್ರದರ್ಶನಕ್ಕೆ ಥಿಯೇಟರ್ ಯೋಗ್ಯವಲ್ಲ ಎಂದು ಬಹಳ ಮಂದಿ ಅಭಿಪ್ರಾಯ ವ್ಯಕ್ತಪಡಿಸಿದರು. ಅವಶೇಷವಾಗಿ ಉಳಿದಿದ್ದ ಮುಕ್ಕಾಲು ಭಾಗ ಕಟ್ಟಡವನ್ನು ಸಂಪೂರ್ಣವಾಗಿ ಕೆಡವುವಂತೆ ಪೋಲೀಸ್ ಕಮೀಷನರ್‌ರವರು ಸಹ ಸಲಹೆ ಮಾಡಿದರು. ಸುಮಾರು ದಿನಗಳ ಕಾಲ ನಗರಪಾಲಿಕೆಯ ತಾಂತ್ರಿಕ ಸಿಬ್ಬಂದಿ ಚಿತ್ರಮಂದಿರದ ಒಳಗೆ ಕಾಲಿಡಲು ಹೆದರುತ್ತಿತ್ತು. ಕಟ್ಟಡದ ಸ್ಥಿತಿಗತಿಯ ಬಗ್ಗೆ ಪರಿಶೀಲಿಸಲು ಚಿತ್ರಮಂದಿರದ ಮಾಲೀಕರು ಒಂದು ತಜ್ಞರ ತಂಡವನ್ನು ಮದರಾಸಿನಿಂದ ಕರೆಸಿದರು. ಇಡೀ ದಿನ ಕಟ್ಟಡದ ಸ್ಥಿತಿಯನ್ನು ಪರಿಶೀಲಿಸಿದ ತಂಡವು ಕೆಲವು ದುರಸ್ತಿ ಕಾರ್ಯಗಳೊಂದಿಗೆ ಚಿತ್ರಮಂದಿರವನ್ನು ಮರುಬಳಕೆ ಮಾಡಬಹುದೆಂದು ಸಲಹೆ ನೀಡಿತು. ರಾಜ್ಯಸರ್ಕಾರ ದುರಂತದ ಬಗ್ಗೆ ಸಮಗ್ರ ತನಿಖೆ ನಡೆಸಲು ಸಮಿತಿಯೊಂದನ್ನು ರಚಿಸಿತು. ಇದೆಲ್ಲ ಆದ ಸುಮಾರು ೧೫ ತಿಂಗಳ ನಂತರ ಎಲ್ಲ ರೀತಿಯ ದುರಸ್ತಿಗಳೊಂದಿಗೆ ಮೊದಲಿನ ಆಕರ್ಷಣೆಗಳೊಂದಿಗೆ ಕಪಾಲಿಯಲ್ಲಿ ಪ್ರದರ್ಶನವನ್ನು ಆರಂಭಿಸಲಾಯಿತು. ಕಪಾಲಿಯ ಪುನರಾರಂಭದ ಚಿತ್ರವಾಗಿ ರಾಜಕುಮಾರ್ ಅಭಿನಯದ 'ಮಯೂರ' ಚಿತ್ರವನ್ನು ಪ್ರದರ್ಶಿಸಲಾಯಿತು. ಇದೇ ಸಂದರ್ಭದಲ್ಲಿ ಇನ್ನು ಮುಂದೆ ತಮ್ಮ ಚಿತ್ರಮಂದಿರವನ್ನು ಕನ್ನಡ ಚಿತ್ರಗಳಿಗೆ ಮಾತ್ರ ಮೀಸಲಿಡುವುದಾಗಿ ಮಾಲೀಕರು ಪುನರುಚ್ಚರಿಸಿದರು.

ದುರಂತ ನಡೆದಾಗ ಪ್ರದರ್ಶನವಾಗುತ್ತಿದ್ದ 'ಭಕ್ತ ಪ್ರಹ್ಲಾದ' ಚಿತ್ರವನ್ನು ಕೆಂಪೇಗೌಡ ರಸ್ತೆಯ ಕಲ್ಪನಾ ಚಿತ್ರಮಂದಿರಕ್ಕೆ ವರ್ಗಾಯಿಸಲಾಗಿತ್ತು. ಘಟನೆಯ ಒಟ್ಟು ಪರಿಣಾಮವೋ ಎಂಬಂತೆ ಚಿತ್ರಕ್ಕೆ ಪ್ರೇಕ್ಷಕರ ಎಂದಿನ ಬೆಂಬಲ ಸಿಗಲಿಲ್ಲ. ಚಿತ್ರದ ಮೊದಲರ್ಧದಲ್ಲಿ ಹಿರಣ್ಯಕಶಿಪುವಿನ ಪ್ರತಾಪವನ್ನು ನಿರೂಪಿಸಲಾಗಿದ್ದು, ನಂತರದಲ್ಲಿ ಪ್ರಹ್ಲಾದನ ಸನ್ನಿವೇಶಗಳನ್ನು ಜೋಡಿಸಿದ್ದರಲ್ಲಿ ಅಗತ್ಯಕ್ಕಿಂತ ಹೆಚ್ಚಿನ ವೇಗ, ಆತುರ ನುಸುಳಿತ್ತು. ವಿಜಯ್ ನಿರ್ದೇಶನ ಆಲ್ಲಲ್ಲಿ ಸಡಿಲವಾಗಿದ್ದುದರಿಂದ ಪ್ರೇಕ್ಷಕ ತನಗೆ ಗೊತ್ತಿರುವ ಕಥೆಯನ್ನು ತೆರೆಯಲ್ಲಿ ನೋಡುವಾಗ ನಿರೀಕ್ಷಿಸುವಂಥ ಪರಿಣಾಮ ಸೃಷ್ಟಿಯಾಗಿರಲಿಲ್ಲ. ಅಪರೂಪದ ಶ್ರೀಮಂತ ಸೆಟ್ಟುಗಳು, ಆಲ್ಲಲ್ಲಿನ ಜಾಣ್ಮೆಯ ಟ್ರಿಕ್ ಫೋಟೋಗ್ರಫಿ ಮಾತ್ರ ಆಷ್ಟಿಷ್ಟು ಮೆಚ್ಚುಗೆಗಳಿಸಿದುವು. ಟಿ.ಜಿ.ಲಿಂಗಪ್ಪನವರ ಸಂಗೀತ ವಿಶೇಷವಾಗಿಲ್ಲದ್ದು ಕೂಡ ಚಿತ್ರದ ಬಹು ದೊಡ್ಡ ಕೊರತೆಯಾಗಿತ್ತು. ಇಂಥ ಕೆಲವು ದೌರ್ಬಲ್ಯಗಳ ನಡುವೆ ಚಿತ್ರದ ಕ್ಯಾಮರಾ ತಂತ್ರಗಳಿಗಾಗಿ ಎಸ್.ಎಸ್.ಲಾಲ್ ಹಾಗೂ ಧ್ವನಿಗ್ರಹಣಕ್ಕಾಗಿ ಪಾಂಡು ೧೯೮೩ರ ರಾಜ್ಯ ಪ್ರಶಸ್ತಿ ಪಡೆದುಕೊಂಡರು.

'ಸ್ವರ್ಗದಲ್ಲಿ ಮದುವೆ' ಮಣಿಮುರುಗನ್ ನಿರ್ದೇಶನದ ಚಿತ್ರ. ಪ್ರೀಮಿಯರ್ ಸ್ಟುಡಿಯೋದ ಕಾರ್ಮಿಕರೆಲ್ಲ ಸೇರಿ ನಿರ್ಮಿಸಿದರು. 'ಮ್ಯಾರೇಜಸ್ ಆರ್ ಮೇಡ್ ಇನ್ ಹೆವೆನ್' ಎಂಬ ಮಾತನ್ನು ಒಪ್ಪದೆ ಅದು ಆಗುವುದು, ಆಗಬೇಕಾದ್ದು ಇಲ್ಲೇ, ಇದೇ ನೆಲದಲ್ಲೇ ಎಂದು ಹೇಳುವ ಪ್ರಯತ್ನ. ಜೊತೆಗೆ ರಾಷ್ಟ್ರೀಯ ಭಾವೈಕ್ಯತೆಯೂ ಸೇರಿದೆ. ಜನರನ್ನು ಆಕರ್ಷಿಸುವ ಸಲುವಾಗಿ ರಾಜಕುಮಾರ್ ಹೆಸರು, ಕಟೌಟ್ಸ್‌ಗಳನ್ನು ಬಳಸುವ ಗಿಮಿಕ್ ಮಾಡಿದ್ದರು. ವಿಜಯಕಾಶಿ ಒಂದು ಮುಖ್ಯ ಪಾತ್ರದಲ್ಲಿದ್ದು ಗಮನ ಸೆಳೆದರು. ಭವ್ಯಾ ಇನ್ನೂ ಹೊಸಬರಾದರೂ ಗಮನಾರ್ಹ ಅಭಿನಯವಿತ್ತು. ಆರ್.ಟಿ.ರಮಾ ಚಿತ್ರರಂಗಕ್ಕೆ ಹೊಸಬರಲ್ಲ, ರಂಗಭೂಮಿಯಲ್ಲೂ ದೊಡ್ಡ ಹೆಸರು. ರಾಷ್ಟ್ರೀಯ ನಾಟಕ ಶಾಲೆಯ ಪದವೀಧರೆ. ಆದರೂ ಚಿತ್ರರಂಗ ಅವರನ್ನು ಕೆಳದರ್ಜೆಯ ಹಾಸ್ಯಕ್ಕಾಗಿಯೇ ಬಳಸುತ್ತ ಆಕೆಯ ಪ್ರತಿಭೆಯನ್ನು ಮುಕ್ಕಾಗಿಸುತ್ತಲೇ ಇತ್ತು. ಮಣಿಮುರುಗನ್ ಅವರಿಗೆ ಬೇಡಿಕೆಗಳು ಹೆಚ್ಚಾದಂತೆ ಶ್ರದ್ಧೆ ದೂರ ಸರಿದು ಪ್ರತಿಭೆ ಕಣ್ಮರೆಯಾಗುತ್ತಿತ್ತು. ಅಂಥ ಕಾಲದಲ್ಲಿ ಕಾರ್ಮಿಕ ವರ್ಗಕ್ಕೆ ಚಿತ್ರ ಮಾಡುವಾಗ ಮತ್ತಷ್ಟು ನಿರ್ಲಕ್ಷ್ಯವಿದ್ದಿರಬೇಕು. ಸರಿಯಾದ ನಿರೂಪಣೆ ಇಲ್ಲದ 'ಸ್ವರ್ಗದಲ್ಲಿ ಮದುವೆ' ಚಿತ್ರ ಸೋತಿತು.

'ಮನೆಗೆ ಬಂದ ಮಹಾಲಕ್ಷ್ಮೀ' ಒಂದು ಪುನರವತರಣಿಕೆ. ಈ ಚಿತ್ರ ತೀರಾ ಅಸಂಬದ್ಧವಾಗಿತ್ತು. ಎ.ಆರ್.ರಾಜು ನಿರ್ಮಿಸಿದ್ದರು. ಚಿತ್ರದ ಹೆಸರು ಮತ್ತು ಪ್ರಚಾರದಲ್ಲಿ ಕುಟುಂಬದವರೆಲ್ಲ ನೋಡಿ ನಲಿಯುವಂಥ ಚಿತ್ರ ಇತ್ಯಾದಿಗಳ ಬಳಕೆಯಿಂದಾಗಿ ಸಭ್ಯವಾದ ಚಿತ್ರ ಎಂದು ಹೋದವರಿಗೆ ಆಚ್ಚರಿ ಕಾದಿತ್ತು. ಹಿಂಸೆ, ಅಶ್ಲೀಲ ತುಂಬಿಹೋಗಿತ್ತು. ಸೆನ್ಸಾರ್‌ನವರೇನು ಮಾಡುತ್ತಿದ್ದರು ಎಂದು ಕೇಳುವಷ್ಟು ಟೀಕೆಗಳನ್ನು ಎದುರಿಸಬೇಕಾಯಿತು. ಒಂದು ಸಂದರ್ಭದಲ್ಲಿ ರಾಜಕುಮಾರ್ ಸಹ ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷರು ಇಂಥ ಚಿತ್ರ ನಿರ್ಮಿಸುವುದೇ ಎಂದು ಮುಜುಗರದಿಂದ ಆಡಿದ ಮಾತೂ ವರದಿಯಾಗಿತ್ತು.

ಸಾಯಿಸುತೆ ಕಾದಂಬರಿ ಆಧರಿಸಿದ್ದ, ಎಸ್.ಎಸ್.ಧನಂಜಯ ನಿರ್ದೇಶಿಸಿದ ಚಿತ್ರ 'ಗಂಧರ್ವಗಿರಿ'. ಎಸ್.ಎಸ್.ಚಂದ್ರು, ವೀಣಾ ನಾಗರಾಜ್, ಎಸ್.ಎಸ್.ಮುಕುಂದ್,



ರಂಗನಾಯಕಿ (೧೯೮೧) ಆರತಿ - ಅಶೋಕ್

ಮಾನಸ ಸರೋವರ (೧೯೮೧) ಪದ್ಮಾವಾಸಂತಿ - ಶ್ರೀನಾಥ್

ಅಂತ (೧೯೮೧) ಸುಂದರ ಕೃಷ್ಣ ಅರಸ್ - ಅಂಬರೀಷ್



ಅವಳ ಅಂತರಂಗ (೧೯೮೪)
ರೂಪಾದೇವಿ - ಅಶೋಕ್



ಕವಿರತ್ನ ಕಾಳಿದಾಸ (೧೯೮೩) ರಾಜಕುಮಾರ್



ಪಲ್ಲವಿ ಅನುಪಲ್ಲವಿ (೧೯೮೧) ಲಕ್ಷ್ಮೀ - ಮಾ। ರೋಹಿತ್

ಹಾಲು ಜೇನು (೧೯೮೩) ಮಾಧವಿ - ರಾಜಕುಮಾರ್

ಬೆಟ್ಟದ ಹೂವು (೧೯೮೫) ಪುನೀತ್ ರಾಜಕುಮಾರ್

ನೋಡಿ ಸ್ವಾಮಿ
ನಾವಿರೋದೆ ಹೀಗೆ (೧೯೮೩)
ಶಂಕರ್‌ನಾಗ್ - ರಮೇಶ್‌ಭಟ್
- ಅರುಂಧತಿರಾವ್ - ಮಾ| ಮಂಜುನಾಥ್

↑ ಭಕ್ತ ಪ್ರಹ್ಲಾದ (೧೯೮೩) ರಾಜಕುಮಾರ್ - ಮಾ| ಪುನೀತ್ - ಸರಿತಾ

↓ ಬ್ಯಾಂಕರ್ ಮಾರ್ಗಯ್ಯ (೧೯೮೩) ಲೋಕೇಶ್



ಪ್ರಾಯ ಪ್ರಾಯ ಪ್ರಾಯ (೧೯೮೪) ವಿಜಯಲಕ್ಷ್ಮಿ ಸಿಂಗ್ - ಸುಂದರರಾಜ್



ಅನುರಾಗ ಅರಳಿತು (೧೯೮೬) ರಾಜಕುಮಾರ್ ಮತ್ತು ಸಹ ಕಲಾವಿದರು

↓ ಚಕ್ರವ್ಯೂಹ (೧೯೮೩) ಅಂಬರೀಷ್





ಅನುಭವ (೧೯೮೪) ಕಾಶೀನಾಥ್ ಸಹನಟನೊಂದಿಗೆ



ಶಂಖನಾದ (೧೯೮೬) ರಮೇಶ್‌ಭಟ್ - ಅರವಿಂದ್



ಮಲಯ ಮಾರುತ (೧೯೮೬) ಮಾಧವಿ - ವಿಷ್ಣುವರ್ಧನ್ - ಸರಿತಾ

ಪ್ರೇಮಲೋಕ (೧೯೮೭) ಜೂಹಿ ಚಾವ್ಲ - ರವಿಚಂದ್ರನ್ ↑

↓ ಸುಪ್ರಭಾತ (೧೯೮೮) ಸುಹಾಸಿನಿ - ವಿಷ್ಣುವರ್ಧನ್



ಮಿಥಿಲೆಯ ಸೀತೆಯರು (೧೯೮೮) ಬಿ.ವಿ.ರಾಧಾ - ಕಲ್ಪನಾ ಅಯ್ಯರ್ - ಗೀತಾ - ಅಖಿಲಾ ↑

↓ ಸಿಂಹದ ಮರಿ ಸೈನ್ಯ (೧೯೮೨) ಮಾ| ದಿನೇಶ್‌ಬಾಬು - ಬೇಬಿ ಇಂದಿರಾ - ಮಾ| ಅರ್ಜುನ್ ಸರ್ಜಾ - ಬೇಬಿ ಅರುಣಾ

ದೇವತಾ ಮನುಷ್ಯ (೧೯೮೮) ರಾಜಕುಮಾರ್ - ರಾಜಾನಂದ್



ಸಂತ ಶಿಶುನಾಳ ಷರೀಫ (೧೯೮೯)
ಸುಮನ್ ರಂಗನಾಥ್ - ಶ್ರೀಧರ್

ರಣಧೀರ (೧೯೮೮) ರವಿಚಂದ್ರನ್



ತಬರನ ಕತೆ (೧೯೮೮) ಚಾರುಹಾಸನ್ - ಜಮಾದಾರ್

27 ಮಾವಳ್ಳಿ ಸರ್ಕಲ್ (೧೯೮೯) ಕಲ್ಪನಾರೆಡ್ಡಿ - ಟಿ. ಎಸ್. ನರಸಿಂಹನ್





ಮತ್ತೆ ಹಾಡಿತು ಕೋಗಿಲೆ (೧೯೯೦ ) ಬೇಬಿ ಶ್ಯಾಮಿಲಿ ↑



ಇದು ಸಾಧ್ಯ (೧೯೮೯) ಬೇಬಿ - ರೇವತಿ

ಮುತ್ತಿನ ಹಾರ (೧೯೯೦) ಸುಹಾಸಿನಿ - ವಿಷ್ಣುವರ್ಧನ್ ↓



(ಚಿತ್ರ ೬೬) 'ಫಣಿಯಮ್ಮ' ಚಿತ್ರದಲ್ಲಿ ಪ್ರತಿಭಾ ಕಾಸರವಳ್ಳಿ

ಬಿ.ಎ.ಅನಸೂಯ ಇವರುಗಳ ನಿರ್ಮಾಣದಲ್ಲಿ ವಿಷ್ಣುವರ್ಧನ್, ಆರತಿ, ಮಾನು, ಲೀಲಾವತಿ, ಸುಂದರಕೃಷ್ಣ ಅರಸ್, ರಾಜಾನಂದ್ ಮುಂತಾದವರ ಅಭಿನಯ ಚಿತ್ರಕ್ಕಿತ್ತು. ಸುಂದರಕೃಷ್ಣ ಅರಸ್ ಮತ್ತು ಮಾನು ಖಳಪಾತ್ರದಲ್ಲಿದ್ದರು. ರಾಜಾನಂದ್‌ಗೆ ಉತ್ತಮ ಪಾತ್ರವಿತ್ತು. ಉಪೇಂದ್ರಕುಮಾರ್ ಸಂಗೀತದಲ್ಲಿ 'ಗಂಧರ್ವ ಗಿರಿಯಲಿ ಗಂಧರ್ವರೆ ನೀವು...' ಹಾಡು ಜನಪ್ರಿಯವಾಯಿತು.

ರಾಷ್ಟ್ರದ ಮಹತ್ವದ ಚಿತ್ರಗಳಲ್ಲಿ ಒಂದಾದ 'ಫಣಿಯಮ್ಮ' ಸಾಂಸ್ಕೃತಿಕವಾಗಿಯೂ ಕನ್ನಡದ ಮುಖ್ಯ ಚಿತ್ರ. ಮಹಿಳೆ ನಿರ್ದೇಶಿಸಿದ ಪ್ರಥಮ ಪ್ರಾಯೋಗಿಕ ಚಿತ್ರವೆಂಬುದು ಕೂಡ ಇದರ ದಾಖಲೆ. ಈ ಚಿತ್ರ ಸೆನ್ಸಾರ್ ಆಗುವ ಸಂದರ್ಭದಲ್ಲೇ ದೇಶದ ಇಡೀ ಚಿತ್ರೋದ್ಯಮ ಸೆನ್ಸಾರ್ ವ್ಯವಸ್ಥೆಯ ವಿರುದ್ಧ ತಿರುಗಿ ಬಿದ್ದು ನಿಷೇಧ ಹಾಕಿತ್ತು. ಈ ನಿಷೇಧದ ಬಿಸಿ ಇಡೀ ದೇಶದ ತುಂಬ ಹಬ್ಬಿಕೊಂಡಿತ್ತು. 'ಫಣಿಯಮ್ಮ' ೧೯೮೨ರ ಜೂನ್ ೧೦ ರಂದು ಮದರಾಸಿನ ಸೆನ್ಸಾರ್ ಮಂಡಳಿಯ ಮುಂದೆ ಬರಬೇಕಾಗಿತ್ತು. ಆದರೆ ಅಷ್ಟರೊಳಗಾಗಲೇ ದಕ್ಷಿಣ ಭಾರತದ ಚಲನಚಿತ್ರ ವಾಣಿಜ್ಯ ಮಂಡಳಿ ೧೯೮೨ರ ಜೂನ್ ೧೦ ರಿಂದ ಯಾರೂ ತಮ್ಮ ಚಿತ್ರಗಳನ್ನು ಈ ಮಂಡಳಿಗೆ ಕಳುಹಿಸಬಾರದೆಂದು ಮದರಾಸಿನ ಸೆನ್ಸಾರ್ ಕಚೇರಿಯ ಚಟುವಟಿಕೆಗಳಿಗೆ ಸಂಪೂರ್ಣ ಬಹಿಷ್ಕಾರ ಹಾಕಿತು. ''ಮದರಾಸಿನ ಪ್ರಾದೇಶಿಕ ಕಚೇರಿಯಲ್ಲಿ ಯಾವುದೇ ನೀತಿ, ನಿಯಮಗಳ ಆಧಾರವಿಲ್ಲದೆ ಚಿತ್ರಗಳನ್ನು ಸೆನ್ಸಾರ್ ಮಾಡಲಾಗುತ್ತಿದ್ದು ಇದರಿಂದ ದಕ್ಷಿಣ ಭಾರತದ ಚಿತ್ರಗಳಿಗೆ ಅನ್ಯಾಯವಾಗುತ್ತಿದೆ. ಜೊತೆಗೆ ಅಸಹನೀಯವಾದ ವಿಳಂಬ ಬೇರೆ''- ಎಂಬುದು ಬಹಿಷ್ಕಾರಕ್ಕೆ ಕೊಟ್ಟ ಕಾರಣ. ಇದನ್ನು ಇತರ ರಾಜ್ಯದ ಚಿತ್ರೋದ್ಯಮಗಳೂ ಬೆಂಬಲಿಸಿದವು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯೂ ಈ ತೀರ್ಮಾನವನ್ನು ಬೆಂಬಲಿಸಿ ನಿರ್ಣಯವನ್ನು ಕೈಗೊಂಡಿತು.

ಇಷ್ಟೆಲ್ಲಾ ಆದ ಎರಡು ವಾರಗಳ ನಂತರ ಕೇಂದ್ರದ ವಾರ್ತಾ ಮತ್ತು ಪ್ರಸಾರ ಇಲಾಖೆ ಜಾಗೃತವಾಯಿತು. ಇಲಾಖೆಯ ಉನ್ನತಾಧಿಕಾರಿಗಳು ಮದರಾಸಿಗೆ ಬಂದು ತಮಿಳು ನಾಡಿನ ವಾರ್ತಾ ಮಂತ್ರಿ ಆರ್.ಎಂ.ವೀರಪ್ಪನ್ ಅಧ್ಯಕ್ಷತೆಯಲ್ಲಿ ಸಭೆ ಏರ್ಪಡಿಸಿ ಚರ್ಚಿಸಿದರು. ಮಾತುಕತೆಯ ಫಲಶ್ರುತಿ ಸಮಾಧಾನಕರವಾಗಿ ಇದ್ದುದರಿಂದ ಕೂಡಲೇ ಬಹಿಷ್ಕಾರವನ್ನು ಹಿಂತೆಗೆದುಕೊಳ್ಳಲಾಯಿತು. ಈ ಪ್ರತಿಭಟನೆಯ ಒಟ್ಟು ಹಿನ್ನೆಲೆಯಲ್ಲಿ ಸೆನ್ಸಾರ್‌ನ ಉನ್ನತಾಧಿಕಾರಿಗಳು ಕೊಟ್ಟ ಭರವಸೆ: ''ಸೆನ್ಸಾರ್ ಮಾಡುವಾಗ ವೈಯಕ್ತಿಕ ಭಾವನೆ ನುಸುಳುವುದು ಸಹಜ. ಅತ್ಯಂತ ಕರಾರುವಾಕ್ಕಾಗಿ ಚಿತ್ರಗಳನ್ನು ವಿಶ್ಲೇಷಿಸುವುದು ಕೂಡ ಅಸಾಧ್ಯ. ವೈಯಕ್ತಿಕ ಪ್ರಭಾವಗಳನ್ನು ಕಡಿಮೆ ಮಾಡಲು ಯತ್ನಿಸುತ್ತೇವೆ. ಇನ್ನು ವರ್ಷಕ್ಕೆ ೫೦೦ ಚಿತ್ರಗಳನ್ನು ನೋಡಿ ಸೆನ್ಸಾರ್ ಮಾಡಬೇಕಾದ ಕೆಲಸದ ಒತ್ತಡದಲ್ಲಿ ಅನುಮತಿ ಪತ್ರ ನೀಡುವುದರಲ್ಲಿ ವಿಳಂಬವಾಗುತ್ತಿರುವುದು ಅನಿವಾರ್ಯ. ಇದನ್ನು ತಪ್ಪಿಸಲು ಇನ್ನಷ್ಟು ಸೆನ್ಸಾರ್ ಅಧಿಕಾರಿಗಳನ್ನು ನೇಮಿಸುತ್ತೇವೆ''.

ಇಷ್ಟೆಲ್ಲ ಚರ್ಚೆ-ಸಂಧಾನಗಳು ನಡೆಯುತ್ತಿರುವಾಗ ಅಷ್ಟು ದಿನಗಳ ವಿಳಂಬವನ್ನು ನಿರೀಕ್ಷಿಸಿದ್ದ 'ಫಣಿಯಮ್ಮ' ನಿರ್ಮಾಪಕರು ತಮ್ಮ ಚಿತ್ರವನ್ನು ಮುಂಬೈನಲ್ಲಿ ಸೆನ್ಸಾರ್ ಮಾಡಿಸಿದರು. ವಸ್ತು ಮತ್ತು ನಿರ್ವಹಣೆಯಲ್ಲಿ ವೈವಿಧ್ಯವನ್ನು ಸಾಧಿಸಿಕೊಂಡಿದ್ದ ಈ ಚಿತ್ರ ಕನ್ನಡ ಚಿತ್ರರಂಗಕ್ಕೆ ಮತ್ತೊಮ್ಮೆ ಅಂತರರಾಷ್ಟ್ರೀಯ ಮಾನ್ಯತೆಯನ್ನು ದೊರಕಿಸಿಕೊಟ್ಟಿತು. ಕೇಂದ್ರದ ಸ್ವರ್ಣ ಕಮಲ ಪ್ರಶಸ್ತಿಯೊಂದಿಗೆ ರಾಜ್ಯದ ೧೯೮೩ರ ದ್ವಿತೀಯ ಅತ್ಯುತ್ತಮ ಚಿತ್ರ ಪುರಸ್ಕಾರವನ್ನು ಗಳಿಸಿಕೊಂಡಿತು. ಅತ್ಯುತ್ತಮ ಕಥೆಗಾಗಿ ಎಂ.ಕೆ.ಇಂದಿರಾ ಹಾಗೂ ಪೋಷಕ ಕಲಾವಿದೆಯಾಗಿ ಅರ್ಚನಾ ಪ್ರಶಸ್ತಿ ಪಡೆದರು. ನಮ್ಮ ಸಮಾಜದ ಬ್ರಾಹ್ಮಣ ಜನಾಂಗದಲ್ಲಿ ವಿಧವೆಯರಾದ ಮಹಿಳೆಯರು ಹಲವಾರು ಕಟ್ಟುಪಾಡುಗಳಿಂದಾಗಿ ಅನುಭವಿಸುತ್ತಿದ್ದ ಮಾನಸಿಕ ಹಿಂಸೆಯನ್ನು ಪ್ರೇಮಾ ಕಾರಂತ್ ಮಾರ್ಮಿಕವಾಗಿ, ನೈಜವಾಗಿ, ಸರಳವಾಗಿ ಚಿತ್ರಿಸಿದ್ದರು. ಬದಲಾಗುತ್ತಿದ್ದ ಮೌಲ್ಯಗಳನ್ನು ಸಹ ಮೂರು ತಲೆಮಾರುಗಳನ್ನು ಬಳಸಿಕೊಂಡು ಹೇಳುವ ಪ್ರಯತ್ನ ಮಾಡಿದ್ದರು. ಮೂರು ತಲೆಮಾರುಗಳ ಬದಲಾವಣೆಯನ್ನು ದೀಪಸ್ತಂಭಗಳ ಮಾರ್ಪಾಟಿನ ಮೂಲಕ ತೋರಿಸಿದ ಪ್ರೇಮಾರ ನಿರೂಪಣೆ ವಿನೂತನವಾಗಿತ್ತು. ಮಧು ಅಂಬಟ್‌ರ ಛಾಯಾಗ್ರಹಣ, ಬಿ.ವಿ.ಕಾರಂತರ ಸಂಗೀತ ಕೂಡ ವಸ್ತುವಿಗೆ ಪೂರಕವಾಗಿದ್ದು ಚಿತ್ರದ ಆಶಯಕ್ಕೆ ಸೂಕ್ಷ್ಮ ರೀತಿಯಲ್ಲಿ ಒತ್ತು ಕೊಟ್ಟಿದ್ದುವು. ಮುಖ್ಯಮಂತ್ರಿ ಚಂದ್ರು ಅಂಚೆಯವನಾಗಿ (ರನ್ನರ್) ಅಭಿನಯಿಸಿದ್ದರು. ಅವರ ಮೇಲೆ ಚಿತ್ರಿಸಿದ್ದ 'ರನ್ನರ್ ರನ್ನರ್...' ಎಂಬ ಗೀತೆ ತುಂಬ ಮೆಚ್ಚಿನಿಸಿತ್ತು. ಎಲ್.ವಿ.ಶಾರದಾ ಅಭಿನಯ ನೈಜತೆಗೆ ಒಂದು ಮಾದರಿಯಂತಿತ್ತು.

ಬಿ.ವಿ.ಕಾರಂತರ ಸಂಗೀತ ನಿರ್ದೇಶನದಲ್ಲಿ 'ರನ್ನರ್ ರನ್ನರ್...' ಎಸ್.ಜಾನಕಿ ಹಾಡಿದ್ದು, ಒಂದು ರೀತಿಯ 'ತಕಿಟಕಿಕಿಟ' ಬೀಟ್‌ನಲ್ಲಿ ನೃತ್ಯದ ಹಾಗೆ ಬರುತ್ತದೆ. ಮತ್ತೊಂದು ಗೀತೆಗೆ ತಾಳಮದ್ದಲೆಗಳನ್ನು ಬಳಸಿ ಜಾನಪದ ಧಾಟಿಯಲ್ಲಿ ಕೂಡಿಸಿದ್ದನ್ನು, ಜಯಚಂದ್ರನ್ ಹಾಡಿದ್ದರು.

'ಫಣಿಯಮ್ಮ' ಜರ್ಮನಿಯ ಮ್ಯಾನ್‌ಹ್ಯಾಮ್ ಚಿತ್ರೋತ್ಸವಕ್ಕೆ ಆಯ್ಕೆಯಾದಾಗ ಕನ್ನಡ ಚಿತ್ರರಸಿಕರ ಸಂಘ ಪ್ರೇಮಾ ಕಾರಂತ್‌ರಿಗೆ ಆತ್ಮೀಯವಾದ ಒಂದು ಬೀಳ್ಕೊಡುಗೆ ಸಮಾರಂಭವನ್ನು ಏರ್ಪಡಿಸಿತ್ತು. ಸಂಘದ ಅಧ್ಯಕ್ಷರಾದ ಸಿ.ವಿ.ಎಲ್.ಶಾಸ್ತ್ರಿಯವರು ನಿರ್ದೇಶಕಿಯ ವಿದೇಶ ಪ್ರಯಾಣದ ವೆಚ್ಚವನ್ನು ಸಂಪೂರ್ಣವಾಗಿ ಭರಿಸುವ ಘೋಷಣೆ ಮಾಡಿದರು. ಈ ಚಿತ್ರೋತ್ಸವದಲ್ಲಿ ಅಂತರರಾಷ್ಟ್ರೀಯ ತಜ್ಞರ ವಿಶೇಷ ಮೆಚ್ಚುಗೆ ಪಡೆದ 'ಫಣಿಯಮ್ಮ'ಕ್ಕೆ ಮೂರು ಪ್ರಶಸ್ತಿಗಳು ಲಭ್ಯವಾದವು. 'ಫಿಲಂ ಡುಕಾಕ್' ಪ್ರಶಸ್ತಿಯೊಂದಿಗೆ ಎರಡು ಸಾವಿರ ಜರ್ಮನ್ ಮಾರ್ಕ್‌ಗಳ ನಗದು (ಸುಮಾರು ಎಂಟು ಸಾವಿರ ರೂಪಾಯಿ) ಬಂಗಾರದ ಪದಕ ಮತ್ತು ಪ್ರಶಸ್ತಿಪತ್ರ ದೊರಕಿತು. ಇದಲ್ಲದೆ ಕ್ಯಾಥೊಲಿಕ್ ಪ್ರಶಸ್ತಿ ಹಾಗೂ ಅಂತರರಾಷ್ಟ್ರೀಯ ವಿಮರ್ಶಕರ ಪ್ರಶಸ್ತಿಯೂ ಲಭ್ಯವಾದವು. ಈ ಚಿತ್ರದ ಒಂದು ವಿಶೇಷವೆಂದರೆ ನಾಗಮಂಗಲದಲ್ಲಿದ್ದ ಗುಬ್ಬಿವೀರಣ್ಣನವರ ನಾಟಕ ಕಂಪನಿಯ ಜೀರ್ಣಗೊಂಡ ಥಿಯೇಟರಿನಲ್ಲಿ 'ದುಷ್ಯಂತ, ಶಕುಂತಲೆ'ಯ ನಾಟಕದ ಒಂದು ದೃಶ್ಯವನ್ನು ಚಿತ್ರೀಕರಿಸಿಕೊಂಡಿರುವುದು. ದುಷ್ಯಂತನಾಗಿ ಅತ್ಯಂತ ಪುಟ್ಟ ಪಾತ್ರದಲ್ಲಿ ಆ ದಿನಗಳಲ್ಲಿ ಬೇಡಿಕೆಯ ನಾಯಕ ನಟರಾಗಿದ್ದ ಅನಂತ್‌ನಾಗ್ ಅಭಿನಯಿಸಿದರು. 'ಕಾಕನಕೋಟೆ' ಚಿತ್ರದಲ್ಲಿ ನಟಿಸಿದ ರಾಣಿ ಎನ್ನುವ ಕಲಾವಿದೆ ಶಕುಂತಲೆಯಾಗಿದ್ದರು. ಅನಂತ್‌ನಾಗ್ ಅವರೇ ಈ ಚಿತ್ರವನ್ನು ವಿತರಿಸಿದರು.

ಈ ಮಧ್ಯೆ ಬಿ.ಎಂ.ವೆಂಕಟೇಶ್ ನಿರ್ಮಿಸಿದ 'ಗಂಡುಗಲಿ ರಾಮ' ಚಿತ್ರ ಪ್ರಾರಂಭವಾದ ಹಿನ್ನೆಲೆಯಲ್ಲಿ ಅಭಿಮಾನಿಗಳ ಉತ್ಸಾಹದಿಂದ ಕೆಲವು ಮುಜುಗರದ ಸಂಗತಿಗಳು ಎದುರಾದವು. ವಿಷ್ಣು ತ್ರಿಪಾತ್ರಾಭಿನಯವಿದ್ದೂ ಚಿತ್ರ ಸೋತಿತು.



(ಚಿತ್ರ ೬೭)'ಮುದುಡಿದ ತಾವರೆ ಅರಳಿತು' ಚಿತ್ರದಲ್ಲಿ ಲಕ್ಷ್ಮಿ, ಶೋಭಾ, ಲೀಲಾವತಿ, ಮುಖ್ಯಮಂತ್ರಿ ಚಂದ್ರು, ಮೈಸೂರು ಲೋಕೇಶ್ ಮತ್ತು ಅಶ್ವತ್ಥ್

ಇದೇ ಅವಧಿಯಲ್ಲಿಯೇ ನಗರ ಹಾಗೂ ಮಧ್ಯಮವರ್ಗದ ಪ್ರೇಕ್ಷಕರ ವಿಶೇಷ ಒಲವು ಗಳಿಸಿಕೊಂಡಿರುವ ನಿರ್ದೇಶಕ ಕೆ.ವಿ.ಜಯರಾಂ ಅವರ 'ಇಬ್ಬನಿ ಕರಗಿತು' ಹಾಗೂ 'ಮುದುಡಿದ ತಾವರೆ ಅರಳಿತು' ಚಿತ್ರಗಳು ತೆರೆಕಂಡವು. ಎಂದಿನ ಅವರ ಕಾದಂಬರಿ ಒಲವು ಹಾಗೂ ಅಚ್ಚುಕಟ್ಟು ಈ ಎರಡೂ ಚಿತ್ರಗಳಲ್ಲಿದ್ದುವು. 'ಇಬ್ಬನಿ ಕರಗಿತು' ಕಾದಂಬರಿ ರೀತಿಯ ನಿರೂಪಣೆಯೊಂದಿಗೆ ಆರಂಭವಾಗಿ ಪತ್ತೆದಾರಿ ಶೈಲಿಯಲ್ಲಿ ಮುಗಿದರೆ, 'ಮುದುಡಿದ ತಾವರೆ ಅರಳಿತು' ಸಂಪೂರ್ಣವಾಗಿ ಕಾದಂಬರಿಯ ರೂಪವನ್ನೇ ಧರಿಸಿಕೊಂಡಂತಿದ್ದ ಚಿತ್ರ. ಈ ಎರಡೂ ಚಿತ್ರಗಳ ನಾಯಕ-ನಾಯಕಿ ಅಗ್ಗೆ ಕೆ.ವಿ.ಜಯರಾಂರ ಯಶಸ್ಸಿನ ಅಂಶಗಳಾಗಿದ್ದ ಅನಂತ್‌ನಾಗ್ ಮತ್ತು ಲಕ್ಷ್ಮೀ. ತನ್ನ ತಂಗಿಯ ಕೊಲೆಗೆ ಕಾರಣನಾದವನ ಮೇಲೆ ಸೇಡು ತೀರಿಸಿಕೊಳ್ಳಲು ಕೊಲೆಗಾರನ ತಂಗಿಗೆ ಶಿಕ್ಷೆ ವಿಧಿಸುವ ನಾಯಕ ಹಾಗೂ ಗಂಡನಿಲ್ಲದೆ ಬಾಳುವೆನೆಂಬ ಆತ್ಮವಿಶ್ವಾಸದಿಂದ ಗಂಡನ ಮೇಲೆ ದಬ್ಬಾಳಿಕೆ ನಡೆಸಲು ಹೋಗಿ, ಎಲ್ಲರಿಂದ ತಿರಸ್ಕೃತಗೊಂಡು, ಕೊನೆಗೆ ಐದು ವರ್ಷಗಳ ಒಂಟಿ ಜೀವನಕ್ಕೆ ಅಂತ್ಯ ಹಾಡಿ ಅವನನ್ನು ಕೂಡುವ ನಾಯಕಿ - ಈ ಎರಡೂ ಚಿತ್ರಗಳಲ್ಲಿದ್ದರು. ಕುಟುಂಬದೊಳಗಿನ ಸರಸ-ವಿರಸಗಳು ಹಾಗೂ ಗಂಡ-ಹೆಂಡತಿಯರ ನಡುವೆ ಅಘೋಷಿತವಾಗಿರುವ ನೀತಿಗಳೇ ಕೆ.ವಿ.ಜಯರಾಂ ಅವರ ಎಲ್ಲಾ ಚಿತ್ರಗಳ ಮೂಲದ್ರವ್ಯವಾಗಿರುವಂತೆ ಈ ಚಿತ್ರಗಳದೂ ಆಗಿತ್ತು. ಲಕ್ಷ್ಮೀ ಎರಡೂ ಚಿತ್ರಗಳಲ್ಲಿನ ತಮ್ಮ ಪಾತ್ರದಲ್ಲಿ ಸಂಯಮದ ಅಭಿನಯ ನೀಡಿ ಗಮನ ಸೆಳೆದರು.'ಮುದುಡಿದ ತಾವರೆ ಅರಳಿತು' ಚಿತ್ರದ 'ವಿವಾಹ ಬಾಳಿಗೆ ಹೊಂಗಿರಣ, ರಂಗಾದ ರಾಗಕೆ ಹೊಸ ಕಿರಣ...' ಹಾಡು ಅದರ ಮಾಧುರ್ಯದಿಂದ ಜನಪ್ರಿಯವಾಯಿತು. ಹಾಗೆಯೇ ಶೀರ್ಷಿಕೆ ಗೀತೆ ಕೂಡ ಜನಪ್ರಿಯವಾಯಿತು.

'ಇಬ್ಬನಿ ಕರಗಿತು' ಮೂಲಕ ಕ್ಯಾಬರೆ ನರ್ತಕಿ ಅನುರಾಧ ಕನ್ನಡಕ್ಕೆ ಪರಿಚಯವಾದರು. ಆ ದಿನಗಳಲ್ಲಿ ಕ್ಯಾಬರೆ ನರ್ತಕಿಯಾಗಿ ಇವರಿಗೆ ಅತಿ ಹೆಚ್ಚು ಬೇಡಿಕೆ ಇತ್ತು. 'ಇಬ್ಬನಿ ಕರಗಿತು' ಚಿತ್ರದ ನಂತರ ಇವರಿಗೆ ಕನ್ನಡದಲ್ಲಿ ಹೆಚ್ಚು ಹೆಚ್ಚು ಅವಕಾಶಗಳು ಒದಗಬಂದವು. 'ಚಿನ್ನದಂಥ ಮಗ' ಚಿತ್ರದಲ್ಲಿ ಎರಡು ನೃತ್ಯ ಹಾಗೂ ಕಥೆಗೆ ಹೊಂದಿಕೊಳ್ಳುವಂಥ ಒಂದು ಮುಖ್ಯ ಪಾತ್ರವೂ ದೊರಕಿತು. ಜನಪ್ರಿಯತೆಯಲ್ಲಿ ಉತ್ತುಂಗ ತಲುಪಿದ್ದ ಸಿಲ್ಕ್ ಸ್ಮಿತಾಳ ಮಿತಿ ಮೀರಿದ ಸಂಭಾವನೆ ಹಾಗೂ ಆಕೆಯ ನಾಯಕಿಯಾಗುವ ಆಸೆ ಅನುರಾಧಾಗೆ ವರವಾಯಿತು. 'ಸಿಂಹ ಘರ್ಜನೆ' ಹಾಗೂ 'ಪವಿತ್ರ ಪ್ರೇಮ' ಚಿತ್ರಗಳಲ್ಲೂ ಪಾತ್ರಗಳನ್ನು ನಿರ್ವಹಿಸಿದ ಈಕೆ ಮೂಲತಃ ಕನ್ನಡದ ಹುಡುಗಿ. ಹಲವಾರು ಕನ್ನಡ ಚಿತ್ರಗಳಿಗೆ ನೃತ್ಯ ನಿರ್ದೇಶನ ಮಾಡಿರುವ ಕೃಷ್ಣಕುಮಾರರ ಪುತ್ರಿ.

ನಿರ್ದೇಶಕ ಸಿದ್ದಲಿಂಗಯ್ಯ ತಮ್ಮ ಪುತ್ರ ಮುರಳಿ (ಈಗ ಮುರಳಿ ತಮಿಳು ಚಿತ್ರರಂಗದಲ್ಲಿ ಉತ್ತಮ ಸ್ಥಾನದಲ್ಲಿದ್ದಾರೆ) ಯನ್ನು ಬಿ.ಎಲ್.ವೇಣುರವರ ಯುವ ಜೋಡಿಯ ಪ್ರೇಮಕಥೆಯನ್ನು ಆಧರಿಸಿದ 'ಪ್ರೇಮ ಪರ್ವ'ದ ಮೂಲಕ ಚಿತ್ರರಂಗಕ್ಕೆ ಪರಿಚಯಿಸಿದರು. ನಾಯಕಿಯಾಗಿ ಭವ್ಯ ಅಭಿನಯಿಸಿದ್ದ ಈ ಚಿತ್ರ ಶತದಿನ ಪ್ರದರ್ಶನ ಕಂಡಿತಲ್ಲದೆ ಎಲ್ಲೂ ಬೇಸರ ತರಿಸದ ಬಿಗಿ ನಿರೂಪಣೆಯಿಂದಾಗಿ ಸಿದ್ದಲಿಂಗಯ್ಯನವರ ವರ್ಚಸ್ಸನ್ನು ಕಾಯ್ದಿರಿಸುವಲ್ಲಿ ಯಶಸ್ವಿಯಾಯಿತು. ಮುರಳಿ ಭವಿಷ್ಯದಲ್ಲಿ ನೆಲೆ ನಿಲ್ಲುವ ಎಲ್ಲ ಸೂಚನೆಗಳನ್ನು ತಮ್ಮ ಅಭಿನಯದಲ್ಲಿ ತೋರಿದ್ದರು.

'ಬೆಂಕಿಯಲ್ಲಿ ಅರಳಿದ ಹೂವು' ಸುಹಾಸಿನಿಯನ್ನು ಕನ್ನಡ ತೆರೆಗೆ ಪರಿಚಯಿಸಿದ ಕೆ.ಬಾಲಚಂದರ್‌ರವರ ರೀಮೇಕ್ ಚಿತ್ರ. ಮಧ್ಯಮ ವರ್ಗದ ಅದರಲ್ಲೂ ಉದ್ಯೋಗಸ್ಥ ಮಹಿಳೆಯರಿರುವ ಕುಟುಂಬಗಳ ಬವಣೆಯ ಯಥಾವತ್ತು ಚಿತ್ರಣವಿದ್ದುದರಿಂದ ಈ ಚಿತ್ರದ ಪಾತ್ರಗಳಲ್ಲಿ ಪ್ರೇಕ್ಷಕರು ತಮ್ಮನ್ನು ತಾವೇ ಕಂಡುಕೊಳ್ಳುವಂತಾಗಿದ್ದು ವಿಶೇಷ. ಸಹಜವಾಗಿ, ಗಂಭೀರವಾಗಿ ಅಭಿನಯಿಸುವುದರ ಮೂಲಕ ಕನ್ನಡದವಳೇ ನಟಿ ಎನ್ನುವಷ್ಟರ ಮಟ್ಟಿಗೆ ಪರಿಚಿತವಾದ ತಮಿಳಿನ ಸುಹಾಸಿನಿಗೆ ಈ ಚಿತ್ರದಲ್ಲಿ ಕಂಠದಾನ ಮಾಡಿದವರು ಮತ್ತೊಬ್ಬ ತಮಿಳು ಜನಪ್ರಿಯ ನಟಿ ಸರಿತಾ. ಕನ್ನಡವನ್ನು ಚೆನ್ನಾಗಿ ಕಲಿತಿದ್ದ ಸರಿತಾ 'ಹಾಲು ಜೇನು' ಚಿತ್ರದಲ್ಲಿ ರಾಜಕುಮಾರ್-ಮಾಧವಿಯವರ ಮೇಲೆ ಚಿತ್ರಿಸಿರುವ ಹಾಡಿನಲ್ಲಿ ಮಧ್ಯೆ ಮಧ್ಯೆ ಬರುವ ಎರಡೆರಡು ಮಾತುಗಳನ್ನು ಕೂಡಾ ಆಡಿದ್ದರು.

ವೆಂಕಟರಾಮ್ ನಿರ್ಮಾಣ ಹಾಗೂ ನಿರ್ದೇಶನದಲ್ಲಿ 'ಹಸಿದ ಹೆಬ್ಬುಲಿ' ಚಿತ್ರ ಬಂತು. ಊರಿನಲ್ಲಿ ನಡೆಯುವ ಅನ್ಯಾಯದ ವಿರುದ್ಧ ಸಿಡಿದೇಳುವ ನಾಯಕನಾಗಿ ಅಂಬರೀಷ್ ಹಾಗೂ ದುಷ್ಟರ ಜೊತೆಯಲ್ಲಿದ್ದುಕೊಂಡೇ ಕೊನೆಗೆ ಆತನ ಕತ್ತನ್ನೇ ಕತ್ತರಿಸುವ ಪಾತ್ರದಲ್ಲಿ ಪ್ರಭಾಕರ್ ಅಭಿನಯ ಗಮನ ಸೆಳೆಯುತ್ತದೆ. ದಿನೇಶ್-ಶಶಿಕಲಾ ಹಾಸ್ಯ ರಂಜಿಸುತ್ತದೆ. ವೈ.ಶಿವಯ್ಯ ಸಾಹಸವನ್ನು ಉತ್ತಮವಾಗಿ ಸಂಯೋಜಿಸಿದ್ದರು.

ಲಕ್ಷ್ಮಣ್, ಎಂ.ಪದ್ಮಾವತಿ, ಈ.ಎ.ವಿಶ್ವನಾಥ್ ಅವರುಗಳಿಗಾಗಿ ಬಿ.ಮಲ್ಲೇಶ್ 'ಗಾಯತ್ರಿ ಮದುವೆ' ನಿರ್ದೇಶಿಸಿದರು. ಅನಂತ್‌ನಾಗ್ ಈ ಚಿತ್ರದಲ್ಲಿ ದ್ವಿಪಾತ್ರದಲ್ಲಿ ಅಭಿನಯಿಸಿದ್ದರು. ಸಾಧಾರಣ ಚಿತ್ರದಂತೆ ಇಲ್ಲೂ ಒಬ್ಬ ಒಳ್ಳೆಯವನಾದರೆ ಮತ್ತೊಬ್ಬ ಕೆಟ್ಟವ. ಎರಡೂ ಭಿನ್ನವಾದ ಪಾತ್ರದಲ್ಲಿ ಭಾವ ತುಂಬಿ ಅಭಿನಯಿಸಿದರು



(ಚಿತ್ರ ೬೮)'ಇಬ್ಬನಿ ಕರಗಿತು' ಚಿತ್ರದಲ್ಲಿ ಅನಂತ್‌ನಾಗ್ ಮತ್ತು ಲಕ್ಷ್ಮೀ



(ಚಿತ್ರ ೬೯)'ಪ್ರೇಮಪರ್ವ' ಚಿತ್ರದಲ್ಲಿ ಮುರಳಿ ಮತ್ತು ಭವ್ಯ



(ಚಿತ್ರ ೭೦) 'ಬೆಂಕಿಯಲ್ಲಿ ಅರಳಿದ ಹೂವು' ಚಿತ್ರದಲ್ಲಿ ಸುಹಾಸಿನಿ, ಕೆ.ಎಸ್.ಭಾರತಿ ಮತ್ತು ಲೀಲಾವತಿ

ಅನಂತ್‌ನಾಗ್. ಚಿತ್ರದಲ್ಲಿ ಹಾಸ್ಯವೇ ಪ್ರಧಾನ. ಪ್ರಭಾಕರ್ ಆಂಜನೇಯನ ಪರಮ ಭಕ್ತನಾಗಿ, ಬ್ರಹ್ಮಚಾರಿಯಾಗಿ ರಂಜಿಸುತ್ತಾರೆ. ರಾಜನ್-ನಾಗೇಂದ್ರ ಸಂಗೀತದಲ್ಲಿ ಒಂದೆರಡು ಉತ್ತಮ ಹಾಡುಗಳಿದ್ದವು.

ಚಾಮುಂಡೇಶ್ವರಿ ಫಿಲಂಸ್‌ನ ಗಿರಿಜಾ ಅವರು ನಿರ್ಮಿಸಿ ರವೀ ಅವರು ನಿರ್ದೇಶಿಸಿದ ಚಿತ್ರ 'ಕರುಣೆ ಇಲ್ಲದ ಕಾನೂನು'. ಕಥೆ, ಚಿತ್ರಕಥೆ ಕೆ.ಬಾಲಚಂದರ್ ಅವರದು. ಪ್ರಭಾಕರ್ ಯುದ್ಧದಲ್ಲಿ ಕಣ್ಣು ಕಳೆದುಕೊಂಡ ಒಬ್ಬ ಯೋಧನ ಪಾತ್ರದಲ್ಲಿ ಪ್ರೌಢವಾಗಿ ಅಭಿನಯಿಸಿದ್ದರು. ಕಣ್ಣು ಕಾಣದೆಯೂ ಸಲೀಸಾಗಿ ನಡೆಯಬಲ್ಲ, ವಸ್ತುಗಳು ಯಾವ್ಯಾವುದು ಎಲ್ಲೆಲ್ಲಿದೆ ಎಂಬ ಗಮನ, ಇವೆಲ್ಲವೂ ಕಥೆಗಾರನ ಜಾಣ್ಮೆ. ಕಥೆಯೇ ಚೆನ್ನಾಗಿತ್ತು. ಪ್ರಭಾಕರ್ ಮಕ್ಕಳ ಪಾತ್ರದಲ್ಲಿ ಅಶೋಕ್ ಮತ್ತು ಚಂದ್ರಶೇಖರ್ ಇದ್ದರು. ಅತ್ಯಾಚಾರಕ್ಕೆ ಬಲಿಯಾದ ನಾಯಕಿಯ ಅಣ್ಣನ ಪಾತ್ರದಲ್ಲಿ ಲೋಕೇಶ್ ಉತ್ತಮ ನಟನೆ ತೋರಿದ್ದರು. ಶಂಕರ್-ಗಣೇಶ್ ಸಂಗೀತದಲ್ಲಿ 'ನೀನು ತಂದಂಥ ರಾಗ...' ಮತ್ತು 'ಧೈರ್ಯವೇ ಹಿಮಾಲಯ...' ಹಾಡುಗಳು ನೆನಪಿನಲ್ಲುಳಿಯುತ್ತವೆ.

ಸಾಕಷ್ಟು ಯಶಸ್ವಿ ಚಿತ್ರಗಳನ್ನು ತೆರೆಗಿತ್ತ ನಿರ್ದೇಶಕ ಸಿಂಗೀತಂ ಶ್ರೀನಿವಾಸರಾವ್ 'ಎರಡು ನಕ್ಷತ್ರಗಳು' ಚಿತ್ರವನ್ನು ನಿರ್ದೇಶಿಸಿದರು. ರಾಜಕುಮಾರ್ ಮತ್ತು ಅಂಬಿಕಾ ನಾಯಕ-ನಾಯಕಿಯರಾದರೂ ನಿಜದಲ್ಲಿ ಮಾ।ಪುನೀತ್ ರಾಜಕುಮಾರ್ ಚಿತ್ರದ ನಾಯಕ. ಅದೂ ದ್ವಿಪಾತ್ರದಲ್ಲಿ ಅಭಿನಯ. ಒಬ್ಬ ಬಡವ, ಇನ್ನೊಬ್ಬ ರಾಜನ ಮಗ. ಎರಡನ್ನೂ ಚೆನ್ನಾಗಿಯೇ ನಿರ್ವಹಿಸಿದ್ದರು ಮಾ।ಪುನೀತ್. ಆದರೂ ಚಿತ್ರ ಹೇಳಿಕೊಳ್ಳುವಂತಹ ಯಶ ಕಾಣಲಿಲ್ಲ. ಜಿ.ಕೆ.ವೆಂಕಟೇಶ್ ಸಂಗೀತದಲ್ಲಿ 'ಗೆಳತಿ ಬಾರದು ಇಂಥಾ ಸಮಯ...' ಹಾಗೂ 'ಏಕೆ ಮಳ್ಳಿ ಹಂಗೆ ನನ್ನ ನೀನು...' ಹಾಡುಗಳು ಮನೋಲ್ಲಾಸಕಾರಿಯಾಗಿದ್ದವು. ಪುನೀತ್‌ಗೆ ರಾಜ್ಯದ ಶ್ರೇಷ್ಠ ಬಾಲನಟ ಪ್ರಶಸ್ತಿ ಲಭಿಸಿತು.

'ನೋಡಿ ಸ್ವಾಮಿ ನಾವಿರೋದು ಹೀಗೆ' ಮರಾಠಿ ನಾಟಕವನ್ನು ಆಧರಿಸಿದ ಹಾಸ್ಯ ಮಿಶ್ರಿತ ರಂಜನೀಯ ಚಿತ್ರ. ಸಂಸಾರದ ಖರ್ಚು ವೆಚ್ಚಗಳನ್ನು ತೂಗಿಸುವುದರಲ್ಲಿ ಆಗುವ ಏರು ಪೇರುಗಳು, ಕೆಲಸಕ್ಕೆ ಹೋಗುವ ಇಬ್ಬರಿಗೂ ಉಂಟಾಗುವ ಗಡಿಬಿಡಿಗಳು, ಇವೆಲ್ಲದರಿಂದ ಮಾನಸಿಕವಾಗಿ ಕೊರಗಿ, ಅದರ ತಾಪದಲ್ಲೇ ಬೇರೆಯಾದ ದಂಪತಿಗಳನ್ನು ಸೂತ್ರಧಾರ ನಾಯಕ ತನ್ನ ಸ್ವಂತ ಸಂಸಾರದ ನೋವಿನ ಕಥೆಯನ್ನು ಸ್ಫೋಟಿಸುವುದರ ಮೂಲಕ ಒಂದಾಗುವಂತೆ ಮಾಡುತ್ತಾನೆ. ಚುರುಕು ನಿರೂಪಣೆ, ಕಚಗುಳಿಯಿಡುವ ಸಂಭಾಷಣೆ, ವೇಗವಾಗಿ ಸಾಗುವ ದೃಶ್ಯಗಳಿಂದ ಚಿತ್ರದ ಮೊದಲರ್ಧ ರಸಮಯವಾಗಿ ಸಾಗಿದರೆ ದ್ವಿತೀಯಾರ್ಧ ಸಂಸಾರದ ನೋವನ್ನು ಹೊರಹಾಕುತ್ತಾ ಗಂಭೀರವಾಗಿ ಮುಗಿಯುತ್ತದೆ. ರಂಗಭೂಮಿಯ ಮೇಲೆ ೧೦೦ ಪ್ರದರ್ಶನಗಳನ್ನು ಕಂಡು ಜನಪ್ರಿಯವಾಗಿದ್ದ ನಾಟಕವನ್ನು ಚಲನಚಿತ್ರವಾಗಿಸುವುದರಲ್ಲಿ ಶಂಕರ್‌ನಾಗ್ ಯಶಸ್ವಿಯಾದರು. ಇದಕ್ಕೆ ಮುಂಚೆ ಇವರ ನಿರ್ದೇಶನದಲ್ಲಿ ವಿಫಲವಾಗಿದ್ದ 'ಹೊಸ ತೀರ್ಪು' ಚಿತ್ರಕ್ಕಿಂತ ಇದು ಭಿನ್ನವಾಗಿತ್ತು.

ಕನ್ನಡ ಚಿತ್ರರಂಗದ ಉತ್ತಮ ಕಲಾವಿದರಲ್ಲಿ ವಜ್ರಮುನಿ ಒಬ್ಬರು. ಇವರ ಮೊದಲ ಹೆಸರು ಸದಾನಂದ ಸಾಗರ್. ವಜ್ರಮುನಿ ಅವರ ರಂಗಭೂಮಿಯ ಗುರು ಕಣಗಾಲ್ ಪ್ರಭಾಕರಶಾಸ್ತ್ರಿಗಳು. ಅವರ 'ಪ್ರಚಂಡ ರಾವಣ' ನಾಟಕದಲ್ಲಿ ರಾವಣನಾಗಿ ವಜ್ರಮುನಿ ಜನಪ್ರಿಯರು. ಪುಟ್ಟಣ್ಣನವರ 'ಮಲ್ಲಮ್ಮನ ಪವಾಡ' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ಆನಂತರ ಅವರ ಬೆಳವಣಿಗೆಯ ಬಿರುಸೇ ಬೇರೆ. ಇವರು ಅಭಿನಯಿಸಿದ ೧೦೦ನೆಯ ಚಿತ್ರ 'ಹಸಿದ ಹೆಬ್ಬುಲಿ' ತೆಲುಗಿನ 'ಪಲ್ಲೆಟೂರಿ ಮೊನಗಾಡು' ಚಿತ್ರದ ರೀಮೇಕ್. ಹೊಲಸು ಬೈಯ್ಗುಳಗಳೇ ಯಥೇಚ್ಛವಾಗಿದ್ದ ಈ ಚಿತ್ರ ದಾವಣಗೆರೆಯಲ್ಲಿ ೫೦ ದಿನಗಳ ಪ್ರದರ್ಶನ ಕಂಡಿತು. ವಜ್ರಮುನಿ ೧೦೦ ಚಿತ್ರಗಳನ್ನು ಪೂರೈಸಿದ್ದು ಹಾಗೂ 'ಚೆತ್ತಲೆ ಸೇವೆ' ಚಿತ್ರದ ಗೌಡನ ಪಾತ್ರದ ಅಭಿನಯಕ್ಕೆ ರಾಜ್ಯ ಪ್ರಶಸ್ತಿ ಪಡೆದಿದ್ದರ ಸಂತಸವನ್ನು ಅವರ ಅಭಿಮಾನಿಗಳು, ಸ್ನೇಹಿತರು, ಹಿತೈಷಿಗಳು ಬೆಂಗಳೂರಿನಲ್ಲಿ ಹಾಗೂ ಧಾರವಾಡದಲ್ಲಿ ದೊಡ್ಡ ಸಮಾರಂಭಗಳನ್ನು ಸಂಘಟಿಸಿ ಆಚರಿಸಿದರು. ಮೊದಲ ಸಮಾರಂಭ ೧೯೮೩ರ ನವೆಂಬರ್ ೩೦ ರಂದು ಬೆಂಗಳೂರಿನ ಪುಟ್ಟಣ್ಣ ಚೆಟ್ಟಿ ಪುರಭವನದಲ್ಲಿ ನಡೆಯಿತು. ರಾಜಕುಮಾರ್ ಮುಖ್ಯ ಅತಿಥಿಯಾಗಿದ್ದ ವೇದಿಕೆಯಲ್ಲಿ ವಜ್ರಮುನಿಯವರಿಗೆ 'ನಟಭೈರವ' ಎಂಬ ಬಿರುದನ್ನಿತ್ತು ಅಭಿನಂದಿಸಲಾಯಿತು. ಇನ್ನೊಂದು ಸಮಾರಂಭ ಡಿಸೆಂಬರ್ ೩ ರಂದು ಜಯನಗರದ ಚಾಮರಾಜ ಕಲ್ಯಾಣ ಮಂಟಪದಲ್ಲಿ ನಡೆದು 'ನಟ ಕಂಠೀರವ' ಬಿರುದನ್ನು ನೀಡಲಾಯಿತು. ಡಾ।ಹಾ.ಮಾ.ನಾಯಕ್, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪ್ರೊ।ಜಿ.ವೆಂಕಟಸುಬ್ಬಯ್ಯ, ಕಣಗಾಲ್ ಪ್ರಭಾಕರಶಾಸ್ತ್ರಿ, ಪುಟ್ಟಣ್ಣ ಕಣಗಾಲ್, ಬಿ.ಸರೋಜಾದೇವಿ ಈ ಸಭೆಯ ಮುಖ್ಯ ಅತಿಥಿಗಳಾಗಿದ್ದರು. ವಜ್ರಮುನಿಯವರನ್ನು ಕುರಿತು ಕಣಗಾಲ್ ಪ್ರಭಾಕರಶಾಸ್ತ್ರಿ ರಚಿಸಿದ್ದ ಸನ್ಮಾನ ಗೀತೆಯನ್ನು ಮೈಸೂರು ಅನಂತಸ್ವಾಮಿ ಹಾಡಿದರು. ಧಾರವಾಡದಲ್ಲಿ 'ಚಿತ್ರಕಲಾ' ಮಾಸಪತ್ರಿಕೆಯ ಆಶ್ರಯದಲ್ಲಿ ನಡೆದ ಮೂರನೆಯ ಅಭಿನಂದನಾ ಕಾರ್ಯಕ್ರಮಕ್ಕೆ ಅಂಬರೀಷ್, ಅಂಬಿಕಾ, ಕೆ.ಸಿ.ಎನ್.ಚಂದ್ರಶೇಖರ್ ಅತಿಥಿಗಳಾಗಿದ್ದರು.

ಈ ದಿನಗಳಲ್ಲೇ, ಅಂದರೆ ೧೯೮೩ ರಲ್ಲಿ, ರಾಜಕುಮಾರ್ ಅಭಿಮಾನಿಗಳ ರಾಜ್ಯಮಟ್ಟದ 'ಅಖಿಲ ಕರ್ನಾಟಕ ಡಾ।ರಾಜಕುಮಾರ್ ಅಭಿಮಾನಿಗಳ ಸಂಘ' ಅಸ್ತಿತ್ವಕ್ಕೆ ಬಂದದ್ದು ಕನ್ನಡ ಚಿತ್ರರಂಗದ ಒಂದು ಪ್ರಮುಖ ಘಟನೆ. ಗೋಕಾಕ್ ಚಳವಳಿ ಯಶಸ್ವಿಯಾದ ಮೇಲೆ ಅಭಿಮಾನಿಗಳ ಸಂಘದ ಕೇಂದ್ರ ಸಮಿತಿಯನ್ನು ಹುಟ್ಟುಹಾಕುವ ಅನಿವಾರ್ಯತೆಯನ್ನು ರಾಜ್ ಅಭಿಮಾನಿಗಳು ಮನಗಂಡಿದ್ದರು. ೧೯೮೩ನೆಯ ಸೆಪ್ಟೆಂಬರ್ ೩ನೆಯ ತಾರೀಖು ರಾಜ್ಯದ ಎಲ್ಲಾ ಸಂಘದ ಪದಾಧಿಕಾರಿಗಳ ರಾಜ್ಯ ಮಟ್ಟದ ಸಮಾವೇಶ ನಡೆಯಿತು. ರಾಜಕೀಯಕ್ಕೆ ಇಳಿಯಬಾರದೆಂಬ ಸಂಘದ ನಿಯಮವನ್ನು ಉಲ್ಲಂಘಿಸಿದ್ದರಿಂದ ಅದುವರೆಗೆ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದ ಹಾಸನದ ರಾಮೇಗೌಡ ಅವರನ್ನು ಸಂಘದಿಂದ ಉಚ್ಚಾಟಿಸಲಾಯಿತು. ತಮಗೆ ತಾವೇ ಜನ್ಮ ತಳೆದು ಎಲ್ಲಾ ಕಡೆ ಹಂಚಿಹೋಗಿದ್ದ ಸಂಘಗಳಲ್ಲಿ ಏಕರೂಪತೆಯನ್ನು ಸಾಧಿಸಿ,



(ಚಿತ್ರ ೭೧) 'ಎರಡು ನಕ್ಷತ್ರಗಳು' ಚಿತ್ರದಲ್ಲಿ ಮಾ। ಲೋಹಿತ್ (ದ್ವಿಪಾತ್ರದಲ್ಲಿ)

ಕನ್ನಡ ನಾಡು ನುಡಿಗಾಗಿ ಹೋರಾಡುವ ಧ್ಯೇಯೋದ್ದೇಶಗಳೊಡನೆ ಯುವಕರೇ ಬಹುಸಂಖ್ಯೆಯಲ್ಲಿದ್ದ ಈ ಸಂಘ ಸಾ.ರಾ.ಗೋವಿಂದು ಅವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂತು. ಈ ಸಂಬಂಧವಾಗಿ ಬೆಂಗಳೂರಿನಲ್ಲಿ ನಡೆದ ಸರ್ವಸದಸ್ಯರ ಸಭೆಗೆ ರಾಜ್ಯದ ಎಲ್ಲಾ ತಾಲ್ಲೂಕು, ನಗರಗಳಿಗೆ ಬಂದಿದ್ದ ಪ್ರತಿನಿಧಿಗಳು ಹೊಸ ಕಾರ್ಯಕಾರಿ ಸಮಿತಿಯನ್ನು ಚುನಾಯಿಸಿಕೊಂಡದ್ದಲ್ಲದೆ ಸಂಘದ ಕಾರ್ಯಕ್ರಮವನ್ನು ರೂಪಿಸಿಕೊಂಡರು.

ಸಂಘ ರಾಜಕೀಯದಿಂದ ದೂರ ಉಳಿದು, ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವುದು ಹೇಗೆಂಬುದರ ಬಗ್ಗೆ ಎಲ್ಲರೂ ಕುಳಿತು ಸುದೀರ್ಘವಾದ ಚರ್ಚೆ ನಡೆಸಿದರು. ಕನ್ನಡಿಗರು ಹಾಗೂ ಕರ್ನಾಟಕದ ಹಿತರಕ್ಷಣೆ, ರಾಜ್ಯದ ಹಾಗೂ ಕೇಂದ್ರ ಸರ್ಕಾರದ ಎಲ್ಲಾ ಇಲಾಖೆಗಳು ಹಾಗೂ ಇತರ ಖಾಸಗಿ ವಾಣಿಜ್ಯ ಸಂಸ್ಥೆಗಳಲ್ಲಿನ ಉದ್ಯೋಗಗಳಲ್ಲಿ ಕನ್ನಡಿಗರಿಗೇ ಆದ್ಯತೆ ನೀಡಬೇಕೆಂದು ಒತ್ತಾಯಿಸುವುದು ಮುಂತಾದ ಹದಿನೈದು ಅಂಶಗಳ ಕಾರ್ಯಕ್ರಮಗಳ ಮೇಲೆ ಕೆಲಸ ಮಾಡುವ ಪ್ರಣಾಳಿಕೆಯನ್ನು ರೂಪಿಸಿಕೊಳ್ಳಲಾಯಿತು. ರಾಜ್ಯ ಮಟ್ಟದ ಈ ಸಂಸ್ಥೆಯ ಗೌರವಾಧ್ಯಕ್ಷರಾಗಿ ಚಿತ್ರೋದ್ಯಮಿ ಸಿ.ವಿ.ಎಲ್.ಶಾಸ್ತ್ರಿ, ಅಧ್ಯಕ್ಷರಾಗಿ ಸಾ.ರಾ.ಗೋವಿಂದು, ಮಹಾ ಪ್ರಧಾನ ಕಾರ್ಯದರ್ಶಿಯಾಗಿ ಟಿ.ವೆಂಕಟೇಶ್ ಹಾಗೂ ಮುಖ್ಯ ಪದಾಧಿಕಾರಿಗಳಾಗಿ ಶಿವಶಂಕರ್, ರಾಮು, ಗುರುಪ್ರಸಾದ್, ಕುಮಾರೇಶ್ ಬಾಬು, ಶಾಂತರಾಜ್, ಮೃತ್ಯುಂಜಯ ಆಯ್ಕೆಯಾದರು.

೧೯೮೩ರ ಸೆಪ್ಟೆಂಬರ್‌ನಲ್ಲಿ ಅಸ್ತಿತ್ವಕ್ಕೆ ಬಂದ ಈ ಸಂಘ ನಂತರದ ಎರಡು ತಿಂಗಳಿನಲ್ಲೇ ಬೆಂಗಳೂರಿನ ವಿಧಾನಸೌಧದ ಎದುರು ಒಂದು ಬೃಹತ್ ಸಮಾರಂಭವನ್ನು ಏರ್ಪಡಿಸಿತು. ನವೆಂಬರ್ ೧ ರಂದು ನಡೆದ ಈ ದಾಖಲಾರ್ಹ ಸಮಾರಂಭದೊಂದಿಗೆ ಹೆಸರಾಂತ ಸಮಾಜ ಸೇವಕ ಬಿ.ಎಲ್.ಎಸ್.ಮೂರ್ತಿಯವರ ನೇತೃತ್ವದಲ್ಲಿ ಏರ್ಪಡಿಸಲಾಗಿದ್ದ ರಕ್ತದಾನ ಶಿಬಿರವನ್ನು ವಿಶ್ವೇಶ್ವರಯ್ಯ ಬಹುಮಹಡಿ ಕಟ್ಟಡ ಸಭಾಂಗಣದಲ್ಲಿ ಆಗಿನ ಆರೋಗ್ಯ ಸಚಿವರಾಗಿದ್ದ ಪಿ.ಜಿ.ಆರ್.ಸಿಂಧ್ಯಾ ಉದ್ಘಾಟಿಸಿದರು. ಸ್ವತಃ ರಾಜಕುಮಾರ್ ಮೊದಲನೆಯವರಾಗಿ ರಕ್ತದಾನ ಮಾಡಿದರು. ನಂತರ ಅನಂತ್‌ನಾಗ್, ಶಿವರಾಂ, ಚಂದ್ರಶೇಖರ್, ಬಿ.ವಿ.ರಾಧ, ಜೈಜಗದೀಶ್, ಸುಂದರರಾಜ್, ವಜ್ರಮುನಿ, ಅಂಬರೀಷ್, ಅಶೋಕ್ ಮುಂತಾದ ಕಲಾವಿದರು ರಕ್ತ ನೀಡಿದರು. ಒಂದೇ ದಿನದಲ್ಲಿ ೧,೬೩೩ ಶೀಷೆ ರಕ್ತ ಸಂಗ್ರಹವಾಗಿ ದಾಖಲೆ ನಿರ್ಮಾಣವಾಯಿತು. ಹೆಚ್ಚುವರಿ ರಕ್ತವನ್ನು ಶೇಖರಿಸಿಟ್ಟುಕೊಳ್ಳಲಾಗದ ತಾಂತ್ರಿಕ ಕಾರಣಗಳಿಂದಾಗಿ ಸುಮಾರು ೫೦೦ ಅಭಿಮಾನಿಗಳನ್ನು ವಾಪಸ್ಸು ಕಳುಹಿಸಲಾಯಿತು. ನಂತರದ ಮುಖ್ಯ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದವರು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ. ವೇದಿಕೆಯ ಮೇಲೆ ತಗಡೂರು ರಾಮಚಂದ್ರರಾವ್, ಶಂ.ಬಾ.ಜೋಶಿ, ಎಸ್.ನಿಜಲಿಂಗಪ್ಪ, ಬಿ.ಪುಟ್ಟಸ್ವಾಮಯ್ಯ, ಬಿ.ದೇವೇಂದ್ರಪ್ಪ, ಮಳವಳ್ಳಿ ಸುಂದರಮ್ಮ, ಜಿ.ವಿ.ಅಯ್ಯರ್, ದೇವನಹಳ್ಳಿಯ ಶಿಲ್ಪಿ ಆಚಾರ್ಯ, ಎಚ್.ನರಸಿಂಹಯ್ಯ ಮೊದಲಾದ ೨೧ ಮಂದಿ ಗಣ್ಯ ಸಾಧಕರನ್ನು ಗೌರವಿಸಲಾಯಿತು. ಸನ್ಮಾನಿತರ ಪರವಾಗಿ ಎಸ್.ನಿಜಲಿಂಗಪ್ಪ ಹಾಗೂ ತರಳಬಾಳು ಜಗದ್ಗುರುಗಳು ಮಾತನಾಡಿದರು.



(ಚಿತ್ರ ೭೨) 'ನೋಡಿ ಸ್ವಾಮಿ ನಾವಿರೋದು ಹೀಗೆ' ಚಿತ್ರದಲ್ಲಿ ರಮೇಶ್‌ಭಟ್, ಅರುಂಧತಿನಾಗ್, ಮಾ। ಮಂಜುನಾಥ್, ಶಂಕರ್‌ನಾಗ್

ಹೀಗೆ ಬೃಹತ್ ರೀತಿಯಲ್ಲಿ ಚಟುವಟಿಕೆಗಳನ್ನು ಆರಂಭಿಸಿದ ಅಭಿಮಾನಿ ಸಂಘದ ಮೊದಲ ಮೂರು ವರ್ಷಗಳ ವಾರ್ಷಿಕ ಕಾರ್ಯಕ್ರಮಗಳಲ್ಲಿ ರಾಜಕುಮಾರ್‌ರವರು ಖುದ್ದಾಗಿ ಭಾಗವಹಿಸಿದರು. ನಂತರ ಅವರು ಮತ್ತೆಂದೂ ಸಂಘದ ವೇದಿಕೆಗಳಲ್ಲಿ ಕಾಣಿಸಿಕೊಳ್ಳಲಿಲ್ಲ. ಆದರೆ ಸಂಘ ತಾನು ರೂಪಿಸಿಕೊಂಡಿದ್ದ ೧೫ ಅಂಶಗಳ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಉತ್ಸಾಹದಿಂದ ಕಾರ್ಯಪ್ರವೃತ್ತವಾಯಿತು. ಸಾರ್ವಜನಿಕರ ನಡುವೆ ದೊಡ್ಡ ರೀತಿಯಲ್ಲಿ ಅಭಿಮಾನಿ ಸಂಘ ರೂಪುಗೊಂಡ ನಾಲ್ಕೈದು ತಿಂಗಳ ನಂತರ ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ ಅಸ್ತಿತ್ವಕ್ಕೆ ಬಂದಿತು. ಇದಕ್ಕೂ ಒಂದು ತಿಂಗಳ ಮುಂಚೆ ಅಖಿಲ ಕರ್ನಾಟಕ ಚಲನಚಿತ್ರ ಸಾಹಸ ನಿರ್ದೇಶಕರ ಮತ್ತು ಸಾಹಸ ಕಲಾವಿದರ ಸಂಘ ಜನ್ಮ ತಾಳಿತು. ಉದ್ಯಮದಲ್ಲಿನ ಇಂಥ ಚಟುವಟಿಕೆ ಸಂಘಟನೆಗಳ ಹಿಂದೆ ಗೋಕಾಕ್ ಚಳವಳಿಯ ತೀಕ್ಷ್ಣ ಪ್ರಭಾವವಿತ್ತು. ಇದು ಸಾರ್ವಜನಿಕರಲ್ಲಿ ಇನ್ನಷ್ಟು ಆಳವಾಗಿ ಬೇರುಬಿಟ್ಟಿತ್ತು. ಇದಕ್ಕೆ ನಿದರ್ಶನವೆಂಬಂತೆ ಕೆಲವೇ ದಿನಗಳಲ್ಲಿ 'ಬೆಂಗಳೂರು ಬಂದ್' ನಡೆಯಿತು. ''ಮೂರು ಮತ್ತು ನಾಲ್ಕನೇ ದರ್ಜೆ ನೌಕರರ ನೇಮಕಾತಿಗೆ ಕನ್ನಡ ಭಾಷೆಯ ಕಲಿಕೆ ಕಡ್ಡಾಯವಲ್ಲ'' ಎಂಬ ರಾಜ್ಯ ಸರ್ಕಾರದ ನೀತಿಯನ್ನು ವಿರೋಧಿಸಿ ಬೆಂಗಳೂರು ಬಂದ್, ಹಿಂಸಾಚಾರ ಮತ್ತು ಬೃಹತ್ ಪ್ರತಿಭಟನೆಗಳು ನಡೆದುವು. ವಿಶ್ವ ಕನ್ನಡ ಸಮ್ಮೇಳನದಲ್ಲಿ ಕನ್ನಡ ನಾಡಿನ ಗಡಿ ಸಮಸ್ಯೆಗಳನ್ನು ಚರ್ಚಿಸುವಾಗ ದೊಡ್ಡ ರಾದ್ಧಾಂತವಾಯಿತು. ಒಂದು ಕಡೆ ರಾಜಕುಮಾರ್‌ರನ್ನು ರಾಜಕೀಯಕ್ಕೆ ಕರೆತರಲು ಪ್ರಯತ್ನಿಸಿ ಸೋತವರು, ಅದರಲ್ಲೂ ವಿಶೇಷವಾಗಿ ಎ.ಕೆ.ಸುಬ್ಬಯ್ಯನವರು ರಾಜಕುಮಾರ್‌ರನ್ನು ಬಹಿರಂಗವಾಗಿ ಟೀಕಿಸಲು ಆರಂಭಿಸಿದರು. ಇಷ್ಟು ವಿದ್ಯಮಾನಗಳ ಒಟ್ಟು ಪರಿಣಾಮವೋ ಎಂಬಂತೆ ರಾಜಕುಮಾರ್ ಮೇಲೆ ಊಟಿಯಲ್ಲಿ ಕೊಲೆ ಪ್ರಯತ್ನ ಮತ್ತು ಹಲ್ಲೆ ನಡೆಯಿತು. ಈ ಘಟನೆಯ ನಂತರ ಉಂಟಾದ ಆತಂಕಮಯ ಪರಿಸ್ಥಿತಿಯಿಂದಾಗಿ ಎ.ಕೆ.ಸುಬ್ಬಯ್ಯನವರ ಮನೆಗೆ ಸುಮಾರು ಆರು ತಿಂಗಳಿಗೂ ಹೆಚ್ಚು ಕಾಲ ಪೊಲೀಸ್ ರಕ್ಷಣೆಯನ್ನು ಒದಗಿಸಲಾಗಿತ್ತು. ಇವೆಲ್ಲದರೊಂದಿಗೆ ಆರಂಭವಾದ ೧೯೮೪ರ ವರ್ಷ ಚಿತ್ರಗಳ ಸಂಖ್ಯೆಯಲ್ಲಿ, ಅವುಗಳ ಬಿಡುಗಡೆಯಲ್ಲಿ, ಸಾಲು ಸಾಲು ಸಮಾರಂಭಗಳಲ್ಲಿ ಎಲ್ಲ ದಾಖಲೆಗಳನ್ನು ಮುರಿದು ಹಾಕಿತು. ೧೯೮೪ರ ಜನವರಿ ಎರಡನೆಯ ವಾರದಿಂದ ಪ್ರಾರಂಭವಾದ ಚಿತ್ರಗಳ ಬಿಡುಗಡೆಯ ಭರಾಟೆ ಡಿಸೆಂಬರ್ ತಿಂಗಳ ಎರಡನೆಯ ವಾರ ಮಾತ್ರ ಬಿಟ್ಟು ಪ್ರತಿವಾರವೂ ಒಂದರಿಂದ ಮೂರರ ಸಂಖ್ಯೆಯಲ್ಲಿ ನಿರಂತರವಾಗಿ ಬಿಡುಗಡೆಯಾಗುತ್ತಾ ದಾಖಲೆ ಸೃಷ್ಟಿಸಿದೆ. ಈ ವರ್ಷ ತೆರೆಕಂಡ ಚಿತ್ರಗಳ ಸಂಖ್ಯೆ ೭೬. ಈ ಹಿಂದೆ ೧೯೮೩ ರಲ್ಲಿ ೬೦, ೧೯೮೨ ರಲ್ಲಿ ೫೨, ೧೯೮೧ರಲ್ಲಿ ೬೫ ಚಿತ್ರಗಳು ಬಿಡುಗಡೆಯಾಗಿದ್ದವು. ಆಶ್ಚರ್ಯವೆಂದರೆ ೧೯೮೪ರಲ್ಲಿ ರೀಮೇಕ್ ಚಿತ್ರಗಳ ಸಂಖ್ಯೆ ೧೭ಕ್ಕೆ ಇಳಿಮುಖವಾಯಿತು.

ನಿರ್ಮಾಣವಾಗುತ್ತಿದ್ದ ಒಟ್ಟು ಚಿತ್ರಗಳಲ್ಲಿ ಸಾಹಸ, ಸೇಡು, ಹೊಡೆದಾಟವೇ ಪ್ರಧಾನವಾಗಿ ಚಿತ್ರಗಳು ಮೇಲುಗೈ ಸಾಧಿಸುತ್ತಿದ್ದಂತೆ ಇವಕ್ಕೆ ಬೇಕಾದವರು, ಅಗತ್ಯವಾದ ಪರಿಕರಗಳನ್ನು ಹೊಂದಿಸುವವರು ಮತ್ತು ಸೃಷ್ಟಿಸುವವರು ತಯಾರಾದರು. ಸಂಗೀತದ ಧ್ವನಿಮುದ್ರಣಕ್ಕೆ ಬೇಕಾದ ಸ್ಥಳೀಯ ವಾದ್ಯಕಲಾವಿದರನ್ನು ತರಬೇತುಗೊಳಿಸಬೇಕೆಂಬ ಕೂಗು, ಒತ್ತಡ ಪ್ರಬಲವಾದಂತೆಯೇ ಸಾಹಸಕ್ಕೆ ಅಗತ್ಯವಾದದ್ದನ್ನೆಲ್ಲ ಕರ್ನಾಟಕದಲ್ಲೇ ಸೃಷ್ಟಿಸಿಕೊಳ್ಳಬೇಕೆಂಬ ಅಭಿಲಾಷೆಯೂ ಕೆಲವರಲ್ಲಿ ಕಾಣಿಸಿಕೊಂಡಿತು. ಇದಕ್ಕೆ ಬಹಳ ವರ್ಷಗಳಿಂದ ಅನುಭವಿಸುತ್ತಿದ್ದ ಅಪಮಾನವೂ ಕಾರಣವಾಗಿತ್ತು. ಮದರಾಸಿನಿಂದ ಬರುತ್ತಿದ್ದ ಸಾಹಸ ನಿರ್ದೇಶಕರು ಇಲ್ಲಿಯವರನ್ನು ಕಡೆಗಣಿಸಿದ್ದು, ತಮ್ಮಲ್ಲೇ ಕೇಂದ್ರೀಕರಿಸಿಕೊಂಡಿದ್ದ ಸಂಘದ ಮೂಲಕ ಬೆದರಿಕೆ ಒಡ್ಡಿದ್ದು ಹಾಗೂ ಗೌರವಧನದ ಹಂಚಿಕೆಯಲ್ಲಿ ತಾರತಮ್ಯ ಮಾಡುತ್ತಿದ್ದದ್ದನ್ನು ಹೊಸ ಪೀಳಿಗೆಯ ಯುವ ಸಾಹಸಿಗರು ಸಹಿಸಲಿಲ್ಲ. ಪರರಾಜ್ಯದವರ ತೆಕ್ಕೆಯಲ್ಲಿ ಅತೃಪ್ತಿ, ಅಸಮಾಧಾನಗಳಿಂದ ದುಡಿದು ದಣಿದಿದ್ದವರು ಕೊನೆಗೂ ಸೆಟೆದು ನಿಂತರು. ಕರ್ನಾಟಕದ ಹಣ ಕರ್ನಾಟಕದಲ್ಲಿಯೇ ಸದುಪಯೋಗವಾಗಬೇಕು ಎಂಬ ತತ್ವದ ತಳಹದಿಯ ಮೇಲೆ ಕೊನೆಗೂ ೧೯೮೪ರ ಜನವರಿಯಲ್ಲಿ ಅಖಿಲ ಕರ್ನಾಟಕ ಸಾಹಸ ನಿರ್ದೇಶಕರ ಮತ್ತು ಸಾಹಸ ಕಲಾವಿದರ ಸಂಘ ಅಸ್ತಿತ್ವಕ್ಕೆ ಬಂದಿತು. ಕನ್ನಡ ನಿರ್ಮಾಪಕರು ತಮ್ಮವರ ಬಗ್ಗೆಯೇ ತೋರಿಸುತ್ತಿದ್ದ ಅಸಡ್ಡೆಗೆ ಉತ್ತರವೂ ಆಗಿದ್ದ ಈ ಸಂಘವನ್ನು ರೂಪಿಸುವುದರಲ್ಲಿ ಸಾಹಸ ನಿರ್ದೇಶಕ ಹಾಸನ ರಘು ತುಂಬಾ ಶ್ರಮಿಸಿದರು. ಇವರೊಂದಿಗೆ ಸ್ಥಾಪಕ ಪ್ರಧಾನ ಕಾರ್ಯದರ್ಶಿಯಾಗಿದ್ದ ಬಿ.ಇ.ರುದ್ರೇಶ್ (೧೯೯೬ ರಲ್ಲಿ ಅನಾರೋಗ್ಯದಿಂದ ನಿಧನರಾದರು) ಹಾಗೂ ಜಿ.ಗೋವಿಂದ ಸಹಕಾರ್ಯದರ್ಶಿಯಾಗಿ ಹಾಗೂ ಅಖಿಲ

ಭಾರತ ಖ್ಯಾತಿಯ ಹಿರಿಯ ಸಾಹಸ ನಿರ್ದೇಶಕ ಎಂ.ಶ್ಯಾಮಸುಂದರಶೆಟ್ಟಿ ಅವರು ಅಧ್ಯಕ್ಷರಾಗಿ ನೇಮಕಗೊಂಡರು.

ಸಾಹಸ ಕಲಾವಿದರ ಸಂಘ ೧೯೮೪ರ ಜನವರಿಯಲ್ಲಿ ಅಸ್ತಿತ್ವಕ್ಕೆ ಬಂದರೆ ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ ಫೆಬ್ರವರಿಯಲ್ಲಿ ಜನ್ಮ ತಾಳಿತು. ಕನ್ನಡ ಚಲನಚಿತ್ರ ಇತಿಹಾಸದ ದೃಷ್ಟಿಯಿಂದ ಇವೆರಡೂ ಸಂಘಗಳ ಹುಟ್ಟು ಅತ್ಯಂತ ಮುಖ್ಯವಾದದ್ದು. ಮುಂಬಯಿ ಹಾಗೂ ಇನ್ನಿತರ ಕೆಲವು ರಾಜ್ಯಗಳಲ್ಲಿ ನಿರ್ದೇಶಕರ ಸಂಘಗಳು ಬಹಳ ಹಿಂದೆಯೇ ಅಸ್ತಿತ್ವಕ್ಕೆ ಬಂದಿದ್ದವು. ಮದರಾಸಿನಲ್ಲಿ ದಕ್ಷಿಣ ಭಾರತ ಚಲನಚಿತ್ರ ನಿರ್ದೇಶಕರ ಸಂಘ ಕ್ರಿಯಾಶೀಲವಾಗಿತ್ತು. ಇದರಲ್ಲಿ ಕರ್ನಾಟಕದ ಅನೇಕ ನಿರ್ದೇಶಕರು ಮದರಾಸಿನ ಸಂಘದ ಸದಸ್ಯರಾಗಿದ್ದರು. ಯಾವುದೋ ಒಂದು ವಿಶಿಷ್ಟ ಸಂದರ್ಭದಲ್ಲಿ ಹಿಂದಿ ಚಿತ್ರರಂಗದ ಹಿರಿಯ ನಿರ್ದೇಶಕ ಹೃಷಿಕೇಶ್ ಮುಖರ್ಜಿ ಕರ್ನಾಟಕದ್ದೇ ಆದ ಒಂದು ಸಂಘವನ್ನು ಸ್ಥಾಪಿಸುವಂತೆ ನಿರ್ದೇಶಕ ರಾಜೇಂದ್ರಸಿಂಗ್ ಬಾಬು ಅವರಿಗೆ ಸೂಚಿಸಿದ್ದರಂತೆ. ಈ ಬಗ್ಗೆ ಆಗಾಗ್ಗೆ ಯೋಚಿಸುತ್ತಿದ್ದ ಬಾಬು ಕೆಲವು ನಿರ್ದೇಶಕರೊಡನೆ ಸಮಾಲೋಚಿಸಿ ಒಂದು ಪೂರ್ವಭಾವಿ ಸಭೆ ಕರೆದರು. ಆಗ ಅದರಲ್ಲಿ ೩೦ಕ್ಕೂ ಹೆಚ್ಚು ಮಂದಿ ನಿರ್ದೇಶಕರು ಭಾಗವಹಿಸಿದರು. ಅಂದಿನ ದಿನವೇ ಸಂಘದ ರೂಪುರೇಷೆಗಳನ್ನು ಸಿದ್ಧಪಡಿಸಲು ಒಂದು ಸಮಿತಿಯನ್ನು ಕೂಡ ರಚಿಸಲಾಯಿತು. ಇದಾದ ನಂತರ ೧೯೮೪ರ ಫೆಬ್ರವರಿ ೧೨ ರಂದು ಬೆಂಗಳೂರಿನ ವುಡ್‌ಲ್ಯಾಂಡ್ಸ್ ಹೋಟೆಲಿನಲ್ಲಿ ಎಲ್ಲ ನಿರ್ದೇಶಕರು ಸೇರಿದ್ದ ಮಹಾಸಭೆಯಲ್ಲಿ ಪುಟ್ಟಣ್ಣ ಕಣಗಾಲ್‌ರವರನ್ನು ಮೊದಲ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆರಿಸುವುದರೊಂದಿಗೆ ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಿತು. ಉಳಿದಂತೆ ಉಪಾಧ್ಯಕ್ಷರಾಗಿ ಎನ್.ಲಕ್ಷ್ಮೀನಾರಾಯಣ್ ಮತ್ತು ಸಿದ್ಧಲಿಂಗಯ್ಯ, ಪ್ರಧಾನ ಕಾರ್ಯದರ್ಶಿಗಳಾಗಿ ಕೆ.ಎಸ್.ಎಲ್. ಸ್ವಾಮಿ (ರವೀ) ಮತ್ತು ಎಸ್.ವಿ.ರಾಜೇಂದ್ರಸಿಂಗ್ ಬಾಬು, ಖಜಾಂಚಿಯಾಗಿ ಜಾನಕಿರಾಂ ಅವಿರೋಧವಾಗಿ ಆಯ್ಕೆಯಾದರು. ಬಿ.ಎ.ಅರಸುಕುಮಾರ್, ಟಿ.ಎಸ್.ನಾಗಾಭರಣ, ಕೆ.ವಿ.ಜಯರಾಂ, ಪ್ರೇಮಾ ಕಾರಂತ್, ಗೀತಪ್ರಿಯ, ಭಗವಾನ್, ಗಿರೀಶ್ ಕಾಸರವಳ್ಳಿ, ಜೋಸೈಮನ್, ಶಿವರಾಂ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಚುನಾಯಿತರಾದರು. ದೊಡ್ಡ ರೀತಿಯಲ್ಲಿ ಜನ್ಮತಳೆದ ಈ ಸಂಘ ತನ್ನ ಮೊದಲ ಸಮಾರಂಭವನ್ನು ಅಚ್ಚುಕಟ್ಟಾಗಿ, ವೈವಿಧ್ಯಮಯವಾಗಿ ೧೯೮೪ರ ಏಪ್ರಿಲ್ ೧೪ ರಂದು ಶನಿವಾರ ಸಂಜೆ ನಡೆಸಿತು. ಬೆಂಗಳೂರಿನ ಚೌಡಯ್ಯ ಸ್ಮಾರಕ ಭವನದಲ್ಲಿ ನಡೆದ ಸಮಾರಂಭವನ್ನು ಭಾರತದ ಹಿರಿಯ ಚಿತ್ರೋದ್ಯಮಿ, ನಟ, ನಿರ್ಮಾಪಕ ಎಲ್.ವಿ.ಪ್ರಸಾದ್ ಉದ್ಘಾಟಿಸಿದರು. ಅಧಿಕ ಸಂಖ್ಯೆಯಲ್ಲಿ ಕನ್ನಡ ಚಿತ್ರೋದ್ಯಮದವರು ಅಂದು ಅಲ್ಲಿ ನೆರೆದಿದ್ದರು. ಉದ್ಘಾಟನಾ ಸಮಾರಂಭದಲ್ಲಿ ಸಂಘ ಸ್ಥಾಪನೆಯ ಉದ್ದೇಶವನ್ನು ಹೀಗೆ ಬಣ್ಣಿಸಲಾಯಿತು. ''ರಾಷ್ಟ್ರ ಮಟ್ಟದಲ್ಲಿ ಕನ್ನಡ ಚಿತ್ರಗಳಿಗೆ, ನಿರ್ದೇಶಕರುಗಳಿಗೆ ಸೂಕ್ತ ಸ್ಥಾನಮಾನ ಹಾಗೂ ಪ್ರಾತಿನಿಧ್ಯ ದೊರಕಿಸುವ ಸರ್ವ ಪ್ರಯತ್ನ, ವೃತ್ತಿಯಲ್ಲಿ ಒಗ್ಗಟ್ಟು, ಶಿಸ್ತು ತರುವುದರ ಜೊತೆಗೆ ಚಲನಚಿತ್ರ ಕಲೆ, ತಾಂತ್ರಿಕ ಪ್ರಗತಿ, ಚಿತ್ರಕಥಾ ರಚನೆ ಮುಂತಾದ ನಿರ್ದೇಶನದ ಮೂಲಭೂತ ಅಂಶಗಳ ಬಗ್ಗೆ ತರಬೇತಿ ಕೊಡುವುದು'' - ಈ ಕೆಲವು ಅಂಶಗಳೊಂದಿಗೆ ದೂರದೃಷ್ಟಿಯ ಕಾರ್ಯಸೂಚಿಯನ್ನು ಹೊಂದಿದ್ದ ಸಂಘ ತನ್ನ ಹುಟ್ಟಿನೊಂದಿಗೆ ಉಜ್ವಲ ಭವಿಷ್ಯವನ್ನು ಹಾಗೂ ಪ್ರಮುಖ ದುರಂತವೊಂದನ್ನೂ ಗರ್ಭೀಕರಿಸಿಕೊಂಡಿತ್ತು.

ರಾಜ್ಯ ಸರ್ಕಾರದ ಮೂರು ಮತ್ತು ನಾಲ್ಕನೆಯ ದರ್ಜೆ ನೌಕರರ ನೇಮಕಾತಿಗೆ ಕನ್ನಡ ಭಾಷೆಯ ಕಲಿಕೆ ಕಡ್ಡಾಯವಲ್ಲ ಎಂಬ ರಾಮಕೃಷ್ಣ ಹೆಗಡೆ ನೇತೃತ್ವದ ರಾಜ್ಯ ಸರ್ಕಾರದ ನೀತಿಯನ್ನು ಖಂಡಿಸಿ ವಿಧಾನಸೌಧದ ಎದುರು ಶಾಂತಿಯುತ ಪ್ರತಿಭಟನೆ ಆರಂಭವಾದದ್ದು ೧೯೮೪ರ ಜನವರಿ ೫ ರಂದು. ರಾಜಕುಮಾರ್ ಅಭಿಮಾನಿಗಳ ಸಂಘ ಸಂಘಟಿಸಿದ್ದ ಈ ಧರಣಿಯಲ್ಲಿ ಪ್ರತಿದಿನವೂ ಹಲವಾರು ಕಾರ್ಖಾನೆಗಳ ಕಾರ್ಮಿಕರು, ವಕೀಲರು, ಚಲನಚಿತ್ರ ವಾಣಿಜ್ಯ ಮಂಡಳಿಯ ಪದಾಧಿಕಾರಿಗಳು ಸೇರಿದಂತೆ ವಿವಿಧ ಸಂಘಟನೆಗಳ ೫೦ ಮಂದಿ ಭಾಗವಹಿಸುತ್ತಿದ್ದರು. ಸರ್ಕಾರದ ಪ್ರತಿಕ್ರಿಯೆ ಅತ್ಯಂತ ಉದಾಸೀನವಾಗಿತ್ತಾದ್ದರಿಂದ 'ಬೆಂಗಳೂರು ಬಂದ್'ಗೆ ಕರೆ ನೀಡಲಾಯಿತು. ಈ ಸಂದರ್ಭದಲ್ಲಿ ಹಿಂಸಾಕೃತ್ಯಗಳು ನಡೆದವು. ಸಾರ್ವಜನಿಕರ ಸಾಕಷ್ಟು ಆಸ್ತಿಪಾಸ್ತಿ ನಷ್ಟವಾಯಿತು. ತಮಿಳುನಾಡಿನ ಮುಖ್ಯಮಂತ್ರಿ ಎಂ.ಜಿ.ಆರ್. ರಾಜಕುಮಾರ್‌ರಿಗೆ ತಂತಿಸಂದೇಶವನ್ನು ಕಳುಹಿಸಿ ''ತಮಿಳರ ಮೇಲೆ ಹಲ್ಲೆಯಾಗದಂತೆ ನೋಡಿಕೊಳ್ಳಬೇಕೆಂದು'' ವಿನಂತಿಸಿಕೊಂಡರು. ಹಾಗೆಯೇ ತಮ್ಮನ್ನು ಭೇಟಿಯಾಗುವಂತೆ ಕೋರಿಕೊಂಡರು. ೧೯೮೪ರ ಜನವರಿ ೨೫ ರಂದು ಬುಧವಾರ ಮದರಾಸಿನಲ್ಲಿ ಈ ಭೇಟಿ ನಡೆಯಿತು. ಆದರೆ ಈ ಭೇಟಿಯಲ್ಲಿ ನಡೆದ ಮಾತುಕತೆಗಳೇನೆಂಬುದು ಬಹಿರಂಗವಾಗಲಿಲ್ಲ. ಎಂ.ಜಿ.ಆರ್. ಕೂಡ ಮದರಾಸಿನಲ್ಲಿ ಮಾಧ್ಯಮಗಳಿಗೆ ಏನೂ ಹೇಳಲಿಲ್ಲ. ಆದರೆ ೧೯೮೪ರ ಜನವರಿ ೧ ರಂದು ರಾಜಕುಮಾರ್ ತಮ್ಮ ವೃತ್ತಿ ಜೀವನದಲ್ಲೇ ಮೊದಲ ಬಾರಿಗೆ ಪತ್ರಿಕಾಗೋಷ್ಠಿಯನ್ನು ಕರೆದರು. ಅಲ್ಲಿ ಅವರು ತಮ್ಮ ಅಭಿಮಾನಿಗಳನ್ನು ಮೊಟ್ಟ ಮೊದಲ ಬಾರಿಗೆ ಹೀಗೆ ಸಮರ್ಥಿಸಿಕೊಂಡರು. ''ಬಂದ್ ಸಮಯದಲ್ಲಿ ನಡೆದ ಹಿಂಸಾಕೃತ್ಯಗಳು ಎಲ್ಲರ ಖಂಡನೆಗೆ ಅರ್ಹವಾಗಿವೆ. ಆ ಗಲಭೆಗಳಿಗೂ, 'ಕನ್ನಡನಾಡು' ಪಕ್ಷದ ಕಚೇರಿ ಮೇಲೆ ನಡೆದ ಹಲ್ಲೆಗೂ ನನ್ನ ಅಭಿಮಾನಿಗಳಿಗೂ ಯಾವುದೇ ಸಂಬಂಧವಿಲ್ಲ''. ಬಂದ್ ನಡೆದ ದಿನ ಉಡುಪಿಯ ಪರ್ಯಾಯ ಮಹೋತ್ಸವದಲ್ಲಿ ಭಾಗವಹಿಸಿದ್ದ ಅವರು ಅಲ್ಲಿಂದ ಬಂದ ಮರುದಿನವೇ ಈ ಪತ್ರಿಕಾಗೋಷ್ಠಿಯನ್ನು ಕರೆದಿದ್ದರು.

ಕನ್ನಡಿಗರಿಗೆ ಹಾಗೂ ಕನ್ನಡ ಭಾಷೆಗೆ ಸಂಬಂಧಿಸಿದಂತೆ ಅತ್ಯಂತ ಮಹತ್ವದ್ದಾಗಿದ್ದ ಈ ಚಳವಳಿ ನಡೆದ ಒಂದು ತಿಂಗಳ ನಂತರ ಅಂದರೆ ೧೯೮೪ರ ಮಾರ್ಚ್ ೩ ರಂದು ಶನಿವಾರ ಕನ್ನಡ ಚಿತ್ರರಂಗ ಹಾಗೂ ಕರ್ನಾಟಕದ ಇತಿಹಾಸದಲ್ಲಿಯೇ ಘೋರವಾದ ದುರ್ಘಟನೆಯೊಂದು ನಡೆಯಿತು. ಅಂದು ತಮಿಳುನಾಡಿನ ಸೆರಗಿನಲ್ಲಿರುವ ಊಟಿಯಲ್ಲಿ 'ಯಾರಿವನು' ಚಿತ್ರದ ಚಿತ್ರೀಕರಣ ನಡೆಯುತ್ತಿತ್ತು. ಆಗ ಅಲ್ಲಿ ಹಾಜರಾದ ೨೦೦-೩೦೦ ಜನರ ಗುಂಪು ಇದ್ದಕ್ಕಿದ್ದಂತೆ ರಾಜಕುಮಾರ್‌ರ ಮೇಲೆ ಹಠಾತ್ತನೆ ದಾಳಿ ಮಾಡಿತು. ಒಂದಿಬ್ಬರು ಅವರ ಕುತ್ತಿಗೆ ಪಟ್ಟಿಯನ್ನು ಹಿಡಿದೆಳೆದರು. ಅವರ ರಕ್ಷಣೆಗೆ ಧಾವಿಸಿದ ಚಿತ್ರತಂಡದವರನ್ನು ಹಿಗ್ಗಾಮುಗ್ಗ ಥಳಿಸಲಾಯಿತು. ನೂಕಾಟದಲ್ಲಿ ಕೆಳಗೆ ಬಿದ್ದ ರಾಜಕುಮಾರ್ ತಲೆಯ ಮೇಲೆ ಹಾಕಲು ಒಬ್ಬ ದೊಡ್ಡ ಕಲ್ಲನ್ನು ಮೇಲೆತ್ತಿದಾಗ ತಂಡದ ಸದಸ್ಯರೊಬ್ಬರು ಅವನತ್ತ ನುಗ್ಗಿ ದೂರ ತಳ್ಳಿದರು. ಉಳಿದವರೆಲ್ಲ ರಾಜಕುಮಾರ್‌ರನ್ನು ರಕ್ಷಿಸಲು ಅವರನ್ನು ಸುತ್ತುಗಟ್ಟಿ ನಿಂತರು. ಆದರೂ ಚೈನು, ದೊಣ್ಣೆಗಳಿಂದ ಅವರನ್ನು ಹೊಡೆಯುವ ಪ್ರಯತ್ನ ಸಾಗಿಯೇ ಇತ್ತು. ಅಲ್ಲಿಗೆ ಬಂದಿದ್ದ ದಾಳಿಕೋರರ ಮುಖ್ಯ ಗುರಿ ರಾಜಕುಮಾರ್ ಆಗಿದ್ದರು. ಲೈಟು, ರಿಫ್ಲೆಕ್ಟರುಗಳು ಹಾಗು ಇನ್ನಿತರ ಚಿತ್ರೀಕರಣದ ಸಾಮಗ್ರಿಯನ್ನು ಎತ್ತಿ ಹತ್ತಿರದಲ್ಲೇ ಇದ್ದ ಕೆರೆಗೆ ಎಸೆಯಲಾಯಿತು. ನಟಿ ರೂಪಾದೇವಿಯನ್ನು ಎಳೆದಾಡಿ ಬಟ್ಟೆಗಳನ್ನು ಹರಿದಿದ್ದಲ್ಲದೆ ಅತ್ಯಾಚಾರಕ್ಕೂ ಕೆಲವರು ಪ್ರಯತ್ನಿಸಿದರು. ಈ ಸಂದರ್ಭದಲ್ಲಿ ನೆರವಿಗೆ ಬರದೆ ಓಡಿ ಹೋದರೆಂದು ಎಸ್.ಕೆ.ಭಗವಾನ್ ಅವರ ಬಗ್ಗೆ ಆಕ್ಷೇಪವಿತ್ತು. ''...ಅತ್ಯಧಿಕ ಮೊತ್ತದ ಕ್ಯಾಮರಾ ಅವುಚಿಕೊಂಡು ಗಿಡದ ಮರೆಗೆ ಹೋದೆ, ತಪ್ಪಿಸಿಕೊಂಡು ಹೋಗಲಿಲ್ಲ'' ಎಂದು ವಿವರಣೆ ಕೊಡುತ್ತಾರೆ ಭಗವಾನ್.

''ಮೈ ಕೈಗೆ ಆದ ಪೆಟ್ಟು, ತಲೆಗೆ ತೂತಾಗಿ ರಕ್ತ ಹರಿದಿತ್ತು. ಅವರು ಬಂದವರೇ ಬಟ್ಟೆಗಳನ್ನು ಬಿಚ್ಚಿ ಇದು ಕಂಟಿನ್ಯೂಯಿಟಿಗೆ ಬೇಕಾಗುತ್ತದೆ ತೆಗೆದಿಡು ಅಂತ ಮೇಕಪ್‌ಮ್ಯಾನ್‌ಗೆ ಕೊಟ್ಟರು. ಅದು ರಕ್ತಸಿಕ್ತ ಶರ್ಟ್. ಆ ನೋವಿನಲ್ಲೂ ಚಿತ್ರಕ್ಕೆ ತೊಂದರೆ ಆಗಬಾರದೆಂಬ ಎಚ್ಚರ ಅವರಿಗೆ. ಮಾತಾಡದೆ ಹೊರಡು ಅಂದರು. ಕಾರಿನಲ್ಲಿ ಬೆಂಗಳೂರಿಗೆ ಹೊರಟೆವು. ಕೊಂಚ ಫಸ್ಟ್‌ಏಯ್ಡ್ ಮಾಡಿದ್ದಷ್ಟೆ, ಅವರ ಒಂದು ಕಡೆ ನಾನು, ಇನ್ನೊಂದು ಕಡೆ ರೂಪಾದೇವಿ ಇದ್ದೆವು. ನನ್ನ ಭುಜದ ಮೇಲೆ ತಲೆ ಇಟ್ಟಿದ್ದರು. ಯಾರೂ ಮಾತಾಡಲಿಲ್ಲ. ಬೆಂಗಳೂರು ತಲುಪುವ ಹೊತ್ತಿಗೆ ಅವರ ತಲೆಯಿಂದ ಇಳಿದ ರಕ್ತ ನನ್ನ ಸೆರಗು, ರವಿಕೆಯ ತೋಳನ್ನು ತೋಯಿಸಿ ಸೀಟಿನವರೆಗೆ ಹರಿದಿತ್ತು. ಅವರ ಆ ಧೈರ್ಯ, ಸಹನೆ ನೆನೆದರೆ ಇಂದಿಗೂ ಆಶ್ಚರ್ಯವಾಗುತ್ತದೆ..''. ಎನ್ನುತ್ತಾರೆ ಪಾರ್ವತಮ್ಮ ರಾಜಕುಮಾರ್.

ಅನಿರೀಕ್ಷಿತವಾಗಿದ್ದ ಈ ದುರ್ಘಟನೆ ಕನ್ನಡಿಗರನ್ನು ಬೆಚ್ಚಿ ಬೀಳಿಸಿತು. ಮರುದಿನವೇ ಕರ್ನಾಟಕದಾದ್ಯಂತ ತೀವ್ರವಾದ ಪ್ರತಿಭಟನೆ ಕಾಣಿಸಿಕೊಂಡಿತು. ಬೆಂಗಳೂರಿನಲ್ಲಿ ಮೂರು ದಿನಗಳ ಕಾಲ ನಿರಂತರವಾಗಿ ಗಲಭೆ ನಡೆದು ಸಾರ್ವಜನಿಕ ಹಾಗೂ ಖಾಸಗಿ ಆಸ್ತಿ-ಪಾಸ್ತಿ ನಷ್ಟವಾಯಿತು. ತಮಿಳುನಾಡಿನ ನೋಂದಣಿಯ ಸಂಖ್ಯೆಗಳನ್ನೊಳಗೊಂಡ ಲಾರಿ, ಕಾರುಗಳ ಮೇಲೆ ದಾಳಿ ನಡೆಯಿತು. ಇದೆಲ್ಲವನ್ನೂ ತಮಿಳು ಪತ್ರಿಕೆಗಳು ಉತ್ಪ್ರೇಕ್ಷೆ ಮಾಡಿ ವರ್ಣರಂಜಿತವಾಗಿ ಬರೆದವು. ತಮಿಳು ಭಾಷಿಕರು ಕರ್ನಾಟಕದಲ್ಲಿ ಜೀವಿಸುವುದೇ ಕಷ್ಟವಾಗಿದೆ ಎಂಬ ಅರ್ಥ ಬರುವ ಕಟ್ಟುಕತೆಗಳನ್ನು ನಿರಂತರವಾಗಿ ಪ್ರಚಾರಪಡಿಸಿದ್ದರಿಂದ ಕನ್ನಡಿಗರ ಮೇಲೆ ತಮಿಳರ ದ್ವೇಷಾಸೂಯೆಗಳು ಹೆಚ್ಚತೊಡಗಿದವು. ಇದೆಲ್ಲದರ ಪರಿಣಾಮ ಮದರಾಸಿನ ಸ್ಟುಡಿಯೋಗಳಲ್ಲಿ ನಡೆಯುತ್ತಿದ್ದ ಕನ್ನಡ ಚಿತ್ರಗಳ ಚಿತ್ರೀಕರಣದ ಮೇಲೆ ಆಯಿತು. ನಿರ್ಮಾಣ ತಂಡಗಳು ಕೂಡಲೇ ಕರ್ನಾಟಕಕ್ಕೆ ವಾಪಸ್ಸಾಗಿ ಇಲ್ಲಿ ತಮ್ಮ ಚಟುವಟಿಕೆಗಳನ್ನು ಆರಂಭಿಸಿದವು. ಆದರೆ ಈ ಚಿತ್ರಗಳಲ್ಲಿ ದುಡಿಯುತ್ತಿದ್ದ ಮದರಾಸಿನ ತಂತ್ರಜ್ಞರು ಇಲ್ಲಿಗೆ ಬಂದು ಕೆಲಸ ಮಾಡಲು ನಿರಾಕರಿಸಿದರು. ಇಷ್ಟೇ ಅಲ್ಲದೆ ಅಲ್ಲಿಯೇ ಕೆಲಸ ಮಾಡಲು ನಿಂತ ಕೆಲವು

ನಿರ್ಮಾಪಕರಿಗೆ ಅಲ್ಲಿನ ಸ್ಟುಡಿಯೊ ಮಾಲೀಕರು ಹಾಗೂ ತಂತ್ರಜ್ಞರಿಂದ ಸಹಕಾರ ದೊರೆಯಲಿಲ್ಲ. ತಮ್ಮ ಮೇಲಿನ ಹಲ್ಲೆಯ ಭಯ ಅಥವಾ ಭಾಷಾದ್ವೇಷ ಇವುಗಳಲ್ಲಿ ಯಾವುದಕ್ಕಾಗಿ ಅವರು ಹೀಗೆ ವರ್ತಿಸಿದರು ಎಂಬುದು ಸ್ಪಷ್ಟವಾಗಲಿಲ್ಲ. ಒಟ್ಟಾರೆ ಈ ಎಲ್ಲ ಘಟನೆಗಳ ಪರೋಕ್ಷ ಪರಿಣಾಮದಿಂದ ಮದರಾಸಿನಲ್ಲಿ ನಡೆಯುತ್ತಿದ್ದ ಕನ್ನಡ ಚಿತ್ರಗಳ ಕೆಲಸ ಕರ್ನಾಟಕಕ್ಕೆ ವರ್ಗಾವಣೆಯಾದ ಬೆಳವಣಿಗೆ ಸಂಭವಿಸಿತು.

ರಾಜಕುಮಾರ್ ಮೇಲೆ ಹೇಯವಾದ ರೀತಿಯಲ್ಲಿ ನಡೆದ ಹಲ್ಲೆಯನ್ನು ಕನ್ನಡ ಚಿತ್ರೋದ್ಯಮ ವಿಶಿಷ್ಟ ರೀತಿಯಲ್ಲಿ ಪ್ರತಿಭಟಿಸಿತು. ರೇಸ್‌ಕೋರ್ಸ್ ಬಳಿಯ ಹೈಲ್ಯಾಂಡ್ಸ್ ಹೋಟೆಲಿನಿಂದ ವಿಧಾನಸೌಧದವರೆಗೆ ಮೌನ ಮೆರವಣಿಗೆ ನಡೆಯಿತು. ಇದರಲ್ಲಿ ಐದು ಸಾವಿರಕ್ಕೂ ಹೆಚ್ಚು ಮಂದಿ ಭಾಗವಹಿಸಿದ್ದರು. ಮೆರವಣಿಗೆಯ ಮುಂಚೂಣಿಯಲ್ಲಿ ವಿಷ್ಣುವರ್ಧನ್, ಅಂಬರೀಷ್, ಅನಂತ್‌ನಾಗ್, ಶ್ರೀನಾಥ್, ಲೋಕೇಶ್, ಅಶೋಕ್, ಎಂ.ಪಿ.ಶಂಕರ್, ಶಿವರಾಂ, ತೂಗುದೀಪ ಶ್ರೀನಿವಾಸ್, ಧೀರೇಂದ್ರಗೋಪಾಲ್, ಮಾನು ಮುಂತಾದವರು ಇದ್ದು ಮುಖ್ಯಮಂತ್ರಿ ಹಾಗೂ ರಾಜ್ಯಪಾಲರಿಗೆ ಮನವಿ ಅರ್ಪಿಸಲಾಯಿತು. ತಮಿಳುನಾಡಿನ ಮುಖ್ಯಮಂತ್ರಿ ಎಂ.ಜಿ.ಆರ್. ಈ ಹಲ್ಲೆಯ ಬಗ್ಗೆ ವಿಷಾದ ವ್ಯಕ್ತಪಡಿಸಿದರಲ್ಲದೆ ನ್ಯಾಯಾಂಗ ತನಿಖೆಗೂ ಆಜ್ಞೆ ಮಾಡಿದರು. ಒಟ್ಟಾರೆ ಈ ದಿನಗಳು ಹೋರಾಟ, ಪ್ರತಿಭಟನೆಗಳಿಂದ, ಕನ್ನಡ ಭಾಷಾಪ್ರಜ್ಞೆಯನ್ನು ಜಾಗೃತಗೊಳಿಸುವ ಹುಮ್ಮಸ್ಸಿನಿಂದ ತುಂಬಿಕೊಂಡಿದ್ದವು. ಸಿನಿಮಾರಂಗವನ್ನು ಉಪೇಕ್ಷೆಯಿಂದ ಕಾಣುತ್ತಿದ್ದ ಸಾಹಿತಿಗಳು ಕೂಡ ಗೋಕಾಕ್ ಚಳವಳಿಯ ನಂತರದ ದಿನಗಳಲ್ಲಿ ತಮ್ಮ ನಿಲುವನ್ನು ಸಾಕಷ್ಟು ಬದಲಾಯಿಸಿಕೊಂಡಿದ್ದರು. ಇದಕ್ಕೆ ನಿದರ್ಶನವೆನ್ನುವಂತೆ ೧೯೮೩ ರಲ್ಲಿ ಕೈವಾರದಲ್ಲಿ ನಡೆದ ೫೫ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಿನಿಮಾ ಪ್ರಸ್ತಾಪದಿಂದ ಇದ್ದಕ್ಕಿದ್ದಂತೆ ಕಾವೇರಿತು. ಇದು ನಡೆದದ್ದು ಬಹಿರಂಗ ಅಧಿವೇಶನದಲ್ಲಿ. ಕೈವಾರದ ಸಾಹಿತ್ಯ ಸಮ್ಮೇಳನ ಒಂದು ರೀತಿಯಲ್ಲಿ ಭಾಷೆಗಾಗಿ ನಡೆಯುತ್ತಿದ್ದ ಚಳವಳಿಗಳನ್ನು ಟೀಕಿಸುವುದರಿಂದಲೇ ಆರಂಭವಾಯಿತು. ಸಮ್ಮೇಳನವನ್ನು ಉದ್ಘಾಟಿಸಿದ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಚಳವಳಿ ಮಾಡುವವರನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಂಡರು. ಸಮ್ಮೇಳನಾಧ್ಯಕ್ಷ ಎ.ಎನ್.ಮೂರ್ತಿರಾವ್ ಚಳವಳಿಗಳು ನಡೆಯುತ್ತಿರುವ ವಿಧಾನ ಸರಿಯಿಲ್ಲ ಅಂದರು. ಆದರೆ ಮೊದಲನೆಯ ಗೋಷ್ಠಿಯ ಅಧ್ಯಕ್ಷರಾಗಿ ಮಾತನಾಡಿದ ಎಸ್.ಎಲ್.ಭೈರಪ್ಪ ಮಾತ್ರ 'ಚಳವಳಿಗಳಿಂದಲೇ ಕನ್ನಡ ಉಳಿದಿದೆ' ಎಂದು ಖಂಡತುಂಡವಾಗಿ ಹೇಳಿದರಲ್ಲದೆ ನೆರೆ ರಾಜ್ಯಗಳಲ್ಲಿ ಹೇಗೆ ಬೇರೆ ಭಾಷೆಗಳನ್ನು ಹತ್ತಿಕ್ಕುತ್ತಿದ್ದಾರೆ ಎನ್ನುವುದಕ್ಕೆ ಉದಾಹರಣೆಗಳನ್ನು ಕೊಟ್ಟರು. ಬಹಿರಂಗ ಅಧಿವೇಶನದಲ್ಲಿ ನಿರ್ಣಯಗಳ ಮಂಡನೆಯಾಗಿ ಚರ್ಚೆಯಾಗುತ್ತಿದ್ದಂತೆ ಗದ್ದಲ ಶುರುವಾಯಿತು. ಈ ಸಂದರ್ಭದಲ್ಲಿ ಮಂಡಿಸಿದ ಬಹುತೇಕ ನಿರ್ಣಯಗಳು ಕನ್ನಡ ಭಾಷೆಗೆ ಸಂಬಂಧಪಟ್ಟಂತೆ ಇದ್ದರೂ ಸಭೆಯ ಒಂದು ಭಾಗದಿಂದ ಆಗಾಗ ಕೂಗಾಟ, ಆಕ್ರೋಶದ ಮಾತುಗಳು ಕೇಳಿ ಬರುತ್ತಲೇ ಇದ್ದವು. ಕೊನೆಗೆ ಬಂಗಾರಪೇಟೆಯ ಕನ್ನಡ ಸಂಘದ ಸದಸ್ಯರು ಚರ್ಚೆಯಲ್ಲಿ ಭಾಗವಹಿಸಿ ಮಾತನಾಡುತ್ತಾ ''ಕೋಲಾರದ ಚಿನ್ನದ ಗಣಿ ಪ್ರದೇಶದಲ್ಲಿ ಎರಡು ವರ್ಷಗಳಿಂದ ಕನ್ನಡ ಚಿತ್ರಗಳ ಪ್ರದರ್ಶನ ಆಗಿಲ್ಲ. ಈ ತಿಂಗಳ ಮೊದಲ ವಾರದಲ್ಲಿ ಬೆಂಗಳೂರು ನಗರದಲ್ಲಿ ಕೆಲವು ದಿನಗಳ ಕಾಲ ತಮಿಳು ಚಿತ್ರಗಳ ಪ್ರದರ್ಶನವಾಗದಿದ್ದಾಗ ಡಿ.ಎಂ.ಕೆ. ಸದಸ್ಯರು ಲೋಕಸಭೆಯಲ್ಲಿ ವಿಷಯ ಪ್ರಸ್ತಾಪಿಸಿ, ಪ್ರತಿಭಟಿಸಿ ಸಭಾತ್ಯಾಗ ಮಾಡಿದರು. ಆದರೆ ನಮ್ಮ ಶಾಸಕರು, ಸಂಸದರು ಚಿನ್ನದಗಣಿ ಪ್ರದೇಶದಲ್ಲಿ ಕನ್ನಡ ಚಿತ್ರದ ಪ್ರದರ್ಶನವಾಗದಿರುವುದಕ್ಕೆ ಎಂದಾದರೂ ಪ್ರತಿಭಟಿಸಿದ್ದಾರೆಯೇ ? ಏನಾದರೂ ಕ್ರಮ ಕೈಗೊಂಡಿದ್ದಾರೆಯೇ ?'' ಎಂದು ಪ್ರಶ್ನಿಸಿದರಲ್ಲದೆ ''ಆ ಪ್ರದೇಶದಲ್ಲಿ ಕನ್ನಡಿಗರು ನಿರ್ಭಯವಾಗಿ ಜೀವನ ನಡೆಸುವುದೇ ಕಷ್ಟವಾಗಿದೆ'' ಎಂದು ಪರಿಸ್ಥಿತಿಯನ್ನು ವಿವರಿಸಿದರು. ಒಂದು ಕ್ಷಣ ಇಡೀ ಸಭೆ ತಲ್ಲಣಿಸಿತು. ಆಗ ಎದ್ದು ನಿಂತ ಹಾ.ಮಾ.ನಾಯಕ್ ರಾಜ್ಯದ ರಾಜಕೀಯ ನಾಯಕತ್ವದ ದಾರಿದ್ರ್ಯವನ್ನು ಖಂಡಿಸಿ ಮಾತನಾಡಿದರು. ಸಮ್ಮೇಳನಾಧ್ಯಕ್ಷ ಎ.ಎನ್.ಮೂರ್ತಿರಾಯರು ಸಹ ರಕ್ಷಿತ ಪ್ರದೇಶದಲ್ಲಿರುವ ತಮಗೆ ಗಡಿನಾಡಿನ ಜನತೆಯ ಕಷ್ಟ-ನಷ್ಟಗಳ ಅರಿವಿಲ್ಲವೆಂದು ಹೇಳಿ ''ನನ್ನ ಕಣ್ಣು ಇಂದು ತೆರೆಯಿತು. ನನ್ನ ವಿದ್ಯಾಭ್ಯಾಸ ಇಂದು ಪೂರ್ಣವಾಯಿತು. ಕನ್ನಡತನವನ್ನು ಬೆಳೆಸಲು, ಸರ್ಕಾರ ಪ್ರಯತ್ನಿಸಬೇಕಾದ್ದು ಅಗತ್ಯ'' ಎಂದು ಒತ್ತಿ ಹೇಳಿದರು. ಚಿನ್ನದ ಗಣಿ ಪ್ರದೇಶದಲ್ಲಿ ಕನ್ನಡವನ್ನು ಬೆಳೆಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕೆಂಬ ನಿರ್ಣಯವನ್ನು ಪಟ್ಟಿಯಲ್ಲಿ ಹೊಸದಾಗಿ ಸೇರಿಸಿ ಸರ್ವಾನುಮತದಿಂದ ಅಂಗೀಕರಿಸಲಾಯಿತು. ಈ ಘಟನೆ ಕನ್ನಡ ಕಾರ್ಯಕರ್ತರಲ್ಲಿ ಜಾಗೃತವಾಗಿದ್ದ ಭಾಷಾಪ್ರಜ್ಞೆಯನ್ನು ಏಕಕಾಲಕ್ಕೆ ಸಿನಿಮಾ ಪ್ರೇಕ್ಷಕರು ಹಾಗೂ ಕನ್ನಡ ಕಾರ್ಯಕರ್ತರ ಬಗ್ಗೆ ಬದಲಾಗಿದ್ದ ಸಾಹಿತಿಗಳ ದೃಷ್ಟಿಕೋನವನ್ನು ದಾಖಲಿಸಿತು. ಇವರೊಂದಿಗೆ ಕನ್ನಡ ಚಿತ್ರಗಳು ಕೂಡ ಕನ್ನಡ ಭಾಷಾಭಿವೃದ್ಧಿಯ ಒಂದು ಸಾಧನ ಎಂಬುದಕ್ಕೆ ಸಾಕ್ಷಿಯೊದಗಿಸಿತು.

ಕನ್ನಡ ಪ್ರಜ್ಞೆ ಹೀಗೆ ಒಂದು ಕಡೆ ವ್ಯಾಪಕ ಜಾಗೃತಿಯನ್ನು ಪಡೆದುಕೊಳ್ಳುತ್ತಿದ್ದರೆ ಇನ್ನೊಂದು ಕಡೆ ಕನ್ನಡ ನಿರ್ಮಾಪಕರ ಅವಸರದ ಮನೋಭಾವ, ಲೋಭಗಳಿಂದಾಗಿಕನ್ನಡ ಚಿತ್ರಗಳ ಗುಣಮಟ್ಟ ದಿನೇ ದಿನೇ ಕುಸಿಯಲು ಆರಂಭಿಸಿತು. ಹಾಡು, ಸಂಭಾಷಣೆಗಳಲ್ಲಿ ದ್ವಂದ್ವಾರ್ಥ ಹೆಚ್ಚತೊಡಗಿತಲ್ಲದೆ ಅಶ್ಲೀಲ ನೃತ್ಯಗಳು ಚಿತ್ರಕ್ಕೆ ಅನಿವಾರ್ಯ ಎನ್ನುವಂಥ ವಾತಾವರಣ ಸೃಷ್ಟಿಯಾಯಿತು. ಚಿತ್ರದಲ್ಲಿ ಒಂದು ನಿರ್ದಿಷ್ಟ ಸಂದರ್ಭಕ್ಕಾಗಿ ಸೃಷ್ಟಿಯಾಗುತ್ತಿದ್ದ ಗೀತೆಗಳಿಗೂ, ಅದರ ಹಿಂದುಮುಂದಿನ ಸನ್ನಿವೇಶಕ್ಕೂ ಯಾವ ಸಂಬಂಧವೂ ಇರುತ್ತಿರಲಿಲ್ಲ. ಚಿತ್ರದ ಹಿಂದೆ ಅಥವಾ ಮುಂದೆ ನಡೆದ ಅಥವಾ ನಡೆಯಬಹುದಾದ ಘಟನೆಗಳನ್ನು ಸೂಚಿಸುವುದಾಗಲಿ, ಕಥೆಯ ಧ್ವನಿಗೆ ಅಭಿವ್ಯಕ್ತಿ ನೀಡುವುದಾಗಲಿ, ದೃಶ್ಯಗಳಿಗೆ ಕೊಂಡಿಯಂತಿರುವುದೇ ಆಗಲಿ - ಇವೆಲ್ಲ ಗುಣಗಳನ್ನು ಈ ಅವಧಿಯ ಹಾಡುಗಳು ಕಳೆದುಕೊಳ್ಳುತ್ತಾ ಬಂದವು. 'ಅಯ್ಯೋ ಅಬ್ಬಾಯಿ... ಬೇಡ ಸುಬ್ಬಯ್ಯ', 'ಬಾ, ಬಂದೆ.. ಕೂತ್ಕೊ.. ಕೂತ್ಕೊಂಡೆ..' ಇಂಥ ರಚನೆಗಳು ಹೇರಳವಾಗಿ ಕಾಣಿಸಿಕೊಂಡವು. ಇವುಗಳ ಆಯಸ್ಸು ಕೂಡ ನಾಲ್ಕೈದು ವರ್ಷಕ್ಕೆ ಸೀಮಿತವಾಯಿತು. ಅತಿ ನಗ್ನವಾಗಿ ಅಂಗಾಂಗ ಪ್ರದರ್ಶಿಸುವ, ಸಂಭಾಷಣೆಗಳಲ್ಲಿ ದ್ವಂದ್ವಾರ್ಥದ ಮಾತುಗಳನ್ನು ಬಳಕೆ ಮಾಡುವ, ಗೀತೆಗಳಲ್ಲಿ ಅಶ್ಲೀಲ ಪದಗಳನ್ನು ಜೋಡಿಸುವ 'ಸೃಜನಶೀಲತೆ' ಹೆಚ್ಚು ತೃಪ್ತಿ ಕೊಡದಿದ್ದಾಗ ನಿರ್ಮಾಪಕರ ಕಣ್ಣು ಅಶ್ಲೀಲ ನೃತ್ಯಗಳತ್ತ ಹೊರಳಿತು. ಕ್ಯಾಬರೆಗೆ ಮಾತ್ರ ಮೀಸಲಾಗಿದ್ದ ನಟಿಯರಿಗೆ ತುಂಡು ಬಟ್ಟೆಗಳನ್ನು ತೊಡಿಸಿ ಹಾಡುಗಳನ್ನು ಚಿತ್ರಿಸುತ್ತಿದ್ದ ಸ್ಥಳದಲ್ಲಿ ನಾಯಕ-ನಾಯಕಿಯರೇ ಕಾಣಿಸಿಕೊಳ್ಳತೊಡಗಿದರು. 'ಕಾರ್ಮಿಕ ಕಳ್ಳನಲ್ಲ'ಚಿತ್ರದಲ್ಲಿ ಶಂಕರ್‌ನಾಗ್-ಸ್ವಪ್ನಾ ಮೇಲೆ ಚಿತ್ರಿಸಿರುವ ಹಾಡು ಇಂಥ ಅಭಿರುಚಿಹೀನ ಪರಂಪರೆ ಆರಂಭವಾಗಿದ್ದುದಕ್ಕೆ ಒಂದು ಉದಾಹರಣೆ. 'ಸೆನ್ಸಾರ್ ಮಂಡಳಿ ಇಂಥ ದೃಶ್ಯಗಳಿಗೆಲ್ಲ ಹೇಗೆ ಅನುಮತಿ ನೀಡುತ್ತಿದೆ' ಎಂಬುದು ಆಗಿನ ಚರ್ಚೆಗಳಲ್ಲಿರುತ್ತಿದ್ದ ಸಾಮಾನ್ಯ ಉದ್ಗಾರ. ಇಂಥ ಸಂದರ್ಭದಲ್ಲಿ ಸಂಬಂಧಿಸಿದ ನಿರ್ಮಾಪಕರಿಂದ ತೆಲುಗು, ತಮಿಳು ಮತ್ತು ಹಿಂದಿ ಚಿತ್ರಗಳಲ್ಲಿ ಇನ್ನೂ ಹೆಚ್ಚಿನ ಅಸಭ್ಯ ದೃಶ್ಯಗಳಿರುತ್ತವೆ ಎಂಬ ಸಮರ್ಥನೆ ದೊರೆಯುತ್ತಿತ್ತು. ಮದರಾಸಿನ ಸೆನ್ಸಾರ್ ಮಂಡಳಿಯಲ್ಲಿ ಪಾರದರ್ಶಕತೆ ಇಲ್ಲ ಎಂಬ ಅಸಮಾಧಾನದೊಂದಿಗೆ ಶಕ್ತಿಯಿದ್ದವರು ಅಲ್ಲಿ ಏನನ್ನಾದರೂ ಮಾಡುತ್ತಾರೆ ಎಂಬ ಆರೋಪಗಳೂ ಕೇಳಿ ಬರುತ್ತಿದ್ದವು. ಬೆಂಗಳೂರಿನಲ್ಲೇ ಸೆನ್ಸಾರ್‌ನ ಒಂದು ಪ್ರಾದೇಶಿಕ ಕಚೇರಿ ಇದ್ದಿದ್ದರೆ ಹೀಗೆಲ್ಲ ಆಗುತ್ತಿರಲಿಲ್ಲ ಎಂಬ ಸಮಜಾಯಿಷಿ ಹುಟ್ಟುತ್ತಿತ್ತು.

ವಾಸ್ತವವಾಗಿ ಕರ್ನಾಟಕಕ್ಕೆ ಸೆನ್ಸಾರ್‌ನ ಒಂದು ಪ್ರತ್ಯೇಕ ಪ್ರಾದೇಶಿಕ ಘಟಕದ ಅನಿವಾರ್ಯತೆಯಿದೆಯೇ ಎಂದು ಚರ್ಚಿಸುವುದಕ್ಕೆ ಕಾರಣಗಳೇ ಇರಲಿಲ್ಲ. ನಿರ್ಮಾಣ ಚಟುವಟಿಕೆಗಳು ಮದರಾಸಿನಿಂದ ಕರ್ನಾಟಕಕ್ಕೆ ವರ್ಗಾವಣೆಯಾಗುತ್ತಿದ್ದಂತೆ ಬೆಂಗಳೂರಿನಲ್ಲಿ ಸೆನ್ಸಾರ್ ಕಚೇರಿಯನ್ನು ಸ್ಥಾಪಿಸುವ ಕೆಲಸಕ್ಕೂ ಸಹಜವಾಗಿ ಚಾಲನೆ ಸಿಗಬೇಕಾಗಿತ್ತು. ಏಕೆಂದರೆ ಕನ್ನಡ ಭಾಷೆಯನ್ನು ಚೆನ್ನಾಗಿ ತಿಳಿಯದವರು ಕನ್ನಡ ಚಿತ್ರಗಳನ್ನು ಸೆನ್ಸಾರ್ ಮಾಡುತ್ತಿದ್ದುದರಿಂದ ಹಲವಾರು ಸಮಸ್ಯೆಗಳು ಎದುರಾಗುತ್ತಿದ್ದವು. ಸಂಭಾಷಣೆ, ಹಾಡು, ದೃಶ್ಯಗಳಲ್ಲಿ ಸದಸ್ಯರಿಗೆ ಅನಪೇಕ್ಷಿತ ಎನಿಸುತ್ತಿದ್ದ ದೃಶ್ಯಗಳ ಅನಿವಾರ್ಯತೆಯನ್ನು ವಿವರಿಸಿ ಹೇಳುವುದು ಕಷ್ಟವಾಗುತ್ತಿತ್ತು. ತಮಿಳು ಮೂಲದ ಬಹುತೇಕ ಸದಸ್ಯರಿಗೆ ಕನ್ನಡ ಸಂಸ್ಕೃತಿಯ ಪರಿಚಯ ಇರಲಿಲ್ಲವಾದುದರಿಂದ ಅವರಿಗೆ ಅನುಮಾನ ಉಂಟುಮಾಡುತ್ತಿದ್ದ ಸಾಮಾನ್ಯ ದೃಶ್ಯಗಳಿಗೆಲ್ಲ ವಿವರಣೆ ಕೊಡಬೇಕಾದಂಥ ಕಿರಿಕಿರಿಯ ಪರಿಸ್ಥಿತಿ ಎದುರಾಗುತ್ತಿತ್ತು. ಅಲ್ಲದೆ ಕಷ್ಟದಿಂದ ಹೊಂದಿಸಿಕೊಂಡ ದಿನಾಂಕಕ್ಕೆ ಮದರಾಸಿನ ಸೆನ್ಸಾರ್ ಮಂಡಳಿಯಿಂದ ಅನುಮತಿ ಪತ್ರ ಪಡೆದುಕೊಂಡು ತಮ್ಮ ಚಿತ್ರವನ್ನು ಬಿಡುಗಡೆ ಮಾಡುತ್ತೇವೆಂಬ ಬಗ್ಗೆ ನಿರ್ಮಾಪಕರಿಗೆ ಯಾವುದೇ ಖಾತ್ರಿ ಇರಲಿಲ್ಲ. ಏಕೆಂದರೆ ಅಲ್ಲಿ ಕೆಲಸದ ಒತ್ತಡ ಅಷ್ಟು ಜಾಸ್ತಿ ಇತ್ತು. ಇದೆಲ್ಲಕ್ಕಿಂತ ಹೆಚ್ಚಾಗಿ ಕನ್ನಡ ಚಿತ್ರೋದ್ಯಮಕ್ಕೆ ಮದರಾಸು ಅವಲಂಬನೆಯ ಈ ಕೊನೆಯ ಕೊಂಡಿಯನ್ನು ಕಡಿದುಕೊಳ್ಳಲು ಹಾಗೂ ವಿಶೇಷವಾಗಿ ತನ್ನ ಮೂಲಭೂತ ಹಕ್ಕನ್ನು ಪ್ರತಿಷ್ಠಾಪಿಸಿಕೊಳ್ಳಲು ಈ ಸೆನ್ಸಾರ್ ಘಟಕ ಅಗತ್ಯವಾಗಿತ್ತು. ಈ ನಿಟ್ಟಿನಲ್ಲಿ ಸುಮಾರು ವರ್ಷಗಳಿಂದ ನಡೆದ ನಿರಂತರ ಪ್ರಯತ್ನದ ಫಲವಾಗಿ ಕೊನೆಗೆ ಬೆಂಗಳೂರಿನಲ್ಲಿ ಸೆನ್ಸಾರ್‌ನ ಪ್ರಾದೇಶಿಕ ಕಚೇರಿ ಆರಂಭಿಸಲು ಕೇಂದ್ರ ವಾರ್ತಾ ಮತ್ತು ಪ್ರಸಾರ ಇಲಾಖೆ ಸಮ್ಮತಿಸಿತು. ಅದರಂತೆ ೧೯೮೩ರ ಏಪ್ರಿಲ್‌ನಲ್ಲಿ ಇದರ ಸಮಾರಂಭದ ಮೂಲಕ ಉದ್ಘಾಟನೆಯಾಯಿತು. ಕಾರ್ಯಕ್ರಮ ನಡೆದದ್ದು ರವೀಂದ್ರ ಕಲಾಕ್ಷೇತ್ರದಲ್ಲಿ. ಶುದ್ಧ ಸರ್ಕಾರಿ ಸಮಾರಂಭದಂತೆ ಅತ್ಯಂತ ನೀರಸವಾಗಿ

ಸಂಘಟಿಸಲಾಗಿದ್ದ ಕಾರ್ಯಕ್ರಮವನ್ನು ಕೇಂದ್ರ ವಾರ್ತಾ ಮತ್ತು ಪ್ರಸಾರ ಖಾತೆ ಸಚಿವ ಹೆಚ್.ಕೆ.ಎಲ್.ಭಗತ್ ಉದ್ಘಾಟಿಸಿದರು. ಕೇಂದ್ರ ಸೆನ್ಸಾರ್ ಮಂಡಳಿ ಅಧ್ಯಕ್ಷ ಬಿಕ್ರಮ್ ಸಿಂಗ್, ರಾಜ್ಯ ವಾರ್ತಾ ಸಚಿವ ರಘುಪತಿ, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷ ಬಿ.ಸಿ.ಎಸ್.ನಾರಾಯಣ್ ಅವರು ಮುಖ್ಯ ಅತಿಥಿಗಳಾಗಿದ್ದರು. ಬೆಂಗಳೂರಿನ ಪ್ರಾದೇಶಿಕ ಕಚೇರಿಯ ಪ್ರಥಮ ಅಧಿಕಾರಿಯಾಗಿ ಕನ್ನಡಿಗ ಜಿ.ಎಸ್.ರಾಜಗೋಪಾಲ್ ನೇಮಕವಾದರು. ಆರಂಭದ ದಿನಗಳಲ್ಲಿ ಪತ್ರಕರ್ತರಾಗಿದ್ದ ಇವರು ನಂತರ ಪೊಲೀಸ್ ಇಲಾಖೆ ಸೇರಿ ಬಹಳ ವರ್ಷಗಳ ಕಾಲ ಉತ್ತರ ಭಾರತದಲ್ಲಿ ಸೇವಾ ನಿರತರಾಗಿದ್ದರು. ಬೆಂಗಳೂರಿನ ಮುಖ್ಯಸ್ಥರಾಗಿ ನೇಮಕವಾಗುವ ಮುನ್ನ ಮದರಾಸಿನ ಸೆನ್ಸಾರ್ ಕಚೇರಿಯಲ್ಲಿ ಅಧಿಕಾರಿಯಾಗಿದ್ದರು.



(ಚಿತ್ರ ೭೩) ಕೇಂದ್ರ ವಾರ್ತಾ ಮತ್ತು ಪ್ರಸಾರ ಖಾತೆ ಸಚಿವ ಹೆಚ್.ಕೆ.ಎಲ್.ಭಗತ್ ಅವರಿಂದ ಕರ್ನಾಟಕ ಪ್ರಾದೇಶಿಕ ಸೆನ್ಸಾರ್ ಘಟಕ ಉದ್ಘಾಟನೆ. (ಎಡದಿಂದ ಬಲಕ್ಕೆ) ಕೇಂದ್ರ ಸೆನ್ಸಾರ್ ಮಂಡಳಿಯ ಅಧ್ಯಕ್ಷ ಬಿಕ್ರಮ್‌ಸಿಂಗ್, ಹೆಚ್.ಕೆ.ಎಲ್.ಭಗತ್, ರಾಜ್ಯ ವಾರ್ತಾ ಸಚಿವ ರಘುಪತಿ.

ಕನ್ನಡಿಗರ ಬಹಳ ವರ್ಷಗಳ ಬೇಡಿಕೆಯಾಗಿದ್ದ ಈ ಸೆನ್ಸಾರ್ ಘಟಕವನ್ನು ಒತ್ತಡದಿಂದ ಪಡೆದ ಹಿನ್ನೆಲೆಯಲ್ಲಿ ಉದ್ಯಮದಲ್ಲಿ ಕಾಣಬೇಕಾಗಿದ್ದ ಉತ್ಸಾಹ ಸೃಷ್ಟಿಯಾಗದಂಥ ವಿಪರ್ಯಾಸ ನಡೆಯಿತು. ಕನ್ನಡ ನಿರ್ಮಾಪಕರು ಒಂಬತ್ತೂವರೆ ತಿಂಗಳಾದರೂ ಈ ಕಚೇರಿಯತ್ತ ಸುಳಿಯಲಿಲ್ಲ. ಅಷ್ಟೇ ಅಲ್ಲ, ಇದೇ ಅವಧಿಯಲ್ಲಿ ಮದರಾಸಿನಲ್ಲಿಯೇ ಐದಾರು ಚಿತ್ರಗಳನ್ನು ಸೆನ್ಸಾರ್ ಮಾಡಿಸಿದರು. ಕಚೇರಿ ಆರಂಭಿಸಿದ ಉದ್ದೇಶವೇ ವಿಫಲವಾಗುವಂಥ ಪರಿಸ್ಥಿತಿ ನಿರ್ಮಾಣವಾಯಿತು. ಹೊಸ ಕಚೇರಿಯಲ್ಲಿ ಸಿಬ್ಬಂದಿ ಕೆಲಸವಿಲ್ಲದೆ ಕೂರಬೇಕಾಯಿತು. ದೇಶದಲ್ಲಿ ಎಲ್ಲಿಯೋ ತಯಾರಿಸಿದ ಚಿತ್ರವನ್ನು ಎಲ್ಲಿ ಬೇಕಾದರೂ ಸೆನ್ಸಾರ್ ಮಾಡಿಸಬಹುದಾದ ಹಕ್ಕು ಸ್ವಾತಂತ್ರ್ಯ ನಿರ್ಮಾಪಕರಿಗೆ ಇತ್ತಾದರೂ ಇಷ್ಟಕ್ಕಾಗಿ ಈ ಕಚೇರಿಯನ್ನು ಹೋರಾಡಿ ಪಡೆಯಬೇಕಾಗಿದ್ದ ಆವಶ್ಯಕತೆಯೇನಿತ್ತು ಎಂಬುದನ್ನು ಯಾರೂ ಯೋಚಿಸಿರಲಿಲ್ಲ. ಈ ಬೆಳವಣಿಗೆಯಿಂದ ಗಾಬರಿಗೊಂಡ ಘಟಕದ ಮುಖ್ಯಸ್ಥ ರಾಜಗೋಪಾಲ್ ವಾಣಿಜ್ಯ ಮಂಡಳಿಗೆ ಪತ್ರ ಬರೆದು ತಮ್ಮ ಆತಂಕವನ್ನು ತೋಡಿಕೊಂಡರು. ಆಗ ಚೇಂಬರ್‌ನ ಗೌರವ ಕಾರ್ಯದರ್ಶಿಯಾಗಿದ್ದ ಆರ್.ಲಕ್ಷ್ಮಣ್ ಎಲ್ಲರ ಒತ್ತಾಯ ಹಾಗೂ ಅವಿರತ ಶ್ರಮದಿಂದ ಪಡೆದುಕೊಂಡಿರುವ ಕಚೇರಿಯನ್ನು ಮುಚ್ಚದಿರುವಂತೆ ನೋಡಿಕೊಳ್ಳುವ ಜವಾಬ್ದಾರಿ ನಿರ್ಮಾಪಕರ ಮೇಲಿದ್ದು ಎಲ್ಲರೂ ತಮ್ಮ ಚಿತ್ರಗಳನ್ನು ಬೆಂಗಳೂರಿನಲ್ಲಿಯೇ ಸೆನ್ಸಾರ್ ಮಾಡಿಸಬೇಕೆಂದು ವಿನಂತಿಸಿಕೊಂಡರು. ಇಷ್ಟೆಲ್ಲ ಆದ ಮೇಲೂ ಸುಮಾರು ತಿಂಗಳುಗಳ ಕಾಲ ನಿರ್ಮಾಪಕರು ನಿರ್ಲಕ್ಷ್ಯದಿಂದಲೇ ಇದ್ದರು. ತಮ್ಮ ನಿರ್ಲಕ್ಷ್ಯಕ್ಕೆ ಅವರು ಖಾಸಗಿ ಚರ್ಚೆಗಳಲ್ಲಿ ಕೊಡುತ್ತಿದ್ದ ಈ ಕೆಳಗಿನ ಕಾರಣಗಳೇ ಚಿತ್ರಗಳ ಗುಣಮಟ್ಟ ಕುಸಿಯುತ್ತಿದ್ದುದಕ್ಕೆ ಇದ್ದಂಥ ಬಹುಮುಖ್ಯ ಕಾರಣಗಳೂ ಆಗಿವೆ. "ಮದರಾಸಿನ ಸೆನ್ಸಾರ್ ಕಚೇರಿಯಲ್ಲಿ ಕನ್ನಡ ಬಾರದ ಸದಸ್ಯರೇ ನಮ್ಮ ಚಿತ್ರಗಳಲ್ಲಿನ ಹೆಚ್ಚು ಭಾಗಗಳಿಗೆ ಆಕ್ಷೇಪ ಸೂಚಿಸುತ್ತಿರುವಾಗ ಇನ್ನು ಚೆನ್ನಾಗಿ ಭಾಷೆ ಬರುವವರು ಎಷ್ಟೊಂದು ತೊಂದರೆ ಕೊಡಬಹುದು. ಅಲ್ಲದೆ, ಎಡಿಟಿಂಗ್, ಪ್ಯಾಚ್ ವರ್ಕ್, ಆಪ್ಟಿಕಲ್, ರೀರೆಕಾರ್ಡಿಂಗ್ ಮುಂತಾದ ಅಂತಿಮ ಹಂತದ ಕೆಲಸಗಳೆಲ್ಲ ಮದರಾಸಿನಲ್ಲೇ ಆಗುತ್ತಿರುವಾಗ ಸೆನ್ಸಾರ್‌ಗಾಗಿ ಮಾತ್ರ ಬೆಂಗಳೂರಿಗೆ ಬಂದು, ಹೆಚ್ಚಿನ ಪ್ರತಿಗಳನ್ನು ಹಾಕಿಸಲು ಮತ್ತೆ ಅಲ್ಲಿಗೇ ಹೋಗಬೇಕಾಗುತ್ತದಲ್ಲ" ಎಂದು. ಕೊನೆಗೆ ಸೆನ್ಸಾರ್ ಕಚೇರಿ ಆರಂಭವಾದ ಒಂದು ತಿಂಗಳ ನಂತರ 'ನೀ ನಕ್ಕಾಗ' ಹಾಗೂ 'ಬೆಂಕಿ ಬಿರುಗಾಳಿ' ಈ ಎರಡು ಚಿತ್ರಗಳು ಮಾತ್ರ ಸೆನ್ಸಾರ್ ಆಗಿದ್ದವು.

ಈ ಸಂದರ್ಭದಲ್ಲಿ ಅಂದರೆ ೧೯೮೪ ರಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ತಮ್ಮ ಇಲಾಖೆಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡವು. ಕೇಂದ್ರ ಸರ್ಕಾರ "ಸೆಂಟ್ರಲ್ ಬೋರ್ಡ್ ಆಫ್ ಫಿಲಂ ಸೆನ್ಸಾರ್' ಎಂದಿದ್ದ ಚಲನಚಿತ್ರ ಪರಿಶೀಲನಾ ಮಂಡಳಿಯ ಹೆಸರನ್ನು "ಸೆಂಟ್ರಲ್ ಬೋರ್ಡ್ ಆಫ್ ಫಿಲಂ ಸರ್ಟಿಫಿಕೇಷನ್" ಎಂದು ಪುನರ್ ನಾಮಕರಣ ಮಾಡಿಕೊಂಡಿತು. ರಾಜ್ಯ ಸರ್ಕಾರ ಗೃಹ ಇಲಾಖೆಯ ಅಧೀನದಲ್ಲಿದ್ದ ಸಿನಿಮಾಟೋಗ್ರಾಫ್ ಕಾಯಿದೆಯನ್ನು ಜಾರಿಗೊಳಿಸುವ ಜವಾಬ್ದಾರಿಯನ್ನು ಮಹತ್ವದ ತಿದ್ದುಪಡಿ ತಂದು ವಾರ್ತಾ ಇಲಾಖೆಗೆ ವರ್ಗಾಯಿಸಿತು. ಈಗಾಗಲೇ ಚಲನಚಿತ್ರ ಖಾತೆಯ ಹೊಣೆಯನ್ನು ಹೊತ್ತಿರುವ ವಾರ್ತಾ ಇಲಾಖೆಗೆ ಸಿನಿಮಾಟೋಗ್ರಾಫ್ ಕಾಯಿದೆಯ ನಿರ್ವಹಣೆಯೂ ಸೇರಿದ್ದರಿಂದಾಗಿ ಮುಂದಿನ ದಿನಗಳಲ್ಲಿ ಉತ್ತಮ ಹೊಂದಾಣಿಕೆ ಸಾಧ್ಯವಾಗಬಹುದೆಂದು ಚಿತ್ರೋದ್ಯಮ ಭಾವಿಸಿತು. ಆದರೆ ಕೆಲವೇ ತಿಂಗಳುಗಳಲ್ಲಿ ಮತ್ತೆ ಗೃಹ ಇಲಾಖೆಗೆ ವಾಪಸಾಯಿತು. ಇದರೊಂದಿಗೆ ರಾಜ್ಯ ಸರ್ಕಾರದ ಚಲನಚಿತ್ರ ಪ್ರಶಸ್ತಿ ಸಲಹಾ ಸಮಿತಿಗೆ ಉನ್ನತ ಅಧಿಕಾರಿಯೊಬ್ಬರನ್ನು ನೇಮಿಸುತ್ತಿದ್ದ ಹಳೆಯ ಸಂಪ್ರದಾಯವನ್ನು ಕೈಬಿಟ್ಟು ಅಧಿಕಾರೇತರ ವ್ಯಕ್ತಿಯೊಬ್ಬರನ್ನು ಆರಿಸುವ ಪರಿಪಾಠವನ್ನು ಆರಂಭಿಸಿತು.

ಚಲನಚಿತ್ರವೊಂದರ ಯಶಸ್ಸಿಗಾಗಿ ಸೂತ್ರವನ್ನು ಅನ್ವೇಷಿಸುವ ನಿರ್ಮಾಪಕರ ಪ್ರಯತ್ನಗಳು ನಿರಂತರವಾಗಿರುತ್ತವೆ. ಅರೆನಗರ ಮತ್ತು ಗ್ರಾಮಾಂತರ ಪ್ರದೇಶಗಳ ಜನರಿಗೆ ಯಾವುದು ಹೆಚ್ಚು ಇಷ್ಟವಾಗುತ್ತದೆ, ಅಕ್ಷರಸ್ಥರ ಸಂಖ್ಯೆ ಹೆಚ್ಚಿಗೆ ಇರುವ ನಗರಗಳಿಗೆ ಹೊಂದುವಂಥ ವಸ್ತು ಯಾವುದು ಎನ್ನುವುದನ್ನು ಗುಣಿಸಿ, ಕೂಡಿಸಿ, ಕಥೆಗಳನ್ನು ಹೆಣೆಯುವವರು ಒಂದು ವರ್ಗದವರಾದರೆ, ಎಲ್ಲ ಬಗೆಯ ಜನರನ್ನು ಸೆಳೆಯಬಲ್ಲ ಘಾಟು ಮಸಾಲೆಗಳನ್ನು ಬೆರೆಸಿ ಪಕ್ಕಾ ವ್ಯಾಪಾರಿ ಚಿತ್ರಗಳನ್ನು ತಯಾರಿಸುವವರದ್ದು ಇನ್ನೊಂದು ಬಗೆ. ಅತ್ಯಂತ ಜನಪ್ರಿಯರಾದ, ಆ ಸಂದರ್ಭಕ್ಕೆ ಬೇಡಿಕೆಯುಳ್ಳ ಕಲಾವಿದರೊಂದಿಗೆ ಬೇರೆ ಬೇರೆ ಅಂಶಗಳನ್ನು ಬೆರೆಸಿ ಹಣ ಗಳಿಸುವುದು ಇಂಥ ನಿರ್ಮಾಪಕರ ಮುಖ್ಯ ಉದ್ದೇಶವಾಗಿರುತ್ತದೆ.

ದೇಶದಲ್ಲಿ ಸಾವುಗಳ ಸರಮಾಲೆ ತಂದ ವರ್ಷ. ಭೂಪಾಲದಲ್ಲಿ ಅನಿಲ ಸೋರಿಕೆಯ ಘೋರ ದುರಂತ, ಬ್ಲೂಸ್ಟಾರ್ ಕಾರ್ಯಾಚರಣೆ, ಭಿಂದ್ರನ್‌ವಾಲೆ ಸಾವು, ಅದರ ಸೇಡಿಗಾಗಿ ಇಂದಿರಾಗಾಂಧಿ ಹತ್ಯೆ, ದೆಹಲಿಯಲ್ಲಿ ನಡೆದ ಮಾರಣಹೋಮ ಇವೆಲ್ಲವೂ ಸಾವಿರಾರು ಅಮಾಯಕರ ಸಾವಿಗೆ ಕಾರಣವಾದವು. ಅಂಥ ಕರಾಳತೆಯ ನಡುವೆ ರಾಜೀವ್ ಗಾಂಧಿ ಪ್ರಧಾನಿಯಾಗಿ ಅಧಿಕಾರ ಸ್ವೀಕರಿಸಿದರು. ಇವೆಲ್ಲವುಗಳ ನಡುವೆ ೧೯೮೪ ಕಾರ್ಯಪ್ರವೃತ್ತವಾಯಿತು.

೧೯೮೪-೮೫ರ ಮತ್ತೊಂದು ವಿಶೇಷವೆಂದರೆ ಚಲನಚಿತ್ರ ಕುರಿತ ಕೆಲವು ಗಂಭೀರವಾದ ಪುಸ್ತಕಗಳು ಪ್ರಕಟವಾದ್ದು. ಗಿರೀಶ್ ಕಾಸರವಳ್ಳಿ ಅವರು ಇತರರೊಡನೆ ಸಂಪಾದಿಸಿದ 'ಸಿನಿಮಾ ಕಲೆ - ನೆಲೆ'. ಪ್ರಕಾಶಕರು : ನವಕರ್ನಾಟಕ ಪಬ್ಲಿಕೇಷನ್ಸ್. ಇದೊಂದು ಸಿನಿಮಾ ಸಿದ್ಧಾಂತವನ್ನು ಕುರಿತ ಪುಸ್ತಿಕೆ. ಸಿನಿಮಾ ವಾಸ್ತವತೆಯನ್ನು ಪ್ರತಿಬಿಂಬಿಸಬೇಕೇ ಅಥವಾ ವಾಸ್ತವತೆಯಿಂದ ದೂರ ಸರಿಯಬೇಕೇ ಎಂಬ ವಿಷಯದಲ್ಲಿ ಗಹನವಾದ ಚರ್ಚೆ ಇತ್ತು. ಪ್ರಪಂಚದ ಹಿರಿಯರ ಲೇಖನಗಳನ್ನು ಅನುವಾದ ಮಾಡಿ ಪ್ರಕಟಿಸಲಾಗಿತ್ತು. ಇದು ಗಂಭೀರವಾದ ಚಿಂತನೆಗೆ ಹಚ್ಚುವಂಥ ಕೃತಿ. ಸಿನಿಮಾ ಕಲೆಯನ್ನು ತತ್ವಶಾಸ್ತ್ರದಂತೆ ಅಮೂರ್ತ ಘಟ್ಟದಲ್ಲಿ ವಿಶ್ಲೇಷಿಸುವ ಇಂಥ ಪುಸ್ತಕ ಕನ್ನಡಕ್ಕೆ ಪ್ರಥಮ. ಆದರೆ ಅದಕ್ಕೆ ದೊರೆತ ಓದುಗರು ಮಾತ್ರ ಬೆರಳೆಣಿಸುವಷ್ಟು. ಅನಂತರ ಇಂಥ ಇನ್ನೊಂದು ಪುಸ್ತಕ ಬಂದಿಲ್ಲ.

ಜಿ.ವಿ.ಅಯ್ಯರ್ ಅವರ 'ಮೂರು ಚಿತ್ರ ಮೂರು ದಾರಿಗಳು' ಕೂಡಾ ನವಕರ್ನಾಟಕ ಪಬ್ಲಿಕೇಷನ್ಸ್‌ನ ಪ್ರಕಟಣೆ. ಜಿ.ವಿ.ಅಯ್ಯರ್ ತಮ್ಮ 'ಹಂಸಗೀತೆ', 'ಕುದುರೆ ಮೊಟ್ಟೆ' ಮತ್ತು 'ಶಂಕರಾಚಾರ್ಯ' ಚಿತ್ರಗಳ ಬಗ್ಗೆ ಹೇಳಿದರೂ ಅಲ್ಲಿಯ ಹಲವಾರು ಅಂಶಗಳು ಮಾರ್ಗದರ್ಶಕ ಸೂತ್ರಗಳಂತಿದ್ದುವು. ಚಿತ್ರಿಕೆ ತನ್ನಷ್ಟಕ್ಕೇ ಕಲಾತ್ಮಕ ತುಣುಕು ಆಗುವ ಬಗೆ, ಮಾಂಟಾಜ್ ಕಲ್ಪನೆ, ಚಿತ್ರಶಿಲ್ಪದ ಸಾವಯವ ಸಂಬಂಧ, ದೃಶ್ಯ-ಶಬ್ದ-ಸಂಗೀತಗಳು ರಸಪ್ರಜ್ಞೆಗಳಾಗುವ ಪರಿ, ಇವೆಲ್ಲ ಚಿತ್ರ ನಿರ್ಮಾಣವನ್ನು ಗಂಭೀರವಾಗಿ ತೆಗೆದುಕೊಳ್ಳುವವರಿಗೆ ತುಂಬ ನೆರವಾಗುವಂತಿದ್ದುವು.

'ಮಿನುಗುತಾರೆ ಕಲ್ಪನಾ' ತಾರೆ ಕಲ್ಪನಾ ಅವರನ್ನು ಕುರಿತ ವಿವರಗಳಿದ್ದ ಕೃತಿ. ಸಿ.ಸೀತಾರಾಂ ರಚಿಸಿದ್ದರು. ಕರ್ನಾಟಕ ಸಹಕಾರಿ ಚಲನಚಿತ್ರ ಮಹಾಮಂಡಳಿ ಪ್ರಕಟಿಸಿತ್ತು. ಪ್ರಬುದ್ಧ ಕಲಾವಿದೆಯೊಬ್ಬಳ ಬದುಕಿನ ಏಳು-ಬೀಳುಗಳ ಚಿತ್ರಣವಿತ್ತು. ಈ ಪುಸ್ತಕವನ್ನು ಬಿಡುಗಡೆ ಮಾಡಿದ ಪುಟ್ಟಣ್ಣನವರು "...'ಶರಪಂಜರ'ದ ಹುಚ್ಚಿ ಪಾತ್ರದಲ್ಲಿ ಕಲ್ಪನಾ ಅಷ್ಟು ಚೆನ್ನಾಗಿ ಯಾಕೆ ಮಾಡಿದಳೆಂದರೆ ಆಕೆ ಆ ವೇಳೆಗೆ ಹುಚ್ಚಿಯೇ ಆಗಿದ್ದಳು" ಎಂದರು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ರಾಜ್ಯ ಸರ್ಕಾರದ ನೆರವಿನೊಂದಿಗೆ ಹೊರತಂದ ಸ್ಮರಣ ಸಂಚಿಕೆ,ಎಲ್ಲ ಕಾಲಕ್ಕೂ ಒಂದು ಆಕರ ಗ್ರಂಥವಾಗುವಂಥ ಮಾಹಿತಿಯುಳ್ಳದ್ದಾಗಿತ್ತು. ೧೯೩೪ ರಿಂದ ೧೯೮೪ ರವರೆಗಿನ ಚಲನಚಿತ್ರ ಇತಿಹಾಸ, ರಾಜ್ಯ ಸರ್ಕಾರದ ನೆರವು, ಚಿತ್ರಗಳ ಸಹಿತ ಪ್ರಕಟವಾದ ಅಪೂರ್ವ ಗ್ರಂಥವಿದು. ಹಿಂದೆಂದೂ ಈ ಪ್ರಮಾಣದಲ್ಲಿ ಚಲನಚಿತ್ರ ಕುರಿತ ಗ್ರಂಥಗಳ ಪ್ರಕಟಣೆ ಆಗಿರಲಿಲ್ಲ. ಇವು ದಾಖಲೆಯ ದೃಷ್ಟಿಯಿಂದಲೂ ಗಮನಾರ್ಹ ಕೃತಿಗಳು.

೧೯೮೦ರ ಈ ದಶಕದಲ್ಲಿ ವಿವಿಧ ಬಗೆಯ ಪ್ರಾಣಿಗಳನ್ನು ಬಳಸಿಕೊಂಡಿರುವ ಚಿತ್ರಗಳು ಪ್ರಧಾನವಾಗಿ ಕಾಣುತ್ತವೆ. ಮದರಾಸಿನಲ್ಲಿ ಚಲನಚಿತ್ರಗಳ ಬಳಕೆಗೆಂದು ಪ್ರಾಣಿಗಳನ್ನು ತರಬೇತುಗೊಳಿಸುವ ತಜ್ಞರು ೧೯೫೦ರಿಂದಲೂ ಇದ್ದರು. ಕಾಲಾಂತರದಲ್ಲಿ ದೇವರ್ ಫಿಲಂಸ್‌ನಂಥ ಸಂಸ್ಥೆ ಹಾಗೂ ಇನ್ನಿತರ ಕೆಲವು ಸಂಸ್ಥೆಗಳು ಇದನ್ನು ವೃತ್ತಿಯನ್ನಾಗಿಯೇ ಕೈಗೆತ್ತಿಕೊಂಡವು. ಇದಕ್ಕೂ ಮುಂಚೆ ಹುಲಿ, ಕರಡಿ, ಸಿಂಹ ಇತ್ಯಾದಿ ಪ್ರಾಣಿಗಳನ್ನು ಸರ್ಕಸ್ ಕಂಪನಿಗಳಿಂದ ತರಿಸಿಕೊಳ್ಳಲಾಗುತ್ತಿತ್ತು. ಹಳೆಯ ಜಾನಪದ, ಪೌರಾಣಿಕ, ಐತಿಹಾಸಿಕ ಕಥೆಗಳ ಚಿತ್ರಗಳಿಗೆ ಅನಿವಾರ್ಯವಾಗಿದ್ದ ಪ್ರಾಣಿಗಳನ್ನು ಬಳಸುವ ಪದ್ಧತಿ ಕಾಲಾಂತರದಲ್ಲಿ ಸಾಮಾಜಿಕ, ಕೌಟುಂಬಿಕ ಚಿತ್ರಗಳಲ್ಲೂ ಮುಂದುವರಿದುಕೊಂಡು ಬಂದಿತು. ಅದರಲ್ಲೂ ವಿಶೇಷವಾಗಿ ಈ ಪ್ರವೃತ್ತಿ ೧೯೮೫ರಿಂದ ೯೫ರವರೆಗೆ ಅತಿ ಹೆಚ್ಚಾಗಿ ಕಂಡು ಬರುತ್ತದೆ.

ಪ್ರಾಣಿಗಳನ್ನು ಬಳಸಲಾಗಿದ್ದ ಒಂದೆರಡು ಚಿತ್ರಗಳಲ್ಲಿ ಅವುಗಳಿಂದ ಮಾಡಿಸಲಾಗಿದ್ದ ಚಮತ್ಕಾರ, ಸಾಹಸಗಳು ವಿಶೇಷವಾದ ರಂಜನೆಯನ್ನು ಉಂಟುಮಾಡಿದ್ದು ಮತ್ತು ಇದೇ ಕಾರಣಕ್ಕೆ ಆ ಚಿತ್ರಗಳು ಯಶಸ್ವಿಯಾದದ್ದು ಇಂಥ ಸಮೂಹ ಪ್ರಭಾವಕ್ಕೆ ಕಾರಣ.

ಮಾಟ, ಮಂತ್ರಗಳಿಂದ ತುಂಬಿರುವ 'ಪ್ರಚಂಡ ಕುಳ್ಳ' ಉತ್ತಮ ಜಾನಪದ ಕಥೆಗಳ ಹಲವಾರು ಅಂಶಗಳನ್ನು ಬಳಸಿಕೊಂಡು ಹೆಣೆದಿರುವ ಕಥೆ. 'ಪ್ರಚಂಡ ಕುಳ್ಳ'ದಲ್ಲಿ ಪಿ.ಎಸ್.ಪ್ರಕಾಶ್ ಛಾಯಾಗ್ರಹಣವೇ ವಿಶೇಷ. ಜಾನಪದ ಕಥೆಯಾದ್ದರಿಂದ ಏನೂ ಮಾಡಲು ಸಾಧ್ಯತೆಗಳಿದ್ದವು. ಚಲಂ ಕಲಾನಿರ್ದೇಶನ ಅದ್ಭುತ ಅನಿಸಿಕೊಂಡಿತು. ಮಾಂತ್ರಿಕನ ವೇಷದಲ್ಲಿ ಸುದರ್ಶನ್‌ಗೆ ಹೊಸ ಇಮೇಜ್ ದಕ್ಕಿತ್ತು. ಈ ಚಿತ್ರದಲ್ಲಿ ಮೂವರು ಕ್ಯಾಬರೆ ನರ್ತಕಿಯರಿದ್ದರು. ವಿಭಿನ್ನ ಕಾರಣಗಳಿಗಾಗಿ ಗಮನಾರ್ಹರು. ಪೆದ್ದ ರಾಮುವಿನ ಪಾತ್ರದಲ್ಲಿ ಅತ್ಯುತ್ತಮವಾಗಿ ನಟಿಸಿರುವ ದ್ವಾರಕೀಶ್ ಅವರೊಂದಿಗೆ ಪ್ರಾಣಿಗಳ ಚಮತ್ಕಾರ ಕೂಡ ಈ ಚಿತ್ರವನ್ನು ಸಹ್ಯಗೊಳಿಸಿತ್ತು. ದುಷ್ಟ 'ಕಿಂಕಿಣಿವರ್ಮ'ನ ಪಾತ್ರದಲ್ಲಿ ಸುದರ್ಶನ್ ಅದೇ ಬಗೆಯ ಹಾಲಿವುಡ್ ಚಿತ್ರಗಳಲ್ಲಿನ ಕಲಾವಿದರಷ್ಟೇ ಗಂಭೀರ ಹಾಗೂ ಉತ್ತಮ ಅಭಿನಯ ನೀಡಿ ಯಶಸ್ವಿಯಾಗಿದ್ದರು. ಕೆಟ್ಟ ಮತ್ತು ಒಳ್ಳೆಯ ಮೌಲ್ಯಗಳಿಗಾಗಿ 'ನಾಯಕ-ಖಳನಾಯಕ' ವಿವಿಧ ಬಗೆಯ ಪ್ರಾಣಿಗಳಾಗಿ ರೂಪಾಂತರಗೊಳ್ಳುತ್ತಾ ಕಾದಾಡುವುದು ಅತ್ಯಂತ ಹಳೆಯ ಸರಕಾದರೂ ಈ ಚಿತ್ರದಲ್ಲಿ ವಿಶೇಷವಾಗಿ ರಂಜನೆ ನೀಡಿತು.

'ಗಜೇಂದ್ರ'ದಲ್ಲಿ ಘರ್ಜಿಸುವ ಆನೆಗಳ ಜೊತೆಯಲ್ಲಿ ಟೈಟಲ್ ಕಾರ್ಡ್ ತೋರಿಸಲಾಯಿತು. 'ಗಂಡಭೇರುಂಡ'ದಲ್ಲಿ ನಾಯಿ, ಕುದುರೆಗಳು ಪ್ರಧಾನವಾಗಿವೆ. 'ತಾಳಿಯ ಭಾಗ್ಯ'ದಲ್ಲಿ ಬ್ರೌನಿ ಹೆಸರಿನ ನಾಯಿ ಅತ್ಯಂತ ಪ್ರಮುಖ ಪಾತ್ರದಲ್ಲಿ ಮಿಂಚಿತಲ್ಲದೆ, ಈ ಚಿತ್ರದ ಶತದಿನೋತ್ಸವ ಸಮಾರಂಭದಲ್ಲಿ ಅತಿಥಿಯಾಗಿ ಭಾಗವಹಿಸಿತ್ತು. ಚಿತ್ರದ ಆರ್ಥಿಕ ಯಶಸ್ಸಿನಿಂದಾಗಿ ನಿರ್ಮಾಪಕ ಅಬ್ಬಾಯಿ ನಾಯ್ಡು ಅವರು ಎಷ್ಟೊಂದು ಉದ್ವೇಗಕ್ಕೊಳಗಾಗಿದ್ದರೆಂದರೆ, ನಾಯಿಯನ್ನು ವೇದಿಕೆಯ ಮೇಲೆ ಕರೆತಂದು ಹಾರ ಹಾಕಿ ಗೌರವಿಸಿದ್ದಲ್ಲದೆ ಚುಂಬನದ ಉಡುಗೊರೆಯನ್ನೂ ಕೊಟ್ಟರು. ಚಿತ್ರದಲ್ಲಿ ಈ ನಾಯಿ ತನ್ನ ಒಡೆಯನನ್ನು ಕೊಂದವರನ್ನು ಪತ್ತೆ ಹಚ್ಚುವುದಲ್ಲದೆ ಅವರೆಲ್ಲರ ಮೇಲೂ ಸೇಡು ತೀರಿಸಿಕೊಳ್ಳುತ್ತದೆ. ಇದರೊಂದಿಗೆ ನೆರವಿಗೆ ಒಂದು ಹಾವು ಕೂಡ ಇರುತ್ತದೆ. ಈ ಚಿತ್ರದಲ್ಲಿ ನಾಯಿಯ ಚಮತ್ಕಾರವನ್ನು ನೋಡಿದ 'ಪ್ಯಾಸೇಜ್ ಟು ಇಂಡಿಯಾ' ನಿರ್ಮಾಪಕರು ತಮ್ಮ ಚಿತ್ರಕ್ಕೆ ಅದೇ ನಾಯಿಯನ್ನು ಬಳಸಿಕೊಂಡರು. 'ತಾಳಿಯ ಭಾಗ್ಯ' ಚಿತ್ರದ ಕಥೆಯನ್ನು ನಾಯಿ ಅನಿವಾರ್ಯವೆನ್ನುವಂತೆ ಹೆಣೆದಿದ್ದ ಅಬ್ಬಾಯಿನಾಯ್ಡುರವರು ನಂತರದ 'ತಾಯಿಯ ಹೊಣೆ'ಯಲ್ಲಿ ಸಂದರ್ಭಕ್ಕೆ ಹೊಂದದಿದ್ದರೂ ಕೋತಿಯನ್ನು ಬಲವಂತವಾಗಿ ಸೇರಿಸಿದ್ದರಿಂದಾಗಿ ಚಿತ್ರದ ಪರಿಣಾಮಕ್ಕೆ ಭಾರಿ ಪೆಟ್ಟು ಬಿದ್ದಿತ್ತು. 'ನಾಗರ ಮಹಿಮೆ' ಚಿತ್ರದಲ್ಲಿ ನಾಗರಹಾವು ಪ್ರಮುಖವಾಗಿತ್ತು. 'ವಿಘ್ನೇಶ್ವರ ವಾಹನ'ದಲ್ಲಿ ನೂರಾರು ಇಲಿಗಳನ್ನು ಬಳಸಿಕೊಳ್ಳಲಾಗಿತ್ತು. ಇದರಲ್ಲಿ ಕೆಲವು ಬಿಳಿ ಇಲಿಗಳೂ ಕೂಡ ಇದ್ದವು. ಪ್ರಾಣಿಗಳನ್ನು ಬಳಸುವುದೇ ಗುರಿಯಾದರೂ ಕಥೆಯಲ್ಲಿ ಇಲಿಯನ್ನು ವಿಘ್ನೇಶ್ವರ ವಾಹನವೆಂದೂ ಅದನ್ನು ಅಪಮಾನಿಸಿ ಮಾತಾಡಿದ್ದರಿಂದ ನಾಯಕನನ್ನು ಇಲಿಗಳು ಹಿಂಸಿಸಿದವೆಂದೂ ತರ್ಕವನ್ನು ಹೊಂದಿಸಲಾಗಿತ್ತು. 'ಜಿದ್ದು' ಚಿತ್ರದಲ್ಲಿ ಹಲವಾರು ಪ್ರಾಣಿಗಳಿದ್ದರೂ ಅವುಗಳ ಅಭಿನಯ, ನಡವಳಿಕೆಯನ್ನೆಲ್ಲ ಚಿತ್ರದ ನಾಯಕ ಪ್ರಭಾಕರ್‌ರ ಮೂಲಕವೇ ನಿರ್ದೇಶಕರು ಹೊರಗೆಡಹಿದ್ದರಿಂದಾಗಿ ಅವುಗಳಿಗೆ ಹೆಚ್ಚು ಕೆಲಸವಿರಲಿಲ್ಲ. 'ಪೂಜಾಫಲ'ದಲ್ಲಿ ಹಾವನ್ನು ಅತ್ಯಂತ ಚಮತ್ಕಾರಿಕವಾಗಿ ಬಳಸಿಕೊಂಡಿದ್ದೇ ಚಿತ್ರದ ಮುಖ್ಯ ಸತ್ವವಾಗಿತ್ತು. ನಾಗದೋಷ ಹಾಗೂ ಅದರ ಪರಿಹಾರದ ಸುತ್ತ ಕುಣಿಗಲ್ ನಾಗಭೂಷಣ್ ಹೆಣೆದಿದ್ದ 'ಪೂಜಾಫಲ' ಕಥೆಯನ್ನು ವಿದುರಾಶ್ವತ್ಥದಲ್ಲಿ ಚಿತ್ರೀಕರಿಸಲಾಯಿತು. ೧೯೮೬ ರಲ್ಲಿ ಸುದ್ದಿಯಾಗಿದ್ದ ಹಾವಿನ ಚರ್ಮ ಮತ್ತು ಹಾವಿನ ವಿಷದ ಕಳ್ಳ ಸಾಗಾಣಿಕೆ ಘಟನೆಗಳ ಸ್ಫೂರ್ತಿಯಿಂದ ತಯಾರಾಗಿದ್ದ ಚಿತ್ರ 'ಬೆಳ್ಳಿನಾಗ'. ಜಾನಪದ ಶೈಲಿಯಲ್ಲಿ ನಿರ್ಮಿಸಲಾಗಿದ್ದ ಈ ಚಿತ್ರದಲ್ಲಿ ಹಾವುಗಳು ಎಲ್ಲೆಂದರಲ್ಲಿ ಪ್ರತ್ಯಕ್ಷವಾಗುತ್ತವೆ. ಮೂಢನಂಬಿಕೆ ಹಾಗೂ ದೈವಭಕ್ತಿ ಎರಡನ್ನೂ ಈ ಚಿತ್ರ ಒಟ್ಟೊಟ್ಟಿಗೆ ವೈಭವೀಕರಿಸಿತು. ಇದನ್ನು ಬಿಟ್ಟರೆ 'ಶಪಥ' ಚಿತ್ರದಲ್ಲಿ ಹುಲಿಯ ಮೂಲಕ ಕೆಲವು ಸಾಹಸಗಳನ್ನು ಮಾಡಿಸಲಾಗಿದೆ. ಪ್ರಾಣಿಗಳನ್ನು ಬಳಸಿಕೊಳ್ಳುವ ಅಂದಿನ ಟ್ರೆಂಡ್‌ನ ಸ್ಫೂರ್ತಿಯೆಂಬಂತೆ ಎಂ.ಪಿ.ಶಂಕರ್ ತಾವು ತಯಾರಿಸಿದ 'ಕಾಡಿನ ರಾಜ' ಚಿತ್ರದಲ್ಲಿ ಕೋತಿ, ಆನೆ, ಹುಲಿ, ಸಿಂಹ, ಮೇಕೆ, ಕೋಳಿ ಮುಂತಾದ ಪ್ರಾಣಿಗಳ ಸೈಜವಾದ ಧ್ವನಿಗಳನ್ನು ಮುದ್ರಿಸಿಕೊಂಡು ಚಿತ್ರದ ಒಂದು ಹಾಡಿನಲ್ಲಿ ಅಳವಡಿಸಿದರು.


(ಚಿತ್ರ ೭೪) 'ಪ್ರಚಂಡ ಕುಳ್ಳ' ಚಿತ್ರದಲ್ಲಿ ದೇವಿಕಾರಾಣಿ, ದ್ವಾರಕೀಶ್, ರಾಜಾನಂದ್, ಲಕ್ಷ್ಮಣ್, ಚೇತನ್ ರಾಮರಾವ್

ತಯಾರಿಸಿದ ಜಾಣತನ. ಈ ಚಿತ್ರದಿಂದ ಸಿ.ಆರ್.ಸಿಂಹ ಚಿತ್ರರಂಗದಲ್ಲಿ ಮತ್ತೊಂದು ಮಾದರಿ ಪಾತ್ರಕ್ಕೆ ಹೆಸರಾದರು, ಬಿಜಿಯಾದರು. ಹಾಗೇ ಸಂಭಾಷಣೆ, ಅಭಿನಯಕ್ಕೆ ಎಸ್.ಎಸ್.ರಾವ್ ಕೂಡಾ.

'ಮರ್ಯಾದೆ ಮಹಲ್' ಚಿತ್ರವನ್ನು ಜಗನ್ನಾಥ್ ನಿರ್ಮಿಸಿದರು. ಸಾಹಿತ್ಯಪ್ರಿಯರಾದ ಅವರು ಅಶ್ವತ್ಥರವರ ಕಾದಂಬರಿ 'ಮರ್ಯಾದೆ ಮಹಲು'ವನ್ನು ಅದೇ ಹೆಸರಿನಲ್ಲಿ ಚಿತ್ರಿಸಿದರು. ಎ.ವಿ.ಶೇಷಗಿರಿರಾಯರು ಆ ಹೆಸರಿಗೆ ತಕ್ಕ ಹಾಗೆ ಶ್ರೀಮಂತವಾದ ಸೆಟ್ ಹಾಕಿಸಿ ಚಿತ್ರಣ ನಡೆಸಿದರು. ಉದಯಕುಮಾರ್ ಬಹಳ ಇಷ್ಟಪಟ್ಟು ಅಭಿನಯಿಸಿದ್ದ ಪಾತ್ರವಿತ್ತು. ಸುಂದರರಾಜ್, ಲೀಲಾವತಿ, ಮುಸುರಿ ಕೃಷ್ಣಮೂರ್ತಿ ಮೊದಲಾದವರು ನಿರ್ವಹಿಸಿದ ಪಾತ್ರಗಳಿಗೆ ಪೋಷಣೆ ಸಾಲದಾಗಿತ್ತು. ನಮ್ಮ ಬಹುತೇಕ ಅನುಭವೀ ನಿರ್ದೇಶಕರೂ ಕೂಡಾ ಗಟ್ಟಿಯಾದ ಚಿತ್ರನಾಟಕ ಮಾಡಿಕೊಳ್ಳದಿರುವುದರ ಕಾರಣವೇ ಇವತ್ತಿಗೂ ನಿಗೂಢ. ಕಾದಂಬರಿಯ ಕಥೆಯೇ ಗಟ್ಟಿಯಾಗಿತ್ತು. ಅದು ಸಾಕಷ್ಟು ನೆರವಾಯಿತು. ಆದರೂ ಒಂದು ಚೌಕಟ್ಟು, ಘಟನೆಗಳಿಗೆ ಜೋಡಿಸುವ ನಳಿಕೆಗಳು ಸರಿಯಾಗಿಲ್ಲದಾಗ ಚಿತ್ರ ಯಾವ ಆಧಾರದ ಮೇಲೆ ನಿಂತೀತು ? ಎಲ್ಲ ಇದ್ದೂ ಏನೂ ಆಗಲಿಲ್ಲವೆಂಬ ಸ್ಥಿತಿ. ಉದಯಕುಮಾರ್ ಸಹ ಇತರ ಅಂಶಗಳು ಬೆಳೆಯುತ್ತಿರುವ 'ಲಯ'ವನ್ನು ಗಮನಿಸದೆ ತನ್ಮಯರಾಗಿ ಅಭಿನಯಿಸಿದ್ದರಿಂದಾಗಿ ಪ್ರತ್ಯೇಕವಾಗಿ ಉಳಿದುಬಿಟ್ಟರು. ಚಿತ್ರದ ಕೊನೆಯಲ್ಲಿ ಮನೆಗೆ ಬೆಂಕಿ, ಆತ್ಮಾಭಿಮಾನವೇ ಆಸ್ತಿಯಾದ ಯಜಮಾನನ ಸಾವು ಮನಸ್ಸಿನಲ್ಲಿ ನಿಂತುಬಿಡುತ್ತದೆ. ರಾಮಕೃಷ್ಣ ತಮಗೆ ಸಿಕ್ಕ ಅವಕಾಶದಲ್ಲೇ ಮಿಂಚುತ್ತಾರೆ.

'ಶುಭಮುಹೂರ್ತ' ಗೀತಪ್ರಿಯರೇ ಬರೆದ ಕಥೆ, ಸಂಭಾಷಣೆ ಇದ್ದ ಚಿತ್ರ. ಅವರದೇ ನಿರ್ದೇಶನ. ಚಿತ್ರದ ಹಲವು ಅಂಶಗಳು ಅತ್ಯಂತ ಸೂಕ್ಷ್ಮವಾಗಿ ಭಾವನೆಗಳನ್ನು ತಟ್ಟುತ್ತಿದ್ದವು. ಕಲ್ಯಾಣ್‌ಕುಮಾರ್-ಜಯಂತಿ ಪ್ರೌಢವಾಗಿ ಅಭಿನಯಿಸಿದ್ದರು. ಆದರೂ ಚಿತ್ರನಾಟಕದ ದೌರ್ಬಲ್ಯ, ಚಿತ್ರಿಕೆಗಳು ಬಹ್ವಂಶ ಚಪ್ಪಟೆಯಾದವು ಇತ್ಯಾದಿ ಕಾರಣಗಳಿಂದಲೋ ಏನೋ ಒಂದು ಗಾಢವಾದ ಅನುಭವವಾಗಲಿಲ್ಲ. ಆರ್.ಕೆ.ಸಿನೆಟೋನ್ಸ್‌ನ ಆರ್.ಎ.ಖಾನ್ ಚಿತ್ರ ನಿರ್ಮಿಸಿ ಬರಿಗೈಯಾದರು. ಚಿತ್ರಾಸಕ್ತರಿಗೆ ಚಿತ್ರದ ಒಟ್ಟು ಪರಿಣಾಮಕ್ಕಿಂತ ಅಲ್ಲಿ-ಇಲ್ಲಿ ಮಿಂಚಿದ ಒಂದೆರಡು ಸೊಗಸಾದ ಅಭಿನಯ, ಚಿತ್ರಿಕೆಗಳು ಮನಸ್ಸಿನಲ್ಲಿ ಉಳಿದವು. ಕೆಲವೆಡೆ ಆರ್.ಸಿ.ಮಾಪಾಕ್ಷಿ ಛಾಯಾಗ್ರಹಣದಲ್ಲಿ ವಿಶೇಷ ಬೆಳಕು ವಿನ್ಯಾಸ, ಕೋನಗಳು ಕಂಡವು. ಚಿತ್ರದ ನಿರ್ಮಾಪಕರು ಯುವಕರು. ಧಾರಾಳಿಗಳು ಎಂದು ಸುದ್ದಿಯಾದರು. ಮಾರುತಿ ಮೂವೀಸ್‌ನ ಸೇತೂರಾಂ ವಿತರಿಸಲು ಹೋಗಿ ಅಧಿಕ ಪ್ರಿಂಟ್‌ಗಳನ್ನು ಹಾಕಿ ರಾಜ್ಯಾದ್ಯಂತ ಬಿಡುಗಡೆ ಮಾಡಿದರು. ಲೆಕ್ಕಾಚಾರ ತಲೆಕೆಳಗಾಯಿತು. ಈ ಚಿತ್ರದಿಂದ ಸರಿಗಮ ವಿಜಿ ಗಮನ ಸೆಳೆದರು.

'ಗಜೇಂದ್ರ' ವಿ.ಸೋಮಶೇಖರ್ ನಿರ್ದೇಶನದ ಚಿತ್ರ. ಅವರೇ ನಿರ್ಮಾಪಕರೂ ಕೂಡಾ. ಅದು ಸೋಮಶೇಖರ್ ಶೈಲಿಯ ಚಿತ್ರಗಳ ಜನಪ್ರಿಯತೆಯ ಕಾಲ. ಬಹುತೇಕ ರಾಜಕಾರಣ-ಸಾಹಸಗಳನ್ನು ಕೇಂದ್ರ ಮಾಡಿಕೊಂಡು ಕಥೆ ಹೆಣೆಯುತ್ತಿದ್ದರು ಸೋಮಶೇಖರ್. ಅವರ ಹಿಂದೆ ಅವರನ್ನು ಗೌರವಿಸುವ ಕಲಾವಿದ-ತಂತ್ರಜ್ಞರ ಭಾರಿ ತಂಡವೇ ಇತ್ತು. ಸೋಮಶೇಖರ್ ಅವರದೇ ಒಂದು ಧಾಟಿ ಶೈಲಿಯಿತ್ತು. ಆ ಮಟ್ಟಿಗೆ ಸೋಮಶೇಖರ್ ಅವರ ಚಿತ್ರಗಳಿಗೆ ಪ್ರೇಕ್ಷಕರೂ ಇದ್ದರು. ಅವರ ಯಶಸ್ಸಿನ ಸಾಲಿನಲ್ಲಿ 'ಗಜೇಂದ್ರ' ಚಿತ್ರವೂ ಒಂದು. ಆಗಲೇ



(ಚಿತ್ರ ೭೫) 'ಮರ್ಯಾದೆ ಮಹಲ್' ಚಿತ್ರದಲ್ಲಿ ರಾಮಕೃಷ್ಣ, ಕಾಂಚನಾ, ಉದಯ್‌ಕುಮಾರ್

೧೯೮೮ ರಲ್ಲಿ ತೆರೆಕಂಡ 'ನಗಬೇಕಮ್ಮ ನಗಬೇಕು' ಒಂದು ರೀಮೇಕ್ ಚಿತ್ರ. ಹೊರನಾಡ ಕನ್ನಡಿಗ ಜಿ.ಮೋಹನಕೃಷ್ಣ ಮೂಲತಃ ಅರ್ವೋ ಫಿಲಂನಲ್ಲಿ ವಿಶೇಷ ಪರಿಣತರು. ಅವರು ಕನ್ನಡ ಚಿತ್ರರಂಗ ಪ್ರವೇಶಿಸಿದ್ದು ಈ ಚಿತ್ರದ ಮೂಲಕ. ಶ್ರೀಲಲಿತಾ ಬಹಳ ಕಾಲದ ನಂತರ ಮತ್ತೆ ಕನ್ನಡ ಚಿತ್ರದಲ್ಲಿ ಪೋಷಕ ನಟಿಯಾಗಿ ಬಂದರು. ತೆಲುಗಿನ 'ಶಂಕರಾಭರಣಂ' ಖ್ಯಾತಿಯ ತುಳಸಿ ಈ ಕನ್ನಡ ಚಿತ್ರದಲ್ಲಿ ಅಭಿನಯಿಸಿದರು. ಈ ಚಿತ್ರದಲ್ಲಿ ಜಯಮಾಲಾ ಆಟೋ ಚಾಲಕಿಯಾಗಿ ವಿಭಿನ್ನವಾಗಿ ಕಂಡರು.

'ರಕ್ತ ತಿಲಕ'ದ ಹೊತ್ತಿಗೆ ವಿಷ್ಣುವರ್ಧನ್-ಜೋಸೈಮನ್ ಗೆಳೆತನ ಮುರಿದುಹೋಗಿತ್ತು. ಬಾಳಿಗಾ ಸೋದರರ ಈ ಚಿತ್ರಕ್ಕೆ ಶಂಕರ್‌ನಾಗ್ ನಾಯಕರಾಗಿ ಆಯ್ಕೆ ಆಗಬೇಕಾಯಿತು. ಹುಲಿಯೊಂದಿಗೆ ಸೆಣಸಾಟ ಹಾಗೂ ಶಂಕರ್‌ನಾಗ್ ಹಾಡಿದ್ದು ವಿಶೇಷ.

'ಸುಖ ಸಂಸಾರಕ್ಕೆ ೧೨ ಸೂತ್ರಗಳು' ಸಂಪೂರ್ಣ ಹಾಸ್ಯಮಯ ಚಿತ್ರ. ಇದು ತೆಲುಗಿನ 'ಪಂಡಂಟಿ ಸಂಸಾರಾನಿಕಿ ಪನ್ನೆಂಡು ಸೂತ್ರಾಲು' ಚಿತ್ರದ ರೀಮೇಕ್. 'ಸುಖ ಸಂಸಾರಕ್ಕೆ ೧೨ ಸೂತ್ರಗಳು' ರಾಜಾಚಂದ್ರ ನಿರ್ದೇಶನದ ಚಿತ್ರ. ನಿರ್ಮಾಪಕರು ಹೆಚ್.ಆರ್.ಪ್ರಭಾಕರರೆಡ್ಡಿ ಮತ್ತು ಬಿ.ಕೆ.ಚನ್ನಣ್ಣ. ಸಿ.ಆರ್.ಸಿಂಹ ವಿಶಿಷ್ಟವಾದ ಪಾತ್ರದಲ್ಲಿ ಗಮನ ಸೆಳೆಯುತ್ತಾರೆ. ಚಕ್ರವರ್ತಿ ಸಂಗೀತ ನಿರ್ದೇಶನದಲ್ಲಿ ಒಂದೆರಡು ಗೀತೆಗಳು ಸೊಗಸಾಗಿವೆ. ನೃತ್ಯ ನಿರ್ದೇಶಕಿ ತಾರಾ ಅನಂತನಾಗ್‌ರಂಥ ನೃತ್ಯ ಎಂದರೆ ಓಡಿಹೋಗುವ ಕಲಾವಿದರಿಂದಲೂ ನರ್ತನ ಮಾಡಿಸಿದ್ದು, ಅದು ಮೆಚ್ಚುವಂತಿದ್ದುದೂ ವಿಶೇಷ ಸಂಗತಿಗಳೇ. ಉದ್ದಕ್ಕೂ ಸ್ತ್ರೀಯರನ್ನು ಅಣಗಿಸಿಡುವ ಸಲುವಾಗಿ ಸಿದ್ಧವಾಗುವ ಹನ್ನೆರಡು ಸೂತ್ರಗಳ ಚಿತ್ರ-ವಿಚಿತ್ರ ವ್ಯಾಖ್ಯಾನವೇ ಆದರೂ ರಂಜನೆಯನ್ನಂತೂ ಕೊಡುತ್ತದೆ. ಇಂಥ ಕಡೆ ತರ್ಕ ಸಾಧ್ಯಾಸಾಧ್ಯತೆಗಳ ಪ್ರಶ್ನೆಯೇ ಇರುವುದಿಲ್ಲ. 'ಸುಖ ಸಂಸಾರಕ್ಕೆ ಹನ್ನೆರಡು ಸೂತ್ರಗಳು' ಚಿತ್ರದ ವಿವರಗಳ ಜೊತೆಗೆ ಇನ್ನೊಂದು ಮುಖ್ಯ ಸಂಗತಿ ಎಂದರೆ ಮೂಲ ತೆಲುಗು ಚಿತ್ರದ ಪೂರ್ಣ ಹಕ್ಕನ್ನು ತೆಗೆದಿಟ್ಟುಕೊಂಡು, ತೆರೆಗೆ ಬಿಡದೆ ಕನ್ನಡ ಚಿತ್ರ



(ಚಿತ್ರ ೭೬) 'ಗಜೇಂದ್ರ' ಚಿತ್ರದಲ್ಲಿ ಅಂಬರೀಷ್ ಮತ್ತು ಶಾಂತಮ್ಮ



(ಚಿತ್ರ ೭೭) 'ಅಮೃತ ಘಳಿಗೆ' ಚಿತ್ರದಲ್ಲಿ ಪದ್ಮಾವಾಸಂತಿ ಮತ್ತು ಶ್ರೀಧರ್

ಹೇಳಿದ ಹಾಗೆ ಅವರ ಚಿತ್ರಗಳ ಹಿಂದೆ ಅವರದೇ ಒಂದು ದಂಡು ಎಂದರೆ ಸಾಮಾನ್ಯವಾಗಿ ಅಂಬರೀಷ್, ಲೋಹಿತಾಶ್ವ, ಮುಖ್ಯಮಂತ್ರಿ ಚಂದ್ರು, ಸುಧೀರ್ ಮೊದಲಾದವರು ಇರುತ್ತಿದ್ದರು. ಹಾಗೆಯೇ ಈ ಚಿತ್ರದಲ್ಲಿ ವಜ್ರಮುನಿ, ಶಕ್ತಿಪ್ರಸಾದ್ ಸೇರಿದಂತೆ ಹಲವರು ಇದ್ದರು. 'ಗಜೇಂದ್ರ' ಚಿತ್ರದಲ್ಲಿ ಅಭಿನಯದಲ್ಲಿ ಗಮನಾರ್ಹವೆನಿಸಿದ್ದು ಸುಧೀರ್, ಮುಖ್ಯಮಂತ್ರಿ ಚಂದ್ರು, ಲೋಹಿತಾಶ್ವ, ಶಕ್ತಿಪ್ರಸಾದ್ ಹಾಗೂ ಮಾ।ವಿನಯ್. ರಾಜಕೀಯ ಚಿತ್ರವೆಂದರೆ ಸೋಮಶೇಖರ್ ಎನ್ನುತ್ತಿದ್ದ ದಿನಗಳವು. ಎಂ.ಡಿ.ಸುಂದರ್ ಅವರ ಬಿಗಿಯಾದ ಚಿತ್ರಕಥೆಯಿತ್ತು. ಪಾತ್ರಧಾರಿ-ಸಾಮಾಜಿಕ ಸಂದರ್ಭಗಳನ್ನು ಗಮನದಲ್ಲಿಟ್ಟೇ ಉದಯಶಂಕರ್ ರಚಿಸಿದ ಸಂಭಾಷಣೆಯ ಚುರುಕೂ ಇತ್ತು. ಶಿವಯ್ಯನವರ ಸಾಹಸ, ಚಿಟ್ಟಿಬಾಬು ಅವರ ಛಾಯಾಗ್ರಹಣ ಇವೆಲ್ಲ ಒಂದು ಯಶಸ್ಸಿನ ಹಿಂದಿನ ಶಕ್ತಿಗಳಾಗಿ ಒಗ್ಗೂಡಿ ರಂಜನೆಯನ್ನು ಒದಗಿಸಿದ್ದವು. ಥಟ್ಟನೆ ಜಿ.ಕೆ.ವೆಂಕಟೇಶ್‌ರ ಸಂಗೀತ ಕೊಂಚ ಅತ್ತ-ಇತ್ತ ಸೆಳೆದು ಓಟಕ್ಕೆ ಲಗಾಮು ಹಾಕುತ್ತಿತ್ತು. ಅದರಲ್ಲಿಯೂ 'ರಾಮ ಕೃಷ್ಣ ಗಾಂಧಿ ಬುದ್ಧ...', 'ಅಂತಸ್ತು ಎಲ್ಲಿದೆ, ಗೌರವ ಎಲ್ಲಿದೆ...' ಮತ್ತು 'ಪಾರ್ಟ್ನರ್ ಒಳ್ಳೇ ಪಾರ್ಟ್ನರ್...' ಹಾಡುಗಳು ಜನಮೆಚ್ಚುಗೆ ಗಳಿಸಿದ್ದವು. ಆಗ 'ಗಜೇಂದ್ರ' ಭಾರಿ ಸುದ್ದಿ ಮಾಡಿದ್ದ ಚಿತ್ರ.

ಪುಟ್ಟಣ್ಣನವರಿಗೆ ಮತ್ತೆ ಚೈತನ್ಯ ನೀಡುವಲ್ಲಿ ದೊಡ್ಡೇರಿ ವೆಂಕಟಗಿರಿರಾವ್‌ರ 'ಅವದಾನ' ಕಾದಂಬರಿ ಆಧಾರಿತ 'ಅಮೃತ ಘಳಿಗೆ' ಬಹುತೇಕ ಯಶಸ್ವಿಯಾಗಿತ್ತು. ಇಕ್ಕೇರಿ, ಕೆಳದಿ, ಜೋಗ್ ಮುಂತಾದ ಪ್ರದೇಶಗಳ ರಮ್ಯ ಹೊರಾಂಗಣವೇ ಕಥೆಗೆ ಪೂರಕವಾಗಿದ್ದುದು ಹಾಗೂ ಮೂರು ಪಾತ್ರಗಳ ಸುತ್ತವೇ ಮುಖ್ಯ ಘಟನೆಗಳು ಕೇಂದ್ರೀಕೃತವಾಗಿದ್ದುದು ಚಿತ್ರದ ವಿಶೇಷ ಅಂಶ. ಗಂಡು-ಹೆಣ್ಣಿನ ಸಂಬಂಧದ ನಡುವೆ ಇರುವಂಥ ರೂಢಿಗತ ನಂಬಿಕೆಗಳನ್ನು ಶೋಧಿಸುವ ಆಶಯದ ಈ ಚಿತ್ರಕ್ಕೆ ಛಾಯಾಗ್ರಾಹಕರು ಬಿ.ಎಸ್.ಬಸವರಾಜ್ ಅವರಿಗೆ ಮತ್ತು ಚಿತ್ರನಾಟಕಕ್ಕೆ ಪುಟ್ಟಣ್ಣ ಕಣಗಾಲ್, ಸಂಕಲನಕ್ಕೆ ವಿ.ಪಿ.ಕೃಷ್ಣ ೧೯೮೩-೮೪ರ ರಾಜ್ಯ ಪ್ರಶಸ್ತಿ ಪಡೆದುಕೊಂಡರು. ಈ ಚಿತ್ರದ ಮೂಲಕ ಭರತನಾಟ್ಯ ಕಲಾವಿದರಾದ ಇಂಜಿನಿಯರಿಂಗ್ ಪದವೀಧರ ಶ್ರೀಧರ್‌ರನ್ನು ನಾಯಕ ನಟರನ್ನಾಗಿ ಹಾಗೂ ದೂರವಾಣಿ ಇಲಾಖೆಯ ಬೆಂಗಳೂರು ವಿಭಾಗದಲ್ಲಿ ಉದ್ಯೋಗದಲ್ಲಿದ್ದ ಬಿ.ಆರ್.ಛಾಯಾ ಅವರನ್ನು ಗಾಯಕಿಯಾಗಿ ಪುಟ್ಟಣ್ಣ ಪರಿಚಯಿಸಿದರು.

'ಅಪರಂಜಿ' ಸತ್ಯ ಘಟನೆಯೊಂದನ್ನು ಆಧರಿಸಿ ಹಸಿಹಸಿಯಾಗಿ ರೂಪುಗೊಂಡಿದ್ದ ಚಿತ್ರ. ಶಿಕ್ಷಣ ರಂಗದಲ್ಲಿ ಬೆಳೆದಿರುವ ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಜಾತೀಯತೆಯ ಕ್ರೂರ ಮುಖಗಳನ್ನು ಬಿಚ್ಚಿಟ್ಟ ಈ ಚಿತ್ರ ಹಳ್ಳಿಗಳಲ್ಲಿ ಬೀಡು ಬಿಟ್ಟಿರುವ ಕೆಟ್ಟ ರಾಜಕೀಯಕ್ಕೆ ಕನ್ನಡಿ ಹಿಡಿಯಿತು. ತಲೆ ತುಂಬಾ ಆದರ್ಶಗಳನ್ನು ತುಂಬಿಕೊಂಡು, ಕಾಮುಕರ ನಡುವೆ ಬವಣೆ ಅನುಭವಿಸುವ ಶಿಕ್ಷಕಿಯ ಪಾತ್ರದ ಮೂಲಕ ಹೊಸ ನಾಯಕಿ ಮಹಾಲಕ್ಷ್ಮೀ ಕನ್ನಡಕ್ಕೆ ಕಾಲಿಟ್ಟರು. ಇವರು ನಂತರ ೧೯೮೪ರಿಂದ ೧೯೯೧ರವರೆಗೆ ಏಳು ವರ್ಷಗಳ ಕಾಲ ಕನ್ನಡದಲ್ಲಿ ಬೇಡಿಕೆಯ ಕಲಾವಿದೆಯಾಗಿ ಚಲಾವಣೆಯಲ್ಲಿದ್ದು ಸುಮಾರು ೨೫ ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯಿಸಿದರು. ಕಾರಿನ ತೀವ್ರ ಅಪಘಾತಕ್ಕೊಳಗಾಗಿ ಮತ್ತೆ ಚೇತರಿಸಿಕೊಂಡರು.

'ಅಪರಂಜಿ' ರವೀಂದ್ರನಾಥ್ ನಿರ್ದೇಶನದ ಪ್ರಥಮ ಚಿತ್ರ. ಇದಕ್ಕೂ ಮುಂಚೆ 'ಹೆಣ್ಣೆ ನಿನಗೇನು ಬಂಧನ'ವನ್ನು ನಿರ್ದೇಶಿಸಿದ್ದರೂ ಅದು ತೆರೆಕಂಡದ್ದು ೧೯೮೬ರಲ್ಲಿ. ಇವರು ಹುಣಸೂರು ಕೃಷ್ಣಮೂರ್ತಿ, ಕೆ.ಬಾಲಚಂದರ್, ಕೆ.ಎಸ್.ಪ್ರಕಾಶ್‌ರಾವ್ ಇವರುಗಳ ಬಳಿ ಸಹಾಯಕ ನಿರ್ದೇಶಕರಾಗಿದ್ದವರು. ಗಂಭೀರ ಸ್ವಭಾವದವರಾದ ಇವರಿಗೆ ಈ ಚಿತ್ರದ ನಂತರ ಮೂರು ವರ್ಷಗಳವರೆಗೆ ನಿರ್ದೇಶನದ ಅವಕಾಶ ದೊರೆಯಲಿಲ್ಲ.

'ಅಪರಂಜಿ' ಚಿತ್ರದ ಸಂಭಾಷಣೆಗಾಗಿ ಜನಪ್ರಿಯ ಕಾದಂಬರಿಕಾರ ಬಿ.ಎಲ್.ವೇಣು ೧೯೮೩-೮೪ರ ರಾಜ್ಯ ಪ್ರಶಸ್ತಿ ಪಡೆದುಕೊಂಡರು. ಬಹುಮುಖ ಪ್ರತಿಭೆಯ ದೊಡ್ಡಣ್ಣ ಇದೇ ಚಿತ್ರದ ಮೂಲಕ ಬೆಳಕು ಕಂಡ ಕಲಾವಿದ. ವೃತ್ತಿ ರಂಗಭೂಮಿಯ ಹಿನ್ನೆಲೆಯುಳ್ಳವರು. ಇವರನ್ನು ರವೀಂದ್ರನಾಥ್ ಪರಿಚಯಿಸಿದಾಗ ಇವರು ಮುಂದೆ ಚರಿತ್ರ ನಟರಾಗಿ ಕನ್ನಡದ ಬೆಳ್ಳಿತೆರೆಯ ಅನಿವಾರ್ಯ ಕಲಾವಿದರಾಗುತ್ತಾರೆಂದು ಯಾರೂ ಊಹಿಸಿರಲಿಲ್ಲ. ಖಳನಾಗಿ, ಜವಾಬ್ದಾರಿಯುತ ತಂದೆ-ಅಣ್ಣನಾಗಿ, ಸಂಪೂರ್ಣ ಹಾಸ್ಯ ಕಲಾವಿದನಾಗಿ ಸಹ ಕನ್ನಡ ಚಿತ್ರರಂಗದಲ್ಲಿ ದೊಡ್ಡಣ್ಣ ಬಹುಬೇಗ ಬೇರು ಬಿಟ್ಟರು. ೧೯೯೮ರ ಹೊತ್ತಿಗೆ ಇವರ ಅಭಿನಯದ ಚಿತ್ರಗಳ ಸಂಖ್ಯೆ ೩೦೦ನ್ನು ಮುಟ್ಟಿದ್ದು ಇವರ ಜನಪ್ರಿಯತೆಯನ್ನು ಹೇಳುತ್ತದೆ. ವಿಶಿಷ್ಟ ಶೈಲಿಯ ಮಾತುಗಾರಿಕೆ, ಗಂಭೀರ ಭಾವಾಭಿವ್ಯಕ್ತಿ ಎಲ್ಲದರಲ್ಲೂ ತಮ್ಮತನ ತೋರುತ್ತಾ ನಡೆವ ಇವರ ಅಭಿನಯಕ್ಕೆ ಅವರದೇ ಆದ ಒಂದು ಶೈಲಿಯಿದೆ. ಆದರೆ ಅವರ ಹಾಸ್ಯ ಕೆಲವೊಮ್ಮೆ ಗಾಂಭೀರ್ಯದ ಎಲ್ಲೆ ಮೀರಿ ಅಶ್ಲೀಲದ ಅಂಚು ಮುಟ್ಟಿರುವುದೂ ನಿಜ. ಅದು ಯಾವುದೇ ಕಲಾವಿದರ ಪ್ರಭಾವಗಳಿಂದ ಮುಕ್ತವಾಗಿದೆ- ಸ್ವತಂತ್ರವಾಗಿದೆ. 'ಅಪರಂಜಿ' ಚಿತ್ರ ಅವರೆಗೆ ಇದ್ದ ಜಾಡನ್ನು ಬ್ರೇಕ್ ಮಾಡಿ ತಿರುವು ಕೊಟ್ಟಿತು. ಈ ಚಿತ್ರಕ್ಕೆ ಛಾಯಾಗ್ರಾಹಕ ಮಧುಸೂದನ್ ಕೂಡಾ ನಿರ್ಮಾಪಕರಲ್ಲಿ ಒಬ್ಬರು. ರಜನೀಕಾಂತ್ ಚಿತ್ರಕ್ಕೆ ಸಹಕರಿಸಿ ಅತಿಥಿ ನಟನಾಗಿ ಅಭಿನಯಿಸಿದ್ದರು. ಅಶೋಕ್, ರವೀಂದ್ರನಾಥ್, ರಜನೀಕಾಂತ್ ಮೊದಲಾದವರೆಲ್ಲ ಮದರಾಸಿನ ಸಿನಿಮಾ ಶಿಕ್ಷಣ ವಿಭಾಗದಲ್ಲಿ ಸಹಪಾಠಿಗಳು. ಆ ಸ್ನೇಹವೇ ಇಲ್ಲಿ ವಿಶೇಷ ಆಸ್ಥೆಯಾಗಿ ಕೆಲಸವಾಗಲು ಕಾರಣ.

'ಶಿವಕನ್ಯೆ' ಬಹಳಷ್ಟು ನಿರೀಕ್ಷೆ ಇಟ್ಟುಕೊಂಡಿದ್ದ ಚಿತ್ರ. ಚಂದೂಲಾಲ್ ಜೈನ್ ಅವರಿಗೆ 'ಗರುಡರೇಖೆ'ಯ ಯಶಸ್ಸು ಗಮನ ಸೆಳೆದಿತ್ತು. ಮಾಧವಿ ಅವರನ್ನು, ಅವರ ಸರ್ಪ ನೃತ್ಯವನ್ನು ಬಳಸಿಕೊಳ್ಳಲೆಂದೇ 'ಶಿವಕನ್ಯೆ' ಚಿತ್ರ ಮಾಡಿದರು. ಹುಣಸೂರು ಕೃಷ್ಣಮೂರ್ತಿಗಳೇ ನಿರ್ದೇಶಿಸಿದರು. ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಹಾಕಲಾದ



(ಚಿತ್ರ ೭೮) 'ಅಪರಂಜಿ' ಚಿತ್ರದಲ್ಲಿ ಮಹಾಲಕ್ಷ್ಮೀ ಮತ್ತು ರಾಜೀವ್



(ಚಿತ್ರ ೭೯) 'ನಾಗರ ಮಹಿಮೆ' ಚಿತ್ರದಲ್ಲಿ ಸುಂದರಕೃಷ್ಣ ಅರಸ್ ಮತ್ತು ಶ್ರೀಪ್ರಿಯಾ

ಭರ್ಜರಿ ಸೆಟ್ ಭಾರಿ ಸುದ್ದಿ ಮಾಡಿತ್ತು. ನಾಗರಾಜರಾಯರ ಕಲಾನಿರ್ದೇಶನ ಚಿತ್ರದ ಮುಖ್ಯ ಅಂಶವಾಗಿತ್ತು. ಅತ್ಯಧಿಕ ಮೊತ್ತದ ಸಂಭಾವನೆಯನ್ನು ಚಿತ್ರದ ನಾಯಕಿ ಮಾಧವಿ ಪಡೆದರೆಂಬ ಸುದ್ದಿಯೂ ಇತ್ತು. ಆದರೆ ಚಿತ್ರ ನಿರೀಕ್ಷಿಸಿದ ಯಶಸ್ಸು ತರಲಿಲ್ಲ. ಬಹಳ ದಿನದ ನಂತರ ಗುರುರಾಜುಲುನಾಯ್ಡು ನಾರದನಾಗಿ ತೆರೆಗೆ ಬಂದರು. ರಾಜೀವ್-ಸುರೇಖಾ ಶಿವ-ಪಾರ್ವತಿಯಾಗಿ ಒಪ್ಪವೆನಿಸಿದರು. ತ್ಯಾಗರಾಜ ಅರಸು, ರೂಪಾದೇವಿ ಗಮನ ಸೆಳೆವಂಥ ಅಭಿನಯ ನೀಡಿದರು.

'ಒಂಟಿ ಧ್ವನಿ' ಚಿತ್ರಕ್ಕೆ ಪತ್ರಕರ್ತ ನರಸಿಂಹ ಅವರ ಸಂಭಾಷಣೆ ಇತ್ತು.

'ಗುರುಭಕ್ತಿ' ರೀಮೇಕ್ ಆದರೂ ಮಾಣಿಕ್‌ಚಂದ್ ಅವರ ಕೆಲವು ಸಾಹಸಗಳಿಗಾಗಿ ಗಮನಾರ್ಹ. ಧ್ವನಿ ದಾನ ಮಾಡುತ್ತಿದ್ದ ಕಲಾವಿದನೊಬ್ಬ ಒಂದೆರಡು ಕೋನಗಳಲ್ಲಿ ಅಂಬರೀಷ್‌ರನ್ನೇ ಹೋಲುತ್ತಿದ್ದರು. ಆತನ ಹೆಸರು ಆಗ ಹರ್ಷವರ್ಧನ್ (ನಿಜಕ್ಕೂ ಕೃಷ್ಣಮೂರ್ತಿ ಎಂದಿರಬೇಕು). ಚಿತ್ರದಲ್ಲಿ ಆತನೇ ಮುಖ್ಯ ಪಾತ್ರ. ಅಂಬರೀಷ್‌ರನ್ನು ಅತಿಥಿ ನಟರಾಗಿ ಕರೆದಿದ್ದರು. ಒಪ್ಪಿ ಬಂದಿದ್ದು ಅಂಬರೀಷ್‌ರ ದೊಡ್ಡತನ. ''ಕಿರಿಯರು ಮುಂದೆ ಬರೋಕೆ ನಮ್ಮ ಬೆಂಬಲ ಯಾವಾಗಲೂ ಉಂಟು'' ಎಂದಿದ್ದರು. ಏನೆ ಕಷ್ಟಪಟ್ಟರೂ ಆ ತರುಣ ಏನೂ ಸಾಧಿಸಲಿಲ್ಲ. ಕಡೆಗೆ ಅಂಬರೀಷ್, ಜಯಮಾಲಿನಿ, ವಿಜಯ್ ಇವರುಗಳು ಅತಿಥಿ ನಟರಾಗಿ ಬಂದೇ ಎಲ್ಲರ ಮನಸ್ಸನ್ನು ಗೆದ್ದರು.

'ನಾಗರ ಮಹಿಮೆ' ಕಲ್ಲೇಶ್ ನಿರ್ದೇಶನದ ಚಿತ್ರ. ಕಲ್ಲೇಶ್ ಬಹಳಷ್ಟು ಕಾಲ ಸಹಾಯಕ-ಸಹನಿರ್ದೇಶಕನಾಗಿಯೇ ಕೆಲಸ ಮಾಡಿದರು. ಅವರ ಚಿತ್ರ ನಿರ್ದೇಶಕನಾಗುವ ಮಹದಾಸೆಯನ್ನು ಶ್ರೀ ಗುರು ಫಿಲಂಸ್ ಸಂಸ್ಥೆಯು ಪೂರೈಸಿತು. ಜಿ.ಕೆ.ಕೃಷ್ಣಕುಮಾರ್ ಅವರ ತುಂಬ ವಿನೂತನವಾದ ಕಥೆ. ಕಥೆಯ ನಿರೂಪಣೆಯಲ್ಲಿ ಕಲ್ಲೇಶ್ ಹೊಸತನ ತಂದಿದ್ದರು. ಹುಣಸೂರು ಕೃಷ್ಣಮೂರ್ತಿಯವರ ಸಂಭಾಷಣೆಯಲ್ಲಿ ಅತ್ತ ಜನಪದವೂ ಅಲ್ಲ, ಇತ್ತ ಸಾಮಾಜಿಕವೂ ಅಲ್ಲದ ವಸ್ತುವಿಗೆ ಹೊಂದಿಸುವ ಪ್ರಯತ್ನ ಕಾಣಬಹುದಿತ್ತು. ಸುಂದರಕೃಷ್ಣ ಅರಸ್ ಶಹನಾಯ್ ವಾದಕನಾಗಿ ತುಂಬ ಸೊಗಸಾಗಿ ಅಭಿನಯಿಸಿದರು. ಅವರು ಆ ಪಾತ್ರದ ಬಗ್ಗೆ ತುಂಬ ಆಸಕ್ತಿಯನ್ನು ವಹಿಸಿ ಅಭಿನಯಿಸಿದರೆಂಬುದು ಅವರು ಅನೇಕ ಸಂದರ್ಶನಗಳಲ್ಲಿ ಆ ಕುರಿತು ಆಡಿದ ಮಾತುಗಳಿಂದ ವ್ಯಕ್ತವಾಗುತ್ತಿತ್ತು. ಗೀತೆಗಳೂ ಪ್ರಸಿದ್ಧ ಸಾಹಿತಿಗಳ ರಚನೆಯಲ್ಲಿ ಸೊಗಸಾಗಿ ಮೂಡಿಬಂದಿದ್ದವು. ಅಕಾಲದಲ್ಲಿ ರತ್ಯಾಸಕ್ತರಾಗಿದ್ದರಿಂದ ಶಾಪಗ್ರಸ್ತ ಮಗುವಿನ ಜನನ. ಮಗುವಿನ ಮುಖವೆಲ್ಲ ಕುರೂಪವಾಗಿದೆ. ಯಾರೂ ಹತ್ತಿರ ಸೇರಿಸುವುದಿಲ್ಲ. ಅಲ್ಲಿಂದಾಚೆಗೆ ಮಗು ಅಲೆದಾಡುತ್ತ ಪಡುವ ಕಷ್ಟಗಳು ಇತ್ಯಾದಿ. ಮುಖ್ಯವಾಗಿ ಸಂಗೀತದಲ್ಲಿ ಶಹನಾಯ್ ವಾದನ ಚೆನ್ನಾಗಿ ಅಳವಡಿಕೆಯಾಗಿತ್ತು. ಶುಭ ಸಮಾರಂಭಗಳು, ದೇವಸ್ಥಾನಗಳಲ್ಲಿ ಆರಾಧನೆಯ ಸಮಯ ಇವೆಲ್ಲ ಮಂಗಳಕರವಾದ ಸಂಗೀತವನ್ನು ಕೊಡುವ ಸಮಯಗಳು. ಅದು ಮನಸ್ಸನ್ನು ಆಹ್ಲಾದಗೊಳಿಸುವ ಸಂಗೀತವೂ ಆದಾಗ ನಿಜಕ್ಕೂ ತಾದಾತ್ಮ್ಯವಿರುತ್ತದೆ. ಅಂಥ ಪ್ರಯತ್ನ ಚಿತ್ರದಲ್ಲಿ ಇತ್ತು. ಹೊಸ ನಿರ್ದೇಶಕರು, ಚಿತ್ರ ಸೋತರೆ ಎಂಬ ಭಯ. ಆದರಿಂದಲೇ ಶಶಿಕಲಾ, ದಿನೇಶ್, ಮುಸುರಿ, ಉಮೇಶ್ ಮೊದಲಾದವರನ್ನು ಬಳಸಿ ಕೊಂಚ 'ಅತಿ' ಅನ್ನಿಸುವ ಹಾಸ್ಯವನ್ನು ಸೇರಿಸಿದ್ದರು. ಒಟ್ಟಾರೆ ಇರಬೇಕಿದ್ದ ಗಾಂಭೀರ್ಯವೇ ಜಾರಿಹೋಗಿತ್ತು. ಕಲ್ಲೇಶ್ ಉತ್ತಮ ನಿರ್ದೇಶಕನಾಗಬಲ್ಲ ಎಂಬ ಭರವಸೆಯಂತೂ ಬರುತ್ತಿತ್ತು. ಆದರೆ ಮತ್ತೆ ಕಲ್ಲೇಶ್ ಚಿತ್ರ ನಿರ್ದೇಶನಕ್ಕೆ ಪರ್ವಗಟ್ಟಲೆ ಕಾದರು. ವಿಧಿಯಿಲ್ಲದೆ ಸಹನಿರ್ದೇಶನಕ್ಕೆ ವಾಪಸಾದರು. ಚಿತ್ರರಂಗದಲ್ಲಿ ನಿರ್ದೇಶಕನಾದರೆ ಮುಂದೆ ಆತ ಹಿಂದೆ ಬರಲಾರ ಅಥವಾ ಯಾರೂ ಕರೆಯುವುದಿಲ್ಲ. ಅವನಿಗೇ ಅದೊಂದು ಹಿಂಬಡ್ತಿ ಅನ್ನಿಸಲೂಬಹುದು. ಒಟ್ಟಾರೆ ಬದುಕು ಅಸಹನೀಯ ಆಗುವುದಂತೂ ನಿಜ. ಕಲ್ಲೇಶ್ ಈ ಸಂಪ್ರದಾಯಕ್ಕೆ ಹೊರತೇನಾಗಲಿಲ್ಲ. ಕಸುಬು ಗೊತ್ತಿದ್ದೂ ಕಲ್ಲೇಶ್ ಅಂಥವರು ಏನೂ ಸಾಧಿಸಲು ಸಾಧ್ಯವಾಗದೇ ಉಳಿಯುವಂಥ ಸ್ಥಿತಿ.

'ರುದ್ರನಾಗ'ದಲ್ಲಿ ಮಾಧವಿಯವರ ಪಾತ್ರ ವಿಭಿನ್ನವಾಗಿತ್ತು. ಒಂದು ನೃತ್ಯದ ಭಂಗಿಗಳು ಬಹುಕಾಲ ಸುದ್ದಿಯಲ್ಲಿದ್ದವು. ಅಮೃತ ಆರ್ಟ್ಸ್‌ನವರು ರಾಜಾಚಂದ್ರ ನಿರ್ದೇಶನದಲ್ಲಿ ತೆರೆಗೆ ತಂದ 'ಕಲಿಯುಗ' ಚಿತ್ರದಿಂದ ರಾಜೇಶ್ ಮತ್ತೆ ಜನಕ್ಕೆ ಹತ್ತಿರವಾದರು.

'ವಿಘ್ನೇಶ್ವರ ವಾಹನ' ಬಿ.ಆರ್.ಜೆ.ಫಿಲಂಸ್‌ನ ತುಳಸಿ ಅವರ ನಿರ್ಮಾಣ. ಛಾಯಾಗ್ರಾಹಕರೂ ಆಗಿದ್ದ ಪಿ.ಎಸ್.ಪ್ರಕಾಶ್ ಅವರು ನಿರ್ದೇಶಿಸಿದ್ದ ಚಿತ್ರ. 'ಗಣೇಶನ ಮಹಿಮೆ' ಇತ್ಯಾದಿಗಳ ಯಶಸ್ಸಿನ ಬೆನ್ನ ಹಿಂದೆ ಈಶ್ವರನ ವಾಹನ ನಂದಿಯ ಮಹಿಮೆಗಳಿದ್ದ ಹಾಗೆ ಗಣೇಶನ ವಾಹನದ ಬಗ್ಗೆ ಒಂದು ಕಥೆಯೇಕಾಗಬಾರದೆಂದು ಯೋಚಿಸಿ ಸಿದ್ಧ ಮಾಡಿದ ಕಥೆ. ಎಂ.ಡಿ.ಸುಂದರ್ ಬರೆದ ಕಥೆ-ಚಿತ್ರಕಥೆ. ಸಾವಿರಾರು ಇಲಿಗಳನ್ನು ಬಳಸಿದರೆಂಬ ವಿಚಿತ್ರ ಪ್ರಚಾರವಿತ್ತು. ನಾಯಕನಟ ಪ್ರಭಾಕರ್ ಚಿತ್ರದ ಬಗ್ಗೆ ಅಪಾರ ಭರವಸೆ ಇಟ್ಟುಕೊಂಡಿದ್ದರು. ಆದರೆ ಇಲಿಗಳನ್ನು ಇತರ ಸಾಕು ಪ್ರಾಣಿಗಳನ್ನು ನಿಯಂತ್ರಿಸಿದಂತೆ ನಿಯಂತ್ರಿಸಲು ಸಾಧ್ಯವಾಗಿರಲಿಲ್ಲ. ಕಷ್ಟಪಟ್ಟು ತೆಗೆದರೂ ತೀರಾ ಪೇಲವ ಎನ್ನಿಸಿತು. ನೋಡುಗನಲ್ಲಿ ಇಲಿಗಳ ಬಗ್ಗೆಯಾಗಲಿ, ಅವುಗಳನ್ನು ವಾಹನ ಮಾಡಿಕೊಂಡ ಗಣೇಶನ ಬಗೆಗಾಗಲಿ ಏನೂ ಅನ್ನಿಸಲಿಲ್ಲ. ಮುಖ್ಯವಾಗಿ ನಮ್ಮ ಬದುಕಿನಲ್ಲಿ ಸೇರಿಹೋಗದ ಅಂಶವನ್ನು ಸೇರಿಸಿ ಪುರಾಣ ಪರಂಪರೆ ಅಂದರೆ ಒಪ್ಪುವುದು ಕಷ್ಟ. ನಮ್ಮ ಪುರಾಣದಲ್ಲಿ ಇಲಿಗಳಿಗೆ ಅಂಥ ಸ್ಥಾನವಿಲ್ಲ ಎಂಬುದನ್ನು ಗಮನಿಸಬೇಕು. ಚಿತ್ರದಲ್ಲಿ ಬಳಸಿದ್ದ ಬಿಳಿ ಇಲಿ ಪುಟಪುಟನೆ ಓಡಾಡಿದಾಗ ಖುಷಿ ಎನ್ನಿಸಿದ್ದು ಬಿಟ್ಟರೆ ಇಷ್ಟು ಇಲಿಗಳನ್ನು ತಂದದ್ದು, ಅವುಗಳ ಪಾಡು ಕಂಡಾಗ ಈ ಹಿಂಸೆ ಬೇಕಿತ್ತೆ ಅನ್ನಿಸಿದ್ದೂ ಉಂಟು. ಜಯಮಾಲಾ ಮತಿಭ್ರಮೆಗೊಳಗಾದ ಕೆಲವು ಸನ್ನಿವೇಶಗಳಲ್ಲಿ ಉತ್ತಮವಾಗಿ ಅಭಿನಯಿಸಿದ್ದರು. ವಿಪರ್ಯಾಸವೆಂದರೆ ಉತ್ತಮ ಚಿತ್ರಕಥಾ ಲೇಖಕ ಎಂ.ಡಿ.ಸುಂದರ್ ತಮ್ಮ ಚಿತ್ರಕ್ಕೇ ಬಂಧಗೆಟ್ಟ ಚಿತ್ರಕಥೆ ಹೊಂದಿಸಿದ್ದು. ಈ ಚಿತ್ರ ಚಿ.ಉದಯಶಂಕರ್ ಅವರಿಗೆ ೨೦೦ನೇ ಚಿತ್ರವಾಗಿತ್ತು.

''... ಚಿತ್ರದ ಬಿಡುಗಡೆಯ ನಂತರ ನನಗೆ ಅನೇಕ ಪತ್ರಗಳು ಬಂದವು. ನಾವು 'ಟೈಗರ್' ಅಂದಿದೀವಿ. ನೀವು ಒಂದು 'ಇಲಿ'ಗೆ ಸೋಲೋದೆ ? ಇದು ನಮಗೆ ಒಪ್ಪಿಗೆ ಇಲ್ಲ ಅಂತ. ಚಿತ್ರದ ನಿರ್ಮಾಪಕರು ನನ್ನ ಸ್ನೇಹಿತರು. ಕಥೆ ಕೇಳದೆಯೆ ಒಪ್ಪಿಕೊಂಡೆ. ಅದರ ಫಲ ಅನುಭವಿಸಿದೆ..'' ಎಂದಿದ್ದರು ನಟ ಪ್ರಭಾಕರ್.

'ಶ್ರಾವಣ ಬಂತು' ಚಿತ್ರ 'ಕಲ್ಯಾಣ ರಾಮನ್', 'ಚಿನ್ನದಂಥ ಮಗ' ರೀತಿಯ ಪುನರ್ ಜನ್ಮದ ಹಿನ್ನೆಲೆಯಿರುವ ಕಥೆ. ಪ್ರೇತಾತ್ಮದ ಆತ್ಮೀಯ ಗೆಳೆಯನ ನೆನಪಿನ ಸಹಾಯದಿಂದ ಹಿಂದಿನ ಜನ್ಮದ ಪ್ರೇಯಸಿಯನ್ನು, ಘಟನೆಗಳನ್ನು ನೆನಪಿಸಿಕೊಂಡು ಈ ಜನ್ಮದಲ್ಲಿ ಪಡೆಯಲು ಹಾಗೂ ತನ್ನ ತಂದೆಯ ಮನಸ್ಸನ್ನು ಪರಿವರ್ತನೆ ಮಾಡಲು ನಾಯಕ ಹೂಡುವ ತಂತ್ರಗಳು ಈ ಚಿತ್ರದಲ್ಲಿ ಪ್ರಧಾನವಾಗಿವೆ. ಇವು ರಂಜನೀಯ ನಿರೂಪಣೆ, ನವಿರಾದ ಹಾಸ್ಯಗಳ ಮೂಲಕ ವಿಶಿಷ್ಟ ರೀತಿಯ ಪ್ರೇಮಕಥೆಯನ್ನು ನೋಡಿದ ಅನುಭವ ಉಂಟುಮಾಡುತ್ತವೆ. ಅದರೂ ೫೦ ವರ್ಷಗಳ ಕಾಲದ ಅಂತರವನ್ನು ಹೊಂದಿಸಲು ನಿರ್ದೇಶಕರು ಸಾಕಷ್ಟು ಹೆಣಗಾಡಿರುವುದು ಕಾಣುತ್ತದೆ. ಎಂ.ರಂಗರಾವ್ ಸಂಗೀತದಲ್ಲಿ 'ಶ್ರಾವಣ ಮಾಸ ಬಂದಾಗ...', 'ಹೊಸ ಬಾಳಿನ ಹೊಸಿಲಲಿ...', 'ಮೇರಿ ಮೇರಿ ಮೇರಿ ಐ ಲವ್ ಯೂ...' ಹಾಡುಗಳು ಅತ್ಯಂತ ಜನಪ್ರಿಯವಾದವು. ಧರ್ಮಸ್ಥಳದಲ್ಲಿ ಆರಂಭವಾಗಿದ್ದ ಸಾಮೂಹಿಕ ವಿವಾಹ ಪದ್ಧತಿಯನ್ನು ರಾಜ್ಯದಾದ್ಯಂತ ಜನಪ್ರಿಯಗೊಳಿಸುವುದರಲ್ಲಿ ಈ ಚಿತ್ರದ ಒಂದು ಹಾಡು ತುಂಬಾ ಪರಿಣಾಮ ಬೀರಿತು. ರಘು ಹಾಗೂ ಕುಮಾರನ ದ್ವಿಪಾತ್ರದಲ್ಲಿ ರಾಜಕುಮಾರ್ ವೈವಿಧ್ಯಮಯವಾಗಿ ನಟಿಸಿದ್ದರು.

೭೬ ಚಿತ್ರಗಳ ಉಬ್ಬರದ ಸಂಖ್ಯೆಯೊಂದಿಗೆ ೧೯೮೪ಕ್ಕೆ ಹಲವಾರು ವೈಶಿಷ್ಟ್ಯಗಳಿವೆ. ಈ ವರ್ಷದಲ್ಲಿಯೇ ಆರತಿ, ಸುಂದರಕೃಷ್ಣ ಅರಸ್, ಶಿವರಾಂ, ಮುಸುರಿಕೃಷ್ಣಮೂರ್ತಿ



(ಚಿತ್ರ ೮೦) 'ಶ್ರಾವಣ ಬಂತು' ಚಿತ್ರದಲ್ಲಿ ಆದವಾನಿ ಲಕ್ಷ್ಮೀದೇವಿ, ಊರ್ವಶಿ, ರಾಜಕುಮಾರ್

ಮುಂತಾದವರು ೧೦೦ ಚಿತ್ರಗಳನ್ನು ಪೂರೈಸಿದರು. ೭೦ರ ದಶಕದಲ್ಲಿ ನಾಯಕಿಯರಾಗಿ ವಿಜೃಂಭಿಸಿ ಚಿತ್ರ ರಸಿಕರ ಮನಸ್ಸನ್ನು ಸೂರೆಗೊಂಡಿದ್ದ ಕೆಲವು ನಟಿಯರು ಅತ್ತೆ , ತಾಯಿ, ಅತ್ತಿಗೆ, ಅಜ್ಜಿಯಾಗಿ ತಮ್ಮೊಂದಿಗೆ ನಾಯಕನಾಗಿ ಅಭಿನಯಿಸಿದ್ದ ನಟರ ಜೊತೆ ಕಾಣಿಸಿಕೊಂಡರು. ಈ ಪ್ರಮುಖ ಪಲ್ಲಟದ ಮೊದಲ ಉದಾಹರಣೆ 'ಗೆಜ್ಜೆಪೂಜೆ' ಚಿತ್ರದಲ್ಲಿದೆ. ಈ ಚಿತ್ರ ತೆರೆ ಕಾಣುವುದಕ್ಕಿಂತ ಮುಂಚಿನ ದಿನಗಳಲ್ಲಿ ಬಹಳ ಮಂದಿ ಲೀಲಾವತಿಯವರ ಚಿತ್ರರಂಗದ ಬದುಕು ಮುಗಿದೇ ಹೋಯಿತು ಅನ್ನುತ್ತಿದ್ದರು. ಅದರೆ ಲೀಲಾವತಿಯವರಿಗೆ ಪುಟ್ಟಣ್ಣ ತಮ್ಮ 'ಗೆಜ್ಜೆಪೂಜೆ' ಚಿತ್ರದ ಮೂಲಕ 'ತಾಯಿ'ಯಾಗಿ ಪುನರ್ಜನ್ಮ ನೀಡಿದರು. ಇವರಿಗಿಂತ ಸ್ವಲ್ಪ ತಡವಾಗಿ ಜಯಂತಿ ಕೂಡ ಇದೇ ಹಾದಿಗೆ ಹೊರಳಿದರು. 'ಗಂಡ ಹೆಂಡತಿ' ಹಾಗೂ 'ತಾಯಿಗಿಂತ ದೇವರಿಲ್ಲ' ಚಿತ್ರಗಳಲ್ಲಿ ಮಂಜುಳಾರ ತಾಯಿಯಾಗಿ ನಟಿಸಲು ಜಯಂತಿ ಒಪ್ಪಿಕೊಂಡಾಗ ಬಹಳ ಮಂದಿ ಅವರಿಗಿದ್ದ ಇಮೇಜಿನ ಹಿನ್ನೆಲೆಯಲ್ಲಿ ಅಶ್ಚರ್ಯ ವ್ಯಕ್ತಪಡಿಸಿದ್ದರು. ಅದರೆ ಬದಲಾಗುತ್ತಿದ್ದ 'ಕಾಲ'ಕ್ಕೆ ಜಯಂತಿಯವರಂಥ ವೃತ್ತಿನಿರತ ಕಲಾವಿದೆ ಹೊಂದಿಕೊಳ್ಳುವುದು ಅನಿವಾರ್ಯವಾಗಿತ್ತು. ಅವರು ಬಹಳ ಬೇಗ ಹೊಂದಿಕೊಂಡರು ಕೂಡ. 'ಶ್ರೀಮಂತನ ಮಗಳು' ಹಾಗೂ 'ದೇವರು ಕೊಟ್ಟ ವರ' ಚಿತ್ರಗಳಲ್ಲಿ ವಿಷ್ಣುವರ್ಧನ್‌ರ ನಾಯಕಿಯಾಗಿದ್ದವರು 'ಕಲ್ಲು ವೀಣೆ ನುಡಿಯಿತು', 'ನಾಗ ಕಾಳ ಭೈರವ' ಹಾಗೂ 'ಬೆಂಕಿ ಬಿರುಗಾಳಿ' ಚಿತ್ರಗಳಲ್ಲಿ ಅವರಿಗೆ ತಾಯಿಯಾಗಿ ಅಭಿನಯಿಸಿದರು. ನಂತರ ಅಂಬರೀಷ್‌ರ 'ಗೂಂಡಾ ಗುರು' ಹಾಗೂ ಇನ್ನೂ ಕೆಲವು ಚಿತ್ರಗಳಲ್ಲಿ ಮತ್ತು ಪ್ರಭಾಕರ್ ಅಭಿನಯದ 'ತಾಯಿನಾಡು' ಮತ್ತಿತರ ಚಿತ್ರಗಳಲ್ಲಿ ತಾಯಿಯಾದರು. ೧೯೮೫ರ ನಂತರ ಬೆಳ್ಳಿ ತೆರೆಗೆ ಬಂದ ಬಹುತೇಕ ಯುವ ನಾಯಕ ನಟರಿಗೆ ಖಾಯಂ 'ತಾಯಿ'ಯಾಗಿ ತಮ್ಮ ವೃತ್ತಿ ಬದುಕಿನ ಮತ್ತೊಂದು ಮಜಲನ್ನು ಮುಟ್ಟಿದರು. ಜನರ ಮನಸ್ಸು ಸೃಷ್ಟಿಸುವ 'ಇಮೇಜ್' ಎಂಬ ಮೋಹಿನಿ ಕಲಾವಿದರನ್ನು ಯಾವಾಗಲೂ ಕಾಡುತ್ತಿರುತ್ತದೆ. ಲೀಲಾವತಿ, ಜಯಂತಿಯವರಂಥ ಪ್ರಬುದ್ಧ ಕಲಾವಿದೆಯರಿಗೆ ಪಾತ್ರ ಮತ್ತು ಅಲ್ಲಿ ಅವರ ಅಭಿನಯ ಸಾಮರ್ಥ್ಯಕ್ಕಿರುವ ಸವಾಲುಗಳು ಮಾತ್ರ ಮುಖ್ಯವಾಗುತ್ತವೆ. ನಿಜವಾದ ಕಲಾವಿದರಿಗೆ ಅಭಿನಯವೇ ಮುಖ್ಯ, ಇಮೇಜ್ ಅಥವಾ ಜನಪ್ರಿಯತೆ ಅಲ್ಲ. ಸತ್ವ ಇದ್ದರೆ ಅವು ಹಿಂದೆಯೇ ಬರುತ್ತವೆ. ಇವರಿಬ್ಬರ ಬದುಕಿನಲ್ಲಿ ಅದದ್ದೂ ಅದೇ.

ಪ್ರೇಮಾ ಭಟ್ ಅವರ 'ಸುಜಾತ' ಕಾದಂಬರಿಯನ್ನು ಆಧರಿಸಿದ 'ಬೆಕ್ಕಿನ ಕಣ್ಣು' ಸಾಧಾರಣ ಚಿತ್ರ. ಎಸ್.ಶಿವರಾಂರ ೧೦೦ನೆಯ ಚಿತ್ರವಾಗಿ ಇದು ಉಲ್ಲೇಖಾರ್ಹ. ೧೯೬೫ ರಲ್ಲಿ ಕು.ರ.ಸೀತಾರಾಮಶಾಸ್ತ್ರಿಯವರ ನಿರ್ದೇಶನದ 'ಬೆರೆತ ಜೀವ' ಚಿತ್ರದ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದ್ದ ಇವರು ವರ್ಷಕ್ಕೆ ಒಂದೋ ಎರಡೋ ಚಿತ್ರಗಳಲ್ಲಿ ಅಭಿನಯಿಸುತ್ತಾ ಬಂದು ೧೯೭೩ರ ವೇಳೆಗೆ ೨೫ ಚಿತ್ರಗಳನ್ನು ಪೂರೈಸಿದ್ದರು. 'ಹೆಣ್ಣು ಸಂಸಾರದ ಕಣ್ಣು' ಶಿವರಾಂರವರ ೨೫ನೆಯ ಚಿತ್ರ. ಆ ವೇಳೆಗೆ ಚಿತ್ರರಂಗದಲ್ಲಿಯೂ ಚಟುವಟಿಕೆಗಳು ಹೆಚ್ಚಿದ್ದವು. ೧೯೭೮ರಲ್ಲಿ ತೆರೆಕಂಡ 'ಪ್ರೇಮಾಯಣ' ೫೦ನೆಯ ಚಿತ್ರವಾಯಿತು. ಇಷ್ಟು ಚಿತ್ರಗಳನ್ನು ಪೂರೈಸಿದ್ದು ೧೩ ವರ್ಷಗಳಲ್ಲಿ. ನಂತರ ಐದಾರು ವರ್ಷಗಳಲ್ಲೇ ಹೆಚ್ಚಿನ ಬೇಡಿಕೆ ಕುದುರಿದ್ದರಿಂದ ಶತಕದ ಗುರಿಯನ್ನು ಮುಟ್ಟಿದರು. 'ಬೆಕ್ಕಿನ ಕಣ್ಣು' ಆ ಸ್ಥಾನವನ್ನು ಪಡೆದುಕೊಂಡಿತು. ಈ ಸಂಬಂಧವಾಗಿ ಚಿತ್ರರಸಿಕರು ಬೆಂಗಳೂರಿನ ಪುರಭವನದಲ್ಲಿ ೧೯೮೫ರ ಫೆಬ್ರವರಿ ೭ ರಂದು ಶಿವರಾಂರವರಿಗೆ ಸಾರ್ವಜನಿಕ ಸಮಾರಂಭವನ್ನು ಏರ್ಪಡಿಸಿ 'ವಿನೋದ ವಿದ್ಯಾಸಾಗರ' ಬಿರುದನ್ನಿತ್ತು ಗೌರವಿಸಿದರು. 'ಪ್ರೇಮಜ್ಯೋತಿ' ಕನ್ನಡದ ರಂಗಭೂಮಿ ಹಿನ್ನೆಲೆಯ ಮತ್ತೊಬ್ಬ ಹಿರಿಯ ಕಲಾವಿದ ರಾಜಾನಂದ್‌ರ ನೂರನೆಯ ಚಿತ್ರವಾಗಿತ್ತು.

ನಟ ವಿಷ್ಣುವರ್ಧನ್ ಹಾಗೂ ನಿರ್ದೇಶಕ ರಾಜೇಂದ್ರಸಿಂಗ್ ಬಾಬು ಅವರ ವೃತ್ತಿ ಬದುಕಿನ ಬಹು ಮುಖ್ಯ ಮೈಲಿಗಲ್ಲಾಗಿ ಸೃಷ್ಟಿಯಾದ ಚಿತ್ರ 'ಬಂಧನ'. ಈ ಚಿತ್ರದ ಯಶಸ್ಸು ಹಾಗೂ ಈ ಚಿತ್ರದಲ್ಲಿನ 'ಪ್ರೇಮಕ್ಕಾಗಿ ತ್ಯಾಗ' ಮಾಡಿದ ಅಂಶವೇ ಮುಖ್ಯವಾಗಿ ಚಿತ್ರ ಮಹತ್ವದ್ದಾಗಿದೆ. ಬೆಂಗಳೂರಿನಲ್ಲಿ ಈ ಚಿತ್ರ ಪ್ರದರ್ಶನವಾಗುತ್ತಿದ್ದಾಗಲೇ ಸಂತೋಷ್ ಚಿತ್ರಮಂದಿರದಲ್ಲಿ 'ಶರಾಬಿ', ಪಲ್ಲವಿಯಲ್ಲಿ 'ಸಾಗರ ಸಂಗಮಂ', ಪ್ರದೀಪ್‌ನಲ್ಲಿ 'ಹೀರೋ' ಚಿತ್ರಗಳು ರಜತೋತ್ಸವ ಆಚರಿಸಿ ಸ್ವರ್ಣಮಹೋತ್ಸವದತ್ತ ನಡೆದಿದ್ದವು. ಇವೆಲ್ಲವುಗಳ ಬಿರುಗಾಳಿಯಲ್ಲೂ 'ಬಂಧನ' ಗಟ್ಟಿಯಾಗಿ ನಿಂತಿತು. ಇದೆಲ್ಲಕ್ಕಿಂತ ಹೆಚ್ಚಾಗಿ ಯುವಕ-ಯುವತಿಯಲ್ಲಿ ಹುಚ್ಚು ಉಂಟುಮಾಡಿ, ಒಂದೆರಡು ವರ್ಷಗಳಿಂದ ಮಸುಕಾಗಿದ್ದ ವಿಷ್ಣುವರ್ಧನ್‌ರ ಇಮೇಜನ್ನು ಮತ್ತೆ ಹೆಚ್ಚಿಸಿತ್ತು. ವಿಷ್ಣು ಹೆಸರು ಎಲ್ಲರ ನಾಲಿಗೆಯ ಮಾತಾಯಿತು.

'ಬಂಧನ' ತೆರೆಕಾಣುವ ಮುನ್ನವೇ ವಿಷ್ಣುವರ್ಧನ್ ಚಿತ್ರರಂಗದಿಂದ ನಿವೃತ್ತಿಯ ಮಾತನಾಡಿದ್ದರು. ೧೯೮೪ರ ಸೆಪ್ಟೆಂಬರ್ ೯ ರಂದು ಸಂಜೆ ದಿಢೀರನೆ ಮದರಾಸಿನಿಂದ ನಗರಕ್ಕೆ ಬಂದ ಅವರು ಕೆಲವು ಪತ್ರಕರ್ತರೆದುರು ತಾನು ಕನ್ನಡ ಚಿತ್ರರಂಗದಿಂದ ನಿವೃತ್ತಿಯಾಗುತ್ತಿದ್ದೇನೆ ಎಂದು ಗಂಭೀರವಾಗಿ ಹೇಳಿಕೊಂಡರು. ಅದಕ್ಕೆ ಅವರು ಕೊಟ್ಟ ಕಾರಣಗಳು ಈ ಹಿಂದೆ ಕೊಟ್ಟಿದ್ದಂಥವೇ. ಬೆದರಿಕೆ ಕರೆಗಳು ಬರುತ್ತಿರುವುದು, ಬೈಯ್ಯುವುದು ಹಾಗೂ ಅವರು ಅಭಿನಯಿಸಿದ ಚಿತ್ರಗಳು ನಾನಾ ಅಡ್ಡಿ - ಆತಂಕಗಳನ್ನು ಎದುರಿಸುತ್ತಿರುವುದು ವಿಪರೀತವಾಗುತ್ತಿದೆ ಎಂಬುದು. ವಿಷ್ಣು ನಿವೃತ್ತಿಯ ಘೋಷಣೆ ಅವರ ಎದುರಿಗೆ ಕುಳಿತಿದ್ದ ಪತ್ರಕರ್ತರಿಗೆ ಹೊಸ ಸಂಗತಿಯಾಗಿರಲಿಲ್ಲವಾದ್ದರಿಂದ ಯಾರೂ ಚಕಿತಗೊಳ್ಳಲಿಲ್ಲ. ಅದರೆ ಈ ಬಾರಿಯ ಮಾತುಗಳಲ್ಲಿ ದೃಢತೆ ಕಂಡಿದ್ದರಿಂದ ಅವನ್ನು ಗುರುತಿಸಿ ಹಾಗೆಯೇ ಬರೆದರು. ಆಗಿದ್ದ ವಾತಾವರಣದಲ್ಲಿ ವಿಷ್ಣುವರ್ಧನ್ ನಿವೃತ್ತಿಯ ಹೇಳಿಕೆ ನಂಬುವಂತಿತ್ತು. ಹಾಗಾಗಿಯೇ ಉದ್ಯಮದಿಂದ ಅನಿರೀಕ್ಷಿತ,



(ಚಿತ್ರ ೮೧) 'ಬೆಕ್ಕಿನ ಕಣ್ಣು' ಚಿತ್ರದಲ್ಲಿ ಮುಸುರಿ, ಶಿವರಾಂ ಮತ್ತು ದಿನೇಶ್



(ಚಿತ್ರ ೮೨) 'ಬಂಧನ' ಚಿತ್ರದಲ್ಲಿ ಜೈಜಗದೀಶ್, ಸುಹಾಸಿನಿ, ವಿಷ್ಣುವರ್ಧನ್

ಅಸಗತ್ಯ, ಆತುರದ ಕ್ರಮ ಎಂಬ ಪ್ರತಿಕ್ರಿಯೆ ವ್ಯಕ್ತವಾಯಿತು. ಈ 'ಆಪ್ತ' ಪತ್ರಿಕಾಗೋಷ್ಠಿ ನಡೆದ ಒಂದು ವಾರದ ನಂತರ ರಾಜಕುಮಾರ್ ಅಭಿಮಾನಿಗಳ ಸಂಘವು ಪತ್ರಿಕಾಗೋಷ್ಠಿ ಕರೆಯಿತು. ಸಂಘದ ಗೌರವಾಧ್ಯಕ್ಷ ಸಿ.ವಿ.ಎಲ್.ಶಾಸ್ತ್ರಿಯವರು ಹಾಜರಿದ್ದ ಗೋಷ್ಠಿಯಲ್ಲಿ ಸಂಘದ ಪದಾಧಿಕಾರಿಗಳು "ವಿಷ್ಣುವರ್ಧನ್ ಆರೋಪಗಳು ತಮ್ಮ ಸಂಘವನ್ನು ಗುರಿಯಾಗಿಟ್ಟುಕೊಂಡಿವೆ" ಎಂದು ಹೇಳಿ "ಈ ನಿರ್ಧಾರದ ಹಿಂದೆ ಯಾರದೋ ಚಿತಾವಣೆಯಿದೆ. ಅಲ್ಲದೆ ವಿಷ್ಣುವರ್ಧನ್ ಹೆಚ್ಚಿನ ಹಣ ಸಂಪಾದನೆ ಮಾಡಲು ಬೇರೆ ಭಾಷೆಗಳ ಚಿತ್ರಗಳಲ್ಲಿ ಅಭಿನಯಿಸಲು ತೀರ್ಮಾನಿಸಿರುವುದರಿಂದ, ಕನ್ನಡ ಚಿತ್ರರಂಗವನ್ನು ತೊರೆಯಲು ಅವರಿಗೆ ಒಂದು ನೆಪ ಬೇಕಾಗಿತ್ತು. ಆದ್ದರಿಂದಲೇ ಸಲ್ಲದ ಆರೋಪಗಳನ್ನು ಮಾಡಿದ್ದಾರೆ" ಎಂದು ಪ್ರತಿಕ್ರಿಯಿಸಿದರು. ನಂತರ ಇದನ್ನು ವಿಷ್ಣುವರ್ಧನ್ ಅಲ್ಲಗಳೆದರು. ಪತ್ರಿಕೆಗಳಲ್ಲಿ ಅವರ ಅಭಿಮಾನಿಗಳು ಹಾಗೂ ಉದ್ಯಮದ ಗಣ್ಯರನೇಕರು ನಿವೃತ್ತಿಯಾಗದಿರುವಂತೆ ಒತ್ತಾಯ ತರತೊಡಗಿದರು. ಅವರಿಗೆ ರಕ್ಷಣೆ ಕೊಡುವಂತೆ ರಾಜಕುಮಾರ್ ಅಭಿಮಾನಿ ಸಂಘ ಮುಖ್ಯಮಂತ್ರಿಗಳನ್ನು ಕೋರಿತು. ರಾಜ್ಯದ ಕೆಲವಾರು ಊರುಗಳಲ್ಲಿ 'ವಿಷ್ಣು ಬೇಕು' ಎಂಬ ಫಲಕಗಳನ್ನು ಹಿಡಿದು ಮೆರವಣಿಗೆಗಳಾದವು. ವಾರ್ತಾ ಸಚಿವರಾಗಿದ್ದ ಡಾ. ಜೀವರಾಜ್ ಆಳ್ವ ಕಲಾವಿದರಿಗೆ ಎಲ್ಲಾ ರೀತಿಯ ರಕ್ಷಣೆ ಕೊಡುವುದಾಗಿ ಹೇಳಿದರು. ಫಿಲಂ ಚೇಂಬರ್ ಅಧ್ಯಕ್ಷ ಜಿ.ಸಿ.ಎಸ್.ನಾರಾಯಣ್ "ಅವರು ಈ ಬಗ್ಗೆ ನಮಗೆ ಮೊದಲೇ ತಿಳಿಸಿದ್ದರೆ ಅಗತ್ಯ ಕ್ರಮಗಳನ್ನು ಕೈಗೊಳ್ಳಬಹುದಾಗಿತ್ತು" ಎಂದು ನಿವೃತ್ತಿಯನ್ನು ಅನುಮೋದಿಸುವ ರೀತಿಯಲ್ಲಿ ಹೇಳಿದರು.

ಕಲಾವಿದರ ಸಂಘದ ಸಭೆ ಇದೇ ಸಂದರ್ಭದಲ್ಲಿ ನಡೆಯಿತಾದರೂ ಅಲ್ಲಿ ಈ ವಿಷಯವನ್ನು ಚರ್ಚೆಗೆ ಎತ್ತಿಕೊಳ್ಳಲಿಲ್ಲ. ಇದಕ್ಕೆ ಇಂಥ ನಿರ್ಧಾರವನ್ನು ವಿಷ್ಣುವರ್ಧನ್ ಈ ಹಿಂದೆ ಎರಡು ಬಾರಿ ತೆಗೆದುಕೊಂಡಿದ್ದುದು ಹಾಗೂ ಈ ಘಟನೆಯ ನಂತರವೂ ಅವರಲ್ಲಿ ಅದೇ ಪ್ರವೃತ್ತಿ ಪುನರಾವರ್ತನೆ ಆಗುತ್ತಲೇ ಇರಬಹುದು ಎಂಬ ಊಹೆಯೂ ಕಾರಣವಾಗಿರಬಹುದು. ಒಟ್ಟಾರೆ ಎಲ್ಲರ ಒತ್ತಡದಿಂದ ಅವರು ಎಂದಿನಂತೆ ತಮ್ಮ ನಿವೃತ್ತಿಯ ನಿರ್ಧಾರವನ್ನು ವಾಪಸ್ಸು ತೆಗೆದುಕೊಂಡರು. ಇದನ್ನು ಹೇಳುವಾಗ "ಅದು ತಮಗೆ ಸೂಕ್ತ ರಕ್ಷಣೆ ಕೊಟ್ಟರೆ ಮಾತ್ರ" ಎಂದು ಸೇರಿಸಿದರು. ಅವರು ತಮ್ಮ ನಿರ್ಧಾರವನ್ನು ಪ್ರಕಟಿಸಿದ್ದು 'ಬಂಧನ' ಚಿತ್ರದ ಶತದಿನೋತ್ಸವ ಸಮಾರಂಭದ ವೇದಿಕೆಯಲ್ಲಿ. ಆಗ ವೇದಿಕೆಯ ಮೇಲೆ ಹಿಂದಿಯ ದಿಲೀಪ್ ಕುಮಾರ್, ಸಾಯಿರಾಬಾನು, ಪುಟ್ಟಣ್ಣ ಕಣಗಾಲ್, ತಾರೆ ಲಕ್ಷ್ಮೀ ಅತಿಥಿಗಳಾಗಿ ಉಪಸ್ಥಿತರಿದ್ದರು.

'ಬಂಧನ'ದ ಅಭೂತಪೂರ್ವ ಯಶಸ್ಸು ಇಂಥ ಘಟನೆಗೆ ಸಾಕ್ಷಿಯೊದಗಿಸಿ ರಜತೋತ್ಸವದತ್ತ ಮುನ್ನಡೆಯತೊಡಗಿತು. ನಾಯಕಿ ನಂದಿನಿಯ ಪ್ರೇಮಕ್ಕಾಗಿ ಪರಿತಪಿಸುತ್ತಾ ನಾಯಕ ಹರೀಶ್ ಆಡುವ ಮಾತುಗಳು ಯುವಕ-ಯುವತಿಯರಿಗೆ ಬಾಯಿಪಾಠವಾಗಿ ಹೋಗಿದ್ದವು. ಹರಿವ ನೀರಿನಲ್ಲಿ ತೇಲಿ ಬರುವ ಕಾಗದದ ದೋಣಿ ಇತ್ಯಾದಿ ಸಂಕೇತಗಳು ಅರ್ಥಪೂರ್ಣವಾಗಿದ್ದವು. ರಾಜೇಂದ್ರಸಿಂಗ್ ಬಾಬು ಅದ್ದೂರಿ ಸಾಹಸ ಪ್ರಧಾನ ಚಿತ್ರಗಳಿಗೆ ಮಾತ್ರ ಸರಿ ಎಂದುಕೊಂಡಿದ್ದವರಿಗೆ ಈ ಭಾವಪ್ರಧಾನ ಚಿತ್ರ ಆಶ್ಚರ್ಯ ಹುಟ್ಟಿಸಿದ್ದಂತೂ ನಿಜ. ಹಾಗೆ ನೋಡಿದರೆ ಉಷಾ ನವರತ್ನರಾಂರ ಕಾದಂಬರಿಯ ವಸ್ತುವಿನಲ್ಲಿ ಹೊಸದೇನೂ ಇರಲಿಲ್ಲ. ಹೊಸತನ ಇದ್ದದ್ದು ಕಥೆ ಹೇಳುವ ವಿಧಾನದಲ್ಲಿ.



(ಚಿತ್ರ ೮೩) 'ಇಂದಿನ ಭಾರತ' ಚಿತ್ರದಲ್ಲಿ ಅಂಬಿಕಾ

ಡಾ।ಹರೀಶ್‌ಗೆ ತನ್ನ ಶಿಷ್ಯೆ ಹಾಗೂ ಸಹೋದ್ಯೋಗಿಯಾದ ನಂದಿನಿಯ ಮೇಲೆ ಆಸೆ-ಪ್ರೀತಿ. ಆದರೆ ಅದನ್ನು ಹೇಳಿಕೊಳ್ಳಲು ಸಂಕೋಚ. ನಂದಿನಿ ಇದಕ್ಕೆ ತದ್ವಿರುದ್ಧ. ಆಕೆಗೆ ಹರೀಶ್ ಬಗ್ಗೆ ಪೂಜ್ಯ ಭಾವನೆ ಇತ್ತೇ ಹೊರತು ದೈಹಿಕ ಆಕರ್ಷಣೆ ಇರಲಿಲ್ಲ. ಹರೀಶ್ ಕೊನೆಗೆ ನಂದಿನಿಯ ಮುಂದೆ ತನ್ನ ಪ್ರೀತಿಯನ್ನು ಹೇಳಿಕೊಂಡಾಗ ಅವಳಿಗೆ ದಿಗ್ಭ್ರಮೆಯಾಗುತ್ತದೆ. ಅಷ್ಟು ಹೊತ್ತಿಗಾಗಲೇ ಅವಳ ಮದುವೆ ಬೇರೊಬ್ಬನೊಡನೆ ನಿಶ್ಚಯವಾಗಿರುತ್ತದೆ. ಪರಿಸ್ಥಿತಿ ಹಾಗೂ ತನ್ನ ಮನಸ್ಥಿತಿಯನ್ನು ವಿವರಿಸುತ್ತಾಳೆ. ಇಬ್ಬರೂ ಭಾರವಾದ ಹೃದಯಗಳಿಂದ ದೂರವಾಗುತ್ತಾರೆ. ನಂದಿನಿಯನ್ನು ಕೈಹಿಡಿದ ಬಾಲು ವೃತ್ತಿಯಲ್ಲಿ ಇಂಜಿನಿಯರ್. ಇಬ್ಬರೂ ಕೆಲಸಕ್ಕೆ ಹೋಗುವ ದೃಶ್ಯಗಳನ್ನು ಹಾಗೂ ಇಬ್ಬರ ನಡುವೆ ಮಾನಸಿಕ ಅಂತರ ಏರ್ಪಡುವುದನ್ನು ನಿರ್ದೇಶಕರು ಚುರುಕು ಗತಿಯಲ್ಲಿ ನಿರೂಪಿಸಿದ್ದಾರೆ. ಇದೇ ಹೊತ್ತಿಗೆ ವಾಸಿಯಾಗದ ಹೃದ್ರೋಗಕ್ಕೆ ತುತ್ತಾದ ಹರೀಶ್‌ಗೆ ಸೇವೆ ಮಾಡಿ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುವ ನಂದಿನಿಯ ನಿರ್ಧಾರ ಗಂಡ ಹೆಂಡಿರ ನಡುವಿನ ಅಂತರವನ್ನು ಹೆಚ್ಚಿಸುತ್ತದೆ. ದಿನೇ ದಿನೇ ಹರೀಶನ ಅನಾರೋಗ್ಯ ಉಲ್ಬಣಿಸುತ್ತದೆ. ಹರೀಶ್ ಕಡೆಗೆ ತಾನೇ 'ನಂದಿನಿ ಮತ್ತು ಅವಳ ಮಗುವನ್ನು ಉಳಿಸಿ' ಸಾಯುತ್ತಾನೆ. ಬಾಲುವಿನ ನಡತೆಯಿಂದ ಜಿಗುಪ್ಸೆಗೊಂಡ ನಂದಿನಿ ವಿವಾಹ ವಿಚ್ಛೇದನ ಪತ್ರಕ್ಕೆ ಸಹಿಹಾಕಿ ಹೊರ ನಡೆಯುವ ದೃಶ್ಯದೊಂದಿಗೆ ಚಿತ್ರ ಮುಗಿಯುತ್ತದೆ. ನಂದಿನಿ ಮತ್ತು ಮಗು ಉಳಿದದ್ದು ನಾಯಕನ

ಪ್ರಾಣಾರ್ಪಣೆಯಿಂದಲೇ ಎಂಬಂತೆ ಚಿತ್ರದ ನಿರೂಪಣೆಯಿದೆ. ಇದು ಮನುಷ್ಯನ ಶಕ್ತಿಗೆ ಅತೀತವಾದ್ದು ಮತ್ತು ಮೂಢನಂಬಿಕೆಗಳನ್ನು ಪ್ರೋತ್ಸಾಹಿಸುವಂತಹುದು ಎಂದು ಈ ಬಗ್ಗೆ ಹಲವಾರು ಟೀಕೆಗಳು-ಸಮರ್ಥನೆಗಳೂ ಕೇಳಿಬಂದವು. ಆದರೆ ಈ ದೃಶ್ಯದಲ್ಲಿ ನಮ್ಮ ಪುರಾಣ, ಪರಂಪರೆಗಳಲ್ಲಿ ಕಾಣುವ 'ಮಹಾತ್ಯಾಗ'ದ ಅಂಶವೇ ಪ್ರಧಾನವಾಗಿದ್ದದ್ದು ಹಾಗೂ ಈ ಅಂಶವೇ ಚಿತ್ರದ ಯಶಸ್ಸಿಗೆ ಕಾರಣವಾದದ್ದು ನಿರ್ವಿವಾದ. ಇದೆಲ್ಲದರ ಜೊತೆಗೆ ನಂದಿನಿ-ಹರೀಶ್‌ರ ನಡುವಿನ ರಸಮಯ ದೃಶ್ಯಗಳು, ಹಾಸ್ಯ ಮಿಶ್ರಿತ ನಿರೂಪಣೆ, ಹಾಡುಗಳ ವಿಶಿಷ್ಟ ರೀತಿಯ ಚಿತ್ರಣ ಗಮನ ಸೆಳೆದವು. ವಿಷ್ಣುವರ್ಧನ್‌ರಿಗೆ ಪ್ರೇಮಿಯಾಗಿ, ಸಂಕೋಚದವನಾಗಿ, ವಿರಹಿಯಾಗಿ ಮೂರು ರೀತಿಯಲ್ಲಿ ಅಭಿನಯಿಸುವ ಉತ್ತಮ ಅವಕಾಶ ದೊರಕಿತ್ತು. ಹೆಚ್.ವಿ.ಸುಬ್ಬರಾಯರ ಸಂಭಾಷಣೆ ಅರ್ಥಗರ್ಭಿತವಾಗಿದ್ದುದಲ್ಲದೆ ಅಲ್ಲಲ್ಲಿ ಮಾರ್ಮಿಕವಾಗಿತ್ತು. 'ಬಣ್ಣ ಬಣ್ಣ...', 'ಈ ಬಂಧನ...', 'ನೂರೊಂದು ನೆನಪು...' ಈ ಹಾಡುಗಳು ಎಂದೆಂದಿಗೂ ಚಿರವಾಗಿರಬಲ್ಲಷ್ಟು ಜನಪ್ರಿಯತೆಯನ್ನು ಸಾಬೀತು ಪಡಿಸುತ್ತಾ ಬಂದಿವೆ. ಈ ಚಿತ್ರಕ್ಕೆ ಕೇಂದ್ರದ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿಯಲ್ಲದೆ, ವಿಷ್ಣುವರ್ಧನ್‌ರಿಗೆ ಅತ್ಯುತ್ತಮ ನಟ, ಎಂ.ರಂಗರಾವ್ ಅವರಿಗೆ ಅತ್ಯುತ್ತಮ ಸಂಗೀತ ನಿರ್ದೇಶಕರೆಂದು ರಾಜ್ಯ ಪ್ರಶಸ್ತಿ ಬಂದುವು.

'ಇಂದಿನ ಭಾರತ' ಕೊಂಚ ಒರಟು ಮಾತಿನದಾದರೂ ಕಥಾವಸ್ತು ಚೆನ್ನಾಗಿತ್ತು. ಕೊನೆಯ ದೃಶ್ಯದಲ್ಲಿ ಆರೋಪಿಯ ಪ್ರಶ್ನೆಗಳು ಕಾನೂನು ಎಂದೂ ಉತ್ತರಿಸಲಾಗದೆ ಉಳಿದು ಹೋದಂಥವು. ಒಂದು ಅರ್ಥದಲ್ಲಿ ಆ ದಿನಗಳಲ್ಲಿ ಪ್ರಚಲಿತವಿದ್ದ ಬೀದಿ ನಾಟಕಗಳಲ್ಲಿ ಸಾಮಾಜಿಕ ಅನ್ಯಾಯಗಳನ್ನು ಪ್ರಶ್ನಿಸುತ್ತಿದ್ದ ರೀತಿಯೇ ಇತ್ತು.



(ಚಿತ್ರ ೮೪) 'ಆ್ಯಕ್ಸಿಡೆಂಟ್' ಚಿತ್ರದಲ್ಲಿ ಅನಂತ್‌ನಾಗ್ ಮತ್ತು ಶಂಕರ್‌ನಾಗ್

ಆಸ್ಪತ್ರೆಯಲ್ಲಾಗುವ ಅನ್ಯಾಯಗಳನ್ನು ಕುರಿತ ಹಾಡೊಂದು ಲಾವಣಿಯ ಹಾಗಿದ್ದು, ಜನಪ್ರಿಯವಾಗಿತ್ತು. ಈ ಚಿತ್ರದ ಹಿಂದೆ ಕೃಷ್ಣ ಎಂಬ ಉತ್ಸಾಹೀ ತರುಣ ನಿರ್ಮಾಣ, ನಿರ್ದೇಶನದಲ್ಲೂ ಆಸಕ್ತಿ ತೋರಿದ್ದರು. ಕೆ.ವಿ.ರಾಜು ಸಹ ಅಷ್ಟೇ ಉತ್ಸಾಹದಿಂದ ತೊಡಗಿಕೊಂಡಿದ್ದರು.

ಅಬ್ಬರಗಳಿಲ್ಲದ ಪಕ್ಕಾ ಕೌಟುಂಬಿಕ ಲಕ್ಷಣಗಳ 'ಅವಳ ಅಂತರಂಗ', ಹಾಗೂ 'ಯಾರಿವನು ?', 'ಋಣಮುಕ್ತಳು', 'ಆ್ಯಕ್ಸಿಡೆಂಟ್' ಚಿತ್ರಗಳು ಸಾಕಷ್ಟು ಯಶಸ್ವಿ ಎನಿಸಿಕೊಂಡವು. ವಸ್ತುವಿನ ಮಟ್ಟಿಗೆ ಒಂದೊಂದೂ ಭಿನ್ನವಾಗಿದ್ದ ಈ ಚಿತ್ರಗಳಲ್ಲಿ 'ಅವಳ ಅಂತರಂಗ' ಮೊದಲು ಬೆಂಗಳೂರಲ್ಲಾಗದೆ ಹೊರಗೆ ತೆರೆಗೆ ಬಂತು. ಆರ್.ಎನ್.ಜಯಗೋಪಾಲ್ ಅವರ ಚೊಕ್ಕವಾದ ನಿರೂಪಣೆಯಿತ್ತು. ಮುಂದೆ ಕಿರುತೆರೆಯಲ್ಲಿ ದೊಡ್ಡ ಹೆಸರಾದ ತರುಣ, ಮೈನಾವತಿ ಅವರ ಮಗ ಶ್ಯಾಂ ಸುಂದರ್ ಈ ಚಿತ್ರದಿಂದ ಬೆಳ್ಳಿ ತೆರೆಗೆ ಪರಿಚಯವಾದರು. ಹಿಂದಿ ಚಿತ್ರ ಪ್ರದರ್ಶನಕ್ಕೆ ಹೆಸರಾದ ಮೈಸೂರಿನ 'ಒಲಂಪಿಯ' ಚಿತ್ರಮಂದಿರದಲ್ಲಿ ಬೆಳಗಿನ ಪ್ರದರ್ಶನದಲ್ಲಿ ೫೦ ವಾರಗಳ ಪ್ರದರ್ಶನ ಕಂಡು ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ದಾಖಲೆ ನಿರ್ಮಿಸಿತು. ಉತ್ತರ ಕರ್ನಾಟಕದಲ್ಲಿಯೂ ಚಿತ್ರ ಯಶಸ್ವಿಯಾಗಿ ಪ್ರದರ್ಶಿತವಾಯಿತು. ಇದರೊಂದಿಗೆ ರೂಪಾದೇವಿ - ಅತ್ಯುತ್ತಮ ನಟಿ, ಶ್ಯಾಮಸುಂದರ್ - ಪೋಷಕ ನಟ, ಆರ್.ಎನ್.ಕೃಷ್ಣಪ್ರಸಾದ್ - ಛಾಯಾಗ್ರಹಣ, ಆರ್.ಹನುಮಂತರಾವ್ ಅವರು ಸಂಕಲನಕ್ಕೆ ೧೯೮೪-೮೫ರ ರಾಜ್ಯ ಪ್ರಶಸ್ತಿಗಳನ್ನು ಪಡೆದುಕೊಂಡರು.

ಕನ್ನಡದಲ್ಲಿ calf loveನಂತಹ ಸೂಕ್ಷ್ಮ ಕಥಾವಸ್ತುವಿನ ಆಧಾರದ ಮೇಲೆ ತಯಾರಾದ ಮೊದಲ ಚಿತ್ರ 'ಅವಳ ಅಂತರಂಗ'.

'ಋಣಮುಕ್ತಳು' ಪುಟ್ಟಣ್ಣನವರ ಎಂದಿನ ನಾಯಕಿ ಪ್ರಧಾನ ಚಿತ್ರ. ಡಾ|ಅನುಪಮಾ ನಿರಂಜನ ಅವರ 'ಋಣ' ಕಾದಂಬರಿಯನ್ನು ಆಧರಿಸಿದ ಈ ಚಿತ್ರದಲ್ಲಿ ಭಾರತಿಯವರ ಅಭಿನಯ ಶ್ರೇಷ್ಠವಾಗಿತ್ತು. ಸಾಧಾರಣ ಗೃಹಿಣಿಯೊಬ್ಬಳು ಕುಟುಂಬದಲ್ಲೆದ್ದ ಬಿರುಗಾಳಿಯಲ್ಲಿ ಹೊಯ್ದಾಡುತ್ತಾ ಕೊನೆಗೆ ಆಧ್ಯಾತ್ಮದ ಗೂಡು ಸೇರಿಕೊಳ್ಳುವ ರೀತಿಯನ್ನು ಭಾವುಕತೆ, ತಾತ್ವಿಕತೆ ಎರಡನ್ನೂ ಬೆರೆಸಿ ಹೇಳಿದ್ದ ರೀತಿ ಉತ್ತಮವಾಗಿತ್ತು.

''...ಹಳೆಯದು ಹೊನ್ನು, ಹಿಂದಿನದೇ ಚೆನ್ನಾಗಿತ್ತು ಎಂದು ಹೇಳಲು ಸಾಧ್ಯವಿಲ್ಲ. ಆದರೆ ಆಗ ಕಲಾವಿದರಲ್ಲಿ, ತಂತ್ರಜ್ಞರಲ್ಲಿ ಸಮರ್ಪಣಾ ಭಾವವಿತ್ತು. ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸ ಚೆನ್ನಾಗಿರಬೇಕೆಂದು ಶ್ರದ್ಧೆಯಿಂದ ದುಡಿಯುತ್ತಿದ್ದರು. ಈಗ ಎಲ್ಲವೂ ವ್ಯಾಪಾರವಾಗಿದೆ, ಲಾಭದ ಕಡೆಗೇ ಗಮನ.. ಅಭಿನಯ, ಎದುರಿಗಿರುವವರ ಅಭಿನಯ ಚೆನ್ನಾಗಿದ್ದಷ್ಟು ನಮ್ಮ ಅಭಿನಯ ಪಕ್ವವಾಗುತ್ತಾ ಹೋಗುತ್ತದೆ. ಇಂದಿನ ಕಲಾವಿದರಲ್ಲಿ ಆ ಸಮರ್ಪಣಾ ಭಾವ ಕಡಿಮೆ. ನನಗೆ ಬಲವಾದ ಪ್ರತಿಸ್ಪರ್ಧಿ ಇಲ್ಲ ಅನ್ನಿಸುತ್ತಿರುತ್ತೆ. 'ಋಣಮುಕ್ತಳು' ಚಿತ್ರದಲ್ಲಿ ಕೆಲಸ ಮಾಡಿದಾಗ ಈ ಬಗೆಯ ಕೊರತೆ ಕಂಡಿತ್ತು. ಏನಾದರೂ ಚೆನ್ನಾದ್ದೂಂತ ಇದ್ದರೆ ಅದೆಲ್ಲ ಪುಟ್ಟಣ್ಣ ನೀಡುತ್ತಿದ್ದ ಸ್ಫೂರ್ತಿಯಿಂದ ಆಗಿದ್ದಷ್ಟೆ. ಹೊಸ ಕಲಾವಿದರಲ್ಲಿ ಪ್ರತಿಭಾವಂತರಿದ್ದಾರೆ, ಇನ್ನು ಕೊಂಚ ಶ್ರದ್ಧೆ ತೋರಬೇಕು, ಅಷ್ಟೆ. ನಿರ್ದೇಶಕಳಾಗಬೇಕೆಂದಿದ್ದೆ. ರವೀ ಅವರ ಜೊತೆ ಕೆಲಸ ಮಾಡಿ ಪ್ರಾಕ್ಟಿಕಲ್ ಆಗೂ ಕಲಿತೆ. ನಾನೇ ನಿರ್ದೇಶಿಸುವ ಸಿದ್ಧತೆಯಲ್ಲಿದ್ದಾಗ ಪುಟ್ಟಣ್ಣ ಕರೆದು 'ಋಣಮುಕ್ತಳು'ಗೆ ಅವಕಾಶ ಮಾಡಿದರು. ಸದಾ ಒಬ್ಬರನ್ನೇ ಹಾಕಿ ಚಿತ್ರ ಮಾಡ್ತೀರಲ್ಲ ಅಂತ ಅವರನ್ನು ರೇಗಿಸ್ತಿದ್ದೆ. ನಿನಗಾಗಿಯೇ ಕಥೆ ಮಾಡ್ತೀನಿ ಅಂದರು. ಮಾಡಿದರು. ನನಗೆ ಅವರ ಜೊತೆ ಕೆಲಸ ಮಾಡಿದೆ ಎಂಬ ಸಂತೋಷ, ತೃಪ್ತಿ ಇದೆ..''. ಎಂದಿದ್ದರು 'ಋಣಮುಕ್ತಳು' ಚಿತ್ರದ ನಾಯಕಿ ನಟಿ ಭಾರತಿ ವಿಷ್ಣುವರ್ಧನ್.

'ಆ್ಯಕ್ಸಿಡೆಂಟ್' ಮಾದಕ ದ್ರವ್ಯ ನಿರೋಧದ ಆಶಯವನ್ನು ಇಟ್ಟುಕೊಂಡಿದ್ದ ಪರಿಣಾಮಕಾರಿ ರಾಜಕೀಯ ಚಿತ್ರ. ಚಿತ್ರಕಥೆ, ನಿರೂಪಣೆ ಎರಡೂ ಭಿನ್ನವಾಗಿದ್ದ ಇದು ಶಂಕರ್‌ನಾಗ್ ನಿರ್ದೇಶನದ ಉತ್ತಮ ಚಿತ್ರಗಳಲ್ಲೊಂದು. ಈ ಚಿತ್ರಕ್ಕೆ ಚಿತ್ರಕಥೆ ನಿರ್ವಹಿಸಿದ್ದ ವಸಂತ ಮೊಕಾಶಿ ಸಾಕಷ್ಟು ಗಮನ ಸೆಳೆದರು. ಚಿತ್ರದ ಅಂತಿಮ ದೃಶ್ಯವನ್ನು ಬದಲಾಯಿಸಿದ್ದೊಂದು ವಿಶೇಷ ಸಂಗತಿ. ''...ರಾಜಕೀಯ ಚಿತ್ರಗಳನ್ನು ಇಂಡಿಯಾದಲ್ಲಿ ನಾವು ಮಾಡ್ತಾನೇ ಇಲ್ಲ. ಲ್ಯಾಟಿನ್ ಅಮೆರಿಕಾದಂಥ ದೇಶ ನಿಜವಾದ ರಾಜಕೀಯ ಚಿತ್ರಗಳನ್ನು ಮಾಡ್ತಿದೆ. ಆ್ಯಕ್ಸಿಡೆಂಟ್ ಕೂಡಾ ರಾಜಕೀಯ ಚಿತ್ರವೇನಲ್ಲ. ರಾಜಕಾರಣಿಯಾಗಿರುವ ವ್ಯಕ್ತಿಯೊಬ್ಬ ತನ್ನ ವೃತ್ತಿ ಜೀವನದ ಶೃಂಗದಲ್ಲಿದ್ದಾಗ ಅವನ ಮಗನಿಂದಾಗಿ ಎದುರಿಸಿದ ಸಮಸ್ಯೆಗಳು, ಅವನೆಷ್ಟು ಸ್ವಾರ್ಥಿ ಅನ್ನುವ ವಿಷಯ ಇದೆ. ಇದಿಷ್ಟೇ ಕಾರಣಕ್ಕೆ ರಾಜಕೀಯ ಚಿತ್ರ ಆಗೋದಿಲ್ಲ. ನಿರ್ದೇಶಕ ಒಪ್ಪದೇ ಹೋದರೂ ನನ್ನ ದೃಷ್ಟಿಯಲ್ಲಿ ಅಡೂರು ಗೋಪಾಲಕೃಷ್ಣನ್ ಅವರ 'ಮುಖಾಮುಖಂ' ರಾಜಕೀಯ ಚಿತ್ರ ಅನ್ನಿಸುತ್ತೆ. ಕೇರಳದಲ್ಲಿ ಮಾರ್ಕ್ಸಿಸಂ ಹೇಗೆ ಬೆಳೆದು ಅಳಿಯಿತು ಅನ್ನೋದನ್ನು ಹೇಳ್ತಿರುತ್ತೆ. ರಾಜಕೀಯ ಚಿತ್ರಗಳಲ್ಲಿ ಒಂದು ಐಡಿಯಾನ, ಡಾಕ್ಟ್ರಿನ್‌ನ ಹೇಳೋದಿಕ್ಕೆ ಪ್ರಯತ್ನ ಪಡ್ತಾರೆ. ಅದು ವಿಶುಯಲ್ ಅಲ್ಲ. ಅದು ಸಫಲ ಆಗಬೇಕಾದರೆ ಆ ಸಂದೇಶದಲ್ಲಿ, ವಾದದಲ್ಲಿ ನೀವು ಆಳವಾಗಿ ತೊಡಗಿಸಿಕೊಳ್ಳಬೇಕು. ಸಾಮಾನ್ಯ ಜನರು ಇದನ್ನು ಮಾಡೋಕ್ಕೆ ಅವರು ಈಗಿರುವ ಮಟ್ಟದಿಂದ ಇನ್ನೂ ತುಂಬಾನೇ ಮೇಲೇರಬೇಕು ಅದು ಆಗುವವರೆಗೂ..''. ಎನ್ನುತ್ತಾರೆ ನಿರ್ದೇಶಕ ಶಂಕರ್‌ನಾಗ್.

''ಇಂಡಿಯಾ ಸುಭಿಕ್ಷವಾದ ದೇಶದಿ. ನಮ್ಮ ವ್ಯವಸ್ಥೆಯ ಸರಕಾರ ಜನರ ಊಟ-ಬಟ್ಟೆ ನೋಡಿಕೋಬೇಕು. ಹೀಗೆ ಕಲೆಗೂ ಆರ್ಥಿಕ ಸ್ಥಿತಿಗೂ ನೇರ ಸಂಬಂಧ ಇದೆ. ಅಂತದ್ರಲ್ಲೂ ನಾವು ಸಾಕಷ್ಟು ಮುಂದು ಬಂದಿದೇವೆ. ಪ್ರಗತಿ ಸಾಧಿಸಿದೇವೆ. ಯಾವುದೇ ಸರ್ಕಾರ ಇದ್ದಾಗ್ಲೂ. ಯಾಕೆ ಅಂದರೆ, ಈ ಜನತಾ-ಕಾಂಗ್ರೆಸ್ ಅನ್ನೋದೆಲ್ಲ ಬರೀ ಹೆಸರುಗಳು. ನಮ್ಮಲ್ಲಿ ಹಲವು ಉತ್ತಮ, ಸಮರ್ಥ ವ್ಯಕ್ತಿಗಳು ಬಂದುಹೋಗಿದ್ದಾರೆ. ನೆಹರು, ತಿಲಕ್, ಇಂದಿರಾಗಾಂಧಿ ಹೊರತು ಹೇಳ್ಕೊಳ್ಳೋ ಅಂಥ ಶಕ್ತಪಕ್ಷ ಯಾವುದೂ ಇಲ್ಲ. ತಮಿಳುನಾಡಿನಲ್ಲಿ ಎಂ.ಜಿ.ಆರ್ ಇಲ್ಲ,



(ಚಿತ್ರ ೮೫) 'ಶೃಂಗಾರ ಮಾಸ' ಚಿತ್ರದಲ್ಲಿ ಅಮೋಲ್ ಪಾಲೇಕರ್ ಮತ್ತು ದೀಪಾ ಧನರಾಜ್

ಬೇರೆಯವರು ಅವರ ಪರವಾಗಿ ಸರಕಾರ ನಡೆಸ್ತಿದಾರೆ. ರಾಮಾಯಣದಲ್ಲಿ ರಾಮನೇ ಇಲ್ಲದಾಗ ಆತನ ಪಾದುಕೆ ಇಟ್ಟು ಭರತ ರಾಜ್ಯಭಾರ ಮಾಡಿದ. ಇದರ ಸಾಕ್ಷಾತ್ ಪ್ರಿಂಟ್ ಅಲ್ವೇ ಇದು. ಇಹ ಇದೆ, ಪರ ಇದೆ. ಇಹ ಅಂದರೆ ಇದು, ವಾಸ್ತವ. ಪರ ಅಂದರೆ ಆದರ್ಶ. ರಾಮಾಯಣ, ಮಹಾಭಾರತ, ಭಗವದ್ಗೀತೆ ಇವೆಲ್ಲಾ ಆದರ್ಶಗಳು ಅಲ್ವೆ ? ಇವರ ಮಧ್ಯೆ ಆಕಾರವೇ ಮಿತಿ. ಆ ಲೆಕ್ಕದಲ್ಲಿ ನಾನು ಅಷ್ಟೆತ್ತರಕ್ಕೆ ಹಾರಬಹುದು, ಶಂಕರ್ ಇನ್ನೂ ಮೇಲೆ ಹಾರಬಹುದು, ಬೇಂದ್ರೆ ಅತಿ ಅತಿ ಎತ್ತರದಲ್ಲಿ ಹಾರಬಹುದು'' ಎನ್ನುತ್ತಾರೆ ಅನಂತ್‌ನಾಗ್.

ಮಾದಕ ದ್ರವ್ಯ ನಿಷೇಧ ಕುರಿತ ಅತ್ಯುತ್ತಮ ಚಿತ್ರ ಎಂದು ಕೇಂದ್ರದ ರಜತ ಕಮಲವನ್ನಲ್ಲದೆ ಐದು ರಾಜ್ಯ ಪ್ರಶಸ್ತಿಗಳನ್ನು ಗಳಿಸಿತು. ೧೯೮೪-೮೫ರ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ, ಅರುಂಧತಿನಾಗ್ - ಪೋಷಕ ನಟಿ, ವಸಂತ ಮೊಕಾಶಿ - ಚಿತ್ರಕಥೆ, ಪಾಂಡುರಂಗನ್ - ಧ್ವನಿಗ್ರಹಣ, ಹಾಸನ್ ರಘು - ವಿಶೇಷ ಸಾಹಸ ಪ್ರಶಸ್ತಿಗಳು ಲಭ್ಯವಾದವು. ಕನ್ನಡದ ಸಾಹಸ ಕಲಾವಿದರ ಕೆಲವಾರು ವರ್ಷಗಳ ಒತ್ತಾಯದ ಮೇರೆಗೆ ಈ ಸಾಹಸ ಪ್ರಶಸ್ತಿಯನ್ನು ನೀಡಿದ್ದಲ್ಲದೆ ನಂತರದ ವರ್ಷಗಳಲ್ಲಿ ಸಾಹಸ ವಿಭಾಗಕ್ಕೆ ಪ್ರಶಸ್ತಿ ನೀಡುವುದನ್ನು ಖಾಯಂ ಆಗಿ ಮುಂದುವರಿಸಲಾಯಿತು.

ಮೇಲೆ ಚರ್ಚಿಸಿದ ಕೆಲವು ಉತ್ತಮ ಚಿತ್ರಗಳಿಗಿಂತ ಅತ್ಯಂತ ಭಿನ್ನ ಬಗೆಯ ಉದ್ದೇಶವನ್ನು ಹೊಂದಿದ್ದುದು 'ಶೃಂಗಾರ ಮಾಸ'. ಈ ಚಿತ್ರದಲ್ಲಿ ಈಗಾಗಲೇ ಮದುವೆ ಆಗಿರುವ ಗಂಡ-ಹೆಂಡತಿಯ ಸಮಾಗಮದ ಏಕತಾನತೆಗಿರುವ ಕಾರಣಗಳನ್ನು ಶೋಧಿಸಲಾಗಿದ್ದರೆ, ಕಾಶೀನಾಥ್‌ರ 'ಅನುಭವ'ದಲ್ಲಿ ಮದುವೆಯ ನಂತರದಲ್ಲಿ ಸಮಾಗಮವನ್ನು ಆರಂಭಿಸುವುದರ ದೈಹಿಕ-ಮಾನಸಿಕ ಸ್ಥಿತಿಗಳ ಚಿತ್ರಣವಿದೆ. ಈ ಎರಡು ಚಿತ್ರಗಳನ್ನು ಇವುಗಳನ್ನು ನಿರ್ಮಿಸಿ-ನಿರ್ದೇಶಿಸಿದವರ ಹಿನ್ನೆಲೆಯಿಂದ ಹೋಲಿಸಲಾಗದಿದ್ದರೂ ಕಥಾವಸ್ತು ದಾಂಪತ್ಯ ಹಾಗೂ ಕಾಮಕೇಂದ್ರಿತ ಪ್ರಜ್ಞೆಯನ್ನೇ ನೆಲೆಯಾಗಿಟ್ಟುಕೊಂಡಿರುವುದರಿಂದ ಕೆಲವು ಅಂಶಗಳ ಮೂಲಕ ಚರ್ಚಿಸಬಹುದಾಗಿದೆ.

೧೯೮೩-೮೪ರ ರಾಜ್ಯ ಸರ್ಕಾರದ ವಿಶೇಷ ಪ್ರಶಸ್ತಿ ಪಡೆದ 'ಶೃಂಗಾರ ಮಾಸ'ವನ್ನು ನಿರ್ದೇಶಿಸಿದವರು 'ಸಂಸ್ಕಾರ'ದಂಥ ಮಾದರಿ ಚಿತ್ರ ಸೃಷ್ಟಿಸಿದ ಪಟ್ಟಾಭಿರಾಮರೆಡ್ಡಿ. ಎರಡೇ ಪಾತ್ರಗಳ ಸುತ್ತ ಇಡೀ ಚಿತ್ರವಿದ್ದು, ಇದು ಕನ್ನಡಕ್ಕೆ ಹೊಸದಾಗಿತ್ತು. ಪರಸ್ಪರ ಭಿನ್ನಾಭಿಪ್ರಾಯದಿಂದ ದಂಪತಿಗಳ ನಡುವೆ ವಿರಸ ಮೂಡುತ್ತದೆ. ಈ ಭಿನ್ನಾಭಿಪ್ರಾಯ ಹಾಗೂ ಮಾನಸಿಕ ಅಸ್ವಸ್ಥತೆಗೆ ಆಧುನಿಕ ಜೀವನ ವಿಧಾನದಲ್ಲಿನ ಯಾಂತ್ರಿಕತೆ ಕಾರಣವೆಂಬುದು ನಿರ್ದೇಶಕರ ನಂಬಿಕೆ. ಗಂಡ ತನ್ನ ಹೆಂಡತಿಯ ಮಾನಸಿಕ ಕ್ಷೋಭೆಯನ್ನು ಹೋಗಲಾಡಿಸುವ ಆಸೆಯಿಂದ ಒಂದು ನಿರ್ಧಾರಕ್ಕೆ ಬರುತ್ತಾನೆ. ಇಬ್ಬರೂ ಪ್ರಶಾಂತ ಪ್ರಕೃತಿಯ ಸೆರಗಿಗೆ ಬರುತ್ತಾರೆ. ವರ್ಷದ ಒಂದೊಂದು ಋತುವೂ ಅವರಲ್ಲಿ ಬದಲಾವಣೆ ಉಂಟುಮಾಡತೊಡಗುತ್ತದೆ. ಹಾಗೆಯೇ ಪ್ರಕೃತಿಯಲ್ಲಿನ ಬದಲಾವಣೆಗಳಲ್ಲಿ ಅವರ ಜೀವನದ ಅರ್ಥಗಳು ಗೋಚರಿಸುತ್ತವೆ. ಇಬ್ಬರ ನಡುವೆ ಬೆಳೆದು ನಿಂತಿದ್ದ ಭಿನ್ನಾಭಿಪ್ರಾಯಗಳ ತೀವ್ರತೆ ಅವರಿಗೇ ಅರಿವಿಲ್ಲದಂತೆ ಕಡಿಮೆಯಾಗುತ್ತಾ ಬರುತ್ತದೆ. ಕೊನೆಗೆ ಅವರಿಬ್ಬರನ್ನೂ ಹಬ್ಬಿಕೊಂಡಿದ್ದ ಕಾರ್ಮೋಡ ಸರಿದು ಪ್ರಶಾಂತ ಮನಸ್ಸಿನಿಂದ ಹಿಂತಿರುಗುತ್ತಾರೆ. ಪ್ರಯೋಗದ ಮಟ್ಟದಲ್ಲೇ ನಿಂತರೂ ಈ ಚಿತ್ರಕ್ಕೆ ಅದರದೇ ಆದ ಆಯಾಮ ಇದೆ. ಆದರೆ ನಿರೂಪಣೆಯಲ್ಲಿ ವಸ್ತುವಿಗೆ ಭಾರವೆನಿಸುವ ಮಂದಗತಿಯನ್ನು ಅನುಸರಿಸಿರುವುದು ಪ್ರಮುಖ ದೌರ್ಬಲ್ಯವೆನಿಸಿತು. ಆರು ಋತುಗಳು ಆರಂಭವಾಗುವುದನ್ನು ನವಿರಾಗಿ, ಹಂತ ಹಂತವಾಗಿ ತೋರುವುದರಲ್ಲಿ ಛಾಯಾಗ್ರಾಹಕ ಬಿ.ಸಿ.ಗೌರಿಶಂಕರ್ ವಿಶೇಷ ಪರಿಣತಿ ತೋರಿದ್ದರು. ಕವಿಗಳಾದ ಗೋಪಾಲಕೃಷ್ಣ ಅಡಿಗ ಮತ್ತು ಎಸ್.ಎಸ್.ಲಕ್ಷ್ಮೀನಾರಾಯಣಭಟ್ಟರ ಎರಡು ಕವನಗಳನ್ನು ಈ ಚಿತ್ರದ ಸಂಗೀತ ನಿರ್ದೇಶಕರೂ ಆದ ರಾಜೀವ್ ತಾರಾನಾಥ್ ಅವರೇ ಹಾಡಿದ್ದರು. ಬೇಂದ್ರೆಯವರ 'ಬಂತದೋ ಶೃಂಗಾರ ಮಾಸ' ಕವನವನ್ನು ಚಿತ್ರದುದ್ದಕ್ಕೂ ಅರ್ಥಪೂರ್ಣವಾಗಿ ಬಳಸಲಾಗಿತ್ತು. ಈ ಚಿತ್ರದಲ್ಲಿ ಅಮೋಲ್ ಪಾಲೇಕರ್-ದೀಪಾ ಧನರಾಜ್ ಅಭಿನಯಿಸಿದ್ದರು. ಅಲ್ಲಲ್ಲಿ ಸುಳಿವ ಒಂದೆರಡು ಮಾತುಗಳಿಗೆ ಸುರೇಶ್ ಹೆಬ್ಳೀಕರ್ ಕಂಠದಾನ ಮಾಡಿದ್ದರು. ಈ ಚಿತ್ರ ಎರಡು ಭಾಷೆಯಲ್ಲಿ ತಯಾರಾಗಿತ್ತು. ಕನ್ನಡದಲ್ಲಿ 'ಶೃಂಗಾರ ಮಾಸ'ವಾದರೆ, ಇಂಗ್ಲಿಷ್ ಆವೃತ್ತಿಗೆ 'ಪೇಪರ್ ಬೋಟ್ಸ್' ಎಂದು ಹೆಸರಿಡಲಾಗಿತ್ತು. ಕಾವ್ಯಾತ್ಮಕ ಪ್ರತಿಮೆಗಳನ್ನು ಬಳಸಿದ್ದ ಅಪರೂಪದ ಚಿತ್ರ ಇದು. 'ಶೃಂಗಾರ ಮಾಸ' ಚಿತ್ರದಿಂದ ಗೌರಿಶಂಕರ್ ಸ್ವತಂತ್ರ ಛಾಯಾಗ್ರಾಹಕರಾದರು.

ಕೆ.ವಿ.ಜಯರಾಂರ 'ಒಲವೇ ಬದುಕು'ದಲ್ಲಿ ವಿನಯ, ಶ್ಯಾಮಲ, ಕೆ.ಎಸ್.ಭಾರತಿ, ಮನ್‌ದೀಪ್ ರಾಯ್ ಗಮನಾರ್ಹರು.

'ಮೂರು ಜನ್ಮ' ಕೂಡಾ ಸುದ್ದಿ ಮಾಡಿದಷ್ಟು ಒಳ್ಳೆಯ ಚಿತ್ರವಾಗಲಿಲ್ಲ. ಅದೇ ದಾರಿಯಲ್ಲಿದ್ದ ಚಿತ್ರ 'ಶಪಥ', 'ಅಯ್ಯಪ್ಪ ಶರಣು', 'ಗಂಗಾ'. 'ಪ್ರೇಮಿಗಳ ಸವಾಲ್' ಕನ್ನಡತನವಿಲ್ಲದೆ ಸೊರಗಿದ ಮತ್ತೊಂದು ಚಿತ್ರ. ರಾಜನ್-ನಾಗೇಂದ್ರ ಸಂಗೀತವೊಂದೇ ಚೆನ್ನ. 'ಪವಿತ್ರ ಪ್ರೇಮ' ಚಿತ್ರದಲ್ಲಿ ಸುಧೀರ್ ಅಭಿನಯ ಚೆನ್ನಾಗಿತ್ತು. ನಟಿ ಸಂಗೀತಾ ಬೆಳ್ಳಿತೆರೆಗೆ ಪರಿಚಯವಾದರು.

'ರಾಮಾಪುರದ ರಾವಣ' ಚಿತ್ರ ದಿನೇಶ್ ಅವರ ೨೦೦ನೇ ಚಿತ್ರ. ತೂಗುದೀಪ ಶ್ರೀನಿವಾಸ್ ಉತ್ತಮ ಅಭಿನಯ ನೀಡಿದ್ದರು. ಸಿ.ಜಯರಾಂ ಅವರು ನಿರ್ಮಿಸಿದ ಚಿತ್ರ. ಚಿತ್ರೀಕರಣದ ಒಂದು ಸನ್ನಿವೇಶದಲ್ಲಿ ತೂಗುದೀಪ ಶ್ರೀನಿವಾಸ್ ವಿಧವೆ ಪಾತ್ರದಲ್ಲಿದ್ದ ಆರತಿ ಅವರಿಗೆ ಕುಂಕುಮವಿಟ್ಟು ಹೆಂಡತಿಯಾಗಿ ಸ್ವೀಕರಿಸಬೇಕು. ಆ ಸನ್ನಿವೇಶದಲ್ಲಿ ಆರತಿ ಅವರು ಅಸಹಕಾರ ತೋರಿದರು. ಅದಕ್ಕೆ ಆಕೆಯ ವೈಯಕ್ತಿಕ ಕಾರಣಗಳು ಇದ್ದವು. ಯಾವುದೋ ಭಾವನಾತ್ಮಕ ನೆಲೆಯಲ್ಲಿ 'ಒಲ್ಲೆ' ಎಂದದ್ದೇ ದೊಡ್ಡ ಸುದ್ದಿಯಾಗಿ, ತೂಗುದೀಪ ಶ್ರೀನಿವಾಸ್ ತಪ್ಪಾಗಿ ಗ್ರಹಿಸಿ ವಿಚಿತ್ರ ಸ್ಥಿತಿ ಏರ್ಪಟ್ಟಿತ್ತು.

'ಯಾರಿವನು ?' ಕುತೂಹಲ ಬೆಳೆಸುವ ಕಥೆ ಮತ್ತು ಒಂದೆರಡು ಉತ್ತಮ ಹಾಡುಗಳೊಂದಿಗೆ ಗಮನ ಸೆಳೆಯಿತು. ಚಿತ್ರಕ್ಕೆ ಎಸ್.ಎಸ್.ಲಾಲ್-ಗೌರಿಶಂಕರ್ ಇಬ್ಬರು ಛಾಯಾಗ್ರಾಹಕರು. ಸರೋಜಾದೇವಿ, ಶನಿಮಹದೇವಪ್ಪ ಗಮನಾರ್ಹ ಅಭಿನಯ ನೀಡಿದ್ದರು.

'ಪ್ರೀತಿ ವಾತ್ಸಲ್ಯ' ಚಿತ್ರಕ್ಕೆ ಆರತಿ ಅವರು ಅಧಿಕ ಸಂಭಾವನೆ ಕೇಳಿದ್ದು ದೊಡ್ಡ ಸುದ್ದಿ. ಆಕೆ ಹಠ ಹಿಡಿದರು. ನಾಯಕನಟರಿಗೆ ಕರಿ-ಬಿಳಿಯಾಗಿ ಕೇಳಿದಷ್ಟು ಕೊಡುವವರು ತಾರೆಯೊಬ್ಬರಿಗೆ ಸಂಭಾವನೆ ಕೊಡಲು ತಕರಾರೆತ್ತುವುದೇಕೋ. ಈ ಚಿತ್ರಕ್ಕೆ ಸಾಹಿತ್ಯ ಒದಗಿಸಿದ ಬಿ.ಎಲ್.ವೇಣು ವಿವಾದಕ್ಕೊಳಗಾದರು. ರಾಮಕೃಷ್ಣ, ಚಂದ್ರಶೇಖರ್ ಕೆಲಸ ಪೂರೈಸದೆ ಹೊರಟುಹೋಗಿದ್ದರಿಂದ ವಿಶ್ವವಿಜೇತ, ವಿಜಯಕಾಶಿಗೆ ಅವಕಾಶ ದೊರೆತಿತ್ತು. ಅವರು ಕೈಲಾದ ಮಟ್ಟಿಗೆ ನ್ಯಾಯ ಸಲ್ಲಿಸಿದರು. ಚಿತ್ರದಲ್ಲಿ ಗಮನ ಸೆಳೆದವರು ಪ್ರಭಾಕರ್. ಖಳನಾಗಿಯೇ ಹೆಚ್ಚು ಹೆಸರಾಗಿದ್ದವರು ಮುಖ್ಯ ಪಾತ್ರವಾದರೂ ವಿಚಿತ್ರ ಸಾಹಸ, ಅರ್ಭಟಗಳ ಮೂಲಕವೇ ಗೊತ್ತಾಗಿದ್ದವರು ಪ್ರಭಾಕರ್. ಆದರೆ ಈ ಚಿತ್ರದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ತುಂಬ ಬೇರೆಯದೇ ಆದ ಅಭಿನಯ ತೋರಿದರು. ಕಣ್ಣುಗಳಲ್ಲಿ, ಕಿರುನಗೆಯಲ್ಲಿ ಭಾವ ಬಿತ್ತರಿಸಿದ ರೀತಿ ಮನ ಸೆಳೆದಿತ್ತು.

'ಪ್ರೀತಿ ವಾತ್ಸಲ್ಯ' ಭಾರ್ಗವ-ರಾಜಾರಾಂ ಜೋಡಿ ಹುಟ್ಟುಹಾಕಿದ 'ಕಲಾಕೃತಿ' ಸಂಸ್ಥೆಯ ಮೊದಲ ಚಿತ್ರ. ಮುಂದಿನ ದಿನಗಳಲ್ಲಿ ನಿರಂತರವಾಗಿ ೧೦ ವರ್ಷಗಳವರೆಗೆ ಈ ಸಂಸ್ಥೆ ಏಳು ಚಿತ್ರಗಳನ್ನು ನಿರ್ಮಿಸಿತು. ಇದರಲ್ಲಿ 'ಹೃದಯಗೀತೆ', 'ಜನನಾಯಕ', 'ಕರುಣಾಮಯಿ', 'ಜೀವನಚಕ್ರ' ಚಿತ್ರಗಳು ಯಶಸ್ವಿಯಾದವು. ರವೀಯವರ 'ಮುತ್ತೈದೆ ಭಾಗ್ಯ'ದ ನಂತರ ಅದೇ ಚಿತ್ರದ ಯಶಸ್ವಿ ಜೋಡಿಯಾಗಿದ್ದ ಪ್ರಭಾಕರ್-ಆರತಿಯವರನ್ನು ಹಾಕಿಕೊಂಡು ಭಾರ್ಗವ ಈ ಚಿತ್ರವನ್ನು ನಿರ್ಮಿಸಿದರು. ಪ್ರಭಾಕರ್ ಅವರ ಬೆಳವಣಿಗೆಗೆ ಈ ಚಿತ್ರವು ಒಂದು ಗಟ್ಟಿ ಮೆಟ್ಟಿಲಾಯಿತು.



(ಚಿತ್ರ ೮೬)'ಪ್ರೀತಿ ವಾತ್ಸಲ್ಯ'ಚಿತ್ರದಲ್ಲಿ ಆರತಿ ಮತ್ತು ಶ್ರೀಧರ್

'ಅನುಭವ' ಅದುವರೆಗೆ ತಯಾರಾದ ಒಂದು ಸಾವಿರಕ್ಕೂ ಹೆಚ್ಚಿನ ಕನ್ನಡ ಚಿತ್ರಗಳಿಗಿಂತ ಭಿನ್ನವಾದ ಚಿತ್ರ. ಈ ಚಿತ್ರವನ್ನು ನೋಡಿ ಆಗ ಸೆನ್ಸಾರ್ ಅಧಿಕಾರಿಯೊಬ್ಬರು ಹೊರಡಿಸಿದ ಈ ಕೆಳಗಿನ ಉದ್ಗಾರವೇ ಮೇಲಿನ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ.

''ನಾವು ಐನೂರಕ್ಕೂ ಹೆಚ್ಚು ಚಿತ್ರಗಳನ್ನು ನೋಡಿದ್ದೇವೆ. ಆದರೆ ಇಷ್ಟು ಕೆಟ್ಟ, ಅಸಹ್ಯ ಚಿತ್ರವನ್ನು ನೋಡಿದ್ದು ಇದೇ ಮೊದಲು''.

ನಿಜ, ಕನ್ನಡಿಗರಲ್ಲಿ ಕನ್ನಡ ಚಿತ್ರಗಳು ಸುಮಾರು ೫೦ ವರ್ಷಗಳಿಂದ ಸೃಷ್ಟಿಸಿದ್ದ ಸಭ್ಯಕೋಶವನ್ನು ಕಾಶೀನಾಥ್ ವೈರಸ್‌ಗಳು 'ಅನುಭವ'ದ ಮೂಲಕ ಪ್ರವೇಶಿಸಿಬಿಟ್ಟಿದ್ದವು. ಸೆನ್ಸಾರ್ ಮಂಡಳಿ ನಾಲ್ಕು ತಿಂಗಳ ಸುದೀರ್ಘ ಶಸ್ತ್ರಚಿಕಿತ್ಸೆಯ ನಂತರ ಕೆಲವಾರು ದೃಶ್ಯಗಳನ್ನು ಕತ್ತರಿಸಿಹಾಕಿ ವಯಸ್ಕರು ಮಾತ್ರ ನೋಡಬೇಕೆಂದು ಪ್ರದರ್ಶನಕ್ಕೆ ಅನುಮತಿ ನೀಡಿತು. ಈ ಅನುಮತಿಯೇ ಮುಂದಿನ ದಿನಗಳಲ್ಲಿ ಕನ್ನಡ ಚಿತ್ರರಂಗದಲ್ಲಿ ಲೈಂಗಿಕ ಚಿತ್ರಗಳ ಪರಂಪರೆಯ ಆರಂಭಕ್ಕೆ ನೀಡಿದ ಸಮ್ಮತಿಯೂ ಆಯಿತು. 'ಅನುಭವ' ಚಿತ್ರಕ್ಕೆ ಸಂಬಂಧಿಸಿ ಎಲ್ಲರಿಗೂ ಇಂಥ ಅಭಿಪ್ರಾಯವೇ ಆರಂಭದ ದಿನಗಳಲ್ಲಿ ಇದ್ದದ್ದು. ಆದರೆ ಅದನ್ನು ದಿನ ಕಳೆದಂತೆ ಸಮಾಜಶಾಸ್ತ್ರಜ್ಞರು, ಮನಃಶಾಸ್ತ್ರಜ್ಞರು ಹಾಗೂ ಲೈಂಗಿಕ ತಜ್ಞರ ಬರಹ, ಭಾಷಣ, ಅಭಿಪ್ರಾಯಗಳ ಮೂಲಕ ಬದಲಾಯಿಸಲು ಪ್ರಯತ್ನಿಸಲಾಯಿತು. ಈ ಪ್ರಯತ್ನದಲ್ಲಿ ಸಾಕಷ್ಟು ಯಶಸ್ಸು ದೊರಕಿತು. ಇದರ ಫಲವಾಗಿ 'ಅನುಭವ' ಚಿತ್ರವನ್ನು ಲೈಂಗಿಕ ಶಿಕ್ಷಣದ ಚಿತ್ರವನ್ನಾಗಿ ಭಾವಿಸಿಕೊಳ್ಳಲು ಬಹುಸಂಖ್ಯಾತರು ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡರು.

ಇದೆಲ್ಲ ಹೊರಗೆ ನಡೆಯುತ್ತಿದ್ದಾಗ ಚಿತ್ರಮಂದಿರದ ಒಳಗೆ ಜನರು ತುಂಬಿ ತುಳುಕುತ್ತಿದ್ದರು. ಹೆಸರಾಂತ ನಾಯಕ, ನಾಯಕಿ, ಸಾಹಸ, ಕ್ಯಾಬರೆ, ಮಾರಾಮಾರಿ ಯಾವುದೂ ಇಲ್ಲದೇನೇ ಹೇಗೆ ಈ ಚಿತ್ರ ಇಷ್ಟೊಂದು ಯಶಸ್ವಿಯಾಗುತ್ತಿದೆ ಎಂದು ಆಗ ಎಲ್ಲರಿಗೂ ಅಚ್ಚರಿ. ನಾಯಕ ಎಂದರೆ ಒಂದು ಗೊತ್ತಾದ ಕಲ್ಪನೆ ಸೃಷ್ಟಿಯಾಗಿದ್ದ ದಿನಗಳಲ್ಲಿ ಪೆದ್ದು ಮೊಗದ, ನರಪೇತಲನಂತಿರುವ ನಾಯಕನೊಬ್ಬನನ್ನು ಒಪ್ಪುವಂತೆ ಮಾಡಿದ್ದು ಅದೇ ಒಣಕಲ ದೇಹದಲ್ಲಿನ ಒಂದು ಸೃಜನಶೀಲ ಮನಸ್ಸು. ಈ ಚಿತ್ರದಿಂದ ಕಾಶೀನಾಥ್‌ರಿಗೆ ಯಶಸ್ಸಷ್ಟೇ ಅಲ್ಲದೆ 'ಕನ್ನಡದ ಭಾಗ್ಯರಾಜ್' ಎಂಬ ಬಿರುದೂ ಪ್ರಾಪ್ತವಾಯಿತು. ಕಥೆ, ಚಿತ್ರಕಥೆ, ಸಂಭಾಷಣೆ, ನಿರ್ದೇಶನ, ನಟನೆ, ನಿರ್ಮಾಣ ಹೀಗೆ ಎಲ್ಲ ವಿಭಾಗಗಳನ್ನು ತಾವೇ ನಿರ್ವಹಿಸಿದ ಕಾಶೀನಾಥ್ ಕನ್ನಡ ಚಿತ್ರರಂಗದಲ್ಲಿ ತಮ್ಮನ್ನು ಪ್ರತ್ಯೇಕವಾಗಿಯೇ ಪ್ರತಿಷ್ಠಾಪಿಸಿಕೊಂಡರು.

'ಅನುಭವ'ದ ಕಥೆ ಹಾಗೆ ನೋಡಿದರೆ ಸಂಕೀರ್ಣವಾದದ್ದಲ್ಲ, 'ಶೃಂಗಾರ ಮಾಸ'ದಂತೆ ಪ್ರಯೋಗದ ದೃಷ್ಟಿಯನ್ನೂ ಒಳಗೊಂಡಿರಲಿಲ್ಲ. ಸೀಮಿತ ಉದ್ದೇಶ, ಸೀಮಿತ ಸಾಧ್ಯತೆಗಳ ಅಂದಾಜಿನಲ್ಲಿ ಇದನ್ನು ನಿರ್ಮಿಸಲಾಗಿತ್ತು. ಮದುವೆಯ ಕನಸು ಕಾಣುವ ಒಬ್ಬ ಸಾಮಾನ್ಯ ರೂಪಿನ ಪೆದ್ದು ಯುವಕ ಚಿತ್ರದ ನಾಯಕ. ದಾಂಪತ್ಯದ ಬದುಕಿನ ಬಗ್ಗೆ ಎಳ್ಳಷ್ಟು ಜ್ಞಾನವಿಲ್ಲದ ಮುಗ್ಧ ಹುಡುಗಿ ಗೌರಿ ನಾಯಕಿ. ಇವಳಿನ್ನೂ ಮಾನಸಿಕವಾಗಿ ಬೆಳೆದಿಲ್ಲ. ದೈಹಿಕ ಬಯಕೆಗಳ ಬಗ್ಗೆ ಅರಿವು ಇಲ್ಲದಿರುವುದರಿಂದ ಕೈ ಹಿಡಿದ ಗಂಡನ ಬಯಕೆಗಳನ್ನು ಹೇಗೆ ಈಡೇರಿಸಬೇಕೆಂಬುದು ಅವಳಿಗೆ ಗೊತ್ತಿಲ್ಲ. ಇದನ್ನು ನಿರೂಪಿಸಲು ಕಾಶೀನಾಥ್ ಮುಜುಗರ ಹುಟ್ಟಿಸುವ ಸಂಭಾಷಣೆ, ದೃಶ್ಯಗಳನ್ನು ಜಾಣತನದಿಂದ ಸೃಷ್ಟಿಸಿದ್ದರು. ಇದು ಕಥೆಗೆ ಅತ್ಯಗತ್ಯವಾದ ಅತ್ಯಂತ ಸಹಜ ಅಂಶ ಎಂದು ಕಾಶೀನಾಥ್ ನಂತರದ ದಿನಗಳಲ್ಲಿ ವಾದಿಸಿದರು. ಕೊನೆಗೆ ನಾಯಕ ಬೇರೊಂದು ಹೆಣ್ಣಿನ ಸಾಮೀಪ್ಯವನ್ನು ಬಯಸಿ, ಅಲ್ಲಿನ ಅನುಭವದಿಂದ ನೊಂದು ಹೆಂಡತಿಯನ್ನು ಹುಡುಕಿಕೊಂಡು ಬರುವ ವೇಳೆಗೆ ಅವೇ ಘಟನೆಗಳಿಂದಾಗಿ ಅವಳಲ್ಲೂ ಸಾಕಷ್ಟು ಪರಿವರ್ತನೆ ಆಗಿರುತ್ತದೆ. ಈ ಕಥೆಯನ್ನು ಕ್ರಮೇಣ ಮಹಿಳೆಯರು ಕೂಡ ಮೆಚ್ಚಿಕೊಂಡು ಚಿತ್ರಮಂದಿರಗಳಿಗೆ ಬರತೊಡಗಿದ್ದು ಅಧ್ಯಯನಕ್ಕೆ ಯೋಗ್ಯವಾದ ಸಂಗತಿ. ಎಲ್ಲಕ್ಕಿಂತ ಹೆಚ್ಚಾಗಿ ಚಿತ್ರದ ನಿರೂಪಣೆ, ಕಥೆ ನಡೆಯುವ ಪರಿಸರ ಚಿತ್ರಕ್ಕೆ ವಿಶಿಷ್ಟ ಜೀವಂತಿಕೆಯನ್ನು ಸೃಷ್ಟಿಸಿಕೊಟ್ಟಿದ್ದವು.

'ಅನುಭವ' ಚಿತ್ರದ ಇನ್ನೊಂದು ವಿಶೇಷವೆಂದರೆ ಚಿತ್ರದ ಬಹುತೇಕ ಕಲಾವಿದರು ಹೊಸಬರಾಗಿದ್ದರೂ ಪಳಗಿದ ಕಲಾವಿದರಂತೆ ಅಭಿನಯಿಸಿದ್ದುದು. ಕಾಶೀನಾಥ್‌ರ ಪೆದ್ದುತನದ ಅಭಿನಯ ಅವರ ವ್ಯಕ್ತಿತ್ವವೇ ಇರಬಹುದೆಂಬಷ್ಟರ ಮಟ್ಟಿಗೆ ನಂತರದ ವರ್ಷಗಳಲ್ಲಿ ಬಹಳ ಜನಪ್ರಿಯವಾಯಿತು. ಸಾಧಾರಣ ರೂಪಿನ ಹೊಸ ಹುಡುಗಿ



(ಚಿತ್ರ ೮೭)'ಅನುಭವ' ಚಿತ್ರದಲ್ಲಿ ಕಾಶೀನಾಥ್ ಮತ್ತು ಅಭಿನಯ



(ಚಿತ್ರ ೮೮) ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಅಧ್ಯಕ್ಷತೆಯಲ್ಲಿ ನಡೆದ ಕನ್ನಡ ವಾಕ್ಚಿತ್ರ ಸುವರ್ಣಮಹೋತ್ಸವ (೧೯೮೪) ಸಮಾರಂಭವನ್ನು ವಿ.ಶಾಂತಾರಾಂ ಉದ್ಘಾಟಿಸಿದರು.

ಅಭಿನಯ ತುಂಟ ಹುಡುಗಿಯಾಗಿ, ಪ್ರಬುದ್ಧ ಹೆಣ್ಣಾಗಿ ಸಮರ್ಪಕವಾಗಿ ನಟಿಸಿದ್ದರು. ಆಗ್ಗ ಹವ್ಯಾಸಿ ರಂಗಭೂಮಿಯಲ್ಲಿ ಹೆಸರಾಗಿದ್ದ ಉಮಾಶ್ರೀ 'ಪದ್ದಿ' ಪಾತ್ರದಲ್ಲಿ ಮೈ ಚಳಿ ಬಿಟ್ಟು ತೋರಿದ ನಟನೆಯೇ ಒಂದು ಮಾದರಿಯಾಗಿಬಿಟ್ಟಿತು. ಸೇರೆಗಾರನ ಪಾತ್ರದಲ್ಲಿ ಅರವಿಂದ್, ನಾಯಕನ ತಾಯಿಯಾಗಿ ಕಮಿನೀಧರನ್ ಒಬ್ಬೊಬ್ಬರೂ ಕನ್ನಡ ತೆರೆಗೆ ಉತ್ತಮ ಕೊಡುಗೆಗಳಾದರು. ಈ ಚಿತ್ರದ ಮೂಲಕ ಕಾಶೀನಾಥ್‌ರ ಖ್ಯಾತಿ ಹಿಂದಿ ಚಿತ್ರರಂಗದವರೆಗೂ ವ್ಯಾಪಿಸಿತು. ತಮ್ಮ ಮೊದಲ ಚಿತ್ರ 'ಅಪರಿಚಿತ'ವನ್ನು ಮಿಥುನ್ ನಾಯಕತ್ವದಲ್ಲಿ 'ಬೇಷಕ್' ಹೆಸರಿನಲ್ಲಿ ತಾವೇ ನಿರ್ಮಿಸಿ, ನಿರ್ದೇಶಿಸಿದರು. ಮತ್ತೆ 'ಅನುಭವ' ಹಿಂದಿಯಲ್ಲಿ 'ಅನುಭವ್' ಆಗಿ ಕನ್ನಡಕ್ಕಿಂತ ಹೆಚ್ಚು ಯಶಸ್ಸು ಗಳಿಸಿತು. ೧೯೮೩-೮೪ರ ರಾಜ್ಯದ ಅತ್ಯುತ್ತಮ ನಟಿ ಪ್ರಶಸ್ತಿ - ಅಭಿನಯ ಅವರಿಗೆ, ಪೋಷಕ ನಟ - ಅರವಿಂದ್, ಪೋಷಕ ನಟಿ - ಕಮಿನೀಧರನ್‌ರಿಗೆ ಲಭ್ಯವಾದುವು. ಮಿನರ್ವ ಚಿತ್ರಮಂದಿರದಲ್ಲಿ ತೆರೆಕಂಡಿತ್ತು. ಮತ್ತು ಕೈಲಾಶ್ ಚಿತ್ರಮಂದಿರದಲ್ಲಿ ೨೫ ವಾರಗಳಿಗೂ ಮೀರಿ ಯಶಸ್ವಿ ಪ್ರದರ್ಶನ ಕಂಡಿತು. ನಂತರದ ವರ್ಷಗಳ ಮರು ಬಿಡುಗಡೆಗಳಲ್ಲೂ ಹಾಗೂ ೧೯೯೫ ರಲ್ಲೂ ೧೦, ೧೫ ವಾರಗಳ ಪ್ರದರ್ಶನಗಳನ್ನು ಕಾಣುತ್ತಲೇ ಬಂದಿದೆ.

ಈ ದಿನಗಳಲ್ಲೇ ಕನ್ನಡ ವಾಕ್ಚಿತ್ರ ಚರಿತ್ರೆಯ ಮಹತ್ವದ ಮುಹೂರ್ತವೊಂದು ಒದಗಿ ಬಂತು. ಕನ್ನಡ ವಾಕ್ಚಿತ್ರಕ್ಕೆ ೫೦ ವರ್ಷ ತುಂಬಿದ (೧೯೩೪-೮೪) ಅಮೃತ ಘಳಿಗೆಯದು. ಇದನ್ನು ರಾಜ್ಯದಾದ್ಯಂತ ಅತ್ಯಂತ ಅದ್ದೂರಿಯಾಗಿ ಅರ್ಥಪೂರ್ಣವಾಗಿ ಆಚರಿಸಲು ಚರ್ಚೆ, ಸಿದ್ಧತೆಗಳು ನಡೆಯತೊಡಗಿದವು. ಆಗ ದುರಂತವೊಂದು ಘಟಿಸಿತು. ರಾಷ್ಟ್ರದ ಜನಪ್ರಿಯ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರ ಹತ್ಯೆ ಆಯಿತು (೩೧-೧೦-೧೯೮೪). ಈ ಘಟನೆ ಇಡೀ ದೇಶವನ್ನೇ ಶೋಕದಲ್ಲಿ ಮುಳುಗಿಸಿತ್ತು. ಇದರಿಂದಾಗಿ ನಿಯೋಜಿತ ಕನ್ನಡ ವಾಕ್ಚಿತ್ರ ಉತ್ಸವ ಕೂಡ ಮುಂದೂಡಲ್ಪಟ್ಟಿತು. ಮುಂದೆ ೧೯೮೪ರ ೨೫-೨೬ ನವೆಂಬರ್‌ನಲ್ಲಿ ಕಂಠೀರವ ಸ್ಟೇಡಿಯಂನಲ್ಲಿ ಜರುಗಿತು.

ಕನ್ನಡ ವಾಕ್ಚಿತ್ರಕ್ಕೆ ೫೦ ವರ್ಷ ತುಂಬಿದ ಮಹಾ ಉತ್ಸವದ ಉದ್ಘಾಟನೆಯನ್ನು ಭಾರತೀಯ ಚಿತ್ರರಂಗದ ದಿಗ್ಗಜ, ಕನ್ನಡಿಗ ವಿ.ಶಾಂತಾರಾಂ ಉದ್ಘಾಟಿಸಿದರು. ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಅಧ್ಯಕ್ಷತೆ ವಹಿಸಿದ್ದ ವೇದಿಕೆಯಲ್ಲಿ ದಕ್ಷಿಣ ಭಾರತ ಚಿತ್ರರಂಗದ ದಿಗ್ಗಜರಾದ ರಾಮಾನುಜಂ, ಡಿ.ವಿ.ಎಸ್.ರಾಜು, ರಜನೀಕಾಂತ್, ಸಾಹುಕಾರ್ ಜಾನಕಿ, ಹೃಷಿಕೇಶ್ ಮುಖರ್ಜಿ, ರಾಜಕುಮಾರ್ ಹಾಗೂ ಹಲವಾರು ಸಚಿವರು ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ಅಹಿತಕರ ಘಟನೆಯೊಂದು ಜರುಗಿತು. ಶಾಂತಾರಾಂ ಅವರು ತಾವು ಹುಬ್ಬಳ್ಳಿಯಲ್ಲಿ ಚಿತ್ರಮಂದಿರವೊಂದರ ಗೇಟ್‌ಕೀಪರ್ ಆಗಿ ವೃತ್ತಿಜೀವನ ಆರಂಭಿಸಿದ್ದನ್ನು ಇಂಗ್ಲಿಷ್‌ನಲ್ಲಿ ಹೇಳುತ್ತಿದ್ದಾಗ ಕಲವು ಭಾಷಾಂಧರು ಅವರ ಭಾಷಣವನ್ನು ಅರ್ಧಕ್ಕೇ ನಿಲ್ಲಿಸಿದರು.

ಕಾರ್ಯಕ್ರಮದ ನಂತರ ನಡೆದ ಸಂಗೀತ ಸಂಜೆಯಲ್ಲಿ ಸಂಗೀತ ನಿರ್ದೇಶಕರಾದ ರಾಜನ್-ನಾಗೇಂದ್ರ, ಜಿ.ಕೆ.ವೆಂಕಟೇಶ್, ಸತ್ಯಂ ಹಾಗೂ ವಿಜಯಭಾಸ್ಕರ್ ನಿರ್ದೇಶನದಲ್ಲಿ ರಾಜಕುಮಾರ್, ಎಸ್.ಪಿ.ಬಾಲಸುಬ್ರಹ್ಮಣ್ಯಂ, ಪಿ.ಬಿ.ಶ್ರೀನಿವಾಸ್, ಎಸ್.ಜಾನಕಿ ಹಾಗೂ ಬೆಂಗಳೂರು ಲತಾ ಜನಪ್ರಿಯ ಚಿತ್ರಗೀತೆಗಳನ್ನು ಹಾಡಿದರು. ರಾಜ್ಯಪಾಲ ಎ.ಎನ್.ಬ್ಯಾನರ್ಜಿ ಸ್ಮರಣ ಫಲಕಗಳನ್ನು ವಿತರಣೆ ಮಾಡಿದರು. ೬೫ ಮಂದಿ ಹಿರಿಯ ಚಿತ್ರಜ್ಞರನ್ನು (ಹತ್ತು ಮಂದಿ ಗೈರುಹಾಜರಾಗಿದ್ದರು) ಸನ್ಮಾನಿಸಲಾಯಿತು. ಇದೇ ಸಂದರ್ಭದಲ್ಲಿ ಕನ್ನಡ ಚಿತ್ರೋದ್ಯಮದ ಸ್ಥಿತಿಗತಿಗಳ ಬಗ್ಗೆ ಎರಡು ದಿನಗಳ ಕಾಲ ವಿಚಾರ ಸಂಕಿರಣ ನಡೆಯಿತು. ಮೈಸೂರು, ಮಂಗಳೂರು ನಗರಗಳಲ್ಲಿ ನವೆಂಬರ್ ೩೦ ರಿಂದ ಡಿಸೆಂಬರ್ ೬ರವರೆಗೆ, ಹುಬ್ಬಳ್ಳಿ, ಬೆಳಗಾಂ, ಗುಲ್ಬರ್ಗಾ ನಗರಗಳಲ್ಲಿ ಡಿಸೆಂಬರ್ ೭ ರಿಂದ ೧೩ರವರೆಗೆ ಚಿತ್ರೋತ್ಸವ ನಡೆಯಿತು. ಇದರೊಂದಿಗೆ ರಾಜ್ಯ ಸರ್ಕಾರ ಹಾಗೂ ವಾಣಿಜ್ಯ ಮಂಡಳಿಗಳು ರಾಜಧಾನಿ ದೆಹಲಿಯಲ್ಲೂ ಚಿತ್ರೋತ್ಸವವನ್ನು ಏರ್ಪಡಿಸಿದ್ದವು. ಮಹಾರಾಷ್ಟ್ರ ರಂಗಾಯನ್ ಸಭಾಂಗಣದಲ್ಲಿ ನಡೆದ ಈ ಉತ್ಸವವನ್ನು ಪುಟ್ಟಣ್ಣನವರು ಉದ್ಘಾಟಿಸಿದರು. ಇಲ್ಲಿ ರೂಪಕ ಚಿತ್ರಗಳೊಂದಿಗೆ ಕನ್ನಡ ಚಿತ್ರರಂಗ ನಡೆದು ಬಂದ ದಾರಿಯ ಬಗ್ಗೆ ರಾಜ್ಯ ಸರ್ಕಾರ ತಯಾರಿಸಿದ ಸಾಕ್ಷ್ಯಚಿತ್ರ ಹಾಗೂ ಸ್ಥಿರಚಿತ್ರಗಳ ಪ್ರದರ್ಶನವು ಒಂದು ವಾರ ನಡೆಯಿತು.

ಈ ಮಹಾ ಉತ್ಸವದ ಸಂದರ್ಭದಲ್ಲಿ ಉದ್ಯಮದ ಪರಿಮಿತಗಳಿಗೆ ಸಾಕ್ಷಿಯಾದ ಒಂದು ಕಹಿ ಪ್ರಸಂಗ ಜರುಗಿತು. ಬೆಂಗಳೂರಿನಲ್ಲಿ ಸನ್ಮಾನಿಸಲಾದ ೬೫ ಮಂದಿ ಗಣ್ಯರ ಪಟ್ಟಿಯಲ್ಲಿ ಮೈಸೂರಿನ ಪ್ರೀಮಿಯರ್ ಸ್ಟುಡಿಯೋ ಮಾಲೀಕರಾದ ಬಸವರಾಜಯ್ಯನವರ ಹೆಸರೂ ಇತ್ತು. ಸಮಾರಂಭದ ವೇಳೆಗೆ ಸ್ಟುಡಿಯೋ ಮುಚ್ಚಿ ಎರಡು ವರ್ಷಗಳಾಗಿದ್ದವು. ಅಲ್ಲದೆ ಅದನ್ನು ಬಸವರಾಜಯ್ಯನವರು ವ್ಯಾಪಾರಿ ಉದ್ದೇಶಗಳಿಗೆ ಬಾಡಿಗೆಗೆ ಕೊಟ್ಟಿದ್ದರು. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರ ವಿಭಾಗಾಧಿಕಾರಿಗಳ ನೇತೃತ್ವದಲ್ಲಿ ಸಮಿತಿಯೊಂದನ್ನು ನೇಮಿಸಿ ತನಿಖೆ ನಡೆಸಿತು.

ಸ್ಟುಡಿಯೋವನ್ನು ಮುಚ್ಚಬೇಕಾಗಿ ಬಂದಿದ್ದಕ್ಕೆ ಬಸವರಾಜಯ್ಯನವರು ಕೊಡುತ್ತಿದ್ದ ಕಾರಣಗಳ ಜೊತೆಗೆ ಚಿತ್ರೋದ್ಯಮದವೇ ಆದ ಇನ್ನೂ ಕೆಲವು ಅಂಶಗಳಿದ್ದವು. ೧೯೮೧ ರಿಂದ ಹೊರಾಂಗಣ, ಖಾಸಗಿ ಮನೆಗಳು, ಬಂಗಲೆಗಳಲ್ಲಿ ಚಿತ್ರೀಕರಣ ನಡೆಸುವ ಪರಿಪಾಠ ಹೆಚ್ಚಿತು. ಮುಂಬೈನಲ್ಲೂ ಇಂಥದೇ ವಾತಾವರಣ ಇತ್ತು.

ಅಲ್ಲಿಯೂ ಸ್ಟುಡಿಯೋಗಳಲ್ಲಿ ಕೆಲಸವಿಲ್ಲದೆ ಸಾಕಷ್ಟು ಕಾರ್ಮಿಕರು ನಿರುದ್ಯೋಗಿಗಳಾಗಿದ್ದರು. ಬೆಂಗಳೂರಿನ ಸ್ಟುಡಿಯೋಗಳು ಕೂಡ 'ಬಿಕೋ' ಅನ್ನುತ್ತಿದ್ದವು. ಇಂಥ ಹಿನ್ನೆಲೆಯಲ್ಲಿಯೇ ಸ್ಟುಡಿಯೋ ಮುಚ್ಚಿದ್ದ ಬಸವರಾಜಯ್ಯನವರು ಒಂದೆರಡು ಫ್ಲೋರ್‌ಗಳನ್ನು ಬಾಡಿಗೆಗೆ ಕೊಟ್ಟಿದ್ದರು. ಇಂಥ ಪರಿಸ್ಥಿತಿ ನಿರ್ಮಾಣವಾಗಲು ಇನ್ನೊಂದು ಮುಖ್ಯ ಕಾರಣವೂ ಇತ್ತು. ಅದು ಎಲ್ಲಿಯೇ ಚಿತ್ರೀಕರಣ ಮಾಡಿದ್ದರೂ 'ಅರ್ಧ ತೆರಿಗೆ ವಿನಾಯಿತಿ ಲಭ್ಯ' ಎಂಬ ಸರ್ಕಾರದ ನೀತಿ. ಇದು ಘೋಷಣೆಯಾಗುತ್ತಿದ್ದಂತೆ ಬಹಳ ಮಂದಿ ನಿರ್ಮಾಪಕರು ಮದರಾಸು ಸೇರಿಕೊಂಡರು. ಪ್ರಮುಖ ನಟರಲ್ಲಿ ಕೆಲವರು ಮದರಾಸಿನಲ್ಲಿಯೇ ತಳವೂರಿದರು. ಒಮ್ಮೊಮ್ಮೆಗೆ ಅಲ್ಲಿ ಏಳೆಂಟು ಕನ್ನಡ ಚಿತ್ರಗಳ ಚಿತ್ರೀಕರಣ ನಡೆಯತೊಡಗಿತು. ಸರ್ಕಾರ ನೀಡುತ್ತಾ ಬಂದಿದ್ದ ೧೫ ವರ್ಷಗಳ ಸಹಾಯಧನ ಯೋಜನೆಯ ಫಲವೂ ಇದೆಲ್ಲದರಿಂದಾಗಿ ಮಣ್ಣುಗೂಡಲು ಆರಂಭವಾಯಿತು.

'ವೆಚ್ಚವೆಲ್ಲ ಮದರಾಸಿನಲ್ಲಿ, ಸೌಲಭ್ಯ ಮಾತ್ರ ಕರ್ನಾಟಕದಲ್ಲಿ' ಎಂಬಂತಾದಾಗ ಇಲ್ಲಿನ ನಿರ್ಮಾಣ ವ್ಯವಸ್ಥೆಯನ್ನು ನಂಬಿ ಕುಳಿತಿದ್ದವರು ನಿರುದ್ಯೋಗಿಗಳಾದದ್ದಷ್ಟೇ ಅಲ್ಲ, ಇರುವ ಕೆಲವೇ ಡಬ್ಬಿಂಗ್ ಕಲಾವಿದರು ಬೆಂಗಳೂರು-ಮದರಾಸಿನ ನಡುವೆ ಅಡ್ಡಾಡುತ್ತಾ ಪರದಾಡತೊಡಗಿದರು. ಇಲ್ಲಿ ಒಂದು ಉದಾಹರಣೆ ಕೊಟ್ಟರೆ ಅಂದಿನ ಚಿತ್ರರಂಗದ ಪರಿಸ್ಥಿತಿಯ ಸ್ಪಷ್ಟ ಚಿತ್ರಣ ಸಿಗುತ್ತದೆ. 'ಋಣ ಮುಕ್ತಳು' ಚಿತ್ರದ ಡಬ್ಬಿಂಗ್ ಸಮಯದಲ್ಲಿ ನಟ ರಾಮಕೃಷ್ಣ ಮದರಾಸಿನಲ್ಲಿ ನಡೆಯುತ್ತಿದ್ದ ಕನ್ನಡ ಚಿತ್ರದ ಚಿತ್ರೀಕರಣದಲ್ಲಿ ಭಾಗವಹಿಸಿದ್ದರು. ಇದರಿಂದಾಗಿ ಅವರ ಭಾಗದ ಡಬ್ಬಿಂಗ್ ಕೆಲಸವನ್ನು ಚಿತ್ರದ ತಂಡ ಅಲ್ಲಿಯೇ ಹೋಗಿ ಮುಗಿಸಿಕೊಂಡು ಬಂದಿತು. ಇಂಥ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಸ್ಟುಡಿಯೋ ಮುಚ್ಚಬೇಕಾಗಿ ಬಂದ ತಮ್ಮ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಲಿಲ್ಲವೆಂದು ಬಸವರಾಜಯ್ಯನವರು ವ್ಯಗ್ರರಾಗಿದ್ದರು. ತಮ್ಮ ಅಸಮಾಧಾನವನ್ನು ಸರ್ಕಾರಕ್ಕೆ ಪತ್ರ ಬರೆಯುವುದರ ಮೂಲಕ ತೋಡಿಕೊಂಡ ಅವರು ಅದನ್ನು ಸಾರ್ವಜನಿಕರ ಗಮನಕ್ಕೂ ತಂದರು. ''ಈಗ ಸ್ಟುಡಿಯೋ ಮುಚ್ಚಿರುವುದರಿಂದ ಆಸಕ್ತರ ಒತ್ತಾಯಕ್ಕೆ ಮಣಿದು ಸರ್ಕಾರ ನನ್ನ ಮೇಲೆ ಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಿದೆ. ಈ ಹಿನ್ನೆಲೆಯಲ್ಲಿ ಸುವರ್ಣ ಮಹೋತ್ಸವದ ಗೌರವಕ್ಕೆ ನಾನು ಅರ್ಹನಲ್ಲ. ಒಂದು ಕಡೆ ಸನ್ಮಾನ ಮಾಡುವುದು, ಇನ್ನೊಂದು ಕಡೆ ನನ್ನ ಮೇಲೆ ಕ್ರಮಗಳನ್ನು ಕೈಗೊಳ್ಳುವುದು ವಿಪರ್ಯಾಸ''.

ಮೈಸೂರಿನ ಶ್ಯಾಂಸುಂದರ್ ಚಿತ್ರಮಂದಿರದ ಎದುರು, ಒಳಗೆ ಚಿತ್ರೋತ್ಸವ ಆರಂಭವಾಗುವ ವೇಳೆಗೆ ಮೈಸೂರಿನ ಚಲನಚಿತ್ರ ಸಹಕಲಾವಿದರ ಹಾಗೂ ಕಾರ್ಮಿಕರ ಒಕ್ಕೂಟ ಧರಣೆ ನಡೆಸಿ ಘೋಷಣೆಗಳನ್ನು ಕೂಗುತ್ತಾ ಪ್ರೀಮಿಯರ್ ಸ್ಟುಡಿಯೋವನ್ನು ಪುನರಾರಂಭಿಸುವಂತೆ ಒತ್ತಾಯ ಪಡಿಸಿತು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ವಿಭಾಗಾಧಿಕಾರಿ ಸಿ.ಮುನಿಸ್ವಾಮಿ ಸರ್ಕಾರವು ಕಾನೂನಿನಡಿಯಲ್ಲಿ ಸ್ಟುಡಿಯೋ ಪ್ರಾರಂಭಿಸಲು ಎಲ್ಲ ಕ್ರಮಗಳನ್ನೂ ಕೈಗೊಳ್ಳುತ್ತಿದೆ ಎಂಬ ಭರವಸೆ ನೀಡಿದರು. ಅಂದಿನ ವೇದಿಕೆಯಲ್ಲಿ ಮೈಸೂರಿನ ೧೬ ಮಂದಿ ಹಿರಿಯ ಚಿತ್ರಜ್ಞರನ್ನು ಗೌರವಿಸಲಾಯಿತು.

ವಾಕ್ಚಿತ್ರ ಸುವರ್ಣ ಮಹೋತ್ಸವದ ಸಂಭ್ರಮ, ಗದ್ದಲದ ಶಬ್ದ ಹೀಗೆ ಅನುರಣಿಸುತ್ತಿದ್ದಾಗಲೇ ಚುನಾವಣೆ ರಾಜಕಾರಣದ ಘಂಟಾನಾದ ಮೊಳಗತೊಡಗಿತು. ಆದರೆ ಈ ಬಾರಿ ಶಬ್ದ ಚಿತ್ರರಂಗದೊಳಗಿನಿಂದಲೇ ಹೊರಟಾಗ ಉದ್ಯಮದಲ್ಲಿ ಮಿಶ್ರ ಪ್ರತಿಕ್ರಿಯೆ ಕೇಳಿಬಂತು. ೧೯೮೫ ಜನವರಿ ಮೊದಲ ವಾರ ಶಂಕರ್‌ನಾಗ್ ಮತ್ತು ಅನಂತ್‌ನಾಗ್ ಇಬ್ಬರೂ ಜನತಾಪಕ್ಷದ ಪರವಾಗಿ ಚುನಾವಣಾ ಪ್ರಚಾರಕ್ಕಿಳಿಯಲು ತೀರ್ಮಾನಿಸಿರುವುದಾಗಿ ಹೇಳಿಕೆ ಕೊಟ್ಟರು. ಅದಾಗಲೇ ಭಾರತೀಯ ಜನತಾ ಪಕ್ಷದ ಬೆಂಬಲ ಹಾಗೂ ಮಂತ್ರಿ ರಘುಪತಿಯವರ ಆಸಕ್ತಿಯಿಂದ ೮೪ರ ಸೆಪ್ಟೆಂಬರ್‌ನಲ್ಲಿ ತಾರೆ ಆರತಿ ವಿಧಾನ ಪರಿಷತ್‌ಗೆ ನಾಮಕರಣಗೊಂಡಿದ್ದ ಸಂಗತಿ ಇನ್ನೂ ಚರ್ಚೆಯಲ್ಲಿದ್ದಂತೆಯೇ ನಾಗ್ ಸೋದರರು ಕೈಗೊಂಡ ನಿರ್ಧಾರ ೧೯೮೫ರ ವಿಧಾನಸಭಾ ಚುನಾವಣೆಯು ಸಿನಿಮಾ ಮಂದಿಯ ಪ್ರವೇಶದಿಂದ ಸಾಕಷ್ಟು ರಂಗೇರಲಿದೆ ಎಂಬುದನ್ನು ಖಾತ್ರಿ ಪಡಿಸಿತು. ಇದರೊಂದಿಗೆ ಬಹಳ ಮಂದಿ ಕಲಾವಿದರು ಜನಪ್ರಿಯ ರಾಜಕೀಯ ಪಕ್ಷಗಳ ಮೂಲಕ ಟಿಕೆಟ್ ಗಿಟ್ಟಿಸಿಕೊಂಡು ಈ ಬಾರಿ ಚುನಾವಣಾ ಕಣಕ್ಕೆ ಇಳಿಯುತ್ತಾರೆಂಬ ವದಂತಿಗಳು ಎಲ್ಲ ಕಡೆ ಹರಡಿದವು.

ಆಗ್ಗೆ ರಾಜಕುಮಾರ್ ಅಭಿಮಾನಿಗಳ ಸಂಘ ಹೆಚ್ಚು ಸಂಘಟಿತವಾಗಿ ಸುದ್ದಿಯಲ್ಲಿದ್ದುದರಿಂದ ಅದರ ನಿಲುವು ಏನೆಂಬುದರ ಬಗ್ಗೆಯೂ ಎಲ್ಲರಿಗೂ ಕುತೂಹಲವಿತ್ತು. ಸಂಘ ಸರ್ವ ಸದಸ್ಯರ ಸಭೆ ಕರೆದು ಈ ಬಾರಿಯ ವಿಧಾನಸಭಾ ಚುನಾವಣೆಯಲ್ಲಿ ಯಾರ ಅಥವಾ ಯಾವುದೇ ಪಕ್ಷದ ಪರವಹಿಸದೆ ತಮಗೆ ಸರಿ ತೋರಿದ ಪಕ್ಷಕ್ಕೆ ಮತ ಚಲಾಯಿಸುವುದರ ಮೂಲಕ ತಟಸ್ಥವಾಗಿರಲು ಸರ್ವಾನುಮತದ ನಿರ್ಧಾರ ಕೈಗೊಂಡಿತು. ಇದರೊಂದಿಗೆ ಕೆಲವರು 'ಕನ್ನಡ ದೇಶಂ' ಪಕ್ಷವನ್ನು ರಚಿಸಿದ್ದು, ಇದಕ್ಕೆ ಆಂಧ್ರಪ್ರದೇಶದ ಮುಖ್ಯಮಂತ್ರಿ ಎನ್.ಟಿ.ರಾಮರಾಯರ ಪರೋಕ್ಷ ಬೆಂಬಲ ಇದೆಯೆಂಬ ಗುಮಾನಿಯ ಹಿನ್ನೆಲೆಯಲ್ಲಿ ಆ ಪ್ರಯತ್ನವನ್ನು ಖಂಡಿಸಿದ್ದಲ್ಲದೆ, ಅಭಿಮಾನಿಗಳಾರೂ ಸ್ವಾರ್ಥ ಸಾಧಕರ ಚಿತಾವಣೆಗೆ ಬಲಿಯಾಗದೆ ಇದುವರೆಗೆ ಬೆಳೆದು ಬಂದಿರುವ ಕನ್ನಡ ನಾಡಿನ ಮತ್ತು ತಮ್ಮ ನಡುವಿನ ಮಧುರ ಬಾಂಧವ್ಯವನ್ನು ಕಾಪಾಡಿಕೊಳ್ಳಲು ನೆರವಾಗಬೇಕೆಂದು ವಿನಂತಿಸಿಕೊಂಡರು. ಆದರೆ ಡಾ|ರಾಜ್‌ಕುಮಾರ್ ಅಭಿಮಾನಿ ಸಂಘದ ಈ ನಿರ್ಧಾರ ಒಂದು ತಿಂಗಳು ಕೂಡ ಊರ್ಜಿತವಾಗಿರಲಿಲ್ಲ. ಕೆಲವಾರು ಮಂದಿಯ ಆಸಕ್ತಿ-ಹಿತಾಸಕ್ತಿಗಳು ತೀವ್ರವಾಗಿ ಕೆಲಸ ಮಾಡಿದವು. ಕೊನೆಗೆ ಸಂಘಕ್ಕಿರುವ ವರ್ಚಸ್ಸಿನ ಪರೀಕ್ಷೆ ನಡೆದೇ ಹೋಗಲಿ ಎಂಬುದರತ್ತಲೇ ಒಲವು ಮೂಡಿಬಂತು. ಬೆಂಗಳೂರಿನ ಮಲ್ಲೇಶ್ವರಂ ವಿಧಾನಸಭಾ ಕ್ಷೇತ್ರದಿಂದ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದ ಪತ್ರಿಕೋದ್ಯಮಿ ಟಿ.ವೆಂಕಟೇಶ್ ಅವರನ್ನು ಚುನಾವಣಾ ಕಣಕ್ಕೆ ಇಳಿಸಲು ತೀರ್ಮಾನಿಸಲಾಯಿತು. ಟಿ.ವೆಂಕಟೇಶ್ ಅವರ ಜಯ-ಅಪಜಯಗಳ ಮೇಲೆ ಸಂಘ ಸಕ್ರಿಯ ರಾಜಕೀಯಕ್ಕೆ ಬರಬೇಕೋ, ಬೇಡವೋ ಎಂಬುದನ್ನು ನಿರ್ಧರಿಸುವುದೆಂದು ತೀರ್ಮಾನಿಸಲಾಯಿತು. ಅಭಿಮಾನಿಗಳ ಈ ನಿರ್ಧಾರ ರಾಜ್ಯದ ಚುನಾವಣೆಗೆ ವಿಚಿತ್ರ ರಂಗು ತುಂಬಿಬಿಟ್ಟಿತು. ಕಲಾವಿದರಲ್ಲೂ ಪಕ್ಷಾಧಾರಿತ ಗುಂಪುಗಳು ಕಾಣಿಸಿಕೊಳ್ಳತೊಡಗಿದವು.

ಈ ಸಂದರ್ಭದಲ್ಲಿ ಬಹಳ ಕಲಾವಿದರು ಚುನಾವಣೆಗೆ ಧುಮುಕುತ್ತಾರೆಂದು ಹರಡಿದ್ದ ವದಂತಿಗಳು ದಿನ ಕಳೆದಂತೆ ಸುಳ್ಳಾದವು. ಅಭ್ಯರ್ಥಿಗಳ ಅಂತಿಮ ಪಟ್ಟಿ ಪ್ರಕಟವಾದಾಗ ಗೌರಿಬಿದನೂರು ಕ್ಷೇತ್ರದಿಂದ ಮುಖ್ಯಮಂತ್ರಿ ಚಂದ್ರು ಜನತಾಪಕ್ಷದ ಅಭ್ಯರ್ಥಿಯಾಗಿ ಮತ್ತು ಟಿ.ವೆಂಕಟೇಶ್ ಸ್ವತಂತ್ರ ಅಭ್ಯರ್ಥಿಯಾಗಿ, ಇವರಲ್ಲದೆ ಹಾಸನ ಜಿಲ್ಲೆಯ ಸಕಲೇಶಪುರ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಹೆಚ್.ಬಿ.ಯಜಮಾನ್ ಕಣದಲ್ಲಿದ್ದರು. ೧೯೭೩ ರಲ್ಲಿ ತೆರೆಕಂಡ ಪ್ರಶಸ್ತಿ ವಿಜೇತ 'ಕಂಕಣ' ಚಿತ್ರದಲ್ಲಿ ಅಭಿನಯಿಸಿದ್ದ ಯಜಮಾನ್ ರಾಜ್ಯಸರ್ಕಾರದ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ಪಡೆದಿದ್ದರು.

೧೯೮೫ರ ಮಾರ್ಚ್ ೩ ರಂದು ಸಂಘ ಬೃಹತ್ ಮೆರವಣಿಗೆಯನ್ನು ವ್ಯವಸ್ಥೆ ಮಾಡಿತು. ಇದರಲ್ಲಿ ಲಕ್ಷ್ಮೀ, ಅಂಬರೀಷ್, ಶಿವರಾಂ, ಶ್ರೀನಾಥ್, ಬಾಲಣ್ಣ, ಮಾ|ಹಿರಣ್ಣಯ್ಯ, ಗೀತಾ, ವಿಜಯರಂಜಿನಿ, ಸುಂದರರಾಜ್, ಉಮೇಶ್ ಮುಂತಾದವರು ಭಾಗವಹಿಸಿ ಟಿ.ವೆಂಕಟೇಶ್ ಪರವಾಗಿ ಭಾಷಣ ಮಾಡಿದರು. ನಂತರದ ಕೆಲವಾರು ದಿನಗಳ ಕಾಲ ಸಮಯ ಸಿಕ್ಕಾಗಲೆಲ್ಲಾ ಬೆಂಗಳೂರಿನಲ್ಲಿ ಬೀಡು ಬಿಟ್ಟಿದ್ದ ಕಲಾವಿದರು ಮಲ್ಲೇಶ್ವರಂನಲ್ಲಿ ಕಾಣಿಸಿಕೊಳ್ಳತೊಡಗಿದರು. ಅಗ್ಗೆ ಅದೊಂದು ದಾಖಲೆ. ಬೆಂಗಳೂರಿನಲ್ಲಿ ಬೇರೆ ಯಾವುದೇ ಪಕ್ಷದ ಪರವಾಗಿ ಅಥವಾ ಸ್ಪರ್ಧಿಯ ಪರವಾಗಿ ಅಷ್ಟೊಂದು ಬಿರುಸಾದ ಪ್ರಚಾರ ನಡೆದಿರಲಿಲ್ಲ; ಅಷ್ಟು ಸಂಖ್ಯೆಯ ಕಲಾವಿದರೂ ಭಾಗವಹಿಸಿರಲಿಲ್ಲ.

ಜನತಾ ಪಕ್ಷದ ಪರವಾಗಿ ನಾಗ್ ಸೋದರರು ರಾಜ್ಯದಾದ್ಯಂತ ಪ್ರವಾಸ ಮಾಡಿ ಪ್ರಚಾರ ಮಾಡಿದರು. ವಜ್ರಮುನಿ, ಶಕ್ತಿಪ್ರಸಾದ್ ಬಸವನಗುಡಿ ಕ್ಷೇತ್ರದಲ್ಲಿ ಕಾಂಗ್ರೆಸ್ ಪರವಾಗಿ ಪ್ರಚಾರ ಮಾಡಿದರು. ಹಿಂದಿನ ಲೋಕಸಭಾ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷದ ಪರವಾಗಿ ಪ್ರಚಾರ ಮಾಡಿದ್ದ ಆರತಿ ೧೯೮೫ ರಲ್ಲಿ ಯಾರೊಂದಿಗೂ ಗುರುತಿಸಿಕೊಳ್ಳದೆ ತಟಸ್ಥರಾಗಿದ್ದರು. ಮಂಜುಳಾ ಕಾಂಗ್ರೆಸ್ ಪರವಾಗಿ ಪ್ರಚಾರ ಮಾಡಲು ಹೋಗಿ ಒಂದೆರಡು ಕಡೆ ಅಹಿತಕರವಾದ ಕಹಿ ಘಟನೆಗಳನ್ನು ಎದುರಿಸಿದರು. ನಾಗ್ ಸೋದರರ ಪ್ರಚಾರ ಸಭೆಗಳಲ್ಲಿ ಕೂಡ ಗದ್ದಲಗಳಾದುವಾದರೂ ಅವು ಯಾವುವೂ ವಿಕೋಪಕ್ಕೆ ಹೋಗಿರಲಿಲ್ಲ. ಆ ದಿನಗಳಲ್ಲಿ ಒಂದು ರೀತಿಯ ಜಿದ್ದಿನ ಮನೋಭಾವ ಚಿತ್ರರಸಿಕರಲ್ಲಿ ಕಾಣಿಸಿಕೊಂಡಿತ್ತು. ಚುನಾವಣೆಯ ಫಲಿತಾಂಶ ಪ್ರಕಟವಾದಾಗ ಮುಖ್ಯಮಂತ್ರಿ ಚಂದ್ರು ವಿಜಯಿಯಾಗಿದ್ದು ಟಿ.ವೆಂಕಟೇಶ್ ಪರಾಭವಗೊಂಡಿದ್ದರು. ಟಿ.ವೆಂಕಟೇಶ್‌ರವರ ಸೋಲಿನಿಂದ ಅಪಾರವಾದ ನಿರಾಶೆಯನ್ನು ಅನುಭವಿಸಿದ ಅಭಿಮಾನಿ ವೃಂದ ಮಲ್ಲೇಶ್ವರಂನ ಮುಖ್ಯರಸ್ತೆಗಳಲ್ಲಿ ವಿಪರೀತ ಗದ್ದಲ, ಹಾನಿ ಉಂಟುಮಾಡಿತು. ಇದು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರನ್ನು ಕೆರಳಿಸಿತು. ಅವರು ''ರಾಜಕುಮಾರ್ ಅಥವಾ ಮತ್ತಾವ ಕುಮಾರ್ ಅಭಿಮಾನಿಗಳಾದರೂ ಕಾನೂನು ಪ್ರಕಾರ ಶಿಕ್ಷಿಸಲೇ ಬೇಕಾಗುತ್ತದೆ'' ಎಂಬ ಎಚ್ಚರಿಕೆಯ ಮಾತುಗಳನ್ನು

ಆಡಿದ್ದರು. ನಾಗ್ ಸೋದರರ ಪ್ರಚಾರ ರಾಜ್ಯದಾದ್ಯಂತ ತಂದುಕೊಟ್ಟಿದ್ದ ಅದ್ಭುತ ಯಶಸ್ಸಿನಿಂದ ರಾಮಕೃಷ್ಣ ಹೆಗಡೆ ಅತ್ಯಂತ ಸಂತುಷ್ಟರಾಗಿದ್ದರು ಮತ್ತು ಉತ್ಸಾಹಗೊಂಡಿದ್ದರು. ಇದೆಲ್ಲವನ್ನೂ ಬದಿಗಿಟ್ಟು ನೋಡಿದರೂ ೧೯೮೫ ನಾಗ್ ಸಹೋದರರು ಅವರ ಸಾರ್ವಜನಿಕ ಬದುಕಿನಲ್ಲಿ ಅತ್ಯಂತ ಸುದ್ದಿ ಸಂಭ್ರಮಗಳಲ್ಲಿದ್ದ ವರ್ಷವೆನ್ನಬಹುದು.

ರಾಜಕಾರಣ ಮತ್ತು ಅಭಿಮಾನಿಗಳ ಅಭಿಮಾನ ಕೆಲವೊಮ್ಮೆ ಗುಪ್ತಗಾಮಿನಿಯಾಗಿ, ಬಹಳ ಸಾರಿ ಬಹಿರಂಗವಾಗಿ ಪ್ರಕಟವಾಗುತ್ತ ಮೇಲು-ಕೀಳಾಟಗಳಲ್ಲಿ ತೊಡಗಿದ್ದಾಗ ಚಲನಚಿತ್ರ ಉದ್ಯಮ ಕರ್ನಾಟಕದಲ್ಲಿಯೇ ಬೇರು ಬಿಡಲು ಅತ್ಯವಶ್ಯವಾಗಿದ್ದ ಎರಡು ಬೃಹತ್ ಸಂಸ್ಥೆಗಳ ಸ್ಥಾಪನೆಯಾಯಿತು. ದೇಶದ ಹೆಸರಾಂತ ಚಿತ್ರೋದ್ಯಮಿ ಎಲ್.ವಿ.ಪ್ರಸಾದ್‌ರವರ ಪ್ರಸಾದ್ ಸಂಸ್ಕರಣಾಗಾರ ಇದರಲ್ಲಿ ಬಹಳ ಮುಖ್ಯವಾದದ್ದು. ೧೯೮೫ರ ಜನವರಿ ೧೧ ರಂದು ಇವರ ಆರಂಭದೊಂದಿಗೆ ಕನ್ನಡ ಚಿತ್ರೋದ್ಯಮಕ್ಕಿದ್ದ ಸುಸಜ್ಜಿತ ಹಾಗೂ ಆಧುನಿಕ ಸಂಸ್ಕರಣಾಗಾರದ ಬಹುದೊಡ್ಡ ಕೊರತೆಯೊಂದು ನೀಗಿತು. ಒಂದು ಮಿನಿ ಚಿತ್ರಮಂದಿರದೊಂದಿಗೆ ಈಸ್ಟ್‌ಮನ್, ಆರ್ರೋ ವರ್ಣಚಿತ್ರಗಳ ಜೊತೆಗೆ ಕಪ್ಪು-ಬಿಳುಪು ಚಿತ್ರಗಳ ಸಂಸ್ಕರಣದ ಸೌಲಭ್ಯ, ೩೫ ಎಂ.ಎಂ. ಜೊತೆಗೆ ೧೬ ಎಂ.ಎಂ. ಚಿತ್ರಗಳ ಸಂಸ್ಕರಣವನ್ನೂ ಕಂಪ್ಯೂಟರ್‌ನಿಂದ ಕೂಡಿದ ಅನಲೈಸರ್ ಮೂಲಕ ಸಂಸ್ಕರಿಸುವಂಥ ವ್ಯವಸ್ಥೆಯಾಯಿತು. ಅಮೆರಿಕಾದ ಮೂರು ಅತ್ಯಾಧುನಿಕ ಪ್ರಿಂಟರ್‌ಗಳ ಮೂಲಕ ವರ್ಣ ಛಾಯಾಂತರ ಮಾಡಿ ಪ್ರತಿಗಳನ್ನು ಮುದ್ರಿಸುವ ವ್ಯವಸ್ಥೆ ರೂಢಿಗೆ ಬಂತು. ನಗರದ ಹೊರವಲಯದಲ್ಲಿರುವ ಯಶವಂತಪುರ ಕೈಗಾರಿಕಾ ಬಡಾವಣೆಯಲ್ಲಿ ಕಂಠೀರವ ಸ್ಟುಡಿಯೋದ ಹತ್ತಿರದಲ್ಲಿಯೇ ಇವರ ಸ್ಥಾಪನೆಯಾದದ್ದು ಉದ್ಯಮಕ್ಕೆ ಸಂತಸ ತಂದಿತು. ಪ್ರಸಾದ್ ಸಂಸ್ಕರಣಾಗಾರ ಆರಂಭವಾದ ಕೇವಲ ಮೂರೇ ತಿಂಗಳಲ್ಲಿ ಅಂದರೆ ಮಾರ್ಚ್ ೨೮ರಂದು ಎರಡು ವರ್ಷಗಳಿಂದ ಮುಚ್ಚಲ್ಪಟ್ಟಿದ್ದ ಪ್ರೀಮಿಯರ್ ಸ್ಟುಡಿಯೋ ಕೂಡ ಪುನರಾರಂಭಗೊಂಡಿತು.

ಸ್ವಾವಲಂಬನೆಯ ದೃಢ ಹೆಜ್ಜೆಗಳಲ್ಲಿ ಒಂದು ಮೈಲಿಗಲ್ಲು ಎನಿಸಿದ್ದು ಸಂಕೇತ್ ಎಲೆಕ್ಟ್ರಾನಿಕ್ಸ್ ಪ್ರೈ.ಲಿ., ಸಂಸ್ಥೆ. ಇದು ನಿಸ್ಸಂದೇಹವಾಗಿ ಶಂಕರನಾಗ್‌ರ ಸಾಹಸದ ಫಲ. ೧೯೮೫ರ ಆಗಸ್ಟ್ ೧೫ ರಂದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಸಂಪೂರ್ಣ ಸಹಕಾರದಿಂದ, ಮಂಡಳಿಯ ಸ್ವಂತ ಕಟ್ಟಡದ ಮೊದಲನೆಯ ಮಹಡಿಯಲ್ಲಿಯೇ ಆರಂಭವಾದ ಸಂಕೇತ್ ಕನ್ನಡ ಚಲನಚಿತ್ರ ಚಟುವಟಿಕೆಗಳನ್ನು ಕರ್ನಾಟಕದಲ್ಲೇ ಬೇರೂರಿಸುವುದರಲ್ಲಿ ನಿರ್ಣಾಯಕ ಪಾತ್ರ ವಹಿಸಿತು. ಸೂರ್ಯರಾವ್, ಸಿ.ವಿ.ಎಲ್.ಶಾಸ್ತ್ರಿ, ರಮೇಶ್ ಭಟ್, ಅನಂತ್‌ನಾಗ್, ಶಂಕರ್‌ನಾಗ್ ಅವರನ್ನೊಳಗೊಂಡ ಐದು ಮಂದಿ ನಿರ್ದೇಶಕರು ಕಟ್ಟಿದ ಸಂಕೇತ್ ಸಂಸ್ಥೆಯ ಒಟ್ಟು ಬಂಡವಾಳ ೭೫ ಲಕ್ಷ ರೂಪಾಯಿ. ಈ ಸ್ಟುಡಿಯೋದ ಆರಂಭದಿಂದಾಗಿ ಕಂಪ್ಯೂಟರೈಜ್ಡ್ ಡಬ್ಬಿಂಗ್, ಹಾಡುಗಳ ಧ್ವನಿ ಮುದ್ರಣ, ಸಂಕಲನ, ಮಿಕ್ಸಿಂಗ್ ಮತ್ತು ೧೬-೩೫ ಎಂ.ಎಂ. ಚಿತ್ರಗಳಿಗೆ ಹಿನ್ನೆಲೆ ಸಂಗೀತವನ್ನು ಧ್ವನಿಮುದ್ರಿಸುವಂಥ ವ್ಯವಸ್ಥೆ ಆಯಿತು. ಇವಕ್ಕೆ ಪೂರ್ವಭಾವಿಯಾಗಿ ೧೯೮೫ರ ಆಗಸ್ಟ್ ೧ ರಿಂದ ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ಹಿಮ್ಮೇಳ ಸಂಗೀತ ಕಲಾವಿದರಿಗೆ ತರಬೇತಿ ಕೊಡುವ ಕಾರ್ಯಾಗಾರವನ್ನು ನಡೆಸಲಾಯಿತು. ಪ್ರತಿಭಾವಂತ ವಾದ್ಯಕಲಾವಿದರನ್ನು ಸಂಘಟಿಸಲು ಅರ್ಜಿ ಕರೆಯಲಾಗಿದ್ದು ಬಂದವರಲ್ಲಿ ಹೊರಗಿನವರಿಗಿಂತ ಬೆಂಗಳೂರಿನವರೇ ಹೆಚ್ಚು ಮಂದಿ ಇದ್ದರು. ಅಭ್ಯರ್ಥಿಗಳೊಂದಿಗೆ ವಿಚಾರ ವಿನಿಮಯ ಸಮಾರಂಭವೊಂದನ್ನು ಬೆಂಗಳೂರಿನ ಜನಾರ್ದನ್ ಹೋಟೆಲಿನಲ್ಲಿ ಜುಲೈ ೨೮ ರಂದು ಏರ್ಪಡಿಸಲಾಗಿತ್ತು. ಈ ಪ್ರತಿಭೆಗಳ ಸಂಗಮವನ್ನು 'ಕನ್ನಡ ಚಲನಚಿತ್ರ ಸಂಗೀತ ಕಲಾವಿದರ ಮೇಳ' ಎಂದು ಕರೆಯಲಾಯಿತು. ಇವಕ್ಕೆ ರಾಜೀವ್ ತಾರಾನಾಥ್ ಮತ್ತು ಜಿ.ಕೆ.ವೆಂಕಟೇಶ್ ನಿರ್ವಾಹಕರಾಗಿದ್ದರು. ಈ ಮೇಳದ ಕಲಾವಿದರಿಗೆ ಹತ್ತು ದಿನಗಳ ಕಾಲ ತರಬೇತಿ ವ್ಯವಸ್ಥೆಯನ್ನು ಸಂಕೇತ್ ಸಂಸ್ಥೆಯೇ ಮಾಡಿತು. ಶಿಬಿರದಲ್ಲಿ ಸಂಗೀತ ನಿರ್ದೇಶಕರುಗಳಾದ ರಾಜೀವ್ ತಾರಾನಾಥ್, ಜಿ.ಕೆ.ವೆಂಕಟೇಶ್, ಎಂ.ರಂಗರಾವ್, ಸಿ.ಅಶ್ವತ್ಥ್, ಮೈಸೂರು ಅನಂತಸ್ವಾಮಿ, ವಿಜಯಭಾಸ್ಕರ್ ಮತ್ತು ಬಿ.ಕೆ.ಸುಮಿತ್ರ ಮೊದಲಾಗಿ ಎಲ್ಲಾ ಗಾಯಕ-ಗಾಯಕಿಯರೂ ಭಾಗವಹಿಸಿ ತರಬೇತಿ ನೀಡಿದರು. ರವೀಂದ್ರ ಕಲಾಕ್ಷೇತ್ರದ ತಾಲೀಮು ಮಂಟಪದಲ್ಲಿ ನಡೆದ ಈ ಶಿಬಿರದಲ್ಲಿ ಅನಂತ್‌ನಾಗ್-ಶಂಕರ್‌ನಾಗ್ ಇಬ್ಬರೂ ಪ್ರತಿದಿನವೂ ಪಾಲ್ಗೊಳ್ಳುತ್ತಿದ್ದರು. ಇಷ್ಟೆಲ್ಲ ಪೂರ್ವ ಸಿದ್ಧತೆಗಳೊಂದಿಗೆ ಚಲನಚಿತ್ರ ವಾಣಿಜ್ಯ ಮಂಡಳಿಯ ಕಟ್ಟಡದ ಮೇಲೆ ಆರಂಭವಾದ ಸಂಕೇತ್ ಅನ್ನು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಉದ್ಘಾಟಿಸಿದರು. ರಾಜಕುಮಾರ್‌ರಿಂದ ಪ್ರಥಮ ಗೀತೆಯನ್ನು ಹಾಡಿಸಿ ಧ್ವನಿಮುದ್ರಣವನ್ನು ಆರಂಭಿಸಲಾಯಿತು. ಸಮಾರಂಭದಲ್ಲಿ ರಾಜಕುಮಾರ್‌ರ 'ಸೂರ್ಯ ಚಂದ್ರರಿರುವ ತನಕ ಸಂಕೇತ್ ಉಳಿದು ಬೆಳಗಲಿ' ಎಂಬ ಹಾರೈಕೆಯೊಂದಿಗೆ ಬಣ್ಣ ಬಣ್ಣದ ಕನಸುಗಳ ದೊಡ್ಡ ಮೂಟೆ ಹೊತ್ತುಕೊಂಡು ಆರಂಭವಾದ ಸಂಕೇತ್ ೧೯೯೦ರ ಸೆಪ್ಟೆಂಬರ್ ೩೦ ರಲ್ಲಿ ಶಂಕರ್‌ನಾಗ್‌ರ ಅಕಾಲಿಕ ನಿಧನದಿಂದಾಗಿ ದಿನದಿಂದ ದಿನಕ್ಕೆ ಸೊರಗುತ್ತಾ ಬಂದಿತು. ಸ್ಟುಡಿಯೋ ೧೫ ವರ್ಷಗಳ ಅಲ್ಪಕಾಲ ಜೀವಿಸಿ ಕೊನೆಗೆ ಇಸವಿ ೨೦೦೦ದಲ್ಲಿ ಅಧಿಕೃತವಾಗಿ ಕಣ್ಣು ಮುಚ್ಚಿತು.

ಕನ್ನಡ ಚಳವಳಿ, ಕನ್ನಡ ಪರ ಕೆಲಸಗಳೆಂದರೆ ಸಿ.ವಿ.ಎಲ್.ಶಾಸ್ತ್ರಿಗಳಿಗೆ ಎಂಟಾನೆಯ ಬಲ. ಅವರು ೧೯೮೫ರಲ್ಲಿ ಮಾಡಿದ ಬಹು ದೊಡ್ಡ ಕೆಲಸವೆಂದರೆ 'ಆಂಗ್ಲರ ಆಡಳಿತ ಭಾಷೆಯಾಗಿ ಕನ್ನಡ' ಸಾಕ್ಷ್ಯಚಿತ್ರ. ಎಸ್.ಲಕ್ಷ್ಮೀನಾರಾಯಣ್ ಅವರು ನಿರ್ದೇಶಿಸಿದ್ದರು. ಈ ಕಿರುಚಿತ್ರದಲ್ಲಿ ಕನ್ನಡ ಬಹು ಹಿಂದಿನಿಂದಲೂ ಆಡಳಿತ ಭಾಷೆಯಾಗಿ ಜಾರಿಯಲ್ಲಿತ್ತೆಂದು ದಾಖಲಿಸಿದ ಹಲವು ಕೈಫಿಯತ್ತುಗಳು, ಗೆಜೆಟ್‌ಗಳು, ಶಿಲಾಶಾಸನಗಳು, ಪತ್ರಗಳನ್ನೆಲ್ಲ ಶೇಖರಿಸಿ ಸೂಕ್ತವಾದ ವಿವರಣೆ ಕೊಡಲಾಗಿತ್ತು. ಕನ್ನಡದಲ್ಲೇ ಬರೆಯಲಾದ ಆಜ್ಞಾಪತ್ರಗಳಿದ್ದವು. ಇತರರು ಕನ್ನಡ ಕಲಿತು ಆಡಳಿತ ನಡೆಸಿದ್ದ ವಿವರಗಳಿದ್ದವು. ಸ್ಥಳೀಯನೊಬ್ಬ ಕನ್ನಡ ಕಲಿತಿಲ್ಲ ಎಂಬ ಕಾರಣಕ್ಕೆ ನಿವೃತ್ತನಾಗಬೇಕೆಂಬ ಆಜ್ಞೆ ಹೊರಡಿಸಿದ್ದ ವಿವರವೂ ಇತ್ತು. ಇವನ್ನೆಲ್ಲ ಸಂಗ್ರಹಿಸಿದ್ದ ಹಿರಿಯ ಸಾಹಿತಿ ಮಹದೇವ ಬಣಕಾರ ಅವರು ಇವೆಲ್ಲದರ ಹಿಂದೆ ಪ್ರೇರಣ ಶಕ್ತಿಯಾಗಿದ್ದರು. ಈ ಸಂಗ್ರಹ ಕಾರ್ಯದಲ್ಲಿ ಪ್ರಸಿದ್ಧ ವಿದ್ವಾಂಸರಾದ ಎಂ.ಎಂ.ಕಲಬುರ್ಗಿಯವರೂ ನೆರವಾಗಿದ್ದರು. ಕರ್ನಾಟಕದಾದ್ಯಂತ ಈ ಕಿರುಚಿತ್ರವನ್ನು ಪ್ರದರ್ಶಿಸುವ ಯೋಜನೆಯಿತ್ತು. ಸಿ.ವಿ.ಎಲ್.ಶಾಸ್ತ್ರಿಗಳು ಬಹು ದೊಡ್ಡ ಸಮಾರಂಭ ಮಾಡಿ ಈ ಎಲ್ಲ ಮಾಹಿತಿಗಳ ಪ್ರದರ್ಶನವನ್ನು ಏರ್ಪಡಿಸಿದ್ದರು. ಇದೊಂದು ಅಪೂರ್ವ ಸಾಧನೆ.

''ಈ ಸಾಕ್ಷ್ಯಚಿತ್ರ ಮಾಡೋವಾಗ ಭಾಷೆ ಬಗೆಗಿನ ಪ್ರೀತಿ ಇರಬೇಕು, ದುರಭಿಮಾನ ಕೂಡದು, ವಾಸ್ತವತೆ ಎದುರಿಗಿಡೋಣ ಅಂತ ಅಂದುಕೊಂಡೆವು. ಇದಕ್ಕಾಗಿ ಕಲಾವಿದರಾದ ಚಂದ್ರಶೇಖರ್ ಹಾಗೂ ಕಮಲೇಶ್ ೫೦ ವರ್ಣಚಿತ್ರಗಳನ್ನು ಬರೆದರು. ಧ್ವನಿಯ ವೈವಿಧ್ಯಕ್ಕಾಗಿ ನಾಲ್ಕು ಧ್ವನಿಗಳನ್ನು ಬಳಸಿದೀನಿ. ಅದೊಂದು ತೃಪ್ತಿ ಕೊಟ್ಟ ಕೆಲಸ..''. ಎಂದಿದ್ದರು ಎಸ್.ಲಕ್ಷ್ಮೀನಾರಾಯಣ್

ಇತ್ತ ಚಿತ್ರರಂಗದ ಇನ್ನೊಂದು ಮಗ್ಗುಲಲ್ಲಿ ಚಟುವಟಿಕೆಯೂ ಸಾಗಿತ್ತು. ಎಂ.ಡಿ.ಸುಂದರ್ ಅವರ 'ಚಾಣಕ್ಯ' ಚಿತ್ರದಿಂದ ಮಾಧವಿ ತಮಗೆ ತಾವೇ ಕಂಠದಾನ ಮಾಡಲು ಪ್ರಾರಂಭಿಸಿದರು. 'ಒಲವು ಮೂಡಿದಾಗ' ಮಲ್ಲೇಶ್ ನಿರ್ದೇಶಿಸಿದ ಚಿತ್ರ. ಅವರ 'ನನ್ನ ದೇವರು' ಚಿತ್ರದಲ್ಲಿ ತೋರಿದ ಪ್ರತಿಭೆ, ಸರಳ ಹಾಸ್ಯಕ್ಕೆ ಮಾರುಹೋಗಿ ಅನಂತ್‌ನಾಗ್ ಅಭಿನಯಿಸಿದರು. ಆಗ ಅವರ ಜನಪ್ರಿಯ ಜೋಡಿ ಎನಿಸಿದ್ದ ಲಕ್ಷ್ಮೀ ಇದ್ದರು. ಅವರಲ್ಲಿ ಒಬ್ಬರು ವೈದ್ಯರಾದರೆ, ಇನ್ನೊಬ್ಬರು ಲಾಯರ್. ಚಿತ್ರನಾಟಕದಲ್ಲಿ ಬಿಗಿ ಇಲ್ಲದೆ ಹೋದ್ದರಿಂದ ಪೇಲವವಾಯಿತು. ನಿರೀಕ್ಷೆ ಹುಸಿಯಾಯಿತು. ದಿನೇಶ್-ಲೀಲಾವತಿ ಅವರ ಪಾತ್ರಗಳನ್ನು ಸೊಗಸಾಗಿ ನೇಯ್ದುಕೊಂಡುದರಿಂದ ಸಹನೀಯವಾಗಿತ್ತು.

'ಒಡೆದ ಹಾಲು' ಜೋಸೈಮನ್ ಅವರ ನಿರ್ದೇಶನದ ಚಿತ್ರ. ವಿತರಕ/ನಿರ್ವಾಹಕ ದತ್ತಾತ್ರೇಯ ಅವರು ನಿರ್ಮಾಣ ಕ್ಷೇತ್ರಕ್ಕೆ ಬಂದರು. ಈ ಚಿತ್ರದ ಬಗ್ಗೆ ಏನೇನೋ ಭರವಸೆ ಇತ್ತು. ಇಂಗ್ಲಿಷ್ ಚಿತ್ರವೊಂದರ ಸ್ಫೂರ್ತಿಯಿದ್ದೂ ಚೊಕ್ಕವಾಗಿ ಚಿತ್ರಕಥೆ ಮಾಡಿಕೊಳ್ಳದೆ ಸೋತರು. ಸ್ವತಃ ಜೋಸೈಮನ್ ಅವರೇ ಭವ್ಯಾರೊಟ್ಟಿಗೆ ಅಭಿನಯಿಸಿದ್ದು ಭಾರಿ ಸುದ್ದಿ. ಆಕೆಯ ಅಭಿನಯವೊಂದೇ ಉತ್ತಮವಾಗಿತ್ತು.

'ಮಕ್ಕಳಿರಲವ್ವ ಮನೆ ತುಂಬ' ಚಿತ್ರವನ್ನು ನಾಗಾಭರಣ ನಿರ್ದೇಶಿಸಿದರು. ನಿರ್ಮಾಣದಲ್ಲಿ ನಾಯಕನಟ ಅನಂತ್‌ನಾಗ್ ಭಾಗವಹಿಸಿದ್ದರು. ಅನಂತ್‌ನಾಗ್-ಲಕ್ಷ್ಮೀ ಜೋಡಿ ಮುಖ್ಯ ಪಾತ್ರದಲ್ಲಿದ್ದ ಈ ಚಿತ್ರದಲ್ಲಿ ಶಂಕರ್‌ನಾಗ್ ಅತಿಥಿ ನಟರಾಗಿ ಕಾಣಿಸಿಕೊಂಡರು. ಚಿತ್ರ ಪ್ರಾರಂಭವಾಗುವುದೇ ಶಂಕರ್‌ನಾಗ್‌ರ ನೃತ್ಯದಿಂದ. ಮಕ್ಕಳು ಸಾಕಷ್ಟು ಗಮನ ಸೆಳೆಯುವಂಥ ಚೇಷ್ಟೆ, ಆಟ, ಸಾಹಸಗಳಿಂದ ನಗೆಯುಕ್ಕಿಸಿದರು. ಹಾಸ್ಯದ ಭಾಗವನ್ನು ಮನ್‌ದೀಪ್ ರಾಯ್ ಚೆನ್ನಾಗಿ ನಿರ್ವಹಿಸಿದರು. ''...ಚಿತ್ರ ಕುಟುಂಬ ಯೋಜನೆಯ ಪರವೋ, ವಿರೋಧವೋ ತಿಳಿಯುವುದಿಲ್ಲ. ಉತ್ತರಾರ್ಧಕ್ಕೂ. ಪೂರ್ವಾರ್ಧಕ್ಕೂ ಸಂಬಂಧವಿಲ್ಲ, ಲಕ್ಷ್ಮೀ ಅಷ್ಟೇಕೆ ಅಳುತ್ತಾರೆ ? ಚಿತ್ರದ ಶೀರ್ಷಿಕೆಗೂ ಚಿತ್ರಕಥೆಗೂ ಏನು ಸಂಬಂಧ ?'' ಎಂಬ ತೀಕ್ಷ್ಣ



(ಚಿತ್ರ ೮೯) 'ಮಕ್ಕಳಿರಲವ್ವ ಮನೆ ತುಂಬ' ಚಿತ್ರದಲ್ಲಿ ಅನಂತ್‌ನಾಗ್ ಮತ್ತು ಲಕ್ಷ್ಮೀ

ಪ್ರಶ್ನೆಗಳನ್ನು ಎದುರಿಸಿದರು ನಿರ್ದೇಶಕ ನಾಗಾಭರಣ. ಕನ್ನಡ ಚಿತ್ರರಂಗದ ಸುವರ್ಣ ಮಹೋತ್ಸವದ ಹೊತ್ತಿಗೆ ಹೊರಬಂದ ಚಿತ್ರವಿದು. ಅಲ್ಲಲ್ಲಿ ನಾಗಾಭರಣರ ಜಾಣ್ಮೆ ಅನ್ನಿಸುವಂಥ ಕೆಲವು ಸನ್ನಿವೇಶಗಳು, ಚಿತ್ರಿಕೆಗಳು ಇವೆ. ಮುಖ್ಯವಾಗಿ ಭೀಮಸೇನಜೋಶಿ ಅವರೇ ಹಾಡಿರುವುದು.

'ಅಪೂರ್ವ ಸಂಗಮ' ಚಿತ್ರ ರಾಜಕುಮಾರ್ ಅಭಿನಯದ ಜೊತೆಗೆ ಹಲವು ನಟ-ನಟಿಯರ ಸಂಗಮವಾಗಿತ್ತು. ಹಿಂದೀ ಚಿತ್ರವೊಂದರ ಪುನರವತರಣಿಕೆ. ಸಾಮಾನ್ಯವಾಗಿ ರೀಮೇಕ್‌ಗಳೇ ಅದರೂ ಕನ್ನಡದ ಸಲುವಾಗಿ ಕೆಲವು ಬದಲಾವಣೆಗಳಾಗುತ್ತವೆ. ಈ ಚಿತ್ರದಲ್ಲಿ ಅಷ್ಟೇನೂ ನೆಲದ ಸೊಗಡನ್ನು ತರುವ ಪ್ರಯತ್ನ ಇರಲಿಲ್ಲ. ವೈ.ಆರ್.ಸ್ವಾಮಿ ನಿರ್ದೇಶಿಸಿದ್ದರು. ಉಪೇಂದ್ರಕುಮಾರ್ ಸಂಗೀತವಿತ್ತು. ಗಮನ ಸೆಳೆದ ಪಾತ್ರಧಾರಿ ನೀಗ್ರೋ ಜಾನಿ. ಚಿತ್ರದಲ್ಲಿ ರೂಪಾ ಚಕ್ರವರ್ತಿ ಕ್ಯಾಬರೆ ಮಾದರಿಯ ನೃತ್ಯ ಮಾಡಿದ್ದು, ಬಹಳ ದಿನಗಳಿಂದ ದೂರವೇ ಇದ್ದ ವಜ್ರಮುನಿ ಮತ್ತೆ ರಾಜಕುಮಾರ್‌ರೊಂದಿಗೆ ಅಭಿನಯಿಸಿದ್ದು ಮುಖ್ಯ. ಚಿತ್ರದುದ್ದಕ್ಕೂ ಸಂಯಮರಾಹಿತ್ಯವಿತ್ತು. ಚಿತ್ರ ಬಹಳಷ್ಟು ಆಕ್ಷೇಪಣೆಗಳನ್ನು ಎದುರಿಸಿತು. ರಾಜ್ ಅವರ ಅಪಾರ ಅಭಿಮಾನಿಗಳು ಕೂಡ ಅವರಿಗೆ ಈ ಚಿತ್ರ, ಪಾತ್ರ ಶೋಭಿಸಲಿಲ್ಲ ಎಂದಿತು.

'ಬಿಳೀ ಗುಲಾಬಿ'ಯಂಥ ತೀರಾ ಸಾಮಾನ್ಯ ವರ್ಜೆಯ ಚಿತ್ರವೂ ಬಂತು. ಕಲ್ಯಾಣ್‌ಕುಮಾರ್ ಅವರ ಒಂದಾನೊಂದು ಕಾಲದ ಅಭಿನಯ ಶೈಲಿಗೂ ಇಂದಿಗೂ ಹೊಂದಿಕೆಯಾಗಲಿಲ್ಲ. ಮಾನಸಿಕ ತುಮುಲವನ್ನು ಹೇಳುವುದಕ್ಕೆ ಬಳಸಲಾದ ಒಂದು ಗೀತೆ, ನೃತ್ಯದ ರೂಪಕ ಗಮನ ಸೆಳೆಯಿತು. ಆದರೆ ಇಲ್ಲಿಯ ಕೌಟುಂಬಿಕ ಹಿನ್ನೆಲೆಗೆ ಅಂಥ ಗೀತೆ-ನೃತ್ಯಗಳು ಹೊಂದುವುದಿಲ್ಲ ಅನ್ನಿಸಿತ್ತು. ಅದರ ಅತಾರ್ಕಿಕತೆಯೇ ಆಕ್ಷೇಪಕ್ಕೆ ಕಾರಣವಾಯಿತು. ಉದಯಕುಮಾರ್ ಮಗಳು ರೇಣುಕಾಬಾಲಿ ಈ ಚಿತ್ರದಿಂದ ಪರಿಚಯವಾದರು. ಇದೇ ಅವಧಿಯಲ್ಲಿ ಬಂದ 'ಆಶಾಕಿರಣ', ತಾರೆ ವಿಜಯಕಲಾ ನಿರ್ಮಿಸಿ, ನಿರ್ದೇಶಿಸಿದ್ದ 'ಪ್ರೇಮಮಂದಿರ' ತೆರೆ ಕಂಡವು. ರಂಗಾಚಾರ್ ನಿರ್ದೇಶಿಸಿದ್ದ 'ರವಿ ಮೂಡಿ ಬಂದ' ಬೆಂಗಳೂರಿನಲ್ಲಿ ತೆರೆಕಾಣಲಿಲ್ಲ.

'ಆರಾಧನೆ' ಚಿತ್ರದ ಹಿಂದೆ ತಾರೆ ಭಾರತಿಯವರ ಆಸಕ್ತಿ ಬಹಳ ಇತ್ತು. ಆಕೆಯ ಸಹೋದರರ ನಿರ್ಮಾಣ. ಮುಖ್ಯವಾಗಿ ವಿಷ್ಣುವರ್ಧನ್ ಅವರೇ ಮುಂದೆ ನಿಂತು ನಡೆಸಿಕೊಟ್ಟ ಕೆಲಸ. ಹಿಂದಿಯ ಬರಹಗಾರ ದೀಪಕ್ ಬಲರಾಜ್ ಅವರು ನಿರ್ದೇಶಕರು.



(ಚಿತ್ರ ೯೦) 'ಪರಮೇಶಿ ಪ್ರೇಮ ಪ್ರಸಂಗ' ಚಿತ್ರದಲ್ಲಿ ರಮೇಶ್ ಭಟ್ ಮತ್ತು ಅರುಂಧತಿನಾಗ್

ಅವರನ್ನು ಸರ್ವ ವಿಧದಲ್ಲೂ ಗಮನಿಸಿ, ವಿಚಾರಿಸುತ್ತ ಕೆಲಸವನ್ನು ಸರಾಗವಾಗಿ ನಿರ್ವಹಿಸುವಂತೆ ಮಾಡಿದವರು ವಿಷ್ಣುವರ್ಧನ್. ನಿರ್ದೇಶಕರ ಕಥೆ, ಚಿತ್ರಕಥೆಗೆ ಕುಣಿಗಲ್ ನಾಗಭೂಷಣ್ ಅವರ ಸಂಭಾಷಣೆಯಿತ್ತು. ಮಹಾಲಕ್ಷ್ಮೀ ವಿಭಿನ್ನ ಪಾತ್ರದಲ್ಲಿ ಕಾಣಿಸಿಕೊಂಡರು. ವಿಷ್ಣು-ಗೀತಾ ಜೋಡಿಯ ಅಭಿನಯ. ಕೆಲವು ವಿಶಿಷ್ಟ ತಿರುವುಗಳಿದ್ದ ಕಥೆ ಕುತೂಹಲ ತರುತ್ತಿತ್ತು. ಕದಡಿದ ಮನಸ್ಸುಗಳು 'ನಿಜ' ತಿಳಿದು ಒಂದಾಗಲು ಬಳಸಿದ ಕೆಲವು ತಂತ್ರಗಳು ಕೊಂಚ ಅಸಹಜವಾದವು. ಚಿತ್ರ ವಿಷ್ಣುವರ್ಧನ್ ಅವರೇ ಹೆಚ್ಚುಕಮ್ಮಿ ನಿರ್ದೇಶಕನೂ ನಟನೂ ಆದ ಕಾರಣಕ್ಕೆ, ಮಹಾಲಕ್ಷ್ಮೀ ಬಂದ ಹೊಸತರಲ್ಲೇ ಸೊಗಸಾಗಿ ಅಭಿನಯಿಸಿದ್ದಕ್ಕೆ, ಗೀತಾ ಮಾಡಲ್ ಆಗಿ, ಗೃಹಿಣಿಯಾಗಿ ಒಳತೋಟ-ಸಂದಿಗ್ಧಗಳನ್ನು ಅಪೇಕ್ಷಣೀಯವಾಗಿ ಅಭಿನೀತಗೊಳಿಸಿದ್ದಕ್ಕೆ - ಕೆಲವು ಗೀತೆಗಳು ತುಂಬ ಚೆನ್ನಾಗಿದ್ದವೆಂದೂ ಕೂಡಾ ಮುಖ್ಯವಾಯಿತು. ನಿರೀಕ್ಷೆಯಂತೆ ಓಡಲಿಲ್ಲ. ಪ್ರೌಢ ಅಭಿನಯಕ್ಕಿಂತ ವಿಷ್ಣುವರ್ಧನ್ ಅವರನ್ನು ಬಹಳ ಬೇರೆಯಾಗಿಯೇ ನಿರೀಕ್ಷಿಸುವ ಪ್ರೇಕ್ಷಕರು ಚಿತ್ರವನ್ನು ಪರಿಗಣಿಸಲಿಲ್ಲ. 'ಆರಾಧನೆ' ಚಿತ್ರವಲ್ಲಿ ವಿಷ್ಣುವರ್ಧನ್ ಸೊಗಸಾದ ಅಭಿನಯ ನೀಡಿದ್ದರು. ಮಧ್ಯ ವಯಸ್ಕನ ಗೆಟಪ್ ಹಾಗೂ ಪಾರ್ಕ್‌ನಲ್ಲಿ ನಡೆಯುವ ಒಂದು ಭೇಟಿಯ ಸನ್ನಿವೇಶದಲ್ಲಿ ಮನಸ್ಸನ್ನು ಗೆಲ್ಲುವಂಥ ಸೂಕ್ಷ್ಮ ಅಭಿನಯ ನೀಡಿದ್ದರು. ಹಿಂದಿಯ ತಂತ್ರಜ್ಞರನ್ನು ಹತ್ತಿರ ತೆಗೆದುಕೊಳ್ಳುವುದು ವಿಷ್ಣುವರ್ಧನ್ ಖಯಾಲಿ. ಇಲ್ಲಿಯೂ ನಿರ್ದೇಶಕರು ಮತ್ತು ಛಾಯಾಗ್ರಾಹಕರು ಅತ್ತ ಕಡೆಯವರೆ. ಚಿತ್ರ ನಿರ್ಮಿಸಿದವರು ಭಾರತಿ ಮತ್ತು ಅವರ ಸಹೋದರ. ಈ ಚಿತ್ರ ಚೆನ್ನಾಗಿ ನಡೆಯುತ್ತಿದ್ದಾಗಲೇ ತೆಗೆಯಬೇಕಾಯಿತು. ಪ್ರಭಾವಕ್ಕೆ, ಸ್ನೇಹಕ್ಕೆ ಮಣಿದು ಬಂಧುಗಳನ್ನು ನಿರ್ಲಕ್ಷಿಸಿದರು ಎಂಬ ಆಪಾದನೆಯೂ ವಿಷ್ಣುವರ್ಧನ್ ಮೇಲೆ ಬಂತು.

'ಪ್ರಳಯಾಂತಕ' ಚಿತ್ರದ ನಿರ್ದೇಶಕರು ತೆಲುಗರು. ರವಿಚಂದ್ರನ್ ಮುಖ್ಯ ಪಾತ್ರವಲ್ಲಿದ್ದರು. ಅವರ ಜೊತೆಗೆ ಅರ್ಜುನ್ ಸರ್ಜಾ, ವಿಜಯಕಾಶಿ ಇದ್ದರು ಎಂಬುದನ್ನು ಬಿಟ್ಟರೆ ಹಿಂಸೆ ಇತ್ಯಾದಿಗಳಿದ್ದ ಮಾಮೂಲಿ ಜಾಡಿನ ಕಥೆ. ರವಿಚಂದ್ರನ್‌ರಿಗೆ ಈ ಚಿತ್ರದಲ್ಲಿ ಕಂಠದಾನ ಮಾಡಿದವರು ರಾಮಕೃಷ್ಣ. ತಪ್ಪು ಮಾಡಿದವನು ಕಾನೂನಿನಿಂದ ತಪ್ಪಿಸಿಕೊಂಡರೂ ದೇವರು ಶಿಕ್ಷೆ ಕೊಡುತ್ತಾನೆ ಎಂಬ ಸಂದೇಶವಿರುವ ಸಾಧಾರಣ ಚಿತ್ರ. ವೀರಾಸ್ವಾಮಿಯವರು ತಮ್ಮ ಮಗನ ಸಲುವಾಗಿ ನಿರ್ಮಿಸಿದ್ದರು.

'ಕುರಿದೊಡ್ಡಿ ಕುರುಕ್ಷೇತ್ರ' ಅದೇ ಹೆಸರಿನ ಜನಪ್ರಿಯ ನಾಟಕ ಆಧರಿಸಿ ಚಿತ್ರಿತವಾಯಿತು. ವಿಜಯ್ ಗುಜ್ಜಾರ್ ನಿರ್ದೇಶನ. ಪಾಂಡವ-ಕೌರವ ವಿರೋಧ ಪ್ರಸಂಗವನ್ನು ಗ್ರಾಮೀಣ ಹಿನ್ನೆಲೆಯ ಹಲವು ಭಿನ್ನಾಭಿಪ್ರಾಯಗಳಿಗೆ ಸಮೀಕರಿಸಿಕೊಂಡು ಹೆಣೆಯಲಾದ ಕಥೆ. ರಂಗದ ಮೇಲೆ ತುಂಬಾ ಯಶಸ್ವಿ. ತೆರೆಗೆ ಅಳವಡಿಸುವಲ್ಲಿ ರಿಚರ್ಡ್ ಲೂಯಿಸ್, ಎ.ಎಸ್.ಮೂರ್ತಿ ಮೊದಲಾದವರೆಲ್ಲ ಸೇರಿದ್ದರು. ಚಿತ್ರವಲ್ಲಿ ನಾಗಾಭರಣ, ಬಿ.ಜಯಶ್ರೀ ರಂಗಭೂಮಿಯ ಹಿರಿಯ ನಿರ್ದೇಶಕ ಪ್ರೊ|ಬಿ.ಚಂದ್ರಶೇಖರ್, ಮೊದಲಾದವರು ಅಭಿನಯಿಸಿದ್ದರು. ಈ ಚಿತ್ರದ ಸಂಭಾಷಣೆಗೆ ರಾಜ್ಯ ಪ್ರಶಸ್ತಿ ಬಂದಾಗ ವಿಪರೀತ ವಿವಾದಗಳಾದವು. ಸಂಭಾಷಣೆಕಾರ ಎ.ಎಸ್.ಮೂರ್ತಿಯವರಿಗೆ ಪ್ರಶಸ್ತಿ ಎಂದು ಘೋಷಿಸಿತ್ತು. ಸಂಭಾಷಣೆ ಬರೆದವನು ನಾನು ಎಂದರು ರಿಚರ್ಡ್ ಲೂಯಿಸ್. ಒಟ್ಟಾರೆ ಆ ಪ್ರಶಸ್ತಿಯನ್ನು ಇಬ್ಬರೂ ತೆಗೆದುಕೊಳ್ಳಲೇ ಇಲ್ಲ.

'ಗೂಂಡಾ ಗುರು' ಮತ್ತೊಂದು ಸಾಹಸಮಯ ಚಿತ್ರ. ಶಾಂತಿಪುರ ಎಂಬ ಗ್ರಾಮ ತನ್ನ ಹೆಸರಿಗೆ ತದ್ವಿರುದ್ಧವಾಗಿದ್ದು, ಗ್ರಾಮದೊಳಗೆ ಬಂದವರನ್ನೆಲ್ಲ ಆಹುತಿ ತೆಗೆದುಕೊಳ್ಳುತ್ತಿರುತ್ತದೆ. ಅಂಬರೀಷ್ ಅನ್ಯಾಯದ ವಿರುದ್ಧ ಸಿಡಿದು ಸರ್ವನಾಶ ಮಾಡಿ ಸಾಹಸ ಮೆರೆದ ಮತ್ತೊಂದು ಚಿತ್ರ. ಶ್ರಮಿಕನಿಗೆ ಅಕ್ಷರಜ್ಞಾನವಿದ್ದರೆ ಶೋಷಣೆ ಕಡಿಮೆಯಾಗುತ್ತದೆಂಬ ತತ್ವವಿದೆ. ಅದನ್ನು ತಮ್ಮ ಅನುಕೂಲಕ್ಕಾಗಿ ತಪ್ಪಿಸುತ್ತಲೇ ಬಂದ ಶ್ರೀಮಂತ ವರ್ಗವಿದೆ. ಪುನರಾವರ್ತನೆ ಅನ್ನಿಸಿಯೂ ಕೆಲವು ಅಂಶಗಳು ಚೆನ್ನಾಗಿ ಮೂಡಿಬಂದಿದ್ದವು. ಜೈನ್ ಅವರ ನಿರ್ಮಾಣ. ಎಚ್.ವಿ.ಸುಬ್ಬರಾವ್ ಅವರ



(ಚಿತ್ರ ೯೧) ಬೆಟ್ಟದ ಹೂವು ಚಿತ್ರದಲ್ಲಿ ಧಮರುಗೇಂದ್ರ ಮತ್ತು ಪುನೀತ್

ಕಥೆ ಇತ್ತು. ತೆಲುಗು ಚಿತ್ರವನ್ನು ನೋಡಿದ ಹಾಗೆ ಅನ್ನಿಸುತ್ತಿತ್ತು ಎಂಬ ಆಕ್ಷೇಪವನ್ನೂ ಎದುರಿಸಿತು.

'ಆಂತ'-'ಅಜಿತ್' ಚಿತ್ರಗಳನ್ನು ಕೊಟ್ಟ ಸಂಸ್ಥೆ 'ಧರ್ಮ' ಚಿತ್ರವನ್ನು ತಯಾರಿಸಿತ್ತು. ವಿಜಯ್ ಗುಜ್ಜಾರ್ ನಿರ್ದೇಶನದಲ್ಲಿ ಧರ್ಮದ ಬಗ್ಗೆ ತಪ್ಪು ಕಲ್ಪನೆಗಳು, ಬೋಧನೆಗಳು ತುಂಬಿಹೋಗಿದ್ದವು. ಮುಂದೆ ಕಂಠದಾನ ಕಲಾವಿದೆಯಾಗಿ ಹೆಸರಾದ ಶ್ಯಾಮಲಾ ಪಾತ್ರದಲ್ಲಿ ಉದ್ದಕ್ಕೂ ಒಂದೇ ಬಗೆಯ ಗ್ರಾಮೀಣ ಭಾಷೆಯನ್ನೇ ಬಳಸಿ ಮೆಚ್ಚುಗೆ ಪಡೆದರು. ಚಿತ್ರಕ್ಕೆ ರಾಜಕುಮಾರ್ ಅವರ ಹಾಡೂ ಇತ್ತು.

'ಬಿಡುಗಡೆಯ ಬೇಡಿ' ತ.ರಾ.ಸು. ಅವರ ಜನಪ್ರಿಯ ಕಾದಂಬರಿ. ದೊರೆ-ಭಗವಾನ್ ಈ ಚಿತ್ರವನ್ನು ನಿರ್ಮಿಸಿ ನಿರ್ದೇಶಿಸಿದರು. ಸಾಮಾಜಿಕ ಕಾದಂಬರಿಗಳು ಚಿತ್ರವಾದಾಗೆಲ್ಲ ಇವರೇ ಸೈ ಎಂಬಂತೆ ಗೊತ್ತಾದ ಜೋಡಿ ಅನಂತ್‌ನಾಗ್-ಲಕ್ಷ್ಮೀ ಮುಖ್ಯ ಪಾತ್ರದಲ್ಲಿದ್ದರು. ಪೃಥ್ವಿರಾಜ್‌ಸಾಗರ್ ಹಾಗೂ ಸಂಭಾಷಣೆಕಾರ ಬಿ.ಎಲ್.ವೇಣು ಸಹ ಪಾತ್ರ ವಹಿಸಿದ್ದರು.

೧೯೮೫-೮೬ ರಲ್ಲಿ ಶಂಕರ್‌ನಾಗ್ ಖ್ಯಾತಿ ಉತ್ತುಂಗ ತಲುಪಿತ್ತು. ಕೇವಲ ಚಿತ್ರರಂಗವಲ್ಲದೆ ಸಾರ್ವಜನಿಕ ರಂಗದಲ್ಲಿಯೂ ಏನನ್ನಾದರೂ ಸಾಧಿಸಬೇಕೆಂದು ಹಲವಾರು ಕನಸುಗಳನ್ನು ಹೊತ್ತು ಸದಾ ಕ್ರಿಯಾಶೀಲರಾಗಿರುತ್ತಿದ್ದರು. ಇವರ ಜೊತೆಯಲ್ಲಿ ದುಡಿಯುವುದೇ ಹೆಮ್ಮೆ ಎಂಬ ಭಾವನೆ ಆಗ ಅನೇಕ ಯುವಕರು, ತಂತ್ರಜ್ಞರು, ಕಲಾವಿದರಲ್ಲಿ ಇತ್ತು. ಶಂಕರ್‌ನಾಗ್‌ರೊಂದಿಗೆ ಕೆಲಸ ಮಾಡುವವರನ್ನು 'ಸಂಕೇತ್ ಗುಂಪಿನವರು' ಅಥವಾ ಅವರ ಹೆಸರಿನೊಂದಿಗೆ ಸಂಕೇತ್ ಎಂದೋ ಸೇರಿಕೊಂಡಿರುತ್ತಿತ್ತು. ನಾಟಕ, ಸಿನಿಮಾ, ಸಮಾರಂಭ, ರಾಜಕೀಯ ಹೀಗೆ ಯಾವುದಾದರೂ ಸರಿ ಎಂಬಂತೆ ಎಲ್ಲರೂ ಅತ್ಯಂತ ಭಿನ್ನವಾಗಿ ಯೋಚಿಸುತ್ತಾ ಕನ್ನಡದ ಕೆಲಸಗಳಲ್ಲಿ ನಿರತರಾಗಿದ್ದರು. ಇಂಥ ಬಹುಮುಖಿ ಚಟುವಟಿಕೆಗಳ ದಿನಗಳಲ್ಲಿಯೇ 'ಸಂಕೇತ್'ನ ಆರಂಭಕ್ಕೂ ಮುನ್ನ ಅತ್ಯಂತ ಭಿನ್ನ ರೀತಿಯ ಹಾಸ್ಯ ಚಿತ್ರ 'ಪರಮೇಶಿ ಪ್ರೇಮ ಪ್ರಸಂಗ' ಬಿಡುಗಡೆಯಾಯಿತು. ರಮೇಶ್ ಭಟ್ ನಿರ್ದೇಶಿಸಿದ್ದ ಈ ಚಿತ್ರಕ್ಕೆ 'ಸಂಕೇತ್' ಗುಂಪಿನ ಚಿಂತನೆಯ ವೈವಿಧ್ಯವಿದ್ದು ಸಾಕಷ್ಟು ಗಮನ ಸೆಳೆಯಿತು.

ವಿದ್ಯಾವಂತ ತರುಣ ಪರಮೇಶಿ ರಸಿಕ. ಇವನು ತನ್ನ ಹೆಂಡತಿ ರಮಾಮಣಿಯನ್ನು ಗಾಢವಾಗಿ ಪ್ರೀತಿಸುತ್ತಿರುವವನು. ಇಂಥವನು ಕಚೇರಿಯ ಜವಾನ ಕರಿಯಪ್ಪನ ಹುಡುಗಾಟಿಕೆಯಿಂದಾಗಿ ಬೇರೊಬ್ಬ ಹುಡುಗಿಯೊಂದಿಗೆ ಕಾಣಿಸಿಕೊಂಡು ಹೆಂಡತಿಗೆ ಅನುಮಾನ ಬರಿಸುತ್ತಾನೆ. ಇಬ್ಬರಿಗೂ ಮಾತಿಗೆ ಮಾತು ಬೆಳೆದು ದೂರವಾಗುತ್ತಾರೆ. ರಮಾಮಣಿ ಗಂಡನ ನಿರೀಕ್ಷೆಯಲ್ಲಿಯೇ ಅತ್ಯಂತ ಕಷ್ಟಪಟ್ಟು ಮಗನನ್ನು ಬೆಳೆಸುತ್ತಾಳೆ. ಕೊನೆಗೆ ಪರಮೇಶಿ ತನ್ನ ಮಗನನ್ನು ಪಡೆಯಲು ಕೋರ್ಟಿನ ಮೆಟ್ಟಿಲು ಹತ್ತಿ ಜಯ ಸಾಧಿಸಿದರೂ ಹೆಂಡತಿಗೆ ಶರಣಾಗುವುದರೊಂದಿಗೆ ಚಿತ್ರ ಮುಗಿಯುತ್ತದೆ. ಶಂಕರ್‌ನಾಗ್ ಬರೆದಿದ್ದ ಚಿತ್ರಕಥೆಯಲ್ಲಿ ಹಾಸ್ಯ ದೃಶ್ಯಗಳು ಉತ್ತಮವಾಗಿ ಮೂಡಿಬಂದಿದ್ದವು. ಮುಗ್ಧ ಹೆಣ್ಣಾಗಿ, ಪ್ರೀತಿಯ ಮಡದಿಯಾಗಿ ಹಾಗೂ ಕಷ್ಟಪಡುವ ತಾಯಿಯಾಗಿ ಅರುಂಧತಿ ರಾವ್ ಅತ್ಯಂತ ಸಹಜವಾಗಿ ನಟಿಸಿದ್ದರು. ರಮೇಶ್‌ಭಟ್‌ರ ಪ್ರಥಮ ನಿರ್ದೇಶನದ ಪ್ರಯತ್ನ ಸಾಕಷ್ಟು ಗಮನ ಸೆಳೆದಿತ್ತು. ಈ ಚಿತ್ರದಲ್ಲಿ ಅತ್ಯಂತ ಚೂಟಿಯಾಗಿ ನಟಿಸಿದ್ದ ಮಾ|ಮಂಜುನಾಥ್‌ಗೆ ೧೯೮೪-೮೫ರ ಅತ್ಯುತ್ತಮ ಬಾಲನಟ ಪ್ರಶಸ್ತಿ ಲಭ್ಯವಾಯಿತು.

'ಪರಮೇಶಿ ಪ್ರೇಮ ಪ್ರಸಂಗ'ದಷ್ಟೇ ಸರಳ ಸುಂದರವಾಗಿದ್ದ ಚಿತ್ರ 'ಬೆಟ್ಟದ ಹೂವು'. ಲೋಹಿತ್ ಹೆಸರಿನಲ್ಲಿ ಕನ್ನಡಿಗರಿಗೆ ಪರಿಚಿತನಾಗಿದ್ದ ರಾಜಕುಮಾರ್‌ರ ಮೂರನೆಯ ಪುತ್ರನಿಗೆ ಈ ಚಿತ್ರದ ಮೂಲಕ 'ಪುನೀತ್' ಎಂದು ಮರು ನಾಮಕರಣ ಮಾಡಲಾಯಿತು. ಸಾಕಷ್ಟು ಪ್ರಶಸ್ತಿಗಳನ್ನು ಪಡೆದು, ವಿದೇಶ ಯಾತ್ರೆಗಳನ್ನು ಕೈಗೊಂಡ ಈ ಚಿತ್ರ ಕನ್ನಡದ ಕೆಲವೇ ಉತ್ತಮ ಮಕ್ಕಳ ಚಿತ್ರಗಳಲ್ಲಿ ಅತ್ಯಂತ ಮುಖ್ಯಸ್ಥಾನ ಪಡೆದುಕೊಂಡಿದೆ. ನಿರ್ಗತಿಕ ಬಾಲಕನೊಬ್ಬನ ಅಕ್ಷರ ಕಲಿಕೆಯ ದಾಹವನ್ನು ಕೌಟುಂಬಿಕ ಸಮಸ್ಯೆಗಳ ಮೂಲಕ ವಿಶ್ಲೇಷಿಸುವ ಪ್ರಯತ್ನದಲ್ಲಿ ನಿರ್ದೇಶಕ ಎನ್.ಲಕ್ಷ್ಮೀನಾರಾಯಣ್ ಗಂಭೀರವಾದ ಹಾದಿ ತುಳಿದಿದ್ದರು. ಕೆಮ್ಮಣ್ಣುಗುಂಡಿಯ ಸುಂದರ ಪರಿಸರ, ರಾಜನ್-ನಾಗೇಂದ್ರರ ಸಂಗೀತ, ವಿಶೇಷವಾಗಿ ಬಿ.ಸಿ.ಗೌರಿಶಂಕರ್‌ರವರ ಛಾಯಾಗ್ರಹಣ ಚಿತ್ರದ ಮೌಲ್ಯವನ್ನು ಗಮನಾರ್ಹವಾಗಿ ವೃದ್ಧಿಸಿದ್ದವು.

ಅಮೇರಿಕಾದ ಲೇಖಕಿ ಶೆರ್ಲಿ ಎಲ್.ಅರೋರಾ ಅವರ ಕಥೆ 'ವಾಟ್ ದೆನ್ ರಾಮನ್' ಆಧರಿಸಿದ 'ಬೆಟ್ಟದ ಹೂವು' ಚಿತ್ರ ೧೯೮೪ರ ರಾಷ್ಟ್ರದ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಪಡೆದದ್ದಲ್ಲದೆ ಪುನೀತ್‌ಗೆ ಶ್ರೇಷ್ಠ ಬಾಲನಟ ಪ್ರಶಸ್ತಿ ತಂದುಕೊಟ್ಟಿತು. ೧೯೮೪-೮೫ರ ರಾಜ್ಯ ಸರ್ಕಾರದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಹಾಗೂ ಅತ್ಯುತ್ತಮ ಕಥೆಗೆ ಲೇಖಕಿ ಶೆರ್ಲಿ ಎಲ್.ಅರೋರಾ ಪ್ರಶಸ್ತಿ ಪಡೆದರು. ಪ್ರಶಸ್ತಿ ವಿತರಣಾ ಸಮಾರಂಭಕ್ಕೆ ಅಮೇರಿಕಾದಿಂದ ಬರಲಾಗದ ಲೇಖಕಿ ೧೯೮೬ರ ಡಿಸೆಂಬರ್ ಕೊನೆಯ ವಾರದಲ್ಲಿ ಪತಿಯೊಂದಿಗೆ ಬೆಂಗಳೂರಿಗೆ ಬಂದು, ಆಗಿನ ವಾರ್ತಾ



(ಚಿತ್ರ ೯೨) ರಾಷ್ಟ್ರಪತಿ ಜೈಲ್‌ಸಿಂಗ್ ಅವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವ ಎನ್.ಲಕ್ಷ್ಮೀನಾರಾಯಣ್



(ಚಿತ್ರ ೯೩) 'ಬೆಟ್ಟದ ಹೂವು' ಚಿತ್ರದ ಲೇಖಕಿ ಶೆರ್ಲಿ ಎಲ್.ಅರೋರಾ ವಾರ್ತಾ ಇಲಾಖೆಯ ನಿರ್ದೇಶಕ ಡಾ| ಕೃಷ್ಣಮೂರ್ತಿಯವರಿಂದ ಅತ್ಯುತ್ತಮ ಕಥೆಗಾಗಿ ಪ್ರಶಸ್ತಿ ಪಡೆದರು.

ಇಲಾಖೆಯ ನಿರ್ದೇಶಕರಾಗಿದ್ದ ಡಾ।ಕೃಷ್ಣಮೂರ್ತಿಯವರಿಂದ ಪ್ರಶಸ್ತಿ ಪಡೆದುಕೊಂಡರು. 'ಬೆಟ್ಟದ ಹೂವು' ಹೈದರಾಬಾದ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಚಿತ್ರೋತ್ಸವದ ಭಾರತೀಯ ಪನೋರಮಾ ವಿಭಾಗದಲ್ಲಿ ಪ್ರದರ್ಶನವಾಯಿತಲ್ಲದೆ ರಷ್ಯಾದ ಮಾಸ್ಕೊ, ಮಿನ್‌ಸ್ಕ್ ಮತ್ತಿತರ ನಗರಗಳಲ್ಲಿ ನಡೆದ ಭಾರತೀಯ ಚಿತ್ರ ಸಪ್ತಾಹದಲ್ಲಿ ಹಾಗೂ ಇರಾನ್ ಸೇರಿದಂತೆ ಹಲವಾರು ವಿದೇಶೀ ಚಿತ್ರೋತ್ಸವಗಳಲ್ಲಿ ಪ್ರದರ್ಶನವಾಯಿತು. ಈ ಕಥೆಯನ್ನು 'ಮುಂದೇನು ರಾಮನ್ ?' ಎಂದು ಪತ್ರಕರ್ತ ವೈ.ಎನ್.ಕೆ. ಕನ್ನಡಕ್ಕೆ ಅನುವಾದ ಮಾಡಿದ್ದರು.

'ಆಹುತಿ' ಟಿ.ಎಸ್.ನಾಗಾಭರಣ ನಿರ್ದೇಶನದಲ್ಲಿ ಬಂದ ಚಿತ್ರ. ವರದಕ್ಷಿಣೆ ಸಮಸ್ಯೆಯನ್ನು ಎತ್ತಿಕೊಳ್ಳಲಾಗಿತ್ತು. ಸಮಸ್ಯೆಯನ್ನು ಬೇರೊಂದು ಮಗ್ಗುಲಿನಿಂದ ನೋಡುವ ಪ್ರಯತ್ನವಿತ್ತು. ನ್ಯಾಯಾಂಗ, ರಾಜ್ಯಾಂಗ, ಪೊಲೀಸರು ಸಹ ಏನೂ ಮಾಡಲಾಗದ ಸ್ಥಿತಿಯನ್ನು ಚಿತ್ರಿಸುತ್ತಾ ಕೆಲವು ಸಮಸ್ಯೆಗಳಿಗೆ ಸಮಾಜ, ಸಮಾಜದೊಳಗಿನ ವ್ಯಕ್ತಿಗಳೇ ಸಂಘಟಿತರಾಗಿ ಹೋರಾಡಬೇಕು ಎಂದು ಹೇಳುವ ಉದ್ದೇಶ. ಕನ್ಸೂಮರ್ಸ್ ಬಾಯ್‌ಕಾಟ್‌ನಂಥ ಒಂದು ಪರಿಕಲ್ಪನೆ. ಆದರೆ ಸೇಡು, ಅತಿಯಾದ ಖಳನಟರ ಕ್ರೌರ್ಯ, ಎಲ್ಲವನ್ನೂ ನಿವಾರಿಸಬಲ್ಲ ನಾಯಕನ ವೈಭವೀಕರಣಗಳಿಂದಾಗಿ ಮೂಲ ಉದ್ದೇಶ ಸರಿಯಾಗಿ ಚರ್ಚೆಯಾಗಲಿಲ್ಲ. ಸುಮಲತಾ-ಅಂಬರೀಷ್ ಜೋಡಿ ಅಭಿನಯಿಸಿತ್ತು. ಸುಮಲತಾ ಕನ್ನಡಕ್ಕೆ ಬಂದ ಹೊಸದು. ನಾಗಾಭರಣರಿಗೂ ಇನ್ನೂ ಮಾಧ್ಯಮದಲ್ಲಿ ಹಿಡಿತವಿಲ್ಲ ಅಥವಾ ವ್ಯಾಪಾರಿ ಚಿತ್ರಗಳ ನಿರ್ಮಾಣದ ಒಳಗುಟ್ಟು ಅರ್ಥವಾಗಿರಲಿಲ್ಲ. ಆದ್ದರಿಂದಲೇ ರಾಜಿ ಮಾಡಿಕೊಂಡರೂ ಏನೂ ಸಾಧಿಸಲು ಆಗಲಿಲ್ಲ.

'ಮುಗಿಲ ಮಲ್ಲಿಗೆ' ಎಸ್.ಬಾಲಚಂದರ್ ಚಿತ್ರ. ಬಹಳ ಹಿಂದೆಯೇ ಅವರು ತಮಿಳಿನಲ್ಲಿ ತೆಗೆದಿದ್ದ 'ತಾಮರೈ ನೆಂಜುಂ' ಚಿತ್ರದ ಪುನರವತರಣಿಕೆ. ಕನ್ನಡ ಭಾಷೆ, ಕನ್ನಡತನಗಳನ್ನು ಪ್ರಸ್ತಾಪಿಸುವ ಪ್ರಸಂಗಗಳನ್ನು ಅನಗತ್ಯವಾಗಿ ಸೇರಿಸಲಾಗಿತ್ತು. ಚಿತ್ರದಲ್ಲಿ ಆತ್ಮಹತ್ಯೆಗೆ ಪ್ರಯತ್ನಿಸಿದ ತರುಣಿಗೆ ಸಾವು ಸಮೀಪವಾದಂತೆ ನಿತ್ಯ ತನ್ನೆದುರು ಚೈತನ್ಯಶೀಲವಾಗಿದ್ದ ಪ್ರಕೃತಿಯೂ ಸ್ತಬ್ಧವಾಗುವ ಚಿತ್ರಿಕೆಗಳು ಗಂಭೀರವಾದ ಆಲೋಚನೆಗೆ ನಿದರ್ಶನವಾಗುವಂತಿದ್ದವು. ಆದರೂ ಬಾಲಚಂದರ್ ಅಂಥವರು ಕನ್ನಡ ಪ್ರೇಕ್ಷಕರು ತನ್ನನ್ನು ಗೌರವಿಸುವುದನ್ನು ಗಂಭೀರವಾಗಿ ಪರಿಗಣಿಸದೆ ಹಳಸಲು ಪದಾರ್ಥವನ್ನು ಕೊಟ್ಟುದರ ಬಗ್ಗೆ ಪತ್ರಿಕೆಗಳು ಕಟುವಾಗಿ ಟೀಕಿಸಿದವು.

ಜೋಸೈಮನ್ ನಿರ್ದೇಶನ, ವಿಷ್ಣುವರ್ಧನ್ ಅಭಿನಯದ 'ಮಹಾಪುರುಷ'ವೂ ತೆರೆಗೆ ಬಂದು ಹೋಯಿತು. ಮೊದಲು 'ನೀ ನನ್ನ ರಾಜ' ಎಂದಿದ್ದ ಹೆಸರು 'ಮಹಾಪುರುಷ' ಎಂದು ಬದಲಾಗಿತ್ತು.

ರಾಜ್ಯದ ೧೯೮೪-೮೫ರ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದ 'ಮರಳಿ ಗೂಡಿಗೆ' ಆರ್ಯಾಂಬ ಪಟ್ಟಾಭಿಯವರ ಅದೇ ಹೆಸರಿನ ಕಾದಂಬರಿಯನ್ನು ಆಧರಿಸಿದ ಚಿತ್ರ. ನಟರಾಗಿದ್ದ ಕೆ.ಆರ್.ಶಾಂತಾರಾಂ ಈ ಚಿತ್ರದ ಮೂಲಕ ನಿರ್ದೇಶಕರಾದರು. ಆರು ತಮಿಳು ಚಿತ್ರಗಳ ಪೈಕಿ ಒಂದರಲ್ಲಿ ನಾಯಕರಾಗಿಯೂ ನಟಿಸಿದ್ದ ಇವರು ಕೆ.ಬಾಲಚಂದರ್ ಚಿತ್ರಗಳಲ್ಲಿ ಹೆಚ್ಚು ಕಾಣಿಸಿಕೊಂಡಿದ್ದಾರೆ. ಕನ್ನಡದಲ್ಲಿ ಇವರು ಅಭಿನಯಿಸಿರುವ ಹತ್ತು ಚಿತ್ರಗಳ ಪೈಕಿ 'ಕನ್ನೇಶ್ವರರಾಮ', 'ಚಿತೆಗೂ ಚಿಂತೆ', 'ತಪ್ಪಿದ ತಾಳ', 'ಕುದುರೆಮುಖ', 'ಹೂವು ಹಣ್ಣು' ಮುಖ್ಯವಾದವು. ಚಲನಚಿತ್ರ ಬದುಕಿನ ಆಕರ್ಷಣೆಯಿಂದಾಗಿ ಭದ್ರಾವತಿ ಉಕ್ಕು ಕಾರ್ಖಾನೆಯ ನೌಕರಿ ಬಿಟ್ಟು ಬಂದವರು ಅಭಿನಯದೊಂದಿಗೆ ನಾಲ್ಕು ಚಿತ್ರಗಳನ್ನು ನಿರ್ದೇಶಿಸಿದರು. 'ಮರಳಿ ಗೂಡಿಗೆ' ಚಿತ್ರದಲ್ಲಿ ಕುಷ್ಠರೋಗದಂಥ ಖಾಯಿಲೆ ಗುಣಪಡಿಸುವುದು ಸಾಧ್ಯ ಎಂದು ಹೇಳಲಾಗಿದೆ. ಇದೇ ವಸ್ತುವನ್ನು ಬಿ.ಎ.ಅರಸುಕುಮಾರ್ ಅವರು ಹಿಂದೆ ಚಿತ್ರ ಮಾಡಿದ್ದುಂಟು. ಶಾಂತಾರಾಂ ತುಂಬ ಜಾಣ್ಮೆಯಿಂದ, ನೋಡಿಸಿಕೊಳ್ಳುವಂಥ ಚಿತ್ರ ಮಾಡಿದರು. ಆದರೆ ಅಂತ್ಯದಲ್ಲಿ ದ್ವಿಪತ್ನಿತ್ವವನ್ನು ಬೆಂಬಲಿಸುವುದು ಎಷ್ಟೇ ಅನಿವಾರ್ಯದ ಸಂದರ್ಭವಾದರೂ ಸಮಾಧಾನ ತರುವುದಿಲ್ಲ. ಕಲ್ಯಾಣ್‌ಕುಮಾರ್‌ರವರ ಲವಲವಿಕೆಯ ಅಭಿನಯ, ಗೌರಿಶಂಕರ್‌ರವರ ಛಾಯಾಗ್ರಹಣ ಗಮನ ಸೆಳೆಯುತ್ತವೆ. ರಾಜನ್-ನಾಗೇಂದ್ರರ ಸಂಗೀತದಲ್ಲಿ ಎರಡು ಹಾಡುಗಳು ಇಂಪಾಗಿದ್ದವು.

'ಮಹಾಪುರುಷ' ಕುಣಿಗಲ್ ನಾಗಭೂಷಣ್‌ರವರ ಸಾಹಿತ್ಯದ ೫೦ನೆಯ ಚಿತ್ರವಾದರೆ, 'ಶ್ವೇತ ಗುಲಾಬಿ' ಕೆ.ವಿ.ಜಯರಾಂರವರು 'ಜಯದುರ್ಗಾ ಕಂಬೈನ್ಸ್' ಲಾಂಛನದಲ್ಲಿ ನಿರ್ಮಿಸಿದ ಮೊದಲ ಚಿತ್ರ. ದುಡಿಯುವ ಮಹಿಳೆಯರ ಬವಣೆಯನ್ನು ಕುರಿತು ಹೇಳುವ ಪರಿಪಾಠವನ್ನು ಈ ಚಿತ್ರದ ಮೂಲಕ ಆರಂಭಿಸಿದ ಕೆ.ವಿ.ಜಯರಾಂ ಅವರ ಮುಂದಿನ ಬಹುತೇಕ ಚಿತ್ರಗಳಲ್ಲಿ ಅದನ್ನೇ ಖಾಯಂ ವಸ್ತುವನ್ನಾಗಿಸಿಕೊಂಡಿರುವುದು ಕಾಣುತ್ತದೆ. ವಾದಿರಾಜ್ ನಿರ್ಮಿಸಿದ, ರಾಜಕುಮಾರ್ ದ್ವಿಪಾತ್ರಾಭಿನಯದಲ್ಲಿ ನಟಿಸಿದ 'ಅದೇ ಕಣ್ಣು' ಅಪರಾಧಿಯೊಬ್ಬನ ಅಪರಾಧ ಪ್ರಜ್ಞೆಯ ನಡವಳಿಕೆಯನ್ನು ಪರಿಣಾಮಕಾರಿಯಾಗಿ ಸೃಷ್ಟಿಸಿದ ಚಿತ್ರ. ಕುತೂಹಲ ಮೂಡಿಸುವ ಹಲವಾರು ತಿರುವುಗಳನ್ನು ಒಳಗೊಂಡಿದ್ದ ಕಥೆ ರಾಜಕುಮಾರ್‌ರ ಎಂದಿನ ಚಿತ್ರಗಳಿಗಿಂತ ಭಿನ್ನವಾಗಿತ್ತಲ್ಲದೆ ಯಶಸ್ಸನ್ನೂ ಗಳಿಸಿತು. 'ಕಾಮನ ಬಿಲ್ಲು' ಚಿತ್ರದಲ್ಲಿ ವಿಫಲರಾಗಿದ್ದ ನಿರ್ದೇಶಕ ಚಿ.ದತ್ತುರಾಜ್ ಈ ಚಿತ್ರದಲ್ಲಿ ವಸ್ತುವಿಗೆ ಅನುಗುಣವಾದ ನಿರೂಪಣೆಯನ್ನು ಅನುಸರಿಸಿ ಬಿಗಿ ಕಾಯ್ದುಕೊಂಡಿದ್ದರು. ತಂದೆಯ ಪಾತ್ರದಲ್ಲಿ ರಾಜಕುಮಾರ್ ತೋರಿದ ಅಪ್ರತಿಮ ಅಭಿನಯವನ್ನು ಹೇಳುವುದರೊಂದಿಗೆ ಈ ಚಿತ್ರದಲ್ಲಿ ಸತೀಶ್ ಎಂಬ ನಟನ ಅತ್ಯುತ್ತಮ ಅಭಿನಯವನ್ನೂ ವಿಶೇಷವಾಗಿ ಪ್ರಸ್ತಾಪಿಸಬೇಕಾಗುತ್ತದೆ. ರಾಜ್ ಸಂಸ್ಥೆಯ ಚಿತ್ರಗಳಷ್ಟೇ ಅಲ್ಲದೆ ಇತರ ಕೆಲವು ಕನ್ನಡ ಚಿತ್ರಗಳಲ್ಲಿ ಸಣ್ಣ ಪುಟ್ಟ ಪಾತ್ರಗಳಲ್ಲಿ ಕಾಣಿಸಿಕೊಳ್ಳುತ್ತಿದ್ದ ಸತೀಶ್ 'ಅದೇ ಕಣ್ಣು' ಚಿತ್ರದಲ್ಲಿ ಸಿಕ್ಕಿದ ಉತ್ತಮ ಅವಕಾಶವನ್ನು ಸಮರ್ಥವಾಗಿ ಬಳಸಿಕೊಂಡರು. ಈ ಚಿತ್ರಕ್ಕೆ ಸಂಭಾಷಣೆ, ಗೀತೆಗಳನ್ನು ರಚಿಸಿದ ಚಿ.ಉದಯಶಂಕರ್‌ರಿಗೂ ಇದೇ ವರ್ಷ ಒಂದು ಅಪೂರ್ವ ದಾಖಲೆ ಸೃಷ್ಟಿಯಾಯಿತು. ೧೯೮೫ ರಲ್ಲಿ ತೆರೆ ಕಂಡ ೬೬ ಚಿತ್ರಗಳ ಪೈಕಿ ೨೬ ಚಿತ್ರಗಳಲ್ಲಿ ಇವರ ಸಾಹಿತ್ಯ, ಗೀತೆಗಳಿದ್ದುವು. ಇದು ಕನ್ನಡ ಚಿತ್ರರಂಗ ಮಾತ್ರವಲ್ಲ, ಭಾರತೀಯ ಚಿತ್ರರಂಗದಲ್ಲಿಯೇ ಒಂದು ದಾಖಲೆ.

'ಬ್ರಹ್ಮ ಗಂಟು' ದ್ವಾರಕೀಶ್ ಅವರ ನಿರ್ಮಾಣ. ಪುನರವತರಣಿಕೆ. ಯಾವ ಹೊಸ ಜಾಡೂ ಇರಲಿಲ್ಲವೆಂಬ ಟೀಕೆ, ಸೋಲು ಎದುರಿಸಬೇಕಾಯಿತು.

'ಕಾಡಿನ ರಾಜ' ಎಂ.ಪಿ.ಶಂಕರ್ ನಿರ್ಮಾಣದ ಚಿತ್ರ. ಶಂಕರ್ ಅಪಾರ ಪರಿಶ್ರಮವಹಿಸಿ ನಿರ್ಮಿಸಿದರು. ಮುತ್ತತ್ತಿ ಬಳಿಯ ಕಾಡನ್ನು ಬಳಸಿಕೊಂಡರು. ಕಾಡುಗಳೆಲ್ಲ ಬಯಲಾಗುವ ಹೊತ್ತಿನಲ್ಲಿ, ಇನ್ನೂ ಒಳಭಾಗಕ್ಕೆ ಹೋಗಿ ನಿಜವಾದ ಕಾಡನ್ನು ಹೊಗಲು ಆಗದ ಸ್ಥಿತಿಯಲ್ಲಿ ಚಿತ್ರದಲ್ಲಿ ಕಂಡದ್ದೇ ಕಾಡು ಅಂದುಕೊಳ್ಳಬೇಕಿತ್ತು. ಸೊಗಸಾದ ಕಲಾನಿರ್ದೇಶನವಿತ್ತು. ಗಿರಿಜನರ ವಾಸಕ್ಕಾಗಿ ಬಿದಿರುಮೆಳೆಗಳಿಂದ ನಿರ್ಮಿಸಿದ ಗುಡಿಸಲುಗಳೂ ಒಂದು ಅರ್ಥದಲ್ಲಿ ಶ್ರೀಮಂತವಾಗಿಯೇ ಕಂಡವು. ಧಾರಾಳವಾಗಿ ಪ್ರಾಣಿಗಳನ್ನು ಬಳಸಿದ್ದರು. ಆನೆ, ಮೊಸಳೆ, ಹಾವುಗಳಂತೂ ಸಮೃದ್ಧವಾಗಿದ್ದವು. ಎ.ಟಿ.ರಘು ಆ ದಿನಗಳಲ್ಲಿ ಇಂಥ ಸಾಹಸಮಯ ಚಿತ್ರ ನಿರ್ದೇಶನಕ್ಕೆ ಹೆಸರಾಗಿದ್ದರು. ಸಮರ್ಥವಾಗಿ ನಿರ್ವಹಿಸುತ್ತಿದ್ದರು. ಆದರೆ 'ಕಾಡಿನ ರಾಜ' ಚಿತ್ರ ಪ್ರಚಾರ ಮಾಡಿಕೊಂಡಷ್ಟು ಉತ್ತಮವಾಗಿ ಮೂಡಿ ಬರಲಿಲ್ಲ. ಎಂ.ಪಿ.ಶಂಕರ್ ಪಾತ್ರವೇ ಔಚಿತ್ಯ ಮೀರಿ ವರ್ತಿಸಿತ್ತು. ಅನುರಾಧಾ ಕ್ಯಾಬರೆ ನರ್ತಕಿ ಮಾತ್ರವಲ್ಲ ಪಾತ್ರಧಾರಿಯೂ ಆಗಿದ್ದರು. ಆದರೆ ಅತಿ ಎನ್ನಿಸುವ ಕಾಮುಕತನವನ್ನು ಆರೋಪಿಸಲಾಗಿತ್ತು. ಹಾವಿನಿಂದ ಕಚ್ಚಿಸಿಕೊಂಡು ಕಾಮತೃಷೆಯನ್ನು ಶಮನ ಮಾಡಿಕೊಳ್ಳುವ ತೀವ್ರತೆ ತೋರಲಾಗಿತ್ತು. ಆದರೆ ಅನುರಾಧಾ ಪಾತ್ರದಲ್ಲಿ ತೋರಿದ ಗತ್ತು-ಠೀವಿ ಚೆಂದವೆನಿಸಿತ್ತು. ಮುಖ್ಯ ಪಾತ್ರದಲ್ಲಿ ಅಥವಾ ಟಾರ್ಜಾನ್ ಆಗಿ ಪ್ರಭಾಕರ್ ಅಭಿನಯ ಗಮನ ಸೆಳೆದಿತ್ತು. ಅಲ್ಲಿ ಅಭಿನಯಕ್ಕಿಂತ ಅಂಗಸೌಷ್ಠವವೇ ಪ್ರಧಾನವಾದ್ದರಿಂದ ಅಂಥ ಎಲ್ಲ ಮೃಗೀಯ ಭಾವ, ದೇಹದಾರ್ಢ್ಯ ಅವರಿಗಿತ್ತು. ಹಾಗೆ ಪ್ರಭಾಕರ್ ಗಮನ ಸೆಳೆದರು. ದೀಪಾ ಎಂಬ ನಾಯಕಿ ಮುದ್ದಾಗಿದ್ದಾರೆಂದರೆ ಸಾಕು. ಇಂಥ ಚಿತ್ರಗಳಲ್ಲಿ ಸಾಹಸ, ಅಬ್ಬರವೇ ಅಧಿಕ. ನಾಯಕಿಯರ ಅಭಿನಯಕ್ಕಿಲ್ಲಿ ಅವಕಾಶವೂ ಇಲ್ಲ. ದೀಪಾ ಹೊಸಬರು. ಇನ್ನೂ ಅಂಥ ಮುಖ್ಯ ಪಾತ್ರಧಾರಿಯಾಗಿ ಕನ್ನಡ ಚಿತ್ರರಂಗಕ್ಕೆ ಆಕೆಯ ಪರಿಚಯವೂ ಆಗಿರಲಿಲ್ಲ. ಹೀಗೆ 'ಕಾಡಿನರಾಜ' ಎಂ.ಪಿ.ಶಂಕರ್ ಅವರ ಎಂಥ ಸೋಲಿಗೂ ಹೆದರದೆ ಮುನ್ನುಗ್ಗುವ ಸಾಹಸಕ್ಕಾಗಿ ಗಮನಾರ್ಹ. ಪ್ರಾಣಿಗಳು, ಸಾಹಸ, ಟಾರ್ಜಾನ್ ಎಂದುಕೊಂಡು ಮಕ್ಕಳನ್ನು ಕರೆದೊಯ್ಯುವ ಹೆತ್ತವರಿಗೆ ಕೊಂಚ ಇರಿಸುಮುರಿಸಾಗುವಷ್ಟು 'ವಯಸ್ಕರಿಗೇ' ಅನ್ನುವಂಥ ದೃಶ್ಯಗಳಿವೆ ಎಂಬ ಆಕ್ಷೇಪವನ್ನು ಎದುರಿಸಬೇಕಾಯಿತು ಎಂ.ಪಿ.ಶಂಕರ್.

ಎ.ಆರ್.ರಾಜು ಅವರಿಗಾಗಿ ಎಸ್.ಎಸ್.ಧನಂಜಯ ನಿರ್ದೇಶಿಸಿದ ಚಿತ್ರ 'ಸತೀ ಸಕ್ಕೂಬಾಯಿ'. ಧನಂಜಯ ಉದ್ಯಮದಲ್ಲಿ ದತ್ತು ಎಂದೇ ಪರಿಚಿತರು. ಪುಟ್ಟಣ್ಣ ಕಣಗಾಲ್ ಬಳಿ ಸಹನಿರ್ದೇಶಕರಾಗಿ ಬಹಳ ಕಾಲ ಕೆಲಸ ಮಾಡಿದರು. ''...'ರಂಗನಾಯಕಿ' ಚಿತ್ರೀಕರಣದ ಸಂದರ್ಭದಲ್ಲಿ ಚಿತ್ರದ ಅಂತ್ಯ ಹೀಗೇ ಇರಬೇಕೆಂದು ನಾನು, ಹಾಗೆ ಬೇಡವೆಂದು ಪುಟ್ಟಣ್ಣನವರೂ ಹೇಳುತ್ತಾ ಸಾಕಷ್ಟು ಗದ್ದಲ



(ಚಿತ್ರ ೯೪) 'ಕಾಡಿನ ರಾಜ' ಚಿತ್ರದಲ್ಲಿ ರಾಮಕೃಷ್ಣ ಹೆಗಡೆ ಮತ್ತು ಪ್ರಭಾಕರ್

ಮಾಡಿಕೊಂಡೆವು. ನಾನು ಹೊರಗೆ ಬಂದುಬಿಟ್ಟೆ'' ಎನ್ನುತ್ತಾರೆ ದತ್ತು. ಅವರು ಸ್ವತಂತ್ರವಾಗಿ ಹಲವು ಚಿತ್ರಗಳನ್ನು ತೆರೆಗೆ ಕೊಟ್ಟರು. ಯಶಸ್ವಿಯೂ ಆದರು. ದತ್ತು ತಾರೆ ಆರತಿಯ ಸಹೋದರ. 'ಸತೀ ಸಕ್ಕೂಬಾಯಿ' ಚಿತ್ರಕ್ಕೆ ಆರತಿಯವರನ್ನು ನಾಯಕಿಯಾಗಿ ಒಪ್ಪಿಸುವುದು ಕಷ್ಟವೇ ಆಗಿತ್ತು. ಆಕೆ ಆಗಷ್ಟೇ ಎಂ.ಎಲ್.ಸಿ. ಆಗಿದ್ದರು. ಪ್ರಚಾರ ಭಾಷಣಗಳು ಅದೂ ಇದೂ ತುಂಬ ಬಿಜಿ ಆಗಿದ್ದರು. ದತ್ತು ಅವರಿಗೆ 'ಭಕ್ತ ಸಿರಿಯಾಳ'ದ ಯಶಸ್ಸು, ಆ ಚಿತ್ರದಲ್ಲಿ ಆರತಿ ಅವರ ಅಭಿನಯ, ಜನಪ್ರಿಯತೆ 'ಸಂತ ಸಕ್ಕೂಬಾಯಿ'ಗೆ ಪ್ರೇರಣೆ. ಎ.ಆರ್.ರಾಜು ಅವರ ಸಮ್ಮತಿಯೂ ಸಿಕ್ಕಿತು. ಚಿತ್ರ ತುಂಬಾ ಶ್ರೀಮಂತವಾಗಿಯೇ ಮೂಡಿಬಂದಿತ್ತು. ಭಕ್ತಿ ಪ್ರಧಾನವಾದ ಹಳೆಯ ಕಥೆಯಾದರೂ ಅದರ ಶ್ರೀಮಂತಿಕೆ ಈ ಜನಪ್ರಿಯ ನಟರನ್ನು ಇಂಥ ಪಾತ್ರಗಳಲ್ಲಿ ನೋಡುವಾಗಿನ ಪ್ರೇಕ್ಷಕರ ಕುತೂಹಲ, ಚಿತ್ರವನ್ನು ಯಶಸ್ವಿಗೊಳಿಸಿತು. ಮಧುಸೂದನ್ ಛಾಯಾಗ್ರಹಣಕ್ಕೆ ಸಾಕಷ್ಟು ಚಮತ್ಕಾರ ತೋರುವ ಅವಕಾಶವೂ ಇತ್ತು. ಕಾಸ್ಟ್ಯೂಮ್, ಕಲರ್, ಲೊಕೇಶನ್ ಎಲ್ಲ ನೆಲೆಯಲ್ಲೂ ಛಾಯಾಗ್ರಾಹಕನಿಗೆ ಹಬ್ಬವಾಗುವಂಥ ಅಂಶಗಳಿದ್ದವು. ರಾಮಕೃಷ್ಣ-ದೀಪಾರವು ದೈವ ದಾಂಪತ್ಯವಾದರೆ, ದಿನೇಶ್ ತುಂಬ ವಿಶಿಷ್ಟವಾದ ಪಾತ್ರದಲ್ಲಿದ್ದು ಉತ್ತಮ ಅಭಿನಯ ನೀಡಿದ್ದರು. ಸಾಂಸಾರಿಕ ಚಿತ್ರಗಳನ್ನೇ ನೋಡಿ ನೋಡಿ ಬೇಜಾರಾಗಿದ್ದವರಿಗೆ ಒಳ್ಳೆಯ ಸಾಹಿತ್ಯ, ಗೀತೆ, ಕಥೆ, ನಿರ್ವಹಣೆ ಇದ್ದ ಸಕ್ಕೂಬಾಯಿ ಇಷ್ಟವಾಯಿತು. ಆರತಿ ಮಹಾರಾಷ್ಟ್ರದ ಮಹಿಳೆಯ ಹಾಗೆ ಮೂಗಿಗೆ ನತ್ತು, ಕಚ್ಚೆಸೀರೆ, ಮುಡಿ ಕಟ್ಟಿಕೊಂಡ ಬಗೆಯಿಂದ ತುಂಬಾ ಬೇರೆಯಾಗಿಯೇ ಕಂಡರು. ಈ ಚಿತ್ರದಲ್ಲಿ ಶಶಿಕಲಾ, ಉಮಾಶಿವಕುಮಾರ್ ಅವರ ಪೋಷಕ ಪಾತ್ರಗಳು ಚೆನ್ನಾಗಿದ್ದವು. 'ಸತಿ ಸಕ್ಕೂಬಾಯಿ' ಚಿತ್ರ ತೆರೆಕಂಡ ಮೇಲೆ ಅಭಿನಯ, ದೃಶ್ಯ ಶ್ರೀಮಂತಿಕೆ ಚೆನ್ನ ಅನ್ನಿಸಿದರೂ ಸಹಜವಾಗಿಯೇ ಇಷ್ಟು ಥಟ್ಟನೆ ಯಾವುದೋ ಲೋಕದಲ್ಲಿ ವಿಹರಿಸುವಂತೆ ವರ್ತಿಸುವ ಸೊಸೆಯನ್ನು ಅತ್ತೆಯಾದವಳು ತರಾಟೆಗೆ ತೆಗೆದುಕೊಂಡದ್ದು ತಪ್ಪೇನಲ್ಲ. ಆಕೆ ಮಹಾಭಕ್ತೆ, ಅನುಭಾವಿಯಾಗಿ ಮೈಮರೆಯುತ್ತಾಳೆಂದು ಸಾಮಾನ್ಯ ಜನ ತಿಳಿಯುವುದಾದರೂ ಹೇಗೆ ? ಇವೆಲ್ಲ ಅತಾರ್ಕಿಕವಾಗಿಯೇ ಇದ್ದವು ಎಂಬ ಟೀಕೆಯನ್ನು ಎದುರಿಸಿತು.

'ಅಮರಜ್ಯೋತಿ' ತೆಲುಗಿನಿಂದ ನೇರವಾಗಿ ಬಂದ ಕನ್ನಡ ಅವತರಣಿಕೆ. ಭಾರಿ ಪ್ರಚಾರ ಮಾಡಿಕೊಂಡಿತ್ತು. ನಮ್ಮ ಕಲಾವಿದರನ್ನು ಹೈದರಾಬಾದಿಗೇ ಕರೆದೊಯ್ದು ತೆಲುಗು ಚಿತ್ರನಟ ಕೃಷ್ಣ ತಮ್ಮ ಪದ್ಮಾಲಯ ಸ್ಟುಡಿಯೋದಲ್ಲಿ ತಯಾರಿಸಿದರು. ಕನ್ನಡದಲ್ಲಿ ಅಂಬರೀಷ್ ನಾಯಕನಾಗಿ ಮಾಧವಿಯವರೊಂದಿಗೆ ಅಭಿನಯಿಸಿದ್ದರು. ಜೈಜಗದೀಶ್, ಕೆ.ಎಸ್.ಅಶ್ವತ್ಥ್ ಕೂಡಾ ಅಭಿನಯಿಸಿದ್ದರು. ತಾಂತ್ರಿಕವಾಗಿ ಚೆನ್ನ, ಶ್ರೀಮಂತ. ಬಿ.ಸುಬ್ಬಾರಾವ್ ಅವರು ಆರತಿಯವರ ಅಭಿನಯದ ಚಿತ್ರಗಳನ್ನೇ ಹೆಚ್ಚಾಗಿ ನಿರ್ದೇಶಿಸುತ್ತಿದ್ದವರು. ಸಾಕಷ್ಟು ಕಾಲ ಮೌನವಾಗಿದ್ದು ಪುನಃ ಆಂಧ್ರಕ್ಕೆ ಹಿಂತಿರುಗಿ ಈ ಚಿತ್ರ ನಿರ್ದೇಶಿಸಿದ್ದು ಆಗ ದೊಡ್ಡ ಸುದ್ದಿ.

'ಪ್ರಳಯ ರುದ್ರ' ತೆಲುಗಿನ 'ಕಟಕಟಾಲ ರುದ್ರಯ್ಯ' ಚಿತ್ರದ ರೀಮೇಕ್. ಬಹಳ ಹಿಂದೆಯೇ ಶಕ್ತಿಪ್ರಸಾದ್ ಈ ಚಿತ್ರವನ್ನು ತಾವೇ ನಿರ್ಮಿಸುವ ಬಯಕೆ ವ್ಯಕ್ತಪಡಿಸಿದ್ದರು. ತೆಲುಗು ಚಿತ್ರದಲ್ಲಿ ಸತ್ಯನಾರಾಯಣ ಅವರ ಪಾತ್ರ ಅವರಿಗೆ ಮೆಚ್ಚುಗೆಯಾಗಿತ್ತು. ಆದರೆ ಹಾಗಾಗಲಿಲ್ಲ. ಅವರೂ ಒಂದು ಪಾತ್ರದಲ್ಲಿ ಇದ್ದರು ಅಷ್ಟೇ. ಅನೈತಿಕ ಸಂತಾನ, ಸಾಮಾಜಿಕ ಭರ್ತ್ಸನೆ, ಅಸಡ್ಡೆಗಳಿಂದಾಗಿ ಸಿಡಿದು ದುಷ್ಟರಾಗುವ ರೀತಿಯನ್ನು ಕೇಂದ್ರವಾಗಿಟ್ಟುಕೊಂಡು ಸನ್ನಿವೇಶಗಳನ್ನು ಹೆಣೆಯಲಾಗಿತ್ತು. ಸಾಮಾಜಿಕರನ್ನು ಲೋಕದ ಕ್ರೌರ್ಯ-ಹಿಂಸೆಗಳ ಹಿಂದೆ ನೀವೇ ಇರುತ್ತೀರಿ ಎಂದು ಹೇಳುವ, ಎಚ್ಚರಿಸುವ ಪ್ರಯತ್ನ. ಸ್ವಲ್ಪ ಮಟ್ಟಿಗೆ ಮಹಾಭಾರತದ ಕುಂತಿ ಮತ್ತು ಕರ್ಣಾರ್ಜುನರನ್ನು ಸಮೀಕರಿಸಲಾಗಿತ್ತು. ಪಾತ್ರದ ಒಳತೋಟಿಯನ್ನೇ ಗ್ರಹಿಸಿರಲಿಲ್ಲ. ಚಿತ್ರವನ್ನು ಸಭ್ಯತೆಯ ಗಡಿ ದಾಟಿಸಿ ಅಂದಗೆಡಿಸಲಾಗಿತ್ತು. ಪ್ರಣಯ ದೃಶ್ಯಗಳಿಲ್ಲ, ಆದರೆ ಸಲಿಂಗರತಿಯನ್ನು ಸಮೀಪಿಸುವ ಭಾವ-ಭಂಗಿಗಳಿದ್ದವು. ಛಾಯಾಗ್ರಾಹಕ ನಿರ್ದೇಶಕ ಪಿ.ಎಸ್.ಪ್ರಕಾಶ್ ಸೋತರೂ ಹಾಡುಗಳಿಗೆ ನೃತ್ಯ ಸಂಯೋಜನೆ ಉತ್ತಮವಾಗಿತ್ತು.

ಅಬ್ಬಾಯಿನಾಯ್ಡು ಅವರ 'ತಾಯಿಯ ಹೊಣೆ' ಅವರೊಳಗಿದ್ದ ಸಮಾಜವನ್ನು ತಿದ್ದುವ ಬಯಕೆಯನ್ನು ಮತ್ತೊಮ್ಮೆ ಸಾದರಪಡಿಸಿತ್ತು. ಅವರ ಚಿತ್ರಗಳಲ್ಲಿ ಜನಪ್ರಿಯತೆಗೆ ಬೇಕಾದ ಸಭ್ಯವಲ್ಲದ ಸಂಗತಿಗಳೂ ಸೇರುವುದು ಸಹಜ. ಈ ಚಿತ್ರದಲ್ಲಿ ಸಾಕ್ಷರತೆ, ಪತಿತೋದ್ಧಾರದಂಥ ಅಂಶಗಳು ಇದ್ದವು. ಬಸ್, ಆಟೋಗಳು ದಿಢೀರನೆ ಮುಷ್ಕರ ಹೂಡುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುವುದರ ಚಿತ್ರಣ ತಾತ್ಕಾಲೀನ ಸಂದರ್ಭವನ್ನು ಗಂಭೀರವಾಗಿ ವಿವರಿಸಿತ್ತು. ಚಿತ್ರದಲ್ಲಿ ಮಕ್ಕಳೇ ಸೊಗಸಾಗಿ ಅಭಿನಯಿಸಿದ್ದವು. ಮಾ।ರೋಹಿತ್ ಗಮನ ಸೆಳೆದಿದ್ದ. ಚಿತ್ರದಲ್ಲಿ ಒಂದು ಕೋತಿಯ ಪಾತ್ರ ಕೂಡಾ ಅಷ್ಟೇ ಚೆನ್ನಾಗಿತ್ತು. ಒಂದು ಬಂಧವಿಲ್ಲದೆ ಹಲವು ಒಳ್ಳೆಯ ಅಂಶಗಳೇ ಇದ್ದರೂ ಅದು ಮನಸ್ಸನ್ನು ತಟ್ಟುವುದಿಲ್ಲ ಎಂಬುದು ಈ ಚಿತ್ರಕ್ಕೆ ಅನ್ವಯವಾಗುವಂಥ ಮಾತು. ಒಂದು ನಾಡಗೀತೆ, ಅದರ ಚಿತ್ರಣ ಬಹು ಮೆಚ್ಚಾಯಿತು. ಎಂದಿನಂತೆ ಅಬ್ಬಾಯಿನಾಯ್ಡು ಅವರವೇ ಅಭಿನಯವಿತ್ತು. ಆದರೆ ಇವರಲ್ಲಿ ತಮ್ಮ ಲಾಂಛನ ಕರಣೆಯನ್ನು ಹಿಡಿದೇ ಫೈಟ್ ಮಾಡುತ್ತಾರೆ. ಸತ್ಯಂ ಸಂಗೀತದಲ್ಲಿ 'ಮುಗಿಲ ಮಲ್ಲಿಗೆ...' ಎಂಬ ಗೀತೆ ಮೆಚ್ಚಾಗಿತ್ತು.

ದಾಖಲೆಗಳ ಮಾತು ಬಂದಾಗ ದುರಂತಗಳ ಸರಮಾಲೆಯನ್ನು ಅವರೊಂದಿಗೇ ದಾಖಲಿಸಬೇಕಾದ ವಿಪರ್ಯಾಸವಿದೆ. ಬೆಂಗಳೂರಿನಲ್ಲಿ ೧೯೮೪ರ ಡಿಸೆಂಬರ್ ತಿಂಗಳಿನಲ್ಲಿ ಅಲಂಕಾರ್ ಚಿತ್ರಮಂದಿರ ನೆಲಸಮವಾಗಿ ಅದೊಂದು ದೊಡ್ಡ ವಿವಾದವಾಗಿದ್ದರ ನೆನಪು ಹಸಿರಾಗಿರುವಾಗಲೇ ೮೫ರ ಮಾರ್ಚ್ ಕೊನೆಯ ವಾರ ಪ್ರಭಾತ್ ನೆಲಸಮವಾಯಿತು. ಇದೇ ವರ್ಷದ ಡಿಸೆಂಬರ್ ಕೊನೆಯ ವಾರ ಗೀತಾ ಕೂಡ ರಾತ್ರೋರಾತ್ರಿ ಉರುಳಿ ಬಿತ್ತು. ಇವೆರಡೂ ರಾಜಧಾನಿಯ ಪ್ರತಿಷ್ಠಿತ ಕೆಂಪೇಗೌಡ ರಸ್ತೆಯ ಚಿತ್ರಮಂದಿರಗಳು, ಕೆಡವಿದ್ದರ ಉದ್ದೇಶ ವಾಣಿಜ್ಯ ಸಂಕೀರ್ಣಗಳನ್ನು ಕಟ್ಟುವುದು.

ಅಲಂಕಾರ್ ಚಿತ್ರಮಂದಿರವನ್ನು ಕಟ್ಟಿಸಿದವರು ಚಿತ್ರ ಹಂಚಿಕಾ ಕ್ಷೇತ್ರದಲ್ಲಿ ದಕ್ಷಿಣ ಭಾರತದಲ್ಲಿಯೇ ಪ್ರಖ್ಯಾತರಾಗಿದ್ದ ಜಯಂತಿಲಾಲ್ ಠಾಕೂರ್. ಪ್ರಭಾತ್ ಚಿತ್ರಮಂದಿರ ನಿರ್ಮಿಸಿದವರು ಬೇರೊಬ್ಬರು. ಜಯಂತಿಲಾಲ್ ಠಾಕೂರ್ ಅದನ್ನು ಗುತ್ತಿಗೆ ಆಧಾರದ ಮೇಲೆ ಪಡೆದುಕೊಂಡಿದ್ದರು.

೧೯೪೦ರ ಫೆಬ್ರವರಿ ೨೦ ರಂದು ಪ್ರಭಾತ್‌ನ ಉದ್ಘಾಟನೆಯಾಯಿತು. ಇವರಲ್ಲಿ ಪ್ರದರ್ಶಿತವಾದ ಮೊದಲ ಚಿತ್ರ ಹಿಂದಿಯ 'ಆದ್ಮಿ'. ಹೊಸ ಚಿತ್ರಮಂದಿರಗಳಲ್ಲಿ ಆರಂಭದ ಚಿತ್ರಗಳನ್ನಾಗಿ ಆಗ ಹಿಂದಿ, ಇಂಗ್ಲಿಷ್ ಚಿತ್ರಗಳನ್ನೇ ಪ್ರದರ್ಶಿಸಲಾಗುತ್ತಿತ್ತು (ಕನ್ನಡ ಚಿತ್ರವನ್ನೇ ಪ್ರದರ್ಶಿಸುವ ಪರಿಪಾಠ ಆರಂಭವಾದದ್ದು ೧೯೬೩ ರಿಂದ ಮಾತ್ರ ಎಂಬುದು ಗಮನಾರ್ಹ). ಬೆಂಗಳೂರಿನಲ್ಲಿ ಆಗ ಇದ್ದುದು ದಿನವಹಿ ಎರಡು ಪ್ರದರ್ಶನಗಳು ಮಾತ್ರ (೧೯೪೦-೫೪ವರೆಗೆ). ಶನಿವಾರ ಮತ್ತು ಭಾನುವಾರಗಳಂದು ಮಾತ್ರ ಮೂರು ಪ್ರದರ್ಶನಗಳಿರುತ್ತಿದ್ದವು. ಈ ಪದ್ಧತಿಯನ್ನು ಬದಲಾಯಿಸಿ

ಪ್ರತಿದಿನವೂ ಮೂರು ಪ್ರದರ್ಶನ ಪದ್ಧತಿಯನ್ನು ಆರಂಭಿಸಿದ್ದು, ಟಿಕೆಟ್‌ಗಳನ್ನು ನೀಡಲು ಒಂದೊಂದು ತರಗತಿಗೂ ಪ್ರತ್ಯೇಕ ತರಗತಿಗಳನ್ನು ತೆರೆದದ್ದು ಪ್ರಭಾತ್ ಚಿತ್ರಮಂದಿರ ಸಾಧಿಸಿದ ಮೊದಲ ದಾಖಲೆಗಳು. ವಿಶ್ವದಾದ್ಯಂತ ಪ್ರದರ್ಶಿಸಲ್ಪಟ್ಟ 3D ಚಿತ್ರ 'ಹೌಸ್ ಆಫ್ ವ್ಯಾಕ್ಸ್' ಇಂಗ್ಲಿಷ್ ಚಿತ್ರವನ್ನು ಪ್ರದರ್ಶಿಸಿದ ಹೆಮ್ಮೆ ಗಳಿಸಿತ್ತು. ಪ್ರಭಾತ್ ಫಿಲಂ ಕಂಪನಿಯ ಚಿತ್ರಗಳನ್ನಲ್ಲದೆ ಪ್ರಖ್ಯಾತ ನ್ಯೂ ಥಿಯೇಟರ್ಸ್, ಬಾಂಬೆ ಟಾಕೀಸ್, ರಾಜಕಮಲ್, ಆರ್.ಕೆ.ಫಿಲಂಸ್‌ನ ಮಹತ್ವದ ಚಿತ್ರಗಳನ್ನು ಪ್ರದರ್ಶಿಸಿ ಹೆಸರು ಮಾಡಿತು. ಉತ್ತಮ ವ್ಯವಸ್ಥೆ, ನಿರ್ಮಲ ವಾತಾವರಣದೊಂದಿಗೆ ಬಹುಶ್ರೇಷ್ಠ ಚಿತ್ರಗಳನ್ನು ನೋಡುವ ಅವಕಾಶ ಲಭಿಸಿದ್ದರಿಂದ ಪ್ರಭಾತ್ ಜನಮನದಲ್ಲಿ ಬೆರೆತು ಬೆಳೆಯಿತು. ಜನರಿಗೆ ಪ್ರಭಾತ್‌ನಲ್ಲಿ ಚಿತ್ರವನ್ನು ನೋಡುವುದು, ಅನಂತರ ಅದನ್ನು ಇತರರೊಂದಿಗೆ ಹೇಳಿಕೊಳ್ಳುವುದು ಒಂದು ರೀತಿಯ ಪ್ರತಿಷ್ಠೆಯಾಗಿತ್ತು. ಪ್ರತಿ ಪ್ರದರ್ಶನ ಆರಂಭಗೊಳ್ಳುವ ಮುನ್ನ ಚಿತ್ರಮಂದಿರದ ನಿರ್ವಹಣಾಧಿಕಾರಿಯಾಗಿದ್ದ ಅಪ್ಪಚ್ಚು 'ಅಂಗಣ'ದೊಳಕ್ಕೆ ಬಂದು ಕುಳಿತಿರುತ್ತಿದ್ದ ಪ್ರೇಕ್ಷಕರಿಗೆ ಶುಭ ಕೋರಿ ಹೋಗುತ್ತಿದ್ದ ಸೌಜನ್ಯದ ನಡವಳಿಕೆಯನ್ನು ಈ ದಿನಗಳಲ್ಲಿ ಕಲ್ಪಿಸಿಕೊಳ್ಳುವುದೂ ಸಾಧ್ಯವಿಲ್ಲ. ಅದೇ ಅಪ್ಪಚ್ಚು ಪ್ರೇಕ್ಷಕರಾರಾದರೂ ಮುಂದಿನ ಸೀಟಿನ ಮೇಲೆ ಕಾಲಿಟ್ಟಿದ್ದನ್ನು ಕಂಡರೆ ತಕ್ಷಣ ಅವರ ಮಂಡಿಗೆ ತಮ್ಮ ಕೋಲಿನಿಂದ ಹೊಡೆಯುತ್ತಿದ್ದ ಪ್ರಸಂಗಗಳೂ ಇದ್ದವು.

ಆಗಿನ ರಾಷ್ಟ್ರಪತಿ ಡಾ|ರಾಜೇಂದ್ರಪ್ರಸಾದ್ ಅವರು ಫೇಮಸ್ ಪಿಕ್ಚರ್ಸ್‌ನವರು ನಿರ್ಮಿಸಿದ್ದ 'ಗಾಂಧಿ' ಸಾಕ್ಷ್ಯಚಿತ್ರವನ್ನು ಪ್ರಭಾತ್‌ನಲ್ಲಿ ಜವಹರಲಾಲ್ ನೆಹರು, ಸಿ.ರಾಜಗೋಪಾಲಾಚಾರಿ ಮುಂತಾದ ಗಣ್ಯರೊಂದಿಗೆ ವೀಕ್ಷಿಸಿ ಚಿತ್ರಮಂದಿರದ ಸುವ್ಯವಸ್ಥೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದರು. ಸಾರ್ವಜನಿಕರಿಗಾಗಿ ನಿರ್ಮಿತವಾದ ಚಿತ್ರಮಂದಿರದಲ್ಲಿ ರಾಷ್ಟ್ರಪತಿಗಳು ಚಿತ್ರವನ್ನು ವೀಕ್ಷಿಸಿದ್ದು ಅದೇ ಮೊದಲ ಬಾರಿ ಎಂಬುದು ದಾಖಲೆಯ ಸಂಗತಿಯಾಗಿದೆ. ಇಂಥ ಚಿತ್ರಮಂದಿರದಲ್ಲಿ ಪ್ರದರ್ಶನ ಭಾಗ್ಯ ಪಡೆದ ಮೊದಲ ಕನ್ನಡ ಚಿತ್ರ ರಾಜಕುಮಾರ್, ಸಾಹುಕಾರ್ ಜಾನಕಿ ಅಭಿನಯಿಸಿದ 'ಗೌರಿ'(೧೯೬೩). ಈ ಚಿತ್ರದ ಬಿಡುಗಡೆಯಂದು ಚಿತ್ರರಸಿಕರು ಅತೀವ ಆನಂದಪಟ್ಟು, ಚಿತ್ರಮಂದಿರಕ್ಕೆ ವಿಶೇಷ ಅಲಂಕಾರ ಮಾಡಿ, ಕುಂಬಳಕಾಯಿಗಳಿಂದ ನಿವಾಳಿಸಿ ದೃಷ್ಟಿ ತೆಗೆದಿದ್ದರು. ಹೀಗೆ ಪ್ರೇಕ್ಷಕರ ಭಾವನೆಗಳೊಂದಿಗೆ ಬೆರೆತು ಹೋಗಿದ್ದ ಪ್ರಭಾತ್ ಇನ್ನಿಲ್ಲವಾಗುತ್ತದೆಂದಾಗ ಚಿತ್ರರಸಿಕರು ತಮ್ಮ ಮನೆಯನ್ನೇ ಕಳೆದುಕೊಂಡವರಂತೆ ಮರುಗಿದರು. ೧೯೮೫ರ ಮಾರ್ಚ್‌ನಲ್ಲಿ ಅಂತ್ಯಗೊಂಡ ಪ್ರಭಾತ್‌ನ ಆಯಸ್ಸು ೪೫ ವರ್ಷಗಳಾಗಿತ್ತು.

ಅಲಂಕಾರ್ ಆರಂಭವಾದದ್ದು ೧೯೫೭ರ ಜೂನ್ ೧೯ ರಂದು. 'ಛೋಟಿ ಬಹು' ಆರಂಭದ ಚಿತ್ರವಾಗಿ ಪ್ರದರ್ಶನವಾಗಿತ್ತು. ೧೯೮೪ರ ಡಿಸೆಂಬರ್‌ನಲ್ಲಿ ಅಂತ್ಯಗೊಂಡಾಗ ಇದರ ಆಯುಸ್ಸು ಕೇವಲ ೨೭ ವರ್ಷ. "ಇಂತಹ ಚಿತ್ರಮಂದಿರವನ್ನು ಕೆಡವಲು ಎಂತಹ ಕಠಿಣ ಹೃದಯದವರಿಗೂ ಸಾಧ್ಯವಾಗಬಾರದಿತ್ತು..". ಎಂದು ಜನ ಮಾತನಾಡಿಕೊಂಡರು, ಪತ್ರಗಳನ್ನು ಬರೆದು ಪತ್ರಿಕೆಗಳ ಮೂಲಕ ವಿನಂತಿಸಿಕೊಂಡರು. ಆದರೆ ಜನತೆಯಿಂದ ಇಷ್ಟೊಂದು ಒಲವು ಪಡೆದಿದ್ದ ಚಿತ್ರಮಂದಿರಗಳನ್ನು ಉಳಿಸಿಕೊಳ್ಳುವುದು ಯಾರಿಂದಲೂ ಸಾಧ್ಯವಾಗಲಿಲ್ಲ. ವ್ಯಾಪಾರದ ಪರಿಮಿತಗಳಲ್ಲಿ ಬೇರೆಯವರಿಗೆ ಹಸ್ತಾಂತರವಾದ ಈ ಚಿತ್ರಮಂದಿರಗಳ ಮಾಲೀಕತ್ವ ಅವುಗಳ ಅವಸಾನಕ್ಕೆ ಕಾರಣವಾಯಿತು. ಅಲಂಕಾರ್ ಕೆಡವಲು ಆರಂಭಿಸಿದಾಗ ರಾಜಕುಮಾರ್ ಅಭಿಮಾನಿಗಳು ಉಗ್ರವಾದ ಧರಣೆ, ಪ್ರತಿಭಟನೆ ನಡೆಸಿದರು. ಇದು ಸಾರ್ವಜನಿಕರ ಗಮನವನ್ನು ಸಾಕಷ್ಟು ಸೆಳೆದಿತ್ತು. ಈ ಸಂದರ್ಭದಲ್ಲಿ ಕಾಂಪ್ಲೆಕ್ಸ್‌ನಲ್ಲಿ ಒಂದು ಚಿತ್ರಮಂದಿರವೂ ಇರುತ್ತದೆಂದು ಆಶ್ವಾಸನೆ ನೀಡಲಾಯಿತು. ಆದರೆ ಬಹಳ ಜಾಣತನದಿಂದ ಪ್ರತಿಭಟನೆಯನ್ನು ಹತ್ತಿಕ್ಕಲಾಯಿತು. ಈ ಸಂಬಂಧವಾಗಿ ಅನೇಕ ಗುಸುಗುಸುಗಳೂ ಎದ್ದವು. ಸಂಘದಿಂದ ಸಿಡಿದು ಹೋದವರ ಹೇಳಿಕೆ, ಪ್ರತಿಹೇಳಿಕೆಗಳು ಬಂದವು. ಒಟ್ಟಾರೆ ಚಿತ್ರಮಂದಿರ ಕುಸಿದಿತ್ತು. ಅಲಂಕಾರ್ ಚಿತ್ರಮಂದಿರವನ್ನು ಕೆಡವಿದ ನಂತರ ಆ ಸ್ಥಳದಲ್ಲಿಒಂದು ಮಿನಿ ಡಿಸ್ನಿಲ್ಯಾಂಡ್ ನಿರ್ಮಾಣವಾಗುವುದೆಂಬ ಭ್ರಮೆಯನ್ನು ಹುಟ್ಟಿಸಲಾಯಿತು. ಆದರೆ ಕೊನೆಗೂ ಆ ಜಾಗದಲ್ಲಿ ತಲೆಯೆತ್ತಿದ್ದು ಒಂದು ಷಾಪಿಂಗ್ ಕಾಂಪ್ಲೆಕ್ಸ್ ಮಾತ್ರ.

ಅಲಂಕಾರ್ ಕೆಡವಿದಾಗ ಎದ್ದಿದ್ದ ಗದ್ದಲದ ಅರಿವು ಪ್ರಭಾತ್ ಮತ್ತು ಗೀತಾ ಚಿತ್ರಮಂದಿರಗಳ ಮಾಲೀಕರಿಗೆ ಚೆನ್ನಾಗಿ ಇತ್ತಾದ್ದರಿಂದ ರಹಸ್ಯವಾದ ಕಾರ್ಯತಂತ್ರಗಳನ್ನು ಅನುಸರಿಸಿದರು. ಚಿತ್ರಮಂದಿರದ ಮುಂಭಾಗದಲ್ಲಿ ಅಂಟಿಸಿದ್ದ 'ಆಹುತಿ' ಚಿತ್ರದ ಬ್ಯಾನರು, ಪೋಸ್ಟರುಗಳನ್ನು ಹಾಗೆಯೇ ಉಳಿಸಿಕೊಂಡು ಹಿಂಭಾಗದಿಂದ ತಗಡು, ಬಾಗಿಲುಗಳನ್ನು ಕೀಳಲು ಆರಂಭಿಸಿದರು. ಇದರಿಂದ ವಿಷಯ ಎರಡು ಮೂರು ದಿನಗಳವರೆಗೆ ಯಾರಿಗೂ ಗೊತ್ತಾಗಲೇ ಇಲ್ಲ. ಚಿತ್ರಮಂದಿರವನ್ನು ಗುತ್ತಿಗೆಗೆ ಪಡೆದಿದ್ದ ವಿತರಕ ಕೆ.ವಿ.ಗುಪ್ತ ಅವರು ಹರಸಾಹಸ ಮಾಡಿದರೂ ಈ ಕೃತ್ಯವನ್ನು ನಿಲ್ಲಿಸಲಾಗದೆ ಅಸಹಾಯಕರಾಗಬೇಕಾಯಿತು. ಅಷ್ಟೊಂದು ರಹಸ್ಯವಾಗಿ ಕೆಲಸ ನಡೆಯಿತು.ಇದೆಲ್ಲಕ್ಕಿಂತ ವಿಚಿತ್ರವೆಂದರೆ ಪ್ರಭಾತ್ ಚಿತ್ರಮಂದಿರ ಕೆಡವಲು ಆರಂಭಿಸಿದಾಗ ಸುಮ್ಮನಿದ್ದ ಅಲ್ಲಿಯ ಕೆಲಸಗಾರರು ನಾಲ್ಕು ದಿನಗಳ ನಂತರ ಭಾರತೀಯ ಮಜ್ದೂರ್ ಸಂಘದ ಹೆಸರಿನಲ್ಲಿ ಧರಣೆ ಆರಂಭಿಸಿದರು.

ಗೀತಾ ಚಿತ್ರಮಂದಿರದ್ದು ಇದಕ್ಕಿಂತ ಭಿನ್ನವಾದ ಕಥೆ. ಶುಕ್ರವಾರ 'ಶ್ರೀಕೃಷ್ಣಾವತಾರಂ' ಚಿತ್ರದ ಪ್ರದರ್ಶನ ಆರಂಭಿಸಲಾಯಿತು. ಆ ದಿನದ ಮೂರು ಪ್ರದರ್ಶನಗಳಾದ ಮೇಲೆ ಕೆಲಸಗಾರರೆಲ್ಲರೂ ಮನೆಗಳಿಗೆ ಹೋದ ನಂತರ ಬಾಗಿಲುಗಳನ್ನು ಕೀಳಲು ಆರಂಭಿಸಿದರು. ಬೆಳಗಾಗುವುದರೊಳಗೆ ಗೀತಾ ಇತಿಹಾಸದಲ್ಲಿ ಸೇರಿ ಹೋಯಿತು. ಸೆಲೆಕ್ಟ್ ಹೆಸರಿನಲ್ಲಿ ಆರಂಭವಾದ ಬೆಂಗಳೂರಿನ ಈ ಗೀತಾ ಚಿತ್ರಮಂದಿರದಲ್ಲಿಯೇ ಭಾರತದ ಪ್ರಪ್ರಥಮ ಮಾತನಾಡುವ ಚಿತ್ರ 'ಆಲಂ ಆರಾ'ವನ್ನು ೧೯೩೧ ರಲ್ಲಿ ಪ್ರದರ್ಶಿಸಲಾಗಿತ್ತು. ಒಂದು ಕಾಲಕ್ಕೆ ಕನ್ನಡ ಚಿತ್ರಗಳನ್ನು ಮಾತ್ರ ಪ್ರದರ್ಶಿಸುತ್ತಿದ್ದ ಈ ಚಿತ್ರಮಂದಿರ ದಿನ ಕಳೆದಂತೆ ತೆಲುಗು ಚಿತ್ರಗಳನ್ನು ಮಾತ್ರ ಪ್ರದರ್ಶಿಸಲಾರಂಭಿಸಿತು. ಇದೇ ಚಿತ್ರಮಂದಿರದಲ್ಲಿ ಬಿಡುಗಡೆಯಾದ ಕೊನೆಯ ಕನ್ನಡ ಚಿತ್ರ 'ಮಾಡಿ ಮಡಿದವರು'. ಕೊನೆಗೆ ೫೪ ವರ್ಷಗಳ ಅರ್ಧ ಆಯುಷ್ಯವನ್ನು ಮುಗಿಸಿಕೊಂಡು ಮಾರುಕಟ್ಟೆ ಸಂಕೀರ್ಣವಾಗಿ ಎದ್ದು ನಿಂತಿತು. ಇದನ್ನು ಕೆಡವಿದಾಗಲೂ ಎಂದಿನಂತೆಯೇ ಚಿತ್ರಮಂದಿರದ ನೌಕರರು ಪ್ರತಿಭಟನೆ ನಡೆಸಿದರು.

ಪ್ರಭಾತ್ ಮತ್ತು ಗೀತಾ ಚಿತ್ರಮಂದಿರಗಳು ನೆಲಸಮವಾದ ನಂತರ ೧೯೮೬ರ ಮೇ ೧೯ ರಿಂದ ಸ್ವಸ್ತಿಕ್‌ನಲ್ಲಿ ಪ್ರದರ್ಶನ ನಿಲ್ಲಿಸಲಾಯಿತು. ಈ ಚಿತ್ರಮಂದಿರವನ್ನು ನೆಲಸಮ ಮಾಡುವುದರ ವಿರುದ್ಧ ಚಲನಚಿತ್ರ ವಾಣಿಜ್ಯ ಮಂಡಳಿ ಮುಖ್ಯಮಂತ್ರಿಗಳಿಗೆ ಸುದೀರ್ಘ ಪತ್ರವೊಂದನ್ನು ಬರೆದು ಪರ್ಯಾಯ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಿತು. ಆದರೆ ಇದರಿಂದ ಯಾವುದೇ ಪ್ರಯೋಜನ ಆಗಲಿಲ್ಲ. ಇದರ ನಂತರ ಅವಸಾನದ ಸರದಿ ಬಂದಿದ್ದು ಪ್ರತಿಷ್ಠಿತ ಮಿನರ್ವ ಚಿತ್ರಮಂದಿರಕ್ಕೆ. ೧೯೮೬ರ ನವೆಂಬರ್ ೨೧ ರಂದು ಈ ಚಿತ್ರಮಂದಿರದ ಬಾಗಿಲುಗಳು ಕೂಡ ಶಾಶ್ವತವಾಗಿ ಮುಚ್ಚಿದವು. ಸಾಮಾನ್ಯವಾಗಿ ತೆಲುಗು ಚಿತ್ರಗಳ ಪ್ರದರ್ಶನಕ್ಕೆ ಹೆಸರಾಗಿದ್ದ ಈ ಚಿತ್ರಮಂದಿರದಲ್ಲಿ 'ಅರುಣರಾಗ' ಕಟ್ಟ ಕಡೆಯ ಚಿತ್ರವಾಗಿ ಪ್ರದರ್ಶನ ಕಂಡಿತು. ಹೀಗೆ ಒಂದೇ ವರ್ಷದಲ್ಲಿ ಬೆಂಗಳೂರಿನ ಬಹುಮುಖ್ಯವಾದ ಐದು ಚಿತ್ರಮಂದಿರಗಳು ಉರುಳಿಬಿದ್ದು ಆ ಸ್ಥಳಗಳಲ್ಲಿ ಬೃಹತ್ ಮಾರುಕಟ್ಟೆ ಸಂಕೀರ್ಣಗಳು ತಲೆಯೆತ್ತಿದವು. (ನೋಡಿ ಚಿತ್ರಮಂದಿರ)

ಚಿತ್ರಗಳ ಸಂಖ್ಯೆ, ಹಣ ಗಳಿಕೆ ಮತ್ತು ಚಿತ್ರಮಂದಿರ - ಎಲ್ಲವೂ ಇಳಿಕೆಯಾಗುತ್ತಿದ್ದಂತ ೧೯೮೫-೮೬ ರಲ್ಲಿ ಸಂಭವಿಸಿದ ಸಾವುಗಳು ಕೂಡ ಕಹಿ ನೆನಪುಗಳಾಗಿ ಉಳಿದುಕೊಂಡವು. ೧೯೮೫ರ ಮಾರ್ಚ್ ತಿಂಗಳ ಮೂರನೆಯ ವಾರ ಕೇವಲ ೪೮ ಗಂಟೆಗಳ ಕಡಿಮೆ ಅಂತರದಲ್ಲಿ ಮೂವರು ಹಿರಿಯರು ನಿಧನರಾದರು. ಸಾಹಿತಿ, ಸಹನಿರ್ದೇಶಕ ಕುಂದಾನಿ ಸತ್ಯನ್, 'ವಾಣಿ' ಚಿತ್ರದ ಮೂಲಕ ೧೯೪೩ ರಲ್ಲಿಯೇ ಬೆಳ್ಳಿ ತೆರೆಗೆ ಕಾಲಿಟ್ಟಿದ್ದ ಮುಸುರಿ ಕೃಷ್ಣಮೂರ್ತಿ ಹಾಗೂ ಇವರ ಅತ್ಯಂತ ಆಪ್ತ ಸ್ನೇಹಿತರಾಗಿದ್ದ ಶರಪಂಜರ ಅಯ್ಯಂಗಾರ್ ಇವರೇ ಆ ಮೂವರು. ಇವರೆಲ್ಲರೂ ೫೦ರ ವಯಸ್ಸಿನ ಆಸುಪಾಸಿನಲ್ಲಿದ್ದರು. ಇವರ ಸಾವಿನ ಹಿಂದು ಮುಂದಿನ ದಿನಗಳಲ್ಲಿ ಢಿಕ್ಕಿ ಮಾಧವರಾವ್, ಅರುಣ್‌ಕುಮಾರ್ (ಗುರುರಾಜುಲು ನಾಯ್ಡು), ಯತಿರಾಜ್ ಕೂಡ ಕಣ್ಮುಚ್ಚಿದ್ದರು. ೧೯೮೬ರ ಮಾರ್ಚ್ ೨೬ ರಂದು ಕನ್ನಡ ವೃತ್ತಿರಂಗಭೂಮಿಯ ಸಮರ್ಥ ನಟರಲ್ಲೊಬ್ಬರಲ್ಲಾದ ತಮಾಷ್ ಮಾಧವರಾವ್ ಎಂದೇ ಹೆಸರಾಗಿದ್ದ ಎಂ.ಎಸ್.ಮಾಧವರಾವ್ ಮೈಸೂರಿನಲ್ಲಿ ನಿಧನರಾದರು. ತಮ್ಮ ೭೮ನೇ ವಯಸ್ಸಿನಲ್ಲಿ ನಿಧನರಾದ ಇವರು 'ಸಂಸಾರನೌಕ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದರಲ್ಲದೆ ಕೆಲಕಾಲ 'ತಮಾಷ್' ಹೆಸರಿನ ಪತ್ರಿಕೆಯನ್ನು ಕೂಡ ನಡೆಸಿದ್ದರು.

೧೯೮೫ರ ಡಿಸೆಂಬರ್ ಕೊನೆಯ ವಾರ ಉದಯಕುಮಾರ್ ತೀರಿಕೊಂಡಿದ್ದು, ಮೇಲಿನ ಎಲ್ಲರ ಸಾವುಗಳಿಗೆ ಅದರಲ್ಲೂ ವಿಶೇಷವಾಗಿ ಜೂನ್‌ನಲ್ಲಿ ದಿಢೀರ್ ಕಣ್ಮರೆಯಾದ ಪುಟ್ಟಣ್ಣ ಕಣಗಾಲ್‌ರಿಗೆ ಭಾಷ್ಯ ಬರೆದಂತಿತ್ತು. ಪುಟ್ಟಣ್ಣನವರ ನಿಧನ ಅವರ ಚಿತ್ರಗಳಂತೆ ಸಿನಿಮೀಯವಾಗಿತ್ತು; ಅತ್ಯಂತ ಭಾವುಕವಾಗಿತ್ತು. ಹಲವಾರು ಅನಾಹುತ, ವಿವಾದಗಳನ್ನು ಉಂಟುಮಾಡಿದ ಈ ಮಹಾನ್ ನಿರ್ದೇಶಕನ ಸಾವು ಈ ವರ್ಷದ ಜೂನ್ ೫ ರಂದು ಸಂಭವಿಸಿದ್ದು ಹೀಗೆ :

ಹಿಂದಿನ ಭಾನುವಾರ ಚೌಡಯ್ಯ ಸ್ಮಾರಕ ಭವನದಲ್ಲಿ ನಡೆದ ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘದ ಕಾರ್ಯಕ್ರಮದನ್ನು ಪುಟ್ಟಣ್ಣ ಅತ್ಯಂತ ವಿಶೇಷವಾಗಿ, ರಂಜನೀಯವಾಗಿ ರೂಪಿಸಿದ್ದರು. ಕಾರ್ಯಕ್ರಮದ ಆರಂಭದಲ್ಲಿ ವೇದಿಕೆಯಲ್ಲಿ ಕಾಣಿಸಿಕೊಂಡು ನೆರೆದಿದ್ದವರಿಗೆಲ್ಲ ಸ್ವಾಗತ ಕೋರಿದರು. ಅವರು ನೇಪಥ್ಯಕ್ಕೆ ಸರಿಯುತ್ತಿದ್ದಂತೆ ಸಭಾಂಗಣದ ದೀಪಗಳೆಲ್ಲ ಆರಿ ತೆರೆಯ ಮೇಲೆ ಶಂಕರನಾಗ್‌ರ 'ಆ್ಯಕ್ಸಿಡೆಂಟ್' ಚಿತ್ರದ ದೃಶ್ಯ ಆರಂಭವಾಯಿತು. ಕತ್ತಲಿನಲ್ಲಿ ಸುಮ್ಮನೆ ನಿಂತಿದ್ದ ಪುಟ್ಟಣ್ಣನವರ ಎದೆಯಲ್ಲಿ ಇದ್ದಕ್ಕಿದ್ದಂತೆ ತೀವ್ರವಾದ ನೋವು ಕಾಣಿಸಿಕೊಂಡು ಕೆಳಗೆ ಕುಸಿದರು. ಕೂಡಲೇ ಅವರನ್ನು ನರ್ಸಿಂಗ್ ಹೋಂಗೆ ಸಾಗಿಸಲಾಯಿತು. ನಿರ್ದೇಶಕರ ವೇದಿಕೆಯಿಂದ ಅವರು ಆಗಲಿದ ರೀತಿ ಸಾಂಕೇತಿಕವಾಗಿತ್ತು ಅನ್ನುವಂತೆ ಇದೇ ಅವರ ಕೊನೆಯ ಸಮಾರಂಭವಾಯಿತು. ಅತ್ತ ಆಸ್ಪತ್ರೆಯ ಹಾಸಿಗೆಯಲ್ಲಿ ನೋವಿನಿಂದ ಚಡಪಡಿಸುತ್ತಾ ಪುಟ್ಟಣ್ಣ ಮಲಗಿದ್ದರೆ, ಇತ್ತ ಅವರೇ ನಿರ್ದೇಶಿಸಿದ್ದ ಕಾರ್ಯಕ್ರಮ ಅದ್ಭುತವಾಗಿ ನಡೆಯತೊಡಗಿತು. ಶಿಕ್ಷಣ ಸಚಿವ ರಘುಪತಿ ಅಧ್ಯಕ್ಷತೆ ವಹಿಸಿದ್ದ ಕಾರ್ಯಕ್ರಮವನ್ನು ಎಂ.ಆರ್.ವಿಠಲ್ ಉದ್ಘಾಟಿಸಿದರು. ಎಸ್.ರಾಮನಾಥ್ ಮುಖ್ಯ ಅತಿಥಿಗಳಾಗಿದ್ದರು. ಪುಟ್ಟಣ್ಣನವರು ಓದಬೇಕಾಗಿದ್ದ ಭಾಷಣದ ಭಾಗವನ್ನು ರವೀ ಓದಿದರು. ಸಭೆಯಲ್ಲಿ ಯಾರಿಗೂ ಪುಟ್ಟಣ್ಣನವರ ಅನಾರೋಗ್ಯದ ವಿಷಯ ತಿಳಿಯಲೇ ಇಲ್ಲ. ಬುಧವಾರ ಬೆಳಗ್ಗೆ ಅವರು ನಿಧನರಾದ ಸುದ್ದಿ ಪ್ರಕಟವಾದಾಗ ಅದನ್ನು ನಂಬಲು ಅನೇಕರು ಸಿದ್ಧರಿರಲಿಲ್ಲ. ರಾತ್ರಿ ಅಲಂಕೃತ ಲಾರಿಯಲ್ಲಿ ಶರೀರವನ್ನು ಮೆರವಣಿಗೆಯಲ್ಲಿ ಕೊಂಡೊಯ್ದು ಬೆಂಗಳೂರಿನ ಚಾಮರಾಜಪೇಟೆ ಸ್ಮಶಾನದಲ್ಲಿ ಅಂತಿಮ ಸಂಸ್ಕಾರ ನಡೆಸಲಾಯಿತು. ಸುರಿಯುತ್ತಿದ್ದ ಭಾರಿ ಮಳೆಯನ್ನು ಲೆಕ್ಕಿಸದೆ ಅಗಲಿದ ಮಹಾ ನಿರ್ದೇಶಕನನ್ನು ನೆರೆದ ಜನತೆ ಭಾರವಾದ ಹೃದಯದಿಂದ ಬೀಳ್ಕೊಟ್ಟಿತು. ಪುಟ್ಟಣ್ಣನವರಿಗೆ ಗೌರವ ಸಲ್ಲಿಸಲು ರಾಜ್ಯ ಸರ್ಕಾರ ಬೆಂಗಳೂರಿನ ಜಯನಗರದ ನಗರಪಾಲಿಕೆ ಒಡೆತನದಲ್ಲಿರುವ ಪೂನಂ ಚಿತ್ರಮಂದಿರಕ್ಕೆ ಪುಟ್ಟಣ್ಣ ಕಣಗಾಲ್ ಚಿತ್ರಮಂದಿರವೆಂದು ಮರುನಾಮಕರಣ ಮಾಡಿತು. ನಂತರ ಅವರ ಹೆಸರಿನಲ್ಲಿಯೇ ಅತ್ಯುತ್ತಮ ನಿರ್ದೇಶಕರಿಗೆ ಮೀಸಲಾದ ಒಂದು ಲಕ್ಷ ರೂಪಾಯಿಗಳ ವಾರ್ಷಿಕ ಪ್ರಶಸ್ತಿಯನ್ನೂ ಸ್ಥಾಪಿಸಿತು. ಈ ಮಧ್ಯೆ ನಟ ರಾಮಕೃಷ್ಣನ ಪ್ರೇಮವಿವಾಹ, ಅವರ ಮಗುವಿನ ಸಂಬಂಧವಾಗಿ ಎದ್ದ ವಿವಾದವೂ ಚಿತ್ರರಂಗದಲ್ಲಿ ರೋಚಕ ಸುದ್ದಿ.

ಚಲನಚಿತ್ರಗಳಿಗಿಂತ ವಿವಾದಗಳೇ ವಿಜೃಂಭಿಸುತ್ತಿದ್ದ ಈ ದಿನಗಳಲ್ಲಿ (ಜೂನ್) ಕೈಗಾರಿಕಾ ಸಚಿವರಾಗಿದ್ದ ಜೆ.ಹೆಚ್.ಪಟೇಲ್ 'ಹತ್ತು ವರ್ಷಗಳ ಕಾಲ ಸಿನಿಮಾವನ್ನು ಬಂದ್ ಮಾಡಬೇಕು' ಎಂಬ ಸಲಹೆ ಕೊಟ್ಟರು. ತಮ್ಮ ಸಲಹೆಗೆ ಅವರು ಕೊಟ್ಟ ಕಾರಣ, 'ಜಾನಪದ ಮತ್ತು ಯಕ್ಷಗಾನ ಕಲೆಗಳು ಸಿನಿಮಾ ಪ್ರಭಾವದಿಂದ ಹಾಳಾಗುತ್ತಿವೆ' ಎನ್ನುವುದು. ಸಚಿವರ ಹೇಳಿಕೆ ಬೇಜವಾಬ್ದಾರಿಯದು ಎಂದು ನಿರ್ದೇಶಕರ ಸಂಘ ಸೇರಿದಂತೆ ಹಲವಾರು ಸಂಘ ಸಂಸ್ಥೆಗಳು ಉಗ್ರವಾಗಿ ಖಂಡಿಸಿದವು. ಈ ಸಂಬಂಧವಾಗಿ ಒಂದು ವಿಚಾರ ಸಂಕಿರಣವೂ ನಡೆಯಿತು. ಆಗ ಸ್ವಲ್ಪ ವಿಚಲಿತರಾದ ಪಟೇಲರು "ವ್ಯರ್ಥವಾಗುತ್ತಿರುವ ಮಾನವ ಶಕ್ತಿಯ ಅಮೂಲ್ಯ ಉಳಿತಾಯಕ್ಕಾಗಿ ಹಗಲಿನ ಸಿನಿಮಾ ಪ್ರದರ್ಶನವನ್ನು ನಿಲ್ಲಿಸಬೇಕು" - ಎಂದು ಇನ್ನೊಂದು ಹೇಳಿಕೆ ಕೊಟ್ಟರು. ಇವೆಲ್ಲ ಅವರಿಗೆ ಸ್ವಲ್ಪ ಪ್ರಚಾರ ತಂದುಕೊಟ್ಟಿದ್ದು ಬಿಟ್ಟರೆ ಇನ್ಯಾವ ಸಾಧನೆಯೂ ಆಗಲಿಲ್ಲ. ವಿಪರ್ಯಾಸವೆಂದರೆ ಸಚಿವರ ಹೇಳಿಕೆ-ಪ್ರತಿಹೇಳಿಕೆಗಳ ಸಮರ ನಡೆಯುತ್ತಿದ್ದಾಗಲೇ, ಅವರದೇ ಸರ್ಕಾರ ಕಳೆದ ಏಳು ವರ್ಷಗಳಿಂದ ಹಂಚಿಕೆಯಾಗದೆ ಉಳಿದಿದ್ದ ರಾಜ್ಯ ಪ್ರಶಸ್ತಿಗಳನ್ನು ವಿತರಿಸಲು ಬೃಹತ್ ಸಮಾರಂಭದ ಸಿದ್ಧತೆಗಳಲ್ಲಿ ತೊಡಗಿತ್ತು. ಈ ಸಮಾರಂಭ ಮುಂದಿನ ೨೦ ದಿನಗಳಲ್ಲೇ ಅಂದರೆ ೧೯೮೫ರ ಜೂನ್ ೮ರಂದು ಬೆಂಗಳೂರಿನ ಲಾಲ್‌ಬಾಗಿನ ಗಾಜಿನ ಮನೆಯಲ್ಲಿ ನಡೆಯಿತು. ನಾಲ್ಕೂವರೆ ಗಂಟೆಗಳಷ್ಟು ಸುದೀರ್ಘ ಕಾಲ ನಡೆದ ಸಮಾರಂಭದಲ್ಲಿ ಮೂವತ್ತೊಂಬತ್ತು ಮಂದಿ ನಿರ್ಮಾಪಕರೂ ಸೇರಿದಂತೆ ಒಟ್ಟು ೧೪೩ ಮಂದಿ ತಂತ್ರಜ್ಞರು, ಕಲಾವಿದರು ಪ್ರಶಸ್ತಿ ಸ್ವೀಕರಿಸಬೇಕಾಗಿತ್ತು. ಆದರೆ ಬಹುತೇಕ ಮಂದಿ ಹಾಜರಿರಲಿಲ್ಲ. ಆ ಸಂದರ್ಭದಲ್ಲಿನ ವಿವಾದಗಳು, ಸಚಿವರ ಬೇಜವಾಬ್ದಾರಿ ಹೇಳಿಕೆಗಳು, ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಮಲ್ಲೇಶ್ವರಂ ಗದ್ದಲಕ್ಕೆ ಸಂಬಂಧಿಸಿದಂತೆ ರಾಜಕುಮಾರ್ ಬಗ್ಗೆ ಆಡಿದ್ದ ಮಾತುಗಳು - ಒಟ್ಟು ಇವೆಲ್ಲದರಿಂದ ಉದ್ಯಮ ಕಳಾಹೀನವಾಗಿತ್ತು. ಸಮಾರಂಭವೂ ಮಂಕಾಗಿತ್ತು.

ಸರ್ಕಾರ ಚಲನಚಿತ್ರಗಳಿಗೆ ನೀಡುವ ಸಹಾಯಧನವನ್ನು ಹೆಚ್ಚಿಸಿ ಅದು ಮುಂದಿನ ವರ್ಷದಿಂದ ಜಾರಿಯಾಗುತ್ತದೆ ಎಂದು ಹೇಳಿದ್ದು ಕೂಡ ಈ ಅವಧಿಯಲ್ಲಿ ಚಿತ್ರೋದ್ಯಮಿಗಳ ಉತ್ಸಾಹವನ್ನು ಕುಗ್ಗಿಸಿತ್ತು. ಇದೇ ವೇಳೆಯಲ್ಲಿ ತನ್ನ ಪ್ರಸಾರದ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುತ್ತಿದ್ದ ದೂರದರ್ಶನ ಕೂಡ ಚಿತ್ರೋದ್ಯಮಕ್ಕೆ ದೊಡ್ಡ ಸವಾಲಾಗುವ ಭಯ ಹುಟ್ಟಿಸಿತ್ತು. ೧೯೮೪ ರಲ್ಲಿ ಕೇವಲ ೩೦-೪೦ ಕಿ.ಮೀ. ಪ್ರಸಾರ ವ್ಯಾಪ್ತಿಯನ್ನು ಮಾತ್ರ ಹೊಂದಿದ್ದ ಬೆಂಗಳೂರು ದೂರದರ್ಶನ ೧೯೮೫ರ ಮಾರ್ಚ್ ೧೦ ರಿಂದ ತನ್ನ ಶಕ್ತಿಯನ್ನು ವಿಸ್ತರಿಸಿಕೊಂಡು ೧೨೦ ಕಿ.ಮೀ.ವರೆಗೆ ತನ್ನ ಕಾರ್ಯಕ್ರಮಗಳನ್ನು ಬಿತ್ತರಿಸಲು ಶಕ್ತವಾಯಿತು. ಇದರಿಂದಾಗಿ ತುಮಕೂರು, ಮಂಡ್ಯ, ಕೋಲಾರ, ಮೈಸೂರು ಹಾಗೂ ತಮಿಳುನಾಡಿನ ಧರ್ಮಪುರಿ ಜಿಲ್ಲೆಗಳು ಬೆಂಗಳೂರು ಕೇಂದ್ರದ ತೆಕ್ಕೆಗೆ ಬಂದವು. ಇದರೊಂದಿಗೆ ಕಳೆದ ಆರೇಳು ತಿಂಗಳುಗಳಿಂದ ರಾಜ್ಯದಲ್ಲಿ ಅನೇಕ ದೂರದರ್ಶನ ಕೇಂದ್ರಗಳು ಆರಂಭಗೊಂಡಿದ್ದು, ಎಲ್ಲ ಪ್ರಮುಖ ನಗರಗಳಲ್ಲಿಯೂ ಜನರು ಸಂಜೆ ಹೊತ್ತು ಟಿ.ವಿ.ಮುಂದೆ ಕೂರುವ ಅಭ್ಯಾಸಕ್ಕೆ ಒಳಗಾದರು. ಈ ಬೆಳವಣಿಗೆ ಕೂಡ ಉದ್ಯಮದಲ್ಲಿ ಆತಂಕ ಹುಟ್ಟಿಸಿತು.

ಬೆಂಗಳೂರು ಕೇಂದ್ರ ವಾರದ ಪ್ರತಿ ಶನಿವಾರ ಸಂಜೆ ಒಂದು ಕನ್ನಡ ಚಿತ್ರವನ್ನು ಬಿತ್ತರಿಸುತ್ತಿತ್ತು. ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಪ್ರತಿ ಭಾನುವಾರ ಸಂಜೆ ಒಂದು ಹಿಂದಿ ಚಿತ್ರ ಪ್ರಸಾರವಾಗುತ್ತಿತ್ತು. ಈ ಹಿಂದಿ ಚಿತ್ರವನ್ನು ರಾಜ್ಯದ ಎಲ್ಲಾ ದೂರದರ್ಶನ ಕೇಂದ್ರಗಳೂ ಮರುಪ್ರಸಾರ ಮಾಡುತ್ತಿದ್ದವು. ಇದರ ಜೊತೆಗೆ ಆಗಿಂದಾಗ್ಗೆ ರಾಷ್ಟ್ರೀಯ ಪ್ರಸಾರದಲ್ಲಿ ಪ್ರಾದೇಶಿಕ ಭಾಷೆಯ ಅತ್ಯುತ್ತಮ ಚಿತ್ರಗಳೊಂದಿಗೆ ಚಲನಚಿತ್ರ ಗೀತೆಗಳು, ಚಲನಚಿತ್ರಗಳ ಸ್ವಾರಸ್ಯಕರ ಸನ್ನಿವೇಶಗಳು ಕ್ರಮವಾಗಿ ಪ್ರಸಾರವಾಗುತ್ತಿದ್ದವು. ಇವೆಲ್ಲ ಬಹಳ ಬೇಗ ಜನಪ್ರಿಯಗೊಂಡು ಜನರನ್ನು ಸೆಳೆದುಕೊಳ್ಳತೊಡಗಿದವು. ಇದರಿಂದಾಗಿ ಬೆಂಗಳೂರಿನ ಚಿತ್ರಮಂದಿರಗಳಲ್ಲಿ ಶನಿವಾರದ ಗಳಿಕೆ ಗಣನೀಯವಾಗಿ ಇಳಿಮುಖವಾಯಿತು. ಹಿಂದಿನ ಆರು ತಿಂಗಳಲ್ಲಿ ಬದಲಾದ ಇಂಥ ಪರಿಸ್ಥಿತಿಯಲ್ಲಿ ಬಿಡುಗಡೆಯಾದ ಯಾವ ಕನ್ನಡ ಚಿತ್ರವೂ ನಿರೀಕ್ಷಿಸಿದ ಮಟ್ಟದಲ್ಲಿ ಯಶಸ್ವಿಯಾಗಲಿಲ್ಲ. ಇತರ ಭಾಷಾ ಚಿತ್ರಗಳು ಕೂಡ ಇದೇ ಪರಿಸ್ಥಿತಿಯನ್ನು ಎದುರಿಸಿದವು.ಇಂಥ ಸ್ಥಿತಿಯಲ್ಲಿ ದೂರದರ್ಶನದ ಅಧಿಕಾರಿಗಳು ಇನ್ನೂ ಹೆಚ್ಚು ಚಿತ್ರಗಳನ್ನು ತಮ್ಮ ಕಾರ್ಯಕ್ರಮದಲ್ಲಿ ಅಳವಡಿಸಿಕೊಳ್ಳಲು ಯೋಚಿಸುತ್ತಿದ್ದಾರೆಂಬ ಸುದ್ದಿ ಬಂದು ಉದ್ಯಮಿಗಳು ಇನ್ನಷ್ಟು ಹೌಹಾರಿದರು. ಈ ಬಗ್ಗೆ ತಕ್ಷಣವೇ ರಾಜ್ಯ ಮಟ್ಟದಲ್ಲಿ ಪ್ರತಿಭಟನೆ, ಅಸಮಾಧಾನ ಕೇಳಿ ಬಂತು. ಭಾನುವಾರ ಸಂಜೆ ಪ್ರಸಾರವಾಗುತ್ತಿದ್ದ ಹಿಂದಿ ಚಿತ್ರದ ವೇಳೆ ಹಾಗೂ ಇನ್ನಿತರ ಚಿತ್ರಗಳ ವೇಳೆಯನ್ನು ಬದಲಾಯಿಸುವಂತೆ ಸರ್ಕಾರವನ್ನು ಚಿತ್ರೋದ್ಯಮಿಗಳು ಕೋರಿದರು. ಇದೇ ವೇಳೆಯಲ್ಲಿ ರಾಷ್ಟ್ರದ ಕೆಲವು ಪಟ್ಟಣಗಳಲ್ಲಿ ಹೊಸದಾಗಿದ್ದ '3D' ತಂತ್ರಜ್ಞಾನವನ್ನು ಅಳವಡಿಸಿಕೊಂಡಿದ್ದ ಚಿತ್ರಗಳು ವಿಸ್ಮಯಕರ ರೀತಿಯಲ್ಲಿ ಜನರನ್ನು ಆಕರ್ಷಿಸತೊಡಗಿದವು.

3D ತಂತ್ರಜ್ಞಾನ ಜನ್ಮತಳೆದದ್ದೇ ಒಂದು ಸಂಕಷ್ಟದ ಹಿನ್ನೆಲೆಯಲ್ಲಿ. ೧೯೫೦ರ ದಶಕದಲ್ಲಿ ದೂರದರ್ಶನ ಅಮೆರಿಕಾದಂತಹ ಮುಂದುವರಿದ ರಾಷ್ಟ್ರಗಳಲ್ಲಿ ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಿದ್ದದ್ದು ಸಿನಿಮಾರಂಗಕ್ಕೆ ಅಪಾಯಕಾರಿಯಾಗಿ ಪರಿಣಮಿಸಿತು. ಜನರು ಪುಕ್ಕಟೆಯಾಗಿ ಮನೆಯಲ್ಲಿ ಸಿಗುವ ಮನರಂಜನೆಗೆ ಮಾರು ಹೋಗಿ ಚಿತ್ರಮಂದಿರಗಳಿಗೆ ಬರುವುದನ್ನೇ ಕಡಿಮೆ ಮಾಡಿದಾಗ ಕೋಟಿಗಟ್ಟಲೆ ಬಂಡವಾಳ ಹೂಡಿ ಎದ್ದು ನಿಂತಿದ್ದ ಸಿನಿಮಾ ಉದ್ಯಮ ನಿಂತಲ್ಲೇ ಕುಸಿಯುವ ಲಕ್ಷಣಗಳು ಕಂಡುಬಂದವು. ಇದರಿಂದ ಸಿನಿಮಾ ರಂಗ ತನ್ನನ್ನು ತಾನು ಉಳಿಸಿಕೊಳ್ಳಬೇಕಾಗಿತ್ತು. ಪುಟ್ಟ ಪರದೆಯ ಟಿ.ವಿ. ಪೆಟ್ಟಿಗೆ ಕೊಡಲಾಗದ ವೈವಿಧ್ಯಮಯ ಆಕರ್ಷಣೆಯನ್ನು, ಅಗಾಧತೆಯನ್ನು ಸಿನಿಮಾ ಸೃಷ್ಟಿಸಬೇಕಿತ್ತು. ಈ ಬದುಕಿನ ಹೋರಾಟದ ಪರಿಣಾಮವಾಗಿ ಹುಟ್ಟಿಕೊಂಡಿದ್ದು ೭೦ ಎಂ.ಎಂ. ಹಾಗೂ ಸಿನಿಮಾಸ್ಕೋಪ್‌ನಂತಹ ಅಗಲ ಪರದೆಯ ಪ್ರದರ್ಶನಗಳು, ಮೂರು ಪರದೆಗಳ ಸಿನೆರಮಾ ಇತ್ಯಾದಿಗಳು. ಮೂರು ಆಯಾಮಗಳ ಭ್ರಮೆ ಹುಟ್ಟಿಸುವ ಪ್ರಯತ್ನದ ಅಂತಿಮ ಹಾಗೂ ಯಶಸ್ವಿ ಪ್ರಯೋಗವಾಗಿ ಹೊರಹೊಮ್ಮಿದ್ದು ಈ ತ್ರೀ ಡೈಮೆನ್ಷನ್ ಅಥವಾ 3D ಸಿನಿಮಾ.

ನಾವು ವಸ್ತುಗಳನ್ನು ಎರಡು ಕಣ್ಣುಗಳಿಂದ ನೋಡುತ್ತೇವೆ. ಅವುಗಳ ನಡುವೆ ಸುಮಾರು ಮೂರು ಅಂಗುಲಗಳ ಅಂತರವಿರುತ್ತದೆ. ಹೀಗಾಗಿ ಒಂದು ನಿರ್ದಿಷ್ಟ ದೂರದಲ್ಲಿರುವ ವಸ್ತು ಒಂದು ಕಣ್ಣಲ್ಲಿ ಉಂಟುಮಾಡುವ ಬಿಂಬಕ್ಕೂ ಅದೇ ವಸ್ತು ಇನ್ನೊಂದು ಕಣ್ಣಲ್ಲಿ ಉಂಟುಮಾಡುವ ಬಿಂಬಕ್ಕೂ ಸೂಕ್ಷ್ಮವಾದ ವ್ಯತ್ಯಾಸ ಇರುತ್ತದೆ. ಮಿದುಳಿನ ದೃಶ್ಯಗ್ರಹಣ ಕೇಂದ್ರದಲ್ಲಿ ಸೂಕ್ಷ್ಮ ವ್ಯತ್ಯಾಸವುಳ್ಳ ಒಂದೇ ವಸ್ತುವಿನ ಎರಡು ಬಿಂಬಗಳ ಸಂಶ್ಲೇಷಣೆಯಿಂದಾಗಿ ವಸ್ತುವು ಘನವಾಗಿ, ಅಂದರೆ ಮೂರು ಆಯಾಮ ಉಳ್ಳದ್ದಾಗಿ ಅನುಭವಕ್ಕೆ ಬರುತ್ತದೆ. ಇದೇ ತತ್ವವನ್ನು ಅನುಸರಿಸಿ 3D ಚಿತ್ರಗಳನ್ನು ತಯಾರಿಸಲಾಯಿತು. ಇದರ ಚಿತ್ರೀಕರಣಕ್ಕೆ ಬಳಸುವ ಕ್ಯಾಮರಾಕ್ಕೆ ಎರಡು ಮಸೂರ (ಲೆನ್ಸ್)ಗಳಿರುತ್ತವೆ. ಇವುಗಳ ಮಧ್ಯದ ಅಂತರ ಸಾಮಾನ್ಯ ಮನುಷ್ಯನ ಎರಡು ಕಣ್ಣುಗಳ ನಡುವಿನ ಅಂತರಕ್ಕೆ ಸಮವಾಗಿರುತ್ತದೆ. ಹೀಗಾಗಿ ಅವು ಕಣ್ಣುಗಳ ರೀತಿಯಲ್ಲಿ

ವರ್ತಿಸಿ ಫಿಲ್ಮಿನ ಮೇಲೆ ಬಿಂಬವನ್ನು ಮೂಡಿಸುತ್ತವೆ. ಇಂತಹ ಚಿತ್ರವನ್ನು ಪರದೆಯ ಮೇಲೆ ಬಿಟ್ಟಾಗ ಸ್ವಲ್ಪ ವ್ಯತ್ಯಾಸವುಳ್ಳ ಎರಡೂ ಬಿಂಬಗಳು ಪರದೆಯ ಮೇಲೆ ಮೂಡುತ್ತವೆ. ಇವನ್ನು ಮತ್ತೆ ಪ್ರತ್ಯೇಕಿಸಿ ನೋಡಲು ಸಾಧ್ಯವಾದಾಗ ಅವರ ನೈಜತೆ ಅನುಭವಕ್ಕೆ ಬರುತ್ತದೆ. ಇದಕ್ಕಾಗಿ ಪ್ರೇಕ್ಷಕರು ಒಂದು ಭಿನ್ನ ರೀತಿಯ ಕನ್ನಡಕವನ್ನು ಬಳಸಬೇಕಾಗುತ್ತದೆ. ಎರಡು ಕಣ್ಣಿಗೆ ಎರಡು ವಿಭಿನ್ನ ಬಣ್ಣದ ಫಿಲ್ಟರುಗಳನ್ನು ಬಳಸಿರುವ ಈ ಕನ್ನಡಕದಿಂದಾಗಿ ಚಿತ್ರೀಕರಣದ ಸಮಯದಲ್ಲಿ ಎರಡು ಬೇರೆ ಬೇರೆ ಮಸೂರಗಳು ನೋಡಿದ ರೀತಿಯಲ್ಲಿ, ಒಂದು ಕಣ್ಣಿನಲ್ಲಿ ಒಂದು ಮಸೂರ ಮೂಡಿಸಿದ ಚಿತ್ರ, ಇನ್ನೊಂದು ಕಣ್ಣಿನಲ್ಲಿ ಇನ್ನೊಂದು ಮಸೂರ ಮೂಡಿಸಿದ ಚಿತ್ರ ಕಾಣಿಸುತ್ತದೆ. ನಮ್ಮ ಮಿದುಳಿನ ಸಹಜ ಶಕ್ತಿಯಿಂದಾಗಿ ಈ ಎರಡು ಬಿಂಬಗಳ ಸಂಶ್ಲೇಷಣೆ ನಡೆಯುವುದರಿಂದ ಪರದೆ ಮೇಲಿನ ದೃಶ್ಯ ನೈಜ ಪ್ರಪಂಚವಂತೆಯೇ ಕಾಣುತ್ತದೆ. (ನೋಡಿ 'ತಂತ್ರಜ್ಞಾನ' ಲೇಖನ)


(ಚಿತ್ರ ೯೫) 'ಕಾಡಿನಲ್ಲಿ ಜಾತ್ರೆ' ಚಿತ್ರದಲ್ಲಿ ಸುದರ್ಶನ್

3D ಚಿತ್ರೀಕರಣ ಕ್ಲಿಷ್ಟ ಹಾಗೂ ದುಬಾರಿ. ಪ್ರದರ್ಶನದಷ್ಟೇ ವಿಶಿಷ್ಟ ರೀತಿಯ ವ್ಯವಸ್ಥೆ ಆಗತ್ಯ. ಹೀಗಾಗಿ ಇದು ಒಂದು ತಾಂತ್ರಿಕ ಸಾಧನೆಯಾಗಿಯಷ್ಟೇ ಉಳಿಯಿತು. ಭಾರತದ ಮೊದಲ ಸಿನಿಮಾಸ್ಕೋಪ್ ಚಿತ್ರವನ್ನು ತಯಾರಿಸಿದ ಕೇರಳದ ಅಪ್ಪಚ್ಚನ್ ಎಂಬುವವರೇ ಭಾರತದ ಮೊದಲ 3D ಚಿತ್ರ ' ಮೈ ಡಿಯರ್ ಕುಟ್ಟಿಚಾತನ್' ತಯಾರಿಸಿದರು. ಭಾರತದಲ್ಲಿ ಮೊದಲಿಗರಾಗಬೇಕೆಂಬ ಹಂಬಲದಿಂದ ೪೫ ದಿನಗಳಲ್ಲಿ ೯೦ ನಿಮಿಷ ಅವಧಿಯ ಈ ಚಿತ್ರವನ್ನು ಪೂರ್ಣಗೊಳಿಸಿದರು. ಇದಕ್ಕೆ ಹಾಲಿವುಡ್‌ನ 3D ನಿರ್ಮಾತೃಗಳಾದ ಡೇವಿಡ್ ಸ್ಮೆಯರ್ ಮತ್ತು ಥಾಮಸ್ ಎಸ್ನೊ ಎಂಬುವರ ನೆರವು ಪಡೆದುಕೊಂಡರು. ವಿಚಿತ್ರವೆಂದರೆ ಸಾಧಾರಣ ಚಿತ್ರಕ್ಕೆ ತಗಲುವ ವೆಚ್ಚದ ಸುಮಾರು ಐದು ಪಟ್ಟು ಹಣ ಈ 3D ಚಿತ್ರ ನಿರ್ಮಾಣಕ್ಕೆ ಬೇಕಾಗುತ್ತದೆ.

'ಮೈ ಡಿಯರ್ ಕುಟ್ಟಿಚಾತನ್' ಚಿತ್ರವು ಭಾರತದಲ್ಲಿ 3D ಚಿತ್ರಗಳ ಪರಂಪರೆಯನ್ನು ಆರಂಭಿಸಿದ ಮೊದಲ ಚಿತ್ರ. ಇದು ತೆಲುಗು, ತಮಿಳು ಮತ್ತು ಹಿಂದಿ ಭಾಷೆಗಳಿಗೆ ಡಬ್ ಆಗಿ ಎಲ್ಲ ಕಡೆಯೂ ಸಾಕಷ್ಟು ಯಶಸ್ವಿಯಾಯಿತು. ಇದರ ಯಶಸ್ಸನ್ನು ಗಮನಿಸಿ ಒಂದು ನಿರೀಕ್ಷೆ ಬೆಳೆಯಿತು. ದೂರದರ್ಶನದ ಸವಾಲನ್ನು ಎದುರಿಸಲು ಈ 3D ಅಸ್ತ್ರವೇ ಸರಿ ಎಂದು ಭಾವಿಸಲಾಯಿತು. ದೇಶದ ಎಲ್ಲಾ ಭಾಷೆಗಳಲ್ಲೂ 3D ತಂತ್ರಜ್ಞಾನದ ಚಿತ್ರಗಳ ತಯಾರಿಕೆಯ ಸಿದ್ಧತೆಗಳು ನಡೆಯತೊಡಗಿದವು. 'ದೇವರ್ ಫಿಲಂಸ್' ಲಾಂಛನದಲ್ಲಿ ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ಏಕ ಕಾಲಕ್ಕೆ ಒಂದು ಚಿತ್ರದ ತಯಾರಿಕೆ ಆರಂಭವಾಯಿತು. ರೇವತಿ ಫಿಲಂಸ್ ಲಾಂಛನದಲ್ಲಿ 'ಸೂಪರ್ ಬಾಯ್' ಎಂಬ 3D ಚಿತ್ರದ ಚಿತ್ರೀಕರಣ ಶುರುವಾಯಿತು.

'ಕಾಡಿನಲ್ಲಿ ಜಾತ್ರೆ' ಕನ್ನಡ, ಮಲಯಾಳಂ ಮತ್ತು ತಮಿಳು ಭಾಷೆಗಳಲ್ಲಿ ಏಕ ಕಾಲಕ್ಕೆ ತಯಾರಾದ ಪ್ರಪ್ರಥಮ ಕನ್ನಡ 3D ಚಿತ್ರ. ಇದರ ಚಿತ್ರೀಕರಣ ತಿರುವನಂತಪುರದಲ್ಲಿ ಆರಂಭವಾಗಿ, ತಿರುಚ್ನೂರು ಅರಣ್ಯ, ಕೊಯಮತ್ತೂರು ಬಳಿಯ ಅರಣ್ಯಗಳಲ್ಲಿ ನಡೆಯಿತು. ಅಮೆರಿಕಾದ ಲಾಸ್‌ಏಂಜಲೀಸ್‌ನಿಂದ ಕರೆಸಲಾಗಿದ್ದ ನಾಲ್ಕು ಮಂದಿ ಛಾಯಾಗ್ರಹಣ ತಂತ್ರಜ್ಞರ ನೆರವು ಪಡೆದುಕೊಂಡು ಖ್ಯಾತ ಛಾಯಾಗ್ರಾಹಕ ವಿನ್ಸೆಂಟ್ ಈ ಚಿತ್ರದ ಛಾಯಾಗ್ರಹಣ ನಿರ್ವಹಿಸಿದರು. ಅನೇಕ ಕಾಡು ಪ್ರಾಣಿಗಳ ಚಮತ್ಕಾರವಿರುವ ಈ ಚಿತ್ರದಲ್ಲಿ ನಿರ್ದಿಷ್ಟ ಕಥೆ, ಸೂತ್ರ ಏನೊಂದೂ ಇರಲಿಲ್ಲ. ವಸ್ತು ಕೂಡ ಸಾಮಾಜಿಕ, ಪೌರಾಣಿಕ, ಜಾನಪದಗಳ ಅಪಕ್ವ ಮಿಶ್ರಣವಾಗಿತ್ತು. ಅರಸನೊಬ್ಬ ಅಡಗಿಸಿಟ್ಟಿರುವ ವಜ್ರವೊಂದರ ಬಗ್ಗೆ ವಿವರ ತಿಳಿದುಕೊಳ್ಳಲು ದುಷ್ಟನೊಬ್ಬ ನಡೆಸುವ ಸಂಚು, ನಾಯಕ-ನಾಯಕಿಯರ ಒಂದಷ್ಟು ಪ್ರೇಮ-ಕಲಹ, ಕಾಡು ಜನರ ರೀತಿ-ನೀತಿಗಳು, ಒಂದಷ್ಟು ಕಾಡು ಪ್ರಾಣಿಗಳು ಇವೆಲ್ಲ ಚಿತ್ರದಲ್ಲಿ ಅಸ್ತವ್ಯಸ್ತವಾಗಿ ಹರಡಿ ಬಿದ್ದಿದ್ದವು. ಪ್ರೇಕ್ಷಕರನ್ನು ಸೆಳೆಯುವಲ್ಲಿ ಚಿತ್ರವು ಯಶಸ್ವಿಯಾಗಲಿಲ್ಲ. ಆದರೂ ದೂರದರ್ಶನದ ಸವಾಲನ್ನು ಎದುರಿಸಲು 3D ಚಿತ್ರಗಳೇ ಸರಿ ಎಂಬ ಭಾವನೆ ಆಗ ಅತ್ಯಂತ ಬಲವಾಗಿತ್ತು. ಆದರೆ ದಿನ ಕಳೆದಂತೆ ಈ ನಂಬಿಕೆಯೂ ಹುಸಿಯಾಗತೊಡಗಿತು. ಏಕೆಂದರೆ ಅತ್ಯಂತ ಸಾಧಾರಣ ವಸ್ತು, ಪೇಲವ ನಿರೂಪಣೆ ಹಾಗೂ ತಂತ್ರಜ್ಞಾನದ ಕೊರತೆಯಿಂದಾಗಿ ಈ ಅವಧಿಯಲ್ಲಿ ತೆರೆಕಂಡ 'ಕಾಡಿನಲ್ಲಿ ಜಾತ್ರೆ', 'ಸೂಪರ್ ಬಾಯ್', 'ನಮ್ಮ ಭೂಮಿ' ಚಿತ್ರಗಳು ಸೋಲನ್ನುಂಡವು. ಇದೇ ವೇಳೆಯಲ್ಲಿ ತೆರೆಕಂಡ ಇತರ ಕನ್ನಡ ಚಿತ್ರಗಳು ಕೂಡ ಯಾವುದೇ ಹೊಸತನದಿಂದ ಕೂಡಿರಲಿಲ್ಲ.

ರಾಜಕುಮಾರ್ ಅಭಿನಯದ 'ಜ್ವಾಲಾಮುಖಿ' ಸಂಯೋಜಿತ ಶತದಿನ ಪ್ರದರ್ಶನವನ್ನು ಕಂಡಿತು. ಇವರದೇ ಅಭಿನಯದ 'ಧ್ರುವತಾರೆ' ವಿಜಯಸಾಸನೂರರ 'ಅಪರಂಜಿ' ಕಾದಂಬರಿ ಆಧರಿಸಿದ್ದ ಚಿತ್ರ. ಇದರಲ್ಲಿ ಕಲೆಗಾರನೂ ವಕೀಲನೂ ಆಗಿದ್ದ ನಾಯಕ ತನ್ನ ಪ್ರತಿಭೆಗೆ ಪ್ರೋತ್ಸಾಹ ದೊರಕದ್ದರಿಂದ ನಿರಾಸೆಗೊಂಡು ಕೊನೆಗೆ ರೈತರ ಕಷ್ಟ ಸುಖಗಳಲ್ಲಿ ಭಾಗಿಯಾಗಿ ರೈತರ ಮುಖಂಡನಾಗುತ್ತಾನೆ. ಈ ಅಂಶ ಆಗ ಅಪಾರ ಯಶಸ್ಸು ಕಂಡ ಪ್ರೊ| ಎಂ.ಡಿ.ನಂಜುಂಡಸ್ವಾಮಿಯವರ ರೈತ ಚಳವಳಿಯಿಂದ ಸ್ಫೂರ್ತಿ ಪಡೆದದ್ದಾಗಿತ್ತು. ಚಿತ್ರದಲ್ಲಿ ರೈತರ ಶಾಂತಿಯುತ ಚಳವಳಿ ಹಾಗೂ ವಿರೋಧಿಗಳ ಗೊಂದಲದಲ್ಲಿ ಪೋಲೀಸರು ಲಾಠಿ ಚಾರ್ಜ್ ಮಾಡುವ ದೃಶ್ಯಗಳು ಸಹಜವಾಗಿ ಮೂಡಿ ಬಂದಿದ್ದವು. ಉಪೇಂದ್ರಕುಮಾರ್ ಅವರ ರಾಗ ಸಂಯೋಜನೆಯಲ್ಲಿ ರಾಜಕುಮಾರ್ ಅವರು ಹಾಡಿದ 'ಆ ಮೋಡ ಬಾನಲ್ಲಿ ತೇಲಾಡುವಾ...' ಗೀತೆ ಕೇಳಲು ಮಧುರವಾಗಿತ್ತು. ಆರ್ಥಿಕವಾಗಿ ಸಾಧಾರಣ ಯಶಸ್ಸು ಕಂಡ ಈ ಚಿತ್ರ ಅತ್ಯುತ್ತಮ ಕಥೆ ಹಾಗೂ ದ್ವಿತೀಯ ಅತ್ಯುತ್ತಮ ಚಿತ್ರವೆಂದು ೧೯೮೫-೮೬ರ ರಾಜ್ಯ ಪ್ರಶಸ್ತಿ ಗಳಿಸಿತು. 'ಅಜೇಯ' ಸಿದ್ದಲಿಂಗಯ್ಯನವರ ನಿರ್ಮಾಣ-ನಿರ್ದೇಶನದ ಕನ್ನಡ-ತಮಿಳು ಭಾಷೆಗಳಲ್ಲಿ ಏಕಕಾಲಕ್ಕೆ ತಯಾರಾದ ಸಾಹಸ ಪ್ರಧಾನ ಚಿತ್ರ. ಮುರಳಿ ದ್ವಿಪಾತ್ರಾಭಿನಯದ ಹೊಂದಾಣಿಕೆ ಹಾಗೂ ವಿ.ಕೆ.ಕಣ್ಣನ್ ಛಾಯಾಗ್ರಹಣವಷ್ಟೇ ಉತ್ತಮವಾಗಿದ್ದ ಈ ಚಿತ್ರದ ಸಂಕಲನಕ್ಕೆ ಆರ್.ರಾಜನ್ ೧೯೮೫-೮೬ರ ರಾಜ್ಯ ಪ್ರಶಸ್ತಿ ಪಡೆದರು.

ರವಿಚಂದ್ರನ್‌ರ 'ಸ್ವಾಭಿಮಾನ' ಹಾಗೂ 'ನಾನು ನನ್ನ ಹೆಂಡ್ತಿ' ಆರ್ಥಿಕವಾಗಿ ಯಶಸ್ವಿಯಾದರೂ ಹೇರಳವಾಗಿದ್ದ ಅಶ್ಲೀಲ ಸಂಭಾಷಣೆ ಹಾಗೂ ದೃಶ್ಯಗಳಿಂದಾಗಿ ವಿಪರೀತ ಟೀಕೆಗಳನ್ನು ಎದುರಿಸಿದವು. 'ಸ್ವಾಭಿಮಾನ' ಚಿತ್ರದಿಂದ 'ಉಮಾಶ್ರೀ-ಎನ್.ಎಸ್.ರಾವ್' ಹಾಸ್ಯ ಜೋಡಿ ಅತ್ಯಂತ ಜನಪ್ರಿಯವಾದರೂ ಅಶ್ಲೀಲ ಸಂಭಾಷಣೆ, ಆಂಗಿಕ ಚೇಷ್ಟೆಗಳ ಕಳಂಕವನ್ನು ಇಬ್ಬರೂ ಹೊರಬೇಕಾಯಿತು. ''ಹಾಸ್ಯ ಅಂದರೆ ಆರೋಗ್ಯಕ್ಕೆ ಅವಶ್ಯಕವಾದ ಟಾನಿಕ್ಕು. ಆದರೆ ಅದು ಸದ್ಯಕ್ಕೆ 'ನೋ ಸ್ಟಾಕು'. ...ಶುದ್ಧ ಹಾಸ್ಯಕ್ಕೆ ಬರ ಬಂದಿದೆ. ಅದರ ಉತ್ಪಾದನೆ ನಿಂತುಹೋಗಿದೆ. ಹೊರಬರಕ್ಕೆ ಹಾಸ್ಯದ ಹೂರಣ ಎಲ್ಲಿದೆ ? ಸದಭಿರುಚಿ ಮರೆತು ಹೋಗಿದೆ, ಭಯೋತ್ಪಾದನೆ ಜಾಸ್ತಿ ಆಗಿದೆ. ಜನ 'ಅಂಥಾ' ಹಾಸ್ಯ ನೋಡಿ ಶಿಳ್ಳೆ, ಕೇಕೆ ಹಾಕಿ


(ಚಿತ್ರ ೯೬) 'ಧ್ರುವತಾರೆ' ಚಿತ್ರದಲ್ಲಿ ರಾಜಕುಮಾರ್, ಗೂ.ರ.ಭೀಮರಾವ್, ಕೆ.ಎಸ್.ಅಶ್ವತ್ಥ್



(ಚಿತ್ರ ೯೭) 'ಸ್ವಾಭಿಮಾನ' ಚಿತ್ರದಲ್ಲಿ ಎಸ್.ಎಸ್.ರಾವ್ ಮತ್ತು ಉಮಾಶ್ರೀ

ನಗೋದನ್ನು ಬಿಡೋಲ್ಲ. ಅವರು ನಗು ನಿಲ್ಲಿಸೋವರೆಗೂ ಈ ಹಾಸ್ಯದ ಆರೋಗ್ಯ ಸರಿ ಹೋಗಲ್ಲ. ಅದು ಸರಿ ಹೋಗೋವರೆಗೂ ನಮ್ಮಂಥ ಹಾಸ್ಯ ನಟರು ತಲೆ ಎತ್ತೋಲ್ಲ. ಸೂಕ್ಷ್ಮಾನುಸೂಕ್ಷ್ಮ ಭಾವಗಳನ್ನು ಪ್ರದರ್ಶನ ಮಾಡೋಕೆ ಸಿನಿಮಾದಷ್ಟು ಶ್ರೇಷ್ಠ ಮಾಧ್ಯಮ ಜಗತ್ತಿನಲ್ಲಿ ಬೇರೆ ಯಾವುದೂ ಇಲ್ಲವಾದರೂ ಭಾರತೀಯ ಚಿತ್ರೋದ್ಯಮದಲ್ಲಿ ಕಣ್ಣೀರಿಡುವ ದೃಶ್ಯಗಳಿಗೆ ನೀಡುವ ಪ್ರಾಮುಖ್ಯ ಹಾಸ್ಯಕ್ಕೆ ನೀಡದೆ ಇರೋದು ಹಾಸ್ಯದ ದುರಾದೃಷ್ಟ, ಅಪಹಾಸ್ಯದ ಅದೃಷ್ಟ'' ಎಂದು ತಮಗೆ ಬರುವ ಪಾತ್ರ ಹಾಗೂ ಹಾಸ್ಯದ ಬಗ್ಗೆ ಎಸ್.ಎಸ್.ರಾವ್ ವಿವರಿಸುತ್ತಾರೆ.

ಈ ಚಿತ್ರದಲ್ಲಿನ ಗೀತ ರಚನೆಗಾಗಿ ಆರ್.ಎನ್.ಜಯಗೋಪಾಲ್‌ರಿಗೆ ೧೯೮೫-೮೬ರ ರಾಜ್ಯ ಪ್ರಶಸ್ತಿ ಪ್ರಾಪ್ತವಾದದ್ದು ಒಂದು ವಿಶೇಷ. 'ನಾನು ನನ್ನ ಹೆಂಡ್ತಿ' ದಾವಣಗೆರೆಯಲ್ಲಿ ಶತದಿನ ಕಂಡು ಆ ನಗರದಲ್ಲಿ ರವಿಚಂದ್ರನ್ ಅಭಿಮಾನಿಗಳನ್ನು ಹುಟ್ಟುಹಾಕುವಲ್ಲಿ ಮುಖ್ಯ ಪಾತ್ರ ವಹಿಸಿತು. 'ನಾನು ನನ್ನ ಹೆಂಡ್ತಿ' ಚಿತ್ರದಲ್ಲಿನ ಕೆಲವು ಸನ್ನಿವೇಶಗಳು, ವಿವರಗಳು, ಹಾಸ್ಯ ಪ್ರತ್ಯೇಕವಾಗದೆ ಕಥೆಯೊಳಗೇ ಹೆಣೆದುಕೊಂಡಿದ್ದನ್ನು ಸೊಗಸಾಗಿ ನಿರೂಪಿಸಿದ್ದರು. ಆ ವಿವರಗಳಲ್ಲೇ ಗೆದ್ದುಕೊಂಡ ಚಿತ್ರವಿದು.

ಇದೇ ಹೊತ್ತಿನಲ್ಲಿ ಅತ್ಯಂತ ಕುತೂಹಲದಿಂದ ಪ್ರೇಕ್ಷಕರು ಪುಟ್ಟಣ್ಣ ಪೂರ್ಣಗೊಳಿಸದಿದ್ದ 'ಮಸಣದ ಹೂವು' ಚಿತ್ರವನ್ನು ಎದುರು ನೋಡುತ್ತಿದ್ದರು. 'ಮಸಣದ ಹೂವು' ಚಿತ್ರವನ್ನು ಯಾರ ನಿರ್ದೇಶನದಲ್ಲಿ ಪೂರ್ಣಗೊಳಿಸಬೇಕೆಂಬ ಬಗ್ಗೆ ಮೂರು ನಾಲ್ಕು ತಿಂಗಳ ಕಾಲ ಚರ್ಚೆ ನಡೆಯಿತು. ಪುಟ್ಟಣ್ಣನವರ ಬಳಿ ಸಹಾಯಕರಾಗಿ ದುಡಿದಿದ್ದ ಕೆಲವರು 'ತಾವೇ ಆ ಕೆಲಸಕ್ಕೆ ಅರ್ಹರು' ಎಂಬ ಹೇಳಿಕೆಗಳನ್ನು ಕೊಟ್ಟರು. ಈ ನಡುವೆ ಪುಟ್ಟಣ್ಣನವರ ಬಳಿ ಬಹಳ ವರ್ಷಗಳಿಂದ ಬಹಳ ಚಿತ್ರಗಳಿಗೆ ದುಡಿದವರಿಗೆ ಪುಟ್ಟಣ್ಣ ಅವರ ಅಂತರ್ಯ, ನಿರ್ದೇಶನ ಶೈಲಿ ಚೆನ್ನಾಗಿ ತಿಳಿದಿರುತ್ತಾದ್ದರಿಂದ ಅಂಥವರು ಯಾರು ಎಂಬ ಹುಡುಕಾಟ ನಡೆಯಿತು. ಅದನ್ನು ಯಾರಾದರೂ ಪೂರ್ಣಗೊಳಿಸುವುದಕ್ಕಿಂತ, ಅರ್ಧವಾಗಿರುವ ಚಿತ್ರವನ್ನು ಪುಣೆಯ ಫಿಲ್ಮ್ ಇನ್ಸ್‌ಟಿಟ್ಯೂಟ್‌ನಂಥ ಸಂಸ್ಥೆಗಳು ಕೊಂಡುಕೊಂಡು ವಿದ್ಯಾರ್ಥಿಗಳ ಪಠ್ಯವನ್ನಾಗಿ ಬಳಸಬೇಕು. ಶ್ರೇಷ್ಠ ನಿರ್ದೇಶಕನೊಬ್ಬನ ಈ ಅಪೂರ್ಣ ಚಿತ್ರವನ್ನು ಅದರ ಶೈಲಿಗೆ ಹೊಂದುವ ಹಾಗೆ ಪೂರ್ಣಗೊಳಿಸುವುದೇ ಪಠ್ಯದ ಒಂದು ಭಾಗವಾದರೆ ಅದಕ್ಕ ಅರ್ಥವಿರುತ್ತದೆ ಎಂಬ ಕೆಲವು ಸಲಹೆಗಳೂ ಬಂದವು. ಆದರೆ ಅದಾಗಲೇ ಸಾಕಷ್ಟು ಹಣ ಖರ್ಚು ಮಾಡಿದ್ದ ನಿರ್ಮಾಪಕನನ್ನು ಉಳಿಸಲು ಚಿತ್ರವನ್ನು ಪೂರ್ಣಗೊಳಿಸಿ ತೆರೆಗೆ ತರುವುದೇ ಸರಿಯಾದ ಕ್ರಮ ಎಂಬ ಮಾತಿಗೆ ಹೆಚ್ಚಿನ ಬೆಂಬಲ ಸಿಕ್ಕಿತು. ಇವೆಲ್ಲ ವಾದ-ವಿವಾದಗಳು ನಡೆಯುತ್ತಿದ್ದಾಗಲೇ ಪುಟ್ಟಣ್ಣನವರಿಗೆ ಆಪ್ತರಾಗಿದ್ದ ರವೀಯವರಿಗ ಚಿತ್ರವನ್ನು ಪೂರ್ಣಗೊಳಿಸುವ ಜವಾಬ್ದಾರಿಯನ್ನು ನೀಡಲಾಯಿತು. ಈ ಹಿಂದೆ ರವೀ ವಿವಾದಾತ್ಮಕ ಬಸವಣ್ಣ ಚಿತ್ರವನ್ನು ನಿರ್ದೇಶಿಸಿದ್ದರು. ನಂತರ ೧೯೮೩ ರಲ್ಲಿ ಆರೂರು ಪಟ್ಟಾಭಿ ನಿರ್ದೇಶನದಲ್ಲಿ ಕೇವಲ ಮೂರು ದಿನಗಳ ಚಿತ್ರೀಕರಣ ಮಾತ್ರ ನಡೆದಿದ್ದ 'ಮಲೆ ಮಾದೇಶ್ವರ' ಚಿತ್ರವನ್ನು ನಿರ್ದೇಶಿಸಿದ್ದರು. ಈ ಅವಕಾಶ ಆರೂರು ಪಟ್ಟಾಭಿಯವರ ನಿಧನದಿಂದಾಗಿ ರವೀಯವರಿಗೆ ಲಭ್ಯವಾಗಿತ್ತು. ಚರ್ಚೆ, ಚಿಂತನೆಗಳ ನಡುವೆ ರವೀ ಪೂರ್ಣಗೊಳಿಸಿದ 'ಮಸಣದ ಹೂವು' ತೆರೆಗೆ ಬಂತು. ಚಿತ್ರ ಪ್ರೇಕ್ಷಕರು ನಿರೀಕ್ಷಿಸಿದ್ದಷ್ಟು ಪರಿಣಾಮಕಾರಿಯಾಗಿರಲಿಲ್ಲ. ಟೀಕೆಗಳು ಸಾಕಷ್ಟು ಬಂದವು. ಕೆಲವರಂತೂ ತಮ್ಮ ಅಸಮಾಧಾನಕ್ಕೆ ರವೀಯವರನ್ನೇ ಗುರಿಯಾಗಿಸಿಕೊಂಡಿದ್ದರು. ಆಗ ರವೀಯವರು "ನನ್ನಿಂದಲೇ ಕೆಟ್ಟಿದೆ ಅನ್ನುವವರು ಪುಟ್ಟಣ್ಣ ಮತ್ತು ನಾನು ಚಿತ್ರಿಸಿರುವ ದೃಶ್ಯಗಳು ಯಾವು ಯಾವುವೆಂದು ಬೇರ್ಪಡಿಸಿ ತೋರಿಸಲಿ'' ಎಂದು ಸವಾಲು ಹಾಕಿದರು. ಈ ವಾದ-ವಿವಾದಗಳ ಹಿನ್ನೆಲೆ ಏನೇ ಇದ್ದರೂ ಚಿತ್ರದಲ್ಲಿ 'ಆತ್ಮ'ವಂತೂ ಇರಲಿಲ್ಲ.

'ಮಸಣದ ಹೂವು' ತ.ರಾ.ಸು. ಅವರ ಕಾದಂಬರಿಯನ್ನು ಆಧರಿಸಿದ್ದು. ಚಿತ್ರಕಥೆಯ ರೂಪಾಂತರದಲ್ಲಿ ಪುಟ್ಟಣ್ಣ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಂಡಿದ್ದರು. ಸ್ವಲ್ಪ ಹೆಚ್ಚೇ ಎನಿಸುವ ನಾಟಕೀಯತೆ ನಿರೂಪಣೆಯಲ್ಲಿತ್ತು. ತಾರಾದೇವಿ ಒಬ್ಬ ಸಿರಿವಂತ ವೇಶ್ಯಾಗೃಹದ ಮಾಲಕಿ. ಈಕೆಯ ಪ್ರಭಾವ ವಲಯದಲ್ಲಿ ಪೊಲೀಸ್ ಅಧಿಕಾರಿ, ರಾಜಕಾರಣಿ, ಅಧ್ಯಾಪಕ ಎಲ್ಲರೂ ಇರುತ್ತಾರೆ. ಈ ವೇಶ್ಯಾಗೃಹದಲ್ಲಿ ಬದುಕುವಂಥ ವೇಶ್ಯೆಯರ ಮಾನಸಿಕ ಒತ್ತಡ, ಸ್ಥಿತಿಗತಿಗಳ ಚಿತ್ರಣಕ್ಕಿಂತ ಈ ವೃತ್ತಿಯ ಬಗ್ಗೆ ಮಾತುಗಳ ಮೂಲಕವೇ ಹೇಳುವಂಥ ಪ್ರಯತ್ನವಿತ್ತು. ಇದು ಚಿತ್ರದ ಪರಿಣಾಮವನ್ನು ಕುಗ್ಗಿಸಿತು. ಜೊತೆಗೆ ಪ್ರೇಕ್ಷಕರು ಪುಟ್ಟಣ್ಣನವರ ಚಿತ್ರಗಳಲ್ಲಿ ನಿರೀಕ್ಷಿಸುವಂಥ ಮಧುರ ಹಾಡುಗಳಿರಲಿಲ್ಲ. ಇವೆಲ್ಲ ಚಿತ್ರವನ್ನು ಸಾಮಾನ್ಯ ಮಟ್ಟಕ್ಕೆ ದೂಡಿದವು. ಇಷ್ಟೆಲ್ಲ ದೌರ್ಬಲ್ಯಗಳ ನಡುವೆಯೂ ವಸ್ತುವಿನ ವೈವಿಧ್ಯ ಹಾಗೂ ನಿರ್ಮಾಣದ ಹಿಂದಿನ ಕಾಳಜಿಗಳು ಚಿತ್ರಕ್ಕೆ ಆರು ರಾಜ್ಯ ಪ್ರಶಸ್ತಿಗಳನ್ನು ತಂದುಕೊಟ್ಟವು. ಜಯಂತಿ - ಅತ್ಯುತ್ತಮ ನಟಿ, ಅಂಬರೀಷ್ - ಅತ್ಯುತ್ತಮ ಪೋಷಕ ನಟ, ಟಿ.ಜಿ.ಅಶ್ವತ್ಥನಾರಾಯಣ - ಸಂಭಾಷಣೆ, ಎಸ್.ಮಾರುತಿರಾವ್ - ಛಾಯಾಗ್ರಹಣ, ಸಿ.ಡಿ.ವಿಶ್ವನಾಥನ್ ಮತ್ತು ಅರುಣ್ ಡಿ.ಗುಡಗಾಂವಕರ್ - ವಿಶೇಷ ಕಲಾನಿರ್ದೇಶಕರೆಂದು ೧೯೮೫-೮೬ರ ಪ್ರಶಸ್ತಿಗಳಿಗೆ ಪುರಸ್ಕೃತರಾದರು.

ಸೆನ್ಸಾರ್ ಕತ್ತರಿಯಲ್ಲಿ ನಲುಗಿದ 'ತುಳಸೀದಳ' ಮಾಯ, ಮಾಟ ಮಂತ್ರದ ವಸ್ತುವನ್ನುಳ್ಳ ತೆಲುಗಿನ ಜನಪ್ರಿಯ ಲೇಖಕ ಯಂಡಮೂರಿ ವೀರೇಂದ್ರನಾಥರ ಕಾದಂಬರಿಯನ್ನು ಆಧರಿಸಿತ್ತು. 'ಎ' ಸರ್ಟಿಫಿಕೇಟ್ ಪಡೆದ ಚಿತ್ರ. 'ಹಾರರ್' ಚಿತ್ರಗಳ ಶೈಲಿಯ ನಿರೂಪಣೆಯಿದ್ದ ಈ ಚಿತ್ರದ ಪ್ರಸಾಧನಕ್ಕಾಗಿ ಮಲ್ಲೇಶ್ ಹರ್ತಿ ಅವರಿಗೆ ವಿಶೇಷ ಪ್ರಶಸ್ತಿ ಹಾಗೂ ಇವರೊಂದಿಗೆ ಕನ್ನಡ ಬೆಳ್ಳಿ ತೆರೆ ಕಂಡ ಪ್ರತಿಭಾವಂತ ಬಾಲನಟಿ ಬೇಬಿ ರೇಖಾಗೆ ಅತ್ಯುತ್ತಮ ಬಾಲನಟಿ ಎಂದು ೧೯೮೬-೮೭ರ ರಾಜ್ಯ ಪ್ರಶಸ್ತಿ ಬಂದುವು.

ಚಿತ್ರ ನಿರ್ಮಾಣದಲ್ಲಿ ದುಡಿಯುತ್ತಿರುವವರೆಲ್ಲರ ಸಂಘಟಿತ ಶಕ್ತಿ ಒಂದು ಖಚಿತ ರೂಪವನ್ನು ಪಡೆದುಕೊಳ್ಳುವ ಅಗತ್ಯವಿತ್ತು. ಎಲ್ಲರೂ ತಮ್ಮ ಏಳಿಗೆ, ಹಕ್ಕು, ರಕ್ಷಣೆಗಾಗಿ ಸಂಘಗಳನ್ನು ಸ್ಥಾಪಿಸಿಕೊಳ್ಳುವ ಕ್ರಿಯೆ ದಿನೇ ದಿನೇ ಸಾಕಷ್ಟು ಜೀವಂತವಾಗತೊಡಗಿತು. ಈ ನಿಟ್ಟಿನಲ್ಲಿ ಮುಂದಿನ ದಿನಗಳಲ್ಲಿ ಚಿತ್ರೋದ್ಯಮದಲ್ಲಿ ನಿರ್ಣಾಯಕ ಪಾತ್ರ ವಹಿಸುವಷ್ಟು ಬೆಳವಣಿಗೆ ಕಂಡ ಚಲನಚಿತ್ರ ಪೋಷಕ ನಟ-ನಟಿಯರ ಸಂಘ ಪ್ರಮುಖವಾದದ್ದು.



(ಚಿತ್ರ ೯೮) 'ಮಸಣದ ಹೂವು' ಚಿತ್ರದಲ್ಲಿ ಅಪರ್ಣಾ ಮತ್ತು ಅಂಬರೀಷ್

ಚಲನಚಿತ್ರ ಪೋಷಕ ಕಲಾವಿದರನ್ನು 'ಜೂನಿಯರ್ ಆರ್ಟಿಸ್ಟ್'ಗಳೆಂಬ ಹೆಸರಿನಿಂದ ಕರೆಯಲಾಗುತ್ತದೆ. ಇವರಲ್ಲಿ ಪುಟ್ಟ ಬಾಲಕರಿಂದ ೮೦ ವರ್ಷದವರೆಗಿನ ಎಲ್ಲ ವಯಸ್ಸಿನವರೂ ಇರುತ್ತಾರೆ. ಇವರನ್ನು ಚಿತ್ರೀಕರಣಗಳಿಗೆ ಕರೆದೊಯ್ಯುವ ಕೆಲಸ ನಿರ್ವಹಿಸಲು ೭೦ರ ದಶಕದ ಕೊನೆಯಲ್ಲಿ ಮಧ್ಯವರ್ತಿಗಳು ಹುಟ್ಟಿಕೊಂಡರು. ೧೯೮೦ರಲ್ಲಿಯೇ ಆರಂಭವಾಗಿದ್ದರೂ ಸಹಕಲಾವಿದರ ಸೇವೆಯನ್ನು ದಿನಗೂಲಿಯ ಆಧಾರದಲ್ಲಿ ಪಡೆದುಕೊಳ್ಳುವ ಪರಿಪಾಠ ಒಂದು ಖಚಿತ ರೂಪವನ್ನು ಪಡೆದುಕೊಂಡಿದ್ದು ೧೯೮೪ರ ಕೊನೆಯಲ್ಲಿ. ಆನಂತರದಿಂದ ಈ ಅವಧಿಯಲ್ಲಿ ಇವರ ದಿನಗೂಲಿ ೩೦ ರಿಂದ ೫೦ ರೂಪಾಯಿಗಳಿತ್ತು. ಚಿತ್ರೀಕರಣದ ವೇಳೆ ಇವರಿಗೆ ಊಟ ತಿಂಡಿಯನ್ನು ಒದಗಿಸಲಾಗುತ್ತದೆ. ಇವರನ್ನು ನಿರ್ವಹಿಸುವವರ ಕಮಿಷನ್, ಬಟ್ಟೆಗಳ ಬಾಡಿಗೆ ಇತ್ಯಾದಿ ಖರ್ಚುಗಳನ್ನೆಲ್ಲ ಕಳೆದರೆ ಇವರ ಕೈಗೆ ಸಿಗುತ್ತಿದ್ದದ್ದು ಕೇವಲ ೩೦ ರೂಪಾಯಿ. ಇವರಲ್ಲಿ ಬಹುತೇಕ ಮಂದಿ ಬೇರೆಬೇರೆ ಕೆಲಸಗಳಲ್ಲಿ ನಿರತರಾಗಿರುವವರು. ಕೆಲವರು ಚಲನಚಿತ್ರ ಆಕರ್ಷಣೆಗೆ ಮಾರುಹೋಗಿ ಬಂದವರು. ಮತ್ತೆ ಕೆಲವರು ನಿರುದ್ಯೋಗಿಗಳಾಗಿದ್ದು ಬೇರೆ ಕೆಲಸ ಸಿಗದಿದ್ದುದರಿಂದ ಈ ಕೆಲಸಕ್ಕೆ ಅಂಟಿಕೊಂಡವರು. ಈ ವರ್ಗದ ಕಲಾವಿದರಲ್ಲಿ ೧೯೮೭ರವರೆಗೆ ಸಂಘಟನೆ ಇರಲಿಲ್ಲ. ಆದರೆ ಕೆಲವರು ತಮಗೆ ತೋಚಿದ ಹೆಸರುಗಳಲ್ಲಿ ಬೋರ್ಡುಗಳನ್ನು ಹಾಕಿಕೊಂಡು ಕಾರ್ಯ ನಿರ್ವಹಿಸತೊಡಗಿದರು. ಇಂಥವರು ನಾಲ್ಕೈದು ಮಂದಿ ಇದ್ದು ಆಗಾಗ ತಮ್ಮ ತಮ್ಮೊಳಗೇ ಸ್ಪರ್ಧೆ ನಡೆಸತೊಡಗಿದರು. ಇದರಿಂದಾಗಿ ಒಬ್ಬರು ಹೇಳಿದ ದರಕ್ಕಿಂತ ಕಡಿಮೆಗೆ ಇನ್ನೊಬ್ಬರು ಪೋಷಕ ನಟ-ನಟಿಯರನ್ನು ಒದಗಿಸುತ್ತಿದ್ದರು. ಇಂಥ ದೌರ್ಬಲ್ಯದ ಲಾಭವನ್ನು ಚಿತ್ರ ನಿರ್ಮಾಪಕರು ಕೂಡ ಪಡೆದುಕೊಳ್ಳುತ್ತಿದ್ದರು. ಆದರೆ ಮದರಾಸಿನಲ್ಲಿ ಪರಿಸ್ಥಿತಿ ಹೀಗಿರಲಿಲ್ಲ. ಅಲ್ಲಿ ವ್ಯವಸ್ಥಿತ ಸಂಘವಿತ್ತು. ಸಂಘದ ಸದಸ್ಯರಲ್ಲದವರನ್ನು ಚಿತ್ರೀಕರಣದಲ್ಲಿ ಭಾಗವಹಿಸಲು ಬಿಡದಂತಹ ಕಟ್ಟುನಿಟ್ಟಿನ ನಿಯಮಗಳನ್ನು ಅಲ್ಲಿ ಮಾಡಿಕೊಳ್ಳಲಾಗಿತ್ತು. ಕಲಾವಿದರ ಅರ್ಹತೆಯ ಆಧಾರದ ಮೇಲೆ ಎ.ಬಿ.ಸಿ. ಎಂಬ ವಿಭಾಗಗಳನ್ನು ಮಾಡಿಕೊಂಡು ಅದರಂತೆ ಅಲ್ಲಿ ಸಂಭಾವನೆ ನೀಡುತ್ತಿದ್ದರು. ಇಂಥ ಶಿಸ್ತಿನ ವ್ಯವಸ್ಥೆ ೧೯೮೫ರವರೆಗೆ ಬೆಂಗಳೂರಿನಲ್ಲಿ ರೂಢಿಗೆ ಬಂದಿರಲಿಲ್ಲ. ಒಂದು ಹಂತದಲ್ಲಿ ಭೂಗತ ದೊರೆಗಳೂ ಇವರನ್ನು ಸಂಘಟಿಸಿ ಅಧಿಕಾರ ನಡೆಸುವಂತಾಗಿತ್ತು. ೧೯೮೫ರ ಹೊತ್ತಿಗೆ ಬೆಂಗಳೂರಿನಲ್ಲಿ ಊರ್ಜಿತವಾಗಿದ್ದ ಒಂದು ಸಂಘವೆಂದರೆ ಶ್ರೀ ವಿಶ್ವ ವಿನಾಯಕ ಚಲನಚಿತ್ರ ಪೋಷಕ ನಟ-ನಟಿಯರ ಸಂಘ. ಇದರಲ್ಲಿ ೧,೫೦೦ ಸದಸ್ಯರಿದ್ದರು. ಸಂಘಕ್ಕೆ ಸದಸ್ಯರು ಸದಸ್ಯತ್ವ ಶುಲ್ಕವಾಗಿ ವರ್ಷಕ್ಕೆ ೩೫ ರೂಪಾಯಿ ನೀಡಬೇಕಾಗಿತ್ತು. ಸಂಘದ ಸದಸ್ಯರಿಗೆ ನಿರ್ಮಾಪಕರಿಂದ ಸಂಭಾವನೆಯನ್ನು ಕೊಡಿಸುವಾಗ ಸ್ವಲ್ಪ ಭಾಗ ಹಿಡಿದುಕೊಂಡು ಕೊಡಲಾಗುತ್ತಿತ್ತು. ಒಂದೊಮ್ಮೆ ನಿರ್ಮಾಪಕರು ಹಣ ಕೊಡುವುದು ತಡವಾದರೆ ಸಂಘವೇ ಸದಸ್ಯರಿಗೆ ಕೊಡಬೇಕಾದ ಹಣವನ್ನು ನೀಡುತ್ತಿತ್ತು. ಸಾಮಾನ್ಯವಾಗಿ ಈ ವರ್ಗದ ಕಲಾವಿದರು ಸನ್ನಿವೇಶಕ್ಕೆ ಹೊಂದುವಂತೆ ತಮ್ಮ ಪಾತ್ರದ ಉಡುಗೆಗಳನ್ನು ತಾವೇ ತರಬೇಕು. ಕೆಲವೊಮ್ಮೆ ಈ ಕಲಾವಿದರ ಸಂಘಗಳೇ ಇವರಿಗೆ ಬೇಕಾಗುವ ಉಡುಪನ್ನು ಕೊಡುವ ವ್ಯವಸ್ಥೆಯನ್ನೂ ಮಾಡುತ್ತಿದ್ದವು. (ನೋಡಿ : ಸಂಘಟನೆ)

ಇದೇ ಅವಧಿಯಲ್ಲಿ ಇದಕ್ಕಿಂತ ಭಿನ್ನವಾದ ಒಂದು ವೃತ್ತಿಯಾಗಿ ಬೆಳೆದದ್ದು 'ಡಬ್ಬಿಂಗ್' ಕಲೆ. ಇದು ಕ್ರಮೇಣ ಚಿತ್ರ ನಿರ್ಮಾಣದಲ್ಲಿ ಪಾತ್ರಗಳಿಗೆ ಜೀವ ತುಂಬುವ ಬಹುಮುಖ್ಯ ಹಂತವಾಯಿತು. ಆರಂಭದ ದಿನಗಳಲ್ಲಿ ಸ್ಟುಡಿಯೋಗಳಲ್ಲಿ ಚಿತ್ರೀಕರಣ ಮಾಡುವಾಗ ಬಹುತೇಕ ಮಿಚೆಲ್ ಕ್ಯಾಮರಾಗಳನ್ನು ಬಳಸುತ್ತಿದ್ದರು. ಆಗ ಹೊರಾಂಗಣದಲ್ಲಿ ಚಿತ್ರೀಕರಣ ನಡೆಯುತ್ತಿದ್ದದ್ದು ಬಹಳ ಕಡಿಮೆ. ಹೀಗಾಗಿ ಸ್ಟುಡಿಯೋಗಳಲ್ಲಿ ನೇರವಾಗಿ ಧ್ವನಿ ಮುದ್ರಿಸಿಕೊಂಡಿದ್ದನ್ನೇ ಚಿತ್ರಗಳಲ್ಲೂ ಬಳಸಲಾಗುತ್ತಿತ್ತು. ಆದರೆ ದಿನ ಕಳೆದಂತೆ ಹೊರಾಂಗಣದಲ್ಲಿ ಚಿತ್ರೀಕರಣ ನಡೆಸುವ ಪರಿಪಾಠ ಹೆಚ್ಚಾಯಿತು. ಸ್ಟುಡಿಯೋಗಳಲ್ಲಿ ಸಹ ಪರಿಫ್ಲೆಕ್ಸ್ ಕ್ಯಾಮರಾಗಳನ್ನು ಬಳಸುವುದು ಸಾಮಾನ್ಯವಾಯಿತು. ಈ ವಿಧಾನದಲ್ಲಿ ಪಾತ್ರಗಳ ಸಂಭಾಷಣೆಯ ಜೊತೆಗೆ ಪರಿಸರದಲ್ಲಿನ ಇತರ ಶಬ್ದಗಳು ಮುದ್ರಣವಾಗುತ್ತವೆ. ಕೆಲವೊಮ್ಮೆ ಪಾತ್ರಗಳ ಮಾತಿಗಿಂತ ಬೇರೆ ಧ್ವನಿಗಳೇ ಪ್ರಬಲವಾಗಿರುವುದುಂಟು. ಇದರಿಂದಾಗಿ ಚಿತ್ರೀಕರಣದಲ್ಲಿ ಭಾಗವಹಿಸಿದ್ದ ಕಲಾವಿದರನ್ನೆಲ್ಲ ಮತ್ತೆ ಸ್ಟುಡಿಯೋಗೆ ಕರೆಸಿಕೊಂಡು ಚಿತ್ರೀಕರಣದಲ್ಲಿ ಆಡಿದ ಮಾತುಗಳನ್ನು ಮತ್ತೆ ತುಟಿ ಚಲನೆಗೆ ಹೊಂದಿಸಿ ಧ್ವನಿ ಮುದ್ರಿಸಿಕೊಳ್ಳುವುದು ಅನಿವಾರ್ಯವಾಗುತ್ತ ಬಂತು. ಇದು ಬರಬರುತ್ತ ಒಂದು ಕಲೆಯಾಗಿ-ವೃತ್ತಿಯಾಗಿ ನಿರ್ದಿಷ್ಟ ಸ್ವರೂಪವನ್ನು ಪಡೆದುಕೊಳ್ಳತೊಡಗಿತು. ಇಂಥ ಬದಲಾವಣೆಗೆ ಉದ್ಯಮದ ಪ್ರವೃತ್ತಿಯೊಂದಿಗೆ ತಂತ್ರಜ್ಞಾನದಲ್ಲಿನ ಬೆಳವಣಿಗೆಯೂ ಒಂದು ಕಾರಣ. ಇದರೊಂದಿಗೆ ಭಾಷೆ ತಿಳಿಯದ ಪರಭಾಷಾ ಕಲಾವಿದರ ಆಮದು, ಧ್ವನಿ ಸರಿಯಿಲ್ಲದವರು ಅಭಿನಯಿಸಲು ಆರಂಭಿಸಿದ್ದು ಇನ್ನೊಂದು ಕಾರಣ. ಇದೆಲ್ಲದರಿಂದಾಗಿ ತೆರೆಯ ಮೇಲಿನ ನಟ-ನಟಿಯರಿಗೆ ಬೇರೆಯವರು ಧ್ವನಿ ಕೊಡಲೇಬೇಕಾಗಿ ಬಂತು. ದಿನಕಳೆದಂತೆ ಈ ಕಲಾವಿದರದೇ ಒಂದು ಗುಂಪು ಬೆಳೆಯತೊಡಗಿ ಇವರನ್ನು 'ಡಬ್ಬಿಂಗ್ ಕಲಾವಿದ'ರೆಂದು ಕರೆಯಲಾಯಿತು. ಸಂಭಾಷಣೆಯ ಜೀವಂತಿಕೆಗೆ ಸಾಕಷ್ಟು ಕಾಣಿಕೆ ಸಲ್ಲಿಸುತ್ತಿದ್ದರೂ ೧೯೮೬ರವರೆಗೆ ಇವರ ಹೆಸರುಗಳನ್ನು ಟೈಟಲ್ ಕಾರ್ಡ್‌ಗಳಲ್ಲಿ ಹಾಕುತ್ತಿರಲಿಲ್ಲ. ಆದರೆ ಬರಬರುತ್ತ ಸಂಘಟಿತರಾದ ಇವರು ತಮ್ಮ ಅಸಮಾಧಾನ, ಪ್ರತಿಭಟನೆಗಳನ್ನು ಬೇರೆ ಬೇರೆ ರೀತಿಯಲ್ಲಿ ತೋರತೊಡಗಿದ್ದರಿಂದ ೧೯೮೭ ರಲ್ಲಿ ಇವರ ಹೆಸರುಗಳನ್ನು 'ಕಂಠದಾನ' ಎಂಬ ಶೀರ್ಷಿಕೆಯಲ್ಲಿ ಹಾಕಲು ಆರಂಭಿಸಲಾಯಿತು. ಅದುವರೆಗೆ ಕೆಲವು ಕಲಾತ್ಮಕ ಚಿತ್ರಗಳಲ್ಲಿ ಮಾತ್ರ ಕಂಠದಾನ ಕಲಾವಿದರ ಹೆಸರುಗಳನ್ನು ಟೈಟಲ್ ಕಾರ್ಡ್‌ಗಳಲ್ಲಿ ತೋರಿಸುವ ಪರಿಪಾಠವಿತ್ತು. (ನೋಡಿ : ಸಂಘಟನೆ)

೧೯೮೬ರ ಚಿತ್ರರಂಗದ ಚಟುವಟಿಕೆಗಳಲ್ಲಿ ಬಹು ಮುಖ್ಯವಾದದ್ದು, ಬರ ಪರಿಹಾರ ನಿಧಿ ಸಂಗ್ರಹಕ್ಕಾಗಿ ರಾಜಕುಮಾರ್ ನೇತೃತ್ವದಲ್ಲಿ ಸಂಘಟಿಸಲಾದ ಪಾದಯಾತ್ರೆ. ೧೯೮೫ ರಂತೆ ನಿರ್ಮಾಣ, ಗಳಿಕೆ, ವ್ಯವಹಾರದ ದೃಷ್ಟಿಯಿಂದ ಸಾಕಷ್ಟು ನಿರಾಸೆ ಉಂಟುಮಾಡಿದ ೧೯೮೬ ಕೇವಲ ಕೆಲವು ಚಟುವಟಿಕೆಗಳಿಂದಷ್ಟೇ ಜೀವಂತವಾಗಿತ್ತು. ೧೯೮೪ ರಲ್ಲಿನ ೭೬ ಚಿತ್ರಗಳ ಪರುಬ್ಬರ ೮೫ ರಲ್ಲಿ ೬೭ಕ್ಕೆ, ೧೯೮೬ ರಲ್ಲಿ ೫೮ಕ್ಕೆ ಇಳಿಯಿತು. ಒಂದೆರಡು ಚಿತ್ರಗಳನ್ನು ಹೊರತುಪಡಿಸಿದರೆ ಬಹುತೇಕ ನಿರ್ಮಾಪಕರು ಕೈ ಖಾಲಿ ಮಾಡಿಕೊಂಡು ತಳಮಳಿಸಿದರು. ಇದರಿಂದಾಗಿ ಚಿತ್ರೋದ್ಯಮದ ನಿರ್ಮಾಣೇತರ ಚಟುವಟಿಕೆಗಳೇ ಮಾಧ್ಯಮಗಳಲ್ಲಿ ಹೆಚ್ಚು ಪ್ರಚಾರ ಪಡೆದುಕೊಂಡವು. ಬರ ಪರಿಹಾರ ನಿಧಿ ಸಂಗ್ರಹಕ್ಕಾಗಿ ಕಲಾವಿದರು ಕೈಗೊಂಡ ಪಾದಯಾತ್ರೆ, ಚಿತ್ರೋದ್ಯಮದ ಬಗ್ಗೆ ಸರ್ಕಾರ ರೂಪಿಸಿದ ನೀತಿಗಳು, ಮಾರಾಟ ತೆರಿಗೆ ಹೆಚ್ಚಳದಿಂದಾಗಿ ದೇಶಾದ್ಯಂತ ನಡೆದ ಬಂದ್, ರಾಜಕುಮಾರ್ ಅಸಮ್ಮತಿಯ ನಡುವೆ ಅವರ ಹೆಸರೇ ಬೇಕೆಂದು ಅವರ ಅಭಿಮಾನಿಗಳು ಹಿಡಿದ ಪಟ್ಟು ಹಾಗೂ ಈ ಬಗ್ಗೆ ನಡೆದ ಸಭೆಗಳೇ ೧೯೮೬ರ ಬಹು ಮುಖ್ಯ ಚಟುವಟಿಕೆಗಳೆನಿಸಿದವು. ಇವೆಲ್ಲವುಗಳೊಂದಿಗೆ ಪ್ರದರ್ಶನ ವೇಳೆಯ ಬದಲಾವಣೆಯಿಂದಾಗಿ ಉದ್ಯಮದಲ್ಲಿ ಹಿಂದೆಂದೂ ಕಾಣದಂಥ ಬಿಕ್ಕಟ್ಟು ತಲೆದೋರಿ ಗಳಿಕೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಯಿತು. ಇದೆಲ್ಲಕ್ಕಿಂತ ಹೆಚ್ಚಾಗಿ ಸಂಭವಿಸಿದ ಸಾಲುಸಾಲು ಸಾವುಗಳು ಕೂಡ ಉದ್ಯಮದ ಮೇಲೆ ಕಾರ್ಮೋಡಗಳನ್ನು ಕವಿಸಿದವು. ಕನ್ನಡ ಬೆಳ್ಳಿ ತೆರೆಯ ಮೊದಲ ಬಜಾರಿ ನಾಯಕಿ ಮಂಜುಳಾ ಹಾಗೂ ಶಶಿಕಲಾ ಸುಟ್ಟ ಗಾಯಗಳಿಂದ ನಿಧನರಾದರು. ಹಿರಿಯ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಸಾಹಿತಿ/ನಿರ್ದೇಶಕ/ನಟ ವಿಶುಕುಮಾರ್, ಹಿರಿಯ ಕಲಾವಿದರಾದ ಎಂ.ಜಿ.ಮರಿರಾವ್, ನಟ/ನಾಟಕಕಾರ ದಾಶರಥಿ ದೀಕ್ಷಿತ್, ಶಕ್ತಿಪ್ರಸಾದ್ ಇವರೆಲ್ಲ ಕಣ್ಮರೆಯಾದದ್ದು ವರ್ಷದ ಚಟುವಟಿಕೆಗಳಲ್ಲಿ ಶೂನ್ಯತೆ ತುಂಬಿತು.

೧೯೮೬ರ ಪ್ರಾರಂಭವು ಕೆ.ವಿ.ಜಯರಾಂ ನಿರ್ದೇಶನದ 'ಹೊಸ ನೀರು' ಮೂಲಕ ಆಯಿತು. ಯುವತಿಯೊಬ್ಬಳು ಎಂಜಿನಿಯರ್ ವೃತ್ತಿಯನ್ನು ಆರಿಸಿಕೊಂಡಾಗ ಎದುರಿಸಬೇಕಾದ ತೊಂದರೆಗಳ ಚಿತ್ರಣ ಇದರಲ್ಲಿದೆ. ವಸ್ತುವಿನ ದೃಷ್ಟಿಯಿಂದ ಹೊಸತನವಿದ್ದರೂ ನಿರೂಪಣೆ ಸಾಂಪ್ರದಾಯಿಕ ಶೈಲಿಗಿಂತ ಭಿನ್ನವಾಗಿರಲಿಲ್ಲ. ಇದೆಲ್ಲಕ್ಕಿಂತ ಹೆಚ್ಚಾಗಿ ಚಿತ್ರಕ್ಕೆ ಆಕರ್ಷಣೆ ಒದಗಿ ಬಂದಿದ್ದುದು ಅದೇ ಪ್ರಥಮ ಬಾರಿಗೆ ಜೋಡಿಯಾಗಿ ನಟಿಸಿದ್ದ ಅನಂತ್‌ನಾಗ್ ಮತ್ತು ಸುಹಾಸಿನಿಯವರಿಂದ. ಆಗ್ಗೆ ಹವ್ಯಾಸಿ ರಂಗಭೂಮಿಯಲ್ಲಿ ಜನಪ್ರಿಯ ನಿರ್ದೇಶಕರೂ, ನಟರೂ ಆಗಿದ್ದ ಅಶೋಕ್ ಬಾದರದಿನ್ನಿ ಒಂದು ವಿಶಿಷ್ಟ ಪಾತ್ರದಲ್ಲಿ ಕಾಣಿಸಿಕೊಳ್ಳುವುದರ ಮೂಲಕ ಬೆಳ್ಳಿತೆರೆಗೆ ಅಡಿಯಿಟ್ಟರು. ಕೆ.ವಿ.ರಾಜು ಸಂಭಾಷಣೆಯಲ್ಲಿ ಒಗರು, ಹೊಸತನವಿತ್ತು. ಈ ಚಿತ್ರ ೧೯೮೫-೮೬ರ ಪ್ರಥಮ ಅತ್ಯುತ್ತಮ ಚಿತ್ರವೆಂದು ರಾಜ್ಯ ಪ್ರಶಸ್ತಿ ಗಳಿಸಿಕೊಂಡಿದ್ದಲ್ಲದೆ ಅನಂತ್‌ನಾಗ್ ಅವರಿಗೆ ಅತ್ಯುತ್ತಮ ನಟ, ಶಶಿಕಲಾ - ಪೋಷಕನಟಿ ಹಾಗೂ ಜಿ.ಕೆ.ವೆಂಕಟೇಶ್ ಅವರಿಗೆ ಶ್ರೇಷ್ಠ ಸಂಗೀತ ನಿರ್ದೇಶಕ ಪ್ರಶಸ್ತಿಗಳನ್ನು ತಂದುಕೊಟ್ಟಿತು.

''ಸಿನಿಮಾ, ಕಲೆಯ ಪ್ರಕಾರಗಳಲ್ಲಿ ಒಂದು. ಅಂತೆಯೇ ಜನಪ್ರಿಯ ಮಾಧ್ಯಮವಾಗಿದೆ. ಅನೇಕರಿಗೆ ಬದುಕಿನ ಆಸರೆಯಾಗಿ ಸರ್ಕಾರಕ್ಕೆ ವರಮಾನ ತರುವಂಥದ್ದಾದ್ದರಿಂದ ಕೈಗಾರಿಕೆಯೂ ಹೌದು. ಜನತೆಯ ಮೇಲೆ ಪ್ರಭಾವ ಇದ್ದೇ ಇರುತ್ತೆ. ಅನೇಕ ವೇಳೆ ಅದು ನಮ್ಮ ಜನಜೀವನದ ರೀತಿ-ನೀತಿಗಳಲ್ಲಿ ನಮಗೇ ತಿಳಿಯದೆ ಮಾರ್ಪಾಡು ತರಬಹುದು. ಮನರಂಜನೆಯೇ ಉದ್ದೇಶ. ಕೋಟ್ಯಾಂತರ ರೂಪಾಯಿ ಹಾಕಿದವನು ಅದನ್ನು ಹಿಂದಕ್ಕೆ ಪಡೆದುಕೊಳ್ಳುವ ಬಗೆಯನ್ನು ನೋಡುತ್ತಾನೆ. ಆದರೆ ತಪ್ಪು ಗ್ರಹಿಕೆ ನೀಡಿ ಪ್ರೇಕ್ಷಕರ ಅಭಿರುಚಿಯನ್ನು ಕೆಡಿಸುವಂಥ ಕೆಳ ದರ್ಜೆಯ ಚಿತ್ರ ನೀಡುವುದು ದ್ರೋಹವೆನಿಸುತ್ತದೆ..''. ಎಂದು ಚಲನಚಿತ್ರಗಳ



(ಚಿತ್ರ ೯೯) 'ಹೊಸ ನೀರು' ಚಿತ್ರದಲ್ಲಿ ಸುಹಾಸಿನಿ ಮತ್ತು ಅನಂತ್‌ನಾಗ್

ದೃಶ್ಯ ಮಾಧ್ಯಮದ ಪ್ರಭಾವವನ್ನು ವಿವರಿಸುತ್ತಾ ಲೋಕನಾಥ್ ತಮ್ಮ ನಟನೆಯ ಬಗ್ಗೆಯೂ ಹೇಳುತ್ತಾರೆ. ''ಚಿತ್ರನಟನಾಗಿ ನನಗ ಸಿಕ್ಕಿರುವ ಪಾತ್ರವನ್ನು ಅರ್ಥ ಮಾಡಿಕೊಂಡು ಚಿತ್ರಕ್ಕೆ ಪೂರಕವಾಗುವ ಹಾಗೆ ನಟಿಸುವುದಷ್ಟೇ ನನ್ನ ಕೆಲಸ. ನಾನು ನನ್ನ ಪಾತ್ರಕ್ಕಷ್ಟೇ ಬದ್ಧನಾಗಿರಬೇಕು, ಸಮಾಜಕ್ಕೆ ಚಿತ್ರನಟನಾಗಿ ಬದ್ಧನಾಗಿರಬೇಕಿಲ್ಲ. ಎಲ್ಲ ಪಾತ್ರಗಳೂ ತೃಪ್ತಿ ಕೊಟ್ಟಿಲ್ಲ. ನಾನು ಪ್ರಾಮಾಣಿಕವಾಗಿ ನಟಿಸುವ ಪ್ರಯತ್ನ ಖಂಡಿತಾ ಮಾಡುತ್ತೇನೆ. 'ಶರಪಂಜರ'ದಲ್ಲಿ ಸಣ್ಣ ಪಾತ್ರವಾದರೂ ತುಂಬಾ ತೃಪ್ತಿ ಕೊಟ್ಟಿತ್ತು. 'ಹೊಸನೀರು' ಸಮಾಧಾನ ತಂದ ಪಾತ್ರ... ಇಂಥ ಒಂದಷ್ಟು ಆಯ್ದ ಹೆಸರುಗಳನ್ನು ಹೇಳಬಹುದು...''.

'ಹೊಸ ನೀರು' ಸದಭಿರುಚಿಯ ಚಿತ್ರದಿಂದ ಆದ ಶುಭಾರಂಭ ನಂತರದ ದಿನಗಳಲ್ಲಿ ದಿಕ್ಕು ತಪ್ಪಿ ನಡೆಯುತ್ತ ಹೋದದ್ದು ಒಂದು ವಿಚಿತ್ರ. ಇದರಿಂದಾಗಿಯೇ ಬರ ಪರಿಹಾರ ನಿಧಿ ಸಂಗ್ರಹದಂಥ ಸಾರ್ವಜನಿಕ ಚಟುವಟಿಕೆಯು ಕೂಡ ಅನಿರೀಕ್ಷಿತ ಮಹತ್ವ ಪಡೆದುಕೊಳ್ಳಲು ಸಾಧ್ಯವಾಯಿತು. ೧೯೮೫ ರಿಂದ ಬೀದರ್, ಗುಲ್ಬರ್ಗಾ ಜಿಲ್ಲೆಗಳೂ ಸೇರಿದಂತೆ ಉತ್ತರ ಕರ್ನಾಟಕದ ಬಹುಭಾಗ ಕ್ಷಾಮಕ್ಕೆ ತುತ್ತಾಗಿತ್ತು. ರೈತರು, ಕೂಲಿ ಕಾರ್ಮಿಕರು ಉದ್ಯೋಗ, ಆಹಾರ ಇಲ್ಲದೆ ಎರಡು ವರ್ಷಗಳಿಂದಲೂ ತತ್ತರಿಸಿ ಹೋಗಿದ್ದರು. ಸಾವಿರಾರು ಜನ ತಮ್ಮ ಊರು, ಮನೆಗಳನ್ನು ಬಿಟ್ಟು ನಗರಗಳತ್ತ ವಲಸೆ ಆರಂಭಿಸಿದರು. ಅಲ್ಲಿನ ಬಡ ಜನರ ಗೋಳಿನ ಬಗ್ಗೆ ಪ್ರತಿ ದಿನವು ಕರುಣಾಜನಕ ಸುದ್ದಿಗಳು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು.

ಈ ಬಗ್ಗೆ ಸಾರ್ವಜನಿಕರಲ್ಲಿ ಸಾಕಷ್ಟು ಜಾಗೃತಿ ಮೂಡಿಸಿ ನೆರವಾಗುವಂಥ ಮನೋಭಾವಕ್ಕೆ ಮಾಧ್ಯಮಗಳು ಕೂಡ ಪ್ರೇರಣೆ ಒದಗಿಸಿದ್ದವು. ಆಗ ಚಿತ್ರೋದ್ಯಮ ಕೂಡ ಸೇವೆ ಸಲ್ಲಿಸಲು ಮುಂದಾಗಿ ರಾಜಕುಮಾರ್ ಗೌರವಾಧ್ಯಕ್ಷರಾಗಿರುವ ಸಮಿತಿಯೊಂದನ್ನು ರಚಿಸಿಕೊಂಡಿತು. ಒಂದು ಕೋಟಿ ರೂಪಾಯಿ ಸಂಗ್ರಹದ ಗುರಿಯೊಂದಿಗೆ ಆರಂಭವಾದ ಸಮಿತಿಯ ಕೆಲಸ ೧೯೮೬ರ ಜನವರಿ ೨೪ ರಂದು ಶುಕ್ರವಾರ ಬೆಳಿಗ್ಗೆ ವಾಣಿಜ್ಯ ಮಂಡಳಿಯ ಕಚೇರಿಯಿಂದ ಆರಂಭವಾಯಿತು. ರಾಜಕುಮಾರ್ ಬೆಳಿಗ್ಗೆ ೧೦ ಗಂಟೆಗೆ ವಾಣಿಜ್ಯ ಮಂಡಳಿಯ ಕಚೇರಿಗೆ ಬಂದಾಗ ಅವರ ಕೈಗೆ ಮೊದಲ ಬೋಣಿಯಾಗಿ ಒಂದು ಸಾವಿರ ರೂಪಾಯಿ ನೀಡಿದವರು ನಿರ್ಮಾಪಕ ಚಂದೂಲಾಲ್ ಜೈನ್. ಇಷ್ಟೇ ಮೊತ್ತವನ್ನು ನಂತರ ಪಾರ್ವತಮ್ಮ ರಾಜಕುಮಾರ್ ಹಾಗೂ ಸಿ.ವಿ.ಎಲ್.ಶಾಸ್ತ್ರಿ ನೀಡಿದರು. ನಂತರ ತಂಡದ ಪಾದಯಾತ್ರೆ ಚಿಕ್ಕಪೇಟೆಯಲ್ಲಿ ಆರಂಭವಾಯಿತು. ಈ ಮೊದಲೇ ಎಲ್ಲಾ ಸಗಟು ಹಾಗೂ ಚಿಲ್ಲರೆ ಜವಳಿ ವ್ಯಾಪಾರಿಗಳಿಗೆ ವಿಷಯ ತಿಳಿಸಿತ್ತಾದ್ದರಿಂದ ರಾಜಕುಮಾರ್ ಬರುತ್ತಿದ್ದಂತೆ ಸಿದ್ಧಪಡಿಸಿಟ್ಟುಕೊಂಡಿದ್ದ ಚೆಕ್‌ನ ಲಕೋಟೆಯನ್ನು ಅವರ ಕೈಗಿತ್ತು ಶುಭ ಹಾರೈಸುತ್ತಿದ್ದರು. ಮಧ್ಯಾಹ್ನದ ವಿರಾಮ ಕೇವಲ ಅರ್ಧ ಗಂಟೆಯದು. ನಂತರ ಮತ್ತೆ ರಾತ್ರಿ ಎಂಟು ಗಂಟೆಯವರೆಗೆ ಪಾದಯಾತ್ರೆ. ಹೀಗೆ ಶುಕ್ರವಾರ ಮತ್ತು ಮರುದಿನ ಶನಿವಾರ ಗಾಂಧೀನಗರದಲ್ಲಿ ಸಂಚರಿಸಿ ಸಂಗ್ರಹಿಸಿದ ಮೊತ್ತ ಒಂಬತ್ತು ಲಕ್ಷ ರೂಪಾಯಿ. ಇವಲ್ಲದೆ ರಾಜಕುಮಾರ್ ಬೇರೆ ರೀತಿಯಲ್ಲಿಯೂ ಹಣ ಸಂಗ್ರಹಿಸಿದರು. ಅವರ ಚಿತ್ರದ ಚಿತ್ರೀಕರಣ ನಡೆಯುತ್ತಿದ್ದ ವೇಳೆ ಅಭಿಮಾನಿಗಳ ಜೊತೆ ಫೋಟೋ ತೆಗೆಸಿಕೊಳ್ಳಬೇಕಾದರೆ ಒಬ್ಬರಿಗೆ ೧೦ ರೂಪಾಯಿ ನಿಗದಿ ಮಾಡಲಾಯಿತು. ಚಿತ್ರೀಕರಣದ ನಡುವೆ ಬಿಡುವು ದೊರೆತಾಗಲೆಲ್ಲ ಅವರು ಇದಕ್ಕೆ ಸಹಕರಿಸಿದರು. ಇದರಿಂದ ಒಂದು ವಾರದಲ್ಲೇ ಸುಮಾರು ಎಂಟು ಸಾವಿರ ರೂಪಾಯಿ ಸಂಗ್ರಹವಾಯಿತು. ಇದರೊಂದಿಗೆ ಅವರು ಸ್ವತಃ ೫೦ ಸಾವಿರ ರೂಪಾಯಿ ಕೊಟ್ಟರು. ಅನಂತ್‌ನಾಗ್-ಶಂಕರ್‌ನಾಗ್ ಇಬ್ಬರೂ ತಲಾ ಅಷ್ಟೇ ಹಣ ನೀಡಿದ್ದಲ್ಲದೆ ವಾಣಿಜ್ಯ ಮಂಡಳಿ ಹಾಗೂ ಜನತಾ ಪಕ್ಷದ ನಿಧಿ ಸಂಗ್ರಹಣ ಕಾರ್ಯಕ್ರಮಗಳಲ್ಲೂ ಸಕ್ರಿಯವಾಗಿ ಭಾಗವಹಿಸಿದರು. ಇದೆಲ್ಲದರಿಂದ ಸಂಗ್ರಹವಾದ ಒಟ್ಟು ಹಣ ೧೫ ಲಕ್ಷ ರೂಪಾಯಿ. ಒಂದು ಕೋಟಿಯ ಗುರಿಯನ್ನು ಮುಟ್ಟುವ ಉದ್ದೇಶವಿತ್ತಾದರೂ ಅದು ಸಾಧ್ಯವಾಗಲಿಲ್ಲ. ಸಂಗ್ರಹಿಸಿದ ನಿಧಿಯನ್ನು ಸೈಂಟ್ ಜಾನ್ಸ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಕೈಗೆ ರಾಜಕುಮಾರ್ ನೇತೃತ್ವದಲ್ಲಿ ಹೋಗಿ ತಲುಪಿಸಲಾಯಿತು. ಈ ಎಲ್ಲಾ ಚಟುವಟಿಕೆ ನಡೆದದ್ದು ಜನವರಿಯಲ್ಲಿ. ನಂತರದ ಮಾರ್ಚ್‌ನಲ್ಲಿ ರಾಮಕೃಷ್ಣ ಹೆಗಡೆಯವರು ತಮ್ಮ ಆಯ-ವ್ಯಯದಲ್ಲಿ ೧೯೮೬ರ ಜನವರಿ ೧ ರಿಂದ ಜಾರಿಗೆ ಬರುವಂತೆ ಕನ್ನಡ ಚಲನಚಿತ್ರಗಳಿಗೆ ನೀಡುವ ಸಹಾಯಧನವನ್ನು ಎರಡೂವರೆ ಲಕ್ಷ ರೂಪಾಯಿಗಳಿಗೆ ಹೆಚ್ಚಿಸಿದರು. ಇದರೊಂದಿಗೆ ಈ ಸೌಲಭ್ಯವನ್ನು ಪಡೆಯಬೇಕಾದರೆ ಚಿತ್ರವು ಸಂಪೂರ್ಣವಾಗಿ ರಾಜ್ಯದಲ್ಲಿಯೇ ತಯಾರಾಗಿರಬೇಕೆಂಬ ನಿರ್ಬಂಧವೂ ಇತ್ತು. ಸರ್ಕಾರದ ಈ 'ನೆರವು-ನಿರ್ಬಂಧ'ಗಳ ಬಗ್ಗೆ ವ್ಯಾಪಕ ಚರ್ಚೆ, ಚಿಂತನೆ ನಡೆಯಿತು. ಪರ-ವಿರೋಧ ಅಭಿಪ್ರಾಯಗಳು ವ್ಯಕ್ತವಾದವು. ಸಹಾಯಧನದ ಮೊತ್ತವನ್ನು ಹೆಚ್ಚಿಸಿದ್ದು ಸಂತೋಷವನ್ನು ಉಂಟುಮಾಡಿದ್ದರೂ ಹೊರಗೆಲ್ಲೂ ಹೋಗಬಾರದೆಂಬ ನಿರ್ಬಂಧ ಕೆಲವರಿಗೆ ರುಚಿಸಲಿಲ್ಲ. ಅಂಥ ಕೆಲವರು ತಮ್ಮ ಅಸಮಾಧಾನಕ್ಕೆ ಕೊಟ್ಟ ಕಾರಣಗಳು ಹೀಗಿದ್ದವು : ಕರ್ನಾಟಕದಲ್ಲಿ ನಾಲ್ಕೈದು ಭಾಷೆಗಳ ಚಿತ್ರಗಳು ಪ್ರದರ್ಶನವಾಗುತ್ತವೆ. ಇವೆಲ್ಲ ತಾಂತ್ರಿಕವಾಗಿ ಉತ್ತಮವಾಗಿದ್ದು, ಅದ್ದೂರಿ ನಿರ್ಮಾಣಗಳಾಗಿರುತ್ತವೆ. ಇವುಗಳೊಂದಿಗೆ ಪೈಪೋಟಿ ಅನಿವಾರ್ಯವಾಗಿರುವುದರಿಂದ ನಾವು ಕೂಡ ಅಂಥದೇ ಮಾರ್ಗಗಳನ್ನು ಅನುಸರಿಸಬೇಕಾಗುತ್ತದೆ. ಇದಕ್ಕೆ ಬೇಕಾದ ಎಲ್ಲಾ ಸೌಲಭ್ಯಗಳು ರಾಜ್ಯದಲ್ಲಿ ಇನ್ನೂ ದೊರೆಯುತ್ತಿಲ್ಲವಾದ್ದರಿಂದ ಹೊರಗೆ ಹೋಗುವ ಅವಕಾಶ ಇನ್ನೂ ಕೆಲಕಾಲ ಇರಬೇಕು ಹಾಗೂ ಅಲ್ಲಿಯವರೆಗೆ ಶೇಕಡ ೫೦ ರಷ್ಟು ತೆರಿಗೆ ವಿನಾಯಿತಿಯ ವಿಸ್ತರಣೆ ಬೇಕು. ಇಷ್ಟು ಅಭಿಪ್ರಾಯವನ್ನು ಮುಖ್ಯಮಂತ್ರಿಗಳಿಗೆ ತಿಳಿಸಲು ಹೊರಟ ನಿಯೋಗದ ನೇತೃತ್ವವನ್ನು ರಾಜಕುಮಾರ್ ವಹಿಸಿದ್ದರು. ಜೊತೆಯಲ್ಲಿ ವಿಷ್ಣುವರ್ಧನ್, ವೀರಾಸ್ವಾಮಿ, ಬಿ.ಕೆ.ಗಂಗಪ್ಪ, ಕೆ.ಎಸ್.ಎಲ್.ಸ್ವಾಮಿ, ಪಾರ್ವತಮ್ಮ ರಾಜಕುಮಾರ್, ಎಸ್.ಎ.ಚಿನ್ನೇಗೌಡ, ಹೆಚ್.ಎಂ.ಕೆ.ಮೂರ್ತಿ ಇದ್ದರು. ಹೆಗಡೆ ಪರಿಶೀಲಿಸುವ ಭರವಸೆ ನೀಡಿದರು.

ವೈ.ವಿ.ರಾವ್ ನಿರ್ಮಾಣದಲ್ಲಿ ಪೇರಾಲ ನಿರ್ದೇಶಿಸಿದ ಚಿತ್ರ 'ಬೆಟ್ಟದ ತಾಯಿ'. ಈ ಚಿತ್ರದ ಮುಖ್ಯಾಂಶವೇ ಬೇಬಿ ಲಕ್ಷ್ಮೀ ಅಭಿನಯ. ಚಿತ್ರದುದ್ದಕ್ಕೂ ಕಥೆ ಸಾಗುವುದೇ ಈ ಹುಡುಗಿಯ ಹಿಂದೆ. ಈಕೆಯೇ ಕೇಂದ್ರ ಪಾತ್ರ. ಚಾಮುಂಡಿ ಬೆಟ್ಟದ ಚಾಮುಂಡೇಶ್ವರಿಯನ್ನು ಹಿನ್ನೆಲೆಯಾಗಿರಿಸಿ ಚಿತ್ರ ತಯಾರಿಸಿದರು. ಅಂತಿಮ ದೃಶ್ಯದಲ್ಲಿ ಹುಡುಗಿ ಹಾಡುತ್ತಾ ಹರಿಕಥೆ ಹೇಳುವ ಪ್ರಸಂಗದಲ್ಲಿ ಲೀಲಾಜಾಲವಾಗಿ ನಟಿಸಿದ್ದಾಳೆ. ಸತ್ಯಂ ಸಂಗೀತದಲ್ಲಿ ದೇವೀಸ್ತುತಿ ಚೆನ್ನಾಗಿದೆ. ಶ್ರೀನಾಥ್, ಆರತಿ, ಉಮಾಶ್ರೀ, ವಜ್ರಮುನಿ ಸಹಕಲಾವಿದರು.

ಈ ದಿನಗಳಲ್ಲಿಯೇ ಕನ್ನಡ ಚಿತ್ರಗಳನ್ನು ಪಕ್ಕದ ರಾಜ್ಯಗಳಾದ ತಮಿಳುನಾಡು ಹಾಗೂ ಆಂಧ್ರ ಪ್ರದೇಶಗಳಲ್ಲಿ ಬಿಡುಗಡೆ ಮಾಡುವ ಒಂದೆರಡು ಪ್ರಯತ್ನಗಳು ನಡೆದವು. ಈ ಹಿಂದೆಯೂ ಇಂಥ ಒಂದೆರಡು ಪ್ರಯತ್ನ ನಡೆದಿತ್ತಾದರೂ ಅವು ಫಲ ನೀಡಿರಲಿಲ್ಲ ಮತ್ತು ಬಹಳ ದಿನ ಊರ್ಜಿತವಾಗಿರಲಿಲ್ಲ. ಇದಕ್ಕೆ ನಮ್ಮ ಚಿತ್ರೋದ್ಯಮಿಗಳ ನಿರುತ್ಸಾಹವೇ ಕಾರಣ. ೧೯೫೦ ರಲ್ಲಿ ಹೈದರಾಬಾದ್ ನಗರದಲ್ಲಿ ವಾರಕ್ಕೊಂದು ಕನ್ನಡ ಚಿತ್ರವು ಬೆಳಗಿನ ಪ್ರದರ್ಶನದಲ್ಲಿ ಆಗಾಗ ಬಿಡುಗಡೆಯಾಗುತ್ತಿತ್ತು. ಆಗ ತಯಾರಾಗುತ್ತಿದ್ದ ಚಿತ್ರಗಳಲ್ಲಿ ಒಬ್ಬಿಬ್ಬರು ತೆಲುಗು ಕಲಾವಿದರು ಅಭಿನಯಿಸಿರುತ್ತಿದ್ದುದು ಇದಕ್ಕೆ ನೆರವಾಗಿತ್ತು. ನಂತರದ ೬೦ರ ದಶಕದಲ್ಲಿ ಕೆಲವು ವರ್ಷ ಪ್ರತಿದಿನ ಬೆಳಗಿನ ಮತ್ತು ಮಧ್ಯಾಹ್ನದ ಆಟಗಳಲ್ಲಿ ಕನ್ನಡ ಚಿತ್ರಗಳು ಪ್ರದರ್ಶನ ಕಾಣುತ್ತಿದ್ದವು. ಕೆಲಕಾಲದ ನಂತರ ಇದು ಕೂಡ ನಿಂತುಹೋಯಿತು.

೧೯೮೬ ರಲ್ಲಿ ಇಂಥ ಚಿಂತನೆ ಮತ್ತೆ ಚಾಲನೆಗೆ ಬಂತು. ಈ ಬಾರಿ ಆಸಕ್ತಿ ವಹಿಸಿದ್ದು ಫಿಲಂ ಚೇಂಬರ್. ಇದಕ್ಕೆ ಹೈದರಾಬಾದ್‌ನಲ್ಲಿ ನಿಯೋಜಿತವಾಗಿದ್ದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವೂ ಒಂದು ಕಾರಣ. 'ಭಾಗ್ಯದ ಲಕ್ಷ್ಮೀ ಬಾರಮ್ಮ' ಚಿತ್ರವನ್ನು ಈ ಸಂದರ್ಭದಲ್ಲಿ ಬಿಡುಗಡೆ ಮಾಡಲಾಯಿತು. ಚಿತ್ರದ ನಿರ್ದೇಶಕ ಸಿಂಗೀತಂ



(ಚಿತ್ರ ೧೦೦) 'ಭಾಗ್ಯದ ಲಕ್ಷ್ಮೀ ಬಾರಮ್ಮ' ಚಿತ್ರದಲ್ಲಿ ಮಾಧವಿ ಮತ್ತು ರಾಜಕುಮಾರ್

ಶ್ರೀನಿವಾಸರಾವ್ ಆಂಧ್ರ ಪ್ರದೇಶದಲ್ಲೂ ಜನಪ್ರಿಯರಾಗಿದ್ದುದರಿಂದ ಉತ್ತಮ ಪ್ರತಿಕ್ರಿಯೆ ನಿರೀಕ್ಷಿಸಲಾಗಿತ್ತು. ಹೈದರಾಬಾದ್‌ನ ಪದ್ಮಾವತಿ ಚಿತ್ರಮಂದಿರದಲ್ಲಿ ಮಾಮೂಲಿ ಪ್ರದರ್ಶನದಲ್ಲಿ ಬಿಡುಗಡೆಯಾದಾಗ ಮೊದಲ ಮೂರು ವಾರ ಉತ್ತಮ ಫಲಿತಾಂಶ ದೊರಕಿತ್ತು. ಇದನ್ನು ಗಮನಿಸಿದ ರಾಮಕೃಷ್ಣ ಚಿತ್ರಮಂದಿರದ ವ್ಯವಸ್ಥಾಪಕರು, ಬೇಡಿಕೆ ಬೆಳೆದರೆ ತಾವು ಕೂಡ ಕನ್ನಡ ಚಿತ್ರಗಳನ್ನು ಪ್ರದರ್ಶಿಸಲು ಸಿದ್ಧವಿರುವುದಾಗಿ ಹೇಳಿದರು. ಆದರೆ ಈ ಎಲ್ಲ ಬೆಳವಣಿಗೆಗಳೂ ಇದೊಂದು ಚಿತ್ರದೊಂದಿಗೇ ಮುಕ್ತಾಯಗೊಂಡವು.

'ಭಾಗ್ಯದ ಲಕ್ಷ್ಮೀ ಬಾರಮ್ಮ' ಸಂಪೂರ್ಣ ಹಾಸ್ಯಮಯ ಚಿತ್ರ. ನಿರುದ್ಯೋಗ ಸಮಸ್ಯೆಯ ವಿಷಾದವೂ ಇದರಲ್ಲಿದೆ. ನಿರುದ್ಯೋಗಿ ಪಾಂಡು ಮೂಗನಂತೆ ನಟಿಸಿ ಮುದ್ರಣಾಲಯವೊಂದರಲ್ಲಿ ಕೆಲಸಗಿಟ್ಟಿಸಿಕೊಳ್ಳುತ್ತಾನೆ. ಅಲ್ಲಿ ಅವನಿಗೆ ಮೂಗಿಯಂತೆ ನಟಿಸುತ್ತಾ ಕೆಲಸ ಮಾಡುತ್ತಿರುವ ಪಾರ್ವತಿಯ ಪರಿಚಯವಾಗುತ್ತದೆ. ಇಲ್ಲಿಂದ ಇಬ್ಬರ ನಡುವೆ ಬೆಳೆಯುವ ಹಾಸ್ಯಮಯ ಸ್ನೇಹ, ಮನೆಯ ಆರ್ಥಿಕ ತಾಪತ್ರಯಗಳು ಇಬ್ಬರನ್ನೂ ಸಂಸ್ಥೆಯೊಂದು ಆದರ್ಶ ದಂಪತಿಗಳಿಗೆ ಲಕ್ಷ ರೂಪಾಯಿಗಳನ್ನು ಬಹುಮಾನವಾಗಿ ನೀಡುವ ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಮಾಡುತ್ತದೆ. ಇಬ್ಬರೂ ಜಾಣತನದಿಂದ ಸ್ಪರ್ಧೆಯಲ್ಲಿ ಗೆಲ್ಲುತ್ತಾರೆ. ಜೊತೆಗೆ ಪಾರ್ವತಿಗೆ ದೂರವಾಗಿದ್ದ ಅವಳ ಸಿರಿವಂತ ತಾತನೂ ಹತ್ತಿರವಾಗಿ ಎಲ್ಲರೂ ಒಂದುಗೂಡುತ್ತಾರೆ. ಇಷ್ಟು ಕಥೆಯಲ್ಲಿ ನಿರುದ್ಯೋಗ, ವರದಕ್ಷಿಣೆ ಸಮಸ್ಯೆಗಳನ್ನು ಬೆರೆಸಿ, ಹಾಸ್ಯದೊಂದಿಗೆ ನೇರವಾಗಿ ನಿರೂಪಿಸಲಾಗಿದೆ. ಸಿಂಗೀತಂ ಶ್ರೀನಿವಾಸರಾವ್ ಈ ಚಿತ್ರಕ್ಕೆ ನಿರ್ದೇಶನದೊಂದಿಗೆ ಸಂಗೀತವನ್ನು ಕೂಡ ನೀಡಿದ್ದರು. ಅಲ್ಲದೆ ಇದು ಅವರ ಸಂಗೀತ ನಿರ್ದೇಶನದ ಮೊದಲ ಚಿತ್ರ ಕೂಡ. ಈ ಹಿಂದೆ ಇವರೇ ನಿರ್ದೇಶಿಸಿದ 'ಶ್ರಾವಣ ಬಂತು' ಚಿತ್ರಕ್ಕೆ ಎಂ.ರಂಗರಾವ್ ಸಂಗೀತ ನಿರ್ದೇಶಕರಾಗಿದ್ದರೂ ಸಿಂಗೀತಂ ರಾಗ ಸಂಯೋಜಿಸಿದ್ದ ಒಂದು ಹಾಡನ್ನು ರಂಗರಾವ್ ಸಮ್ಮತಿಯೊಂದಿಗೆ ಯಥಾವತ್ತಾಗಿ ಬಳಸಿಕೊಳ್ಳಲಾಗಿತ್ತು. ಅದು ಜನಪ್ರಿಯವಾಯಿತು. ಈ ಹಿನ್ನೆಲೆಯಲ್ಲಿ ಅವರಿಗೆ ಈ ಅವಕಾಶವನ್ನು ನೀಡಲಾಗಿತ್ತು. ಚಿತ್ರ ವಿಶೇಷವೆನಿಸದಿದ್ದರೂ ಒಂದೆರಡು ಹಾಡುಗಳು ಜನಪ್ರಿಯವಾದವು. ಜನಪ್ರಿಯ ಪೋಷಕ ಕಲಾವಿದೆ ಉಮಾಶಿವಕುಮಾರ್‌ರಿಗೆ ಇದು ನೂರನೆಯ ಚಿತ್ರ. 'ಕಾಡು' ಚಿತ್ರದ ಮೂಲಕ ಕನ್ನಡ ಚಿತ್ರರಂಗಕ್ಕೆ ಪರಿಚಯವಾಗಿದ್ದ ಇವರು 'ಕೆಸರಿನ ಕಮಲ'ದಲ್ಲಿ ನಾಯಕಿಯ ಗೆಳತಿ ಪಾತ್ರದಲ್ಲಿ ಗಮನ ಸೆಳೆದಿದ್ದರು. ನಂತರ ಅಕ್ಕ, ಅಮ್ಮ, ಅತ್ತೆ, ಗಯ್ಯಾಳಿ ಹೀಗೆ ವಿಭಿನ್ನ ಪಾತ್ರಗಳನ್ನು ನಿರ್ವಹಿಸುತ್ತಾ ನೂರು ಚಿತ್ರಗಳ ಅಭಿನಯದ ಸಾಧಕಿಯಾದರು. ಈ ಚಿತ್ರದ ಅತ್ಯುತ್ತಮ ಚಿತ್ರನಾಟಕಕ್ಕಾಗಿ ಸಿಂಗೀತಂ ಹಾಗೂ ಚಿ.ಉದಯಶಂಕರ್ ಜಂಟಿಯಾಗಿ ೧೯೮೬ರ ರಾಜ್ಯ ಪ್ರಶಸ್ತಿ ಸ್ವೀಕರಿಸಿದರು. ಮತ್ತೆ ಇದೇ ಜೋಡಿ ಇದೇ ಪ್ರಶಸ್ತಿಯನ್ನು ಮುಂದಿನ ವರ್ಷ ಅಂದರೆ ೧೯೮೬-೮೭ ರಲ್ಲಿ ಸ್ವೀಕರಿಸಿದಂಥ ಒಂದು ಅಪೂರ್ವ ಘಟನೆ ನಡೆಯಿತು. ಅದು 'ಆನಂದ್' ಚಿತ್ರ ಸೃಷ್ಟಿಸಿದ ಹಲವಾರು ದಾಖಲೆಗಳಲ್ಲಿ ಒಂದಾಗಿತ್ತು.

'ಆನಂದ್' ಚಿತ್ರದ ಮೂಲಕ ರಾಜಕುಮಾರ್ ಹಿರಿಯ ಪುತ್ರ ಶಿವರಾಜ್‌ಕುಮಾರ್ ದೊಡ್ಡ ರೀತಿಯಲ್ಲಿ ಬೆಳ್ಳಿತೆರೆಗೆ ಕಾಲಿಟ್ಟರು. ಅಂದು ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಉದ್ಯಮವೇ ಕಿಕ್ಕಿರಿದು ನೆರೆದಿತ್ತು. ಬಹಳ ಮಂದಿ ರಾಜಕುಮಾರ್ ಅವರ ಉತ್ತರಾಧಿಕಾರಿಯ ಸೃಷ್ಟಿ ಇಂದು ನಿಜವಾಗಿಯೂ ಆಗಬಹುದೇ ಎಂದು ಮಾತನಾಡಿಕೊಳ್ಳುತ್ತಿದ್ದರು. ಚಲನಚಿತ್ರ ಅಭಿನಯದ ಶಾಲಾ ಶಿಕ್ಷಣದೊಂದಿಗೆ, ರಕ್ತಗತವಾಗಿರಬಹುದಾದ ಅಭಿಜಾತ ಪ್ರತಿಭೆ ಎಷ್ಟರ ಮಟ್ಟಿಗೆ ಹೊರಹೊಮ್ಮಬಹುದೆಂಬುದರ ಬಗ್ಗೆ ಆ ದಿನ ಯಾರಿಗೂ ಸ್ಪಷ್ಟ ಕಲ್ಪನೆಯಿರಲಿಲ್ಲ. ಸಿಂಗೀತಂ ಶ್ರೀನಿವಾಸರಾವ್ ಏನಾದರೂ ಪವಾಡ ಮಾಡದಿದ್ದರೆ ಖಂಡಿತಾ ದೊಡ್ಡದೇನೂ ಸಂಭವಿಸುವುದಿಲ್ಲ ಎಂಬುದೇ ಆಗಿನ ಬಹಳ ಮಂದಿಯ ಅನಿಸಿಕೆ. ಏಕೆಂದರೆ ಯಾರೊಬ್ಬರಿಗೂ ಶಿವರಾಜ್‌ಕುಮಾರ್ ಸಾಮರ್ಥ್ಯದ ಬಗ್ಗೆ ಎಳ್ಳಷ್ಟೂ ತಿಳಿದಿರಲಿಲ್ಲ. ಇಷ್ಟೇ ಅಲ್ಲ, ಶಿವರಾಜ್‌ಕುಮಾರ್ ಮದರಾಸಿನಲ್ಲೇ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಓದುತ್ತಾ ಅದುವರೆಗಿನ ತಮ್ಮ ಜೀವನವನ್ನು ಕಳೆದಿದ್ದರಿಂದ ಕನ್ನಡಿಗರಿಗೆ ಅವರ ಮುಖದ ಪರಿಚಯವೂ ಇರಲಿಲ್ಲ.

'ಆನಂದ್' ಚಿತ್ರ ಹೊಸ ತಾರೆಯೊಂದನ್ನು ಸೃಷ್ಟಿಸಿದ್ದಷ್ಟೇ ಅಲ್ಲ, ಅದುವರೆಗಿನ ಕನ್ನಡ ಬೆಳ್ಳಿ ತೆರೆಯಲ್ಲಿ ಯಾವುದೇ ಕಲಾವಿದನ ಪ್ರಥಮ ಚಿತ್ರ ಮಾಡದಂಥ ಸರಣಿ ದಾಖಲೆಗಳನ್ನು ಸೃಷ್ಟಿಸುತ್ತಾ ಹೋಯಿತು. ಒಂಬತ್ತು ಕೇಂದ್ರಗಳ ಹನ್ನೊಂದು ಚಿತ್ರಮಂದಿರಗಳಲ್ಲಿ ಶತದಿನದ ದಾಖಲೆ ಸ್ಥಾಪಿಸಿದ್ದಷ್ಟೇ ಅಲ್ಲ ಬೆಂಗಳೂರಿನಲ್ಲಿ ೨೫ ವಾರದ ಪ್ರದರ್ಶನ ಕಂಡಿತು. ಇತರ ಹನ್ನೆರಡು ಚಿತ್ರಮಂದಿರಗಳಲ್ಲಿ ಸತತವಾಗಿ ೫೦ ದಿನ ಪ್ರದರ್ಶನವಾಯಿತು. ಶಿವರಾಜ್‌ಕುಮಾರ್ ಜೊತೆ ನಾಯಕಿಯಾಗಿ ಅಭಿನಯಿಸಿದ್ದ ೧೩ರ ಬಾಲೆ ಜಯಶ್ರೀ (ಸುಧಾರಾಣಿ) ಕೂಡ ಬೆಳಗಾಗುವುದರೊಳಗೆ ತಾರೆಯಾದರು. ಇವರೊಂದಿಗೆ ಚಿ.ಉದಯಶಂಕರ್ ಪುತ್ರರಾದ ಗುರುದತ್, ರವಿಶಂಕರ್ ಮತ್ತು ನರಸಿಂಹರಾಜು ಅವರ ಪುತ್ರಿ ಸುಧಾನರಸಿಂಹರಾಜು ಬೆಳ್ಳಿ ತೆರೆಗೆ ಪರಿಚಿತರಾದರು. ಹೊಸ ಮುಖಗಳೊಂದಿಗೆ ನಿರೂಪಿಸಲಾಗಿದ್ದ ಸಾಧಾರಣ ಪ್ರೇಮಕಥೆಯೊಂದು ಆಶ್ಚರ್ಯಕರ ರೀತಿಯಲ್ಲಿ ಯಶಸ್ಸು ಗಳಿಸಿದ್ದನ್ನು ವಿಶ್ಲೇಷಿಸುವುದು ಉದ್ಯಮಕ್ಕೆ ಸಾಧ್ಯವಾಗಲಿಲ್ಲ. ಆಗ ಎಲ್ಲರೂ ಅದನ್ನು ರಾಜಕುಮಾರ್‌ರ ಹೆಸರಿನ ಯಶಸ್ಸು ಎಂದು ಸುಲಭವಾಗಿ ಕರೆದುಬಿಟ್ಟರು. ಆದರೆ ಈ ಚಿತ್ರದ ನಂತರ ಬಂದ 'ರಥಸಪ್ತಮಿ', 'ಮನ ಮೆಚ್ಚಿದ ಹುಡುಗಿ' ಚಿತ್ರಗಳು ಕೂಡ ೨೫ ವಾರಗಳ ಲೀಲಾಜಾಲವಾದ ಓಟವನ್ನು ಸಾಧಿಸಿದಾಗ ಉದ್ಯಮದ ವಿಶ್ಲೇಷಣೆ ತಪ್ಪಾಗಿತ್ತೆಂಬುದು ಗೊತ್ತಾಯಿತು. ಅಷ್ಟು ಹೊತ್ತಿಗೆ ಶಿವರಾಜ್‌ಕುಮಾರ್ ಕನ್ನಡ ಬೆಳ್ಳಿತೆರೆಯ ಅಗ್ರಪಂಕ್ತಿಯ ಯುವನಾಯಕ ನಟರಾಗಿ ಯುವ ಜನಾಂಗದ ಹೃದಯದಲ್ಲಿ ನೆಲೆ ನಿಂತಿದ್ದು. ಇಷ್ಟು ಮಾತ್ರವಲ್ಲ, ಕನ್ನಡ ಚಿತ್ರರಂಗದ ಮೊಟ್ಟ ಮೊದಲ 'ಹ್ಯಾಟ್ರಿಕ್ ಹೀರೋ' ಎಂಬ ಬಿರುದನ್ನು ಕೂಡ ಸಂಪಾದಿಸಿಕೊಂಡು ಬೆರಗು ಹುಟ್ಟಿಸಿದರು.

ಕಥೆಯ ಮಟ್ಟಿಗೆ 'ಆನಂದ್'ನಲ್ಲಿ ವಿಶೇಷವೇನಿರಲಿಲ್ಲ. ಮುಗ್ಧ ಯುವತಿಯನ್ನು ಪ್ರೇಮಿಸಿ ಕೈ ಬಿಟ್ಟ ಯುವಕ - ಇವರಿಬ್ಬರ ಪ್ರೇಮದ ಫಲವಾಗಿ ಹುಟ್ಟಿದ ಬಡ ಹುಡುಗ ಚಿತ್ರದ ನಾಯಕ. ಇವನು ಕಾಲೇಜಿನ ಆಟ-ಪಾಠಗಳಲ್ಲಿ, ಪ್ರಾಮಾಣಿಕತೆಯಲ್ಲಿ ಸದಾ ಮುಂದು. ಕೊನೆಗೆ ತನ್ನ ತಾಯಿಗಾಗಿರುವ ಅನ್ಯಾಯವನ್ನು ತಿಳಿದುಕೊಂಡ ಮೇಲೆ ಅದನ್ನು ಸರಿಪಡಿಸುವ ಹಟ ತೊಟ್ಟು ಯಶಸ್ವಿಯಾಗುತ್ತಾನೆ. ಬಡ ಯುವಕನಾಗಿ ಭಾವಪೂರ್ಣ ಅಭಿನಯ ನೀಡಿದ್ದ ಶಿವರಾಜ್‌ಕುಮಾರ್ ಆಗ್ಗೆ ಕನ್ನಡ ತೆರೆಗೆ ಆಧುನಿಕವೆನಿಸಿದ ನೃತ್ಯದಲ್ಲಿ ಅತ್ಯಂತ ಚುರುಕು, ತೀವ್ರ ಗತಿ, ಉತ್ಸಾಹಗಳನ್ನು ತೋರಿದ್ದು ವಿಶೇಷವೆನಿಸಿತು. ಇದೇ ಅವರಿಗೆ ಕನ್ನಡದ ಪ್ರಥಮ ನೃತ್ಯಗಾರ ನಾಯಕನೆಂಬ ಹೆಗ್ಗಳಿಕೆಯನ್ನು ತಂದುಕೊಟ್ಟಿತು. ಖಳನಾಗಿ ಅಭಿನಯಿಸಿದ್ದ ಗುರುದತ್ ಅಬ್ಬರಕ್ಕೆ ಹೊರತಾದ ಮೆಲುಸ್ತರದ ಅಭಿನಯ ನೀಡಿ ಹೊಸ ಮಾದರಿ ಎನಿಸಿದರು.

ಇವರೊಂದಿಗೆ ಚಿತ್ರದ ಗಂಭೀರ ಹಾಗೂ ಭಾವುಕ ದೃಶ್ಯಗಳಿಗೆ ಬೆಂಗಾವಲಾಗಿ ಜಯಂತಿ, ರಾಜೇಶ್, ಶುಭ, ಉದಯಶಂಕರ್ ಇದ್ದದ್ದು ಚಿತ್ರಕ್ಕೆ ಶೋಭೆ ನೀಡಿತ್ತು. ಸಿಂಗೀತಂ ಶ್ರೀನಿವಾಸರಾವ್ ಬಿಗಿಯಾದ ಚಿತ್ರಕಥೆ ಮತ್ತು ಚುರುಕು ನಿರೂಪಣೆ ನೀಡಿ ರಾಜ್ ಸಂಸ್ಥೆ ಅವರ ಮೇಲೆ ಇಟ್ಟಿದ್ದ ವಿಶ್ವಾಸವನ್ನು ಇನ್ನಷ್ಟು ಗಟ್ಟಿಗೊಳಿಸಿಕೊಂಡರು. ಹಾಸ್ಯ ಲೇಪಿತವಾಗಿದ್ದ ಚಿ.ಉದಯಶಂಕರ್‌ರವರ ಸಂಭಾಷಣೆ, ಬಿ.ಸಿ.ಗೌರಿಶಂಕರ್‌ರ ಉತ್ತಮ ಛಾಯಾಗ್ರಹಣ, ಶಂಕರ್-ಗಣೇಶ್‌ರ ಪಾಪ್ ಶೈಲಿಯ ಸಂಗೀತ ಚಿತ್ರದ ಓಟಕ್ಕೆ ಪೂರಕವಾಗಿತ್ತು. ಜಯಂತಿ ಅವರಿಗೆ ೧೯೮೬-೮೭ರ ಅತ್ಯುತ್ತಮ ಪೋಷಕ ನಟಿ ಎಂದು ರಾಜ್ಯ ಪ್ರಶಸ್ತಿ ಬಂತು.

'ತಾಯಿಯೇ ನನ್ನ ದೇವರು' ವಿಜಯಾರೆಡ್ಡಿ ದಮಯಂತಿ ಅವರಿಗಾಗಿ ನಿರ್ದೇಶಿಸಿದ ಚಿತ್ರ. ಪ್ರಭಾಕರ್, ಶಂಕರ್‌ನಾಗ್, ಜಯಂತಿ, ಪಲ್ಲವಿ ಮುಖ್ಯ ಪಾತ್ರದಲ್ಲಿದ್ದರು. ಸತ್ಯಂ ಸಂಗೀತದಲ್ಲಿ 'ದೇವರ ಗುಡಿಯಲಿ...' ಹಾಡು ಹಿತವೆನಿಸಿತು.

ಅರ್ಜುನ್‌ಸರ್ಜಾ, ರವಿಚಂದ್ರನ್, ಭವ್ಯ ಮೊದಲಾದವರ ಪಾತ್ರವರ್ಗದಲ್ಲಿ, ಶಂಕರ್-ಸೋಮು ಅವರ ಜಂಟಿ ನಿರ್ದೇಶನದಲ್ಲಿ 'ನಾ ನಿನ್ನ ಪ್ರೀತಿಸುವೆ' ತೆರೆಕಂಡಿತು. ಮಂಜುಳಾ-ಶಂಕರ್ ಮಿತ್ರರು ಚಿತ್ರ ನಿರ್ಮಿಸಿದ್ದು ಅಂತಹ ವಿಶೇಷವೇನೂ ಚಿತ್ರದಲ್ಲಿರಲಿಲ್ಲ.


(ಚಿತ್ರ ೧೦೧) 'ಆನಂದ್' ಚಿತ್ರದಲ್ಲಿ ತಲ್ಲಂ ನಂಜುಂಡಶೆಟ್ಟರು, ಆರ್.ಲಕ್ಷ್ಮಣ್, ಶಿವರಾಜ್‌ಕುಮಾರ್ ಮತ್ತು ರವಿಶಂಕರ್

ಉಷಾ ಆರ್ಟ್ ಫಿಲಂಸ್‌ನ ಎಂ.ಕೆ.ಬಾಲಾಜಿಸಿಂಗ್ ಅವರು ನಿರ್ಮಿಸಿ ರವೀಂದ್ರನಾಥ್ ನಿರ್ದೇಶಿಸಿದ ಚಿತ್ರ 'ಲಂಚ ಲಂಚ ಲಂಚ'ದಲ್ಲಿ ಲೋಕೇಶ್ ಉತ್ತಮ ಅಭಿನಯ ತೋರಿದ್ದರು. ಲಂಚದ ಸುತ್ತಲೇ ಸುತ್ತುವ ಜಗತ್ತಿನ ನಡಾವಳಿಯನ್ನು ಎತ್ತಿ ತೋರುವ ವಸ್ತುವೇ ಕಥೆಯ ತಿರುಳು. 'ಲಂಚ ಲಂಚ...' ಎಂಬ ಶೀರ್ಷಿಕೆ ಗೀತೆ ಮೆಚ್ಚಾಯಿತು.

ಯಶಸ್ವಿ ಚಿತ್ರ 'ತವರು ಮನೆ'ಯನ್ನು ಮಾಮೂಲಿನಂತೆ ಅಬ್ಬಾಯಿನಾಯ್ಡು ಕಥೆ ಬರೆದು ನಿರ್ಮಿಸಿದ್ದರು. ವಿಜಯ್ ನಿರ್ದೇಶಕರು. ಕಲ್ಯಾಣ್‌ಕುಮಾರ್, ರಾಜೇಶ್, ಭಾರತಿ, ಭವ್ಯ, ತಾರ ಮುಂತಾದವರ ಅಭಿನಯವಿದೆ. ಮುಖ್ಯವಾಗಿ ರಾಜೇಶ್ ಹಾಗೂ ಭಾರತಿ ಅವರ ನಟನೆ ಚೆನ್ನಾಗಿತ್ತು. ಈ ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ವಿನೋದ್ ಆಳ್ವಾ, ಅಬ್ಬಾಯಿಯವರ ಕೃಪಾಕಟಾಕ್ಷದ ನಡುವೆಯೂ ಕನ್ನಡ ಚಿತ್ರರಂಗದಲ್ಲಿ ನೆಲೆ ನಿಲ್ಲಲು ಸಾಧ್ಯವಾಗಲಿಲ್ಲ. ನೆರೆಯ ಆಂಧ್ರದಲ್ಲಿ ಯಶ ಕಂಡರು. ಚಿ.ಉದಯಶಂಕರ್ ಸಂಭಾಷಣೆ ಮನಮುಟ್ಟುವಂತಿತ್ತು. ಚಿತ್ರ ಶತದಿನವನ್ನು ಆಚರಿಸಿತು.

ವಿನಾಯಕ ಚಿತ್ರದವರು ಒಂದು ವಿಭಿನ್ನ ಕಥಾವಸ್ತುವನ್ನು ತೆರೆಗೆ ತಂದದ್ದೇ 'ಉಷಾ' ಚಿತ್ರದ ವಿಶೇಷ. ಕಲ್ಯಾಣ್‌ಕುಮಾರ್, ಜಯಂತಿ, ಸಂಯುಕ್ತ ಅಭಿನಯ ಚೆನ್ನ. ನಿರ್ದೇಶಕರು ರಾಘವ. ಚಿತ್ರದ ಪೂರ್ವಾರ್ಧದಲ್ಲಿ ಸ್ತ್ರೀ ಶೋಷಣೆಯ ಬಗ್ಗೆ ಉದ್ದುದ್ದ ಭಾಷಣಗಳಿದ್ದವು. ವಿಚಾರ ಉತ್ತಮವಾದರೂ ಅದು ಒಂದು ಅನುಭವ ಆಗದೆ ಅತಿ ವಾಚ್ಯತೆಯಿಂದಾಗಿ ಜಾರಿತು.

'ಮದುವೆ ಮಾಡು ತಮಾಷೆ ನೋಡು' ದ್ವಾರಕೀಶ್ ಅವರು ಕೊಟ್ಟ ಪುನರವತರಣಿಕೆ ಚಿತ್ರ. ಅವರೇ ಅಭಿನಯಿಸಿದ್ದರು. ಚೆನ್ನಾದ ನೃತ್ಯ-ಸಂಗೀತವೂ ಇತ್ತು. ತಮಿಳಿನಲ್ಲಿ ವಿಶು ಅವರು ಅಭಿನಯಿಸಿದ್ದ ಪಾತ್ರವನ್ನು ವಿಷ್ಣುವರ್ಧನ್ ನಿರ್ವಹಿಸಿದ್ದರು. ಹಾಸ್ಯವೇ ಆದರೂ ತರ್ಕ ಇರಬೇಕೆಂಬುದನ್ನು ಅವಗಣಿಸಲಾಗಿತ್ತು. ವರದಕ್ಷಿಣೆ ಕುರಿತಂತೆ ಕಾನೂನುಗಳಿವೆ, ಪೊಲೀಸ್ ಅಧಿಕಾರಿಯ ಕರ್ತವ್ಯಗಳಿವೆ ಎಂಬುದನ್ನು ಮರೆತುಬಿಡಲಾಗಿತ್ತು.

'ಹೆಣ್ಣಿನ ಕೂಗು' ದೊರೆ-ಭಗವಾನ್ ನಿರ್ಮಿಸಿ, ನಿರ್ದೇಶಿಸಿದ ಚಿತ್ರ. ಗೀತಾ ನಾಗಭೂಷಣ ಅವರ 'ಹಸಿಮಾಂಸ ಹದ್ದುಗಳು' ಕಾದಂಬರಿಯನ್ನು ಆಧರಿಸಲಾಗಿತ್ತು. ಸ್ತ್ರೀ ಪರವಾದ ನಿಲುವನ್ನು ತಾಳುವ ಕಾದಂಬರಿಗಾರ್ತಿ ಹಲವು ವಿವರಗಳನ್ನು ಕೊಡುತ್ತ ಅಂತಿಮ ಹಂತದಲ್ಲಿ ತೀವ್ರವಾದ ಪ್ರತಿಭಟನೆಯನ್ನು ತರುತ್ತಾರೆ. ದೊರೆ-ಭಗವಾನ್ ಜೋಡಿಗೆ ಇದು ಕೊಂಚ ವಿಭಿನ್ನವಾದ ಶೈಲಿಯ, ಅರಗಿಸಿಕೊಳ್ಳುವುದು ಕಷ್ಟವಾಗುವಂಥ ವಸ್ತು. ಪ್ರಾಮಾಣಿಕ ಪ್ರಯತ್ನವಂತೂ ಇತ್ತು. ಸರಿತಾ ಭಾವಾಭಿನಯದಲ್ಲಿ ಎಷ್ಟೇ ಸಮರ್ಥ ಅಭಿನೇತ್ರಿಯಾದರೂ ಈ ಪಾತ್ರಕ್ಕೆ ಅಗತ್ಯವಾದ್ದನ್ನು ಕೊಡಲಾರದೆ ಹೋದರು. ನಿರಂತರವಾಗಿ ಹಿಂಸಿಸುವ ಗಂಡನ ಪಾತ್ರದಲ್ಲಿ ತರುಣ ವಿಶ್ವನಾಥ್ ತುಂಬಾ ಚೆನ್ನಾಗಿ ಅಭಿನಯಿಸಿದ್ದರು (ಬಹುಕಾಲ ಮರೆಯಾಗಿದ್ದ ಈತ ೨೦೦೧ ರಲ್ಲಿ ಕನ್ನಡ ಚಿತ್ರವೊಂದನ್ನು ನಿರ್ದೇಶಿಸಲು ಬಂದರು). ಬಡತನ ಇತ್ಯಾದಿ ಅಂಶಗಳನ್ನು ನೈಜವಾಗಿ ತರಲು ಸಾಧ್ಯವಾಗಲಿಲ್ಲ. ಅಂತಿಮ ಘಟ್ಟದಲ್ಲಿ ಆಕೆ ತಾನು ಹೆತ್ತದ್ದು ಗಂಡುಮಗು ಎಂದು ತಿಳಿದಾಗ 'ಇನ್ನೆಷ್ಟು ಹೆಂಗಸರ ಬದುಕನ್ನು ಹಾಳು ಮಾಡಲು ಹುಟ್ಟಿದೆಯೋ, ಇದು ಬೇಡ ಸಾಯಿಸಿಬಿಡಿ' ಎಂದು ಚೀರುತ್ತಾಳೆ. ಗಂಡುಮಗುವಿನ ಅಗತ್ಯದ ಪರಿಕಲ್ಪನೆಯನ್ನೇ ಬುಡಮೇಲಾಗಿಸಿದ ಇಂಥ ತಿರುವು ಸಾಂದ್ರವಾಗಿ ಮೂಡಿಬರದೆ ಜಾರಿಕೊಂಡಿತು. ಸಾಮಾಜಿಕ ಸಂದರ್ಭದಲ್ಲಿ ಎಷ್ಟೇ ಸತ್ಯವಾದ ಮಾತಾದರೂ ರೂಢಿಗತ ಆಚಾರ, ನಂಬಿಕೆಗಳನ್ನು ಸಮೂಹಮಾಧ್ಯಮಗಳು ಅದರಲ್ಲೂ ಜನಪ್ರಿಯ ಚಿತ್ರಗಳಲ್ಲಿ ಥಟ್ಟನೆ ಇಂಥವನ್ನು ಹೇಳುವುದು ಸಾಧ್ಯವಾಗುವುದಿಲ್ಲ. ಸಮಾಜ ವಿರೋಧಿ ಹಣೆಪಟ್ಟಿಯಲ್ಲಿ ಹೊರಗುಳಿಯುತ್ತವೆ. ದೊರೆ-ಭಗವಾನ್ ಜೋಡಿ ಆ ಮಟ್ಟಿಗೆ ಧೈರ್ಯ ಮಾಡಿದರು ಎಂಬುದಷ್ಟೇ ಮುಖ್ಯ. ಚಿತ್ರ ಯಶಸ್ವಿಯಾಗದಿದ್ದರೂ ಅಂಥ ವಸ್ತು ಆಯ್ದದ್ದೇ ವಿಶೇಷ.

ಬಹಳಷ್ಟು ನಿರೀಕ್ಷೆ ಇರಿಸಿದ್ದ 'ಕಥಾನಾಯಕ' ತೀರಾ ಸಾಧಾರಣ ಚಿತ್ರವಾಯಿತು. ಪಿ.ವಿಮಲಕುಮಾರ್ ಮತ್ತು ಆರ್.ಜಯಲಕ್ಷ್ಮೀ ನಿರ್ಮಿಸಿ, ವಾಸು ನಿರ್ದೇಶಿಸಿದರು. ವಿಷ್ಣುವರ್ಧನ್, ಸುಮಲತ, ವಜ್ರಮುನಿ, ಲೀಲಾವತಿ ಇವರೆಲ್ಲರನ್ನೂ ಮೀರಿಸಿದ ನಟನೆ ಶ್ರೀನಿವಾಸಮೂರ್ತಿಯವರ ಸಹಜತೆಯಲ್ಲಿತ್ತು. ಚಿಕ್ಕದೇ ಪಾತ್ರವಾದರೂ ಚೊಕ್ಕ ಅಭಿನಯವಿತ್ತು. ವಿಷ್ಣು ಒಂದೆರಡು ದೃಶ್ಯಗಳಲ್ಲಿ ಮಿಂಚುತ್ತಾರೆ. ಕಥೆಯ ಬೆಳವಣಿಗೆಗೆ, ಸೇಡಿಗೆ ಸೂಕ್ತ ಕಾರಣ ಒದಗಿಸಲಾಗಿಲ್ಲ. ಅದೇ ಕಥೆಯ ಓಟಕ್ಕೂ ಮುಳುವಾಗುತ್ತದೆ. ಎಂ.ರಂಗರಾವ್ ಸಂಗೀತದ 'ನನ್ನದೆ ವೀಣೆಯು ಮಿಡಿಯುವುದು...' ಹಾಗೂ 'ಮರದಲ್ಲಿ ಮಾವಿನಕಾಯಿ...' ಹಾಡುಗಳು ರಂಜಿಸುತ್ತವೆ.

ಎಂ.ಪಿ.ಶಂಕರ್ ಭರಣಿ ಚಿತ್ರ ಲಾಂಛನದಲ್ಲಿ ಕಥೆ ಬರೆದು 'ಮೃಗಾಲಯ' ಚಿತ್ರವನ್ನು ತೆರೆಗೆ ತಂದರು. ಮೈಸೂರಿನ ಪ್ರಾಣಿ ಸಂಗ್ರಹಾಲಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳಲಾಗಿದೆ. ಚಿತ್ರದ ಹೆಸರೇ ಮೃಗಾಲಯವಾದ್ದರಿಂದ ಪ್ರಾಣಿಗಳು ಇರಲೇಬೇಕು. ನಾಯಿಯಿಂದ ಹುಲಿ, ಸಿಂಹ, ಆನೆಯವರೆಗೂ ಎಲ್ಲಾ ಪ್ರಾಣಿಗಳನ್ನು



(ಚಿತ್ರ ೧೦೨) 'ಮೃಗಾಲಯ' ಚಿತ್ರದಲ್ಲಿ ಅಂಬರೀಷ್, ಗೀತಾ ಮತ್ತು ಎಂ.ಪಿ.ಶಂಕರ್

ಚಿತ್ರದಲ್ಲಿ ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಚಿತ್ರದ ದೃಶ್ಯವೊಂದರಲ್ಲಿ ಮೃಗಾಲಯದ ಪ್ರಾಣಿಗಳೆಲ್ಲವೂ ರಾಸಾಯನಿಕ ಬೆರತ ನೀರು ಸೇವಿಸಿ ಅತಿ ಶಕ್ತಿ ಬಂದು ಮೃಗಾಲಯದಿಂದ ನಗರ ಪ್ರದೇಶಕ್ಕೆ ಪಲಾಯನವಾಗುತ್ತವೆ. ಆ ಸಂದರ್ಭವನ್ನು ನಿರ್ದೇಶಕ ವಿ.ಸೋಮಶೇಖರ್ ಅವರು ನಿಭಾಯಿಸಿರುವ ರೀತಿ ಅಚ್ಚರಿ ಮೂಡಿಸುತ್ತದೆ. ನಿಜಕ್ಕೂ ಇಂಥ ದೃಶ್ಯಗಳ ಚಿತ್ರೀಕರಣ ಒಂದು ದೊಡ್ಡ ಸಾಹಸವೇ. ಅಂಬರೀಷ್, ಗೀತಾ, ಲೀಲಾವತಿ, ಎಂ.ಪಿ.ಶಂಕರ್ (ದ್ವಿಪಾತ್ರ) ಅವರುಗಳಿಗಿಂತ ಪುಟ್ಟದೊಂದು ಪಾತ್ರದಲ್ಲಿ ಸುಂದರಕೃಷ್ಣ ಅರಸ್ ಗಮನ ಸೆಳೆಯುವಂಥ ಅಭಿನಯ ತೋರಿದ್ದಾರೆ. ಸುಧೀರ್, ಪ್ರಮೀಳಾ ಜೋಷಾಯ್ ಅವರ ನಟನೆಯೂ ಮೆಚ್ಚಿನಿಸುತ್ತದೆ.

'ಅನುರಾಗ ಅರಳಿತು' ಹೆಚ್.ಜಿ.ರಾಧಾದೇವಿಯವರ ಕಾದಂಬರಿಯನ್ನು ಆಧರಿಸಿದ ಚಿತ್ರ. ಅಹಂಕಾರಿ ಮಾಲೀಕಳನ್ನು ಮಣಿಸುವ ಕಾರ್ಮಿಕ ನಾಯಕನಾಗಿ ರಾಜಕುಮಾರ್ ಅಭಿನಯ ಉತ್ತಮವಾಗಿತ್ತು. ಮಾಧವಿ ಶ್ರೀಮಂತನ ಮಗಳು, ವಿದ್ಯಾವಂತೆ, ಗರ್ವಿಷ್ಠೆಯಾಗಿ ಪಾತ್ರಕ್ಕೆ ತಕ್ಕ ಗತ್ತುಗಳನ್ನು ತೋರಿದ್ದರು. ಚಿತ್ರದಲ್ಲಿ ತಾಯಿಯಾಗಿ ಪಂಢರಿಬಾಯಿ ಬಹಳ ಭಿನ್ನವಾಗಿ ಕಂಡರು. ಹಾಸಿಗೆ ಹಿಡಿದು ಮಲಗಿದ ತಾಯಿಯನ್ನು ತೋಳುಗಳಲ್ಲಿ ಎತ್ತಿಕೊಂಡೇ ದೈವ ದರ್ಶನಕ್ಕೆ ಕೊಂಡೊಯ್ಯುವುದೇ ಮೊದಲಾದ ಸನ್ನಿವೇಶಗಳು ಸೊಗಸಾಗಿ ಮೂಡಿಬಂದಿದ್ದವು. ಉಪೇಂದ್ರಕುಮಾರ್ ಅವರ ಸಂಗೀತದಲ್ಲಿ 'ಶ್ರೀಕಂಠಾ ವಿಷಕಂಠಾ...' ಮತ್ತು 'ಗಂಗಾ ಯಮುನಾ ಸಂಗಮ...' ಗೀತೆಗಳು ಬಹುಕಾಲ ಜನಮನದಲ್ಲಿ ನಿಂತವು. ಮುಖ್ಯವಾಗಿ ಈ ಚಿತ್ರದ ತೆಲುಗು ಅವತರಣಿಕೆ 'ಘರಾನಾ ಮೊಗುಡು'ದಲ್ಲಿ ಚಿರಂಜೀವಿ ಅಭಿನಯಿಸಿದ್ದರು. ಆ ಚಿತ್ರ ಜನಪ್ರಿಯ ಚಿತ್ರಗಳ ಯಶಸ್ಸನ್ನು ಕುರಿತು ವಾದ ವೇದಿಕೆಗಳಿಗೆ ಗ್ರಾಸ ಒದಗಿಸುವಷ್ಟು ವಿಶೇಷವಾಗಿತ್ತು. ಹಿಂದಿಯಲ್ಲಿ 'ಲಾಡ್ಲಾ', ತಮಿಳಿನಲ್ಲಿ 'ಮನ್ನನ್' ಆಗಿ ತೆರೆಗೆ ಬಂತು.

ಟಿ.ಎನ್.ನರಸಿಂಹನ್ ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ವಿಭಿನ್ನ ಪ್ರಯೋಗಗಳನ್ನು ನಡೆಸಿದ ಪ್ರತಿಭಾವಂತ ನಿರ್ದೇಶಕ, ಸಾಹಿತಿ. ಇವರು ಕಡಿಮೆ ದಿನಗಳಲ್ಲಿ ಭಿನ್ನ ರೀತಿಯಲ್ಲಿ ಗೆಳೆಯರೊಡಗೂಡಿ ನಿರ್ಮಿಸಿದ ಚಿತ್ರ '೨೭ ಮಾವಳ್ಳಿ ಸರ್ಕಲ್'. ಸುಮಾರು ವರ್ಷಗಳ ಕಾಲ ಈ ಚಿತ್ರದ ಬಿಡುಗಡೆಯಾಗದಿದ್ದರೂ, ನಂತರದ ದಿನಗಳಲ್ಲಿ ನರಸಿಂಹನ್ ಕಥೆಗಾರರಾಗಿ ಹೆಚ್ಚು ಬೇಡಿಕೆಯಲ್ಲಿದ್ದರು. ೧೯೯೬ರ ಸೆಪ್ಟೆಂಬರ್ ೧೭ ರಂದು ಬೆಂಗಳೂರು-ಮೈಸೂರು ಹೆದ್ದಾರಿಯ ಬಿಡದಿ ಬಳಿಯಲ್ಲಿ ನಡೆದ ಕಾರು ಅಪಘಾತದಲ್ಲಿ ಅವರು ತೀರಿಕೊಳ್ಳುವವರೆಗೆ ಕೆಲವಾರು ಚಿತ್ರಗಳಿಗೆ ತಮ್ಮ ಮೌಲಿಕ ಕೊಡುಗೆ ನೀಡಿದರು.

ಮೇಲ್ನೋಟಕ್ಕೆ ವಿಕ್ಷಿಪ್ತ ಸ್ವಭಾವದವರಂತೆ ತೋರಿದರೂ ಅತ್ಯಂತ ಸೃಜನಶೀಲ ಮನಸ್ಸನ್ನು ಹೊಂದಿದ್ದ ನರಸಿಂಹನ್ ನಿಗೂಢವಾದ ಮತ್ತು ಕುತೂಹಲ ಬೆಳೆಸುವ ಕಥಾವಸ್ತುಗಳ ಬಗ್ಗೆ ಹೆಚ್ಚು ಒಲವು ಇಟ್ಟುಕೊಂಡಿದ್ದರು. ಆಂಗ್ಲ ಕೃತಿ 'ವೇಯ್ಟ್ ಅಂಟಿಲ್ ಡಾರ್ಕ್' ಕೃತಿಯನ್ನು ಆಧರಿಸಿದ '೨೭ ಮಾವಳ್ಳಿ ಸರ್ಕಲ್' ರತ್ನಗಳನ್ನು ಹುದುಗಿಸಿಟ್ಟಿದ್ದ ಒಂದು ಬೊಂಬೆಯನ್ನು ಹುಡುಕಲು ಹೊರಟ ಮೂವರು ದಾದಾಗಳ ಕಥೆ. ಅಂತೂ ಇಂತೂ ಬೊಂಬೆಯ ಪತ್ತೆ ಮಾಡುವ ಇವರು ಅದನ್ನು ಪಡೆಯಲು ಒಬ್ಬರಿಗೊಬ್ಬರು ಕಿತ್ತಾಡಿ ಕೊಲೆ, ರೇಪ್ ಮುಂತಾದುವುಗಳಿಗೆ ಇಳಿಯುತ್ತಾರೆ. ಹೀಗೆ ಸಾಗುವ ಕಥೆಯ ಚಿತ್ರದ ರೂಪ ದುರ್ಬಲವಾಗಿದ್ದರೂ ಪ್ರಯೋಗದ ಆಶಯ ಹೊಂದಿತ್ತೆಂಬುದಷ್ಟೇ ಮುಖ್ಯವಾಯಿತು. ನರಸಿಂಹನ್ ಅವರ ಮಿತ್ರರೊಡಗೂಡಿ ಪ್ರಾರಂಭದಲ್ಲಿ ಚಿತ್ರಿಸಿದ್ದ ಪತ್ರಕರ್ತ ಜಿ.ಎಸ್.ಸದಾಶಿವ ಅವರ 'ಸಿಕ್ಕು' ಆಧಾರಿತ ಚಿತ್ರ 'ದಂಗೆ', ಕುವೆಂಪು ಅವರ ಸಣ್ಣಕತೆ 'ಮೀನಾಕ್ಷಿ ಮನೆಮೇಷ್ಟ್ರು' ಆಧರಿಸಿದ ಅದೇ ಹೆಸರಿನ ಚಿತ್ರಗಳಿಗೆ ತೆರೆಯ ಯೋಗ ಸಿಗಲಿಲ್ಲ. ಆದರೆ ಅವು ಆತನ ಪ್ರತಿಭೆಯ ಬಗ್ಗೆ ಉದ್ಯಮದಲ್ಲಿ ಸುದ್ದಿ ಮಾಡಿದವು. ಬಾಲಾಜಿಸಿಂಗ್ ಈತನ ನೆರವಿಗೆ ಬಂದರು. ಅನಂತರ ರಾಜಕುಮಾರ್ ಚಿತ್ರಗಳಿಗೆ ನರಸಿಂಹನ್ ಬಹಳ ಕಾಲ ಕೆಲಸ ಮಾಡಿದರು.

ರೋಹಿಣಿ ಪಿಕ್ಚರ್ಸ್ ಲಾಂಛನದ ಭಾರ್ಗವ ನಿರ್ದೇಶನದಲ್ಲಿ ತೆರೆಗೆ ಬಂದ ಚಿತ್ರ 'ಕರ್ಣ'. ಹಿಂದಿಯ 'ಸಾಹೇಬ್' ಚಿತ್ರದ ಪುನರವತರಣಿಕೆ. ಮೂಲದಲ್ಲಿ ಅನಿಲ್‌ಕಪೂರ್ ನಟಿಸಿದ್ದಾರೆ. 'ಕರ್ಣ' ಚಿತ್ರದಲ್ಲಿ ವಿಷ್ಣುವರ್ಧನ್ ಆ ಪಾತ್ರವನ್ನು ನಿರ್ವಹಿಸಿದ್ದರು. ಸುಮಲತ, ಸುಮಿತ್ರ, ರಾಜೇಶ್, ಮಾನು ಅಭಿನಯವಿತ್ತು. ವಿಷ್ಣುವರ್ಧನ್, ಅಶ್ವತ್ಥ್ ಹಾಗೂ ಅತ್ತಿಗೆ ಪಾತ್ರದಲ್ಲಿ ಸುಮಿತ್ರಾ ನಟನೆ ಉತ್ತಮವಾಗಿದೆ. ಮಹಾಭಾರತದ ಕರ್ಣನ ಕಥೆಯನ್ನು ಇಂದಿನ ಸಂದರ್ಭಕ್ಕೆ ಸಮೀಕರಿಸಿ ಹೆಣೆದಿದ್ದರು. ಮೂಲ ಚಿತ್ರದ ರಾಗ, ಛಾಪವೇ ಈ ಚಿತ್ರದಲ್ಲೂ ಇಣುಕಿದ್ದು ಸ್ವಂತಿಕೆಗೆ ಅವಕಾಶವಿಲ್ಲವಾಗಿತ್ತು. ಜೇಸುದಾಸ್ ಹಾಡಿರುವ 'ಆ ಕರ್ಣನಂತೆ....' ಜನಪ್ರಿಯವಾಯಿತು.

ವಿ.ವರ್ಗಿಸ್ ಅವರಿಗಾಗಿ ಟಿ.ಎಸ್.ನಾಗಾಭರಣ ನಿರ್ದೇಶಿಸಿದ ಚಿತ್ರ 'ನೆನಪಿನ ದೋಣಿ'. ಇದರ ಆಚೀಚೆ ಬಂದ ಚಿತ್ರಗಳಿಗಿಂತ ಇವರ ಕಥೆ ಕೊಂಚ ವಿಭಿನ್ನತೆಯಿಂದ



(ಚಿತ್ರ ೧೦೩) '೨೭ ಮಾವಳ್ಳಿ ಸರ್ಕಲ್' ಚಿತ್ರದಲ್ಲಿ ಹೆಚ್.ಜಿ.ಸೋಮಶೇಖರ್, ಕಲ್ಪನಾರೆಡ್ಡಿ



(ಚಿತ್ರ ೧೦೪) 'ನೆನಪಿನ ದೋಣಿ' ಚಿತ್ರದಲ್ಲಿ ಗೀತಾ, ಗಿರೀಶ್ ಕಾರ್ನಾಡ್, ಅನಂತ್‌ನಾಗ್

ಕೂಡಿತ್ತು. ನಿರೂಪಣೆಯಲ್ಲಿ ಸಾವೀನ್ಯವಿತ್ತು. ಹೊಸ ಧಾಟಿಯಲ್ಲಿ ಹೇಳಬೇಕೆಂದುಕೊಂಡರೂ ವಾಣಿಜ್ಯ ಕಾರಣಗಳಿಗಾಗಿ ಅನೇಕ ಒಪ್ಪಂದಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ನಾಗಾಭರಣರಿಗೂ ಅದು ಅನಿವಾರ್ಯ. ಗಿರೀಶ್ ಕಾರ್ನಾಡ್ ಹಾಗೂ ಗೀತಾ ಪಾತ್ರಗಳು ಅಭಿನಯದ ದೃಷ್ಟಿಯಿಂದ ಮೆಚ್ಚೆನಿಸುತ್ತದೆ. ಚಿತ್ರದ ಅಂತಿಮ ಘಟ್ಟದಲ್ಲಿ ಶ್ರೀಮಂತನಾಗಿ ಬಂದ ನಾಯಕನ ಮನೆ ಹೊಕ್ಕ ನಾಯಕಿಗೆ ಎಲ್ಲೆಲ್ಲೂ ತನ್ನದೇ ಆಳೆತ್ತರದ ಭಾವಚಿತ್ರಗಳ ವಿನ್ಯಾಸ ಕಾಣುತ್ತದೆ. ಈ ಸನ್ನಿವೇಶ ಹಾಗೂ ಪಾರ್ಟಿಯಲ್ಲಿ ಕವಿತೆ ಓದುವ ದೃಶ್ಯ ಮೊದಲಾದವು ತುಂಬಾ ಚೆನ್ನ ಎನ್ನಿಸಿದ್ದವು.

ಪೇರಾಲ ನಿರ್ದೇಶನದಲ್ಲಿ ಶ್ರೀ ಭವಾನಿ ಪಿಕ್ಚರ್ಸ್ ಲಾಂಛನದಲ್ಲಿ ವಜ್ರಮುನಿ 'ಬ್ರಹ್ಮಾಸ್ತ್ರ' ಚಿತ್ರ ನಿರ್ಮಿಸಿದರು. ಧಾರಾವಾಹಿಯಾಗಿ ಪ್ರಕಟವಾದ ಜನಪ್ರಿಯ ಕಾದಂಬರಿ ಆಧಾರಿತ ಕುತೂಹಲ ತುಂಬಿಕೊಂಡ ಚಿತ್ರ. ದ್ವಿಪಾತ್ರ ನಿರ್ವಹಿಸಿದ ಅಂಬರೀಷ್ ತಂದೆಯ ಪಾತ್ರದಲ್ಲಿ ಗಂಭೀರವಾಗಿ ನಟಿಸಿದ್ದಾರೆ. 'ಕನ್ನಡಮ್ಮನ ದೇವಾಲಯ...' ಹಾಡು ಸತ್ಯಂ ಅವರ ರಾಗ ಸಂಯೋಜನೆಯಲ್ಲಿ ಜನಪ್ರಿಯವಾಯಿತು.

ಜ್ಯೂಬ್ಲಿ ಸತ್ಯಜ್ಯೋತಿ ಕಂಬೈನ್ಸ್ ಲಾಂಛನದಲ್ಲಿ ಕೆ.ರಂಗರಾವ್ 'ಸತ್ಯಜ್ಯೋತಿ' ಚಿತ್ರ ತಯಾರಿಸಿದರು. ಈ ಚಿತ್ರದ ಮುಖ್ಯ ಆಕರ್ಷಣೆ ವಿಷ್ಣುವರ್ಧನ್. ಚಿತ್ರದಲ್ಲಿ ನಾಯಕನನ್ನು ಎರಡು ವಿಭಿನ್ನ ದೃಷ್ಟಿಕೋನದ ಹಿನ್ನೆಲೆಯಲ್ಲಿ ಚಿತ್ರಿಸಿರುವುದು ಮುಖ್ಯ ಅಂಶ. ವಿಷ್ಣು ಇಮೇಜ್‌ಗೆ ಒಗ್ಗುವ ಪಾತ್ರದ ನಡವಳಿಕೆಯನ್ನು ತಂದಿರುವುದರಲ್ಲಿ ನಿರ್ದೇಶಕ ಹೊಸತನ ಮೆರೆದಿದ್ದಾರೆ. ಊರ್ವಶಿ, ಸುಮಲತ ನಾಯಕಿಯರಾಗಿ ನಟಿಸಿದ್ದಾರೆ. ಇಬ್ಬರೂ ಒಪ್ಪವಾಗಿ ನಟಿಸಿದ್ದಾರೆ. ಚಿತ್ರದ ಅಂತಿಮವೂ ತೀರಾ ಸಾಧಾರಣವಾಗಿತ್ತು. ಒಟ್ಟಾರೆ ಹೇಳುವ ಕ್ರಮದಲ್ಲಿ ವಿಭಿನ್ನವಾದ ತಂತ್ರವಿತ್ತು.



(ಚಿತ್ರ ೧೦೫) 'ಗುರಿ' ಚಿತ್ರದಲ್ಲಿ ಮುಖ್ಯಮಂತ್ರಿ ಚಂದ್ರು ಮತ್ತು ರಾಜಕುಮಾರ್

ಗೀತಪ್ರಿಯ ನಿರ್ದೇಶನದ 'ಮೌನಗೀತ' ಒಂದು ಸದಭಿರುಚಿಯ ಪ್ರಯತ್ನವಾಗಿ ಪಾತ್ರ ಮುಖ್ಯವೆನಿಸಿದ ಚಿತ್ರ. ಜಗ್ಗು ಪ್ರಿಯದರ್ಶಿನಿ ಅವರ 'ಬಂಗಾರದ ಲಕ್ಷ್ಮಿ' ಕಾದಂಬರಿಯನ್ನು ಆಧರಿಸಿದ ಈ ಚಿತ್ರದಲ್ಲಿ ಸರಿತಾ ಮೊದಲ ಬಾರಿಗೆ ದ್ವಿಪಾತ್ರದಲ್ಲಿ ಅಭಿನಯಿಸಿದ್ದರು.

'ಟೈಗರ್' ನಿಷ್ಠಾವಂತ ಪೊಲೀಸ್ ಅಧಿಕಾರಿಯ ಕಥೆ. ಆರತಿ ತಮ್ಮ ಹಿಂದಿನ ಚಿತ್ರಗಳಿಗಿಂತ ಭಿನ್ನವಾಗಿ ನಟಿಸಿದ್ದರು. ಪ್ರಭಾಕರ್‌ಗೆ ಒಪ್ಪುವ ಪಾತ್ರ. ಬೇಬಿ ವಿಜಯಶ್ರೀ ಪಾತ್ರವೂ ಮನದಲ್ಲಿ ನೆಲೆ ನಿಲ್ಲುತ್ತದೆ. ಶಂಕರ್-ಗಣೇಶ್ ಸಂಗೀತದಲ್ಲಿ 'ನಿನ್ನಿಂದ ಆನಂದ ಈ ಮನೆಗೆ..' ಹಾಡು ಚೆನ್ನಾಗಿತ್ತು.

ಹಿಂದಿಯಲ್ಲಿ ರಾಜೇಶ್ ಖನ್ನಾ ಅಭಿನಯಿಸಿದ್ದ 'ಸೌತೇನ್' ಚಿತ್ರದ ಕನ್ನಡ ಅವತರಣಿಕೆ 'ಕೃಷ್ಣ ನೀ ಬೇಗನೆ ಬಾರೋ'. ಕನ್ನಡದಲ್ಲಿ ವಿಷ್ಣುವರ್ಧನ್, ಭವ್ಯ, ರಾಜಾನಂದ್, ಮುಖ್ಯಮಂತ್ರಿ ಚಂದ್ರು ಅಭಿನಯಿಸಿದ್ದರು. ಭವ್ಯ ಹಾಗೂ ರಾಜಾನಂದ್ ಗಮನ ಸೆಳೆಯುತ್ತಾರೆ. ಡಿ.ವಿ.ರಾಜಾರಾಂ ಅವರು ವಿವಿಧ ಲೊಕೇಶನ್‌ಗಳನ್ನು ಅತ್ಯುತ್ತಮವಾಗಿ ಚಿತ್ರಿಸಿದ್ದರು. ಬಪ್ಪಿಲಹರಿ ಸಂಗೀತದಲ್ಲಿ 'ಆಲಾರೆ ಅಲಾರೆ...', 'ಈ ರಾಧೆಗೆ...' ಹಾಗೂ 'ಮಮ್ಮಿ ಮಮ್ಮಿ ಮಮ್ಮಿ...' ಜನಪ್ರಿಯವಾದವು.

ಕೆ.ಬಾಲಚಂದರ್ ನಿರ್ದೇಶನದ 'ಸುಂದರ ಸ್ವಪ್ನಗಳು' ಅವರದೇ 'ಸೊಲ್ಲತ್ತಾನ್ ನಿನೈಕ್ಕಿರೇನ್' ಚಿತ್ರದ ರೀಮೇಕ್. ಬಿಗಿಯಾದ ಚಿತ್ರಕಥೆ, ಅಪ್ತವಾಗುವ ಶೈಲಿ, ಹೇಳುತ್ತಿರುವ ಮಾತು ಬಾಣದಂತೆ ಮನಸ್ಸನ್ನು ನಾಟುವಂಥ ಆಳವಾದ ನೋಟಗಳನ್ನು ಕೊಡಬಲ್ಲ ಸಮರ್ಥರು ಬಾಲಚಂದರ್. ಆದರೆ ಅವರ ಕಥಾವಸ್ತುವಿನ ಆಯ್ಕೆ, ತಮ್ಮ ನಂಬಿಕೆಗಳ ಸಮರ್ಥನೆಗೆ ಕೊಟ್ಟುಕೊಳ್ಳುವ ಕಾರಣಗಳು ಹಿತ ತರುವಂಥವಲ್ಲ. ಈ ಚಿತ್ರದಲ್ಲೂ ವಿವಾಹ ಎಂಬುದು ಒಂದು ವ್ಯವಸ್ಥೆ. ಅದನ್ನು ಕಾಪಾಡಿಕೊಳ್ಳಬೇಕು ಎಂಬ ತತ್ವಕ್ಕಾಗಿ ಒಂದು ಪದಾರ್ಥಕ್ಕಿಂತಲೂ ಕನಿಷ್ಠ ಆದ್ಯತೆಯನ್ನು ಹೆಂಡತಿಗೆ ಕೊಡುವ ಮುದುಕ ಗಂಡನಿಗೆ ನಿಷ್ಠೆ ತೋರಿಸಬೇಕು ಮತ್ತು ದಾರಿ ತಪ್ಪುತ್ತಿರುವ ಒಂದು ಹೆಣ್ಣಿಗಾಗಿ ಇನ್ನೊಂದು ಹೆಣ್ಣು ದುಷ್ಟನಿಗೆ ತನ್ನನ್ನೇ ಒಪ್ಪಿಸಿಕೊಂಡು, ಅನಂತರ ಅವನನ್ನೇ ವಿವಾಹವಾಗುವುದು ಇತ್ಯಾದಿ ಅಂಶಗಳಿದ್ದವು. ಯಾವುದೇ ವ್ಯವಸ್ಥೆ ತನ್ನ ಒಡಲಲ್ಲೇ ಹುಳಿತು ಹೋಗಿದ್ದರೆ ಅದನ್ನು ಇರುವ ಹಾಗೆಯೇ ಸ್ವೀಕರಿಸುವ ಬದಲು ದೋಷಗಳನ್ನು ಸರಿಪಡಿಸುವ ಪ್ರಯತ್ನ ಮಾಡಬೇಕು ಎಂಬ ಎಚ್ಚರ ನಿರ್ದೇಶಕರಿಗೆ ಇರಲಿಲ್ಲ. ಅತ್ಯಂತ ಶಕ್ತ ನಿರ್ದೇಶಕರ ಇಂಥ ಚಿತ್ರಗಳು ಜನಸಾಮಾನ್ಯರಲ್ಲಿ ತಪ್ಪು ತೀರ್ಮಾನಗಳಿಗೆ ದಾರಿ ಮಾಡುತ್ತವೆ. ಇವು ಕೇವಲ ಮನೋರಂಜನೆಯ ಚಿತ್ರಗಳಲ್ಲ. ತಮಿಳಿನಲ್ಲಿ ಎಂದೋ ಬಂದ ಚಿತ್ರಗಳು ಕನ್ನಡದಲ್ಲಿ ಬರುವುದರ ಅಗತ್ಯವಿತ್ತೇ ಎಂಬ ಪ್ರಶ್ನೆ ಹಾಗೇ ಉಳಿಯಿತು. ಬಾಲಚಂದರ್ ಅಂಥವೇ ಚಿತ್ರಗಳನ್ನು ಕೊಡುತ್ತ ಬಂದರು. ಕನ್ನಡ ಚಿತ್ರರಂಗವೂ ಸ್ವೀಕರಿಸಿತ್ತು.

'ಗುರಿ' ಚಿತ್ರದಲ್ಲಿ ರಾಜಕುಮಾರ್ ನಿರ್ವಹಿಸಿದ್ದಂಥ ಅನೇಕ ಪಾತ್ರಗಳು ಈಗಾಗಲೇ ಬಂದುಹೋಗಿವೆ. ಆದರೆ ಅಭಿನಯದ ದೃಷ್ಟಿಯಿಂದ ರಾಜಕುಮಾರ್ ಅಂಥ ಪಾತ್ರಗಳ ಏಕತಾನತೆಯನ್ನು ಮುರಿದದ್ದು ಗಮನಿಸಬೇಕಾದ ಅಂಶ. ತನ್ನ ತಂಗಿಯ ಜೊತೆ ಪಂದ್ಯ ಕಟ್ಟಿ ಸೋಲುತ್ತಾರೆ, ಅವರಿವರು ಕಂಡಾರೆಂಬ ಅಳುಕನ್ನು ತೋರುತ್ತಾ ಮುಗ್ಧನಂತೆ ಪಂದ್ಯ ಕಟ್ಟಿದ್ದಂತೆ ಕುಂಟುವಾಗ, ಹಣ ಕೊಟ್ಟು ಸೆಳೆದುಕೊಳ್ಳಲು ಬಂದ ವ್ಯಕ್ತಿಯೊಂದಿಗೆ ಅಂಥ ವರ್ತನೆಗೆ ಅಸಹ್ಯಪಟ್ಟು ಸಿಡುಕುವಾಗ, ಮೋಸಗಾರರ ಜಾಲದಲ್ಲಿ ಸಿಕ್ಕು ವಾಸ್ತವ ತಿಳಿಸಲಾಗದೆ ಚಡಪಡಿಸುತ್ತ ಅಸಹಾಯಕನಾಗಿ ಸಿಡಿಯುವ ಸನ್ನಿವೇಶ, ಪ್ರೀತಿಯ ತಂಗಿಯ ಹೆಣದ ಮುಂದೆ ಅವಳ ಸುಂದರ ಕನಸುಗಳನ್ನೆಲ್ಲ ನೆನೆಯುತ್ತ ದುಃಖಿಸುವಾಗ ಹೀಗ ಹಲವು ಸನ್ನಿವೇಶಗಳಲ್ಲಿ ಅವರ ಭಾವಾಭಿನಯವೇ ಗೆದ್ದುಬಿಡುತ್ತದೆ. ಮುಸ್ಲಿಮನಾಗಿ, ವೈದ್ಯನಾಗಿ, ಪೊಲೀಸ್ ಅಧಿಕಾರಿಯಾಗಿ ದುಃಖ-ದೈನ್ಯ, ಗತ್ತು-ಗಾಂಭೀರ್ಯ, ಹಾಸ್ಯ-ರೋಷ ಎಲ್ಲವನ್ನೂ ಪ್ರದರ್ಶಿಸುತ್ತಾರೆ. ತಾನು ಸೇಡು ತೀರಿಸಿಕೊಳ್ಳಬೇಕಿದ್ದ ವ್ಯಕ್ತಿಯ ಒಡಲೊಳಗಿದ್ದ ರಾಕ್ಷಸ ಪ್ರವೃತ್ತಿಯನ್ನು ಉದ್ರೇಕಿಸಿ, ಖಳನನ್ನು ಕೊಂದು, ತಾನೂ ಗುಂಡೇಟಿಗೆ ಬಲಿಯಾಗುವಾಗ ತನ್ನ ಕಾರ್ಯ ಸಿದ್ಧಿಯಾದ ತೃಪ್ತಿ ತೋರುವ ಮುಖಭಾವ. ಇಲ್ಲೆಲ್ಲ ಅವರ ಅಭಿನಯವೇ ಕಥೆ-ಸನ್ನಿವೇಶಗಳ ತರ್ಕವನ್ನು ಮೀರಿ ನಿಲ್ಲುತ್ತವೆ.

ಕೆ.ವಿ.ಜಯರಾಂ ನಿರ್ಮಿಸಿ ನಿರ್ದೇಶಿಸಿದ 'ಅರುಣರಾಗ' ಅನಂತ್‌ನಾಗ್, ಗೀತಾ, ಲೋಕನಾಥ್ ಅಭಿನಯದಲ್ಲಿ ಸ್ವಾಭಿಮಾನ, ದುರಭಿಮಾನಗಳ ಕಥೆ ಹೇಳುತ್ತದೆ. ರೇಖಾ ಕಾಖಂಡಕಿ ಅವರ ಕಾದಂಬರಿ ಆಧರಿಸಿದ್ದ ಈ ಚಿತ್ರದಲ್ಲಿ ಲೋಕನಾಥ್ ನಟನೆ ಉತ್ತಮವಾಗಿತ್ತು. ಜಯರಾಂ ಚಿತ್ರಕಥೆಯನ್ನು ಬಹಳ ಚೆನ್ನಾಗಿ ಹೆಣೆದಿದ್ದರು. ಆದರೆ ಸಂಭಾಷಣೆ ಅಲ್ಲಲ್ಲಿ ಗ್ರಾಂಥಿಕ ರೂಪ ತಾಳಿದ್ದರಿಂದ ಓಟಕ್ಕೆ ತಡೆಯೊಡ್ಡುತ್ತವೆ. 'ನಾನೊಂದು ತೀರಾ ನೀನೊಂದು ತೀರ...' ಹಾಗೂ 'ಹೂವಂತ ಹೃದಯವನು ಹಿಂಡುವಿರೇಕೆ...' ಹಾಡುಗಳು ಹಿತವೆನಿಸಿದವು. ನಾಯಕಿಯಾಗಿ ಅಭಿನಯಿಸಿದ್ದ ಗೀತಾಗೆ ೧೯೮೬-೮೭ರ ಅತ್ಯುತ್ತಮ ನಟಿ ರಾಜ್ಯ ಪ್ರಶಸ್ತಿ ಬಂತು.

'ಮನೆಯೇ ಮಂತ್ರಾಲಯ' ತೆಲುಗಿನ ಮೂಲದಿಂದ ಬಂದ ಚಿತ್ರವಾದರೂ ಭಾರತಿ ಅಭಿನಯ ಗಮನಾರ್ಹವೆನಿಸಿತ್ತು. ಸೊಸೆಯಾಗಿ ಮನೆ ತುಂಬಿದ ದಿನವೇ ಸಾಲಗಾರನಿಗೆ ಒಡವೆಗಳನ್ನು ಬಿಚ್ಚಿ ಕೊಡುವಾಗ, ಗಂಡ ಪ್ರಾಣಾಂತಿಕ ಸ್ಥಿತಿಯಲ್ಲಿರುವಾಗ ಆಕೆಯ ನೋವು, ಮನೆಯೆಲ್ಲ ಸಾಲಗಾರರ ಪಾಲಾಗಿ ಸೂರಿಲ್ಲದೆ ಬೀದಿಗೆ ಬಂದು ನಿಂತಾಗ, ಹಸಿದ ಗಂಡನಿಗಾಗಿ ಭಿಕ್ಷೆ ಬೇಡಿ ಅನ್ನ ತರುವಾಗ, ಇಂಥ ಹಲವು ಸನ್ನಿವೇಶಗಳಲ್ಲಿ ಆಕೆಯ ಮುಖದಲ್ಲಿ ಎಳೆ ಎಳೆಯಾಗಿ ಭಾವನೆಗಳು ಸುಳಿ ಸುಳಿದು ಸರಿಯುತ್ತವೆ. ಎಂಥ ಪ್ರೇಕ್ಷಕನೂ ವಿಚಲಿತನಾಗುವಂಥ ಸನ್ನಿವೇಶಗಳವು.

ಇದೇ ಅವಧಿಯಲ್ಲಿ ಹೆಚ್ಚು ಸುದ್ದಿ ಮಾಡಿದ ಚಿತ್ರ 'ಮಲಯ ಮಾರುತ'. ಸಿ.ವಿ.ಎಲ್.ಶಾಸ್ತ್ರಿಯವರು ಅಪಾರ ವೆಚ್ಚದಲ್ಲಿ ಮಹತ್ವಾಕಾಂಕ್ಷೆಯಿಂದ ನಿರ್ಮಿಸಿದ ಚಿತ್ರವಿದು. ಸಂಪೂರ್ಣ ಸಂಗೀತಮಯ ಚಿತ್ರವೊಂದನ್ನು ನಿರ್ದೇಶಿಸುವ ರವೀಯವರ ಆಸೆ ಈ ಚಿತ್ರದ ಮೂಲಕ ಈಡೇರಿತಾದರೂ ಪ್ರೇಕ್ಷಕರಿಗೆ ಅತ್ಯುತ್ತಮ ಚಿತ್ರ ನೋಡಿದ ತೃಪ್ತಿ ಉಂಟಾಗಲಿಲ್ಲ. 'ಮಲಯ ಮಾರುತ' ಚಿತ್ರದಲ್ಲಿ ವಿಷ್ಣುವರ್ಧನ್ ಕೆಲವು



(ಚಿತ್ರ ೧೦೬) 'ಮಲಯ ಮಾರುತ' ಚಿತ್ರದಲ್ಲಿ ವಿಷ್ಣುವರ್ಧನ್, ಸರಿತಾ ಮತ್ತು ಮಾಧವಿ

ಸನ್ನಿವೇಶಗಳಲ್ಲಿ ಮನೋಜ್ಞ ಅಭಿನಯ ನೀಡಿದ್ದಾರ. ಸಂಗೀತ ತನಗ ಒಲಿಯುವ ಸತಾಯಿಸುತ್ತಿರುವಾಗ, ಗುರು ಸಿಟ್ಟಾಗಿ ಮನೆಯಿಂದ ಹೊರಹಾಕಿದಾಗಿನ ಮಾನಸಿಕ ಯಾತನೆ, ಗುರುವಿನ ಆತ್ಮ ತನ್ನೊಳಗೆ ಪ್ರವೇಶಿಸಿ ಸಂಗೀತ ಉಕ್ಕಿ ಹರಿದಾಗ 'ಶಾರದೆ ದಯೆ ತೋರಿದೆ....' ಹಾಡುವಲ್ಲಿಯ ಆನಂದ ಭಾವ, ಮತ್ತೆ ಕಂಠಸಿರಿ ಕಳೆದು ಹೋದಾಗಿನ ವ್ಯಥೆ, ದೇವಿಯ ಮುಂದೆ ಧನ್ಯತೆಯಿಂದ ಹಾಡುವುದು ಇಂಥಲ್ಲಿ ಪಾತ್ರ, ಸನ್ನಿವೇಶದ ಆಳವನ್ನು ಅರಿತು ಆಂತರಿಕ ಜಂಜಾಟ, ದುಃಖ, ಸಂತೋಷಗಳನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುತ್ತಾರೆ. ಜನಪ್ರಿಯವಾದ ಈ ಚಿತ್ರದ ಹಾಡು ಹಾಗೂ ಸಂಗೀತಕ್ಕಾಗಿ ವಿಜಯಭಾಸ್ಕರ್ 'ಸುರ್‌ಸಿಂಗಾರ್' ಪುರಸ್ಕಾರ ಪಡೆದುಕೊಂಡರು.

ಇದೇ ಸಂದರ್ಭದಲ್ಲಿ ಈ ಚಿತ್ರದಲ್ಲಿ ಬಳಸಲಾಗಿದ್ದ ಹಾಡೊಂದು ಆಕ್ಷೇಪಕ್ಕೆ ಗುರಿಯಾಗಿ ವಿವಾದ ಉಂಟುಮಾಡಿತು. ರವೀ 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ..' ಎಂಬ ಕನಕದಾಸರ ಗೀತೆಯನ್ನು ಕ್ಯಾಬರೆ ನರ್ತಕಿಯ ಮೇಲೆ ಚಿತ್ರೀಕರಿಸಿದ್ದರು. ಇದು ಕನಕದಾಸರಿಗೆ ಮಾಡಿರುವ ಅವಮಾನವೆಂದು ಕುರುಬ ಜನಾಂಗದ ಮುಖಂಡರು ಪ್ರತಿಭಟನೆ ವ್ಯಕ್ತಪಡಿಸಿದರು. "...ದಾಸರ ಕೃತಿಯನ್ನು ಜನಪ್ರಿಯಗೊಳಿಸುವ ಏಕೈಕ ಉದ್ದೇಶದಿಂದ ಬಳಸಲಾಗಿದೆ. ಜೊತೆಗೆ ಪಾಶ್ಚಾತ್ಯ ವಾದ್ಯಗಳನ್ನೇ ಬಳಸಿ ಶಾಸ್ತ್ರೀಯ ರಾಗದಲ್ಲಿ ಹಾಡುವ ಪ್ರಯೋಗ ಮಾಡಲಾಗಿದೆ. ಇದರೊಂದಿಗೆ ಕ್ಯಾಬರೆ ನರ್ತಕಿಯು ಸಹ ಪರಿವರ್ತನೆಯಾಗಿ ಗರತಿಯಂತ ಬಟ್ಟೆಯುಡುವ ಸನ್ನಿವೇಶವದು" ಎಂದು ರವೀ ಹೇಳಿದರು. ಈ ಮಾತುಗಳಿಂದ ಆ ಜನಾಂಗದ ಮುಖಂಡರು ಸಮಾಧಾನಗೊಳ್ಳಲಿಲ್ಲ. ಆಗ ರವೀ ಆ ಹಾಡಿನ ದೃಶ್ಯವನ್ನು ಕತ್ತರಿಸಿ ಬೇರೆಯೇ ದೃಶ್ಯಗಳನ್ನು ಚಿತ್ರಿಸಿಕೊಂಡರು.

ಅತ್ಯುತ್ತಮ ಧ್ವನಿಗ್ರಹಣಕ್ಕಾಗಿ ಸಿ.ಡಿ.ವಿಶ್ವನಾಥರಿಗೆ ೧೯೮೬-೮೭ರ ರಾಜ್ಯ ಪ್ರಶಸ್ತಿ ತಂದುಕೊಟ್ಟ 'ಮಲಯ ಮಾರುತ' ದೆಹಲಿಯಲ್ಲಿ ನಡೆದ ೧೧ನೆಯ ಅಂತರರಾಷ್ಟ್ರೀಯ ಚಿತ್ರೋತ್ಸವದ 'ಮೇನ್‌ಸ್ಟ್ರೀಮ್' ವಿಭಾಗಕ್ಕೆ ಆಯ್ಕೆಯಾಗಿತ್ತು. ಈ 'ಮೂಲ ವಾಹಿನಿ' ವಿಭಾಗ ಆರಂಭವಾಗಿದ್ದು ಅದೇ ವರ್ಷ. ಭಾರತೀಯ ಚಿತ್ರರಂಗದ ವ್ಯಾಪಾರಿ ವಲಯದಿಂದ ಆಯ್ದ ಚಿತ್ರಗಳನ್ನು ಈ ವಿಭಾಗದಲ್ಲಿ ಪ್ರದರ್ಶಿಸಲಾಗುತ್ತದೆ. ಆ ವರ್ಷ ದಕ್ಷಿಣ ಭಾರತದ ವಿವಿಧ ಭಾಷೆಯ ಎಂಟು ಚಿತ್ರಗಳು, ಮುಂಬೈನಿಂದ ಏಳು, ಪೂರ್ವ ವಲಯದಿಂದ ಮೂರು ಚಿತ್ರಗಳು ಈ ವಿಭಾಗಕ್ಕೆ ಆಯ್ಕೆಯಾಗಿ ಪ್ರದರ್ಶನವಾದವು.

'ಜೇತ್ರ' ಸೋಮಶೇಖರ್ ನಿರ್ದೇಶನದ ರಾಜಕೀಯದಲ್ಲಿಯ ಭ್ರಷ್ಟತೆಯನ್ನು ಕಂಡು ಸಿಡಿದೇಳುವ ನಾಯಕನ ಸುತ್ತ ಹೆಣೆಯಲಾದ ಮತ್ತೊಂದು ಕಥೆ. ಎಂದಿನಂತೆ ಸೋಮಶೇಖರ್ ಈ ಚಿತ್ರದಲ್ಲಿ ಮಳೆಯಲ್ಲಿ ನೆನೆಯುತ್ತ ನರ್ತಿಸುವ ಗೀತೆಯನ್ನು ಚಿತ್ರಿಸಿದ್ದರು. ದೃಶ್ಯ ಶ್ರೀಮಂತಿಕೆಗಾಗಿ ಸಾಲುಗಟ್ಟಿ ನಿಂತ ಲಾರಿಗಳಿಗೆಲ್ಲ ಹಳದಿ ಬಣ್ಣವನ್ನು ಲೇಪಿಸಿದರು. ಇವನ್ನೆಲ್ಲ ಅವರು ಯಶಸ್ಸಿನ ಸೂತ್ರಗಳೆಂದು ಭಾವಿಸತೊಡಗಿದ್ದರು. ರಾಜಕಾರಣವನ್ನು ಟೀಕಿಸುವಾಗ ಕೊಂಚ ಜಾಣತನ, ಸೂಕ್ಷ್ಮತೆ ಇದ್ದದ್ದು ಮುಖ್ಯಮಂತ್ರಿ ಚಂದ್ರು ಅವರಲ್ಲಿ. ಪ್ರಾಯಃ ಅವರು ರಾಜಕಾರಣದಲ್ಲಿ ಪ್ರವೇಶಿಸಿದ್ದರಿಂದ ಅತಿ ಹಾಸ್ಯ, ಅತಿಯಾದ ಟೀಕೆಗಳನ್ನು ನಿವಾರಿಸಿಕೊಂಡಿದ್ದಿರಬಹುದು. ಆದರೆ ಎಲ್ಲ ದುಷ್ಟರನ್ನೂ ನಾಯಕನೊಬ್ಬನೇ ಕತ್ತರಿಸಿ ಚೆಂಡಾಡುವುದೇ ಪರಿಹಾರ ಎಂಬ ನಿಲುವು ವಾಸ್ತವವನ್ನು ಸರಿಯಾಗಿ ಗ್ರಹಿಸಲಾರದವರ ಚಿಂತನೆಯಷ್ಟೇ. ಹೊಸ ಯೋಚನೆಗಳು, ಹೊಸ ವಿಧಾನಗಳು ರಾಜಕಾರಣದಲ್ಲಿ ಬರತೊಡಗಿದ್ದವು. ರಾಜಕಾರಣಿಗಳಿಗೂ ಮೀರಿದ ಇನ್ನಾವುದೋ ಶಕ್ತಿಯ ಪ್ರವೇಶವಾಗತೊಡಗಿತ್ತು. ಸೋಮಶೇಖರ್ ಇದನ್ನೆಲ್ಲ ಗ್ರಹಿಸದೇ ಅಜ್ಜ ನೆಟ್ಟಾಲವನ್ನೇ ನೆಚ್ಚಿ ಕುಳಿತರು.

'ರಥಸಪ್ತಮಿ' ಚಿತ್ರದಲ್ಲಿ ಶಿವರಾಜ್‌ಕುಮಾರ್ ಅಭಿನಯದಲ್ಲಿ ಕೆಲವು ಸನ್ನಿವೇಶಗಳು ಗಮನ ಸೆಳೆಯುತ್ತವೆ. 'ಶಿಲೆಗಳು ಸಂಗೀತವ ಹಾಡಿದೆ...' ಗೀತೆಯನ್ನು ಹೇಳುವಾಗ, ಪ್ರೇಮ ದುರಂತದ ಹಂತದಲ್ಲಿ ವಿಷ ಸೇವನೆ, ರಕ್ತ ಕಾರುವಿಕೆಯಂಥ ಚಿತ್ರಿಕೆಗಳು ತುಸು ರೂಕ್ಷವಾದರೂ ಆ ಸಂದರ್ಭಕ್ಕೆ ಶಿವರಾಜ್‌ಕುಮಾರ್ ಭಾವಾಭಿನಯದಲ್ಲಿ ಕಂಡ ವಿಷಾದ, ವ್ಯಥೆ ಗಮನ ಸೆಳೆಯುವಂಥದ್ದು. ಚಿತ್ರದಲ್ಲಿ ಅವರ ನಾಯಕಿಯಾಗಿ ಅಭಿನಯಿಸಿದ್ದ ಆಶಾರಾಣಿ ನಿಜಕ್ಕೂ ಅತ್ಯುತ್ತಮ ಕಲಾವಿದೆಯಾಗುವ ಎಲ್ಲ ಲಕ್ಷಣಗಳನ್ನೂ ತೋರಿದ್ದರು. ಕಣ್ಣುಕುಕ್ಕುವ ಚೆಲುವೆ, ಕಲಾವಿದೆ ದಕ್ಕಿದಳೆಂಬ ಹೊತ್ತಿಗೆ ಆಕೆ ಅರ್ಜುನ್ ಸರ್ಜಾ ಅವರನ್ನು ವಿವಾಹವಾಗಿ ಅಭಿನಯಕ್ಕೆ ವಿದಾಯ ಹೇಳಿದ್ದು ಚಿತ್ರರಂಗದ ಪಾಲಿಗೆ ನಷ್ಟವೇ ಸರಿ. ಆಶಾರಾಣಿ ಖ್ಯಾತ ನಟ ರಾಜೇಶ್ ಅವರ ಮಗಳು.

'ಆಫ್ರಿಕಾದಲ್ಲಿ ಶೀಲಾ' ದ್ವಾರಕೀಶ್‌ರ ಇಪ್ಪತ್ತೈದನೆಯ ಚಿತ್ರ. ಸಂಪೂರ್ಣ ಆಫ್ರಿಕಾದಲ್ಲಿ ಚಿತ್ರಿಸಿರುವುದೇ ದೊಡ್ಡ ಸುದ್ದಿಯಾಗಿತ್ತು. ದ್ವಾರಕೀಶ್ ಅಂಥ ಮಹಾ ಸಾಹಸಿ. ಅನೇಕ ಮೊದಲುಗಳಿಗೆ ಕಾರಣರು. ಈ ಚಿತ್ರಕ್ಕೆ ಬಪ್ಪಿಲಹರಿ ಸಂಗೀತವೂ ಇತ್ತು. ಅವರಿಗೆ ಕನ್ನಡದ ಕವಿತೆಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಒಂದೊಂದು ಪ್ರದೇಶದ ಜಾಯಮಾನ, ಅಲ್ಲಿಯ ಭಾಷೆ, ಕೆಲವು ರೀತಿ-ನೀತಿಗಳನ್ನು ಬೇಡುತ್ತವೆ. ಕನ್ನಡದ ಶಬ್ದಗಳ ಉಚ್ಚಾರಣೆಯಲ್ಲಿ ತಪ್ಪುಗಳಾದರೆ ಅರ್ಥ ಕಳೆದುಕೊಳ್ಳುತ್ತವೆ. ಚಿತ್ರದ ಹಾಡುಗಳು ಅರ್ಥವಾಗದಾಗ ಕಿರುಚಿದ ಹಾಗೆ ಅನ್ನಿಸಿದರೂ ಅಚ್ಚರಿಯಿಲ್ಲ. ಅಂಥ ಆಕ್ಷೇಪಗಳನ್ನು ದ್ವಾರಕೀಶ್ ಎದುರಿಸಬೇಕಾಯಿತು. ಬಹಳಷ್ಟು ಟ್ರಿಕ್ಸ್, ಡ್ಯೂಪ್‌ಗಳು ಇದ್ದದ್ದು, ಮನುಷ್ಯರಿಗೇ ಪ್ರಾಣಿಗಳ ಉಡುಪು ತೊಡಿಸಿದ್ದು ಇಂಥ ಅನೇಕ ಸಂಗತಿಗಳು ಟೀಕೆಗೆ ಒಳಗಾದವು. ದ್ವಾರಕೀಶ್ ಅದಕ್ಕೆಲ್ಲಾ ತಲೆ ಕೆಡಿಸಿಕೊಳ್ಳಲಿಲ್ಲ. "ನನಗೇನೂ ಯೋಚನೆ ಇಲ್ಲ. ಜನ 'ಶೀಲಾ'ನ ಒಪ್ಪಿದ್ದಾರೆ" ಎಂತಲೇ ಹೇಳುತ್ತಿದ್ದರು. ಮುಂದಿನ ಚಿತ್ರ 'ಡ್ಯಾನ್ಸ್ ರಾಜಾ ಡ್ಯಾನ್ಸ್'ಗೆ ಸಿದ್ಧತೆ ಮಾಡುತ್ತಿದ್ದರು. ಅದೊಂದು ವಿಚಿತ್ರ ಛಲದ ವ್ಯಕ್ತಿತ್ವ. 'ಆಫ್ರಿಕಾದಲ್ಲಿ ಶೀಲಾ' ಚಿತ್ರದ ಹಾಡುಗಳನ್ನು ದ್ವಾರಕೀಶ್ ಲಂಡನ್‌ನಲ್ಲಿ ಧ್ವನಿಮುದ್ರಿಸಿಕೊಂಡಿದ್ದರು.



(ಚಿತ್ರ ೧೦೭) 'ರಥಸಪ್ತಮಿ' ಚಿತ್ರದಲ್ಲಿ ರವಿಶಂಕರ್ ಮತ್ತು ಶಿವರಾಜ್‌ಕುಮಾರ್



(ಚಿತ್ರ ೧೦೮) 'ಶಂಖನಾದ' ಚಿತ್ರದಲ್ಲಿ ಅರವಿಂದ್, ಹೊನ್ನಯ್ಯ ಮತ್ತು ಅಂಜನಪ್ಪ

ಚಿತ್ರದಲ್ಲಿರುವುದು ನಿಜವಾಗಿಯೂ [illegible] ಅಥವಾ ಆದಿರುವುದೇ ಹಾಗೆಯೋ ಎಂಬ ಅನುಮಾನ ಉಂಟಾಗುವಷ್ಟು ಚಿತ್ರ ಕಳಪೆಯಾಗಿತ್ತು. ಈ ಚಿತ್ರದ ನಿರ್ಮಾಣಕ್ಕೆ ತಗುಲಿದ ದುಬಾರಿ ವೆಚ್ಚ ದ್ವಾರಕೀಶ್‌ರವರನ್ನು ಆರ್ಥಿಕವಾಗಿ ಶೂನ್ಯ ಸ್ಥಿತಿಗೆ ತಂದು ನಿಲ್ಲಿಸಿತು. ಹೆಸರಾಂತ ಅಮಿ ಫಿಲಂಸ್ ಸಂಸ್ಥೆ ಈ ಚಿತ್ರಕ್ಕೆ ಹಣ ತೊಡಗಿಸಿದ್ದು ಚಿತ್ರವು ಊಹಾತೀತವಾಗಿ ನೆಲ ಕಚ್ಚಿದ್ದರಿಂದ ದ್ವಾರಕೀಶ್ ಆ ಸಂಸ್ಥೆಗೆ ೨೦ ಲಕ್ಷ ರೂಪಾಯಿಗಳನ್ನು ಹಿಂದಿರುಗಿಸಬೇಕಾದ ಪ್ರಸಂಗ ಎದುರಾಯಿತು.

'ವಿಶ್ವರೂಪ' ಚಿತ್ರವನ್ನು ಪಿ.ಸೋಮಶೇಖರ್ ನಿರ್ದೇಶಿಸಿದರು. ಹೇಳುವಂಥದೇನೂ ಇಲ್ಲ. ಈ ಚಿತ್ರವನ್ನು ಟಿ.ಲಕ್ಷ್ಮಿ[illegible] ಎಂಬುವವರು ನಿರ್ಮಿಸಿದರೆಂದಷ್ಟೇ ಹೇಳಬಹುದು.

ಅದ್ದೂರಿ ನಿರ್ಮಾಣ, ಸಾಹಸ ಪ್ರವೃತ್ತಿಗ ಉದಾಹರಣೆಯಾಗುವ ಇಂಥ ಚಿತ್ರಗಳ ನಡುವೆ 'ಶಂಖನಾದ' ಎಂಬ ಅತಿ ಕಡಿಮೆ ಬಜೆಟ್ಟಿನ ಚಿತ್ರವೊಂದು ಶತದಿನ ಪ್ರದರ್ಶನ ಕಂಡದ್ದು ಇಲ್ಲಿ ಚರ್ಚೆಗೆ ಯೋಗ್ಯ. ಈ ಚಿತ್ರವನ್ನು ನಿರ್ದೇಶಿಸಿದವರು ಉಮೇಶ್ ಕುಲಕರ್ಣಿ. ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಸಂಕಲನದಲ್ಲಿ ಪದವಿ ಪಡೆದ ಇವರ ಪ್ರಥಮ ಚಿತ್ರ ಇದು. ದಲಿತರಿಗೆ, ಹಿಂದುಳಿದ ವರ್ಗದವರಿಗೆ ಆಡಳಿತದಲ್ಲಿ ಪಾಲುಕೊಡಲು ರೂಪಿಸಿದ ಯೋಜನೆಗಳು, ನಿಯಮಗಳು, ನಿರ್ಣಯಗಳು ಹೇಗೆ ಕಾಗದದ ಮೇಲೆಯೇ ಉಳಿದುಕೊಳ್ಳುತ್ತವೆ ಎಂಬುದನ್ನು ಮತ್ತು ಹಾಗೊಮ್ಮೆ ಅಧಿಕಾರ ಕೈಗೆ ಸಿಕ್ಕಿದರೂ ಅದನ್ನು ಬಳಸಲು ಮುಂದುವರಿದ ವರ್ಗಗಳು ಹೇಗೆ ಅವರಿಗೆ ಅವಕಾಶ ನೀಡುತ್ತಿಲ್ಲವೆಂಬುದನ್ನು ಒಂದು ಉತ್ತಮ ಕಥೆಯ ಮೂಲಕ ನಿರೂಪಿಸುವ ಪ್ರಯತ್ನ ಮಾಡಲಾಗಿತ್ತು. ಈ ಸಣ್ಣ ಕಥೆಯನ್ನು ಬರೆದವರು ಮರಾಠಿ ಲೇಖಕ ಡಾ|ಎ.ವಿ.ವರ್ಟಿ. ಹಳ್ಳಿಯ ಹಿಂದುಳಿದ ವರ್ಗಕ್ಕೆ ಸೇರಿದ ದಾಸಯ್ಯನೊಬ್ಬ ಪಂಚಾಯಿತಿಯ ಅಧ್ಯಕ್ಷನಾಗುತ್ತಾನೆ. ಅವನನ್ನು ಹತೋಟಿಯಲ್ಲಿಟ್ಟುಕೊಂಡು ತನ್ನ ಸ್ವಾರ್ಥ ಸಾಧನೆಗೆ ಪ್ರಯತ್ನಿಸುವ ಊರಿನ ಗೌಡರು ದಾಸಯ್ಯನ ಪ್ರಾಮಾಣಿಕ ಪ್ರಯತ್ನಗಳಿಗೆಲ್ಲ ಅಡ್ಡಿ ಬರುತ್ತಾರೆ. ಕಡೆಗೆ ಹತಾಶನಾದ ದಾಸಯ್ಯ ಹಳ್ಳಿಯ ಬಸವಿಯನ್ನು ಅಧ್ಯಕ್ಷ ಪಟ್ಟಕ್ಕೇರಿಸಿ ತಾನು ಉಪವಾಸ ಕೂರುತ್ತಾನೆ. ಅದುವರೆಗೆ ಹೊಸ ಅಲೆ ಅಥವಾ ಕಲಾತ್ಮಕ ಚಿತ್ರಗಳೆಂದರೆ ಬ್ರಾಹ್ಮಣರ ಬದುಕು, ಸಂಪ್ರದಾಯ, ಆಚಾರ, ಮೌಲ್ಯ, ಮೌಢ್ಯಗಳನ್ನು ಬ್ರಾಹ್ಮಣ ನಿರ್ದೇಶಕರೇ ಟೀಕಿಸುವ ಚಿತ್ರಗಳು ಎಂಬ ಅನಿಸಿಕೆ ಇತ್ತು. ಇದು 'ಸಂಸ್ಕಾರ', 'ಸಂಕಲ್ಪ', 'ವಂಶವೃಕ್ಷ', 'ಘಟಶ್ರಾದ್ಧ', 'ಫಣಿಯಮ್ಮ' ಚಿತ್ರಗಳು ಮೂಡಿಸಿದ್ದ ಭಾವನೆ. ಆದರೆ 'ಶಂಖನಾದ' ಅಧಿಕಾರದ ಸಂಘರ್ಷದಲ್ಲಿ ದಲಿತ ಹಾಗೂ ಬ್ರಾಹ್ಮಣೇತರ ಮೇಲ್ಜಾತಿಗಳ ಪಾತ್ರವನ್ನು ನಿರೂಪಿಸಿತ್ತು. ಈ ಕಥೆಯನ್ನು ಉಮೇಶ್ ಕುಲಕರ್ಣಿ ಕಳಕಳಿಯಿಂದ ಚಿತ್ರಿಸಿದ್ದರಲ್ಲದೆ, ಚಿತ್ರ ನಿರ್ಮಾಣದಲ್ಲಿ ರೂಢಿಯಲ್ಲಿದ್ದ ಹಲವಾರು ಸಂಪ್ರದಾಯಗಳನ್ನು ಮುರಿದರು. ಮುಕ್ತಾಯದ ದಿನವೂ ಕ್ಯಾಮರಾ ಚಾಲನೆ ನಿಲ್ಲಿಸುವ ಸಮಾರಂಭವನ್ನು ಏರ್ಪಡಿಸಿದ್ದರು. ಅಂತಿಮ ದೃಶ್ಯಕ್ಕೆ ಸಾಹಿತಿ ಗೊರೂರು ರಾಮಸ್ವಾಮಯ್ಯಂಗಾರ್ ಕ್ಲಾಪ್ ಮಾಡಿದರೆ, ಅಬ್ಬಾಯಿನಾಯ್ಡು ಕ್ಯಾಮರಾ ನಿಲ್ಲಿಸಿದರು. ಇದೆಲ್ಲಕ್ಕಿಂತ ವಿಶೇಷವೆಂದರೆ ಎಲ್ಲರೂ 'ಎ' ಕೇಂದ್ರದಲ್ಲಿ, ಪ್ರತಿಷ್ಠಿತ ಚಿತ್ರಮಂದಿರಗಳಲ್ಲಿ ತಮ್ಮ ಚಿತ್ರಗಳನ್ನು ತೆರೆ ಕಾಣಿಸಲು ಪರದಾಡಿದರೆ, ಇವರು ಸದ್ದಿಲ್ಲದೆ ಚಿತ್ರದ ಚಿತ್ರೀಕರಣ ನಡೆಸಿದ್ದ 'ಸಿ' ಕೇಂದ್ರ ಸಂಪಿಗೆ ಹಳ್ಳಿಯಲ್ಲಿ ತಮ್ಮ ಚಿತ್ರವನ್ನು ಬಿಡುಗಡೆ ಮಾಡಿದರು. ಹೆಸರಾಂತ ಸುಗಮ ಸಂಗೀತ ಗಾಯಕಿ ರತ್ನಮಾಲ ಪ್ರಕಾಶ್ ತಮ್ಮ ಮೊದಲ ಚಿತ್ರಗೀತೆಯನ್ನು ಹಾಡಿದ್ದು ಈ ಚಿತ್ರದಲ್ಲಿಯೇ. 'ಅನುಭವ' ಚಿತ್ರದ ಸೇರೆಗಾರನ ಪಾತ್ರದ ನಂತರ ಅರವಿಂದ್, ಅಭಿನಯ ಹಾಗೂ ಮಹಿಮಾ ಉತ್ತಮವಾಗಿ ಅಭಿನಯಿಸಿದ್ದರು. ಸಂಪಿಗೆಹಳ್ಳಿಯ ಮುಖಂಡರು ತಮ್ಮ ಚುನಾವಣಾ ಅವಕಾಶಗಳನ್ನು ಹಾಳುಮಾಡಲೆಂದೇ ಈ ಚಿತ್ರವನ್ನು ತಮ್ಮ ಊರಿನಲ್ಲಿ ಚಿತ್ರಿಸಿ ಬಿಡುಗಡೆ ಮಾಡುತ್ತಿದ್ದಾರೆಂದು ಗದ್ದಲವೆಬ್ಬಿಸಿ ರಾದ್ಧಾಂತ ಮಾಡಿದರು. ಪೊಲೀಸ್ ಕಾವಲಿನಲ್ಲಿ ಚಿತ್ರದ ಪ್ರದರ್ಶನ ನಡೆಯಿತು. ಚಿತ್ರ ನಿರ್ಮಿಸಲು ಬಹು ಸಾಹಸ ಮಾಡಿದ್ದರು ಉಮೇಶ್ ಕುಲಕರ್ಣಿ. ಅವರೊಂದಿಗೆ ಮೊದಲ ಬಾರಿಗೆ ಜಕ್ಕೂರಿನ ಭೈರಪ್ಪನವರು ಸಹ ನಿರ್ಮಾಪಕರಾಗಿ ಸೇರಿಕೊಂಡರು. ಈ ಚಿತ್ರದ ನಿರ್ಮಾಣದ ಹಿಂದಿನ ಸದುದ್ದೇಶವನ್ನು ಗೌರವಿಸಲೋ ಎಂಬಂತೆ ಕೇಂದ್ರದ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಲಭ್ಯವಾದದ್ದು ಒಂದು ವಿಶೇಷ. ಉಮೇಶ್ ಕುಲಕರ್ಣಿ 'ಉತ್ತರ ಭೂಪ' ಹಾಗೂ 'ಗಂಡು ಗೂಳಿಗಳು' ಚಿತ್ರಗಳನ್ನೂ ನಿರ್ದೇಶಿಸಿದರು.

೧೯೯೦ ರಲ್ಲಿ ತೆರೆಕಂಡ 'ಉತ್ತರ ಭೂಪ' ತುರ್ತು ಪರಿಸ್ಥಿತಿಯ ನಂತರದ ದಿನಗಳಲ್ಲಿ ಪೊಲೀಸರು ಮತ್ತು ನಾಗರೀಕರ ನಡುವೆ ಕಂಡುಬರುತ್ತಿದ್ದ ಅನುಮಾನ, ಆತಂಕಗಳನ್ನು ಕುರಿತ ವಸ್ತುವಿನ ಚಿತ್ರ. ಇದು ಕೂಡ ಡಾ|ಎ.ವಿ.ವರ್ಟಿಯವರ ಕಥೆಯನ್ನು ಆಧರಿಸಿತ್ತು. ಈ ಚಿತ್ರದಲ್ಲಿ ಆಗ್ಗೆ ೩೦೦ ಚಿತ್ರಗಳ ಅಭಿನಯವನ್ನು ಪೂರ್ಣಗೊಳಿಸಿದ್ದ ದಿನೇಶ್ ನಾಯಕನಾಗಿ ನಟಿಸಿದ್ದರು. ಅವರು ತಮ್ಮ ವೃತ್ತಿ ಬದುಕಿನಲ್ಲಿ ನಾಯಕನಾಗಿ ಅಭಿನಯಿಸಿದ ಮೂರನೆಯ ಚಿತ್ರವಿದು. ಇದಕ್ಕೂ ಮೊದಲು 'ಲಕ್ಷಾಧಿಪತಿ' ಹಾಗೂ 'ಋತುಗಾನ' ಚಿತ್ರಗಳಲ್ಲಿ ನಾಯಕರಾಗಿದ್ದರು. ಈ ಚಿತ್ರದಲ್ಲಿ ಉತ್ತಮ ಕಂಠದಾನ ಕಲಾವಿದೆಯೆಂದು ಹೆಸರಾಗಿದ್ದ ಸರ್ವಮಂಗಳಾ ನಾಯಕಿಯಾಗಿ ಅಭಿನಯಿಸಿದ್ದರು. ಈ ಚಿತ್ರದ ನಾಯಕ ಪಾತ್ರ ಹಾಸ್ಯ ಸಾಹಿತಿಯದಾಗಿದ್ದುದು - ಕನ್ನಡದ ಜನಪ್ರಿಯ ಹಾಸ್ಯ ಸಾಹಿತಿ ಬೀಚಿಯವರಿಗೆ ಹೋಲಿಕೆ ತಂದುಕೊಟ್ಟಿತು. ಬೀಚಿಯವರ ಜೀವನವನ್ನು ಆಧರಿಸಿದ ಚಿತ್ರವೆಂದು ನಡೆದ ಅಪಪ್ರಚಾರದಿಂದಾಗಿ ಬೇಸತ್ತ ಅವರ ಕುಟುಂಬದವರು ವಕೀಲರ ಮೂಲಕ ನೋಟೀಸು ಕೊಟ್ಟರು. ಈ ಚಿತ್ರದಲ್ಲಿ ಪತ್ರಕರ್ತ ಹಾಗೂ ಖ್ಯಾತ ಹಾಸ್ಯ ಲೇಖಕ ಪುಂಡಲೀಕ ಶೇಟ್ ಪೂರ್ಣ ಪ್ರಮಾಣದ ಹಾಸ್ಯ ಪಾತ್ರದಲ್ಲಿ ಅಭಿನಯಿಸಿದ್ದರು. ಸಂಗೀತವನ್ನು ವೃತ್ತಿ ರಂಗಭೂಮಿಯ



(ಚಿತ್ರ ೧೦೯) 'ಗಂಡು ಗೂಳಿಗಳು' ಚಿತ್ರದಲ್ಲಿ ಶಂಕರ್ ಪಾಟೀಲ್

ಹಾರ್ಮೋನಿಯಂ ವಾದಕರಾದ ಬಿ.ಎಂ.ಸೀತಾರಾಮರಾಜು ನೀಡಿದ್ದರು. ಇದು ಇವರ ಸಂಗೀತ ನಿರ್ದೇಶನದ ಪ್ರಥಮ ಚಿತ್ರ. ೧೯೮೯ ರಲ್ಲಿ ಬಂದ 'ಗಂಡು ಗೂಳಿಗಳು' ಗ್ರಾಮೀಣ ದಲಿತ ಹೆಣ್ಣಿನ ಮೇಲಾಗುವ ಅತ್ಯಾಚಾರ ಕೇಂದ್ರ ಬಿಂದುವಾಗಿ ಅದು ಚಿತ್ರ ವಿಚಿತ್ರವಾಗಿ ಪಡೆದುಕೊಳ್ಳುವ ತಿರುವುಗಳನ್ನು ಒಳಗೊಂಡಿರುವ ಚಿತ್ರ. ನಿರ್ದೇಶಕರದೇ ಕಥೆ ವಸ್ತು ಇದ್ದ ಚಿತ್ರ. ಉಮೇಶ್ ಕುಲಕರ್ಣಿಯವರ ಮೊದಲ ಎರಡು ಚಿತ್ರಗಳಂತೆ ಈ ಚಿತ್ರವು ಕೂಡ ಸುದ್ದಿ, ವಿವಾದಗಳ ಸುಳಿಯಲ್ಲಿ ಸಿಲುಕಿಕೊಂಡಿತ್ತು. ಕನ್ನಡದ ಸಿತಾರಾ ಭಾವಪೂರ್ಣ ಅಭಿನಯ ನೀಡಿದ್ದರೂ ಚಿತ್ರರಂಗ ಇವರನ್ನು ಗಮನಿಸಲಿಲ್ಲ.

ಬದ್ಧತೆ ಇಟ್ಟುಕೊಂಡು ಕೆಲಸ ಮಾಡುತ್ತಿದ್ದ ಇಂಥ ಕೆಲವರ ಪ್ರಯತ್ನಗಳು, ದುರ್ಬಲವಾಗಿ ಕಾಣುವಂಥ ವಿದ್ಯಮಾನಗಳು ಉದ್ಯಮವನ್ನು ಆವರಿಸಿಕೊಂಡಿದ್ದವು. ರಾಜಕುಮಾರ್ ಯಾವುದೇ ನಿರ್ದಿಷ್ಟ ಕಾರಣವನ್ನು ಬಹಿರಂಗ ಪಡಿಸದೆ ಅತ್ಯಂತ ಉತ್ಸಾಹ, ಹುಮ್ಮಸ್ಸಿನಿಂದ ಮುಂದುವರಿಯುತ್ತಿದ್ದ ತಮ್ಮ ಅಭಿಮಾನಿಗಳ ಸಂಘವನ್ನು ದೃಷ್ಟಿಯಲ್ಲಿರಿಸಿಕೊಂಡು ಮತ್ತು ಬೇರೆಯವರಿಗೂ ಅನ್ವಯಿಸುವಂತೆ ಇನ್ನು ಮುಂದೆ "ಯಾರೂ ತಮ್ಮ ಹೆಸರನ್ನು ಸಂಘ ಸಂಸ್ಥೆಗಳಿಗೆ ಬಳಸಿಕೊಳ್ಳಬಾರದು" ಎಂದು ಪತ್ರಿಕಾ ಹೇಳಿಕೆ ನೀಡಿದರು. ಇದು ಸಾರ್ವಜನಿಕ ಹಾಗೂ ಸಾಂಸ್ಕೃತಿಕ ರಂಗದಲ್ಲಿ ವ್ಯಾಪಕವಾದ ಚರ್ಚೆಗೆ ಕಾರಣವಾಯಿತು. ರಾಜಕುಮಾರ್ ಅಭಿಮಾನಿಗಳು ಇದ್ದಕ್ಕಿದ್ದಂತೆ ಚಿಂತಾಕ್ರಾಂತರಾದರು. ಒಂದು ರೀತಿಯಲ್ಲಿ ಆದೇಶದಂತೆಯೇ ಇದ್ದ ರಾಜಕುಮಾರ್ ಸೂಚನೆಯನ್ನು ಪಾಲಿಸಬೇಕೋ, ಬಿಡಬೇಕೋ ಎಂಬ ಬಗ್ಗೆ ಅಭಿಮಾನಿಗಳಲ್ಲಿ ಗೊಂದಲ ತಲೆದೋರಿದ್ದರಿಂದ ಸರ್ವಸದಸ್ಯರ ಸಭೆಯನ್ನು ಕರೆಯಲಾಯಿತು. ಈ ಸಭೆ ೧೯೮೬ರ ಜುಲೈ ೧೭ರಂದು ಬೆಂಗಳೂರಿನ ಬಬ್ಬೂರುಕಮ್ಮೆ ಸಮುದಾಯ ಮಂಟಪದಲ್ಲಿ ನಡೆಯಿತು. ಅಲ್ಲಿ ರಾಜಕುಮಾರ್ ಹೆಸರನ್ನು ಕೈಬಿಟ್ಟು ಕನ್ನಡ ಪರವಾದ ಬೇರೊಂದು ಹೆಸರನ್ನು ಇಡುವ ಪ್ರಸ್ತಾವನೆಯನ್ನು ಕಾರ್ಯಕಾರಿ ಸಮಿತಿಯು ಮುಂದಿಟ್ಟಾಗ ಸಭೆಯು ಅತ್ಯಧಿಕ ಬಹುಮತದಿಂದ ತಿರಸ್ಕರಿಸಿತು. "ನಾವು ಸಂಘವನ್ನು ಕಟ್ಟಿದಾಗ ರಾಜಕುಮಾರ್ ಅವರನ್ನಾಗಲಿ, ಬೇರೆ ಯಾರನ್ನೇ ಆಗಲಿ ಕೇಳಿ ಮುಂದುವರಿಯಲಿಲ್ಲ. ಅಲ್ಲದೆ ರಾಜಕುಮಾರ್‌ರಿಂದ ಯಾವುದೇ ಆರ್ಥಿಕ ನೆರವನ್ನು ಸಂಘವು ಪಡೆದಿಲ್ಲ. ನಮ್ಮ ಸಾಮಾಜಿಕ ಚಟುವಟಿಕೆಗಳಿಗೆ ಅವರ ಹೆಸರು ಸ್ಫೂರ್ತಿಯಾಗಿದೆ. ಆದ್ದರಿಂದ ಸಂಘಕ್ಕೆ ಅವರ ಹೆಸರು ಬೇಕೇ ಬೇಕು. ಇಲ್ಲವಾದರೆ ವಿಸರ್ಜನೆ ಒಳಿತು," ಎಂಬ ತೀರ್ಮಾನಕ್ಕೆ ಬಂದದ್ದಲ್ಲದೆ ಹೆಸರನ್ನು ಬಳಸಿಕೊಳ್ಳಲು ಅನುಮತಿ ನೀಡಬೇಕೆಂದು ರಾಜಕುಮಾರ್‌ಗೆ ಮನವಿ ಸಲ್ಲಿಸಲು ನಿರ್ಧರಿಸಿತು. ಈ ಬೆಳವಣಿಗೆಯ ನಂತರ ರಾಜಕುಮಾರ್ ಅವರು ಈ ಅಭಿಮಾನಿ ಸಂಘದ ಯಾವುದೇ ಸಭೆ-ಸಮಾರಂಭಗಳಲ್ಲಿ ಭಾಗವಹಿಸಲಿಲ್ಲ. ಸಂಘ ತೆಗೆದುಕೊಂಡ ನಿರ್ಧಾರದ ಬಗ್ಗೆ ಬಹಿರಂಗವಾಗಿ ಏನೊಂದು ಅಭಿಪ್ರಾಯವನ್ನೂ ವ್ಯಕ್ತಪಡಿಸಲಿಲ್ಲ.

ಈ ವಿದ್ಯಮಾನಗಳ ನಂತರ ರಾಜಕುಮಾರ್ ಸರ್ಕಾರ ವಿಧಿಸಿದ ಮನರಂಜನಾ ತೆರಿಗೆಯ ವಿರುದ್ಧ ನಡೆದ ಬಂದ್ ಮತ್ತು ಇದಕ್ಕೆ ಸಂಬಂಧಿಸಿದ ಮೆರವಣಿಗೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಮನರಂಜನಾ ತೆರಿಗೆಯನ್ನು ವಿರೋಧಿಸಿ ೧೯೮೬ರ ಅಕ್ಟೋಬರ್ ಮಧ್ಯಭಾಗದಿಂದ ಇಡೀ ದೇಶದಲ್ಲಿ ಚಳವಳಿ ಆರಂಭವಾಯಿತು. ೧೯೮೬ರ ಮಾರ್ಚ್‌ನಲ್ಲಿ ಮುಖ್ಯಮಂತ್ರಿಗಳು ವಿಧಾನ ಮಂಡಲದಲ್ಲಿ ಮಂಡಿಸಿದ ಆಯ-ವ್ಯಯದಂತೆ ಶೇಕಡಾ ಐವತ್ತರಷ್ಟು ಮನರಂಜನಾ ತೆರಿಗೆಯ ಹೊರೆ ಬಿತ್ತು. ಇದರಂತೆ ಚಿತ್ರರಂಗದ ಸೇವೆಗಳೆಲ್ಲವೂ ಈ ತೆರಿಗೆಯ ವ್ಯಾಪ್ತಿಗೆ ಒಳಪಟ್ಟವು. ಕ್ಯಾಮರಾ, ಲೈಟು ಮುಂತಾದ ಸಲಕರಣೆಗಳನ್ನು ಬಾಡಿಗೆಗೆ ಕೊಡುವವರು ಅವನ್ನು ಬಳಸುವ ನಿರ್ಮಾಪಕರಿಂದ ಮನರಂಜನಾ ತೆರಿಗೆಯನ್ನು ವಸೂಲು ಮಾಡಬೇಕಾಗುತ್ತದೆ. ಇದರೊಂದಿಗೆ ನಿರ್ಮಾಪಕರು, ಹಂಚಿಕೆದಾರರು, ಪ್ರದರ್ಶಕರು ತಮ್ಮ ವ್ಯವಹಾರದ ಪ್ರತಿಯೊಂದು ಹಂತದಲ್ಲೂ ಈ ಮನರಂಜನಾ ತೆರಿಗೆಗೆ ಒಳಪಡುವಂತಾಯಿತು. ಇದರಿಂದಾಗಿ ಚಿತ್ರವೊಂದು ನಿರ್ಮಾಣವಾಗುವ ಹೊತ್ತಿಗೆ ವಿವಿಧ ಬಾಬ್ತುಗಳ ಮೂಲಕ ಸರ್ಕಾರಕ್ಕೆ ಶೇಕಡಾ ೬೦ ರಷ್ಟು ಮನರಂಜನಾ ತೆರಿಗೆ ಸೇರುವಂತಾಯಿತು. ೨೦ ಲಕ್ಷ ರೂಪಾಯಿ ಖರ್ಚು ಮಾಡಿ ಚಿತ್ರ ತಯಾರಿಸುವ ನಿರ್ಮಾಪಕ ಐದು ಲಕ್ಷ ರೂಪಾಯಿನಷ್ಟು ಮನರಂಜನಾ ತೆರಿಗೆ ಕೊಡಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಸರ್ಕಾರದ ಅನಿರೀಕ್ಷಿತವಾದ ಈ ನಿರ್ಧಾರದಿಂದ ಉದ್ಯಮ ಬೆಚ್ಚಿಬಿದ್ದಿತು. ಕೇರಳ, ಮಹಾರಾಷ್ಟ್ರ ಮತ್ತು ತಮಿಳು ನಾಡು ಸರ್ಕಾರಗಳು ಕೂಡ ಅಲ್ಲಿ ಇಂಥದೇ ನಿರ್ಧಾರ ಕೈಗೊಂಡಿದ್ದರಿಂದ ಅಲ್ಲಿಯೂ ವ್ಯಾಪಕ ಪ್ರತಿಭಟನೆಗಳು ನಡೆದವು. ಆದರೆ ಕೇರಳ ಮತ್ತು ತಮಿಳುನಾಡಿನಲ್ಲಿ ಉದ್ಯಮಿಗಳು ನ್ಯಾಯಾಲಯದ ಮೊರೆ ಹೋಗಿ ತಡೆಯಾಜ್ಞೆ ತಂದುಕೊಂಡರು.

ಮಹಾರಾಷ್ಟ್ರದ ಪರಿಸ್ಥಿತಿ ತದ್ವಿರುದ್ಧವಾಗಿತ್ತು. ಅಲ್ಲಿನ ಚಳವಳಿಗೆ ಶಿವಸೇನೆಯ ಬೆಂಬಲವೂ ದೊರಕಿ ಒಂದು ತಿಂಗಳಷ್ಟು ದೀರ್ಘ ಕಾಲ ಬಂದ್ ನಡೆಯಿತು. ದಿನೇ-ದಿನೇ ಹೆಚ್ಚುತ್ತಿದ್ದ ಪ್ರತಿಭಟನೆಗೆ ಕೊನೆಗೂ ಮಣಿದ ಸರ್ಕಾರ ತನ್ನ ನಿರ್ಧಾರವನ್ನು ರದ್ದುಗೊಳಿಸಿತು. ಮಹಾರಾಷ್ಟ್ರದ ಮೂಲಕ ಆರಂಭವಾಗಿ ದೇಶಾದ್ಯಂತ ನಡೆದ ಈ ಬಂದ್ ಸಂದರ್ಭದಲ್ಲಿ ಚಿತ್ರ ನಿರ್ಮಾಣ, ಚಿತ್ರಮಂದಿರ, ಸ್ಟುಡಿಯೋ ಎಲ್ಲವೂ ಸಂಪೂರ್ಣ ನಿಂತುಹೋಗಿದ್ದವು. ಮಹಾರಾಷ್ಟ್ರದಲ್ಲಿ ಪ್ರತಿಭಟನೆ ಆರಂಭವಾದ ೧೦ ದಿನಗಳ ನಂತರ ಕರ್ನಾಟಕದಲ್ಲೂ ಹೋರಾಟ ಶುರುವಾಯಿತು. ಈ ಸಂಬಂಧವಾಗಿ ಬೆಂಗಳೂರಿನಲ್ಲಿ ನಡೆದ ಬೃಹತ್ ಮೆರವಣಿಗೆಯ ನೇತೃತ್ವವನ್ನು ರಾಜಕುಮಾರ್ ಮತ್ತು ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷ ಆರ್.ಲಕ್ಷ್ಮಣ್ ವಹಿಸಿದ್ದರು. ಜಿ.ವಿ.ಅಯ್ಯರ್, ವಿಷ್ಣುವರ್ಧನ್, ಅಂಬರೀಷ್, ಶ್ರೀನಾಥ್, ರಾಜೇಂದ್ರಸಿಂಗ್ ಬಾಬು, ಶಿವರಾಂ, ಮುಖ್ಯಮಂತ್ರಿ ಚಂದ್ರು ಮುಂತಾದ ಕಲಾವಿದರು ಭಿತ್ತಿ ಪತ್ರಗಳನ್ನು ಹಿಡಿದು ಮೆರವಣಿಗೆಯ ಉದ್ದಕ್ಕೂ ಘೋಷಣೆಗಳನ್ನು ಕೂಗುತ್ತಾ ನಡೆದರು. ನಿರ್ಮಾಪಕರು, ಹಂಚಿಕೆದಾರರು, ಪ್ರದರ್ಶಕರು, ನಿರ್ದೇಶಕರು, ಕಲಾವಿದರು ಎಲ್ಲರೂ ಒಗ್ಗಟ್ಟಾಗಿ ತಮ್ಮ ಶಕ್ತಿ ತೋರಿಸಿದ ಈ ಮೆರವಣಿಗೆ ವಾಣಿಜ್ಯ ಮಂಡಳಿ ಆವರಣದಿಂದ ಹೊರಟು, ಸುಬೇದಾರ್ ಛತ್ರಂ ರಸ್ತೆಯ ಮೂಲಕ ಗಾಂಧಿನಗರವನ್ನು ಪ್ರವೇಶಿಸಿ, ಪ್ಯಾಲೆಸ್ ರಸ್ತೆಯಲ್ಲಿ ಹಾದು ಅಕೌಂಟೆಂಟ್ ಜನರಲ್ ಕಚೇರಿಯ ಬಳಿಗೆ ಬಂದು ರಾಜ್ಯಪಾಲರನ್ನು ಭೇಟಿ ಮಾಡಲು ಅರ್ಧ ಗಂಟೆ ಕಾಯಬೇಕಾಯಿತು. ಆಗ ಇಡೀ ತಾರಾ ಸಮೂಹ ರಸ್ತೆಯ ಮೇಲೆಯೇ ಕುಳಿತುಕೊಳ್ಳಬೇಕಾಗಿ ಬಂತು. ಅನಂತರ ರಾಜ್ಯಪಾಲ ಎ.ಎನ್.ಬ್ಯಾನರ್ಜಿಯವರು ಉದ್ಯಮದ ಪ್ರತಿನಿಧಿಗಳೊಂದಿಗೆ ಚರ್ಚಿಸಿ ಮನವಿ ಸ್ವೀಕರಿಸಿದರು. ಇಡೀ ಚಿತ್ರೋದ್ಯಮವೇ ಕಲೆತಿದ್ದ ಮೆರವಣಿಗೆಯಲ್ಲಿ ಅನಂತ್‌ನಾಗ್, ಶಂಕರ್‌ನಾಗ್‌ರವರು ಭಾಗವಹಿಸಿರಲಿಲ್ಲ. ತಮ್ಮ ಗೈರುಹಾಜರಿಯ ಬಗ್ಗೆ ಅವರು ನಂತರ "ನಮ್ಮನ್ನು ಯಾರೂ ಕರೆದಿರಲಿಲ್ಲ. ಆದರೂ ವಾಣಿಜ್ಯ ಮಂಡಳಿಯೊಂದಿಗೆ ಸಹಕರಿಸುತ್ತೇವೆ" ಎಂದು ಹೇಳಿದರು. ಅಂತೂ ಉದ್ಯಮದ ಸಂಘಟಿತ ಪ್ರತಿಭಟನೆಯ ಪರಿಣಾಮವಾಗಿ ರಾಜ್ಯ ಸರ್ಕಾರ ತಾನು ವಿಧಿಸಿದ್ದ ತೆರಿಗೆಯನ್ನು ರದ್ದುಪಡಿಸಿತು.

ಸರ್ಕಾರ ತನ್ನ ವಾರ್ಷಿಕ ಆಯ-ವ್ಯಯವನ್ನು ಸಿದ್ಧಪಡಿಸುವಾಗ ಚಿತ್ರರಂಗದಿಂದ ಬರಬಹುದಾದ ಆದಾಯಗಳ ಬಗ್ಗೆ ಸ್ವಲ್ಪ ಹೆಚ್ಚು ನಿಗಾ ವಹಿಸಿರುತ್ತದೆ. ಈಗಾಗಲೇ ಸರ್ಕಾರಕ್ಕೆ ಚಿತ್ರೋದ್ಯಮ ಹಲವಾರು ವಿಭಾಗಗಳ ತೆರಿಗೆಗಳನ್ನು ಕೊಡುತ್ತಿತ್ತು. ಇದಲ್ಲದೆ ಸರ್‌ಛಾರ್ಜ್, ಪ್ರದರ್ಶನ ತೆರಿಗೆ, ಆರೋಗ್ಯ ತೆರಿಗೆಗಳ ಜೊತೆಗೆ ಕಚ್ಚಾ ಫಿಲಂ ಮೇಲೆ ಮನರಂಜನಾ ತೆರಿಗೆ ಮತ್ತು ಪ್ರಿಂಟ್‌ಗಳ ಮೇಲೆ ಅಬ್ಕಾರಿ ತೆರಿಗೆಯ ರೂಪದಲ್ಲಿ ಕೂಡ ಸರ್ಕಾರಕ್ಕೆ ತೆರಿಗೆ ಸಲ್ಲುತ್ತದೆ. ಇದಿಷ್ಟು ಸಾಲದೆಂಬಂತೆ ೧೯೮೬ ರಿಂದ 'ಕೆಲಸಗಾರರ ಸಹಾಯ ಯೋಜನೆ'ಯನ್ನು ರೂಪಿಸಿ ಆ ಬಾಬಿನಿಂದಲೂ ಹಣ ಸಂಗ್ರಹಿಸಲು ತೊಡಗಿದ್ದು ಉದ್ಯಮಕ್ಕೆ ಹೊಸ ಹೊರೆಯೇ ಆಯಿತು. ಸರ್ಕಾರಕ್ಕೆ ಸಲ್ಲಿಸಬೇಕಾದ ಈ ವಿವಿಧ ಬಗೆಯ ತೆರಿಗೆಗಳನ್ನು ಯಾರ್ಯಾರು ಯಾವ್ಯಾವ ಹಂತದಲ್ಲಿ ಕೊಡಬೇಕೆಂಬ ಬಗ್ಗೆ ಉದ್ಯಮದಲ್ಲಿ ವ್ಯಾಪಕವಾದ ಚರ್ಚೆ ನಡೆಯಿತಲ್ಲದೆ, ಕೆಲವು ತೆರಿಗೆಗಳ ಸಂಬಂಧವಾಗಿ ಭಿನ್ನಾಭಿಪ್ರಾಯಗಳೂ ಉಂಟಾದವು. ಇದುವರೆಗೆ ನಿರ್ಮಾಪಕರ ಮೇಲೆಯೇ ಹೆಚ್ಚು ಕರಭಾರ ಬಿತ್ತೆಂದು ಭಾವಿಸಲಾಗಿತ್ತಾದರೂ ಹೆಚ್ಚು ಕಡಿಮೆ ಅಷ್ಟೇ ಹೊರೆಯನ್ನು ಹಂಚಿಕೆದಾರರು ಹೊರಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಏಕೆಂದರೆ ಪ್ರದರ್ಶಕರು ಅವರ ಮೇಲೆ ಬಿದ್ದಿದ್ದ ಭಾರವನ್ನು ಹಂಚಿಕೆದಾರರಿಗೆ ವರ್ಗಾಯಿಸಿ ತಾವು ಬಚಾವಾಗಿದ್ದರು. ಚಿತ್ರವೊಂದರ ಗಳಿಕೆ ಪ್ರದರ್ಶಕರ ಬಳಿಯೇ ಇರುವಂಥ ವ್ಯವಸ್ಥೆಯಲ್ಲಿ ಅವರು ತಮಗೆ ಬೇಕಾದಷ್ಟನ್ನು ಮುರಿದುಕೊಳ್ಳುವುದು ಸುಲಭವಾಗಿತ್ತು. ಅದನ್ನು ಅವರು ಮಾಡುತ್ತಿದ್ದರು ಕೂಡ. ಸುಮಾರು ವರ್ಷಗಳಿಂದ ಚಾಲ್ತಿಯಲ್ಲಿದ್ದ ರೂಢಿಯಂತೆ ಪ್ರದರ್ಶನ ತೆರಿಗೆ, ಆರೋಗ್ಯ ತೆರಿಗೆ ಮತ್ತು ವಾರ್ತಾ ಚಿತ್ರಗಳ ಪ್ರದರ್ಶನದ ಬಾಡಿಗೆಯನ್ನು ಪ್ರದರ್ಶಕರು ಹಂಚಿಕೆದಾರರಿಂದ ವಸೂಲಿ ಮಾಡುತ್ತಿದ್ದರು. ಹಂಚಿಕೆದಾರರು ತಮ್ಮ ಮೇಲೆ ಬಿದ್ದ ಭಾರವನ್ನು ನಿರ್ಮಾಪಕರ ಹೆಗಲಿಗೆ ವರ್ಗಾಯಿಸುತ್ತಿದ್ದರು. ಪ್ರದರ್ಶನದ ವ್ಯವಸ್ಥೆಯ ಈ ಮೂಲಭೂತ ಅಂಶಗಳು ಚಳವಳಿಯ ಸಂದರ್ಭದಲ್ಲಿ ಉದ್ಯಮದ ಗಣ್ಯರಲ್ಲಿ ವ್ಯಾಪಕವಾಗಿ ಚರ್ಚಿತವಾದವು. ಇದೆಲ್ಲದರಿಂದಾಗಿ ವಿವಿಧ ವಿಭಾಗಗಳ ನಡುವೆ ಇದ್ದ ಭಿನ್ನಾಭಿಪ್ರಾಯಗಳು ಇನ್ನಷ್ಟು ಉಲ್ಬಣಿಸಿದವು. ಈ ಹಂತದಲ್ಲಿ ಒಂದು ಮಹತ್ವದ ಬೆಳವಣಿಗೆ ಆಯಿತು. ೧೯೮೭ರ ಜನವರಿ ಮೊದಲ ವಾರದಲ್ಲಿ ಬಹು ದೊಡ್ಡ ಪ್ರಮಾಣದಲ್ಲಿ 'ಹೊಸ' ಹಂಚಿಕೆದಾರರ ಸಂಘವು ಸ್ಥಾಪನೆಯಾಯಿತು.

ಮೊದಲೇ ಹಂಚಿಕೆದಾರರ ಸಂಘವೊಂದು ಅಸ್ತಿತ್ವದಲ್ಲಿ ಇತ್ತು. ಆದರೆ ಅದರಲ್ಲಿ ಪ್ರಮುಖ ಹಾಗೂ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿರುವ ಹಂಚಿಕೆದಾರರು ಸಾಕಷ್ಟು ಸಂಖ್ಯೆಯಲ್ಲಿ ಸದಸ್ಯರಾಗಿರಲಿಲ್ಲ. ಆದರೆ ಪರಿಸ್ಥಿತಿ ಈಗ ಸಾಕಷ್ಟು ಬದಲಾಗಿತ್ತು. ಜಿಲ್ಲಾವಾರು ಹಂಚಿಕಾ ವ್ಯವಸ್ಥೆ, ಹೆಚ್ಚಿದ ಆರ್ಥಿಕ ವಹಿವಾಟು ಇನ್ನಷ್ಟು ಸಂಘಟಿತ ವ್ಯವಸ್ಥೆಗಾಗಿ ಒತ್ತಾಯಿಸುತ್ತಿತ್ತು. ಅನಿವಾರ್ಯವೆನ್ನುವಂಥ ಇಂಥ ಪರಿಸ್ಥಿತಿಯಲ್ಲಿ ಈ ಹೊಸ ಸಂಘ ಮೈದಾಳಿತು. ಹೊಸ ಸಂಘದ ಹುಟ್ಟಿಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ವಾಣಿಜ್ಯ ಮಂಡಳಿಯು ಬೆಂಬಲ ನೀಡಿತು. ವಾಣಿಜ್ಯ ಮಂಡಳಿಯ ಆವರಣದಲ್ಲಿಯೇ ಸೇರಿದ್ದ ಹಂಚಿಕೆದಾರರ ಸಭೆಯಲ್ಲಿ ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್‌ನ ಎಸ್.ಎಂ.ಲಕ್ಷ್ಮಣರಾವ್‌ರನ್ನು ಹೊಸ ಸಂಘದ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಅಂದು ಪ್ರಕಟಿಸಲಾದ ಕಾರ್ಯಸೂಚಿಯಲ್ಲಿ ಈ ಕೆಲವು ಮುಖ್ಯ ಅಂಶಗಳಿದ್ದವು. ''ಹಂಚಿಕಾ ವ್ಯವಸ್ಥೆಯಲ್ಲಿರುವ ಹಲವಾರು ಅಕ್ರಮಗಳನ್ನು, ದೋಷಗಳನ್ನು ಸರಿಪಡಿಸುವುದು, ಚಿತ್ರಮಂದಿರಗಳಿಗೆ ಚಿತ್ರಗಳನ್ನು ಕೊಡುವಾಗ ಲಿಖಿತ ಕರಾರು ಮಾಡಿಕೊಳ್ಳುವುದು ಮತ್ತು ಈ ಎಲ್ಲಾ ವ್ಯವಹಾರವನ್ನು ಚಿತ್ರಮಂದಿರದ ಮಾಲೀಕರು ಅಥವಾ ಅಧಿಕೃತ ಲೈಸೆನ್ಸುದಾರರೊಂದಿಗೆ ಮಾತ್ರ ಮಾಡಿ ಮಧ್ಯವರ್ತಿಗಳನ್ನು ದೂರವಿಡುವುದು, ಕಳ್ಳ ಪ್ರಿಂಟುಗಳ ಪ್ರದರ್ಶನವನ್ನು ತಪ್ಪಿಸಲು ಮತ್ತು ಅಂಥ ಪ್ರಿಂಟ್‌ಗಳನ್ನು ವಶಪಡಿಸಿಕೊಳ್ಳಲು ಜಾಗೃತ ದಳವನ್ನು ರಚಿಸುವುದು ಹಾಗೂ ಇದೆಲ್ಲಕ್ಕಿಂತ ಮುಖ್ಯವಾಗಿ ಮಾಲೀಕರು ತಮ್ಮ ಚಿತ್ರಮಂದಿರದ ಲೈಸನ್ಸನ್ನು ಪಡೆಯಲು ತೆರಬೇಕಾದ ತೆರಿಗೆಗಳಿಗೆ ಅವರೇ ಹೊಣೆಯಾಗಿದ್ದು ಅದನ್ನು ತಮ್ಮಿಂದ ವಸೂಲು ಮಾಡುವುದನ್ನು ತಪ್ಪಿಸುವುದು''. ಈ ಸಂದರ್ಭದಲ್ಲಿ ಚಿತ್ರಮಂದಿರಗಳನ್ನು ಪಡೆಯಲು ಕಪ್ಪು ಹಣದ ವಹಿವಾಟು ಕೂಡದೆಂದು ಚರ್ಚಿಸಿದರೆಂಬ ಬಗ್ಗೆ ಖಚಿತ ಮಾಹಿತಿ ಇಲ್ಲ.

ಚಿತ್ರೋದ್ಯಮದಲ್ಲಿ ಸಂಘಟನೆ ಮತ್ತು ಪ್ರತಿಭಟನಾ ಪ್ರಜ್ಞೆ ಜಾಗೃತಾವಸ್ಥೆಯಲ್ಲಿದ್ದ ಈ ದಿನಗಳಲ್ಲಿ ಸಿನಿಮಾ ನಿರ್ಮಾಣ ಮತ್ತು ನಿರ್ದೇಶನ ವಿಭಾಗಗಳಲ್ಲಿ ಗಮನಾರ್ಹ ಸಾಧನೆ ಕಂಡುಬರಲಿಲ್ಲ. ೧೯೮೭ ರಲ್ಲಿ ಬಿಡುಗಡೆಯಾದ ೬೦ ಚಿತ್ರಗಳಲ್ಲಿ ಅರ್ಧದಷ್ಟು ರೀಮೇಕ್ ಆಗಿದ್ದವು. ಇದರೊಂದಿಗೆ ಬೆಳ್ಳಿತೆರೆಗೆ ಕಾಲಿಟ್ಟ ಹೊಸ ಕಲಾವಿದರಲ್ಲಿ ವಿನೋದ್‌ರಾಜ್ ಬಿಟ್ಟರೆ ಇತರರು ಭರವಸೆ ಹುಟ್ಟಿಸಲಿಲ್ಲ. ಹಾಸ್ಯ ನಟರಾಗಿ ಒಂದು ವರ್ಗದ ಚಿತ್ರಪ್ರೇಮಿಗಳಿಗ ಹುಚ್ಚುಹಿಡಿಸಿದ್ದ ಎನ್.ಎಸ್.ರಾವ್‌ರೊಂದಿಗೆ ರಾಜಾಶಂಕರ್, ಬಹುಮುಖ ಪ್ರತಿಭೆಯ ಯೂನಿವಾಕ್ಸ್ ಹನುಮಂತಾಚಾರ್, ನಿರ್ದೇಶಕ ಸೋಮುರವರ ನಿಧನ ವಿಷಾದದ ನೆರಳನ್ನು ಹರಡಿತು.

ಅದುವರೆಗಿನ ಕನ್ನಡ ಚಿತ್ರರಂಗದ ಇತಿಹಾಸದಲ್ಲೇ ೧೭ ದಿನಗಳಷ್ಟು ದೀರ್ಘಾವಧಿ ನಡೆದ ಬಂದ್ ಚಿತ್ರರಂಗದ ಚಟುವಟಿಕೆಗಳ ಉತ್ಸಾಹವನ್ನೆಲ್ಲ ಕುಗ್ಗಿಸಿಬಿಟ್ಟಿತು. ಈ ಬಂದ್ ನಡೆದದ್ದು ಸರ್ಕಾರ ಹೊಸದಾಗಿ ಹೇರಿದ ಪ್ರದರ್ಶನ ತೆರಿಗೆಯ ವಿರುದ್ಧ. ಬಂದ್ ಮತ್ತು ಪ್ರತಿಭಟನೆಗಳ ಫಲವಾಗಿ ಪ್ರದರ್ಶನ ತೆರಿಗೆ ಇಳಿಕೆಯಾಯಿತೇನೋ ಸರಿ, ಆದರೆ ಈ ಇಳಿಕೆಯನ್ನು ಅನ್ವಯಿಸುವುದರಲ್ಲಿ ಕನ್ನಡ ಮತ್ತು ಕನ್ನಡೇತರ ಚಿತ್ರಗಳ ಪ್ರಶ್ನೆ ಉದ್ಭವವಾಗಿ ಅದೇ ದೊಡ್ಡ ರಗಳೆ, ವೈಮನಸ್ಯಗಳನ್ನು ಹುಟ್ಟುಹಾಕಿ ಚಿತ್ರೋದ್ಯಮದ ಎಲ್ಲ ವಲಯಗಳನ್ನೂ ಒಳಗೊಂಡಿರುವ ವಾಣಿಜ್ಯ ಮಂಡಳಿಯನ್ನು ಇಕ್ಕಟ್ಟಿಗೆ ಸಿಲುಕಿಸಿತು. ತೆರಿಗೆಯನ್ನು ಇಳಿಸುವಂತೆ ಒತ್ತಾಯಿಸಲು ವಾಣಿಜ್ಯ ಮಂಡಳಿ ನಡೆಸುತ್ತಿದ್ದ ಸರದಿ ಉಪವಾಸದಿಂದ ಕನ್ನಡ ಚಿತ್ರಗಳ ಹಿತರಕ್ಷಣೆಯಾಗುವುದಿಲ್ಲ ಎಂದು ಅಶೋಕ್ ನೇತೃತ್ವದ ಒಂದು ಗುಂಪು ತಾನೂ ಮಹಾತ್ಮ ಗಾಂಧಿ ಪ್ರತಿಮೆ ಎದುರು ಒಂದು ದಿನದ ಉಪವಾಸ ಹೂಡಿತ್ತು. ಈ ಸಂದರ್ಭದಲ್ಲಿ ನಡೆದ ಬಂದ್ ಮತ್ತು ಪ್ರತಿಭಟನಾ ಮೆರವಣಿಗೆಯಲ್ಲಿ ಜಿ.ವಿ.ಅಯ್ಯರ್, ರಾಜಕುಮಾರ್ ಆದಿಯಾಗಿ ಎಲ್ಲಾ ಹಿರಿಕಿರಿಯ ತಾರೆಯರೂ ಭಾಗವಹಿಸಿದ್ದರು. ಅನಂತ್‌ನಾಗ್, ಶಂಕರ್‌ನಾಗ್ ಮೊದಲ ದಿನದ ಮೆರವಣಿಗೆಯಲ್ಲಿ ಕಾಣಿಸಿಕೊಂಡು ಆನಂತರ ಮರೆಯಲ್ಲಿದ್ದರೆ, ದ್ವಾರಕೀಶ್ ತಟಸ್ಥರಾಗಿದ್ದುಬಿಟ್ಟರು. ಈ ಮೆರವಣಿಗೆಗೆ ಮುಂಚೆಯೇ ಕನ್ನಡ ಸಹಕಲಾವಿದರ, ತಂತ್ರಜ್ಞರ ಒಕ್ಕೂಟವು ಕನ್ನಡ ಚಿತ್ರೋದ್ಯಮ ಇಲ್ಲಿಯೇ ಉಳಿಯಬೇಕು ಎಂದು ಒತ್ತಾಯಿಸಿ ಮೆರವಣಿಗೆ ನಡೆಸಿದ್ದು ಕೂಡ ಇಲ್ಲಿ ಉಲ್ಲೇಖಾರ್ಹ. ಚಿತ್ರರಂಗದ ಇಂಥ ಬಹಿರಂಗ ಚಟುವಟಿಕೆ, ಪ್ರಸವ ವೇದನೆಗಳ ನಡುವೆ ೧೯೮೭ರ ಇಡೀ ವರ್ಷದ ಗೌರವ ಉಳಿಸಿದ್ದು ಕೇವಲ ಎರಡು ಚಿತ್ರಗಳು. ಅವು 'ಪುಷ್ಪಕ ವಿಮಾನ' ಮತ್ತು 'ಪ್ರೇಮಲೋಕ'. ಇದೇ ವರ್ಷ 'ತಬರನ ಕಥೆ'ಗೆ 'ಸ್ವರ್ಣ ಕಮಲ' ರಾಷ್ಟ್ರಪ್ರಶಸ್ತಿ ಬಂದಿತಾದರೂ ಈ ಚಿತ್ರ ಬಿಡುಗಡೆಯಾದದ್ದು ೧೯೮೮ರಲ್ಲಿ.

೧೯೮೭ ರಲ್ಲಿ ಬೋಫೋರ್ಸ್ ಗದ್ದಲ, ಅಮಿತಾಬ್ ಬಚ್ಚನ್ ಅವರೂ ಭಾಗಿಯೆಂಬ ಆರೋಪದಿಂದಾಗಿ ಅವರು ಪಾರ್ಲಿಮೆಂಟ್ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು ದೇಶದಲ್ಲಿ ಪ್ರಕ್ಷುಬ್ಧತೆಯನ್ನು ಸೃಷ್ಟಿಸಿತ್ತು. ಇದೇ ವರ್ಷ ರೂಪಾ ಕನ್ವರ್ ಸತಿ ಪ್ರಕರಣಕ್ಕೆ ಒಂದೆಡೆ ಬೆಂಬಲ, ಇನ್ನೊಂದೆಡೆ ಪ್ರಬಲ ವಿರೋಧ ಕಂಡುಬಂತು. ಬಾಬ್ರಿ ಮಸೀದಿ ಬಗ್ಗೆ ತಕರಾರುಗಳು ಕೇಳಿ ಬಂದವು. ಹಿಂದೂ-ಮುಸ್ಲಿಂ ಗದ್ದಲಗಳು ಸಂಭವಿಸುವ ಎಲ್ಲ ಲಕ್ಷಣಗಳೂ ಕಂಡವು. ರಾಜಕೀಯ ಪಕ್ಷಗಳು ಇವನ್ನೆಲ್ಲ ಬಳಸಿಕೊಳ್ಳತೊಡಗಿದವು. ಇದೇ ಹೊತ್ತಿನಲ್ಲಿ ದೂರದರ್ಶನದಲ್ಲಿ ಧಾರಾವಾಹಿಯಾಗಿ ಬಂದ 'ರಾಮಾಯಣ' ಜನಪ್ರಿಯವಾಯಿತು ಮತ್ತು ಹಿಂದೂಗಳಲ್ಲಿ ಕೋಮು ಭಾವನೆಯನ್ನು ಭಕ್ತಿಯ ರೂಪದಲ್ಲಿ ಪ್ರಚೋದಿಸಿತೆಂಬ ಮಾತುಗಳಿದ್ದವು. 'ಎನ್‌ಎಫ್‌ಡಿಸಿ'ಯು 'ಸಿನಿಮಾ ಇನ್ ಇಂಡಿಯಾ' ತ್ರೈಮಾಸಿಕ ಪ್ರಾರಂಭಿಸಿತು. ಇದೇ ವರ್ಷ ಎಂ.ಜಿ.ರಾಮಚಂದ್ರನ್ ನಿಧನ ಹೊಂದಿದರು.

'ಬಜಾರ್ ಭೀಮ'ದಂಥ ತೆಲುಗು ಶೈಲಿಯ ಹಳೆಯ ಕಥೆಯೊಂದರಲ್ಲಿ ಕುಣಿತ, ಅಸಭ್ಯ ಮಾತುಗಳು ತೂರಿಕೊಂಡಿತ್ತು. ಅಂಬರೀಷ್ ದ್ವಿಪಾತ್ರದಲ್ಲಿದ್ದು, ಗೀತಾ, ಅಂಜಿಕಾ ಮೊದಲಾದವರಿದ್ದರೆಂಬ ಕುತೂಹಲ ಉಳಿಯಲಿಲ್ಲ. ವೈ.ವಿ.ರಾವ್ ಈ ಚಿತ್ರವನ್ನು ರವಿಚಿತ್ರ ಫಿಲಂಸ್ ಲಾಂಛನದಲ್ಲಿ ಪೇರಾಲ ನಿರ್ದೇಶನದಲ್ಲಿ ತೆರೆಗಿತ್ತರು.



(ಚಿತ್ರ ೧೧೦) ಮಾರಾಟ ತೆರಿಗೆಯ ವಿರುದ್ಧ ಚಿತ್ರೋದ್ಯಮದ ಪ್ರತಿಭಟನೆ ಶ್ರೀನಿವಾಸಮೂರ್ತಿ, ರಾಜಕುಮಾರ್, ಜಿ.ವಿ.ಅಯ್ಯರ್, ವಿಷ್ಣುವರ್ಧನ್, ರಾಜೇಂದ್ರಸಿಂಗ್ ಬಾಬು, ಮುಖ್ಯಮಂತ್ರಿ ಚಂದ್ರು ಹಾಗೂ ಇತರರು ಭಾಗವಹಿಸಿದ್ದರು.

ದ್ವಿಪಾತ್ರಗಳಿಗೆ ಬೇಕಾದ ಚಮತ್ಕಾರದ ಛಾಯಾಗ್ರಹಣದಲ್ಲಿ ಕಬೀರ್ ಲಾಲ್ ಕೆಲಸ ಉತ್ತಮವಾಗಿತ್ತು. ವೈ.ವಿ.ರಾವ್ ತೆಲುಗು ನಿರ್ಮಾಪಕ ಭಾವನಾರಾಯಣರ ಸಂಬಂಧಿ. ಕನ್ನಡದಲ್ಲಿ 'ನ್ಯಾಯಕ್ಕಾಗಿ ನಾನು', 'ನನ್ನ ತಂಗಿ', 'ಮಾರುತಿ ಮಹಿಮೆ' ಮೊದಲಾದ ಚಿತ್ರಗಳನ್ನು ನಿರ್ಮಿಸಿದ್ದರು.

'ಸೌಭಾಗ್ಯಲಕ್ಷ್ಮಿ' ಚಿತ್ರದ ನಿರ್ದೇಶಕರು ಭಾರ್ಗವ. ಎಸ್.ಪಿ.ರಾಜಶೇಖರ್ ನಿರ್ಮಾಣ. ಡಿ.ವಿ.ರಾಜಾರಾಂ ಅವರ ಊಟಿಯ ಸುತ್ತಮುತ್ತಲ ಪರಿಸರವನ್ನು ಸೆರೆ ಹಿಡಿದ ರೀತಿ ಮುದ ತರುತ್ತದೆ. ಒಲಿದವರು ಇಬ್ಬರು. ಇವರ ನಡುವೆ ಹೇಳಲಾಗದೆ, ಅವರಿಬ್ಬರನ್ನು ಬಿಡಲಾರದೆ ತೊಳಲಾಡುವ ನಾಯಕ ವಿಷ್ಣುವರ್ಧನ್ ಮತ್ತು ಅವರ ಸಲುವಾಗಿಯೇ ಹೆಣೆದಂತಿರುವ ಘಟನೆಗಳು, ರಂಜನೀಯ ಸನ್ನಿವೇಶಗಳಿಂದಾಗಿ ಗಮನ ಸೆಳೆದಿತ್ತು. ಎಸ್.ಪಿ.ಬಾಲಸುಬ್ರಹ್ಮಣ್ಯಂ ಸಂಗೀತ ನೀಡಿದ್ದರು. ಎಸ್.ಪಿ.ಬಾಲಸುಬ್ರಹ್ಮಣ್ಯಂ ಇತರ ಸಂಯೋಜನೆಯಲ್ಲಿ ಹಾಡಿದಾಗ ಸಿಗುವ ಸಂತೋಷ ಅವರೇ ಸಂಗೀತ ನಿರ್ದೇಶಕರಾದಾಗ ಸಿಗುವುದಿಲ್ಲ. ಬೆರಳೆಣಿಕೆಯಷ್ಟು ಪ್ರಯತ್ನಗಳಾದರೂ ಏನೂ ಸಾಧಿತವಾಗಿಲ್ಲ ಎಂಬುದು ಆಶ್ಚರ್ಯ. ಲಕ್ಷ್ಮೀ, ಬಿ.ವಿ.ರಾಧಾ ನಾಯಕಿಯರು. ಒಬ್ಬ ಗಂಡನನ್ನು ಇಬ್ಬರು ಹಂಚಿಕೊಳ್ಳಲಾರದೆ ವಿರಸ, ಕಡೆಗೆ ಒಬ್ಬಳ ಸಾವಿನಿಂದ ಸಮಸ್ಯೆಗೊಂದು ಅಂತಿಮ ರೂಪ. ಸಮೂಹ ಮಾಧ್ಯಮಗಳು ಕ್ಲಿಷ್ಟ ಸಮಸ್ಯೆಗಳು ಎದುರಾದಾಗಲೆಲ್ಲ ಪರಿಹಾರ ಕಂಡುಕೊಳ್ಳುವುದೇ ಹೀಗೆ. ತ್ಯಾಗ, ಬಲಿದಾನದ ವಿನಾ ಬೇರೆ ಪರಿಹಾರ ಸ್ತ್ರೀಯರಿಗೆ ಇನ್ನೂ ದಕ್ಕಲಿಲ್ಲ.

'ಈ ಬಂಧ ಅನುಬಂಧ' ಪ್ರೇಮಾಲಯ ಫಿಲಂಸ್ ಲಾಂಛನದಡಿ ಎ.ರಾಧಾಕೃಷ್ಣರಾಜು ಹಾಗೂ ವಿ.ಎಲ್.ಎಸ್.ಮೂರ್ತಿ ನಿರ್ಮಿಸಿದ ಚಿತ್ರ. ಜಾನಕಿರಾಂ ಛಾಯಾಗ್ರಹಣ ಹಾಗೂ ನಿರ್ದೇಶನ ಎರಡನ್ನೂ ನಿರ್ವಹಿಸಿದ್ದಾರೆ. ನಿರ್ಮಾಪಕರೂ ಆದ ಸಮೀಉಲ್ಲಾ ಅವರು ಬರೆದ ಕಥೆ. ರಮೇಶ್ ನಾಯ್ಡು ಅವರ ಸಂಗೀತ ನಿರ್ದೇಶನದಲ್ಲಿ ಹಾಡುಗಳೂ ಚೆನ್ನಾಗಿದ್ದವು. ಚಿತ್ರಣದಲ್ಲೂ ಅತಿರೇಕಗಳಿಲ್ಲ, ಅಸಗತ್ಯ ನೃತ್ಯ, ಮರ ಸುತ್ತುವ ಅಸಹಜತೆಗಳಿಲ್ಲ. ಆದರೂ ಚಿತ್ರಕಥೆಯನ್ನು ಜಾಳುಜಾಳಾಗಿಸಿದ್ದು, ಗಂಭೀರವಾದ ಚಿಂತನೆಗಳನ್ನು ಅಭಿವ್ಯಕ್ತಿಸಬೇಕಾದರೆ ಆಳವಾದ ನೋಟವಿರದಿದ್ದದ್ದು ಎದ್ದು ಕಂಡ ದೋಷ. ಶಂಕರ್‌ನಾಗ್ ಅವರೊಂದಿಗೆ ಜರೀನಾವಹಾಬ್, ವಜ್ರಮುನಿ, ದಿನೇಶ್, ರಾಜಶೇಖರ್ ಮತ್ತು ಮಾ|ಮಂಜುನಾಥ್ ಅಭಿನಯಿಸಿದ್ದರು.

'ಪುಷ್ಪಕ ವಿಮಾನ' ಒಂದು ಅದ್ಭುತ ಕಲ್ಪನೆಯಷ್ಟೇ ಅಲ್ಲ, ಪ್ರಯತ್ನ ಕೂಡ. ಮಾತು, ಶಬ್ದ ಹಾಗೂ ಸಂಗೀತಗಳೂ ಚಲನಚಿತ್ರಗಳ ಜೀವಾಳವೆಂಬಂತೆ ವಿಜೃಂಭಿಸುತ್ತಿದ್ದ ದಿನಗಳಲ್ಲಿ ಮಾತೇ ಇಲ್ಲದ ಮೂಕಿ ಚಿತ್ರವನ್ನು ಕಲ್ಪಿಸಿಕೊಳ್ಳುವುದು ಅಥವಾ ನಿರ್ಮಿಸುವುದು ಸರಳ ಸಂಗತಿಯಲ್ಲ. ಆದರೆ ಅಸಾಧ್ಯವಾದದ್ದು ಸಾಧ್ಯವಾಯಿತು. ಇದನ್ನು ಸಾಧಿಸಿದವರು ಸಿಂಗೀತಂ ಶ್ರೀನಿವಾಸರಾವ್ ಹಾಗೂ ಶೃಂಗಾರ್ ನಾಗರಾಜ್. ಮಾತಿಗೆ ಹತ್ತು ಅರ್ಥ ಹುಟ್ಟಬಹುದಾದರೆ ಮೌನ ನೂರು ಅರ್ಥಗಳನ್ನು ಧ್ವನಿಸಬಲ್ಲದು. ಮನುಷ್ಯ ಸ್ವಭಾವದ ಸೂಕ್ಷ್ಮ ಅಭಿವ್ಯಕ್ತಿಯಾದ ಇಂಥ ಮೌನವನ್ನು ಸಿನಿಮಾದಂಥ ದೃಶ್ಯ ಮಾಧ್ಯಮಕ್ಕೆ ಅಳವಡಿಸುವುದು ನಿಜಕ್ಕೂ ಸವಾಲು. ಏಕೆಂದರೆ ಕಳೆದ ಅರ್ಧ ಶತಮಾನಕ್ಕೂ ಮೀರಿ ಮಾತು, ಹಾಡುಗಳು ಚಲನಚಿತ್ರಗಳ ಅನಿವಾರ್ಯ ಅಂಗ ಎನ್ನುವಂಥ ವಾತಾವರಣ ಬೆಳೆದು ಬಂದಿತ್ತು. ಇಂಥ ಸಂದರ್ಭದಲ್ಲಿ ಶೃಂಗಾರ್ ನಾಗರಾಜ್ ಹಾಗೂ ಸಿಂಗೀತಂ ಶ್ರೀನಿವಾಸರಾವ್ ಜಂಟಿಯಾಗಿ ದೊಡ್ಡ ಸಾಹಸಕ್ಕೆ ಕೈ ಹಾಕಿ ಯಶಸ್ವಿಯಾದರು.

ಕೆಲಸವಿಲ್ಲದ ಬೇಗೆಯಲ್ಲಿ ಬೇಯುತ್ತಿದ್ದ ನಿರುದ್ಯೋಗಿ ಏಕಾಂಗಿ ಯುವಕ ಕುಡಿದು ದಾರಿಯಲ್ಲಿ ಬಿದ್ದಿದ್ದ ಶ್ರೀಮಂತನ ಜೇಬಿನಿಂದ ಅವನು ಪಂಚತಾರಾ ಹೋಟೇಲಿನಲ್ಲಿ ಬಾಡಿಗೆಗೆ ಹಿಡಿದಿದ್ದ ರೂಮಿನ ಬೀಗದ ಕೈಯನ್ನು ಎತ್ತಿಕೊಳ್ಳುತ್ತಾನೆ. ನಂತರ ಅವನನ್ನು ಹೊತ್ತೊಯ್ದು ತನ್ನ ರೂಮಿನಲ್ಲಿ ಕೂಡಿಹಾಕಿ ತಾನು ಕನಸು ಕಾಣುತ್ತಿದ್ದ ವೈಭವದ ಜೀವನ ಆರಂಭಿಸುತ್ತಾನೆ. ಇದಕ್ಕೆ ಪೂರಕವಾಗಿ ಅವನಿಗೆ ಅಲ್ಲಿಯೇ ಪ್ರದರ್ಶನ ಕೊಡಲು ಮೊಕ್ಕಾಂ ಮಾಡಿರುವ ಜಾದೂಗಾರನ ಮಗಳೊಂದಿಗೆ ಅನುರಾಗ ಬೆಳೆಯುತ್ತದೆ. ಆದರೆ ಒಂದೆರಡು ದಿನದಲ್ಲೇ ಯುವಕ ಕೂಡಿ ಹಾಕಿದ್ದ 'ಶ್ರೀಮಂತ ಕುಡುಕ'ನ ಹೆಂಡತಿಯ ಪ್ರಿಯತಮ ಬಾಡಿಗೆ ಹಂತಕನನ್ನು ನಿಯೋಜಿಸಿ ಶ್ರೀಮಂತನನ್ನು ಕೊಲ್ಲಲು ಕಳುಹಿಸುತ್ತಾನೆ. ಹಂತಕನ ಬೇಟೆಗೆ ಗುರಿಯಾಗುವುದು ಶ್ರೀಮಂತನ ಬದಲಿಗೆ ಅವನ ಕೋಣೆಯಲ್ಲಿ ವಾಸ ಮಾಡುತ್ತಿದ್ದ ಯುವಕ. ಇಲ್ಲಿಂದಾಚೆಗೆ ಸ್ವಾರಸ್ಯಕರ ತಿರುವುಗಳು, ವೈಭವದ ಬದುಕಿನ ಹಿಂದಿರುವ ವಿಷಾದ ಎಲ್ಲವೂ



(ಚಿತ್ರ ೧೧೧) 'ಪುಷ್ಪಕ ವಿಮಾನ' ಚಿತ್ರದಲ್ಲಿ ಕಮಲಹಾಸನ್

ಬಿಚ್ಚಿಕೊಳ್ಳತೊಡಗುತ್ತವೆ. ಕೊನೆಗೆ ಯುವಕನಿಗೆ ತಾನು ಅನುಭವಿಸುತ್ತಿದ್ದ ಬದುಕಿನ ಹಿಂದಿರುವ ಕ್ರೌರ್ಯ, ದುರಾಸೆಗಳು ಜಿಗುಪ್ಸೆ ಹುಟ್ಟಿಸುತ್ತವೆ. ತಾನು ಏರಿ ಕುಳಿತಿರುವುದು ಬಿಸಿಲು ಕುದುರೆಯ ಬೆನ್ನ ಮೇಲೆ ಎಂಬುದು ಮನವರಿಕೆಯಾಗುತ್ತದೆ. ಅದುವರೆಗಿನ ತನ್ನ ಎಲ್ಲ ಗೊಂದಲಗಳಿಗೂ ವಿದಾಯ ಹೇಳಿ ಮತ್ತೆ ಕೆಲಸದ ಬೇಟೆಗಾಗಿ ಕ್ಯೂನಲ್ಲಿ ಬಂದು ನಿಲ್ಲುತ್ತಾನೆ.

ಗಂಡು-ಹೆಣ್ಣಿನ ನಡುವಿನ ಪ್ರೀತಿಯಲ್ಲಿರುವ ಕೆಲವು ಸರಳ ಸತ್ಯಗಳನ್ನು, ಭಿಕ್ಷುಕನ ದೃಶ್ಯಗಳನ್ನು, ಜಾದೂ ದೃಶ್ಯಗಳನ್ನು ಅರ್ಥಗರ್ಭಿತವಾಗಿ, ಪ್ರಬುದ್ಧವಾಗಿ ಚಿತ್ರಿಸಿರುವ ರೀತಿ ಸಿಂಗೀತಂ ಅವರನ್ನು ಶ್ರೇಷ್ಠ ನಿರ್ದೇಶಕರ ಸಾಲಿನಲ್ಲಿ ನಿಲ್ಲಿಸಿದೆ. 'ಮೌನವೇ ಮಾನವನ ಸಹಜ ಗುಣ' ಎನ್ನಿಸುವಂಥ ಚತುರ ದೃಶ್ಯಗಳ ಸೃಷ್ಟಿಯಲ್ಲಿ ಹಾಸ್ಯವೂ ಬೆರೆತಿದ್ದು 'ಒಂದು ಮಾದರಿ' ಅನ್ನಿಸುವಷ್ಟು ಶ್ರೇಷ್ಠವಾಗಿ ಮೂಡಿಬಂದಿದೆ. ಕಮಲಹಾಸನ್, ಅಮಲಾರಿಂದ ಹಿಡಿದು ಭಿಕ್ಷುಕನ ಪುಟ್ಟ ಪಾತ್ರದವರೆಗೆ ಪ್ರತಿಯೊಬ್ಬರೂ ಸಮರ್ಥ ಆಯ್ಕೆಯಾಗಿರುವುದು ವಿಶೇಷ. ಬಿ.ಸಿ.ಗೌರಿಶಂಕರ್‌ರವರ ಛಾಯಾಗ್ರಹಣ ಕೂಡ ಚಿತ್ರದ ಮುಖ್ಯ ಗುಣವಾಗಿದೆ. ಇಲ್ಲಿ ಹೇಳಬೇಕಾದ ಇನ್ನೊಂದು ಮೂಲಭೂತ ಅಂಶವಿದೆ. ಈ ಮಾತಿಲ್ಲದ ಚಿತ್ರಕ್ಕೆ ಯಶಸ್ಸನ್ನು ತಂದುಕೊಡುವುದರಲ್ಲಿ ಹಿನ್ನೆಲೆ ಸಂಗೀತ ಬಹುಮುಖ್ಯ ಪಾತ್ರವನ್ನು ನಿರ್ವಹಿಸಿದೆ. ದೃಶ್ಯ ಮತ್ತು ನಟನೆಗೆ ಹಿನ್ನೆಲೆ ಸಂಗೀತ ಸೇತು ರೂಪದಲ್ಲಿ ಅವಶ್ಯಕವಾಗಿತ್ತು. ಇದರೊಂದಿಗೆ ಈ ಚಿತ್ರದ ನಿರ್ಮಾಣ ಹಂತದ ಮತ್ತು ನಂತರದಲ್ಲಿನ ಕೆಲವು ಸಂಗತಿಗಳನ್ನು ಇಲ್ಲಿ ಉಲ್ಲೇಖಿಸಬಹುದು. ಈ ಚಿತ್ರಕ್ಕೆ 'ಶ್ರೇಷ್ಠ ಜನಪ್ರಿಯ ಮನರಂಜನಾ ಚಿತ್ರ'ವೆಂದು ಕೇಂದ್ರದ 'ಸ್ವರ್ಣಕಮಲ' ಪ್ರಶಸ್ತಿ ಲಭ್ಯವಾಯಿತು. ಸೃಜನಾತ್ಮಕ, ಪ್ರಯೋಗಾತ್ಮಕ ಕಥೆ ಹಾಗೂ ನಿರ್ದೇಶನಕ್ಕೆ ಸಿಂಗೀತಂರವರಿಗೆ, ಸಂಗೀತಕ್ಕಾಗಿ ಎಲ್.ವೈದ್ಯನಾಥನ್, ಸಂಕಲನಕ್ಕಾಗಿ ಡಿ.ವಾಸು ೧೯೮೭-೮೮ರ ರಾಜ್ಯ ಪ್ರಶಸ್ತಿ ಪಡೆದರು.

ಸಿಂಗೀತಂ ಶ್ರೀನಿವಾಸರಾವ್ ತಾವು ಏಳು ವರ್ಷಗಳಿಂದ 'ಪುಷ್ಪಕ ವಿಮಾನ' ಚಿತ್ರದ ಕನಸು ಕಾಣುತ್ತಿದ್ದುದಾಗಿ ಆ ಸಂದರ್ಭದಲ್ಲಿ ಹೇಳಿಕೊಂಡಿದ್ದರು. ಆದರೆ ಚಿತ್ರದ 'ರಷಸ್' ನೋಡಿದ ತಮಿಳು ವಿತರಕರಿಗೆ ಚಿತ್ರವನ್ನು ನಿರೂಪಿಸಿದ್ದ ಶೈಲಿ ಇಷ್ಟವಾಗದೆ ತಾವು ಮುಂಗಡವಾಗಿ ಕೊಟ್ಟಿದ್ದ ಎಂಟೂವರೆ ಲಕ್ಷ ರೂಪಾಯಿಗಳನ್ನು ವಾಪಸು ಪಡೆದಿದ್ದರು. ಈ ಚಿತ್ರದ ನಿರ್ಮಾಣಕ್ಕಾಗಿ ಒಟ್ಟು ೪೫ ಲಕ್ಷ ರೂಪಾಯಿ ವೆಚ್ಚವಾಗಿತ್ತು. ಚಿತ್ರದ ಬಹಳ ಭಾಗದ ಚಿತ್ರೀಕರಣ ನಡೆದದ್ದು ಬೆಂಗಳೂರಿನ ವಿಂಡ್ಸರ್ ಮ್ಯಾನರ್ ಪಂಚತಾರಾ ಹೊಟೇಲ್‌ನಲ್ಲಿ. ಇದರ ಬಾಡಿಗೆಗೇ ಆರು ಲಕ್ಷ ರೂಪಾಯಿ ವೆಚ್ಚವಾಗಿತ್ತು. ೪೦ ವಾರಗಳ ನಿರಂತರ ಪ್ರದರ್ಶನ ಕಂಡ ಈ ಚಿತ್ರದ ಗಳಿಕೆ ಬೇರೆಲ್ಲ ರಾಜ್ಯಗಳಿಗಿಂತ ಮಹಾರಾಷ್ಟ್ರದಲ್ಲಿ ಮುಂದಿತ್ತು. ಕರ್ನಾಟಕದಲ್ಲಿ ೧೫ ಪ್ರಿಂಟ್‌ಗಳು ಚಲಾವಣೆಯಲ್ಲಿದ್ದರೆ, ಆಂಧ್ರ ಪ್ರದೇಶದಲ್ಲಿ ೨೦, ತಮಿಳುನಾಡು ೩೦, ಮುಂಬಯಿ, ದೆಹಲಿ ಮತ್ತು ಉತ್ತರ ಪ್ರದೇಶದಲ್ಲಿ ತಲಾ ೧೦ ಪ್ರಿಂಟ್‌ಗಳನ್ನು ಬಿಡುಗಡೆ ಮಾಡಲಾಯಿತು. ತಾಷ್ಕೆಂಟ್‌ನ ಅಂತರರಾಷ್ಟ್ರೀಯ ಚಿತ್ರೋತ್ಸವದಲ್ಲಿ ಪ್ರದರ್ಶನವಾದ ಈ ಚಿತ್ರವನ್ನು ರಷ್ಯಾ ೧೦ ವರ್ಷಗಳ ಕಾಲ ಪ್ರದರ್ಶಿಸುವ ಹಕ್ಕುಗಳೊಂದಿಗೆ ಖರೀದಿಸಿತು.



(ಚಿತ್ರ ೧೧೨) 'ಪ್ರೇಮಲೋಕ' ಚಿತ್ರದಲ್ಲಿ ರವಿಚಂದ್ರನ್ ಮತ್ತು ಜ್ಯೂಹಿ ಚಾವ್ಲಾ

'ಪುಷ್ಪಕ ವಿಮಾನ' ಹೀಗೆ ಮಾತನಾಡದೆ ಮೌನವಾಗಿ ಸದಭಿರುಚಿಯಿಂದ ಸಾಧಿಸಿದ ಯಶಸ್ಸನ್ನು ಅದೇ ವರ್ಷ ಅಬ್ಬರ-ಕುಣಿತಗಳಿಂದ, ಅದ್ದೂರಿ-ವೈಭವಗಳಿಂದ ಸಾಧಿಸಿದ ಚಿತ್ರ 'ಪ್ರೇಮಲೋಕ'. ಇವೆರಲ್ಲಿ 'ನಾನೇ ರಾಜ' ಚಿತ್ರದಲ್ಲಿನ ಪಡ್ಡೆತನ, 'ಖದೀಮ ಕಳ್ಳರು' ಚಿತ್ರದಲ್ಲಿದ್ದ ಧ್ವಂಸ, 'ಸ್ವಾಭಿಮಾನ', 'ಸಾವಿರ ಸುಳ್ಳು'ಗಳಲ್ಲಿದ್ದ ದ್ವಂದ್ವಾರ್ಥ ಸಂಭಾಷಣೆ, 'ಚಕ್ರವ್ಯೂಹ'ದ ಗಟ್ಟಿಬಂಧ - ಇವೆಲ್ಲವೂ ಪ್ರಮಾಣಬದ್ಧವಾಗಿ, ಹದವಾಗಿ ಬೆರೆತಿದ್ದುವು. ಈ ಚಿತ್ರದ ಯಶಸ್ಸು, ಹದಿಹರೆಯದವರಲ್ಲಿ ಸೃಷ್ಟಿಸಿದ ಹುಚ್ಚು, ಕನ್ನಡ ಚಿತ್ರರಂಗದ ಒಂದು ವಿಶೇಷ ಘಟನೆಯಾಗಿತ್ತು. ಈ ಚಿತ್ರದ ಹಾಡುಗಳು ಉಂಟುಮಾಡಿದ ಭ್ರಮೆ ಹೇಗಿತ್ತೆಂದರೆ ಎಂದಾದರೊಂದು ದಿನ ರಾಜಕುಮಾರನಂಥ ಶ್ರೀಮಂತ ಸ್ಫುರದ್ರೂಪಿ ಯುವಕ ಬಂದು ಕರೆದೊಯ್ಯುವ ನಿರೀಕ್ಷೆಯಲ್ಲಿ, ಜಿಂಕೆಯಂತೆ ಜಿಗಿದು ಬಳುಕುವ ಸುಂದರ ಎಳೆಬಾಲೆಯ ಬೆಚ್ಚಗಿನ ತೆಕ್ಕೆಯಲ್ಲಿದ್ದೇವೆಂಬ ಭಾವದಲ್ಲಿ ಯುವಕ-ಯುವತಿಯರು ಕಳೆದುಹೋಗಿದ್ದರು. ಏಕೆಂದರೆ ಆ ಬಗೆಯ ಹೊಸತನ ತೆರೆಯ ಮೇಲೆ ಕಂಡುಬಂದದ್ದು ಅದೇ ಮೊದಲು. 'ಪ್ರೇಮಲೋಕ'ದಲ್ಲಿದ್ದಂಥ ಭಾವಪೂರ್ಣವಾದ ಕಾವ್ಯಾತ್ಮಕ ನಿರೂಪಣೆಯನ್ನು ಯಾರೂ ಅದುವರೆಗೆ ಕನ್ನಡ ಬೆಳ್ಳಿತೆರೆಯಲ್ಲಿ ಕಂಡಿರಲಿಲ್ಲ. ಇಂಥ ಹೊಸತನ ಮತ್ತು ಭಿನ್ನತೆಯಿಂದಾಗಿ ಈ ಚಿತ್ರವು ಮೊದಲ ನಾಲ್ಕು ವಾರಗಳ ಕಾಲ ಪ್ರೇಕ್ಷಕರಿಗೆ ಅರ್ಥವೂ ಆಗಿರಲಿಲ್ಲ. ಇದರಿಂದಾಗಿ ಚಿತ್ರ ಬಿಡುಗಡೆಯಾದಲ್ಲೆಲ್ಲ ಪ್ರೇಕ್ಷಕರ ಸಂಖ್ಯೆ ಅತ್ಯಂತ ಕಡಿಮೆ ಇರುತ್ತಿತ್ತು. ಆದರೆ ಚಿತ್ರದ ಭಾವ, ಕಾಮನೆಗಳು ಎಲ್ಲ ವಯಸ್ಸಿನವರನ್ನು ಕ್ರಮೇಣ ಮುಟ್ಟಲಾರಂಭಿಸಿದವು. ಐದನೆಯ ವಾರದ ನಂತರದ ಪ್ರತಿಯೊಂದು ಪ್ರದರ್ಶನವೂ ಭರ್ತಿಯಾಗತೊಡಗಿತು. ಇದರೊಂದಿಗೆ ಸಂಗೀತ ನಿರ್ದೇಶಕ ಹಂಸಲೇಖ (ಪಿ.ಜಿ.ಗಂಗರಾಜ್) ಹಾಗೂ ನಿರ್ದೇಶಕ-ನಟ ರವಿಚಂದ್ರನ್ ತಮ್ಮ ಬೆಳವಣಿಗೆಯ ಹೊಸ ಮೆಟ್ಟಿಲುಗಳನ್ನು ಹತ್ತತೊಡಗಿದರು.

ಧನದಾಹದ ಶ್ರೀಮಂತ ತಂದೆ-ತಾಯಿಗಳ ಮಮತೆಯಿಂದ ವಂಚಿತನಾದ ನಾಯಕ ಆ ಪ್ರೀತಿಯನ್ನು ನಾಯಕಿಯಿಂದ ಪಡೆದುಕೊಳ್ಳಲು ಹೆಣಗುವ ಎಳೆಯಷ್ಟೇ ಕಥೆ. ಆದರೆ ಇದನ್ನು ಝಗಮಗಿಸುವ ದೀಪಗಳ ರಾತ್ರಿ ದೃಶ್ಯಗಳಲ್ಲಿ, ಭವ್ಯವಾದ ಸೆಟ್ಟುಗಳಲ್ಲಿ, ಅಮಲೇರಿಸುವಂತಹ ಉತ್ತಮ ರಾಗಗಳಲ್ಲಿ, ಪಡ್ಡೆ ಹುಡುಗರ ನುಡಿಗಟ್ಟುಗಳಲ್ಲಿ ಹೇಳಲಾಗಿದೆ. ಅಲ್ಲದೆ ಗದ್ಯವೇ ಗೀತೆಗಳಾದದ್ದು, ದೃಶ್ಯವೇ ಹಾಡುಗಳಾದದ್ದು ಬಹುಶಃ ಈ ಚಿತ್ರದ ಮೂಲಕವೆ. ರಾಗ ಸಂಯೋಜಕನೇ ಗೀತರಚನೆಕಾರನಾದಾಗ ಆಗುವಂಥ ಅನುಕೂಲಗಳಿಗೆ 'ಪ್ರೇಮಲೋಕ'ದ ಹಾಡುಗಳು ಇವತ್ತಿಗೂ ಉದಾಹರಣೆಯಾಗಿವೆ. ಈ ಚಿತ್ರದ ಯಶಸ್ಸಿನೊಂದಿಗೆ ರವಿಚಂದ್ರನ್ ಮತ್ತು ಹಂಸಲೇಖಾರ ಜೋಡಿ ಅತ್ಯಂತ ಜನಪ್ರಿಯವಾಯಿತು. ಹಾಗೆಯೇ 'ಆನಂದ್', 'ರಥಸಪ್ತಮಿ'ಗಳಿಂದ ಯಶಸ್ಸು ಗಳಿಸಿದ್ದ ಶಿವರಾಜ್‌ಕುಮಾರ್ ಮತ್ತು 'ಪ್ರೇಮಲೋಕ'ದ ರವಿಚಂದ್ರನ್ ಕನ್ನಡ ಚಿತ್ರರಂಗದ ಭವಿಷ್ಯದ ನಾಯಕ ನಟರು ಎಂಬ ಅಭಿಪ್ರಾಯ ಆಗ ಕೇಳಿಬಂತು. ೧೯೮೬ ರಲ್ಲಿ ಶಿವರಾಜ್‌ಕುಮಾರ್‌ರ 'ಆನಂದ್' ಬರುವ ಹೊತ್ತಿಗೆ - ೧೯೮೧ ರಿಂದಲೇ ರವಿಚಂದ್ರನ್ ೧೨ ಚಿತ್ರಗಳ ಅಭಿನಯ, ಒಂದೆರಡು ಚಿತ್ರಗಳ ನಿರ್ಮಾಣದಲ್ಲಿ ಸಂಪೂರ್ಣ ಅನುಭವ ಪಡೆದಿದ್ದರು. ವಿತರಣೆ, ವ್ಯವಹಾರದ ಒಳಗಿನ ಸೂಕ್ಷ್ಮಗಳನ್ನು ತಂದೆ ವೀರಾಸ್ವಾಮಿಯವರ ಜೊತೆಗಿದ್ದುಕೊಂಡು ಗ್ರಹಿಸಿದ್ದರು. ಹೀಗೆ ಚಿತ್ರರಂಗದಲ್ಲಿ ಸಂಪೂರ್ಣವಾಗಿ ತೊಡಗಿಕೊಂಡದ್ದು ಅವರನ್ನು ಅಪ್ಪಟ ಕನಸುಗಳ 'ಪ್ರೇಮಲೋಕ'ದಂಥ ಬಹುದೊಡ್ಡ ಸಾಹಸಕ್ಕೆ ಪ್ರೇರೇಪಿಸಿತು. ೧೯೮೨ ರಿಂದ ೧೯೯೦ ರವರೆಗಿನ ಎಂಟು ವರ್ಷಗಳ ಅವಧಿಯಲ್ಲಿ ರವಿಚಂದ್ರನ್‌ರ ೨೩ ಚಿತ್ರಗಳು ತೆರೆ ಕಂಡಿದ್ದರೆ ೧೯೮೬ ರಿಂದ ೯೦ ರವರೆಗಿನ ನಾಲ್ಕು ವರ್ಷಗಳಲ್ಲಿ ಶಿವರಾಜ್‌ಕುಮಾರ್ ಅಭಿನಯದ ೧೦ ಚಿತ್ರಗಳು ತೆರೆಕಂಡಿದ್ದವು. ರವಿಚಂದ್ರನ್ ಅದ್ದೂರಿತನದ ಜೊತೆಗೆ ಪರಭಾಷೆಯ ಹೆಸರಾಂತ ಸುಂದರ ತಾರೆಯರಾದ ಜ್ಯೂಹಿ, ಖುಷ್ಬೂ, ಮಾಧವಿ, ಪೂನಂ ಢಿಲ್ಲೊ, ಕರಿಷ್ಮಾ, ಅಮಲಾ, ಸೀತಾ, ಅಂಬಿಕಾ,

ಮಹಾಲಕ್ಷ್ಮೀ ಮೊದಲಾದವರ ಜೋಡಿಯಲ್ಲಿ ಯಶಸ್ಸಿಗಾಗಿ ಪ್ರಯತ್ನಿಸಿದರೆ ಶಿವರಾಜ್‌ಕುಮಾರ್‌ರ ನಾಯಕಿಯರು ಕನ್ನಡದವರೇ ಆದ ಸುಧಾರಾಣಿ, ಆಶಾರಾಣಿ, ಸರಳಾ, ವೀಣಾ, ಕಾವ್ಯ ಮತ್ತು ೧೯೯೦ರ ಕೊನೆಯ ಚಿತ್ರ 'ಮೃತ್ಯುಂಜಯ'ದಲ್ಲಿ ಕರ್ನಾಟಕದವರೇ ಎಂಬಂತಾಗಿದ್ದ ಮಾಲಾಶ್ರೀ ಅಭಿನಯಿಸಿದ್ದರು. ಹೀಗೆ ಇವರಿಬ್ಬರೂ ಎರಡು ದಾರಿಯಲ್ಲಿ ನಡೆಯುತ್ತಿದ್ದರೂ ತಾವು ಮುಂದಿನ ದಶಕದ ಮುಖ್ಯ ನಾಯಕನಟರೆಂಬುದನ್ನು ಸಾಬೀತು ಮಾಡತೊಡಗಿದರು. ೧೯೮೦ ರಿಂದ ಆರಂಭಿಸಿ ಅತಿ ಹೆಚ್ಚಿನ ಸಂಖ್ಯೆ ಹಾಗೂ ಕೆಲವೇ ಯಶಸ್ವಿ ಚಿತ್ರಗಳ ಮೂಲಕ ನಿರಂತರವಾಗಿ ಚಲಾವಣೆಯಲ್ಲಿದ್ದ ಅಂಬರೀಷ್, ವಿಷ್ಣುವರ್ಧನ್, ಅನಂತ್‌ನಾಗ್, ಶಂಕರ್‌ನಾಗ್, ಪ್ರಭಾಕರ್ ಇವರೆಲ್ಲರ ನಡುವೆಯೇ ಈ ಯುವ ನಾಯಕರಿಬ್ಬರು ತಮ್ಮ ಅಸ್ತಿತ್ವ ಸ್ಥಾಪಿಸಿಕೊಂಡು ಜನಮನದಲ್ಲಿ ಬೇರೂರಿದ್ದು ಒಂದು ವಿಶೇಷ ಸಂಗತಿ.

'ಪ್ರೇಮಲೋಕ'ದ ನಿರ್ಮಾಣದಲ್ಲಿ ಕೇವಲ ಒಬ್ಬ ಕಲಾಕಾರ ಮಾತ್ರವಲ್ಲ, ಒಬ್ಬ ಚತುರ ಉದ್ಯಮಿ ಕೂಡ ಇದ್ದಾನೆಂಬುದನ್ನು ಆಗ ಬಹಳ ಮಂದಿ ಗುರುತಿಸಿದ್ದರು. ಕಾಲ ಕ್ರಮೇಣ ಇದು ನಿಜವಾಗುತ್ತಾ ಬಂತು. ಕನ್ನಡ ಚಿತ್ರರಂಗದ ಮಾರುಕಟ್ಟೆ ವಿಸ್ತರಣೆಯಲ್ಲಿ ರವಿಚಂದ್ರನ್ ಪ್ರಮುಖ ಪಾತ್ರ ನಿರ್ವಹಿಸಿದರು. ರವಿಚಂದ್ರನ್ ಮತ್ತು ವೀರಾಸ್ವಾಮಿಯವರ ವ್ಯಾವಹಾರಿಕ ಯಶಸ್ಸಿನಿಂದ ಬೆರಗಾದವರು ಅದೇ ಗುಂಗಿನಲ್ಲಿ 'ಪ್ರೇಮಲೋಕ'ದಲ್ಲಿದ್ದ ಅತಿ ರಂಜಕತೆ, ದ್ವಂದ್ವಾರ್ಥ ಸಂಭಾಷಣೆಯ ಅಪಾಯಗಳನ್ನು ಮರೆತರು ಅಥವಾ ನಿರ್ಲಕ್ಷಿಸಿದರು. ಚಿತ್ರದಲ್ಲಿ ಒಟ್ಟು ಹತ್ತು ಹಾಡುಗಳಿದ್ದವು. ಪ್ರತಿಯೊಂದು ಹಾಡೂ ಭಿನ್ನತೆಯಿಂದ ಕೂಡಿತ್ತು. ಮಾರುಕಟ್ಟೆಗೆ ಬರುವ ನಾಯಕಿಯ ಅಂದವನ್ನು ಬಣ್ಣಿಸುವ 'ನಿಂಬೆ ಹಣ್ಣಿನಂತ ಹುಡುಗಿ ಬಂತು ನೋಡು...', ಆಡುಮಾತಿನ ಧಾಟಿಯಲ್ಲಿ ನಾಯಕಿ ಕಾಲೇಜಿಗೆ ಬರುವುದು; ಅಡ್ಮಿಷನ್ ಆಗುವುದು; ಚುಡಾಯಿಸುವ ಪೋಲಿ ಹುಡುಗರನ್ನು ಮಾತಿನಲ್ಲೇ ಗೆಲ್ಲುವುದು ಈ ಎಲ್ಲಾ ಅಂಶಗಳೊಡಗೂಡಿದಂತೆ 'ನೋಡಮ್ಮ ಹುಡುಗಿ ಕೇಳಮ್ಮ ಸರಿಯಾಗಿ...' ಹಾಡನ್ನು ಸಂಯೋಜಿಸಿ ಅದಕ್ಕೆ ಅನುಗುಣವಾದ ಚಿತ್ರೀಕರಣವನ್ನು ಮಾಡಿದ್ದರು. ವಿದ್ಯಾಲಯದ ಕಾಲೇಜ್ ಡೇ ಸಮಾರಂಭಕ್ಕೆ ಬೇಕಾದ ಸಿದ್ಧತೆ ಮಾಡುತ್ತಿರುವಾಗಲೇ ಬರುವ ಗೀತೆಯೊಂದು ಕೂಡಾ ಕ್ರಿಯೆ-ಕೇಳುವಿಕೆಯ ಸಂಯೋಗದಲ್ಲಿ ಸೊಗಸಾಗಿ ಮೂಡಿ ಬಂದಿತ್ತು. 'ಪ್ರೇಮಲೋಕದಿಂದ ಬಂದ....' ಹಾಡು ಭರ್ಜರಿ ಸೆಟ್‌ಗಳೊಡನೆ ಜೇಸುದಾಸ್ ಮತ್ತು ಎಸ್.ಜಾನಕಿ ಗಾಯನದಲ್ಲಿ ಗಮನ ಸೆಳೆದರೆ, 'ಯಾರಿವನೂ ಈ ಮನ್ಮಥನು...' ಹಾಗೂ 'ಮೋಸಗಾರನಾ ಹೃದಯ ಶೂನ್ಯನಾ...' ಹಾಡುಗಳಲ್ಲೇ ಸಾಹಸವನ್ನು ಜೋಡಿಸಿದ್ದ ಜಾಣತನವಿತ್ತು. ಎಲ್ಲಕ್ಕಿಂತ ಮಧುರವಾದ 'ಇದು ನನ್ನ ನಿನ್ನ ಪ್ರೇಮಗೀತೆ ಚಿನ್ನ...' ಹಾಡಿನಲ್ಲಿ ಸಾಕಷ್ಟು ವಯಲಿನ್‌ಗಳನ್ನು ದೃಶ್ಯದ ಅಂದಕ್ಕಾಗಿ ಬಳಸಿಕೊಂಡಿದ್ದರು. ವಿಶಿಷ್ಟ ರೀತಿಯಲ್ಲಿ ನೂರಾರು ಮೋಟಾರ್ ಬೈಕ್ ಬಳಸಿದ್ದೇ ಮೊದಲಾದ ಕಣ್ತಣಿಸುವ ಹಲವಾರು ದೃಶ್ಯಗಳ ಸಂಗಮವಾಗಿತ್ತು. ಚಲನಚಿತ್ರ ವ್ಯಾಕರಣದಲ್ಲಿ ಕೂಡಾ ರವಿಚಂದ್ರನ್ ವಿಶೇಷ ಪ್ರಯೋಗ ಮಾಡಿದರು. ಜಾಹಿರಾತು ಮಾದರಿಯಲ್ಲಿ ಚಿತ್ರಿಕೆಗಳನ್ನು ತೆಗೆದು ಸಂಕಲಿಸುವ ಹೊಸದೆನ್ನಿಸುವ ಶೈಲಿಯೂ ಇತ್ತು.

ಇದೆಲ್ಲದರ ನಡುವೆ 'ಪ್ರೇಮಲೋಕ' ಕನ್ನಡ ಚಿತ್ರೋದ್ಯಮದ ಮಾರುಕಟ್ಟೆಯ ವ್ಯಾಪ್ತಿಯನ್ನು ತೋರಿಸಿಕೊಟ್ಟದ್ದು ಕೂಡ ಒಂದು ಬಹು ಮುಖ್ಯ ದಾಖಲೆ. ಇಷ್ಟೇ ಅಲ್ಲದೆ ಉದ್ಯಮದ ಅಂತರಂಗದಲ್ಲಿ ಸೊರಗುತ್ತಿದ್ದ ಆರ್ಥಿಕ ಚೇತನವನ್ನು ಕೂಡ ಈ ಚಿತ್ರ ಬಡಿದೆಬ್ಬಿಸಿತು. ಕನ್ನಡ ಸಂಗೀತ ಲೋಕದಲ್ಲಿ ಇದು ಉಂಟುಮಾಡಿದ ಕೋಲಾಹಲ ಕೂಡ ದಾಖಲಾರ್ಹ. ಈ ಚಿತ್ರದ ಅಂದಾಜಿನ ದಾಖಲೆಗಳ ಪ್ರಕಾರ ಎಂಟು ಲಕ್ಷ ಹಾಡಿನ ಕ್ಯಾಸೆಟ್‌ಗಳು ೧೯೯೫ರ ಒಳಗೆ ಮಾರಾಟವಾಗಿವೆ. ಅಲ್ಲದೆ ಪ್ರಪ್ರಥಮ ಬಾರಿಗೆ ಈ ಚಿತ್ರದ ಹಾಡುಗಳನ್ನು ಇತರ ಭಾಷೆಯ ಗೀತೆಗಳನ್ನು ಮಾತ್ರ ಕೇಳುವ ಸಂಗೀತ ಪ್ರೇಮಿಗಳು ಕೂಡ ಮೆಚ್ಚಿಕೊಂಡರು. ಬೆಂಗಳೂರಿನ ಇಂಗ್ಲಿಷ್‌ಮಯವಾದ ಪ್ರದೇಶಗಳ ಹೋಟೆಲ್, ಪಬ್. ಕ್ಲಬ್‌ಗಳಲ್ಲಿ ಸುಮಾರು ಆರೇಳು ವರ್ಷಗಳ ಕಾಲ 'ಪ್ರೇಮಲೋಕ'ದ ಹಾಡುಗಳನ್ನು ಖಾಯಂ ಆಗಿ ಹಾಕಲಾಗುತ್ತಿತ್ತು. ಈ ಅರ್ಥದಲ್ಲಿ ಬ್ರಿಗೇಡ್ ರಸ್ತೆ, ಎಂ.ಜಿ.ರಸ್ತೆ, ಕಮರ್ಷಿಯಲ್ ಬೀದಿಗಳ ಆಧುನಿಕ ಸಂಸ್ಕೃತಿಗೆ ಸುಗ್ಗುವಂಥ ವಿಶಿಷ್ಟ ಶೈಲಿಯ ಹಾಡುಗಳನ್ನು ಒಳಗೊಂಡಿದ್ದ ಪ್ರಥಮ ಕನ್ನಡ ಚಿತ್ರವಿದು. ಒಟ್ಟಾರೆ ಈ ಚಿತ್ರ ರವಿಚಂದ್ರನ್ ಒಬ್ಬ ಯಶಸ್ವಿ ನಟ, ನಿರ್ದೇಶಕ, ನಿರ್ಮಾಪಕ, ಉದ್ಯಮಿ ಆಗಿ ಚಿತ್ರರಂಗದಲ್ಲಿ ನೆಲೆ ನಿಲ್ಲಲು ನೆರವಾಯಿತು. ಹಂಸಲೇಖ ಇದಕ್ಕೂ ಮೊದಲು 'ಪ್ರೇಮ ತಪಸ್ಸಿ', 'ಹೆಣ್ಣೇ ನಿನಗೇನು ಬಂಧನ' ಚಿತ್ರಗಳಿಗೆ ಸಂಗೀತ ನೀಡಿದ್ದರೂ ಈ ಚಿತ್ರದಿಂದ ಬಹುಮುಖ್ಯ ಸಂಗೀತ ನಿರ್ದೇಶಕರಾಗಿ ಹೊರಹೊಮ್ಮಿದ್ದರು.

'ಪ್ರೇಮಲೋಕ'ಕ್ಕಿಂತ ಮುಂಚೆ ೧೯೮೭ರ ಎರಡನೆಯ ಚಿತ್ರವಾಗಿ ಬಿಡುಗಡೆಯಾದ 'ಆಗಂತುಕ' ಸುರೇಶ್ ಹೆಬ್ಳೀಕರ್ ನಾಯಕತ್ವ, ನಿರ್ದೇಶನದ ಪತ್ತೇದಾರಿ ಶೈಲಿಯ ಚಿತ್ರ. ಈ ದಿನಗಳಲ್ಲಿ ನಿರಂತರವಾಗಿ ಹರಿದು ಬರುತ್ತಿದ್ದ ತ್ರಿಕೋನ ಪ್ರೇಮದ ಕಥೆಗಳಿಗಿಂತ ಭಿನ್ನವಾಗಿದ್ದ ಚಿತ್ರವಿದು. 'ಆಗಂತುಕ' ಚಿತ್ರದಲ್ಲಿದ್ದ ಪ್ರಕೃತಿ, ಪರಿಸರ ಇನ್ನಷ್ಟು ಜನಪ್ರಿಯಗೊಳಿಸಿತು. '೨೨ ಮಾವಳ್ಳಿ ಸರ್ಕಲ್'ನಿಂದ ಚಿತ್ರರಂಗ ಪ್ರವೇಶಿಸಿದ್ದರು ದೇವರಾಜ್. ದೇವರಾಜ್ ಆ ಮೊದಲೇ 'ದಂಗೆ, 'ತ್ರಿಶೂಲ' ಚಿತ್ರಗಳಲ್ಲಿ ಅಭಿನಯಿಸಿದ್ದರು. 'ತ್ರಿಶೂಲ' ಚಿತ್ರಕ್ಕೆಂದು ದೇವರಾಜ್, ಅವಿನಾಶ್ ಇಬ್ಬರನ್ನು ಬಾಲಾಜಿಸಿಂಗ್, ಕೆ.ವಿ.ಗುಪ್ತ ಮೇಕಪ್ ಟೆಸ್ಟ್, ಕ್ಯಾಮರಾ ಟೆಸ್ಟ್ ಎಲ್ಲ ಮಾಡಿಸಿದ್ದುಂಟು. ಆ ಚಿತ್ರಗಳು ತೆರೆಕಾಣಲಿಲ್ಲ. ಆದ್ದರಿಂದ '೨೨ ಮಾವಳ್ಳಿ ಸರ್ಕಲ್' ಅವರ ಮೊದಲ ಚಿತ್ರವಾಯಿತು. ಈ ಚಿತ್ರಕ್ಕೆ ಕಲಾನಿರ್ದೇಶನ ಮಾಡಿದ್ದ ಕಿರಿಯ ಕಲಾವಿದ ಎ.ಎಂ.ಪ್ರಕಾಶ್ ಅವರೆಗೆ ಇದ್ದ ಕಲಾನಿರ್ದೇಶನದ ಕೆಲವು ಸೂತ್ರಗಳನ್ನು ಮುರಿದು, ಮುಂದಿನ ಕಲಾನಿರ್ದೇಶಕರಿಗೆ ಹೊಸ ದಾರಿ ತೋರಿದ್ದರು. 'ಆಗಂತುಕ' ಚಿತ್ರ ದೇವರಾಜ್‌ಗೆ ಹೊಸ ದಿಕ್ಕು ತೆರೆದಿಟ್ಟಿತು. ಜೊತೆಗೆ ಅವರ ಅಭಿನಯಕ್ಕಾಗಿ ೧೯೮೬-೮೭ರ ರಾಜ್ಯದ ಅತ್ಯುತ್ತಮ ಪೋಷಕ ನಟ ಪ್ರಶಸ್ತಿಯೂ ಬಂದಿತು. ಹೆಸರಾಂತ ಛಾಯಾಗ್ರಾಹಕರಾದ ಮಧು ಅಂಬಟ್‌ರವರ ಬಳಿ ಸಹಾಯಕರಾಗಿದ್ದ ಪಿ.ರಾಜನ್ ಈ ಚಿತ್ರದ ಮೂಲಕ ಸ್ವತಂತ್ರ ಛಾಯಾಗ್ರಾಹಕರಾಗಿ ಕನ್ನಡ ಚಿತ್ರರಂಗದಲ್ಲಿ ದುಡಿಯಲು ಆರಂಭಿಸಿದರು. ನಂತರ ಇವರು ಅತ್ಯಂತ ಯಶಸ್ವಿ ಛಾಯಾಗ್ರಾಹಕರಾಗಿ ಸುನಿಲ್‌ಕುಮಾರ್ ದೇಸಾಯಿಯವರಂಥ ಕೆಲವು ಸೃಜನಶೀಲ ನಿರ್ದೇಶಕರೊಂದಿಗೆ ಕೆಲಸ ನಿರ್ವಹಿಸಿದರು. ಸಾಧಾರಣ ಯಶಸ್ಸು ಗಳಿಸಿದ್ದ 'ಆಗಂತುಕ' ಚಿತ್ರಕ್ಕೆ ರಾಜೀವ ತಾರಾನಾಥ್ ಸಂಗೀತ ನೀಡಿದ್ದರು.

ಮಹಾಭಾರತದ ಏಕಲವ್ಯ ಮತ್ತು ದ್ರೋಣಾಚಾರ್ಯರ ಮಹಾ ಕೋಲಾಹಲದ ವಸ್ತುವನ್ನು ಆಧರಿಸಿ ಕುವೆಂಪುರವರು ಬರೆದ 'ಬೆರಳ್ಗೆ ಕೊರಳ್' ನಾಟಕವನ್ನು ಅದೇ ಹೆಸರಿನಲ್ಲಿ ತೆರೆಗೆ ತಂದವರು ಶ್ರೀಹರ್ಷ. ಇವರು ವ್ಯಾವಹಾರಿಕ ಯಶಸ್ಸನ್ನು ಲೆಕ್ಕಿಸದೆಯೇ ಚಿತ್ರವನ್ನು ಅತ್ಯಂತ ಹಠದಿಂದ ಹಳಗನ್ನಡದಲ್ಲೇ ತಯಾರಿಸಿದ್ದು ವಿಶೇಷ. ಈ ದೃಷ್ಟಿಯಿಂದ ಇದೇ ಕನ್ನಡದ ಪ್ರಥಮ ಮತ್ತು ಏಕೈಕ ಹಳೆಗನ್ನಡದ ಚಿತ್ರ. ಇದನ್ನು ಕೆಮ್ಮಣ್ಣುಗುಂಡಿಯ ಸುತ್ತಮುತ್ತ, ಹೆಬ್ಬೆ ಮತ್ತು ಕಲ್ಹತ್ತಿ ಜಲಪಾತಗಳ ಬಳಿ ಹಾಗೂ ಕುವೆಂಪುರವರ ಅಚ್ಚುಮೆಚ್ಚಿನ ಸ್ಥಳವಾದ ನವಿಲುಕಲ್ಲು, ಸಿಬ್ಬಲಗುಡ್ಡೆ, ತುಂಗಾ ನದಿ ತೀರ ಹಾಗೂ ಕವಿಶೈಲದಲ್ಲಿ ಚಿತ್ರಿಸಿದರು. ಕುವೆಂಪುರವರ ರಚನೆಗಳಾದ 'ನವಿಲುಕಲ್ಲಿನ ಆ ಸೂರ್ಯೋದಯ', 'ಕವಿಶೈಲದಲ್ಲಿ ಸಂಧ್ಯಾ' ಹಾಗೂ 'ಗುರುಸ್ತುತಿ' ಕವನಗಳನ್ನು ಬಳಸಿಕೊಂಡಿದ್ದರು. ಸಿನಿಮಾ ಭಾಷೆ ಹಾಗೂ ತಾಂತ್ರಿಕ ಜ್ಞಾನದ ಕೊರತೆಯಿಂದಾಗಿ ಚಿತ್ರ ಪರಿಣಾಮಕಾರಿಯಾಗಿರಲಿಲ್ಲ. ಇದಕ್ಕೆ ೧೯೮೯-೯೦ರ ವಿಶೇಷ ರಾಜ್ಯ ಪ್ರಶಸ್ತಿ ಲಭ್ಯವಾಯಿತು.


(ಚಿತ್ರ ೧೧೩) 'ಬೆರಳ್ಗೆ ಕೊರಳ್' ಚಿತ್ರದಲ್ಲಿ ಶ್ರೀಹರ್ಷ

ಈ ಚಿತ್ರಕ್ಕೆ ಸಂಬಂಧಿಸಿದಂತೆ ನಡೆದ ಒಂದು ಪ್ರಸಂಗ ಅಧಿಕಾರಿಗಳ ಅಸಡ್ಡೆ ಹಾಗೂ 'ಕನ್ನಡ ಭಾಷೆ'ಯ ಸ್ವರೂಪಕ್ಕೆ ಸಂಬಂಧಿಸಿರುವುದರಿಂದ ಇಲ್ಲಿ ಹೇಳುವುದು ಉಚಿತವಾಗಿದೆ. ಆ ದಿನಗಳಲ್ಲಿ ರಾಷ್ಟ್ರ ಅಥವಾ ರಾಜ್ಯ ಪ್ರಶಸ್ತಿ ಇಲ್ಲವೆ ಪನೋರಮಾ ಅಥವಾ ವಿದೇಶಿ ಚಿತ್ರೋತ್ಸವಕ್ಕೆ ಆಯ್ಕೆಯಾದ ಚಿತ್ರಗಳಿಗೆ ಮಾತ್ರ

ಸಂಪೂರ್ಣ ತೆರಿಗೆ ವಿನಾಯಿತಿ ನೀಡಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಪ್ರಶಸ್ತಿ ಸಮಿತಿಯ ವಿಶೇಷ ಪ್ರಶಸ್ತಿ ಗಳಿಸಿದ್ದ ಶ್ರೀಹರ್ಷ ತೆರಿಗೆ ವಿನಾಯಿತಿಯನ್ನು ಕೋರಿ ಸರ್ಕಾರಕ್ಕೆ ಮನವಿ ಸಲ್ಲಿಸಿದರು. ಆಗ ಸರ್ಕಾರಿ ಅಧಿಕಾರಿಗಳು ಪುಸ್ತಕದಲ್ಲಿ ಅಚ್ಚಾಗಿರುವ ನಿಯಮಗಳ ಪ್ರಕಾರ ಕನ್ನಡ, ತುಳು, ಕೊಂಕಣಿ, ಕೊಡವ ಚಿತ್ರಗಳಿಗೆ ಮಾತ್ರ ತೆರಿಗೆ ನೀತಿ ಅನ್ವಯವಾಗುವುದರಿಂದ 'ಹಳೆಗನ್ನಡ' ಹೆಸರು ಪಟ್ಟಿಯಲ್ಲಿ ಇಲ್ಲದಿರುವುದರಿಂದ ಮನವಿಯನ್ನು ಪುರಸ್ಕರಿಸಲು ಸಾಧ್ಯವಿಲ್ಲವೆಂದು ಅರ್ಜಿಯನ್ನು ತಿರಸ್ಕರಿಸಿದರು. ಆಗ ಶ್ರೀಹರ್ಷ 'ಹಳೆಗನ್ನಡವೂ ಕನ್ನಡವೇ' ಎಂಬ ಅಭಿಪ್ರಾಯದ ಪತ್ರಕ್ಕೆ ಸುಮಾರು ೧೫೦ ಶಾಸಕರನ್ನು ಸಂಪರ್ಕಿಸಿ ಅವರ ಸಹಿ ಹಾಕಿಸಿಕೊಂಡು ತಮ್ಮ ಚಿತ್ರ ತೆರಿಗೆ ವಿನಾಯಿತಿಗೆ ಅರ್ಹವಾಗಿದೆ ಎಂದು ಸರ್ಕಾರಕ್ಕೆ ಪುನಃ ಮನವಿ ಸಲ್ಲಿಸಿದರು. ಅಂತೂ ಕೊನೆಗೆ ಅವರಿಗೆ ಸಂಪೂರ್ಣ ತೆರಿಗೆ ವಿನಾಯಿತಿ ಲಭ್ಯವಾಯಿತು. ಆದರೆ ಇದೆಲ್ಲಾ ಆಗುವ ವೇಳೆಗೆ ಹತ್ತು ತಿಂಗಳಿನಷ್ಟು ಅಮೂಲ್ಯ ವೇಳೆ ವ್ಯರ್ಥವಾಗಿತ್ತು. ಈ ಅವಧಿಯಲ್ಲಿ ಹೆಚ್ಚಿದ ಸಾಲದ ಹೊರೆ, ಬಡ್ಡಿಯ ಭಾರದಲ್ಲಿ ನಿರ್ಮಾಪಕರು ಬಸವಳಿದಿದ್ದರು. ಕನ್ನಡದಲ್ಲಿ ಅಪರೂಪದ ದಾಖಲೆಯೆನಿಸುವ ಚಿತ್ರ ಮಾಡಿದ ನಿರ್ಮಾಪಕರು ಸರ್ಕಾರದ ನಿಯಮ ನೀತಿಗಳ ಚಕ್ರದಲ್ಲಿ ಸಿಕ್ಕಿ ಉತ್ಸಾಹ ಕಳೆದುಕೊಂಡರು.

'ಬೆರಳ್ಗೆ ಕೊರಳ್' ಕುರಿತು ಬರೆಯುವಾಗ ಪುನರ್ ನಿರ್ಮಾಣಗೊಂಡ ಪುರಾಣ ಚಿತ್ರ 'ಶಿವಭಕ್ತ ಮಾರ್ಕಂಡೇಯ'ವನ್ನು ಮರೆಯಲಾಗುವುದಿಲ್ಲ. ಏಕೆಂದರೆ ಈ ಚಿತ್ರಕ್ಕೆ ಇದೇ ವಸ್ತುವಿನ ಹಳೆಯ ಚಿತ್ರದೊಂದಿಗೆ ಬೆರಗು ಹುಟ್ಟಿಸುವಂಥ ಅನೇಕ ಸಾಮ್ಯತೆಗಳಿವೆ. ಇದು ಕನ್ನಡ ಮತ್ತು ತೆಲುಗು (ಮೃತ್ಯುಂಜಯುಡು) ಭಾಷೆಗಳಲ್ಲಿ ಏಕಕಾಲಕ್ಕೆ ತಯಾರಾಯಿತು. ಮೂವತ್ತು ವರ್ಷಗಳ ಹಿಂದೆ ಬಿ.ಎಸ್.ರಂಗಾ ಇದೇ ಚಿತ್ರವನ್ನು ಮೂರು ಭಾಷೆಗಳಲ್ಲಿ ನಿರ್ಮಿಸಿ ನಿರ್ದೇಶಿಸಿದ್ದರು. ಆಗ ಅದು ಕನ್ನಡ, ತಮಿಳು, ತೆಲುಗು ಭಾಷೆಗಳಲ್ಲಿ ಹಲವಾರು ಕೇಂದ್ರಗಳಲ್ಲಿ ಶತದಿನದ ಪ್ರದರ್ಶನ ಕಂಡಿತ್ತು. ಆಗಿನ ಯಶಸ್ಸಿನ ಸ್ಫೂರ್ತಿಯಿಂದಾಗಿಯೇ ೧೯೮೭ ರಲ್ಲಿ ಈ ಚಿತ್ರವನ್ನು ಬಣ್ಣದಲ್ಲಿ ಪುನರ್ ನಿರ್ಮಿಸಲಾಯಿತು. ೩೦ ವರ್ಷಗಳ ಹಿಂದೆ ಯಮನ ಪಾತ್ರವನ್ನು ಆರ್.ನಾಗೇಂದ್ರರಾವ್ ವಹಿಸಿದ್ದರು. ಹೊಸ ಅವತರಣಿಕೆಯಲ್ಲಿ ಅದೇ ಪಾತ್ರವನ್ನು ಅವರ ಪುತ್ರ ಸುದರ್ಶನ್ ಅಭಿನಯಿಸಿದ್ದರು. ವರ್ಣ ಚಿತ್ರಕ್ಕೆ ಚಿ.ಉದಯಶಂಕರ್ ಸಾಹಿತ್ಯ ಒದಗಿಸಿದ್ದರೆ ಹಿಂದಿನ ಚಿತ್ರಕ್ಕೆ ಇವರ ತಂದೆ ಚಿ.ಸದಾಶಿವಯ್ಯ ಸಾಹಿತ್ಯ ಒದಗಿಸಿದ್ದರು ಹಾಗೂ ಒಂದು ಪಾತ್ರವನ್ನು ಕೂಡ ನಿರ್ವಹಿಸಿದ್ದರು. ಹಿಂದಿನ ತೆಲುಗು ಚಿತ್ರ ಅವತರಣಿಕೆಗೆ ಸೀನಿಯರ್ ಸಮುದ್ರಾಲ ಸಾಹಿತ್ಯ ಒದಗಿಸಿದ್ದರೆ ಈಗ ಜ್ಯೂನಿಯರ್ ಸಮುದ್ರಾಲ ಒದಗಿಸಿದರು. ಕಾಲದ ಅಂತರ ಮೂವತ್ತು ವರ್ಷಗಳಷ್ಟಿದ್ದರೂ ಹಿಂದಿನ ಚಿತ್ರವನ್ನು ಹಾಗೂ ಈಗಿನ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದ್ದು ಬಿ.ಎಸ್.ರಂಗಾ ಅವರೆಂಬುದು ವಿಶೇಷ. ಮೂವತ್ತು ವರ್ಷಗಳ ಹಿಂದಿನ ಹಳೆಯ ಚಿತ್ರದಲ್ಲಿ ಮಾತುಗಳ ಸುರಿಮಳೆ, ಅತಿ ನಾಟಕೀಯತೆ, ಸಂಗೀತಗಳೇ ಪ್ರಧಾನವಾಗಿದ್ದರೆ ಪುನರ್‌ನಿರ್ಮಾಣದ ಈ ಚಿತ್ರದಲ್ಲಿ ಅವೆಲ್ಲವೂ ಕಡಿಮೆಯಾಗಿದ್ದವು.

'ಪ್ರೇಮ ಕಾದಂಬರಿ' ಬಿ.ಮಲ್ಲೇಶ್ ನಿರ್ದೇಶನದ ಚಿತ್ರ. ಮಲ್ಲೇಶ್ ಈ ಹಿಂದೆ 'ನನ್ನ ದೇವರು' ಚಿತ್ರದಿಂದ ಪ್ರತಿಭಾವಂತನೆಂದು ಸಾಬೀತು ಮಾಡಿದ್ದರು. 'ಪ್ರೇಮ ಕಾದಂಬರಿ'ಯಲ್ಲಿ ಒಂದೋ ಎರಡೋ ಸನ್ನಿವೇಶಗಳಲ್ಲಿ ಮುದಗೊಳ್ಳುವಂಥ ಹಾಸ್ಯದ ಪ್ರಸಂಗಗಳಿವೆ. ಉಳಿದಂತೆ ಮಾತಿನ ಮಂಟಪ ಎಂಬ ಆಕ್ಷೇಪ ಎದುರಿಸಿದರು. ರಾಗಮಾಲಿಕಾ ಪಿಕ್ಚರ್ಸ್ ಲಾಂಛನದಲ್ಲಿ ತೆರೆಗೆ ಬಂದ ಚಿತ್ರವಿದು. ವೈದ್ಯನಾಥ್ ಸಂಗೀತ, ಗೌರಿಶಂಕರ್ ಛಾಯಾಗ್ರಹಣವಿತ್ತು. ಅಂಬರೀಷ್-ಲಕ್ಷ್ಮೀ ಜೋಡಿಯ ಅಭಿನಯ, ಜೈಜಗದೀಶ್‌ರ ಪಾತ್ರ ಪೋಷಣೆ ಗಮನ ಸೆಳೆದಿತ್ತು.

'ಆರಂಭ' ಸುಂದರನಾಥ ಸುವರ್ಣರ ಕಲ್ಪನೆಯಿಂದ ಮೂಡಿ ಬಂದ ಚಿತ್ರ. ಛಾಯಾಗ್ರಾಹಕರಾದರೂ ಸುವರ್ಣ ಸದಾ ಕಥೆಗಳನ್ನು ಯೋಚಿಸುವ ಪ್ರವೃತ್ತಿಯವರು. ಅವರೊಳಗಿದ್ದ ಚಿತ್ರಕಶಕ್ತಿ ಅದ್ಭುತ ರಮ್ಯಗಳನ್ನು ಕಟ್ಟುತ್ತಿತ್ತು. ಚಿತ್ರಮಾಧ್ಯಮ ತಿಳಿಯದ ಅನೇಕರ ಚಿತ್ರನಿರ್ದೇಶನದ ಹಿಂದೆ ಸುವರ್ಣ ಇರುತ್ತಿದ್ದರು. ಅವರ ಅಂಥ ಅನೇಕ ಸುಂದರವಾದ ಕಲ್ಪನೆಗಳಿಗೆ ದಾರಿ ಮಾಡಿಕೊಂಡಿದ್ದು 'ಆರಂಭ' ನಿರ್ದೇಶಿಸಿದಾಗ. ಸುವರ್ಣರ ಜೊತೆ ಸಹಕರಿಸಿದವರು ಉದಯ್ ಹುತ್ತಿನಗದ್ದೆ ಹಾಗೂ ಜಯರಾಮಶೆಟ್ಟಿ. ಸುವರ್ಣ ಈ ಚಿತ್ರಕ್ಕೆ ತಾವೇ ಕಥೆ, ಚಿತ್ರಕಥೆ, ಛಾಯಾಗ್ರಹಣ, ನಿರ್ದೇಶನ ನಿರ್ವಹಿಸಿದರು. ಸಂಭಾಷಣೆ ಬರೆದವರು ನಾಲ್ಕು ಮಂದಿ. ಸಂಭಾಷಣೆ ವಿಶೇಷ ಗಮನ ಸೆಳೆದಿತ್ತು. ಪ್ರೇಮವೇ ಕೇಂದ್ರವಾಗಿದ್ದ ಕಥೆ. ಪ್ರಯತ್ನಪಟ್ಟು ಹೊಡೆದಾಟ ಇತ್ಯಾದಿ ಸೇರಿಸಿರಲಿಲ್ಲ. ವಿಜಯಾ ಸೋಮಣ್ಣ, ಉದಯ್ ಹುತ್ತಿನಗದ್ದೆ, ಚಂದ್ರಲೇಖಾ ಅಭಿನಯಿಸಿದ್ದರು. ರಿಚರ್ಡ್ ಲೂಯಿಸ್, ರಾಮಮೂರ್ತಿ ಗಮನ ಸೆಳೆದಿದ್ದರು. ಆವರೆಗೆ ಇದ್ದ ಜಾಡನ್ನು ತೊರೆದು ಹೊಸತಾಗಿ ಕಂಡ ಅನೇಕ ಅಂಶಗಳಿದ್ದವು. ನಿರ್ದೇಶಕರ ಜಾಣತನ ಸಾರುವ ಕೆಲವು ಚಿತ್ರಿಕೆಗಳೂ ಇದ್ದವು. ತಂದೆ-ತಾಯಿಯ ಮಾತನ್ನು ಆಲಿಸಲು ಅಡುಗೆ ಮನೆಯ ಹೊಗೆ ಕೊಳವೆಯ ಬಳಕೆ, ಲೂನಾದಿಂದ ಒಟ್ಟಿಗೆ ಕೆಸರು ಹಾರಿಸುವ ಸನ್ನಿವೇಶ ಮುಖ್ಯವಾಗಿ ಸೊಗಸೆನಿಸುವ ಹಾಸ್ಯ ಪ್ರಸಂಗಗಳು, ಕಗ್ಗಲ್ಲನ್ನು ಮೆದುವಾಗಿಸಿ ಸ್ತ್ರೀಯಾಗಿಸುವ ಕಲ್ಪನೆ ಇತ್ಯಾದಿಗಳನ್ನು ಉದಾಹರಿಸಬಹುದು. ಆದರೂ ಚಿತ್ರಕಥೆಯಲ್ಲಿ ಬಿಗಿ ಇರಲಿಲ್ಲ. ಪೂರ್ವಾರ್ಧ-ಉತ್ತರಾರ್ಧಗಳು ತಾಳೆಯಾಗಲಿಲ್ಲ. ಪಾತ್ರಗಳ ಪೋಷಣೆ ಸಾಲದು ಇತ್ಯಾದಿ ಆಕ್ಷೇಪಗಳನ್ನು ಎದುರಿಸಿದರು ಸುವರ್ಣ.

'ಕರುಣಾಮಯಿ' ಕಾಕೋಳು ಸರೋಜಾರಾವ್ ಅವರ ಕಾದಂಬರಿ ಆಧರಿಸಿದ್ದ ಚಿತ್ರ. ವಿಷ್ಣುವರ್ಧನ್ ಅವರ ಅಭಿನಯದಲ್ಲಿ ತ್ಯಾಗ, ಜೀವನ ಪ್ರೀತಿಗಳನ್ನು ವೈಭವಿಸುವಂಥ ಕಥೆ. ಪುನರವತರಣಿಕೆಗಳ ಗದ್ದಲಗಳ ನಡುವೆ ಬಂದ ಕನ್ನಡದ ಕಥೆ, ಕರ್ನಾಟಕದ ಸ್ಟುಡಿಯೋ, ಕರ್ನಾಟಕದಲ್ಲೇ ಧ್ವನಿಮುದ್ರಣ ಎಂಬ ಹೆಗ್ಗಳಿಕೆ ಮಾಡಿಕೊಂಡ ಚಿತ್ರ. ಭಾರ್ಗವ-ಡಿ.ವಿ.ರಾಜಾರಾಂ ಜೊತೆಯಾಗಿ ಪ್ರಾರಂಭಿಸಿದ್ದ 'ಕಲಾಕೃತಿ' ಸಂಸ್ಥೆಯ ನಿರ್ಮಾಣ. ಚಿತ್ರಕಥೆಯನ್ನು ವಾಸು, ಗೀತರಚನೆ-ಸಂಭಾಷಣೆಯನ್ನು ಚಿ.ಉದಯಶಂಕರ್ ನಿರ್ವಹಿಸಿದ್ದರು. ಆ ವಿಭಾಗ ವಿಷ್ಣುವರ್ಧನ್ ಪಾತ್ರವನ್ನು ಎತ್ತರಕ್ಕೇರಿಸುವಂತೆಯೇ ಸಿದ್ಧವಾಗಿತ್ತು. ಗೀತೆಗಳಾಗಲಿ, ಸಂಭಾಷಣೆಯಾಗಲಿ ಅಂಥ ಉದ್ದೇಶಕ್ಕಾಗಿಯೇ ರಚಿತವಾಗಿದ್ದವು. ನಾಯಕನಟನನ್ನು ಉದಾತ್ತೀಕರಿಸುವುದೂ ಒಂದು ತಂತ್ರವಾಗಿ ಬಳಕೆಯಾಗುತ್ತಿದ್ದ ನೆಲೆಯಲ್ಲಿ ಇದು ಅನಿವಾರ್ಯ. ಗ್ರಾಮೀಣ ಪರಿಸರವನ್ನು ಚೆನ್ನಾಗಿ ಪಡಿಮೂಡಿಸಿದ್ದರು ಭಾರ್ಗವ. ವಿಷ್ಣುವರ್ಧನ್, ಭವ್ಯ, ಕೆ.ಎಸ್.ಅಶ್ವತ್ಥ್, ಪಂಢರಿಬಾಯಿ, ತಾರಾ, ವಿಶ್ವವಿಜೇತ, ಶಿವಕುಮಾರ್, ದೊಡ್ಡಣ್ಣ, ರಮೇಶ್ ಭಟ್ ಮೊದಲಾದವರು, ಮತ್ತೂ ಕೆಲವು ಹೊಸಬರನ್ನು ಪರಿಚಯಿಸಲಾಗಿತ್ತು.

ವಿಷ್ಣುವರ್ಧನ್ ಅಭಿನಯ ಕೆಲವು ಸನ್ನಿವೇಶಗಳಲ್ಲಿ ಮನಸ್ಸನ್ನು ತಟ್ಟುವಂಥದ್ದು. 'ಊರು ಹೇಗೆಂದು...', 'ಮನದಲ್ಲಿ ಬಯಸುವುದು ಒಂದು...' ಹಾಡುಗಳ ಸನ್ನಿವೇಶದಲ್ಲಿ ಮನಸ್ಸಿನ ಅಸ್ವಸ್ಥತೆ, ವಿಷಾದದ ಛಾಯೆಯನ್ನು ಸೊಗಸಾಗಿ ಬಿಂಬಿಸಿದ್ದರು. ಪ್ರೀತಿಸಲು ಬಂದ ಹುಡುಗಿಯ ಎದುರು ಮುಗ್ಧತೆ ತೋರುವ ಸನ್ನಿವೇಶದಲ್ಲೂ ನಾಯಕಿ ಪ್ರಣಯಪಾಠ ಹೇಳಿಕೊಟ್ಟು 'ನೀನೊಬ್ಬ ಟ್ಯೂಬ್‌ಲೈಟ್' ಎಂದಾಗಲೂ ಅಮಾಯಕನಂತೆ 'ನಾಟಕ' ಮಾಡುವಲ್ಲಿ, ಮದುವೆ ನಿಶ್ಚಯವಾದಾಗ ಮೈ ಮರೆತು ಭತ್ತ ಅಳೆದಳೆದು ರಾಶಿಗೇ ಸುರಿಯುವಲ್ಲಿ, ತಮ್ಮಂದಿರು ಅಪಮಾನ ಮಾಡಿದಾಗಲೂ ನಗುನಗುತ್ತಾ ನೋವು ನುಂಗುವಲ್ಲಿ ಅವರ ಅಭಿನಯ ಗಮನಾರ್ಹವೆನ್ನಿಸಿತ್ತು.

ದುರ್ಗಾ ಆರ್ಟ್ ಪ್ರೊಡಕ್ಷನ್ಸ್‌ನ ನಾಗಿರೆಡ್ಡಿ 'ಹುಲಿ ಹೆಬ್ಬುಲಿ' ಚಿತ್ರ ನಿರ್ಮಿಸಿದರು. ಸಾಹಸ ಪ್ರಧಾನ ಚಿತ್ರಗಳ ಯಶಸ್ವಿ ನಿರ್ದೇಶಕರಾಗಿದ್ದ ವಿಜಯ್ ಅಥವಾ ವಿಜಯಾರೆಡ್ಡಿ ಅವರು ಈ ಚಿತ್ರದ ನಿರ್ದೇಶಕರು. ಈ ಹೊತ್ತಿಗೆ ವಿಜಯಾರೆಡ್ಡಿ ಹಿಂದಿ ಚಿತ್ರರಂಗದಲ್ಲೂ ಖ್ಯಾತಿ ಪಡೆದಿದ್ದರು. ಕನ್ನಡದ ಕೆಲವು ನಿರ್ದೇಶಕರು ಹಿಂದಿಯ ಪುನರವತರಣಿಕೆಗಳನ್ನು ತಾವೇ ನಿರ್ದೇಶಿಸಿ ಹೆಸರಾಗಿದ್ದಿದೆ. ಅವರಲ್ಲಿ ವಿಜಯಾರೆಡ್ಡಿಯವರೂ ಒಬ್ಬರು. 'ಹುಲಿ ಹೆಬ್ಬುಲಿ' ಚಿತ್ರವೂ ಸಾಹಸ ಪ್ರಧಾನವಾದದ್ದು. ಸಾಂಸಾರಿಕ ಕಥಾಭಾಗ, ಭಾವನಾತ್ಮಕ ಅಂಶಗಳಿಗೂ ಅಷ್ಟೇ ಆದ್ಯತೆ ಇತ್ತು. ಷಣ್ಮುಗಸುಂದರಂ ಅವರ ಕಥೆ-ಚಿತ್ರಕಥೆ ಅಂದಾಗಲೇ ಇದೊಂದು ಪುನರವತರಣಿಕೆ ಎಂಬುದು ಸ್ಪಷ್ಟವಾಗುತ್ತದೆ. ಚಿತ್ರಕ್ಕೆ ವಿಜಯಭಾಸ್ಕರ್ ಸಂಗೀತ ಹಾಗೂ ಚಿ.ಉದಯಶಂಕರ್ ಗೀತರಚನೆ ಇತ್ತು. ಸಾಕಷ್ಟು ಚಿತ್ರಗಳಿಗೆ ಸಹನಿರ್ದೇಶಕರಾಗಿಯೇ ಬದುಕೆಲ್ಲ ದುಡಿದ ಪಿ.ಜಿ.ಸುಧೀರ್ ಈ ಚಿತ್ರಕ್ಕೂ ಸಹಾಯಕರೇ. ಅವರೇ ಸಂಭಾಷಣೆ ಬರೆದಿದ್ದರು. ಸುಧೀರ್ ಸಮರ್ಥರೇ. ಆದರೆ ಅವಕಾಶಗಳು ಸಿಗಲಿಲ್ಲ. ಹಾಗೆಯೇ ಕಮರಿ ಹೋದ ಪ್ರತಿಭೆ. ಒಂದು ದಿನ ಇಲ್ಲವಾಯಿತು. ಎಸ್.ರಾಮಚಂದ್ರ ಅಪರೂಪಕ್ಕೆಂಬಂತೆ ಇಂಥ ಚಿತ್ರಕ್ಕೆ ಛಾಯಾಗ್ರಹಣ ಮಾಡಿದರು. ಶಂಕರ್‌ನಾಗ್, ಅನಂತ್‌ನಾಗ್, ಪ್ರಭಾಕರ್, ಭವ್ಯಾ, ಸುಮಲತ, ಲೀಲಾವತಿ, ಮುಖ್ಯಮಂತ್ರಿ ಚಂದ್ರು, ಸುಧೀರ್, ಎನ್.ಎಸ್.ರಾವ್ ಅಭಿನಯಿಸಿದ್ದರು.



(ಚಿತ್ರ ೧೧೪) 'ಹಾಲಿ ಹೆಬ್ಬುಲಿ' ಚಿತ್ರದಲ್ಲಿ ಶಂಕರ್‌ನಾಗ್ ಮತ್ತು ಸುಧೀರ್

'ಮಿ। ರಾಜಾ' ಚಿತ್ರಕ್ಕೆ ಗಂಗಾರಾಂ ಕಟ್ಟಿದ ಕುಸಿದ ಓನ್ನೆಲೆಯನ್ನು ಬಳಸಿ ಚಿತ್ರಕಥೆ ಸಿದ್ಧ ಮಾಡಿದ್ದರು. ಸೋಮಶೇಖರ್ ಕಟ್ಟಡಗಳ ಕುಸಿತದ ಬಗ್ಗೆ ಗಂಟೆಗಟ್ಟಲೆ ಹೇಳುವಂಥ ವಿಷಯಗಳಿವೆ ಅನ್ನುತ್ತಿದ್ದರು. ಈ ಚಿತ್ರದ 'ಡಿಸ್ಕೋ ರುಕ್ಕಮ್ಮ ನೀ ಹೆಜ್ಜೆ ಇಕ್ಕಮ್ಮ...' ಹಾಡು ಎಸ್.ಎಸ್.ರಾವ್ ಮೇಲೆ ಚಿತ್ರಿತವಾಗಿದ್ದು ಜನಪ್ರಿಯವಾಯಿತು. ಸಾಮಾನ್ಯವಾಗಿ ಎಲ್ಲಾ ಚಿತ್ರಗಳಲ್ಲೂ ಎಸ್.ಎಸ್.ರಾವ್ ಮಾತಿನ ನಡುವೆ ಅಥವಾ ಮೊದಲು ಬಳಸುತ್ತಿದ್ದ 'ಅಯ್ಯಯ್ಯಪ್ಪೋ...' ಹಾಗೂ 'ಕಿಲಕಿಲ...' ಎನ್ನುವ ಪದಗಳೂ ಈ ಹಾಡಿನಲ್ಲಿ ಬಳಕೆಯಾಗಿದ್ದವು.

ಇದೇ ಅವಧಿಯಲ್ಲಿ ಜಿ.ಯು.ಶ್ರೀನಿವಾಸ್ ನಿರ್ದೇಶನದ 'ಚಾಮುಂಡೇಶ್ವರಿ ಪೂಜಾ ಮಹಿಮೆ' ತೆರೆಗೆ ಬಂತು. ಇತ್ತ ಪೌರಾಣಿಕವೂ ಅಲ್ಲ, ಕೌಟುಂಬಿಕವೂ ಅಲ್ಲದ ಚಿತ್ರ. ವಾಮ ವಿದ್ಯೆ ಮತ್ತು ವಿಜ್ಞಾನ, ಭಕ್ತಿಗಳಲ್ಲಿ ಯಾವುದು ಮೇಲುಗೈ ಎಂದು ನಿರೂಪಿಸಲು ಹೋಗಿ ಏನೂ ಸಾಧಿತವಾಗದೇ ಉಳಿದಿತ್ತು.

ಸಿ.ವಿ.ರಾಜೇಂದ್ರನ್ ನಿರ್ದೇಶನದ 'ಪೂರ್ಣಚಂದ್ರ' ಮತ್ತೊಂದು ತ್ಯಾಗವೇ ಪ್ರಧಾನವಾದ ಚಿತ್ರ. ಅನಗತ್ಯ ಮಸಾಲೆ ಇರಲಿಲ್ಲ. ಅಂಬರೀಷ್, ಶ್ರೀನಾಥ್ ಉತ್ತಮ ಅಭಿನಯವಿತ್ತು. ಹೆಕ್ಕಿ ತೆಗೆದರೆ ಸಿಗುವ ಒಂದೆರಡು ಉತ್ತಮ ಅಂಶಗಳು ಇದ್ದವು. ಚಿತ್ರದಲ್ಲಿ ಅಂಬರೀಷ್ ಕೆಲವು ಸನ್ನಿವೇಶಗಳನ್ನು ಮನೋಜ್ಞವೆನ್ನಿಸಿಬಿಡುತ್ತಾರೆ. ಎಲ್ಲ ಜವಾಬ್ದಾರಿಯೂ ತನ್ನ ಮೇಲೆ ಬಿದ್ದಾಗಲೂ ತಾಳ್ಮೆ, ತ್ಯಾಗ, ಕರ್ತವ್ಯ ತೋರುವ ರೀತಿ, ಹೆಂಡತಿ ಜೆಂಕಿಗೆ ಅಹುತಿಯಾಗಿ, ತಾನು ತಂಗಿಯಿಂದ ಅಪಮಾನಗೊಂಡು, ತಮ್ಮಂದಿರೇ ವಂಚಿಸಿ ಹೋಗುವ ಚಿತ್ರಿಕೆಗಳಲ್ಲಿ ಮನಸ್ಸಿನ ತೊಳಲಾಟವನ್ನು ಸೊಗಸಾಗಿ ಅಭಿವ್ಯಕ್ತಿಸಿದ್ದರು.

ಎಂ.ಡಿ.ಕೌಶಿಕ್ ಅವರ ಬಹುದಿನಗಳ ಪ್ರಯತ್ನದ ಫಲವಾಗಿ ಬಿ.ಬಿ.ಫಿಲಂಸ್ ಲಾಂಛನದಲ್ಲಿ 'ಮುಖವಾಡ' ತೆರೆಗೆ ಬಂತು. ಇದು ಅವರ ಪ್ರಥಮ ನಿರ್ದೇಶನ. ಕೆಲವು ಅತಾರ್ಕಿಕ ಅಂಶಗಳಿದ್ದವಾದರೂ ಕೌಶಿಕ್‌ರಂಥ ಉತ್ಸಾಹಿ ತರುಣರು ನಿರ್ದೇಶನಕ್ಕೆ ಬಂದರೆಂಬುದೂ ಮುಖ್ಯವೇ.

'ಸತ್ಯಪರೀಕ್ಷೆ' ಪತ್ರಕರ್ತರ ಮಹತ್ವವನ್ನು, ಸಮಾಜದ ಮೇಲೆ ಲೇಖನಿ ಎಂಥ ಪ್ರಭಾವ ಬೀರಬಲ್ಲದೆಂಬುದನ್ನು ಹೇಳುವ ಪ್ರಯತ್ನ ಮಾಡಿತು. ಅಂಥ ಪತ್ರಿಕೋದ್ಯಮಕ್ಕೆ ಹಿತಾಸಕ್ತಿಗಳಿಂದ ಒದಗುವ ಅಪಾಯಗಳನ್ನು ವಿವರಿಸುವ ಪ್ರಯತ್ನವಿತ್ತು. ಆದರೆ ನಾಯಕನಟರ ಇಮೇಜ್‌ನ ಸಲುವಾಗಿ ಸೇರಿಸಿದ ಇನ್ನಿತರ ಮಸಾಲೆಗಳಿಂದಾಗಿ ಆ ಅಂಶ ಓನ್ನೆಲೆಗೆ ಸರಿದು ಇವರ ವಿಚಾರಗಳೇ ಮರೆದವು. ಹಾಗಾಗಿ ಹಿಂಸೆಯ ವೈಭವೀಕರಣವೇ ಆಯಿತು. ಚುರುಕಾದ ಮಾತುಗಳಿಂದ ಗಮನ ಸೆಳೆದವರು ಚಿ.ಉದಯಶಂಕರ್. ನಾಯಕನಟ ಪ್ರಭಾಕರ್, ಚಿಕ್ಕದಾದರೂ ಚೊಕ್ಕವಾಗಿ ಅಭಿನಯಿಸಿದ ಶ್ರೀಧರ್ ಮಾತ್ರ ಗಮನಾರ್ಹರು. ಪ್ರಭಾಕರ್ ಸಾಹಸವೇ ಪ್ರಧಾನ ಗುಣವಾದ ನಟ. ಪತ್ರಕರ್ತನ ಪಾತ್ರ ಒಪ್ಪುವುದೂ ಇಲ್ಲ. ಕಥೆ, ಚಿತ್ರಕಥೆ, ನಿರ್ದೇಶನ ಮೂರನ್ನೂ ನಿರ್ವಹಿಸಿದ ಶ್ರೀನಿವಾಸ್ ಅವರೇ ಶ್ರೀದುರ್ಗಾ ಆರ್ಟ್ ಪ್ರೊಡಕ್ಷನ್ಸ್ ಲಾಂಛನದಲ್ಲಿ ನಿರ್ಮಿಸಿದ ಚಿತ್ರ 'ಸತ್ಯಪರೀಕ್ಷೆ'.

ಕೆ.ಸಿ.ಎನ್.ಚಂದ್ರಶೇಖರ್ ನಿರ್ಮಿಸಿದ ಚಿತ್ರ 'ಅಂತಿಮ ತೀರ್ಪು'. ಪ್ರಗತಿ ಎಂಟರ್‌ಪ್ರೈಸಸ್ ಲಾಂಛನದಲ್ಲಿ ಸಿದ್ಧವಾಯಿತು. ಎ.ಟಿ.ರಘು ನಿರ್ದೇಶಕರು. ಪೊಲೀಸ್ ಅಧಿಕಾರಿಯೊಬ್ಬನ ಪ್ರಾಮಾಣಿಕತೆಯ ಸುತ್ತ ಹೆಣೆಯಲಾಗಿದ್ದ ಕಥೆ. ವಾಣಿಜ್ಯ ಪ್ರಧಾನ ಚಿತ್ರಗಳಿಗೆ ಬೇಕಾದ ಎಲ್ಲ ಅಂಶಗಳೂ ಇದ್ದವು. ಸಾಮಾನ್ಯವಾಗಿ ಹೀಗಾದಾಗ ತರ್ಕಕ್ಕೆ ಜಾಗವಿರುವುದಿಲ್ಲ. ಈ ಚಿತ್ರ ಹಾಗಾಗಲಿಲ್ಲ ಎಂಬುದೇ ವಿಶೇಷ. ಹಿಂಸೆಯನ್ನು ವೈಭವಿಸುವುದಕ್ಕಿಂತ ಸಂದರ್ಭವನ್ನು ಅನಿವಾರ್ಯವೆಂಬಂತೆ ತರುವ ರೀತಿಯಲ್ಲಿ ಜಾಣತನವಿತ್ತು. ಪರಾಕಾಷ್ಠೆಯ ಸನ್ನಿವೇಶದಲ್ಲಿ ಭಾವಾತಿರೇಕ, ನಾಟಕೀಯತೆಯ ಸಲುವಾಗಿ ತರ್ಕವನ್ನು ಮರೆತರು ಎಂಬ ಆಕ್ಷೇಪಗಳಿದ್ದವು. ಇನ್ನೂ ಪೊಲೀಸ್ ಇಲಾಖೆಯ ಬಗ್ಗೆ ಭರವಸೆ-ಗೌರವ ಇಟ್ಟುಕೊಂಡಿದ್ದ ಸಾರ್ವಜನಿಕರು ಪೊಲೀಸ್ ಇಲಾಖೆಯನ್ನು ಚಿತ್ರಮಾಧ್ಯಮದಲ್ಲಿ ಹೀಗೆ ಖಂಡಿಸಬಾರದಿತ್ತು ಎಂದು ಟೀಕಿಸಿದರು. ಕೆ.ವಿ.ರಾಜು ಅವರ ಹರಿತವಾದ ಮಾತುಗಳಿಂದಾಗಿ ಇಂಥ ಆಕ್ಷೇಪಗಳಾಗಿರಬಹುದು. ರಾಜು ಮಾತು, ನಿರ್ದೇಶನ ಎಲ್ಲವೂ ಅಂಥ ತೀಕ್ಷ್ಣ ರೀತಿಯವೇ ಆದ್ದರಿಂದ ಈ ಟೀಕೆಗಳು ಯಾರ ಗಮನಕ್ಕೂ ಬರಲಿಲ್ಲ. ಚಿತ್ರದಲ್ಲಿ ಅಂಬರೀಷ್ ಪೊಲೀಸ್ ಅಧಿಕಾರಿ. ಅವರ ಮೇಲೆ ಬರುವ ಕೊಲೆಯ ಆರೋಪವನ್ನು ವಿರೋಧಿಸಿ, ಸಮರ್ಥಿಸಿಕೊಳ್ಳಲಾಗದೆ ಮೌನವಾಗಿ ಹೊತ್ತುಕೊಳ್ಳುವ ಸನ್ನಿವೇಶದಲ್ಲಿ ಸೊಗಸಾಗಿ ಅಭಿನಯಿಸಿದ್ದರು. ಸತ್ಯಜಿತ್ (ಸಯ್ಯದ್), ಬಾಲಕೃಷ್ಣ ಕೂಡಾ ಉತ್ತಮ ಅಭಿನಯ ನೀಡಿದ್ದರು. ಛಾಯಾಗ್ರಹಣ-ಸಂಕಲನ ಇಂಥ ಚಿತ್ರಗಳಿಗೆ ಬಹಳ ಮುಖ್ಯ. ಆ ಮಟ್ಟಿಗೆ ಆ ವಿಭಾಗಗಳ ಕೆಲಸವೂ ಸಮರ್ಪಕವಾಗಿತ್ತು.

'ಭದ್ರಕಾಳಿ' ವರದಕ್ಷಿಣೆಯ ಪಿಡುಗು ಎಂಥ ಅನಾಹುತ ತರುತ್ತದೆಂದು ಹೇಳುವ ಚಿತ್ರ. ರೇಣುಕಾಶರ್ಮ ಅಜಂತಾ ಕಂಬೈನ್ಸ್ ಸಂಸ್ಥೆಗಾಗಿ ನಿರ್ದೇಶಿಸಿದರು. ಪ್ರಭಾಕರ್ ಛಾಯಾಗ್ರಹಣ ಮಾಡಿದರು. ಕುಣಿಗಲ್ ನಾಗಭೂಷಣ್‌ರ ಸಂಭಾಷಣೆ ಹಾಗೂ ಪಾತ್ರವೂ ಇತ್ತು. ಮಹಾಲಕ್ಷ್ಮೀ, ಶ್ರೀಧರ್, ತಾರಾ, ವಜ್ರಮುನಿ, ಡಿಂಗ್ರಿ ನಾಗರಾಜ್,



(ಚಿತ್ರ ೧೧೫) 'ಅಂತಿಮ ತೀರ್ಪು' ಚಿತ್ರದಲ್ಲಿ ದೇವರಾಜ್ ಮತ್ತು ಅಂಬರೀಷ್

ದಿನೇಶ್, ಸುಂದರರಾಜ್ ಅಭಿನಯಿಸಿದ್ದರು. ಚಿತ್ರದಲ್ಲಿ ವರದಕ್ಷಿಣೆಯಂಥ ಸಮಸ್ಯೆಗೆ ಪರಿಹಾರವನ್ನು ಹೇಳುವುದಕ್ಕಿಂತ ತನ್ನ ಸಾವಿಗೆ ಕಾರಣರಾದವರ ಮೇಲೆ ಪ್ರೇತವಾಗಿ ಬಂದು ಸೇಡು ತೀರಿಸಿಕೊಳ್ಳುವುದಕ್ಕೇ ಹೆಚ್ಚು ಒತ್ತು ನೀಡಲಾಗಿತ್ತು. ಸಮಸ್ಯೆಗಳಿಗೆಲ್ಲ ಸತ್ತು ಪ್ರೇತವಾಗಿ ಹೆದರಿಸಿಯೇ ಪರಿಹಾರ ಕಂಡುಕೋ ಎನ್ನುವ ನಿಲುವು ಅಷ್ಟೇನೂ ಹಿತ ತರುವ ಸಂಗತಿಯಲ್ಲ. ವರದಕ್ಷಿಣೆಯ ಸಮಸ್ಯೆ, ಸಾವುಗಳಿಗೆ ಕಾರಣ, ಪರಿಹಾರ ಕುರಿತಂತೆ ಇನ್ನೂ ಮಾಧ್ಯಮಗಳು ಗಂಭೀರವಾಗಿ ಯೋಚಿಸಿಯೇ ಇಲ್ಲ. ಹಿಂಸೆ, ವ್ಯಥೆ, ಕಣ್ಣೀರು, ಪವಾಡ ಸದೃಶ ಘಟನೆಗಳನ್ನು ತರುವ ವಿಪುಲ ಅವಕಾಶವಿದೆ ಎಂತಲೇ ಇಂಥ ವಸ್ತುವನ್ನು ಆಯ್ದುಕೊಳ್ಳುತ್ತಾರೆ. ಆ ಸಮಸ್ಯೆಯ ಬಗ್ಗೆ ಗಂಭೀರವಾದ ಕಾಳಜಿ ಇದ್ದದ್ದು ಕಡಿಮೆ.

೧೯೮೭ ರಲ್ಲಿ ಬಿಡುಗಡೆಯಾದ ರಾಜಕುಮಾರ್ ಅಭಿನಯದ ಎರಡೇ ಎರಡು ಚಿತ್ರಗಳಲ್ಲಿ 'ಒಂದು ಮುತ್ತಿನ ಕಥೆ' ಶಂಕರ್‌ನಾಗ್ ನಿರ್ದೇಶಿಸಿದ್ದಾರೆಂಬ ಕಾರಣಕ್ಕಾಗಿ ಅತಿ ಹೆಚ್ಚು ನಿರೀಕ್ಷೆ ಹುಟ್ಟಿಸಿದ್ದ ಚಿತ್ರ. ಮೊದಲ ಬಾರಿಗೆ ರಾಜಕುಮಾರ್ ಅವರ ಅಭಿನಯದ ಚಿತ್ರ ಮಾಲ್ಡೀವ್ಸ್‌ನಲ್ಲಿ ಚಿತ್ರೀಕರಣಗೊಂಡ ವಿಶೇಷವೂ ಇತ್ತು. ಮುತ್ತಿಗರ ಯುವಕನೊಬ್ಬನಿಗೆ ಸಿಗುವ ಒಂದು ಅಮೂಲ್ಯವಾದ ಮುತ್ತಿನಿಂದ ಅವನ ಕುಟುಂಬವು ವಿಚಿತ್ರವಾದ ಹಿಂಸೆ, ಸಂಕಟಗಳಿಗೆ ಸಿಲುಕಿಕೊಳ್ಳುವುದು ಹಾಗೂ ಅದನ್ನು



(ಚಿತ್ರ ೧೧೬) 'ಒಂದು ಮುತ್ತಿನ ಕಥೆ' ಚಿತ್ರದಲ್ಲಿ ರಾಜಕುಮಾರ್ ಮತ್ತು ಅರ್ಚನಾ

ನಿವಾರಿಸಿಕೊಳ್ಳಲು ಅವನು ಪಡುವ ಪಾಡೇ ಚಿತ್ರದ ವಸ್ತು. ಕೆಲವು ದೋಷಗಳ ನಡುವೆಯೂ ಮೆಚ್ಚುವ ಪ್ರಯತ್ನವಾಗಿದ್ದ ಈ ಚಿತ್ರದಲ್ಲಿ ರಾಜಕುಮಾರ್ ಉತ್ತಮವಾಗಿ ನಟಿಸಿದ್ದರೂ ಅವರ ಮಾಮೂಲಿಯಂತಲ್ಲದ ವಿಚಿತ್ರ ವೇಷ-ಭೂಷಣ, ಪಾತ್ರ ಕಲ್ಪನೆ, ಒಟ್ಟಾರೆ ಕಥಾ ಸ್ವರೂಪವೇ ಪ್ರೇಕ್ಷಕರಿಗೆ ಅಪರಿಚಿತವೆನಿಸಿ ಚಿತ್ರ ಸೋಲನ್ನುಂಡಿತು. ಎಲ್.ವೈದ್ಯನಾಥನ್‌ರ ಸಂಗೀತ ಪ್ರಯೋಗಗಳಿಂದ ಕೂಡಿತ್ತು. ಈ ಚಿತ್ರದ ಹಾಡುಗಳ ಧ್ವನಿಮುದ್ರಣಕ್ಕೆ ಸಂಬಂಧಿಸಿದಂತೆ ಸೃಷ್ಟಿಯಾಗಿದ್ದ ಒಂದು ಇಕ್ಕಟ್ಟಿನ ಪ್ರಸಂಗ ಎಲ್ಲರಿಗೂ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತ್ತು.

ರಾಜ್ ಸಂಸ್ಥೆಯ ಚಿತ್ರ ನಿರ್ಮಾಣ ತಂಡ ಸಾಮಾನ್ಯವಾಗಿ ಯಾವಾಗಲೂ ಮಾಡುತ್ತಿದ್ದಂತೆ ಹಾಡುಗಳ ಧ್ವನಿಮುದ್ರಣಕ್ಕಾಗಿ ಮದರಾಸಿನ ಪ್ರಸಾದ್ ರೆಕಾರ್ಡಿಂಗ್ ಸ್ಟುಡಿಯೋವನ್ನು ಕಾದಿರಿಸಿತು. ಶಂಕರ್‌ನಾಗ್‌ರಿಗೆ ವಿಷಯ ತಿಳಿದಾಗ ಅವರು ತುಂಬಾ ಕಳವಳಕ್ಕೀಡಾದರು. ಸಾಹಸ ಮತ್ತು ಶ್ರಮದಿಂದ ಸಂಕೇತ್ ಕಟ್ಟಿದ ತಾವೇ ತಮ್ಮ ನಿರ್ದೇಶನದ ಚಿತ್ರಕ್ಕೆ ಹೊರಗೆ ಹೋದರೆ ಬೇರೆ ಯಾರು ಧ್ವನಿ ಮುದ್ರಣಕ್ಕೆ ಬರುತ್ತಾರೆಂಬುದು ಅವರ ಕೊರಗು. ಅಲ್ಲದೆ ಸಂಕೇತ್ ಅನ್ನು ತಮ್ಮ ಹಾಡಿನ ಮೂಲಕ ಉದ್ಘಾಟಿಸಿ ಶುಭ ಹಾರೈಸಿದ್ದವರು ಕೂಡ ರಾಜಕುಮಾರ್ ಅವರೇ. ಆದಾಗಲೇ ಸಂಕೇತ್ ಆರಂಭವಾಗಿ ಎರಡು ವರ್ಷವಾಗಿದ್ದರೂ ಬಹಳ ಮಂದಿ ನಿರ್ಮಾಪಕರು ಮದರಾಸಿಗೇ ಹೋಗುತ್ತಿದ್ದರು. ಇಂಥ ಸಂದರ್ಭದಲ್ಲಿ ತಾವೂ ಮದರಾಸಿಗೆ ಹೋದರೆ ಸಂಕೇತ್‌ನಲ್ಲಿ ಲೋಪವಿದೆ ಎಂದು ಭಾವಿಸಿದವರಿಗೆ ಸಾಕ್ಷಿ ಒದಗಿಸಿದಂತಾಗುತ್ತದೆ ಎಂದು ಶಂಕರ್‌ನಾಗ್ ತಮ್ಮ ಅಳಲನ್ನು ತೋಡಿಕೊಂಡರು. ಆದರೆ ನಿರ್ಮಾಣ ತಂಡದ ಒಂದಿಬ್ಬರು 'ಪ್ರಸಾದ್‌ಗೆ ಹೇಳಿ ಆಗಿದೆ, ಈಗ ಏನೂ ಮಾಡುವಂತಿಲ್ಲ' ಅಂದರು. ಆಗ ಶಂಕರ್‌ನಾಗ್ "ನಾನು ಬರೆದಿರುವ ಕಥೆ ಮತ್ತು ಚಿತ್ರಕಥೆಯನ್ನು ಬಿಟ್ಟುಕೊಡಲು ತಯಾರಿದ್ದೇನೆ. ನಿರ್ದೇಶನವನ್ನು ಬೇರೆ ಯಾರಿಂದ ಮಾಡಿಸಿಕೊಂಡರೂ ನನ್ನದೇನೂ ಅಡ್ಡಿಯಿಲ್ಲ. ಆದರೆ ನಾನು ಮಾತ್ರ ಮದರಾಸಿನ ಪ್ರಸಾದ್ ಧ್ವನಿಮುದ್ರಣ ಕೇಂದ್ರಕ್ಕೆ ಬಂದು ಹಾಡುಗಳ ಕೆಲಸದಲ್ಲಿ ಭಾಗವಹಿಸಲಾರೆ" ಅಂದುಬಿಟ್ಟರು. ಈ ಸಮಸ್ಯೆಗೆ ಪರಿಹಾರವೇ ಇಲ್ಲ ಅನ್ನುವಂಥ ಪರಿಸ್ಥಿತಿ ನಿರ್ಮಾಣವಾಯಿತು. ಈ ಹಂತದಲ್ಲಿ ಇಡೀ ವಿಷಯ ರಾಜಕುಮಾರ್ ಗಮನಕ್ಕೆ ಬಂತು. ಆಗ ಅವರು "ಅದಕ್ಕೇನಂತೆ, ಬೆಂಗಳೂರಿನಲ್ಲಿಯೇ ಹಾಡುಗಳ ಧ್ವನಿಮುದ್ರಣ ಮಾಡೋಣ" ಅಂದುಬಿಟ್ಟರು. ಎಲ್ಲರ ತಲೆಯನ್ನು ಸಾಕಷ್ಟು ನೋಯಿಸಿದ್ದ ದೊಡ್ಡ ಹೊರೆ ಅನಾಯಾಸವಾಗಿ ಗಾಳಿಯಲ್ಲಿ ತೇಲಿ ಹೋಯಿತು.

"...ಉತ್ತಮ ಚಿತ್ರ ಕೊಡ್ತೀವಿಂತ ಅಂದುಕೊಂಡೆವು. ಬಾಕ್ಸ್ ಆಫೀಸ್‌ನಲ್ಲಿ ಫೈಲ್ ಆಯ್ತು. ವಿಮರ್ಶೆ ಒಳ್ಳೆಯದಿದೆ. ಜನಕ್ಕೆ 'ಮಸಾಲೆ' ಸಾಲದು ಎನ್ನಿಸಿದೆ. ರಾಜಕುಮಾರ್ ಬಗ್ಗೆ ಅವರು ಇಟ್ಟುಕೊಂಡಿರೋ ಇಮೇಜ್ ಬಿಟ್ಟು ಬೇರೆ ಇಮೇಜ್ ಕೊಟ್ಟಿದ್ದೇ ದೋಷವಾಯ್ತು. ಏನು ನಮ್ಮಣ್ಣನಿಗೆ ಓಡೋಕೆ, ಬರ್‍ಯೋಕೆ ಬರಲ್ವಾಂತ ಕೇಳ್ತಾರೆ. ಕಾಸ್ಟ್ಯೂಮ್ಸ್ ಸಹ ಇಷ್ಟವಾಗಿಲ್ಲ ಅವರಿಗೆ" ಎಂದರು ಶಂಕರ್‌ನಾಗ್. ತಮ್ಮ ನಿರ್ದೇಶನದ 'ಒಂದು ಮುತ್ತಿನ ಕತೆ' ಸಂಕೇತ್‌ನಲ್ಲೇ ಆಗಬೇಕೆಂದು ಹಠ ಹಿಡಿದು ಧ್ವನಿ ಮುದ್ರಣ ಮಾಡಿದ್ದರೂ ಆ ಕೆಲಸ ಸರಿಯಾಗಿ ಆಗಿರಲಿಲ್ಲ. ರಾಜಕುಮಾರ್ ಹಾಡಿದ ಹಾಡು ಯಾರೋ ಹಾಡಿದ ಹಾಗಿತ್ತು. ರತ್ನಮಾಲಾ ಹಾಡಿದ್ದೂ ಹೊಂದುತ್ತಿರಲಿಲ್ಲ. ವಾದ್ಯಗಳಿಗೂ ಕಂಠಸ್ವರಕ್ಕೂ ಹೊಂದಾಣಿಕೆ ಆಗಿರಲಿಲ್ಲ.

೧೯೮೭ರ ಪ್ರಮುಖ ವಿದ್ಯಮಾನಗಳಲ್ಲಿ ೧೫ ಮಂದಿ ಹೊಸ ನಿರ್ದೇಶಕರ ಆಗಮನ-ನಿರ್ಗಮನಗಳ ವಿಶೇಷ-ವಿಷಾದಗಳಿವೆ. ಹಾಗೆಯೇ ಅದ್ದೂರಿಯಾಗಿ ರಂಗ ಪ್ರವೇಶಿಸಿದ ನವ ನಾಯಕನಟರು ಹಾಗೂ ಯಥಾಶಕ್ತಿ ಅಡಿಯಿಟ್ಟವರ ಪ್ರಸ್ತಾಪಗಳಿವೆ. ಕೆ.ವಿ.ಜಯರಾಂ ಚಿತ್ರಗಳಿಗೆ ಚಿತ್ರಕಥೆ, ಸಂಭಾಷಣೆ ಬರೆಯುತ್ತಿದ್ದ ಅವರ ಹಿರಿಯ ಸೋದರ ಕೆ.ವಿ.ರಾಜು 'ಬಂಧಮುಕ್ತ' ಮೂಲಕ ಸ್ವತಂತ್ರ ನಿರ್ದೇಶಕರಾದರು. ಈ ಚಿತ್ರ ಅತೀವ ಹಿಂಸೆ, ಕ್ರೌರ್ಯ, ಅತ್ಯಾಚಾರದ ದೃಶ್ಯಗಳಿಂದಾಗಿ ಸೆನ್ಸಾರ್‌ನಿಂದ ಹೊರಬರಲು ನಾಲ್ಕು ತಿಂಗಳ ಸಮಯ ತೆಗೆದುಕೊಂಡಿತು. ವೀಕ್ಷಣೆ-ಮರುವೀಕ್ಷಣೆ, ಚರ್ಚೆ-ಮರುಚರ್ಚೆಗಳ ಸುದೀರ್ಘ ವಿದ್ಯಮಾನಗಳ ನಂತರ ಹೊರಗೆ ಬಂದದ್ದಷ್ಟೇ ಈ ಚಿತ್ರದ ವಿಶೇಷ.

ಕನ್ನಡ ಚಿತ್ರರಂಗದ ಮುಖ್ಯ ಛಾಯಾಗ್ರಾಹಕರಾದ ಬಿ.ಸಿ.ಗೌರಿಶಂಕರ್ ಹಾಗೂ ಸುಂದರನಾಥ ಸುವರ್ಣ ನಿರ್ದೇಶಕರಾದದ್ದು ಇದೇ ವರ್ಷ. ಈ ಇಬ್ಬರ 'ಕೆಂಡದ ಮಳೆ' ಹಾಗೂ 'ಆರಂಭ' ಯಾವುದೇ ಅಂಶಗಳಲ್ಲೂ ವಿಶೇಷ ಚಿತ್ರಗಳಾಗದೆ ಹೋದವು. ಈ ಚಿತ್ರಗಳ ನಂತರ ಇವರಿಬ್ಬರು ತಲಾ ಎರಡು-ಮೂರು ಚಿತ್ರಗಳನ್ನು ನಿರ್ದೇಶಿಸಿದರಾದರೂ ಅವು ಕೂಡ ಯಶಸ್ವಿಯಾಗಲಿಲ್ಲ. ನಿರ್ದೇಶಕರಾಗಿ ಸೋತರೂ ಇವರಿಬ್ಬರೂ ಚಿತ್ರರಂಗದಲ್ಲಿ ಬೇಡಿಕೆಯ ಛಾಯಾಗ್ರಾಹಕರಾಗಿ ಮುಂದುವರೆದರು. ೧೯೮೭-೮೮ರ ಅತ್ಯುತ್ತಮ ಹಿನ್ನಲೆ ಗಾಯಕ ಪ್ರಶಸ್ತಿಯನ್ನು ನರಸಿಂಹ ನಾಯಕ್ 'ಕೆಂಡದ ಮಳೆ' ಚಿತ್ರದಲ್ಲಿನ ಹಾಡಿಗಾಗಿ, ಅತ್ಯುತ್ತಮ ಹಿನ್ನಲೆ ಗಾಯಕಿ ಪ್ರಶಸ್ತಿಯನ್ನು 'ಕಾಡಿನ ಬೆಂಕಿ' ಚಿತ್ರದ ಹಾಡಿಗಾಗಿ ಬಿ.ಆರ್.ಛಾಯಾ ಪಡೆದರು. ಕಲಾವಿದರ ಪೈಕಿ ಜಯಂತಿ, ಮಾ।ಹಿರಣ್ಣಯ್ಯ, ರವಿಚಂದ್ರನ್ ಅವರುಗಳಲ್ಲಿ ರವಿಚಂದ್ರನ್ ಬಿಟ್ಟರೆ ಇತರರು ನಿರ್ದೇಶಕರಾದದ್ದಷ್ಟೇ ಸುದ್ದಿಯಾಯ್ತು.

ಜಯಂತಿಯವರಿಗೆ ಚಿತ್ರವೊಂದನ್ನು ನಿರ್ಮಿಸಿ ಪತಿ ರಾಜಶೇಖರ್ ಅವರನ್ನು ನಾಯಕನನ್ನಾಗಿ ಪರಿಚಯಿಸುವ ಇರಾದೆ ಇತ್ತು. ಈ ಬಗ್ಗೆ ಒಂದಿಬ್ಬರು ನಿರ್ದೇಶಕರನ್ನು ಕೇಳಿದಾಗ ಅವರು ಆಗೀಗ ಎಂದು ಸತಾಯಿಸಿದ್ದರಿಂದ ನೊಂದುಕೊಂಡ ಅವರು ತಾವೇ

ನಿರ್ದೇಶಕರಾಗಲು ತೀರ್ಮಾನಿಸಿ 'ವಿಜಯ್' ಹೆಸರಿನ ಚಿತ್ರ ತಯಾರಿಸಿದರು. ಅವರೆ ಅವರ ಅಭಿನಯದಲ್ಲಿ ಕಂಡಿದ್ದ ಶ್ರೇಷ್ಠತೆ ಚಿತ್ರದ ನಿರೂಪಣೆಯಲ್ಲಿ ಇರಲಿಲ್ಲ. ಜೊತೆಗೆ ಚಿತ್ರ ಅತ್ಯಂತ ಹಳೆಯ ಅಮಿತಾಬ್ ಚಿತ್ರಗಳ ಶೈಲಿಯಲ್ಲಿತ್ತು. ನಟನಾಗಿ ರಾಜಶೇಖರ್, ನಿರ್ದೇಶಕಿಯಾಗಿ ಜಯಂತಿ ಇಬ್ಬರೂ ಸೋತರು. ಆದರೂ ಜಯಂತಿ ಛಲ ಬಿಡಲಿಲ್ಲ. ಮರು ವರ್ಷವೇ ರಾಜಶೇಖರ್ ಅವರೊಂದಿಗೆ ಆಗ್ಗೆ ಚಲಾವಣೆಯಲ್ಲಿದ್ದ ಕೆಲವು ಮಂದಿ ಜನಪ್ರಿಯ ಕಲಾವಿದರನ್ನು ಕಲೆಹಾಕಿ 'ಏನ್ ಸ್ವಾಮಿ ಅಳಿಯಂದಿರೆ' ಎಂಬ ಹಾಸ್ಯ ಚಿತ್ರವನ್ನು ನಿರ್ದೇಶಿಸಿ, ತಾವೂ ಅಭಿನಯಿಸಿದರು. ಈ ಪ್ರಯತ್ನದಲ್ಲೂ ಅವರಿಗೆ ಯಶಸ್ಸು ದೊರಕಲಿಲ್ಲ. ಅಲ್ಲಿಗೆ ಅವರ ನಿರ್ದೇಶನದ ಪ್ರವೃತ್ತಿಗೆ ಸಂಪೂರ್ಣವಾಗಿ ತೆರೆ ಬಿತ್ತು.

'ತಾಯಿ' ಎಂಬ ಚಿತ್ರವೊಂದು ಸ್ತ್ರೀಯರನ್ನು ಅಪಮಾನಿಸಲೆಂದೇ ಬಂದಂತಿತ್ತು. 'ಬಂಜೆ ತೊಟ್ಟಿಲು' ಎಂಬ ಜನಪ್ರಿಯ ವೃತ್ತಿನಾಟಕವೇ ಮೂಲ. ಉಮಾಶ್ರೀ ಅತಿರೇಕದ ಅಭಿನಯವಿತ್ತು. ಮುಖ್ಯವಾಗಿ ಬಂಜೆತನವನ್ನು ಹೀಯಾಳಿಸುವ ರೀತಿ ಅಸಹನೀಯವಾಗಿತ್ತು. ಅನಂತ್‌ನಾಗ್, ಗಾಯತ್ರಿ ಮೊದಲಾದ ಸೂಕ್ಷ್ಮ ಸಂವೇದಿ ನಟರಿದ್ದೂ ಇಂಥದೊಂದು ಚಿತ್ರ ಬಂದಿತೆಂದರೆ ಅಚ್ಚರಿಯೇ. ಚಿತ್ರದ ಸಂಭಾಷಣೆಯಲ್ಲಿ ಗ್ರಾಮೀಣ ಸೊಗಡಿತ್ತು. ಸತ್ಯಂ ಸಂಗೀತದಲ್ಲಿ ಕೆಲವು ಹಾಡುಗಳು ಚೆನ್ನಾಗಿದ್ದವು.

'ಅಗ್ನಿಕನ್ಯೆ' ಎಸ್.ಆರ್.ಕಂಬೈನ್ಸ್ ಲಾಂಛನದಲ್ಲಿ ಟಿ.ಜನಾರ್ಧನ್ ನಿರ್ದೇಶನದ ಚಿತ್ರ. ರಜನಿಕಾಂತ್, ಸೂರ್ಯಕಾಂತ್ ನಿರ್ಮಾಪಕರು. ಜನಾರ್ಧನ್ ಅವರದೇ ಕಥೆಗೆ ಎಚ್.ವಿ.ಸುಬ್ಬರಾವ್ ಸಂಭಾಷಣೆ ಬರೆದಿದ್ದರು. ಭಾರಿ ತಾರಾಗಣವಿಲ್ಲ. ಚಿತ್ರವೂ ಯಶಸ್ವಿಯಾಗಲಿಲ್ಲ. ಆದರೆ ಜನಾರ್ಧನ್ ಛಾಯಾಗ್ರಾಹಕರಾಗಿ ತಮ್ಮ ಪ್ರತಿಭೆಯನ್ನು ಮತ್ತೆ ತೋರಿಸಿದ ಚಿತ್ರ ಎನ್ನಬಹುದಾಗಿತ್ತು. ನಿರ್ದೇಶನದಲ್ಲಿ ಕೆಲವು ಹೊಳಹುಗಳಿದ್ದವು. ಶಂಕರ್-ಗಣೇಶ್‌ರ ಹಿನ್ನೆಲೆ ಸಂಗೀತ ಪೂರಕವಾಗಿತ್ತು. ಚಿತ್ರಕಥೆಯ ಚೌಕಟ್ಟು ಭದ್ರವಿಲ್ಲದ್ದರಿಂದ ಒಂದು ರೀತಿಯ ಕುಪ್ಪಳಿಸುವಿಕೆಯಾಗಿದ ಎಂಬ ಆಕ್ಷೇಪಕ್ಕೆ ಗುರಿಯಾಯಿತು.

'ಮುಳ್ಳಲ್ಲೂ ಒಂದು ಮಲ್ಲಿಗೆ' ಚಿತ್ರವನ್ನು ಸ್ವಾಮಿ ಎಂಬುವವರು ನಿರ್ಮಿಸಿ, ನಿರ್ದೇಶಿಸಿದ್ದರು. ಇವರದೇ ಕಥೆ-ಚಿತ್ರಕಥೆ ಇತ್ತು. ಈ ಚಿತ್ರ ಒಂದು ನೀಲಿಚಿತ್ರದ ಹಾಗಿತ್ತೆಂಬ ಆಕ್ಷೇಪಕ್ಕೆ ಗುರಿಯಾಯಿತು. ಎಲ್ಲ ಹೊಸಬರೇ ಇದ್ದ ಚಿತ್ರ. ಸೆನ್ಸಾರ್‌ನಲ್ಲಿ ತಕರಾರಾಗಿ ದೆಹಲಿ ಟ್ರಿಬ್ಯುನಲ್‌ನಲ್ಲಿ ವಾದ ಮಾಡಿ ಮನ್ನಣೆ ಪಡೆದುಕೊಂಡಿತ್ತು. ಮೇಲುನೋಟಕ್ಕೆ ಜೀತ, ಶೋಷಣೆ ಮೊದಲಾದ ಶಬ್ದಗಳನ್ನು ಬಳಸಲಾಗಿತ್ತು. ಬಹಳ ಜಾಣತನದಿಂದ ವಂಚಿಸುವ ಮನಸ್ಸು ಇದರ ಹಿಂದೆ ಇತ್ತು.

'ಆಸೆಯ ಬಲೆ' ಎಸ್.ಎಸ್.ಪ್ರೊಡಕ್ಷನ್ಸ್ ಲಾಂಛನದಲ್ಲಿ ತೆರೆಗೆ ಬಂತು. ಸಿ.ವಿ.ಎಲ್.ಶಾಸ್ತ್ರಿ ಮತ್ತು ಎಸ್.ವಿ.ಪ್ರಸಾದ್ ಅವರು ನಿರ್ಮಿಸಿದರು. ಬಹಳ ಕಾಲದಿಂದ ಶಾಸ್ತ್ರಿಗಳ ನಿರ್ಮಾಣ ಎಂಬ ಕುತೂಹಲವಿತ್ತು. ಅದ್ದೂರಿಯನ್ನೂ ನಿರೀಕ್ಷಿಸಲಾಗಿತ್ತು. ರಾಜ್‌ಕಿಶೋರ್ ಚಿತ್ರದ ನಿರ್ದೇಶಕರು. ಪ್ರೇಮ ವಿವಾಹ, ಅಭಿಪ್ರಾಯ ಭೇದ, ಸಮಯ ಸಾಧಕರ ವಂಚನೆ ಈ ಎಲ್ಲ ಇದ್ದಾಗಲೂ ಅಂತಿಮ ಜಯ ಶುದ್ಧ ಪ್ರೇಮಕ್ಕೇ ಎಂಬ ತತ್ವಕ್ಕೆ ಬದ್ಧರಾಗುತ್ತಾರೆ ನಿರ್ದೇಶಕರು. ರಾಜ್‌ಕಿಶೋರ್ ಕಥೆಯನ್ನು ಅಚ್ಚುಕಟ್ಟಾಗಿ ನಿರೂಪಿಸಿದ್ದಕ್ಕಾಗಿ ಮೆಚ್ಚುಗೆ ಪಡೆದರು. ಪ್ರಸಿದ್ಧ ಸಂಕಲನಕಾರ ಗೌತಮ್‌ರಾಜು ಅವರ ಕಾರ್ಯದಕ್ಷತೆ ಬಗ್ಗೆ ಚಿತ್ರ ತಂಡ ಬಹಳವಾಗಿ ಹೇಳಿಕೊಂಡಿತ್ತು. ಬಸವರಾಜ್ ಛಾಯಾಗ್ರಹಣ, ರಾಜು ಸಾಹಸವಿದ್ದ ಚಿತ್ರ. ವಿಷ್ಣುವರ್ಧನ್, ನಳಿನಿ, ಜೈಜಗದೀಶ್, ದಿನೇಶ್, ಲೋಕನಾಥ್, ಪಂಢರಿಬಾಯಿ ಮೊದಲಾದವರು ಇದ್ದರು. 'ದೋ ಅಂಜಾನೆ' ಹಿಂದಿ ಚಿತ್ರದ ರೀಮೇಕ್ ಎಂಬ ಅಪಸ್ವರವೂ ಇತ್ತು.

'ಅಗ್ನಿಪರ್ವ' ಸುಂದರನಾಥ ಸುವರ್ಣರ ನಿರ್ದೇಶನದಲ್ಲಿ ಬಂದ ಚಿತ್ರ. ಕೆ.ವಿ.ಮಂಜುನಾಥ್, ಕೆ.ವಿ.ವೆಂಕಟೇಶ್ ಅವರು ತುಳಸಿ ಆರ್ಟ್ಸ್ ಪ್ರೊಡಕ್ಷನ್ಸ್ ಲಾಂಛನದಲ್ಲಿ ನಿರ್ಮಿಸಿದರು. ಸುವರ್ಣರದ್ದೇ ಕಥೆ, ಚಿತ್ರಕಥೆಗೆ ಕೆ.ವಿ.ರಾಜು ಸಂಭಾಷಣೆ ಬರೆದರು. ಚಿತ್ರ ಯಶಸ್ವಿ ಆಗಲಿಲ್ಲ. ಪುನರವತರಣಿಕೆ ಎಂಬ ಆಕ್ಷೇಪವೂ ಬಂತು. ಇದು ಸುವರ್ಣರ ನಿರ್ದೇಶನದ ಎರಡನೇ ಚಿತ್ರ. ಪ್ರಭಾಕರ್ ಸುವರ್ಣರ ಬಗ್ಗೆ ಇದ್ದ ಪ್ರೀತಿಯಿಂದಾಗಿ ಸಹಕರಿಸಿದ್ದರು. ಅವರೊಂದಿಗೆ ಗಾಯತ್ರಿಯೂ ಇದ್ದರು.

'ರಾವಣ ರಾಜ್ಯ' ಹಿಂದಿಯ 'ಅಂಕುಶ್' ಚಿತ್ರದ ಕನ್ನಡ ಅವತರಣಿಕೆ. ನಾಗಾಭರಣ ಅವರು ದ್ವಾರಕೀಶ್ ಸಲುವಾಗಿ ನಿರ್ದೇಶಿಸಿದ್ದರು. ದ್ವಾರಕಾ ಫಿಲಂಸ್ ಲಾಂಛನದಲ್ಲಿ ತೆರೆಗೆ ಬಂದ ಈ ಚಿತ್ರ ಅಚ್ಚುಕಟ್ಟಾಗಿಯೇ ಇತ್ತು. ಆದರೂ ಪ್ರೇಕ್ಷಕ ಗಮನಿಸದಾದ. ಬಹುತೇಕ ಜನಪ್ರಿಯರಲ್ಲದ ನಟರೇ ಹೆಚ್ಚಾಗಿ ಇದ್ದುದೂ ಕಾರಣವೇನೋ. ಕನ್ನಡ ರಂಗಭೂಮಿಯ ನಟರನೇಕರು ಇದ್ದರು. ನಾಸರ್ ಅವರು ಕನ್ನಡದಲ್ಲಿ 'ನಚಿಕೇತ'ನಾಗಿ ಹಿಂದಿಯಲ್ಲಿ ನಾನಾಪಾಟೇಕರ್ ನಿರ್ವಹಿಸಿದ್ದ ಪಾತ್ರದಲ್ಲಿದ್ದರು. ನೆ.ಲ.ನರೇಂದ್ರಬಾಬು, ಜಗದೀಶ ಮಲ್ನಾಡ್, ಕಾಸರಗೋಡು ಚಿನ್ನ, ಕಿಟ್ಟಿ, ದೇವರಾಜ್ ಮೊದಲಾದವರಿದ್ದರು. ಇದು ಚಾಕು, ಚೂರಿ, ಲಾಂಗ್‌ಗಳನ್ನು ನೇರವಾಗಿ ತೆರೆಗೆ ತಂದ ಚಿತ್ರವೂ ಹೌದು.

'ಹೊಸಬಾಳು' ಎಚ್.ಟಿ.ನಾಗೇಂದ್ರಪ್ಪನವರ ನಿರ್ದೇಶನದ ಚಿತ್ರ. ನವೀನ್‌ಕುಮಾರ್ ಸಹೋದರರೊಂದಿಗೆ ನಾಗೇಂದ್ರಪ್ಪನವರೂ ಸೇರಿ ಮಹೇಶ್ವರಿ ಮೂವೀಸ್ ಲಾಂಛನದಲ್ಲಿ ನಿರ್ಮಿಸಿದರು. ಭಾರೀ ಅನ್ನುವಂಥ ತಾರಾಗಣವಿರಲಿಲ್ಲ. ಆದರೆ ಮೀನಾಕ್ಷಿಯವರ ಛಾಯಾಗ್ರಹಣ, ಜಿ.ಕೆ.ವೆಂಕಟೇಶ್‌ರ ಸಂಗೀತ ಗಮನ ಸೆಳೆದವು. ಸತಿ-ಪತಿಯ ಮಧ್ಯೆ ಸಾಮರಸ್ಯ ಬೇಕಾಗಲೀ ಸಂದೇಹ ಇರಬಾರದು ಎಂಬ ತತ್ವದ ಸುತ್ತ ಅನೇಕ ವಿವರಗಳನ್ನು ಸೇರಿಸಿಕೊಂಡು ಚಿತ್ರಕಥೆಯನ್ನು ಹೆಣೆಯಲಾಗಿತ್ತು. ತಾಂತ್ರಿಕವಾಗಿ ಅಂಥ ಉತ್ತಮ ಗುಣಮಟ್ಟ ಇರಲಿಲ್ಲವಾದ್ದರಿಂದ ಚಿತ್ರದ ತಿರುಳೂ ತಲುಪಲಿಲ್ಲ ಎಂದರಷ್ಟೇ ಸಾಕು.

'ತಾಳಿಯ ಆಣೆ' ಅಬ್ಬಾಯಿನಾಯ್ಡು ಅವರು ನಿರ್ಮಿಸಿದ ಚಿತ್ರ. ತಾರೆ ಭಾರತಿ ಬಹಳ ಭಿನ್ನವಾದ ಪಾತ್ರದಲ್ಲಿ ಇದ್ದರು. ಪೊಲೀಸ್ ಅಧಿಕಾರಿ, ಗೃಹಿಣಿ ಎಲ್ಲವೂ ಆದ ಆ ಪಾತ್ರದಲ್ಲಿ ಸೇಡು ತೀರಿಸಿಕೊಳ್ಳುವ ಹಂತದಲ್ಲಿ ಡಕಾಯಿತ ರಾಣಿಯ ಹಾಗೆ ಪೋಷಾಕು ಧರಿಸಿ, ರಕ್ತ ತಿಲಕವಿಟ್ಟು ವಿಜೃಂಭಿಸುವ ಸನ್ನಿವೇಶ ಕೊಂಚ ಪಾತ್ರೌಚಿತ್ಯ ಮೀರಿದ್ದು ಎಂಬ ಟೀಕೆಗೆ ಒಳಗಾಯಿತು. ಭಾರತಿ ಅಭಿನಯದಲ್ಲಿ ಏಕತಾನತೆ ಇತ್ತು ಅನ್ನಿಸಿದರೂ ಕೆಲವು ಸನ್ನಿವೇಶಗಳಲ್ಲಿ ಗಮನ ಸೆಳೆದರು. ಗಂಡನ ಸಾವು, ಸೇಡು



(ಚಿತ್ರ ೧೧೭) 'ಅವಸ್ಥೆ' ಚಿತ್ರದಲ್ಲಿ ಅರ್ಚನಾ ವಿಶ್ವನಾಥ್ ಮತ್ತು ಅನಂತ್‌ನಾಗ್

ತೀರಿಸಿಕೊಳ್ಳಲು ತಾಳಿಯ ಮೇಲೆ ಆಣೆ ಮಾಡುವುದು, ಸೇಡು ತೀರಿಸಿಕೊಂಡ ಮೇಲೆ ತಾನೇ ಕಾನೂನಿಗೆ ಶರಣಾಗುವ ಸನ್ನಿವೇಶಗಳಲ್ಲಿ ತುಂಬಾ ಪ್ರೌಢವಾದ ಅಭಿನಯ ನೀಡಿದ್ದರು. ಇಂಥದೇ ಕಥೆಯ ಚಿತ್ರವೊಂದು ಹಿಂದಿ ಭಾಷೆಯಲ್ಲಿ ಬಂದಿದೆ ಎಂತಲೂ ಹೇಳಲಾಗಿತ್ತು. ಆದರೆ ಅಬ್ಬಾಯಿನಾಯ್ಡು ಕಥೆ ಜೋಡಿಸುವುದರಲ್ಲಿ ಮಹಾ ಚತುರ. ಬಿಗಿಯಾದ ಕಥೆಯ ಹಾಗೇ ಚಿತ್ರಕಥೆಯೂ ಇತ್ತು. ಮಾಧ್ಯಮದ ಲಗು-ಬಿಗು ಬಲ್ಲ ಡಿ.ರಾಜೇಂದ್ರಬಾಬು ನಿರ್ದೇಶನವಿದ್ದ ಚಿತ್ರ. ಚಿಟ್ಟಿಬಾಬು ಛಾಯಾಗ್ರಹಣ, ವಿಜಯಭಾಸ್ಕರ್ ಸಂಗೀತ ಪೂರಕವಾಗಿದ್ದವು. ಪ್ರಭಾಕರ್- ಆರತಿ ಅವರಲ್ಲದೆ ಕಲ್ಯಾಣ್‌ಕುಮಾರ್, ವಜ್ರಮುನಿ, ವಿನೋದ್ ಆಳ್ವಾ ಅವರೂ ಇದ್ದರು. 'ತ'ಕಾರ ಪ್ರಿಯ ಅಬ್ಬಾಯಿ ಅವರು ಈ ಮೊದಲು 'ನಮ್ಮ ಊರ ದೇವತೆ' ಚಿತ್ರಿಸಿ, ಸೋತದ್ದಕ್ಕೆ 'ತ'ಕಾರ ಬಿಟ್ಟಿದ್ದೇ ಕಾರಣವೆಂದು ಭಾವಿಸಿ ಮತ್ತೆ 'ತ'ಕಾರಕ್ಕೇ ಮರಳಿದ ಮೇಲೆ ಬಂದ ಚಿತ್ರ 'ತಾಳಿಯ ಆಣೆ'.

ಕೆ.ಸಿ.ಎನ್. ಸಂಸ್ಥೆ ಎಂದರೆ ಒಂದು ವಿಶೇಷ ಗೌರವ. ಶ್ರೀಮಂತಿಕೆಯ ಸಂಕೇತ ಎಂಬ ಭಾವನೆ. ಕೆ.ಸಿ.ಎನ್.ಗೌಡರ ಬಗ್ಗೆ ಅಪಾರವಾದ ಗೌರವ ಉದ್ಯಮಕ್ಕೂ, ಜನರಿಗೂ ಇದೆ. ಅವರ ಕುಟುಂಬ ಪರಂಪರೆಯಿಂದಲೆಂಬಂತೆ ಚಿತ್ರೋದ್ಯಮವನ್ನು ಅವಲಂಬಿಸಿತು. ರೇಷ್ಮೆ ವ್ಯಾಪಾರದ ಹಾಗೆಯೇ ಚಿತ್ರನಿರ್ಮಾಣ, ವಿತರಣೆ ಅವರ ವೃತ್ತಿಧರ್ಮವಾಗಿತ್ತು. ಇವರದೇ ಸಂಸ್ಥೆ ರಾಜ್‌ಕಮಲ್ ಆರ್ಟ್ಸ್ ಲಾಂಛನದಲ್ಲಿ 'ಜಯಸಿಂಹ' ಮತ್ತೊಂದು ಅದ್ದೂರಿ ನಿರ್ಮಾಣವಾಗಿ ಹೊರಬಂತು. ಚಿತ್ರವನ್ನು ಗೌಡರ ಮಕ್ಕಳಾದ ಕೆ.ಸಿ.ಎನ್.ಚಂದ್ರಶೇಖರ್ ಮತ್ತು ಕೆ.ಸಿ.ಎನ್.ಮೋಹನ್

ನಿರ್ಮಿಸಿದ್ದರು. ಚಿತ್ರಕಥೆ, ನಿರ್ದೇಶನದ ಹೊಣೆ ಹೊತ್ತವರು ವಾಸು. ಅರಣ್ಯದ ಹಿನ್ನೆಲೆಯುಳ್ಳ ಕಥೆಯಾದ್ದರಿಂದ ಛಾಯಾಗ್ರಾಹಕ ಡಿ.ವಿ.ರಾಜಾರಾಂಗೆ ಪ್ರತಿ ಫ್ರೇಂನಲ್ಲೂ ಹಸಿರ ಹಬ್ಬವೇ ದಕ್ಕಿತ್ತು. ವಿಷ್ಣುವರ್ಧನ್ ಮತ್ತು ಮಹಾಲಕ್ಷ್ಮೀ ಜೋಡಿಯ ಅಭಿನಯ, ಮುಖ್ಯವಾಗಿ ಆನೆಯೊಂದನ್ನು ತುಂಬ ಚೆನ್ನಾಗಿ ಬಳಸಿಕೊಳ್ಳಲಾಗಿತ್ತು. ವಿಜಯಾನಂದ್ ಸಂಗೀತದಲ್ಲಿ ಮೆಲುಕು ಹಾಕುವಂಥ ರಾಗಸಂಯೋಜನೆಯೂ ಇತ್ತು.

'ದಿಗ್ವಿಜಯ'ಚಿತ್ರ 'ಗರುಡರೇಖೆ' ನಿರ್ಮಿಸಿದ ತಂಡದ ಸಾಹಸ. 'ಗರುಡರೇಖೆ'ಗೆ ಸಂಭಾಷಣೆ ಬರೆದು ಹೆಸರಾಗಿದ್ದ ಸೋಮು ಈ ಚಿತ್ರದ ನಿರ್ದೇಶಕರು. ಚಿತ್ರ ಬಿಡುಗಡೆ ಆಗುವ ಹೊತ್ತಿಗೆ ಅವರು ಜೀವಿಸಿರಲಿಲ್ಲ. ಪತ್ರಕರ್ತೆಯ ಸುತ್ತ ಕತೆ ಹೆಣೆಯುವ ಪ್ರಯತ್ನ ಭೂತ-ಪ್ರೇತ, ಸಾವು, ಸಾಹಸಗಳತ್ತ ತಿರುಗಿ ಹಲವು ಕವಲುದಾರಿಗಳಲ್ಲಿ ಸಾಗಿತ್ತು. ಶ್ರೀನಾಥ್ ಅವರಿಂದ ಚಾಲ್ತಿಗೆ ಬಂದ ಅಂಬಿಕಾ ಇಲ್ಲೂ ನಾಯಕಿ. ಹಲವು ಬಗೆಯ ಅಭಿನಯಕ್ಕೆ ಅವಕಾಶವಿರುವಂತೆ ಪಾತ್ರ ಸೃಷ್ಟಿಯಾಗಿತ್ತು. ಕುರುಡಿ, ಮುಗ್ಧೆ, ದಿಟ್ಟೆ, ಪ್ರೇತವೂ ಆಗಿ ತಮ್ಮ ಸಾಮರ್ಥ್ಯ ತೋರಿಸಿದರು. ಶ್ರೀನಾಥ್‌ರದ್ದೂ ತುಂಬ ಬೇರೆಯಾದ ಪಾತ್ರ. 'ಗರುಡರೇಖೆ'ಯಲ್ಲಿ ಮುಖ್ಯ ಪಾತ್ರ, ಅದೇ ಜನರ ಎರಡನೇ ಚಿತ್ರದ ಹೊತ್ತಿಗೆ ಶ್ರೀನಾಥ್-ಅಂಬರೀಷ್‌ರ ಸ್ಥಾನಗಳು ಅದಲು ಬದಲಾಗಿದ್ದವು. ಈ ಚಿತ್ರಕ್ಕೆ ಶ್ರೀನಾಥ್ ಭಾಗಶಃ ನಿರ್ಮಾಪಕರೂ ಆಗಿದ್ದರು. ಆದರೆ 'ಶಿಕಾರಿ'ಯ ಸೋಲು ಅವರ ಚಿತ್ರಜೀವನದಲ್ಲಿ ಹಿಂದೆ ಬೀಳುವಂತೆ ಮಾಡಿತ್ತು. 'ದಿಗ್ವಿಜಯ' ಚಿತ್ರವನ್ನು ಅರ್ಪಿಸಿದವರು ಗೀತಾಶ್ರೀನಾಥ್ ಎಂದಿರಬೇಕಿತ್ತು. ಅದೂ ಕೂಡಾ ಅದೃಷ್ಟವಿಲ್ಲದವರೇನೊ ಎಂಬ ಭಯದಿಂದಾಗಿ ಕೈಬಿಡಲಾಗಿತ್ತು. ಶ್ರೀನಾಥ್



(ಚಿತ್ರ ೧೧೮) 'ವಿಜಯೋತ್ಸವ' ಚಿತ್ರದಲ್ಲಿ ಕುಮಾರ್ ಬಂಗಾರಪ್ಪ

'ದಿಗ್ವಿಜಯ'ದಲ್ಲಿ ಸೌಮ್ಯ ವ್ಯಕ್ತಿತ್ವದವರು. ಅದನ್ನು ಚೆನ್ನಾಗಿಯೇ ನಿರ್ವಹಿಸಿದ್ದರು. ಅಂಬಿಕಾ ಅವರನ್ನು ಶ್ರೀನಾಥ್ 'ಗರುಡರೇಖೆ'ಗೆ ಪರಿಚಯಿಸಿದಾಗ ಮಂಜುಳಾರೊಂದಿಗೆ ವಿರಸ ಎಂಬ ಕಾರಣ ಹೇಳಲಾಗಿತ್ತು. ಅದೇ ಶ್ರೀನಾಥ್ ಅದಾವುದನ್ನೂ ತಲೆಗೆ ಹಾಕಿಕೊಳ್ಳಲಿಲ್ಲ. 'ಅಂಬಿಕಾ ಕನ್ನಡಕ್ಕೆ ಕೊಡುಗೆ ತಾನೆ?' ಎಂಬ ಮರುಪ್ರಶ್ನೆ ಹಾಕಿದ್ದರು. ಮಂಜುಳಾ ಮರಣಶಯ್ಯೆಯಲ್ಲಿದ್ದಾಗ ಆಕೆಯ ಜೀವಕ್ಕಾಗಿ ಹಗಲಿರುಳೆನ್ನದೆ ಆಸ್ಪತ್ರೆಯಲ್ಲೇ ಇದ್ದು ದುಡಿದವರೂ ಶ್ರೀನಾಥ್‌ರೇ. ಶ್ರೀನಾಥ್‌ರಲ್ಲಿದ್ದ ಈ ಮಾನವೀಯತೆ, ಸಹಕಾರಗಳೇ ಅವರನ್ನು ಉದ್ಯಮದಲ್ಲಿ ಎಲ್ಲರೂ ಗೌರವಿಸಲು ಕಾರಣವಾಗಿತ್ತು. 'ದಿಗ್ವಿಜಯ'ದಲ್ಲಿ ಅಂಬಿಕಾ-ಅಂಬರೀಷ್ ಜೋಡಿಯೊಂದಿಗೆ ಶ್ರೀನಾಥ್ ಪೋಷಕ ನಟ. ಆದರೂ ಆ ಪಾತ್ರ ಮನಸ್ಸಿನಲ್ಲಿ ಉಳಿಯಿತು. 'ಶ್ರಾವಣ ಬಂತು' ನಂತರ ಅಂಥದೇ ಭಾವಪ್ರಧಾನ ಪಾತ್ರ ಇಲ್ಲಿ ಇತ್ತು.

ನಿರ್ಮಾಪಕ-ನಟ ಶ್ರೀನಾಥ್ ಕೆಲವು ವಿಷಯಗಳನ್ನು ಹೀಗೆ ವಿವರಿಸುತ್ತಾರೆ: ''ಚಲನಚಿತ್ರಗಳಲ್ಲಿ ನಾವು ವಾಸ್ತವದಿಂದ ದೂರ ಬಂದಿದ್ದೇವೆ ಅನ್ನೋದು ನಿಜ. ಚಿತ್ರ ಒಂದು ಮನರಂಜನೆಯ ಮಾಧ್ಯಮ. ಜೀವನದ ಕಷ್ಟಗಳನ್ನು ಯಥಾವತ್ ತೋರಿಸಿದರೆ ರಂಜನೆ ಸಿಗೋದಿಲ್ಲ. ತಮ್ಮನ್ನು ತಾವು ಮರೆತು ವಿಹರಿಸುವ ಹಾಗೆ ಆಗಬೇಕಾದರೆ ವಾಸ್ತವತೆಯಲ್ಲಿ ಸಾಧ್ಯವೆ? ಬರೀ ಸಮಸ್ಯೆಗಳನ್ನು ಹೇಳಿದರೆ ಸಾಕೆ ? ಪರಿಹಾರ ಹೇಳಿದರೆ ಸರಿಯೆ ? ಪರಿಹಾರ ಹೇಳಿದರೂ ಅದು ಚಿತ್ರ ತಯಾರಕನ ದೃಷ್ಟಿ ಮಾತ್ರ ಆಗುತ್ತೆ. ಚಿತ್ರದ ಮೂಲಕ ಬದುಕನ್ನು ಅರ್ಥ ಮಾಡಿಕೊಳ್ಳೋದು ಅಂದರೆ ಅತಿ ಆದರ್ಶ-ಹುಸಿ ತಳಹದಿ ಆಗಿಬಿಡುತ್ತೆ. ಅದರಿಂದಲೇ ಇದು ಜ್ಞಾನಾರ್ಜನೆಗಲ್ಲ, ರಂಜನೆಗೆ ಅಂತೀವಿ. ಅದಕ್ಕಾಗಿಯೇ ಫ್ಯಾಂಟಸಿ, ಕನಸುಗಳನ್ನು ಕಟ್ಟುತ್ತಾ ಹೋಗ್ತೀವಿ.

''ಅಭಿನಯ ಕಷ್ಟವಲ್ಲ. ನಿರ್ಮಿಸೋದೇ ಕಷ್ಟ. ಚಿತ್ರ ಒಳ್ಳೇದೋ ಕೆಟ್ಟದೋ ಒಂದು ಯೂನಿಟ್ ಆಗಿ ಕೆಲಸ ಮಾಡ್ತೀವಿ. ಆದರೆ ಯಶಸ್ಸು ಬಂದರೆ ಕೆಲವರಿಗೆ ಮಾತ್ರ ಹೆಸರು ಬರುತ್ತೆ. ಸೋತರೆ 'ಈ ಶ್ರೀನಾಥ್‌ನನ್ನು ಹಾಕ್ಕೊಂಡ್ರೆ ಪಿಕ್ಚರ್ ಓಡಲ್ಲಪ್ಪಾ' ಅಂದುಬಿಡುತ್ತಾರೆ. ಗೆದ್ದರೆ ಯಶಸ್ಸಿನ ಒಂದು ಭಾಗ ಮಾತ್ರ ನಟನಿಗೆ ಬಂದರೂ ಬರಬಹುದು..''..

ಮಾ।ಹಿರಣ್ಣಯ್ಯನವರ 'ಸಂಪ್ರದಾಯ', ಕೆ.ಆರ್.ಶಾಂತಾರಾಂರ ನಿರ್ದೇಶನದ 'ಬಾಳನೌಕೆ', ಹೆಚ್.ಜಿ.ನಾಗೇಂದ್ರಪ್ಪ ನಿರ್ಮಾಣದ 'ಹೊಸ ಬಾಳು' ಆಶಯ ಮತ್ತು ಕಳಕಳಿಯಿಂದಷ್ಟೇ ಮುಖ್ಯವಾದ ಚಿತ್ರಗಳು. ಇರುವುದರಲ್ಲಿ 'ಹೊಸಬಾಳು' ಮತ್ತು 'ಬಾಳನೌಕೆ' ಗಮನ ಸೆಳೆದವು. ಕೆ.ಆರ್.ಮುರಳೀಕೃಷ್ಣ ನಿರ್ಮಿಸಿರುವ 'ಬಾಳನೌಕೆ'ಯಲ್ಲಿ ಇಬ್ಬರು ಕೆಟ್ಟ ಗಂಡು ಮಕ್ಕಳು ಕೊಡುವ ನೋವಿನಿಂದ ರೋಸಿ ಹೋಗುವ ತಂದೆ ಅವರನ್ನು ಕೊಂದು, ಶವಗಳಿಗೆ ಹಗ್ಗ ಕಟ್ಟಿ ಊರಿನ ಬೀದಿಗಳಲ್ಲಿ ಎಳೆದುಕೊಂಡು ಸುತ್ತುವಂಥ ಹಸಿಹಸಿಯಾದ ದೃಶ್ಯವಿದೆ. ಇಂಥ ದೃಶ್ಯಗಳ ಪರಿಣಾಮವನ್ನು ತರ್ಕ, ವಾದಗಳಿಂದ ಸಮರ್ಥಿಸುವುದು ಕಷ್ಟ. ಕಥೆಯ ಸಿದ್ಧಾಂತ ಏನೇ ಇದ್ದರೂ ತಂದೆಯ ಪಾತ್ರದಲ್ಲಿ ಶ್ರೀನಿವಾಸಮೂರ್ತಿ ನೀಡಿದ್ದ ಅಭಿನಯ ಅತ್ಯುತ್ತಮವಾಗಿತ್ತು. ರೂಪಾದೇವಿ ಹಾಗೂ ಪ್ರಮೋದ್ ಚಕ್ರವರ್ತಿ ಉತ್ತಮವಾಗಿ ನಟಿಸಿದ್ದರು. 'ಆಸೆಯ ಬಲೆ'ಯ ಮೂಲಕ ಸ್ವತಂತ್ರ ನಿರ್ದೇಶಕರಾದ ರಾಜಕಿಶೋರ್ ನಂತರದ ಹದಿಮೂರು ವರ್ಷಗಳಲ್ಲಿ ಸುಮಾರು ೨೦ ಚಿತ್ರಗಳನ್ನು ನಿರ್ದೇಶಿಸಿ ಚಲಾವಣೆಯಲ್ಲಿದ್ದರು. ಯು.ಆರ್.ಅನಂತಮೂರ್ತಿ ಕಾದಂಬರಿ 'ಅವಸ್ಥೆ'ಯನ್ನು ಆಧರಿಸಿ ಅದೇ ಹೆಸರಿನಲ್ಲಿ ಕೃಷ್ಣಮಾಸಡಿ ಚಿತ್ರವನ್ನು ನಿರ್ದೇಶಿಸಿದರು. ಇದು ಶಾಂತವೇರಿ ಗೋಪಾಲಗೌಡರ ಜೀವನ ಆಧರಿಸಿದ ಚಿತ್ರವೆಂದು ಮುಹೂರ್ತದಲ್ಲಿ ಸಾರಲಾಯಿತು. ನಂತರ ಅವರ ಪಾತ್ರವನ್ನು ಅವಹೇಳನಕಾರಿಯಾಗಿ ಚಿತ್ರಿಸಲಾಗಿದೆಯೆಂದು ಅವರ ಕುಟುಂಬದವರು ನ್ಯಾಯಾಲಯದ ಕಟ್ಟೆ ಏರಿ ನಿಷೇಧಾಜ್ಞೆ ತಂದಿದ್ದರಿಂದ ಅದು ಅವರ ಜೀವನ ಕಥೆಯಲ್ಲ ಎಂಬ ನಿಲುವು ತಾಳಲಾಯಿತು. ಆದರೂ ಅದು ಬಿಡುಗಡೆಯಾದ ಒಂದೇ ದಿನಕ್ಕೆ ಪ್ರದರ್ಶನ ರದ್ದಾಯಿತು. ಆದರೂ ಚಿತ್ರದ ಕೆಲವು ಗುಣಾತ್ಮಕ ಅಂಶಗಳನ್ನು ಗುರುತಿಸಿ ರಾಜ್ಯದ ೧೯೮೭-೮೮ರ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಬಂದಿತು. ಅತ್ಯುತ್ತಮ ನಾಯಕ ನಟರಾಗಿ ಅನಂತ್‌ನಾಗ್ ಆಯ್ಕೆಯಾದರು. ಚಿತ್ರವನ್ನು ನಿರ್ಮಿಸಿದವರು ಆಗಿನ ರಾಮಕೃಷ್ಣ ಹೆಗಡೆ ಸಂಪುಟದಲ್ಲಿ ಕೈಗಾರಿಕಾ ಸಚಿವರಾಗಿದ್ದು ಕೇವಲ ಒಂದು ವರ್ಷದ ಹಿಂದೆಯಷ್ಟೇ '೧೦ ವರ್ಷಗಳ ಕಾಲ ಚಲನಚಿತ್ರ ಚಟುವಟಿಕೆಗಳನ್ನು ಬಂದ್ ಮಾಡಬೇಕು' ಎಂದು ಕರೆಕೊಟ್ಟಿದ್ದ ಜೆ.ಹೆಚ್.ಪಟೇಲ್‌ರ ಪುತ್ರ ಮಹಿಮಾ ಪಟೇಲ್. ಜೆ.ಹೆಚ್.ಪಟೇಲರು ತಾವು ಕೊಟ್ಟಿದ್ದ ಹೇಳಿಕೆಗೆ ವಿರುದ್ಧವಾಗಿ ಚಿತ್ರ ನಿರ್ಮಿಸಿದ್ದಷ್ಟೇ ಅಲ್ಲ, ಅದರಲ್ಲಿ ತಾವೂ ಒಂದು ಪಾತ್ರ ನಿರ್ವಹಿಸಿದ್ದಲ್ಲದೆ ತಮ್ಮ ಸಚಿವ ಸಹೋದ್ಯೋಗಿಗಳಾದ ಡಿ.ಬಿ.ಚಂದ್ರೇಗೌಡ, ರಾಜವರ್ಧನ್, ಬಿ.ಆರ್.ಯಾವಗಲ್, ಎಂ.ಪಿ.ಪ್ರಕಾಶ್ ಅವರಿಗೂ ನಟಿಸುವ ಅವಕಾಶ ಕಲ್ಪಿಸಿದರು.

ಹೊಸ ನಿರ್ದೇಶಕರ ಪ್ರಯತ್ನಗಳ ಮೂಲಕ ಹೊಸ ಮುಖಗಳು ಕೂಡ ಬೆಳ್ಳಿತೆರೆಗೆ ಬಂದಿರುವುದು ವಿಶೇಷ. ಇವರಲ್ಲಿ ರಾಜಕಾರಣಿ ಬಂಗಾರಪ್ಪನವರ ಪುತ್ರ ವಸಂತಕುಮಾರ್ (ಕುಮಾರ್ ಬಂಗಾರಪ್ಪ), ಉದಯ್ ಹುತ್ತಿನಗದ್ದೆ ಮುಖ್ಯರು.

ರಾಜಕುಮಾರ್ ಬ್ಯಾನರ್‌ನಲ್ಲಿ ಎಸ್.ಎ.ಗೋವಿಂದರಾಜು ನಿರ್ಮಿಸಿ ದೊರೆ-ಭಗವಾನ್ ನಿರ್ದೇಶನದಲ್ಲಿ ತೆರೆಗೆ ತಂದ ಚಿತ್ರ 'ವಿಜಯೋತ್ಸವ'. ದೊರೆ-ಭಗವಾನ್ ನಿರ್ದೇಶನ ಎಂದರೆ ಕೌಟುಂಬಿಕ ಕಥೆ, ಸನ್ನಿವೇಶಗಳ ನವಿರು, ಸದಭಿರುಚಿ ಎಲ್ಲವೂ ಸಹಜವಾಗಿಯೇ ಇರುತ್ತದೆ. ಈ ಚಿತ್ರದಲ್ಲಿ ಎಲ್ಲವೂ ಇತ್ತು. ಆದರೂ ಏನೋ ಸಪ್ಪೆತನ. ಬಹುತೇಕ ಆದಾಗಲೇ ತೆರೆಗೆ ಬಂದ ಯಶಸ್ವೀ ಚಿತ್ರಗಳನ್ನು ನೆನಪಿಗೆ ತರುವಂಥ ಕೆಲವು ದೃಶ್ಯಗಳು ಇದ್ದವು. ಶುದ್ಧವಾದ, ತಿಳಿ ನಗೆಯನ್ನು ತರುವಂಥ ಹಾಸ್ಯವಿತ್ತು. ಶಿವರಾಜ್‌ಕುಮಾರ್ ಚಿತ್ರಗಳಿಂದ ಜನಪ್ರಿಯತೆಯನ್ನು ಗಳಿಸಿದ್ದ ಸುಧಾರಾಣಿ ಜೊತೆಯಾಗಿ ಕುಮಾರ್ ಬಂಗಾರಪ್ಪ ಅವರನ್ನು ಪರಿಚಯಿಸಲಾಯಿತು. ಅಷ್ಟೇನೂ ಗಟ್ಟಿಯಾದ ಕಥಾವಸ್ತುವಿಲ್ಲದಿದ್ದರೂ ನಿರ್ಮಾಣ, ನಿರೂಪಣೆಯಲ್ಲಿ ಅಚ್ಚುಕಟ್ಟು ಹಾಗೂ ಮಧುರ ರಂಜನೆ ಒಳಗೊಂಡಿತ್ತು. ಒಂದೆರಡು ಹಾಡುಗಳಷ್ಟೇ ಉತ್ತಮವಾಗಿದ್ದವು. ಚಿತ್ರದ ಬಗ್ಗೆ ಕುಮಾರ್ ಬಂಗಾರಪ್ಪ ಹೇಳುವಂತೆ



(ಚಿತ್ರ ೧೯೯) 'ಡ್ಯಾನ್ಸ್ ರಾಜಾ ಡ್ಯಾನ್ಸ್' ಚಿತ್ರದಲ್ಲಿ ವಿನೋದ್‌ರಾಜ್

''...'ವಿಜಯೋತ್ಸವ'ದಲ್ಲಿ ಎಲ್ಲ ಎಫೆಕ್ಟ್ ಹಾಕಿದೆವಿ. ಆದರೂ ನಿರೀಕ್ಷೆ ಮುಟ್ಟಲಿಲ್ಲ. ಚಿತ್ರ ಆ್ಯಕ್ಷನ್ ಓರಿಯೆಂಟೆಡ್ ಅನ್ನುವುದು ಕಾರಣವಲ್ಲ. ಈ ಚಿತ್ರಕ್ಕೂ ಮೊದಲೇ ಶಿವರಾಜ್‌ಕುಮಾರ್ 'ರಥಸಪ್ತಮಿ' ಬಿಡುಗಡೆ ಆಯಿತು. 'ವಿಜಯೋತ್ಸವ', 'ರಥಸಪ್ತಮಿ' ಕಥೆಗಳು ಪುನರಾವರ್ತನೆ ಅನ್ನಿಸಿತು ಪ್ರೇಕ್ಷಕರಿಗೆ. 'ವಿಜಯೋತ್ಸವ'ದಲ್ಲಿ ಆ್ಯಕ್ಷನ್ ಗೆ ಒತ್ತು ಕೊಟ್ಟು ಡ್ರಮ್ಯಾಟಿಕ್ಸ್‌ಗೆ ಕಡಿಮೆ ಪ್ರಾಧಾನ್ಯ ಇದ್ದುದೂ ವೈಫಲ್ಯಕ್ಕೆ ಕಾರಣವಾಗಿರಬಹುದು. ನನ್ನ ಮಟ್ಟಿಗೆ ಹೇಳುವುದಾದರೆ ಚಿತ್ರದಲ್ಲಿ ಅಷ್ಟು ಇನ್ವಾಲ್ವ್‌ಮೆಂಟ್ ಇರಲಿಲ್ಲ. ಕಥೆ ಕೂಡಾ ಸರಿಯಾಗಿ ಮನನವಾಗಿರಲಿಲ್ಲ. ನಿರ್ದೇಶಕರೂ ನನ್ನ ಅಭಿನಯ ಉತ್ತಮ ಪಡಿಸಬಹುದಿತ್ತು. ನಿರ್ದೇಶಕರ ಸಹಕಾರ ಸಾಲದು..''..

ನಂತರ ಕೆ.ವಿ.ಜಯರಾಂ ನಿರ್ದೇಶನದಲ್ಲಿ 'ಶರವೇಗದ ಸರದಾರ' (೧೯೮೯), ಸಿ.ಆರ್.ಸಿಂಹ ನಿರ್ದೇಶನದಲ್ಲಿ 'ಅಶ್ವಮೇಧ' (೧೯೯೦) ತೆರೆಕಂಡವು. ಉತ್ತಮ ನಿರ್ಮಾಣ ಮೌಲ್ಯಗಳಿಂದ ಕೂಡಿದ್ದರೂ ಕುಮಾರ್ ಬಂಗಾರಪ್ಪನವರ ದುರ್ಬಲ ಅಭಿನಯದಿಂದಾಗಿ ಇವೆರಡು ಚಿತ್ರಗಳೂ ಗಮನ ಸೆಳೆಯಲಿಲ್ಲ. ರಾಜಕುಮಾರ್ ಹಿನ್ನೆಲೆ ಗೀತೆಗಳೇ ಬಂಡವಾಳವಾದವು. ಹಾಗೆ ರಾಜ್ ಅವರಿಂದ ಹಾಡಿಸುವ ಪರಂಪರೆಯೇ ಮತ್ತಷ್ಟು ಬಲವಾಗಿ ಬೇರೂರಿತು.

''...ಅಕ್ಷರದಲ್ಲಿ ಮೂಡಿದ್ದೆಲ್ಲ ಚಿತ್ರದ ದೃಶ್ಯಗಳಲ್ಲಿ ದಾಖಲಿಸಲು ಸಾಧ್ಯವಿಲ್ಲ. ಚಿತ್ರಮಾಧ್ಯಮಕ್ಕೂ ಎಲ್ಲ ಮಾಧ್ಯಮಗಳ ಹಾಗೆಯೇ ಒಂದು 'ಮಿತಿ' ಇದೆ. ಹೊಂದುವಂಥದ್ದನ್ನ ಆಯ್ದು ಚಿತ್ರಿಸುತ್ತೇವೆ. ಎಷ್ಟೋ ಸಲ ಕಾದಂಬರಿಯ ವಸ್ತುವನ್ನು ಕೇಂದ್ರವಾಗಿಟ್ಟುಕೊಂಡು ನಾವೇ ಪರಿಕರ-ಪರಿಸರ ಕಟ್ಟುತ್ತೇವೆ. ಅಲ್ಲಿಯ ವಿವರಗಳನ್ನೇ ಕೊಡುವುದಿಲ್ಲ. ನಮ್ಮಲ್ಲಿ ನಟ-ನಟಿಗಿಂತ ತಾರಾಪಟ್ಟದ್ದೇ ಮೇಲುಗೈ. ತಮ್ಮ ಇಮೇಜ್ ಬದಲಿಸುವುದಿಲ್ಲ. ಈ ಪಾತ್ರಕ್ಕೆ ಅಗತ್ಯವಿದೆ ಕೂದಲಿಗೆ ಕೊಂಚ ಬಿಳಿ ಹಾಕಬೇಕು ಅಂದರೆ ಜನ ಒಪ್ಪುವುದಿಲ್ಲ ಅಂದುಬಿಡುತ್ತಾರೆ. ಕೆಲವರು ಮೀಸೆ ಸಹ ಬೋಳಿಸೋದಿಲ್ಲ. ಪಾತ್ರದ ಔಚಿತ್ಯ ಮರೆತು ಬಣ್ಣ ಬಣ್ಣದ ಬಟ್ಟೆ ಹಾಕುವ ಹಠಮಾರಿಗಳೂ ಇದ್ದಾರೆ. ಇವರ ನಡುವೆ ನಿರ್ದೇಶಕ ಸೃಜನಶೀಲತೆಯಿಂದ ಕೆಲಸ ಮಾಡಬೇಕು. ಸಾಧ್ಯವೇ ? ಎಷ್ಟು ಮಾತ್ರ ?'' ಎಂದು ಪ್ರಶ್ನಿಸುತ್ತಾರೆ ನಟ/ನಟಿಯರ ಇಮೇಜ್ ಬಗ್ಗೆ ಮಾತಾಡುತ್ತ ನಿರ್ದೇಶಕ ಕೆ.ವಿ.ಜಯರಾಂ.

'ಆರಂಭ' ಚಿತ್ರದ ಮೂಲಕ ಪರಿಚಿತರಾದ ಉದಯ್ ಹುತ್ತಿನಗದ್ದೆ ಕೂಡ ಸುಂದರ ಮುಖವಿದ್ದರೂ ಅಭಿನಯಕ್ಕೆ ಬೇಕಾಗಿದ್ದ ಪ್ರತಿಭೆ ಇಲ್ಲದ್ದರಿಂದ ಸೊರಗಿಹೋದರು.

ಈ ಹಿನ್ನೆಲೆಯಲ್ಲಿ ದ್ವಾರಕೀಶ್ ಪರಿಚಯಿಸಿದ ಲೀಲಾವತಿಯವರ ಪುತ್ರ ವಿನೋದ್‌ರಾಜ್ ಸಾಕಷ್ಟು ಯಶಸ್ವಿ ಯುವನಾಯಕ ನಟರಾಗಿ ಬೇಡಿಕೆಯನ್ನು ಗಳಿಸಿಕೊಂಡಿದ್ದು ಗಮನಾರ್ಹ. ಆಧುನಿಕ ನೃತ್ಯವನ್ನು ಅಭ್ಯಾಸ ಮಾಡಿದ್ದ ಹಿನ್ನೆಲೆಯಲ್ಲಿ ದ್ವಾರಕೀಶ್ ವಿನೋದ್‌ರಾಜ್ ಅವರನ್ನು ನೃತ್ಯವೇ ಪ್ರಧಾನವಾದ 'ಡ್ಯಾನ್ಸ್ ರಾಜ ಡ್ಯಾನ್ಸ್' ಚಿತ್ರದ ಮೂಲಕ ತೆರೆಗೆ ಇಳಿಸಿದರು. ಚಿತ್ರವು ಚುರುಕು ನಿರೂಪಣೆ ಹಾಗೂ ವೇಗ ಗತಿಯ ನೃತ್ಯಗಳಿಂದಾಗಿ ಸಾಕಷ್ಟು ಯಶಸ್ವಿಯಾಯಿತು. ವಿನೋದ್‌ರಾಜ್ ಬೇಡಿಕೆಯ ನಟರಾಗಿಯೂ ರೂಪುಗೊಂಡರು. 'ಡ್ಯಾನ್ಸ್ ರಾಜಾ ಡ್ಯಾನ್ಸ್'ನ ಮತ್ತೊಂದು ವಿಶೇಷವೆಂದರೆ ಇಡೀ ಮೈಸೂರನ್ನು ಹೆಲಿಕಾಪ್ಟರ್‌ನಿಂದ ಚಿತ್ರಿಸಿರುವುದು. ಸಾಮಾನ್ಯವಾಗಿ ಹಾಡಿನಲ್ಲಿ, ಭೂಪಟದಲ್ಲಿ ತೋರಿಸುತ್ತಿದ್ದ ದ್ವಾರಕೀಶ್ ಈ ಚಿತ್ರದಲ್ಲಿ ಹೊಸ ವಿಧಾನ ತಂದರು.

''ಅಮ್ಮ ಹೇಳಿದ್ದರು 'ನಾನು ಕ್ಯಾಮರಾ ಎದುರಿಸಿದಾಗ ನೂರು ಭೂತಗಳು ಎದುರಿಗೆ ನಿಂತಂತಾಗಿತ್ತು' ಎಂತ. ಆ ಮಟ್ಟಿಗೆ ನಾನು ಧೈರ್ಯವಂತನೇ,'' ಅನ್ನುವ ವಿನೋದ್‌ರಾಜ್ ''...ನನಗೆ ಅಮ್ಮನೇ ಗುರು. ತಂದೆ-ತಾಯಿ ಎಲ್ಲ ಅವರೇ. ನಾನು ಶಾಸ್ತ್ರೀಯವಾಗಿ ನೃತ್ಯ ಕಲಿತವನಲ್ಲ. ಅಮ್ಮನಿಗೆ ನಾನು ಪ್ರಸಿದ್ಧ ಹಾಡುಗಾರನಾಗಬೇಕೆಂಬ ಹಂಬಲವಿತ್ತು. ಆದರೆ ನನಗೆ ಬ್ರೇಕ್ ಡ್ಯಾನ್ಸ್ ಮತ್ತು ಡಿಸ್ಕೋದಲ್ಲಿ ಹುಚ್ಚು. ಈ ನೃತ್ಯಗಳನ್ನು ಯಾವ ಗುರುವಿನ ಸಹವಾಸವಿಲ್ಲದೆಯೇ, ಶಾಲಾ ದಿನಗಳಿಂದ ಕಲಿತು ಪರಿಣತಿ ಪಡೆದೆ,'' ಎಂದು ಹೇಳುತ್ತಾರೆ.

'ಡ್ಯಾನ್ಸ್ ರಾಜಾ ಡ್ಯಾನ್ಸ್' ಚಿತ್ರಕ್ಕೆ ೬ರಿಂದ ೯ ರವರೆಗೆ ಕಾಲ್‌ಶೀಟ್ ಮರೆತು ಮೂಡ್ ಬಂದಾಗ, ಮೂಡ್ ಇರುವಷ್ಟು ಹೊತ್ತು ಕೆಲಸ ಮಾಡಿದರು ದ್ವಾರಕೀಶ್. ''ಒಂದೊಂದು ಶಾಟ್‌ಗೂ ಎರಡು ಸಾವಿರ ರೂಪಾಯಿ ಖರ್ಚು ಮಾಡಿದ್ದೇನೆ. ಬಜೆಟ್ ಹಾಕಿದ್ದು ಮೂವತ್ತು ಲಕ್ಷ. ಆಗುತ್ತಿರೋ ರೀತಿ ನೋಡಿದರೆ ನಲವತ್ತು ಮೀರುತ್ತೆ, ಐವತ್ತೂ ಆಗುತ್ತೆ. ಮಹತ್ವಾಕಾಂಕ್ಷೆ ಅಲ್ಲ, ನನಗೆ ಪರ್ಫೆಕ್ಷನ್ ಮುಖ್ಯ. ಪ್ರತಿ ಚಿತ್ರಿಕೆಯಲ್ಲೂ 'ಮಜಾ' ಸಿಗಬೇಕು, ತೃಪ್ತಿ ಇರಬೇಕು. ಎಷ್ಟೇ ಖರ್ಚಾದರೂ ಸರಿ. ಮದರಾಸ್ ಅಲ್ಲ ಬಾಂಬೆ ಕ್ವಾಲಿಟಿ ಕೊಟ್ಟಿದೀನಿ. ನಾಳೆ ಫಲಿತಾಂಶ ಏನಾಗುತ್ತೋ ಹೇಳೋಕಾಗಲ್ಲ. ಫಲಾಫಲ ದೇವರ ಮೇಲೆ... ದೇವಿಪ್ರಸಾದ್ ಕ್ಯಾಮರಾದಲ್ಲಿ ಸ್ಟಾರ್, ಚಿನ್ನಿ ಡ್ಯಾನ್ಸ್‌ನಲ್ಲಿ ಸ್ಟಾರ್, ಪ್ರೀಮಿಯರ್‌ನಲ್ಲಿ ಫಸ್ಟ್‌ಕ್ಲಾಸ್ ಕ್ವಾಲಿಟಿ ಸಿಕ್ಕಿದೆ. ಇಲ್ಲಿ ಹಾಕಿರುವ ನಾಲ್ಕು ಭರ್ಜರಿ ಸೆಟ್ಸ್‌ನ ಮದರಾಸಲ್ಲೂ ಹಾಕೋಕಾಗಲ್ಲ. ನನಗೆ ಸೆಟ್ಟು ಭರ್ಜರಿ ಆಯ್ತು, ಸ್ಟುಡಿಯೋಗೆ ಆಸ್ತಿ ಆಯ್ತು'' ಎಂದಿದ್ದರು ದ್ವಾರಕೀಶ್.

೧೯೮೭ರ ಉಳಿದ ಚಿತ್ರಗಳಲ್ಲಿ 'ಒಲವಿನ ಉಡುಗೊರೆ', 'ಸೂರ್ಯ' ಮುಖ್ಯವಾದವು. 'ಒಲವಿನ ಉಡುಗೊರೆ'ಯನ್ನು 'ರೂಪಲೇಖಾ' ಚಲನಚಿತ್ರ ಪತ್ರಿಕೆಯ ಪತ್ರಕರ್ತ ರಾಮನ್ ನೇತೃತ್ವದಲ್ಲಿ ಗೀತ ರಚನೆಕಾರ ಶ್ಯಾಂಸುಂದರ ಕುಲಕರ್ಣಿ, ಎನ್.ಎಸ್.ರಾಮಚಂದ್ರ ಹಾಗೂ ಚಲನಚಿತ್ರ ಪ್ರಚಾರಕರಾದ ಡಿ.ವಿ.ಸುಧೀಂದ್ರ-ರಾಮಮೂರ್ತಿ ನಿರ್ಮಿಸಿದರು. ತ್ಯಾಗ ಕೇಂದ್ರಿತ ವಸ್ತುವನ್ನು ಡಿ.ರಾಜೇಂದ್ರಬಾಬು ಪರಿಣಾಮಕಾರಿಯಾಗಿ ನಿರೂಪಿಸಿದ್ದುದು ಚಿತ್ರದ ಯಶಸ್ಸಿಗೆ ಕಾರಣವಾಯಿತು. ಹುಬ್ಬಳ್ಳಿಯ ಸುಧಾ ಚಿತ್ರಮಂದಿರದಲ್ಲಿ ೨೫ ವಾರಗಳ ಪ್ರದರ್ಶನ ಕಂಡಿತು. ಮಂಜುಳಾಶರ್ಮ ಎರಡು ಪಾತ್ರಗಳನ್ನು ನಿರ್ವಹಿಸಿದ್ದರು. ಈಕೆಯ ನಿಜನಾಮ ಇಳವರಸಿ. ವಿಜಯಭಾಸ್ಕರ್ ಸಂಗೀತ, ಹಿನ್ನೆಲೆ-ಹಾಡು ಎರಡೂ ನೆಲೆಯಲ್ಲಿ ಅತ್ಯುತ್ತಮವೆನ್ನಿಸಿತ್ತು. ಇರುವಷ್ಟೇ ಅವಕಾಶದಲ್ಲಿ ರಾಮಕೃಷ್ಣ ಅತ್ಯುತ್ತಮವೆಂಬಂತೆ ಅಭಿನಯಿಸಿದ್ದರು.

'ಒಲವಿನ ಉಡುಗೊರೆ' ಚಿತ್ರದಲ್ಲಿ 'ಒಲವಿನ ಉಡುಗೊರೆ ತರಲೇನು, ರಕುತದಿ ಬರೆದಿಹೆ ಇದ ನಾನು...' ಗೀತೆಯು ಸಂಗೀತವೇ ಥೀಮ್ ಮ್ಯೂಸಿಕ್‌ನಂತೆ ಬಳಕೆಯಾಗಿತ್ತು. ಈ ಚಿತ್ರದಲ್ಲಿ ಬಳಸಲಾದ ಒಂದು ಬ್ಯಾಲೆಯಲ್ಲಿ ಆಷ್ಟಾವಂಕನ ಪಾತ್ರದಲ್ಲಿ ಅಂಬರೀಷ್ ಉತ್ತಮ ಅಭಿನಯ ನೀಡಿದ್ದರು. ಆ ನಾಟಕದ ಪಾತ್ರ ಮುಂದೆ ನಡೆಯುವ ಸಂಗತಿಗೆ ಸಂಕೇತವಾಗುವ ಹಾಗೆ ನಿರ್ದೇಶಕರು ಬಳಸಿಕೊಂಡದ್ದೂ ಚೆನ್ನ. ಚಿತ್ರದಲ್ಲಿ ವೈದ್ಯನಾಗಿ ಬರುವ ರಾಮಕೃಷ್ಣ ಅನಿರೀಕ್ಷಿತ ತಿರುವುಗಳಿಗೆ ಕಾರಣವಾಗಿ ಇರುವ ಕೊಂಚ ಅವಕಾಶದಲ್ಲೇ ಗಮನ ಸೆಳೆದರು.

'ಸೂರ್ಯ' ಮರಾಠಿ ರಂಗಭೂಮಿಯ ಜನಪ್ರಿಯ ಕಲಾವಿದೆ ರೋಹಿಣಿ ಹಟ್ಟಂಗಡಿ ಮುಖ್ಯಪಾತ್ರದಲ್ಲಿ ಅಭಿನಯಿಸಿದ್ದ, ಬರಗೂರು ರಾಮಚಂದ್ರಪ್ಪ ನಿರ್ದೇಶನದ ಚಿತ್ರ. ಗಂಡ ತನಗೆ ದೇಹ ಸುಖ ಹಾಗೂ ಮಕ್ಕಳನ್ನು ನೀಡುವಲ್ಲಿ ವಿಫಲನಾದಾಗ ಗೌಡತಿ ಮನೆಯಾಳು ಕರಿಯನನ್ನು ಬಲವಂತದಿಂದ ಕೂಡಿ ಬಸಿರಾಗುತ್ತಾಳೆ. ಇದನ್ನು ತಿಳಿದ ಗೌಡ ಕರಿಯನ ಹೆಂಡತಿಯ ಮೇಲೆ ಅತ್ಯಾಚಾರ ಮಾಡಿ ಸಾಯಿಸಿದ್ದಲ್ಲದೆ ಅವಳ ಸಾವಿಗೆ ಕರಿಯನೇ ಕಾರಣನೆಂದು ಊರಿನಲ್ಲಿ ಸುಳ್ಳುಸುದ್ದಿಯನ್ನು ಹಬ್ಬಿಸುತ್ತಾನೆ. ನಿಜ ಸ್ಥಿತಿ ತಿಳಿದಿದ್ದ ಗೌಡತಿ ಸತ್ಯವನ್ನು ಹೊರಗೆಡಹಿದ್ದಲ್ಲದೆ ಗೌಡನನ್ನು ತ್ಯಜಿಸಿ ಕರಿಯನ ಕೈಹಿಡಿದು ಹೊರಟುಹೋಗುತ್ತಾಳೆ. ಚಿತ್ರದಲ್ಲಿ ಇಡೀ ವ್ಯವಸ್ಥೆಯನ್ನು ಪ್ರಶ್ನಿಸುವ ಗೌಡತಿಯ ಬಂಡಾಯ ಮನೋಧರ್ಮ ನಿರ್ದೇಶಕರ ಮನೋಧರ್ಮ ಕೂಡ ಆಗಿದೆ.



(ಚಿತ್ರ ೧೨೦) 'ಸೂರ್ಯ' ಚಿತ್ರದಲ್ಲಿ ರೋಹಿಣಿ ಹಟ್ಟಂಗಡಿ ಮತ್ತು ನಟರಾಜ್ ಬಳ್ಳಾರಿ

ಅವರ ಚಿತ್ರದಲ್ಲಿನ ಮೂಲವಸ್ತುವಿನ ನಿರೂಪಣೆ. ನಿರ್ಮಾಪಕ ನಟರಾಜ್ ಸಹ ಅಭಿನಯ ಮನಸ್ಸಿಗೆ ಗಾಢವಾಗಿ ತಟ್ಟಬೇಕಾದ ದೃಶ್ಯಗಳನ್ನು ದುರ್ಬಲಗೊಳಿಸಿದ. ಉತ್ತಮ ಕಥೆ ಹಾಗೂ ಅಲ್ಲಲ್ಲಿನ ಅರ್ಥಗರ್ಭಿತ ಸಂಭಾಷಣೆಯಿಂದಷ್ಟೇ ಗಮನ ಸೆಳೆಯುವ ಈ ಚಿತ್ರ ರಾಜ್ಯದ ೧೯೮೭-೮೮ರ ದ್ವಿತೀಯ ಅತ್ಯುತ್ತಮ ಚಿತ್ರ ಹಾಗೂ ಎಸ್.ಆರ್.ಭಟ್ ಅವರಿಗೆ ಅತ್ಯುತ್ತಮ ಛಾಯಾಗ್ರಹಣ ಪ್ರಶಸ್ತಿಗಳನ್ನು ತಂದುಕೊಟ್ಟಿತು.

'ಸಂಪ್ರದಾಯ' ಮಾ|ಹಿರಣ್ಣಯ್ಯ ನಿರ್ದೇಶಿಸಿದ ಚಿತ್ರ. ಅವರದೇ ಕಥೆ, ಚಿತ್ರಕಥೆ, ಸಂಭಾಷಣೆ. ಎನ್.ವೀರಭದ್ರಾಚಾರಿ ನಿರ್ಮಿಸಿದರು. ವೃತ್ತಿರಂಗಭೂಮಿಯವರೇ ಆದ ವಜ್ರಪ್ಪ ಸಂಗೀತ ನೀಡಿದ್ದರು. ಭಾರತಿ ವಿಷ್ಣುವರ್ಧನ್, ಹೇಮಾಚೌಧರಿ ಅವರನ್ನುಳಿದು ಇತರರೆಲ್ಲಾ ರಂಗಭೂಮಿಯ ಹಿನ್ನೆಲೆಯವರು. ಮಾಸ್ಟರ್ ಅವರಿಗೆ ಪರಿಚಿತರು ಆಗಿದ್ದರು. ಛಾಯಾಗ್ರಾಹಕರು ಎಸ್.ರಾಮಚಂದ್ರ. ೧೯೮೧ರ ಕೊನೆಯಲ್ಲೇ ಪ್ರಾರಂಭಿಸಿದ ಚಿತ್ರ ಮುಗಿದು ತೆರೆಗೆ ಬರಲು ಬಹು ದೀರ್ಘಕಾಲ ತೆಗೆದುಕೊಂಡಿತು. ಕಾಲದ ಅವಧಿ ಮೀರಿದ ಕಚ್ಚಾ ಫಿಲಂ ಬಳಸಿದ ಕಾರಣದಿಂದಾಗಿ ಪ್ರಿಂಟ್ ತುಂಬ ಮಸುಕಾಗಿತ್ತು. ಚಿಕ್ಕ ಕುಟುಂಬ, ಭಾವೈಕ್ಯತೆ, ಅಸ್ಪೃಶ್ಯತೆ ಇತ್ಯಾದಿಗಳ ಬಗ್ಗೆ ಆದರ್ಶಮಯವಾಗಿ ಚಿತ್ರಿಸಿದರೂ ಮಾಸ್ಟರ್ ಹಿರಣ್ಣಯ್ಯ ಸಹಜವಾಗಿಯೇ ವಾಚಾಳಿತನ, ನಾಟಕೀಯತೆಗೇ ಒತ್ತು ಕೊಟ್ಟಿದ್ದರು. ಬಳಕೆಯಾದ ಹಾಡುಗಳಲ್ಲಿ ಎರಡು-ಮೂರು ಸೊಗಸಾಗಿದ್ದವು. ಹಿನ್ನೆಲೆ ಸಂಗೀತಕ್ಕೆ ರಂಗಭೂಮಿಯ ಹಾಗೆ ಹಾರ್ಮೋನಿಯಮನ್ನೇ ಬಳಸಿದ್ದುದು ಕಥೆಯ ಓಟಕ್ಕೆ ತಡೆಯಾದಂತಿತ್ತು. ಚಿತ್ರದಲ್ಲಿ ಛಾಯಾಪತಿ-ಭಾರತಿ ಅಭಿನಯದ ಒಂದು ನೃತ್ಯ ಭಾಗ ಸೊಗಸಾಗಿ ಮೂಡಿಬಂದಿತು.

'ಇನ್ಸ್‌ಪೆಕ್ಟರ್ ಕ್ರಾಂತಿಕುಮಾರ್' ಎ.ಟಿ.ರಘು ನಿರ್ದೇಶನದ ಚಿತ್ರ. ಮಾಣಿಕ್‌ಚಂದ್ ನಿರ್ಮಿಸಿದರು. 'ಏಟು ಎದಿರೇಟು' ಚಿತ್ರದಿಂದ ಭಾರಿ ನಷ್ಟವಾಗಿತ್ತು. ಆದರೆ ಈ ಚಿತ್ರ ಇನ್ನೂ ಚಿತ್ರೀಕರಣ ಹಂತದಲ್ಲಿರುವಾಗಲೇ ಕರ್ನಾಟಕದ ಬಹುತೇಕ ಭಾಗಗಳಿಗೆ ಮಾರಾಟವಾಗಿತ್ತು. ಅಷ್ಟರಮಟ್ಟಿಗೆ ಮಾಣಿಕ್‌ಚಂದ್ ಶ್ರಮ ಸಾರ್ಥಕವಾಗಿತ್ತು. ಎ.ಟಿ.ರಘು 'ಆಶಾ' ಚಿತ್ರದಿಂದ ಹೆಸರಾಗಿದ್ದರು. ಚಿತ್ರದಲ್ಲಿ ಅಂಬರೀಷ್, ಗೀತಾ, ಭವ್ಯ, ಜೈಜಗದೀಶ್, ದಿನೇಶ್, ವಿಜಯಾ ಸೋಮಣ್ಣ ಅಭಿನಯಿಸಿದ್ದರು. ಎಚ್.ಜಿ.ರಾಜು ಛಾಯಾಗ್ರಹಣ, ಸಾಹುಲ್ ಸಾಹಸ, ಮುಖ್ಯವಾಗಿ ಸತ್ಯನಾರಾಯಣ ಸಂಭಾಷಣೆ ಇತ್ತು.

ಕುಂ.ವೀರಭದ್ರಪ್ಪನವರ 'ಬೇಟೆ' ಕಾದಂಬರಿ ಆಧಾರಿತ 'ಮನ ಮೆಚ್ಚಿದ ಹುಡುಗಿ' ಎಸ್.ಎ.ಚಿನ್ನೇಗೌಡ ಹಾಗೂ ಎಸ್.ಎ.ಗೋವಿಂದರಾಜು ನಿರ್ಮಾಣದ ಚಿತ್ರ. ವಜ್ರೇಶ್ವರಿ ಸಿನಿ ಕಂಬೈನ್ಸ್ ಹಂಚಿಕೆ. ಉದಯೋನ್ಮುಖ ಕಲಾವಿದನಾಗಿದ್ದ ಶಿವರಾಜ್‌ಕುಮಾರ್ ಅವರಿಗಾಗಿ ನಿರ್ಮಿಸುವಾಗ ಅಗತ್ಯವಿರುವ ಎಲ್ಲ ಅಂಶಗಳನ್ನು ಸೇರಿಸಿಕೊಂಡೇ ಸಾಹಿತ್ಯ ವಿಭಾಗವನ್ನು ಉದಯಶಂಕರ್ ಹೊಂದಿಸಿದ್ದರು. ಇದು ಎಂ.ಎಸ್.ರಾಜಶೇಖರ್ ನಿರ್ದೇಶನದ ನಾಲ್ಕನೆಯ ಚಿತ್ರವಾಗಿತ್ತು. ರಾಜಶೇಖರ್ ಭಾವಪ್ರಧಾನ ಕಥೆಯಾದಾಗ ಸಹಜವಾಗಿಯೇ ತಮ್ಮನ್ನು ತೊಡಗಿಸಿಕೊಂಡು ಬಿಡುತ್ತಾರೆ. ಈ ಕಥೆ ಸಾಹಸ, ಪ್ರಣಯ, ಭಾವನಾತ್ಮಕತೆ ಎಲ್ಲವನ್ನೂ ಒಳಗೊಂಡಿತ್ತು. ಮೂಲ ಕಾದಂಬರಿಯಿಂದ ಬದಲಾವಣೆಗಳನ್ನು ಮಾಡಿಕೊಳ್ಳಲಾಗಿತ್ತು. ಹೊರಾಂಗಣದ ಕೆಲವು ಚಿತ್ರಿಕೆಗಳನ್ನು ಗೌರಿಶಂಕರ್ ಅಪೂರ್ವ ಅನ್ನುವಷ್ಟು ಸೊಗಸಾಗಿ ಚಿತ್ರಿಸಿದ್ದರು. ಈ ಚಿತ್ರದಲ್ಲಿ ಶಂಕರ್‌ಪಾಟೀಲ್ ಗಮನ ಸೆಳೆವಂಥ ಪಾತ್ರದಲ್ಲಿದ್ದರು. 'ಶಂಖನಾದ' ಚಿತ್ರದ ನಂತರ ಆತನಿಗೆ ಗಂಭೀರವೂ ಅಭಿನಯಕ್ಕೆ ಅವಕಾಶ ಇರುವಂಥದ್ದೂ ಆದ ಪಾತ್ರ ಇಲ್ಲಿ ಸಿಕ್ಕಿತ್ತು. ಆತ ಸಾಮರ್ಥ್ಯ ತೋರಿದ್ದರು. ಚಿತ್ರದ ಸಾಹಸ ಪ್ರಧಾನ ದೃಶ್ಯಗಳು ಕೆಲವು ಕಡೆ ಸೊರಗಿದವು. ಅದರಲ್ಲಿ ಊರು ಹೊಕ್ಕು ಮನುಷ್ಯರ ರಕ್ತದ ರುಚಿ ಕಂಡ ಚಿರತೆಯನ್ನು ಹಿಡಿದು ಹೊಡೆದಾಡುವ ದೃಶ್ಯದಲ್ಲಿ ಶಿವರಾಜ್‌ಕುಮಾರ್ ಸಾಹಸವನ್ನು ಸರಿಯಾಗಿ ಸೆರೆ ಹಿಡಿದಿರಲಿಲ್ಲ. ಶಿವರಾಜ್‌ಕುಮಾರ್-ಸುಧಾರಾಣಿ ಜೋಡಿಯ ಜನಪ್ರಿಯತೆ ಹೆಚ್ಚಿತು. ಚಿತ್ರದಲ್ಲಿ ಗ್ರಾಮ ಪರಿಸರವನ್ನು ಚೆನ್ನಾಗಿ ಹಿಡಿಯಲಾಗಿತ್ತು. ಭಾಷೆಯನ್ನು ಸಾಧ್ಯವಾದಷ್ಟೂ ಗ್ರಾಮೀಣ ಸೊಗಡಿಗೆ ತರುವ ಪ್ರಯತ್ನವಿತ್ತು.

ವಿ.ಸೋಮಶೇಖರ್ ನಿರ್ದೇಶನದ ಚಿತ್ರ 'ಜೇಡಿ'. ಅವರೇ ನಿರ್ಮಾಪಕರು. ಕೀರ್ತಿರಾಜರ ಕಥೆ, ಕೆ.ವಿ.ರಾಜು ಸಂಭಾಷಣೆ. ಅಂಬರೀಷ್, ಪ್ರಭಾಕರ್, ವಜ್ರಮುನಿ, ಶೃಂಗುದೀಪ ಶ್ರೀನಿವಾಸ್, ಸಿ.ಆರ್.ಸಿಂಹ, ಮುಖ್ಯಮಂತ್ರಿ ಚಂದ್ರು, ಧೀರೇಂದ್ರಗೋಪಾಲ್, ಲೋಹಿತಾಶ್ವ, ಭವ್ಯಾ, ಸುಧಾಚಂದ್ರನ್, ಉಮಾಶ್ರೀ, ಡಿಸ್ಕೋ ಶಾಂತಿ ಹೀಗೆ ನಟ-ನಟಿಯರ ಸಾಲುಸಾಲೇ ಇತ್ತು. ಸಿನಿಮಾ-ರಂಗಭೂಮಿಯ ಮಿಶ್ರಣದ ಹಾಗೆ. ಈ ಚಿತ್ರದಲ್ಲಿ ನಾಯಕ ಶತ ಒರಟ. ಉಗ್ರಗಾಮಿ ಧೋರಣೆಯವನು. ಅವನು ಬದಲಾಗಿ ಪೊಲೀಸ್ ಆಗುವ ಹೊತ್ತಿಗೆ ಅವನ ಪರಿವರ್ತನೆಗೆ ಕಾರಣನಾದವನೇ ಶಿಕ್ಷೆಗೆ ಗುರಿಯಾಗಿದ್ದಾನೆ. ವೃಥಾ ಇಬ್ಬರಲ್ಲೂ ಘರ್ಷಣೆ. ಸಾಕಷ್ಟು ಮಸಾಲೆಗಳನ್ನು ಸೇರಿಸಲಾಗಿದೆ. ಪ್ರಭಾಕರ್-ಅಂಬರೀಷ್ ಜೋಡಿ ಎಂಬುದೇ ವಿಶೇಷ ಆಕರ್ಷಣೆ. ತ್ರಿಪಾತ್ರದಲ್ಲಿದ್ದ ಎನ್.ಎಸ್.ರಾವ್ ಹೆಚ್ಚಿನದನ್ನೇನೂ ಸಾಧಿಸಲಿಲ್ಲ.

'ಜೀವನ ಜ್ಯೋತಿ' ಗೋಳಿನ ಕಥೆ. ಕ್ಯಾನ್ಸರ್ ರೋಗಿಯ ಸುತ್ತ ಕಥೆಯ ಗೋಡೆ ಕಟ್ಟುವಾಗ ಕೊಂಚ ಜಾಣತನ ತೋರಿದ್ದಾರೆ. ಅನಿರೀಕ್ಷಿತ ತಿರುವುಗಳಿವೆ. ರೋಗಿಯಾಗಿ ವಿಷ್ಣುವರ್ಧನ್ ಉತ್ತಮ ಅಭಿನಯ ನೀಡಿದ್ದರು. ಚಿತ್ರದಲ್ಲಿ ಕೆಲವು ತತ್ಕಾಲೀನ ಸಮಾಜದ ಸಮಸ್ಯೆಗಳನ್ನು ತರಲಾಗಿತ್ತು.

'ಲಾರಿ ಡ್ರೈವರ್' ಪೇರಾಲ ನಿರ್ದೇಶನದ ತೆಲುಗಿನವರೇ ನಿರ್ಮಾಪಕರೂ ಆಗಿದ್ದ ಚಿತ್ರ. ಶಂಕರ್‌ನಾಗ್, ಭವ್ಯ, ಲೀಲಾವತಿ, ತಾರಾ, ವಜ್ರಮುನಿ, ಸುಂದರರಾಜ್, ಎನ್.ಎಸ್.ರಾವ್-ಉಮಾಶ್ರೀ ಜೋಡಿ ಇತ್ತು. ೨೨ ದಿನದಲ್ಲಿ ಚಿತ್ರ ಮುಗಿಸುತ್ತೇವೆಂಬ ಹೇಳಿಕೆ, ವರ್ಷದಲ್ಲಿ ಐದು ಚಿತ್ರ ನಿರ್ಮಿಸುತ್ತೇನೆಂದು ಹೇಳಿಕೊಂಡಿದ್ದರು ನಿರ್ಮಾಪಕ ಬುಚ್ಚಿರೆಡ್ಡಿ.

'ಶುಭ ಮಿಲನ' ಎಚ್.ವಿ.ನಾಗೇಂದ್ರಪ್ಪ ನಿರ್ಮಿಸಿದ ಚಿತ್ರ. ಪ್ರೇಮಿಸಿ ವಿವಾಹವಾದರೂ ಶ್ರತಿಪಥಿಯಿಂದ ಬೇರೆಯಾಗುವುದು, ನೆನಪುಗಳು ಹಿಂಸಿಸಿದಾಗಿನ



(ಚಿತ್ರ ೧೨೧) 'ಶುಭಮಿಲನ' ಚಿತ್ರದಲ್ಲಿ ಅಂಬಿಕಾ ಮತ್ತು ಕೆ.ಎಸ್.ಅಶ್ವತ್ಥ್



(ಚಿತ್ರ ೧೨೨)'ಸಂಗ್ರಾಮ' ಚಿತ್ರದಲ್ಲಿ ಅಪರ್ಣಾ ಮತ್ತು ರವಿಚಂದ್ರನ್

ಸಂಕಟ, ಅಂತಿಮವಾಗಿ ಮಿಲನ, ಇದು ಕಥೆಯ ತಿರುಳು. ಭಾರ್ಗವ ಅವರಿಗೆ ಇಂಥ ವಸ್ತು ಸಿಕ್ಕರೆ ಕಬ್ಬಿನ ರಸದ ಹಾಗ ಹೀರಿಬಿಡಬಲ್ಲರು. ಜೊತೆಗೆ ವಿಷ್ಣುವರ್ಧನ್-ಅಂಬಿಕಾ ಜೋಡಿ. ಅವರನ್ನು ಎರಡು ಸ್ತರದಲ್ಲಿ ತಾರುಣ್ಯದಲ್ಲಿ ಪ್ರೇಮಿಗಳಾಗಿ, ಅನಂತರದ ಪ್ರೌಢ ವಯಸ್ಕರಾಗಿ ತೋರಿಸುವ ಸವಾಲು. ಆ ಬಗೆಯ ಅಭಿನಯದ ರೇಂಜ್ ಸಿಗುವುದೇ ಅಪರೂಪ. ಎಲ್ಲರಿಗೂ ಇದೊಂದು ಸವಾಲೇ ಆಗಿತ್ತು. ಇವನ್ನೆಲ್ಲ ಪೋಷಿಸಲು ಸುತ್ತುವರಿದ ಪಾತ್ರಗಳಲ್ಲಿ ಕೆ.ಎಸ್.ಅಶ್ವತ್ಥ್, ದಿನೇಶ್, ರಮೇಶ್‌ಭಟ್, ತಾರಾ, ಸುಧಾ ನರಸಿಂಹರಾಜು, ಮೈಸೂರು ಲೋಕೇಶ್, ಉದಯ್ ಹುತ್ತಿನಗದ್ದೆ, ನಾಗೇಶ್ ಯಾದವ್, ಜ್ಯೋತಿ, ಅನುರಾಧಾ ಅವರಲ್ಲದೆ ಸಹನಿರ್ದೇಶಕ ಫಣಿ ರಾಮಚಂದ್ರ ಅವರೂ ಒಂದು ಪಾತ್ರ ನಿರ್ವಹಿಸಿದ್ದರು. ಸರಸ, ವಿರಸಗಳನ್ನು ಸಮಸಮವಾಗಿ ಕೊಂಡೊಯ್ಯಬಲ್ಲ ಸಮರ್ಥ ಬರಹಗಾರ ಉದಯಶಂಕರ್ ಈ ಚಿತ್ರದ ಸಂಭಾಷಣೆ ನಿರ್ವಹಿಸಿದ್ದರು. ಎಂ.ರಂಗರಾವ್ ಸಂಗೀತಕ್ಕೆ ಉದಯಶಂಕರ್, ಆರ್.ಎನ್.ಜಯಗೋಪಾಲ್ ಗೀತೆಗಳಿದ್ದವು. ಡಿ.ವಿ.ರಾಜಾರಾಂ ಊಟಿ, ಬೆಂಗಳೂರು, ಮದರಾಸಿನ ಕೆಲವು ಪ್ರದೇಶಗಳ ಹೊರಾಂಗಣವನ್ನು ಸೊಗಸಾಗಿ ಚಿತ್ರಿಸಿದ್ದರು.

'ಸಂಗ್ರಾಮ' ಚಂದೂಲಾಲ್ ಜೈನ್ ಮಗ ರಾಜಕುಮಾರ್ ನಿರ್ಮಿಸಿದ ಚಿತ್ರ. ಪದವೀಧರನೊಬ್ಬ ಎಷ್ಟು ಪ್ರಯತ್ನಿಸಿದರೂ ಉದ್ಯೋಗ ಸಿಗದೆ ಅಪರಾಧ-ಹಿಂಸೆಯತ್ತ ತಿರುಗುವುದು, ಅವನನ್ನು ಸ್ವಾರ್ಥಕ್ಕೆ ಬಳಸಿಕೊಳ್ಳುವ ರಾಜಕಾರಣಿಗಳು, ಅವರ ಮುಖವಾಡಗಳನ್ನು ಕಳಚಿ ಅನ್ಯಾಯವನ್ನೆಲ್ಲ ಹೊರಗಿಡುವುದು ಇಂಥ ಅಂಶಗಳನ್ನು ಆಧರಿಸಿದ ಚಿತ್ರ. ಚಿತ್ರಕಥೆ ಬರೆದು, ನಿರ್ದೇಶಿಸಿರುವ ಕೆ.ವಿ.ರಾಜು ಎಷ್ಟು ಸೊಗಸಾಗಿ ಚಿತ್ರಿಕೆಗಳನ್ನು ತೆಗೆಯಬಲ್ಲರೋ ಅಷ್ಟೇ ವಿಚಿತ್ರವಾಗಿ ಹಿಂಸೆಯನ್ನು ವೈಭವಿಸಲೂ ಬಲ್ಲರು. ರವಿಚಂದ್ರನ್-ಭವ್ಯಾ ಜೋಡಿಯ ಅಭಿನಯಕ್ಕೆ ಪೂರಕವಾಗಿ ಲೋಕೇಶ್, ರಾಮಕೃಷ್ಣ, ಲೋಕನಾಥ್, ಮುಖ್ಯಮಂತ್ರಿ ಚಂದ್ರು, ಲೋಹಿತಾಶ್ವ, ಎಂ.ಎಸ್.ಉಮೇಶ್, ಅಪರ್ಣಾ, ಕಮಿನೀಧರನ್ ಮೊದಲಾದವರು, ಹಲವು ಹೊಸಬರೂ ಇದ್ದರು.

'ಆಸೆ' ಮೇಹುಲ್ ಪ್ರೊಡಕ್ಷನ್ಸ್‌ಗಾಗಿ ಎನ್.ಟಿ.ಜಯರಾಮರೆಡ್ಡಿ ನಿರ್ದೇಶಿಸಿದ ಚಿತ್ರ. ಮಲ್ಲಿಕ್ ಛಾಯಾಗ್ರಹಣ, ಚಿನ್ನಿಪ್ರಕಾಶ್ ನೃತ್ಯ, ಮುಖ್ಯವಾಗಿ ಮೊದಲ ಬಾರಿಗೆ ಗೀತಾ-ಚರಣ್‌ರಾಜ್ ಜೋಡಿ ಅಭಿನಯಿಸಿತ್ತು. ಅನಾರೋಗ್ಯದಿಂದ ಲೇಖನಿ ಕೆಳಗಿಟ್ಟಿದ್ದ ಎನ್.ಎಸ್.ರಾವ್ ಮತ್ತೆ ಸಂಭಾಷಣೆ ಬರೆದರು.

ವ್ಯವಸ್ಥೆಯ ವಿರುದ್ಧ ಅಸಹನೆ ವ್ಯಕ್ತಪಡಿಸುವ 'ಸೂರ್ಯ'ದಂಥ ಮೆಲುಧ್ವನಿಗಳ ನಡುವೆ ತುಂಬಾ ನೇರವಾಗಿ ರಾಜಕಾರಣವನ್ನು ಲೇವಡಿ ಮಾಡುವಂಥ ಚಿತ್ರಗಳ ಸಂಖ್ಯೆ ಹೆಚ್ಚತೊಡಗಿದ್ದು ಈ ಅವಧಿಯ ವಿಶೇಷ. ಇಂಥದಕ್ಕೆ ರಾಜಕಾರಣದ ವಾತಾವರಣ ಕೂಡ ಸ್ಫೂರ್ತಿದಾಯಕವಾಗಿತ್ತು. ಇದರೊಂದಿಗೆ ಸ್ಟೆನ್‌ಗನ್‌ಗಳನ್ನು ಹಿಡಿದುಕೊಂಡು ಸುಟ್ಟುಹಾಕುವುದಕ್ಕೆಂಬಂತೆ ಎಲ್ಲಾ ಭಾಷೆಗಳಲ್ಲಿ ಅದಕ್ಕೆ ಹೊಂದುವಂಥ 'ಹೀರೋ'ಗಳು ಈಗಾಗಲೇ ಸೃಷ್ಟಿಯಾಗಿದ್ದರು. ಕನ್ನಡದಲ್ಲಂತೂ ಇಂಥ ಚಿತ್ರಗಳಿಗೆ ತಾವೇ ಸರಿ ಎಂಬಂತೆ ಅಂಬರೀಷ್, ವಿಷ್ಣುವರ್ಧನ್ ವಿಜೃಂಭಿಸತೊಡಗಿದ್ದರು.

೧೯೮೮ರ ಜನವರಿ ತಿಂಗಳೊಂದರಲ್ಲಿಯೇ ಏನಿಲ್ಲವೆಂದರೂ ೧೫ ರಾಜಕೀಯ ಚಿತ್ರಗಳ ನಿರ್ಮಾಣ ನಡೆದಿತ್ತು. ಅಷ್ಟು ಹೊತ್ತಿಗಾಗಲೇ ಇಂಥ ಸುಮಾರು ೪೦ ಚಿತ್ರಗಳು ತೆರೆ ಕಂಡಿದ್ದವು.

ಇದೆಲ್ಲ ಶುರುವಾದದ್ದು ೧೯೭೭ ರಲ್ಲಿನ 'ತುರ್ತು ಪರಿಸ್ಥಿತಿ'ಯ ನೆರಳಲ್ಲಿ ನಡೆದ ಘಟನೆಗಳ ಪರಿಣಾಮದಿಂದ. ಅಂದಿನ ಉಸಿರುಗಟ್ಟುವ ವಾತಾವರಣದಲ್ಲಿ ಬುದ್ಧಿಜೀವಿಗಳಿಗೆ ತಟಸ್ಥರಾಗಿ ಇರಲಾಗಲಿಲ್ಲ. ಸರ್ವಾಧಿಕಾರವನ್ನು ವಿರೋಧಿಸಿ ಸಾಕಷ್ಟು ಮಂದಿ ಭೂಗತ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಆಗ ಅತ್ಯಂತ ಸಹಜವಾಗಿ ಸಿನಿಮಾ ಮಾಧ್ಯಮವನ್ನು ಗಂಭೀರವಾಗಿ ಭಾವಿಸಿದ್ದವರು ಕ್ರಿಯಾಶೀಲರಾದರು. ಅಂತಹ ದಿನಗಳಲ್ಲಿ ತಯಾರಾದದ್ದೇ ಹಿಂದಿಯ 'ಕಿಸ್ಸಾ ಕುರ್ಸೀ ಕಾ'. ಈ ಚಿತ್ರವು ದೇಶಾದ್ಯಂತ ಉಂಟುಮಾಡಿದ ಕೋಲಾಹಲ, ವಿವಾದ ದೊಡ್ಡ ಇತಿಹಾಸ. ಇದು ದೇಶದ ವ್ಯಾಪಾರಿ ಚಿತ್ರನಿರ್ಮಾಪಕರನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ಇಲ್ಲಿಂದಾಚೆಗೆ ರಾಜಕಾರಣ ತುಂಬಾ ನೇರವಾಗಿ ಚಲನಚಿತ್ರಗಳಲ್ಲಿ ಕಾಣತೊಡಗಿದ್ದಲ್ಲದೆ ಬೇಗ ಪ್ರಾದೇಶಿಕ ಚಿತ್ರಗಳಿಗೂ ಹರಡಿಕೊಂಡಿತು. ಇದರ ಜೊತೆ ಮಹಾರಾಷ್ಟ್ರ ಹಾಗೂ ಪಶ್ಚಿಮ ಬಂಗಾಳದ ರಂಗಭೂಮಿಯಲ್ಲಿ ಕಂಡುಬಂದ ಪರಿವರ್ತನೆ ಮಹತ್ವದ್ದಾಗಿದೆ. ವಿಶೇಷವಾಗಿ ಈ ಎರಡೂ ರಾಜ್ಯಗಳಲ್ಲಿ ತುರ್ತು ಪರಿಸ್ಥಿತಿಯನ್ನು ಲೇವಡಿ ಮಾಡುವ ಅತಿ ಹೆಚ್ಚು ನಾಟಕಗಳು ಸೃಷ್ಟಿಯಾಗತೊಡಗಿದವು. ಇವುಗಳಲ್ಲಿ ಕೆಲವು ಚಲನಚಿತ್ರಗಳಿಗೆ ಸ್ಫೂರ್ತಿಯಾದರೆ, ಕೆಲವು ವಸ್ತುವೇ ಆದವು. ೧೯೭೭ ರಲ್ಲಿ ತುರ್ತುಪರಿಸ್ಥಿತಿಯನ್ನು ರದ್ದು ಮಾಡಿದರೂ ಅದರ ಗಾಢವಾದ ಪರಿಣಾಮ ೧೯೮೫ ರವರೆಗೆ ಜನರಲ್ಲಿತ್ತು. ಆ ಅವಧಿಯಲ್ಲಿ ತೆಗೆದುಕೊಂಡ ಬಲವಂತದ ಕ್ರಮಗಳಿಂದಾಗಿ ರಾಜಕಾರಣಿಗಳ ಬಗ್ಗೆ ಜನರಿಗೆ ವಿಪರೀತ ಸಿಟ್ಟು ಇತ್ತು. ಇದು ಶೋಷಣೆ ಮಾಡಿದ ರಾಜಕಾರಣಿಗಳನ್ನು ಬಂಡೆದ್ದ ನಾಯಕ ಅಥವಾ ನಾಯಕಿ ಅಮಾನುಷವಾಗಿ ಕೊಲ್ಲುವುದನ್ನು ಇಷ್ಟಪಡುವಂತೆ ಮಾಡಿತು. ಹೀಗೆ ಜನರ ಅಂತರಂಗದ ಬೇಗುದಿ ಸುಂದರ ಚಿತ್ರಗಳಾಗುತ್ತಾ ಅವರನ್ನು ತೃಪ್ತಿಪಡಿಸತೊಡಗಿದವು. ಇದೇ ಕಾರಣದಿಂದಲೇ ಕೆಲವು ಅದ್ದೂರಿ ಚಿತ್ರಗಳು ಅದ್ಭುತ ಯಶಸ್ಸನ್ನು ಕೂಡ ಗಳಿಸಿದವು. ಪ್ರೇಕ್ಷಕರನ್ನು ಅನ್ಯಾಯದ ವಿರುದ್ಧ ತಿರುಗಿ ಬೀಳುವಂತೆ ಮಾಡುವ ಬದಲು ರಾಜಕಾರಣಿ, ಅಧಿಕಾರಿ ಪೊಲೀಸರ ಮೇಲೆ ಅವರಿಗಿರಬಹುದಾದ ಸಿಟ್ಟನ್ನು ತೆರೆಯ ಮೇಲೆ ಈಡೇರಿಸಿ ಅವರನ್ನು ತಣ್ಣಗಾಗಿಸುವ ಸೂತ್ರ ಜನಪ್ರಿಯವಾಯಿತು.

ಕನ್ನಡದಲ್ಲಿ ರಾಜಕೀಯ ಚಿತ್ರಗಳ ಪರಂಪರೆ ೧೯೭೮ ರಲ್ಲಿ ತೆರೆಕಂಡ 'ಚಿತೆಗೂ ಚಿಂತೆ' ಚಿತ್ರದ ಮೂಲಕ ಆರಂಭವಾಯಿತು. ನಂತರ ೧೯೮೧ ರಲ್ಲಿ ಬಂದ 'ಅಂತ' ಹಾಗೂ ೧೯೮೨ ರಲ್ಲಿ ತೆರೆಕಂಡ 'ಬರ' ಚಿತ್ರಗಳು, ನಂತರದ ತೆಳು ಹಂದರದವೇ ಆದರೂ ರಾಜಕೀಯ ಚಿತ್ರಗಳ ಸುರಿಮಳೆಗೆ ಅಡಿಪಾಯ ಹಾಕಿದವು. ಕೊನೆಗೆ ಇದು ಎಲ್ಲಿಗೆ ಬೆಳೆಯಿತೆಂದರೆ 'ಮುಖ್ಯಮಂತ್ರಿ' ಎಂಬ ಹೆಸರಿಟ್ಟುಕೊಂಡು ಚಿತ್ರ ನಿರ್ಮಿಸುವವರೆಗೆ ಹಾಗೂ ಹತ್ತಿರದ ದಿನಗಳಲ್ಲೇ ನಡೆದ ರೌಡಿ ಕೊತ್ವಾಲ್ ಹಾಗೂ ನಂದಕುಮಾರ್ ಎಂಬಿಬ್ಬರ ಕೃತ್ಯಗಳನ್ನು ಯಥಾವತ್ತು ಚಿತ್ರಿಸುವವರೆಗೆ. (ಸಿದ್ಧಲಿಂಗಯ್ಯನವರು ೧೯೮೮ ರಲ್ಲಿ ಚಿತ್ರಿಸಿದ 'ಸಂಭವಾಮಿ ಯುಗೇ ಯುಗೇ' ಚಿತ್ರದಲ್ಲಿ ಚಿತ್ರೀಕರಣಕ್ಕೆ ಮುಂಚಿನ ನಾಲ್ಕು ತಿಂಗಳ ಅವಧಿಯಲ್ಲಿ ನಡೆದ ಎಲ್ಲಾ ರಾಜಕೀಯ ವಿದ್ಯಮಾನಗಳೂ ಇದ್ದವು.) ಮಹಾಭಾರತ, ರಾಮಾಯಣಗಳಲ್ಲಿ ಕಾಣುವಂಥ ಧರ್ಮನಿಷ್ಠ ನೈತಿಕ ನೆಲೆಯ ರಾಜಕಾರಣಕ್ಕಿಂತ ಭಿನ್ನವಾದ ಸಾಮಾಜಿಕ ಹಿನ್ನೆಲೆಯ, ಸ್ವಜನ ಪಕ್ಷಪಾತ, ಭ್ರಷ್ಟಾಚಾರ, ನೀಚತನವೇ ಪ್ರಧಾನವಾದ ರಾಜಕಾರಣದ ಚಿತ್ರಣ ಮನರಂಜನೆಯ ಮುಖವಾಡದಲ್ಲಿ ವಿಜೃಂಭಿಸತೊಡಗಿತು.

೧೯೮೮ ರಲ್ಲೇ ಪಷ್ಯನ್ ಫಿಲಂಸ್ ಬಗ್ಗೆ ವಿವರವಾದ ಚರ್ಚೆಯಿದ್ದ 'ಸಿನಿಮಾಯಾ' ದೆಹಲಿಯಲ್ಲಿ ಪ್ರಾರಂಭವಾದರೆ, ಬೆಂಗಳೂರಿನಲ್ಲಿ 'ಡೀಪ್ ಫೋಕಸ್' ಇಂಗ್ಲಿಷ್ ಪತ್ರಿಕೆಯನ್ನು ಬೆಂಗಳೂರು ಚಿತ್ರಸಮಾಜದ ಕುಟ್ಟಿ ಪ್ರಾರಂಭಿಸಿದರು.

ರಾಜಕೀಯಮಯವಾಗಿದ್ದ ಇಂಥ ವಾತಾವರಣದಲ್ಲಿ ಭಿನ್ನವಾಗಿ ಯೋಚಿಸುವವರ ಸಂಖ್ಯೆ ಇಳಿಮುಖವಾಗುತ್ತಾ ಬಂದಿತು. ಈ ಹಿನ್ನೆಲೆಯಲ್ಲಿ ೧೯೮೮ರಲ್ಲಿ ತೆರೆಕಂಡ ೫೬ ಚಿತ್ರಗಳಲ್ಲಿ ಪ್ರಸ್ತಾಪಿಸಲು ಯೋಗ್ಯವಾದಂಥವು ಆರೇಳು ಮಾತ್ರ. ಮುಖ್ಯವಾದ್ದು 'ಅವಳೇ ನನ್ನ ಹೆಂಡ್ತಿ'. ಈ ಚಿತ್ರದ ಯಶಸ್ಸು ಕಾಶೀನಾಥ್‌ರವರಿಗೆ ತಾರಾವರ್ಚಸ್ಸನ್ನು ತಂದುಕೊಟ್ಟಿತಲ್ಲದೆ ನಾಲ್ಕು ವರ್ಷಗಳ ಕಾಲ ಅವರನ್ನು ಅತ್ಯಂತ ಬೇಡಿಕೆಯ ನಾಯಕ ನಟರನ್ನಾಗಿಸಿತು. ಜೊತೆಗೆ ಅದೇ ಶೈಲಿಯ ಕಥೆ, ಹೆಸರು ಅರ್ಥಗಳಿರುವ 'ಅವನೇ ನನ್ನ ಗಂಡ', 'ಮನ್ಮಥ ರಾಜ', 'ಕಲಿಯುಗ ಕೃಷ್ಣ', 'ಸುರಸುಂದರಾಂಗ', 'ಚಪಲ ಚೆನ್ನಿಗರಾಯ', 'ಪೋಲಿ ಕಿಟ್ಟಿ', 'ರತಿ ಮನ್ಮಥ', 'ತರ್ಲೆ ನನ್ಮಗ' ಚಿತ್ರಗಳ ಸರಣಿ ನಿರ್ಮಾಣಕ್ಕೆ ಕಾರಣವಾಯಿತು. ಈ ಚಿತ್ರಗಳ ಎಲ್ಲಾ ಕಥೆಗಳನ್ನು ಕಾಶೀನಾಥ್



(ಚಿತ್ರ ೧೨೩) 'ಅವಳೇ ನನ್ನ ಹೆಂಡ್ತಿ' ಚಿತ್ರದಲ್ಲಿ ಭವ್ಯಾ ಮತ್ತು ಕಾಶೀನಾಥ್

ಇಮೇಜನ್ನು ದೃಷ್ಟಿಯಲ್ಲಿಟ್ಟುಕೊಂಡೇ ರಚಿಸಿದ್ದುದು ಗಮನಾರ್ಹ. ಅವರ ಒಂದೇ ಬಗೆಯ ಚಿತ್ರಗಳಿಂದಾಗಿ ಕಾಶೀನಾಥ್ ವರ್ಚಸ್ಸು ಬಹಳ ಬೇಗ ಮಂಕಾಯಿತು. ಇವರ ನಂತರ ಈ ಸಂಪ್ರದಾಯವನ್ನು ಉತ್ಸಾಹದಿಂದ ಮುಂದುವರಿಸಲು 'ತರ್ಲೆ ನನ್ಮಗ' ಮೂಲಕ ಜಗ್ಗೇಶ್ ಉದ್ಭವಿಸಿದರು. ದ್ವಂದ್ವಾರ್ಥ ಸಂಭಾಷಣೆಯನ್ನೇ ಜೀವಾಳ ಮಾಡಿಕೊಂಡ ಇವರು ಕೂಡ 'ಭಂಡ ನನ್ನ ಗಂಡ', 'ಸೂಪರ್ ನನ್ಮಗ', 'ಬಲ್ ನನ್ಮಗ' ಇತ್ಯಾದಿ ಚಿತ್ರಗಳ ಮೂಲಕ 'ಬಿ' 'ಸಿ' ಕೇಂದ್ರಗಳ ಜನಪ್ರಿಯ ಹಾಸ್ಯ ನಾಯಕನಟರಾಗಿ ಕೆಲವರ್ಷ ನೆಲೆ ನಿಂತರು.

'ಅವಳೇ ನನ್ನ ಹೆಂಡ್ತಿ' ಹಾಸ್ಯ ಲೇಪಿತ ಗಂಭೀರ ಚಿತ್ರ. ವರದಕ್ಷಿಣೆ ಸಮಸ್ಯೆ ಮತ್ತು ಅದರ ದುಷ್ಪರಿಣಾಮಗಳನ್ನು ಮಧ್ಯಮ ವರ್ಗದ ಕುಟುಂಬವೊಂದರ ಹಿನ್ನೆಲೆಯಲ್ಲಿ ಹೊಸ ನಿರ್ದೇಶಕರಾದ ಉಮೇಶ್-ಪ್ರಭಾಕರ್ ಜೋಡಿ ಚುರುಕಾಗಿ, ಪರಿಣಾಮಕಾರಿಯಾಗಿ ಚಿತ್ರಿಸಿದ್ದರು. ಕಾಶೀನಾಥ್ 'ಅನುಭವ'ದ ನಂತರ ಅಂಥದೇ ಪಾತ್ರಕ್ಕೆ ಸಮರ್ಪಕವಾಗಿ ಹೊಂದಿಕೊಂಡಿದ್ದಲ್ಲದೆ ಉತ್ತಮವಾಗಿ ಅಭಿನಯಿಸಿದ್ದರು. ಇದು ಯುವ ನಿರ್ದೇಶಕರಿಬ್ಬರ ಪ್ರಥಮ ಸಾಹಸವಾಗಿತ್ತು. ಜೊತೆಗೆ ಚುರುಕಾದ ಸಂಕಲನ ಹಾಗೂ ಸಮರ್ಪಕ ಇಂಟರ್‌ಕಟ್ ಬಳಕೆಯಿಂದಾಗಿ ಅತಿಯಾದ ನಾಟಕೀಯತೆಗೂ ಸಹಜತೆ ತಂದಿತ್ತು. ಹಂಸಲೇಖ ಸಂಗೀತದಲ್ಲಿ ಚಿತ್ರದ ಎಲ್ಲಾ ಹಾಡುಗಳು ಜನಪ್ರಿಯವಾದವು. ಹಲವಾರು ದೃಶ್ಯಗಳಲ್ಲಿ ಹೇಳಬಹುದಾದ ವಿಷಯಗಳನ್ನು ಒಂದು ಗೀತೆಯ ಮೂಲಕ ಹೇಳುವ ಹಾಡೊಂದನ್ನು ಹಂಸಲೇಖಾ ಹಾಡಿಸಿದ್ದರು. ಇದು 'ಪ್ರೇಮಲೋಕ' ನಂತರ ಅವರಿಗೆ ಇನ್ನೊಂದು ಯಶಸ್ಸಾಗಿತ್ತು. ಬೆಂಗಳೂರಿನ ಅಪರ್ಣ ಚಿತ್ರಮಂದಿರದಲ್ಲಿ ರಜತೋತ್ಸವ ಆಚರಿಸಿದ ಈ ಚಿತ್ರ ೨೫ ವಾರಗಳ ಕಾಲ ಪ್ರತಿನಿತ್ಯವೂ ಮಧ್ಯಾಹ್ನದ ಪ್ರದರ್ಶನದಲ್ಲಿ ನಿರಂತರವಾಗಿ ಹೌಸ್‌ಫುಲ್ ಆಗಿ ಕನ್ನಡ ಚಿತ್ರರಂಗದ ಮಟ್ಟಿಗೆ ದಾಖಲೆ ನಿರ್ಮಿಸಿತು. 'ಅವಳೇ ನನ್ನ ಹೆಂಡ್ತಿ' ರಜತೋತ್ಸವ ಸಮಾರಂಭ ೧೯೮೮ರ ಜುಲೈ ೧೦ ರಂದು ಚೌಡಯ್ಯ ಸ್ಮಾರಕ ಭವನದಲ್ಲಿ ನಡೆದಾಗ ವಿಷ್ಣುವರ್ಧನ್, ರವಿಚಂದ್ರನ್, ಶಿವರಾಜ್‌ಕುಮಾರ್, ಶಂಕರನಾಗ್ ಆಗಮಿಸಿ ಶುಭ ಹಾರೈಸಿದ್ದೊಂದು ಅಪೂರ್ವ ದೃಶ್ಯ. ಈ ಚಿತ್ರದ ನಂತರ ಉಮೇಶ್-ಪ್ರಭಾಕರ್ ಇಬ್ಬರೂ 'ಅವನೇ ನನ್ನ ಗಂಡ' ನಿರ್ಮಿಸಿದರಾದರೂ ನಿರೀಕ್ಷಿಸಿದ ಫಲ ನೀಡಲಿಲ್ಲ. ಕೆಲವೇ ದಿನಗಳಲ್ಲಿ ಭಿನ್ನಾಭಿಪ್ರಾಯದಿಂದಾಗಿ ಉಮೇಶ್-ಪ್ರಭಾಕರ್ ಬೇರೆ ಬೇರೆಯಾದರು. ಒಬ್ಬೊಬ್ಬರೇ ಚಿತ್ರ ನಿರ್ಮಾಣದಲ್ಲಿ ಪ್ರತ್ಯೇಕವಾಗಿ ತೊಡಗಿಕೊಂಡರು. ಮತ್ತೆ ಒಂದಾದದ್ದು ೧೯೯೫ ರಲ್ಲಿ ತೆರೆಕಂಡ 'ತುಂಬಿದ ಮನೆ' ಚಿತ್ರದಿಂದ. ವ್ಯಾವಹಾರಿಕವಾಗಿ ಬುದ್ಧಿವಂತರಾದ ಪ್ರಭಾಕರ್ ಏಳು ವರ್ಷಗಳ ನಂತರ ತಮ್ಮ ಅಸಮಾಧಾನವನ್ನು ಮರೆತು ಉಮೇಶ್‌ರವರಿಗೆ ನಿರ್ದೇಶನದ ಅವಕಾಶ ಕೊಟ್ಟು ತಾವು ನಿರ್ಮಾಪಕರಾಗಿ ಮಾತ್ರ ಉಳಿದುಕೊಂಡರು.

'ಪ್ರೇಮಲೋಕ' ಯಶಸ್ಸಿನ ನಂತರ ರವಿಚಂದ್ರನ್ ನಾಯಕತ್ವದಲ್ಲಿ ಈಶ್ವರಿ ಪ್ರೊಡಕ್ಷನ್ ನಿರ್ಮಿಸಿದ ಚಿತ್ರ 'ರಣಧೀರ'. 'ಪ್ರೇಮಲೋಕ' ಚಿತ್ರಕ್ಕೆ ಇಂಗ್ಲಿಷ್ 'ಗ್ರೀಸ್-2' ಚಿತ್ರ ಸ್ಫೂರ್ತಿಯಾಗಿ, ಹಿಂದಿಯ ಜೂಹಿ ಚಾವ್ಲಾ ನಟಿಸಿದ್ದರೆ, 'ರಣಧೀರ'ಕ್ಕೆ ಹಿಂದಿ ಚಿತ್ರ 'ಹೀರೋ' ಮೂಲ. ಉತ್ತರದ ನಟಿ ಖುಷ್ಬೂ ನಾಯಕಿಯಾದರು. ರವಿಚಂದ್ರನ್ ಈ ಚಿತ್ರದಲ್ಲೂ ಅದ್ದೂರಿತನಕ್ಕೆ ಕೊರತೆ ಮಾಡಿಲ್ಲ. ಮೂಲ ಚಿತ್ರದ ಛಾಪು ಸಂಪೂರ್ಣವಾಗಿದ್ದರೂ ಅದಕ್ಕಿಂತಲೂ ದೃಶ್ಯ ಶ್ರೀಮಂತಿಕೆ ಮತ್ತು ಕ್ಲೈಮ್ಯಾಕ್ಸ್‌ನಲ್ಲಿ ಕನ್ನಡ ಚಿತ್ರವೇ ಮೇಲುಗೈ ಸಾಧಿಸುತ್ತದೆ. ಲೋಕೇಶ್ ಮತ್ತು ಅನಂತ್‌ನಾಗ್ ಉತ್ತಮವಾಗಿ ನಟಿಸಿದ್ದಾರೆ. ಮಾ|ಮಂಜುನಾಥ್‌ನಂಥ ಅಪ್ಪಟ ಕಲಾವಿದನನ್ನು ಬಳಸಿಕೊಂಡ ಬಗೆ ಮೆಚ್ಚಾಗುವುದಿಲ್ಲ. ಹಂಸಲೇಖ ಸಂಯೋಜಿಸಿದ ಸಂಗೀತ ಕಿವಿಗೆ ಹಿತವಾದರೆ, ಆರ್.ಮಧುಸೂದನ್ ಛಾಯಾಗ್ರಹಣ ಕಣ್ಮನ ಸೆಳೆಯುತ್ತದೆ. ಚಿತ್ರದ ಥೀಮ್ ಮ್ಯೂಸಿಕ್ ಆಗಿ ಬಳಕೆಯಾಗುವ ಕೊಳಲಿನ ನಾದ ಹಿಂದಿಯದು. ಅದೇ ರಾಗದಲ್ಲಿ ಕೇವಲ ಸಿನಿಮಾ ಹೆಸರುಗಳನ್ನಷ್ಟೇ ಜೋಡಿಸಿ ಒಂದು ಗೀತೆ ರಚಿಸಿದ್ದಾರೆ. ಮಾತಿನ ಶೈಲಿಯ ಹಾಡುಗಳು ಇಲ್ಲೂ ಮುಂದುವರೆದಿವೆ. 'ಯಾರೆ ನೀನು ಸುಂದರ ಚಲುವೆ...', 'ಲೋಕವೆ ಹೇಳಿದ ಮಾತಿದು..' ಹಾಡುಗಳು ಜನಮನ್ನಣೆ ಗಳಿಸಿದವು. ಕ್ಲೈಮ್ಯಾಕ್ಸ್‌ನಲ್ಲಿ ಬರುವ ಹಡಗನ್ನು ಕಲಾನಿರ್ದೇಶಕ ನಜೀರ್ ಅತ್ಯುತ್ತಮವಾಗಿ ನಿರ್ಮಿಸಿದ್ದರು. ನಜೀರ್ ಕೆಲಸ ಚಿತ್ರದುದ್ದಕ್ಕೂ ಗಮನ ಸೆಳೆಯದಿರದು. ಅಂತಿಮ ದೃಶ್ಯದಲ್ಲಿ ಹಡಗಿನೊಳಕ್ಕೆ ನೀರು ನುಗ್ಗುವುದು ಚೆನ್ನಾಗಿಯೇ ಬಂದಿದೆ. ಕೆಲವು ದೃಶ್ಯಗಳು ರವಿಚಂದ್ರನ್ ರಸಿಕತನಕ್ಕೆ ಸಾಕ್ಷಿಯಾಗುತ್ತವೆ. ನಾಯಕನಲ್ಲಿ ಉತ್ಸಾಹ, ಆವೇಶ ತುಂಬುವಲ್ಲಿ ನಾಯಕನ ನಾಲ್ಕಾರು ಸಂಗಡಿಗರು ಹಿನ್ನೆಲೆಯಲ್ಲಿ 'ಬಾರೊ ಬಾರೋ ರಣಧೀರಾ...' ಎಂದು ಕೋರಸ್‌ನಲ್ಲಿ ಹಾಡುವುದನ್ನು ಪ್ರೇಕ್ಷಕರು ಮೆಚ್ಚಿಕೊಂಡರು.

ಮಧು ಆರ್ಟ್ ಪಿಕ್ಚರ್ಸ್‌ನವರ 'ತಾಯಿಯ ಆಸೆ'ಯನ್ನು ರಾಜ್ ಕಿಶೋರ್ ನಿರ್ದೇಶಿಸಿದರು. ಚಿತ್ರ ವಾಣಿಜ್ಯಾತ್ಮಕವಾಗಿ ಯಶ ಪಡೆದರೂ ನಿರ್ದೇಶಕರು ಸಂಯೋಜಿಸಿರುವ ಅಪಕ್ವ ದೃಶ್ಯಗಳು ಚಿತ್ರವನ್ನು ಎಡವಿಸಿದೆ. ರಾಜೇಶ್, ಪ್ರಮೀಳಾ ಜೋಷಾಯ್ ಅಭಿನಯವೇ ಚಿತ್ರದ ಮುಖ್ಯಾಂಶ. ವಿನೋದ್ ಆಳ್ವಾ ನೃತ್ಯದಲ್ಲಿ ಗೆಲ್ಲುತ್ತಾರೆ. ವಿಜಯಭಾಸ್ಕರ್ ಸಂಗೀತ ಸಾಧಾರಣ.

ಅಂಬರೀಷ್, ರವಿಚಂದ್ರನ್, ಅನಂತ್‌ನಾಗ್ ಮೂವರು ನಾಯಕರು ಒಟ್ಟಾಗಿ 'ಬ್ರಹ್ಮ ವಿಷ್ಣು ಮಹೇಶ್ವರ' ಚಿತ್ರದಲ್ಲಿ ಕ್ರಮವಾಗಿ ಬ್ರಹ್ಮ, ವಿಷ್ಣು, ಮಹೇಶ್ವರನಾಗಿ ಕಾಣಿಸಿಕೊಂಡರು. ರೋಹಿಣಿ ಪಿಕ್ಚರ್ಸ್ ನಿರ್ಮಿಸಿ ರಾಜಾಚಂದ್ರ ನಿರ್ದೇಶಿಸಿದರು. ಕಿರಣ್ ಜುನೇಜಾ, ಮಹಾಲಕ್ಷ್ಮೀ, ತುಳಸಿ ನಾಯಕಿಯರು. ಬಹುತಾರಾ ಚಿತ್ರವಾಗಿ ಯಶಸ್ಸು ಕಂಡಿತು. ಕಥೆಯೂ ವಿಶೇಷವಾಗಿಯೇ ಇತ್ತು. 'ಹುಡುಗಿಯು ಚೆನ್ನ...' ಹಾಡು ವಿಜಯಾನಂದ್ ಸಂಯೋಜನೆಯಲ್ಲಿ ಜನಪ್ರಿಯವಾಯಿತು. ಒಂದೆರಡು ಅಶ್ಲೀಲ ದೃಶ್ಯಗಳು ಚಿತ್ರದಲ್ಲಿದ್ದುದು ಆಭಾಸವಾಯಿತು.



(ಚಿತ್ರ ೧೨೪) 'ರಣಧೀರ' ಚಿತ್ರದಲ್ಲಿ ರವಿಚಂದ್ರನ್



(ಚಿತ್ರ ೧೨೫) 'ಬ್ರಹ್ಮ ವಿಷ್ಣು ಮಹೇಶ್ವರ' ಚಿತ್ರದಲ್ಲಿ ಅಂಬರೀಷ್, ರವಿಚಂದ್ರನ್ ಮತ್ತು ಅನಂತ್‌ನಾಗ್

ನಟ ಪ್ರಭಾಕರ್ 'ಶಕ್ತಿ' ಚಿತ್ರದ ಮೂಲಕ ನಿರ್ದೇಶನ ರಂಗಕ್ಕೆ ಕಾಲಿರಿಸಿದರು. ಕೆ.ಎಸ್.ಆರ್.ದಾಸ್ ಪ್ರೊಡಕ್ಷನ್ಸ್ ಲಾಂಛನದಲ್ಲಿ ಚಿತ್ರ ತಯಾರಾಯಿತು. ಮಾಮೂಲಿ ಸೇಡಿನ ಕಥೆಗೆ ವಿಭಿನ್ನವೆನಿಸುವ ಕಥಾಶೈಲಿ. ನಿರೂಪಣೆಯಲ್ಲೂ ಹೊಸತನ, ಫೈಟಿಂಗ್‌ಪ್ರಿಯರನ್ನು ರಂಜಿಸುವ ಕಸರತ್ತುಗಳೂ ಸಾಕಷ್ಟಿವೆ. ವನಿತಾವಾಸು ಅವರನ್ನು ಹಾಡಿನ ನೆಪದಲ್ಲಿ ಸಾಕಷ್ಟು ರೋಚಕವಾಗಿ ಕುಣಿಸಲಾಗಿತ್ತು. ಪೊಲೀಸರಿಂದ ಹತರಾದರೆನ್ನಲಾದ ಕೇರಳದ ವಕೀಲ ರಷೀದ್‌ನ ಸಾವಿನ ಸ್ಫೂರ್ತಿಯು ಚಿತ್ರದಲ್ಲಿ ವಜ್ರಮುನಿ ಪಾತ್ರದಲ್ಲಿ ಕಾಣಸಿಗುತ್ತದೆ. ಪ್ರಭಾಕರ್ ನಟನೆಯಲ್ಲಷ್ಟೇ ಅಲ್ಲದೇ ನಿರ್ದೇಶನದಲ್ಲೂ ಚುರುಕುತನ ತೋರಿ ಮಾಧ್ಯಮದ ಮೇಲಿನ ಹಿಡಿತವನ್ನು ರುಜುವಾತು ಪಡಿಸಿದ್ದಾರೆ.

ವಿಷ್ಣುವರ್ಧನ್ ಅಭಿನಯಿಸಿದ 'ಡಿಸೆಂಬರ್ ೩೧' ನಿರುದ್ಯೋಗ ಸಮಸ್ಯೆಯಿಂದ ಯುವಕರು ಸಮಾಜಘಾತುಕರಾಗುವ ಸಮಸ್ಯೆ ಕುರಿತಾದ ಚಿತ್ರ. ಸತ್ಯಂ ಅವರ ಹಾಡು ಹಿನ್ನೆಲೆ ಸಂಗೀತ ಎರಡೂ ಪರಿಣಾಮ ಬೀರುವುದಿಲ್ಲ. ಪ್ರಥಮ ಬಾರಿಗೆ ಮಹಿಳಾ ಛಾಯಾಗ್ರಾಹಕಿ ಬಿ.ಆರ್.ವಿಜಯಲಕ್ಷ್ಮೀ (ಬಿ.ಆರ್.ಪಂತುಲು ಮಗಳು) ಛಾಯಾಗ್ರಹಣ ಮಾಡಿರುವುದೇ ಚಿತ್ರದ ವಿಶೇಷ.

ಮನು ಅವರ 'ಅಯನ' ಕಾದಂಬರಿಯನ್ನು ಆಧರಿಸಿ ನಾಗಾಭರಣ ನಿರ್ದೇಶಿಸಿದ 'ಆಸ್ಫೋಟ' ರಾಜಕಾರಣಿಗಳ ತಂತ್ರಗಳಿಗೆ ಬಲಿಯಾಗುವ ವಿದ್ಯಾರ್ಥಿಗಳ ಬದುಕನ್ನು ನಿರೂಪಿಸಿದ ಚಿತ್ರ. ಕೊಲೆಗಳ ಹಸಿಹಸಿಯಾದ ಚಿತ್ರಣವಿರುವ ಇದರಲ್ಲಿ ರುದ್ರೇಶ್ ಸಾಹಸ ಸಂಯೋಜನೆ ಭಿನ್ನವಾಗಿತ್ತು. ರಾಜ್ಯದ ೧೯೮೭-೮೮ರ ಪ್ರಥಮ ಅತ್ಯುತ್ತಮ ಚಿತ್ರವಾಗಿ ಆಯ್ಕೆಯಾದದ್ದಲ್ಲದೆ ಕಥೆಗಾಗಿ ಟಿ.ಎನ್.ರಂಗನ್ (ಮನು), ಚಿತ್ರಕಥೆಗಾಗಿ ನಾಗಾಭರಣ, ಪೋಷಕ ನಟನೆಗಾಗಿ ಹೆಚ್.ಜಿ.ದತ್ತಾತ್ರೇಯ ಪ್ರಶಸ್ತಿಗಳನ್ನು ಪಡೆದರು.

ರಾಜಕುಮಾರ್ ಅಭಿಮಾನಿಗಳ ಸಂಘದ ಅಧ್ಯಕ್ಷರಾಗಿ ಕನ್ನಡದ ಕೆಲಸಗಳಲ್ಲಿ ತೊಡಗಿಕೊಂಡಿದ್ದ ಸಾ.ರಾ.ಗೋವಿಂದು ಸಿ.ವಿ.ಎಲ್.ಶಾಸ್ತ್ರಿಯವರ ಭಾವಮೈದುನ ಪ್ರಸಾದ್ ಪಾಲುದಾರಿಕೆಯಲ್ಲಿ ನಿರ್ಮಿಸಿದ ಪ್ರಥಮ ಚಿತ್ರ 'ಏಳು ಸುತ್ತಿನ ಕೋಟೆ'. ರಷ್ಯಾ ದೇಶದ ಹೆಸರಾಂತ ಬರಹಗಾರ 'ದಾಸ್ತೋವ್‌ಸ್ಕಿ'ಯವರ 'ಕ್ರೈಂ ಅಂಡ್ ಪನಿಷ್‌ಮೆಂಟ್' ಕೃತಿಯಿಂದ ಸ್ಫೂರ್ತಿ ಪಡೆದಿದ್ದ ಈ ಚಿತ್ರದಲ್ಲಿ ಅಂಬರೀಷ್‌ಗೆ ವಿಭಿನ್ನ ಪಾತ್ರವಿತ್ತಾದರೂ ಗೌರಿಶಂಕರ್ ನಿರೂಪಣೆಯಲ್ಲಿ ಇಬ್ಬಂದಿತನವಿತ್ತು. ಚಿತ್ರ ಯಶಸ್ವಿಯಾಗಲಿಲ್ಲ. 'ಏನೋ ಮಾಡಲು ಹೋಗಿ ಏನು ಮಾಡಿದೆ ನೀನು...' ಹಾಡು ಭಿನ್ನವಾಗಿದೆ. ಕಲಾವಿದೆ ಗೌತಮಿ ಕನ್ನಡಕ್ಕೆ ಬಂದರು. ಅನಂತರ ತೆಲುಗು-ತಮಿಳಿನಲ್ಲಿ ಪ್ರಸಿದ್ಧ ನಟಿಯಾದರು. ಚಿತ್ರದ ಧ್ವನಿಗ್ರಹಣಕ್ಕಾಗಿ ಶ್ರೀನಿವಾಸ್‌ರವರಿಗೆ ೧೯೮೭-೮೮ರ ರಾಜ್ಯ ಪ್ರಶಸ್ತಿ ಬಂದಿತು.

ಇದೇ ಅವಧಿಯಲ್ಲಿ ತೆರೆಕಂಡ 'ತಬರನ ಕತೆ' ಆಗಿನ ದಿನಗಳಲ್ಲಿ ಕನ್ನಡ ಚಿತ್ರರಂಗಕ್ಕೆ ಅಪರೂಪವಾಗಿದ್ದ 'ಸ್ವರ್ಣಕಮಲ' ಗಳಿಸಿಕೊಟ್ಟ ಚಿತ್ರ. ಎಂದಿನ ಮೆಲುಸ್ತರದ ನಿರೂಪಣೆಯ ಮೂಲಕ ಗಿರೀಶ್ ಕಾಸರವಳ್ಳಿ ನಿವೃತ್ತ ಸರ್ಕಾರಿ ಕಾರಕೂನ ತನ್ನ ಪಿಂಚಣಿ ಪಡೆಯಲು ಪಡುವ ಪಾಡನ್ನು ಧ್ವನಿಪೂರ್ಣವಾಗಿ ಚಿತ್ರಿಸಿದ್ದರು. ಸರ್ಕಾರದ ಆಡಳಿತ ಯಂತ್ರದ ಚಲನೆಯಲ್ಲಿ ಒಳಗೊಂಡಿರುವ ಅಮಾನವೀಯತೆ ಹಾಗೂ ಕ್ರೌರ್ಯವನ್ನು ಸೂಕ್ಷ್ಮ ವಿವರಗಳಲ್ಲಿ, ನವಿರಾಗಿ ನಿರೂಪಿಸಿದ್ದರು. 'ತಬರನ ಕಥೆ' ಚಿತ್ರಕ್ಕೆ ಕೇಂದ್ರದ ೧೯೮೭ರ ಅತ್ಯುತ್ತಮ ಕಥಾಚಿತ್ರವೆಂದು ಸ್ವರ್ಣಕಮಲ ಲಭ್ಯವಾಯಿತು. ಇದರೊಂದಿಗೆ ೧೯೮೬-೮೭ರ ರಾಜ್ಯದ ಪ್ರಥಮ ಅತ್ಯುತ್ತಮ ಚಿತ್ರವೆಂದು ಆಯ್ಕೆಯಾಗಿ ಉಳಿದ ಐದು ವಿಭಾಗಗಳಲ್ಲಿ ಪ್ರಶಸ್ತಿ ಗಳಿಸಿತು. ಅತ್ಯುತ್ತಮ ನಟ - ಚಾರುಹಾಸನ್, ಅತ್ಯುತ್ತಮ ಕಥೆ, ಸಂಭಾಷಣೆ - ಪೂರ್ಣಚಂದ್ರ ತೇಜಸ್ವಿ, ಅತ್ಯುತ್ತಮ ಸಂಕಲನ - ಎಂ.ಎನ್.ಸ್ವಾಮಿ, ಬಾಲನಟ - ಮಾ|ಸಂತೋಷ್ ಪ್ರಶಸ್ತಿಗಳನ್ನು ಪಡೆದರು.

ಕೆ.ವಿ.ಜಯರಾಂ ಎಂದೊಡನೆ ಅವರ ಚಿತ್ರದ ಕಥೆ ಒಂದು ಕಾದಂಬರಿಯನ್ನು ಆಧರಿಸಿದ್ದಾಗಿರುತ್ತದೆ ಎಂಬುದು ಎಲ್ಲರ ನಂಬಿಕೆ. 'ಒಲವಿನ ಆಸರೆ' ಚಿತ್ರದ ಕಥೆಯೂ ತನುಜಾ ಅವರ ಕಾದಂಬರಿ ಆಧಾರಿತ. ಹೀಗಿದ್ದೂ ಚಿತ್ರ ವಿಶೇಷವೆನಿಸುವುದಿಲ್ಲ. ಆರಂಭದಲ್ಲಿ ಸಸ್ಪೆನ್ಸ್ ಇದ್ದರೂ ಹಿಡಿತ ಕೊನೆಯವರೆವಿಗೂ ಉಳಿಯುವುದಿಲ್ಲ. ವಿಷ್ಣುವರ್ಧನ್, ಸುಧೀರ್ ಅಭಿನಯ ಚೆನ್ನಾಗಿದೆ. ರೂಪಿಣಿ ನಾಯಕಿ.

ರಾಜಕುಮಾರ್ ಅಭಿನಯದ ಮೊದಲ ಚಿತ್ರ 'ಬೇಡರ ಕಣ್ಣಪ್ಪ'. ಅವರ ಮಗ ಶಿವರಾಜ್‌ಕುಮಾರ್ ಅವರಿಗಾಗಿ 'ಶಿವ ಮೆಚ್ಚಿದ ಕಣ್ಣಪ್ಪ' ಚಿತ್ರವನ್ನು ಭಗವತಿ ಕಂಬೈನ್ಸ್ ನಿರ್ಮಿಸಿದರು. ವಿಜಯ್ ನಿರ್ದೇಶಿಸಿದರು. ವಿಶೇಷವೆಂದರೆ ಇಲ್ಲಿ ದಿಣ್ಣನ ಪಾತ್ರವನ್ನು ಶಿವರಾಜ್‌ಕುಮಾರ್ ನಿರ್ವಹಿಸಿದ್ದು. ಶಿವನ ಪಾತ್ರದಲ್ಲಿ ರಾಜಕುಮಾರ್ ಅವರೇ ನಟಿಸಿದರು. ಗೀತಾ, ಪಾರ್ವತಿಯ ಪಾತ್ರದಲ್ಲಿದ್ದರು. ಎಲ್ಲ 'ಬೇಡರ ಕಣ್ಣಪ್ಪ' ಚಿತ್ರದ ಕಥೆಯೇ, ಕೆಲವೊಮ್ಮೆ ಸಂಭಾಷಣೆಯೂ ಮೂಲದ್ದೇ. ಮೂಲದಲ್ಲಿಲ್ಲದ ಮುಖ್ಯ ಘಟನೆಯೊಂದು ಈ ಚಿತ್ರದಲ್ಲಿ ಕಾಣಿಸಿಕೊಂಡಿದೆ. ಪಾರ್ವತಿಯು ಅರ್ಜುನನ ಬೆನ್ನನ್ನು ನೋಡಬೇಕೆಂದಾಗ ಶಿವನು ಕಿರಾತನಾಗಿ ಬಂದು ಅರ್ಜುನನೊಡನೆ ಕಾದುವ ದೃಶ್ಯ. ರಾಜಕುಮಾರ್ ಹಾಗೂ ಶಿವರಾಜ್‌ಕುಮಾರ್ ಈ ದೃಶ್ಯದಲ್ಲಿ ಕ್ರಮವಾಗಿ ಶಿವ ಮತ್ತು ಅರ್ಜುನನಾಗಿ ಅಭಿನಯಿಸಿದರು. ಪುನೀತ್ ಈ ಚಿತ್ರದಲ್ಲಿ ಬಾಲ ದಿಣ್ಣ. ಟಿ.ಜಿ.ಲಿಂಗಪ್ಪ



(ಚಿತ್ರ ೧೨೬) 'ಆಸ್ಫೋಟ' ಚಿತ್ರದಲ್ಲಿ ದತ್ತಾತ್ರೇಯ ಮತ್ತು ಅಶೋಕ್ ಬಾದರದಿನ್ನಿ



(ಚಿತ್ರ ೧೨೭) 'ತಬರನ ಕತೆ' ಚಿತ್ರದಲ್ಲಿ ಚಾರುಹಾಸನ್



(ಚಿತ್ರ ೧೨೮) 'ಶಿವ ಮೆಚ್ಚಿದ ಕಣ್ಣಪ್ಪ' ಚಿತ್ರದಲ್ಲಿ ಶಿವರಾಜ್‌ಕುಮಾರ್

ಸಂಗೀತ ಸಂಯೋಜನೆಯಲ್ಲಿ 'ಕಣ್ಣಿಲ್ಲ... ಕಿವಿಯಿಲ್ಲ...' ಹಾಗು 'ಕಣ್ಣಿಂದ ನೀ ಬಾಣ ಬೀಸಿದಾಗ...' ಹಾಡುಗಳು ಹಿತವಾಗಿದ್ದವು. ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಸ್ಫೋಟವಾದ ಸಂದರ್ಭದಲ್ಲಿ ಚಿತ್ರೀಕರಣ ನಡೆಯುತ್ತಿತ್ತು. ಆ ಅವಘಡದಲ್ಲಿ ಸೆಟ್‌ಗಳು ಮುರಿದುಬಿದ್ದವು. ಪ್ರಾಣಹಾನಿಯಾಗಲಿಲ್ಲ. ಅಲ್ಲಿಂದಾಚೆಗೆ ಚಾಮುಂಡೇಶ್ವರಿಯಲ್ಲಿ ಚಿತ್ರೀಕರಣದ ಫ್ಲೋರ್‌ಗಳನ್ನೇ ನಿಲ್ಲಿಸಿ, ಧ್ವನಿಮುದ್ರಣ, ಸಂಕಲನ ಇತ್ಯಾದಿಗಳನ್ನು ಮಾತ್ರ ಬಳಸಿಕೊಂಡರು.

ವರ್ಣರಂಜಿತ ಪ್ರಚಾರಗಳೊಂದಿಗೆ ಟಿ.ಕೆ.ರಾಮರಾವ್ ಕಾದಂಬರಿ ಆಧಾರಿತ ಸಸ್ಪೆನ್ಸ್ ಚಿತ್ರವೆಂಬ ಹಣೆಪಟ್ಟಿ ಹೊತ್ತುಬಂದ ಚಿತ್ರ 'ವರ್ಣಚಕ್ರ'. ಕೆ.ವಿ.ಜಯರಾಂ ತಮ್ಮ ಮೊದಲ ಚಿತ್ರ 'ಮರಳು ಸರಪಣಿ'ಯಲ್ಲಿ ಸಸ್ಪೆನ್ಸ್ ತುಂಬಿದ್ದರು. ಅದಾದ ಮೇಲೆ ಪೂರ್ಣ ಪ್ರಮಾಣದ ಸಸ್ಪೆನ್ಸ್ ಚಿತ್ರವನ್ನಾಗಿ ಈ ಚಿತ್ರವನ್ನು ನಿರ್ದೇಶಿಸಿದರು. ಅನಂತ್‌ನಾಗ್‌ಗೆ ಬೇರೆ ಇಮೇಜ್ ಸೃಷ್ಟಿಸಬೇಕೆಂಬ ಕಾರಣಕ್ಕೆ ಅವರಿಂದ ಸಾಹಸಗಳನ್ನು ಮಾಡಿಸಿದ್ದರು. "...ಗೋವಾದಲ್ಲಿ ಇನ್ನೂ ತೆರೆಯದಿದ್ದ ವೈದ್ಯಕೀಯ ಕಾಲೇಜನ್ನೇ ಫಾರಿನ್ ತರಹ ಬಿಂಬಿಸಿ, ಅದರ ಸುತ್ತಲೂ ಪಾಶ್ಚಾತ್ಯ ವಾತಾವರಣವನ್ನು ಕಲ್ಪಿಸಲಾಗಿತ್ತು. ಅಲ್ಲಿನ ಪಂಚತಾರಾ ಹೊಟೇಲ್‌ಗಳು ಹಾಗೂ ಅಲ್ಲಿಯೇ ಇದ್ದ ಜರ್ಮನರನ್ನು ಚಿತ್ರದಲ್ಲಿ ಬಳಸಿಕೊಂಡು ಅದು ಫಾರಿನ್ ಎಂಬಂತೆ ಚಿತ್ರೀಕರಿಸಿದ್ದೆವು" ಎನ್ನುತ್ತಾರೆ ಚಿತ್ರದ ನಿರ್ದೇಶಕ ಕೆ.ವಿ.ಜಯರಾಂ. ಏನೆಲ್ಲ ಕಸರತ್ತು ನಡೆಸಿದರೂ ಚಿತ್ರ ಜನಕ್ಕೆ ಒಪ್ಪಿಗೆಯಾಗಲಿಲ್ಲ. ಹೊಸ ಇಮೇಜ್ ಅನಂತ್ ಅವರಿಗೆ ಇಷ್ಟವಾಗಲಿಲ್ಲ. ಉದಯಕುಮಾರ್ ಅಭಿನಯದ ಕೊನೆಯ ಚಿತ್ರವಿದು.

'ಕಿರಾತಕ', ಶ್ರೀಕೃಷ್ಣ ಗಾರುಡಿ ಕಂಬೈನ್ಸ್ ನಿರ್ಮಾಣ. ಮಾಯಾಪುರ ಎಂಬಲ್ಲಿ ಕಿರಾತಕರು ಚಿತ್ರ ಹಿಂಸೆ, ಅತ್ಯಾಚಾರ, ಕೊಲೆ ಮಾಡುವವರು. ಅವರನ್ನು ಬಗ್ಗು ಬಡಿಯುವ ಪೊಲೀಸ್ ಅಧಿಕಾರಿಯ ಸಾವು, ಅವನ ಸಾವನ್ನು ಮುಚ್ಚಿಟ್ಟು ಅವನೇ ಎಂಬ ಭ್ರಮೆ ಹುಟ್ಟಿಸುವಂತೆ ಬರುವ 'ಸೂಪರ್‌ಮ್ಯಾನ್'-ಸಾಹಸಗಳು. ಥ್ರಿಲ್ ತರುವಂಥ ಚಿತ್ರವೆಂದೇ ಹೇಳಲಾಗಿತ್ತು. ಪ್ರಭಾಕರ್ ಅಣ್ಣ-ತಮ್ಮನಾಗಿ ಎರಡೂ ಪಾತ್ರ ಮಾಡಿದ್ದರು. ಅಣ್ಣನ ಪಾತ್ರ ಸತ್ತ ಮೇಲೆ, ತಮ್ಮನ ಪಾತ್ರ ಬರುವುದರಿಂದ ಹೆಚ್ಚು ಟ್ರಿಕ್ ಶಾಟ್ಸ್ ಸಮಸ್ಯೆಗಳಿರಲಿಲ್ಲ.

'ಅರ್ಜುನ್' ಚಿತ್ರ ಮಹಾಭಾರತದಲ್ಲಿ ಅಭಿಮನ್ಯು ಚಕ್ರವ್ಯೂಹ ಭೇದಿಸಿದ ಕಥೆಯನ್ನು ಹೋಲುವ ಹಾಗಿತ್ತು. ಇಲ್ಲಿಯ ನಾಯಕ ಕಳ್ಳ ಸಾಗಾಣಿಕೆದಾರರ, ಅವರ ಬೆಂಗಾವಲಿಗೆ ನಿಂತಿರುವ ನ್ಯಾಯಾಂಗ ಹಾಗೂ ಸಾಮಾಜಘಾತಕ ಶಕ್ತಿಗಳ ಚಕ್ರವ್ಯೂಹವನ್ನು ಮುರಿಯುತ್ತಾನೆ. ಅಭಿಮನ್ಯು ಸತ್ತ ಹಾಗೆ ಈ ನಾಯಕ ಸಾಯುವುದಿಲ್ಲ. ಎ.ಟಿ.ರಘು ಚಿತ್ರಕಥೆ ಹೆಣೆದ ರೀತಿ ಚೆನ್ನ, ಆದರೆ ನಿರ್ದೇಶನ ಅಷ್ಟೇ ಚಂದವಾಗಿ ಬರಲಿಲ್ಲ ಎಂಬ ಆಕ್ಷೇಪವಿತ್ತು. ಕರ್ನಾಟಕದ ಎಲ್ಲ ಊರುಗಳನ್ನು ಹೆಸರಿಸುವ ಒಂದು ಕನ್ನಡ ಗೀತೆಯ ಸಮೂಹಗಾನ, ದೋಣಿಗಳಲ್ಲಿ ಸಾಗುವ ಹಾಡುವ ಚಿತ್ರಿಕೆಗಳು ಮೆಚ್ಚಾಗಿದ್ದವು.

ಕರ್ನಾಟಕದಲ್ಲಿ ಚಿತ್ರೋದ್ಯಮದ ಚಟುವಟಿಕೆಗಳು ಹೆಚ್ಚತೊಡಗುತ್ತಿದ್ದಂತೆ ಹಲವಾರು ವಲಯಗಳಲ್ಲಿ ದುಡಿಯುತ್ತಿದ್ದವರು ಸಂಘಟನೆಗಳನ್ನು ರೂಪಿಸಿಕೊಂಡಿದ್ದು ಹಾಗೂ ದುಡಿಯುವವರಲ್ಲಿ ಹಕ್ಕಿನ ಪ್ರಜ್ಞೆ ಜಾಗೃತವಾಗತೊಡಗಿದ್ದು ಈ ದಶಕದ ಪ್ರಮುಖ ಬೆಳವಣಿಗೆ. ಚಲನಚಿತ್ರ ನಿರ್ಮಾಣದಲ್ಲಿ ಅನಿವಾರ್ಯವಾಗಿದ್ದ ನಿರ್ಮಾಣ ಸಹಾಯಕರು, ಸಹ ಕಲಾವಿದರು ತಮ್ಮ ದುಡಿಮೆಗೆ ನಿರ್ದಿಷ್ಟ ವ್ಯವಸ್ಥೆ ಮಾಡಿಕೊಳ್ಳುವುದರತ್ತ ಆಲೋಚಿಸಿದ್ದರ ಫಲವಾಗಿ ೧೯೮೭ರ ಸೆಪ್ಟೆಂಬರ್ ೧೨ ರಂದು ಕರ್ನಾಟಕ ಚಲನಚಿತ್ರ ಕಾರ್ಮಿಕರ, ಕಲಾವಿದರ, ತಂತ್ರಜ್ಞರ ಒಕ್ಕೂಟ ರಚನೆಯಾಯಿತು. ಇದಕ್ಕೆ ಪೂರ್ವಭಾವಿಯಾಗಿ ಆಗಸ್ಟ್ ತಿಂಗಳ ೧೨ ರಂದು ಬೆಂಗಳೂರಿನಲ್ಲಿ, ೧೯ ರಂದು ಮೈಸೂರಿನಲ್ಲಿ ಸರ್ವಸದಸ್ಯರ ಸಮ್ಮುಖದಲ್ಲಿ ಮಹಾಸಭೆಗಳು ನಡೆದವು. ಈ ಸಭೆಗಳಲ್ಲಿ ಎಲ್ಲಾ ಸದಸ್ಯರ ಸಮಸ್ಯೆಗಳು ಹಾಗೂ ಕಾರ್ಯವಿಧಾನವನ್ನು ಚರ್ಚಿಸಿ ಸರಿಪಡಿಸಿಕೊಳ್ಳುವ ಉದ್ದೇಶಕ್ಕೆ ಪ್ರತಿ ತಿಂಗಳು ಸಭೆ ಸೇರುವ ನಿರ್ಣಯ ಕೈಗೊಳ್ಳಲಾಯಿತು. ಸಭೆ ಸೇರುವ ದಿನಾಂಕದ ಬಗ್ಗೆ ಚಿಂತನೆ ನಡೆಸಿದ ನಂತರ ಪ್ರತಿ ತಿಂಗಳ ೨ನೆಯ ಭಾನುವಾರವನ್ನು ಗೊತ್ತುಪಡಿಸಿಕೊಳ್ಳಲಾಯಿತು. ಇದನ್ನು ಸಂಘ ಚಲನಚಿತ್ರ ವಾಣಿಜ್ಯ ಮಂಡಳಿ ಹಾಗೂ ಇನ್ನಿತರ ಸಂಘಟನೆಗಳಿಗೆ ತಿಳಿಸಿತಲ್ಲದೆ ಪತ್ರಿಕಾ ಪ್ರಕಟಣೆ ನೀಡಿ ಘೋಷಿಸಿತು. ಈ ರಜೆ ೧೯೮೮ರ ನವೆಂಬರ್ ತಿಂಗಳಿಂದ ಅಧಿಕೃತವಾಗಿ ಜಾರಿಗೆ ಬಂದಿತು. ಪ್ರತಿ ತಿಂಗಳ ಎರಡನೆಯ ಭಾನುವಾರವನ್ನು ಚಿತ್ರನಿರ್ಮಾಣಕ್ಕೆ ರಜಾದಿನವನ್ನಾಗಿ ಪರಿಗಣಿಸಲಾಗಿದೆ. ಇದು ಸಂಪೂರ್ಣ ಉದ್ಯಮಕ್ಕೆ ರಜೆಯಲ್ಲ. ಚಿತ್ರೀಕರಣ ಇರುವುದಿಲ್ಲ, ಉಳಿದ ಎಲ್ಲ ವ್ಯವಹಾರಗಳೂ ನಡೆಯುತ್ತವೆ.

ಇದೇ ದಿನಗಳಲ್ಲಿ ಇನ್ನೊಂದು ವಿಚಿತ್ರ ಪ್ರವೃತ್ತಿ ಬೆಂಗಳೂರಿನ ಪ್ರದರ್ಶನ ವಲಯದಲ್ಲಿ ಕಾಣಿಸಿಕೊಂಡಿತು. ಇದಾದದ್ದು ೧೯೮೮ರ ಜೂನ್, ಜುಲೈ ವೇಳೆಯಲ್ಲಿ. ಹೆಸರಾಂತ ನಾಯಕನಟರು ಅಭಿನಯಿಸಿದ, ಅದ್ದೂರಿ ವೆಚ್ಚದ ಚಿತ್ರಗಳೆಲ್ಲ ನಗರದ ಪ್ರತಿಷ್ಠಿತ ಚಿತ್ರಮಂದಿರಗಳ ಜೊತೆಜೊತೆಯಲ್ಲಿಯೇ ನಗರದ ಒಳ-ಹೊರ ವಲಯದಲ್ಲಿದ್ದ ಟೆಂಟುಗಳಲ್ಲೂ ಬಿಡುಗಡೆಯಾಗಲಾರಂಭಿಸಿದವು. ಅಷ್ಟು ವರ್ಷಗಳ ಕಾಲ ಹೊಸ ಚಿತ್ರವನ್ನು ನೇರವಾಗಿ ಟೆಂಟಿನಲ್ಲಿ ಬಿಡುಗಡೆ ಮಾಡುವುದು ಆ ಚಿತ್ರಕ್ಕೆ ಹಾಗೂ ಅದರಲ್ಲಿ ಅಭಿನಯಿಸಿದ ನಾಯಕನಟನಿಗೆ ಮಾಡುವ ಅವಮಾನ ಎಂದೇ ಭಾವಿಸಲಾಗುತ್ತಿತ್ತು. ಇಲ್ಲವೆ ಅದೊಂದು ಸತ್ವವಿಲ್ಲದ ಅಥವಾ ಬೇಡಿಕೆ ಕಳೆದುಕೊಂಡ ನಾಯಕನಟನ ಸಾಧಾರಣ ಚಿತ್ರವಿರಬೇಕು ಎಂದು ನಂಬಲಾಗುತ್ತಿತ್ತು. ಆದರೆ ೧೯೮೮ರ



(ಚಿತ್ರ ೧೨೯) 'ಅರ್ಜುನ್' ಚಿತ್ರದಲ್ಲಿ ಕಲ್ಯಾಣ್ ಕುಮಾರ್ ಮತ್ತು ಅಂಬರೀಷ್

ನಂತರದ ದಿನಗಳಲ್ಲಿ ಎಲ್ಲವೂ ತಿರುವು ಮುರುವಾಯಿತು. ಈ ಪರಂಪರೆ ಶುರುವಾದದ್ದು ತಮಿಳು, ತೆಲುಗು ಚಿತ್ರಗಳಿಂದ. ಪರಭಾಷೆಯ ಚಿತ್ರಗಳ ಕರ್ನಾಟಕದ ಹಂಚಿಕೆಯ ಹಕ್ಕುಗಳನ್ನು ಪಡೆದವರು ಆದಷ್ಟು ಬೇಗ ಹಣ ಮಾಡಿಕೊಳ್ಳುವ ಉದ್ದೇಶದಿಂದ ಮುಖ್ಯ ಚಿತ್ರಮಂದಿರಗಳೊಂದಿಗೆ ಟೆಂಟುಗಳಲ್ಲೂ ಪ್ರದರ್ಶಿಸತೊಡಗಿದರು. ಕನ್ನಡ ಚಿತ್ರಗಳಿಗೂ ಈ ಪರಂಪರೆ ಅನುಸರಿಸಿದವರು 'ಸಾಂಗ್ಲಿಯಾನ', 'ನ್ಯೂ ಡೆಲ್ಲಿ' ಹಾಗೂ 'ಬಾಳೊಂದು ಭಾವಗೀತೆ' ಚಿತ್ರಗಳ ಹಂಚಿಕೆದಾರರು. ಇವರೆಲ್ಲರಿಗಿಂತ ಎರಡು ತಿಂಗಳ ಮೊದಲೊಮ್ಮೆ ವಿಷ್ಣುವರ್ಧನ್ ಅಭಿನಯದ ಹೊಸ ಚಿತ್ರವೊಂದನ್ನು ಟೆಂಟಿಗೆ ಹಾಕುವ ಪ್ರಕಟಣೆ ಹೊರಬಿದ್ದಾಗ ಒಂದಷ್ಟು ಮಂದಿ ಅಭಿಮಾನಿಗಳು ಟೆಂಟಿನ ಬಳಿ ಘೇರಾಯಿಸಿಕೊಂಡು ಗಲಾಟೆ ಮಾಡಿದ್ದರು. ಆಗ ಅಭಿಮಾನಿಗಳ ಅನಿರೀಕ್ಷಿತ ಪ್ರತಿಭಟನೆಗೆ ಹೆದರಿದ ಟೆಂಟಿನವರು ಆ ಚಿತ್ರವನ್ನು ಹಾಕುವ ಧೈರ್ಯ ಮಾಡಲಿಲ್ಲ. ಆದರೆ ಕೆಲವೇ ತಿಂಗಳಲ್ಲಿ ಪರಿಸ್ಥಿತಿ ಬದಲಾಯಿತು. ಯಾವುದೇ ಅಭಿಮಾನಿ ಪ್ರತಿಭಟನೆಯೂ ಇಲ್ಲವಾಗಿ (ರಾಜಕುಮಾರ್‌ರವರ ಚಿತ್ರಗಳನ್ನು ಹೊರತುಪಡಿಸಿ) ಮಿಕ್ಕೆಲ್ಲರ ಎಲ್ಲ ಕನ್ನಡ ಚಿತ್ರಗಳು ಟೆಂಟುಗಳಿಗೆ ಇಳಿಯತೊಡಗಿದವು. ಇಂಥವುಗಳಲ್ಲಿ ಅನಂತ್‌ನಾಗ್ ಚಿತ್ರಗಳ ಸಂಖ್ಯೆಯೇ ಹೆಚ್ಚು. ಅನಂತರದ ಸ್ಥಾನ ಶಂಕರ್‌ನಾಗ್, ಶ್ರೀನಾಥ್, ಅಂಬರೀಷ್ ಅವರುಗಳ ಚಿತ್ರಗಳದ್ದು. ಇಂಥ ಪ್ರವೃತ್ತಿ ಆರಂಭವಾಗುವುದಕ್ಕೆ ಮೂರು ಕಾರಣಗಳು ಇವೆ. ಒಂದು, ನಿರ್ಮಾಪಕರ ಅತಂತ್ರ ಸ್ಥಿತಿ. ಇನ್ನೊಂದು, ಚಿತ್ರಗಳ ನಟರು ತಮಗಿರುವ ಬೇಡಿಕೆಯಲ್ಲಿ ಅನುಭವಿಸುತ್ತಿರುವ ಏರು-ಪೇರು. ಮತ್ತೊಂದು, ಚಿತ್ರಮಂದಿರಗಳ ಕೊರತೆ. ಇದಕ್ಕೆಲ್ಲ ಜಿಲ್ಲಾವಾರು ಹಂಚಿಕಾ ವ್ಯವಸ್ಥೆಯೇ ಕಾರಣ.

ಕಷ್ಟಪಟ್ಟು ಚಿತ್ರ ನಿರ್ಮಿಸುವ ನಿರ್ಮಾಪಕನಿಗೆ ಹಂಚಿಕೆಯ ಹಂತದಲ್ಲಿ ಹಲವಾರು ಸಮಸ್ಯೆಗಳು, ಆರ್ಥಿಕ ಸಂಕಷ್ಟಗಳು ಎದುರಾಗುವ ಪರಿಸ್ಥಿತಿ ಎಂದಿನಿಂದಲೂ ಉದ್ಯಮದಲ್ಲಿದೆ. ಇದು ಆತ ತನ್ನ ಚಿತ್ರವನ್ನು ೫-೧೦ ವರ್ಷಗಳ ಕರಾರಿಗೆ ಇಲ್ಲವೇ ಒಂದೇ ಬಾರಿಗೆ ಸಂಪೂರ್ಣ ಹಕ್ಕುಗಳನ್ನೇ ಮಾರಾಟ ಮಾಡುವ ಸ್ಥಿತಿಗೆ ತಂದು ನಿಲ್ಲಿಸುತ್ತದೆ. ಇಷ್ಟಾದ ಮೇಲೆ ಚಿತ್ರವನ್ನು ಕೊಂಡ ವ್ಯಕ್ತಿಗೂ ಅನುಮಾನ, ಅಳುಕು. ಮುಂದೆ ಹೇಗೋ, ಏನೋ ಎಂಬ ಅಂಜಿಕೆಯಿಂದ ಮೊದಲ ವಾರದಲ್ಲಿಯೇ ಸಿಕ್ಕಿದಷ್ಟು ಬಾಚಿಕೊಳ್ಳೋಣವೆಂದು ಟೆಂಟುಗಳವರೆಗೂ ಕೈ ಚಾಚುತ್ತಾನೆ. ಟೆಂಟ್ ಎಂದು ಜನ ಕರೆಯುವ ಚಿತ್ರಮಂದಿರಗಳು ಸುಸಜ್ಜಿತವಾಗಿವೆ. ಹಳೆಯ ಕಾಲದ ಗುಡಾರಗಳಲ್ಲ (ನೋಡಿ : 'ಚಿತ್ರಮಂದಿರಗಳು').

ಮದರಾಸಿನಲ್ಲಿ ಸರ್ಕಾರ ವೀಡಿಯೋ ಚಿತ್ರಮಂದಿರಗಳಿಗೆ ಅವಕಾಶವನ್ನೇ ಕೊಡಲಿಲ್ಲ. ಆದರೆ ಕರ್ನಾಟಕ ಸರ್ಕಾರ ವೀಡಿಯೋ ಪಾರ್ಲರುಗಳನ್ನು ನಿಷೇಧಿಸುವ ಬದಲು ೧೯೮೭ರ ಮಾರ್ಚ್ ತಿಂಗಳಲ್ಲಿ ಮಂಡಿಸಿದ ಆಯ-ವ್ಯಯದಲ್ಲಿ ಅವನ್ನು ಅಧಿಕೃತಗೊಳಿಸುವ ರೀತಿಯಲ್ಲಿ ಮಾಸಿಕ ಶುಲ್ಕ ೧೦೦೦ ರೂಪಾಯಿ ಇದ್ದದ್ದನ್ನು ೨,೫೦೦ ರೂಪಾಯಿಗೆ ಏರಿಸಿ ಚಿತ್ರೋದ್ಯಮಕ್ಕೆ ಆತಂಕ ಹುಟ್ಟಿಸಿತು. ಇದರೊಂದಿಗೆ ಚಿತ್ರೋದ್ಯಮ ಇನ್ನಷ್ಟು ದುರ್ಬಲಗೊಳ್ಳಲು ಕಾರಣ ಚಿತ್ರಮಂದಿರಗಳ ಸಂಖ್ಯೆ ಅಗತ್ಯವಿದ್ದಷ್ಟು ಹೆಚ್ಚದಿದ್ದುದು. ೧೯೮೧ ರಿಂದ ೧೯೮೮ರವರೆಗಿನ ಎಂಟು ವರ್ಷಗಳಲ್ಲಿ ಕರ್ನಾಟಕದಾದ್ಯಂತ ನಿರ್ಮಾಣವಾದ ಹೊಸ ಚಿತ್ರಮಂದಿರಗಳು ೯೬ ಮಾತ್ರ. ಇದೇ ಅವಧಿಯಲ್ಲಿ ಕೆಡವಲಾಗಿರುವ ಚಿತ್ರಮಂದಿರಗಳು ಎಂಟು. ಆದರೆ ಇದೇ ಅವಧಿಯಲ್ಲಿ ತಮಿಳುನಾಡಿನಲ್ಲಿ ೧೦೦೦ ಚಿತ್ರಮಂದಿರಗಳು, ಆಂಧ್ರ ಪ್ರದೇಶದಲ್ಲಿ ೯೦೦ ಚಿತ್ರಮಂದಿರಗಳು ನಿರ್ಮಾಣವಾಗಿವೆ. ಇದೊಂದೇ ಸಂಗತಿ ನಮ್ಮ ಮತ್ತು ಅಲ್ಲಿನ ಚಿತ್ರೋದ್ಯಮದ ಬೆಳವಣಿಗೆಗಳಿಗೆ ಉತ್ತಮ ಹೋಲಿಕೆಯಾಗಬಲ್ಲದು. ನಮ್ಮ ರಾಜ್ಯದಲ್ಲಿ ೧೯೮೮ರ ಹೊತ್ತಿಗೆ ೫೮೦ ಖಾಯಂ ಚಿತ್ರಮಂದಿರಗಳು, ೬೫೦ ಅರೆಶಾಶ್ವತ ಚಿತ್ರಮಂದಿರಗಳು ಅಸ್ತಿತ್ವದಲ್ಲಿದ್ದವು. ಹೆಚ್ಚುತ್ತಿರುವ ಚಲನಚಿತ್ರಗಳ ಸಂಖ್ಯೆಗೆ ಹೋಲಿಸಿದರೆ ಇವು ಏನೇನೂ ಸಾಲದು. ಚಿತ್ರಮಂದಿರಗಳ ಸಂಖ್ಯೆ ದ್ವಿಗುಣಗೊಂಡರೆ ಮಾತ್ರ ನಿರ್ಮಾಪಕರ ಹಾಗೂ ರಾಜ್ಯ ಸರ್ಕಾರದ ಆದಾಯ ದುಪ್ಪಟ್ಟು ಹೆಚ್ಚಲು ಸಾಧ್ಯ. ಆದರೆ ಸುಮಾರು ವರ್ಷಗಳಿಂದ ರಾಜ್ಯ ಸರ್ಕಾರಗಳು ಈ ದಿಸೆಯಲ್ಲಿ ಏನನ್ನೂ ಮಾಡಲಿಲ್ಲ. ಚಿತ್ರಮಂದಿರಗಳ ನಿರ್ಮಾಣಕ್ಕೆ ಕಂಟಕವಾಗಿರುವ ಹಳೆಯ ಸಿನಿಮಾಟೋಗ್ರಾಫ್ ಕಾಯ್ದೆ ತಿದ್ದುಪಡಿ ಮಾಡಿಕೊಂಡು, ಚಿತ್ರಮಂದಿರಗಳ ಚಟುವಟಿಕೆಗಳನ್ನು ಸರಳಗೊಳಿಸಿಕೊಳ್ಳುವಂತೆ ಕೇಂದ್ರ ಸರ್ಕಾರ ಕೂಡ ಸೂಚಿಸಿತ್ತು. ಹಲವಾರು ಕಡೆಗಳಿಂದ ನಿರಂತರವಾದ ಒತ್ತಾಯ ಇತ್ತು. ಅಲ್ಲದೆ ಸರ್ಕಾರ ನೇಮಿಸಿದ್ದ ಉಪಸಮಿತಿ ಸಲ್ಲಿಸಿದ್ದ ವರದಿಯೂ ಅನುಕೂಲಕರವಾಗಿತ್ತು. ಆದರೆ ಇವಾವುದಕ್ಕೂ ಸರ್ಕಾರ ಸ್ಪಂದಿಸಲಿಲ್ಲ. ವಿಪರ್ಯಾಸವೆಂದರೆ ಚಾಲ್ತಿಯಲ್ಲಿರುವ ಸಿನಿಮಾಟೋಗ್ರಾಫ್ ಕಾಯ್ದೆ ಪ್ರಕಾರ ವೀಡಿಯೋ ಪಾರ್ಲರ್‌ಗಳಿಗೂ, ಚಿತ್ರಮಂದಿರಗಳಿಗೂ ಯಾವುದೇ ರೀತಿಯ ವ್ಯತ್ಯಾಸವಿಲ್ಲ. ಇದರಿಂದಾಗಿ ವೀಡಿಯೋ ಪಾರ್ಲರ್‌ಗಳು ನಿರ್ಬಂಧಗಳಿಲ್ಲದೆ ಬೆಳೆಯತೊಡಗಿದವು. ವೀಡಿಯೋದವರು ಸಿನಿಮಾಟೋಗ್ರಾಫಿ ಆ್ಯಕ್ಟನ್ನು ಒಪ್ಪಿಕೊಳ್ಳಲಿಲ್ಲ, ಅನುಸರಿಸಲೂ ಇಲ್ಲ. ಪ್ರತ್ಯೇಕವಾಗೇ ಉಳಿದವು. ಅವರದೇ ನಿಯಮಗಳಿಗೆ ಹೋದವು. ಪರಿಣಾಮವಾಗಿ ಚಿತ್ರಮಂದಿರಗಳ ಗಳಿಕೆ ಇಳಿಮುಖವಾಯಿತು. ಈ ಹಂತದಲ್ಲಿ ಅಗತ್ಯ ಕ್ರಮಗಳನ್ನು ಕೈಗೊಂಡು ತನ್ನ ಆದಾಯವನ್ನು ಹೆಚ್ಚಿಸಿಕೊಳ್ಳಬೇಕಾಗಿದ್ದ ಸರ್ಕಾರ ಸುಲಭ ದಾರಿ ಹಿಡಿದು ಮಾರಾಟ ತೆರಿಗೆ ಏರಿಸುವ ಮೂಲಕ ಉದ್ಯಮದ ಅಸಮಾಧಾನ, ಕೋಪಕ್ಕೆ ತುತ್ತಾಯಿತು. ಬಹಳಷ್ಟು ವೀಡಿಯೋ ಪಾರ್ಲರ್‌ಗಳು ರಾಜಕಾರಣಿಗಳ ಆಶ್ರಯದಲ್ಲಿದ್ದವು.

ಟೆಂಟುಗಳಲ್ಲಿ ಬಿಡುಗಡೆಯಾದ ಆರಂಭದ ಚಿತ್ರಗಳಲ್ಲಿ 'ಸಾಂಗ್ಲಿಯಾನ' ಕೂಡ ಒಂದು. ಈ ಚಿತ್ರದ ತಾರಾಗಣದಲ್ಲಿ ಆಗ್ಗೆ ಬಹುಬೇಡಿಕೆಯ ನಾಯಕ ನಟರಾದ ಶಂಕರ್‌ನಾಗ್, ಅಂಬರೀಷ್ ಅವರೊಂದಿಗೆ ಭವ್ಯಾ, ತಾರಾ, ಶ್ರೀನಾಥ್ ಮುಂತಾದವರಿದ್ದರು. ವ್ಯಾಪಾರಿ ಸೂತ್ರದ ಚೌಕಟ್ಟಿನಲ್ಲಿ ಅಚ್ಚುಕಟ್ಟಾಗಿ ರೂಪುಗೊಂಡಿದ್ದರೂ ಹಂಚಿಕೆದಾರರಿಗೆ ಈ ಚಿತ್ರದ ಮೇಲೆ ವಿಶ್ವಾಸ ಮೂಡಿರಲಿಲ್ಲ. ಏಕೆಂದರೆ ಈ ಚಿತ್ರವನ್ನು ನಿರ್ದೇಶಿಸಿದ್ದವರು ಅದುವರೆಗೆ ಸಹಾಯಕ ನಿರ್ದೇಶಕರಾಗಿದ್ದ ನಂಜುಂಡಪ್ಪ. ಚಿತ್ರ ಬಿಡುಗಡೆಯಾದಾಗ ಎಲ್ಲರಿಗೂ ಆಶ್ಚರ್ಯ ಕಾದಿತ್ತು. ಎಲ್ಲಾ ವ್ಯಾವಹಾರಿಕ ಲೆಕ್ಕಾಚಾರಗಳನ್ನು ಬುಡಮೇಲು ಮಾಡಿ 'ಸಾಂಗ್ಲಿಯಾನ' ಮೂರು ಜಿಲ್ಲಾ ಕೇಂದ್ರಗಳಲ್ಲಿ ನೂರು ದಿನದ ಪ್ರದರ್ಶನ ಕಂಡಿತು.



(ಚಿತ್ರ ೧೩೦) 'ಸಾಂಗ್ಲಿಯಾನ' ಚಿತ್ರದಲ್ಲಿ ಭವ್ಯಾ ಮತ್ತು ಶಂಕರ್‌ನಾಗ್

ಈ ಚಿತ್ರದ್ದು ಇನ್ನೊಂದು ದಾಖಲೆಯಿದೆ. ಇದು ಆಗ್ಗೆ ತಮ್ಮ ಕಾರ್ಯನಿರ್ವಹಣಾ ಶೈಲಿಯಿಂದ ಕರ್ನಾಟಕದಲ್ಲಿ ಜನಪ್ರಿಯರಾಗಿದ್ದ ಐಪಿಎಸ್ ಅಧಿಕಾರಿ ಸಾಂಗ್ಲಿಯಾನಾ ಹೆಸರಿನಲ್ಲಿ ಅವರದೇ ಕೆಲವು ಸತ್ಯ ಘಟನೆಗಳನ್ನು ಆಧರಿಸಿ ನಿರ್ಮಾಣವಾಗಿದ್ದ ಚಿತ್ರ. ಚಿತ್ರೀಕರಣ ಶುರುವಾದಾಗ ಮಣಿಪುರದ ರಾಜಧಾನಿ ಇಂಫಾಲ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದ ಸಾಂಗ್ಲಿಯಾನ ಅವರು ಗುರುನಾನಕ್ ಭವನದಲ್ಲಿ ನಡೆದ ಶತದಿನ ಸಮಾರಂಭಕ್ಕೆ ಅತಿಥಿಯಾಗಿ ಬಂದಿದ್ದರು. ಭಾವನಾತ್ಮಕ ಹಾಗೂ ಸಾಹಸ ದೃಶ್ಯಗಳನ್ನು ಹದವಾಗಿ, ಚುರುಕಾಗಿ ನಿರೂಪಿಸಿ ಜಾಣತನ ತೋರಿದ್ದ ನಂಜುಂಡಪ್ಪ ಈ ಚಿತ್ರದ ನಂತರ 'ಸಿಬಿಐ ಶಂಕರ್' (೧೯೮೯) ಹಾಗೂ ಎಸ್‌ಪಿ ಸಾಂಗ್ಲಿಯಾನ (೧೯೯೦) ಚಿತ್ರಗಳನ್ನು ನಿರ್ದೇಶಿಸಿದರು. ಈ ಮೂರೂ ಚಿತ್ರಗಳು ಯಶಸ್ಸು ಗಳಿಸಿದವು. ಈ ಚಿತ್ರಗಳ ನಿರೂಪಣೆ ಆ್ಯಕ್ಷನ್ ಚಿತ್ರಗಳ ಯಶಸ್ವಿ ನಿರ್ದೇಶಕರಾದ ವಿಜಯ್, ಸೋಮಶೇಖರ್‌ರ ಶೈಲಿಗೆ ಹತ್ತಿರವಾಗಿತ್ತು. ನಂತರ ೧೯೯೦ ರಲ್ಲಿ ಹೃದಯಾಘಾತದಿಂದ ಅಕಾಲಿಕ ಸಾವಿಗೀಡಾದರು. ನಂಜುಂಡಪ್ಪನವರ ವಿಶೇಷ ಸ್ಮರಣೆಗೆ ಇರುವ ಇನ್ನೊಂದು ಕಾರಣ - ಇವರೇ ನಟ ಶಶಿಕುಮಾರ್‌ರನ್ನು ಬೆಳಕಿಗೆ ತಂದವರೆಂಬುದು. ವೃತ್ತಿಯಲ್ಲಿ ಕಂಟ್ರ್ಯಾಕ್ಟರ್ ಆಗಿದ್ದ 'ಸಾಂಗ್ಲಿಯಾನ' ಚಿತ್ರದ ನಿರ್ಮಾಪಕ ಕೃಷ್ಣಂರಾಜು, ನಂಜುಂಡಪ್ಪನವರಿಗೆ ಅವಕಾಶ ಒದಗಿಸಿದರು. ತಾವೂ ಬೆಳಕಿಗೆ ಬಂದರು. ಒಂದೆರಡು ವರ್ಷಗಳಲ್ಲಿಯೇ ಶಕ್ತಿಯುತ ನಿರ್ಮಾಪಕರಾಗಿ ಬೆಳೆದಿದ್ದ ಇವರಿಗೆ ನಂಜುಂಡಪ್ಪನವರ ಮೇಲೆ ಅಪಾರ ವಿಶ್ವಾಸವಿತ್ತು.

ನಂಜುಂಡಪ್ಪನವರ ನಿಧನದಿಂದ ಶಕ್ತಿ, ಉತ್ಸಾಹ ಕಳೆದುಕೊಂಡಂತಾದ ಕೃಷ್ಣಂರಾಜು ನಂತರದ ದಿನಗಳಲ್ಲಿ ಒಂದೆರಡು ಚಿತ್ರಗಳನ್ನು ನಿರ್ಮಿಸಿದರಾದರೂ ಅವು ಯಶಸ್ವಿಯಾಗಲಿಲ್ಲ. ಆದರೆ 'ಸಾಂಗ್ಲಿಯಾನ' ಯಶಸ್ಸು ಉದ್ಯಮಕ್ಕೆ ಸ್ಫೂರ್ತಿಯಾಗಿತ್ತು. ಈ ಚಿತ್ರದ ಯಶಸ್ಸಿನಿಂದಾಗಿ ಕುಸಿಯುತ್ತಿದ್ದ ಶಂಕರ್‌ನಾಗ್ ಹಾಗೂ ಅಶೋಕ್ ವರ್ಚಸ್ಸು ವೃದ್ಧಿಸಿತು. ಒಂದೆರಡು ವರ್ಷಗಳ ನಂತರ ವಿ.ಸೋಮಶೇಖರ್ ನಿರ್ಮಿಸಿ, ನಿರ್ದೇಶಿಸಿದ 'ಐ.ಪಿ.ಎಸ್.ಕೆಂಪಯ್ಯ' ಹಾಗೂ ಚಂದೂಲಾಲ್ ಜೈನ್ ನಿರ್ಮಿಸಿದ 'ವೀರಪ್ಪನ್' ಚಿತ್ರಗಳಿಗೆ 'ಸಾಂಗ್ಲಿಯಾನ'ದ ಯಶಸ್ಸು ಹಾಗೂ ಚಿತ್ರ ಕಲ್ಪನೆಯೇ ಸ್ಫೂರ್ತಿಯಾಗಿತ್ತು.



(ಚಿತ್ರ ೧೩೧) 'ನ್ಯೂಡೆಲ್ಲಿ' ಚಿತ್ರದಲ್ಲಿ ಅಂಬರೀಷ್

ಆಂಧ್ರದಲ್ಲಿ ದಿಗ್ವಿಜಯ ಗಳಿಸಿದ್ದ 'ರೇಪಟಿ ಪೌರುಲು' ಕನ್ನಡದಲ್ಲಿ 'ನವಭಾರತ' ಹೆಸರಿನಲ್ಲಿ ತೆರೆಗೆ ಬಂತು. ಸಮಾಜದ ಜ್ವಲಂತ ಸಮಸ್ಯೆಗಳನ್ನು ಎಳೆಎಳೆಯಾಗಿ ಬಿಡಿಸುತ್ತಾ ಅದಕ್ಕೆ ಪರಿಹಾರವನ್ನು ಕೊಡುತ್ತಾ ಸಾಗುವ ಈ ಚಿತ್ರದಲ್ಲಿ ನಿರೂಪಣೆ ಹಾಗೂ ಬಹುತೇಕ ಎಲ್ಲಾ ನಟ-ನಟಿಯರ ಚುರುಕಾದ ಅಭಿನಯ ಗಮನ ಸೆಳೆಯಿತು. ಚಿತ್ರದಲ್ಲಿ ಬಡತನ, ನಿರುದ್ಯೋಗ, ಲಂಚಾವತಾರ, ವೇಶ್ಯಾಸಮಸ್ಯೆ ಮೊದಲಾದವುಗಳನ್ನು ಯಥಾವತ್ತಾಗಿ ಚಿತ್ರಿಸಲಾಗಿದೆ. ಪ್ರತಿಯೊಬ್ಬ ಬಾಲನಟ-ನಟಿ ಪರಿಣಾಮಕಾರಿಯಾಗಿ ಅಭಿನಯಿಸಿದ್ದಾರೆ. ಹೆತ್ತವರು, ಪೋಷಕರು ಜವಾಬ್ದಾರಿ ಮರೆತು ಭವ್ಯ ಭಾರತದ ಭಾವಿ ಪ್ರಜೆಗಳನ್ನು ತಮ್ಮ ಸ್ವಚ್ಛಂದ, ಮಾದರಿಯಾಗದ ರೀತಿಯ ಜೀವನಶೈಲಿಯಿಂದ ಹಾದಿ ತಪ್ಪಿಸುವಾಗ ಒಬ್ಬ ಜವಾಬ್ದಾರಿಯುತ ಶಿಕ್ಷಕಿ ಅದೇ ಮಕ್ಕಳಿಂದ ಸಮಾಜದ ಕೆಡುಕಿನ ವಿರುದ್ಧ ಬಂಡೇಳುವಂತೆ ಮಾಡಿ ವಿಫಲಗೊಂಡ ಶಾಸಕಾಂಗ, ನ್ಯಾಯಾಂಗ, ಕಾರ್ಯಾಂಗಗಳನ್ನು ಸಾರ್ವಜನಿಕರೆದುರಿಗೆ ನಡುರಸ್ತೆಗೆ ಎಳೆದು ಮಕ್ಕಳ ಕೈಯಿಂದಲೇ ತೀರ್ಪು ನೀಡಿಸಿ, ಭ್ರಷ್ಟರ ತಲೆ ತಗ್ಗುವಂತೆ ಮಾಡಿ, ತಪ್ಪು ಒಪ್ಪಿಕೊಳ್ಳುವಂತೆ ಮಾಡುವುದರೊಂದಿಗೆ ಚಿತ್ರ ಮುಗಿಯುತ್ತದೆ. ವೇಣುಗೋಪಾಲ್ ನಿರ್ಮಿಸಿದ ಈ ಚಿತ್ರ ಮಕ್ಕಳ ಕ್ರಾಂತಿಕಾರಿ ಚಿತ್ರ. ರೀಮೇಕ್ ಆಗಿದ್ದರೂ ನೀತಿಯುಕ್ತವಾದ್ದರಿಂದ ಸ್ವಾಗತಾರ್ಹ ಎಂಬ ಮೆಚ್ಚುಗೆ ಬಂದಿತು. ಲೋಹಿತಾಶ್ವ, ಮಹಾಲಕ್ಷ್ಮೀ, ಬಾಲಕೃಷ್ಣ, ಉಮಾಶ್ರೀ ವಿಭಿನ್ನ ಪಾತ್ರಗಳಲ್ಲಿದ್ದರು. ಪುಟ್ಟದಾದರೂ ಮನಸ್ಸಿನಲ್ಲಿ ಉಳಿಯುವಂಥ ಪಾತ್ರದಲ್ಲಿ ಅಂಬರೀಷ್ ಅಭಿನಯವಿತ್ತು. ಬಾಲ ನಟರ ಭಾರೀ ದಂಡು ಭಾಗವಹಿಸಿತ್ತು. ಮಾ|ಮಂಜುನಾಥ್, ಮಾ|ಚೇತನ್, ಮಾ|ಆನಂದ್, ಮಾ|ರೋಹಿತ್, ಮಾ|ಸಂಜಯ್, ಬೇಬಿ ಸುಷ್ಮಾ ಅವರಲ್ಲಿ ಮುಖ್ಯರು. ಕೆ.ವಿ.ರಾಜು ರೀಮೇಕ್ ಆದರೂ ತಮ್ಮತನ ಬಿಟ್ಟು ಕೊಡದೆ ಸಂಭಾಷಣೆ ರಚಿಸಿದ್ದು ವಿಶೇಷವಾಗಿ ಗಮನ ಸೆಳೆಯಿತು. ಚಕ್ರವರ್ತಿ ಸಂಗೀತದಲ್ಲಿ ಒಂದೆರಡು ಗೀತೆಗಳು ಗಮನ ಸೆಳೆದವು.

'ಸಂಯುಕ್ತ' ಎಸ್.ಎ.ಗೋವಿಂದರಾಜು ಹಾಗೂ ವಿ.ಭರತ್‌ರಾಜ್ ಅವರಿಗಾಗಿ ಕೆ.ಎಸ್.ಚಂದ್ರಶೇಖರ್‌ಶರ್ಮ ನಿರ್ದೇಶಿಸಿದ, ಕಾಕೋಳು ಸರೋಜಾರಾವ್ ಕಾದಂಬರಿ ಆಧಾರಿತ ಚಿತ್ರ. ಶಿವರಾಜ್‌ಕುಮಾರ್, ಗುರುದತ್, ಬಾಲರಾಜ್ ಮೂವರು ನಾಯಕರು. ಬಾಲರಾಜ್ ಈ ಚಿತ್ರದ ಮೂಲಕ ಗಮನ ಸೆಳೆದರು. ಅಂಜುಬುರುಕನ ಪಾತ್ರದಲ್ಲಿ ಚೆನ್ನಾಗಿಯೇ ನಟಿಸಿದ್ದರು. ಕಥೆಯಲ್ಲಿದ್ದ ಸಸ್ಪೆನ್ಸ್ ಅನ್ನು ಚಿತ್ರದುದ್ದಕ್ಕೂ ಕಾಪಾಡಿಕೊಂಡು ಬಂದಿದ್ದಾರೆ. ವೀಣಾ ಎಂಬ ಹೊಸ ನಾಯಕಿ. ಸಿಂಗೀತಂ ಶ್ರೀನಿವಾಸರಾವ್ ಹಾಗೂ ಚಿ.ಉದಯಶಂಕರ್ ಇಬ್ಬರೂ ಕೂಡಿ ಚಿತ್ರಕಥೆ ರಚಿಸಿದ್ದರು. ಚಿ.ಉದಯಶಂಕರ್ ರಚಿಸಿದ್ದ ಸಂಭಾಷಣೆಯಲ್ಲಿ ಹಾಸ್ಯ ಸಹ್ಯವಾಗಿತ್ತು. ಸಿಂಗೀತಂ ಶ್ರೀನಿವಾಸರಾವ್ ಸಂಗೀತ ಒದಗಿಸಿದ್ದು, 'ಈ ನಮ್ಮ ನಾಡೇ ಚಂದವು...' ಹಾಗೂ 'ಮೈಸೂರಲ್ಲಿ ಮಲ್ಲಿಗೆ ಹೂವು ಉಂಟಮ್ಮ...' ಹಾಡುಗಳು ಚೆನ್ನಾಗಿದ್ದವು. ವಿ.ಕೆ.ಕಣ್ಣನ್ ಅವರ ಛಾಯಾಗ್ರಹಣ ಮೋಹಕವೆನಿಸಿವಿತ್ತು.

'ಜನನಾಯಕ' ರಾಜಕೀಯ ಕಥೆಯಾಧಾರಿತ ಚಿತ್ರ. ಮೊದಲ ಬಾರಿಗೆ ವಿಷ್ಣುವರ್ಧನ್ ಚುನಾವಣೆಗೆ ನಿಲ್ಲುವ, ಗೆಲ್ಲುವ, ಪುರಸಭಾಧ್ಯಕ್ಷನಾಗುವ ಕಥೆ ಇದೆ. ವಿಷ್ಣುವರ್ಧನ್ ಲವಲವಿಕೆಯಿಂದ ನಟಿಸಿದ್ದಾರೆ. ರಮೇಶ್ ಭಟ್, ದೇವರಾಜ್ ಅವರದು ಚಿಕ್ಕ ಪಾತ್ರವಾದರೂ ನೆನಪಿನಲ್ಲುಳಿಯುವ ಅಭಿನಯವಿದೆ. ರಾಜನ್-ನಾಗೇಂದ್ರ ಸಂಗೀತ ಸಂಯೋಜನೆಯಲ್ಲಿ 'ವೀರಾಧಿ ವೀರ ಕಣೇ...' ಹಾಡು ಜನಪ್ರಿಯವಾಯಿತು. ಈ ಹಿಂದೆ ವಿಷ್ಣು ನಟಿಸಿ ಜನಪ್ರಿಯವಾಗಿದ್ದ.ಚಿತ್ರಗಳ ಹೆಸರುಗಳನ್ನು ಈ ಹಾಡಿನಲ್ಲಿ ಸೇರಿಸಿದ್ದಾರೆ. ಭಾರ್ಗವ ನಿರ್ದೇಶಿಸಿ ಕಲಾಕೃತಿ ಲಾಂಛನದಲ್ಲಿ ಭಾರ್ಗವ ಹಾಗೂ ರಾಜಾರಾಂ ಚಿತ್ರವನ್ನು ನಿರ್ಮಿಸಿದರು.

ಅಂಬರೀಷ್ ಅವರಿಗೆ ತೀರ ವಿಭಿನ್ನವೆನಿಸುವ ಪಾತ್ರ 'ನ್ಯೂಡೆಲ್ಲಿ'ಯಲ್ಲಿ ದೊರೆತಿದೆ. ಅದನ್ನು ಅಷ್ಟೇ ನಾಜೂಕಾಗಿ ನಿರ್ವಹಿಸಿದ್ದಾರೆ ಅಂಬರೀಷ್. ಮೂಲತಃ ಮಲಯಾಳಿ ಚಿತ್ರ. ಅದೇ ನಿರ್ದೇಶಕರು ಕನ್ನಡವನ್ನೂ ನಿರ್ದೇಶಿಸಿದರು. ಕಲ್ಯಾಣಿ ಫಿಲಂಸ್‌ನವರು ನಿರ್ಮಾಣ ಮಾಡಿದ್ದ ಈ ಚಿತ್ರಕ್ಕೆ ಡೆನ್ನಿಸ್ ಜೋಸೆಫ್ ಅವರ ಕಥೆ-ಚಿತ್ರಕಥೆಯೇ ಜೀವಾಳ. ಅದಕ್ಕೆ ತಕ್ಕುದಾಗಿ ನಿರ್ದೇಶಕ ಜೋಶಿ ದೆಹಲಿಯ ಹೊರಾಂಗಣವನ್ನು ಛಾಯಾಗ್ರಾಹಕ ಜೆ.ವಿನ್ಸೆಂಟ್ ಅವರಿಂದ ಚಿತ್ರಿಸಿದ್ದಾರೆ. ಹಾಡುಗಳಿಲ್ಲದ ಶ್ಯಾಂ ಅವರ ಹಿನ್ನೆಲೆ ಸಂಗೀತ ಸಂದರ್ಭಕ್ಕನುಗುಣವಾಗಿದೆ. ಸಾಕಷ್ಟು ಪರಭಾಷಿಕರೇ ಅಭಿನಯಿಸಿದ್ದರೂ ನಮ್ಮವರೇ ಆದ ಸಿ.ಆರ್.ಸಿಂಹ, ಅಂಬರೀಷ್ ಗಮನ ಸೆಳೆದಿದ್ದರು. ಮೊದಲರ್ಧ ಮಂದಗತಿಯಲ್ಲಿ ಸಾಗಿದರೆ, ದ್ವಿತಿಯಾರ್ಧ ಚುರುಕಾಗಿದ್ದು ಕುತೂಹಲ ಹೆಚ್ಚಿಸುತ್ತದೆ. ಪತ್ರಿಕೋದ್ಯಮದ ಒಳಸುಳಿಗಳನ್ನು ಹೇಳುವ ಚಿತ್ರ. ಕೆಲವು ಕನ್ನಡ ಜಾಯಮಾನಕ್ಕೆ ಅಸಹಜ, ಅತಿರೇಕ ಅನ್ನಿಸುವ ಅಂಶಗಳಿದ್ದವು.

'ಗಂಡ ಮನೆ ಮಕ್ಕಳು' ದ್ವಾರಕೀಶ್‌ರ ಮತ್ತೊಂದು ರೀಮೇಕ್, ಸಾಮಾನ್ಯ ಚಿತ್ರ.

ಬಿ.ಎನ್.ಗಂಗಾಧರ್ ನಿರ್ಮಿಸಿ, ರೇಣುಕಾಶರ್ಮ ನಿರ್ದೇಶಿಸಿದ 'ಅಂಜದ ಗಂಡು' ಒಂದು ಯಶಸ್ವೀ ಚಿತ್ರ. ರವಿಚಂದ್ರನ್ ಮತ್ತು ಖುಷ್ಬೂ ಮುಖ್ಯ ಪಾತ್ರದಲ್ಲಿದ್ದರೆ ಮಾ|ಮಂಜುನಾಥ್ ಗಮನ ಸೆಳೆಯುತ್ತಾರೆ. ಕಷ್ಟವೇ ಗೊತ್ತಿಲ್ಲದ ನಾಯಕನನ್ನು ಹಳ್ಳಿಗೆ ಕಳುಹಿಸಿ ಅವನಿಂದ ಕೆಲಸ ತೆಗೆಸುತ್ತಾರೆ. ಆತ, ಮರದಲ್ಲಿ ರಾಗಿ ಬೆಳೆಯುತ್ತದೆಂದು ತಿಳಿದುಕೊಂಡಿದ್ದಂತಹ ಅಜ್ಞಾನಿ. ಅಂತಿಮವಾಗಿ ಹಳ್ಳಿಯಲ್ಲಿ ಜಂಭದ ಹುಡುಗಿಯ ಕೊಬ್ಬಿಳಿಸಿ ಮದುವೆಯಾಗುವ ಕಥೆ.



(ಚಿತ್ರ ೧೩೨) 'ಅಂಜದ ಗಂಡು' ಚಿತ್ರದಲ್ಲಿ ರವಿಚಂದ್ರನ್ ಮತ್ತು ಖುಷ್ಬೂ



(ಚಿತ್ರ ೧೩.೩) 'ದೇವತಾ ಮನುಷ್ಯ' ಚಿತ್ರದಲ್ಲಿ ರಾಜಕುಮಾರ್ ಮತ್ತು ರಾಜಾನಂದ್

ರಾಜಕುಮಾರ್ ೨೦೦ನೆಯ ಚಿತ್ರ 'ದೇವತಾ ಮನುಷ್ಯ' ತೆರೆಗೆ ಬಂದದ್ದು ಇದೇ ವರ್ಷ. ಒಬ್ಬ ಯಶಸ್ವಿ ಕಲಾವಿದನಾಗಿ ಅವರ ಅಭಿನಯ ಬದುಕಿನಲ್ಲಿ ಇದೊಂದು ಮುಖ್ಯ ಚಿತ್ರ ಕೂಡ. ಹೀಗಾಗಿ ಈ ಚಿತ್ರದ ವಸ್ತು ಏನಾಗಿರುತ್ತದೆಂಬುದು ಮತ್ತು ಅದನ್ನು ನಿರ್ದೇಶಿಸುವ ಅವಕಾಶ ಯಾರಿಗೆ ಲಭ್ಯವಾಗುತ್ತದೆಂಬುದು ಆಗ ಚಿತ್ರರಸಿಕರಿಗೆ ಕುತೂಹಲದ ವಿಷಯವಾಗಿತ್ತು. ಕೊನೆಗೆ ಅವರ ಸಂಸ್ಥೆಗೆ ಕೆಲವು ಯಶಸ್ವಿ ಚಿತ್ರಗಳನ್ನು ರೂಪಿಸಿಕೊಟ್ಟಿದ್ದ ಸಿಂಗೀತಂ ಶ್ರೀನಿವಾಸರಾವ್ ಅವರಿಗೆ ಜವಾಬ್ದಾರಿ ವಹಿಸಲಾಯಿತು. ಈ ಚಿತ್ರದಲ್ಲಿ ರಾಜಕುಮಾರ್ ಯುವಕ ಹಾಗೂ ವೃದ್ಧ - ಎರಡೂ ರೀತಿಯಲ್ಲಿ ಕಾಣಿಸಿಕೊಂಡಿದ್ದಾರೆ. ಅವರ ಸಾಧನೆಯ ಪ್ರೌಢಿಮೆಯನ್ನು ದಾಖಲಿಸುವ ಉದ್ದೇಶವೂ ಈ ಕಥೆಯ ಆಯ್ಕೆಯ ಹಿಂದಿತ್ತು. ವಸ್ತು ಸೇಡಿನದೇ ಆದರೂ ಇದಕ್ಕೆ ವಿರುದ್ಧವಾಗಿ ಮಾನವೀಯತೆಯ ನೆಲೆಯಲ್ಲಿ ಮುಕ್ತಾಯ ಕಾಣುತ್ತದೆ. 'ಸೈಲಾಸ್ ಮಾರ್ನರ್' ಎಂಬ ಪ್ರಸಿದ್ಧ ಆಂಗ್ಲ ಕಾದಂಬರಿಯೊಂದು ಹಲವು ಚಿತ್ರಗಳಿಗೆ ಸ್ಫೂರ್ತಿಯಾಯಿತು. ಬಹಳ ಹಿಂದೆಯೇ ತೆಲುಗಿನಲ್ಲಿ 'ಬಂಗಾರು ಪಾಪ' ಎಂಬ ಚಿತ್ರವಾಗಿತ್ತು. 'ದೇವತಾ ಮನುಷ್ಯ' ಕೂಡಾ ಅಂಥದೇ ಒಂದು ಎಳೆಯನ್ನು ಆಧರಿಸಿತ್ತು. 'ದೇವತಾ ಮನುಷ್ಯ'ವನ್ನು ರಾಜಕುಮಾರ್ ಅವರ ವ್ಯಕ್ತಿತ್ವ ಮತ್ತು ಅಭಿನಯ ಸಾಮರ್ಥ್ಯಕ್ಕೆ ಪೂರಕವಾಗುವಂಥ ಆಶಯದೊಂದಿಗೆ ನಿರೂಪಿಸಲಾಗಿತ್ತು. ಆದರೆ ಚಿತ್ರ ತನ್ನ ನಿರ್ಮಾಣದ ಹಿಂದಿನ ಕಳಕಳಿಯನ್ನು ಪ್ರತಿಫಲಿಸಲಿಲ್ಲ. ಚಿತ್ರದ 'ಹೃದಯದಲಿ ಇದೇನಿದು...' ಹಾಗೂ 'ನಿನ್ನಂಥ ಅಪ್ಪ ಇಲ್ಲ...', 'ನೀರಲ್ಲಾದರು ಹಾಕು, ಹಾಲಲ್ಲಾದರು ಹಾಕು ರಾಘವೇಂದ್ರ...' ಹಾಡುಗಳು ಚಿತ್ರರಸಿಕರು ಮೆಲುಕು ಹಾಕುವಂತಿದ್ದವು.

'ದೇವತಾ ಮನುಷ್ಯ' ಚಿತ್ರದ ಬಿಡುಗಡೆಯ ಸಂಭ್ರಮ ರಾಜಕುಮಾರ್ ಹಿಂದಿನೆಲ್ಲ ಚಿತ್ರಗಳಿಗಿಂತ ಹೆಚ್ಚಿನ ಸಡಗರ ಅಬ್ಬರಗಳಿಂದ ಕೂಡಿತ್ತು. ಅಭಿಮಾನಿಗಳ ಮೇರೆ ಮೀರಿದ ಉತ್ಸಾಹ ಮುಖ್ಯ ಚಿತ್ರಮಂದಿರಗಳ ಕಟೌಟ್‌ಗಳಿಗೆ ಹಾಲಿನ ಅಭಿಷೇಕ ಮಾಡಿಸಿತು. ಅಭಿನಯ್ ಚಿತ್ರಮಂದಿರದ ಮುಂಭಾಗಕ್ಕೆ ೫೦೦೦ ರೂಪಾಯಿಗಳ ಹೂವಿನ ಅಲಂಕಾರ, ಮೈಸೂರಿನಲ್ಲಿನ ಕಟೌಟ್‌ನ ಅಡ್ಡ ಪಲ್ಲಕ್ಕಿ ಉತ್ಸವ, ಬೆಂಗಳೂರಿನ ಗಾಯಿತ್ರಿ ನಗರದಲ್ಲಿ ಬೃಹತ್ ಅನ್ನಸಂತರ್ಪಣೆ ಈ ಚಿತ್ರದ ಬಿಡುಗಡೆ ಸಂದರ್ಭದ ಕೆಲವು ವಿಶೇಷಗಳು. ಈ ಚಿತ್ರದ ಅಭಿನಯಕ್ಕಾಗಿ ರಾಜಕುಮಾರ್‌ಗೆ ೧೯೮೮-೮೯ರ ರಾಜ್ಯದ ಅತ್ಯುತ್ತಮ ನಟ ಪ್ರಶಸ್ತಿ ಬಂದಿತು.

ಯೌವ್ವನ ಬಂದಾಗ ಪ್ರೀತಿ ಪ್ರೇಮಗಳುದಿಸಿ ಆಗುವ ಸಂಬಂಧಗಳು, ದೈಹಿಕವಾಗಿ ಮಾರ್ಪಟ್ಟು ಕಾರಣಾಂತರಗಳಿಂದ, ಸಂಗಾತಿ ದೂರವಾದಾಗ ಆಗುವ ಮಾನಸಿಕ ಯಾತನೆ, ವೇದನೆಯನ್ನು 'ಬಾಳೊಂದು ಭಾವಗೀತೆ' ಚಿತ್ರದಲ್ಲಿ ಹೇಳಲು ಪ್ರಯತ್ನಿಸಿದರು ಗೀತಪ್ರಿಯ. ನಾರಾಯಣರಾವ್ ಅವರ ಪ್ರಕಟವಾಗದ ಕಥೆಯನ್ನು ಈ ಚಿತ್ರಕ್ಕೆ ಆಯ್ಕೆ ಮಾಡಿದ್ದರು. ಗೀತಪ್ರಿಯ ಈ ಕಥೆಯನ್ನು ನಿರೂಪಿಸಿರುವ ವಿಧಾನ ನಿಜಕ್ಕೂ ಮೆಚ್ಚಿಸುತ್ತದೆ. ಶ್ರೀನಾಥ್ ಹಾಗೂ ಸರಿತಾ ಅಭಿನಯ ಚಿತ್ರದ ಪ್ಲಸ್ ಪಾಯಿಂಟ್. ಹಂಸಲೇಖ 'ಮಾವಿನ ಮರವೆ ಮಾವಿನ ಮರವೆ' ಹಾಡನ್ನು ಉತ್ತಮವಾಗಿ ಸಂಯೋಜಿಸಿದ್ದರು. ಗೀತಾ ಶ್ರೀನಾಥ್ ಮತ್ತು ಎಂ.ಎಸ್.ಕಾರಂತ್ ಈ ಚಿತ್ರವನ್ನು ನಿರ್ಮಿಸಿದರು.

೧೯೮೮ ರಲ್ಲಿಯೇ ರಾಜ್ ಸಂಸ್ಥೆ ರಾಜಕುಮಾರ್‌ರ ದ್ವಿತೀಯ ಪುತ್ರ ರಾಘವೇಂದ್ರ ರಾಜಕುಮಾರ್‌ರನ್ನು 'ಚಿರಂಜೀವಿ ಸುಧಾಕರ್' ಚಿತ್ರದ ಮೂಲಕ ಬೆಳ್ಳಿ ತೆರೆಗೆ ಪರಿಚಯಿಸಿತು. ಈ ಚಿತ್ರವನ್ನು ಕೂಡ ಮೊದಲ ಪುತ್ರ ಶಿವರಾಜ್‌ಕುಮಾರ್ ಅಭಿನಯದ 'ಆನಂದ್'ನ ಭರ್ಜರಿ ಯಶಸ್ಸಿನ ರೂವಾರಿಯಾಗಿದ್ದ ಸಿಂಗೀತಂ ಶ್ರೀನಿವಾಸರಾವ್ ಅವರೇ ನಿರ್ದೇಶಿಸಿದರು. ಆದರೆ ಈ ಪ್ರೇಮಕಥೆಗೆ ಯಾವುದೇ ವಿಭಿನ್ನ ಆಯಾಮಗಳಿರಲಿಲ್ಲ. ಇದರಿಂದಾಗಿ ನಿರೂಪಣೆ ಮಾಮೂಲಿ ಸ್ತರದಲ್ಲಿ ನಿಂತುಬಿಟ್ಟಿತು. ಈ ಚಿತ್ರದ ಒಂದೇ ವಿಶೇಷವೆಂದರೆ ಗಾಯಕ/ನಾಯಕನಾಗಿ ರಾಘವೇಂದ್ರ ರಾಜಕುಮಾರ್ ಬೆಳ್ಳಿ ತೆರೆಗೆ ಬಂದದ್ದು. ಶಿವರಾಜ್‌ಕುಮಾರ್ ರಂಗ ಪ್ರವೇಶಕ್ಕೆ ನೃತ್ಯವೇ ಪ್ರಧಾನ ವೈಶಿಷ್ಟ್ಯವಾಗಿದ್ದಂತೆ ರಾಘವೇಂದ್ರ ಪ್ರವೇಶಕ್ಕೆ ಸಂಗೀತ, ಗಾಯನ ಮುಖ್ಯವೆಂದು ಸಂಸ್ಥೆ ಭಾವಿಸಿತ್ತು. ಗಾಯನದಲ್ಲಿ ರಾಘವೇಂದ್ರ ಗಮನ ಸೆಳೆದದ್ದು, ಒಂದೆರಡು ಹಾಡುಗಳು ಅತ್ಯಂತ ಜನಪ್ರಿಯವಾದದ್ದಷ್ಟೇ ಈ ಚಿತ್ರದ ಸಾಧನೆ.



(ಚಿತ್ರ ೧೩.೪) 'ಚಿರಂಜೀವಿ ಸುಧಾಕರ' ಚಿತ್ರದಲ್ಲಿ ರಾಘವೇಂದ್ರರಾಜಕುಮಾರ್ ಮತ್ತು ಮೋನಿಷಾ

'ಸುಪ್ರಭಾತ' ಮಲಯಾಳಂ ಮೂಲದ ಪುಣೆ ಫಿಲಂ ಇನ್‌ಸ್ಟಿಟ್ಯೂಟ್ ಪದವೀಧರ ದಿನೇಶ್ ಬಾಬು ನಿರ್ದೇಶನ/ಛಾಯಾಗ್ರಹಣದ ಪ್ರಥಮ ಕನ್ನಡ ಚಿತ್ರ. ತನ್ನ ಉಡಾಫೆ ಪ್ರವೃತ್ತಿಯಿಂದ ಅತಿ ವಾಚಾಳಿಯಾದ ನಾಯಕಿ ಹಾಗೂ ಸಂಕೋಚ, ಕೀಳರಿಮೆಯಿಂದಾಗಿ ಮಾತಾಡುವಾಗ ತೊದಲುವ ನಾಯಕ ಈ ಚಿತ್ರದ ಮುಖ್ಯ ಪಾತ್ರಗಳು. ಇವರ ನಡುವಿನ ಸಂಬಂಧ ಹಾಗೂ ಘಟನೆಗಳನ್ನು ದಿನೇಶ್ ಬಾಬು ಸ್ವಾರಸ್ಯಕರವಾಗಿ ನಿರೂಪಿಸಿದ್ದರು. ನಾಯಕ-ನಾಯಕಿಗೆ ಪೂರಕವಾಗಿ ಎರಡು ಮೂರು ಪಾತ್ರಗಳು ಮಾತ್ರ ಚಿತ್ರದಲ್ಲಿ ಇದ್ದವು. ಇಡೀ ಚಿತ್ರ ಸುಂದರ ಹೊರಾಂಗಣದಲ್ಲಿ ಚಿತ್ರಣಗೊಂಡಿದ್ದು ಪ್ರೇಕ್ಷಕರಿಗೆ ಮಧುರ ಅನುಭವ ಉಂಟುಮಾಡುವಲ್ಲಿ ಯಶಸ್ವಿಯಾಯಿತು. ನಿರೂಪಣೆಯಲ್ಲಿ ಇದ್ದ ಹೊಸತನ ದಿನೇಶ್ ಬಾಬು ಅವರನ್ನು ಕನ್ನಡ ಚಿತ್ರರಂಗದಲ್ಲಿ ನೆಲೆ ನಿಲ್ಲಿಸಿತು.

ವಿಷ್ಣುವರ್ಧನ್, ಸುಹಾಸಿನಿ, ಮಾನು, ಶ್ರೀವಿದ್ಯಾ, ವಿಜಯಕಾಶಿ ಉತ್ತಮವಾಗಿ ಅಭಿನಯಿಸಿದ್ದರು. ಮೈಸೂರಿನ ಪ್ರಭಾರಾಜ್ ನಿರ್ಮಿಸಿದ ಈ ಚಿತ್ರ ವಿಷ್ಣುವರ್ಧನ್ ಅಭಿನಯ ಜೀವನದ ಉತ್ತಮ ಚಿತ್ರಗಳಲ್ಲೊಂದು. ಕೇವಲ ನಾಲ್ಕೈದು ಪಾತ್ರಗಳ ಜೊತೆಗೆ ಬೆಟ್ಟದ ಸುಂದರ ತಪ್ಪಲಿನಲ್ಲಿ ಹಾಕಿದ ಪೆಟ್ರೋಲ್ ಬಂಕ್‌ನ ಸೆಟ್ ಕೂಡ ಒಂದು ಪಾತ್ರದಂತೆ ಕಂಡದ್ದು ನಿರ್ದೇಶಕರ ಸಾಮರ್ಥ್ಯವನ್ನು ಸೂಚಿಸುವಂತಿತ್ತು. ಚಿತ್ರದಲ್ಲಿ ಬಳಸಲಾದ ವಿಷ್ಣುವರ್ಧನ್‌ರ ನೃತ್ಯ ಭಾಗ ಕೂಡಾ ಮೆಚ್ಚುವಂತಿತ್ತು. ಈ ಚಿತ್ರದ ನಂತರ ದಿನೇಶ್ ಬಾಬು ೧೯೮೮ ರಲ್ಲಿ ಶಿವರಾಜ್ ಕುಮಾರ್ ನಾಯಕತ್ವದ 'ಇನ್ಸ್‌ಪೆಕ್ಟರ್ ವಿಕ್ರಂ' ನಿರ್ದೇಶಿಸಿದರು. ಇದು ಯಶಸ್ವಿಯಾಗಲಿಲ್ಲ.


(ಚಿತ್ರ ೧೩೫) 'ಸುಪ್ರಭಾತ' ಚಿತ್ರದಲ್ಲಿ ಸುಹಾಸಿನಿ ಮತ್ತು ವಿಷ್ಣುವರ್ಧನ್

ಇದೇ ವರ್ಷ ಅನಂತ್‌ನಾಗ್ ನಾಯಕತ್ವದಲ್ಲಿ ತೆರೆಗೆ ಬಂದ 'ಹೆಂಡ್ತಿಗ್ಹೇಳ್ಬೇಡಿ' ಇನ್ನೊಂದು ಉತ್ತಮ ಚಿತ್ರ. ಸುಂದರ ಹೆಂಡತಿಗೆ ಹೆದರುವ ಪುಕ್ಕಲ ಗಂಡ, ಅವನ ಮನೆಯಲ್ಲಿ ನಡೆಯುವ ಕೊಲೆ ಇವುಗಳ ಸುತ್ತ ನಡೆಯುವ ಸ್ವಾರಸ್ಯಕರ ಘಟನೆಗಳು ಉತ್ತಮ ಚಿತ್ರಕಥೆಯಿಂದಾಗಿ ಪರಿಣಾಮ ಬೀರಿದವು. ರಾಜಕಾರಣದಲ್ಲಿ ತೊಡಗಿದ್ದು ಹಾಗೂ ಬಹಳ ದಿನಗಳಿಂದ ಉತ್ತಮ ಪಾತ್ರಗಳು ಸಿಗದಿದ್ದ ಕೊರತೆಯನ್ನು ಈ ಚಿತ್ರದಲ್ಲಿ ಅನಂತ್‌ನಾಗ್ ತುಂಬಿಕೊಟ್ಟಿದ್ದರು. ದಿನೇಶ್ ಬಾಬು ಭಿನ್ನವಾದ ವಸ್ತುವಿನೊಂದಿಗೆ ಉತ್ತಮವಾದ ಛಾಯಾಗ್ರಹಣವನ್ನು ತಾವೇ ನಿರ್ವಹಿಸುತ್ತ ಮುಂದಿನ ದಿನಗಳಲ್ಲಿ ಕೆಲವು ಉತ್ತಮ ಚಿತ್ರಗಳನ್ನು ಕೊಟ್ಟರು.

ಕೇಂದ್ರದ ೧೯೮೮ರ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಹಾಗೂ ರಾಜ್ಯದ ೧೯೮೭-೮೮ರ ತೃತೀಯ ಅತ್ಯುತ್ತಮ ಚಿತ್ರ ಹಾಗೂ ಬಿ.ಆರ್.ಛಾಯಾ ಅವರಿಗೆ ಶ್ರೇಷ್ಠ ಹಿನ್ನೆಲೆ ಗಾಯಕಿ ಪ್ರಶಸ್ತಿ ತಂದಿತ್ತ 'ಕಾಡಿನ ಬೆಂಕಿ' ವಸ್ತುವಿನ ದೃಷ್ಟಿಯಿಂದ ಭಿನ್ನವಾಗಿದ್ದ ಚಿತ್ರ. ಹೆಂಡತಿಯನ್ನು ಕೂಡುವಾಗ ತಾಯಿಯ ರೂಪ ಸ್ಮರಣೆಗೆ ಬಂದು ಲೈಂಗಿಕ ಕ್ರಿಯೆಯಲ್ಲಿ ಅಸಮರ್ಥನಾಗುವ ಯುವಕನೊಬ್ಬನ ತೊಳಲಾಟದ ಕಥೆ ಈ ಚಿತ್ರದ್ದು. ವಸ್ತು ಸಂಕೀರ್ಣವಾಗಿರುವುದರಿಂದ ಇಂಥ ಚಿತ್ರಗಳ ನಿರೂಪಣೆಯಲ್ಲಿ ಎಚ್ಚರ ವಹಿಸಬೇಕಾಗುತ್ತದೆ. ಈ ದೃಷ್ಟಿಯಲ್ಲಿ ನಿರ್ದೇಶಕ ಸುರೇಶ್ ಹೆಬ್ಳೀಕರ್ ಹಾಗೂ ಛಾಯಾಗ್ರಾಹಕ ರಾಜನ್ ಇಬ್ಬರ ಕೊಡುಗೆ ಚಿತ್ರವನ್ನು ಸಹ್ಯಗೊಳಿಸುವಲ್ಲಿ ಯಶಸ್ವಿಯಾಗಿದೆ. ಇಷ್ಟಾಗಿ ಈ ವಸ್ತು ಬೆಳ್ಳಿತೆರೆಗೆ ಹೊಸದಾಗಿರಲಿಲ್ಲ. ಸುಮಾರು ವರ್ಷಗಳ ಹಿಂದೆ ಮಲಯಾಳಂನಲ್ಲಿ ಬಂದಿತ್ತು. ನಂತರ ತೆಲುಗು, ತಮಿಳು ಮೂರು ಭಾಷೆಗಳಲ್ಲೂ ರೀಮೇಕ್ ಆಗಿ ಯಶಸ್ವಿಯಾಗಿತ್ತು. ಆ ಚಿತ್ರಕ್ಕೂ 'ಕಾಡಿನ ಬೆಂಕಿ'ಗೂ ವ್ಯತ್ಯಾಸವೆಂದರೆ ಮೂಲ ಚಿತ್ರದಲ್ಲಿ ರೋಗಿಗೆ ಚಿಕಿತ್ಸೆ ಕೊಡುವ ವಿಧಾನವನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಆದರೆ 'ಕಾಡಿನ ಬೆಂಕಿ'ಯಲ್ಲಿ ಚಿಕಿತ್ಸೆಯೇ ಇಲ್ಲದೆ ರೋಗ ವಾಸಿಯಾಗುತ್ತದೆ. ಇಷ್ಟಾದರೂ ಇದು ಸೆನ್ಸಾರ್‌ನಿಂದ ವಯಸ್ಕರ ಚಿತ್ರವೆಂದು ಪ್ರಮಾಣಪತ್ರ ಪಡೆಯಿತು.

ಸುರೇಶ್ ಹೆಬ್ಳೀಕರ್ ಪರಿಸರದಲ್ಲಿ ಆಸಕ್ತರು. ಆದ್ದರಿಂದಲೇ 'ಋತುಮಾನ ಸಂಪುಟದಿ...' ಎಂಬ ಪರಿಸರ ಗೀತೆಯನ್ನು ಚಿತ್ರದಲ್ಲಿ ಅಳವಡಿಸಿದ್ದರು. ಈ ಹಾಡಿಗೆ ೧೯೮೭-೮೮ನೇ ಸಾಲಿನ ಅತ್ಯುತ್ತಮ ಹಿನ್ನೆಲೆ ಗಾಯಕಿ ಪ್ರಶಸ್ತಿಯನ್ನು ಕೂಡ ಗಾಯಕಿ ಬಿ.ಆರ್.ಛಾಯಾ ಪಡೆದುಕೊಂಡರು. ಸುರೇಶ್ ಹೆಬ್ಳೀಕರ್ ಪರಿಸರದ ಬಗ್ಗೆ, ಭಾಷೆ ಬಗ್ಗೆ ಹೀಗೆನ್ನುತ್ತಾರೆ : "ಪರಿಸರ ಪ್ರೇಮ ಮತ್ತು ಕಾಳಜಿ ನಾನು ಕೈಗಾ ವಿರೋಧಿ ಚಳವಳಿಗೆ ಧುಮುಕಲು ಪ್ರೇರಣೆ. 'ಕೈಗಾ ಚಲೋ' ಚಳವಳಿಯಲ್ಲಿ ಭಾಗವಹಿಸಿದೆ. ಕೈಗಾ ವಿರೋಧಿ ಚಳವಳಿ ಇಷ್ಟಕ್ಕೂ ನಿಂತಿಲ್ಲ. ಮೀನುಗಾರರು, ವ್ಯವಸಾಯಗಾರರು ಹೀಗೆ ಎಲ್ಲ ವರ್ಗದ ಜನಗಳಲ್ಲೂ ಜಾಗೃತಿ ಮೂಡಿಸುವ ಕಾರ್ಯ ನಡೀತಿದೆ. ನಮಗಿರುವುದೊಂದೇ ಪಶ್ಚಿಮ ಘಟ್ಟ. ಅದು ಹಾಳಾದರೆ ಇಡೀ ದಕ್ಷಿಣ ಭಾರತದ ಪರಿಸರ ಸಮತೋಲನವೇ ಹಾಳಾಗುತ್ತದೆ. ನಾನು ಯಾವುದೇ ರಾಜಕೀಯ ಉದ್ದೇಶಕ್ಕಾಗಿ ಚಳವಳಿ ಮಾಡ್ತಿಲ್ಲ, ರಾಜಕೀಯ ಪ್ರೇರಿತವೂ ಅಲ್ಲ. ಹಾಗೇ ನಾನು ಭಾಷಾಂಧ ಅಲ್ಲ. ಆದರೂ ಕನ್ನಡ ಚಳವಳಿಗೆ ಬರ್ತೇನೆ. ಮಾತೃಭಾಷೆ ಬಗ್ಗೆ ಪ್ರೇಮ ಇದ್ದೇ ಇರುತ್ತೆ. ಕನ್ನಡ ಪ್ರಥಮ ಭಾಷೆ ಆಗಿರಬೇಕು. ಅದಕ್ಕೆ ಪ್ರಥಮ ಪ್ರಾಶಸ್ತ್ಯ ಇರಬೇಕು ಅನ್ನೋ ಬೇಡಿಕೆ ನನಗೂ ಒಪ್ಪಿಗೆ..". ಎನ್ನುತ್ತಿದ್ದರು. ಭಾರತ-ಚೀನ ಸ್ನೇಹ, ರಾಜೀವ್‌ಗಾಂಧಿ ಚೀನ ಭೇಟಿ ಬಗ್ಗೆ ಕುತೂಹಲ ಇಟ್ಟುಕೊಂಡವರು ಹೆಬ್ಳೀಕರ್. "...ಸಾಂಸ್ಕೃತಿಕ ಸಂಬಂಧಗಳಲ್ಲಿ ಇದುವರೆಗೂ ಹೇಳಿಕೊಳ್ಳುವಂಥದ್ದೇನೂ ನಡೆದಿಲ್ಲ. ಸಿನಿಮಾ ಸಾಹಿತ್ಯ, ಸಾಂಸ್ಕೃತಿಕ ತಂಡಗಳ ವಿನಿಮಯ ಮಾಡಿಕೊಳ್ಳುವ ಯೋಜನೆ ಇದೆ".

'ಕೃಷ್ಣ ರುಕ್ಮಿಣಿ'ಗೆ ಬಿ.ಕೆ.ಚಂದಣ್ಣ ನಿರ್ಮಾಪಕರು. ಭಾರ್ಗವ ನಿರ್ದೇಶಿಸಿದರು. ವಿಷ್ಣುವರ್ಧನ್ ಮತ್ತು ರಮ್ಯಕೃಷ್ಣ ಚೆಂದವೆನ್ನಿಸುವಂತೆ ನಟಿಸಿದರು. ಕೃಷ್ಣ ಹಂಪೆಯಲ್ಲಿ ಅನಧಿಕೃತ ಗೈಡ್; ಕೊಳಲು ವಾದಕ. ಹಂಪೆಯ ಗತವೈಭವದ ಕಥೆ ಕೇಳಲು ಬರುವ ಸಿರಿವಂತ ಯುವತಿ ರಮ್ಯಕೃಷ್ಣ ನೃತ್ಯಗಾತಿ. ಈರ್ವರ ಪ್ರೇಮಕ್ಕೆ ಅನುಮತಿ ನೀಡಲು ಹಿರಿಯರು ಪರೀಕ್ಷೆ ಒಡ್ಡುತ್ತಾರೆ. ೨೪ ಗಂಟೆಗಳ ಕಾಲ ಕೃಷ್ಣ (ವಿಷ್ಣುವರ್ಧನ್) ಸತತವಾಗಿ ಕೊಳಲು ನುಡಿಸಿದರೆ, ರುಕ್ಮಿಣಿ (ರಮ್ಯಕೃಷ್ಣ) ನೃತ್ಯ ಮಾಡಬೇಕು. ಸಫಲರಾದರೆ ಮದುವೆ. ಈ ದೃಶ್ಯವನ್ನು ನಿರ್ದೇಶಕ ಭಾರ್ಗವ ಉತ್ತಮವಾಗಿ ನಿರ್ದೇಶಿಸಿದ್ದಾರೆ. ಆದರೂ ಅಲ್ಲಲ್ಲಿ ಅಸಹಜತೆ ಕಾಣುತ್ತದೆ. ಉಮಾಶ್ರಿ, ಫಣಿ ರಾಮಚಂದ್ರ ಹಾಸ್ಯ ಸಭ್ಯತೆಯ ಮಿತಿ ಮೀರಿತು. ಕೆ.ವಿ.ಮಹದೇವನ್ ರಾಗ ಸಂಯೋಜನೆಯಲ್ಲಿ 'ನಾದವೇ ನನ್ನಿಂದ ದೂರಾದೆಯಾ...' ಹಾಡು ಸಂದರ್ಭೋಚಿತ.

ವಿಷ್ಣುವರ್ಧನ್ ದ್ವಿಪಾತ್ರದಲ್ಲಿ ನಟಿಸಿರುವ ಶಕ್ತಿ ಪ್ರೊಡಕ್ಷನ್ಸ್ ಅವರ ಚಿತ್ರ 'ದಾದಾ'. ಆರ್.ಎಫ್.ಮಾಣಿಕ್‌ಚಂದ್ ನಿರ್ಮಿಸಿ ಪಿ.ವಾಸು ಕಥೆ-ಚಿತ್ರಕಥೆ ಬರೆದು ನಿರ್ದೇಶಿಸಿದರು. ದಾದಾನ ಪಾತ್ರದಲ್ಲಿ ವಿಷ್ಣು ಅಭಿನಯ ವಿಭಿನ್ನ ಪ್ರೇಕ್ಷಕನ ಸಹಾನುಭೂತಿ ಗಿಟ್ಟಿಸುತ್ತದೆ. ತಾಯಿ ಪಾತ್ರದ ಪಂಢರಿಬಾಯಿ ನಟನೆ ಪ್ರೌಢ. ಸುಂದರಕೃಷ್ಣ ಅರಸ್ ಚಿಕ್ಕ ಅವಕಾಶದಲ್ಲೇ ಮನಸೆಳೆಯುತ್ತಾರೆ. ರಮೇಶ್‌ಭಟ್, ಮೈಸೂರು ಲೋಕೇಶ್, ಅವಿನಾಶ್ ಅವರುಗಳಿಗೆ ವಿಷ್ಣು ಭಂಟರಾಗಿ ಉತ್ತಮ ಪಾತ್ರವಿದೆ. ಹರ್ಷ ಬಾಬು ಸಾಹಸ ರೋಮಾಂಚಕವೆನಿಸುತ್ತವೆ. ಮಾಧವನ್.ಡಿ.ವಿ. ಪ್ರಸಾಧನದಲ್ಲಿ ವಿಷ್ಣುವಿಗೆ ಹಿಂದಿಯ 'ಶೆಹೆನ್ ಷಾ' ಶೋಭೆ ತಂದರು. ವಸ್ತ್ರವಿನ್ಯಾಸವೂ ಅದೇ ಹೋಲಿಕೆ. ಕಥೆಗೂ ಅದೇ ಸ್ಫೂರ್ತಿ. ಕೆ.ಬಾಲು ಚುರುಕಾದ ಸಂಕಲನದಿಂದ ಮೆಚ್ಚುಗೆ ಪಡೆದರು.


(ಚಿತ್ರ ೧೩೬) 'ಕಾಡಿನ ಬೆಂಕಿ' ಚಿತ್ರದಲ್ಲಿ ಮಮತಾರಾವ್ ಮತ್ತು ಸುರೇಶ್ ಹೆಬ್ಳೀಕರ್



(ಚಿತ್ರ ೧೩.೭) 'ರಣರಂಗ' ಚಿತ್ರದಲ್ಲಿ ಶಿವರಾಜಕುಮಾರ್ ಮತ್ತು ಸುಧಾರಾಣಿ

'ರಣರಂಗ' ವೈಷ್ಣವಿ ಮೂವೀಸ್‌ಗಾಗಿ ವಿ.ಸೋಮಶೇಖರ್ ನಿರ್ದೇಶಿಸಿದರು. ಮಾಮೂಲಿ ಸೇಡಿನ ಕತೆಯೇ ಆದರೂ ಶಿವರಾಜ್‌ಕುಮಾರ್-ಸುಧಾರಾಣಿ ಚುರುಕು ಅಭಿನಯದಿಂದಾಗಿ ಮನ ಗೆಲ್ಲುತ್ತದೆ. ಜೊತೆಗೆ ವಿ.ಸೋಮಶೇಖರ್ ನಿರೂಪಣೆಯಲ್ಲೂ ಬಿಗಿ ಇತ್ತು. ಅರವಿಂದ್, ಜಗ್ಗೇಶ್, ವೆಂಕಟೇಶ್, ಶಂಕರ್ ಪಾಟೀಲ್‌ಗೆ ಖಳನಾಯಕರ ಮಕ್ಕಳಾಗಿ ಲವಲವಿಕೆಯ ಅಭಿನಯಕ್ಕೆ ಅವಕಾಶವಿತ್ತು.

'ರಣರಂಗ' ಬದಲಾಗುತ್ತಿದ್ದ ಅಭಿರುಚಿ, ಸಾಮಾಜಿಕ ಸಂದರ್ಭಕ್ಕೆ ಅನಿವಾರ್ಯವಾಗಿ ಸದಭಿರುಚಿಯ ಚಿತ್ರನಿರ್ಮಾಣ ಸಂಸ್ಥೆಗಳೂ ರಾಜಿ ಮಾಡಿಕೊಳ್ಳಬೇಕಾಗಿ ಬಂದುದಕ್ಕೆ ನಿದರ್ಶನ. ಸಾಮಾನ್ಯವಾಗಿ ಹಿಂಸೆ, ಕ್ರೌರ್ಯಗಳು ಅಧಿಕವಾಗಿಲ್ಲದ, ಹೆಚ್ಚಾಗಿ ಕಾದಂಬರಿಗಳನ್ನೇ ಆಧರಿಸಿ ಚಿತ್ರ ನಿರ್ಮಿಸುತ್ತಿದ್ದ ರಾಜಕುಮಾರ್ ನಿರ್ಮಾಣ ಸಂಸ್ಥೆ 'ರಣರಂಗ'ದಂಥ ಚಿತ್ರ ತಯಾರಿಸುವಾಗ ಮುಂದಿನ ಪೀಳಿಗೆಯನ್ನು ಒಪ್ಪಿಸುವಾಗಿನ ಒಪ್ಪಂದಗಳು ಗೊತ್ತಾಗುವಂತಿತ್ತು. ಆದರೆ ಇಂಥ ಪಾತ್ರಕ್ಕೆ ಇಂಥವರೇ ಎಂದು ಗೊತ್ತು ಮಾಡಿಕೊಂಡ ಸ್ಥಿತಿಯನ್ನು ಭೇದಿಸಿ ಎಲ್ಲ ಬಗೆಯ ಪಾತ್ರವನ್ನು ನಿರ್ವಹಿಸಬಲ್ಲೆನೆಂದು ಶಿವರಾಜ್‌ಕುಮಾರ್ ಸಾಬೀತು ಮಾಡಿದ್ದರು. ರವಿಚಂದ್ರನ್, ಅಂಬರೀಷ್ ಇಮೇಜ್ ದಾಟಿ ಯುವಜನಾಂಗಕ್ಕೆ ಯುವಕನೊಬ್ಬ ಹೀರೋ ಆದದ್ದು 'ರಣರಂಗ'ದಿಂದ. 'ಜಗವೇ ಒಂದು ರಣರಂಗ...' ಹಾಡನ್ನು ರಾಜಕುಮಾರ್ ಹಾಡಿದ್ದು, ಅದಕ್ಕೆ ಕ್ಯಾಮೆರಾ ಟ್ರಿಕ್ ಬಳಸಿ ಒಂದೇ ಬಾರಿಗೆ ಒಂಬತ್ತು ಶಿವರಾಜ್‌ಕುಮಾರ್ ಕಾಣುವಂತೆ ಹೆಚ್.ಜಿ.ರಾಜು ಚಿತ್ರಿಸಿದ್ದರು. ಸಂಗೀತ ನಿರ್ದೇಶಕ ಹಂಸಲೇಖಾ ಹಾಗೂ ನಿರ್ದೇಶಕ ಸೋಮಶೇಖರ್ ಶ್ರೀಮಂತಿಕೆ ಮತ್ತು ಕೆಲವು ಅಂಶಗಳನ್ನು ಒತ್ತಿ ಹೇಳುವ ದಿಕ್ಕಿನಲ್ಲೇ ಪರಿಶ್ರಮ ವಹಿಸಿದ್ದರು. 'ಇವ ಗಾಜನೂರಿನ ಗಂಡು ಕಾಣಮ್ಮೋ...' ಮತ್ತು 'ಕುಣಿಯೋದು ನನ್ನ ತಂದೆ ಕೊಟ್ಟ ಬಳುವಳಿ...' ಹಾಡಿನ ಸಾಲುಗಳ ಹಿಂದೆ ಹೊಸ ಇಮೇಜ್‌ನಲ್ಲಿ ಬರುತ್ತಿರುವ ಯುವಕನನ್ನು ಜನ ಸ್ವಾಗತಿಸಬೇಕೆಂಬ ಭಾವನಾತ್ಮಕ ಒತ್ತಡವೂ ಸೇರಿತ್ತು. ಮೊದಲ ಬಾರಿಗೆ ಹಂಸಲೇಖಾ ರಾಜಕುಮಾರ್ ಕ್ಯಾಂಪಿನಲ್ಲಿ ಸಂಗೀತ ನಿರ್ದೇಶಿಸಿದ್ದು, ಬಹಳ ವರ್ಷಗಳ ಅಂತರ ಕಳೆದು ನಿರ್ದೇಶಕ ಸೋಮಶೇಖರ್ ಹಿಂತಿರುಗಿದ್ದು ಗಮನಿಸಬೇಕಾದ ಸಂಗತಿಗಳು. 'ನಿನ್ನ ಕಣ್ಣುಗಳು...', 'ಮುಸ್ಸಂಜೇಲಿ ನಮ್ಮೂರಲ್ಲಿ...' ಹಾಡುಗಳು ಮನಸ್ಸನ್ನು ಹಿಡಿದಿಡುತ್ತವೆ. 'ಅಂಜದ ಗಂಡು' ಚಿತ್ರದಲ್ಲಿ ರವಿಚಂದ್ರನ್ ಹಾಕುವ ಪುರೋಹಿತ ವೇಷ, 'ಪ್ರೇಮಲೋಕ'ದಲ್ಲಿ ಬರುವ 'ನಿಂಬೆಹಣ್ಣಿನಂತಹ...' ಗೀತೆಯ ದೃಶ್ಯಗಳನ್ನು ನೆನಪಿಸುವ ಚಿತ್ರಿಕೆಗಳು ಇದ್ದುದು ಹಂಸಲೇಖಾ ಪ್ರವೇಶಿಸಿದ ಕಾರಣವೇ ಎಂದು ವಿಮರ್ಶಕರು ವಿಶ್ಲೇಷಿಸಿದರು. ತಾರಾ ಅವರನ್ನು ಅತಿ ಅನ್ನಿಸುವಷ್ಟು 'ಬಿಚ್ಚಮ್ಮ' ಮಾಡಿದ್ದರು.

'ಕಂಪನ' ಸುರೇಶ್ ಸೋಮಪುರ ಅವರ ನಿಗೂಢತೆಯೇ ಪ್ರಧಾನವಾಗಿರುವ ಕಥೆಯನ್ನು ವೇಮಗಲ್ ಜಗನ್ನಾಥ್ ಸೂಕ್ತವಾಗಿ ಮಾರ್ಪಡಿಸಿಕೊಂಡು ನಿರ್ದೇಶಿಸಿದರು. ಜಗನ್ನಾಥ್ ಮೂಲತಃ ಸಸ್ಪೆನ್ಸ್, ಅದಕ್ಕಿಂತ ಮಿಗಿಲಾಗಿ ಭಯಾನಕತೆಯನ್ನು ಅಳವಡಿಸುವುದರಲ್ಲಿ ಆಸಕ್ತರು. ಆಂಥ ಅವರ ಪ್ರಯತ್ನಗಳು ಯಶಸ್ವಿಯೂ ಆಗಿವೆ. ಒಂದೆರಡು ಅಪವಾದ ಇರಬಹುದಾದರೂ ಅವರು ತೆರೆಗೆ, ಕಿರುತೆರೆಗೆ ಸಹಾ ಅಂಥ ಮೋಡಿ, ಮೋಹಿನಿ, ಭೂತ-ಪಿಶಾಚಿಗಳನ್ನು ತಂದು ಪ್ರೇಕ್ಷಕನನ್ನು ತುದಿಗಾಲಲ್ಲಿ ಕೂರಿಸುವುದರಲ್ಲಿ ಯಶಸ್ವಿಯಾದವರು. 'ಕಂಪನ' ಅನಿತಾ ನಿವಾಸ ಎಂಬ ಭೂತ ಬಂಗಲೆ ಸುತ್ತ ಹರಡಿಕೊಂಡ ಕತೆ. ಆ ನಿವಾಸದಲ್ಲಿ ನಡೆಯುವ ಆಶ್ಚರ್ಯಕರ ಸಂಗತಿಗಳಿಂದಾಗಿ ಪ್ರೇಕ್ಷಕ ದೆವ್ವದ ಅಸ್ತಿತ್ವವನ್ನು ನಂಬುವ ಹಂತಕ್ಕೆ ಬರುತ್ತಾನೆ. ಆದರೆ ಕೊನೆಯಲ್ಲಿ ವೈದ್ಯರೊಬ್ಬರ ಪಾತ್ರದ ಮೂಲಕ ವಾಸ್ತವವನ್ನು ತೆರೆದಿಡುತ್ತಾರೆ. ತಾಂತ್ರಿಕವಾಗಿ ಇಂಥ ಚಿತ್ರಗಳು ಎಷ್ಟು ಪರಿಪೂರ್ಣವಾದರೆ ಅಷ್ಟೂ ಉತ್ತಮ. ಅಂಥ ಅನುಕೂಲಗಳು ನಿರ್ದೇಶಕರಿಗೆ ಸಿಕ್ಕಿರಲಾರದು. ಶರತ್‌ಬಾಬು-ಪವಿತ್ರಾ ಬಂಗಲೆಗೆ ಬಂದು ಬವಣೆ ಪಡುವ ದಂಪತಿಗಳಾಗಿ, ಪ್ರಭಾಕರ್ ರಹಸ್ಯ ಭೇದಿಸಲು ಹೋಗಿ ತಾನೇ ಬಲಿಯಾಗುವ ವೈದ್ಯನ ಪಾತ್ರದಲ್ಲಿ ಸಹಜವಾಗಿ ಅಭಿನಯಿಸಿದ್ದರು.

ವಿನೋದ್ ಆಳ್ವ ಅಭಿನಯದ 'ಸಾಹಸವೀರ' ಒಂದು ಸಾಮಾನ್ಯ ಚಿತ್ರವಾಗಿ ತೆರೆಕಂಡಿತು. 'ನೀ ನನ್ನ ದೈವ' ಪತ್ತೇದಾರಿ ಕಥೆಯನ್ನು ಹೋಲುತ್ತಿತ್ತು. ಸಾಹಸ, ಸರಸ ಎಲ್ಲ ಇತ್ತು.

'ಲೇಡೀಸ್ ಹಾಸ್ಟೆಲ್' ಹಾಸ್ಟೆಲೊಂದರ ಸುತ್ತ ಹಲವು ವಿವರಗಳನ್ನು ಹೊಂದಿಸಿಕೊಂಡಿದ್ದ ಕಥೆ. ಘಟನೆಗಳ ತುಣುಕುಗಳನ್ನು ಪೋಣಿಸಿದ ಹಾಗಿತ್ತು. ಹಾಸ್ಯ ನಟ ಮೆಹಮೂದ್ ಅಭಿನಯಿಸಿದ್ದರೆಂಬುದೇ ಹೆಗ್ಗಳಿಕೆ. ಅಶ್ಲೀಲವಿತ್ತೆಂದು ಆಕ್ಷೇಪಕ್ಕೆ ಗುರಿಯಾಯಿತು. ಹತ್ತಾರು ರೀತಿಯಲ್ಲಿ ಬೇಡವಾದ ಸುದ್ದಿಗಳನ್ನೇ ಮಾಡಿದ ಚಿತ್ರವಿದು.

'ಧರ್ಮಪತ್ನಿ' ಹಿಂದಿ ಚಿತ್ರವೊಂದರ ಪುನರವತರಣಿಕೆ. ಸುಖಸಂಸಾರದಲ್ಲಿ ರೋಗವೇ ಖಳನಾಗಿತ್ತು. ಒಂದನ್ನುಳಿಸಲು ಇನ್ನೊಂದರ ತ್ಯಾಗ, ಅದಕ್ಕಾಗಿಯೇ ರಹಸ್ಯವನ್ನು ಕಾಪಾಡುತ್ತಾ ಪಡುವ ಕಷ್ಟಗಳಿದ್ದವು. ಹಂಸಲೇಖಾ ರಾಗ ಸಂಯೋಜನೆಯಲ್ಲಿ 'ಅಮ್ಮ ಅಮ್ಮ....' ಗೀತೆ ಮೆಚ್ಚುವಂತಿತ್ತು. ಲಕ್ಷ್ಮೀ-ರಾಜೇಶ್, ವಿನೋದ್ ಆಳ್ವ-ತಾರಾ ಜೋಡಿಗಳಾಗಿ ಹೆಂಗರುಳುಗಳನ್ನು ಆಕರ್ಷಿಸಿದ್ದರು.

ವೈವಿಧ್ಯದಲ್ಲಿ ಮೇಲೆ ಚರ್ಚಿಸಿರುವ ಕೆಲವು ಚಿತ್ರಗಳು ಮಾತ್ರ ಮುಖ್ಯವಾಗಿದ್ದ ೧೯೮೮ರ ವರ್ಷ ಡಿಸೆಂಬರ್‌ನಲ್ಲಿ ಕೇರಳದಲ್ಲಿ ನಡೆದ ಕನ್ನಡ ಚಿತ್ರೋತ್ಸವದ ಯಶಸ್ಸಿನ ಸವಿನೆನಪಿನೊಂದಿಗೆ ೧೯೮೯ಕ್ಕೆ ಮುಂದಡಿಯಿಟ್ಟಿತು. ಈ ಚಿತ್ರೋತ್ಸವ ಒಂದು ರೀತಿಯಲ್ಲಿ ಹೊರರಾಜ್ಯಗಳಲ್ಲಿ ಕನ್ನಡದ ಕಂಪನ್ನು ಪಸರಿಸಲು ಆಯೋಜಿಸಲಾಗಿದ್ದ ಎರಡನೆಯ ಕಾರ್ಯಕ್ರಮ. ಇದಕ್ಕೆ ಮುಂಚೆ ೧೯೮೦ರ ಜನವರಿಯಲ್ಲಿ ಹೈದರಾಬಾದಿನಲ್ಲಿ 'ಭಾಗ್ಯದ ಲಕ್ಷ್ಮೀ ಬಾರಮ್ಮ' ಚಿತ್ರದ ಬಿಡುಗಡೆಯ ಮೂಲಕ ಇಂಥದೊಂದು ಪ್ರಯತ್ನ ನಡೆದಿತ್ತು. "ಇದಕ್ಕೂ ಮೊದಲು ೧೯೭೫-೭೬ ರಲ್ಲಿ ಒಂದು ಪ್ರಯತ್ನವಾಗಿತ್ತು. ಅಂದಿನ ಮುಖ್ಯಮಂತ್ರಿ ಗುಂಡೂರಾಯರ ನೇತೃತ್ವದಲ್ಲಿ ಮದರಾಸಿನಲ್ಲಿ ಕನ್ನಡ ಚಿತ್ರೋತ್ಸವ ಆಯಿತು. ದೇವಿ ಕಾಂಪ್ಲೆಕ್ಸ್‌ನಲ್ಲಿ ಮಿನಿ ಚಿತ್ರಮಂದಿರವೊಂದು ದೊರೆತಿತ್ತು. ನಾಲ್ಕೈದು ಕನ್ನಡ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಮದರಾಸು ಚಿತ್ರರಂಗದ ಇತಿಹಾಸದಲ್ಲೇ ಪ್ರಥಮವಾಗಿ ಈ ಚಿತ್ರಗಳಿಗೆ ತೆರಿಗೆ ವಿನಾಯಿತಿ ಕೊಟ್ಟರು. ಆದರೂ ಅಲ್ಲಿಯ ಕನ್ನಡಿಗರು ದುಡ್ಡು ಕೊಟ್ಟು ಚಿತ್ರ ನೋಡಲಿಲ್ಲ. ಅದರಿಂದಾಗಿ ಪ್ರತಿ ವಾರ ಚಿತ್ರ ಪ್ರದರ್ಶನ ನಡೆಸಬೇಕೆಂಬ, ವಿತರಕರು ಚಿತ್ರಗಳನ್ನು ಕೊಡಬೇಕು ಎಂಬ ಯೋಜನೆಗಳು ನಿಂತುಹೋದವು" ಎಂದು ವಿವರಿಸುತ್ತಾರೆ ಕೆ.ವಿ.ಗುಪ್ತ. ಮೂರನೆಯದು ಮದರಾಸಿನಲ್ಲಿ ೧೯೮೭ರ ಆಗಸ್ಟ್ ೨೭ ರಂದು ನಡೆಯಿತು. ಕೇರಳದ ಕನ್ನಡ ಚಿತ್ರೋತ್ಸವದ ಯಶಸ್ಸು ಅಂದಿನ ಫಿಲಂ ಚೇಂಬರ್ ಅಧ್ಯಕ್ಷ ಸಿ.ವಿ.ಎಲ್.ಶಾಸ್ತ್ರಿಯವರಿಗೆ ಸಲ್ಲುತ್ತದೆ.

ಕೇರಳ ಉತ್ಸವದಲ್ಲಿ ಆಯ್ದ ೨೧ ಶ್ರೇಷ್ಠ ಕನ್ನಡ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಕನ್ನಡ ಮತ್ತು ಮಲಯಾಳಂ ಚಿತ್ರೋದ್ಯಮ ಕುರಿತಂತೆ ಗಂಭೀರ ವಿಚಾರ ಸಂಕಿರಣ ನಡೆಯಿತು. ಉದ್ಘಾಟನಾ ಸಮಾರಂಭದಲ್ಲಿ ಎರಡೂ ರಾಜ್ಯಗಳ ಮುಖ್ಯ ಮಂತ್ರಿಗಳಾದ ಇ.ಕೆ.ನಯನಾರ್ ಹಾಗೂ ಎಸ್.ಆರ್.ಬೊಮ್ಮಾಯಿ ಭಾಗವಹಿಸಿದ್ದರು. ತಿರುವನಂತಪುರದ ವಿಶಾಲ ಕಲಾಭವನದಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಎರಡೂ ಭಾಷೆಯ ಹಿರಿಕಿರಿಯ ಕಲಾವಿದರು, ಕೇರಳದಲ್ಲಿ ನೆಲೆಸಿರುವ ಪ್ರತಿಷ್ಠಿತ ಕನ್ನಡಿಗರು ಹಾಜರಿದ್ದರು. ಕೇರಳದ ಸಂಸ್ಕೃತಿ ಸಚಿವ ರಾಮಕೃಷ್ಣನ್, ರಾಜಕುಮಾರ್, ಪ್ರೇಮ್‌ನಜೀರ್, ಲೋಕೇಶ್, ಮಲಯಾಳಂನ ಮಧು, ಕೇರಳದ ಮಹಾತ್ಮಗಾಂಧಿ ವಿಶ್ವವಿದ್ಯಾಲಯದ ಉಪಕುಲಪತಿ ಕನ್ನಡ ಸಾಹಿತಿ ಯು.ಆರ್.ಅನಂತಮೂರ್ತಿ,

ಕೇರಳದ ಮುಖ್ಯ ನ್ಯಾಯಾಧೀಶ ಕನ್ನಡಿಗ ಮಳೀಮಠ್ ಇವರೊಂದಿಗೆ ವೇದಿಕೆಯ ಮೇಲೆ ಕನ್ನಡದ ಹಿರಿಯ ಚಿತ್ರೋದ್ಯಮಿಗಳಾದ ಆರ್.ಲಕ್ಷ್ಮಣ್, ಎಂ.ಭಕ್ತವತ್ಸಲ ಇದ್ದರು. ಕನ್ನಡ ಮತ್ತು ಮಲಯಾಳಂ ಚಿತ್ರಗಳೆರಡರಲ್ಲೂ ಅಭಿನಯಿಸಿರುವ ಗೀತಾ ಅವೆರಡರ ಪ್ರತಿನಿಧಿಯಂತೆ ಹಾಜರಿದ್ದರು. ರಾಜಕುಮಾರ್, ಮಳೀಮಠ್, ಎಸ್.ಆರ್.ಬೊಮ್ಮಾಯಿ, ರಾಮಕೃಷ್ಣನ್ ಮತ್ತು ಇ.ಕೆ.ನಯನಾರ್ ಈ ಐವರು ಒಟ್ಟಿಗೆ ಐದು ದೀಪದ ಕಂಬಗಳನ್ನು ಬೆಳಗಿ ಚಿತ್ರೋತ್ಸವವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮಾತನಾಡಿದ ಕೇರಳದ ಮುಖ್ಯಮಂತ್ರಿಯವರು ''ಈ ಬಗೆಯ ಚಿತ್ರೋತ್ಸವಗಳು ಸಂಸ್ಕೃತಿಯ ವಿನಿಮಯವಾಗಿ ಯಾವಾಗಲೂ ನಡೆಯುತ್ತಿರಬೇಕು'' ಎಂದು ಹೇಳಿ, ಕನ್ನಡದ ಲೇಖಕ ನಿರಂಜನರನ್ನು ಸ್ಮರಿಸಿಕೊಂಡು, ಅವರ ಕೃತಿ 'ಚಿರಸ್ಮರಣೆ' ಮಲಯಾಳಂನಲ್ಲಿ 'ಮೀನ ಮಾಸತ್ತಿಲೆ ಸೂರ್ಯ' ಎಂಬ ಹೆಸರಿನಲ್ಲಿ ಚಲನಚಿತ್ರವಾಗಿದ್ದನ್ನು ನೆನೆದರು. ಏಳು ದಿನಗಳ ಕಾಲ ನಡೆದ ಈ ಉತ್ಸವವನ್ನು ಸಂಘಟಿಸಿದ್ದ ರೀತಿ ಭಾಗವಹಿಸಿದವರೆಲ್ಲರಿಗೂ ಮಧುರ ನೆನಪಾಗಿ ಉಳಿಯಿತು. ಉತ್ಸವಕ್ಕೆ ತಗುಲಿದ ವೆಚ್ಚವನ್ನು ಸಿ.ವಿ.ಎಲ್.ಶಾಸ್ತ್ರಿಗಳೇ ವಹಿಸಿಕೊಂಡಿದ್ದು ಉಲ್ಲೇಖಾರ್ಹ. ಕೇರಳದ ಸಂಘಟನೆಗಳು, ಚಲನಚಿತ್ರ ವಾಣಿಜ್ಯ ಮಂಡಳಿಯ ಸಂಪರ್ಕ ಸಾಧಿಸಿ ಇಂಥದೊಂದು ದೊಡ್ಡ ಕೆಲಸ ಸುಲಭವಾಗಿ ನಡೆದುಹೋಗಲು ನೆರವಾದವರು ಆಗ ಚಲನಚಿತ್ರ ವಾಣಿಜ್ಯ ಮಂಡಳಿಯ ಪದಾಧಿಕಾರಿಗಳೂ ಆಗಿದ್ದ ಜಿ.ಕೆ.ಕುಟ್ಟಿ.



(ಚಿತ್ರ ೧೩೮) ಕೇರಳದ ತಿರುವನಂತಪುರದಲ್ಲಿ ನಡೆದ ಕನ್ನಡ ಚಿತ್ರೋತ್ಸವವನ್ನು ಇ.ಕೆ.ನಯನಾರ್, ಎಸ್.ಆರ್.ಬೊಮ್ಮಾಯಿ, ರಾಮಕೃಷ್ಣನ್ ಮತ್ತು ರಾಜಕುಮಾರ್ ಅವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸುತ್ತಿರುವುದು.

ಕನ್ನಡ ಚಲನಚಿತ್ರ ಅಭಿಮಾನಿಗಳ ಮೂರನೆಯ ಸಮಾವೇಶ ಮದರಾಸಿನ ನಾರದ ಗಾನ ಸಭಾದಲ್ಲಿ ನಡೆಯಿತು. ಕೆ.ಬಾಲಚಂದರ್ ಉದ್ಘಾಟಿಸಿದ ಕಾರ್ಯಕ್ರಮದಲ್ಲಿ ವಿಷ್ಣುವರ್ಧನ್, ಚಾರುಹಾಸನ್, ಕಲ್ಯಾಣ್‌ಕುಮಾರ್, ಎಂ.ಭಕ್ತವತ್ಸಲ, ರವೀ, ಬಿ.ಎಂ.ವೆಂಕಟೇಶ್, ದ್ವಾರಕೀಶ್, ಶ್ರೀನಾಥ್, ಭಾರತಿ, ಗೀತಾ, ರಾಘವೇಂದ್ರ, ರಾಜಕುಮಾರ್, ಶೈಲಶ್ರೀ, ಅಬ್ಬಾಯಿನಾಯ್ಡು ಹಾಜರಿದ್ದರು. ಇದನ್ನು ಸಂಘಟಿಸಲು ಸಿ.ವಿ.ಎಲ್.ಶಾಸ್ತ್ರಿಯವರೊಂದಿಗೆ ಆರ್.ಎನ್.ಜಯಗೋಪಾಲ್ ಹಾಗೂ ಮದರಾಸಿನ ಕೆಲವು ಕನ್ನಡ ಸಂಘಟನೆಗಳು ಶ್ರಮಿಸಿದ್ದವು. ಈ ಸಂದರ್ಭದಲ್ಲಿ ಚಾರುಹಾಸನ್ ಒಳಗೊಂಡಂತೆ ಮಾತನಾಡಿದ ಕೆಲವರು, ಕನ್ನಡ ಚಿತ್ರಗಳ ಪ್ರದರ್ಶನವನ್ನು ನಿಯಮಿತವಾಗಿ ನಡೆಸಲು ಸಲಹೆಗಳನ್ನು ನೀಡಿದರು. 'ಸಾಧ್ಯವಾದಷ್ಟು ಉತ್ತಮ ಚಿತ್ರಗಳನ್ನು ಪ್ರದರ್ಶನಕ್ಕೆ ಆಯ್ಕೆ ಮಾಡುವುದು, ನೋಡುಗರ ಬಿಡುವಿನ ಅವಧಿಯನ್ನು ಹೊಂದಿಸಿ ಪ್ರದರ್ಶನದ ಅವಧಿಯನ್ನು ನಿಗದಿ ಮಾಡುವುದು, ಕನ್ನಡ ಚಿತ್ರಗಳ ಬಿಡುಗಡೆಯಾದಾಗಲೆಲ್ಲ ಪುಟ್ಟ ಕರಪತ್ರಗಳನ್ನು ಮುದ್ರಿಸಿ ಕನ್ನಡಿಗರ ಮನೆಮನೆಗೆ ಹಂಚುವುದು ಮತ್ತು ಇದೆಲ್ಲದರ ಜೊತೆಗೆ ಆಗಾಗ್ಗೆ ಒಟ್ಟಿಗೆ ಸೇರುವ ಸಂದರ್ಭಗಳನ್ನು ಸೃಷ್ಟಿಸಿಕೊಂಡು ಬೇರೆ ಬೇರೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು.'

ಹೊರ ರಾಜ್ಯಗಳಲ್ಲಿ ಕನ್ನಡ ಪ್ರಜ್ಞೆಯನ್ನು ಜಾಗೃತಗೊಳಿಸುವ ಪ್ರಯತ್ನಗಳಿಂದಾಗಿ ಅಲ್ಲಿ ಕನ್ನಡ ಚಿತ್ರಗಳನ್ನು ನಿಯಮಿತವಾಗಿ ಪ್ರದರ್ಶಿಸುವಂಥ ವ್ಯವಸ್ಥೆಯೇನೂ ಆಗದಿದ್ದರೂ ಅಲ್ಲಿ ನೆಲೆಸಿರುವ ಕನ್ನಡಿಗರಿಗೆ ಕನ್ನಡದ ನೆನಪನ್ನು ಮಾಡಿಕೊಡುವ ಕೆಲಸವಂತೂ ಆಯಿತು. ಕನ್ನಡದ ಕೆಲಸದ ಸಂಭ್ರಮದ ನೆನಪಿನ ಜೊತೆಗೆ ದುರಂತಗಳೂ ಜೊತೆಗೂಡಿದವು. ಸದಭಿರುಚಿಯ ಚಿತ್ರಗಳನ್ನು ನಿರ್ಮಿಸಿದ ಸಹೃದಯಿ ಎಂ.ಕೆ.ಬಾಲಾಜಿಸಿಂಗ್ ೧೯೮೮ರ ಜೂನ್‌ನಲ್ಲಿ ನಿಧನರಾದರೆ, ೧೯೮೯ರ ಜನವರಿ ೧೧ರ ರಾತ್ರಿ ೫೦೦ ಕ್ಕೂ ಹೆಚ್ಚು ಚಿತ್ರಗಳಿಗೆ ಸಂಗೀತ ನೀಡಿದ್ದ ಸತ್ಯಂ ಹಾಗೂ ಜನವರಿ ೧೩ರಂದು ಕನ್ನಡ ಚಿತ್ರೋದ್ಯಮದ ದಿಗ್ಗಜ ಹುಣಸೂರು ಕೃಷ್ಣಮೂರ್ತಿ ಇನ್ನಿಲ್ಲವಾದರು.

ಹುಣಸೂರು ಕೃಷ್ಣಮೂರ್ತಿ ರಾಜ್ಯ ಸರ್ಕಾರದ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ಪಡೆದ ಮೊದಲಿಗರು. ಸರ್ಕಾರದ ಸಮಾರಂಭಕ್ಕೂ ಮೊದಲೇ ಅವರಿಗೆ ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ಮೈಸೂರಿನಲ್ಲಿ ವಾರ್ತಾಸಚಿವ ಎಂ.ಪಿ.ಪ್ರಕಾಶ್, ರಾಜಕುಮಾರ್, ಹಾ.ಮಾ.ನಾಯಕ್, ಅಂದು ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದ ಟಿ.ರಾಮಕೃಷ್ಣ ಮತ್ತಿತರ ಗಣ್ಯರ ಸಮಕ್ಷಮ ಅದ್ದೂರಿ ಸನ್ಮಾನ ಏರ್ಪಡಿಸಿತ್ತು.

ಇಂದಿರಾ ಗಾಂಧಿ ಹಂತಕರು ನೇಣಿಗೆ ಹೋದರು, ಸಫ್ದರ್ ಹಶ್ಮಿ ಅವರನ್ನು ಬೀದಿ ನಾಟಕ ಆಡುತ್ತಿರುವಾಗಲೇ ಹತ್ಯೆಗೈದರು, ರಾಮಮಂದಿರಕ್ಕೆ ಶಿಲಾನ್ಯಾಸ ಮಾಡಿದ್ದನ್ನು ಅನುಮತಿಸದ ರಾಜೀವ್ ಗಾಂಧಿ ಟೀಕೆಗಳನ್ನು ಎದುರಿಸಬೇಕಾಯಿತು, ಇವಿಷ್ಟು ೧೯೮೧ರ ರಾಷ್ಟ್ರ ರಾಜಕಾರಣದ ಮುಖ್ಯಾಂಶಗಳು.

ಸೆಂಟ್ರಲ್ ಬೋರ್ಡ್ ಆಫ್ ಫಿಲಂ ಸರ್ಟಿಫಿಕೇಷನ್ ಈ ವರ್ಷ ೧೨೬೮ ವೀಡಿಯೋ, ೪೮ ಪೂರ್ಣಾವಧಿ ಚಿತ್ರಗಳು, ೬೧೫ ವಿದೇಶೀ ಕಿರುಚಿತ್ರಗಳಿಗೆ ಅನುಮತಿ ನೀಡಿತು.

ಪ್ರೀಮಿಯರ್ ಸ್ಟುಡಿಯೋ ಅಗ್ನಿದುರಂತ ಸಂಭವಿಸಿದ್ದು ಚಿತ್ರೋದ್ಯಮ ಕಂಡ ಮಹಾದುರಂತ. ಭಾರತದ ಚಿತ್ರೀಕರಣದ ಇತಿಹಾಸದಲ್ಲಷ್ಟೇ ಅಲ್ಲದೆ ಕನ್ನಡ ಚಲನಚಿತ್ರ ಇತಿಹಾಸದ ಕರಾಳ ನೆನಪು.

ಮೈಸೂರಿನ ಪ್ರೀಮಿಯರ್ ಸ್ಟುಡಿಯೋದಲ್ಲಿ ೧೯೮೯ರ ಫೆಬ್ರವರಿ ೮ರಂದು ಈ ದುರಂತ ಸಂಭವಿಸಿತು. ಹಿಂದಿಯ ಜನಪ್ರಿಯ ನಾಯಕನಟ ಫಿರೋಜ್‌ಖಾನ್ ಸೋದರ ಸಂಜಯ್‌ಖಾನ್ ಮೆಗಾ ಹಿಂದಿ ಟಿ.ವಿ. ಧಾರಾವಾಹಿ 'ಸ್ವೋರ್ಡ್ ಆಫ್ ಟಿಪ್ಪು'ಗೆ ಚಿತ್ರೀಕರಣ ನಡೆಸುತ್ತಿದ್ದಾಗ ಇದ್ದಕ್ಕಿದ್ದಂತೆ ಸ್ಟುಡಿಯೋದಲ್ಲಿ ಬೆಂಕಿ ಕಾಣಿಸಿಕೊಂಡು ಎಲ್ಲ ಕಡೆ ವ್ಯಾಪಿಸಿಕೊಂಡಿತು. ಏನು ನಡೆಯುತ್ತಿದೆ ಎಂದು ಅರ್ಥವಾಗುವಷ್ಟರಲ್ಲಿ ೨೮ ಮಂದಿ ಜೀವಂತ ದಹಿಸಿಹೋದರು. ೧೦೦ಕ್ಕೂ ಹೆಚ್ಚು ಜನ ಗಾಯಗೊಂಡರು. ಗಾಯಗೊಂಡವರನ್ನು ಆಸ್ಪತ್ರೆಗೆ ಸೇರಿಸುವುದರಲ್ಲಿ ಮತ್ತೆ ೨೨ ಮಂದಿ ಕೊನೆಯುಸಿರೆಳೆದರೆ, ಸುಮಾರು ೧೦೦ ಮಂದಿಗೆ ಖಾಯಂ ಅಂಗವೈಕಲ್ಯ ಉಂಟಾಯಿತು. ಸರ್ಕಾರ ಈ ಅಗ್ನಿದುರಂತದ ಬಗ್ಗೆ ತನಿಖೆಗೆ ಆಜ್ಞಾಪಿಸಿತು. ಸತ್ತ ಮತ್ತು ಗಾಯಗೊಂಡವರ ಕುಟುಂಬಗಳಿಗೆ ಪರಿಹಾರ ಕೊಡಿಸಲು ನ್ಯಾಯಾಲಯದಲ್ಲಿ ಹೂಡಿದ ಮೊಕದ್ದಮೆ ಸುಮಾರು ಐದು ವರ್ಷ ನಡೆಯಿತು. ದುರಂತದಲ್ಲಿ ಟಿ.ವಿ. ಸರಣಿ ನಿರ್ದೇಶಕ-ನಿರ್ಮಾಪಕ ಸಂಜಯ್‌ಖಾನ್‌ರಿಗೆ ಗಾಯಗಳಾಗಿ ನಂತರ ಅವರು ಮುಖಕ್ಕೆ ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕೊಂಡು ಮುಂದಿನ ಕಂತುಗಳಲ್ಲಿ ಅಭಿನಯಿಸಿದರು. ಸತ್ತವರಲ್ಲಿ ಕಡು ಬಡವರಾಗಿದ್ದ ನಿರ್ಮಾಣ ಸಹಾಯಕರು, ಸಹಕಲಾವಿದರೂ ಇದ್ದರು. ಸಿ.ವಿ.ಎಲ್.ಶಾಸ್ತ್ರಿ, ಸಾ.ರಾ.ಗೋವಿಂದು ಮತ್ತು ನಟ ಅಶೋಕ್ ನೊಂದವರ ಮನೆಮನೆಗೂ ಭೇಟಿ ನೀಡಿ ಸಾಂತ್ವನ ಹೇಳಿದರು. ತಕ್ಷಣದ ನೆರವಿಗೆಂದು ಪುಟ್ಟ ಮೊತ್ತವನ್ನೂ ಕೊಟ್ಟರು. ಸ್ಟುಡಿಯೋ ಮಾಲೀಕರು ಅಥವಾ ಧಾರಾವಾಹಿ ನಿರ್ಮಾಪಕರಿಬ್ಬರಲ್ಲಿ ಯಾರ ಅಜಾಗರೂಕತೆಯಿಂದಾಗಿ ಈ ದುರಂತ ಸಂಭವಿಸಿತು ಎಂಬ ಬಗ್ಗೆ ಪತ್ರಿಕೆ ಹಾಗೂ ಸಾರ್ವಜನಿಕರಲ್ಲಿ ಒಂದು ವರ್ಷ ಕಾಲ ನಿರಂತರವಾಗಿ ಚರ್ಚೆ ನಡೆಯುತ್ತಲೇ ಇತ್ತು. ಈ ದುರಂತದ ಪರಿಣಾಮದಿಂದಾಗಿ ಚಿತ್ರೋದ್ಯಮದಲ್ಲಿ ಸುಮಾರು ತಿಂಗಳುಗಳ ಕಾಲ ಮಂಕು ವಾತಾವರಣ ಕವಿದುಕೊಂಡಿತ್ತು.



(ಚಿತ್ರ ೧೩೯) 'ಸ್ವೋರ್ಡ್ ಆಫ್ ಟಿಪ್ಪು' ಹಿಂದಿ ಧಾರಾವಾಹಿಯ ಚಿತ್ರೀಕರಣ ಸಂದರ್ಭದಲ್ಲಿ ನಡೆದ ಅಗ್ನಿ ದುರಂತದಲ್ಲಿ ನಾಶವಾಗಿರುವ ಮೈಸೂರು ಪ್ರೀಮಿಯರ್ ಸ್ಟುಡಿಯೋದ ಸೆಟ್.

ಅಂಬರೀಷ್ ಕನ್ನಡ ಚಿತ್ರರಂಗದಲ್ಲಿ ಗಟ್ಟಿ ನೆಲೆ ಕಂಡುಕೊಂಡು ಸುಮಾರು ಹತ್ತು ವರ್ಷಗಳಾಗಿತ್ತು. 'ತನ್ನ ಮಾನವೀಯ ನಡವಳಿಕೆಯಿಂದ ಉಳಿದು, ಬೆಳೆದ ನಟ' ಎಂಬುದು ಇವರನ್ನು ಕುರಿತು ಹೇಳುವಾಗ ಬಳಸುತ್ತಿದ್ದ ಮಾತು. ೧೯೮೨ ರಲ್ಲಿ ತೆರೆಕಂಡ 'ಅಂತ'ದಿಂದ ಉತ್ಕರ್ಷದ ದಿನಗಳನ್ನು ಕಾಣತೊಡಗಿದರು ಅಂಬರೀಷ್. ಅವರನ್ನು ಅರಸಿ ಬಂದ ಪಾತ್ರಗಳಲ್ಲಿ ಬಹು ಸಂಖ್ಯೆಯವು ವ್ಯವಸ್ಥೆಯ ವಿರುದ್ಧ ಹೋರಾಡುವಂಥವು. ರಾಜಕೀಯ ಚಿತ್ರದಲ್ಲಿ ಬಂಡೇಳುವ ಯುವಕನ ಪಾತ್ರವಿದ್ದರೆ ಅದಕ್ಕೆ ಅಂಬರೀಷ್ ಸರಿ ಎಂಬ ಮಾತು ೧೯೮೦ರ ದಶಕದಾದ್ಯಂತ ಚಲಾವಣೆಯಲ್ಲಿತ್ತು. ಇವರು ಅಭಿನಯಿಸಿದ ಸಾಲು ಸಾಲು ರಾಜಕೀಯ ಚಿತ್ರಗಳಲ್ಲಿ ಸಾಕಷ್ಟು ಜೊಳ್ಳಿದ್ದರೂ 'ಅಂತ', 'ಅಜಿತ್', 'ಚಕ್ರವ್ಯೂಹ', 'ಪ್ರಜಾಪ್ರಭುತ್ವ', 'ಒಂಟಿ ಧ್ವನಿ', 'ನವ ಭಾರತ', 'ನ್ಯೂಡೆಲ್ಲಿ', 'ಮಿಸ್ಟರ್ ರಾಜಾ' ಗಮನಾರ್ಹ. ಇವಕ್ಕಿಂತ ಭಿನ್ನ ಪಾತ್ರಗಳಿದ್ದ ಚಿತ್ರಗಳ ಪೈಕಿ 'ಸಂಸಾರ ನೌಕೆ', 'ಶುಭ ಮಂಗಳ', 'ರಂಗನಾಯಕಿ', 'ಪಡುವಾರಳ್ಳಿ ಪಾಂಡವರು', 'ಒಲವಿನ ಉಡುಗೊರೆ', 'ಅಮರ ಜ್ಯೋತಿ', 'ಸ್ನೇಹ ಸಂಬಂಧ', 'ಮಮತೆಯ ಮಡಿಲು', 'ಹೃದಯ ಹಾಡಿತು' ಮುಖ್ಯವಾದವು.

'ಪ್ರೀಮಿಯರ್ ದುರಂತ' ಎಂದೇ ಖ್ಯಾತವಾದ ಈ ದುರಂತ ಘಟಿಸಿದ ನಂತರದ ದಿನಗಳಲ್ಲಾಗಿದ್ದರೆ ಮೈಸೂರಿನವರೇ ಆಗಿದ್ದ ಅಂಬರೀಷ್ ತಮ್ಮ ಶತಚಿತ್ರ ಸಮಾರಂಭವನ್ನು ಏರ್ಪಡಿಸಲು ಒಪ್ಪಿಕೊಳ್ಳುತ್ತಿರಲಿಲ್ಲವೇನೋ ? ಆದರೆ ಅದು ಜನವರಿ ತಿಂಗಳ ಆರಂಭದಲ್ಲಿಯೇ ನಡೆದು ಹೋಗಿತ್ತು. ಹಾಗೆ ನೋಡಿದರೆ ಅಂಬರೀಷ್ ೫೦, ೧೦೦, ೧೫೦ ಇಂಥ ಸಂಖ್ಯೆಗಳ ಬಗ್ಗೆ ತಲೆಕೆಡಿಸಿಕೊಳ್ಳುವ ಸ್ವಭಾವದವರಲ್ಲ. ಇಲ್ಲವಾದರೆ ಅವರ ಅಭಿನಯದಲ್ಲಿ ಬಿಡುಗಡೆಯಾದ ಚಿತ್ರಗಳ ಸಂಖ್ಯೆ ೧೦೭ನ್ನು ದಾಟಿದ ದಿನಗಳಲ್ಲಿ ೧೦೮ನೆಯ ಚಿತ್ರವನ್ನು ೧೦೦ ಎಂದು ಘೋಷಿಸಿಕೊಂಡು ಸಮಾರಂಭವನ್ನು ಆಚರಿಸಿಕೊಳ್ಳುತ್ತಿರಲಿಲ್ಲ. ಇಂಥ ವ್ಯಕ್ತಿತ್ವದ ಅಂಬರೀಷ್ ಅವರನ್ನು ಅಂಥದೊಂದು ೧೦೦ರ ಆಚರಣೆಗೆ ಒಪ್ಪಿಸಿದವರು 'ಹಾಂಕಾಂಗ್‌ನಲ್ಲಿ ಏಜೆಂಟ್ ಅಮರ್' ಚಿತ್ರದ ನಿರ್ಮಾಪಕ, ನಿರ್ದೇಶಕರು. ಆದರೆ ಅಂದುಕೊಂಡದ್ದೆಲ್ಲ ಆಗದಿರುವ ಚಿತ್ರರಂಗದಲ್ಲಿ ಅಂದು ಆಗಿದ್ದು ಮಾತ್ರ ರಾಜಕೀಯ ದಿಗ್ಗಜರ ಭರ್ಜರಿ ಸಮಾಗಮ. ಬೆಂಗಳೂರಿನ ನರ್ತಕಿ ಚಿತ್ರಮಂದಿರದ ಆವರಣವೆಲ್ಲ ಅಂಬರೀಷ್ ಅಭಿಮಾನಿಗಳಿಂದ ತುಂಬಿಹೋಗಿತ್ತು. ಮುಖ್ಯಮಂತ್ರಿ ಎಸ್.ಆರ್.ಬೊಮ್ಮಾಯಿ, ಹೆಚ್.ಡಿ.ದೇವೇಗೌಡ, ಆರ್.ಗುಂಡೂರಾವ್, ಎಂ.ವೀರಪ್ಪಮೊಯ್ಲಿ, ಜೀವರಾಜ್‌ಆಳ್ವ, ಆರ್.ವಿ.ದೇಶಪಾಂಡೆ ಅಂಬರೀಷ್‌ರನ್ನು ಅಭಿನಂದಿಸಲು ಬಂದಿದ್ದರು. ಇವರೆಲ್ಲ ಒಟ್ಟಿಗೆ ವೇದಿಕೆಯ ಮೇಲೆ ಇದ್ದ ದೃಶ್ಯ ಮುಂದಿನ ದಿನಗಳಲ್ಲಿ ಅಂಬರೀಷ್ ತುಳಿಯಲಿರುವ ರಾಜಕೀಯ ದಾರಿಯ ದಿಕ್ಸೂಚಿಯೆಂಬಂತಿತ್ತು. ಎಲ್ಲಾ ಪಕ್ಷಗಳ ಮುಖಂಡರುಗಳೊಂದಿಗೆ ರಾಜಕುಮಾರ್, ವಿಷ್ಣುವರ್ಧನ್, ದ್ವಾರಕೀಶ್, ಶ್ರೀನಾಥ್ ಸೇರಿದಂತೆ ಉದ್ಯಮದ ಹಿರಿ-ಕಿರಿಯರೆಲ್ಲ ನೆರೆದಿದ್ದದ್ದು ಸಾರ್ವಜನಿಕ ಬದುಕಿನಲ್ಲಿ ಅಂಬರೀಷ್‌ರವರು ಪಡೆದುಕೊಂಡಿದ್ದ ಗುಣವಂತಿಕೆಗೆ ಸಾಕ್ಷಿಯಾಗಿತ್ತು.

ಅಂಬರೀಷ್ ಶತಚಿತ್ರಗಳ ಸಮಾರಂಭ ಅವರ ಚಲನಚಿತ್ರ ಬದುಕಿನ ಹಾಗೆ ಅದು ಹೋದಂತೆಲ್ಲಾ ನಡೆಯಿತು. ಕಾರ್ಯಕ್ರಮ ಮುಗಿದ ಮೇಲೆ 'ಹಾಂಕಾಂಗ್‌ನಲ್ಲಿ ಏಜೆಂಟ್ ಅಮರ್' ಚಿತ್ರವನ್ನು ಅಂದು ಹಾಜರಿದ್ದ ರಾಜಕಾರಣಿಗಳೆಲ್ಲ ಬಿಡುವಾಗಿ ಕುಳಿತು ಪೂರ್ತಿಯಾಗಿ ವೀಕ್ಷಿಸಿದ್ದೊಂದು ವಿಶೇಷ. ಚಿತ್ರದ ವಸ್ತು ಮಕ್ಕಳ ಸಾಹಸ ಚಿತ್ರವನ್ನು ಹೋಲುವಂಥದ್ದು. ಭಾರತದ ವಿಜ್ಞಾನಿಯೊಬ್ಬ ಕಂಡುಹಿಡಿದಿರುವ ಆಧುನಿಕ ಬಾಂಬ್‌ನ ನಿರ್ಮಾಣ ಸೂತ್ರವನ್ನು ಹಾಂಕಾಂಗ್‌ನಲ್ಲಿ ನೆಲೆಸಿರುವ ಭಾರತೀಯ ದುಷ್ಟನೊಬ್ಬ ವಶಪಡಿಸಿಕೊಳ್ಳಲು ನಡೆಸುವ ಕಸರತ್ತುಗಳು, ಇದನ್ನು ಏಜೆಂಟ್ ಅಮರ್ ಧ್ವಂಸ ಮಾಡುವ ಸಾಹಸವೇ ಚಿತ್ರದ ವಸ್ತು. ಇದನ್ನು ಜೋಸೈಮನ್ ನಿರೂಪಿಸಿದ ರೀತಿಯಲ್ಲಿ ವಿಶೇಷವೇನೂ ಇರಲಿಲ್ಲ. ಈ ಚಿತ್ರದ ನಿರ್ಮಾಪಕರಲ್ಲಿ ಒಬ್ಬರು ನಟ.

'ಯುದ್ಧಕಾಂಡ' ಹಿಂದಿಯ 'ಮೇರಿ ಜಂಗ್' ಚಿತ್ರವನ್ನು ಹೋಲುತ್ತಿತ್ತು. ನಿರ್ಮಾಪಕರು ಪಿ.ರಾಜಕುಮಾರ್. ನಿರ್ದೇಶಕರು ಕೆ.ವಿ.ರಾಜು. ಶ್ರೀಮಂತ ಚಿತ್ರಿಕೆಗಳು, ಮುಖ್ಯವಾಗಿ ಸಾವಿರಾರು ಬಾಟಲುಗಳನ್ನು, ಗಾಜುಗಳನ್ನು ಒಡೆಯುವುದರಲ್ಲೇ ದೃಶ್ಯವೈಭವವನ್ನು ಕಾಣಿಸುವ ಪ್ರಯತ್ನವಿತ್ತು. ಮುಂದೆ ರವಿಚಂದ್ರನ್ ಅಭಿನಯದ ಚಿತ್ರಗಳಲ್ಲಿ ಇದು ಒಂದು ಪರಂಪರೆಯ ಹಾಗೆ ನಡೆದುಕೊಂಡು ಬಂತು. ಸೇಡು, ಪ್ರತೀಕಾರಗಳೇ ಪ್ರಧಾನವಾದ ಕಥಾವಸ್ತು. ಭಾರತಿ, ಶ್ರೀನಿವಾಸಮೂರ್ತಿ, ಮಾ।ಮಂಜುನಾಥ್ ಅಭಿನಯವನ್ನು ಬಹುವಾಗಿ ಮೆಚ್ಚಿಕೊಳ್ಳಲಾಗಿತ್ತು. ಹಂಸಲೇಖಾ ಸಂಗೀತದ ಒಂದೆರಡು ಹಾಡುಗಳು ಜನಪ್ರಿಯವಾದವು. ಸಾಹಸ ದೃಶ್ಯಗಳನ್ನು ವಿಶೇಷವಾಗಿ ಅಳವಡಿಸಿದ್ದಲ್ಲದೆ ಒಂದೆರಡು ಸಾಹಸ ಸನ್ನಿವೇಶಗಳು ನಡೆದಿರುವಾಗಲೇ ಈ ಭಾಗದ ಸಾಹಸ ನಿರ್ದೇಶನ ವಿ.ರವಿಚಂದ್ರನ್ ಅವರದು ಎಂದು ಹೇಳುವ ಶೀರ್ಷಿಕೆಯೂ ಬಂದಿತು. ಇದೊಂದು ಹೊಸ ವಿಧಾನವಾಗಿತ್ತು.



(ಚಿತ್ರ ೧೪೦) 'ಯುದ್ಧಕಾಂಡ' ಚಿತ್ರದಲ್ಲಿ ಶ್ರೀನಿವಾಸಮೂರ್ತಿ, ಮಾ।ಚೇತನ್ ಮತ್ತು ಭಾರತಿ

ವಿಶೇಷಗಳು, ದಾಖಲೆಗಳು ಕಾಲಗರ್ಭದಲ್ಲಿ ಹುದುಗಿರುತ್ತವೆಯೇನೋ. ಅವು ಆಶ್ಚರ್ಯಕರವಾಗಿ 'ನಂಜುಂಡಿ ಕಲ್ಯಾಣ' ಮೂಲಕ ಸೃಷ್ಟಿಯಾಗತೊಡಗಿದವು. 'ಇತಿಹಾಸ ಆಗುತ್ತದೆ, ಮಾಡುವುದಲ್ಲ'- ಎಂಬ ಮಾತಿಗೆ ಈ ಚಿತ್ರದ ಯಶಸ್ಸು ಒಂದು ನಿದರ್ಶನವಾಗಿ ದಾಖಲಾಯಿತು. ಈ ಚಿತ್ರದ ಕಥೆಯಲ್ಲಿ ವಿಶೇಷವೇನು ಇಲ್ಲ. ತಂದೆ ಮತ್ತು ಮಾವನ ನಡುವಿನ ಮನಸ್ತಾಪದಿಂದ ಕಡಿದುಹೋಗಿದ್ದ ಸಂಬಂಧವನ್ನು ನಾಯಕ ಮಾವನ ಮಗಳನ್ನು ವರಿಸಿ, ನಂತರ ಅವಳ ಮನವನ್ನು ಗೆದ್ದು ಒಂದು ಮಾಡುವುದಷ್ಟೆ ಚಿತ್ರದ ಕಥಾವಸ್ತು. ಆದರೆ ಬಿಡುಗಡೆಯಾದ ದಿನದಿಂದಲೇ ಚಿತ್ರವು ಜನರನ್ನು ಸೆಳೆಯತೊಡಗಿತು. ಬೆಂಗಳೂರಿನ ಸ್ಟೇಟ್ಸ್ ಚಿತ್ರಮಂದಿರದಲ್ಲಿ ಸತತವಾಗಿ ಒಂದು ವರ್ಷ ಪ್ರದರ್ಶನವಾದದ್ದಲ್ಲದೆ ಕನ್ನಡ ಚಿತ್ರರಂಗದ ೫೦ ವರ್ಷಗಳ ಇತಿಹಾಸದಲ್ಲಿ ಪ್ರಥಮ ಬಾರಿಗೆ ೩೦ ಕೇಂದ್ರಗಳಲ್ಲಿ ರಜತೋತ್ಸವ ಆಚರಿಸಿತು. ಇದರಲ್ಲಿ ಬೆಂಗಳೂರಿನವೇ ಆರು ಚಿತ್ರಮಂದಿರಗಳಿದ್ದವು. 'ನಂಜುಂಡಿ ಕಲ್ಯಾಣ'ದ ಅಭೂತಪೂರ್ವ ಯಶಸ್ಸಿಗೆ ಕಾರಣಗಳನ್ನು ಹುಡುಕುವ ಪ್ರಯತ್ನ ಸುಮಾರು ವರ್ಷಗಳ ಕಾಲ ಉದ್ಯಮದಲ್ಲಿ ನಡೆಯುತ್ತಲೇ ಇತ್ತು.

'ನಂಜುಂಡಿ ಕಲ್ಯಾಣ'ವ ಯಶಸ್ಸಿಗೆ ಮೇಲ್ನೋಟಕ್ಕೆ ಕಾಣುವ ಅಂಶಗಳಲ್ಲಿ ಲವಲವಿಕೆಯ ನಿರೂಪಣೆ, ರಂಜನೆಯೇ ಮುಖ್ಯವಾಗಿ ಕಾಣುತ್ತದೆ. ಈ ಚಿತ್ರದ ಮೂಲಕ ಕನ್ನಡ ತೆರೆಗೆ ಮಾಲಾಶ್ರೀಯಾಗಿ ಪರಿಚಯವಾದ ತೆಲುಗಿನ ಶ್ರೀದುರ್ಗಾ, ಆಗ್ಗೆ ತೆಲುಗಿನಲ್ಲಿ ಒಂದೆರಡು ಚಿತ್ರಗಳಲ್ಲಿ ಸೋದರಿ, ಗೆಳತಿ ಇಂಥ ಪುಟ್ಟ ಪಾತ್ರಗಳಲ್ಲಿ ಕಾಣಿಸಿಕೊಂಡಿದ್ದರು. ಆದರೆ ಅವರ ಒಳ್ಳೆಯ ದಿನಗಳು ಕನ್ನಡ ಚಿತ್ರರಂಗದಲ್ಲೇ ಇದ್ದವು. 'ನಂಜುಂಡಿ ಕಲ್ಯಾಣ' ಚಿತ್ರದ ಯಶಸ್ಸಿನೊಂದಿಗೆ ಕನ್ನಡದಲ್ಲಿ ಅತ್ಯಂತ ಬೇಡಿಕೆ ಸೃಷ್ಟಿಸಿಕೊಂಡು ಸುಮಾರು ನಾಲ್ಕು ವರ್ಷಗಳ ಕಾಲ ಏಕಮೇವಾದ್ವಿತೀಯ ನಾಯಕಿಯಾಗಿದ್ದರು. ಚಿತ್ರದಲ್ಲಿ ನಾಯಕನ ಮಾವನ ದುರಹಂಕಾರಿ ಮಗಳಾಗಿ ಮಾಲಾಶ್ರೀ ಲೀಲಾಜಾಲವಾಗಿ ತೋರಿದ ದಾರ್ಷ್ಟ್ಯ, ಠೀವಿ ಜನರಿಗೆ ಮೆಚ್ಚುಗೆಯಾಯಿತು. ಕೊಬ್ಬಿದವಳನ್ನು ಮಣಿಸಲು ನಾಯಕ ಸವಾಲು ಹಾಕಿ ಸೃಷ್ಟಿಸುವ ಸರಣಿ ಪ್ರಸಂಗಗಳು ಕೂಡ ರಂಜನೀಯವಾಗಿದ್ದವು. ಸಾಮಾನ್ಯವಾಗಿ ಇಂಥ ಎಲ್ಲ ಕಥೆಗಳಿಗೂ 'ಟೇಮಿಂಗ್ ಆಫ್ ದಿ ಶ್ರೂ' ಮೂಲ. ಅಂಥ ಕಥಾವಸ್ತುವಿದ್ದಾಗ ಗೆಲುವು ಸಹಜವೇ. ಅದೇ ವಸ್ತುವನ್ನು ಹಲವು ರೀತಿಯಲ್ಲಿ ನಿರೂಪಿಸಿರುವ ಉದಾಹರಣೆಗಳೇನಕವು ಇವೆ. ಚಿ.ಉದಯಶಂಕರ್ ಸಂಭಾಷಣೆ ಹಾಸ್ಯಮಯವಾಗಿದ್ದು, ಚುರುಕಾಗಿತ್ತು. ಉಪೇಂದ್ರಕುಮಾರ್ ಸಂಗೀತದಲ್ಲಿ ಭಂಗಿರಂಗ ಬರೆದ 'ಒಳಗೆ ಸೇರಿದರೆ ಗುಂಡು...' ಗೀತೆಯ ಜನಪ್ರಿಯತೆ ಚಲನಚಿತ್ರ ಸಂಗೀತ ಲೋಕದಲ್ಲಿ ಇಂದಿಗೂ ಒಂದು ದಾಖಲೆಯೇ ಆಗಿದೆ. 'ಗುಂಡಿನ ಹಾಡು' ಎಂದೇ ಜನಪ್ರಿಯವಾದ ಈ ಹಾಡಿನಿಂದಲೇ ಚಿತ್ರವು ಯಶಸ್ವಿಯಾಯಿತು ಎಂದು ವಾದಿಸುವವರೂ ಇದ್ದಾರೆ. ಈ ಹಾಡಿನಲ್ಲಿ ಮಾಲಾಶ್ರೀ ಮತ್ತೇರಿದವಳಂತೆ ಮಾದಕವಾಗಿ ತೂರಾಡುವುದು ಹಾಗೂ ಇನ್ನೊಂದು ದೃಶ್ಯದಲ್ಲಿ ಈಜುಡುಗೆಯುಟ್ಟು ರಸ್ತೆಯಲ್ಲೆಲ್ಲಾ ಓಡಾಡುವುದು ರಾಜ್ ಸಂಸ್ಥೆಯ ಚಿತ್ರಗಳಲ್ಲಿ ಯಾರೂ ನಿರೀಕ್ಷಿಸದಿದ್ದ ದೃಶ್ಯಗಳು ಎಂಬ ಟೀಕೆಯೂ ಕೇಳಿಬಂತು. ಆದರೆ ಈ ಹಾಡು ಗೀತರಚನೆಕಾರ ಭಂಗಿರಂಗ ಹಾಗೂ ಗಾಯಕಿ ಮಂಜುಳಾ ಗುರುರಾಜ್‌ರವರಿಗೆ ಹೊಸ ತಿರುವನ್ನೇ ತಂದುಕೊಟ್ಟವು. ಮತ್ತಿನ ಗೀತೆಯ ಪರಿಣಾಮಕ್ಕೆ ಹೋಲುವಂತೆ ಸಮರ್ಥವಾಗಿ ರಾಗ ಸಂಯೋಜಿಸಿದ್ದು ಕೂಡ ಉಪೇಂದ್ರಕುಮಾರ್ ಹೆಗ್ಗಳಿಕೆ. ಇದಕ್ಕೆ ಹೊಂದುವಂತೆ ಮಂಜುಳಾ ತಮ್ಮ ಗಾಯನದಲ್ಲಿ ಧ್ವನಿಯ ಏರಿಳಿತ, ಮಾದಕತೆ, ಗಡುಸನ್ನು ಸಾಧಿಸಿದರು. ಮಂಜುಳಾ ಹಿನ್ನೆಲೆ ಗಾಯನವನ್ನು ಆರಂಭಿಸಿದ್ದು ಜೋಸೈಮನ್ ಅವರ ನಿರ್ದೇಶನದ 'ರೌಡಿ ರಾಜ' (೧೯೮೩) ಚಿತ್ರದ 'ನಗುವುದನು ಕಲಿಯುವೆಯಾ...' ಗೀತೆಯಿಂದ. ಎಳೆಯ ವಯಸ್ಸಿನಿಂದಲೇ ವಾದ್ಯಗೋಷ್ಠಿಗಳಲ್ಲಿ ಹಾಡಲು ಆರಂಭಿಸಿದ ಇವರು ಹದಿನೈದನೇ ವಯಸ್ಸಿಗೇ ಮಂಜುಳಾ ಪಾರ್ಟಿ ಹೆಸರಿನ ತಂಡವನ್ನು ಕಟ್ಟಿ ಕಾರ್ಯಕ್ರಮಗಳನ್ನು ನೀಡುತ್ತಿದ್ದರು. ನಂತರ ಗಾಯಕ ಗುರು ಅವರ ಸೌಂಡ್ ಆಫ್ ಮ್ಯೂಸಿಕ್ ತಂಡವನ್ನು ಸೇರಿಕೊಂಡು ಗಾಯನವನ್ನೇ ವೃತ್ತಿ ಮಾಡಿಕೊಂಡರು.

ಪರಭಾಷಾ ಗಾಯಕಿಯರನ್ನೇ ಅವಲಂಬಿಸಿದ್ದ ಕನ್ನಡ ಚಿತ್ರರಂಗದಲ್ಲಿ 'ಗುಂಡಿನ ಹಾಡು' ತಂದುಕೊಟ್ಟ ಜನಪ್ರಿಯತೆಯಿಂದಾಗಿ ಕನ್ನಡದ ಮುಖ್ಯ ಹಿನ್ನೆಲೆ ಗಾಯಕಿಯಾಗಿ ಬೆಳೆದರು. ಇವರು ಹಾಡಿದ ಗುಂಡಿನ ಹಾಡಿನ ಇನ್ನೊಂದು ವಿಶೇಷವೆಂದರೆ ಅಬ್ಬರ ಮತ್ತು ವೇಗದ ತಾಳಗತಿಗೆ ಹೊರತಾಗಿ ಅತ್ಯಂತ ಮಂದ್ರಸ್ಥಾಯಿಯಲ್ಲಿಯೇ ಶ್ರೇಷ್ಠ ಪರಿಣಾಮವನ್ನು ಸಾಧಿಸಿದ್ದು. ಈ ಗೀತೆಯೊಂದಿಗೆ 'ನಿಜವ ನುಡಿಯಲೆ ನನ್ನಾಣೆ ನಲ್ಲೆ...' ಯುಗಳಗೀತೆ ಕೂಡ ಸಾಕಷ್ಟು ಜನಪ್ರಿಯವಾಯಿತು. ಈ ಚಿತ್ರದ ಸಂಗೀತಕ್ಕಾಗಿ ಉಪೇಂದ್ರಕುಮಾರ್‌ಗೆ ೧೯೮೮-೮೯ರ ರಾಜ್ಯ ಪ್ರಶಸ್ತಿ ಬಂದಿತು.

ಉಪೇಂದ್ರಕುಮಾರ್ ಚಿತ್ರಸಂಗೀತ ಬಗ್ಗೆ ಮಾತಾಡುತ್ತಾ : "ಒಳ್ಳೇ ಸಾಹಿತ್ಯವಿಲ್ಲದ ಹಾಡುಗಳಿಗೆ ನಾವು ಎಷ್ಟೇ ರಾಗ ಸಂಗೀತ ಒದಗಿಸಿದರೂ ಪ್ರಯೋಜನವಿಲ್ಲ. ಆದರೆ ಬರೀ ಸಾಹಿತ್ಯ ಒಂದು ಪದ್ಯ... ಅದನ್ನು ಒಳ್ಳೇ ಸಂಗೀತದಲ್ಲಿ ಅಲಂಕರಿಸಿದರೆ ಮಾತ್ರ ಆ ಸಾಹಿತ್ಯಕ್ಕೆ ಜೀವ ಸಿಗುತ್ತದೆ. ಆದ್ದರಿಂದ ಸಾಹಿತ್ಯ, ಸಂಗೀತ ಒಂದು ಮರದ ಎರಡು ಕೊಂಬೆಗಳಂತೆ.

"ಶಾಸ್ತ್ರೀಯ ಸಂಗೀತದ ಆಧಾರವಿಲ್ಲದೆ ಚಿತ್ರಸಂಗೀತ ಸಾಧ್ಯವಿಲ್ಲ ಎಂಬ ಮಾತು ಸರಿಯಲ್ಲ. ಚಿತ್ರಕ್ಕೆ ಬೇಕಾದುದು ಚಿತ್ರದ ಸನ್ನಿವೇಶಗಳಿಗೆ ಹೊಂದುವ ತರಹ ಒಂದು ಸ್ವರದ ಸಮುದಾಯ. ಶಾಸ್ತ್ರೀಯ ಸಂಗೀತವೇ ಎಲ್ಲ ಅಲ್ಲ".



(ಚಿತ್ರ ೧೪೧) 'ನಂಜುಂಡಿ ಕಲ್ಯಾಣ' ಚಿತ್ರದಲ್ಲಿ ಮಾಲಾಶ್ರೀ ಮತ್ತು ರಾಘವೇಂದ್ರರಾಜಕುಮಾರ್

'ನಂಜುಂಡಿ ಕಲ್ಯಾಣ' ಚಿತ್ರದ ಅದ್ಭುತ ಯಶಸ್ಸಿನ ದಾಖಲೆಗೆ ಇನ್ನೊಂದು ದುರಂತದ ಪುಟವೂ ಸೇರಿಕೊಂಡಿತು. ಸಹೃದಯಿ, ಸಜ್ಜನ ಚಿ.ಉದಯಶಂಕರ್‌ರವರ ಏಕಮುಖದ ಯಶಸ್ಸಿನ ಬದುಕು, ನೋವಿನ ಆರಂಭವನ್ನು ಪಡೆದುಕೊಂಡದ್ದು ಇದೇ ದಿನಗಳಲ್ಲಿ; ಚಿತ್ರದ ಶತದಿನದ ಸಮಾರಂಭ ನಿಗದಿಯಾಗಿದ್ದ ದಿನ. ಚೌಡಯ್ಯ ಸ್ಮಾರಕ ಭವನದಲ್ಲಿ ಬೆಳಿಗ್ಗೆ ೧೧ ಗಂಟೆಗೆ ನಡೆಯಲಿದ್ದ ಸಮಾರಂಭದಲ್ಲಿ ಭಾಗವಹಿಸಲು ಚಿತ್ರದಲ್ಲಿ ಅಭಿನಯಿಸಿದ್ದ ಉದಯೋನ್ಮುಖ ಪ್ರತಿಭೆ, ಉದಯಶಂಕರ್ ದ್ವಿತೀಯ ಪುತ್ರ ರವಿಶಂಕರ್, ನಿರ್ಮಾಪಕ ವಿಕ್ರಂ ಶ್ರೀನಿವಾಸ್ ಪುತ್ರ ಮುರಳಿ ಹಾಗೂ ಸ್ನೇಹಿತರೆಲ್ಲಾ ಜೊತೆಯಾಗಿ ರಾತ್ರಿಯೇ ಮದರಾಸಿನಿಂದ ಕಾರಿನಲ್ಲಿ ಹೊರಟಿದ್ದರು. ನಾಲ್ಕೈದು ಗಂಟೆಯ ರಾತ್ರಿ ಪ್ರಯಾಣದ ನಂತರ ಹಳೆಯ ಮದರಾಸು ರಸ್ತೆಯಲ್ಲಿ ಹೊಸಕೋಟೆಯ ದೊಡ್ಡಕೆರೆ ಏರಿಯ ಸೇತುವೆ ಬಳಿ ಕಾರು ವೇಗವಾಗಿ ಬರುತ್ತಿದ್ದಾಗ ನಿದ್ರೆಯ ಮಂಪರಿನಲ್ಲಿದ್ದ ಚಾಲಕನ ಹತೋಟಿ ತಪ್ಪಿ ಸೇತುವೆಗೆ ಢಿಕ್ಕಿ ಹೊಡೆಯಿತು. ಸ್ಥಳದಲ್ಲಿಯೇ ರವಿಶಂಕರ್ ಹಾಗೂ ಮುರಳಿ ಇಬ್ಬರೂ ದುರ್ಮರಣಕ್ಕೀಡಾದರು. ಉಳಿದವರು ಗಾಯಗಳೊಂದಿಗೆ ಪ್ರಾಣಾಪಾಯದಿಂದ ಪಾರಾದರು. ವಿಷಯ ಬೆಂಗಳೂರಿಗೆ ತಲುಪಲು ಮೂರು ಗಂಟೆಗಳಷ್ಟು ವಿಳಂಬವಾಯಿತು. ಸಮಾರಂಭವನ್ನು ಕೂಡಲೇ ರದ್ದುಪಡಿಸಿದ ರಾಜ್ ಸಂಸ್ಥೆ ಸುಮಾರು ತಿಂಗಳ ಕಾಲ ಶೋಕದಲ್ಲಿ



(ಚಿತ್ರ ೧೪೨) 'ತರ್ಕ' ಚಿತ್ರದಲ್ಲಿ ದೇವರಾಜ್ ಮತ್ತು ವನಿತಾವಾಸು

ಮುಳುಗಿಬಿಟ್ಟಿತ್ತು. ಚಿ.ಉದಯಶಂಕರ್ ಅವರಂತೂ ಈ ಘಟನೆಯ ನಂತರ ಎಂದಿನ ಲವಲವಿಕೆ, ಉತ್ಸಾಹಗಳನ್ನು ಕಳೆದುಕೊಂಡರು. ಇದೇ ಚಿತ್ರದ ರಜತೋತ್ಸವ ಸಮಾರಂಭ ಮತ್ತೆ ಚೌಡಯ್ಯದಲ್ಲಿ ನಡೆದಾಗ ಅವರು ಕಣ್ಣೀರು ಹಾಕುತ್ತಾ ಮನೆಯಲ್ಲೇ ಇದ್ದುಬಿಟ್ಟರು. ಎಲ್ಲಕ್ಕಿಂತ ದೊಡ್ಡ ನಷ್ಟವೆಂದರೆ ಆಗಷ್ಟೇ ಕಲಾವಿದನಾಗಿ ಪ್ರವರ್ಧಮಾನಕ್ಕೆ ಬರುತ್ತಿದ್ದ ರವಿಶಂಕರ್‌ರನ್ನು ಚಿತ್ರರಂಗ ಕಳೆದುಕೊಂಡದ್ದು.

'ತರ್ಕ' ತಾಂತ್ರಿಕ ಪರಿಣತಿಯುಳ್ಳ ಒಬ್ಬ ಸಮರ್ಥ ನಿರ್ದೇಶಕನನ್ನು ಪರಿಚಯಿಸಿದ ಚಿತ್ರ. ಈ ಚಿತ್ರದೊಂದಿಗೆ ಗಮನ ಸೆಳೆದ ಸುನಿಲ್‌ಕುಮಾರ್ ದೇಸಾಯಿ ಮುಂದಿನ ದಿನಗಳಲ್ಲಿ ಸಾಹಸ ಚಿತ್ರಗಳ ಸಾಲಿನಲ್ಲಿ ತಮ್ಮದೇ ಒಂದು ದಾರಿಯನ್ನು ರೂಪಿಸಿಕೊಂಡು ಕನ್ನಡದ ಯಶಸ್ವಿ ನಿರ್ದೇಶಕರೆನಿಸಿಕೊಂಡರು. 'ತರ್ಕ', ೧೯೯೦ ರಲ್ಲಿ ತೆರೆಕಂಡ 'ಉತ್ಕರ್ಷ' ಸೇರಿದಂತೆ ನಂತರದಲ್ಲಿ ಇವರು ನಿರ್ದೇಶಿಸಿದ ನಾಲ್ಕೈದು ಚಿತ್ರಗಳು ನಮ್ಮ ಸಂಸ್ಕೃತಿಗೆ ಹತ್ತಿರದವಲ್ಲ ಎನಿಸಿದರೂ ಒಂದು ವರ್ಗದ ಪ್ರೇಕ್ಷಕರನ್ನು ಮೋಡಿ ಮಾಡುವುದರಲ್ಲಿ ಯಶಸ್ವಿಯಾಗಿದ್ದವು. ಮಿತ ಎನಿಸುವಂತೆ ತೋರುವ, ಆದರೆ ಅತಿಯಾದ ಲೈಂಗಿಕ ದೃಶ್ಯಗಳು ಇವರ ಪ್ರತಿಯೊಂದು ಚಿತ್ರದಲ್ಲೂ ಇವೆ. ಅವು ಎಷ್ಟೋ ಬಾರಿ ಪರಪೀಡಕ ಮನಸ್ಸನ್ನು ಪ್ರತಿನಿಧಿಸುವಂತೆ ತೋರಿವೆ. ಇವರೇ ಬರೆದಿರುವ ಸಂಭಾಷಣೆ ಗ್ರಾಂಥಿಕವಾಗಿದ್ದು ಅದನ್ನು ಹೇಳಲು ಕಲಾವಿದರು ತಿಣುಕಾಡುವುದು ಕಾಣುತ್ತದೆ. ಇಷ್ಟೆಲ್ಲದರ ನಡುವೆಯೂ ಚಿತ್ರಕಥಾ ನಿರೂಪಣೆಯಲ್ಲಿ ದಿನ ಕಳೆದಂತೆ ಬಿಗಿಯನ್ನು ರೂಢಿಸಿಕೊಳ್ಳುತ್ತಾ ೯೦ರ ದಶಕದಲ್ಲಿ ದೇಸಾಯಿ ಒಂದೆರಡು ಉತ್ತಮ ಚಿತ್ರಗಳನ್ನು ನೀಡಿದ್ದಾರೆ. ಮುಖ್ಯವಾಗಿ ದೇಸಾಯಿ ಅತ್ಯುತ್ತಮ ಚಿತ್ರಕಥಾ ಲೇಖಕ ಎಂಬುದನ್ನು ಪ್ರಾರಂಭದಿಂದಲೂ ಸಾಬೀತು ಮಾಡುತ್ತಲೇ ಬಂದರು.

'ತರ್ಕ' ಶಂಕರ್‌ನಾಗ್ ಅಭಿನಯಿಸಿದ್ದ, ದೇಸಾಯಿ ಅವರ ಮೊದಲ ಚಿತ್ರ. ಬಿಗಿಯಾದ ಚಿತ್ರಕತೆಯೇ ಇದರ ಜೀವಾಳ. ಕುತೂಹಲ, ನೋಟಕನ ನಿರೀಕ್ಷೆಯನ್ನು ತಲೆಕೆಳಗಾಗಿಸುತ್ತಲೇ ಹೋಗುವ ತಿರುವು ಮುಖ್ಯ ನಿರೂಪಣಾ ತಂತ್ರವಾಗಿತ್ತು. ಈ ಚಿತ್ರದಲ್ಲೂ ಅಶ್ಲೀಲ ಅಥವಾ ಸ್ಯಾಡಿಸ್ಟ್ ಪ್ರವೃತ್ತಿ ಅನ್ನಿಸುವಂಥ ಅಂಶಗಳು ಇದ್ದವು. ಚಿತ್ರಕ್ಕೆ ಛಾಯಾಗ್ರಾಹಕ ರಾಜನ್, ಧ್ವನಿಗ್ರಾಹಕ ಕೃಷ್ಣಮೂರ್ತಿ, ಉತ್ತಮ ಚಿತ್ರಕಥೆಗಾಗಿ ಸುನೀಲ್ ಕುಮಾರ್ ದೇಸಾಯಿ ರಾಜ್ಯ ಪ್ರಶಸ್ತಿ ಪಡೆದರು.

ಅನಂತರದ 'ಉತ್ಕರ್ಷ' ವಿಕೃತ ಮನಸ್ಸಿನ ರೋಗಿಯೊಬ್ಬ ನಡೆಸುವ ಸರಣಿ ಕೊಲೆಗಳ ಕಥೆಯನ್ನು ಆಧರಿಸಿದೆ. ಈ ಚಿತ್ರದ ನಾಯಕ ಇಡೀ ಸ್ತ್ರೀಕುಲದ ಬಗ್ಗೆಯೇ ಸಂಶಯಗೊಂಡು, ತನಗೆ ಒಲಿದವರನ್ನೆಲ್ಲ ಕೊಲ್ಲುತ್ತಾನೆ. ಸ್ವಲ್ಪ ಮಟ್ಟಿಗೆ 'ರೆಡ್ ರೋಸಸ್' ಹೋಲಿಕೆಯಿದ್ದರೂ ದೇಸಾಯಿ ಚಿತ್ರಕಥೆ, ನಿರೂಪಣೆಯಲ್ಲಿ ಹೊಸತನವಿತ್ತು. ನಾಯಕನನ್ನು ಚಿತ್ರಕಲಾವಿದನೆಂದು ತೋರಿಸಿ, ಹಲವಾರು ಪೇಂಟಿಂಗ್ಸನ್ನು ತೋರಿಸಿದ್ದರು. ಉದ್ವಿಗ್ನ ಮನಸ್ಸನ್ನು ಪ್ರತಿನಿಧಿಸುವಲ್ಲಿ ಪಾತ್ರಧಾರಿ ದೇವರಾಜ್ 'ಬಣ್ಣದ ತಗಡಿನ ತುತ್ತೂರಿ...' ಎಂಬ ಶಿಶುಗೀತೆಯನ್ನು ಬಳಸುತ್ತಿದ್ದುದು, ಅವರ ಅಭಿನಯದಲ್ಲಾಗುತ್ತಿದ್ದ ಪರಿಪಕ್ವತೆ ಆತ ಅದ್ಭುತ ಕಲಾವಿದ ಎಂಬುದನ್ನು ಮತ್ತೆ ಮತ್ತೆ ಹೇಳುತ್ತಿತ್ತು. ಇಷ್ಟೆಲ್ಲ ಉತ್ತಮ ಅಂಶಗಳಿದ್ದೂ ಅದೊಂದು ಹಿಂಸೆ-ಲೈಂಗಿಕತೆ ಪ್ರಧಾನವಾಗಿದ್ದ ಚಿತ್ರವೆಂಬ ಆಪಾದನೆಗೆ ಗುರಿಯಾಯಿತು. ಮಹಿಳಾ ಸಂಘಟನೆಗಳು ಪ್ರತಿಭಟಿಸಿದವು. ಚಿತ್ರಕ್ಕೆ ಸಂಕಲನಕಾರ ಜನಾರ್ಧನ್ ರಾಜ್ಯ ಪ್ರಶಸ್ತಿ ಪಡೆದರು.

ಸುನೀಲ್‌ಕುಮಾರ್ ದೇಸಾಯಿ ನಿರ್ದೇಶಿಸಿದ ನಾಲ್ಕು ಚಿತ್ರಗಳಲ್ಲಿ ವಿಷ್ಣುವರ್ಧನ್ ಅಭಿನಯದ 'ಸಂಘರ್ಷ' ಬಿಟ್ಟರೆ ಇನ್ನುಳಿದ ಮೂರೂ ಚಿತ್ರಗಳಲ್ಲಿ ಹಾಡುಗಳು ಬಳಕೆಯಾಗಿರಲಿಲ್ಲ. ದೇಸಾಯಿ ತಮ್ಮ ಪ್ರಯೋಗಗಳಿಂದಾಗಿ ಹೆಸರಾದವರು. 'ನಿಷ್ಕರ್ಷ' ಚಿತ್ರದಲ್ಲಂತೂ ಅವರು ಜನಪ್ರಿಯ ಕಲಾವಿದರಾದ ವಿಷ್ಣುವರ್ಧನ್ ಮತ್ತು ಅನಂತ್‌ನಾಗ್ ಅವರನ್ನು ಬಳಸಿಯೂ ಒಂದು ವಿಶಿಷ್ಟ ಪ್ರಯೋಗವಾಗಿಸಿದ್ದು ಮಹತ್ವದ ಸಂಗತಿ.

ವಿಷ್ಣುವರ್ಧನ್ ಅಭಿನಯಿಸಿದ್ದ 'ಹೃದಯ ಗೀತೆ' ಭಾರ್ಗವ ನಿರ್ದೇಶಿಸಿದ್ದರು. ಬಾಕ್ಸ್ ಆಫೀಸ್‌ನಲ್ಲಿ ಗೆದ್ದ ಚಿತ್ರ. ಕೆಲವು ಕೇಂದ್ರಗಳಲ್ಲಿ ೫೦ಕ್ಕೂ ಹೆಚ್ಚು ದಿನ ಓಡಿದೆ ಎಂಬ ಹೆಗ್ಗಳಿಕೆಯಿತ್ತು. ಪ್ರೇಯಸಿಗಾಗಿ ವಿಷ್ಣುವರ್ಧನ್ ಹುಚ್ಚನಂತೆ ನಟಿಸಿದ್ದ ಭಾಗಗಳು ಅಭಿನಯದ ದೃಷ್ಟಿಯಿಂದ ಮೆಚ್ಚಾದರೆ, ವಿಷ್ಣುವರ್ಧನ್-ಖುಷ್ಬೂ ಈಜುಡುಗೆಯಲ್ಲಿದ್ದ ದೃಶ್ಯಗಳೂ ರಂಜನೀಯವೆಂದು ಹೇಳಲಾಗಿತ್ತು.

'ಗುರು' ಶ್ರೀಕಾಂತ್ ಸಂಸ್ಥೆಯ ಅದ್ದೂರಿ ಸಿನಿಮಾಸ್ಕೋಪ್ ಚಿತ್ರ. ಚಿತ್ರವನ್ನು ಶ್ರೀಕಾಂತ್ ನಹತಾ ನಿರ್ದೇಶಿಸಿದ್ದು ವಿಶೇಷ. ಹಾಡುಗಳ ಚಿತ್ರೀಕರಣ ಹಿಂದಿ ಚಿತ್ರರಂಗವನ್ನು ನೆನಪಿಸುವಷ್ಟು ಶ್ರೀಮಂತ. ಬಪ್ಪಿಲಹರಿ ಸಂಗೀತ ಕನ್ನಡದ ಜಾಯಮಾನಕ್ಕೆ ಒಗ್ಗುವುದಿಲ್ಲ. ಆದರೆ ಹಾಲಿವುಡ್, ಬಾಲಿವುಡ್‌ಗಳಿಗೆ ಮುಖ ಮಾಡಿ ನಿಂತಿರುವ ಪ್ರೇಕ್ಷಕರಿಗೆ ಇವೆಲ್ಲವೂ ಕನ್ನಡದಲ್ಲೂ ಇದೆ ಎಂದು ಹೇಳುವ ಅನಿವಾರ್ಯವಂತೂ ಎದುರಿಗಿದೆ. ಆ ದೃಷ್ಟಿಯಿಂದ ಇದು ಗಮನಾರ್ಹ ಪ್ರಯತ್ನ.

'ಬಿಡಿಸದ ಬಂಧ' ಎಂ.ಸಾಂಬಶಿವರಾವ್ ನಿರ್ಮಿಸಿದ ಚಿತ್ರ. ನಟ ಪ್ರಭಾಕರ್ ನಿರ್ದೇಶಿಸಿದರು. ಅವರೇ ಪೊಲೀಸ್ ಅಧಿಕಾರಿಯ ಪಾತ್ರದಲ್ಲಿ ಅಭಿನಯಿಸಿದ್ದರು. ಕ್ರಿಮಿನಲ್ ಲಾಯರ್ ಪಾತ್ರದಲ್ಲಿ ಸುಜಾತ, ಕುಖ್ಯಾತ ರೌಡಿಯಾಗಿ ಸುದರ್ಶನ್ ಇದ್ದರು. ಈ ಮೂವರ ನಡುವಣ ಸಂಘರ್ಷವೇ ಚಿತ್ರದ ಕೇಂದ್ರ. ಕಬೀರ್‌ಲಾಲ್ ಛಾಯಾಗ್ರಹಣದಲ್ಲಿ ಚಮತ್ಕಾರವಿತ್ತು.

'ತಾಯಿಗೊಬ್ಬ ತರ್ಲೆ ಮಗ' ಚಿತ್ರನಟರೇ ನಿರ್ಮಿಸಿದ ಚಿತ್ರ. ಶ್ರೀನಿವಾಸಮೂರ್ತಿ, ಜೈಜಗದೀಶ್ ನಿರ್ಮಾಪಕರು. ನಿರ್ದೇಶಕರು ಸಾಯಿಪ್ರಕಾಶ್. ಚಿತ್ರ ಯಶಸ್ವಿಯಾಯಿತು. ರಾಜ್ಯದ ಎಲ್ಲ ಕಡೆ ಬಿಡುಗಡೆಯಾಗಿತ್ತು. ಚಿತ್ರದಲ್ಲಿ ಹಾಸ್ಯಕ್ಕೆ ಪ್ರಾಧಾನ್ಯವಿತ್ತು. 'ಬಿ' 'ಸಿ' ಸೆಂಟರ್‌ಗಳಲ್ಲಿ ಚೆನ್ನಾಗಿ ಓಡಿತು.



(ಚಿತ್ರ ೧೪೩) 'ಸಂಕ್ರಾಂತಿ' ಚಿತ್ರದಲ್ಲಿ ಲೋಕೇಶ್ ಮತ್ತು ಸರಿತಾ



(ಚಿತ್ರ ೧೪೪) 'ಅನಂತನ ಅವಾಂತರ' ಚಿತ್ರದಲ್ಲಿ ಅಂಜಲಿ ಮತ್ತು ಕಾಶೀನಾಥ್

ಇದೇ ವರ್ಷ ಚಿತ್ರರಂಗಕ್ಕೆ ಕಾಲಿಟ್ಟ ಇನ್ನೊಬ್ಬ ಯುವ ನಿರ್ದೇಶಕರು ನಂಜುಂಡೇಗೌಡ. ರಾಜ್ಯ ರೈತ ಸಂಘದ ಹೋರಾಟದಲ್ಲಿ ತೊಡಗಿಕೊಂಡಿದ್ದ ಇವರು ಪಿ.ಲಂಕೇಶ್ ಹಾಗೂ ಕೆ.ಬಾಲಚಂದರ್ ಚಿತ್ರಗಳಲ್ಲಿ ಸಹಾಯಕ ನಿರ್ದೇಶಕರಾಗಿ ದುಡಿದು ನಾಗತಿಹಳ್ಳಿ ಚಂದ್ರಶೇಖರ್ ಅವರ 'ಬನ್ನೇರಿ' ಕಥೆಯನ್ನು ಆಧರಿಸಿದ 'ಸಂಕ್ರಾಂತಿ' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. ಆದರೆ ಬಿಡುಗಡೆಯ ತೊಡಕುಗಳಿಂದಾಗಿ ಇವರ 'ಅಮಾನುಷ' ಮೊದಲು ತೆರೆಕಂಡಿತು. ಈ ಚಿತ್ರದ ನಾಯಕ ಒಬ್ಬ ಪೊಲೀಸ್ ಇನ್ಸ್‌ಪೆಕ್ಟರ್. ಇವನು ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಶಿಕ್ಷಿಸಲಾಗದ ಅಪರಾಧಿಗಳನ್ನು ಮುಖವಾಡ ಹಾಕಿಕೊಂಡು ಕೊಲ್ಲುತ್ತಾ ಕಾನೂನಿನ ಗೆರೆಯ ಆಚೆಗೆ ನಿಂತುಕೊಂಡು ಸಾಮಾಜಿಕ ನ್ಯಾಯ ಒದಗಿಸಲು ಪ್ರಯತ್ನಿಸುತ್ತಾನೆ. ಕಾನೂನು ರಕ್ಷಕನೊಬ್ಬನನ್ನು ಹೀಗೆ ಚಿತ್ರಿಸಿದ್ದು ಸೆನ್ಸಾರ್‌ಗೆ ಪಥ್ಯವಾಗಲಿಲ್ಲ. ಚಿತ್ರ ದೆಹಲಿಯ ಮೆಟ್ಟಿಲು ಹತ್ತಿ ಟ್ರಿಬ್ಯುನಲ್‌ನಲ್ಲಿ 'ವಯಸ್ಕರ' ವೀಕ್ಷಣೆಯ ಚಿತ್ರವೆಂದು ಅನುಮತಿ ಪಡೆದುಕೊಂಡರೂ ಅಯಶಸ್ವಿಯಾಯಿತು. ನಿರೂಪಣೆಯಲ್ಲಿ ಬಿಗಿ ಇರಲಿಲ್ಲ. ಮುಖವಾಡ ಬಾಲಿಶವೆನಿಸುವಂತಿತ್ತು. ಆದರೆ 'ಸಂಕ್ರಾಂತಿ' ಗ್ರಾಮೀಣ ಬದುಕಿನ ಸಮರ್ಥ ಚಿತ್ರಣದಿಂದಾಗಿ ಗಮನ ಸೆಳೆಯಿತು. 'ಬೂತಯ್ಯನ ಮಗ ಅಯ್ಯು' ಚಿತ್ರದಲ್ಲಿ ವ್ಯಕ್ತಿಗತ ದ್ವೇಷ, ಪ್ರತಿಷ್ಠೆಯಿಂದ ತಮ್ಮ ಬದುಕನ್ನು ನಾಶಮಾಡಿಕೊಳ್ಳುವ ರೈತರಿದ್ದರೆ, 'ಸಂಕ್ರಾಂತಿ'ಯಲ್ಲಿ ರಕ್ತಗತವಾದ ಪಾಳೇಗಾರಿಕೆ ಮನೋಭಾವ ಹಾಗೂ ಆಧುನಿಕ ಭಾರತದ ರಾಜಕೀಯ ಪ್ರಜ್ಞೆಗೆ ಸಾಕ್ಷಿಯಾಗುವ ರೈತ ಕುಟುಂಬಗಳ ಚಿತ್ರಣವಿದೆ. ಗ್ರಾಮೀಣ ಪರಿಸರ, ಅಲ್ಲಿನ ಕ್ಷುಲ್ಲಕ ರಾಜಕೀಯ ಮತ್ತು ಕೃಷಿಯ ಕಷ್ಟ-ನಷ್ಟಗಳನ್ನು ನಿರೂಪಿಸುವುದರಲ್ಲಿ ಅದೇ ಪರಿಸರದಿಂದ ಬಂದಿದ್ದ ನಂಜುಂಡೇಗೌಡ ಯಶಸ್ವಿಯಾಗಿದ್ದರು. ಉಡಾಫೆ ಪ್ರವೃತ್ತಿಯ ಪುಡಾರಿಗಳು, ದಳ್ಳಾಳಿಗಳು ಪ್ರತಿ ಹಳ್ಳಿಯ ಮುಳ್ಳುಗಳಾಗಿ ಅಲ್ಲಿನ ನೆಮ್ಮದಿಯನ್ನು ಹಾಳುಮಾಡುತ್ತಿರುವುದನ್ನು ಈ ಚಿತ್ರದ 'ಪುಗಸಟ್ಟೆ' ಪಾತ್ರದ ಮೂಲಕ ಸಮರ್ಥವಾಗಿ ಬಿಂಬಿಸಿದ್ದರು. ಈ ಪಾತ್ರ ಕನ್ನಡ ಬೆಳ್ಳಿತೆರೆಗೆ ಒಂದು ಕೊಡುಗೆಯೂ ಆಗುವಂತೆ ಮೂಡಿ ಬಂದಿತ್ತು. 'ಬರ' ಚಿತ್ರದಲ್ಲಿ ಭೀಮೋಜಿ ಪಾತ್ರಕ್ಕೆ ಜೀವ ತುಂಬಿದ್ದ ಸಿ.ಆರ್.ಸಿಂಹ 'ಪುಗಸಟ್ಟೆ' ಪಾತ್ರದಲ್ಲೂ ಮಿಂಚಿದರು. ಲೋಕೇಶ್ ಮತ್ತು ಸರಿತಾ ಅವರ ಉತ್ತಮ ಅಭಿನಯವಿತ್ತು. ಸುಂದರರಾಜ್ ಸಾಮಾನ್ಯವಾಗಿ ಅವಕಾಶವಿದ್ದೂ ಎದ್ದುಕಾಣುವ ಪ್ರತ್ಯೇಕತೆ ತೋರಿದ್ದು ಕಡಿಮೆ. ಈ ಚಿತ್ರದಲ್ಲಿ ಅವರ ಪಾತ್ರ ನೆನಪಿನಲ್ಲುಳಿಯುವಂತಿತ್ತು. 'ಸಂಕ್ರಾಂತಿ' ೧೯೮೮-೮೯ರ ಮೂರು ರಾಜ್ಯ ಪ್ರಶಸ್ತಿಗಳನ್ನು ಪಡೆಯಿತು. ತೃತೀಯ ಅತ್ಯುತ್ತಮ ಚಿತ್ರ, ಸರಿತಾ ಉತ್ತಮ ನಟಿ, ನಾಗತಿಹಳ್ಳಿ ಚಂದ್ರಶೇಖರ್ ಅತ್ಯುತ್ತಮ ಕಥಾಲೇಖಕರಾಗಿ ಪ್ರಶಸ್ತಿ ಗಳಿಸಿದರು.

"...'ಸುಖ ಸಂಸಾರಕ್ಕೆ ೧೨ ಸೂತ್ರಗಳು' ಅಂಥ ವ್ಯಾಪಾರೀ ಚಿತ್ರದಲ್ಲಿ ನಿಜಕ್ಕೂ ತುಂಬಾ ಉಲ್ಲಾಸಕಾರಿ ಅನ್ನೋ ಅಂಥ ಪಾತ್ರ ಸಿಕ್ಕಿತು. 'ನೀ ಬರೆದ ಕಾದಂಬರಿ', 'ಇಂದಿನ ರಾಮಾಯಣ'ದಲ್ಲಿಯೂ ಗಂಭೀರವಾದ ಪಾತ್ರಗಳು ಸಿಕ್ಕಿವೆ. 'ರಾಮಾಪುರದ ರಾವಣ'ದಲ್ಲಿ ನಾನು ವಿಲನ್. ಇಂಥ ವೈವಿಧ್ಯಮಯವಾದ ಪಾತ್ರಗಳಲ್ಲಿ ನನ್ನನ್ನು ನಾನು 'ಸ್ಟ್ರೆಚ್' ಮಾಡ್ಕೊಳ್ಳಕ್ಕೆ ಒಂದು ಅವಕಾಶ ಸಿಕ್ತಿರೋವಾಗ ಅಬ್ಬಾಯಿನಾಯ್ಡು 'ತಾಯಿ ಕನಸು' ಚಿತ್ರಕ್ಕೆ ಕರೆದರು. ಆ ಪಾತ್ರವನ್ನು 'ಫಾರ್ ದಿ ಹೆಕ್ ಆಫ್ ಇಟ್' ನೋಡೋಣ ಇರಲಿ ಅಂತ್ಲೇ ಮಾಡಿದೆ. ಮುಸುರಿ, ಬಾಲಣ್ಣ, ದಿನೇಶ್, ಕೆ.ಎಸ್.ಅಶ್ವತ್ಥ್ ಅಂತ ಹಣೆಪಟ್ಟಿ ಹಚ್ಚಿಕೊಳ್ಳದೇ ನನ್ನಂಥ ಒಬ್ಬ ನಟ ಬೇರೆ ಬೇರೆ ರೀತಿ ಮಾಡಿ ನೋಡೇಬಿಡೋಣ, ಅದರಿಂದ ಎಂಥ ಖುಷಿ ಸಿಕ್ಕೀತು ಅನ್ನೋ ಕುತೂಹಲ. ಈಗಿನ ನಮ್ಮ ಸಂದರ್ಭದಲ್ಲಿ ಈ ಯಾವುದೇ ಪಾತ್ರಗಳನ್ನು ನನ್ನ ಮೇಲೆ ನಾನು ಪಾತ್ರಗಳ ರೀತಿ, ಸ್ವಭಾವ ಅಂಟಿಸ್ಕೋತಿಲ್ಲವಾದ್ದರಿಂದ ಯಾವ ಮುಜುಗರವೂ ಇಲ್ಲದೆ ಮಾಡಿದೆ.... ಯಾವುದೇ ರಂಗವಾಗಲಿ ನಮ್ಮ ಮಟ್ಟಿಗೆ ಉದ್ದೇಶ ಸ್ಪಷ್ಟವಾಗಿದ್ದರೆ ಆಗ ಮಾನಸಿಕವಾಗಿ ತೊಳಲಾಟಗಳಿಲ್ಲದೆ ನಮ್ಮನ್ನು ನಾವು ತೊಡಗಿಸಿಕೋಬಹುದು. ನಾನೂ ಹಾಗೇ ಮಾಡಿದೀನಿ. ನಾನು ವ್ಯಾಪಾರಿ ಚಿತ್ರಗಳನ್ನು ಒಪ್ಪಿ ಮುಂದುವರಿಯೋಕ್ಕೆ ಮೊದಲೇ ಕಮರ್ಷಿಯಲ್ ಚಿತ್ರರಂಗದ ಎಲ್ಲ ಆತಂಕಗಳು, ಅದರ ಒಪ್ಪು-ತಪ್ಪು ಮತ್ತು ಬೆನಿಫಿಟ್ಸ್ ಗೊತ್ತಿತ್ತು. ಅದರಿಂದ ಒಪ್ಪಿಕೊಳ್ಳುವುದನ್ನು ಮನಃಪೂರ್ವಕವಾಗಿ ಅದನ್ನು ಇದ್ದ ರೀತಿಯಲ್ಲಿಯೇ ಒಪ್ಕೊಳ್ಳೋದು ಅಂತ ತೀರ್ಮಾನ ಮಾಡಿದ್ದೆ. ಹಾಗಿದ್ದಾಗ ಮಾತ್ರ ಅಲ್ಲಿ ಸಂತೋಷವಾಗಿರೋದು ಸಾಧ್ಯ. ಇಲ್ಲಾಂದ್ರೆ ಮಾನಸಿಕ ಅಶಾಂತಿ ಆಗುತ್ತೆ" ಎಂದು ಪಾತ್ರಗಳ ಆಯ್ಕೆ, ಮನೋಧರ್ಮ ಕುರಿತಂತೆ ನಟ ಸಿ.ಆರ್.ಸಿಂಹ ವಿಶ್ಲೇಷಿಸುತ್ತಾರೆ.

ಈ ಅವಧಿಯಲ್ಲಿ ಹೆಚ್ಚು ಸುದ್ದಿ ಮಾಡಿದ ಚಿತ್ರ ಕಾಶೀನಾಥ್ ಅವರ 'ಅನಂತನ ಅವಾಂತರ'. ಸಾಮಾನ್ಯವಾಗಿ ಕೆಲವು ಚಿತ್ರಗಳು ಒಂದೆರಡು ದೃಶ್ಯ ಅಥವಾ ಸಂಭಾಷಣೆಯು ಆಕ್ಷೇಪಾರ್ಹವಾಗಿರುವುದರ ಕಾರಣಕ್ಕೆ ಸೆನ್ಸಾರ್‌ಗಾಗಿ ದೆಹಲಿಯ ಟ್ರಿಬ್ಯುನಲ್‌ನ ಮೆಟ್ಟಿಲು ಹತ್ತುತ್ತಿದ್ದವು. ಆದರೆ 'ಅನಂತನ ಅವಾಂತರ'ದ ಇಡೀ ಚಿತ್ರದ ಕಥೆ, ನಿರೂಪಣೆ, ದೃಶ್ಯಗಳ ಸಂಭಾಷಣೆ ಎಲ್ಲವೂ ಆಕ್ಷೇಪಾರ್ಹವಾಗಿತ್ತು. 'ಅನುಭವ' ನಂತರ ಕಾಶೀನಾಥ್ ತಮ್ಮ ದಾರಿಯನ್ನು ಬದಲಾಯಿಸಿಕೊಳ್ಳದೆ ಇನ್ನಷ್ಟು ಮುಂದೆ ನಡೆದಿದ್ದರು. 'ವಾಟ್ ಹ್ಯಾಪನ್ಸ್ ಟು ಎ ಲ್ಯಾಟಿನ್ ಲವರ್ ಆನ್ ಹಿಸ್ ವೆಡ್ಡಿಂಗ್ ನೈಟ್' ಇಂಗ್ಲಿಷ್ ಚಿತ್ರವನ್ನು ಆಧರಿಸಿದ್ದ 'ಅನಂತನ ಅವಾಂತರ' ಚಿತ್ರಕ್ಕೆ ಪ್ರಾದೇಶಿಕ ಸೆನ್ಸಾರ್ ಸಮಿತಿ ಒಪ್ಪಿಗೆಯನ್ನು ನಿರಾಕರಿಸಿದ ಹಿನ್ನೆಲೆಯಲ್ಲಿ ಅದರ ಅಧಿಕಾರಿ ನೀಡಿದ ಪತ್ರದಲ್ಲಿ ಹೀಗಿತ್ತು : "ಇದು ನೀಲಿ ಚಿತ್ರದಂತಿದೆ. ಇದರಲ್ಲಿ ಎಷ್ಟೇ ದೃಶ್ಯಗಳನ್ನು ಕತ್ತರಿಸಿದರೂ ಈ ಚಿತ್ರ ಯಾವುದೇ ಬಗೆಯ ಪ್ರಮಾಣ ಪತ್ರ ಪಡೆಯಲು ಅನರ್ಹವಾಗಿದೆ". ಕಾಶೀನಾಥ್ ತಮ್ಮ ಮೇಲ್ಮನವಿಯಲ್ಲಿ "ಲೈಂಗಿಕ ಶಿಕ್ಷಣಕ್ಕೆ ಸಂಬಂಧಪಟ್ಟ ಚಿತ್ರವಾದ್ದರಿಂದ ಹಾಸ್ಯ ಹಾಗೂ ಶೃಂಗಾರಮಯವಾಗಿ ಚಿತ್ರಿಸುವುದು ಅನಿವಾರ್ಯವಾಯಿತು" ಎಂದು ಸ್ಪಷ್ಟಪಡಿಸಿದ್ದರು. ಕೆಲವಾರು ಬಾರಿಯ ವೀಕ್ಷಣೆ, ಮರುವೀಕ್ಷಣೆಗಳ ನಂತರ ಹಲವಾರು ದೃಶ್ಯ, ಸಂಭಾಷಣೆಗಳನ್ನು ಕತ್ತರಿಸುವ ಸೂಚನೆಯೊಡನೆ ಚಿತ್ರ ವಯಸ್ಕರ ವೀಕ್ಷಣೆಗೆ ಅನುಮತಿ ಪಡೆದುಕೊಂಡಿತು. ಕಾಶೀನಾಥ್ ಮುಂದಿನ ಚಿತ್ರ 'ಹೆಂಡ್ತಿ ಎಂದರೆ ಹೀಗಿರಬೇಕು'ನಲ್ಲಿಯೂ ಅಂಥದೇ ದಾರಿ ತುಳಿದರು. ಈ ಚಿತ್ರ ಕೂಡ ದೆಹಲಿಯ ಮೆಟ್ಟಿಲು ಹತ್ತಿತು. ಅಲ್ಲಿ ಮತ್ತದೇ ಹಳೆಯ ವಾದವನ್ನು ಮಂಡಿಸಿ ಚಿತ್ರದ ಹಲವಾರು ದೃಶ್ಯ, ಮಾತುಗಳನ್ನು ಕಳೆದುಕೊಂಡು ಚಿತ್ರದ ಡಬ್ಬಿಯನ್ನು ವಾಪಸ್ಸು ತಂದರು.

ಹದಿನೆಂಟನೇ ವಯಸ್ಸಿನಲ್ಲಿಯೇ ಸಿನಿಮಾದಲ್ಲಿನ ಆಸಕ್ತಿಯಿಂದಾಗಿ ಎಪಿಎಂಸಿ ಯಾರ್ಡ್‌ನ ಅವರದೇ ಅಂಗಡಿಯ ರೊಟೇಶನ್ ಹಣದಿಂದಾಗಿ ಮನೆಯವರಿಗೂ ತಿಳಿಸದೇ ಕೋಡ್ಲು ಅವರನ್ನು ನಿರ್ದೇಶಕರಾಗಿಸಿ, ಪ್ರವೀಣ್‌ಕುಮಾರ್ ಎಂದು ಹೆಸರು ಬದಲಿಸಿ ನಿರ್ಮಾಪಕರಾಗಿಯೇ ಬಿಟ್ಟರು ಹಾಸನದ ದೇವಿ ಹಳ್ಳಿಯ ರಾಮಕೃಷ್ಣ. ಹೀಗೆ 'ಬಿಸಿಲು ಬೆಳದಿಂಗಳು' ಕೋಡ್ಲು ರಾಮಕೃಷ್ಣ ನಿರ್ದೇಶನದ ಪ್ರಥಮ ಚಿತ್ರವೂ ಆಯಿತು. ಇದು ಮಂಗಳಾ ಸತ್ಯನ್‌ರವರ 'ಆ ಮುಖ' ಕಾದಂಬರಿಯನ್ನು ಆಧರಿಸಿದೆ. ಈ ಚಿತ್ರದಲ್ಲಿ ವಿಶೇಷಗಳೇನೂ ಇರಲಿಲ್ಲವಾದರೂ ಕಾದಂಬರಿಗಳನ್ನು ಆಧರಿಸಿ ಚಿತ್ರ ನಿರ್ಮಿಸುವ ನಿರ್ದೇಶಕರ ಪರಂಪರೆಗೆ ಇನ್ನೊಬ್ಬರನ್ನು ಪರಿಚಯಿಸಿತು. ತೆಲುಗಿನ 'ಮಯೂರಿ' ಚಿತ್ರದ ಮೂಲಕ ದೇಶದಾದ್ಯಂತ ಅತ್ಯಂತ ಜನಪ್ರಿಯರಾಗಿದ್ದ ಸುಧಾ ಚಂದ್ರನ್ ಇದರ ನಾಯಕಿ. ನಾಗಾಭರಣ ಮುಂತಾದವರ ಬಳಿ ಸಹಾಯಕ ನಿರ್ದೇಶಕರಾಗಿದ್ದ ಕೋಡ್ಲು ರಾಮಕೃಷ್ಣ, ನಂತರದ ದಿನಗಳಲ್ಲಿ ಆರಕ್ಕೇರದ ಮೂರಕ್ಕಿಳಿಯದ ನಿರ್ದೇಶಕರಾಗಿ ಉದ್ಯಮದಲ್ಲಿ ಉಳಿದುಕೊಂಡರಾದರೂ ಇವರನ್ನು ಕುರಿತು ಹೇಳುವಾಗ ೧೯೯೦ ರಲ್ಲಿ ತೆರೆಕಂಡ 'ಉದ್ಭವ' ಚಿತ್ರವನ್ನು ಮರೆಯುವಂತಿಲ್ಲ. 'ಉದ್ಭವ' ಸಾಹಿತ್ಯ ಕೃತಿಯಾಗಿಯೇ ಸಾಕಷ್ಟು ಜನಪ್ರಿಯವಾಗಿತ್ತು. ಪತ್ರಕರ್ತ ವೈಕುಂಠರಾಜು ಅವರ ಶೈಲಿಯಲ್ಲಿ ರಾಜಕೀಯ, ಸಮಾಜ ಮತ್ತು ಧಾರ್ಮಿಕ ರೀತಿ-ನೀತಿಗಳ ವಿಡಂಬನೆ ನಾಟಕೀಯವಾಗಿ, ಮಾರ್ಮಿಕವಾಗಿ ಮೂಡಿ ಬಂದಿತ್ತಲ್ಲದೆ ನಾಟಕದ ರೂಪದಲ್ಲಿ ರಂಗದ ಮೇಲೂ ಯಶಸ್ವಿಯಾಗಿತ್ತು. 'ಸಂಕ್ರಾಂತಿ'

ಚಿತ್ರದಲ್ಲಿದ್ದಂತೆ ಹಳ್ಳಿಗಳಲ್ಲಿ ಕಾಣುವ 'ಪುಗಸಟ್ಟೆ'ಗಳು ನಗರದಲ್ಲೂ ಇರುವುದನ್ನು ವೈಕುಂಠರಾಜು ತಮ್ಮ ಲೇಖನಿಯ ಮೂಲಕ ಸಮರ್ಥವಾಗಿ ಚಿತ್ರಿಸಿದ್ದರು. ರಸ್ತೆ, ಸರ್ಕಾರಿ ಜಾಗಗಳಲ್ಲಿ ರಾತ್ರೋರಾತ್ರಿ ದೇವರುಗಳು ಉದ್ಭವಿಸುತ್ತಿರುವುದನ್ನು ಮತ್ತು ಇಂಥ 'ಉದ್ಭವ'ಗಳ ಹಿಂದೆ ಇರುವ ನಯವಂಚಕರ ಕುತಂತ್ರಗಳನ್ನು ಈ ಚಿತ್ರದಲ್ಲಿ ನಾಯಕರಾಗಿದ್ದ ಅನಂತ್‌ನಾಗ್ ಮೂಲಕ ಯಾವುದೇ ಆಡಂಬರಗಳಿಲ್ಲದೆ ಅಭಿವ್ಯಕ್ತಿಸಿದ್ದು ಭಿನ್ನವಾಗಿತ್ತು. 'ಸ್ವಪ್ನ' ಚಿತ್ರಮಂದಿರದಲ್ಲಿ ೧೦೦ ದಿನಗಳ ಪ್ರದರ್ಶನ ಕಂಡ 'ಉದ್ಭವ' ಕೋಡ್ಲು ರಾಮಕೃಷ್ಣ ನಿರ್ದೇಶನದ ಯಶಸ್ವಿ ಚಿತ್ರ. 'ಉದ್ಭವ'ದಲ್ಲಿನ ಅನಂತ್‌ನಾಗ್‌ರ ಪಾತ್ರ ಅಭಿನಯ ಎಷ್ಟು ಶಕ್ತಿಯುತವಾಗಿತ್ತೆಂದರೆ ಮುಂದಿನ ದಿನಗಳಲ್ಲಿ ಅವರು ಅದೇ ಬಗೆಯ ಪಾತ್ರಗಳಿರುವ ಹತ್ತಾರು ಚಿತ್ರಗಳಲ್ಲಿ ಅಭಿನಯಿಸಿದರು.



(ಚಿತ್ರ ೧೪೫) 'ಉದ್ಭವ' ಚಿತ್ರದಲ್ಲಿ ಅನಂತ್‌ನಾಗ್

ಕೋಡ್ಲು ರಾಮಕೃಷ್ಣರ 'ಬಿಸಿಲು ಬೆಳದಿಂಗಳು' ಚಿತ್ರದ ನಿರ್ಮಾಣದಲ್ಲಿ ಹಿರಿಯ ಕಲಾವಿದ ಬಾಲಣ್ಣನವರ ಪುತ್ರ ಬಿ.ಶ್ರೀನಿವಾಸ್ ಹಾಗೂ ಬಿ.ಗಣೇಶ್ ಸಕ್ರಿಯವಾಗಿ ತೊಡಗಿಕೊಂಡಿದ್ದರು. ಈ ಚಿತ್ರದ ನಂತರ ಇವರು ತಮ್ಮ ತಂದೆಯ ಬದುಕು, ಸಾಧನೆಯನ್ನು ಆಧರಿಸಿ 'ಕಲಾಭಿಮಾನಿ' ನಿರ್ಮಿಸಿದರು. ಬಾಲಣ್ಣನವರ ಬದುಕಿನ ಕೆಲವು ಮುಖ್ಯ ಘಟ್ಟಗಳನ್ನು ದಾಖಲಿಸಿದ ಈ ಚಿತ್ರದಲ್ಲಿ ಸ್ವತಃ ಬಾಲಣ್ಣನವರೇ ಅಭಿನಯಿಸಿದ್ದೊಂದು ವಿಶೇಷ. ಸುಮಾರು ೪೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ ಪ್ರತಿಭಾವಂತ ಕಲಾವಿದನಿಗೆ ಒಂದು ಅರ್ಥಪೂರ್ಣ ಗೌರವವಾಗಿ ದಾಖಲಾಗಬಹುದಾಗಿದ್ದ ಈ ಚಿತ್ರ ಬಡಕಲು ನಿರ್ಮಾಣ ಹಾಗೂ ನಿರೂಪಣೆಯಲ್ಲಿನ ದೌರ್ಬಲ್ಯದಿಂದಾಗಿ ಸೊರಗಿತ್ತು. ಆದರೂ ಕಲಾವಿದನೊಬ್ಬನ ಜೀವನ ಕಥೆಯನ್ನು ಆಧರಿಸಿದ ಮೊದಲ ಚಿತ್ರವಾಗಿ ಇದಕ್ಕೆ ಮಹತ್ವವಿದೆ. ಬಡತನದ ಬೇಗೆಯಿಂದ ಹತ್ತುವರೇ ಎಂಟು ವರ್ಷದ ಬಾಲಕ ಬಾಲಣ್ಣನನ್ನು ಮಾರುವುದು, ನಾಟಕದ ಗೀಳು ಹಚ್ಚಿಕೊಂಡ ಬಾಲಕ ಕದಿಯುವ ಹವ್ಯಾಸಕ್ಕೆ ಬಿದ್ದು ಹೆಣದ ಮೇಲಿನ ಒಡವೆಗಳನ್ನು ಬಾಚಿಕೊಂಡು ಮುಂಬೈಗೆ ಓಡಿಹೋಗುವುದು, ಅಲ್ಲಿ ಬದುಕಲಾಗದೆ ವಾಪಸಾಗಿ ಪಾತ್ರ ಮಾಡುವ ಆಸೆಗೆ ನಾಟಕ ಕಂಪನಿ ಸೇರಿಕೊಂಡು ಬೋರ್ಡು ಬರೆಯುವುದು, ನೆಲ ಅಗೆಯುವುದು - ಇಂತಹ ಹಲವಾರು ಘಟ್ಟಗಳನ್ನು ದಾಟುವ ಬಾಲಣ್ಣ ಕೊನೆಗೆ ನೀಲಕಂಠಯ್ಯನವರ ನಾಟಕ ಮಂಡಳಿಯನ್ನು ಸೇರುತ್ತಾರೆ. ಅಲ್ಲಿಂದಾಚೆಗೆ ಮದರಾಸಿನಲ್ಲಿದ್ದ ಎಂ.ವಿ.ರಾಜಮ್ಮನವರಿಗೆ ಕೋರಿಕೆ ಪತ್ರ ಬರೆದು ಅವರು ನಿರ್ಮಿಸಲಿದ್ದ 'ರಾಧಾರಮಣ' ಚಿತ್ರದಲ್ಲಿ ಪಾತ್ರ ಗಿಟ್ಟಿಸುತ್ತಾರೆ. ಹೀಗೆ ಸಾಗುವ ಜೀವನ ಕಥೆ, ಬಾಲಣ್ಣನವರ ಬದುಕಿನ ಮುಖ್ಯ ಪ್ರಸಂಗಗಳನ್ನು ಹಾದು ಬೆಳೆಯುತ್ತದೆ. ಪ್ರೇಕ್ಷಕರ ದೃಷ್ಟಿಯಿಂದ ಚಿತ್ರ ಸಾಧಾರಣವೆನಿಸಿದರೂ ಇದು ಒಬ್ಬ ಅಸಾಧಾರಣ ವ್ಯಕ್ತಿಯ ಬದುಕಿನ ದಾಖಲೆಯಾಯಿತು.

ರಾಜ್ ಕಿಶೋರ್ ನಿರ್ದೇಶನದ 'ಅವತಾರ ಪುರುಷ'ದಲ್ಲಿ ಅಂಬರೀಷ್ ಅಭಿನಯಿಸಿದ್ದರು. ಎಂದಿನ ಸೇಡು-ಪ್ರತೀಕಾರಗಳ ಸೂತ್ರವೇ ಇತ್ತು. ಕನ್ನಡ ಚಿತ್ರಗಳಿಗೆ ಕನ್ನಡಿಗರು ಹೆಚ್ಚಾಗಿ ಬರುವ ಚಿತ್ರಮಂದಿರಗಳು ಸಿಗಲಿಲ್ಲವಾದ್ದರಿಂದ ಚಿತ್ರ ಸಾಕಷ್ಟು ಯಶಸ್ವಿಯಾಗಲಿಲ್ಲ ಎಂಬ ಕೂಗೂ ಇತ್ತು.

'ರುದ್ರ' ವಿಷ್ಣುವರ್ಧನ್ ಅಭಿನಯದ ಚಿತ್ರ. ಕೆ.ಎಸ್.ಆರ್.ದಾಸ್ ನಿರ್ದೇಶಿಸಿದ್ದರು. ವಿಷ್ಣುವರ್ಧನ್ ಅವರೇ ಸ್ವಂತ ಹಂಚಿಕೆಯ ಮುಖಾಂತರ ಬಿಡುಗಡೆ ಮಾಡಿದರು. ಖುಷ್ಬೂ ನಾಯಕಿ. ಸಾಹಸ ಪ್ರಧಾನ ಚಿತ್ರ.

'ಯುಗಪುರುಷ' 'ಕರ್ಜ್'ನ ಪುನರವತರಣಿಕೆ. ಬಿಡುಗಡೆ ಆಗುವುದು ತಡವಾಯಿತು. ದೂರದರ್ಶನದಲ್ಲಿ 'ಕರ್ಜ್' ಪ್ರದರ್ಶನವಾಗಿಬಿಟ್ಟಿತು. ಅದೂ ಈ ಚಿತ್ರಕ್ಕೆ ಮೈನಸ್ ಪಾಯಿಂಟೇ ಆಯಿತು. ಅಪರೂಪವೆನಿಸುವ ಸೆಟ್‌ಗಳು, ಸಂಗೀತ ರವಿಚಂದ್ರನ್ ಅಭಿನಯಿಸುವ ಚಿತ್ರಗಳಲ್ಲಿ ಇದ್ದೇ ಇರುತ್ತದೆ ಎಂದು ಪ್ರೇಕ್ಷಕ ನಂಬುತ್ತಾನೆ. ಈ ಚಿತ್ರದಲ್ಲಿ ಅವೆಲ್ಲವೂ ಇದ್ದವು. ನಿರ್ಮಾಪಕರು ಎಸ್.ವಿ.ರಾಜೇಂದ್ರಸಿಂಗ್ ಬಾಬು. ನಿರ್ದೇಶಕರು ಡಿ.ರಾಜೇಂದ್ರಬಾಬು. ಎಸ್.ವಿ.ರಾಜೇಂದ್ರಸಿಂಗ್ ಬಾಬು ಸಾಮಾನ್ಯವಾಗಿ ಬೇರೆ ನಿರ್ದೇಶಕರಿಗೆ ವಹಿಸುವ ತಮ್ಮ ನಿರ್ಮಾಣದ ಚಿತ್ರಗಳೆಲ್ಲ ರೀಮೇಕ್‌ಗಳೇ ಆಗಿದ್ದವು.

ಕೆ.ವಿ.ರಾಜು ಉತ್ತಮ ಚಿತ್ರಕಥೆ ಬರೆಯುವುದರಲ್ಲಿ ಸಿದ್ಧಹಸ್ತರು. ಸಹೋದರ ಕೆ.ವಿ.ಜಯರಾಂ ಚಿತ್ರಗಳಿಗೆ ಸಾಮಾನ್ಯವಾಗಿ ರಾಜು ಚಿತ್ರಕಥೆ ಬರೆಯುತ್ತಿದ್ದರು. ಆದ್ದರಿಂದಲೇ ಚಿತ್ರದ ಬಂಧದಲ್ಲಿ ಗಟ್ಟಿತನವಿರುತ್ತಿತ್ತು. ರಾಜು ೧೯೮೯ ರಲ್ಲಿ ನಿರ್ದೇಶಕರಾದ ಮೇಲೆ ಜಯರಾಮ್ ಚಿತ್ರಗಳಿಗೆ ಕೆಲಸ ಮಾಡಲು ಕಷ್ಟವಾಯಿತು. ಕೆ.ವಿ.ರಾಜು ನಿರ್ದೇಶನದಲ್ಲಿ ಏನಾದರೂ ವಿಶೇಷ ಇರುತ್ತಿತ್ತು. ಹಾಗಾಗಿಯೇ 'ಇಂದ್ರಜಿತ್' ಚಿತ್ರ ಆರ್ಥಿಕವಾಗಿ ಯಶ ಸಾಧಿಸಿತು. ಕೆ.ವಿ.ರಾಜು ಕಥೆ, ಚಿತ್ರಕಥೆ, ಸಂಭಾಷಣೆ ಬರೆದು ಈ ಚಿತ್ರವನ್ನು ನಿರ್ದೇಶಿಸಿದ್ದರು. ಸುಧೀರ್ ಕಾಮತ್ ಮತ್ತು ದೌಲತ್ ಭಾಟಿಯಾ ಸೇರಿ ಹಣ ತೊಡಗಿಸಿದ್ದರು. 'ರಾಮಾಯಣ'ದ ಸೀತಾ ಪಾತ್ರಧಾರಿ ದೀಪಿಕಾ ಚಿತ್ರದ ನಾಯಕಿಯಾದರೆ, ದೇವರಾಜ್‌ಗೆ ಈ ಚಿತ್ರದಲ್ಲಿ ಒಂದು ಉತ್ತಮ ಪಾತ್ರವನ್ನು ಕೊಟ್ಟಿದ್ದರು. ಅಷ್ಟೇ ಸಮರ್ಥವಾಗಿ ಅದನ್ನು ನಿರ್ವಹಿಸಿದ್ದ ದೇವರಾಜ್‌ಗೆ ಮುಂದೆ ನಾಯಕರಾಗುವ ಅವಕಾಶಗಳು ಒದಗಿಬಂದವು. ಪೊಲೀಸ್ ಮತ್ತು ರಾಜಕೀಯದ ಕಥೆಯನ್ನು ರಾಜು ಚೆನ್ನಾಗಿ ಹೆಣೆದಿದ್ದರು. ಕೇವಲ ಕ್ಯಾಬರೆ ಡ್ಯಾನ್ಸ್‌ಗಳಿಗೆ ಮಾತ್ರ ಸೀಮಿತವಾಗಿದ್ದ ಡಿಸ್ಕೋ ಶಾಂತಿಗೆ ಈ ಚಿತ್ರದಲ್ಲಿ ದೊಡ್ಡದೇ ಎಂಬಂಥ ಪಾತ್ರ ದಕ್ಕಿತು. ಹೊಡೆದಾಟದ ದೃಶ್ಯಗಳನ್ನೂ ರಾಜು ಕೊಟ್ಟಿದ್ದರು. ಅಂಬರೀಷ್ ದ್ವಿತಿಯಾರ್ಧದಲ್ಲಿ ಕಲ್ಕಿಯಂತೆ ವೇಷ ತಾಳುತ್ತಾರೆ. ಇದೆಲ್ಲಾ ರಾಜು ಕಲ್ಪನೆಗೆ ಸಾಕ್ಷಿಯಾಗುತ್ತವೆ. ಹಂಸಲೇಖ ಸಂಗೀತದಲ್ಲಿ 'ಬೆಳ್ಳಿ ರಥದಲಿ ಸೂರ್ಯ ತಂದ ಕಿರಣ...' ಹಾಗೂ 'ಕಡಲಿಗ ಒಂದ ಕೊನೆಯಿದೆ...' ಹಾಡುಗಳು ಜನಪ್ರಿಯವಾದವು.

ಜನಪ್ರಿಯ ಕಲಾವಿದರ ಹೆಸರು ಅಥವಾ ವ್ಯಕ್ತಿತ್ವವನ್ನು ಇಲ್ಲವೇ ಹುಟ್ಟಿದ ಊರನ್ನು ಹಿನ್ನೆಲೆಯಾಗಿಟ್ಟುಕೊಂಡು ಕೆಲವು ಚಿತ್ರಗಳು ನಿರ್ಮಾಣವಾದವು. 'ಮೈಸೂರು ಜಾಣ', 'ಮಂಡ್ಯದ ಗಂಡು', 'ಗಾಜನೂರು ಗಂಡು' ಇಂಥವುಗಳಲ್ಲಿ ಕೆಲವು.

'ಒಂದು ಊರಿನ ಕಥೆ'ಯ ನಂತರ ಬಂದ 'ಬೆಂಕಿ' ಒಂದು ವಿಶಿಷ್ಟ ಅನುಭವವನ್ನು ಕೊಡುವಂಥದ್ದಾಗಿತ್ತು. ಉಮೇಶ್, ಪ್ರಮೀಳಾ ಜೋಷಾಯ್, ಮಾನಪ್ಪ ಮುಖ್ಯ



(ಚಿತ್ರ ೧೪೬) 'ಬಿಸಿಲು ಬೆಳದಿಂಗಳು' ಚಿತ್ರದಲ್ಲಿ ಸುಧಾಚಂದ್ರನ್ ಮತ್ತು ಶ್ರೀಧರ್

ಪಾತ್ರಗಳಲ್ಲಿ ಇದ್ದು ಹೊಸ ಸಿನಿಮಾ ಭಾಷೆಗೆ ಒಡ್ಡಿಕೊಂಡರು. ಚಿತ್ರದಲ್ಲಿ ಅಶಕ್ತ ಗಂಡನ ಮೇಲಿನ ಸಿಟ್ಟು-ವಿರೋಧಗಳನ್ನು ತೋರಲು ಆಕೆ ತನ್ನ 'ಬ್ರಾ' ಕಳಚಿ ಬೆಂಕಿಗೆ ಎಸೆಯುವ ಸನ್ನಿವೇಶವೊಂದು ಬಹಳಷ್ಟು ವ್ಯಾಖ್ಯಾನಕ್ಕೆ ಒಳಗಾಯಿತು. ಬರಗೂರರು ಅವರದೇ ರೀತಿಯಲ್ಲಿ ವ್ಯಾಕರಣವನ್ನು ಮುರಿದು ಹೊಸ ಭಾಷೆ ಕಟ್ಟುವ ಸಾಹಸ ಪ್ರಾರಂಭಿಸಿದ್ದರು. ಅದನ್ನೇ ಮುಂದುವರೆಸಿದರು. ಆದರೆ ಚಿತ್ರ ಬಿಡುಗಡೆಯಾಗಲಿಲ್ಲ.

ಬರಗೂರು ರಾಮಚಂದ್ರಪ್ಪನವರ ಮಹತ್ವಾಕಾಂಕ್ಷೆ, ಹೇಳಬೇಕಾದ ಮಾತಿಗೆ ಎಲ್ಲ ವೇದಿಕೆ, ಮಾಧ್ಯಮಗಳನ್ನು ಬಳಸಿಕೊಳ್ಳಬೇಕು, ಹೇಳಲೇಬೇಕು ಎಂಬುದು. ಅಂಥ ಅನೇಕ ಪ್ರಯತ್ನಗಳಲ್ಲಿ ಚಲನಚಿತ್ರವೂ ಒಂದು. ಅವರು ನಿರ್ದೇಶಿಸಿದ ಎರಡನೆಯ ಚಿತ್ರ 'ಬೆಂಕಿ' ರಾಜ್ಯ ಸರ್ಕಾರದ ಪ್ರಶಸ್ತಿ ಪಡೆಯಿತು. ಮುಖ್ಯ ಪಾತ್ರಗಳ ಸ್ವಭಾವವನ್ನು ಖಚಿತವಾಗಿ ಕಡೆಯುತ್ತ ಅವು ತಮ್ಮದೇ ವ್ಯಕ್ತಿತ್ವವನ್ನು ಪ್ರಕಟಿಸುವಂತೆ ಮಾಡಿದ್ದರು. ಅದಕ್ಕಾಗಿ ಅವುಗಳ ಸ್ವಭಾವದಲ್ಲಿ ಬದಲಾವಣೆ ಆಗುವುದಿಲ್ಲ. ಬರಗೂರರು ಬದಲಾಗುವುದೇ ಬೆಳವಣಿಗೆ ಎನ್ನುವ ಅಭಿಪ್ರಾಯದವರಲ್ಲವಾದ್ದರಿಂದ ಇಂಥ ರಚನೆಗೆ ಕಾರಣ. ಚಿತ್ರದ ಅಂತ್ಯ ಶೀಲ-ಪಾತಿವ್ರತ್ಯದ ಬಗ್ಗೆ ಸಾಂಪ್ರದಾಯಿಕ ನಿಲುವಾಯಿತು ಎಂದು ಮೇಲುನೋಟಕ್ಕೆ ಅನ್ನಿಸಿದರೂ ಹಾಗೇನೂ ಆಗಿಲ್ಲ. ದುರಂತವೇ ನಾಯಕಿಯ ಕಡೆಗೆ ಸಹಾನುಭೂತಿಯನ್ನು ಸೆಳೆಯುವುದರಿಂದ ಮತ್ತು ಚಿತ್ರ ದ್ವಂದ್ವ ದುರಂತದಲ್ಲಿ ಮುಕ್ತಾಯವಾಗುವುದರಿಂದ ಆದರ ಪರಿಣಾಮ ಪ್ರಗತಿಪರವಾದ್ದಾಗುತ್ತದೆ. ನಾಯಕಿ ಬದುಕಿಗಾಗಿ, ನೆಮ್ಮದಿಗಾಗಿ ಹುಡುಕಾಡುತ್ತಾಳೆ. ಅವಳ ಹುಡುಕಾಟ ಸಾಗಿ ಸಾಗಿ ಕಡೆಗೆ ಆಕೆ ತಲುಪುವುದು ಎದ್ದು ನಿಂತ ದೊಡ್ಡ ಗೋಡೆಯನ್ನು. ಅದೇ ಕೊಟ್ಟಕೊನೆ.... ಸಾಂಕೇತಿಕವಾದ್ದು. ಆ ಹಂತದಲ್ಲಿ ಅವಳ ಅಪ್ಪನ ಮಾತುಗಳು ಕೇಳಿಬರುತ್ತವೆ. ಆಗ ಆಕೆಯ ಮುಖಭಾವದಲ್ಲಿ ಸ್ಪಷ್ಟವಾಗಿ ನೋವಿನಿಂದ ಹುಟ್ಟಿದ ಸಿಟ್ಟನ್ನು ತೋರಿಸಲಾಗಿದೆ. ಈ ಸಿಟ್ಟಾಗುವಾಗಿನ ಕಣ್ಣುಗಳ ಮೂಲಕವೇ ಅಪ್ಪ ಆಡುವ 'ಪಾತಿವ್ರತ್ಯ'ದ ಮಾತಿಗೆ ಪ್ರತಿಭಟನೆ ತೋರಿಸಿರುತ್ತಾಳೆ. ಅವಳು ಆ ಅಂತಿಮ ಆಂಚಿನ ಗೋಡೆಯ ಬಳಿ ಕುಸಿಯುತ್ತಾಳೆ. ಪರಿಣಾಮ ಸಾವು. ಈ ದೃಶ್ಯದಲ್ಲಿ ಆಕೆ ಕುಸಿದಾಗ ಬೆಟ್ಟವನ್ನು ಪ್ಯಾನ್ ಮಾಡಿ ವೇದಘೋಷಗಳ ಲಯ ಇರುವ ಹಮ್ಮಿಂಗ್ ಬಳಸುವುದು ಆ ಸ್ಥಿತಿಯ ವ್ಯಂಗ್ಯವನ್ನು ಸೂಚಿಸುತ್ತದೆ. ಇಡೀ ಚಿತ್ರದಲ್ಲಿ ಕೋಟೆ ಸಾಂಪ್ರದಾಯಿಕ ಮೌಲ್ಯಗಳ ಪ್ರತೀಕವಾಗಿ ಬೆಳೆಯುತ್ತದೆ. ಚಿತ್ರದಲ್ಲಿ ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಹುಟ್ಟುವ ಅಸಹಾಯಕತೆ, ದ್ವಂದ್ವಗಳು ದಾಖಲಾಗುತ್ತವೆ. ಮಾತಿನಲ್ಲಿ ವಿಡಂಬನೆ, ದೃಶ್ಯದಲ್ಲಿ ವ್ಯಂಗ್ಯವನ್ನು ಸಮರ್ಥವಾಗಿ ಸಾಧಿಸಿತ್ತು 'ಬೆಂಕಿ'. ಬರಗೂರು ರಾಮಚಂದ್ರಪ್ಪನವರು ಈ ಚಿತ್ರದ ಬಗ್ಗೆ ಹೀಗೆ ಹೇಳುತ್ತಾರೆ : "ನನ್ನ ಚಿತ್ರದ ಬಗ್ಗೆ ಆತ್ಮವಿಶ್ವಾಸವಿದೆ, ಅಹಂಕಾರವಲ್ಲ. ಫ್ಯಾಂಟಸಿ ಮತ್ತು ರಿಯಾಲಿಟಿಗಳನ್ನು ಒಟ್ಟೊಟ್ಟಿಗೇ ಹಿಡಿದಿಡುತ್ತ ಸೋಷಿಯಲ್ ರಿಯಾಲಿಟಿಯನ್ನು ಶೋಧಿಸುವ ಪ್ರಾಮಾಣಿಕ ಪ್ರಯತ್ನವಿದು. ನನ್ನದು ವಾಸ್ತವವಾದ ಅಲ್ಲ, ಸಾಮಾಜಿಕ ವಾಸ್ತವವಾದ. ಈ ಚಿತ್ರದಲ್ಲಿ ಇತರ ಚಿತ್ರಗಳ ಹಾಗೆ ಸಣ್ಣಸಣ್ಣ ವಿವರಗಳಿಲ್ಲ. ಅನಗತ್ಯವಾದ ಒಂದು ಶಾಟ್ ಸಹ ಇರಬಾರದೆಂದು ನಾನು ನಂಬಿದ್ದೇನೆ. ಅದಕ್ಕನುಗುಣವಾಗಿ ಮುಖ್ಯ ಘಟನೆಗಳನ್ನು ದಾಖಲಿಸಿದ್ದೇನೆ. ಇವುಗಳ ಹಿಂದೆ ಸಾಮಾಜಿಕ ವಾಸ್ತವದ ಎಳೆಯಿದೆ, ಸಾಮಾಜಿಕ ವ್ಯಾಖ್ಯಾನವಿದೆ. ಇನ್‌ವಾಲ್ವ್‌ಮೆಂಟ್ ಮತ್ತು ಅವೇರ್‌ನೆಸ್ ಎರಡೂ ಇರುವಂತೆ ನೋಡಿಕೊಳ್ಳುವ ನಿರೂಪಣೆಯನ್ನು ನನ್ನ ಶೈಲಿಯಾಗಿ ಸ್ವೀಕರಿಸಿದ್ದೆ".

ಬರಗೂರು ರಾಮಚಂದ್ರಪ್ಪನವರ ಪ್ರಯೋಗಶೀಲ ಪ್ರವೃತ್ತಿಯ ಇನ್ನೊಂದು ಸಾಹಸ 'ಕೋಟೆ'. ಈ ಚಿತ್ರದ ಕಥೆ, ಚಿತ್ರಕಥೆ, ಕಥನಗೀತೆ, ನಿರ್ದೇಶನವನ್ನು ಬರಗೂರರೇ ನಿರ್ವಹಿಸಿದ್ದರು. ಚಿತ್ರದ ನಿರ್ಮಾಪಕರು ಆರ್.ನಾಗರಾಜರೆಡ್ಡಿ ಸಿಂಗನಾಯಕನಹಳ್ಳಿ. ಚಿತ್ರವನ್ನು ಶ್ರೀ ವೆಂಕಟೇಶ್ವರ ಫಿಲಂಸ್ ಲಾಂಛನದಲ್ಲಿ ಸಿದ್ಧಮಾಡಿದರು. ಇಡೀ ಚಿತ್ರದಲ್ಲಿ ಹಾಡುಗಳೇ ಪಾತ್ರವಾಗಿ ಮಾತನಾಡುತ್ತವೆ. ಪಾತ್ರಗಳ ಒಳತೋಟ, ಕಥೆಯ ನಿರೂಪಣೆಗಾಗಿ ಹಾಡುಗಳನ್ನು ಬಳಸಿದ್ದಾರೆ. ಸುಮಾರು



(ಚಿತ್ರ ೧೪೭) 'ಬೆಂಕಿ' ಚಿತ್ರದಲ್ಲಿ ಪ್ರಮೀಳಾ ಜೋಷಾಯ್

೪೫ ನಿಮಿಷದಷ್ಟು ಕಥನಗೀತೆಯೂ ಇದೆ. ಉಳಿದವು ಮಾತಿಲ್ಲದ ಸನ್ನಿವೇಶಗಳು. ಚಂದ್ರಶೇಖರ ಕಂಬಾರರು ಜಾನಪದ ಶೈಲಿಯಲ್ಲಿ ಸಂಗೀತ ನಿರ್ದೇಶಿಸಿದ್ದರು. ಬರಗೂರರ 'ಒಂದು ಊರಿನ ಕತೆ'ಯ ಛಾಯೆ ಕೂಡ ಇತ್ತು. ಆದರೆ ಅಲ್ಲಿಂದಲೂ ಮುಂದುವರಿದ ಹೊಸ ಆಲೋಚನೆಗಳಿದ್ದವು. 'ಸೀತಾದೇವಿಯ ಕೊಳ'ದ ಪ್ರತಿಮೆಯ ಮೂಲಕ ಪುರಾಣ ಮತ್ತು ವಾಸ್ತವಗಳನ್ನು ಪರಿಶೀಲಿಸುತ್ತಾ ಅಸ್ಪೃಶ್ಯತೆಯ ಸಮಸ್ಯೆಯನ್ನು ಚರ್ಚಿಸಲಾಗಿತ್ತು. ನಾಯಕಿಯ ಪಾತ್ರ ತನ್ನ ಬದುಕಿನ ಘಟನೆಗಳನ್ನು ರಾಮಾಯಣದ ಪ್ರಸಂಗಗಳಿಗೆ ಹೋಲಿಸಿಕೊಳ್ಳುವುದರಿಂದಾಗಿ ಅದೇ ಕಥೆಯನ್ನು ಹೇಳಲು ಬಳಸಿಕೊಂಡ ವಿಧಿವಿಧಾನ ಕೂಡಾ ಆಗಿದೆ. ಚಿತ್ರ ಒಂದೇ ಹಂತದಲ್ಲಿ ಚಿತ್ರೀಕರಣಗೊಂಡು ಸಿದ್ಧವಾಗಿತ್ತು. ಇದಕ್ಕಾಗಿ ಬರಗೂರರು ತಮ್ಮ ಪ್ರೀತಿಯ ಸ್ಥಳಗಳಾದ ಮಧುಗಿರಿ ಬಳಿಯ ಮಲ್ಲೇರಂಗನ ಬೆಟ್ಟ, ಗಂಡಾರನಹಳ್ಳಿ, ಪುರವರ, ಗಿಡ್ಡಯ್ಯನ ಪಾಳ್ಯ, ಸಿದ್ಧನಹಳ್ಳಿ ಮುಂತಾದ ಸ್ಥಳಗಳಲ್ಲಿ ಚಿತ್ರಿಸಿದರು. ಕಲಾನಿರ್ದೇಶನವನ್ನು ನಿರ್ವಹಿಸಿದ್ದ ರಘು ಮತ್ತು ರಂಗಾರೆಡ್ಡಿ ಕೋಡಿರಾಂಪುರ ನಿರ್ವಹಿಸಿದ್ದರು. ಹೊರಾಂಗಣದಲ್ಲೇ ಪರ್ಣಕುಟಿಯ ಸೆಟ್ ಹಾಕಲಾಗಿತ್ತು. ಎಸ್.ಆರ್.ಭಟ್ ಛಾಯಾಗ್ರಹಣ, ಸುರೇಶ್ ಅರಸ್‌ರ ಸಂಕಲನವಿತ್ತು. ಮುಖ್ಯ ಪಾತ್ರದಲ್ಲಿ ತಾರಾ, ಸುಂದರರಾಜ್, ಮಾನು, ಲಿಂಗರಾಜ ಕಗ್ಗಲ್, ದೇವ್ ನಾಗೇಶ್, ದಯಾನಂದ್, ಮೈಲಾರಿರಾವ್, ಗುರುಪ್ರಸಾದ್ ಅಭಿನಯಿಸಿದ್ದರು.

ಅಭಿನಯ-ಗಾಯನ ಎರಡೂ ವಿಭಾಗದಲ್ಲಿ ಪ್ರಸಿದ್ಧರು-ಹೊಸಬರುಗಳ ಸಂಗಮವಿತ್ತು. ಇಷ್ಟೆಲ್ಲ ಇದ್ದೂ ಇಂಥದೊಂದು ಪ್ರಾಯೋಗಿಕ ಚಿತ್ರಕ್ಕೆ ಸಿಗಬೇಕಾದ ಮಾನ್ಯತೆ ಸಿಗಲಿಲ್ಲ, ಸುದ್ದಿಯಾಗಲಿಲ್ಲ, ತೆರೆಗೂ ಬರಲಿಲ್ಲ ಎಂಬುದು ವ್ಯಥೆಯ ಸಂಗತಿ. 'ಕೋಟೆ' ಚಿತ್ರಕ್ಕೆ ರಾಜ್ಯ ಸರ್ಕಾರದ ೧೯೮೮-೮೯ನೇ ಸಾಲಿನ ತೀರ್ಪುಗಾರರ ವಿಶೇಷ ಪ್ರಶಸ್ತಿ, ಗೀತರಚನೆಗಾಗಿ ಬರಗೂರು ರಾಮಚಂದ್ರಪ್ಪನವರಿಗೆ ಸಂದಿತು.

೧೯೮೯ ರಲ್ಲಿ ತೆರೆಕಂಡ 'ಮಧುಮಾಸ' ಭಿನ್ನಶೈಲಿಯ ನಿರೂಪಣೆಯಿದ್ದ ಚಿತ್ರ. 'ಮಧುಮಾಸ'ದ ವಿಶೇಷವೆಂದರೆ ಇಡೀ ಚಿತ್ರವನ್ನು ರಾಜ್ಯದ ಸುಂದರ ಗಿರಿಧಾಮ ನಂದಿಬೆಟ್ಟದಲ್ಲಿ ಚಿತ್ರೀಕರಿಸಿರುವುದು. ವೃತ್ತಿಯಲ್ಲಿ ಕೆಎಎಸ್ ಅಧಿಕಾರಿಯಾಗಿರುವ ನಾರಾಯಣಸ್ವಾಮಿ ಇದರ ನಿರ್ದೇಶಕರು. ರಮೇಶ್, ಸರಳಾ, ಪ್ರತಾಪ್, ಸುಜಾತ ಸಹಜವಾಗಿ ಅಭಿನಯಿಸಿ ಪ್ರೇಮ ಕಥೆಗೆ ಬೇರೊಂದು ರೀತಿಯಲ್ಲಿಯೂ ಜೀವ ತುಂಬುವುದಕ್ಕೆ ಸಾಧ್ಯವಿದೆ ಎಂಬುದನ್ನು ತೋರಿಸಿದ್ದರು.

'ಕಿಂದರಿಜೋಗಿ' ಅದ್ದೂರಿ ಚಿತ್ರ, ರವಿಚಂದ್ರನ್ ಅನೆ ನಡಿಗೆಗೆ ಸಾಕ್ಷಿ ಒದಗಿಸುತ್ತಾ ಬಿಡುಗಡೆಯಾಯಿತು. ನಿರ್ಮಾಣ ಹಂತದಲ್ಲಿಯೇ ಹೆಚ್ಚು ಸುದ್ದಿ ಮಾಡಿದ ಈ ಚಿತ್ರಕ್ಕೆ ರವಿಚಂದ್ರನ್ ಹಿಂದಿಯ ಜ್ಯೂಲಿಯನ್ನು ಮತ್ತೆ ಕರೆತಂದಿದ್ದರು. ತಾಂತ್ರಿಕ ಪರಿಣತಿ, ದೃಶ್ಯ ವೈಭವ ಅದ್ಭುತ ಎನ್ನಿಸುವ ಹಾಗಿತ್ತು. ಚಿತ್ರದ ಯಶಸ್ಸಿಗೆ ಅಷ್ಟೇ ಕಾರಣವಾಗಲಾರದು ಎಂಬುದನ್ನು ದಯನೀಯವಾಗಿ ಸೋತ 'ಕಿಂದರಿಜೋಗಿ' ರವಿಚಂದ್ರನ್ ಅವರಿಗೆ ತೋರಿಸಿಕೊಟ್ಟಿತು. ಪ್ರೇಮ, ಮಕ್ಕಳು, ಫ್ಯಾಂಟಸಿ, ದೇವರು - ಇವೆಲ್ಲವನ್ನು ಬೆರೆಸಿದ್ದ ಕಥೆಯಲ್ಲಿ ನಿರ್ದಿಷ್ಟ ಸೂತ್ರ ಇರಲಿಲ್ಲ. 'ಪೈಡ್ ಪೈಪರ್' ಆಧರಿಸಿ ಹಂಸಲೇಖಾ ತಾಯಿ-ಮಗನನ್ನು ಕೇಂದ್ರವಾಗಿಟ್ಟು ಬರೆದಿದ್ದ ಕಥೆಯಿತ್ತು. ಅದು ರವಿಚಂದ್ರನ್‌ಗೆ ಒಪ್ಪಿಗೆ ಆಗಲಿಲ್ಲ. ಆದರೆ 'ಕಿಂದರಿಜೋಗಿ' ಶೀರ್ಷಿಕೆ ಬಿಡಲಾರದಾಗಿದ್ದರು. ಭಂಗೀರಂಗ ಬರೆದ ಕಥೆಯನ್ನು ಆಯ್ದು ಕಿಂದರಿಜೋಗಿ ಶೀರ್ಷಿಕೆಗೆ ಹೊಂದಿಸಲು ಹೋಗಿ ಆಯ ತಪ್ಪಿತ್ತು. ಭಂಗೀರಂಗ ಅವರೇ ಎಡಪಂಥೀಯ ಒಲವುಳ್ಳವರು, ಹಂಸಲೇಖಾ ಅವರೂ ಆಳದಲ್ಲಿ ಎಡಪಂಥೀಯ ಚಿಂತಕರಾಗಿದ್ದವರು. ಹೀಗಾಗಿ ಚಿತ್ರದ ಕೆಲವು ಸನ್ನಿವೇಶಗಳು ಅಂಥ ಆಲೋಚನೆಯನ್ನು ಬಿಂಬಿಸಿದ್ದವು. ಚಿತ್ರ ತೆರೆಕಂಡ ದಿನಗಳಲ್ಲಿ ಚಿತ್ರದಲ್ಲಿ ಬೀಗಮುದ್ರೆ ತೆಗೆದು ದೇವರನ್ನು ಬೀದಿಯಲ್ಲಿಟ್ಟ ಸನ್ನಿವೇಶವನ್ನು 'ಬಾಬ್ರಿ ಮಸೀದಿ-ಮಂದಿರ'ದ ಪ್ರಕರಣಕ್ಕೆ ಹೋಲಿಸಿದ್ದೂ ಉಂಟು. ಕಲಾನಿರ್ದೇಶನ, ಮಕ್ಕಳ ಬಳಕೆ, ಗೀತೆಗಳ ಚಿತ್ರೀಕರಣ



(ಚಿತ್ರ ೧೪೮) 'ಕಿಂದರಿಜೋಗಿ' ಚಿತ್ರದಲ್ಲಿ ರವಿಚಂದ್ರನ್

ಇಂಥವು ಮತ್ತೆ ಮತ್ತೆ ನೆನೆಯುವಷ್ಟು ಚೆನ್ನಾಗಿದ್ದವು. ಆದರೆ ಚಿತ್ರ ಜನರ ಹತ್ತಿರಕ್ಕೆ ಹೋಗಲಿಲ್ಲ. ಈ ಚಿತ್ರದ ಸೋಲು ರವಿಚಂದ್ರನ್‌ರನ್ನು ಮತ್ತೆ ರೀಮೇಕ್ ಸಂಸ್ಕೃತಿಗೆ ಗಟ್ಟಿಯಾಗಿ ಅಂಟಿಕೊಳ್ಳುವಂತೆ ಮಾಡಿತು. ಈ ಚಿತ್ರದ ಬಿಡುಗಡೆಯ ಸಂದರ್ಭದಲ್ಲಿ ಸೃಷ್ಟಿಯಾದ ವಿವಾದ ಕೂಡ ಚಿತ್ರದ ಮೇಲೆ ಸಾಕಷ್ಟು ಪರಿಣಾಮ ಬೀರಿದ್ದು ಗಮನಾರ್ಹ.

ಇದು ಆರಂಭವಾದದ್ದು ಬೆಳಗಾವಿ ನಗರದ 'ಕನ್ನಡಮ್ಮ' ಪತ್ರಿಕೆಯ ವರದಿಗಾರರೊಬ್ಬರು ರವಿಚಂದ್ರನ್ ಸಂದರ್ಶನ ಮಾಡಿ ಬರೆದಿದ್ದ ಲೇಖನದಲ್ಲಿ ಕನ್ನಡ ಭಾಷೆಯನ್ನು ಟೀಕಿಸಿದ್ದ ವಾಕ್ಯಗಳಿದ್ದವು. ಇದು ರಾಜ್ಯದಾದ್ಯಂತ ಪ್ರತಿಭಟನೆಯ ವಾತಾವರಣವನ್ನು ನಿರ್ಮಿಸಿತು. ಸಂದರ್ಶನ ನಡೆದದ್ದು ೧೯೮೮ರ ಜೂನ್ ತಿಂಗಳಿನಲ್ಲಿ, ಅದರ ಪ್ರಕಟಣೆಯಾಗಿದ್ದು ಆಗಸ್ಟ್ ಮಧ್ಯ ಭಾಗದಲ್ಲಿ. ಇದೆಲ್ಲಕ್ಕಿಂತ ಹೆಚ್ಚಾಗಿ ಸಂದರ್ಶನದ ಪೂರ್ಣಭಾಗವನ್ನು ಪ್ರಕಟಿಸದೆ ರವಿಚಂದ್ರನ್‌ರ ಕೆಲವು ಮಾತುಗಳನ್ನಷ್ಟೇ ಪ್ರಕಟಿಸಿ ಅದರ ಬಗ್ಗೆ ದಿಢೀರನೆ ಖಂಡನೆಯನ್ನೂ ಪ್ರಕಟಿಸಿತ್ತು. ಬೆಳಗಾವಿ ಜಿಲ್ಲೆಯ ಗಜೇಂದ್ರಘಡದ ವರದಿಗಾರರೊಬ್ಬರೊಂದಿಗೆ ರವಿಚಂದ್ರನ್ ಮಾತನಾಡುತ್ತಾ ''ಭಾಷೆಯ ಬಗ್ಗೆ ನನ್ನ ಹತ್ತಿರ ಮಾತನಾಡಬೇಡಿ. ನನಗೆ ಕೇವಲ ಕನ್ನಡ, ಗಿನ್ನಡ ಬೇಕಾಗಿಲ್ಲ. ಭಾಷೆಯ ಬಗ್ಗೆ ನನ್ನ ಹತ್ತಿರ ಮಾತಾಡಿದರೆ ನನಗಾಗದು'' ಎಂದು ಹೇಳಿದ್ದಾರೆಂಬ ಹೇಳಿಕೆಯೇ ವಿವಾದಕ್ಕೆ ಕಾರಣವಾದದ್ದು. ಈ ಹೇಳಿಕೆ ಪ್ರಕಟವಾಗುತ್ತಿದ್ದಂತೆ ಸಿಟ್ಟಿಗೆದ್ದ ಬೆಳಗಾವಿಯ ಕನ್ನಡ ಸಂಘಟನೆಗಳ ಕಾರ್ಯಕರ್ತರು 'ಕಿಂದರಿಜೋಗಿ' ಪ್ರದರ್ಶನವನ್ನು ನಿರ್ಬಂಧಿಸಲು ಮುಂದಾದರು. ಆಗ ಚಿತ್ರದ ವಿತರಕರು ಹಾಗೂ ಚಿತ್ರಮಂದಿರದ ಮಾಲೀಕರು ಪ್ರತಿಭಟನಕಾರರ ಮನವೊಲಿಸಿ ರವಿಚಂದ್ರನ್‌ರಿಂದ ಕ್ಷಮಾಪಣೆ ಕೋರುವ ಹೇಳಿಕೆ ಕೊಡಿಸುವುದಾಗಿ ಆಶ್ವಾಸನೆ ನೀಡಿದರು. ಪ್ರತಿಭಟನೆ ಮುಂದಕ್ಕೆ ಹೋಯಿತು.

ಇಷ್ಟರ ನಡುವೆ ರವಿಚಂದ್ರನ್ ಸಂದರ್ಶನ ಕ್ಯಾಸೆಟ್‌ನಲ್ಲಿ ಸಂಪೂರ್ಣವಾಗಿ ಧ್ವನಿ ಮುದ್ರಣವಾಗಿದ್ದು ಅದರಲ್ಲಿ ಅವರು ಕನ್ನಡವನ್ನು ಸ್ಪಷ್ಟವಾಗಿಯೇ ವಿರೋಧಿಸಿ ಮಾತನಾಡಿದ್ದಾರಂತೆ ಎಂಬ ಸುದ್ದಿ ಹಬ್ಬಿತು. ಈ ಹಂತದಲ್ಲಿ ಬೆಳಗಾವಿಗೆ ಸೀಮಿತವಾಗಿದ್ದ ಅಸಮಾಧಾನದ ಹೊಗೆ ರಾಜ್ಯದ ಇತರೆಡೆಗಳಲ್ಲೂ ಕಾಣಿಸಿಕೊಂಡು ಎಲ್ಲ ಕಡೆಯಿಂದಲೂ 'ಕಿಂದರಿಜೋಗಿ'ಯನ್ನು ನಿರ್ಬಂಧಿಸುವ ಹೇಳಿಕೆಗಳು ಬರತೊಡಗಿದವು. ಅಷ್ಟು ಹೊತ್ತಿಗೆ 'ಕ್ಷಮಾಪಣೆ ಕೋರಿಕೆ ಪತ್ರ' ಕೊಡಲು ಸಿದ್ಧರಾಗಿದ್ದ ವೀರಾಸ್ವಾಮಿ ಆ ಕ್ಯಾಸೆಟ್ಟನ್ನು ತಮಗೆ ಕೊಡಬೇಕೆಂದು ಸಂಬಂಧಪಟ್ಟವರನ್ನು ಕೇಳಿಕೊಂಡರು. ಪತ್ರಿಕಾ ಧರ್ಮವನ್ನು ಕಾಪಾಡಬೇಕಾದ್ದು ಪತ್ರಕರ್ತನ ಹೊಣೆಯಾಗಿರುವುದರಿಂದ ಕ್ಯಾಸೆಟ್ಟನ್ನು ಕೊಡಲಾಗದು ಎಂದು ಪತ್ರಿಕೆಯ ಸಂಪಾದಕರು ಸ್ಪಷ್ಟಪಡಿಸಿದರು. ಕಡೆಗೆ ಆಯ್ದ ಗಣ್ಯರ ಮುಂದೆ ಕ್ಯಾಸೆಟ್ ಹಾಕಿದಾಗ ಅದರಲ್ಲಿ 'ನಾನು ಒಬ್ಬ ಭಾರತೀಯ. ಭಾಷೆಯ ಬಗ್ಗೆ ಏನೂ ಮಾತಾಡಬೇಡಿ. ನೀವು ಮಾತಾಡಿದರೆ ನಾನು ಎದ್ದು ಹೋಗುತ್ತೇನೆ'' ಎಂಬ ಮಾತುಗಳಿರುವುದಾಗಿ ಬೆಂಗಳೂರಿನ ವುಡ್‌ಲ್ಯಾಂಡ್ಸ್ ಹೋಟೇಲ್‌ನಲ್ಲಿ ಕರೆಯಲಾಗಿದ್ದ ಪತ್ರಿಕಾಗೋಷ್ಠಿಯಲ್ಲಿ ಪ್ರಕಟಿಸಲಾಯಿತು. ಆದರೂ ವೀರಾಸ್ವಾಮಿ ರವಿಚಂದ್ರನ್‌ರಿಂದ ಕ್ಷಮಾಪಣಾ ಪತ್ರವನ್ನು ಬರೆಸಿ ಬೆಳಗಾವಿಯ ಪತ್ರಿಕೆಯ ಸಂಪಾದಕರಿಗೆ ಕಳುಹಿಸಿಕೊಟ್ಟರು. ಅದಕ್ಕೆ ಸಮ್ಮತಿ ಸೂಚಿಸಿದ ಪತ್ರಿಕೆಯ ಸಂಪಾದಕರು ರವಿಚಂದ್ರನ್‌ರನ್ನು ಅಭಿನಂದಿಸಿದ್ದಲ್ಲದೆ ಬೆಳಗಾವಿಗೆ ಕರೆಸಿ ಸನ್ಮಾನಿಸುವುದಾಗಿ ಹೇಳಿಕೆ ಕೊಟ್ಟರು. ಆದರೆ ಬೆಳಗಾವಿ ತಣ್ಣಗಾದಷ್ಟು ಬೇಗ ಇತರ ನಗರಗಳು ಆಗಲಿಲ್ಲ. ಮೈಸೂರು, ಮಂಡ್ಯ, ಚನ್ನಪಟ್ಟಣ ಮತ್ತಿತರೆಡೆ ಪ್ರತಿಭಟನೆ ಮುಂದುವರಿದು ತಮ್ಮ ಎದುರು ರವಿಚಂದ್ರನ್ ಅವರೇ ಬರಬೇಕೆಂದು ಚಳವಳಿಗಾರರು ಹಠ ಹಿಡಿದು ಕುಳಿತಿದ್ದರು. ಇಂಥದೇ ಒಂದು ಚಿತಾವಣೆಗೆ ಸಿಕ್ಕಿಕೊಂಡ ಬಹುಬೇಡಿಕೆಯ ತಾರೆ ಮಾಲಾಶ್ರೀ ಅವರಿಗೆ ವೀರಾಸ್ವಾಮಿಯಂಥ ಗಾಡ್‌ಫಾದರ್ ಇರಲಿಲ್ಲ. ಮುತ್ಸದ್ದಿತನ ಬರದು. ಆಕೆಯ ಯಾವ ಮಾತೂ ನಿಲ್ಲಲಿಲ್ಲ. ಒಂದು ಅರ್ಥದಲ್ಲಿ ಚಿತ್ರರಂಗದಿಂದ ಆಕೆಯನ್ನು ಹೊರಗೇ ಇಡಲಾಯಿತು. ಇದಕ್ಕೆ ಬಳಸಿದ್ದು ಕನ್ನಡದ ನಾಯಕನಟರು, ಭಾಷೆ ಕುರಿತ ಭಾವನಾತ್ಮಕತೆಯನ್ನು.

ಪಾರಿಜಾತ ಆರ್ಟ್ಸ್‌ನ ಎಸ್.ಎಂ.ಮಧುಸೂದನ್ ಮತ್ತು ಎಸ್.ಎಂ.ಭಾನುಪ್ರಕಾಶ್ ನಿರ್ಮಾಣದಲ್ಲಿ ಡಿ.ರಾಜೇಂದ್ರಬಾಬು ನಿರ್ದೇಶಿಸಿದ ಸಾಂಸಾರಿಕ ಚಿತ್ರ 'ಸಂಸಾರನೌಕೆ'. ಹೆಣ್ಣು ಶೋಷಣೆಗೊಳಗಾಗಿ, ಒಂದು ಹಂತದವರೆವಿಗೂ ಸಹಿಸಬಲ್ಲಳು, ಅವಳಿಗೂ ಛಲವಿದೆ, ಅವಳೂ ಸಾಧಿಸಬಲ್ಲಳು ಎಂಬ ತಿರುಳುಳ್ಳ ಕಥೆ ಅತಿರೇಕವೆನಿಸುವ ಸನ್ನಿವೇಶಗಳು ವಾಣಿಜ್ಯ ಕಾರಣಕ್ಕಾಗಿ ನುಸುಳಿಕೊಂಡರೂ ಕಥೆ ಹೇಳುವ ವಿಧಾನ ವಿಶೇಷವೆನಿಸುತ್ತದೆ. ನಾಯಕಿ ಪಾತ್ರದಲ್ಲಿ ಮಹಾಲಕ್ಷ್ಮೀ ಮತ್ತು ಅತ್ತೆ-ಮಾವನಾಗಿ ಪಂಢರಿಬಾಯಿ, ಬಾಲಕೃಷ್ಣ ಚೆನ್ನಾಗಿ ನಟಿಸಿದ್ದಾರೆ. ತಂದೆ ತಾಯಿಗಳನ್ನು, ಗಂಡನನ್ನು ಕಳೆದುಕೊಂಡ ಮನೆಯ ಸೊಸೆಯನ್ನು ಮೈದುನ ಹೊರಗೆ ಅಟ್ಟುತ್ತಾನೆ. ಛಲದಿಂದ ಸಣ್ಣದಾಗಿ ಹಪ್ಪಳ-ಸಂಡಿಗೆ ಉದ್ಯೋಗ ಆರಂಭಿಸಿ ಅದನ್ನೇ ದೊಡ್ಡ ಉದ್ಯಮವಾಗಿ ಬೆಳೆಸುವುದು, ಇವೆಲ್ಲಾ ಚಿತ್ರದ ಗುಣಾತ್ಮಕ ಅಂಶಗಳು. ಚಿತ್ರದ ಅಂತ್ಯವೂ ಭಿನ್ನವಾಗಿತ್ತು. ಎಂ.ರಂಗರಾವ್ ಸಂಗೀತ ಸಂಯೋಜನೆಯಲ್ಲಿ 'ಕಂದ ಬರುವನೆಂಬ ನಮ್ಮ ಬಾಳೇ....' ಹಾಡು ಗುನುಗುವಂತಿತ್ತು. ಇದು ಹಿಂದಿಯ 'ಆರಾಧನಾ' ಚಿತ್ರದ ಹಾಡಿನ ಅನುಕರಣೆಯಾಗಿತ್ತು ಎಂಬುದು ವಿಪರ್ಯಾಸ.

'ದೇವ' ಮತ್ತೊಂದು ತ್ಯಾಗೋದಾತ್ತ ಗುಣಗಳ ನಾಯಕನ ಕಥೆ. ತಮ್ಮಂದಿರ ಸುಖಕ್ಕಾಗಿ ತ್ಯಾಗ ಮಾಡಿ ಕೊನೆಗೆ ಜೈಲಿನ ಕಂಬಿ ಎಣಿಸುವವರೆಗೆ ಅತಿರೇಕ ವಿಜೃಂಭಿಸುತ್ತದೆ. ವಿಷ್ಣುವರ್ಧನ್ ನಟನೆಯೇ ಚಿತ್ರದಲ್ಲಿ ಹೇಳಬಹುದಾದ ಅಂಶ.



(ಚಿತ್ರ ೧೪೯) 'ಸಂಸಾರನೌಕೆ' ಚಿತ್ರದಲ್ಲಿ ಅಂಬರೀಷ್ ಮತ್ತು ಮಹಾಲಕ್ಷ್ಮೀ

ಜೊತೆಗೆ ಚಿತ್ರ ಯಶಸ್ಸಿನ ಏಣಿಯನ್ನೂ ಏರಿತು. 'ದೇವಣ್ಣ ನಿನ ಮೇಲೆ ಮನಸಣ್ಣ...' ಹಾಗೂ 'ಸುಗ್ಗಿ ಬಂದ ಹಾಗೆ...' ಹಾಡುಗಳು ಜನಮನ್ನಣೆ ಪಡೆದವು. ಚಿತ್ರ ತಮಿಳಿಗೆ ರೀಮೇಕ್ ಆಯಿತು.

ಕನ್ನಡ ಭಾಷೆಗೆ ಸಂಬಂಧಿಸಿದಂತೆ ಕನ್ನಡಿಗರನ್ನು ಕೆರಳಿಸಲು ಕಾವೇರಿ ನೀರು, ಗೋಕಾಕ್ ವರದಿಯಂಥ ವಿಷಯಗಳ ಜೊತೆಗೆ ರವಿಚಂದ್ರನ್ ಭಾಷಾಪ್ರೇಮ ಕೂಡ ಸೇರ್ಪಡೆಯಾದದ್ದು ಸಂದರ್ಭದ ವ್ಯಂಗ್ಯವಿರಬಹುದು. ಆದರೆ ಗೋಕಾಕ್ ಚಳವಳಿ ಕನ್ನಡಿಗರಲ್ಲಿ ಅಷ್ಟರ ಮಟ್ಟಿಗಿನ ಜಾಗೃತಿಯನ್ನು, ಉತ್ಕಟ ಭಾಷಾಪ್ರೇಮವನ್ನು ಉಂಟುಮಾಡಿತ್ತೆಂಬುದು ನಿಜ. ಒಟ್ಟಾರೆ ಆ ದಿನಗಳಲ್ಲಿ ಕನ್ನಡದ ಬಗ್ಗೆ ಲಘುವಾಗಿ ಮಾತನಾಡಲು ಎಂಥವರೂ ಅಳುಕುತ್ತಿದ್ದರು. ಇಂಥ ಹಿನ್ನೆಲೆಯಲ್ಲಿಯೇ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಆಚರಿಸಿದ ಕನ್ನಡ ರಾಜ್ಯೋತ್ಸವ ವಿಶೇಷವಾಗಿತ್ತು.

ಅಂದಿನ ಆಚರಣೆ ಸರಳವಾಗಿದ್ದರೂ ಅರ್ಥಪೂರ್ಣವಾಗಿತ್ತು. ಬೆಳಿಗ್ಗೆ ರಾಜಕುಮಾರ್ ವಾಣಿಜ್ಯ ಮಂಡಳಿ ಆವರಣದಲ್ಲಿ ಕನ್ನಡ ಬಾವುಟ ಹಾರಿಸಿದರು. ವಿಷ್ಣುವರ್ಧನ್ ಹಾಗೂ ಇನ್ನಿತರ ಕಲಾವಿದರು ಹಾಜರಿದ್ದರು. ಸಂಜೆ ಸಮಾರಂಭದ ಅಧ್ಯಕ್ಷತೆಯನ್ನು ರಾಜಕುಮಾರ್ ವಹಿಸಿದ್ದು ಕನ್ನಡ ಚಿತ್ರರಂಗಕ್ಕೆ ಸೇವೆ ಸಲ್ಲಿಸುತ್ತಿರುವ ಹಿರಿಯರಾದ ಟಿ.ಎಸ್.ಬಾಲಕೃಷ್ಣ, ಶಾಂತಮ್ಮ, ಕೆ.ಸಿ.ಎನ್.ಗೌಡ, ಚಿ.ಉದಯಶಂಕರ್, ಎಸ್.ಎಂ.ಲಕ್ಷ್ಮಣರಾವ್ ಇವರುಗಳೊಂದಿಗೆ, ಬೆಂಗಳೂರಿನ ಮೇನಕಾ ಚಿತ್ರಮಂದಿರವನ್ನು ಕನ್ನಡ ಚಿತ್ರಗಳಿಗಾಗಿ ಮೀಸಲಾಗಿರಿಸಲು ಕಾರಣರಾದ ಅದರ ಪಾಲುದಾರ ವೆಂಕಟೇಶಮೂರ್ತಿಯವರನ್ನು ಸನ್ಮಾನಿಸಲಾಯಿತು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಕನ್ನಡ ರಾಜ್ಯೋತ್ಸವವನ್ನು ಆಚರಿಸಿದ ಇದೊಂದು ಉದಾಹರಣೆ ಮಾತ್ರವಲ್ಲ, ಎಲ್ಲಾ ಕಡೆಯೂ ಇಂಥ ಅನಿವಾರ್ಯ ಸ್ಥಿತಿ ಉಂಟಾಗಿತ್ತು. ತನ್ನ ಮೂರು ದಶಕಗಳಿಗೂ ಮೀರಿದ ಇತಿಹಾಸದಲ್ಲಿ ಚಿತ್ರೋದ್ಯಮದ ಈ ಪ್ರಾತಿನಿಧಿಕ ಸಂಸ್ಥೆ ಚಲನಚಿತ್ರ ವಾಣಿಜ್ಯ ಮಂಡಳಿ ಎಂದೂ ಕನ್ನಡ ರಾಜ್ಯೋತ್ಸವವನ್ನು ಆಚರಿಸಿರಲಿಲ್ಲ. ಇದಕ್ಕೆ ಗಟ್ಟಿಯಾದ ಕಾರಣವೇನೆಂದು ತಿಳಿಯುವುದಿಲ್ಲ. ಆಗ ಹೆಚ್ಚಿನಂಶ ಪರಭಾಷಾಪ್ರೇಮಿ ಪ್ರತಿನಿಧಿಗಳಿದ್ದುದು ಮತ್ತು ಹಂಚಿಕೆದಾರರು, ಪ್ರದರ್ಶಕರುಗಳ ಶಕ್ತಿಯೇ ವಾಣಿಜ್ಯ ಮಂಡಳಿಯಲ್ಲಿ ಪ್ರಧಾನವಾಗಿದ್ದುದು ಕಾರಣವಾಗಿರಬಹುದೇ ಎಂಬುದನ್ನು ಕೆ.ವಿ.ಗುಪ್ತ ಹಾಗೂ ಆರ್.ಲಕ್ಷ್ಮಣ್ ಇಬ್ಬರೂ ಒಪ್ಪುವುದಿಲ್ಲ. ಅವರ ಪ್ರಕಾರ''...ಹೀಗೊಂದು ಯೋಚನೆಯೇ ಯಾರಿಗೂ ಬರಲಿಲ್ಲ. ಅಂಥ ಕೆಲಸ ಕೈಗೆತ್ತಿಕೊಂಡಿದ್ದರೆ ಯಾರೂ ಬೇಡವೆನ್ನುತ್ತಿರಲಿಲ್ಲವೇನೋ. ಅಂಥ ಸಂದರ್ಭವೇ ಎದುರಾಗಲಿಲ್ಲವಾದ್ದರಿಂದ ಅವರಿವರ ಮೇಲೆ ತಪ್ಪು ಹೊರಿಸಬಾರದು. ರಾಜ್ಯೋತ್ಸವ ಮಾತ್ರವಲ್ಲ, ಸ್ವಾತಂತ್ರ್ಯೋತ್ಸವ, ಗಣರಾಜ್ಯೋತ್ಸವಗಳನ್ನೂ ಆಚರಿಸಿಲ್ಲ. ಎಂದೂ ಧ್ವಜಾರೋಹಣವೇ ಆಗಿರಲಿಲ್ಲ. ಇವೆಲ್ಲ ಪ್ರಾರಂಭವಾದದ್ದು ಸಿ.ವಿ.ಎಲ್.ಶಾಸ್ತ್ರಿಗಳಿಂದ. ಅವರು ಇಂಥ ಅನೇಕ ಕಾರ್ಯಗಳನ್ನು ಪ್ರಾರಂಭಿಸಿದರು - ತಾವೇ ನಿಂತು ನಡೆಸಿದರು'' ಎಂದು ನೆನೆಯುತ್ತಾರೆ. ತದನಂತರ ವರ್ಷಂಪ್ರತಿ ಈ ಆಚರಣೆಯನ್ನು ವಾಣಿಜ್ಯ ಮಂಡಳಿ ಮುಂದುವರೆಸಿಕೊಂಡು ಬಂದಿದೆ. ಆದರೆ ೮೦ರ ದಶಕದಲ್ಲಿ ಇಡೀ ಚಿತ್ರೋದ್ಯಮ ಕನ್ನಡದ ಬಿರುಗಾಳಿಯಲ್ಲಿ ತೇಲುತ್ತಿತ್ತಾದ್ದರಿಂದ ಈ ರಾಜ್ಯೋತ್ಸವವನ್ನು ಏರ್ಪಡಿಸಿರುವ ಸಾಧ್ಯತೆಗಳಿವೆ. ಕನ್ನಡ ಪ್ರಜ್ಞೆ ಅತ್ಯಂತ ಜಾಗೃತಾವಸ್ಥೆಯಲ್ಲಿದ್ದ ೧೯೮೦ರ ದಶಕದಲ್ಲಿ ಕನ್ನಡದಲ್ಲಿ ಶ್ರೇಷ್ಠ ಚಿತ್ರಗಳ ಸೃಷ್ಟಿಯಾಗದಿದ್ದರೂ ಕನ್ನಡಿಗರಲ್ಲಿ ಕನ್ನಡ ಚಿತ್ರಗಳನ್ನು ಪ್ರೋತ್ಸಾಹಿಸಬೇಕು ಎಂಬಂಥ ಎಚ್ಚರ ಮೂಡಿತ್ತು.

೧೯೭೦ರ ದಶಕ ಮತ್ತು ಅದಕ್ಕೂ ಹಿಂದಿನ ನಿರ್ಮಾಪಕರು ತಮ್ಮ ಚಿತ್ರಗಳು ರಾಜ್ಯ ಪ್ರಶಸ್ತಿಗೆ ಅರ್ಹವೋ, ಅಲ್ಲವೋ ಎಂಬುದನ್ನು ತಮಗೆ ತಾವೇ ತೀರ್ಮಾನಿಸಿಕೊಳ್ಳುತ್ತಿದ್ದರು. ಇದರಿಂದಾಗಿ ವಾರ್ತಾ ಇಲಾಖೆ ಪ್ರಶಸ್ತಿ ವೀಕ್ಷಣೆಗೆ ಚಿತ್ರಗಳನ್ನು ಆಹ್ವಾನಿಸಿದರೆ ಬಹಳ ಮಂದಿ ಚಿತ್ರಗಳನ್ನು ಕಳುಹಿಸುತ್ತಿರಲಿಲ್ಲ. ನಿರ್ಮಾಪಕರ ಈ ಆತ್ಮವಿಮರ್ಶೆ ಮನೋಭಾವದಿಂದಾಗಿ ಕೆಲವು ವರ್ಷ ೧೨ ರಿಂದ ೧೫ ಚಿತ್ರಗಳು ಮಾತ್ರ ಬಂದಿದ್ದ ಉದಾಹರಣೆ ಇದೆ. ಪ್ರಶಸ್ತಿ ಗಳಿಸಬೇಕಾದರೆ ಚಿತ್ರ ವಿಶೇಷ ಅರ್ಹತೆಯನ್ನು ಹೊಂದಿರಬೇಕು ಎಂಬ ನಂಬಿಕೆ ಆಗ ಬಲವಾಗಿದ್ದುದು ಇದಕ್ಕೆ ಕಾರಣ. ಸ್ಪರ್ಧೆಗೆ ಬಂದ ಚಿತ್ರಗಳ ಸಂಖ್ಯೆ ಕಡಿಮೆಯಾದ ಸಂದರ್ಭಗಳಲ್ಲಿ ವಾರ್ತಾ ಇಲಾಖೆ ಪ್ರವೇಶಕ್ಕೆ ನಿಗದಿ ಪಡಿಸಿದ್ದ ಅಂತಿಮ ದಿನಾಂಕವನ್ನು ವಿಸ್ತರಿಸಿದ ಉದಾಹರಣೆಯೂ ಇದೆ. ೧೯೮೦ರ ನಂತರದಲ್ಲಿ ವಾತಾವರಣ ಬದಲಾಯಿತು. ಪ್ರಶಸ್ತಿಗಳ ಬಗ್ಗೆ ವಿವಾದಗಳು ಹೆಚ್ಚಿದಂತೆ, ಪ್ರಶಸ್ತಿ ಬಯಸುವ ನಿರ್ಮಾಪಕರೂ ಹೆಚ್ಚಿದರು. ಯಾವುದಾದರೂ ಒಂದು ಪ್ರಶಸ್ತಿಯನ್ನು ಗಳಿಸಲೇಬೇಕು ಎಂಬ ನಿರ್ಮಾಪಕರ ಆಸೆಗೆ ಪ್ರಶಸ್ತಿ ಪಡೆದ ಚಿತ್ರಗಳಿಗೆ ದೂರದರ್ಶನ ಇತ್ಯಾದಿ ಮಾಧ್ಯಮಗಳಲ್ಲಿ ಏರ್ಪಾಟಾದ ಆರ್ಥಿಕ ಸೌಲಭ್ಯಗಳು ನೀರೆರೆದವು. ೮೦ರ ದಶಕದ ಪೂರ್ವಾರ್ಧದ ಒಂದೆರಡು ವರ್ಷ ೪೦ ರಿಂದ ೫೦ ಚಿತ್ರಗಳು ಪ್ರಶಸ್ತಿಗಾಗಿ ದಾಖಲಾಗಿದ್ದವೆಂದರೆ ಐದಾರು ವರ್ಷಗಳಲ್ಲಿ ಪರಿಸ್ಥಿತಿ ಎಷ್ಟು ಬದಲಾಗಿತ್ತೆಂಬುದನ್ನು ಊಹಿಸಿಕೊಳ್ಳಬಹುದು. ವಿಪರ್ಯಾಸವೆಂದರೆ ಇತರ ಭಾಷೆಯ ಚಿತ್ರಗಳನ್ನು ಕಾಪಿ ಮಾಡಿದ ನಿರ್ಮಾಪಕರೂ ಪ್ರಶಸ್ತಿಗಾಗಿ ಹಂಬಲಿಸತೊಡಗಿದರು. ೪೦ ಚಿತ್ರಗಳಲ್ಲಿ ೨೦ ರೀಮೇಕ್ ಆಗಿರುವಂಥ ದುರಂತ ಸೃಷ್ಟಿಯಾಯಿತು. ಈ ಹಂತದಲ್ಲಿ ವಾರ್ತಾ ಇಲಾಖೆಗೆ ಹೊಸ ತಲೆನೋವು ಶುರುವಾಯಿತು. ಪ್ರಶಸ್ತಿ ಸಮಿತಿಯ ಬಹುತೇಕ ಸದಸ್ಯರು ಬೇರೆ ಭಾಷೆಯ ಚಿತ್ರಗಳನ್ನು ನೋಡಿರುವುದಿಲ್ಲವಾದ್ದರಿಂದ ಅವುಗಳನ್ನು ಗುರುತಿಸಿ ದೂರವಿಡುವ ಕೆಲಸವನ್ನು ವಾರ್ತಾ ಇಲಾಖೆಯೇ ಮಾಡಬೇಕಾಯಿತು. ಇದರಿಂದಾಗಿ ವಾರ್ತಾ ಇಲಾಖೆಯು ಸಂಶೋಧಕ-ಹೋರಾಟಗಾರ ಚಿದಾನಂದಮೂರ್ತಿಯವರ 'ಸಾಹಿತಿ ಕಲಾವಿದರ ಬಳಗ'ಕ್ಕೆ ರೀಮೇಕ್ ಚಿತ್ರಗಳ ಬಗ್ಗೆ ಆಗಾಗ್ಗೆ ಸಮರ್ಪಕ ಮಾಹಿತಿ ನೀಡಬೇಕೆಂದು ಪತ್ರ ಬರೆದು ಕೋರಿಕೊಂಡಿತು. ತಕ್ಷಣ ಸ್ಪಂದಿಸಿದ ಚಿದಾನಂದಮೂರ್ತಿ ಹಾಗೂ ಕನ್ನಡಾಸಕ್ತ ಗೆಳೆಯರು ೧೯೮೭-೮೮ ರಲ್ಲಿ ತೆರೆಕಂಡಿರುವ ಒಟ್ಟು ಚಿತ್ರಗಳಲ್ಲಿ ೫೧ ಚಿತ್ರಗಳು ರೀಮೇಕ್ ಎಂದು ವಿವರ ನೀಡಿದರು. ಇದರೊಂದಿಗೆ ಸರ್ಕಾರದಿಂದ ಸಬ್ಸಿಡಿ, ತೆರಿಗೆ ವಿನಾಯ್ತಿ ಪಡೆಯಲು ನಿರ್ಮಾಪಕರು 'ನಮ್ಮದು ರೀಮೇಕ್ ಅಲ್ಲ' ಎಂದು ಪ್ರಮಾಣ ಪತ್ರದೊಂದಿಗೆ ಸಲ್ಲಿಸಿರುವ ಸಿನಿಮಾಗಳ ಪಟ್ಟಿಯಲ್ಲಿ ೧೦ ಚಿತ್ರಗಳು ರೀಮೇಕ್ ಎಂಬುದನ್ನು ಪತ್ತೆ ಮಾಡಿ ಇವುಗಳಿಗೆ ಯಾವ ಕಾರಣಕ್ಕೂ ಸರ್ಕಾರದ ಸೌಲಭ್ಯ ಸಿಗಬಾರದೆಂದು ಆಗ್ರಹಿಸಿ ಸರ್ಕಾರಕ್ಕೆ ಪತ್ರ ಬರೆದರು. ಇದು ರೀಮೇಕ್ ಸಂಸ್ಕೃತಿ ಕನ್ನಡ ಚಿತ್ರರಂಗವನ್ನು ಯಾವ ಪ್ರಮಾಣದಲ್ಲಿ ಆವರಿಸಿಕೊಂಡಿತ್ತೆಂಬುದಕ್ಕೆ ನಿದರ್ಶನ.

ಚಿತ್ರರಂಗದ ಒಟ್ಟು ವಾತಾವರಣ ಹೀಗೆ ಸ್ವಂತಿಕೆಯನ್ನು ಕಳೆದುಕೊಂಡ ದಿನಗಳಲ್ಲಿ 'ಸಂತ ಶಿಶುನಾಳ ಶರೀಫ'ದಂಥ ಚಿತ್ರ ವಿಶೇಷವಾಗಿ ಕಾಣುವುದಕ್ಕೆ ಬೇರೆ ಯಾವ ಅದ್ಭುತ ಕಾರಣ ಇರಲಿಲ್ಲ. ೧೯ನೆಯ ಶತಮಾನದಲ್ಲಿ ಬದುಕಿದ ಸಂತ, ಅನುಭಾವಿ ಶಿಶುನಾಳ ಶರೀಫರ ಬದುಕನ್ನು ಆಧರಿಸಿದ್ದ ಚಿತ್ರ. ''ಸಂತ ಶಿಶುನಾಳ ಶರೀಫರ ಬಗ್ಗೆ ಹುಬ್ಬಳ್ಳಿಯ ಕಡೆಯವರೊಬ್ಬರು ಚಿತ್ರ ಮಾಡಿದ್ದರು. ಅಲ್ಲಿಯ ಭಾಷೆಯ ಸೊಗಡು, ಗಾಯನ ಮಾಧುರ್ಯ ಇತ್ತು. ಚಿತ್ರ ತಕ್ಕಮಟ್ಟಿಗೆ ಚೆನ್ನಾಗಿಯೂ ಇತ್ತು. ಏನೋ ಮನಸ್ತಾಪದ ಕಾರಣ ತೆರೆಗೆ ಬರಲಿಲ್ಲ'' ಎಂದು ಆ ಚಿತ್ರ ನೋಡಿದ್ದ ಕೆ.ವಿ.ಗುಪ್ತ ಹೇಳುತ್ತಾರೆ. ಆ ನಂತರ 'ಈಶ್ವರ ಅಲ್ಲಾ' ಕೂಡಾ ಬೆಂಗಳೂರಿನಲ್ಲಿ ತೆರೆಕಾಣಲಿಲ್ಲ.

ನೆಮ್ಮದಿಯ ಬದುಕು ಮನುಷ್ಯ-ಮನುಷ್ಯರ ನಡುವಿನ ಪ್ರೀತಿ-ಸ್ನೇಹಗಳ ನಂಬಿಕೆಯಲ್ಲಿದೆ ಎಂಬುದನ್ನುತಾನೇ ಬದುಕಿ ತೋರಿಸಿದ್ದು ಶರೀಫನ ಹೆಗ್ಗಳಿಕೆ. ಜಾತಿ, ಮತ, ಪಂಥಗಳನ್ನು ಮೀರಿ ಜೀವಿಸುವ ತತ್ವವನ್ನು ತನ್ನ ಹಾಡುಗಳ ಮೂಲಕ ಪ್ರತಿಪಾದಿಸುತ್ತ ಊರಿಂದ ಊರಿಗೆ ಅಲೆದ ದಾರ್ಶನಿಕ ಈತ. ಮೇಲ್ನೋಟಕ್ಕೆ ಸರಳವಾಗಿ ಕಾಣುವ ಶರೀಫರ ಗೀತೆಗಳಲ್ಲಿ ಶಕ್ತ ಕವಿಯೊಬ್ಬನ ಕಾವ್ಯದಲ್ಲಿರುವಂಥ ನಿಗೂಢ ಅರ್ಥಗಳಿವೆ. ಇವು ತನ್ನ ಒಳಗಣ್ಣಿಗೆ ಕಂಡಾಗ ಅವನೇ ಮುಗ್ಧತೆಯಿಂದ ಬೆರಗಾಗಿದ್ದಾನೆ. ಸೃಷ್ಟಿಯ ಚಮತ್ಕಾರಗಳಿಗೆ ಮನಸಾರೆ ಸೋತುಹೋಗಿದ್ದಾನೆ. ಈ ಪರವಶತೆ ಅವನ ಹಾಡುಗಳಲ್ಲಿ ಜೀವನ ಪ್ರೀತಿ, ಉತ್ಸಾಹಗಳಾಗಿ ಮೈದಾಳಿದೆ. ವಾಸ್ತವ ಹಾಗೂ ಸತ್ಯದ ಅರಿವಿನೊಂದಿಗೆ ಎಚ್ಚರದಿಂದ ಬದುಕಬೇಕೆಂಬ ಅವನ ನಂಬಿಕೆ, ಪ್ರಾಮಾಣಿಕ ತುಡಿತ, ವಿನೀತ ಭಾವಗಳೇ ಈತನ ಹಾಡುಗಳಲ್ಲಿ ಹರಳುಗಟ್ಟಿಕೊಂಡಿವೆ. ಈ ಹಿನ್ನೆಲೆಯಲ್ಲಿಯೇ ಅವನ್ನು ಕೇಳಿದರೆ ಮನಸ್ಸು ಥಟ್ಟನೆ ಒಲಿಯುತ್ತವೆ.

ಅನೇಕ ವರ್ಷಗಳಿಂದ ಉತ್ತರ ಕರ್ನಾಟಕದ ಜನರ ನೆನಪಿನಲ್ಲಿ ಮಾತ್ರ ಉಳಿದಿದ್ದ ಶರೀಫ, ಇದ್ದಕ್ಕಿದ್ದಂತೆ ಬೆಳಕಿಗೆ ಬಂದದ್ದು ೧೯೮೧ ರಲ್ಲಿ ಗಾಯಕ, ಸಂಗೀತ ನಿರ್ದೇಶಕ ಸಿ.ಅಶ್ವಥ್, ಕವಿ ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರ ಸಂಶೋಧನಾ ನೆರವಿನೊಂದಿಗೆ ರಾಗ ಸಂಯೋಜಿಸಿ ಹೊರತಂದ 'ಸಂತ ಶಿಶುನಾಳ ಶರೀಫರ ಗೀತೆಗಳು' ಧ್ವನಿಸುರುಳಿ ಮೂಲಕ. ಕೆಲವೇ ದಿನಗಳಲ್ಲಿ ನಾಡಿನಾದ್ಯಂತ ಜನಪ್ರಿಯವಾದ ಈ ಧ್ವನಿಸುರುಳಿ ಶರೀಫರನ್ನು, ಮತ್ತು ಏಕಕಾಲಕ್ಕೆ ಸಿ.ಅಶ್ವಥ್‌ರನ್ನು ಖ್ಯಾತಿಯ ಉತ್ತುಂಗಕ್ಕೇರಿಸಿತು. ಇದೇ ಜನಪ್ರಿಯತೆಯೇ ಆತನ ಬದುಕನ್ನು ಆಧರಿಸಿ ಚಿತ್ರ ರೂಪಿಸಲು ನಾಗಾಭರಣರಿಗೆ ಪ್ರೇರಣೆಯಾಯಿತು. ಜನಮನದಲ್ಲಿ ಅಚ್ಚೊತ್ತಿರುವ ತತ್ವಪದಗಳನ್ನೇ ಆಧರಿಸಿ, ಜೀವನ ಚರಿತ್ರೆಯನ್ನು ಸಂಗ್ರಹಿಸಿ, ಜನಪದ ಸಂಗೀತವನ್ನು ವಿಶಿಷ್ಟ ರೀತಿಯಲ್ಲಿ ಬಳಸಿ ಮಾಡಿರುವ ಪ್ರಯೋಗವಿದು. ಸಿ.ಅಶ್ವಥ್ ಕ್ಯಾಸೆಟ್ ಹಾಡುಗಳಿಗೆ ಸಂಯೋಜಿಸಿದ್ದ ರಾಗಗಳನ್ನೇ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು



(ಚಿತ್ರ ೧೫೦) 'ಸಂತ ಶಿಶುನಾಳ ಶರೀಫ' ಚಿತ್ರದಲ್ಲಿ ಶ್ರೀಧರ್ ಮತ್ತು ಸುಮನ್ ರಂಗನಾಥ್

ನಿರ್ಮಾಪಕರು. ಶಂಕರ್‌ನಾಗ್, ಅನಂತ್‌ನಾಗ್, ಪ್ರಭಾಕರ್, ಶ್ರೀನಾಥ್, ದೇವರಾಜ್, ರಮೇಶ್, ರೇವತಿ, ಮಹಾಲಕ್ಷ್ಮೀ, ಡಿಸ್ಕೋ ಶಾಂತಿ ಹೀಗೆ ಭಾರಿ ತಾರಾಗಣವಿದ್ದ ಈ ಚಿತ್ರಕ್ಕೆ ಮೂರು ಶಿಫ್ಟ್‌ಗಳಲ್ಲಿ ಎಂಟು ಕ್ಯಾಮೆರಾಗಳನ್ನು ಬಳಸಿ ಚಿತ್ರಿಸಲಾಯಿತು. ಒಬ್ಬ ವ್ಯಕ್ತಿ ಗೂಬೆಯ ಮುಖವಾಡ ಧರಿಸಿ ಸರಣಿ ಕೊಲೆ ಮಾಡುತ್ತಾ ಬರುತ್ತಾನೆ. ಕೊನೆಗೆ ರೇವತಿಯೊಬ್ಬಳೇ ಅವನಿಂದ ತಪ್ಪಿಸಿಕೊಂಡು ಬದುಕುಳಿಯಲು ಸಾಧ್ಯವಾಗುವುದು. ಇಂಥ ಕುತೂಹಲಕಾರಿ ಚಿತ್ರವನ್ನು ಇನ್ನಷ್ಟು ನಾಜೂಕಾಗಿ, ಆರಂಭದಲ್ಲೇ ಸಸ್ಪೆನ್ಸ್ ಬಯಲಾಗದಂತೆ ಮಾಡಿದ್ದಿದ್ದರೆ ಚಿತ್ರದ ಸ್ವಾರಸ್ಯ ಹೆಚ್ಚುತ್ತಿತ್ತು. ಹಿಂದಿಯ ಪಾಪ್ ಗಾಯಕಿ ಅಲಿಷಾ ಚಿನಾಯ್ ಹಾಡಿದ್ದರು. ಚಿತ್ರದ ಅವಧಿ ಎಂದಿನ ಸಿನಿಮಾಗಳಿಗಿಂತ ಒಂದು ಗಂಟೆಯಷ್ಟು ಕಡಿಮೆ ಇತ್ತು.

'ಪರಶುರಾಮ್' ರಾಜಕುಮಾರ್ ಅವರ ೨೦೧ನೇ ಚಿತ್ರ. ದಾಕ್ಷಾಯಿಣಿ ಕಂಬೈನ್ಸ್‌ನ ಪಾರ್ವತಮ್ಮ ರಾಜಕುಮಾರ್ ನಿರ್ಮಾಣ ಮಾಡಿ ವಿ.ಸೋಮಶೇಖರ್ ನಿರ್ದೇಶಿಸಿದರು. 'ದೇವತಾ ಮನುಷ್ಯ'ದಲ್ಲಿ ಅವರ ಸಹಜರೂಪದಲ್ಲೇ ಕಾಣಿಸಿಕೊಂಡದ್ದು ಹಾಗೂ ನಾಯಕನಾಗಿ ಸೇಡು ತೀರಿಸಿಕೊಳ್ಳದೇ ಇದ್ದುದು ಅಭಿಮಾನಿಗಳಿಗೆ ಹಿಡಿಸಲಿಲ್ಲ. 'ಪರುಶುರಾಮ್' ಚಿತ್ರದಲ್ಲಿ ಕ್ರೌರ್ಯ ರಾಜಕುಮಾರ್ ಚಿತ್ರಗಳಲ್ಲಿ ಇರುತ್ತಿದ್ದ ಹಿಂಸೆಗಿಂತ ಹೆಚ್ಚಾಗಿದ್ದುದು 'ಎ' 'ಬಿ' ದರ್ಜೆಯ ಪ್ರೇಕ್ಷಕರಿಗೆ ಮೆಚ್ಚೆನಿಸಲಿಲ್ಲ. ಒಂದು ಹಾಡಿನಲ್ಲಿ ಮಹಾಲಕ್ಷ್ಮೀ ರಾಜಕುಮಾರ್‌ಗೆ ಜೋಡಿಯಾಗಿ ಅಭಿನಯಿಸಿದ್ದರು. ಆದರೆ ಚಿತ್ರದಲ್ಲಿ ವಾಣಿ ವಿಶ್ವನಾಥ್ ನಾಯಕಿ. ಪುನೀತ್ ರಾಜಕುಮಾರ್‌ಗೂ ವಿಶೇಷ ಪಾತ್ರವಿತ್ತು. ರಾಜರತ್ನಂ ಶೈಲಿಯಲ್ಲಿ ಬರೆದಿದ್ದ 'ನಮ್ ತಿಪ್ಪಾರಳ್ಳಿ ಬಲು ದೂರ ಅಲ್ಲವ್ವೆ ನಮ್ಮ ಬಸ್ಸಿ..' ಗೀತೆ ವಿಶೇಷವೆನಿಸಿತು. ಪತ್ರಕರ್ತರೊಬ್ಬರು ಪತ್ರಕರ್ತನ ಪಾತ್ರದಲ್ಲೇ ಮಿಂಚಿದರು. ಹಂಸಲೇಖ ಮೊದಲ ಬಾರಿಗೆ ರಾಜ್ ಚಿತ್ರಕ್ಕೆ ಸಂಗೀತ ಒದಗಿಸಿದರು.

ದ್ವಾರಕೀಶ್ ಹಿಂದಿಯಲ್ಲಿ ಯಶಸ್ವಿ ಎನಿಸಿದ್ದ 'ಮಿ। ಇಂಡಿಯಾ' ಚಿತ್ರವನ್ನು ಕನ್ನಡೀಕರಿಸಿದ್ದು 'ಜೈ ಕರ್ನಾಟಕ' ಮೂಲಕ. ಅಂಬರೀಷ್ ೧೫ ರಿಂದ ೨೦ ಅನಾಥ ಮಕ್ಕಳನ್ನು ಸಾಕುವ ಪಾತ್ರದಲ್ಲಿದ್ದರೆ, ರಜನಿ ಪತ್ರಕರ್ತೆಯಾಗಿ ಚುರುಕಾಗಿ

ಚಿತ್ರಕ್ಕೂ ಆಳವಡಿಸಿವರು. ಶರೀಫರ ಪಾತ್ರದಲ್ಲಿ ಶ್ರೀಧರ್ ಉತ್ತಮವಾಗಿ ನಟಿಸಿದ್ದರು. ಹಿಂದು-ಮುಸ್ಲಿಂ ಭಾವೈಕ್ಯತೆ ಸಂಕೇತವಾಗಿ ಮೂಡಿದ ಈ ಸಂಗೀತ ಪ್ರಧಾನ ಚಿತ್ರ ಹಲವಾರು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿತು. ಮೂರು ಚಿತ್ರಮಂದಿರಗಳಲ್ಲಿ ೨೫ ವಾರಗಳ ಪ್ರದರ್ಶನ ಕಂಡಿತು. ಒಂದು ಪ್ರದೇಶ, ಕಾಲದ ಜನಪದದಲ್ಲಿ 'ಮಹತ್ವದ ವ್ಯಕ್ತಿ'ಯಾಗಿ ಸದಾ ಜೀವಂತವಾಗಿರುವ ಚೇತನವನ್ನು ದೃಶ್ಯರೂಪದಲ್ಲಿ ಸೃಷ್ಟಿಸುವ ಸವಾಲಿನ ಕೆಲಸದಲ್ಲಿ ನಾಗಾಭರಣ ಯಶಸ್ಸು ಸಾಧಿಸಿದರು. ಚಿತ್ರಕ್ಕೆ ಕೇಂದ್ರದ ೧೯೯೦ರ ರಾಷ್ಟ್ರೀಯ ಭಾವೈಕ್ಯತೆಯ ಚಿತ್ರಕ್ಕಾಗಿ ಮೀಸಲಾದ ನರ್ಗಿಸ್‌ದತ್ ಪ್ರಶಸ್ತಿ ಹಾಗೂ ರಜತಕಮಲ ಬಂದವು. ಇದರೊಂದಿಗೆ ರಾಜ್ಯದ ೧೯೮೯-೯೦ರ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ, ಶ್ರೀಧರ್‌ಗೆ ಅತ್ಯುತ್ತಮ ನಟ, ಗಿರೀಶ್ ಕಾರ್ನಾಡ್‌ರಿಗೆ ಅತ್ಯುತ್ತಮ ಪೋಷಕ ನಟ ಪ್ರಶಸ್ತಿಗಳೂ ಬಂದವು. ಇದನ್ನು ಕನ್ನಡಕ್ಕೆ ಸದಭಿರುಚಿಯ ಚಿತ್ರಗಳನ್ನು ಕೊಡುವ ಉದ್ದೇಶದಿಂದ ಕರ್ನಾಟಕದ ಉದ್ಯಮಿ ಶ್ರೀಹರಿ ಎಲ್.ಖೋಡೆಯವರು ಯಜಮಾನ್ ಎಂಟರ್‌ಪ್ರೈಸಸ್ ಲಾಂಛನದಲ್ಲಿ ನಿರ್ಮಿಸಿದ್ದರು.

"...ಶರೀಫರ ಅಂತ್ಯ ಕಾಲದಲ್ಲಿ ಆತ್ಮಾವಲೋಕನ ಮಾಡಿಕೊಳ್ಳುವ ಭಾವನೆ ವ್ಯಕ್ತಪಡಿಸಬೇಕಿತ್ತು. ಲೌಕಿಕ ಬಂಧನಗಳನ್ನು ಬಿಡಿಸಿಕೊಂಡ ಶರೀಫರಿಗೆ ತಂಬೂರಿಯೇ ಜೊತೆ. ತಂಬೂರಿ ಅವರ ಜೀವನವನ್ನು, ಆತ್ಮದ ಬೆಳವಣಿಗೆಯನ್ನು ಹತ್ತಿರದಿಂದ ವೀಕ್ಷಿಸಿದ ಸಾಕ್ಷಿ. ತಂಬೂರಿಯ ನಾದ ಸಂತಮಾರ್ಗದಲ್ಲಿ ಧ್ಯಾನಾವಸ್ಥೆಯಲ್ಲಿದ್ದಾಗ ಬಲಗಿವಿಯಲ್ಲಿ ಕೇಳಿಬರುವ ವಿಶಿಷ್ಟ ನಾದ (ವೇದಗಳಲ್ಲಿ ಇದನ್ನು ಅನಾಹತ ಎನ್ನುತ್ತಾರೆ) ತಂಬೂರಿಯನ್ನು ಕೈಗೆ ತಗೊಂಡು ಪ್ರೀತಿಯಿಂದ ಅದನ್ನು ಸವರಿ ಮೀಟುತ್ತಾ ಹೋಗುತ್ತೇನೆ.

"ಮನಶ್ಶಾಂತಿಗಾಗಿ ಅಲೆಯುತ್ತಾ ಶರೀಫ ಮಸೀದಿಗೆ ಬರುತ್ತಾನೆ. ಈತ ಧರ್ಮದ್ರೋಹಿ ಅನ್ನುವ ಭಾವನೆಯಿಂದ ಅಧಿಕಾರಿಗಳು ಆತನನ್ನು ದೂಡುತ್ತಾರೆ. ಶರೀಫನಿಗೆ ವಿಪರೀತ ಕೋಪ ಬರುತ್ತದೆ. ಗುರುವಿನ ವಾಣಿ ಅವನನ್ನು ತಡೆಯುತ್ತದೆ. ಉದ್ರಿಕ್ತನಾದ ನಾನು ಗುರುವಿಂದ ಪಡೆದ ದಂಡವನ್ನು ಬಿಗಿಯಾಗಿ ಹಿಡಿದು ಶಾಂತವಾಗಲು ಪ್ರಯತ್ನಿಸುತ್ತೇನೆ..". ಎಂದು ಚಿತ್ರದಲ್ಲಿ ತಮ್ಮ ಅಭಿನಯದಲ್ಲಿ ಅನುಸರಿಸಿದ ವಿಧಾನಗಳನ್ನು ವಿಸ್ತಾರವಾಗಿ ಹೇಳುತ್ತಾರೆ ಶ್ರೀಧರ್. (ನೋಡಿ : ಅಭಿನಯ)

ಓನೇಶ್ ಬಾಬು ಸಾಹಸಿ. ಹೊಸತನ್ನು ಮಾಡಬೇಕೆಂಬ ಹೆಬ್ಬಯಕೆಯ ವ್ಯಕ್ತಿ. ಕೇವಲ ೪೮ ಗಂಟೆಗಳಲ್ಲಿ ಚಿತ್ರ ತಯಾರಿಸಬೇಕೆಂಬ ಉದ್ದೇಶದಿಂದ 'ಇದು ಸಾಧ್ಯ' ಚಿತ್ರವನ್ನು ನಿರ್ದೇಶಿಸಿದರು. ಜೈನ್ ಮೂವೀಸ್‌ನ ಚಂದೂಲಾಲ್ ಜೈನ್



(ಚಿತ್ರ ೧೫೧) 'ಇದು ಸಾಧ್ಯ' ಚಿತ್ರದಲ್ಲಿ ಅನಂತ್‌ನಾಗ್, ಶಂಕರ್‌ನಾಗ್ ಮತ್ತು ಡಿಸ್ಕೋ ಶಾಂತಿ



(ಚಿತ್ರ ೧೫೨) 'ಪರಶುರಾಮ್' ಚಿತ್ರದಲ್ಲಿ ರಾಜಕುಮಾರ್

ಅಭಿನಯಿಸಿದ್ದಾರೆ. ಮುಗ್ಯಾಂಬೋ ಪಾತ್ರದಲ್ಲಿ ಕ್ಯಾಪ್ಟನ್ ರಾಜು ಇದ್ದರು. ವಿಜಯಾನಂದ್ ಸಂಗೀತದಲ್ಲಿ 'ನಗುವೇ ಹೂವಂತೆ ಅಳುವೇ ಮುಳ್ಳಂತೆ..' ಗೀತೆ ಮನಗೆಲ್ಲುತ್ತದೆ. ಚಿತ್ರದ ಜಾಹಿರಾತುಗಳಲ್ಲಿ 'ಜೈ' ಎನ್ನುವಲ್ಲಿ ಟೋಪಿ ಹಾಗೂ 'ಕರ್ನಾಟಕ' ಎಂಬ ಪದದ ಮೇಲೆ ಕೋವಿ ಹಾಕಿದ್ದನ್ನು ಓದುಗರು ಪತ್ರಿಕೆಗಳಲ್ಲಿ ಆಕ್ಷೇಪಿಸಿದ್ದರು.

ದೊರೆ-ಭಗವಾನ್ ಮತ್ತೆ ಕಾದಂಬರಿ ಆಧರಿಸಿ ತೆರೆಗೆ ತಂದ ಚಿತ್ರ 'ಗಗನ'. ಎನ್.ಪಂಕಜರ ಅದೇ ಹೆಸರಿನ ಕಾದಂಬರಿ ಆಧಾರಿತ ಚಿತ್ರ. ಎಸ್.ಆರ್.ಕೃಷ್ಣನ್ ನಿರ್ಮಾಪಕರು. ಬಾಲ್ಯದಲ್ಲಿ ವಿವಾಹವಾದ ವ್ಯಕ್ತಿಯನ್ನು ಮತ್ತೆ ಮನವೊಲಿಸಿ ಮದುವೆಯಾಗುವುದು ಕಥಾ ಹಂದರ. ಇದು ಬಾಲ್ಯ ವಿವಾಹವನ್ನು ಪೋಷಿಸಿದಂತಾಗುತ್ತದೆ ಎಂಬ ಟೀಕೆಗಳೂ ಬಂದವು. ಅನಂತ್‌ನಾಗ್, ಶ್ರೀನಾಥ್, ಖುಷ್ಬೂ, ವನಿತಾವಾಸು ಮುಖ್ಯ ಪಾತ್ರದಲ್ಲಿದ್ದರು. ಅನಂತ್‌ನಾಗ್, ಖುಷ್ಬೂ ಅಭಿನಯ ಉತ್ತಮವಾಗಿತ್ತು. ಶ್ರೀನಾಥ್‌ದೂ ಸಂಯಮದ ನಟನೆ, ಚಿತ್ರದ ನಿರೂಪಣೆ ಸೊಗಸೆನಿಸಿತ್ತು.

ಅನಂತ್‌ನಾಗ್ ನಟನೆ ವೃತ್ತಿಯಾದಾಗ ಶ್ರೇಷ್ಠ-ಸರಿ ಆಯ್ಕೆ ಕುರಿತು "...ಯಾವುದು ಶ್ರೇಷ್ಠ, ಯಾವುದು ಅಲ್ಲ ನಿರ್ಧರಿಸೋರು ಯಾರು ? ಎಲ್ಲಕ್ಕೂ ಎರಡು ಮಗ್ಗುಲಿದೆ. ಒಬ್ಬರಿಗೆ ಸರಿಯಾದ್ದು ಇನ್ನೊಬ್ಬರಿಗೆ ಅಲ್ಲ ಆಗಬಹುದು. ಇದರ ನಿರ್ಣಯ ನಾನೇ ಮಾಡಿಕೊಳ್ಳಬೇಕು. ನಾವು ಅಭಿನಯಿಸೋದೆಲ್ಲಾ ಶ್ರೇಷ್ಠ-ಸರಿ ಅಂದರೆ ಆತ್ಮವಂಚನೆ ಆಗುತ್ತೆ. ಆದರೆ ಸಂಪೂರ್ಣ ಹೊಣೆ ನಟನದ್ದೇ ಆಗಿರೋಲ್ಲ. ನಮ್ಮಲ್ಲಿ ಎಷ್ಟು ಪಾತ್ರಗಳನ್ನು ಸರಿಯಾಗಿ ಆಳವಾದ ಅಭ್ಯಾಸದಿಂದ ಚಿತ್ರಿಸಿದಾರೆ. ನಾನು ಮಾಡುವ ಪಾತ್ರಗಳು ನನ್ನ ಬದುಕಲ್ಲಿ ಕಂಡ, ಅನುಭವಿಸಿದ ಕೆಲವಾದರೂ ಅಂಶಗಳನ್ನು ಬಳಸಿಕೊಂಡ ಇನ್‌ಸೈಟ್ ಕೊಡಬಲ್ಲವೇ ? ಹಾಗೆ ಸಿದ್ಧವಾದ ಪಾತ್ರವಾದರೆ ಖಂಡಿತಾ ನ್ಯಾಯ ಸಲ್ಲಿಸ್ತೀರಿ. ಈ ಕಾರಣದಿಂದಲೇ ನಾನೇ ಅಭಿನಯಿಸಿಯೂ ಕೆಲವು ಪಾತ್ರಗಳಲ್ಲಿ ನನ್ನ ಇನ್‌ಡಿಫರೆನ್ಸ್ ಗೊತ್ತಾಗಿಬಿಡಬಹುದು. ಆಗೆಲ್ಲ ಕ್ಷಮಿಸಿ ಎನ್ನಬಹುದು, ಅಷ್ಟೇ. ನಮ್ಮಲ್ಲಿ ಅಭಿನಯಕ್ಕಿಂತ ಮಾಡೆಲಿಂಗ್ ಪ್ರಧಾನವಾಗ್ತಿದೆ. ಹಾಗಿರುವಾಗ ವಕೀಲನಾಗಲಿ, ಗೃಹಸ್ಥನಾಗಲಿ, ಏನೇ ಆಗಲಿ ಎಲ್ಲವೂ ಒಂದೇ ರೀತಿ ಕಾಣುತ್ತವೆ" ಎಂದಿದರು.

'ಹೊಸ ಕಾವ್ಯ' ಲಕ್ಷ್ಮೀ ಶಿವಚಂದ್ರನ್ ನಿರ್ಮಾಣದಲ್ಲಿ, ಶಿವಚಂದ್ರನ್ ಕಥೆ, ಚಿತ್ರಕಥೆ, ಸಂಭಾಷಣೆ ರಚಿಸಿ ನಿರ್ದೇಶಿಸಿದ್ದರು. ನಿರ್ಮಾಪಕಿ/ನಟಿ ಲಕ್ಷ್ಮೀಯ ಮಗಳು ಐಶ್ವರ್ಯ ನಾಯಕಿಯಾದ ಪ್ರಥಮ ಚಿತ್ರ. ಪ್ರಭಾಕರ್, ಲಕ್ಷ್ಮೀ, ಸಿ.ಆರ್.ಸಿಂಹ, ವಿನೋದ್ ಆಳ್ವ ಮುಖ್ಯ ಪಾತ್ರದಲ್ಲಿದ್ದರು. ನಿರೀಕ್ಷಿತ ಪರಿಣಾಮ ಬೀರಲಿಲ್ಲ.

'ಏನೇ ಬರಲಿ ಪ್ರೀತಿ ಇರಲಿ' 'ಸ್ಪಂದನ' ಚಿತ್ರಗಳ ಮೂಲಕ ಹೆಸರು ಮಾಡಿದ್ದ ಪಿ.ಎಚ್.ಶ್ರೀನಿವಾಸ್ 'ಅಭಿಮಾನ' ಚಿತ್ರಕ್ಕೆ ಪಿ.ಕೃಷ್ಣರಾಜ್ ನಿರ್ಮಾಣದಲ್ಲಿ ಕಥೆ-ಚಿತ್ರಕಥೆ-ಸಂಭಾಷಣೆಯೊಡನೆ ನಿರ್ದೇಶನದ ಹೊಣೆಯನ್ನು ಹೊತ್ತಿದ್ದರು. ಶ್ರೀನಿವಾಸ್‌ಗೆ ನಟಿಸುವ ಖಯಾಲಿಯೂ ಇದ್ದದ್ದೇ ಮುಳುವಾಯಿತೇನೋ. 'ಅಭಿಮಾನ' ಅತ್ತ ಕಮರ್ಷಿಯಲ್ಲೂ ಆಗದೆ, ಇತ್ತ ಕಲಾತ್ಮಕವೂ ಆಗದ ಮಧ್ಯಮ ಚಿತ್ರವಾಯಿತು. ಸರಳ ನಿರೂಪಣೆ ಇತ್ತು. ಹಲವಾರು ಉತ್ತಮ ಅಂಶಗಳು ಚಿತ್ರದಲ್ಲಿದ್ದರೂ ಸೋತಿತು. ಕೆಲವು ಕಡೆ ಸಂಭಾಷಣೆ ಚೆನ್ನ. 'ರಾಯರು ಬಂದರು ಮಾವನ ಮನೆಗೆ....' ಹಾಡು ಸೊಗಸಾಗಿತ್ತು.

ಶಂಕರ್‌ನಾಗ್, ಅಂಬರೀಷ್ ಅಭಿನಯದಲ್ಲಿ ಕೆ.ವಿ.ಚಂದ್ರಿಕಾ ನಿರ್ಮಿಸಿದ ಚಿತ್ರ 'ಜಯಭೇರಿ' ಜೆ.ಕೆ.ಮುದ್ದುರಾಜ್ ಅವರ ಚೊಚ್ಚಲ ನಿರ್ದೇಶನದ ಚಿತ್ರ ಎಂಬ ಕಾರಣಕ್ಕೆ ಮುಖ್ಯವಾಗುತ್ತದೆ. ಚಿತ್ರದಲ್ಲಿ ಬಾತ್‌ರೂಮ್ ಹಾಗೂ ಬೆಡ್‌ರೂಂ ದೃಶ್ಯಗಳೇ ಹೆಚ್ಚಾಗಿದ್ದವು. ರಾಜೇಶ್ ಈ ಚಿತ್ರದಲ್ಲಿ ಮೊದಲ ಬಾರಿಗೆ ಖಳನಾಗಿ ಅಭಿನಯಿಸಿದ್ದರು. ಜನಕ್ಕೆ ಅದು ಒಪ್ಪಾಗಲಿಲ್ಲ. ಮಾತಿನ ನಡುವೆ 'ನನ್ನ ಕ್ಯಾರೆಕ್ಟರೇ ಅರ್ಥ ಮಾಡ್ಕೊಳಲ್ಲಾ ಅಂತಾರೆ...' ಎನ್ನುವ ವಾಕ್ಯ ಪುನರಾವರ್ತಿತವಾಗುತ್ತಿತ್ತು. ಕ್ಲೈಮ್ಯಾಕ್ಸ್‌ನಲ್ಲಿ ರಾಜೇಶ್‌ರನ್ನು ಶಂಕರ್‌ನಾಗ್ ಕೊಲ್ಲುವ ದೃಶ್ಯ ಹೊಸ ರೀತಿಯಲ್ಲಿತ್ತು.

ಫಣಿ ರಾಮಚಂದ್ರ ಪ್ರಥಮ ಬಾರಿಗೆ 'ಡಾಕ್ಟರ್ ಕೃಷ್ಣ' ಚಿತ್ರದ ಮೂಲಕ ನಿರ್ದೇಶಕರಾದರು. ತಾವೇ ಬರೆದ ಕಥೆ, ಚಿತ್ರಕಥೆಗೆ, ಬಿ.ಎಲ್.ವೇಣು ಸಂಭಾಷಣೆ ರಚಿಸಿದರು. ವಿಷ್ಣುವರ್ಧನ್ ವೈದ್ಯನಾಗಿ ಕಾಣಿಸಿಕೊಂಡರೆ, ತಾರಾ ಮೂರ್ಛೆ ರೋಗದ ವಿಷ್ಣುವಿನ ಪ್ರೇಯಸಿಯಾಗಿ ಉತ್ತಮ ಅಭಿನಯ ನೀಡಿದ್ದರು. ಸುಮನ್ ರಂಗನಾಥ್ ನಾಯಕಿಯಾಗಿ ಬೊಂಬೆಯಂತೆ ಕಾಣುತ್ತ, ರೂಪದರ್ಶಿಗಳ ವೇದಿಕೆಯ ಮೇಲಿನ ಶೈಲೀಕೃತ ನಡಿಗೆಯಿಂದ ಗಮನ ಸೆಳೆದರೆ, ಪೃಥ್ವಿರಾಜ್ ಕಪಟ ಪೂಜಾರಿಯಾಗಿ ಚೆನ್ನಾಗಿ ಕಂಡರು. ರಾಜನ್-ನಾಗೇಂದ್ರ ಸಂಗೀತ ಸಂಯೋಜನೆಯಲ್ಲಿ 'ಕರುಣಾಮಯಿ ನೀನೇ ದೈವ...' ಹಾಗೂ 'ಡಾಕ್ಟರ್ ಕೃಷ್ಣಾನಾ ಡ್ರಾಮಾ ಆಕ್ಟರ್ ಕೃಷ್ಣಾನಾ...' ಹಾಡುಗಳು ಇಷ್ಟವಾದವು.

ಪಾರ್ವತಮ್ಮ ರಾಜಕುಮಾರ್ ನಿರ್ಮಾಣದಲ್ಲಿ ಎಂ.ಎಸ್.ರಾಜಶೇಖರ್ ನಿರ್ದೇಶಿಸಿದ 'ಗಜಪತಿ ಗರ್ವಭಂಗ' ರಾಘವೇಂದ್ರ ರಾಜಕುಮಾರ್ ಮೂರನೇ ಚಿತ್ರವಾದರೂ ಎರಡನೇ ಯಶಸ್ವೀ ಚಿತ್ರ. ನಾಯಕಿ ಮಾಲಾಶ್ರೀ ಅವರಿಗೂ ಇದು ಎರಡನೇ ಚಿತ್ರ. ೨೫ ವಾರಗಳ ಕಾಲ ಪ್ರದರ್ಶನವಾಯಿತು. 'ನಂಜುಂಡಿ ಕಲ್ಯಾಣ' ಟೀಮ್ ಇಲ್ಲೂ ಕೆಲಸ ಮಾಡಿತು. ರಾಘವೇಂದ್ರ ತಮ್ಮ ಹಾಸ್ಯದಿಂದ ಗಮನ ಸೆಳೆದರೆ,



(ಚಿತ್ರ ೧೫೩) 'ಗಜಪತಿ ಗರ್ವಭಂಗ' ಚಿತ್ರದಲ್ಲಿ ಶ್ರೀನಾಥ್, ಸಂಗೀತಾ, ಶಾಭಾ ಮತ್ತು ರಾಘವೇಂದ್ರ ರಾಜಕುಮಾರ್



(ಚಿತ್ರ ೧೫೪) 'ಆಸೆಗೊಬ್ಬ ಮೀಸೆಗೊಬ್ಬ' ಚಿತ್ರದಲ್ಲಿ ಮಾಲತಿ, ರಾಘವೇಂದ್ರ ರಾಜಕುಮಾರ್ ಮತ್ತು ಶಿವರಾಜ್ ಕುಮಾರ್

ಮಾಲಾಶ್ರೀ ಮತ್ತೆ ತಮ್ಮ ನೋಟ, ಮಾಟ, ಅಭಿನಯಗಳಿಂದ ಜನಕ್ಕೆ ಹತ್ತಿರವಾದರು. ಮೊದಲ ಚಿತ್ರದ ಗುಂಡಿನ ಹಾಡಿನ ಮಹಿಮೆ, ಇಲ್ಲಿ ಮುಚ್ಚಿಯ ಹಾಡಾಗಿ ಬದಲಾಗುತ್ತದೆ. ಎಲ್ಲಕ್ಕೂ ಮಿಗಿಲಾದದ್ದು ಧೀರೇಂದ್ರಗೋಪಾಲ್ ಹಾಸ್ಯ. ನಾಯಕ ಆತನನ್ನು ಹೆದರಿಸಲು 'ಹಗ್ಗ - ಹಳ್ಳ - ಕಠಾರಿ' ಎನ್ನುತ್ತಿದ್ದಂತೆ ಧೀರೇಂದ್ರಗೋಪಾಲ್ ಮುಖಭಾವಗಳು ಬದಲಾಗುವ ರೀತಿ, ನಟನೆ ಪ್ರೇಕ್ಷಕರನ್ನು ಹಾಸ್ಯದ ಹೊನಲಲ್ಲಿ ತೇಲಿಸಿತು. ಉಪೇಂದ್ರಕುಮಾರ್ ಮತ್ತೊಮ್ಮೆ ಇಲ್ಲಿ ಉತ್ತಮವಾದ ರಾಗ ಸಂಯೋಜನೆ ಮಾಡಿದ್ದಾರೆ. 'ಹೊಸ ರಾಗವಿದು...', 'ಮದುವೆಯ ವಯಸು...' ಸೇರಿದಂತೆ ಬಹುತೇಕ ಎಲ್ಲಾ ಹಾಡುಗಳು ಜನಪ್ರಿಯವೇ. 'ಜಟಕಾ ಕುದುರೆ ಹತ್ತಿ ಪ್ಯಾಟೆಗೋಗುಮ....' ಹಾಡಿನಲ್ಲಿ ಮಂಜುಳಾ ಗುರುರಾಜ್ ಕಂಠ ಬದಲಿಸುತ್ತಾ ಹಾಡಿದ ರೀತಿ ಚೆನ್ನ.

'ಮೊದಲ ಪಾಪ' ಸೂಪರ್ ಫಿಲ್ಮ್ ಇಂಟರ್ ನ್ಯಾಷನಲ್ಸ್‌ರವರ ನಿರ್ಮಾಣ. ಇದು ಸೆಕ್ಸ್ ಫಿಲಂ ಹೌದೇ ಅಲ್ಲವೇ ಎಂಬುದೇ ಚರ್ಚೆಯಾಗಿತ್ತು. ಮಾನವ ಸೃಷ್ಟಿಯ ಮೂಲನಿಯಮವನ್ನು ಹೇಳುತ್ತದೆ. ಡಾರ್ವಿನ್ ಸಿದ್ಧಾಂತವನ್ನೇನೂ ತೆಗೆದುಕೊಂಡಿಲ್ಲ. ಹುಟ್ಟುವಾಗಲೇ ಪರಿಪೂರ್ಣ ಮಾನವನಾಗಿ ಮನುಷ್ಯರ ಭಾಷೆಯಲ್ಲಿ ಮಾತಾಡುವ ತರ್ಕರಾಹಿತ್ಯವನ್ನು ಬಿಟ್ಟರೆ, ನಗ್ನತೆ ಸಹ ಆಕರ್ಷಣೆಗಿಂತ ಪ್ರಕೃತಿಯೊಂದಿಗೆ ಸೇರಿದ ಹಾಗೆ ಚಿತ್ರಿಸಿರುವ ರೀತಿ ಮೆಚ್ಚುವಂತಿತ್ತು. ಆದರೆ ಚಿತ್ರ ಲೈಂಗಿಕ ಆಕರ್ಷಣೆ ಇರುವಂಥದ್ದು ಎಂದು ಪ್ರಚಾರ ಮಾಡಿ, ಪೋಸ್ಟರ್ಸ್ ಅಂಟಿಸಿದ ಮೇಲೆ ಜನ ನೋಡಿದರು. ವಿತರಕರು ಹಣದ ಮುಖ ನೋಡಿದರು. ಈ ಆದಾಯದಿಂದಲೇ ಮಾರ್ಸ್ ಎಂಬ ವಿತರಣ ಸಂಸ್ಥೆ ಹೊಸದಾಗಿ ಪ್ರಾರಂಭವಾಯಿತು. ತರುಣ ಎಚ್.ಸುರೇಶ್ ಇದರ ಮಾಲೀಕರು. ಇಂಥ ಉತ್ತಮ ಉದ್ದೇಶದ ಚಿತ್ರಗಳು ಏನೆಂಥ ಹಣೆಪಟ್ಟಿಯಡಿ ತೆರೆಕಂಡು ಜನರನ್ನು ಸೆಳೆಯಬೇಕಾಯಿತೆಂಬುದು ಖೇದದ ಸಂಗತಿ.

''...ಏನೆಲ್ಲ ಆಸೆಗಳನ್ನಿಟ್ಟುಕೊಂಡೇ ಈ ರಂಗಕ್ಕೆ ಬಂದೆ. ಆ ಆಶೋತ್ತರಗಳು ಈಡೇರಲಿಲ್ಲ. ನೈತಿಕತೆ ಇಲ್ಲ, ಎಲ್ಲ ಕಲೆಗಳನ್ನು ಪ್ರೇಕ್ಷಕರು ಬಯಸುತ್ತಾರೆಂದು ಅವರ ಮೇಲೆ ಯಾಕೆ ತಪ್ಪು ಹೊರಿಸಬೇಕು. ಅವರಿಗೆ ಉತ್ತಮ ಅಭಿರುಚಿ ಕೊಡುವ ಗ್ರೇಡ್‌ಗೆ ನಾವೇ ಏರಿಲ್ಲ. 'ಅನುಭವ' ಫೋಟೋ ಕಾರ್ಡ್‌ಗಳಲ್ಲಿ ಬರೀ ಸೆಕ್ಸ್ ಸ್ಟಿಲ್ಸ್ ಇದ್ದದ್ದು ನೋಡಿ ಚಿತ್ರಮಂದಿರದ ಮಾಲೀಕರಾದ ಜಿ.ಸಿ.ಎಸ್.ನಾರಾಯಣ್ ಚಿತ್ರ ನೋಡದೆ ತಗೋಳಲ್ಲ ಅಂದಿದ್ರು. ಫಿಲ್ಮ್‌ನಲ್ಲಿ ಇಲ್ಲದೇ ಇರುವಂಥದ್ದನ್ನು ಫೋಟೋ ಕಾರ್ಡ್ ಮಾಡಿಬಿಡ್ತಾರೆ. ಒಳ್ಳೆ ವಸ್ತು ಇದ್ದಾಗಲೂ ಹಿಂಜರಿಕೆ. ಪ್ರೇಕ್ಷಕರನ್ನು ಆಕರ್ಷಿಸ್ತೀವಿಂತ ಸಿದ್ಧವಾದ ಫೋಟೋ ಕಾರ್ಡ್‌ಗಳಲ್ಲಿರುವ ಚಿತ್ರಗಳ ಸ್ಥಾನದಲ್ಲಿ ನಮ್ಮ ಅಕ್ಕ ತಂಗಿ, ಮಕ್ಕಳನ್ನು ಕಲ್ಪಿಸಿಕೊಂಡರೆ... ಹೆಣ್ಣಿನ ಸೀರೆ ಬಿಚ್ಚಿದ ಸ್ಟಿಲ್ ಹಾಕಿ ವ್ಯಾಪಾರ ನಡೆಸೋ ಮಟ್ಟಕ್ಕೆ ಬುದ್ಧಿ ಇಳಿದಿದೆ ಅಂದ್ರೆ ದುಃಖ ಆಗುತ್ತೆ...'' ಎಂದಿದ್ದರು ಹೆಚ್.ಆರ್.ಪ್ರಭಾಕರರೆಡ್ಡಿ.

ವಿನೋದ್‌ರಾಜ್‌ರನ್ನು ಬೆಳೆಸುವ ಉದ್ದೇಶದಿಂದ ದ್ವಾರಕೀಶ್ ಮಾಡಿದ ನೃತ್ಯಾಧಾರಿತ ಮತ್ತೊಂದು ಚಿತ್ರ 'ಕೃಷ್ಣ ನೀ ಕುಣಿದಾಗ'. ಅಂಬುಜಾ ದ್ವಾರಕೀಶ್ ನಿರ್ಮಾಣದಲ್ಲಿ, ದ್ವಾರಕೀಶ್ ನಿರ್ದೇಶಿಸಿದರು. ವಿನೋದ್ ರಾಜ್ ಕೃಷ್ಣನಾಗಿ, ಸುಧಾರಾಣಿ ರಾಧೆಯಾಗಿ ಉತ್ತಮ ಅಭಿನಯ ತೋರಿದರು. ನಾಸಿರ್-ಹೇಮಾಚೌಧರಿ ಚಿತ್ರದಲ್ಲಿ ದಂಪತಿಗಳಾಗಿ ಗಮನ ಸೆಳೆದಿದ್ದರು. ಚಿತ್ರವನ್ನು ಮೇಲೆತ್ತಲು ಪ್ರಯತ್ನಿಸುವುದೇ ಸಿ.ಆರ್.ಸಿಂಹ ನಟನೆ ಹಾಗೂ ವಿಜಯಾನಂದ್ ಸಂಗೀತ. ದೇವೀಪ್ರಸಾದ್ ಛಾಯಾಗ್ರಹಣವೂ ಮುದ ನೀಡಿತು. 'ಹಾಡುವೆನು ನಿನಗಾಗಿ, ಕುಣಿದಾಡುವೆನು ನಿನಗಾಗಿ...' ಹಾಗೂ 'ಪ್ರಾಯ ಬಂದರೆ ಯಾಕೋ ಅದು ಯಾಕೋ...' ಹಾಡುಗಳು ಮಧುರ. ಚಿ.ಉದಯಶಂಕರ್ ಮಗ ರವಿಶಂಕರ್‌ನ ಕೊನೆಯ ಚಿತ್ರ.

ಪರಿಶಿಷ್ಟ ಜಾತಿ/ವರ್ಗಗಳಿಗೆ ಹೆಚ್ಚಿನ ಅವಕಾಶ ನೀಡುವ ಕೇಂದ್ರದ ಹೊಸ ನೀತಿ ಮೇಲ್ಜಾತಿ ವರ್ಗಗಳಿಂದ ವಿಪರೀತ ಪ್ರತಿಭಟನೆಯನ್ನು ಎದುರಿಸಿತು. ಶ್ರೀಲಂಕೆಯ ಉಗ್ರಗಾಮಿಗಳಿಗೆ ಬೆಂಬಲ ನೀಡಿದರೆಂಬ ಆಕ್ಷೇಪ ಎದುರಿಸಿದ ಕರುಣಾನಿಧಿ ನೇತೃತ್ವದ ಡಿ.ಎಂ.ಕೆ. ಸರ್ಕಾರವನ್ನು ಅಮಾನತುಗೊಳಿಸಲಾಯಿತು. ಎಲ್.ಕೆ.ಆಡ್ವಾನಿ ರಥಯಾತ್ರೆ ಸೋಮನಾಥದಿಂದ ಅಯೋಧ್ಯೆವರೆಗೆ ಪ್ರಾರಂಭವಾಯಿತು. ಕರಸೇವೆ ಕಾರ್ಯಕ್ರಮದ ಫಲವಾಗಿ ಘರ್ಷಣೆಗಳೆದ್ದು, ಅಕ್ಟೋಬರ್ ೩೦ ರಂದು ಪೊಲೀಸರ ಕಾರ್ಯಾಚರಣೆಯಿಂದಾಗಿ ಮತ್ತೆ ಸಾವು-ನೋವುಗಳಾದವು.

ಫಿಲಂಸ್ ಡಿವಿಷನ್ ವತಿಯಿಂದ ಮುಂಬೈನಲ್ಲಿ ಸಾಕ್ಷ್ಯಚಿತ್ರ ಹಾಗೂ ಕಿರುಚಿತ್ರಗಳ ಉತ್ಸವ ಜರುಗಿತು. ಪ್ರಾದೇಶಿಕ ಚಿತ್ರಗಳ ಮೇಲೆ ವಿಚಿತ್ರ ಪ್ರಭಾವ ಬೀರುವ ಅನೇಕ ಘಟನೆಗಳು ದೇಶದಲ್ಲಿ ನಡೆದವು. ಹಿಂಸೆಯ ವೈಭವೀಕರಣ, ಪೊಲೀಸರ ಮೇಲಿನ ಸಿಟ್ಟು ಚಿತ್ರಗಳಲ್ಲಿ ಕಾಣಿಸಿಕೊಂಡಿತು. ಭಕ್ತಿ, ಧಾರ್ಮಿಕ ಸಂಗತಿಗಳು ಅಸೂಕ್ಷ್ಮ ರೀತಿಯಲ್ಲಿ ಕಥಾವಸ್ತುವಿನ ಒಳಗೆ ತುಂಬಿಕೊಳ್ಳತೊಡಗಿತು. ಆಯಾ ನಿರ್ದೇಶಕರ ಮನೋಧರ್ಮವನ್ನು ಆಧರಿಸಿ ವಿರೋಧಗಳು ವ್ಯಕ್ತವಾಗತೊಡಗಿದ್ದವು.

೧೯೯೦ ರಲ್ಲಿ ತೆರೆಕಂಡ ಚಿತ್ರಗಳು ೬೯. 'ಮತ್ಸರ' ಕೆ.ವಿ.ಜಯರಾಂ ನಿರ್ದೇಶನದ ಚಿತ್ರ. ಬಹು ಪ್ರಯಾಸದಿಂದ ಅಂಬರೀಷ್ ಕಾಲ್‌ಶೀಟ್‌ಗಾಗಿ ಕಥೆ ಸಿದ್ಧಮಾಡಿಕೊಂಡರು. ಕಾಕೋಳು ಸರೋಜಾರಾವ್ ಕಾದಂಬರಿ ಆಧಾರವಾದರೂ ಅನೇಕ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಯಿತು. ಅಂಡಮಾನ್ ದ್ವೀಪದಲ್ಲಿ ಚಿತ್ರೀಕರಣ ಮಾಡಿದ್ದಷ್ಟೇ ವಿಶೇಷ. ಚಿತ್ರ ನಗರಗಳಿಗಿಂತ ತಾಲ್ಲೂಕು ಹೋಬಳಿಗಳಲ್ಲಿ ಯಶಸ್ವಿಯಾಯಿತು.

ಲಕ್ಷ್ಮೀ ವಜ್ರಮುನಿ ನಿರ್ಮಿಸಿದ ಚಿತ್ರ 'ರಣಭೇರಿ'ಯನ್ನು ವಿ.ಸೋಮಶೇಖರ್ ನಿರ್ದೇಶಿಸಿದರು. ಅಂಬರೀಷ್, ಪ್ರಭಾಕರ್, ವಾಣಿ ವಿಶ್ವನಾಥ್, ಚಂದ್ರಿಕಾ ನಟಿಸಿದ್ದರು. ಟಿ.ಎನ್.ನರಸಿಂಹನ್ ಕಥೆಯಿತ್ತು. ಪ್ರಭಾಕರ್ ಪೂರ್ವಾರ್ಧದಲ್ಲಿ ಹಾಸ್ಯಮಯವಾಗಿ ಸನ್ನಿವೇಶಗಳನ್ನು ನಿರ್ವಹಿಸುತ್ತಾ ಕ್ರಮೇಣ ಗಂಭೀರವಾಗುವ ವಿಶೇಷ ರೀತಿಯ ಚಿತ್ರಕಥೆಯಿತ್ತು. ಕೆಲಸವೇ ಇಲ್ಲದ ಅಭಿಮಾನ್ ಸ್ಟುಡಿಯೋದಲ್ಲಿ ಸೆಟ್ ಹಾಕಿ ಚಿತ್ರಿಸಿ ಬಾಲಣ್ಣನ ಮುಖದಲ್ಲಿ ನಗೆ ಮೂಡಿದ್ದನ್ನು ಕಂಡು 'ಧನ್ಯನಾದೆ' ಎಂದು ಹೇಳಿದ್ದರು ವಜ್ರಮುನಿ. ಚಿತ್ರ ಸಾಮಾನ್ಯವಾಯಿತು.



(ಚಿತ್ರ ೧೫೫) 'ಕೆಂಪು ಸೂರ್ಯ' ಚಿತ್ರದಲ್ಲಿ ಅಂಬರೀಷ್



(ಚಿತ್ರ ೧೫೬) 'ಎಸ್.ಪಿ.ಸಾಂಗ್ಲಿಯಾನ' ಚಿತ್ರದಲ್ಲಿ ಶಂಕರ್‌ನಾಗ್

ನಟ ಶ್ರೀನಿವಾಸಮೂರ್ತಿ ನಿರ್ಮಾಣದಲ್ಲಿ ಎಸ್.ಉಮೇಶ್ ನಿರ್ದೇಶಿಸಿದ ಚಿತ್ರ 'ನಂಬಿದ್ರೆ ನಂಬಿ ಬಿಟ್ರೆ ಬಿಡಿ'. ಶ್ರೀನಿವಾಸಮೂರ್ತಿಗಳಿಗೆ ಎಸ್.ಉಮೇಶ್ ಬಗ್ಗೆ ಅಪಾರ ಭರವಸೆ. ಕಿರಿಯ ಪ್ರಾಯದಲ್ಲೇ ಅಪರೂಪವೆನಿಸುವ ಕಲ್ಪನೆಗಳಿರುವ ತರುಣ ಎಂದು ಹೇಳುತ್ತಿದ್ದರು. ಉಮೇಶ್ ಪ್ರತಿಭೆಯನ್ನು ದುಡಿಸಿಕೊಳ್ಳಲೆಂದೇ ತಾವು ಈ ಚಿತ್ರ ನಿರ್ಮಾಣಕ್ಕಿಳಿದುದೆಂದೂ ಹೇಳಿದ್ದುಂಟು. ಭವಿಷ್ಯ ಇತ್ಯಾದಿಗಳಲ್ಲಿ ನಂಬಿಕೆ ಮತ್ತು ತರ್ಕ-ವಿಜ್ಞಾನವೇ ಮುಖ್ಯ ಎನ್ನುವುದರ ನಡುವೆ ಇರುವ ಸಂಘರ್ಷ. ನಂಬಲಿ ಬಿಡಲಿ ಆಗುವುದು ಆಗಿಯೇ ಆಗುತ್ತದೆ ಎಂಬ ನಿಲುವು. ಉಮೇಶ್ ಸಹಜವಾಗಿಯೇ ಹಾಸ್ಯಪ್ರಿಯ. ವಿನೋದಮಯವಾಗಿ ಚಿತ್ರಿಸಿದ್ದರು. ಆದರೂ ನಿರೀಕ್ಷಿಸಿದ ಯಶಸ್ಸು ಕಾಣಲಿಲ್ಲ. ಈ ಚಿತ್ರದಲ್ಲಿಯೇ ಶ್ರುತಿ ಪ್ರವೇಶವಾಯಿತು. ಆಕೆಯನ್ನು 'ಪ್ರಿಯದರ್ಶಿನಿ' ಎಂದು ಕರೆದಿದ್ದರು. ಮುಂದೆ ಆಕೆ 'ಆಸೆಗೊಬ್ಬ ಮೀಸೆಗೊಬ್ಬ' ಚಿತ್ರದಲ್ಲಿ ಗಿರಿಜೆಯಾಗಿ ಬಂದರು. ದ್ವಾರಕೀಶ್ 'ಶ್ರುತಿ' ಎಂದು ಕರೆದರು.

'ಆಸೆಗೊಬ್ಬ ಮೀಸೆಗೊಬ್ಬ' ಹಾಸ್ಯ ಪ್ರಧಾನ ಚಿತ್ರ. ಶಿವರಾಜ್‌ಕುಮಾರ್ ಅಭಿನಯದಲ್ಲಿ ಯಾವ ಚೌಕಟ್ಟುಗಳ ಮಿತಿಯೂ ಇಲ್ಲದೆ ಸ್ವಚ್ಛಂದವಾಗಿ ಅಭಿನಯಿಸುವ ಅವಕಾಶವಿತ್ತು. ಹಿಂದಿಯ 'ಗೋಲ್‌ಮಾಲ್' ಈ ಚಿತ್ರಕ್ಕೆ ಸ್ಫೂರ್ತಿ. ಸಂಭಾಷಣೆ-ಸನ್ನಿವೇಶಗಳ ಹಾಸ್ಯವೇ ಪ್ರಧಾನ. ಲೋಕೇಶ್ ಅಭಿನಯ ಶ್ರೇಷ್ಠವಾಗಿತ್ತು. ರಾಜಕುಮಾರ್ ಹಾಡಿರುವ 'ಎಲ್ಲಾ ಬುರುಡೆ ಇಲ್ಲಿ ಎಲ್ಲ ಬುರುಡೆ...' ಗೀತೆ ತಮಾಷೆಯಾಗಿಯೂ ಇತ್ತು. ಆಗ ಈಗ ಗುನುಗುವಂತಿತ್ತು. ಚಿತ್ರದಲ್ಲಿ ಶಿವರಾಜ್‌ಕುಮಾರ್ ಜೊತೆಗೆ ರಾಘವೇಂದ್ರರಾಜಕುಮಾರ್ ಗೌರವ ನಟನಾಗಿ ಅಭಿನಯಿಸಿದ್ದರು. ಸುಧಾರಾಣಿ, ಶಿವರಾಂ, ವೈಶಾಲಿ, ಶ್ರುತಿ ನಗೆಬುಗ್ಗೆ ಎಬ್ಬಿಸುವಂತೆ ಅಭಿನಯಿಸಿದ್ದರು.

'ಕೆಂಪುಸೂರ್ಯ' ಎಂ.ಪಿ.ಶಂಕರ್ ನಿರ್ಮಿಸಿದ ಚಿತ್ರ. ಅಂಬರೀಷ್, ಸುಮನ್ ರಂಗನಾಥ್, ಎಂ.ಪಿ.ಶಂಕರ್, ಸುಧೀರ್ ಅಭಿನಯಿಸಿದ್ದರು. ಚಿತ್ರದ ಕೆಲವು ಸನ್ನಿವೇಶಗಳನ್ನು ಟಿಬೆಟಿಯನ್ನರು ವಾಸಿಸುವ 'ಲಾಮಾ ಕ್ಯಾಂಪ್' ಎಂಬಲ್ಲಿ ಚಿತ್ರಿಸಲಾಯಿತು. ಅವರದೇ ರೀತಿಯ ವೇಷ-ಭೂಷಣವನ್ನು ಹಾಕಲಾಗಿತ್ತು. ಅದೇ ದೊಡ್ಡ ಸಂಗತಿಯಾಗಿತ್ತು. ಬಹಳ ಹಿಂದೆಯೇ ರಾಜಕುಮಾರ್ ಅಭಿನಯದ 'ಬಿಡುಗಡೆ' ಚಿತ್ರಕ್ಕೆ ಈ ಸ್ಥಳದಲ್ಲಿ ಚಿತ್ರಿಸಲಾಗಿತ್ತು. ಡಾರ್ಜಿಲಿಂಗ್ ಮೊದಲಾದ ಕಡೆ ಮಾಡಿದ ಚಿತ್ರಣ ಪೂರ್ತಿಯಾಗದೆ ಉಳಿದ ಪ್ಯಾಚ್ ವರ್ಕನ್ನು ಇಲ್ಲಿಯೇ ಚಿತ್ರಿಸಿದ್ದರು. 'ಕೆಂಪು ಸೂರ್ಯ'ದಲ್ಲಿ ನೇರವಾಗಿಯೇ ಚಿತ್ರಣ ನಡೆಯಿತು. ಅದಕ್ಕೆ ಸಂಬಂಧಿಸಿದ ಹಾಗೆಯೇ ಕಥೆಯನ್ನು ಹೆಣೆಯಲಾಗಿತ್ತು. ಚಿತ್ರದ ಬಹುಭಾಗ ಕಾಡುಗಳಲ್ಲಿ ನಡೆಯಿತು. ಸುಮನ್ ರಂಗನಾಥ್ ಪತ್ರಕರ್ತೆ ಪಾತ್ರದಲ್ಲಿ ಗಮನ ಸೆಳೆದರು.

ಕಲಾಕೃತಿ ಸಂಸ್ಥೆಯ ಭಾರ್ಗವ ನಿರ್ದೇಶನದ ಚಿತ್ರ 'ಶಿವ ಶಂಕರ್'. ವಿಷ್ಣುವರ್ಧನ್ ಅಭಿನಯ ಶ್ರೇಷ್ಠ. ಅವರು ತಮ್ಮೊಂದಿಗಿದ್ದ ಸವಾಲನ್ನು ಗಂಭೀರವಾಗಿ ಪರಿಗಣಿಸಿ ಗೆದ್ದಿದ್ದರು. ಶಿವ, ಶಂಕರ ಎರಡು ಪಾತ್ರಗಳು. ಒಂದು ಇನ್ಸ್‌ಪೆಕ್ಟರ್, ಇನ್ನೊಂದು ಪೆದ್ದ, ಕುರೂಪಿ ಪಾತ್ರ. ವಿಷ್ಣುವರ್ಧನ್ ತಮ್ಮ ಇಮೇಜನ್ನು ಲೆಕ್ಕಿಸದೆ ಅಂಥ ಮೇಕಪ್ ಹಾಕಿದ್ದು, ವಿಭಿನ್ನವಾಗಿ ಅಭಿನಯಿಸಿದ್ದು ವಿಶೇಷ. ಆದರೆ ಅವರ ಪ್ರೇಕ್ಷಕರೇ ಒಪ್ಪಲಿಲ್ಲ.

"...ಅದು ನಾನೇ ಅಂತ ಗುರುತಿಸಲೇ ಇಲ್ಲ ಜನ. ಏನು ಮಾಡೋದು ?" ಎನ್ನುತ್ತಾರೆ ವಿಷ್ಣುವರ್ಧನ್. ಆ ಚಿತ್ರ ಸೋತದ್ದು ಅವರಿಗೆ ವ್ಯಥೆಯ ಸಂಗತಿ. ಶಿವ ಎಂಬ ಮಾನಸಿಕ ಅಸ್ವಸ್ಥ ಯುವಕನ ಪಾತ್ರಕ್ಕೆ ವಿಷ್ಣುವರ್ಧನ್ ಅವರ ಎಲ್ಲ ಅಭಿನಯ ಸಾಮರ್ಥ್ಯವನ್ನು ಬಳಸಿಕೊಳ್ಳಲಾಗಿತ್ತು. ಚಿತ್ರನಾಟಕ ಇನ್ನಷ್ಟು ಬಿಗಿಯಾಗಬೇಕಿತ್ತು. ಪರಾಕಾಷ್ಠೆ ಪೇಲವವಾಯಿತು ಇತ್ಯಾದಿ ಕಾರಣಗಳು ಅಭಿನಯವನ್ನು ಮರೆಮಾಡಿತು. ಚಿತ್ರದ ನಷ್ಟ ಮತ್ತೆ ಚಿತ್ರ ನಿರ್ಮಿಸಲೂ ಆಗದ ಹಾಗೆ ಕಲಾಕೃತಿ ಸಂಸ್ಥೆಯನ್ನು ಕರಗಿಸಿಬಿಟ್ಟಿತ್ತು. ನಿರ್ದೇಶಕ ಭಾರ್ಗವ, ಛಾಯಾಗ್ರಾಹಕ ಡಿ.ವಿ.ರಾಜಾರಾಂ ಮತ್ತು ಹಣಕಾಸು ವ್ಯವಸ್ಥಾಪಕ ಹರಿಹರನ್ ಸಂಯುಕ್ತ ಪ್ರಯತ್ನಗಳು ಇಲ್ಲಿಗೆ ಕೊನೆಗೊಂಡವು. ರಾಜನ್-ನಾಗೇಂದ್ರ ಸಂಗೀತ ನಿರ್ದೇಶನದಲ್ಲಿ ಎಸ್.ಪಿ.ಬಾಲಸುಬ್ರಹ್ಮಣ್ಯಂ ಮನೋವಿಕಲನ ಪಾತ್ರಕ್ಕೆ ಹಾಡಿದ ಗೀತೆ ಶ್ರೇಷ್ಠವಾಗಿತ್ತು. ವಿಷ್ಣುವರ್ಧನ್ ಒಂದು ಗೀತೆಯನ್ನು ತುಂಬಾ ಚೆನ್ನಾಗಿ ಹಾಡಿದ್ದರು.

'ಎಸ್.ಪಿ.ಸಾಂಗ್ಲಿಯಾನ-೨' ಮತ್ತೆ ನಿಷ್ಠಾವಂತ ಪೊಲೀಸ್ ಅಧಿಕಾರಿ ಸಾಂಗ್ಲಿಯಾನ ಅವರನ್ನು ಕುರಿತೇ ಆಗಿತ್ತು. ಈಗಾಗಲೇ ಮೊದಲ ಭಾಗ ಬಂದು ಯಶಸ್ವಿ ಆಗಿತ್ತು. ನಂಜುಂಡಪ್ಪ ನಿರ್ದೇಶನವಿತ್ತು. ಅವರೇ ಭಾಗ-೨ ಸಹ ನಿರ್ದೇಶಿಸಿದರು. ಎರಡರಲ್ಲೂ ಶಂಕರ್‌ನಾಗ್ ಅಭಿನಯಿಸಿದ್ದರು. ಅತ್ಯಂತ ಯಶಸ್ವೀ ಚಿತ್ರಗಳಿವು. ನಂಜುಂಡಪ್ಪ ಬಹು ಬೇಗ ತೀರಿಕೊಂಡರು. ಆದರೆ ಅವರು ಜನಪ್ರಿಯ ಪೊಲೀಸ್ ಅಧಿಕಾರಿಗಳ ಹೆಸರು-ವಸ್ತು ಇರುವ ಚಿತ್ರ ನಿರ್ಮಿಸುವ ಪರಂಪರೆಯನ್ನು ಬಿಟ್ಟುಹೋದರು. ಅವರು ಪರಿಚಯಿಸಿದ ತಾರೆ ಶಿವರಂಜಿನಿ ಕೂಡಾ ನಿಲುವು, ಚೆಲುವುಗಳಿಂದ ಹೆಸರಾದರು.

ನಂಜುಂಡಪ್ಪ ಈ ಚಿತ್ರ ಬಿಡುಗಡೆಯ ವೇಳೆಗೆ ಇರಲಿಲ್ಲ. ಚಿತ್ರೋದ್ಯಮ, ಅದರಲ್ಲೂ ಶಂಕರ್‌ನಾಗ್ ಆತನಿಗಾಗಿ ಬಹುವಾಗಿ ದುಃಖಿಸಿದ್ದರು. ಚಿತ್ರದಲ್ಲಿ ರೋಮಾಂಚನಕಾರಿ ಸಾಹಸ ದೃಶ್ಯಗಳು. ಹಾಡು, ನೃತ್ಯ ಕೂಡಾ ಚೆನ್ನಾಗಿತ್ತು. ಮುಖ್ಯವಾಗಿ ಬಿಗಿಯಾದ ಚಿತ್ರನಾಟಕವಿತ್ತು. ಲತಾ ಹಂಸಲೇಖಾ ಹಾಡಿರುವ 'ಟೂ ಟು ಟು ಟು ಟು ಟು ಟೂ ನಿನ್ನ ಜೊತೆ ನಾ ಟೂ ಟೂ...' ಗೀತೆಯ ಚಿತ್ರೀಕರಣದಲ್ಲಿ ಊನಾದಲ್ಲಿ ಬರುವ ನಿರ್ದೇಶಕರು 'ಕಾಂಚನಾ ಕೋಪವೇ...' ಎಂದು ಮುಂದುವರಿಸುವ ಭಾಗವೂ ಇತ್ತು. ಹಂಸಲೇಖಾ ಸಂಗೀತದ ವೈಭವವಿತ್ತು. 'ರಾಮಯ್ಯ ರಾಮಯ್ಯನೇ...' ಎಂಬ ಹಿಗ್ಗಿನ ಗೀತೆ ಖುಷಿ ಕೊಡುವಂತಿತ್ತು. ನಿರ್ದೇಶಕರ ಜಾಣ್ಮೆಯನ್ನು ಗುರುತಿಸಬಹುದಾದ ಸನ್ನಿವೇಶಗಳಿದ್ದವು. ಮಾರುವೇಷದಲ್ಲಿ ಬಂದು ತಾನೇ ಲಂಚ ಕೊಟ್ಟು 'ನಿಜ'ವನ್ನು ಕಂಡುಕೊಳ್ಳುವುದು ಇತ್ಯಾದಿ. ಮುಖ್ಯವಾಗಿ ಒಂದು ದೃಶ್ಯದಲ್ಲಿ ಬಸ್‌ನ ಫುಟ್‌ಬೋರ್ಡ್ ಮೇಲೆ ಪ್ರಯಾಣಿಸುವ ಪ್ರಯಾಣಿಕರ ಚಿತ್ರಿಕೆ. ಅವರನ್ನು ತಡೆದಾಗ ಥಟ್ಟನೆ ಎಲ್ಲರೂ ಒಳಗೆ ಸೀಟುಗಳಲ್ಲಿ ಕುಳಿತರು. ಸೀಟುಗಳು ಇದ್ದರೂ ಫುಟ್‌ಬೋರ್ಡ್ ಮೇಲೆ ನಿಲ್ಲುವವರನ್ನು ಗದರಿಸಿ, ದಂಡ ವಿಧಿಸಬೇಕು, ಒಬ್ಬೊಬ್ಬರನ್ನೇ ಎಳೆದು ನಿಲ್ಲಿಸಿ ಕೇಳುವಾಗ ಆತ ಅವರನ್ನು ಹೇಗೆ ಗುರುತಿಸಿದ ಎಂಬುದೇ ನಿರ್ದೇಶಕರ ಜಾಣ್ಮೆ. ಅಂದರೆ ಬಸ್ ನಿಲ್ಲಿಸುವಾಗಲೇ ಇನ್ಸ್‌ಪೆಕ್ಟರ್ ತನ್ನ ಪೆನ್ನಿನಿಂದ ಇಂಕ್ ಅನ್ನು ಝಾಡಿಸಿದ್ದು, ಆಗ ನಿಂತಿದ್ದವರ ಶರ್ಟ್‌ಗಳ ಮೇಲೆ ಇಂಕ್ ಸಿಡಿದಿತ್ತು. ಇದೇ ಆತನಿಗೆ 'ಗುರುತು'



(ಚಿತ್ರ ೧೫೭) 'ಗೋಲ್‌ಮಾಲ್ ರಾಧಾಕೃಷ್ಣ' ಚಿತ್ರದಲ್ಲಿ ವನಿತಾವಾಸು. ಅನಂತ್‌ನಾಗ್ ಮತ್ತು ಚಂದ್ರಿಕಾ

(ಚಿತ್ರ ೧೫೮) 'ಕಿಲಾಡಿ ತಾತ' ಚಿತ್ರದಲ್ಲಿ ದಿನೇಶ್ ಮತ್ತು ಪ್ರಭಾಕರ್

ಆಯಿತು. ಇಂಥ ಹಲವು ಜಾಣತನಗಳಿದ್ದವು. ಆದರೆ ಚಿತ್ರದ ಪರಾಕಾಷ್ಠೆಯಲ್ಲಿ ಅಸಹಜ, ಅತಾರ್ಕಿಕ ಅಂಶಗಳು ತೂರಿಕೊಂಡವು. ಇಂಥ ದೋಷಗಳನ್ನು ಬಿಟ್ಟರೆ ಉಳಿದಂತೆ ನಂಜುಂಡಪ್ಪ ನಿಜಕ್ಕೂ ಉತ್ತಮ ನಿರ್ದೇಶಕ. ಅವರ ಅಕಾಲ ಮರಣ ಕನ್ನಡ ಚಿತ್ರರಂಗದ ದುರಂತ.

'ಗೋಲ್‌ಮಾಲ್ ರಾಧಾಕೃಷ್ಣ' ಚಿದಂಬರಶೆಟ್ಟಿ ಅವರ ಗಲ್ಲಾಪೆಟ್ಟಿಗೆ ಗಮನದಲ್ಲಿಟ್ಟ ಆಯ್ಕೆ. ಯಶಸ್ವಿಯಾಯಿತು. ಸಾಯಿಪ್ರಕಾಶ್ ನಿರ್ದೇಶನವಿತ್ತು. ಅನಂತ್‌ನಾಗ್, ಚಂದ್ರಿಕಾ, ವನಿತಾವಾಸು, ಉಮೇಶ್, ಉಮಾಶ್ರೀ ಇದ್ದರು. ಹಾಸ್ಯವೇ ಪ್ರಧಾನ. ತಮಿಳು ಮೂಲವಾದರೂ ಕನ್ನಡ ಚಿತ್ರ ಕೂಡಾ ಅಷ್ಟೇ ನಗೆಯುಕ್ಕಿಸುತ್ತಿತ್ತು. ಉಮೇಶ್ ಈ ಚಿತ್ರದಲ್ಲಿ ಚೆನ್ನಾಗಿ ಅಭಿನಯಿಸಿದ್ದರು. ಚೆಕಾಫನ ಕಥೆಯೊಂದರಲ್ಲಿ 'ಸೀನು'ವ ಗುಮಾಸ್ತನ ಕಥೆಯೊಂದಿದೆ. ಅದನ್ನು ಹೋಲುವ ಕೆಲವು ಸನ್ನಿವೇಶಗಳನ್ನು ಹಾಸ್ಯಕ್ಕಾಗಿ ದುಡಿಸಿಕೊಳ್ಳಲಾಗಿತ್ತು. ಸಿಹಿಕಹಿ ಚಂದ್ರು ಸೊಗಸಾಗಿ ಅಭಿನಯಿಸಿದ್ದರು. ಉಮಾಶ್ರೀ, ಮೈಸೂರು ಲೋಕೇಶ್ ಜೋಡಿಯ ವೃತ್ತಿರಂಗಭೂಮಿಯ ನಂಟು, ರಂಗಗೀತೆಗಳ ಖಯಾಲಿ ಮತ್ತೆ ಮತ್ತೆ ನೆನೆದು ನಗುವ, ಆ ಗಾಯನವನ್ನು ನೆನೆವಂಥ ಸಂಗತಿಗಳು.

ಈ ಚಿತ್ರದಲ್ಲಿ ಲೀಲಾವತಿ ವಾಚಾಳಿ; ಮಾತು ಮಾತಿಗೆ ಊರ ಜನರನ್ನು ಸೇರಿಸಿ ಪಂಚಾಯಿತಿ ಮಾಡುವ ಸ್ವಭಾವದಿಂದಾಗಿ ರಂಜನೀಯವೆನ್ನಿಸಿತು. 'ಪೆಟ್ರೋಮ್ಯಾಕ್ಸ್' ಎಂದರೆ ಉಪಪತ್ನಿ ಎಂಬರ್ಥ ಬರುವ ಹಾಗೆ ಬಳಸಿದ್ದರು. ಇವೆಲ್ಲ ತಮಿಳಿನ ಅನುಕರಣೆಯೇ ಆದರೂ ಕನ್ನಡದ ಪ್ರೇಕ್ಷಕನಿಗೆ ಹೊಸದು, ನಗುನಗುತ್ತಾ ಸ್ವೀಕರಿಸಿದ್ದ. ಒಂದು ಕಡೆಯಿಂದ ಆಕ್ಷೇಪವೂ ಇತ್ತು.

ಬಾಲರಾಜ್ ಅಭಿನಯಿಸಿದ್ದ 'ರುದ್ರತಾಂಡವ'ಕ್ಕೆ ಬಿ.ರಾಮಮೂರ್ತಿ ನಿರ್ದೇಶನ. ಚಿತ್ರಮಂದಿರದ ಮುಂದೆ ಭಾರೀ ಕಟೌಟ್ ನಿಲ್ಲಿಸಲಾಗಿತ್ತು. ಸಂಗೀತದ ಬಗ್ಗೆ, ಕಥೆಯ ಬಗ್ಗೆ ಕುತೂಹಲ ಹುಟ್ಟಿಸುವ ಹೇಳಿಕೆಗಳನ್ನು ಪ್ರಚಾರದಲ್ಲಿ ಬಳಸಲಾಗಿತ್ತು. ಕುತೂಹಲ-ಆಕರ್ಷಣೆ ಹುಟ್ಟಿಸಿ ಪ್ರೇಕ್ಷಕರನ್ನು ಒಳಗೆ ಕರೆಸಿಕೊಂಡರೂ ಹೂರಣವೇ ಇಲ್ಲವಾಗಿತ್ತು. ಹಾಸ್ಯ ಎಂದುಕೊಂಡು ಚಿತ್ರಿಸಿರುವ ಸನ್ನಿವೇಶಗಳು ಹಾಸ್ಯಾಸ್ಪದವಾಗಿದ್ದವು. ಇನ್ನೂ ನಾಯಕನಾಗಿಲ್ಲದ ಶಶಿಕುಮಾರ್ ಪಾತ್ರ ವಹಿಸಿದ್ದರು. ಶಶಿಕುಮಾರ್, ಬಾಲರಾಜ್ ಇಬ್ಬರೂ ನೃತ್ಯಪಟುಗಳಾಗಿ ಕಂಡರು. ಮುಖ್ಯವಾಗಿ ಸಂಗೀತ ನೃತ್ಯದಲ್ಲಿ ಮಿಶ್ರಶೈಲಿ ಬಳಸಲಾಗಿತ್ತು. ಉಪೇಂದ್ರಕುಮಾರ್ ಕೆಲವು ಒಳ್ಳೆಯ ಹಾಡುಗಳನ್ನು ಸಂಯೋಜಿಸಿದ್ದರು. ಚಿತ್ರ ಗೆಲ್ಲಲಿಲ್ಲ. ರಾಜಕುಮಾರ್ ಪ್ರೀತಿಯ ತಂಗಿ ಶಾರದಮ್ಮನವರ ಮಗ ಬಾಲರಾಜ್. ಆತನೂ ಅಭಿನಯ ಕ್ಷೇತ್ರ ಆಯ್ದದ್ದು ಸರಿಯೋ ತಪ್ಪೋ ಆ ಮಾತು ಬೇರೆ. ಆದರೆ ಯಾರ ಶ್ರೀರಕ್ಷೆಯೇ ಇದ್ದರೂ ಕಲಾವಿದರ ಒಳಗೆ ಸತ್ವ ಇರಬೇಕು, ಪರಿಶ್ರಮ ಬೇಕು. ಆ ಮಟ್ಟಿಗೆ ಬಾಲರಾಜ್ ಸತ್ವ ಇಲ್ಲದವರೇನಲ್ಲ, ಕೃಷಿ ಸಾಲದು. ಶ್ರದ್ಧೆ ನಿಷ್ಠೆ ಇದ್ದರೆ ಸಾಮಾನ್ಯ ನಟನೆಯಾದರೂ ಸಾಧ್ಯವಿತ್ತು. ಅದರೆ ಅಂಥ ಪ್ರಯತ್ನ ಮಾಡಲಿಲ್ಲ ಬಾಲರಾಜ್. ಆದರೂ ಅವರ ಅಭಿನಯದಲ್ಲಿ ಅಲ್ಲಲ್ಲಿ ಬೆಳಕಿನ ಕಿರಣಗಳ ಹಾಗೆ ಪ್ರತಿಭೆ ಎದ್ದು ಕಂಡದ್ದಿದೆ. ಅದು ಸ್ಥಾಯಿ ಆಗುವುದಿಲ್ಲ, ಅಷ್ಟೇ. ಹೆಣ್ಣು ಕೊಟ್ಟ ಮಾವ ಜಯರಾಂ ನಿರ್ಮಾಪಕರಾಗಿ ಎಷ್ಟು ಸಾಧ್ಯವೋ ಅಷ್ಟು ಮೇಲೆ ಬರಲು ನೆರವಾದರು. ಅವರ ಬೊಕ್ಕಸ ಖಾಲಿಯಾಯಿತು. ಅವರೊಬ್ಬ ಶ್ರದ್ಧಾವಂತ ನಿರ್ಮಾಪಕ ಎಂಬುದನ್ನು ನೆನೆಯಬೇಕು.

'ರಾಮರಾಜ್ಯದಲ್ಲಿ ರಾಕ್ಷಸರು' ಕೆಲವು ಕಾರಣಗಳಿಗಾಗಿ ನಾವು ನೆನೆಯಬೇಕಾದ ಚಿತ್ರ. ಡಿ.ರಾಜೇಂದ್ರಬಾಬು ನಿರ್ದೇಶಿಸಿದ್ದರು. ಬಾಬು ಅವರ ಎಂದಿನ ಬಿಗಿಯಾದ ಚಿತ್ರಕಥೆ, ಚಿತ್ರಿಕೆಗಳನ್ನು ತೆಗೆಯುವ ವಿಶೇಷಗಳು ಇಲ್ಲೂ ಇದ್ದವು. ಶಂಕರ್‌ನಾಗ್, ಅನಂತ್‌ನಾಗ್ ಅಭಿನಯಿಸಿದ್ದರು.ಸೂರ್ಯ-ಚಂದ್ರ ಎಂಬ ಹೆಸರಿನ ಪಾತ್ರಗಳು. ಒಬ್ಬ ಇನ್ಸ್‌ಪೆಕ್ಟರ್, ಮತ್ತೊಬ್ಬ ಪತ್ರಕರ್ತ. ದುಷ್ಟರ ಸಂಚನ್ನು ಬಯಲಿಗೆಳೆದು, ಅವರನ್ನು ಮಟ್ಟ ಹಾಕುವುದು ವಸ್ತು. ಈ ಚಿತ್ರದಲ್ಲಿ ಮುಖ್ಯವಾಗಿ ಬರುವ ಒಂದು ಮೈಕ್ರೋಫಿಲಮ್ ಅನ್ನು ಎಲ್ಲಿಟ್ಟರೂ ಹಾರಿಸಿಕೊಂಡು ಹೋಗುವ ಸಾಧ್ಯತೆ ಇದ್ದುದರಿಂದ ಶಂಕರ್‌ನಾಗ್ ಪಾತ್ರ ತನ್ನ ತೊಡೆಯನ್ನೇ ಕೊಯ್ದು ಒಳಗೆ ಅಡಗಿಸಿಡುವುದು ವಿಶೇಷ. ತೊಡೆ ಕೊಯ್ಯುವ ಚಿತ್ರಿಕೆಯನ್ನೂ ತೆಗೆಯಲಾಗಿತ್ತು. ಇದಕ್ಕಾಗಿ ಹಂದಿಯ ತೊಡೆಯ ಮೇಲ್ಚರ್ಮವನ್ನು ತೆಗೆದು ಶಂಕರ್‌ನಾಗ್‌ರ ಚರ್ಮದ ವರ್ಣ ಪ್ರಮಾಣಕ್ಕೆ ಹೊಂದಿಸಿ ಬಳಸಿದ್ದನ್ನು ನಿರ್ದೇಶಕರು ಹೇಳಿದ್ದರು. ಇಂಥ ಒಂದೆರಡು ವಿಶೇಷಗಳಲ್ಲದೆ, ಖಳರಾಗಿ ಸುಧೀರ್, ಲಕ್ಷ್ಮಣ್, ದೊಡ್ಡಣ್ಣರ ಅಭಿನಯ ಗಮನ ಸೆಳೆದಿತ್ತು. ಬಹಳ ದಿನಗಳ ಮೇಲೆ ಬೇಬಿ ರೇಖಾ ಕುಮಾರಿಯಾಗಿ ಪಾತ್ರ ವಹಿಸಿದ್ದರು.

'ಕೆಂಪು ಗುಲಾಬಿ'ಗೆ ವಿಜಯಾರೆಡ್ಡಿ ನಿರ್ದೇಶನವಿತ್ತು. ಚಿತ್ರದ ಎಲ್ಲ ಹಾಡುಗಳೂ ಚೆನ್ನಾಗಿದ್ದವು. ಜೇಸುದಾಸ್ ಹಾಡಿದ್ದ 'ಹೂವಿನ ಲೋಕ ನನ್ನದು, ಅದರಲ್ಲಿ ಒಂದು ಹೂವು ನನ್ನದು...' ಮತ್ತು 'ಕೆಂಪು ಗುಲಾಬಿ ಬಣ್ಣ ಬಣ್ಣ ನನ್ನ ತುಂಬ ನಿನ್ನ ಬಣ್ಣವೇ....' ಗೀತೆಗಳು ಮೆಚ್ಚಾದವು. 'ಕೆಂಪು ಗುಲಾಬಿ' ಗೀತೆಗೆ ಜೇಸುದಾಸ್ ಜೊತೆ ಸ್ವರ್ಣಲತಾ ಹಾಡಿದ್ದರು. ಹಂಸಲೇಖಾ ಸಂಗೀತ ಗಮನ ಸೆಳೆದಿತ್ತು. ಚಿತ್ರದಲ್ಲಿ ರಮೇಶ್ ಜೊತೆಗೆ ಪಾರಿಜಾತ ಅಭಿನಯಿಸಿದ್ದರು. ಚಿಕ್ಕಂದಿನಿಂದ ಆಟ-ಪಾಠಗಳಲ್ಲಿ ಹತ್ತಿರವಾದ ಹುಡುಗರಿಬ್ಬರು ಬೇರೆಬೇರೆ ಬೆಳೆದರು. ದೊಡ್ಡವರಾಗಿ ಬಂದಾಗ ಹುಡುಗಿ ಗುರುತು ಹಿಡಿಯಲಿಲ್ಲ. ಅದರೆ ಬಾಲ್ಯದ ಆಟ-ಪಾಠಗಳನ್ನು ಮತ್ತೆ ಮತ್ತೆ ಕೊಂಚಕೊಂಚವೇ ನೆನಪಿಸುವಂತೆ ಮಾಡುವ ಚಿತ್ರಿಕೆಗಳು ತುಂಬಾ ಸೊಗಸಾಗಿದ್ದವು. ಚಿತ್ರದಲ್ಲಿ ಶ್ರೀಮಂತ ಹುಡುಗನನ್ನು ಅಳಿಯನನ್ನಾಗಿ ಮಾಡಿಕೊಳ್ಳ ಬಯಸುವ ಕೆಲವರಲ್ಲಿ ಒಬ್ಬರು ಧೀರೇಂದ್ರಗೋಪಾಲ್. ಆತ ಉದ್ದಕ್ಕೂ ವೃತ್ತಿರಂಗಭೂಮಿಯ ಮಹಾರಾಜನಂತೆ ವರ್ತಿಸುವ, ಸಂಭಾಷಣೆ ಹೇಳುವ ರೀತಿಯೇ ಸೊಗಸಾಗಿತ್ತು. ಜಗ್ಗೇಶ್ ವಿಭಿನ್ನ ಪಾತ್ರದಲ್ಲಿದ್ದರು. ಒಂದು ಹಂತದಲ್ಲಿ ರಮೇಶ್-ಜಗ್ಗೇಶ್ ನಡುವೆ ನೃತ್ಯದ ಸ್ಪರ್ಧೆ. ಜಗ್ಗೇಶ್ ಸೊಗಸಾಗಿ ನರ್ತಿಸಿದರು. ಆದರೆ ನಾಯಕನಾದ್ದರಿಂದ ರಮೇಶ್ ಗೆಲ್ಲಲೇಬೇಕಾಗಿತ್ತು. ಅದರಿಂದಾಗಿ ದೃಶ್ಯ ಅಸಹಜ ಆಯಿತು.

'ಕಿಲಾಡಿ ತಾತ' ಉದಯಕುಮಾರ್ ಮಗ ವಿಶ್ವವಿಜೇತನ ಮಹಾತ್ವಾಕಾಂಕ್ಷೆಯ ಚಿತ್ರ. ವಿಭಿನ್ನ ಕಥೆ. ಪ್ರಭಾಕರ್ ಆ ತರುಣನನ್ನು ಬಹುವಾಗಿ ಮೆಚ್ಚಿಕೊಂಡಿದ್ದರಿಂದ ಸಹಕರಿಸಿದ್ದರು. ಜೊತೆಗೆ ಅವರ ಪ್ರೀತಿಯ ಛಾಯಾಗ್ರಾಹಕ ಸುಂದರನಾಥ ಸುವರ್ಣ ನಿರ್ದೇಶಿಸಿ, ಛಾಯಾಗ್ರಹಣವನ್ನೂ ಮಾಡಿದ್ದರು. ಪ್ರಭಾಕರ್ ತ್ರಿಪಾತ್ರದಲ್ಲಿದ್ದರು. ಸುವರ್ಣ ಅವರ ಟ್ರಿಕ್ಸ್ ಹಾಗೂ ಮಾಸ್ಕ್ ಶಾಟ್ಸ್ ಗಮನ ಸೆಳೆದಿತ್ತು. ವಿಶ್ವವಿಜೇತರೇ ಕಥೆ, ಚಿತ್ರಕಥೆ, ಸಂಭಾಷಣೆ ನಿರ್ವಹಿಸಿದರು. ಗಣೇಶ ಹೆಸರಿನ ಆನೆಯೇ ಒಂದು ಪಾತ್ರವೆನ್ನಿಸುವಷ್ಟು ಚೆನ್ನಾಗಿ ಕೆಲಸ ಮಾಡಿತ್ತು. ತಂದೆ-ಮಗ-ಮೊಮ್ಮಗ ಮೂರು ಪಾತ್ರಗಳಲ್ಲಿ ತಾತ-ಮೊಮ್ಮಗನದ್ದೇ ಹೆಚ್ಚು ಕೆಲಸ. ಕಿರಿಯನಾದರೂ ಮೊಮ್ಮಗ ನಾಯಕನಲ್ಲ, ನಾಯಕನಾಗಿರೋನು 'ತಾತ'ನೇ. ತಾತನಿಗೊಬ್ಬ ಗೆಳೆಯನಾಗಿ ದಿನೇಶ್. ಈ ವೃದ್ಧರಿಬ್ಬರ ಮೋಜಿನ ಬದುಕು, ಒಂದು ಸಾಹಸ ದೃಶ್ಯ ಕೂಡಾ ಹಾಸ್ಯಮಯವಾಗಿದೆ. ಕನ್ಯೆಯರನ್ನು ಅಪಹರಿಸಿ ಮಾರುವ ಕಳ್ಳರ ಜಾಲವನ್ನು ಭೇದಿಸುವುದು, ಸೇಡು ಇತ್ಯಾದಿ ಅಂಶಗಳೂ ಇವೆ. ಒಟ್ಟಾರೆ ಚಿತ್ರ ಲವಲವಿಕೆ ಮತ್ತು ನಗೆಯುಕ್ಕಿಸುವ ಕಥಾನಿರೂಪಣೆಯಿಂದ ಗಮನ ಸೆಳೆಯುತ್ತದೆ. 'ಚೆಲ್ಲಯ್ಯ ಚೆಲುವೋ ತಾನೆ ತಂದಾನ...' ಗೀತೆಗೆ ಹುಡುಗಿಯನ್ನು ಚುಡಾಯಿಸಲು ಹೊರಟ ವೃದ್ಧರು, ಅವರಿಗೆ ತೊಡರುಗಾಲಾಗಿ ಬರುವ ಆನೆ - ತುಂಬ ಸೊಗಸಾದ ಚಿತ್ರಣವಾಗಿತ್ತು. ಸುವರ್ಣರ ಕಲ್ಪನೆಯಲ್ಲಿ ಹಾಸ್ಯಕ್ಕೇ ಒತ್ತು, ಹಾಗೇ ಪ್ರಭಾಕರ್‌ಗೂ ಹಾಸ್ಯವೆಂದರೆ ಬಲು ಪ್ರೀತಿ. ಈ ಸಹಯೋಗ ನಗೆಯುಬ್ಬರವನ್ನೇ ಮೂಡಿಸಿತ್ತು.



(ಚಿತ್ರ ೧೯೯೦) 'ಪೊಲೀಸನ ಹೆಂಡ್ತಿ' ಚಿತ್ರದಲ್ಲಿ ಶಶಿಕುಮಾರ್ ಮತ್ತು ಮಾಲಾಶ್ರೀ

'ಮಹೇಶ್ವರ' ದಿನೇಶ್ ಬಾಬು ನಿರ್ದೇಶನದ ಚಿತ್ರ. ಸುಮಲತಾ-ಶಂಕರ್‌ನಾಗ್ ಜೋಡಿ ಅಭಿನಯ. ಆಸ್ತಿಯ ಆಸೆಗಾಗಿ ಕಗ್ಗತ್ತಲೆಯಲ್ಲಿ ದೂಡಿದ ಯುವಕನೊಬ್ಬನನ್ನು ಮತ್ತೆ ಮನುಷ್ಯನಾಗಿ ಪರಿವರ್ತಿಸುವ, ದುಷ್ಟರನ್ನು ನಾಶಮಾಡುವಷ್ಟು ಶಕ್ತನನ್ನಾಗಿಸುವ ಕಥೆ. ದಿನೇಶ್ ಬಾಬು ಅವರೇ ಛಾಯಾಗ್ರಹಣವನ್ನು ನಿರ್ವಹಿಸಿದ್ದರಿಂದ ಅವರದೇ ವಿಶಿಷ್ಟಶೈಲಿಯ ಲೈಟಿಂಗ್ ಡಿಸೈನ್ ಇತ್ತು. ಕತ್ತಲೆಯಿಂದ ಬೆಳಕಿಗೆ ತೆರೆದ ಕಣ್ಣುಗಳು ಇತ್ಯಾದಿ ಸನ್ನಿವೇಶಗಳಲ್ಲಿ ಸೊಗಸಾದ ಬೆಳಕು ವಿನ್ಯಾಸ, ಛಾಯಾಗ್ರಹಣದ ಕೆಲಸಗಳನ್ನು ಕಾಣಬಹುದಿತ್ತು. ಪೂರ್ವಾರ್ಧವೇ ನಿಜವಾದ ಕಥೆ-ಚಿತ್ರಣ. ಉತ್ತರಾರ್ಧದ ಸಾಹಸ ಇತ್ಯಾದಿಗಳೆಲ್ಲ ಜನಪ್ರಿಯ ಕಲಾವಿದ, ಮಾರುಕಟ್ಟೆಗಳ ಸಲುವಾಗಿ ಕೆಲವು ಸೂತ್ರಗಳನ್ನು ಅಳವಡಿಸಿ ಅಧಿಕೃತವಾಗಿ ಹೆಣೆದ ಕಥಾಭಾಗವಾಗಿ ಸರಳೀಕರಣವೆನಿಸಿದವು. ಇದೂ ಆಂಗ್ಲ ಚಿತ್ರವೊಂದರ ಸ್ಫೂರ್ತಿ ಪಡೆದು ಸಿದ್ಧವಾದ ಚಿತ್ರ. ಇದರ ನಂತರ ಬಹುಕಾಲ ದಿನೇಶ್ ಬಾಬು ಕನ್ನಡದಲ್ಲಿ ಚಿತ್ರಗಳನ್ನು ಮಾಡಲೇ ಇಲ್ಲ. ಕೇರಳದಲ್ಲಿ ಛಾಯಾಗ್ರಾಹಕರಾಗಿ ಆಗೀಗ ಸುದ್ದಿಯಾದರು. ಮತ್ತೆ ಅವರು ಚಿತ್ರ ಮಾಡಲು ಬಂದದ್ದು ೧೯೯೭ರಲ್ಲಿಯೇ. 'ಅಮೃತ ವರ್ಷಿಣಿ' ನಿರ್ದೇಶಿಸಿ ಮತ್ತೆ ಕನ್ನಡದಲ್ಲಿ ಸುದ್ದಿಯಾದರು. ಅವರಿಗೆ ಕನ್ನಡದಲ್ಲಿ ಪ್ರೇಕ್ಷಕರಿದ್ದಾರೆ. ಕಲಾವಿದರಿಗೂ ಅವರ ಬಗ್ಗೆ ಪ್ರೀತಿಯಿದೆ, ಸಹಕರಿಸುತ್ತಾರೆ. ಪುಟ್ಟಣ್ಣನ ನಂತರ ರಾಮಕೃಷ್ಣರಂಥ ಕಲಾವಿದನಿಂದ ಕೆಲಸ ತೆಗೆದು ಆತನೊಳಗಿರುವ ಸಾಮರ್ಥ್ಯವೇನೆಂದು ತೋರಿಸಿದವರೇ ದಿನೇಶ್‌ಬಾಬು.

ರಾಮಕೃಷ್ಣ ತಮ್ಮ ಚಿತ್ರಗಳಲ್ಲಿನ ಪಾತ್ರ ಮತ್ತು ಬೆಳವಣಿಗೆ ಕುರಿತು ಹೀಗೆನ್ನುತ್ತಾರೆ: ''...ನಾನೆಂದೂ ಭಾರೀ ಕನಸು ಕಂಡೋನಲ್ಲ. ಕನಸು ಕೂಡಾ ನನ್ನ ಮಿತಿಯಲ್ಲೇ ಇರಬೇಕೆನ್ನುವವನು ನಾನು. ನಮ್ರತೆ-ಕಾಯುವಿಕೆ-ಪ್ರಾರ್ಥನೆ ಇವೆಲ್ಲ ನನಗೆ ಪ್ರಿಯವಾದ ಸಂಗತಿಗಳು. ಕಲಾವಿದ ಅಂತಲೇ ಅಲ್ಲ, ಯಾವುದೇ ಮನುಷ್ಯನಿಗೂ ಇರಬೇಕಾದ ಮೂಲಭೂತ ಗುಣಗಳವು. ಒಂದು ರೀತಿಯ ಎಟರ್ನಲ್ ಕ್ವಾಲಿಟೀಸ್ ಅಲ್ವೇ ? ...ಒಬ್ಬ ತಾನು ಅಂದುಕೊಂಡರೆ ದೊಡ್ಡವನಾಗಿ ಬಿಡೋಲ್ಲ. ಈ ಉದ್ಯಮದ ಜನ ರಾಮಕೃಷ್ಣನ್ನ ಹಾಗೆ ಬೆಳೀಲಿ, ಬೆಳೆಸಬೇಕು ಅಂದುಕೋಬೇಕು. ಅವೆಲ್ಲ ಹಠ ಮಾಡೋದ್ರಿಂದ ಬರೋದಿಲ್ಲ''.

ದಿನೇಶ್ ಬಾಬು ಚಿತ್ರೀಕರಣ ವಿಧಾನ, ಶಿಸ್ತು ಎಲ್ಲರೂ ಮೆಚ್ಚುವಂಥದ್ದು. ಬೆಳಗಿನ ಆರು ಗಂಟೆಗೇ ಮೊದಲ ಚಿತ್ರಿಕೆ, ೧೧-೩೦ಕ್ಕೆ ಕೆಲಸ ನಿಲ್ಲಿಸಿ, ಮತ್ತೆ ೪ ಗಂಟೆಗೆ ಚಿತ್ರೀಕರಣ ಪ್ರಾರಂಭಿಸುವ ವಿಧಾನವೇ ಬಹಳಷ್ಟು ಸುದ್ದಿಯಾಗಿತ್ತು. ಇದು ಅವರು ಸಹಜ ಬೆಳಕಿನ ಸಲುವಾಗಿ ಮಾಡಿಕೊಂಡ ಕಾರ್ಯವಿಧಾನ. ಆದರೆ ಅಷ್ಟೇ ಅವಕಾಶದಲ್ಲಿ ಅಧಿಕ ಚಿತ್ರಿಕೆಗಳನ್ನು ತೆಗೆಯುತ್ತಾರೆ. ಗೊತ್ತಾದ ಕಾಲಾವಧಿಯಲ್ಲಿ, ಕಡಿಮೆ ವೆಚ್ಚದಲ್ಲಿ ಚೊಕ್ಕವಾದ ಚಿತ್ರ ಮಾಡಿಕೊಡುತ್ತಾರೆ. ದಿನೇಶ್ ಬಾಬು ಕಥೆ-ನಿರೂಪಣೆ ಒಂದು ವರ್ಗದ ಪ್ರೇಕ್ಷಕರಿಗೆ ಮಾತ್ರ, ಅವು 'ಬಿ', 'ಸಿ' ಸೆಂಟರ್ ಎಂದು ಉದ್ಯಮ ಗುರುತಿಸಿಕೊಳ್ಳುವ ಜಿಲ್ಲೆ, ತಾಲ್ಲೂಕು ಮಟ್ಟದಲ್ಲಿ ಹೆಚ್ಚಾಗಿ ಓಡುವುದಿಲ್ಲ. ನಗರ ಪ್ರದೇಶದ ಮಧ್ಯಮ, ಮೇಲ್‌ಮಧ್ಯಮ ವರ್ಗ ಮುಗಿಬಿದ್ದು ನೋಡಿ, ಮೆಚ್ಚುವ ಇವರ ಚಿತ್ರಗಳು ಪ್ರಶಸ್ತಿಯ ನೆಲೆಯಲ್ಲೂ ಮಾನ್ಯವಾಗುತ್ತವೆ. ಪ್ರಶಂಸೆಯೂ ವಿಪುಲವಾಗಿ ಸಿಗುತ್ತದೆ. ಆದರೆ ನಿರ್ಮಾಪಕನ ಬೊಕ್ಕಸಕ್ಕೆ ಆ ಮೆಚ್ಚುಗೆಯಷ್ಟೇ ಸಾಲದಲ್ಲ... ಹೀಗಾಗಿ ಇವರ ಚಿತ್ರಗಳಿಗೆ ನಿರ್ಮಾಪಕರು ಸಿಗುವುದು ಕೊಂಚ ಕಷ್ಟ. ಹೊಸ ನಿರ್ಮಾಪಕರನ್ನು ಹುಡುಕಿಕೊಳ್ಳುವುದೂ ಅಷ್ಟೇ ಪ್ರಯಾಸದ ಸಂಗತಿ. ಆದರೂ ದಿನೇಶ್ ಬಾಬು ಬೇಕಾಗುತ್ತಾರೆ. ಒಂದು ವಾತಾವರಣ, ವರ್ಗ ಅವರ ಚಿತ್ರಗಳನ್ನು ಬೇಡುತ್ತದೆ. ದಿನೇಶ್ ಬಾಬು ಇಂಗ್ಲಿಷ್‌ನಲ್ಲಿ ಹೇಳುವ ಸಂಭಾಷಣೆಯನ್ನು ಗ್ರಹಿಸಿ ಕನ್ನಡದ ಜಾಯಮಾನಕ್ಕೆ ಒಗ್ಗಿಸಿಕೊಂಡು ಬರೆಯುವವರು ಸಹನಿರ್ದೇಶಕರು. ಅನುವಾದ ಅಥವಾ ರೂಪಾಂತರ ಅನ್ನಬಹುದು. ಸಾಹಿತ್ಯ ಕ್ಷೇತ್ರದಲ್ಲಿ ಇದೂ ಕೂಡಾ ಅಷ್ಟೇ ಮುಖ್ಯ ಸಂಗತಿ, ಸೃಜನಶೀಲವೆಂದೇ ಪರಿಗಣಿಸುತ್ತೇವೆ. ಆದರೆ ದಿನೇಶ್ ಬಾಬು ಸಂಭಾಷಣೆಗೆ ತಮ್ಮ ಹೆಸರೇ ಹಾಕಿಕೊಳ್ಳುವುದು ಹಿತವಲ್ಲದ ಸಂಗತಿ. ಪ್ರಶಸ್ತಿಯಂಥದೇನಾದರೂ ಬಂದರೆ ಕನ್ನಡವೇ ಬಾರದವರಿಗೆ ಕೊಡುತ್ತಾರೆಯೇ ಎಂಬ ಟೀಕೆಗಳು ಸಾಕಷ್ಟು ಬಂದವು.

'ಪೊಲೀಸನ ಹೆಂಡ್ತಿ' ಸಾಯಿಪ್ರಕಾಶ್ ನಿರ್ದೇಶನದ ಚಿತ್ರ. ಹಲವು ಕಾರಣಗಳಿಗಾಗಿ ಅನುವಾದ ಚಿತ್ರವಾದರೂ ಮುಖ್ಯವಾಗುತ್ತದೆ. 'ನಂಜುಂಡಿ ಕಲ್ಯಾಣ', 'ಗಜಪತಿ ಗರ್ವಭಂಗ' ಚಿತ್ರಗಳ ಯಶಸ್ಸಿನ ಹಿಂದೆ ಜನಪ್ರಿಯರಾದ ಮಾಲಾಶ್ರೀ ವಜ್ರೇಶ್ವರಿ ಸಂಸ್ಥೆಯಲ್ಲದೆ ಹೊರಗಿನವರಿಗೆ ಕಾಲ್‌ಶೀಟ್ ಕೊಟ್ಟ ಚಿತ್ರ. ಚಿತ್ರಕ್ಕೆ ನಾಲ್ಕಾರು ನಿರ್ಮಾಪಕರು. ಚಿತ್ರದಲ್ಲಿ ಮಾಲಾಶ್ರೀಗೆ ಜೋಡಿಯಾದದ್ದು ಶಶಿಕುಮಾರ್. ಇದೇ ಅವರು ಪೂರ್ಣಪ್ರಮಾಣದ ನಾಯಕನಾಗಿ ನಟಿಸಿದ ಪ್ರಥಮ ಚಿತ್ರ. ಜೈಜಗದೀಶ್ ಈ ಚಿತ್ರದಲ್ಲಿ ಪೊಲೀಸ್ ಅಧಿಕಾರಿ. ಶಶಿಕುಮಾರ್ ಸಾಮಾನ್ಯ ಪೊಲೀಸ್. ಮೇಲಧಿಕಾರಿಗಳು ಹೇಗೆ ಕೆಳಗಿನವರನ್ನು ಶೋಷಣೆ, ಅವಮಾನಗಳಿಗೆ ಗುರಿ ಮಾಡುತ್ತಾರೆ, ಮನೆಕೆಲಸ, ಹೀನಾತಿಹೀನವಾದ ಕೆಲಸಗಳನ್ನೂ ಮಾಡಿಸುತ್ತಾರೆ ಎಂಬುದನ್ನು ಚಿತ್ರಿಸಲಾಗಿತ್ತು. ಹಾಗೆಯೇ ವಿದ್ಯಾವಂತ, ಸ್ವಾಭಿಮಾನಿ ಹೆಂಡತಿ ಇದನ್ನು ವಿರೋಧಿಸಿದಾಗ ಪ್ರೀತಿಸಿ ಮದುವೆಯಾದ ಗಂಡನೇ ಆಕೆಯನ್ನು ಹೊರಗಟ್ಟುತ್ತಾನೆ. ಹಾಗೆ ಮಾಡುವುದರ ಹಿಂದೆ ಹೊಟ್ಟೆಪಾಡಿಗಿರುವ ಉದ್ಯೋಗವನ್ನು ಉಳಿಸಿಕೊಳ್ಳುವ ತುಡಿತವಿದೆ. ಇದೇ ಚಿತ್ರದಲ್ಲಿ ದೇವರಾಜ್ ವಿಭಿನ್ನ ಪಾತ್ರದಲ್ಲಿದ್ದಾರೆ. ಕ್ರೂರಿ, ಆದರೆ ಎಲ್ಲಕ್ಕೂ ಅವನದೇ ಕಾರಣಗಳಿವೆ. 'ಉದರ ನಿಮಿತ್ತಂ ಬಹುಕೃತ ವೇಷಂ' ಎಂಬಂತೆ ಹತ್ತಾರು ಬಗೆಯ ಉದ್ಯೋಗದಲ್ಲಿರುತ್ತಾನೆ. ಅಪರಕರ್ಮದ ಪುರೋಹಿತ, ಮೌಲ್ವಿ, ಕ್ಷೌರಿಕ, ಉಚ್ಚ-ನೀಚವೆನ್ನದೆ ಕೆಲಸ ಮಾಡುವಾತ. ಹೇಗೆ ದುಡೀತೀನೆಂದು ಕೇಳಬೇಡಿ, ಸಂಪಾದಿಸುತ್ತೇನಲ್ಲಾ ಎಂಬ ವಾದ. ಇದರ ಮಧ್ಯೆ ಎಲ್ಲರಿಗೂ ಸೇಡು ತೀರಿಸಿಕೊಳ್ಳುವ ಗುರಿಯೊಂದಿದೆ. ಸಾಯಿಪ್ರಕಾಶ್ ಎರವಲು ಕಥೆಯನ್ನು ಚೆನ್ನಾಗಿಯೇ ಅನುವಾದಿಸಿದ್ದರು. ಜನಪ್ರಿಯವಾದ ಚಿತ್ರವಿದು. ಸಾಯಿಪ್ರಕಾಶ್‌ಗೆ ಅತಿ ಬೇಡಿಕೆ, ಮಾಲಾಶ್ರೀಗೆ ಮತ್ತಷ್ಟು ಜನಪ್ರಿಯತೆ. ಮುಖ್ಯವಾಗಿ ಮಾಲಾಶ್ರೀ-ಶಶಿಕುಮಾರ್ ಜೋಡಿ ಜನಪ್ರಿಯವಾಯಿತು. ಅನನ್ಯವೆನಿಸುವಂಥ ಪ್ರತಿಭೆ ಇದ್ದರೂ ಬಹಳಷ್ಟು ಬಾರಿ ದೇವರಾಜ್ ಹಿಂದೆ ಬೀಳುತ್ತಾರೆ. ಚಿತ್ರರಂಗ ನಿಜವಾದ ಪ್ರತಿಭೆಯನ್ನು ಒರೆಹಚ್ಚಿ ನೋಡುವುದಿಲ್ಲವೇಕೋ ಎಂಬ ಪ್ರಶ್ನೆಗಳೂ ಹುಟ್ಟಿಕೊಂಡಿವೆ.

ಶೈಲೇಂದ್ರಬಾಬು ನಿರ್ಮಿಸಿದ 'ಹೊಸ ಜೀವನ' ಭಾರ್ಗವ ನಿರ್ದೇಶನದಲ್ಲಿ ತೆರೆಗೆ ಬಂದಿತು. ಶಂಕರ್‌ನಾಗ್-ದೀಪಿಕಾ ಅಭಿನಯಿಸಿದ್ದ ಚಿತ್ರ. ಒರಟನೊಬ್ಬನನ್ನು ಮನುಷ್ಯನನ್ನಾಗಿ ಮಾಡುವ ಕಥೆ. ಆದರೆ ಭಾರ್ಗವ ನಿರೂಪಣಾ ವಿಧಾನ ಭಿನ್ನವಾಗಿತ್ತು. ದುಷ್ಟರ ಬಳಿ 'ಜೀತ'ದ ಹಾಗಿದ್ದ ವ್ಯಕ್ತಿ ಅವರ ಮಾತಿನಂತೆ ಹುಡುಗಿಯೊಬ್ಬಳನ್ನು ರೇಪ್ ಮಾಡಿದ. ಆಕೆ ಆತ ಒಲ್ಲೆನೆಂದರೂ ಬಿಡದೆ ಅವನೊಂದಿಗೆ ಸಂಸಾರ ಮಾಡಲೆಂದು ಬಂದು ಅವನನ್ನೇ ಒಲಿಸಿಕೊಳ್ಳುತ್ತಾಳೆ, ದುಷ್ಟಸಂಹಾರ ಇತ್ಯಾದಿಗಳು. ಅತ್ಯಾಚಾರ ಮಾಡಿದ ಹುಡುಗಿಯನ್ನೇ ವಿವಾಹವಾಗುವುದು ಅದೂ ಒತ್ತಾಯವಲ್ಲದೆ, ಪ್ರೀತಿಯಿಂದ ಆಗುವುದು ವಿಶೇಷ. ಒಂದು ಬೈಯುವ ಮಾತುಗಳಿರುವ 'ಹೇಯ್ ನಿನ್ನೆಳೆ ಹೇಯ್ ಚಾಕು ಚೈನು ನನ್ ಎಡಗೈ ಬಲಗೈ ಬೇವರ್ಸಿ....' ಎಂಬ ಗೀತೆಯಿದೆ. ಆ ಇಡೀ ಗೀತೆಯ ಚಿತ್ರಣದೊಳಗೆ ಆ ಪಾತ್ರದ ಸ್ವಭಾವ-ನಡವಳಿಕೆಗಳನ್ನು ವಿವರಿಸಿ ಪರಿಚಯ ಮಾಡುತ್ತದೆ. ಒಂದೆರಡು ಮನಸೆಳೆಯುವ ಪ್ರಕೃತಿ ಸೌಂದರ್ಯವನ್ನು ಸೆರೆಹಿಡಿದ ಚಿತ್ರಿಕೆಗಳಿವೆ.

'ಮೃತ್ಯುಂಜಯ' ದತ್ತರಾಜ್ ನಿರ್ದೇಶನದಲ್ಲಿ ರಾಘವೇಂದ್ರ ರಾಜಕುಮಾರ್ ನಿರ್ಮಿಸಿದ ಚಿತ್ರ. ಬೇರೊಂದು ಮೂಲದ ಕಥೆಯನ್ನು ಕೊಂಚ ಬದಲಾಯಿಸಿಕೊಂಡು ಚಿತ್ರಿಸಿದ್ದರು. ದ್ವಿಪಾತ್ರ. ಒಬ್ಬನು ಸತ್ತಿದ್ದಾನೆಂದು, ಅಂಥವನೇ ಜೈಲಿನಲ್ಲೊಬ್ಬ ಇದ್ದಾನೆಂದು ಕಂಡು ಅವನನ್ನು ಕರೆಸುವುದು ಕಥಾಭಾಗ. ಆದರೆ ಅಂತಿಮವಾಗಿ

ಸತ್ತಿರಲಿಲ್ಲ, ನಾಟಕ ಮಾಡಿದನೆಂಬ ತಿರುವು ಕೊಡಲಾಯಿತು. ಜೈಲಿನಲ್ಲಿ 'ಕಂಡೋರ ಜೇಬಿಗೆ ಕತ್ತರಿ ಹಾಕಿದರೆ ಕಾಸೆಲ್ಲ ಮಂಗಮಾಯ..' ಎಂಬ ನೃತ್ಯಗೀತೆಯ ಚಿತ್ರೀಕರಣ ಚೆನ್ನಾಗಿ ಮೂಡಿಬಂದಿತ್ತು. 'ಮುತ್ತು ಮುತ್ತು ಮಾತು ಮುತ್ತು...' ಗೀತೆಯೂ ಚೆನ್ನಾಗಿತ್ತು. ಉಪೇಂದ್ರಕುಮಾರ್ ಸಂಗೀತ; ಚಿ.ಉದಯಶಂಕರ್, ಶ್ರೀರಂಗ ಬರೆದ ಗೀತೆಗಳು. ಕೆಲ ವರ್ಷಗಳ ಹಿಂದೆ 'ಕ್ರಾಂತಿ ವೀರ' ಚಿತ್ರದಲ್ಲಿ ರಾಜಕುಮಾರ್ 'ಯಾರು ಏನು ಮಾಡುವರು, ನನಗೇನು ಮಾಡುವರು...' ಗೀತೆ ಹಾಡಿದ್ದನ್ನು ಈ ಹಿಂದೆಯೇ ಪ್ರಸ್ತಾಪಿಸಲಾಗಿದೆ. ಅದೇ ಸಾಲುಗಳ ಪಲ್ಲವಿ ಇರುವ ಗೀತೆಯೊಂದನ್ನು ರಾಗ ಬದಲಾಯಿಸಿ ಇಲ್ಲಿಯೂ ಬಳಸಲಾಗಿತ್ತು. ಶಶಿಕುಮಾರ್ ಖಳನಾಗಿಯೂ ಅಭಿನಯಿಸಿದ್ದರು.

ರವಿರಾಜಾ ನಿರ್ದೇಶನದ 'ಅಭಿಮನ್ಯು' ಇನ್ನೊಂದು ಮೂಲದಿಂದ ಬಂದ ಚಿತ್ರ. ಚಿತ್ರದಲ್ಲಿ ಪೊಲೀಸ್ ಅಧಿಕಾರಿ ಹಾಗೂ ಮುಖ್ಯಮಂತ್ರಿಯ ಪಾತ್ರ ಗಮನ ಸೆಳೆಯುವಂಥದ್ದು. ಮುಖ್ಯಮಂತ್ರಿ ಒಳ್ಳೆಯವ, ಜನಪ್ರೀತಿ ಗಳಿಸಿದವ ಎಂದು ಕಲ್ಪಿಸಲಾಗಿತ್ತು. ಸಾಮಾನ್ಯವಾಗಿ ಮಂತ್ರಿ, ರಾಜಕಾರಣಿಗಳನ್ನು ಚಿತ್ರಿಸುವ ರೀತಿಗಿಂತ ಭಿನ್ನ. ಆ ಚಿತ್ರದಲ್ಲಿ ಪಾತ್ರವಹಿಸಲು ರಾಮಕೃಷ್ಣ ಹೆಗಡೆಯವರನ್ನು ಕೇಳಿದ್ದರೆಂದೂ ಅವರು ಒಪ್ಪಲಿಲ್ಲವಾದ್ದರಿಂದ ಆ ಪಾತ್ರಕ್ಕೆ ಅನಂತ್‌ನಾಗ್ ಅವರನ್ನು ಆಯ್ದುಕೊಂಡರೆಂದೂ ತಿಳಿದುಬರುತ್ತದೆ. ಚಿತ್ರ ಬಿಡುಗಡೆಯಾದಾಗ ಅದರಲ್ಲಿರುವ ಮುಖ್ಯವಾದ ಕೆಲವು ಬದಲಾವಣೆಗಳು ಪ್ರೇಕ್ಷಕರನ್ನು ಥಟ್ಟನೆ ಹಿಡಿಯಲಿಲ್ಲ. ಹಂಸಲೇಖಾ ಸಂಗೀತವಂತೂ ವಿಪರೀತ ಆಕ್ಷೇಪಕ್ಕೆ ಗುರಿಯಾಯಿತು. ಆದರೆ ಒಂದು ವಾರದ ಒಳಗೇ ಎಲ್ಲ ತಲೆಕೆಳಗಾಯಿತು. ಹಾಡುಗಳು ತುಂಬ ಜನಪ್ರಿಯವಾದವು. 'ಮಲ್ಲಿಗೆ ಪ್ರಾಣವ ನೀಡಿದ ಗಂಡು ನೀನಾದೆ...' ಗೀತೆ, ಚಿತ್ರದ ನಾಯಕಿಯ ಅಸಹಾಯಕ ಸ್ಥಿತಿ, ನೆರವಾದ ನಾಯಕನ ಹಿನ್ನೆಲೆಯಲ್ಲಿ ಸಾಂದರ್ಭಿಕವಾಗಿ ಮೂಡಿಬಂದಿತ್ತು. ಮೂಲದ 'ಅಂಕುಶಂ' ಚಿತ್ರದಲ್ಲಿಯ ಹಾಗೆಯೇ ಇಲ್ಲಿಯೂ ರಾಮಿರೆಡ್ಡಿ ಖಳನಾಗಿ ನಟಿಸಿದ್ದರು. ನಾಯಕ ಪಾತ್ರದ ರವಿಚಂದ್ರನ್ ಪ್ರಸಾಧನವೂ ಸಹ ಬೇರೆಯಾಗಿತ್ತು. ಅವರೆಗಿನ ಅವರ ಚಿತ್ರಗಳಲ್ಲಿಯ ಯಾವ ಶೈಲಿಯೂ ಇಲ್ಲಿ ಇರಲಿಲ್ಲ. ಅದ್ದೂರಿ ಸೆಟ್‌ಗಳಾಗಲೀ, ಅವರ ಶೈಲಿಯ ಹಾಡುಗಳಾಗಲೀ ಇರಲಿಲ್ಲ. ಸಹಜವಾದ ಲೊಕೇಷನ್‌ಗಳಲ್ಲಿ ಚಿತ್ರಿಸಲಾಗಿತ್ತು. ಚಿತ್ರ ನಿಧಾನವಾಗಿ ಜನಮೆಚ್ಚುಗೆ ಪಡೆಯಿತು.

ಡಿ.ರಾಜೇಂದ್ರಬಾಬು ಭವಾನಿ ಕ್ರಿಯೇಷನ್ಸ್‌ನ ಎನ್.ಕೆ.ನಾರಾಯಣ್, ಎನ್.ನರಸಿಂಹಯ್ಯ ಅವರಿಗೆ ನಿರ್ದೇಶಿಸಿದ ಚಿತ್ರ 'ಚಕ್ರವರ್ತಿ'. ಹಿರಿಯ ದಂಪತಿಗಳಾಗಿ, ಹೆತ್ತವರಾಗಿ ಲೋಕನಾಥ್-ಪಂಢರಿಬಾಯಿ ಅಭಿನಯಿಸಿದ್ದರು. ಅಂಬರೀಷ್-ಕರಿಷ್ಮಾ, ಅಲ್ಲದೆ ಪ್ರಕಾಶ್ ರೈ, ಸುಧೀರ್, ಸುದರ್ಶನ್, ವಜ್ರಮುನಿ, ದೇವರಾಜ್ ಮೊದಲಾದ ಖಳರ ದಂಡೇ ಇತ್ತು. ತಾನು ಮಾಡದ ತಪ್ಪಿಗೆ ಕಳ್ಳನೆಂಬ ಆಪಾದನೆ ಹೊತ್ತು ಬೇಸರದಿಂದ ಮುಂಬೈ ಸೇರಿ ಆಕಸ್ಮಿಕ ಘಟನೆಗಳಿಂದಾಗಿ ಭೂಗತ ಜಗತ್ತಿನ 'ಚಕ್ರವರ್ತಿ'ಯಾಗಿ ಬಿಡುತ್ತಾನೆ. ಎಲ್ಲವನ್ನು ಬಿಟ್ಟುಕೊಟ್ಟು ತಾನು ಕಳುಹಿಸಿದ ಆರ್ಥಿಕ ನೆರವಿನಿಂದ ತನ್ನ ಜನ ಸುಖವಾಗಿರಬಹುದೆಂದು ಭಾವಿಸಿ ಊರಿಗೆ ಬಂದರೆ ಇಲ್ಲಿ ಅನ್ಯಾಯದ ಪರಮಾವಧಿ.. ಒಳ್ಳೆನೆಂದರೂ ನೀತಿ ಹೇಳಿದ ತಂದೆಯೇ ದಂಡ ಎತ್ತಿಕೋ ಎನ್ನುವಂಥ ಸ್ಥಿತಿ. ಮತ್ತೆ ವೈರಿಗಳನ್ನು ಸದೆ ಬಡಿಯುವುದು. ಈ ಚಿತ್ರದಲ್ಲಿ ಮುಂಬೈನ ಕೊಳೆಗೇರಿ, ಅಲ್ಲೊಬ್ಬ ಮುಸ್ಲಿಂ ಬಾಂಧವ, ಅವನ ಮಗಳು ಈ ನಾಯಕನನ್ನು ಪ್ರೀತ್ಯಾದರ ತೋರಿ ಭಾವನಾತ್ಮಕವಾಗಿ ಕಟ್ಟಿಹಾಕುವ ಚಿತ್ರಣವಿತ್ತು. ಆ ಮುಸ್ಲಿಂ ಬಾಂಧವನ ಪಾತ್ರದಲ್ಲಿ ಟಿ.ಎನ್.ಬಾಲಕೃಷ್ಣ ಚೆನ್ನಾದ ಅಭಿನಯ ನೀಡಿದ್ದರು. ಆತನ ಮಗಳಾಗಿ ಅಪರ್ಣಾ ಇದ್ದರು. ಹಿಂದಿ ಛಾಯೆಯಂತಿದ್ದರೂ ಪಾತ್ರಧಾರಿಗಳಿಗೆ ಹೆಚ್ಚು ಅವಕಾಶವಿದ್ದ ಚಿತ್ರ.

ತಾರೆ ಮಾಲಾಶ್ರೀ ಜನಪ್ರಿಯತೆಯ ಭರಾಟೆಯಲ್ಲಿ ಆಕೆಯೊಂದಿಗೆ ನಟಿಸುವ ಆಸೆ ಇಟ್ಟುಕೊಂಡವರೊಬ್ಬರು ಎಷ್ಟು ಖರ್ಚಾದರೂ ಸರಿಯೇ ತಾನೊಂದು ಚಿತ್ರ ನಿರ್ಮಿಸಿ ಆಕೆಯೊಂದಿಗೆ ನಟಿಸಿಯೇ ತೀರುತ್ತೇನೆಂದು ನುಗ್ಗಿದರು. ಎಸ್.ಉಮೇಶ್ ನಿರ್ದೇಶನದಲ್ಲಿ 'ರಾಜಾ ಕೆಂಪು ರೋಜಾ' ತೆರೆಗೆ ಬಂದಿದ್ದು ಹೀಗೆ. ರವಿರಾಜ್ ಚಿತ್ರಿಕೆಗೊಂದರಂತೆ ಪೋಷಾಕು ಧರಿಸಿ ಮಾಲಾಶ್ರೀ ಅವರೊಂದಿಗೆ ನರ್ತಿಸಿದರು. ಆಕೆಯ ಲವಲವಿಕೆ, ಲೀಲಾಜಾಲವಾದ ಹೆಜ್ಜೆಯ ಗತಿಯ ಜೊತೆಗೆ ಅಡಿ ಇಡಲಾಗದೆ ತಡವರಿಸಿದ್ದರು. ನೀರಿನಂತೆ ಖರ್ಚು ಮಾಡಿ ಚಿತ್ರ ತೆರೆಗೆ ತಂದದ್ದೇ ದೊಡ್ಡ ಸಾಹಸ. ಆಕೆ ನಿಜಕ್ಕೂ ಸರಾಗವಾಗಿ ನಟಿಸುವುದರಿಂದ, ಪುಟಿವ ಉತ್ಸಾಹದಿಂದ, ಭಾವ ಭಂಗಿಯಲ್ಲಿದ್ದ ಸುಭಗತೆಯಿಂದ ಅವರೆಗೆ ಇದ್ದ ಸಾಂಪ್ರದಾಯಿಕ ಚೌಕಟ್ಟನ್ನು ಮುರಿದು ಹೊರಬಂದು ತನ್ನತನ ತೋರಿಸಿದರು. ಆದು ಎಲ್ಲರಿಗೂ ಇಷ್ಟವಾಗಿತ್ತು. ಆಕೆಯ ಶರೀರಕ್ಕೆ ಆ ಬಾಗು, ಬಳುಕು, ಫ್ಲೆಕ್ಸಿಬಲಿಟಿ ಇದರೆ, ಆಕೆಯ ಶಾರೀರಕ್ಕೆ ಕಂಠದಾನ ಕಲಾವಿದೆ ಸರ್ವಮಂಗಳಾ ಜೀವ ತುಂಬಿಬಿಡುತ್ತಿದ್ದರು. ಮಾಲಾಶ್ರೀ ಯಶಸ್ಸಿನ ಹಿಂದೆ ಸರ್ವಮಂಗಳಾರ ಪಾತ್ರ ಬಹಳಷ್ಟಿದೆ. ದೀರ್ಘಕಾಲದ ಮೌನದ ನಂತರ ಮರಳಿ ಬಂದಾಗ ಸರ್ವಮಂಗಳಾ ಕೂಡಾ ವೈಯಕ್ತಿಕವಾಗಿ ಬಹಳ ನೊಂದಿದ್ದರು. ಆಪಾದನೆ, ಕೋರ್ಟು, ಕೇಸು, ಅನಾರೋಗ್ಯ, ಮನೆಯ ಸಂಕಟಗಳು. ಮಾಲಾಶ್ರೀ ಆಕೆಯ ಮನೆಗೇ ಹೋಗಿ ವಿಧ ವಿಧವಲ್ಲಿ ಮನವೊಲಿಸಿದರೂ ಆಕೆ ಮತ್ತೆ ಕಂಠದಾನ ಮಾಡುವ ಸ್ಥಿತಿಯಲ್ಲೇ ಇರಲಿಲ್ಲ. 'ನನ್ನ ವೃತ್ತಿ ಜೀವನಕ್ಕೆ ಇದೊಂದು ದೊಡ್ಡ ಪೆಟ್ಟು'' ಎಂದು ನೊಂದುಕೊಂಡರು ಮಾಲಾಶ್ರೀ. ಕನ್ನಡ ಚಿತ್ರರಂಗದಲ್ಲಿ ಮಾಲಾಶ್ರೀ ಜನಪ್ರಿಯತೆ, ಸರ್ವಮಂಗಳಾರ ಪ್ರಕರಣದಲ್ಲಿ ಆದ ಪರಿಳಿತ ವಿಷಾದನೀಯ ಸಂಗತಿಗಳು.

ಕನ್ನಡ ಚಿತ್ರರಂಗದಲ್ಲೂ ಹೆಸರಾದ ಕಲಾವಿದೆ ಜಯಪ್ರದಾ ಹಿಂದಿ ಚಿತ್ರರಂಗದಲ್ಲೂ ಅಷ್ಟೇ ಹೆಸರಾದವರು. ಸತ್ಯಜಿತ್ ರಾಯ್ ಆಕೆಯನ್ನು ಮೆಚ್ಚಿದ್ದರು. ಜಯಪ್ರದಾ ಜನಪ್ರಿಯ ಹಿಂದೀ ನಟಿಯರಿಗೆ ಸರಿಯಾದ ಸ್ಪರ್ಧೆ ಕೊಟ್ಟವರು. ಆಕೆ ಶ್ರೀಕಾಂತ ನಹತಾ ಅವರನ್ನು ವಿವಾಹವಾದ ಮೇಲೆ ಉಕ್ಕುವ ಹಾಲು ಕೆಳಗಿಳಿದಂತೆ ಕುಸಿದಿತ್ತು. ಈ ಮಧ್ಯೆ ಕನ್ನಡದಲ್ಲಿ ಆಕೆಯ ಪತಿ ನಿರ್ದೇಶಿಸಿದ 'ಏಕಲವ್ಯ'' ಚಿತ್ರದಲ್ಲಿ ಅಭಿನಯಿಸಿದರು. ರಾಜಕುಮಾರ್ ವಿನಾ ಬೇರೆ ಯಾವ ನಾಯಕನೊಂದಿಗೂ ನಟಿಸುವುದಿಲ್ಲ ಎಂದವರು ಅಂಬರೀಷ್‌ಗೆ ನಾಯಕಿಯಾದರು. ಅಂಬರೀಷ್ ಆ ಕುಟುಂಬದೊಡನೆ ಆಪ್ತಸ್ನೇಹಿತನಾಗಿ ಹತ್ತಿರವಾಗಿದ್ದರು. ಸ್ನೇಹವೇ ರಾಜಿಯಾಗಲು ಕಾರಣವಾಯಿತು. ಈ ಚಿತ್ರದ ಕಥೆಯೂ ವಿಶೇಷವಾಗಿಯೇ ಇತ್ತು. ಇನ್ಸ್‌ಪೆಕ್ಟರ್ ಪಾತ್ರದ ಅಂಬರೀಷ್



(ಚಿತ್ರ ೧೬೦) 'ಬಾರೇ ನನ್ನ ಮುದ್ದಿನ ರಾಣಿ' ಚಿತ್ರದಲ್ಲಿ ಸರೋಜಾಶ್ರೀಶೈಲನ್, ಮಹಾಲಕ್ಷ್ಮೀ, ಲೋಕೇಶ್, ಆಶಾಲತಾ, ಮೈಸೂರು ಲೋಕೇಶ್ ಮತ್ತು ಸದಾಶಿವ ಬ್ರಹ್ಮಾವರ್

ಏನೇ ಪ್ರಯತ್ನಿಸಿದರೂ ಗೋಮುಖ ವ್ಯಾಘ್ರನಂತಿದ್ದ ಮಹ್ಪನನ್ನು ಹಿಡಿಯಲಾಗಲಿಲ್ಲ. ನಟ ಗಂಗಾಧರ್ ಅವರನ್ನು ರೇಗಿಸಿ, ಹಂಗಿಸಿ ಸಿಟ್ಟಿನಲ್ಲಿ ತನ್ನನ್ನೇ ಕೊಲೆ ಮಾಡುವಂತೆ ನಡೆದುಕೊಂಡ ಶ್ರೀನಾಥ್ ಪಾತ್ರ ತಾನೇ ಸತ್ತು ಸಾವಿಗೆ ಸಾಕ್ಷಿಗಳನ್ನು ಒದಗಿಸುತ್ತದೆ. ಜ್ಯೂಡೋ ರತ್ನಂ ಸಾಹಸ ಸಂಯೋಜಿಸಿದ್ದಾರೆ. ಸಂಗೀತರಾಜಾ ಸಂಗೀತದಲ್ಲಿ ಕೆಲವು ಗೀತೆಗಳು ಉತ್ತಮವಾಗಿದ್ದವು. ಅದರಲ್ಲೂ ಹಿಂದಿಯ 'ಜುಮ್ಮಾ ಜುಮ್ಮ ದೇದೇ...' ರೀತಿಯ 'ಮುತ್ತು ಮುತ್ತು ಈಗ....' ಗೀತೆ ಜನಪ್ರಿಯವಾಗಿತ್ತು.

ಪ್ರತಿಭಾದೇವಿ ಅವರಿಗಾಗಿ ವಿ.ಸೋಮಶೇಖರ್ ನಿರ್ದೇಶಿಸಿದ 'ಪ್ರತಾಪ್'ನಲ್ಲಿ ಅರ್ಜುನ್‌ಸರ್ಜಾ-ಮಾಲಾಶ್ರೀ ಜೋಡಿಯಿತ್ತು. ಪ್ರೇಮ ತ್ರಿಕೋನದ ಕಥೆ. ಆದರೆ ಇಡೀ ಕನ್ನಡ ಚಿತ್ರರಂಗವೇ ಇದೆಯೋ ಎನ್ನುವ ಹಾಗೆ ಭಾರಿ ತಾರಾಗಣವೇ ಭಾಗವಹಿಸಿತ್ತು. ಕಾಡುಜನರ ಸಹವಾಸ, ಕಾಡು ಹುಡುಗಿಯ ಪ್ರೀತಿ ಇತ್ಯಾದಿಗಳಿಗಾಗಿ ಗಿರಿಜನರ ಪೋಷಾಕು, ಜನಪದ ಗೀತೆ-ನೃತ್ಯ ಬಳಸಿದ್ದರು. ಆದರೆ ತೆಲುಗು ಮಿಶ್ರಿತ. ಹಂಸಲೇಖಾ ಸಂಗೀತದಲ್ಲಿ ಹಾಡುಗಳು ಚೆನ್ನಾಗಿದ್ದವು. 'ಪ್ರೇಮ ಬರಹಾ ಕೋಟಿ ತರಹಾ...', 'ಈ ಜೋಗದ ಜಲಪಾತ...', 'ತಂಬೂರಯ್ಯ ತಂತಿ ಮೀಟಯ್ಯ...' ಗೀತೆಗಳು ನೆನಪಿನಲ್ಲುಳಿದವು. ಕಾಡಿನ ಹುಡುಗಿಯಾಗಿ ಮಾಲಾಶ್ರೀ ಅಭಿನಯ ಗಮನ ಸೆಳೆಯಿತು.

ಸಿದ್ದಲಿಂಗಯ್ಯ ನಿರ್ದೇಶಿಸಿದ 'ಬಾರೇ ನನ್ನ ಮುದ್ದಿನ ರಾಣಿ' ಶಶಿಕುಮಾರ್-ಮಹಾಲಕ್ಷ್ಮೀ ಅಭಿನಯದ ಚಿತ್ರ. ವರದಕ್ಷಿಣೆ ವಿರೋಧಿಸುವ



(ಚಿತ್ರ ೧೬.೧) 'ಪಂಚಮವೇದ' ಚಿತ್ರದಲ್ಲಿ ರಮೇಶ್ ಮತ್ತು ಸುಧಾರಾಣಿ

ವಿದ್ಯಾವಂತೆ ಗಂಡನು ಬಯಸುವ ಷಡ್ಗುಣಗಳನ್ನು ಅವೆಷ್ಟು ಅರ್ಥಹೀನ ಎಂದು ವಿಡಂಬನೆ ಮಾಡುವ ಗೀತೆ, ಆ ದೃಶ್ಯಗಳ ಸಂಯೋಜನೆ ಎರಡೂ ಚೆನ್ನಾಗಿತ್ತು. ಶ್ರೀಮಂತವಾದ ಚಿತ್ರಿಕೆಗಳು. ಹಾಡುಗಳಲ್ಲೂ ಹಾಸ್ಯ-ವಿಡಂಬನೆ ಇತ್ತು. ಒಟ್ಟು ವ್ಯವಸ್ಥೆಯನ್ನು ವಿಡಂಬಿಸುವ ಬಗೆಯೇ ನಿರ್ದೇಶಕರ ವ್ಯಂಗ್ಯ ನೋಟವನ್ನು ಎತ್ತಿ ಹಿಡಿದಿತ್ತು.

ಆದರೆ ಚಿತ್ರದಲ್ಲಿ ಕನ್ಯಾಪರೀಕ್ಷೆಯ ಪ್ರಸಂಗ ಮುಜುಗರ ತರುವಂತಿತ್ತು. ಆ ಬಗ್ಗೆ ಆಕ್ಷೇಪಗಳೂ ಎದ್ದವು. ಭಾವನೆಗಳನ್ನೆಲ್ಲ ಹಾಗೇ ಹರಡುವುದಕ್ಕೂ, ಅದನ್ನೇ ಸೂಚ್ಯವಾಗಿ ಹೇಳುವುದಕ್ಕೂ ವ್ಯತ್ಯಾಸವಿದೆ. ಆದರೆ ಇಡೀ ಚಿತ್ರವೇ ವಿಡಂಬನೆಯಾಗಿದ್ದುದರಿಂದ 'ಅತಿ'ಗಳನ್ನು ಸಹಿಸುವುದು ಆ ಶೈಲಿಯ ದೃಷ್ಟಿಯಿಂದ ಅನಿವಾರ್ಯ.

ವಿ.ಎಸ್.ಎನ್.ಸಂಸ್ಥೆಯ ಸ್ವಾಮಿನಾಥನ್ ಅದ್ಧೂರಿ ಚಿತ್ರಗಳು, ಅದರಲ್ಲೂ ಭಕ್ತಿಪ್ರಧಾನವಾದ ದೈವ ಮಹಿಮೆ ಹೇಳುವಂಥ ಚಿತ್ರ ನಿರ್ಮಾಣಕ್ಕೆ ಹೆಸರಾದವರು. ಅವರು ನಿರ್ಮಿಸಿದ 'ಶಬರಿಮಲೈ ಸ್ವಾಮಿ ಅಯ್ಯಪ್ಪ' ದೊಡ್ಡದೊಂದು ಸಂಚಲನವನ್ನೇ ಮಾಡಿತು. ಸೊಗಸಾದ ಭಾರಿ ಸೆಟ್‌ಗಳು, ಅಲ್ಲಿಗೆ ಅಗತ್ಯವಾದ ಗುಣಾಕಾರದಲ್ಲಿ ಅರಮನೆ, ಕೈಲಾಸಾದಿ ಅನೇಕ ಸ್ಥಳಗಳನ್ನು ರಮ್ಯಲೋಕದಂತೆ ನಿರ್ಮಿಸಿದರು ಕಲಾನಿರ್ದೇಶಕ ನಾಗರಾಜರಾವ್. ಕಂಠೀರವ ಸ್ಟುಡಿಯೋಕ್ಕೆ ಈ ಸೆಟ್‌ಗಳನ್ನು ನೋಡಲೆಂದೇ ಜನ ಹೋಗುತ್ತಿದ್ದರು. ರೇಣುಕಾಶರ್ಮ ಶ್ರದ್ಧೆಯಿಂದ ನಿರ್ದೇಶನ ಮಾಡಿದರು. ಶ್ರೀಧರ್-ಸುಧಾರಾಣಿ ಶಿವ-ಪಾರ್ವತಿಯಾಗಿ ಕೈಲಾಸದಲ್ಲಿ ನರ್ತಿಸುವ ಸನ್ನಿವೇಶಕ್ಕೆ ಬಳಸಲಾದ 'ಶಂಕರ ಶಶಿಧರ ಗಜ ಚರ್ಮಾಂಬರ ಗಂಗಾಧರ ಹರನೇ...' ಗೀತೆ ಸೊಗಸಾಗಿತ್ತು.

ಈ ಚಿತ್ರದಲ್ಲಿ ಎಲ್ಲ ತಾರೆಯರೂ ಇದ್ದರು. ಶ್ರೀಲಲಿತಾ ಮಹಿಷಿಯಾಗಿ ಅಪರೂಪದ ಮೇಕಪ್‌ನಲ್ಲಿದ್ದರು. ಸೊಗಸಾಗಿ ಅಭಿನಯಿಸಿದ್ದರು. ಎಲ್ಲ ಪಾತ್ರಧಾರಿಗಳೂ ಒಂದು ಸವಾಲಿನಂತೆ ಅಭಿನಯಿಸಿದ್ದರು. ಅವರೆಲ್ಲರಲ್ಲೂ ಕಾಯಕ ನಿಷ್ಠೆಗಿಂತ ಮಿಗಿಲಾಗಿ ಭಕ್ತಿಯ ಅರ್ಪಣಾಭಾವವೂ ಇತ್ತು. ಅದೊಂದು ಯಶಸ್ವಿ ಭಕ್ತಿ ಚಿತ್ರ.

'ಪೋಲಿ ಕಿಟ್ಟಿ' ಕೆ.ವಿ.ಜಯರಾಂ ನಿರ್ದೇಶನದ ಕಾಶೀನಾಥ್ ಚಿತ್ರ. ಎಂದಿನಂತೆ ಕಾಶೀನಾಥ್‌ಗಾಗಿ ಕೊಂಚ ಹಾಸ್ಯ ಲೈಂಗಿಕ ಅತೃಪ್ತಿ ಇತ್ಯಾದಿಗಳೇ ಹೂರಣ. ಬಹಳ ದಿನದ ನಂತರ ಕನ್ನಡ ಚಿತ್ರದಲ್ಲಿ ಮಂಜುಳಾಶರ್ಮ, ಕಾಶೀನಾಥ್ ಜೋಡಿಯಾಗಿ ಅಭಿನಯಿಸಿದ್ದೂ ವಿಶೇಷ. ಕಾಶೀನಾಥ್ ಎರಡು ಬಗೆಯ ಪಾತ್ರಗಳಲ್ಲಿದ್ದರು. ಹಾಗೆಂದು ಮಾಸ್ಕ್ ಶಾಟ್ಸ್‌ನ ಅವಶ್ಯವಿರದ ಹಾಗೆ ಚಿತ್ರಕಥೆ ಹೆಣೆಯಲಾಗಿತ್ತು. ಕೆ.ವಿ.ಜಯರಾಂ ಅವರೇ ಕಥೆ-ಚಿತ್ರಕಥೆ ನಿರ್ವಹಿಸಿದ್ದರಿಂದ ಅವೆಲ್ಲ ಸಾಧ್ಯವಾಗಿತ್ತು. ಸಂಗೀತರಾಜಾ ಅವರ ಸಂಗೀತವೂ, ಒಂದೆರಡು ಹಾಡುಗಳೂ ಜನಪ್ರಿಯವಾದವು. ಉಮಾಶ್ರೀ ಅಭಿನಯ ಶ್ರೇಷ್ಠವಾಗಿತ್ತೆಂಬುದನ್ನು ನೆನೆಯಬೇಕು.

ಎಂ.ರಾಮನ್ ನಿರ್ಮಿಸಿದ ಹಾಸ್ಯ ಚಿತ್ರ 'ಎದುರು ಮನೆ ಮೀನಾ' ಪತ್ರಕರ್ತ ಎ.ಬಾಲಕೃಷ್ಣ ನಿರ್ದೇಶಿಸಿದ ಪ್ರಥಮ ಚಿತ್ರ. ನಿರೂಪಣೆ ಅಷ್ಟಿಷ್ಟು ಭಿನ್ನತೆ ಹೊಂದಿದ್ದುದು ಹಾಗೂ ನಾಯಕಿಯರಾದ ಉಮಾಶ್ರೀ ಮತ್ತು ಅಭಿನಯ ಪರಸ್ಪರ ಚುಂಬಿಸಿದ್ದು ಚಿತ್ರದ ವಿಶೇಷ.

ತೀವ್ರವಾದ ತಿರುವುಗಳನ್ನು, ಭಾವುಕತೆಯನ್ನು ಹೊಂದಿದ್ದ 'ಪಂಚಮವೇದ' ಅಪ್ಪಟ ಪ್ರೇಮದ ಚಿತ್ರ. ನಿರ್ದೇಶಕ ಪಿ.ಹೆಚ್.ವಿಶ್ವನಾಥ್ ಪುಟ್ಟಣ್ಣ ಕಣಗಾಲ್ ಶಿಷ್ಯರಲ್ಲಿ ಹೆಚ್ಚಿನ ಪರಿಶ್ರಮ ಉಳ್ಳವರೆಂಬುದನ್ನು ಚಿತ್ರದ ನಿರೂಪಣೆ ಹಾಗೂ ಯಶಸ್ಸು ತೋರಿಸಿಕೊಟ್ಟಿತು. ಸ್ನೇಹಿತನ ಪರವಾಗಿ ಅವನಿಗಿಷ್ಟವಿಲ್ಲದ ಹೆಣ್ಣನ್ನು ನೋಡುವ ಶಾಸ್ತ್ರ ಮುಗಿಸಲಷ್ಟೇ ಹಳ್ಳಿಗೆ ಬರುವ ನಾಯಕ ಹುಡುಗಿಯಲ್ಲಿ ಅನುರಕ್ತನಾಗುತ್ತಾನೆ. ಇಬ್ಬರ ನಡುವಿನ ಗಾಢಪ್ರೇಮ ನಾಟಕೀಯವಾಗಿ ಪರಾಕಾಷ್ಠೆಯನ್ನು ಮುಟ್ಟಿದಾಗ ನಿಜವಾಗಿ ಬರಬೇಕಾಗಿದ್ದ ಗಂಡು ಹಾಜರಾಗುತ್ತಾನೆ. ಗುಟ್ಟು ರಟ್ಟಾಗಿ ರಾದ್ಧಾಂತವಾಗುತ್ತದೆ. ಆದರೂ ಹಿರಿಯರು ಹಟ ಹಿಡಿದು ನಿಜವಾದ ಗಂಡಿನೊಂದಿಗೆ ಬಲವಂತವಾಗಿ ಮದುವೆ ಮಾಡುತ್ತಾರೆ. ನಾಯಕಿ ಮದುವೆಯಾದ ರಾತ್ರಿಯೇ ಮನೆ ಬಿಟ್ಟು ಓಡಿ ಪ್ರೇಮಿಯನ್ನು ಕೂಡಿಕೊಳ್ಳುತ್ತಾಳೆ. ಗಂಡ ಕಟ್ಟಿದ ತಾಳಿಯನ್ನು ಕಿತ್ತು ಪ್ರೇಮಿಯಿಂದ ತಾಳಿಯನ್ನು ಕಟ್ಟಿಸಿಕೊಳ್ಳುತ್ತಾಳೆ. ಅಂತ್ಯದಲ್ಲಿ ಊರವರಿಂದ ಹೊಡೆಸಿಕೊಂಡು ಅರೆಜೀವವಾಗಿ ಬಿದ್ದಿದ್ದ ಪ್ರೇಮಿಯ ಮೇಲೆ ಸೀಮೆಎಣ್ಣೆ ಸುರಿದು, ತಾನೂ ಸುರಿದುಕೊಂಡು, ಬೆಂಕಿ ಹಚ್ಚಿಕೊಂಡು ಸಾಯುತ್ತಾಳೆ. ಕಥೆಯನ್ನು ಪಿ.ಹೆಚ್.ವಿಶ್ವನಾಥ್ ಭಾವುಕ ಸನ್ನಿವೇಶಗಳ ಮೂಲಕ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಹೆಣ್ಣೊಬ್ಬಳು ಶಾಸ್ತ್ರಬದ್ಧವಾಗಿ ಕಟ್ಟಲಾದ ತಾಳಿಯನ್ನು ಕಿತ್ತು, ಅದನ್ನೇ ಪ್ರೇಮಿಯಿಂದ ಕಟ್ಟಿಸಿಕೊಳ್ಳುವುದು ನಮ್ಮ ಸಾಮಾಜಿಕ ಸಂದರ್ಭದಲ್ಲಿ ಹೊಸದಾಗಿತ್ತು. ಸಾಮಾನ್ಯವಾಗಿ ನಮ್ಮ ವಾಣಿಜ್ಯ ಚಿತ್ರ ತಯಾರಕರಿಗೆ ಇದು ಆ್ಯಂಟಿ ಸೆಂಟಿಮೆಂಟ್. ಸಮಾಜ ಸುಲಭದಲ್ಲಿ ಒಪ್ಪಿಕೊಳ್ಳಲಾರದ ಸನ್ನಿವೇಶವನ್ನು ದಿಟ್ಟತನದಿಂದ ತೆರೆಗೆ ತಂದರು ವಿಶ್ವನಾಥ್. ಕಲಾವಿದರ ಸಮರ್ಪಕ ಆಯ್ಕೆ, ಪಾತ್ರ ಪೋಷಣೆ, ಪರಿಸರವನ್ನು ಬಳಸಿಕೊಂಡ ರೀತಿ, ದ್ವಂದ್ವಾರ್ಥ-ಮಸಾಲೆಗಳಿಲ್ಲದ್ದು ಚಿತ್ರವನ್ನು ಅಚ್ಚುಕಟ್ಟುಗೊಳಿಸಿತ್ತು. ರಮೇಶ್, ಸುಧಾರಾಣಿ ಉತ್ತಮವಾಗಿ ನಟಿಸಿ ತಮ್ಮ ಪಾತ್ರಗಳಿಗೆ ಜೀವ ತುಂಬಿದ್ದರು. ಸುಧಾರಾಣಿ ತಂದೆಯ ಪಾತ್ರದಲ್ಲಿ ಮುಂದೆ ಕನ್ನಡದ ಉತ್ತಮ ಪೋಷಕ ನಟರಲ್ಲೊಬ್ಬರಾದ ಕೃಷ್ಣೇಗೌಡರ ಅಭಿನಯ ನೈಜವಾಗಿತ್ತು. ೧೯೮೯-೯೦ರ ಮೂರು ರಾಜ್ಯ ಪ್ರಶಸ್ತಿಗಳನ್ನು ಗಳಿಸಿದ ಚಿತ್ರ ಸುಧಾರಾಣಿಯವರಿಗೆ ಅತ್ಯುತ್ತಮ ನಟಿ, ಟಿ.ಎಸ್.ಸೀತಾರಾಂರವರಿಗೆ ಅತ್ಯುತ್ತಮ ಸಂಭಾಷಣೆ, ಸುರೇಶ್ ಅರಸ್ ಅವರಿಗೆ ಅತ್ಯುತ್ತಮ ಸಂಕಲನದ ಗೌರವ ತಂದುಕೊಟ್ಟಿತು. ಈ ಚಿತ್ರ ನಾಯಕಿ ಸುಧಾರಾಣಿಯ ಮೂಲಹೆಸರಾದ 'ರುಕ್ಮಿಣಿ' ಹೆಸರಿನಲ್ಲಿ ತೆಲುಗಿನಲ್ಲಿ ರೀಮೇಕ್ ಆಗಿ ಕನ್ನಡಕ್ಕಿಂತ ಯಶಸ್ವಿಯಾಯಿತು. ತಮಿಳಿಗೆ ಕೂಡ ಡಬ್ ಆಯಿತು.

ಸುರೇಶ್ ಹೆಬ್ಳೀಕರ್ ಅವರ 'ಪ್ರಥಮ ಉಷಾಕಿರಣ' ಮಕ್ಕಳನ್ನು ಆಧರಿಸಿದ್ದ ಮನೋವೈಜ್ಞಾನಿಕ ಚಿತ್ರ. ಶಿವಮೊಗ್ಗೆಯ ಮನೋವೈದ್ಯ ಅಶೋಕ್ ಈ ಚಿತ್ರ ನಿರ್ಮಿಸಿದರು. ಎಂ.ಪಿ.ಪ್ರಕಾಶ್, ಗಿರೀಶ್ ಕಾರ್ನಾಡ್ ಮೊದಲಾದವರ ಅಭಿನಯವಿತ್ತು. 'ಹಂಸಗೀತೆ' ಖ್ಯಾತಿಯ ಎಂ.ವಿ.ನಾರಾಯಣರಾವ್ ತಿರುವು ಕೊಡುವ ಪಾತ್ರವೊಂದರಲ್ಲಿದ್ದರು. ಹೆತ್ತವರಿಗೆ ಮಕ್ಕಳ ಮನಸ್ಥಿತಿಯ ಬಗ್ಗೆ ತಿಳಿವಳಿಕೆ ಕೊಡುವ



(ಚಿತ್ರ ೧೬.೨) 'ಪ್ರಥಮ ಉಷಾ ಕಿರಣ' ಚಿತ್ರದಲ್ಲಿ ಮಾ|ಧಮರುಗೇಂದ್ರ, ಗೀತಾ ಮತ್ತು ಸುರೇಶ್ ಹೆಬ್ಳೀಕರ್

ಈ ಚಿತ್ರಕ್ಕೆ ತೃತೀಯ ಅತ್ಯುತ್ತಮ ಚಿತ್ರ ಹಾಗೂ ಮಾಧವರುಗೇಂದ್ರನಿಗೆ ಶ್ರೇಷ್ಠ ಬಾಲನಟ ಪ್ರಶಸ್ತಿ ಬಂದಿತು.

ಕಡಿಮೆ ಬಜೆಟ್ಟಿನ 'ಶರೀಫ,' 'ಪಂಚಮವೇದ', 'ಪ್ರಥಮ ಉಷಾಕಿರಣ'ದಂಥ ಚಿತ್ರಗಳಿಗಿಂತ ಅದ್ದೂರಿ ವೆಚ್ಚ, ದೊಡ್ಡ ತಾರಾಬಳಗದ ಚಿತ್ರಗಳ ಬಗ್ಗೆ ಪ್ರೇಕ್ಷಕರಿಗೆ ಸಾಮಾನ್ಯವಾಗಿ ಹೆಚ್ಚಿನ ಕುತೂಹಲವಿರುತ್ತದೆ. ಇಂಥ ಚಿತ್ರಗಳಿಗೆ ಮಾಧ್ಯಮಗಳಿಂದ ಸಿಗುವ ಪ್ರಚಾರ, ಚಿತ್ರರಸಿಕರು ಆಡಿಕೊಳ್ಳುವ ಮಾತುಗಳು ಎಲ್ಲವೂ ವರದಾನ. ೧೯೯೦ರಲ್ಲಿ ಹೀಗೆ ಸುದ್ದಿಗಳನ್ನು ಸೃಷ್ಟಿಸುತ್ತಾ ಅಬ್ಬರಿಸಿದ ಎರಡು ಚಿತ್ರಗಳೆಂದರೆ 'ಮುತ್ತಿನ ಹಾರ', 'ಅಶ್ವಮೇಧ'. 'ಮುತ್ತಿನ ಹಾರ'ದ ಬಗ್ಗೆ ನಿರೀಕ್ಷೆ ಬೆಳೆಯುತ್ತಾ ಬಂದಿದ್ದಕ್ಕೆ ನಿರ್ದೇಶಕ ರಾಜೇಂದ್ರಸಿಂಗ್ ಬಾಬು ಸಂದರ್ಭ ಸಿಕ್ಕಾಗಲೆಲ್ಲಾ ಅವರ ಕಥೆಯ ಬಗ್ಗೆ ಹೇಳುತ್ತಿದ್ದುದು ಒಂದು ಕಾರಣ. ವೆಂ.ಮು.ಜೋಷಿಯವರ ೧೬ ಪುಟಗಳ ಸಣ್ಣಕಥೆಯನ್ನು ಶ್ರೇಷ್ಠ ಚಿತ್ರಕಥೆಯನ್ನಾಗಿ ರಚಿಸಿ ಇಟ್ಟುಕೊಂಡಿರುವುದಾಗಿಯೂ, ಅದು ತಮ್ಮ ಬಳಿ ಇರುವ ಮೂರು 'ಗೋಲ್ಡನ್ ಸ್ಕ್ರಿಪ್ಟ್'ಗಳಲ್ಲಿ ಒಂದೆಂದೂ ಅವರು ಹೆಮ್ಮೆಯಿಂದ ಬಣ್ಣಿಸುತ್ತಿದ್ದರು. ಉಳಿದ ಎರಡು 'ಹಗಲುಗನಸು' ಮತ್ತು 'ಯುದ್ಧ'.

ಶೂಟಿಂಗ್ ಸಂದರ್ಭದಲ್ಲಿ ವಿಷ್ಣು ತಲೆ ಬೋಳಿಸಿಕೊಂಡ ಚಿತ್ರಗಳು, ಸೆರೆ ಸಿಕ್ಕ ಖೈದಿಗೆ ಅವರು ನೀಡುತ್ತಿದ್ದ ಶಿಕ್ಷೆಯ ಮಟ್ಟ ಇವುಗಳನ್ನು ಕುರಿತ ಒಂದು ಚಿತ್ರ-ಲೇಖನ ದಿನಪತ್ರಿಕೆಗಳ ಸಿನಿಮಾ ಪುಟಗಳಲ್ಲಿ ವಿಜೃಂಭಿಸಿತು. ಈ ಎಲ್ಲ ಅಂಶಗಳೂ ಅಭಿಮಾನಿಗಳ/ಪ್ರೇಕ್ಷಕರ ಮನದಲ್ಲಿ ಅಪರಿಮಿತ ನಿರೀಕ್ಷೆ ಉಂಟುಮಾಡಿತ್ತು. ವಿಷ್ಣು ಅಭಿಮಾನಿಗಳು ಚಿತ್ರದಲ್ಲಿ ವಿಷ್ಣುವರ್ಧನ್ ತಮ್ಮ ಪಾತ್ರಕ್ಕಾಗಿ ತಲೆ ಬೋಳಿಸಿಕೊಂಡ ಕಾರಣಕ್ಕಾಗಿ 'ಮುತ್ತಿನಹಾರ' ಚಿತ್ರದ ಬಿಡುಗಡೆಯ ದಿನ ತಾವುಗಳೆಲ್ಲರೂ ತಲೆ ಬೋಳಿಸಿಕೊಂಡು ಚಿತ್ರ ನೋಡುವುದಾಗಿಯೂ ಘೋಷಿಸಿದ್ದರು. ಆದರೆ ಚಿತ್ರದ ಬಿಡುಗಡೆಯ ದಿನಾಂಕದ ಗೊಂದಲದಿಂದಾಗಿ ಅದು ಅಷ್ಟು ಸುದ್ದಿಯಾಗದೆ ಅಲ್ಲೊಬ್ಬ ಇಲ್ಲೊಬ್ಬ ಅಭಿಮಾನಿ ತಲೆ ಬೋಳಿಸಿಕೊಂಡು ಚಿತ್ರ ನೋಡಿದರು. ಪತ್ರಿಕೆಗಳಲ್ಲಿ ಬರುತ್ತಿದ್ದ ಪುಟಗಟ್ಟಲೆ ಜಾಹಿರಾತು, ಇಷ್ಟೆಲ್ಲ ಅಬ್ಬರದ ಪ್ರಚಾರ ಸಹಜವಾಗಿಯೇ ನೋಡುಗನಲ್ಲಿ ಕುತೂಹಲ ಕೆರಳಿಸಿತ್ತು; ನಿರೀಕ್ಷೆ ಅತಿಯಾಗಿಯೇ ಇತ್ತು. ಚಿತ್ರ ರಸಿಕರು ಚಿತ್ರದ ತುಂಬಾ ಬರೀ ಯುದ್ಧವೇ ತುಂಬಿರುತ್ತದೆ; ಸಾಹಸವೇ ಇರುತ್ತದೆ ಎಂದು ಭಾವಿಸಿದ್ದರು. ಆದರೆ ಚಿತ್ರದಲ್ಲಿ ಯುದ್ಧದ ದೃಶ್ಯಗಳು ಜನರ ನಿರೀಕ್ಷೆಯ ಪ್ರಮಾಣದಲ್ಲಿ ಇರಲಿಲ್ಲ. ಬಾಬು ಯುದ್ಧ ಒಬ್ಬ ವ್ಯಕ್ತಿಯ ವೈಯಕ್ತಿಕ ಬದುಕಿನಲ್ಲಿ ಏನೆಲ್ಲ ಕೋಲಾಹಲವನ್ನುಂಟು ಮಾಡಬಹುದು ಎಂಬುದನ್ನು ಚಿತ್ರಿಸಿದ್ದರು. ಕೊಡಗಿನಲ್ಲಿ ಪ್ರತಿ ಮನೆಯಿಂದ ಒಂದು ಗಂಡು ಮಗುವಾದರೆ ಆತ ದೇಶದ ರಕ್ಷಣೆಗೆ ಮುಡುಪು ಎಂಬ ಆಶಯ, ಹಂಸಲೇಖಾ ರಚಿಸಿದ ಕೊಡವ ಭಾಷೆ ಮಿಶ್ರಿತ ಹಾಡುಗಳು, ಜೈಸಲ್ಮೇರ್, ಶಿಮ್ಲಾ, ಕಾಶ್ಮೀರದ ಸುಂದರ ತಾಣಗಳು ಎಲ್ಲವೂ ಚೆನ್ನಾಗಿತ್ತು. ಸಾಹಸ ಪ್ರಧಾನ ಚಿತ್ರವೆಂದು ಬಂದ ಚಿತ್ರರಸಿಕರಿಗೆ ಇದೊಂದು ದುಃಖಾಂತ/ದುಃಖಪೂರಿತ ಚಿತ್ರವಾಗಿ ಕಂಡಾಗ ಸಹಜವಾಗಿಯೇ ಚಿತ್ರ ನಿರೀಕ್ಷಿತ ಗೆಲುವನ್ನು ಕಾಣಲಾಗಲಿಲ್ಲ.



(ಚಿತ್ರ ೧೬೩) 'ಮುತ್ತಿನಹಾರ' ಚಿತ್ರದಲ್ಲಿ ಸುಹಾಸಿನಿ, ಕಾವ್ಯ

ವಿಷ್ಣುವರ್ಧನ್

ಇವುಗಳ ನಡುವೆಯೂ ಬಾಬು ಪ್ರಯತ್ನದಲ್ಲಿ ಹಲವಾರು ಉತ್ತಮ ಅಂಶಗಳನ್ನು ಈ ಚಿತ್ರದಲ್ಲಿ ಗುರುತಿಸಬಹುದು. ಚಿತ್ರದ ಆರಂಭದ ದೃಶ್ಯವೇ ಒಂದು ಆಂಗ್ಲ ಚಿತ್ರ ನೋಡಿದ ಅನುಭವ ಮೂಡುವಂತೆ ಚಿತ್ರಿತವಾಗಿತ್ತು. ವಿಷ್ಣುವರ್ಧನ್ ಅಪ್ಪನ ಪಾತ್ರದಲ್ಲಿ ಅಭಿನಯಿಸಿದ್ದ ಕೆ.ಎಸ್.ಅಶ್ವತ್ಥ್ ನಟನೆ ಪ್ರಬುದ್ಧತೆಯಿಂದ ಕೂಡಿತ್ತು. ಅಭಿನಯ ಒಂದು ಮತ್ತೊಂದನ್ನು ಮೀರಿಸುವಂತಿತ್ತು. ಈ ಚಿತ್ರದಿಂದ ಪ್ರಕಾಶ್‌ರೈ, ರಾಮ್‌ಕುಮಾರ್ ಚಿತ್ರರಂಗ ಪ್ರವೇಶಿಸಿದರು. ಚಿತ್ರದ ಹಾಡುಗಳೂ ಚೆನ್ನಾಗಿದ್ದವು. ನಲವತ್ತರ ದಶಕದ ಚಿತ್ರಗಳಲ್ಲಿಯಂತೆಯೇ ಉಡುಪಿ ಜಯರಾಂ ನೃತ್ಯ ಸಂಯೋಜಿಸಿದ್ದರು. ಕೊಡವ ಭಾಷೆ ಮಿಶ್ರಿತ ಗೀತೆಯಿತ್ತು. ಬಾಲಮುರಳಿ ಕೃಷ್ಣ ಹಾಡಿದ್ದ ಋತುಮಾನವನ್ನು ಕುರಿತ ಗೀತೆಯೊಂದು ಅಂಥ ಹಾಡುಗಳ ಪರಂಪರೆಗೇ ನಾಂದಿ ಹಾಡಿತು. ಚಿತ್ರ ನಿರ್ದೇಶಿಸಿದ ರಾಜೇಂದ್ರಸಿಂಗ್ ಬಾಬು ಅವರ ಶ್ರದ್ಧೆಯನ್ನು ಗುರುತಿಸಿದ ರಾಜ್ಯ ಸರ್ಕಾರದ ಪ್ರಶಸ್ತಿ ಸಲಹಾ ಮಂಡಳಿಯ ಸದಸ್ಯರು ಇದಕ್ಕೆ ೧೯೯೦-೯೧ರ ಪ್ರಥಮ ಶ್ರೇಷ್ಠ ಚಿತ್ರ ಪ್ರಶಸ್ತಿ ನೀಡಿದರು. ಇದರೊಂದಿಗೆ ಶ್ರೇಷ್ಠ ಪೋಷಕ ನಟನೆಗಾಗಿ ಕೆ.ಎಸ್.ಅಶ್ವತ್ಥ್ ಅವರಿಗೆ, ಶ್ರೇಷ್ಠ ಛಾಯಾಗ್ರಹಣಕ್ಕಾಗಿ ಡಿ.ವಿ.ರಾಜಾರಾಂ ಅವರಿಗೆ ಪ್ರಶಸ್ತಿಗಳು ಲಭ್ಯವಾದವು.

ಎಸ್.ಶಂಕರ್ ನಿರ್ಮಾಣದಲ್ಲಿ ವಿಷ್ಣುವರ್ಧನ್ ಅಭಿನಯಿಸಿದ ಇದೇ ಅವಧಿಯ ಮತ್ತೊಂದು ಯಶಸ್ವಿ ಚಿತ್ರ 'ಮತ್ತೆ ಹಾಡಿತು ಕೋಗಿಲೆ'. ಇದು ಸದಭಿರುಚಿಯಿಂದ ಕೂಡಿದ ನಿರ್ಮಾಣವಾಗಿದ್ದು ಶತದಿನ ಪ್ರದರ್ಶನ ಕಂಡಿತು. 'ಕರುಣಾಮಯಿ' ಭಾರ್ಗವರ ಉತ್ತಮ ನಿರ್ದೇಶನದ ಚಿತ್ರ. ಇದರ ಯಶಸ್ಸಿನಲ್ಲಿ ಚಿ.ಉದಯಶಂಕರ್‌ರವರ ಸಾಹಿತ್ಯದ ಪಾಲು ಹೆಚ್ಚಿದೆ. ಚಿತ್ರದಲ್ಲಿ ಉತ್ತಮವಾಗಿ ಅಭಿನಯಿಸಿದ್ದ ಬೇಬಿ ಶ್ಯಾಮಿಲಿಗೆ ೧೯೯೦-೯೧ರ ಅತ್ಯುತ್ತಮ ಬಾಲನಟಿ ಪ್ರಶಸ್ತಿ ಬಂದಿತು. ಬೇಬಿ ಶ್ಯಾಮಿಲಿಯನ್ನು ಕರ್ನಾಟಕದಲ್ಲಿ ಜನಪ್ರಿಯಗೊಳಿಸಲು ಈ ಚಿತ್ರವೇ ಬುನಾದಿಯಾಯಿತು.

'ರಾಣಿ ಮಹಾರಾಣಿ' ಪಕ್ಕಾ ಮಸಾಲೆಗಳ ಚೌಚೌ ಚಿತ್ರ. ಸಹನಿರ್ದೇಶಕಿಯಾಗಿ ರಂಗಕರ್ಮಿ ಗಾಯತ್ರಿ ಇದ್ದರು. ಸೊಗಸಾದ ವಸ್ತ್ರವಿನ್ಯಾಸ ಮಾಡಿದ್ದ ನಿರ್ಮಾಪಕಿ ವಿಜಯಲಕ್ಷ್ಮೀಸಿಂಗ್ ಸುದ್ದಿಯಾದರು. ದ್ವಿಪಾತ್ರದ ಇಂಥ ಹಲವು ಚಿತ್ರಗಳು ಬಂದಿದ್ದರೂ ಈ ಚಿತ್ರ ಶ್ರೀಮಂತವಾಗಿತ್ತು. ಬಿಗಿಯಾದ ಚಿತ್ರಕಥೆಯಿತ್ತು, ಸಂಗೀತ, ಅಭಿನಯ ಎಲ್ಲ ಚೆನ್ನಾಗಿತ್ತು. ಇದು 'ನಂಜುಂಡಿ ಕಲ್ಯಾಣ'ದ ಅಭೂತಪೂರ್ವ ಯಶಸ್ಸಿನ ನಂತರ ಕನ್ನಡ ಚಿತ್ರರಂಗದಲ್ಲಿ ಮಾಲಾಶ್ರೀ ನೆಲೆಯನ್ನು ಭದ್ರಪಡಿಸಿದ್ದಲ್ಲದೆ, ಜೈಜಗದೀಶ್ ನಿರ್ಮಾಣ ಪ್ರವೃತ್ತಿಗೆ ಗಟ್ಟಿಯಾದ ಆರ್ಥಿಕ ನೆಲೆ ಒದಗಿಸಿತು. ಜಗ್ಗೇಶ್ ಅಭಿನಯ ಬದುಕಿಗೆ ತಿರುವು ತಂದ ಚಿತ್ರ ಕೂಡ ಇದೇ ಆಗಿತ್ತು. ಅವರು ವಿಶಿಷ್ಟ ಮ್ಯಾನರಿಸಂ ಬಳಸಿದ ಚಿತ್ರ. 'ಕಳ್ಳೇಕಾಯ್' ಪದಪ್ರಯೋಗವೂ ಜನಪ್ರಿಯವಾಯಿತು. ಕೆ.ವಿ.ಜಯರಾಂ ಅವರ 'ಶ್ವೇತ ಗುಲಾಬಿ' ಮೂಲಕ ಜಗ್ಗೇಶ್ ಸಹನಿರ್ದೇಶಕರಾಗಿ ಚಿತ್ರರಂಗಕ್ಕೆ ಬಂದರು. ರಾಜ್‌ಕಿಶೋರ್ ಬಳಿ ಎರಡು ಚಿತ್ರಗಳಿಗೆ ಸಹನಿರ್ದೇಶಕರಾಗಿ ಕೆಲಸ ಮಾಡಿದರು. 'ರಣಧೀರ' ಚಿತ್ರದಲ್ಲಿ ರವಿಚಂದ್ರನ್‌ರ ಐದು ಮಂದಿ ಗೆಳೆಯರಲ್ಲಿ ಒಬ್ಬರಾಗಿ ಕಾಣಿಸಿಕೊಂಡು ನಂತರ ದ್ವಾರಕೀಶ್‌ರ 'ಕೃಷ್ಣ ನೀ ಕುಣಿದಾಗ'ದಲ್ಲಿ ಒಂದು ಮುಖ್ಯಪಾತ್ರದಲ್ಲಿ ಅಭಿನಯಿಸಿದರು. 'ರಾಣಿ ಮಹಾರಾಣಿ'ಯಲ್ಲಿನ ಹಾಸ್ಯಮಿಶ್ರಿತ ಖಳನ ಪಾತ್ರ ಜಗ್ಗೇಶ್‌ರನ್ನು ಎಲ್ಲರೂ ಗುರುತಿಸುವಂತೆ ಮಾಡಿತು. ಖಳನಟನೆಯಿಂದ ಹಾಸ್ಯನಟರಾಗಿ, ನಂತರ ೧೯೯೨ ರಲ್ಲಿ 'ತರ್ಲೆ ನನ್ಮಗ' ಮೂಲಕ ನಾಯಕನಟರಾಗಿ ಚಿತ್ರರಂಗದಲ್ಲಿ ನೆಲೆನಿಂತರು.

ಕನ್ನಡಕ್ಕೆ ಮೂರು ಯಶಸ್ವಿ ಚಿತ್ರಗಳನ್ನು ಕೊಟ್ಟ ಫಣಿ ರಾಮಚಂದ್ರ ನಿರ್ದೇಶನದ ಎರಡನೆಯ ಚಿತ್ರ 'ಗಣೇಶನ ಮದುವೆ'. ಭಾರ್ಗವರ ಸಹಾಯಕರಾಗಿ ಕೆಲವಾರು



(ಚಿತ್ರ ೧೬೪)'ಮತ್ತೆ ಹಾಡಿತು ಕೋಗಿಲೆ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಅನಂತ್‌ನಾಗ್

ಚಿತ್ರಗಳಿಗೆ ದುಡಿದಿದ್ದ ಇವರು ೧೯೮೯ ರಲ್ಲಿ ತೆರೆಕಂಡ 'ಡಾಕ್ಟರ್ ಕೃಷ್ಣ' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. 'ಗಣೇಶನ ಮದುವೆ'ಯ ಯಶಸ್ಸಿನೊಂದಿಗೆ 'ಗಣೇಶ' ಹೆಸರಿನಿಂದಲೇ ಆರಂಭವಾಗುವ 'ಗಣೇಶನ ಗಲಾಟೆ', 'ಗೌರಿಗಣೇಶ', 'ಗಣೇಶ-ಸುಬ್ರಹ್ಮಣ್ಯ', 'ಗಣೇಶ ಐ ಲವ್ ಯೂ' ಇತ್ಯಾದಿ ಚಿತ್ರಗಳನ್ನು ಇವರು ನಿರ್ದೇಶಿಸಿದ್ದಾರೆ. ನಗರದ ಕೆಳ ಮಧ್ಯಮವರ್ಗದ ಜನರ ಬದುಕು, ಅವರ ಆಸೆ-ಆಕಾಂಕ್ಷೆ, ಕನಸುಗಳನ್ನು ನಾಟಕೀಯವಾಗಿಯಾದರೂ ಸಮರ್ಥವಾಗಿ ಬಿಂಬಿಸಿದ್ದು ಇವರ ಹೆಗ್ಗಳಿಕೆ. ಇವರ ಕಲವು ಚಿತ್ರಗಳಲ್ಲಿ ಸ್ವಾರಸ್ಯಕರವಾಗಿ ಬಿಂಬಿತವಾಗಿರುವ ವಠಾರದ ಬದುಕನ್ನು ರೂಪಿಸಿದ್ದರಲ್ಲಿ ಚಿತ್ರಕಥೆ-ಸಂಭಾಷಣಾಕಾರ ಕುಣಿಗಲ್ ನಾಗಭೂಷಣ್ ಪಾತ್ರವೂ ಇದೆ. ಫಣಿ ರಾಮಚಂದ್ರ ಅವರ ನಂತರದ ಚಿತ್ರಗಳು ಅದೇ ಮಧ್ಯಮ ವರ್ಗ, ಒಂದೇ ಬಗೆಯ ಶೈಲಿಯೊಂದಿಗೆ ನಗಿಸಲು ಪ್ರಯತ್ನಿಸಿದ ರೀತಿ ಏಕತಾನ ಆಗತೊಡಗಿತು.

ದ್ವಾರಕೀಶ್‌ರ 'ಶ್ರುತಿ' ಬದಲಾವಣೆಗೊಳಗಾಗಿದ್ದ ರೀಮೇಕ್ ಚಿತ್ರ. ಆಕಸ್ಮಿಕವಾಗಿ ಅನಾಥಳಂತೆ ಸಿಕ್ಕಿದ ಶ್ರೀಮಂತ ಹುಡುಗಿಯನ್ನು - ನಾಲ್ಕು ಮಂದಿ ಹಾಡುವ ಒಳ್ಳೆಯ ಹುಡುಗರು - ರಕ್ಷಿಸುವ ಭಾವನಾತ್ಮಕ ಕಥೆ ಈ ಚಿತ್ರದ್ದು. ಮೂಲಚಿತ್ರವನ್ನು ನೋಡದವರು ಇದರ ಹೊಸ ಮುಖಗಳನ್ನು, ಹೊಸತನವನ್ನು ಇಷ್ಟಪಟ್ಟರು. ೨೫ ವಾರಗಳ ಪ್ರದರ್ಶನದೊಂದಿಗೆ ಯಶಸ್ವಿ ಚಿತ್ರವೆನಿಸಿಕೊಂಡ 'ಶ್ರುತಿ' ಮೂಲಕ ಗಿರಿಜಾ ಹೆಸರಿನ ವೃತ್ತಿ ರಂಗಭೂಮಿಯ ಹುಡುಗಿಯು, ಪ್ರಿಯದರ್ಶಿನಿಯಾಗಿ ಕಡೆಗೆ 'ಶ್ರುತಿ' ಹೆಸರಿನಲ್ಲೇ ಅಪಾರ ಜನಪ್ರಿಯತೆ ಪಡೆದು ನಾಯಕಿಯಾಗಿ ನೆಲೆ ನಿಂತರು. ಗುಬ್ಬಿವೀರಣ್ಣನವರ ನಾಟಕಮಂಡಳಿಯಲ್ಲಿ ದುಡಿಯುತ್ತಿದ್ದು ನಂತರ ಜಿ.ವಿ.ಕೃಷ್ಣ ನಾಟಕ ಮಂಡಳಿ ಎಂದು ತಮ್ಮ ಹೆಸರಿನಲ್ಲೇ ತಂಡ ಕಟ್ಟಿ ನಾಟಕಗಳನ್ನು ಅಭಿನಯಿಸುತ್ತಿದ್ದ ಜಿ.ವಿ.ಕೃಷ್ಣರ ಮಗಳು ಶ್ರುತಿ. ೧೯೮೮-೮೯ ರಲ್ಲಿ ತಂದೆಯ ನಿರ್ದೇಶನ, ಅಭಿನಯದ 'ಮುದುಕನ ಮದುವೆ' ಮತ್ತಿತರ ನಾಟಕಗಳಲ್ಲಿ ನೃತ್ಯ, ಪಾತ್ರಗಳನ್ನು ಮಾಡುತ್ತಿದ್ದರು. ಮಗಳು ಗಿರಿಜಾಳನ್ನು ಸಿನಿಮಾರಂಗಕ್ಕೆ ತರುವ ಉದ್ದೇಶದಿಂದ ನಾಟಕದ ಕಂಪನಿಯ ಸಾಮಗ್ರಿಯನ್ನು ಮಾರಿ ಕೃಷ್ಣ ಬೆಂಗಳೂರಿನಲ್ಲಿ ನೆಲೆನಿಂತರು. ರಂಗದ ಮೇಲೆ ಪುಟ್ಟ ಬಾಲಕಿ ಆಗಿದ್ದಾಗಿನಿಂದಲೂ ಅಭಿನಯಿಸಿದ್ದ ಹಿನ್ನೆಲೆಯಿಂದಾಗಿ ಶ್ರುತಿಗೆ ಸಿನಿಮಾ ಅಭಿನಯ ಕಷ್ಟವಾಗಲಿಲ್ಲ. ಅಷ್ಟೇ ಅಲ್ಲ, ಚಿತ್ರರಂಗದಲ್ಲಿ ಉಳಿಯುವುದಕ್ಕೂ ನೆರವಾಯಿತು. 'ಶ್ರುತಿ' ಚಿತ್ರದಿಂದ ಬೆಳಕಿಗೆ ಬಂದ ಸುನಿಲ್ ನಂತರದ ವರ್ಷಗಳಲ್ಲಿ ನಾಯಕನಟರಾಗಿ ಕೆಲವಾರು ಚಿತ್ರಗಳಲ್ಲಿ ಅಭಿನಯಿಸಿದರು.

೧೯೯೦ರ ಸೆಪ್ಟೆಂಬರ್ ೩೦ ರಂದು ಶಂಕರ್‌ನಾಗ್ ನಿಧನರಾದರು. ದೊಡ್ಡ ಸಾಧನೆಗಳ ಬೆನ್ನು ಹತ್ತಿ ತಮ್ಮ ಬದುಕಿನ ಕಾರಿನಲ್ಲಿ ಶಂಕರ್‌ನಾಗ್ ವೇಗವಾಗಿ ಮುನ್ನುಗ್ಗುತ್ತಿದ್ದರು. ಒಂದು ವಾಹನವನ್ನು ಹಿಂದಿನಿಂದ ದಾಟಿಕೊಂಡು ಮತ್ತೆ ರಸ್ತೆಗೆ ಬಂದಾಗ ಎದುರಿಗೆ ಲಾರಿಯೊಂದು ನಿಂತಿತ್ತು. ಅರೆಕ್ಷಣದಲ್ಲಿ ಕಾರು ಮುದ್ದೆಯಾಯಿತು. ಶಂಕರ್‌ನಾಗ್‌ರ ತಲೆ ಜಜ್ಜಿ ಹೋಗಿತ್ತು. ಮುಂಜಾವಿಗೆ ಮುನ್ನ ರಾತ್ರಿ ೩.೩೦-೪.೦೦ ಗಂಟೆಯಲ್ಲಿ ನಡೆದ ಈ ಘಟನೆ ರಾಜ್ಯಕ್ಕೆ ತಿಳಿದಾಗ ಬೆಳಿಗ್ಗೆ ೮ ಗಂಟೆ. ಕನ್ನಡಿಗರ ಕಣ್ಣೀರ ಕಟ್ಟೆ ಒಡೆದುಬಿತ್ತು. ಲಕ್ಷಾಂತರ ಮಂದಿ ಹೃದಯದಲ್ಲೇ ರೋದಿಸಿದರು. ಬೆಳಗಿನ ಒಂಬತ್ತು ಗಂಟೆಗೆಲ್ಲ ಇಡೀ ಬೆಂಗಳೂರಿನಲ್ಲಿ ಕನ್ನಡ ಧ್ವಜಗಳಿರುವ ವೃತ್ತಗಳಲ್ಲಿ, ರಸ್ತೆಗಳಲ್ಲಿ, ಕನ್ನಡ ಸಂಘಗಳ ಕಚೇರಿಗಳಲ್ಲಿ ಶಂಕರ್‌ನಾಗ್ ಭಾವಚಿತ್ರಗಳು ರಾರಾಜಿಸಿದವು. ಹೂವು, ಊದುಬತ್ತಿ, ದೀಪಗಳು ಅಗಲಿದ ಸೃಜನಶೀಲ ನಟ-ನಿರ್ದೇಶಕನಿಗೆ ಅಶ್ರುತರ್ಪಣ ನೀಡಿದವು.

ಶಂಕರ್‌ನಾಗ್ ಅಭಿನಯಿಸುತ್ತಿದ್ದ ಕೊನೆಯ ಚಿತ್ರಗಳ ನಿರ್ಮಾಪಕರು ಎಷ್ಟರ ಮಟ್ಟಿಗೆ ನೋವುಂಡರೋ ಏನೋ. ಆದರೆ ಕ್ರಿಯಾಶಾಲಿ ವ್ಯಕ್ತಿಯೊಬ್ಬನ ಸಾವನ್ನು ಬಂಡವಾಳ ಮಾಡಿಕೊಳ್ಳುವ ಪ್ರಯತ್ನವನ್ನಂತೂ ಮಾಡಿದರು. 'ಆಟ ಬೊಂಬಾಟ'(೧೯೯೦) ಚಿತ್ರದಲ್ಲಿ ಸಾವು ಹಾಗೂ ಸಾವಿಗೆ ಮುನ್ನ ಮನುಷ್ಯ ಮಾಡಬೇಕಾದ ಕರ್ತವ್ಯದ ಬಗ್ಗೆ ಹೇಳುವ ಹಾಡೊಂದು ಇತ್ತು. ಶಂಕರ್‌ನಾಗ್ ಸಾವಿಗೂ ಅದಕ್ಕೂ ತಳಕು ಹಾಕಲಾಯಿತು. 'ಸುಂದರಕಾಂಡ' (೧೯೯೧) ಇನ್ನೇನು ಮುಗಿಯಿತು ಎನ್ನುವಾಗ ಗುಡುಗು ಸಿಡಿಲಿನಬ್ಬರದಂಥ ಸಂಗೀತವನ್ನು ತಣ್ಣಗಾಗಿಸಿ ತೆರೆಯ ಮೇಲೆ ''ಶಂಕರ್‌ನಾಗ್ ಬಣ್ಣದ ಬದುಕಿನಿಂದ ನಿರ್ಗಮಿಸುವ ಮುನ್ನ ತೆಗೆಯಲಾದ ಹೃದಯಸ್ಪರ್ಶಿ ಚಿತ್ರ'' - ಎಂದು ಹಾಕಲಾಯಿತು. ಇವೆರಡೂ ಚಿತ್ರಗಳ ನಂತರ ಆರ್ಥಿಕ ಅಡಚಣೆಗಳಿಂದಾಗಿ ೧೯೯೩ ರಲ್ಲಿ ತೆರೆಕಂಡ ಎಸ್.ಡಿ.ಅಂಕಲಗಿ ಮತ್ತು ಗೆಳೆಯರು ನಿರ್ಮಿಸಿದ 'ಪ್ರಾಣ ಸ್ನೇಹಿತ' ಶಂಕರ್‌ನಾಗ್ ಕೊನೆಯ ಚಿತ್ರ. ಶಂಕರ್‌ನಾಗ್ ಆಕಸ್ಮಿಕ ಹಾಗೂ ಅಕಾಲಿಕ ನಿಧನಕ್ಕೆ ಉದ್ಯಮದ ಪ್ರತಿಕ್ರಿಯೆ ಹೇಗಾದರೂ ಇರಲಿ, ಸರ್ಕಾರ ನಗರ ಪಾಲಿಕೆ ಮೂಲಕ ತೆಗೆದುಕೊಂಡ ಒಂದು ನಿರ್ಧಾರ ಪ್ರಶಂಸಾರ್ಹವೆನಿಸಿಕೊಂಡಿತು. ಬೆಂಗಳೂರಿನ ಮಹಾತ್ಮಗಾಂಧಿ ರಸ್ತೆಯ ನಗರಪಾಲಿಕೆ ಒಡೆತನದ 'ಸಿಂಫೋನಿ' ಚಿತ್ರಮಂದಿರಕ್ಕೆ 'ಶಂಕರ್‌ನಾಗ್ ಚಿತ್ರಮಂದಿರ' ಎಂದು ಮರುನಾಮಕರಣ ಮಾಡಿತು. ಹಾಗೆ ಮಾಡಲೇಬೇಕಾದ ಅನಿವಾರ್ಯತೆಯನ್ನು ತಾವು ಅತ್ಯಲ್ಪ ಕಾಲದಲ್ಲಿ ಮಾಡಿದ್ದ ದೊಡ್ಡ ಸಾಧನೆಯ ಮೂಲಕ ಶಂಕರ್‌ನಾಗ್ ಉಂಟುಮಾಡಿದ್ದರು.

ಈ ದಶಕದ ಒಂದು ಹೆಚ್ಚಳವೆಂದರೆ ೧೯೮೫ನೆಯ ವರ್ಷವನ್ನು ಹೊರತುಪಡಿಸಿ ಮತ್ತೆಲ್ಲ ವರ್ಷಗಳಲ್ಲಿಯೂ ಒಂದಲ್ಲ ಒಂದು ಕನ್ನಡ ಚಿತ್ರ ಭಾರತದಲ್ಲೇ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳ 'ಇಂಡಿಯನ್ ಪನೋರಮಾ' ವಿಭಾಗಕ್ಕೆ ಆಯ್ಕೆಯಾಗಿದ್ದು.

ಒಟ್ಟಾರೆ ೧೯೮೦ರ ದಶಕದ ಪೂರ್ವಾರ್ಧ ಭವಿಷ್ಯದ ಕನ್ನಡ ಚಿತ್ರರಂಗಕ್ಕೆ ಪ್ರತಿಭಾವಂತರಾದ ರವಿಚಂದ್ರನ್, ಶಿವರಾಜ್‌ಕುಮಾರ್, ವಿನೋದ್‌ರಾಜ್, ಶ್ರೀಧರ್, ಶಶಿಕುಮಾರ್, ದೇವರಾಜ್, ರಮೇಶ್, ದೊಡ್ಡಣ್ಣ, ದತ್ತಣ್ಣ, ರಮೇಶ್ ಭಟ್, ಸುನಿಲ್ ಕುಮಾರ್ ದೇಸಾಯಿ, ಸುಧಾರಾಣಿ, ತಾರಾ, ಶ್ರುತಿ, ಮಾಲಾಶ್ರೀ, ವಿನಯಾಪ್ರಸಾದ್, ದಿನೇಶ್ ಬಾಬು, ಸುರೇಶ್ ಹೆಬ್ಳೀಕರ್, ಹಂಸಲೇಖ, ಮಂಜುಳಾ ಗುರುರಾಜ್, ಬಿ.ಆರ್.ಛಾಯಾ ಮುಂತಾದವರನ್ನು ಕೊಡುಗೆಯನ್ನಾಗಿಸಿತು. ಇವರೆಲ್ಲರ ಅನುಭವದ ಬೆಳಕು ೧೯೯೦ರ ದಶಕದಲ್ಲಿ ಬೀಸಿದ ಅಪೂರ್ಣಿತನದ ಗಾಳಿಯಲ್ಲಿ, ಅತ್ಯಾಧುನಿಕ ತಾಂತ್ರಿಕ ಬೆಳವಣಿಗೆಯಲ್ಲಿ, ಹೆಚ್ಚಿದ ಟಿ.ವಿ.ಚಾನಲ್‌ಗಳು - ಕೇಬಲ್ ವ್ಯವಸ್ಥೆಯಲ್ಲಿ ಪಡೆದುಕೊಂಡಿರುವ ಆಯಾಮಗಳು ಕುತೂಹಲಕರ. ಕಾವ್ಯ, ಸಾಹಿತ್ಯ, ಚಿತ್ರಕಲೆ, ನಾಟಕ ಇವುಗಳ ಮಹತ್ವ ಕುಗ್ಗಿರುವ ಪರಿಸ್ಥಿತಿ ನಿರ್ಮಾಣವಾಗಿದೆ. ಭೂಗತಲೋಕದ ಕಪ್ಪುಹಣ ಚಿತ್ರರಂಗವನ್ನು ತನ್ನ ಹತೋಟಿಗೆ ಎಳೆದುಕೊಂಡಿದೆ. ೧೯೮೧-೯೦ ರಲ್ಲಿ ಕಂಡುಬಂದ ಮೌಲ್ಯಗಳ ವಿಘಟನೆ ೧೯೯೧ರ ನಂತರದ ಚಟುವಟಿಕೆಗಳಿಗೆ ಅಪಾಯಕಾರಿಯಾದ ವೇಗ, ಬಿರುಸನ್ನು ತಂದುಕೊಟ್ಟಿದೆ.



(ಚಿತ್ರ ೧) 'ಜನುಮದ ಜೋಡಿ' ಚಿತ್ರದಲ್ಲಿ ಶಿವರಾಜ್ ಕುಮಾರ್

# ಗುರಿ ಒಂದು, ದಾರಿ ಹಲವು

೨೦ನೆಯ ಶತಮಾನದ ಕೊನೆಯ ದಶಕ ಪರಿವರ್ತನೆಗಳ ಬಿರುಗಾಳಿಯಿಂದ ಹೊಯ್ದಾಡುತ್ತಿದ್ದು ೨೦೦೦ದ ಕೊನೆಯ ವರ್ಷದವರೆಗೂ ಸ್ಥಿರತೆ ಪಡೆದುಕೊಳ್ಳಲಿಲ್ಲ. ಆರ್ಥಿಕ ಉದಾರೀಕರಣ, ಜಾಗತೀಕರಣ ಹಾಗೂ ಸ್ಥಿತ್ಯಂತರಗಳ ಪರಿಣಾಮವಾಗಿ ಈ ಹತ್ತು ವರ್ಷಗಳಲ್ಲಿ ಯಾವ ಸಿದ್ಧಾಂತವೂ ಉಳಿದುಕೊಂಡಿಲ್ಲ. ಸಾಹಿತ್ಯ, ಚಿತ್ರಕಲೆ, ಸಿನಿಮಾ ಇವೆಲ್ಲದರ ಚಿಂತನೆಯಲ್ಲೂ ಗೊಂದಲದಿಂದಾಗಿ ಸಮಾಜದ ಎಲ್ಲಾ ವಲಯಗಳಲ್ಲಿಯೂ ಅರಾಜಕತೆ ಉಂಟಾಯಿತು. ಅಲ್ಲಲ್ಲಿ ಸಿದ್ಧಾಂತದ ನೆನಪುಗಳು, ದೃಶ್ಯಗಳು ಕಾಣುತ್ತವೆ. ಕ್ರಿಯೆ, ಬಳಕೆ ಇಲ್ಲ. ಸಮಾಜವಾದ, ಹಿಂದೂವಾದ, ಗಾಂಧೀವಾದ ಇವೆಲ್ಲ ಜನರು ಗುಳೆ ಎದ್ದ ಖಾಲಿ ಪಟ್ಟಣಗಳಂತಾದವು.

೧೯೯೧ರ ಡಿಸೆಂಬರ್ ೮ ರಂದು ಸೋವಿಯತ್ ಒಕ್ಕೂಟದ ಪತನದೊಂದಿಗೆ ಸ್ಥಿತ್ಯಂತರಗಳ ತೀವ್ರತೆ ಹೆಚ್ಚಿತು. ಯುರೋಪಿನ ಕಲೆ, ಸಂಸ್ಕೃತಿಯ ನೂರಾರು ವರ್ಷದ ಬೇರುಗಳು ಅಲ್ಲಿ ಹೆಚ್ಚತೊಡಗಿದ ನಿರುದ್ಯೋಗದಿಂದಾಗಿ ಒಣಗಲು ಆರಂಭಿಸಿದವು. ಒಂದು ಕಡೆ ಭದ್ರತೆಯ ಭಾವ ತುಂಬಿದ್ದ ಬಲಾಢ್ಯ ಗೋಡೆ ಕುಸಿಯತೊಡಗಿದರೆ ಇನ್ನೊಂದೆಡೆ ಜೀವರಸ ಇಂಗತೊಡಗಿತು. ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಇದೊಂದು ದೊಡ್ಡ ಹೊಡೆತ. ಬೆಳವಣಿಗೆಯ ಆತುರ, ಬಯಕೆ ಇತ್ತು, ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಇಚ್ಛಾಶಕ್ತಿ ಇರಲಿಲ್ಲ. ತಾಂತ್ರಿಕಜ್ಞಾನ ವೃದ್ಧಿಯಾಗುತ್ತಾ ಯಥೇಚ್ಛವಾಗಿ ಹರಿದುಬರುತ್ತಿತ್ತು. ಅದನ್ನು ಅರಗಿಸಿಕೊಂಡು ಬೆಳೆಯುವ ಗಾಢ ಚಿಂತನೆಗಳಿರಲಿಲ್ಲ. ಇಂಥ ಪರಿಸ್ಥಿತಿಗೆ ಸಾಮಾನ್ಯರು, ಬುದ್ಧಿಜೀವಿಗಳು, ಚಿಂತಕರಷ್ಟೇ ಅಲ್ಲ, ಸರ್ಕಾರವೇ ತತ್ತರಿಸಿತು. ಬೆಳವಣಿಗೆಯ ದಾಹವನ್ನು ಇಂಗಿಸಬೇಕಾದ ಜವಾಬ್ದಾರಿಯನ್ನು ತನ್ನನ್ನು ಆರಿಸಿದ ಜನರಿಗಾಗಿ ಸರ್ಕಾರ ನಿರ್ವಹಿಸಬೇಕಾದ ಅನಿವಾರ್ಯತೆಯಿತ್ತು. ಇದನ್ನು ೧೯೯೬-೯೭ರ ಅವಧಿಯಲ್ಲಿ ಭಾರತದ ಪ್ರಧಾನಿ ಪಿ.ವಿ.ನರಸಿಂಹರಾವ್ ನೇತೃತ್ವದ ಕಾಂಗ್ರೆಸ್ ಸರ್ಕಾರ 'ಆರ್ಥಿಕ ಉದಾರೀಕರಣ ನೀತಿ' ಮೂಲಕ ನಿಭಾಯಿಸಲು ಪ್ರಯತ್ನಿಸಿತು. ಸಾವಿರಾರು ಕೆ.ಜಿ. ಚಿನ್ನವನ್ನು ಒತ್ತೆಯಿಟ್ಟು ದೊಡ್ಡ ಪ್ರಮಾಣದ ಸಾಲ ತೆಗೆದುಕೊಂಡದ್ದು ಹಾಗೂ ಭಾರತವನ್ನು ವಿಶ್ವದ ಮಾರುಕಟ್ಟೆಯನ್ನಾಗಿ ಪರಿವರ್ತಿಸಿದ್ದು ಸ್ಥಿತ್ಯಂತರದ ಹೊಯ್ದಾಟವನ್ನು ನಿಗ್ರಹಿಸಲು ಮಾಡಿದ ಪ್ರಯತ್ನಗಳು. ಇದರೊಂದಿಗೆ ಹೆಚ್ಚಿದ ಭಯೋತ್ಪಾದನೆ ಮತ್ತು ಆಂತರಿಕ ಗದ್ದಲ, ಹೋರಾಟಗಳನ್ನು ಹತ್ತಿಕ್ಕಲು ರಾಷ್ಟ್ರದ ಖಜಾನೆಯ ಬಹುಪಾಲು ಹಣ ವ್ಯಯವಾಗತೊಡಗಿತು.

ಕಳೆದ ಶತಮಾನಗಳಲ್ಲಿ ರೂಪುಗೊಂಡಿದ್ದ ಚಿಂತನೆಗಳೆಲ್ಲ ೧೯೮೦ ರಿಂದೀಚೆಗೆ ಪ್ರಶ್ನೆಗಳಿಗೊಳಗಾಗಿ ಈ ದಶಕದ ಅಂತ್ಯಕ್ಕೆ ವಿಕ್ಷಿಪ್ತ ಮನಸ್ಥಿತಿಗೆ ತಂದಿದೆ. ರಂಜನೆ ಒದಗಿಸುವ ಮತ್ತು ಬೇಗ ತಲುಪುವ ಧಾವಂತ ವಿಜ್ಞಾನದ ಪ್ರಮುಖ ಬೆಳವಣಿಗೆ. ಮಾಹಿತಿ ತಂತ್ರಜ್ಞಾನದ ವಿಸ್ತೃತ ಜಾಲ ಹಾಗೂ ಟಿ.ವಿ.ಚಾನೆಲ್‌ಗಳು ಸಾರ್ವಭೌಮತ್ವ ಸ್ಥಾಪಿಸಿಕೊಂಡವು. ೧೯೯೧ ರಲ್ಲಿ ರಾಜೀವ್‌ಗಾಂಧಿ ತಮಿಳುನಾಡಿನ ಶ್ರೀಪೆರಂಬದೂರಿನಲ್ಲಿ ಎಲ್‌ಟಿಟಿಇ ಉಗ್ರಗಾಮಿಗಳಿಂದ ಹತರಾದರು. ದೆಹಲಿ ದೂರದರ್ಶನದ ಡೈರೆಕ್ಟರ್ ಜನರಲ್ಲರನ್ನು ಪಂಜಾಬಿನ ಉಗ್ರಗಾಮಿಗಳು ಕೊಲೆ ಮಾಡಿದರು. ಮಹಾ ಚುನಾವಣೆಯಲ್ಲಿ ಬಹುಮತದಿಂದ ಗೆದ್ದ ಕಾಂಗ್ರೆಸ್ ಪ್ರಧಾನಿಯಾಗಿ ಪಿ.ವಿ.ನರಸಿಂಹರಾವ್ ಆಯ್ಕೆಯಾದರು. ಟಾಡಾ ಕಾಯ್ದೆ ಜಾರಿಗೆ ಬಂತು. ಪಾರ್ಲಿಮೆಂಟಿನ ಕಲಾಪಗಳನ್ನು ದೂರದರ್ಶನದಲ್ಲಿ ಪ್ರಸಾರ ಮಾಡುವ ಪರಿಪಾಠ ಆರಂಭವಾಯಿತು. ಜನರ ಗಮನ ಇವುಗಳತ್ತ ಹೆಚ್ಚಿಗೆ ಹೊರಳುತ್ತಿದಂತೆ ಚಿತ್ರೋದ್ಯಮ ತನ್ನ ಅಸ್ತಿತ್ವಕ್ಕಾಗಿ ಚಡಪಡಿಸತೊಡಗಿತು. ಸರ್ಕಾರೀ ಸವಲತ್ತುಗಳನ್ನು ಪಡೆಯುವುದು ತನ್ನ ಹಕ್ಕು ಎಂಬಂತೆ ವರ್ತಿಸತೊಡಗಿತು. ಈ ದಶಕದಲ್ಲಿ ಸನ್ಮಾನ, ಪುರಸ್ಕಾರಗಳ ದಾಹ ಹೆಚ್ಚಿದ್ದಷ್ಟೇ ಅಲ್ಲ, ಪ್ರಶಸ್ತಿಗಳಿಗಾಗಿ ಹಾತೊರೆಯುವುದು, ವಿವಿಧ ಸಮಿತಿಗಳು, ಹುದ್ದೆಗಳ ಬೆನ್ನು ಹತ್ತುವುದು, ನೇರವಾಗಿ ರಾಜಕಾರಣಕ್ಕೆ ನುಗ್ಗುವಂಥ ಪ್ರವೃತ್ತಿ ವಿಜೃಂಭಿಸಿದವು.

೧೯೯೧-೨೦೦೦ ದಶಕವು ಗದ್ದಲ ಗೌಜುಗಳಿಂದಲೇ ಆರಂಭವಾಗಿದ್ದಕ್ಕೆ ರಾಷ್ಟ್ರದ ಇಂಥ ರಾಜಕೀಯ, ಸಾಮಾಜಿಕ ಪರಿಸ್ಥಿತಿ ಹಿನ್ನೆಲೆಯಾಗಿತ್ತು. ವರ್ಷದಿಂದ ವರ್ಷಕ್ಕೆ ಚಿತ್ರಗಳ ಸಂಖ್ಯೆ ಹೆಚ್ಚುತ್ತಿದ್ದರೂ ಚಿತ್ರಗಳು ಉಂಟುಮಾಡಲಾಗದ ಸುದ್ದಿಯನ್ನು ಹಲವಾರು ಘಟನೆ, ಪ್ರಕರಣಗಳು ಉಂಟುಮಾಡಿದವು. ಕಳೆದ ದಶಕದ ಆರಂಭ ಕೂಡ ಹೀಗೆಯೇ ಗೋಕಾಕ್ ಚಳವಳಿಯ ಹೋರಾಟದಿಂದ ಆಗಿತ್ತು. ಕಾಕತಾಳೀಯವೆಂಬಂತೆ ೧೯೯೧-೧೯೯೨ ರಲ್ಲಿಯೂ 'ಟಿಪ್ಪು ಸುಲ್ತಾನ್' ಹಿಂದಿ ಧಾರಾವಾಹಿಯ ಡಬ್ಬಿಂಗ್ ವಿವಾದ ಹಾಗೂ ಕಾವೇರಿ ಜಲವಿವಾದಗಳು ಗದ್ದಲ, ಪ್ರಚಾರ ಹಾಗೂ ಹಿಂಸೆಯ ಪರಾಕಾಷ್ಠೆ ಮುಟ್ಟಿದವು. ಕರ್ನಾಟಕದ ಸಾರ್ವಜನಿಕ ಬದುಕನ್ನು ಸಂಪೂರ್ಣವಾಗಿ ಆವರಿಸಿಕೊಂಡಿದ್ದ ಈ ಗದ್ದಲಗಳಿಂದಾಗಿ ಪ್ರಾರಂಭದಲ್ಲಿ ಯಾವುದೇ ಕನ್ನಡ ಚಿತ್ರ ಅದ್ಭುತ ಅನ್ನುವಂಥ ಯಶಸ್ಸನ್ನಾಗಲಿ, ಶ್ರೇಷ್ಠ ಎಂಬ ಹಣೆಪಟ್ಟಿಯನ್ನಾಗಲಿ ಪಡೆದುಕೊಳ್ಳಲಿಲ್ಲ.

'ಭೂಗತ ಜಗತ್ತು' ಹಿಂದೆಂದಿಗಿಂತಲೂ ಹೆಚ್ಚು ಕ್ರಿಯಾಶೀಲವಾಗಿದ್ದುದು ೧೯೯೦ರ ದಶಕದ ದುರಂತ. ಸುದ್ದಿಗಳ ಬಗ್ಗೆ ಜನತೆ ಅಪರಿಮಿತ ಕುತೂಹಲ ತೋರತೊಡಗಿತು. ಅಂಥದನ್ನೇ ವರ್ಣರಂಜಿತವಾಗಿ ಪ್ರಕಟಿಸುವ ಪತ್ರಿಕೆಗಳು ಕೂಡ ಹುಟ್ಟಿಕೊಳ್ಳತೊಡಗಿದವು. 'ರಾಜಕಾರಣ ಮೂರ್ಖನ ಕೊನೆಯ ಆಯ್ಕೆ' ಎಂಬ ಮಾತು ಹಳೆಯದಾಗಿ 'ಪಾತಕಿಗಳ ಮಹಾಮನೆ' ಎಂಬಂಥ ಪರಿಸ್ಥಿತಿ ನಿರ್ಮಾಣವಾಯಿತು. ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಮೌಲ್ಯಗಳ ಅಧಃಪತನವಾಗತೊಡಗಿ ಶಾಸಕಾಂಗದಲ್ಲೂ ರೌಡಿಗಳು, ಕೊಲೆಗಡುಕರು, ಅಪರಾಧ ಹಿನ್ನೆಲೆಯುಳ್ಳವರು ವಿಜೃಂಭಿಸತೊಡಗಿದ್ದರು. ಸಮಾಜದ ಇಂಥ ವಿಷಮ ಪರಿಸ್ಥಿತಿಯನ್ನು ಸಿನಿಮಾ ನಿರ್ಮಾಣದಲ್ಲಿ ತೊಡಗಿಕೊಂಡಿದ್ದವರು ವ್ಯಾಪಾರದ ಸರಕನ್ನಾಗಿ ಪರಿವರ್ತಿಸಿಕೊಳ್ಳಲು ಆತುರ ತೋರಿದರು. ಇದರ ಪರಿಣಾಮವಾಗಿಯೇ 'ರೌಡಿ ಮತ್ತು ಎಂ.ಎಲ್.ಎ', 'ಪೊಲೀಸ್ ಮತ್ತು ದಾದಾ', 'ಗೂಂಡಾ ಮತ್ತು ಪೊಲೀಸ್'ನಂಥ ಚಿತ್ರಗಳು ನಿರ್ಮಾಣವಾದವು. ವಿಚಿತ್ರವೆಂದರೆ ಈ ಮೂರೂ ಚಿತ್ರಗಳ ಹೆಸರುಗಳನ್ನು ಇಟ್ಟಾಗ ಅದರಲ್ಲಿ 'ಮತ್ತು' ಎಂಬ ಪದ ಇರಲಿಲ್ಲ. ತುಂಬಾ ನೇರವಾದ ಅರ್ಥ ಬರಲೆಂದೇ 'ರೌಡಿ ಎಂ.ಎಲ್.ಎ', 'ಗೂಂಡಾ ಪೊಲೀಸ್' ಎಂದೇ ಬಳಸಲಾಗಿತ್ತು. ಆದರೆ ರಾಜಕಾರಣಿ ಮತ್ತು ಪೊಲೀಸರನ್ನು ನೇರವಾಗಿ ಅವಹೇಳನ ಮಾಡಿದಂತಾಗುತ್ತದೆಂಬ ಕಾರಣ ಮುಂದೊಡ್ಡಿ ಕರ್ನಾಟಕದ ಪ್ರಾದೇಶಿಕ ಸೆನ್ಸಾರ್ ಮಂಡಳಿ 'ಮತ್ತು' ಸೇರಿಸಲು ಸೂಚಿಸಿತ್ತು. ಏನೇ ಸೇರಿಸಿದರೂ ಆ ಹೆಸರುಗಳಂತಿದ್ದ ಜನ ಸಮಾಜದಲ್ಲಿ ಅಲ್ಲಲ್ಲಿ ಕಾಣತೊಡಗಿದ್ದರು. ಅಂಥವರ ಸುದ್ದಿ, ಚಟುವಟಿಕೆ, ಕೃತ್ಯಗಳನ್ನು ಪ್ರತಿದಿನ ಜನರು ಓದುತ್ತಿದ್ದರು. ಇದರಿಂದಾಗಿ 'ಮತ್ತು' ಅಥವಾ ಇನ್ಯಾವುದೇ ಪದದ ಸೇರ್ಪಡೆ ಅಥವಾ ಹೆಸರಿನ ಬದಲಾವಣೆ ವಾಸ್ತವ ಸ್ಥಿತಿಯನ್ನೇನೂ ಪರಿವರ್ತನೆ ಮಾಡುವಂತಿರಲಿಲ್ಲ. ವಿಚಿತ್ರವೆಂದರೆ ನಿರ್ದಿಷ್ಟ ಅರ್ಥಕ್ಕಾಗಿಯೇ ರಾಜಕಾರಣಿ, ಪೊಲೀಸರತ್ತ ಬೆರಳು ತೋರಲೆಂದೇ ತುಂಬಾ ನೇರವಾಗಿಯೇ ಈ ಹೆಸರುಗಳನ್ನು ಇಡಲಾಗಿದ್ದ ತೆಲುಗು ಭಾಷೆಯ ಚಿತ್ರಗಳು ಅದೇ ದಿನಗಳಲ್ಲಿ ಆಂಧ್ರಪ್ರದೇಶ ಹಾಗೂ ಕರ್ನಾಟಕದಲ್ಲಿ ಪ್ರದರ್ಶನವಾಗುತ್ತಿದ್ದವು.



(ಚಿತ್ರ ೨) 'ರಾಮಾಚಾರಿ' ಚಿತ್ರದಲ್ಲಿ ಮಾಲಾಶ್ರೀ ಮತ್ತು ರವಿಚಂದ್ರನ್

ಅಪರಾಧ ಜಗತ್ತಿನ ಕೃತ್ಯಗಳು ವರ್ಣರಂಜಿತವಾಗಿ ವಿಜೃಂಭಿಸುತ್ತಿದ್ದಾಗ ನೈತಿಕ ಪ್ರಜ್ಞೆ, ಸಾತ್ವಿಕ ಸಿದ್ಧಾಂತಗಳು ಸಹಜವಾಗಿ ಚೈತನ್ಯ ಕಳೆದುಕೊಳ್ಳತೊಡಗಿದವು. ಹೊಸ ಬಗೆಯ ಪ್ರಯತ್ನ, ಪ್ರಯೋಗಶೀಲ ಚಿಂತನೆಗಳಿಗೆ ಅಗತ್ಯವಾಗಿದ್ದ ವಾತಾವರಣ ನಾಶವಾಗುತ್ತಾ ಬಂದಿತು.

೧೯೯೧ರ ಹೊತ್ತಿಗೆ ದೇಶದ ಇತರೆಡೆಯಲ್ಲಾಗುತ್ತಿದ್ದಂತೆ ಕನ್ನಡ ಚಿತ್ರರಂಗವೂ ಅದೃಶ್ಯ ಸುಳಿಗೆ ಸಿಕ್ಕಿದಂತೆ ಹೊಯ್ದಾಡುತ್ತಿತ್ತು. ಕನ್ನಡ ಚಿತ್ರಗಳಿಗೆ ಭವ್ಯವಾದ ಭವಿಷ್ಯವನ್ನಿರಲಿ, 'ಕನ್ನಡದ ಆತ್ಮ'ವಾದರೂ ಇರುವಂತೆ ನೋಡಿಕೊಳ್ಳುವ ಸವಾಲು ಎದುರಿಗಿತ್ತು. ಸ್ವತಂತ್ರ ಚಿಂತನೆ, ಹೊಸ ಕಥೆಗಳಿರುವ ಚಿತ್ರಗಳು ಸಾಲು ಸಾಲಾಗಿ ಸೋಲತೊಡಗಿದ್ದವು. ಇದಕ್ಕೆ ವ್ಯತಿರಿಕ್ತವಾಗಿ ಕನ್ನಡದ್ದಲ್ಲದ ಸಂಸ್ಕೃತಿಯ ಪರಭಾಷಾ ಚಿತ್ರಗಳನ್ನು ಯಥಾವತ್ತಾಗಿ ಪುನರ್ ನಿರ್ಮಿಸಿದ 'ರೀಮೇಕ್'ಗಳು ಬಂದವು.

'ರಾಮಾಚಾರಿ' ಇಂಥದೊಂದು ರೀಮೇಕ್. 'ಚಿನ್ನತಂಬಿ' ಹೆಸರಿನಲ್ಲಿ ತಮಿಳಿನಲ್ಲಿ ಯಶಸ್ವಿಯಾಗಿದ್ದ ಚಿತ್ರವನ್ನು - 'ಶಾಂತಿ ಕ್ರಾಂತಿ' ನಿರ್ಮಾಣ ತಡವಾಗುತ್ತಿದ್ದ ಕಾರಣಕ್ಕಾಗಿ - ರವಿಚಂದ್ರನ್ ನಿರ್ಮಿಸಿದರು. 'ರಾಮಾಚಾರಿ' ಶೀರ್ಷಿಕೆಯೇ ಗಮನ ಸೆಳೆಯುತ್ತದೆ. ಪುಟ್ಟಣ್ಣ ಕಣಗಾಲರ 'ನಾಗರಹಾವು' ಚಿತ್ರದ ವಿಷ್ಣುವರ್ಧನ್ ಅಭಿನಯಿಸಿದ ರಾಮಾಚಾರಿಯ ಪಾತ್ರದ ಜನಪ್ರಿಯತೆಯ ಹಿನ್ನೆಲೆಯಲ್ಲಿ, ಚಿತ್ರದ ಹೆಸರೇ 'ರಾಮಾಚಾರಿ' ಎಂದರೆ ನಿಜಕ್ಕೂ ಕುತೂಹಲವೇ. ಜನಪ್ರಿಯ ಗೀತೆಯ ಹೆಸರನ್ನಿಟ್ಟು ಚಿತ್ರಿಸುವುದರಿಂದ ಒಂದು ಹೆಜ್ಜೆ ಮುಂದೆ ಹೋಗಿ ಜನಪ್ರಿಯ ಪಾತ್ರದ ಹೆಸರಿನಲ್ಲಿ ಈ ಚಿತ್ರ ಬಂದಿತು. ತಮಿಳಿನ 'ಚಿನ್ನತಂಬಿ'ಯಲ್ಲಿ ಮುಖ್ಯ ಪಾತ್ರ ವಹಿಸಿದ್ದ ತಾರೆ ಖುಷ್ಬೂ ರವಿಚಂದ್ರನ್‌ಗೆ ಆ ಚಿತ್ರವನ್ನು ಕನ್ನಡದಲ್ಲಿ ತೆಗೆಯಲು ಸೂಚಿಸಿದ್ದರು. ಆಕೆಯ ಕಾಲ್‌ಶೀಟ್ ಇರಲಿಲ್ಲವಾದ್ದರಿಂದ ಆಗ ಜನಪ್ರಿಯ ತಾರೆಯಾಗಿದ್ದ ಮಾಲಾಶ್ರೀ ನಾಯಕಿ ಪಾತ್ರಕ್ಕೆ ಆಯ್ಕೆಯಾದರು. ಸಹಜವಾಗಿಯೇ ರವಿಚಂದ್ರನ್ ಚಿತ್ರದ ಕಥೆಯ ಎಳೆಯನ್ನಷ್ಟೇ ಇಟ್ಟುಕೊಂಡು ತಮ್ಮದೇ ರೀತಿಯಲ್ಲಿ ಕಥೆಯನ್ನು ಹೇಳಿದ್ದರು. ಅಪೂರ್ವ ಸನ್ನಿವೇಶಗಳು, ದೃಶ್ಯ ಸಂಯೋಜನೆಗಳು ಚಿತ್ರದಲ್ಲಿದ್ದವು. ಹಾಗೇ ರವಿಚಂದ್ರನ್ ಅವರ 'ಅತಿ' ಅನ್ನಿಸುವ ಕೆಲವು ವಿವರಣೆಗಳು ಇದ್ದವು. ರವಿಚಂದ್ರನ್ ವೈಶಿಷ್ಟ್ಯಗಳಲ್ಲಿ ಒಂದಾದ ಎದೆಯ ಬಳಕೆಯ ಸನ್ನಿವೇಶಗಳೂ ಇದ್ದವು. ಶ್ರೀಮಂತ ಎನ್ನಿಸುವಂಥ ಛಾಯಾಗ್ರಹಣವಿತ್ತು - ದುಃಖವೂ ವೈಭವ, ವರ್ಣಮಯ ಆಗುವಂತೆ ಚಿತ್ರಿಸುವ ರವಿಚಂದ್ರನ್ ಅವರ ತಾಳಕ್ಕೆ ತಕ್ಕಂತೆ ಉದ್ವೇಗ, ಉನ್ಮೇಷಗಳುಳ್ಳ ಪದಪುಂಜಗಳ ಜೋಡಣೆಯ ಗೀತೆ ರಚಿಸಿ, ರಾಗ ಸಂಯೋಜಿಸಿದ್ದರು ಹಂಸಲೇಖ. ಅಭಿನಯದಲ್ಲೂ ಎಲ್ಲ ಪಾತ್ರಗಳೂ ಸೊಗಸೆನಿಸಿದ್ದವು.

'ರಾಮಾಚಾರಿ' ಅದ್ಭುತ ಯಶಸ್ಸು ಗಳಿಸಿದ್ದಲ್ಲದೆ ಬೆಂಗಳೂರು, ಮೈಸೂರು, ಚಿತ್ರದುರ್ಗ, ಗದಗ, ಶಿವಮೊಗ್ಗ, ಗಂಗಾವತಿ, ಉಡುಪಿ ನಗರಗಳಲ್ಲಿ ೨೫ ವಾರ ನಡೆಯಿತು. 'ಕಿಂದರಿ ಜೋಗಿ'ಯ ಸೋಲಿನಿಂದಾಗಿ ಕಳೆದುಹೋಗಿದ್ದ ವರ್ಚಸ್ಸು ಈ ಚಿತ್ರದಿಂದ ಮತ್ತೆ ರವಿಚಂದ್ರನ್‌ಗೆ ಬಂತು. ಮೂಲಚಿತ್ರಕ್ಕಿಂತ ಬೇರೆಯಾಗಿ ಹಾಗೂ ಭಿನ್ನವಾಗಿ ಹಾಡುಗಳನ್ನು ಸಂಯೋಜಿಸಲಾಗಿತ್ತು. 'ಯಾರಿವಳು ಯಾರಿವಳು...', 'ನಮ್ಮೂರ ಯುವರಾಣಿ...' ಹೆಚ್ಚು ಜನಪ್ರಿಯವಾದವು. ೧೯೯೧ರ ದಿನಗಳಲ್ಲಿ ಖ್ಯಾತಿಯ ಉತ್ತುಂಗದಲ್ಲಿದ್ದ ಮಾಲಾಶ್ರೀಗೆ ಹೊಸ ಇಮೇಜ್ ಕೊಟ್ಟ ಚಿತ್ರ. ರವಿಚಂದ್ರನ್ ಅಭಿನಯ ವಿಭಿನ್ನವಾಗಿತ್ತು; ಜನಪ್ರಿಯವಾಯಿತು. ಇಂಥ ಕೆಲವು ಉತ್ತಮ ಅಂಶಗಳೊಂದಿಗೆ ಹೇಳಬೇಕಾದ ಇನ್ನೊಂದು ಮುಖ್ಯ ಸಂಗತಿಯೆಂದರೆ ಚಿತ್ರದ ಬಹುಭಾಗ ಕನ್ನಡ ಸಂಸ್ಕೃತಿಯಿಂದ ಹೊರತಾಗಿತ್ತೆಂಬುದು. ರವಿಚಂದ್ರನ್ ಚಿತ್ರದಲ್ಲಿ ಪ್ರಾದೇಶಿಕತೆ, ಕಾಲ, ತರ್ಕಗಳಿಗೆ ಎಂದೂ ಅವಕಾಶವಿಲ್ಲ. ಶ್ರೀಮಂತ ಚಿತ್ರಿಕೆಗಳಿಗೆ ಎಲ್ಲಿಂದ, ಏನು ಬೇಕಾದರೂ ಅಳವಡಿಸಿಬಿಡುವುದು ಅವರ ಜಾಯಮಾನ. ವಿಧವೆಗೆ ಬಲವಂತವಾಗಿ ಅರಿಶಿನ-ಕುಂಕುಮಗಳನ್ನು ಬಳಿಯುವುದು, 'ಸ್ವರ್ಗ ಸಿಗುತ್ತದೆ' ಎಂದು ಗಂಡನ ಎಂಜಲೆಲೆಯಲ್ಲಿ ಊಟ ಮಾಡುವ ದೃಶ್ಯಗಳು ಇದ್ದವು. ಇವಕ್ಕೆ ಪ್ರಜ್ಞಾವಂತ ಮಹಿಳೆಯರಿಂದ ಪ್ರತಿಭಟನೆ ವ್ಯಕ್ತವಾಯಿತು. ಕೆಲವರಂತೂ ಪತ್ರಿಕೆಗಳ ಓದುಗರ ಅಂಕಣದಲ್ಲಿ ಅತ್ಯುಗ್ರವಾಗಿ ಟೀಕಿಸಿದರು. ಆದರೆ ಇಂಥ ಪದ್ಧತಿಗಳು ಇಂದಿಗೂ ಕೆಲವೆಡೆ ನಡೆದುಕೊಂಡು ಬರುತ್ತಿವೆ ಎಂಬುದು ಬದುಕಿನ ವಿರೋಧಾಭಾಸ.

ತಮಿಳಿನ ರೀಮೇಕ್ ಚಿತ್ರಗಳ ಮೂಲಕ ಒಂದು ಕಡೆಯಿಂದ ತಮಿಳು ಸಂಸ್ಕೃತಿಯನ್ನು ಸ್ವಾಗತಿಸುತ್ತಿದ್ದ ಕರ್ನಾಟಕದ ಪ್ರೇಕ್ಷಕರು ಇನ್ನೊಂದು ಕಡೆಯಿಂದ ತೆಲುಗು ಸಂಸ್ಕೃತಿಯನ್ನು ಅಷ್ಟೇ ನಿರಾಯಾಸವಾಗಿ ಒಪ್ಪಿಕೊಳ್ಳುತ್ತಿದ್ದರು. ತೆಲುಗಿನಿಂದ ತಂಡತಂಡವಾಗಿ ನಿರ್ಮಾಪಕರು, ನಿರ್ದೇಶಕರು ಬೆಂಗಳೂರಿಗೆ ಬಂದಿಳಿದರು. ಸಿದ್ಧ ಯಶಸ್ವಿ ಸರಕು, ವೇಗದ ನಿರ್ಮಾಣ, ಚಿತ್ರದ ಮಾರಾಟ ಇವಷ್ಟೇ ಅವರಿಗೆ 'ಸಿನಿಮಾ' ಆಗಿತ್ತು. ಮಾಲಾಶ್ರೀಯನ್ನು ಹುಟ್ಟಿದ ರಾಜ್ಯ ಹಾಗೂ ತೆಲುಗು ಭಾಷೆಯ ಭಾವನಾತ್ಮಕ ಸಂಬಂಧದಲ್ಲಿ ಇರುಕಿಸಿ, ಕರ್ನಾಟಕದಲ್ಲಿನ ಆಕೆಯ ಖ್ಯಾತಿಯನ್ನು ನಗದು ಮಾಡಿಕೊಂಡು ಊರು ಸೇರಿಕೊಳ್ಳುವುದಷ್ಟೇ ಕೆಲವರ ಉದ್ದೇಶವಾಗಿತ್ತು. ತೆಲುಗಿನ ಯಶಸ್ವಿ ನಿರ್ಮಾಪಕ ಡಿ.ರಾಮಾನಾಯ್ಡು ಕೂಡ ಇಂಥ ದಾರಿಯನ್ನು ಅನುಸರಿಸಿಯೇ ಕನ್ನಡ ಚಿತ್ರರಂಗಕ್ಕೆ ಬಂದವರು. ಇವರು ನಿರ್ಮಿಸಿದ ಪ್ರಥಮ ಕನ್ನಡ ಚಿತ್ರ 'ತವರು ಮನೆ ಉಡುಗೊರೆ' ಸಹ ರೀಮೇಕ್. ಅತಿ ಎನ್ನಿಸುವಷ್ಟು ಮೆಲೋಡ್ರಾಮಾ ಹೆಂಗರುಳಿನ, ಕೋಮಲ ಮನಸ್ಸಿನವರನ್ನು ಸುಲಭವಾಗಿ ಆಕರ್ಷಿಸಿತು. ಮಾಲಾಶ್ರೀ ಅವರಾಗಲೇ ಕನ್ನಡದಲ್ಲಿ ಜನಪ್ರಿಯ ತಾರೆ. ಆಕೆಯನ್ನು ಬಳಸಿ ಚಿತ್ರ ಮಾಡುವ ಮೂಲಕ ಕನ್ನಡದಲ್ಲೂ ಗಳಿಸುವ ಅಪೇಕ್ಷೆ ಇರಬಹುದು. ಮಾಲಾಶ್ರೀ ದೂರವಿಟ್ಟ ತವರುಮನೆ ಆಂಧ್ರ ಮತ್ತೆ ಕರೆದೀತೆಂಬ ಆಂತರ್ಯದ ಆಸೆಯಿಂದಲೇ ನಿರ್ವಹಿಸಿದರು. ಆಂಧ್ರಕ್ಕೂ ಹೋದರು. ಆದರೆ ಅಲ್ಲಿ ಭದ್ರವಾದ ನೆಲೆ ಕನಸಾಯಿತು. 'ತವರು ಮನೆ ಉಡುಗೊರೆ' ಯಶಸ್ವಿ ಚಿತ್ರ. ಆದರೆ ರಾಮಾನಾಯ್ಡು ಅವರು ಕನ್ನಡದಲ್ಲಿ ನೆಲೆಯೂರಿ ಚಿತ್ರ ನಿರ್ಮಿಸುವ ಪ್ರಯತ್ನಗಳು ಫಲ ನೀಡಲಿಲ್ಲ. ಅವರು ಅನಂತರವೂ ಶಿವರಾಜ್ ಕುಮಾರ್ ಅಭಿನಯದ 'ಮದುವೆ ಆಗೋಣ ಬಾ'ವರೆಗೆ ಕೆಲವು ಚಿತ್ರಗಳನ್ನು ನಿರ್ಮಿಸಿದರೂ ಗೆಲುವು ಅಪರೂಪವಾಯಿತು. ಕರ್ನಾಟಕದ ಏಳು ಕೇಂದ್ರಗಳಲ್ಲಿ ಇದು ಶತದಿನ ಪ್ರದರ್ಶನವನ್ನು ಕಂಡಿತು. ಚಿತ್ರದ ನಿರ್ಮಾಣ ಸಂದರ್ಭದಲ್ಲಿ ಬೆಂಗಳೂರಿಗೆ ಬಂದಿದ್ದ ಡಿ.ರಾಮಾನಾಯ್ಡು ಭಾರತದ ಪ್ರತಿ ಭಾಷೆಯಲ್ಲಿಯೂ ಒಂದೊಂದು ಚಿತ್ರ ನಿರ್ಮಿಸುವುದು ತಮ್ಮ ಗುರಿ ಎಂದು ಹೇಳಿ, ಕನ್ನಡದಲ್ಲಿ ಸ್ವತಂತ್ರ ಕಥೆಯೊಂದನ್ನು ಆಧರಿಸಿ ಚಿತ್ರ ನಿರ್ಮಿಸುವ ಬಯಕೆ ತಮಗಿರುವುದಾಗಿ ನುಡಿದಿದ್ದರು. ಇಂಥವೇ ಮಾತುಗಳನ್ನು ತಮಿಳಿನ ಕೆ.ಬಾಲಚಂದರ್ ನಾಲ್ಕಾರು ಸಂದರ್ಭಗಳಲ್ಲಿ ಆಡಿದ್ದರು. ಆದರೆ ಇವರಾಗಲಿ ಅಥವಾ ಹೊರಗಿನಿಂದ ಬಂದ ಇತರರೇ ಆಗಲಿ ಎಂದೂ ಕನ್ನಡದ್ದೇ ಒಂದು ಚಿತ್ರವನ್ನೂ ನಿರ್ಮಿಸಲಿಲ್ಲ. ತಮ್ಮ ಹೆಸರಿನ ಬಲ ಬಳಸಿಕೊಂಡು ನಾಲ್ಕಾರು ರೀಮೇಕ್ ಚಿತ್ರಗಳನ್ನೇ ತಯಾರಿಸಿ ಹಣ ಮಾಡಿಕೊಂಡು ಹೋದರು. ಇವರೆಲ್ಲ ಕಥೆಯನ್ನಷ್ಟೇ ಅಲ್ಲ, ನಿರ್ದೇಶಕರನ್ನು ಕೂಡ ತಮ್ಮ ಜೊತೆಯಲ್ಲಿಯೇ

ಕರೆತಂದಿರುವುದನ್ನು ನೋಡಿದರೆ ಇವರುಗಳ ಕನ್ನಡ ಚಿತ್ರ ನಿರ್ಮಾಣದ ಹಿಂದಿನ ಉದ್ದೇಶ ಸ್ಪಷ್ಟ.

'ತವರು ಮನೆ ಉಡುಗೊರೆ'ಯಂಥ ಚಿತ್ರಗಳು ಹೆಣ್ಣುಮಕ್ಕಳಲ್ಲಿ ತವರಿನ ಪ್ರೀತಿಯನ್ನು ಮತ್ತಷ್ಟು ಹೆಚ್ಚಿಸುವತ್ತ ಕೇಂದ್ರೀಕರಿಸಿದ್ದವು. ಅಣ್ಣಾಯಿಸಾಯ್ತು ಅವರ ತಾಯಿ ಇತ್ಯಾದಿ ಭಾವನಾತ್ಮಕತೆಗಿಂತ ಇಲ್ಲಿಯ ತವರಿನ ಪ್ರೀತಿ, ತವರಿಗಾಗಿ ತ್ಯಾಗದಂಥ ಬೋಧನೆ, ಭಾವನೆಗಳು ವಿಶೇಷ ಸಂಗತಿಗಳೇನೂ ಆಗಿರಲಿಲ್ಲ.

ಕನ್ನಡ ಚಲನಚಿತ್ರ ಸಂಸ್ಕೃತಿ ಒಂದು ಕಡೆ ಪರಭಾಷೆಯ ಪ್ರಭಾವಗಳಿಗೆ ಸಿಕ್ಕಿ ಜರ್ಜರಿತವಾಗುತ್ತಿದ್ದರೆ, ಇನ್ನೊಂದು ಕಡೆ ಕಿರುತೆರೆ ಮೂಲಕ ಡಬ್ಬಿಂಗ್ ಸಂಸ್ಕೃತಿಯು ಕನ್ನಡಿಗರ ಮನೆಯೊಳಗೆ ಪ್ರವೇಶಿಸಲು ಸನ್ನದ್ಧವಾಯಿತು. ಈ ಬಾರಿ ಕನ್ನಡ ಚಿತ್ರೋದ್ಯಮ ಹಾಗೂ ಕನ್ನಡ ಪ್ರೇಮಿಗಳು ಹೋರಾಡಬೇಕಾಗಿದ್ದುದು ಕೇಂದ್ರ ಸರ್ಕಾರದಲ್ಲಿ ಪ್ರಭಾವ ಹೊಂದಿದ 'ಸ್ವೋರ್ಡ್ ಆಫ್ ಟಿಪ್ಪುಸುಲ್ತಾನ್' ಹಿಂದಿ ಧಾರಾವಾಹಿ ಖ್ಯಾತಿಯ ಸಂಜಯ್‌ಖಾನ್ ವಿರುದ್ಧ. ಅವರ ವಿರುದ್ಧ ಪ್ರತಿಭಟನೆ ಸರಳ ಸಂಗತಿಯಾಗಿರಲಿಲ್ಲ. ಸಂಜಯ್‌ಖಾನ್ ಕನ್ನಡಿಗರಿಗೆ ಹಾಕಿದ ಸವಾಲು ಅವರ 'ಶಕ್ತಿ' ಮತ್ತು ಅಪರಿಮಿತ 'ಪ್ರಭಾವ'ಗಳಿಂದಾದ 'ಅಹಂಕಾರ'ದ ರೂಪದಲ್ಲಿ ವ್ಯಕ್ತವಾಗಿತ್ತು.



(ಚಿತ್ರ ೩) 'ತವರು ಮನೆ ಉಡುಗೊರೆ' ಚಿತ್ರದಲ್ಲಿ ಮಾಲಾಶ್ರೀ ಮತ್ತು ಶ್ರೀಧರ್

ಇದೆಲ್ಲ ಆರಂಭವಾದದ್ದು ಹೀಗೆ. 'ಸ್ವೋರ್ಡ್ ಆಫ್ ಟಿಪ್ಪುಸುಲ್ತಾನ್' ಹಿಂದಿ ಧಾರಾವಾಹಿಯನ್ನು ಕನ್ನಡದ ಮಾತು ಜೋಡಿಸಿ ಪ್ರಸಾರ ಮಾಡಲಾಗುತ್ತದೆ ಎಂಬ ಸುದ್ದಿ ಹೊರಟಿತು. ಈ ಸಂಬಂಧವಾಗಿ ಒಂದೆರಡು ಬಾರಿ ಬೆಂಗಳೂರಿಗೆ ಬಂದಿದ್ದ ಹಿಂದಿಯ ಖ್ಯಾತ ನಾಯಕನಟ ಫಿರೋಜ್‌ಖಾನ್‌ರ ಸೋದರ ಸಂಜಯ್‌ಖಾನ್ ಅವರು ಹಿಂದಿ ಸಂಭಾಷಣೆಯ ಅನುವಾದ ಕೆಲಸವನ್ನು ವ್ಯವಸ್ಥಿತವಾಗಿ ಆರಂಭಿಸಿದರು. ಇದಕ್ಕೆ ಕನ್ನಡ, ಹಿಂದಿ, ಉರ್ದು ಭಾಷೆಗಳನ್ನು ಚೆನ್ನಾಗಿ ಬಲ್ಲ ಕರ್ನಾಟಕದ ಅಧ್ಯಾಪಕ, ವಿದ್ವಾಂಸ/ವಾಗ್ಮಿ ಪ್ರೊ।ಪಜಾಸುದ್ದೀನ್ ನೆರವಾದರು. ಡಬ್ಬಿಂಗ್ ಕೆಲಸ ಸಾಕಷ್ಟು ಮುನ್ನಡೆಯಾದ ಹಂತದಲ್ಲಿ ಸುದ್ದಿ ಇನ್ನಷ್ಟು ವ್ಯಾಪಕವಾಗಿ ಹಬ್ಬಿತು. ಇದಕ್ಕೆ ಮೊದಲ ಪ್ರತಿಭಟನೆ ಬುದ್ಧಿಜೀವಿಗಳಿಂದ ಬಂದು, ನಂತರ ಅಶೋಕ್ ನೇತೃತ್ವದ ಚಲನಚಿತ್ರ ಕಾರ್ಮಿಕರ ಒಕ್ಕೂಟ ಬೀದಿಗೆ ಇಳಿಯಿತು. ಡಬ್ಬಿಂಗ್ ಧಾರಾವಾಹಿಯ ಪ್ರಸಾರಕ್ಕೆ ಅಡೆತಡೆ ಎದುರಾಗಬಹುದೆಂದು ಮೊದಲಿಗೆ ಸಂಜಯ್‌ಖಾನ್ ಊಹಿಸಿರಲಿಲ್ಲ. ನಂತರವೂ ಅವರು ಅಷ್ಟೇನೂ ವಿಚಲಿತರಾಗಲಿಲ್ಲ. ಏಕೆಂದರೆ ಕೇಂದ್ರ ಸರ್ಕಾರದಲ್ಲಿ ಅವರಿಗೆ ಪ್ರಭಾವ ಅಷ್ಟಿತ್ತು. ಟಿಪ್ಪು ಸುಲ್ತಾನ್ ಸ್ವತಃ ಯುದ್ಧದಲ್ಲಿ ಬಳಸಿದ್ದ ಅತ್ಯಮೂಲ್ಯವಾದ ಐತಿಹಾಸಿಕ ಖಡ್ಗವನ್ನೇ ಧಾರಾವಾಹಿಯ ಪ್ರಥಮ ದೃಶ್ಯಕ್ಕಾಗಿ ಬಳಸಿದ್ದ ಅವರಿಗೆ ಕನ್ನಡಿಗರಿಂದ ಎದುರಾಗಬಹುದಾಗಿದ್ದ ಪ್ರತಿಭಟನೆ ಲೆಕ್ಕಕ್ಕಿರಲಿಲ್ಲ. ನಿಜವಾದ ಖಡ್ಗವನ್ನು ಅತ್ಯಂತ ಸರಾಗವಾಗಿ ಕೇಂದ್ರ ಸರ್ಕಾರದ ಅನುಮತಿ ಪಡೆದು ವಸ್ತು ಸಂಗ್ರಹಾಲಯದಿಂದ ಹೊರಗೆ ತಂದಾಗ ಎದ್ದಿದ್ದ ಅಪಸ್ವರಗಳನ್ನು ಮೆಟ್ಟಿ ಅವರು ಜಯಶಾಲಿಯಾಗಿದ್ದರು. ಅಲ್ಲದೆ ತಮಿಳು, ತೆಲುಗರು ಸಣ್ಣ ತಕರಾರೂ ಇಲ್ಲದಂತೆ ಅವರವರ ಭಾಷೆಗಳಲ್ಲಿ ಕಿರುತೆರೆಯಲ್ಲಿ ಟಿಪ್ಪುವನ್ನು ನೋಡಿದ್ದರು. ರಾಜಕುಮಾರ್ ಪ್ರತಿಭಟನೆಗೆ ಇಳಿದು ಬೀದಿ ಹೋರಾಟ ಆರಂಭವಾಗಬಹುದು ಎಂಬ ಸುದ್ದಿ ಸಿಕ್ಕಿದಾಗಲೂ ''ಯಾರ ಪ್ರತಿಭಟನೆಗೂ ಧಾರಾವಾಹಿ ನಿಲ್ಲುವುದಿಲ್ಲ'' ಎಂದು ಉದ್ಧಟತನದಿಂದ ಪ್ರತಿಕ್ರಿಯಿಸಿದರು. ಈ ಹಂತದಲ್ಲಿ ಸಂಜಯ್‌ಖಾನ್‌ರೊಂದಿಗೆ ಅಶೋಕ್ ಹಾಗೂ ಕನ್ನಡ ಹೋರಾಟಗಾರರ ತಂಡದೊಂದಿಗೆ ಸಮಾಲೋಚನಾ ಸಭೆ ನಡೆಯಿತು. ಅಲ್ಲಿ ಅವರಿಗೆ 'ಡಬ್ಬಿಂಗ್'ನಿಂದಾಗಿ ಕನ್ನಡಕ್ಕಾಗಬಹುದಾದ ಹಾನಿ ಹಾಗೂ ತೊಂದರೆಗಳನ್ನು ವಿವರಿಸಲಾಯಿತು. ಸಂಜಯ್‌ಖಾನ್‌ಗೆ ವಸ್ತುಸ್ಥಿತಿ ಮನವರಿಕೆಯಾಗಲಿಲ್ಲ. ಅಷ್ಟೇ ಅಲ್ಲ, ಅತ್ಯಂತ ಹಮ್ಮಿನಿಂದ ''ಹೋರಾಡುವುದೇ ನಿಮ್ಮ ಉದ್ದೇಶವಾದರೆ ಹೋರಾಟಕ್ಕೆ ನಾನೂ ಸಿದ್ಧವಾಗಿದ್ದೇನೆ'' ಎಂದುಬಿಟ್ಟರು. ಅಶೋಕ್, ''ಹಾಗಾದರೆ ರಣರಂಗದಲ್ಲಿಯೇ ಭೇಟಿಯಾಗೋಣ'' ಎಂದು ಹೇಳಿ ಹೊರಬಂದರು.

ಅಲ್ಲಿಂದ ಹೊರಟ ಕನ್ನಡ ಹೋರಾಟಗಾರರ ನಿಯೋಗ ರಾಜಕುಮಾರ್ ಅವರನ್ನು ಭೇಟಿಯಾಗಿ ಪರಿಸ್ಥಿತಿ ವಿವರಿಸಿತು. ಕನ್ನಡಿಗರ ಸ್ವಾಭಿಮಾನವನ್ನು ಕೆಣಕಿರುವವರನ್ನು ಉದ್ದೇಶಿಸಿ ''ಅವರ ಸವಾಲನ್ನು ಸ್ವೀಕರಿಸಿದ್ದೇವೆ'' ಎಂದು ರಾಜಕುಮಾರ್ ಮರುಸವಾಲು ಹಾಕಿದರು. ಈ ಹಿಂದೆ 'ರಾಮಾಯಣ', 'ಮಹಾಭಾರತ' ಧಾರಾವಾಹಿಗಳ ವಿಷಯದಲ್ಲಿ ಹೀಗೆಯೇ ಆಗಿದ್ದರೂ ಪರಿಸ್ಥಿತಿ ವಿಕೋಪಕ್ಕೆ ಹೋಗಿರಲಿಲ್ಲ. ಆದರೆ ಸಂಜಯ್‌ಖಾನ್ ದಾರ್ಷ್ಟ್ಯ ತೋರಿ ಸೋಲುಣಬೇಕಾದ ಪರಿಸ್ಥಿತಿ ಬಂತು. 'ಟಿಪ್ಪು ಸುಲ್ತಾನ್' ಡಬ್ಬಿಂಗ್ ಧಾರಾವಾಹಿಯ ವಿರುದ್ಧ ಹೋರಾಡಲು ಕರ್ನಾಟಕ ಸನ್ನದ್ಧವಾಯಿತು. ಎಲ್ಲ ಕಡೆ ಪ್ರತಿಭಟನಾ ಪ್ರದರ್ಶನ, ಧರಣಿ, ವಿಚಾರ ಸಂಕಿರಣ ನಡೆದವು. ಕರ್ನಾಟಕದ ಸಾರ್ವಜನಿಕ ಬದುಕು ಹದಗೆಡಬಹುದು ಎಂಬ ಹಂತದಲ್ಲಿ, ರಾಜಕುಮಾರ್ ನಾಯಕತ್ವದ ಚಳವಳಿಗಳ ಬಿಸಿಯ ಬಗ್ಗೆ ಅರಿವಿದ್ದ ಕೇಂದ್ರ ಸರ್ಕಾರ ಟಿಪ್ಪು ಡಬ್ಬಿಂಗ್ ಧಾರಾವಾಹಿ ಪ್ರಸಾರ ಮಾಡುವ ಉದ್ದೇಶ ಇಲ್ಲವೆಂದು ಪ್ರಕಟಣೆ ಹೊರಡಿಸಿತು. ಅಲ್ಲಿಗೆ ಇನ್ನೇನು ನಡೆಯಲಿದ್ದ ಒಂದು ಮಹಾಯುದ್ಧ ಆರಂಭದಲ್ಲೇ ತಣ್ಣಗಾಯಿತು. ೧೯೬೦ರ ದಶಕದಲ್ಲಿ ನಡೆದಿದ್ದ ಡಬ್ಬಿಂಗ್ ವಿರುದ್ಧ ಪ್ರಬಲ ಚಳವಳಿ ಬಿಟ್ಟರೆ ೧೯೯೧ ರಲ್ಲಿ ನಡೆದ ಈ ಚಳವಳಿಗೆ ಐತಿಹಾಸಿಕ ಮಹತ್ವವಿದೆ.

ಇದನ್ನು ಬಿಟ್ಟರೆ ೨೦೦೦ನೇ ವರ್ಷದಲ್ಲಿ ರಾಜೇಂದ್ರಸಿಂಗ್ ಬಾಬುರವರು 'ಭಾರತ್ ೨೦೦೦' ಚಿತ್ರವನ್ನು ತೆಲುಗಿನಿಂದ ಡಬ್ ಮಾಡಿ ವಿವಾದಕ್ಕೆ ಒಳಗಾದರು. ತಮ್ಮ ತಪ್ಪಿನಿಂದಾಗಿ ನಿರ್ದೇಶಕರ ಸಂಘದ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಕೆಲವು ತಾಂತ್ರಿಕ ವಿಷಯಗಳ ಬಗೆಗಿನ ತಪ್ಪು ತಿಳಿವಳಿಕೆಯಿಂದಾಗಿ ತಮ್ಮಿಂದ ಇಂಥ ಪ್ರಮಾದ ನಡೆದಿದೆ ಎಂದು ರಾಜೇಂದ್ರಸಿಂಗ್ ಬಾಬು ತಪ್ಪೊಪ್ಪಿಕೊಂಡಿದ್ದರಿಂದ ವಿವಾದ ಬೆಳೆಯಲಿಲ್ಲ. ಆದರೂ ಪತ್ರಿಕೆಗಳು, ಚಲನಚಿತ್ರ ವಾಣಿಜ್ಯ ಮಂಡಳಿ ಬಾಬುರವರನ್ನು ಉಗ್ರವಾಗಿ ಟೀಕಿಸಿದವು. ಏಕವ್ಯಕ್ತಿಯ ತಪ್ಪಾಗಿದ್ದುದು ಹಾಗೂ ಈ ತಪ್ಪನ್ನು ಬೇರೆಯವರು ಮಾಡುವಂಥ ಸಾಧ್ಯತೆಗಳಿಲ್ಲದ್ದು ಹೆಚ್ಚಿನ ಅನಾಹುತಗಳಾಗುವುದನ್ನು ತಪ್ಪಿಸಿತು. ಆದರೂ ಬಾಬು ಸಂಪ್ರದಾಯವನ್ನು ಮುರಿದು ಅಪಖ್ಯಾತಿಗೆ ಒಳಗಾದರು.

೧೯೯೧ರ ಆರಂಭದ ಡಬ್ಬಿಂಗ್ ಹಗರಣದ ಪ್ರಮುಖ ವಿವಾದ ನಂತರ ಇದೇ ವರ್ಷದ ಕೊನೆಯಲ್ಲಿ ಇನ್ನೊಂದು ಉಗ್ರ ಹೋರಾಟ ಹಾಗೂ ಹಿಂಸಾತ್ಮಕ ಬಂದ್ ನಡೆಯಿತು. 'ಕಾವೇರಿ ಜಲವಿವಾದ'ವಾಗಿದ್ದ ಇದು, ೧೯೮೨ ರಲ್ಲಿನ ಗೋಕಾಕ್ ಚಳವಳಿಯಷ್ಟೇ ಅಥವಾ ಅದಕ್ಕಿಂತ ಹೆಚ್ಚಿನ ಹಾನಿ ಹಾಗೂ ಆತಂಕಮಯ ಪರಿಸ್ಥಿತಿಯನ್ನು ಸೃಷ್ಟಿಸಿತು. ಇದು ಆರಂಭವಾದದ್ದು ೧೯೯೧ರ ನವೆಂಬರ್ ಮೊದಲ ವಾರದ ನಂತರ. ತಮಿಳುನಾಡಿಗೆ ಕರ್ನಾಟಕ ಸರ್ಕಾರ ಹೆಚ್ಚಿನ ಕಾವೇರಿ ನೀರನ್ನು ಬಿಡುತ್ತಿದೆ ಎಂಬ ಅನುಮಾನ ಹಾಗೂ ಇಂತಿಷ್ಟೇ ಬಿಡಬೇಕೆಂಬ ತಮಿಳರ ಒತ್ತಾಯದಿಂದಾಗಿ ಕರ್ನಾಟಕದಲ್ಲಿ ಭುಗಿಲೆದ್ದಿದ್ದ ಅಸಮಾಧಾನ ಭೀಕರ

ಸ್ವರೂಪದಲ್ಲಿತ್ತು. ಈ ಹೋರಾಟ ೧೯೯೨ರ ಜನವರಿಯಲ್ಲಿ ಬೆಂಗಳೂರಿನಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ಮುಗಿಯುವವರೆಗೆ ಒಂದೂವರೆ ವರ್ಷದಷ್ಟು ಕಾಲ ಜೀವಂತವಿದ್ದು, ಪ್ರತಿದಿನ ಮುಂದೇನಾಗಬಹುದೋ ಎಂದು ರಾಜ್ಯದ ಜನತೆಯನ್ನು ತುದಿಗಾಲಿನಲ್ಲಿ ನಿಲ್ಲಿಸಿತ್ತು. ಪ್ರತಿದಿನ ನಡೆಯುತ್ತಿದ್ದ ಉಪವಾಸ, ಧರಣಿ, ವೈವಿಧ್ಯಮಯ ಪ್ರತಿಭಟನೆಗಳಲ್ಲಿ ಸಾಹಿತಿಗಳು, ಸಂಘ ಸಂಸ್ಥೆಗಳು, ಎಲ್ಲಕ್ಕಿಂತ ವಿಶೇಷವಾಗಿ ಸಿನಿಮಾರಂಗದವರು ತೊಡಗಿಸಿಕೊಳ್ಳುತ್ತಿದ್ದರು. ಬಾಬು, ಹಂಸಲೇಖ, ನಂಜುಂಡೇಗೌಡ ಉದ್ಯಮದ ನೀತಿಗೆ ವಿರುದ್ಧವಾಗಿ ಹೇಳಿಕೆ ಕೊಟ್ಟಿದ್ದು ಅಂತರರಾಷ್ಟ್ರೀಯ ಚಿತ್ರೋತ್ಸವಕ್ಕೆ ಬಹಳಷ್ಟು ತೊಂದರೆಯಾಯಿತು.

ಸಿನಿಮಾರಂಗದವರ ಹೆಚ್ಚಿನ ಭಾಗವಹಿಸುವಿಕೆಯಿಂದಾಗಿ ರಾಜ್ಯದ ಚಿತ್ರೋದ್ಯಮದ ಮೇಲೆ ತಾತ್ಕಾಲಿಕ ಹಾಗೂ ದೀರ್ಘಾವಧಿ ಪರಿಣಾಮಗಳು ಉಂಟಾದವು. ಅದರಲ್ಲೂ ೧೯೯೧ರ ಡಿಸೆಂಬರ್ ೧೩ ರಂದು ಬೆಂಗಳೂರು ಹಾಗೂ ರಾಜ್ಯದಾದ್ಯಂತ ನಡೆದ 'ಹಿಂಸಾತ್ಮಕ ಬಂದ್' ಚಿತ್ರರಂಗದ ಚಟುವಟಿಕೆಗಳ ಮೇಲೆ ನೇರ ಪರಿಣಾಮ ಉಂಟುಮಾಡಿತು. ಬಂದ್‌ಗೆ ತಕ್ಷಣದ ಪ್ರತಿಕ್ರಿಯೆಯಾಗಿ ಅಂದಿನಿಂದಲೇ ತಮಿಳುನಾಡಿನ ವಾದ್ಯವೃಂದದವರು, ಸ್ಟಂಟ್ ಕಲಾವಿದರು ಅವರವರ ಸಂಘಗಳ ಅಧಿಕೃತ ನಿಲುವಿಗೆ ಕಾಯದೆ ವೈಯಕ್ತಿಕ ನಿರ್ಧಾರ ಕೈಗೊಂಡು ಬೆಂಗಳೂರಿಗೆ ಬರುವುದನ್ನು ನಿಲ್ಲಿಸಿದರು. ನಗರದ ಧ್ವನಿಮುದ್ರಣ ಸ್ಟುಡಿಯೋಗಳಲ್ಲಿ ಕೆಲಸದ ರಭಸ ಕುಗ್ಗಿತು. ಕನ್ನಡ ಚಿತ್ರರಂಗದ ಸಂಗೀತ, ನೃತ್ಯ ಹಾಗೂ ಸಾಹಸ ನಿರ್ದೇಶಕರುಗಳಲ್ಲಿ ಕನ್ನಡಿಗರೇ ಹೆಚ್ಚಿನ ಪ್ರಮಾಣದಲ್ಲಿ ಇದ್ದರೂ ವಾದ್ಯ ಕಲಾವಿದರು ಹಾಗೂ ನೃತ್ಯ ಕಲಾವಿದರಲ್ಲಿ ಬಹುತೇಕ ಮಂದಿ ತಮಿಳುನಾಡಿನವರೇ ಆಗಿರುವುದು ವಿಷಮ ಪರಿಸ್ಥಿತಿಗೆ ಕಾರಣವಾಗಿತ್ತು. ತಕ್ಷಣಕ್ಕೆ ತೊಂದರೆ ಉಂಟಾಗಿದ್ದರೂ ಭವಿಷ್ಯದ ದೃಷ್ಟಿಯಿಂದ ಒಳ್ಳೆಯದಾಗುವ ಸಾಧ್ಯತೆಗಳಿದ್ದವು. ಕನ್ನಡ ಚಿತ್ರೋದ್ಯಮಿಗಳಲ್ಲಿ ಕನ್ನಡದ ಬಗ್ಗೆ ಹೆಚ್ಚು ಪ್ರೀತಿಯಿದ್ದ ಕೆಲವರಾದರೂ ಅನ್ಯರ ಅವಲಂಬನೆಯಿಂದ ಹೊರಬರಬೇಕಾಗಿರುವುದರ ಅವಶ್ಯಕತೆಯನ್ನು ಮನಗಂಡು ಕಾರ್ಯಪ್ರವೃತ್ತರಾದರು.

ಬೆಂಗಳೂರಿನಲ್ಲಿ ಚಲನಚಿತ್ರ ಸಂಗೀತಕ್ಕೆ ಸೂಕ್ತವೆನಿಸುವ ವಾದ್ಯ ಕಲಾವಿದರು ಇದ್ದರಾದರೂ ಅವರುಗಳಿಗೆ ರಾಜ್ಯದಲ್ಲಿ ಸಂಗೀತವನ್ನೇ ನಂಬಿ ಬದುಕುವ ಮಟ್ಟಿಗೆ ಕೆಲಸದ ಭದ್ರತೆ ಇಲ್ಲದ್ದರಿಂದ ನಾನಾ ಕಾರ್ಖಾನೆ, ಸಂಸ್ಥೆಗಳಲ್ಲಿ ದುಡಿಯುತ್ತಿದ್ದರು. ಇಂಥವರನ್ನೆಲ್ಲ ಒಂದುಗೂಡಿಸಿ ಸಜ್ಜುಗೊಳಿಸಲು ಇದು ಸರಿಯಾದ ಸಮಯವಾಗಿತ್ತು. 'ಸಂಕೇತ್' ಆರಂಭವಾದಾಗ ಇಂಥ ಪ್ರಯತ್ನ ನಡೆದಿದ್ದರೂ ಅದು ಸಫಲವಾಗಿರಲಿಲ್ಲ. ನಿರ್ಮಾಪಕರು 'ಸಂಕೇತ್'ನಲ್ಲಿ ಧ್ವನಿಮುದ್ರಣಕ್ಕೆ ಉತ್ಸಾಹ ತೋರದಿದ್ದುದು ಹಾಗೂ ಒಂದೊಮ್ಮೆ ಅಲ್ಲಿ ಧ್ವನಿಮುದ್ರಣ ನಡೆಸಿದರೂ ವಾದ್ಯಕಲಾವಿದರನ್ನು ಮದರಾಸಿನಿಂದಲೇ ಕರೆಸುತ್ತಿದ್ದುದು ಅವಲಂಬನೆಯನ್ನು ಯಥಾಸ್ಥಿತಿಯಲ್ಲಿಟ್ಟಿತ್ತು. ಇಂಥ ಸಂದರ್ಭದಲ್ಲಿ ಉತ್ಸಾಹದಿಂದ ಕ್ರಿಯಾಶೀಲರಾದವರೆಂದರೆ ಹಂಸಲೇಖ. ಚಲನಚಿತ್ರಗಳಿಗೆ ಸಂಗೀತ ನುಡಿಸುವ ಕರ್ನಾಟಕದ ವಾದ್ಯಗಾರರನ್ನೆಲ್ಲ ಸೇರಿಸಿ 'ಕರ್ನಾಟಕ ಚಲನಚಿತ್ರ ಹಾಗೂ ಸುಗಮ ಸಂಗೀತ ವಾದ್ಯಗಾರರ ಸಂಘ' ಸ್ಥಾಪಿಸಿದರು. ೭೫ ಮಂದಿ ಸದಸ್ಯರಿದ್ದ ಈ ವೇದಿಕೆಗೆ ಹಂಸಲೇಖ ಗೌರವಾಧ್ಯಕ್ಷರು. ಈ ಸಂಘಟನೆಯ ಮೊದಲ ಸೃಷ್ಟಿಯಾಗಿ ಆಗಿನ ಸಂದರ್ಭಕ್ಕೆ ಸೂಕ್ತವಾಗಿದ್ದ 'ಕನ್ನಡ ಕಾವೇರಿ' ಧ್ವನಿಸುರುಳಿಯನ್ನು ತಯಾರಿಸಲಾಯಿತು. ಇದರ ನಿರ್ಮಾಣಕ್ಕೆ ಸಂಪೂರ್ಣವಾಗಿ ಕರ್ನಾಟಕದ ವಾದ್ಯಗಾರರನ್ನೇ ಬಳಸಿಕೊಳ್ಳಲಾಯಿತು. ೧೦ ಹಾಡುಗಳಿದ್ದ ಈ ಧ್ವನಿಸುರುಳಿಯ ಧ್ವನಿಮುದ್ರಣ 'ಸಂಕೇತ್'ನಲ್ಲಿ ನಡೆಯಿತು. ಕನ್ನಡ ಕವಿಗಳ ರಚನೆಗಳನ್ನು ಮೈಸೂರು ಅನಂತಸ್ವಾಮಿ, ಸಿ.ಅಶ್ವತ್ಥ್, ಬಿ.ಆರ್.ಛಾಯಾ, ರತ್ನಮಾಲಾ ಪ್ರಕಾಶ್, ಎಲ್.ಎನ್.ಶಾಸ್ತ್ರಿ ಹಾಡಿದರು. ಚೆನ್ನವೀರ ಕಣವಿಯವರ 'ಹೆಸರಾಯಿತು ಕರ್ನಾಟಕ ಉಸಿರಾಗಲಿ ಕನ್ನಡ...' ಗೀತೆಯನ್ನು ರಾಜಕುಮಾರ್ ಹಾಡಿದರು. ಕನ್ನಡ ನಾಡು, ನೆಲ, ಭಾಷೆ, ನಾಡಿನ ವೈಭವ, ಸಂಸ್ಕೃತಿ ಇತ್ಯಾದಿಗಳನ್ನು ಮನಗಾಣಿಸಲೆಂದೇ 'ಕನ್ನಡ ಕಾವೇರಿ' ಯೋಜಿಸಲಾಗಿತ್ತು.

ಕರ್ನಾಟಕದಲ್ಲಿ ಚಲನಚಿತ್ರ ವಾದ್ಯಗಾರರು ಬೆಳೆಯದಿರಲು ಕಾರಣವೇನೆಂಬ ಪ್ರಶ್ನೆಗೆ ವಿಜಯಭಾಸ್ಕರ್ ಅಭಿಪ್ರಾಯ ಹೀಗೆ : ''ಅದಕ್ಕೆ ಕಾರಣ ಇಲ್ಲಿಯ ಸಂಗೀತ ನಿರ್ದೇಶಕರೇ ಅನ್ನಿಸುತ್ತದೆ. ಇದೊಂದು ಪೈಪೋಟಿಯ ವಿಷಯ. ಚೆನ್ನ, ಅತಿ ಚೆನ್ನ, ಶ್ರೀಮಂತ ಆಗಿರಲೇಬೇಕೆಂಬ ಕಾರಣಕ್ಕೆ, ಹಾಗೆ ಆಗಬೇಕಾದರೆ ಪರಿಣತರಾಗಿರುವ ಮದರಾಸಿನವರೇ ಅಗತ್ಯ ಎಂದು ಭಾವಿಸಿದರು. ಇವರಿಗೆ ಕಂಡಕ್ಟರ್ ಅರೇಂಜರ್‌ಗಳೆಲ್ಲ ಮದರಾಸಿನವರೇ. ಅವರು ಮದರಾಸಿನಿಂದಲೇ ವಾದ್ಯಗಾರರನ್ನು ಕರೆಸಿಕೊಳ್ಳುತ್ತಿದ್ದರು. ಬಾಯಿ ಮಾತಿನಲ್ಲಿ ಮ್ಯೂಸಿಕ್ ಬ್ಯಾಂಕ್, ವಾಯ್ಸ್ ಬ್ಯಾಂಕ್ ಎಂತ ಪ್ರಚಾರ ಮಾಡಿಕೊಂಡರಾಗಲಿ, ಇದರಿಂದ ಕನ್ನಡ ಚಿತ್ರ ಸಂಗೀತಗಾರರಿಗೆ ಎಳ್ಳಷ್ಟೂ ಪ್ರಯೋಜನವಾಗಲಿಲ್ಲ. ಚಿತ್ರಕ್ಕೆ ಕನಿಷ್ಠ ಒಬ್ಬರನ್ನು ತೊಡಗಿಸಿಕೊಂಡು ತಯಾರಿ ಕೊಟ್ಟಿದ್ದರೂ ಕರ್ನಾಟಕದಲ್ಲಿ ಈ ಬಗೆಯ ಸಂಗೀತಗಾರರು ಬೆಳೆಯುತ್ತಿದ್ದರು. ಇದೇ ಮಾತು ಹಿನ್ನೆಲೆ ಗಾಯಕರಿಗೂ ಅನ್ವಯಿಸುತ್ತದೆ.

''ಇದಿಷ್ಟೇ ಅಲ್ಲ, ಇಲ್ಲಿಯ ಸಂಗೀತಗಾರರಲ್ಲಿ ವೃತ್ತಿಬದ್ಧತೆ ಇಲ್ಲ. ರಿಕಾರ್ಡಿಂಗ್‌ಗೆ ಬರುತ್ತೇವೆಂದು ಬರದಿರುವುದು, ಸಂಜೆಯ ಕಛೇರಿ ಮತ್ತಿತರ ಕಾರ್ಯಕ್ರಮವಿದ್ದರೆ ಮೊದಲೇ ತಿಳಿಸಿರುವುದಿಲ್ಲ. ಹೀಗೆ ಹಲವಾರು ಜವಾಬ್ದಾರಿರಹಿತ ಸಂಗತಿಗಳಿವೆ. ಇದು ನಮ್ಮವರ ನ್ಯೂನತೆ. ಇದು ನನ್ನ ಅನುಭವಕ್ಕೇ ಬಂದಿರುವ ಸಂಗತಿ. ಇನ್ನೂ ಕಾಲ ಮಿಂಚಿಲ್ಲ. ನಮ್ಮ ಸಂಗೀತಗಾರರೆಲ್ಲ ಒಬ್ಬೊಬ್ಬರನ್ನಾದರೂ ಅವಕಾಶವಿತ್ತು ಬೆಳೆಸಿದರೆ ನಮ್ಮಲ್ಲೇ ಸಂಗೀತ, ಸಂಗೀತಗಾರ ಹುಟ್ಟುವುದೂ ಸಾಧ್ಯ. ಇವೆಲ್ಲ ಬರೀ ಸಂಘ ಮಾಡಿದರೆ ಆಗುವಂಥದ್ದಲ್ಲ. ಸಂಘಗಳು ಸಮರ್ಥರು ಇರುವ ತನಕ, ಅವರ ಆಸಕ್ತಿ ಹೋದರೆ ಉಳಿದವರೂ ಸಪ್ಪೆಯಾಗುತ್ತಾರೆ.

''...ನನ್ನ ಅಭಿಪ್ರಾಯದಲ್ಲಿ, ದಿ ಸಾಂಗ್, ನಾಟ್ ದಿ ಸಿಂಗರ್ ಈಸ್ ಇಂಪಾರ್ಟೆಂಟ್. ಹಾಡು ಎಷ್ಟು ಚೆನ್ನಾಗಿರುತ್ತದೆಯೋ ಹಾಗೆಯೇ ಜನರನ್ನು ಒಲಿಸಿಕೊಳ್ಳುತ್ತದೆ. ಹೆಸರಾಂತ ಹಾಡುಗಾರ ಹಾಡಿದರೆ ಹಾಡಿಗೆ ಒಂದು ಕಳೆ - ಜೀವ ತುಂಬಿಬರುತ್ತದೆ. ಜನರನ್ನೂ ಒಲಿಸಿಕೊಳ್ಳುತ್ತದೆ. ಕ್ಯಾಸೆಟ್ ಮಾರಾಟಕ್ಕೂ ಅನುಕೂಲವಾಗುತ್ತದೆ. ಇದು ಸಾಮಾನ್ಯವಾಗಿ ಇರುವ ಲಕ್ಷಣ. ಯಾವುದೇ ಹಾಡು ಅವನು ಹಾಡಿದ ತಕ್ಷಣ ಸೂಪರ್‌ಹಿಟ್ ಆಗದಿರಬಹುದು. ಹಾಡು ಚೆನ್ನಾಗಿದ್ದರೆ ಜನ ಮುಗಿ ಬೀಳುತ್ತಾರೆ ಎಂಬುದೂ ಸತ್ಯ ಸಂಗತಿ.''

ಕಾವೇರಿಯ ಕಾವು ದಿನದಿಂದ ದಿನಕ್ಕೆ ಹೆಚ್ಚಾಗತೊಡಗಿತು. ಪ್ರತಿಭಟನೆಯ ತೀವ್ರತೆಯನ್ನು ಹೆಚ್ಚಿಸಲು ಒಬ್ಬೊಬ್ಬರೇ ಹೇಳಿಕೆಗಳನ್ನು ಕೊಡುತ್ತಾ ೧೯೯೨ರ ಜನವರಿಯಲ್ಲಿ ಬೆಂಗಳೂರಿನಲ್ಲಿ ನಡೆಯಲಿದ್ದ ಅಂತರರಾಷ್ಟ್ರೀಯ ಚಿತ್ರೋತ್ಸವವನ್ನು ಬಹಿಷ್ಕರಿಸಲು ಆರಂಭಿಸಿದರು. ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದೆಂಬ ಅರಿವಿದ್ದರೂ ಮುಖ್ಯಮಂತ್ರಿ ಬಂಗಾರಪ್ಪ ಚಿತ್ರೋತ್ಸವವನ್ನು ನಡೆಸುವ ತೀರ್ಮಾನಕ್ಕೆ ಬದ್ಧರಾದರು. ಆದರೆ ರಾಜ್ಯ ರೈತ ಸಂಘ, ಕರ್ನಾಟಕ ಚಿತ್ರೋದ್ಯಮ, ಸಾಹಿತಿಗಳು, ಕನ್ನಡ ಹೋರಾಟಗಾರರು ಚಿತ್ರೋತ್ಸವ ನಡೆಯುವುದಕ್ಕೆ ವಿರುದ್ಧವಾಗಿದ್ದರು.

೧೨ ವರ್ಷಗಳ ನಂತರ ಬೆಂಗಳೂರಿನಲ್ಲಿ ನಡೆದ ೨೩ನೆಯ ಅಂತರರಾಷ್ಟ್ರೀಯ ಚಿತ್ರೋತ್ಸವವನ್ನು ರಾಜ್ಯಪಾಲ ಖುರ್ಷಿದ್ ಆಲಂಖಾನ್ ಉದ್ಘಾಟಿಸಿದರು. ಕೇಂದ್ರ ವಾರ್ತಾ ಮತ್ತು ಪ್ರಸಾರ ಖಾತೆಯ ಸಚಿವ ಅಜಿತ್ ಪಾಂಜಾ ಉತ್ಸವದ ಉಸ್ತುವಾರಿ ನಿರ್ವಹಿಸಿದರು. ಜ್ಯೋತಿ ಬೆಳಗಿಸಲು ನೆರವಿಗಾಗಿ ಬರಬೇಕಾಗಿದ್ದ ನಟಿ ರೇಖಾ ಕೊನೆಗಳಿಗೆಯಲ್ಲಿ ಗೈರು ಹಾಜರಾಗಿದ್ದರಿಂದ ಆ ಕೆಲಸವನ್ನು ರವೀನಾ ಟಂಡನ್ ನಿರ್ವಹಿಸಿದರು. ಮುಖ್ಯಮಂತ್ರಿ ಎಸ್.ಬಂಗಾರಪ್ಪ, ಕೇಂದ್ರ ವಾರ್ತಾ ಮತ್ತು ಪ್ರಸಾರ ಖಾತೆಯ ಉಪಸಚಿವೆ ಗಿರಿಜಾ ವ್ಯಾಸ್, ಸಚಿವ ಎಸ್.ರಮೇಶ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. ವೇದಿಕೆಯು ರಂಗಕರ್ಮಿ ಆರ್.ನಾಗೇಶ್, ಶ್ರೀನಿವಾಸ್ ಜಿ.ಕಪ್ಪಣ್ಣ ಮೇಲ್ವಿಚಾರಣೆಯಲ್ಲಿ ಸುಂದರವಾಗಿ ರೂಪುಗೊಂಡಿತ್ತು. ಉದ್ಯಮದ ಬಹಿಷ್ಕಾರವನ್ನು ಉಪೇಕ್ಷಿಸಿ ಗಿರೀಶ್ ಕಾರ್ನಾಡ್, ಕುಮಾರ್ ಬಂಗಾರಪ್ಪ ಮುಂತಾದವರು ಸಮಾರಂಭದಲ್ಲಿ ಭಾಗವಹಿಸಿದ್ದರು. ಈ ಚಿತ್ರೋತ್ಸವದಲ್ಲಿ ಬೆಂಗಳೂರಿನ ಪ್ರಮುಖ ವೃತ್ತಗಳಲ್ಲಿ ಚಲನಚಿತ್ರ ಗಣ್ಯರಿಗೆ ಬದಲಾಗಿ ಮುಖ್ಯಮಂತ್ರಿ ಹಾಗೂ ಇತರ ರಾಜಕಾರಣಿಗಳ ಬೃಹತ್ ಕಟೌಟ್‌ಗಳನ್ನು ನಿಲ್ಲಿಸಿದ್ದುದು ಪತ್ರಿಕೆಗಳು ಹಾಗೂ ಸಾರ್ವಜನಿಕರಿಂದ ಟೀಕೆಗೆ ಗುರಿಯಾಯಿತು.

ಅಂತರರಾಷ್ಟ್ರೀಯ ಚಲನಚಿತ್ರೋತ್ಸವವನ್ನು ಕಾವೇರಿ ನೀರು, ಕನ್ನಡಕ್ಕೆ ತಳುಕು ಹಾಕಿ ಪ್ರತಿಭಟಿಸಿದ್ದೇ ಒಂದು ರೋಚಕ ಕಥೆಯಂತಿತ್ತು.

ಚಿತ್ರನಟರಾದ ವಿಷ್ಣುವರ್ಧನ್, ಅಂಬರೀಷ್ ಹೆಸರಿನಲ್ಲಿ ಚಿತ್ರೋತ್ಸವವನ್ನು ಬಹಿಷ್ಕರಿಸುವ ಜಾಹಿರಾತುಗಳು ಪ್ರಕಟವಾದವು. ಆ ಸಮಯದಲ್ಲಿ ಅವರಿಬ್ಬರೂ ಬೇರೆಬೇರೆ ಕಡೆ ಚಿತ್ರೀಕರಣದಲ್ಲಿದ್ದರು. ಅವರನ್ನು ದೂರವಾಣಿಯಲ್ಲಿ ಸಂಪರ್ಕಿಸಿ ಅವಸರದಲ್ಲಿ ಜಾಹಿರಾತು ಕೊಡುವುದರ ಹಿಂದೆ ಹಂಸಲೇಖ, ನಂಜುಂಡೇಗೌಡ ಪ್ರಮುಖ ಪಾತ್ರವಹಿಸಿದ್ದರು. ಅವರ ಜೊತೆಗಿದ್ದ ಮತ್ತೊಬ್ಬರೆಂದರೆ ಚಲನಚಿತ್ರ ನಿರ್ದೇಶಕರ ಸಂಘದ ಅಧ್ಯಕ್ಷರೂ ಆಗಿದ್ದ ಎಸ್.ವಿ.ರಾಜೇಂದ್ರಸಿಂಗ್ ಬಾಬು. ಈ

ಪ್ರಚಾರದ ಅಬ್ಬರ ಕರ್ನಾಟಕದ ಜನತೆಯಲ್ಲಿ ವಿಚಿತ್ರ ಸಂಚಲನವನ್ನೇ ಉಂಟುಮಾಡಿತ್ತು. ಚಿತ್ರೋತ್ಸವದ ವ್ಯವಸ್ಥಾಪಕರು ತಲ್ಲಣಿಸಿ ಹೋದರು. ಇದೇ ಚಿತ್ರೋತ್ಸವವನ್ನು ಉದ್ಘಾಟಿಸಬೇಕಿದ್ದ ರಾಜಕುಮಾರ್ ಅವರಿಗೆ ಉಭಯಸಂಕಟದ ಸ್ಥಿತಿ. ಅವರಿಗೆ ಅಂತರರಾಷ್ಟ್ರೀಯ ಚಿತ್ರೋತ್ಸವಕ್ಕೂ ಪ್ರಾದೇಶಿಕ ಭಾಷಾ ಸಮಸ್ಯೆಗೂ ತಳುಕು ಹಾಕುವುದು ಸರಿಯಲ್ಲ; ಅದು ರಾಜ್ಯಕ್ಕೆ ಶೋಭೆ ತರುವ ಸಂಗತಿಯಲ್ಲ ಎಂಬ ಅರಿವಿತ್ತು. ಆದರೆ ಜನರಲ್ಲಿ ಕನ್ನಡ ಪ್ರೀತಿ, ತಮಿಳಿನ ದ್ವೇಷ ದಳ್ಳುರಿಯಂತೆ ಹಬ್ಬಿತ್ತು. ಅದೊಂದು ಸಮೂಹ ಸನ್ನಿ. ತೀರ್ಮಾನ ಕೈಗೊಳ್ಳುವುದು ಸುಲಭವಿರಲಿಲ್ಲ. ರಾಜಕುಮಾರ್ ಇವೆಲ್ಲ ನಡೆಯುತ್ತಿದ್ದಾಗ ಅವರ ಗ್ರಾಮದಲ್ಲಿದ್ದರು. ಅಲ್ಲಿಂದ ಬರುವಾಗ ದಾರಿಯುದ್ದಕ್ಕೂ ಹೊತ್ತಿ ಉರಿವ ಮನೆಗಳು, ನೊಂದವರ ಆರ್ತನಾದ ನೋಡಿಕೊಂಡೇ ಬಂದರು. ವ್ಯಥಿತ ಮನಸ್ಸು ಯಾವ ಸಂತೋಷ, ಉತ್ಸವಗಳನ್ನೂ ಒಲ್ಲೆನೆಂದಿತ್ತು. ಅಂಥದೇ ಹೇಳಿಕೆ ಕೊಟ್ಟು ತಾವು ಯಾವುದೇ ಸಮಾರಂಭದಲ್ಲಿ ಭಾಗವಹಿಸುವುದಿಲ್ಲ ಎಂದುಬಿಟ್ಟರು. ಮತ್ಯಾರ ಪ್ರಯತ್ನ, ಪ್ರಭಾವಕ್ಕೂ ಮಣಿಯಲಿಲ್ಲ. ಚಿತ್ರೋತ್ಸವ ವಿಚಿತ್ರ ಸನ್ನಿವೇಶದಲ್ಲಿ, ಭಯದ ವಾತಾವರಣದಲ್ಲಿ ನಡೆಯಿತು.

ನಿರ್ದೇಶಕರ ಸಂಘದ ಹಂಗಾಮಿ ಅಧ್ಯಕ್ಷರಾಗಿರಲು ಒಪ್ಪಿದ್ದ ನಾಗಾಭರಣ ಈ ಬಗೆಯ ಚಿತ್ರೋತ್ಸವಗಳು ಮಾಧ್ಯಮಾಸಕ್ತರಿಗೆ ಕಲಿಕೆ, ಅಧ್ಯಯನವೇ ವಿನಾ ಹಬ್ಬವಲ್ಲ ಎಂದು ಸ್ಪಷ್ಟಪಡಿಸಿದರು. ಕನ್ನಡಪರ ಹೋರಾಟಕ್ಕೆ ಬೆಂಬಲಿಸಲು ನಿರ್ದೇಶಕರು-ಸಹಾಯಕರೆಲ್ಲ ಕಪ್ಪು ಬಟ್ಟೆ ತೋಳಿಗೆ ಕಟ್ಟಿಕೊಂಡು ಉತ್ಸವದಲ್ಲಿ ಭಾಗವಹಿಸಿದರು. ಕಲಾವಿದರ ಸಂಘ ಪೂರ್ತಿಯಾಗಿ ಬಹಿಷ್ಕರಿಸಿತು. ಕುತೂಹಲದಿಂದ - ಗೊತ್ತಾಗದ ಹಾಗೆ - ಭಾಗವಹಿಸಿದ ಕೆಲವರು ಸುದ್ದಿಯಾದರು. ಕಲಾವಿದರ ಸಂಘದ ಸಭೆಯಲ್ಲಿ ಅವರನ್ನೆಲ್ಲ ಕರೆಸಿ ಪ್ರಶ್ನಿಸಲಾಯಿತು.

ಚಿತ್ರೋತ್ಸವದ ಉದ್ಘಾಟನೆಗೆ ರಾಜಕುಮಾರ್ ಒಪ್ಪಿಕೊಳ್ಳಲಿಲ್ಲ. ಪ್ರತಿಭಟನೆ, ಲಾಠಿ ಚಾರ್ಜ್, ಬಿಗಿ ಭದ್ರತೆಗಳ ನಡುವೆ ಚಿತ್ರೋತ್ಸವ ನಡೆಯಿತು. ಕಲಾವಿದರು ಉತ್ಸವದಲ್ಲಿ ಭಾಗವಹಿಸಲಿಲ್ಲ. ಕಂಠೀರವ ಸ್ಟೇಡಿಯಂನಲ್ಲಿ ನಡೆದ ಉದ್ಘಾಟನಾ ಸಮಾರಂಭದಲ್ಲಿ ಮಿಂಚಿನಂತೆ ನಾಲ್ಕೈದು ಮಂದಿ ಕನ್ನಡಪರ ಹೋರಾಟಗಾರರು ವೇದಿಕೆಗೆ ನುಗ್ಗಿ ಸಿನಿಮೀಯ ರೀತಿಯಲ್ಲಿ ಪ್ರತಿಭಟಿಸಿದರು. ಪೊಲೀಸರು ಅವರನ್ನು ಬಂಧಿಸಿದ್ದಲ್ಲದೆ ಥಳಿಸಿದರು. ಗುಂಪಿನಲ್ಲಿ ಪ್ರಮುಖರಾಗಿದ್ದ ನಿರ್ದೇಶಕ ಕೋಡಳ್ಳಿ ಶಿವರಾಂರನ್ನು ಪೊಲೀಸರು ಲಾಕಪ್‌ನಲ್ಲಿ ಕೂಡಿಹಾಕಿ ಥಳಿಸಿದ್ದು ವಿವಾದವಾಯಿತು. ದೊಡ್ಡ ಸುದ್ದಿಯಾದ ಈ ಪ್ರಸಂಗ ಮುಖ್ಯಮಂತ್ರಿ ಬಂಗಾರಪ್ಪ ನೇತೃತ್ವದ ರಾಜ್ಯ ಸರ್ಕಾರಕ್ಕೆ ಇರಿಸು ಮುರಿಸನ್ನು ತಂದಿತು.

ಕಾವೇರಿ ಜಲವಿವಾದದ ಕಾವು ಕೇವಲ ಕರ್ನಾಟಕಕ್ಕೆ ಸೀಮಿತವಾಗಿರಲಿಲ್ಲ. ತಮಿಳುನಾಡಿನಲ್ಲಿ ಅದರ ತೀವ್ರತೆ ಸಾಕಷ್ಟಿತ್ತು. ಹೆಚ್ಚು ನೀರು ಬೇಕೆಂದು ಅಲ್ಲಿ ಧರಣಿ ಕುಳಿತವರಲ್ಲಿ ತಮಿಳುನಾಡಿನ ಮುಖ್ಯಮಂತ್ರಿ ಜಯಲಲಿತಾ ಕೂಡ ಇದ್ದರು. ಅವರಿಗೆ ಸಹಾನುಭೂತಿ ತೋರಲು ಅಲ್ಲಿನ ಚಲನಚಿತ್ರ ಕಲಾವಿದರು ಕೂಡ ಮುಂದಾದರು. ಹೀಗೆ ಜಯಲಲಿತಾರನ್ನು ಭೇಟಿ ಆದವರಲ್ಲಿ ರಜನೀಕಾಂತ್, ಕಮಲಹಾಸನ್, ಶ್ರೀದೇವಿ ಮುಖ್ಯರು. ಇವರೆಲ್ಲ ಜಯಲಲಿತಾಗೆ ಬೆಂಬಲ ಸೂಚಿಸಿದ್ದು ಕರ್ನಾಟಕದಲ್ಲಿ ಗದ್ದಲ ಉಂಟುಮಾಡಿತು. ಈ ಮೂವರು ಕಲಾವಿದರು ಅಭಿನಯಿಸಿದ ಚಿತ್ರಗಳ ಪ್ರದರ್ಶನಕ್ಕೆ ಕರ್ನಾಟಕದಲ್ಲಿ ಬಹಿಷ್ಕಾರ ಹಾಕಲು ಕನ್ನಡಪರ ಸಂಘಟನೆಗಳು ತೀರ್ಮಾನ ಮಾಡಿದವು. ಕನ್ನಡಿಗರ ಈ ನಿರ್ಧಾರದಂತೆ ೧೯೯೨ ರಲ್ಲಿ ಬಹಿಷ್ಕಾರಕ್ಕೆ ಬಲಿಯಾದ ಮೊದಲ ಚಿತ್ರ ರಜನೀಕಾಂತ್ ಅಭಿನಯದ 'ಉಳೈಪಾಳಿ'. ಇದನ್ನು ಬಿಡುಗಡೆ ಮಾಡಲು ಕನ್ನಡಿಗರು ಅವಕಾಶ ಕೊಡಲಿಲ್ಲ. ಆಗ ರಜನೀಕಾಂತ್ ಗುಟ್ಟಾಗಿ ಬೆಂಗಳೂರಿಗೆ ಬಂದು ಕಾರ್ಮಿಕರ ಒಕ್ಕೂಟದ ನಾಯಕ ಅಶೋಕ್ ಹಾಗೂ ರಾಜಕುಮಾರ್ ಅವರುಗಳನ್ನು ಭೇಟಿ ಮಾಡಿ ಸಹಕರಿಸಲು ಮನವಿ ಮಾಡಿದರು. ಆದರೆ ಅವರುಗಳು ಏನೂ ಮಾಡುವ ಸ್ಥಿತಿಯಲ್ಲಿ ಇರಲಿಲ್ಲ. ಇದಾದ ಎಂಟು ತಿಂಗಳ ನಂತರ ಶ್ರೀದೇವಿ ನಟಿಸಿದ ಹಿಂದಿ ಚಿತ್ರ 'ಗುಮ್‌ರಾಹ್' ಬಿಡುಗಡೆಯಾದಾಗ ಈ ಪ್ರತಿಭಟನೆ ಮತ್ತೆ ಕಾಣಿಸಿಕೊಂಡಿತು. ಆಗ ಮಧ್ಯಸ್ಥಿಕೆ ವಹಿಸಿದ ಚಲನಚಿತ್ರ ವಾಣಿಜ್ಯ ಮಂಡಳಿಯು ಶ್ರೀದೇವಿ ಕ್ಷಮೆ ಕೇಳಿದ್ದಾರೆಂಬ ಅರ್ಥ ಬರುವಂತೆ ಒಂದು ಜಾಹಿರಾತನ್ನು ಪ್ರಕಟಿಸಿತು. ಇದು ಅಸ್ಪಷ್ಟ ಹಾಗೂ ಅನುಮಾನಾಸ್ಪದವಾಗಿತ್ತು. ಇದು ಪ್ರಕಟವಾದ ಒಂದೆರಡು ದಿನದಲ್ಲೇ ಶ್ರೀದೇವಿಯ ಇನ್ನೊಂದು ಹೇಳಿಕೆ ಪ್ರಕಟವಾದದ್ದು ಅನುಮಾನವನ್ನು ಇನ್ನಷ್ಟು ಬಲಪಡಿಸಿತು. ಆಗ ಕೆರಳಿದ ಕನ್ನಡದ ಕಾರ್ಯಕರ್ತರು ವಾಣಿಜ್ಯ ಮಂಡಳಿಯ ಮುಂದೆ ಘೇರಾಯಿಸಿ ಪ್ರತಿಭಟಿಸಿದರು. ಆಗ ಕನ್ನಡದ ನಿರ್ದೇಶಕರೊಬ್ಬರು ಮೊದಲಿನ ಹೇಳಿಕೆಯನ್ನು ಆಕೆಯ ಪರವಾಗಿ ತಾವು ಸಿದ್ಧಪಡಿಸಿದ್ದಾಗಿ ತಪ್ಪೊಪ್ಪಿಕೊಂಡರು. ಇಡೀ ಪ್ರಕರಣವು ನಿಗೂಢವಾಗಿ ಮುಕ್ತಾಯಗೊಂಡಿತು. ಈ ಹಿಂದೆ ಶ್ರೀದೇವಿ ಅಭಿನಯದ 'ಗುರುದೇವ್' ಬಿಡುಗಡೆಯಾದಾಗ ಕನ್ನಡ ಸಂಘಟನೆಗಳು ಪ್ರತಿಭಟಿಸಿರಲಿಲ್ಲ. ಆಗ ಸುಮ್ಮನಿದ್ದ



(ಚಿತ್ರ ೪) ಬೆಂಗಳೂರಿನಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಉದ್ಘಾಟನಾ ಸಮಾರಂಭ - ಸಚಿವ ಎಸ್.ರಮೇಶ್, ರಾಜ್ಯಪಾಲ ಖುರ್ಷಿದ್ ಆಲಂಖಾನ್, ಕೇಂದ್ರ ಸಚಿವ ಅಜಿತ್ ಪಾಂಜಾ, ನಟಿ ರವೀನಾ ಟಂಡನ್, ಮುಖ್ಯಮಂತ್ರಿ ಎಸ್.ಬಂಗಾರಪ್ಪ ಮತ್ತು ಕೇಂದ್ರ ಸಚಿವೆ ಗಿರಿಜಾ ವ್ಯಾಸ್.

ಹೋರಾಟಗಾರರು ಈಗೇಕೆ ಪ್ರತಿಭಟಿಸಿವರು ಎಂಬ ಅನುಮಾನ ಉಳಿದುಕೊಂಡಿತು. ಇವರೊಂದಿಗೆ ಬೇರೆ ಚಿತ್ರಮಂದಿರಗಳಲ್ಲಿ 'ಗುಮ್‌ರಾಹ್' ಇದ್ದರೂ ಪ್ರತಿಭಟನೆ ನಡೆದದ್ದು ಬೆಂಗಳೂರಿನ ತ್ರಿವೇಣಿ ಚಿತ್ರಮಂದಿರದ ಎದುರು ಮಾತ್ರ.

ಪ್ರಾಮಾಣಿಕತೆ, ಮೌಲ್ಯ ಪ್ರಜ್ಞೆಯ ಶಿಥಿಲೀಕರಣ ಆರಂಭವಾಗಿದ್ದುದು ೧೯೮೦ರ ದಶಕದಲ್ಲಿ. ವೇಗಗೊಂಡದ್ದು ೧೯೯೦ರ ನಂತರದಲ್ಲಿ. ಲೋಭ, ಅವಸರ, ಕೆಟ್ಟ ಅನುಕರಣೆ, ತಂತ್ರ - ಇಂಥವು ವಿಜೃಂಭಿಸತೊಡಗಿದ್ದು ಸ್ಪಷ್ಟವಾಗಿ ಇದೇ ದಶಕದಲ್ಲಿ. ನಿರ್ಮಾಪಕರು, ನಿರ್ದೇಶಕರು ತಮ್ಮ ಚಟುವಟಿಕೆ, ಕ್ರಿಯೆಗಳಲ್ಲಿ ಯಾವುದೇ ತತ್ವ, ಸಿದ್ಧಾಂತ, ಕಳಕಳಿಗಳನ್ನು ಹೊಂದಿಲ್ಲದಿರುವುದು ಮೇಲ್ನೋಟಕ್ಕೇ ಢಾಳಾಗಿ ಕಂಡುಬರುತ್ತದೆ. ಒಂದು ಚಿತ್ರ ಯಾವುದಾದರೂ ಕಾರಣಕ್ಕೆ ಯಶಸ್ಸು ಗಳಿಸಿದರೆ ಅದರ ಹೆಸರಿನ ಅರ್ಧಭಾಗವನ್ನು ಕಥೆಗೆ ಹೊಂದದಿದ್ದರೂ ಅಂಧರಂತೆ ಅನುಕರಣೆ ಮಾಡುತ್ತಾ ಹೋಗಿದ್ದಾರೆ. ಕೆಟ್ಟ ಸ್ವರೂಪದ್ದೆಂದು ಕರೆಯಲ್ಪಡುವಂಥದ್ದೇ ಈ ದಶಕದಲ್ಲಿ ಗೌರವ, ಪ್ರಚಾರ, ಮನ್ನಣೆ ಪಡೆಯುತ್ತಾ ಹೋಗಿದೆ. ಇದನ್ನು ವಿವರಗಳ ಮೂಲಕ ಅವಲೋಕಿಸುವ ಮುನ್ನ ಈ ಹೆಸರುಗಳ ಅಂಧಾನುಕರಣೆಯ ಉದಾಹರಣೆಯೊಂದನ್ನು ಉಲ್ಲೇಖಿಸಬಹುದು.

೧೯೮೦ರ ದಶಕದ ಕೊನೆಯಲ್ಲಿ ರವಿಚಂದ್ರನ್‌ರ 'ನಾನೂ ನನ್ನ ಹೆಂಡ್ತಿ' ಬಿಡುಗಡೆಯಾಯಿತು. ದ್ವಂದ್ವಾರ್ಥ, ಅಶ್ಲೀಲತೆ ತುಂಬಿಕೊಂಡಿತ್ತು. ಆದರೆ ಚಿತ್ರದ ಕಥಾ ನಿರ್ವಹಣೆಯಲ್ಲಿ ಲವಲವಿಕೆಯಿತ್ತು. ಸಾನ್ನಿವೇಶಿಕ ಹಾಸ್ಯ ಇದ್ದುದರಿಂದ



(ಚಿತ್ರ ೫೫) 'ಭುಜಂಗಯ್ಯನ ದಶಾವತಾರ' ಚಿತ್ರದಲ್ಲಿ ಲೋಕೇಶ್ ಮತ್ತು ಪಲ್ಲವಿ ಜೋಷಿ

ಪ್ರೇಕ್ಷಕನಿಗೆ ಆಪ್ತವಾಯಿತು. ರವಿಚಂದ್ರನ್‌ಗೆ ಆಗ ಖ್ಯಾತ ರಂಗನಿರ್ದೇಶಕ ಶ್ರೀನಿವಾಸಪ್ರಭು ಕಂಠದಾನ ಮಾಡುತ್ತಿದ್ದುದರಿಂದ, ಹಾಸ್ಯ ಸಂಭಾಷಣೆಗೆ ಬೇಕಾದ ಪರಿಳಿತ, ಒತ್ತು ಇರುತ್ತಿತ್ತು. 'ಪಂಚ್'ಗಳು ಸರಿಯಾಗಿ ಪ್ರೇಕ್ಷಕನನ್ನು ತಲುಪಿದವು. ಚಿತ್ರ ಯಶಸ್ವಿಯಾಯಿತು. ಇದನ್ನು ಅನುಸರಿಸಿ ನಂತರ ಇದರ ಛಾಯೆಯಲ್ಲಿಯೇ ಕೇವಲ ಎರಡು ವರ್ಷಗಳಲ್ಲಿ 'ಅವಳೇ ನನ್ನ ಹೆಂಡ್ತಿ', 'ಗಂಡನಿಗೆ ತಕ್ಕ ಹೆಂಡ್ತಿ', 'ಪುಟ್ಟ ಹೆಂಡ್ತಿ', 'ಪೊಲೀಸ್‌ನ ಹೆಂಡ್ತಿ', 'ಬೊಂಬಾಟ್ ಹೆಂಡ್ತಿ', 'ಇಬ್ಬರು ಹೆಂಡಿರ ಮುದ್ದಿನ ಪೊಲೀಸ್', 'ಹೆಂಡ್ತೀರೇ ಹುಷಾರ್', 'ನನಗೂ ಹೆಂಡ್ತೀ ಬೇಕು', 'ಎದುರು ಮನೇಲಿ ಗಂಡ ಪಕ್ಕದ್ಮನೇಲಿ ಹೆಂಡ್ತಿ', 'ಹೆಂಡ್ತಿ ಹೇಳಿದರೆ ಕೇಳಬೇಕು' ಮುಂತಾದ ಚಿತ್ರಗಳು ತಯಾರಾದವು. ಈ ಚಿತ್ರಗಳಲ್ಲಿ ಬಹುತೇಕವು ತೆಲುಗು ಚಿತ್ರಗಳ ರೀಮೇಕ್‌ಗಳಾಗಿದ್ದವು.

ಚಲನಚಿತ್ರಗಳ ಹೆಸರುಗಳ ಅಂಧಾನುಕರಣೆ, ದ್ವಂದ್ವಾರ್ಥ ಇವು ೧೯೯೦ರ ದಶಕದ ಅಧಃಪತನಕ್ಕೆ ಇನ್ನೊಂದು ಸೂಚನೆ. ಬೈಗುಳ, ಆಕ್ಷೇಪಣೆ ಹಾಗೂ ಅಯೋಗ್ಯತನ ಎಂದು ಸಮಾಜದಲ್ಲಿ ಪರಿಗಣಿಸಲ್ಪಡುವ ಕೆಟ್ಟ ಪದಗಳು ಸಿನಿಮಾ ಮಾಧ್ಯಮದಲ್ಲಿ ಮಿನುಗತೊಡಗಿದ್ದು ದುರಂತ. ೧೯೭೮ ರಲ್ಲಿ ತೆರೆಕಂಡ 'ತಾಯಿಗೆ ತಕ್ಕ ಮಗ' ಹಾಗೂ ೧೯೯೨ ರಲ್ಲಿ 'ತರ್ಲೆ ನನ್ಮಗ' ಇವೆರಡು ಹೆಸರುಗಳ ಅರ್ಥ/ಅನರ್ಥ ೧೪ ವರ್ಷಗಳ ಅಂತರದಲ್ಲಿ ಚಲನಚಿತ್ರ ಸಂಸ್ಕೃತಿ ಎಷ್ಟೊಂದು ಹೀನಾಯ ಮಟ್ಟಕ್ಕೆ ಇಳಿದಿತ್ತೆಂಬುದಕ್ಕೆ ನಿದರ್ಶನ. ಕನ್ನಡ ಚಿತ್ರಗಳ ಬಗ್ಗೆ ಸದಭಿರುಚಿಯ ಪ್ರೇಕ್ಷಕರಲ್ಲಿ ಜಿಗುಪ್ಸೆ, ತಿರಸ್ಕಾರ ಮೂಡತೊಡಗಿದ್ದು ಈ ಹಂತದಲ್ಲಿಯೇ. ಇಷ್ಟೇ ಅಲ್ಲ, ಇಂಥ ಕೆಟ್ಟ ಚಿತ್ರಗಳನ್ನು ನೋಡುವ ಒಂದು ಪ್ರತ್ಯೇಕ ವರ್ಗವೇ ಈ ದಶಕದಲ್ಲಿ ಸೃಷ್ಟಿಯಾಯಿತು. 'ಪುಗಸಟ್ಟೆ ಗಂಡ ಹೊಟ್ಟೆ ತುಂಬ ಉಂಡ', 'ಬನ್ನಿ ಒಂದ್ಸಲ ನೋಡಿ', 'ಮನೇಲಿ ಇಲಿ ಬೀದೀಲಿ ಹುಲಿ', 'ತರ್ಲೆ ನನ್ಮಗ', 'ಲವ್ ಟ್ರೈನಿಂಗ್', 'ಭಂಡ ನನ್ನ ಗಂಡ', 'ಸೂಪರ್ ನನ್ಮಗ', 'ಬಲ್ ನನ್ಮಗ', 'ಅಲ್ಲಿ ರಾಮಾಚಾರಿ ಇಲ್ಲಿ ಬ್ರಹ್ಮಚಾರಿ', 'ಅನುಕೂಲಕ್ಕೊಬ್ಬ ಗಂಡ', 'ರೆಡಿಮೇಡ್ ಗಂಡ', 'ಅಲ್ಲೇ ಇರೋದು ನೋಡಿ', 'ಆಹಾ ಬ್ರಹ್ಮಚಾರಿ', 'ಅಪ್ಪ ನಂಜಪ್ಪ ಮಗ ಗುಂಜಪ್ಪ', 'ಕೋಣ ಈದೈತೆ', 'ಬೊಂಬಾಟ್ ರಾಜ ಬಂಡಲ್ ರಾಣಿ', 'ಇಬ್ಬರು ಹೆಂಡಿರ ಮುದ್ದಿನ ಪೊಲೀಸ್', 'ಪೋಲಿ ಹುಡುಗ', 'ಪೋಲಿ ಭಾವ' ಇಂಥ ಚಿತ್ರಗಳು ಈ 'ವಿಶೇಷ' ವರ್ಗವನ್ನು ದೃಷ್ಟಿಯಲ್ಲಿರಿಸಿಕೊಂಡೇ ನಿರ್ಮಾಣವಾದವು. ವಿಚಿತ್ರವೆಂದರೆ 'ಅವಳೇ ನನ್ನ ಹೆಂಡ್ತಿ'ಯಂಥ ಸದಭಿರುಚಿಯ ಚಿತ್ರವನ್ನು ನಿರ್ದೇಶಿಸಿದ್ದ ಎಸ್.ಉಮೇಶ್ ಕೇವಲ ತಮ್ಮ ಉಳಿವಿಗಾಗಿ 'ಬನ್ನಿ ಒಂದ್ಸಲ ನೋಡಿ' ಹಾಗೂ 'ಮುಟ್ಟಿದರೆ ತಟ್ ಬಿಡ್ತೀನಿ' ಎಂಬ ಹೆಸರುಗಳನ್ನಿಟ್ಟು ಚಿತ್ರಗಳನ್ನು ತಯಾರಿಸಿದ್ದು. ಇವೆರಡರಲ್ಲಿ ಎರಡನೆಯ ಚಿತ್ರಕ್ಕೆ ಟೀಕೆ, ಆಕ್ಷೇಪಣೆ ಬಂದಾಗ ಅವರು ಅದನ್ನು 'ಬಾಂಬೆ ದಾದ' ಎಂದು ಬದಲಾಯಿಸಿದರು. 'ಮುಟ್ಟಿದರೆ ತಟ್ ಬಿಡ್ತೀನಿ' ಹೆಸರು ಕೊಡುವ ಅರ್ಥಕ್ಕೂ, 'ಬಾಂಬೆ ದಾದ'ಗೂ ಯಾವುದೇ ಹೋಲಿಕೆ, ಸಾಮ್ಯ ಇರಲಿಲ್ಲ.

ಕೆಟ್ಟ ಹೆಸರುಗಳನ್ನಿಡುವುದರ ಸಂಖ್ಯೆ ಹೆಚ್ಚಿದಂತೆ ಅದನ್ನು ಖಂಡಿಸಿ ಪತ್ರಗಳನ್ನು ಬರೆಯುವವರು ಹೆಚ್ಚಿದರು. ಈ ಬಗ್ಗೆ ವಿಧಾನಸಭೆ, ವಿಧಾನ ಪರಿಷತ್ತುಗಳಲ್ಲೂ ವ್ಯಾಪಕ ಚರ್ಚೆ ನಡೆಯಿತು. ಯಾವುದೇ ನೀತಿ, ನಿಯಮ, ಸಂಸ್ಕೃತಿ ಇಲ್ಲದೆ ಚಿತ್ರಗಳನ್ನು ತಯಾರಿಸುತ್ತಿರುವ ಚಿತ್ರೋದ್ಯಮವನ್ನು ತೆರಿಗೆ ವಿನಾಯ್ತಿ, ಸಹಾಯಧನಗಳ ಮೂಲಕ ಪ್ರೋತ್ಸಾಹಿಸಬಾರದೆಂದು ಜನಪ್ರತಿನಿಧಿಗಳು ಗದ್ದಲವೆಬ್ಬಿಸಿದರು. ಈ ಹಂತದಲ್ಲಿ ಚಲನಚಿತ್ರ ವಾಣಿಜ್ಯ ಮಂಡಳಿ ಹಾಗೂ ಚಿತ್ರೋದ್ಯಮಕ್ಕೆ ಸಂಬಂಧಪಟ್ಟ ಇತರ ಸಂಸ್ಥೆಗಳು ಎಚ್ಚರಗೊಂಡವು. ಕೇಂದ್ರ ವಾರ್ತಾ ಇಲಾಖೆಯು ಸೆನ್ಸಾರ್ ಹಾಗೂ ಚಿತ್ರ ಪ್ರಚಾರದ ಬಗ್ಗೆ ತಿಳಿಸಿರುವ ಮಾರ್ಗದರ್ಶಿ ಸೂತ್ರಗಳನ್ನು ನಮೂದಿಸಿ ನಿರ್ಮಾಪಕರಿಗೆ ಎಚ್ಚರಿಕೆ ಕೊಡುವ ಸುತ್ತೋಲೆಗಳನ್ನು ಕಳುಹಿಸಿಕೊಟ್ಟವು. ಈ ಬಗ್ಗೆ ಹೆಚ್ಚು ಆಸಕ್ತಿ ವಹಿಸಿದವರು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಗೆ ಸತತವಾಗಿ ೧೯೯೧ ರಲ್ಲಿ ಮೂರನೆಯ ಬಾರಿಗೆ ಆಯ್ಕೆಯಾಗಿದ್ದ ಸಿ.ವಿ.ಎಲ್.ಶಾಸ್ತ್ರಿ.

ಚಲನಚಿತ್ರಗಳ ಪೋಸ್ಟರ್ ಹಾಗೂ ಪ್ರಚಾರ ಜಾಹಿರಾತು ವಿನ್ಯಾಸಗಳನ್ನು ಒಪ್ಪಬೇಕಾಗಿರುವ ಅಧಿಕಾರವನ್ನು ವಾಣಿಜ್ಯ ಮಂಡಳಿ ಚಲಾಯಿಸುತ್ತಿತ್ತು. ಏಕೆಂದರೆ ಇವು ಕೂಡ ಸದಭಿರುಚಿಯ ಎಲ್ಲೆಯನ್ನು ದಾಟಿ ನಿಂತಿದ್ದವು. ಈಗ ಹೆಸರುಗಳ ಬಗ್ಗೆಯೂ ಜಾಗೃತವಾಗಿರಲೇಬೇಕಾದ ಸ್ಥಿತಿ ಸೃಷ್ಟಿಯಾಗಿತ್ತು. ಚಿತ್ರವೊಂದರ ಶೀರ್ಷಿಕೆಯ ಅರ್ಥ ತಿಳಿಯದೆ ವಾಣಿಜ್ಯ ಮಂಡಳಿ ಶೀರ್ಷಿಕೆಯನ್ನು ರದ್ದು ಮಾಡಬೇಕಾಯಿತು.

ದೇವರು, ನ್ಯಾಯಾಲಯ, ನಂಬಿಕೆ ಹಾಗೂ ಗಣ್ಯವ್ಯಕ್ತಿಗಳ ಅವಹೇಳನ ನಡೆಯತೊಡಗಿದ್ದು ಕೂಡ ಇದೇ ದಶಕದಲ್ಲಿ. ದೇವರನ್ನು ವಿದೂಷಕನಂತೆ ತೋರಿಸುವ ಮನೋವಿಕಾರವೂ ಹಲವಾರು ಚಿತ್ರಗಳಲ್ಲಿ ಕಾಣಿಸಿಕೊಂಡಿತು. ದೇವರುಗಳನ್ನು ಬರೀ ಸಂಭಾಷಣೆಯಲ್ಲಷ್ಟೇ ಕೊಲ್ಲದೆ, ವಾಹನಗಳ ಮೇಲೂ ಕೂರಿಸಿ ತಮಾಷೆ ನೋಡುವ ಪ್ರಯತ್ನವನ್ನು ಕೆಲವರು ಮಾಡಿದ್ದರು. ಕೃಷ್ಣ ಲೂನಾ ಮೇಲೆ ಬರುವುದು, ಕಾರು ಓಡಿಸುವುದು, ನಾರದ ಕ್ಯಾಬರೆ ನೋಡುವುದು, ಇಂದ್ರ ವೇಶ್ಯಾಗೃಹಕ್ಕೆ ಭೇಟಿ ಕೊಡುವುದು, ಯಮಧರ್ಮರಾಯ ಲಾಡ್ಜ್‌ಗೆ ಬಂದು ಸೋಪು ತಿನ್ನುವುದು ಇಂಥ ನೂರೆಂಟು ದೃಶ್ಯಗಳು ಕೇವಲ ಕಾಸು ಸಂಪಾದನೆಗಾಗಿ ಸೃಷ್ಟಿಯಾದವು. 'ನವತಾರೆ' ಚಿತ್ರದ ಶೌಚಾಲಯದಲ್ಲಿನ ಒಂದು ಸನ್ನಿವೇಶದಲ್ಲಿ 'ಬಾಗಿಲನು ತೆರೆದು ಸೇವೆಯನು ಕೊಡೋ ಹರಿಯೇ ಕೂಗಿದರು ಧ್ವನಿ ಕೇಳಲಿಲ್ಲವೆ' ಎಂಬ ಅತ್ಯಂತ ಜನಪ್ರಿಯ ಭಕ್ತಿಗೀತೆಯನ್ನು ಬಳಸಿರುವಂಥ ಅಭಿರುಚಿಯೂ ಪ್ರಕಟವಾಯಿತು. 'ಬೊಂಬಾಟ್ ಹೆಂಡ್ತಿ' ಚಿತ್ರದಲ್ಲಿ ರೌಡಿ ಪಾತ್ರಧಾರಿಯು ಮನೆಯ ಸಾಮಾನುಗಳನ್ನು ಒಡೆದು ಹಾಕುತ್ತಾ ಸ್ವಾಮಿ ವಿವೇಕಾನಂದರ ಪ್ರತಿಮೆಯನ್ನು ನೆಲಕ್ಕೆ ಕುಕ್ಕಿ ಪುಡಿ ಪುಡಿ ಮಾಡುತ್ತಾನೆ. ಇಂಥ ದೃಶ್ಯಗಳು ಅನೇಕ ಚಿತ್ರಗಳಲ್ಲಿದ್ದವು. ಬೇರೆ ಧರ್ಮದ ದೇವರುಗಳನ್ನು ಮುಟ್ಟುವ ಶಕ್ತಿಯಿಲ್ಲದ ನಿರ್ದೇಶಕ, ನಿರ್ಮಾಪಕರು ಅಗ್ಗವಾಗಿ

ಹಿಂದೂ ಧರ್ಮ, ದೇವರುಗಳ ಟೀಕೆಗಿಳಿದು ಅದನ್ನು ನಂಬುವ ಜನರ ಭಾವನೆಗಳಿಗೆ ನೋವುಂಟುಮಾಡತೊಡಗಿದರು. ಇವೆಲ್ಲದರ ಪರಿಣಾಮವಾಗಿ ಮೇಲ್ಮಟ್ಟದ ಅಭಿರುಚಿ, ಸಂಸ್ಕೃತಿಯನ್ನುಳ್ಳ ಜನ ಸಿನಿಮಾಗಳಿಂದ ದೂರ ಸರಿಯತೊಡಗಿದರು. ಇವರ ಜಾಗದಲ್ಲಿ ಕೀಳು ಅಭಿರುಚಿಯನ್ನು ಆಸ್ವಾದಿಸುವ 'ಹೊಸ ಪೀಳಿಗೆ' ಸೃಷ್ಟಿಯಾಯಿತು.

ಅನಂತರದ ಕೆಲವು ನಿರ್ದೇಶಕರು ಈ ಅತೃಪ್ತ ಮನಸ್ಸಿನ ದಾಹವನ್ನು ತಣಿಸಲು ಹಲವು ಬಗೆಯ ಕಥಾ ನಿರೂಪಣೆಯ ತಂತ್ರವನ್ನು ಬಳಸಿಕೊಳ್ಳಲಾರಂಭಿಸಿದರು. ಅವರ ಯೋಜನೆ ಸ್ವಲ್ಪಮಟ್ಟಿಗೆ ಯಶಸ್ವಿಯಾಗಿ, ಕಡೆಗೆ ಆ ವರ್ಗವೇ ಇವರ ಚಿತ್ರ ಪ್ರೇಕ್ಷಕರೆಂಬ ನಿಲುವಿಗೂ ಬರಬೇಕಾಯಿತು. ಇದಕ್ಕೆ ಒಂದು ಹಂತದ ಕಾಶೀನಾಥ್ ಚಿತ್ರಗಳು, ಅವರ ಜಾಡನ್ನು ಮತ್ತಷ್ಟು ವಿಸ್ತರಿಸಿಕೊಂಡ ಕೆಲವು ಪ್ರಯತ್ನಗಳು ನಮ್ಮೆದುರಿಗಿವೆ.

ಕಾವ್ಯಮಯವಾಗಿ ಸೌಂದರ್ಯ, ಅನುಭವ, ಭಾವನೆಗಳನ್ನು ವ್ಯಕ್ತ ಮಾಡಬೇಕಿದ್ದ ಗೀತೆಗಳು ವಾಚ್ಯವಾಗಿ, ಅವಾಚ್ಯವೂ ಆಗತೊಡಗಿದವು. 'ತೇಜ', 'ನನಗೂ ಹೆಂಡ್ತಿ ಬೇಕು', 'ಕಲಿಯುಗ ಸೀತೆ', 'ಮನೆದೇವ್ರು', 'ಭೂಬಾಣ', 'ಟೈಂ ಬಾಂಬ್', 'ಸರ್ಕಾರಕ್ಕೆ ಸವಾಲ್' ಮೊದಲಾದ ಚಿತ್ರಗಳಲ್ಲಿಯ ಗೀತೆಗಳ ಸಾಲುಗಳನ್ನು ಉಲ್ಲೇಖ ಮಾಡುವುದಕ್ಕೂ ಸಂಕೋಚವಾಗುತ್ತದೆ. ಹಸಿಹಸಿಯಾದ ಈ ವರ್ಣನೆಗಳಿಗೆ 'ರತಿಕೇಳಿ'ಯ ಆಂಗಿಕ ಚಲನೆಯನ್ನು ಕೊಟ್ಟು, ಕನಿಷ್ಠ ಉಡುಪಿನಲ್ಲಿ ಅಭಿವ್ಯಕ್ತಿಸುವುದರ ಹಿಂದೆ ಪ್ರೇಕ್ಷಕನನ್ನು ಉದ್ರೇಕಿಸುವುದಕ್ಕಿಂತ ಬೇರೆ ಯಾವ ಗಂಭೀರವಾದ ಕಾರಣಗಳೂ ಇಲ್ಲ. ಅಭಿವ್ಯಕ್ತಿ ಮಾಧ್ಯಮವೊಂದರ ದಯನೀಯ ಸ್ಥಿತಿ ಇದು. ಸಂಭಾಷಣೆಯಲ್ಲಿ ಸಹ ದ್ವಂದ್ವಾರ್ಥದ ಮುಸುಕೂ ಕಳಚಿ ಎಲ್ಲ ನೇರವಾಗಿಯೇ ಬರತೊಡಗಿತು. ದೇವರು-ನಂಬಿಕೆಗಳು ಉಪಮೆಗಳ ಜೊತೆ ಜೊತೆಗೆ ಬಂದ ಅಸಭ್ಯ ನುಡಿಗಳಿಗೆ 'ಗಣೇಶ ಐ ಲವ್ ಯೂ', 'ಬೊಂಬಾಟ್ ಹುಡ್ಗ' ಮೊದಲಾದ ಚಿತ್ರಗಳನ್ನು ಉದಾಹರಿಸಬಹುದಾಗಿದೆ.

ಹಾಡುಗಳು, ವೇಷ-ಭೂಷಣ, ಸಂಭಾಷಣೆ ಎಲ್ಲವೂ ಲೈಂಗಿಕಮಯವಾಗುತ್ತಿದ್ದ ೧೯೯೧ರ ಸಂದರ್ಭವು ಇನ್ನೊಂದು ವೈರುಧ್ಯವನ್ನೂ ಒಳಗೊಂಡಿತ್ತು. ಕನ್ನಡದ ನಟ-ನಟಿಯರು ಇಂಥ ಚಿತ್ರಗಳಿಗೆ ಹೊಂದುತ್ತಿರಲಿಲ್ಲ. ಹಾಗೆಂದು ನಿರ್ಮಾಪಕರು, ನಿರ್ದೇಶಕರು ತಮಗೆ ತಾವೇ ಭಾವಿಸಿಕೊಂಡರು. ಕೆಲವು ಕನ್ನಡದ ನಟ-ನಟಿಯರು ಅಶ್ಲೀಲ ಮಾತನ್ನು ಆಡಲು, ಅರೆಬೆತ್ತಲೆ ಕಾಣಿಸಿಕೊಳ್ಳಲು ಒಪ್ಪುತ್ತಿರಲಿಲ್ಲ. ಕೆಲವರಿಗೆ ಅವರದೇ ಆದ ಇಮೇಜ್ ಇತ್ತು. ಎಂಥ ಪಾತ್ರಕ್ಕೂ ಸೈ ಎಂದವರೂ ಕೆಲವರಿರಬಹುದು. ಕನ್ನಡ ಪ್ರೇಕ್ಷಕರದೂ ಈ ವಿಷಯದಲ್ಲಿ ಲೆಕ್ಕಾಚಾರದ ಆಯ್ಕೆಯಾಗಿತ್ತು.

ಇವರ ಗೊಡವೆಯೇ ಬೇಡವೆಂದು ನಿರ್ಧರಿಸಿದ ನಿರ್ಮಾಪಕರು ಮುಂಬೈ, ಮದರಾಸು, ಕೇರಳದಿಂದ ನಟಿಯರನ್ನು ಕರೆತರಲಾರಂಭಿಸಿದರು. ಮತ್ತು ಹೊಸ ಪೀಳಿಗೆಯ ಪ್ರೇಕ್ಷಕರನ್ನು ಹೆಚ್ಚಿಸುವುದರಲ್ಲಿ ತಮ್ಮ ಕೊಡುಗೆ ಸಲ್ಲಿಸಿದರು. ನಟಿಯರ ಇಂಥ ಏಕಮುಖ ಪ್ರವಾಹ ಚಲನಚಿತ್ರ ಸಂಸ್ಕೃತಿಯಲ್ಲಿ ಹಲವಾರು ಬದಲಾವಣೆಗಳಿಗೆ ಕಾರಣವಾಯಿತು. ಕನಿಷ್ಠ ಬಟ್ಟೆಗಳನ್ನು ತೊಡುವುದು ತಮ್ಮ ಉಳಿವಿಗೆ ಅನಿವಾರ್ಯ ಎಂಬ ಭಾವನೆ ನಾಯಕನಟಿಯರಿಂದ ಪೋಷಕ ನಟಿಯರವರೆಗೂ ಬೆಳೆದುಬಂದಿತು. ಇವರ ನಡುವಿನ ಪೈಪೋಟಿಯಿಂದಾಗಿ ಕ್ಯಾಬರೆ ನರ್ತಕಿಯರಿಗೆ ಕೆಲಸವಿಲ್ಲವಾಯಿತು. ಕೌಟುಂಬಿಕ ಎಂಬ ಹಣೆಪಟ್ಟಿ ಧರಿಸಿದ ಚಿತ್ರಗಳು ಕೂಡ ಅರೆಬೆತ್ತಲೆ ದೃಶ್ಯಗಳನ್ನು ತುಂಬಿಕೊಳ್ಳುವಂತಾಯಿತು. ಹಿಂದೆ ಕೇವಲ ಒಂದು ಅಥವಾ ಎರಡು ನಿಮಿಷಕ್ಕೆ ಸೀಮಿತವಾಗಿರುತ್ತಿದ್ದ ಪ್ರಥಮ ರಾತ್ರಿಯ ದೃಶ್ಯಗಳು ಪ್ರಧಾನವಾಗಿ ವಿಜೃಂಭಿಸಲು ಆರಂಭವಾಯಿತು. ಹೀಗೆ ಪರಭಾಷೆಯಿಂದ ಬಂದ ಬಹುತೇಕ ಕಲಾವಿದೆಯರು 'ಅಗತ್ಯವಿದ್ದರೆ ತಾವು ಎಷ್ಟಾದರೂ ಮೈ ಪ್ರದರ್ಶನಕ್ಕೆ ಸಿದ್ಧ' ಎಂದರೇ ಹೊರತು ಕನ್ನಡದಲ್ಲಿ ನಟಿಸಬೇಕೆಂಬುದು ತಮ್ಮ ಬಯಕೆಗಳಲ್ಲಿ ಒಂದು ಎಂದು, ಎಂದೂ ಹೇಳಲಿಲ್ಲ. ಕನ್ನಡದ ನಿರ್ಮಾಪಕ, ನಿರ್ದೇಶಕರೂ ಪ್ರೇಕ್ಷಕರ ಅಭಿರುಚಿಯ ಬಗ್ಗೆ ತಾವೇ ತೀರ್ಮಾನ ತೆಗೆದುಕೊಂಡು ಅಂಥ ಕಲಾವಿದರೇ ಬೇಕೆಂದು ಭಾವಿಸಿದ್ದರು. ಇದೊಂದು ವಿಷಚಕ್ರ. ಪ್ರೇಕ್ಷಕ ಬಯಸುತ್ತಾನೆ ಎಂದು ನಿರ್ಮಾಪಕ, ನಿರ್ಮಾಪಕ ಹೇಳಿದಂತೆ ಕೇಳದಿದ್ದರೆ ಅವಕಾಶ ತಪ್ಪಿಹೋಗುತ್ತದೆಂದು ನಿರ್ದೇಶಕ ಹೀಗೆ ಎಲ್ಲರೂ ಒಟ್ಟಿಗೆ ಜಾತ್ರೆಗೆ ಹೊರಟಂಥ ಪರಿಸ್ಥಿತಿ ನಿರ್ಮಾಣವಾಯಿತು. ಕನ್ನಡ ಚಿತ್ರರಂಗದಲ್ಲಿ ಕಾಣಿಸಿಕೊಂಡ ಇಂಥ ಪರಿವರ್ತನೆಯಿಂದಾಗಿ ಕನ್ನಡದ ನಟಿಯರು ಬೆಳೆಯಲು ಬೇಕಾಗಿದ್ದಂಥ ವಾತಾವರಣ ಸಂಪೂರ್ಣ ನಾಶವಾಯಿತು. ಕಲ್ಪನಾ, ಆರತಿ, ಭಾರತಿ, ಜಯಂತಿ, ಲೀಲಾವತಿ, ಜಯಮಾಲರಂಥ ವಿಶೇಷ ಪ್ರತಿಭೆ, ನಿಲುವು, ಆಕರ್ಷಣೆಗಳಿರುವ ನಟಿಯರ ಕಾಲ ಮರೆಯಾಯಿತು. ಚಿತ್ರಗಳ ಕಥೆಗಳೇ ಕೆಳಮಟ್ಟಕ್ಕೆ ಇಳಿಯುತ್ತಿದ್ದುದರಿಂದ ಉತ್ತಮ ಬೆಳವಣಿಗೆ ಕಾಣುವ ಸಾಧ್ಯತೆಗಳಿದ್ದ ಸುಧಾರಾಣಿ ಮಂಕಾದರು. ಇವರಿಗೆ ಸವಾಲೆನಿಸುವ ಪಾತ್ರಗಳೇ ಇರಲಿಲ್ಲ. ನಾಯಕಿಯು ಸಾಂಪ್ರದಾಯಿಕ ಕಲ್ಪನೆಗೆ ಹೊಂದುವಷ್ಟು ಎತ್ತರವಿಲ್ಲದ ಶ್ರುತಿ ಕಣ್ಣೀರು ಸುರಿಸುವಂಥ ಸಾಧಾರಣ ದರ್ಜೆಯ ಚಿತ್ರಗಳಲ್ಲಿ ಲೀನವಾಗಿಹೋದರು.

ಕನ್ನಡ ಚಿತ್ರೋದ್ಯಮ ಕಲೋದ್ಯಮವಾಗಿದ್ದ ಅವಸ್ಥೆಯನ್ನು ದಾಟಿದೆ ಎಂಬುದನ್ನು ಮೇಲಿನ ಎಲ್ಲ ವಿದ್ಯಮಾನಗಳಿಂದಷ್ಟೇ ಅಲ್ಲ, ಜಾಗತೀಕರಣದ ಒಟ್ಟು ಪರಿಣಾಮಗಳಿಂದಲೂ ಹೇಳಲು ಸಾಧ್ಯವಿತ್ತು. ಸುದ್ದಿ, ಸೌಂದರ್ಯಗಳಿಗೆ ಮಾರಾಟದ ಬೆಲೆ ಬಂದಿತು. ಭಾರತದ ಹುಡುಗಿಯರನ್ನು ಪದೇಪದೇ ವಿಶ್ವಸುಂದರಿಯರ ಪಟ್ಟದಲ್ಲಿ ಕೂಡಿಸಲಾಯಿತು. ಹೆಚ್ಚತೊಡಗಿದ ಟಿ.ವಿ.ಚಾನಲ್‌ಗಳು ಹಾಗೂ ಮಿಂಚಿನಂತೆ ಹರಡಿದ ಮಾಹಿತಿ ತಂತ್ರಜ್ಞಾನದ ಬಿರುಸಿನಲ್ಲಿ ಗಟ್ಟಿಯಾಗಿ ನಿಲ್ಲಬೇಕೆಂದು ಯೋಚಿಸುವವರು ಇಲ್ಲವಾದರು. ಹಿಂದಿನಿಂದಲೂ ಯೋಚಿಸುತ್ತಾ ಬಂದಿದ್ದವರು ದಿಕ್ಕುಗೆಟ್ಟರು. ಕನ್ನಡ ಚಿತ್ರರಂಗದ ವಾತಾವರಣವು ಎಲ್ಲ ರೀತಿಯಿಂದಲೂ ಕಲುಷಿತಗೊಂಡಿದ್ದ ಇಂಥ ಪರಿಸ್ಥಿತಿಯಲ್ಲಿ ಒಳ್ಳೆಯ ಉದ್ದೇಶವನ್ನು ಹೊಂದಿದ್ದ ಕೆಲವು ಉತ್ತಮ ಚಿತ್ರಗಳೂ ನಿರ್ಮಾಣವಾದವು.



(ಚಿತ್ರ ೬) 'ನಕ್ಕಳಾ ರಾಜಕುಮಾರಿ' ಚಿತ್ರದಲ್ಲಿ ಸಿ.ಆರ್.ಸಿಂಹ, ಮಾಳವಿಕಾ, ಎಲ್.ವಿ.ಶಾರದ

೧೯೯೧ ರಲ್ಲಿ ತೆರೆ ಕಂಡ ನಟ ಲೋಕೇಶ್ ನಿರ್ದೇಶಿಸಿದ 'ಭುಜಂಗಯ್ಯನ ದಶಾವತಾರ', ಪ್ರೇಮಾಕಾರಂತ್‌ರ 'ನಕ್ಕಳಾ ರಾಜಕುಮಾರಿ', ಗಿರೀಶ್ ಕಾಸರವಳ್ಳಿಯ 'ಮನೆ', ೧೯೯೨ ರಲ್ಲಿ ಬಿಡುಗಡೆಯಾದ ನಾಗಾಭರಣರ 'ಮೈಸೂರು ಮಲ್ಲಿಗೆ', ಸದಾನಂದ ಸುವರ್ಣರ 'ಕುಬಿ ಮತ್ತು ಇಯಾಲ', ರವೀ ನಿರ್ದೇಶನದ 'ಹರಕೆಯ ಕುರಿ', ಸುಂದರಕೃಷ್ಣ ಅರಸ್ ನಿರ್ದೇಶನದ 'ಸಂಗ್ಯಾ ಬಾಳ್ಯಾ' - ಇವೆಲ್ಲ ಒಂದಕ್ಕಿಂತ ಒಂದು ಭಿನ್ನವಾಗಿದ್ದವು; ವಸ್ತುವಿನ ಮಟ್ಟಿಗೆ ಒಂದೊಂದೂ ಬೇರೆಯಾಗಿದ್ದವು. ಆದರೆ 'ಮೈಸೂರು ಮಲ್ಲಿಗೆ' ಹೊರತುಪಡಿಸಿ ಬೇರೆ ಯಾವುವೂ ಆರ್ಥಿಕವಾಗಿ ಯಶಸ್ಸು ಗಳಿಸಲಿಲ್ಲ. ಈ ಚಿತ್ರಗಳ ಮೂಲ ಕೃತಿಕಾರರು ಕನ್ನಡದ ಹೆಸರಾಂತ ಬರಹಗಾರರಾಗಿದ್ದರು. ಕೃತಿಗಳು ಕೂಡಾ ಸಾಹಿತ್ಯಿಕವಾಗಿ ಮಾನ್ಯತೆ ಗಳಿಸಿದ್ದಂಥವು. ಗಂಭೀರ ಸಾಹಿತ್ಯದ ಓದುಗರಂತೂ ಇವನ್ನು ಓದಿಯೇ ಇದ್ದರು. 'ಭುಜಂಗಯ್ಯನ ದಶಾವತಾರ' ಶ್ರೀಕೃಷ್ಣ ಆಲನಹಳ್ಳಿಯ ಯಶಸ್ವಿ ಬೃಹತ್ ಕಾದಂಬರಿಯನ್ನು ಆಧರಿಸಿದ್ದರೆ, 'ಮನೆ' ಸಂವೇದನಾಶೀಲ ಕಥೆಗಾರ ಟಿ.ಜಿ.ರಾಘವರ ಕಥೆಯ ರೂಪಾಂತರವಾಗಿತ್ತು. ಪೂರ್ಣಚಂದ್ರ ತೇಜಸ್ವಿಯ ಕಥೆ 'ಕುಬಿ ಮತ್ತು ಇಯಾಲ'ದ್ದು.



(ಚಿತ್ರ ೭)'ಮನೆ' ಚಿತ್ರದಲ್ಲಿ ನಾಸಿರುದ್ದೀನ್ ಷಾ ಮತ್ತು ದೀಪ್ತಿನವಲ್

'ಹರಕೆಯ ಕುರಿ' ಚಂದ್ರಶೇಖರ ಕಂಬಾರರ ನಾಟಕದ ಚಲನಚಿತ್ರ ರೂಪ. ಕನ್ನಡದ ಇಂಥ ಖ್ಯಾತ ಲೇಖಕರ ಕೃತಿಗಳು ಚಲನಚಿತ್ರವಾಗಿದ್ದು ಈ ದಶಕದ ಸುಯೋಗ. ಆದರೆ ಇವು ಜನರನ್ನು ಸೆಳೆಯುವುದರಲ್ಲಿ ಯಶಸ್ವಿಯಾಗಲಿಲ್ಲ. ಇವೇ ಚಿತ್ರಗಳು ೧೯೭೦ ರಿಂದ ೮೦ರ ಒಳಗೆ ತಯಾರಾಗಿದ್ದಿದ್ದರೆ ಏನಾಗಿರುತ್ತಿತ್ತು ಎಂಬುದು ಊಹೆಗೆ ಬಿಟ್ಟ ವಿಚಾರವಾದರೂ ಸದ್ಯದಲ್ಲಂತೂ ಇಂಥ ಚಿತ್ರಗಳ ಕನಿಷ್ಠ ಪ್ರಮಾಣದ ಆದರಣೆಯನ್ನೂ ಪಡೆಯಲಾಗದ ವಾತಾವರಣ ನಿರ್ಮಾಣವಾಗಿತ್ತೆಂಬುದನ್ನು ಉಲ್ಲೇಖಿಸಬೇಕಾಗಿದೆ.

ಲೋಕೇಶ್ 'ಭುಜಂಗಯ್ಯನ ದಶಾವತಾರ' ಚಿತ್ರವನ್ನು ಮಹತ್ವಾಕಾಂಕ್ಷೆಯಿಂದ ಚಿತ್ರಿಸಿದ್ದರು. ಸಿದ್ಧಪಡಿಸಲು ಅವರು ಹಲವಾರು ದಿನಗಳ ಕಾಲ ಚರ್ಚೆ ನಡೆಸಿದ್ದುದನ್ನು, ಈ ಚಿತ್ರವು ಸೋತಿದ್ದರೂ ಕೂಡ ಯಶಸ್ವಿ ಚಿತ್ರವೊಂದರ ಚಿತ್ರಕಥೆಯನ್ನು ಮಾತ್ರ ಹೇಳುವಂಥ ವಾತಾವರಣದಲ್ಲಿ ಹೇಳಲೇಬೇಕಾಗುತ್ತದೆ. ಅದಮ್ಯ ಜೀವನಪ್ರೀತಿಯ ಈ ಚಿತ್ರದ ನಾಯಕ ತನ್ನ ಪ್ರತಿಯೊಂದು ಸೋಲನ್ನು ಗೆಲುವಿನ ಮೆಟ್ಟಿಲು ಅಂದುಕೊಳ್ಳುತ್ತಾನೆ. ಬದುಕು 'ಹೋರಾಟದ ಭೂಮಿ' ಎಂದು ಅವನ ನಂಬಿಕೆ. ಸೋಲನ್ನೇ ಸವಾಲಾಗಿ ತೆಗೆದುಕೊಳ್ಳುವುದು ಅವನ ಮನೋಭಾವ. ಆದರೆ ಪ್ರಕೃತಿ ಭುಜಂಗಯ್ಯನಿಗೆ ವಿರುದ್ಧವಾಗಿರುತ್ತದೆ. ಅವನು ಬದುಕುವುದಕ್ಕಾಗಿ ಏನನ್ನು ನೋಡಿದರೂ ಅದರ ಉದರದಲ್ಲಿ 'ಸೋಲು' ಅಡಗಿ ಕುಳಿತಿರುತ್ತದೆ. ಆದರೆ ಅವನ ಜೀವಂತಿಕೆ ಇರುವುದು ಸಾಲುಸಾಲಾಗಿ ಎದುರಾಗುವ ಸೋಲುಗಳನ್ನು ಎದುರಿಸುವುದರಲ್ಲಿಯೆ. ಲೋಕೇಶ್ ಅವರು 'ಬೂತಯ್ಯನ ಮಗ ಅಯ್ಯು' ಹಾಗೂ 'ಪರಸಂಗದ ಗೆಂಡೆತಿಮ್ಮ' ನಂತರ ತಮ್ಮ ವೃತ್ತಿ ಬದುಕಿನಲ್ಲಿ ಅತ್ಯುತ್ತಮ ಅಭಿನಯವನ್ನು ಭುಜಂಗಯ್ಯನ ಪಾತ್ರದಲ್ಲಿ ನೀಡಿದ್ದರು. ಇವರಿಗೆ ನಾಯಕಿಯಾಗಿ ಹಿಂದಿಯ ಪಲ್ಲವಿ ಜೋಶಿ ಅಭಿನಯಿಸಿದ್ದರು. ನಿರೂಪಣೆಯಲ್ಲಿ ಗಂಭೀರ ಗತಿಯನ್ನು ಅವಲಂಬಿಸಿದ್ದ ಚಿತ್ರ ರಾಜ್ಯ ಸರ್ಕಾರದ ೧೯೯೦-೯೧ರ ಮೂರು ಪ್ರಶಸ್ತಿಗಳನ್ನು ಗಳಿಸಿತು. ಶ್ರೀಕೃಷ್ಣ ಆಲನಹಳ್ಳಿ ಶ್ರೇಷ್ಠ ಕಥಾಲೇಖಕ, ಗಿರಿಜಾ ಲೋಕೇಶ್ ಶ್ರೇಷ್ಠ ಪೋಷಕ ನಟಿ ಹಾಗೂ ತೃತೀಯ ಶ್ರೇಷ್ಠ ಚಿತ್ರವೆಂದು ಪ್ರಶಸ್ತಿ ಲಭ್ಯವಾಯಿತು. ಶ್ರಮಪಟ್ಟು ಚಿತ್ರವನ್ನು ನಿರ್ದೇಶಿಸಿದ್ದ ಲೋಕೇಶ್ ಅವರು ಚಿತ್ರದ ಸೋಲಿನಿಂದಾಗಿ ಎಷ್ಟೊಂದು ವಿಚಲಿತರಾದರೆಂದರೆ ಮತ್ತೆಂದೂ ನಿರ್ದೇಶಕರಾಗುವ ಪ್ರಯತ್ನವನ್ನು ಮಾಡಲು ಹೋಗಲಿಲ್ಲ. ಅಭಿನಯ ಒಂದರಲ್ಲೇ ಮುಂದುವರಿದರು.

ಶ್ರೇಷ್ಠವೆನಿಸುವ ಗೀತೆಗಳನ್ನು ರಚಿಸಿ, ರಾಗ ಸಂಯೋಜಿಸಿದ್ದ ಹಂಸಲೇಖ ಅವರಿಗೂ ಇದೊಂದು ಮಹತ್ವಾಕಾಂಕ್ಷೆಯ ಚಿತ್ರವಾಗಿತ್ತು. ತಮ್ಮ ಬಹುದಿನಗಳ ಕನಸಾಗಿದ್ದ 'ಭುಜಂಗಯ್ಯ...' ಸೋತಾಗ ಹಂಸಲೇಖ ಕೂಡಾ ಲೋಕೇಶ್ ಹಾಗೆಯೇ ಮಾನಸಿಕವಾಗಿ ಕುಸಿದುಹೋದರು.

ಅಪರೂಪವಾಗುತ್ತಿದ್ದ ಮಕ್ಕಳ ಚಿತ್ರಗಳಿಗೆ ಮರುಜನ್ಮವೋ ಎಂಬಂತೆ ತೆರೆಗೆ ಬಂತು, ಹೊಸಬ ವಿಶ್ವನಾಥರಾವ್ ನಿರ್ಮಿಸಿದ 'ನಕ್ಕಳಾ ರಾಜಕುಮಾರಿ'. ಅಬ್ದುಲ್ ರೆಹಮಾನ್ ಪಾಷಾ ಬರೆದ ನಾಟಕ. ಅವರು ಚಿತ್ರೀಕರಣದಲ್ಲೂ ಸಹಾಯಕನಾಗಿ ಸಾಹಿತ್ಯ ವಿಭಾಗದಲ್ಲೂ ನೆರವಾಗುತ್ತಾ ತೊಡಗಿಕೊಂಡರು.

ನಗೆಯೇ ಇಲ್ಲದ ಪುಟ್ಟ ರಾಜಕುಮಾರಿಯನ್ನು ನಗಿಸಿದವರಿಗೆ ಅರ್ಧ ರಾಜ್ಯ ಕೊಡುತ್ತೇನೆಂದ ರಾಜ, ಸಾಮಾನ್ಯ ಬಾಲಕನೊಬ್ಬ ಬಾಲೆಯನ್ನು ಹೊರಗೆ ಕರೆದೊಯ್ದು ತಿರುಗಾಡಿಸಿ ನಕ್ಕು-ನಗಿಸುವ ಜಾನಪದ ಕಥೆ. ಫ್ಯಾಂಟಸಿಯಂತೆ ಚಿತ್ರಿಸಲಾಗಿತ್ತು. ಬೆಂಗಳೂರಿನ ಅರಮನೆಯನ್ನು ಅರ್ಥಪೂರ್ಣವಾಗಿ ಬಳಸಿಕೊಂಡಿದ್ದರು. ಪುಟ್ಟ ರಾಜಕುಮಾರಿ ಹೇಗೆ ಆಕಾಶದೆತ್ತರದ ಗೋಡೆಗಳ ನಡುವೆ ಹೊರಗಿನ ಸುಂದರ ಲೋಕವನ್ನೇ ಕಾಣದೆ ತತ್ತರಿಸುತ್ತಾಳೆಂಬುದನ್ನು ತೋರಿಸುವಲ್ಲಿ ವಿಶೇಷ ರೀತಿಯ ಚಿತ್ರಿಕೆಗಳನ್ನು ಜೋಡಿಸಲಾಗಿತ್ತು. ಪಿ.ರಾಜನ್ ಛಾಯಾಗ್ರಹಣ, ಜಾನ್ ದೇವರಾಜ್ ಕಲಾನಿರ್ದೇಶನ ಸೊಗಸಾಗಿತ್ತು. ಎಲ್ಲ ಇದ್ದೂ ಲವಲವಿಕೆಯಿಲ್ಲದ ನಿರೂಪಣೆಯಿಂದಾಗಿ ಸೋತಿತು.

'ಮನೆ' ಬದಲಾಗುತ್ತಿರುವ ಗಂಡ-ಹೆಂಡತಿ ಸಂಬಂಧ ಮೂಲಕ ಹೊರಗಿನ ಸಮಾಜದಲ್ಲಿ ನಡೆಯುವ ಪರಿವರ್ತನೆಯ ಪ್ರಕ್ರಿಯೆಯನ್ನು ವಿಮರ್ಶಿಸುವ ವಸ್ತುವನ್ನು ಒಳಗೊಂಡಿದೆ. ಗಿರೀಶ್ ಕಾಸರವಳ್ಳಿ ಸೂಕ್ಷ್ಮ ವಿವರಗಳ ಮೂಲಕ ಕಥೆಯ ಕೇಂದ್ರವನ್ನು ಮುಟ್ಟುವಂಥ ತಮ್ಮ ಎಂದಿನ ನಿರೂಪಣಾ ಶೈಲಿಯನ್ನು ಅನುಸರಿಸಿದ್ದರು. ಮುಖ್ಯವಾಗಿ 'ಶಬ್ದ ಮಾಲಿನ್ಯ' ಹಾಗೂ ಬಹುರಾಷ್ಟ್ರೀಯ ಸಂಸ್ಥೆಗಳ ಆಕ್ರಮಣದ ಪರಿಣಾಮಗಳನ್ನು ಚಿತ್ರ ಚರ್ಚಿಸಿತ್ತು. ಹಳದಿ ವರ್ಣವನ್ನು ಸಂದೇಹ, ಅನ್ಯತೆ, ಹೊರಗಿನದ್ದು ಮೊದಲಾದ ವಿವಿಧ ಅರ್ಥಗಳಿಗೆ ಸಂಕೇತವಾಗಿ ಬಳಸಿದ್ದರು. ಕನ್ನಡ ಹಾಗೂ ಹಿಂದಿ ಭಾಷೆಯಲ್ಲಿ ಏಕಕಾಲಕ್ಕೆ ಚಿತ್ರವನ್ನು ತಯಾರಿಸಲಾಗಿತ್ತು. ಹಿಂದಿ ಚಿತ್ರರಂಗದ ಹೆಸರಾಂತ ಕಲಾವಿದರಾದ ನಾಸಿರುದ್ದೀನ್ ಷಾ, ದೀಪ್ತಿ ನವಲ್, ರೋಹಿಣಿ ಹಟ್ಟಂಗಡಿಯವರು ಕನ್ನಡ ಅವತರಣಿಕೆಯಲ್ಲಿಯೂ ಅಭಿನಯಿಸಿದ್ದರು. ೧೯೯೧ರ ಲಂಡನ್ ಚಿತ್ರೋತ್ಸವಕ್ಕೆ ಆಯ್ಕೆಯಾಗಿದ್ದ ಈ ಚಿತ್ರ ಅದೇ ವರ್ಷ ಮದರಾಸಿನಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಪನೋರಮಾ ವಿಭಾಗದಲ್ಲಿ ಪ್ರದರ್ಶಿತವಾದ ಏಕೈಕ ಕನ್ನಡ ಚಿತ್ರವಾಗಿತ್ತು. ಇದರೊಂದಿಗೆ ಆಸ್ಟ್ರೇಲಿಯಾದ ಸಿಡ್ನಿ, ಜಪಾನಿನ ಫುಕೋಕಾ ಚಿತ್ರೋತ್ಸವಗಳಲ್ಲಿ ಇದು ಪ್ರದರ್ಶನವಾಗಿದೆ. ೧೯೮೯-೯೦ರ ರಾಜ್ಯ ಪ್ರಶಸ್ತಿ, ತೀರ್ಪುಗಾರರ ವಿಶೇಷ ಪ್ರಶಸ್ತಿ ಗಳಿಸಿದ್ದಲ್ಲದೆ ಅತ್ಯುತ್ತಮ ಚಿತ್ರನಾಟಕಕ್ಕೆ ಗಿರೀಶ್ ಕಾಸರವಳ್ಳಿಗೆ, ಅತ್ಯುತ್ತಮ ಛಾಯಾಗ್ರಹಣಕ್ಕೆ ಎಸ್.ರಾಮಚಂದ್ರರಿಗೆ ಹಾಗೂ ಅತ್ಯುತ್ತಮ ಧ್ವನಿಗ್ರಹಣಕ್ಕೆ ಎಸ್.ಪಿ.ರಾಮನಾಥ್‌ಗೆ ಪ್ರಶಸ್ತಿ ಗಳಿಸಿಕೊಟ್ಟಿತು.

'ಮನೆ' ಚಿತ್ರದಲ್ಲಿ ಮನೆಯ ಮಾಳಿಗೆಯ ಮೇಲೆ ನಿಂತು ಮಾತನಾಡುವ ಒಂದು ದೃಶ್ಯದಲ್ಲಿ ಮಾತುಗಳನ್ನು ತೀರಾ ಮೆಲ್ಲಗೆ, ಉಸಿರಾಟವೂ ಕೇಳಿಸುವಷ್ಟು ಚೊಕ್ಕವಾಗಿ ಧ್ವನಿಮುದ್ರಿಸಲಾಗಿತ್ತು. ಚಾಮುಂಡೇಶ್ವರಿ ಸ್ಟುಡಿಯೋದ ಕೆಳಮನೆಯಲ್ಲಿ ತಂತ್ರಜ್ಞ ಕೋದಂಡಪಾಣಿ ಸೊಗಸಾದ ಪರಿಣಾಮ ಮೂಡಿಸಿದ್ದರು. ವರ್ಗಾವಣೆಯಾಗುವಾಗ ಮೇಲ್ಮನೆಯಲ್ಲಿದ್ದ ಮತ್ತೊಬ್ಬ ತಂತ್ರಜ್ಞರು ಇಷ್ಟು ಮೆಲುಮಾತು ಇರುವುದು ಸಾಧ್ಯವೇ, ಎಲ್ಲೋ ತಪ್ಪಾಗಿದೆ ಎಂದುಕೊಂಡು ವಾಲ್ಯೂಂ ಹೆಚ್ಚಿಸಿಬಿಟ್ಟರು. ಹೀಗೆ ಮಾಡುವುದರ ಹಿಂದೆ ತಾನು ಒಳ್ಳೆಯದನ್ನೇ ಮಾಡುತ್ತೇನೆಂಬ ಭಾವನೆ ಆ ತಂತ್ರಜ್ಞರಿಗೆ. ಆದರೆ ನಿರ್ದೇಶಕರಿಗೆ ತಾವು ಪಟ್ಟ ಶ್ರಮ, ಮಾಡಿದ ಪ್ರಯೋಗ ವಿಫಲವಾಯಿತೆಂಬ ವ್ಯಥೆ. ಈ ಚಿತ್ರಕ್ಕೆ ಕಾಸರವಳ್ಳಿ ಜೊತೆ ರಂಗಕರ್ಮಿ ಬಿ.ಸುರೇಶ್ ಸಂಭಾಷಣೆ ರಚಿಸಿದ್ದರು.

೧೯೯೧ರ ಹಿಂದುಮುಂದಿನ ದಿನಗಳಲ್ಲಿ ಹೆಚ್ಚು ಸುದ್ದಿ ಮಾಡಿದ ಎರಡು ಚಿತ್ರಗಳೆಂದರೆ ರವಿಚಂದ್ರನ್ ನಿರ್ಮಾಣ, ನಿರ್ದೇಶನದ 'ಶಾಂತಿ ಕ್ರಾಂತಿ' ಹಾಗೂ ಚಂದೂಲಾಲ್ ಜೈನ್‌ರ 'ವೀರಪ್ಪನ್'. ರವಿಚಂದ್ರನ್ 'ಶಾಂತಿ ಕ್ರಾಂತಿ' ಮೂಲಕ ದೇಶದಾದ್ಯಂತ ಪ್ರಚಾರ ಪಡೆಯುವ ಆಸೆಯನ್ನು ಇಟ್ಟುಕೊಂಡಿದ್ದರು. ಏಕಕಾಲಕ್ಕೆ ನಾಲ್ಕು ಭಾಷೆಗಳ ಚಿತ್ರೀಕರಣ ಅವರ ಗುರಿಯಾಗಿತ್ತು. ಕನ್ನಡ, ತೆಲುಗು, ತಮಿಳು ಅವತರಣಿಕೆಗಳ ಮೂಲಕ ದಕ್ಷಿಣ ಭಾರತವನ್ನು, ಹಿಂದಿ ಅವತರಣಿಕೆಯ ಮೂಲಕ ಉತ್ತರ ಭಾರತವನ್ನು ಗೆಲ್ಲುವ ಆಸೆ ಇಟ್ಟುಕೊಂಡಿದ್ದರು. ಇದಕ್ಕಾಗಿ ಆಯಾ ಭಾಷೆಯ ಜನಪ್ರಿಯ ನಾಯಕನಟರನ್ನು ಗೊತ್ತುಪಡಿಸಿದ್ದು, ಇವರೆಲ್ಲರೊಂದಿಗೆ ಹಿಂದಿಯ ಜ್ಯೂಹಿ



(ಚಿತ್ರ ೮)'ಶಾಂತಿ ಕ್ರಾಂತಿ' ಚಿತ್ರದಲ್ಲಿ ರವಿಚಂದ್ರನ್ ಮತ್ತು ಖುಷ್ಬೂ

ಜಾಪ್ಪಾರನ್ನು ನಾಯಕಿಯನ್ನಾಗಿಸಿದ್ದು ಜಾಣತನದ ನಿರ್ಧಾರವಾಗಿ ಎಲ್ಲರಿಗೂ ಕಂಡಿತು. ಆದರೆ ಕೇಳಲು ಚೆನ್ನಾಗಿದ್ದ ಯೋಜನೆ ವಾಸ್ತವದ ನೆಲೆಗಳನ್ನು ಹೊಂದಿರಲಿಲ್ಲ. ಚಿತ್ರೀಕರಣ ಆರಂಭವಾಗುತ್ತಿದ್ದಂತೆ ಹಲವಾರು ಸಮಸ್ಯೆಗಳು ಎದುರಾದವು. ಮೂರ್‍ನಾಲ್ಕು ಭಾಷೆಯ ದೃಶ್ಯಗಳನ್ನು ಒಂದಾದ ಮೇಲೊಂದರಂತೆ ತೆಗೆಯಬೇಕಾಗಿದ್ದುದರಿಂದ ಮೊದಲ ದೃಶ್ಯದ ನಾಯಕನಟರು ಅರ್ಧ ದಿನ, ಇನ್ನೊಂದು ದೃಶ್ಯಕ್ಕ ಗಂಟೆಗಟ್ಟಲೆ, ಒಮ್ಮೊಮ್ಮೆ ಮರುದಿನದವರೆಗೂ ಕಾಯಬೇಕಾಗುತ್ತಿತ್ತು. ನಾಯಕಿಯಂತೂ ಅಷ್ಟು ದೃಶ್ಯಗಳಲ್ಲಿ ಬೇರೆಬೇರೆ ಭಾಷೆಗಳ ನಾಯಕರೊಂದಿಗೆ ಪದೇಪದೇ ಭಾವ ಪ್ರದರ್ಶನ ನೀಡಲಾಗದೆ ಸೊರಗುವಂಥ ಸ್ಥಿತಿ ಏರ್ಪಟ್ಟಿತು. ಜೊತೆಗೆ ಎಲ್ಲಾ ಭಾಷೆಗಳ ಸಂಭಾಷಣೆ, ಸ್ಕ್ರಿಪ್ಟ್‌ಗಳನ್ನು ನಿರ್ವಹಿಸಲು ಸಹಾಯಕರು ಹೆಣಗಾಡಬೇಕಾಯಿತು. ತೆಲುಗಿನ ನಾಗಾರ್ಜುನ, ತಮಿಳಿನ ರಜನೀಕಾಂತ್ ಕೊಟ್ಟಿದ್ದ ದಿನಾಂಕಗಳಲ್ಲಿ ಕಾಲುಭಾಗದ ಚಿತ್ರಣವೂ ಮುಗಿಯುವಂತಿರಲಿಲ್ಲ. ಆದರೆ ಅವರೆಲ್ಲ ಸಹಕರಿಸಿದರು. ಎಲ್ಲವನ್ನು ಸರಿದೂಗಿಸಿಕೊಂಡು ಚಿತ್ರೀಕರಣ ಮುಗಿಸಲು ಮೂರು ವರ್ಷ ಹಿಡಿದು ೧೯೯೧ರ ಮಾರ್ಚ್ ೧೦ ರಂದು ಅಂತ್ಯವಾಯಿತು. ಚಿತ್ರೀಕರಣ ಮುಗಿಸುವಷ್ಟರಲ್ಲಿ ರವಿಚಂದ್ರನ್ ಸೊರಗಿಹೋಗಿದ್ದರು. ಆದರೂ ಉತ್ಸಾಹ ಕುಗ್ಗಿರಲಿಲ್ಲ. ಒಂದು ಕೋಟಿ ರೂಪಾಯಿಯ ವೆಚ್ಚದಲ್ಲಿ ತಯಾರಾದ ಪ್ರಥಮ ಕನ್ನಡ ಚಿತ್ರವೆಂಬ ಹೆಗ್ಗಳಿಕೆಗೆ ಪಾತ್ರವಾದ ಈ ಚಿತ್ರದ ಬಿಡುಗಡೆ ಬೆಂಗಳೂರಿನಲ್ಲಿ ಒಂದು ಪ್ರಮುಖ ಘಟನೆ ಆಯಿತು. ೧೯೯೧ ಸೆಪ್ಟೆಂಬರ್ ೧೯ನೇ ಗುರುವಾರ ಉಮಾ ಚಿತ್ರಮಂದಿರದಲ್ಲಿ ಪ್ರಥಮ ದಿನದ ಪ್ರಥಮ ಪ್ರದರ್ಶನಕ್ಕೆ ರವಿಚಂದ್ರನ್ ಚಿತ್ರೋದ್ಯಮದ ಸಮಸ್ತರನ್ನೂ ಆಹ್ವಾನಿಸಿದ್ದರು. ಅಂದು ಕನ್ನಡ ಚಿತ್ರರಂಗದ ಬಹುತೇಕ ಕಲಾವಿದರೆಲ್ಲ ಭಾಗವಹಿಸಿದರು.

'ಶಾಂತಿ ಕ್ರಾಂತಿ' ದೊಡ್ಡ ಸೋಲನ್ನು ಅನುಭವಿಸಿತು. ಕನ್ನಡದಲ್ಲಷ್ಟೇ ಅಲ್ಲದೆ ತೆಲುಗು, ತಮಿಳು ಭಾಷೆಗಳಲ್ಲೂ ಯಶಸ್ಸು ಕಾಣಲಿಲ್ಲ. ರವಿಚಂದ್ರನ್ ಅನಿರೀಕ್ಷಿತ ಆಘಾತವನ್ನು ಅನುಭವಿಸಿದರು. ತಪ್ಪುಗಳನ್ನು ಸರಿಪಡಿಸಿ ಹಿಂದಿಯಲ್ಲಿ ಬಿಡುಗಡೆ ಮಾಡುವ ಅವರ ಆಸೆ ಎಷ್ಟು ಪ್ರಯತ್ನಪಟ್ಟರೂ ಈಡೇರಲಿಲ್ಲ. ಮಕ್ಕಳ ಅಂಗಾಂಗಗಳನ್ನು ಕತ್ತರಿಸಿ ವಿದೇಶಗಳಿಗೆ ರಫ್ತು ಮಾಡುವ ಜಾಲವೊಂದರ ವಸ್ತುವನ್ನು ಹೊಂದಿದ್ದ ಕಥೆ ತಾಂತ್ರಿಕ ಚಮತ್ಕಾರಗಳಲ್ಲಿ ಮುಚ್ಚಿಹೋಗಿತ್ತು. ಮೂರು ಸಾವಿರಕ್ಕೂ ಹೆಚ್ಚು ಮಕ್ಕಳನ್ನು ಬಳಸಿದ್ದ ರೀತಿ ಹಾಗೂ ಕೆಲವು ಚಮತ್ಕಾರಗಳಷ್ಟೇ ಚಿತ್ರದಲ್ಲಿ ವಿಶೇಷವಾಗಿ ಕಂಡದ್ದು. ರಾಜ್ಯ ಸರ್ಕಾರವು 'ತಾಂತ್ರಿಕ ದೃಷ್ಟಿಯಿಂದ ಮೈಲಿಗಲ್ಲು ಹಾಗೂ ಮಕ್ಕಳ ಚಿತ್ರ'ವೆಂಬ ಅಂಶಗಳನ್ನು ಉಲ್ಲೇಖಿಸಿ, ಚಿತ್ರಕ್ಕೆ ತೆರಿಗೆ ವಿನಾಯ್ತಿ ನೀಡಿತು. ಆದರೆ 'ಮಕ್ಕಳ ಚಿತ್ರ'ವೆಂದು ಪರಿಗಣಿಸಲು ಚಿತ್ರ ಅರ್ಹತೆ ಹೊಂದಿಲ್ಲವೆಂದು ಕಲಾವಿದ, ಅಧ್ಯಾಪಕ ಜಿ.ಕೆ.ಗೋವಿಂದರಾವ್ ಪ್ರತಿಭಟಿಸಿದರು. ಸಾರ್ವಜನಿಕರ ಹಿತಾಸಕ್ತಿಯ ಪರವಾಗಿ ಈ ದಶಕದಲ್ಲಿ ಆಗಾಗ ಇವರ ಪ್ರತಿಭಟನೆ ಕಂಡುಬಂದಿದೆ.

ಯಾರಿಗೇ ಅಪ್ರಿಯವಾದರೂ ತಮಗೆ ಅನ್ನಿಸಿದ್ದನ್ನು ಪತ್ರಿಕೆಗಳಿಗೆ ಬರೆಯುವುದು, ಅಗತ್ಯ ಬಿದ್ದರೆ ಸ್ವಂತ ಖರ್ಚಿನಿಂದ ನ್ಯಾಯಾಲಯದ ಕಟ್ಟೆ ಹತ್ತುವುದು ಜಿ.ಕೆ.ಗೋವಿಂದರಾವ್ ಸ್ವಭಾವ. 'ವೀರಪ್ಪನ್' ಚಿತ್ರಕ್ಕೆ ಪತ್ರಕರ್ತ ವೈ.ಎನ್.ಕೃಷ್ಣಮೂರ್ತಿ ಅಧ್ಯಕ್ಷತೆಯ ಪ್ರಶಸ್ತಿ ಸಲಹಾ ಸಮಿತಿ ಪ್ರಥಮ ಶ್ರೇಷ್ಠ ಚಿತ್ರವೆಂದು ಪ್ರಶಸ್ತಿ ನೀಡಿದಾಗ ಜಿ.ಕೆ.ಗೋವಿಂದರಾವ್ ತಮ್ಮ ಗೆಳೆಯರ ಜೊತೆಗೂಡಿ ಉಚ್ಚನ್ಯಾಯಾಲಯದ ಮೂಲಕ ತಡೆಯಾಜ್ಞೆ ತರಲು ಪ್ರಯತ್ನಿಸಿದರು. ಆದರೆ ಸಮಿತಿಯೊಂದರ ಅಭಿಪ್ರಾಯವನ್ನು ತಪ್ಪೆನ್ನಲಾಗದು ಎಂದು ಇವರ ಮನವಿಯನ್ನು ನ್ಯಾಯಾಧೀಶರು ಪುರಸ್ಕರಿಸಲಿಲ್ಲ. 'ವೀರಪ್ಪನ್' ಚಿತ್ರಕ್ಕೆ ನೀಡಲಾಗಿರುವ ಪ್ರಶಸ್ತಿಯನ್ನು ಸಮರ್ಥಿಸಿ ರಾಜ್ಯ ಸರ್ಕಾರದ ಪರವಾಗಿ ಅಡ್ವೊಕೇಟ್ ಜನರಲ್ ಅವರೇ ವಾದ ಮಾಡಿದರು.

'ವೀರಪ್ಪನ್'ನಂಥ ಕಾಡುಗಳ್ಳನ ಬಗ್ಗೆ ಚಿತ್ರ ನಿರ್ಮಿಸಿದ್ದೇ ತಪ್ಪು ಎಂಬ ಅಭಿಪ್ರಾಯವು ಆಗ ಬಹಳಷ್ಟು ಜನರಲ್ಲಿತ್ತು. ಇದನ್ನು ಒಪ್ಪದೆ 'ಕನ್ನೇಶ್ವರರಾಮ' ಚಿತ್ರದ ಉದಾಹರಣೆಯನ್ನು ಕೊಟ್ಟು ಸಮರ್ಥಿಸುವವರೂ ಇದ್ದರು. ಆದರೆ ರಾಜಕೀಯವಾಗಿ ಮಾತ್ರವಲ್ಲ, ಚಿತ್ರರಂಗಕ್ಕೂ ವೀರಪ್ಪನ್‌ನ ಕರಿನೆರಳು ದಟ್ಟವಾಗಿ ಹಬ್ಬತೊಡಗಿತ್ತು. ಸರ್ಕಾರಕ್ಕೆ ತಲೆನೋವಾಗಿ, ಸಾರ್ವಜನಿಕರಿಗೆ ಕುತೂಹಲದ ವ್ಯಕ್ತಿಯಾಗಿ ವೀರಪ್ಪನ್ ಸುದ್ದಿಯ ಕೇಂದ್ರಬಿಂದುವಾಗಿದ್ದ. 'ವೀರಪ್ಪನ್' ಚಿತ್ರ ಆರ್ಥಿಕವಾಗಿ ಯಶಸ್ಸು ಗಳಿಸಿದ್ದಲ್ಲದೆ ವೀರಪ್ಪನ್ ಪಾತ್ರದಲ್ಲಿ ಅಭಿನಯಿಸಿದ್ದ ದೇವರಾಜ್‌ಗೆ ೧೯೯೧-೯೨ರ ಅತ್ಯುತ್ತಮ ನಟನೆಗಾಗಿ ರಾಜ್ಯ ಪ್ರಶಸ್ತಿ ಸಂದಿತು. ಪ್ರಶಸ್ತಿಗಳನ್ನು ಪಡೆದು, ಹಣವನ್ನು ಗಳಿಸಿದ್ದರ ಸ್ಫೂರ್ತಿಯೋ ಅಥವಾ ಸಾರ್ವಜನಿಕರ ನಡುವೆ ಜನಪ್ರಿಯವಾಗಿರುವ ಹೆಸರುಗಳನ್ನು ಆಧರಿಸಿ ಚಿತ್ರ ಮಾಡಿದರೆ ಅನುಕೂಲ ಎಂಬ ಭಾವನೆಯಿಂದಲೋ ನಿರ್ಮಾಪಕ ಚಂದೂಲಾಲ್ ಜೈನ್ ೧೯೯೨ ರಲ್ಲಿ 'ಶಿವರಾಸನ್' ಹೆಸರಿನಲ್ಲಿ ಚಿತ್ರವನ್ನು ತಯಾರಿಸುವುದಾಗಿ ಜಾಹೀರಾತು ಕೊಟ್ಟರು. ರಾಜೀವ್ ಗಾಂಧಿಯಂಥ ನಾಯಕನನ್ನು ಶಿವರಾಸನ್ ದಾರುಣವಾಗಿ ಕೊಂದದ್ದು ದೇಶದ ಜನರಲ್ಲಿ ಸಿಟ್ಟು, ಆಕ್ರೋಶ, ಅಸಮಾಧಾನವನ್ನು ಹುಟ್ಟುಹಾಕಿತ್ತು. ಶಿವರಾಸನ್‌ನಂಥ ದೇಶದ್ರೋಹಿಯೊಬ್ಬನ ಕುರಿತು ಚಿತ್ರ ನಿರ್ಮಿಸುವುದರ ಹಿಂದೆ ಹಣಗಳಿಕೆಯಲ್ಲದೆ ಇನ್ಯಾವ ಉದ್ದೇಶವೂ ಇರಲು ಸಾಧ್ಯವಿಲ್ಲ ಎಂದು ಭಾವಿಸಲು ಕಾರಣಗಳಿದ್ದವು. 'ಶಿವರಾಸನ್' ಚಿತ್ರದ ಜಾಹೀರಾತು ಪ್ರಕಟವಾದ ಒಂದೆರಡು ದಿನಗಳಲ್ಲೇ ಚಂದೂಲಾಲ್ ಜೈನ್ ಬಗ್ಗೆ ತೀವ್ರ ಟೀಕೆಗಳು ಕೇಳಿಬಂದವು. ಕೆಲವರು ಅವರಿಗೆ ದೂರವಾಣಿ ಮೂಲಕ ಬೆದರಿಕೆ ಹಾಕಿದ್ದು ಸುದ್ದಿ ಆಯಿತು. ಇದೆಲ್ಲದರಿಂದ ವಿಚಲಿತರಾದ ಜೈನ್ ಕೂಡಲೇ ಪತ್ರಿಕೆಗಳಿಗೆ ಪತ್ರ



(ಚಿತ್ರ ೯)'ವೀರಪ್ಪನ್' ಚಿತ್ರದಲ್ಲಿ ದೇವರಾಜ್



(ಚಿತ್ರ ೧೦)'ಲಯನ್ ಜಗಪತಿರಾವ್' ಚಿತ್ರದಲ್ಲಿ ಭವ್ಯ ಮತ್ತು ವಿಷ್ಣುವರ್ಧನ್

ಬರೆದರು. ಸ್ನೇಹಿತರು, ಹಿತೈಷಿಗಳ ಅಭಿಪ್ರಾಯ ಮತ್ತು ಸಲಹೆಯಂತೆ 'ಶಿವರಾಸನ್' ಚಿತ್ರದ ಯೋಜನೆಯನ್ನು ಸಂಪೂರ್ಣವಾಗಿ ಕೈ ಬಿಟ್ಟು, ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ನೋಂದಾಯಿಸಿದ ಹೆಸರನ್ನು ವಾಪಸ್ಸು ಪಡೆದಿರುವುದಾಗಿ ಹೇಳಿಕೆ ಕೊಟ್ಟರು.

ಈ ದಶಕದ ಹಾಗೂ ವರ್ಷದ ಮೊದಲ ಚಿತ್ರ 'ಲಯನ್ ಜಗಪತಿ ರಾವ್'. ವಿಷ್ಣುವರ್ಧನ್ ದ್ವಿಪಾತ್ರ. ಸಾಯಿಪ್ರಕಾಶ್ ನಿರ್ದೇಶನವಿತ್ತು. ಈ ಚಿತ್ರದಿಂದಾಚೆಗೆ ಸಾಯಿಪ್ರಕಾಶ್‌ಗೆ ಒಂದು ಸ್ಥಿರ-ಗಂಭೀರ ಸ್ಥಾನವೂ ದಕ್ಕಿತು. ಹೊಸ ಹುಟ್ಟು ಎನ್ನಬಹುದು. ವಿಷ್ಣುವರ್ಧನ್ ಈ ಚಿತ್ರದಲ್ಲಿ ವಿಶೇಷ ಆಸ್ಥೆಯಿಂದ ಎಲ್ಲ ವಿಭಾಗದಲ್ಲೂ ಭಾಗಿಯಾದರು. ಪುನರವತರಣಿಕೆಯೇ ಆದರೂ ವಿಶೇಷ ಗಮನ ಸೆಳೆದ ಚಿತ್ರವಿದು. ವಿಷ್ಣುವರ್ಧನ್ ವೈಯಕ್ತಿಕವಾಗಿ ಆಸಕ್ತಿ ತೆಗೆದುಕೊಂಡು ಪತ್ರಕರ್ತರನ್ನೆಲ್ಲ ಕರೆಸಿ ಅವರನ್ನು ಬಳಸಿಕೊಂಡ ಸನ್ನಿವೇಶವೊಂದನ್ನು ಚಿತ್ರಿಸಿಕೊಳ್ಳಲು ಕಾರಣರಾದರು. ಈ ಚಿತ್ರದಲ್ಲಿ ವಿಷ್ಣುವರ್ಧನ್ ತಂದೆಯ ಪಾತ್ರದಲ್ಲಿ ಭಿನ್ನವಾಗಿ ಕಂಡರು. ಕೆಲವು ದೃಶ್ಯಗಳಲ್ಲಿ 'ಮುತ್ತಿನಹಾರ'ದ ವೇಶಾಲಂಕರಣವನ್ನೇ ಹೋಲುತ್ತಿತ್ತು. ಅವರ ಮುಂದುವರಿಕೆಯೇ ಎನ್ನುವಂಥ ಅಭಿನಯವೂ ಇತ್ತು. ಅವರ ಕ್ಲೋಸ್‌ಕಾಲರ್ ಸೂಟ್ ಸುದ್ದಿಯಲ್ಲಿತ್ತು. ಅನಂತರ ವಿಷ್ಣುವರ್ಧನ್ ಅಂಥ ವೇಷದಲ್ಲಿ ಹೆಚ್ಚಾಗಿ ಕಾಣಿಸಿಕೊಂಡರು. ಈ ಚಿತ್ರದ ಅಭಿನಯಕ್ಕಾಗಿ ವಿಷ್ಣುವರ್ಧನ್‌ಗೆ ರಾಜ್ಯ ಸರ್ಕಾರದ ವರ್ಷದ ಶ್ರೇಷ್ಠ ನಟ ಪ್ರಶಸ್ತಿಯೂ ಬಂದಿತು.

'ಅಜಗಜಾಂತರ' ಕಾಶೀನಾಥ್ ನಿರ್ದೇಶನದ ಚಿತ್ರ. ಯಶಸ್ವಿಯಾಗಿ ಪ್ರದರ್ಶಿತವಾಯಿತು. ಪಾತ್ರಗಳ ನಡವಳಿಕೆ, ಭಾವ-ಭಂಗಿಗಳ ಮೂಲಕವೇ ಹಾಸ್ಯವನ್ನು ತರುವ ಪ್ರಯತ್ನವಿತ್ತು. ಸುಖ, ಶ್ರೀಮಂತಿಕೆಯೇ ಬದುಕಿನ ಪರಮಗುರಿ ಎಂದು ಭಾವಿಸುವ ತರುಣಿ ಮತ್ತು ಸಾಮಾನ್ಯ ದರ್ಜೆಯ ಬದುಕು, ಉದ್ಯೋಗಕ್ಕಾಗಿ ಅವರಿವರನ್ನು ಓಲೈಸಿ 'ರಾಜಿ' ಮಾಡಿಕೊಳ್ಳುವ ತರುಣ. ಇವರ ದಾಂಪತ್ಯದಲ್ಲಿ ಸಹಜವಾಗಿಯೇ ಏಳುವ ಭಿನ್ನಾಭಿಪ್ರಾಯಗಳು. ಅನೇಕ ಸಾನ್ನಿವೇಶಿಕ ಸಂಗತಿಗಳು ಕಥೆಯ ಓಟವನ್ನು ವಿಭಿನ್ನವಾಗಿ ನಿಯಂತ್ರಿಸುತ್ತ ಹೋಗಿವೆ. ಚಿತ್ರದ ನಿರೂಪಣಾ ತಂತ್ರದಲ್ಲೇ ಒಬ್ಬರನ್ನು ಮತ್ತೊಬ್ಬರು ವಂಚಿಸಲು, ಕಲವೊಮ್ಮೆ ತಿದ್ದಲು 'ನಾಟಕ'ವಾಡುತ್ತಾರೆ. ಒಂದು ಭ್ರಮೆಯ ಮೇಲೆ ಸವಾರಿ ಮಾಡುತ್ತಲೇ ವಾಸ್ತವವನ್ನು ಕಟ್ಟಲು ಹೊರಡುತ್ತಾರೆ ಕಾಶೀನಾಥ್. ಈ ಚಿತ್ರದ ಜಾಣತನದ ಹಿಂದೆ ಕಾಶೀನಾಥ್ ಸಹಾಯಕರಾಗಿ ಉಪೇಂದ್ರ ಇದ್ದರೆಂಬುದು ಗಮನಿಸಬೇಕಾದ ಸಂಗತಿ. ಅವರು ಒಂದು ಚಿಕ್ಕ ಪಾತ್ರವನ್ನೂ ನಿರ್ವಹಿಸಿದರು. ಈ ಚಿತ್ರಕ್ಕೆ ಹಂಸಲೇಖ ನೀಡಿದ ಗೀತಸಾಹಿತ್ಯ, ಕಲವು ಸನ್ನಿವೇಶಗಳ ಹಿನ್ನೆಲೆ ಸಂಗೀತ ಉತ್ತಮವಾಗಿತ್ತು. ಸತ್ಯಭಾಮಾ-ಸುಧೀಂದ್ರ ಮತ್ತು ಬ್ಯಾಂಕ್ ಜನಾರ್ದನ್, ಎಚ್.ಜಿ.ಸೋಮಶೇಖರರಾವ್ ಗಮನ ಸೆಳೆದರು. 'ನೂರು ಗಂಡು ಬಂದರೇನು ಒಂದು ಕೂಡ ಸೆಟ್ಟಗಿಲ್ಲವೇ....' ಗೀತ ಮತ್ತು ಚಿತ್ರೀಕರಣ ಹಾಸ್ಯದ ಜೊತೆ ಜೊತೆಗೆ ಗಮನಾರ್ಹವೆನಿಸಿತ್ತು. ಟಿಪಿಕಲ್ ಕಾಶೀನಾಥ್ ಹಾಸ್ಯಕ್ಕೆ ಈ ಚಿತ್ರದಲ್ಲಿ ಹಲವು ಸನ್ನಿವೇಶಗಳಿದವು. ಟೇಪ್‌ರೆಕಾರ್ಡರ್, ಧ್ವನಿಸುರುಳಿ ಇಟ್ಟುಕೊಂಡು ರಿಪ್ಲೆಂಡ್ ಮಾಡುತ್ತಲೇ ಅದರಿಂದ ಹೊರಡುವ ಗೀತೆಗಳಿಗೆ ವಿಶಿಷ್ಟ ಸನ್ನಿವೇಶಗಳನ್ನು ಹೊಂದಿಸಿರುವ ರೀತಿ ಮೊದಲಾದ ಅನೇಕ ಅಂಶಗಳು ಮಧ್ಯಮ ವರ್ಗದ ಹಗಲುಗನಸುಗಳು ಮತ್ತು ಅವನ್ನು ಅರ್ಧಾಂಶವಾದರೂ ಪೂರೈಸುವ ಪ್ರಯತ್ನಗಳನ್ನು ತೋರುತ್ತಲೇ ಅಂಥ ಕನಸುಗಾರರ ವರ್ಗಕ್ಕೆ ನೆರಳು ಬೆಳಕಿನಲ್ಲಿ ಒಂದು ಅನುಭವವನ್ನು ಕೊಡುವ ಪ್ರಯತ್ನ ಮಾಡಿದ್ದರು. ಅವುಗಳ ಆಳದಲ್ಲಿ ಆ ವರ್ಗದ ಅಲ್ಪತೃಪ್ತಿಯನ್ನು ಧನಾತ್ಮಕ ಮಾಡಿಕೊಳ್ಳುತ್ತಿರುವ ಬಗ್ಗೆ ವಿಷಾದದ ಎಳೆಯೊಂದು ಕಾಣದ ಹಾಗೆ ನುಸುಳಿ ಬಂದಿರುತ್ತಿತ್ತು.

'ಶಿವಯೋಗಿ ಅಕ್ಕಮಹಾದೇವಿ' ಪ್ರಾಮಾಣಿಕ ಪ್ರಯತ್ನವಾಗಿತ್ತು. ಆದರ ತಾಂತ್ರಿಕವಾಗಿ ದುರ್ಬಲ ಚಿತ್ರ. ಚಿತ್ರದಲ್ಲಿ ಅನಂತಸ್ವಾಮಿಯ ಸಂಗೀತ-ಗಾಯನ ಹಿತವೆನಿಸಿತ್ತು. ಅಕ್ಕನ ಪಾತ್ರದಲ್ಲಿ ಕಲಾವಿದೆ ಉಷಾ ಚೆನ್ನಾಗಿ ಅಭಿನಯಿಸಿದ್ದರು. ಆಕೆಗೆ ಮತ್ತು ಚಿತ್ರದ ತಾಂತ್ರಿಕ ವಿಭಾಗಕ್ಕೆ ರಾಜ್ಯ ಪ್ರಶಸ್ತಿಗಳೂ ಬಂದವು. ಆದರೆ ಚಿತ್ರ ಬಿಡುಗಡೆಯಾಗಲೇ ಇಲ್ಲ.

'ಗೋಲ್ ಮಾಲ್ ಭಾಗ-೨' ಮತ್ತೊಂದು ಹಾಸ್ಯ ಪ್ರಧಾನ ಚಿತ್ರ. ಅನಂತ್‌ನಾಗ್‌ಗೆ ಇಂಥ ಚಿತ್ರಗಳಲ್ಲಿ ಪಾತ್ರ ನೀಡಲು ನಿರ್ಮಾಪಕರು ಸಾಲುಗಟ್ಟಿ ನಿಂತ ದಿನಗಳವು. ಗೋಲ್ ಮಾಲ್ ಎರಡನೆಯ ಭಾಗದಲ್ಲಿ ಹೇಳುವಂಥ ವಿಶೇಷಗಳೇನೂ ಇರಲಿಲ್ಲ. ಮೊದಲನೆ ಭಾಗದ ಪಾತ್ರಗಳ, ಅದೇ ಶೈಲಿಯ ಪುನರಾವರ್ತನೆ. ಚಿತ್ರ ಸೋತಿತು.

'ಕಿತ್ತೂರಿನ ಹುಲಿ' ಚಿತ್ರವನ್ನು ಸಾಯಿಪ್ರಕಾಶ್ ನಿರ್ದೇಶಿಸಿದರು. ಸಾಯಿಪ್ರಕಾಶ್ ಮುಟ್ಟಿದ್ದೆಲ್ಲ ಚಿನ್ನವಾಗುತ್ತಿದ್ದ ಕಾಲವದು. ಭ್ರಷ್ಟರು, ವಂಚಕರುಗಳನ್ನು ಶೋಷಣೆಗೆ ಒಳಗಾದ ಸ್ತ್ರೀಯೇ ಸಿಡಿದು ಭದ್ರಕಾಳಿಯಂತೆ ಸಂಹರಿಸಿಬಿಡುವ ಕಥಾವಸ್ತು. ದುಷ್ಟ ಪ್ರವೃತ್ತಿ ಅತಿಯಾದರೆ ಸಾಮಾನ್ಯ ಮನುಷ್ಯನೂ ಸಿಡಿದೇಳುತ್ತಾನೆ. ಉತ್ತಮ ಮೌಲ್ಯಗಳ ಸಲುವಾಗಿ ಸಮಾಜ ಸದಾ ಕಾತರಗೊಂಡಿರುತ್ತದೆ ಎಂಬ ತತ್ವವನ್ನು ಹೇಳುವ ಪ್ರಯತ್ನವಿತ್ತು. ಶಶಿಕುಮಾರ್-ಮಾಲಾಶ್ರೀ ಜೋಡಿಯ ಅಭಿನಯ. ಮುಖ್ಯಮಂತ್ರಿ ಚಂದ್ರು ಮೊದಲಾಗಿ ಖಳರ ಸಾಲುಸಾಲೇ ಇತ್ತು. ಪರಾಕಾಷ್ಠೆಯ ದೃಶ್ಯದಲ್ಲಿ ಅಮ್ಮನವರ ರಥೋತ್ಸವ ನಡೆದಾಗ ಮಾಲಾಶ್ರೀ ದೇವತೆಯ ತ್ರಿಶೂಲವನ್ನೇ ಎಳೆದು ದುಷ್ಟರ ಸಂಹಾರ ಮಾಡುವ ಚಿತ್ರಣವಿತ್ತು. ಸಹಜ-ಅಸಹಜಗಳ ತರ್ಕದಾಚೆಗೆ ಸದಾಶಯವನ್ನು ಗಮನಿಸಿದರೆ ಇದೊಂದು ಗಮನಾರ್ಹ ಪ್ರಯತ್ನವೇ. ಹೆಂಡತಿ ಕೇಳಿದ್ದೆಲ್ಲವನ್ನು ಕೊಡಿಸುವ ಆತುರದಲ್ಲಿ ಸಂಬಳ ಸಾಲದೆ ಗಿಂಬಳಕ್ಕೆ ಕೈಯೊಡ್ಡಿದ ನಂತರದ ಅವಸ್ಥೆಯನ್ನು 'ಹೆಂಡ್ತಿ ಮಾತು ಕೇಳ್ತಿಯಾ...' ಹಾಡಿನ ಮುಖಾಂತರ ಮುಖ್ಯಮಂತ್ರಿ ಚಂದ್ರು ಪಾತ್ರವೇ ಸಾರುತ್ತದೆ. ಸಾಯಿಪ್ರಕಾಶ್ ಅವರು ಈ ಚಿತ್ರದ ಸಲುವಾಗಿ ವಿಮರ್ಶಾ ಸ್ಪರ್ಧೆ ಏರ್ಪಡಿಸಿದ್ದರು. ಲೇಖಕಿ ಎಚ್.ಎಸ್.ಪಾರ್ವತಿ, ಕಲಾವಿದೆ ಭಾರ್ಗವಿ ನಾರಾಯಣ್ ಅವರನ್ನು ತೀರ್ಪುಗಾರರನ್ನಾಗಿ ಆಹ್ವಾನಿಸಿ ಚಿತ್ರವನ್ನು ತೋರಿಸಿ, ಬಂದ ವಿಮರ್ಶೆಗಳಲ್ಲಿ ಬಹುಮಾನಕ್ಕೆ ತಕ್ಕವುಗಳನ್ನು ಆರಿಸಲು ತಿಳಿಸಲಾಗಿತ್ತು. ಹಾಗೆಯೇ ವಿಜೇತರಿಗೆ ಬಹುಮಾನ ವಿತರಿಸಿದ್ದರು.

'ಕದನ' ಕೆ.ವಿ.ರಾಜು ನಿರ್ದೇಶನದ ಚಿತ್ರ. ಅವರ 'ಇಂದ್ರಜಿತ್' ಯಶಸ್ಸಿನ ನಂತರ ಈ ಚಿತ್ರ ನಿರ್ದೇಶಿಸಿದಾಗ ನಿರೀಕ್ಷೆಯೂ ಬಹಳ ಇತ್ತು. ಆದರೆ ಹಾಗಾಗಲಿಲ್ಲ. ಚಿತ್ರ ಅದು ತೆರೆಕಂಡ ಕಾಲ-ಸಂದರ್ಭಕ್ಕಿಂತಲೂ ಮುಂದೆ ಇತ್ತು ಎಂಬ ಮಾತನ್ನು ನಿರ್ದೇಶಕ



(ಚಿತ್ರ ೧೧)'ನೀನು ನಕ್ಕರೆ ಹಾಲುಸಕ್ಕರೆ' ಚಿತ್ರದಲ್ಲಿ ವಿಷ್ಣುವರ್ಧನ್, ವಿನಯಾ ಪ್ರಸಾದ್



(ಚಿತ್ರ ೧೨) 'ಬಾಲಕ ಅಂಬೇಡ್ಕರ್' ಚಿತ್ರದಲ್ಲಿ ಅಮಿತ್



(ಚಿತ್ರ ೧೩) 'ಬಾಲಕ ಅಂಬೇಡ್ಕರ್' ಚಿತ್ರದಲ್ಲಿ ಅಮಿತ್ ಮತ್ತು ಗಂಗಾಧರ್

ಕೆ.ವಿ.ರಾಜು ಅವರೇ ಒಂದು ಸಂದರ್ಭದಲ್ಲಿ ಹೇಳಿದ್ದರು. 'ಇಂದ್ರಜಿತ್'ಗೆ ಹಿಂದಿಯ ರಾಮಾಯಣ ಧಾರಾವಾಹಿಯಲ್ಲಿ ಸೀತೆಯ ಪಾತ್ರಧಾರಿಯಾಗಿದ್ದ ದೀಪಿಕಾರನ್ನು ಕರೆಸಿದ್ದರೆ, 'ಕದನ'ಕ್ಕೆ ಮಹಾಭಾರತದ ದ್ರೌಪದಿ ಖ್ಯಾತಿಯ ರೂಪಾ ಗಂಗೂಲಿಯನ್ನು ಕರೆಸಿ ಸುದ್ದಿ ಮಾಡಿದ್ದರು. 'ಕದನ' ಮೂವರು ನಾಯಕರ ಸಾಹಸದ ಸುತ್ತ ನಡೆಯುವ ಕಥೆ. ಮೂರೂ ಮಂದಿ ಜೀವದ ಗೆಳೆಯರು. ನೌಕಾನೆಲೆ, ವಾಯುಪಡೆ, ಸೈನ್ಯ ಮೂರೂ ವಿಭಾಗಗಳಲ್ಲಿ ಕೆಲಸ ಮಾಡುತ್ತಿದ್ದ ಮಿತ್ರರು ರಜೆಯಲ್ಲಿ ಊರಿಗೆ ಬಂದಾಗ ನಡೆಯುವ ಆಕಸ್ಮಿಕ ಘಟನೆಗಳು ನಾಡಿನ ಒಳಗೇ ಇರುವ ಶತ್ರುಗಳು ಹೆಚ್ಚು ಅಪಾಯಕಾರಿ ಎಂಬುದನ್ನು ಗ್ರಹಿಸಿ ಇಲ್ಲೇ ನಿಂತು ಹೋರಾಡುವ ಸನ್ನಿವೇಶ ಸೃಷ್ಟಿಸುತ್ತದೆ.ಎಂದಿನಂತೆ ಕೆ.ವಿ.ರಾಜು ಅವರ ಚುರುಕಾದ ಅರ್ಥಪೂರ್ಣ ಸಂಭಾಷಣೆ ಇತ್ತು. ಜೈಜಗದೀಶ್ ಈ ಚಿತ್ರದಲ್ಲಿ ಇನ್‌ಸ್ಪೆಕ್ಟರ್ ಪಾತ್ರದಲ್ಲಿದ್ದರು. ಆತ ತುಂಬಾ ವಿಭಿನ್ನವಾಗಿ ಕಾಣುವಂತೆ ಮೇಕಪ್ ಮಾಡಲಾಗಿತ್ತು. ಅಂಬರೀಷ್, ದೇವರಾಜ್, ರಾಮಕೃಷ್ಣರ ಪಾತ್ರಗಳಿಗೆ ಬೆಂಬಲವಾಗಿ ನಿಲ್ಲುವ ಪಾತ್ರ ಜೈಜಗದೀಶ್‌ರದ್ದು. ತಾಂತ್ರಿಕವಾಗಿ ಕೆ.ವಿ.ರಾಜು ಅವರ ಪರಿಣತಿಯ ಬಗ್ಗೆ ಹೇಳುವ ಅಗತ್ಯವೇ ಇಲ್ಲ. ಛಾಯಾಗ್ರಹಣ. ಸಂಕಲನ ವಿಶೇಷವಾಗಿದ್ದವು. ಕೇರಳದ ಕಲಾವಿದ ಕ್ಯಾಪ್ಟನ್ ರಾಜು ಖಳನ ಪಾತ್ರದಲ್ಲಿದ್ದರು. 'ಕದನ' ನಿರ್ಮಿಸಿದ ಪದ್ಮನಿಧಿ ಆರ್ಟ್ಸ್ ಸಂಸ್ಥೆಯ ವೇಣುಗೋಪಾಲ್‌ಗೆ ಇಂಥದೊಂದು ಚಿತ್ರ ನಿರ್ಮಿಸಿದ ಹೆಮ್ಮೆಯೊಂದೇ ಉಳಿಯಿತು; ಬೊಕ್ಕಸ ಖಾಲಿಯಾಯಿತು. ಚಿತ್ರ ಪ್ರೇಕ್ಷಕರ ಗಮನ ಸೆಳೆಯಲಿಲ್ಲ.

ಕನ್ನಡದಲ್ಲಿ ಅಂಬೇಡ್ಕರ್ ಬಗ್ಗೆ ಬಂದ ಮೊದಲ ಚಿತ್ರ 'ಬಾಲಕ ಅಂಬೇಡ್ಕರ್'. ಬಸವರಾಜ ಕೆಸ್ತೂರ್ ಶ್ರದ್ಧೆಯ ನಿರ್ದೇಶನವಿತ್ತು. ಐ.ಎ.ಎಸ್. ಅಧಿಕಾರಿ ಸ್ವತಂತ್ರರಾವ್ ಚಿತ್ರದ ನಿರ್ಮಾಪಕರು. ಕಥೆಯೂ ಅವರದೆ. ಬಿಗಿಯಾದ ಚಿತ್ರಕಥೆ - ಅಭಿನಯವನ್ನೂ ಶಕ್ತಿಶಾಲಿ ಸಂಭಾಷಣೆಯನ್ನೂ ಬೇಡುವ ಚಿತ್ರ. ಆದರೆ ಅದಾವುದೂ ಇರಲಿಲ್ಲ. ತೀರಾ ಮೇಲ್‌ಸ್ತರದ ನಿರೂಪಣೆಯಾಗಿತ್ತು. ಚಿತ್ರ ಯಶಸ್ವಿಯಾಗಿ ಪ್ರದರ್ಶನವಾಗಲಿಲ್ಲ. ಆದರೆ ಆ ಚಿತ್ರ ಹಿಂದಿಗೂ ಡಬ್ ಆಯಿತು ಮತ್ತು ಕೆಲವು ಬಾರಿ ದೂರದರ್ಶನದ ನ್ಯಾಷನಲ್ ನೆಟ್‌ವರ್ಕ್‌ನಲ್ಲಿ ಪ್ರಸಾರವಾಯಿತು. ಚಿತ್ರಮಂದಿರಕ್ಕಿಂತ ಕಿರುತೆರೆಯಲ್ಲಿ ನೋಡಿದವರು ಇಷ್ಟಪಟ್ಟಿದ್ದೂ ಉಂಟು.

ಒಂದು ಘಟ್ಟದಲ್ಲಿ ರಜಸ್ಸು ಸಂಸ್ಥೆ ತನ್ನ ವ್ಯಾವಹಾರಿಕ ಅಚ್ಚುಕಟ್ಟುತನಕ್ಕೆ, ಉತ್ತಮ ಚಿತ್ರಗಳ ವಿತರಣೆಗೆ ಹೆಸರಾಗಿತ್ತು. ರಜಸ್ಸು ಸಂಸ್ಥೆಯ ರಾಜಶೇಖರ್ ಅವರೊಂದಿಗೆ ವ್ಯವಹಾರ ಒಂದು ಹೆಮ್ಮೆಯ ಸಂಗತಿಯೂ ಆಗಿತ್ತು. ರಜಸ್ಸು ಸಂಸ್ಥೆ ಅಜ್ಞಾತವಾಗಿಮ ವಿತರಣೆಗೆ ಮುಂಗಡ ಕೊಡುವುದರ ಆಚೆಗೆ ನೇರವಾಗಿ ನಿರ್ಮಾಣಕ್ಕೇ ಇಳಿಯಿತು. ದೊರೆ-ಭಗವಾನ್ ನಿರ್ದೇಶನದಲ್ಲಿ ವಿಷ್ಣುವರ್ಧನ್ ಅಭಿನಯದ 'ನೀನು ನಕ್ಕರೆ ಹಾಲು ಸಕ್ಕರೆ' ಚಿತ್ರವನ್ನು ನಿರ್ಮಿಸಿತು. ದೊರೆ ಭಗವಾನ್ ನಿರ್ದೇಶನ, ವಿಷ್ಣುವರ್ಧನ್ ನಾಯಕತ್ವ ಮತ್ತು ಹಂಸಲೇಖರ ಸಂಗೀತ - ಈ ಮೂವರ ಸಮ್ಮಿಲನ ಎಂಬುದೇ ಒಂದು ವಿಶೇಷ ಸಂಗತಿ, ನಿರೀಕ್ಷೆಯೂ ಬಹಳವಿತ್ತು. ಜೊತೆಗೆ ಚಿತ್ರದಲ್ಲಿ ಚಂದ್ರಿಕಾ, ವಿನಯಾ ಪ್ರಸಾದ್, ಅಂಜಲಿ, ರಜನಿ, ರೂಪಿಣಿ ಐವರೂ ನಾಯಕಿಯರಾಗಿದ್ದರು.

ಚಿತ್ರ ಸರಳವೂ, ಹಾಸ್ಯ-ರಂಜನೆ ಉಳ್ಳದ್ದೂ ಆಗಿತ್ತು. ಆದರೆ ಆಗಲೇ ಧೀರೋದಾತ್ತ ನಾಯಕನ ಇಮೇಜ್ ಇದ್ದ ವಿಷ್ಣು ಈ ಬಗೆಯ ಹಾಸ್ಯ ಚಿತ್ರದಲ್ಲಿ ಅಭಿನಯಿಸಿಯೂ ಉತ್ತಮ ಅಭಿನಯ ನೀಡಿದ್ದರು. ಸುಬ್ಬು ಪಾತ್ರದಲ್ಲಿದ್ದ ಅವರು ಇಷ್ಟಪಟ್ಟು ಹತ್ತಿರ ಹೋದ ಹುಡುಗಿಯರೆಲ್ಲ ಒಂದಲ್ಲ ಒಂದು ಸಮಸ್ಯೆಗಳಲ್ಲಿ ಒದ್ದಾಡುವವರಾಗಿದ್ದು, ಯಾರೂ ಆತನನ್ನು ವಿವಾಹವಾಗುವಂತಿರಲಿಲ್ಲ. ಆತನೇ ಅವರ ಸಮಸ್ಯೆಗಳನ್ನು ಬಿಡಿಸಿ ಬದುಕು ಒಪ್ಪ ಮಾಡುತ್ತಾನೆ. ಕೊನೆಯ ಹುಡುಗಿ ಮಾತ್ರ ಪ್ರೀತಿಸಿ ಮದುವೆ ಆಗುತ್ತಾಳೆ. ಸಾಮಾನ್ಯವಾಗಿ ಎಲ್ಲರೂ ನಿರೀಕ್ಷಿಸುವ ಉತ್ಕಂಠಿತ ಸ್ಥಿತಿಯಾಗಲಿ, ಅತಿ ಸಾಹಸವಾಗಲಿ ಇರಲಿಲ್ಲ. ಆದರೂ ಜನ ಭಾಗಶಃ ಒಪ್ಪಿದರು. ಈ ಚಿತ್ರದಲ್ಲಿ ವಿನಯಾ ಪ್ರಸಾದ್ ಅಭಿನಯ ಅತ್ಯುತ್ತಮ ಎನ್ನುವಷ್ಟು ಚೆನ್ನಾಗಿತ್ತು. ಸಿನಿಮಾ ಹುಚ್ಚಿನ ಹುಡುಗಿಯಾಗಿ ತುಂಬ ಲವಲವಿಕೆಯ ಅಭಿನಯ ನೀಡಿದರು. ಉಮಾಶ್ರೀ-ಎಂ.ಎಸ್.ಉಮೇಶ್ ಜೋಡಿ ಕೂಡಾ ಹೊಸದು. ಚಿತ್ರ ೫೦ ದಿನಗಳಿಗೂ ಹೆಚ್ಚು ಕಾಲ ಪ್ರದರ್ಶನಗೊಂಡು ಯಶಸ್ವಿ ಅನ್ನಿಸಿಕೊಂಡಿತು.

'ಮೋಡದ ಮರೆಯಲ್ಲಿ' ಚಿತ್ರವು 'ಕಿರೀಟಂ' ಮಲೆಯಾಳಂ ಚಿತ್ರದ ಪುನರವತರಣಿಕೆ. ಎಂ.ಎಸ್.ರಾಜಶೇಖರ್ ನಿರ್ದೇಶನದಲ್ಲಿ ಶಿವರಾಜ್ ಕುಮಾರ್ ಅಭಿನಯಿಸಿದ ಚಿತ್ರ. 'ಜೀವ ನೀನು ದೇಹ ನಾನು ನೀವು ದೂರವಾದರೆ...', 'ಬಾಳು ಉಯ್ಯಾಲೆಯಂತೆ ನಿನ್ನ ಮಾತು ಸಂಗೀತದಂತೆ...' ಹಾಡುಗಳು ಚೆನ್ನಾಗಿದ್ದವು. ಆಕಸ್ಮಿವಾಗಿ ನಡೆದ ದುರ್ಘಟನೆಯೊಂದರ ಕಾರಣದಿಂದ ತಪ್ಪಿತಸ್ಥನಾದ ನಾಯಕ ವಿನಾಕಾರಣ ರೌಡಿಯಂತಾಗುವುದೇ ಮೊದಲಾದ ಗಂಭೀರ ಅಂಶಗಳು ಚರ್ಚೆಗೆ ಬರುತ್ತವೆ. ಸಿಹಿಕಹಿ ಗೀತಾ ಮತ್ತು ಸಿಹಿಕಹಿ ಚಂದ್ರು ಅವರ ಹಾಸ್ಯ ನೆನಪಿನಲ್ಲುಳಿಯುತ್ತವೆ.



(ಚಿತ್ರ ೧೪) 'ಗೌರಿಗಣೇಶ' ಚಿತ್ರದಲ್ಲಿ ಮಾ।ಆನಂದ್ ಮತ್ತು ಸಿಹಿಕಹಿ ಚಂದ್ರು

ನಂಜುಂಡೇಗೌಡರ ನಿರ್ದೇಶನದಲ್ಲಿ ಸುರೇಶ್‌ಕುಮಾರ್ ನಿರ್ಮಿಸಿದ ಚಿತ್ರ 'ನವತಾರೆ'. ಗೌಡರ ಚಿತ್ರಗಳೆಲ್ಲ ಯಶಸ್ವಿ ಅಲ್ಲ. ಅವರ ಅವರ ವಸ್ತುವಿನ ಆಯ್ಕೆಯಲ್ಲಿ ವಿಶೇಷವಿರುತ್ತಿತ್ತು. ಒಂದು ಮತ್ತೊಂದಕ್ಕಿಂತ ಭಿನ್ನ ಮತ್ತು ಹೊಸತಿನದು ಎಂಬುದು ಮುಖ್ಯ. ಅವರಗಿನ ಚಿತ್ರಗಳಿಗೆ ಹೋಲಿಸಿದರೆ 'ನವತಾರೆ' ಕೂಡಾ ಪೂರ್ಣ ಪ್ರಮಾಣದಲ್ಲಿ ಕ್ರೀಡೆಯನ್ನು ಕೇಂದ್ರದಲ್ಲಿಟ್ಟುಕೊಂಡಿತ್ತು. ಕುಮಾರ್ ಬಂಗಾರಪ್ಪ ಅಭಿನಯಿಸಿದ ಚಿತ್ರ. 'ಆಲ್‌ರೌಂಡರ್' ಎಂಬ ಹಿಂದಿ ಚಿತ್ರದ ಛಾಯೆ ಎಂಬ ಮಾತೂ ಇತ್ತು. ಕ್ರಿಕೆಟ್ ಆಟವನ್ನೇ ಮುಖ್ಯ ವಸ್ತುವನ್ನಾಗಿಸಿ ತೆಗೆದ ಏಕೈಕ ಚಿತ್ರ. ಆಟದ ಜೊತೆಗೇ ಬದುಕು, ಸಾಹಸ, ಪ್ರೀತಿ ಎಲ್ಲವೂ ಮೇಳೈಸಿದ ಚಿತ್ರ. ಆದರೆ ರೀಮೇಕ್ ಚಿತ್ರವಾಗಿರಲಿಲ್ಲ. ಕ್ರಿಕೆಟ್ ಆಟಗಾರ ಜಿ.ಆರ್.ವಿಶ್ವನಾಥ್‌ರನ್ನು ಬೆಳ್ಳಿತೆರೆಗೆ ತಂದ ಸಾಹಸಿ ನಂಜುಂಡೇಗೌಡ. ಹಂಸಲೇಖ ಸಾಹಿತ್ಯದಲ್ಲಿ 'ನೀರಿನಂತೆ ನಿರ್ಮಲ ಹೂವಿನಂತೆ ಕೋಮಲ...', 'ಒಂದೇ ಕ್ಷಣದಲ್ಲಿ ಪರಿಚಯವಾಯ್ತು...', 'ಲೋಕ ಲೋಕ ನೋಡೋದು ಹೀಗೇನೆ...' ಹಾಡುಗಳು ಜನಪ್ರಿಯ ಆದವು. ದೇವಿಪ್ರಸಾದ್ ಛಾಯಾಗ್ರಹಣವಿತ್ತು. ಮುಂದೆಯೂ ಕಲಕಾಲ ಇದೊಂದು ಟೀಮ್ ಎಂಬಂತೆ ಇವರಲ್ಲ ಕೆಲಸ ಮಾಡಿದರು.

ಅನಂತ್‌ನಾಗ್-ಫಣಿ ರಾಮಚಂದ್ರ ಜೋಡಿಯಲ್ಲಿ 'ಗಣೇಶನ ಮದುವೆ'ಯ ಯಶಸ್ಸಿನ ನಂತರ ತೆರಕಂಡ ಚಿತ್ರ 'ಗೌರಿಗಣೇಶ'. ಚಿತ್ರದ ಕಥೆ ರಂಜನೆಯ



(ಚಿತ್ರ ೧೫) 'ಎಸ್.ಪಿ.ಭಾರ್ಗವಿ' ಚಿತ್ರದಲ್ಲಿ ದೊಡ್ಡಣ್ಣ ಮತ್ತು ಮಾಲಾಶ್ರೀ

ಜೊತೆಜೊತೆಗೇ ಮಧ್ಯಮವರ್ಗದ ಬದುಕಿನ ವಿಷಾದಗಳನ್ನು ಹೇಳುತ್ತದೆ. ನಾಯಕ ಎಲ್ಲೋ ಸಿಕ್ಕ ಡೈರಿಯೊಂದರಿಂದ ಸತ್ತುಹೋದ ಹುಡುಗಿಯ ಜೊತೆ ಸಂಬಂಧವಿರಿಸಿಕೊಂಡವರು, ಬಂಧುಗಳು ಎಲ್ಲರನ್ನೂ ಸಂಪರ್ಕಿಸುತ್ತಾನೆ. ಅನಾಥಾಶ್ರಮದಿಂದ ಕರೆತಂದ ಒಬ್ಬ ಹುಡುಗನನ್ನು ಮುಂದಿಟ್ಟುಕೊಂಡು ಆ ಸತ್ತ ಹುಡುಗಿಯ ಮಗನೇ ಎಂದು ಹೇಳುತ್ತಾ, 'ಚಾಟಿ ಇಲ್ಲೇ ಆಡಿಸಬಲ್ಲೇ ಬುಗುರಿಯನೇ....' ಎಂದು ಎಲ್ಲರನ್ನೂ ಮೋಸಗೊಳಿಸುತ್ತಾ ಭಾವನಾತ್ಮಕವಾಗಿ ಒಳಗೊಳ್ಳುವಂತೆ ಮಾಡಿ ಬೇಕಾದನ್ನು ಪಡೆದುಕೊಳ್ಳುತ್ತಾನೆ. ಈ ಎಲ್ಲವೂ ಸಾನ್ನಿವೇಶಿಕ ಹಾಸ್ಯದ ಹಾಗೂ ಕಲಾವಿದರ ಸೊಗಸಾದ ಅಭಿನಯದಿಂದಾಗಿ ಅತ್ಯಂತ ರಂಜನೀಯವಾಗಿದೆ. ಚೊಕ್ಕವಾದ ಚಿತ್ರನಾಟಕ ರಚಿಸಬಲ್ಲ ಫಣಿ ರಾಮಚಂದ್ರರ ಪ್ರತಿಭೆ ಚಿತ್ರಿಕಗಳಿಗಿಂತ ಮಿಗಿಲಾಗಿ ಅವರು ಕಥೆ ಹೇಳುವ ವಿಧಾನ ಮತ್ತು ಕಲಾವಿದರನ್ನು ಬಳಸಿಕೊಳ್ಳುವ ಬಗೆಯಲ್ಲೇ ವ್ಯಕ್ತವಾಗುವಂಥದ್ದು. ಮಾ। ಆನಂದ್ ಚಟುವಟಿಕೆಯ ಅಭಿನಯ ಈ ಚಿತ್ರದ ಹೈಲೈಟ್.

'ಎಸ್.ಪಿ.ಭಾರ್ಗವಿ' ಚಿತ್ರವನ್ನು ಸೋಮಶೇಖರ್ ನಿರ್ದೇಶಿಸಿದ್ದರು. ಮಾಲಾಶ್ರೀ ಪೊಲೀಸ್ ಸೂಪರಿನ್‌ಟೆಂಡೆಂಟ್ ಪಾತ್ರದಲ್ಲಿ ಉತ್ತಮ ಅಭಿನಯ ನೀಡಿದ್ದರು. ಚಿತ್ರದಲ್ಲಿ ಡ್ಯೂಪ್ ಹಾಕದೆ ಆಕೆಯೇ ಸಾಹಸ ಸನ್ನಿವೇಶಗಳಲ್ಲಿ ಫೈಟ್ ನಿರ್ವಹಿಸಿದರು. ಕನ್ನಡದಲ್ಲಿ ತೆಲುಗಿನ ವಿಜಯಶಾಂತಿಗೆ ಸಮನಾದ ಕಲಾವಿದೆಯೊಬ್ಬರಿದ್ದಾರೆ ಮತ್ತು ಕನ್ನಡ ಜನತೆ ಒಪ್ಪಿಕೊಂಡಿದೆ ಎಂಬುದು ಗಮನಿಸಬೇಕಾದ ಸಂಗತಿ. ಸೋಮಶೇಖರ್‌ಗೆ ಮಾಲಾಶ್ರೀಯನ್ನು ಹೀಗೆ ಹೊಸ ಮಾದರಿಯಾಗಿ ರೂಪಿಸಿದ ಹೆಮ್ಮೆಯೂ ಇತ್ತು.

ಮುಂದಿನ ವರ್ಷಗಳಲ್ಲಿ ಮಾಲಾಶ್ರೀ ಅಭಿನಯದ ಚಿತ್ರಗಳೆಲ್ಲ ಸಾಹಸ, ದಿಟ್ಟತನಗಳನ್ನೊಳಗೊಂಡವೇ ಆಗಿದ್ದವು.

'ಭೈರವಿ' ಚಿತ್ರಕ್ಕೆ ಬೇಬಿ ಶ್ಯಾಮಿಲಿಯದೇ ಆಕರ್ಷಣೆ. ಈ ಮೊದಲು 'ಮತ್ತೆ ಹಾಡಿತು ಕೋಗಿಲೆ'ಯಲ್ಲಿ ಚಿಕ್ಕ ಪಾತ್ರದಲ್ಲಿ ಕಾಣಿಸಿಕೊಂಡಿದ್ದಳು. 'ಭೈರವಿ'ಯಲ್ಲಿ ಆಕೆಯೇ ಕೇಂದ್ರವಾದಳು. ಸೆಲ್ವಂ ಮತ್ತು ರಾಮನಾರಾಯಣ್ ಜೋಡಿ ಈ ಚಿತ್ರದಿಂದ ಕನ್ನಡದಲ್ಲಿ ಹೆಸರಾಯಿತು. ಇಲ್ಲಿಂದಾಚೆಗೆ ಸೆಲ್ವಂ ನಿರ್ಮಾಣ, ರಾಮನಾರಾಯಣ್ ನಿರ್ದೇಶನದಲ್ಲಿ ಶ್ಯಾಮಿಲಿ ಅಭಿನಯದ ಸರಣಿ ಸಿನಿಮಾಗಳು ಬರತೊಡಗಿದವು. ಬೇಬಿ ಶ್ಯಾಮಿಲಿಯ ಅಭಿನಯ ಸಾಮರ್ಥ್ಯವನ್ನು ಸರಿಯಾಗಿ ಬಳಸಿಕೊಳ್ಳಬಯಸಿದ ಚಿತ್ರರಂಗ ಆಕೆಯನ್ನು ಸಾಮಾನ್ಯವಾಗಿ ದೈವ-ದೆವ್ವಗಳಂಥ ಶಕ್ತಿಶಾಲಿಯಾದ್ದೊಂದು ಹೊರಗಿನ ಆವಾಹನೆ ಮಾಡಿಕೊಳ್ಳುವಂತೆ ಕಲ್ಪಿಸಿದ್ದೇ ಹೆಚ್ಚು. ಆಕೆಯ ನೆರವಿಗೆಂಬಂತೆ ಹಾವು, ಕೋತಿ, ನಾಯಿ, ಗೂಳಿ ಮೊದಲಾದ ಪ್ರಾಣಿಗಳನ್ನು ಬಳಸಿದರು. ಈ ಬಗೆಯ ಚಿತ್ರಗಳ ಸಾಲಿನಲ್ಲೇ ಬಿ.ರಾಮಮೂರ್ತಿ ನಿರ್ದೇಶನದ 'ಶ್ವೇತಾಗ್ನಿ' ಕೂಡಾ - ಅಂಥದೇ ಕಥಾವಸ್ತು ನಿರೂಪಣೆಯಿಂದಾಗಿ - ಸೇರಿಕೊಳ್ಳುತ್ತದೆ.

'ಗಂಡು ಸಿಡಿಗುಂಡು' ಎಂ.ಎಸ್.ರಾಜಶೇಖರ್ ನಿರ್ದೇಶನದ ಚಿತ್ರ. 'ವಾಮನ' ಎಂಬ ಹೆಸರಿನ ಪಾತ್ರವನ್ನು ರಾಜಶೇಖರ್ ನಿರ್ವಹಿಸಿದ್ದರು. ಅವರಿಗಾಗಿ ಗೀತೆಯೊಂದೂ ರಚಿತವಾಗಿತ್ತು. ಅಂಬರೀಷ್-ಮಾಲಾಶ್ರೀ ಜೋಡಿ ಅಭಿನಯಿಸಿತ್ತು.



(ಚಿತ್ರ ೧೬) 'ಕಲ್ಯಾಣ ಮಂಟಪ' ಚಿತ್ರದಲ್ಲಿ ಮೋಹಿನಿ ಮತ್ತು ರಾಘವೇಂದ್ರ ರಾಜಕುಮಾರ್

ಒಂದು ಘಟ್ಟದಲ್ಲಿ ಮಾಲಾಶ್ರೀ-ಅಂಬರೀಷ್-ಎಂ.ಎಸ್.ರಾಜಶೇಖರ್ ಸಹಯೋಗ ಚಾಲ್ತಿಯಲ್ಲಿತ್ತು. ಚಿತ್ರ ಸಾಮಾನ್ಯವಾಗಿತ್ತು. ಹಾಸ್ಯಕ್ಕೆ ಹೆಚ್ಚು ಒತ್ತೂ ಇತ್ತು. 'ಗೌರಿ ಕಲ್ಯಾಣ' ದ್ವಾರಕೀಶ್ ಚಿತ್ರಿಸಿದ ಮತ್ತೊಂದು ರೀಮೇಕ್. ಇದಕ್ಕೆ ಮೂಲ ಹಿಂದಿಯ 'ಮೊಹಬತ್' ಎನ್ನಲಾಗಿತ್ತು. ಚಿತ್ರದ ಕಥಾಂಶ ಚೆನ್ನಾಗಿಯೇ ಇತ್ತು. ಎಂ.ಪಿ.ಶಂಕರ್ ಪಾತ್ರ ಬಹಳ ಕಾಲದ ಮೇಲೆ ಮತ್ತೆ 'ನಾಗರಹಾವು', 'ಬಂಗಾರದ ಮನುಷ್ಯ' ಚಿತ್ರಗಳನ್ನು ನೆನಪಿಗೆ ತರುವಷ್ಟು ಒಪ್ಪವಾಗಿತ್ತು. ಈ ಚಿತ್ರದಲ್ಲಿ ಹೊಸ ನಟ ಹರ್ಷವರ್ಧನನನ್ನು ಪರಿಚಯಿಸಿದರು. ಆದರೆ ಆ ತರುಣ ನೆಲೆ ನಿಲ್ಲುವಷ್ಟು ಉತ್ತಮವಾಗಿ ಅಭಿನಯಿಸಲಿಲ್ಲ. ಹಾಗಾಗಿ ಕರಗಿ ಹೋದರು. 'ಗೌರಿ ಕಲ್ಯಾಣ' ದ್ವಾರಕೀಶ್ ನಿರ್ಮಾಣ ಮಟ್ಟಕ್ಕೆ ಇರಲಿಲ್ಲ. ಬಡಕಲಾಗಿದ್ದು ಪ್ರೇಕ್ಷಕರನ್ನು ನಿರಾಶೆಗೊಳಿಸಿತ್ತು. "ಈ ಚಿತ್ರವನ್ನು ಆರ್ವೋ ಕಲರ್ ಫಿಲಂ ಬಳಸಿ ಚಿತ್ರಿಸಿದ್ದೂ ಕೂಡ ಚಿತ್ರದ ಗುಣಮಟ್ಟ ಕಡಿಮೆಯಾಗಿ ಚಿತ್ರ ಸೋಲಲು ಕಾರಣವಾಯಿತು" ಎನ್ನುತ್ತಾರೆ ದ್ವಾರಕೀಶ್.

'ಅನಾಥ ರಕ್ಷಕ' ತರುಣ ಟಿ.ಜನಾರ್ದನ್ ನಿರ್ದೇಶಿಸಿದ್ದು. ಜನಾರ್ದನ್ ಉತ್ತಮ ಛಾಯಾಗ್ರಾಹಕರು. ಅವರ ಕೌಶಲವನ್ನು ಮೆಚ್ಚಿ ಚಂದೂಲಾಲ್ ಜೈನ್ ಹಿಂದೆಯೇ ಚಿತ್ರ ನಿರ್ದೇಶಿಸಲು ಅವಕಾಶ ನೀಡಿದ್ದರು. ಮೊದಲ ಪ್ರಯತ್ನದಲ್ಲೇ ಅತಿ ಉತ್ಸಾಹ. ಬಾಕ್ಸಾಫೀಸ್ ಹಿಟ್‌ಗಳನ್ನು ಗಮನದಲ್ಲಿಟ್ಟುಕೊಂಡು ಕ್ಯಾಮರಾ ಗಿಮಿಕ್‌ಗಳನ್ನು ತುಂಬಿಸಿ ಚಿತ್ರ ಪೂರ್ತಿ ಮಾಡಿದ್ದರು. ಚಿತ್ರ ಓಡಲಿಲ್ಲ. ಬಹುಕಾಲ ಜನಾರ್ದನ್ ಅವಕಾಶಗಳಿಗಾಗಿ ಪರದಾಡಿದರು. 'ಯೌವನದ ಹೊಳೆಯಲ್ಲಿ'ಯಂತೆ 'ಅಗ್ನಿಕನ್ಯೆ' ಮೊದಲಾದ ಚಿತ್ರಗಳಾದವು. ಆಗ ಈಗ ಸಿಗುವ ಅವಕಾಶದಲ್ಲಿ ಅವರದೇ ಆದ

ರೀತಿಯಲ್ಲಿ ('ನೀ ನನ್ನ ಜೀವ' ಮೊದಲಾದ ಚಿತ್ರಗಳು) ಚಿತ್ರ ನಿರ್ದೇಶನ ಮಾಡುವುದಾಗಿತ್ತು. 'ಅನಾಥ ರಕ್ಷಕ' ಚಿತ್ರದ ನಿರ್ದೇಶನ ನಿಜಕ್ಕೂ ಅವರಿಗೆ ಒಂದು ಅಪೂರ್ವ ಅವಕಾಶವೇ. ನಿರ್ಮಾಪಕರು ಮೂರ್‍ನಾಲ್ಕು ಜನ. ಶಶಿಕುಮಾರ್ ಅಭಿನಯದ ಚಿತ್ರ. ಕಥೆಯನ್ನು ಪತ್ರಕರ್ತ ಹರೀಶ್ ಚೆನ್ನಾಗಿ ಹೆಣೆದಿದ್ದರು. ಧಾರಾಳವಾಗಿ ವೆಚ್ಚಮಾಡಿ ಚಿತ್ರ ನಿರ್ಮಿಸುವಂಥ ನಿರ್ಮಾಪಕರೂ ಇದ್ದರು. ಚಿತ್ರವೂ ಕಳಪೆಯೇನಲ್ಲ. ಸಾಧಾರಣ ಮಟ್ಟದ ಪ್ರೇಕ್ಷಕರನ್ನು ರಂಜಿಸುವಂತಿತ್ತು. ಮುಖ್ಯವಾಗಿ ಸಾಧು ವೇಷದ ಮುಖವಾಡಧಾರಿಗಳ ಬಣ್ಣ ಬಯಲು ಮಾಡುವ ವಸ್ತುವನ್ನು ಜನಾರ್ದನ್ ಚೊಕ್ಕವಾಗಿ ನಿರೂಪಿಸಿದ್ದರು. ಸದಾಶಿವ ಸಾಲಿಯಾನ್, ಸುನೀಲ್, ರೋಹಿಣಿ, ಅಪ್ಸರ ಅಭಿನಯಿಸಿದ್ದರು. ಅಬ್ಬರದ ಪ್ರಚಾರ ಪಡೆದುಕೊಂಡ ಚಿತ್ರ. ಸಹಕಾರಿ ಬ್ಯಾಂಕೊಂದರ ಹಣ ಈ ಚಿತ್ರಕ್ಕಾಗಿ ಬಳಕೆಯಾದ ಅಪಾದನೆ ದೊಡ್ಡ ಹಗರಣವೇ ಆಯಿತು. ನಿರ್ಮಾಪಕರು, ಬ್ಯಾಂಕಿನ ಸಿಬ್ಬಂದಿ ಪೇಚಿಗೆ ಸಿಕ್ಕಿಕೊಂಡರು.

'ತೇಜ' ಕೊಟ್ಟಾರಕರ ಕುಟುಂಬ ಬಹಳ ದಿವಸಗಳ ನಂತರ ಮತ್ತೆ ಕನ್ನಡ ಚಿತ್ರ ನಿರ್ಮಿಸಿದರೆಂಬುದಕ್ಕಷ್ಟೇ ವಿಶೇಷ. ಕುಮಾರ್ ಬಂಗಾರಪ್ಪ ಅಭಿನಯವಿತ್ತು. ಕೊಟ್ಟಾರಕರರ ಮಗ ರವಿ ಕೊಟ್ಟಾರಕರ ನಿರ್ದೇಶಿಸಿದ ಮೊದಲ ಚಿತ್ರ 'ತೇಜ'.


(ಚಿತ್ರ ೧೭) 'ಪೊಲೀಸ್ ಮತ್ತು ದಾದಾ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಸಂಗೀತಾ ಬಿಜಲಾನಿ

'ಕಲ್ಯಾಣಮಂಟಪ' ರಾಘವೇಂದ್ರ ರಾಜಕುಮಾರ್ ಅಭಿನಯದ ಚಿತ್ರ. ಸೊಗಸಾದ ಹಾಡುಗಳು, ಲವಲವಿಕೆಯ ಅಭಿನಯ. ಅವರೊಂದಿಗೆ ಮೋಹಿನಿ ಎಂಬ 'ಬೊಂಬೆ'ಯಂಥ ಚೆಲುವೆ ಅಭಿನಯಿಸಿದ್ದರು. ವಿ.ಗೋವಿಂದರಾಜರ ನಿರ್ದೇಶನದ ಚಿತ್ರದಲ್ಲಿ ಕರಾಟೆ ಪರಿಣತ, ನೀಳ ಚೆಲುವೆ ಶಿವರಂಜಿನಿ ಇದ್ದರು. ಧೀರೇಂದ್ರಗೋಪಾಲ್ ಮತ್ತೊಮ್ಮೆ 'ಗಜಪತಿ ಗರ್ವಭಂಗ'ದ ಹಾಸ್ಯವನ್ನು ನೆನಪಿಸುವಂಥ ಅಭಿನಯ-ಹಾಸ್ಯ ಕೊಟ್ಟರು. ಮನೆಯೊಂದನ್ನು ಬಾಡಿಗೆದಾರರಿಂದ ಬಿಡಿಸಲು ನಾಯಕನು ಕಟ್ಟುವ ನಾಟಕವೇ ಕಥೆಯ ಕೇಂದ್ರಬಿಂದು. ಇದಕ್ಕಾಗಿ ಮೋಹಿನಿಯು ಹಾಗೆ ಬಂದು ಮಹಾತ್ಮಾ ಸಂಸ್ಥೆಯ ಜಗನ್ಮೋಹಿನಿ ಚಿತ್ರದ 'ಎಂದೋ ಎಂದೋ ಎಂದೋ ಮನೆಯ ಬಿಡುವೆ...' ಎಂಬ ಚುಟುಕು ಗೀತ ಹಾಡಿ ಮಧುರ ನೆನಪುಗಳನ್ನು ಕೆರಳಿಸಿದ್ದರು ರಾಘವೇಂದ್ರ ರಾಜಕುಮಾರ್. ರಾಜಕುಮಾರ್ ಹಾಡಿರುವ 'ಒಂಬತ್ತು ಒಂಬತ್ತು ತೋಳ ಹಳ್ಳಕ್ಕೆ ಬಿತ್ತು...' ಗೀತ, ಚಿತ್ರೀಕರಣ ಜನರಿಗೆ ಇಷ್ಟವಾದವು.

'ರಣಚಂಡಿ' ಮುದ್ದುರಾಜ್ ನಿರ್ದೇಶಿಸಿದ ರೀಮೇಕ್ ಚಿತ್ರ. ಇದರಲ್ಲಿ ಕೆಲವು ಚಿತ್ರಿಕೆಗಳು ಗಮನಾರ್ಹವೆನಿಸಿದ್ದವು. ತಮಿಳಿನ ರಾಧಾ ಮುಖ್ಯ ಪಾತ್ರದಲ್ಲಿ ತುಂಬ ಸೊಗಸಾಗಿ ಅಭಿನಯಿಸಿದ್ದರು. ಧೂರ್ತನೊಬ್ಬ ಅತ್ಯಾಚಾರಕ್ಕಿಂತ ಹೆಚ್ಚಿನ ಅಪಮಾನವಾಗಲಿ ಎಂದು ಆಕೆಯನ್ನು ಬೆತ್ತಲಾಗಿಸಿ, ರಸ್ತೆಯಲ್ಲಿ ನಡೆದು ಹೋಗು ಎನ್ನುವುದು, ಆಕೆ ನಡೆದು ಬರುವಾಗ ನಾಯಕನಟ ಸನಿಹದಲ್ಲೇ ಇದ್ದ ದೇವಿಯ ವಿಗ್ರಹದ ಮೇಲಿದ್ದ ಸೀರೆಯನ್ನು ತೆಗೆದು ಉಡಲು ಕೊಡುವ ಸನ್ನಿವೇಶ ನೋಟಕನಲ್ಲಿ ವಿಶಿಷ್ಟ ಅನುಕಂಪ ತರುವಂತಿತ್ತು. ಮೇಲ್‌ಸ್ತರದ ನಿರೂಪಣೆಯಿಂದಾಗಿ ಗಮನಾರ್ಹ ಚಿತ್ರವೆನ್ನಿಸಲಿಲ್ಲ.

'ಪೊಲೀಸ್ ಮತ್ತು ದಾದಾ' ಚಿತ್ರ ಹಲವು ಕಾರಣಗಳಿಗಾಗಿ ಮುಖ್ಯವಾಗುತ್ತದೆ. ವಿಷ್ಣುವರ್ಧನ್ ಹಿಂದಿ ಚಿತ್ರರಂಗವನ್ನೂ ಪ್ರವೇಶಿಸಬೇಕೆಂಬ ಮಹತ್ವಾಕಾಂಕ್ಷೆಯ ಫಲವಾಗಿ ಈ ಚಿತ್ರ, ಅವರು ಮತ್ತು ಅವರ ಆಪ್ತ ಮಿತ್ರ ಮಾಣಿಕ್‌ಚಂದ್ ಅವರ ಸಾಹಸದಿಂದಾಗಿ ನಿರ್ಮಾಣವಾಯಿತು. 'ಪೊಲೀಸ್ ದಾದಾ' ಆಗಿದ್ದುದು ಸೆನ್ಸಾರ್ ಕಾರಣದಿಂದ 'ಪೊಲೀಸ್ ಮತ್ತು ದಾದಾ' ಆಯಿತು. ಹಿಂದಿಯಲ್ಲೂ ಏಕಕಾಲಕ್ಕೆ ಚಿತ್ರಿತವಾದ ಈ ಚಿತ್ರದ ಹಿಂದಿ ಅವತರಣಿಕೆ ಕರ್ನಾಟಕದಲ್ಲಿ ಬಿಡುಗಡೆ ಆಗಿದ್ದು ಕೊಂಚ ತಡವಾಯಿತು. ಹಿಂದಿಯಲ್ಲಿ 'ಇನ್‌ಸ್ಪೆಕ್ಟರ್ ಧನುಷ್' ಎಂದು ಹೆಸರು ಕೊಡಲಾಗಿತ್ತು. ವಿಭಿನ್ನ ಪಾತ್ರಗಳು; ಆದರೆ ಮಾಸ್ಕ್ ಬಳಸುವಂಥ ದ್ವಿಪಾತ್ರವಲ್ಲ. ಒಬ್ಬ ಖೈದಿ, ಒಬ್ಬ ಇನ್‌ಸ್ಪೆಕ್ಟರ್. ಒಬ್ಬ ಸತ್ತ ಮೇಲೆ ಇನ್ನೊಂದು ಪಾತ್ರ ಬರುತ್ತದೆ. ಎರಡೂ ಪಾತ್ರ ನಿರ್ವಹಿಸಿದವರು ವಿಷ್ಣುವರ್ಧನ್. ಜೈಲಿನಲ್ಲಿರುವ ಖೈದಿಯ ಹೆಸರು ವಿಷ್ಣುದಾದಾ. ಇನ್‌ಸ್ಪೆಕ್ಟರ್ ಪಾತ್ರದ ಹೆಸರು ಧನುಷ್. ಇನ್‌ಸ್ಪೆಕ್ಟರ್ ಪಾತ್ರ ಶತ್ರುಗಳ ಸಂಚಿನಿಂದಾಗಿ ಸಾಯುತ್ತದೆ. ಖೈದಿಯನ್ನು ಇನ್‌ಸ್ಪೆಕ್ಟರ್ ಆಗಿಸಿ ಹೊರಗೆ ಕರೆತರುತ್ತಾರೆ. ಸಾಮಾಜಿಕ ಸಂದರ್ಭದ ಹಿನ್ನೆಲೆಯಲ್ಲಿ ಖೈದಿಯೊಬ್ಬ ಪೊಲೀಸ್ ಆಗಿ ಸಮಾಜದ ಒಳಗೆ ಸೇರುವುದು ಆಶ್ಚರ್ಯಕರ ಹಾಗೂ ವಿಶೇಷ ಸಂಗತಿ. ಬಪ್ಪಿಲಹರಿ ಅವರ ಸಂಗೀತ. ಕೆಲವು ಗೀತೆಗಳು ಜನಪ್ರಿಯವಾದವು. ಈ ಚಿತ್ರದ ಬಗ್ಗೆ ಮಾತನಾಡುವಾಗಲೇ ಇನ್ನೊಂದು ಮುಖ್ಯ ಸಂಗತಿಯನ್ನು ನೆನಪು ಮಾಡಬೇಕು. ಈ ಹಿಂದೆ ೧೯೮೦ ರಲ್ಲಿ 'ಕಾಳಿಂಗ' ಚಿತ್ರ ವಿ.ಸೋಮಶೇಖರ್ ನಿರ್ದೇಶನದಲ್ಲಿ ತೆರೆಗೆ ಬಂದಿತ್ತು. ಈ ಚಿತ್ರದ ಕಥೆಯ ಅನುವಾದವೋ ಎಂಬಂತೆ 'ಪೊಲೀಸ್ ಮತ್ತು ದಾದಾ' ಹಿಂದಿಯ ತುಳಸಿ ಮತ್ತು ಶ್ಯಾಂ ಅವರ ಜಂಟಿ ನಿರ್ದೇಶನದಲ್ಲಿ ತೆರೆಗೆ ಬಂತು. 'ಕಾಳಿಂಗ' ಚಿತ್ರದಲ್ಲೂ ವಿಷ್ಣುವರ್ಧನ್ ಅಭಿನಯವಿತ್ತು. ರತಿ ಅಗ್ನಿಹೋತ್ರಿ ನಾಯಕಿಯಾಗಿದ್ದರು. 'ಪೊಲೀಸ್ ಮತ್ತು ದಾದಾ'


(ಚಿತ್ರ ೧೮) 'ಕಲಿಯುಗ ಭೀಮ' ಚಿತ್ರದಲ್ಲಿ ಪಂಢರಿಬಾಯಿ ಮತ್ತು ಪ್ರಭಾಕರ್



(ಚಿತ್ರ ೧೯) 'ಹೃದಯ ಹಾಡಿತು' ಚಿತ್ರದಲ್ಲಿ ಮಾಲಾಶ್ರೀ, ಸುಂದರಕೃಷ್ಣ ಅರಸ್, ಅಂಬರೀಷ್ ಮತ್ತು ಭವ್ಯ

ಚಿತ್ರಕ್ಕೆ ಸಂಗೀತಾ ಬಿಜಲಾನಿಯನ್ನು ಕರೆತರಲಾಗಿತ್ತು. ಈಗಾಗಲೇ ಅಭಿನಯಿಸಿದಂತಹ ಪಾತ್ರವನ್ನೇ ಹತ್ತು ವರ್ಷ ಕಳೆದ ಮೇಲೂ ತಾವೇ ನಿರ್ಮಿಸಿಯಾದರೂ ಮತ್ತೆ ಅಭಿನಯಿಸಬೇಕೆಂಬಂತಹ ಯಾವ ಆಕರ್ಷಣೆ ವಿಷ್ಣುವರ್ಧನ್‌ರನ್ನು ಪ್ರೇರೇಪಿಸಿರಬಹುದೋ. ಆದರೆ 'ಕಾಳಿಂಗ' ಚಿತ್ರ ಯಶಸ್ವಿಯಾಗಿರಲಿಲ್ಲ. ಈ ಚಿತ್ರ ಕನ್ನಡದಲ್ಲಿ ಗೆದ್ದಿತು. ಕೆಲವು ದೃಶ್ಯಗಳಲ್ಲಿ ವಿಷ್ಣುವರ್ಧನ್ ಅಭಿನಯ ಚೆನ್ನಾಗಿತ್ತು. ಆದರೆ ಹಿಂದಿಯಲ್ಲಿ ಇದು ವಿಶೇಷವೇನೂ ಆಗಲಿಲ್ಲ. ಆ ಅಬ್ಬರದಲ್ಲಿ ಇದೊಂದು ಸಿಂಧುವಿನಲ್ಲಿ ಬಿಂದುವಿನಂತೆ ಆಯಿತು.

'ಕಲಿಯುಗ ಭೀಮ' ಪ್ರಭಾಕರ್ ನಿರ್ದೇಶನದ ಚಿತ್ರ. ಖುಷ್ಬೂ, ಸುಮಲತಾ ಅಭಿನಯ ಗಮನಾರ್ಹ. ಪ್ರಭಾಕರ್ ಸಾಹಸಕ್ಕೆ ಕೊಡುವಷ್ಟೇ ಮಹತ್ವವನ್ನು ತಾಯಿಪ್ರೇಮಕ್ಕೂ ಕೊಟ್ಟಿದ್ದರು. ಈ ಚಿತ್ರದಲ್ಲಿ ತಾಯಿಯ ಪಾತ್ರದಲ್ಲಿ ಪಂಢರಿಬಾಯಿ ಇದ್ದರು. 'ಕೈ ತುತ್ತು ಕೊಟ್ಟೋಳೇ ಐ ಲವ್ ಯೂ ಮೈ ಮದರ್ ಇಂಡಿಯಾ....' ಎಂಬ ಗೀತೆಯನ್ನು ವಿಶೇಷವಾಗಿ ಅಳವಡಿಸಿದ್ದರು. ಜನಪ್ರಿಯವಾದ ಗೀತೆ ಇದು. ಪ್ರಭಾಕರ್ ಸಾಮಾನ್ಯವಾಗಿ ಸಂಭಾಷಣೆ ಹೇಳುವಾಗಲೇ ಒಂದು ವಾಕ್ಯವನ್ನು ಒಮ್ಮೆ ಇಂಗ್ಲಿಷ್‌ನಲ್ಲಿ ಹೇಳಿ ಮತ್ತೆ ಕನ್ನಡದಲ್ಲಿ ಹೇಳುವುದು ಅಭ್ಯಾಸ. ಅದೇ ರೀತಿ ಈ ಗೀತೆಯಲ್ಲಿ ಅರ್ಧ ಇಂಗ್ಲಿಷ್, ಅರ್ಧ ಕನ್ನಡ ಇದ್ದವು. ಧಾರಾಳವಾಗಿ ಪ್ರಾಸವೂ ಇತ್ತು.

'ಫುಡ್ ಇಲ್ದೆ ಬೆಡ್ ಇಲ್ದೆ ಮಲಗಿದ್ದೆ
ನಾನು ಸರ್ಕಾರಿ ಆಸ್ಪತ್ರೇಲಿ
ನಮ್ಮಮ್ಮ ಅಲ್ಲಿಗೆ ಬರದಿದ್ದರೆ
ನನ್ನ ಡೆಡ್ ಬಾಡಿ ಶೋಕೇಸಲ್ಲಿ....
ಕೈ ಕೆಸರಾದರೆ ತಾನೇನೆ ನಮ್ಮ 'ಮೌತ್' ಮೊಸರಾಗುವುದು
ವರ್ಕೇ ವರ್ಷಿಪ್ಪು ಎಂದರೆ ಸುತ್ತೋ ಗ್ಲೋಬಲ್ಲಿ ಹೆಸರುಳಿಯೋದು....'

ಹೀಗೆ ಗದ್ಯ-ಪದ್ಯಗಳ ಮಿಶ್ರಣ ಹಾಗೂ ಕನ್ನಡ-ಇಂಗ್ಲಿಷ್ ಬೆರಕೆ ಆಗಿದ್ದೂ ಅದರ ರಾಗ ಸಂಯೋಜನೆ, ಚಿತ್ರೀಕರಣದಿಂದಾಗಿ ಗೀತೆ ಜನಪ್ರಿಯವಾಯಿತು.

೧೯೯೧ರ ಕೊನೆಯ ಚಿತ್ರ 'ನಾಗಿಣಿ'. ತಾರೆ ಶ್ರೀಪ್ರಿಯಾ ನಿರ್ದೇಶಿಸಿದರು. ಆಕೆಯದೇ ಕಥೆ ಚಿತ್ರಕಥೆ. ಚಿತ್ರ ಗೊತ್ತಾದ ಅವಧಿಯಲ್ಲಿ ಮುಗಿಯಲಿಲ್ಲ. ಈ ಮಧ್ಯೆ ಪ್ರಧಾನ ಪಾತ್ರಧಾರಿ ಶಂಕರ್‌ನಾಗ್ ಅಪಮೃತ್ಯುವಿಗೆ ಈಡಾದರು. ಚಿತ್ರವನ್ನು ಹೇಗಾದರೂ ಮುಗಿಸಲೇಬೇಕಾಗಿತ್ತು. ನಿರ್ದೇಶಕ ರವೀ ನೆರವಿನಿಂದ ಚಿತ್ರವನ್ನು ಬಿ.ಎನ್.ಗಂಗಾಧರ್, ಎಂ.ಸುನಂದ, ಎಂ.ಕೃಷ್ಣ ನಿರ್ಮಿಸಿದರು. ಕಥೆಯನ್ನು ಕೊಂಚ ಬದಲಿಸಿ, ಫ್ಯಾಂಟಸಿಯಾಗಿ ಪರಿವರ್ತಿಸಿದರು. ಹಾವು, ರೂಪ ಮಾರ್ಪಾಟು ಇತ್ಯಾದಿ ಅಂಶಗಳನ್ನು ಸೇರಿಸಿ ಶಂಕರ್‌ನಾಗ್ ಬದಲಿಗೆ ಅನಂತನಾಗ್ ಅಭಿನಯಿಸುವಂತೆ ಮಾಡಲಾಯಿತು. ಮುಜುಗರದಿಂದಲೇ ಕಾರ್ಯನಿರ್ವಹಿಸಿದ್ದರು ಅನಂತ್‌ನಾಗ್. ತಮ್ಮನ ಸಲುವಾಗಿ, ಸತ್ತು ಹೋದ ಆತನಿಗೆ ಅಪಖ್ಯಾತಿ ಬರದಿರಲೆಂದು ಸಹಕರಿಸಿದ್ದರು. ಅನಂತ್‌ನಾಗ್ ಮಾತುಗಳನ್ನು ಕೂಡಿಸುವಾಗ ಶಂಕರ್‌ನಾಗ್ ಮಾತನಾಡಿದ ಹಾಗೆ ಹಲ್ಲುಕಚ್ಚಿ ಮಾತನಾಡಿ ಯಶಸ್ವಿಯಾಗಿದ್ದರು. ಏನೆಲ್ಲ ಮಾಡಿದರೂ ಚಿತ್ರ ಯಶಸ್ವಿಯಾಗಲಿಲ್ಲ.

ಎಂ.ಎಸ್.ರಾಜಶೇಖರ್ ನಿರ್ದೇಶನದ 'ಹೃದಯ ಹಾಡಿತು' ಒಂದೆರಡು ಅಂಶಗಳಿಂದಾಗಿ ಮುಖ್ಯವೆನಿಸಿತು. ಉಪೇಂದ್ರಕುಮಾರ್ ಉತ್ತಮ ಸಂಗೀತ ಹಾಗೂ ಅಂಬರೀಷ್ ಉತ್ತಮ ಅಭಿನಯದಿಂದ ಗಮನ ಸೆಳೆದ ಚಿತ್ರ. ಸಾಮಾನ್ಯವಾಗಿ ಪುಟ್ಟಣ್ಣನವರಿಗ ಮಾತ್ರ ಅಂಬರೀಷ್ ಅವರಿಂದ ಒಳ್ಳೆಯ ನಟನೆಯನ್ನು ಹೊರಹೊಮ್ಮಿಸಲು ಸಾಧ್ಯ ಎಂಬ ಅಭಿಪ್ರಾಯವಿತ್ತು. ಇದು ನಿಜವಾದರೂ ಒಳ್ಳೆಯ ಕಥೆ ಹಾಗೂ ಕೆಲವು ನಿರ್ದೇಶಕರ ಶ್ರಮವಿದ್ದ ಸುಮಾರು ಚಿತ್ರಗಳಲ್ಲಿ ಅಂಬರೀಷ್ ಉತ್ತಮವಾಗಿ ನಟಿಸಿದ್ದಾರೆ. ಇವುಗಳಲ್ಲಿ ಒಂದು 'ಹೃದಯ ಹಾಡಿತು'. ತ್ರಿಕೋನ ಪ್ರೇಮದಿಂದ ಆರಂಭವಾಗಿ ನಾಟಕೀಯ ತಿರುವುಗಳನ್ನು ಪಡೆಯುತ್ತಾ ಕೊನೆಗೆ ಇಬ್ಬರನ್ನೂ ವರಿಸುವ ನಾಯಕನ ಕಥೆ. 'ಕಣ್ಣಲ್ಲಿ ಜ್ಯೋತಿ ತಂದೋನು ನೀನೆ...', 'ಗಿರಿ ನವಿಲು ಎಲ್ಲೋ...' ಹಾಗೂ 'ನಲಿಯುತ ಹೃದಯ ಹಾಡನು ಹಾಡಿದೆ...' ಹಾಡುಗಳು ಉತ್ತಮವಾದ ರಾಗ ಹಾಗೂ ಕಾವ್ಯಾತ್ಮಕ ಗುಣದಿಂದ ಹೆಚ್ಚು ಜನಪ್ರಿಯವಾಗಿ ಉಪೇಂದ್ರಕುಮಾರ್‌ಗೆ ೧೯೯೧-೯೨ರ ಅತ್ಯುತ್ತಮ ಸಂಗೀತ ನಿರ್ದೇಶಕರೆಂಬ ಪ್ರಶಸ್ತಿ ತಂದುಕೊಟ್ಟಿತು. ಬಿ.ಸಿ.ಗೌರಿಶಂಕರ್ ಛಾಯಾಗ್ರಹಣ ಶ್ರೇಷ್ಠವಾಗಿದ್ದು ಪ್ರೇಕ್ಷಕರ ಮನಗೆಲ್ಲುವಲ್ಲಿ ಯಶಸ್ವಿಯಾಯಿತು. 'ಸಂಜುಂಡಿ ಕಲ್ಯಾಣ', 'ಗಜಪತಿ ಗರ್ವಭಂಗ' ಚಿತ್ರಗಳ ನಂತರ ಎಂ.ಎಸ್.ರಾಜಶೇಖರ್‌ಗೆ ಕೀರ್ತಿ ತಂದುಕೊಟ್ಟ ಚಿತ್ರವಿದು. ಮಾಲಾಶ್ರೀ, ಭವ್ಯಾ ಇಬ್ಬರೂ ಗಂಭೀರವಾಗಿ ಅಭಿನಯಿಸಿ ಚಿತ್ರಕ್ಕೆ ಮೆರುಗು ತಂದುಕೊಟ್ಟಿದ್ದರು. ವಂಶಿಯವರ 'ಹಿಮದ ಹೂವು' ಕಾದಂಬರಿ ಆಧಾರಿತ ಈ ಚಿತ್ರ ೨೫ ವಾರಗಳ ಪ್ರದರ್ಶನ ಕಂಡಿರುವ ಈ ದಶಕದ ಉತ್ತಮ ಚಿತ್ರಗಳಲ್ಲೊಂದು.

ವರ್ಷದ ಕಹಿ ಘಟನೆಗಳಲ್ಲಿ ಮುಖ್ಯವಾದ್ದು ಕನ್ನಡದ ಉತ್ತಮ ಕಾದಂಬರಿಕಾರ್ತಿ ಅನುಪಮಾ ನಿರಂಜನ ೧೯೯೧ನೇ ಮಾರ್ಚ್ ತಿಂಗಳಲ್ಲಿ ನಿಧನರಾದುದು.

ರಾಜಕುಮಾರ್ ಆರೋಗ್ಯದ ಬಗ್ಗೆ ಹರಡಿದ ಸುಳ್ಳು ಸುದ್ದಿಯಿಂದ ಕನ್ನಡಿಗರು ತಲ್ಲಣಿಸಿದರು. ಕೆಲವಾರು ಕಡೆ ಆತಂಕಮಯ ವಾತಾವರಣ ಸೃಷ್ಟಿಯಾಗಿತ್ತು. ಸುದ್ದಿಯ ಮೂಲ ಯಾವುದೆಂದು ಕೊನೆಗೂ ಸ್ಪಷ್ಟವಡಲಿಲ್ಲ. ಅವರು 'ಆತ್ಮಹತ್ಯೆಗೆ ಪ್ರಯತ್ನಿಸಿದರು / ಮಾಡಿಕೊಂಡರು' ಎಂದು ವ್ಯಾಪಿಸಿದ ಸುದ್ದಿಯನ್ನು ಕೊನೆಗೆ ಅವರೇ ದೂರದರ್ಶನದಲ್ಲಿ ಕಾಣಿಸಿಕೊಂಡು ಅಲ್ಲಗಳೆಯಬೇಕಾಯಿತು. ಈ ಘಟನೆಯ ನಂತರ ರಾಜಕುಮಾರ್ ಅಭಿಮಾನಿಗಳು ಮತ್ತೆ ಚಿತ್ರಗಳಲ್ಲಿ ಅಭಿನಯಿಸುವಂತೆ ಒತ್ತಾಯಿಸಿ ಅವರ ಮನೆಯ ಮುಂದೆ ಧರಣಿ ಕುಳಿತರು. ಅವರಿಂದ ಭರವಸೆ ಪಡೆದ ನಂತರ ಧರಣಿಯನ್ನು ವಾಪಸ್ಸು ಪಡೆಯಲಾಯಿತು. ನಟನೊಬ್ಬನನ್ನು ಚಿತ್ರದಲ್ಲಿ ಅಭಿನಯಿಸಲು ಒತ್ತಾಯಿಸಿ ಹರತಾಳ ನಡೆಸಿದ ಉದಾಹರಣೆ ಬಹುಶಃ ದೇಶದಲ್ಲಿಯೇ ಪ್ರಥಮ. ಈ ಘಟನೆ ನಡೆದ ನಂತರ ರಾಜಕುಮಾರ್‌ಗೆ ಮತ್ತೆ ಬಣ್ಣ ಹಚ್ಚಿಕೊಳ್ಳುವ ಹುಮ್ಮಸ್ಸು ಬಂದಿತು.

೧೯೮೯ ರಲ್ಲಿ ರಾಜಕುಮಾರ್ ಅಭಿನಯದ 'ಪರಶುರಾಮ್' ಬಿಡುಗಡೆಯಾಗಿತ್ತು. ಅಂತಹ ವಿಶೇಷ, ವೈಶಿಷ್ಟ್ಯಗಳೇನೂ ಈ ಚಿತ್ರದಲ್ಲಿ ಇರಲಿಲ್ಲ. ಪಾತ್ರ ಪೂರ್ಣವಾಗಿ ತೃಪ್ತಿಕೊಡದ ಕಾರಣದಿಂದಾಗಿಯೋ ಅಥವಾ ಕೆಲವರು ಊಹಿಸುತ್ತಿದ್ದಂತೆ ತಮ್ಮ ಮಕ್ಕಳ ಚಿತ್ರಗಳಿಗೆ ದಾರಿ ಸುಗಮಗೊಳಿಸಬೇಕೆಂಬ ಉದ್ದೇಶದಿಂದಲೋ ಅವರು ಸುಮಾರು ನಾಲ್ಕು ವರ್ಷಗಳ ಕಾಲ ಅಭಿನಯಿಸಲಿಲ್ಲ. ಅಭಿಮಾನಿಗಳ ಒತ್ತಾಯ ಬಲವಾಗಿಲ್ಲದಿರುತ್ತಿದ್ದರೆ ಅವರು ಮತ್ತೆಂದೂ ಅಭಿನಯಕ್ಕೆ ಮರಳುತ್ತಿರಲಿಲ್ಲ ಎಂಬ ಅಭಿಪ್ರಾಯ ಇತ್ತು. ಕೊನೆಗೆ ಅಭಿನಯಕ್ಕೆ ಮರಳಿದಾಗ ಸಿದ್ಧವಾದ ಚಿತ್ರ 'ಜೀವನಚೈತ್ರ'. ದೊರೆ-ಭಗವಾನ್ ನಿರ್ದೇಶನದ ಈ ಚಿತ್ರ ಅಭೂತಪೂರ್ವ ಯಶಸ್ಸನ್ನು ಗಳಿಸಿದ್ದಲ್ಲದೆ ಹಲವಾರು ದಾಖಲೆಗಳನ್ನು ಸೃಷ್ಟಿಸಿತು. ತುಂಬು ಕುಟುಂಬದ ಪ್ರಬುದ್ಧ ತಂದೆಯಾಗಿ



(ಚಿತ್ರ ೨೦) 'ಜೀವನಚೈತ್ರ' ಚಿತ್ರದಲ್ಲಿ ಪಂಢರಿಬಾಯಿ, ರಾಜಕುಮಾರ್, ಬಾಲರಾಜ್, ಗುರುದತ್ ಮತ್ತು ಅಭಿಜಿತ್

ರಾಜಕುಮಾರ್ ವಿಜೃಂಭಿಸಿದ ಪಾತ್ರ ಅವರ ವಯಸ್ಸು ಹಾಗೂ ಗಾಂಭೀರ್ಯಕ್ಕೆ ಹೊಂದುವಂತಿತ್ತು. ಸಮಾಜದ ಬದಲಾಗುತ್ತಿರುವ ಮೌಲ್ಯಗಳಿಗೆ ಸಂಕೇತವಾಗಿದ್ದ ಕಥಾವಸ್ತು ಮದ್ಯಪಾನ ನಿಷೇಧದ ಆದರ್ಶವನ್ನು ಕೂಡ ಒಳಗೊಂಡಿತ್ತು. ಕೆಟ್ಟಮಕ್ಕಳಿಗೆ ಪ್ರೀತಿ, ಮಮತೆ, ವಾತ್ಸಲ್ಯದ ಮಹತ್ವವನ್ನು ಮನಗಾಣಿಸುವಂಥ ದೃಶ್ಯಗಳು ಜೀವಂತವಾಗಿ ಮೂಡಿಬಂದಿದ್ದವು. ರಾಜ್ಯದ ಒಟ್ಟು ೩೦ ಕೇಂದ್ರಗಳ ೨೬ ಚಿತ್ರಮಂದಿರಗಳಲ್ಲಿ ಶತದಿನ ಆಚರಿಸಿದ್ದು ಈ ಚಿತ್ರದ ದಾಖಲೆ. ಬೆಂಗಳೂರಿನ ಆರು ಚಿತ್ರಮಂದಿರಗಳಲ್ಲಿ ನಾಲ್ಕು ಪ್ರದರ್ಶನಗಳಲ್ಲಿ, ೧೦ ಚಿತ್ರಮಂದಿರಗಳಲ್ಲಿ ಮೂರು ಪ್ರದರ್ಶನಗಳಲ್ಲಿ, ಮೂರು ಚಿತ್ರಮಂದಿರಗಳಲ್ಲಿ ಬೆಳಗಿನ ಪ್ರದರ್ಶನಗಳಲ್ಲಿ ೧೦೦ ದಿನ ನಡೆದದ್ದು ದೊಡ್ಡ ದಾಖಲೆ. 'ಜೀವನಚೈತ್ರ' ಮದ್ಯಪಾನ ನಿಷೇಧಕ್ಕೆ ಕೊಟ್ಟ ಪ್ರಬಲವಾದ ಕರೆ ಎಂಬ ಅಂಶವನ್ನು ವಿಶೇಷವಾಗಿ ಉಲ್ಲೇಖಿಸಬೇಕಾಗುತ್ತದೆ. ಚಿತ್ರ ಬಿಡುಗಡೆಯಾದ ನಂತರ ರಾಜ್ಯದ ಕೆಲವು ಊರುಗಳಲ್ಲಿ ಮದ್ಯಪಾನವನ್ನು ಬಹಿಷ್ಕರಿಸಿದ, ಮದ್ಯದ ಅಂಗಡಿಗಳನ್ನು ಮುಚ್ಚಿಸಿದ ಘಟನೆಗಳು ನಡೆದವು. ಇದರಿಂದಾಗಿ ಆಗ ಇದೊಂದು ವ್ಯಾಪಕವಾದ ಚಳವಳಿಯ ಸ್ವರೂಪ ಪಡೆಯುತ್ತದೆಂಬ ನಿರೀಕ್ಷೆ ಬೆಳೆಯಿತು. ಆದರೆ ಹಾಗೇನೂ ಆಗಲಿಲ್ಲ. ಆದರೂ ಒಂದು ಉತ್ತಮ ಚಿತ್ರ ಸಮಾಜದ ಮೇಲೆ, ಜನರ ಮನಸ್ಸಿನ ಮೇಲೆ ಪರಿಣಾಮ ಬೀರಲು ಸಾಧ್ಯವಿದೆ ಎಂಬುದನ್ನು ಸಾಧಿಸಿ ತೋರಿಸಿತು.

ಈ ಚಿತ್ರ ಬಿಡುಗಡೆಯಾದ ಹೊಸದರಲ್ಲಿ ರಾಜಕುಮಾರ್ ಅವರು ತಮ್ಮ ಬಂಧುವೊಬ್ಬರ ಮದ್ಯ ತಯಾರಿಕಾ ಕಾರ್ಖಾನೆಯೊಂದನ್ನು ಉದ್ಘಾಟಿಸಬೇಕಿದ್ದು, ಪತ್ರಿಕೆಗಳಲ್ಲಿ ಅವರ ಜಾಹಿರಾತು ಸಹ ಪ್ರಕಟವಾಗಿದ್ದರೂ, 'ಜೀವನಚೈತ್ರ'ದಿಂದ ಪ್ರಭಾವಿತರಾಗಿದ್ದ ಅಭಿಮಾನಿಗಳ ಒತ್ತಾಯದಿಂದಾಗಿ ಅವರು ನಂತರ ಉದ್ಘಾಟನೆಗೆ ಹೋಗಲಿಲ್ಲ ಎಂಬುದು ಉಲ್ಲೇಖನಾರ್ಹ.

ಈ ಚಿತ್ರದಲ್ಲಿ ಬಳಸಿರುವ ರಾಜಕುಮಾರ್ ಹಾಡಿದ 'ನಾದಮಯಾ ಈ ಲೋಕವೆಲ್ಲ...' ಗೀತೆ ಕೇಂದ್ರದ ೧೯೯೨ರ ಅತ್ಯುತ್ತಮ ಗಾಯಕ ಪ್ರಶಸ್ತಿಯನ್ನು ರಾಜಕುಮಾರ್‌ಗೆ ತಂದುಕೊಟ್ಟಿತು. ಇದರೊಂದಿಗೆ ರಾಜ್ಯದ ೧೯೯೨-೯೩ರ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ, ರಾಜಕುಮಾರ್‌ಗೆ ಅತ್ಯುತ್ತಮ ನಟ ಪ್ರಶಸ್ತಿ ಹಾಗೂ ಉಪೇಂದ್ರಕುಮಾರ್, ಚಿ.ಉದಯಶಂಕರ್ ಅವರಿಗೆ ಕ್ರಮವಾಗಿ ಸಂಗೀತ ಹಾಗೂ ಸಂಭಾಷಣೆಗಾಗಿ ಪ್ರಶಸ್ತಿಗಳು ಲಭ್ಯವಾದವು.

೧೯೯೨, ರಾಷ್ಟ್ರಮಟ್ಟದಲ್ಲಿ ಗಮನ ಸೆಳೆದ ವರ್ಷ. ಬಾಬ್ರಿ ಮಸೀದಿ ಉರುಳಿತು. ಜನಾಂದೋಳನ, ಕೋಮು ಗಲಭೆಗಳ ಉದ್ರಿಕ್ತ ಸ್ಥಿತಿ. ಪ್ರಾಯೋಗಿಕವಾಗಿ ಐದು ಕಡೆ ದೂರದರ್ಶನದ ಪ್ರಾದೇಶಿಕ ಪ್ರಸಾರ ಪ್ರಾರಂಭವಾಯಿತು. ಸತ್ಯಜಿತ್ ರಾಯ್‌ಗೆ ಅವರ ರುಗ್ಣಾವಸ್ಥೆಯಲ್ಲೇ ಮನೆ ಬಾಗಿಲಿಗೆ 'ಆಸ್ಕರ್' ಬಂತು. ಈ ಎಲ್ಲಾ ಘಟನೆಗಳು ರಾಷ್ಟ್ರ, ರಾಜ್ಯಗಳಲ್ಲಿ ತನ್ನದೇ ಪ್ರಭಾವ ಬೀರಿದವು. ಚಿತ್ರರಂಗದಲ್ಲಿ ಬೇರೆ ಬೇರೆ ರೂಪಗಳಲ್ಲಿ ಇವುಗಳ ಛಾಪು ಮೂಡಿದ್ದು ನಿಜ.

೧೯೯೨ರಲ್ಲಿ ೯೦ ಚಿತ್ರಗಳು ಬಿಡುಗಡೆಯಾದದ್ದು ವಿಶೇಷ ದಾಖಲೆ. ಸೃಜನಶೀಲತೆ ಹಾಗೂ ಪ್ರಯೋಗಾತ್ಮಕ ನೆಲೆಯಲ್ಲಿ ೧೯೯೩ ರಲ್ಲಿ ಬಂದ 'ಮೈಸೂರ ಮಲ್ಲಿಗೆ', 'ಕುಬಿ ಮತ್ತು ಇಯಾಲ', 'ಹರಕೆಯ ಕುರಿ', 'ಸಂಗ್ಯಾಬಾಳ್ಯಾ' ಮುಖ್ಯವಾಗುತ್ತವೆ.

'ಮೈಸೂರ ಮಲ್ಲಿಗೆ' ಒಂದು ಕಾವ್ಯಾತ್ಮಕ ನಿರೂಪಣೆಯ ಸಂಗೀತ ಪ್ರಧಾನ ಚಿತ್ರ. ಕೆ.ಎಸ್.ನರಸಿಂಹಸ್ವಾಮಿಯವರ ಜನಪ್ರಿಯ ಕವನಗಳನ್ನು ಆಧರಿಸಿ ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ನವಿರಾದ ದಾಂಪತ್ಯ ಜೀವನವೊಂದನ್ನು ಚಿತ್ರಿಸುವ ಪ್ರಯತ್ನ ಈ ಚಿತ್ರದ್ದು. ಕವನದ ಅರ್ಥವನ್ನು ಅನುಸರಿಸಿ ಪಾತ್ರಗಳನ್ನು ಸೃಷ್ಟಿಸಿಕೊಂಡು, ಈ ಪಾತ್ರಗಳಿಂದ ಕಥೆಯನ್ನು ಕಟ್ಟಿ, ಈ ಕಥೆಯನ್ನು ಚಿತ್ರನಾಟಕವನ್ನಾಗಿ ಪರಿವರ್ತಿಸಿ ಒಂದು ವಿಶೇಷ ಪ್ರಯೋಗವನ್ನು ಮಾಡಲಾಗಿತ್ತು. ಈ ದೃಷ್ಟಿಯಿಂದ ಇದು ಕನ್ನಡ ಚಲನಚಿತ್ರ ಇತಿಹಾಸದಲ್ಲಿಯೇ ಪ್ರಥಮ ಪ್ರಯೋಗವೆನ್ನಬಹುದು. ನಾಯಕಿಯಾಗಿ ಸುಧಾರಾಣಿ ಹಾಗೂ ಬಳೆಗಾರ ಚೆನ್ನಯ್ಯನಾಗಿದ್ದ ಶಿವಮೊಗ್ಗ ವೆಂಕಟೇಶ್ ಶ್ರೇಷ್ಠ ಅಭಿನಯವಿದ್ದ ಈ ಚಿತ್ರ ಸಾಹಿತ್ಯ ಹಾಗೂ ಕಾವ್ಯ ಪ್ರೇಮಿಗಳ ಮನಸ್ಸನ್ನು ನಿರೀಕ್ಷಿಸಿದಷ್ಟು ಗೆಲ್ಲಲಿಲ್ಲ. ಯಾವುದೇ ಸಂಕೀರ್ಣತೆ, ಗೋಜಲುಗಳಿಲ್ಲದೆ ಕೆ.ಎಸ್.ನರಸಿಂಹಸ್ವಾಮಿಯ ಕಾವ್ಯವನ್ನು ಆಸ್ವಾದಿಸಿದ್ದ ಮನಸ್ಸುಗಳು ಚಿತ್ರದಲ್ಲಿಯೂ ಅದೇ ನವಿರು ಸ್ಪರ್ಶವನ್ನು ಹುಡುಕಿ ನಿರಾಶವಾದವು. ಇಷ್ಟರ ನಡುವೆಯೂ ಚಿತ್ರ ಎರಡು ಚಿತ್ರಮಂದಿರಗಳಲ್ಲಿ ರಜತೋತ್ಸವವನ್ನು ಆಚರಿಸಿತು. ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂದು ರಾಷ್ಟ್ರಪ್ರಶಸ್ತಿ ಗಳಿಸಿದ್ದಲ್ಲದೆ ಅತ್ಯುತ್ತಮ ಗೀತರಚನೆಗಾಗಿ ಕೆ.ಎಸ್.ನರಸಿಂಹಸ್ವಾಮಿಯವರಿಗೂ



(ಚಿತ್ರ ೨೧) 'ಮೈಸೂರ ಮಲ್ಲಿಗೆ' ಚಿತ್ರದಲ್ಲಿ ಸುಧಾರಾಣಿ ಮತ್ತು ಅನಂದ್

ರಾಷ್ಟ್ರಪ್ರಶಸ್ತಿ ತಂದುಕೊಟ್ಟಿತು. ಕನ್ನಡ ಚಿತ್ರದಲ್ಲಿ ಸಾಹಿತ್ಯಕ್ಕೆ ರಾಷ್ಟ್ರಪ್ರಶಸ್ತಿ ಬಂದದ್ದು ಇದೇ ಮೊದಲು. ಇದರೊಂದಿಗೆ ನಾಲ್ಕು ರಾಜ್ಯ ಪ್ರಶಸ್ತಿಗಳೊಂದಿಗೆ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಗಳಿಸಿತು. ಸುಧಾರಾಣಿ ಅತ್ಯುತ್ತಮ ನಟಿ, ಕೆ.ಎಸ್.ಕೃಷ್ಣಮೂರ್ತಿ ಅತ್ಯುತ್ತಮ ಧ್ವನಿಗ್ರಾಹಕ, ಬಿ.ಸಿ.ಗೌರಿಶಂಕರ್ ಅತ್ಯುತ್ತಮ ಛಾಯಾಗ್ರಾಹಕ, ಸುರೇಶ್ ಅರಸ್ ಅತ್ಯುತ್ತಮ ಸಂಕಲನಕಾರರೆಂದು ಪುರಸ್ಕೃತರಾದರು. ಇಟಲಿಯ ಅಂತರರಾಷ್ಟ್ರೀಯ ಚಿತ್ರೋತ್ಸವಕ್ಕೆ ಆಯ್ಕೆಯಾಗಿದ್ದ ಚಿತ್ರ, ಇಂಡಿಯನ್ ಪನೋರಮಾ ವಿಭಾಗದಲ್ಲೂ ಪ್ರದರ್ಶನವಾಯಿತು.

ಕನ್ನಡದ ಹೆಸರಾಂತ ಲೇಖಕ ಕೆ.ಪಿ.ಪೂರ್ಣಚಂದ್ರ ತೇಜಸ್ವಿ ೧೯೭೩ ರಲ್ಲಿ ಬರೆದ ಸಣ್ಣಕಥೆ 'ಕುಬಿ ಮತ್ತು ಇಯಾಲ'. ಇದನ್ನು ಅದೇ ಹೆಸರಿನಲ್ಲಿ ಮುಂಬೈ ನಿವಾಸಿ ಕನ್ನಡಿಗ ಸದಾನಂದ ಸುವರ್ಣ ನಿರ್ಮಿಸಿದರು. ಗಿರೀಶ್ ಕಾಸರವಳ್ಳಿ ನಿರ್ದೇಶನದಲ್ಲಿ 'ಘಟಶ್ರಾದ್ಧ' ನಿರ್ಮಿಸಿದ್ದ ಸದಾನಂದ ಸುವರ್ಣ, ಕಾಸರವಳ್ಳಿಯವರಿಂದಲೇ ಚಿತ್ರಕಥೆ ಬರೆಯಿಸಿ ಈ ಚಿತ್ರವನ್ನು ತಾವೇ ನಿರ್ದೇಶಿಸಿದರು. ೧೯೭೯-೮೦ರ ರಾಜ್ಯದ ಪ್ರಥಮ ಅತ್ಯುತ್ತಮ ಚಿತ್ರಪ್ರಶಸ್ತಿ ಪಡೆದ 'ಕುಬಿ ಮತ್ತು ಇಯಾಲ' ಪೂರ್ಣಚಂದ್ರ ತೇಜಸ್ವಿಯವರಿಗೂ ಅತ್ಯುತ್ತಮ ಕಥೆಗಾಗಿ ಪ್ರಶಸ್ತಿ ತಂದುಕೊಟ್ಟಿತು. ಕುಗ್ರಾಮ ಭೈರಾಪುರದಲ್ಲಿ ಸರ್ಕಾರಿ ವೈದ್ಯನಾಗಿರುವ ಕುಬೇರನಾಥ ಉತ್ತಮ ಚಿಕಿತ್ಸಗ ಹೆಸರಾಗಿರುತ್ತಾನೆ. ಔಷಧಿಗಿಂತ ಆತನ ಕೈಗುಣದ ಬಗ್ಗೆ, ಆತ ದೈವೀ



(ಚಿತ್ರ ೨೨) 'ಕುಬಿ ಮತ್ತು ಇಯಾಲ' ಚಿತ್ರದಲ್ಲಿ ಲಲಿತಾಂಜಲಿ ಮತ್ತು ಚಾರುಹಾಸನ್

ಸ್ವರೂಪನಿರಬೇಕೆಂಬ ಬಗ್ಗೆಯೇ ದಂತಕಥೆಗಳು ಹಬ್ಬಿಕೊಳ್ಳುತ್ತವೆ. ತನ್ನನ್ನು ವೈದ್ಯನನ್ನಾಗಿ ನೋಡದೆ ಬೇರೆ ರೀತಿಯಲ್ಲಿ ನೋಡುವುದು 'ಕುಬಿ'ಗೆ ಇಷ್ಟವಿರುವುದಿಲ್ಲ. ಸೂಕ್ಷ್ಮ ಸ್ವಭಾವದವನೂ, ಒಳ್ಳೆಯವನೂ ಆದ ಕುಬಿಯನ್ನು ಹಳ್ಳಿಯ ಎಲ್ಲರೂ ಅವಲಂಬಿಸತೊಡಗುತ್ತಾರೆ. ಇದು ಜಾತಿರಾಜಕಾರಣದಿಂದಾಗಿ ಎರಡು ಗುಂಪುಗಳಾಗಿರುವ ಊರಿನ ಮುಖಂಡರಿಗೆ ಇರಿಸುಮುರಿಸು ಉಂಟುಮಾಡುತ್ತದೆ. ಈ ನಡುವೆ ಮುಗ್ಧ ಬಾಲಕಿ ಇಯಾಲಾಳ ಕೊಲೆ ಹಳ್ಳಿಯಲ್ಲಿ ರಾಜಕೀಯ ಬೆರೆತುಕೊಂಡು ವಿಚಿತ್ರ ಹಾಗೂ ಆತಂಕದ ವಾತಾವರಣ ಸೃಷ್ಟಿಸುತ್ತದೆ. ಇಯಾಲ ಒಬ್ಬ ಕುರುಡು ನಂಬಿಕೆಯ ಮೂರ್ಖನಿಂದಾಗಿ ಅತ್ಯಾಚಾರಕ್ಕೊಳಗಾಗಿ ಕೊಲೆಯಾಗಿರುತ್ತಾಳೆ. ಇದನ್ನು ತಮ್ಮ ಸ್ವಾರ್ಥ, ದ್ವೇಷ, ಜಾತಿರಾಜಕಾರಣಕ್ಕೆ ಬಳಸಿಕೊಳ್ಳುವ ತಂತ್ರ ಪ್ರತಿತಂತ್ರಗಳು ವಿಜೃಂಭಿಸತೊಡಗುತ್ತವೆ. ಸಾಯುವ ಸ್ಥಿತಿಯಲ್ಲಿ ಅಪರಾಧಿ ನಿಜ ಹೇಳಿ ಕಣ್ಣು ಮುಚ್ಚುವಷ್ಟರ ಹೊತ್ತಿಗೆ ಸಾಕಷ್ಟು ಅನಾಹುತಗಳು ನಡೆದುಹೋಗಿರುತ್ತವೆ.

ಈ ಚಿತ್ರದ ಕೊನೆಯ ದೃಶ್ಯಗಳಲ್ಲಿನ ಕೆಲವು ಚಿತ್ರಿಕೆಗಳು, ಪಾತ್ರಕ್ಕೆ ಬಳಸಿದ ಪ್ರಭಾವಳಿಯಂಥ ಹಿನ್ನೆಲೆಯ ಬೆಳಕು ಚಿತ್ರದ ಒಳಗೆ - ಹೊರಗೆ ಕೂಡಾ ಒಂದು ಭ್ರಮಾತ್ಮಕ ಕಲ್ಪನೆಯನ್ನು ಹುಟ್ಟಿಸುವಂತಿತ್ತು. ಅದು ಚಿತ್ರದ ಒಳಗೆ ದೈವದ ಪರಿಕಲ್ಪನೆಯನ್ನು ಹುಟ್ಟಿಸುವಂತಿದ್ದುದರಿಂದ ಚಿತ್ರ ಮೂಢನಂಬಿಕೆ ಕುರಿತು ಹೇಳಬೇಕೆಂದಿದ್ದ ಆಶಯಕ್ಕೆ ಹತ್ತಿರವಾಯಿತು. ಇದು ಆ ವರ್ಷ ಕಲ್ಕತ್ತಾದಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಭಾರತೀಯ ಪನೋರಮಾ ವಿಭಾಗದಲ್ಲಿ ಪ್ರದರ್ಶಿತವಾದ ಏಕೈಕ ಕನ್ನಡ ಚಿತ್ರ.

'ಕುಬಿ ಮತ್ತು ಇಯಾಲ' ಸ್ವಾತಂತ್ರ್ಯೋತ್ತರ ರಾಜಕಾರಣ ಹಳ್ಳಿಗಳಲ್ಲಿ ಉಂಟು ಮಾಡಿದ ಪರಿಣಾಮಗಳನ್ನು ಬಿಡಿಸಿಟ್ಟರೆ, ಚಂದ್ರಶೇಖರ ಕಂಬಾರರ 'ಹರಕೆಯ ಕುರಿ' ಅದೇ ವಸ್ತುಸ್ಥಿತಿಯು ನಿರುದ್ಯೋಗ, ಹತಾಶೆಗಳು ತಾಂಡವವಾಡುತ್ತಿರುವ ನಗರಗಳಲ್ಲಿ ಪಡೆದುಕೊಂಡಿರುವ ಕರಾಳ ಮುಖಗಳನ್ನು ಪರಿಚಯಿಸುತ್ತದೆ. ಈ ಎರಡೂ ಕಥೆಗಳಲ್ಲಿ ವಿಚಿತ್ರವೆನಿಸುವ ಸಾಮ್ಯತೆಗಳಿರುವುದು ಆಶ್ಚರ್ಯ. ಎರಡರಲ್ಲೂ ಕುಟುಂಬದ ಘಟನೆಯ ಮೂಲಕ ಸಮಾಜವನ್ನು ನೋಡುವ ಪ್ರಯತ್ನವಿದೆ. 'ಕುಬಿ ಮತ್ತು ಇಯಾಲ'ದಲ್ಲಿ ಹಮಾಲಿಗಳಿಬ್ಬರು ಮಾಡದ ತಪ್ಪಿಗೆ ಶಿಕ್ಷೆ ಅನುಭವಿಸಿದರೆ, 'ಹರಕೆಯ ಕುರಿ'ಯಲ್ಲಿ ಗಂಡ-ಹೆಂಡತಿ ಬಲಿಪಶುವಾಗುತ್ತಾರೆ. 'ಕುಬಿ ಮತ್ತು ಇಯಾಲ'ದಲ್ಲಿ ಒಳ್ಳೆಯತನಕ್ಕೆ ಹಾಗೂ ಮೌಲ್ಯಪ್ರಜ್ಞೆಗೆ ಡಾಕ್ಟರ್ ಕುಬೇರನಾಥ್ ಪಾತ್ರ ಸಾಕ್ಷಿ. 'ಹರಕೆಯ ಕುರಿ'ಯಲ್ಲಿ ನಾಯಕ ರಾಜಕಾರಣದ ಪಗಡೆಯಾಟದ ದಾಳಕ್ಕೆ ಸಂಕೇತವಾಗಿದ್ದಾನೆ. ಎರಡರಲ್ಲೂ ತನ್ನ ಸ್ವಾರ್ಥಕ್ಕಾಗಿ ಮನುಷ್ಯ ಮನುಷ್ಯನನ್ನು ಬೇಟೆಯಾಡಿ ಕೊಲ್ಲುವಂಥ ಕಥೆಯೇ. ಮುಗ್ಧೆ ಇಯಾಲಾಳು 'ಹುಡುಗಿಯರನ್ನು ಕೂಡಿದರೆ ಹೆಂಗಸರ ರೋಗ ಹೋಗುತ್ತದೆ' ಎಂದು ನಂಬಿದ್ದ ಲೈಂಗಿಕ ರೋಗಿಯೊಬ್ಬನ ಮೌಢ್ಯದಿಂದಾಗಿ ಅತ್ಯಾಚಾರಕ್ಕೊಳಗಾಗಿ ಕೊಲೆಗೀಡಾದರೆ, 'ಹರಕೆಯ ಕುರಿ'ಯಲ್ಲಿ ಪ್ರಬುದ್ಧಳಾಗಿರುವ ನಾಯಕಿ ಅಂಥದೇ ಮುಗ್ಧತೆಯಿಂದ ರಾಜಕಾರಣಿಗಳ ಚಕ್ರವ್ಯೂಹದೊಳಗೆ ಸಿಲುಕಿಕೊಂಡು ಒದ್ದಾಡುತ್ತಾಳೆ. ಇಬ್ಬರ ಪಾತ್ರಗಳು ಶೀಲದ ಪ್ರಶ್ನೆಯೊಂದಿಗೆ ಪರೀಕ್ಷೆಗೆ ಒಳಗಾಗುತ್ತವೆ.



(ಚಿತ್ರ ೨೩) 'ಹರಕೆಯ ಕುರಿ' ಚಿತ್ರದಲ್ಲಿ ಗೀತಾ, ಮೈನಾ, ಹೆಚ್.ಜಿ.ಸೋಮಶೇಖರರಾವ್

'ಹರಕೆಯ ಕುರಿ' ರವೀಯವರು ತಮ್ಮ ಗುರುಗಳಾದ ಜಿ.ವಿ.ಅಯ್ಯರ್ ಅವರಂತೆ ಹೊಸದಾರಿ ಸೃಷ್ಟಿಸಿಕೊಳ್ಳುವ ಆಸೆಯಿಂದ ನಿರ್ದೇಶಿಸಿದ ಚಿತ್ರ. ವಿಷ್ಣುವರ್ಧನ್ ಶ್ರಮಪಟ್ಟು ನಟಿಸಿದ್ದರು. ಗಂಡ-ಹೆಂಡತಿಯರಾಗಿ ಗೀತಾ, ಪ್ರಕಾಶ್ ರೈ ಅವರದ್ದು ಉತ್ತಮ ಅಭಿನಯ. ಹೆಚ್.ಜಿ.ಸೋಮಶೇಖರರಾವ್ ತಮಗೆ ಆಪ್ಯಾಯಮಾನವಾದ ಶೈಲಿಯ ಅಭಿನಯದಲ್ಲಿ ಸೂರಂಕ ಮುಟ್ಟಿದ್ದು ವಿಶೇಷವಾಗಿತ್ತು. ಅಲ್ಲಲ್ಲಿ ಹವ್ಯಾಸಿ ನಾಟಕದ ಶೈಲಿಯ ಚಿತ್ರಣವಿದ್ದುದಕ್ಕೆ ಆ ಕ್ಷೇತ್ರದ ಹೆಚ್ಚು ಮಂದಿ ಚಿತ್ರ ನಿರ್ಮಾಣದಲ್ಲಿಯೂ ತೊಡಗಿಕೊಂಡದ್ದು ಕಾರಣವಿರಬಹುದು. ಜಾನ್ ದೇವರಾಜ್ ಅವರ ಕಲಾನಿರ್ದೇಶನ ಈ ಚಿತ್ರದ ಒಂದು ಪ್ರಧಾನ ಅಂಶ ಹಾಗೂ ಆಕರ್ಷಣೆಯಾಗಿತ್ತು. 'ಹರಕೆಯ ಕುರಿ' ಚಿತ್ರದಲ್ಲಿ ಸರ್ರಿಯಲಿಸ್ಟಿಕ್ ಶೈಲಿಯ ಕನಸಿನ ಭಾಗ ಚೆನ್ನಾಗಿ ಚಿತ್ರಿತವಾಗಿತ್ತು. ಮೊದಲ ಕನಸಿನಲ್ಲಿ ಹೆಂಡತಿ ಬಿಳಿ ಸೀರೆಯುಟ್ಟು ಭಾರತ ಮಾತೆ, ಮೆಟ್ಟಿಲುಗಳನ್ನೇರಿ ಹೋದ ಗಂಡ ರಾಜಕಾರಣಿಯಿಂದಾಗಿ ಅವನ ತಲೆ ಕತ್ತರಿಸಿ ಭಾರತ ಮಾತೆಯ ಕೈಯಲ್ಲಿಟ್ಟಂತೆ. ಎರಡನೆಯ ಬಾರಿ ರಾಜಕಾರಣಿಯಿಂದಾದ ತೊಂದರೆಗಳು ತಿಳಿದ ಮೇಲೆ - ತಮ್ಮಿಬ್ಬರ ತಲೆಗಳೂ 'ದೇವರ' ಕೈಯಲ್ಲಿದ್ದ ಹಾಗೆ ಎಂಬ ವಿವರಗಳಿವೆ. ಎತ್ತರಕ್ಕೆ ಹೋಗುವ ಮೆಟ್ಟಿಲು ಇತ್ಯಾದಿಗಳಿಗೆ ಸರ್ವೆ ಮರಗಳನ್ನು ಬಳಸಿ ಸೆಟ್ ಹಾಕಲಾಗಿತ್ತು. ಅವು ವೃತ್ತಾಕಾರವಾಗಿರುತ್ತವಾದ್ದರಿಂದ ಇಡೀ ಸೆಟ್ ಡಿವೈನ್ ಕಾಮಿಡಿ, ಪ್ಯಾರಡೈಸ್ ಲಾಸ್ಟ್ ಕಾವ್ಯದಲ್ಲಿ ಬರುವ ವರ್ತುಲ ಸೋಪಾನಗಳನ್ನು ಹೋಲುವಂತೆ ರೂಪಿಸಲಾಗಿತ್ತು ಎಂದು ನಿರ್ದೇಶಕ ರವೀ ವಿವರಿಸಿದ್ದರು. ಈ ಚಿತ್ರಕ್ಕೆ ರಂಗಭೂಮಿಯ ಬಿ.ಸುರೇಶ್ ಚಿತ್ರಕಥೆ ಸಂಭಾಷಣೆ ಇತ್ತು; ಚಂದ್ರಶೇಖರ



(ಚಿತ್ರ ೨೪) 'ಸಂಗ್ಯಾ ಬಾಳ್ಯಾ' ಚಿತ್ರದಲ್ಲಿ ಗುಡಿಗೇರಿ ಬಸವರಾಜ್ ಮತ್ತು ಭಾರತಿ ಪಾಟೀಲ

ಚುರುಕಾದ ಸಂಭಾಷಣೆಗಳಿದ್ದವು. ಕೊಳಲು, ಗೆಜ್ಜೆಗಳನ್ನು ನಿರೂಪಣೆಯಲ್ಲೇ, ಬಳಸಿದ್ದು ಒಂದೆರಡು ಅಪರೂಪವೆನಿಸುವ ಗೀತೆಗಳು ಬಹುಕಾಲ ನೆನಪಿನಲ್ಲುಳಿದವು. 'ಕೇಳಿಸದೆ ಕಲ್ಲು ಕಲ್ಲಿನಲಿ ಕನ್ನಡ ನುಡಿ...' ಗೀತೆ ಎರಡು ಸಲ ಬಳಕೆ ಆಗಿತ್ತು. ಚಿತ್ರಾ, ಎಸ್.ಪಿ.ಬಾಲಸುಬ್ರಹ್ಮಣ್ಯಂ ಹಾಡಿದರು. ಚಿತ್ರಾ ಅವರ ಕಂಠವೇ ಜನರಿಗೆ ಆಪ್ತವಾಗಿತ್ತು. 'ಒಂದೇ ಒಂದು ಕಣ್ಣ ಬಿಂದು ಜಾರಿದರೆ ನನ್ನಾಣೆ...' ಗೀತೆಯೂ ಯಾರೂ ಗುನುಗುವಂತಿತ್ತು. ಮಾಲಾಶ್ರೀ-ಸುನೀಲ್ ಅಭಿನಯದ ಜೊತೆಗೆ ಗಮನ ಸೆಳೆದವರು ಗುರುದತ್, ಶಿವಕುಮಾರ್. ಶಿವಕುಮಾರ್ ಪಾತ್ರ ಅವರೆಗಿನ ಅವರ ಅಭಿನಯ ಕೃಷಿಯಲ್ಲೇ ಮೊಟ್ಟಮೊದಲ ಬಾರಿಗೆ ಇಂಥ ಅವಕಾಶ, ಸವಾಲು ಎನ್ನುವಂಥದ್ದಾಗಿತ್ತು. ಹಂಪಿಯ ಬಗ್ಗೆ ನಮಗೆಷ್ಟೇ ಒಲವುಗಳಿದರೂ ಕಣ್ಣಿಗೆ ಹಬ್ಬವಾಗುವಂಥ ಹಸಿರು ಇಲ್ಲದ ಬಟ್ಟಬಯಲು ಬಹಳ ಕಾಲ ಮನಸ್ಸನ್ನು ಹಿಡಿದಿಡಲಾಗದು. ಎಲ್ಲ ಚೆನ್ನಾಗಿದ್ದರೂ ಏನೋ ಕೊರತೆ ಅನ್ನಿಸಿದ್ದು ಇದೇ ಕಾರಣಕ್ಕಿರಬಹುದು.

ಮೂಲತಃ ಸಂಕಲನಕಾರರೂ ಆದ ಎಸ್.ಉಮೇಶ್ ಆಯ್ದುದ್ದು ನಿರ್ದೇಶನವನ್ನು. 'ಅವಳೇ ನನ್ನ ಹೆಂಡ್ತಿ', 'ಅವನೇ ನನ್ನ ಗಂಡ' ಇಂಥ ಚಿತ್ರಗಳನ್ನು ತೆರೆಗಿತ್ತರು. ೧೯೯೨ ರಲ್ಲಿ 'ಬನ್ನಿ ಒಂದ್ಸಲ ನೋಡಿ' ಚಿತ್ರ ಮಾಡಿದರು. ಉಮೇಶ್‌ಗೆ ಮಾಧ್ಯಮದಲ್ಲಿ ಹಿಡಿತವಿದೆ. ಅವರ ಕಥೆಯ ಆಯ್ಕೆಯೂ ಪರವಾಗಿಲ್ಲ. ನಿರೂಪಣೆ, ಪಾತ್ರಗಳ ಪೋಷಣೆ.... ಎಲ್ಲಕ್ಕಿಂತ ಮಿಗಿಲಾಗಿ ಶೀರ್ಷಿಕೆ ಕೊಡುವುದರಲ್ಲಿ ಒಂದು ವರ್ಗವನ್ನು ಪೂರ್ತಿಯಾಗಿ ಮರೆತೇಬಿಡುತ್ತಾರೆ ಎನ್ನಿಸುತ್ತದೆ. ಹಾಗಾಗಿ ಅವರ ಶ್ರಮವೆಲ್ಲ 'ಪರವಾಗಿಲ್ಲ'ಕ್ಕಿಂತ ಮುಂದೆ ಹೋಗಲಿಲ್ಲ. 'ಚಿತ್ರಂ ಭಳಾರೇ ವಿಚಿತ್ರಂ' ತೆಲುಗು ಚಿತ್ರವನ್ನು ತದ್ವತ್ತಾಗಿ ಇಳಿಸಿದ ಚಿತ್ರ 'ಬೊಂಬಾಟ್ ಹೆಂಡ್ತಿ'. ಅದೇ ನಿರ್ದೇಶಕರು ತೆಗೆದದ್ದು. ಶ್ರೀಧರ್, ಪ್ರತಿ, ರಮೇಶ್ ಭಟ್, ಟೆನ್ನಿಸ್ ಕೃಷ್ಣ, ಮುಖ್ಯಮಂತ್ರಿ ಚಂದ್ರು ಇದ್ದರು. ಪೂರ್ಣಪ್ರಮಾಣದ ಹಾಸ್ಯ ಚಿತ್ರ. ಚಿತ್ರದ ಸ್ವಲ್ಪ ಭಾಗ ಶ್ರೀಧರ್ ಸೀರೆಯುಟ್ಟು ಅಭಿನಯಿಸಿದ್ದರು.

'ಮಿಡಿದ ಶ್ರುತಿ' ಚಿತ್ರದಲ್ಲಿ ಸುಧಾರಾಣಿ, ಶಿವರಾಜ್ ಕುಮಾರ್, ಅಪ್ಸರಾ ಅಭಿನಯಿಸಿದ್ದರು. ಎಂ.ಎಸ್.ರಾಜಶೇಖರ್ ಕೌಟುಂಬಿಕ ಕಥಾವಸ್ತುವನ್ನು ಸೊಗಸಾಗಿ ನಿರ್ವಹಿಸಬಲ್ಲರು. ಜೊತೆಗೆ ಟಿ.ಎನ್.ನರಸಿಂಹನ್ ಚಿತ್ರಕಥೆ-ಸಂಭಾಷಣೆ ನಿರ್ವಹಿಸಿದ್ದೊಂದು ಉತ್ತಮ ಅಂಶ. ಲವಲವಿಕೆ ಎಲ್ಲ ರೀತಿಯಿಂದಲೂ ಎದ್ದು ಕಂಡಿತ್ತು. ಉಪೇಂದ್ರಕುಮಾರ್ ಸಂಗೀತದಲ್ಲಿ 'ನನ್ನ ನಿನ್ನ ಆಸೆ....', 'ಅಮೆರಿಕಾ ನೆನೆದೊಡನೆ ಅಮೆರಿಕಾ...', 'ಆ ಸೂರ್ಯ ಚಂದ್ರ ನಕ್ಷತ್ರ ಮಾಲೆ....' ಗೀತೆಗಳು

ಕಂಬಾರರೊಂದಿಗೆ ಸಂಭಾಷಣೆಯನ್ನೂ ಬರೆದಿದ್ದರು. ೧೯೯೨-೯೩ರ ರಾಜ್ಯದ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಗಳಿಸಿದ 'ಹರಕೆಯ ಕುರಿ', ಹೆಚ್.ಜಿ.ಸೋಮಶೇಖರರಾವ್‌ಗೆ ಅತ್ಯುತ್ತಮ ಪೋಷಕ ನಟ ಪ್ರಶಸ್ತಿಯನ್ನು ತಂದುಕೊಟ್ಟಿತು. ಈ ಚಿತ್ರದಿಂದ ಪ್ರಕಾಶ್ ರೈ ನಾಯಕನಟನಾದರು.

ಸುಂದರಕೃಷ್ಣ ಅರಸ್ ನಿರ್ದೇಶಿಸಿದ 'ಸಂಗ್ಯಾ ಬಾಳ್ಯಾ'ವನ್ನು ಮುಖ್ಯವಾಗಿ ಪ್ರಸ್ತಾಪಿಸಬೇಕಾಗುತ್ತದೆ. ಉತ್ತರ ಕರ್ನಾಟಕದ ರಂಗಭೂಮಿಯಲ್ಲಿ ಜನಪ್ರಿಯವಾಗಿರುವ ಈ ನಾಟಕವನ್ನು ಹೆಚ್ಚಿನ ಬದಲಾವಣೆಯಿಲ್ಲದೆ ಸುಂದರಕೃಷ್ಣ ಅರಸ್ ಚಲನಚಿತ್ರವಾಗಿ ರೂಪಾಂತರಿಸಿದ್ದರು. ತಾಂತ್ರಿಕ ಅನುಕೂಲಗಳನ್ನು ಗುಣಾತ್ಮಕವಾಗಿ ದುಡಿಸಿಕೊಳ್ಳದಿದ್ದುದು ಹಾಗೂ ಕಡಿಮೆ ವೆಚ್ಚದಲ್ಲಿ ಚಿತ್ರಿಸಿದ್ದು ಚಿತ್ರದ ಕೊರತೆಯಾಯಿತು. ಇದರಿಂದಾಗಿ ಚಿತ್ರವು ನಾಟಕಕ್ಕಿಂತಲೂ ಹೆಚ್ಚಿನ ಪರಿಣಾಮ ಬೀರುವುದು ಸಾಧ್ಯವಾಗಲಿಲ್ಲ. ರಂಗಭೂಮಿಯಲ್ಲಿ ನಿರ್ವಹಿಸುತ್ತಿದ್ದ ಪರವ್ವಳ (ಸಾಮಾನ್ಯವಾಗಿ ಪುರುಷರೇ ಸ್ತ್ರೀ ಪಾತ್ರ ಮಾಡುತ್ತಿದ್ದರು) ಪಾತ್ರವನ್ನು ಚಿತ್ರದಲ್ಲೂ ಉತ್ತಮವಾಗಿ ಕಟ್ಟಿಕೊಟ್ಟಿದ್ದ ಉಮಾಶ್ರೀಯವರಿಗೆ ೧೯೯೨-೯೩ರ ರಾಜ್ಯದ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಬಂತು. 'ಸಂಗ್ಯಾ ಬಾಳ್ಯಾ' ಆಗಿ ರಾಮಕೃಷ್ಣ, ವಿಜಯಕಾಶಿ ಅಭಿನಯಿಸಿದ್ದರು. ಸಹನಿರ್ದೇಶಕರಾಗಿಯೇ ಚಿತ್ರರಂಗ ಪ್ರವೇಶಿಸಿದ್ದ ಸುಂದರಕೃಷ್ಣ ಅರಸ್ ನಿರ್ದೇಶನದ ಬಗ್ಗೆ ಲೋಕೇಶ್ ಅವರಂತೆಯೇ ಅಪಾರ ಒಲವನ್ನಿಟ್ಟುಕೊಂಡಿದ್ದರು. ಆದರೆ ನಟನೆಯಲ್ಲಿ ದಕ್ಕಿದಂಥ ಯಶಸ್ಸು ಅವರಿಗೆ ನಿರ್ದೇಶನದಲ್ಲಿ ಸಿಗಲಿಲ್ಲ. ಆದರೆ ಲೋಕೇಶ್ ಅವರಂತೆ ಭ್ರಮನಿರಸನಗೊಳ್ಳದೆ ನಂತರದ ವರ್ಷಗಳಲ್ಲಿ ನಾಲ್ಕು ಚಿತ್ರಗಳನ್ನು ನಿರ್ದೇಶಿಸಿದರು.

ಆ ಮೊದಲೂ ಅವರು ಚಿತ್ರ ನಿರ್ದೇಶಿಸಿ ಅರ್ಧಕ್ಕೇ ನಿಂತ ಚಿತ್ರಗಳಿವೆ. ಯಾರದೋ ಹೆಸರಿನಲ್ಲಿ ಬಂದ ಚಿತ್ರಗಳಿಗ ಪೂರ್ತಿಯಾಗಿ ಅವರೇ ನಿರ್ದೇಶಿಸಿದ್ದೂ ಉಂಟು. ತುಳು ಚಿತ್ರ 'ಸಂಗಮಸಾಕ್ಷಿ'ಯನ್ನು ನಿರ್ದೇಶಿಸಿದ್ದರು. ಅವರು ಕಣಗಾಲ್ ಪುಟ್ಟಣ್ಣನವರೊಂದಿಗೆ ಸಹನಿರ್ದೇಶಕನಾಗಿ, ಆಗೀಗ ನಟಿಸುತ್ತಾ ಬಹುಕಾಲ ಕೆಲಸ ಮಾಡಿದ್ದರು.

ತಮ ಚಿತ್ರ ಲಾಂಛನದಲ್ಲಿ ಸಾ.ರಾ.ಗೋವಿಂದು ನಿರ್ಮಿಸಿದ 'ಬೆಳ್ಳಿ ಕಾಲುಂಗುರ' ೧೯೯೨ ರ ಪ್ರಥಮ ಚಿತ್ರ. ಕೆ.ವಿ.ರಾಜು ನಿರ್ದೇಶನದಲ್ಲಿ ಗಮನಾರ್ಹ ಚಿತ್ರವಾಗಿ ತೆರೆಗೆ ಬಂತು. ಹಂಪೆಯ ವೈಭವವನ್ನು ನೆನಪಿಸುವಂತೆ ಅಲ್ಲೇ ಚಿತ್ರೀಕರಿಸಲಾಗಿತ್ತು. ಕೆ.ವಿ.ರಾಜು ಕಥೆ, ವೀರಪ್ಪ ಮರಳವಾಡಿ



(ಚಿತ್ರ ೨೫) 'ಬೆಳ್ಳಿ ಕಾಲುಂಗುರ' ಚಿತ್ರದಲ್ಲಿ ಸುನಿಲ್ ಮತ್ತು ಮಾಲಾಶ್ರೀ



(ಚಿತ್ರ ೨೬) 'ಉಂಡೂ ಹೋದ ಕೊಂಡೂ ಹೋದ' ಚಿತ್ರದಲ್ಲಿ ತಾರಾ ಮತ್ತು ಅನಂತ್‌ನಾಗ್

ಚೆನ್ನಾಗಿದ್ದವು. ಈ ಗೀತೆಗೆ ವಿಶಿಷ್ಟ ವೇಗದ ನಡೆ ಗಮನಾರ್ಹವೆನಿಸಿತ್ತು. ಜನಪ್ರಿಯ ಚಿತ್ರವಂತೂ ಹೌದು.

'ಕ್ರಾಂತಿ ಗಾಂಧಿ' ಮಹತ್ವಾಕಾಂಕ್ಷೆಯ ತರುಣ ಎಸ್.ಟಿ.ಜಯರಾಮರೆಡ್ಡಿ ನಿರ್ದೇಶಿಸಿದ್ದರು. ಶ್ರೀಧರ್ ನಾಯಕನಾಗಿ, ಗಾಂಧೀಜಿಯವರು ಸತ್ಯ-ಅಹಿಂಸೆ ಎಂದರೆ, ಈ ಗಾಂಧಿ ತದ್ವಿರುದ್ಧ. ಯುವಜನಾಂಗವನ್ನು ಒಟ್ಟುಗೂಡಿಸಿ ಅನ್ಯಾಯದ ವಿರುದ್ಧ ಬಂಡೇಳುವುದು ಅಗತ್ಯ. ಇದು ಅಹಿಂಸೆಗೆ ಕಾಲವಲ್ಲ, ನ್ಯಾಯ ಬೇಕಾದರೆ ಅನ್ಯಾಯವನ್ನು ಬಡಿದು ಬೀಳಿಸು ಎಂಬ ನಿಲುವು. ಈ ದೇಶಕ್ಕೆ ಈಗ ಬೇಕಾದ್ದು ಶಾಂತಿಯಲ್ಲ, ಕ್ರಾಂತಿ. ಆಶಯ ದೊಡ್ಡದಾದರೂ ತರ್ಕಬದ್ಧವಾಗಿ ಹೇಳುವ, ಚಿತ್ರಿಸುವ ಸೌಲಭ್ಯ ರೆಡ್ಡಿಯವರಿಗೆ ಇರಲಿಲ್ಲ. ಚಿತ್ರ ಬಡಕಲಾಯಿತು.

'ಹೊಸ ರಾಗ' ಪತ್ರಕರ್ತರಾದ ಎಂ.ರಾಮನ್, ಶ್ಯಾಮಸುಂದರ್ ಕುಲಕರ್ಣಿ, ಎನ್.ಎಸ್.ರಾಮಚಂದ್ರ, ಪ್ರಚಾರಕರ್ತ ಡಿ.ವಿ.ಸುಧೀಂದ್ರ ಜಂಟಿಯಾಗಿ ನಿರ್ಮಿಸಿದ ಕೌಟುಂಬಿಕ ಚಿತ್ರ. ಶ್ಯಾಮಸುಂದರ ಕುಲಕರ್ಣಿಯವರ ಕಥೆಯನ್ನು ಆಧರಿಸಿ ಕೆ.ವಿ.ಜಯರಾಂ ನಿರ್ದೇಶಿಸಿದ್ದರು. ಬದಲಾಗುತ್ತಿರುವ ಸಮಾಜದಲ್ಲಿ ಹೆಣ್ಣು ಮಕ್ಕಳ ಬೆಳವಣಿಗೆ, ಬದುಕು ಹೇಗಿರಬೇಕೆಂದು ಹೇಳುವಂಥ ಪ್ರಯತ್ನ ಈ ಚಿತ್ರದಲ್ಲಿದೆ. ಹಿಂದಿಯ ಜನಪ್ರಿಯ ಕಲಾವಿದ ಪ್ರಾಣ್ ಸುಧಾರಾಣಿಯ ತಂದೆಯ ಪಾತ್ರದಲ್ಲಿ ಪ್ರಥಮ ಬಾರಿಗೆ ಕನ್ನಡದಲ್ಲಿ ಅಭಿನಯಿಸಿದರು. ವಿತರಕ ಪಾಲ್ ಚಂದಾನಿ ಈ ಚಿತ್ರದ ನಿರ್ಮಾಣಕ್ಕೆ ನೆರವಾದರು. ಅವರ ಸ್ನೇಹದಿಂದಲೇ ಪ್ರಾಣ್ ಕನ್ನಡ ಚಿತ್ರದಲ್ಲಿ ಅಭಿನಯಿಸಲು ಒಪ್ಪಿ ಬಂದದ್ದು. ಆರ್ಥಿಕ ಯಶಸ್ಸು ಗಳಿಸದ ಈ ಚಿತ್ರದ ನಂತರ ಮಾಧ್ಯಮ ಪ್ರತಿನಿಧಿಗಳಾದ ಈ ನಿರ್ಮಾಪಕರ ತಂಡ ಮತ್ತೆ ಒಂದಾಗಿ ಚಿತ್ರವನ್ನು ತಯಾರಿಸಲಿಲ್ಲ. ಇದಕ್ಕೆ ಮುಂಚೆ ಇದೇ ತಂಡ 'ಒಲವಿನ ಉಡುಗೊರೆ' ತಯಾರಿಸಿತ್ತು. ಆನಂತರ ಸುಧೀಂದ್ರ, ಶ್ಯಾಮಸುಂದರ್ ಕುಲಕರ್ಣಿ, ರಾಮಚಂದ್ರ 'ಗಣೇಶನ ಮದುವೆ' ತಯಾರಿಸಿದರು.

'ಚಿತ್ರಲೇಖ'ವನ್ನು ವಿ.ಸೋಮಶೇಖರ್ ತಮ್ಮ ಮಾಮೂಲಿ ಸಾಹಸ, ರಾಜಕೀಯ ಬಿಟ್ಟು ಚಿತ್ರಿಸಿದ್ದರು. ಮದುವೆಗೆ ಮೊದಲೇ ಹುಡುಗಿಯನ್ನು ಬಲಾತ್ಕರಿಸಲು ಹೋಗಿ ಪೆಟ್ಟು ತಿಂದು, ಆಕಸ್ಮಿಕ ಬೆಂಕಿಯ ಕಾರಣ ಮುಖವೆಲ್ಲ ವಿಕಾರಗೊಂಡ ವ್ಯಕ್ತಿ, ತರುಣಿಯನ್ನು ವಿವಾಹವಾಗಲು ಬಂದವರನ್ನೆಲ್ಲ ಭೂತಚೇಷ್ಟೆ ಎಂಬ ಭ್ರಮೆ ಹುಟ್ಟಿಸಿ, ಒಂದಲ್ಲಾಒಂದು ರೀತಿಯಲ್ಲಿ ಸಾಯಿಸುತ್ತಿರುತ್ತಾನೆ. ಇದೊಂದು ಮೂಢನಂಬಿಕೆಯಂತೆ ಮಾರ್ಪಟ್ಟು ವಿಚಿತ್ರ ತಿರುವು ಪಡೆದುಕೊಂಡಾಗ ನಾಯಕಿ ಶ್ರುತಿಯ ಮನಃಕ್ಲೇಶವನ್ನು ಇನ್‌ಸ್ಪೆಕ್ಟರ್ ಆಗಿ ಬಂದ ದೇವರಾಜ್ ಪರಿಹರಿಸುವ ವಿವರಗಳು, ಚಿತ್ರದ ಕ್ಲೈಮ್ಯಾಕ್ಸ್ ಸ್ವಲ್ಪ ಪೇಲವವಾಗಿದ್ದರಿಂದ ಅವರೆಗಿನ ನಿರ್ವಹಣೆ ಚಪ್ಪಟೆಯಾಯಿತು. ಚಿತ್ರದಲ್ಲಿ ಮೇಕಪ್ ಕಲಾವಿದ ಹೈಲೈಟ್ ಆಗುತ್ತಾರೆ.

'ಶಿವನಾಗ' ಕೆ.ಎಸ್.ಆರ್.ದಾಸ್ ನಿರ್ದೇಶನದ ಚಿತ್ರ. ಅರ್ಜುನ್ ಸರ್ಜಾ-ಮಾಲಾಶ್ರೀ ಜೋಡಿಯ ಅಭಿನಯವೆಂದಾಗ ತುಂಬಾ ನಿರೀಕ್ಷೆಯಂತೂ ಇತ್ತು. ಪುನರವತರಣಿಕೆ. ಹಾವುಗಳನ್ನು ಆಧರಿಸಿದ ಕಥೆಯಾದರೆ ಸಾಮಾನ್ಯ ಮಟ್ಟದಲ್ಲಾದರೂ ಗೆಲ್ಲುತ್ತದೆಂಬುದು ಅನುಭವಸಿದ್ಧ ವಾದ. ಈ ಚಿತ್ರಕ್ಕೆ ಆ ಭಾಗ್ಯವೂ ಇಲ್ಲ.

'ಪುಟ್ಟ ಹೆಂಡ್ತಿ' ಎ.ಟಿ.ರಘು ನಿರ್ದೇಶನದ ಚಿತ್ರ. ಪ್ರಭಾಕರ್ ಉಚ್ಛ್ರಾಯದ ದಿನಗಳವು. ಉತ್ಸಾಹದಿಂದ ರಿಸ್ಕ್ ತೆಗೆದುಕೊಂಡರು. ಚಿತ್ರದಲ್ಲಿ ಪುಟ್ಟ ಬಾಲೆಯನ್ನು ಹೆಂಡತಿ ಮಾಡಿಕೊಂಡರು. ಕಥೆಯೇ ಹಾಗಿತ್ತು, ನಿಜ. ಆದರೆ ಪುಟ್ಟ ಹೆಂಡತಿ ಪಾತ್ರ ಮಾಡಿದ ಬೇಬಿ ರೇಖಾ ೮೦ರ ದಶಕದ ಸಾಕಷ್ಟು ಚಿತ್ರಗಳಲ್ಲಿ ಅಭಿನಯಿಸಿದ್ದ ಹುಡುಗಿ 'ಕುಮಾರಿ ರೇಖಾ' ಎಂದರು. ಆಕೆಗೆ ಇನ್ನೂ ಪುಟಾಣಿಯ ಇಮೇಜ್ ಹೋಗಿರಲಿಲ್ಲ. ಪ್ರಭಾಕರ್ ಎದುರು ಪುಟಾಣಿ ಪಾತ್ರಗಳನ್ನು ನಿರ್ವಹಿಸಿದ್ದ ಬಾಲಕಿಯನ್ನು ಹೆಂಡತಿಯಾಗಿ ನೋಡಲು ಪ್ರೇಕ್ಷಕ ಸಿದ್ಧನಿರಲಿಲ್ಲ. ಚಿತ್ರದ ಕಥೆ, ಸಾಹಿತ್ಯದ ಎಲ್ಲ ವಿಭಾಗ ನಿರ್ವಹಿಸಿದ್ದವರು ಎಚ್.ವಿ.ಸುಬ್ಬರಾವ್. ಅವರು ನಿರ್ಮಾಣದಲ್ಲೂ ಭಾಗಸ್ಥರಾಗಿದ್ದರು. ಅವರು ಬಹಳ ನಿರೀಕ್ಷೆ ಇಟ್ಟುಕೊಂಡಿದ್ದ ಚಿತ್ರವಾಗಿತ್ತು 'ಪುಟ್ಟ ಹೆಂಡ್ತಿ'. ಗಮನ ಸೆಳೆವ ಅಂಶಗಳಿದ್ದವು. ಉತ್ತಮ ಅಭಿನಯವಿತ್ತು, ಶ್ರೀಮಂತವಾಗಿತ್ತು. ಎಲ್ಲ ಇದ್ದರೂ ಪ್ರೇಕ್ಷಕನಿಗೆ ಬೇಡವಾಯಿತು.

'ಬೆಳ್ಳಿ ಮೋಡಗಳು' ಕೆ.ವಿ.ರಾಜು ಚಿತ್ರ. ತೆಲುಗಿನಲ್ಲಿ ಎ.ನಾಗೇಶ್ವರರಾವ್ ಅಭಿನಯಿಸಿದ್ದ 'ಸೀತಾರಾಮಯ್ಯಗಾರಿ ಮನವರಾಲು' ಚಿತ್ರದ ಕನ್ನಡ ಅವತರಣಿಕೆ. ಎಂದಿನಂತೆ ರಾಜು ಎಲ್ಲವನ್ನೂ ತಿರುವು ಮುರುವು ಮಾಡಿದ್ದರು. ಮೂಲದ ಒಂದು ಸಣ್ಣ ಎಳೆಯ ವಿನಾ ಬೇರಾವುದೂ ಅದರಂತಿರಲಿಲ್ಲ. ಮೂಲದಲ್ಲಿ ಷೋಡಶಿಯೊಬ್ಬಳಿದ್ದರೆ, ಇಲ್ಲಿ ಮಾಲಾಶ್ರೀಯಂಥ ಪ್ರೌಢೆಯನ್ನು ಬಳಸಿದರು. ಅಕ್ಕಿನೇನಿ ನಾಗೇಶ್ವರರಾವ್ ಮಾಡಿದ್ದ ತಾತನ ಪಾತ್ರಕ್ಕೆ ದೊಡ್ಡಣ್ಣನನ್ನು ಹಾಕಿದ್ದರು. ಆದರೆ ರಾಜು ಸಮರ್ಥ ನಿರ್ದೇಶಕ. ಅವರ ಫ್ರೇಮಿಂಗ್‌ನಲ್ಲಿ, ಮಾತು ಹೇಳಿಸುವ ರೀತಿಯಲ್ಲಿ ಎಂದೂ ಸಪ್ಪೆತನವಿಲ್ಲ. ದೊಡ್ಡಣ್ಣನವರ ಅವರೆಗಿನ ಇಮೇಜ್ ಪ್ರೇಕ್ಷಕನ ನೆನಪಿಗೂ ಬರಲಿಲ್ಲ. ಅಂಥ ಮಾಗಿದ ಮನಸ್ಸು. ಆಪ್ತವಾಗಿಸುವ ಅಭಿನಯ ಸಾಧ್ಯವಾಯಿತು. ಮಾಲಾಶ್ರೀ ಅವರೂ ಅಷ್ಟೇ ಸುಲಭವಾಗಿ ನಿರ್ವಹಿಸಿದ್ದರು. ಮೂಲಚಿತ್ರ ನೋಡಿದವರಿಗೆ ಅಲ್ಲಿಯ ನವಿರು ಇಲ್ಲ ಅನ್ನಿಸಿದರೂ ಇವಕ್ಕೆ ಅದರದೇ ಅಸ್ತಿತ್ವವೊಂದು ದಕ್ಕಿತ್ತು. ಚಿತ್ರ ಯಶಸ್ವಿ ಆಯಿತು. ದೊಡ್ಡಣ್ಣನವರಿಗೆ ರಾಜ್ಯ ಪ್ರಶಸ್ತಿಯೂ ಬಂದಿತು.

'ಎಂಟೆದೆ ಭಂಟ' ಡಿ.ರಾಜೇಂದ್ರಬಾಬು ಚಿತ್ರ. ಸುದರ್ಶನ್ ದೇಸಾಯಿ ಕಥೆಗೆ ಬಿ.ಎಲ್.ವೇಣು ಚುರುಕಾದ ಸಂಭಾಷಣೆಯಿತ್ತು. ಚಿತ್ರದಲ್ಲಿ ಅನ್ಯಾಯದ ವಿರುದ್ಧ ಹೋರಾಡಲು ಹಳ್ಳಿಗೆ ಹಳ್ಳಿಯೇ ಎದ್ದುಬರುವ ಸೊಗಸಾದ ಪರಿಕಲ್ಪನೆಯಿತ್ತು. ಆದರೆ ಎಲ್ಲವನ್ನೂ ನಾಯಕನಟನೇ ನಿರ್ವಹಿಸಿ ಅಸಹಾಯಕ ಜನತೆಯೆದುರು ದೇವರಾಗಿ ನಿಲ್ಲುವುದು ರೂಢಿಯಾಗಿರುವಾಗ ನಾಯಕನ ಸಮಸಮಕ್ಕೆ ಜನತೆಯೂ ನಿಂತರೆ ಪ್ರೇಕ್ಷಕರಿಗೆ ನಾಯಕನ ಸಾಹಸ ಕಾಣದೆ ನಿರಾಸೆಯಾಗಿರಬೇಕು. ಚಿತ್ರ ಚೆನ್ನಾಗಿತ್ತು, ಶ್ರೀಮಂತವಾಗಿತ್ತು. ವಿಶಿಷ್ಟ ರೀತಿಯಲ್ಲಿ ಕುದುರೆಗಳ ಬಳಕೆ, ಬೆಳದಿಂಗಳ ಚಿತ್ರೀಕರಣ ಎಲ್ಲವೂ ಇತ್ತು. ಚಿತ್ರದ ಶೀರ್ಷಿಕೆ ಕಥಾ ನಿರೂಪಣೆಯಲ್ಲಿದ್ದ ನವಿರುಗಳಿಗೆ ಹೊಂದಿಕೆಯಾಗಲಿಲ್ಲವೆನ್ನಿಸಿತ್ತು. ಒಳ್ಳೆಯ ಪ್ರಯತ್ನವೊಂದು ಇದ್ದಲ್ಲೇ ಕರಗಿಹೋಯಿತು. ಈ ಚಿತ್ರಕ್ಕೆ ಮುಂದೆ ಪ್ರತಿಭಾವಂತ ನಿರ್ದೇಶಕನೆಂದು ಮೊದಲ ಪ್ರಯತ್ನದಲ್ಲೇ ಸಾಬೀತು ಮಾಡಿದ ಕೇಸರಿ ಹರವು ಸಹನಿರ್ದೇಶಕರಾಗಿದ್ದರು.

'ಉಂಡೂ ಹೋದ ಕೊಂಡೂ ಹೋದ' ನಾಗತಿಹಳ್ಳಿ ಚಂದ್ರಶೇಖರ್ ನಿರ್ದೇಶನದ ಮೊದಲ ಚಿತ್ರ. ನಾಗತಿಹಳ್ಳಿ ಆ ಹೊತ್ತಿಗಾಗಲೇ ಕೆಲವು ಚಿತ್ರಗಳಿಗೆ ಸಹಾಯಕರಾಗಿ, ಗೀತರಚನಕಾರರಾಗಿ, ಕೆಲವೊಮ್ಮೆ ಸಣ್ಣ ಪುಟ್ಟ ಪಾತ್ರದಲ್ಲಿ ಅಭಿನಯಿಸಿ ಚಿತ್ರರಂಗಕ್ಕೆ ಹತ್ತಿರವಾಗಿದ್ದರು. ಚಿತ್ರ ನಿರ್ದೇಶಿಸುವ ಅದಮ್ಯ ಆಕಾಂಕ್ಷೆಯ ಫಲವಾಗಿ ಈ ಚಿತ್ರ ತೆರೆಗಿತ್ತರು. ಅವರ ಕೆಲವು ಸಣ್ಣ ಕಥೆಗಳು ನೀಳ್ಗತೆಗಳನ್ನು ತೆರೆಗೆ ತರುವ ಕೆಲವರ ಪ್ರಯತ್ನಗಳು ಅರ್ಧಕ್ಕೆ ನಿಂತಿದ್ದವು. ಈಗ ಅವರದೇ 'ಕಮಂಗೀಪುರದ ಕಥೆ'ಯನ್ನು ಆಧರಿಸಿ ಚಿತ್ರಕಥೆ ಮಾಡಿದರು. ಸ್ವಭಾವತಃ ವಿನೋದ-ವಿಡಂಬನೆಗಳಲ್ಲಿ ಒಲವುಳ್ಳ ನಾಗತಿಹಳ್ಳಿ ಮೊದಲ ಚಿತ್ರಕ್ಕೆ ಸಾಮಾಜಿಕ ಸಮಸ್ಯೆಯನ್ನು ವಿಡಂಬನಾತ್ಮಕವಾಗಿ ಹೇಳುವ ಪ್ರಯತ್ನ ಮಾಡಿದ್ದರು. ಪ್ರಾಮಾಣಿಕ ಪ್ರಯತ್ನ; ಆದರೆ ಶೀರ್ಷಿಕೆ ಮೊದಲುಗೊಂಡು ಎಲ್ಲಾ ಹಂತದಲ್ಲೂ ವಿಡಂಬನೆಯನ್ನು ಬಳಸಿದ್ದು ಅತಿಯೂ ಆಗಿ, ಪ್ರೇಕ್ಷಕನಿಗೆ ಅಜೀರ್ಣವಾಯಿತು. ಸೀಮೆ ಹಸು ತಂದುಕೊಡುತ್ತೇನೆಂದು ಹೇಳಿ ಹಳ್ಳಿಗರಿಂದ ಮುಂಗಡ ಹಣ ವಸೂಲು ಮಾಡಿ ಓಡಿಹೋಗುವ ಅತಿ ಚತುರ ವಾಚಾಳಿ ಪಾತ್ರವೊಂದನ್ನು ಹಳ್ಳಿಯ ಪರಿಸರದಲ್ಲಿ ಚಿತ್ರಿಸಿದ್ದಾರೆ. ಅನಂತ್‌ನಾಗ್ ಅಭಿನಯ ಮನೋಜ್ಞವಾಗಿದ್ದರೆ, ಈ ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ಕರಿಬಸವಯ್ಯ ಕೂಡಾ ಸೊಗಸಾಗಿ ಅಭಿನಯಿಸಿದ್ದರು. ಮುಂದೆ ಚಿತ್ರರಂಗ ಅವರನ್ನು ಸಾಕಷ್ಟು ದುಡಿಸಿಕೊಂಡಿತು. ನಾಗತಿಹಳ್ಳಿಯವರೇ 'ಕೊಟ್ರೇಶಿ ಕನಸು' ಚಿತ್ರದಲ್ಲಿ ಮುಖ್ಯಪಾತ್ರ



(ಚಿತ್ರ ೨೭) 'ಹಳ್ಳಿಮೇಷ್ಟ್ರು' ಚಿತ್ರದಲ್ಲಿ ಬಿಂದಿಯಾ ಮತ್ತು ರವಿಚಂದ್ರನ್

ಕೊಟ್ಟು ಆತನ ಸಾಮರ್ಥ್ಯವನ್ನು ಸರಿಯಾಗಿ ಪರಿಚಯ ಮಾಡಿದರು. ಆ ವರ್ಷ ಅತ್ಯುತ್ತಮ ಪೋಷಕನಟ ಪ್ರಶಸ್ತಿ ಆತನಿಗೆ ದಕ್ಕಿತ್ತು. ನಾಗತಿಹಳ್ಳಿಯವರ ಹರಿತವಾದ ಸಂಭಾಷಣೆ ಈ ಚಿತ್ರಕ್ಕಿತ್ತು. ಈ ಚಿತ್ರದ ಚಿತ್ರಕಥೆಗೆ ಅವರಿಗೆ ೧೯೯೧-೯೨ರ ರಾಜ್ಯ ಪ್ರಶಸ್ತಿ ಬಂತು.

'ಹಳ್ಳಿಮೇಷ್ಟ್ರು' ರವಿಚಂದ್ರನ್ ಅಭಿನಯದ ಚಿತ್ರ. ಮೊದಲ ಬಾರಿಗೆ ಅವರ ಸಹಾಯಕರಾಗಿದ್ದ ಮಂಜು, ಮೋಹನ್ ನಿರ್ದೇಶಿಸಿದ್ದರು. ರವಿಚಂದ್ರನ್ ಚಿತ್ರಗಳು ಒಂದು ಹಂತದ ಜನಪ್ರಿಯತೆಯನಂತರ ಯಾರು ನಿರ್ದೇಶಿಸಿದ್ದರೂ ರವಿಚಂದ್ರನ್ ಅವರ ಟಚ್ ಅಥವಾ ಆಕ್ರಮಣ ಇದ್ದೇ ಇರುತ್ತಿತ್ತು. ಇಲ್ಲೂ ಅದೇ ಆಯಿತು. ಮಹದೇವಪುರದ ಪ್ರಕೃತಿ ಸೌಂದರ್ಯವನ್ನು ಸೂರೆಗೊಂಡ, ಶ್ರೀಮಂತ ಅನುಭವ ಅನ್ನಿಸಿದ ಚಿತ್ರ. ಈ ಚಿತ್ರದಲ್ಲಿ ಹೊಸ ತಾರೆ ಬಿಂದಿಯಾ ಬಂದರು. ಜಂಭದ ಹುಡುಗಿ ಎಂದು ಪ್ರಾರಂಭದಿಂದಲೂ ಬ್ರ್ಯಾಂಡ್ ಆದ ಹುಡುಗಿ ಕಡೆಕಡೆಗೆ ರವಿಚಂದ್ರನ್ ಮೇಲೆ ಅಪವಾದ ಹೊರಿಸಿದರು. ವ್ಯವಹಾರವೇ ಮುಖ್ಯವಾದ ಚಿತ್ರರಂಗದಲ್ಲಿ ನಮ್ಮವರೊಬ್ಬರಿಗೆ ಆದ ಅವಮಾನ ಎಂಬುದನ್ನೂ ನಗಣ್ಯವಾಗಿಸಿ ಆ ತಾರೆಯನ್ನೇ ಇತರ ಚಿತ್ರಗಳಿಗೆ ಬುಕ್ ಮಾಡಿಕೊಂಡು ಚಿತ್ರ ಮಾಡಿದವರೂ ಉಂಟು. ಒಂಟಿ ಹೋರಾಟವೇ ಆದರೂ ರವಿಚಂದ್ರನ್ ದಾವೆ ಹೂಡಿ ಗೆದ್ದರು. ಎಲ್ಲವೂ ತಿಳಿಯಾಯಿತು. 'ಹಳ್ಳಿಮೇಷ್ಟ್ರು' ಭಾಗ್ಯರಾಜ್‌ರ ತಮಿಳು ಚಿತ್ರವೊಂದರ ರೀಮೇಕ್. ರವಿಚಂದ್ರನ್ ಹೊಸ ರೀತಿಯಲ್ಲಿ ನಿರೂಪಿಸಲು ಪ್ರಯತ್ನಿಸಿದ್ದರು. ಸೊಗಸಾದ ಸಂಗೀತ ಕೊಟ್ಟ ಹಂಸಲೇಖ ಸಿಲ್ಕ್‌ಸ್ಮಿತಾ ಅಭಿನಯದ ಒಂದು ಗೀತೆಯನ್ನು ಮಾತ್ರ ಅಶ್ಲೀಲವೆನ್ನಿಸುವಂತೆ ಮಾಡಿದ್ದರು. ಚಿತ್ರೀಕರಣವೂ ಹಾಗೇ 'ಅತಿರೇಕ'ಕ್ಕೆ ಹೋಗಿತ್ತು. ಪುಟ್ಟಣ್ಣ ಕಣಗಾಲರು 'ಅ ಆ ಇ ಈ ಕನ್ನಡದಾ ಅಕ್ಷರ ಮಾಲೆ, ಅಮ್ಮ ಎಂಬುದೆ ಕನ್ನಡ ಕಂದನ ಕರೆಯೋಲೆ....' ಎಂದು ಸೊಗಸಾಗಿ ಹೇಳಿದ್ದರು 'ಕರುಳಿನ ಕರೆ'ಯಲ್ಲಿ. 'ಹಳ್ಳಿಮೇಷ್ಟ್ರು'ನಲ್ಲೂ ಅಂಥದೇ ಗೀತೆಯೊಂದು ಲೈಂಗಿಕ ಚೇಷ್ಟೆಗಳನ್ನು ಬಿಂಬಿಸಿತ್ತು 'ಮನಸ್ಸುಗಳೇಕೆ ರೋಗಗ್ರಸ್ತ' ಅನ್ನಿಸುವ ಹಾಗೆ.

'ಕ್ಷೀರಸಾಗರ' ಸಿಂಗೀತಂ ಶ್ರೀನಿವಾಸ್ ನಿರ್ದೇಶಿಸಿದ ಚಿತ್ರ. ಬಂಗಾರಪ್ಪನವರ ನಿರ್ಮಾಣ. ತಮ್ಮ ಮಕ್ಕಳ ಸಲುವಾಗಿ ಅಥವಾ ತಮ್ಮ ಅಭಿನಯಿಸಬೇಕೆಂಬ ಬಹುದಿನಗಳ ಕನಸನ್ನು ಮಗನಲ್ಲಿಯಾದರೂ ಕಂಡು ಸಮಾಧಾನ ಪಡುವ ತವಕ ಪದೇ ಪದೇ ಇಂಥ ಸಾಹಸಕ್ಕಿಳಿಯಲು ಪ್ರೇರಿಸಿದೆ. ಚಿತ್ರ ಚೆನ್ನಾಗಿಯೇ ಇತ್ತು. ಜನರಿಗೆ ಅಲ್ಲಿಯ ಹಾಸ್ಯ ಪ್ರಿಯವೆನಿಸಲಿಲ್ಲ. ಎಸ್.ಪಿ.ಬಾಲಸುಬ್ರಹ್ಮಣ್ಯಂ ಅವರು ಹಾಡಿದ್ದ 'ಹೊಡೀತಾಳೆ ಬಡೀತಾಳೆ ನನ್‌ಹೆಂಡ್ತಿ ಕೇಳ್ರಪ್ಪೋ ಕೇಳ್ರಪ್ಪೋ ಈ ಸಂಗ್ತಿ....' ಎನ್ನುವ ಹಾಡನ್ನು ಕುಮಾರ್ ಬಂಗಾರಪ್ಪ ಅಭಿನಯದಲ್ಲಿ ಚಿತ್ರಿಸಲಾಗಿತ್ತು. ಸುಮಾರು ಒಂಬತ್ತು ವೇಷಕ್ಕೆ ಒಂಬತ್ತು ಬಗೆಯ ರಾಗಗಳಲ್ಲಿದ್ದ ಗೀತೆ ಇದು. ಆ ಒಂಬತ್ತು ವೇಷದಲ್ಲಿ ಒಂದು ಸ್ತ್ರೀ ವೇಷವೂ ಸೇರಿತ್ತು.

ಇವುಗಳ ಜೊತೆಗೇ ಸಮಾಜ ಸೇವೆಯನ್ನು ಕೇಂದ್ರವಾಗಿಟ್ಟುಕೊಂಡು ಮಾಲಾಶ್ರೀ, ತಾರಾ ಅವರ ಆಧುನಿಕ-ಸಾಂಪ್ರದಾಯಿಕ ಉಡುಗೆಯ ವೈರುಧ್ಯವನ್ನು ಟೀಕಿಸುತ್ತ ಬಿ.ರಾಮಮೂರ್ತಿ ಅವರ ನಿರ್ದೇಶನದ 'ವಜ್ರಾಯುಧ', ಅತಿ ಸಂತಾನವನ್ನು ಕುರಿತು ಮಾತನಾಡಿದ ಸಾಯಿಪ್ರಕಾಶ್ ನಿರ್ದೇಶನದ 'ಮಾಲಾಶ್ರೀ ಮಾಮಾಶ್ರೀ' ತೆರೆಗೆ ಬಂದವು. ಮಾಲಾಶ್ರೀ ಅವರ ಜನಪ್ರಿಯತೆ, ಮಾರುಕಟ್ಟೆ ಹೇಗಿತ್ತೆಂದರೆ ಒಂದು ಚಿತ್ರವೇ ಆಕೆಯ ಹೆಸರಲ್ಲಿ ಬಂದುಬಿಡುವಷ್ಟು ಎಂಬುದನ್ನು ಗಮನಿಸಬಹುದು. ಅಂಬರೀಷ್ ಜನಪ್ರಿಯತೆಯ ಹಿನ್ನೆಲೆಯಲ್ಲಿ ಎ.ಟಿ.ರಘು ಚಿತ್ರ 'ಮೈಸೂರಿನ ಜಾಣ'ವೂ ತೆರೆಗೆ ಬಂತು.

ಭಾರ್ಗವ 'ರಾಜಾಧಿರಾಜ' ನಿರ್ದೇಶಿಸಿದರು. ಈ ಚಿತ್ರದಲ್ಲಿ ವಿಷ್ಣುವರ್ಧನ್ ಆಟೋರಿಕ್ಷಾ ಡ್ರೈವರ್ ಪಾತ್ರದಲ್ಲಿದ್ದರು. ಅವರೊಂದಿಗೆ ರೂಪಿಣಿ ಅಭಿನಯಿಸಿದರು. ಆಟೋ ರಿಕ್ಷಾ ಯೂನಿಯನ್ ಇತ್ಯಾದಿ ವಿಶೇಷಗಳೂ ಇದ್ದವು. ಈ ಹಿಂದೆ ಶಂಕರ್‌ನಾಗ್ ಹೀಗೆ ಆಟೋರಿಕ್ಷಾ ಪ್ರಧಾನ ಚಿತ್ರದಲ್ಲಿ ಅಭಿನಯಿಸಿದಾಗ ಚಿತ್ರಮಂದಿರದ ಹೊರಗೆಲ್ಲ ಬರೀ ಆಟೋಗಳೇ ನಿಂತವು, ಒಳಗೆಲ್ಲ ಆಟೋ ಡ್ರೈವರ್‌ಗಳಿದ್ದರು. ಯಾವ ಆಟೋದಲ್ಲಿ ಕುಳಿತರೂ ಅದೇ ಮಾತು. ಅಂಥ ಒಂದು ಹೊಸ ಪ್ರೇಕ್ಷಕ ವರ್ಗವನ್ನು ಗುರಿಯಲ್ಲಿಟ್ಟಿರಬಹುದಾದರೂ ಈ ಚಿತ್ರಕ್ಕೆ ಹಾಗೇನೂ ಆಗಲಿಲ್ಲ. ಬಿಡುಗಡೆಗೆ ಸರಿಯಾದ ಚಿತ್ರಮಂದಿರ ಸಿಗದೆ, ಪೈಪೋಟಿಯಾಗಿ ವಿಷ್ಣುವರ್ಧನ್ ಬೇಸರ ಮಾಡಿಕೊಂಡಿದ್ದೂ ಉಂಟು. ಚಿತ್ರ ಸುಮಾರಾಗಿ ಯಶಸ್ವಿ ಆಯಿತು.

'ಪುರುಷೋತ್ತಮ' ಶಿವರಾಜ್ ಕುಮಾರ್ ಅಭಿನಯದ ಚಿತ್ರ. ವಿಶೇಷವೆನ್ನುವ ಅಂಶಗಳು ಕಡಿಮೆಯೇ ಆದರೂ ಈ ಚಿತ್ರದ ಸಂಗೀತದ ಬಗ್ಗೆ ನೆನಪು ಮಾಡಿಕೊಳ್ಳುವ ಕೆಲವು ಮುಖ್ಯ ಸಂಗತಿಗಳಿವೆ. ರಾಜಕುಮಾರ್ ಅವರು ಗೀತೆಗಳನ್ನು ಬೇರೆಯವರ ಚಿತ್ರಗಳಿಗಾಗಿ ಹಾಡಿದ್ದಾರೆ. ಬಹುತೇಕ ಅವು ತುಟಿ ಚಲನೆಗಾಗಿ ಅಲ್ಲದೆ, ಹಿನ್ನೆಲೆಗೆ ಬಳಸುವಂಥವಾಗಿದ್ದವು. ಕುಮಾರ್ ಬಂಗಾರಪ್ಪನವರಿಗಾಗಿ 'ಅಶ್ವಮೇಧ' ಚಿತ್ರಕ್ಕೆ 'ಹೃದಯ ಸಮುದ್ರ ಕಲಕಿ...' ಗೀತೆ ಹಾಡಿದರು. 'ತುಟಿ ಚಲನೆಗೆ' ಈ ಚಿತ್ರದಲ್ಲೇ ಎರಡು ಗೀತೆಗಳನ್ನು ಹಾಡಿದರು. ಅವು ಜನಪ್ರಿಯವೂ ಆದವು. "ನಾನು ನಿಮ್ಮವನು. ನಿಮ್ಮ ಮನೆಯವನು ನಿಮ್ಮ ಕಂಬನಿ ಒರೆಸುವ ಮಗನು...' ಈ ಗೀತೆ ಅರ್ಥಪೂರ್ಣವಾಗಿತ್ತು. ಜನಮನವನ್ನು ವಿಭಿನ್ನವಾಗಿ ಆಕರ್ಷಿಸುವಂಥದಾಗಿತ್ತು. ಇಂಥ ಪ್ರಯೋಗಗಳು ಕನ್ನಡ ಚಿತ್ರಗಳಲ್ಲಿ ಪ್ರಾರಂಭವಾದದ್ದೇ ಬಹಳ ತಡವಾಗಿ. ರಾಜಕುಮಾರ್ ಚಿತ್ರಗಳಿಗೆ ಚಿ.ಉದಯಶಂಕರ್ ಸಾಹಿತ್ಯ ರಚಿಸಲು ತೊಡಗಿದ ಮೇಲೆ ಕೊಂಚಕೊಂಚವಾಗಿ ಗ್ರಾಫ್‌ನಲ್ಲಿ ಏರುತ್ತ ಬರುವ ಹಾಗೆ ಒಂದು ಇಮೇಜನ್ನೇ ಕಟ್ಟುವ ಪ್ರಯತ್ನವಾಯಿತು. ಅಂಥ ಪ್ರಯೋಗ ಶಿವರಾಜ್ ಕುಮಾರ್ ಚಿತ್ರದಲ್ಲಿ ಬಹಳ ಬೇಗನೇ ಪ್ರಾರಂಭಿಸಲಾಯಿತು. ಗೀತೆ, ಚಿತ್ರದ ಶೀರ್ಷಿಕೆ, ಸಂಭಾಷಣೆ ಎಲ್ಲ ಕಡೆ ಒಂದು ವ್ಯವಸ್ಥಿತ ರೀತಿಯಲ್ಲಿ ಕಲಾವಿದನನ್ನು ಜನಮನದಲ್ಲಿ ಪ್ರತಿಷ್ಠಾಪಿಸುವ ಕ್ರಮವಿದು. ಶಿವರಾಜ್ ಕುಮಾರ್ ಅವರ ಚಿತ್ರರಂಗದ ವ್ಯವಸಾಯವನ್ನು ರಾಜ್ ಸಾಧನೆಗೆ ಹೋಲಿಸಿದಾಗ ಈ ಅಭಿಪ್ರಾಯ ಮೂಡುವುದು ಸಹಜ. 'ಶಿವ ಶಿವ, ಇವ ಶಿವ, ನಯ ಭಯ ಬಾಳಲ್ಲಿರುವ ಗಂಡು ಶಿವ...' ಎಂಬುದು ಇನ್ನೊಂದು ಗೀತೆ. 'ಕಾಂಚಣ ಕಾಂಚಣ ಮಿಣ ಮಿಣ ಕಾಂಚಣ...' ಗೀತೆ ಶಿವರಾಜ್ ಕುಮಾರ್ ಅವರೇ ಹಾಡಿದ್ದರು. ಚಿತ್ರ ಸಾಮಾನ್ಯವಾಗಿತ್ತು.

ಸಾಯಿಪ್ರಕಾಶ್ ನಿರ್ದೇಶನದ 'ಸೋಲಿಲ್ಲದ ಸರದಾರ' ಚಿತ್ರದಲ್ಲಿ ಅಂಬರೀಷ್-ಮಾಲಾಶ್ರೀ ಜೋಡಿ ಇತ್ತು. 'ಈ ಕನ್ನಡ ಮಣ್ಣನು ಮರೀ ಬ್ಯಾಡ ಓ



(ಚಿತ್ರ ೨೮) 'ಭಂಡ ನನ್ನ ಗಂಡ' ಚಿತ್ರದಲ್ಲಿ ಜಗ್ಗೇಶ್ ಮತ್ತು ಕೆ.ಡಿ.ವೆಂಕಟೇಶ್

ಅಭಿಮಾನೀ...' ಮತ್ತು 'ಕಾವೇರಮ್ಮ ಕಾಪಾಡಮ್ಮ ಈ ದೋಣಿಯ ತೇಲಿಸು ಆ ತೀರವಾ ಸೇರಿಸು...' ಎಂಬ ಎರಡೂ ಗೀತೆಗಳು ಸೊಗಸಾಗಿದ್ದವು. 'ಸಪ್ತಪದಿ' ಸಾಯಿಸುತೆ ಕಾದಂಬರಿ ಆಧರಿಸಿ ಎಸ್.ಎ.ಶ್ರೀನಿವಾಸ್ ನಿರ್ಮಿಸಿದ ಚಿತ್ರ. ಅಂಬರೀಷ್-ಸುಧಾರಾಣಿ ಅಭಿನಯಿಸಿದ್ದರು. ಗೌರಿಶಂಕರ್ ಛಾಯಾಗ್ರಹಣವಿತ್ತು. ಭಾರ್ಗವರ ಚೊಕ್ಕ ನಿರೂಪಣೆಯ ಈ ಚಿತ್ರ ಗಮನ ಸೆಳೆಯುವಂಥದಾಗಿತ್ತು. ಶೀರ್ಷಿಕೆಯ ಗೀತೆಯನ್ನು ರಾಜಕುಮಾರ್ ಎತ್ತರದ ದನಿಯಲ್ಲಿ ಹಾಡಿದ್ದರು. ತುಂಬ ಅರ್ಥಪೂರ್ಣ ಗೀತೆಯಾಗಿತ್ತು.

'ಭಂಡ ನನ್ನ ಗಂಡ' ಜಗ್ಗೇಶ್ ಮುಖ್ಯ ಪಾತ್ರದಲ್ಲಿದ್ದ ಚಿತ್ರವಾಗಿ ಮೊದಲು ತೆರೆಗೆ ಬಂತು. ಜಗ್ಗೇಶ್ ಹಳ್ಳಿಗನಾಗಿ ಸೊಗಸಾಗಿ ಅಭಿನಯಿಸಿದ್ದರು. ಜಗ್ಗೇಶ್ ಸಂಬಂಧಿಯೇ ನಿರ್ಮಿಸಿದ ಚಿತ್ರ. ಆ ಹೊತ್ತಿಗಾಗಲೇ ಜಗ್ಗೇಶ್ ನಾಯಕನಾಗಿ ಅಭಿನಯಿಸಿದ ಮೊದಲ ಚಿತ್ರ 'ತರ್ಲೆ ನನ್ಮಗ' ಇನ್ನೂ ತೆರೆಕಂಡಿರಲಿಲ್ಲವಾದ್ದರಿಂದ 'ಭಂಡ ನನ್ನ ಗಂಡ' ಅವರು ನಾಯಕನಾಗಿ ತೆರೆಗೆ ಬಂದ ಮೊದಲ ಚಿತ್ರ ಎಂದು ದಾಖಲಾಗುತ್ತದೆ. ಜಗ್ಗೇಶ್ ಈ ಚಿತ್ರದಲ್ಲಿ ಅತ್ಯುತ್ತಮ ಎಂಬಂಥ ಅಭಿನಯವನ್ನಂತೂ ಕೊಟ್ಟರು. ಜಂಬಗಾತಿ ಹುಡುಗಿ, ಅವಳು ಗಂಡನೆಂದು ಒಪ್ಪದಿದ್ದರೂ ಅವಳನ್ನು ಒಪ್ಪಿಸಲು ಪರದಾಡುವುದು ಇತ್ಯಾದಿ. ಕೆಲವು ದೃಶ್ಯಗಳನ್ನು ಸವುರಾಗಿಯೂ ಚಿತ್ರಿಸಲಾಗಿತ್ತು. ಜಗ್ಗೇಶ್ ಮುಂದೆಯೂ ಸಾಕಷ್ಟು ಚಿತ್ರಗಳಲ್ಲಿ ಅಭಿನಯಿಸಿದರು. ಆದರೆ ಎಷ್ಟು ಬೇಕೊ ಅಷ್ಟು ಗಂಭೀರವಾಗಿ ಮಾಧ್ಯಮವನ್ನು ದುಡಿಸಿಕೊಳ್ಳಲು ಮರೆತರು.

ಮಾಲಾಶ್ರೀ ಅವರ ಉಚ್ಛ್ರಾಯದ ಕಾಲ ಅದು. ಆಕೆಯ ಜೊತೆಗೆ ಯಾರು ಅಭಿನಯಿಸಿದರೂ ವ್ಯಾಪಾರಕ್ಕೆ ಮೋಸವಿಲ್ಲ ಎಂಬಂಥ ದಿನಗಳು. 'ನಗರದಲ್ಲಿ ನಾಯಕರು' ಚಿತ್ರದಲ್ಲಿ ಹಲವಾರು ನಾಯಕರಿದ್ದರು. ಒಂದು ರೀತಿಯಲ್ಲಿ ತಮಾಷೆ ಅನ್ನಬಹುದಾದಂಥ ನಿರೂಪಣೆ. ಸಾಯಿಪ್ರಕಾಶ್ ನಿರ್ದೇಶನ. ಮಾಲಾಶ್ರೀ ಅವರ ಬಹುತೇಕ ಚಿತ್ರಗಳನ್ನು ಸಾಯಿಪ್ರಕಾಶ್ ನಿರ್ದೇಶಿಸಿದ್ದರು. ಸಾಯಿಪ್ರಕಾಶ್ ಏಕಕಾಲದಲ್ಲಿ ೭-೮ ಚಿತ್ರಗಳನ್ನು ನಿರ್ದೇಶಿಸುವ ಸಾಹಸಕ್ಕೂ ಇಳಿದರು. ಮಾಲಾಶ್ರೀ ಅವರೂ ಮುಂದೆ ಜನಪ್ರಿಯತೆ ಉಳಿಯಬೇಕು ಎಂಬ ಯಾವ ಯೋಚನೆಯೂ ಇಲ್ಲದೆ ಅವರ ಡೇಟ್ಸ್ ಕೊಡುತ್ತಿದ್ದರು. ಕಡೆ ಕಡೆಗೆ ದಿನಗಳೂ ಅಲ್ಲ, ಗಂಟೆಗಳ ಲೆಕ್ಕದಲ್ಲಿ ಕಾಲ್‌ಶೀಟ್ಸ್ ಕೊಟ್ಟರು. ಇದರಲ್ಲಿ ಆಕೆಯನ್ನು ಹಾಗೆ ತೋರಿಸಿ, ಉಬ್ಬಿಸಿ ಬಾಗಿಲ ಬಳಿ ಅಡ್ವಾನ್ಸ್ ಹಿಡಿದು ನಿಂತ ನಿರ್ಮಾಪಕರ ತಪ್ಪೂ ಇದೆ. ಆದರೂ ಆಕೆ ಇನ್ನೂ ಕೊಂಚ ಎಚ್ಚರ ವಹಿಸಬಹುದಿತ್ತು. ತನ್ನ ಅಭಿನಯ ವೃತ್ತಿ ಜೀವನದ ದೃಷ್ಟಿಯಿಂದ, ಅದು ಇನ್ನಷ್ಟು ಕಾಲ ಉಳಿಯಲಿ ಎಂಬ ಅಪೇಕ್ಷೆಯಿಂದಲಾದರೂ ಯೋಜನಾಬದ್ಧವಾಗಿ ನಿರ್ವಹಿಸಬೇಕಿತ್ತು. ಆದರೆ ಮಾಲಾಶ್ರೀ ಹಿಂತಿರುಗಿ ಬರಲಾರದಷ್ಟು ಮುಂದೆ ಹೋಗಿದ್ದರು. ಮತ್ತು ಆಕೆಯ ಇನ್ನೊಂದು ದೌರ್ಬಲ್ಯವೆಂದರೆ ಬಹು ಬೇಗ ಸ್ಥೂಲವಾಗುವುದು. ಒಂದೇ ಚಿತ್ರದ ಎರಡನೆಯ ಶೆಡ್ಯೂಲ್ ಹೊತ್ತಿಗೆ ದಪ್ಪವಾಗಿ ಚಿತ್ರದಲ್ಲಿ ಆ ಪಾತ್ರದ ಕಂಟಿನ್ಯೂಯಿಟಿಗೂ ತೊಂದರೆ ಆದಂಥ ಸಮಸ್ಯೆಗಳು ಇದ್ದವು. ಆದರೆ ಮಾಲಾಶ್ರೀ ಅವರ ಹಾಗೆ ದೇಹವನ್ನು ತುಂಬ ಸಡಿಲಗೊಳಿಸಿ ಸಲೀಸಾಗಿ ನೃತ್ಯ-ಅಭಿನಯ ಕೊಡುತ್ತಿದ್ದವರು ಅಪರೂಪ ಎನ್ನಬಹುದು. ಎಂಥ ಪಾತ್ರವಾದರೂ ನಿರ್ವಹಿಸುವ ಸಮರ್ಥರಾಗಿದ್ದರು ಆಕೆ. ಒಂದೊಂದು ಅವಧಿಯಲ್ಲಿ ಒಂದೊಂದು ಬಗೆಯ ಪಾತ್ರಗಳು. ಅಳುವ, ತಾಳಿಗಾಗಿ ಪರಿತಪಿಸುವ ಅಪ್ಪಟ ಗೃಹಿಣಿ, ತ್ಯಾಗಮಯಿ, ಇವೆಲ್ಲವನ್ನೂ ಮೀರಿದ ಪೊಲೀಸ್ ಅಧಿಕಾರಿಣಿ, ಸಾಹಸಿ ಇಂಥ ಯಾವ ಪಾತ್ರದಲ್ಲೂ ಆಕೆ ಹೊಂದಿಕೊಳ್ಳಬಲ್ಲವರಾಗಿದ್ದರು. ಆಕೆಯ ಚಿತ್ರಗಳು ಯಶಸ್ವಿ ಆಗುತ್ತಿವೆ ಎಂತಲೇ ಹೊರಗಿನಿಂದಲೂ ನಿರ್ಮಾಪಕರು ಬಂದು ಕನ್ನಡ ಚಿತ್ರ ಮಾಡಿದರು. 'ನಗರದಲ್ಲಿ ನಾಯಕರು' ಚಿತ್ರ ಮಾಡಿದವರೂ ತೆಲುಗಿನ ನಿರ್ಮಾಪಕರೇ. ಆಕೆಗೆ ತವರಿನ ಪ್ರೀತಿ ಎಷ್ಟಿತ್ತೆಂದರೆ ಅವರಿಗಲ್ಲ ಒಂದು ಕ್ಷಣವೂ ಯೋಚಿಸದೆ ಡೇಟ್ಸ್ ಕೊಡುತ್ತಿದ್ದರು. ಹೀಗಾಗಿ ಹತ್ತು-ಹದಿನೈದು ದಿನದಲ್ಲಿ ಸುತ್ತುವಂಥ ಚಿತ್ರಗಳನ್ನು ಸುತ್ತಿ ಕೊಡುವ ನಿರ್ದೇಶಕ ಸಾಯಿಪ್ರಕಾಶ್ ಅವರಿಗೆ ಆಪ್ತರಾಗಿಬಿಟ್ಟರು. ಯಂತ್ರದಲ್ಲಿ ಅಚ್ಚೊತ್ತಿ ಬರುವ ಆಟಿಕೆಗಳ ಹಾಗೆ ಆಕೆಯ ಚಿತ್ರಗಳು ಬಂದವು. 'ನಗರದಲ್ಲಿ ನಾಯಕರು' ಅಂಥದೇ ಒಂದು ಚಿತ್ರ. ಕನ್ನಡ ಪ್ರೇಕ್ಷಕರ ತಾಳ್ಮೆಯನ್ನು ಪರೀಕ್ಷಿಸುತ್ತಿತ್ತು ಅಷ್ಟೇ. 'ನಗರದಲ್ಲಿ ನಾಯಕರು' ಪಡ್ಡೆ ಹುಡುಗರ ಜೊತೆ ಚೆಲ್ಲಾಟವಾಡಿದ ಮಾಲಾಶ್ರೀ ಅವರ ಹಲವು ಚಿತ್ರಿಕೆಗಳ ಒಂದು ಜೋಡಣೆಯಂತಿತ್ತು.

ಇದರ ನಂತರ ಬಂದ 'ಕನಸಿನ ರಾಣಿ' ಕೆಲವು ಕಾರಣಗಳಿಗೆ ಮುಖ್ಯ. ಮಾಲಾಶ್ರೀಯೊಂದಿಗೆ ಬಹಳಷ್ಟು ಚಿತ್ರಗಳಲ್ಲಿ ಅಭಿನಯಿಸುತ್ತಿದ್ದ ಶಶಿಕುಮಾರ್ ಒಂದು ಹಂತದಲ್ಲಿ ಆಕೆಯ ಸ್ನೇಹ ಕಡಿದುಕೊಂಡರು. ಅದೊಂದು ಜನಪ್ರಿಯ ಜೋಡಿ ಎಂದೇ ಹೆಸರಾಗಿತ್ತು. ದೀರ್ಘಕಾಲದ ನಂತರ ಮತ್ತೆ ಆ ಜನಪ್ರಿಯ ಜೋಡಿ ಸೇರಿ ಅಭಿನಯಿಸಿದ್ದು 'ಕನಸಿನ ರಾಣಿ'ಯಲ್ಲಿ. ನಿರ್ಮಾಪಕರಿಗೆ ಬಹಳ ನಿರೀಕ್ಷೆಯೇನೋ ಇತ್ತು. ಆದರೆ ಹಾಗಾಗಲಿಲ್ಲ. ಸಾಮಾನ್ಯವಾಗಿ 'ಜನಪ್ರಿಯ'ರು ಗದ್ದಲ ಮಾಡಿ ಬೇರೆ ಹೋಗಿ ಮತ್ತೆ ಸೇರಿದಾಗೆಲ್ಲ ಅಭೂತಪೂರ್ವ ಸ್ವಾಗತ ಸಿಕ್ಕಿಲ್ಲವೆಂದೇ ಅನ್ನಿಸುತ್ತದೆ.

ರಾಜಕಾರಣಿ ಎಸ್.ರಮೇಶ್ ನಿರ್ಮಿಸಿದ ಚಿತ್ರ 'ರವಿವರ್ಮ'. ಕಥೆ ತಮಿಳು ಮೂಲದ್ದು. ರಮೇಶ್ ತಮಿಳು ಚಿತ್ರವನ್ನು ವಿತರಿಸಿದ್ದರು. ಇತ್ತ ಮಿತ್ರರಿಗೆ ಮೂಲ ಚಿತ್ರ ತೋರಿಸಿ, ಅಭಿಪ್ರಾಯವನ್ನು ಸಂಗ್ರಹಿಸಿ, ಪರವಾಗಿಲ್ಲ ಎಂದ ಮೇಲೆ ಕನ್ನಡಕ್ಕೆ ಹಕ್ಕುಗಳನ್ನು ಪಡೆದರು. ವಿಷ್ಣುವರ್ಧನ್ ಅಭಿನಯದ, ಜೋ ಸೈಮನ್ ನಿರ್ದೇಶನದ ಚಿತ್ರ. 'ಸಾಹಸಸಿಂಹ'ದ ನಂತರ ಹಾಗೆ ಒಂದಾಗಿ ಈ ಜೋಡಿ ಚಿತ್ರಗಳನ್ನು ಮಾಡಿರಲಿಲ್ಲ. ಮತ್ತೆ ಜೋಸೈಮನ್ - ವಿಷ್ಣು ಜೋಡಿಯಾದರು ಎಂಬುದೊಂದು ಕುತೂಹಲ-ನಿರೀಕ್ಷೆಯ ಸಂಗತಿ. ಧಾರಾಳವಾಗಿ ಖರ್ಚು ಮಾಡುವ ನಿರ್ಮಾಪಕರಿದ್ದೂ



(ಚಿತ್ರ ೨೯) 'ಗಣೇಶ ಸುಬ್ರಹ್ಮಣ್ಯ' ಚಿತ್ರದಲ್ಲಿ ರಮೇಶ್‌ಭಟ್, ಶಿವರಾಂ, ಅನಂತ್‌ನಾಗ್



**ಭುಜಂಗಯ್ಯನ ದಶಾವತಾರ** (೧೯೯೧) ಲೋಕೇಶ್ - ಪಲ್ಲವಿ ಜೋಷಿ

**ಹರಕೆಯ ಕುರಿ** (೧೯೯೨)
ಹೆಚ್.ಜಿ.ದತ್ತಾತ್ರೇಯ -
ಹೆಚ್.ಜಿ. ಸೋಮಶೇಖರ ರಾವ್

**ಮೈಸೂರು ಮಲ್ಲಿಗೆ** (೧೯೯೨) ಶ್ರೀಪತಿ ಬಲ್ಲಾಳ್ - ಕಿಶೋರಿ ಬಲ್ಲಾಳ್- ಗಿರೀಶ್‌ಕಾರ್ನಾಡ್ - ಆನಂದ್



**ಜೀವನ ಚೈತ್ರ** (೧೯೯೨) ಮಾಧವಿ - ರಾಜಕುಮಾರ್

ಓಂ (೧೯೯೫) ಶಿವರಾಜ್‌ಕುಮಾರ್



ಶಿವ ಸೈನ್ಯ (೧೯೯೬) ಶಿವರಾಜ್‌ಕುಮಾರ್

**ಪುಟ್ನಂಜ** (೧೯೯೫) ರವಿಚಂದ್ರನ್



ಚಿನ್ನಾರಿ ಮುತ್ತ (೧೯೯೩) ಶಾಂತಮ್ಮ - ವಿಜಯ ರಾಘವೇಂದ್ರ



ಜಂಬೂ ಸವಾರಿ (೧೯೯೩)
ಮಾ। ಜಯಂತ್



**ಗಳಿಗೆ** (೧೯೯೬)
ಟಿ.ವಿ. ಗುರುಮೂರ್ತಿ -
ವೆಂಕಟರಾವ್



**ಗಾನಯೋಗಿ ಪಂಚಾಕ್ಷರ ಗವಾಯಿ** (೧೯೯೫) ಚಿಂದೋಡಿ ಬಂಗಾರೇಶ್ - ಲೋಕೇಶ್



**ಓ ಮಲ್ಲಿಗೆ** (೧೯೯೭)
ಅಮರ್ ಮಯೂರ್ -
ಚಾರುಲತಾ

**ಅಮೇರಿಕಾ ! ಅಮೇರಿಕಾ !!** (೧೯೯೭) ಅಕ್ಷಯ್ ಆನಂದ್ - ಹೇಮಾ

ವೀರಪ್ಪ ನಾಯ್ಕ (೧೯೯೮) ವಿಷ್ಣುವರ್ಧನ್



ಜೋ ಸೈಮನ್ ಎಲ್ಲೋ ಎಡವಿದರು. ನಾಯಕನೊಬ್ಬ ಚಿತ್ರಕಾರ. ಚಿತ್ರದಲ್ಲಿ ಬಳಸಿದ್ದ ಪ್ರೈಂಟಿಗ್ಸ್‌ನಲ್ಲಿ ಸೌಂದರ್ಯವೂ ಇರಲಿಲ್ಲ; ಅಮೂರ್ತವಾಗೂ ಇರಲಿಲ್ಲ. ಜೋ ಸೈಮನ್ ಮಡಿಕೇರಿ ಬಳಿ ಭಾರಿ ಹೊರಾಂಗಣದಲ್ಲಿ ಚಿತ್ರಿಸಿದರು. ಒಂದು ದೃಶ್ಯದಲ್ಲಿ ನಾಯಕ ಬೆಟ್ಟದ ಇಳಿಜಾರಿನಲ್ಲಿ ಜಾರಿ ಹೋಗಬೇಕಿತ್ತು. ಅಂಥ ಸನ್ನಿವೇಶಗಳನ್ನಂತೂ ಹಿರಿಯ ಸಾಹಸ ನಿರ್ದೇಶಕ ಜ್ಯೂಡೋ ರತ್ನಂ ತುಂಬ ಸಂಭ್ರಮದಿಂದ ಚಿತ್ರಿಸಿದ್ದರು. ರೂಪಿಣಿ, ಭವ್ಯಾ ಅವರ ಅಭಿನಯವೂ ಚೆನ್ನಾಗಿತ್ತು. ಮೂಲ ಚಿತ್ರದಲ್ಲಿ ಬರುವ ಅನೇಕ ಅಂಶಗಳು ಇಲ್ಲಿ ಇಲ್ಲ. ಸ್ವತಂತ್ರ ಕಲ್ಪನೆಗಳೂ ಇದ್ದವು. ಜೋ ಸೈಮನ್ ಅಭಿರುಚಿ ಬದಲಾಗಿದೆ ಎಂಬುದನ್ನು ಗಮನಿಸಲಿಲ್ಲ ಎನ್ನಿಸಿತು.

'ಗಣೇಶ ಸುಬ್ರಹ್ಮಣ್ಯ' ಫಣಿ ರಾಮಚಂದ್ರ ನಿರ್ದೇಶನದ ಹಾಸ್ಯಪ್ರಧಾನ ಚಿತ್ರ. ಹಾಸ್ಯ-ವಿಡಂಬನೆಯನ್ನು ನಿರೂಪಿಸುವಾಗ ಫಣಿ ಅವರು ವಿಜೃಂಭಿಸುತ್ತಾರೆ. ಇವರಿಗೆ ಸೊಗಸಾಗಿ ಹೇಳುವ ಕಲೆ ಕರಗತವಾಗಿದೆ. ಈ ಚಿತ್ರದಲ್ಲಿ ಅನಂತ್‌ನಾಗ್ ಮತ್ತು ರಮೇಶ್‌ಭಟ್ ಜೋಡಿಯ ಅಭಿನಯವೇ ಸೊಗಸಾಗಿತ್ತು. ಬ್ರಹ್ಮಚಾರಿಗಳು ಅಂತಿಮವಾಗಿ ವಿವಾಹವಾಗುವ ಬಗೆ ಇತ್ತು. ಸ್ತ್ರೀಯರು ತಮ್ಮ ಅಶಕ್ತತೆಯನ್ನು ಎಗ್ಗಿಲ್ಲದೆ ವ್ಯಕ್ತಪಡಿಸುತ್ತಾರೆ. ಅದನ್ನೇ ಗಂಡಸರು ಹಾಗೆ ವ್ಯಕ್ತಪಡಿಸಿದಾಗ ಅದೆಷ್ಟು ಅಸಹ್ಯವಾಗುತ್ತದೆ ಎಂಬುದೂ ಇಲ್ಲಿ ತಿಳಿಯುತ್ತಿತ್ತು. ಪದೇ ಪದೇ ಶೀಲ, ಪಾವಿತ್ರ್ಯ, ಅತ್ಯಾಚಾರಗಳಂಥ ಮಾತು, ಸ್ತ್ರೀಯರನ್ನು ಕಂಡರೆ ಭಯ ಇತ್ಯಾದಿಗಳು ಬಹಳ ಬೇರೆಯದನ್ನೇ ಧ್ವನಿಸುತ್ತಿದ್ದವು. ಚಿತ್ರಕ್ಕೆ ವಿನೋದವೇ ಕೇಂದ್ರವಾಗಿ ಕೆಲವು ಗಹನವಾಗಿ ಯೋಚಿಸುವಂಥ ಅಂಶಗಳೂ ಹಾಸ್ಯದಲ್ಲಿ ತೇಲಿಹೋದವು. ಚಿತ್ರ ನಿರೀಕ್ಷಿತ ಯಶಸ್ಸು ಗಳಿಸಲಿಲ್ಲ.



(ಚಿತ್ರ ೩೦) 'ಒಂದು ಸಿನಿಮಾ ಕಥೆ' ಚಿತ್ರದಲ್ಲಿ ಅನಂತ್‌ನಾಗ್

'ತರ್ಲೆ ನನ್ಮಗ' ಬಾಬು-ರಾಮಸ್ವಾಮಿ ಮಿತ್ರರು ನಿರ್ಮಿಸಿದ ಚಿತ್ರ. ಚಿತ್ರ ತಯಾರಿಕೆಯ ಎಲ್ಲ ಹಂತದಲ್ಲೂ ಎಲ್ಲವೂ ಸಾಹಸವೇ ಆಗಿತ್ತು. ತರುಣರು ಕೆಲವರು ಸೇರಿಕೊಂಡು ಉತ್ಸಾಹದಿಂದ ಸಿದ್ಧಮಾಡಿದ್ದು. ಈ ಚಿತ್ರದಿಂದ ಜಗ್ಗೇಶ್ ನಾಯಕನಟರಾದರು. ಕೊಂಚ ಹೆಚ್ಚಾಯಿತೆಂಬಷ್ಟು ನಿರ್ಮಾಣದಲ್ಲೂ ಪ್ರವೇಶಿಸಿದ್ದರು. ಅವರು ಚಿತ್ರಕ್ಕೆ ಆರ್ಥಿಕ ನೆರವೂ ನೀಡಿದ್ದಿರಬಹುದೆಂಬ ಗುಮಾನಿಯೂ ಇತ್ತು. ಈ ಚಿತ್ರದಿಂದ ಕಾಶೀನಾಥ್ ಆಪ್ತ ಶಿಷ್ಯ ಉಪೇಂದ್ರ ಸ್ವತಂತ್ರ ನಿರ್ದೇಶನಕ್ಕೆ ಬಂದರು. ಮನೋಹರ್‌ಗೆ ಸಂಗೀತ ನಿರ್ದೇಶಿಸುವ ಅವಕಾಶ ದೊರೆತದ್ದೂ ಈ ಚಿತ್ರದಲ್ಲೇ. ಪ್ರತಿಯೊಂದು ಅಂಶವನ್ನೂ ಲೆಕ್ಕಾಚಾರವಾಗಿ, ಶ್ರದ್ಧೆಯಿಂದ ಮಾಡಿದರು ಉಪೇಂದ್ರ. ಕಥೆ, ಚಿತ್ರಕಥೆ, ಸಂಭಾಷಣೆ, ಗೀತರಚನೆ ಎಲ್ಲವನ್ನೂ ನಿರ್ವಹಿಸಿದ ಉಪೇಂದ್ರ ತಮ್ಮ ಜಾಡು ಎಂಥದೆಂಬುದರ ಸೂಚನೆಯನ್ನು ಈ ಚಿತ್ರದಲ್ಲೇ ಕೊಟ್ಟುಬಿಟ್ಟರು. ಪ್ರತಿ ಫ್ರೇಮಿನಲ್ಲೂ ಬೈಗುಳಗಳು ಧಾರಾಳವಾಗಿದ್ದವು. ಜಗ್ಗೇಶ್ ಕೂಡಾ ಭವಿಷ್ಯದ ಬಗ್ಗೆ ಕನಸು ಕಂಡರು. ಬಹಳಷ್ಟು ಯೋಜನೆಗಳನ್ನು ಹಾಕಿಕೊಂಡರು. ಪ್ರಾರಂಭದಿಂದಲೂ ಜಗ್ಗೇಶ್ ಆಗಲಿ, ಉಪೇಂದ್ರ ಆಗಲಿ ಆಯ್ದುಕೊಂಡ ಪ್ರೇಕ್ಷಕ ವರ್ಗವೇ ಬೇರೆಯಾಗಿತ್ತು. ಅವನ್ನೇ ಹೆಚ್ಚಿಸಿಕೊಳ್ಳುತ್ತಾ ಬಂದರು. ಜಗ್ಗೇಶ್ ಮುಖ್ಯ ಪಾತ್ರದ 'ತರ್ಲೆ ನನ್ಮಗ' ಮುಂಚೆಯೇ ಪ್ರಾರಂಭವಾದರೂ ಮೊದಲು ತೆರೆ ಕಾಣಲಿಲ್ಲ. ಆದರೆ ಈ ಯುವಕರು ಹಿಡಿದ ಜಾಡು, ಬೆಳೆದ ಬಗೆ ಗಮನಿಸುವಂಥದ್ದು. ಚಿತ್ರ ಗೆದ್ದಿತು.

'ಒಂದು ಸಿನಿಮಾ ಕಥೆ' ಕೂಡಾ ಫಣಿ ರಾಮಚಂದ್ರ ನಿರ್ದೇಶನದ ಚಿತ್ರ. ಸಿನಿಮಾದೊಳಗೊಂದು ಸಿನಿಮಾದಂತೆ ಹೊಸ ರೀತಿಯಲ್ಲಿ ಹೆಣೆದ ವಸ್ತು. ಪತ್ರಕರ್ತ ಶ್ಯಾಮಸುಂದರ ಕುಲಕರ್ಣಿಯವರು ಫಣಿ ರಾಮಚಂದ್ರರ ಮನೋಧರ್ಮಕ್ಕೆ ಒಗ್ಗುವಂಥ ಕಥೆ ಬರೆಯಬಲ್ಲವರಾಗಿದ್ದರು. ಈ ಜೋಡಿಯೂ ಆಗ ಜನಪ್ರಿಯವಾಗಿತ್ತು. 'ಒಂದು ಸಿನಿಮಾ ಕಥೆ'ಯನ್ನು ಮೆಚ್ಚಿ ಆಂಧ್ರದ ರಾಮೋಜಿರಾವ್ ತೆಲುಗಿನಲ್ಲೂ ಚಿತ್ರ ನಿರ್ಮಿಸಿದ್ದರು. ಫಣಿ ರಾಮಚಂದ್ರ ಬಹು ಕಾಲ ಭಾರ್ಗವ ಬಳಿ ಸಹಾಯಕರಾಗಿದ್ದವರು. ಸ್ವತಂತ್ರವಾಗಿ ಚಿತ್ರ ನಿರ್ದೇಶಿಸತೊಡಗಿದ ಮೇಲೆ ಹಲವು ಯಶಸ್ವಿ ಚಿತ್ರಗಳನ್ನು ಕೊಟ್ಟರು. ಚಿತ್ರೋದ್ಯಮದಲ್ಲಿ ಮುಖ್ಯವಾದ ಸ್ಥಾನವೂ ದಕ್ಕಿತು. ಕೆಲವೊಮ್ಮೆ ಹುಡುಗಾಟ ಎನಿಸಿಬಿಡುವ ಅವರ ಯೋಚನೆಗಳು ಚಿತ್ರ ಮಾಧ್ಯಮವನ್ನು ಗಂಭೀರವಾಗಿ ಪರಿಗಣಿಸುವವರಿಗೆ ಪ್ರಿಯವಾಗುವುದಿಲ್ಲ. ಆದರೆ ಫಣಿ ರಾಮಚಂದ್ರರ ವಿಡಂಬನೆ ಸಭ್ಯತೆಯ ಎಲ್ಲೆ ದಾಟಿಲ್ಲ. ಅವರ ಧೋರಣೆ-ನಿಲುವು ಎಲ್ಲ ವರ್ಗದ ಜನರಿಗೂ ಒಪ್ಪಿತವಾಗುವುದು ಕಷ್ಟ ಎಂದು ಹೇಳಬಹುದು. ಯಾವುದೇ ವಸ್ತು ವಿಷಯಗಳಿಗೆ ಇರುವ ಬೇರೆ ಬೇರೆ ಮಗ್ಗಲುಗಳನ್ನು ಸೂಕ್ಷ್ಮವಾಗಿ ನೋಡುವ ತಾಳ್ಮೆ ಇಲ್ಲದ್ದರಿಂದ ವಿಚಿತ್ರ ಹಾಗೂ ರೂಕ್ಷ ಎನ್ನಿಸುವ ಹಾಗೆ ವಿಡಂಬಿಸಿ ಗಂಭೀರವಾದದ್ದನ್ನು ಮೇಲೆಮೇಲೆ ಹೇಳಿ 'ಅತಿ' ಎನ್ನಿಸುವ ಟೀಕೆ ಮಾಡಿ ಮುಚ್ಚಿ ಹಾಕುತ್ತಾರೆ ಎಂಬ ಆಕ್ಷೇಪವನ್ನು ಮಾಧ್ಯಮಗಳು ಮಾಡುತ್ತಲೇ ಇದ್ದವು.

'ಗೋಪಿಕೃಷ್ಣ' ರೀಮೇಕ್ ಚಿತ್ರ. ರವಿಚಂದ್ರನ್ ದ್ವಿಪಾತ್ರದಲ್ಲಿದ್ದರು. ಪೂರ್ಣಪ್ರಮಾಣದ ಹಾಸ್ಯವಿತ್ತು. ಮಾಗಡಿ ರಸ್ತೆಯ ಮಿತ್ರರೊಬ್ಬರ ದೊಡ್ಡ ಶೆಡ್‌ನಲ್ಲಿ ಸೆಟ್ ಹಾಕಿದ್ದರು. ರವಿಚಂದ್ರನ್ ಆ ಸ್ಥಳವನ್ನು ಶಾಶ್ವತವಾಗಿ ಸೆಟ್‌ಗಳಿಗೆ ಬಳಸುವ ವ್ಯವಸ್ಥೆ ಮಾಡಬೇಕೆಂದಿದ್ದರು. ವ್ಯವಹಾರ ಸರಿಯಾಗಲಿಲ್ಲ. ಯೋಜನೆ ನಿಂತುಹೋಯಿತು. 'ಗೋಪಿಕೃಷ್ಣ'ದಲ್ಲಿ ಗ್ಲಾಮರ್ ತಾರೆ ರೂಪಿಣಿ ಹಾಸ್ಯ ಪಾತ್ರದಲ್ಲಿ ಲವಲವಿಕೆಯಿಂದ ಅಭಿನಯಿಸಿದ್ದರು. ಚಿತ್ರದ ಸಂಭಾಷಣೆ ರವಿಚಂದ್ರನ್ ಬರೆದಿದ್ದರು. ವಿಶೇಷವೆಂದರೆ ಸಾಮಾನ್ಯವಾಗಿ ಚಿತ್ರಸಾಹಿತಿಗಳ ಸಾಹಿತ್ಯಿಕ ವಾಕ್ಯರಚನೆ, ಭಾವಾರ್ಥ, ಧ್ವನಿಗೆ ಒತ್ತು ಕೊಟ್ಟು ಹೆಚ್ಚು ಸಾಲುಗಳನ್ನು ಬರೆಯುವ ರೀತಿಯನ್ನು ಕೈಬಿಟ್ಟು, ಚಿತ್ರಿಕೆಯ ಉದ್ದಕ್ಕೆ ಬೇಕಾದಷ್ಟೇ ಸಾಲುಗಳನ್ನು ಬರೆದರು. ಇಂಥ ಪ್ರಯೋಗ ಹಿಂದೆ 'ಪಲ್ಲವಿ ಅನುಪಲ್ಲವಿ'ಯಲ್ಲಿ, ಹೊಸ ಅಲೆಯ ಕೆಲವು ಚಿತ್ರಗಳಲ್ಲಿ ಆಗಿದ್ದುಂಟು. ರವಿಚಂದ್ರನ್ ಶೈಲಿಯೇ ಚಿಕ್ಕ ಚಿಕ್ಕ ಚಿತ್ರಿಕೆಗಳನ್ನು ತೆಗೆವುದು, ವೇಗದಲ್ಲಿ ಚಲಿಸುವ ಸಂಕಲನ ಮಾಡುವುದು. ಹೀಗಾದಾಗ ಸಂಭಾಷಣೆಯನ್ನು ಅದಕ್ಕೆ ಹೊಂದಿಸಿದ್ದು ಒಂದು ಅರ್ಥದಲ್ಲಿ ವಿಶೇಷವೇ. ಆದರೆ ಅವರು ತಮ್ಮೆಲ್ಲ ಪ್ರಯೋಗಗಳನ್ನು ಅಷ್ಟೇನೂ ಜನಪ್ರಿಯವಾಗದ ಚಿತ್ರಗಳಲ್ಲಿ ಮಾಡಿದ್ದು, ಆ ಬಗ್ಗೆ ಹೇಳದೇ ಇದ್ದುದು ಮೊದಲಾದ ಕಾರಣಗಳಿಂದಾಗಿ ಎಷ್ಟೋ ಅಂಶಗಳು ಬೆಳಕಿಗೇ ಬರಲಿಲ್ಲ.

'ಆತ್ಮಬಂಧನ' ಶ್ರೀಕಾಂತ್ ನಹತಾ ನಿರ್ದೇಶಿಸಿದ ಚಿತ್ರ. ಜಯಪ್ರದಾ ಮುಖ್ಯಪಾತ್ರದಲ್ಲಿದ್ದರು. ಟೈ ರಾಜಗೋಪಾಲ್ ಚಿತ್ರದ ನಿರ್ಮಾಪಕರು. ಚಿತ್ರದ ಕಥೆಯಷ್ಟೇ ವಿಶೇಷ. ಮೊದಲ ಹೆಂಡತಿಯ ಪ್ರೇತ ಗೊಂಬೆಯೊಂದರಲ್ಲಿ ಸೇರಿಕೊಂಡು ತನ್ನನ್ನು ಕಾಡಿದವರ ಮೇಲೆ ಸೇಡು ತೀರಿಸಿಕೊಳ್ಳುತ್ತದೆ. ನಹತಾ ಅವರಿಗೆ ಮಾಧ್ಯಮದ ಮೇಲೆ ಹಿಡಿತವಿತ್ತು. ಚಿತ್ರದ ಓಟ ಚೆನ್ನಾಗಿತ್ತು. ಆದರೆ ಪೊಳ್ಳಾದ ಕಥೆಯಿಂದಾಗಿ ಚಿತ್ರ ಗಮನ ಸೆಳೆಯಲಿಲ್ಲ. ಅರ್ಥಿಕವಾಗಿಯೂ ನಿರ್ಮಾಪಕರಿಗೆ ನಷ್ಟ ತಂದಿತು. 'ಹಳ್ಳಿ ಕೃಷ್ಣ ಡೆಲ್ಲಿ ರಾಧಾ' ತಮಿಳು ಮೂಲದ ಚಿತ್ರವೊಂದರ ಸ್ಫೂರ್ತಿ. ಆಂಧ್ರದ ನಿರ್ಮಾಪಕರು, ನಿರ್ದೇಶಕರು ಚಿತ್ರಕ್ಕೆ ದುಡಿದರು. ಮಾಲಾಶ್ರೀ-ಸುನೀಲ್ ಜೋಡಿಯ ಜನಪ್ರಿಯತೆಯಷ್ಟೇ ಆಧಾರ. ಪ್ರಾರಂಭದಲ್ಲಿ 'ಡೆಲ್ಲಿ ರಾಧಾ' ಎಂದಷ್ಟೇ ಇದ್ದ ಹೆಸರಿಗೆ ಅನಂತರ 'ಹಳ್ಳಿ ಕೃಷ್ಣ' ಸೇರ್ಪಡೆಯಾಯಿತು.

'ಮನಗೆದ್ದ ಮಗ' ಚಿತ್ರದಲ್ಲಿ ಕಲ್ಯಾಣ್‌ಕುಮಾರ್, ಮಂಜುಳಾ ಅಭಿನಯಿಸಿದರು. ದಿನೇಶ್ ಅವರೂ ವಿಶೇಷ ಪಾತ್ರದಲ್ಲಿದ್ದರು. ಚಿತ್ರದ ಬಗ್ಗೆ ವಿಶೇಷವೇನೂ ಇಲ್ಲ. ಆದರೆ

ಆದರ್ಶ್ ಫಿಲಂ ಇನ್‌ಸ್ಟಿಟ್ಯೂಟ್‌ನ ತರುಣ ವಿದ್ಯಾರ್ಥಿ ರಾಜ್ ಕುಪ್ಪೆಲೂರ್ ನಿರ್ದೇಶಿಸಿದ ಮೊದಲ ಚಿತ್ರ ಎಂಬುದಕ್ಕೆ ಇದು ಗಮನ ಕೊಡಬೇಕಾದ ಚಿತ್ರ. ಚಿತ್ರ ಪ್ರಾರಂಭವಾದ ಮೇಲ ಸುಮಾರು ಆರು ವರ್ಷಗಳೇ ಕಳೆದರೂ ಪೂರ್ತಿಯಾಗಲಿಲ್ಲ. ಬಿಡುಗಡೆಯೂ ಆಗಲಿಲ್ಲ. ಆಸಕ್ತಿಯೇ ಕಳೆದುಹೋಗಿತ್ತು. ಹೊಸ ಪ್ರತಿಭೆಗ ಅವಕಾಶ, ಪ್ರೋತ್ಸಾಹ ಕೊಡುವ ಸಲುವಾಗಿಯೇ ಕಲ್ಯಾಣ್‌ಕುಮಾರ್, ಮಂಜುಳಾ, ದಿನೇಶ್‌ರಂಥ ಹೆಸರಾಂತ ಕಲಾವಿದರು ಸಹಕರಿಸಿದ್ದರು. ಆದರೆ ಉದ್ಯಮದಲ್ಲಿ ವ್ಯಾವಹಾರಿಕ ಅಂಶಗಳಿಗ ಇದು ಯಾವುದೂ ಮುಖ್ಯವಾಗುವುದಿಲ್ಲ. ಹೀಗಾದಾಗಲೇ ಬೆಟ್ಟದಷ್ಟು ಆಸೆಯಿಂದ ಕಲಿಯಲು ಬಂದು, ಕಲಿತು, ಮುಂದೆ ಅವಕಾಶಗಳೇ ಇಲ್ಲದ ಸೊರಗಿದವರು, ಅವಕಾಶ ಸಿಕ್ಕರೂ ಪ್ರತಿಭೆಯನ್ನು ಸರಿಯಾಗಿ ದುಡಿಸಿಕೊಳ್ಳಲಾರದೆ ರಾಜಿ, ದೈನ್ಯಗಳಿಂದ ಕುಗ್ಗಿಹೋದ ಅನೇಕರನ್ನು ಕಂಡೆವು.

ಇಂಥದೇ ಪ್ರಯತ್ನ ಗುರುರಾಜ ಹೊಸಕೋಟೆ ನಿರ್ದೇಶನದ 'ಅಲ್ಲೇ ಇರೋದು ನೋಡಿ' ಚಿತ್ರದ್ದು. ಗುರುರಾಜ ಹೊಸಕೋಟೆ ಅವರಿಗೆ ಅವರದೇ ಮಾತುಗಾರಿಕೆಯ ಶೈಲಿಯುಂಟು; ಗಾಯನದ ಗಮ್ಮತ್ತುಂಟು. ಆ ಜನಪ್ರಿಯತೆಯೇ ಚಿತ್ರ ಮಾಧ್ಯಮದಲ್ಲೂ ನೆರವಿಗೆ ಬರುತ್ತದೆಂಬ ಎಣಿಕೆ ತಪ್ಪಾಯಿತು. ಮತ್ತೆಂದೂ ಇಂಥ ಸಾಹಸ ಮಾಡಲಾರೆನೆಂದು ಸ್ವಕ್ಷೇತ್ರಕ್ಕೆ ತೆರಳಿದರು.



(ಚಿತ್ರ ೩೧) 'ಮಣ್ಣಿನ ದೋಣಿ' ಚಿತ್ರದಲ್ಲಿ ಸುಧಾರಾಣಿ, ಅಂಬರೀಷ್

ಸ್ಫೂರ್ತಿ. ಹಿಂದಿಯಲ್ಲಿ ಕಮಲಹಾಸನ್ ಮತ್ತು ರಿಷಿಕಪೂರ್ ಮಾಡಿದ್ದ ಪಾತ್ರಗಳನ್ನು ಅರ್ಜುನ್ ಸರ್ಜಾ ಮತ್ತು ಸುನೀಲ್ ನಿರ್ವಹಿಸಿದರು. ನಾಯಕಿ ಮಾಲಾಶ್ರೀ. ಹಿಂದಿ ಚಿತ್ರದ ಹೋಲಿಕೆ ಮಾಡುವವರಿಗೆ ಅದರ ಶ್ರೀಮಂತಿಕೆ, ಅಭಿನಯದ ಸೊಗಡು ಇಲ್ಲಿ ಕಾಣಲಿಲ್ಲ. ಸುಮ್ಮನೆ ನೋಡಿದವರಿಗೆ ಏನೂ ಹೊಸತು ಸಿಗಲಿಲ್ಲ.

ರವಿಚಂದ್ರನ್-ಗೌತಮಿ ಅಭಿನಯಿಸಿದ 'ಚಿಕ್ಕೆಜಮಾನ್ರು' ತಮಿಳು ಚಿತ್ರದ ಅವತರಣಿಕೆ. ಚಿತ್ರದ ಹಲವು ಭಾಗಗಳಲ್ಲಿ ಖುಷಿ ಕೊಡುವ ಶ್ರೀಮಂತ ಚಿತ್ರಿಕೆಗಳು ಇದ್ದವು. ರವಿಚಂದ್ರನ್ ಅಭಿನಯದ ಯಾವುದೇ ಚಿತ್ರದಲ್ಲಿಯೂ ಈ ವೈಭವ-ಶ್ರೀಮಂತಿಕೆಯ ಅನುಭವ ಇದ್ದೇ ಇರುತ್ತದೆ. ಆದರೆ ಈ ಚಿತ್ರದಲ್ಲಿ ಆಚಾರ-ವಿಚಾರ, ಉಡುಗೆ, ವಾತಾವರಣ ಎಲ್ಲವೂ ತಮಿಳುಮಯವಾಗಿತ್ತು. ಕನ್ನಡದ ಜಾಯಮಾನವನ್ನು ಹುಡುಕಬೇಕಾಯಿತು. ಇಲ್ಲಿಂದಾಚೆಗೆ ರವಿಚಂದ್ರನ್ ಚಿತ್ರಗಳಲ್ಲಿ ಶ್ರೀಮಂತಿಕೆಯೊಂದೇ ಮುಖ್ಯವೇ ವಿನಾ ಪ್ರಾದೇಶಿಕತೆ ಅಲ್ಲ ಅನ್ನುವ ಸ್ಥಿತಿ ಬಂತು.

ರೇಣುಕಾ ಶರ್ಮ ಬಹಳ ದಿನದ ಮೇಲೆ ರಾಘವೇಂದ್ರ ರಾಜಕುಮಾರ್ ಅಭಿನಯದ ಚಿತ್ರ ನಿರ್ದೇಶಿಸಿದರು. ಅದು 'ಭರ್ಜರಿ ಗಂಡು'. ಚಿತ್ರದ ನಾಯಕಿ ರೂಪಶ್ರೀ. ಪ್ರಯತ್ನವೇನೋ ಗಟ್ಟಿಯಾದ್ದೇ. ಆದರೂ ಚಿತ್ರಕಥೆಯೇ ಸಡಿಲ. ಅಲ್ಲಲ್ಲಿ ಕಂಡ ಪ್ರತಿಭೆಯ ಸೆಳಕುಗಳು ಸಾಕಾಗಲಿಲ್ಲ. ಚಿತ್ರ ವೈಫಲ್ಯದ ಪಟ್ಟಿಗೆ ಸೇರಿಹೋಯಿತು.

ಜಗ್ಗೇಶ್ ಅಭಿನಯದ ಮೂರನೆಯ ಚಿತ್ರ 'ಸೂಪರ್ ನನ್ಮಗ'. ಜಗ್ಗೇಶ್ ನೆರವಿನಿಂದ ಅವರ ಸಂಬಂಧಿಗಳ ಹೆಸರಿನಲ್ಲಿ ನಿರ್ಮಾಣವಾಯಿತು. ಮುದ್ದುರಾಜ್ ನಿರ್ದೇಶಿಸಿದರು. ಜಗ್ಗೇಶ್ ಪ್ರಾರಂಭದ ದಿನಗಳಲ್ಲಿ ಇಂಥ ತೆರೆದೆದೆಯ ಸಾಹಸಗಳನ್ನು ಮಾಡಿಯೇ ಸ್ಥಾನ ಭದ್ರ ಮಾಡಿಕೊಂಡರು. ನಿರ್ದೇಶಕರ ಆಯ್ಕೆಯಲ್ಲಿ ಜಾಣತನ ತೋರಿದರು. ತಮ್ಮ ಮಾತನ್ನು ಆಲಿಸುವ ಜನರನ್ನೇ ಬೆನ್ನಿಗಿಟ್ಟುಕೊಂಡರು. ತಮ್ಮದೇ ಮಾತು, ಹಾಸ್ಯ, ಮ್ಯಾನರಿಸಮನ್ನೇ ಬಂಡವಾಳ ಮಾಡಿಕೊಂಡರು. ಅವರ ಲೆಕ್ಕಾಚಾರ ಸರಿಯಾಗಿತ್ತು. ಚಿತ್ರಗಳು ಯಶಸ್ವಿ ಆದವು. ಆದರೆ ಜಗ್ಗೇಶ್ ಅವರು ಚಿತ್ರಗಳಿಗೆ ಕೊಡುತ್ತಿದ್ದ ಹೆಸರುಗಳು, ಅವರ ಮಾತಿನಲ್ಲಿ, ಆಂಗಿಕಾಭಿನಯದಲ್ಲಿ ಕಾಣುತ್ತಿದ್ದ ದ್ವಂದ್ವಾರ್ಥ ಇತ್ಯಾದಿಗಳಿಂದಾಗಿ ಒಂದು ವರ್ಗದ ಪ್ರೇಕ್ಷಕ, ವಿಮರ್ಶಕರು ಕೂಡಾ ಕೊಂಚ ಸರಿದು ನಿಂತರು. ಅವರೆ ಇಂಥ ಹಾದಿಯಲ್ಲದ ಹೋಗಿದರ ಜಗ್ಗೇಶ್ ಅಂಥ ಕಲಾವಿದರು ಮುಂಚೂಣಿಗ ಬರಲು ಬಹಳಷ್ಟು ವರ್ಷಗಳೇ ಕಾಯಬೇಕಾಗುತ್ತಿತ್ತೇನೋ. ಅನೇಕ ಆಕ್ಷೇಪಗಳು, ವ್ಯಂಗ್ಯ-ವಿಡಂಬನೆಗಳ ನಡುವೆಯೂ ವಿಚಿತ್ರ ಪ್ರಚಾರ, ಹೇಳಿಕೆಗಳು ಏನೆಲ್ಲ ಕಸರತ್ತು ಮಾಡುತ್ತಲೇ ತನ್ನ ಸ್ಥಾನವನ್ನು ಭದ್ರ ಮಾಡಿಕೊಂಡು ಕನ್ನಡ ಚಿತ್ರರಂಗದಲ್ಲಿ ತನ್ನದೇ ಒಂದು ಶೈಲಿ-ವೈಶಿಷ್ಟ್ಯವನ್ನು ತೋರಿಸಿದರು ಜಗ್ಗೇಶ್.

ರಾಕ್‌ಲೈನ್ ವೆಂಕಟೇಶ್, ಜೆ.ಜಿ.ಕೃಷ್ಣ, ಸಾಹಸ ಕಲಾವಿದ ಗೋವಿಂದು ಮೂವರೂ ಸೇರಿ ಜಿ.ವಿ.ಕೆ.ಪ್ರೊಡಕ್ಷನ್ಸ್ ಲಾಂಛನ ಮಾಡಿಕೊಂಡರು. ಜೋ ಸೈಮನ್ ನಿರ್ದೇಶನದಲ್ಲಿ 'ಸ್ನೇಹದ ಕಡಲಲ್ಲಿ' ಚಿತ್ರ ನಿರ್ಮಿಸಿದರು. ಹಿಂದಿಯ 'ಸಾಗರ್' ಚಿತ್ರದ

ಸಂದೇಶ್ ನಾಗರಾಜ್ ಉತ್ಸಾಹದಿಂದ ನಿರ್ಮಿಸಿದ ಚಿತ್ರ 'ಮಣ್ಣಿನ ದೋಣಿ'. ಎಂ.ಎಸ್.ರಾಜಶೇಖರ್ ನಿರ್ದೇಶನದಲ್ಲಿ ಚೆನ್ನಾಗಿ ಮೂಡಿಬಂದಿತ್ತು. ರಾಜಕುಮಾರ್ ಹಾಡಿದ್ದ 'ಮೇಘ ಬಂತು ಮೇಘ...' ಜನಪ್ರಿಯವಾಯಿತು. ಆ ಗೀತೆ, ಹಾಡಿದ ರೀತಿ, ಪದೇ ಪದೇ 'ಮುತ್ತಿನಹಾರ' ಚಿತ್ರದ ಬಾಲಮುರಳಿಕೃಷ್ಣ ಗಾಯನದ 'ಮೇಘವೋ...' ಗೀತೆಯನ್ನು ನೆನಪಿಸಿದ್ದೂ ಹೌದು.

'ಮರಣ ಮೃದಂಗ' ಚಿತ್ರವನ್ನು ಚಿದಂಬರಶೆಟ್ಟಿಗಾಗಿ ಬಿ.ರಾಮಮೂರ್ತಿ ನಿರ್ದೇಶಿಸಿದರು. ರಾಜಕೀಯ ವಿಚಾರ ಒಳಗೊಂಡ ಚಿತ್ರವಿದು. ಮಾಜಿ ಮುಖ್ಯಮಂತ್ರಿ



(ಚಿತ್ರ ೩೨) 'ಮರಣ ಮೃದಂಗ' ಚಿತ್ರದಲ್ಲಿ ಸದಾಶಿವ ಸಾಲಿಯಾನ, ನಾಗೇಶ್ ಕಶ್ಯಪ್, ರಾಮಕೃಷ್ಣ ಹೆಗಡೆ ಮತ್ತು ಸುಂದರರಾಜ್

ರಾಮಕೃಷ್ಣ ಹೆಗಡೆ ಅಭಿನಯಿಸಿದ ಚಿತ್ರ. ಅವರ ಸಲುವಾಗಿ ಅನಂತ್‌ನಾಗ್ ಕೂಡಾ ಅಭಿನಯಿಸಿದರು. ರಾಮಕೃಷ್ಣ ಹೆಗಡೆಯವರೊಂದಿಗೆ ಅಭಿನಯ ಎಂದಾಗ ಕರೆದ ಯಾವ ಕಲಾವಿದರೂ 'ಒಲ್ಲೆ' ಎನ್ನಲಿಲ್ಲ. ಹಾಗೆ ಮಾಲಾಶ್ರೀ ಮೊದಲ್ಗೊಂಡು ಭಾರಿ ತಾರೆಯರ ದಂಡು ಚಿತ್ರದಲ್ಲಿತ್ತು. ಮುನ್ಸೂಚನೆಯೋ ಎಂಬಂತೆ ಒಂದು ನವ ನಿರ್ಮಾಣ ವೇದಿಕೆಯಂಥದನ್ನು ಚಿತ್ರದಲ್ಲಿ ರಚಿಸುತ್ತಾರೆ. ಬಹಳಷ್ಟು ವಿಚಾರಗಳನ್ನು ಹೆಗಡೆ ಅವರೊಂದಿಗೆ ಚರ್ಚಿಸಿಯೇ ಚಿತ್ರಿಕೆಗಳನ್ನು ತೆಗೆಯುತ್ತಿದ್ದರು. ಹೆಗಡೆಯವರ ಮನೆಯಲ್ಲೂ ಚಿತ್ರೀಕರಣವಾಗುತ್ತಿತ್ತು. ಚಿತ್ರದ ಕ್ಲೈಮ್ಯಾಕ್ಸ್ ವಿಧಾನಸೌಧದ ಎದುರಿಗೆ ಚಿತ್ರಿತವಾಯಿತು. ಭಾರಿ ಜನಸ್ತೋಮದ ನಡುವೆ ನಿಂತಿದ್ದ 'ಮುಖ್ಯಮಂತ್ರಿ'ಯನ್ನು ಅವರ ಹತ್ತಿರದ ಬಂಟನೇ ಅವಮಾನುಷವಾಗಿ ಮಚ್ಚಿನಲ್ಲಿ ಕೊಚ್ಚಿಹಾಕುವ ಘಟನೆ... ಭೀಭತ್ಸ ಎನ್ನಿಸಿತ್ತು. ಈ ಪ್ರಮಾಣದ ರೂಕ್ಷ ರಾಜಕೀಯ ಚಿತ್ರಣಗಳಿಗೆ ತಾವು ಒಪ್ಪಿಗೆ ಕೊಡಬಾರದಿತ್ತೆಂದು ಹೆಗಡೆ ಅವರಿಗೆ ತಡವಾಗಿ ಮನವರಿಕೆ ಆಯಿತು. ಚಲನಚಿತ್ರದಲ್ಲಿ ಅಭಿನಯಿಸುವ ಮೂಲಕ ಜನತೆಗೆ ಹೇಳಬೇಕಾದ ಕೆಲವು ಅಂಶಗಳನ್ನು ಹೇಳುವ ಸಾಧ್ಯತೆ, ಜನಪ್ರಿಯತೆಯಿಂದ ಅವರ ರಾಜಕಾರಣಕ್ಕೂ ನೆರವು ಸಿಗಬಹುದೆಂಬ ದೂರಾಲೋಚನೆಯೂ ಅವರಿಗಿತ್ತು. ಆದರೆ ಫಲಿಸಲಿಲ್ಲ.



(ಚಿತ್ರ ೩೩) 'ಚೈತ್ರದ ಪ್ರೇಮಾಂಜಲಿ' ಚಿತ್ರದಲ್ಲಿ ಶ್ವೇತಾ, ರಘುವೀರ್

ಮತ್ತೆ ಜಗ್ಗೇಶ್ ಬಿ.ರಾಮಮೂರ್ತಿ ನಿರ್ದೇಶನದಲ್ಲಿ 'ಅಲ್ಲಿ ರಾಮಾಚಾರಿ ಇಲ್ಲಿ ಬ್ರಹ್ಮಚಾರಿ' ಮಾಡಿದರು. ಈ ಬಾರಿ ಒಂದು ಹೆಜ್ಜೆ ಮುಂದೆ ಹೋಗಿ ದ್ವಿಪಾತ್ರದಲ್ಲಿ ಅಭಿನಯಿಸಿದರು. ಒಂದು ಪಾತ್ರ ಹಳ್ಳಿಯವನು, ಮತ್ತೊಂದು ಪಟ್ಟಣದ ತರುಣನದ್ದು. ಅವರದೇ ಎಂದಿನ ಶೈಲಿ, ದ್ವಿಪಾತ್ರದ ಪ್ರಯೋಗವೊಂದೇ ವಿಶೇಷ. 'ಮಲ್ಲಿಗೆ ಹೂವೇ' ಹೆಸರೆಷ್ಟು ಚಂದ. ಆದರೆ ಚಿತ್ರಕ್ಕೆ ಮೂಲ ತಮಿಳಿನ 'ಸಿಂಧೂರ ಪೂವೇ'. ರಾಜ್‌ಕಿಶೋರ್ ನಿರ್ದೇಶನದಲ್ಲಿ ಬಂತು. ಸಾಕಷ್ಟು ಅನುಭವವಿದೆ, ಎದುರಿಗೆ ಯಶಸ್ವಿಯಾದ ಚಿತ್ರವಿದೆ, ಅಂಬರೀಷ್, ಶಶಿಕುಮಾರ್, ರೂಪಿಣಿ, ಪ್ರಿಯಾಂಕರಂಥ ಕಲಾವಿದರಿದ್ದಾರೆ. ಆದರೂ ರಾಜ್‌ಕಿಶೋರ್‌ಗೆ ಕಥಾನಿರೂಪಣೆಯಲ್ಲಿ ಉತ್ಸಾಹವೇ ಇಲ್ಲವಾಯಿತು. ಮರುಕಳಿಸುವ ಚಿತ್ರಿಕೆಗಳು, ಆಕಳಿಸುವ ದೀರ್ಘವೆನಿಸುವ ಪರಿಳಿತಗಳಿಲ್ಲದ ಮಾತು ಹೇಳಿಸುವಿಕೆ ತುಂಬಿಹೋಗಿದ್ದವು. ಚಿತ್ರವನ್ನು ಉಳಿಸಿದ್ದು ಆರೇಳು ಹಾಡುಗಳು. ಎಲ್ಲವೂ ಸೊಗಸಾಗಿದ್ದವು; ಜನಪ್ರಿಯವೂ ಆದವು. ಸೊಗಸಾದ ರಾಗಸಂಯೋಜನೆಯಿತ್ತು. ಚುಂಚನಕಟ್ಟೆ ಜಾತ್ರೆ, ಸುವ್ವಾಲೇ ಸುವ್ವಾಲೇ ಮೊದಲಾದ ಗೀತೆಗಳಿಗೆ ಜನಪದ ಧಾಟಿಯ ಸೊಗಡೂ ಸೇರಿ ಬಲು ಮೆಚ್ಚಾದವು.

'ಶ್ರೀರಾಮಚಂದ್ರ' ರವಿಚಂದ್ರನ್ ಅಭಿನಯದ ಡಿ.ರಾಜೇಂದ್ರಬಾಬು ನಿರ್ದೇಶಿಸಿದ ಚಿತ್ರ. ತಮಿಳಿನ 'ಕಲ್ಯಾಣ ರಾಮನ್' ಚಿತ್ರದ ಸ್ಫೂರ್ತಿ. ರವಿಚಂದ್ರನ್ ಮೊದಲಿಂದಲೂ ಇಮೇಜನ್ನು ಮೀರಿ ವಿಭಿನ್ನ ಗೆಟಪ್‌ನಲ್ಲಿ ಕಾಣಿಸಿಕೊಳ್ಳಲು ಇಷ್ಟಪಡುವಂಥವರು. ಅವರು ಈ ಚಿತ್ರವನ್ನು ಆಯ್ದದ್ದೂ ಅಂಥ ಕಾರಣಕ್ಕಾಗಿಯೇ. ಒಂದು ಪಾತ್ರ ಚೆಲುವಿನದ್ದು, ಇನ್ನೊಂದು ಪಾತ್ರ ಹಲ್ಲುಬ್ಬು ಮೊದಲ್ಗೊಂಡು ತೀರಾ ಬೇರ ರೀತಿಯ ಗೆಟಪ್ ಇರುವಂಥದು. ಕೆಲವು ಟ್ರಿಕ್ಸನ್ನೂ ಬಳಸುವಂಥ ಚಿತ್ರಿಕೆಗಳಿಗೆ ಸಿಗುವಂತೆ ಒಂದು ಪಾತ್ರ 'ಪ್ರೇತ'ದ ಹಾಗೆ ಆಗಾಗ ಕಾಣಿಸಿಕೊಂಡು ತನ್ನ ಹಾಗೇ ಇರುವ ಇನ್ನೊಂದು ಪಾತ್ರಕ್ಕೆ ಪ್ರೇರಣೆ-ಧೈರ್ಯ ತುಂಬುತ್ತದೆ. ಏನು ಮಾಡಬೇಕೆಂಬ ನಿರ್ದೇಶನವನ್ನೂ ಕೊಡುತ್ತದೆ. ಚಿತ್ರ ಹಾಸ್ಯ, ಸಾಹಸ ಎಲ್ಲವನ್ನೂ ಹೊಂದಿತ್ತು. ರವಿಚಂದ್ರನ್ ಅಭಿನಯವೇ ವಿಶೇಷ. ಶ್ರೀರಾಮ-ಚಂದ್ರ ಎರಡು ಪಾತ್ರಗಳು. ಹಲ್ಲುಬ್ಬಿನ ಪಾತ್ರಕ್ಕೆ ತಕ್ಕಂತೆ ಎಸ್.ಪಿ.ಬಾಲಸುಬ್ರಹ್ಮಣ್ಯಂ ವಿಶೇಷವಾಗಿ ಹಾಡಿದ್ದ ಗೀತೆಗಳಿದ್ದವು. ಹಂಸಲೇಖ ಸಂಗೀತದಲ್ಲಿ 'ಸುಂದರಿ ಸುಂದರಿ ಸುರ ಸುಂದರಿ ಸುಂದರಿ...', 'ಗಗನದಲ್ಲಿ ಮಳೆಯ....' ಹಾಗೂ 'ಭೂತವಿಲ್ಲ ಪಿಶಾಚಿಯಿಲ್ಲ.....' ಹಾಡುಗಳು ಜನಪ್ರಿಯವಾದವು ಹಾಗೂ ಇಂಪಾಗಿದ್ದವು. ರವಿಚಂದ್ರನ್ ಅವರು 'ಭೂತ'ವನ್ನು ತಮ್ಮ ಚಿತ್ರದಲ್ಲಿ ತಂದಿದ್ದರೂ ಅದರ ಕ್ರೂರತೆ, ಭಯಾನಕತೆ ಒಂದನ್ನೂ ತರದೆ ಸ್ನೇಹಪೂರ್ವಕ ಭೂತವನ್ನಾಗಿ ತಮಗೆ ಕೇವಲ ಸುಂದರವಾದದ್ದನ್ನು ಮಾತ್ರ ಕಲ್ಪಿಸಲು ಸಾಧ್ಯ ಎಂಬುದನ್ನು ತೋರಿಸಿದ್ದರು. 'ಭೂತವಿಲ್ಲ....' ಹಾಡಿನಲ್ಲಿ ಹಾಗೂ ಭೂತ ಬರುವೆಡೆಯಲ್ಲಿನ ದೃಶ್ಯಗಳ ಟ್ರಿಕ್ ಶಾಟ್ಸ್ ಚೆನ್ನಾಗಿದ್ದವು.

ಹೊಸತನವಿದ್ದ ಇನ್ನೊಂದು ಚಿತ್ರ 'ಚೈತ್ರದ ಪ್ರೇಮಾಂಜಲಿ'. ಈ ಚಿತ್ರದ ಮೂಲಕ ನಿರ್ದೇಶಕನಾಗಿ ಎಸ್.ನಾರಾಯಣ್, ಯುವ ಖಳನಾಗಿ ಶೋಭರಾಜ್ ಬಳಕೆಗೆ ಬಂದರು. ಸಾಧಾರಣ ಪ್ರೇಮಕಥೆ, ಉತ್ತಮ ಹಾಡುಗಳು, ವಿಭಿನ್ನವಾದ ನಿರೂಪಣೆಯಿಂದಾಗಿ ಯಶಸ್ವಿ ಚಿತ್ರವೆನಿಸಿಕೊಂಡು ಬೆಂಗಳೂರಿನ ಅಪರ್ಣ ಚಿತ್ರಮಂದಿರದಲ್ಲಿ ೨೫ ವಾರಗಳ ಪ್ರದರ್ಶನ ಕಂಡಿತು. ಐದು ವರ್ಷಗಳ ಅಂತರದಲ್ಲಿ ಬಿರುಸಿನಿಂದ ಬೆಳವಣಿಗೆ ಕಂಡ ಹಂಸಲೇಖ ಈ ಚಿತ್ರವನ್ನು ಅವರ ಸಂಗೀತ ನಿರ್ದೇಶನದ ೭೫ನೆಯ ಚಿತ್ರವೆಂದು ಘೋಷಿಸಿಕೊಂಡರು. ಆದರೆ ಚಿತ್ರಗಳ ಬಿಡುಗಡೆಯ ಅನುಕ್ರಮದಲ್ಲಿ 'ಚೈತ್ರದ ಪ್ರೇಮಾಂಜಲಿ' ೭೬ನೆಯ ಚಿತ್ರವಾಗಿ, 'ಹಳ್ಳಿಮೇಷ್ಟ್ರು' ೭೫ನೆಯದಾಗುತ್ತದೆ. ಆದರೆ ಹಾಡುಗಳ ಮಹತ್ವ ಹಾಗೂ ಅನುಕೂಲದ ದೃಷ್ಟಿಯಿಂದ ಹಂಸಲೇಖ ತಮ್ಮ ೭೬ನೆಯ ಚಿತ್ರವನ್ನೇ ೭೫ನೆಯದೆಂದು ಗುರುತಿಸಿಕೊಂಡರು. ಈ ಚಿತ್ರದಲ್ಲಿ ಹಂಸಲೇಖ ಹಾಡುಗಳಲ್ಲಷ್ಟೇ ಅಲ್ಲದೆ ಹಿನ್ನೆಲೆ ಸಂಗೀತದಲ್ಲೂ ವಿಶೇಷ ಪ್ರತಿಭೆ ಮೆರೆದಿದ್ದಾರೆ. ದುರಂತ ಅಂತ್ಯದ 'ಧ್ವನಿ'ಯನ್ನು ಚಿತ್ರದ ಆರಂಭದಿಂದಲೇ 'ಥೀಮ್' ಆಗಿ ಬಳಸಿದ್ದಾರೆ. ದಟ್ಟ ಹಸಿರಿನ ಸುಂದರ ಪರಿಸರಕ್ಕೆ ಹೊಂದುವಂಥ ಕೋಗಿಲೆಯ ಧ್ವನಿಯನ್ನು ದೃಶ್ಯದಲ್ಲಿನ ಪಾತ್ರಗಳ ಭಾವಕ್ಕೆ ಅನುಗುಣವಾಗಿ ಹೊಂದಿಸಿರುವುದು ವಿಶೇಷ ಪರಿಣಾಮ ಉಂಟುಮಾಡುತ್ತದೆ. ಈ ದೃಷ್ಟಿಯಿಂದ ಇದು 'ಪ್ರೇಮಲೋಕ' ನಂತರದ ಹಂಸಲೇಖ ಅವರ ಅತ್ಯುತ್ತಮ ಸಂಗೀತ ನಿರ್ದೇಶನದ ಚಿತ್ರವಾಗಿದೆ. ಗೀತೆಗಳ ಚಿತ್ರೀಕರಣ ಸೊಗಸಾಗಿತ್ತು. ಪುಟ್ಟಣ್ಣನವರ ಕಿತ್ತಳೆಯ ಸೂರೆಯ ಮುಂದುವರಿದ ಪರಂಪರೆಯೋ ಎಂಬಂತೆ ನಾರಾಯಣ್ ವರ್ಣಮಯ ಪುಷ್ಪವೃಷ್ಟಿಯನ್ನೇ ಕರೆದಿದ್ದಾರೆ. ಅಂಥ ಚಿತ್ರಿಕೆಗಳು ಶ್ರೀಮಂತವಾಗೂ ಇವೆ. ಈ ಚಿತ್ರದ ನಾಯಕ, ನಿರ್ಮಾಪಕ ರಘುವೀರ್ ಈ ಮೊದಲೇ ಮುರುಳಿ ಅವರೊಂದಿಗೆ 'ಅಜಯ್ ವಿಜಯ್' ಚಿತ್ರದಲ್ಲಿ ನಟಿಸಿದ್ದರಾದರೂ ಯಶಸ್ಸು ಕಂಡದ್ದು ಈ ಎರಡನೆಯ ಚಿತ್ರದಿಂದಲೇ. ಈ ಚಿತ್ರದ ಮೂಲಕ ರಘುವೀರ್ ಹಾಗೂ 'ತರ್ಲೆ ನನ್ಮಗ'ದಿಂದ ಜಗ್ಗೇಶ್ ೧೯೯೨ ರಲ್ಲಿ ನಾಯಕನಟರಾಗಿ ಬೆಳವಣಿಗೆ ಕಂಡರು. 'ತರ್ಲೆ ನನ್ಮಗ'ದಿಂದ ಉಪೇಂದ್ರ ನಿರ್ದೇಶಕರಾದರೆ, ವಿ.ಮನೋಹರ್ ಸಂಗೀತ ನಿರ್ದೇಶಕರಾದರು.

'ಚೈತ್ರದ ಪ್ರೇಮಾಂಜಲಿ' ಬಹುತೇಕ ಹೊಸಬರ ಪ್ರಾಮಾಣಿಕ ಹಾಗೂ ಶಿಸ್ತಿನ ಪ್ರಯತ್ನವಾಗಿತ್ತು. ಈ ಚಿತ್ರದ ಮೂಲಕ ಸ್ವತಂತ್ರ ಛಾಯಾಗ್ರಾಹಕರಾಗಿ ವೃತ್ತಿ ಆರಂಭಿಸಿದ ಪಿ.ಕೆ.ಹೆಚ್.ದಾಸ್ ಪ್ರತಿ ದೃಶ್ಯವನ್ನೂ ರಮ್ಯವಾಗಿ ಸೆರೆ ಹಿಡಿದಿದ್ದರು. ಮಾಧುರ್ಯ ತುಂಬಿದ ಹಾಡುಗಳು ಕ್ಯಾಸೆಟ್ ಪ್ರಪಂಚದಲ್ಲೂ ದಾಖಲೆ ನಿರ್ಮಿಸಿದವು. ಎಷ್ಟೋ ಹಾಡುಗಳು ಜನಪ್ರಿಯವಾಗಿದ್ದರೂ 'ಚೈತ್ರದ ಪ್ರೇಮಾಂಜಲಿಯ ಸುಮಾ ಘಮಾ...', 'ಓ ಮಲೆನಾಡಿನ ಮೈ ಸಿರಿಯೇ...', 'ನನ್ನವರೇ ಕೊನೆಗೆ ಮುಳ್ಳಾದರೆನಗೇ.....' ಬಹಳ ಕಾಲ ನೆನಪಿನಲ್ಲಿ ಉಳಿಯುವಂತಿದ್ದವು. ಎಸ್.ನಾರಾಯಣ್ ಅವರು ಭಾರ್ಗವ, ರಾಜ್‌ಕಿಶೋರ್ ಮುಂತಾದ ನಿರ್ದೇಶಕರೊಂದಿಗೆ ಸಹನಿರ್ದೇಶಕರಾಗಿ ದುಡಿದು ಚಿತ್ರನಿರ್ಮಾಣದ ವಿವಿಧ ವಿಭಾಗಗಳಲ್ಲಿ ಅನುಭವ ಗಳಿಸಿಕೊಂಡಿದ್ದರು. ಸ್ವತಃ ಬರಹಗಾರರಾಗಿದ್ದುದರಿಂದ ಕಥೆ, ಸಂಭಾಷಣೆ, ಚಿತ್ರಕಥೆ, ಗೀತರಚನೆಗಳೊಂದಿಗೆ ನಿರ್ದೇಶನವನ್ನು ನಿಭಾಯಿಸುತ್ತಾ ಈ

ದಶಕದ ಕನ್ನಡದ ಮುಖ್ಯ ಯುವನಿರ್ದೇಶಕರಾಗಿ ಬೆಳೆಯುವುದು ಇವರಿಗೆ ಸಾಧ್ಯವಾಯಿತು.

'ಚೈತ್ರದ ಪ್ರೇಮಾಂಜಲಿ' ನಂತರ ಎಸ್.ನಾರಾಯಣ್ 'ಅನುರಾಗದ ಅಲೆಗಳು', 'ಕ್ಯಾಪ್ಟನ್', 'ಮೇಘಮಾಲೆ' ಮುಂತಾದ ಚಿತ್ರಗಳನ್ನು ನಿರ್ದೇಶಿಸಿದರಾದರೂ ಇವಾವುವೂ ಯಶಸ್ಸು ಗಳಿಸಲಿಲ್ಲ. ಆದರೆ ನಾಲ್ಕು ಚಿತ್ರಗಳ ಸತತ ಸೋಲು ಕೂಡಾ ಚಿತ್ರ ಮಾಧ್ಯಮದ ಮೇಲೆ ಅವರಿಗಿದ್ದ ಹಿಡಿತವನ್ನು ಹೆಚ್ಚಿಸಿತ್ತು. ಈ ನಡುವೆ ಒಂದೆರಡು ವರ್ಷದನಂತರ ನಿರ್ಮಾಣಕ್ಕಿಳಿದರು. ಇವರದೇ ನಿರ್ಮಾಣ, ನಿರ್ದೇಶನದ 'ನಿಘಾತ' ಒಂದು ಪತ್ತೇದಾರಿ ಮಾದರಿಯ ಕಥೆಯನ್ನು ಹೊಂದಿದ್ದು, ಕಡಿಮೆ ವೆಚ್ಚದಲ್ಲಿ ತಯಾರಾಗಿತ್ತು. ಇಡೀ ಚಿತ್ರದಲ್ಲಿ ಕ್ಯಾಮರಾ ಒಂದೇ ಓಡಾಡುತ್ತ ಅಭಿನಯಿಸಿತ್ತು. ಚಿತ್ರದಲ್ಲಿ ಎಸ್.ನಾರಾಯಣ್ ಅವರೂ ಪಾತ್ರ ವಹಿಸಿದ್ದರು. ತಾವು ನಿರ್ದೇಶಿಸಿದ ಪ್ರತಿಯೊಂದು ಚಿತ್ರದಲ್ಲೂ ಸಣ್ಣ ಹಾಸ್ಯಪಾತ್ರಗಳಲ್ಲಿ ಕಾಣಿಸಿಕೊಳ್ಳುತ್ತಿದ್ದವರು ಮುಂದೆ ತಮ್ಮದೇ 'ಭಾಮಾ ಸತ್ಯಭಾಮಾ' ಮೂಲಕ ನಾಯಕನಟನಾದರು. ನಾಯಕನಟರೊಬ್ಬರು ಹೆಚ್ಚಿನ ಸಂಭಾವನೆಯನ್ನು ಕೇಳಿದ್ದೇ ಇವರು ನಾಯಕನಟರಾಗಲು ಕಾರಣವಾಯಿತು ಎಂಬ ಮಾತೂ ಉಂಟು. ಈ ಚಿತ್ರದ ನಂತರ ಸ್ವತಂತ್ರ ಕಥೆ ಬರೆದು ಸದಭಿರುಚಿಯ ಉತ್ತಮ ಚಿತ್ರ 'ವೀರಪ್ಪನಾಯ್ಕ' ನಿರ್ಮಿಸಿ ನಿರ್ದೇಶಿಸಿದರು. ಈ ಚಿತ್ರ ವಿಷ್ಣುವರ್ಧನ್ ವರ್ಚಸ್ಸನ್ನು ಹೆಚ್ಚಿಸಿತು. ರೀಮೇಕ್ ಚಿತ್ರ 'ಸೂರ್ಯವಂಶ' ಯಶಸ್ಸು ನಾರಾಯಣ್ ಅವರನ್ನು ೧೯೯೯ರ ಹೊತ್ತಿಗೆ ಕನ್ನಡದ ಬೇಡಿಕೆಯ ನಿರ್ದೇಶಕರಲ್ಲೊಬ್ಬರನ್ನಾಗಿಸಿತು. 'ಭಾಮಾ ಸತ್ಯಭಾಮ'ದಲ್ಲಿ ನಾಯಕರಾಗಿದ್ದವರು ೨೦೦೦ದಲ್ಲಿ 'ನನ್ನವಳು ನನ್ನವಳು' ಚಿತ್ರದ ಮೂಲಕ ಮತ್ತೆ ನಾಯಕನಟರಾದರು. ಈ ಚಿತ್ರ 'ವೀರಪ್ಪನಾಯ್ಕ'ಕ್ಕೆ ವಿರುದ್ಧ ದಿಕ್ಕಿನಲ್ಲಿತ್ತು. ಒರಟು ಹಾಸ್ಯ, ದ್ವಂದ್ವಾರ್ಥ ಸಂಭಾಷಣೆ, ಅಶ್ಲೀಲತೆ ತುಂಬಿಕೊಂಡಿದ್ದು ಒಂದು ವರ್ಗದ ಪ್ರೇಕ್ಷಕ ವೃಂದವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ನಿರ್ಮಾಣವಾಗಿತ್ತು.



(ಚಿತ್ರ ೩೪) 'ರಾಜಕೀಯ' ಚಿತ್ರದಲ್ಲಿ ವಿಶಾಖ ಮತ್ತು ದೇವರಾಜ್

ಎಸ್.ನಾರಾಯಣ್ ತಮಗೆ ಉತ್ತಮ ಚಿತ್ರಗಳನ್ನು ರೂಪಿಸುವುದು ಸಾಧ್ಯ ಎಂಬುದನ್ನು ರುಜುವಾತುಪಡಿಸಿ, ಅಶ್ಲೀಲತೆಗೆ ಹೊರಳಿದ್ದಕ್ಕೆ ಚಿತ್ರರಂಗದಲ್ಲಿ ಬದಲಾಗಿದ್ದ ವಾತಾವರಣವೂ ಕಾರಣವಾಗಿರಬಹುದು. ಇವರು ಬದಲಾದ ಹಿನ್ನೆಲೆ ಏನೇ ಇದ್ದರೂ, ಇವರ ಸಾಧನೆಯ ಪಟ್ಟಿಯಲ್ಲಿ 'ಚೈತ್ರದ ಪ್ರೇಮಾಂಜಲಿ', 'ವೀರಪ್ಪನಾಯ್ಕ' ಹಾಗೂ 'ಶಬ್ದವೇಧಿ' ಮುಖ್ಯ ಸ್ಥಾನ ಪಡೆದುಕೊಳ್ಳುತ್ತವೆ. ಇದರೊಂದಿಗೆ ತಮಿಳು ಚಿತ್ರರಂಗದಲ್ಲಿನಂತೆ ನಿರ್ದೇಶಕರೇ ನಾಯಕನಟರಾಗಿ ನಟಿಸುತ್ತಿದ್ದ ಕಾಶೀನಾಥ್ ಪರಂಪರೆ ರವಿಚಂದ್ರನ್ ಮೂಲಕ ಎಸ್.ನಾರಾಯಣ್, ಉಪೇಂದ್ರರವರೆಗೂ ಬಂದು ತಲುಪಿತು. ಇವರೆಲ್ಲ ಪ್ರತಿಭಾವಂತರು. ಹೊಸ ರೀತಿಯಲ್ಲಿ ಕಥೆ ಹೇಳುವ ಕಲೆ ಕರಗತವಾಗಿತ್ತು. ಅವರ ನಿರ್ದೇಶನ, ಅಭಿನಯವೇ ವಿಶೇಷ ಆಕರ್ಷಣೆಯಾಗುತ್ತಿತ್ತು. ಆದರೆ ಇವರುಗಳು ಅದಕ್ಕಿಂತ ಮುಂದೆ ಹೋಗಿ ತುಸು ವಾಚ್ಯ, ಅತಿ ಅನ್ನಿಸುವಷ್ಟು ಕೆಳದರ್ಜೆಯ ಸಂಭಾಷಣೆ, ದೃಶ್ಯಗಳಿಗೆ ಒತ್ತುಕೊಟ್ಟಿದ್ದು ಕನ್ನಡ ಚಿತ್ರರಂಗದ ದುರಂತ. ಇದು ಪ್ರತಿಕ್ಷಣ ಚಿತ್ರ ನಿರ್ಮಿಸುವವರಿಗೆ ಇದ್ದ ಸೋಲು - ಗೆಲುವಿನ ಆತಂಕ - ಅನಿಶ್ಚಿತತೆಯನ್ನು ಸೂಚಿಸುತ್ತದೆ.

೧೯೯೨ರಲ್ಲಿ ವೃತ್ತಿ ಆರಂಭಿಸಿದವರಲ್ಲಿ ನಾಗತಿಹಳ್ಳಿ ಚಂದ್ರಶೇಖರ್, ಎಸ್.ಮಹೇಂದರ್ ಮುಖ್ಯರಾಗಿದ್ದಾರೆ. ಆದರೆ ನಾಗತಿಹಳ್ಳಿ ನಿರ್ದೇಶಿಸಿದ 'ಉಂಡೂ ಹೋದ ಕೊಂಡೂ ಹೋದ', ಎಸ್.ಮಹೇಂದರ್ ಅವರ 'ಪ್ರಣಯದ ಪಕ್ಷಿಗಳು' ಸಾಮಾನ್ಯ ಚಿತ್ರಗಳು. ಅಪ್ಪಟ ಪ್ರೇಮಕಥೆ 'ಪ್ರಣಯದ ಪಕ್ಷಿಗಳು' ಛಾಯಾಗ್ರಹಣದಿಂದಷ್ಟೇ ಗಮನ ಸೆಳೆದು ಇನ್ಯಾವ ಅಂಶಗಳಲ್ಲೂ ಜೀವ ಹೊಂದಿರಲಿಲ್ಲ. ಸಾಂಪ್ರದಾಯಿಕವಾಗಿ ಸಿನಿಮಾ ನಿರ್ದೇಶನವನ್ನು ಕಲಿಯದಿದ್ದ ಎಸ್.ಮಹೇಂದರ್ ಈ ಚಿತ್ರದ ಮೂಲಕ ಚಿತ್ರರಂಗಕ್ಕೆ ಅಡಿಯಿಟ್ಟರು.

ಸಿದ್ಧಲಿಂಗಯ್ಯ ನಿರ್ದೇಶಿಸಿದ 'ಬಾ ನನ್ನ ಪ್ರೀತಿಸು' ಕುಟುಂಬ ಯೋಜನೆ ಸಂದೇಶ ಹೊಂದಿದ್ದ ಚಿತ್ರ. ಇದೇ ಕಾರಣಕ್ಕಾಗಿ ಸರ್ಕಾರ ಈ ಚಿತ್ರಕ್ಕೆ ಒಂದು ವರ್ಷ ಕಾಲ ಶೇಕಡಾ ನೂರರ ತೆರಿಗೆ ವಿನಾಯ್ತಿ ನೀಡಿತು. ಚಿತ್ರ ಇಬ್ಬರು ಹೆಂಡತಿಯರನ್ನು ಪ್ರೋತ್ಸಾಹಿಸುವ ಅಂತ್ಯವನ್ನುಳ್ಳದ್ದಾಗಿತ್ತು. ಕಾನೂನಿನ ಪ್ರಕಾರ ಚಿತ್ರ ಇದನ್ನು ಹೇಳುವಂತಿಲ್ಲ. ಆದರೆ ಇದಕ್ಕೆ ಸರ್ಕಾರ ನೆರವಿಗೆ ಬಂದ ವಿರೋಧಾಭಾಸ ಅಥವಾ ದ್ವಂದ್ವನೀತಿಯೂ ಉಂಟು.

೧೯೯೨ರ ಅವಧಿ ಒಟ್ಟಾರೆ ಲಾಭದ ಕಾಳಜಿಯಷ್ಟೇ ಪ್ರಮುಖವಾಗಿತ್ತೆಂಬುದನ್ನು ಬಿಂಬಿಸಿತು. ಇದರಿಂದಾಗಿ ಸಣ್ಣಪುಟ್ಟ ವಿವಾದಗಳು ರೆಕ್ಕೆಪುಕ್ಕಗಳನ್ನು ಕಟ್ಟಿಸಿಕೊಂಡು ವರ್ಣರಂಜಿತವಾಗಿ ವಿಜೃಂಭಿಸಲು ಸಾಧ್ಯವಾಯಿತು. ಭಿನ್ನಾಭಿಪ್ರಾಯದಿಂದಾಗಿ ೧೯೮೫ರಿಂದ ಏಳು ವರ್ಷ ಕಾಲ ದೂರವಾಗಿದ್ದ ವಿಷ್ಣುವರ್ಧನ್, ದ್ವಾರಕೀಶ್ ಇದೇ ವರ್ಷ ಮತ್ತೆ ಒಂದುಗೂಡಿದರು. ಈ ಪುನರ್‌ಮಿಲನ 'ಹೊಸ ಕಳ್ಳ ಹಳೇ ಕುಳ್ಳ' ಚಿತ್ರದ ಬಿಡುಗಡೆಯ ಸಂದರ್ಭದಲ್ಲಾಯಿತು. ಇದಕ್ಕಿಂತ ಮುಖ್ಯವಾಗಿ ಈ ಚಿತ್ರದ ಬಿಡುಗಡೆಯೇ ದೊಡ್ಡ ವಿವಾದವಾಗಿ ನಿರ್ಮಾಪಕ ಹಾಗೂ ಪ್ರದರ್ಶಕರ ಅಂತರಂಗದ ತಿಕ್ಕಾಟವನ್ನು ಬಹಿರಂಗಕ್ಕಿಟ್ಟಿತು. ಇದು ನಿರಂತರವಾಗಿದ್ದ ಚಿತ್ರಮಂದಿರಗಳ ಸಾರ್ವಕಾಲಿಕ ಸಮಸ್ಯೆಯನ್ನು ಕುರಿತದ್ದಾಗಿತ್ತು. ದ್ವಾರಕೀಶ್ ತಮ್ಮ 'ಹೊಸ ಕಳ್ಳ ಹಳೇ ಕುಳ್ಳ' ಚಿತ್ರಕ್ಕೆ ಕಪಾಲಿ ಚಿತ್ರಮಂದಿರ ನೀಡಲಿಲ್ಲ ಎಂದು ಚಿತ್ರಮಂದಿರದ ಎದುರು ಧರಣಿ ಕುಳಿತರು. ಅಲ್ಲಿ ಪ್ರದರ್ಶಿತವಾಗುತ್ತಿದ್ದ 'ರೌಡಿ ಇನ್‌ಸ್ಪೆಕ್ಟರ್' ತೆಗೆದು ಅವರ ಚಿತ್ರವನ್ನು ಪ್ರದರ್ಶಿಸಲು ಮಾಲೀಕರು ಒಪ್ಪಲಿಲ್ಲವಾದ್ದರಿಂದ ಈ ಧರಣಿ ನಡೆಯಿತು. ರಾಜಕುಮಾರ್ ಅಭಿಮಾನಿಗಳ ಸಂಘ, ನಿರ್ಮಾಪಕರ ಸಂಘಗಳು ಬೆಂಬಲ ನೀಡಿದವು. ಬೆಂಗಳೂರಿನ ಕೆಂಪೇಗೌಡ ರಸ್ತೆಯ ಚಿತ್ರಮಂದಿರಗಳು ಕನ್ನಡ ಚಿತ್ರಗಳಿಗೆ ಅಲಭ್ಯವಾಗಿರುವುದರಿಂದ ಹೋರಾಡಲೇಬೇಕಾಗಿದೆ ಎಂಬ ತೀರ್ಮಾನಕ್ಕೆ ಬರಲಾಯಿತಲ್ಲದೆ ಕನ್ನಡ ನಿರ್ಮಾಪಕರಿಗೆ ಆಗುತ್ತಿರುವ ಅನ್ಯಾಯವನ್ನು ಸರಿಪಡಿಸಲು ಕ್ರಿಯಾಸಮಿತಿ ರೂಪಿಸಲಾಯಿತು. ಹೋರಾಟದ ಸ್ವರೂಪ ವಿಕೋಪಕ್ಕೆ ತಿರುಗುವ ಸಾಧ್ಯತೆಗಳಿದ್ದುದರಿಂದ ಮಾಲೀಕರು ದ್ವಾರಕೀಶ್‌ಗೆ ಚಿತ್ರಮಂದಿರ ಬಿಟ್ಟುಕೊಟ್ಟರು. ಆದರೆ ಇಷ್ಟೆಲ್ಲಾ ಗದ್ದಲದಿಂದ ಅನುಕೂಲವಾಗಿದ್ದು ಇದೊಂದು ಚಿತ್ರಕ್ಕೆ ಮಾತ್ರ. ಅದೊಂದು ಪದ್ಧತಿಯಾಗಿ, ನಿಯಮವಾಗಿ ಮುಂದುವರಿಯಲೇ ಇಲ್ಲ.

ವಿಷ್ಣುವರ್ಧನ್-ದ್ವಾರಕೀಶ್ ನಡುವೆ ಆ ಮುಂಚಿನ ವರ್ಷಗಳಲ್ಲಿ ಏರ್ಪಟ್ಟಿದ್ದ ವಿರಸ ಚಿತ್ರೋದ್ಯಮದ ದೃಷ್ಟಿಯಿಂದ ಮುಖ್ಯವಾದ ಸಂಗತಿ. ಈ ಜೋಡಿ, ತೆರೆಗಿತ್ತ ಚಿತ್ರಗಳ ಶ್ರೀಮಂತಿಕೆ, ಯಶಸ್ಸು ಆನಂತರದ ದಿನಗಳಲ್ಲಿ ಕಾಣಲಿಲ್ಲ. ವಿರಸಕ್ಕೆ ಹಲವು ಕಾರಣಗಳು. ಆದರೆ ಅದಕ್ಕೆ ನಿಮಿತ್ತವಾಗುವುದು, ಎದ್ದು ಕಾಣುವುದು ಬೇರಾವುದೋ ಸಂಗತಿ. ಕಡೆಗೂ ಇವರಿಬ್ಬರೂ ೧೯೯೨ರಲ್ಲಿ ಒಂದಾದರು. ದ್ವಾರಕೀಶ್ ಮತ್ತೆ ಚಿತ್ರವನ್ನು ನಿರ್ಮಿಸಿದರು. ಆದರೆ ಒಂದಾನೊಂದು ಕಾಲದ ವೈಭವ-ಅಪ್ತತೆ ಮತ್ತೆಂದೂ ತುಂಬಿಕೊಳ್ಳಲಿಲ್ಲ.

ಕನ್ನಡ ಚಿತ್ರರಂಗದ ದಿಗ್ಗಜರಲ್ಲೊಬ್ಬರಾದ ವೀರಾಸ್ವಾಮಿ ೨೩ ಆಗಸ್ಟ್ ೧೯೯೨ರ ಭಾನುವಾರ ೬೧ನೆಯ ವಯಸ್ಸಿನಲ್ಲಿ ಅರ್ಬುದ ವ್ಯಾಧಿಯಿಂದ ಸ್ವರ್ಗಸ್ಥರಾದರು.

'ಮಾಲಾಶ್ರೀ ಮಾಮಾಶ್ರೀ' ಚಿತ್ರವನ್ನು ಕೆಲವು ಕಾರಣಗಳಿಗಾಗಿ ಉಲ್ಲೇಖಿಸಬೇಕಾಗುತ್ತದೆ. ಚಿತ್ರನಟಿಯ ಹೆಸರನ್ನೇ ಚಿತ್ರಕ್ಕೆ ಇಟ್ಟಿರುವ ಅಪರೂಪದ ಉದಾಹರಣೆಗಳಲ್ಲಿ ಇದೂ ಒಂದು. ಇದು ಆ ನಟಿಯ ಜನಪ್ರಿಯತೆಯನ್ನು ದಾಖಲಿಸುತ್ತದೆ. ೧೯೭೦ರಲ್ಲಿ ಬಿ.ಎಸ್.ರಂಗಾ ಅವರು ರಾಜಕುಮಾರ್ ನಾಯಕರಾಗಿದ್ದ ಚಿತ್ರಕ್ಕೆ 'ಮಿಸ್ಟರ್ ರಾಜಕುಮಾರ್' ಎಂದು ಹೆಸರಿಟ್ಟಿದ್ದರು. ಆನಂತರದ ದಿನಗಳಲ್ಲಿ ಅಂಥ ಅವಕಾಶ ಸೃಷ್ಟಿಯಾದದ್ದು ಮಾಲಾಶ್ರೀಗೆ ಮಾತ್ರ. ೧೯೯೯ರಲ್ಲಿ ಉಪೇಂದ್ರ ಒಂದು ಹೆಜ್ಜೆ ಮುಂದೆ ಹೋಗಿ ತಾವೇ ತಮ್ಮ ಹೆಸರನ್ನಿಟ್ಟುಕೊಂಡು 'ಉಪೇಂದ್ರ' ಚಿತ್ರ ನಿರ್ದೇಶಿಸಿದರು.

೧೯೯೩ ರಲ್ಲಿ ಮುಂಬೈ, ಅಹ್ಮದಾಬಾದ್‌ನಲ್ಲಿ ಕೋಮು ಗಲಭೆ, ಹಿಂಸಾಚಾರ ತೀವ್ರವಾಯಿತು. ಅತ್ಯಾಧುನಿಕ ಮಾರಕಾಸ್ತ್ರ ಎಕೆ-56 ಬಂದೂಕನ್ನು ಪರವಾನಗಿ ಇಲ್ಲದೆ ಹೊಂದಿದ್ದ ಚಿತ್ರನಟ ಸಂಜಯ್‌ದತ್ ಅವರನ್ನು ಟಾಡಾ ಕಾಯಿದೆಯ ಅಡಿಯಲ್ಲಿ ಬಂಧಿಸಿದರು. ಮಹಾರಾಷ್ಟ್ರದ ಲಾತೂರ್‌ನಲ್ಲಿ ಭೂಕಂಪವಾಗಿ ಅನೇಕ ಸಾವುನೋವುಗಳು ಸಂಭವಿಸಿದವು. 'ಖಳ ನಾಯಕ್' ಚಿತ್ರದ 'ಚೋಲಿಕೆ ಪೀಚೆ ಕ್ಯಾ ಹೈ...' ಗೀತೆಯ ವಿವಾದಗಳು ಹಾಗೂ ಮತ್ತಷ್ಟು ಪ್ರಾದೇಶಿಕ ಟಿ.ವಿ. ಪ್ರಸಾರ ಕೇಂದ್ರಗಳ ಪ್ರಾರಂಭ ಆಯಿತು. ಈ ಎಲ್ಲಾ ಅಂಶಗಳು ಚಿತ್ರರಂಗದ ಮೇಲೆ ಒಂದಲ್ಲಾ ಒಂದು ರೀತಿ ಪ್ರಭಾವ ಬೀರಿದೆ.

೧೯೯೨ ರಲ್ಲಿ ೯೦ ಚಿತ್ರಗಳನ್ನು ಕಂಡ ಕನ್ನಡ ಬೆಳ್ಳಿತೆರೆ ೧೯೯೩ ರಲ್ಲಿ ೮೬ ಚಿತ್ರಗಳನ್ನು ಕಂಡಿತು. ಇದರಲ್ಲಿ ೨೮ ಚಿತ್ರಗಳು ರೀಮೇಕ್ ಆಗಿದ್ದವು. ಆರ್ಥಿಕವಾಗಿ ೮೦ ಚಿತ್ರಗಳು ಸೋತವು. ಕೇವಲ ಏಳು ಚಿತ್ರಗಳು ಶತದಿನೋತ್ಸವ ಆಚರಿಸಿ ಐದಾರು ಚಿತ್ರಗಳು ಪರವಾಗಿಲ್ಲ ಎಂಬ ಅಭಿಪ್ರಾಯ ಗಳಿಸಿಕೊಂಡವು. ರೀಮೇಕ್ ಚಿತ್ರಗಳ ಅಬ್ಬರ ಚಿತ್ರಪ್ರೇಮಿಗಳಲ್ಲಷ್ಟೇ ಜಿಗುಪ್ಸೆ ಉಂಟುಮಾಡದೆ, ಸರ್ಕಾರ ಕೂಡ ಜಾಗೃತವಾಗುವಷ್ಟು ತೀವ್ರವಾಗಿತ್ತು. ಇರುವುದರಲ್ಲಿ ಕಾದಂಬರಿ ಆಧಾರಿತ ಕೆಲವು ಚಿತ್ರಗಳು ಕಳೆದ ವರ್ಷದ ಚಿತ್ರಗಳಿಗೆ ಹೋಲಿಸಿದರೆ ಪರವಾಗಿಲ್ಲ ಎಂಬ ಭಾವನೆ ಉಂಟುಮಾಡಿದವು. 'ಜಗ ಮೆಚ್ಚಿದ ಹುಡುಗ', 'ವೈಶಾಖದ ದಿನಗಳು', 'ಆಕಸ್ಮಿಕ', 'ಚಿರ ಬಾಂಧವ್ಯ', 'ಹೂವು ಹಣ್ಣು', 'ಮುಂಜಾನೆಯ ಮಂಜು', 'ರಂಜಿತಾ', 'ಕಲ್ಯಾಣ ರೇಖೆ', 'ಚಿನ್ನಾರಿ ಮುತ್ತ', 'ಆನಂದ ಜ್ಯೋತಿ', 'ಬಾ ನಲ್ಲೆ ಮಧುಚಂದ್ರಕೆ' - ಇವು ಕಾದಂಬರಿ ಆಧರಿಸಿದ ೧೯೯೩ರ ಚಿತ್ರಗಳು. ಆದರೆ ಇವು ಮತ್ತು ಉಳಿದ ಕೆಲವೇ ಸ್ವತಂತ್ರ ಕಥೆಯ ಚಿತ್ರಗಳು ರೀಮೇಕ್ ಚಿತ್ರಗಳ ಪ್ರವಾಹವನ್ನು ಎದುರಿಸುವುದರಲ್ಲಿ ಸಫಲವಾಗಲಿಲ್ಲ. ಜೊತೆಗೆ ೧೯೯೩ರ ಹೊತ್ತಿಗೆ ಕನ್ನಡ ಚಿತ್ರಗಳನ್ನು ಕನ್ನಡಿಗರೇ ಅವಹೇಳನ ಮಾಡುವಂಥ ಸ್ಥಿತಿ ನಿರ್ಮಾಣವಾಯಿತು. ಈ ಹಂತದಲ್ಲಿ ಮುಖ್ಯಮಂತ್ರಿ ವೀರಪ್ಪ ಮೊಯ್ಲಿಯವರ ಸರ್ಕಾರ ಜಾಗೃತವಾಯಿತು.



(ಚಿತ್ರ ೩೫) 'ಜಗ ಮೆಚ್ಚಿದ ಹುಡುಗ' ಚಿತ್ರದಲ್ಲಿ ಶಿವರಾಜ್ ಕುಮಾರ್

'ಬಹದ್ದೂರ್ ಹೆಣ್ಣು' ೧೯೯೩ ರಲ್ಲಿ ತೆರೆಗೆ ಬಂದ ಪ್ರಥಮ ಚಿತ್ರ. ಈ ಚಿತ್ರಕ್ಕೆ ನಾಗಣ್ಣ ಎಂದು ಉದ್ಯಮಿಗಳಲ್ಲಿ ಜನಪ್ರಿಯರಾಗಿದ ಆರ್.ಲಕ್ಷ್ಮಣ್ ಮಗ ನಾಗರಾಜ್ ನಿರ್ದೇಶಕರೆಂದು ಗೊತ್ತಾಗಿತ್ತು. ಕಿರಣ್ ಬೇಡಿ ಬದುಕಿನ ಘಟನೆಗಳನ್ನು ಆಧರಿಸಿ ಚಿತ್ರಕಥೆ ರಚಿಸಲಾಗಿತ್ತು. ಮಹಾಭಾರತದ ದ್ರೌಪದಿ ಪಾತ್ರದ ಖ್ಯಾತಿಯ ರೂಪಾ ಗಂಗೂಲಿಯನ್ನು ಕರೆತರಲಾಗಿತ್ತು. ದೇವರಾಜ್ ಮುಖ್ಯ ಪಾತ್ರದಲ್ಲಿದ್ದರು. ನಾಗಣ್ಣ, ರವೀ ಬಳಿಯೂ ಸಹಾಯಕರಾಗಿ ಬಹಳಷ್ಟು ಚಿತ್ರಗಳಿಗೆ ಕೆಲಸ ಮಾಡಿದ್ದಾರೆ. ನಾಗಣ್ಣ ಚಿತ್ರನಾಟಕದ ಸಿದ್ಧತೆಯಲ್ಲೇ ತುಂಬಾ ಎಚ್ಚರಿಕೆ ವಹಿಸಿ ಬಿಗಿಯಾದ ಬಂಧ ಕಲ್ಪಿಸುತ್ತಾರೆ. ಸಾಮಾನ್ಯವಾಗಿ ಚಿತ್ರಕಥೆ ಸ್ತ್ರೀ ಅಥವಾ ಪುರುಷ ಪ್ರಧಾನವಾಗಿರುತ್ತದೆ. ಅಥವಾ ಒಂದು ಪಾತ್ರದ ಸುತ್ತ ಉಳಿದೆಲ್ಲ ಅಂಶಗಳು ಸುತ್ತುತ್ತವೆ. ಈ ಚಿತ್ರದಲ್ಲಿ ರೂಪಾಗಂಗೂಲಿ-ದೇವರಾಜ್ ಇಬ್ಬರಿದ್ದಾರೆ. ಎರಡೂ ಪಾತ್ರಗಳಿಗೆ ಸಮಾನ ಅವಕಾಶ, ಅಭಿನಯಕ್ಕೆ ಬೇಕಾದ ಸನ್ನಿವೇಶ ನಿರ್ಮಾಣ ಮಾಡಿಕೊಂಡರು ನಾಗಣ್ಣ. ಈ ಜಾಣತನ ಅವರ ಎಲ್ಲ ಚಿತ್ರಗಳಲ್ಲೂ - ಮುಂದೆಯೂ - ಗುರುತಿಸಬಹುದಾಗಿದೆ. 'ಬಹದ್ದೂರ್ ಹೆಣ್ಣು' ಚಿತ್ರದ ಸಂದರ್ಭದಲ್ಲಿ ಕೆಲವು ಭಾಗ ಕೆಲಸ ಮುಗಿದಿರುವಾಗಲೇ ಏನೋ ಭಿನ್ನಾಭಿಪ್ರಾಯ ಬಂತು. ನಾಗಣ್ಣ ಅದನ್ನೇ ದೊಡ್ಡದು ಮಾಡದೆ ಸಾಧ್ಯವಾಗದ ಜಾಗದಲ್ಲಿರದೆ ಹೊರನಡೆದರು. ಅನಂತರ ಆ ಚಿತ್ರವನ್ನು ಪೂರ್ತಿ ಮಾಡಿದವರು ಎ.ವಿ.ಶೇಷಗಿರಿರಾವ್. ಹಿರಿಯ ನಿರ್ದೇಶಕರು ಕಿರಿಯನ ಸ್ಥಾನದಲ್ಲಿ ಕೆಲಸ ಪಡೆದ ಬಗ್ಗೆ ಅನೇಕರು ಆಕ್ಷೇಪಿಸಿದ್ದೂ ಉಂಟು. ಕಾರಣ ಏನೇ ಇರಲಿ ನಾಗಣ್ಣ ಚಿತ್ರ ಪೂರ್ತಿ ಮಾಡಲಿಲ್ಲ.

'ರಾಜಕೀಯ' ಶಿವಮಣಿ ನಿರ್ದೇಶನದ ಮೊದಲ ಚಿತ್ರ. ಶಿವಮಣಿ ಚಿತ್ರಗಳಲ್ಲಿ ಚಿತ್ರಿಕೆಗಳು ಸೊಗಸಾಗಿರುತ್ತಿದ್ದವು. ಚಿತ್ರದ ಒಟ್ಟಾರೆ ಚೌಕಟ್ಟಿನಲ್ಲಿ ಬಿಗಿಯಿಲ್ಲದೆ, ಎಲ್ಲೋ ಸೌಧವೇ ಉರುಳಿದ ಅನುಭವವಾಗುತ್ತದೆ. 'ರಾಜಕೀಯ' ತೆರೆಗೆ ಬಂದಾಗ ಇವರಂಥ ತಂತ್ರಜ್ಞ ಉಂಟೇ ಎಂಬಂಥ ಮೆಚ್ಚುಗೆಯ ಮಾತುಗಳು ಬಂದವು. ಚಿತ್ರವೂ ಚೆನ್ನಾಗಿ ಹೋಯಿತು. ಆದರೆ ಶಿವಮಣಿ ಪ್ರಾರಂಭದಲ್ಲಿ ರಾಜಕೀಯ ಕಥಾವಸ್ತುವಿಗೇ ಒಲವು ತೋರುತ್ತಾರೆಂದು ಭಾವಿಸುವಂತೆ ಸರಣಿಯಲ್ಲಿ ಅಂಥ ಚಿತ್ರಗಳನ್ನು ತೆಗೆದರು. ಅನಂತರ ಹಾಗೆ ಬ್ರ್ಯಾಂಡ್ ಆಗಲೊಲ್ಲದೆ ಬೇರೆಬೇರೆ ಚಿತ್ರಗಳನ್ನು ಮಾಡಿದರು. ಅವರ ಚಿತ್ರಗಳಲ್ಲಿ ಮಾಧ್ಯಮದಲ್ಲಿ ಹಿಡಿತ, ಒಳನೋಟ ಎಲ್ಲವೂ ಇರುತ್ತವೆ. ಆದರೂ ಯಶಸ್ಸಿನ ಅಂಶ ಕಡಿಮೆ. ಶಿವಮಣಿ ಪ್ರಾರಂಭದಲ್ಲಿ ತೆಗೆದ ಕೆಲವು ಚಿತ್ರಗಳ ಲೊಕೇಶನ್, ಚಿತ್ರಿಕೆಗಳು, ಅಲ್ಲಿ ಬಳಸಿದ ಕಲರ್‌ಟೋನ್ ಎಲ್ಲವೂ ಮತ್ತೆಮತ್ತೆ ಅಂಥ ಚಿತ್ರಿಕೆಗಳನ್ನು ನೋಡೋಣ ಎನ್ನುವಷ್ಟು ಉತ್ತಮವಾಗಿದ್ದವು. ಹೊಸಬರಾದರೂ ಯಾವ ಪರಿಣತ ನಿರ್ದೇಶಕನಿಗೂ ಕಡಿಮೆ ಇಲ್ಲದಂಥ ತಂತ್ರಜ್ಞರಾಗಿ ಕಂಡರು.

'ಜಗ ಮೆಚ್ಚಿದ ಹುಡುಗ' ಚೌಡೇಶ್ವರಿ ಲಾಂಛನದಲ್ಲಿ ಎಸ್.ಎ.ಚಿನ್ನೇಗೌಡ ಮತ್ತು ಅವರ ಸಹೋದರ ಸಂಬಂಧಿಗಳು ನಿರ್ಮಿಸಿದ ಚಿತ್ರ. ಭಾರ್ಗವ ನಿರ್ದೇಶನ. ಎಂದಿನಂತೆ ಭಾರ್ಗವ ಅವರದೇ ಆದ ಶೈಲಿಯಲ್ಲಿ ಚಿತ್ರಕಥೆ ಸಿದ್ಧ ಮಾಡಿಕೊಂಡರು. ಭಾರ್ಗವ ಒಂದು ರೀತಿಯಲ್ಲಿ ಗಣಿತಪ್ರಿಯ. ಅದು ಎಷ್ಟೇ ಕೂಡಿ, ಕಳೆದು, ಭಾಗಾಕಾರ ಮಾಡಿದರೂ ಅವರ ಲೆಕ್ಕಾಚಾರವೇನೋ ಅದೇ ಶೇಷವಾಗುಳಿಯಬೇಕು. ಹಾಗೇ ಅವರ ಕಾರ್ಯವಿಧಾನ ಕೂಡಾ. 'ಜಗ ಮೆಚ್ಚಿದ ಹುಡುಗ' ಕಾದಂಬರಿಯನ್ನಾಧರಿಸಿದ್ದು. ಸಾಮಾಜಿಕ ಕಥೆಯೇ ಆದರೂ ಪಾತ್ರಗಳು, ಸ್ವಭಾವ, ಸನ್ನಿವೇಶಗಳನ್ನು ಮಹಾಭಾರತದ ಕರ್ಣನ ಪ್ರಸಂಗಕ್ಕೆ ಸಮೀಕರಿಸಲಾಗಿತ್ತು. ಕರ್ಣನ ಬಳಿ ಕುಂತಿ ಬಂದು ಅರ್ಜುನನ ಪ್ರಾಣಭಿಕ್ಷೆ ಬೇಡುವ ಪ್ರಸಂಗವನ್ನೇ ಹೋಲುವ ಸನ್ನಿವೇಶವೊಂದನ್ನು ತರಲಾಗಿತ್ತು. ತಾರ ಲಕ್ಷ್ಮೀ, ಶ್ರೀನಾಥ್ ಸೊಗಸಾಗಿ ನಿರ್ವಹಿಸಿದ್ದರು. ಪ್ರಭಾಕರ್, ಚಿ.ಉದಯಶಂಕರ್ ಮಗ ಗುರುದತ್ ಅಭಿನಯ ಕೂಡಾ ಸೊಗಸಾಗಿತ್ತು. ಪ್ರಾಯಶಃ ಈ ಮೊದಲಿನ ಚಿತ್ರಗಳಿಗಿಂತ ಭಿನ್ನವಾಗಿ ಲಕ್ಷ್ಮೀ ಎದುರಿಗೆ ಅಭಿನಯಿಸುವುದೇ ಒಂದು ಸವಾಲಾಗಿ ಸ್ವೀಕರಿಸಿ ಶ್ರಮಪಟ್ಟು ಶಿವರಾಜ್ ಕುಮಾರ್ ಭಾವಾಭಿನಯಕ್ಕೇ ಒತ್ತುಕೊಟ್ಟು ಸೈ ಅನ್ನಿಸಿಕೊಂಡರು. ಒಂದು ಉತ್ತಮ ಚಿತ್ರವೇ. ಅಂಥ ಚಿತ್ರ - ಬದಲಾದ ಅಭಿರುಚಿಯ ಹಿನ್ನೆಲೆಯಲ್ಲಿ - ಪ್ರೇಕ್ಷಕರನ್ನು ತಲುಪಬೇಕಾದ ಪ್ರಮಾಣದಲ್ಲಿ ತಲುಪಿಲ್ಲ ಎನ್ನಿಸಿದರೂ ಚಿತ್ರ ಐವತ್ತು ದಿನ ಓಡಿತ್ತು. ಮೆಚ್ಚುಗೆಯ ಮಾತೂ ಬಂದಿತ್ತು.

ಕಾಶೀನಾಥ್ ಜನಪ್ರಿಯತೆ ಇದ್ದುದೇ ಪ್ರೀತಿ-ಪ್ರಣಯಗಳನ್ನು ವಿಶೇಷವಾಗಿ ಹೇಳುವುದರಲ್ಲಿ. ಈ ಪ್ರಣಯ ಪ್ರಸಂಗಗಳಲ್ಲಿ ಕಾಲೇಜು ಹುಡುಗರು ಅಥವಾ ಶ್ರೀಮಂತ ವರ್ಗಕ್ಕೆ ಮಾತ್ರ ಆಪ್ಯಾಯವಾಗುವ ಫಾರ್ಮುಲಾ ಇತ್ತು. ಹೆಚ್ಚೆಂದರೆ ಹಳ್ಳಿಯ ಹುಡುಗ, ಪಟ್ಟಣದ ಹುಡುಗಿಯಂಥದ್ದು ಇರುತ್ತಿತ್ತು. ಅವರೆಲ್ಲ ಚೆಲುವರೂ ಆಗಿರುತ್ತಿದ್ದರು. ಹಾಗಲ್ಲವಾದರೆ ಜನಪ್ರಿಯ ಹಾಸ್ಯನಟರ ಜೋಡಿಯ ಪ್ರಣಯವಿರುತ್ತಿತ್ತು. ಅದು ಹಾಸ್ಯವಾಗಿ ತೇಲಿಹೋಗುತ್ತಿತ್ತು. ಕಾಶೀನಾಥ್ ಚೆಲುವು, ನಿಲುವುಗಳಾಚೆಗೆ ಸಮಾಜದ ಕಟ್ಟಕಡೆಯ ಮನುಷ್ಯನೂ ಪ್ರೀತಿಸಬಲ್ಲ, ಪ್ರೀತಿಯಲ್ಲಿ ತಪ್ಪು, ಒಪ್ಪು, ದಡ್ಡತನ-ಜಾಣತನ ಎಲ್ಲವೂ ಇರುವುದು ಸಾಧ್ಯ ಎಂಬುದನ್ನು ತೋರಿಸಿಕೊಟ್ಟರು. ಮುಖ್ಯವಾಗಿ ಪ್ರೇಮ-ಕಾಮಗಳನ್ನು, ತಮ್ಮ ಸ್ವತ್ತಾಗಿಸಿಕೊಂಡಿದ್ದ ಒಂದು ವರ್ಗದ ಹಿತಾಸಕ್ತಿಯಿಂದ ಹೊರತಂದು, ಅತಿ ಸಾಮಾನ್ಯನಿಗೂ ಈ ಎಲ್ಲ ಅನುಭವವುಂಟು ಎಂದು ಹೇಳಿದರು. ಆದರೆ ಅದನ್ನು ನಿರೂಪಿಸಲು ಅವರು ಆರಿಸಿಕೊಂಡ ವಿಧಾನ ರೂಕ್ಷವಾಯಿತು. ಬಹಳಷ್ಟು ಸಲ ಸಭ್ಯತೆಯ ಎಲ್ಲೆ ಮೀರಿತು.



(ಚಿತ್ರ ೩೬) 'ಗಡಿಬಿಡಿ ಗಂಡ' ಚಿತ್ರದಲ್ಲಿ ರೋಜಾ ಮತ್ತು ರವಿಚಂದ್ರನ್



(ಚಿತ್ರ ೩೭) 'ಅಣ್ಣಯ್ಯ' ಚಿತ್ರದಲ್ಲಿ ಧೀರೇಂದ್ರ ಗೋಪಾಲ್, ಬಿ.ಎಸ್.ಪ್ರಭಾಕರ್, ಮಧು ಮತ್ತು ರವಿಚಂದ್ರನ್

ಈ ವರ್ಷ ತೆರೆಕಂಡ 'ಲವ್ ಟ್ರೈನಿಂಗ್' ಅಂಥದೇ ಒಂದು ಚಿತ್ರ. ಪ್ರೀತಿಸುವುದು ಹೇಗೆ ಎಂದು ಹೇಳಿಕೊಡಲು ಒಂದು ಶಾಲೆ ತೆಗೆದು, ಅಲ್ಲಿ ಬರುವ ವಿದ್ಯಾರ್ಥಿಗಳಿಗೆ ಅವರವರು ಪ್ರೀತಿಸುತ್ತಿರುವ ಹುಡುಗಿಯರನ್ನು ಒಲಿಸಿಕೊಳ್ಳುವುದು ಹೇಗೆಂದು ಆಯಾ ಹುಡುಗಿಯರೊಂದಿಗೆ ನಟಿಸುತ್ತಾ ತೋರುವಾಗ ಎಲ್ಲಾ ವಿದ್ಯಾರ್ಥಿಗಳ ಪ್ರೇಯಸಿಯರೂ ಈತನನ್ನೇ ಪ್ರೀತಿಸುವುದರಿಂದ ಫಜೀತಿಗಿಟ್ಟುಕೊಳ್ಳುವ ಪ್ರಸಂಗವನ್ನು ಲವಲವಿಕೆಯಿಂದ ಹೇಳಿದ್ದಾರೆ ನಿರ್ದೇಶಕ ಬಿ.ರಾಮಮೂರ್ತಿ.

ಕಾಶೀನಾಥ್ ಅಭಿನಯದ ಚಿತ್ರಗಳಿಗೆ ಕರ್ನಾಟಕದ ಹೊರಗೂ ಬೇಡಿಕ ಇತ್ತು. ಡಬ್ಬಿಂಗ್ ಹಕ್ಕುಗಳಿಗೂ ಅಧಿಕ ಬೆಲೆ ಸಿಗುತ್ತಿತ್ತು. ಕಾಶೀನಾಥ್ ಚಿತ್ರಗಳನ್ನು ನಿರ್ಮಿಸಲು ಹೊರಗಿನ ನಿರ್ಮಾಪಕರೂ ಮುಗಿಬಿದರು. ಕಾಶೀನಾಥ್‌ಗೆ ಅಧಿಕ ಸಂಭಾವನೆ ಕೊಡಲೂ ಮುಂದಾದರು. ನಾಗಾಭರಣರಂಥ ನಿರ್ದೇಶಕರೂ ಕಾಶೀನಾಥ್ ಅಭಿನಯದ 'ಸುರ ಸುಂದರಾಂಗ' ಚಿತ್ರ ನಿರ್ದೇಶಿಸಿದ್ದರು. ಇಲ್ಲೂ ಕನ್ಯೆಯರು ಹೆಚ್ಚು. ಎಲ್ಲರಿಗೂ ಕಾಶೀನಾಥ್ ಮೇಲೆ ಪ್ರೇಮ. ನಾಗಾಭರಣ ಚಿತ್ರಿಸಿದಾಗ ಒಂದಿಷ್ಟು ಸಹಜತೆ ತಂತಾನೇ ಮೂಡಿತ್ತು. ಅಭಿನೇತ್ರಿ ಕಾವ್ಯ ಅಯ್ಯಂಗಾರ್ ಸೀರೆ ಉಟ್ಟು ಕಾಶೀನಾಥ್‌ಗೆ ಅಯ್ಯಂಗಾರಿ ಸ್ಪೆಷಲ್‌ಗಳನ್ನು ಮಾಡಿ ಊಟಕ್ಕಿಡುವ ಚಿತ್ರಣವನ್ನು ಬಹುಕಾಲ ಪ್ರೇಕ್ಷಕರು ನೆನೆಯುತ್ತಿದ್ದರು. ಇಂಥ ಸಾಲು ಸಾಲಾಗಿ ಬಂದ ಚಿತ್ರಗಳಲ್ಲಿ 'ಮನ್ಮಥರಾಜ', 'ಕಲಿಯುಗ ಕೃಷ್ಣ', 'ಸಿಂಗಾರಿ ಬಂಗಾರಿ' ಸೇರುತ್ತವೆ.

ಜಗ್ಗೇಶ್ ಅಭಿನಯವನ್ನು ಗಂಭೀರವಾಗಿ ತಗೆದುಕೊಂಡವರೇ ಚಲಾವಣೆಗಾಗಿ ಅವರೆಗೆ ಏನೇ ಮಾಡಿದ್ದರೂ ಅವರು ಮತ್ತ 'ಸರ್ವರ್ ಸೋಮಣ್ಣ' ಚಿತ್ರಕ್ಕೆ ಆರಿಸಿದ ಮೂಲಕಥೆ 'ಸರ್ವರ್ ಸುಂದರಂ' ಚಿತ್ರದ್ದು. ಅಲ್ಲಿ ತಾಯ್‌ನಾಗೇಶ್ ಅದ್ಭುತ ಅಭಿನಯವಿತ್ತು. ಕ್ಲಿಷ್ಟ, ಆದರೆ ಸವಾಲೆಸಿಸುವಂಥ ಪಾತ್ರವನ್ನು ಜಗ್ಗೇಶ್ ಆರಿಸಿಕೊಂಡರು. ಸಮರ್ಥವಾಗಿ ನಿರ್ವಹಿಸಿದರು. ಅವರ ಅಭಿನಯವನ್ನು ಗುಪ್ತವಾಗಿ ಮೆಚ್ಚಿಕೊಂಡ ಒಂದು ವರ್ಗ ಬಾಯಿ ಬಿಡಲಿಲ್ಲ. ಎಲ್ಲವನ್ನೂ ಅಬ್ಬರ ಮಾಡಿ ಹೇಳುವ, ಚಿತ್ರಮಂದಿರಕ್ಕೆ ನೂಕುನುಗ್ಗಲಿನಲ್ಲಿ ಬರುವ ಪ್ರೇಕ್ಷಕರು ಈ ಚಿತ್ರಕ್ಕೆ ಬರಲಿಲ್ಲ. ನಿಜವಾದ ಕಲಾವಿದ ಇದ್ದ, ಆದರೆ ಗುರುತಿಸಿ ಮೆಚ್ಚುವ ಜನ ಅಪರೂಪವಾದರು. ಇಂಥ ಕಾರಣಗಳಿಗಾಗಿಯೇ ಮತ್ತೆಮತ್ತೆ ಹಳೆಯ ದಾರಿಗೇ ಹಿಂತಿರುಗುವ ಅನಿವಾರ್ಯವೂ ಬರುತ್ತದೆ ಕಲಾವಿದರಿಗೆ. ಆಯ್ಕೆ, ಅಭಿರುಚಿ, ಸವಾಲುಗಳು, ಸಂತೃಪ್ತತೆ ಎಲ್ಲವೂ ಕನಸಾಗಿ ಅನ್ವೇಷಿತವಾಗಿ ಬಹುಸಂಖ್ಯೆಯ ಸಮುದಾಯವೊಂದರ ಸೂತ್ರದ ಬೊಂಬೆಯಾಗಿಬಿಡುವ ಅನಿವಾರ್ಯ ಏರ್ಪಡುವುದು ಹೀಗಾದಾಗಲೇ. ಮತ್ತೆ ಮತ್ತೆ ನಾವು ಯಾವ ಪ್ರೇಕ್ಷಕರನ್ನು ಕರೆದುಕೊಳ್ಳಬೇಕಂಬ ಜಿಜ್ಞಾಸೆಯೊ ಏನೋ ಚಿತ್ರದ ಶೀರ್ಷಿಕೆಯಿಂದಾಗಿ ಒಂದು ವರ್ಗ ಚಿತ್ರಮಂದಿರಕ್ಕೇ ಬರಲಿಲ್ಲ. ಶೀರ್ಷಿಕೆಯ ಆಕರ್ಷಣೆಯಿಂದ ಚಿತ್ರಮಂದಿರಕ್ಕೆ ಬಂದ ಇನ್ನೊಂದು ವರ್ಗ ಈ ಸಾಹಿತ್ಯ ಸಂಗೀತ 'ಕೊರತೆ' ಅಂದುಕೊಂಡಿತು.

ದೊರೆ ಭಗವಾನ್ ಜೋಡಿ ಬಹಳ ಕಾಲದ ನಂತರ ಮತ್ತ ಚಿತ್ರ ಮಾಡಲು ಬಯಸಿತು. ಅನಂತ್‌ನಾಗ್ ಮಾಲಾಶ್ರೀ ಜೋಡಿಯನ್ನು, ಜೊತೆಗ ಮೂನ್‌ಮೂನ್‌ಸೇನ್ ಅವರನ್ನು ಕರೆಸಿ ಚಿತ್ರಿಸಿದ್ದು 'ಮಾಂಗಲ್ಯ ಬಂಧನ'. ಆದರೂ ಚಿತ್ರ ಅವರ ಬೊಗಸೆ ತುಂಬಿಸಲಿಲ್ಲ.

ಆಂಧ್ರದ ನಿರ್ಮಾಪಕ, ನಿರ್ದೇಶಕರು ಕನ್ನಡದಲ್ಲಿ ಚಿತ್ರಿಸಿದ್ದು 'ಗಡಿಬಿಡಿ ಗಂಡ'. ಒಳ್ಳೆಯ ಚಿತ್ರ. ಮೂಲ ತೆಲುಗಾದರೂ ಚೆನ್ನಾಗಿ ಮೂಡಿಬಂದ ಚಿತ್ರ. ಇಬ್ಬರು ಹೆಂಡಿರ ಸಮಸ್ಯೆ ಕಥೆಯ ಕೇಂದ್ರ. ರಮ್ಯಕೃಷ್ಣ, ರೋಜಾರೊಂದಿಗೆ ರವಿಚಂದ್ರನ್ ನಾಯಕನಾಗಿ ಅಭಿನಯಿಸಿದ್ದರು. ರವಿಚಂದ್ರನ್ ಸಂಗೀತದ ವಿದ್ಯಾರ್ಥಿ, ಅವರಿಗೊಬ್ಬ ಸಹಾಯಕ ಅಥವಾ ತಬಲಾಸಾಥಿ, ಆ ಪಾತ್ರದಲ್ಲಿ ಜಗ್ಗೇಶ್. ಈ ಜೋಡಿ ಖುಷಿ ಕೊಟ್ಟಿತ್ತು. ಚಿತ್ರ ಶ್ರೀಮಂತವಾಗಿತ್ತು. ಸಂಗೀತವಂತೂ ಮತ್ತೆ ಮತ್ತೆ ಕೇಳುವಷ್ಟು ಮಧುರ ಅನ್ನಿಸುವಂತಿತ್ತು. ಶಾಸ್ತ್ರೀಯ ಧಾಟಿಯಲ್ಲೇ ಇದ್ದ ಹಂಸಲೇಖ ಸಂಗೀತದಲ್ಲಿ ಕೆಲವು ಗೀತೆಗಳು ಮನಸ್ಸನ್ನು ಅರಳಿಸಿದವು. 'ನೀನು ನೀನೇ ಇಲ್ಲಿ ನಾನು ನಾನೇ...', 'ಪಂಚರಂಗಿ ಪುಟ್ಟಾ ಶ್ಯಾಮನಾದ...', 'ಮುದ್ದಾಡೆಂದಿದೆ ಮಲ್ಲಿಗೆ ಹೂ ಬಳಸೀ ಎಂದಿದೆ ಸಂಪಿಗೆ ಹೂ....' ಗೀತೆಗಳು ಚೆನ್ನಾಗಿದ್ದವು. ಒಂದು ಗೀತೆಯ ಚಿತ್ರೀಕರಣ ಪೂರ್ತಿ ಯೋಗಾಸನವನ್ನೇ ಒಳಗೊಂಡಿತ್ತು. ಹಾಡಿನ ಸಾಹಿತ್ಯ ಸಾಂದರ್ಭಿಕವಾಗಿದ್ದು ಮೆಚ್ಚಾಯಿತು. ಈ ಚಿತ್ರದಲ್ಲಿ ಜಗ್ಗೇಶ್ ಅಭಿನಯ ಅತ್ಯುತ್ತಮವಾಗಿತ್ತು. ಹಾಸ್ಯ ಸನ್ನಿವೇಶಗಳಲ್ಲಿಯಂತೂ ಪ್ರೇಕ್ಷಕರನ್ನು ವಿಶೇಷವಾಗಿ ನಗಿಸಿದರು. ಒಂದು ಸನ್ನಿವೇಶದಲ್ಲಿ 'ಗೋವಿಂದ ಓಡೂ ಓಡೂ...' ಎನ್ನುತ್ತಾ ಒಬ್ಬಳು ಪತ್ನಿಯ ಜೊತೆಗಿದ್ದ



(ಚಿತ್ರ ೩೮) 'ಸರ್ವರ್ ಸೋಮಣ್ಣ' ಚಿತ್ರದಲ್ಲಿ ಜಗ್ಗೇಶ್



(ಚಿತ್ರ ೩೯) 'ಅನುರಾಗದ ಅಲೆಗಳು' ಚಿತ್ರದಲ್ಲಿ ಮಮತಾಶ್ರೀ ಮತ್ತು ರಾಘವೇಂದ್ರ ರಾಜಕುಮಾರ್

ರವಿಚಂದ್ರನ್‌ರನ್ನು ಮತ್ತೊಬ್ಬ ಪತ್ನಿಯ ಕಣ್ಣೋಟದಿಂದ ತಪ್ಪಿಸುತ್ತಾ ಹೆಣಗುವ ಪ್ರಸಂಗ ರಂಜಕವಾಗಿತ್ತು. ಇದೊಂದು ಯಶಸ್ವಿ ಚಿತ್ರ.

ಎಸ್.ನಾರಾಯಣ್ ನಿರ್ದೇಶನದ ಮತ್ತೊಂದು ಚಿತ್ರ 'ಅನುರಾಗದ ಅಲೆಗಳು'. ರಕ್ತದ ಕ್ಯಾನ್ಸರ್ ಕುರಿತ ವೈದ್ಯರ ವರದಿ ಅದಲು ಬದಲಾಗಿ ವಿಚಿತ್ರ ಸನ್ನಿವೇಶವೊಂದು ಸೃಷ್ಟಿಯಾಗುವುದೇ ಕೇಂದ್ರ ಕಥಾವಸ್ತು. ಕಥೆ-ನಿರ್ದೇಶನ ಎರಡೂ ಸೊಗಸಾಗಿತ್ತು. ಕೆಲವು ಚಿತ್ರಿಕೆಗಳು ಪೈಂಟಿಂಗ್ ಅನ್ನುವಂತೆ ಮನಸ್ಸಿನಲ್ಲಿ ಉಳಿದವು. ಮತ್ತೆ ಹಂಸಲೇಖ ಅಪರೂಪ ಅನ್ನಿಸುವಂಥ ಸಂಗೀತ ನೀಡಿದ್ದರು. 'ಅನುರಾಗದಲೆಗಳ ಮೇಲೆ ಸಂಗೀತ ಸ್ವರಗಳ ಮಾಲೆ...', 'ಸಾಗರವೇ ಸಾಗರವೇ ಕಂಬನಿಯಾ ಅಗರವೇ...' ಗೀತೆಗಳು ಮೆಲುಕು ಹಾಕುವಂತಿದ್ದವು. ಚಿತ್ರದ ನಾಯಕನೇ ಗಾಯಕ. ಆತ ಒಂದು ಗಾಯನ ಕಾರ್ಯಕ್ರಮದಲ್ಲಿ ಹಾಡುವ ಗೀತೆಯು 'ನಾನು ಹಾಡೋ ಹಾಡು ಈಗ ನಂದಲ್ಲ, ನೀವು ಕೇಳೋ ಮುರಳೀ ಗಾನ ನಿಮಗಲ್ಲ, ಅರಳೋ ಮುಂಚೇನೇ ಬಾಡೋ ಹೂಗಳಿಗೆ ಪ್ರಾರ್ಥನೆ ಗೀತೆಯಿದು...' ಎಂಬ ಸಾಲುಗಳು ಸಂದರ್ಭಕ್ಕೆ ಹೊಂದುವಂತಿದ್ದವು. ಭಾವಪರವಶತೆ ಕೇಳುಗನನ್ನು ಗದ್ಗದಿಸುವಂತೆ ಮಾಡುತ್ತಿತ್ತು. ಈ ಚಿತ್ರಕ್ಕಾಗಿ ರಾಜಕುಮಾರ್ ಹಾಡಿದ್ದ 'ಜೀವ ಕೋಗಿಲೆ ಇಂಚರ, ಅದಕೆ ದೇಹವೆಂಬುದೇ ಪಂಜರ...' ಗೀತೆ ಸಾವು ಬದುಕಿನ ನಡುವೆ ಸೆಣಸಾಡುವ ಪಾತ್ರವನ್ನು ಕುರಿತು ಹೇಳುವ ರೀತಿ ಕೂಡಾ ಭಾವುಕವಾಗಿತ್ತು. ರಾಜಕುಮಾರ್ ಅವರ ವೈಷ್ಣವಿ ಸಂಸ್ಥೆ ನಿರ್ಮಿಸಿದ ಈ ಚಿತ್ರ ನಿರೀಕ್ಷಿಸಿದ ಪ್ರಮಾಣದಲ್ಲಿ ಅಥವಾ ಆ ಚಿತ್ರ ಇದ್ದ ಉತ್ತಮ ಗುಣಮಟ್ಟಕ್ಕೆ ತಕ್ಕ ಹಾಗೆ ಓಡಲಿಲ್ಲ. ಆದರೆ ರಾಜಕುಮಾರ್ ಈ ತರುಣನ ಪ್ರತಿಭೆಯನ್ನು ಸರಿಯಾಗಿ ಗುರುತಿಸಿದ್ದರು. "ಮುಂದೆ ನಾನು ಅಭಿನಯಿಸುವುದೆ ಅದರೆ ನೀವೇ ನಿರ್ದೇಶಿಸಬೇಕು" ಅಂದಿದ್ದರು. ಅದೇ ರೀತಿ ಅವರ 'ಶಬ್ದವೇಧಿ' ಚಿತ್ರದ ನಿರ್ದೇಶನವನ್ನು ನಾರಾಯಣ್‌ಗೇ ವಹಿಸಿದರು.

ಇದೇ ಆಸುಪಾಸಿನಲ್ಲಿ ಬಂದ ಇನ್ನೊಂದು ಚಿತ್ರ 'ಶೃಂಗಾರಕಾವ್ಯ'. ಮಹೇಂದರ್ ನಿರ್ದೇಶಿಸಿದ್ದು. ಇದೂ ಕೂಡಾ ಬ್ಲಡ್ ಕ್ಯಾನ್ಸರ್ ಕುರಿತ ಕಥೆಯೇ ಆಗಿತ್ತು. ಹಾಗೆ ನೋಡಿದರೆ ತಮಿಳಿನ 'ಗೀತಾಂಜಲಿ' ಚಿತ್ರದ ಸ್ಫೂರ್ತಿಯಿಂದ ಒಂದು ಕಥೆ ಸಿದ್ಧ ಮಾಡಿಕೊಂಡಿದ್ದ ನಾರಾಯಣ್ ತಮ್ಮ ಮೊದಲ ಚಿತ್ರದ ನಿರ್ಮಾಪಕ-ನಟ ರಘುವೀರ್ ಅವರಿಗಾಗಿ ನಿರ್ದೇಶಿಸಬೇಕಿತ್ತು. ಕಾರಣಾಂತರದಿಂದ ಹಾಗಾಗಲಿಲ್ಲ. ಈ ಅಸಮಾಧಾನವನ್ನು ಬಳಸಿಕೊಂಡ ರಘುವೀರ್ ನಿರ್ಮಿಸಿದ್ದು 'ಶೃಂಗಾರಕಾವ್ಯ'. ಅದೇ ಬಗೆಯ ಕಥೆಗೆ ಮಹೇಂದರ್ ಸಣ್ಣಪುಟ್ಟ ಬದಲಾವಣೆ ಮಾಡಿರಬಹುದು. ರಘುವೀರ್-ಸಿಂಧು ಪಾತ್ರ ಮಾಡಿದರು. ಮುಂದೆ ಸಿಂಧು ಆತನ ಮಡದಿಯೂ ಆದರು. ಈ ಚಿತ್ರದಲ್ಲಿ ಥ್ರಿಲ್ಲರ್ ಮಂಜು ನಿರ್ದೇಶಿಸಿದ ಸಾಹಸ ಬಹಳಷ್ಟು ಗಮನ ಸೆಳೆದಿತ್ತು.

ಈ ಚಿತ್ರಕ್ಕೂ ಹಂಸಲೇಖ ಸಂಗೀತ ನೀಡಿದ್ದರು. 'ಅಂಬರ ಚುಂಬಿತ ಪ್ರೇಮಾ ಪ್ರೇಮಾ...' ಮತ್ತು 'ಓ ಮೇಘವೇ ಮೇಘವೇ ಓಡಿ ಬಾ...' ಗೀತೆಗಳು ಚೆನ್ನಾಗಿದ್ದವು.

'ಅಂಗೈಯಲ್ಲಿ ಅಪ್ಸರೆ' ಸಿ.ಆರ್.ಸಿಂಹ ನಿರ್ದೇಶನದ ಚಿತ್ರ. ಚೊಕ್ಕವಾದ ಜನಪದ ಕಥೆ. ಲವಲವಿಕೆಯಿಂದ ಚಿತ್ರಿಸಲಾಗಿತ್ತು. ಹಾಸ್ಯ, ಲಘು ಸಾಹಸ, ಫ್ಯಾಂಟಸಿ ಇದ್ದ ಚಿತ್ರ. ಗೀತೆಗಳು, ನೃತ್ಯ, ಸುಂದರವಾದ ಸೆಟ್‌ಗಳು ಹಿನ್ನೆಲೆಯಲ್ಲಿ ಕಣ್ಣಿಗೆ ತಂಪೆನಿಸುವ ಬಣ್ಣಗಳನ್ನು ಬಳಸಿ ಚಿತ್ರಿಸಿದ್ದ ಚಿತ್ರಿಕೆಗಳಿಂದಾಗಿ ಒಂದು ಸುಂದರ ಅನುಭವವನ್ನಂತೂ ಕೊಡುತ್ತಿತ್ತು. ಆದರೆ ಚಿತ್ರ ಯಶಸ್ವಿಯಾಗಲಿಲ್ಲ. ಅದು ತೆರೆಗೆ ಬಂದ ಸಮಯ, ಆ ಹೊತ್ತಿನ ಅಭಿರುಚಿಯ ಭರಾಟೆಯೇ ಬೇರೆಯಾದ್ದರಿಂದ 'ಅಂಗೈಯಲ್ಲಿ ಅಪ್ಸರೆ' ಯಾರಿಗೂ ಬೇಕಾಗಲಿಲ್ಲ. ಆದರೆ ಈ ಆಲೋಚನೆಯನ್ನು ಮೆಚ್ಚಿಕೊಂಡ ನಿರ್ದೇಶಕರೊಬ್ಬರು ತೆಲುಗಿನಲ್ಲಿ ಅಂಥದೇ ಧಾಟಿಯ ಇನ್ನಷ್ಟು ಒತ್ತಾದ ಕಥೆಯನ್ನು ಅಬ್ಬರದಲ್ಲೇ ಚಿತ್ರಿಸಿ ಅತ್ಯಂತ ಯಶಸ್ವಿಯೂ ಆದರು.

ಅಂಬರೀಷ್-ಸುಮಲತಾ ವಿವಾಹವಾದ ಮೇಲೆ ಜೊತೆಯಾಗಿ ನಟಿಸಿದ ಚಿತ್ರ 'ಒಲವಿನ ಕಾಣಿಕೆ'. ಅದೊಂದೇ ಹೆಗ್ಗಳಿಕೆ. ಚಿತ್ರ ನಡೆಯಲಿಲ್ಲ. ಪ್ರೇಕ್ಷಕರ ಮನಸ್ಸುಗಳು ಬಹಳ ಬೇರೆಯಾಗಿ ಯೋಚಿಸುತ್ತವೆ. ಅವರ ಮಟ್ಟಿಗೆ ಕಲಾವಿದರ ವೈಯಕ್ತಿಕ ಬದುಕಿನ ಸ್ವಾತಂತ್ರ್ಯ ಕುರಿತು ಎಂದೂ ಗಂಭೀರವಾಗಿ ಯೋಚಿಸುವುದಿಲ್ಲ. ಅಂಬರೀಷ್‌ರನ್ನು ಅಪೇಕ್ಷಿಸುತ್ತಿದ್ದ ಪ್ರೇಕ್ಷಕವರ್ಗ ಅವರ ಕನಸಿನ, ಕಲ್ಪನೆಯ ರೀತಿಗಿಂತ ಬೇರೆಯಾಗಿ ಒಬ್ಬ ತಾರೆಯ ಗಂಡನೆಂಬ ಚೌಕಟ್ಟಿನಲ್ಲಿ ನಿಲ್ಲಿಸಿಕೊಳ್ಳಲು ಒಪ್ಪಲಿಲ್ಲ. ಅದೇ ರೀತಿ ಸುಮಲತಾ ಅವರನ್ನು ಅಂಬರೀಷ್‌ರ ಹೆಂಡತಿಯೆಂಬುದನ್ನು ಮರೆತು ಚಿತ್ರದಲ್ಲಿ ನೋಡಿ ಸಂಭ್ರಮಿಸುವುದು ಸಾಧ್ಯವಾಗಲಿಲ್ಲ. ಕಲಾವಿದರ ಬದುಕು-ವೃತ್ತಿ ಹೇಗೆ ಜನರ ಇಷ್ಟಾನಿಷ್ಟಗಳ ಸುಳಿಯಲ್ಲಿ ಕಳೆದೇಹೋಗುತ್ತವೆ, ಮೇಲೆ ಕಾಣುವ ಗತ್ತು-ಗೈರತ್ತೆಲ್ಲ ಬರೀ ಪೊಳ್ಳು ಎಂಬುದನ್ನು ಇಂಥ ಕೆಲವು ಘಟನೆಗಳ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಬಹುದೇನೋ.

ವೈ.ಕೃಷ್ಣರಾಜು ನಿರ್ದೇಶಿಸಿ, ನಾಯಕನಟನೂ ಆಗುವ ಸಾಹಸ ಮಾಡಿದ್ದು 'ಖೈದಿ ನಂ. ೪೦೭' ಚಿತ್ರದಿಂದ. ಅದು ಸಾಹಸವಾಗಿಯಷ್ಟೇ ಉಳಿಯಿತು. ಯಾವ ಸಂಚಲನವನ್ನೂ ಉಂಟುಮಾಡಲಿಲ್ಲ. ೧೯೯೩ ರಲ್ಲಿ ಬಿಡುಗಡೆ ಆಯಿತು.



(ಚಿತ್ರ ೪೦) 'ಅಂಗೈಲಿ ಅಪ್ಸರೆ' ಚಿತ್ರದಲ್ಲಿ ಸುಪ್ರಿಯಾ



(ಚಿತ್ರ ೪೧) 'ಮುದ್ದಿನ ಮಾವ' ಚಿತ್ರದಲ್ಲಿ ಶಶಿಕುಮಾರ್ ಮತ್ತು ಎಸ್.ಪಿ.ಬಾಲಸುಬ್ರಹ್ಮಣ್ಯಂ

ರವಿಚಂದ್ರನ್ ಅಭಿನಯದ, ಡಿ.ರಾಜೇಂದ್ರಬಾಬು ನಿರ್ದೇಶಿಸಿದ ಚಿತ್ರ 'ಅಣ್ಣಯ್ಯ' ಹೊಸ ಅನುಭವ ಕೊಟ್ಟಿತು. ಅದು ತಮಿಳಿನ 'ಎನ್ ಚಿನ್ನ ರಾಸಾ' ಚಿತ್ರದ ನಕಲು. ಆದರೂ ಚಿತ್ರೀಕರಿಸುವಾಗ ಮಾಡಿಕೊಂಡ ಬದಲಾವಣೆಗಳು, ಎಲ್ಲಕ್ಕಿಂತ ಮಿಗಿಲಾಗಿ ಅವೆಂಥ ಪುನರವತರಣಿಕೆಯೇ ಆದರೂ ಕಲಾವಿದನ ಅಭಿನಯ ಸ್ವತಂತ್ರವಾಗಿಯೇ ಇರಬೇಕಷ್ಟೇ. ಆ ದೃಷ್ಟಿಯಿಂದ 'ಅಣ್ಣಯ್ಯ' ಚಿತ್ರದಲ್ಲಿ ಕಲಾವಿದರ ಸಾಮರ್ಥ್ಯವನ್ನು ಸರಿಯಾಗಿ ದುಡಿಸಿಕೊಂಡಿದ್ದರು ಡಿ.ರಾಜೇಂದ್ರಬಾಬು. ಹಿಂದಿ ತಾರೆ ಅರುಣಾ ಇರಾನಿ ಮಲತಾಯಿಯ ಪಾತ್ರದಲ್ಲಿ ಸಾಟಿ ಇಲ್ಲದ ಅಭಿನಯ ನೀಡಿದ್ದರೆ, ಧೀರೇಂದ್ರಗೋಪಾಲ್ ವಿಶಿಷ್ಟವಾಗಿ ಕಾಣಿಸಿದ್ದರು. ಪರಾಕಾಷ್ಠೆಯ ಸನ್ನಿವೇಶಗಳು ಮೆಲೊಡ್ರಾಮಾ ಅನ್ನಿಸಿದವಾದರೂ ಒಟ್ಟಾರೆ ಶ್ರೀಮಂತ ಚಿತ್ರ. ಅಪರೂಪವೆನ್ನಿಸುವ ಕೆಲವು ಚಿತ್ರಿಕೆಗಳು ಇದ್ದವು. ಹಿನ್ನೆಲೆ ಸಂಗೀತ ಚೆನ್ನಾಗಿತ್ತು. 'ಬೊಂಬೆ ಬೊಂಬೆ..' ಗೀತೆಗೆ ಸೊಗಸಾದ ಸೆಟ್ ಹಾಕಿದ್ದರು. ಜನಪ್ರಿಯ 'ಕಮಾನು ಡಾರ್ಲಿಂಗ್ ಅಯ್ಯೋ ಅಯ್ಯೋ...' ಹಾಡಿನ ಇಡೀ ಚಿತ್ರಣದಲ್ಲಿ ಕಾರುಗಳನ್ನು ಬಳಸಿ ವಿನ್ಯಾಸ ಮಾಡಿಕೊಂಡ ರೀತಿ ಚೆನ್ನೆನಿಸಿತ್ತು.

ವ್ಯಾಪಾರೀ ಅನಿಲ್ ಚಿತ್ರರಂಗದ ಹುಚ್ಚಿಗೆ ಬಿದ್ದು ನಿರ್ಮಿಸಿದ ಹಾಸ್ಯ ಚಿತ್ರ 'ಆಹಾ ಬ್ರಹ್ಮಚಾರಿ'. ಅವರ ಹೆಂಡತಿ 'ಆರ್ತಿ', ನಿಜ ಜೀವನದಲ್ಲಿ ಆರತಿ, ಚಿತ್ರದಲ್ಲಿ ಅವರ ಹೆಂಡತಿಯಾಗಿಯೇ ಅಭಿನಯಿಸಿದ್ದರು. ಗುರುಪ್ರಸಾದ್ ನಿರ್ದೇಶನವಿದ್ದ ಈ ಚಿತ್ರದಲ್ಲಿ ಒಂದೆರಡು ಹಾಡುಗಳು ಚೆನ್ನಾಗಿದ್ದವು. ಮುಂದೆಯೂ ಅನಿಲ್ ಚಿತ್ರ ಮಾಡಿದರು. ಪ್ರಚಾರ ಮಾಡಿಕೊಂಡರು. ಪ್ರಿಂಟ್ ಮಾತ್ರ ಹೊರಗೆ ಬರಲಿಲ್ಲ.

ಪ್ರಚಾರಕರ್ತ ಡಿ.ವಿ.ಸುಧೀಂದ್ರ ಅವರಿಗೆ ಚಿತ್ರರಂಗ ಹೊಸದಲ್ಲ. ಚಿತ್ರರಂಗ-ಪತ್ರಿಕೆಗಳ ಮಧ್ಯೆ ಸಂಪರ್ಕ ಕಲ್ಪಿಸುವ ವಿಧಾನವನ್ನು - ವಾಣಿಜ್ಯೇತರ - ಪ್ರಚಾರ - ಅವರು ಪ್ರಾರಂಭಿಸಿದರು. ಈಗ ಅಂಥ ಪ್ರಚಾರಕರ್ತರ ಒಂದು ಗುಂಪೇ ಇದೆ. ಅವರಿಗಿರುವ ಪರಿಚಯ-ಅನುಭವಗಳ ಹಿನ್ನೆಲೆಯಲ್ಲಿ ಅವರಿವರ ಜೊತೆಗೂಡಿ ಚಿತ್ರ ನಿರ್ಮಾಣ ಮಾಡಿದ್ದಾಗಿತ್ತು. ಸುಧೀಂದ್ರ ಕೆಲವೊಮ್ಮೆ 'ಪ್ಯಾಕೇಜ್' ರೀತಿಯಲ್ಲಿ ವ್ಯವಹಾರ ಮಾಡಿದ್ದೂ ಇದೆ. ನಿರ್ಮಾಪಕರು ಇಂತಿಷ್ಟು ಎಂದು ಹಣ ಕೊಟ್ಟರೆ ಎಲ್ಲವನ್ನೂ ಅವರೇ ನಿರ್ವಹಿಸಿ ಚಿತ್ರ ಮಾಡಿ ಮೊದಲ ಪ್ರತಿ ಕೈಯಲ್ಲಿಡುತ್ತಾರೆ. ಹಾಗೆ ಲಹರಿ ಕ್ಯಾಸೆಟ್ ಸಂಸ್ಥೆಗೆ ಚಿತ್ರವನ್ನು ಮಾಡಿಕೊಟ್ಟು ಯಶಸ್ವಿಯೂ ಆಗಿದ್ದಾರೆ. ಸುಧೀಂದ್ರ ಮತ್ತವರ ಸಹಾಯಕರ ಸಾಹಸವಾಗಿ ತೆರೆಗೆ ಬಂದ ಚಿತ್ರ 'ಗುಂಡನ ಮದುವೆ'. ಅವರ ಎಂದಿನ ಆಸಕ್ತಿಯಾದ ಹಾಸ್ಯಕ್ಕೆ ಆದ್ಯತೆ ಇದ್ದ ಚಿತ್ರ. ಸುಧೀಂದ್ರ ಅವರ ಬಗ್ಗೆ ಪ್ರೀತ್ಯಾದರವನ್ನುಳ್ಳ ಜಗ್ಗೇಶ್ ಅಭಿನಯಿಸಲು ಒಪ್ಪಿದರು, ಬಂದು ಸಹಕರಿಸಿದರು. ತಮ್ಮ ಪ್ರವೇಶದ ಪ್ರಾರಂಭದ ದಿನಗಳಲ್ಲಿ ಬೆಂಬಲವಾಗಿ ನಿಂತು, ಧೈರ್ಯ ತುಂಬಿದ್ದರೆಂಬ ಕೃತಜ್ಞತೆಯಿಂದ ವಿನಯಾ ಪ್ರಸಾದ್ ಆಕೆಯ ಇಮೇಜ್‌ಗೆ ಒಗ್ಗದ ಪ್ರೌಢೆಯ ಪಾತ್ರದಲ್ಲಿ ಅಭಿನಯಿಸಿ ಸಹಕರಿಸಿದರು. ಮುಹೂರ್ತದ ದಿನವೇ ರಾಜಕುಮಾರ್ ಗಿಡ ನೆಟ್ಟು, ಅವಕ್ಕೆಲ್ಲ ಕರ್ನಾಟಕದ ಪ್ರಸಿದ್ಧ ವ್ಯಕ್ತಿಗಳ ಹೆಸರನ್ನಿಡುವ ದೃಶ್ಯವನ್ನು ಚಿತ್ರೀಕರಿಸಲಾಗಿತ್ತು. ಹಾಸ್ಯದ ಲೇಪವಿದ್ದರೂ ಅಂತರ್ಯದಲ್ಲಿ ಪರಿಸರ ಪ್ರೇಮವನ್ನು ತುಂಬಿಕೊಂಡ ಚಿತ್ರವಿದು. 'ಗುಂಡನ ಮದುವೆ' ತಳ್ಳಿಹಾಕುವಂಥ ಚಿತ್ರವಾಗಿರಲಿಲ್ಲ. ಜಿ.ಕೆ.ಮುದ್ದುರಾಜ್ ನಿರ್ದೇಶಿಸಿದ್ದರು. ಒಳ್ಳೆಯ ಹಾಡುಗಳಿದ್ದವು.

ಸಾಯಿಪ್ರಕಾಶ್ ನಿರ್ದೇಶನದ ರಿಮೇಕ್ 'ಮುದ್ದಿನ ಮಾವ'ದಲ್ಲಿ ಒಳ್ಳೆಯ ಕಥೆ ಇತ್ತು. ಮುಖ್ಯವಾಗಿ ''ಇಲ್ಲಿಯ ಮಾವನ ಪಾತ್ರ ರಾಜಕುಮಾರ್ ಅಂಥ ಕಲಾವಿದರು ನಿರ್ವಹಿಸುವಷ್ಟು ಚೆನ್ನಿದ್ದು, ಅವರನ್ನು ಕರೆತರಬಲ್ಲೆವೆ ? ಆದರೆ ಆ ಜಾಗದಲ್ಲಿ ಬಾಲಸುಬ್ರಹ್ಮಣ್ಯಂ ಇದ್ದಾರೆ. ಅವರ ಪ್ರೌಢ ಭಾವ ಪ್ರೇಕ್ಷಕನನ್ನು ತೃಪ್ತಿ ಪಡಿಸಬಲ್ಲುದು ಎಂಬ ನಂಬಿಕೆ ನಮಗಿದೆ'' ಎಂದಿದ್ದರು ಸಾಯಿಪ್ರಕಾಶ್. ಆ ಮಟ್ಟಿಗೆ ಬಾಲಸುಬ್ರಹ್ಮಣ್ಯಂ ಜನಪ್ರಿಯತೆಯೂ ಅವರಿಗೆ ಸಹಕಾರಿಯೇ ಅನ್ನಬಹುದು. ಈ ಚಿತ್ರದಲ್ಲಿ ''ರಾಜಕುಮಾರ್ ಅವರು ನನಗೆ ಹಾಡುತ್ತಾರೆ. ಅದು ನನ್ನ ಭಾಗ್ಯ'' ಎಂದು ಬಾಲಸುಬ್ರಹ್ಮಣ್ಯಂ ಭಾವುಕರಾಗಿ ಹೇಳಿದ್ದರು. 'ದೀಪಾವಳಿ ದೀಪಾವಳಿ ಗೋವಿಂದ ಲೀಲಾವಳಿ...' ಹಾಗೂ 'ಕಣ್ಣಪ್ಪ ಕೊಟ್ಟನು ಕಣ್ಣನು, ನನ್ನಪ್ಪ ಕೊಡುವೆನು ನನ್ನನು...' ಹಾಡುಗಳನ್ನು ರಾಜಕುಮಾರ್ ಹಾಡಿದ್ದರು. ಬಾಲಸುಬ್ರಹ್ಮಣ್ಯಂ ಕನ್ನಡದ ಚಿತ್ರಗಳಲ್ಲಿ ಆಗ-ಈಗ ಗಾಯಕನಾಗಿ ಮತ್ತೆ ಕೆಲವು ಪಾತ್ರಗಳಲ್ಲೂ ಕಾಣಿಸಿಕೊಂಡಿದ್ದರು. ಈ ಚಿತ್ರದಲ್ಲಿ ಅವರು ಪೂರ್ಣಪ್ರಮಾಣದಲ್ಲಿ ಶೀರ್ಷಿಕೆಯ ಪಾತ್ರದಲ್ಲೇ ಕಾಣಿಸಿಕೊಂಡು ಆ ಪಾತ್ರಕ್ಕೆ ನ್ಯಾಯ ಸಲ್ಲಿಸಿದ್ದರು ಕೂಡ. ಈ ಚಿತ್ರವನ್ನು ನಿರ್ಮಿಸಿದ ಪ್ರಭಾಕರ್ ಅವರಿಗೆ ಭಾರಿ ಗಳಿಕೆಯಲ್ಲದಿದ್ದರೂ ನಷ್ಟವೂ ಆಗಲಿಲ್ಲ. ಈ ಚಿತ್ರಕ್ಕೂ ಹಂಸಲೇಖ ಸಂಗೀತವಿತ್ತು. 'ಆರಾಧನಾ ಪ್ರೇಮಾರಾಧನಾ...' ಗೀತೆಯೂ ಜನಪ್ರಿಯವಾಯಿತು. ಚಿತ್ರದ ಹಾಸ್ಯ ಮಾತ್ರ ಮತ್ತೆಮತ್ತೆ ಚರ್ಚಿಸುವಂಥದ್ದು. ಒಮ್ಮೊಮ್ಮೆ ತುಂಬ ರೂಕ್ಷ ಎನ್ನಿಸುತ್ತದಾದರೂ ಕೆಲವು ಕಾರಣಗಳಿಗಾಗಿ ಮುಖ್ಯ. ದ್ವಾರಕೀಶ್ ಭಿಕ್ಷುಕ. ತುಂಡು ಗೌನು ಧರಿಸಿ, ಭಿಕ್ಷಾ ಪಾತ್ರೆ ಹಿಡಿದು ಅವರು ಭಿಕ್ಷೆ ಕೇಳುವ ರೀತಿಯೇ ಪಂಚತಾರಾ ಶೈಲಿಯದ್ದು. ದೊಡ್ಡಣ್ಣ ಮಾತು ಮಾತಿಗೆ ದ್ವಾರಕೀಶ್‌ರನ್ನು ಒದ್ದು ಮಾತಾಡಿಸುವ ರೀತಿ. ಆ ಮಾತಿನಲ್ಲೊಂದು ಅರ್ಥ. ಒಂದು ದೃಶ್ಯದಲ್ಲಿ ದೊಡ್ಡಣ್ಣ ಜಗಲಿ ಮೇಲಿದ್ದ ತುಂಡು ವಸ್ತ್ರದಿಂದ ಮುಖ ಒರೆಸಿಕೊಂಡಾಗ, ದ್ವಾರಕೀಶ್ ಬಂದು 'ಎಲ್ಲಿ ನನ್ನ ಡ್ರೆಸ್ಸು' ಎನ್ನುತ್ತಾರೆ. ದೊಡ್ಡಣ್ಣ ಅದನ್ನು ಕೊಟ್ಟು 'ಮುಖ ಒರೆಸಿಕೊಂಡೆ' ಅಂದಾಗ, ಅದನ್ನೇ ಲಂಗೋಟಿ ಹಾಕಿಕೊಂಡು 'ಅದರಲ್ಲಿ ಒರೆಸಿದ್ದರಿಂದಲೇ ನಿನ್ನ ಮುಖ ಲಕಲಕ ಅಂತ ಹೊಳೀತಿದೆ' ಅಂತಾರೆ. ಇಂಥ ಹಲವು ದೃಶ್ಯಗಳಿವೆ. ದ್ವಾರಕೀಶ್ ಇಂಥ ಪಾತ್ರ ಒಪ್ಪಿಕೊಂಡದ್ದೇ ಆಶ್ಚರ್ಯದ ಸಂಗತಿ.

'ನಾನೆಂದೂ ನಿಮ್ಮವನೇ' ದಶಮಿ ಸಂಸ್ಥೆ ತಯಾರಿಸಿದ ಮೊದಲ ಚಿತ್ರ. ಹತ್ತು ಮಂದಿ ತಂತ್ರಜ್ಞರು ಒಟ್ಟಿಗೇ ಸೇರಿ ನಿರ್ಮಿಸಿದ್ದ ಈ ಚಿತ್ರದಲ್ಲಿ ವಿಷ್ಣುವರ್ಧನ್



(ಚಿತ್ರ ೪೨) 'ನಾನೆಂದೂ ನಿಮ್ಮವನೇ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಶ್ರೀಶಾಂತಿ



(ಚಿತ್ರ ೪೩) 'ಕೊಲ್ಲೂರು ಶ್ರೀ ಮೂಕಾಂಬಿಕೆ' ಚಿತ್ರದಲ್ಲಿ ದೊಡ್ಡಣ್ಣ ಮತ್ತು ಶ್ರೀಜ್ಯೋತಿ

ಅಭಿನಯವಿತ್ತು. ಚಿತ್ರದಲ್ಲಿ ಹೃದಯ ಬೇನೆಯಿದ್ದ ಸ್ತ್ರೀಯೊಬ್ಬಳು ತನ್ನ ಮಗುವಿಗೆ ''ಇವನೇ ಅಪ್ಪ'' ಎಂದು ವಿಷ್ಣು ಅವರನ್ನು ತೋರಿಸಿಬಿಡುವುದರಿಂದಾಗಿ ವಿಷ್ಣು ಪಾತ್ರ ವಿಪರೀತ ಸಮಸ್ಯೆಗೆ ಸಿಕ್ಕಿಕೊಳ್ಳುತ್ತದೆ. ಸನ್ನಿವೇಶ ವಿಪರೀತಕ್ಕೆ ದಾರಿ ಮಾಡುತ್ತದೆ. ಜೊತೆಗೆ ಮಾನವ ಸಹಜ ಭಾವುಕತೆ, ಮಗುವಿನ ಬಗ್ಗೆ ಬೆಳೆಯುವ ಪ್ರೀತಿ-ಕಾಳಜಿಗಳು ಅಪಾರ್ಥಕ್ಕೆಡೆ ಮಾಡಿ ಎಲ್ಲವೂ ಕಗ್ಗಂಟಾಗುತ್ತದೆ. ಇವೆಲ್ಲವನ್ನೂ ಬಿಡಿಸಿಕೊಂಡು ತಿಳಿಯಾಗಿಸಿಕೊಳ್ಳುವುದು ಕೇಂದ್ರವಾದರೂ, ಇತರ ವಿವರಗಳು ಹಲವು ದಿಕ್ಕಿಗೆ ಕೊಂಡೊಯ್ದು ಸರಸ-ವಿರಸಗಳಿಗೆ ದಾರಿ ಮಾಡುತ್ತವೆ. ಸಂಗೀತ ರಾಜನ್-ನಾಗೇಂದ್ರ ಅವರದ್ದು. 'ಸಂಡೆ ಸರೋಜ ಮಂಡೇ ಮಿಸ್ ರೋಜಾ...' ಗೀತೆ ವಿಷ್ಣು ಪಾತ್ರದ ಆರಂಭದ ಚಾಂಚಲ್ಯವನ್ನು ವಿನೋದಮಯವಾಗಿ ಹೇಳಲು ಬಳಸಿದ ಗೀತೆ. ಚಿತ್ರದ ಕಥೆಯ ಸ್ವಾಮ್ಯ ಕುರಿತು ವಿವಾದಗಳು ಆದವು. ದಶಮಿ ಚಿತ್ರ ಲಾಂಛನದಲ್ಲಿ ಸಹಕಾರ ಯೋಜನೆ ರೀತಿಯಲ್ಲಿ ನಿರಂತರವಾಗಿ ಚಿತ್ರಗಳನ್ನು ನಿರ್ಮಿಸುವುದಾಗಿ ಘೋಷಿಸಿದ ಇವರು ಇದೊಂದು ಚಿತ್ರದ ನಂತರ ಬೇರೆ ಬೇರೆಯಾದರು.

ಇಂಥದೇ ಒಂದು ಪ್ರಯತ್ನ ೧೯೬೦ ರಲ್ಲಿ ಕನ್ನಡ ಚಲನಚಿತ್ರ ಕಲಾವಿದರ ಸಂಘ ಲಾಂಛನದಲ್ಲಿ 'ರಣಧೀರ ಕಂಠೀರವ' ಚಿತ್ರದ ಮೂಲಕ ನಡೆದಿತ್ತು. ಒಂದೇ ಚಿತ್ರಕ್ಕೆ ಇದು ಕೊನೆಯಾಯಿತು. ನಂತರ ೧೯೮೨ ರಲ್ಲಿ ಪಿ.ಎಸ್.ಪ್ರಕಾಶ್ ನೇತೃತ್ವದಲ್ಲಿ 'ಗರುಡ ರೇಖೆ' ಚಿತ್ರ ನಿರ್ಮಿಸಿದ್ದು ನಾಲ್ಕು ಜನರು. ನಂತರ ಆ ತಂಡದಿಂದ ಮತ್ತೊಂದು ಚಿತ್ರ ತಯಾರಾಗಲಿಲ್ಲ. ಅವರ ಮುಂದಿನ ಚಿತ್ರದ ಹೊತ್ತಿಗೆ ನಾಲ್ಕರ ಸಂಖ್ಯೆ ಕುಗ್ಗಿತ್ತು. ಅನಂತರ ಅದೂ ಇಲ್ಲ. ೧೯೭೫ ರಲ್ಲಿ 'ಕಂಕಣ' ಚಿತ್ರವೂ ಸಹಕಾರ ತಂತ್ರದಲ್ಲಿ ತಯಾರಾಯಿತು. ಆದರೆ ಹಣ ತೊಡಗಿಸಿದವರು ತಂತ್ರಜ್ಞರಾಗಿರಲಿಲ್ಲ. ೨೦ ಜನ ತಲಾ ೧೦ ಸಾವಿರ ಹಾಕಿ ನಿರ್ಮಿಸಿದ್ದರು. ಆ ತಂಡವೂ ಮುಂದೆ ಚಿತ್ರ ಮಾಡಲಿಲ್ಲ. 'ಬೆಳ್ಳಿ ಬೆಳಕು' ಕರ್ನಾಟಕ ಹಾಲು ಮಾರಾಟಗಾರರ ಒಕ್ಕೂಟದ ನಿರ್ಮಾಣ, 'ಲೀಡರ್ ವಿಶ್ವನಾಥ್' ಮಣಿಮುರುಗನ್ ನಿರ್ದೇಶನದ ಈ ಚಿತ್ರ ಪ್ರೀಮಿಯರ್ ಸ್ಟುಡಿಯೋದ ಕಾರ್ಮಿಕರ ನೆರವಿನಿಂದ ತಯಾರಾಯಿತು. ಎಸ್.ಎಸ್.ಶಂಕರ್ ನೇತೃತ್ವದಲ್ಲಿ ೧೯೯೭ ರಲ್ಲಿ 'ಉಲ್ಟಾ ಪಲ್ಟಾ' ಚಿತ್ರ ನಿರ್ಮಿಸಿದನಂತರ ತಂಡದಿಂದ ಮತ್ತೆ ಚಿತ್ರ ನಿರ್ಮಾಣದ ಪ್ರಯತ್ನ ನಡೆಯಲಿಲ್ಲ. ಈ ಶತಮಾನದ ಕೊನೆಯ ವರ್ಷದಲ್ಲಿ ಸಹಕಾರ ತತ್ವದ ಮೇಲೆಯೇ 'ಮುನ್ನುಡಿ' ಚಿತ್ರ ತಯಾರಾಗಿದೆ. ಈ ಐದು ಉದಾಹರಣೆಗಳನ್ನು ಗಮನಿಸಿದರೆ ಚಿತ್ರರಂಗದಂಥ ಪರಿಳಿತಗಳ ಮಾಧ್ಯಮದಲ್ಲಿ 'ಸಹಕಾರ ತತ್ವ' ಯಶಸ್ವಿಯಾಗಲಾರದು ಅನ್ನಿಸುತ್ತದೆ.

೧೯೯೩ ರಲ್ಲಿ ಪೌರಾಣಿಕ ಅಥವಾ ಭಕ್ತಿ ಪ್ರಧಾನ ಎಂದು ಹೇಳಬಹುದಾದ ನಾಲ್ಕು ಚಿತ್ರಗಳು ತೆರೆಗೆ ಬಂದವು. ಅವೇ 'ಕೊಲ್ಲೂರು ಶ್ರೀ ಮೂಕಾಂಬಿಕೆ', 'ಭಗವಾನ್ ಶ್ರೀ ಸಾಯಿಬಾಬಾ', 'ಮಣಿಕಂಠನ ಮಹಿಮೆ', 'ದುರ್ಗಾಪೂಜೆ'.

'ಕೊಲ್ಲೂರು ಶ್ರೀ ಮೂಕಾಂಬಿಕೆ'ಯನ್ನು 'ಕವಿರತ್ನ ಕಾಳಿದಾಸ'ದ ಹಿಂದೆಯೇ ನಿರ್ಮಾಪಕರೊಬ್ಬರು ಚಿತ್ರಿಸಲು ಪ್ರಯತ್ನಿಸಿ ಕೊಂಚ ಚಿತ್ರೀಕರಣವೂ ನಡೆದು ನಿಂತುಹೋಗಿತ್ತು. ಮತ್ತೊಬ್ಬರು ಪ್ರಯತ್ನಿಸಿದಾಗಲೂ ಆಗಲಿಲ್ಲ. ಕಡೆಗೆ ರೇಣುಕಾ ಶರ್ಮರೇ ನಿರ್ಮಾಣ ಮಾಡುವ ಹೊಣೆ ಹೊತ್ತು ಕಾರ್ಯ ಮುಗಿಸಿದರು. ಚಿತ್ರಕ್ಕೆ ನಾಗರಾಜರಾಯರ ಅಪೂರ್ವ ಕಲ್ಪನೆಯ ಕಲಾನಿರ್ದೇಶನವಿತ್ತು. ಟ್ರಿಕ್ ಷಾಟ್ಸ್‌ಗೆ ಅಪಾರ ಅವಕಾಶವಿತ್ತು. ವಜ್ರಮುನಿ ಈ ಚಿತ್ರದಲ್ಲಿ ಅನನ್ಯ ಅಭಿನಯ ನೀಡಿದ್ದರು. ಬಾಲನಟ ವಿಜಯರಾಘವೇಂದ್ರ ಒಂದು ಪಾತ್ರದಲ್ಲಿ ಇದ್ದರು. ಛಾಯಾಗ್ರಾಹಕರಾದ ಎಸ್.ವಿ.ಶ್ರೀಕಾಂತ್, ವಿ.ಕೆ.ಕಣ್ಣನ್ ಸಾಹಸಮಯತೆ ಟ್ರಿಕ್ ಷಾಟ್ಸ್‌ಗಳಲ್ಲಿ ಕಾಣಬಹುದಿತ್ತು. ಅಪಾರ ಯಶಸ್ಸಲ್ಲವಾದರೂ ಕೆಲವೇ ಜನರಿಗೆ ಚಿತ್ರ ಪ್ರಿಯವಾಗಿತ್ತು.

ಸಾಯಿಪ್ರಕಾಶ್ ಅವರೇ ನಿರ್ಮಿಸಿ, ನಿರ್ದೇಶಿಸಿದ ಚಿತ್ರ ಶಿರಡಿ ಸಾಯಿಬಾಬಾ ಅವರ ಕಥೆಯನ್ನು ಆಧರಿಸಿದ 'ಭಗವಾನ್ ಶ್ರೀ ಸಾಯಿಬಾಬಾ'. ಪುಟ್ಟಪರ್ತಿಯ ಸಾಯಿಬಾಬಾ ಆಶೀರ್ವಾದ, ಉಡುಗೊರೆ ಪಡೆದುಕೊಂಡು ದೊಡ್ಡ ಸುದ್ದಿ ಮಾಡಿಕೊಂಡೇ ಪ್ರಾರಂಭವಾಗಿತ್ತು. ಸಾಯಿಬಾಬಾ ಪಾತ್ರದಲ್ಲೂ ಕಾಣಿಸಿಕೊಂಡವರು ನಿರ್ದೇಶಕ ಸಾಯಿಪ್ರಕಾಶ್. ಗಟ್ಟಿಯಾದ ಚಿತ್ರಕಥೆ ಇಲ್ಲದೆ ಕೇವಲ ಭಕ್ತಿ-ಭಾವಗಳನ್ನು ಮುಂದಿಟ್ಟರೆ ಜನ ಒಪ್ಪರು ಎಂಬುದಕ್ಕೆ ಈ ಚಿತ್ರ ಸಾಕ್ಷಿ. ಸಾಯಿಪ್ರಕಾಶ್ ಉದ್ಯಮದಲ್ಲಿ ಬಹಳಷ್ಟು ಚಿತ್ರ ನಿರ್ದೇಶಿಸಿ ಚಲಾವಣೆಯಲ್ಲಿದ್ದವರು. ಸಾಯಿಬಾಬಾ ಬಗ್ಗೆ ಭಕ್ತಿಯ ಕಾರಣ ಗಾಡಿಗಟ್ಟಲೆ ಜನಪ್ರಿಯ ಕಲಾವಿದರು ಚಿತ್ರದಲ್ಲಿ ಅವರಿಗೆ ಒಪ್ಪಿತ್ತೋ ಇಲ್ಲವೋ ಕಾಸ್ಟ್ಯೂಮ್ ಹಾಕಿಕೊಂಡು ದೇವಿ-ದೇವತೆ-ಭಕ್ತರುಗಳಾಗಿ ಕಾಣಿಸಿಕೊಂಡುಬಿಟ್ಟರು. ಕಣ್ಣಿಗೆ ಹಬ್ಬವಾಗುವಂಥ ಸೆಟ್‌ಗಳಿದ್ದವು. ಬಹಳ ದಿನಗಳ ಮೇಲೆ ಎಂ.ಎಸ್.ವಿಶ್ವನಾಥನ್-ಕೆ.ವಿ.ಮಹದೇವನ್ ಕನ್ನಡ ಚಿತ್ರಕ್ಕೆ ಮತ್ತೆ ಸಂಗೀತ ನೀಡಿದ್ದರು. ಶ್ರೀಮಂತವೆನಿಸುವ ಸಂಗೀತ, ಸ್ಪೆಷಲ್ ಎಫೆಕ್ಟ್ಸ್ ಇತ್ತು. ಭಾರೀ ತಾರಾಗಣವೂ ಇತ್ತು. ಆದರೂ ಚಿತ್ರ ಸೋತಿತು.

'ದುರ್ಗಾಪೂಜೆ' ತಮಿಳಿನ ಓಂಶಕ್ತಿ ನಿರ್ದೇಶನದಲ್ಲಿ ತೆರೆಗೆ ಬಂತು. ದೇವಿಯನ್ನು ಆರಾಧಿಸುವುದು ಕೇಂದ್ರ ವಸ್ತು. ನಾದಬ್ರಹ್ಮ ಕುನ್ನಕ್ಕುಡಿ ವೈದ್ಯನಾಥನ್ ಸಂಗೀತವಿತ್ತು. ಎಲ್ಲ ತಂತ್ರಜ್ಞರೂ ತಮಿಳಿಂದ ಬಂದವರು. ಕನ್ನಡ ಪ್ರೇಕ್ಷಕ ಈ ಚಿತ್ರವನ್ನು ಸ್ವೀಕರಿಸುವುದು ಸಾಧ್ಯವೇ ಇರಲಿಲ್ಲ. ಚಿತ್ರನಿರ್ಮಾಣ ಅದ್ದೂರಿಯಾಗಿತ್ತು. ಲಕ್ಷ್ಮೀ, ಶ್ರುತಿ, ವಿನಯಾಪ್ರಸಾದ್, ರಘುವೀರ್ ಮೊದಲಾದವರು ಅಭಿನಯಿಸಿದ್ದರು.

'ಮಣಿಕಂಠನ ಮಹಿಮೆ' ಚಿತ್ರದಲ್ಲಿ ಮತ್ತೆ ಸೆಟ್‌ಗಳೇ ಮುಖ್ಯವಾದವು. ವಿಷ್ಣುವರ್ಧನ್-ಜಯಪ್ರದಾ ಅಭಿನಯಿಸಿದ್ದರು. ತಮಿಳಿನ ಜನಪ್ರಿಯ ನಿರ್ದೇಶಕ ಕೆ.ಶಂಕರ್ ಬಹಳ ದಿನದ ನಂತರ ಕನ್ನಡ ಚಿತ್ರ ನಿರ್ದೇಶಿಸಿದ್ದರು. ವಿಶೇಷ ಭಕ್ತಿ-ಪುರಾಣ ಚಿತ್ರಗಳ ನಿರ್ಮಾಣಕ್ಕೇ ಹೆಸರಾದ ಸ್ವಾಮಿನಾಥನ್ ಚಿತ್ರವನ್ನು ಅದ್ದೂರಿಯಾಗಿ ನಿರ್ಮಿಸಿದ್ದರು.

'ಮಿಡಿದ ಹೃದಯಗಳು' ಎ.ಟಿ.ರಘು ನಿರ್ದೇಶನದ ಚಿತ್ರ. ಗಾಂಧೀನಗರದಲ್ಲಿ ತನ್ನೆಲ್ಲ ಇತರ ವ್ಯವಹಾರ ಬಿಟ್ಟು ವಿತರಣಾ ಸಂಸ್ಥೆ ಪ್ರಾರಂಭಿಸಿದ್ದ ಶಾಂತರಾಜ್ ಚಿತ್ರ ನಿರ್ಮಿಸುವಲ್ಲಿ ತೋರಿದ ಉತ್ಸಾಹದಿಂದಾಗಿ ಗೆಳೆಯ ಕೆ.ಸುಧಾಕರ್ ಜೊತೆಗೂಡಿ ನಿರ್ಮಿಸಿದ ಚಿತ್ರ. ಶಾಂತರಾಜ್ ಬಗ್ಗೆ ಒಂದಷ್ಟು ಮೃದುಭಾವ ಇಟ್ಟುಕೊಂಡಿರುವ



(ಚಿತ್ರ ೪೪) 'ಭಗವಾನ್ ಶ್ರೀ ಸಾಯಿಬಾಬಾ' ಚಿತ್ರದಲ್ಲಿ ಸಾಯಿಪ್ರಕಾಶ್

ಅಂಬರೀಷ್ ಅವರ ಕಾಲ್‌ಶೀಟ್ ಪಡೆದು ಶ್ರುತಿ, ನಿರೋಷಾ, ರಮೇಶ್‌ಭಟ್ ಮೊದಲಾದವರನ್ನು ಒಪ್ಪಿಸಿ ನಿರ್ಮಿಸಿದ ಚಿತ್ರ 'ಮಿಡಿದ ಹೃದಯಗಳು'. ಶಾಂತರಾಜ್ ತನ್ನ ಸಾಹಸಪ್ರಿಯತೆಯನ್ನು ಕೈಬಿಟ್ಟು ಭಾವನಾಪ್ರಧಾನವಾದ ಪ್ರೇಮದ ವಸ್ತುವನ್ನು ಆಯ್ದುದ್ದೇ ವಿಶೇಷ. ಹಂಸಲೇಖ ಸಂಗೀತ-ಗೀತೆಗಳು ಚೆನ್ನಾಗಿದ್ದವು. ಶ್ರುತಿ, ನಿರೋಷಾ ಅಭಿನಯವಿತ್ತು. ಭಿನ್ನ ಮನೋಧರ್ಮದ ಸೋದರಿಯರ ನಡುವೆ ಅಂಬರೀಷ್ ವಿವಾಹ-ಮಗು ತೊಳಲಾಟದಲ್ಲಿ ಎರಡು ಮದುವೆ ಮಾಡಿಕೊಂಡು, ಸತ್ತುಹೋಗಿದ್ದಾಳೆಂದುಕೊಂಡ ಮೊದಲ ಹೆಂಡತಿ ಬದುಕಿ ಬಂದುಬಿಡುತ್ತಾಳೆ. ಹೀಗೇ ಬದುಕು ಪೂರಾ ಗೋಜಲುಗಳನ್ನು ಕಾಣುವಂಥ ಪಾತ್ರ ನಿರ್ವಹಿಸಿದ್ದಾರೆ. ಆ ಮಟ್ಟಿಗೆ ಅವರಿಗೂ ಇದು ವಿಭಿನ್ನ ಪಾತ್ರವೇ. ಗೀತೆಗಳಲ್ಲಿ 'ದೇವಲೋಕ ಪ್ರೇಮಲೋಕ ನಮ್ಮ ಮನೆಯೀಗ...' ಮತ್ತು ರಾಜಕುಮಾರ್ ಹಾಡಿರುವ 'ತಂದೆ ಕೊಡಿಸೋ ಸೀರೆ...' ಜನಪ್ರಿಯವಾದವು. ಚಿತ್ರ ಯಶಸ್ವಿಯಾಯಿತು. ಶಾಂತರಾಜ್ ಮತ್ತಷ್ಟು ಚಿತ್ರ ನಿರ್ಮಿಸುವ ಕನಸು ಕಂಡರು.

ಮುದ್ದುರಾಜ್ ನಿರ್ದೇಶನದಲ್ಲಿ ಜಗ್ಗೇಶ್ ಅಭಿನಯಿಸಿದ್ದ 'ಶಿವಣ್ಣ' ಅದರ ಶೀರ್ಷಿಕೆಯಿಂದಲೇ ಗುಸುಗುಸು ವಿವಾದ ಪ್ರಾರಂಭಿಸಿತ್ತು. ಎಂದಿನಂತೆ ಜಗ್ಗೇಶ್ ಚಿತ್ರಗಳಲ್ಲಿ ಇರಲೇಬೇಕಾದ ಕನ್ನಡ ಭಾಷೆ ಕುರಿತ ಹಾಡೊಂದಿತ್ತು. ವಿ.ಮನೋಹರ್ ಸಂಯೋಜಿಸಿದ್ದ ಈ ಕನ್ನಡ ಗೀತೆಗೆ ಸ್ವರಸಂಯೋಜನೆ ವೇಗವಾಗಿ ಬಹಳಷ್ಟನ್ನು ಹೇಳುವ ಪದಪುಂಜಗಳನ್ನೊಳಗೊಂಡಿತ್ತು. ಗೀತೆಯಲ್ಲಿ ಕನ್ನಡದ ಬಗ್ಗೆ ಕನ್ನಡಿಗರ ನಿರಭಿಮಾನವನ್ನು ಟೀಕಿಸಲಾಗಿತ್ತು. ಸಾಲುಗಳ ನಡುವೆ ಬರುವ 'ಎಕ್ಕಡಾ' ಎಂಬ ಶಬ್ದ ತೆಲುಗಿನ 'ಎಲ್ಲಿ' ಎಂಬ ಅರ್ಥದಲ್ಲಿ ಬಳಸಿದ್ದರೂ ಕನ್ನಡದ ಅರ್ಥದಲ್ಲಿ ತಪ್ಪಾಗುತ್ತದೆಂದು ತೆಗೆಸಿಹಾಕಲಾಯಿತು. ಹಾಗೆಯೇ ಮತ್ತೊಂದು ಶಬ್ದ 'ಎನ್ನಡ' ಕೂಡಾ ತಮಿಳು-ಕನ್ನಡಗಳ ನಡುವೆ ಜಗಳವಾದೀತೆಂದು ತೆಗೆದುಹಾಕಲಾಯಿತು. ಇವೆಲ್ಲ ಮತ್ತೆ ಆ ಹಾಡಿನ ಅರ್ಥವನ್ನೇ ಧ್ವನಿಸಿದ ಕ್ರಿಯೆಗಳೆಂದು ಜಗ್ಗೇಶ್ ನಕ್ಕುಬಿಟ್ಟರು. ಈ ಚಿತ್ರದಲ್ಲಿ ಅವರ ಸೋದರ ಚಿರಂಜೀವಿ ಅಭಿನಯಿಸಿದ್ದರು.

'ಪ್ರಾಣ ಸ್ನೇಹಿತ' ಭಾರ್ಗವ ನಿರ್ದೇಶಿಸಿದ ಚಿತ್ರ. ಅಂಕಲಗಿ ಮಿತ್ರರ ಸಲುವಾಗಿ ಶಂಕರ್‌ನಾಗ್ ಅಭಿನಯಿಸಿದ್ದು. ಅವರು ಈ ಚಿತ್ರ ಬಿಡುಗಡೆ ಆಗುವ ಮೊದಲೇ ನಿಧನರಾಗಿದ್ದು, ಚಿತ್ರದ ಡಬ್ಬಿಂಗನ್ನು ಅನಂತ್‌ನಾಗ್ ನಿರ್ವಹಿಸಿ ಹೇಗೋ ತೆರೆಗೆ ತರುವ ಸಾಹಸ ಮಾಡಬೇಕಾಯಿತು. ಆದರೂ ಚಿತ್ರ ಭುವನೇಶ್ವರಿ ಸಂಸ್ಥೆಯ ಚಿತ್ರನಿರ್ಮಾಣದ ಶ್ರೀಮಂತಿಕೆಯ ಮಟ್ಟಕ್ಕೇರಲಿಲ್ಲ. ಯಶಸ್ವಿಯೂ ಆಗಲಿಲ್ಲ.

'ಚಿರಬಾಂಧವ್ಯ' ಎಂ.ಎಸ್.ರಾಜಶೇಖರ್ ನಿರ್ದೇಶನದ ಕಾದಂಬರಿ ಆಧರಿತ ಚಿತ್ರ. ನಿವೇದಿತಾ, ಪ್ರೇಮಾ, ದೊರೆಸ್ವಾಮಿ ಶಾಶ್ವತಿ ಚಿತ್ರ ಲಾಂಛನದಲ್ಲಿ ತೆರೆಗೆ ತಂದರು. ನಿರೂಪಣೆ ಹೇಗೇ ಇರಲಿ, ಒಟ್ಟು ಕಥೆ ಬಾಲ್ಯವಿವಾಹವನ್ನು ಸಹಕರಿಸಿ ಒಪ್ಪಿಕೊಳ್ಳುವಂಥ ತಿರುವು ಕೊಡಲಾಗಿತ್ತು. ಚಿತ್ರ ತುಂಬ ಯಶಸ್ವಿ ಆಗಿದ್ದಿದ್ದರೆ ಈ ವಿಷಯವಾಗಿ ಪ್ರತಿಭಟನೆಯೇ ನಡೆದಿರುತ್ತಿತ್ತು. ಈ ಚಿತ್ರಕ್ಕೂ ಹಂಸಲೇಖ ಸಂಗೀತವಿತ್ತು. ಒಂದೆರಡು ಹಾಡುಗಳೂ ಜನಪ್ರಿಯವಾದವು. ಚಿತ್ರ ಯಶಸ್ವಿಯಾಗಲಿಲ್ಲ. ಚಿತ್ರೀಕರಣವೇ ಬಡಕಲು-ಬಯಲು ಅನ್ನಿಸುತ್ತಿತ್ತು.

'ಮನೆ ದೇವ್ರು' ಸುಧಾರಾಣಿ-ರವಿಚಂದ್ರನ್ ಅಭಿನಯಿಸಿದ ಏಕೈಕ ಚಿತ್ರ. ರವಿಚಂದ್ರನ್‌ರದ್ದೇ ನಿರ್ದೇಶನ. ಯಶಸ್ವಿಯಾಗಲಿಲ್ಲ. ಆದರೆ ಈ ಚಿತ್ರದಲ್ಲಿ ಟೇಪ್‌ರೆಕಾರ್ಡರ್ ಒಂದನ್ನು ಸರಿಯಾಗಿ ಬಳಸಲಾಗಿತ್ತು. ಟೇಪ್ ಆಗಿ ರಿವೈಂಡ್ ಮಾಡಿ ಮಾತು ಕೇಳಿಸುವ ರೀತಿ ಗಮನ ಸೆಳೆದಿತ್ತು. ಚಿತ್ರಕ್ಕೆ ಹಂಸಲೇಖ ಗೀತೆಗಳು, ಅವುಗಳಲ್ಲಿ 'ಅಪರಂಜಿ ಚಿನ್ನವೋ ನನ್ನ ಮನೆಯ ದೇವರು...' ಜನಪ್ರಿಯವಾಯಿತು. ಮಗು ಹಾಡುವ 'ಅಪ್ಪಾ ಅಪ್ಪಾ ನಂಗೆ ನೀನು ಬೇಕಪ್ಪಾ...' ಗೀತೆ ಕೂಡಾ ಗಮನ ಸೆಳೆದಿತ್ತು.

'ಅಳಿಮಯ್ಯ' ಕಿಶೋರ್ ಸರ್ಜಾ ನಿರ್ದೇಶನದ ಚಿತ್ರ. ಅರ್ಜುನ್ ಸರ್ಜಾ ಕನ್ನಡದಲ್ಲಿ ಅಭಿನಯಿಸಿದ್ದು ವಿಶೇಷ. ತಮಿಳಿನ ಮೂಲ ಇರಬಹುದೆಂದು ಅಂದಾಜು ಮಾಡಲಾಗಿತ್ತು. ಲೋಕೇಶ್ ಗಿರಿಜಾ ದಂಪತಿಗಳು, ದೊಡ್ಡಣ್ಣ ಮೊದಲಾದವರೆಲ್ಲ ಅಭಿನಯಿಸಿದ್ದು, ಹಾಸ್ಯ ಪ್ರಸಂಗಗಳು ಚೆನ್ನಾಗಿದ್ದವು. ವಿರೋಧ, ಜಗಳ ಮಾಡುವುದೇ ಗುರಿಯಾದಾಗ ತೀರಾ ಸಣ್ಣ ಕಾರಣವೂ ನೆರವಿಗೆ ಬರುತ್ತದಂತೆ. ಮದುವೆ ಗಂಡು ತನಗೆ ಉಡುಗೊರೆ ಕೊಡಬೇಕಿದ್ದವರಿಂದೆಲ್ಲ ಹಣ ಸಂಗ್ರಹಿಸಿ ಇಸ್ಪೀಟ್ ಆಡಿದ್ದು, ಊಟಕ್ಕೆ ಬಡಿಸುವಾಗ ದೊಡ್ಡಣ್ಣನ ಪಂಚೆಯ ತುದಿಗೆ ಕೊಂಚ ಸಾಂಬಾರ್ ಬಿದ್ದದ್ದು ದೊಡ್ಡ ಗಲಾಟೆಗೆ ಕಾರಣವಾಯಿತು. ಇಂಥ ಕೆಲವು ಸ್ವಾರಸ್ಯಗಳಿದ್ದವು.

ಸೂರ್ಯ ಪ್ರೊಡಕ್ಷನ್ಸ್ ಸಂಸ್ಥೆಯ ಸೆಲ್ವಂ ತಮಿಳಿನ ಪತ್ರಿಕಾ ಸಂಪಾದಕ, ಪ್ರಕಾಶಕ ಮತ್ತು ರಾಜಕಾರಣಿ. ಅವರು ವರ್ಷಕ್ಕೊಂದು ಕನ್ನಡ ಚಿತ್ರ ಕೊಡುತ್ತಾ ಬಂದವರು. ಅವರ ಚಿತ್ರಗಳ ಖಾಯಂ ನಾಯಕಿ ಬೇಬಿ ಶ್ಯಾಮಿಲಿ. ಸಂಸ್ಥೆ ಈ ಹಿಂದೆ 'ಭೈರವಿ', 'ಶಾಂಭವಿ' ತಯಾರಿಸಿತ್ತು. ಈ ವರ್ಷ 'ದಾಕ್ಷಾಯಿಣಿ' ಚಿತ್ರ ಕೊಟ್ಟಿತು. ಮೂರು ಚಿತ್ರಗಳೂ ಒಂದೇ ಕಥೆಯ ಎಳೆಗಳೇ. ಆಸ್ತಿಗಾಗಿ ಮನೆಯಲ್ಲಿ ಆಗುವ ಗೊಂದಲಗಳನ್ನು, ಅದರ ಪರಿಣಾಮಗಳನ್ನು ಹೇಳುತ್ತದೆ. ದೊಡ್ಡವರ ದುಷ್ಟತನ, ಪುಟ್ಟ ಬಾಲೆಯು ನಾಯಿ, ಕೋತಿಗಳ ನೆರವಿನಿಂದ ಬುದ್ಧಿ ಕಲಿಸುತ್ತಾಳೆ. ಹಿರಿಯ ತಂತ್ರಜ್ಞ ಕೆ.ಸೀತಾರಾಂ ತಮ್ಮದೇ ಕಥೆ 'ದಾಕ್ಷಾಯಿಣಿ'ಯನ್ನು ತೆರೆಗೆ ತಂದರು.

'ಹೂವು ಹಣ್ಣು', 'ರಂಜಿತಾ' ನಾಯಕಪ್ರಧಾನ ಚಿತ್ರಗಳ ಆರ್ಭಟವನ್ನು ಕಡಿಮೆ ಮಾಡಿದವು. 'ಹೂವು ಹಣ್ಣು' ಚಿತ್ರದ ಆದರ್ಶ ಕಾಲ್ಪನಿಕವಲ್ಲ. ಮುಖ್ಯವಾಗಿ ಚಿತ್ರದ ಒಂದು ಸನ್ನಿವೇಶದಲ್ಲಿ ತನ್ನೆದುರೇ ತನ್ನ ಮಗಳನ್ನು ಅನುಭವಿಸಲು ಬಂದ ಪೊಲೀಸ್ ಅಧಿಕಾರಿಯ ರುಂಡ ಚೆಂಡಾಡಿದ, ಕಾಳಿಯಂತೆ ಕೂಡುವ ನಾಯಕಿಯ ಭಂಗಿ ಪಟ್ಟಣಕ್ಕೆ ಭೀಭತ್ಸ ಅನ್ನಿಸಿದರೂ ಆ ಕಲ್ಪನೆ ಈ ನೆಲದ ಪರಂಪರೆಯನ್ನು, ದೇಸೀಯತೆ, ಪ್ರಾದೇಶಿಕತೆಯ ಸೊಗಡನ್ನು ನಿರ್ದೇಶಕ ಗ್ರಹಿಸಿದ್ದನ್ನು ಹೇಳುತ್ತಿತ್ತು. ಚಿತ್ರದ ಸಂಗೀತ ಪೂರಕವಾಗಿತ್ತು. ಹಂಸಲೇಖ ಮತ್ತೆಮತ್ತೆ ವಯಲಿನ್ ಬಳಸಿರುವುದು, ಅದು ಪಾತ್ರಗಳ ಭಾವನೆಗಳಲ್ಲಿ ಲಯವಾಗಿರುವ ರೀತಿ ಗಮನ ಸೆಳೆಯುವಂಥದ್ದು.

'ಹೂವು ಹಣ್ಣು' ರಾಜೇಂದ್ರಸಿಂಗ್ ಬಾಬು ಮಹಾತ್ವಾಕಾಂಕ್ಷೆಯಿಂದ ನಿರ್ಮಿಸಿ ನಿರ್ದೇಶಿಸಿದ ಚಿತ್ರ. ಚಿತ್ರದ ಸಹನಿರ್ಮಾಪಕನಾಗಿ ಜೈಜಗದೀಶ್ ಅವರೊಂದಿಗೆ ಪುತ್ರ ದುಶ್ಯಂತ್‌ಸಿಂಗ್ ಹೆಸರನ್ನು ಚಾಲ್ತಿಗೆ ತಂದರು. ಈ ಮೂಲಕ 'ಮಹಾತ್ಮ ಪಿಕ್ಚರ್ಸ್' ಸಂಸ್ಥೆಯ ಮೂರನೆಯ ತಲೆಮಾರನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಲಾಯಿತು. 'ಹೂವು ಹಣ್ಣು' ಚಿತ್ರಕ್ಕೆ ತ್ರಿವೇಣಿಯವರ ಕಾದಂಬರಿಯನ್ನು ಆಧರಿಸಲಾಗಿತ್ತು. ೫೦ರ ದಶಕದ ಕಥೆ ಹಾಗೂ ಸಾಮಾಜಿಕ ಸಂದರ್ಭವನ್ನು ಒಳಗೊಂಡಿತ್ತು. ಈ ಚಿತ್ರದೊಂದಿಗೆ ಕನ್ನಡ ಚಿತ್ರರಂಗದಲ್ಲಿ ಮತ್ತೆ ಕಾದಂಬರಿಯುಗವನ್ನು ಆರಂಭಿಸುವ ಉದ್ದೇಶ ಬಾಬು ಅವರಿಗಿತ್ತು. ಆದರೆ ಹಳೆಯ ಕಥೆಗೆ ಬಾಬು ಅವರು ವಿಪರೀತ ಕನ್ನಡ ಪ್ರೇಮವನ್ನು ಹಾಗೂ ಈ ಶತಮಾನದ ಮಹಾಮಾರಿ ಎಂದು ಕರೆಯಿಸಿಕೊಳ್ಳುತ್ತಿರುವ ಏಡ್ಸ್ ಕಾಯಿಲೆಯನ್ನು ತಳಕು ಹಾಕಿದ್ದರು. ಇದು ಕಥೆಯ ಕೇಂದ್ರಪ್ರಜ್ಞೆಯಾಗಿದ್ದ ಸ್ತ್ರೀಶೋಷಣೆಯ ಧ್ವನಿಯನ್ನು ಕ್ಷೀಣಗೊಳಿಸಿತ್ತು. ಸ್ವಾರ್ಥ ಮತ್ತು ಅಜ್ಞಾನದ ಕಾರಣದಿಂದಾಗಿ ಶಿಥಿಲಗೊಳ್ಳುವ ಸಂಬಂಧಗಳ ಚಿತ್ರಣವನ್ನು ಕೃತಕಗೊಳಿಸಿತ್ತು. ಕಾದಂಬರಿಯಲ್ಲಿ ಬಡತನದೊಂದಿಗೆ ಹೆಣೆದುಕೊಳ್ಳುವ ಮಾನವೀಯ ಸಂಬಂಧಗಳು ಮಾರ್ಮಿಕವಾಗಿ ಅಭಿವ್ಯಕ್ತವಾಗಿವೆ. ಆದರೆ ಚಿತ್ರದಲ್ಲಿ ಇವು ಮನಸ್ಸಿಗೆ ತಟ್ಟುವಂತಿರಲಿಲ್ಲ. ಸೇಡಿಗಾದರೂ ಸರಿ ಒಬ್ಬ ವೈದ್ಯನು ವೇಶ್ಯೆಯಾದ ನಾಯಕಿ ರಮಾಗೆ ಏಡ್ಸ್ ಇದೆ ಎಂದು ಸುದ್ದಿ ಹಬ್ಬಿಸುವುದು ಅಸಹಜವೆನ್ನಿಸಿತು. ಏಡ್ಸ್ ಪರಿಹಾರಕ್ಕೆ, ನಿವಾರಣೆಗೆ ಜಾಗತಿಕ ಮಟ್ಟದಲ್ಲಿ ಸಂಶೋಧನೆ ನಡೆಯುತ್ತಿರುವಾಗ ಬಾಬು ಅವೆಲ್ಲವನ್ನು ಮರೆತವರಂತೆ ಸದರಿ ಕಾಯಿಲೆಯ ಭಯಾನಕತೆಯ ಭಾವನೆಯನ್ನಷ್ಟೇ ಚಿತ್ರಿಸಿದ್ದರು. ಅಲ್ಲದೆ ಮೈಸೂರು, ಬೆಂಗಳೂರಿನಂತಹ ಪಟ್ಟಣಗಳಲ್ಲಿ ಸಭ್ಯಸ್ಥರ ನಡುವೆ ವೇಶ್ಯೆಯೊಬ್ಬಳಿದ್ದಲ್ಲಿ ನೆರೆಹೊರೆಯ ಜನ ಆಕೆಯನ್ನು ಮಾನಸಿಕವಾಗಿ ಬಹಿಷ್ಕರಿಸುತ್ತಾರೆಯೇ ವಿನಾ ಚಿತ್ರದಲ್ಲಿರುವಂತೆ ಕಾಮಣ್ಣನ ಚಟ್ಟಕ್ಕೆ ಕಟ್ಟಿ ಬೆಂಕಿ ಹಾಕಿ ಸುಡುವುದರಿಂದಲ್ಲ.

ಒಟ್ಟಾರೆ ಚಿತ್ರದ ಬಗ್ಗೆ ಪತ್ರಿಕೆಗಳಲ್ಲಿ ಕಟುವಾದ ವಿಮರ್ಶೆಗಳು ಪ್ರಕಟವಾದವು. ಇದರಿಂದ ಅಸಮಾಧಾನಗೊಂಡ ಬಾಬು ಚಿತ್ರವನ್ನು ಪತ್ರಕರ್ತರೇ ಕೊಂದುಹಾಕಿದರೆಂದು ನೋವು ತೋಡಿಕೊಂಡಿದ್ದರು. ಆಶಯದ ನಿರ್ವಹಣೆಯಲ್ಲಿ ಸೋತಿದ್ದರೂ 'ಹೂವು ಹಣ್ಣು' ತನ್ನ ಉದಾತ್ತ ಉದ್ದೇಶದಿಂದಾಗಿ ಮುಖ್ಯವೆನಿಸಿದ ಚಿತ್ರ. ಇದರಲ್ಲಿ ಅಳವಡಿಸಿದ್ದ ಕೈಲಾಸಂರವರ 'ಸೂಳೆ' ನಾಟಕದ ದೃಶ್ಯ ಉತ್ತಮವಾಗಿತ್ತು. ಮಾಜಿ ಮುಖ್ಯಮಂತ್ರಿ ಗುಂಡೂರಾಯರ ಪುತ್ರ ಅಜಯ್ ಗುಂಡೂರಾವ್ ಹಾಗೂ ಮತ್ತೊಬ್ಬ ರಾಜಕಾರಣಿ ಹೆಚ್.ಕೆ.ಶ್ರೀನಿವಾಸ್‌ರ ಪುತ್ರಿ ವೈಜಯಂತಿ ನಾಯಕ-ನಾಯಕಿಯಾಗಿ ಉತ್ತಮ ಅಭಿನಯ ನೀಡಿದ್ದರು. ಈ ಚಿತ್ರದ ಮೂಲಕ ಕೆ.ಎಸ್.ಅಶ್ವತ್ಥ್‌ರ ಪುತ್ರ ಶಂಕರ್ ಅಶ್ವತ್ಥ್‌ರನ್ನು ಬಾಬು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದರು. ಭಾರತದ ಹಾಗೂ ಹಿಂದಿ ಚಿತ್ರರಂಗದ ಹೆಸರಾಂತ ಛಾಯಾಗ್ರಾಹಕ ಕನ್ನಡಿಗ ವಿ.ಕೆ.ಮೂರ್ತಿ ಕನ್ನಡ ಚಿತ್ರವೊಂದಕ್ಕೆ ಛಾಯಾಗ್ರಹಣ ಮಾಡಿದ್ದು ಹೆಗ್ಗಳಿಕೆ. ಅವರು ಒಂದು ಪಾತ್ರದಲ್ಲಿ ಕಾಣಿಸಿಕೊಂಡೂ ಇದ್ದರು. ರಮಾಳ ಪಾತ್ರದಲ್ಲಿ ಉತ್ತಮ

ಅಭಿನಯ ನೀಡಿದ್ದ ಲಕ್ಷ್ಮಿಗೆ ೧೯೯೩-೯೪ರ ರಾಜ್ಯದ ಅತ್ಯುತ್ತಮ ನಟಿ ಪ್ರಶಸ್ತಿ ಬಂದಿತು. ಚಿತ್ರದ ಕ್ರೈಸ್ತ ನನ್ ಪಾತ್ರದಲ್ಲಿ ಪ್ರಮಿಳಾ ಜೊಷಾಯ್ ಗಮನ ಸೆಳೆದರು. ಚಿತ್ರಿಕೆಗಳು. ಪರಿಕಲ್ಪನೆ ಅದೆಷ್ಟೇ ಚೆನ್ನಾಗಿದ್ದರೂ ಪ್ರಾರಂಭದಲ್ಲಿ ಕಾಲವನ್ನು ಸೂಚಿಸಿ, ಅನಂತರ ಆಧುನಿಕ ಸಂಗತಿಗೆ ವರ್ಗಾಯಿಸಿದ್ದು ಹೊಂದಿಕೊಳ್ಳಲಿಲ್ಲ. ವೇಶ್ಯೆಯ ಮನೆಗೆ ಬಂದು ಹೋಗುವ 'ವಿಟ'ರನ್ನು ಚಿತ್ರಿಸಿದ ರೀತಿ ಅಸಹಜವಾಗಿತ್ತು. 'ಹೂವು ಹಣ್ಣು' ಬಗ್ಗೆ ನಿರ್ದೇಶಕ ರಾಜೇಂದ್ರಸಿಂಗ್ ಬಾಬು ಹೀಗೆ ಹೇಳುತ್ತಾರೆ :

''ವೇಶ್ಯೆ ಕೂಡಾ ತಾಯಿ ಎನ್ನುವ ದೃಷ್ಟಿಯಿಂದ ವೇಶ್ಯೆಯ ಪಾತ್ರ ಪೋಷಣೆ ಮಾನವೀಯ ಸಂಬಂಧಗಳ ನೆಲೆಯಲ್ಲಿ ತಾಯಿ-ಮಗಳು-ಮೊಮ್ಮಗಳ ನಡುವಿನ ಅಂತಃಸಂಬಂಧ, ಮತ್ತು ತನ್ನ ತಾಯಿ ಯಾರು ಮತ್ತು ಎಂತಹವಳು ಅಂತ ತಿಳಿಯದ ಮಗಳು ಮತ್ತು ತಾಯಿಯ ನಡುವೆ ಗೋಡೆ ಕಟ್ಟುವ ಸಮಾಜವನ್ನು, ಚಿತ್ರಿಸಬೇಕು ಅಂತ 'ಹೂವು ಹಣ್ಣು' ಕಾದಂಬರಿ ಆರಿಸಿಕೊಂಡೆ. ಇದಕ್ಕಾಗಿಯೇ ಚಿತ್ರದುದ್ದಕ್ಕೂ ವೇಶ್ಯೆ ತನ್ನ ಮಗಳನ್ನು ಭೇಟಿ ಮಾಡುವ ದೃಶ್ಯಗಳಿದ್ದಲ್ಲೆಲ್ಲ ಗೋಡೆಯೊಂದನ್ನು ಅಡ್ಡಕ್ಕೆ ಇಟ್ಟುಕೊಂಡೇ ಬಂದಿದ್ದೇನೆ. ತಾಯಿ, ಮಗಳನ್ನು ಆಭರಣದ ಅಂಗಡಿಯಲ್ಲಿ ನೋಡುವ ದೃಶ್ಯದಲ್ಲಿ ಅಡ್ಡ ಬರುವುದು ಗಾಜಿನ ಗೋಡೆ. ಇಲ್ಲಿರುವ ಕ್ಲೋಸಪ್ ತಾಯಿಯ ಅಸಹಾಯಕತೆ ಮತ್ತು ಆಕೆ ಸಮಾಜ ನಿರ್ಮಿತ ಸೆರೆಮನೆಯಲ್ಲಿದ್ದಾಳೆಂಬುದನ್ನು ಸೂಚ್ಯವಾಗಿ ಹೇಳಿದೆ. ಚಿತ್ರದ ಎರಡನೆಯ ಅರ್ಧದಲ್ಲಿ ಮೊಮ್ಮಗಳನ್ನು ಭೇಟಿ ಮಾಡಲು ಅಜ್ಜಿ ಬರುವಾಗಲೇ ಕಾಂಪೌಂಡ್ ಒಂದು ಫೋರ್‌ಗ್ರೌಂಡ್‌ನಲ್ಲಿ ಇರುವಂತೆ ಫ್ರೇಮ್ ಮಾಡಲಾಗಿದೆ. ಕಿಟಕಿಯ ಸರಳುಗಳನ್ನು ಸಹ ಹಲವೆಡೆ ಇದೇ ಅರ್ಥದಲ್ಲಿ ಬಳಸಲಾಗಿದ.. ತಾನು ಬದುಕುತ್ತಿರುವ ಸಮಾಜದ ರೂಢಿಗತ ನಂಬಿಕೆಗಳಿಗಿಂತ ಭಿನ್ನವಾಗಿ ಇಂಥ ಪಾತ್ರಪೋಷಣೆ ಮಾಡಿದರ ಪ್ರೇಕ್ಷಕ ಸ್ವೀಕರಿಸುತ್ತಾನೋ ಇಲ್ಲವೋ ಎಂಬ ಆತಂಕ ಇಂಥ ಚಿತ್ರ ಮಾಡುವಾಗ ಇದ್ದೇ ಇರುತ್ತದೆ. ಆದ್ದರಿಂದಲೇ ಎಚ್ಚರಿಕೆಯಿಂದ ಚಿತ್ರಿಕೆಗಳನ್ನು ಸಂಯೋಜಿಸಲಾಗಿತ್ತು. ಸದಾ ಗೋಡೆಯ ಅಂತರದಲ್ಲಿಯೇ ಬದುಕಿದ ಹೆಂಗಸು ಚಿತ್ರದ ಅಂತ್ಯದಲ್ಲಿ ಬಾಗಿಲನ್ನು ತೆರೆದಿಟ್ಟು ಹೋಗುತ್ತಾಳೆ. ಆ ತೆರೆಗೆ ಬಾಗಿಲಿಂದ ಚೆಲ್ಲುವ ಬೆಳಕು ಹೊರಗಿನ ಅಂಧಕಾರವನ್ನುಸಂಪೂರ್ಣವಾಗಿಯಲ್ಲವಾದರೂ ಕೊಂಚವಾದರೂ ಕತ್ತಲು ಕಳೆದಿರಬಹುದೆಂಬುದರ ಸೂಚನೆಯಾಗಿತ್ತು.



(ಚಿತ್ರ ೪೫) 'ಹೂವು ಹಣ್ಣು' ಚಿತ್ರದಲ್ಲಿ ಲಕ್ಷ್ಮೀ ಮತ್ತು ಶಂಕರ್ ಅಶ್ವತ್ಥ್

ಪೂರ್ವಾಗ್ರಹಗಳಿಂದ ಸಮಾಜ ಮುಕ್ತವಾಗದಿದ್ದರೆ ಇಂಥ ಪಾತ್ರಗಳು ಒತ್ತಡಗಳಿಂದ ಬಿಡಿಸಿಕೊಂಡು ಬದುಕಲಾರವು ಎಂದು ಹೇಳಬೇಕಿತ್ತು.

''ಮಹಡಿ ಹತ್ತುವ, ಇಳಿಯುವ ಒಂದೆರಡು ಚಿತ್ರಿಕೆಗಳಲ್ಲಿ, ಅಲ್ಲಿ ಬಳಸಲಾದ ಲೋಆ್ಯಂಗಲ್‌ಗಳಿಗ ಒಂದು ಅರ್ಥ ಸಂಕೇತ ಇತ್ತು. ಚಿತ್ರದಲ್ಲಿ ಪ್ರಧಾನ ಪಾತ್ರಧಾರಿಯೇ ಕತ್ತಲು. ದೃಶ್ಯ ಬದಲಾವಣೆಗೆ ಬೇಕೆಂದೇ ದೀರ್ಘ ಫೇಡ್‌ಔಟ್‌ಗಳನ್ನು ಬಳಸಲಾಗಿತ್ತು. ಕಳೆದೆರಡು ದಶಕದಿಂದ ಜನಪ್ರಿಯ ಸಿನಿಮಾ ಈ ತಂತ್ರವನ್ನು ಬಿಟ್ಟು ಕಟ್-ಟು-ಕಟ್ ತಂತ್ರವನ್ನು ಬಳಸುತ್ತಿದೆ. ಚಿತ್ರದಲ್ಲಿ ಕಪ್ಪು-ಬಿಳುಪು, ವರ್ಣಗಳ ಬಳಕೆಯ ಹಿಂದೆ ಕೂಡಾ ಭೂತ-ವರ್ತಮಾನಗಳ ಸಂಕೇತವನ್ನು ಇಟ್ಟುಕೊಳ್ಳಲಾಗಿತ್ತು. ಚಿತ್ರದ ಅಂತ್ಯ ಕೂಡಾ ಅಜ್ಜಿಯ ಸಾವಿನಲ್ಲಿ ಚಿತ್ರಿಸಲಾಗಿತ್ತು. ಅದು ಭೀಭತ್ಸ ಅನ್ನಿಸಿದ್ದರಿಂದ ಕೈಬಿಟ್ಟು ಬೇರೆ ಚಿತ್ರಿಕ ಹಾಕಲಾಯಿತು. ಗಾಳಿ ಸುದ್ದಿಗಳಿಗೆ ಜನ ಪ್ರತಿಕ್ರಿಯಿಸುವ ತೀವ್ರತೆ ಹೇಳಲು ಬೆಂಕಿ ಹಚ್ಚುವ ಪ್ರಯತ್ನವನ್ನೂ ಆ್ಯಂಟೆನಾಗಳ ಮೇಲ ಕೂತು ಕಾಗ ಕೂಗುವ ಸದನ್ನೂ ಸಾಂಕೇತಿಕವಾಗಿ ತರಲಾಗಿತ್ತು. ಮೂಲದಲ್ಲಿರುವ ಸಿಫಿಲಿಸ್ ರೋಗ ಈಗ ಬಳಸಲು ಸಾಧ್ಯವಿಲ್ಲವಾದ್ದರಿಂದ ಏಡ್ಸ್ ಬಳಸಲಾಯಿತು. ಆದರೆ ಅದು ವೇಶ್ಯೆಗೆ ಬಂದ ರೋಗವಾಗಿರಲಿಲ್ಲ, ಸಮಾಜಕ್ಕೆ ಗಾಳಿ ಸುದ್ದಿಯಿಂದಾಗಿ ಹಬ್ಬಿದ ರೋಗ ಎಂದು ಚಿತ್ರಿಸಿದೆ....''

ರಾಜೇಂದ್ರಸಿಂಗ್ ಬಾಬು ಚಿತ್ರಗಳಿಗೆ ಒಮ್ಮೊಮ್ಮೆ ಇಬ್ಬರು, ಮೂವರು ಛಾಯಾಗ್ರಾಹಕರು ಕೆಲಸ ಮಾಡಿದ್ದಾರೆ. ಹೀಗಾದಾಗ ಶೈಲಿಯಲ್ಲಿ ಏರುಪೇರಾಗುವುದಿಲ್ಲವೇ ಎಂಬ ಮಾತಿಗೆ ಸಿಂಗ್ ಬಾಬು ''...ಜನಪ್ರಿಯ ಸಿನಿಮಾಗಳಲ್ಲಿ ಇರುವ ಕಾಲ್‌ಶೀಟ್ ಒತ್ತಡದಿಂದಾಗಿ ಸ್ಟಾರ್ ಸಿಸ್ಟಮ್‌ನಿಂದಾಗಿ ಹೀಗಾಗುತ್ತಿದೆ. ಛಾಯಾಗ್ರಹಣ ಎಂದರೆ ಕೇವಲ ತೆರೆಯ ಮೇಲೆ ಚಿತ್ರ ಮೂಡಿಸುವುದಲ್ಲ. ಅದು ಕಥಾ ನಿರೂಪಣೆಗೆ ಹೊಂದಿಕೊಳ್ಳಬೇಕು. ಚಿತ್ರ ತಯಾರಿಕೆಗೂ ಮುಂಚೆ ಪ್ರತಿ ಶಾಟ್‌ಗಳನ್ನು ಯೋಚಿಸಿ ಸ್ಟೋರಿ ಬೋರ್ಡ್ ಮಾಡಿಕೊಳ್ಳುವುದು ಈ ಕಾಲ್‌ಶೀಟ್ ಅವಸರದಲ್ಲಿ ಸಾಧ್ಯವಾಗುತ್ತಿಲ್ಲ. ಅದರಿಂದಾಗಿ ನಿರ್ಮಾಣ ವಿನ್ಯಾಸ ಸಹ ಸಾಧ್ಯವಾಗುತ್ತಿಲ್ಲ. ವಸ್ತ್ರವಿನ್ಯಾಸ, ಪ್ರಸಾಧನ ವಿಭಾಗಗಳೂ ಬೆಳೆಯಲು ಅವಕಾಶವಿಲ್ಲವಾಗುತ್ತಿದೆ. ಈ ಯಾವ ವಿಭಾಗವೂ ನಮ್ಮ ಸಂದರ್ಭದಲ್ಲಿ ವ್ಯವಸ್ಥಿತವಾಗಿ ಇಲ್ಲ. ಇಲ್ಲವೇ ಇಲ್ಲ ಎನ್ನಬಹುದು. ಪರಸ್ಪರ ಚರ್ಚೆ-ಸಲಹೆಗಳ ಫಲವಾಗಿ ಹೊಸ ಆಯಾಮಗಳೂ ದಕ್ಕಬಹುದು. 'ಅಂತ' ಚಿತ್ರದ ಕೊನೆಯಲ್ಲಿ ಒಂದು ಮಳೆಯ ದೃಶ್ಯ ಬರುತ್ತದೆ, ಒಂದು ನಿರ್ದಿಷ್ಟ ಕಾರಣಕ್ಕಾಗಿ 'ಮಿಂಚು' ಬೀಳುವ ಎಫೆಕ್ಟ್ ಬೇಕಾಗಿತ್ತು, ಅದು ಸಿಗಲಿಲ್ಲ. ವೆಲ್ಡಿಂಗ್ ಆರ್ಕ್ ಬೆಳಕು ಸರಿಯಾಗಲಿಲ್ಲ. ಅದು ಕೆಳಗಿಂದ ಬರದ ಹಾಗೆ, ಮೇಲಿಂದ ಬಂದಹಾಗೆ ಕ್ಯಾಮರಾದ ಷಟರ್ ಸ್ಪೀಡ್ ನಿಯಂತ್ರಿಸಿ, ಹೈಸ್ಪೀಡ್ ಫಿಲಂ ಬಳಸಿ, ಕಾರ್ಬನ್ ಆರ್ಕ್‌ನಿಂದ ಮಿಂಚನ್ನು ಸೃಷ್ಟಿಸಿದೆವು. ಇದೆಲ್ಲ ಛಾಯಾಗ್ರಾಹಕ ಪ್ರಕಾಶ್ ಜಾಣ್ಮೆಯಿಂದ ಆದದ್ದು.''

ಜನಪ್ರಿಯ ಚಿತ್ರಗಳಲ್ಲಿ ಸಾಮಾನ್ಯವಾಗಿ ಆಯಾ ಸಮಾಜದ ಅಪೂರ್ಣ ಆಕಾಂಕ್ಷೆಗಳನ್ನು, ಕನಸುಗಳನ್ನು ರೂಪಿಸಿರುತ್ತಾರೆ. 'ಅಂತ' ಚಿತ್ರದಲ್ಲಿ ಈ ದೇಶದ ಹದಗೆಟ್ಟ ಸ್ಥಿತಿಗೆ ಮತ್ತು ಸಾಮಾನ್ಯ ಜನರ ಕನಸುಗಳಿಗೆ ಅಡ್ಡಿಯಾಗಿ ನಿಂತವರು ರಾಜಕಾರಣಿಗಳು ಎಂದು ತೋರಿಸಿ ಅವರನ್ನು ಬಗ್ಗುಬಡಿಯುವ ನಾಯಕನಿದ್ದಾನೆ. ಈ ಬಗೆಯ ಆ್ಯಂಗ್ರಿ ಯಂಗ್ ಮ್ಯಾನ್ ಅಥವಾ ನಾಯಕರು ತಾಳುವ ನಿಲುವೇ ಜನತೆಯ ಮನಸ್ಸಿನೊಳಗಿನ ನಿಲುವೂ ಆಗುವುದರಿಂದ ಅವರು ಜನರಿಗೆ ಪ್ರಿಯವಾಗುತ್ತಾರೆ. ಇಂಥವೇ ಜಾಡಿನಲ್ಲಿ ನಡೆದುಬಂದ ಚಿತ್ರಗಳು ಒಂದು ಹಂತದಲ್ಲಿ ರಾಜಕಾರಣಿಯೂ ಅಸಹಾಯಕ, ಅವನನ್ನು ನಿಯಂತ್ರಿಸುವವನು ಭೂಗತದೊರೆ ಅಂತಲೋ, ಬಂಡವಾಳಶಾಹಿಯೆಂತಲೋ ಹೇಳಲು ಪ್ರಾರಂಭಿಸಿದರು. ಈ ಹಿನ್ನೆಲೆಯಲ್ಲಿ ನಮ್ಮ ಖಳರ ಪರಿವರ್ತನೆಯನ್ನು ಗಮನಿಸಬಹುದು.

ಒಂದು ಕಾಲಕ್ಕೆ ಖಳ ಒಂದು ರೀತಿಯ ಕಳ್ಳ, ದರೋಡೆಕಾರ ಆಗಿರುತ್ತಿದ್ದ. ಅಂಥವರ ಮೇಕಪ್, ವಸ್ತ್ರ ಎಲ್ಲಕ್ಕೂ ಒಂದು ಮಾದರಿಯಂತೂ ಇತ್ತು. ಅನಂತರ



(ಚಿತ್ರ ೪೬) 'ರಂಜಿತಾ' ಚಿತ್ರದಲ್ಲಿ ಶ್ರುತಿ

ಗ್ರಾಮದ ಜಮೀನ್ದಾರ, ಗೌಡ, ಪಟೇಲರು ಶೋಷಕರಾಗುವುದನ್ನು ಕಾಣುತ್ತೇವೆ. ಇದರಾಚೆಗೆ ಬಂದವರು ರಾಜಕಾರಣಿಗಳು. ಅನಂತರದ ಭೂಗತದೊರೆಗಳು, ಶ್ರೀಮಂತರುಗಳನ್ನು ಗಮನಿಸಿದರೆ ಉದ್ದಕ್ಕೂ ಬದಲಾದ ಹೊರನೋಟವೂ ಒಂದಿದೆ. ಖಳನೆಂದರೆ ಸದಾ ಬಾಡಿಬಿಲ್ಡರ್ ತರಹ ಇರಬೇಕಾಗಿಲ್ಲ. ಅವನು ಸೊಣಕಲ ಸೂಟುಧಾರಿ ಕೂಡಾ ಆಗಿ ನಾಯಕನನ್ನು ಮೀರಿಸುವಂತೆ ಶ್ರೀಮಂತವಾಗಿ, ಸಾಹಸಮಯ ಪಾತ್ರವಾಗಿ ಕಾಣಬಲ್ಲ.

ಈ ಮಧ್ಯೆ ಇನ್ನೊಂದು ವಿಧಾನವೂ ಕಂಡಿತು. ಹೊರಗಿನವರಿಂದ ಪಲ್ಲಟಗೊಳ್ಳುವ ವ್ಯವಸ್ಥೆಯ ಚಿತ್ರಣ. ಕುಟುಂಬದ ಒಳಗಾದರೆ ಸೊಸೆಯಾಗಿ ಬಂದ ಪಟ್ಟಣದ ಹುಡುಗಿ ಅಥವಾ ಶ್ರೀಮಂತ ಹುಡುಗಿ. ಅಥವಾ ಆಕೆ ಒಳ್ಳೆಯವಳೇ ಆದರೂ ಅವಳ ತಮ್ಮನೋ, ಅಣ್ಣನೋ, ಚಿಕ್ಕಪ್ಪನೋ ಕೆಡುಕರಾಗಿ ಇರುತ್ತಾರೆ. ಹೀಗೆ ಹೊರಗಿನ ಶಕ್ತಿಗಳು, ಆಧುನಿಕವಾದವು ನಮ್ಮ ಸಂಸ್ಕೃತಿಯನ್ನು ನಾಶಮಾಡುತ್ತವೆ. ಒಗ್ಗಟ್ಟನ್ನು ಛೇದಿಸುತ್ತವೆ ಎಂಬ ನಿಲುವನ್ನು ಪ್ರತಿಪಾದಿಸುವುದೂ ಉಂಟು. ಇವೆಲ್ಲವೂ ಜನಪ್ರಿಯ ಚಿತ್ರಗಳು ಕಾಲಕಾಲಕ್ಕೆ ಕಂಡುಕೊಂಡ ನಂಬಿದ, ನಿರೂಪಿಸಿದ ಜನರಿಗೂ ಪ್ರಿಯವಾಗುವ ಅಂಶಗಳು.

ಕೆ.ವಿ.ಜಯರಾಂ ಸೌಮ್ಯವಾಗಿ ಕಥೆ ಹೇಳುವ ಪ್ರವೃತ್ತಿಯವರು. 'ರಂಜಿತಾ' ನಿರೂಪಣೆ ಅವರ ಮೆದುಮನಸ್ಸು ಕೂಡಾ ಸಮಾಜದಲ್ಲಿ ಸ್ತ್ರೀಯರ ಶೋಷಣೆಯನ್ನು ಕಂಡು ಸಿಡಿದಿದೆ ಎಂದು ಸ್ಪಷ್ಟ ಮಾಡುತ್ತದೆ. ಚಿತ್ರ ಯಶಸ್ವಿಯೂ ಆಯಿತು. ಬದಲಾಗುತ್ತಿರುವ ಮಹಿಳೆಯ ಒಳತೋಟಿಯನ್ನು ಚಿತ್ರದ ನಾಯಕಿಯ ಮೂಲಕ ಪ್ರಕಟಿಸುತ್ತಾರೆ ಜಯರಾಂ. ಸಿಟ್ಟಿಗೆದ್ದ ಹೆಣ್ಣು ಸಂಪ್ರದಾಯವಾದಿ ಆವರಣವನ್ನು ತಿರಸ್ಕರಿಸಿ ಸೀಮೋಲ್ಲಂಘನ ಮಾಡುತ್ತಾಳೆ. ಜೀವವೇ ದಹಿಸುವಂಥ ದಳ್ಳುರಿಯಲ್ಲಿ ಸಿಲುಕಿರುವ 'ರಂಜಿತಾ'ದ ನಾಯಕಿ ದುಡುಕಿದಳು ಎಂದು ಸನಾತನವಾದಿಗಳೂ ಹೇಳಲಾಗದಂತೆ ಚಿತ್ರದ ವಾತಾವರಣವನ್ನು ರೂಪಿಸಿದ್ದಾರೆ ಜಯರಾಂ. 'ಏನಾದರೇನು ಹೆಣ್ಣಾದ ಬಳಿಕ ಗಂಡಾ ಇರಬೇಕು..' ಹಾಡು ತುಂಬಾ ಜನಪ್ರಿಯವಾಯಿತು. ಚಿತ್ರೀಕರಣದಲ್ಲಿ ಗಾಢತ ತುಂಬಿ ಬಂದಿತ್ತು. ಜಯರಾಂ ಅವರು ೧೬ ಎಂ.ಎಂ.ನಲ್ಲಿ ತೆಗೆದು ಬ್ಲೋ ಅಪ್ ಮಾಡಿಯೂ ತಾಂತ್ರಿಕವಾಗಿ ಯಾವ ಆಕ್ಷೇಪವೂ ಇಲ್ಲದ ಚಿತ್ರ 'ರಂಜಿತಾ'.

'ರಂಜಿತಾ' ವರದಕ್ಷಿಣೆ ಸಮಸ್ಯೆಯನ್ನು ನಾಟಕೀಯವಾಗಿ ನಿರೂಪಿಸಿದ ಚಿತ್ರ. 'ಕಾಲೇಜ್ ಹೀರೋ', 'ಚೈತ್ರದ ಪ್ರೇಮಾಂಜಲಿ', 'ಜೀವನ ಚೈತ್ರ' ಚಿತ್ರಗಳಲ್ಲಿ ಮುಖ್ಯ ಪಾತ್ರಗಳ ಮೂಲಕ ಗಮನ ಸೆಳೆದಿದ್ದ ಅಭಿಜಿತ್ ಈ ಚಿತ್ರದ ಮೂಲಕ ನಾಯಕನಟರಾದರು. ೧೯೯೩ ರಲ್ಲಿ ತೆರೆಗೆ ಬಂದು ಕೆಲವಾರು ವರ್ಷ ನೆಲೆನಿಂತ ಕೆ.ಶಿವರಾಮು, ರಾಮ್‌ಕುಮಾರ್ ಅವರೊಂದಿಗೆ ಅಭಿಜಿತ್‌ಗೆ ಕೂಡ ಸ್ಥಾನವಿದೆ. ೨೫ ವಾರಗಳ ಪ್ರದರ್ಶನ ಕಂಡು ಎಲ್ಲರಲ್ಲೂ ಅಚ್ಚರಿ ಹುಟ್ಟಿಸಿದ ಈ ಕಡಿಮೆ ವೆಚ್ಚದ ಚಿತ್ರ ೧೯೯೪ರಲ್ಲಿ ಕಲ್ಕತ್ತಾದಲ್ಲಿ ನಡೆದ ಅಂತರರಾಷ್ಟ್ರೀಯ ಚಿತ್ರೋತ್ಸವದ ಪ್ರಮುಖ ವಾಹಿನಿ ವಿಭಾಗದಲ್ಲಿ ಪ್ರದರ್ಶಿತವಾಯಿತು. ಈ ಚಿತ್ರದ ಕಾದಂಬರಿಕಾರ್ತಿ ಹೆಚ್.ಕೆ.ಅನಸೂಯಾ ಸಂಪತ್‌ಗೆ ರಾಜ್ಯದ ೧೯೯೪ರ ಅತ್ಯುತ್ತಮ ಕಥಾಲೇಖಕಿ ಪ್ರಶಸ್ತಿ ಬಂದಿತು.

'ಜೀವನ ಸಂಘರ್ಷ' ಉತ್ತಮ ಕಥೆ ಇರುವ ಚಿತ್ರ. ನೈಜ ಘಟನೆಯನ್ನಾಧರಿಸಿ ರಚಿಸಲಾದ ಚಿತ್ರಕಥೆ. ಅನಿರೀಕ್ಷಿತ ತಿರುವುಗಳಿಂದಾಗಿ ಕುತೂಹಲ ಮೂಡುತ್ತದೆ. ಶ್ರೀಧರ್ ಅಭಿನಯವೊಂದೇ ಜೀವ ತುಂಬಿದೆ. ಕಥೆಯನ್ನು ನಿರೂಪಿಸುವಾಗ ಕಲೆಗಾರಿಕೆ ಸಾಲದೆ, ರೂಕ್ಷ, ವಾಚ್ಯ ಆದುದೇ ದೋಷ.

'ಮಹೇಂದ್ರವರ್ಮ' ಪ್ರಭಾಕರ್ ನಿರ್ಮಾಣ-ನಿರ್ದೇಶನದ ಚಿತ್ರ. ಜನಪ್ರಿಯವೂ ಯಶಸ್ವಿಯೂ ಆದ ಚಿತ್ರ. ಪ್ರಭಾಕರ್ ನಿರ್ದೇಶನವಾದ್ದರಿಂದ ಸಹಜವಾಗೇ ಸಾಹಸ, ಸೆಂಟಿಮೆಂಟ್‌ಗಳಿಗೆ ಆದ್ಯತೆ. ಪ್ರಭಾಕರ್ ನಿರ್ದೇಶನದಲ್ಲಿ ಸಂಕಲನವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಕಥೆಯನ್ನು ನಿರೂಪಿಸುವ ವೈಶಿಷ್ಟ್ಯವೊಂದಿದೆ. ಇದೇ 'ಮಹೇಂದ್ರವರ್ಮ'ದ ಯಶಸ್ಸಿಗೆ ಕಾರಣ ಕೂಡಾ. ''ಚಿತ್ರ ನೋಡಿದ ಉದ್ಯಮದ ಜನ 'ಏನೂ ಇಲ್ಲ ಇದರಲ್ಲಿ' ಅಂದರು. ಅದು ಸೂಪರ್ ಹಿಟ್ ಆಯಿತು. ಅದೇ ರೀತಿ ಅದಾಗಲೇ ಏಳೆಂಟು ಭಾಷೆಯಲ್ಲಿ ಬಂದಿದ್ದ 'ಅಗ್ನಿಸಾಕ್ಷಿ' ಮಾಡಿದಾಗಲೂ 'ಅಲ್ಲೇ ನೋಡಿರುತ್ತಾರೆ. ಕನ್ನಡದಲ್ಲಿ ಯಾಕೆ' ಅಂದರು. ಆದರೆ ಅದೂ ಹಿಟ್ ಆಯ್ತು. ನನ್ನ ಚಿತ್ರಗಳಲ್ಲಿ ಫೈಟ್ಸ್-ಸಾಂಗ್ಸ್ ತುಂಬ ಮುಖ್ಯ. ಅದು ಕೊಂಚ ರೋಬಸ್ಟ್ ಆಗಿರುತ್ತೆ. ಸೆಕ್ಸ್ ಗೆಶ್ಚರ್ಸ್ ಕೂಡಾ ಜಾಸ್ತಿ ಇರುತ್ತೆ. ನನ್ನ ಪ್ರೇಕ್ಷಕರು ಅದನ್ನೇ ನಿರೀಕ್ಷಿಸುತ್ತಾರೆ. ಅದನ್ನೆಲ್ಲ ತೆಗೆದುಹಾಕೋಕೆ ಆಗೋಲ್ಲ ಈ ಸೆಟಪ್‌ಗಳಲ್ಲಿ...'' ಎಂದಿದ್ದರು ಪ್ರಭಾಕರ್. ಪ್ರಭಾಕರ್ ಚಿತ್ರಗಳ ಹಾಡುಗಳ ಚಿತ್ರೀಕರಣದಲ್ಲಿ ಸಭ್ಯತೆಯ ಬಗ್ಗೆ ಬೇಕಾದಷ್ಟು ಚರ್ಚೆಯಿದೆ. ಆದರೆ ಪ್ರಭಾಕರ್ ಅವರ ಇಂಥ ಹಾಡುಗಳನ್ನು, ಸಾಹಸವನ್ನು ಮೆಚ್ಚಿಕೊಂಡ ಸ್ತ್ರೀಯರೇ ಸೇರಿ ಒಂದು ಅಭಿಮಾನಿ ಸಂಘ ಮಾಡಿಕೊಂಡು, ಪ್ರಭಾಕರ್ ಹೆಸರಿನಲ್ಲಿ ಸಮಾಜ ಸೇವೆ ಮಾಡುತ್ತಿರುವುದೂ ವಾಸ್ತವ. ಇಂಥ ಕ್ರಿಯೆ-ಆಸಕ್ತಿಗಳನ್ನು ಹೇಗೆ ಗುರುತಿಸಿಕೊಳ್ಳಬೇಕೋ ತಿಳಿಯದೆ ಚಿತ್ರಶಾಸ್ತ್ರಿಗಳು ತಬ್ಬಿಬ್ಬಾಗುತ್ತಾರೆ.

'ಮುಂಜಾನೆಯ ಮಂಜು', ಹೆಣ್ಣೇ ಪ್ರಧಾನವಾದರೂ ಗಂಡಸಿನ ಔದಾರ್ಯದಲ್ಲಿ ತನ್ನ ತೃಪ್ತಲೋಕ ಸೃಷ್ಟಿಸಿಕೊಳ್ಳಲು ನಡೆಸುವ ಒಂದು ಪುಟ್ಟ ಘರ್ಷಣೆ. ಕೆ.ರಾಮಯ್ಯ ಸಂಭಾಷಣೆಯ ಚಮತ್ಕಾರಿಕ ಶೈಲಿ ದೃಶ್ಯದ ಅರ್ಥವನ್ನು ಶಕ್ತಿಯುತವಾಗಿ ಧ್ವನಿಸುವಂಥದ್ದಾಗಿದೆ. ಪಿ.ಹೆಚ್.ವಿಶ್ವನಾಥ್ ನಿರ್ದೇಶನದ ಚಿತ್ರ. ಹೆಣ್ಣುಗಳಿಬ್ಬರ ನಡುವೆ 'ಅನುಮಾನ'ವನ್ನು ಚಿತ್ರಿಸುತ್ತಾರೆ, ಅದರಾಚೆಗೆ ಚಾಚಿರುವ ಬದುಕಿನ ಇತರ ಮುಖಗಳ ಬಗ್ಗೆ ಸಾಕಷ್ಟು ಯೋಚಿಸಿದಂತಿಲ್ಲ. ಶ್ರೀಮಂತ ಛಾಯಾಗ್ರಹಣ, ಪ್ರಕೃತಿ ಖುಷಿ ಕೊಡುತ್ತವೆ.



(ಚಿತ್ರ ೪೭) 'ಗೆಜ್ಜೆನಾದ' ಚಿತ್ರದಲ್ಲಿ ಶ್ವೇತಾ ಮತ್ತು ರಾಮ್‌ಕುಮಾರ್

'ಕಾದಂಬರಿ', 'ಗೆಜ್ಜೆನಾದ' ಚಿತ್ರಗಳು ಪ್ರೇಮಕ್ಕಾಗಿ ತುಡಿಯುವ, ಮದುವೆಯಾಗಲು ಹೆಣಗುವ ಉದ್ದೇಶಕ್ಕೇ ಸೀಮಿತವಾಗಿವೆ. 'ಕಾದಂಬರಿ' ಚಿತ್ರದ ನವೀನ್‌ಚಂದರ್ ಹೊಸ ಪರಿಚಯ.

'ಗೆಜ್ಜೆನಾದ' ಈ ವರ್ಷ ತೆರೆಕಂಡ ಸದಭಿರುಚಿಯ ಚಿತ್ರಗಳಲ್ಲಿ ಒಂದು. 'ಮುತ್ತಿನಹಾರ', 'ಆವೇಶ', 'ಒಲವಿನ ಕಾಣಿಕೆ' ಚಿತ್ರಗಳಲ್ಲಿ ಸಣ್ಣ ಪಾತ್ರಗಳಲ್ಲಿ ಅಭಿನಯಿಸಿದ್ದ ರಾಮ್‌ಕುಮಾರ್ - ನಿರ್ಮಾಪಕ ಶೃಂಗಾರ ನಾಗರಾಜ್ ಪುತ್ರ - ಈ ಚಿತ್ರದಿಂದ ಪೂರ್ಣಪ್ರಮಾಣದ ನಾಯಕನಾಗಿ ಜನಮನ ಗೆದ್ದರು. ರಾಮ್‌ಕುಮಾರ್ ಚೆಲುವಾದ ಮುಖ, ನಿಲುವು, ಭಾವಾಭಿನಯ ಎಲ್ಲವನ್ನೂ ಸರಿಯಾಗಿ ದುಡಿಸಿಕೊಂಡ ಚಿತ್ರವಿದು. ಇದು ಅವರ ಮುಂದಿನ ಪ್ರಗತಿಪಥಕ್ಕೆ ಏರುಮೆಟ್ಟಿಲಾಯಿತು. ಈ ಚಿತ್ರವನ್ನು ವೆಂಕಟೇಶ್, ಲಕ್ಷ್ಮೀನಾರಾಯಣ್, ಸುದರ್ಶನ್ ನಿರ್ಮಿಸಿದರು. ವಿಜಯಕುಮಾರ್, ನಂಜುಂಡಪ್ಪ ಜಂಟಿಯಾಗಿ ನಿರ್ದೇಶಿಸಿದ್ದರು. ರಾಮ್‌ಕುಮಾರ್-ಶ್ವೇತಾ ಜೋಡಿಯ ಅಭಿನಯ. ಸಂಗೀತ-ನೃತ್ಯ ಪ್ರಧಾನವಾದ ಪ್ರೇಮಕಥೆ. 'ಮಳೆ ಮಳೆ ಮಿಂಚುಳ್ಳಿ ಜಾಣ ಜಾಣ ಕಾಜಾಣ...', 'ಸಿಂಧು ಸಿಂಧೂರ ಮಲ್ಲಿಗೆ...' ಹಾಗೂ ಬಾಲಕೃಷ್ಣ ಮತ್ತು ಪಂಢರಿಬಾಯಿ ಅಭಿನಯವಿದ್ದ ವಿಶೇಷ ಗೀತೆ 'ಸೋಮವಾರ ಸಂತೆಗೆ ಶನಿವಾರ ಸಂತೆಗೆ ಬರದಿದ್ದ ಸಂಪಿಗೆ..' ಚೆನ್ನಾಗಿತ್ತು. ಈ ಚಿತ್ರದ ಮುಖಾಂತರ ಕನ್ನಡದ ನೃತ್ಯ ನಿರ್ದೇಶಕ ದಂಪತಿಗಳಾದ ಮದನ್-ಹರಿಣಿ ಬೆಳಕಿಗೆ ಬಂದದ್ದು ವಿಶೇಷ. ಸೊಗಸಾದ ರೂಪಕಗಳನ್ನು ಬಳಸಿ ರಚಿತವಾಗಿದ್ದ ಸಂಭಾಷಣೆಗಾಗಿ ಕೋಟಿಗಾನಹಳ್ಳಿ ರಾಮಯ್ಯ ೧೯೯೪ರ ರಾಜ್ಯ ಪ್ರಶಸ್ತಿ ಪಡೆದುಕೊಂಡರು.

'ರಾಯರು ಬಂದರು ಮಾವನ ಮನೆಗೆ' ವಿಷ್ಣುವರ್ಧನ್-ದ್ವಾರಕೀಶ್ ವಿರಸ ಕಳೆದು ಒಂದಾದ ಮೇಲೆ ನಿರ್ಮಿಸಿದ ಚಿತ್ರ. ರಿಮೇಕ್ ಆದರೂ ಚೆನ್ನಾಗಿ ಮೂಡಿ ಬಂದಿತ್ತು. ಸಂಗೀತ, ಅಭಿನಯ, ಸಹಜ ಹಾಸ್ಯ ಎಲ್ಲವೂ ಇತ್ತು. ಬಾಡಿಗೆ ಗಂಡನಾಗಿ ಬಂದು ಮನೆಮಂದಿಯ ಮನಸೂರೆಗೈದ ಜಾಣ, ಆದರೆ ನೇಣುಗಂಬಕ್ಕೆ ಹೋಗಬೇಕಾದ ಅಪರಾಧಿಯಾಗಿ ವಿಷ್ಣುವರ್ಧನ್ ಉತ್ತಮ ಅಭಿನಯ ನೀಡಿದ್ದರು. ಕನ್ನಡ ಚಿತ್ರರಂಗದಲ್ಲಿ ರವಿಚಂದ್ರನ್ ಮೇಲೆ ಅಪವಾದ ಹೊರಿಸಿ ವಿವಾದದ ಬಿರುಗಾಳಿ ಎಬ್ಬಿಸಿದ, ಕೋರ್ಟಿನ ಮೆಟ್ಟಿಲು ತುಳಿದ ತಾರೆ ಬಿಂದಿಯಾ ಈ ಚಿತ್ರದ ಒಂದು ವಿಶೇಷ ಪಾತ್ರದಲ್ಲಿ ಮೂಕಿಯಾಗಿ ಅಭಿನಯಿಸಿದ್ದರು. ತಂದೆಯ ಪಾತ್ರದಲ್ಲಿ ಸಿ.ಆರ್.ಸಿಂಹ ಅಭಿನಯ ನೆನಪಿನಲ್ಲಿ ಉಳಿಯುವಂತಿತ್ತು. ಚಿತ್ರದ ಸಂಗೀತ ಉಲ್ಲೇಖನಾರ್ಹ.



(ಚಿತ್ರ ೪೮) 'ರಾಯರು ಬಂದರು ಮಾವನ ಮನೆಗೆ' ಚಿತ್ರದಲ್ಲಿ ವಿಷ್ಣುವರ್ಧನ್

ಚಿತ್ರರಂಗದಲ್ಲಿ ಮಾತು, ಲವಲವಿಕೆಗೆ ಹೆಸರಾದ ರಾಜೇಂದ್ರಕುಮಾರ್ ಅರಸ್‌ರ ಪ್ರಥಮ ನಿರ್ದೇಶನ ಚಿತ್ರ 'ವಿಜಯಕ್ರಾಂತಿ'. ಚಿತ್ರೋತ್ಸವಗಳಲ್ಲಿ ಹಲವಾರು ಚಿತ್ರಗಳನ್ನು ನೋಡಿ, ಏನೋ ಸಾಧಿಸಬೇಕೆಂಬ ತುಡಿತ ಇರುವ ಅರಸ್ 'ವಿಜಯಕ್ರಾಂತಿ' ಚಿತ್ರಕಥೆಯಲ್ಲಿ ಸರಿಯಾದ ಸ್ಥಳಗಳನ್ನೇ ಆಯ್ದು ತಿರುವುಗಳನ್ನು ಕೊಡುತ್ತಾರೆ. ಪ್ರೇಕ್ಷಕನ ಮನಸ್ಸನ್ನು ಎಲ್ಲಿ ಬಾಗಿಸಬಹುದೆಂಬುದನ್ನು ಬಲ್ಲ ಅರಸ್‌ರ ಜಾಣತನ ಇಲ್ಲಿ ಗ್ರಹೀತ.

ಜೋ ಸೈಮನ್ ನಿರ್ದೇಶನದಲ್ಲಿ 'ವಾಂಟೆಡ್' ತೆರೆಗೆ ಬಂತು. ನಿರ್ಮಾಪಕರು ಒಬ್ಬರೇ ಅಲ್ಲ, ಹಲವರು. ನಾಯಕಿಯ ತಂದೆಯೂ ಒಬ್ಬರು. ಚಿತ್ರಿಸಿದ್ದ ಗೀತೆಯೊಂದನ್ನು ಕಿತ್ತುಹಾಕಲಾಯಿತು, ಅದೇ ವಿವಾದ. ಕಥೆಯಲ್ಲಿ ಕೆಲವು ರೋಚಕ ತಿರುವುಗಳಿದ್ದವು. ಮುಖ್ಯವಾಗಿ ರಾಜೀವ್ ಗಾಂಧಿಯವರನ್ನು ಹತ್ಯೆ ಮಾಡಿದಾಗ ಬಳಸಿದ್ದ ಮಾನವಬಾಂಬ್ ತಂತ್ರವನ್ನು ಇಲ್ಲಿ ಬಳಸಿಕೊಂಡರು. ಕಾಕತಾಳೀಯವೆಂಬಂತೆ ಮಾನವಬಾಂಬ್ ಪಾತ್ರ ವಹಿಸಿದ್ದ ಹುಡುಗಿಯ ಹೆಸರೂ ಧನು ಎಂದೇ ಇತ್ತು.

'ಮೋಜಿನ ಮದುವೆ' ವಿ.ನಾರಾಯಣ ಸ್ವಾಮಿಯವರ ಚಿತ್ರ. ಸರ್ಕಾರಿ ಅಧಿಕಾರಿ. ಸದಭಿರುಚಿಯಲ್ಲಿ ಒಲವು ಎಂಬುದನ್ನು ಅವರ 'ಮಧುಮಾಸ' ಹೇಳಿತ್ತು. ಆದರೆ 'ಮೋಜಿನ ಮದುವೆ' ಹೊತ್ತಿಗೆ ಜನಪ್ರಿಯತೆಯ ಜಾಡನ್ನು ತಪ್ಪಾಗಿ ಅರ್ಥೈಸಿಕೊಂಡು ಸಾಗಿದಂತೆ ತೋರುತ್ತದೆ. ಆದರ್ಶ, ನಿಷ್ಠುರತೆ ಇಟ್ಟುಕೊಂಡು ಒಳ್ಳೆಯದನ್ನೆಲ್ಲ ಸ್ವಾಗತಿಸುತ್ತಿದ್ದ ಪತ್ರಕರ್ತ-ಲೇಖಕ ಮಿತ್ರರಾದ ಸತ್ಯಮೂರ್ತಿ ಆನಂದೂರು ಮತ್ತು ಚಂದ್ರಶೇಖರ ಆಲೂರು ಇಬ್ಬರೂ ಸಂಭಾಷಣೆಯ ರಚನೆಯಲ್ಲಿ ಬಹಳಷ್ಟು ರಾಜಿ ಮಾಡಿಕೊಂಡಂತಿದೆ.

ಯಶಸ್ವಿ ನಿರ್ದೇಶಕ ಎಂ.ಎಸ್.ರಾಜಶೇಖರ್ ನಿರ್ದೇಶಿಸಿದ ಮತ್ತೊಂದು ಚಿತ್ರ 'ಕಲ್ಯಾಣರೇಖೆ'. ಕಾದಂಬರಿಗಳನ್ನು ಆಯ್ಕೆ ಮಾಡುವಾಗಲೇ ತೀರಾ ತೆಳುಹಂದರದ ಕಥಾವಸ್ತುವನ್ನು ಆಯ್ದುಕೊಳ್ಳುವುದು ಅವರ ಗುಣವೋ, ದೌರ್ಬಲ್ಯವೋ ತಿಳಿಯದು. ಒಮ್ಮೊಮ್ಮೆ ಅಂಥವೇ ಅವರ ಸೃಜನಶೀಲತೆಯಿಂದಾಗಿ ಸೊಗಸಾಗಿದ್ದೂ ಉಂಟು. 'ಕಲ್ಯಾಣರೇಖೆ' ದುರ್ಬಲವಾಯಿತು, ತಾಳಿಯ ಸುತ್ತ ಓಡಾಡುವುದೇ ಜನರನ್ನು ತಲುಪುವ ಖಚಿತ ಸೂತ್ರ ಎಂದು ಭಾವಿಸುವುದು ಒಂದು ಕ್ರಮ. ಆ ಮಟ್ಟಿಗೆ ರಾಜಶೇಖರ್ ಜನರನ್ನು ತಲುಪಿದರು.

'ಕುಂಕುಮ ಭಾಗ್ಯ' ಬಿ.ಸುಬ್ಬಾರಾವ್ ನಿರ್ದೇಶನದಲ್ಲಿ ತೆರೆಗೆ ಬಂತು. ಕೆಳ ಮಧ್ಯಮ ವರ್ಗದ ಕುಟುಂಬವೊಂದರ ಆರ್ಥಿಕ ಸಂಕಷ್ಟವನ್ನು, ಮತ್ತದರ ಪರಿಣಾಮವನ್ನು ಚಿತ್ರಿಸುತ್ತದೆ. ಆ ಮಟ್ಟಿಗೆ ಅದು ಯಶಸ್ವಿ ಕೂಡಾ. ಚಿತ್ರ ಮೆಲೊಡ್ರಾಮಾದಿಂದಾಗಿ ಗುಣಾತ್ಮಕ ಅಂಶಗಳನ್ನು ಕಳೆದುಕೊಂಡಿತು. ಹಣದ ಸಲುವಾಗಿಯೇ ಆದರೂ ಮುತ್ತೈದೆ ಕುಂಕುಮ ಅಳಿಸಿಕೊಳ್ಳುವುದು, ಹೆತ್ತವರ ಭಾವನೆಗಳಿಗೆ ಬೆಲೆ ಕೊಡದೆ ಹಣಕ್ಕೆ ಬಾಯಿ ಬಿಡುವ ಮಕ್ಕಳು ಎಷ್ಟೇ ವಾಸ್ತವ ಅಂದುಕೊಂಡರೂ ಅಸಹನೀಯರಾಗುತ್ತಾರೆ. ಜೀವವಿಮೆ ಹಣಕ್ಕೆ ಸಂಬಂಧಿಸಿದ ವಸ್ತು ಕುತೂಹಲ ಹುಟ್ಟಿಸುವಲ್ಲಿ ಯಶಸ್ವಿ.

'ಹೂವೊಂದು ಬೇಕು ಬಳ್ಳಿಗೆ' ಫಣಿ ರಾಮಚಂದ್ರ ನಿರ್ದೇಶನದ ಚಿತ್ರ. ಧೈರ್ಯದ ಪ್ರಯತ್ನ. 'ಬಾಡಿಗೆ ತಾಯಿ'ಯ ಪರಿಕಲ್ಪನೆ ಕನ್ನಡ ಚಿತ್ರ ಪರಿಸರಕ್ಕೆ ಹೊಸದು. ವಂಶ ಪ್ರಜ್ಞೆ, ಹಳೆಯ ಮೌಲ್ಯಗಳ ಪ್ರತಿನಿಧಿಯಾದ ತಂದೆಗೆ ಮಗನಿಂದ ವಂಶವೃದ್ಧಿಯಾಗುತ್ತದೆಂಬ ಕನಸು. ಆತ ವಿದೇಶದಲ್ಲೇ ಮದುವೆ ಆಗಿ ಬಂದ. ಆಕೆಗೆ ಮಕ್ಕಳಾಗುವ ಅರ್ಹತೆ ಇಲ್ಲ. ಮಾವನಿಗಾಗಿ ವಿದೇಶಿ ಸೊಸೆ ಇನ್ನೊಬ್ಬಳಿಂದ ಮಗು ಪಡೆಯಲು ಬಯಸುತ್ತಾಳೆ. ವೇಶ್ಯೆಯೊಬ್ಬಳನ್ನು ಒಪ್ಪಿಸಿ, ಗಂಡ ಕುಡಿದು ಅಪ್ರಜ್ಞಾವಸ್ಥೆಯಲ್ಲಿದ್ದಾಗ ಆಕೆಯೊಡನೆ ಸಮಾಗಮ, ಆಕೆ ಗರ್ಭಿಣಿ ಆದಾಗ ತಾನೂ ಗರ್ಭಿಣಿಯಂತೆ ಮಾವನೆದುರು ನಟಿಸುತ್ತಾಳೆ. ಮಗು ಹುಟ್ಟಿದಾಗ ತನ್ನ ಮಗುವಾಗಿಸಿಕೊಳ್ಳುತ್ತಾಳೆ. ತಾಯಿ ಆದ ಮೇಲೆ ವೇಶ್ಯೆ ಮಗು ಕೊಡಲು ಒಪ್ಪದಿರುವ, ಅವಳನ್ನು ಆ ಮನೆಯ ಗೆಳೆಯನೇ ಮದುವೆ ಆಗುವುದು ಹೀಗೆ ವಿಚಿತ್ರ ತಿರುವುಗಳಿರುವ ಕಥೆ. ತಾವು ಬಹುವಾಗಿ ಮೆಚ್ಚಿದ ಪಾತ್ರ ಎಂದು ಕೆಲವು ಸನ್ನಿವೇಶಗಳ ಚಿತ್ರಣವನ್ನು ಎಳೆಎಳೆಯಾಗಿ ಬಿಡಿಸಿಡುತ್ತಾರೆ ತಂದೆಯ ಪಾತ್ರಧಾರಿ ಕೆ.ಎಸ್.ಅಶ್ವತ್ಥ್. ಚಿತ್ರ ನೋಡಿದವರಿಗೆ ತಂದೆ ಪಾತ್ರ ರೂಕ್ಷವೆನ್ನಿಸುತ್ತದೆ. ಈಗಾಗಲೇ ಅನ್ಯಭಾಷೆಗಳಲ್ಲಿ ಚಿತ್ರಿತವಾಗಿರುವ ವಸ್ತುವೇ ಆದರೂ ಕನ್ನಡದಲ್ಲಿ ಯಶಸ್ವಿಯಾಗಲಿಲ್ಲ. ಚಿತ್ರಕ್ಕೆ ಆಯ್ದ ಕಲಾವಿದೆ ನಿಜಜೀವನದಲ್ಲೂ ಬೀದಿ ಬದಿಯಲ್ಲಿ ಎಳನೀರು ವ್ಯಾಪಾರಿ ಎಂಬುದು ಸುದ್ದಿಯಾಗಿತ್ತು. ಆಕೆ ಅನನುಭವಿಯೇ ಆದರೂ

ತನ್ನ ಕೆಲಸದಲ್ಲಿ ಕಳಪೆ ಆಗಲಿಲ್ಲ. ಚಿತ್ರ ನಿರ್ದೇಶನ ಹೊಸದಲ್ಲವಾದರೂ ಫಣಿ ರಾಮಚಂದ್ರರಂತಹ ಪ್ರತಿಭಾವಂತರೂ ಎಡವಿದರು. ನಿರ್ಮಾಣ ಹಂತದ ಸಮಸ್ಯೆ ಕಾರಣವಾಗಿದಿರಬಹುದು. ಚಿತ್ರೀಕರಣದ ಸ್ಥಳದಲ್ಲೇ ವಿಸ್ತರಿಸುವ ವಿಧಾನದಲ್ಲಿ ಯಾವುದೋ ಒಂದು ಅಂಶಕ್ಕೆ ಹೆಚ್ಚಿನ ಒತ್ತು ಬಿದ್ದು ಪಾತ್ರಗಳು ಸಮತೋಲ ಕಳೆದುಕೊಂಡವು. ಹಾಗಲ್ಲವಾಗಿದ್ದರೆ ಇದೊಂದು ಗಂಭೀರವಾದ ಪ್ರಯೋಗವಂತೂ ಆಗಬಹುದಿತ್ತು.

'ಪೊಲೀಸ್ ಮತ್ತು ದಾದಾ' ಯಶಸ್ಸಿನ ಹಿಂದೆಯೇ ಅದೇ ಉತ್ಸಾಹದಲ್ಲಿ ವಿಷ್ಣುಪ್ರಿಯ ಲಾಂಛನದಲ್ಲಿ ತೆರೆಗೆ ತಂದದ್ದು ಮುಂಬೈನ ಕೇಸು ನಿರ್ದೇಶಿಸಿದ 'ವಿಷ್ಣು ವಿಜಯ'. ಬಹಳಷ್ಟು ಜನ ಹಿಂದೀ ನಟರೇ ಇದ್ದರು. ಅಕ್ಷಯ್ ಕುಮಾರ್, ವಿಷ್ಣುವರ್ಧನ್ ಜೋಡಿ. ಸಾಹಸ ಪ್ರಧಾನ. ಆದರೆ ಇದರ ಹಿಂದಿ ಅವತರಣಿಕೆಯಲ್ಲಿ ವಿಷ್ಣು ಅವರ ಪಾತ್ರ ಕಿರಿದಾಗಿತ್ತು. ಏನೂ ಕೆಲಸವಿಲ್ಲದ ಇಂಥ ಪಾತ್ರ ಕೊಟ್ಟು ತಮ್ಮ ನೆಚ್ಚಿನ ನಟನನ್ನು ಅವಮಾನಿಸಲಾಗಿದೆ ಎಂದುಕೊಂಡಿತು ವಿಷ್ಣು ಅಭಿಮಾನಿ ಬಳಗ. ಏನೇ ಆದರೂ ಚಿತ್ರ ವಿಷ್ಣು ನಿರೀಕ್ಷಿಸಿದ ಹಾಗೆ ಕನ್ನಡ-ಹಿಂದಿ ಎರಡು ಭಾಷೆಯಲ್ಲೂ ಯಶಸ್ವಿ ಆಗಲಿಲ್ಲ.

ಹಿಂದಿ ಚಿತ್ರವೊಂದರಲ್ಲಿ ಖ್ಯಾತನಟರ ಪ್ರತಿರೂಪಗಳ ಹಾಗಿದ್ದ ಬಹುತೇಕ ಡ್ಯೂಪ್ ಕಲಾವಿದರುಗಳು ಚಿತ್ರವೊಂದರಲ್ಲಿ ಅಭಿನಯಿಸಿ ಯಶಸ್ವಿ ಆಗಿದ್ದರು. ಅದೊಂದು ಪ್ರಯೋಗ. ಅದೇ ಮಾದರಿ ಅನುಸರಿಸಿ ಕನ್ನಡದಲ್ಲಿ 'ಹೂಸ ಲವ್ ಸ್ಟೋರಿ' ಚಿತ್ರವನ್ನು ರಾಜ್ ಕಿಶೋರ್ ನಿರ್ದೇಶಿಸಿದರು. ವೀರೇಶ್, ಸಾಯಿಕುಮಾರ್, ರಾಜ್ ಕಿಶೋರ್ ಮೂವರೂ ಸೇರಿ ನಿರ್ಮಿಸಿದ ಚಿತ್ರ. ಇವನ್ನೆಲ್ಲ ಖುಷಿಯಿಂದಲೇ ಸ್ವಾಗತಿಸಿದ ನಾಯಕನಟರೂ ಸಹಕರಿಸಿದ್ದರು. ವಿಷ್ಣುವರ್ಧನ್ 'ಮೇಘ ಮಾಲೆಯಲಿ ಸ್ವರ್ಣ ವರ್ಣದಲಿ...' ಗೀತೆಯನ್ನು ಹಾಡಿಯೂ ಇದ್ದರು. ಚಿತ್ರ ನೆಲ ಕಚ್ಚಿತು. ಕನ್ನಡದ ಪ್ರೇಕ್ಷಕ ತಮಾಷೆಗೂ ತಮ್ಮ ನಾಯಕನ ಸ್ಥಾನದಲ್ಲಿ ಅಪರಿಚಿತರನ್ನು ಕೂರಿಸಲು ಒಲ್ಲದಾದ.

ಎಸ್.ನಾರಾಯಣ್ ನಿರ್ದೇಶಿಸಿ ಜಗ್ಗೇಶ್ ಅಭಿನಯಿಸಿದ ಚಿತ್ರ 'ಬೇವು ಬೆಲ್ಲ'. ಈ ಜೋಡಿ ಎಂದ ಮೇಲೆ ಯಶಸ್ಸು ಖಚಿತ ಎಂಬ ನಿರೀಕ್ಷೆ ಹುಸಿಯಾಯಿತು. ಆದರೆ ಹಂಸಲೇಖ ಅವರ ಸಂಗೀತ ಸೊಗಸಾಗಿತ್ತು. ಎಲ್ಲ ಹಾಡುಗಳೂ ಚೆನ್ನಾಗಿದ್ದವು. 'ನಮ್ಮ ಊರ ಚೆಲುವೆ...', 'ಜನುಮ ನೀಡುತ್ತಾಳೆ ನಮ್ಮ ತಾಯಿ...', 'ದೇವರಿಗೊಂದು ಕಾಗದ ಬರೆದು..' ಮೊದಲಾದವು ಅರ್ಥಪೂರ್ಣ ಜನಪ್ರಿಯ ಹಾಡುಗಳಾಗಿದ್ದವು.

ರಾಜ್ಯ ಸರ್ಕಾರ ಅದುವರೆಗೆ ಎಲ್ಲಾ ಕನ್ನಡ ಚಿತ್ರಗಳಿಗೆ ಮನರಂಜನಾ ತೆರಿಗೆಯಲ್ಲಿ ಶೇಕಡಾ ೫೦ ರಷ್ಟು ವಿನಾಯ್ತಿ ನೀಡುತ್ತಿತ್ತು. ಇದರ ದುರ್ಬಳಕೆ ಆಗುತ್ತಿದೆ ಎಂಬ ಅಭಿಪ್ರಾಯವೂ ಎಲ್ಲಾ ಕಡೆಯಿಂದ ಕೇಳಿಬಂದ ಹಿನ್ನೆಲೆಯಲ್ಲಿ ರೀಮೇಕ್ ಚಿತ್ರಗಳಿಗೆ ವಿನಾಯ್ತಿಯನ್ನು ೧೯೯೩ ರಲ್ಲಿ ರದ್ದುಗೊಳಿಸಿತು. ರೀಮೇಕ್ ಚಿತ್ರಗಳ ಹಾವಳಿಯಿಂದಾಗಿ ತತ್ತರಿಸಿ, ಮುಳುಗುತ್ತಿದ್ದ ಉದ್ಯಮಕ್ಕೆ ಸರ್ಕಾರದ ನೀತಿ ಆಶಾಭಾವನೆ ಮೂಡಿಸಿದೆ ಎಂದು ಉದ್ಯಮದ ಬಹುತೇಕ ಮಂದಿ ಸ್ವಾಗತಿಸಿದರು. ಆದರೆ ಚಿತ್ರನಿರ್ಮಾಣವನ್ನು ವ್ಯವಹಾರದ ಸುಲಭ ಮಾರ್ಗಗಳಿಗಾಗಿ ಅವಲಂಬಿಸಿದ್ದವರು ಎಂದಿನಂತೆ ಅಪಸ್ವರ ಎತ್ತಿದರು. ೧೯೯೩ರ ಮಾರ್ಚ್ ಆಯ-ವ್ಯಯದ ಮೂಲಕ ಸರ್ಕಾರದ ಪ್ರಕಟಣೆ ಹೊರಬಿದ್ದ ಮೇಲೆ ಮೂರು ತಿಂಗಳಷ್ಟು ಕಾಲ ಚಿತ್ರೋದ್ಯಮದ ಚಟುವಟಿಕೆ ಸ್ತಬ್ಧಗೊಂಡಿತು. ಇದರಿಂದಾಗಿ ಕಾರ್ಮಿಕರು, ತಂತ್ರಜ್ಞರು ಕೆಲಸವಿಲ್ಲದೆ ಕುಳಿತುಕೊಳ್ಳಬೇಕಾಯಿತು. ಇದರೊಂದಿಗೆ ಸರ್ಕಾರದ ನೀತಿ ೧೯೯೩ರ ಏಪ್ರಿಲ್‌ನಲ್ಲಿ ಯಶಸ್ವಿಯಾಗಿ ಪ್ರದರ್ಶನವಾಗುತ್ತಿದ್ದ 'ಗಡಿಬಿಡಿ ಗಂಡ' ಹಾಗೂ 'ಅಣ್ಣಯ್ಯ' ರೀಮೇಕ್ ಚಿತ್ರಗಳ ಮೇಲೆ ಪ್ರತಿಕೂಲ ಪರಿಣಾಮ ಬೀರಿತು. ಇವೆರಡು ಚಿತ್ರಗಳಿಗೂ ಚಿತ್ರಮಂದಿರದ ಮಾಲೀಕರು ಏಪ್ರಿಲ್ ೧ ರಿಂದ ಶೇಕಡಾ ೧೦೦ ತೆರಿಗೆ ಸಂಗ್ರಹಿಸುವ ಮೂಲಕ ಪ್ರವೇಶಧನ ಹೆಚ್ಚಿಸಿದ್ದರು. ಇದರಿಂದ ಕಂಗಾಲಾದ ಮೇಲಿನ ಚಿತ್ರಗಳ ನಿರ್ಮಾಪಕರು ಹಾಗೂ ಹಂಚಿಕೆದಾರರು ವಾಣಿಜ್ಯ ಮಂಡಳಿ ಮೊರೆಹೊಕ್ಕರು. ವಾಣಿಜ್ಯ ಮಂಡಳಿ ನಿಯೋಗ ಮುಖ್ಯಮಂತ್ರಿಯನ್ನು ಭೇಟಿ ಮಾಡಿ, ಮುಂದಿನ ಆಗಸ್ಟ್ ೩೧ರ ಒಳಗೆ ಸೆನ್ಸಾರ್ ಆದ ರೀಮೇಕ್ ಚಿತ್ರಗಳಿಗೆ ತೆರಿಗೆ ವಿನಾಯ್ತಿ ಕೊಡಬೇಕೆಂದು ಆರು



(ಚಿತ್ರ ೪೯) 'ಆಕಸ್ಮಿಕ' ಚಿತ್ರದಲ್ಲಿ ರಾಜಕುಮಾರ್

ತಿಂಗಳ ಸಮಯಾವಕಾಶ ಕೇಳಿ ಮತ್ತೊಂದು ಆಜ್ಞೆ ಹೊರಡಿಸುವಲ್ಲಿ ಯಶಸ್ವಿಯಾಯಿತು.

ರಿಮೇಕ್ ಚಿತ್ರಗಳ ಆಸಕ್ತಿ, ಹಿತವನ್ನು ಕಾಪಾಡಿಕೊಳ್ಳಲು ಒಂದು ವರ್ಗದ ಚಿತ್ರೋದ್ಯಮಿಗಳು ಶಕ್ತಿಮೀರಿ ಪ್ರಯತ್ನಿಸುತ್ತಿದ್ದಾಗ ಪ್ರೇಕ್ಷಕರಲ್ಲಿ ಪ್ರದರ್ಶಕರಲ್ಲಿ ಹೊಸದೊಂದು ಬೆಳವಣಿಗೆ ಕಂಡುಬಂದಿತು. ಅದು ಹಳೆಯ ಚಿತ್ರಗಳ ಅದ್ದೂರಿ ಪುನರ್‌ಪ್ರದರ್ಶನ ಹಾಗೂ ವೀಕ್ಷಣೆ. ನಾಲ್ಕು ದಶಕಗಳಷ್ಟು ಹಳೆಯ ಚಿತ್ರ 'ಸತ್ಯ ಹರಿಶ್ಚಂದ್ರ' ಬೆಂಗಳೂರಿನ ಕೆಂಪೇಗೌಡ ರಸ್ತೆಯ ಚಿತ್ರಮಂದಿರದಲ್ಲಿ ಬಿಡುಗಡೆಯಾಗಿ ಅಭೂತಪೂರ್ವ ರೀತಿಯಲ್ಲಿ ಯಶಸ್ವಿಯಾಯಿತು. ಇದು ಚಿತ್ರೋದ್ಯಮಿಗಳನ್ನು ಅಶ್ಚರ್ಯದಲ್ಲಿ ಮುಳುಗಿಸಿತು. ಇದರಿಂದ ಉತ್ಸಾಹಗೊಂಡ ಹಂಚಿಕೆದಾರರು ರಾಜ್ಯದಾದ್ಯಂತ ಮುಖ್ಯ ಪಟ್ಟಣಗಳಲ್ಲಿ ರಾಜಕುಮಾರ್ ಅಭಿನಯದ 'ಕಸ್ತೂರಿ ನಿವಾಸ', 'ಜಗ ಮೆಚ್ಚಿದ ಮಗ', 'ಭಲೇ ಜೋಡಿ', 'ರಾಜದುರ್ಗದ ರಹಸ್ಯ', 'ಗಂಧದ ಗುಡಿ' ಚಿತ್ರಗಳನ್ನು ಹೊಸಚಿತ್ರಗಳೆಂಬಂತೆ ಪ್ರಚಾರ, ಪೋಸ್ಟರ್ ಮಾಡಿಸಿ ಬಿಡುಗಡೆ ಮಾಡಿದರು. ಇವು ೫೦, ೭೫, ೧೦೦ ದಿನಗಳಷ್ಟು ಕಾಲ ಪ್ರದರ್ಶನವಾಗಿ ಪ್ರೇಕ್ಷಕರ ಅಭಿರುಚಿಯನ್ನು ತಪ್ಪಾಗಿ ಅರ್ಥೈಸುತ್ತಿದ್ದವರ ಕಣ್ಣು ತೆರೆಸಿದವು. ಈ ಪುನರ್ ಬಿಡುಗಡೆಯಾದ ಕಪ್ಪು-ಬಿಳುಪು ಚಿತ್ರಗಳ ಪ್ರತಿಗಳನ್ನು ಸಿಪಿಯಾ ವರ್ಣದಲ್ಲಿ ಸಿದ್ಧಗೊಳಿಸಲಾಗಿತ್ತು.

ಪುನರ್‌ಬಿಡುಗಡೆಯಲ್ಲಿ ಯಶಸ್ಸು ಕಂಡದ್ದು ರಾಜಕುಮಾರ್‌ರವರ ಶ್ರೇಷ್ಠ ಹಳೆಯ ಚಿತ್ರಗಳು ಮಾತ್ರ. ಇವರದೇ ಅಭಿನಯದ ಇನ್ನು ಕೆಲವು ಚಿತ್ರಗಳನ್ನು ಹಂಚಿಕೆದಾರರು ಉತ್ಸಾಹ, ಉಮೇದಿನಿಂದ ಬಿಡುಗಡೆ ಮಾಡಿದರೂ ಅವು ಎರಡು ಅಥವಾ ಮೂರು ವಾರಕ್ಕಿಂತ ಹೆಚ್ಚಿನ ದಿನಗಳನ್ನು ಕಾಣಲಿಲ್ಲ. ಅಪರೂಪದ ಚಿತ್ರ, ಶ್ರೀಮಂತ ಚಿತ್ರ ಎಂದು



(ಚಿತ್ರ ೫೦) 'ಆತಂಕ' ಚಿತ್ರದಲ್ಲಿ ಅನಂತ್‌ನಾಗ್ ಮತ್ತು ವಿನಯಾ ಪ್ರಸಾದ್

ಇಂದಿಗೂ ಮೆಚ್ಚಿಕೊಳ್ಳುವ 'ಸತಿಶಕ್ತಿ' ಚಿತ್ರವನ್ನು ಬೇಕರಿ ಶ್ರೀನಿವಾಸ್ ವಿತರಿಸಿದರು. ಆದರೆ ಅದು ಮರುಪ್ರದರ್ಶನದಲ್ಲಿ ಪ್ರೇಕ್ಷಕರನ್ನು ಹಿಡಿದಿಟ್ಟುಕೊಳ್ಳಲಿಲ್ಲ.

ಇದೇ ವೇಳೆಯಲ್ಲಿ 'ಆಕಸ್ಮಿಕ' ಬಿಡುಗಡೆಯಾಗಿ ಯಶಸ್ಸು ಕಂಡಿತು. ತ.ರಾ.ಸು. ಅವರ ಆಕಸ್ಮಿಕ, ಅಪರಾಧಿ ಹಾಗೂ ಪರಿಣಾಮ - ಈ ಮೂರು ಕಾದಂಬರಿಗಳನ್ನು ಆಧರಿಸಿದ ಈ ಚಿತ್ರವನ್ನು ನಾಗಾಭರಣ ನಿರ್ದೇಶಿಸಿದರು. ಇದಕ್ಕೂ ಮುಂಚೆ ಈ ತ್ರಿವಳಿ ಕಾದಂಬರಿಗಳನ್ನು ಮೆಚ್ಚಿಕೊಂಡಿದ್ದ ಅನಂತ್‌ನಾಗ್ ಅವರು ನಾಗಾಭರಣ ಅವರಿಂದಲೇ ಈ ಚಿತ್ರವನ್ನು ತಯಾರಿಸಲು ಉದ್ದೇಶಿಸಿದ್ದರು. ಶಂಕರ್‌ನಾಗ್ ನಿಧನಾನಂತರ ವಿಚಲಿತರಾಗಿದ್ದ ಅವರು ಯೋಜನೆ ಕೈ ಬಿಟ್ಟಿದ್ದರಿಂದ ರಾಜ್‌ರ ಸಂಸ್ಥೆಗೆ ಅವಕಾಶ ಲಭ್ಯವಾಯಿತು. ಪತ್ತೇದಾರಿ ಶೈಲಿಯ ನಿರೂಪಣೆ ಇರುವ ಈ ಚಿತ್ರದಲ್ಲಿ ಸಮಾಜದ ಪ್ರಮುಖ ಸಮಸ್ಯೆಯಾಗಿರುವ ವೇಶ್ಯಾವಾಟಿಕೆಯ ಪ್ರಸ್ತಾಪವಿದೆ. ರಾಜ್ಯದ ಎಂಟು ಚಿತ್ರಮಂದಿರಗಳಲ್ಲಿ ಶತದಿನದ ಪ್ರದರ್ಶನ ಕಂಡ ಈ ಚಿತ್ರ, ಬೆಂಗಳೂರಿನ ನರ್ತಕಿಯಲ್ಲಿ ೨೫ ವಾರ ಪ್ರದರ್ಶನ ಕಂಡಿತು. ಇದರೊಂದಿಗೆ ರಾಜ್ಯ ಸರ್ಕಾರದ ದ್ವಿತೀಯ ಶ್ರೇಣಿ ಪ್ರಶಸ್ತಿ ಪಡೆಯಿತು.

ಹುಬ್ಬಳ್ಳಿಯ ಕಿತ್ತೂರು ಚೆನ್ನಮ್ಮ ವೃತ್ತದಲ್ಲಿ ಚಿತ್ರಿಸಲಾಗಿರುವ ಈ ಚಿತ್ರದ 'ಹುಟ್ಟಿದರೆ ಕನ್ನಡ ನಾಡಲ್ ಹುಟ್ಟಬೇಕು...' ಹಾಡು ಪಡೆದುಕೊಂಡ ಜನಪ್ರಿಯತೆ ಈ ದಶಕದ ಪ್ರಮುಖ ದಾಖಲೆ. ಹಂಸಲೇಖ ಬರೆದು, ರಾಗ ಸಂಯೋಜಿಸಿರುವ ಈ ಗೀತೆಯಲ್ಲಿ ಕಾವ್ಯಾತ್ಮಕ ಅಂಶಗಳಾಗಲೀ, ಸುಸಂಬದ್ಧ ಅರ್ಥ ವಿಸ್ತರಣೆಯಾಗಲೀ (ಉದಾಹರಣೆಗೆ 'ಹುಟ್ಟಿದರೆ ಕನ್ನಡ ನಾಡಲ್ ಹುಟ್ಟಬೇಕು ಮೆಟ್ಟಿದರೆ ಕನ್ನಡ ಮಣ್ಣನ್ನು ಮೆಟ್ಟಬೇಕು...' ಸಾಲಿನ ನಂತರ ಬರುವ 'ಬದುಕಿದು ಜಟಕಾ ಬಂಡಿ ಇದು ವಿಧಿಯೋಡಿಸುವ ಬಂಡಿ...'' ಸಾಲಿನ ಅರ್ಥ ಔಚಿತ್ಯ ಯಾರಿಗೂ ಅರ್ಥವಾಗದು) ಇಲ್ಲದಿದ್ದರೂ ತಾಳ, ಪದಗಳ ಲಯಬದ್ಧ ಜೋಡಣೆ ಇದ್ದುದು ಹಾಗೂ ರಾಜಕುಮಾರ್ ಭಾವಪೂರ್ಣ ಅಭಿನಯ ಯಶಸ್ಸಿಗ ಕಾರಣವಾಯಿತು. ಈ ಹಾಡಿನ ಗಾಯನಕ್ಕಾಗಿ ರಾಜಕುಮಾರ್‌ಗ ೧೯೯೪-೯೫ರ ಅತ್ಯುತ್ತಮ ಗಾಯಕ ರಾಜ್ಯ ಪ್ರಶಸ್ತಿ ಬಂದಿತು. ೧೯೯೫ರ ನಂತರದ ವರ್ಷಗಳಲ್ಲಿ ಈ ಗೀತೆ ಬಹುತೇಕ ಚಲನಚಿತ್ರ ಸಮಾರಂಭಗಳ ಖಾಯಂ ಮುಕ್ತಾಯಗೀತೆಯಂತಾಯಿತು. ಹಿಂದ ರಾಜಕುಮಾರ್‌ರವರ ವ್ಯಕ್ತಿವೈಶಿಷ್ಟ್ಯಕ್ಕೆ ಒತ್ತು ಕೊಡುವಂಥ 'ನಾನೇ ರಾಜಕುಮಾರ ಕನ್ನಡ ನಾಡಿನ ಪ್ರೇಮದ ಕುವರ...', 'ಯಾರೇ ಕೂಗಾಡಲಿ ಊರೇ ಹೋರಾಡಲಿ...' ಗೀತೆಗಳು ಯಶಸ್ವಿಯಾಗಿದ್ದವು. ನಂತರದ ದಿನಗಳಲ್ಲಿ ಪಾತ್ರವನ್ನು ವೈಭವೀಕರಿಸಿಕೊಳ್ಳುವ ಗೀತೆಗಳು ಅವರ ಚಿತ್ರಗಳಲ್ಲಿ ಇಲ್ಲವಾದವು. ಅವುಗಳ ಜಾಗದಲ್ಲಿ 'ಜನಭಕ್ತಿ' ಹಾಗೂ 'ರಾಜ್ಯಭಕ್ತಿ' ಗೀತೆಗಳು ಕಾಣಿಸಿಕೊಂಡವು. 'ಮಯೂರ' ಚಿತ್ರದ 'ನಾನಿರುವುದೆ ನಿಮಗಾಗಿ...' ಗೀತೆ ಮೊದಲನೆಯದಾದರೆ ಇದರ ಮುಂದುವರಿದ ರೂಪವೇ 'ಆಕಸ್ಮಿಕ'ದ 'ಹುಟ್ಟಿದರೇ...'. ನಂತರ 'ಶಬ್ದವೇಧಿ'ಯಲ್ಲಿ 'ಜನರಿಂದ ನಾನು ಮೇಲೆ ಬಂದೆ...' ಎಂಬ ಋಣ ಹರಿಸಿಕೊಳ್ಳುತ್ತಿರುವ ಭಾವದ ಕೃತಜ್ಞತಾಪೂರ್ವಕ ಗೀತೆ ಸೃಷ್ಟಿಯಾಯಿತು. 'ಆಕಸ್ಮಿಕ' ಚಿತ್ರದ 'ಹುಟ್ಟಿದರೆ....' ಗೀತೆಯ ಯಶಸ್ಸು ಇತರ ನಾಯಕನಟರ ಮೇಲೂ ಅಪಾರವಾದ ಪರಿಣಾಮ ಬೀರಿತು. ಸುಮಾರು ಆರು ವರ್ಷಗಳ ಕಾಲ ೧೯೯೮ರವರೆಗೆ ಕನ್ನಡ ಬಾವುಟವನ್ನು ಹಿಡಿದುಕೊಂಡು ಕುಣಿಯುವಂಥ ಸುಮಾರು ೩೦ಕ್ಕೂ ಹೆಚ್ಚು ಹಾಡುಗಳು ಕನ್ನಡ ಚಿತ್ರಗಳಲ್ಲಿ ಕಾಣಿಸಿಕೊಂಡಿವೆ. ಅವುಗಳಲ್ಲಿ ಹೆಚ್ಚಿನವನ್ನು ಹಂಸಲೇಖ ಬರೆದು, ರಾಗ ಸಂಯೋಜಿಸಿದ್ದಾರೆ. ಆದರೆ ಅವಾವುವೂ ಯಶಸ್ವಿಯಾಗಿಲ್ಲ. 'ಹೂವು ಹಣ್ಣು' ಚಿತ್ರದಲ್ಲೂ ಕನ್ನಡ ಭಾಷೆಯ ಮಹತ್ವ, ಹೆಮ್ಮೆಯನ್ನು ಸಾರುವ ಒಂದು ಗೀತೆಯನ್ನು ಬರೆದು ಹಂಸಲೇಖ ರಾಗ ಸಂಯೋಜಿಸಿದ್ದರು.

ಹೆಚ್ಚು ರಾಜ್ಯ ಪ್ರಶಸ್ತಿಗಳನ್ನು ಗಳಿಸಿ ಸುದ್ದಿ ಮಾಡಿದ ಈ ಅವಧಿಯ ಇನ್ನೊಂದು ಚಿತ್ರ ಸಿ.ವಿ.ಎಲ್.ಶಾಸ್ತ್ರಿ ನಿರ್ಮಿಸಿದ 'ಆತಂಕ'. ಗಲ್ಲಾಪೆಟ್ಟಿಗೆಯಲ್ಲಿ ಚಿತ್ರ ದಯನೀಯ ಸೋಲನ್ನು ಅನುಭವಿಸಿತು. ಫಾರ್ಮುಲಾ ನಿರ್ದೇಶಕ ಸಾಯಿಪ್ರಕಾಶ್ ನಿರ್ದೇಶನ ಚಿತ್ರರಂಗದಲ್ಲಿ ಅಚ್ಚರಿ ಮೂಡಿಸಿತು. ಮಾನಸಿಕ ಅಸ್ವಸ್ಥರೊಬ್ಬಳನ್ನು ಕೇಂದ್ರವಾಗಿಟ್ಟುಕೊಂಡ ಕೌತುಕಮಯ ನಿರೂಪಣೆಯ ಚಿತ್ರ. ಬಿಗಿಯಾದ ಚಿತ್ರಕಥೆ ನಿರ್ದೇಶಕ ಸಾಯಿಪ್ರಕಾಶ್ ಕೆಲಸವನ್ನು ಸುಲಭಗೊಳಿಸಿತ್ತು. ರಾಜ್ಯದ ೧೯೯೨-೯೩ರ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಗಳಿಸಿದ 'ಆತಂಕ' ವಿನಯಾ ಪ್ರಸಾದ್‌ಗೆ ಶ್ರೇಷ್ಠ ನಟಿ, ಎಸ್.ಸುರೇಂದ್ರನಾಥ್‌ಗೆ ಶ್ರೇಷ್ಠ ಕಥೆ, ಚಿತ್ರಕಥೆ ಹಾಗೂ ಜಾನಿಲಾಲ್, ಕೆ.ನರಸಯ್ಯ ಅವರಿಗೆ ಕ್ರಮವಾಗಿ ಛಾಯಾಗ್ರಹಣ, ಸಂಕಲನಕ್ಕೆ ಪ್ರಶಸ್ತಿ ತಂದುಕೊಟ್ಟಿತು. ತನ್ನ ಗಂಡನೇ ತನ್ನನ್ನು ಸಾಯಿಸಿಬಿಡುತ್ತಾನೆಂಬ ಸಂದೇಹದ ಹೆಂಡತಿ, ಕಾಕತಾಳೀಯವಾಗಿ ನಡೆಯುವ ಎಲ್ಲ ಘಟನೆಗಳೂ ಆ ಆತಂಕಕ್ಕೆ ಸರಿಹೊಂದುವಂತೆ ಇರುತ್ತಿದ್ದುದು ಅವಳ ಮತ್ತಷ್ಟು ಗಾಬರಿಗೆ ಕಾರಣ. ವಿನಯಾ ಪ್ರಸಾದ್ ತಮ್ಮ ಕಣ್ಣುಗಳಲ್ಲೇ ಅಪರೂಪವೆಂಬಂಥ ಭಾವ ಪ್ರದರ್ಶನ ಮಾಡಿದ್ದರು. ಇಂಥ ಚಿತ್ರಗಳ ಸೋಲು ಉದ್ಯಮದ ದುರಂತವೇ ಸರಿ.

'ಆತಂಕ'ದಂತೆಯೇ ೧೯೯೩ರ ಕೆಲವು ಗಮನಾರ್ಹ ಚಿತ್ರಗಳೆಲ್ಲವೂ ಪತ್ತೇದಾರಿ ಶೈಲಿಯ ಲಕ್ಷಣಗಳನ್ನು ಒಳಗೊಂಡಿರುವುದು ಕುತೂಹಲಕರ 'ಆಕಸ್ಮಿಕ', 'ವೈಶಾಖದ ದಿನಗಳು', 'ಬಾ ನಲ್ಲೆ ಮಧುಚಂದ್ರಕೆ', 'ಕರಿಮಲೆಯ ಕಗ್ಗತ್ತಲು', 'ನಿಷ್ಕರ್ಷ' - ಇವೆಲ್ಲ ಚಿತ್ರಗಳ ವಸ್ತು ಭಿನ್ನವಾಗಿದ್ದರೂ ರಹಸ್ಯ ಶೋಧನೆ ಹಾಗೂ ರಹಸ್ಯ ಕಾಪಾಡುವ ರೀತಿಯಲ್ಲಿವೆ. 'ವೈಶಾಖದ ದಿನಗಳು' ೧೯೭೯ರಲ್ಲಿ 'ಅರಿವು' ಚಿತ್ರವನ್ನು ನಿರ್ದೇಶಿಸಿದ್ದ



(ಚಿತ್ರ ೫೧) 'ಬಾ ನಲ್ಲೆ ಮಧುಚಂದ್ರಕೆ' ಚಿತ್ರದಲ್ಲಿ ನಂದಿನಿಸಿಂಗ್ ಮತ್ತು ಕೆ.ಶಿವರಾಮು



(ಚಿತ್ರ ೫೨) 'ನಿಷ್ಕರ್ಷ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಮಂಜು

ಕಟ್ಟೆ ರಾಮಚಂದ್ರ ಅವರು ೧೩ ವರ್ಷದ ನಂತರ ನಿರ್ದೇಶಿಸಿದ ಚಿತ್ರ. ಬಂಗಾಲಿಯ ಮೂನ್ ಮೂನ್ ಸೇನ್ ಅಭಿನಯಿಸಿದ್ದ ಈ ಚಿತ್ರದಲ್ಲಿ ವಿಷ್ಣುವರ್ಧನ್, ಚಲನಚಿತ್ರನಟ ವಿಷ್ಣುವರ್ಧನ್ ಆಗಿಯೇ ಅಭಿನಯಿಸಿದ್ದರು. ಕುತೂಹಲಕರ ಕಥೆಯಲ್ಲಿ ಕುತೂಹಲಕ್ಕೆ ಕಾರಣಗಳು ದುರ್ಬಲವಾಗಿದ್ದವು. ಚಿತ್ರವನ್ನು ಆರಂಭಿಸುವಾಗ 'ತಾನು ಇಷ್ಟು ವರ್ಷಗಳ ಕಾಲ ಕಲಾತ್ಮಕ ಚಿತ್ರಗಳನ್ನು ನಂಬಿ ಕೆಟ್ಟೆ' ಎಂದು ಹೇಳಿದ್ದ ಕಟ್ಟೆ ರಾಮಚಂದ್ರ ಅವರು, ವ್ಯಾಪಾರಿ ಎಂದು ಭಾವಿಸಿಕೊಂಡಿದ್ದ 'ವೈಶಾಖದ ದಿನಗಳು' ಚಿತ್ರವಲ್ಲೂ ಯಶಸ್ಸು ಕಾಣಲಿಲ್ಲ. ಕೆಲವು ಉತ್ತಮ ಸನ್ನಿವೇಶಗಳಷ್ಟೇ ಇಡೀ ಚಿತ್ರದಲ್ಲಿದ್ದದ್ದು.

'ಬಾ ನಲ್ಲೆ ಮಧುಚಂದ್ರಕೆ', ತಾನು ಅತಿಯಾಗಿ ಪ್ರೀತಿಸಿ ಮದುವೆ ಆದವಳಿಂದ ಮೋಸಹೋದ ನಾಯಕ ಅವಳನ್ನು ಕೊಲ್ಲುವ ಕಥೆಯಿರುವ ಚಿತ್ರ. ವಸ್ತು ಹೊಸದಲ್ಲದಿದ್ದರೂ ಹೇಳಿದ ರೀತಿ ಭಿನ್ನವಾಗಿತ್ತು. ಹಂಸಲೇಖ ರಾಗ ಸಂಯೋಜನೆಯಲ್ಲಿ 'ಓಹೋ ಹಿಮಾಲಯ...' ಹಾಗೂ 'ಆ ಬೆಟ್ಟದಲ್ಲಿ ಬೆಳದಿಂಗಳಲ್ಲಿ....' ಹಾಡುಗಳು ಉತ್ತಮವಾಗಿದ್ದವು. 'ಉಂಡೂ ಹೋದ ಕೊಂಡೂ ಹೋದ' ಚಿತ್ರದನಂತರ ನಾಗತಿಹಳ್ಳಿ ಚಂದ್ರಶೇಖರ್‌ಗೆ ಮಾಧ್ಯಮದ ಮೇಲೆ ಹಿಡಿತ ತಂದುಕೊಟ್ಟ ಚಿತ್ರವಿದು. ಕನ್ನಡ ಮಾಧ್ಯಮದಲ್ಲಿ ಐಎಎಸ್ ಪರೀಕ್ಷೆ ಬರೆದು ತೇರ್ಗಡೆಯಾದ ಮೊದಲ ಅಧಿಕಾರಿ ಎಂಬ ಹೆಗ್ಗಳಿಕೆ ಪಡೆದುಕೊಂಡಿದ್ದ ಕೆ.ಶಿವರಾಮು ಈ ಚಿತ್ರದ ಮೂಲಕ ನಾಯಕನಟರಾಗಿ ಪರಿಚಿತರಾದರು. ಭಾವಾಭಿನಯದಲ್ಲಿ ಸಪ್ಪೆಯೆನಿಸಿದ ಇವರು ನೃತ್ಯ ಹಾಗೂ ಹೊಡೆದಾಟಗಳಲ್ಲಿ ಚುರುಕಾಗಿ ಅಭಿನಯಿಸಿದ್ದರು. 'ಹರಕೆಯ ಕುರಿ', 'ವೈಶಾಖದ ದಿನಗಳು' ಚಿತ್ರಗಳಲ್ಲಿ ಮುಖ್ಯ ಹಾಗೂ ವಿಭಿನ್ನ ಪಾತ್ರಗಳಲ್ಲಿ ಅಭಿನಯಿಸಿದ್ದ ಪ್ರಕಾಶ್ ರೈ ಈ ಚಿತ್ರದ ನಾಯಕನ ಅನುಮಾನಾಸ್ಪದ ಗೆಳೆಯನ ಪಾತ್ರದಲ್ಲಿ ಗಮನಾರ್ಹ ಅಭಿನಯ ನೀಡಿದ್ದರು. ಚಿತ್ರವು ಬೆಂಗಳೂರಿನಲ್ಲಿ ನೂರು ದಿನದ ಪ್ರದರ್ಶನ ಕಂಡಿತು.

ಜನಪ್ರಿಯ ಚಿತ್ರಗಳಲ್ಲಿ ಕೆಲವು ದೃಶ್ಯಗಳಿಗೆ ಒಂದು ಗೊತ್ತಾದ ವಿಧಾನ ಅನೂಚಾನವಾಗಿ ನಡೆದುಬಂದಿದೆ. ನಾಗತಿಹಳ್ಳಿ ಅದನ್ನು ಮುರಿದು ಹೊಸ ರೀತಿಯಲ್ಲಿ ಹೇಳಿದ ಕೆಲವು ಸನ್ನಿವೇಶಗಳಿದ್ದವು. ಉದಾಹರಣೆಗೆ, ಮೊದಲ ರಾತ್ರಿಯ ದೃಶ್ಯ. ಮನೆ ದೊಡ್ಡದು, ಶ್ರೀಮಂತವಾದ್ದೇ. ಆದರೆ ನೆಲದ ಮೇಲೆ ಹಾಸಿಗೆ ಹಾಸಿರುತ್ತೆ. ಒಳಗೆ ಬರುವಾಗ ಅಮ್ಮ ಹೇಳಿದ ಹಿತ ನುಡಿಗೆಲ್ಲ 'ಸ್ತ್ರೀವಾದಿ'ಯಂತೆ ಎದುರುತ್ತರ ಕೊಡುವ ಹುಡುಗಿ. ಪದ್ಧ ಹೇಳುವ ಗಂಡನನ್ನು ಚುಡಾಯಿಸಿ, ಅವನಿಗೆ ಕೊಡದೆ ತಾನೇ ಹಾಲು ಕುಡೀತಾಳೆ. ಗಂಡ 'ಮೊದಲ ಸಮಾಗಮ ಮಧುಚಂದ್ರದಲ್ಲೇ ಆಗಲಿ, ಸಿಮ್ಲಾದಲ್ಲಿ' ಎಂದು ಇಬ್ಬರ ಮಧ್ಯೆ ದಿಂಬು ಇಟ್ಟು ಮಲಗುತ್ತಾನೆ. ಹೀಗೆ ನಿರೀಕ್ಷಿಸಿದ್ದಕ್ಕೆ ವಿರುದ್ಧವಾಗಿ ನಡೆಯುವ ಕ್ರಿಯೆಗಳು. ಜಾನ್ ದೇವರಾಜ್ ಕಲಾನಿರ್ದೇಶನದಲ್ಲಿ ವಿಭಿನ್ನವಾಗಿ ತೋರುವ ವಾತಾವರಣ ಇತ್ತು. ಹೊಸ ಪೀಳಿಗೆಯ ನಿರ್ದೇಶಕರು 'ಹೊಸ ಅಲೆ', 'ಜನಪ್ರಿಯ' ಚಿತ್ರಗಳ ಜಾಡು ಬಿಟ್ಟು ತಮ್ಮದೇ ಶೈಲಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಕ್ಕೆ ಇಂಥ ಹಲವು ಉದಾಹರಣೆಗಳನ್ನು ಕೊಡಬಹುದು.

ಕನ್ನಡ ಸಂಸ್ಕೃತಿಯ ಸೊಗಡಿಲ್ಲದಿದ್ದರೂ ತಾಂತ್ರಿಕ ಕಾರಣಗಳಿಗಾಗಿ 'ಶ್!' ಹಾಗೂ 'ನಿಷ್ಕರ್ಷ' ಮುಖ್ಯ ಚಿತ್ರಗಳು. ಗುಪ್ತನಿಧಿ ಹುಡುಕುವ ಪ್ರಯತ್ನದಲ್ಲಿ ನಡೆಯುವ ಸರಣಿ ಕೊಲೆಗಳ ರಹಸ್ಯವನ್ನು 'ಶ್!' ಒಳಗೊಂಡಿದ್ದರೆ, 'ನಿಷ್ಕರ್ಷ' ಬ್ಯಾಂಕ್ ದರೋಡೆಯ ಒಂದು ದಿನದ ಕಥೆಯನ್ನು ಬಿಗಿಯಾಗಿ ನಿರೂಪಿಸಿದ್ದ ಚಿತ್ರ. ವಿಚಿತ್ರವೆಂದರೆ ಇವೆರಡು ಚಿತ್ರಗಳ ಆತ್ಮ ಹಿಂದಿ, ಇಂಗ್ಲಿಷ್ ಚಿತ್ರಗಳದ್ದಾಗಿತ್ತು. ಈ ಸಂದರ್ಭದಲ್ಲಿ ರಾಜ್ಯ ಪ್ರಶಸ್ತಿ ಸಲಹಾ ಮಂಡಳಿಯ ತೀರ್ಪುಗಾರರ ಮನಸ್ಥಿತಿ ಕೂಡ ಎಷ್ಟು ಬದಲಾಗಿತ್ತೆಂದರೆ ಅಯಾಚಿತವಾಗಿ ೧೯೯೩-೯೪ರ ಮೂರು ಅತ್ಯುತ್ತಮ ಚಿತ್ರ ಪ್ರಶಸ್ತಿಗಳು ಈ ಕೌತುಕಮಯ ಚಿತ್ರಗಳಿಗೇ ಲಭಿಸಿದವು. 'ನಿಷ್ಕರ್ಷ' - ಪ್ರಥಮ, 'ಆಕಸ್ಮಿಕ' - ದ್ವಿತೀಯ, 'ಶ್!' - ತೃತೀಯ ಪ್ರಶಸ್ತಿ ಗಳಿಸಿದ್ದು ಈ ದಶಕದಲ್ಲಿ ಬದಲಾಗಿದ್ದ ವಾತಾವರಣವನ್ನು ಸಂಕೇತಿಸುವ ಮುಖ್ಯ ಅಂಶ. ಈ ಅಭಿಪ್ರಾಯವನ್ನು ಪುಷ್ಟೀಕರಿಸುವಂತೆ ಸಾಮಾಜಿಕ ಕಳಕಳಿಯನ್ನು ಹೊಂದಿದ್ದ 'ಕರಿಮಲೆಯ ಕಗ್ಗತ್ತಲು', 'ಹೂವು ಹಣ್ಣು', 'ರಂಜಿತಾ', 'ಗೆಜ್ಜೆನಾದ', 'ಮುಂಜಾನೆಯ ಮಂಜು', 'ನಾನೆಂದೂ ನಿಮ್ಮವನೆ', 'ಹೂವೊಂದು ಬೇಕು ಬಳ್ಳಿಗೆ' ಇವುಗಳಲ್ಲಿ ಯಾವುವೂ ಅತ್ಯುತ್ತಮ ಚಿತ್ರಗಳ ಗೌರವ ಪಡೆದಿಲ್ಲ. 'ನಿಷ್ಕರ್ಷ'ದ ಹೆಗ್ಗಳಿಕೆ ಬಿಗಿಯಾದ ನಿರೂಪಣೆ ಹಾಗೂ ನಮ್ಮದಲ್ಲದ ಕಥೆಯನ್ನು ನಮ್ಮದೆಂಬಂತೆ ಹೊಂದಿಸುವ ಪ್ರಯತ್ನದಲ್ಲಿತ್ತು. ಒಂದೇ ಕಟ್ಟಡದ ಒಳಗೆ ಚಿತ್ರಿಸುವುದರಲ್ಲಿನ ಶ್ರಮ ಹಾಗೂ ಒಂದೆರಡು ತಂತ್ರಗಳು ಮೆಚ್ಚುಗೆ ಹುಟ್ಟಿಸುವಂತಿದ್ದವು. ಈ ಚಿತ್ರದ ಇನ್ನೆರಡು ವಿಭಾಗಗಳಾದ (ಸುನೀಲ್ ಕುಮಾರ್ ದೇಸಾಯಿ) ಚಿತ್ರಕಥೆ ಹಾಗೂ (ಆರ್.ಕಣ್ಣನ್) ಧ್ವನಿಗ್ರಹಣಕ್ಕೂ ರಾಜ್ಯ ಪ್ರಶಸ್ತಿ ಬಂತು. ಶತದಿನದ ಪ್ರದರ್ಶನ ಕಂಡ ಈ ಚಿತ್ರದಲ್ಲಿ ವಿಷ್ಣುವರ್ಧನ್, ಅನಂತ್‌ನಾಗ್ ಪೈಪೋಟಿಯಿಂದ ನಟಿಸಿದ್ದರು. ಸುಮನ್ ನಗರ್‌ಕರ್, ಬಿ.ಸಿ.ಪಾಟೀಲ್, ರಮೇಶ್ ಭಟ್ ಪಾತ್ರಗಳನ್ನು ಜನ ಮೆಚ್ಚಿಕೊಂಡರು.

'ಶ್!' ಮೂಲಕ ಕುಮಾರ್ ಗೋವಿಂದ್, ಸಂಗೀತ ನಿರ್ದೇಶಕರಾಗಿ ಸಾಧುಕೋಕಿಲ, ಸಾಹಸ ನಿರ್ದೇಶಕರಾಗಿ ಥ್ರಿಲ್ಲರ್ ಮಂಜು ಬೇಡಿಕೆ ಸೃಷ್ಟಿಸಿಕೊಂಡರು. ನೀಲಿ ಚಿತ್ರದಂತಿದ್ದ ಕೆಲವು ದೃಶ್ಯಗಳು, ಬ್ಯಾಂಕ್ ಜನಾರ್ದನ್ ಅತಿರೇಕದ ಪಾತ್ರ ಈ ಚಿತ್ರವನ್ನು ಒಂದು ವರ್ಗದ ಪ್ರೇಕ್ಷಕರು ಇಷ್ಟಪಡುವಂತೆ ಮಾಡಿತು. ಜನ ಯಾವುದನ್ನು ಬೇಗ ಮೆಚ್ಚಿಕೊಳ್ಳುತ್ತಾರೆಂಬುದನ್ನು 'ತರ್ಲೆ ನನ್ಮಗ'ದ ಮೂಲಕ ಕಂಡುಕೊಂಡಿದ್ದ ಉಪೇಂದ್ರರಿಗೆ 'ಶ್!' ಇನ್ನಷ್ಟು ಆತ್ಮವಿಶ್ವಾಸ ತಂದುಕೊಟ್ಟಿತು.

೧೯೯೩ರ ವೈಶಿಷ್ಟ್ಯ ಹೆಚ್ಚು ಮಕ್ಕಳ ಚಿತ್ರಗಳು ತೆರೆಕಂಡಿರುವ ಅಂಶ. ಹಿಂದಿನ ಯಾವುದೇ ವರ್ಷಗಳಲ್ಲಿ ಆರು ಮಕ್ಕಳ ಚಿತ್ರಗಳು ಒಂದೇ ವರ್ಷ ತೆರೆಕಂಡಿಲ್ಲ. 'ಚುಕ್ಕಿ ಚಂದ್ರಮ', 'ಚಿನ್ನಾರಿ ಮುತ್ತ', 'ಜಂಬೂ ಸವಾರಿ' ಕೀರ್ತಿ ತಂದ ಪುಟಾಣಿಗಳ ಪೂರ್ಣಪ್ರಮಾಣದ ಚಿತ್ರಗಳಾದರೆ, 'ಸೀತಾಂಜನೇಯ' ಹಾಗೂ 'ದಾಕ್ಷಾಯಿಣಿ' ಬಾಲಕಲಾವಿದರೇ ಪ್ರಧಾನವಾಗಿದ್ದ ಕೌಟುಂಬಿಕ ಚಿತ್ರಗಳು. (ನೋಡಿ: 'ಮಕ್ಕಳ ಚಿತ್ರಗಳು')

ಮಿಶ್ರಚಿಂತನೆ, ರಾಜಕೀಯ ಚಿತ್ರಗಳ ಪ್ರಾಧಾನ್ಯದಿಂದ ಆರಂಭವಾದ ೧೯೯೦ರ ದಶಕ ಸದಭಿರುಚಿಯ ಚಿತ್ರಗಳ ನಿರ್ದೇಶಕ ಎನ್.ಲಕ್ಷ್ಮೀನಾರಾಯಣ್ ಅವರನ್ನು ೧೯೯೧ರ ಫೆಬ್ರವರಿ ೧೬ ರಂದು ಹಠಾತ್ ಹೃದಯಾಘಾತದಿಂದಾಗಿ ಕಳೆದುಕೊಂಡಿತು. ಹಾಸ್ಯನಟ ಮೈಸೂರು ಲೋಕೇಶ್ ಹಾಗೂ ಕಂಠದಾನ ಕಲಾವಿದೆ ಸರ್ವಮಂಗಳಾ ಬಳ್ಳಾರಿಯ ಹೋಟೇಲ್ ಒಂದರಲ್ಲಿ ೧೯೯೨ರ ಏಪ್ರಿಲ್ ೧೪ ರಂದು ಜಂಟಿಯಾಗಿ ಆತ್ಮಹತ್ಯೆಗೆ ಪ್ರಯತ್ನಿಸಿದರು. ವಿಷದ ಪ್ರಮಾಣ ಹೆಚ್ಚಾಗಿದ್ದ ಮೈಸೂರು ಲೋಕೇಶ್ ಮರುದಿನ - ೧೫ ರಂದು - ನಿಧನರಾದರು. ನಂತರದ ೧೯೯೩ರ ದೊಡ್ಡ ಆಘಾತ ಚಿ.ಉದಯಶಂಕರ್ ಸಾವು. ೧೯೯೩ರ ಜುಲೈ ೨ ರಂದು ಹೃದಯಾಘಾತಕ್ಕೀಡಾದ ಈ ಅನನ್ಯ ಪ್ರತಿಭೆಯ ಸಾಹಿತಿ ಚಿತ್ರರಂಗಕ್ಕೆ ದೊಡ್ಡ ಶೂನ್ಯವನ್ನು ಬಿಟ್ಟುಹೋದರು. ಇವರ ನಂತರ ನವೆಂಬರ್‌ನಲ್ಲಿ ಸುಂದರಕೃಷ್ಣ ಅರಸ್, ಜಿ.ಕೆ.ವೆಂಕಟೇಶ್ ನಿಧನರಾದರೆ, ಇದೇ ವರ್ಷ ಒಂದೇ ತಿಂಗಳ ಅಂತರದಲ್ಲಿ ನಿರ್ದೇಶಕ ಆರೂರು ಪಟ್ಟಾಭಿ, ಛಾಯಾಗ್ರಾಹಕ ಎನ್.ಜಿ.ರಾವ್, ಹಿರಿಯ ನಟ ವಾಸುದೇವ ಗಿರಿಮಾಜಿ, ಪ್ರಶಸ್ತಿ ವಿಜೇತ ಚಿತ್ರ 'ಕ್ರಮ'ದ ನಿರ್ದೇಶಕ ಅಸ್ರಾರ್ ಅಭಿದ್ ಕಣ್ಮರೆಯಾದರು.

೧೯೯೦ರ ದಶಕದ ಆರಂಭದವರೆಗೆ ಕೇಂದ್ರ ಸರ್ಕಾರಿ ಸ್ವಾಮ್ಯದ ರಾಷ್ಟ್ರೀಯ ದೂರದರ್ಶನದ ಏಕವಾಹಿನಿ ಮಾತ್ರ ಇದ್ದದ್ದರಿಂದ ಅದರಲ್ಲಿ ಭಾನುವಾರ ಪ್ರಸಾರವಾಗುವ ಚಲನಚಿತ್ರಗಳ ಬಗ್ಗೆ ಜನರಿಗೆ ಕಾಳಜಿಯಿತ್ತು. ಎಷ್ಟು ಚಿತ್ರಗಳು ಪ್ರಸಾರವಾಗುತ್ತಿವೆ, ಪಕ್ಷಪಾತವಾಗುತ್ತಿದೆಯೇ, ಕನ್ನಡತನ ಇರುವಂಥ ಉತ್ತಮ ಚಿತ್ರಗಳನ್ನೇಕೆ ಪ್ರಸಾರ ಮಾಡುತ್ತಿಲ್ಲ ಎಂದು ಪ್ರಶ್ನಿಸಿ, ಆಗ್ರಹಿಸಿ ಪತ್ರಿಕೆಗಳಿಗೆ ಪತ್ರಗಳನ್ನು ಬರೆಯುತ್ತಿದ್ದರು. ದೂರದರ್ಶನದ ಕನ್ನಡ ಕಾರ್ಯಕ್ರಮಗಳಿಗೆ ಹೆಚ್ಚು ಸ್ಪಂದಿಸುತ್ತಿದ್ದರು. ೧೯೯೨ರ ನಂತರ ಪರಿಸ್ಥಿತಿ ಬದಲಾಯಿತು. 'ಸ್ಟಾರ್' ಟಿ.ವಿ.ಯ



(ಚಿತ್ರ ೫೩) 'ಶ್!' ಚಿತ್ರದಲ್ಲಿ ಮೇಘ ಮತ್ತು ಕುಮಾರ್ ಗೋವಿಂದ್

ವಿವಿಧ ಚಾನಲ್‌ಗಳು ಎಂ.ಟಿ.ವಿ., ಸಿ.ಎನ್.ಎನ್., ಝೀ ಸೇರಿದಂತೆ ಕೇಬಲ್ ವ್ಯವಸ್ಥೆ ವ್ಯಾಪಿಸಿಕೊಳ್ಳತೊಡಗಿತು. ೧೯೯೪ರ ಜೂನ್‌ನಲ್ಲಿ ೨೪ ಗಂಟೆಗಳ ಕಾಲ ಪೂರ್ಣವಾಗಿ ಕನ್ನಡವನ್ನು ಪ್ರಸಾರ ಮಾಡುವ ಉದಯ ಟಿ.ವಿ. ಆರಂಭವಾಯಿತು. ಚಿತ್ರಮಂಜರಿಯ ಹಾಡುಗಳ ಆಯ್ಕೆಗೆ, ಗುಣಮಟ್ಟಕ್ಕೆ, ಭಾನುವಾರದ ಚಲನಚಿತ್ರಗಳಿಗೆ ಸಲಹೆ, ಸೂಚನೆ, ಆಕ್ಷೇಪಗಳನ್ನು ವ್ಯಕ್ತಪಡಿಸುತ್ತಿದ್ದ ವೀಕ್ಷಕರು ವಿವಿಧ ಚಾನಲ್‌ಗಳತ್ತ ಸರಿದು ಕುಳಿತರು. ಈ ಹಂತದಲ್ಲಿ ಚಾನಲ್‌ಗಳ ನಡುವೆ ಪೈಪೋಟಿ ಉಂಟಾಯಿತು. ಇದರಿಂದಾಗಿ ನೇರವಾಗಿ ಮನೆಯೊಳಗಡೆ ಅಶ್ಲೀಲ ಪ್ರವೇಶ ಮಾಡಿತು. ಸಿನಿಮಾಗಳಲ್ಲಿನ ಅಸಭ್ಯ ಸಂಭಾಷಣೆ, ಮೈ ಕುಲುಕಾಟದ ನೃತ್ಯಗಳು, ಕ್ರೌರ್ಯ, ಹಿಂಸಾತ್ಮಕ ಹೊಡೆದಾಟಗಳು, ಲೈಂಗಿಕ ಪ್ರಚೋದಕ ಕಾರ್ಯಕ್ರಮಗಳು ಮನೆಮನೆಯನ್ನು ಆವರಿಸಿಕೊಂಡವು. ಈ ಹಂತದಲ್ಲಿ ಸ್ಪರ್ಧೆಗೆ ಭಾರತದ ರಾಷ್ಟ್ರೀಯ ವಾಹಿನಿಯೂ ಇಳಿಯಿತು. ಸಿನಿಮಾ ಹಾಡುಗಳ ಆಯ್ಕೆಯಲ್ಲಿ ಧಾರಾಳತನ ತೋರಿತು. 'ಸೂಪರ್ ಹಿಟ್ ಮುಕಾಬಲಾ' ಹೆಸರಿನ ಕಾರ್ಯಕ್ರಮಕ್ಕೆ ಆರಿಸಿಕೊಳ್ಳತೊಡಗಿದ ಗೀತೆಗಳು ಸದಭಿರುಚಿಯ ಗಡಿಯನ್ನು ದಾಟಿದ್ದವು.

೧೯೯೩-೯೪ರ ಸಂದರ್ಭದಲ್ಲಿ ದೂರದರ್ಶನ ವಾಹಿನಿಗಳ ಭರಾಟೆ ಮತ್ತು ಇವುಗಳಲ್ಲಿ ಬಹುತೇಕ ಚಾನಲ್‌ಗಳು ಚಲನಚಿತ್ರವನ್ನೇ ಪ್ರಮುಖವಾಗಿ ಅವಲಂಬಿಸಿದ್ದ ಪರಿಸ್ಥಿತಿಯನ್ನು ಈ ಅಂಕಿ-ಅಂಶಗಳು ವಿವರಿಸುತ್ತವೆ. ೧೯೯೪ರ ಹೊತ್ತಿಗೆ ಭಾರತದಲ್ಲಿದ್ದ ಕಮರ್ಷಿಯಲ್ ಕೇಬಲ್ ಟಿ.ವಿ. ಆಪರೇಟರ್‌ಗಳ ಸಂಖ್ಯೆ ಸುಮಾರು ೩೦ ಸಾವಿರ. ಕೇವಲ ಟಿ.ವಿ. ವೀಕ್ಷಕರ ಸಂಖ್ಯೆ ೧.೩೦ ಕೋಟಿ. ಭಾರತದಲ್ಲಿ ಈ ವೇಳೆಗೆ ಅತ್ಯಧಿಕ ಕೇಬಲ್ ಟಿ.ವಿ. ವೀಕ್ಷಕರಿದ್ದುದು ಮಹಾರಾಷ್ಟ್ರ, ಗುಜರಾತ್‌ನಲ್ಲಿ. ದೆಹಲಿ, ಪಂಜಾಬ್‌ಗೆ ನಂತರದ ಸ್ಥಾನ. ಕರ್ನಾಟಕ, ತಮಿಳುನಾಡು, ಕೇರಳ ಮೂರನೆಯ ಸ್ಥಾನದಲ್ಲಿದ್ದವು. ನಂತರದ ದಿನಗಳಲ್ಲಿ ಈ ಸಂಖ್ಯೆ/ಪರಿಮಾಣ ಹೆಚ್ಚುತ್ತಾ ಹೋಯಿತು. ಈ ಮೂಲಕ ಅಶ್ಲೀಲತೆಯ ಆಕರ್ಷಣೆ ಬೆಳೆಯತೊಡಗಿ ಚಲನಚಿತ್ರ ಉದ್ಯಮ ಆತಂಕದ ಪರಿಸ್ಥಿತಿ ಎದುರಿಸುವಂತಾಯಿತು. ಈ ಆತಂಕವನ್ನು ಮೊಟ್ಟಮೊದಲಿಗೆ ವ್ಯಕ್ತಪಡಿಸಿದ್ದು ಸಿಸಿಸಿಎ (ಸೆಂಟ್ರಲ್ ಸರ್ಕಿಟ್ ಸಿನಿ ಅಸೋಸಿಯೇಷನ್). ದೇಶದ ಚಲನಚಿತ್ರ ಉದ್ಯಮದ ವಿತರಕರು ಮತ್ತು ಪ್ರದರ್ಶಕರ ಅತ್ಯಂತ ಹಳೆಯ ಪ್ರಾತಿನಿಧಿಕ ಸಂಸ್ಥೆಯಾದ ಇದು 'ಎಲೆಕ್ಟ್ರಾನಿಕ್ ಮಾಧ್ಯಮದ ಮಾರಕಪ್ರಾಯ ಹೊಡೆತದ ವಿರುದ್ಧ ಚಲನಚಿತ್ರೋದ್ಯಮವು ಹೋರಾಡಲು ಸಾಧ್ಯವಾಗುವಂತೆ ಕೇಂದ್ರ ಸರ್ಕಾರವು ರಾಷ್ಟ್ರೀಯ ನೀತಿಯೊಂದನ್ನು ರೂಪಿಸಬೇಕು' ಎಂದು ಒತ್ತಾಯಪಡಿಸಿತು. ಈ ಒತ್ತಾಯ ಕೇಳಿಬಂದದ್ದು ೨೯, ಸೆಪ್ಟೆಂಬರ್ ೧೯೯೪ರಂದು ಜೈಪುರದಲ್ಲಿ ನಡೆದ ಸಂಸ್ಥೆಯ ೪೧ನೆಯ ಮಹಾ ಅಧಿವೇಶನದಲ್ಲಿ. ದೇಶದ ವಾಣಿಜ್ಯೋದ್ಯಮ ಸರಣಿಯಲ್ಲಿ ಹತ್ತನೆಯ ಸ್ಥಾನ ಪಡೆದಿರುವ ಚಿತ್ರೋದ್ಯಮವು ತನ್ನ ಉಳಿವಿಗಾಗಿ ಹೋರಾಡಬೇಕಾದ ಸ್ಥಿತಿ ತಲುಪಿರುವುದನ್ನು ಪ್ರಸ್ತಾಪಿಸಲಾದ ನಿರ್ಣಯದಲ್ಲಿ 'ವಿವೇಕಯುತ' ರಾಷ್ಟ್ರೀಯ ನೀತಿ ರೂಪಿಸುವಂತೆ ಕೇಂದ್ರ ಸರ್ಕಾರವನ್ನು ವಿನಂತಿಸಿಕೊಂಡಿತ್ತು.

ಇದಕ್ಕೂ ಮೊದಲು ಮೇ ೧೯೯೪ರಲ್ಲಿ ಕೇಂದ್ರ ಸೆನ್ಸಾರ್ ಮಂಡಳಿ ದೃಢ ನಿರ್ಧಾರದೊಂದಿಗೆ ಒಂದು ನೀತಿ ರೂಪಿಸಿಕೊಂಡಿತು. ಅದರಂತೆ, ನಿರ್ಮಾಣ ಹಂತದಲ್ಲಿರುವ ಅಥವಾ ದೃಢೀಕರಣ ಪತ್ರ ಪಡೆಯದ ಚಿತ್ರಗಳ ಹಾಡುಗಳನ್ನು ಪ್ರಸಾರ ಮಾಡುವ ಮುನ್ನ ದೂರದರ್ಶನ ಮತ್ತು ಇತರೆ ಚಾನಲ್‌ಗಳು ಸೆನ್ಸಾರ್ ಮಂಡಳಿ ಅನುಮತಿ ಪಡೆಯಬೇಕು. ಈ ನಿರ್ಧಾರವನ್ನು ಕಿರುತೆರೆಯಲ್ಲಿ ಅಸಭ್ಯ, ಅಶ್ಲೀಲ ದೃಶ್ಯಗಳು ಮೂಡುತ್ತಿರುವುದನ್ನು ತಡೆಯುವುದಕ್ಕಾಗಿ ಕೈಗೊಳ್ಳಲಾಯಿತು. ಈ ಸೂಚನೆಯನ್ನು ಪಾಲಿಸುವುದಾಗಿ ದೂರದರ್ಶನ ಹಾಗೂ ಝೀ ಟಿ.ವಿ.ಗಳು ಒಪ್ಪಿಕೊಂಡವು. ಅಲ್ಲದೆ ತಾವು ಪ್ರಸಾರ ಮಾಡುವ ಚಿತ್ರಗಳಲ್ಲಿ ಅಶ್ಲೀಲ ಅಂಶ ಇರುವುದನ್ನು ತಡೆಯಲು ಅವು ತಮ್ಮದೇ ಸಮಿತಿಗಳನ್ನು ರಚಿಸಿಕೊಂಡವು. ಈ ಯಾವ ನಿರ್ಧಾರಗಳೂ ದೂರಗಾಮಿ ಪರಿಣಾಮ ಬೀರಲಿಲ್ಲ. ದಿನೇ ದಿನೇ ಸಂಗೀತವಾಹಿನಿಗಳ ಹಾಡುಗಳಲ್ಲಿ ಹಾಗೂ ಚಲನಚಿತ್ರಗಳಲ್ಲಿ ಹಿಂಸೆ, ಅಶ್ಲೀಲ ಹೆಚ್ಚುತ್ತಾ ಹೋಯಿತು. ಇದು ಅಂದಿನ ಸಂದರ್ಭದಲ್ಲಿ ಎಷ್ಟು ವಿಪರೀತಕ್ಕೆ ಮುಟ್ಟಿತು ಹಾಗೂ ಎಂಥ ಆತಂಕ ಸೃಷ್ಟಿಸಿತ್ತು ಎಂಬುದಕ್ಕೆ ಎರಡು ತಿಂಗಳ ನಂತರದಲ್ಲಿ ಅಂದರೆ ೧೯೯೪ ಜುಲೈ ೨ ರಂದು ಬೆಂಗಳೂರಿನಲ್ಲಿ ನಡೆದ ೯೭ನೆಯ ರಾಷ್ಟ್ರೀಯ ಸೆನ್ಸಾರ್ ಮಂಡಳಿ ಸಭೆಯಲ್ಲಿ ನಡೆದ ಚರ್ಚೆಯೇ ಸಾಕ್ಷಿ. ಈ ಸಭೆಯ ಅಧ್ಯಕ್ಷತೆಯನ್ನು ಕೇಂದ್ರ ಚಲನಚಿತ್ರ ಅರ್ಹತಾಪತ್ರ ಮಂಡಳಿಯ ಅಧ್ಯಕ್ಷ ಶಕ್ತಿಸಾಮಂತ ವಹಿಸಿದ್ದರು. ಅವರು ನೀಡಿದ ಸೂಚನೆ ಹೀಗಿತ್ತು : "ಚಿತ್ರ ನಿರ್ಮಾಣ ಹಂತದಲ್ಲಿಯೇ ಎಚ್ಚರದಿಂದಿರುವಂತೆ ಚಿತ್ರ ನಿರ್ಮಾಪಕರಿಗೆ ಮಂಡಳಿಯ ಸೆನ್ಸಾರ್ ಧೋರಣೆಯ ಬಗ್ಗೆ ಮುನ್ಸೂಚನೆ ಕೊಡಬೇಕು. ಚಲನಚಿತ್ರಗಳಲ್ಲಿ ಸ್ತ್ರೀಯರ ವಿಕೃತ ಚಿತ್ರಣ ಹಾಗೂ ಅರ್ಥಹೀನ ಹಿಂಸೆಯ ದೃಶ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಸದಸ್ಯರು ಒಂದೇ ಬಗೆಯ ಜವಾಬ್ದಾರಿಯುತ ನಿಲುವು ತೆಗೆದುಕೊಳ್ಳಬೇಕು. ಹಿಂಸೆ ಮತ್ತು ಲೈಂಗಿಕತೆಯ ಅತಿರೇಕದ ವಿರುದ್ಧ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಬೇಕು." ಈ ಅಭಿಪ್ರಾಯವನ್ನು ಒಮ್ಮತದಿಂದ ಪುನರ್ ಅಂಗೀಕರಿಸಲಾಯಿತು. ಸಭೆಯ ಮತ್ತೊಂದು ವಿಶೇಷವೆಂದರೆ ಕೆಲವೇ ದಿನಗಳ ಹಿಂದೆ ಕೇಂದ್ರ ವಾರ್ತಾ ಸಚಿವರ ಅಧ್ಯಕ್ಷತೆಯಲ್ಲಿ ಸಂಸತ್ ಸದಸ್ಯೆಯರು ಹಾಗೂ ರಾಷ್ಟ್ರಮಟ್ಟದ ಮಹಿಳಾ ಸಂಸ್ಥೆಗಳ ಪ್ರತಿನಿಧಿಗಳೊಂದಿಗೆ ನಡೆಸಲಾಗಿದ್ದ ಸಮಾಲೋಚನೆಯ ಮುಖ್ಯ ಅಂಶಗಳನ್ನು ಪ್ರಸ್ತಾಪಿಸಿ, ಅನುಮೋದಿಸಲಾಯಿತು. ಅದರಲ್ಲಿ ನಿರ್ಮಾಪಕರ ಅಪವಿತ್ರ ಚಿಂತನೆಗಳ ಬಗ್ಗೆ ಖಂಡನೆ ಹಾಗೂ ಭವಿಷ್ಯದ ಭಾರತದ ಬಗ್ಗೆ ಆತಂಕ ವ್ಯಕ್ತಪಡಿಸಿದ್ದ ಅಂಶಗಳಿದ್ದವು. ಈ ಸಭೆಯಲ್ಲಿ ಕನ್ನಡ ನಿರ್ಮಾಪಕರ ಪ್ರತಿನಿಧಿಗಳು ಕೂಡ ಭಾಗವಹಿಸಿದ್ದರು. ಆದರೆ ಇಂಥ ಯಾವ ಸಭೆ, ನಿರ್ಧಾರ, ನೀತಿಗಳ ಪರಿಣಾಮವೂ ಚಿತ್ರರಂಗದ ಚಟುವಟಿಕೆಗಳ ಮೇಲೆ ಆಗಲಿಲ್ಲ. ಬದಲಿಗೆ ದಿನೇದಿನೇ ಪರಿಸ್ಥಿತಿಯು ಯಾವ ಅಂಕೆಗೂ ಸಿಲುಕದಂತೆ ಓಡತೊಡಗಿತು. ೧೯೯೪ರ ನಂತರ ನಿರ್ಮಾಣವಾದ ಮೂರನೆಯ ಎರಡು ಭಾಗದಷ್ಟು ಚಿತ್ರಗಳು ಭಯಾನಕ ಹಿಂಸೆ, ಕ್ರೌರ್ಯ, ಅಶ್ಲೀಲವನ್ನೇ ಕೇಂದ್ರವಾಗಿಟ್ಟುಕೊಂಡಿದ್ದವು. ಇದು ಸಾಲದೆಂಬಂತೆ 'ವೈಜ್ಞಾನಿಕ ಚಿತ್ರ'ಗಳ ಹಣೆಪಟ್ಟಿಯಲ್ಲಿ ಹೊಸ ರೋಗವೊಂದು ಪರಿಹಾರವೇ ಇಲ್ಲದ ಏಡ್ಸ್ ರೀತಿಯಲ್ಲಿ ವ್ಯಾಪಿಸಿಕೊಳ್ಳತೊಡಗಿತು. 'ರತಿ ವಿಜ್ಞಾನ' ಎಂಬ ಬೋಧನೆಯ ಮುಸುಕಿನಲ್ಲಿ ಈ ಅಶ್ಲೀಲ ಚಿತ್ರಗಳು ಉಂಟುಮಾಡಿದ ಹಾವಳಿ ವಿಶ್ಲೇಷಣೆಗೆ ಸಿಲುಕದಷ್ಟು ಗಾಢವಾಗಿತ್ತು.

ಈ ಬಗೆಯ ಕೆಳದರ್ಜೆಯ ಚಿತ್ರಗಳ ತವರು ಕೇರಳ. ಅಲ್ಲಿ ಒಂದು ದಶಕದಿಂದಲೂ ಇಂಥ ಚಿತ್ರಗಳು ತಯಾರಾಗುತ್ತಿದ್ದವು. ಅವುಗಳಲ್ಲಿ ಕೆಲವು ಬೆಂಗಳೂರಿನ ಆಯ್ದ ಚಿತ್ರಮಂದಿರಗಳಲ್ಲಿ ಪ್ರದರ್ಶನವಾಗುತ್ತಿದ್ದವು. ಇಂಥ ಮುಸುಕಿನ ಪ್ರದರ್ಶನಕ್ಕೆ ಸಾರ್ವಜನಿಕ ವ್ಯಾಪ್ತಿ ತಂದುಕೊಟ್ಟಿದ್ದು ೧೯೮೦ರಲ್ಲಿ ಹೆಚ್ಚು ಸುದ್ದಿ ಮಾಡಿದ ಹಿಂದಿಯ 'ಗುಪ್ತ ಜ್ಞಾನ್'. ಇದು ಅಶ್ಲೀಲ ಚಿತ್ರಗಳನ್ನು ಕದ್ದು ನೋಡುತ್ತಿದ್ದವರ ಲಜ್ಜೆ, ಸಂಕೋಚಗಳನ್ನು ಸಾಕಷ್ಟು ಹೋಗಲಾಡಿಸಿತು. ಉತ್ತಮ ಚಿತ್ರಗಳನ್ನು ಪ್ರದರ್ಶಿಸುವ ಚಿತ್ರಮಂದಿರಗಳು ಜನರಿಲ್ಲದೆ ಬಿಕೋ ಅನ್ನತೊಡಗಿದ್ದು ಹಾಗೂ 'ವೈಜ್ಞಾನಿಕ ಚಿತ್ರ'ಗಳನ್ನು ಪ್ರದರ್ಶಿಸುವ ಕಳಪೆ ನಿರ್ವಹಣೆಯ ಚಿತ್ರಮಂದಿರಗಳು ಕಿಕ್ಕಿರಿಯತೊಡಗಿದ್ದು ಕೆಲವು ಕನ್ನಡ ನಿರ್ಮಾಪಕರು ಹಾದಿ ಬದಲಿಸುವಂತೆ ಮಾಡಿತು. ಕದ್ದುಮುಚ್ಚಿ, ಸದ್ದು-ಗದ್ದಲವಿಲ್ಲದೆ ಕನ್ನಡದಲ್ಲೂ ಇಂಥ ಚಿತ್ರಗಳು ೧೯೯೪ ರಿಂದ ನಿರ್ಮಾಣವಾಗತೊಡಗಿದವು. ಈ ಬದಲಾವಣೆಗೆ ಪ್ರಮುಖವಾಹಿನಿ ಚಿತ್ರಗಳ ಗುಣಮಟ್ಟ ಕುಸಿಯತೊಡಗಿದ್ದು ಒಂದು ಕಾರಣವಾದರೆ ಹೇಗಾದರೂ ಹಣ ಮಾಡಬೇಕೆನ್ನುವ ಮನೋಭಾವ, ಮಾನಸಿಕ ವಿಕೃತಿ ಇನ್ನೊಂದು ಕಾರಣ. ಜೊತೆಗೆ ಕಡಿಮೆ ವೆಚ್ಚದಲ್ಲಿ ಶೀಘ್ರವಾಗಿ ಇಂಥ ಚಿತ್ರಗಳನ್ನು ತಯಾರಿಸಲು ಸಾಧ್ಯವಿತ್ತು.

ನೆಪಕ್ಕೊಂದು ಕಥೆ, ಚಾಲ್ತಿಯಲ್ಲಿಲ್ಲದ ನಟ-ನಟಿಯರು, ಚಿತ್ರೀಕರಣಕ್ಕೆ ಏಕೈಕ ತಾಣ - ಇಷ್ಟನ್ನು ಹೊಂದಿಸಿಕೊಂಡು ನಿರ್ಮಾಣ ನಡೆಯುತ್ತಿತ್ತು. ಇಂಥ ಚಿತ್ರಗಳಿಗೆ ವೆಚ್ಚ ಕಡಿಮೆ. ತೆಲುಗು, ತಮಿಳು ಭಾಷೆಗಳಿಗೆ ಚಿತ್ರವನ್ನು ಮಾರುವುದೂ ಸುಲಭ.

ಸಬ್ಸಿಡಿ, ಗಲ್ಲಾಪೆಟ್ಟಿಗೆ ಆದಾಯ, ಪರಭಾಷಾ ಹಕ್ಕುಗಳು ಹೀಗೆ ಹತ್ತಿರ ಹತ್ತಿರ ಇಂಥ ಚಿತ್ರಗಳಿಂದ ೧೫ ಲಕ್ಷ ರೂಪಾಯಿ ಗಳಿಸಲು ಸಾಧ್ಯವಿತ್ತು. ಈ ಚಿತ್ರಗಳನ್ನು ನಿರ್ಮಿಸುವವರು ಬೇರೊಂದು ರೀತಿಯ ಜಾಣತನವನ್ನು ತೋರುತ್ತಿದ್ದರು. ಚಿತ್ರ ನಿರ್ಮಾಣಕ್ಕೆ ಮುನ್ನ ಕುಟುಂಬ ಕಲ್ಯಾಣ ಇಲಾಖೆ, ಆರೋಗ್ಯ ಇಲಾಖೆಯ ಮುಖ್ಯಾಧಿಕಾರಿಗಳನ್ನು ಸಂಪರ್ಕಿಸಿ ಅವರಿಂದ ಮಾಹಿತಿಪತ್ರಗಳನ್ನು ಪಡೆದುಕೊಳ್ಳುತ್ತಿದರು. ಈ ಮೂಲಕ ಸರ್ಕಾರಿ ಯೋಜನೆಗಳನ್ನು ಜನರಿಗೆ ತಲುಪಿಸುವ ನಾಟಕವನ್ನು ಅಚ್ಚುಕಟ್ಟಾಗಿ ಆಡುತ್ತಿದ್ದರು. ಸೆಕ್ಸ್ ಹಾಗೂ ಲೈಂಗಿಕ ಖಾಯಿಲೆಗಳ ಬಗ್ಗೆ ಜನರಿಗೆ ತಿಳಿವಳಿಕೆ ಮೂಡಿಸುವುದು ಚಿತ್ರದ ಉದ್ದೇಶ ಎಂಬ ವಿವರಣೆ ಪ್ರಕಟಿಸುತ್ತಿದ್ದರು. ೧೯೮೦ರ ನಂತರದ ೧೦ ವರ್ಷಗಳ ಕಾಲ ಬೇರೆ ರೀತಿಯ ಚಿತ್ರಗಳಲ್ಲಿ ವಿರಾಮಕ್ಕೆ ಮೊದಲು ಹಾಗೂ ನಂತರ ೧೦ ಸೆಕೆಂಡುಗಳ ನೀಲಿಚಿತ್ರದ ತುಣುಕನ್ನು ಸೇರಿಸಿ ಪ್ರದರ್ಶಿಸುತ್ತಿದ್ದ ಚಿತ್ರಮಂದಿರಗಳೆಲ್ಲ ತುಂಬಾ ನೇರವಾಗಿ, ನಿರ್ಭಿಡೆಯಿಂದ ಈ ಬಗೆಯ ಅಪ್ಪಟ ಕನ್ನಡ ಚಿತ್ರಗಳನ್ನು ಅವಲಂಬಿಸಿದವು ಮತ್ತು ನಿಯಮಿತವಾಗಿ ಪ್ರದರ್ಶಿಸತೊಡಗಿದವು. ಸೃಷ್ಟಿಯಾಗುತ್ತಿದ್ದ ಬೇಡಿಕೆಯನ್ನು ಅನುಸರಿಸಿ ೧೯೮೫ರ ಒಂದೇ ವರ್ಷದಲ್ಲಿ ಇಂಥ ಹನ್ನೆರಡು ಚಿತ್ರಗಳು ನಿರ್ಮಾಣವಾದವು.

ಇಂಥ ಚಿತ್ರಗಳತ್ತ ಆಕರ್ಷಿಸಲು ವಿಶಿಷ್ಟ ಪೋಸ್ಟರ್‌ಗಳೂ ಬಂದವು. ಒಂದು ಕಥೆ, ಉದ್ದೇಶ ಇಟ್ಟುಕೊಂಡು ತಯಾರಾದ ನಮ್ಮ ಜನಪ್ರಿಯ ನಿರ್ದೇಶಕರ ಚಿತ್ರಗಳು ಎರಡು ವಾರವೂ ಪ್ರದರ್ಶಿತವಾಗಲಿಲ್ಲ. ಈ ವೈಜ್ಞಾನಿಕ ಚಿತ್ರಗಳು ಕೆಲವು ಚಿತ್ರಮಂದಿರಗಳಲ್ಲಂತೂ ಶತದಿನ, ೧೫೦ ದಿನ ಹೀಗೆಲ್ಲ ಓಡಿದವು. ಇಂಥ ಒಂದು ಚಿತ್ರ ಸತತವಾಗಿ ಎರಡು ವರ್ಷ ಓಡಿ 'ಬಂಗಾರದ ಮನುಷ್ಯ' ಚಿತ್ರವನ್ನು ಕೂಡಾ ಹಿಂದೆ ಹಾಕಿತ್ತು. ಬಿಡುಗಡೆಯೇ ತೊಂದರೆಯಾದ ಕೆಲವು ಉತ್ತಮ ಚಿತ್ರಗಳು ಕೂಡಾ ಇಂಥದೊಂದು ಪೋಸ್ಟರ್ ಪ್ರಚಾರದ ಗಿಮಿಕ್‌ನಿಂದ ತೆರೆಕಂಡದ್ದೂ ಉಂಟು. ಚಂದ್ರಶೇಖರ ಕಂಬಾರರ 'ಕಾಡು ಕುದುರೆ' ೭೫ ದಿನಗಳ ಪ್ರದರ್ಶನ ಕಂಡಿದ್ದರ ಹಿಂದೆ ಇಂಥದೊಂದು ಪೋಸ್ಟರ್ ಜಾಣತನ ಬಳಕ ಆಗಿತ್ತು. ಪ್ರಾರಂಭದಲ್ಲಿ ಚಿತ್ರಕ್ಕೆ ಪ್ರೋತ್ಸಾಹ ಇರಲಿಲ್ಲ. ಪೋಸ್ಟರ್‌ಗೆ ಬಳಸಿದ ಕೆಲವು ಭಂಗಿಗಳಿಂದಾಗಿ ಚಿತ್ರಮಂದಿರಕ್ಕೆ ಜನ ಬರತೊಡಗಿದರು. ಸದಾ ಇಂಥ ರೋಚಕ ಅನುಭವ ಕೊಡುವ ಚಿತ್ರಗಳನ್ನೇ ಪ್ರದರ್ಶಿಸಿದ ಅಪಖ್ಯಾತಿ ಕೆಂಪೇಗೌಡ ಚಿತ್ರಮಂದಿರಕ್ಕೆ ಬಂದಿತ್ತು. ಇದು ಬೇರೆ ಊರುಗಳಿಗೂ ಹಬ್ಬಿತು. ಆ ಜಾಡಿನಲ್ಲಿ ನಡೆವ ಮತ್ತೆ ಕಲವು ಚಿತ್ರಮಂದಿರಗಳು ಬಹು ಬೇಗ ಎಚ್ಚರಗೊಂಡವು. ಇಂಥಲ್ಲಿ ಸರ್ಕಾರ-ಪೊಲೀಸ್ ಇಲಾಖೆಯ ನಿರ್ಲಕ್ಷ್ಯ, ವೈಫಲ್ಯಗಳೇ ಇವೆ.

ಈ ಸಮಸ್ಯೆಯ ಬಗ್ಗೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಸೆಪ್ಟೆಂಬರ್ ೧೯೯೪ ರಲ್ಲಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಉನ್ನತ ಪೊಲೀಸ್ ಅಧಿಕಾರಿಗಳೊಂದಿಗೆ ವಿಚಾರ ವಿನಿಮಯ ನಡೆಸಿತು. ಆಗ ಅಧಿಕಾರಿಗಳು ಲೈಂಗಿಕ ಚಿತ್ರಗಳ ಹಾವಳಿಯನ್ನು ಉಗ್ರಕ್ರಮಗಳ ಮೂಲಕ ಕಡ್ಡಾಯವಾಗಿ ತಡೆಗಟ್ಟಿ, ಯುವ ಪೀಳಿಗೆಯ ಭವಿಷ್ಯವನ್ನು ರಕ್ಷಿಸುವುದಾಗಿ ಭರವಸೆ ನೀಡಿದ್ದರು. ಅದೇನೂ ಆಗಲಿಲ್ಲ. ಕನ್ನಡ ಚಿತ್ರರಂಗವು ಈ ದಶಕದಲ್ಲಿ ಕಂಡ ಒಂದು ದುರಂತ ಇದಾದರೆ, ಇನ್ನೊಂದು ಅದಕ್ಕೆ ಸಮಾನಾಂತರವಾಗಿ ಮುನ್ನುಗ್ಗಲು ಮನರಂಜನೆಯ ಹೆಸರಿನ ಸಿನಿಮಾಗಳು ಸಿದ್ಧವಾದದ್ದು. ವಿಜ್ಞಾನ ಚಿತ್ರಗಳಲ್ಲಿ ಪ್ರಸ್ತಾಪಿಸಿರುವ ಅಂಶಗಳೇ ಹಾಡು, ಸಂಭಾಷಣೆ, ನೃತ್ಯ, ಅಂಗಾಂಗ ಪ್ರದರ್ಶನಗಳ ಮೂಲಕ ಇನ್ನೊಂದು ರೀತಿಯ ಅತಿರೇಕವನ್ನು ತಲುಪತೊಡಗಿತು. ರಾಷ್ಟ್ರದ ಇತರ ಭಾಷಾ ಚಿತ್ರಗಳೊಂದಿಗೆ ಪೈಪೋಟಿಗಿಳಿಯಬೇಕೆಂಬ ನೆಪ ಇಂಥ ಬದಲಾವಣೆಯ ಹಿಂದಿತ್ತು.

೧೯೯೪ರ ರಲ್ಲಿ ದೇಶದ ರಾಜಕೀಯದಲ್ಲಿ ವಿಚಿತ್ರ ತಿರುವುಗಳಾದವು. ಜನತಾದಳ ಒಡೆದು ಜಾರ್ಜ್ ಫರ್ನಾಂಡಿಸ್ ಅವರ ಸಮತಾ ಪಾರ್ಟಿ ಪ್ರಾರಂಭವಾಯಿತು. ದೂರದರ್ಶನದಲ್ಲಿ ಉರ್ದು ಸುದ್ದಿ ಪ್ರಸಾರ ವಿರೋಧಿಸಿ ಚಳವಳಿಗಳು, ಕೋಮು ಗಲಭೆಗಳಿಗೆ ಕಾರಣವಾಗಿ ಸಾವು-ನೋವುಗಳಾದವು. ಹಲವಾರು ಹಾಲಿವುಡ್ ಚಿತ್ರಗಳು ಪ್ರಾದೇಶಿಕ ಭಾಷೆಗಳಿಗೆ ಡಬ್ ಆಗಿ ಬಂದವು. ಪ್ರಾದೇಶಿಕ ಚಿತ್ರಗಳಿಂದ ಉದ್ಯಮ ತಲ್ಲಣಿಸಿತು. ಕನ್ನಡ ಚಿತ್ರರಂಗದಲ್ಲಿ ಈ ಪಿಡುಗು ಬರುವ ಹಾಗೆಯೇ ಇಲ್ಲವಾದ್ದರಿಂದ ಅಪಾಯ ತಪ್ಪಿತು. ಸೆನ್ಸಾರ್‌ನಲ್ಲಿ ಕೆಲವು ಗೀತೆಗಳು, 'ಬ್ಯಾಂಡಿಟ್ ಕ್ವೀನ್' ಬ್ಯಾನ್ ಆದದ್ದು, ಗಲಾಟೆಗಳಾದದ್ದು ವಿಶೇಷ. ಮುಂದೆ ವಿಚಿತ್ರ ಪರಂಪರೆಗೆ ಇವು ನಾಂದಿ ಹಾಡಿದವು. ಇದರ ಜೊತೆಗೇ 'ಹಮ್ ಆಪ್ ಕೆ ಹೈ ಕೌನ್'ನಂಥ ಸಾಂಸಾರಿಕ-ಸಂಭ್ರಮದ ಚಿತ್ರ ಜನಪ್ರಿಯವಾಯಿತು. ಹಿಂಸೆ, ಅಶ್ಲೀಲಗಳ ಜೊತೆಗೆ ಹಿತವಾದ ಬದುಕಿಗೆ ಹಾತೊರೆಯುವ ಮನಸ್ಸುಗಳಿಗೆ ಖುಷಿ. ಇದು ಪರಂಪರೆಯಾಗಿ ಪ್ರಾದೇಶಿಕವಾಗೂ ಬಂದಿತು.

ಈ ಅವಧಿಯಲ್ಲಿ ಚಿತ್ರೋದ್ಯಮಿಗಳ ಮನಸ್ಸಿನಲ್ಲಿ ಇನ್ನೊಂದು ಭಾವನೆ ಗಟ್ಟಿಯಾಗಿ ಬೇರೂರಿಕೊಂಡಿದ್ದುದು ಕಾಣುತ್ತದೆ. ಅದು ಚಿತ್ರವು ಅದ್ದೂರಿಯಾಗಿದ್ದರೆ ಮಾತ್ರ ಯಶಸ್ವಿಯಾಗಲು ಸಾಧ್ಯ ಎಂಬುದು. ಇದಕ್ಕೆ ಆ ಸಂದರ್ಭದ ವಾತಾವರಣ ಕೂಡ ಕಾರಣ. ಆ ದಿನಗಳಲ್ಲಿ ಶ್ರೀಮಂತ ನಿರ್ಮಾಣ ಮೌಲ್ಯದ ಚಿತ್ರಗಳು ಮಾತ್ರ ಯಶಸ್ವಿಯಾಗುವ ಲಕ್ಷಣಗಳು ಕಾಣತೊಡಗಿದವು. ಇದರಿಂದಾಗಿ ಚಿತ್ರ ಉತ್ತಮವಾಗಿದ್ದರೂ ನಿರ್ಮಾಣ ಅದ್ದೂರಿಯಾಗಿ ಇಲ್ಲದಿದ್ದರೆ ಜಯಿಸುವುದು ಕಷ್ಟ ಎಂಬ ಭಾವನೆ ಬೆಳೆಯಿತು. ಇದಕ್ಕೆ ತೆಲುಗು, ತಮಿಳು, ಹಿಂದಿ ಚಿತ್ರಗಳ ಅದ್ದೂರಿತನ, ಬೆಡಗಿನ ತಾರೆಯರ ಸಂಮೋಹನವೂ ಕಾರಣ. ಇದೇ ಕಾರಣವಾಗಿ ಭಾಷೆ ಪೂರ್ಣವಾಗಿ ಅರ್ಥವಾಗದಿದ್ದರೂ ಪರಭಾಷಾ ಚಿತ್ರಗಳನ್ನು ನೋಡುವ ಪ್ರವೃತ್ತಿ ಕನ್ನಡಿಗರಲ್ಲಿ ಹೆಚ್ಚಿತು. ರಾಜ್ಯದ ಪ್ರಮುಖ ನಗರಗಳಲ್ಲಿ ಮಾತ್ರವಲ್ಲದೆ, ಮಧ್ಯಮ ದರ್ಜೆಯ ನಗರ ಮತ್ತು ತಾಲ್ಲೂಕು ಪ್ರದೇಶಗಳಲ್ಲೂ ತೆಲುಗು, ತಮಿಳು ಚಿತ್ರಗಳು ವ್ಯಾಪಕ ಯಶಸ್ಸು ಗಳಿಸತೊಡಗಿದವು. ತೆಲುಗು ಬಲ್ಲವರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರುವ ದಕ್ಷಿಣ ಕನ್ನಡ, ಧಾರವಾಡ, ಶಿವಮೊಗ್ಗಗಳಲ್ಲಿ ತೆಲುಗು ಚಿತ್ರಗಳು ಹೆಚ್ಚು ಹಣ ಸಂಗ್ರಹಿಸತೊಡಗಿದವು. ಇದರಿಂದಾಗಿ 'ಚಿತ್ರವನ್ನು ಅದ್ದೂರಿಯಾಗಿ ನಿರ್ಮಿಸದಿದ್ದರೆ ಉಳಿಗಾಲವಿಲ್ಲ' ಎನ್ನುವ ತೀರ್ಮಾನಕ್ಕೆ ಕನ್ನಡ ಚಿತ್ರ ನಿರ್ಮಾಪಕರು ಬಂದರು. ಇದಕ್ಕೆ 'ನಿಷ್ಕರ್ಷ' ಚಿತ್ರ ತೆಲುಗಿಗೆ ಡಬ್ ಆದದ್ದು ಹಾಗೂ ಅದ್ದೂರಿಯಾಗಿ ನಿರ್ಮಾಣವಾಗಿದ್ದ 'ಗಡಿಬಿಡಿ ಗಂಡ', 'ಗೋಲಿಬಾರ್', 'ಕುಂಕುಮ ಭಾಗ್ಯ' ಚಿತ್ರಗಳು ಯಶಸ್ವಿಯಾದ ಉದಾಹರಣೆಯಿತ್ತು. ಪ್ರಮುಖವಾಹಿನಿ ಚಿತ್ರಗಳ ಪ್ರವಾಹ 'ನೀರಿನಂತೆ ಹಣ ಸುರಿಯಬೇಕು' ಎಂಬ ನಿಲುವನ್ನು ಗಟ್ಟಿಗೊಳಿಸುತ್ತಾ ಲೋಬಜೆಟ್, ಕಲಾತ್ಮಕ ಎಂಬ ಚಿಂತನೆಗಳಲ್ಲಿ ಮುಳುಗಿದ್ದ ಕೆಲವೇ ಕೆಲವರನ್ನು ವಿಚಲಿತಗೊಳಿಸಿ ದಿಕ್ಕು ತಪ್ಪಿಸುವಲ್ಲಿ ಯಶಸ್ವಿಯಾಯಿತು. ಕನ್ನಡ ಚಿತ್ರವೊಂದರ ನಿರ್ಮಾಣಕ್ಕೆ ಕನಿಷ್ಠ ೫೦ ಲಕ್ಷ ರೂಪಾಯಿ ಬೇಕೇ ಬೇಕು ಎಂಬ ಸ್ಥಿತಿ ನಿರ್ಮಾಣವಾಯಿತು. ಕನ್ನಡ ಚಿತ್ರರಂಗದಲ್ಲಿ ಹೀಗೆ ಅದ್ದೂರಿ ಚಿತ್ರಗಳ ಅಲೆ ೧೯೯೪ರ ರಲ್ಲಿ ಬಿರುಸಿನಿಂದ ಆರಂಭವಾಯಿತು.

ಅದ್ದೂರಿ ಹಣೆಪಟ್ಟಿಯ ಬಹುತೇಕ ಚಿತ್ರಗಳ ವಸ್ತು ರಾಜಕಾರಣ ಅಥವಾ ಪ್ರೇಮ. ಇವೆರಡು ವಸ್ತುಗಳನ್ನು ಅಬ್ಬರದ ಪ್ರಚಾರದೊಂದಿಗೆ ನಿರ್ಮಿಸುವ ಧಾವಂತ ಕಂಡುಬಂದಿದೆ. ರಾಜಕೀಯ ಚಿತ್ರಗಳಲ್ಲಿ ನಿಜಜೀವನದ ರಾಜಕಾರಣಿಗಳಲ್ಲಿ ಕಂಡು ಬರುವ ಸೂಕ್ಷ್ಮತೆ, ವ್ಯಾವಹಾರಿಕತೆ, ವಾಸ್ತವಿಕ ಪ್ರಜ್ಞೆಯ ನಿರೂಪಣೆಯ ಬದಲಿಗೆ ರಂಜನೆಗ, ಅತಿರೇಕಕ್ಕೆ ಅಥವಾ ಸರಳೀಕರಣಕ್ಕೆ ಪ್ರಾಧಾನ್ಯ ನೀಡಲಾಗಿದೆ. ಇವರೊಂದಿಗೆ ರಾಜಕೀಯ ಚಿತ್ರದಲ್ಲಿ ರಾಜಕಾರಣಿಗಳು ಇರಲೇಬೇಕೆಂಬ ಸರಳ ನಂಬಿಕೆ ಕೂಡ ಕಂಡುಬರುತ್ತದೆ. ಈ ಅವಧಿಯ ಯಾವುದೇ ರಾಜಕೀಯ ಚಿತ್ರವನ್ನು ಉದಾಹರಣೆಯಾಗಿ ತೆಗೆದುಕೊಂಡರೂ ಅದರಲ್ಲಿ ನಾಲ್ಕೈದು ಜನ ರಾಜಕಾರಣಿಗಳನ್ನು ದುಷ್ಟರಂತೆ, ಉಳಿದ ಪ್ರತಿಭೆಗಳನ್ನು ಒಳ್ಳೆಯವರಂತೆ ಸರಳ ರೇಖಾತ್ಮಕವಾಗಿ ತೋರಿಸಲಾಗಿದೆ. ಅಂದರೆ ಇದು ತುಂಬಾ ನೇರವಾಗಿ ರಾಜಕಾರಣಿಗಳು ಮಾತ್ರ ಕೆಟ್ಟವರು, ಉಳಿದವರು ಒಳ್ಳೆಯವರು ಎಂದು ತೀರ್ಮಾನಿಸಿದಂತೆ. ರಾಜಕೀಯ ಚಿತ್ರಗಳ ತಳಹದಿ ಇದಾದರೆ ಪ್ರೇಮ ಚಿತ್ರಗಳಲ್ಲಿನ ಪ್ರೇಮದ್ದು ಇನ್ನೊಂದು ಅತಿರೇಕ.

'ಪ್ರೀತಿ ಮಾಡಬಾರದು, ಮಾಡಿದರೆ ಜಗಕೆ ಹೆದರಬಾರದು...' ಎಂಬ ನೇರವಾದ ಹಿತವಚನ ಗೀತೆ ಯುವಕ-ಯುವತಿಯರಿಗೆ ಆದರ್ಶದ ಮಾತಾಗಿದ್ದಷ್ಟೇ ಅಲ್ಲ 'ರಣಧೀರ' ಚಿತ್ರದ ಯಶಸ್ಸಿಗೂ ಕಾರಣವಾಗಿತ್ತು. 'ರಣಧೀರ' ರೀಮೇಕ್ ಆಗಿದ್ದರೂ ಅಲ್ಲಿ ಬಳಸಿದ್ದ ನಾಯಕನನ್ನು ಹುರಿದುಂಬಿಸುವ 'ಬಾ ಬಾರೊ ಬಾರೊ ರಣಧೀರ...' ಕೋರಸ್ ಒಂದು ವಿಶಿಷ್ಟ ಆಕರ್ಷಣೆಯೇ ಆಗಿತ್ತು. ಮುಂದೆ ಇಂಥವರ ಅನುಕರಣೆಗಳೂ ಬಂದವು. ಇದರೊಂದಿಗೆ ಅದೇ ಪ್ರೇಮದ ಅತಿರೇಕವನ್ನು 'ಏನ್ ಹುಡ್ಗೀರೊ ಯಾಕ್ಹಿಂಗ್ ಆಡ್ತೀರೋ...' ಗೀತೆಯ ಮೂಲಕ ಅನುಮೋದಿಸುವ, ಪ್ರೇಮಿಗಳ ವಿರಹದಲ್ಲಿ ಭಾಗಿಯಾಗುವ ಪರಿಣಾಮ ಸಾಧಿತವಾಯಿತು. ಭಾರತೀಯ ಚಿತ್ರಗಳಲ್ಲಿ 'ಪ್ರೇಮ' ತಲುಪಿರುವ ಸ್ಥಿತಿಯನ್ನು 'ರಣಧೀರ' ಸಾಂಕೇತಿಕವಾಗಿ ಧ್ವನಿಸಿತು. ಗಂಡು-ಹೆಣ್ಣಿನ ನಡುವೆ ಸಹಜವಾಗಿ ಉಂಟಾಗುವ ಅನುರಾಗವನ್ನು ಉತ್ಕಟವಾಗಿ ಸಾರಿ ಹೇಳಲು ಇಲ್ಲಸಲ್ಲದ ಸರ್ಕಸ್ಸುಗಳನ್ನು ಮಾಡತೊಡಗಿದ್ದು ಪ್ರೇಮ, ಪ್ರಣಯದ ಚಿತ್ರಗಳಿಗೆ ಸಿದ್ಧ ಸೂತ್ರವನ್ನು ರೂಪಿಸಿಕೊಟ್ಟಿತು. ನಾಯಕ ಅಥವಾ ನಾಯಕಿ ಇಬ್ಬರಲ್ಲಿ ಒಬ್ಬರು ಬಡವರಾಗಿ ಇರಲೇಬೇಕು. ಆಗ ಪ್ರೇಮಿಗಳ ಒಡನಾಟಕ್ಕೆ ಹಿರಿಯರ ವಿರೋಧ

ಬರುವುದು ಸಹಜವಾಗಿ ಕಾಣುತ್ತದೆ. ಕೊನೆಗೆ ಪ್ರೇಮಿಗಳು ಹಿರಿಯರಿಗೆ ಬುದ್ಧಿ ಕಲಿಸಿ ಒಂದಾಗಲು ಸಾಧ್ಯವಾಗುತ್ತದೆ. ಇದಿಲ್ಲವಾದರೆ ವಿಷ ಕುಡಿದು ಅಥವಾ ಬೆಟ್ಟದಿಂದ ಹಾರಿ ಪ್ರಾಣ ಬಿಡಲೂ ಸುಲಭವಾಗುತ್ತದೆ. ಇಲ್ಲಿ ಇನ್ನೂ ಸ್ವಲ್ಪ ವೈವಿಧ್ಯ ಬೇಕಾದವರು ಪ್ರೇಮಿಗಳ ಕುಟುಂಬದ ನಡುವೆ ಆರ್ಥಿಕ ಅಂತಸ್ತಿನೊಂದಿಗೆ ಜಾತಿಯನ್ನು ಬೆರೆಸಿದರು. ಇನ್ನೂ ಕೆಲವರು ಕುಟುಂಬಗಳ ನಡುವೆ ವೈಷಮ್ಯ ತಂದು ತಿರುವುಗಳನ್ನು ತುರುಕಿದರು.

೧೯೪೦-೫೦ರ ದಶಕದಲ್ಲಿ ಪ್ರೇಮದ ಚಿತ್ರಣ ಈ ಬಗೆ ಇರಲಿಲ್ಲ. ಕಣ್ಣಿನ ನೋಟ, ನಾಚಿಕೆ, ಭಾವನೆಗಳಲ್ಲೇ ಪ್ರೇಮವನ್ನು ಪ್ರಕಟಿಸುವ ಪ್ರಯತ್ನ ಮಾಡುತ್ತಿದ್ದರು. ೧೯೬೦ರ ದಶಕದಲ್ಲಿ ಇದು ಸ್ವಲ್ಪ ಮಟ್ಟಿಗೆ ಬದಲಾಗಿ ಇನ್ನೊಂದು ಹಂತ ಮುಟ್ಟಿತು. ನಾಯಕ-ನಾಯಕಿಯರನ್ನು ಪ್ರೇಮದ ಹೆಸರಿನಲ್ಲಿ ರೇಗಿಸುವ, ಚುಡಾಯಿಸುವ ಪರಿ ಆರಂಭವಾಯಿತು. ನಾಯಕನನ್ನು ಮೊದಲು ನಾಯಕಿ ದ್ವೇಷಿಸುವಂತೆ ಮಾಡಿ ಕೊನೆಗೆ ಅವನನ್ನು ಬಿಟ್ಟರೆ ಜಗತ್ತಿನಲ್ಲಿ ತನಗ್ಯಾರೂ ಇಲ್ಲ ಎನ್ನುತ್ತಾ ಆತನಲ್ಲಿ ಲೀನವಾಗುವ ಪರಂಪರೆ ಶುರುವಾಯಿತು. ೧೯೭೦ರ ದಶಕದ ಕೊನೆಯ ಹೊತ್ತಿಗೆ ಬಿಗಿಯಾದ ಉಡುಪು ತೊಡಿಸಿ, ಎಗ್ಗಿಲ್ಲದ ಅಂಗಾಂಗ ಪ್ರದರ್ಶನಕ್ಕೆ ಇಳಿದು ಅದನ್ನೇ ಪ್ರಮುಖ ಆಕರ್ಷಣೆ ಮಾಡುವ ನಿರ್ದೇಶಕರು ಹುಟ್ಟಿಕೊಂಡರು. ೧೯೮೦ರ ನಂತರದಲ್ಲಿ


(ಚಿತ್ರ ೫೪) 'ಹಾಲುಂಡ ತವರು' ಚಿತ್ರದಲ್ಲಿ ದೊಡ್ಡಣ್ಣ, ಸಿತಾರಾ, ರಿಚರ್ಡ್ ಲೂಯಿಸ್ ಮತ್ತು ಕೃಷ್ಣೇಗೌಡ

'ಪ್ರೇಮಲೋಕ', 'ರಣಧೀರ' ಚಿತ್ರಗಳು ವಿಫಲ ಪ್ರೇಮಿ ಕೆರಳುವ, ವಸ್ತುಗಳನ್ನು ಧ್ವಂಸ ಮಾಡುವ, ಉತ್ಕಟವಾಗಿ ಹಾಡುತ್ತಾ ಕುಣಿಯುವ ವಿಚಿತ್ರ ಪರಂಪರೆಗೆ ನಾಂದಿ ಹಾಡಿದವು. ೧೯೮೦ರ ದಶಕವು ತ್ರಿಕೋನ ಪ್ರೇಮಕಥೆಗಳಿಗೆ ವೈವಿಧ್ಯವನ್ನು ತರುವ ಪ್ರಯತ್ನ ಮಾಡಿತು. ಒಬ್ಬ ನಾಯಕನನ್ನು ಇಬ್ಬರು ಪ್ರೇಮಿಸುವುದು, ನಂತರ ಅದರಲ್ಲಿ ಒಬ್ಬಳು ಮತ್ತೊಬ್ಬಳಿಗಾಗಿ ನಾಯಕನನ್ನು ಬಿಟ್ಟುಕೊಡುವ ಪದ್ಧತಿ ಆರಂಭವಾಯಿತು. ಕನ್ನಡದ 'ಹುಲಿಯ ಹಾಲಿನ ಮೇವು' ಇಂಥದಕ್ಕೆ ಸ್ಫೂರ್ತಿಯಾದ ಚಿತ್ರ. ಇದರ ಪ್ರಭಾವ ತೀಕ್ಷ್ಣ. ನಾಯಕನನ್ನು ತ್ಯಾಗ ಮಾಡುವ ನಾಯಕಿ ಚಿತ್ರದ ನಡುವೆಯೇ ದುಷ್ಟರ ವ್ಯೂಹಕ್ಕೆ ಬಲಿಯಾಗಿ, ತನ್ನ ಪ್ರೇಮದ ಶ್ರೇಷ್ಠತೆಯನ್ನು ಸಾರಿ ಪ್ರೇಕ್ಷಕರ ಅನುಕಂಪ ಗಿಟ್ಟಿಸುವ ಹಲವಾರು ಚಿತ್ರಗಳು ಸೃಷ್ಟಿಯಾದವು.

ಪ್ರೇಮ, ಪ್ರೀತಿಸುವುದು ಎಂಬ ಮಾತಿನ ಹಿಂದೆ ಇರುವ ನವುರಾದ ಭಾವ ಕ್ರಮೇಣ ಕರಗಿ ಹೋಯಿತು. ಅದೊಂದು ಹಿಂಸೆ, ಒತ್ತಾಯ, ಒಲ್ಲದವರನ್ನು ಬಡಿದು ಒಗ್ಗಿಸುವ ಕ್ರಿಯೆಯಾಗಿ ಬದಲಾಯಿತು. ಆ ಬಗೆಯ ಕ್ರೌರ್ಯವನ್ನು ಪುರುಷತ್ವದ ಸಂಕೇತವಾಗಿ ಬಿಂಬಿಸಿ, ಅದನ್ನು ಸ್ವೀಕರಿಸಿದ್ದೂ ಆಯಿತು. ಒಂದು ವರ್ಗದ ಜನ ಇದನ್ನು ಇಷ್ಟ ಪಟ್ಟರು. ಇನ್ನೊಂದು ವರ್ಗದ ಜನ ಚಲನಚಿತ್ರಗಳನ್ನು ನೋಡುವುದನ್ನೇ ಬಿಟ್ಟರು. ಒಟ್ಟಾರೆ ೧೯೯೫ರ ಹೊತ್ತಿಗೆ ಇಡೀ ಪರಿಸ್ಥಿತಿಯು 'ಬಂಧನ', 'ಹೊಂಬಿಸಿಲು', 'ಹಾಲು ಜೇನು' ಚಿತ್ರಗಳ ಪ್ರಣಯ ದೃಶ್ಯಗಳ ನವಿರು ನಿರೂಪಣೆಯನ್ನು, ಪ್ರೀತಿ ಕೇವಲ ದೈಹಿಕ ಆಕರ್ಷಣೆಯದ್ದಲ್ಲ, ಅದಕ್ಕೆ ಬೇರೊಂದು ಆಯಾಮವಿದೆ ಎಂಬಂಥ ಮೌಲ್ಯವನ್ನು ಪೂರ್ಣವಾಗಿ ಕಳೆದುಕೊಂಡಿತು.

ಕನ್ನಡ ಚಿತ್ರಪ್ರೇಕ್ಷಕರ ಎರಡು ವರ್ಗಗಳನ್ನು ಕೆಲವು ಚಿತ್ರಗಳು ಮೇಲಿನಂತೆ ವರ್ಗೀಕರಿಸುತ್ತಿದ್ದಾಗ ಇನ್ನೊಂದು ವರ್ಗ ಕ್ರಿಯಾಶೀಲವಾಗಿತ್ತೆಂಬುದನ್ನು ಗುರುತಿಸಬೇಕಾಗುತ್ತದೆ. ಕಳೆದ ೩೦ ವರ್ಷಗಳಿಂದ ಕನ್ನಡ ಚಿತ್ರಗಳಲ್ಲಿನ ಒಳ್ಳೆಯದನ್ನು ಗುರುತಿಸುತ್ತಾ, ಇಷ್ಟಪಡುತ್ತಾ, ಆರಾಧಿಸುತ್ತಿದ್ದ ಈ ವರ್ಗ ಹಿಂದಿನ ಕಾಲದ ಹಳೆಯ ಚಿತ್ರಗಳನ್ನು ಇಲ್ಲವೇ ಕೌಟುಂಬಿಕ ಮಹತ್ವ, ಸಾಮಾಜಿಕ ಮೌಲ್ಯಗಳಿದ್ದ ಚಿತ್ರಗಳನ್ನು ಹಸಿದವರಂತೆ ನೋಡಿ ಆನಂದಪಟ್ಟಿತು. ೧೯೯೪ ರಲ್ಲಿ ಬಿಡುಗಡೆಯಾದದ್ದು ೬೫ ಚಿತ್ರಗಳು. ಅವುಗಳಲ್ಲಿ ಮೇಲೆ ಹೇಳಿದಂತೆ ಕೌಟುಂಬಿಕ ಚಿತ್ರಗಳು ಹೆಚ್ಚು ಬಿಡುಗಡೆಯಾಗಿ ಯಶಸ್ಸನ್ನು ಕಂಡವು. 'ಕರುಳಿನ ಕೂಗು', 'ಒಡಹುಟ್ಟಿದವರು', 'ಹಾಲುಂಡ ತವರು', 'ಹೆತ್ತ ಕರುಳು' ಚಿತ್ರಗಳು ಜನರ ಮುಕ್ತ ಅಭಿಮಾನ ಗಳಿಸಿಕೊಂಡವು.

ಕನ್ನಡ ಚಿತ್ರಗಳಲ್ಲಿ ಕಣ್ಣೀರಿನ ಅಲೆಯನ್ನು ಆರಂಭಿಸಿದ ಚಿತ್ರ 'ಕರುಳಿನ ಕೂಗು' ಈ ವರ್ಷ ಬಂತು. ಮಲೆಯಾಳಂ ಚಿತ್ರ 'ಆಕಾಶ್‌ದೂತ್‌ನ' ಕನ್ನಡ ಅವತರಣಿಕೆಯಾಗಿದ್ದರೂ ಕಥೆ ಗಟ್ಟಿಯಾಗಿದ್ದುದರಿಂದ ದಕ್ಷಿಣ ಭಾರತದ ಇತರ ಭಾಷೆಗಳಲ್ಲೆಲ್ಲ ತಯಾರಾಗಿ ಎಲ್ಲ ಕಡೆ ಜಯಭೇರಿ ಬಾರಿಸಿತು. ಕುಡುಕ ಗಂಡನಿಂದಾಗಿ ಸರ್ವಸ್ವವನ್ನು ಕಳೆದುಕೊಂಡ ಹೆಣ್ಣೊಬ್ಬಳು ತನಗೆ ಕ್ಯಾನ್ಸರ್ ತಗುಲಿದೆಯೆಂದು ತಿಳಿದು, ಮಕ್ಕಳನ್ನು ಒಂದೊಂದಾಗಿ ಬೇರೆಯವರಿಗೆ ಸಾಕಲು ಕೊಡುವುದು, ಮಾರ್ಮಿಕ ದೃಶ್ಯಗಳ ಮೂಲಕ ತೀವ್ರವಾಗಿ ನಾಟುವಂತಿತ್ತು. ಡಿ.ರಾಜೇಂದ್ರಬಾಬು ನಿರ್ದೇಶಿಸಿದ್ದ ಈ ಚಿತ್ರ ಮೋಹಕ ಛಾಯಾಗ್ರಹಣ ಹಾಗೂ ವಿನಯಾ ಪ್ರಸಾದ್, ಪ್ರಭಾಕರ್, ಲಕ್ಷ್ಮಣ್ ಅವರ ಉತ್ತಮ ಅಭಿನಯದಿಂದಾಗಿ ಯಶಸ್ಸು ಕಂಡಿತು. 'ಹಾಲುಂಡ ತವರು' ಇದೇ ನಿರ್ದೇಶಕರ ಇನ್ನೊಂದು ಯಶಸ್ವಿ ಚಿತ್ರ. ಊಹೆಗೂ ನಿಲುಕದಷ್ಟು, ಒಮ್ಮೊಮ್ಮೆ ಪ್ರೇಕ್ಷಕರಿಗೆ ಸಿಟ್ಟು ಬರುವಷ್ಟು ತ್ಯಾಗವನ್ನು ಈ ಚಿತ್ರದ ನಾಯಕ-ನಾಯಕಿ ಮಾಡುತ್ತಾರೆ. ಹಂಸಲೇಖ ಉತ್ತಮ ಸಂಗೀತವಿದ್ದ ಈ ಚಿತ್ರ ಅವರಿಗೆ ೧೯೯೪-೯೫ರ ಅತ್ಯುತ್ತಮ ಸಂಗೀತ ನಿರ್ದೇಶಕರ ಪ್ರಶಸ್ತಿಯನ್ನಲ್ಲದೆ, 'ಎಲೆ ಹೊಂಬಿಸಿಲೇ....' ಹಾಡಿಗೆ ಅತ್ಯುತ್ತಮ ಗೀತರಚನೆಕಾರ ಪ್ರಶಸ್ತಿಯನ್ನು ಗಳಿಸಿಕೊಟ್ಟಿತು. ಅಶೋಕ್ ಕಶ್ಯಪ್ ಛಾಯಾಗ್ರಹಣ ಶ್ರೀಮಂತ-ಸುಂದರ. 'ಹಾಲುಂಡ ತವರು'ನಂಥ ಚಿತ್ರಗಳು ಸ್ತ್ರೀವಾದಿ ನಿಲುವಿನ ಹೆಂಗಳೆಯರಿಗೆ ಒಪ್ಪಿತವಾಗಲಿಲ್ಲ. ಒಂದೆರಡು ಸಭೆ ನಡೆಸಿ ಚರ್ಚಿಸಿದ್ದರು. ತವರಿನ ಆಸ್ತಿಯಲ್ಲಿ ಹಕ್ಕು ಕೇಳಲು ಕಾನೂನು ಬರುತ್ತಿರುವಾಗ ತವರಿನ ಕಷ್ಟಕ್ಕೆ ನೆರವಾಗಲು ಗಂಡನ - ತನ್ನ - ಸರ್ವಸ್ವವನ್ನೂ ತ್ಯಾಗ ಮಾಡು ಎಂದು ಬೋಧಿಸುವ ಇಂಥ ಚಿತ್ರಗಳು ಸ್ತ್ರೀಯರ ಮನಸ್ಸನ್ನು ಬ್ಲ್ಯಾಕ್‌ಮೇಲ್ ಮಾಡುತ್ತವೆ ಎಂಬ ವಾದವಿತ್ತು.

''...ಈಗೀಗ ಪ್ರತಿಭಟಿಸುವ ಹುರುಪೇ ಹೋಗಿಬಿಟ್ಟಿದೆ. ಪ್ರಜೆ, ವ್ಯವಸ್ಥೆಗೆ ತಾನೇ ಹೊಂದಿಕೊಂಡುಬಿಡುತ್ತಿದ್ದಾನೆ. ಕಂಡೂ ಕಾಣದ ಹಾಗೆ ಇರುವ, ರಾಜಿ ಮಾಡಿಕೊಳ್ಳುವ ಪ್ರವೃತ್ತಿ ಬಂದುಬಿಟ್ಟಿದೆ. ಅದಕ್ಕೆ ಬಿಡುಗಡೆ ಇರುವುದು ಬೇರೆ ರೀತಿ ಯೋಚಿಸುವುದರಲ್ಲಿ. ಹೀಗಾಗಿ ಕೌಟುಂಬಿಕ ಮೌಲ್ಯಗಳು, ಮನುಷ್ಯ ಸಂಬಂಧಗಳು, ಪ್ರೀತಿ-ಕರುಣೆ, ಹಾಸ್ಯದ ಕಡೆ ತಿರುಗಿದ್ದಾರೆ. ಇವೆಲ್ಲ ಮನುಷ್ಯ ಇಷ್ಟ ಪಡುವ, ಜೋಪಾನವಾಗಿಟ್ಟುಕೊಳ್ಳಬೇಕು ಎಂದು ಬಯಸುವ ಮೌಲ್ಯಗಳು. ಅವನ ಒಳಗೆ, ಸುತ್ತ ಮುತ್ತ ಇರುವಂಥವು. ಈ ಬದಲಾಗುತ್ತಿರುವ ಮನೋಧರ್ಮ ಗಮನಿಸಿ, ಜಲಾವಣೆಯಲ್ಲಿರುವ ವಸ್ತುವನ್ನೇ ಸಿನಿಮಾಗೆ ತೆಗೆದುಕೊಳ್ಳುತ್ತೇವೆ. ಅಜ್ಜಾಯಿನಾಯ್ಡು ಅವರು ಅಂದು ಮಾಡಿದ ತಾಳಿ, ತವರುಗಳು ಮತ್ತೆ ಮುಂಚೂಣಿಗೆ ಬಂದಿವೆ. ನಾನೇ ಮಾಡಿದ 'ಹಾಲುಂಡ ತವರು', 'ಕರುಳಿನ ಕೂಗು' ಮತ್ತೆ ಒಂದು ಪರಂಪರೆಯನ್ನೇ ಹುಟ್ಟಿಹಾಕಿವೆ...'' ಎನ್ನುತ್ತಾರೆ ಚಿತ್ರ ನಿರ್ದೇಶಕ ಡಿ.ರಾಜೇಂದ್ರಬಾಬು. ಇದರ ಹಿಂದೆಯೇ ಬಂದ 'ದೀರ್ಘ ಸುಮಂಗಲಿ' ಕೂಡಾ ಇಂಥದೇ ವಿಚಿತ್ರ ವಸ್ತುವಿನದ್ದಾಗಿತ್ತು.



(ಚಿತ್ರ ೫೫) 'ಒಡ ಹುಟ್ಟಿದವರು' ಚಿತ್ರದಲ್ಲಿ ಅಂಬರೀಷ್ ಮತ್ತು ರಾಜಕುಮಾರ್

'ಒಡ ಹುಟ್ಟಿದವರು' ಕನ್ನಡ ಚಿತ್ರರಂಗಕ್ಕೆ, ಪ್ರೇಕ್ಷಕ ವೃಂದಕ್ಕೆ ಕುತೂಹಲ ತಂದ ಚಿತ್ರ. ''ರಾಜಕುಮಾರ್ ಮತ್ತು ಅಂಬರೀಷ್ ಸಹೋದರರಾಗಿ ಅಭಿನಯಿಸಿದ್ದರು. ಶಿಸ್ತಿನ ವ್ಯಕ್ತಿಯೊಂದಿಗೆ 'ಅಶಿಸ್ತು' ಸೇರಿತ್ತು. ಆದರೆ ಅಲ್ಲಿ ಅದಮ್ಯ ಪ್ರೀತಿ, ಗೌರವ ಇತ್ತು. ಭಯ-ಭಕ್ತಿಗಳೂ ಇದ್ದವು. ರಾಜಕುಮಾರ್ ಅವರ ನಮ್ರತೆ, ವಿಶಿಷ್ಟ ವ್ಯಕ್ತಿತ್ವದ ಎದುರು ಅಂಬರೀಷ್ ಮಣಿದರು. ಕನಿಷ್ಟ ಸೆಟ್‌ನಲ್ಲಿರುವಷ್ಟು ಕಾಲವಾದರೂ ಅವರು ತಮ್ಮ ತುಂಟತನವನ್ನು ಒಂದು 'ಹದ'ದಲ್ಲಿ ಹರಿಯಬಿಡುತ್ತಿದ್ದರು. ''ಮುಖ್ಯವಾಗಿ ಆತನ ಲವಲವಿಕೆ, ಪುಟಿಯುವ ಮನಸ್ಸು, ಪ್ರವೃತ್ತಿಯನ್ನು ಕಂಡು ರಾಜಕುಮಾರ್ ಅವರೇ ಖುಷಿಯಾಗುತ್ತಿದ್ದರು. ಹೀಗಾಗಿ ಕೆಲಸ ಕಷ್ಟವೇ ಆಗಲಿಲ್ಲ. 'ಅಶಿಸ್ತು' ಇಲ್ಲಿ ಶಿಸ್ತಿನ ಪುಟ್ಟಸ್ವಾಮಿಯೇ ಆಗಿಹೋಯಿತು. ಆತ ಬಂದರೆ ಬೆಳದಿಂಗಳ ಬೆಳಕು ಚೆಲ್ಲಿದ ಹಾಗಾಗಿ ಎಲ್ಲೆಲ್ಲೂ ನಗೆಯ, ಉಲ್ಲಾಸದ ಬುಗ್ಗೆಯೇ ಹರಿಯುತ್ತಿತ್ತು. ನಮಗೆ ಈ ಕೆಲಸ ಕೆಲಸವಾಗದೇ ಒಂದು ಆಟವಾಗಿ ಹೋಗಿತ್ತು. ಸರಾಗವಾಗಿ ಮುಗಿಸಿದೆವು...'' ಎನ್ನುತ್ತಾರೆ ಚಿತ್ರದ ನಿರ್ದೇಶಕ ಎಸ್.ಕೆ.ಭಗವಾನ್.

ಚಿತ್ರಕ್ಕೆ ಕಥೆ ಬರೆದವರು ಭಗವಾನ್. ''ನನ್ನ ಕಥೆಗೆ ಸ್ಫೂರ್ತಿ ರಾಮಾಯಣವೇ. ಅಲ್ಲಿಯ ಮರ್ಯಾದಾ ಪುರುಷೋತ್ತಮ ರಾಮನೇ ಇಲ್ಲಿಯ ಆದರ್ಶ. ರಾಜ್ಯವನ್ನೇ ಬಿಟ್ಟುಕೊಟ್ಟು ಕಾಡಿಗೆ ಹೋದ ರಾಮನ ಹಾಗೇ ಈ ಚಿತ್ರದ ಮುಖ್ಯ ಪಾತ್ರವೂ ಎಲ್ಲವನ್ನೂ ತ್ಯಾಗ ಮಾಡಿ ಹೊರಟು ಹೋಗುತ್ತದೆ. ಅಂಥ ತ್ಯಾಗ ವ್ಯಕ್ತಿಯಾಗಿ, ವೃತ್ತಿಯಲ್ಲಿ, ಸಮಾಜದಲ್ಲಿ ಅದನ್ನೇ ಅಳವಡಿಸಿಕೊಂಡಿರುವ ರಾಜಕುಮಾರ್ ಅವರಿಗೂ ಅನ್ವಯ. ಅಂಥ ಪಾತ್ರ ಅವರಿಗೆ ಲೀಲಾಜಾಲ. ರಾಮಾಯಣದಲ್ಲಿ ಅಷ್ಟೇ ಮುಖ್ಯವಾದ ಪಾತ್ರ ಲಕ್ಷ್ಮಣನದ್ದು. ಅಂಥ ಲಕ್ಷ್ಮಣನನ್ನು ಅಂಬರೀಷ್‌ರಲ್ಲಿ ಕಂಡೆ. ಅವರು ತಲ್ಲೀನರಾಗಿ ಅಭಿನಯಿಸಿದರು. ಅಣ್ಣನಿಗಿಂತ ಆಸ್ತಿ, ಹೆಂಡತಿ ಒಂದೂ ಬೇಕಾಗಲಿಲ್ಲ ಈ ಚಿತ್ರದ ಲಕ್ಷ್ಮಣನಿಗೆ. ಹೀಗೆ ನನ್ನ ಮನಸ್ಸಿನಲ್ಲಿದ್ದ ಆಧುನಿಕ ರಾಮ-ಲಕ್ಷ್ಮಣರನ್ನು ಬೆಳ್ಳಿ ತೆರೆಗೆ ತಂದೆ. ಅವರೆಲ್ಲ ಅಷ್ಟೇ ಸಹಕಾರ ನೀಡಿದರು'' ಎಂದು ವಿವರಿಸುವ ಭಗವಾನ್ ಅವರಿಗೆ ರಾಮಾಯಣದ ತ್ಯಾಗಮಯಿ ಊರ್ಮಿಳೆಯನ್ನು ತರಲಾಗಲಿಲ್ಲವಂತೆ. ''ನನ್ನ ಊರ್ಮಿಳೆ ಸ್ವಾರ್ಥಿಯಾಗಬೇಕಾಯಿತು. ಸಂಘರ್ಷವಿಲ್ಲದೆ ಚಿತ್ರಕಥೆ ನಡೆಯುವುದೇ ಸಾಧ್ಯವಿರಲಿಲ್ಲ'' ಎನ್ನುತ್ತಾರೆ. ಅಣ್ಣ-ತಮ್ಮಂದಿರ ನಡುವೆ ಬಿರುಕು ತಂದು ಬೇರೆ ಮಾಡಲು ಪ್ರಯತ್ನಿಸುವ ಹೆಂಡತಿಯನ್ನೂ ಬಿಡಲಾಗದೆ, ಅಣ್ಣನನ್ನೂ ವಿರೋಧಿಸಲಾಗದೆ ತೊಳಲುವ ಪಾತ್ರದಲ್ಲಿ ಅಂಬರೀಷ್ ಸೊಗಸಾಗಿ ಅಭಿನಯಿಸಿದರು. ಸಾಮಾನ್ಯವಾಗಿ ಒಟ್ಟು ಕುಟುಂಬಗಳನ್ನು ಒಡೆಯುವುದು ಹೊರಗಿನಿಂದ ಬಂದ ಮನುಷ್ಯರೇ ಎಂಬ ನಿಲುವು ಇಲ್ಲಿಯೂ ಇತ್ತು. ಅದೇ ಆಕರ್ಷಣೆಯಾಗಿ ಛಿದ್ರವಾಗುವ ಕುಟುಂಬಗಳಂತಲ್ಲದೆ ಇಲ್ಲಿ ಅಣ್ಣನಾದವನು ತಮ್ಮನ ಸುಖಕ್ಕಾಗಿ ತ್ಯಾಗ ಮಾಡಿ ಹೊರಟು ಹೋದ. ಅದಕ್ಕಿಂತ ಮಿಗಿಲಾಗಿ ಆಸ್ತಿ-ಹಣವೇ ಪ್ರಧಾನವಾದರೆ ನೀನೇ ಇಟ್ಟುಕೋ. ನನ್ನ ಒಡವೆ, ಆಸ್ತಿ, ಜೀವ ಎಲ್ಲವೂ ನನ್ನ ಅಣ್ಣನೇ ಎಂದು ಹೇಳಿ ತಮ್ಮನೂ ಅಣ್ಣನನ್ನು ಸೇರಿಕೊಂಡ. ಹೀಗೆ ತ್ಯಾಗದ ಜೊತೆ ತ್ಯಾಗದ ಪೈಪೋಟಿ. ಒಳ್ಳೆಯ ಗುಣಗಳ ಮೇಲಾಟವನ್ನೇ ತರುವ ಪ್ರಯತ್ನ. ಉದಾತ್ತ ಧ್ಯೇಯಕ್ಕಾಗಿ ಸರ್ವಸ್ವವನ್ನು ತ್ಯಾಗ ಮಾಡುವುದು ಕೇಂದ್ರ ವಸ್ತುವಾದರೆ, ಇಡೀ ಚಿತ್ರದಲ್ಲಿ ಗ್ರಾಮೀಣ ಪರಿಸರ, ಮುಖ್ಯವಾಗಿ ರೈತರ ಬದುಕಿನ ಚಿತ್ರಣವಿದೆ. ಮಣ್ಣಿನ ಮೇಲಿನ ಪ್ರೀತಿ, ತನ್ನ ಸೇವೆ ಮಾಡಿದವನನ್ನು ಎಂದೂ ಭೂಮಾತೆ ಕೈ ಬಿಡುವುದಿಲ್ಲ ಎಂಬ ತತ್ವವನ್ನು ಅಳವಡಿಸಲಾಗಿದೆ. ಮಹದೇವಪುರದ ಹಸಿರ ನಡುವೆ ರೈತನಾಗಿ ರಾಜಕುಮಾರ್ ಅವರ ಒಳಮನಸ್ಸಿನಲ್ಲಿದ್ದ ರೈತನಾಗುವ ಬಯಕೆಯನ್ನು ತಣಿಸಿಕೊಂಡಿದ್ದಾರೆ. ಅಂಥ ತನ್ಮಯತೆಯನ್ನು ಅವರ ಅಭಿನಯದಲ್ಲಿ ಕಾಣಬಹುದಿತ್ತು. ''...'ಜೀವನಚೈತ್ರ', 'ಆಕಸ್ಮಿಕ' ಆದ ಮೇಲೆ ಬಂದದ್ದು 'ಒಡಹುಟ್ಟಿದವರು'. ಜನ ಸ್ವಾಗತಿಸಿದರು. 'ಆಕಸ್ಮಿಕ'ಕ್ಕಿಂತ ಹೆಚ್ಚು ಗಳಿಕೆಯೂ ಆಯಿತು.

''ಕಥೆಯ ನಿರೂಪಣೆಯಲ್ಲಿ ಅಂಬರೀಷ್ ಪಾತ್ರವನ್ನು, ಸ್ಥಾನವನ್ನು ಕಡಿಮೆಗೊಳಿಸದ ಹಾಗೆ ಸಮಸಮವಾಗಿ ತರುವಂತೆ ಎಚ್ಚರವಹಿಸಿದ್ದರು ರಾಜಕುಮಾರ್. ಪ್ರಚಾರದಲ್ಲೂ ರಾಜಕುಮಾರ್ ಕಟೌಟ್ ೬೦ ಅಡಿ ಇದ್ದರೆ, ಅಂಬರೀಷ್‌ದು ೬೧ ಅಡಿ ಇರಬೇಕೆಂದು ಒತ್ತಾಯ ಮಾಡುತ್ತಿದ್ದರು. ಇಂಥ ಸಣ್ಣ ಸಣ್ಣ ವಿಷಯಗಳಲ್ಲೂ ರಾಜಕುಮಾರ್ ತೆಗೆದುಕೊಂಡ ಎಚ್ಚರ, ಪ್ರೀತಿಗಳು ಕೂಡಾ ಜನಪ್ರಿಯತೆಯ ದೃಷ್ಟಿಯಿಂದ ಪರಿಳಿತಗಳಾಗದ ಹಾಗೆ ನಿರ್ವಹಿಸಲು ನೆರವಾಯಿತು'' ಎಂದು ವಿವರಿಸುತ್ತಾರೆ ಭಗವಾನ್. ಚಿ.ಉದಯಶಂಕರ್ ಇಂಥ ಸಮತೋಲನವನ್ನು ಸಂಭಾಷಣೆಯಲ್ಲೂ ತರುವ ಪ್ರಯತ್ನ ಮಾಡಿದರು. ಯಶಸ್ವಿಯೂ ಆದರು. ಉಪೇಂದ್ರಕುಮಾರ್ ಸಂಗೀತ ಕೂಡಾ ಚೆನ್ನ. ಬಹುಕಾಲ ನೆನಪಿನಲ್ಲುಳಿಯುವ ರಾಗಸಂಯೋಜನೆಯಿತ್ತು. ಗೀತರಚನೆಯಲ್ಲೂ ಕೆಲವು ಗೀತೆಗಳು ಅರ್ಥಗರ್ಭಿತವಾಗಿದ್ದವು. 'ಸೋಲೇ ಗೆಲುವೆಂದು ಬಾಳಲಿ ಅರಿತಾದ ಮೇಲೆ....' ಮತ್ತು 'ನಾನು.. ನಾನು ನೀನು...' ಗೀತೆಗಳು ಗಮನಾರ್ಹ. ಇದು ದೊರೆ-ಭಗವಾನ್ ಜೋಡಿಯಾಗಿ ನಿರ್ದೇಶಿಸಿದ ಕೊನೆಯ ಚಿತ್ರ. ದೊರೆಯಂಥ ತಂತ್ರಜ್ಞನ ಅಗಲಿಕೆ ಚಿತ್ರರಂಗಕ್ಕೆ ಅಪಾರ ನಷ್ಟ. ಅವರ ಬಗ್ಗೆ ತುಂಬು ಅಭಿಮಾನವಿದ್ದ ರಾಜಕುಮಾರ್ ಈ ಬಗ್ಗೆ ವ್ಯಥಿತರು.

ತ್ಯಾಗ, ದುರಂತ, ಕುಟುಂಬಗಳ ನೋವು ನಾಟಕೀಯವಾಗಿ ವಿಜೃಂಭಿಸುತ್ತಾ ಯಶಸ್ಸನ್ನು ಗಳಿಸುತ್ತಿದ್ದಂತೆ ಅಂಥದೇ ಚಿತ್ರಗಳ ನಿರ್ಮಾಣ ಕೂಡ ಹೆಚ್ಚಿತು. ಇಂಥ ಚಿತ್ರಗಳಿಗೆ ಕಥೆ ಹೆಣೆಯುವುದರಲ್ಲಿ ಸಿದ್ಧಹಸ್ತರೆಂದು ಅಜಯ್‌ಕುಮಾರ್ ಖ್ಯಾತಿ ಪಡೆದರು. ವಿಚಿತ್ರವೆಂದರೆ ಇವರ ಕಥೆಯನ್ನು ಆಧರಿಸಿದ ಕೆಲವು ಚಿತ್ರಗಳು ಯಶಸ್ವಿಯಾದವು ಮತ್ತು ಇವು ೧೯೬೦ರ ದಶಕದಲ್ಲಿ ತೆರೆಕಂಡು ಯಶಸ್ಸು ಕಂಡಿದ್ದ ತೆಲುಗು, ತಮಿಳು ಚಿತ್ರಗಳ ಕಥೆಗಳನ್ನು ಆಧರಿಸಿದ್ದವು. ಅಂದರೆ ಒಂದು ವರ್ಗದ ಪ್ರೇಕ್ಷಕರು ಬದಲಾದ ವಾತಾವರಣದಲ್ಲಿಯೂ ಏನನ್ನು ಅಪೇಕ್ಷಿಸುತ್ತಿದ್ದಾರೆ ಎಂಬುದನ್ನು ಈ ತ್ಯಾಗಕೇಂದ್ರಿತ ದುರಂತ ವಸ್ತುವಿನ ಚಿತ್ರಗಳ ಯಶಸ್ಸು ಹೇಳುತ್ತದೆ.

ಭಾಗ್ಯರಾಜ್ ಅವರ ತಮಿಳು ಚಿತ್ರವೊಂದನ್ನು ಆಧರಿಸಿ ಈ ವರ್ಷ ತೆರೆಗೆ ಬಂದ ಮೊದಲ ಚಿತ್ರ 'ತೂಗುವೆ ಕೃಷ್ಣನಾ'. ಕುಣಿಗಲ್ ವಸಂತ್ ಅವರಿಗೆ ನಿರ್ದೇಶಿಸುವ ಅವಕಾಶ ಸಿಗುವುದೇ ಅಪರೂಪ, ಆ ಸಂಭ್ರಮದಲ್ಲಿ ಚಿತ್ರಿಸಿದ್ದರು. ಈ ಚಿತ್ರದ ನಿರ್ಮಾಪಕರು ಗಾಯತ್ರಿ ಸಿನಿ ಕ್ರಿಯೇಷನ್ಸ್‌ನ ಕೃಷ್ಣಮಾದೇಗೌಡ. ಹಾಸ್ಯ, ಅನಿರೀಕ್ಷಿತಗಳು ಮೊದಲಾದ ವಿಶೇಷ ತಿರುವು ಕೊಡುವಂಥ ಸನ್ನಿವೇಶಗಳು ಇದ್ದ ಚಿತ್ರ. ಚಿತ್ರನಾಟಕದ ಬಂಧವೇ ವಿಭಿನ್ನ. ಅಭಿನಯಿಸಿದ್ದ ಸೌಂದರ್ಯ, ಅನಂತ್‌ನಾಗ್, ಶ್ರೀನಾಥ್ ಸಮಸಮ ಸ್ಪರ್ಧಿಗಳ ಹಾಗೆ ನಿರ್ವಹಿಸಿದ್ದರು. ಇಷ್ಟಾದರೂ ಚಿತ್ರ ತುಂಬಾ ಯಶಸ್ವಿ ಆಗಲಿಲ್ಲ. ಜನಪ್ರಿಯ ನಟರಿದ್ದಾಗ ಎಷ್ಟು ಎಚ್ಚರವಾಗಿದ್ದರೂ ಸಾಲದು. ಎಂಥ ಪಾತ್ರವೇ ಇರಲಿ ಜನಪ್ರಿಯತೆ ಕಟ್ಟಿಕೊಟ್ಟ ಇಮೇಜ್ ಮರೆತು ಅಭಿನಯಿಸುವ ಸ್ವಾತಂತ್ರ್ಯ ನಾಯಕನಟರಿಗೆ ಇಲ್ಲವೇ ಇಲ್ಲ. ಈ ಚಿತ್ರದಲ್ಲಿ ಅನಂತ್‌ನಾಗ್ ಅವರಿಗೆ ವಾರ್ಡ್‌ಬಾಯ್ ಮಾದರಿ ಪಾತ್ರ. ಆಸ್ಪತ್ರೆಯ ಫಾದರ್ ಕಣ್ಣಿಗೆ ಅನಂತ್ ಹಾಗೂ ಹುಚ್ಚಿಯಂತೆ ನಟಿಸುತ್ತಿದ್ದ ನಾಯಕಿ ಸೌಂದರ್ಯ ಅವರ ಕ್ರಿಯೆಗಳೆಲ್ಲ ನಾಯಕಿ ಗರ್ಭಿಣಿಯಾಗಲು ಆತನೇ ಕಾರಣ ಎಂಬ ಸಂದೇಹ ಬರುವಂತೆ ತಳುಕು



(ಚಿತ್ರ ೫೬) 'ತನಿಖೆ' ಚಿತ್ರದಲ್ಲಿ ಗುಲ್ಜಾರ್ ಖಾನ್ ಮತ್ತು ಸುಜಾತ ರಾಮಚಂದ್ರ

ಹಾಕಿಕೊಳ್ಳುತ್ತದೆ. ನೀನೇ ತಪ್ಪಿತಸ್ಥ ಎಂದು ಫಾದರ್ ಹೇಳಿದಾಗ, ಎದುರುತ್ತರ ಹೇಳದೆ ಒಪ್ಪಿಕೊಳ್ಳುವುದು ಅವರ ಅಭಿಮಾನಿಗಳು ಬಯಸುವ ರೀತಿಗಿಂತ ಭಿನ್ನವಾಯಿತೇನೋ. ಸೌಂದರ್ಯ ತೆಲುಗು ಚಿತ್ರರಂಗದಲ್ಲಿದ್ದವರು ಕನ್ನಡ ಚಿತ್ರಕ್ಕೆ ಬಂದರು ಅಷ್ಟೇ.

'ಸಿಡಿದೆದ್ದ ಶಿವ' ಮೊದಲೇ ಬಿಡುಗಡೆಗೆ ಸಿದ್ಧವಾಗಿ ಪೋಸ್ಟರ್, ಪತ್ರಿಕಾ ಪ್ರಚಾರ ಮಾಡಿಯಾಗಿತ್ತು. ಆಗ ತೆರೆಗೆ ಬರಲಿಲ್ಲ. ಮತ್ತೆಂದೋ ಬಂದಾಗ ಪೋಸ್ಟರ್ಸ್ ಇತ್ಯಾದಿ ಇರಲಿಲ್ಲ. ಚಿತ್ರ ತೆರೆಕಂಡದ್ದು ತಿಳಿಯಲೇ ಇಲ್ಲ. ಹಲವು ಚಿತ್ರಗಳ ಬಿಡುಗಡೆಯ ಬಗ್ಗೆ ಇಂಥ ಕಾರಣಕ್ಕಾಗಿ ನಿಖರತೆಯೇ ಇಲ್ಲದ ಸ್ಥಿತಿಯೂ ಇದೆ.

'ಚಿನ್ನ' ರವಿಚಂದ್ರನ್ ನಿರ್ದೇಶಿಸಿ, ನಿರ್ಮಿಸಿದ ಚಿತ್ರ. ಚಿತ್ರದಲ್ಲಿ ಯಮುನಾ ನಾಯಕಿ. ಕಾಡುಗಳ್ಳನಾಗಿ ವಿಚಿತ್ರ ಪಾತ್ರವೊಂದರಲ್ಲಿ ಹೊರಗಿನ ನಟರೊಬ್ಬರು ಇದ್ದರು. ಕೆಲವು ಚಿತ್ರಿಕೆಗಳು ಸೊಗಸಾಗಿದ್ದವು. ಕಾಡಿನಲ್ಲಿ ಚಿತ್ರೀಕರಣ ನಡೆದಾಗ ಸಿಡಿಸಿದ ಬಾಂಬ್‌ನಿಂದಾಗಿ ಮುಖ್ಯವಾಗಿ ನೀರಿನಲ್ಲಿದ್ದ ಸಾಕಷ್ಟು ಮೀನುಗಳು ಸತ್ತು ಹೋದದ್ದು ವಿವಾದವಾಗಿ, ಮುಂದೆ ಕಾಡಿನಲ್ಲಿ ಚಿತ್ರೀಕರಿಸಲು ಅನುಮತಿಯನ್ನೇ ಕೊಡಬಾರದೆಂದು ಇಲಾಖೆ ತೀರ್ಮಾನ ತೆಗೆದುಕೊಳ್ಳುವ ಹಂತಕ್ಕೆ ಬಂದಿತು. ಈ ಚಿತ್ರಕ್ಕೆ ಹಂಸಲೇಖಾರ ಸಂಗೀತವಿತ್ತು. 'ನನ್ನವಳು ನನ್ನವಳು ಮುಟ್ಟಿದರೆ ನಲುಗುವಳು...' ಗೀತೆ ಜನಪ್ರಿಯವಾಯಿತು. ಎಂದಿನಂತೆ ರವಿಚಂದ್ರನ್ ಚಿತ್ರೀಕರಣದ ಜಾಣ್ಮೆ ಇತ್ತು. ಗೀತೆಯ ಸಾಲಿನಲ್ಲಿ 'ಮುಟ್ಟದೆಯೇ ಮುದ್ದಾಡಲೇ...' ಮಾತಿಗೆ ಕನ್ನಡಿಗಳನ್ನಿಡಿಸಿ ಆಕೆಯ ಪ್ರತಿಬಿಂಬಗಳನ್ನು ಪ್ರೇಮಿಸಿದಂತೆ ಚಿತ್ರಿಸಲಾಗಿತ್ತು. 'ಆಂಟಿ ಬಂದ್ಲು ಆಂಟಿ, ಆಂಟಿ ತುಂಬ ತುಂಟಿ...' ಗೀತೆಗೆ ಸಿಲ್ಕ್‌ಸ್ಮಿತಾ ಅಭಿನಯವಿತ್ತು. 'ಹಳ್ಳಿ ಮೇಷ್ಟ್ರು' ನಂತರ ಮತ್ತೆ ರವಿಚಂದ್ರನ್ ಚಿತ್ರದಲ್ಲಿ ಸಿಲ್ಕ್ ಸ್ಮಿತಾ ಅಭಿನಯಿಸಿದ್ದರು. ಆಕೆಯ ಪಾತ್ರ, ನೃತ್ಯಕ್ಕೆ ಆಕೆಗೇ ಹೊಂದುವಂಥ ಸಾಲುಗಳು ಆ ಗೀತೆಯಲ್ಲಿದ್ದವು. ರವಿಚಂದ್ರನ್‌ಗೆ ಚಿತ್ರದಿಂದ ಲಾಭವಂತೂ ಆಗಲಿಲ್ಲ.

ವಿಷ್ಣುವರ್ಧನ್, ಪ್ರಭಾಕರ್ ಅಭಿನಯಿಸಿ ಜೋ ಸೈಮನ್ ನಿರ್ದೇಶಿಸಿದ 'ಟೈಂ ಬಾಂಬ್', ಸಾಹಸಗಳ ಆಕರ್ಷಣೆಯಿಂದ ಚೆನ್ನಾಗಿ ಓಡಿತು. ಕೇಳಿದವರು ಸಂಕೋಚಪಡುವಂಥ ಅರ್ಥಹೀನ ಗೀತೆಗಳು ಚಿತ್ರಕ್ಕೆ ದೃಷ್ಟಿಬೊಟ್ಟಿನಂತೆ ನಿಂತವು.

ಸಾಹಸ-ರಾಜಕೀಯ ಚಿತ್ರಗಳಿಂದಲೇ ಹೆಸರಾಗಿದ್ದ ಶಿವಮಣಿ ಆ ಇಮೇಜನ್ನು ಬದಲಿಸಿ ತನ್ನ ಸಾಮರ್ಥ್ಯ ಬೇರೆಯೂ ಉಂಟು ಎಂಬಂತೆ ಪ್ರಣಯಪ್ರಧಾನ 'ಸ್ವಾತಿ' ಚಿತ್ರಿಸಿದರು. ಸುಧಾರಾಣಿ-ಶಶಿಕುಮಾರ್ ಅಭಿನಯವಿತ್ತು. ಪ್ರೀತಿ-ಪ್ರೇಮದ ನವಿರೂ ಗೊತ್ತು ಎಂದು ತೋರಿಸಲು ಕೊಂಚ ಹೆಚ್ಚಾಯಿತೆಂಬಷ್ಟು ಅಂಥ ದೃಶ್ಯಗಳನ್ನು ಸೇರಿಸಿದ್ದರು. ಉತ್ತರಾರ್ಧದ ಹೊತ್ತಿಗೆ ಮತ್ತೆ ಅವರ ಜಾಡಿಗೇ ಮರಳಿ ತೆರೆಯನ್ನು ರಕ್ತಮಯಗೊಳಿಸಿದರು. ಆದರೂ ಚಿತ್ರ ಯಶಸ್ವಿಯಾಗಲಿಲ್ಲ. ಚಿತ್ರಕ್ಕೆ ಸಂಗೀತ ನೀಡಿದವರು ಎಂ.ಎಂ.ಕೀರವಾಣಿ. 'ಕುಹು ಕುಹು ಹಾಡುವ ಕೋಗಿಲೆಯೇ...', 'ಪರದೆಯತ್ತಿ ಪನ್ನೀರ ಚೆಲ್ಲಿ...', 'ಪಂಜರದ ಓ ಗಿಳಿಯೇ...' ಮೊದಲಾದ ಹಾಡುಗಳು ಜನಪ್ರಿಯವಾದವು. ಚಿತ್ರದ ಮರೆಗುಳಿ ಪಾತ್ರವೊಂದರಲ್ಲಿ ಉಮಾಶ್ರೀ ಗಮನ ಸೆಳೆದರು. ಹಾಸ್ಯ ನಗೆಯುಕ್ಕಿಸುತ್ತಿತ್ತು.

ತರುಣ ಗುಲ್ಜಾರ್ ಖಾನ್ ನಿರ್ಮಿಸಿದ ಚಿತ್ರ 'ತನಿಖೆ'. ಅಭಿನಯಿಸುವ ಆಕಾಂಕ್ಷೆ ತೀರಿಸಿಕೊಂಡಿದ್ದರು ಆತ. ಚಿತ್ರದ ಪ್ರಚಾರವೇ ಒಂದು ಇತಿಹಾಸವಾಗುವಷ್ಟು ಸುದ್ದಿಯಾಯಿತು. ಯಾವ ಸಂಕೋಚ, ಕೀಳರಿಮೆಗಳೂ ಇಲ್ಲದೆ ತನ್ನನ್ನು ತಾನೇ ಪ್ರದರ್ಶಿಸಿಕೊಂಡರು ಖಾನ್. ಸುರಿಯಲು ಹಣವೂ ಇತ್ತು. ತನ್ನ ಚಿತ್ರಕ್ಕೆ ಬಾಲಸುಬ್ರಹ್ಮಣ್ಯಂ ಅವರು ಹಾಡಿದ್ದರೆ, ಅವರ ಧ್ವನಿಯನ್ನು ತೆಗೆದು ತಾನೇ ಟ್ರ್ಯಾಕ್‌ಗೆ ಹಾಡಿದರು. ಪದೇ ಪದೇ ಆತನ ಪ್ರಚಾರವನ್ನು ನೋಡಿ ಟೀಕಿಸುತ್ತಲೇ 'ಪ್ರೀತಿ'ಸತೊಡಗಿದ ಪ್ರೇಕ್ಷಕ. ಹೀಗಾಗಿ ಚಿತ್ರಮಂದಿರಕ್ಕೆ ಬರದೇ ಇದ್ದ ಜನ ಬರತೊಡಗಿದರು. ಅಲ್ಲಿಯವರೆಗೆ ಚಿತ್ರ ನಡೆಯುತ್ತಿರುವಂತೆ ನೋಡಿಕೊಂಡ ಸಾಹಸಿ ಈ ಖಾನ್. ಒಂದು ಹಂತದಲ್ಲಿ ಆತನ ಈ ಧೈರ್ಯವನ್ನು ಮೆಚ್ಚಿ ಮಾತನಾಡಿದರು ರಾಜಕುಮಾರ್. ಚಿತ್ರಮಂದಿರದ ಬಳಿ ರಾಜಕುಮಾರ್ ಅವರ ಭಾರೀ ಕಟೌಟ್ ಅನ್ನೇ ಇರಿಸಿಬಿಟ್ಟರು ಖಾನ್. ಮುಂದೆ ತಾವು ನಿರ್ಮಿಸಬೇಕೆಂದಿದ್ದ 'ಸಾರಥಿ' ಚಿತ್ರದ ಬಗ್ಗೆಯೂ ಬೇಕಾದಷ್ಟು ರಂಜನೀಯ ಹೇಳಿಕೆಗಳನ್ನು ಕೊಟ್ಟರು. ಅನಂತರ ವಿಚಿತ್ರ ವಿವಾದ, ಕೋರ್ಟು, ವ್ಯವಹಾರಗಳಿಗೆ ಈಡಾದರು.

ರವಿಚಂದ್ರನ್ ಅಭಿನಯದ ಚಿತ್ರವೊಂದನ್ನು ದ್ವಾರಕೀಶ್ ನಿರ್ದೇಶಿಸಿದರು. ಇದು ಎಲ್ಲರೂ ಕುತೂಹಲದಿಂದ ನಿರೀಕ್ಷಿಸುತ್ತಿದ್ದ ಸಂಗತಿ. ಪ್ರಾರಂಭದಲ್ಲಿ ರವಿಚಂದ್ರನ್ ಪ್ರತಿಭೆ, ಚಿತ್ರೀಕರಣದಲ್ಲಿ ತೊಡಗುವಿಕೆ, ದೃಶ್ಯ ಕಲ್ಪನೆಯ ವೈಶಿಷ್ಟ್ಯ ಎಲ್ಲವನ್ನೂ ಬಾಯಿತುಂಬ ಹೊಗಳಿದರು ದ್ವಾರಕೀಶ್. ಆದರೆ ಅದೇ ಬಹು ಕಾಲ ತಾಳಿಕೊಳ್ಳದಾದರು. ಅವರೊಳಗಿದ್ದ ನಿರ್ದೇಶಕ-ನಿರ್ಮಾಪಕನ 'ಅಹಂ' ಮತ್ತೆ ಸೆಟೆದು ನಿಂತಿತು. 'ರಂಗನ ಮುಂದೆ ಸಿಂಗನೆ' ಎಂತ ಸಿಡಿದೆದ್ದರು. 'ರಸಿಕ' ಚಿತ್ರ ಈ ವಿವಾದಗಳು, ಪೈಪೋಟಿಗಳ ಕಾರಣದಿಂದ ಒಂದು ಬಿಗಿಯಾದ ಬಂಧದಲ್ಲಿ, ಚೌಕಟ್ಟಿನಲ್ಲಿ ನಿಲ್ಲದೇ ಹೋಯಿತು. ಚಿತ್ರ ಸದ್ದು ಮಾಡಿದ್ದರಲ್ಲಿ ಕಾಲಂಶವೂ ಇಲ್ಲದೆ ಸೊರಗಿತು. ಮತ್ತೆಂದೂ ಇವರಿಬ್ಬರೂ ಸೇರುವುದೇ ಇಲ್ಲವೇನೋ ಎಂಬಂತೆ ರವಿಚಂದ್ರನ್-ದ್ವಾರಕೀಶ್‌ರ ವಾಗ್ವಾದವೂ ಆಗಿಹೋಯಿತು. ಚಿತ್ರದಲ್ಲಿ ಎಂದಿನಂತೆ ಕೆಲವು ಗೀತೆಗಳು, ಅವುಗಳ ಚಿತ್ರೀಕರಣ ಚೆನ್ನಾಗಿದ್ದವು. 'ಅಂಬರವೇರಿ ಅಂಬರವೇರಿ ಸೂರ್ಯನು ಬಂದಾನೋ...', 'ಯಪ್ಪೋ ಯಾಕೊ ಮೈಯಾಗ್ ಹುಸಾರಿಲ್ಲ ಟಿಶುಂ...' ಗೀತೆಗಳು ಜನಪ್ರಿಯವಾದವು. ಭಾನುಪ್ರಿಯಾರಂಥ ಅಪೂರ್ವ ಕಲಾವಿದೆ ಇದ್ದರು. ಆಕೆಗೂ ಈ ತಂಡ ಒಪ್ಪಾಗಲಿಲ್ಲ. ಪ್ರುತಿ, ದ್ವಾರಕೀಶ್ ಸಹ ಅಭಿನಯಿಸಿದ್ದರು.

ರಜಸ್ಸು ಸಂಸ್ಥೆಯ ರಾಜಶೇಖರ್ ಒಂದು ಘಟ್ಟದಲ್ಲಿ ಗಾಂಧಿನಗರದ ದೊರೆಯೇ ಆಗಿದ್ದರು. ಅಂಥ ಬೆಳಗುವ ದಿನಗಳಲ್ಲೇ ಅವರು ನಾಗಣ್ಣ ನಿರ್ದೇಶನದ 'ಸಾಮ್ರಾಟ್' ನಿರ್ಮಿಸಿದರು. ನಾಗಣ್ಣ ಬಗ್ಗೆ ವಿಷ್ಣುವರ್ಧನ್‌ಗೆ ಅಪಾರ ಆಸಕ್ತಿ, ಪ್ರೀತಿ. ಕಥೆ ಕೇಳಿ ಒಪ್ಪಿಗೆ ಕೊಟ್ಟರು. ಚಿತ್ರತಂಡ ಮುಂದೆ ವಿಷ್ಣು ಹೆಸರಿನ ಜೊತೆ 'ಸಾಹಸಸಿಂಹ'ನಲ್ಲ, 'ಸಾಮ್ರಾಟ್' ಸೇರಬೇಕು ಎಂಬಂಥ ಹೇಳಿಕೆ ಕೊಟ್ಟಿತು. 'ಸಾಮ್ರಾಟ್' ಚಿತ್ರದ ಕೆಲವು ದೃಶ್ಯಗಳು ನಿಜಕ್ಕೂ ಸೊಗಸಾಗಿದ್ದವು. ಸಾಹಸ ಪ್ರಧಾನವೂ ಆಗಿತ್ತು. ಮಾಮೂಲಿ ಜಾಡನ್ನು ಬಿಟ್ಟು ಅನಿರೀಕ್ಷಿತ ಹಾಗೂ ಖುಷಿ ಅನ್ನಿಸುವಂಥ ದೃಶ್ಯಗಳನ್ನು ಸಂಯೋಜಿಸಿದರು ನಾಗಣ್ಣ. ಚಿತ್ರದಲ್ಲಿ ನಾಯಕಿಯಾಗಿ ಸೌಮ್ಯ ಕುಲಕರ್ಣಿ ಇದ್ದರು. ಹಂಸಲೇಖ ಸಂಗೀತವಿತ್ತು. ಎಲ್ಲ ಪ್ರದೇಶದ ಭಾಷೆಯ ವೈರುಧ್ಯವನ್ನು ಹೇಳುವ ಒಂದು ಗೀತೆಯನ್ನು ಮಾಲ್ಗುಡಿ ಶುಭಾ ಹಾಡಿದ್ದರು. ಆ ಗೀತೆಯ ಚಿತ್ರೀಕರಣಕ್ಕೆ ವಿಶಿಷ್ಟ ವಸ್ತ್ರಾಲಂಕಾರದಲ್ಲಿ ವಿನಯಾ ಪ್ರಸಾದ್ ನೃತ್ಯ ನಿರ್ವಹಿಸಿದ್ದರು. ನಿರ್ಮಾಪಕರ ಉತ್ಸಾಹಕ್ಕೆ ಈ ಚಿತ್ರ ಭಂಗ ತರಲಿಲ್ಲ. ನಾಗಣ್ಣ ಅವರಿಗೆ ಉದ್ಯಮದಲ್ಲಿ ಒಂದು ಸ್ಥಾನ-ಅವಕಾಶಗಳು ಲಭಿಸಲು ನೆರವಾಯಿತು.

'ಮಹಾಕ್ಷತ್ರಿಯ' ಎಸ್.ವಿ.ರಾಜೇಂದ್ರಸಿಂಗ್ ಬಾಬು ನಿರ್ದೇಶನದಲ್ಲಿ ತೆರೆಗೆ ಬಂತು. ಚಿತ್ರವನ್ನು ನಿರ್ಮಿಸಿದವರು ಲಹರಿ ಸಂಸ್ಥೆಯವರು. ಚಿತ್ರದಲ್ಲಿ ವಿಷ್ಣು-ಸೋನುವಾಲಿಯಾ, ರಾಮ್ ಕುಮಾರ್-ಸುಧಾರಾಣಿ ಜೋಡಿ ಅಭಿನಯವಿತ್ತು. ಶಂಕರ್ ಅಶ್ವತ್ಥ್, ಬಿ.ಸಿ.ಪಾಟೀಲ್, ಪದ್ಮಾ ಕುಮುಟಾ, ಜಿ.ಕೆ.ಗೋವಿಂದರಾವ್ ಮೊದಲಾದವರು ಅಭಿನಯಿಸಿದರು. ಸೋನುವಾಲಿಯಾ ಉತ್ತರದಿಂದ ಬಂದು ಅಭಿನಯಿಸಿದ್ದರು. ಒಂದು ಅಪಹರಣದ ಸುತ್ತ ಹೆಣೆಯಲಾದ ಕಥೆ. ಕೆಲವು ಸೊಗಸಾದ ಚಿತ್ರಿಕೆಗಳಿದ್ದವು. ಡಿ.ವಿ.ರಾಜಾರಾಂ ಛಾಯಾಗ್ರಹಣದ ಮೆರುಗಿತ್ತು. ಹಂಸಲೇಖಾ ಸನ್ನಿವೇಶಕ್ಕೆ ಸೂಚ್ಯವಾಗುವಂಥ ಗೀತೆ ರಚಿಸಿ, ರಾಗ ಸಂಯೋಜಿಸಿದ್ದರು. ವಿಷ್ಣು ಅಭಿನಯದಲ್ಲಿ 'ಈ ಭೂಮಿ ಬಣ್ಣದ ಬುಗುರಿ ಆ ಶಿವನೇ ಚಾಟಿ ಕಣೋ....' ಗೀತೆ ಬಹಳಷ್ಟು ಕಾಲ ಜನಮನದಲ್ಲಿ ಗುಂಯ್‌ಗುಡುತ್ತಿತ್ತು. ಗುರುರಾಜ ಹೊಸಕೋಟೆ



(ಚಿತ್ರ ೫೭) 'ಮಹಾಕ್ಷತ್ರಿಯ' ಚಿತ್ರದಲ್ಲಿ ವಿಷ್ಣುವರ್ಧನ್, ರಾಮ್‌ಕುಮಾರ್, ಶಂಕರ್‌ಅಶ್ವತ್ಥ್ ಮತ್ತು ಸುಧಾರಾಣಿ

ಹಾಡಿದ್ದರು. ಇಂಥ ಮತ್ತಷ್ಟು ಗೀತೆಗಳು ಇದ್ದವು. ಎಲ್ಲ ಇದೆ, ಏನೋ ಸಾಲದು ಎಂಬಂತೆ ಚಿತ್ರ ಎಲ್ಲೋ ಪೇಲವವಾಯಿತು. ಯಶಸ್ವಿ ಅನ್ನಿಸಲಿಲ್ಲ. ಸೋಲು-ಗೆಲುವು ಏನೇ ಇರಲಿ, ನಿರ್ಮಾಪಕರು-ನಿರ್ದೇಶಕರ ನಡುವಣ ಬಾಂಧವ್ಯ ಕೂಡಾ ಹಾಗೇ ಉಳಿಯಲಿಲ್ಲ ಎಂಬುದು ವಿಷಾದದ ಸಂಗತಿ.

'ಮೇಘಮಾಲೆ' ಎಸ್.ನಾರಾಯಣ್ ನಿರ್ದೇಶನದಲ್ಲಿ ಬಂದ ಚಿತ್ರ. ಮಾಂಬಳ್ಳಿ ಪಾಪೇಗೌಡ ನಿರ್ಮಿಸಿದ್ದರು. ಅವರಾಗಲೇ ಸುನಾದ ಕ್ಯಾಸೆಟ್ ಸಂಸ್ಥೆ ಪ್ರಾರಂಭಿಸಿ ಹೆಸರಾಗಿದ್ದವರು. ತಮ್ಮ ಮಗನನ್ನು ಚಿತ್ರರಂಗಕ್ಕೆ ತರುವ ಅಪೇಕ್ಷೆಯಿಂದ ಚಿತ್ರ ನಿರ್ಮಿಸಿದರು. ಚಿತ್ರವನ್ನು ಎಸ್.ನಾರಾಯಣ್ ಬಹು ಶ್ರದ್ಧೆಯಿಂದಲೇ ಸಿದ್ಧ ಮಾಡಿದ್ದರು. ಅದ್ದೂರಿತನಕ್ಕೇ ಗಮನ ಹರಿಸಿದ್ದ ನಿರ್ದೇಶಕರು ಕಥೆಯ ಕಡೆ ಗಮನ ಕಳೆದುಕೊಂಡದ್ದೇ ಚಿತ್ರದ ಸೋಲಿಗೆ ಕಾರಣವಾಯಿತು. ಸುಭಾಷ್ ಕಡಕೋಳ್ ಬೆಂಡುಗಳಲ್ಲೇ ಲತಾಮಂಟಪ ಮುಂತಾದವುಗಳನ್ನು ನಿರ್ಮಿಸಿ ಅಮೃತ ಶಿಲೆಯ ಮೆರುಗು ಕೊಟ್ಟಿದ್ದರು. ಹಂಸಲೇಖ ಸಂಗೀತ ಹಿತವಾಗಿತ್ತು. ಹಾಡುಗಳು ಜನಮನ್ನಣೆ ಪಡೆದವು. ರಾಜಕುಮಾರ್ ಹಾಡಿದ 'ಮೇಘಮಾಲೆ ಮೇಘಮಾಲೆ....' ಶೀರ್ಷಿಕೆ ಗೀತೆಯೊಡನೆ 'ಇವಳು ಹೆತ್ತವಳು..' ಹಾಗೂ 'ಒಂದು ಹುಡುಗಿ ನೋಡ್ದೆ ಕಣೋ...' ಇಷ್ಟವಾದವು.

ಕಿಶೋರ್ ಸರ್ಜಾ ಧನರಾಜ್‌ಗಾಗಿ ನಿರ್ದೇಶಿಸಿದ ಚಿತ್ರ 'ಮಕ್ಕಳ ಸಾಕ್ಷಿ'. ಕೊಲೆಯೊಂದನ್ನು ಆಕಸ್ಮಾತ್ತಾಗಿ ನೋಡಿದ ಎಳೆಯರಿಬ್ಬರನ್ನು ಬೆನ್ನು ಹತ್ತಿದ ಹಂತಕರು, ಅವರಿಂದ ಪಾರಾಗುವ ಕಥೆಯೇ ಕೇಂದ್ರವಸ್ತು. ಬೇಬಿ ಶ್ಯಾಮಿಲಿ, ಮಾ। ಆನಂದ್ ಇಬ್ಬರದೂ ದೈತ್ಯ ಪ್ರತಿಭೆ. ಇಬ್ಬರನ್ನೂ ಜೊತೆ ಮಾಡಿ, ಅವರಿಂದ ಪ್ರೌಢವೆನಿಸುವ ಅಭಿನಯ ತೆಗೆಯಲಾಗಿದೆ. ಆಡುವ ಮಕ್ಕಳಿಂದ ಇಂಥ ಅಭಿನಯ ತೆಗೆಯಬೇಕಿತ್ತೇ ಎಂಬ ಆಕ್ಷೇಪ ಬಂತು. ಬೇಬಿ ಶ್ಯಾಮಿಲಿಯನ್ನು ಮಿನಿ ಮಾಲಾಶ್ರೀ ರೀತಿಯಲ್ಲಿ ಚಿತ್ರಿಸಿ, ಎಳೆಯರನ್ನು ಮರ ಸುತ್ತಿಸಿ, 'ಪಿಕ್‌ನಿಕ್ ಪಿಕ್‌ನಿಕ್ ಪಿಕ್‌ನಿಕ್ಕು ನಮ್ಮ ಪಿಕ್‌ನಿಕ್ಕು..' ಎಂದು ಹಾಡಿಸಿ ಎಷ್ಟು ಬೇಕೋ ಅಷ್ಟೂ 'ಅತಿ'ಗಳನ್ನು ಚಿತ್ರಿಸಿದಂತಿತ್ತು. ಹಂಸಲೇಖ ಸಂಗೀತ ಅಲ್ಲಲ್ಲಿ ಚೆನ್ನ. ಈ ಚಿತ್ರದಲ್ಲಿ ಶ್ರೀನಿವಾಸಮೂರ್ತಿ, ಶರತ್‌ಬಾಬು, ಮುಖ್ಯಮಂತ್ರಿ ಚಂದ್ರು ಅವರಲ್ಲದೆ ಪುನೀತ್ ಇಸ್ಸಾರ್ ಕೂಡಾ ಇದ್ದರು. ಡಾಲಿ ನಾಯಕಿ.

'ಲವ್ ೯೪' ಜಿ.ಕೆ.ಮುದ್ದುರಾಜ್ ನಿರ್ದೇಶನದ ಚಿತ್ರ. ಶಾಂತಮ್ಮ ಹಾಗೂ ಮಲ್ಲಿಗಮ್ಮ ನಿರ್ಮಿಸಿದ್ದರು. ವಿ.ಮನೋಹರ್ ಸಂಗೀತ ಲವಲವಿಕೆಯದಾಗಿತ್ತು. ಚಿತ್ರದಲ್ಲಿ ಅಭಿನಯ, ಸಂಘವಿ ನಾಯಕಿಯರು. ಹೊಸ ನಟ ಅಭಿಷೇಕ್ ಪ್ರವೇಶವಾಯಿತು. ಅತ ಅನಂತರ ಬೆಳ್ಳಿತೆರೆಯಲ್ಲಿ ಬೆಳಗಲಿಲ್ಲ. ಬಾಲಕೃಷ್ಣ, ಲೋಹಿತಾಶ್ವ, ಉಮಾಶ್ರೀ ಅವರಲ್ಲದೆ ಲಕ್ಷ್ಮೀ ಅವರೂ ಪಾತ್ರ ವಹಿಸಿದ್ದರು. ಡಾ। ಸುರೇಶ್‌ಶರ್ಮ ಒಂದು ಮುಖ್ಯ ಪಾತ್ರದಲ್ಲಿದ್ದರು.

'ಸಾಗರದೀಪ' ನಾಗಾಭರಣ ನಿರ್ದೇಶನದ ಚಿತ್ರ. ವೀರಪ್ಪ ಮೊಯ್ಲಿ ಮೊಗವೀರರ ಬಗ್ಗೆ ಬರೆದ ಕಾದಂಬರಿಯನ್ನು ಆಧರಿಸಲಾಗಿತ್ತು. ರಾಘವೇಂದ್ರ ರಾಜಕುಮಾರ್ ಅಭಿನಯಿಸಿದ್ದರು. ಬಹುತೇಕ ಕರಾವಳಿ ಪ್ರದೇಶದಲ್ಲಿ ಚಿತ್ರಿಸಲಾಗಿತ್ತು. ಉಪೇಂದ್ರಕುಮಾರ್ ಅವರ ಸಂಗೀತ ಉತ್ತಮವಾಗಿತ್ತು. ನಾಗಾಭರಣರಿಗೆ ಪಿ.ಶೇಷಾದ್ರಿ ಸಹನಿರ್ದೇಶಕರಾಗಿ ಕೆಲಸ ಮಾಡಿದರು. 'ಸಾಗರದೀಪ' ಚೆನ್ನಾಗಿ ಓಡಲಿಲ್ಲ. ಆದರೆ ಚಿತ್ರದಲ್ಲಿ ಗಮನ ಸೆಳೆಯುವಂಥ ಸನ್ನಿವೇಶಗಳನ್ನು ಹೊಂದಿಸಲಾಗಿತ್ತು. "...ಮೊಗವೀರರ ಬದುಕನ್ನು ಸರಿಯಾಗಿ ತರಲು ಆಗಲಿಲ್ಲ. ಅವರಿಗೆ ಮೀನು ದೋಣಿ ಪವಿತ್ರವಾದ್ದು. ಚಪ್ಪಲಿ ಹಾಕಿಕೊಂಡು ಹೋಗುವಂತಿಲ್ಲ. ರಾಘವೇಂದ್ರ ರಾಜಕುಮಾರ್ ಶೂ ಹಾಕಿಕೊಂಡು ಹೋದರು. ಬೇರೆ ದಾರಿ ಇಲ್ಲ, ಅಲ್ಲಿ ಫೈಟ್ಸ್ ಇತ್ತು. ಇಂಥ ಅನೇಕ ಅನಿವಾರ್ಯಗಳೂ ಇದ್ದವು" ಎನ್ನುತ್ತಾರೆ ಚಿತ್ರ ತಂಡದ ತಂತ್ರಜ್ಞರೊಬ್ಬರು.

ಕೋಡ್ಲು ರಾಮಕೃಷ್ಣ ಸರಳವಾದ ದೈನಂದಿನ ಬದುಕಿನಲ್ಲಿ ಸಾಧ್ಯ ಅನ್ನಿಸುವಂಥ ಕಥೆಗಳನ್ನೇ ಆಯ್ದುಕೊಳ್ಳುತ್ತಾರೆ. ಅಂಥ ಕಥೆ 'ಯಾರಿಗೂ ಹೇಳ್ಬೇಡಿ'. ಮಧ್ಯಮ ವರ್ಗದ, ಅದರಲ್ಲೂ ಕೆಳಮಧ್ಯಮ ವರ್ಗದ ಸಣ್ಣಪುಟ್ಟ ಆಸೆಗಳ ಸುತ್ತ ಹೆಣೆಯಲಾದ ಬಿಗಿಯಾದ ಚಿತ್ರಕಥೆ. ವಠಾರವೊಂದರಲ್ಲಿ ಇಂಥ ಹಲವು ಕುಟುಂಬಗಳಿವೆ. ಅವರಿಗೆ ಸ್ವಂತಮನೆ ಎಂಬುದು ಕನಸಲ್ಲೂ ಸಾಧ್ಯವಿಲ್ಲ. ಆದರೆ ದಲ್ಲಾಳಿಯ ಪ್ರವೇಶ ಕೆಲವು ತಿರುವು ಮುರುವುಗಳಿಗೆ ಕಾರಣವಾಗುತ್ತದೆ. ಅಂಥ ಪಾತ್ರದಲ್ಲಿ ಅನಂತ್‌ನಾಗ್ ಸೊಗಸಾಗಿ ಅಭಿನಯಿಸಿದ್ದಾರೆ. ಅವರ ಮುಖದಲ್ಲೇ ಸಹಜ ಹಾಸ್ಯ-ತುಂಟತನಗಳು ಅವರ ನೆರವಿಗೆ ಬಂದಿವೆ. ವಿನಯಾ ಪ್ರಸಾದ್ ಅಭಿನಯಿಸಿರುವ ಪಾತ್ರಕ್ಕೆ ಈ ದೂರದ ಸಂಬಂಧಿ 'ದಲ್ಲಾಳಿ'ಯ ಮಾತಿನಿಂದಾಗಿ ಸರ್ಕಾರ ಕೊಡುವ ಸೈಟಿನಲ್ಲಿ ಮನೆ ಮಾಡಿಕೊಳ್ಳುವ ಆಸೆ. ಅದರ ಮೂಲಕ ಇಡೀ ವಠಾರ ಇಂಥದರಲ್ಲಿ ಒಲವು ತೋರಿತು. ಪ್ರಾಯಃ ರಾಜ್ಯ ಸರ್ಕಾರದ ಕೆಲವು ಯೋಜನೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಇಂಥ ವಿಡಂಬನಾತ್ಮಕ ಕಥೆ ರಚಿಸಿಕೊಂಡಿರಬಹುದು. ಅನೇಕ ವಿವರಗಳು ಎಲ್ಲರ ಬದುಕಿನಲ್ಲೂ ಬಂದು ಹೋಗುವಂಥವೇ ಆದ್ದರಿಂದ ಆಪ್ತವಾಗುತ್ತವೆ. ಮನೆಯೂ ಆಯಿತು, ಗೃಹಪ್ರವೇಶದ ಹೊತ್ತಿಗೆ ಇನ್ನೊಬ್ಬ ವ್ಯಕ್ತಿ ಬಂದು "ಇದು ನನ್ನ ಜಾಗ, ಅಲ್ಲಿ ಕಟ್ಟಿದ್ದೀರಿ, ನನ್ನದೇ ಮನೆ" ಎಂದುಬಿಡುತ್ತಾನೆ. ಇಂಥ ಆಕಸ್ಮಿಕಗಳು ಮತ್ತು ಅವು ಸಹಜವಾಗಿಯೇ ಕಟ್ಟಿಕೊಳ್ಳುವುದರಿಂದಾಗಿ ಇಷ್ಟವಾಗುತ್ತವೆ. ಯಶಸ್ಸಿನ ಹಿಂದೆ ಇಂಥ ಜಾಣತನವೇ ಇದೆ. 'ಯಾರಿಗೂ ಹೇಳ್ಬೇಡಿ' ಚಿತ್ರಕ್ಕೆ ೧೯೯೪-೯೫ನೇ ಸಾಲಿನ ತೃತೀಯ ಅತ್ಯುತ್ತಮ ಚಿತ್ರ ಹಾಗೂ ಕುಣಿಗಲ್ ನಾಗಭೂಷಣ್ ಅವರಿಗೆ ಅತ್ಯುತ್ತಮ ಸಂಭಾಷಣಾಕರ್ತೃ ರಾಜ್ಯ ಪ್ರಶಸ್ತಿ ಲಭಿಸಿದೆ.



(ಚಿತ್ರ ೫೮) 'ಮಕ್ಕಳ ಸಾಕ್ಷಿ' ಚಿತ್ರದಲ್ಲಿ ಮಾ। ಆನಂದ್ ಮತ್ತು ಕೆ.ಎಸ್.ಅಶ್ವತ್ಥ್



(ಚಿತ್ರ ೫೯) 'ಸಾಗರದೀಪ' ಚಿತ್ರದಲ್ಲಿ ರಾಘವೇಂದ್ರರಾಜಕುಮಾರ್, ಗಿರಿಜಾ ಲೋಕೇಶ್, ಸುಪ್ರಿಯಾ, ಶ್ರೀನಾಥ್

ಶೀರ್ಷಿಕೆ ಬಳಸಿದ ವಿನ್ಯಾಸ, ಶೈಲಿ ಹಿಡಿಸಲಿಲ್ಲ ಎಂದು ಗೊಣಗಿದ್ದರು. ಪ್ರತಿಯೊಂದು ಹಂತದಲ್ಲೂ ಎಷ್ಟು ಎಚ್ಚರಿಕೆಯಿಂದ ಕಲಸ ಆಗಬೇಕಾಗುತ್ತದೆಂಬುದು ಇವರಿಂದ ಅರ್ಥವಾದೀತು.

ವಿಧವಾ ವಿವಾಹ ಸಮಸ್ಯೆಯನ್ನು ನಿರ್ದೇಶಕ ಕೆ.ವಿ.ಜಯರಾಂ 'ರಶ್ಮಿ' ಚಿತ್ರದಲ್ಲಿ ತಂದರು. 'ರಶ್ಮಿ' ಸಿನಿಮಾ ಒಂದು ನಾಟಕದಂತಿದೆ ಎಂದು ಟೀಕೆಗಳು ಬಂದವು. ಈ ಚಿತ್ರಕ್ಕಾಗಿ ಹಾಡಿದ ಛಾಯಾಗೆ ರಾಜ್ಯ ಪ್ರಶಸ್ತಿ ಬಂದಿತು. ಅದು 'ಇಬ್ಬನಿ ತಬ್ಬಿದ ಇಳೆಯಲಿ...' ಗೀತೆ.

ಟೆನ್ನಿಸ್ ಕೃಷ್ಣ ರಂಗಭೂಮಿಯ ಕಲಾವಿದ. ಬೀದಿ ನಾಟಕಗಳಲ್ಲಿ ಜನಪ್ರಿಯರಾಗಿದ್ದರು. ಚಿತ್ರರಂಗಕ್ಕೆ ಬಂದ ಮೇಲೆ ತಮ್ಮದೇ ಆದ ಮುಗ್ಧತೆ, ಪೆದ್ದುತನಗಳ ಶೈಲಿಯೊಂದನ್ನು ರೂಢಿಸಿಕೊಂಡರು. ಜೊತೆಗೆ ಅವರ ಕಂಠದಲ್ಲಿ ಹೊರಡುವ ವಿಚಿತ್ರ ಸ್ವರ - ಉದ್ದೇಶಪೂರ್ವಕವಾಗಿ ರೂಢಿಸಿಕೊಂಡದ್ದು - ಮಧುರವಲ್ಲದಿದ್ದರೂ ಅದರ ಪ್ರತ್ಯೇಕತೆಗಾಗಿಯೇ ಆಕರ್ಷಣೀಯವಾಗಿ ಹೋಯಿತು. ಅವರು ದೂರದರ್ಶನದಲ್ಲಿ ಪ್ರಸಾರವಾಗುತ್ತಿದ್ದ 'ಕಂಡಕ್ಟರ್ ಕರಿಯಪ್ಪ' ಧಾರಾವಾಹಿಯಿಂದ ಹೆಸರಾಗಿದ್ದರು. ನಗುನಗುತ್ತ ಬರಮಾಡಿಕೊಂಡಿತು ಜನತೆ. ಬಹಳ ಕಾಲ ಹಾಸ್ಯ ನಟರಾಗಿಯೇ ಇದ್ದ ಕೃಷ್ಣ ತಾವೇ 'ನಾಯಕ'ನಾಗಿ ನಟಿಸಿದ ಪೂರ್ಣಾವಧಿ ಚಿತ್ರ 'ಅಪ್ಪ ನಂಜಪ್ಪ ಮಗ ಗುಂಜಪ್ಪ'ವನ್ನು ಹೊರತರುವ ಸಂಕಲ್ಪ ಮಾಡಿದರು. ಅದಲ್ಲದೆ ಅವರು ಅಪ್ಪ-ಮಗ ಎರಡೂ ಪಾತ್ರದಲ್ಲಿ ಅಭಿನಯಿಸಿದ್ದು ಮತ್ತೊಂದು ವಿಶೇಷ. ಅಂಜಲಿ, ಅಭಿನಯ ಇವರ ನಾಯಕಿಯರು. ಬಾಬು ಶರ್ಮ ಸಂಗೀತವಿತ್ತು. ಎಲ್ಲವೂ ಹಾಸ್ಯಮಯ. ಕೊಂಚ ಹೆಚ್ಚು ಅನ್ನಿಸುವಷ್ಟು ಹಾಸ್ಯ. ಶಿವರಾಂ ಗಂಗಾಟ್ಕರ್ ಅವರ ನಿರ್ಮಾಣ, ನಿರ್ದೇಶನ ಇತ್ತು. ಎಷ್ಟೇ ಉತ್ತಮವಾದ ಅಭಿನಯವಿದ್ದರೂ ಪೂರ್ಣಾವಧಿ ಹಾಸ್ಯಚಿತ್ರಗಳು ಎಲ್ಲ ವರ್ಗದ ಪ್ರೇಕ್ಷಕರನ್ನೂ ತಲುಪುವುದಿಲ್ಲ. ಇನ್ನು ಎಡ-ಬಲಕ್ಕೆ ಇಂಬಾಗುವ ಖ್ಯಾತರು ಒಬ್ಬರೂ ಇಲ್ಲದ ಇಂಥ ಚಿತ್ರಗಳು ಜನರನ್ನು ತಲುಪುವುದು ಅಷ್ಟು ಸುಲಭವಲ್ಲ. ಅಂಥದೇ ವ್ಯಥೆಯ ಕಥೆ ಈ ಚಿತ್ರದ್ದು.

ರವಿಚಂದ್ರನ್ ಅಭಿನಯದ ಚಿತ್ರವನ್ನು ಸಾ.ರಾ.ಗೋವಿಂದು ನಿರ್ಮಿಸಿದರು. ಶಿವಮಣಿ ನಿರ್ದೇಶನವಿತ್ತು. ಕೆಲವು ಜಾಣ ತಿರುವು, ತೀರ್ಮಾನಗಳು ಇದ್ದುವಾದ್ದರಿಂದ ಚಿತ್ರವನ್ನು 'ಜಾಣ' ಎಂದು ಕರೆಯಲಾಗಿತ್ತು. ನಾಯಕನಿಗೆ ಶ್ರುತಿ, ಕಸ್ತೂರಿ, ಅಂಜನಾ ಮೂವರು ನಾಯಕಿಯರು. ಚಿತ್ರದ ಕೊನೆಯ ಭಾಗದಲ್ಲಿ ಚಲಿಸುತ್ತಿದ್ದ ವಾಹನದ ಟ್ಯಾಂಕ್‌ನಲ್ಲಿದ್ದ ಪೆಟ್ರೋಲ್‌ನಲ್ಲಿ ಬಿದ್ದು, ಎದ್ದು ಹೋರಾಡುವ ಚಿತ್ರಣ ಸಾಹಸ ಎಂದು ಅನ್ನಿಸಲಿಲ್ಲ. ಮಧುಸೂದನ್ ಕ್ಯಾಮರಾ ಎಂದಿನಂತೆ ವಿಜೃಂಭಿಸಿತ್ತು. ಜಿ. ಸುರೇಶ್

ಎಂ.ಎಸ್.ರಾಜಶೇಖರ್ ನಿರ್ದೇಶನದಲ್ಲಿ ಶಿವರಾಜ್ ಕುಮಾರ್ ಅಭಿನಯಿಸಿದ ಚಿತ್ರ 'ಮುತ್ತಣ್ಣ'. ಶೀರ್ಷಿಕೆಯಲ್ಲೇ ಆಕರ್ಷಿಸುವ ತಂತ್ರಕ್ಕೆ ಇದೂ ಹೊರತಲ್ಲ. ಶಿವರಾಜ್ ಕುಮಾರ್ ಚಿತ್ರಗಳ ಶೀರ್ಷಿಕೆಗಳಲ್ಲೆಲ್ಲ ಅವರ ತಂದೆಯ ಜನಪ್ರಿಯತೆಯನ್ನು ಬಳಸಿಕೊಳ್ಳುವ ತಂತ್ರವೂ ಇದೆ. ಅಂಥ ಹೆಸರುಗಳಿರುತ್ತವೆ ಚಿತ್ರಕ್ಕೆ (ಉದಾ : 'ಗಾಜನೂರ ಗಂಡು', 'ಅಣ್ಣಾವ್ರ ಮಕ್ಕಳು', 'ಮುತ್ತಣ್ಣ' ಇತ್ಯಾದಿ). ಈ ಚಿತ್ರದಲ್ಲಿ ಶಿವರಾಜ್ ಕುಮಾರ್‌ಗೆ ದ್ವಿಪಾತ್ರ. ಒಬ್ಬ ಹಳ್ಳಿಯವ, ಇನ್ನೊಬ್ಬ ಗಡುಸು ಮನುಷ್ಯ. ಈ ಚಿತ್ರಕ್ಕೂ ಹಿಂದಿ ಮೂಲ; ದ್ವಿಪಾತ್ರ. ಅಲ್ಲಿ ಮೂಡುವ ಹಾಸ್ಯ ಬಳಕೆಯಾದದ್ದು ನೂರಾರು ಬಾರಿಯೇ ಇರಬೇಕು. ಮೂಲಕಥೆ ಬಗ್ಗೆ ತಲೆ ಕೆಡಿಸಿಕೊಳ್ಳಬೇಕಿಲ್ಲ. ದ್ವಿಪಾತ್ರವಾದಾಗಲೆಲ್ಲ ಖಂಡಿತ ಗೆಲ್ಲುತ್ತದೆ ಎಂಬುದೊಂದು ನಂಬಿಕೆ. ಹಾಗಾಗದೇ ಹೋದರೆ ಆಶ್ಚರ್ಯ. ಒಂದು ಪಾತ್ರಕ್ಕೆ ಪದೇ ಪದೇ ಮೂಗು ತೀಡುವ ಮ್ಯಾನರಿಸಂ ಆದರೆ, ಇನ್ನೊಂದು ಹಳ್ಳಿಯ ಮುಗ್ಧ. ಟಿ.ಎನ್.ನರಸಿಂಹನ್ ಸಂಭಾಷಣೆ ಚೆನ್ನಾಗಿತ್ತು. 'ಮುತ್ತಣ್ಣ ಪೀಪಿ ಊದುವ ಮುತ್ತಣ್ಣ ಡೋಲು ಬಡಿಯುವ...' ಗೀತೆ ಉತ್ತಮವಾಗಿತ್ತು.

ರಂಗಭೂಮಿಯಿಂದ ಬಂದ ಉತ್ತರ ಕರ್ನಾಟಕದ ತರುಣ ಸುಧೀಂದ್ರ ಕಲ್ಲೋಳ್ ನಿರ್ದೇಶಿಸಿದ ಚಿತ್ರ 'ಪಂಜರದ ಗಿಳಿ'. ಪತ್ರಕರ್ತ ಸಿಂಹ ಹೆಮ್ಮಿಗೆ, ಉಪೇಂದ್ರ ಸಾಹಿತ್ಯ ನಿರ್ವಹಿಸಿದ್ದರು. ಹಾಸ್ಯಮಯ ಚಿತ್ರ. ಒಳ್ಳೆಯ ಕಥೆ, ಹೇಳುವ ರೀತಿಯೂ ಪರವಾಗಿಲ್ಲ. ಕಾಫಿ ರಾಘವೇಂದ್ರ ರಚಿಸಿದ್ದ ಗೀತೆಗಳು ಉತ್ತಮವಾಗಿದ್ದವು. ಸಂಬಂಧಿಯೊಬ್ಬರ ವಂಚನೆಯಿಂದ ಮುಂಬೈನ ವೇಶ್ಯಾವಾಟಿಕೆ ಸೇರುವ ನಾಯಕಿ ಶ್ರುತಿ ನಾಯಕನ ಸಹಾಯದಿಂದ ಅಲ್ಲಿಂದ ಪಾರಾಗಿ ಆತನನ್ನೇ ಮದುವೆಯಾಗುತ್ತಾಳೆ. ಶ್ರುತಿ ಪಾತ್ರ ಚಿತ್ರದಲ್ಲಿನ ದೌರ್ಬಲ್ಯಗಳನ್ನೆಲ್ಲ ಜೀರ್ಣಿಸಿಕೊಂಡು ಬೆಳೆದಿತ್ತು. ಲೋಕೇಶ್, ಅಶೋಕ್ ಬಾದರದಿನ್ನಿ ಅಭಿನಯ ಉತ್ತಮವಾಗಿತ್ತು. ನಿರ್ದೇಶಕ ಸುಧೀಂದ್ರ ಕಲ್ಲೋಳ್ ಕಥೆ ಹೇಳಲು ಕೊಂಚಮಟ್ಟಿಗೆ ಹೆಣಗಿದ್ದರು.

ಎಸ್.ನಾರಾಯಣ್ ನಿರ್ದೇಶನದ ಚಿತ್ರ 'ಕಾವೇರಿ ತೀರದಲ್ಲಿ'. ವಿಜಯಾನಂದ್ ಸಂಗೀತದಲ್ಲಿ ಲವಲವಿಕೆ ಇತ್ತು. 'ಕಾವೇರಿ ತೀರದಲಿ ಸಂಕ್ರಾಂತಿ ಸಂಜೆಯಲಿ ಪ್ರೇಮಾ...' ಎಂಬ ಗೀತೆ ಶ್ರಾವ್ಯವಾಗಿದ್ದು ಜನಪ್ರಿಯವೂ ಆಯಿತು. ರಘುವೀರ್-ಸಂಗೀತಾ ಅಭಿನಯಿಸಿದ್ದರು. ಪ್ರೇಕ್ಷಕರು ಎಲ್ಲವನ್ನೂ ಗಂಭೀರವಾಗಿ ತೆಗೆದುಕೊಳ್ಳುತ್ತಾರೆ. ಅನೇಕರು ಈ ಚಿತ್ರದ ಪ್ರಚಾರಕ್ಕೆ



(ಚಿತ್ರ ೬೦) 'ಯಾರಿಗೂ ಹೇಳ್ಬೇಡಿ' ಚಿತ್ರದಲ್ಲಿ ವಿನಯಾಪ್ರಸಾದ್, ಸತ್ಯಭಾಮಾ, ವೈಶಾಲಿ ಕಾಸರವಳ್ಳಿ, ಗಿರಿಜಾ ಲೋಕೇಶ್

ಚುರುಕಿನ ಮಾತುಗಳಿದ್ದವು. ಹಂಸಲೇಖ ಸಂಗೀತ ಮತ್ತೆ ಗೆದ್ದಿತ್ತು. 'ಪ್ರೇಮಲೋಕದಾ ಪಾರಿಜಾತವೇ...' ಗೀತೆಯ ಚಿತ್ರೀಕರಣಕ್ಕೆ ಬರೀ ಕಾರುಗಳನ್ನು ಬಳಸಲಾಗಿತ್ತು. ಶ್ರುತಿ ಅವರೊಂದಿಗೆ ನರ್ತಿಸುವ 'ಒನ್ ಟೈ ಟೂ ಮುತ್ತನು ತಿನ್ನುವ ಬಾರಾ...' ಗೀತೆಗೆ ಅನಿಮೇಷನ್ ತಂತ್ರ ಬಳಸಿ ಕೆಲವು ಚಿತ್ರಿಕೆ ತೆಗೆಯಲಾಗಿತ್ತು. 'ಪ್ರೇಮಾನೇ ನನ್ನ ಪ್ರಾಣ ಓ ಲೈಲಾ...' ಹಾಗೂ 'ಡುಂ ಡುಂ ಅಂತಿದೆ ಎದೆಯ ಡಂಗೂರಾ...' ಗೀತೆಗಳು ಜನಪ್ರಿಯವಾಗಿದ್ದವು. ಬಾಡಿಗೆ ಗೂಂಡಾಗಳು ಶ್ರೀಮಂತರ ಮಗಳನ್ನು ಅಪಹರಿಸಿ ಆಕೆಯನ್ನು ಕಾಡಿನ ಮನೆಯಲ್ಲಿಡುವುದು, ಬಹಳ ಶ್ರಮಪಟ್ಟು ಆ ಸ್ಥಳ ಹುಡುಕಿಬಂದ ಹುಡುಗ ಇತ್ಯಾದಿ ಕಥಾಭಾಗವಿತ್ತು. ಒಂದು ಚಿತ್ರಿಕೆಯಲ್ಲಿ ಆ ಶ್ರೀಮಂತ ಹುಡುಗಿ ಅರ್ಧ ರಾತ್ರಿಯಲ್ಲಿ ಕೊಳದಲ್ಲಿ ಈಜುವಾಗ ಒಳಗಿಳಿದ ಒಬ್ಬ ಗೂಂಡಾ ಆಳು ಆಕೆಯ ಮೇಲೆ ಅತ್ಯಾಚಾರವೆಸಗಲು ಬಂದುದನ್ನು ಗಮನಿಸಿದ ನಾಯಕ ತಾನೂ ನೀರಿಗಿಳಿದು ಹೋರಾಡಿ, ಬಿಡಿಸುವ ಚಿತ್ರಣವಿತ್ತು. ಅಂಥ ಕೆಲವು ಸನ್ನಿವೇಶಗಳನ್ನು ರವಿಚಂದ್ರನ್ ನಿರ್ವಹಿಸಿದ ರೀತಿ ಉತ್ತಮ. ಖಳನಾಗಿ ಆನಂದರಾಜ್ ಸೊಗಸಾಗಿ ಕಂಡರು.

'ಕಿಲಾಡಿಗಳು', ವಿಷ್ಣುವರ್ಧನ್-ದ್ವಾರಕೀಶ್ ಇಬ್ಬರೂ ದ್ವಿಪಾತ್ರದಲ್ಲಿದ್ದ ಚಿತ್ರ. ಅಕ್ಷಯ ಕೃಷ್ಣಮೂರ್ತಿ ನಿರ್ಮಾಣ. ರಾಜಕೋಟಿ ಸಂಗೀತ ನಿರ್ದೇಶನ. ಕೆಲವು ಹಾಡುಗಳು ಖುಷಿ ಕೊಟ್ಟವು. 'ಕರುನಾಡ ಕುವರಾ ಕಣೋ, ಮಲೆನಾಡ ಚೆಲುವಾ ಕಣೋ...', 'ಆಳುಕದೆ ಬಳುಕದೆ ಬನ್ನಿ ಮೇಡಂ...' ಗೀತೆಗಳು ಹಾಸ್ಯಸನ್ನಿವೇಶಕ್ಕೆ ಅಷ್ಟೇ ಚೆನ್ನಾಗಿ ಚಿತ್ರಿತವಾಗಿ ಮುದ ತಂದವು. 'ಲಯನ್ ಜಗಪತಿರಾವ್' ಚಿತ್ರದಲ್ಲಿ 'ಸ್ವಾಗತ ನಿನಗೇ ಸಂಭ್ರಮ ನಿಮಗೆ...' ಎಂಬ ಗೀತೆಯೊಂದಿತ್ತು. ಅದೇ ಧಾಟಿಯ 'ಈ ಆಟ ಕುಣಿದಾಟ..' ಗೀತೆಯನ್ನು ಇಲ್ಲಿಯೂ ಅಳವಡಿಸಲಾಗಿತ್ತು. ವಿಷ್ಣು-ದ್ವಾರಕೀಶ್ ಬಹಳ ದಿನದ ಮೇಲೆ ಒಂದಾದದ್ದು, ಎರಡನೇ ಚಿತ್ರ ನಿರ್ಮಾಣ ಮಾಡಿದ್ದು ಖುಷಿಯ ಸಂಗತಿ. ಏನೋ ಹೇಳಿಕೊಳ್ಳಬೇಕಿತ್ತು, ಅದನ್ನು ಹಾಡಿನಲ್ಲಿ ಹೇಳಿತ್ತು ಈ ಜೋಡಿ. 'ಕಾಲ ಮತ್ತೊಮ್ಮೆ ನಮಗಾಗಿ ಬಂತು. ನಮ್ಮ ಈ ಜೋಡಿ ಒಂದಾಗಲೆಂದೂ. ಕಷ್ಟ-ಸುಖವೋ ಸೋಲು-ಗೆಲುವೋ...' ಎಂಬ ಸಾಲುಗಳಲ್ಲಿ ಅವರದೇ ಕಥೆ-ವ್ಯಥೆಗಳಿದ್ದವು. ಚಿತ್ರದಲ್ಲಿ ಐದು ಹಾಡುಗಳಿದ್ದವು. ಅಷ್ಟು ಜನ ಗೀತರಚನಕಾರರೂ ಇದ್ದರು. ಎರಡು ಜೋಡಿಗಳಲ್ಲಿ ಕಳ್ಳತನ ಮಾಡೋ ಜೋಡಿ ಒಂದು, ಪೆದ್ದರಾದ ಶ್ರೀಮಂತ ಜೋಡಿಯೊಂದು ಇತ್ತು. ಇವು ಅದಲುಬದಲಾಗಿ ಪರುಪೇರನ್ನೆಲ್ಲ ಸಮಸಿ ಶಿಗೆ ತರುವ ಕಥೆ. ಆದರೆ ಆ ನಡುವಿನ ಹಾಸ್ಯದ್ದೇ ಸೊಗಸು. ಕಳ್ಳತನ ಮಾಡುವ ಜೋಡಿಯ ಹಾಸ್ಯವಂತೂ ಜಾಣತನ ತುಂಬಿದ ಹಾಸ್ಯ. ಉದಾಹರಣೆಗೆ ಬಸ್ ನಿಲ್ಲಿಸಿ ಊಟಕ್ಕೆ ಹೋದ ಡ್ರೈವರ್ ಕಂಡಕ್ಟರ್ ಜಾಗದಲ್ಲಿ ತಾವು ಆ ವೇಷದಲ್ಲಿ ಕೂತು ಎಲ್ಲ ಪ್ರದೇಶಕ್ಕೂ ಬಸ್ ಹೋಗುತ್ತದೆಂದು ಹೇಳುತ್ತಾ ಹಣ ಪಡೆದು ಟಿಕೆಟ್ ಕೊಡದ ಪರಾರಿಯಾಗುವ ಸನ್ನಿವೇಶ ನಗೆಯುಕ್ಕಿಸುತ್ತದೆ. ಪೊಲೀಸ್ ಪಾತ್ರದಲ್ಲಿ ರಮೇಶ್‌ಭಟ್ ಕೂಡಾ ಸೊಗಸಾಗಿ ಅಭಿನಯಿಸಿದರು. ದ್ವಾರಕೀಶ್ ಚಿತ್ರಗಳಲ್ಲಿ ಒಮ್ಮೊಮ್ಮೆ ಅತಿ ಎನಿಸಿದರೂ ಖುಷಿ ಕೊಡುವಂಥ ಹಾಸ್ಯವೂ ಇರುತ್ತದೆ.



(ಚಿತ್ರ ೬೧) 'ಪ್ರಜಾಶಕ್ತಿ' ಚಿತ್ರದಲ್ಲಿ ಶಶಿಕುಮಾರ್ ಮತ್ತು ಶ್ರೀಶಾಂತಿ

ಹ.ಸೂ.ರಾಜಶೇಖರ್ ಸದ್ದಿಲ್ಲದೆ ನಿರ್ದೇಶಕರಾದರು. ಅವರ ಅನುಭವ ಅವರಿಗೆ ಒಳ್ಳೆಯ ಚಿತ್ರನಾಟಕ ರಚಿಸುವ ಶಕ್ತಿಯನ್ನಂತೂ ಕೊಟ್ಟಿತು. ಅವರ ಜೊತೆಗೆ ನಾಟಕ, ಸಂಭಾಷಣೆ, ಬದುಕಿನ ಒಳ-ಹೊರ ನೋಟಗಳಿಗೆ ಕ್ಷ-ಕಿರಣ ಬೀರಿ ಹೆಕ್ಕಿ ತೆಗೆಯಬಲ್ಲ ಮಿತ್ರ ರಿಚರ್ಡ್ ಲೂಯಿಸ್ ಇದ್ದರು. ಇವರುಗಳ ಶ್ರದ್ಧೆಯ ಫಲವಾಗಿ 'ಕರ್ಫ್ಯೂ' ಸಿದ್ಧವಾಯಿತು. ಅದು ಭಿನ್ನ ಕಥೆ - ಚಿತ್ರ. ಅವರೆಗೆ ಅಂಥ ಪ್ರಯತ್ನ ಆಗಿರಲಿಲ್ಲ. ಯಾವುದೇ ಕಾರಣಕ್ಕೆ 'ಕರ್ಫ್ಯೂ' ಜಾರಿಯಲ್ಲಿದ್ದಾಗ ಜನ ಸಾಮಾನ್ಯರ ಸಂಕಷ್ಟಗಳೇನೆಂಥವು ಎಂಬ ವಾಸ್ತವ ಚಿತ್ರಣವಿತ್ತು. ಅಜ್ಜಿಯೊಂದು ಮೊಮ್ಮಗನನ್ನು ನೋಡಲು ಊರಿಗೆ ಬಂದಿದೆ. ರಸ್ತೆಗೆ ಬರಬೇಡ ಅಂದರೆ ಕೇಳುತ್ತಿಲ್ಲ. ಇನ್‌ಸ್ಪೆಕ್ಟರ್ ಪಾತ್ರದ ದೇವರಾಜ್ ಜೀಪಿನಲ್ಲಿ ಕೂರಿಸಿಕೊಂಡು ಅಜ್ಜಿಯ ಮನೆ-ಮೊಮ್ಮಗನನ್ನು ಹುಡುಕುತ್ತಾ ಹೊರಟರು. ದೂರದಲ್ಲಿ ಒಬ್ಬ ತರುಣ ಕಂಡ. ಅವನಿಗೆ ಬಾಳೆಹಣ್ಣು ಕೊಳ್ಳಬೇಕಿತ್ತು. ಆದರೆ ಜೀಪ್ ನೋಡಿ ಹೆದರಿ ಓಡತೊಡಗಿದ. ಕರ್ಫ್ಯೂ ಅಲ್ಲವೇ ? ಕಂಡಲ್ಲಿ ಗುಂಡಿಡಬಹುದು, ಗುಂಡಿಟ್ಟರು. ಆತ ಸತ್ತ. ಹೆಣವನ್ನು ಅದೇ ಜೀಪಿನಲ್ಲಿ ಹಾಕಿದರು. 'ಯಾವ ಪುಣ್ಯಾತಗಿತ್ತಿ ಹೆತ್ತ ಮಗನೋ ಹೀಗಾದನೇ' ಎಂಬ ಉದ್ಗಾರ ಅಜ್ಜಿಯದು. ಕುತೂಹಲಕ್ಕೆ ಮುಖದ ಮೇಲಿನ ಬಟ್ಟೆ ಸರಿಸಿದರೆ ತನ್ನ ಮೊಮ್ಮಗನೆ. ಅಜ್ಜಿಯ ಸಂಕಟ ಕೇಳಬೇಕೆ ? ಶಾಂತಮ್ಮನವರ ಅಭಿನಯ ನೋಡುಗನನ್ನು ಬಿಕ್ಕಿಬಿಕ್ಕಿ ಅಳುವಂತೆ ಮಾಡಿತ್ತು. ಇಂಥ ಗಟ್ಟಿಯಾದ ಹಲವಾರು ಸನ್ನಿವೇಶಗಳು ಚಿತ್ರದಲ್ಲಿ ಇದ್ದವು. ಅಷ್ಟೇ ಸೊಗಸಾಗಿ ಸಂಗೀತ ನೀಡಿದ್ದರು ಸಾಧುಕೋಕಿಲಾ. ಹಿನ್ನೆಲೆ ಸಂಗೀತ ದೃಶ್ಯಗಳಿಗೆ ದಟ್ಟವಾದ ಭಾವ ತುಂಬಿಕೊಡುತ್ತಿತ್ತು.

ಡಿ.ರಾಜೇಂದ್ರಬಾಬು ನಿರ್ದೇಶನದ 'ಪ್ರಜಾಶಕ್ತಿ' ಚಿತ್ರವನ್ನು ಚಿದಂಬರಶೆಟ್ಟಿ ನಿರ್ಮಿಸಿದರು. ರಾಮಕೃಷ್ಣ ಹೆಗಡೆ ರಾಜಕಾರಣಿಯಾಗಿ ಅಭಿನಯಿಸಿದ್ದರು. ಶಶಿಕುಮಾರ್, ಶ್ರೀಶಾಂತಿ, ತಾರಾ, ಶ್ರೀನಿವಾಸಮೂರ್ತಿ ಇದ್ದರು. ಈ ಚಿತ್ರದ ಬ್ಯಾನರ್‌ಗಳು, ಕಟೌಟ್‌ಗಳು ವಿಚಿತ್ರವಾಗಿದ್ದವು. ರಾಜಕಾರಣದ ಬಗ್ಗೆ, ರಾಜಕಾರಣಿಗಳ ಬಗ್ಗೆ ಶ್ರೀಸಾಮಾನ್ಯನಿಗಿರುವ ಜಿಗುಪ್ಸೆಯನ್ನೆಲ್ಲ ಆ ಚಿತ್ರಗಳು ಹೇಳುತ್ತಿದ್ದವು. ಜಿಲ್ಲಾಧಿಕಾರಿ ಪಾತ್ರದಲ್ಲಿ ವಿನಯಾ ಪ್ರಸಾದ್ ಗಮನ ಸೆಳೆದರು. ತಾರಾ ಪಾತ್ರ ಗಮನಾರ್ಹ.

"...ರಾಜಕಾರಣಿ ಅಧಿಕಾರಕ್ಕೆ ಬಂದಮೇಲೆ ಜನರ ಹತ್ತಿರ ಹೋಗುವುದಿಲ್ಲ. ಬಾಡಿಗಾರ್ಡ್ಸ್ ಮಧ್ಯೆ ಇರುತ್ತಾರೆ. ಅಧಿಕಾರ ಹೋದಮೇಲೆ 'ನಮಗೆ ಅಧಿಕಾರ ಇಲ್ಲ, ಏನೂ ಮಾಡೋಕಾಗಲ್ಲ' ಅಂತಾರೆ. ಆದರೆ ದೇಶದ ಜನರ ಕೆಲಸ ಮಾಡಬೇಕೂ ಅನ್ನುವ ಮನಸ್ಸಿದ್ರೆ ಇವೆಲ್ಲ ಮುಖ್ಯ ಅಲ್ಲ. ಅಂಥ ಒಂದು ಪಾತ್ರವನ್ನು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರಿಗಾಗಿಯೇ 'ಪ್ರಜಾಶಕ್ತಿ' ಚಿತ್ರದಲ್ಲಿ ಸೃಷ್ಟಿಸಿದ್ದು, ಅವರು ಅಭಿನಯಿಸಿದರು. ಆ ಪಾತ್ರ ಅವರ ಮೇಲೆ ತುಂಬಾ ಪರಿಣಾಮ ಬೀರಿದೆ ಅಂದಿದ್ದರು. ಸ್ವಾತಂತ್ರ್ಯ ಬಂತು, ಬಹುಮುಖ್ಯ ಅಂದುಕೊಂಡ ಕಾವಿ, ಖಾಕಿ, ಖಾದಿಗಳು ಭ್ರಷ್ಟಗೊಂಡವು, ವಿಜೃಂಭಿಸಿದವು. ಪ್ರತಿಯೊಬ್ಬ ಪ್ರಜೆಯ ಒಳಗೂ ಸಿಟ್ಟು ಭುಗಿಲೆದ್ದು ಉರೀತಿದೆ. ಇಷ್ಟೇ ಪ್ರಜಾಪ್ರಭುತ್ವದ ಅರ್ಥ ಅನ್ನುವುದಾದರೆ ಇದು ಬೇಡ, ಅಥವಾ ನಮಗೆ ಪ್ರಜಾಪ್ರಭುತ್ವ ಅಂದರೇನಂತ ಅರ್ಥ ಆಗಿಲ್ಲ ಅಂದುಕೊಳ್ಳಬಹುದು..." ಎನ್ನುತ್ತಾರೆ ನಿರ್ದೇಶಕ ಡಿ.ರಾಜೇಂದ್ರಬಾಬು.

ಭಾರ್ಗವ ಬಳಿ ಸಹಾಯಕರಾಗಿ ಬಹುಕಾಲ ಕೆಲಸ ಮಾಡಿದವರಲ್ಲಿ ಫಣಿ ರಾಮಚಂದ್ರ, ಸಿ.ಹೆಚ್.ಬಾಲಾಜಿಸಿಂಗ್ ಮುಖ್ಯರು. ಫಣಿ ರಾಮಚಂದ್ರ ಸ್ವತಂತ್ರ ನಿರ್ದೇಶಕರಾಗಿ ಬಹಳ ಕಾಲವಾಯಿತು. ಎರಡನೆಯದು ಬಾಲಾಜಿಸಿಂಗ್ ಸರದಿ. ಅವರು ಶಿವರಾಜ್ ಕುಮಾರ್ ಅಭಿನಯದ 'ಗಂಡುಗಲಿ' ಚಿತ್ರವನ್ನು ಸ್ವತಂತ್ರವಾಗಿ ನಿರ್ದೇಶಿಸಿದರು. ಈ ಚಿತ್ರವನ್ನು ಜೆ.ಜಿ.ಕೃಷ್ಣ, ಸಾಹಸಿಗ ಜಿ.ಗೋವಿಂದು, ಕ.ಸಿ.ಸುಬ್ರಹ್ಮಣ್ಯ ರಾಜು, ರಾಘವೇಂದ್ರ ನಿರ್ಮಿಸಿದ್ದರು. ಈ ಚಿತ್ರದಲ್ಲಿ ರಾಜೀವ್, ನಿರೋಷಾ, ರವಿಕಿರಣ್ ಅಭಿನಯ ಇತ್ತು. ಸೇಡಿನ ಕಥೆ. ಬಿಡುಗಡೆಗೂ ಮೊದಲೇ ಸಾಧುಕೋಕಿಲಾ ಸಂಗೀತದಲ್ಲಿ ಹಾಡುಗಳು ಯಶ ಸಾಧಿಸಿದ್ದವು. ಕೆಲವು ಕಡೆ ವೇಗದ ಸಂಭಾಷಣೆಯಲ್ಲಿ ಎಡವಿದರೂ ಹಾಸ್ಯ ದೃಶ್ಯಗಳು ಪ್ರೇಕ್ಷಕರನ್ನು ನಗಿಸುವಲ್ಲಿ ಯಶಸ್ವಿಯಾದವು. ಜೆ.ಜಿ.ಕೃಷ್ಣ ಛಾಯಾಗ್ರಹಣ, ಆರ್.ಜನಾರ್ದನ್ ಸಂಕಲನ ಚೆನ್ನಾಗಿತ್ತು. ಸಿನಿಮಾ ಜನಪ್ರಿಯವಾಗಲಿಲ್ಲ. ಆದರೆ ಸಂಗೀತದಲ್ಲಿ, ನೃತ್ಯದಲ್ಲಿ ವಿಶೇಷವಿತ್ತು. ಒಂದು ಬಗೆಯ ರ್‍ಯಾಪ್ ಮ್ಯೂಸಿಕ್ ಬಳಸಿದ್ದರು. ನೃತ್ಯವೂ ಮಿಶ್ರ ಶೈಲಿಯಲ್ಲೇ ಇತ್ತು. 'ಈ ಜೋಡಿ, ಬಾಡಿ, ಬಳ್ಳಿ ಹಾಗೆ ಬಾಗಿ ಬಳುಕಾಡಿ...' ಗೀತೆ ಈ ಮಿಶ್ರ ಸಂಗೀತದಿಂದಲೇ ಜನಪ್ರಿಯವಾಯಿತು. ಚಿತ್ರದ ಹಾಡಿನ ಧ್ವನಿಸುರುಳಿಗಳು

ಬಿಡುಗಡೆಯಾದಾಗ ತಮಿಳಿನ 'ಕಾದಲನ್' ಮೊದಲಾದ ಚಿತ್ರಗಳ ಸಂಗೀತದ ಭರಾಟೆ ಇತ್ತು. ಹಾಗೆಯೇ ಈ ಧ್ವನಿಸುರುಳಿಗಳೂ ಮಾರಾಟವಾದವು. ಎಲ್ಲೆಲ್ಲೂ ಅದೇ ಹಾಡುಗಳು ಕೇಳಿಬರುತ್ತಿದ್ದವು. ಅದೇ ನಿರೀಕ್ಷೆಯಲ್ಲಿ ಚಿತ್ರಮಂದಿರಕ್ಕೆ ಹೋದವರಿಗೆ ಎಂಥ ಹೂರಣವೂ ಸಿಗಲಿಲ್ಲ.

ಮಹಿಳಾ ಪ್ರೇಕ್ಷಕರನ್ನು ದೃಷ್ಟಿಯಲ್ಲಿಟ್ಟುಕೊಂಡು ದುರಂತಗಳ ಸರಮಾಲೆ ಪೋಣಿಸುತ್ತಾ ಕೆಲವು ನಿರ್ಮಾಪಕರು ಚಿತ್ರಗಳನ್ನು ತಯಾರಿಸುತ್ತಿದ್ದಾಗ, ಸಾಹಸವನ್ನು ವೈಭವೀಕರಿಸುವ ಚಿತ್ರಗಳ ಬಗ್ಗೆ ಕೆಲವರು ಆಸಕ್ತಿ ಬೆಳೆಸಿಕೊಂಡರು. ರಾಮು, ಥ್ರಿಲ್ಲರ್ ಮಂಜು, ನಂಜುಂಡಿ ನಾಗರಾಜ್ , ಪ್ರವೀಣ್ ಕುಮಾರ್ ಇಂಥವರಲ್ಲಿ ಮುಖ್ಯರು. ಇವರಿಗೆ ಲಗತ್ತಾಗಿ ಯುವನಿರ್ದೇಶಕರ ದಂಡು ಸೃಷ್ಟಿಯಾಯಿತು. ಶಿವಮಣಿ, ಓಂಪ್ರಕಾಶ್ ರಾವ್, ಆನಂದ್ ಪಿ.ರಾಜು, ಕೆ.ವಿ.ರಾಜು, ಹ.ಸೂ.ರಾಜಶೇಖರ್, ನಾಗಣ್ಣ, ಜಿ.ಕೆ.ಮುದ್ದುರಾಜ್, ಬಿ.ರಾಮಮೂರ್ತಿ ಹೊಸ ಪೀಳಿಗೆಯ ಸಾಹಸ ಚಿತ್ರಗಳ ನಿರ್ದೇಶಕರು. ೧೯೮೫ ರಿಂದ ಚಲಾವಣೆಯಲ್ಲಿದ್ದ ರಾಜಕೀಯ ಚಿತ್ರಗಳಿಗೆ ಇವರು ಸಾಹಸ ದೃಶ್ಯಗಳನ್ನು ಬೆರೆಸತೊಡಗಿದರು. ಚಿತ್ರಕಥೆಯಲ್ಲಿ ರಾಜಕಾರಣಿಗಳಿಗೆ ಕೊಟ್ಟಷ್ಟು ಮಹತ್ವವನ್ನೇ ಗೂಂಡಾಗಳಿಗೂ ಕೊಡುತ್ತಾ ಬಂದರು. ರೌಡಿ ಪಾತ್ರಗಳಿಗೆ ನಮ್ಮಲ್ಲಿ ವಿಚಿತ್ರ ಮುಖದ ನಟರ ಅಭಾವ ಇದೆಯೆನ್ನಿಸಿ ಅಂಥದೇ ಪಾತ್ರಗಳಲ್ಲಿ ತೆಲುಗು, ತಮಿಳು ಚಿತ್ರಗಳಲ್ಲಿ ಹೆಸರಾಗಿದ್ದ ಕಲಾವಿದರನ್ನು ಹೆಚ್ಚು ಸಂಭಾವನೆ ಕೊಟ್ಟು ಕರೆತಂದರು. ಇವರ ಹಿಂದೆ ಈ ಕಲಾವಿದರ ಕಾರಣದಿಂದ ಅವರ ಭಾಷೆಗಳಿಗೆ 'ಡಬ್' ಮಾಡಲು ಮಾರಾಟವಾಗುತ್ತದೆಂಬ ದೂರಾಲೋಚನೆಯೂ ಇರುತ್ತಿತ್ತು. ಈ ಅವಧಿಯ ಕನ್ನಡದ ಬಹುತೇಕ ಸಾಹಸ ಚಿತ್ರಗಳಲ್ಲಿ ಖಳ ಹಾಗೂ ನಾಯಕಿ ಪಾತ್ರಗಳಲ್ಲಿ ಪರಭಾಷೆಯವರೇ ತುಂಬಿಕೊಂಡಿದ್ದಾರೆ. ಇದರೊಂದಿಗೆ ಎಂಥ ಸಾಹಸ ದೃಶ್ಯಕ್ಕೆ ಹೆಚ್ಚು ಹಣ ಖರ್ಚು ಮಾಡಬಹುದು ಎಂಬ ಲೆಕ್ಕಾಚಾರದಿಂದಲೇ ಸಾಹಸದೃಶ್ಯಗಳ ಸಂಯೋಜನೆ ಮಾಡಲಾಗಿದೆ. ಥ್ರಿಲ್ಲರ್ ಮಂಜು ಈ ಬಗೆಯ ಚಿತ್ರಗಳಲ್ಲಿ ಸಾಹಸವನ್ನು ಭಿನ್ನವಾಗಿ ಸಂಯೋಜಿಸಿ ಖ್ಯಾತರಾದರು. ಹಾಲಿವುಡ್ ಚಿತ್ರಗಳ ಪ್ರಭಾವವಷ್ಟೇ ಅಲ್ಲ, ಹಾಲಿವುಡ್ ಮಟ್ಟದ ಸಾಹಸ ದೃಶ್ಯಗಳನ್ನು ಸಂಯೋಜಿಸಿದ್ದೇವೆ ಎಂದು ಪ್ರಚಾರ ಮಾಡಿಕೊಳ್ಳುವುದರಲ್ಲೂ ನಮ್ಮವರು ಹಿಂದೆ ಬೀಳಲಿಲ್ಲ. ಕೆ.ವಿ.ರಾಜು ನಿರ್ದೇಶನದ 'ಯುದ್ಧಕಾಂಡ' ಚಿತ್ರದಲ್ಲಿ ಸಾಹಸ ದೃಶ್ಯಗಳು ನಡೆಯುತ್ತಿರುವಾಗಲೇ ಮಧ್ಯದಲ್ಲಿ ವಿಶೇಷ ಸ್ಪೆಷಲ್ ಎಫೆಕ್ಟ್ ಜೊತೆ ಸಾಹಸ ನಿರ್ದೇಶಿಸಿದವರು 'ರವಿಚಂದ್ರನ್' ಎಂದು ಪ್ರಚಾರ ಮಾಡಿದ್ದರು. ಪ್ರಚಾರದ ವೈಖರಿ ಈ ದಿನಗಳಲ್ಲಿ ದಾರಿ ತಪ್ಪಿ ನಡೆಯತೊಡಗಿತು. ಪತ್ರಿಕೆಗಳಲ್ಲಿ ಇಂಥದಕ್ಕೆ ವ್ಯಾಪಕ ಮಹತ್ವ, ಮಾನ್ಯತೆ ಸಿಗುತ್ತದೆಯೆಂದಾಗ ಅದರಲ್ಲಿ ತೊಡಗಿಕೊಂಡಿದ್ದವರ ಉತ್ಸಾಹ ನೂರ್ಮಡಿಸಿತು. ಎಚ್ಚರಿಸಬೇಕಾಗಿದ್ದವರು ಸುಮ್ಮನಾದರು. ಎಚ್ಚರದಿಂದಿರಬೇಕಾಗಿದ್ದವರು ನಾಗಾಲೋಟದಿಂದ ಮುನ್ನುಗ್ಗಿದರು. ಪರಿಣಾಮ ಭಯಾನಕವಾಗಿತ್ತು. ಯಾವುದೇ ಸಿದ್ಧತೆ, ಮುನ್ನೆಚ್ಚರಿಕೆ, ರಕ್ಷಣೆ, ಮುಂದಾಲೋಚನೆ ಇಲ್ಲದ ಬಾಂಬು, ಬಸ್ಸು, ಕಾರುಗಳೊಂದಿಗೆ ಈ ದಶಕದ ಯುವಪೀಳಿಗ ಆಟಕ್ಕೆ ತೊಡಗಿತು. ಅನಾಹುತಗಳು ಸಾಲುಗಟ್ಟಿಕೊಂಡು ಸಂಭವಿಸಿದವು. ಮೊದಲ ಬಾರಿಗೆ ಬೆಳಕಿಗೆ ಬಂದು ಹೆಚ್ಚು ಸುದ್ದಿ ಮಾಡಿದ ಪ್ರಕರಣ 'ಲಾಕಪ್ ಡೆತ್' ಚಿತ್ರೀಕರಣ ಸಂದರ್ಭದಲ್ಲಾಯಿತು. ಹಿಂದೆ ನಡೆದಿದ್ದ ಸಣ್ಣಪುಟ್ಟ ಆಕಸ್ಮಿಕಗಳನ್ನೆಲ್ಲ ಹಾಡುಹಗಲಲ್ಲೇ ನಡೆದ ಈ ಬೃಹತ್ ಘಟನೆ ಬಯಲಿಗೆ ಎಳೆದು ಹಾಕಿತು. ಅದು ನಡೆದದ್ದು ಹೀಗೆ :



(ಚಿತ್ರ ೬೨) 'ಲಾಕಪ್ ಡೆತ್' ಚಿತ್ರದಲ್ಲಿ ಸಾಯಿಕುಮಾರ್, ಜಯಚಿತ್ರ, ದೇವರಾಜ್ ಮತ್ತು ನಿರೋಷಾ

೧೯೯೪ರ ಫೆಬ್ರವರಿ ಕೊನೆಯ ವಾರದ ಒಂದು ದಿನ ಮಧ್ಯಾಹ್ನ ನಾಲ್ಕು ಗಂಟೆಯ ಸಮಯ. ಬೆಂಗಳೂರಿನ ಪ್ರತಿಷ್ಠಿತ ಮಹಾತ್ಮಗಾಂಧಿ ರಸ್ತೆಯ ಮಧ್ಯಭಾಗ. ಆಸ್ಪತ್ರೆಯಲ್ಲಿ ಬಂದಿಯಾಗಿರುವ ನಾಯಕ ದೇವರಾಜ್‌ನನ್ನು ಅವರ ಸ್ನೇಹಿತರು ಬಿಡಿಸಿಕೊಂಡು ತಪ್ಪಿಸಿಕೊಳ್ಳುವಾಗ ಪೊಲೀಸರು ಬೆನ್ನಟ್ಟುತ್ತಾರೆ. ಅವರಿಂದ ತಪ್ಪಿಸಿಕೊಂಡು ಧಾವಿಸುವಾಗ ರಸ್ತೆಯಲ್ಲಿ ಎರಡಂತಸ್ತಿನ ಬಸ್ಸು ಎದುರಾಗುತ್ತದೆ. ಬೆನ್ನಟ್ಟುತ್ತಿದ್ದ ಪೊಲೀಸರು ಇದನ್ನು ಹಾರುವ ಸನ್ನಿವೇಶ. ಕಷ್ಟಕರವಾದ ಈ ಸನ್ನಿವೇಶದಲ್ಲಿ ಶಿವಕುಮಾರ್, ರವಿ ಎಂಬ ಸಾಹಸಿಗರು ಭಾಗವಹಿಸಿದರು. ಎರಡು ಬೈಕ್‌ಗಳು 'ಸ್ಪ್ರಿಂಗ್ ಬ್ರಿಡ್ಜ್' ಹಾದು ೩೦ ಅಡಿ ಎತ್ತರದ ಬಸ್ ಮೇಲೆ ಹಾರಿದವು. ಅರೆಕ್ಷಣದಲ್ಲಿ ಆಯತಪ್ಪಿ ಅಷ್ಟು ಎತ್ತರದಿಂದ ಒಬ್ಬರ ಮೇಲೊಬ್ಬರು ರಸ್ತೆಯಲ್ಲಿ ಬಿದ್ದರು. ಬೀಳುವ ಹಂತದಲ್ಲಿ ಇಬ್ಬರೂ ಬೈಕ್‌ಗಳನ್ನು ಬಿಟ್ಟುಬಿಟ್ಟಿದ್ದರು. ರವಿಯವರಿಗೆ ಮೈಯೆಲ್ಲಾ ಗಾಯವಾಗಿ ಮಾನಸಿಕ ಸ್ಥಿಮಿತ ತಪ್ಪಿತು. ಶಿವಕುಮಾರ್ ಮೂಗಿಗೆ ಅಳ ಗಾಯವಾಗಿ ರಕ್ತ ಹರಿಯಿತು. ವಾಸ್ತವವಾಗಿ ಈ ಸಾಹಸದಲ್ಲಿ ಭಾಗವಹಿಸಬೇಕಾಗಿದ್ದುದು ಇನ್ನೊಬ್ಬ ಸಾಹಸ ನಿರ್ದೇಶಕ ಜಾಲಿ ಬಾಸ್ಟಿನ್. ಮೊದಲು ಇದನ್ನು ಕಾರಿನಲ್ಲಿ ಜಿಗಿಯುವಂತೆ ಯೋಜಿಸಲಾಗಿತ್ತು. ಅವರು ರಸ್ತೆ ಇಕ್ಕಟ್ಟೆಂದು ನಿರಾಕರಿಸಿದ್ದರಿಂದ ಬೈಕ್‌ಗಳನ್ನು ಆರಿಸಿಕೊಳ್ಳಲಾಗಿತ್ತು. ರಾಮು ನಿರ್ಮಿಸಿದ ಈ ಚಿತ್ರದ ಸಾಹಸ ದೃಶ್ಯವನ್ನು ಸಂಯೋಜಿಸಿದ್ದವರು ಥ್ರಿಲ್ಲರ್ ಮಂಜು. ಇಂಥ ಸರಣಿ ಸಾವು-ನೋವುಗಳೇ ಇವೆ. ಕನ್ನಡ ಚಿತ್ರರಂಗದಲ್ಲಿ ಆಗಿರುವಷ್ಟು ದುರಂತಗಳು ಬೇರೆಲ್ಲೂ ಇಲ್ಲ ಎಂಬ ಮಾತೂ ಇದೆ. (ನೋಡಿ : ಸಾಹಸ ಲೇಖನ)

ಬೆಳಕಿಗೆ ಬಂದ ಘಟನೆಗಳು ಕೆಲವೇ ಕೆಲವು. ಗೌಪ್ಯವಾಗಿಟ್ಟಿರುವಂಥವು ಪ್ರಾಯಶಃ ಹೆಚ್ಚಿನ ಸಂಖ್ಯೆಯಲ್ಲಿವೆ. ಕೇವಲ ನಾಲ್ಕು ವರ್ಷಗಳಷ್ಟು ಕಡಿಮೆ ಅಂತರದಲ್ಲಿ ನಡೆದಿರುವ ಘೋರ ದುರಂತಗಳ ಬಗ್ಗೆ ಉದ್ಯಮದವರು ಚಿಂತಿಸಲಿಲ್ಲ. ಯಾವುದೋ ಬಿರುಗಾಳಿಗೆ ಸಿಕ್ಕಂತ ವ್ಯಾವಹಾರಿಕ ಸೇತುವೆಯನ್ನಷ್ಟೇ ಹುಡುಕುತ್ತಾ ಪರದಾಡುತ್ತಿತ್ತು. ಇದೆಲ್ಲದರ ಒಟ್ಟು ಪರಿಣಾಮವೋ ಎಂಬಂತೆ ಚಿತ್ರಗಳಲ್ಲಿ ವೈವಿಧ್ಯ ಕಡಿಮೆಯಾಗುತ್ತಾ ಬಂತು. ಸೋಲುವ ಚಿತ್ರಗಳ ಸಂಖ್ಯೆ ದಿನೇ ದಿನೇ ಹೆಚ್ಚತೊಡಗಿತು. ೧೯೯೧ರ ನಂತರದ ದಿನಗಳಲ್ಲಿ, ಹೊಸ ನಿರ್ಮಾಪಕರಿಂದ ಹರಿದು ಬರುತ್ತಿದ್ದ ಹಣ ಎಲ್ಲರ ಕಣ್ಣೆಗೆ ಕಾಣುತ್ತಿದ್ದಂತೆಯೇ ಇಂಗಿ ಹೋಗುತ್ತಿತ್ತು. ನಾಲ್ಕೈದು ಮಂದಿ ನಿರ್ಮಾಪಕರನ್ನು ಹೊರತುಪಡಿಸಿದರೆ ಮಿಕ್ಕವರೆಲ್ಲ ಕೈಚೆಲ್ಲಿ ಕುಳಿತರು. ೫೦ರ ದಶಕದ ಸಮರ್ಥ ನಿರ್ಮಾಪಕರಾದ ಚಂದೂಲಾಲ್ ಜೈನ್, ಅಬ್ಬಾಯಿನಾಯ್ಡು, ಮಾಣಿಕ್‌ಚಂದ್, ದ್ವಾರಕೀಶ್, ಅಜಂತಾ ರಾಜು ಮುಂತಾದ ಹತ್ತಾರು ಮಂದಿ ನಿರ್ಮಾಣ ನಿಲ್ಲಿಸಿ ಕೈಚೆಲ್ಲಿ ಕುಳಿತರು. ಇವರ ಹಣವನ್ನು ಸದ್ವಿನಿಯೋಗಗೊಳಿಸುವಂತೆ ಚಿತ್ರಗಳನ್ನು ನಿರ್ದೇಶಿಸುತ್ತಿದ್ದ ವಿ.ಸೋಮಶೇಖರ್, ಭಾರ್ಗವ, ರೇಣುಕಾಶರ್ಮ, ವಿಜಯ್ ಬದಲಾಗಿದ್ದ ವಾತಾವರಣದ ಕಾರಣ ತಿಳಿದುಕೊಳ್ಳದೆ ಸರಣಿಸೋಲು ಅನುಭವಿಸತೊಡಗಿದರು. ಇಂಥ ಪರಿಸ್ಥಿತಿಯಲ್ಲಿ ಉದ್ಯಮ ಆತ್ಮಾವಲೋಕನ ಮಾಡಿಕೊಳ್ಳಬೇಕಿತ್ತು. ಅದಕ್ಕೆ ಯಾರೂ ಸಿದ್ಧರಿರಲಿಲ್ಲ. ಎಲ್ಲರೂ ಅವರವರದೇ ಸಮಸ್ಯೆಗಳಲ್ಲಿ ಮುಳುಗಿ ಹತಾಶರಾಗಿದ್ದರು.

ಕರ್ನಾಟಕ ಚಲನಚಿತ್ರ ಪತ್ರಕರ್ತರ ವೇದಿಕೆ ಉದ್ಯಮದ ಆತ್ಮಾವಲೋಕನ ಹಾಗೂ ಪುನಶ್ಚೇತನಕ್ಕಾಗಿ ಬೃಹತ್ ಕಾರ್ಯಕ್ರಮ ಹಮ್ಮಿಕೊಂಡಿತು. ೧೯೩೪ ರಲ್ಲಿ ತೆರೆಕಂಡ 'ಸತಿ ಸುಲೋಚನಾ' ಮೂಲಕ ವಾಕ್ಚಿತ್ರಕ್ಕೆ ೬೦ ವರ್ಷಗಳು ತುಂಬಿದ ನವಿನೆನಪಲ್ಲಿ ೧೯೯೩ರ ಏಪ್ರಿಲ್‌ನಿಂದ ೧೯೯೪ರ ಆಗಸ್ಟ್‌ವರೆಗೆ ಇಡೀ ವರ್ಷ ಪ್ರತಿ ತಿಂಗಳೂ ನಡೆದ ಕಾರ್ಯಕ್ರಮದ ವಿಶಿಷ್ಟ ರೀತಿಯ ಉದ್ಘಾಟನೆಯನ್ನು ಮುಖ್ಯಮಂತ್ರಿ ವೀರಪ್ಪ ಮೊಯ್ಲಿಯವರು ಮಾಡಿದರು. 'ಕನ್ನಡ ಚಿತ್ರರಂಗ-೬೦, ಸಾಧನೆಯ ಹಿನ್ನೋಟ' ಶೀರ್ಷಿಕೆಯಲ್ಲಿ ಹಿಂದಿನ ೬೦ ವರ್ಷಗಳ ಏಳುಬೀಳು, ಸಾಧನೆ, ಭವಿಷ್ಯದ ಚಿಂತನೆಗಳ ನಿರಂತರ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಸಂಘಟಿಸಲಾಗಿತ್ತು.



(ಚಿತ್ರ ೬೩) 'ಕನ್ನಡ ಚಲನಚಿತ್ರರಂಗ - ೬೦, ಸಾಧನೆಯ ಹಿನ್ನೋಟ' ಸಮಾರಂಭದ ಉದ್ಘಾಟನಾ ಸಮಾರಂಭ. ಜಿ.ವಿ.ಅಯ್ಯರ್, ಮುಖ್ಯಮಂತ್ರಿ ವೀರಪ್ಪ ಮೊಯಿಲಿ ಮತ್ತು ಕರ್ನಾಟಕ ಚಲನಚಿತ್ರ ಪತ್ರಕರ್ತರ ವೇದಿಕೆಯ ಅಧ್ಯಕ್ಷ ವಿ.ಎನ್.ಸುಬ್ಬರಾವ್

ಆರಂಭದ ದಶಕಗಳಲ್ಲಿ ದುಡಿದ ಹಿರಿಯರು ಸೇರಿದಂತೆ ಸಮಕಾಲೀನ ವಿವಿಧ ಪ್ರಕಾರಗಳ ಸುಮಾರು ೪೦ ಮಂದಿ ವಿದ್ವಾಂಸರು ವಿವಿಧ ವಿಷಯಗಳ ಮೇಲೆ ಚಿಂತನೆ ಮಂಡಿಸಿದರು. ಉದ್ಯಮ ಹಾಗೂ ಚಿತ್ರಜ್ಞರು ಎಲ್ಲ ಕಾರ್ಯಕ್ರಮಗಳಲ್ಲೂ ಭಾಗವಹಿಸಿದರು. ಚಿತ್ರಚಿಂತನೆಯ ಈ ವಾರ್ಷಿಕ ಅಭಿಯಾನವು ೧೯೯೪ರ ಆಗಸ್ಟ್ ೧೪ ರಂದು ಬೃಹತ್ ಪ್ರಮಾಣದ 'ಸಂಗೀತ ಸಂಭ್ರಮ' ಕಾರ್ಯಕ್ರಮದ ಮೂಲಕ ಚೌಡಯ್ಯ ಸ್ಮಾರಕ ಭವನದಲ್ಲಿ ಮುಕ್ತಾಯವಾಯಿತು. ಅಂದು ಹಿಂದಿ ಚಿತ್ರಜಗತ್ತಿನ ದಿಗ್ಗಜರಾದ ಮಜ್ರೂಹ್ ಸುಲ್ತಾನ್‌ಪುರಿ, ಗುಲ್ಜಾರ್ ಅವರೊಂದಿಗೆ ರಾಜಕುಮಾರ್ ಭಾಗವಹಿಸಿದ್ದರು. ೬೦ ವರ್ಷಗಳ ಕನ್ನಡ ಚಿತ್ರಚರಿತ್ರೆಯನ್ನು ಸಂಗೀತದ ಮೂಲಕ ನಿರೂಪಿಸುವ ವಿಶಿಷ್ಟ ಪ್ರಯೋಗ ಮಾಡಲಾಗಿತ್ತು. ವಿಚಾರ ಸಂಕಿರಣ, ವಸ್ತು ಪ್ರದರ್ಶನಗಳಾದವು. ನಾಡಿನ ಎಲ್ಲ ಗಾಯಕ, ಗಾಯಕಿಯರು, ಗೀತರಚನೆಕಾರರು, ಸಂಗೀತ ನಿರ್ದೇಶಕರು ಭಾಗವಹಿಸಿದ್ದರು.

ಕನ್ನಡ ವಾಕ್ಚಿತ್ರ ವಜ್ರಮಹೋತ್ಸವ ಆಚರಣೆಯ ಸಂಭ್ರಮ ಕೇವಲ ಸಂಭ್ರಮ ಮಾತ್ರವಾಗಿ ಉಳಿಯದಿದ್ದುದು ವಿಶೇಷ. ಏಕೆಂದರೆ ಈ ಮೂಲಕ ಆತ್ಮಾವಲೋಕನ ನಡೆದಿತ್ತು. ಆಗಬೇಕಿದ್ದುದು ನರಳುತ್ತಿದ್ದ ಉದ್ಯಮಕ್ಕೆ ತುರ್ತು ಚಿಕಿತ್ಸೆ; ಭವಿಷ್ಯದ ಭದ್ರ ಬುನಾದಿ. ಮುಖ್ಯಮಂತ್ರಿ ವೀರಪ್ಪ ಮೊಯ್ಲಿಯವರು ತಮ್ಮ ಆಶ್ವಾಸನೆಗೆ ತಕ್ಕ ರೀತಿಯಲ್ಲಿ ಸ್ಪಂದಿಸಿದರು. ಎರಡು ತಿಂಗಳ ಕಡಿಮೆ ಅವಧಿಯಲ್ಲಿ ಚಲನಚಿತ್ರ ಉನ್ನತಾಧಿಕಾರ ಸಮಿತಿಯನ್ನು ರಚಿಸಿದರು. ವಿ.ಎನ್.ಸುಬ್ಬರಾವ್ ಅಧ್ಯಕ್ಷತೆಯ ಈ ಸಮಿತಿಯಲ್ಲಿ ನಿರ್ಮಾಪಕರು, ವಿತರಕರು, ಪ್ರದರ್ಶಕರು - ಹೀಗೆ ವಲಯಗಳ ಪ್ರತಿನಿಧಿಗಳಿದ್ದರು. ಒಂದಿಬ್ಬರು ಕಾರ್ಯನಿಮಿತ್ತ ಭಾಗವಹಿಸಿರಲಿಲ್ಲ. ಪಾರ್ವತಮ್ಮ ರಾಜಕುಮಾರ್, ಕೆ.ವಿ.ಗುಪ್ತ, ಕುಪ್ಪುಸ್ವಾಮಿ ನಾಯ್ಡು, ಸುರೇಶ್ ಹೆಬ್ಳೀಕರ್, ಎಸ್.ವಿ.ರಾಜೇಂದ್ರಸಿಂಗ್ ಬಾಬು, ಆರ್.ಲಕ್ಷ್ಮಣ್, ಕೆ.ಎಸ್.ಎಲ್.ಸ್ವಾಮಿ (ರವೀ), ಟಿ.ಎಸ್.ನರಸಿಂಹನ್, ಟಿ.ಎಸ್.ನಾಗಾಭರಣ, ಭಾರತಿ ವಿಷ್ಣುವರ್ಧನ್, ಸಿ.ವಿ.ಎಲ್.ಶಾಸ್ತ್ರಿ, ಎಸ್.ಶಿವರಾಂ, ಎಂ.ಎನ್.ಬಸವರಾಜಯ್ಯ, ಚಂದ್ರಶೇಖರರಾಜು, ವಿ.ಎ.ಮುಧೋಳ್ಕರ್ ಅವರುಗಳನ್ನು ಕೋಆಪ್ಟ್ ಮಾಡಿಕೊಳ್ಳಲಾಯಿತು. ಅರವಿಂದ ಜನ್ನು ಅವರು ಸದಸ್ಯ ಕಾರ್ಯದರ್ಶಿಯಾಗಿದ್ದರು. ಕುಪ್ಪುಸ್ವಾಮಿ ನಾಯ್ಡು ಅವರು ಭಾಗವಹಿಸಲು ಸಾಧ್ಯವಿಲ್ಲವೆಂದಾಗ ಅವರ ಸ್ಥಾನಕ್ಕೆ ಆಹ್ವಾನಿಸಲಾದ ಬಸವರಾಜಯ್ಯನವರೂ ಅನಾರೋಗ್ಯ ಕಾರಣ ಭಾಗವಹಿಸಲು ಆಗಲಿಲ್ಲ. ಭಾರತಿ ವಿಷ್ಣುವರ್ಧನ್ ಅವರೂ ಭಾಗವಹಿಸಲಿಲ್ಲ. ಉಳಿದಂತೆ ಸದಸ್ಯರು ನೆರೆರಾಜ್ಯಗಳಲ್ಲಿ ಸಂಚರಿಸಿ, ಗಣ್ಯ ವ್ಯಕ್ತಿಗಳನ್ನು ಸಂದರ್ಶಿಸಿ ವರದಿ ಸಿದ್ಧಪಡಿಸಲು ನೆರವಾದರು.

ಉದ್ಯಮದ ಸಮಸ್ಯೆಗಳ ಸಮಗ್ರ ಅಧ್ಯಯನ ಮಾಡಿ, ಸಲಹೆ, ಪರಿಹಾರ ಸೂಚಿಸಿ ವರದಿ ಸಲ್ಲಿಸಲು ಸಮಿತಿಗೆ ಕೊಟ್ಟಿದ್ದು ಎರಡು ತಿಂಗಳ ಕಾಲಾವಕಾಶ. ಆದರೆ ಕೇರಳ, ತಮಿಳುನಾಡು, ಆಂಧ್ರ, ಮಹಾರಾಷ್ಟ್ರಗಳ ಚಿತ್ರೋದ್ಯಮವನ್ನು ತುಲನಾತ್ಮಕವಾಗಿ ಪರಾಮರ್ಶಿಸಿ, ಒಳನೋಟ ಕೊಡಲು ಈ ಅವಧಿ ಕಡಿಮೆಯಾಗಿತ್ತು. ಸಹಜವಾಗಿ ವರದಿ ಸಿದ್ಧಪಡಿಸಲು ಸಮಿತಿಗೆ ಎಂಟು ತಿಂಗಳ ಸಮಯ ಹಿಡಿಯಿತು. ಸಿದ್ಧವಾದ ವರದಿಯನ್ನು ಪತ್ರಕರ್ತರ ಸಮ್ಮುಖದಲ್ಲಿ ೧೯೯೫ರ ಮಾರ್ಚ್ ೧ ರಂದು ಮಂಗಳವಾರ ಬೆಳಿಗ್ಗೆ ಬಿಡುಗಡೆ ಮಾಡಲಾಯಿತು.ವರದಿ ಬಹುತೇಕ ಎಲ್ಲರ ಮೆಚ್ಚುಗೆಗಳಿಸಿತು. ಪ್ರಮುಖವಾಗಿ ಗಮನ ಸೆಳೆದದ್ದು ನಿರ್ಮಾಪಕರ ಕಷ್ಟವನ್ನು ಕಡಿಮೆ ಮಾಡಲು ಪ್ರದರ್ಶನ ವ್ಯವಸ್ಥೆ ಹಾಗೂ ತೆರಿಗೆ ವ್ಯವಸ್ಥೆಯಲ್ಲಿ ಅಳವಡಿಸಲು ಸಲಹೆ ಮಾಡಲಾಗಿದ್ದ 'ಸ್ಲ್ಯಾಬ್ ವ್ಯವಸ್ಥೆ'. ಇದರೊಂದಿಗೆ ವರದಿಯಲ್ಲಿ ಕನ್ನಡ ಚಿತ್ರರಂಗದ ೬೦ ವರ್ಷಗಳ ಅರ್ಥವ್ಯವಸ್ಥೆಯ ವಿಶ್ಲೇಷಣೆ, ಅಂಕಿ-ಅಂಶಗಳ ಸೋದಾಹರಣ ನಿರೂಪಣೆಯಿತ್ತು. ಕನ್ನಡ ಚಿತ್ರರಂಗದ ಸಾಧನೆ, ಹೆಗ್ಗಳಿಕೆ, ಸಮಸ್ಯೆಗಳನ್ನು ಹೇಳುತ್ತಲೇ ಸರ್ಕಾರ ಕಾಲಕಾಲಕ್ಕೆ ನಿರ್ವಹಿಸುತ್ತಾ ಬಂದ ಪಾತ್ರವನ್ನು ಮರುವಿಶ್ಲೇಷಣೆಗೊಳಪಡಿಸಲಾಗಿತ್ತು. ಸುಬ್ಬರಾವ್ ಸಮಿತಿಯ ವರದಿ ವಿಮರ್ಶಾತ್ಮಕ ಧೋರಣೆಯನ್ನು ಒಳಗೊಂಡಿದ್ದದ್ದು ಈ ಕೆಲವು ಅಂಶಗಳ ಮೂಲಕ ವಿದಿತವಾಗುತ್ತದೆ.

''ದಕ್ಷಿಣ ಭಾರತದಲ್ಲೇ ಅತಿ ಹೆಚ್ಚು ಎನಿಸಿದ ಶೇಕಡಾ ೧೧೦ ಮನರಂಜನಾ ತೆರಿಗೆಯಿಂದ ರಾಜ್ಯ ಸರ್ಕಾರವು ೧೨೦೦ ಚಿತ್ರಮಂದಿರಗಳಿಂದ ವರ್ಷಕ್ಕೆ ೫೦ ಕೋಟಿ ರೂಪಾಯಿ ಗಳಿಸುತ್ತಿದ್ದರೆ, ಆಂಧ್ರಪ್ರದೇಶದಲ್ಲಿ ೨೬೦೦ ಚಿತ್ರಮಂದಿರಗಳಿಂದ ೩೨ ಕೋಟಿ ರೂಪಾಯಿ ಹಾಗೂ ತಮಿಳುನಾಡಿನಲ್ಲಿ ೨೪೦೦ ಚಿತ್ರಮಂದಿರಗಳಿಂದ ೩೦ ಕೋಟಿಯನ್ನು ಗಳಿಸುತ್ತಿದೆ. ಕಳೆದ ಐದು ವರ್ಷಗಳಲ್ಲಿ ಆಂಧ್ರಪ್ರದೇಶ ಹಾಗೂ ತಮಿಳುನಾಡಿನಲ್ಲಿ ತಲಾ ೩೦೦ ಹೊಸ ಚಿತ್ರಮಂದಿರಗಳು ನಿರ್ಮಾಣವಾಗಿದ್ದರೆ ಕರ್ನಾಟಕದಲ್ಲಿ ಈಗಾಗಲೇ ಇರುವ ಚಿತ್ರಮಂದಿರಗಳ ಸಂಖ್ಯೆ ಇಳಿಮುಖವಾಗುತ್ತಿದೆ. ರಾಜ್ಯ ಪ್ರಶಸ್ತಿಗಳು, ಸಹಾಯಧನ ಯೋಜನೆ, ಚಲನಚಿತ್ರ ಕೈಗಾರಿಕಾಭಿವೃದ್ಧಿ ನಿಗಮ - ಮುಂತಾದ ಹಲವಾರು ಯೋಜನೆಗಳನ್ನು ಪ್ರಥಮವಾಗಿ ಕೈಗೊಂಡ ಹೆಗ್ಗಳಿಕೆ ಹೊಂದಿರುವ ಕರ್ನಾಟಕ ರಾಜ್ಯವು ಈಗ ಆ ವಿಷಯದಲ್ಲಿ ತನ್ನನ್ನು ಅನುಸರಿಸಿದ ರಾಜ್ಯಗಳಿಗಿಂತಲೂ ಹಿಂದಿದೆ.''

ಇಂಥ ಹೋಲಿಕೆ ಅಂಶಗಳನ್ನು ವಿವರಿಸಿದ್ದ ಮೌಲಿಕ ವರದಿಯಲ್ಲಿ 'ಸ್ಲ್ಯಾಬ್' ವ್ಯವಸ್ಥೆಯನ್ನು ಪ್ರಾಯೋಗಿಕವಾಗಿ ಎರಡು ವರ್ಷಗಳ ಅವಧಿಗೆ ಜಾರಿ ಮಾಡಲು ಸಲಹೆ ಮಾಡಲಾಗಿತ್ತು. ಇದರೊಂದಿಗೆ ಚಲನಚಿತ್ರ ಪ್ರಶಸ್ತಿಗಳೊಂದಿಗೆ ನೀಡುತ್ತಿರುವ ಹಣವನ್ನು ಹೆಚ್ಚಿಸುವುದು, ಸಹಾಯಧನವನ್ನು ನಾಲ್ಕಾರು ವರ್ಷಗಳ ಕಾಲ ಕಂತುಗಳಲ್ಲಿ ಕೊಡದೆ ೯೦ ದಿನಗಳ ಒಳಗೆ ನೀಡುವುದು, ಚಿತ್ರನಗರಿಯ ನಿರ್ಮಾಣಕ್ಕೆ ಹಂತಹಂತವಾಗಿ ಕ್ರಮ ಕೈಗೊಳ್ಳುವುದು, ಪುರಾತನ ಕಾಲದ ಸಿನೆಮಾಟೊಗ್ರಾಫಿ ಕಾಯಿದೆಯನ್ನು ಬದಲಾಯಿಸುವುದು, ಚಲನಚಿತ್ರಗಳ ಮೌಲ್ಯವರ್ಧನೆಗೆ ಪೂರಕವಾಗಿ ಕೆಲಸ ಮಾಡುವಂತ ಚಲನಚಿತ್ರ ಅಕಾಡೆಮಿಯನ್ನು ಸ್ಥಾಪಿಸುವುದು ಮುಂತಾದ ಉಪಯುಕ್ತ ಸಲಹೆಗಳಿದ್ದವು. ಇವನ್ನು ಪರಿಣಾಮಕಾರಿಯಾಗಿ ಜಾರಿ ಮಾಡಿದ್ದರೆ ಚಿತ್ರೋದ್ಯಮದ ಚಟುವಟಿಕೆಗಳಲ್ಲಿ ಗುಣಾತ್ಮಕ ಪ್ರಗತಿಯನ್ನು ಕಾಣಲು ಸಾಧ್ಯವಿತ್ತು. ಆರು ತಿಂಗಳನಂತರ ೧೯೯೫ರ ಅಕ್ಟೋಬರ್ ಮೊದಲ ವಾರದಲ್ಲಿ ಸರ್ಕಾರ ವರದಿಯ ಸುಮಾರು ೪೦ ಭಾಗವನ್ನು ಜಾರಿಗೆ ತಂದಿತು. ಇದರಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ಉಂಟುಮಾಡಲು ಶಕ್ತವಾಗಿದ್ದದ್ದು ಸ್ಲ್ಯಾಬ್ ವ್ಯವಸ್ಥೆಗೆ. ಆದರೆ ಈ ವ್ಯವಸೆ ಯಾರ ಕಲ್ಯಾಣವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ರೂಪಿಸಲಾಗಿತ್ತೋ ಅದು ಅವರನ್ನು ತಲುಪುವ ಮುಂಚೆಯೇ ಕಬಳಿಸಲು ಬೇರೆಯವರು ಹುನ್ನಾರಗಳನ್ನು ರೂಪಿಸಿಕೊಂಡರು. ಫಲವಿಲ್ಲದೆಯೇ 'ಫಲಾನುಭವಿ' ಎಂದು ಕರಸಿಕೊಂಡು ನಿರ್ಮಾಪಕರು ಕಂಗೆಟ್ಟರು. ಅಸಮಾಧಾನ, ಗೊಂದಲ, ಟೀಕೆ ಇತ್ಯಾದಿಗಳಿಂದ ದಿನಗಳು ಕಳೆಯತೊಡಗಿದವು. ಕೆಲವರು ನೋವನ್ನು ಹತ್ತಿಕ್ಕಲಾಗದೆ ಸರ್ಕಾರದ ಬಳಿ ಹಲವಾರು ಬಾರಿ ದೂರಿದರು. ಸರ್ಕಾರ 'ನೀವೇ ಬಯಸಿ ಪಡೆದ ವ್ಯವಸ್ಥೆ. ಸದ್ಯಕ್ಕೆ ಏನೂ ಮಾಡಲಾಗದು' ಎಂದು ಚಿತ್ರೋದ್ಯಮದ ಮೇಲೆಯೇ ಬೇಸರ ಮಾಡಿಕೊಳ್ಳುವ ಸ್ಥಿತಿಗೆ ತಲುಪಿತು. ಸರ್ಕಾರದ ಅಸಮಾಧಾನಕ್ಕೆ ಕಾರಣವಿತ್ತು. ಚಿತ್ರೋದ್ಯಮದಲ್ಲಿದ್ದ

ಕೆಟ್ಟ ಗುಂಪುಗಾರಿಕೆಯಿಂದಾಗಿ ಏನೇ ಒಳ್ಳೆಯದನ್ನು ಮಾಡಿದರೂ ಅದು ನಿರೀಕ್ಷಿಸಿದಂಥ ಪರಿಣಾಮ ಉಂಟುಮಾಡುವಲ್ಲಿ ವಿಫಲವಾಗುತ್ತಿತ್ತು.

೧೯೯೫ರ ಮಧ್ಯಭಾಗದವರೆಗೆ ತಮ್ಮ ಬೇಗುದಿಯನ್ನು ಅದುಮಿಟ್ಟುಕೊಂಡಿದ್ದ ನಿರ್ಮಾಪಕರು ೧೯೯೬ರ ಜನವರಿಯಲ್ಲಿ ಸಿಟೆದ್ದು ಕುಳಿತರು. ೧೯೮೨ರಲ್ಲಿ ಪ್ರದರ್ಶಕರ ವಿರುದ್ಧ ನಡೆದಿದ್ದ ಸಮರದ ೧೨ ವರ್ಷಗಳ ನಂತರ ಇನ್ನೊಂದು ಯುದ್ಧಕ್ಕೆ ರಣರಂಗ ಸಿದ್ಧವಾಗತೊಡಗಿತು. ಚುರುಕಾಗಿ ಕಾರ್ಯ ನಿರ್ವಹಿಸತೊಡಗಿದ ನಿರ್ಮಾಪಕರು ತಮ್ಮ ಪ್ರತಿಭಟನೆಗೆ ಕೊಟ್ಟಿರುವ ಕಾರಣಗಳಲ್ಲಿ ಸ್ಲ್ಯಾಬ್ ಫಲಾನುಭವಿಗಳ ಚಹರೆಗಳು ಇರುವುದರಿಂದ ಅವನ್ನು ಇಲ್ಲಿ ಪ್ರತ್ಯೇಕವಾಗಿ ಪಟ್ಟಿ ಮಾಡುತ್ತಿಲ್ಲ. ೧೯೯೬ರ ಜನವರಿ ೧೯ ರಂದು ನಡೆದ ಸಭೆಯಲ್ಲಿ 'ನಿರ್ಮಾಪಕರನ್ನು ಉಳಿಸಿ - ಕನ್ನಡ ಬೆಳೆಸಿ' ಘೋಷಣೆ ಹೊರಬಂತು. ಈ ಘೋಷಣೆಯ ಜೊತೆಗೆ ನಾಲ್ಕು ನಿರ್ಣಯಗಳು ಇದ್ದವು.

೧. ರಾಜ್ಯದಲ್ಲಿ ಕನ್ನಡೇತರ ಪ್ರದೇಶಗಳೆಂದು ಗುರುತಿಸಲಾದ ಸ್ಥಳಗಳಲ್ಲಿ ಅಲ್ಲಿನ ಚಿತ್ರಮಂದಿರಗಳು ವರ್ಷದ ಆರು ತಿಂಗಳು ಕಡ್ಡಾಯವಾಗಿ ಕನ್ನಡ ಚಿತ್ರಗಳನ್ನು ಪ್ರದರ್ಶಿಸಬೇಕು.

೨. ಸ್ಲ್ಯಾಬ್ ಜಾರಿಗೆ ಬಂದನಂತರ ಪ್ರದರ್ಶಕರು ಚಿತ್ರಮಂದಿರದ ಬಾಡಿಗೆಯನ್ನು ವಿಪರೀತ ಹೆಚ್ಚಿಸಿದ್ದಾರೆ. ಸ್ಲ್ಯಾಬ್ ಪದ್ಧತಿ ಬರುವ ಮುನ್ನ ಜಾರಿಯಲ್ಲಿ ಇದ್ದಂತೆ ಕೆಂಪೇಗೌಡ ರಸ್ತೆಯಲ್ಲಿ ಚಿತ್ರದ ಗಳಿಕೆಯ ಮೂರನೆಯ ಒಂದು ಭಾಗ ಹಾಗೂ ಉಳಿದೆಡೆ ಗಳಿಕೆಯ ಕಾಲು ಭಾಗ ಬಾಡಿಗೆಯಾಗಿರಬೇಕು - ಎನ್ನುವ ಸೂತ್ರವನ್ನು ಜಾರಿಗೆ ತರಬೇಕು.

೩. ಪ್ರೇಕ್ಷಕ ಕನ್ನಡ ಚಿತ್ರಗಳನ್ನು ನೋಡುವಂತಾಗಬೇಕಾದರೆ, ಚಿತ್ರಮಂದಿರದ ಪ್ರವೇಶದರ ಗರಿಷ್ಠ ೧೬-೧೮ ರೂಪಾಯಿ ನಿಗದಿಯಾಗಬೇಕು. ಇದು ಚಿತ್ರಮಂದಿರದ ಮಟ್ಟ, ಸೌಲಭ್ಯಗಳಿಗೆ ಅನುಸಾರವಾಗಿರಬೇಕು.

೪. ಕನ್ನಡೇತರ ಚಿತ್ರಗಳು ಅಲ್ಲಿಯ ರಾಜ್ಯದಲ್ಲಿ ಬಿಡುಗಡೆಯಾದ ೧೨ ವಾರಗಳ ನಂತರ ಕರ್ನಾಟಕದಲ್ಲಿ ಬಿಡುಗಡೆಯಾಗಬೇಕು (ಗ್ರಾಮಾಂತರ ಪ್ರದೇಶಗಳಲ್ಲಿ ೧೬ ವಾರಗಳ ನಂತರ). ಏಕಕಾಲಕ್ಕೆ ಅಲ್ಲೂ-ಇಲ್ಲೂ ಬಿಡುಗಡೆಗೆ ಅವಕಾಶವೇ ಇರಬಾರದು.

ಈ ನಿರ್ಣಯಗಳನ್ನು ಜಾರಿಗೆ ತರಲು ಫೆಬ್ರವರಿ ೧ರವರೆಗೆ ಗಡುವು ನೀಡಲಾಗಿತ್ತು. ಅಷ್ಟರಲ್ಲಿ ಬೇಡಿಕೆ ಈಡೇರದಿದ್ದರೆ ಹೋರಾಟದ ಸ್ವರೂಪ ನಿರ್ಧರಿಸಲು ನಿರ್ಮಾಪಕರು, ನಿರ್ದೇಶಕರು ಒಂದಾಗಿ ಕ್ರಿಯಾಸಮಿತಿ ರಚಿಸಿಕೊಂಡರು. ಇಷ್ಟೆಲ್ಲ ಬೆಳವಣಿಗೆಗಳು ನಡೆಯುತ್ತಿದ್ದರೂ ಪ್ರದರ್ಶಕರಿಂದ ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ಕಾರಣವೆಂದರೆ ಕಳೆದ ಒಂದು ವರ್ಷದಿಂದಲೂ ನಿರ್ಮಾಪಕರ ಸಂಘದ ಪ್ರತಿನಿಧಿಗಳು ಆಗಾಗ ಅಂಥ ಹೋರಾಟದ ಮಾತುಗಳನ್ನು ಆಡುತ್ತಲೇ ಇದ್ದರು. ಈ ನಡುವೆ ಪರಿಸ್ಥಿತಿಯು ಗಂಭೀರ ಸ್ವರೂಪಕ್ಕೆ ತಿರುಗಬಹುದೆಂದು ಊಹಿಸಿದ ವಾಣಿಜ್ಯ ಮಂಡಳಿ ಅಧ್ಯಕ್ಷ ಚಂದ್ರಶೇಖರ ರಾಜು ಅವರು ಬಿಕ್ಕಟ್ಟು ನಿವಾರಣೆಗೆ ಪ್ರಯತ್ನಿಸಿದರಾದರೂ ಪ್ರದರ್ಶಕರ ಮನವೊಲಿಸುವುದು ಅವರಿಗೆ ಸಾಧ್ಯವಾಗಲಿಲ್ಲ. ಈ ಹಿನ್ನೆಲೆಯಲ್ಲಿ ೧೯೯೬ರ ಫೆಬ್ರವರಿ ೨೩ ರಂದು ಬಂದ್ ನಡೆಯಿತು. ರಾಜಕುಮಾರ್ ಮೆರವಣಿಗೆ ನೇತೃತ್ವ ವಹಿಸಿದರು. ವಿಷ್ಣುವರ್ಧನ್, ರವಿಚಂದ್ರನ್, ಪ್ರಭಾಕರ್ ಆದಿಯಾಗಿ ಎಲ್ಲಾ ಕಲಾವಿದರು, ನಿರ್ಮಾಪಕರು, ನಿರ್ದೇಶಕರು ಹೋರಾಟಕ್ಕಿಳಿದರು.

ನಿರ್ಮಾಪಕರು ನೀಡಿದ ಪ್ರಕಟಣೆಯಲ್ಲಿ 'ಮೌನ ಮೆರವಣಿಗೆ' ಎಂದಿತ್ತು. ಕ್ರಿಯಾಸಮಿತಿಯ ಉದ್ದೇಶವೂ ಅದೇ ಆಗಿತ್ತು. ಆದರೆ ಮೆರವಣಿಗೆ ಆರಂಭವಾದಾಗ ಘೋಷಣೆಗಳ ಅಬ್ಬರ ಮೊದಲಾಯಿತು. ಪೊಲೀಸರು ಮೊದಲಿಗೆ ಕೆಂಪೇಗೌಡ ರಸ್ತೆಯಲ್ಲಿ ಮೆರವಣಿಗೆಗೆ ಅವಕಾಶ ನೀಡುವುದಿಲ್ಲ ಎಂದು ಹೇಳಿದ್ದರು. ರಾಜಕುಮಾರ್ ಭಾಗವಹಿಸುತ್ತಾರೆ ಎಂದಾಗ ನಿಯಮವನ್ನು ಸಡಿಲಿಸಿ ಅವಕಾಶ ಮಾಡಿಕೊಟ್ಟರು. ಮೈಸೂರು ಬ್ಯಾಂಕ್ ವೃತ್ತದಿಂದ ಹೊರಟ ಮೆರವಣಿಗೆ ಸಾಗರ್ ಚಿತ್ರಮಂದಿರದವರೆಗೆ ಮಾತ್ರ ಸಾಗಬೇಕು ಎಂದು ಪೊಲೀಸ್ ಮುಖ್ಯಸ್ಥರು ತಿಳಿಸಿದ್ದರು. ಆದರೆ ಮೆರವಣಿಗೆ ಕೈಲಾಸ್ ಚಿತ್ರಮಂದಿರದತನಕ ಸಾಗಿತು. ಎಲ್ಲಿಯೂ ಶಾಂತಿ ಕದಡುವಂತಹ ಘಟನೆಗಳು ನಡೆಯಲಿಲ್ಲ. ಮೆಜೆಸ್ಟಿಕ್ ಪ್ರದೇಶದ ಅಂಗಡಿಗಳು ಸ್ವಯಂಪ್ರೇರಣೆಯಿಂದ ಬಾಗಿಲುಗಳನ್ನು ಮುಚ್ಚಿದ್ದವು. ಚಿತ್ರಮಂದಿರಗಳಲ್ಲಿ ಬೆಳಗಿನ ಪ್ರದರ್ಶನ ರದ್ದಾಗಿತ್ತು. ಗೀತಾಂಜಲಿ, ಸಂಪಿಗೆ ಮುಂತಾದ ಕೆಲವು ಚಿತ್ರಮಂದಿರಗಳಲ್ಲಿ ಶೇಕಡಾ ೧೦೦ರ ತೆರಿಗೆ ವಿನಾಯ್ತಿ ಇರುವ ಚಿತ್ರಗಳನ್ನು ಪ್ರದರ್ಶಿಸಿದರು. ನವರಂಗ್, ಮೆಜೆಸ್ಟಿಕ್ ಚಿತ್ರಮಂದಿರಗಳು ಬಂದ್ ದಿನವೇ ಪ್ರವೇಶ ದರವನ್ನು ಕಡಿಮೆ ಮಾಡಿದ್ದವು. ಇಲ್ಲಿಯೇ ಸ್ಲ್ಯಾಬ್ ಪದ್ಧತಿಯ ಲಾಭಗಳನ್ನು ಪಡೆದುಕೊಳ್ಳಲು ಯೋಚಿಸುತ್ತಿದ್ದವರ ರೀತಿಗೊಂದು ಉದಾಹರಣೆ ಪ್ರಸ್ತಾಪಿಸಬಹುದು. ಪ್ರತಿಭಟನೆ ನಡೆದದ್ದು ಸೋಮವಾರ. ರವಿಚಂದ್ರನ್‌ರ 'ಸಿಪಾಯಿ' ನಂತರದ ಶುಕ್ರವಾರ ಬಿಡುಗಡೆಯಾಯಿತು. ಪ್ರವೇಶ ದರ ಜಾಸ್ತಿ ಎಂದು ಸ್ವತಃ ಪ್ರತಿಭಟನೆಯಲ್ಲಿ ಪಾಲ್ಗೊಂಡಿದ್ದ ರವಿಚಂದ್ರನ್ ಅವರೇ ಪ್ರವೇಶ ದರ ಕಡಿಮೆ ಎಂಬ ಕಾರಣಕ್ಕೆ ತಮ್ಮ 'ಸಿಪಾಯಿ' ಚಿತ್ರವನ್ನು ಕೆಲವು ಚಿತ್ರಮಂದಿರಗಳಿಗೆ ಪ್ರದರ್ಶನಕ್ಕೆ ಕೊಡಲಿಲ್ಲ. ಏಕೆಂದರೆ ಸ್ಲ್ಯಾಬ್‌ನಿಂದ ಆಗಬಹುದಾದ ಲಾಭವನ್ನು ಅವರು ನಿರೀಕ್ಷಿಸುತ್ತಿದ್ದರು. ಕೊನೆಗೆ ಸ್ಲ್ಯಾಬ್‌ನಿಂದಾಗಿ 'ಸಿಪಾಯಿ' ಸೋತ ಚಿತ್ರ ಎನಿಸಿಕೊಂಡಿದರೂ ಅದರ ಮೊದಲ ವಾರದ ಗಳಿಕೆ ೬೦ ಲಕ್ಷ ರೂಪಾಯಿ ಆಗಿತ್ತು. ಸಂತೋಷ್ ಚಿತ್ರಮಂದಿರವೊಂದರಲ್ಲೇ 'ಸಿಪಾಯಿ'ಗೆ ಆರು ಲಕ್ಷ ರೂಪಾಯಿ ಸಂಗ್ರಹವಾಯಿತು.

ಬಂದ್ ಅನ್ನು ಹಂತಹಂತವಾಗಿ ಇತರ ಜಿಲ್ಲಾಕೇಂದ್ರಗಳಿಗೂ ವಿಸ್ತರಿಸುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿತ್ತು. ಈ ಹಂತದಲ್ಲಿ ಮುಖ್ಯಮಂತ್ರಿ ದೇವೇಗೌಡರು ಮಧ್ಯೆ ಪ್ರವೇಶಿಸಿ ನೀಡಿದ ಆಶ್ವಾಸನೆಗಳ ಮೇರೆಗೆ ಯೋಜನೆಯನ್ನು ಮುಂದೂಡಲಾಯಿತು. ಇದೇ ಸಂದರ್ಭದಲ್ಲಿ ಕ್ರಿಯಾ ಸಮಿತಿ ಮುಂದಿಟ್ಟಿದ್ದ ನಾಲ್ಕು ಬೇಡಿಕೆಗಳನ್ನು ಪ್ರದರ್ಶಕರು ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ, ಅಸಮಾಧಾನದೊಂದಿಗೆ ಒಪ್ಪಿಕೊಂಡರು. ಉದ್ಯಮದ ಈ ಒಳಜಗಳ ನಡೆದಾಗ ಮುಖ್ಯಮಂತ್ರಿಗಳು ಮುಂದಿನ ವಾರ್ಷಿಕ ಆಯ-ವ್ಯಯದಲ್ಲಿ ಸರ್ಕಾರದ ಮೂಲಕ ಇನ್ನಷ್ಟು ಅನುಕೂಲಗಳನ್ನು ಕಲ್ಪಿಸುವುದಾಗಿ ನುಡಿದಿದ್ದರು. ಆದರೆ ಅದರ ಸ್ವರೂಪ ಏನೆಂದು ಯಾರಿಗೂ ಸ್ಪಷ್ಟವಿರಲಿಲ್ಲ. ೧೯೯೬ರ ಮಾರ್ಚ್ ಮೊದಲ ವಾರ ಆಯ-ವ್ಯಯವನ್ನು ಪ್ರಕಟಿಸಲಾಯಿತು. ಅದರಲ್ಲಿ ಎಲ್ಲಾ ಕನ್ನಡ ಚಿತ್ರಗಳಿಗೂ ಶೇಕಡಾ ೧೦೦ ರಷ್ಟು ತೆರಿಗೆ ವಿನಾಯ್ತಿಯನ್ನು ಘೋಷಿಸಲಾಗಿತ್ತು. ಆಶ್ಚರ್ಯವೆಂದರೆ ಉದ್ಯಮವೇ ಇದನ್ನು ನಿರೀಕ್ಷಿಸಿರಲಿಲ್ಲ. ಹೀಗಾಗಿ ಇದು ಉದ್ಯಮದ ಪಾಲಿಗೆ ಬಯಸದೇ ಬಂದ ಭಾಗ್ಯವಾಗಿತ್ತು. ಕನ್ನಡ ಚಿತ್ರಗಳಿಗೆ ಸಂಪೂರ್ಣವಾಗಿ ತೆರಿಗೆಯನ್ನು ಮನ್ನಾ ಮಾಡಿದ್ದ ಸರ್ಕಾರ ಅದರೊಂದಿಗೆ ಪ್ರದರ್ಶಕರಿಗೆ ಕೆಲವು ಸೂಚನೆಗಳನ್ನು ಆಜ್ಞೆಯ ಸ್ವರೂಪದಲ್ಲಿ ನೀಡಿತ್ತು. ''ಕನ್ನಡ ಚಿತ್ರಗಳಿಗೆ ಕೇಳಿದಾಕ್ಷಣ ಚಿತ್ರಮಂದಿರವನ್ನು ಕೊಡಬೇಕು. ಸ್ಲ್ಯಾಬ್ ಪದ್ಧತಿ ಜಾರಿಗೊಳಿಸುವ ಮುನ್ನ ಇದ್ದ ಬಾಡಿಗೆಯನ್ನೇ ಈಗಲೂ ಅಳವಡಿಸಿಕೊಳ್ಳಬೇಕು. ವರ್ಷದಲ್ಲಿ ಆರು ತಿಂಗಳ ಕಾಲ ಕನ್ನಡ ಚಿತ್ರಗಳನ್ನು ಕಡ್ಡಾಯವಾಗಿ ಪ್ರದರ್ಶಿಸಬೇಕು ಮತ್ತು ಪರಭಾಷಾ ಚಿತ್ರಗಳು ಆಯಾ ರಾಜ್ಯಗಳಲ್ಲಿ ಬಿಡುಗಡೆಯಾದ ಏಳು ವಾರಗಳ ನಂತರ ಕರ್ನಾಟಕದಲ್ಲಿ ಬಿಡುಗಡೆಯಾಗಬೇಕು.'' - ಸರ್ಕಾರದ ಈ ನಿರ್ಧಾರದಿಂದಾಗಿ ನಿರ್ಮಾಪಕರ ವಲಯದಲ್ಲಿ ಸಾಕಷ್ಟು ನೆಮ್ಮದಿ ಕಾಣಿಸಿಕೊಂಡಿತು. ಸರ್ಕಾರದ ನಿರ್ಧಾರದಿಂದ ಬೊಕ್ಕಸಕ್ಕೆ ೩೦ ಕೋಟಿ ರೂಪಾಯಿಗಳಷ್ಟು ನಷ್ಟವಾದರೂ ನಿರ್ಮಾಪಕರಿಗೆ ಒಂದು ಪ್ರದರ್ಶನದಲ್ಲಿಯೇ ೧೩೦೦ ರೂಪಾಯಿ ಉಳಿತಾಯವಾಗುತ್ತದೆ. ಅಂದರೆ ವಾರಕ್ಕೆ ಒಂದು ಚಿತ್ರಮಂದಿರದಲ್ಲಿಯೇ ೪೦,೦೦೦ ರೂಪಾಯಿಗಳಷ್ಟು ಉಳಿತಾಯವಾದಂತಾಯಿತು. ಏಕಕಾಲದಲ್ಲಿ ಹತ್ತಕ್ಕೂ ಹೆಚ್ಚು ಚಿತ್ರಮಂದಿರಗಳಲ್ಲಿ ಚಿತ್ರಗಳನ್ನು ಬಿಡುಗಡೆ ಮಾಡುವ ಪ್ರಮುಖ ನಿರ್ಮಾಪಕರಿಗೆ ವಾರಕ್ಕೆ ಒಂದು ಲಕ್ಷ ರೂಪಾಯಿ ಉಳಿತಾಯವಾಗುವ ವ್ಯವಸ್ಥೆ ಸೃಷ್ಟಿಯಾಯಿತು.

ಇದೇ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಚಿತ್ರ ಪ್ರದರ್ಶಕರ ಸಂಘದ ನಿಯೋಗವೊಂದು ಸಂಘದ ಅಧ್ಯಕ್ಷ ಅವಿನಾಶ್ ಪೋತದಾರ್ ನೇತೃತ್ವದಲ್ಲಿ ಮಾಜಿ ಸಚಿವರು ಹಾಗೂ ಬೆಳಗಾವಿಯ ಪ್ರಮುಖ ಪ್ರದರ್ಶಕರಾದ ಆರ್.ಟಿ.ಪೋತದಾರ್ ಅವರೊಂದಿಗೆ ಮುಖ್ಯಮಂತ್ರಿ ದೇವೇಗೌಡರನ್ನು ಭೇಟಿಯಾಗಿ ಚಿತ್ರಮಂದಿರಗಳಿಗೆ ಉದ್ಯಮದ ಸ್ಥಾನಮಾನ ನೀಡುವಂತೆ ವಿನಂತಿಸಿಕೊಂಡಿತು. ಉದ್ಯಮಗಳಿಗೆ ದೊರಕುವ ಸವಲತ್ತುಗಳೆಲ್ಲವೂ ಚಿತ್ರಮಂದಿರಗಳಿಗೆ ದೊರಕಿದರೆ ಪ್ರದರ್ಶಕರಿಗೆ ಆರ್ಥಿಕ ಹೊರೆ ಕಡಿಮೆಯಾಗುವುದಲ್ಲದೆ, ಸೌಲಭ್ಯಗಳನ್ನು ಉತ್ತಮಗೊಳಿಸಿಕೊಳ್ಳಬಹುದು ಎಂದು ವಿವರಿಸಿತು.

ಏಕಕಾಲದಲ್ಲಿ ಪರಭಾಷಾ ಚಿತ್ರಗಳ ಬಿಡುಗಡೆ ಕುರಿತಂತೆ ರಾಜ್ಯ ಸರ್ಕಾರ ತಳೆದ ನಿಲುವು ಆ ವಲಯದ ಹಂಚಿಕೆದಾರರು ಹಾಗೂ ಪ್ರದರ್ಶಕರಲ್ಲಿ ಸಹಜವಾಗಿ ಎಲ್ಲರೂ ನಿರೀಕ್ಷಿಸಿದಂತೆ ಅಸಮಾಧಾನವನ್ನು ಹುಟ್ಟುಹಾಕಿತು. ಸರ್ಕಾರದ ನೂತನ ನೀತಿಯು ಸೆಪ್ಟೆಂಬರ್ ಒಂದರಿಂದ ಜಾರಿಗೆ ಬರುವುದಿತ್ತು. ಇದರಿಂದ ಆತಂಕಗೊಂಡ ಫಿಲಂ ಫೆಡರೇಷನ್ ಆಫ್ ಇಂಡಿಯಾ ತನ್ನ ಕಾರ್ಯಕಾರಿ ಸಮಿತಿಯ ಸಭೆಯನ್ನು ಬೆಂಗಳೂರಿನಲ್ಲಿ ಕರೆದು ತನ್ನ ಅಸಮಾಧಾನ ವ್ಯಕ್ತಪಡಿಸಿತು. ಏಳು ವಾರಗಳ ಕಾಲ

ತಡೆಹಿಡಿದು, ಆರು ವಾರಗಳ ಕಡ್ಡಾಯ ಪ್ರದರ್ಶನ ವ್ಯವಸ್ಥೆ ಜಾರಿಗೆ ಬಂದರೆ ಹಿಂದಿ ಚಿತ್ರ ವಿತರಕರಿಗೆ ತುಂಬಾ ತೊಂದರೆಯಾಗುತ್ತದೆ. ಈಚಿನ ದಿನಗಳಲ್ಲಿ ಹೆಚ್ಚಿನ ಹಿಂದಿ ಚಿತ್ರಗಳು ವಿಫಲವಾಗುತ್ತಿರುವುದರಿಂದ ಸರ್ಕಾರ ತನ್ನ ನಿರ್ಧಾರವನ್ನು ಪುನರ್‌ವಿಮರ್ಶಿಸಬೇಕೆಂದು ಒತ್ತಾಯಿಸಿತು. ಈ ಒತ್ತಾಯಕ್ಕೆ ಸರ್ಕಾರ ಸ್ಪಂದಿಸಲಿಲ್ಲ. ಉದ್ಯಮ ಎಂದಿನಂತೆ ದಿನಗಳನ್ನು ನೂಕುತ್ತಾ ಸೆಪ್ಟೆಂಬರ್ ೧ರ ಗಡಿ ದಾಟಿತು. ಹಿಂದಿನಂತೆಯೇ ಹಿಂದಿ ಚಿತ್ರಗಳು ಏಕಕಾಲಕ್ಕೆ ಬಿಡುಗಡೆಯಾಗತೊಡಗಿದವು. ಆಗ ಚಲನಚಿತ್ರ ವಾಣಿಜ್ಯ ಮಂಡಳಿ ಹಳೆಯ ನಿರ್ಧಾರವನ್ನು ಪ್ರಸ್ತಾಪಿಸಿ, 'ಏಕಕಾಲದ ಬಿಡುಗಡೆ ಬೇಡ' ಎಂದು ಪತ್ರ ಬರೆದು ಸೂಚಿಸಿತು. ಆದರೆ ಸೂಚನೆಯನ್ನು ಪಾಲಿಸುವವರು ಯಾರೂ ಇರಲಿಲ್ಲ. ಶೇಕಡಾ ೧೦೦ರ ತೆರಿಗೆ ವಿನಾಯ್ತಿಯ ತೃಪ್ತಿಯಿಂದ ಇವರೂ ಅದನ್ನೇ ಬೊಟ್ಟು ಮಾಡಿ ತೋರಿಸುತ್ತಾ, ಅವರೂ ತಮ್ಮ ಎಂದಿನ ದಿನಚರಿಯಲ್ಲಿ ಮಗ್ನರಾಗಿದ್ದರು.

ಈ ಮಗ್ನತೆಗೆ ಮತ್ತೆ ಭಂಗ ಒದಗಿದ್ದು ರಾಜ್ಯ ಸರ್ಕಾರ ಮುಂದಿನ ವರ್ಷ ಅಂದರೆ ೧೯೯೭ರ ಮಾರ್ಚ್ ಮೊದಲ ವಾರ ಮಂಡಿಸಿದ ತನ್ನ ಆಯ-ವ್ಯಯದಲ್ಲಿ ಮನರಂಜನಾ ತೆರಿಗೆಯನ್ನು ಇನ್ನಷ್ಟು ಹೆಚ್ಚಿಸಿದಾಗ. ಚಲನಚಿತ್ರರಂಗಕ್ಕೆ ಸಂಬಂಧಪಟ್ಟಂತೆ ವಿತ್ತಮಂತ್ರಿಗಳ ಬಜೆಟ್ ಭಾಷಣದ ಒಂದು ಭಾಗ ಹೀಗಿತ್ತು: ''೨೭-೯-೧೯೯೪ ರಿಂದ ಚಲನಚಿತ್ರಮಂದಿರಗಳಿಗೆ ಸಂಬಂಧಪಟ್ಟಂತೆ ಜಾರಿಯಲ್ಲಿರುವ 'ಸ್ಲ್ಯಾಬ್ ಸಿಸ್ಟಂ' ಮೂಲಕ ತೆರಿಗೆ ಕಟ್ಟುವ ಪದ್ಧತಿಯಿಂದ ರಾಜ್ಯದ ಆದಾಯಕ್ಕೆ ನಷ್ಟವಾಗಿರುತ್ತದೆ. ಈ ಪದ್ಧತಿಯನ್ನು ಜಾರಿಗೆ ತರಲು ಆಧಾರವಾದ ಸುಬ್ಬರಾವ್ ಸಮಿತಿ ವರದಿ ಎರಡು ವರ್ಷದ ಅವಧಿ ಮುಗಿದನಂತರ ಹೊಂದಾಣಿಕೆ ಪದ್ಧತಿಯನ್ನು ಪುನರ್‌ವಿಮರ್ಶಿಸಲು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈಗಿರುವ ಪದ್ಧತಿಯನ್ನು ಪುನರ್‌ವಿಮರ್ಶಿಸಿ, ಮೊಹರು ಟಿಕೆಟ್ ಪದ್ಧತಿಯನ್ನು ಜಾರಿಗೊಳಿಸಿ, ಹೊಂದಾಣಿಕೆ ಪದ್ಧತಿಯನ್ನು ೫೦,೦೦೦ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಪ್ರದೇಶಗಳಲ್ಲಿ ಹಿಂತೆಗೆದುಕೊಳ್ಳಲು ಉದ್ದೇಶಿಸಿರುತ್ತೇನೆ. ಆದರೆ ಕನ್ನಡ, ಕೊಡವ, ಕೊಂಕಣಿ, ತುಳು ಭಾಷೆಯ ಚಿತ್ರಗಳಿಗೆ ಈಗ ಇರುವ ಶೇಕಡಾ ೧೦೦ ರಷ್ಟು ತೆರಿಗೆ ವಿನಾಯ್ತಿಯನ್ನು ೧೯೯೭-೯೮ರ ಸಾಲಿನಲ್ಲೂ ಸಹ ಮುಂದುವರಿಸಲು ಉದ್ದೇಶಿಸಿರುತ್ತೇನೆ. ಜನಸಂಖ್ಯೆ ೫೦,೦೦೦ಕ್ಕಿಂತ ಕಡಿಮೆ ಇರುವ ಪ್ರದೇಶಗಳಲ್ಲಿರುವ ಚಲನಚಿತ್ರಮಂದಿರಗಳು ಹೊಂದಾಣಿಕೆ ಪದ್ಧತಿಯ ಮೂಲಕವಾಗಲಿ ಅಥವಾ ಮೊಹರು ಪದ್ಧತಿಯ ಮೂಲಕವಾಗಲಿ ತೆರಿಗೆ ಕೊಡಲು ಅವಕಾಶವಿರುವುದು.''

ಬಜೆಟ್ ಮಂಡನೆಯ ಒಂದೆರಡು ವಾರ ಅದರಲ್ಲಿನ ತಮಗೆ ಸಂಬಂಧಿಸಿದ ಒಂದೆರಡು ಅಂಶಗಳ ಬಗ್ಗೆ ಯಾರೂ ತಲೆಕೆಡಿಸಿಕೊಂಡಿರಲಿಲ್ಲ. ಆದರೆ ಅದೇ ಮಾರ್ಚ್ ೨೯ ರಂದು ತೆರಿಗೆ ಅಧಿಕಾರಿಗಳು ಚಿತ್ರಮಂದಿರಗಳ ಮಾಲೀಕರಿಗೆ 'ಇನ್ನು ಮೇಲೆ ನೀವು ಶೇಕಡಾ ೧೧೦ ರಷ್ಟು ಮನರಂಜನಾ ತೆರಿಗೆ ಪಾವತಿಸಬೇಕು' ಎಂದು ತಿಳಿಸಿದಾಗ ಪರಭಾಷಾ ಚಿತ್ರಗಳ ಪ್ರದರ್ಶಕರು, ವಿತರಕರು ಬೆಚ್ಚಿಬಿದ್ದರು. ಇವರಲ್ಲಿ ಸಾಕಷ್ಟು ಅಸಮಾಧಾನ ಕಾಣಿಸಿಕೊಂಡಿತು. ಸರ್ಕಾರದ ನಿರ್ಧಾರವನ್ನು ಪ್ರದರ್ಶಕರು ಹಿಂದಿನ ವರ್ಷದಂತೆ 'ಫಿಲಂ ಫೆಡರೇಷನ್ ಆಫ್ ಇಂಡಿಯಾ' ಗಮನಕ್ಕೆ ತಂದರು. ಆಗ ಅವರು ಅರ್ಥಸಚಿವರಿಗೆ ಮಾಡಿದ ಫ್ಯಾಕ್ಸ್‌ನಲ್ಲಿ ಈ ವಿವರಣೆ ಇತ್ತು : ''ಯುರೋಪ್ ದೇಶದಲ್ಲಿ ಮನರಂಜನಾ ತೆರಿಗೆಯೇ ಇಲ್ಲ. ಪಾಶ್ಚಾತ್ಯ ಬಹುತೇಕ ದೇಶಗಳಲ್ಲಿ ಶೇಕಡಾ ೧೫ಕ್ಕಿಂತ ಹೆಚ್ಚಿಲ್ಲ. ಕರ್ನಾಟಕದಲ್ಲಿ ಈಗ ನೀವು ವಿಧಿಸಿರುವ ತೆರಿಗೆ ಜಗತ್ತಿನಲ್ಲೇ ಅತಿ ಹೆಚ್ಚು. ಕನ್ನಡ ಚಿತ್ರಗಳಿಗೆ ತೆರಿಗೆಯನ್ನು ಸಂಪೂರ್ಣವಾಗಿ ಮನ್ನಾ ಮಾಡಿರುವುದನ್ನು ನಾವು ಸ್ವಾಗತಿಸುತ್ತೇವೆ. ಆದರೆ ಕನ್ನಡೇತರ ಚಿತ್ರಗಳಿಗೆ ಈ ಮಟ್ಟದ ತೆರಿಗೆಯನ್ನು ಹೇರಬೇಡಿ. ಮಹಾರಾಷ್ಟ್ರದಲ್ಲಿ ಶೇಕಡಾ ೧೦೦ರಷ್ಟು ತೆರಿಗೆ ವಿಧಿಸಿದಾಗ ಪ್ರದರ್ಶಕರು, ವಿತರಕರು ಮುಷ್ಕರ ಹೂಡಿದರು. ಆಗ ಅದನ್ನು ೬೦ಕ್ಕೆ ಇಳಿಸಲಾಗಿತ್ತು.''

'ಫಿಲಂ ಫೆಡರೇಷನ್' ಸಂಸ್ಥೆಯ ವಾದದಲ್ಲಿ ಹುರುಳಿತ್ತು. ೧೯೬೯ ರಲ್ಲಿ ರಾಮಕೃಷ್ಣ ಹೆಗಡೆ ಅರ್ಥಸಚಿವರಾಗಿದ್ದಾಗ ಈ ಸೆಸ್ ಶೇಕಡಾ ೧೦ ರಂತೆ ಆರಂಭವಾಗಿತ್ತು. ಕ್ರಮೇಣ ೨೦, ೩೦ ಪರ್ಸೆಂಟ್ ಆಗುತ್ತಾಬಂದು ೧೯೯೭ರ ಮಾರ್ಚ್‌ನಲ್ಲಿ ೧೧೦ರ ಗಡಿ ಮುಟ್ಟಿತು. ಪರಭಾಷಾ ಚಿತ್ರಗಳಿಗೆ ವಿಧಿಸಿದ ಇಷ್ಟು ಪ್ರಮಾಣದ ತೆರಿಗೆಯಿಂದ ಆಗುವ ಹಣದ ಹಂಚಿಕೆಯ ಅಂಕಿ-ಅಂಶಗಳು ಹೀಗಿದ್ದವು. ತೆರಿಗೆ ಹೆಚ್ಚಳವಾಗುವ ಮುನ್ನ ಅಂದರೆ ಟಿಕೆಟ್ ಬೆಲೆ ೩೦ ರೂಪಾಯಿ ಇದ್ದಾಗ ಅವರ ಪಾಲು ಹೀಗೆ ವಿಭಾಗವಾಗುತ್ತಿತ್ತು. ಸ್ಲ್ಯಾಬ್ ತೆರಿಗೆ ೬.೫೦ ರೂ. (ಶೇ. ೨೧), ಚಿತ್ರಮಂದಿರದ ಪಾಲು ೯ ರೂ. (ಶೇ. ೩೦), ವಿತರಕರ ಪಾಲು ೧೪-೧೫ ರೂ. (ಶೇ. ೪೯).

ಶೇಕಡಾ ೧೧೦ರ ತೆರಿಗೆ ಬಂದರೆ ಹಂಚಿಕೆಯ ಪ್ರಮಾಣ ಹೀಗೆ ವಿಭಾಗವಾಗುತ್ತದೆ: ಸ್ಲ್ಯಾಬ್ ತೆರಿಗೆ ೧೬ ರೂಪಾಯಿ, ಪ್ರದರ್ಶಕರ ಪಾಲು ೯ ರೂಪಾಯಿ, ವಿತರಕರ ಪಾಲು ೫ ರೂಪಾಯಿ. ಸ್ಲ್ಯಾಬ್ ವ್ಯವಸ್ಥೆಯಲ್ಲಿ ಒಟ್ಟು ಗಳಿಕೆಯಲ್ಲಿ ಶೇಕಡಾ ೪೯ ರಷ್ಟು ಪಾಲನ್ನು ಪಡೆದುಕೊಳ್ಳುತ್ತಿದ್ದ ವಿತರಕರು ಸರ್ಕಾರದ ನಿರ್ಧಾರದಿಂದ ಶೇಕಡಾ ೧೫ಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಗಿತ್ತು. ಶೇಕಡಾ ೫೫ ರಷ್ಟು ಸರ್ಕಾರದ ಖಜಾನೆಗೆ ಸೇರುತ್ತಿತ್ತು. ಆದರೆ ಈ ಹಿಂದೆ ಸ್ಲ್ಯಾಬ್ ಪದ್ಧತಿ ಜಾರಿ ಮಾಡಿದಾಕ್ಷಣ ಪ್ರದರ್ಶಕರು ಇಚ್ಛಿಸಿದ್ದಂತೆ ಪ್ರವೇಶ ದರವನ್ನು ಏರಿಸಿದ್ದರು. ಈ ಬಾರಿ ಅವರು ಹಾಗೆ ಮಾಡಲಿಲ್ಲ. ಇದಕ್ಕೆ ಚಿತ್ರಮಂದಿರಕ್ಕೆ ಬರುತ್ತಿರುವ ಪ್ರೇಕ್ಷಕರ ಸಂಖ್ಯೆ ಇನ್ನಷ್ಟು ಕುಗ್ಗಬಹುದೆಂಬ ಭೀತಿಯೇ ಕಾರಣ.

ಸುಬ್ಬರಾವ್ ಸಮಿತಿ ಶ್ರಮಪಟ್ಟು ಸಲ್ಲಿಸಿದ್ದ ವರದಿ ಉದ್ಯಮದವರ ಕೈಯಿಂದಲೇ ವಿಷಪ್ರಾಶನಕ್ಕೊಳಗಾಗಿ, ಹೀಗೆ ಸಂಪೂರ್ಣ ಬದಲಾವಣೆಯನ್ನು ತರುವ ತನ್ನ ಶಕ್ತಿಯನ್ನು ಎರಡು ವರ್ಷಗಳಲ್ಲಿ ಕಳೆದುಕೊಂಡು ನಿಸ್ತೇಜವಾಯಿತು. ತಮಗಿರುವ ಮಾರುಕಟ್ಟೆಯ ವ್ಯಾಪ್ತಿ ತಿಳಿದುಕೊಳ್ಳದೆ ಮುಖ್ಯ ನಾಯಕನಟರು ತಮ್ಮ ಸಂಭಾವನೆಯನ್ನು ವಿಪರೀತವಾಗಿ ಹೆಚ್ಚಿಸಿಕೊಂಡದ್ದು, ಇವರನ್ನೇ ಕಾರ್ಮಿಕರು ಕೂಡ ಅನುಸರಿಸಿದ್ದು ವರದಿಯನ್ನು ಸಾವಿನಂಚಿಗೆ ತಂದು ನಿಲ್ಲಿಸಿತು.

ಈ ದಶಕದ ಕನ್ನಡ ಚಿತ್ರೋದ್ಯಮದ ಅರ್ಥವ್ಯವಸ್ಥೆಯಲ್ಲಿ ಪ್ರಮುಖವಾಗಿ ತೋರುವ ಈ ವಿದ್ಯಮಾನವನ್ನು ಬಿಟ್ಟರೆ ಉಳಿದಂತೆ ಚರಿತ್ರ ನಟ ಕೆ.ಎಸ್.ಅಶ್ವತ್ಥ್ ನಿವೃತ್ತಿ, ಸಂಗೀತ ಕಲಾವಿದರ ಸಂಘ ಸ್ಥಾಪನೆ ಹಾಗೂ ರಾಜಕುಮಾರ್ ಅವರ ಮೂರು ಯಶಸ್ವಿ ಚಿತ್ರಗಳ ಸಂಭ್ರಮವನ್ನು ಒಂದೇ ವೇದಿಕೆಯಲ್ಲಿ ಒಟ್ಟಿಗೇ ಆಚರಿಸಿದ್ದು ೧೯೯೪ರ ಮುಖ್ಯ ಘಟನೆಗಳು.

ಚಿತ್ರರಂಗಕ್ಕೆ ವಿದಾಯ ಹೇಳುವ ನಿರ್ಧಾರ ಮಾಡಿದ್ದರೂ ಅಭಿಮಾನಿಗಳ ಒತ್ತಾಯದಿಂದ ಮತ್ತೆ ಬಣ್ಣ ಹಚ್ಚಿಕೊಂಡು ರಾಜಕುಮಾರ್ ಅಭಿನಯಿಸಿದ 'ಜೀವನ ಚೈತ್ರ' ೩೬೫ ದಿನಗಳ ಪ್ರದರ್ಶನ ಕಂಡಿತು. ಅನಂತರದ 'ಆಕಸ್ಮಿಕ' ಎಂಟು ಚಿತ್ರಮಂದಿರಗಳಲ್ಲಿ ಶತದಿನ ಹಾಗೂ ಒಂದು ಚಿತ್ರಮಂದಿರದಲ್ಲಿ ರಜತ ವಾರ ಪ್ರದರ್ಶನವಾಯಿತು. 'ಒಡ ಹುಟ್ಟಿದವರು' ರಾಜ್ಯದ ೨೫ ಚಿತ್ರಮಂದಿರಗಳಲ್ಲಿ ಶತದಿನ ಹಾಗೂ ಎಂಟು ಚಿತ್ರಮಂದಿರಗಳಲ್ಲಿ ರಜತೋತ್ಸವ ಆಚರಿಸಿತು. ಈ ಮೂರು ಚಿತ್ರಗಳ ಸಡಗರವನ್ನು 'ತ್ರಿವಳಿ ಸಮಾರಂಭ' ಹೆಸರಿನಲ್ಲಿ ರಾಜ್ ಸಂಸ್ಥೆ ೧೯೯೪ರ ಆಗಸ್ಟ್ ೫ ರಂದು ಬೆಂಗಳೂರಿನ ಚೌಡಯ್ಯ ಸ್ಮಾರಕ ಭವನದಲ್ಲಿ ಆಚರಿಸಿತು.

ಧ್ವನಿಮುದ್ರಣ ಕೇಂದ್ರಗಳು ಹೆಚ್ಚಿದಂತೆ ಬೆಂಗಳೂರಿನಲ್ಲಿ ಚಲನಚಿತ್ರ ಹಾಗೂ ವಿವಿಧ ಪ್ರಕಾರದ ಹಾಡುಗಳ ಧ್ವನಿಮುದ್ರಣ ಚಟುವಟಿಕೆಗಳು ಜಾಸ್ತಿಯಾದವು. ವಾದ್ಯಗಾರರ ಸಂಖ್ಯೆ ಬೆಳೆಯಿತು. ಮದರಾಸಿನಲ್ಲಿ ಇರುವಂತೆ ವೃತ್ತಿ ಭದ್ರತೆಗೆ ವ್ಯವಸ್ಥೆ ಮಾಡಿಕೊಳ್ಳುವ ನಿಟ್ಟಿನಲ್ಲಿ ವಾದ್ಯಗಾರರೆಲ್ಲ ಒಂದಾಗಿ ಸಂಘಟನೆ ರೂಪಿಸಿಕೊಂಡರು. ೧೯, ಮಾರ್ಚ್ ೧೯೯೪ ರಂದು ಶನಿವಾರ ಸಂಜೆ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಅತ್ಯಂತ ಸಿನಿಮೀಯ ರೀತಿಯಲ್ಲಿ 'ಸಂಗೀತ ಕಲಾವಿದರ ಸಂಘ' (ಸಂಸಂ) ಆರಂಭವಾಯಿತು. ಕನ್ನಡ ಕಲಾವಿದರೆಲ್ಲ ಭಾಗವಹಿಸಿದ್ದರು. ವಾದ್ಯಗಾರರ ಸಂಭಾವನೆಯಲ್ಲಿ ಏಕರೂಪತೆ, ದುಡಿಮೆಯ ಸಮಯ, ಶಿಸ್ತಿನ ಬಗ್ಗೆ ಗಮನ ಹರಿಸುವುದು ಮುಂತಾದ ಧ್ಯೇಯೋದ್ದೇಶಗಳನ್ನು ಹೊಂದಿರುವುದಾಗಿ ವೇದಿಕೆಯಲ್ಲಿ ಪ್ರಕಟಿಸಲಾಯಿತು. 'ಸಂಸಂ' ಮುಂದೆ ಕ್ರಿಯಾಶೀಲವಾಗಿಲ್ಲದೆ ಕರಗಿಹೋಯಿತು.

೧೯೯೪ರ ಮೇ ತಿಂಗಳ ವಿಷಾದಕರ ಘಟನೆ ಕನ್ನಡ ಚಿತ್ರರಂಗದ ಗೌರವಾನ್ವಿತ ಚರಿತ್ರ ಕಲಾವಿದ ಕೆ.ಎಸ್.ಅಶ್ವತ್ಥ್ ನಿವೃತ್ತಿ. ನಿರ್ಮಾಣ ಮೌಲ್ಯಗಳ ಅಧಃಪತನ, ಅಪ್ರಾಮಾಣಿಕತೆ, ಅಶಿಸ್ತುಗಳಿಂದ ಸುಮಾರು ವರ್ಷಗಳಿಂದ ಕನಲುತ್ತಾ ಬಂದಿದ್ದ ಅಶ್ವತ್ಥ್ ಕೊನೆಗೆ ತಮ್ಮ ಅಭಿನಯ ಬದುಕಿಗೆ ಮುಕ್ತಾಯ ಹಾಡಲು ತೀರ್ಮಾನಿಸಿ, ಜೂನ್ ೧ ರಂದು ಅದನ್ನು ಪ್ರಕಟಿಸಿದರು. ಅವರ ಕಟುವಾದ ಹಾಗೂ ಗಟ್ಟಿಯಾದ ನಿರ್ಧಾರಕ್ಕೆ ಇದ್ದ ಹಿನ್ನೆಲೆಯನ್ನು ಅವರ ಮಾತುಗಳಲ್ಲೇ ಹೇಳಿದರೆ ಈ ದಶಕದ ಕನ್ನಡ ಚಿತ್ರರಂಗದ ಪರಿಸ್ಥಿತಿ ಹಾಗೂ ಚಿತ್ರಗಳು ನಿರ್ಮಾಣವಾಗುತ್ತಿದ್ದ ರೀತಿಯ ಬಗ್ಗೆ ಸ್ಪಷ್ಟ ಚಿತ್ರ ಮೂಡುತ್ತದೆ. ಅವರು ಹೇಳಿದ ಪ್ರಸಂಗ ನಡೆದಿರುವುದು ಬೆಂಗಳೂರಿನ ಮಲ್ಲೇಶ್ವರಂನ ವಿನಾಯಕ ದೇವಸ್ಥಾನದಲ್ಲಿ ಚಿತ್ರವೊಂದರ ಮುಹೂರ್ತದ ಸಂದರ್ಭದಲ್ಲಿ. ''ವಸ್ತ್ರಾಲಂಕಾರದವನು, 'ಸಾರ್, ಯಾವ ಗೆಟಪ್ ಹಾಕಲಿ' ಎಂದು ಕೇಳಿದ. ಆಗ ನಾನು ನಿರ್ದೇಶಕರು ಹೇಳಿದಂತೆ ಅಲಂಕರಿಸಬೇಕೆಂದು ಹೇಳಿದೆ. ಅದಕ್ಕೆ ಅವನು 'ಅವರು ಏನೂ ಹೇಳೇ ಇಲ್ಲ ಸಾರ್' ಎಂದ. ಇಂಥ ಅನುಭವಗಳು ಇವತ್ತಿನ

ಬಹುತೇಕ ಚಿತ್ರಗಳ ಚಿತ್ರೀಕರಣದಲ್ಲಿ ಆಗುತ್ತಿದೆ. ಕಾಲಬದ್ಧ ಹಾಗೂ ಅವಸರದ ಚಿತ್ರಗಳ ನಿರ್ಮಾಣದಿಂದ ಒಳ್ಳೆಯ ಚಿತ್ರಗಳು ಮೂಡಿಬರುವುದು ಅಸಾಧ್ಯ. ನಟನೆ ಮಾಡಲು ಸೂಕ್ತ ವಾತಾವರಣವೇ ಇಲ್ಲದ ಪರಿಸ್ಥಿತಿ ಉದ್ಭವವಾಗುತ್ತಿದೆ. ಸೌಜನ್ಯದ ನಡವಳಿಕೆ, ಕಥೆ ಅಥವಾ ಸನ್ನಿವೇಶ ತಿಳಿಸುವ ಕಲೆಗಾರಿಕ ಅಥವಾ ಅಭ್ಯಾಸವೇ ಇಲ್ಲವಾಗುತ್ತಿದೆ. ಇವನ್ನೆಲ್ಲ ನೋಡಿ ನನಗೆ ಅತಿಯಾದ ನೋವಾಗಿದೆ. ಇಲ್ಲಿ ಅದನ್ನೆಲ್ಲ ಹೇಳಲಾರೆ. 'ಸ್ತ್ರೀರತ್ನ' (೧೯೫೫) ಚಿತ್ರದಿಂದ ಆರಂಭಗೊಂಡ ಚಿತ್ರಜೀವನ, ೩೪೭ ಚಿತ್ರಗಳಿಗೆ ಮುಗಿದಿದೆ. ರಾಜಕುಮಾರ್ ಜೊತೆ ೯೫ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವೆ. ಆರ್ಥಿಕ ಭದ್ರತೆ ಇಲ್ಲದ ಈ ಚಲನಚಿತ್ರ ಜೀವನದ ನಾಲ್ಕು ದಶಕಗಳನ್ನು ಆತಂಕದಿಂದಲೇ ಕಳೆದಿರುವೆ. ಬಹಳ ಹಿಂದೆಯೇ ಉಳಿತಾಯದ ನಿರ್ಧಾರ ಮಾಡಿದ್ದುದರಿಂದ ವಿಶ್ರಾಂತ ಜೀವನಕ್ಕೆ ತೊಂದರೆಯಿಲ್ಲ. ಪತ್ನಿ, ಪುತ್ರಿಯರು, ಪುತ್ರರು, 'ಸಾಕು ಬಿಡಿ, ದಣಿದಿದ್ದೀರಿ' ಎಂದು ನನ್ನ ನಿರ್ಧಾರವನ್ನು ಬೆಂಬಲಿಸಿದ್ದಾರೆ. ಆದರೆ ಚಿತ್ರರಂಗ ಹೀಗೆಯೇ ಮುಂದುವರಿದರೆ ಖಂಡಿತಾ ಭವಿಷ್ಯವಿಲ್ಲ. ಚಿತ್ರರಂಗದಲ್ಲಿ 'ಕ್ರಾಂತಿ' ಆಗಬೇಕಾದ ಅಗತ್ಯವಿದೆ.''

ಈ ಮಾತುಗಳನ್ನು ದುಃಖದಿಂದ ತೋಡಿಕೊಂಡ ಕೆ.ಎಸ್.ಅಶ್ವತ್ಥ್ ಅವರು ಆರು ವರ್ಷಗಳ ಕಾಲ ಚಲನಚಿತ್ರಗಳಲ್ಲಿ ನಟಿಸಲಿಲ್ಲ. ಅನಂತರ ರಾಜಕುಮಾರ್ ಅವರ ಒತ್ತಾಯಕ್ಕೆ ಕಟ್ಟುಬಿದ್ದು ೨೦೦೦ನೇ ವರ್ಷದಲ್ಲಿ 'ಶಬ್ದವೇಧಿ' ಚಿತ್ರದಲ್ಲಿ ಅಭಿನಯಿಸಿದರು. ನಂತರ ಆಯ್ದ ಒಂದೆರಡು ಚಿತ್ರಗಳಲ್ಲಿ ಕಾಣಿಸಿಕೊಂಡರು.

ಚಿತ್ರರಂಗದ ಮಾಗಿದ ಚೇತನಗಳ ನೋವು ಒಂದು ರೀತಿಯದಾದರೆ ಯುವ ಚೈತನ್ಯಗಳ ವೇಗದ ಸಾವು ಇನ್ನೊಂದು ಬಗೆಯ ಶೂನ್ಯವನ್ನು ಸೃಷ್ಟಿಸಿತ್ತು. ದ್ವಾರಕೀಶ್ ಅವರ 'ಶ್ರುತಿ' ಚಿತ್ರದ ಮೂಲಕ ಜನಾದರಣೆ ಗಳಿಸಿ ಕಲವಾರು ಚಿತ್ರಗಳಲ್ಲಿ ನಾಯಕನಾಗಿ ಅಭಿನಯಿಸಿದ ಯುವನಟ ಸುನಿಲ್ ೧೯೯೪ರ ಜುಲೈ ೧೪ರಂದು ರಾತ್ರಿ ೧೨.೩೦ರ ಸಮಯದಲ್ಲಿ ನಾಟಕವೊಂದರ ಪ್ರದರ್ಶನ ಮುಗಿಸಿಕೊಂಡು ಬರುತ್ತಿದ್ದಾಗ ಚಿತ್ರದುರ್ಗದ ಬಳಿ ಕಾರು ಅಪಘಾತದಲ್ಲಿ ದುರ್ಮರಣಕ್ಕೀಡಾದರು. ಜೊತೆಯಲ್ಲಿ ಪ್ರಯಾಣಿಸುತ್ತಿದ್ದ ಮಾಲಾಶ್ರೀ ಸಣ್ಣಪುಟ್ಟ ಗಾಯಗಳೊಡನೆ ಪಾರಾದರು. ಕಾದಂಬರಿಕಾರ್ತಿ ಹಾಗೂ ಜನಪ್ರಿಯ ಲೇಖಕಿ ಎಂ.ಕೆ.ಇಂದಿರಾ ೧೬, ಮಾರ್ಚ್ ೧೯೯೪ರಂದು ನಿಧನರಾದರು. ಇದೇ ವರ್ಷ ಕಣ್ಮರೆಯಾದ ಇನ್ನಿತರರು ಚಲನಚಿತ್ರಗಳ ಸ್ಥಿರಚಿತ್ರ ಸಂಗ್ರಾಹಕ ಕಾನಕಾನಹಳ್ಳಿ ಗೋಪಿ ಹಾಗೂ ಕನ್ನಡ ಚಿತ್ರರಂಗದ ಅತ್ಯಂತ ಹಿರಿಯ ಸಾಹಸ ನಿರ್ದೇಶಕ ವೈ.ಶಿವಯ್ಯ.

೧೯೯೫ಕ್ಕೂ ಮುಂಚೆಯೇ ಕಾಶ್ಮೀರದ ಹಳೆಯ ಪವಿತ್ರ ಸ್ಥಳಗಳನ್ನು ಉಗ್ರರು ನಾಶ ಮಾಡುವುದು ನಡೆದೇ ಇತ್ತು. ೧೯೯೫ರ ಹೊತ್ತಿಗೆ ದೇಶದ ಪ್ರಮುಖ ನಗರಗಳಲ್ಲಿ ಸೆಲ್ಯುಲರ್ ಫೋನ್‌ಗಳ ಚಲಾವಣೆ ಬಂತು. ಒಂದು ಕಡೆ 'ದಿಲ್‌ವಾಲೆ ದುಲ್ಹನಿಯ ಲೇಜಾಯೇಂಗೆ' ಸಿನಿಮಾ ಬಂದು ಹಿಟ್ ಆದರೆ, ದಕ್ಷಿಣದಲ್ಲಿ ಮಣಿರತ್ನಂ ಅವರ 'ಬಾಂಬೆ' ತತ್ಕಾಲೀನ ಸಂದರ್ಭಗಳಿಗೆ ಸ್ಪಂದಿಸಿದ ಚಿತ್ರವಾಗಿತ್ತು. ಅವರಾಗಲೇ ಕಾಶ್ಮೀರದ ಹಿನ್ನಲೆಯಲ್ಲಿ 'ರೋಜಾ' ಚಿತ್ರಿಸಿಯಾಗಿತ್ತು. ತೆಲುಗಿನ 'ಅಲ್ಲುಡಾ ಮಜಾಕಾ' ಚಿತ್ರ ಸೆನ್ಸಾರ್ ವಿವಾದದಲ್ಲಿ ಸಿಲುಕಿತ್ತು. ಈ ಚಿತ್ರವನ್ನು ಗಂಭೀರ ಅಧ್ಯಯನಕ್ಕೆ ಒಡ್ಡಿ ಲೇಖನಗಳನ್ನು ಬರೆದ ಬುದ್ಧಿಜೀವಿಗಳು ಕೊಟ್ಟ ವ್ಯಾಖ್ಯಾನಗಳೇ ಬೇರೆ. ಈಚೆಗೆ ಕನ್ನಡ ಚಿತ್ರರಂಗ ಹಿಂದಿ, ತೆಲುಗು ಚಿತ್ರರಂಗವನ್ನು ಅನುಕರಿಸುತ್ತಿರುವ ಹಿನ್ನಲೆಯಲ್ಲಿ ಇವು ಮುಖ್ಯವಾಗುತ್ತವೆ.

೧೯೯೫ ರಲ್ಲಿ ೭೫ ಚಿತ್ರಗಳು ತೆರೆಕಂಡವು. ೧೯೯೪-೯೫ ರಾಜಕಾರಣಿಗಳಿಂದ ಟೀಕೆಗಳನ್ನು ಎದುರಿಸಿದ ವರ್ಷ. ಏಕೆಂದರೆ ಈ ಎರಡು ವರ್ಷಗಳಲ್ಲಿ ತೆರೆಕಂಡ ಚಿತ್ರಗಳ ಗುಣಮಟ್ಟ ಅಧಃಪತನಕ್ಕಿಳಿದಿತ್ತು. ಮೆಲುಕು ಹಾಕಲು ನಾಲ್ಕೈದು ಚಿತ್ರಗಳನ್ನು ಹುಡುಕುವುದೂ ಪ್ರಯಾಸಕರವಾಗಿತ್ತು. ವಿಧಾನಸಭಾಧ್ಯಕ್ಷ ಎಸ್.ರಮೇಶ್‌ಕುಮಾರ್ ಸುಮಾರು ಎರಡು ವರ್ಷಗಳ ಕಾಲ ಯಾವುದೇ ಸಮಾರಂಭಕ್ಕೆ ಹೋದರೂ ಕನ್ನಡದ ಚಿತ್ರಗಳನ್ನು ಕಟುವಾಗಿ ಟೀಕಿಸುವ ಅಭ್ಯಾಸ ಬೆಳೆಸಿಕೊಂಡಿದ್ದರು. ಕೆಲವಾರು ವೇದಿಕೆಗಳಲ್ಲಿ ಅವರು 'ಚಿತ್ರಮಂದಿರಗಳನ್ನು ಮುಚ್ಚಿಬಿಡಿ' ಎಂದು ಕರೆ ಕೊಡುತ್ತಿದ್ದರು. ವಾರ್ತಾಸಚಿವ ಎಂ.ಸಿ.ನಾಣಯ್ಯ ಇನ್ನೂ ಒಂದು ಹೆಜ್ಜೆ ಮುಂದಿಟ್ಟು 'ಈರುಳ್ಳಿ ಬೆಳ್ಳುಳ್ಳಿ ಮಾರುವವರೆಲ್ಲ ಚಿತ್ರನಿರ್ಮಾಣಕ್ಕಿಳಿದು ಚಿತ್ರಗಳ ಗುಣಮಟ್ಟ ಗಬ್ಬೆದ್ದು ಹೋಗಿದೆ' ಎಂದು ಸಿಡಿದರು. ರಾಜಕಾರಣಿಗಳ ಇಂಥ ಮಾತುಗಳಿಗೆ ಸಾಮಾನ್ಯವಾಗಿ ಬರಬಹುದಾಗಿದ್ದ ಪ್ರತಿಭಟನೆ ಕಾಣಲಿಲ್ಲ. ಏಕೆಂದರೆ ಉದ್ಯಮಿಗಳಿಗೆ ತಾವು ಏನನ್ನು ಮಾಡುತ್ತಿದ್ದೇವೆಂಬುದರ ಬಗ್ಗೆ ಸ್ಪಷ್ಟವಾಗಿ ತಿಳಿದಿತ್ತು. ಯಾರ್ಯಾರ ಮಾತಿಗೂ ಏಕೆ ತಲೆ ಕೆಡಿಸಿಕೊಳ್ಳಬೇಕು ಎಂದು ಒಬ್ಬೊಬ್ಬರು ತಂತಮ್ಮ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವುದರಲ್ಲಿ ಮಗ್ನರಾಗಿದ್ದರು. ಆದರೆ ವಾಣಿಜ್ಯ ಮಂಡಳಿಯ ಸಮಾರಂಭದಲ್ಲೇ ವಾರ್ತಾಮಂತ್ರಿ ನಾಣಯ್ಯನವರು ಕಟುವಾಗಿ ಮಾತನಾಡಿದ್ದರಿಂದ ಅದೇ ವೇದಿಕೆಯಲ್ಲಿ ಚಿತ್ರನಟ-ರಾಜಕಾರಣಿ ಎರಡೂ ಆಗಿದ್ದ ಅನಂತ್‌ನಾಗ್ ಅದಕ್ಕೆ ಉತ್ತರಿಸಿ, ನಾಣಯ್ಯನವರ ಹೇಳಿಕೆಯನ್ನು ತೀವ್ರವಾಗಿ ಖಂಡಿಸಿದ್ದರು. ಆ ವಾಗ್ವಾದದ ಹಿಂದೆ ರಾಜಕಾರಣಿಗಳ ತಿಕ್ಕಾಟ, ಭಿನ್ನಾಭಿಪ್ರಾಯಗಳೇ ಮುಖ್ಯ ಕಾರಣ ಆಗಿರಬಹುದು. ಆದರೂ ಚಿತ್ರೋದ್ಯಮದ ಪರವಾದ ಮಾತುಗಳಾದ್ದರಿಂದ ಆ ಮಟ್ಟಿಗೆ ಅನಂತ್‌ನಾಗ್ ಪ್ರಶಂಸೆಗೆ ಪಾತ್ರರಾದರು. ಉದ್ಯಮದವರೇ ಆದ ನಿರ್ದೇಶಕ-ನಿರ್ಮಾಪಕ ರವೀ ಸಹ ಅಶಿಸ್ತನ್ನು ಎತ್ತಿ ಆಡಿ ಆಕ್ಷೇಪಿಸಿದ್ದೂ ಕೆಲವರನ್ನು ಕೆರಳಿಸಿತ್ತು. ಆದರೆ ಯಾರೂ ಬಹಿರಂಗವಾಗಿ ಉತ್ತರ ಕೊಡಲಿಲ್ಲ.

ನಿರ್ಮಾಪಕರ ಸಂಘ ಪರಭಾಷಾ ಚಿತ್ರಗಳ ಹಾವಳಿ ವಿರುದ್ಧ ಕೆಂಡ ಕಾರಿದರೆ ಚಿತ್ರಮಂದಿರಗಳ ಅವ್ಯವಸ್ಥೆ ವಿರುದ್ಧ ನಿರ್ದೇಶಕರ ಸಂಘ ಪ್ರತಿಭಟನೆ ನಡೆಸಿತು. ಸಂಪೂರ್ಣ ವ್ಯಾಪಾರಿಮಯ ವಾತಾವರಣದಲ್ಲಿ ಸೂಕ್ಷ್ಮ ಮನಸ್ಸಿನವರು ತಟಸ್ಥರಾಗಿರಬೇಕಾದ ಒತ್ತಡ ಏರ್ಪಟ್ಟಿತ್ತು. ಅಸ್ತಿತ್ವಕ್ಕಾಗಿ ಹೆಣಗುತ್ತಿದ್ದವರು ಜಯಿಸುವುದು ಸುಲಭವಾಗಿರಲಿಲ್ಲ. ಇಂಥ ದಿನಗಳಲ್ಲಿ ೧೯೯೫ರ ಜನವರಿ ೯ರಂದು 'ಪ್ರೇಮ ಕಾಮ', 'ಋಷ್ಯಶೃಂಗ'ದಂಥ ಸೂಕ್ಷ್ಮವಸ್ತುವಿನ ಮೆಲುದನಿಯ ಚಿತ್ರಗಳನ್ನು ನಿರ್ದೇಶಿಸಿದ್ದ ಅತ್ಯುತ್ತಮ ಸಂಕಲನಕಾರ, ಪ್ರತಿಭಾವಂತ ಯುವಕ ವಿ.ಆರ್.ಕೆ.ಪ್ರಸಾದ್ ಹೃದಯಾಘಾತದಿಂದ ನಿಧನರಾದರು. ಜುಲೈ ಮೂರನೆಯ ವಾರ ಬಾಲಣ್ಣ, ಅಕ್ಟೋಬರ್ ಎರಡನೆಯ ವಾರ ತೂಗುದೀಪ ಶ್ರೀನಿವಾಸ್ ಹಾಗೂ ಕಥೆಗಾರ-ನಿರ್ದೇಶಕ ಕೆ.ಎಸ್.ಸತ್ಯನಾರಾಯಣ (ನಟಿ ಸೌಂದರ್ಯ ತಂದೆ) ಕಣ್ಮರೆಯಾದರು. ಬಾಲಣ್ಣ, ತೂಗುದೀಪ ಶ್ರೀನಿವಾಸ್ ಅವರುಗಳು ಕನ್ನಡ ಬೆಳ್ಳಿತೆರೆಯ ಸೊಗಸು, ಸೊಗಡನ್ನು ಬೆಳೆಸುತ್ತಾ ಬಂದವರು. ಇವರ ಸಾವಿನೊಂದಿಗೆ ಕನ್ನಡ ಚಿತ್ರರಸಿಕರ ಚಿತ್ತಭಿತ್ತಿಯಲ್ಲಿ ಮನೆ ಮಾಡಿಕೊಂಡಿದ್ದ ವೈವಿಧ್ಯಮಯ ಪಾತ್ರಗಳ ನಿಜದ ಪ್ರಾಣ ಕಣ್ಮರೆಯಾಯಿತು. ಇವರು ಅಭಿನಯಿಸಿದ್ದ ನೂರಾರು ಪಾತ್ರಗಳು ಅಮರ. ಇವರೊಂದಿಗೆ ಕೇವಲ ನಾಲ್ಕು ಕನ್ನಡ ಚಿತ್ರಗಳಿಗೆ ಸಂಗೀತ ನೀಡಿದ್ದರೂ ಅವೆಲ್ಲವೂ ಯಶಸ್ವಿಯಾಗುವಷ್ಟು ಪ್ರತಿಭೆ ಧಾರೆ ಎರೆದಿದ್ದ ಹಿಂದಿಯ ಜನಪ್ರಿಯ ಸಂಗೀತ ನಿರ್ದೇಶಕ ಸಲಿಲ್ ಚೌಧುರಿ ಸೆಪ್ಟೆಂಬರ್ ಮೊದಲ ವಾರ ತೀರಿಕೊಂಡರು.

ನಟ ಜಗ್ಗೇಶ್ ಆರಂಭದಲ್ಲಿ ರಜನೀಕಾಂತ್‌ರನ್ನು ಹೋಲುತ್ತಾರೆಂಬ ಕಾರಣಕ್ಕೆ ಗಮನ ಸೆಳೆದಿದ್ದರು. ಆಗ-ಈಗ ಅವರಿಗೆ ಖಳನಟನ ಪಾತ್ರ ಸಿಗುತ್ತಿತ್ತು. 'ರಾಣಿ-ಮಹಾರಾಣಿ' ಚಿತ್ರದಲ್ಲಿ ಅವರ ಪಾತ್ರ ಒಂದು ವರ್ಗದ ಪ್ರೇಕ್ಷಕರನ್ನೇ ಅವರಿಗೆ ತಂದುಕೊಟ್ಟಿತು. ಮಹತ್ವಾಕಾಂಕ್ಷೆ, ನಿರಂತರ ಪ್ರಯತ್ನ, ಶ್ರದ್ಧೆ ಕಾರಣ ಅವರು ಕ್ರಮೇಣ ಬೆಳೆದರು. ಉಪೇಂದ್ರ ಅವರನ್ನು ನಿರ್ದೇಶಕರನ್ನಾಗಿಸಿ, ತಾವೂ ನಾಯಕನಾಗಿ ಪ್ರೇಕ್ಷಕರನ್ನು ಗಟ್ಟಿ ಮಾಡಿಕೊಂಡರು. ಅವರ ಚಿತ್ರಗಳದ್ದೇ ಒಂದು ಶೈಲಿ, ಒಂದು ವರ್ಗದ ಪ್ರೇಕ್ಷಕ ಎಂಬುದು ನಿಖರವಾಗತೊಡಗಿತ್ತು. ಒಮ್ಮೊಮ್ಮೆ ದ್ವಂದ್ವಾರ್ಥ-ಅಶ್ಲೀಲಗಳ ತಲೆಪಟ್ಟಿ ಹೊತ್ತರೂ ಜಗ್ಗೇಶ್ ವೈವಿಧ್ಯಮಯ ಪಾತ್ರಗಳನ್ನು ನಿರ್ವಹಿಸಿದ ಉತ್ತಮ ನಟರೆಂಬುದೂ ಅಷ್ಟೇ ನಿಜ. ಅವರ ಕೆಲವು 'ಮ್ಯಾನರಿಸಂ'ಗಳು ಒಂದು ವರ್ಗಕ್ಕೆ ಅತಿ ಅನ್ನಿಸಿದರೆ, ಬಹುಸಂಖ್ಯಾತರು ಅದನ್ನು ಬಯಸಿದರು. ಇರುವ ಅವಕಾಶದಲ್ಲಿ ಅಲ್ಲಲ್ಲಿ ಸೂಕ್ಷ್ಮ ಅಭಿನಯ ತೋರುತ್ತ ಬೆಳೆದರು ಜಗ್ಗೇಶ್. ಈ ಅವಧಿಯಲ್ಲಿ ವೈಯಕ್ತಿಕ ಕಾರಣಗಳಿಗಾಗಿ ಅವರ ಮನಸ್ಸು - ಬದುಕು ಪಲ್ಲಟಗೊಂಡಿತು. ಆತ್ಮಹತ್ಯೆ ಪ್ರಯ-ತ್ನದಿಂದ ಆರಂಭಿಸಿ, ಅನೇಕ ಪರಪೀಡನೆ, ದುಡುಕು ವರ್ತನೆಗಳಿಂದಾಗಿ ಟೀಕೆಗೆ ಒಳಗಾದರು. ಈ ಸಂದರ್ಭದಲ್ಲಿ ವಾಣಿಜ್ಯ ಮಂಡಳಿ ಜನಪ್ರಿಯ ನಟರೇ ಆದರೂ ಒಂದು ಶಿಸ್ತು ಸಂಹಿತೆ ದಾಟಿದರೆ ಕ್ರಮ ತೆಗೆದುಕೊಳ್ಳುತ್ತದೆ ಎಂಬುದನ್ನು ತೋರಿಸಿಕೊಟ್ಟಿತು. ಚಿತ್ರೋದ್ಯಮದ ಕೆಲವು ಗುಣಾತ್ಮಕ ಅಂಶಗಳಿಗಾಗಿ ಈ ವಿವರ.

ಜಗ್ಗೇಶ್ ಬಗ್ಗೆ ಕ್ರಮ ತೆಗೆದುಕೊಂಡ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ವಿಶೇಷ ಸಮಿತಿ ೧೯೯೬ರ ಜುಲೈನಲ್ಲಿ ಐದು ವರ್ಷಗಳವರೆಗೆ ಬಹಿಷ್ಕಾರ ಹಾಕಿತು. ಜಗ್ಗೇಶ್ ಅಭಿನಯಿಸುವುದು, ಜಗ್ಗೇಶ್ ಚಿತ್ರಗಳನ್ನು ನಿರ್ದೇಶಿಸುವುದು, ಅವರಿಗೆ ಪಾತ್ರಗಳನ್ನು ಕೊಡುವುದು, ಚಿತ್ರಗಳನ್ನು ಹಂಚಿಕೆ ಮಾಡುವುದು - ಎಲ್ಲಕ್ಕೂ ನಿಷೇಧ ಹೇರಿತು. ಕೆಲವರು ನಿಷೇಧ 'ಬೇಡ' ಅಂದರೆ, ಬಹಳ ಮಂದಿ 'ಬೇಕು' ಅಂದರು.



(ಚಿತ್ರ ೬೪) 'ಅರಗಿಣಿ' ಚಿತ್ರದಲ್ಲಿ ರಮೇಶ್ ಮತ್ತು ಸುಧಾರಾಣಿ

ವಾಣಿಜ್ಯ ಮಂಡಳಿಯಲ್ಲಿ ಸುಮಾರು ಸಭೆ, ಚರ್ಚೆಗಳು ನಡೆದವು. ಅನಂತರ ಐದು ವರ್ಷವನ್ನು ಒಂದು ವರ್ಷಕ್ಕೆ ಇಳಿಸಲಾಯಿತು. ಕೊನೆಗೆ ರಾಜಕುಮಾರ್ ಮಧ್ಯಪ್ರವೇಶಿಸಿ ''ಕಲಾವಿದನೊಬ್ಬನ ಅಭಿನಯದ ಹಸಿವನ್ನು ಇಂಗಿಸುವುದು ಬೇಡ'' ಎಂದು ಹೇಳಿ ವಿವಾದಕ್ಕೆ ತೆರೆ ಎಳೆದರು. ಈ ಔದಾರ್ಯ ಕೂಡಾ ಅನೇಕರಿಗೆ ಇಷ್ಟವಾಗಿರಲಿಲ್ಲ. ೧೯೯೪ ರಲ್ಲಿ ನಿರ್ಮಾಪಕ ಗುಲ್ಜಾರ್‌ಖಾನ್ ಮೊದಲ್ಗೊಂಡು ಅನೇಕರು ವಿವಿಧ ರೀತಿಯಲ್ಲಿ ಚಿತ್ರಗಳಿಗೆ ಪ್ರಚಾರ ಮಾಡಿದರು. ಇದಕ್ಕೆ 'ಹೆತ್ತಕರುಳು', 'ಅಪ್ಪಾಜಿ', 'ಪುಟ್ನಂಜ', 'ಸಿಪಾಯಿ'. 'ಉಪೇಂದ್ರ' ಮೊದಲಾದ ಚಿತ್ರಗಳ ಪ್ರಚಾರ ವೈಖರಿ ಗಮನಿಸಿ.

ಸತ್ವವಿಲ್ಲದ ಚಿತ್ರಗಳನ್ನು ತಯಾರಿಸಿ ಅವನ್ನು ಹೇಗಾದರೂ ಯಶಸ್ವಿಯಾಗುವಂತೆ ಮಾಡಬೇಕೆಂದು ಕೆಲವರು ವಿಚಿತ್ರ ತಂತ್ರಗಳನ್ನು ಮಾಡುತ್ತಿದ್ದರು (ನೋಡಿ : ಪ್ರಚಾರ ಲೇಖನ). ಇರುವುದರಲ್ಲಿ ಉತ್ತಮ ಚಿತ್ರಗಳನ್ನು ತಯಾರಿಸಿದವರು ಹಣಕಾಸಿನ ಮುಗ್ಗಟ್ಟಿನಿಂದಾಗಿ ಅಂತಹ ಪ್ರಚಾರ ತಂತ್ರಗಳನ್ನು ಮಾಡಲಾಗದೆ ಅಸಹಾಯಕರಾಗಿದ್ದರು. 'ಚಿತ್ರವು ಚೆನ್ನಾಗಿದ್ದರೆ ಜನ ನೋಡಿಯೇ ನೋಡುತ್ತಾರೆ' ಎಂಬ ಮಾತು, ನಂಬಿಕೆ ಆ ದಿನಗಳಲ್ಲಿ ನಿಜವಾಗುತ್ತಿರಲಿಲ್ಲ. ಚಿತ್ರದೊಂದಿಗೆ ಪ್ರಚಾರ ಅದ್ದೂರಿಯಾಗಿ, ವಿಚಿತ್ರವಾಗಿ ಇರಲೇಬೇಕು ಎಂಬ ಕೆಲವರ ಪ್ರಯತ್ನ ಫಲಪ್ರದವಾದ ಉದಾಹರಣೆಗಳು ಕಂಡುಬರುತ್ತವೆ. ಇದರಿಂದಾಗಿ 'ಅರಗಿಣಿ', 'ಗೌರಿಶಂಕರ', 'ಕಿಡ್ನಾಪ್', 'ಶ್ರಾವಣ ಸಂಜೆ', 'ಗಾನಯೋಗಿ ಪಂಚಾಕ್ಷರ ಗವಾಯಿ'ಯಂಥ ಭಿನ್ನವಾದ ಸದಭಿರುಚಿಯ ಕೆಲವು ಚಿತ್ರಗಳು ಪಡೆಯಬೇಕಾದಷ್ಟು ಮನ್ನಣೆ ಪಡೆಯಲಾಗಲಿಲ್ಲ. ಪಿ.ಹೆಚ್.ವಿಶ್ವನಾಥ್ ನಿರ್ದೇಶನದ 'ಅರಗಿಣಿ' ಭಿನ್ನ ವಾತಾವರಣದಲ್ಲಿ ಅರಳಿರುವ ಕಥೆ. ವೈನೆರದ ಹೆಣ್ಣುಗಳನ್ನು ದೇವರಿಗೊಪ್ಪಿಸಿದಂತೆ ಮಾಡಿ, ನಂತರ ಅವರನ್ನು ಅನುಭವಿಸುವ ಸರಕುಗಳನ್ನಾಗಿ ಪರಿವರ್ತಿಸುವ ಸಮಾಜವೊಂದನ್ನು ಚಿತ್ರಿಸುತ್ತಾರೆ. ಹಣ ಹಾಗೂ ದರ್ಪದಿಂದ ಹೆಜ್ಜೆಹೆಜ್ಜೆಗೂ ಹೆಣ್ಣನ್ನು ಕುಗ್ಗಿಸುತ್ತಾ ಮೇಲುಗೈ ಸಾಧಿಸುವ ವ್ಯವಸ್ಥೆಯ ವಿರುದ್ಧ ಈ ಚಿತ್ರದ ನಾಯಕಿ ತಿರುಗಿಬೀಳುತ್ತಾಳೆ. ಕಾಮುಕರ ಪಂಜರದಿಂದ ತಪ್ಪಿಸಿಕೊಂಡು ನಗರಕ್ಕೆ ಬರುವ ಅವಳಿಗೆ ಒಂದು ಪ್ರೇಮದ ಆವರಣ ಕಾಣುತ್ತದೆ. ಅವಳಿಗೆ ಪರಿಚಯವಾಗುವ ಇಬ್ಬರು ಸ್ನೇಹಿತರು ಸುಸಂಸ್ಕೃತರು. ನಿರುದ್ಯೋಗಿಗಳಾಗಿರುವ ಇವರು ತಮ್ಮ ಹಸಿವನ್ನು ಇಂಗಿಸಿಕೊಳ್ಳುವುದಕ್ಕಾಗಿ ಸಣ್ಣಪುಟ್ಟ ಕಳ್ಳತನ ಮಾಡುತ್ತಿರುತ್ತಾರೆ. ಇವರು ಹೆಣ್ಣನ್ನು ನೋಡುವ ದೃಷ್ಟಿ ನಿರ್ಮಲವಾಗಿರುವುದು ನಾಯಕಿಯ ಮೇಲೆ ವಿಶೇಷ ಪರಿಣಾಮ ಉಂಟುಮಾಡುತ್ತದೆ. ಅವಳು ಸ್ವಲ್ಪಸ್ವಲ್ಪವೇ ಭಯಮುಕ್ತಳಾಗುತ್ತಿದ್ದಂತೆ ಮತ್ತೆ ಅವಳ ಹಳ್ಳಿಯವರಿಂದ ಬೇಟೆ ಆರಂಭವಾಗುತ್ತದೆ. ಈ ಹಂತದವರೆಗೆ ವಿಶಿಷ್ಟವಾದ ರೀತಿಯಲ್ಲಿ ಚಿತ್ರವನ್ನು ನಿರೂಪಿಸಿರುವ ಪಿ.ಹೆಚ್.ವಿಶ್ವನಾಥ್ ನಂತರ ಅತಿ ನಾಟಕೀಯತೆಗೆ ಶರಣಾಗಿ, ಚಿತ್ರದ ಶ್ರೇಷ್ಠತೆಯನ್ನು ತಾವೇ ಕುಗ್ಗಿಸಿದರು. ೧೯೯೪-೯೫ರ ರಾಜ್ಯದ ದ್ವಿತೀಯ ಅತ್ಯುತ್ತಮ ಚಿತ್ರಪ್ರಶಸ್ತಿ ಪಡೆದ 'ಅರಗಿಣಿ'ಯಲ್ಲಿ ಸುಧಾರಾಣಿ, ರಮೇಶ್, ಕಾಶಿ ಉತ್ತಮ ಅಭಿನಯ ಹಾಗೂ ಕೆ.ರಾಮಯ್ಯನವರ ಅರ್ಥಪೂರ್ಣ ಸಂಭಾಷಣೆ ಇತ್ತು. ಈ ಚಿತ್ರದ ಛಾಯಾಗ್ರಹಣ ಹಾಗೂ ಧ್ವನಿಗ್ರಹಣಕ್ಕೆ ಕ್ರಮವಾಗಿ ಆರ್.ಮಂಜುನಾಥ್ ಹಾಗೂ ವಿ.ಬಾಲಚಂದ್ರ ಮೆನನ್ ಅವರಿಗೆ ರಾಜ್ಯ ಪ್ರಶಸ್ತಿ ಬಂದಿತು.

ದ್ವಾರಕೀಶ್ ನಿರ್ದೇಶಿಸಿದ ಹಾಡಿಲ್ಲದ ಚಿತ್ರ 'ಕಿಡ್ನ್ಯಾಪ್' ಹೊಸತನವಿದ್ದರೂ ವಿಫಲವಾಯಿತು. ಗೆಳೆಯರಿಬ್ಬರ ಅಂತರಂಗದೊಳಗೆ ನಡೆಯುವ ಸ್ಪರ್ಧೆಯೇ ಕಥೆಯ ವಸ್ತು. ದ್ವಾರಕೀಶ್‌ರವರ ವೃತ್ತಿಜೀವನದಲ್ಲಿ ಮುಖ್ಯವೆಂದು ಹೇಳಿಕೊಳ್ಳಬಹುದಾದ ಪ್ರಯತ್ನವಿದು. ಯುವಕರು ಆಶ್ರಯಿಸಿಕೊಳ್ಳುವ ಪಾಳುಮನೆ, ರೈಲ್ವೆ ನಿಲ್ದಾಣ ಮುಂತಾದ ದೃಶ್ಯಗಳು ಕನ್ನಡ ಚಿತ್ರಗಳಲ್ಲಿ 'ಅಪರೂಪ' ಅನ್ನಿಸುವಂತಿದ್ದವು. ಚಿತ್ರಕಥೆ ಉತ್ತಮವಾಗಿತ್ತು. ಭಿನ್ನ ಪಾತ್ರದಲ್ಲಿ ದೇವರಾಜ್ ಸಮರ್ಥವಾಗಿ ಅಭಿನಯಿಸಿದ್ದರು. ಆದರೆ ನಿರೂಪಣೆಯಲ್ಲಿನ ಆತುರ ಮತ್ತು ಅರಗಿಸಿಕೊಳ್ಳಲಾಗದ ಹೊಸತನ ಇವ್ಯಾವ ಕಾರಣದಿಂದಲೋ ಚಿತ್ರ ಯಶಸ್ವಿಯಾಗಲಿಲ್ಲ.



(ಚಿತ್ರ ೬೫) 'ಕೋಣ ಈದೈತೆ' ಚಿತ್ರದಲ್ಲಿ ಕುಮಾರ್ ಗೋವಿಂದ್

'ಕೋಣ ಈದೈತೆ', ಮುಂದಿನ ದಿನಗಳಲ್ಲಿ ಕನ್ನಡದ ಒಬ್ಬ ಗಟ್ಟಿ ಹಾಗೂ ಖಾಯಂ ನಿರ್ಮಾಪಕಿಯಾಗಿ ಬೆಳೆದ ಆಂಧ್ರ ಮೂಲದ ಬಿ.ಜಯಶ್ರೀದೇವಿ ಅವರು ನಿರ್ದೇಶಿಸಿದ ಪ್ರಥಮ ಚಿತ್ರ. ಹೆಚ್ಚು ಪ್ರಚಾರ ಪಡೆದಿದ್ದ ಈ ಚಿತ್ರವು ಭಿನ್ನತೆ ತೋರಬೇಕೆಂಬ ಆಕಾಂಕ್ಷೆಯಿಂದಲೋ ಏನೋ ಅಸಂಬದ್ಧ ಕಲ್ಪನೆಗಳಿಂದ ಕೂಡಿತ್ತು. ನ್ಯಾಯಾಂಗದ ಲೋಪಗಳನ್ನು ಹೇಳುವ ಉದ್ದೇಶಕ್ಕೆ 'ಮನಸ್ಸಾಕ್ಷಿ' ಹಾಗೂ ಜಾಳುಜಾಳಾದ 'ಪ್ರತಿಮೆ'ಗಳನ್ನು ಬಳಸಿಕೊಂಡ ರೀತಿ ಒಂದಕ್ಕೊಂದು ಹೊಂದುವಂತಿರಲಿಲ್ಲ. ಚಿತ್ರದ ಸಂಗೀತವನ್ನು ಹಂಸಲೇಖ ಮನುಷ್ಯರ ಧ್ವನಿಗಳನ್ನು ಬಳಸಿ ಸೃಷ್ಟಿಸಿದ್ದರು. ಅದನ್ನು 'ಪ್ರಯೋಗ' ಎಂದು ಮಾಡಿದ್ದ ರೀತಿ ಕ್ಷೋಭೆ ಉಂಟುಮಾಡುವಂತಿತ್ತು. ಕಂಪ್ಯೂಟರ್ ವಾದ್ಯಗಳ ಬಳಕೆ ಸಹಜ ವಾದ್ಯಗಳ ಮಾಧುರ್ಯವನ್ನು ಹಾಳುಮಾಡುತ್ತಿದ್ದ ನೋವಿನ ದಿನಗಳಲ್ಲಿ ಮನುಷ್ಯರ ಮಿತಿಗಳಿರುವ ಬಾಯಿ ಶಬ್ದವನ್ನು ಇಡೀ ಚಿತ್ರಕ್ಕೆ ಬಳಸಿದ್ದು ಅಪಾರ ಕಿರಿಕಿರಿ ಉಂಟುಮಾಡಿತು. 'ಕೋಣ ಈದೈತೆ'ಗೆ ಸೆನ್ಸಾರ್ ಪ್ರಾಂತೀಯ ಮಂಡಳಿ ಸರ್ಟಿಫಿಕೇಟನ್ನು ನಿರಾಕರಿಸಿತು. ನಂತರ

ಜಯಶ್ರೀದೇವಿ ಚಿತ್ರದ ಅನೇಕ ಭಾಗಗಳನ್ನು ಮರುಚಿತ್ರಿಸಿ, ಪರಿಷ್ಕೃತ ಅವತರಣಿಕೆಯನ್ನು ಮತ್ತೆ ಮಂಡಳಿಯ ಮುಂದಿಟ್ಟು ಆ ಘಟ್ಟದಲ್ಲಿಯೂ ಕೆಲವು ಕಟ್‌ಗಳೊಂದಿಗೆ ಪ್ರದರ್ಶನಕ್ಕೆ ಪರವಾನಗಿ ಪಡೆದರು. ಅತಿ ಭಿನ್ನತೆ ಪ್ರತಿಪಾದಿಸಲು ಹೋಗಿ ಈ ಕೆಲವು ಚಿತ್ರಗಳು ಸೋತರೆ, ಪ್ರಗತಿಪರ ಆಶಯ ಹೊಂದಿದ್ದು ಉತ್ತಮವಾಗಿದ್ದ 'ಶ್ರಾವಣ ಸಂಜೆ' ಯಶಸ್ವಿಯಾಗಲಿಲ್ಲ. 'ಆಶಾ' ನಂತರ ಎ.ಟಿ.ರಘು ನಿರ್ದೇಶಿಸಿದ ಹಲವಾರು ಚಿತ್ರಗಳಲ್ಲಿ ಉತ್ತಮವಾಗಿದ್ದ ಚಿತ್ರವಿದು. 'ವಿಧವಾ ವಿವಾಹ ತಪ್ಪಲ್ಲ' ಎಂಬುದನ್ನು ಈ ಚಿತ್ರದಲ್ಲಿ ಸಹಜವಾಗಿ, ಆದರ್ಶದ ಸೋಗಿಲ್ಲದೆ ನಿರೂಪಿಸಲಾಗಿದೆ. ಚಿತ್ರಕಥೆಯು ತಿರುವುಗಳಲ್ಲಿ ಅವಧಿಯ ವ್ಯತ್ಯಾಸದಿಂದಾಗಿ ಎಳೆತವಿದ್ದರೂ ನಿರ್ದೇಶನದ ಬಿಗಿಯಿಂದಾಗಿ ಉತ್ತಮವಾಗಿದ್ದ ಚಿತ್ರವಿದು.

'ಪುಟ್ನಂಜ' ರೀಮೇಕ್ ಆದರೂ ಕೆಲವು ಅಂಶಗಳಿಂದಾಗಿ ಮುಖ್ಯವೆನಿಸುವ ಚಿತ್ರ. ಹಾಡು, ಹೊಡೆದಾಟ, ಭಾವುಕ ಸನ್ನಿವೇಶಗಳನ್ನು ಸಂಕಲನ ಹಾಗೂ ಸಂಗೀತ ಪ್ರಜ್ಞೆಯೊಂದಿಗೆ ಯೋಜಿಸುವ ರವಿಚಂದ್ರನ್ ಶೈಲಿಯ ಪಕ್ವತೆಯನ್ನು ಇದು ಹೊಂದಿತ್ತು. ಕಿಲಾಡಿಯಾದ ಹಳ್ಳಿಗನೊಬ್ಬ ನಗರದಲ್ಲಿರುವ ಅತ್ತೆಯ ಮಗಳನ್ನು ಮದುವೆಯಾಗಿ ಅತ್ತೆಯ ಸೊಕ್ಕನ್ನು ಇಳಿಸುವುದು 'ಪುಟ್ನಂಜ'ದ ಕಥೆ. ಕನ್ನಡ ಚಿತ್ರಗಳಲ್ಲಿ ಇಂಥ ವಸ್ತು ಹೊಸದಲ್ಲವಾದರೂ ನಾಯಕಿಯ ಪಾತ್ರವನ್ನು ಭಿನ್ನವಾಗಿ ನಿರೂಪಿಸಿರುವುದು ಆಕರ್ಷಣೆಯೆನಿಸಿತ್ತು. ಇದಕ್ಕಿಂತ ಹೆಚ್ಚಾಗಿ ಅಜ್ಜಿಯ ಪಾತ್ರವೊಂದು ನಾಯಕನಿಗೆ ಸಮಾನಾಂತರವಾಗಿ ಮೆರೆಯುವುದು ಕನ್ನಡ ಪ್ರೇಕ್ಷಕರಿಗೆ ಹೊಸದೆನ್ನಿಸಿತು. ಅಜ್ಜಿ ಪುಟ್ಮಲ್ಲಿಯಾಗಿ ಉಮಾಶ್ರೀ ಅಭಿನಯ, ಅವರ ಪರಿಳಿತಗಳ ಮಾತುಗಳನ್ನು ಪ್ರೇಕ್ಷಕರು ಅಪಾರವಾಗಿ ಇಷ್ಟಪಟ್ಟರು. ಪರಂಪರೆಯ ಪಳೆಯುಳಿಕೆಯಂತೆ ಕಾಣುವ ಪುಟ್ಮಲ್ಲಿ, ಸಮಸ್ಯೆಗಳನ್ನು ಎದುರಿಸುವುದರಲ್ಲಿ ತೋರುವ ದಿಟ್ಟತನ, ತಳೆಯುವ ಜೀವನವೃಷ್ಟಿ ನಮ್ಮ ಸಂಸ್ಕೃತಿಯ ಅಂತಃಸತ್ವವೇ ಆಗಿದ್ದುದು ಚಿತ್ರದ ಯಶಸ್ಸಿನಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ನಾವು ಮರೆಯುತ್ತಿರುವ ಮೌಲ್ಯಗಳನ್ನು ಮಾತಾಗಿಸಿ ಅಜ್ಜಿಯ ಬಾಯಲ್ಲಿ ಹೇಳಿಸಿದ್ದ ರೀತಿ ಉಪದೇಶದ ಮಿತಿಯನ್ನು ಮೀರಿದ ಕಲಾತ್ಮಕತೆಯನ್ನು ಸಾಧಿಸಿಕೊಂಡಿದ್ದುದು ವಿಶೇಷ. ಹವ್ಯಾಸಿ ರಂಗಭೂಮಿ ಹಿನ್ನೆಲೆಯ ಬಿ.ಸುರೇಶ್ ಇಂಥ ಅರ್ಥಪೂರ್ಣ ಸಂಭಾಷಣೆಯಿಂದ ಚಿತ್ರದ ಯಶಸ್ಸಿನ ಇನ್ನೊಂದು ಅಂಶವಾಗಿ ಪರಿಚಿತವಾದರು. ಇವರನ್ನು ಬಿಟ್ಟರೆ ಇದೇ ಸಂದರ್ಭದಲ್ಲಿ ಪ್ರಸ್ತಾಪಿಸಬೇಕಾದ ಇನ್ನೊಂದು ಹೆಸರು ೩೫ ವರ್ಷ ವಯಸ್ಸಿನ ಉಮಾಶ್ರೀಯವರನ್ನು ೭೦ರ ರೂಪಕ್ಕೆ ಬದಲಾಯಿಸಿದ ಪ್ರಸಾಧನ ಕಲಾವಿದ 'ಬಹುರೂಪಿ ನಾಣಿ'. ಸುಕ್ಕುಗಟ್ಟಿದ ಮುಖ, ಗ್ರಾಫ್‌ನಂತಹ ನೆರಿಗೆಗಳು, ಬಿಳಿಕೂದಲ ತಲೆ, ಬಣ್ಣಗೆಟ್ಟ ಹಲ್ಲುಗಳು - ಇವುಗಳ ಸಹಜಸೃಷ್ಟಿ ಉಮಾಶ್ರೀಯವರನ್ನು ಒರಿಜಿನಲ್ ಅಜ್ಜಿಯನ್ನಾಗಿಸಿತ್ತು. ಹವ್ಯಾಸಿ ರಂಗಭೂಮಿಯಿಂದ ಬಂದವರಲ್ಲಿ ರಾಮಕೃಷ್ಣರ ನಂತರ ಮಲ್ಲೇಶ್ ಹರ್ತಿ ಅವರೊಂದಿಗೆ ಅವಶ್ಯಕವಾಗಿ ಪ್ರಸ್ತಾಪಿಸಬೇಕಾದ ಹೆಸರು ಯುವಕಲಾವಿದ ಮೇಕಪ್ ನಾಣಿಯವರದ್ದು. ಇವರ ಪ್ರತಿಭೆಯ ಉದಾಹರಣೆಗಳನ್ನಾಗಿ ಇಲ್ಲಿಯೇ ಕೆಲವು ಚಿತ್ರಗಳನ್ನು ಉಲ್ಲೇಖಿಸಬಹುದು.

'ತರ್ಕ', 'ಭುಜಂಗಯ್ಯನ ದಶಾವತಾರ', 'ಅನ್ವೇಷಣೆ', 'ಸಿಪಾಯಿ', 'ನಿಷ್ಕರ್ಷ' - ಇವು ಮೇಕಪ್ ನಾಣಿಯ ಕೆಲವು ಮುಖ್ಯ ಚಿತ್ರಗಳು. 'ನಿಷ್ಕರ್ಷ'ದಲ್ಲಿ ಮೇಲ್ನೋಟಕ್ಕೆ ಯಾರೂ ಬಣ್ಣ ಹಚ್ಚಿದಂತೆ ಕಾಣುವುದಿಲ್ಲ. ಆದರೆ ಪ್ರತಿಯೊಬ್ಬರಿಗೂ ಮೇಕಪ್ ಮಾಡಲಾಗಿದೆ. ದರೋಡೆಕೋರರು ಬ್ಯಾಂಕ್‌ಗೆ ನುಗ್ಗಿ ಸಿಬ್ಬಂದಿಯನ್ನು ಒತ್ತೆಯಾಳಾಗಿಸಿಕೊಳ್ಳುತ್ತಾರೆ. ಗಂಟೆಗಳು ಕಳೆಯುತ್ತಿದ್ದಂತೆ ಆತಂಕ, ಭಯದಿಂದ ಸಿಬ್ಬಂದಿಯ ಮುಖ ಕಳಾಹೀನವಾಗುತ್ತದೆ. ಈ ಕಳಾಹೀನತೆಯನ್ನು ಅಭಿನಯಕ್ಕಿಂತ ಮಿಗಿಲಾಗಿ ಸೃಷ್ಟಿಸಿದ್ದುದು ನಾಣಿಯವರ ಕಲೆಗಾರಿಕೆ. 'ಭುಜಂಗಯ್ಯನ ದಶಾವತಾರ'ದ ಭುಜಂಗಯ್ಯನಿಗೆ ಕೃತಕ ಕಣ್ಣನ್ನು ಸಹಜವಾಗಿ ಕಾಣುವಂತೆ ಅಳವಡಿಸಿದ್ದರು. ಚಿತ್ರ ಯಶಸ್ವಿಯಾಗದಿದ್ದುದರಿಂದಾಗಿ ತಂತ್ರಗಾರಿಕೆ ಯಾರ ಗಮನಕ್ಕೂ ಬರಲಿಲ್ಲ. 'ತರ್ಕ' ಚಿತ್ರದಲ್ಲಿ ಶಂಕರ್‌ನಾಗ್ ಖಳನ ಕತ್ತು ಕೊಯ್ಯುವ ದೃಶ್ಯ ಸಹಜವಾಗಿ ಮೂಡಿಬಂದಿತ್ತು. 'ಲೇಟೆಕ್ಸ್ ರಬ್ಬರ್' ಬಳಸಿ ಅದನ್ನು ನಿಜವೆನ್ನಿಸುವಂತೆ ಭ್ರಮೆ ಹುಟ್ಟಿಸಲಾಗಿತ್ತು. 'ಅನ್ವೇಷಣೆ' ನೈಜತೆಗೆ ಅಲ್ಲಿನ ಪ್ರತಿಯೊಂದು ಪಾತ್ರಕ್ಕೂ ಮಾಡಲಾಗಿದ್ದ ಹದವಾದ ಮೇಕಪ್ ಕೂಡ ನೆರವಾಗಿತ್ತು.



(ಚಿತ್ರ ೬೬) 'ಪುಟ್ನಂಜ' ಚಿತ್ರದಲ್ಲಿ ಲೋಕೇಶ್, ರವಿಚಂದ್ರನ್, ಮೀನಾ, ಕವಿತಾ ಮತ್ತು ಉಮಾಶ್ರೀ

'ಪುಟ್ನಂಜ' ಯಶಸ್ವಿಯಾಗುವವರೆಗೆ ರವಿಚಂದ್ರನ್‌ಗೆ ಅವರ ಚಿತ್ರಗಳು ತಾಂತ್ರಿಕತೆ ಹಾಗೂ ಅದ್ದೂರಿತನದಿಂದಾಗಿ ಯಶಸ್ವಿಯಾಗುತ್ತವೆ ಎಂಬ ಭಾವನೆಯಿತ್ತು. ಆ ದೃಢವಾದ ನಂಬಿಕೆಯಿಂದ ಅವರು ತಯಾರಿಸಿದ ಚಿತ್ರಗಳು ನಿರಂತರವಾಗಿ ಸೋಲನ್ನುಂಡವು. ಅವರ ನಂಬಿಕೆಯನ್ನು ಬದಲಿಸಿದ್ದು 'ಪುಟ್ನಂಜ'ದ ಯಶಸ್ಸು. ಇದರ ನಂತರ ಒಂದು ಚಿತ್ರದ ಯಶಸ್ಸನ್ನು ಕಥೆ, ಸಂಭಾಷಣೆ, ಮೇಕಪ್ ಹಾಗೂ ಸಂಗೀತ ರೂಪಿಸುತ್ತವೆ ಎಂದು ಅವರು ಸಂದರ್ಶನಗಳಲ್ಲಿ ಹೇಳಿಕೊಂಡಿದ್ದರು. ೨೫ ವಾರಗಳ ಯಶಸ್ವಿ ಪ್ರದರ್ಶನ ಕಂಡ 'ಪುಟ್ನಂಜ' ಬಿಡುಗಡೆಯಾದಾಗ ಸ್ಲ್ಯಾಬ್ ವ್ಯವಸ್ಥೆ ಜಾರಿಯಲ್ಲಿತ್ತು. ಇದು ಚಿತ್ರದ ಗಳಿಕೆ, ಯಶಸ್ಸಿಗೆ ಸಹಕಾರಿಯಾಯಿತು.

ಉತ್ತಮ ನಾಟಕ ನಿರ್ದೇಶಕರೆಂದು ಹೆಸರು ಗಳಿಸಿದ್ದ ಪ್ರತಿಭಾವಂತ ನಟ ಅಶೋಕ್ ಬಾದರದಿನ್ನಿ ನಿರ್ದೇಶನದ ಪ್ರಥಮ ಚಿತ್ರ 'ಗೌರಿಶಂಕರ'. ಬಾದರದಿನ್ನಿ ಪ್ರತಿಭೆಯನ್ನು ಇತರ ವಿಭಾಗಗಳಲ್ಲಿ ಕಾಣುತ್ತಾ ಬಂದಿದ್ದವರು ನಿರ್ದೇಶನದಲ್ಲೂ ಅದನ್ನು ನಿರೀಕ್ಷಿಸಿದ್ದರು. ಆದರೆ ಕೆಲವರ ನಿರೀಕ್ಷೆಯನ್ನು ತಣಿಸುವಲ್ಲಿ ಬಾದರದಿನ್ನಿ ಸಫಲರಾಗಲಿಲ್ಲ. ಚಿತ್ರದ ಕಥೆ ಮೂಢನಂಬಿಕೆಯೊಂದರ ಸುತ್ತ ಬೆಸೆದುಕೊಂಡಿದ್ದು, ಅದನ್ನು ಗೌಡನ ಪಾತ್ರದ ಮೂಲಕ ಬೆಳೆಸುತ್ತ ಹೋಗುವ ರೀತಿಯನ್ನು ಅನುಸರಿಸಿದೆ. 'ಕೊಟ್ರೇಶಿ ಕನಸು' ಚಿತ್ರದಲ್ಲಿರುವಂಥ ಸ್ತಬ್ಧ ಸ್ಲಂ ಇಲ್ಲಿ ಸ್ತಬ್ಧ ಹಳ್ಳಿಯಾಗಿದೆ. ನಿಧಿ ಇರುವ ಜಾಗ ತಿಳಿಯಬೇಕಾದರೆ ಆಗ ತಾನೇ ಹುಟ್ಟಿದ ಮೂರು ಹೆಣ್ಣು ಶಿಶುಗಳ ಬಲಿ ಆಗಬೇಕು ಎಂದು ಮೈಗಳ್ಳ ಮಂತ್ರವಾದಿಯೊಬ್ಬ ಹೇಳುತ್ತಾನೆ. ಅದರಂತೆ ಪರಮ ಲೋಭಿಯಾಗಿದ್ದ ಗೌಡ ಊರಿನ ಪೂಜಾರಿಯ ಜೊತೆ ಸೇರಿಕೊಂಡು ಆ ಕೆಲಸಕ್ಕೆ



(ಚಿತ್ರ ೬೭) 'ಕೊಟ್ರೇಶಿ ಕನಸು' ಚಿತ್ರದಲ್ಲಿ ವಿಜಯರಾಘವೇಂದ್ರ, ಉಮಾಶ್ರೀ ಮತ್ತು ಕರಿಬಸವಯ್ಯ

ಇಳಿಯುತ್ತಾನೆ. ಇಲ್ಲಿ ಮಂತ್ರವಾದಿ ತಾನು ಸುಳ್ಳನ್ನು ಹೇಳುತ್ತಿರುವುದಾಗಿ ಅದನ್ನು ಹೇಳುವಾಗಲೇ ಸ್ವಗತದ ಮಾತುಗಳನ್ನಾಡುವುದರಿಂದ ನಿರೂಪಣೆಯ ಗಾಂಭೀರ್ಯ ಹಾಳಾಗುತ್ತದೆ. 'ಗೌರಿಶಂಕರ'ದಲ್ಲಿ ಕಥೆಗೆ ತಕ್ಕ ವಾತಾವರಣವಿತ್ತು. ಆದರೆ ಪಾತ್ರಧಾರಿಗಳ ಅಭಿನಯದಲ್ಲಿದ್ದ ಅತಿ ನಾಟಕೀಯತೆ ಹಾಗೂ ಅಪಕ್ವ ಚಿತ್ರಕಥೆ ಚಿತ್ರದ ಪರಿಣಾಮವನ್ನು ಹಾಳುಮಾಡಿತ್ತು. ಆದರೆ ವಚನಗಳನ್ನು ಬಳಸಿದ್ದ ಕೆಲವು ಸನ್ನಿವೇಶಗಳು ಉತ್ತಮವಾಗಿದ್ದವು. ಇದರೊಂದಿಗೆ ಹಳ್ಳಿಯ ಪರಿಸರವೇ ಚಿತ್ರದ ಒಂದು ಪಾತ್ರವಾಗಬೇಕಿತ್ತು. ಆದರೆ ಅದನ್ನು ಸಾಧಿಸಿಕೊಳ್ಳುವಂಥ ಪರಿಣತಿಯನ್ನು ನಿರ್ದೇಶಕರು ತೋರಿರಲಿಲ್ಲ. ಮುಂದೆ ಖ್ಯಾತರಾದ ಪಿ.ಶೇಷಾದ್ರಿ ಈ ಚಿತ್ರದ ಸಹನಿರ್ದೇಶಕರು.

ಪ್ರಕೃತಿ ಮತ್ತು ಅದರ ಅಂಶಗಳನ್ನು ಒಂದು ಪ್ರಮುಖ ಅಂಗವಾಗಿ ಅಳವಡಿಸಿಕೊಳ್ಳುವ ಪರಿಣತಿ ನಮ್ಮ ಚಿತ್ರಗಳಲ್ಲಿ ಕಾಣುವುದಿಲ್ಲ. 'ಮರೋ ಚರಿತ್ರ' ಚಿತ್ರದಲ್ಲಿ ಸಮುದ್ರ, 'ಬಾಂಬೆ' ಚಿತ್ರದಲ್ಲಿ ಬೇಕಲ್ ಕೋಟೆ, 'ಕ್ರೌರ್ಯ'ದ ಹಳ್ಳಿ, 'ನಾಗಮಂಡಲ'ದ ಮನೆ, 'ಅನ್ವೇಷಣೆ'ಯಲ್ಲಿ ವಠಾರ ಇವು ಚಿತ್ರಗಳ ಪ್ರಮುಖ ಪಾತ್ರಗಳಾಗಿ ಬಳಕೆಯಾಗಿವೆ. ಕಥೆಯೇ ಬೇಡುವ ಪರಿಸರವನ್ನು ಸೃಷ್ಟಿಸಿಕೊಳ್ಳುವುದು ಅಥವಾ ಸಿದ್ಧ ಪರಿಸರವನ್ನು ಒಗ್ಗಿಸಿಕೊಳ್ಳುವುದು ಇವೆರಡೂ ಈ ಅವಧಿಯಲ್ಲಿ ನಗಣ್ಯವಾಗಿದ್ದ ಅಂಶಗಳು. ಅವರ ಬದಲಿಗೆ ಹೊಸ ಊರಿನಲ್ಲಿ ಹಾಡಿನ ಚಿತ್ರೀಕರಣ, ಪ್ರಾಣಿಗಳ ಚಮತ್ಕಾರ, ಹೆಲಿಕಾಪ್ಟರ್ ಬಳಕೆ - ಈ ಅಂಶಗಳು ಪ್ರಚಾರದ ಅಥವಾ ಲಾಭದ ಅಂಶಗಳಾಗಿ ವಿಜೃಂಭಿಸುತ್ತಿದ್ದವು. ಆದರೆ ಬೇರೆ ಬಗೆಯ ಸೂಕ್ಷ್ಮಗಳನ್ನು ಹೊಂದಿದ್ದ ನಿರ್ದೇಶಕರಾರೂ ಚಿತ್ರದ ವಾತಾವರಣವನ್ನು ಪ್ರತಿಷ್ಠಾಪಿಸುವ ವಿಚಾರದಲ್ಲಿ ಪ್ರತಿಭೆ ತೋರುತ್ತಿರಲಿಲ್ಲವೆಂಬುದು ಈ ದಿನಗಳ ದುಃಖದ ಅಂಶ. 'ಕೊಟ್ರೇಶಿ ಕನಸು' ಹಾಗೂ 'ಆಘಾತ' ಚಿತ್ರಗಳ ನಿರ್ದೇಶಕರು ಕೂಡ ಇಂಥ 'ಪರಿಸರ ಪ್ರಜ್ಞೆ' ಹೊರತಾದ ಚಿತ್ರಗಳನ್ನು ನಿರ್ದೇಶಿಸಿದ್ದಾರೆ.

೧೯೯೫ ರಲ್ಲಿ ತೆರೆಕಂಡ 'ಕೋಟ್ರೇಶಿ ಕನಸು' ಹೆಚ್ಚು ಕಡಿಮೆ ನಿರ್ದೇಶಕರನ್ನು ಹೊರತುಪಡಿಸಿ 'ಚಿನ್ನಾರಿ ಮುತ್ತ' ತಂಡವನ್ನೇ ನಿರ್ಮಾಣದಲ್ಲಿ ತೊಡಗಿಸಿಕೊಂಡಿತ್ತು. ಕುಂ.ವೀರಭದ್ರಪ್ಪ ಅವರ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಕಥೆಯನ್ನು ಆಧರಿಸಿದ್ದ ಈ ಚಿತ್ರದಲ್ಲಿ ದಲಿತ ಬಾಲಕ ಕೊಟ್ರನಾಗಿ ವಿಜಯರಾಘವೇಂದ್ರನ ಅಭಿನಯ ಶ್ರೇಷ್ಠವಾಗಿತ್ತು. 'ಚಿನ್ನಾರಿ ಮುತ್ತ'ಕ್ಕಿಂತ ಭಿನ್ನವಾದ, ಹಿಂದುಳಿದ ವರ್ಗಗಳ ಅಂತರಂಗದ ಧ್ವನಿಗೆ ಒತ್ತುಕೊಡುವಂತೆ ಸಿ.ಅಶ್ವತ್ಥ್ ರಾಗಗಳನ್ನು ಸಂಯೋಜಿಸಿದ್ದರು. ಇದರೊಂದಿಗೆ ೧೯೯೪-೯೫ರ ರಾಜ್ಯದ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರವೆಂದು ಪ್ರಶಸ್ತಿ, ಹಾಗೂ ಮಗನನ್ನು ಹೈಸ್ಕೂಲಿಗೆ ಸೇರಿಸುವ ಕನಸಿನೊಂದಿಗೆ ಪರಿತಪಿಸುವ ದಲಿತ ತಂದೆ-ತಾಯಿಯ ಪಾತ್ರದಲ್ಲಿ ಸಹಜ ಅಭಿನಯ ನೀಡಿದ್ದ ಕರಿಬಸವಯ್ಯ, ಉಮಾಶ್ರೀ ಅವರಿಗೆ ಅತ್ಯುತ್ತಮ ಪೋಷಕ ನಟನೆಗೆ ಪ್ರಶಸ್ತಿ ಲಭ್ಯವಾಯಿತು.

ಅಂತರರಾಷ್ಟ್ರೀಯ ಚಿತ್ರೋತ್ಸವದ ಪನೋರಮಾ ವಿಭಾಗಕ್ಕೆ ಆಯ್ಕೆಯಾಗಿದ್ದ ಈ ಚಿತ್ರ ವಿಜಯರಾಘವೇಂದ್ರನಿಗೆ ಕೇಂದ್ರದ ಶ್ರೇಷ್ಠ ಬಾಲನಟ ಪ್ರಶಸ್ತಿ ತಂದುಕೊಟ್ಟಿತು. ಆ ದಿನಗಳಲ್ಲಿ ಈ ಬಾಲಕಲಾವಿದನಿಗೆ ಹಲವಾರು ಅವಕಾಶಗಳು ಅರಸಿ ಬಂದವಾದರೂ ವಿದ್ಯಾಭ್ಯಾಸಕ್ಕೆ ಪ್ರಾಶಸ್ತ್ಯ ನೀಡುವ ಪೋಷಕರ ಒತ್ತಾಸೆಗೆ ಅನುಗುಣವಾಗಿ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಲಿಲ್ಲ. ಅಭಿನಯಿಸಿರುವ ಕೆಲವೇ ಚಿತ್ರಗಳಲ್ಲಿ ಜಿ.ವಿ.ಅಯ್ಯರ್ ಅವರ 'ವಿವೇಕಾನಂದ' ಚಿತ್ರದ ಬಾಲ ವಿವೇಕಾನಂದನ ಪಾತ್ರ, ಚಿಂದೋಡಿ ಬಂಗಾರೇಶ್ ಅವರ 'ಗಾನಯೋಗಿ ಪಂಚಾಕ್ಷರ ಗವಾಯಿ' (೧೯೯೫) ಚಿತ್ರದ ಕುರುಡ ಬಾಲ ಗವಾಯಿಯ ಪಾತ್ರ, ರೇಣುಕಾಶರ್ಮ ಅವರ ನಿರ್ದೇಶನದ 'ಕೊಲ್ಲೂರು ಶ್ರೀ ಮೂಕಾಂಬಿಕೆ' ಚಿತ್ರದ ಬಾಲ ಶಂಕರಾಚಾರ್ಯನ ಪಾತ್ರಗಳು ಗಮನಾರ್ಹ. ಅಭಿನಯಿಸಿದ ಕೆಲವೇ ಚಿತ್ರಗಳಲ್ಲಿನ ಪಾತ್ರಗಳನ್ನು ಅತ್ಯುತ್ತಮವಾಗಿ ನಿರ್ವಹಿಸಿದ್ದು ಈ ಬಾಲನಟನ ಹೆಗ್ಗಳಿಕೆ.

'ಕೋಟ್ರೇಶಿ ಕನಸು' ಚಿತ್ರದ ಹಳ್ಳಿ ಆಧುನಿಕತೆಯನ್ನೆಲ್ಲ ಜೀರ್ಣಿಸಿಕೊಂಡಂತೆ ಚಿತ್ರಿತವಾಗಿದೆ. ಲುಂಗಿ ಉಡುವ, ಬೈಕ್ ಓಡಿಸುವ ಜನರಿದ್ದಾರೆ. ಇಂಥ ವಾತಾವರಣದಲ್ಲಿ ದಲಿತ ಬಾಲಕ ಕೊಟ್ರ ಹೈಸ್ಕೂಲಿಗೆ ಸೇರಲು ಕಷ್ಟವಾಗುವುದು ಅಸಹಜವಾಗಿ ಕಾಣುತ್ತದೆ. ಹಾಗೆಯೇ ಮಾನಸಿಕ ಆಘಾತಕ್ಕೊಳಗಾಗಿ ಮತ್ತೆ ಚೇತರಿಸಿಕೊಳ್ಳುವ ನಾಯಕಿಪ್ರಧಾನ ಕಥೆಯಿರುವ 'ಆಘಾತ'ದಲ್ಲಿ ಸುಂದರವಾದ ಹೊರಾಂಗಣವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಆದರೆ ಅದು ಪಾತ್ರವಾಗಿಲ್ಲ; ಪಾತ್ರಧಾರಿಗಳು ನಿಂತು ಸಂಭಾಷಣೆ ಒಪ್ಪಿಸುವ ಸೀನರಿ ಮಾತ್ರವಾಗಿ ಕಾಣುತ್ತದೆ. ಪರಿಸರ ಅತ್ಯಂತ ಮುಖ್ಯವಾಗಿದ್ದ ಈ ಎರಡು ಚಿತ್ರಗಳ ಉದಾಹರಣೆಯನ್ನು ಗಮನಿಸಿದರೆ ಯುವಪೀಳಿಗೆಯ ನಿರ್ದೇಶಕರು ಚಿತ್ರವೊಂದರಲ್ಲಿ ವಿನ್ಯಾಸದ ಪರಿಕರಗಳು ಬಹು ಮುಖ್ಯ ಅಂಶ ಎಂದು ಭಾವಿಸುತ್ತಿರಲಿಲ್ಲ ಎಂಬುದು ಸ್ಪಷ್ಟ. ಇಂಥದೇ ಬೇರೊಂದು ಉದಾಹರಣೆ ೧೯೯೫ ರಲ್ಲಿ ಬಿಡುಗಡೆಯಾದ ಶಿವರಾಜ್ ಕುಮಾರ್ ಅಭಿನಯದ ಎರಡು ಚಿತ್ರಗಳಲ್ಲಿವೆ. 'ಗಡಿಬಿಡಿ ಅಳಿಯ' ಚಿತ್ರದಲ್ಲಿ ನಾಯಕ ಕೇವಲ ಟಾಟಾ ಮಾಡುತ್ತಾ ಕೆಳಗಿಳಿಯುವ ಒಂದು ನಿಮಿಷದ ದೃಶ್ಯಕ್ಕಾಗಿ ಹೆಲಿಕಾಪ್ಟರ್ ಬಳಸಲಾಗಿದೆ. 'ಸವ್ಯಸಾಚಿ' ಚಿತ್ರದಲ್ಲಿ ರಾಷ್ಟ್ರಪತಿ ಭವನ ಕಂಡಾಗ ಮಾತ್ರ ದೆಹಲಿ ಅನ್ನಿಸುತ್ತದೆ, ಉಳಿದಂತೆ ಯಾವುದಾದರೂ ಊರಾಗಬಹುದು. ಆದರೆ ಇವೆರಡೂ ಚಿತ್ರದ ಪ್ರಚಾರದಲ್ಲಿ ದೆಹಲಿ ಮತ್ತು ಹೆಲಿಕಾಪ್ಟರ್‌ಗಳನ್ನೇ ಕಥೆಗಿಂತ ಹೆಚ್ಚಾಗಿ ಮೆರೆಸಲಾಗಿತ್ತು. 'ಬಾಂಬೆ' ಚಿತ್ರಕ್ಕೆ ಬಾಂಬೆಯ ಗಲ್ಲಿಯೊಂದರ ಸೆಟ್ ಹಾಕಿ ಪರಿಣಾಮ ಪಡೆದುಕೊಂಡವರ ಉದಾಹರಣೆಗಳನ್ನು ನೋಡುತ್ತಿದ್ದರೂ ನಮ್ಮವರು ಖುದ್ದಾಗಿ ದೆಹಲಿಯನ್ನೇ ದೆಹಲಿಯಂತೆ ಚಿತ್ರಿಸಲಾಗದಷ್ಟು ಕಲ್ಪನೆಯಲ್ಲಿ ಹಾಗೂ ತಾಂತ್ರಿಕತೆಯಲ್ಲಿ ಬಡವರಾಗಿದ್ದರು.

೧೯೯೬ರಲ್ಲಿ ತೆರೆಕಂಡ ಆರು ಮಕ್ಕಳ ಚಿತ್ರಗಳ ಉಬ್ಬರ ನಂತರದ ದಿನಗಳಲ್ಲಿ ಇದ್ದಕ್ಕಿದ್ದಂತೆ ಇಳಿಯಿತು. ೧೯೯೫ ರಲ್ಲಿ ಬಂದ 'ನಾವಿದ್ದೀವಿ ಎಚ್ಚರಿಕೆ' ಮತ್ತು ವಾದಿರಾಜ್ ನಿರ್ದೇಶಿಸಿದ 'ಇನ್ನೊಂದು ಮುಖ' (೧೯೯೮) ಈ ದಶಕದಲ್ಲಿ ನಿರ್ಮಾಣವಾದ ಏಕೈಕ ಮಕ್ಕಳ ಚಿತ್ರಗಳು. (ನೋಡಿ : ಮಕ್ಕಳ ಚಿತ್ರಗಳು)

'ತುಂಬಿದ ಮನೆ' ೧೯೮೮ ರಲ್ಲಿ ತೆರೆಕಂಡು ಯಶಸ್ವಿಯಾಗಿದ್ದ 'ಅವಳೇ ನನ್ನ ಹೆಂಡ್ತಿ' ಚಿತ್ರದ ಪ್ರಭಾಕರ್-ಉಮೇಶ್ ಜೋಡಿ ಏಳು ವರ್ಷಗಳ ನಂತರ ಮತ್ತೆ ಒಂದಾಗಿ ರೂಪಿಸಿದ ಚಿತ್ರ. ಶತದಿನ ಪ್ರದರ್ಶನ ಕಂಡ ಈ ಚಿತ್ರ 'ಒಡಹುಟ್ಟಿದವರು' ಚಿತ್ರದ ಮತ್ತೊಂದು ರೂಪ. ತ್ಯಾಗವೇ ಪ್ರಧಾನವಾಗಿ ಒಳಗೊಂಡಿದ್ದು, ಅವಿಭಕ್ತ ಕುಟುಂಬದ ಸಡಗರ, ಸಂತೋಷದ ಕ್ಷಣಗಳ ಕೆಲವು ದೃಶ್ಯಗಳು ಉತ್ತಮವಾಗಿದ್ದವು. ವಿಷ್ಣುವರ್ಧನ್ ಅವರೊಂದಿಗೆ ಯುವ ಪೀಳಿಗೆಯ ಬಹುತೇಕ ಕಲಾವಿದರು ಈ ಚಿತ್ರದಲ್ಲಿ ಅಭಿನಯಿಸಿದ್ದರು. 'ತಾಯಿ ಇಲ್ಲದ ತವರು' ಚಿತ್ರದಲ್ಲಿದ್ದ ಯಾವುದೇ ಅತಿರೇಕಗಳು, ಮಾನಸಿಕ ಹಿಂಸೆಗಳು ಈ ಚಿತ್ರದಲ್ಲಿ ಇರಲಿಲ್ಲ. 'ತಾಯಿ ಇಲ್ಲದ ತವರು' ಚಿತ್ರದಲ್ಲಿ ಕಣ್ಣೀರನ್ನು ಸುರಿಸಲಿಕ್ಕಾಗಿಯೇ ಸೃಷ್ಟಿಸಿದ್ದ ಸಾವುಗಳ ಬಗ್ಗೆ ಹೇಳಿದರೆ ಈ ಅವಧಿಯಲ್ಲಿ ಒಂದು ಮುಖ್ಯ ಅಲೆಯಾಗಿ ಚಲಾವಣೆಯಲ್ಲಿದ್ದ ಚಿತ್ರಗಳ ಸ್ವರೂಪ ತಿಳಿಯುತ್ತದೆ. ಒಂದು ಮುಖ್ಯ ಅಲೆಯಾಗಿ ಚಲಾವಣೆಯಲ್ಲಿದ್ದ ಚಿತ್ರಗಳ ಸ್ವರೂಪ ತಿಳಿಯುತ್ತದೆ. ಬಿಟ್ಟು ಈ ಚಿತ್ರದ ಎಲ್ಲಾ ಪಾತ್ರಧಾರಿಗಳು ಕೃತಕ

ಹುಟ್ಟಿದ ಹಾಲುಗಲ್ಲದ ಅವಳಿ ಮಕ್ಕಳು, ಮಳೆಯಿಂದಾಗಿ ಅವಳು ಆಶ್ರಯ ಪಡೆದಿದ್ದ ಮಂಟಪದ ಕಲ್ಲು ಬಿದ್ದು ಜಜ್ಜಿ ಹೋಗುತ್ತವೆ. ಮನುಷ್ಯನ ಬದುಕಿನಲ್ಲಿ ಭರವಸೆ, ಆಸೆಗಳನ್ನೇ ಕಮರಿಸುವ ಇಂಥ ಜೀವವಿರೋಧಿ ಚಿತ್ರಗಳು ಕೆಟ್ಟ ರಾಜಕೀಯ ಚಿತ್ರಗಳನ್ನು ದ್ವೇಷಿಸುತ್ತಿದ್ದವರಿಂದ ಆದರಣೆ ಪಡೆದವು. ಈ ಚಿತ್ರಗಳಲ್ಲಿದ್ದದ್ದು ಸ್ವಾತಂತ್ರ್ಯಪೂರ್ವ ಕುಟುಂಬಗಳ ಚಿತ್ರಣ. ಸುಮಾರು ೩೦-೪೦ ವರ್ಷಗಳಷ್ಟು ಹಿಂದಿನ ಮೌಲ್ಯಗಳು, ಆದರ್ಶಗಳು, ಕಲ್ಪನೆಗಳು ಈ ಚಿತ್ರಗಳಲ್ಲಿ ಹೊಸ ಕಲಾವಿದರು, ಹೊಸ ವೇಷಭೂಷಣಗಳ ಮೂಲಕ ಪುನರ್‌ಸೃಷ್ಟಿಯಾಗಿದ್ದವು.

೧೯೯೩ರಲ್ಲೇ ಕುಸಿದಿದ್ದ ಮಾಲಾಶ್ರೀಯ ಇಮೇಜನ್ನು ಮತ್ತೆ ಹೆಚ್ಚಿಸಲು ೧೯೯೪ರಲ್ಲಿ ತಯಾರಾದ 'ಮುತ್ತಿನಂಥ ಹೆಂಡತಿ' ಇಂಥದೇ ಅಂಧಶ್ರದ್ಧೆ, ಮೂಢನಂಬಿಕೆಗಳನ್ನು ತುಂಬಿಕೊಂಡಿದ್ದ ಚಿತ್ರ. ಚಿತ್ರದ ನಿರ್ಮಾಪಕರು ರಾಮು. ಪೇರಾಲ ನಿರ್ದೇಶನದಲ್ಲಿ ಮಾಲಾಶ್ರೀ ಅಭಿನಯಿಸಿದ್ದರು. ಸಾಯಿಕುಮಾರ್, ವಿನಯಾ ಪ್ರಸಾದ್, ರಮೇಶ್‌ಭಟ್ ಮೊದಲಾದವರಿದ್ದರು. ಚಿತ್ರದ ಬಹುತೇಕ ಚಿತ್ರೀಕರಣ ಮುರುಡೇಶ್ವರ ಬಳಿ ನಡೆಯಿತು. ಸೊಗಸಾದ ಪ್ರಕೃತಿ ಸೌಂದರ್ಯವಿತ್ತು. ಈ ಚಿತ್ರದ ಕಥೆ, ನಿರೂಪಣೆಯ ಬಗ್ಗೆ ಚರ್ಚಿಸುವುದಕ್ಕಿಂತ ಮುಖ್ಯವಾಗಿ ಕನ್ನಡ ಚಿತ್ರದಲ್ಲಿ ನಾವು ಕಂಡಿರದ ಸಂಗತಿಯಾದ ಸ್ತ್ರೀಯರೇ ನಾಗಸ್ವರ ನುಡಿಸುವ ಚಿತ್ರಣವಿತ್ತು. ಮಾಲಾಶ್ರೀ ಆ ಪಾತ್ರದಲ್ಲಿ ಉತ್ತಮ ಅಭಿನಯ ನೀಡಿದ್ದರು. ಇದೂ ನಿರ್ಮಾಪಕರ ನಿರೀಕ್ಷೆ ಮೀರಿ ವಿಫಲವಾಯಿತು. ಇದಾದನಂತರದ ವರ್ಷಗಳಲ್ಲೂ ಮಾಲಾಶ್ರೀಯವರನ್ನು ಉಳಿಸಿಕೊಳ್ಳುವ ಒಂದೆರಡು ಪ್ರಯತ್ನಗಳು ಸೋತವು. ೨೦೦೦ನೇ ವರ್ಷದಲ್ಲಿ ರಾಮು ಮತ್ತೆ 'ಚಾಮುಂಡಿ' ಹೆಸರಿನಲ್ಲಿ ಮಾಲಾಶ್ರೀಯವರಿಗಾಗಿ ತೆಗೆದ ಅದ್ದೂರಿ ಚಿತ್ರ ಕೂಡ ಸೋತು ಪ್ರೇಕ್ಷಕರು ಅವರನ್ನು ಸಂಪೂರ್ಣವಾಗಿ ಮರೆತು ಮುಂದೆ ಹೋಗಿಬಿಟ್ಟಿದ್ದಾರೆ ಎಂಬುದಕ್ಕೆ ಅಂತಿಮ ಸಾಕ್ಷಿಯನ್ನೊದಗಿಸಿತು.



(ಚಿತ್ರ ೬೮) 'ಮುತ್ತಿನಂಥ ಹಂಡತಿ' ಚಿತ್ರದಲ್ಲಿ ವಿನಯಾ ಪ್ರಸಾದ್ ಮತ್ತು ಮಾಲಾಶ್ರೀ

ಪ್ರಭಾಕರ್ ನಿರ್ದೇಶನದ 'ಯಮಕಿಂಕರ' ವಿಷ್ಣುವರ್ಧನ್ ಅವರು ಪ್ರಭಾಕರ್ ಮೇಲಿನ ಪ್ರೀತಿಯಿಂದಾಗಿ ಒಪ್ಪಿ ನಟಿಸಿದುದು. ಅವರು ಪಾತ್ರವನ್ನು ತುಂಬಾ ಗಂಭೀರವಾಗಿ ಪರಿಗಣಿಸಿರಲಿಲ್ಲ. ಚಿತ್ರವಿಡೀ ಲಘುಹಾಸ್ಯ, ಸುಲಭ-ಸುಭಗ ಚಲನೆಯಿಂದ ಕೂಡಿತ್ತು. ಚಿತ್ರವಿಡೀ ಈ ನಟರಿಬ್ಬರೂ ಸಲೀಸಾಗಿ ನಟಿಸಿದ್ದಾರೆನ್ನಬಹುದು. ಅದಕ್ಕಾಗುವಂಥ ಹಾಸ್ಯಮಯ ಕಥೆಯೂ ಇತ್ತು. ಯಮಲೋಕದಿಂದ ಬಂದ ಇಬ್ಬರೂ ಹುಡುಗಿಯೊಬ್ಬಳ ಪ್ರಾಣ ಕೊಂಡೊಯ್ಯುವ ಬದಲು ಒಬ್ಬ ಆಕೆಯ ಚೆಲುವಿಗೆ ಮರುಳಾಗಿ ಪ್ರೇಮಿಸಿ ಭೂಲೋಕದಲ್ಲೇ ಇದ್ದರೆ, ಇನ್ನೊಬ್ಬನದೂ ಅದೇ ಸ್ಥಿತಿ. ವಿಚಿತ್ರ ಉಡುಗೆ-ತೊಡುಗೆ, ಅತಿಯಾದ ಹಾವಭಾವ, ಸರಸ ಸಂಭಾಷಣೆಯಿಂದ ಖುಷಿ ಪಡುತ್ತಾರೆ. ಆದರೆ ಆ ಖುಷಿ ಪ್ರೇಕ್ಷಕನಿಗೆ ಸಿಗುವುದು ಕಷ್ಟ. ಹೀಗಾಗಿ ಅದೊಂದು ಪರ್ಸನಲ್ ಕಾಮಿಡಿಯ ರೀತಿ ಉಳಿದುಹೋಯಿತು ಎನ್ನಬಹುದು.

ದ್ವಿಪಾತ್ರದ ಗಲಿಬಿಲಿ ಇರುವ ಮತ್ತೊಂದು ಚಿತ್ರ 'ಮೋಜುಗಾರ ಸೊಗಸುಗಾರ'. ವಿಜಯ್ ನಿರ್ದೇಶನದಲ್ಲಿ ವಿಷ್ಣುವರ್ಧನ್ ಅಭಿನಯ. ಕೆ.ಸಿ.ಎನ್. ಸಂಸ್ಥೆಯ ಕುಮಾರ್ ನಿರ್ಮಾಣ. ಮುಖ್ಯ ಸಂಗತಿಯೆಂದರೆ ಇದು ವಿಷ್ಣುವರ್ಧನ್ ಅವರ ೧೫೦ನೇ ಚಿತ್ರ. ಈ ಚಿತ್ರಕ್ಕೊಂದು ಮೂಲ ಇದೆ-ಇಲ್ಲ ಎಂಬ ಸಂಗತಿ ಮುಖ್ಯವಲ್ಲ. ಈಗಾಗಲೇ ಹೇಳಿರುವ ಹಾಗೆ ಇಂಥ ಅನೇಕ ಚಿತ್ರಗಳು ಕನ್ನಡವೂ ಸೇರಿದಂತೆ ಎಲ್ಲ ಭಾಷೆಗಳಲ್ಲಿ ಸಾಕಷ್ಟು ಬಂದಿದೆ. ಅಂಥದೇ ಒಂದು ಹಾಸ್ಯಮಯ, ಒಂದೇ ರೀತಿ ಇರುವ ಇಬ್ಬರು ಅದಲು-ಬದಲಾದಾಗಿನ ಎಡವಟ್ಟುಗಳ ಕಥೆ. ಈ ಚಿತ್ರದಲ್ಲಿ ಒಬ್ಬ ಪೆದ್ದ, ಇನ್ನೊಬ್ಬ ಒರಟ, ಆದರೆ ಜಾಣ. ಅದಲಿ-ಬದಲಿ ಆದಾಗ ಒರಟನ ಪಾತ್ರ ಮೊಟ್ಟೆ-ಮಾಂಸಗಳನ್ನು ತಿನ್ನುವ ರೀತಿ ತೀರಾ ರೂಕ್ಷ. ಇದನ್ನು ಪ್ರೇಕ್ಷಕರೊಬ್ಬರು ಕಟುವಾಗಿ ಟೀಕಿಸಿ, ಅಕ್ಷಮ್ಯ ಎಂದಿದ್ದರು. ಆ ಚಿತ್ರಿಕೆಗಳು ಅಷ್ಟು ದೀರ್ಘವಾಗಿರಬೇಕಿರಲಿಲ್ಲ ಎನ್ನುವುದಂತೂ ನಿಜ. ಈ ಚಿತ್ರದಲ್ಲಿ ಹಂಸಲೇಖ ಅವರ ಹಾಡುಗಳು ಸೊಗಸಾಗಿದ್ದವು. 'ಮೋಜುಗಾರನಾ.. ಸೊಗಸುಗಾರನಾ.. ಹಾಡುಗಾರನಾ...', 'ಯಾರಮ್ಮ ಇವನು ನಶೆಯ ಹುಡುಗಾ...' ಹಾಡುಗಳು ಹಾಗೂ ವಿಷ್ಣುವರ್ಧನ್ ಹಾಡಿದ್ದ 'ಕನ್ನಡವೇ ನಮ್ಮಮ್ಮ ಅವಳಿಗೆ ಕೈ ಮುಗಿಯಮ್ಮ...' ಗೀತೆ ಜನಪ್ರಿಯವಾಗಿತ್ತು. ಚಿತ್ರದಲ್ಲಿ ಲೋಕೇಶ್, ಸಿಹಿಕಹಿ ಚಂದ್ರು, ವಿಷ್ಣುವರ್ಧನ್ ಅಭಿನಯ ಚೆನ್ನಾಗಿತ್ತು.

'ದೀರ್ಘ ಸುಮಂಗಲಿ' ಡಿ.ರಾಜೇಂದ್ರಬಾಬು ನಿರ್ದೇಶನದ ಚಿತ್ರ. 'ಹಾಲುಂಡ ತವರು' ಚಿತ್ರದ ಯಶಸ್ಸು ಅವರನ್ನು ಅಂಥದೇ ಭಾವಾತಿರೇಕ ಇರುವ ಚಿತ್ರ ಮಾಡಲು ಪ್ರೇರಿಸಿರಬೇಕು. ವಿಷ್ಣುವರ್ಧನ್, ಸಿತಾರಾ ಅಭಿನಯಿಸಿದ್ದರು. ಪ್ರೇಮಿಸಿದ ಹುಡುಗನನ್ನು ಬಿಟ್ಟು ಬೇರೆಯವನನ್ನು ವಿವಾಹವಾದರೂ ಗಂಡನಲ್ಲಿ ಪ್ರೀತಿ, ನಿಷ್ಠೆ ಇರುವ ಹೆಣ್ಣು, ಗಂಡನಿಗೆ ಪಾರ್ಶ್ವವಾಯುವಾಗಿ ಕೈಲಾಗದಾಗ ಹೊರಗೂ ದುಡಿಯುವ ಸ್ಥಿತಿ. ಅಲ್ಲಿಗೆ ಬರುವ ಬಾಸ್ ಅವಳ ಮಾಜಿ ಪ್ರಿಯಕರ. ಇಲ್ಲಿಂದಾಚೆಗೆ ಸಂಶಯ, ಆಕರ್ಷಣೆ, ಅಂತರಂಗದ ತುಮುಲ ಏನೆಲ್ಲಕ್ಕೂ ಅವಕಾಶವುಂಟು. ಅಂಥ ಉತ್ಕಟತೆಯ ಸನ್ನಿವೇಶಗಳೂ ಪದೇ ಪದೇ ನಿರ್ಮಾಣವಾಗುತ್ತವೆ. ಕೆಲವೊಮ್ಮೆ 'ಅತಿ' ಅನ್ನಿಸುವಂಥವು. ಪರಾಕಾಷ್ಠೆಯ ಸನ್ನಿವೇಶಗಳೇ ಎರಡು-ಮೂರು ಬಂದು, ಮತ್ತೆ ಮತ್ತೆ ಆರಂಭಿಸಿದ ಜಾಗಕ್ಕೇ ಬರುವ ಚಿತ್ರನಾಟಕ ರಚನೆಯ ವಿಧಾನದಿಂದಾಗಿ ಪ್ರೇಕ್ಷಕನಿಗೆ ಇರಿಸುಮುರಿಸು. ಅಂತ್ಯದಲ್ಲಿ ದುರಂತವಾಗಲೇಬೇಕೆಂದು ತಂದ ಅಸಹಜ ತಿರುವು. 'ಹಾಲುಂಡ ತವರು'ನಲ್ಲಿ ಚಿತ್ರದ ದೋಷಗಳನ್ನು ಮರೆಸಿಬಿಡುವಷ್ಟು ಸೊಗಸಾದ ಹಾಡುಗಳು, ಛಾಯಾಗ್ರಹಣ ಇತ್ತು. 'ದೀರ್ಘ ಸುಮಂಗಲಿ'ಯಲ್ಲಿ ಅದೇ ಛಾಯಾಗ್ರಾಹಕರಾದರೂ ಎಲ್ಲೋ ಎಡವಿದಂತೆನಿಸುತ್ತದೆ. ಹಾಸ್ಯ ಸನ್ನಿವೇಶಗಳು ಕೂಡಾ ಕೊಂಚ ಸಭ್ಯತೆಯ ಎಲ್ಲೆ ದಾಟಿದ್ದವು. ಇಷ್ಟಾದರೂ ರಾಜೇಂದ್ರ ಬಾಬು ಅವರು ಘಟನೆಗಳನ್ನು ಹೆಣೆಯುವ ರೀತಿ, ಪಾತ್ರಗಳನ್ನು ಪೋಷಿಸುವ ಬಗೆ ಚೆನ್ನಾಗಿತ್ತು. ಒಂದೇ ಒಂದು ಸಣ್ಣ ಪಾತ್ರವೂ ಕಳಚಿಹೋಗದ ಹಾಗೆ ಬಿಗಿಯಾದ ಚಿತ್ರಕಥೆಯನ್ನು, ಅದಕ್ಕೆ ಬೇಕಾದ ಚಿತ್ರಿಕೆಗಳನ್ನು ಸಂಯೋಜಿಸಿದ್ದರು. ಸಾಮಾನ್ಯವಾಗಿ ಅವರೇ ನೃತ್ಯ ನಿರ್ದೇಶನವನ್ನು ಮಾಡುವುದರಿಂದ ಸಂಯೋಜನೆ ಮತ್ತು ವರ್ಣವಿನ್ಯಾಸದಲ್ಲಿ ವಿಶೇಷವನ್ನು ತರುವುದರಲ್ಲಿ ಸಫಲರಾಗಿದ್ದರು.

'ಗಡಿಬಿಡಿ ಅಳಿಯ' ಸಾಯಿಪ್ರಕಾಶ್ ನಿರ್ದೇಶನದ ಚಿತ್ರ. ಶಿವರಾಜ್ ಕುಮಾರ್, ಮಾಲಾಶ್ರೀ ಅಭಿನಯವಿತ್ತು. ಹಾಸ್ಯವೇ ಪ್ರಧಾನ. ಜೊತೆಗೆ ಸಾಮಾನ್ಯವಾಗಿ ನಾವು ನೋಡುವ ಹೆಂಡತಿಯನ್ನು ಮಣಿಸುವ 'ಟೇಮಿಂಗ್ ಆಫ್ ದಿ ಶ್ರೂ' ತಂತ್ರದ ಇನ್ನೊಂದು ರೀತಿಯಾದ ಗರ್ವಿಷ್ಠೆ ಅತ್ತೆಯನ್ನು, ಜೊತೆಗೆ ಅವಳ ಮಗಳನ್ನು ಮಣಿಸುವುದು ಕೇಂದ್ರ ವಸ್ತು. ಅತ್ತೆಯ ಪಾತ್ರದಲ್ಲಿ - ಬಹಳ ದಿನಗಳ ನಂತರ - ಜಯಮಾಲಾ ಅಭಿನಯಿಸಿದ್ದರು. ಹೆಸರಿಗೆ ಅತ್ತೆ ಪಾತ್ರವಾದರೂ ಗ್ಲಾಮರಸ್ ಅತ್ತೆ ಆದ್ದರಿಂದ ಆಕೆಯ ಚೆಲುವಿಗೇನೂ ಭಂಗ ಬರಲಿಲ್ಲ. ಮತ್ತು ಆಕೆ ಸೊಗಸಾಗಿ ಅಭಿನಯಿಸಿದ್ದರು ಕೂಡಾ. ಚಿತ್ರದಲ್ಲಿ ಶಿವರಾಜ್ ಕುಮಾರ್ ಟ್ಯಾಕ್ಸಿ ಡ್ರೈವರ್. ಅವರ ಮೇಲೆ ಸೇಡು ತೀರಿಸಿಕೊಳ್ಳಲು ಪ್ರೇಮದ ನಾಟಕ ಆಡಿ, ಜೈಲಿಗೆ ಹಾಕಿಸುವ ಹುಡುಗಿ



(ಚಿತ್ರ ೬೯)'ಗಣೇಶನ ಗಲಾಟೆ' ಚಿತ್ರದಲ್ಲಿ ಶಶಿಕುಮಾರ್ ಮತ್ತು ಸಿತಾರಾ

ಮೋಹಿನಿ. ಅಮೆರಿಕೆಯ ಅಳಿಯನೇ ಬೇಕೆಂಬ ಅತ್ತೆ ಮತ್ತು ಇಬ್ಬರು ನಾಯಕಿಯರಾದ್ದರಿಂದ ಅಂತ್ಯವನ್ನು ನಿರ್ಧರಿಸಲು ಕಷ್ಟವಾಗಿರಬೇಕು. ಇಬ್ಬರು ಶಿವರಾಜ್ ಕುಮಾರ್‌ರನ್ನು ಮಾಡಲು ಒಬ್ಬನನ್ನು ಅಮೆರಿಕೆಯಿಂದ ಕರೆಸುತ್ತಾರೆ. ಯಾವುದೋ ಕಥೆಯ ಎಳೆ, ತಿರುವುಗಳು ಇಷ್ಟವಾಗಿ ಚಿತ್ರಕ್ಕೆ ಆಯ್ದುಕೊಂಡರೂ ಜನಪ್ರಿಯತೆಯ ಕಾರಣಕ್ಕೆ ನಾಯಕ/ನಾಯಕಿ ಇಮೇಜ್ ಗಮನದಲ್ಲಿಡಲೇ ಬೇಕಾದ್ದರಿಂದ ಚಿತ್ರಕಥೆಯಲ್ಲಿ ಇಂಥ ರಾಜಿ ಅನಿವಾರ್ಯವಾಗುತ್ತದೆ. ಅದು ವಾಣಿಜ್ಯ ವಲಯದ ದೊಡ್ಡ ಸಮಸ್ಯೆ. ಇಲ್ಲಿ ಪ್ರತಿ ನಿಮಿಷಕ್ಕೂ ಕಥೆ ಹೇಳುವುದು, ತನಗೆ ಪ್ರಿಯವಾದಂತೆ ಹೇಳುವುದು ಅನ್ನುವುದಕ್ಕಿಂತ ನಿರ್ದೇಶಕನಿಗೆ ಕೇಂದ್ರ ಪಾತ್ರಗಳ ಇಮೇಜ್ ಅನ್ನು ಬೆಳೆಸುವುದೂ ಮುಖ್ಯವಾಗಿಬಿಡುತ್ತದೆ. ಈ ಅಪಾಯ-ಒಪ್ಪಂದಗಳ ನಡುವೆಯೂ ಅವರು ಸೃಜನಶೀಲರಾಗುವುದಕ್ಕಾಗಿ ಶ್ರಮ ಪಡುತ್ತಿರುತ್ತಾರೆ.

'ಭೂತಾಯಿ ಮಕ್ಕಳು' ಚಿತ್ರವನ್ನು ಸಿದ್ಧಲಿಂಗಯ್ಯ ನಿರ್ದೇಶಿಸಿದರು. ಶಶಿಕುಮಾರ್, ಅಭಿಜಿತ್ ನಟಿಸಿದ್ದರು. ರಾಜನ್-ನಾಗೇಂದ್ರ ಸಂಗೀತವಿತ್ತು. ಚಿತ್ರದಲ್ಲಿ ಅರವಿಂದ್ 'ಮೋಜಾ' ರೀತಿಯಲ್ಲಿ ವಿಭಿನ್ನವಾಗಿ ಕಂಡರು. ತಾಯಿಯಾಗಿ ಜಯಂತಿ ಗಮನ ಸೆಳೆದರು. 'ಬಂಗಾರದ ಕಳಶ' ಭಾರ್ಗವ ನಿರ್ದೇಶನದ ಚೊಕ್ಕಚಿತ್ರ. ಕನ್ನಡ ನೆಲದ ಸೊಗಡಿಲ್ಲ, ಏನೋ ಅನ್ಯತೆ ಅನ್ನಿಸಿತ್ತು. ಮೂಲ ಯಾವುದೋ ಇರಬಹುದು. ಆದರೆ ಚಿತ್ರಿಸಿದ ರೀತಿ, ವಿಷ್ಣುವರ್ಧನ್ ಅಭಿನಯದ ಬಗ್ಗೆ ಎರಡು ಮಾತಿಲ್ಲ. ಚಿಕ್ಕ ಪ್ರಾಯದಲ್ಲಿ ಯಾರಿಂದಲೋ ಯಾತನೆಗೆ ಒಳಗಾದ ತರುಣ, ದೇವಸ್ಥಾನದ ಗೋಪುರವೇ ಅವನ ಮನೆ. ಯಾರಿಗೂ ಜಾಗ ಬಿಡನು, ಅವನ ಅನುಮತಿ ಇಲ್ಲದೆ ಪ್ರವೇಶ ನಿಷಿದ್ಧ. ಬಕಾಸುರನ ಕಥೆಯನ್ನು ನೆನಪಿಸುವ ಹಾಗೆ ಗ್ರಾಮದ ಜನ ನಿತ್ಯ ಒಂದೊಂದು ಮನೆಯವರು ಸರದಿಯಂತೆ ಊಟ ಕೊಡಬೇಕು. ಅದು ನಿಯಮ. ಊರಿಗೇನೋ ಉಪಕಾರಿಯೇ, ಆದರೆ ಶತ ಒರಟ. ಅಂಥವನಲ್ಲಿ ಮನುಷ್ಯತ್ವ ತುಂಬಿ ಸಹಜ ಸ್ಥಿತಿಗೆ ತರುವ ನಾಯಕಿ ಸಿತಾರಾ. ಚಿತ್ರದಲ್ಲಿ ರಮೇಶ್‌ಭಟ್ ಇದ್ದರು. ವೆಣ್ಣಿರಾಡೈ ನಿರ್ಮಲಾ ಅಭಿನಯಿಸಿದ್ದರು.

ಎಂ.ಎಸ್.ರಾಜಶೇಖರ್ ನಿರ್ದೇಶನದ 'ಸವ್ಯಸಾಚಿ' ವಿಜಯ ಸಾಸನೂರರ ಕಾದಂಬರಿ ಆಧಾರಿತ ಚಿತ್ರ. ವೈಜ್ಞಾನಿಕ ಅಂಶಗಳಿದ್ದವು. ಸೂಜಿಮದ್ದಿನಿಂದಾಗಿ ಶಿವರಾಜ್ ಕುಮಾರ್ ಮಾರ್ಪಡುವ ಸನ್ನಿವೇಶಗಳು ಇತ್ಯಾದಿ. ಅಂಥವನ್ನೆಲ್ಲ ಒಪ್ಪಿಕೊಳ್ಳಲು ಜನ ಸಿದ್ಧರಿಲ್ಲ. ಅಂಥ ಸಿದ್ಧತೆಗಳೂ ಆಗಿಲ್ಲ. ಪ್ರೇಮಾ ಮೊದಲ ಬಾರಿಗೆ ನಾಯಕಿಯಾಗಿ ಕಂಡರು. ಹೊರ ರಾಜ್ಯಗಳಲ್ಲಿ ಚಿತ್ರೀಕರಿಸಲಾಗಿತ್ತು.

ಬಿ.ಎಲ್.ನಾಗರಾಜ್ - ಅಂದರೆ ನಾಗಣ್ಣ - ನಿರ್ದೇಶಿಸಿದ ಚಿತ್ರ 'ಲೇಡಿ ಪೊಲೀಸ್'. ರಾಘವೇಂದ್ರ ಪ್ರೊಡಕ್ಷನ್ಸ್ ಲಾಂಛನದಲ್ಲಿ ಕೆ.ಸಿ.ರವಿಚಂದ್ರ, ಶ್ರೀನಿವಾಸ್ ತೆರೆಗಿತ್ತರು. ನಾಗಣ್ಣ ಎಂಥದನ್ನೂ ಜೋಡಿಸಿ ಸುಂದರವಾಗಿಸಬಲ್ಲರು. ಇಲ್ಲಿಯೂ ಅದೇ ಆಯಿತು. ಥ್ರಿಲ್ಲರ್ ಮಂಜು ಅವರ ಸಾಹಸ ನಿರ್ದೇಶನವಿತ್ತು. ಮಾಲಾಶ್ರೀ ವಿಭಿನ್ನವಾಗಿ ಸಾಹಸ ದೃಶ್ಯಗಳಲ್ಲಿ ಭಾಗವಹಿಸಿದ್ದರು. ಆಕೇನೇ ಗ್ಲಾಸ್ ಫೈಟ್ ನಿರ್ವಹಿಸಿದ್ದರು. (ನೋಡಿ : ಸಾಹಸ ಲೇಖನ)

'ಗಣೇಶನ ಗಲಾಟೆ' ಲಹರಿ ಸಂಸ್ಥೆಗಾಗಿ ಸುಧೀಂದ್ರ ಮಾಡಿಕೊಟ್ಟ ಚಿತ್ರ. ಪ್ಯಾಕೇಜ್ ಡೀಲ್ ಇದ್ದ ಹಾಗೆ. ಸಾಧ್ಯವಾದಷ್ಟು ಕಡಿಮೆ ಬಜೆಟ್‌ನಲ್ಲಿ ಕೆಲಸ ಮಾಡಿದರು. ಶಶಿಕುಮಾರ್ ಅಭಿನಯವಿತ್ತು. ಇಂಥ ಹಾಸ್ಯ ಚಿತ್ರಗಳಿಗೆ ಅನಂತ್‌ನಾಗ್ ವಿನಾ ಇನ್ಯಾರೂ ಇಲ್ಲ ಎಂಬುದನ್ನು ಮುರಿದು ಶಶಿಕುಮಾರ್ ಅಭಿನಯಿಸಿದರು. ಸಿಲ್ಕ್‌ಸ್ಮಿತಾ ಒಬ್ಬ ಬಾಡಿಗೆ ಕೊಲೆಗಡುಕಿಯಾಗಿ ಬರುವ ಸನ್ನಿವೇಶಗಳು ಬಿಟ್ಟರೆ ಉಳಿವಂತೆ ಸಾಮಾನ್ಯ ಹಾಸ್ಯಚಿತ್ರ. ಲೈಫ್ ಇನ್ಶೂರೆನ್ಸ್ ಏಜೆಂಟ್ ಪಾತ್ರದವನಾಗಿ ರಮೇಶ್‌ಭಟ್, ಮಧ್ಯಮ ವರ್ಗದ ಕನಸು-ಆಸೆ ಹೊತ್ತು ಕಾಡುವ ಹೆಂಡತಿಯಾಗಿ ಸಿತಾರಾ, ಇವುಗಳ ಮಧ್ಯೆ ಸಾಯಬೇಕೆಂದರೂ ಆಗದೇ ಮತ್ತೆಮತ್ತೆ ಬದುಕಿಬರುವ ಗಂಡ, ಅವನನ್ನು ಕೊಲ್ಲಲು ಬಾಡಿಗೆ ಕೊಲೆಗಾತಿ..... ಹೀಗೆ ಎಲ್ಲೆಲ್ಲೋ ಹೋಗುವ ಕಥೆ, ವಿಚಿತ್ರ ತಿರುವುಗಳು. ಅಂತಿಮ ದೃಶ್ಯದಲ್ಲಿ ಎಲ್‌ಐಸಿ ಏಜೆಂಟ್ ಸಾವು, ಥಟ್ಟನೆ ವಿಷಾದದ ಛಾಯೆ ಆವರಿಸುವಂತಿತ್ತು.

೧೯೯೫ರಲ್ಲಿ 'ಓಂ' ಮೂಲಕ ಕನ್ನಡ ಚಿತ್ರರಂಗ ಒಂದು ಅಪಾಯಕಾರಿ ತಿರುವನ್ನು ಪಡೆದುಕೊಂಡಿತು. ಈ ಚಿತ್ರದಿಂದಾಗಿ ಆವರಿಸಿಕೊಂಡ ವಿಕಾರ ಚಿಂತನೆ ಹಾಗೂ ರಾಕ್ಷಸೀ ಪ್ರವೃತ್ತಿ ಹಲವಾರು ಅನಾಹುತಗಳನ್ನು ಉಂಟುಮಾಡಿತು. ಇದು ಇದ್ದಕ್ಕಿದ್ದಂತೆ ಬೆಳ್ಳಿತೆರೆಯಲ್ಲಿ ಅದುವರೆಗೆ ಇದ್ದ ಪ್ರೇಮ, ಪ್ರಣಯದ ನಿರೂಪಣೆಯ ಹಾದಿಯನ್ನು ಪೂರ್ಣವಾಗಿ ಬದಲಾಯಿಸಿತು. ಇದರೊಂದಿಗೆ ಸಮಾಜದ ನಿಜಜೀವನದ ರೌಡಿಗಳನ್ನು ತುಂಬಾ ಆದರದಿಂದ ಕರೆತಂದು ಚಿತ್ರರಂಗದ ಅಂಗಳದಲ್ಲಿ ನಿಲ್ಲಿಸಿತು. ಮುಚ್ಚುಮರೆ ಹೋಗಿ ತೆರೆದ ಪುಸ್ತಕವಾದ ಚಿತ್ರರಂಗಕ್ಕೆ ನೇರವಾಗಿ ಸಾಲದ ರೂಪದಲ್ಲಿ ಬಂದ ಹಣ, ಅದರ ವಸೂಲಿಗಾಗಿ ತೆಗೆದುಕೊಂಡ ಕ್ರಮಗಳು ಥರಗುಟ್ಟುವಂತೆ ಮಾಡಿತು. ಆದರೆ ಆ ವಿಷಯದಲ್ಲಿ ಹಿಂತಿರುಗಿ ಬರಲಾಗದಷ್ಟು ಮುಂದೆ ಹೋಗಿ ಆಗಿತ್ತು. ಸಾಂಸ್ಕೃತಿಕ ಮಾಧ್ಯಮವಾದ ಚಲನಚಿತ್ರವು ಮೊದಲ ಬಾರಿಗೆ ಪೊಲೀಸು ವ್ಯವಸ್ಥೆಯ ಕಕ್ಷೆಯೊಳಗಡೆ ಬಂದು ನಿಂತಿತು.

ಹಾಗೆ ನೋಡಿದರೆ ಇದೆಲ್ಲ ಮೊದಲಿಗೆ ಆರಂಭವಾದದ್ದು ಕನ್ನಡದಲ್ಲಲ್ಲ. ಮುಂಬೈ ಇದರ ತವರು. ಸ್ವಂತಿಕೆಯ ವಿಷಯದಲ್ಲಿ ದೌರ್ಬಲ್ಯವಿರುವ ಕನ್ನಡ ಚಿತ್ರರಂಗ ಅದರ ಬೆನ್ನಿಗೆ ಬಿದ್ದಿತು. ತಮಿಳು, ತೆಲುಗು, ಮಲೆಯಾಳಂ ಚಿತ್ರರಂಗಗಳು ಸ್ವಂತಿಕೆಯಿಂದ ಮೆರೆಯುತ್ತಿದ್ದ ದಿನಗಳಲ್ಲಿ ಕನ್ನಡ ಚಲನಚಿತ್ರ ಉದ್ಯಮವು ಹಣಕ್ಕಾಗಿ, ಅಸ್ತಿತ್ವಕ್ಕಾಗಿ ಇಂಥ ಮಾರ್ಗವನ್ನು ಅನುಸರಿಸಿದ್ದು ಇತಿಹಾಸದಲ್ಲಿನ ವಿಷಾದದ ದಾಖಲೆ.

ಕನ್ನಡದಲ್ಲಿ ೧೯೭೦ರ ದಶಕಕ್ಕೆ ಇಣುಕು ಹಾಕಿದರೆ 'ನಾಗರಹಾವು' ಕಾಣುತ್ತದೆ. ಈ ಚಿತ್ರದ ನಾಯಕ ರಾಮಾಚಾರಿ ಅಲಮೇಲುವಿನ ಪ್ರೇಮವನ್ನು ಪ್ರೀತಿಯಿಂದ ಗೆದ್ದರೂ ಮಾರ್ಗರೇಟ್‌ಳೊಡನೆ ಆತನ ಪ್ರೀತಿ ಶುರುವಾಗುವುದು ಜಬರ್‌ದಸ್ತಿನ ಮೂಲಕ. ಆಕೆಯ ಮನೆಗೆ ಹೋಗಿ ರಾದ್ಧಾಂತ ಮಾಡಿ, ಒರಟಾಗಿ ಚುಂಬಿಸಿದ ಮೇಲೆ ಅಲ್ಲಿ ಪ್ರೀತಿ ಬೆಳೆಯುತ್ತದೆ. ಆದರೆ ಅಲ್ಲಿ ನಾಯಕಿ ನಾಯಕನನ್ನು ಕೊನೆಯವರೆಗೂ ದ್ವೇಷಿಸುವುದಿಲ್ಲ. ಬಹಳ ಬೇಗನೆ ಅವನಿಗೆ ಒಲಿಯುತ್ತಾಳೆ. ಹಿಂದಿನ ಚಿತ್ರಗಳಲ್ಲಿ ನಾಯಕ ಒರಟನಾಗಲು ಕಾರಣವಿರುತ್ತಿತ್ತು. ವ್ಯವಸ್ಥೆಯ ವಿರುದ್ಧ ಅವನು ಒರಟಾಗಿ ವರ್ತಿಸಿದರೂ ಪ್ರಿಯತಮೆಯ ಮುಂದೆ ಸೋಲುತ್ತಿದ್ದ. ಖಳನಾದರೂ ಪ್ರೇಯಸಿಯ ಮುಂದೆ ಆತ ಸಭ್ಯನಾಗಿರುತ್ತಿದ್ದ. ಬಹಳ ಸಾರಿ ಪ್ರಿಯತಮೆಗಾಗಿ ಅವನು ಖಳನಾಗುತ್ತಿದ್ದುದೂ ಉಂಟು. ಆದರೆ ಇಂಥ ವಾತಾವರಣ ಸಂಪೂರ್ಣವಾಗಿ ಬದಲಾಯಿತು. ರಾಕ್ಷಸ ಪ್ರವೃತ್ತಿಯ ಮುಂದೆ ಪ್ರೇಯಸಿ, ಖಳ ಇಬ್ಬರೂ ಒಂದೇ ಎಂಬಂತಾಯಿತು. 'ನನಗದು ಬೇಕು, ಅದಕ್ಕಾಗಿ ನಾನು ಏನು ಮಾಡಲೂ ಸಿದ್ಧ' ಎಂಬ ಸಮಾಜ ವಿರೋಧಿ ತತ್ವ ವಿಜೃಂಭಿಸತೊಡಗಿತು. 'ಓಂ' ಚಿತ್ರದ ಅನಂತರ ಇಂಥ ಚಿತ್ರಗಳ ಸಾಲುಸಾಲೇ ಬಂದಿವೆ. ಇವುಗಳಲ್ಲಿ 'ಓಂ' ಚಿತ್ರದ ತಾಂತ್ರಿಕತೆ, ದೃಶ್ಯವೈಭವವಿಲ್ಲವಾದರೂ ಇತರ ಅಂಶಗಳು ವೈಭವೀಕರಣವಾದವು.



(ಚಿತ್ರ ೭೦) 'ಓಂ' ಚಿತ್ರದಲ್ಲಿ ಪ್ರೇಮಾ ಮತ್ತು ಶಿವರಾಜ್ ಕುಮಾರ್

'ಓಂ' ಚಿತ್ರ, ಅದು ಹುಟ್ಟುಹಾಕಿದ ಪರಂಪರೆ ಏನೇ ಇರಲಿ, ಅದರ ಗುಣಾಂಶಗಳನ್ನು ಪ್ರಸ್ತಾಪಿಸುವ ಅಗತ್ಯವಿದೆ. ಈ ಚಿತ್ರ ಕಲವು ವೈಶಿಷ್ಟ್ಯಗಳನ್ನು ಒಳಗೊಂಡಿತ್ತು. ವಿಶೇಷವಾಗಿ ಛಾಯಾಗ್ರಹಣ, ಸಂಗೀತ ಶಕ್ತಿಯುತವಾಗಿ ಪ್ರಕಟವಾಗಿದ್ದವು. ಮಾತಿಲ್ಲದ ಸಂದರ್ಭದಲ್ಲಿ, ದೃಶ್ಯದಿಂದ ದೃಶ್ಯಕ್ಕೆ ಪ್ರವೇಶಿಸುವಾಗ ಬಳಸಿರುವ 'ಓಂಕಾರ' ಹಾಗೂ ಕೆಲವು ಕಡೆ ಅತಿ ಹೆಚ್ಚು ವಾದ್ಯಗಳನ್ನು ಬಳಸಿ ಶಬ್ದ ಜಲಪಾತವನ್ನು ಧುಮ್ಮಿಕ್ಕಿಸಿರುವ ರೀತಿ ಚಿತ್ರದ ತೀವ್ರತೆಯನ್ನು ಹೆಚ್ಚಿಸುವಲ್ಲಿ ಬಹುಮುಖ್ಯ ಪಾತ್ರ ನಿರ್ವಹಿಸಿತ್ತು. ಇವರೊಂದಿಗೆ ಕಥೆಯ ಕೇಂದ್ರ ಭಾವಕ್ಕೆ ಒತ್ತುಕೊಡಲು ಇಡೀ ಚಿತ್ರವನ್ನು ಕೆಂಪು ಬಣ್ಣದಲ್ಲಿ ಚಿತ್ರಿಸಿರುವ ಜಾಣತನ ಮೆಚ್ಚುಗೆ ಹುಟ್ಟಿಸಿದರೂ ಕೆಲವು ಸನ್ನಿವೇಶಗಳು ಆ ಬಣ್ಣ ಉಂಟುಮಾಡುವ ಭಾವನೆಗೆ ಹೊಂದುತ್ತಿರಲಿಲ್ಲವಾದ್ದರಿಂದ ಆಭಾಸವೆನಿಸಿ ಕಣ್ಣಿಗೆ ಕಿರಿಕಿರಿ ಉಂಟುಮಾಡುವಂತಿತ್ತು. ಇನ್ನು ತೀವ್ರವಾಗಿ ಪ್ರೀತಿಸುವ, ಉಗ್ರವಾಗಿ ದ್ವೇಷಿಸುವ ಸ್ವಭಾವದ ಸತ್ಯನ ಪಾತ್ರದಲ್ಲಿ ಶಿವರಾಜ್ ಕುಮಾರ್ ಉತ್ತಮವಾಗಿ ಅಭಿನಯಿಸಿದ್ದರು. ಈ ಚಿತ್ರಕ್ಕೆ ೧೯೯೫-೯೬ರ ನಾಲ್ಕು ರಾಜ್ಯ ಪ್ರಶಸ್ತಿಗಳು ಲಭ್ಯವಾದವು. ಅತ್ಯುತ್ತಮ ನಟ, ನಟಿ ಪ್ರಶಸ್ತಿಗಳು ಶಿವರಾಜ್ ಕುಮಾರ್ ಮತ್ತು ಪ್ರೇಮ ಪಾಲಾದರೆ, ಛಾಯಾಗ್ರಹಣಕ್ಕೆ ಬಿ.ಸಿ.ಗೌರಿಶಂಕರ್, ಚಿತ್ರಕಥೆಗೆ ಉಪೇಂದ್ರ ಪ್ರಶಸ್ತಿ ಗಳಿಸಿದರು.

ಇದೇ ದಿನಗಳಲ್ಲಿ 'ಬೆಳದಿಂಗಳ ಬಾಲೆ', 'ಗಾನಯೋಗಿ ಪಂಚಾಕ್ಷರ ಗವಾಯಿ', 'ಅನುರಾಗ ಸಂಗಮ'ದಂಥ ಚಿತ್ರಗಳು ತಯಾರಾಗಿದ್ದವೆಂಬುದು ಕನ್ನಡ ಚಿತ್ರರಂಗದ ಆಶಾಕಿರಣವಾಗಿ, ಸೌಭಾಗ್ಯವಾಗಿ ಕಾಣುತ್ತದೆ. ಯಾವ ಹುಡುಗಿಯೂ ಇಲ್ಲದ, ಕೇವಲ ಅವಳ ಮೋಹಕ ಧ್ವನಿಯ ಜಾಡನ್ನು ಹಿಡಿದು ಪ್ರೇಮ ತೋಡಿಕೊಳ್ಳುವ ಅಪರೂಪದ ಪ್ರೇಮಕಥೆಯ 'ಬೆಳದಿಂಗಳ ಬಾಲೆ' ಚಿತ್ರಿಸಿ ಸುನೀಲ್ ಕುಮಾರ್ ದೇಸಾಯಿ ದೊಡ್ಡದನ್ನು ಸಾಧಿಸಿದ್ದರು. ಕಳೆದ ಹತ್ತು ವರ್ಷಗಳಲ್ಲಿ ಉಂಟಾಗಿದ್ದ ಕೊರತೆಯನ್ನು ಇದೊಂದು ಚಿತ್ರದ ಮೂಲಕ ತುಂಬಿಕೊಳ್ಳಲು ಸಾಧ್ಯವಿದೆಯೇನೋ ಎಂಬಂತಿತ್ತು ಈ ಚಿತ್ರ ಉಂಟುಮಾಡಿದ ಅನುಭವ. 'ಓಂ' ಚಿತ್ರದ ಓಟ ಉದ್ವೇಗದಿಂದ-ಉದ್ವೇಗಕ್ಕೆ ಜಿಗಿಯುವಂತಿದ್ದರೆ, 'ಬೆಳದಿಂಗಳ ಬಾಲೆ' ಚಿತ್ರ ಕುತೂಹಲದಿಂದ-ಉದ್ವೇಗಕ್ಕೆ, ಉದ್ವೇಗದಿಂದ-ಸಮಾಧಾನಕ್ಕೆ, ಸಮಾಧಾನದಿಂದ-ಶಾಂತಿಗೆ ಬೆಳವಣಿಗೆ ಕಂಡಿತ್ತು. ಉಪೇಂದ್ರ ಕುತೂಹಲವನ್ನು ಹಿಂಸೆಗಳಿಂದ ಬೆಳೆಸಿದರೆ, ದೇಸಾಯಿ ಅದನ್ನೇ ರಂಜನೆಯ ಮೂಲಕ ಸಾಧಿಸಿದ್ದುದು ಚಿತ್ರವನ್ನು ೧೫ ವಾರಗಳ ಯಶಸ್ವಿ ಪ್ರದರ್ಶನ ಕಾಣುವಂತೆ ಮಾಡಿತ್ತು. ಇದಕ್ಕಿಂತ ಭಿನ್ನವಾಗಿ 'ಗಾನಯೋಗಿ ಪಂಚಾಕ್ಷರ ಗವಾಯಿ' ಚಿತ್ರವಿತ್ತು.

'ಬೆಳದಿಂಗಳ ಬಾಲೆ', 'ಗಾನಯೋಗಿ ಪಂಚಾಕ್ಷರ ಗವಾಯಿ' ಚಿತ್ರಗಳಲ್ಲಿ ಕೆಲವು ಅಸೂಹ್ಯ ದರ್ಶನಗಳಿವೆ. 'ಬೆಳದಿಂಗಳ ಬಾಲೆ'ಯಲ್ಲಿನ ಅನ್ವೇಷಣೆ ಮನುಷ್ಯನ ಸಂತೋಷ ಹುಡುಕಿಕೊಳ್ಳುವ ಬಯಕೆಯನ್ನು ದಾಖಲಿಸುತ್ತದೆ. ಪಂಚಾಕ್ಷರ ಗವಾಯಿಗಳ ತ್ಯಾಗಮಯ ಬದುಕು ಇದ್ದಲ್ಲೇ, ಇರುವುದರಲ್ಲೇ ಎಲ್ಲವನ್ನು ಕಂಡುಕೊಳ್ಳುವ ಆದರ್ಶವನ್ನು ಹೇಳುತ್ತದೆ. ಹಾಗೆ ನೋಡಿದರೆ 'ಪರಮಾತ್ಮ'ನ ನಾಮಸ್ಮರಣೆಯಲ್ಲಿಯೇ ಕಳೆಯುವ ಗವಾಯಿಗಳ ಒಟ್ಟು ಬದುಕು ಹುಟ್ಟಿದ ನೆಲದ 'ಮೋಹ'ದಿಂದ ಒಂದಿಂಚೂ ಆಚೀಚೆ ಸರಿಯುವುದಿಲ್ಲ.

'ಹೆಂಡತಿ ಎಂದರೆ ಹೀಗಿರಬೇಕು' ಕಾಶೀನಾಥ್ ಚಿತ್ರ. ಅವರು ಈ ಬಾರಿ ತಮ್ಮ ತುಂಟತನಕ್ಕೆ ಆಧಾರವಾಗಿಸಿಕೊಂಡದ್ದು ಎಂ.ಕೆ.ಇಂದಿರಾ ಅವರ 'ಕೂಚು ಭಟ್ಟ' ಕಾದಂಬರಿಯನ್ನು. ಚಿತ್ರದ ಬಗ್ಗೆ ಸೆನ್ಸಾರ್‌ನಲ್ಲಿ ತಕರಾರುಗಳೆದ್ದಾಗ ಪತ್ರಿಕಾಗೋಷ್ಠಿಯಲ್ಲಿ ಹೇಳಿದ್ದೂ ಈ 'ಕೂಚು ಭಟ್ಟ'ದ ಬಗ್ಗೆಯೇ. ಬರವಣಿಗೆಗೂ, ಅದು ದೃಶ್ಯವಾದಾಗಿನ ಪರಿಣಾಮಕ್ಕೂ ವ್ಯತ್ಯಾಸ ಗೊತ್ತಿಲ್ಲದವರಲ್ಲ ಕಾಶೀನಾಥ್. ಅವರ ಜಾಣತನ ಗುಣಾತ್ಮಕವಾಗದೇ ಇಂಥ ಸಮರ್ಥನೆಗಳಿಗೇ ಎಸೆಯೋಗವಾದದ್ದೊಂದು ದುರಂತ. ಸ್ತ್ರೀ ಸೌಂದರ್ಯದ ಬಗ್ಗೆ ಕಲ್ಪನೆಗಳು ಎಷ್ಟು ಹುಸಿ ಎಂಬುದನ್ನು ಖಚಿತ ಪಡಿಸಲು ಕಾವ್ಯದ ವರ್ಣನೆಗಳನ್ನೆಲ್ಲ ದೃಶ್ಯವಾಗಿಸಿದ್ದರು. ಈ ಚಿತ್ರದ ನಿರ್ದೇಶನದ ಜೊತೆ ಸಂಗೀತವನ್ನೂ ನಿರ್ವಹಿಸಿದ್ದರು. ಕಾಶೀನಾಥ್ ಆಲೋಚನೆಗಳಲ್ಲಿ ದೋಷವಿಲ್ಲ, ಅವುಗಳ ನಿರೂಪಣೆಯಲ್ಲಿದ್ದ ಹುಡುಗಾಟ, ರೂಕ್ಷತೆ ಅವರನ್ನು ಪದೇ ಪದೇ ಪೇಚಿಗೆ ಸಿಕ್ಕಿಸಿದೆ. ಅಂಥದೇ ಚಿತ್ರ 'ಹೆಂಡತಿ ಎಂದರೆ ಹೀಗಿರಬೇಕು' ಕೂಡಾ.

'ಓಹೋ' ಎಚ್.ಎಸ್.ಶಂಕರ್ ನಿರ್ದೇಶನದ ಚಿತ್ರ. ಎಂ.ಸಾಂಬಶಿವರಾವ್ ನಿರ್ಮಾಪಕರು. ಎಸ್.ನಾರಾಯಣ್ ಚಿತ್ರಕಥೆ, ಸಂಭಾಷಣೆಗಳನ್ನು ಗಮನಿಸುವುದಕ್ಕಿಂತ ಹೆಚ್ಚಾಗಿ ಅಭಿನಯಿಸುವ ಬಯಕೆಯಿಂದ ಈ ಚಿತ್ರದಲ್ಲಿ ನಾಯಕನಾಗಿ ಮೊಟ್ಟಮೊದಲ ಬಾರಿಗೆ ಅಭಿನಯಿಸಿದರು. ಶ್ರೀವಾಣಿ ಅವರಿಗೆ




(ಚಿತ್ರ ೭೧) 'ಬೆಳದಿಂಗಳ ಬಾಲೆ' ಚಿತ್ರದಲ್ಲಿ ಅವಿನಾಶ್ ಮತ್ತು ಅನಂತ್‌ನಾಗ್



(ಚಿತ್ರ ೭೨)'ಈಶ್ವರ್' ಚಿತ್ರದಲ್ಲಿ ಜಗ್ಗೇಶ್

ಜೋಡಿಯಾದರು. ಸಾಧುಕೋಕಿಲಾ ಸಂಗೀತದಲ್ಲಿ ಕೆಲವು ಝಳಕು-ಸೆಳಕುಗಳನ್ನು ಕಾಣಬಹುದಿತ್ತು. ಅವರು ಅಂದುಕೊಂಡಂತೆ ಭರ್ಜರಿಯಾಗಿ ಚಿತ್ರ ಓಡಲಿಲ್ಲ. ನಿರ್ಮಾಪಕರಿಗಷ್ಟು ಖೋತಾ ಬಜೆಟ್ ಆಯಿತು.

'ಕಲ್ಯಾಣೋತ್ಸವ' ಎಸ್.ವಿ.ರಾಜೇಂದ್ರಸಿಂಗ್ ಬಾಬು ನಿರ್ದೇಶನದ ಚಿತ್ರ. ಜೈಜಗದೀಶ್ ಹಾಗೂ ದುಶ್ಯಂತ್‌ಸಿಂಗ್ ನಿರ್ಮಾಣದಲ್ಲಿ ಬಂದ ಚಿತ್ರ. ಅಂಬರೀಷ್ ವಿಭಿನ್ನ ಪಾತ್ರದಲ್ಲಿ ಕಾಣಿಸಿಕೊಂಡರು. ಅಭಿನಯವೂ ಮೆಚ್ಚುವಂತಿತ್ತು. ವಿನಯಾ ಪ್ರಸಾದ್, ಎಸ್.ಪಿ.ಬಾಲಸುಬ್ರಹ್ಮಣ್ಯಂ ಅಭಿನಯಿಸಿದ್ದರು. ಹಂಸಲೇಖ ಸಂಗೀತದಲ್ಲೂ ಹಿತವಿತ್ತು. 'ಪ್ರೀತಿ ಮಾಡೋ ಹುಡುಗರಾ, ಜಯಿಸಿ ನಿಮ್ಮ ಹಿರಿಯರಾ...'ಗೀತೆಯನ್ನು ಬಾಲಸುಬ್ರಹ್ಮಣ್ಯಂ ಹಾಡಿದ್ದರು. ಅವರದೇ ಅಭಿನಯವೂ ಇತ್ತು.

'ಈಶ್ವರ್' ಚಿತ್ರದಲ್ಲಿ ಜಗ್ಗೇಶ್ ಒಂಬತ್ತು ಪಾತ್ರಗಳಲ್ಲಿದ್ದಾರೆ. ಬೇರೆ ಬೇರೆ ವಯೋಮಾನ, ಸ್ವಭಾವ, ಗೆಟಪ್ ಎಲ್ಲ ಇದ್ದೂ ಅಭಿನಯ ವಿಭಿನ್ನ ಅನ್ನಿಸುವುದಿಲ್ಲ. ಒಮ್ಮೊಮ್ಮೆ ಟೆನ್ನಿಸ್ ಕೃಷ್ಣರನ್ನು ನೆನಪಿಸುತ್ತಾರೆ. ಮತ್ತೊಮ್ಮೆ ತೀರಾ ಹೆಣ್ಣುಹೆಣ್ಣಾಗಿ ಆಡಿ ಆಭಾಸ ಮಾಡಿಕೊಂಡರೆ, ಒಂದೆರಡು ಪಾತ್ರ ಅದೇ ರೀತಿ ಮೌಲ್ಡ್ ಮಾಡಿಕೊಂಡಿದ್ದಾರೆ. ಚಿತ್ರದಲ್ಲಿ ಬಹುತೇಕ ಪಾತ್ರಗಳು ಮನಸ್ಸಿನಲ್ಲೇ ಮಾತನಾಡಿಕೊಳ್ಳುತ್ತವೆ. ಕ್ರಿಯೆಗಿಂತ ಸ್ವಗತಕ್ಕೇ ಒತ್ತು. ಛೇಸಿಂಗ್ ಮತ್ತಿತರ ಕಡೆಗಳಲ್ಲಿ ಹಿನ್ನೆಲೆ ಸಂಗೀತ ವಿಶಿಷ್ಟವಾಗಿ ಸಂಯೋಜಿಸಲಾಗಿದೆ. ಅಗಲಿದ ಪ್ರಣಯಿಗಳು ಬೇರೆ ಬೇರೆ ಕೋಣೆಗಳಲ್ಲಿ ಪ್ರಣಯಗೀತೆ ಹಾಡುತ್ತಾ ಹಾಡಿನ ಧ್ವನಿಮುದ್ರಣದಲ್ಲಿ ಭಾಗವಹಿಸಿ, ಅನಂತರ ಭೇಟಿಯಾಗುವ ಪರಿಕಲ್ಪನೆ ಚೆನ್ನ. ಉಳಿದಂತೆ ಜಗ್ಗೇಶ್ ಒಂಬತ್ತು ಪಾತ್ರ ನಿರ್ವಹಿಸಿದರು ಎಂಬುದಷ್ಟೇ ವಿಶೇಷ. ಚಿತ್ರದ ಪ್ರಾರಂಭದ ದೃಶ್ಯದಲ್ಲೇ ವೃದ್ಧ ಶ್ರೀಮಂತ ತನ್ನ ಕಂಪೆನಿ ಕೆಲಸಗಾರನ ಬಳಿ ಮಾತನಾಡುತ್ತ ಪತ್ರಕರ್ತರ ಬಗ್ಗೆ ಅಸಮಾಧಾನ ವ್ಯಕ್ತಪಡಿಸುವ ಪ್ರಸಂಗವೊಂದಿದೆ. ಅದು ಅವರನ್ನು ಟೀಕಿಸುವ ಪತ್ರಕರ್ತರಿಗೆ ಉತ್ತರವಾಗಿರಬಹುದು.

'ಮಹಾ ಚತುರ' ರೇಖಾ ಮಲ್ಲು ನಿರ್ಮಿಸಿದರು. ಮಲ್ಲು ಅವರದೇ ಕಥೆ, ಚಿತ್ರಕಥೆ, ಸಂಭಾಷಣೆ, ಸಂಗೀತ, ಗಾಯನ, ಅಭಿನಯ ಹಾಗೂ ನಿರ್ದೇಶನ. ಜೊತೆಗೆ ದ್ವಿಪಾತ್ರ ನಿರ್ವಹಣೆ. ಕನ್ಯೆಯರ ಸರಣಿ ಕೊಲೆಯ ಹಿಂದೆ ಕಾರಣ ಹುಡುಕುವ ಕುತೂಹಲವಿದ್ದ ಚಿತ್ರ. ವಿಚಿತ್ರ ಮನೋವಿಕಲತೆಯಿದ್ದವನ ಪಾತ್ರದಲ್ಲಿ ಮದನ್ ಮಲ್ಲು ಅಭಿನಯಿಸಿದರು. ಕಥೆಯಲ್ಲಿ ವಿಶೇಷವಿತ್ತಾದರೂ ಎಲ್ಲವೂ ತಾನೇ ಆಗಲು ಹೋಗಿ ಮಲ್ಲು ಅವರಿಗೆ ನ್ಯಾಯ ಒದಗಿಸಲಾಗಲಿಲ್ಲ.

'ಶ್ರೀಗಂಧ' ಒಂದು ಉತ್ತಮ ಚಿತ್ರವಾಗಿದ್ದರೂ ಅದರಲ್ಲಿ ಮುಖ್ಯ ಅಂಶವಾಗಿರುವುದು 'ಪ್ರೇಮ', 'ಮದುವೆ'. 'ಗವಾಯಿ' ಹಾಗೂ 'ಬೆಳದಿಂಗಳ ಬಾಲೆ'ಯಲ್ಲಿ ಭಿನ್ನಗೊಳ್ಳುವುದರಲ್ಲಿ ತನ್ನ ಶ್ರೇಷ್ಠತೆಯನ್ನು ಸಾಧಿಸಿಕೊಳ್ಳುತ್ತದೆ. 'ಶ್ರೀಗಂಧ'ಚಿತ್ರದಲ್ಲಿ ಅತಿ ಮುಖ್ಯವೆನಿಸುವ'ಮದುವೆ'ಉಳಿದೆರಡು ಚಿತ್ರಗಳಲ್ಲಿ ಕೆಲವು ಕ್ಷಣಗಳ ಸಂಚಾರಿಭಾವ ಮಾತ್ರ. ಈ ಕಾರಣದಿಂದಾಗಿಯೇ ಇವೆರಡು ಚಿತ್ರಗಳು ಆ ದಿನಗಳ ಧೈರ್ಯದ ಪ್ರಯತ್ನಗಳಾಗಿ ಕಾಣುತ್ತವೆ. ಪಿ.ಹೆಚ್.ವಿಶ್ವನಾಥ್ ಅವರ ನಿರ್ದೇಶನದ 'ಶ್ರೀಗಂಧ' ನಿರ್ದಿಷ್ಟ ಸೂತ್ರದ ಚೌಕಟ್ಟಿನಲ್ಲೂ ವಿಶೇಷವಾಗಿದ್ದ ಚಿತ್ರ. ರಮೇಶ್, ಸುಧಾರಾಣಿ ಶ್ರೇಷ್ಠ ಅಭಿನಯ, ಕೆ.ರಾಮಯ್ಯ ಶ್ರೇಷ್ಠ ಸಂಭಾಷಣೆ ಎಲ್ಲ ಇದ್ದರೂ ಕಥೆಗೇ ಇದ್ದ ಮಿತಿಯಿಂದಾಗಿ ಅವಕ್ಕೆ ಶ್ರೇಷ್ಠತೆ ಪ್ರಾಪ್ತವಾಗಿರಲಿಲ್ಲ. ಪಿ.ಹೆಚ್.ವಿಶ್ವನಾಥ್ ಈ ದಶಕದ ಕೆಲವೇ ಯುವನಿರ್ದೇಶಕರಲ್ಲಿ ಮುಖ್ಯರಾದವರು. ಪಾತ್ರಗಳಿಗೆ ವೈವಿಧ್ಯ ತರುವುದರಿಂದ ಹಿಡಿದು, ಚಿತ್ರಕಥೆಯ ಪರಿಳಿತಗಳನ್ನು ಪ್ರಮಾಣಬದ್ಧವಾಗಿ ಹೆಣೆಯುವುದರಲ್ಲಿ ವಿಶೇಷ ಪರಿಣತಿ ತೋರಿದ್ದಾರೆ. ಅತ್ಯಂತ ಸಾಧಾರಣ ಪ್ರೇಮಕಥೆಯಲ್ಲಿ ಕೂಡ ಮಾತು ಮತ್ತು ಮೌನಗಳ ಬಳಕೆಯನ್ನು ಸಾಂದರ್ಭಿಕವಾಗಿ ಯೋಜಿಸಿದ್ದಾರೆ. ಇವರ ವೈಶಿಷ್ಟ್ಯವಿರುವುದು ದೃಶ್ಯಗಳನ್ನು ಆರಂಭಿಸುವ ರೀತಿಯಲ್ಲಿ ಹಾಗೂ ಮಾತನ್ನು ತಡೆದು ಭಾವನೆಗಳಿಗೆ ಜಾಗವನ್ನು ಆಯೋಜಿಸುವುದರಲ್ಲಿ. ಭಾವಾವೇಶದ ಸನ್ನಿವೇಶವಲ್ಲಿ ಮುಖ್ಯ ಪಾತ್ರದಿಂದ ಅವರು ಮಾತನ್ನೇ ಆಡಿಸುವುದಿಲ್ಲ. ಇವರಿಂದಾಗಿ ಅಲ್ಲಿನ ಮಾತು ಪ್ರೇಕ್ಷಕರದಾಗಿರುತ್ತದೆ. 'ಶ್ರೀಗಂಧ' ಚಿತ್ರದಲ್ಲಿ ನಾಯಕಿ ಕಾರಿನ ಗಾಜು ಒಡೆದು ಪುಡಿಪುಡಿ ಮಾಡುವ ದೃಶ್ಯ ಹಾಗೂ ನಾಯಕಿಯನ್ನು ಹುಡುಕಿ ನಾಯಕ ಆಕೆಯ ಕೋಣೆಗೆ ಬರುವ ದೃಶ್ಯಗಳು ಇಂಥ ತಂತ್ರದಿಂದಾಗಿ ಶಕ್ತವಾಗಿ ಹೊರಹೊಮ್ಮಿವೆ. ಚಿತ್ರದ ಇಂಥ ಹಲವಾರು ಸನ್ನಿವೇಶಗಳಲ್ಲಿ ನಾಯಕ ಅಥವಾ ನಾಯಕಿ ಏನು ಹೇಳಬೇಕಾಗಿತ್ತು ಅಥವಾ ಏನನ್ನು ಹೇಳಬಾರದಿತ್ತು ಎಂಬುದನ್ನು ಪ್ರೇಕ್ಷಕರೇ ಆಡುವಂತಾಗುತ್ತದೆ. ಮಾತಿಗಿಂತ ದೃಶ್ಯಶಕ್ತಿಯ ಮೇಲೆ ನಂಬಿಕೆಯಿಟ್ಟಿರುವ ಕೆಲವೇ ಕೆಲವರಲ್ಲಿ ಪಿ.ಹೆಚ್.ವಿಶ್ವನಾಥ್ ಒಬ್ಬರು.

'ಆಟ ಹುಡುಗಾಟ' ಚಿತ್ರದಲ್ಲಿ ರಾಘವೇಂದ್ರ ರಾಜಕುಮಾರ್, ಪ್ರೇಮಾ ಅಭಿನಯಿಸಿದ್ದರು. ಸ್ವಾತಿ ಇದ್ದರು. ಇದು ಹಿಂದಿಯ 'ಕಿಲಾಡಿ' ಪುನರಾವರ್ತಿತ ಚಿತ್ರ. ಬಿ.ರಾಮಮೂರ್ತಿ ಲೆಕ್ಕಕ್ಕೆ ಮತ್ತೊಂದು ಸೇರ್ಪಡೆ. ವಿ.ಸತ್ಯನಾರಾಯಣ ಚಿತ್ರ ನಿರ್ಮಿಸಿದರು. ಚೆನ್ನಾಗಿ ಆಗಬಹುದಾದ್ದನ್ನು ಸಾಕಷ್ಟು ಶ್ರದ್ಧೆ ತೋರಿಸದೆ ಕಳೆದುಕೊಂಡಂತಾಯಿತು. ಸಾಧು ಕೋಕಿಲಾ ಸಂಗೀತದಲ್ಲಿ 'ಆ ಬೆಳ್ಳಿ ಚುಕ್ಕಿ ಕದ್ದು ಕದ್ದು ನನ್ನ ನೋಡಿದೆ....' ಹಾಡೊಂದೇ ಮೆಚ್ಚಾಗಿದ್ದು.

'ಮನ ಮಿಡಿಯಿತು' ಎಂ.ಎಸ್.ರಾಜಶೇಖರ್ ನಿರ್ದೇಶನದ ಚಿತ್ರ. ರಾಜಶೇಖರ್ ಅವರೇ ನಿರ್ಮಾಪಕರು. ಅವರ ಚಿತ್ರಗಳ ಸೋಲು-ಗೆಲುವಿನ ಮಾತು ಹೇಗೂ ಇರಲಿ,



(ಚಿತ್ರ ೭೩)'ಶ್ರೀಗಂಧ' ಚಿತ್ರದಲ್ಲಿ ಸುಷ್ಮಾ ಮತ್ತು ಸುಧಾರಾಣಿ



(ಚಿತ್ರ ೭೪) 'ಗಾನಯೋಗಿ ಪಂಚಾಕ್ಷರ ಗವಾಯಿ' ಚಿತ್ರದಲ್ಲಿ ಲೋಕೇಶ್

ಒಂದು ಉತ್ತಮ ಅಭಿರುಚಿ ಇದ್ದವರು. ಚಿತ್ರಿಕೆಗಳಲ್ಲಿ ಡೆಪ್ತ್ ಇರುತ್ತದೆ, ಪಾತ್ರಗಳು ಸಹಜವಾಗಿಯೇ ಪೋಷಣೆಯಾಗಿರುತ್ತವೆ. ಅದಕ್ಕಾಗಿ ರಾಜಶೇಖರ್ ಶ್ರಮ ತೆಗೆದುಕೊಳ್ಳುತ್ತಾರೆ. ಪ್ರತಿಭಾವಂತರ ನೆರವು ಪಡೆಯುತ್ತಾರೆ. ಸದ್ದಿಲ್ಲದ ಕೆಲಸ ಮಾಡುವ ಪ್ರವೃತ್ತಿ. ಎಂದೂ ತಾನು, ತನ್ನ ಕೆಲಸ ಎಂದು ಹೇಳಿಕೊಳ್ಳುವುದೂ ಇಲ್ಲ. ಈ ಚಿತ್ರಕ್ಕೂ ಅವರು ಅಶ್ವಿನಿಯವರ ಕಾದಂಬರಿಯನ್ನೇ ಆಯ್ದರು. ಉಪೇಂದ್ರಕುಮಾರ್ ಸಂಗೀತದಲ್ಲಿ ವಿಶಿಷ್ಟ ಮಾಧುರ್ಯ ಇತ್ತು. ಹಾಡುಗಳಿಗೆ ಹಾಕಿದ್ದ ಸೆಟ್ಸ್ ಬಹಳ ಸುದ್ದಿಯಲ್ಲಿದ್ದವು. ಇಷ್ಟಾದರೂ ಚಿತ್ರ ಸರಿಯಾಗಿ ಹೋಗಲಿಲ್ಲ. ಕೆಲವೊಮ್ಮೆ ಕಾರಣವೇ ತಿಳಿಯುವುದಿಲ್ಲ. ಅಬ್ಬರವಿಲ್ಲದ ಸರಳವಾಗಿ ಕಥೆ ಹೇಳುವ ವಿಧಾನವೂ ಪ್ರೇಕ್ಷಕನಿಗೆ ಬೇಸರ ಎನಿಸುತ್ತಿರಬಹುದು. ಯಾವುದನ್ನೂ ಅದು ಇರುವ ಹಾಗೆಯೇ ಪದೇ ಪದೇ ಸ್ವೀಕರಿಸಲಾರ. ಬದಲಾವಣೆ, ತಿರುವುಗಳು ಬೇಕು ಎನ್ನುತ್ತಾನೆ ಆತ.

'ಸಮರ' ಚಿತ್ರವನ್ನು ಟಿ.ಉದಯಶಂಕರ್ ಮಗ ಗುರುದತ್ ನಿರ್ದೇಶಿಸಿದರು. ಸಾಕಷ್ಟು ಅನುಭವ ಇತ್ತು; ಬೆಂಬಲ ಇತ್ತು. ಆದರೂ ಚಿತ್ರ ಪೇಲವವಾಯಿತು. ಈ ಚಿತ್ರದಲ್ಲಿ ಶಿವರಾಜ್ ಕುಮಾರ್, ದೇವರಾಜ್ ಒಟ್ಟಿಗೇ ಅಭಿನಯಿಸಿದ್ದರು. ಪ್ರಾಯಃ ಈ ಜೋಡಿ ಸೇರಿದ್ದು ಇದೇ ಮೊದಲು ಎಂದೂ ಹೇಳಲಾಗಿತ್ತು. ಕೌಸ್ತುಭ ಸಂಗೀತವಿತ್ತು. ನಿರೂಪಣೆಯಲ್ಲಿ ಬಿಗಿ ಕಾಣಲಿಲ್ಲ, ಸೊರಗಿತು. ಚಿತ್ರಕ್ಕೆ ಪಿ.ಶೇಷಾದ್ರಿ ಸಹನಿರ್ದೇಶನ ಇತ್ತು. ಶ್ರೀಮಂತ ಚಿತ್ರಣ. ಕಾರವಾರ, ಮುರುಡೇಶ್ವರ ಮೊದಲಾದೆಡೆಯ ಪ್ರಕೃತಿ ಸೌಂದರ್ಯವನ್ನು ಸೊಗಸಾಗಿ ಸೆರೆ ಹಿಡಿಯಲಾಗಿತ್ತು.

ಬಹು ದೀರ್ಘ ಕಾಲ ಸಹನಿರ್ದೇಶಕನಾಗಿದ್ದವರು, ಒಂದೆರಡು ಚಿತ್ರಗಳನ್ನು ಮಾತ್ರ ಸ್ವತಂತ್ರವಾಗಿ ನಿರ್ದೇಶಿಸಿ ಸಹೋದರಿಯೊಂದಿಗೆ ರಂಗಭೂಮಿಗೇ ಹಿಂತಿರುಗಿದವರು ಬಂಗಾರೇಶ್. ಮತ್ತೆ ಸಹೋದರಿ ಚಿಂದೋಡಿ ಲೀಲಾ ಅವರೊಂದಿಗೆ ನಿರ್ಮಿಸಿ, ನಿರ್ದೇಶಿಸಿದ್ದು 'ಗಾನಯೋಗಿ ಪಂಚಾಕ್ಷರ ಗವಾಯಿ'. ಸದ್ದು ಮಾಡದೆ ಲೋಕಕ್ಕೆ ಬೇಕಾದುದೇನೆಂದು ತೋರಿಸಿಕೊಟ್ಟರು. ಕಣ್ಣು-ಕಿವಿಯನ್ನು ತಣಿಸಿದರು. ಗವಾಯಿ ಚಿತ್ರದ ಒಂದೆರಡು ಸನ್ನಿವೇಶಗಳು 'ದರ್ಶನ'ದ ದಾರಿಯಲ್ಲಿ ಬರುವ ಆಮಿಷಗಳಾಗಿವೆ. ಅವನ್ನು ಗ್ರಹಿಸಲಾಗದೆ, ಅಥವಾ ಚಿತ್ರೀಕರಣ ಆ ಪರಿಣಾಮ ಬೀರುವಲ್ಲಿ ಸೋತಿದ್ದರಿಂದಾಗಿ 'ಮೂಢನಂಬಿಕೆ'ಯ ಹಣೆಪಟ್ಟಿ ಅಂಟಿಸಿದವರೂ ಉಂಟು. ಅವೆಲ್ಲದರ ಆಚೆಗೆ ಗವಾಯಿ ಚಿತ್ರ ಕುದಿಯುತ್ತಿದ್ದ ಮನಸ್ಸು, ಉರಿಯುತ್ತಿದ್ದ ಸಂದರ್ಭಕ್ಕೆ ತತ್ವ-ಗಾಯನದ ತಂಪು ಕೊಟ್ಟಿತು. ಸುನೀಲ್‌ಕುಮಾರ್ ದೇಸಾಯಿ ಮತ್ತು ಬಂಗಾರೇಶ್ ಯಾವುದೋ ಸೆಳೆತದಲ್ಲಿ ತತ್ತರಿಸುತ್ತಿದ್ದ ಸ್ಥಿತಿಯಿಂದ ವಾಸ್ತವಕ್ಕೆ, ಸತ್ಯಕ್ಕೆ, ದರ್ಶನಕ್ಕೆ ಎಳೆತಂದು ನಿಜವಾದ ಪ್ರೇಮ, ಭಕ್ತಿ, ಧ್ಯಾನ ಎಂದರೇನೆಂದು ನೆನಪಿಸಿದರು. ಚಿತ್ರ ಮಾಧ್ಯಮದ ವಿಶ್ಲೇಷಣೆಯಲ್ಲಿ ಈ ಮಾತುಗಳು ಹೆಚ್ಚಾಗಬಹುದು. ಆದರೆ ಅವು ಬಂದ ಸಂದರ್ಭಕ್ಕೆ ಮುಖ್ಯವೆನಿಸುತ್ತವೆ.

೧೮೯೨ ರಲ್ಲಿ ಧಾರವಾಡದಲ್ಲಿ ಜನಿಸಿದ ಗವಾಯಿಗಳು ಜನ್ಮಾಂಧರು. ಇವರ ಜನ್ಮಜಾತ ಪ್ರತಿಭೆಯನ್ನು ಗುರುತಿಸಿ ಹಾನಗಲ್ ಕುಮಾರಸ್ವಾಮಿಗಳು ಬಾಲ ಗವಾಯಿಗೆ ಸಂಗೀತ ಕಲಿಸುತ್ತಾರೆ. ಈ ಶಿಕ್ಷಣದ ಹಿಂದೆ ಇರುವ ಮಹದೋದ್ದೇಶ ನಮ್ಮ ಸಂಸ್ಕೃತಿಯ ಮುಖ್ಯ ಮೌಲ್ಯಗಳಲ್ಲೊಂದಾಗಿರುವ ಪರೋಪಕಾರ. ತನ್ನಂತೆ ಗವಾಯಿಯೂ ಸಮಾಜಕ್ಕೆ ಉಪಕಾರಿ ಆಗಬೇಕು ಎಂಬುದು ಕುಮಾರಸ್ವಾಮಿಗಳ ಆಸೆ. ಆದರೆ ಗವಾಯಿಯ ದೇಹದಲ್ಲಿ ಯೌವನ ಪ್ರವೇಶವಾಗುತ್ತಾ ಮದುವೆಯ ಅಪೇಕ್ಷೆ ಉಂಟುಮಾಡುತ್ತದೆ. ಗುರುಗಳಲ್ಲಿ ಅದನ್ನು ತೋಡಿಕೊಂಡಾಗ ಅವರು ವಿಷಾದ, ನೋವಿನಿಂದ ಹೇಳುತ್ತಾರೆ, ''ಮದುವೆಯಾಗಿ ನಾಲ್ಕೈದು ಮಕ್ಕಳ ತಂದೆಯಾಗುವುದಕ್ಕಿಂತ ನೂರಾರು ಅನಾಥ ಮಕ್ಕಳ ತಂದೆಯಾಗುತ್ತೀಯಾ ಎಂಬ ಆಸೆಯಿತ್ತು.'' 'ಇತ್ತು' ಎಂಬುದು ಆಗಲೇಬೇಕು ಎಂಬ 'ಒತ್ತಾಯ' ಅಥವಾ 'ಹುಕುಂ' ಅಲ್ಲ. ಇದು ನಮ್ಮ ಧರ್ಮಗಳು ವ್ಯಕ್ತಿಯೊಬ್ಬನ ಇಷ್ಟಾನಿಷ್ಟಗಳಿಗೆ ಕೊಡುತ್ತಿದ್ದ ಗೌರವ. 'ಓಂ' ಚಿತ್ರ ಪ್ರತಿಪಾದಿಸುವ ಮೌಲ್ಯಕ್ಕೂ ಇದಕ್ಕೂ ನಡುವಿನ ಅಂತರವನ್ನು ಕುಮಾರಸ್ವಾಮಿಗಳ ಮಾತು ತೋರಿಸಿಕೊಡುತ್ತದೆ. ತ್ಯಾಗ, ಪರಪ್ರೀತಿ, ನಿಸ್ವಾರ್ಥ ಮೌಲ್ಯಗಳ ಖನಿಯಾಗಿ ಕುಮಾರಸ್ವಾಮಿ ಪ್ರಕಟವಾಗುತ್ತಾರೆ. ಗವಾಯಿಗಳು ಹಿಂದೂಸ್ಥಾನಿ, ಕರ್ನಾಟಕಿ ಎರಡೂ ಪ್ರಕಾರಗಳಲ್ಲಿ ಸಿದ್ಧಹಸ್ತರಾಗಿದ್ದವರು. ಸಂಗೀತ ನಿರ್ದೇಶಕರಾದ ಹಂಸಲೇಖ ಚಿತ್ರದಲ್ಲಿ ಅವೆರಡನ್ನೂ ಬಳಸುವ ಪ್ರಯತ್ನ ಮಾಡಿದ್ದಾರೆ. ಆದರೆ ಚಿತ್ರದ ಪರಿಣಾಮವನ್ನು ಗಾಢವಾಗಿಸುವುದರಲ್ಲಿ ಅವರು ಆಯ್ಕೆ ಮಾಡಿಕೊಂಡಿರುವ ರಾಗಗಳು ಸಹಕಾರಿಯಾಗಿರಲಿಲ್ಲ. ಆಯಾಯ ಸಂದರ್ಭಕ್ಕೆ ಅವು ವಿಶೇಷವೆನಿಸುತ್ತವೆಯೇ ಹೊರತು ಇಡೀ ಚಿತ್ರಕ್ಕೆ ಒಂದು ಏರುಲಯ ತಂದುಕೊಡುವುದರಲ್ಲಿ ಸೋತಿವೆ. ಗವಾಯಿಗಳ ಪ್ರಬುದ್ಧವಾಗುತ್ತಾ ಹೋಗುವ ನಡವಳಿಕೆಗೆ, ದೈವೀಕವಾಗುತ್ತಾ ಹೋಗುವ ವ್ಯಕ್ತಿತ್ವಕ್ಕೆ ಲಗತ್ತಾಗಿ ರಾಗಗಳಿಗ ಜಾಗವನ್ನು ಹೊಂದಿಸದಿರುವುದು ಪ್ರಮುಖ ದೌರ್ಬಲ್ಯವಾಗಿದೆ. ಗವಾಯಿಗಳು ಹೆಣ್ಣಿಗೆ ಆಕರ್ಷಿತರಾಗುವ ಸಂದರ್ಭದಲ್ಲಿ ಸಂಗೀತ ಇನ್ನಷ್ಟು ಮಧುರವಾಗಿ, ವಿಹಾರಗಳ ಭಾವಪುಂಜವಾಗಿ ಇರಬಹುದಿತ್ತು. ಗವಾಯಿಗಳ ದನಿಯೊಂದಿಗೆ ಹೆಣ್ಣಿನ ದನಿ ಬೆರೆಸಿರುವ ತಂತ್ರ ಸಂದರ್ಭಕ್ಕೆ ಹೊಂದುವಂತಿತ್ತು. ಈ ಚಿತ್ರದಲ್ಲಿಯ 'ನೀಡು ಶಿವಾ...' ಹಾಗೂ 'ಘಮಂಡು...' ಗೀತೆಗಳು ಜನಪ್ರಿಯವಾದವು. ಘಮಂಡು ಗೀತೆಯನ್ನು ಹಾಡಿದ ಎಸ್.ಪಿ.ಬಾಲಸುಬ್ರಹ್ಮಣ್ಯಂ ಕೇಂದ್ರ ಪ್ರಶಸ್ತಿ ಪಡೆದರು. ಚಿತ್ರದ ಸಂಗೀತಕ್ಕಾಗಿ ಹಂಸಲೇಖ ಕೇಂದ್ರ-ರಾಜ್ಯ ಪ್ರಶಸ್ತಿಗಳನ್ನು ಪಡೆದರು. ಇನ್ನೊಂದು ವಿಶೇಷವೆಂದರೆ ಪಂಚಾಕ್ಷರ ಗವಾಯಿಯವರು ವಿಧಿವಶರಾಗುವ ಅಂತ್ಯದ ಘಟನೆಗಳನ್ನು ಗದಗ್‌ನ ಗವಾಯಿಗಳ ಹುಟ್ಟೂರಾದ ಕಾಡಶೆಟ್ಟಿಹಳ್ಳಿಯಲ್ಲಿ ಅವರು ಹುಟ್ಟಿದ ಮನೆಯಲ್ಲಿಯೇ ಚಿತ್ರಿಸಿಕೊಂಡಿರುವುದು.

ಗವಾಯಿ ಚಿತ್ರದಲ್ಲಿ ಲೋಕೇಶ್ ಅಭಿನಯ ಶ್ರೇಷ್ಠ ಮಟ್ಟದ್ದು. ಕುರುಡನಾಗಿ ಅವರ ಅಭಿನಯ ಅವರಷ್ಟು ಚೆನ್ನಾಗಿ ಇತರರಿಂದ ಸಾಧ್ಯವಾಗದೇನೋ ಎಂಬಂತಿದೆ. ಸಂದರ್ಶನವೊಂದರಲ್ಲಿ ಲೋಕೇಶ್ ತಮ್ಮ ಪಂಚಾಕ್ಷರ ಗವಾಯಿ ಪಾತ್ರದ ಬಗ್ಗೆ ಹೀಗೆ ಹೇಳುತ್ತಾರೆ : ''...ಚಿತ್ರದ ನಾಯಕ ಹುಟ್ಟು ಕುರುಡ. ಅವರನ್ನು ನೇರವಾಗಿ ಕಂಡವರು ಇನ್ನೂ ಇದ್ದಾರೆ. ಅವರ ಶಿಷ್ಯ ಪುಟ್ಟರಾಜ ಗವಾಯಿಗಳು ಇದ್ದರು. ಅವರನ್ನೆಲ್ಲ ಕಂಡು ಮಾತನಾಡಿಸಿ, ಗಮನಿಸಿ ಆ ಆಂಗಿಕ ಚಲನವಲನಗಳನ್ನು ಪಾತ್ರಕ್ಕೆ ಅಳವಡಿಸಿಕೊಂಡಿದ್ದೇನೆ. ಇವೆಲ್ಲಕ್ಕಿಂತ ಮುಖ್ಯವಾಗಿ ಒಂದು ಲಯಬದ್ಧತೆ ಇರಬೇಕು. ಅದಿಲ್ಲದೇ ಹಾಸ್ಯ, ಮೌನ, ಗಾಂಭೀರ್ಯ ಮೊದಲಾದ ಯಾವ ಭಾವವೂ ಪ್ರೇಕ್ಷಕನನ್ನು ತಲುಪಲಾರದು....''

ಬಾಲ ಗವಾಯಿಯಾಗಿ ಮಾ। ವಿಜಯರಾಘವೇಂದ್ರ ಹಾಗೂ ನಟನಲ್ಲದ ಹುಟ್ಟುಕುರುಡ ಶ್ರೀಮಂತ ಎಂಬ ಬಾಲಕ ಇವರ ಅಭಿನಯ ಮನಮಿಡಿಯುತ್ತದೆ.



(ಚಿತ್ರ ೭೫) 'ಗಿಡ್ಡೂ ದಾದಾ' ಚಿತ್ರದಲ್ಲಿ ಎಂ.ಪಿ.ಶಂಕರ್ ಮತ್ತು ದ್ವಾರಕೀಶ್

ನಿರ್ದೇಶಕ ಚಿಂದೋಡಿ ಬಂಗಾರೇಶ್ ಸಂಭಾಷಣೆ ಹಲವಾರು ಕಡೆ ಅರ್ಥಗರ್ಭಿತವಾಗಿದ್ದು ಮನಸ್ಸನ್ನು ತಟ್ಟುತ್ತದೆ.

ಅಭಿನಯದ ಬಗ್ಗೆ ಉಲ್ಲೇಖಿಸುವ ಸಂದರ್ಭದಲ್ಲಿ 'ಬೆಳದಿಂಗಳ ಬಾಲೆ'ಯಲ್ಲಿ ಅನಂತ್‌ನಾಗ್ ಮುಟ್ಟಿರುವ ಎತ್ತರವನ್ನು ಬೆರಗಿನಿಂದಲೇ ಉಲ್ಲೇಖಿಸಬೇಕಾಗುತ್ತದೆ. ಇಲ್ಲದ ಪಾತ್ರವನ್ನು ಕಲ್ಪಿಸಿಕೊಂಡು, ಕೇವಲ ಧ್ವನಿಗೆ ಪ್ರತಿಕ್ರಿಯಿಸುತ್ತಾ ಅಭಿನಯಿಸುವುದು ಶ್ರಮದ ಕೆಲಸ. ಅನಂತ್‌ನಾಗ್ ಅದನ್ನು ಸಾಧಿಸಿದ್ದಾರೆ. ಈ ಚಿತ್ರಕ್ಕಿರುವ ಇನ್ನೊಂದು ಆಯಾಮವೆಂದರೆ, ಅಗೋಚರವಾದದ್ದಕ್ಕೆ ತಹತಹಿಸುವ ಮನುಷ್ಯನ ದೌರ್ಬಲ್ಯವನ್ನು ಬಹಿರಂಗಗೊಳಿಸಿದ್ದು. ಮನುಷ್ಯನ ಅಂತರಂಗದ ತುಡಿತಗಳನ್ನು ನೇರವಾಗಿ ಈ ಚಿತ್ರವು ಪ್ರಕಟಿಸಿತು. ವ್ಯಕ್ತಿಯ ಪರಾವಲಂಬಿತತ್ವ ಬೆಂಬಲದ ನಿರೀಕ್ಷೆ, ಗುಪ್ತ ಸಂತೋಷದ ತಹತಹಿಕೆ - ಇವೆಲ್ಲವೂ ಹೇಗೆ ಪ್ರತಿಯೊಬ್ಬರಲ್ಲೂ ಇರುತ್ತವೆ ಎಂಬುದನ್ನು ಶತದಿನ ಪ್ರದರ್ಶನ ಕಂಡ ಈ ಚಿತ್ರದ ಯಶಸ್ಸು ತೋರಿಸಿತು. ಕಾಣದ ಧ್ವನಿಯನ್ನು ನಾಯಕ ರೇವಂತ್ ಮಾತ್ರ ಬೆನ್ನಟ್ಟುವುದಿಲ್ಲ, ಅವನೊಂದಿಗೆ ಪ್ರೇಕ್ಷಕರೂ ಬೆನ್ನಟ್ಟುತ್ತಾರೆ. ಪ್ರೇಕ್ಷಕನಿಗೆ 'ಗವಾಯಿ' ಚಿತ್ರ ನೋಡುವಾಗ ಇರುವ ನಿರ್ಲಿಪ್ತ ಹಾಗೂ ವಿಷಾದಮಯ ಮನಃಸ್ಥಿತಿ 'ಬೆಳದಿಂಗಳ ಬಾಲೆ' ನೋಡುವಾಗ ಇರುವುದಿಲ್ಲ. ಭಾವನೆಗಳು ಉದ್ವೇಗಕ್ಕೊಳಗಾಗಿ ಇಲ್ಲಿ ಬಿರುಗಾಳಿಯಂತೆ ಹೊಯ್ದಾಡುತ್ತವೆ. ನಿರ್ದೇಶಕ ತಾನೇ ನಾಯಕನೂ ಆಗಿ ಪರಿಶ್ರಮಪೂರ್ವಕವಾಗಿ ತೊಡಗಿಕೊಂಡಿರುವುದರಿಂದಲೇ ಇಂಥ ಪರಿಣಾಮ ಸಾಧ್ಯವಾಗಿದೆ.

'ತರ್ಕ' ಚಿತ್ರದಿಂದ ಗಮನ ಸೆಳೆದು 'ಉತ್ಕರ್ಷ'ದಲ್ಲಿ ಟೀಕೆಗೆ ಒಳಗಾದ ಸುನೀಲ್‌ಕುಮಾರ್ ದೇಸಾಯಿ 'ಬೆಳದಿಂಗಳ ಬಾಲೆ'ಯಲ್ಲಿ ನಿರ್ದೇಶಕನಾಗಿ ತಮ್ಮ ಬೆಳವಣಿಗೆಯನ್ನು ದಾಖಲಿಸಿದರು. ಚಲಾವಣೆಯಲ್ಲಿದ್ದ ವ್ಯಾಪಾರಿ ಸೂತ್ರಗಳಿಂದ ಹೊರತಾಗಿದ್ದರೂ ಯಶಸ್ಸನ್ನು ಸಾಧಿಸಿದ್ದು ಚಿತ್ರದ ವಿಶೇಷ. ವಾತಾವರಣ ಎಷ್ಟೊಂದು ಹದಗೆಟ್ಟಿದ್ದರೂ ಸದಭಿರುಚಿ ಚಿತ್ರಗಳಿಂದ ಪ್ರೇಕ್ಷಕರನ್ನು ಸೆಳೆಯಲು ಸಾಧ್ಯವಿದೆ ಎಂಬುದನ್ನು ದೇಸಾಯಿ ಪ್ರತಿಪಾದಿಸಿದರು.

ಇಷ್ಟಿದ್ದೂ ಈ ಚಿತ್ರದ ಕಾವ್ಯಾತ್ಮಕ ನಿರೂಪಣೆಗೆ ಅಲ್ಲಲ್ಲಿ ಗುಣಸಿಂಗ್ ಅವರ ಸಂಗೀತ ತಡೆಯೊಡ್ಡುತ್ತದೆ. ಸುಗಮ ಸಂಗೀತದಂಥ ಮಾಧುರ್ಯಪೂರ್ಣ ಹಾಡುಗಳು ಇರಬೇಕಾದಲ್ಲಿ ಕೇವಲ ಶಬ್ದಗಳು ತುಂಬಿವೆ. ಚಿತ್ರದ ಅಗೋಚರ ಬಾಲೆಯ ಧ್ವನಿಯನ್ನು ನೀಡಿದವರು ಗಾಯಕಿ ಮಂಜುಳಾ ಗುರುರಾಜ್. ಧ್ವನಿಯ ಭಾವ, ಪರಿಳಿತ, ಒತ್ತು, ನಿರ್ವಹಣೆಯಲ್ಲಿ ಪ್ರಬುದ್ಧತೆ ತೋರಿರುವುದು ಅವರ ಸಾಧನೆ. ಈ ಚಿತ್ರ ದಶಕದ ಉತ್ತಮ ಚಿತ್ರಗಳಲ್ಲಿ ಒಂದೆಂಬುದು ನಿರ್ವಿವಾದ. ಭಾವನೆಗಳೇ ಬಂಡವಾಳವಾಗಿರುವ ಈ ಚಿತ್ರಕ್ಕೆ ಪಿ.ರಾಜನ್ ನಿರ್ವಹಿಸಿರುವ ಮೂಡ್ ಫೋಟೋಗ್ರಫಿ ವಿಶೇಷ ಆಕರ್ಷಣೆ ಹಾಗೂ ಜೀವಂತಿಕೆ ತಂದುಕೊಟ್ಟಿತ್ತು.

೧೯೯೫ರ ವಿಶೇಷ ಪ್ರಯತ್ನಗಳಾಗಿ ಕಂಡ ಮೇಲಿನ ಎರಡು ಚಿತ್ರಗಳು ೧೯೯೫-೯೬ರ ರಾಜ್ಯದ ಹಲವಾರು ಪ್ರಶಸ್ತಿಗಳನ್ನು ಪಡೆದುಕೊಂಡು ಕಳೆದುಹೋಗುತ್ತಿದ್ದ ಭರವಸೆಯನ್ನು ಮತ್ತೆ ತಂದುಕೊಟ್ಟವು. 'ಬೆಳದಿಂಗಳ ಬಾಲೆ'ಗೆ ತೃತೀಯ ಅತ್ಯುತ್ತಮ ಚಿತ್ರ, ಅತ್ಯುತ್ತಮ ಸಂಭಾಷಣೆ (ಸುನೀಲ್‌ಕುಮಾರ್ ದೇಸಾಯಿ-ವಂಶಿ) ಹಾಗೂ ಹಿನ್ನೆಲೆ ಧ್ವನಿಗಾಗಿ ಮಂಜುಳಾ ಗುರುರಾಜ್‌ಗೆ ಪ್ರಶಸ್ತಿಗಳು ಬಂದರೆ, 'ಸಂಗೀತ ಸಾಗರ ಗಾನಯೋಗಿ ಪಂಚಾಕ್ಷರ ಗವಾಯಿ' ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿಯೊಂದಿಗೆ ಸಂಗೀತ ನಿರ್ದೇಶನಕ್ಕೆ ಹಂಸಲೇಖ, ಪೋಷಕ ನಟನೆಗೆ ಗಿರೀಶ್ ಕಾರ್ನಾಡ್‌ಗೆ ಪ್ರಶಸ್ತಿಗಳು ಬಂದವು. ಇದೇ ವರ್ಷದ ಉತ್ತಮ ಪ್ರಯತ್ನಗಳಲ್ಲೊಂದಾಗಿ ಗಮನ ಸೆಳೆದ ಚಿತ್ರ ಅಮರದೇವ ನಿರ್ದೇಶನದ 'ಊರ್ವಶಿ'. ಸಾಹಿತಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಕೃತಿಯನ್ನು ಆಧರಿಸಿದ್ದ ಈ ಚಿತ್ರಕ್ಕೆ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರವೆಂದು ಅದೇ ವರ್ಷದ ರಾಜ್ಯ ಪ್ರಶಸ್ತಿ ಲಭ್ಯವಾಯಿತು. ಅತ್ಯುತ್ತಮ ಕಥೆಗಾಗಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರಿಗೂ ಪ್ರಶಸ್ತಿ ಪ್ರಕಟಿಸಲಾಯಿತು. ಉತ್ತಮ ಹಿನ್ನೆಲೆ ಗಾಯನಕ್ಕೆ ಕಳೆದ ದಶಕದ ಕೊನೆಯ ಭಾಗದಲ್ಲಿ ಚಿತ್ರರಂಗಕ್ಕೆ ಅಡಿಯಿಟ್ಟ ಚಂದ್ರಿಕಾ ಗುರುರಾಜ್ ಪ್ರಶಸ್ತಿ ಪಡೆದರು. ಶಂಕರ್‌ನಾಗ್ ಅವರಿಂದ ಹಂಸಲೇಖ ಅವರಿಗೆ ೧೯೮೮ ರಲ್ಲಿ ಪರಿಚಯವಾದ ಇವರು 'ಕಡಲಿಗೂ ಒಂದು ಕೊನೆಯಿದೆ, ಸ್ನೇಹಕೆ ಎಲ್ಲಿದೆ...' ಎಂಬ ಮೊದಲ ಗೀತೆಯನ್ನು 'ಇಂದ್ರಜಿತ್' ಚಿತ್ರಕ್ಕೆ ಹಾಡುವುದರ ಮೂಲಕ ಹಿನ್ನೆಲೆ ಗಾಯಕಿಯಾದರು. ಅನಂತರ ೧೯೯೪ರಷ್ಟು ಹೊತ್ತಿಗೆ 'ಮತ್ತೆ ಹಾಡಿತು ಕೋಗಿಲೆ', 'ಅಜಗಜಾಂತರ', 'ಗಣೇಶ ಸುಬ್ರಹ್ಮಣ್ಯ', 'ಚೈತ್ರದ ಪ್ರೇಮಾಂಜಲಿ', 'ಭುಜಂಗಯ್ಯನ ದಶಾವತಾರ', 'ಅಭಿಮನ್ಯು' ಮುಂತಾದ ೪೦ ಕ್ಕೂ ಹೆಚ್ಚು ಚಿತ್ರಗಳಲ್ಲಿ ಹಾಡಿದರು.

'ಗಿಡ್ಡು ದಾದಾ' ಎಂ.ಪಿ.ಶಂಕರ್ ಭರಣಿ ಲಾಂಛನದಲ್ಲಿ ತೆಗೆದ ಚಿತ್ರ. ದ್ವಾರಕೀಶ್ ನಿರ್ದೇಶನ. ಎಂ.ಪಿ.ಶಂಕರ್, ದ್ವಾರಕೀಶ್ ಇಬ್ಬರೂ ಅಭಿನಯಿಸಿದ್ದರು. ಈ ಚಿತ್ರದ ಯುವ ಜೋಡಿಯಾಗಿ ರಾಮಕುಮಾರ್-ಮಾಲಾಶ್ರೀ ಮೊದಲ ಬಾರಿಗೆ ಅಭಿನಯಿಸಿದ್ದರು. ಅಮೂಲ್ಯ ವಜ್ರಗಳಿಗಾಗಿ ಹುಡುಕಾಡುವ ಕಥೆ. ಚಿತ್ರಕಥೆಯನ್ನು ದ್ವಾರಕೀಶ್ ನಿರ್ವಹಿಸಿದ್ದರು. ಹಾಸ್ಯವೇ ನಿರೂಪಣೆಯ ಪ್ರಧಾನ ಅಂಶವಾಗಿತ್ತು.



(ಚಿತ್ರ ೭೬) 'ಕರುಳಿನ ಕುಡಿ' ಚಿತ್ರದಲ್ಲಿ ಸಿತಾರಾ ಮತ್ತು ವಿಷ್ಣುವರ್ಧನ್



(ಚಿತ್ರ ೭೭) 'ಕಾವ್ಯ' ಚಿತ್ರದಲ್ಲಿ ಸಿತಾರಾ ಮತ್ತು ರಾಮ್‌ಕುಮಾರ್

ಒಂದು ಉತ್ತಮ ಚಿತ್ರವಾದರೂ ಜನಪ್ರಿಯವಾಗುವ ಯಾವುದೋ ಕೊಂಡಿ ಕಳಚಿಕೊಂಡು ಹೋಗಿದ್ದರಿಂದ ಚಿತ್ರ ನಿರೀಕ್ಷಿತ ಯಶಸ್ಸನ್ನು ಗಳಿಸಲಿಲ್ಲ.

'ಕರುಳಿನ ಕುಡಿ' ಧನರಾಜ್ ನಿರ್ಮಾಣದ ಚಿತ್ರ. ಧನರಾಜ್‌ಗೆ ಇತರ ಭಾಷಾ ಚಿತ್ರಗಳಲ್ಲಿ ಜನಪ್ರಿಯವಾದುದೆಲ್ಲ ತನಗಿರಲಿ ಎಂಬ ಆಸೆ. ಓಡಿಹೋಗಿ ಅಧಿಕ ಬೆಲೆಗ ಹಕ್ಕುಗಳನ್ನು ತಂದು, ಅಂಥದೇ ಕಥೆಯ ಇನ್ನೊಂದು ಚಿತ್ರ ಆದಾಗಲೇ ಬಂದಿದ್ದನ್ನು ನೋಡಿ ಕೈಕೈ ಹಿಸುಕಿಕೊಂಡದ್ದು ಎಷ್ಟೋ ಬಾರಿ. ಧನರಾಜ್ ಒರಟುತನ, ವಿನಯ ಎರಡಕ್ಕೂ ಹೆಸರಾದವರು. ಎಲ್ಲಕ್ಕೂ ಬೇಗ ಪ್ರತಿಕ್ರಿಯಿಸಿ ವಿವಾದಕ್ಕೆ ಸಿಕ್ಕಿಕೊಳ್ಳುವುದೂ ಉಂಟು. ಆದರೂ ಧನರಾಜ್ ಎಂದರೆ ಕಲಾವಿದರು, ಉದ್ಯಮ ಸಹಕರಿಸುತ್ತಾರೆ. ಧನರಾಜ್ ಕೂಡಾ ಒಮ್ಮೆ ಅಖಾಡಕ್ಕೆ ಇಳಿದರೆ ಹಿಂದುಮುಂದು ನೋಡದ ಖರ್ಚು ಮಾಡಿ ಕೆಲಸವನ್ನು ಚೊಕ್ಕವಾಗಿಸಬೇಕೆನ್ನುವ ವ್ಯಕ್ತಿ. ಆದುದರಿಂದಲೇ ಅವರು ಆಯ್ದ 'ಕರುಳಿನ ಕುಡಿ'ಯನ್ನು ಶ್ರೀಮಂತವಾಗಿಯೇ ಚಿತ್ರಿಸಿದರು. ವಿ.ಪಿ.ಸಾರಥಿ ನಿರ್ದೇಶನ. ಅಂಬರೀಷ್, ವಿಷ್ಣುವರ್ಧನ್ ಒಟ್ಟಿಗೇ ನಟಿಸಿದ್ದರು. ವಿಷ್ಣು ನಟಿಸಿದ ಚಿತ್ರಕ್ಕೆ ಪ್ರಥಮ ಬಾರಿಗೆ ರಾಜಕುಮಾರ್ ಹಾಡಿದ್ದರು. ರಾಜನ್-ನಾಗೇಂದ್ರ ಸಂಗೀತದಲ್ಲಿ ರಾಜಕುಮಾರ್ ಹಾಡಿದ 'ಓ ಮಲ್ಲೆ ಹೂವೇ ನಿನಗೆಲ್ಲ ನೋವೇ...' ಗೀತೆ ತುಂಬ ಮೆಚ್ಚಾಗಿತ್ತು. ಕೆಲಕಾಲದಿಂದ ಕನ್ನಡದಲ್ಲಿ ಮರೆಯಾಗಿದ್ದ ಬೇಬಿ ಶ್ಯಾಮಿಲಿ ಮತ್ತೆ ಅಭಿನಯಿಸಿದ್ದು ಕೂಡಾ ವಿಶೇಷವೆ.

'ಕಾವ್ಯ', ಕೋಡ್ಲು ರಾಮಕೃಷ್ಣರ ನಿರ್ದೇಶನದಲ್ಲಿ ಬಂದ ಚಿತ್ರ. ವೈದೇಹಿ ವೆಂಕಟರಾಮ್, ಮಂಗಳಗೌರಿ ಜೊತೆಗೆ ನಿರ್ದೇಶಕರೂ ನಿರ್ಮಾಪಕರೇ. "ನಾನು ಇತ್ತ ಆರ್ಟ್ ಫಿಲಮ್‌ಗೂ ಇಲ್ಲ, ಅತ್ತ ಕಮರ್ಷಿಯಲ್‌ಗೂ ಅಲ್ಲ ಅಂತಾಗಿದೆ. ನನ್ನ ಚಿತ್ರಗಳು ಯಶಸ್ವಿಯಾಗಿವೆ. ಆದರೂ ನನಗೇಂತ ನಿರ್ಮಾಪಕರು ಬರೋಲ್ಲ. ನಾನೇ ಹುಡುಕಿಕೊಳ್ಳಬೇಕು, ವರ್ಕಿಂಗ್ ಪಾರ್ಟನರ್ ಆಗಬೇಕು..." ಎಂದು ಮುಜುಗರ ಮಾಡಿಕೊಳ್ಳುವುದುಂಟು ಕೋಡ್ಲು ರಾಮಕೃಷ್ಣ. ಶುದ್ಧ ಅಭಿರುಚಿಯ ಚಿತ್ರಗಳನ್ನು ಕೊಟ್ಟವರು. ಒಳ್ಳೆಯ ಕಥೆಗಳಿಗಾಗಿ ಹುಡುಕುತ್ತಾ ಚಿತ್ರದ ಉದ್ದಕ್ಕೂ ಕುತೂಹಲ, ವಿಶಿಷ್ಟ ತಿರುವುಗಳುಳ್ಳ ಅಂತ್ಯ ಇರಬೇಕೆಂದು ತಹತಹಿಸುವ ನಿರ್ದೇಶಕ. ಗಿಮಿಕ್ಸ್ ಇಲ್ಲ, ವಿಶೇಷ ಹೇಳಿಕೆಯೂ ಇಲ್ಲ. ತನ್ನ ಕೈಯಲ್ಲಿರೋ ಕಥೆಯನ್ನು ನೇರವಾಗಿ-ಸರಳವಾಗಿ ಹೇಳುವುದು, ಸಾಧ್ಯವಾದಲ್ಲಿ ಸುಂದರ ಹೊರಾಂಗಣ ಚಿತ್ರೀಕರಣ, ದೃಶ್ಯ ಸಂಯೋಜನೆಯಲ್ಲಿ, ಸನ್ನಿವೇಶಗಳಲ್ಲಿ, ಸೂಕ್ಷ್ಮ ವಿವರಗಳಲ್ಲಿ ಜೀವನದ ಅನುಭವಗಳನ್ನು ಸೆರೆ ಹಿಡಿಯುವ ಪ್ರಯತ್ನ. ಇದಿಷ್ಟೇ ಅವರ ಸೊತ್ತು. ಕಥೆ ಹೇಳುವಾಗ ಅಥವಾ ಚಿತ್ರಕಥೆಯ ಸಿದ್ಧತೆಯಲ್ಲಿ ಆಕಸ್ಮಿಕಗಳ ಹಾಗೆ ಘಟನೆಗಳನ್ನು ಹೊಂದಿಸುತ್ತ ನಿರೀಕ್ಷೆ, ಅದನ್ನು ಮುರಿದು ಬೇರೇನೋ ಸಂಭವಿಸುವುದು.. ಇದರಿಂದಾಗಿ ಪ್ರೇಕ್ಷಕನಿಗ ತುದಿಗಾಲಲ್ಲಿ ನಿಂತು ಮುಂದಿನ ಸಂಭವಗಳನ್ನು ಊಹಿಸುತ್ತಾ ಕಾಯುವಂತೆ ಆಗುತ್ತದೆ.

ಇದು ಕೋಡ್ಲು ಚಿತ್ರಗಳೆಲ್ಲದರಲ್ಲೂ ಇರುವ ತಂತ್ರಗಾರಿಕೆ. ಇದರಾಚೆಗೆ ಕಲಾವಿದರ ಸಾಮರ್ಥ್ಯ, ತಂತ್ರಜ್ಞರ ಸಾಮರ್ಥ್ಯದ ಮೇಲೆ ಇನ್ನುಳಿದ ಅಂಶಗಳು ನಿಲ್ಲುತ್ತವೆ. 'ಕಾವ್ಯ' ಚಿತ್ರದ ಕಥೆ ಕೂಡಾ ಇಂಥದೇ ಕುತೂಹಲ ತುಂಬಿಕೊಡುವಂಥದ್ದು. ಅವರದೇ ಕಥೆ, ಚಿತ್ರಕಥೆ ಇತ್ತು. ಸಾಧುಕೋಕಿಲಾ ಸಂಗೀತ ಕೂಡಾ ಚೆನ್ನಾಗಿತ್ತು. 'ವಂದನೇ ವಂದನೇ ಸಾವಿರಾ ವಂದನೇ...', 'ಒಲುಮೆಯ ಕಾವ್ಯ ನೀನೂ...' ಜನಪ್ರಿಯವಾಗಿದ್ದವು. ಪ್ರಣಯ ತ್ರಿಕೋನ, ಪ್ರೇಮ ಅಂದುಕೊಂಡದ್ದು ಸ್ನೇಹವೆನಿಸಿ, ಸ್ನೇಹವಾದ್ದು ಪ್ರೇಮವಾಗಿ ಎದುರು-ಬದುರಾಗುವ ಸಂದರ್ಭದಲ್ಲಿ ಕಾಕತಾಳೀಯವಾಗಿ ತಪ್ಪಿಹೋಗುವ ಹಾಗೆ ಜಾಣತನದಲ್ಲಿ ಹೆಣೆದ ಚಿತ್ರನಾಟಕದಿಂದಾಗಿ ನಿರಾಳವಾಗಿ ಸರಿಯುವ ಕಥೆ. ಚಿತ್ರದ ಅಂತ್ಯವೇ ವಿನೂತನವೆನಿಸಿತ್ತು. ಕೋಡ್ಲು ಅವರಿಗೆ ಸಾಕಷ್ಟು ಅಭಿಮಾನಿಗಳು ಪತ್ರ ಬರೆದದ್ದೂ ಉಂಟು. ಯಾರೂ ಊಹಿಸಿರದ ಅಂತ್ಯ ಎಂಬ ಮನ್ನಣೆ. ರಾಮಕುಮಾರ್ ಜೊತೆಗೆ ಸುಧಾರಾಣಿ, ಸಿತಾರಾ ಇಬ್ಬರು ನಾಯಕಿಯರು. ಸುಧಾರಾಣಿ ಖ್ಯಾತ ಕ್ರೀಡಾಪಟು ಆಗಿ ವಿಭಿನ್ನವಾಗಿ ಅಭಿನಯಿಸಿದ್ದರು. 'ಕಾವ್ಯ' ಕೆಲಕಾಲ ನೆನಪಿನಲ್ಲಿದ್ದ ಕಥೆ.

ಮಾಲಾಶ್ರೀ ಅಭಿನಯದ 'ಹಲೋ ಸಿಸ್ಟರ್' ಚಿತ್ರಕ್ಕೆ ರಂಜನೆಯೇ ಪ್ರಧಾನ. ಆದರೆ ಚಿತ್ರೀಕರಣ ಪೇಲವ, ಅತಿರೇಕಗಳಿವೆ. ಮೂಲ ಉದ್ದೇಶವೇ ಸರಳೀಕರಣವಾಗುತ್ತದೆ. ಈಗಾಗಲೇ ಒಬ್ಬರ ದೇಹದಲ್ಲಿ ಇನ್ನೊಂದು ಆತ್ಮ ಸೇರುವ ಕಥೆಗಳು ಹಲವು ಬಂದಿವೆ. ಈ ಚಿತ್ರದಲ್ಲಿ ಮಾಲಾಶ್ರೀ ಸಾವಿನನಂತರ ಯಮಧರ್ಮರಾಜನು ಆಕೆಗೆ ಮರುಜೀವ ಕೊಡುವ ಸಲುವಾಗಿ ಆಕೆಯ ಹಾಗೆಯೇ ಇರುವ ಹಲವರ ಬಳಿ ಕರೆದೊಯ್ಯುವುದು, ಕೆಳವರ್ಗದ ಮೂಗಿ ಮಾಲಾಶ್ರೀ, ಅಯ್ಯಂಗಾರ್ ಹೆಂಗಸು ಮಾಲಾಶ್ರೀ, ಜಾದೂಗಾರ್ತಿ ಕುಳ್ಳಿ ಮಾಲಾಶ್ರೀ ಮುಂತಾದ ವಿಧವಿಧವಾದ ಮಾಲಾಶ್ರೀ ಕಾಣಿಸಿಕೊಳ್ಳುತ್ತಾರೆ. ಪ್ರಾರಂಭದಲ್ಲೇ ವೃತ್ತಿರಂಗಭೂಮಿ ನಾಟಕಗಳು, ಅಲ್ಲಿ ಮಾಲಾಶ್ರೀ ನಿರ್ವಹಿಸುವ ಗಂಡು ಪಾತ್ರಗಳು ಇತ್ಯಾದಿ ರಸಮಯ ಎನ್ನಿಸುತ್ತದೆ. ದೊಡ್ಡಣ್ಣ-ದ್ವಾರಕೀಶ್ ಹಾಸ್ಯ ಚಿತ್ರವನ್ನು ಸಹ್ಯವಾಗಿಸಿತ್ತು. ಮುಖ್ಯ ನಟರ ದಂಡೇ ಇದ್ದರೂ ಮಾಲಾಶ್ರೀ ಪ್ರತಿಭೆಯನ್ನೆಲ್ಲ ಹೊರಗೆಳೆವಂತೆ ಹಲವು ಬಗೆಯಲ್ಲಿ ತೋರಿಸಿದ್ದರೂ ಚಿತ್ರಕ್ಕೆ ದಿಕ್ಕು ಸಿಗಲಿಲ್ಲ. ಕೆಲವು ವೃತ್ತಿನಾಟಕದ ಹಾಡುಗಳು ಗಮನ ಸೆಳೆದವು. ರಂಗಪ್ರಿಯರಿಗೆ ಖುಷಿ ಕೊಡುತ್ತವೆ. ಚಿತ್ರವನ್ನು ನಿರ್ಮಿಸಲು ಹೊರಟವರು ಪೂರ್ತಿ ಮಾಡಲಾಗದೆ ಕೈ ಚೆಲ್ಲಿ ಕುಳಿತಾಗ, ರಾಮು ಕೈಗೆತ್ತಿಕೊಂಡು ಪೂರ್ತಿ ಮಾಡಿದರು. ಮತ್ತು ಪ್ರಚಾರದಲ್ಲಿ ಮಾಲಾಶ್ರೀಯ ವಿವಿಧ ಭಂಗಿಗಳು, ಅದರಲ್ಲೂ 'ಅಪೂರ್ವ ಸಹೋದರ್‌ಗಳ್'ನಲ್ಲಿ ಕಮಲಹಾಸನ್ ನಿರ್ವಹಿಸಿದ್ದ ರೀತಿಯ 'ಕುಳ್ಳಿ' ಪಾತ್ರದಲ್ಲಿ ಆಕೆಯನ್ನು



(ಚಿತ್ರ ೭೮) 'ಹಲೋ ಸಿಸ್ಟರ್' ಚಿತ್ರದಲ್ಲಿ ಶಶಿಕುಮಾರ್ ಮತ್ತು ಮಾಲಾಶ್ರೀ



(ಚಿತ್ರ ೭೯) 'ದೊರೆ' ಚಿತ್ರದಲ್ಲಿ ಶಿವರಾಜ್ ಕುಮಾರ್ ಮತ್ತು ಭಾರತಿ

ತೋರಿಸಿರುವುದು ಮುಂತಾದುವನ್ನು ಬಳಸಿದ್ದರು. ಇಷ್ಟಾದರೂ ಚಿತ್ರ ಜನರಿಗೆ ಪ್ರಿಯವಾಗಲಿಲ್ಲ.

'ದೊರೆ' ಶಿವಮಣಿ ನಿರ್ದೇಶನದ ಚಿತ್ರ. ಶಿವರಾಜ್‌ಕುಮಾರ್ ಮುಖ್ಯ ಪಾತ್ರದಲ್ಲಿದ್ದರು. ಇದೊಂದು ರೀತಿಯಲ್ಲಿ ಜೀತಪದ್ಧತಿಯನ್ನು ಕೇಂದ್ರವಾಗಿಟ್ಟುಕೊಂಡು ಶ್ರೀಮಂತರ ದಬ್ಬಾಳಿಕೆಯನ್ನು, ಅದನ್ನು ವಿರೋಧಿಸುವ ಪ್ರಯತ್ನದಲ್ಲೂ ಬೇರುಬಿಟ್ಟ ದಾಸ್ಯಭಾವ ಎಂಥ ದೈನ್ಯತೆಗೆ ದಾರಿಯಾಗುತ್ತದೆ ಎಂಬುದನ್ನು ಹೇಳುವ ಪ್ರಯತ್ನ ಮಾಡಿದ್ದರು. ಶಿವಮಣಿ ಅವರು ಕಥೆ ಹೇಳುವ ರೀತಿಯಲ್ಲಿ ಒಂದು ಗೊತ್ತಾದ ಲಯವನ್ನು ಬಳಸಿದ್ದರು. ಕಥೆ ಬಯಸುವ ಕತ್ತಲೆ, ಮಬ್ಬುಗತ್ತಲೆಯೂ ಹೆಚ್ಚಾಗಿ ಬಳಕೆಯಾಗಿತ್ತು. ಕೆಲವು ದೃಶ್ಯಗಳು ಒಂದು ಹೊರದೇಶದ ಚಿತ್ರ ನೋಡುವಂತೆನಿಸುತ್ತಿತ್ತು. ಇವೆಲ್ಲ ನಮ್ಮ ಪ್ರೇಕ್ಷಕನಿಗೆ ಅಭ್ಯಾಸವಿಲ್ಲ. ಬಡತನ, ಭಿಕ್ಷೆ ಕೂಡಾ ಶ್ರೀಮಂತವಾಗಿ ಪ್ರಜ್ವಲಿಸುವ ಬೆಳಕಿನಲ್ಲಿ ಚಿತ್ರಿತವಾಗುತ್ತಿರುವ ಈ ದಿನಗಳಲ್ಲಿ ಬಣ್ಣದ ಚಿತ್ರವೊಂದು ಬಣ್ಣವೇ ಇಲ್ಲದೆ, ಸಹಜ ಟೋನ್‌ನಲ್ಲಿ ತೆರೆಗೆ ಬಂದರೆ ಒಪ್ಪುವ ಸಿದ್ಧತೆಯೇ ನಮಗೆ ಇಲ್ಲ. ಈ ಚಿತ್ರದಲ್ಲಿ ಜಮೀನ್ದಾರ ಅಥವಾ ಖಳನ ಪಾತ್ರದಲ್ಲಿ ತಮಿಳಿನ ಕಲಾವಿದರೊಬ್ಬರಿದ್ದರು. ಸುಧೀರ್ ಒಂದು ಸೊಗಸಾದ ಪಾತ್ರದಲ್ಲಿದ್ದರು. ಪ್ರಾರಂಭದಲ್ಲಿ ಧಣಿಯ ಬೆಂಬಲಿಗನೇ ಆಗಿದ್ದರೂ ಕ್ರಮೇಣ ಮನಃಪರಿವರ್ತನೆ, ಬದುಕಿನಲ್ಲಿ-ಮನುಷ್ಯನಲ್ಲಿ ಪ್ರೇಮ ಹುಟ್ಟುವ ಪ್ರಕ್ರಿಯೆಯನ್ನು ಚೆನ್ನಾಗಿ ತೋರಿದ್ದರು. ಅವರೊಳಗಿದ್ದ ನಿಜವಾದ ಕಲಾವಿದನನ್ನು ತೆರೆದಿಟ್ಟಂತಾಗಿತ್ತು. ಚಿತ್ರದಲ್ಲಿ ಮಾ|ಆನಂದ್‌ನ ಸಹೋದರ ಮಾ|ಅರುಣ್ ಶಿವರಾಜ್ ಕುಮಾರ್ ಬಾಲ್ಯದ ಪಾತ್ರವನ್ನು ವಹಿಸಿದ್ದು, ಆ ಹುಡುಗನ ಮಾತು, ದಿಟ್ಟತನ ಮೆಚ್ಚುವಂತಿತ್ತು. ಪಾತ್ರದ ಹೆಸರು ದೊರೆ. 'ನೀನು ದೊರೆ ಅಲ್ಲ ಕರಿಯ' ಎಂದು ಧಣಿ ಹೇಳಿದರೆ, ಯಾವ ಶಿಕ್ಷೆಗೂ ಬಗ್ಗದೆ, ಒಪ್ಪದೆ 'ನಾನು ದೊರೆ' ಎನ್ನುತ್ತಿದ್ದ ರೀತಿ. ಎಲ್ಲ ಜೀತದಾಳುಗಳಿಗೂ ಕಾಯಿಸಿ ಮುದ್ರೆ ಒತ್ತುವಾಗ ಇತರರ ಹಾಗೆ ಹೆದರದೆ, ಕಿರುಚದೆ ದೃಢವಾಗಿ ನಿಂತು 'ಅಯ್ಯಾ? ನಾನು ಹೋಗಬೇಕು, ಅಮ್ಮ ಕಾಯ್ತಿರ್ತಾಳೆ' ಎನ್ನುವ ದಿಟ್ಟತನ ಇಂಥಲ್ಲೆಲ್ಲಾ ಆ ಬಾಲಕ ನಿಜಕ್ಕೂ ಅಭಿನಯವನ್ನು ಮೆರೆದಿದ್ದ. ಹುಡುಗ ದೊಡ್ಡವನಾದ ಮೇಲೆ ಶಿವರಾಜ್ ಕುಮಾರ್. ಜಾತಿ-ಜೀತಗಳು ಪ್ರೀತಿ-ಪ್ರೇಮದ ಮುಂದೆ ನಿಲ್ಲಲಾರವು, ಕಟ್ಟು ಕಿತ್ತು ನುಗ್ಗುತ್ತವೆ ಎಂಬ ಒಳದನಿಯೂ ಇಲ್ಲಿತ್ತು. ಸಂಗೀತ ನೀಡಿದ್ದ ಹಂಸಲೇಖ ಅತ್ಯುತ್ತಮ ಗೀತೆಗಳನ್ನು ಸಂಯೋಜಿಸಿದ್ದರು. 'ರೈತ ರೈತ ರೈತ ಅನ್ನ ಕೊಡುವ ದಾತ..' ಗೀತೆ ರಾಜಕುಮಾರ್ ಹಾಡಿದ್ದರು. 'ಹಳ್ಳಿ ಹಾಡು ತಂದಾನಾನಾ, ನಂ ಭೂಮ್‌ತಾಯಿ ಬೇಡಾ ಅಂಬುತ್ತಾಳೆ ಭೇದ ಭಾವಾನಾ...' ಮೊದಲಾದ ಅರ್ಥಪೂರ್ಣ ಗೀತೆಗಳನ್ನು ರಚಿಸಿ, ಜನಪದ ಗೀತೆಗಳನ್ನು ಬಳಸಿ ರಾಗ ಸಂಯೋಜಿಸಲಾಗಿತ್ತು. ಚಿತ್ರದಲ್ಲಿ ಶಿವರಾಜ್ ಕುಮಾರ್ ಪ್ರೇಯಸಿ, ದೊರೆ ಮಗಳು ಆಗಿ ಹೇಮಾ ಪಂಚಮುಖಿ ಅಭಿನಯಿಸಿದ್ದರು. ಮುಖ್ಯವಾಗಿ ಶಿವರಾಜ್ ಕುಮಾರ್ ತಾಯಿಯ ಪಾತ್ರದಲ್ಲಿ ಭಾರತಿ ವಿಷ್ಣುವರ್ಧನ್ ಅಭಿನಯ ಪ್ರೌಢವಾಗಿ ಮೂಡಿಬಂದಿತ್ತು. ನಿಮಿಷಾಂಬಾ ಸಂಸ್ಥೆಯ ಎಂ.ಚಂದ್ರಶೇಖರ್ ಶ್ರದ್ಧೆಯ ನಿರ್ಮಾಣ. ಆದರೆ ಕೈ ಕಚ್ಚಿತು.

ಉಪೇಂದ್ರರ ಮಹತ್ವಾಕಾಂಕ್ಷೆಯ ಚಿತ್ರ 'ಆಪರೇಷನ್ ಅಂತ'. ಚಿತ್ರ ಓಡಲಿಲ್ಲ. ಆದರೆ ಹೇಳಬೇಕಾದ ಅಂಶಗಳಿವೆ. 'ಓಂ' ಚಿತ್ರಕ್ಕೂ ಮೊದಲೇ ಪ್ರಾರಂಭಿಸಿ ಚಿತ್ರೀಕರಣವೂ ಸ್ವಲ್ಪ ಆಗಿತ್ತು. ಚಿತ್ರದ ಕಥೆಯನ್ನು ಬೆಳೆಸಿ, ಚಿತ್ರಕಥೆ ಮಾಡಿ ಮೊದಲು ೧೯೮೧ ರಲ್ಲಿ 'ಅಂತ' ಚಿತ್ರ ನಿರ್ದೇಶಿಸಿದ್ದ ರಾಜೇಂದ್ರಸಿಂಗ್ ಬಾಬುಗೆ ತೋರಿಸಿದ್ದರು. ಸೊಗಸಾಗಿದೆ ಎಂದ ಬಾಬು ಅವರೇ ಚಿತ್ರದಲ್ಲಿ ಒಂದು ಪಾತ್ರವನ್ನು ನಿರ್ವಹಿಸಿದ್ದರು. ಹಿರಣ್ಣಯ್ಯನ ಪಾತ್ರವನ್ನು ಹಿರಣ್ಣಯ್ಯನವರೇ ವಹಿಸಿದರು. ಪಿ.ಲಂಕೇಶ್‌ರನ್ನು ಕೇಳಿಕೊಂಡು, ಅವರು ಒಪ್ಪದಿದ್ದಾಗ ಅಂಥದೇ ಹೋಲಿಕೆ ಇರುವವರನ್ನು ಕರೆತಂದು, ಲಿಂಗೇಶ್ ಎಂಬ ಹೆಸರಿಟ್ಟು 'ಲಿಂಗೇಶ್ ಪತ್ರಿಕೆಯನ್ನು' ತದ್ವತ್ತಾಗಿ ಮಾಡಿದ್ದರು. ಮುಸುರಿ ಕೃಷ್ಣಮೂರ್ತಿ 'ಅಂತ'ದಲ್ಲಿ ಹಲ್ಕಟ್ ಲಾಲ ಪಾತ್ರದಲ್ಲಿದ್ದರೆ, ಈ ಚಿತ್ರದಲ್ಲಿ ಜಯಸಿಂಹ ಮುಸುರಿ ಅಂಥದೇ ವೇಷದಲ್ಲಿ - ಅವರ ಮಗ - ಲೋಫರ್ ಲಾಲ ಆಗಿ ಕಾಣಿಸಿಕೊಂಡರು. ಚಿತ್ರದ ಬಹುತೇಕ ಪಾತ್ರಗಳು ನಮ್ಮ ಪ್ರಮುಖ ರಾಜಕಾರಣಿಗಳನ್ನು ಹಾಗೆ ಹೇಳದೆಯೇ ಗುರುತಿಸುವಷ್ಟು ಹತ್ತಿರವಿದ್ದವು. ಎಲ್ಲ ಮ್ಯಾನರಿಸಂ, ಹೋಲಿಕೆ, ಮಾತಾಡುವ ರೀತಿಗಳನ್ನು ಹೊಂದಿಸಲಾಗಿತ್ತು. ಕಥೆಯ ವಿವರಗಳಲ್ಲಿ ಅನೇಕ ಅಂಶಗಳು ಬದುಕಿನಲ್ಲಿ, ಸಮಾಜದಲ್ಲಿ, ವ್ಯಕ್ತಿಗಳಲ್ಲಿ ಕೂಡಾ ಏನು ಇರಬೇಕೋ ಅದರ ಬದಲು ಬೇರೆಯೇ ನಡವಳಿಕೆ ಇದೆ ಎಂಬುದನ್ನು ಅಲ್ಲಿಯ ವಿರೋಧಾಭಾಸಗಳ ಮೂಲಕವೇ ಚಿತ್ರಿಸಲಾಗಿತ್ತು. ಉದಾಹರಣೆಗೆ ಕಾಂಪೌಂಡಿನ ಬಳಿ ಮೂತ್ರ ವಿಸರ್ಜನೆ ಮಾಡುವ ವ್ಯಕ್ತಿಯನ್ನು 'ಪಿಯ್ ಪಿಸ್ ಮಾಡ್ತಿದೀಯಾ' ಅಂದರೆ, 'ಇದು ನಿಮ್ಮನೇನಾ ?' 'ಅಲ್ಲ. ಆದರೆ ಹೀಗೆ ಮಾಡಬಹುದಾ' ಅಂದರೆ, 'ಹೋಗ್ರೀ ದಾರಿ ಹಿಡ್ಕೊಂಡು' ಅಂತ ಮತ್ತೆ ತನ್ನ ಕ್ರಿಯೆಯಲ್ಲಿ ತೊಡಗುತ್ತಾನೆ. ಈ ಪಾತ್ರವನ್ನು ನಿರ್ದೇಶಕ ಉಪೇಂದ್ರರೇ ನಿರ್ವಹಿಸಿದರು. ಭ್ರಷ್ಟ, ಅನೀತಿಯುತ, ಬೇಜವಾಬ್ದಾರಿ ಸಮಾಜದ ಚಿತ್ರಣವನ್ನು ಕೊಡಲಾಗಿತ್ತು. ಜನ; ಲಂಚ, ಭ್ರಷ್ಟಾಚಾರ, ಮೋಸ, ಹಗಲು ದರೋಡೆ ಮುಂತಾದವುಗಳಿಂದ ಪಾರಾಗಬೇಕಾದರೆ ಮುಖ್ಯವಾಗಿ ಅವರಲ್ಲಿ ಭಯ ಬರಬೇಕು. ಆಗಲೇ ಅನ್ಯಾಯ-ಅನಿಷ್ಟಗಳನ್ನು ದೂರ ಮಾಡಬಹುದೆಂಬ ಆಶಯ ಚಿತ್ರದಲ್ಲಿತ್ತು. ಪ್ರಥಮಾರ್ಧದಲ್ಲಿ ಅದನ್ನು ಸಮರ್ಥವಾಗಿಯೇ ಚಿತ್ರಿಸಿದರು ಉಪೇಂದ್ರ. ಒಂದು ಜನಪ್ರಿಯ ಬೀದಿನಾಟಕವನ್ನು



(ಚಿತ್ರ ೮೦) 'ಆಪರೇಷನ್ ಅಂತ' ಚಿತ್ರದಲ್ಲಿ ಅಂಬರೀಷ್

ನೆನಪಿಸುವಂತೆ ಚಿತ್ರಿತವಾದ ಘಟನೆಗಳವು. ಅಂಬರೀಷ್ ದ್ವಿಪಾತ್ರದಲ್ಲಿದ್ದರು. ಆದರೂ ಮೂಲದ ಸೊಗಡು ಇರಲಿಲ್ಲ. ದ್ವಿತೀಯಾರ್ಧದಲ್ಲಿ ಮೃಗೀಯ ಭಾವ ಅತಿಯಾಯಿತು. ಚಿತ್ರ ಜನಪ್ರಿಯವಾಗಲಿಲ್ಲ.

ಬಹಳ ದಿನಗಳ ನಂತರ ವಿಷ್ಣುವರ್ಧನ್, ಎಸ್.ವಿ.ರಾಜೇಂದ್ರಸಿಂಗ್ ಬಾಬು ಜೊತೆಗೂಡಿದ ಚಿತ್ರ 'ಹಿಮಪಾತ'. ಬಾಬು ಮೆಚ್ಚಿನ ನಾಯಕಿ ಸುಹಾಸಿನಿ ಮತ್ತು ಜಯಪ್ರದಾ ಈ ಚಿತ್ರದಲ್ಲಿ ವಿಷ್ಣುವರ್ಧನ್ ಜೋಡಿಯಾಗಿ ಅಭಿನಯಿಸಿದ್ದರು. ಉತ್ತರ ಭಾರತದ ಹಲವೆಡೆ ಹಾಗೂ ಬಾದಾಮಿ ಗುಹೆಗಳಲ್ಲಿ ಚಿತ್ರೀಕರಿಸಿದ್ದರು. ಹಂಸಲೇಖ ಸಂಗೀತದಲ್ಲಿ 'ಓ ವಸುಂಧರೆ ಮನೋಹರೆ...', 'ತೆರೆಯೋ ಮಂಜಿನ ತೆರೆಯಾ...' ಜನಪ್ರಿಯವಾದವು. ಚಿತ್ರದ ಕಥೆ, ನಿರ್ದೇಶನ ಎರಡೂ ಉತ್ತಮವಾಗಿದ್ದೂ ಸಹಾ ಚಿತ್ರ ಸೋಲಬೇಕಾಯಿತು. ಅಪರೂಪವೆನಿಸುವ ಹೊರಾಂಗಣವಿತ್ತು. ಅತ್ತಲ ಹಿಮಾಚ್ಛಾದಿತ ಪರಿಸರ, ಇತ್ತಲ ಬಿಜಾಪುರದ ಸುಲ್ತಾನ್‌ಶಾಹೀ ಶ್ರೀಮಂತಿಕೆಯ ಪಳೆಯುಳಿಕೆ ಎಲ್ಲವನ್ನೂ ಅನುಪಮ ಸುಂದರಗೊಳಿಸಿದ್ದ ರಾಜಾರಾಂ ಛಾಯಾಗ್ರಹಣ ಚಿತ್ರಕ್ಕಿತ್ತು. ನಿರ್ಮಾಪಕ ರಾಕ್‌ಲೈನ್ ವೆಂಕಟೇಶ್ ಉತ್ಸಾಹ ಕರಗಿಹೋಗಿತ್ತು.



(ಚಿತ್ರ ೮೧) 'ಅನುರಾಗ ಸಂಗಮ' ಚಿತ್ರದಲ್ಲಿ ಸುಧಾರಾಣಿ ಮತ್ತು ಕುಮಾರ್ ಗೋವಿಂದ್

ಇದೇ ಅವಧಿಯಲ್ಲಿ ಕನ್ನಡ ಚಿತ್ರರಂಗಕ್ಕೊಂದು ಹೊಸ ಭರವಸೆಯೆಂಬಂತೆ ಬಂದ ಯಶಸ್ವಿ ಚಿತ್ರ ವಿ.ಉಮಾಕಾಂತ್ ನಿರ್ದೇಶನದ 'ಅನುರಾಗ ಸಂಗಮ'. ಕಥೆಯ ಮಟ್ಟಿಗೆ ವಿಶೇಷವೇನೂ ಇರಲಿಲ್ಲ. ಭಾರೀ ತಾರಾಗಣವಿಲ್ಲ, ಅದ್ದೂರಿಯೂ ಅಲ್ಲ. ಆದರೂ ಏನೋ ಹಿತ-ಮಿತವಾದ ಮತ್ತು ಒಡಲೊಳಗಿನ ಸೂಕ್ಷ್ಮ ವಿವರಗಳಿಂದಾಗಿ ಆಪ್ತವಾಗುತ್ತ ಹೋಗುವ ಲಕ್ಷಣಗಳಿದ್ದವು. ಸಾಮಾನ್ಯವಾಗಿ ಕನ್ನಡ ಚಿತ್ರಗಳು ತಾನು ಹೇಳಬೇಕಾದ ಕಥೆಯನ್ನು ನೇರವಾಗಿ ಹೇಳುವುದೇ ಇಟ್ಟ ಬಾಣ, ಗುರಿಯಾಗಿ ಬಿಡುತ್ತದೆ. ಹೀಗಾದಾಗ ಪಾತ್ರಗಳ ಒಳತೋಟಿ, ದೈನಂದಿನ ಸಂಗತಿಗಳು ಸಣ್ಣ ಪುಟ್ಟ ವಿವರಗಳ ಮೂಲಕ ವಸ್ತು, ಸ್ವಭಾವಗಳನ್ನು ಪರಿಚಯಿಸುತ್ತಾ ಕಥೆಯನ್ನು ಬೆಳೆಸುವ ವಿಧಾನವನ್ನು ಅನುಸರಿಸಿದರು ನಿರ್ದೇಶಕ ಉಮಾಕಾಂತ್. ಇಂಥ ಪ್ರಯತ್ನಗಳನ್ನು ಸಾಮಾನ್ಯವಾಗಿ ಹೊಸ ಅಲೆ ಚಿತ್ರಗಳಲ್ಲಿ ಕಾಣುತ್ತೇವೆ. ವಾಣಿಜ್ಯ ಪ್ರಧಾನ ಚಿತ್ರಗಳಲ್ಲಿ ಅಪರೂಪ. ಕಾಶೀನಾಥ್ ಅಂಥ ಪ್ರಯತ್ನ ಮಾಡಿದ್ದರು. ಉಮಾಕಾಂತ್ ಇಂಥ ವಿವರಗಳನ್ನು ನವಿರಾದ ಹಾಸ್ಯದ ಜೊತೆ ಸೇರಿಸಿದ್ದರು. ಪ್ರಣಯ ಸನ್ನಿವೇಶಗಳಲ್ಲಿ ಹೊಸತನವಿತ್ತು. ಉಮಾಕಾಂತರ ಜೊತೆಗೆ ಕಥಾ ಸಂವಿಧಾನದಲ್ಲೂ ತನ್ನನ್ನು ತೊಡಗಿಸಿಕೊಳ್ಳುವ ಛಾಯಾಗ್ರಾಹಕ ಸುಂದರನಾಥ ಸುವರ್ಣ ಇದ್ದರು. ಕಥೆಗೆ ಮುಖ್ಯವಾಗಿ ಚಾಪ್ಲಿನ್ನನ 'ಸಿಟಿಲೈಟ್ಸ್' ಎಳೆಯೂ ಇತ್ತು. ಕುಮಾರ್ ಗೋವಿಂದ್ ಅಭಿನಯದಲ್ಲಿ ಚಾಪ್ಲಿನ್ನನ ಕೆಲವಂಶದ ಅನುಕರಣೆಯೂ ಇತ್ತು. ಚಿತ್ರದ ಒಂದು ಹಂತದಲ್ಲಿ ಬಹಳ ದಿನಗಳ ಮೇಲೆ ಗಂಭೀರ, ಚೊಕ್ಕ ಅಭಿನಯ ನೀಡಿದ್ದರು ಬಿ.ಸರೋಜಾದೇವಿ. ಇಂಥ ಹತ್ತಾರು ಕಾರಣಗಳು ಚಿತ್ರದ ಯಶಸ್ಸಿನ ಹಿಂದೆ ಇದ್ದವು. ಆದರೆ ಒಳ್ಳೆಯ ತಂತ್ರಜ್ಞನಾದರೂ ಉಮಾಕಾಂತ್ ಮುಂದಿನ ಪ್ರಯತ್ನಗಳಲ್ಲಿ ಈ ಸೊಗಡು ಕಾಣಲಿಲ್ಲ. ಪ್ರತಿಯೊಂದನ್ನೂ ಪ್ರಯೋಗ ಮಾಡಲು ಹೋದರು. ತನ್ನ ಪ್ರೇಕ್ಷಕನನ್ನು ಗಟ್ಟಿ ಮಾಡಿಕೊಂಡು ಆನಂತರ ಪ್ರಯೋಗಗಳತ್ತ ಗಮನಿಸಬಹುದಿತ್ತೇನೊ, ಉಮಾಕಾಂತ್ ಕೊಂಚ ಮುಡುಕಿದರು. ಮನೋಹರ್ ಸಂಗೀತ ಜೀವಂತಿಕೆಯಿಂದ ಕೂಡಿತ್ತು. 'ಓ ಮಲ್ಲಿಗೆ...' ಹಾಡು ಜನಪ್ರಿಯವಾಯಿತು. ಇದನ್ನು ಹಾಡಿದ್ದ ರಮೇಶ್‌ಚಂದ್ರ ೧೯೯೫-೯೬ರ ರಾಜ್ಯಪ್ರಶಸ್ತಿ ಪಡೆದರು. 'ಸಂಗಮ ಸಂಗಮ....' ಹಾಗೂ 'ತಾವರೆ ಓ ತಾವರೇ...' ಮತ್ತು ಉಳಿದ ಹಾಡುಗಳ ಚಿತ್ರೀಕರಣದಲ್ಲಿ ಹೊಸ ರೀತಿಯಿತ್ತು. ೧೯ ವಾರಗಳ ಪ್ರದರ್ಶನ ಕಾಣುತ್ತಿದ್ದಾಗ ಚಿತ್ರವನ್ನು ಚಿತ್ರಮಂದಿರದಿಂದ ತೆಗೆಯಲಾಯಿತು.

ಚಲನಚಿತ್ರ ನಿರ್ಮಾಣ ಕ್ಷೇತ್ರದಲ್ಲಿ ನಡೆಯುತ್ತಿದ್ದ ಇಂಥ ಸೂಕ್ಷ್ಮ ಪ್ರಯತ್ನಗಳು ಎಷ್ಟೇ ಮಹತ್ವದ್ದಾಗಿದ್ದರೂ ಇತರೆ ಪ್ರಭಾವಗಳನ್ನು ಬೀರುವಷ್ಟು ಶಕ್ತವಾಗಿರಲಿಲ್ಲ. ಒಂದು ಚಳವಳಿಯಿಂದ ಆಗಬೇಕಾದ್ದನ್ನು ಚಳವಳಿಯೇ ಆಗುಮಾಡಬೇಕಾಗಿತ್ತು. ಇದರ ಹೊರತಾಗಿ ಚಲನಚಿತ್ರಗಳು ಅವಷ್ಟಕ್ಕೆ ಅವುಗಳ ಲೋಕದಲ್ಲಿ ವಿಹರಿಸುವ ವಸ್ತುಗಳಾಗಿದ್ದವು. ಗೋಕಾಕ್ ಚಳವಳಿಯಲ್ಲಿ ರಾಜಕುಮಾರ್ ಭಾಗವಹಿಸಿದ್ದನ್ನು ನೆಪ ಮಾಡಿಕೊಂಡು ಕೋಲಾರ ಚಿನ್ನದಗಣಿ ಪ್ರದೇಶದಲ್ಲಿ ಕನ್ನಡ ಚಿತ್ರಗಳನ್ನು ೧೯೮೨ ರಿಂದಲೇ ಬಹಿಷ್ಕರಿಸಲಾಗಿತ್ತು. ಈ ಬಗ್ಗೆ ಸರ್ಕಾರ, ಸಂಘ ಸಂಸ್ಥೆಗಳು, ಕನ್ನಡ ಹೋರಾಟಗಾರರು ಗಮನ ಕೊಟ್ಟಿರಲಿಲ್ಲ ಅಥವಾ ಗೊತ್ತಿದ್ದರೂ ಏನೂ ಮಾಡುವಂತಿರಲಿಲ್ಲ. ಈ ಅಘೋಷಿತ ನಿಷೇಧ ೧೪ ವರ್ಷಗಳ ಕಾಲ ಜಾರಿಯಲ್ಲಿತ್ತು. ಕೊನೆಗೆ ಸ್ಥಳೀಯರೇ ಸ್ವಲ್ಪ ಜಾಗೃತರಾಗಿ ಮೈಕೊಡವಿಕೊಂಡು ಮೇಲೆದ್ದರು. ಕನ್ನಡ ಸಮಾರಂಭಗಳನ್ನು ಏರ್ಪಡಿಸುತ್ತಾ ಬೆಂಗಳೂರಿನಿಂದ ಕನ್ನಡಪರ ಹೋರಾಟಗಾರರನ್ನು ಕರೆಸಿಕೊಳ್ಳತೊಡಗಿದರು. ಇಂಥ ಚಟುವಟಿಕೆಗಳು ಹೆಚ್ಚುತ್ತಿದ್ದಂತೆ ಕ್ರಮೇಣ ಚಿತ್ರಮಂದಿರಗಳ ಫಲಕಗಳಲ್ಲಿ ಕನ್ನಡ ಕಾಣಿಸಿಕೊಳ್ಳತೊಡಗಿತು. ೧೯೯೫ರ ಜೂನ್ ಮೊದಲ ವಾರ ರಾಜಕುಮಾರ್ ಅಭಿನಯದ 'ಹೊಸ ಬೆಳಕು' ಚಿತ್ರವನ್ನು ಪ್ರದರ್ಶಿಸಲಾಯಿತು. ಇದೇ ಮೊದಲಾಗಿ ಕೆಜಿಎಫ್‌ನಲ್ಲಿ ಒಂದೊಂದು ಕನ್ನಡ ಚಿತ್ರ ಪ್ರದರ್ಶನವಾಗತೊಡಗಿತು.

ಇದರೊಂದಿಗೆ ಈ ವೇಳೆಗಾಗಲೇ ಸರ್ಕಾರ ಅಥವಾ ಚಲನಚಿತ್ರ ವಾಣಿಜ್ಯ ಮಂಡಳಿ ಕನ್ನಡ ವಾಕ್ಚಿತ್ರ ವಜ್ರಮಹೋತ್ಸವವನ್ನು ಸಂಘಟಿಸಬೇಕಾಗಿತ್ತು. ಆದರೆ ಅದು ಒಂದು ವರ್ಷದನಂತರವೂ ಸಾಧ್ಯವಾಗಲಿಲ್ಲ. ಅದರ ಬದಲಿಗೆ ೧೯೯೫ರ ಜೂನ್ ೩೦ ರಂದು ವಜ್ರ ಮಹೋತ್ಸವ ಆಚರಿಸಿಕೊಂಡಿತು. ಈ ಉತ್ಸವ ಒಂದಿಬ್ಬರು ಅತಿಥಿಗಳ ಭಾಷಣದಿಂದಾಗಿ ಆತ್ಮಾವಲೋಕನದ ವೇದಿಕೆಯೂ ಆಗಿ ಪರಿವರ್ತನೆಯಾಯಿತು. ಏಕೆಂದರೆ ಆ ಅವಧಿಯ ಚಿತ್ರಗಳು, ಹಾಡುಗಳು, ಪೋಸ್ಟರ್‌ಗಳು, ಪ್ರಚಾರ - ಎಲ್ಲವೂ ಸಾರ್ವಜನಿಕರಿಂದ ವ್ಯಾಪಕ ಟೀಕೆಗೆ ಒಳಗಾಗಿದ್ದವು. ಚಿತ್ರಗಳಿಗೆ ಇಡುತ್ತಿದ್ದ ಹೆಸರುಗಳ ಬಗ್ಗೆ ವಿಧಾನಸಭೆ ಹಾಗೂ ವಿಧಾನ ಪರಿಷತ್ತಿನಲ್ಲಿ ಚರ್ಚೆ ನಡೆದು, ಜನಪ್ರತಿನಿಧಿಗಳು ಆಕ್ರೋಶ ವ್ಯಕ್ತಪಡಿಸಿದ್ದರು. ಹೆಚ್ಚು ರೀಮೇಕ್ ಮಾಡುವುದರ ಜೊತೆಗೆ ಕೆಟ್ಟದ್ದನ್ನೇ ಹೆಚ್ಚಾಗಿ ಕೊಡುತ್ತಾ ಯುವಪೀಳಿಗೆ ಹಾಗೂ ಸಮಾಜವನ್ನು ಹಾಳುಗೆಡುವುತ್ತಿರುವ ಚಿತ್ರೋದ್ಯಮಕ್ಕೆ ಹಲವಾರು ರೀತಿಯ ಸಹಾಯಧನ, ತೆರಿಗೆ ವಿನಾಯ್ತಿ ಕೊಟ್ಟು ಸಾರ್ವಜನಿಕ ಹಣ ಪೋಲು ಮಾಡುತ್ತಿರುವುದನ್ನು ಆಡಳಿತ ಹಾಗೂ ವಿರೋಧ ಪಕ್ಷಗಳೆರಡರ ಸದಸ್ಯರೂ ಒಕ್ಕೊರಲಿನಿಂದ ಖಂಡಿಸಿದ್ದರು. ಇದರ ಪರಿಣಾಮ ತುಂಬಾ ನೇರವಾಗಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಸುವರ್ಣ ಮಹೋತ್ಸವದ ವೇದಿಕೆಯಲ್ಲಿ ಕಂಡುಬಂದಿತು.

ಬೆಂಗಳೂರಿನ ವುಡ್‌ಲ್ಯಾಂಡ್ಸ್ ಹೊಟೇಲ್‌ನಲ್ಲಿ ನಡೆದ ಸಮಾರಂಭ. ವೇದಿಕೆ ಮೇಲೆ ಮುಖ್ಯಮಂತ್ರಿ ಹೆಚ್.ಡಿ.ದೇವೇಗೌಡ, ಅಕ್ಕಿನೇನಿ ನಾಗೇಶ್ವರರಾವ್, ರಾಜಕುಮಾರ್, ಜೆ.ಹೆಚ್.ಪಟೇಲ್, ಎಂ.ಸಿ.ನಾಣಯ್ಯ ಮುಂತಾದವರು ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಕನ್ನಡದ ಬಹುತೇಕ ಕಲಾವಿದರು, ತಂತ್ರಜ್ಞರು

ಭಾಗವಹಿಸಿದ್ದರು. ಈ ಸಮಾರಂಭದಲ್ಲಿ ಕನ್ನಡ ಚಿತ್ರರಂಗ ತುಳಿದಿರುವ ದಾರಿಯ ಬಗ್ಗೆ ಆತಂಕ, ಟೀಕೆಗಳು ಕೆಲವು ಭಾಷಣಕಾರರಿಂದ ವ್ಯಕ್ತವಾಯಿತು. ಬೆಳಗಿನ ವಿಚಾರ ಸಂಕಿರಣದಲ್ಲಿ ವಾರ್ತಾ ಸಚಿವ ಎಂ.ಸಿ.ನಾಣಯ್ಯನವರಂತೂ 'ಈರುಳ್ಳಿ ಬೆಳ್ಳುಳ್ಳಿ ಮಾರುವವರೆಲ್ಲ ಸಿನಿಮಾ ಮಾಡುತ್ತಿದ್ದಾರೆ'' ಎಂದು ತಮ್ಮ ನೋವನ್ನು ಅತ್ಯಂತ ಆಕ್ರೋಶದಿಂದ, ಕಟುವಾದ ಮಾತುಗಳಲ್ಲಿ ಹೇಳಿದರು. ನಾಣಯ್ಯನವರು ಇನ್ನೂ ಒಂದು ಹೆಜ್ಜೆ ಮುಂದಿಟ್ಟು ''ಮುಂದೆ ಉತ್ತಮ ಚಿತ್ರಗಳಿಗಷ್ಟೇ ಸಬ್ಸಿಡಿ ಕೊಡುವ ಬಗ್ಗೆ ಗಂಭೀರ ಚಿಂತನೆ ನಡೆಯುತ್ತದೆ'' ಎಂದು ಘೋಷಿಸಿದರು. ಅದುವರೆಗೆ ರೀಮೇಕ್ ಅಲ್ಲದ ಪ್ರತಿಯೊಂದು ಕನ್ನಡ ಚಿತ್ರಕ್ಕೂ ಸರ್ಕಾರ ನಾಲ್ಕು ಲಕ್ಷ ರೂಪಾಯಿ ಸಹಾಯಧನ ನೀಡುತ್ತಿತ್ತು. ಈ ಸೌಲಭ್ಯವನ್ನು ಕೆಲವರು ಸುಳ್ಳು ಪ್ರಮಾಣಪತ್ರ ಸಲ್ಲಿಸಿ, ರೀಮೇಕ್ ಹಾಗೂ ಅಲ್ಲಿ-ಇಲ್ಲಿ ಕದ್ದು ಹೆಣೆದ ಕಥೆಯ 'ಚೌಚೌ' ಚಿತ್ರಗಳಿಗೂ ಪಡೆದುಕೊಳ್ಳುತ್ತಿದ್ದರು. ಈ ನೀತಿಗೆ ಸಂಚಕಾರ ಬಂದು ಆಯ್ದ ೨೦ ಚಿತ್ರಗಳಿಗೆ ತಲಾ ೧೦ ಲಕ್ಷ ರೂಪಾಯಿ ನೆರವು ನೀಡುವ ಹೊಸಪದ್ಧತಿ ೧೯೯೩ ರಿಂದ ಜಾರಿಗೆ ಬಂತು. ವಾಸ್ತವವಾಗಿ ಇದು ಚಾಲನೆ ಪಡೆದುಕೊಂಡಿದ್ದು ಜನತಾದಳ ಸರ್ಕಾರದಿಂದ, ಪ್ರಕಟವಾದದ್ದು ಸುವರ್ಣ ಮಹೋತ್ಸವ ವೇದಿಕೆಯಿಂದ. ಆದರೆ ೧೯೯೮ ರಲ್ಲಿ ಬಿ.ವಿ.ಕಾರಂತರ ನೇತೃತ್ವದ ಸಲಹಾ ಸಮಿತಿ ಈ ಆಯ್ಕೆ ನಡೆಸಿಕೊಟ್ಟಿತು.

ಸರ್ಕಾರ ಮತ್ತು ಸಾರ್ವಜನಿಕರ ದೃಷ್ಟಿಯಲ್ಲಿ ಸಿನಿಮಾ ಮಾಧ್ಯಮದ ಮಹತ್ವವನ್ನು ಕುಗ್ಗಿಸುವುದರಲ್ಲಿ, ಕುಸಿಯುತ್ತಿದ್ದ ಚಲನಚಿತ್ರಗಳ ಗುಣಮಟ್ಟದೊಂದಿಗೆ



(ಚಿತ್ರ ೮೨) 'ಅಪ್ಪಾಜಿ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ಆಮನಿ

ಚಲನಚಿತ್ರಗಳಿಗೆ ಇಡುತ್ತಿದ್ದ ಇಂಗ್ಲಿಷ್ ಹೆಸರುಗಳು ಕೂಡ ಪ್ರಭಾವ ಬೀರಿದ್ದವು. ಹಿಂದೆಂದೂ ಇಲ್ಲದಿದ್ದ ಈ ಪ್ರವೃತ್ತಿ ಕನ್ನಡ ಚಿತ್ರೋದ್ಯಮಿಗಳಲ್ಲಿ ೧೯೯೪ರಿಂದ ಉಲ್ಬಣಿಸಿತ್ತು. ಹೊಂದಲಿ, ಬಿಡಲಿ, ಇಂಗ್ಲಿಷ್ ಹೆಸರಿಗೆ ಆಕರ್ಷಣೆ ಇರುತ್ತದೆ ಎಂಬುದರೊಂದಿಗೆ ಇಂಗ್ಲಿಷ್ ಹೆಸರಿಗೋಸ್ಕರ ಕಥೆ ಹೊಂದಿಸುವ ಮೌಢ್ಯವನ್ನೂ ಕೆಲವರು ತೋರಿದರು. ಲಾಳ ಸಿಕ್ಕಿತೆಂದು ಕುದುರೆ ಹುಡುಕಿಕೊಂಡು ಹೊರಟ ಪ್ರಸಂಗವನ್ನು ಇದು ಹೋಲುತ್ತದೆ. ಇಂಗ್ಲಿಷ್ ಹೆಸರುಗಳ ಬಗ್ಗೆ ಅನಾಮತ್ತಾಗಿ ತಿರಸ್ಕಾರ ಹುಟ್ಟುವುದಕ್ಕ ಕೇವಲ ಹತ್ತು ವರ್ಷಗಳಷ್ಟು ಹಿಂದಿನ ಅಚ್ಚ ಕನ್ನಡದ ಸುಂದರ ಹೆಸರುಗಳು ಜನರ ನೆನಪಿನಲ್ಲಿದ್ದುದು ಕಾರಣವಾಗಿತ್ತು.

೧೯೭೦ರ ದಶಕಗಳಲ್ಲಿ 'ಗೆಜ್ಜೆಪೂಜೆ', 'ಕರುಳಿನ ಕರೆ', 'ಉಪಾಸನೆ', 'ಬಂಗಾರದ ಪಂಜರ', 'ಎಡಕಲ್ಲು ಗುಡ್ಡದ ಮೇಲೆ'. 'ಯಾವ ಜನ್ಮದ ಮೈತ್ರಿ', 'ನಾಂದಿ', 'ವಂಶವೃಕ್ಷ', 'ಕಾಡು', 'ಹಣ್ಣೆಲೆ ಚಿಗುರಿದಾಗ', 'ಭಾಗ್ಯಜ್ಯೋತಿ', 'ಬೆಸುಗೆ', 'ಬಂಗಾರದ ಹೂವು', 'ಬಂಗಾರದ ಮನುಷ್ಯ', 'ದೂರದ ಬೆಟ್ಟ', 'ಭಾಗ್ಯದ ಬಾಗಿಲು', 'ಎರಡು ಕನಸು', 'ನಾ ನಿನ್ನ ಮರೆಯಲಾರೆ' ಮುಂತಾದ ಮೋಹಕ ಹೆಸರುಗಳ ಚಿತ್ರಗಳು ಬಂದವು. ಇವು ಪ್ರೇಕ್ಷಕರನ್ನು ಸೆಳೆಯುವುದರಲ್ಲಿ ಯಶಸ್ವಿಯೂ ಆಗಿವವು. ೮೦ರ ದಶಕದಲ್ಲಿ 'ಬಂಧನ', 'ಹಾಲು ಜೇನು', 'ಹೊಸ ನೀರು', 'ಬೆಂಕಿಯ ಬಲೆ', 'ಮುದುಡಿದ ತಾವರೆ ಅರಳಿತು', 'ಹೊಂಬಿಸಿಲು', 'ಮೌನಗೀತೆ' ಇಂಥ ಹೆಸರುಗಳು ಇದ್ದವಾದರೂ ಕ್ರಮೇಣ ವಿರಳವಾಗುತ್ತಾ ಬಂದವು. ಮೇಲಿನ ಹಳೆಯ ಚಿತ್ರಗಳ ಹೆಸರುಗಳೊಂದಿಗೆ ೧೯೯೫ರ ಆಜುಬಾಜಿನಲ್ಲಿ ಬಂದ ಕೆಳಗಿನ ಹೆಸರುಗಳನ್ನು ಹೋಲಿಸಿದರೆ ಮಾಧ್ಯಮ ಹಿಡಿದಿದ್ದ ಅಧಃಪತನದ ಹಾದಿ ಸ್ಪಷ್ಟವಾಗಿ ಗೋಚರಿಸುತ್ತದೆ. 'ಎಮರ್ಜೆನ್ಸಿ', 'ಕರ್ಫ್ಯೂ', 'ಹಲೋ ಡ್ಯಾಡಿ', 'ಕಿಡ್ನಾಪ್', 'ಮದರ್ ಇಂಡಿಯಾ', 'ಮರ್ಡರ್', 'ಕಿಲ್ಲರ್ ಡೈರಿ', 'ಸ್ಟಂಟ್ ಮಾಸ್ಟರ್', 'ಲೇಡಿ ಪೊಲೀಸ್', 'ಹಲೋ ಸಿಸ್ಟರ್', 'ಇದೇ ಪೊಲೀಸ್ ಬೆಲ್ಟ್', 'ಪ್ರೊಫೆಸರ್', 'ಹ್ಯಾಟ್ಸ್ ಆಫ್ ಇಂಡಿಯಾ', 'ಗುಡ್ ಬ್ಯಾಡ್ ಅಗ್ಲಿ' - ಇಂಥ ಇನ್ನು ಹತ್ತಾರು ಹೆಸರುಗಳು ಸರಣಿಯೋಪಾದಿಯಲ್ಲಿ ಬಳಕೆಯಾಗತೊಡಗಿದವು. ೧೯೯೭ರ ನವೆಂಬರ್ ೧ರ ಕನ್ನಡ ರಾಜ್ಯೋತ್ಸವ ದಿನ ಕನ್ನಡಿಗರಿಗೆ ಶುಭಾಶಯ ಹೇಳುತ್ತಾ ಕನ್ನಡ ಚಲನಚಿತ್ರ ನಿರ್ಮಾಪಕರು ಪತ್ರಿಕೆಗಳಿಗೆ ಕೊಟ್ಟಿದ್ದ ಜಾಹಿರಾತುಗಳಲ್ಲಿ ಹೆಸರುಗಳು ಹೀಗಿದ್ದವು - 'ಎಂಟರ್ ದಿ ಸಿಟಿ', 'ಬೆಂಗಳೂರ್ ಟುಡೆ', 'ಒನ್ ಮ್ಯಾನ್ ಆರ್ಮಿ', 'ರಫ್ ಅಂಡ್ ಟಫ್', 'A', 'ಲೇಡಿ ಟೈಗರ್', 'ಲೇಡಿ ಕಮಿಷನರ್'. ಇವುಗಳ ಮೇಲೆ ಇದ್ದ ವಿಶೇಷಣ ವಾಕ್ಯಗಳು ಮ್ಯೂಸಿಕಲ್ ವಾರ್, ರೊಮ್ಯಾಂಟಿಕ್, ಎಂಟರ್‌ಟೈನ್‌ಮೆಂಟ್, ಆ್ಯಕ್ಷನ್, ದಿ ವೇವ್ ಆಫ್ ಫ್ರೆಶ್‌ನೆಸ್ ಮುಂತಾದವು. ಇವು ಕನ್ನಡ ಸಂಸ್ಕೃತಿ ಬಿಂಬಿಸುವ ಕನ್ನಡ ಚಿತ್ರರಂಗದಿಂದ ಕನ್ನಡಿಗರಿಗೆ ಸಿಕ್ಕಿದ ರಾಜ್ಯೋತ್ಸವ ಕೊಡುಗೆ. ಕನ್ನಡ ಚಲನಚಿತ್ರ ನಿರ್ಮಾಪಕರು, ನಿರ್ದೇಶಕರಿಂದಾಗಿ ಹೀಗೆ ಉಲ್ಬಣಿಸಿದ ಇಂಗ್ಲಿಷ್ ಖಾಯಿಲೆಯನ್ನು ಸಾರ್ವಜನಿಕರಿಂದ ಕೇಳಿಬಂದ ಟೀಕೆಗಳ ಹಿನ್ನೆಲೆಯಲ್ಲಿ ವಾಸಿ ಮಾಡಬೇಕಾದ ಅನಿವಾರ್ಯತೆ ಎದುರಾಯಿತು. ಚಲನಚಿತ್ರ ವಾಣಿಜ್ಯ ಮಂಡಳಿ ಸುತ್ತೋಲೆ ಹೊರಡಿಸಿ ಇಂಗ್ಲಿಷ್ ಹೆಸರುಗಳನ್ನು ಇಡಬಾರದೆಂದೂ, ಹಾಗೊಮ್ಮೆ ಇಂಗ್ಲಿಷ್ ಹೆಸರುಗಳನ್ನು ತಂದರೂ ವಾಣಿಜ್ಯ ಮಂಡಳಿಯಲ್ಲಿ ನೋಂದಾಯಿಸಿಕೊಳ್ಳುವುದಿಲ್ಲವೆಂದೂ ಸ್ಪಷ್ಟವಾಗಿ ಆದೇಶ ನೀಡಿತು.

ವಾಣಿಜ್ಯ ಮಂಡಳಿ ನೀಡಿದ ಆದೇಶ ಪರಿಣಾಮ ಬೀರುವುದರಲ್ಲಿ ಯಶಸ್ಸು ಸಾಧಿಸಿತು. ಆಂಗ್ಲ ಹೆಸರುಗಳನ್ನು ಬಿಡಬೇಕಾಗಿ ಬಂದವರು ಮುಂದೇನು ಮಾಡುವುದೆಂದು ಚಿಂತಿಸುತ್ತಿದ್ದಾಗ ಹಿಂದಿಯಲ್ಲಿ ಜನಪ್ರಿಯ ಹಾಡುಗಳ ಮೊದಲ ಸಾಲನ್ನೇ ಚಿತ್ರಗಳಿಗೆ ಇಡುವ ಪರಂಪರೆ ಆರಂಭವಾಯಿತು. ಅದು ನಮ್ಮವರ ತಲೆನೋವನ್ನು ಸಾಕಷ್ಟು ಕಡಿಮೆ ಮಾಡಿತು. 'ನಮ್ಮೂರ ಮಂದಾರ ಹೂವೆ', 'ರಂಗೇನ ಹಳ್ಳಿಯಾಗೆ ರಂಗಾದ ರಂಗೇಗೌಡ', 'ಓ ಮಲ್ಲಿಗೆ', 'ಹಳ್ಳಿಯಾದರೇನು ಶಿವಾ', 'ದೋಣಿ ಸಾಗಲಿ', 'ಮಾಮರವೆಲ್ಲೋ ಕೋಗಿಲೆಯೆಲ್ಲೋ', 'ನೋಡು ಬಾ ನಮ್ಮೂರ', 'ಶುಭ ಕಾಲ ಬರುತ್ತೈತೆ', 'ಕನಸಲೂ ನೀನೇ ಮನಸಲೂ ನೀನೇ', 'ನಗು ನಗುತಾ ನಲಿ', 'ನೀ ಮುಡಿದಾ ಮಲ್ಲಿಗೆ', 'ನೀನೇ ಸಾಕಿದಾ ಗಿಣಿ', 'ಕರ್ಪೂರದಾ ಗೊಂಬೆ', 'ಕೊಡಗಿನ ಕಾವೇರಿ', 'ಮೇಘ ಬಂತು ಮೇಘ', 'ತರಿಕೆರೆ ಕೆರೆ ಏರಿ ಮೇಲೆ', 'ರಂಭೆ ನೀ ವಯ್ಯಾರದ ಗೊಂಬೆ', 'ಮಾರಿ ಕಣ್ಣು ಹೋರಿ ಮ್ಯಾಗೆ'. 'ಟುವ್ವಿ ಟುವ್ವಿ ಟುವ್ವಿ', 'ನನ್ನಾಸೆಯಾ ಹೂವೇ', 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ', 'ಭಾಮಾ ಸತ್ಯಭಾಮಾ' - ಮುಂತಾದ ಕಾವ್ಯಾತ್ಮಕ, ಗೇಯಗುಣದ ಪದಗಳು ಹೆಸರುಗಳಾಗಿದ್ದು ಅಪೇಕ್ಷಣೀಯವಾಗಿದೆ.

೧೯೯೬ ರಲ್ಲಿ ವಾಜಪೇಯಿ ನೇತೃತ್ವದ ಭಾರತೀಯ ಜನತಾ ಪಕ್ಷ ೧೩ ದಿನ ರಾಜ್ಯಭಾರ ಮಾಡಿ ಕೆಳಗಿಳಿಯಿತು. ಹಲವು ಪಕ್ಷಗಳ ಸಹಯೋಗದಲ್ಲಿ ಕರ್ನಾಟಕದ ಎಚ್.ಡಿ.ದೇವೇಗೌಡ ಪ್ರಧಾನಿಯಾದರು. ಹವಾಲಾ ಪ್ರಕರಣ ವಿಪರೀತ ಸುದ್ದಿ ಮಾಡಿ, ಅನೇಕ ಕ್ಯಾಬಿನೆಟ್ ಮಂತ್ರಿಗಳು, ರಾಜಕಾರಣಿಗಳು ಹವಾಲಾ ಸುಳಿಯಲ್ಲಿ ಸಿಕ್ಕಿಬಿದರು. ಶ್ಯಾಂ ಬೆನೆಗಲ್‌ರ 'ಮೇಕಿಂಗ್ ಆಫ್ ಮಹಾತ್ಮಾ' ಭಾರತ ಹಾಗೂ ದಕ್ಷಿಣ ಆಫ್ರಿಕಾಗಳಲ್ಲಿ ಬಿಡುಗಡೆಯಾಯಿತು. ಆಂಧ್ರದ ಮಂತ್ರಿ ನಟ ಎನ್.ಟಿ.ರಾಮರಾವ್‌ರ ನಿಧನ - ಇವುಗಳೊಂದಿಗೆ ೧೯೯೬ ಸುದ್ದಿಯಲ್ಲಿತ್ತು.

'ಜನುಮದ ಜೋಡಿ' ಚಿತ್ರದ ಅಭೂತಪೂರ್ವ ಯಶಸ್ಸೊಂದು ಸಂಭವಿಸದಿದ್ದಿದ್ದರೆ ೧೯೯೬ ಕೂಡ ಯಾವುದೇ ವೈಶಿಷ್ಟ್ಯಗಳಿಲ್ಲದೆ ಮುಗಿದುಹೋಗುತ್ತಿತ್ತು. ಅಲ್ಲದೆ ಅನಂತ್‌ನಾಗ್, ಅಂಬರೀಷ್, ವಿಷ್ಣುವರ್ಧನ್ ಈ ಮೂವರು ಅವರ ವೃತ್ತಿಜೀವನದ ಬೆಳ್ಳಿಹಬ್ಬಕ್ಕೆ ಕಾಲಿಟ್ಟ ವರ್ಷವಿದು. ೨೫ ವರ್ಷಗಳ ಅಭಿನಯದ ಬದುಕಿನಲ್ಲಿ ಅನಂತ್‌ನಾಗ್ ೧೨೫ ಚಿತ್ರ, ಅಂಬರೀಷ್ ೧೮೦ ಚಿತ್ರ, ವಿಷ್ಣುವರ್ಧನ್ ೧೭೦ ಚಿತ್ರಗಳನ್ನು ಪೂರೈಸಿದ್ದರು. ರಾಜೇಶ್, ಕಲ್ಯಾಣ್‌ಕುಮಾರ್ ಹಾಗೂ ಇನ್ನಿತರ ಕೆಲವು ನಾಯಕನಟರಂತೆ ಇವರು ಅಜ್ಞಾತವಾಸ ಅನುಭವಿಸುವಂಥ ಪರಿಳಿತ ಕಾಣಲಿಲ್ಲವೆಂಬುದು ಚಿತ್ರಚರಿತ್ರೆಯ ಕುತೂಹಲದ ಅಂಶಗಳಲ್ಲೊಂದಾಗಿದೆ. ಹೊಸ ನಾಯಕನಟರ ಆಗಮನವಾಗುತ್ತಲೇ ಇದ್ದರೂ ಇವರು ಗಳಿಸಿಕೊಂಡಿದ್ದ ಸ್ಥಾನಕ್ಕೆ ೨೫ ವರ್ಷಗಳಲ್ಲಿ ಚ್ಯುತಿ ಬರಲಿಲ್ಲ. ಅನಂತ್‌ನಾಗ್ ರಾಜಕಾರಣಕ್ಕೆ ಪ್ರವೇಶಿಸಿ ತಾವಾಗಿಯೇ ಒಂದೆರಡು ವರ್ಷ ಬಂದ ಅವಕಾಶಗಳನ್ನು ಒಪ್ಪಿಕೊಳ್ಳಲಿಲ್ಲ ಎಂಬುದನ್ನು ಬಿಟ್ಟರೆ



(ಚಿತ್ರ ೮೩) 'ಸರ್ಕಲ್ ಇನ್‌ಸ್ಪೆಕ್ಟರ್' ಚಿತ್ರದಲ್ಲಿ ಸಾಯಿಪ್ರಕಾಶ್ ಮತ್ತು ದೇವರಾಜ್

ಅವರ ಬೇಡಿಕೆಯೂ ಎಂದೂ ಕುಗ್ಗಿರಲಿಲ್ಲ. ಒಬ್ಬೊಬ್ಬರೂ ಒಂದೊಂದು ರೀತಿಯ ಪಾತ್ರಗಳಿಗೆ ತಮಗೆ ತಾವೇ ಸಾಟಿ ಎಂಬಂತೆ ಬೆಳವಣಿಗೆ ಕಾಣುತ್ತಾ ಬಂದಿದ್ದಾರೆ. ೧೯೯೬ ರಲ್ಲಿ ಪ್ರಭಾಕರ್ ಕೂಡ ೧೭೫ ಚಿತ್ರಗಳ ಮೂಲಕ ೨೫ ವರ್ಷಗಳನ್ನು ಪೂರೈಸಿದರು. ಆದರೆ ಇವರ ಹಾದಿಯಲ್ಲಿ ಪರಿಳಿತ ಕಾಣುತ್ತದೆ. ಅಲ್ಲಲ್ಲಿ ಸಾಹಸದ ಮಿಂಚುಗಳು ಹೊಳೆದಿವೆ. ಚಿತ್ರನಿರ್ಮಾಣ, ನಿರ್ದೇಶನ, ಚಿತ್ರಕಥೆ, ಸಾಹಸ ನಿರ್ದೇಶನ, ಕೊನೆಗೆ ಸಂಗೀತ ನಿರ್ದೇಶನವನ್ನು ಇವರು ಮಾಡಿದ್ದಾರೆ. ಇವರೊಂದಿಗೆ ೧೯೯೬ರ ನಂತರ ಇವರು ನಿರ್ಮಿಸಿದ, ನಿರ್ದೇಶಿಸಿದ ಆರೇಳು ಚಿತ್ರಗಳು ಅಶ್ಲೀಲತೆಯಿಂದಾಗಿ ಅವರನ್ನು ಇಷ್ಟಪಡುತ್ತಿದ್ದ ಉತ್ತಮ ಅಭಿರುಚಿಯ ಪ್ರೇಕ್ಷಕರನ್ನು ಕಳೆದುಕೊಂಡವು. ವೈಯಕ್ತಿಕ ಬದುಕಿನ ಘಟನೆಗಳು, ಚಿತ್ರ ಬದುಕಿನ ತಪ್ಪು ನಿರ್ಧಾರಗಳು, ಶ್ರಮದಿಂದ ಮೇಲೆ ಬಂದಿದ್ದ ಪ್ರಭಾಕರ್ ಅವರ ಅಂತಃಸತ್ವವನ್ನು ಕುಗ್ಗಿಸಿದವು. ಹೊಸ ಪೀಳಿಗೆಯ ಯಾವುದೇ ನಾಯಕನಟನಿಗೆ ಸರಿಸಾಟಿಯಾಗುವಂಥ ಪ್ರತಿಭೆ ಹೊಂದಿದ್ದು, ಯಾರಿಗೂ ಹೋಲಿಸಿಕೊಳ್ಳದೆ ವಿಶಿಷ್ಟ ಶೈಲಿಯಿಂದ ೨೦ ವರ್ಷಗಳು ತೆಲುಗು, ತಮಿಳು, ಮಲಯಾಳಂ ಸೇರಿದಂತೆ ದಕ್ಷಿಣ ಭಾರತದ ನಾಲ್ಕು ಭಾಷೆಗಳ ಚಿತ್ರಗಳಿಗೆ ಬೇಕಾದವರಾಗಿ ಬೆಳೆದ ಪ್ರಭಾಕರ್ ೧೯೯೬ರೊಂದಿಗೆ ಇಳಿಮುಖದ ಹಾದಿಯನ್ನು ಕ್ರಮಿಸತೊಡಗಿದರು.

ಹಳೆಯ ದಿನಗಳ ಹೋಲಿಕೆ ನಿಲುಕದಷ್ಟು ವಾತಾವರಣ ಬದಲಾವಣೆಗೊಂಡಿತ್ತು. ಇಡೀ ಜೀವಮಾನದ ಉತ್ಸಾಹವನ್ನೆಲ್ಲ ಧಾರೆಯೆರೆದು ಅಬ್ಬಾಯಿನಾಯ್ಡು ಬೆಂಗಳೂರಿನಲ್ಲಿ ರೂಪಿಸಿದ ಮಹಾತ್ವಾಕಾಂಕ್ಷೆಯ 'ಮಧು ಆರ್ಟ್ಸ್ ಸ್ಟುಡಿಯೋ' ೧೯೯೬ರ ಆಗಸ್ಟ್ ೧೬ ರಂದು ಉದ್ಘಾಟನೆಯಾಯಿತು. ರಾಜಕುಮಾರ್‌ಗೆ ದೇಶದ ದೊಡ್ಡ ಗೌರವವಾದ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಅದೇ ಆಗಸ್ಟ್ ತಿಂಗಳ ೬ ರಂದು ಪ್ರದಾನವಾಯಿತು. 'ಪದ್ಮಭೂಷಣ' ಬಂದಾಗ ಅದನ್ನೊಂದು ನಾಡಸಂಭ್ರಮದಂತೆ ಆಚರಿಸಲಾಗಿತ್ತು. ಆದರೆ 'ಫಾಲ್ಕೆ' ಪ್ರಶಸ್ತಿ ಅಂಥ ರೋಮಾಂಚನ ನೀಡಲಿಲ್ಲವೇಕೋ. ಮುಂಚೂಣಿಯಲ್ಲಿ ನಿಂತು ಸಂಭ್ರಮ-ವೈಭವಗಳನ್ನು ಮೆರೆಸುವ ಸಿ.ವಿ.ಎಲ್.ಶಾಸ್ತ್ರಿಗಳಂಥ ಶಕ್ತ ಮನಸ್ಸು - ಧಾರಾಳತನ ಇರುವ ಇನ್ನೊಂದು ವ್ಯಕ್ತಿತ್ವ ಚಿತ್ರೋದ್ಯಮದಲ್ಲಿ ಇಲ್ಲವೆಂದರೂ ಆದೀತು. ಶಾಸ್ತ್ರಿಗಳಿಗೆ ವಯಸ್ಸು, ಮನಸ್ಸು, ಆರೋಗ್ಯ ಎಲ್ಲವೂ ಸಾಕು ಸಾಕು ಎಂದಿತ್ತು. ಫಾಲ್ಕೆ ಪ್ರಶಸ್ತಿಗೆ ಅಲ್ಲಲ್ಲಿ ನಡೆದ ಸಾಂಪ್ರದಾಯಿಕ ಸಮಾರಂಭಗಳು ಬಿಟ್ಟರೆ ಹೆಚ್ಚಿಗೆ ಅನ್ನುವಂಥದೇನೂ ಆಗಲಿಲ್ಲ.

೧೯೯೬ರಲ್ಲಿ ೬೯ ಚಿತ್ರಗಳು ತೆರೆಕಂಡವು.

ಸೂರ್ಯ ಇಂಟರ್‌ನ್ಯಾಷನಲ್ ಲಾಂಛನದಡಿ ತೆರೆಕಂಡ ವರ್ಷದ ಮೊದಲ ಚಿತ್ರ 'ಅಪ್ಪಾಜಿ'. ಡಿ.ರಾಜೇಂದ್ರಬಾಬು ನಿರ್ದೇಶನದ ಈ ಚಿತ್ರದಲ್ಲಿ ವಿಷ್ಣು ದ್ವಿಪಾತ್ರದಲ್ಲಿ ಅಭಿನಯಿಸಿದ್ದಾರೆ. ಚಿತ್ರ ರಕ್ತಪಾತದೊಂದಿಗೇ ಆರಂಭವಾಗುತ್ತದೆ. ವಿಷ್ಣು ಅಣ್ಣ-ತಮ್ಮ ಎರಡು ಪಾತ್ರಗಳಲ್ಲೂ ಉತ್ತಮವಾಗಿ ಅಭಿನಯಿಸಿದ್ದರು. ಅಣ್ಣನ ಪಾತ್ರದ ಸಾವಿಗೆ ಕಾರಣರಾದವರ ಮೇಲೆ ತಮ್ಮ ಸಿಡಿದೆದ್ದು ಅತನ ಮಾರ್ಗದಂತೆಯೇ ನಡೆದು ಜನಕಲ್ಯಾಣ ಮಾಡುತ್ತಾನೆ. ಚಿತ್ರಕಥೆ-ನಿರ್ದೇಶನ ಉತ್ತಮವಾಗಿದ್ದರೂ ಬಿಡುಗಡೆಯಾದಾಗ ಯಶಸ್ಸು ಕಾಣಲಿಲ್ಲ. ಗ್ರಾಮಾಂತರ ಪ್ರದೇಶ ಮುಂತಾದೆಡೆ ಉತ್ತಮ ವ್ಯವಹಾರ ಗಳಿಸಿತ್ತು. ಚಿತ್ರ ತೆಲುಗಿಗೂ ಡಬ್ ಆಯಿತು. 'ಏನೇ ಕನ್ನಡತಿ ನೀ ಯಾಕೆ ಹಿಂಗಾಡ್ತಿ...' ಹಾಡು ಸೊಗಸಾಗಿತ್ತಾದರೂ ಸಾಮಾನ್ಯವಾಗಿ ರೋಷದಿಂದಲೋ, ವೀರಾವೇಶದಿಂದಲೋ ಹಾಡಬೇಕಾದ ಈ ರಾಗವನ್ನು ಪ್ರೇಮಗೀತೆಯನ್ನಾಗಿ ಬಳಸಿಕೊಂಡದ್ದು ಸರಿ ಎನಿಸಲಿಲ್ಲ. ಮೂಲತಃ ಆಂಧ್ರಪ್ರದೇಶದ ಜನಪ್ರಿಯ ನಾಯಕ ಗದ್ದರ್ ಜನಾಂದೋಳನಕ್ಕಾಗಿ ಬಳಸುವ ಧಾಟಿ ಇದಾಗಿತ್ತು.

ವಿಷ್ಣುವರ್ಧನ್, ಸೋನಾಕ್ಷಿ ಮುಖ್ಯಪಾತ್ರದಲ್ಲಿದ್ದ 'ಹಲೋ ಡ್ಯಾಡಿ' ನಿರ್ದೇಶಿಸಿದ್ದು ನಾಗಣ್ಣ. ಆಂಗ್ಲ ಚಿತ್ರವೊಂದರ ಸ್ಫೂರ್ತಿಯಿತ್ತು. ಶ್ರೀಲಲಿತ ಕಮರ್ಷಿಯಲ್ಸ್ ಲಾಂಛನದಡಿ ಬಿಡುಗಡೆಯಾಯಿತು. ಚಿತ್ರದ ಒಂದು ಹಂತದಲ್ಲಿ ಖಳ ಮಾಂತ್ರಿಕನ ಪ್ರಭಾವದಿಂದ ವಿಷ್ಣು ಹಾಗೂ ಅವರ ಮಗನ ಪಾತ್ರದ ಸ್ವಭಾವ, ಗುಣ, ಬುದ್ಧಿ ಎಲ್ಲವೂ ತದ್ವಿರುದ್ಧವಾಗುತ್ತದೆ. ಮಗನ ಆತ್ಮ ಅಪ್ಪನಲ್ಲಿಯೂ ಅಪ್ಪನ ಆತ್ಮ ಮಗನಲ್ಲಿಯೂ ಸೇರಿಕೊಳ್ಳುತ್ತವೆ. ದೇಹ ಮಾತ್ರ ಅವೇ ಆಗಿರುತ್ತವೆ. ಹೀಗಾಗಿ ಸಾಕಷ್ಟು ಗೊಂದಲಗಳು, ಹಾಸ್ಯ ಸೃಷ್ಟಿಯಾಗುತ್ತದೆ. ನಿರ್ದೇಶಕರು ಪಾತ್ರಗಳ ಸ್ವರ ಬದಲಾವಣೆಯಲ್ಲಿ ಜಾಣತನ ತೋರಲಿಲ್ಲ. ಚಿತ್ರದ ಆ ಹಾಸ್ಯ ಪ್ರೇಕ್ಷಕನಿಗೆ ಇಷ್ಟವಾಗಲಿಲ್ಲ. ನೇಪಾಳದಲ್ಲಿ ಚಿತ್ರೀಕರಣ ನಡೆದಿತ್ತು. ವಿಷ್ಣುವರ್ಧನ್ ಅಭಿನಯದಲ್ಲಿ ಹೊಸತನವಿತ್ತು. ಅತ ಕೊಂಚ ವಿಭಿನ್ನ ಅನ್ನಿಸಿದರೂ ಪ್ರೀತಿಯಿಂದ ತೊಡಗಿಕೊಳ್ಳುತ್ತಾರೆ. ಆದರೆ ಅವರ ಅಭಿಮಾನಿಗಳು ಎಲ್ಲವನ್ನೂ ಒಪ್ಪುವುದಿಲ್ಲ. ಹಾಗಾಗಿ ವಿಷ್ಣುವರ್ಧನ್ ರಾಜಿ ಮಾಡಿಕೊಳ್ಳಲೇಬೇಕಾಗುತ್ತದೆ.

ತೆಲುಗಿನ 'ಕರ್ತವ್ಯಂ'ನಂಥ ಯಶಸ್ವಿ ಸಾಹಸ ಪ್ರಧಾನ ಚಿತ್ರ ನಿರ್ದೇಶಿಸಿದ್ದ ಮೋಹನ್ ಗಾಂಧಿಯನ್ನು ನಿರ್ಮಾಪಕ ರಾಮು 'ಸರ್ಕಲ್ ಇನ್‌ಸ್ಪೆಕ್ಟರ್' ನಿರ್ದೇಶಿಸಲು ಕರೆತಂದರು. ದೇವರಾಜ್-ಮಾಲಾಶ್ರೀ ಮುಖ್ಯ ಪಾತ್ರಗಳಲ್ಲಿದ್ದರು. ಮಾಲಾಶ್ರೀ ಸಾಹಸ ದೃಶ್ಯಗಳನ್ನೆಲ್ಲ ನಿರಾತಂಕವಾಗಿ ಎದುರಿಸಿದ್ದರು. ಚಿತ್ರಕಥೆ-ನಿರ್ದೇಶನ ಚೆನ್ನಾಗಿತ್ತು. ಹಂಸಲೇಖ ಸಂಗೀತ ನಿರ್ದೇಶನದಲ್ಲಿ ಮೂಗೂರ್ ಸುಂದರ್ ಮಗ ಬಸವರಾಜ್ ನರ್ತನದಲ್ಲಿ 'ಊರುಮಿಳ ಊರುಮಿಳ ಊರು ತುಂಬ ನಿಂದೆ ಪರಿಮಳ....' ಲವಲವಿಕೆಯಿಂದ ಕೂಡಿತ್ತು. ದೇವರಾಜ್-ಮಾಲಾಶ್ರೀ ಜೋಡಿ ಜನಪ್ರಿಯವಾಯಿತು. ಮಾಲಾಶ್ರೀ ಪಾತ್ರದ ಸಾವಿನ ದೃಶ್ಯದಲ್ಲಿ ಆಕೆಯನ್ನು ಕೊಂದವರನ್ನು ಕಂಡುಹಿಡಿಯಲು ಬಳಸಿದ ತಂತ್ರ ಗಮನ ಸೆಳೆದವು. ಯಾವುದೇ ವ್ಯಕ್ತಿ ಸಾಯುವಾಗ ಕಣ್ಣು ತೆರೆದೇ ಇದ್ದರೆ ಎದುರಿಗಿದ್ದವರ ಬಿಂಬ ಕಣ್ಣಿನಲ್ಲಿ ಮೂಡಿರುತ್ತದೆ ಎಂಬ ವಿಜ್ಞಾನವನ್ನು ಆಧರಿಸಿ, ಶವದ ಕಣ್ಣಿನಲ್ಲಿ ಮೂಡಿದ್ದ ಕೊಲೆಗಾರನನ್ನು ಹಿಡಿಯುವ ವಿಧಾನ ಹೊಸತೆನಿಸಿತ್ತು. ಇದನ್ನು ಇಂಗ್ಲಿಷ್ ಚಿತ್ರವೊಂದರ ಸ್ಫೂರ್ತಿಯಿಂದ ಜೋಡಿಸಿದ್ದರು. ಚಿತ್ರದ ಮತ್ತೊಂದು ಪಾತ್ರವಲ್ಲಿ ಮುಸ್ಲಿಂ ಬಂಧುವಾಗಿ ಇನ್‌ಸ್ಪೆಕ್ಟರ್ ಪಾತ್ರದಲ್ಲಿದ್ದ ಸಾಯಿಕುಮಾರ್ ಮುಂದೆ ನಾಯಕನಟನಾಗುವ ಸೂಚನೆಗಳಿದ್ದವು. ಇದೊಂದು ಯಶಸ್ವಿ ಚಿತ್ರ. ಮುಂದೆ ಇಂಥ ಚಿತ್ರಗಳ ಸರಣಿಗೆ ದಾರಿ ಮಾಡಿದ ಚಿತ್ರ.

ಬಹಳ ವರ್ಷಗಳು ಡಬ್ಬಿಯಲ್ಲೇ ಕೂತು ೧೯೯೬ ರಲ್ಲಿ ತೆರೆಕಂಡ ಗೀತಪ್ರಿಯ ನಿರ್ದೇಶನದ ಚಿತ್ರ 'ಮಾನಸವೀಣೆ'. ಶ್ರೀಧರ್, ಸರಿತಾ ಅಭಿನಯಿಸಿದ್ದರು. ಶ್ರೀಧರ್ ನಾಟ್ಯಪಟು. ವಿದೇಶದಲ್ಲಿ ತನ್ನ ಕಲೆಯ ಪ್ರದರ್ಶನ ಮಾಡಲು ಹೊರಟ ಸಂದರ್ಭದಲ್ಲಿ ತಂದೆ ಸಾಯುವ ಸ್ಥಿತಿಯಲ್ಲಿದ್ದಾನೆ. ಅವನ ಕೊನೆಯ ಕೋರಿಕೆಯಂತೆ ನವರಸ ಭಾವಾಭಿನಯವನ್ನು ತೋರುವುದು ಉತ್ತಮವಾಗಿತ್ತು. ಇದೂ ಒಂದು ತ್ರಿಕೋನ ಪ್ರೇಮಕಥೆ.

ಸಾಕಷ್ಟು ಸೋಲುಗಳನ್ನುಂಡ ಎಸ್.ನಾರಾಯಣ್ ಅವರು ರಾಮ್‌ಕುಮಾರ್, ಶ್ರುತಿ, ಚರಣ್‌ರಾಜ್ ಅಭಿನಯದಲ್ಲಿ ಸ್ವಂತ ನಿರ್ಮಾಣ-ನಿರ್ದೇಶನದಲ್ಲಿ ತೆರೆಗೆ ತಂದ ಚಿತ್ರ 'ತವರಿನ ತೊಟ್ಟಿಲು'. ಚರಣ್‌ರಾಜ್ ಬಹಳ ದಿನಗಳನಂತರ ದೊರೆತ ಅವಕಾಶದಲ್ಲಿ ಉತ್ತಮವಾಗಿ ಅಭಿನಯಿಸಿದ್ದರು. ಅಣ್ಣ-ತಂಗಿ ಬಾಂಧವ್ಯದ ಕಥಾಹಂದರ ಹೊಂದಿದ್ದ ಈ ಚಿತ್ರ ನೂರು ದಿನಗಳಿಗೂ ಹೆಚ್ಚಿನ ಪ್ರದರ್ಶನ ಕಂಡಿತು. 'ಓ ಕುಸುಮವೇ, ಕುಸುಮದಾರ್ಪಣೆ...' ಹಾಡು ಚೆನ್ನಾಗಿತ್ತು. ಎಸ್.ನಾರಾಯಣ್ ಈ ಚಿತ್ರದಿಂದ ಮರುಹುಟ್ಟು ಪಡೆದು, ಚಲಾವಣೆಗೆ ಬಂದರು.

ಶಿವರಾಜ್ ಕುಮಾರ್, ನಿವೇದಿತಾ ಜೈನ್ ಅಭಿನಯಿಸಿ ಶಿವಮಣಿ ನಿರ್ದೇಶನದಲ್ಲಿ ಯಾಶಿ ಎಂಟರ್‌ಪ್ರೈಸಸ್ ಲಾಂಛನದಡಿ 'ಶಿವಸೈನ್ಯ' ತೆರೆಗೆ ಬಂತು. 'ಓಂ' ತೆರೆಕಂಡ ನಂತರ ಬಂದ ಚಿತ್ರವಾದ್ದರಿಂದ ಕೊಂಚ ಅದೇ ಜಾಡಿನಲ್ಲಿದ್ದ ಕಥೆ. ಶಿವರಾಜ್ ಕುಮಾರ್ ಅಭಿನಯ, ಗೆಟಪ್ ಕೂಡ 'ಓಂ' ಚಿತ್ರದಂತೆಯೇ ಇತ್ತು. 'ಸೂರ್ಯಸ್ವಾಮಿ'



(ಚಿತ್ರ ೮೪) 'ಪೊಲೀಸ್ ಸ್ಟೋರಿ' ಚಿತ್ರದಲ್ಲಿ ಸಾಯಿಕುಮಾರ್

ಪಾತ್ರದಲ್ಲಿ ನಿರ್ದೇಶಕ ಎ.ಟಿ.ರಘು ವಿಭಿನ್ನವಾಗಿ, ಉತ್ತಮವಾಗಿ ಅಭಿನಯಿಸಿದ್ದರು. ಇಳಯರಾಜ ಸಂಗೀತ ನಿರ್ದೇಶನದಲ್ಲಿ ಹಾಡುಗಳು ಚೆನ್ನಾಗಿದ್ದವು. ಸ್ವತಃ ಇಳಯರಾಜ ಅವರೇ 'ಚಿಕ್ಕಮಗಳೂರ ಓ ಚಿಕ್ಕ ಮಲ್ಲಿಗೆ...', 'ಜೈಲಲಿ ಹುಟ್ಟಿ ಬಯಲಿಗೆ ಬಂದೆ ಕೃಷ್ಣ ಕೃಷ್ಣ ಕೃಷ್ಣ...' ಹಾಡುಗಳನ್ನು ಹಾಡಿ, ಅವು ಜನಪ್ರಿಯವೂ ಆದವು. ನಿವೇದಿತಾ ಜೈನ್ ಈ ಚಿತ್ರದ ಮೂಲಕ ಉತ್ತಮ ಮುನ್ನಡೆ ಪಡೆದುಕೊಂಡರು. ಅಧಿಕಾರಿಯ ಪಾತ್ರದಲ್ಲಿ ಅರುಂಧತಿ ನಾಗ್ ಗಮನ ಸೆಳೆದರು. ಯುವಶಕ್ತಿಯ ಸಂಘಟನೆ ದೇಶದ ಭವಿಷ್ಯಕ್ಕೆ ಎಷ್ಟು ಮುಖ್ಯ ಎಂಬ ಸಕಾಲಿಕ ಮಾರ್ಗದರ್ಶನದ ಮೂಲಕ ಅಡ್ಡದಾರಿಯಲ್ಲಿದ್ದ ನಿರುದ್ಯೋಗಿ ಯುವಕರನ್ನು ತಿದ್ದುವ ಪ್ರಯತ್ನ, ಆಕೆಯ ಆಕಸ್ಮಿಕ ಸಾವು ಮೊದಲಾದ ಅಂಶಗಳು ನಿರ್ದೇಶಕರ ಸದಾಶಯದ ದ್ಯೋತಕವೆನಿಸಿದವು. ಅಂಥ ಜಾಡಿನಲ್ಲೇ ಚಿತ್ರಕಥೆ ಮುಂದೆ ಸಾಗದೇ ಎತ್ತಲೋ ಜಾರಿದ್ದು ಚಿತ್ರದ ದುರಂತ.

ಯಾವುದೇ ವಿವಾದದ ಮೂಲ ಸ್ವಪ್ರತಿಷ್ಠೆಯಲ್ಲಿದೆ. ತನ್ನದೇ ಆಗಬೇಕು, ತಾನೇ ಶ್ರೇಷ್ಠ ಎಂಬ ಮನಃಸ್ಥಿತಿ ಈ ಅವಧಿಯ ಯುವಪೀಳಿಗೆಯಲ್ಲಿ ಗಾಢವಾಗಿ ಕಂಡುಬರುತ್ತದೆ. ವಿವಾದಗಳಿಗೆ ಕಾರಣವಾಗುವುದು, ನಂತರ ಅದು ಪತ್ರಿಕೆಗಳಲ್ಲಿ ಪ್ರಕಟವಾಗುವುದು, ಸಮರ್ಥಿಸುವುದು, ಅಲ್ಲಗಳೆಯುವುದು, ನಂತರ ಅದೆಲ್ಲದರಲ್ಲಿ ತಾವು ನಿರ್ವಹಿಸಿದ ಪಾತ್ರವನ್ನು ಮೆಲುಕು ಹಾಕಿಕೊಂಡು ಸಂಭ್ರಮಿಸುವುದು ಸಿನಿಮಾ ನಿರ್ಮಾಣದಷ್ಟೇ ಪ್ರಾಮುಖ್ಯ ಪಡೆದುಕೊಂಡಿದೆ. ಸ್ಪರ್ಧಾತ್ಮಕ ಮನೋಭಾವಕ್ಕಿಂತ ಹೆಚ್ಚಾಗಿ ಕೆಟ್ಟ ಹಠದಿಂದ ಕೆಲವಾರು ಕೆಲಸಗಳು ಆಗಿರುವ ಉದಾಹರಣೆಗಳು ಕಾಣುತ್ತವೆ. ಥ್ರಿಲ್ಲರ್ ಮಂಜು ನಾಯಕ, ನಿರ್ದೇಶಕರಾದ್ದು ಕೂಡ ಇಂಥ ಒಂದು ಹಿನ್ನೆಲೆಯಲ್ಲೇ. 'ಏಪ್ರಿಲ್ ಫೂಲ್' ನಿರ್ಮಾಪಕರು ಥ್ರಿಲ್ಲರ್ ಮಂಜು ನಾಯಕತ್ವದಲ್ಲಿ ಚಿತ್ರವೊಂದನ್ನು ತಯಾರಿಸುವ ಉದ್ದೇಶವಿರುವುದಾಗಿ ಹೇಳಿಕೊಂಡಿದ್ದರು. ಅವರು ಎಷ್ಟು ದಿನಗಳಾದರೂ ಅದಕ್ಕೆ ಮುಂದಾಗದಾದಾಗ ಜಿ.ಹೆಚ್.ಗುರುಮೂರ್ತಿ, ನರಸಿಂಹಮೂರ್ತಿ ಜಂಟಿಯಾಗಿ ನಿರ್ಮಿಸಿ, ಥ್ರಿಲ್ಲರ್ ಮಂಜು ನಿರ್ದೇಶಿಸಿದ ಚಿತ್ರ 'ಪೊಲೀಸ್ ಸ್ಟೋರಿ'. ಎಸ್.ಎಸ್.ಡೇವಿಡ್ ಕಥೆ, ಸಂಭಾಷಣೆ ಬರೆದಿದ್ದರು. ಸಾಯಿಕುಮಾರ್ ಪೂರ್ಣಪ್ರಮಾಣದ ನಾಯಕನಾಗಿ ಯಶ ಪಡೆದ ಚಿತ್ರ. ಕನ್ನಡ ಚಲನಚಿತ್ರಗಳ ಸಂಭಾಷಣೆಗಳು ಪ್ರಭಾವಶಾಲಿಯಾಗಿದ್ದರೂ ಕನ್ನಡ ಚಲನಚಿತ್ರಗಳಲ್ಲಿ ಅವಾಚ್ಯ ಶಬ್ದಗಳ ಬಳಕೆ ಈ ಚಿತ್ರದಿಂದ ಮೊದಲುಗೊಂಡಿತು. ಅಕ್ಕ...., ಅಮ್ಮ... ಮುಂತಾದ ಶಬ್ದಗಳು ಚಿತ್ರದ ತುಂಬ ಹರಿದುಬಂದಿವೆ. ಸಾಯಿಕುಮಾರ್ ತಮ್ಮ ಉದ್ವೇಗಭರಿತ, ಶೀಘ್ರ ಪರಿಳಿತಗಳ, ಉದ್ದುದ್ದದ ಸಂಭಾಷಣೆ ಹೇಳುವ ಪರಿ ಕೆಲ ಪ್ರೇಕ್ಷಕರಿಗೆ ಬಹಳ ಮೆಚ್ಚುಗೆಯಾಯಿತು. ಚಿತ್ರುದ್ದಕ್ಕೂ ಕೋಪ-ಉದ್ವೇಗ ತುಂಬಿದ ಪೊಲೀಸ್ ಅಧಿಕಾರಿ 'ಅಗ್ನಿ'ಯಾಗಿ ಸಾಯಿಕುಮಾರ್ ನಟಿಸಿದ್ದರೆ, ಅಣ್ಣನಾಗಿ ಅವಿನಾಶ್, ಖಳರಾಗಿ ಹೊಸ ಪರಿಚಯದ ಸತ್ಯ, ಮುಖ್ಯ ಖಳನಟನಾಗಿ ಶೋಭರಾಜ್ ಅಭಿನಯ ಉತ್ತಮ. ಥೀಮ್ ಚೆನ್ನಾಗಿದ್ದರೂ ಒಂದು ವರ್ಗದ ಪ್ರೇಕ್ಷಕರು ಚಿತ್ರಮಂದಿರಕ್ಕೆ ಬರಲಿಲ್ಲ. ಥ್ರಿಲ್ಲರ್ ಮಂಜು ನಿರ್ದೇಶಕರಾಗಿ, ಸಾಹಸ ನಿರ್ದೇಶಕರಾಗಿ ಯಶ ಸಾಧಿಸಿದರು. ಹಾಡುಗಳು ಹಾಗೂ ನಾಯಕಿಯೇ ಇಲ್ಲದ ಚಿತ್ರ ಇದಾಗಿತ್ತು. ಹಿಂಸೆಯ ವಿಜೃಂಭಣೆ ಹಾಗೂ ಮನುಷ್ಯನ ಒಳಗೆ ಮಲಗಿರುವ ಹಿಂಸಾತ್ಮಕ ಪ್ರವೃತ್ತಿಯನ್ನು ಈ ಚಿತ್ರವು ಬಡಿದೆಬ್ಬಿಸುವಂತಿತ್ತು. ಕನ್ನಡದ ಸಾಹಸ ಸಂಯೋಜಕನೊಬ್ಬ ಮೊದಲ ಬಾರಿಗೆ ನಿರ್ದೇಶಕರಾದರು. ೧೯೮೫ ರಲ್ಲಿ ಸಾಮಾನ್ಯ ಸಾಹಸ ಕಲಾವಿದನಾಗಿ ಚಿತ್ರರಂಗವನ್ನು ಪ್ರವೇಶಿಸಿದ ಮಂಜು ಅವರಿಗೆ 'ಅವಳೇ ನನ್ನ ಹೆಂಡ್ತಿ' ನಿರ್ಮಾಪಕ-ನಿರ್ದೇಶಕ ಕೆ.ಪ್ರಭಾಕರ್ ೧೯೯೦ ರಲ್ಲಿ 'ನರಸಿಂಹ' ಚಿತ್ರದ ಮೂಲಕ ಸಾಹಸ ನಿರ್ದೇಶಕನ ಅವಕಾಶ ಕಲ್ಪಿಸಿಕೊಟ್ಟರು. ನಂತರ ಕೇವಲ ಐದು ವರ್ಷಗಳಲ್ಲಿ ಮಂಜು ೧೫೪ ಚಿತ್ರಗಳನ್ನು ದಾಟಿದರು. 'ಪೊಲೀಸ್ ಸ್ಟೋರಿ' ಯಶಸ್ಸಿನೊಂದಿಗೆ ಅವರು ಬೆಳೆದಷ್ಟೇ ವೇಗವಾಗಿ ನಾಲ್ಕೈದು ಚಿತ್ರಗಳನ್ನು ಒಂದಾದಮೇಲೊಂದರಂತೆ ನಿರ್ಮಿಸಿ, ನಿರ್ದೇಶಿಸಿದರು. ನ್ಯಾಯಾಂಗ, ಪೊಲೀಸು ವ್ಯವಸ್ಥೆಯನ್ನು ಗೇಲಿ ಮಾಡಿದ್ದ ಕಾರಣ ಈ ಎಲ್ಲಾ ಚಿತ್ರಗಳು ಇಕ್ಕಟ್ಟಿಗೆ ಸಿಲುಕಿದವು. ಸತತವಾದ ಸೋಲು, ಆರ್ಥಿಕ ಹಿನ್ನಡೆ ೧೯೯೮ರ ಹೊತ್ತಿಗೆ ಅವರ ವೇಗಕ್ಕೆ ಕಡಿವಾಣ ಹಾಕಿತು. ತಾಂತ್ರಿಕವಾಗಿ ಕೆಲವು ಗಮನ ಸೆಳೆವ ಅಂಶಗಳಿದ್ದವು. ಅವರ ಚಿತ್ರಗಳಿಗೆ ಸ್ಪೆಷಲ್ ಎಫೆಕ್ಟ್ಸ್ ಸೇರಿಸುವ ಕಾರ್ಯ ಚಿತ್ರನಿರ್ಮಾಣದಷ್ಟೇ ಮುಖ್ಯಸಂಗತಿ. ಮುಖ್ಯವಾಗಿ ರವಿ ಶ್ರೀವತ್ಸರ ಸಂಭಾಷಣೆಯ ಮೊನಚು ಗಮನ ಸೆಳೆಯಿತು. ಒಂದು ಬಗೆಯ ಚಿತ್ರಗಳಿಗೆ ಅವರು ಬೇಡಿಕೆಯ ಸಂಭಾಷಣಾಕಾರರೂ ಆದರು.

'ಪೊಲೀಸ್ ಸ್ಟೋರಿ'ಯಲ್ಲಿರುವಂಥದೇ ಹಿಂಸಾತ್ಮಕ ಅಂಶಗಳೊಂದಿಗೆ ಮಾನವೀಯತೆಯೂ ಉತ್ಕಟವಾಗಿ ಪ್ರಕಟವಾಗಿದ್ದ ಇನ್ನೊಂದು ಚಿತ್ರ ಕೆ.ವಿ.ರಾಜು ನಿರ್ದೇಶನದ 'ಹುಲಿಯಾ'. ಇವರು ಈ ಅವಧಿಯೊಳಗೆ ನಿರ್ದೇಶಿಸಿದ ೧೧ ಚಿತ್ರಗಳಲ್ಲಿ 'ಬೆಳ್ಳಿ ಕಾಲುಂಗುರ' ಬಿಟ್ಟರೆ ಭಿನ್ನವಾಗಿದ್ದುದು ಈ ಚಿತ್ರವೇ. ನೀಚ ರಾಜಕಾರಣದ ಬಿರುಗಾಳಿಯಲ್ಲಿ ಬಡ ಕುಟುಂಬವೊಂದು ತರಗೆಲೆಯಂತೆ ಒದ್ದಾಡುವುದರಲ್ಲಿ ಕೆಲವು ದೃಶ್ಯಗಳ ಸಂಯೋಜನೆಯು ವಿಶಿಷ್ಟವಾಗಿ ಸೃಷ್ಟಿಯಾಗಿತ್ತು. ಹಳ್ಳಿಯ ದೊರೆಯೊಬ್ಬ ಬಡ ರೈತರು, ಕೂಲಿ ಕಾರ್ಮಿಕರನ್ನು ಬರಪರಿಹಾರ ಕೊಡಿಸುವ ನೆಪದಲ್ಲಿ ಬೆಂಗಳೂರಿಗೆ ಕರೆತಂದು ಅವರನ್ನು ಭಯೋತ್ಪಾದಕರೆಂದು ನಂಬಿಸಿ ಕೊಲ್ಲಿಸುತ್ತಾನೆ. ಪುಟ್ಟ ಮಕ್ಕಳ ಕಣ್ಣು ಕಿತ್ತು ಭಿಕ್ಷಾಟನೆಗೆ ತಳ್ಳುವುದರ ಜೊತೆಗೆ ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ಅಟ್ಟುತ್ತಾನೆ. ಪ್ರಾಮಾಣಿಕ ಮುಖ್ಯಮಂತ್ರಿ ಇದರ ತನಿಖೆ ನಡೆಸಿ ತಪ್ಪಿತಸ್ಥರಿಗೆ ಶಿಕ್ಷೆ ವಿಧಿಸಲು ಮುಂದಾದಾಗ ಈ ದೊರೆ ತನ್ನ ರಾಜಕೀಯ ಬಲದಿಂದ ಮುಖ್ಯಮಂತ್ರಿಯೇ ತನ್ನ ಕುರ್ಚಿಗೋಸ್ಕರ ತನಿಖೆ ಕೈಬಿಡುವಂತೆ ಮಾಡುತ್ತಾನೆ. ವ್ಯವಸ್ಥೆಯ ವಿರುದ್ಧ ಕೊನೆಯವರೆವಿಗೂ ಒಂಟಿಯಾಗಿ ಹೋರಾಡುವ ಹುಲಿಯಾ ನ್ಯಾಯ ಸಿಗದೆ ಸಾವನ್ನಪ್ಪುತ್ತಾನೆ. ತಾಂತ್ರಿಕವಾಗಿ ಒಪ್ಪವಾಗಿದ್ದ ಚಿತ್ರದಲ್ಲಿ ದೇವರಾಜ್ ಹುಲಿಯಾ ಪಾತ್ರದಲ್ಲಿ ಶ್ರೇಷ್ಠವಾಗಿ ಅಭಿನಯಿಸಿದ್ದರು. ಅವಿನಾಶ್, ಶ್ರೀಧರ್ ಅಭಿನಯ ಗಮನಾರ್ಹ.

ದೇಶದ ಎಲ್ಲ ಆಗು-ಹೋಗಿನ ಹಿಂದೆ ಇರುವ ಶಕ್ತ ರಾಜಕಾರಣ, ಅಧಿಕಾರಗಳ ಬಂಡವಾಳಶಾಹಿ ವ್ಯವಸ್ಥೆ ಮತ್ತು ಅದು ಒಟ್ಟು ಮಾಡಿಕೊಂಡಿರುವ ಪಿಟುಗಳ ಗಂಟು ಎಂಬುದನ್ನು ಹೇಳುವ ಪ್ರಯತ್ನ ಮಾಡಿದ್ದರು ಕೆ.ವಿ.ರಾಜು.



(ಚಿತ್ರ ೮೫) 'ಹುಲಿಯಾ' ಚಿತ್ರದಲ್ಲಿ ದೇವರಾಜ್



(ಚಿತ್ರ ೮೬) 'ಅಣ್ಣಾವ್ರ ಮಕ್ಕಳು' ಚಿತ್ರದಲ್ಲಿ ಪ್ರಮಿಳಾ ಜೋಷಾಯ್, ಪದ್ಮಾ ವಾಸಂತಿ ಮತ್ತು ಶಿವರಾಜ್ ಕುಮಾರ್

ವಿಧಾನಸೌಧ-ನ್ಯಾಯಾಲಯಗಳ ಎದುರಿಗೆ ಅಥವಾ ಅವುಗಳ ನಡುವೆ ಅಮಾಯಕರು ತತ್ತರಿಸಿ ಸಾಯುವುದನ್ನು ಧ್ವನಿಪೂರ್ಣವಾಗಿ ಹೇಳುವ ಪ್ರಯತ್ನವಿತ್ತು. ಬಿಜಾಪುರ ಕನ್ನಡವನ್ನು ರಾಜು ಸಂಭಾಷಣೆಯಲ್ಲಿ ಚೊಕ್ಕವಾಗಿ ತಂದಿದ್ದರು. ಉತ್ತರ ಕರ್ನಾಟಕದ ಅಪೂರ್ವ ಹೊರಾಂಗಣದ ಬಳಕೆಯೂ ಸೊಗಸಾಗಿತ್ತು. ರಾಜು ವ್ಯವಸ್ಥೆಯ ಬಗ್ಗೆ ಇರುವ ಸಿಟ್ಟನ್ನು ತಮ್ಮ ಚಿತ್ರಗಳಲ್ಲಿ ಕಾರುತ್ತಾರೆ. ಕೋಪ ವೈಭವವಾಗಬಾರದು, ಅನುಭವ ಆಗಬೇಕೆಂಬುದರತ್ತ ಗಮನ ಹರಿಸುವುದಿಲ್ಲ.

'ಹುಲಿಯಾ' ವಿವರಗಳನ್ನು ಹೇಳುವ ಸಂದರ್ಭದಲ್ಲಿ ಚಿತ್ರವೊಂದರ ನಿರ್ಮಾಣ ಪ್ರಕ್ರಿಯೆಯಲ್ಲಿ ಮಹತ್ವ ಪಡೆದುಕೊಂಡಿರುವ 'ಸ್ಪೆಷಲ್ ಎಫೆಕ್ಟ್ಸ' ಬಗ್ಗೆ ವಿವರಿಸಬೇಕಾಗುತ್ತದೆ. ಅಪರೂಪದ ಶಬ್ದ, ಧ್ವನಿಗಳ ಮೂಲಕ ದೃಶ್ಯದ ಪರಿಣಾಮ ಮತ್ತು ನೈಜತೆಯನ್ನು ಹೆಚ್ಚಿಸಲು ಈ ದಶಕದಲ್ಲಿ ಇದೊಂದು ಮುಖ್ಯ ವಿಭಾಗವಾಗಿಯೇ ಬೆಳೆದದ್ದಲ್ಲದೆ ಅನಿವಾರ್ಯವಾದ ಅಂಶ ಕೂಡ ಆಯಿತು. ಚಿತ್ರವೊಂದರ ಚಿತ್ರೀಕರಣ ಪೂರ್ಣಗೊಂಡ ನಂತರ ನಡೆಯುವುದು ಸಂಸ್ಕರಣ. ಬಳಿಕ ಪಾತ್ರಗಳ ತುಟಿ ಚಲನೆಗೆ ಅನುಗುಣವಾಗಿ ಮಾತು ಜೋಡಿಸುವ ಡಬ್ಬಿಂಗ್. ದೃಶ್ಯಕ್ಕನುಗುಣವಾಗಿ ಹಿನ್ನೆಲೆ ಸಂಗೀತ ಒದಗಿಸುವುದು ರೀರಿಕಾರ್ಡಿಂಗ್. ಮಾತು-ಸಂಗೀತಗಳ ಟ್ರ್ಯಾಕ್‌ಗಳನ್ನು ಜೊತೆಗೂಡಿಸುವುದು ಮಿಕ್ಸಿಂಗ್. ಈ ಹಂತದಲ್ಲಿಯೇ ಸ್ಪೆಷಲ್ ಎಫೆಕ್ಟ್ಸ ತಜ್ಞರ ಅಗತ್ಯ. ಚಿತ್ರಕ್ಕೆ ಅಂತಿಮ ಪರಿಣಾಮ ದಕ್ಕುವುದು ಇವರಿಂದಲೇ. ಇಷ್ಟಾಗಿ ಸುಮಾರು ವರ್ಷಗಳಿಂದ ಇವರ ಹೆಸರು ಚಲನಚಿತ್ರ ಪ್ರಚಾರದಲ್ಲಿ ಕಾಣಿಸುತ್ತಿರಲಿಲ್ಲ. ಟೈಟಲ್ ಕಾರ್ಡ್‌ನ ಯಾವುದೋ ಒಂದು ಮೂಲೆಯಲ್ಲಿ ನಗಣ್ಯವಾಗಿ ಇವರ ಹೆಸರಿರುತ್ತಿತ್ತು. ೧೯೯೫ರಿಂದೀಚೆಗೆ ಪ್ರಧಾನವಾಗಿ ಕಾಣತೊಡಗಿತು. ಕನ್ನಡ ಚಿತ್ರರಂಗದಲ್ಲಿ ಈ ಬಗೆಯ ವೃತ್ತಿಯಲ್ಲಿ ತಜ್ಞರಾಗಿರುವವರು ಪ್ರಕಾಶ್. ಸುಮಾರು ೭೦೦ ಚಿತ್ರಗಳಿಗೆ ವಿಶೇಷ ಧ್ವನಿಗಳ ಪರಿಣಾಮ ನೀಡಿರುವ ಇವರು ಹಲವಾರು ರೀತಿಯ ಪ್ರಯೋಗಗಳಲ್ಲಿ ನಿರತರಾಗಿ ವೃತ್ತಿ ಮಹತ್ವ ಹೆಚ್ಚಲು ಕಾರಣರಾಗಿದ್ದಾರೆ. (ನೋಡಿ : 'ಧ್ವನಿ')

ಶಿವಶಕ್ತಿ ಪ್ರೊಡಕ್ಷನ್ಸ್ ಲಾಂಛನ, ಫಣಿ ರಾಮಚಂದ್ರ ನಿರ್ದೇಶನದಲ್ಲಿ ತಯಾರಾದ 'ಅಣ್ಣಾವ್ರ ಮಕ್ಕಳು' ಚಿತ್ರ ಶಿವರಾಜ್ ಕುಮಾರ್ ಪ್ರಥಮ ಬಾರಿಗೆ ತ್ರಿಪಾತ್ರದಲ್ಲಿ ಅಭಿನಯಿಸುವ ಮೂಲಕ ವಿಶೇಷವಾಯಿತು. ಒಬ್ಬ ಇನ್‌ಸ್ಪೆಕ್ಟರ್, ಮತ್ತೊಬ್ಬ ಪೆದ್ದ, ಮೂರನೆಯವನು ಚಿಕ್ಕಂದಿನಿಂದ ಕಾಡಿನಲ್ಲೇ ಬೆಳೆದ ಕಾಡುಮನುಷ್ಯ. ಅದರಲ್ಲಿಯೂ ಪೆದ್ದರಾಮನ ಪಾತ್ರದಲ್ಲಿ ಪೆದ್ದನೂ ನಾಚುವಂಥ ಅಭಿನಯ ಅವರಿಂದ ಹೊರಹೊಮ್ಮಿದೆ. ಕಥೆ ಅಸಹಜತೆಗಳಿಂದ ಕೂಡಿದ್ದು ಕೆಲವೊಮ್ಮೆ ಅಸಹನೀಯವೆನಿಸುತ್ತದೆ. ಟ್ರಿಕ್ ಶಾಟ್ಸ್‌ಗಳನ್ನು ಸಮಂಜಸವಾಗಿ ಮೂಡಿಸಲಾಗಿಲ್ಲ. ಮಾಸ್ಕ್ ಪಾತ್ರಗಳ ಮುಖಗಳು ಒಂದೇ ಆದರೂ ಮೂವರೂ ಒಟ್ಟಿಗೇ ಸೇರಬೇಕಾದ ಸಂದರ್ಭಗಳಲ್ಲಿ ಕೃತಕತೆ ಎದ್ದು ಕಾಣುತ್ತದೆ. ಒಬ್ಬ ಪೊಲೀಸ್ ಅಧಿಕಾರಿ ಒಂದು ಸೀಕ್ರೆಟ್ ಕೋಡ್ ಸಂಖ್ಯೆಯನ್ನು ತ್ರಿವಳಿ ಮಕ್ಕಳ ಬೆನ್ನ ಹಿಂದೆ ಬರೆದು ಸಾಯುತ್ತಾನೆ. ಮೂವರು ಬೇರೆಯಾಗಿ ಬೆಳೆದ ಮೇಲೆ ಒಂದಾಗುತ್ತಾರೆ. ಇದು ಚಿತ್ರದ ಮುಖ್ಯ ಕಥೆ. ರಾಜೇಶ್ ರಾಮನಾಥ್ ರಾಗ ಸಂಯೋಜನೆಯಲ್ಲಿ 'ಹೋಗಬ್ಯಾಡ ಹುಡುಗಿ ನನ್ನ ಬಿಟ್ಟು...' ಹಾಡು ಜನಪ್ರಿಯವಾಯಿತು. ಬಹಳ ದಿನದ ಮೇಲೆ ಗಮನ ಸೆಳೆವಂಥ ಪಾತ್ರದಲ್ಲಿದ್ದ 'ಬಿಳೀಹೆಂಡ್ತಿ' ನಾಯಕ ಅನಿಲ್ ಕುಮಾರ್ ಖಳನಾಗಿ ಉತ್ತಮ ಅಭಿನಯ ನೀಡಿದರು.

'ಕರ್ಪೂರದ ಗೊಂಬೆ'ಯಲ್ಲಿ ಒಬ್ಬರನ್ನೊಬ್ಬರು ಅಗಲಿರಲಾರದ ಪ್ರೀತಿ ಬಾಂಧವ್ಯವಿರುವ ಅಕ್ಕನಾಗಿ ಶ್ರುತಿ, ತಂಗಿಯಾಗಿ ಶ್ವೇತ ಅಭಿನಯಿಸಿದ್ದರು. ತಂಗಿಯ ಸುಖಕ್ಕಾಗಿ ಎಲ್ಲಾ ತ್ಯಾಗಕ್ಕೂ ಸಿದ್ಧಳಾಗುವ ಅಕ್ಕನ ಪಾತ್ರದಲ್ಲಿ ಶ್ರುತಿ ಸಹಜ ಅಭಿನಯ ನೀಡಿದರು. ಮೊದಲ ಬಾರಿಗೆ ಶ್ರುತಿಯ ಸಹೋದರ ಶರಣ್ ಈ ಚಿತ್ರದ ಒಂದು ಚಿಕ್ಕ ಪಾತ್ರದಲ್ಲಿ ಅಭಿನಯಿಸಿದರು. ಎಂ.ಚಂದ್ರಶೇಖರ್ ನಿರ್ಮಿಸಿದರು. ಎಸ್.ಮಹೇಂದರ್ ಹಳ್ಳಿಯ ಪರಿಸರದ ಕಥೆಯನ್ನು ಚೆನ್ನಾಗಿ ಅಳವಡಿಸಿಕೊಂಡರು. 'ಕರ್ಪೂರದ ಗೊಂಬೆಯಲಿ ಅಂದ ಕಂಡೆ....' ಹಾಡು ಮೆಚ್ಚುಗೆಯಾಯಿತು. ಹಂಸಲೇಖ ಸಂಗೀತ ನಿರ್ದೇಶಿಸಿದ್ದು, ಪುನರಾವರ್ತನೆಯಾಗುವ 'ತಬ್ಬಲಿಗೆ ಈ ತಬ್ಬಲಿಯ ನಗುವಿದೆ ಯಾಕಳುವೆ...' ಗೀತೆ ಮನಮಿಡಿಯುವಂತಿತ್ತು.

ಸಾಹಸ, ಹಿಂಸೆ, ಕಣ್ಣೀರೇ ಪ್ರಧಾನವಾಗಿದ್ದ ಚಿತ್ರಗಳ ನಡುವೆ 'ನಮ್ಮೂರ ಮಂದಾರ ಹೂವೇ' ಹಾಗೂ 'ಜನುಮದ ಜೋಡಿ' ಸಾಧಿಸಿದ ಯಶಸ್ಸು ಪ್ರೇಕ್ಷಕರ ಅಭಿರುಚಿಯ ನೆಲೆಯಲ್ಲಿ ಅಧ್ಯಯನ ಮಾಡಬೇಕಾದ ಸಂಗತಿ. ಈ ಎರಡು ಚಿತ್ರಗಳ ವಸ್ತುವಿನಲ್ಲೂ ಅದ್ಭುತವಾಗಿದ್ದುದು ಏನೂ ಇರಲಿಲ್ಲ. ಎರಡರದ್ದೂ ಸಾಧಾರಣ ಪ್ರೇಮಕಥೆ. 'ಬೆಳದಿಂಗಳ ಬಾಲೆ' ನಂತರ ತ್ರಿಕೋನ ಪ್ರೇಮದ 'ನಮ್ಮೂರ ಮಂದಾರ ಹೂವೇ'ಯನ್ನು ಭಿನ್ನವಾಗಿ ನಿರೂಪಿಸಿದ ದೇಸಾಯಿ, ಅವರ ಮೇಲಿದ್ದ ಆಂಗ್ಲಚಿತ್ರಗಳ ಮಾದರಿಯ, ಅಶ್ಲೀಲ ದೃಶ್ಯಗಳಿರುವ ಚಿತ್ರಗಳನ್ನು ಮಾತ್ರ ತೆಗೆದು ಯಶಸ್ವಿಯಾಗುತ್ತಾರೆಂಬ ಆರೋಪವನ್ನು ಹೋಗಲಾಡಿಸಿಕೊಂಡರು. ರಮೇಶ್, ಶಿವರಾಜ್ ಕುಮಾರ್ ಸ್ಪರ್ಧಾತ್ಮಕ ಅಭಿನಯದ ಈ ಚಿತ್ರದಲ್ಲಿ ನವಿರು ಸೂಕ್ಷ್ಮಗಳು ಅಲ್ಲಲ್ಲಿ ಇದ್ದವು. ಕಾಶಿ ಹಾಸ್ಯ ಒಂದು ಹಂತದಲ್ಲಿ ವಿಷಾದದತ್ತ ತಿರುಗುವ ಕ್ರಮ ಸೊಗಸಾದ ಸಂಯೋಜನೆ. ಅಷ್ಟೇ ಒರಟು ವಾಚ್ಯತೆಯೂ ಇತ್ತು. ಬೆಂಗಳೂರಿನ ಐದು ಚಿತ್ರಮಂದಿರ, ಮೈಸೂರಿನ ಎರಡು ಹಾಗೂ ದಾವಣಗೆರೆ, ಶಿವಮೊಗ್ಗದ ತಲಾ ಒಂದೊಂದು ಹೀಗೆ ಒಟ್ಟು ಒಂಬತ್ತು ಚಿತ್ರಮಂದಿರಗಳಲ್ಲಿ ಚಿತ್ರ ಶತದಿನದ ಪ್ರದರ್ಶನ ಕಂಡಿತು. ಇಳಯರಾಜಾ ಸಂಗೀತದಲ್ಲಿ 'ಮುತ್ತು ಮುತ್ತು ನೀರ ಹನಿಯ...', 'ಓಂಕಾರದಿ.....' ಹಾಡುಗಳು ಜನಪ್ರಿಯವಾದವು. 'ಹಳ್ಳೀ... ಲಾವಣಿಯಲಿ ಲಾಲಿ ಸುವ್ವಲಾಲಿ....' ಮಧುರವಾಗಿತ್ತು. ಚಿತ್ರಾ ಅತ್ಯುತ್ತಮ ಹಿನ್ನೆಲೆ ಗಾಯಕಿ ಹಾಗೂ ಮಾ। ವಿನಾಯಕ ಜೋಶಿ ಅತ್ಯುತ್ತಮ ಬಾಲನಟನೆಂದು ೧೯೯೬-೯೭ರ ರಾಜ್ಯ ಪ್ರಶಸ್ತಿ ಪಡೆದರು.

"...'ತರ್ಕ' ನೋಡಿದ್ದ ಮಿತ್ರರು 'ಸ್ಯಾಡಿಸ್ಟ್' ಅಂದಿದ್ದರು. ಆಮೇಲೆ 'ಉತ್ಕರ್ಷ' ಇತ್ಯಾದಿಗಳಲ್ಲಿ ಆ ಭಾವ ಪುನರಾವರ್ತಿತವಾಯಿತು. 'ನಿಮ್ಮ ಮನಸ್ಥಿತಿಯೇ ಹಾಗೆ' ಅಂದರು. ಬೆಚ್ಚಿಬಿದ್ದೆ. ನನ್ನ ಒಳಕ್ಕೆ ನಾನೇ ಇಳಿದು ನೋಡಿಕೊಂಡೆ. ನನ್ನೊಳಗೊಬ್ಬ ಸ್ಯಾಡಿಸ್ಟ್ ಇರಬಹುದೇ ಅಂತ ನೋಡಿದೆ. ಇರಲಿಲ್ಲ, ಇಲ್ಲ. ಆಗ ಹಲವು ಪದರುಗಳ ಒಳಗೆ ಅಡಗಿದ್ದ ಕೋಮಲ ಭಾವವೊಂದನ್ನು ಎಚ್ಚರಿಸಿ ಮೇಲೆ ಕರೆತಂದೆ. ಆವರೆಗೆ ನನ್ನ ವೈಯಕ್ತಿಕ ಬದುಕಿನ ಅನೇಕ ಕಾರಣಗಳು, ಜಿಗುಪ್ಸೆ ನನ್ನ ನಿಜವಾದ ಮನಸ್ಸನ್ನು



(ಚಿತ್ರ ೮೭) 'ಕರ್ಪೂರದ ಗೊಂಬೆ' ಚಿತ್ರದಲ್ಲಿ ಶ್ರುತಿ ಮತ್ತು ರಮೇಶ್

ಅದುಮಿಟ್ಟು, ತಾವೇ ವಿಜೃಂಭಿಸಿದವು. ಅದನ್ನೆಲ್ಲ ಔಟ್‌ಕಂ ಮಾಡಿಕೊಂಡು ನನ್ನೊಳಗೇ ಇದ್ದ, ನಾನು ತುಂಬ ಇಷ್ಟಪಡುವ ಬದುಕಿಗೆ ಹತ್ತಿರವಾದ ಭಾವಗಳನ್ನು ಉತ್ತೇಜಿಸಿಕೊಂಡೆ. ಅನಂತರದ ಚಿತ್ರಗಳಲ್ಲಿ ಅವನ್ನೇ ತರಲು ಪ್ರಯತ್ನಿಸಿದ್ದೇನೆ...' ಎನ್ನುತ್ತಾರೆ ನಿರ್ದೇಶಕ ಸುನೀಲ್ ಕುಮಾರ್ ದೇಸಾಯಿ.

'ಜನುಮದ ಜೋಡಿ' ದಶಕದ ಅತ್ಯಂತ ಯಶಸ್ವಿ ಚಿತ್ರಗಳಲ್ಲೊಂದು. ಗುಜರಾತಿ ಕಾದಂಬರಿಕಾರ ಪನ್ನಾಲಾಲ್ ಪಟೇಲ್ ಕಾದಂಬರಿ ಆಧರಿಸಿದ ಈ ಚಿತ್ರ, ನಿರ್ದೇಶಕ ನಾಗಾಭರಣರ ಖ್ಯಾತಿಯನ್ನು ಎತ್ತರಕ್ಕೆ ಕೊಂಡೊಯ್ದಿತು. ಕನಕ ಕುಗ್ರಾಮವೊಂದರ ಕ್ಷೌರಿಕನ ಪುತ್ರಿ. ಕೃಷ್ಣ-ಕನಕಾ ಜಾತ್ರೆಯೊಂದರಲ್ಲಿ ಆಕಸ್ಮಿಕವಾಗಿ ಭೇಟಿಯಾಗಿ ಮೊದಲ ನೋಟದ ಪ್ರೇಮಿಗಳಾಗುತ್ತಾರೆ. ಕೃಷ್ಣನನ್ನು ವರಿಸಲು ಸಿದ್ಧಳಾಗಿದ್ದ ಕನಕಳನ್ನು ಮೋಸದಿಂದ ಇನ್ನೊಬ್ಬನಿಗೆ ಮದುವೆ ಮಾಡುತ್ತಾರೆ. ಜೇಸತ್ತ ಕೃಷ್ಣ ಊರು ತೊರೆಯುತ್ತಾನೆ. ಕೊನೆಗೆ ಈ ಜೋಡಿಯನ್ನು ಬೇರೆ ಮಾಡಿದ್ದ ಹಿರಿಯರಿಗೆ ಜ್ಞಾನೋದಯವಾಗಿ ಅಂತ್ಯದಲ್ಲಿ ಜನುಮದ ಜೋಡಿಯ ಸಮಾಗಮವಾಗುತ್ತದೆ. ಅಗಲಿದ ಜೋಡಿಯ ವಿರಹವನ್ನು, ಇದಕ್ಕಿಂತ ಮುಖ್ಯವಾಗಿ ಜಾತಿ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಮೂಡಿಸಿ, ಚಿತ್ರದ 'ಕೋಲುಮಂಡೆ ಜಂಗಮ ದೇವರು....' ಕಂಸಾಳೆ ಹಾಡಿಗೆ ಅತ್ಯಂತ; ಹಿಂದೆಂದೂ ಕಾಣದಂಥ ಜನಪ್ರಿಯತೆ ತಂದಿತು. ಚಿತ್ರಮಂದಿರಗಳಲ್ಲಿ ಪ್ರೇಕ್ಷಕರು ಗದ್ದಲ, ಒತ್ತಾಯ ಮಾಡಿ ಈ ಹಾಡನ್ನು ಎರಡೆರಡು ಬಾರಿ ಪುನರಾವರ್ತಿಸಿಕೊಂಡು ನೋಡಿದ ಅಪರೂಪದ ಘಟನೆಗಳು ನಡೆದವು. ನಗರ ಜೀವನದ, ಭೂಗತಲೋಕದ ವಸ್ತುವಿನ ಚಿತ್ರಗಳೇ ವಿಜೃಂಭಿಸುತ್ತಿದ್ದ ದಿನಗಳಲ್ಲಿ ಸಾಧಾರಣ ಉಡುಗೆ-ತೊಡುಗೆ, ಕುಗ್ರಾಮದ ಜನಜೀವನವೇ ತುಂಬಿದ್ದ ಈ ಚಿತ್ರ ಗಳಿಸಿದ ಯಶಸ್ಸು ಇನ್ನೂ ಬೆರಗಿನ ಸಂಗತಿಯೇ.


(ಚಿತ್ರ ೪೪) 'ನಮ್ಮೂರ ಮಂದಾರ ಹೂವೇ' ಚಿತ್ರದಲ್ಲಿ ಶಿವರಾಜ್ ಕುಮಾರ್

೧೯೯೭ರ ಮಾರ್ಚ್ ಮೊದಲ ವಾರ ಈ ಚಿತ್ರಕ್ಕೆ ಸಂಬಂಧಿಸಿದಂತೆ ಬೆಂಗಳೂರಲ್ಲಿ ನಡೆದ ವಿಚಾರ ಸಂಕಿರಣ ಚಿತ್ರದ ವಸ್ತುವಿನ ಬಗ್ಗೆ ಸಾಮಾನ್ಯರೂ ಚಿಂತಿಸುವಂತೆ ಮಾಡಿತು. ಅಂದಿನ ಚರ್ಚೆಯಲ್ಲಿ ಚಿತ್ರದಲ್ಲಿನ ಪಾಳೇಗಾರಿಕೆ ಮೌಲ್ಯವನ್ನು ಪ್ರಶ್ನಿಸುವ, ಜಾತಿ ಕಟ್ಟುಪಾಡುಗಳ ವಿರುದ್ಧ ಧ್ವನಿ ಎತ್ತುವ, ಧಾರ್ಮಿಕ ಡಂಭಾಚಾರ ಬಯಲು ಮಾಡುವ ಅಂಶಗಳನ್ನು ಜನಪ್ರಿಯ ಮಾಧ್ಯಮದ ಮೂಲಕ ಎತ್ತಿ ಹಿಡಿದಿರುವ ಬಗ್ಗೆ ಅಪಾರ ಪ್ರಶಂಸೆ ವ್ಯಕ್ತವಾಯಿತು. ಎಡಪಂಥೀಯ ಸಂಘಟನೆಗಳಾದ ಜನವಾದಿ ಮಹಿಳಾ ಸಂಘಟನೆ, ಎಸ್‌ಎಫ್‌ಐ ಹಾಗೂ ಡಿವೈಎಫ್‌ಐ ಒಂದಾಗಿ ಈ ಚರ್ಚೆಯನ್ನು ಏರ್ಪಡಿಸಿದ್ದವು. ಜಾನಪದ ನುಡಿಗಟ್ಟುಗಳನ್ನು ಬಳಸಿಕೊಳ್ಳುವುದರೊಂದಿಗೆ ಪ್ರಾದೇಶಿಕ ಸಂಸ್ಕೃತಿಯನ್ನು ಸಮರ್ಪಕವಾಗಿ ಚಿತ್ರದಲ್ಲಿ ಬಿಂಬಿಸಲಾಗಿತ್ತು. ಬೆಂಗಳೂರು ನಗರದ ಎಂಟು ಚಿತ್ರಮಂದಿರಗಳಲ್ಲಿ ಪ್ರತಿದಿನ ೩೧ ಪ್ರದರ್ಶನಗಳನ್ನು ಕಂಡ ಹಿರಿಮೆಯ 'ಜನುಮದ ಜೋಡಿ' ೧೦೦ ದಿನಕ್ಕೆ ಕಾಲಿಟ್ಟಾಗ (೨೧-೨-೧೯೯೭) ರಾಜ್ಯದಾದ್ಯಂತ ೩೨ ಚಿತ್ರಮಂದಿರಗಳಲ್ಲಿ ೪೩ ಪ್ರದರ್ಶನ ಕಾಣುತ್ತಿತ್ತು. ರಾಯಚೂರು, ಗಂಗಾವತಿಯಲ್ಲಿ ಏಕಕಾಲಕ್ಕೆ ಬಿಡುಗಡೆಯಾಗಿ ೧೦೦ ದಿನಗಳ ಪ್ರದರ್ಶನದ ದಾಖಲೆಯಿರುವುದು ಇದೊಂದು ಚಿತ್ರಕ್ಕೆ ಮಾತ್ರ. ಕಂಪ್ಲಿಯಂಥ ಪುಟ್ಟ ಊರಿನ ಚಂದ್ರಕಲಾ ಚಿತ್ರಮಂದಿರದಿಂದ ಹಿಡಿದು ಮಧ್ಯಮ ಹಾಗೂ ಮಹಾನಗರಗಳವರೆಗೆ ಕನ್ನಡ ಚಿತ್ರರಂಗದ ಅದುವರೆಗಿನ ೬೩ ವರ್ಷಗಳ ಇತಿಹಾಸದಲ್ಲಿ ಯಾವ ಚಿತ್ರವೂ ಸಾಧಿಸದ ಯಶಸ್ಸನ್ನು ಸಾಧಿಸಿ ಈ ಚಿತ್ರವು ದಾಖಲೆಗಳನ್ನು ನಿರ್ಮಿಸಿತು.

'ಜನುಮದ ಜೋಡಿ' ವಿಶೇಷಗಳಲ್ಲಿ ಜಾತ್ರೆ ಮುಖ್ಯವಾದದ್ದು. ಇದರ ಚಿತ್ರೀಕರಣಕ್ಕೆ ೧೫ ದಿನ ಹಿಡಿದಿತ್ತು. 'ಕೋಲುಮಂಡೆ...' ಹಾಡಿನ ಚಿತ್ರೀಕರಣವನ್ನು ಒಂದೂವರೆ ದಿನದಲ್ಲಿ ಮುಗಿಸಲಾಗಿತ್ತು. ಮೂಲ ಜಾನಪದ ಗೀತೆಯ ಕೆಲವು ವಾಕ್ಯಗಳನ್ನು ಇಟ್ಟುಕೊಂಡು ಈ ಗೀತೆಯನ್ನು ಬರೆದವರು ದೊಡ್ಡರಂಗೇಗೌಡ. ಈ ಹಾಡಿನ ರಾಗ ಸಂಯೋಜನೆ ಬಗ್ಗೆ ಸಂಗೀತ ನಿರ್ದೇಶಕ ವಿ.ಮನೋಹರ್ 'ಅರ್ಧ ರಾಗ ಕಂಸಾಳೆ ಮಹದೇವಯ್ಯನವರದು, ಇನ್ನರ್ಧ ನನ್ನದು' ಎಂದು ಹೇಳಿದ್ದಾರೆ. ಅಂದರೆ ಈ ಗೀತೆ ಮೂಲ ಜಾನಪದ ಧಾಟಿಯಲ್ಲಿತ್ತು ಎಂಬುದನ್ನು ಅವರು ಸಮರ್ಥಿಸಿದರು. ಗೀತೆ, ಅದಕ್ಕೆ ತಕ್ಕದಾದ ನೃತ್ಯ, ಗೀತೆಯ ಸಂದರ್ಭ ಹಾಗೂ ಚಿತ್ರಣ ಇವೆಲ್ಲವೂ ಸಮರ್ಪಕವಾಗಿದ್ದ ಉದಾಹರಣೆ ಇದು. ಈ ಹಾಡಿನ ಮೂಲಕ ಯುವಗಾಯಕ ಎಲ್.ಎನ್.ಶಾಸ್ತ್ರಿ ಜನಪ್ರಿಯತೆ ಗಳಿಸಿದರು. ಚಿತ್ರದ ಇನ್ನೊಂದು ಜನಪ್ರಿಯ ಗೀತೆ 'ಮಣಿ ಮಣಿ...' ಇದನ್ನು ಬಂಡಾಯ ಸಾಹಿತಿ ಬರಗೂರು ರಾಮಚಂದ್ರಪ್ಪ ಸಂಬಂಧಿಸಿದ ದೃಶ್ಯದ ಸಂಭಾಷಣೆಯಾಗಿ ಬರೆದುಕೊಟ್ಟಿದ್ದರು. ನಂತರ ಅದನ್ನೇ ಏಕೆ ಹಾಡಿಗೆ ಹೊಂದಿಸಬಾರದು ಎಂದು ಯೋಚಿಸಿದ ನಾಗಾಭರಣ ಹಾಗ ಮಾಡುವುದರಲ್ಲಿ ಯಶಸ್ವಿಯೂ ಆದರು. ನಾಯಕ ಶಿವರಾಜ್ ಕುಮಾರ್ ಅವರೇ ಹಾಡಿರುವ ಗೀತೆಯ ಧ್ವನಿಮುದ್ರಣಕ್ಕೆ ಮೂರು ದಿನ ಹಿಡಿಯಿತು. ಇದನ್ನು ವಿಶೇಷವಾಗಿ ಹಗಲಿನ ಬೇರೆಲ್ಲಾ ದೃಶ್ಯಗಳ ಚಿತ್ರೀಕರಣವಾದ ಮೇಲೆ ಸಂಜೆ ೬ ರಿಂದ ೭ ರವರೆಗೆ ಒಂದುಒಂದೂವರೆ ಗಂಟೆಯಂತೆ ಸ್ವಲ್ಪಸ್ವಲ್ಪವೇ ಎಂಟು ದಿನಗಳ ಕಾಲ ಚಿತ್ರಿಸಲಾಯಿತು. ಚಿತ್ರದಲ್ಲಿ ಬಹಳ ದಿನಗಳ ನಂತರ ಮತ್ತೆ ಅಭಿನಯಿಸಿದ ರಾಜೀವ್, ಗಂಭೀರ ಪಾತ್ರದಲ್ಲಿ ಅಶೋಕ್ ಗಮನ ಸೆಳೆದರು. ರಂಗಭೂಮಿಯ ಹಿರಿಯ ನಟ ಏಣಗಿ ಬಾಳಪ್ಪ ಜಂಗಮಯ್ಯನಾಗಿ ಅಭಿನಯಿಸಿದ್ದು ಮತ್ತೊಂದು ವಿಶೇಷ. ಎಲ್ಲಾ ವಿಭಾಗಗಳಲ್ಲೂ ಅಚ್ಚುಕಟ್ಟು ಕಾಣುತ್ತಿದ್ದ ಈ ಚಿತ್ರದ ಹಿಂದೆ ಇನ್ನೊಂದು ಸ್ವಾರಸ್ಯದ ಸಂಗತಿಯಿದೆ. ನಾಗಾಭರಣ ೧೯೮೨ ರಲ್ಲಿ 'ಅನ್ವೇಷಣೆ' ಮಾಡುವಾಗ ಇದೇ ಕಥೆಯನ್ನು ಹಲವಾರು ಮಂದಿ ನಿರ್ಮಾಪಕರಿಗೆ, ನಟರಿಗ ಹೇಳಿದ್ದರು. ಹದಿನೈದು ವರ್ಷಗಳಲ್ಲಿ ಆಗಾಗ ಪ್ರಯತ್ನಗಳನ್ನು ಮಾಡುತ್ತಲೇ ಇದ್ದರು. ಆದರೆ ಯಾರೂ ಉತ್ಸಾಹ ತೋರಿರಲಿಲ್ಲ. ಕೊನೆಗೆ ರಾಜ್ ಸಂಸ್ಥೆ ಆಸಕ್ತಿ ತೋರಿತು.

'ಜನುಮದ ಜೋಡಿ' ಯಶಸ್ಸಿನ ಮುಖ್ಯ ಅಂಶಗಳಲ್ಲಿ ಬಿ.ಸಿ.ಗೌರಿಶಂಕರ್ ಶ್ರೇಷ್ಠ ಛಾಯಾಗ್ರಹಣವೂ ಒಂದು. ಮೂರು ಗಂಟೆಗಳ ಕಾಲ ಹಳ್ಳಿಯಲ್ಲಿಯೇ ವಿಹರಿಸುವ ಅನುಭವ ಉಂಟುಮಾಡುವ ಗೌರಿಶಂಕರ್ ಈ ಚಿತ್ರದಲ್ಲಿ ಅವರ ವೃತ್ತಿ ಬದುಕಿನ ಇನ್ನೊಂದು ಶೃಂಗ ತಲುಪಿದರು. ಹರಿತ ಹಾಗೂ ಅರ್ಥಪೂರ್ಣ ಸಂಭಾಷಣೆ ಬರೆದ ಬರಗೂರು ರಾಮಚಂದ್ರಪ್ಪ ಚಲನಚಿತ್ರ ಸಂಭಾಷಣೆಗೆ ಬೇರೊಂದು ಆಯಾಮವೂ ಸಾಧ್ಯ ಎಂಬುದನ್ನು ತೋರಿಸಿಕೊಟ್ಟರು. ೧೯೯೬-೯೭ ರಲ್ಲಿ ಈ ಚಿತ್ರ ಪಡೆದ ಆರು ರಾಜ್ಯ ಪ್ರಶಸ್ತಿಗಳಲ್ಲಿ ಇವರಿಬ್ಬರೊಂದಿಗೆ ನಾಯಕಿ ಶಿಲ್ಪಾ, ಸಂಗೀತ ನಿರ್ದೇಶಕ ವಿ.ಮನೋಹರ್, ಕವಿ ದೊಡ್ಡರಂಗೇಗೌಡ, ಗಾಯಕ ಎಲ್.ಎನ್.ಶಾಸ್ತ್ರಿ ಇವರ ಹೆಸರುಗಳಿವೆ. ಇದರೊಂದಿಗೆ ವಿಶೇಷ ಬಹುಮಾನ ಕೂಡ ಈ ಚಿತ್ರಕ್ಕೆ ಲಭ್ಯವಾಯಿತು. ಮಾನವಶಾಸ್ತ್ರ ಅಧ್ಯಯನ ವಸ್ತುವಾಗಿ ಅಮೆರಿಕಾದ ವಿಶ್ವವಿದ್ಯಾಲಯ ಈ ಚಿತ್ರವನ್ನು ಉಲ್ಲೇಖಿಸಿರುವುದು ಚಿತ್ರದ ಇನ್ನೊಂದು ವೈಶಿಷ್ಟ್ಯ. ಜೊತೆಗೆ ಆ ದಿನಗಳಲ್ಲಿ ಅಪರೂಪವಾಗಿದ್ದ ಲಕ್ಷಣಗಳಿಂದಾಗಿ ಈ ಚಿತ್ರ ಪತ್ರಿಕೆಗಳ ಮೆಚ್ಚುಗೆಯನ್ನೂ ಪಡೆಯಿತು. ಒಂದು ಪತ್ರಿಕೆಯ ಶೀರ್ಷಿಕೆ 'ಸದಭಿರುಚಿಯ ಕಾವ್ಯಾತ್ಮಕ ಕಲಾಕೃತಿ' ಎಂದಿದ್ದರೆ, ಇನ್ನೊಂದು ಪತ್ರಿಕೆ 'ಜೋಡಿ' ಎಡಪಂಥೀಯರಿಗೂ 'ಮೋಡಿ' ಎಂದಿತ್ತು. ಸದಭಿರುಚಿಯ ಪ್ರಾಮಾಣಿಕ ಪ್ರಯತ್ನಗಳಿಗೆ ಪ್ರೇಕ್ಷಕರು ಸ್ಪಂದಿಸುತ್ತಾರೆನ್ನುವುದಕ್ಕೆ 'ಜನುಮದ ಜೋಡಿ' ಯಶಸ್ಸು ಜ್ವಲಂತ ನಿದರ್ಶನ.

'ನಿರ್ಬಂಧ' ರಿಚರ್ಡ್ ಲೂಯಿಸ್ ಕಥೆ, ಚಿತ್ರಕಥೆ, ಸಂಭಾಷಣೆ ಬರೆದು, ಹ.ಸೂ.ರಾಜಶೇಖರ್ ನಿರ್ದೇಶಿಸಿದ್ದರು. ಅನಂತ್‌ನಾಗ್, ಶಶಿಕುಮಾರ್, ಕುಮಾರ್



(ಚಿತ್ರ ೮೯) 'ಜನುಮದ ಜೋಡಿ' ಚಿತ್ರದಲ್ಲಿ ಶಿಲ್ಪಾ, ಶಿವರಾಜ್ ಕುಮಾರ್ ಮತ್ತು ಪವಿತ್ರಾ ಲೋಕೇಶ್

ಬಂಗಾರಪ್ಪ, ಜಯಮಾಲ, ಬಿ.ಸಿ.ಪಾಟೀಲ್ ಇವರೆಲ್ಲರ ಅಭಿನಯದ ಈ ಚಿತ್ರದ ತಿರುಳೇ ಕೊನೆಯ ೧೫ ನಿಮಿಷಗಳ ದೃಶ್ಯ. ಆಂಗ್ಲ ಚಿತ್ರ 'ಸ್ಪೀಡ್'ನಿಂದ ಸ್ಫೂರ್ತಿ ಪಡೆದು ಈ ದೃಶ್ಯವನ್ನು ಅಳವಡಿಸಿದ್ದರು. ಮಕ್ಕಳ ದಿನಾಚರಣೆ ಅಂಗವಾಗಿ ಕಾರ್ಯಕ್ರಮವೊಂದಕ್ಕೆ ಹೋಗಬೇಕಿದ್ದ ಮುಖ್ಯಮಂತ್ರಿಗಾಗಿ ವಿಶೇಷ ಬಸ್ ನಿರ್ಮಿಸಿರುತ್ತಾರೆ. ಆಯ್ದ ಶಾಲಾ ಮಕ್ಕಳೊಡನೆ ಮುಖ್ಯಮಂತ್ರಿ, ಆತನ ಹೆಂಡತಿ ಬಸ್ಸಿನಲ್ಲಿರುತ್ತಾರೆ. ದುಷ್ಕರ್ಮಿಗಳು ರಾಜಕೀಯ ಕಾರಣಗಳಿಗಾಗಿ ಆತನನ್ನು ಕೊಲ್ಲಲು ಬಾಂಬೊಂದನ್ನು ಬಸ್‌ಗೆ ಜೋಡಿಸಿರುತ್ತಾರೆ. ಬಸ್ಸು ೫೦ ಕಿಮೀ ವೇಗಕ್ಕಿಂತ ಹೆಚ್ಚು ವೇಗದಲ್ಲಿ ಚಲಿಸಿ ನಂತರ ೫೦ ಕಿಮೀ ವೇಗಕ್ಕಿಂತ ಕಡಿಮೆ ವೇಗದಲ್ಲಿ ಚಲಿಸಿದರೆ ಬಾಂಬ್ ಸ್ಫೋಟಿಸುವಂತೆ ಅದನ್ನು ನಿಯಂತ್ರಿಸಿರುತ್ತಾರೆ. ಈ ವಿಷಯ ತಿಳಿದ ಚಾಲಕ ವೇಗವನ್ನು ಒಂದೇ ಸಮನೆ ಕಾಯ್ದುಕೊಂಡು ಚಲಿಸುವಾಗ ಸಾಕಷ್ಟು ಅನಾಹುತಗಳು ಘಟಿಸುತ್ತವೆ. ಎದುರಿಗೆ ಬಂದ ವಾಹನಗಳು, ಕೈಗಾಡಿಗಳು, ರಸ್ತೆ ವಿಭಜಕಗಳು ಎಲ್ಲವೂ ಧ್ವಂಸಗೊಳ್ಳುತ್ತವೆ. ಈ ದೃಶ್ಯದಲ್ಲಿ ಅನಂತ್‌ನಾಗ್, ಶಶಿಕುಮಾರ್, ಕುಮಾರ್ ಬಂಗಾರಪ್ಪ, ಜಯಮಾಲ ಭಾಗವಹಿಸಿದ್ದರು. ದೃಶ್ಯ ರೋಮಾಂಚಕವಾಗಿತ್ತು. ಈ ಸಂದರ್ಭದಲ್ಲಿ ಲಕ್ಷಾಂತರ ಬೆಲೆ ಬಾಳುವ ಕ್ಯಾಮೆರಾ ನುಚ್ಚುನೂರಾಗಿದ್ದು ಒಂದು ಅವಘಡ. ಈ ದೃಶ್ಯವೊಂದನ್ನು ಹೊರತುಪಡಿಸಿ ಚಿತ್ರದಲ್ಲಿ ವಿಶೇಷವೇನೂ ಇಲ್ಲ. ಭಾರೀ ತಾರಾಗಣವೇ ಇದ್ದರೂ ಕಥೆಗೂ, ಅವರ ಓಟಕ್ಕೂ ಹೊಂದಿಕೆಯಾಗಲಿಲ್ಲ. ಹಾಡುಗಳನ್ನಂತೂ ತುರುಕಿದಂತಿತ್ತು.

ಶ್ರೀ ಧನಲಕ್ಷ್ಮಿ ಕ್ರಿಯೇಷನ್ಸ್ ಲಾಂಛನದಡಿ ಪಿ.ಧನರಾಜ್ ನಿರ್ಮಿಸಿ, ಡಿ.ರಾಜೇಂದ್ರಬಾಬು ನಿರ್ದೇಶಿಸಿದ್ದ ಚಿತ್ರ 'ಜೀವನದಿ'. ವಿಷ್ಣುವರ್ಧನ್, ಖುಷ್ಬೂ, ಅನಂತ್‌ನಾಗ್, ಊರ್ವಶಿ, ಉಮಾಶ್ರೀ ಅಭಿನಯವಿತ್ತು. ಕಾವೇರಿ ನದಿಯ ಉಗಮವಾದ ಮಡಿಕೇರಿಯ ತಲಕಾವೇರಿಯಲ್ಲೇ ಚಿತ್ರೀಕರಿಸಿದ್ದರು. ಲಾರಿಗಟ್ಟಲೆ ಹೂವುಗಳನ್ನು ತರಿಸಲಾಗಿತ್ತು. ಖುಷ್ಬೂ, ವಿಷ್ಣುವರ್ಧನ್ ಭಾಗವಹಿಸಿದ್ದ ಗೀತೆಗಾಗಿ ವಿಶೇಷ ಛಾಯಾಗ್ರಹಣ, ಬೆಳಕು, ವಿನ್ಯಾಸ, ಮುಖ್ಯವಾಗಿ ಕಲಾನಿರ್ದೇಶನ, ವಸ್ತ್ರ ವಿನ್ಯಾಸಗಳನ್ನು ಸಂಯೋಜಿಸಲಾಗಿತ್ತು. ನಾಯಕಿಯ ಹೆಸರು ಕಾವೇರಿ, ಚಿತ್ರದ ಹೆಸರೂ 'ಜೀವನದಿ'. ಇವೆಲ್ಲ ಸಾಂಕೇತಿಕವಾಗಿಯೇ ಕಂಡವು. ಮಕ್ಕಳಿಲ್ಲವೆಂಬ ಸಂಕಟ, ಗರ್ಭಿಣಿ ಮನೆಗೆಲಸದವಳನ್ನು ಆದರಿಸಿ, ಅವಳ ಮಗುವನ್ನು ದತ್ತು ತೆಗೆದುಕೊಂಡು, ಆ ಮಗು ಡಿಫ್ತೀರಿಯಾದಿಂದ ಸಾಯುವುದು, ಆಕಸ್ಮಿಕವೋ ಎಂಬಂತೆ ನಾಯಕಿಯೇ ಗರ್ಭ ಧರಿಸಿ ಹೆರುವುದು, ಆ ಮಗು ಎಲ್ಲೋ ಕಳೆದುಹೋಗಿ, ಯಾರ ಕೈಗೋ ಸಿಕ್ಕು, ಶೋಧ, ಕಡೆಗೆ ಮಗು ಸಿಕ್ಕಾಗ ಮಕ್ಕಳಿಲ್ಲದೆ ಮತಿಭ್ರಮಿತಳಾಗಿದ್ದ ಇನ್ನೊಬ್ಬ ತಾಯಿಯ ಸಂಕಟವನ್ನು ನೋಡಲಾಗದೆ ಹೆತ್ತ ತಾಯಿಯೇ ಮಗುವನ್ನು ಸಾಕುತಾಯಿಗೆ ಕೊಟ್ಟು ಬಿಡುವುದು ಕಥೆಯ ತಿರುಳು. ಚಿತ್ರದ ಅಂತ್ಯವನ್ನು ಪ್ರೇಕ್ಷಕ ಒಪ್ಪಲಿಲ್ಲ. ಕಾವೇರಿ ನೀರಿನ ಗಲಾಟೆಯ ಹಿನ್ನೆಲೆಯಲ್ಲಿ ಕಥೆಯನ್ನು ಹೋಲಿಸಿದರು. ಹೆತ್ತತಾಯಿ ಸಾಕುತಾಯಿಗೇ ಮಗುವನ್ನು ಕೊಟ್ಟಿದ್ದು ಅಪಾರ್ಥಕ್ಕೆಡೆ ಮಾಡಿಕೊಟ್ಟಿತ್ತು. ಆದರೆ ಅಂತ್ಯವನ್ನು ಎರಡು, ಮೂರು ರೀತಿಯಲ್ಲಿ ಯೋಚಿಸಿ ಚಿತ್ರೀಕರಿಸಿದ್ದರಾದ್ದರಿಂದ ನಿರ್ದೇಶಕರು ಮಗುವನ್ನು ಕೊಂಡೊಯ್ದು ಸಾಕುತಾಯಿ ವಿಮಾನವನ್ನು ಹಿಂದೆ ತಂದಂತೆ ಮಾಡಿ ಪುನಃ ಹೆತ್ತತಾಯಿಗೇ ಮಗುವನ್ನು ಕೊಡುವಂತೆ ಇರುವ ಚಿತ್ರಿಕೆಗಳನ್ನು ಪುನಃ ಜೋಡಿಸಿದ್ದರು. ಈ ತರ್ಕಗಳೇನೇ ಇರಲಿ, ವಿಮಾನ ನಿಲ್ದಾಣದಲ್ಲಿ ತೆಗೆಯಲಾದ ಚಿತ್ರಿಕೆಗಳು ಚೆನ್ನಾಗಿದ್ದವು. ಸೊಗಸಾದ ಕಲ್ಪನೆ.

ಧನರಾಜ್ ಧಾರಾಳವಾಗಿ ಖರ್ಚು ಮಾಡಿದ್ದರು. ಕಂಠೀರವ ಸ್ಟುಡಿಯೋದಲ್ಲಿ ತಿರುಪತಿ ವೆಂಕಟರಮಣ ದೇವಸ್ಥಾನ, ವಿಗ್ರಹದ ಪುನರ್ನಿರ್ಮಾಣವೇ ಆಗಿತ್ತು. ಭಕ್ತಿ, ಭಾವೋದ್ರೇಕದ ಸನ್ನಿವೇಶ; ಒಂದು ಸೊಗಸಾದ ಗೀತೆಯನ್ನು ಅಲ್ಲಿ ಚಿತ್ರಿಸಲಾಗಿತ್ತು. ತಿರುಪತಿಯಲ್ಲಿ ಚಿತ್ರೀಕರಣಕ್ಕೆ ಅವಕಾಶವಿಲ್ಲವಾದ್ದರಿಂದ ಹೀಗೆ ಮಾಡಿದ್ದರು. 'ಮಲಯ ಮಾರುತ' ಚಿತ್ರಕ್ಕೆ ಶೃಂಗೇರಿಯ ದೇವಸ್ಥಾನದ ಸೆಟ್ ಹಾಕಿದ್ದನ್ನು ಬಿಟ್ಟರೆ ಪ್ರಾಯಃ ನೈಜವಾದ ದೇವಸ್ಥಾನವೋ ಎಂಬಂಥ ಸೆಟ್ ಹಾಕಿಸಿದವರು ಧನರಾಜ್. ಈ ಮೊದಲು ಜಿ.ವಿ.ಅಯ್ಯರ್ ಅವರು ಕಂಠೀರವ ಸ್ಟುಡಿಯೋದಲ್ಲಿ ದಕ್ಷಿಣೇಶ್ವರದ ಕಾಳಿ ದೇವಾಲಯದ ಸೆಟ್ ಹಾಕಿದ್ದನ್ನು ಇಲ್ಲಿ ನೆನೆಯಬಹುದಾಗಿದೆ. ಧನರಾಜ್ ಸೆಟ್ಟನ್ನು ಕೆಲಕಾಲ ಹಾಗೇ ಇಟ್ಟು ಸಾರ್ವಜನಿಕರಿಗೆ ನೋಡಲು ಅವಕಾಶ ಮಾಡಿದ್ದರು. 'ಜೀವನದಿ' ಅದ್ಭುತ ಯಶಸ್ಸಿನ ಚಿತ್ರವಾಗಲಿಲ್ಲ. ಆದರೆ ಬಹಳ ದಿನಗಳ ಮೇಲೆ ಕನ್ನಡದಲ್ಲಿ ಖುಷ್ಬೂ ಅಭಿನಯಿಸಿದ್ದು, ಚಿತ್ರದ ಶ್ರೀಮಂತಿಕೆ, ಸೊಗಸಾದ ಸಂಗೀತ ಹೀಗೆ



(ಚಿತ್ರ ೯೦) 'ನಿರ್ಬಂಧ' ಚಿತ್ರದಲ್ಲಿ ಇಂಚರ ಮತ್ತು ಶಶಿಕುಮಾರ್

ಹತ್ತಾರು ಉತ್ತಮ ಅಂಶಗಳಿದ್ದವು. ಉಮಾಶ್ರೀ, ದೊಡ್ಡಣ್ಣರ ಹಾಸ್ಯ ಸಹ್ಯವೆನಿಸಲಿಲ್ಲ. ಕೋಟಿ ಸಂಗೀತ ನಿರ್ದೇಶನ, ಆರ್.ಎನ್.ಜಯಗೋಪಾಲ್ ಗೀತರಚನೆ. ಎಸ್.ಪಿ.ಬಾಲಸುಬ್ರಹ್ಮಣ್ಯಂ ಗಾಯನದಲ್ಲಿ 'ಕನ್ನಡ ನಾಡಿನ ಜೀವನದಿ ಕಾವೇರಿ...' ಹಾಡು ಶ್ರೇಷ್ಠವಾಗಿತ್ತು. 'ಶೇಷಾದ್ರಿವಾಸ ಶ್ರೀತಿರುಮಲೇಶ...' ಗೀತೆಯನ್ನು ರಾಜೇಶ್ ಚೆನ್ನಾಗಿ ಹಾಡಿದ್ದರು. ಹಿಂದಿಯ ಖ್ಯಾತ ಗಾಯಕರುಗಳಾದ ಸೋನು ನಿಗಮ್ 'ಎಲ್ಲೋ ಯಾರೋ ಹೇಗೋ...' ಮತ್ತು ಅನುರಾಧ ಪೌಡ್ವಾಲ್ 'ನವ ಮಾಸ ನಿನ್ನನೂ ಹೊರಲಿಲ್ಲ ಕಂದನೆ...' ಹಾಡಿದ್ದರು. ಪೌಡ್ವಾಲ್ ಕಂಠ ಕನ್ನಡಕ್ಕೆ ಹಿತವೆನಿಸಲಿಲ್ಲ.

ತೆಲುಗಿನಲ್ಲಿ ಲೇಡಿ ಅಮಿತಾಬ್ ಎಂದೇ ಖ್ಯಾತರಾದ ವಿಜಯಶಾಂತಿಯನ್ನು 'ಆಯುಧ' ಚಿತ್ರಕ್ಕಾಗಿ ನಿರ್ಮಾಪಕ ರಾಕ್‌ಲೈನ್ ವೆಂಕಟೇಶ್ ಕರೆತಂದರು. ಸಾಯಿಕುಮಾರ್, ಸಿತಾರ, ರಘುವರನ್ ಅಭಿನಯವಿತ್ತು. ಅಯ್ಯಪ್ಪ ಪಿ.ಶರ್ಮ ನಿರ್ದೇಶಿಸಿದ್ದ ಈ ಸಾಹಸ ಚಿತ್ರ ಆಗ ಬರುತ್ತಿದ್ದ ಸಾಹಸ ಚಿತ್ರಗಳ ಮಾದರಿಯಲ್ಲೇ ಹತ್ತರಲ್ಲಿ ಹನ್ನೊಂದರಂತೆ ಬಂತು. ವಿಜಯಶಾಂತಿಯನ್ನು ತಂದ ಲಾಭ ನಿರ್ಮಾಪಕರಿಗೆ ಹೆಚ್ಚೇನೂ ಆಗಲಿಲ್ಲ. ಚಿತ್ರಕ್ಕಾಗಿ ಮೇಕೆದಾಟು ಬಳಿ ಹಾಕಿದ್ದ ಸೆಟ್ ನೀರಿನ ಹೆಚ್ಚಳದಿಂದ ಗೇಟ್ ತೆಗೆದ ಕಾರಣ ಉಕ್ಕಿ ಬಂದ ನೀರಿನಲ್ಲಿ ಮುಳುಗಿ ಹೋಗಿತ್ತು.

'ಆದಿತ್ಯ' ಚಿತ್ರದಲ್ಲಿ ರಾಜೇಶ್ ರಾಮನಾಥ್ ಸಂಗೀತ ನಿರ್ದೇಶನದಲ್ಲಿ ರಂಗನಟಿ/ಗಾಯಕಿ ಬಿ.ಜಯಶ್ರೀ ಮಾದಕ ಶೈಲಿಯಲ್ಲಿ ಹಾಡಿರುವ 'ರಂಭೆ ನೀ ವಯ್ಯಾರದ ಗೊಂಬೆ...' ಮುಖಾಂತರ ಚಿತ್ರರಂಗದಲ್ಲಿ ಗಾಯಕಿಯಾಗಿ ಹೆಸರು



(ಚಿತ್ರ ೯೧) 'ಜೀವನದಿ' ಚಿತ್ರದಲ್ಲಿ ಖುಷ್ಬೂ ಮತ್ತು ವಿಷ್ಣುವರ್ಧನ್

ಗಳಿಸಿದರು. ಈ ಹಾಡು ಜನಪ್ರಿಯವಾಯಿತು. ಇಂಥ ಗೀತೆಗಳಿಗೆ ಹೆಸರಾಗುತ್ತಿದ್ದ ಮಾಲ್ಗುಡಿ ಶುಭಾ ಅವರಿಗೆ ಬಿ.ಜಯಶ್ರೀ ಹಾಡತೊಡಗಿದ ಮೇಲೆ ಅವಕಾಶಗಳು ಸಿಗಲಿಲ್ಲ. ಉಳಿದಂತೆ ರಾಜೇಶ್ ರಾಮನಾಥ್ ಸಂಗೀತದಲ್ಲಿ 'ಬ್ಯೂಟಿ ಎಂಥ ಬ್ಯೂಟಿಯು...' ಹಾಡು ಚೆನ್ನಾಗಿತ್ತು. ಪ್ರಥಮ ಬಾರಿಗೆ ಈ ಚಿತ್ರದ ಕೆಲವು ಹಾಡುಗಳನ್ನು ನ್ಯೂಜಿಲ್ಯಾಂಡ್‌ನ ರೋಟ್ರೋವ, ಪಕ್ಕಪಾಬನಲ್ಲಿ ಚಿತ್ರೀಕರಿಸಲಾಗಿತ್ತು. ಶಿವರಾಜ್ ಕುಮಾರ್, ಮಧು ಬಂಗಾರಪ್ಪ, ರುಬೈನಖಾನ್, ಅರ್ಚನ ಅಭಿನಯಿಸಿದ್ದರು. ಇಷ್ಟೆಲ್ಲ ವಿಶೇಷಗಳಿದ್ದೂ ಬಲವಾದ ಚಿತ್ರಕಥೆ-ನಿರ್ದೇಶನದ ಕೊರತೆಯಿಂದಾಗಿ ಚಿತ್ರ ಗೆಲ್ಲಲಿಲ್ಲ. ಹಿಂದಿಯ ನೀಲಂ ಚಿತ್ರದ ಒಂದು ಹಾಡಿನ ಸನ್ನಿವೇಶದಲ್ಲಿ ಕಾಣಿಸಿಕೊಂಡಿದ್ದರು. ಎಂ.ಪಿ.ರವಿ, ವಿನಯಕುಮಾರ್ ನಿರ್ಮಾಣದಲ್ಲಿ ಕೆ.ಎಸ್.ಲೋಕಚಂದ್ರ ನಿರ್ದೇಶಿಸಿದ್ದರು.

ಎಸ್.ನಾರಾಯಣ್ ನಿರ್ದೇಶನದಲ್ಲಿ ರಾಮಕುಮಾರ್, ನಗ್ಮಾ ಸೋದರಿ ರೋಶನಿ ಪ್ರಥಮ ಬಾರಿಗೆ ನಾಯಕಿಯಾಗಿ ನಟಿಸಿದ್ದ ಚಿತ್ರ 'ಗುಲಾಬಿ'. ಅಜಯ್‌ಕುಮಾರ್ ಕಥೆಗೆ, ಭಾಗ್ಯವತಿ ನಿರ್ಮಿಸಿದ್ದು. ಪ್ರೇಮಕಥೆ. ಬಾಲ್ಯ ಸ್ನೇಹಿತರಿಬ್ಬರ ಪ್ರೀತಿಗೆ ತಂದೆ-ತಾಯಿಗಳು ತಂತಮ್ಮ ದ್ವೇಷದ ಕಾರಣವಾಗಿ ಪ್ರೇಮಿಗಳನ್ನು ಅಗಲಿಸುವ ಪ್ರಯತ್ನ ಮಾಡುತ್ತಾರೆ. ಎಸ್.ನಾರಾಯಣ್ ತಮ್ಮದೇ ಪ್ರಥಮ ಚಿತ್ರ 'ಚೈತ್ರದ ಪ್ರೇಮಾಂಜಲಿ'ಯಂತೆಯೇ ಇದನ್ನೂ ದುರಂತ ಪ್ರೇಮಕತೆಯನ್ನಾಗಿಸಿದ್ದರು. ಆರ್.ಗಿರಿ ಛಾಯಾಗ್ರಹಣದಲ್ಲಿ ರಮ್ಯತಾಣಗಳು ಸೊಗಸೆನಿಸಿದವು. ಇಳಯರಾಜ ಸಂಗೀತ ನಿರ್ದೇಶನದಲ್ಲಿ ಕೆಲವು ಹಾಡುಗಳು ಚೆನ್ನಾಗಿದ್ದವು.

ಹಾಸ್ಯನಟನಾಗಿ ಚಿತ್ರರಂಗ ಪ್ರವೇಶಿಸಿ, ನಿರ್ಮಾಪಕ-ನಿರ್ದೇಶಕನಾಗಿ ಬೆಳೆದು, ಅಂಕಕ್ಕೂ ಹೆಚ್ಚು ಚಿತ್ರಗಳನ್ನು ನಿರ್ಮಿಸಿದ ದ್ವಾರಕೀಶ್, 'ಹೃದಯ ಕಳ್ಳರು' ಚಿತ್ರದ ಮೂಲಕ ಮಕ್ಕಳಾದ ಗಿರಿ ದ್ವಾರಕೀಶ್ ಮತ್ತು ಅಭಿಷೇಕ್ ದ್ವಾರಕೀಶ್ ಅವರನ್ನು ಕನ್ನಡ ಚಿತ್ರರಂಗಕ್ಕೆ ನಾಯಕನಟರನ್ನಾಗಿ ಪರಿಚಯ ಮಾಡಿದರು. ಎಸ್.ಪಿ.ಬಾಲಸುಬ್ರಹ್ಮಣ್ಯಂ, ವಿನಯಾ ಪ್ರಸಾದ್, ಉಮಾಶ್ರೀ, ದ್ವಾರಕೀಶ್ ಪಾತ್ರವರ್ಗವಿತ್ತು. ಕಥೆ ಹಳೆಯದಾದರೂ ನಿರೂಪಣೆ ವಿಭಿನ್ನವಾಗಿತ್ತು. ಪುಟ್ಟ ಹುಡುಗರಂತೆ ಕಾಣುತ್ತಿದ್ದ ನಾಯಕರಿಬ್ಬರೂ ಲವಲವಿಕೆಯಿಂದ ನಟಿಸಿದ್ದರು. ರಮಣಿ ಭಾರದ್ವಾಜ್ ಸಂಗೀತದಲ್ಲಿ 'ಸ್ವಾರ್ಥಕೆ ಬಂದವರಲ್ಲ, ಹಣವೇ ಎಲ್ಲಾ ಅಲ್ಲ..' ಹಾಡು ಚೆನ್ನಾಗಿತ್ತು. ಚಿತ್ರ ಯಶಸ್ವಿಯಾಗಿದ್ದಿದ್ದರೆ ನವನಟರಿಬ್ಬರು ಬೆಳೆಯುವ ಅವಕಾಶವಿತ್ತು. ಆದರೆ ಹಾಗಾಗಲಿಲ್ಲ. ತಾರಾಮೌಲ್ಯವೇ ನಡೆಯುತ್ತಿದ್ದ ಕಾಲದಲ್ಲಿ, ಕೇವಲ ಹೊಸಬರು ಎಂಬ ಕಾರಣಕ್ಕೆ ಚಿತ್ರ ಓಡಲಿಲ್ಲ. ಒಂದು ಕಾಲಕ್ಕೆ ಎಷ್ಟೋ ನಟರಿಗೆ ತಾರಾಮೌಲ್ಯವನ್ನು ತಂದುಕೊಟ್ಟ ದ್ವಾರಕೀಶ್ ಮಕ್ಕಳಿಗೇ ಈ ಪರಿಸ್ಥಿತಿ ಬಂದದ್ದು ವಿಪರ್ಯಾಸ.

ಶೈಲೇಂದ್ರಬಾಬು ನಿರ್ಮಿಸಿದ ಚಿತ್ರ 'ರಂಗೋಲಿ'. ಯುವ ನಟ-ನಟಿ ಸುಮಂತ್, ರುಚಿತಾ ಪ್ರಸಾದ್‌ರನ್ನು ಚಿತ್ರರಂಗಕ್ಕೆ ಪರಿಚಯಿಸಲಾಯಿತು. ಪಿ.ಹೆಚ್.ವಿಶ್ವನಾಥ್



(ಚಿತ್ರ ೯೨) 'ಹೃದಯ ಕಳ್ಳರು' ಚಿತ್ರದಲ್ಲಿ ಅಭಿ ದ್ವಾರಕೀಶ್, ಗಿರಿ ದ್ವಾರಕೀಶ್, ಉಮಾಶ್ರೀ

ನಿರ್ದೇಶನ. ಹಿಂದಿಯ 'ದಿಲ್‌ವಾಲೆ ದುಲ್ಹನಿಯಾ ಲೇಜಾಯೆಂಗೆ' ಛಾಯೆ ಇತ್ತೆಂದು ಹೇಳಲಾಗುತ್ತದೆ. ಪಿ.ಕೆ.ಹೆಚ್.ದಾಸ್ ಛಾಯಾಗ್ರಹಣದಲ್ಲಿ ದೃಶ್ಯಗಳು ಮನೋಹರವಾಗಿದ್ದವು. ಸುಮಂತ್, ರುಚಿತ ಚೆನ್ನಾಗಿ ಅಭಿನಯಿಸಿದ್ದರು. ನಿರ್ದೇಶನವೂ ಉತ್ತಮವಾಗಿತ್ತಾದರೂ ಹೊಸಬರನ್ನು ಪ್ರೇಕ್ಷಕರು ತುಂಬು ಮನಸ್ಸಿನಿಂದ ಸ್ವೀಕರಿಸಲಿಲ್ಲ.

'ಗಳಿಗೆ' ಎಂ.ಎಸ್.ಸತ್ಯು ನಿರ್ದೇಶನದ ಚಿತ್ರ. 'ಭಯೋತ್ಪಾದನೆ'ಯಂಥ ಬೃಹತ್ ರೋಗಕ್ಕೆ 'ಪ್ರೀತಿ'ಯ ಮೂಲಕ ಚಿಕಿತ್ಸೆ ಕೊಡುವ ಆದರ್ಶದ ಪ್ರಯತ್ನವನ್ನು ಸತ್ಯು ಈ ಚಿತ್ರದಲ್ಲಿ ಮಾಡಿದ್ದಾರೆ. ಆದರೆ ಪ್ರೇಮ, ಭಯೋತ್ಪಾದನೆಗಳ ತುಲಾಭಾರ ಚಿತ್ರಕಥೆಯಲ್ಲಿ ಸಮಾನಾಂತರವಾಗಿರಲಿಲ್ಲ. ಭಯೋತ್ಪಾದಕನ ಕುಡಿಯನ್ನು ಕರುಳಲ್ಲಿ ಹೊತ್ತು ತಾನು ಈ ಸಮಾಜದಲ್ಲಿ ಬದುಕಿಯೇ ಬದುಕುತ್ತೇನೆ ಎಂದು ಹೊರಡುವ ನಾಯಕಿಯ ದಿಟ್ಟತನ ಅದ್ಭುತ ಸಂಗತಿಯೆನ್ನಿಸುವಂತೆ ಹಿನ್ನೆಲೆ ಸೃಷ್ಟಿಯಾಗಿಲ್ಲ. ಇದರಿಂದಾಗಿ ಇಡೀ ಚಿತ್ರ ಸೆಕ್ಯುಲರಿಸಂ, ಅಡಿಗ, ರಾಜರತ್ನಂ, ಮಂದಿರ, ಮಸೀದಿ, ಭಯೋತ್ಪಾದಕ, ಬಸಿರು, ಜಪಾನಿನ ತೋಶಿರೋ, ಡಂಕಲ್, ಗ್ಯಾಟ್, ಧಾರವಾಡದ ಅಜ್ಜಿ, ಭಾರತದ ಗಡಿ, ಪಂಜಾಬ್ ಪೊಲೀಸು, ಬೆಂಗಳೂರಿನ ಜಾಲಹಳ್ಳಿ, ಅಲ್ಲಲ್ಲಿ ಕನ್ನಡ, ಅರ್ಧ ಪಂಜಾಬಿ, ಮಿಕ್ಕಿದ್ದು ಹಿಂದಿ, ಉಳಿದದ್ದು ಇಂಗ್ಲಿಷ್ - ಇವೆಲ್ಲ




(ಚಿತ್ರ ೯೩)'ಗಳಿಗೆ' ಚಿತ್ರದ ಒಂದು ದೃಶ್ಯ

ಚೆಲ್ಲಾಡಿರುವ ಅಂಗಳದಂತೆ ಕಾಣುತ್ತದೆ. ಸತ್ಯು ಅವರ ಅಭಿಪ್ರಾಯಗಳಲ್ಲೇ ವಿರೋಧಾಭಾಸಗಳಿದ್ದವು.

೧೯೯೬ ರಲ್ಲಿ ಬಿಡುಗಡೆಯಾದ ೭೪ ಚಿತ್ರಗಳಲ್ಲಿ ಮುಖ್ಯವೆನಿಸಿದ್ದು ಐದಾರು ಚಿತ್ರಗಳು ಮಾತ್ರ. ಉಳಿದಂತೆ ಬಹುತೇಕವು ವ್ಯಾಪಾರಿ ಉದ್ದೇಶದ ಸರಕುಗಳಂತೆ ಅವಸರವಾಗಿ ಮಾರುಕಟ್ಟೆ ಪ್ರವೇಶಿಸುತ್ತಿದ್ದಂಥವು. ಇಂಥ ಚಿತ್ರಗಳ ನಿರಂತರ ಉತ್ಪಾದನೆಯಿಂದಾಗಿ ಕನ್ನಡ ಭಾಷೆ, ಸಂಸ್ಕೃತಿಗೆ ಸಹಾಯವಾಗದಿದ್ದರೂ ಚಿತ್ರರಂಗವನ್ನೇ ಅವಲಂಬಿಸಿದ್ದ ಕಾರ್ಮಿಕರು, ಸಹಕಲಾವಿದರಿಗೆ ಕೈತುಂಬಾ ಕೆಲಸವನ್ನು ಕೊಟ್ಟಿದ್ದವು. ಬಿಡುವಿಲ್ಲದಂತೆ ದುಡಿಯುತ್ತಿದ್ದ ಕಾರ್ಮಿಕರಲ್ಲಿ ಅದೇ ವೇಳೆಗೆ ಹಕ್ಕಿನ ಪ್ರಜ್ಞೆ ಕೂಡ ಜಾಗೃತವಾಗಿತ್ತು. ತಮ್ಮ ವೃತ್ತಿಗೆ ರಕ್ಷಣೆ ಪಡೆದುಕೊಳ್ಳುವ ದಿಸೆಯಲ್ಲಿ ಮುಖಂಡರು ಚಿಂತಿಸತೊಡಗಿದ್ದರು. ಫಲವಾಗಿ ೧೫, ಮಾರ್ಚ್ ೧೯೯೬ರಂದು ಬೆಂಗಳೂರಿನ ಗಾಂಧೀನಗರದ ಮಹಾರಾಷ್ಟ್ರ ಮಂಡಲ ಸಭಾಂಗಣದಲ್ಲಿ 'ಅಖಿಲ ಭಾರತ ಚಲನಚಿತ್ರ ಕಾರ್ಮಿಕರ ಮಹಾ ಒಕ್ಕೂಟ'ದ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ಸಭೆಗೆ ಕೆಲವು ಕಾರಣಗಳಿಂದಾಗಿ ಮಹತ್ವವಿದೆ. ಕರ್ನಾಟಕದಲ್ಲಿ ಒಕ್ಕೂಟ ರಚನೆಯಾದ ೧೦ನೆಯ ವರ್ಷ ಇದು ಏರ್ಪಟ್ಟಿತು. ನಟ ಅಶೋಕ್ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನ, ಸದಸ್ಯರ ಕುಟುಂಬಕ್ಕೆ ವೈದ್ಯಕೀಯ ಸೌಲಭ್ಯ, ಸಾಮೂಹಿಕ ಜೀವ ವಿಮೆ, ಕಾರ್ಮಿಕ ಕ್ಷೇಮ ನಿಧಿ - ಇಂಥ ಹಲವಾರು ವ್ಯವಸ್ಥೆಗಳನ್ನು ಮಾಡುವುದರ ಮೂಲಕ ೧೯೮೭ ರಲ್ಲಿ ಈ ಒಕ್ಕೂಟವನ್ನು ಕಟ್ಟಿದ್ದರು. ಯಶಸ್ವಿಯಾಗಿ ಮುನ್ನಡೆಸುತ್ತಾ ಬಂದ ಸಂಸ್ಥೆ ೧೦ ವರ್ಷಗಳಲ್ಲಿ ಕೆಲವು ಸಂದರ್ಭಗಳಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತಾ ಪ್ರಗತಿ ಸಾಧಿಸಿ ಮುಖ್ಯಹಂತ ತಲುಪಿತ್ತು. ಇಡೀ ದಿನ ನಡೆದ ಸಭೆಯಲ್ಲಿ ರಾಷ್ಟ್ರದ ಬೇರೆ ಬೇರೆ ರಾಜ್ಯಗಳಿಂದ ಬಂದಿದ್ದ ಚಲನಚಿತ್ರ ಕಾರ್ಮಿಕರ ಮುಖಂಡರು ಕಾರ್ಮಿಕರ ಸ್ಥಿತಿಗತಿಗಳ ಬಗ್ಗೆ ವಿವರವಾಗಿ ಚರ್ಚಿಸಿದರು. ಅಂದಿನ ಚರ್ಚೆಯಲ್ಲಿ ವ್ಯಕ್ತವಾದ ಕೆಲವು ಅಭಿಪ್ರಾಯಗಳು ವಾಸ್ತವ ಸತ್ಯವನ್ನು ಮೀರಿದ್ದ ಭಾವುಕತೆಯನ್ನು ಒಳಗೊಂಡಿದ್ದವು. ಅವುಗಳನ್ನು ಮುಖಂಡರ ಮಾತುಗಳಲ್ಲಿಯೇ ದಾಖಲಿಸಿದರೆ ಅಂದಿನ ಪರಿಸ್ಥಿತಿಯ ಚಿತ್ರ ಮೂಡುತ್ತದೆ.

ಒಬ್ಬರು ''ಕಾರ್ಮಿಕರು ಬೀದಿಹೆಣವಾಗಿ ಸಾಯುವಂಥ ಪರಿಸ್ಥಿತಿ ಇದೆ. ಕಾರ್ಮಿಕರನ್ನು ನಿರ್ಮಾಪಕರು ಲೋಟ, ತಟ್ಟೆ, ಚಮಚಾಗಳೆಂದು ಭಾವಿಸುತ್ತಿದ್ದಾರೆ. ಕಾರ್ಮಿಕರಿಗೆ ಪಿ.ಎಫ್., ಗ್ರ್ಯಾಚ್ಯೂಯಿಟಿ ಇಲ್ಲ. ಆದರೆ ಕಾನೂನಿನಲ್ಲಿ ಕಾರ್ಮಿಕರಿಗೆ ಭವಿಷ್ಯ ನಿಧಿ ಬೇಕು ಎಂದಿದೆ. ನಮ್ಮಿಂದ ಒಟ್ಟಾಗಿ ಓಟು ರಾಜಕಾರಣಿಗಳಿಗೆ ತಲುಪುತ್ತಿಲ್ಲವಾದುದರಿಂದ ನಮ್ಮ ಹಿತರಕ್ಷಣೆ ಬಗ್ಗೆ ಅವರು ಕಾಳಜಿ ವಹಿಸುತ್ತಿಲ್ಲ'' ಎಂದರು. ರಾಷ್ಟ್ರೀಯ ಒಕ್ಕೂಟದ ಅಧ್ಯಕ್ಷ ಚಂದ್ರಶೇಖರ್ ''ನಮ್ಮಲ್ಲಿ ಇನ್ನಷ್ಟು ಒಗ್ಗಟ್ಟು ಬೇಕು. ಕರ್ನಾಟಕದಲ್ಲಿ 'ಕಲಾವಿದರ ಸಂಘ'ವು ಕಾರ್ಮಿಕ ಒಕ್ಕೂಟದ ಸದಸ್ಯನಾಗದಿರುವುದು ವಿಷಾದನೀಯ. ನಾನು ರಾಷ್ಟ್ರೀಯ ಒಕ್ಕೂಟದಲ್ಲಿ ಕಲಾವಿದರ ಪರವಾಗಿ ಚುನಾಯಿತನಾಗಿ ಅಧ್ಯಕ್ಷನಾಗಿದ್ದೇನೆ. ಮುಂಬೈನಲ್ಲಿ ದಿಲೀಪ್ ಕುಮಾರ್, ಅಶೋಕ್‌ಕುಮಾರ್ ನೇತೃತ್ವದಲ್ಲಿ ೧.೮೦ ಕೋಟಿ ರೂಪಾಯಿ ಮೊತ್ತದ ಹಣ ಸಂಗ್ರಹಿಸಿ ಕಲಾವಿದರು ಮತ್ತು ಕಾರ್ಮಿಕ ವರ್ಗದ 'ಟ್ರಸ್ಟ್' ಆರಂಭಿಸಲಾಗಿದೆ. ಈ ಹಿನ್ನೆಲೆಯನ್ನು ಅರಿತು ಕನ್ನಡದ ಕಲಾವಿದರೆಲ್ಲ ಜೊತೆಗೂಡಿ ಕಾರ್ಮಿಕರ ಒಕ್ಕೂಟಕ್ಕೆ ಸಹಾಯ ಮಾಡಬೇಕು'' ಎಂದರು. ಕಾರ್ಯದರ್ಶಿ ಮಧುಸೂದನ್ ಅಭಿಪ್ರಾಯ ಭಿನ್ನವಾಗಿತ್ತು. ''ಹಿಂದಿಗಿಂತ ಈಗ ಕಾರ್ಮಿಕರ ಪರಿಸ್ಥಿತಿ ಬದಲಾಗಿದೆ. ಈಗ ಕಾರ್ಮಿಕರ ಗಳಿಕೆಯನ್ನು ಯಾರೂ ವಂಚಿಸುವುದು ಸಾಧ್ಯವಿಲ್ಲ. ಸಂಘಕ್ಕೆ ರಕ್ಷಣೆ ಇದೆ. ಜೀವನ ಮಟ್ಟವೂ ಸಾಕಷ್ಟು ಸುಧಾರಿಸಿದೆ. ಆದರೂ ಇನ್ನಷ್ಟು ಗೌರವ ಮತ್ತು ನೆಮ್ಮದಿ ದೊರಕಬೇಕು.'' ದಕ್ಷಿಣ ಭಾರತ ಕಾರ್ಮಿಕರ ಒಕ್ಕೂಟದ ಅಧ್ಯಕ್ಷ ಎಸ್.ಎಸ್.ವರ್ಮಾ ತಮ್ಮ ಅನುಭವವನ್ನು ಹೇಳುವುದರ ಮೂಲಕ ಹಿಂದಿನ-ಅಂದಿನ ಪರಿಸ್ಥಿತಿಯ ಚಿತ್ರಣ ನೀಡಿದರು. ''ನಾನು ಕನ್ನಡದಲ್ಲಿ 'ಸದಾರಮೆ', 'ಧರ್ಮ ವಿಜಯ' ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದೇನೆ. ನಾನು ಛಾಯಾಗ್ರಹಣ ನಿರ್ವಹಿಸಿದ 'ಮೋಹಿನಿ ಭಸ್ಮಾಸುರ'ದಲ್ಲಿ ರಾಜಕುಮಾರ್ ನಟಿಸಿದ್ದಾರೆ. ಆಗ ನಮ್ಮೆಲ್ಲರ ಪರಿಸ್ಥಿತಿ ಅತ್ಯಂತ ಕಷ್ಟದಲ್ಲಿತ್ತು. ಹಣ ಕೊಟ್ಟರೆ ಉಂಟು, ಇಲ್ಲವಾದರೆ ಇಲ್ಲ. ಆದರೆ ಈಗ ಪರಿಸ್ಥಿತಿ ಸಾಕಷ್ಟು ಬದಲಾಗಿದೆ. ಕಾರ್ಮಿಕರಿಗೆ ನೆಮ್ಮದಿ ಸಿಗುತ್ತಿದೆ.''

ಕಾರ್ಮಿಕರು ಹೀಗೆ ತಮ್ಮ ಹಕ್ಕುಗಳ ಪುನರ್‌ಚಿಂತನೆ ನಡೆಸಿದ ೧೯೯೬ ರಲ್ಲಿ ಹಲವು ವರ್ಗ, ವಿಭಾಗಗಳಲ್ಲಿ ಕಾರ್ಮಿಕರು ಪಡೆದುಕೊಳ್ಳುತ್ತಿದ್ದ (ನೋಡಿ-ಸಂಘಟನೆ) ಈ ಸಂಭಾವನೆಯು ಕನ್ನಡ ಚಿತ್ರಗಳ ಮಾರುಕಟ್ಟೆ, ಗಳಿಕೆ, ನಿರ್ಮಾಣ ವೆಚ್ಚಗಳ ಹಿನ್ನೆಲೆಯಲ್ಲಿ ಹೆಚ್ಚಾಯಿತು ಎಂದು ನಿರ್ಮಾಪಕರು ಕೆಲವು ವರ್ಷಗಳಿಂದ ಅಸಮಾಧಾನ ವ್ಯಕ್ತಪಡಿಸುತ್ತಲೇ ಇದ್ದರು. ಇದರೊಂದಿಗೆ ೧೯೯೮ ರಲ್ಲಿ ಸ್ಲ್ಯಾಬ್ ವ್ಯವಸ್ಥೆ, ಸಬ್ಸಿಡಿ ನೀತಿಯಲ್ಲಿನ ಬದಲಾವಣೆಗಳು, ತೆರಿಗೆ ವಿನಾಯ್ತಿಯ ಬದಲಾಗುತ್ತಿದ್ದ ನಿರ್ಧಾರಗಳು ಚಿತ್ರೋದ್ಯಮದಲ್ಲಿ ಗೊಂದಲ ಹುಟ್ಟುಹಾಕಿದ್ದವು. ಯಾವುದೂ ನಿಶ್ಚಿತ ರೂಪದಲ್ಲಿ 'ಶಾಶ್ವತ ವ್ಯವಸ್ಥೆ' ಎನ್ನುವಂತಿರಲಿಲ್ಲ. ನಿರ್ಮಾಣ ವೆಚ್ಚ ಏರಿ ನಿರ್ಮಾಪಕರು ವೇದನೆ, ಅಸಹನೆ ಅನುಭವಿಸತೊಡಗಿದರು. 'ಸ್ಲ್ಯಾಬ್' ವ್ಯವಸ್ಥೆ ಜಾರಿಗೆ ಬಂದನಂತರ ಪ್ರಮುಖ ಕಲಾವಿದರು ತಮ್ಮ ಸಂಭಾವನೆಯನ್ನು ವಿವೇಚನೆಯಿಲ್ಲದೆ ಏರಿಸಿದ್ದು ಕೂಡ ಉದ್ಯಮದ ಅರ್ಥವ್ಯವಸ್ಥೆಯನ್ನು ಏರುಪೇರುಗೊಳಿಸಿತ್ತು. ಈ ಹಂತದಲ್ಲಿ ನಿರ್ಮಾಪಕರು ಸೆಟೆದು ಕುಳಿತರು. ಚಿತ್ರದ ನಿರ್ಮಾಣ ಚಟುವಟಿಕೆಗಳನ್ನು ನಿಲ್ಲಿಸಬೇಕೆಂಬ ಅಭಿಪ್ರಾಯ, ಕೂಗು ಎಲ್ಲಾ ಕಡೆಗಳಿಂದ ಕೇಳಿ ಬಂತು. ನಿರ್ಮಾಪಕರ ಆರೋಪಗಳಲ್ಲಿ ಐದಾರು ವರ್ಷಗಳಿಂದ ಒಂದೇ ಸಮನೆ ಹೆಚ್ಚುತ್ತಿದ್ದ ಕಾರ್ಮಿಕರ ಸಂಭಾವನೆಯ ಅಂಶ ಪ್ರಮುಖವಾಗಿತ್ತು. ಈ ಹಂತದಲ್ಲಿ ವಾಣಿಜ್ಯ ಮಂಡಳಿ ಮಧ್ಯಸ್ಥಿಕೆ ವಹಿಸಿ ನಿರ್ಮಾಪಕರು - ಕಾರ್ಮಿಕ ಮುಖಂಡರ ಸಭೆ ಏರ್ಪಡಿಸಿತು. ೧೯೯೮ರ ಡಿಸೆಂಬರ್ ಎರಡನೆಯ ವಾರ ನಡೆದ ಈ ಸಭೆ ಸೌಹಾರ್ದಯುತವಾಗಿ ಚರ್ಚೆ ನಡೆಸಿ ಕೆಲವು ತೀರ್ಮಾನಗಳನ್ನು ಕೈಗೊಂಡಿತು. ಇದರಿಂದಾಗಿ ಅದೇ ಡಿಸೆಂಬರ್ ವೇಳೆಗೆ ಕೆಲವಾರು ಬದಲಾವಣೆಗಳು ಆದವು. ಕಾರ್ಮಿಕರು ತಮ್ಮ ವೇತನ, ಭತ್ಯೆಗಳನ್ನು ಸ್ವಲ್ಪ ಕಡಿಮೆ ಮಾಡಿಕೊಂಡರು. ಹಿಂದೆ ಪಡೆಯುತ್ತಿದ್ದ ಓವರ್‌ಟೈಂಗೆ ಎರಡರಷ್ಟನ್ನು ಭತ್ಯೆ ತೆಗೆದುಕೊಳ್ಳುತ್ತಿದ್ದರಲ್ಲಿ ಅರ್ಧವಷ್ಟನ್ನು ಕಡಿಮೆ ಮಾಡಿಕೊಂಡರು. ಇದರೊಂದಿಗೆ ಧ್ವನಿಗ್ರಹಣ ಕೇಂದ್ರಗಳು ಕೂಡ ತಮ್ಮ ಬಾಡಿಗೆಯಲ್ಲಿ ಸ್ವಲ್ಪ ಕಡಿಮೆಗೆ ಒಪ್ಪಿದವು. ೧೯೯೮ರ ಕೊನೆಯ ಭಾಗದಲ್ಲಿ ಸರ್ಕಾರ ಗುಣಾತ್ಮಕ ಚಿತ್ರಗಳಿಗೆ ೧೦ ಲಕ್ಷ ರೂಪಾಯಿ ಸಹಾಯಧನ ನೀಡುವುದಾಗಿ ಘೋಷಿಸಿದ್ದು ಹಾಗೂ ರೀಮೇಕ್ ಚಿತ್ರಗಳಿಗೆ ಶೇಕಡಾ ೧೦೦ರ ತೆರಿಗೆ ವಿನಾಯ್ತಿ ನೀಡಲು ಸಮ್ಮತಿಸಿದ್ದು ನಿರ್ಮಾಪಕರು ನಿಟ್ಟುಸಿರು ಬಿಡುವಂತೆ ಮಾಡಿತು. ಚಟುವಟಿಕೆಗಳನ್ನು ಸ್ತಬ್ಧಗೊಳಿಸಿದ್ದ ಸ್ಥಿತಿ ಬದಲಾಗಿ ಎರಡೇ ವಾರದಲ್ಲಿ ಆರೇಳು ಚಿತ್ರಗಳ ಚಿತ್ರೀಕರಣವು ಆರಂಭವಾಯಿತು.

ಚಿತ್ರರಂಗದ ೧೯೯೬ರ ಬಿರುಸಿನ ಚಟುವಟಿಕೆಗಳ ನಡುವೆ ಸಂಭವಿಸಿದ ಅಕಾಲಿಕ ಸಾವುಗಳು ಘೋರವಾಗಿದ್ದವು. ಹತ್ತು ವರ್ಷಗಳಿಂದ ಆಗಾಗ ಸಂಭವಿಸುತ್ತಿದ್ದ ಸಾವುಗಳಂತೆ ಇವು ಆಕಸ್ಮಿಕವಾಗಿದ್ದವು. ೧೯೯೬ರ ಜುಲೈ ಎರಡನೆಯ ವಾರ ಉತ್ತಮ ಅಧ್ಯಾಪಕ, ವಾಗ್ಮಿ, ಕಲಾವಿದ ಗುತ್ತಿಗೇರಿ ಮಾನಪ್ಪ (ಮಾನು) ಅರಸೀಕೆರೆ ಸಮೀಪದ ಕರಿದೋಡಿಹಳ್ಳಿಯ ಬಳಿ ಕಾರು ಅಪಘಾತದಲ್ಲಿ ಮಡಿದಾಗ ಅವರಿಗೆ ಕೇವಲ ೪೮ ವರ್ಷ ವಯಸ್ಸಾಗಿತ್ತು. ನಟನೆ, ಬರವಣಿಗೆ, ಸಂಘಟನೆ, ರಾಜಕಾರಣ ಹೀಗೆ ಅವರದು ಬಹುಮುಖ ಆಸಕ್ತಿ. ವಿಧಾನ ಪರಿಷತ್ತಿನ ಚುನಾವಣೆಗೆ ಸ್ಪರ್ಧಿಸಿ ಸೋತಿದ್ದರು. ಕುವೆಂಪು ಅವರ 'ಮಲೆನಾಡಿನ ಚಿತ್ರಗಳು' ದೂರದರ್ಶನ ಧಾರಾವಾಹಿಯನ್ನು ನಿರ್ಮಿಸಿ, ನಿರ್ದೇಶಿಸಿದ್ದರು. ಬರಗೂರು ರಾಮಚಂದ್ರಪ್ಪ ನಿರ್ದೇಶಿಸಿದ ಎಲ್ಲ ಚಿತ್ರಗಳಲ್ಲೂ ಅಭಿನಯಿಸಿದ್ದ ಮಾನು ಅವರಿಗೆ ಬರಗೂರು ರಾಮಚಂದ್ರಪ್ಪನವರ 'ಕರಡೀಪುರ' ಕೊನೆಯ ಚಿತ್ರವಾಯಿತು.

೧೯೯೬ರ ಸೆಪ್ಟೆಂಬರ್ ೧೩ ರಂದು ರಂಗನಾಥ್ ನಿಧನರಾದದ್ದು ಕೂಡಾ ಆಕಸ್ಮಿಕವಾಗಿ. ಸ್ನೇಹಿತರಿಂದ 'ರಂಗಣ್ಣ' ಎಂದು ಕರೆಸಿಕೊಳ್ಳುತ್ತಿದ್ದ ಈ ಸಜ್ಜನ

'ಸಂಕೇತ್' ತಂಡದ ಸದಸ್ಯರಾಗಿದ್ದರು. ಎಲೆಮರೆಯ ಕಾಯಿಯಂತೆ ಇರಲು ಬಯಸುತ್ತಿದ್ದ ರಂಗನಾಥ್, ಸುನೀಲ್‌ಕುಮಾರ್ ದೇಸಾಯಿಯ 'ನಿಷ್ಕರ್ಷ' ಚಿತ್ರದ ಕಥೆ ಬರೆದಿದ್ದರು. 'ನಮ್ಮೂರ ಮಂದಾರ ಹೂವೇ' ಚಿತ್ರದ ಹಾಸ್ಯ ದೃಶ್ಯಗಳು ಕೂಡ ಇವರದೇ ಸೃಷ್ಟಿಯಾಗಿತ್ತು. 'ನನ್ನ ಯೋಜನೆಗಳ ಹಿಂದಿನ ಮಿದುಳು ರಂಗನಾಥ್ ಆಗಿದ್ದರು' ಎಂದು ದೇಸಾಯಿ ಹೇಳಿದ ಮಾತು ಪರೋಕ್ಷವಾಗಿ ರಂಗನಾಥ್ ಅವರಿಗಿದ್ದ ಪ್ರತಿಭೆಯನ್ನು ಸಮರ್ಥಿಸುತ್ತದೆ. ಹಂಚಿಕಾ ಕಚೇರಿಯೊಂದರ ಮೆಟ್ಟಿಲಿಳಿಯುತ್ತಿದ್ದಾಗ ಹೃದಯಾಘಾತಕ್ಕೀಡಾದ ರಂಗನಾಥ್ ಸಾಧನೆಯ ಹಾದಿಯಲ್ಲಿದ್ದಾಗಲೇ ಕಣ್ಮರೆಯಾದ ಪ್ರತಿಭೆ.

ಮಿಂಚಿದಷ್ಟೇ ಬೇಗ ಕಣ್ಮರೆಯಾದ ಮತ್ತೊಬ್ಬ ಉತ್ತಮ ಕಲಾವಿದೆ ಸಿಲ್ಕ್‌ಸ್ಮಿತಾ. ೧೯೯೬ರ ಸೆಪ್ಟೆಂಬರ್ ೨೩ ರಂದು ಮದರಾಸಿನ ತಮ್ಮ ಮನೆಯಲ್ಲಿ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡರು. ದಕ್ಷಿಣ ಭಾರತದ ನಾಲ್ಕು ಭಾಷೆಗಳು ಮತ್ತು ಹಿಂದಿಯೂ ಸೇರಿದಂತೆ ಸುಮಾರು ೩೫೦ ಚಿತ್ರಗಳಲ್ಲಿ ಇವರು ಅಭಿನಯಿಸಿದ್ದರು. ಎಂಟು ವರ್ಷಗಳ ಕಾಲ ಚಿತ್ರರಂಗವನ್ನು ಆಳಿ ವರ್ಚಸ್ವಿ ನೃತ್ಯಗಾರ್ತಿ ಎನಿಸಿಕೊಂಡಿದ್ದರು. ಒಂದೆರಡು ಚಿತ್ರಗಳನ್ನು ನಿರ್ಮಿಸಿ ಆರ್ಥಿಕವಾಗಿ ತೊಂದರೆಗೆ ಒಳಗಾಗಿದ್ದ ಸಿಲ್ಕ್ ಸ್ಮಿತಾ ಸಾಯುವಾಗ ಬರೆದಿಟ್ಟಿದ್ದ ಪತ್ರದಲ್ಲಿ ಈ ವಾಕ್ಯವಿತ್ತು : ''ಸಾಲದಲ್ಲಿ ಮುಳುಗಿರುವ ನನಗೆ ಬದುಕೇ ಬೇಡವಾಗಿದೆ. ಅನೇಕರು ನನ್ನಿಂದ ಪ್ರಯೋಜನ ಪಡೆದರು. ಆದರೆ ಯಾರಿಂದಲೂ ನನಗೆ ಪ್ರೀತಿ, ಸಹಾನುಭೂತಿ ದೊರೆಯಲಿಲ್ಲ.''

೧೯೯೭ರ ಜನವರಿ ಎರಡನೆಯ ವಾರ ರಮಾದೇವಿಯವರದು ಸಹಜ ಸಾವು. 'ಸತ್ಯ ಹರಿಶ್ಚಂದ್ರ', 'ಕನ್ಯಾದಾನ', 'ಬೆಟ್ಟದ ಕಳ್ಳ', 'ಆದರ್ಶ ಸತಿ', 'ಅಮರ ಶಿಲ್ಪಿ ಜಕಣಾಚಾರಿ'ಯಂಥ ಕನ್ನಡ ಚಿತ್ರಗಳು ಸೇರಿದಂತೆ ದಕ್ಷಿಣ ಭಾಷೆಗಳ ೩೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಇವರು ಅಭಿನಯಿಸಿದ್ದರು. ಅತ್ತೆ, ಗಯ್ಯಾಳಿ, ಘಟವಾಣಿ ಪಾತ್ರಗಳಿಗೆ ಒಂದು ಮಾದರಿಯನ್ನೇ ಸೃಷ್ಟಿಸಿದ್ದವರು ರಮಾದೇವಿ.

ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಧಿಕಾರಿ ಆಗಿದ್ದು, ಅಭಿನಯದಲ್ಲಿ ಅಪಾರ ಆಸಕ್ತಿ ಇಟ್ಟುಕೊಂಡಿದ್ದ ಎಲ್.ಎಸ್.ಸುಧೀಂದ್ರ ೧೯೯೭ರ ಜನವರಿ ಎರಡನೆಯ ವಾರ ತೀರಿಕೊಂಡರು. ಹವ್ಯಾಸಿ ರಂಗಭೂಮಿಯಲ್ಲಿ ಪ್ರಸಿದ್ಧವಾಗಿದ್ದ ಗುಳ್ಳೇನರಿ, ಉದ್ಧವ, ಸಿಕ್ಕು ನಾಟಕಗಳಲ್ಲಿ ಅಭಿನಯಿಸಿದ್ದರು. 'ಅಜಗಜಾಂತರ', 'ಕಾಡಿನ ಬೆಂಕಿ', 'ಕೊಟ್ರೇಶಿ ಕನಸು' ಸೇರಿದಂತೆ ಕನ್ನಡದ ೨೦ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿದ್ದ ಸುಧೀಂದ್ರ ಹಾಸ್ಯದೃಶ್ಯಗಳ ಅಭಿನಯದಲ್ಲಿ ಅವರದೇ ಶೈಲಿಯೊಂದನ್ನು ಬಿಟ್ಟುಹೋಗಿದ್ದಾರೆ.

೧೯೯೭ರ ಜನವರಿಯಲ್ಲಿ ಚಿತ್ರರಂಗದ ಚಟುವಟಿಕೆಗಳು ನಡೆಯುತ್ತಿದ್ದುದು ಪೊಲೀಸರು ಕೊಟ್ಟ ಗಂಭೀರ ಎಚ್ಚರಿಕೆಯ ನಡುವೆ. ಈ ಅವಧಿಯಲ್ಲಿ ಏನಿಲ್ಲವೆಂದರೂ ಪೊಲೀಸ್ ಇನ್‌ಸ್ಪೆಕ್ಟರ್ ಪ್ರಧಾನವಾದ ಸುಮಾರು ೨೦ ಚಿತ್ರಗಳು ನಿರ್ಮಾಣದ ವಿವಿಧ ಹಂತಗಳಲ್ಲಿದ್ದವು. ಇನ್ನಷ್ಟು ಚಿತ್ರಗಳ ಯೋಜನೆಗಳು ನಟ ದೇವರಾಜ್, ಸಾಯಿಕುಮಾರ್ ಅವರ ಬಿಡುವಿಗಾಗಿ ಕಾದು ಕುಳಿತಿದ್ದವು. ನಗರದ ಯಾವ ಗೋಡೆಗಳ ಮೇಲೆ ನೋಡಿದರೂ ಇನ್‌ಸ್ಪೆಕ್ಟರ್ ನಾಯಕನಾಗಿರುವ ಪೋಸ್ಟರ್‌ಗಳು ರಾರಾಜಿಸುತ್ತಿದ್ದವು. ಈ ಅವಧಿಯ ನಿರ್ಮಾಪಕ, ನಿರ್ದೇಶಕರ 'ಪೊಲೀಸ್ ಸನ್ನಿ'ಯ ತೀವ್ರತೆಯನ್ನು ಮನವರಿಕೆ ಮಾಡಿಕೊಳ್ಳಬೇಕಾದರೆ ಅಂಥ ಪಾತ್ರಗಳನ್ನು ನಿರ್ವಹಿಸುತ್ತಿದ್ದ ದೇವರಾಜ್ ಮಾತೊಂದನ್ನು ಉಲ್ಲೇಖಿಸುವುದು ಸೂಕ್ತ. ಅವರು ಸಂದರ್ಶನವೊಂದರಲ್ಲಿ ನೋವಿನಿಂದ ಈ ಮಾತನ್ನು ಹೇಳಿದ್ದರು : ''ಪ್ರತಿ ಚಿತ್ರದಲ್ಲೂ ಪೊಲೀಸ್ ಪಾತ್ರ ಮಾಡುತ್ತಾ ಮಾಡುತ್ತಾ ಯಾವ ಚಿತ್ರದಲ್ಲಿ ನಾನು ನಟಿಸುತ್ತಿದ್ದೇನೆ ಎಂದು ನನಗೇ ಮರೆತು ಹೋಗಿದೆ.''

ಇನ್‌ಸ್ಪೆಕ್ಟರ್ ಪಾತ್ರದ ನಿರೂಪಣೆಯಲ್ಲಿ ನಾಯಕ, ದ್ವಿತೀಯ ನಾಯಕನ ಪಾತ್ರದ ಮಟ್ಟಿಗೆ ಎರಡು ರೀತಿಗಳನ್ನು ಅನುಸರಿಸಲಾಗುತ್ತಿತ್ತು. ಒಬ್ಬರು ದುಷ್ಟ, ಭ್ರಷ್ಟ, ಸ್ತ್ರೀ ಲಂಪಟನಾದರೆ, ಇನ್ನೊಬ್ಬ ದಕ್ಷ, ಪ್ರಾಮಾಣಿಕ, ಏಕಪತ್ನಿವ್ರತಸ್ಥನಾಗಿರುತ್ತಿದ್ದ. ಇವೆರಡು ರೀತಿಯನ್ನು ಹೊರತು ಪಡಿಸಿದರೆ ಇನ್‌ಸ್ಪೆಕ್ಟರ್‌ಗಿಂತ ಕೆಳಗಿನ ಹಂತದ ದಫೇದಾರ್, ಪೇದೆಗಳು, ಬಫೂನ್‌ಗಳಾಗಿರುತ್ತಿದ್ದರು. ಕೆಲವಾರು ವರ್ಷಗಳಿಂದ ಈ ಮೂರು ಪ್ರಭೇದಗಳು ಕನ್ನಡ ಚಿತ್ರಗಳಲ್ಲಿ ಖಾಯಂ ಅಂಶಗಳಾಗಿ ವಿಜೃಂಭಿಸುತ್ತಿದ್ದವು. ಇಂಥ ಚಿತ್ರಣಕ್ಕೆ ಸತ್ಯ ಹಾಗೂ ವಾಸ್ತವದ ನೆಲೆಗಟ್ಟಿದ್ದರೂ ಗೆರೆ ಎಳೆದಂಥ ವರ್ಗೀಕರಣ ಸಮಂಜಸತೆ ಪಡೆದುಕೊಂಡಿರಲಿಲ್ಲ. ಹಾಗೆಂದು ಅದಕ್ಕೆ ಆಕ್ಷೇಪಣೆಯನ್ನು ವ್ಯಕ್ತಪಡಿಸುವವರೂ ಇರಲಿಲ್ಲ. ಆದರೆ ೧೯೯೭ ಫೆಬ್ರವರಿ ಎರಡನೆಯ ವಾರ ಕರ್ನಾಟಕ ಪೊಲೀಸ್ ಸಂಘ ಒಂದು ಪತ್ರಿಕಾಗೋಷ್ಠಿಯನ್ನು ಕರೆಯಿತು. ಅಲ್ಲಿ ಸಂಘದ ಅಧ್ಯಕ್ಷರಾದ ಸಿ.ಎ.ಆರ್. (ದಕ್ಷಿಣ) ಡಿ.ಸಿ.ಪಿ. ಎಸ್.ಮುನಿಸ್ವಾಮಿ ಮತ್ತಿತರ ಪದಾಧಿಕಾರಿಗಳು ಚಲನಚಿತ್ರಗಳಲ್ಲಿ ಪೊಲೀಸರನ್ನು ಅವಹೇಳನ ಮಾಡುತ್ತಿರುವುದು ಹೆಚ್ಚುತ್ತಿರುವುದನ್ನು ಖಂಡಿಸಿದರು. ''ಪೊಲೀಸ್ ಒಂದು ಶಿಸ್ತು ಪಡೆ. ಆದರೆ ಚಿತ್ರಗಳಲ್ಲಿ ಅವರನ್ನು ಹಾಸ್ಯಾಸ್ಪದವಾಗಿ ತೋರಿಸಲಾಗುತ್ತದೆ. ಇದರಿಂದಾಗಿ ಚಲನಚಿತ್ರಗಳನ್ನು ವೀಕ್ಷಿಸುವವರ ಮೇಲೆ, ಅದರಲ್ಲೂ ಮಕ್ಕಳ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಉಂಟಾಗುತ್ತದೆ. ಇದನ್ನು ನಿಲ್ಲಿಸದಿದ್ದರೆ ಸೆನ್ಸಾರ್ ಮಂಡಳಿಗೆ ಪತ್ರ ಬರೆಯುತ್ತೇವೆ. ಇನ್ನು ಮುಂದೆ ಹಾಗೆ ಅವಹೇಳನ ಇರುವ ಚಿತ್ರಗಳ ನಿರ್ಮಾಪಕರ ವಿರುದ್ಧ ಕ್ರಮ ಕೈಗೊಳ್ಳುತ್ತೇವೆ'' ಎಂದು ನಿರ್ಮಾಪಕರನ್ನು ಎಚ್ಚರಿಸಿದರು. ಆದರೆ ಅದು ಒಂದು ಪತ್ರಿಕಾಗೋಷ್ಠಿಯಾಗಿ ಮುಕ್ತಾಯವಾಯಿತೇ ವಿನಾ ಅದರ ಮುಂದುವರಿಕೆಯಾಗಿ ಪೊಲೀಸ್ ಸಂಘದಿಂದ ಮತ್ತೆ ಯಾವ ಚಟುವಟಿಕೆಯೂ ನಡೆಯಲಿಲ್ಲ.

ಅಪರಾಧಗಳು ಹೆಚ್ಚುತ್ತಿದ್ದ ಸಮಾಜದಲ್ಲಿ ಪೊಲೀಸ್ ಇಲಾಖೆ ಪಡೆದುಕೊಳ್ಳುತ್ತಿದ್ದ ಮಹತ್ವವನ್ನು ಚಲನಚಿತ್ರಗಳು ವಿಚಿತ್ರವಾಗಿ ವಿಜೃಂಭಿಸುತ್ತಿದ್ದ ದಿನಗಳಲ್ಲಿ ಇನ್ನೊಂದು ಬೆಳವಣಿಗೆಯಾಯಿತು. ಅದು ಇನ್‌ಸ್ಪೆಕ್ಟರ್ ಪಾತ್ರಗಳಿಗೆ ಕೊರತೆ ಉಂಟಾಗಿ ಅಕ್ಕಪಕ್ಕದ ರಾಜ್ಯಗಳಿಂದ ಅಲ್ಲಿಯ ಎರಡು, ಮೂರನೆಯ ಹಂತದ ಕಲಾವಿದರನ್ನು ಕರೆತಂದದ್ದು. ಈ ಬೆಳವಣಿಗೆ ಹಿಂದೆ ಪರಭಾಷೆಯ ಡಬ್ಬಿಂಗ್ ಹಕ್ಕುಗಳಿಂದ ಬರಬಹುದಾದ ಲಾಭದ ಲೆಕ್ಕಾಚಾರವಿದ್ದರೂ ಉತ್ತಮ ಮೈಕಟ್ಟು, ವರ್ಚಸ್ಸನ್ನು ಉಳ್ಳ ಕಲಾವಿದರ ಸಂಖ್ಯೆ



(ಚಿತ್ರ ೯೪) 'ರಂಗೇನ ಹಳ್ಳಿಯಾಗೆ ರಂಗಾದ ರಂಗೇಗೌಡ' ಚಿತ್ರದಲ್ಲಿ ಅಂಬರೀಷ್

ಕನ್ನಡದಲ್ಲಿ ಕಡಿಮೆ ಇದ್ದುದು ಒಂದು ಕಾರಣ. ಹೀಗೆ ಅನಿವಾರ್ಯ ಮತ್ತು ಲಾಭದ ಕಾರಣಗಳು ೧೯೯೫ ರಿಂದ ೯೮ ರವರೆಗೆ ನಾಲ್ಕು ವರ್ಷ ಕಾಲ ಪರಭಾಷಾ ಕಲಾವಿದರನ್ನು ಕಾಣುವಂತಾಯಿತು. ಹೀಗೆ ಬಂದವರಲ್ಲಿ ಸುಮನ್, ಪುನೀತ್ ಇಸ್ಸಾರ್, ಅರುಣ್ ಪಾಂಡ್ಯನ್, ರಘುವರನ್, ರಾಜಕಮಲ್, ದೇವನ್, ಮನ್ಸೂರ್ ಆಲಿಖಾನ್, ನೆಪೋಲಿಯನ್, ನಾಜರ್, ನಿಳಲ್‌ಗಳ್ ರವಿ, ಪಂಕಜ್ ಧೀರ್, ಗುಲ್ಷನ್ ಗ್ರೋವರ್ ಮುಖ್ಯರು. ಇವರೆಲ್ಲರೂ ಅಭಿನಯಿಸುತ್ತಿದ್ದ ಚಿತ್ರಗಳು ಭಾರಿ ಯಶಸ್ಸನ್ನು ಕಾಣದಿದ್ದರೂ 'ಅಲ್ಲಿಗಲ್ಲಿಗೆ' ಅನ್ನುವಂತೆ ಚಲಾವಣೆಯಲ್ಲಿದ್ದು, ಕೇವಲ ಸುದ್ದಿ ಮಾಡುವುದರಲ್ಲಷ್ಟೇ ಗಮನ ಸೆಳೆದಿವೆ. ಇವನ್ನು ಹೊರತುಪಡಿಸಿದರೆ ೭೨ ಚಿತ್ರಗಳನ್ನು ಕಂಡ ೧೯೯೭ ರಲ್ಲಿ ಮುಖ್ಯವೆನಿಸುವಂತಿದ್ದುದು ಆರೇಳು ಚಿತ್ರಗಳು.

೧೯೯೭ ರಲ್ಲಿ ಭ್ರಷ್ಟತೆ ಎಲ್ಲೆಡೆ ಲಜ್ಜೆ ಇಲ್ಲದಂತೆ ವಿಹರಿಸಿತು. ಪಿ.ವಿ.ನರಸಿಂಹರಾವ್, ಜಯಲಲಿತಾ ಮೊದಲಾದ ಪ್ರಮುಖ ರಾಜಕಾರಣಿ, ಸಚಿವರುಗಳ ಮೇಲೆ ಆಪಾದನೆಗಳು ಬಂದವು. ಗುಲ್ಷನ್ ಕುಮಾರ್ ಹತ್ಯೆ ದೊಡ್ಡ ಆತಂಕ ಸೃಷ್ಟಿಸಿತು. ಜೊತೆಗೇ ನದೀಮ್ ಪ್ರಕರಣ ಭೂಗತ ದೊರೆಗಳು ತೀರಾ ನೇರವಾಗೇ ಸಮರಕ್ಕಿಳಿದದ್ದು ವ್ಯಕ್ತವಾಗುವಂತಿತ್ತು. ಇವೆಲ್ಲಾ ಮುಂದೆ ಚಿತ್ರಗಳಿಗೆ ಸ್ಫೂರ್ತಿಯೋ ಅಥವಾ ನೇರ ಕಥೆಗಳೋ ಆಗಿ ತೆರೆಕಂಡವು. ಮುಂಬೈ ಚಿತ್ರರಂಗವನ್ನು ಭೂಗತ ದೊರೆಗಳು ನಿಯಂತ್ರಿಸುತ್ತಿದ್ದುದು ಸ್ಪಷ್ಟವಾಯಿತು. ಕನ್ನಡ ಚಿತ್ರರಂಗ ಕೂಡಾ ಅಂಥ ಹಾದಿಯತ್ತ ನಡೆಯುವ ಕುತೂಹಲ ತೋರಿಸಿತ್ತು.

ಈಶ್ವರಿ ಪ್ರೊಡಕ್ಷನ್ಸ್ ಲಾಂಛನದಡಿ ರವಿಚಂದ್ರನ್ ನಿರ್ದೇಶಿಸಿ, ನಾಯಕನಟನಾಗಿ ನಟಿಸಿದ್ದ ಚಿತ್ರ 'ಕಲಾವಿದ'. ರವಿಚಂದ್ರನ್ ಚಿತ್ರವೆಂದ ಮೇಲೆ ಅದ್ಧೂರಿತನ, ಸೆಟ್‌ಗಳು, ಸಂಗೀತ, ಹಾಡು ಚೆನ್ನಾಗಿಯೇ ಇರುತ್ತವೆ. ಇವೆಲ್ಲವೂ ಇದ್ದರೂ ಚಿತ್ರಕಥೆ ಬಲವಾಗಿರದ ಕಾರಣ ಕೆಲವೊಮ್ಮೆ ಚಿತ್ರಗಳು ಮುಗ್ಗರಿಸುತ್ತವೆ. ಇಲ್ಲಿ ರವಿಚಂದ್ರನ್‌ಗೆ ನಾಯಕಿಯರಾಗಿ ಚೆಲುವೆಯರಾದ ರೋಜಾ, ಹೀರಾ ಅಭಿನಯಿಸಿದ್ದರು. ಹಂಸಲೇಖ ಸಂಗೀತದಲ್ಲಿ ಹಾಡುಗಳೆಲ್ಲವೂ ಇಂಪಾಗಿದ್ದವು. 'ಪ್ರೇಮ...ಪ್ರೇಮಾ...ಬಾರೆ ಪ್ರೇಮಾ...' ಹಾಗೂ 'ಓ ನವಿಲೇ ಹೆಣ್ಣವಿಲೇ...' ಹಾಡುಗಳು ಇಂಪಾಗಿದ್ದು, 'ಹೂವ್ವ ರೋಜಾ ಹೂವ್ವ...' ಜನಪ್ರಿಯವಾಯಿತು. ಚಿತ್ರಕಲಾ ಪರಿಷತ್ತಿನಲ್ಲಿ ಪೈಂಟಿಂಗ್‌ಗಳ ನಡುವೆ ಚಿತ್ರೀಕರಿಸಿದ್ದು ಮತ್ತು ಅಭಿಮಾನ್ ಸ್ಟುಡಿಯೋದಲ್ಲಿ ಇಸ್ಮಾಯಿಲ್ ಹಾಕಿದ್ದ ಮನೆಯ ಸೆಟ್ ಸುಂದರವಾಗಿತ್ತು. ಇತರರು ಮತ್ತೆ ಮತ್ತೆ ಬಂದು ನೋಡುವಷ್ಟು ಚಂದವಾದ ಸೆಟ್ ಅದು. ಅಭಿಮಾನ್ ಸ್ಟುಡಿಯೋದಲ್ಲಿ ಹಾಕುವ ಇಂಥ ಸೆಟ್‌ಗಳನ್ನು ಸಣ್ಣಪುಟ್ಟ ಬದಲಾವಣೆಯೊಂದಿಗೆ ಇತರರಿಗೂ ಬಳಸಲು ಅನುಮತಿ ಇತ್ತು. ಈ ಸಲುವಾಗಿ ರವಿಚಂದ್ರನ್ ಒಂದು ಒಪ್ಪಂದ ಮಾಡಿಕೊಂಡಿದ್ದರು. ಎಲ್ಲವೂ ಸರಿಯಾಗಿ ನಡೆದಿದ್ದರೆ ಉದ್ಯಮಕ್ಕೆ ಅದೊಂದು ವರದಾನವೇ ಆಗಬಹುದಿತ್ತು. ಅಭಿಮಾನ್ ಸ್ಟುಡಿಯೋಗೂ ನೆರವಾಗುತ್ತಿತ್ತು. ಆದರೆ ಹಾಗಾಗಲಿಲ್ಲ. ಈ ಚಿತ್ರದ ಒಂದು ಸನ್ನಿವೇಶದಲ್ಲಿ ತಾಯಿಯನ್ನು ನೋಡಲು ನಾಯಕ-ನಾಯಕಿ ಬರುತ್ತಾರೆ. ತಾಯಿಯ ಪಾತ್ರದಲ್ಲಿ ಉಮಾಶ್ರೀ. ಪರಿಸರ, ಪ್ರಾಣಿ-ಪಕ್ಷಿಗಳಲ್ಲಿ ಒಲವಿದ್ದಾಕೆ. ಆ ಪರಿಸರವನ್ನು ನಿರ್ಮಿಸಿದ ರೀತಿ, ಚಿತ್ರಿಕೆಗಳ ಸೊಗಸು ಕಾವ್ಯಮಯವಾಗಿತ್ತು. ಬಹುಕಾಲ ನೆನಪಿನಲ್ಲಿ ಉಳಿಯುವಂತಿತ್ತು. ರವಿಚಂದ್ರನ್ ಸ್ವತಂತ್ರವಾಗಿ ಯೋಚಿಸಿದ್ದ ಕಥೆ. ಪೈಂಟಿಂಗ್‌ನಂಥ ಸೂಕ್ಷ್ಮ ಕಲೆಯ ಸುತ್ತ ಹೆಣೆಯುವಾಗ ಸುಲಭವಾಗಿ ಒಪ್ಪಿಸಲಾಗುವುದಿಲ್ಲ. ಛಾಯಾಗ್ರಹಣದಲ್ಲಿ ಕೆಲವು ಪ್ರಯೋಗ ಮಾಡಲಾಗಿತ್ತು. ಇಲ್ಲಿಯೂ ಇತ್ತ ಕಲೆಯ ಕುರಿತ ಚರ್ಚೆಯೂ ಆಗದೆ, ಅತ್ತ ಕಥಾನಾಯಕನ ಕಥೆಯೂ ಆಗದೆ ತಾಳ ತಪ್ಪಿದ್ದರಿಂದಾಗಿ ಚಿತ್ರ ಸೋತಿತು.

'ಜಿಬೀ ಹೆಂಡ್ತಿ' ಚಿತ್ರದ ಜನಪ್ರಿಯ ಗೀತೆಯ ಮೊದಲ ಸಾಲೇ 'ರಂಗೇನ ಹಳ್ಳಿಯಾಗೆ ರಂಗಾದ ರಂಗೇಗೌಡ' ಚಿತ್ರದ ಶೀರ್ಷಿಕೆಗೆ ಸ್ಫೂರ್ತಿ. ವಿ.ಉಮಾಕಾಂತ್ ನಿರ್ದೇಶನದಲ್ಲಿ ಶಾಂತ ನಿರ್ಮಿಸಿದ್ದರು. ಅಂಬರೀಷ್, ರಮೇಶ್, ಅಶ್ವಿನಿ ಭಾವೆ, ಭವ್ಯಶ್ರೀ ರೈ ಮುಖ್ಯ ಪಾತ್ರದಲ್ಲಿದ್ದರು. ಅಂಬರೀಷ್‌ಗೆ ಹಿಂದಿನ ಎಲ್ಲಾ ಚಿತ್ರಗಳಿಗಿಂತ ಭಿನ್ನವೆನಿಸುವ ವಸ್ತ್ರವಿನ್ಯಾಸ ಈ ಚಿತ್ರದಲ್ಲಿತ್ತು. ಪ್ರಥಮಾರ್ಧ ಪೂರಾ ಈ ವೇಷದಲ್ಲೇ ಅವರು ಮಿಂಚಿದರು. ರಮೇಶ್‌ಗೆ 'ಪಟ್ಟಣಕ್ಕೆ ಬಂದ ಗುಬ್ಬಚ್ಚಿ...' ಹಾಡಿನಲ್ಲಿ ಸ್ತ್ರೀವೇಷದಲ್ಲಿ ನೈಜ ಹೆಣ್ಣಿನ ಗಟಪ್ ಇತ್ತು. ಅಷ್ಟೇ ಸರಾಗವಾಗಿ ಸೀರೆ ಉಟ್ಟು ನೃತ್ಯ ಸನ್ನಿವೇಶದಲ್ಲೂ ಭಾಗವಹಿಸಿ ಗಮನ ಸೆಳೆದಿದ್ದರು. ತಮಿಳಿನಲ್ಲಿ ಕಮಲಹಾಸನ್ ಇಂಥ ಸ್ತ್ರೀ ವೇಷವನ್ನು ಇಡೀ ಚಿತ್ರಕ್ಕೇ ಕೇಂದ್ರವಾಗಿ ಬಳಸಿಕೊಳ್ಳುತ್ತಾರೆ. ನಮ್ಮಲ್ಲಿ ಪ್ರಯೋಗಗಳು ಕೇವಲ ತಮಾಷೆಯ ತುಣುಕಾಗಿ ಬಂದು ಹೋಗುತ್ತವೆ. ನಿರ್ದೇಶಕರು ಚಿತ್ರಕಥೆಯನ್ನು ಉತ್ತಮವಾಗಿ ರಚಿಸಿದ್ದರು. ಅದೇ ಚಿತ್ರದ ಗೆಲುವಿಗೂ ಕಾರಣವಾಯಿತು.

ರಾಮಾಲಯ ಫಿಲಂಸ್ ಲಾಂಛನದಡಿ ಪಾರಸ್‌ಜೈನ್ ನಿರ್ಮಿಸಿ, ಮಂಜ್ಜಿಕೃಷ್ಣಪ್ರಸಾದ್ ನಿರ್ದೇಶಿಸಿದ್ದ ತಮಿಳಿನ 'ಪೂವೇ ಉನಕ್ಕಾಗ' ಚಿತ್ರದ ಪುನರವತರಣಿಕೆ 'ಈ ಹೃದಯ ನಿನಗಾಗಿ'. ಕುಮಾರ್ ಗೋವಿಂದ್, ಅರ್ಚನ, ರಸಿಕ ಅಭಿನಯವಿತ್ತು. ತಮಿಳಿನ ಹಾಸ್ಯನಟ ತಾಯ್‌ನಾಗೇಶ್ ಚಿತ್ರದ ಒಂದು ಪಾತ್ರದಲ್ಲಿದ್ದರು. ಶಿವರಾಜ್ ಕುಮಾರ್ ಒಂದು ಹಾಡಿನಲ್ಲಿ ಗೌರವ ಪಾತ್ರದಲ್ಲಿ ಕಾಣಿಸಿಕೊಂಡಿದ್ದಾರೆ. ವಿಕ್ರಮನ್ ಅವರ ಕಥೆ ಚೆನ್ನಾಗಿತ್ತು. ಭಂಗೀರಂಗ ಬರೆದ ಕನ್ನಡ ಸಂಭಾಷಣೆ ಉತ್ತಮವಾಗಿತ್ತು. ಹಾಸ್ಯ ಸನ್ನಿವೇಶಗಳಲ್ಲಿ ಟೆನ್ನಿಸ್ ಕೃಷ್ಣ ಅಭಿನಯಕ್ಕೂ ಅಡ್ಡಿಯಿಲ್ಲ. ವಿ.ಮನೋಹರ್ ಸಂಗೀತದಲ್ಲಿ ಹಾಡುಗಳೂ ಚೆನ್ನಾಗಿದ್ದವು. ಒಂದು ಸಿನಿಮಾ ಎಲ್ಲಾ ಕೋನಗಳಿಂದಲೂ ಚೆನ್ನಾಗಿದ್ದೂ ಕೂಡ ಸೋತದ್ದು ಸದಭಿರುಚಿಯ ಚಿತ್ರನಿರ್ಮಾಪಕರಿಗೆ ಹಿಂಜರಿಕೆಯುಂಟಾದದ್ದು ನಿಜ. 'ನಲಿ ನಲಿ ನಲಿವಿನ ವೇಳೆ...' ಹಾಡು ಜನಪ್ರಿಯವಾಯಿತು. ಎರಡು ಬೇರ ಬೇರೆ ಧರ್ಮಗಳ ಯುವಕ-ಯುವತಿಯರ ಪ್ರೇಮ, ಅದರಿಂದ ಬೇರ್ಪಟ್ಟ ಸ್ನೇಹ, ಎಲ್ಲಕ್ಕಿಂತ ಸ್ನೇಹ, ಮನುಷ್ಯತ್ವವೇ ದೊಡ್ಡದು ಎಂದು ಕೊನೆಯಲ್ಲಿ ಎರಡೂ ಕಡೆಯವರೂ ಅರಿತು ಒಂದಾಗುವ ಕಥೆ ಬಹಳ ನಾಜೂಕಾಗಿ ಯಾವ ಧರ್ಮಕ್ಕೂ ಚ್ಯುತಿ ಬಾರದಂತೆ ಚಿತ್ರಿಸಿದ್ದರು.

೧೯೯೭ರ ಯಶಸ್ವಿ ಚಿತ್ರಗಳೆನಿಸಿದ 'ಅಮೃತ ವರ್ಷಿಣಿ', 'ಅಮೆರಿಕಾ ಅಮೆರಿಕಾ' ಬೇರೆ ಬೇರೆ ವಾತಾವರಣದ ಹಿನ್ನೆಲೆಯಲ್ಲಿ ಭಿನ್ನವಾಗಿ ನಿರೂಪಿಸಲಾಗಿದ್ದ ಚಿತ್ರಗಳು. ಒಂದು ಅಮೆರಿಕಾದ ಸುಂದರ ನಗರಗಳಲ್ಲಿ ಚಿತ್ರೀಕರಣ ನಡೆಸಿ ಶ್ರೀಮಂತ ಹಿನ್ನೆಲೆಯಲ್ಲಿದ್ದರೆ, ಇನ್ನೊಂದು ಅನೈತಿಕವೆನ್ನಬಹುದಾದ ಆಸೆ, ಭಾವನೆಗಳ ತೀವ್ರತೆ ತರಲು ಊಟಿ, ಕೊಡೈಕೆನಾಲ್ ಮೋಹಕ ಪರಿಸರದಲ್ಲಿ ಚಿತ್ರಿಸಲಾಗಿತ್ತು. 'ಅತಿ ಆದರ್ಶ' ಎಂಬಷ್ಟು ಉತ್ಕಟವಾಗಿ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದ ದಂಪತಿಯರ ನಡುವೆ ಗೆಳೆಯನ ಪ್ರವೇಶವಾಗಿ ಕುಟುಂಬವೇ ನಾಶವಾಗುವ ಕಥಾಹಂದರ 'ಅಮೃತ ವರ್ಷಿಣಿ'ಯಲ್ಲಿದೆ. ಚಿತ್ರದ ಖಳನ ಶೈಲಿಯಲ್ಲಿ ರಮೇಶ್ ನಿರ್ವಹಿಸಿರುವ ಪಾತ್ರ ಹಿಂದಿಯ 'ಬಾಜಿಗರ್', 'ಢರ್'ಗಳಲ್ಲಿನ ಶಾರುಖ್ ಖಾನ್ ಪಾತ್ರವನ್ನು ಹೋಲುವಂತಿದ್ದರೂ ರಮೇಶ್ ಶೈಲಿಯಿಂದಾಗಿ ಅದಕ್ಕಿಂತ ಭಿನ್ನವಾಗಿತ್ತು. ಈ ಚಿತ್ರಕ್ಕೆ 'ಇನ್‌ಟ್ರೂಡರ್' ಎಂಬ ಆಂಗ್ಲ ಚಿತ್ರದ ಹೋಲಿಕೆಯೂ ಇದೆ. ಸ್ನೇಹಿತನ ಹೆಂಡತಿಯನ್ನು ಮೋಹಿಸುವ ನಾಯಕನ ಚಿತ್ರವೆಂದು ಟೀಕಿಸಿದವರು ಚಿತ್ರದ ನಿರೂಪಣೆಯನ್ನು ಇಷ್ಟಪಟ್ಟರು. ತಮಿಳಿನ ದೇವಾ ಸಂಗೀತದಲ್ಲಿ ಕನ್ನಡದ ಯುವ ಗೀತರಚನೆಕಾರ ಕಲ್ಯಾಣ್ ರಚಿಸಿದ್ದ ಎರಡು ಹಾಡುಗಳು ಜನಪ್ರಿಯವಾದವು. ಇದರಿಂದಾಗಿ ಕಲ್ಯಾಣ್‌ಗೆ ವಿಪರೀತ ಬೇಡಿಕೆ ಸೃಷ್ಟಿಯಾಯಿತು. ಚಿತ್ರದ ಒಂದು ಮುಖ್ಯಪಾತ್ರದಲ್ಲಿ ರಾಮಕೃಷ್ಣ ನೀಡಿದ್ದ ಮರೆಗುಳಿ, ಗಾಬರಿ ಮನುಷ್ಯನ ಅಭಿನಯ ಒಂದು ಹಂತದಲ್ಲಿ ಗಂಭೀರವೂ, ಜವಾಬ್ದಾರಿಯುತವೂ ಆಗುವ ರೀತಿ ಗಮನಾರ್ಹ. ಕನ್ನಡದ ಇತರ ನಿರ್ದೇಶಕರು ಉಪಯೋಗಿಸಿಕೊಳ್ಳದಿದ್ದ ರಾಮಕೃಷ್ಣ ಅವರ ಪ್ರತಿಭೆಯನ್ನು ಆ ದಿನಗಳಲ್ಲಿ ಸಮರ್ಥವಾಗಿ ಬಳಸಿಕೊಂಡವರೆಂದರೆ ದಿನೇಶ್ ಬಾಬು. ಇವರೊಂದಿಗೆ ಕೆ.ಬಾಲಚಂದರ್, ಪುಟ್ಟಣ್ಣ ಕಣಗಾಲ್ ಅವರಿಗೂ ರಾಮಕೃಷ್ಣ ಅಚ್ಚುಮೆಚ್ಚಿನ ನಟರಾಗಿದ್ದವರು. ೨೫ ವರ್ಷಗಳ ಹಿಂದೆ 'ಬಬ್ರುವಾಹನ' ಚಿತ್ರದ ಕೃಷ್ಣನ ಪಾತ್ರದ ಮೂಲಕ ತೆರೆಗೆ ಬಂದ ಇವರು 'ರಂಗನಾಯಕಿ', 'ಪಡುವಾರಳ್ಳಿ ಪಾಂಡವರು', 'ಮಾನಸ ಸರೋವರ', 'ಋಣಮುಕ್ತಳು', 'ಅಮೃತ ಘಳಿಗೆ', 'ಜೆಂಕಿಯಲ್ಲಿ ಅರಳಿದ ಹೂವು', 'ಮುಗಿಲ ಮಲ್ಲಿಗೆ', 'ಉಷಾ', 'ಒಲವಿನ ಉಡುಗೊರೆ', 'ಚೆಲ್ಲಿದ ರಕ್ತ', 'ನಗಬೇಕಮ್ಮ ನಗಬೇಕು' ಚಿತ್ರಗಳಲ್ಲಿ ತಾವೊಬ್ಬ ಉತ್ತಮ ಕಲಾವಿದ ಎಂಬುದನ್ನು ಸಾಬೀತು ಮಾಡಿದರು. ಆದರೆ ಕನ್ನಡ ಚಿತ್ರರಂಗ ಇವರನ್ನು ಸಮರ್ಪಕವಾಗಿ ಬಳಸಿಕೊಳ್ಳಲಿಲ್ಲ.



(ಚಿತ್ರ ೯೫) 'ಅಮೃತ ವರ್ಷಿಣಿ' ಚಿತ್ರದಲ್ಲಿ ರಾಮಕೃಷ್ಣ, ತಾರಾ ಮತ್ತು ಶರತ್‌ಬಾಬು

'ಅಮೃತವರ್ಷಿಣಿ'ಯಲ್ಲಿ ಆದರ್ಶ ದಂಪತಿಯಾಗಿ ಶರತ್ ಬಾಬು, ಸುಹಾಸಿನಿ ಪ್ರಬುದ್ಧ ಅಭಿನಯ ನೀಡಿದ್ದರು. ನಿವೇದಿತಾ ಜೈನ್ ತಮಗೆ ಸಿಕ್ಕ ಪುಟ್ಟ ಪಾತ್ರದಲ್ಲೇ ಲವಲವಿಕೆಯಿಂದ ಅಭಿನಯಿಸಿದ್ದರು. ೧೯೯೬-೯೭ರ ಅತ್ಯುತ್ತಮ ಚಿತ್ರಕಥೆ, ಶಬ್ದಗ್ರಹಣ, ಸಂಕಲನಕ್ಕೆ ಕ್ರಮವಾಗಿ ದಿನೇಶ್ ಬಾಬು, ಮಹೇಂದರ್, ಕೆಂಪರಾಜ್ ರಾಜ್ಯಪ್ರಶಸ್ತಿ ಪಡೆದರು. ದಿನೇಶ್ ಬಾಬು ಕೊಡೈಕೆನಾಲ್ ಪರಿಸರವನ್ನು ಮನೋಹರವಾಗಿ ಚಿತ್ರಿಸಿದ್ದರು.



(ಚಿತ್ರ ೯೬) 'ಅಮೆರಿಕಾ ಅಮೆರಿಕಾ' ಚಿತ್ರದಲ್ಲಿ ರಮೇಶ್, ಅಕ್ಷಯ್ ಆನಂದ್ ಮತ್ತು ಹೇಮಾ

ನಂದಕುಮಾರ್ ನಿರ್ಮಿಸಿದ 'ಅಮೆರಿಕಾ ಅಮೆರಿಕಾ'ದಲ್ಲಿ ದೇಶಪ್ರೇಮದ ಪ್ರಸ್ತಾಪದ ಜೊತೆಗೆ ಆಯುರ್ವೇದದಂಥ ದೇಶಿ ಔಷಧ ಪದ್ಧತಿಯ ಉಪಯುಕ್ತತೆ ಬಗ್ಗೆ ವಿವರಗಳಿದ್ದವು. ಅದರಲ್ಲಿ ವಿದೇಶಿ ಔಷಧಿಗಳಿಗಿಂತ ಆಯುರ್ವೇದ ಶ್ರೇಷ್ಠ ಎಂದು ನಾಯಕ ವಾದಿಸುವ ದೃಶ್ಯಗಳಿದ್ದವು. ಇವು ಚಿತ್ರಮಂದಿರದ ಪ್ರತಿಗಳಲ್ಲಿ ಇರಲಿಲ್ಲ. ಬದಲಿಗೆ ಪ್ರಶಸ್ತಿಗೆ ಕಳುಹಿಸಿದ ಪ್ರತಿಯಲ್ಲಿ ಸೇರಿಸಿ, ಹಾಡುಗಳನ್ನು ತೆಗೆದು ಸಲ್ಲಿಸಲಾಗಿತ್ತು. ಪ್ರೇಮದೊಂದಿಗೆ ಸಾಮಾಜಿಕ ಕಳಕಳಿಯೂ ಪ್ರಧಾನವಾಗಿ ಇದ್ದುದರಿಂದ ಚಿತ್ರಕ್ಕೆ ಕೇಂದ್ರದ ೧೯೯೭ರ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂದು ಪ್ರಶಸ್ತಿ ಲಭ್ಯವಾಯಿತು. ಚಿತ್ರವು ಬಿಡುಗಡೆಯಾದ ಆರನೇ ವಾರದಲ್ಲೇ ಸಿಕ್ಕಿದ ಈ ಪ್ರಶಸ್ತಿಯಿಂದಾಗಿ ಚಿತ್ರಕ್ಕೆ ಪ್ರೇಕ್ಷಕರ ಸಂಖ್ಯೆ ಹೆಚ್ಚಿತು. ಕಥೆಗಿಂತ ಹೆಚ್ಚಾಗಿ ಸ್ಯಾನ್‌ಫ್ರಾನ್ಸಿಸ್ಕೋ, ಕ್ಯಾಲಿಫೋರ್ನಿಯಾ, ಗೋಲ್ಡನ್ ಗೇಟ್ ಬ್ರಿಡ್ಜ್‌ಗಳು, ರಮ್ಯ ದೃಶ್ಯಗಳು ಪ್ರೇಕ್ಷಕರಿಗೆ ಇಷ್ಟವಾದವು. ಚಿತ್ರವು ೧೭೫ನೇ ದಿನದ ಪ್ರದರ್ಶನ ಕಾಣುವ ಹೊತ್ತಿಗೆ ಪದೇ ಪದೇ ಕೇಳಿ ಕೇಳಿ ಹಾಡುಗಳು ಕೂಡ ಜನಪ್ರಿಯವಾದವು. ಅಮೆರಿಕಾದಲ್ಲಿ ವಾಸವಾಗಿರುವ ಭಾರತೀಯ ಮನೋಮೂರ್ತಿಯ ಹೆಸರು ಕನ್ನಡ ಸಂಗೀತ ಲೋಕದಲ್ಲಿ ಚಲಾವಣೆಗೆ ಬಂದಿತು.

ಈ ಚಿತ್ರದ ಉಳಿದ ಕೆಲವು ಉತ್ತಮ ಅಂಶಗಳಲ್ಲಿ ನಿರ್ದೇಶಕ ನಾಗತಿಹಳ್ಳಿಯ ಸಂಭಾಷಣೆ ಕೂಡ ಒಂದು. ಉದಾಹರಣೆ, ಹೋಲಿಕೆಗಳೊಂದಿಗೆ ಕಾವ್ಯಾತ್ಮಕವಾಗಿ, ಭಾವುಕವಾಗಿ ಸಂಭಾಷಣೆ ಬರೆದಿದ್ದರು. ಅನಿವಾಸಿ ಭಾರತೀಯರ ಸಮಸ್ಯೆಗಳನ್ನು ಸಂಭಾಷಣೆಗಳ ಮೂಲಕ ಹಿಡಿದಿಟ್ಟಿದ್ದ ರೀತಿ, ಎರಡು ದೇಶಗಳ ನಡುವಿನ ಸಾಂಸ್ಕೃತಿಕ ಭಿನ್ನತೆಯನ್ನು ಗುರುತಿಸಿದ್ದ ಬಗೆ ವಿಶೇಷವಾಗಿತ್ತು. 'ಉಂಡೂ ಹೋದ ಕೊಂಡೂ ಹೋದ', 'ಬಾ ನಲ್ಲೆ ಮಧುಚಂದ್ರಕೆ' ಚಿತ್ರಗಳಲ್ಲಿ ಅಷ್ಟೇನೂ ಯಶಸ್ಸು ಕಾಣದಿದ್ದ ನಾಗತಿಹಳ್ಳಿ ಚಂದ್ರಶೇಖರ್ 'ಕೊಟ್ರೇಶಿ ಕನಸು'ನಲ್ಲಿ ಕಲಾತ್ಮಕ ಶೈಲಿಯೊಂದಿಗೆ ಗುರುತಿಸಿಕೊಳ್ಳಲು ಪ್ರಯತ್ನಿಸಿದ್ದರು. ಆದರೆ 'ಅಮೆರಿಕಾ ಅಮೆರಿಕಾ' ಅವರನ್ನು ಪ್ರಮುಖವಾಹಿನಿಯ ಮುಖ್ಯ ನಿರ್ದೇಶಕರನ್ನಾಗಿಸಿತು. ಈ ಚಿತ್ರದ ಯಶಸ್ಸಿನೊಂದಿಗೆ ಅವರು ತಮ್ಮ ಕನ್ನಡ ಅಧ್ಯಾಪಕ ವೃತ್ತಿಗೆ ರಾಜೀನಾಮೆ ನೀಡಿ ಚಿತ್ರರಂಗದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರು. ೧೯೯೬-೯೭ರ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ ಮತ್ತು ರಮೇಶ್‌ಗೆ ಅತ್ಯುತ್ತಮ ನಟ, ನಾಗತಿಹಳ್ಳಿಯವರಿಗೆ ಅತ್ಯುತ್ತಮ ಕಥೆಗೆ ಪ್ರಶಸ್ತಿ ಬಂದಿತು.

ಸುಪ್ರೀಂ ಪ್ರೊಡಕ್ಷನ್ಸ್ ಲಾಂಛನದಡಿ ಎಸ್.ನಾರಾಯಣ್ ನಿರ್ದೇಶಿಸಿ, ಕುಮಾರ್ ಗೋವಿಂದ್, ಶಿಲ್ಪ, ಚರಣ್‌ರಾಜ್ ಅಭಿನಯಿಸಿದ ಚಿತ್ರ 'ಕಲ್ಯಾಣಿ'. ಕೆ.ಕಲ್ಯಾಣ್ ಗೀತೆ ರಚಿಸಿ ಸಂಗೀತ ನೀಡಿದ್ದರು. ಚಿತ್ರದ ಹಾಡುಗಳನ್ನು ಕಲ್ಯಾಣಿ ರಾಗದಲ್ಲಿಯೇ ಸಂಯೋಜಿಸಿದ್ದೊಂದು ವಿಶೇಷ. 'ಓಓಓ...ಚಂದನ ಚಂದನ ಕಲ್ಯಾಣಿ...' ಎಂಬ ಹಾಡನ್ನು ರಾಜಕುಮಾರ್ ಹಾಡಿದ್ದರು. ಎಸ್.ಪಿ.ಬಾಲಸುಬ್ರಹ್ಮಣ್ಯಂ, ಚಿತ್ರಾ ಸೇರಿದಂತೆ ರಾಜೇಶ್, ಎಲ್.ಎನ್.ಶಾಸ್ತ್ರಿ, ಮಂಜುಳಾ, ಮಂಗಳ, ಸುಜಾತಾ ದತ್ ಮುಂತಾದ ಕನ್ನಡದ ಗಾಯಕರಿಗೆ ಅವಕಾಶವಿತ್ತು.

ಹೆಚ್.ಎಸ್.ಫಣಿ ರಾಮಚಂದ್ರ ನಿರ್ದೇಶನದ ಚಿತ್ರ 'ಗಣೇಶ ಐ ಲವ್ ಯೂ'. ವಿಷ್ಣುವರ್ಧನ್ ರಚಿಸಿದ್ದ ಕಥೆ. ಜಿ.ಆರ್.ಕೆ.ಕ್ರಿಯೇಷನ್ಸ್ ಲಾಂಛನದಡಿ ಅನಂತ್‌ನಾಗ್, ರವೀಂದ್ರನಾಥ್, ಗುರುರಾಜ್‌ಕುಮಾರ್ (ಸುನಾದ್ ರಾಜ್), ಸಿತಾರಾ ಮುಖ್ಯ ಭೂಮಿಕೆಯಲ್ಲಿದ್ದರು. 'ಮೇಘಮಾಲೆ' ಮುಂತಾದ ಚಿತ್ರಗಳಲ್ಲಿ ಸುನಾದ್‌ರಾಜ್ ಹೆಸರಿನಲ್ಲಿ ನಟಿಸಿದ್ದ ಪಾಪೇಗೌಡರ ಮಗ ಈ ಚಿತ್ರದ ಮೂಲಕ ಗುರುರಾಜ್‌ಕುಮಾರ್ ಎಂದು ಹೆಸರು ಬದಲಾಯಿಸಿಕೊಂಡು ಅಭಿನಯಿಸಿದ್ದರು. ಹಾಸ್ಯಪೂರಿತವಾದ ಈ ಚಿತ್ರ ಓಡಲಿಲ್ಲ. ಗುರುರಾಜ್‌ಕುಮಾರ್, ಸಿತಾರ ಇಬ್ಬರ ಮುಖವನ್ನು ಉಬ್ಬು ಹಲ್ಲು, ಸೋಡಾ ಗಾಜುಗಳನ್ನು ಹಾಕಿ ವಿಕಾರವಾಗಿಸಿದ್ದರು. ಆ ಮಟ್ಟಿಗೆ ಇದು ಪ್ರಯೋಗವೇ ಸರಿ.

'ಎಲ್ಲರಂಥಲ್ಲ ನನ್ನ ಗಂಡ' ಚಿತ್ರದಲ್ಲಿ ಮೊದಲ ಬಾರಿಗೆ ವಿಷ್ಣುವರ್ಧನ್ ಜೊತೆ ಪ್ರೇಮಾ ನಾಯಕಿಯಾಗಿ ಅಭಿನಯಿಸಿದ್ದರು. ಕೆ.ಪ್ರಭಾಕರ್ ನಿರ್ಮಿಸಿ, ಎಸ್.ಉಮೇಶ್ ನಿರ್ದೇಶಿಸಿದ್ದರು. ರಾ.ಪ್ರಕಾಶ್ ತ್ರಿಶೂಲಿ ಅವರ ಚುರುಕಾದ, ತೀಕ್ಷ್ಣವಾದ ಮಾತುಗಳು ಜನರಿಂದ ಚಪ್ಪಾಳೆ ಗಿಟ್ಟಿಸಿದ್ದವು. ವಿಷ್ಣುವರ್ಧನ್ ತಾಯಿ ಪಾತ್ರದಲ್ಲಿ ಉಮಾಶ್ರೀ ನೆನಪಿನಲ್ಲುಳಿಯುತ್ತಾರೆ. ಚಿತ್ರದುದ್ದಕ್ಕೆ ನಾಯಕನ ಬುದ್ಧಿ ಪ್ರದರ್ಶನ, ಒಂದು ರೀತಿಯ ಪ್ರಶ್ನಾವಳಿ ಇತ್ತು. ಆದರೆ ಚಿತ್ರ ಗೆಲ್ಲಲಿಲ್ಲ. ಚಿತ್ರದ ಶೀರ್ಷಿಕೆಯೂ ಪ್ರೇಕ್ಷಕರಿಗೆ ಇಷ್ಟವಾಗಲಿಲ್ಲವೆಂದು ಪ್ರತಿಕ್ರಿಯೆಗಳಿಂದ ಊಹಿಸಬಹುದಾಗಿತ್ತು.

ಶಿವರಾಜ್ ಕುಮಾರ್ ಮುಂಬಯಿ ಹುಡುಗಿ ಸಿಮ್ರಾನ್‌ರೊಂದಿಗೆ ನಟಿಸಿ, ರಾಮು ನಿರ್ಮಿಸಿದ ಚಿತ್ರ 'ಸಿಂಹದಮರಿ'. ಎಸ್.ಎಸ್.ಡೇವಿಡ್, ಕೆಂಪರಾಜ್ ರಚಿಸಿದ್ದ ಕಥೆಗೆ ಚಿತ್ರಕಥೆ ಬರೆದು ನಿರ್ದೇಶಿಸಿದವರು ಓಂ ಪ್ರಕಾಶ್. ರಾಮು ಈ ಚಿತ್ರದ ಮೂಲಕ ಕನ್ನಡಕ್ಕೆ ಎಬಿಸಿಎಲ್ ಸಂಸ್ಥೆಯ 'ತೇರೆ ಮೇರೆ ಸಪ್ನೆ' ಚಿತ್ರದ ನಾಯಕಿಯಾಗಿ ನಟಿಸಿ ಆಕರ್ಷಿಸಿದ್ದ ಸಿಮ್ರಾನ್‌ರನ್ನು ಕರೆತಂದರು. ಜೊತೆಗೆ ತೆಲುಗು ಚಿತ್ರರಂಗದ ಜನಪ್ರಿಯ ನಟ ಕೃಷ್ಣಂ ರಾಜು, ಬಹಳ ದಿನಗಳ ನಂತರ ಅಂಬಿಕಾ ಈ ಚಿತ್ರದಲ್ಲಿ ಅಭಿನಯಿಸಿದರು. ಸಾಕು ತಂದೆಯ ಪಾತ್ರದಲ್ಲಿ ಅವಿನಾಶ್, ಆ್ಯಂಗ್ರಿ ಯಂಗ್‌ಮ್ಯಾನ್' ಆಗಿ ಶಿವರಾಜ್ ಕುಮಾರ್ ಅವರದು ಉತ್ತಮ ಅಭಿನಯ. ಮುಂಬಯಿಯ ಸಾಹಸ ನಿರ್ದೇಶಕ ರಾಮ್‌ಶೆಟ್ಟಿ ಸಾಹಸ ಸಂಯೋಜನೆಯಲ್ಲಿ ಹೊಡೆದಾಟದ ದೃಶ್ಯಗಳು ಅದ್ಭುತವೆಂಬಂತೆ ಮೂಡಿಬಂದಿದ್ದವು. ಹಂಸಲೇಖ ಸಂಗೀತದಲ್ಲಿ 'ದೇಖೋರೆ ದೇಖೋರೆ ಬಾಳೆ



(ಚಿತ್ರ ೯೭) 'ಸಿಂಹದಮರಿ' ಚಿತ್ರದಲ್ಲಿ ಶಿವರಾಜ್ ಕುಮಾರ್ ಮತ್ತು ಸಿಮ್ರಾನ್



(ಚಿತ್ರ ೯೮) 'ನಾಗಮಂಡಲ' ಚಿತ್ರದಲ್ಲಿ ಪ್ರಕಾಶ್ ರೈ

ದಿಂಡು...' ಮತ್ತು 'ನನ್ನ ಕಣ್ಣು ನಿನ್ನ ಕಣ್ಣು....' ಹಾಡುಗಳು ಜನಪ್ರಿಯವಾದವು. ಚಿತ್ರ ೫೦ ದಿನದ ಗಡಿ ದಾಟಿತು.

ಎಂ.ಕೆ.ಶ್ರೀನಿವಾಸಮೂರ್ತಿ ಅಕ್ಷಯ ಎಂಟರ್‌ಪ್ರೈಸಸ್ ಲಾಂಛನದಡಿ ನಿರ್ಮಿಸಿದ ಚಿತ್ರ 'ಆಮ್ಮಾವ್ರ ಗಂಡ'. ಫಣಿ ರಾಮಚಂದ್ರ ನಿರ್ದೇಶನದಲ್ಲಿ ಶಿವರಾಜ್ ಕುಮಾರ್ ಅವರೊಂದಿಗೆ 'ಮೈನೇ ಪ್ಯಾರ್ ಕಿಯಾ' ಖ್ಯಾತಿಯ ಭಾಗ್ಯಶ್ರೀ ನಾಯಕಿಯಾಗಿ ನಟಿಸಿದ್ದರು. ಫಣಿ ರಾಮಚಂದ್ರ ಎಂದಿನ ಚಿತ್ರಗಳಂತೆ ಇದೂ ಹಾಸ್ಯ ಪ್ರಧಾನ. ಅತಿರೇಕವೆನ್ನಿಸುವ ಸನ್ನಿವೇಶಗಳಿದ್ದವು. ಶಿವರಾಜ್ ಅಭಿನಯ ಚೆನ್ನಾಗಿದ್ದರೂ ಪ್ರೇಕ್ಷಕರು ಚಿತ್ರವನ್ನು ಸ್ವೀಕರಿಸಲಿಲ್ಲ. ಸ್ತ್ರೀಸ್ವಾತಂತ್ರ್ಯ ಚಳವಳಿಯನ್ನು ಕಟುವಾದ ವ್ಯಂಗ್ಯದಿಂದ ನೋಡಿದ, ಅಪಕ್ವ ವಿಚಾರಗಳಿದ್ದವು.

ಕನ್ನಡ ಚಿತ್ರರಂಗದಲ್ಲೇ ಮೂರು ಭಾಗಗಳಲ್ಲಿ ತೆರೆಕಂಡ ಚಿತ್ರ 'ಸಾಂಗ್ಲಿಯಾನ' ಮಾತ್ರ. ಮೊದಲೆರಡು ಭಾಗಗಳಲ್ಲಿ ಶಂಕರ್‌ನಾಗ್ ಸಾಂಗ್ಲಿಯಾನನಾಗಿ ನಟಿಸಿದ್ದರೆ, ಪಿ.ನಂಜುಂಡಪ್ಪ ಆ ಎರಡೂ ಚಿತ್ರಗಳನ್ನು ನಿರ್ದೇಶಿಸಿದ್ದರು. ಮೂರನೇ ಭಾಗದಲ್ಲಿ ನಟಿಸಲು ಶಂಕರ್‌ನಾಗ್ ಅವರಾಗಲಿ, ನಿರ್ದೇಶಕ ಪಿ.ನಂಜುಂಡಪ್ಪನವರಾಗಲಿ ಬದುಕಿರಲಿಲ್ಲ. 'ಸಾಂಗ್ಲಿಯಾನ ಭಾಗ-೩' ಚಿತ್ರವನ್ನು ಪಿ.ಕೃಷ್ಣರಾಜ್ ನಿರ್ಮಿಸಿ, ರವೀಂದ್ರನಾಥ್ ನಿರ್ದೇಶಿಸಿದ್ದರು. ಸಾಂಗ್ಲಿಯಾನನಾಗಿ ದೇವರಾಜ್ ಈ ಚಿತ್ರದಲ್ಲಿ ಅಭಿನಯಿಸಿದ್ದರು. ಈ ಮೂರೂ ಸಂದರ್ಭದಲ್ಲಿ ಸಾಂಗ್ಲಿಯಾನ ಅವರೇ ಬಂದು ಶುಭ ಹಾರೈಸಿದ್ದು ಅವರ ಮಾಧ್ಯಮ ಪ್ರೀತಿಗೆ ಸಾಕ್ಷಿ.

೧೯೯೭ ರಲ್ಲಿಯೇ ಐದು ರಾಜ್ಯ ಪ್ರಶಸ್ತಿಗಳನ್ನು ಗಳಿಸಿ ಆರ್ಥಿಕವಾಗಿಯೂ ಯಶಸ್ಸು ಗಳಿಸಿದ ಇನ್ನೊಂದು ಚಿತ್ರ ನಾಗಾಭರಣ ನಿರ್ದೇಶಿಸಿದ 'ನಾಗಮಂಡಲ'. ಗಿರೀಶ್ ಕಾರ್ನಾಡ್ ಅವರ ಇದೇ ಹೆಸರಿನ ನಾಟಕವನ್ನು 'ಸಂಕೇತ್' ತಂಡ ಶಂಕರ್‌ನಾಗ್ ನಾಯಕತ್ವದಲ್ಲಿ ರಂಗದ ಮೇಲೆ ಯಶಸ್ವಿಯಾಗಿ ಪ್ರದರ್ಶಿಸಿತ್ತು. ಇದನ್ನು ತೆರೆಗೆ ತರಲು ಹಲವಾರು ಪ್ರಯತ್ನಗಳಾಗಿದ್ದವಾದರೂ ಅಂತಿಮವಾಗಿ ಅವಕಾಶ ಸಿಕ್ಕಿದ್ದು ನಾಗಾಭರಣರಿಗೆ.

ಜನಪದದಲ್ಲಿ 'ನಾಗರಹಾವು' ಸಂತಾನಾಭಿವೃದ್ಧಿ ಸಂಕೇತವಾಗಿ ಬಳಕೆಯಾಗಿದೆ. ಮುಗ್ಧ ಹುಡುಗಿಯೊಬ್ಬಳು ಪರಿಪೂರ್ಣ ಹೆಣ್ಣಾಗುವ ಹಾದಿಯಲ್ಲಿ ಮದುವೆಯಾದವನೇ ಗಂಡನೇ ? ಅಥವಾ ಬದುಕಿಗೆ ಪರಿಪೂರ್ಣತೆ ತಂದುಕೊಟ್ಟವನು ಗಂಡನೇ ? ಎಂಬ ಪ್ರಶ್ನೆಯನ್ನು ಮುಂದಿಡುವ ಕಥೆಯನ್ನು ಜಾನಪದ ಶೈಲಿಯಲ್ಲಿ ನಿರೂಪಿಸಲಾಗಿದೆ.

ದೊಡ್ಡವಾಡೆಯ ಒಂಟಿ ಮನೆಯಲ್ಲಿ ಒಬ್ಬಂಟಿಯಾಗಿ ಬದುಕುವ ಅಪ್ಪಣ್ಣನಿಗೆ ದೂರದ ಸಂಬಂಧಿ ಕುರುಡವ್ವ ಮಲೆನಾಡ ಹುಡುಗಿ ರಾಣಿಯನ್ನು ಮದುವೆ ಮಾಡಿಸುತ್ತಾಳೆ. ಆಕೆಯ ಮೃದುಸ್ವಭಾವಕ್ಕೂ ಅಪ್ಪಣ್ಣನ ಒರಟು ಗುಣಕ್ಕೂ ತಾಳೆಯಾಗುವುದಿಲ್ಲ. ಅಪ್ಪಣ್ಣ ತನ್ನ ಲೈಂಗಿಕ ತೃಷೆಯನ್ನು ಹಿಂಗಿಸಿಕೊಳ್ಳುವುದಕ್ಕೆ ಊರಿನ ಮನೆಯಲ್ಲಿರುವ ಚೆಲುವಿಯನ್ನು ಆಶ್ರಯಿಸುತ್ತಾನೆ. ಈ ನಡುವೆ ರಾಣಿ ಗರ್ಭಿಣಿಯಾಗುತ್ತಾಳೆ. ತನ್ನ ಸಂಪರ್ಕವಿಲ್ಲದೆಯೇ ಹೆಂಡತಿ ಗರ್ಭಿಣಿಯಾಗಿದ್ದರಿಂದ ಕೆರಳಿದ ಅಪ್ಪಣ್ಣ ಪ್ರಕರಣವನ್ನು ಪಂಚಾಯ್ತಿ ಕಟ್ಟೆಗೆ ಎಳೆಯುತ್ತಾನೆ. ಪಂಚಾಯ್ತಿ ಕಟ್ಟೆಯಲ್ಲಿ ನಾಗದಿವ್ಯಕ್ಕೆ ಒಳಗಾಗಿ ತಾನು ಪತಿವ್ರತೆ ಎಂದು ಸಾಬೀತುಪಡಿಸುತ್ತಾಳೆ. ಪ್ರತಿರೂಪಿ ಎಂದರೆ ತದ್ವತ್ ದೈಹಿಕವಾಗಿ ಅಷ್ಟೇ, ಮಾನಸಿಕವಾಗಿಯಲ್ಲ, - ನಿರೂಪಣೆಯ ಅನುಕೂಲಕ್ಕಾಗಿ ಅದು ಪಾತ್ರವಾಗಿ ಕಾಣಿಸಿಕೊಂಡರೂ ವಾಸ್ತವದಲ್ಲಿ ಆತ ರಾಣಿಯ ಕನಸು - ತನ್ನ ಪತಿ ಅಪ್ಪಣ್ಣ ಸದಾ ಹೀಗಿರಬೇಕು ಎಂಬ ರಾಣಿಯ ಬಯಕೆಯ ರೂಪದಲ್ಲಿ ನಾಗಪ್ಪ (ನಾಗರಹಾವು) ಕಾಣಿಸಿಕೊಳ್ಳುತ್ತಾನೆ. ಒರಟು ವ್ಯಕ್ತಿತ್ವಕ್ಕೆ ವಿರುದ್ಧವಾದ ನಿಧಾನ ನಡಿಗೆ, ಸ್ಪರ್ಶ, ಲಾಲಿತ್ಯ ನಾಗಪ್ಪನದ್ದು. ಅಪ್ಪಣ್ಣನಿಗೆ ಪಡೆದುಕೊಳ್ಳುವುದಷ್ಟೇ ಗೊತ್ತಿದ್ದರೆ, ನಾಗಪ್ಪನದು ಕೊಡುವುದರಲ್ಲಿ ಖುಷಿ ಕಾಣುವ ಪಾತ್ರ. ಕಥೆಯ ನಿರೂಪಣೆಯಲ್ಲಿ ನಾಗಾಭರಣ ಅವರು ನಿರ್ದೇಶಕನ ಸ್ವಾತಂತ್ರ್ಯವನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಕಾರ್ನಾಡರ ಮೂಲನಾಟಕದಲ್ಲಿ ಅಸ್ಪಷ್ಟವಾಗಿದ್ದು, ಹಲವು ಧ್ವನಿಗಳನ್ನು ಹೊಂದಿರಬಹುದಾದ ಕಥೆ ಇಲ್ಲಿ ಒಂದು ತೀರ್ಮಾನಕ್ಕೆ ಬರುತ್ತದೆ. ನಾಟಕದಲ್ಲಿ ರಾಣಿ ಪಾತ್ರಕ್ಕೆ ತಾನು ಪರಪುರುಷನೊಂದಿಗೆ ಲೈಂಗಿಕ ಸುಖ ಅನುಭವಿಸುತ್ತಿದ್ದೇನೆ ಎಂಬುದು ತಿಳಿದಿರುತ್ತದೆ. ಆದರೆ ಅದನ್ನು ಚಿತ್ರದಲ್ಲಿ ಮುಗ್ಧತೆಯ ನೆರಳಿನಲ್ಲಿ ಮರೆ ಮಾಡಲಾಗಿದೆ. ಗಂಡನ ಹೊರತಾಗಿ ಇನ್ನೊಬ್ಬನ ಜೊತೆ ಸಂಬಂಧವನ್ನು ಆಕೆ ಊಹಿಸಲಾರಳು, ಇದು ನಿರ್ದೇಶಕರ ನಿಲುವು. ಇದಕ್ಕಾಗಿ ಆಕೆಯನ್ನು ಮುಗ್ಧೆಯನ್ನಾಗಿ ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ಎದುರಾಗಿದೆ. ಒಂದು ನೆಲೆಯಲ್ಲಿ ಗಂಭೀರ ಚಿಂತನೆಯನ್ನು ಸರಳೀಕರಣಗೊಳಿಸಲಾಗಿದೆ ಅನ್ನಿಸುತ್ತದೆ. ಕಥೆ ಒಡ್ಡುವ ಸವಾಲನ್ನು ನಿಭಾಯಿಸಲು ಬೇರೆ ದಾರಿ ಹಿಡಿದಿದ್ದರೂ ಅದು ಅಂಥದೇ ಇನ್ನೊಂದು ಸವಾಲನ್ನು ಎದುರು ನಿಲ್ಲಿಸುತ್ತಿತ್ತು. ಪರಸ್ಪರ ವೈರುಧ್ಯಗಳ ಪಾತ್ರಗಳಲ್ಲಿ ಪ್ರಕಾಶ್ ರೈ ವಿಭಿನ್ನವಾಗಿ ಅಭಿನಯಿಸಿ ಮನಸೆಳೆದಿದ್ದರು. ಇಷ್ಟಾಗಿ ಚಿತ್ರದಲ್ಲಿ ಪ್ರಕಾಶ್ ರೈ ದ್ವಿಪಾತ್ರಾಭಿನಯದ ಹೊಡೆದಾಟದ ದೃಶ್ಯಗಳ ಕಲ್ಪನೆ ಹಾಗೂ ಅಂತ್ಯವನ್ನು ಜಾನಪದ ಕಥೆಗಳಂತೆ ನೀತಿ ಹೇಳುವುದರ ಮೂಲಕ ಮುಕ್ತಾಯಗೊಳಿಸಿದ್ದು ಚಿತ್ರದ ಒಟ್ಟು ರೂಪಕ್ಕೆ ಹೊಂದುವಂತಿರಲಿಲ್ಲ.

ಪ್ರಕಾಶ್ ರೈ, ವಿಜಯಲಕ್ಷ್ಮಿ, ಬಿ.ಜಯಶ್ರೀಯವರ ಅತ್ಯುತ್ತಮ ಅಭಿನಯ, ಭಾಸ್ಕರ್ ಛಾಯಾಗ್ರಹಣ, ಸಿ.ಅಶ್ವತ್ಥ್ ಸಂಗೀತ, ಗೋಪಾಲ ವಾಜಪೇಯಿ ವಿಶಿಷ್ಟ ಗೀತೆಗಳು ಚಿತ್ರವನ್ನು ಭಿನ್ನ ಅನುಭವ ನೀಡುವಂತೆ ಮಾಡಿತ್ತು. ಶಶಿಧರ ಅಡಪ ಕಲಾನಿರ್ದೇಶನದಲ್ಲಿ ಕರ್ನಾಟಕದ್ದಲ್ಲದ ಛಾಯೆ ಇಣುಕಿದ್ದರೂ ಕಣ್ಣು-ಮನಸ್ಸನ್ನು ತಣಿಸುವಲ್ಲಿ ಗೆದ್ದಿತ್ತು. ನಾಗಿಣಿಭರಣ ವಸ್ತ್ರವಿನ್ಯಾಸ ಕಥೆಗೆ ಹೊಂದಿಕೆಯಾಯಿತು. ಇದರೊಂದಿಗೆ ಚಿತ್ರೀಕರಣಕ್ಕೆ ಆಯ್ಕೆ ಮಾಡಿದ್ದ ಪ್ರದೇಶ, ಬಳಸಿದ ಮನೆ ಕಥೆಗೆ ಪೂರಕವಾಗಿತ್ತು. ಬಾಗಲಕೋಟೆಯಿಂದ ೪೦ ಕಿಮೀ ದೂರದ ಹೊನ್ನಿಹಾಳ ಗ್ರಾಮ ಕೃಷ್ಣಾ ನದಿಯಿಂದ ಐದು ಕಿಮೀ ದೂರದ ಪ್ರದೇಶ. ನೀರಿನಿಂದ ಮುಳುಗಡೆ ಆದ ಪ್ರದೇಶದಲ್ಲಿರುವ ಹಳ್ಳಿಯಿದು. ಜನರು ಸಂಪೂರ್ಣವಾಗಿ ಗುಳೆ ಎದ್ದು ಹೋಗಿರುವುದರಿಂದ ಖಾಲಿಯಾಗಿರುವ ಹಳ್ಳಿಯಲ್ಲಿ ಚಿತ್ರೀಕರಣ ನಡೆಸಲಾಗಿತ್ತು.

''...ಇಲ್ಲಿ ಒಬ್ಬ ನಟನ ಹತ್ತಿರ ಎರಡು ಪಾತ್ರ ಮಾಡಿಸಬೇಕಿತ್ತು. ಚಿತ್ರಕಥೆ ತಯಾರಿಯಲ್ಲೇ ಆ ಎರಡೂ ಪಾತ್ರಗಳಿಗೆ ಭಿನ್ನವಾದ ಗೆಶ್ಚರ್‌ಗಳನ್ನು, ನಡಿಗೆಗಳನ್ನು, ಪಾತ್ರದ ಆಶಯಗಳನ್ನು, ಎರಡು ಪಾತ್ರಗಳ ಭಿನ್ನ ವರ್ತನೆಗಳನ್ನು ಮೊದಲೇ ನಿರ್ಧಾರ ಮಾಡಿಕೊಂಡಿದ್ದೆ. ಆದ್ದರಿಂದಲೇ ಆ ಪಾತ್ರ ವಹಿಸಿದ ಪ್ರಕಾಶ್ ರೈ ಜೊತೆ ಚರ್ಚಿಸಿ ನನ್ನ ಕಲ್ಪನೆಯಂತೆ ಚಿತ್ರಿಸಲು ಸಾಧ್ಯವಾಯಿತು..'' ಎನ್ನುತ್ತಾರೆ ನಿರ್ದೇಶಕ ಟಿ.ಎಸ್.ನಾಗಾಭರಣ.

ಶತದಿನ ಪ್ರದರ್ಶನ ಕಂಡ 'ನಾಗಮಂಡಲ' ರಾಜ್ಯದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನಲ್ಲದೆ ಬಿ.ಜಯಶ್ರೀ, ಮಂಡ್ಯ ರಮೇಶ್‌ಗೆ ಅತ್ಯುತ್ತಮ ಪೋಷಕ ನಟ-ನಟಿ



(ಚಿತ್ರ ೯೯) 'ಜೋಡಿಹಕ್ಕಿ' ಚಿತ್ರದಲ್ಲಿ ವಿಜಯಲಕ್ಷ್ಮೀ ಮತ್ತು ಶಿವರಾಜ್ ಕುಮಾರ್

ಪ್ರಶಸ್ತಿ, ಜಿ.ಎಸ್.ಭಾಸ್ಕರ್, ಶಶಿಧರ್ ಅಡಪ ಅವರಿಗೆ ಕ್ರಮವಾಗಿ ಅತ್ಯುತ್ತಮ ಛಾಯಾಗ್ರಹಣ, ಕಲಾನಿರ್ದೇಶನ ಪ್ರಶಸ್ತಿಗಳನ್ನು ತಂದುಕೊಟ್ಟಿತು. ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್ ಪದವೀಧರ ಎಚ್.ಎಂ.ರಾಮಚಂದ್ರ ಅವರು ಭಾಸ್ಕರ್‌ಗೆ ಸಹಾಯಕ ಛಾಯಾಗ್ರಾಹಕರಾಗಿದ್ದರು. ಮುಂದೆ ರಾಮಚಂದ್ರ ಅವರ ಪ್ರತಿಭೆ 'ತಾಯಿಸಾಹೇಬ'ದಲ್ಲಿ ಕಂಡವು.

ತೆಲುಗಿನ ನಿರ್ಮಾಪಕ ಎಂ.ರಾಮಲಿಂಗೇಶ್ವರರಾವ್ ತೆಲುಗು, ಕನ್ನಡ ಎರಡರಲ್ಲಿ ಬೇರೆ ಬೇರೆ ತಾರಾಗಣದಲ್ಲಿ ಒಂದು ಚಿತ್ರ ಸಿದ್ಧ ಮಾಡಿದರು. ಕನ್ನಡದಲ್ಲಿ 'ಮದುವೆ' ಎಂದೂ, ತೆಲುಗಿನಲ್ಲಿ 'ಪೆಳ್ಳಿ' ಎಂದೂ ಹೆಸರಿಸಿದ್ದರು. ಎರಡಕ್ಕೂ ಎಸ್.ಎ.ರಾಜಕುಮಾರ್ ಸಂಗೀತ ನಿರ್ದೇಶಿಸಿದ್ದರು. ಲಕ್ಷ್ಮೀ, ಕುಮಾರ್ ಗೋವಿಂದ್ ಅಭಿನಯ ಚೆನ್ನಾಗಿತ್ತು. ಕುಮಾರ್ ಗೋವಿಂದ್‌ಗೆ ವಿಭಿನ್ನ ಪಾತ್ರವಿತ್ತು. ಅದನ್ನು ಗೋವಿಂದ್ ಸಮರ್ಥವಾಗಿ ನಿರ್ವಹಿಸಿದ್ದರು ಕೂಡ. ರಮೇಶ್, ಚಾರುಲತಾ ಮುಖ್ಯ ಪಾತ್ರದಲ್ಲಿದ್ದರು. 'ಹುಣ್ಣಿಮೆಯೇ ನಿನಗೆ ಇಂದು ಕೋಪವೇ...' ಮತ್ತು 'ಸಿರಿ ಸಿರಿ ಸಂಪಿಗೆ...' ಹಾಡುಗಳು ಉತ್ತಮವಾಗಿದ್ದು, ಜನಪ್ರಿಯವಾದವು. ರಮೇಶ್ ನಟಿಸಿದ್ದ ಎಲ್ಲಾ ಚಿತ್ರಗಳು ಕನಿಷ್ಟ ೫೦ ದಿನ ಓಡಿ ಯಶಸ್ಸಾಗುತ್ತಿದ್ದ ಕಾಲ. ಆ ದಿನಗಳಲ್ಲಿ ಸ್ವಲ್ಪ ಕಡಿಮೆ ಓಡಿದ 'ಮದುವೆ' ನಿರೀಕ್ಷಿತ ಯಶಸ್ಸು ಗಳಿಸಲಿಲ್ಲ. 'ಹಮ್ ಆಪ್ ಕೆ ಹೈ ಕೌನ್' ಚಿತ್ರ ಬಂದಮೇಲೆ ಅಂಥ ಧಾಟಿಯ ಚಿತ್ರಗಳು ಬರತೊಡಗಿದ್ದವು. ಆದರೆ ಅಲ್ಲಿಯ ಶ್ರೀಮಂತಿಕೆಯನ್ನು ಕನ್ನಡದ 'ಮದುವೆ' ತುಂಬಿಕೊಡಲಿಲ್ಲ.

ಸೋಲಿನ ಮೇಲೆ ಸೋಲುಂಡ ವಿನೋದ್‌ರಾಜ್ ಸ್ವಲ್ಪ ಮಟ್ಟಿಗೆ ಯಶಸ್ಸಾದದ್ದು ಶಾಂತಲಾ ಪಿಕ್ಚರ್ಸ್ ಅವರ ಎಸ್.ನಾರಾಯಣ್ ನಿರ್ದೇಶನದ 'ಮಹಾಭಾರತ' ಚಿತ್ರದಿಂದ. ವಿನೋದ್‌ರಾಜ್ ಜೊತೆ ಚೈತಾಲಿ, ಚರಣ್‌ರಾಜ್, ಮಂಡ್ಯ ರಮೇಶ್, ರಾಜೀವ್ ಅಭಿನಯವಿತ್ತು. ವಿನೋದ್‌ರಾಜ್ ಅಭಿನಯ ಚೆನ್ನಾಗಿತ್ತು. ಯುವ ವಿದ್ಯಾರ್ಥಿಗಳನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ರಾಜಕಾರಣಿಗಳ ದಂಡನ್ನು ಹತ್ತಿಕ್ಕುವ ವಸ್ತು. ಕೆ.ಕಲ್ಯಾಣ್ ಗೀತ-ಸಂಗೀತದಲ್ಲಿ 'ಶೇಕು ಬ್ರೇಕು..' ಮತ್ತು 'ಓಹೋ ಶಾಂತಲಾ...' ಹಾಡುಗಳು ಚೆನ್ನಾಗಿದ್ದವು.

ಪಿ.ಧನರಾಜ್ ನಿರ್ಮಾಣದಲ್ಲಿ ಡಿ.ರಾಜೇಂದ್ರಬಾಬು ನಿರ್ದೇಶಿಸಿದ ಚಿತ್ರ 'ಜೋಡಿ ಹಕ್ಕಿ'. 'ಜನುಮದ ಜೋಡಿ' ಯಶಸ್ಸಿನ ಓಸ್ನೆಲೆಯಲ್ಲಿಯೇ 'ಜೋಡಿ ಹಕ್ಕಿ' ಹೆಸರಿನೊಂದಿಗೆ ಶಿವರಾಜ್ ಕುಮಾರ್, ಚಾರುಲತ, ವಿಜಯಲಕ್ಷ್ಮಿ ಅಭಿನಯದಲ್ಲಿ ಚಿತ್ರೀಕರಿಸಲಾಯಿತು. ತ್ರಿಕೋನ ಪ್ರೇಮಕಥೆಯುಳ್ಳ ಚಿತ್ರ. ವಿ.ಮನೋಹರ್ ಗೀತರಚನೆ ಮತ್ತು ಸಂಗೀತದಲ್ಲಿ ಹಾಡುಗಳು ತುಂಬಾ ಇಂಪಾಗಿದ್ದವು. 'ಲಾಲಿ ಸುವ್ವಾಲಿ ಹಾಡಮ್ಮ ಲಾಲಿ...', 'ನವಮಿ ನವಮಿ ಸಿರಿದೇವಿಗೆ....', 'ನೀಲಾ ನೀಲಾ ನೀಲಾಂಬರಿ...' ಹಾಡುಗಳು ಮನಸೂರೆಗೊಂಡವು. ತಿಪಟೂರು ಸೋಮು ವಸ್ತ್ರವಿನ್ಯಾಸದಲ್ಲಿ ಪಕ್ಕಾ ಲಂಬಾಣಿಗಿತ್ತಿಯರಂತೆ ಚಾರುಲತ, ಕಿಶೋರಿಬಲ್ಲಾಳ್ ಮುಂತಾದವರನ್ನು ಅಲಂಕರಿಸಲಾಗಿತ್ತು. ರಾಜೇಂದ್ರಬಾಬು ಕಥೆ, ಚಿತ್ರಕಥೆ ಮತ್ತು ನಿರ್ದೇಶನ ಮೂರು ವಿಭಾಗಗಳಲ್ಲಿ ಕಾರ್ಯ ನಿರ್ವಹಿಸಿದ್ದರು. ಚಿತ್ರಕಥೆಗೆ ೧೯೯೭-೯೮ರ ಸಾಲಿನ ರಾಜ್ಯ ಪ್ರಶಸ್ತಿಯನ್ನು ಬಾಬು ಪಡೆದುಕೊಂಡರೆ, ಶ್ರೇಷ್ಠ ಸಂಗೀತ ನಿರ್ದೇಶಕನಾಗಿ ವಿ.ಮನೋಹರ್ ಪ್ರಶಸ್ತಿ ಪಡೆದುಕೊಂಡರು. ಚಿತ್ರಕ್ಕೆ ಉತ್ತಮ ಸಂಭಾಷಣೆ ಬರೆದವರು ಬರಗೂರು ರಾಮಚಂದ್ರಪ್ಪ.

೧೯೯೭ ರಲ್ಲಿನ ಇನ್ನೆರಡು ಮುಖ್ಯ ಚಿತ್ರಗಳು 'ಭೂಮಿಗೀತ', 'ಮುಂಗಾರಿನ ಮಿಂಚು'. ಇವುಗಳೆರಡರದ್ದು ಅಮೆರಿಕನ್ ಜನಪ್ರಿಯ ಸಿನಿಮಾ ಶೈಲಿಯ ಚಿತ್ರಕಥೆ. ಒಬ್ಬ ಸರ್ಕಾರಿ ಪ್ರತಿನಿಧಿ ತನ್ನೆಲ್ಲ ಚಾಣಾಕ್ಷತೆಯಿಂದ ಬುಡಕಟ್ಟು ಜನರನ್ನು ಅವರ ಹಾಡಿಯಿಂದ ಎತ್ತಂಗಡಿ ಮಾಡಿಸುವುದು. ಇದಕ್ಕಾಗಿ ಚಿತ್ರದ ಮೊದಲ ಚಿತ್ರಿಕೆಯಲ್ಲಿಯೇ ಕಾಣಿಸಿಕೊಳ್ಳುವ ಕಮಿಷನರ್ ಸಾಹೇಬ ಚಿತ್ರದುದ್ದಕ್ಕೂ ಜೀವಯ್ಯ ಮತ್ತು ಅವನ ಗುಂಪನ್ನು ಓಡಿಸುವ ಕುರಿತು ತಂತ್ರಗಳನ್ನು ರೂಪಿಸುವುದೇ ಪ್ರಧಾನ ಅಂಶವಾಗಿ ಬಂದಿದೆ. ಕೆಲವಾರು ವರ್ಷಗಳಿಂದ ಕನ್ನಡ ಚಿತ್ರರಂಗದಲ್ಲಿ ಸಹನಿರ್ದೇಶಕರಾಗಿ ದುಡಿದು ಅನುಭವ ಗಳಿಸಿದ್ದ ಕೇಸರಿ ಹರವೂ ಈ ಚಿತ್ರದ ಮೂಲಕ ನಿರ್ದೇಶಕರಾದರು. ಪರಿಸರ ಹಾಗೂ ಬುಡಕಟ್ಟು ಜನಾಂಗದ ಬಗ್ಗೆ ಕಳಕಳಿ ಹೊಂದಿದ್ದ ಚಿತ್ರ ಸಂಭಾಷಣೆ, ವೇಷ-ಭೂಷಣಗಳ ವಿಷಯದಲ್ಲಿ ನಿರ್ದಿಷ್ಟ ಪ್ರದೇಶದ ಪ್ರಾದೇಶಿಕ ಸೊಗಡನ್ನು ಬಿಂಬಿಸಿರಲಿಲ್ಲ. ಸಾಕ್ಷ್ಯಚಿತ್ರಗಳಂತೆ ತನ್ನ ಅಂತಿಮ ಉದ್ದೇಶ ಸಾರುವ ಆತುರ ವ್ಯಕ್ತಪಡಿಸುತ್ತದೆ. ಇದರಿಂದಾಗಿ ಕಥಾಚಿತ್ರವಾಗಿ ಅನುಭವವನ್ನು ಕಟ್ಟಿಕೊಟ್ಟು ತೀರ್ಪನ್ನು ನೋಡುಗನಿಗೆ ಬಿಟ್ಟುಬಿಡುವ ಶ್ರೇಷ್ಠತೆಯಿಂದ ವಂಚಿತವಾಗುತ್ತದೆ. ಇವೆಲ್ಲದರ ನಡುವೆಯೂ 'ಭೂಮಿಗೀತ'ದಲ್ಲಿ ಅನೇಕ ವಿಶೇಷಗಳಿವೆ. ಪೊಲೀಸರು ಕಾಡು ಬಿದಿರೆಯವರನ್ನು ಬೆನ್ನಟ್ಟುವ ದೃಶ್ಯದ ಸಂಕಲನ ಮತ್ತು ಛಾಯಾಗ್ರಹಣ, ಸರ್ಕಾರಿ ಅಧಿಕಾರಿ ಮನೆಯಲ್ಲಿ ಚಿತ್ರಿತವಾಗಿರುವ ಎಲ್ಲಾ ದೃಶ್ಯಗಳಲ್ಲಿ ಕೇಸರಿ ಹರವೂ ಅವರ ಚಿತ್ರಿಕೆ ವಿಂಗಡಣೆಯ ಹಿಂದಿನ ಬಂಧ, ಚಿತ್ರದ ಉತ್ತರಾರ್ಧದಲ್ಲಿ ಗೆಳೆಯರೊಡನೆ ಮಾತನಾಡುತ್ತಾ ಇರುವಾಗಿನ ಜೋಗಿಯ ನಟನೆಯಲ್ಲಿರುವ ಸಹಜತೆ, ಒಟ್ಟು ಚಿತ್ರ ನಿರ್ಮಾಣದ ಹಿಂದಿರುವ ಪ್ರಾಮಾಣಿಕತೆಗಳು ಗಮನ ಸೆಳೆಯುತ್ತವೆ.



(ಚಿತ್ರ ೧೦೦) 'ಭೂಮಿಗೀತ' ಚಿತ್ರದಲ್ಲಿ ವಿನಯಾ ಪ್ರಸಾದ್ ಮತ್ತು ಅತುಲ್ ಕುಲಕರ್ಣಿ

೧೯೯೭-೯೮ರ ರಾಜ್ಯದ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರವೆಂದು ಪ್ರಶಸ್ತಿ ಗಳಿಸಿದ 'ಭೂಮಿಗೀತ' ಬ್ರೆಜಿಲ್‌ನಲ್ಲಿ ನಡೆದ ೨೨ನೆಯ 'ಸಾವೋಪಾವ್‌ಲೊ' ಅಂತರರಾಷ್ಟ್ರೀಯ ಚಿತ್ರೋತ್ಸವಕ್ಕೆ ಆಯ್ಕೆಯಾಗಿತ್ತು. ಚಿತ್ರಕ್ಕೆ ಸಂಗೀತ ನೀಡಿದ್ದ ಇಳಯರಾಜಾ ಅವರು ಎಸ್.ಪಿ.ಬಾಲಸುಬ್ರಹ್ಮಣ್ಯಂ ಪುತ್ರ ಶರಣ್ ಅವರಿಂದ ಪ್ರಥಮ ಬಾರಿಗೆ ಒಂದು ಹಾಡನ್ನು ಹಾಡಿಸಿದ್ದರು. ವರ್ಣಚಿತ್ರ ಕಲಾವಿದ ಉಮೇಶ್ ಮುಖ್ಯಪಾತ್ರದಲ್ಲಿ ತುಂಬ ಸೊಗಸಾಗಿ ಅಭಿನಯಿಸಿದ್ದರು. ತರುಣ ಅತುಲ್ ಕುಲಕರ್ಣಿ ಅಧಿಕಾರಿಯಾಗಿ ಉತ್ತಮ ಅಭಿನಯ ನೀಡಿದ್ದರು. ತರುಣಿ ಮಂಜುಭಾಷಿಣಿ ಪಾತ್ರಕ್ಕೆ ಒಪ್ಪುವಂತಿದ್ದರು. ಆಕೆಯನ್ನು ಚಿತ್ರರಂಗ ಸರಿಯಾಗಿ ದುಡಿಸಿಕೊಳ್ಳಲಿಲ್ಲ. ಕಿರುತೆರೆಗೇ ಹಿಂತಿರುಗಿದರು. ಈ ಚಿತ್ರದಿಂದ ಯುವ ಕಲಾನಿರ್ದೇಶಕ ಅರುಣ್ ಪರಿಚಯವಾಯಿತು. ವಿನಯಾ ಪ್ರಸಾದ್ ಚೊಕ್ಕವಾಗಿ ಪಾತ್ರ ನಿರ್ವಹಿಸಿದ್ದರು.

ರಾಜೇಂದ್ರಸಿಂಗ್ ಬಾಬು ನಿರ್ದೇಶಿಸಿದ 'ಮುಂಗಾರಿನ ಮಿಂಚು' ಚಿತ್ರಕ್ಕೆ 'ವಾಕಿಂಗ್ ಇನ್ ದ ಕ್ಲೌಡ್ಸ್' ಸ್ಫೂರ್ತಿ. ಪೂರ್ವಾರ್ಧದಲ್ಲಿ ಅಮೆರಿಕನ್ ವಾಸ್ತವವನ್ನು ಭಾರತೀಯ ನೆಲೆಗಟ್ಟಿಗೆ ಹೊಂದಿಸಲು ಶ್ರಮಪಟ್ಟಿರುವುದು ಕಾಣುತ್ತದೆ. ಮೂಲಚಿತ್ರದಲ್ಲಿ ನಾಯಕ ವಿಯೆಟ್ನಾಂ ಯುದ್ಧದಿಂದ ಹಿಂದಿರುಗಿದ, ಹಿಂದಿರುಗುವಷ್ಟರಲ್ಲಿಯೇ ಪ್ರೇಯಸಿ ಮತ್ತೊಬ್ಬನ ಪಾಲಾಗಿರುವ ವಿಷರ ಅರಿತು, ಸೇನೆಯ ಕೆಲಸ ತೊರೆದು ಚಾಕಲೇಟ್ ಮಾರುವ ಉದ್ಯೋಗಿಯಾಗಿರುತ್ತಾನೆ. ನಾಯಕ ಊರಿಂದೂರಿಗೆ ರೈಲಿನಲ್ಲಿ ಪ್ರಯಾಣ ಮಾಡುವಾಗ ನಾಯಕಿ ಅವನಿಗೆ ಪರಿಚಿತಳಾಗುತ್ತಾಳೆ. ಗರ್ಭಿಣಿಯಾದವಳು ಜೋಲಿ ಹೊಡೆದು ಎದುರಿಗೆ ಬರುತ್ತಿದ್ದ ನಾಯಕನ ಮೇಲೆ ವಾಂತಿ ಮಾಡಿಕೊಳ್ಳುತ್ತಾಳೆ. ಹೀಗೆ ಮೊದಲಾಗುವ ಪರಿಚಯ ಅವಳ ಮಾನ ಕಾಯಲು ಅವನು ಅವಳ ಗಂಡನಂತೆ ನಟಿಸಲು ಒಪ್ಪಿಕೊಳ್ಳುವ ಹಂತ ತಲುಪುತ್ತದೆ. ಇದನ್ನು ಕನ್ನಡೀಕರಿಸುವಲ್ಲಿ ನಮ್ಮಲ್ಲಿನ ಆದರ್ಶ ನಾಯಕ-ನಾಯಕಿಯ ಕಲ್ಪನೆಗೆ ಭಂಗ ಬರುವುದರಿಂದ ಗರ್ಭಿಣಿ ಎಂಬುದನ್ನು ಸುಳ್ಳು ಹೇಳಿದಂತೆ ಮಾಡಲಾಗಿದೆ.. ದ್ವಿತೀಯಾರ್ಧದಲ್ಲಿ ನಾಯಕನ ಬಗ್ಗೆ ನಾಯಕಿಯ ಅಪ್ಪನ ವಿರೋಧ, ಉಳಿದವರ ಒಲವುಗಳ ನಡುವೆ ಕಥೆ ಬೆಳೆಯುತ್ತಾ, ಕೊನೆಗೆ ನಾಯಕ, ನಾಯಕಿ ಅಪ್ಪನ ಒಲವನ್ನು ಗಳಿಸಿ ಒಂದಾಗುವುದರೊಂದಿಗೆ ಚಿತ್ರ ಮುಗಿಯುತ್ತದೆ. ನಾಯಕನ ಮೊದಲ ಪ್ರೇಯಸಿ ಬದಲಾದ ಸಂದರ್ಭದಲ್ಲಿ ಅವನ ಚಾಚಿದ ತೋಳಿನಿಂದ ದೂರಕ್ಕೆ ಸಾಗುವ ಚಿತ್ರಿಕೆಯ ರಿವರ್ಸ್ ಷಾಟ್, ಅಂತ್ಯದಲ್ಲಿ ವಾಸ್ತವದ ನಾಯಕಿ ಪ್ರೇಯಸಿ ಆ ತೋಳಿಗೆ ಬರುವ ಪರಿಕಲ್ಪನೆ ಚೆನ್ನ. ಆದರೆ ಅದಾಗಲೇ 'ನಾಗರಹಾವು' ಚಿತ್ರದಲ್ಲಿ ಪುಟ್ಟಣ್ಣ ಇಂಥದೇ ಪರಿಕಲ್ಪನೆಯನ್ನು ಇನ್ನೂ ಚೆನ್ನಾಗಿ ಹೇಳಿರುವುದು ಮತ್ತು ಆ ಚಿತ್ರಿಕೆಗಳು ಕಣ್ಣಮುಂದೆ ಮೂಡುವುದು ಇವುಗಳಿಂದಾಗಿ ನಿರ್ದೇಶಕರ ಈ ಕಲ್ಪನೆ ಮನಸ್ಸಿನಲ್ಲಿ ನಿಲ್ಲುವುದಿಲ್ಲ. ಅಡಿಕೆ ತೋಟದಲ್ಲಿ ನಾಯಕನ ಗಟ್ಟಿ ಮಾತು ಅಲ್ಲಿ ಬಳಸಲಾದ ವರ್ತುಲ ಚಿತ್ರಿಕೆ, ಅದಕ್ಕಿರುವ ವೇಗ ಮತ್ತು ಅಂಥದೇ ಚಿತ್ರಿಕೆ ಬದಲಾದ ಸಂದರ್ಭದಲ್ಲಿ ಪುನಃ ಬಳಕೆ ಆಗುವುದು ಗಮನ ಸೆಳೆಯುತ್ತದೆ.

'ಮುಂಗಾರಿನ ಮಿಂಚು...' ಶೀರ್ಷಿಕೆಯ ಗೀತೆಯನ್ನು ಚಿತ್ರಿಸಿರುವ ರೀತಿ ಸೊಗಸಾಗಿ ಮೂಡಿದೆ. ಇಲ್ಲಿ ಬಳಸಲಾದ ಛಾಯಾಗ್ರಹಣದ ಕೋನಗಳು, ಹಿನ್ನೆಲೆಯ ಪ್ರಕೃತಿಯ ರಮ್ಯದೃಶ್ಯಗಳು ಸೊಗಸೆನಿಸುತ್ತವೆ. ನಿರ್ದೇಶಕ ರಾಜೇಂದ್ರಸಿಂಗ್ ಬಾಬು ಅವರ ದೃಶ್ಯ ಸಂಯೋಜನೆ, ದೃಶ್ಯದ ಒಳಗೆ ಹೊಸ ಧ್ವನಿಯನ್ನು ಹೊರಡಿಸುವ ಬಗೆ ವಿಶಿಷ್ಟವಾದ್ದು. ಆಂಗ್ಲ ಚಿತ್ರದ ಆಧಾರವಾಗಿದ್ದರೂ ದೃಶ್ಯಗಳನ್ನು ನಮ್ಮ ವಾತಾವರಣಕ್ಕೆ ಒಗ್ಗಿಸಿರುವುದು ಹಾಗೂ ಅದನ್ನು ಚಿತ್ರಿಸಿರುವುದು ರಾಜೇಂದ್ರಸಿಂಗ್ ಬಾಬು ಪ್ರತಿಭೆಗೆ ತಕ್ಕುದಾಗಿದೆ. ಮುಖ್ಯವಾಗಿ ತಮಗೆ ಇಷ್ಟವಾದ ಕೃತಿಯನ್ನು ತೋರಿಸಿ ಅದೇ ಎಳೆಯ ಮೇಲೆ ಕನ್ನಡದ ಜಾಯಮಾನಕ್ಕೆ ಒಗ್ಗುವಂಥ ಕಾದಂಬರಿಯನ್ನು ಉಷಾ ನವರತ್ನರಾಂ ಅವರಿಂದ ಬರೆಸಿ ಚಿತ್ರಿಸುವುದರಲ್ಲೂ ಪ್ರಾಮಾಣಿಕತೆ ಕಾಣುತ್ತದೆ. ಸಹಜ ಮಳೆಯಲ್ಲಿ ಚಿತ್ರಿಸಿರುವ ಶ್ರಮ ಮತ್ತು ಸೊಬಗು, 'ಹೃದಯದ ಅಂಚಿನಲಿ ಮುಂಗಾರಿನ ಮಿಂಚು' ಎಂಬ ಸಾಲನ್ನುಳ್ಳ, ಎರಡು ದಿಕ್ಕಲ್ಲಿ ನಿಂತಿರುವ ನಾಯಕ-ನಾಯಕಿಯ ಪ್ರಲಾಪವುಳ್ಳ ಶೀರ್ಷಿಕೆ ಹಾಡಿಗೆ ಕ್ಯಾಮರಾ ಬಳಸಿರುವ ರೀತಿ, ದೃಶ್ಯ ಸಂಯೋಜನೆ ಮಾಡಿರುವ ಬಗೆ ಗಮನ ಸೆಳೆಯುತ್ತದೆ. ಲೋಕೇಶ್, ಶ್ರೀನಿವಾಸಮೂರ್ತಿ, ಕರಿಬಸವಯ್ಯ, ರಮೇಶ್, ಶಿಲ್ಪಾರ ಅತ್ಯುತ್ತಮ ಅಭಿನಯವಿದ್ದ ಈ ಚಿತ್ರ ೧೯೯೮ರ ಕೇಂದ್ರದ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಪಡೆಯಿತು. ಇಂಥ ಚಿತ್ರಗಳನ್ನು ರೀಮೇಕ್ ಎಂಬ ಹಣೆಪಟ್ಟಿಯಡಿ ಇಟ್ಟು ಚರ್ಚಿಸುವುದು ಸೂಕ್ತವಲ್ಲವೆಂದು ತೋರುತ್ತದೆ.

'ಉಲ್ಟಾ ಪಲ್ಟಾ' ಶೇಕ್ಸ್‌ಪಿಯರ್ ಮಹಾಕವಿಯ 'ಕಾಮಿಡಿ ಆಫ್ ಎರರ್ಸ್' ನಾಟಕ ಆಧರಿಸಿ ತಯಾರಾದ ಚಿತ್ರ. ನೇರವಾಗಿ ಹೇಳಿದ್ದಲ್ಲದೆ, ಶೀರ್ಷಿಕೆಯಲ್ಲೂ ತೋರಿಸುವ ಪ್ರಾಮಾಣಿಕತೆ ಚಿತ್ರದ ನಿರ್ದೇಶಕ ಎಸ್.ಎಸ್.ಶಂಕರ್ ಅವರದ್ದು. ಇವರು ತಮ್ಮ ಪ್ರಥಮ ಪ್ರಯತ್ನದಲ್ಲಿಯೇ ಯಶಸ್ವಿಯಾದದ್ದಲ್ಲದೆ, ರಮೇಶ್ ಮತ್ತು ಕಾಶಿಯವರಿಗೆ ಅವರ ವೃತ್ತಿ ಬದುಕಿನ ಶ್ರೇಷ್ಠ ಪಾತ್ರಗಳನ್ನು ಕಲ್ಪಿಸಿಕೊಟ್ಟಿದ್ದರು. ಇಬ್ಬರ ತದ್ರೂಪು ಇನ್ನಿಬ್ಬರು ಇರುವ ಊರೊಂದರಲ್ಲಿ ಉಂಟಾಗುವ ಗೊಂದಲ, ರಸಮಯ ಸನ್ನಿವೇಶಗಳೇ ಜೀವಾಳವಾದ ಕಥೆಗೆ ಮನರಂಜನೆ ಹೊರತುಪಡಿಸಿದ ವಿಶಿಷ್ಟ ಆಯಾಮ ಇರಲಿಲ್ಲ. ಸಹಜ ಹಾಸ್ಯದಿಂದ ಪ್ರೇಕ್ಷಕರನ್ನು ಸೆಳೆದ ಚಿತ್ರ ೨೪ ವಾರಗಳ ಪ್ರದರ್ಶನ ಕಂಡಿತು. ಈ ಯಶಸ್ಸಿಗೆ ಪವಿತ್ರ ಲೋಕೇಶ್ ಅವರನ್ನು ಪ್ರಚೋದಕವಾಗಿ ಚಿತ್ರಿಸಿರುವುದು ಕೂಡ ಕಾರಣವಾಗಿರಬಹುದು. ಅಭಿನಯದಲ್ಲಿ ವಿಶೇಷ ಶೈಲಿಯಿಂದ ಜನಪ್ರಿಯತೆ ಗಳಿಸಿದ್ದ ನಟ ಕಾಶಿಯವರಿಗೆ ಈ ಚಿತ್ರದ ನಟನೆಗಾಗಿ ೧೯೯೭-೯೮ರ ರಾಜ್ಯದ ವಿಶೇಷ ಪುರಸ್ಕಾರ ಲಭಿಸಿತು. ಎಸ್.ಎಸ್.ಶಂಕರ್ ಅತ್ಯುತ್ತಮ ಸಂಭಾಷಣೆಗೆ ಪ್ರಶಸ್ತಿ ಪಡೆದರು. ಇದೇ ವರ್ಷದ ತೃತೀಯ ಅತ್ಯುತ್ತಮ ಚಿತ್ರ ಹಾಗೂ ಅತ್ಯುತ್ತಮ ಗೀತರಚನೆಗೆ ಜೆ.ಎಂ.ಪ್ರಹ್ಲಾದ್ ಅವರಿಗೆ ಪ್ರಶಸ್ತಿ ತಂದುಕೊಟ್ಟ ಚಿತ್ರ ನಂಜುಂಡೇಗೌಡರು ನಿರ್ದೇಶಿಸಿದ 'ನೋಡು ಬಾ ನಮ್ಮೂರ'. 'ಸಂಕ್ರಾಂತಿ' ಚಿತ್ರದ ನಂತರ ಗ್ರಾಮೀಣ ಹಿನ್ನೆಲೆಗೆ ಹೊರತಾದ ಕೆಲವು ಚಿತ್ರಗಳನ್ನು ನಿರ್ದೇಶಿಸಿದ ಇವರು ಈ ಚಿತ್ರದ ಮೂಲಕ ಹಳ್ಳಿಗೆ ಮರಳಿ ಗ್ರಾಮೀಣ ಹಿನ್ನೆಲೆಯ ವಸ್ತು ನಿರ್ವಹಣೆಯಲ್ಲಿ ತಮಗೆ ಹೆಚ್ಚು ಪರಿಣತಿ ಇದೆ ಎಂಬುದನ್ನು ತೋರಿಸಿಕೊಟ್ಟರು. ಸಹಬಾಳ್ವೆಯಲ್ಲಿ ಸ್ವರ್ಗದ ಕಲ್ಪನೆಯನ್ನು ಮೀರಿಸುತ್ತಿದ್ದ ಹಳ್ಳಿಯ ಬದುಕು, ಸ್ವಾರ್ಥ ರಾಜಕೀಯದಲ್ಲಿ ನರಕವಾಗುತ್ತಿದ್ದಾಗ ಆದರ್ಶ ಯುವಕನೊಬ್ಬನ ಮೂಲಕ ಸುಧಾರಣೆ ಕಾಣುವ ವಸ್ತುವನ್ನು ಚಿತ್ರವು ಒಳಗೊಂಡಿತ್ತು.



(ಚಿತ್ರ ೧೦೧) 'ಮುಂಗಾರಿನ ಮಿಂಚು' ಚಿತ್ರದಲ್ಲಿ ಭವ್ಯಶ್ರೀ ರೈ, ರಮೇಶ್ ಮತ್ತು ಶಿಲ್ಪಾ

'ಜನುಮದ ಜೋಡಿ', 'ಅನುರಾಗ ಸಂಗಮ'ದಂಥ ಯಶಸ್ವಿ ಚಿತ್ರಗಳ ಸಂಗೀತ ನಿರ್ದೇಶಕರಾಗಿ ಜನಪ್ರಿಯರಾಗಿದ್ದ ಗೀತರಚನೆಕಾರ ವಿ.ಮನೋಹರ್ ನಿರ್ದೇಶನದ ಪ್ರಥಮ ಚಿತ್ರ 'ಓ ಮಲ್ಲಿಗೆ'. ಈ ದಶಕದಲ್ಲಿ ಕಿರುತೆರೆ ಹಾಗೂ ಪ್ರಚಾರ ಮಾಧ್ಯಮಗಳ ಮೂಲಕ ಹೆಚ್ಚು ಚಲಾವಣೆಯಲ್ಲಿರುವ 'ಮಾಡೆಲಿಂಗ್' ವೃತ್ತಿಯ ಒಳಹೊರಗನ್ನು ಪರಿಚಯಿಸಲು ಪ್ರಯತ್ನಿಸಿದ ಮೊದಲ ಕನ್ನಡ ಚಿತ್ರ. 'ಜನುಮದ ಜೋಡಿ'ಯ ನಾಯಕಿಯಂತೆ ಈ ಚಿತ್ರದ ನಾಯಕಿ ಕೂಡ ಬಂಡಾಯ ಮನೋಧರ್ಮದವಳಾಗಿದ್ದು, ತನ್ನನ್ನು ಆವರಿಸಿಕೊಂಡಿರುವ ಬಂಧನವನ್ನು ಮುರಿದು ಹೊರಗೆ ಹೋಗುತ್ತಾಳೆ. ಈ ಅಂಶ ಎರಡೂ ಚಿತ್ರಗಳ ಯಶಸ್ಸಿನ ಕಾರಣಗಳಲ್ಲೊಂದಾಗಿತ್ತು. 'ಪೊಲೀಸ್ ಸ್ಟೋರಿ'ಯಂಥ ಹಿಂಸಾತ್ಮಕ ಚಿತ್ರಗಳನ್ನು ಶೇಕಡಾ ಎರಡು ಭಾಗದಷ್ಟು ಮಹಿಳೆಯರು



(ಚಿತ್ರ ೧೦೨) 'ಓ ಮಲ್ಲಿಗೆ' ಚಾರುಲತಾ, ರಮೇಶ್ ಮತ್ತು ಅಮರ್ ಮಯೂರ್

ಕೂಡ ಆ ದಿನಗಳಲ್ಲಿ ನೋಡುತ್ತಿರಲಿಲ್ಲವಾದ್ದರಿಂದ, 'ಓ ಮಲ್ಲಿಗೆ', 'ನಮ್ಮೂರ ಮಂದಾರ ಹೂವೇ', 'ಜನುಮದ ಜೋಡಿ'ಯಂಥ ಕೌಟುಂಬಿಕ ಚಿತ್ರಗಳು ಜನಪ್ರಿಯತೆ ಗಳಿಸುವುದು ಸುಲಭವಾಯಿತು. 'ಓ ಮಲ್ಲಿಗೆ' ನಿರೂಪಣೆಯಲ್ಲಿ ಭಿನ್ನತೆ ಹೊಂದಿದ್ದರೂ ಒರಟು ಹಾಗೂ ಕೃತಕವೆನಿಸುವಂಥ ಹಾಸ್ಯ ದೃಶ್ಯಗಳಿಂದಾಗಿ ಪರಿಪೂರ್ಣ ಚಿತ್ರವೆನಿಸಲಿಲ್ಲ. 'ಮುದ್ದಾದ ಬಲೆ ಹೆಣೆದ ಹುಡುಗೀನ ಒಳ ಕರೆದಾ...' ಹಾಡಿಗೆ ಎಸ್.ಪಿ.ಬಾಲಸುಬ್ರಹ್ಮಣ್ಯಂ ಅವರಿಗೆ ಹಿನ್ನೆಲೆ ಗಾಯನಕ್ಕಾಗಿ ೧೯೯೭-೯೮ರ ರಾಜ್ಯ ಪ್ರಶಸ್ತಿ ಬಂದಿತು.

'ಓ ಮಲ್ಲಿಗೆ' ಚಿತ್ರಕ್ಕೆ ಕೆ.ಬಾಲಚಂದರ್ ಸಹಾಯಕ ಅನಂತ್ ಕಥೆ ಕೊಟ್ಟರು. ಆದರೆ ಅವರು ಪೂರ್ತಿ ಮಾಡಿಕೊಡಲು ಆಗಲಿಲ್ಲ. ಆ ಕಥೆ 'ಮೂನ್ರಾಂ ಪಿರೈ' ಮತ್ತು 'ವೀಟ್ಟಿಲೆ ವಿಶೇಷಂಗ' ಚಿತ್ರಗಳ ಕಥೆಯ ಜಾಡಿನಲ್ಲೇ ಇತ್ತು. "ನಾನು, ನಟ ರಮೇಶ್ ಅದನ್ನು ಮತ್ತಷ್ಟು ರಕ್ತ-ಮಾಂಸ ತುಂಬಿ ಕನ್ನಡದ ಜಾಯಮಾನಕ್ಕೆ ಒಗ್ಗಿಸಿಕೊಂಡೆವು. ಹಾಗೆಯೇ 'ಇಂದ್ರಧನುಷ್' ಕಥೆ ಕೂಡಾ ನಾನೂ ರಮೇಶ್‌ರಾವ್ ಎಲ್ಲ ರೀತಿಯಿಂದ ವಿಭಿನ್ನವಾಗಿರುವಂತೆ ಪ್ರಯತ್ನಪೂರ್ವಕವಾಗಿಯೇ ಹೆಣೆದೆವು. ನಮಗೆ ಆ ತೃಪ್ತಿ ಖಂಡಿತಾ ಇದೆ..." ಎನ್ನುತ್ತಾರೆ ವಿ.ಮನೋಹರ್.

ಎಸ್.ಪಿ.ಬಾಲಸುಬ್ರಹ್ಮಣ್ಯಂ ಗಾಯನಕ್ಕಾಗಿ ರಾಜ್ಯಪ್ರಶಸ್ತಿ ಪಡೆದ ೧೯೯೭ರ ಹಿಂದುಮುಂದಿನ ವರ್ಷಗಳಲ್ಲಿ ಚಲನಚಿತ್ರಗಳಿಗೆ ಹಾಡುವುದನ್ನು ಕಡಿಮೆ ಮಾಡಿದ್ದರು. ಅತ್ಯಂತ ಒತ್ತಾಯ ಹಾಗೂ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಭಾನುವಾರವನ್ನು ಧ್ವನಿಮುದ್ರಣಕ್ಕೆ ನಿಗದಿಪಡಿಸಿಕೊಳ್ಳುತ್ತಿದ್ದರು. ಇದಕ್ಕೆ ಅವರಿಗಿದ್ದ ಗಂಟಲಿನ ತೊಂದರೆ ಒಂದು ಕಾರಣವಾಗಿದ್ದರೆ, ಇನ್ನೊಂದು ಕಾರಣ ತೆಲುಗು, ತಮಿಳು, ಕನ್ನಡ ಮೂರು ಭಾಷೆಗಳಲ್ಲಿ ಅವರಿಗೆ ಅಭಿನಯಿಸುವ ಅವಕಾಶ, ಒತ್ತಡ ಹೆಚ್ಚಿದ್ದುದು. ಎಸ್‌ಪಿ ಅವರನ್ನು ಕಲಾವಿದರನ್ನಾಗಿ ಕೂಡ ಪ್ರೇಕ್ಷಕರು ಮೆಚ್ಚಿಕೊಂಡಿದ್ದರು. ಅವರು ಮುಖ್ಯ ಪಾತ್ರಗಳಲ್ಲಿ ಅಭಿನಯಿಸಿದ ನಾಲ್ಕೈದು ಚಿತ್ರಗಳು ವಿಶೇಷ ಯಶಸ್ಸನ್ನು ಗಳಿಸಿದ್ದವು. ಈ ಎಲ್ಲಾ ಹಿನ್ನೆಲೆಯಿಂದಾಗಿ ಅವರು ಕನ್ನಡ ನಿರ್ಮಾಪಕರು, ಸಂಗೀತ ನಿರ್ದೇಶಕರಿಂದ ಹಾಡುವಂತೆ ಒತ್ತಾಯ ಬಂದಾಗ "ಚೆನ್ನಾಗಿ ಹಾಡುತ್ತಿರುವ ನಿಮ್ಮ ಹುಡುಗರಿಗೇ ಅವಕಾಶ ಕೊಡಿ" ಎಂದು ಹಲವಾರು ಸಂದರ್ಭಗಳಲ್ಲಿ ಹೇಳಿದರು. ಒಂದೆರಡು ಬಾರಿ ಟ್ರ್ಯಾಕ್‌ನಲ್ಲಿ ಹಾಡಿದ್ದ ಕನ್ನಡ ಗಾಯಕರ ಧ್ವನಿ ಕೇಳಿ "ಚೆನ್ನಾಗಿ ಹಾಡಿದ್ದಾರೆ, ಅದನ್ನೇ ಬಳಸಿಕೊಳ್ಳಿ" ಎಂದು ಸಲಹೆ ಮಾಡಿದ್ದರು. ಇವೆಲ್ಲದರ ಪರಿಣಾಮವಾಗಿ ೧೯೯೪ರ ನಂತರ ಕನ್ನಡ ಚಲನಚಿತ್ರಗಳಲ್ಲಿ ಕನ್ನಡ ನೆಲದ ಕನ್ನಡ ಗಾಯಕ-ಗಾಯಕಿಯರ ಹೊಸ ಧ್ವನಿಗಳನ್ನು ಕೇಳುವಂತಾಯಿತು. ಇಷ್ಟೇ ಅಲ್ಲದೆ, ಇವರು ಹಾಡಿದ ಹಾಡುಗಳು ಕೂಡ ಜನಪ್ರಿಯವಾಗತೊಡಗಿತು. ೧೯೯೦ರ ದಶಕದಲ್ಲಿ ಕನ್ನಡ ಚಿತ್ರರಂಗದ ೭೦ ವರ್ಷಗಳ ಇತಿಹಾಸದಲ್ಲಿ ಇಂಥ ಬೆಳವಣಿಗೆ ಕಂಡದು ಅದೇ ಪ್ರಥಮ. ಚಲನಚಿತ್ರ ಹಿನ್ನೆಲೆ ಗಾಯನದಲ್ಲಿ ಪುತ್ತೂರು ನರಸಿಂಹ ನಾಯಕ್, ಎಲ್.ಎನ್.ಶಾಸ್ತ್ರಿ, ರಾಜೇಶ್, ರಮೇಶ್‌ಚಂದ್ರ, ಚಂದ್ರಿಕಾ ಗುರುರಾಜ್, ಸುರೇಖಾ, ಸೌಮ್ಯ, ಎಂ.ಡಿ.ಪಲ್ಲವಿ ಹಾಗೂ ವಿಭಿನ್ನ ಬಗೆಯ ಹಾಡುಗಳಲ್ಲಿ ರಂಗಭೂಮಿಯ ಪ್ರತಿಭಾವಂತ ಗಾಯಕಿ ಬಿ.ಜಯಶ್ರೀ ಇವರುಗಳ ಹೆಸರುಗಳು ಕಾಣಿಸಿಕೊಳ್ಳತೊಡಗಿದವು. ಇದರೊಂದಿಗೆ ಮಕ್ಕಳ ಹಾಡುಗಳನ್ನು ಮಕ್ಕಳಿಂದಲೇ ಹಾಡಿಸುವ ಬೆಳವಣಿಗೆಯೂ ಆಯಿತು. ಕನ್ನಡ ಚಲನಚಿತ್ರ ಚಟುವಟಿಕೆಗಳು ಕರ್ನಾಟಕದಲ್ಲಿ ನೆಲೆಯೂರಬೇಕೆಂಬ ಬಯಕೆ, ಒತ್ತಾಸೆಯ ಹಿನ್ನೆಲೆಯಲ್ಲಿ ಈ ಬದಲಾವಣೆ ಮುಖ್ಯ. ಇಷ್ಟಿದ್ದರೂ ಗಾಯಕಿಯರ ಮಟ್ಟಿಗೆ ಚಿತ್ರಾ, ವಾಣಿ ಜಯರಾಂ, ಅನುರಾಧ ಶ್ರೀರಾಮ್ ಅವರುಗಳು ಸಂಗೀತ ನಿರ್ದೇಶಕರ ಆಸಕ್ತಿಯ ಕಾರಣದಿಂದಾಗಿ ಬೆಂಗಳೂರಿಗೆ ಬಂದು ಹಾಡುವುದನ್ನು ಮುಂದುವರಿಸಿದ್ದರು. ಇದಕ್ಕೆ ಸಂಗೀತ ನಿರ್ದೇಶಕರು ಕೊಡುತ್ತಿದ್ದ ಕಾರಣ, ನಮ್ಮ ಕನ್ನಡ ಗಾಯಕಿಯರ ಗಾಯನ ತೃಪ್ತಿಕರವಾಗಿಲ್ಲ ಎಂಬುದಾಗಿತ್ತು.

ರಾಮು ಎಂಟರ್‌ಪ್ರೈಸಸ್ ಲಾಂಛನದಲ್ಲಿ ರಾಮು ನಿರ್ಮಾಣ, ನಾಗಣ್ಣ ನಿರ್ದೇಶನದ ಸಾಹಸ ಪ್ರಧಾನ ಚಿತ್ರ 'ಲೇಡಿ ಕಮಿಷನರ್'. ಮಾಲಾಶ್ರೀ ಮುಖ್ಯ ಪೊಲೀಸ್ ಅಧಿಕಾರಿಣಿ. ಅರುಣ್ ಪಾಂಡ್ಯನ್, ಶ್ರೀವಿದ್ಯಾ, ಕೋಟಾ ಶ್ರೀನಿವಾಸರಾವ್ ಮುಂತಾದ ಪರಭಾಷಾ ನಟರೇ ತುಂಬಿಕೊಂಡಿದ್ದ ಚಿತ್ರ. ಪೊಲೀಸ್-ರಾಜಕೀಯ ಬೆರೆತ, ಅಪ್ಪಟ ತೆಲುಗು ಚಿತ್ರದಂತಿತ್ತು. ಥ್ರಿಲ್ಲರ್ ಮಂಜು ಸಾಹಸಗಳು ಅದ್ದೂರಿಯಾಗಿದ್ದವು.

೧೯೯೭-೯೮ರ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರವೆಂದು ರಾಜ್ಯ ಪ್ರಶಸ್ತಿ ಗಳಿಸಿದ ಚಿತ್ರ 'ಲಾಲಿ'. ರಾಕ್‌ಲೈನ್ ವೆಂಕಟೇಶ್ ನಿರ್ಮಾಣ, ಕಥೆ-ಚಿತ್ರಕಥೆ-ಸಂಭಾಷಣೆ ಜೊತೆಗೆ ನಿರ್ದೇಶನದ ಹೊಣೆಯನ್ನು ದಿನೇಶ್‌ಬಾಬು ಹೊತ್ತಿದ್ದರು. ವಿಷ್ಣುವರ್ಧನ್, ಮೋಹಿನಿ, ರಾಮಕೃಷ್ಣ, ಹರೀಶ್ ಅಭಿನಯವಿತ್ತು. ವಿಷ್ಣುವರ್ಧನ್‌ಗೆ ಈ ಚಿತ್ರದಲ್ಲಿ ಅತ್ಯುತ್ತಮ ಅಭಿನಯಕ್ಕಾಗಿ ೧೯೯೭-೯೮ರ ರಾಜ್ಯದ ಅತ್ಯುತ್ತಮ ನಟ ಪ್ರಶಸ್ತಿ ಬಂದಿತು. ತಂದೆ-ಮಗಳ ಪ್ರೀತಿ, ಬಾಂಧವ್ಯಗಳ ಎಳೆಎಳೆಯನ್ನು ಬಿಡಿಸಿ ಅಚ್ಚುಕಟ್ಟಾಗಿ ಚಿತ್ರಿಸಿದ್ದರು ದಿನೇಶ್ ಬಾಬು. ತಂದೆ ಪಾತ್ರದಲ್ಲಿ ವಿಷ್ಣುವರ್ಧನ್ ಅಭಿನಯ ಅವಿಸ್ಮರಣೀಯ. ಜೀವನದ ಶ್ರೇಷ್ಠ ನಟನೆ ಈ ಚಿತ್ರದಲ್ಲಿ ವಿಷ್ಣು ಅವರಿಂದ ಹೊರ ಹೊಮ್ಮಿಸಿದ ದಿನೇಶ್ ಬಾಬು ನಿಜಕ್ಕೂ ಅಭಿನಂದನಾರ್ಹರು. ಇಂತಹ ಉತ್ತಮ ಚಿತ್ರವನ್ನು ಪ್ರೇಕ್ಷಕರು



(ಚಿತ್ರ ೧೦೩) 'ಲೇಡಿ ಕಮಿಷನರ್' ಚಿತ್ರದಲ್ಲಿ ಮಾಲಾಶ್ರೀ ಮತ್ತು ಮನ್ಸೂರ್ ಅಲಿಖಾನ್



(ಚಿತ್ರ ೧೦೪) 'ವಿಮೋಚನೆ' ಚಿತ್ರದಲ್ಲಿ ಸುಂದರ್‌ರಾಜ್, ಮಾಧುರಿ ಮತ್ತು ಶಿಲ್ಪಾ

ನೋಡಿದ್ದು ಕಡಿಮೆಯೇ. ಕೆಲವೊಂದು ದೃಶ್ಯಗಳಲ್ಲಿ, ಉದಾಹರಣೆಗೆ, ಮಗಳನ್ನು ಪ್ರೀತಿಸುವ ಹುಡುಗ ವಿಷ್ಣುರವರನ್ನು ಕೆಳಗೆ ಬೀಳಿಸಿ, ಅವರ ಎರಡೂ ಕೈಗಳನ್ನು ಹಿಂದಕ್ಕೆ ಎಳೆದು ಹಿಡಿದಾಗ ಅವರ ಮುಖ ಭಾವಗಳು ಮನಮಿಡಿಯುವಂಥವು. ಮಗಳ ಪಾತ್ರದಲ್ಲಿ ಮೋಹಿನಿಯೂ ಚೆನ್ನಾಗಿ ನಟಿಸಿದ್ದರು. ಕೆ.ಕಲ್ಯಾಣ್ ಗೀತರಚನೆಯೊಂದಿಗೆ ವಿ.ಮನೋಹರ್ ಸಂಗೀತದಲ್ಲಿ ಕೆಲವು ಹಾಡುಗಳು ಚೆನ್ನಾಗಿದ್ದವು. ದಿನೇಶ್ ಬಾಬು ಛಾಯಾಗ್ರಹಣ ಸುಂದರ ಪರಿಸರವನ್ನು ಸೆರೆಹಿಡಿದಿದೆ.

ನಾಗಾಭರಣ ತುಂಬು ಪ್ರೀತಿ-ಆಸೆ ಇಟ್ಟುಕೊಂಡು ನಿರ್ಮಿಸಿ, ನಿರ್ದೇಶಿಸಿದ ಚಿತ್ರ 'ವಿಮೋಚನೆ'. ಸ್ತ್ರೀಪರ ನಿಲುವು, ಸಮಸ್ಯೆಗಳಿಗೆ ಪರಿಹಾರ, ಸಮಸ್ಯೆಗಳು ಎದುರಾದಾಗ ಧೈರ್ಯ ಮತ್ತು ನೆರವಿಗೆ ಬರಬಹುದಾದ ಸಂಘಟನೆ, ಸಮಾಜಸುಧಾರಕರ ಬಗ್ಗೆ ಕೂಡಾ ಹೇಳುವುದು ಅವರ ಉದ್ದೇಶವಾಗಿತ್ತು. ಜೊತೆಗೆ ಇಡಿ ಇಡೀ ಕಟ್ಟಡಗಳನ್ನೇ ಲಪಟಾಯಿಸುವ ದಾದಾಗಳ ತಂತ್ರವನ್ನು ಕುರಿತೂ ಹೇಳುವ ಪ್ರಯತ್ನವಿತ್ತು. ತಳ್ಳಿಹಾಕುವಂಥ ಚಿತ್ರವಲ್ಲ. ಆದರೆ ಭ್ರಮಾಲೋಕದಲ್ಲೇ ಇರುವವರಿಗೆ ಇಷ್ಟು ವಾಸ್ತವಗಳು ಬೇಕೆನಿಸಲಿಲ್ಲ. ಜಯಶ್ರೀ ಅರವಿಂದ್ ಶಾಸ್ತ್ರೀಯ ಸಂಗೀತವನ್ನು ಚೊಕ್ಕವಾಗಿ ಅಳವಡಿಸಿದ್ದರು. ಕೆಲವು ದೃಶ್ಯಗಳಲ್ಲಿ ಸಮೂಹಗಾಯನ ತ್ಯಾಗರಾಜರ ಆರಾಧನೆಯನ್ನು ನೆನಪಿಗೆ ತರುವಂತಿತ್ತು. ಉತ್ತಮ ಸಂಗೀತ ಕೂಡಾ ಕಲಬೆರಕೆಗೇ ಒಗ್ಗಿದವರಿಗೆ ಬೋರ್ ಆಗಿರಬೇಕು. ಚಿತ್ರದಲ್ಲಿ ಜಯಂತಿಯವರ ಅಭಿನಯ ಅವರಿಗೆ ಪೈಪೋಟಿಯೆಂಬಂತೆ ನಾಗಾಭರಣರೇ ವಿಭಿನ್ನ ಗೆಟಪ್‌ನಲ್ಲಿ ಅಭಿನಯಿಸಿ ಗೆದ್ದಿದ್ದು ವಿಶೇಷ ಸಂಗತಿ. ಶಿಲ್ಪಾ, ತಾರಾ ಇಬ್ಬರೂ ಪಾತ್ರಕ್ಕೆ ನ್ಯಾಯ ಸಲ್ಲಿಸಿದ್ದರು. ಎಲ್ಲವನ್ನೂ ಹೇಳುವ ಪ್ರಯತ್ನದಲ್ಲಿ ಮುಖ್ಯಾಂಶಗಳ ಕೊಂಡಿ ಕಳಚಿಕೊಂಡಿತು. ನಾಗಾಭರಣ ಚೊಕ್ಕಸ



(ಚಿತ್ರ ೧೦೫) 'ಲಾಲಿ' ಚಿತ್ರದಲ್ಲಿ ವಿಷ್ಣುವರ್ಧನ್

ಬರಿದಾಗಿತ್ತು. ಎಂ.ಎಸ್.ಶೀಲಾ ಅವರಿಗೆ ಅತ್ಯುತ್ತಮ ಹಿನ್ನೆಲೆ ಗಾಯಕಿ ಪ್ರಶಸ್ತಿ ಲಭ್ಯವಾಯಿತು.

ಸಾಹಸ ಪ್ರಧಾನ ಚಿತ್ರಗಳನ್ನೇ ನಿರ್ದೇಶಿಸುತ್ತಾ ಬಂದ ಆನಂದ್ ಪಿ.ರಾಜು ಅವರು ಕಾಂತಾ ರಾಮಕೃಷ್ಣ ನಿರ್ಮಾಣದಲ್ಲಿ 'ಹಾಯ್ ಬೆಂಗಳೂರ್' ನಿರ್ದೇಶಿಸಿದರು. ರವಿಬೆಳಗೆರೆ ಸಂಪಾದಕತ್ವದಲ್ಲಿ ಇದೇ ಹೆಸರಿನಲ್ಲಿ ಅಂಡರ್‌ವರ್ಲ್ಡ್ ಚಟುವಟಿಕೆ ಮುಂತಾದ ವಿಷಯ ಕುರಿತ ಜನಪ್ರಿಯ ವಾರಪತ್ರಿಕೆ ಇದೆ. ಚಿತ್ರದ ಪೋಸ್ಟರ್ ಕೂಡ 'ಹಾಯ್ ಬೆಂಗಳೂರ್' ಪತ್ರಿಕೆಯ ಮುಖಪುಟದಂತೆಯೇ ಇತ್ತು. ಪತ್ರಿಕೆಯಲ್ಲಿ 'ರವಿಬೆಳಗೆರೆ ಸಾರಥ್ಯದಲ್ಲಿ' ಎಂದು ಬರೆದಿದೆ. ಅದೇ ರೀತಿ ಈ ಚಿತ್ರದ ಪೋಸ್ಟರ್‌ನಲ್ಲೂ ಬರೆದಿತ್ತು. ಚಿತ್ರದಲ್ಲಿ ನಾಯಕ ಶಶಿಕುಮಾರ್ ಹೆಸರೂ ರವಿ. ಅವರು ನಡೆಸುವ ಪತ್ರಿಕೆಯೂ 'ಹಾಯ್ ಬೆಂಗಳೂರ್'. ಪತ್ರಕರ್ತನ ಕಥೆಯೇ ಈ ಚಿತ್ರದ ವಸ್ತು. ರವಿ ಬೆಳಗೆರೆ ಸಹಕಾರ ಪಡೆಯಲಾಗಿತ್ತು. ಈ ಒಪ್ಪಿಗೆ-ನೆರವುಗಳಿಗೆ ಸಂಧಾನಕಾರರಾಗಿ ಕೆಲಸ ಮಾಡಿದವರು ಪತ್ರಕರ್ತ ಕೆ.ಜೆ.ಕುಮಾರ್.

ಸುನೀಲ್ ಕುಮಾರ್ ದೇಸಾಯಿಯವರ ಮತ್ತೊಂದು ಪ್ರಯತ್ನ 'ಪ್ರೇಮರಾಗ ಹಾಡು ಗೆಳತಿ'. ಚಿನ್ನಿ ಫಿಲಂಸ್‌ನ ಜಯಶ್ರೀದೇವಿ ನಿರ್ಮಾಪಕರು. ಶಿವರಾಜ್ ಕುಮಾರ್, ರಮೇಶ್, ನಿವೇದಿತಾ ಜೈನ್, ಶ್ರೀನಾಥ್, ಲೋಕೇಶ್ ಅಭಿನಯದಲ್ಲಿ ತೆರೆಕಂಡ ಈ ಚಿತ್ರವನ್ನು ನಿರೀಕ್ಷಿತ ಮಟ್ಟದಲ್ಲಿ ಜನ ಇಷ್ಟಪಡಲಿಲ್ಲ. ಯಂಡಮೂರಿ ವೀರೇಂದ್ರನಾಥ್ ಅವರ ಕಥೆ ಚಿತ್ರಕ್ಕೆ ಪ್ಲಸ್ ಪಾಯಿಂಟ್ ಆಗಲೇ ಇಲ್ಲ. ಇಳಯರಾಜ ಹಾಡುಗಳಲ್ಲಿ ನಾವೀನ್ಯ ಇರಲಿಲ್ಲ. ಕೃಷ್ಣಕುಮಾರ್ ಛಾಯಾಗ್ರಹಣ ಅಲ್ಲಲ್ಲಿ ನೆನಪಲ್ಲಿ ಉಳಿಯುವಂತಿತ್ತು. ವಿಕಾರ ರೂಪದ ಜಾಣ ಪೆದ್ದನ ಪಾತ್ರದಲ್ಲಿ ರಮೇಶ್ ಅತ್ಯುತ್ತಮವಾಗಿಯೇ ನಟಿಸಿದ್ದರು. ನಿವೇದಿತಾ ಜೈನ್ ಮೂಕಿ ಪಾತ್ರದಲ್ಲಿದ್ದರು. 'ನಮ್ಮೂರ ಮಂದಾರ ಹೂವೇ' ಚಿತ್ರದ ಮುಂದುವರೆದ ಭಾಗದಂತಿತ್ತು ಎಂದು ಹಲವರ ವಾದವಾಗಿತ್ತು. ಕನ್ನಡ ನಾಡಿನ ವಿವಿಧ ಸಂಸ್ಕೃತಿ, ಭಾಷೆಯ ಉಚ್ಚಾರಣೆ ಇವುಗಳ ಬಗ್ಗೆ ನಿರ್ದೇಶಕರು ತಮ್ಮ ಹಿಂದಿನ ಚಿತ್ರದಲ್ಲಿಯಂತೆಯೇ ಆಸಕ್ತಿ ವಹಿಸಿ ಚಿತ್ರಿಸಿದ್ದರು. ದೇಸಾಯಿ ಎಂದಾಕ್ಷಣ ಜನರ ನಿರೀಕ್ಷೆ ಹೆಚ್ಚಾಗಿಯೇ ಇರುತ್ತದೆ. ಚಿತ್ರ ಆ ಎತ್ತರ ಮುಟ್ಟಲಿಲ್ಲ. ಇದ್ದುದರಲ್ಲಿ 'ಲಲನಾ ಮಣಿ ಲಲನಾ ಮಣಿ...' ಹಾಡು ಪರವಾಗಿಲ್ಲ. ಆಗಾಗ ಚಿತ್ರದುದ್ದಕ್ಕೂ ಬರುವ ಸ್ಯಾಕ್ಸೋಫೋನ್ ಮತ್ತು ವಯಲಿನ್ ಟ್ಯೂನ್ ಮನ ಸೆಳೆಯುತ್ತದೆ.

'ನೀ ಮುಡಿದಾ ಮಲ್ಲಿಗೆ' ಕೋಡ್ಲು ರಾಮಕೃಷ್ಣ ನಿರ್ದೇಶನದ ಚಿತ್ರ. ಲವಲವಿಕೆಯಿಂದ ಆರಂಭವಾಗಿ ಕ್ರಮೇಣ ವಿಷಾದದ ಮಡುಗಟ್ಟಿಕೊಳ್ಳುವ ನಿರೂಪಣೆ. ಕೋಡ್ಲು ಅವರ ಎಂದಿನ ಅಚ್ಚುಕಟ್ಟು - ಕಾವ್ಯಮಯಗೊಳಿಸುವ ಕಾತರ, ನಿರೀಕ್ಷೆಗಳನ್ನು ಹುಸಿಗೊಳಿಸುವುದಕ್ಕಿಂತ ಅನಿರೀಕ್ಷಿತಗಳನ್ನು ಢಿಕ್ಕಿ ಹೊಡೆಸುವ ವಿಧಾನವೇ ಇಲ್ಲೂ ಇದೆ. ಆಕಸ್ಮಿಕ ಅಪಘಾತದಿಂದ ಶಾಕ್ ಆಗಿ 'ಜಡ'ವಾಗುವ ಮಡದಿ; ಇನ್ನೆಂದೂ ಯಥಾಸ್ಥಿತಿಗೆ ಬರುವುದು ಸಾಧ್ಯವೇ ಇಲ್ಲವಾದದ್ದು ಪವಾಡದ ಹಾಗೆ ಸಂಭವಿಸಿಬಿಡುವುದು, ಆ ಹೊತ್ತಿಗೆ ನಾಯಕನ ಬದುಕಿನಲ್ಲಿ ಇನ್ನೊಂದು ಜೀವ ಬಂದಾಗಿದೆ.

ಇಂಥ ಅಸಹಾಯಕ-ಅನಿವಾರ್ಯಗಳನ್ನು ಸೇರಿಸುತ್ತ ಉಸಿರುಗಟ್ಟಿಸುವ ಕೋಡ್ಲು ನಿರೂಪಣೆಯ ಧಾಟಿಯೇ ವಿಶಿಷ್ಟವಾದದ್ದು. ಚಿತ್ರದ ಹಾಡುಗಳು, ಛಾಯಾಗ್ರಹಣ ಚೆನ್ನಾಗಿತ್ತು.

೧೯೯೭ರ ಮಾರ್ಚ್ ೧೪ ರಂದು ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಮೊದಲ ಬಾರಿಗೆ ಕನ್ನಡ ನಿರ್ಮಾಪಕರೊಬ್ಬರು ಹಣ ಹಿಂದಿರುಗಿಸಲು ತಡಮಾಡಿದ ಕಾರಣದಿಂದ ಪ್ರಾಣ ಕಳೆದುಕೊಂಡರು. ಅವರ ದೇಹ ಬೆಂಗಳೂರಿನ ನಿಮ್ಹಾನ್ಸ್ ಆಸ್ಪತ್ರೆಯ ಎದುರಿನ ಕಾಲುದಾರಿಯ ಮೇಲೆ ಅನಾಥವಾಗಿ ಬಿದ್ದಿತ್ತು. ಎಲ್ಲಕ್ಕೂ ಉದಾಸೀನವೇ ಮದ್ದು ಎಂಬಂತಿದ್ದ ಚಿತ್ರೋದ್ಯಮಿಗಳು ಈಗ ಎದ್ದು ಕುಳಿತರು. ಪ್ರಾಣ ಹಾಗೂ ಮಾನರಕ್ಷಣೆಗಾಗಿ ತಮ್ಮ ಮಾತೃಸಂಸ್ಥೆಯಾದ ಚಲನಚಿತ್ರ ವಾಣಿಜ್ಯ ಮಂಡಳಿ ಮೊರೆ ಹೋದರು. ಕೂಡಲೇ ಮಂಡಳಿಯು ಮುಖ್ಯಮಂತ್ರಿ, ಗೃಹಮಂತ್ರಿ, ಪೊಲೀಸ್ ಕಮೀಷನರ್‌ರವರಿಗೆ ಮನವಿ ಸಲ್ಲಿಸಿ, ಉದ್ಯಮವನ್ನು ರಕ್ಷಿಸುವಂತೆ ವಿನಂತಿಸಿತು. ಭೂಗತ ಲೋಕದಿಂದ ಆರ್ಥಿಕ ನೆರವು ಪಡೆದಿದ್ದವರ ಪಟ್ಟಿ ಮಾಡಿ ಸರ್ಕಾರಕ್ಕೆ ಸಲ್ಲಿಸಲಾಯಿತು. ಸಾರ್ವಜನಿಕ ಚರ್ಚೆಯಾದ ಈ ಘಟನೆಯಿಂದಾಗಿ ಸಿನಿಮಾ ಉದ್ಯಮದ ಬಗ್ಗೆ ಗೌರವ ಮತ್ತಷ್ಟು ನಾಶವಾಯಿತು. ತನ್ನ ಘನತೆಯನ್ನು ಕಾಪಾಡಿಕೊಳ್ಳಬೇಕಾದ ಇಕ್ಕಟ್ಟಿನ ಪ್ರಸಂಗದಲ್ಲಿ ಸಿಕ್ಕಿಬಿದ್ದ ವಾಣಿಜ್ಯ ಮಂಡಳಿಯು ರೌಡಿ ಹಿನ್ನೆಲೆಯಿರುವವರಿಂದ ಹಣಕಾಸು ನೆರವು ಪಡೆಯಬಾರದು ಎಂದು ತುರ್ತು ಸುತ್ತೋಲೆಯನ್ನು ನಿರ್ಮಾಪಕರಿಗೆ ಕಳುಹಿಸಿತು. ಚಿದಂಬರಶೆಟ್ಟಿ ಹತ್ಯೆಯಿಂದ ಮಗುಡ ಅನುಭವಿಸಿದ ಚಿತ್ರರಂಗವು, ಹಣದ ಕೊರತೆಯಿಂದಾಗಿ ೧೦ ಚಿತ್ರಗಳ ಚಿತ್ರೀಕರಣ ಸ್ಥಗಿತಗೊಂಡಿದ್ದರಿಂದ ಇನ್ನೊಂದು ರೀತಿಯ ಆಘಾತವನ್ನು ಅನುಭವಿಸಿತು. ಈ ಹಂತದಲ್ಲಿ ಗಾಂಧೀನಗರದ ಹಣಕಾಸು ಒದಗಿಸುವ ವೃತ್ತಿನಿರತ ಸಂಸ್ಥೆ ವ್ಯಕ್ತಿಗಳು ಜಾಗೃತರಾಗಿ ೧೯೯೭ರ ಜೂನ್‌ನಲ್ಲಿ 'ಫೈನಾನ್ಷಿಯರ್‌ಗಳ ಸಂಘ' ಹುಟ್ಟುಹಾಕಿದರು. ಈ ಸಂಘ ಜನ್ಮ ತಳೆದ ಸಂದರ್ಭದಲ್ಲಿ ಆರು ತಿಂಗಳುಗಳ ಕಾಲ ಸುಮಾರು ೩೦ ಚಿತ್ರಗಳು ಡೋಲಾಯಮಾನ ಸ್ಥಿತಿಯನ್ನು ಅನುಭವಿಸುತ್ತಿದ್ದವು. ಇದು ಹಾಗೂ ಕೆಲವು ನಿರ್ಮಾಪಕರು ಒಂದೇ ಚಿತ್ರಕ್ಕೆ ನಾಲ್ಕೈದು ಕಡೆ ನೆಗೆಟಿವ್ ಹಕ್ಕಿನ ಮೇಲೆ ಸಾಲಪಡೆದು ವಂಚಿಸುತ್ತಿದ್ದ ಪ್ರವೃತ್ತಿಗೆ ಕಡಿವಾಣ ಹಾಕುವುದಕ್ಕಾಗಿ ಈ ಸಂಘ ರೂಪುಗೊಂಡಿತು. ಚಿತ್ರವೊಂದು ಗಲ್ಲಾಪೆಟ್ಟಿಗೆಯಲ್ಲಿ ಸೋತಾಗ ಅದಕ್ಕೆ ಪರಸ್ಪರ ಗೊತ್ತಿಲ್ಲದೆ ಸಾಲ ಕೊಟ್ಟಿದ್ದ ನಾಲ್ಕೈದು ಮಂದಿ ಒಟ್ಟಿಗೇ ಮೋಸ ಹೋಗಿರುತ್ತಿದ್ದರು. ಅಲ್ಲದೆ ಅವರೊಳಗಿನ ಅನಾರೋಗ್ಯಕರ ಪೈಪೋಟಿಯನ್ನು ಕೂಡ ನಿಗ್ರಹಿಸಿಕೊಳ್ಳುವ ಅಗತ್ಯವಿತ್ತು. ಇದೆಲ್ಲಾ ಕಾರಣವಿಂದಿಂದಾಗಿ ಎಲ್ಲರೂ ಒಂದಾದರು. ಸಂಘ ರೂಪುಗೊಳ್ಳುತ್ತಿದ್ದಂತೆ ತೆಗೆದುಕೊಂಡ ತೀರ್ಮಾನವೇನೆಂದರೆ ''ಸದ್ಯಕ್ಕೆ ಯಾವುದೇ ಚಿತ್ರಕ್ಕೆ ನೆರವು ನೀಡುವುದು ಬೇಡ, ಪರಿಸ್ಥಿತಿ ಬದಲಾದ ಬಳಿಕ ನೋಡೋಣ'' ಎಂಬುದು. ಈ ತೀರ್ಮಾನ ಚಿತ್ರೋದ್ಯಮದ ಒಟ್ಟಾರೆ ಹಿತದೃಷ್ಟಿಯಿಂದ ಅನಿವಾರ್ಯವಾಗಿತ್ತಾದರೂ ಕೆಲವರು ಸಭ್ಯ ನಿರ್ಮಾಪಕರು ತೊಂದರೆ ಅನುಭವಿಸಿದರು.

ಮುಸುಕು ಹಾಕಿಕೊಂಡು ಒಳಗೇ ಅಡಗಿದ್ದ ಕೆಡುಕು ವಿಚಿತ್ರ ರೀತಿಯಲ್ಲಿ ತಲೆ ಎತ್ತಿತ್ತು. ಕಥೆಗಾಗಿ, ಕಲಾವಿದರ ಕಾಲ್‌ಶೀಟ್‌ಗಾಗಿ, ಚಿತ್ರಮಂದಿರಕ್ಕಾಗಿ ಹೀಗೆ ಹಲವು ನೆಪಗಳನ್ನು ಮುಂದೆ ಮಾಡಿ ಹಲ್ಲೆ, ಪ್ರಾಣ ಬೆದರಿಕೆ ಇತ್ಯಾದಿಗಳಾದವು. ಸವಾಲ್-ಜವಾಬ್‌ಗಳ ಹಾಗೆ ಪತ್ರಿಕಾ ವರದಿಗಳೂ ಬಂದುವು. ಇದಾವುದೂ ಚಿತ್ರೋದ್ಯಮದ ದೃಷ್ಟಿಯಿಂದ ಒಳ್ಳೆಯದಂತೂ ಅಲ್ಲ. ಬುದ್ಧಿ-ಪ್ರತಿಭೆಗಳಿಂದ ಬೆಳೆಯುವ ಸಾಮಾಜಿಕ ಜವಾಬ್ದಾರಿ ಇಟ್ಟುಕೊಂಡು ಮಾಧ್ಯಮದಲ್ಲಿ ದುಡಿಯಬೇಕೆಂಬ ಕಾಳಜಿ ಕಣ್ಮರೆಯಾಗಿ ದುಡ್ಡು, ದುಡ್ಡಿಗಾಗಿ ದುರ್ವರ್ತನೆ-ದಬ್ಬಾಳಿಕೆ ಎಂಬಂತಾಯಿತು. ದೀರ್ಘ ಕಾಲದಿಂದ ಉದ್ಯಮದಲ್ಲೇ ಇದ್ದ ಸಜ್ಜನರು ತಲೆತಗ್ಗಿಸಿ, ಒಳಗೊಳಗೇ ಕುಸಿದುಹೋದರು.

೧೯೯೬ ರಲ್ಲಿ ಕನ್ನಡ ಚಿತ್ರೋದ್ಯಮದ ಆರ್ಥಿಕ ವಹಿವಾಟಿನಲ್ಲಿ ಕೇಂದ್ರ ಸರ್ಕಾರಿ ಸ್ವಾಮ್ಯದ ದೂರದರ್ಶನ ಮತ್ತು ಖಾಸಗಿ ಟಿ.ವಿ. ಚಾನಲ್‌ಗಳು ಮುಖ್ಯವಾದ ಪಲ್ಲಟಗಳನ್ನು ಉಂಟುಮಾಡಿದವು. ದೂರದರ್ಶನ ಕೂಡ ಚಲನಚಿತ್ರ ಮಾರಾಟದ ಒಂದು ಮುಖ್ಯ ಪೇಟೆಯಾಯಿತು. ಇದುವರೆಗೆ ಪ್ರೇಕ್ಷಕರಿಂದ ಬರಬಹುದಾದ ಹಣವನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಳ್ಳುತ್ತಿದ್ದ ನಿರ್ಮಾಪಕರು ಈ ಅವಧಿಯಲ್ಲಿ ವಿಸ್ತಾರವಾಗಿ ಬೆಳೆದಿದ್ದ ಹಾಡುಗಳ ಕ್ಯಾಸೆಟ್ ಮಾರಾಟದಿಂದ ಬರಬಹುದಾದ ಹಣದೊಂದಿಗೆ, ದೂರದರ್ಶನದಲ್ಲಿ ಪ್ರಸಾರವಾದರೆ ಸಿಗಬಹುದಾದ ಮೊತ್ತವನ್ನು ಕೂಡ ಗಳಿಸುವುದು ಸಾಧ್ಯವಾಯಿತು. ಚಿತ್ರೋದ್ಯಮದ ಆರ್ಥಿಕ ವಹಿವಾಟಿನ ನೇರ ಬಿಂಬ ದೂರದರ್ಶನದಲ್ಲಿ ಕಾಣಿಸಿಕೊಳ್ಳತೊಡಗಿತು. ಅದೇ ಅವಧಿಯಲ್ಲಿ ಖಾಸಗಿ ಟಿ.ವಿ. ಚಾನಲ್‌ಗಳು ಒಂದೊಂದಾಗಿ ಆರಂಭವಾಗುತ್ತಿದ್ದುದರಿಂದ ವ್ಯಾಪಾರದ ಚಿತ್ರ ಅಸ್ಪಷ್ಟವಾಗಿದ್ದರೂ ಆಗುತ್ತಿದ್ದ ಬದಲಾವಣೆ, ಸಿಗುತ್ತಿದ್ದ ಪ್ರತಿಫಲಗಳು ಉದ್ಯಮದಲ್ಲಿ ಗೊಂದಲ ಉಂಟುಮಾಡಿದವು. ತಮ್ಮ ಚಿತ್ರಗಳ ಪ್ರಸಾರಕ್ಕಾಗಿ ನಿರ್ಮಾಪಕರು ದೂರದರ್ಶನದ ಅಧಿಕಾರಿಗಳ ಎದುರು ವಿನಯದಿಂದ ಕುಳಿತುಕೊಳ್ಳಬೇಕಾಗಿದ್ದ ಪರಿಸ್ಥಿತಿ ೧೯೯೫ಕ್ಕೆ ಕೊನೆಯಾಗಿತ್ತು. ಇದಕ್ಕೆ ಕಾರಣ ಸರ್ಕಾರಿ ದೂರದರ್ಶನ ಖಾಸಗಿ ಚಾನಲ್‌ಗಳ ಜೊತೆಗೆ ಪೈಪೋಟಿ ನಡೆಸಲು ಆರಂಭಿಸಿದ ಬಿಡ್ಡಿಂಗ್ ವ್ಯವಸ್ಥೆ. ಇದನ್ನು ರವಿಚಂದ್ರನ್ ಚಿತ್ರವೊಂದರ ಉದಾಹರಣೆ ಮೂಲಕ ನೋಡಿದರೆ ದೂರದರ್ಶನ ವಾಹಿನಿಗಳು ಹಾಗೂ ಜಾಹಿರಾತು ಸಂಸ್ಥೆಗಳು ಚಲನಚಿತ್ರಗಳನ್ನು ಯಾವ ಪ್ರಮಾಣದಲ್ಲಿ ಅವಲಂಬಿಸಿದ್ದವು ಎಂಬುದರ ಚಿತ್ರ ದೊರೆಯುತ್ತದೆ. ಈ ಮಿನಿಮಮ್ ಗ್ಯಾರಂಟಿ ಬಿಡ್ಡಿಂಗ್ ವ್ಯವಸ್ಥೆ ಜಾರಿಗೆ ಬಂದದ್ದು ೧೯೯೭ರ ಸೆಪ್ಟೆಂಬರ್ ಮೊದಲ ವಾರದಲ್ಲಿ.

ಬೆಂಗಳೂರು ದೂರದರ್ಶನ ರವಿಚಂದ್ರನ್ ಅಭಿನಯದ 'ನಾನೂ ನನ್ನ ಹೆಂಡ್ತಿ' ಚಿತ್ರದ ೪೦.೫ ಲಕ್ಷ ರೂಪಾಯಿ ಜಾಹಿರಾತಿನಿಂದಾಗಿ ರಾಷ್ಟ್ರದಲ್ಲೇ ಪ್ರಾದೇಶಿಕ ಕೇಂದ್ರವೊಂದರ ಅತ್ಯಧಿಕ ಜಾಹಿರಾತು ಗಳಿಸಿದ ಕೀರ್ತಿಗೆ ಪಾತ್ರವಾಯಿತು. ಈ ಚಿತ್ರಕ್ಕೆ ೧.೨೫ ಸೆಕೆಂಡ್‌ನ ಜಾಹಿರಾತು ದೊರಕಿದ್ದು ಆ ದಿನಗಳಲ್ಲಿ ಒಂದು ದಾಖಲೆ. ಅದುವರೆಗೆ ಪ್ರಸಾರವಾದ ಚಿತ್ರಗಳಿಗೆ ೧೭ ರಿಂದ ೨೯ ಲಕ್ಷ ರೂಪಾಯಿಯವರೆಗೆ



(ಚಿತ್ರ ೧೦೬) 'ಪ್ರೇಮರಾಗ ಹಾಡು ಗೆಳತಿ' ಚಿತ್ರದಲ್ಲಿ ಶಿವರಾಜ್ ಕುಮಾರ್, ನಿವೇದಿತಾ ಜೈನ್

ಆದಾಯ ಬರುತ್ತಿದ್ದ ಹಿನ್ನೆಲೆಯಲ್ಲಿ ಇದು ದೊಡ್ಡ ಮೊತ್ತವಾಗಿತ್ತು. ಆಗ್ಗೆ ಒಂದು ಸೆಕೆಂಡ್ ಜಾಹಿರಾತಿಗೆ ಒಂದು ಲಕ್ಷ ರೂಪಾಯಿ ನಿಗದಿ ಮಾಡಲಾಗಿತ್ತು. ಯಾವುದೇ ಕನ್ನಡ ಚಿತ್ರ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾಗಬೇಕಾದರೆ ಯಾವ ಮಧ್ಯವರ್ತಿ ಮಿನಿಮಮ್ ಗ್ಯಾರಂಟಿ ನೀಡುವರೋ ಅವರ ಚಿತ್ರವನ್ನು ಬಿಡ್ಡಿಂಗ್ ಮೂಲಕ ಆಯ್ಕೆ ಮಾಡಲಾಗುತ್ತಿತ್ತು. ಮಿನಿಮಮ್ ಗ್ಯಾರಂಟಿ ಸ್ಕೀಂನಿಂದ ದೂರದರ್ಶನ ಕೇಂದ್ರಕ್ಕೆ ಕನಿಷ್ಠ ೧೩ ಲಕ್ಷ ರೂಪಾಯಿ ಕನ್ನಡ ಚಿತ್ರ ಪ್ರಸಾರದಿಂದ ಸಿಗಬೇಕು ಎನ್ನುವ ನಿಯಮ ರೂಪಿಸಲಾಗಿತ್ತು. ಇದರ ಜೊತೆಗೆ ಯಾವ ಕನ್ನಡ ಚಿತ್ರ ಹೆಚ್ಚು ಜಾಹಿರಾತು ನೀಡುವುದೋ ಅದಕ್ಕೆ ಮೊದಲ ಆದ್ಯತೆ. ಒಂದು ವರ್ಷದ ೫೨ ಭಾನುವಾರಗಳ ಪ್ರಸಾರಕ್ಕೆ ದೂರದರ್ಶನ ಕೇಂದ್ರ ೭೫ ಸಾವಿರ ರೂಪಾಯಿ ಮುಂಗಡ ಪಡೆದು ಅರ್ಜಿಗಳನ್ನು ಮಾರಾಟ ಮಾಡಿತ್ತು. ಈ ಯೋಜನೆ ಮೇಲ್ನೋಟಕ್ಕೆ ಲಾಭದಾಯಕವಾಗಿ ಕಂಡರೂ ಹೆಚ್ಚು ಪ್ರಯೋಜನವಾಗುತ್ತಿದ್ದುದು ಜನಪ್ರಿಯ ಚಿತ್ರಗಳಿಗೆ ಮಾತ್ರ. ಈ ವ್ಯವಸ್ಥೆಯ ಇನ್ನೂ ಒಂದು ಸಮಸ್ಯೆಯೆಂದರೆ ನಿರ್ಮಾಪಕರಿಗೆ ಹೆಚ್ಚು ಹಣ ಆಗುತ್ತಿರಲಿಲ್ಲ. ಏಕೆಂದರೆ ಆ ಹೊತ್ತಿಗಾಗಲೇ ಬಹಳ ಮಂದಿ ನಿರ್ಮಾಪಕರು ತಮ್ಮ ಚಿತ್ರಗಳನ್ನು ಮಧ್ಯವರ್ತಿಗಳಿಗೆ ಮಾರಿಕೊಂಡಿದ್ದರು. ನಾಲ್ಕು ಮುಖ್ಯ ಮಧ್ಯವರ್ತಿ ಸಂಸ್ಥೆಗಳ ಕೈವಶದಲ್ಲಿ ೩೦ಕ್ಕೂ ಹೆಚ್ಚು ಜನಪ್ರಿಯ ಚಿತ್ರಗಳ ಹಕ್ಕುಗಳಿತ್ತು. ಇವರು ಗರಿಷ್ಠವೆಂದರೆ ಒಬ್ಬ ನಿರ್ಮಾಪಕರಿಗೆ ಎರಡು ಲಕ್ಷ ರೂಪಾಯಿ ಮಾತ್ರ ನೀಡಿದ್ದರು. ಈ ಯೋಜನೆಗೆ ಮುಂಚೆ ದೂರದರ್ಶನ ಕನ್ನಡ ಚಿತ್ರವೊಂದಕ್ಕೆ

ಒಂದು ಪ್ರದರ್ಶನಕ್ಕೆ ಹೆಚ್ಚೆಂದರೆ ೬೦ ಸಾವಿರ ರೂಪಾಯಿಗಳನ್ನು ನೀಡುತ್ತಿತ್ತು. ಇದಕ್ಕೆ ಹೋಲಿಸಿದರೆ ಎರಡು ಲಕ್ಷ ರೂಪಾಯಿ ಒಳ್ಳೆಯ ಮೊತ್ತ ಎನಿಸಿದರೂ ದೂರದರ್ಶನ ಮಾಡುತ್ತಿದ್ದ ಲಾಭದ ಮುಂದೆ ಅದು ನಗಣ್ಯವಾದ ಮೊತ್ತವಾಗಿತ್ತು. ಅದರೆ, ಕನ್ನಡ ಚಿತ್ರವೊಂದರ ನಿರ್ಮಾಣಕ್ಕೆ ಎಷ್ಟು ವೆಚ್ಚವಾಗುತ್ತದೆಯೋ ಅದರ ಎರಡು ಪಟ್ಟು ಹಣವನ್ನು ಜಾಹಿರಾತು ಮೂಲಕ ಬೆಂಗಳೂರು ದೂರದರ್ಶನ ಕೇಂದ್ರ ಗಳಿಸತೊಡಗಿತು.

ಸರ್ಕಾರಿ ಸಂಸ್ಥೆಯೊಂದರ ನೀತಿ-ನಿಯಮಗಳು ಹೀಗ ಕಾರ್ಯ ನಿರ್ವಹಿಸುತ್ತಿದ್ದಾಗ ಪೂರ್ಣಾವಧಿ ಕನ್ನಡ ಕಾರ್ಯಕ್ರಮಗಳೊಂದಿಗ ಆರಂಭವಾದ ತಮಿಳುನಾಡು ಮೂಲದ 'ಉದಯ ಟಿ.ವಿ.' ಇನ್ನೊಂದು ಬಗೆಯ ಚಾಣಾಕ್ಷತೆಯನ್ನು ಪ್ರದರ್ಶಿಸಿತು. ಸರ್ಕಾರಿ ದೂರದರ್ಶನ ವಾಹಿನಿಯನ್ನು ಹೊರತುಪಡಿಸಿ ಇನ್ಯಾವ ಖಾಸಗಿ ಚಾನಲ್‌ಗಳಿಗೂ ಹಕ್ಕುಗಳನ್ನು ಮಾರುವಂತಿಲ್ಲವೆಂಬ ಕರಾರಿನ ಮೇಲೆ ಕನ್ನಡ ಚಿತ್ರಗಳನ್ನು ಅದು - ಕಟ್ಟದಿರಲಿ, ಒಳ್ಳೆಯದಿರಲಿ - ಖರೀದಿಸಲು ಆರಂಭಿಸಿತು. ಚಿತ್ರದ ಗುಣಮಟ್ಟದ ಮೇಲ 'ಉದಯ ಟಿ.ವಿ. ವಾಹಿನಿ' ಕಟ್ಟಿದ ಬೆಲೆ ಸರ್ಕಾರಿ ದೂರದರ್ಶನದ ಆಡಳಿತಾತ್ಮಕ ಕಿರಿಕಿರಿಗಳಿಂದಾಗಿ ರೋಸಿ ಹೋಗಿದ್ದ ನಿರ್ಮಾಪಕರಿಗೆ ಆಶಾದಾಯಕವಾಗಿ ಕಂಡಿತು. ಅಲ್ಲದೆ ಸರ್ಕಾರಿ ದೂರದರ್ಶನದಲ್ಲಿ ಪ್ರಸಾರಕ್ಕೆ ಅಷ್ಟು ಬೇರೆ ಇರಲಿಲ್ಲ. ಎಂದಾದರೂ ಅದರ ಹಣವೂ ಬಂದೇ ಬರುತ್ತದಲ್ಲ ಎಂದು ಉದಯ ಟಿ.ವಿ.ಗ ಚಿತ್ರದ ಹಕ್ಕುಗಳನ್ನು ಮಾರಲು ಆರಂಭಿಸಿದರು. ಚಿತ್ರದ ಜಯಪ್ರಿಯತೆ,



(ಚಿತ್ರ ೧೦೭)'ನೀ ಮುಡಿದಾ ಮಲ್ಲಿಗೆ' ಚಿತ್ರದಲ್ಲಿ ಭಾವನಾ ಮತ್ತು ನಿವೇದಿತಾಜೈನ್

ನಿರ್ದೇಶಕ, ಕಲಾವಿದರನ್ನು ಅನುಸರಿಸಿ ಉದಯ ಟಿ.ವಿ. ನಿರ್ಮಾಪಕರಿಗೆ ಚಿತ್ರವೊಂದಕ್ಕೆ ಕೊಡುತ್ತಿದ್ದ ಹಣ ಕನಿಷ್ಠ ಹತ್ತು ಸಾವಿರದಿಂದ ಗರಿಷ್ಠ ಎರಡು ಲಕ್ಷ ರೂಪಾಯಿಗಳು. ತಮ್ಮ ಬಳಿ ಐದರಿಂದ ೩೫ ಚಿತ್ರಗಳವರೆಗೆ ಹಕ್ಕುಗಳನ್ನು ಇಟ್ಟುಕೊಂಡವರು ೧೦-೧೫ ಚಿತ್ರಗಳ ಮಾರಾಟದಿಂದ ಸಿಗಬಹುದಾದ ಒಟ್ಟು ಹಣವನ್ನು ಲೆಕ್ಕ ಹಾಕಿ ಸಡಗರಗೊಂಡರು; ಮಾರಾಟ ಮಾಡಿದರು. ಯಾರಿಗೂ ಮುಂದೊಂದು ದಿನ ಅಥವಾ ಇನ್ನೆರಡು ವರ್ಷದಲ್ಲಿ ಇನ್ನಷ್ಟು ಖಾಸಗಿ ಚಾನಲ್‌ಗಳು ಆರಂಭವಾಗಿ ಏರ್ಪಡುವ ಸ್ಪರ್ಧೆಯಿಂದ ತಮ್ಮ ಚಿತ್ರಕ್ಕೆ ಇನ್ನೂ ಉತ್ತಮ ಮೌಲ್ಯ ಸಿಗಬಹುದೆಂಬ ಊಹೆಯಿರಲಿಲ್ಲ. ಈ ಮಾರಾಟದ ಸಂಭ್ರಮ, ಬಿರುಸು ಹೇಗಿತ್ತೆಂದರೆ ೬೦ ವರ್ಷಗಳಲ್ಲಿ ತಯಾರಾಗಿದ್ದ ಕನ್ನಡದ ೨೦೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ೧೬೦೦ ಚಿತ್ರಗಳನ್ನು ಉದಯ ಟಿ.ವಿ. ಮೂರೇ ವರ್ಷಗಳಲ್ಲಿ ಖರೀದಿಸಿಬಿಟ್ಟಿತು. ಬೆರಳೆಣಿಕೆಯಷ್ಟು ಮಂದಿ ಮಾತ್ರ ಆರ್ಥಿಕ ಅನುಕೂಲಗಳಿದ್ದುದರಿಂದಲೋ ಅಥವಾ ಭವಿಷ್ಯದಲ್ಲಿ ಇನ್ನೂ ಉತ್ತಮ ಬೆಲೆ ಸಿಗಬಹುದೆಂಬ ಭರವಸೆಯಿಂದಲೋ ಈ ಎಲ್ಲಾ ಬೆಳವಣಿಗೆಗಳ ಬಗ್ಗೆ ಉದಾಸೀನದಿಂದಿದ್ದರು. ಈ ಔದಾಸೀನ್ಯ ಫಲ ಕೊಡಲು ಬಹಳ ದಿನ ಹಿಡಿಯಲಿಲ್ಲ. ಆಂಧ್ರದ ಹೆಸರಾಂತ ಚಿತ್ರೋದ್ಯಮಿ ರಾಮೋಜಿರಾವ್ ಕನ್ನಡದಲ್ಲಿ ಚಾನಲ್ ಆರಂಭಿಸುವ ನಿರ್ಧಾರದೊಂದಿಗೆ ಗಮನಾರ್ಹ ಬದಲಾವಣೆಗಳು ಕಾಣತೊಡಗಿದವು. ಚಿತ್ರಗಳ ನಟರು, ಯಶಸ್ಸು, ಗುಣಮಟ್ಟ ಆಧರಿಸಿ ಒಂದು ಚಿತ್ರಕ್ಕೆ ಎ. ಬಿ. ಸಿ. ಅರ್ಹತಾನುಸಾರ ೧೦ - ೭ - ೫ ಲಕ್ಷ ರೂಪಾಯಿ ಬೆಲೆ ಕಟ್ಟಲಾಯಿತು. ಪ್ರಮುಖ ನಟರ, ವಿಶೇಷ ಯಶಸ್ಸು ಗಳಿಸಿದ ಚಿತ್ರಕ್ಕೆ ೧೨ ಲಕ್ಷ ರೂಪಾಯಿ ಕೊಟ್ಟ ಉದಾಹರಣೆ ಸೃಷ್ಟಿಯಾಯಿತು. ಇದನ್ನೆಲ್ಲ ನಿರೀಕ್ಷಿಸಿರದಿದ್ದ ಕನ್ನಡ ನಿರ್ಮಾಪಕರು ಪುಳಕಗೊಂಡರು. ಆದರೆ ರಾಮೋಜಿರಾಯರ 'ಈ ಟಿ.ವಿ. ಕನ್ನಡ' ವಾಹಿನಿಗೆ ಸಿಕ್ಕಿದ್ದು ಕೇವಲ ೪೦೦ ಚಿತ್ರಗಳು ಮಾತ್ರ. ಉಳಿದ ಕೆಲವನ್ನು ಮಧ್ಯವರ್ತಿಗಳ ಮೂಲಕ 'ಕಾವೇರಿ' ಚಾನಲ್ ಖರೀದಿಸಿತ್ತು. ಅವರಿಗೆ ರಾಜಕುಮಾರ್ ನಿರ್ಮಾಣ ಸಂಸ್ಥೆಯ ಕೃಪೆಯೂ ಇದ್ದುದರಿಂದ ಕೆಲವೇ ಆದರೂ ಉತ್ತಮ ಚಿತ್ರಗಳು ಸಿಕ್ಕವು.

ಇವೆಲ್ಲ ಸಿದ್ಧವಾಗಿದ್ದ ಚಿತ್ರಗಳ ಮಾರುಕಟ್ಟೆ ಮತ್ತು ಮಾರಾಟದ ಚಿತ್ರಣ. ೧೯೯೯-೨೦೦೦ ದಲ್ಲಿ ಇದು ಇನ್ನೂ ಒಂದು ಮಜಲನ್ನು ಮುಟ್ಟಿತು. ಚಿತ್ರಗಳ ಮುಹೂರ್ತ ದಿನವೇ ಟಿ.ವಿ. ಚಾನಲ್ ಪ್ರತಿನಿಧಿಗಳು ಹಾಜರಾಗಲು ಆರಂಭಿಸಿದರು. ಚಿತ್ರೀಕರಣ ಆರಂಭವಾದ ಕೆಲಗಂಟೆಯಲ್ಲೇ ವ್ಯಾಪಾರ ಮಾತುಕತೆ ಮೊದಲಾಗುತ್ತಿತ್ತು. ಇಬ್ಬರು ಕಲಾವಿದರ ಉದಾಹರಣೆಯ ಮೂಲಕ ಈ ಬೆಳವಣಿಗೆಯನ್ನು ವಿವರಿಸಿದರೆ ಕನ್ನಡ ಚಿತ್ರರಂಗದಲ್ಲಿ ಆಗಿದ್ದ ಬದಲಾವಣೆಯ ನೋಟ ದೊರೆಯುತ್ತದೆ. ವಿಷ್ಣುವರ್ಧನ್ ಅಥವಾ ಶಿವರಾಜ್ ಕುಮಾರ್ ಅಭಿನಯದ ಚಿತ್ರವೊಂದು ಮುಹೂರ್ತದ ದಿನವೇ ೧೫ ರಿಂದ ೨೦ ಲಕ್ಷ ರೂಪಾಯಿಗಳವರೆಗೆ ಸ್ಪರ್ಧಾತ್ಮಕ ಬೆಲೆಗೆ ಮಾರಾಟವಾಗುತ್ತಿತ್ತು. ಉಳಿದ ನಾಯಕನಟರ ಚಿತ್ರಗಳು ಅವರಿಗಿದ್ದ ಮಾರುಕಟ್ಟೆ ಮೌಲ್ಯವನ್ನು ಅನುಸರಿಸಿ ಕನಿಷ್ಠ ಏಳರಿಂದ ೧೨ ಲಕ್ಷ ರೂಪಾಯಿ ಬೆಲೆ ಪಡೆಯುಕೊಳ್ಳುತ್ತಿದ್ದವು. ಮುಹೂರ್ತದ ದಿನದಂದೇ ಮುಂಗಡ ಕೊಟ್ಟು ಕರಾರನ್ನು ಮಾಡಿಕೊಳ್ಳುತ್ತಿದ್ದ ಇಂಥ ಬೆಳವಣಿಗೆಯಿಂದ ನಿರ್ಮಾಪಕರಿಗೆ ಪ್ರಯೋಜನವಾಗತೊಡಗಿತು. ಖಾಸಗಿ ಟಿ.ವಿ.ಚಾನಲ್‌ಗಳ ನಡುವಿನ ಇಂಥ ಸ್ಪರ್ಧೆಯಿಂದಾಗಿ ದಿನ ಕಳೆದಂತೆ ಸರ್ಕಾರಿ ಸ್ವಾಮ್ಯದ ದೂರದರ್ಶನ ವಾಹಿನಿ ಮಹತ್ವ ಕುಗ್ಗತೊಡಗಿತು.

ಕನ್ನಡ ಚಿತ್ರರಂಗವನ್ನು ಹೀಗೆ ತಮ್ಮ ತೆಕ್ಕೆಗೆ ತೆಗೆದುಕೊಂಡ ಖಾಸಗಿ ಟಿ.ವಿ. ವಾಹಿನಿಗಳು ಸಿನಿಮಾದಿಂದ ಜನಪ್ರಿಯತೆ, ವರ್ಚಸ್ಸು ಪಡೆದ ಕಲಾವಿದರು, ನಿರ್ದೇಶಕರನ್ನು ಬೆಂಬತ್ತಿದವು. ಮೊದಲಿಗೆ ಬಿಡುವಾಗಿದ್ದ ಸಣ್ಣಪುಟ್ಟ ಕಲಾವಿದರು, ನಿರ್ದೇಶಕರು ಮಾತ್ರ ಅವರಿಗೆ ದೊರಕಿದರು. ಆದರೆ ದಿನ ಕಳೆದಂತೆ ಚಟುವಟಿಕೆಗಳ ಸ್ವರೂಪವೇ ಬದಲಾಗಿಹೋಯಿತು. ಮೊದಲು ಚಿತ್ರರಂಗದವರು ಕಿರುತೆರೆಯ ಅಭಿನಯ, ನಿರ್ದೇಶನ ಎಂದರೆ ಹಿರಿತೆರೆಯಲ್ಲಿ ಅವಕಾಶವಿಲ್ಲದವರು ಎಂಬ ಅರ್ಥವೆಂದೂ ಕಿರುತೆರೆಗೆ ಕೆಲಸ ಮಾಡುವುದೆಂದರೆ ಒಂದೆರಡು ಮೆಟ್ಟಿಲು ಕೆಳಗಿಳಿದ ಹಾಗೆಂದೂ ಭಾವಿಸುತ್ತಿದ್ದರು. ಅನಂತರ ಕಿರುತೆರೆ ವ್ಯಾಪ್ತಿಯಿಲ್ಲದ, ಸಾರ್ವಕಾಲಿಕ ಮಹತ್ವವಿಲ್ಲದ ಮಾಧ್ಯಮ ಎಂದು ಮೂಗು ಮುರಿಯುತ್ತಿದ್ದವರೆಲ್ಲ ಸ್ವಲ್ಪಸ್ವಲ್ಪವೇ ಹತ್ತಿರವಾಗತೊಡಗಿದರು. ಖಾಸಗಿ ವಾಹಿನಿಗಳಿಗೆ ಜನಪ್ರಿಯ ಕಲಾವಿದರನ್ನು ಬಳಸಿಕೊಂಡು ಜನಪ್ರಿಯ ನಿರ್ದೇಶಕರು ಧಾರಾವಾಹಿ, ಮಹಾಧಾರಾವಾಹಿಗಳನ್ನು ಚಿತ್ರಿಸುವುದು ಪ್ರತಿಷ್ಠೆಯ ವಿಷಯ ಎಂಬಂತಾಯಿತು. ೧೯೯೮ರ ಹೊತ್ತಿಗೆ ಚಿತ್ರರಂಗದ ಕಲಾವಿದರು ಯಾವ ಪ್ರಮಾಣದಲ್ಲಿ ಕಿರುತೆರೆಗೆ ಇಳಿದಿದ್ದರೆಂದರೆ ಚಿತ್ರೀಕರಣ ನೋಡಲು ಕ್ಷಣ ನಿಲ್ಲುತ್ತಿದ್ದ ದಾರಿಹೋಕರು 'ಶೂಟಿಂಗ್ ಟಿ.ವಿ.ದೋ - ಸಿನಿಮಾದೋ?' ಎಂದು ಕೇಳುವುದು ಸಾಮಾನ್ಯವಾಗಿತ್ತು. ಇದೇ ಸಂದರ್ಭದಲ್ಲಿ ಕನ್ನಡಕ್ಕೆಂದೇ ಮೀಸಲಾದ ಐದು ಟಿ.ವಿ. ಚಾನಲ್‌ಗಳು ಸೃಷ್ಟಿಸಿದ ಪೂರಕ ಸೌಲಭ್ಯ ಹಾಗೂ ಕೆಲಸ ಕೂಡಾ ಅಗಾಧವಾಗಿತ್ತು. ಸಣ್ಣ ಸಂಕಲನ ಕೇಂದ್ರಗಳು, ಕ್ಯಾಮರಾಗಳು ಎಷ್ಟಿದ್ದರೂ ಬೇಕು ಅನ್ನುವಂಥ ಪರಿಸ್ಥಿತಿ ನಿರ್ಮಾಣವಾಯಿತು. ಇದರೊಂದಿಗೆ ಕೇಬಲ್ ವ್ಯವಸ್ಥೆ ನಿರ್ವಹಿಸುವವರು ತಾವೇ ಸ್ಥಳೀಯ ಚಾನಲ್‌ಗಳಂತೆ ಕಾರ್ಯ ನಿರ್ವಹಿಸಲಾರಂಭಿಸಿದರು. ಇವೆಲ್ಲವೂ ಹೆಚ್ಚಾಗಿ ಅವಲಂಬಿಸಿದ್ದು ಚಲನಚಿತ್ರಗಳ ಹಾಡು, ದೃಶ್ಯಗಳನ್ನೇ. ೧೯೮೫ ರಲ್ಲಿ ಭಾನುವಾರ ಒಂದೇ ಒಂದು ಚಲನಚಿತ್ರವನ್ನು ಎದುರು ನೋಡುತ್ತಿದ್ದವರು ೨೦೦೦ದ ಹೊತ್ತಿಗೆ ವಾರಕ್ಕೆ ೪೦ ರಿಂದ ೪೫ ಕನ್ನಡ ಚಿತ್ರಗಳನ್ನು ನೋಡುವ ಅವಕಾಶ ಲಭ್ಯವಾಯಿತು. ಇದರೊಂದಿಗೆ ಸಿನಿಮಾ ಕಲಾವಿದರು, ನಿರ್ದೇಶಕರು, ತಂತ್ರಜ್ಞರು ನೇರವಾಗಿ ಕಿರುತೆರೆಯ ನಾನಾ ಚಾನಲ್‌ಗಳಲ್ಲಿ ಕಾಣಿಸಿಕೊಳ್ಳತೊಡಗಿದರು. ಈ ಹಿಂದೆ ಸಿನಿಮಾ ಮಾಧ್ಯಮ ರಂಗಭೂಮಿಯ ಪ್ರತಿಭಾವಂತರನ್ನು ಸೆಳೆದುಕೊಂಡು ಕಲಾಕ್ಷೇತ್ರವನ್ನು ಬರಿದುಮಾಡಿದಂತೆ ಟಿ.ವಿ. ಚಾನಲ್‌ಗಳು ಚಿತ್ರರಂಗದ ಜನರನ್ನು ಸೂಜಿಗಲ್ಲಿನಂತೆ ಸೆಳೆದುಕೊಂಡವು. ಬಿ.ಎಸ್.ರಂಗಾ, ಆರ್.ಎನ್.ಜಯಗೋಪಾಲ್, ಕೆ.ಎಸ್.ಎಲ್.ಸ್ವಾಮಿ, ದ್ವಾರಕೀಶ್, ಭಾರ್ಗವ, ನಾಗಾಭರಣ, ಫಣಿ ರಾಮಚಂದ್ರ, ಪಿ.ಹೆಚ್.ವಿಶ್ವನಾಥ್, ನಾಗತಿಹಳ್ಳಿ ಚಂದ್ರಶೇಖರ್, ಸಂಜುಂಡೇಗೌಡ,

ಎಂ.ಎಸ್.ರಾಜಶೇಖರ್, ಎಸ್.ನಾರಾಯಣ್, ಎಸ್.ಮಹೇಂದರ್, ಭಗವಾನ್, ಡಿ.ರಾಜೇಂದ್ರಬಾಬು ಮುಂತಾದ ಜನಪ್ರಿಯ ನಿರ್ದೇಶಕರು ಟಿ.ವಿ. ಚಾನಲ್‌ಗಳಿಗಾಗಿ ಸ್ವಲ್ಪ ಸಮಯವನ್ನು ಮುಡಿಪಾಗಿಟ್ಟರು. ಎಂ.ಪಿ.ಶಂಕರ್, ಕಲ್ಯಾಣ್ ಕುಮಾರ್, ಶಿವರಾಂ, ಲೋಕನಾಥ್, ಶ್ರೀನಿವಾಸಮೂರ್ತಿ, ಪಂಢರಿಬಾಯಿ, ಮೈನಾವತಿ, ಬಿ.ವಿ.ರಾಧಾ, ರಾಜೇಶ್, ಶ್ರೀನಾಥ್, ಅನಂತ್‌ನಾಗ್, ಬಿ.ಸರೋಜಾದೇವಿ, ಲೋಕೇಶ್, ಅಶೋಕ್, ಹೆಚ್.ಜಿ.ಸೋಮಶೇಖರರಾವ್, ವಿನಯಾ ಪ್ರಸಾದ್, ದತ್ತಣ್ಣ, ಶ್ರೀಧರ್, ರಾಮಕೃಷ್ಣ, ಭವ್ಯ, ಉಮೇಶ್, ತಾರಾ, ಕಾಶಿ, ಮಾಸ್ಟರ್ ಹಿರಣ್ಣಯ್ಯ, ಅಭಿನಯಾ, ರಮೇಶ್‌ಭಟ್ ಮುಂತಾದವರು ಕಿರುತೆರೆ ಧಾರಾವಾಹಿಗಳಲ್ಲಿ ಅಭಿನಯಿಸತೊಡಗಿದರು. ದಿನದ ಲೆಕ್ಕದಲ್ಲಿ ಸಂಭಾವನೆ ತೆಗೆದುಕೊಳ್ಳುತ್ತಿದ್ದುದರಿಂದ ಈ ಕಲಾವಿದರು ಸಿನಿಮಾಕ್ಕಿಂತಲೂ ಹೆಚ್ಚು ಹಣ ಗಳಿಸುವುದು ಸಾಧ್ಯವಾಯಿತು. ೧೯೯೮ರ ಒಂದು ಆರ್ಥಿಕ ಅಂದಾಜು ಟಿ.ವಿ. ಮಾಧ್ಯಮಕ್ಕೆ ಚಲಾವಣೆಯಾಗುತ್ತಿರುವ ಒಟ್ಟು ಹಣ ಚಿತ್ರೋದ್ಯಮದಲ್ಲಿ ತೊಡಗಿಸಲಾಗಿರುವುದಕ್ಕಿಂತ ಮೂರು ಪಟ್ಟು ಹೆಚ್ಚೆಂದು ಹೇಳುತ್ತದೆ. ಇದು ಉದ್ಯಮದ ಗಣ್ಯರು ಕೂಡ ಹುಬ್ಬೇರಿಸುವಂತೆ ಮಾಡಿತು. ಪ್ರತಿಷ್ಠಿತ ಕೆಸಿಎನ್ ಹಾಗೂ ರಾಜಕುಮಾರ್ ಅವರ ವಜ್ರೇಶ್ವರಿ ಸಂಸ್ಥೆಗಳು ಕೂಡ ನೇರವಾಗಿ ಕಿರುತೆರೆ ಧಾರಾವಾಹಿಗಳ ನಿರ್ಮಾಣಕ್ಕೆ ಇಳಿದವು.

ಸವಾಲು ನೇರವಾಗಿತ್ತು. ಕಿರುತೆರೆ ಬಗ್ಗೆ ಆಸಕ್ತಿಯಿಲ್ಲದವರು ಈ ಹಂತದಲ್ಲಿ ಬೇರೆ ದಾರಿ ಹುಡುಕುವುದು ಅನಿವಾರ್ಯವಾಗಿತ್ತು. ಇಂಥದೇ ಸಂಕ್ರಮಣ ಸ್ಥಿತಿಯಲ್ಲಿ



(ಚಿತ್ರ ೧೦೮) 'ಕುರುಬನ ರಾಣಿ' ಚಿತ್ರದಲ್ಲಿ ನಗ್ಮಾ ಮತ್ತು ಶಿವರಾಜ್ ಕುಮಾರ್

ಹಾಲಿವುಡ್‌ನಲ್ಲಿ ಡಿಟಿಎಸ್, ಡಿಜಿಟಲ್ ಪ್ರೊಜೆಕ್ಟರ್, ಗ್ರಾಫಿಕ್‌ಗಳು ಆವರಿಸಿದ್ದವು. ಇವೆಲ್ಲಾ ವಿಶಾಲ ತೆರೆಯ ವೈಭವವನ್ನು ಶೃಂಗಕ್ಕೇರಿಸಲು ಅಲ್ಲಿನವರು ಕಂಡುಕೊಂಡ ಪರ್ಯಾಯಗಳು. ನಮ್ಮಲ್ಲೂ ಕೆಲವರು ಅದನ್ನು ಅನುಸರಿಸಿದರು. ನಿರೂಪಣೆಯಲ್ಲಿ, ತಾಂತ್ರಿಕತೆಯಲ್ಲಿ, ವಿದೇಶ ಸುತ್ತಾಟದಲ್ಲಿ ಪ್ರೇಕ್ಷಕರನ್ನು ಸೆಳೆಯಕೊಳ್ಳಲು ಶ್ರಮಿಸಿದರು. ಹೀಗೆ ಈ ಅವಧಿಯಲ್ಲಿ ಕನ್ನಡ ಚಿತ್ರಗಳಿಗೆ ಪ್ರೇಕ್ಷಕರನ್ನು ಸೆಳೆಯಲು ಪ್ರಯತ್ನ ನಡೆಸಿದವರಲ್ಲಿ ನಿರ್ಮಾಪಕ ರಾಕ್‌ಲೈನ್ ವೆಂಕಟೇಶ್, ರಾಮು, ನಿರ್ದೇಶಕ ಉಪೇಂದ್ರ ಮುಖ್ಯರು. ಇವರ ಪ್ರಯತ್ನಗಳಿಗೆ ತೆಲುಗು, ತಮಿಳು ಚಿತ್ರರಂಗಗಳು ಸ್ಫೂರ್ತಿಯಂತಿದ್ದವು. ಈ ಎರಡು ಭಾಷೆಗಳ ಪ್ರಮುಖವಾಹಿನಿ ಚಿತ್ರಗಳಲ್ಲಿ ಕಥೆಗೆ ಸಂಬಂಧವಿಲ್ಲದಿದರೂ ಹಾಡಿನ ಚಿತ್ರೀಕರಣ ವಿದೇಶಗಳಲ್ಲಿನದಾಗಿತ್ತು. ಅಲ್ಲದೆ ಈ ಚಿತ್ರಗಳಿಂದಾಗಿ ರಾಜ್ಯದ ಪ್ರಮುಖ ನಗರಗಳ ಚಿತ್ರಮಂದಿರಗಳು ತಮ್ಮ ಪ್ರದರ್ಶನ ವ್ಯವಸ್ಥೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಬೇಗ ಬೇಗ ಅಳವಡಿಸಿಕೊಂಡವು. ೧೯೯೮ರ ಹೊತ್ತಿಗೆ ಬಹುತೇಕ ಚಿತ್ರಮಂದಿರಗಳಲ್ಲಿ ಡಿಟಿಎಸ್, ಎಸ್‌ಆರ್‌ಎಸ್ (ಸ್ಟೀರಿಯೋ ರೆಕಾರ್ಡಿಂಗ್ ಸಿಸ್ಟಂ) ಅಳವಡಿಸಿಕೊಂಡು ಮಾನೋ ವ್ಯವಸ್ಥೆಯನ್ನು ಕಿತ್ತು ಹಾಕಲಾಗಿತ್ತು. ಇದೂ ಕೂಡ ನಮ್ಮಲ್ಲಿ ಕೆಲವರನ್ನು ಅನಿವಾರ್ಯವಾಗಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲೇಬೇಕಾದ ಸ್ಥಿತಿಗೆ ದೂಡಿತು.

೧೯೯೮ರಲ್ಲಿ ಕೇಂದ್ರದಲ್ಲಿ ದೇವೇಗೌಡರ ಸರ್ಕಾರ ಬಿದ್ದು, ಐ.ಕೆ.ಗುಜ್ರಾಲ್ ಸರ್ಕಾರ ಬಂತು. ಶ್ರೀಲಂಕಾದ ಉಗ್ರರಿಗೆ ತರಬೇತಿ ಕೊಡುವ ಬಗ್ಗೆ ಮಾಹಿತಿ ದೊರೆತು, ಡಿಎಂಕೆ ಸರ್ಕಾರವೇ ಇದಕ್ಕೆ ಕಾರಣವೆಂಬ ತೀರ್ಮಾನ, ಈ ಹಂತದಲ್ಲಿ ಈ ಹಿನ್ನೆಲೆಯ ಕೆಲವು ಚಿತ್ರಗಳೂ ಬಂದವು. ವಾಜಪೇಯಿ ನೇತೃತ್ವದ ಸರ್ಕಾರ ಬಂತು. ಪ್ರಸಾರ ಭಾರತಿಯಲ್ಲೂ ಬದಲಾವಣೆಗಳಾದವು. ಸ್ವಾಯತ್ತತೆ ಲಭಿಸುವ ಲಕ್ಷಣಗಳು. ಮಹಿಳಾ ಮೀಸಲಾತಿ ಮಸೂದೆ ಒಪ್ಪಲಿಲ್ಲ, ಪ್ರತಿಭಟನೆ. ಇದೇ ಹೊತ್ತಿನಲ್ಲಿ ಪೋಖ್ರಾನ್ ಅಣುಬಾಂಬಿನ ಸ್ಫೋಟ ವಿವಾದಗಳಿಗೆ ಕಾರಣವಾಯಿತು. ಚಿತ್ರರಂಗವನ್ನು ಉದ್ಯಮವೆಂದು ಘೋಷಿಸಲಾಯಿತು. ಹಣಕಾಸು ಸಂಸ್ಥೆಗಳು ನೆರವಾಗಬೇಕೆಂಬ ಸೂಚನೆಯೂ ಬಂತು.

೧೯೯೮ರಲ್ಲಿ ಬಿಡುಗಡೆಯಾದ ಚಿತ್ರಗಳ ಸಂಖ್ಯೆ ೬೩.

ನಟ ಅಶೋಕ್ 'ನಮ್ಮೂರ ಹುಡ್ಗ' ನಿರ್ಮಿಸಿದರು. ಶಿವರಾಜ್ ಕುಮಾರ್, ಶ್ರುತಿ, ರಾಜೀವ್ ಮುಖ್ಯಪಾತ್ರವಿತ್ತು. ರವೀಂದ್ರನಾಥ್ ನಿರ್ದೇಶಿಸಿದ್ದರು. ಹಳ್ಳಿಯ ಕಥೆಗೆ ವಿ.ಮನೋಹರ್ ಸಂಗೀತ ನಿರ್ದೇಶಿಸಿದ್ದರು. ಅಶೋಕ್ ಚಲನಚಿತ್ರ ಕಾರ್ಮಿಕರ ಒಕ್ಕೂಟದ ಅಧ್ಯಕ್ಷರಾಗಿ, 'ಕಡಿಮೆ ಖರ್ಚಿನಲ್ಲೂ ಚಿತ್ರವನ್ನು ನಿರ್ಮಿಸಬಹುದು ಎಂದು ತೋರಿಸಲೇ ಈ ಚಿತ್ರವನ್ನು ಮಾಡಿದೆ' ಎನ್ನುತ್ತಾರೆ. ಆದರೆ ಚಿತ್ರ ಯಶಸ್ವಿಯಾಗಲಿಲ್ಲ.

'ಅಂತರ್ಗಾಮಿ' ಚಿತ್ರ ಹೆಸರಿನಿಂದಲೇ ಸಾಕಷ್ಟು ವಿವಾದಕ್ಕೀಡಾಯಿತು. ಈ ರೀತಿಯ ಹೆಸರನ್ನು ಇಡಲೇಬಾರದೆಂಬ ಆಕ್ಷೇಪ ಬಂತು. ಅಂತೂ ಇಂತೂ ಅದೇ ಹೆಸರಿನಲ್ಲಿ ಚಿತ್ರ ಬಿಡುಗಡೆ ಕಂಡಿತು. ರಮೇಶ್, ಚಾರುಲತಾ, ಶೋಭರಾಜ್ ಅಭಿನಯವಿತ್ತು. ಎ.ಬಾಲಕೃಷ್ಣ ನಿರ್ದೇಶಿಸಿದರು. ಮಾನಸಿಕ ಹಿಂಸೆ ಅನುಭವಿಸಿ ಮದುವೆಯಾದ ಗಂಡನೊಡನೆ ಸೇರದೆ ಇದ್ದಾಗ, ಗಂಡ ಕೆಲಸದವಳೊಡನೆ ಕಾಮಾತುರದಿಂದ ವರ್ತಿಸುವುದು ಈ ರೀತಿಯ ಘಟನೆಗಳು ಚಿತ್ರದಲ್ಲಿದ್ದವು. ಆದರೆ ಎಲ್ಲೂ, ಯಾವ ದೃಶ್ಯಗಳೂ ಸಭ್ಯತೆಯ ಗಡಿ ದಾಟಲಿಲ್ಲ. ಚಿತ್ರ ಗೆಲ್ಲಲಿಲ್ಲ.

'ಕುರುಬನ ರಾಣಿ' ಡಿ.ರಾಜೇಂದ್ರಬಾಬು ನಿರ್ದೇಶನದ ಚಿತ್ರ. ರಾಕ್‌ಲೈನ್ ವೆಂಕಟೇಶ್ ನಿರ್ಮಿಸಿದ್ದರು. ಕುರಿ ಸಾಕುತ್ತ, ತನ್ನ ಪಾಡಿಗೆ ತಾನಾಗಿ, ಊರಿಗೆಲ್ಲ ಬೇಕಾದ ಹುಡುಗ, ತಾಯಿಯೊಂದಿಗೆ ಇದ್ದ. ಊರಿನ ಸಮೀಪ ಚಿತ್ರೀಕರಣಕ್ಕೆ ಬಂದ ತಂಡ, ಮದುವೆ ಸನ್ನಿವೇಶಕ್ಕೆ ಗಂಡನ ಪಾತ್ರಕ್ಕೆ ಯಾರೂ ಸಿಗದೆ ಗ್ರಾಮದಂಚಿನಲ್ಲಿ ಕುರಿ ಕಾಯುತ್ತಿದ್ದ ತರುಣನನ್ನು ಕರೆತಂದರು. ವಿವಾಹ ದೃಶ್ಯ ಚಿತ್ರೀಕರಣವಾಯಿತು. ಚಿತ್ರತಾರೆ ತಾಳಿ ಕಿತ್ತೆಸೆದು ಹೊರಟು ಹೋದಳು. ಆದರೆ ಹುಡುಗನಿಗೆ ತಾಯಿ ತಾಳಿಯ ಅರ್ಥ, ತಾಳಿ ಕಟ್ಟಿದವನ ಜವಾಬ್ದಾರಿಗಳನ್ನು ತಿಳಿಸಿ ಹೇಳಿದ್ದರಿಂದಾಗಿ ಹುಡುಗ ಆಕೆಯನ್ನು ಕಾಪಾಡಲೇಬೇಕಾದ್ದು ಕರ್ತವ್ಯವೆಂದು ಪಟ್ಟಣಕ್ಕೇ ಹೋದ. ಮನೆಯ ಮುಂದಿದ್ದ ದೊಡ್ಡ ಪೈಪ್‌ಗಳ ಒಳಗೆ ಅವನ ಬದುಕು. ಎಲ್ಲರ ಹಿಂಸೆ, ಹೊಡೆತ ಸಹಿಸಿ ಹುಡುಗಿಯ ಆರೈಕೆ ಮಾಡಿದ. ಆಸ್ತಿ, ಕೀರ್ತಿಯಾಚೆಗಿನ ನೈಜಪ್ರೀತಿ ಅರ್ಥಮಾಡಿಕೊಂಡ ಹುಡುಗಿ ಅವನನ್ನು ನಂಬಿ ಹಳ್ಳಿಗೇ ಬಂದಳು. ಊರ ಜನರ ಪ್ರೀತಿ, ರಕ್ಷಣೆ ಸಿಕ್ಕಿತು. ಬದುಕು ಸಾಗಿತು... ಎಂಬ ವಿಶೇಷ ರೀತಿಯ ಕಥೆ ಹೆಣೆದಿದ್ದರು ರಾಜೇಂದ್ರಬಾಬು. ಚಿತ್ರೀಕರಣ ಸಲುವಾಗಿ ಯಾರನ್ನೋ ಕರೆತಂದು ಮದುವೆ ಮಾಡುವ ಪ್ರಸಂಗ ನಿಜವೆಂದು ಭಾವಿಸುವ ಮುಗ್ಧತೆ ಚಿತ್ರದಲ್ಲಿ ಮಾತ್ರವಲ್ಲ, ನಿಜವಾಗಿಯೂ ನಡೆದ ಪ್ರಸಂಗಗಳಿವೆ. ಹಿಂದೆ ಎಂ.ಎಸ್.ಸತ್ಯು ಅವರು 'ಕನ್ನೇಶ್ವರ ರಾಮ' ಚಿತ್ರದ ಇಂಥ ದೃಶ್ಯಕ್ಕೆ ಸ್ಥಿರ ಛಾಯಾಗ್ರಾಹಕ ಬಸವರಾಜವಾಲಿ ಅವರನ್ನು ವರನೆಂದೂ ಹಳ್ಳಿ ಹುಡುಗಿಯೊಬ್ಬಳನ್ನು ವಧುವಾಗಿಯೂ ಮಾಡಿದ್ದರ ಪರಿಣಾಮ ಆ ಹುಡುಗಿ ಆತನೇ ತನ್ನ ಗಂಡ ಎಂದು ಹಟ ಮಾಡಿದ್ದಳು. ಅವರಿಗೆ ತಿಳಿ ಹೇಳಿ, ಸಮಸ್ಯೆ ಪರಿಹರಿಸಿಕೊಳ್ಳಲು ತಿಂಗಳುಗಳೇ ಬೇಕಾದವು. 'ಕುರುಬನ ರಾಣಿ' ಚಿತ್ರದ ಕಥೆಯ ಪ್ರಾರಂಭವೇ ಅಲ್ಲಿಂದ.



(ಚಿತ್ರ ೧೦೯) 'ನಿಶ್ಯಬ್ದ' ಚಿತ್ರದಲ್ಲಿ ರಾಮಕೃಷ್ಣ ಮತ್ತು ವಿಷ್ಣುವರ್ಧನ್

ವಿಶಿಷ್ಟ ಸ್ಥಳದ ಹುಡುಕಾಟದಲ್ಲಿ ನಿರ್ದೇಶಕರಿಗೆ ಕೆಮ್ಮಣ್ಣು ಗುಂಡಿಯ ಒಳ ಪ್ರದೇಶಕ್ಕೆ ಹೋದಾಗ ಸುತ್ತಲೂ ಬೆಟ್ಟ, ಅದರ ನಡುವೆ ತಪ್ಪಲಿನಲ್ಲಿ ಒಂದು ಪುಟ್ಟ ಹಳ್ಳಿ, ಸದಾ ಹಸಿರು, ಹಸಿರ ಮೇಲೆ ಮಂಜಿನ ಹನಿಗಳು, ಶುಭ್ರ ನೀಲಾಕಾಶ ಇರುವ ಸೊಗಸಾದ ಸ್ಥಳ ಸಿಕ್ಕಿತು. ''ಅಂಥ ಪ್ರಕೃತಿಯ ಸಿರಿಯನ್ನು ಹುಡುಕುವುದು ನನ್ನ ಪ್ರೀತಿಯ ಕೆಲಸ. ಕಥೆಯಲ್ಲೇ ಗ್ರಾಮ, ನಗರಗಳನ್ನು ಮಿಶ್ರ ಮಾಡಿರುತ್ತೇವೆ. ನಗರದ ಕಾಂಕ್ರೀಟ್ ಕಾಡಿಗಿಂತ ಹಳ್ಳಿಯ ಹಸಿರು-ಮುಗ್ಧತೆ ತುಂಬ ಇಷ್ಟ. ಈ ಚಿತ್ರದ ನಿರ್ಮಾಪಕ ರಾಕ್‌ಲೈನ್ ವೆಂಕಟೇಶ್ 'ವಿರಾಸತ್' ಹಿಂದಿ ಚಿತ್ರದಲ್ಲಿರುವ ಕಲರ್ ಟೋನ್‌ಗೆ ಹೋಲುವ ಹಾಗೆ ವರ್ಣಗಳ ಹೊಂದಿಕೆ ಮಾಡಿಕೊಡಿ ಅಂದಿದ್ದರು. ಅದಕ್ಕಾಗಿ ಛಾಯಾಗ್ರಾಹಕ ಅಶೋಕ್ ಕಶ್ಯಪ್ ಜೊತೆ ಹಲವು ರೀತಿಯ ವರ್ಣಪರೀಕ್ಷೆ ಮಾಡಿ, ಬೇಕಾದ 'ಟೋನ್' ತಂದೆವು. ನಮ್ಮ ಪ್ರಯೋಗ ಫಲಿಸಿತ್ತು. ಹಾಗೆಯೇ ನಾವು ಸಂಗೀತದಲ್ಲಿಯೂ ಪ್ರಯೋಗ ಮಾಡಿದ್ದೇವೆ'' ಎನ್ನುತ್ತಾರೆ ಡಿ.ರಾಜೇಂದ್ರಬಾಬು.

ಮನೋಹರ್ ಸಂಗೀತ ನಿರ್ದೇಶನ. ಸಾಮಾನ್ಯವಾಗಿ ಮಾಧುರ್ಯಕ್ಕೆ ಒತ್ತು ಕೊಡುವ ಅವರು ಇಲ್ಲಿ ಹೆಚ್ಚು ಆರ್ಕೆಸ್ಟ್ರಾ ಬಳಸಿ, ರಿದಂಗೆ ಆದ್ಯತೆ ಕೊಟ್ಟರು. ಗ್ರಾಮ ಪರಿಸರದಲ್ಲಿ ಅದರ ಅಗತ್ಯ ಇತ್ತು. ''ಇದಕ್ಕಾಗಿ ಅನುರಾಧಾ ಶ್ರೀರಾಂ ಮತ್ತು ಪ್ರೀತಿಸಿಂಗ್ ಅವರನ್ನು ಕರೆಸಿ ಹಾಡಿಸಿದ್ದೆವು. ಪ್ರೀತಿಸಿಂಗ್ ಉದಾಮ್‌ಸಿಂಗ್ ಮಗಳು. ಆಕೆ ಹಾಡಿದ ಹಾಡು 'ಬಣ್ಣ ಬಣ್ಣದ ಪ್ರೀತಿ...' ಅತಿ ಎತ್ತರದ ಸ್ತರದಲ್ಲಿತ್ತು. ಹಾಡುಗಳು ತುಂಬ ಜನಪ್ರಿಯವಾದವು. ನನ್ನ 'ಜೋಡಿ ಹಕ್ಕಿ' ಚಿತ್ರಕ್ಕೂ ಮನೋಹರ್ ಸಂಗೀತವಿತ್ತು. ಅವರಿಗೆ ಪ್ರಶಸ್ತಿಯೂ ಬಂತು'' ಎಂದು ವಿವರಿಸುತ್ತಾರೆ ಡಿ.ರಾಜೇಂದ್ರಬಾಬು. 'ಕುರುಬನ ರಾಣಿ' ಚಿತ್ರಕ್ಕೆ ತರಿಸಿದ ಕುರಿಗಳ ಹಿಂಡೇ ದೊಡ್ಡ ಸುದ್ದಿ ಆ ದಿನಗಳಲ್ಲಿ. ಚಿತ್ರ ಯಶಸ್ವಿಯಾಯಿತು. ಬೆಳಗಾವಿಯಂಥ ಕಡೆ ನೂರು ದಿನ ಓಡಿದ್ದೂ ಉಂಟು ಎನ್ನುತ್ತಾರೆ ನಿರ್ದೇಶಕ ಡಿ.ರಾಜೇಂದ್ರಬಾಬು.

'ನಿಶ್ಯಬ್ದ' ಚಿತ್ರದ ವಿಶೇಷವೇ ನಾಯಿಗಳು. ೨೧ ನಾಯಿಗಳನ್ನು ಚಿತ್ರದ ನಾಯಕ ಸಾಕಿರುತ್ತಾನೆ. ಅವುಗಳ ಲಾಲನೆಪಾಲನೆಯಲ್ಲೇ ಆತನಿಗೆ ಆನಂದ. ಆತನ ಸಹಾಯಕನಾಗಿ ರಾಮಕೃಷ್ಣ ಅಭಿನಯಿಸಿದ್ದರು. ಸಾಮಾನ್ಯವಾಗಿ ದಿನೇಶ್ ಬಾಬು ಚಿತ್ರಗಳೆಂದ ಮೇಲೆ ಪಾತ್ರಗಳ ಸಂಖ್ಯೆ ಕಡಿಮೆ ಇರುತ್ತದೆ. ದೊಂಬಿ, ಜನ ಜಂಗುಳಿ ಇವುಗಳಿಂದ ದೂರವಿದ್ದು ಪ್ರಕೃತಿಯ ಮಡಿಲಲ್ಲೇ ಚಿತ್ರಿಸುತ್ತಾರೆ. ಈ ಚಿತ್ರವೂ ಅದಕ್ಕೆ ಹೊರತಲ್ಲ. ನಾಯಕ ವಿಷ್ಣುವರ್ಧನ್. ರೇವತಿ, ಮೋಹಿನಿ, ಸುಮಂತ್ ಜೊತೆಗೆ ಜಿ.ಕೆ.ಭಾರವಿ, ಸುನೀಲ್ ಪುರಾಣಿಕ್, ತಮಿಳು ನಟ ನಿಳಲ್ಗಳ್ ರವಿ ಅಭಿನಯಿಸಿದ್ದರು. ಜಿ.ಕೆ.ಭಾರವಿ ಸಂಭಾಷಣೆ ಹೇಳುವ ಶೈಲಿಯಲ್ಲಿ ವಿಭಿನ್ನತೆ ಇತ್ತು. ಕನ್ನಡ ಪ್ರೇಕ್ಷಕನಿಗೆ ಅದು ಹೊಸತೆನಿಸಿತ್ತು. ಅ ಪಾತ್ರವನ್ನು ಚೆನ್ನಾಗಿ ಮಾಡಿದ್ದರು ಭಾರವಿ. ಅಷ್ಟೂ ನಾಯಿಗಳನ್ನು ಒಟ್ಟಿಗೆ ಸುಧಾರಿಸಿದ್ದೇ ಒಂದು ಸಾಹಸವಂತಿದೆ. ಚಿತ್ರದ ಅಂತಿಮ ದೃಶ್ಯದಲ್ಲಿ ನಾಯಿಗಳೂ ಸಾಹಸ ಮಾಡುತ್ತವೆ. ಚಿತ್ರದಲ್ಲಿ ಹಾಡುಗಳಿರಲಿಲ್ಲ.

ಶಿವಮಣಿ, ಎಂ.ಎಸ್.ರಮೇಶ್ ಜೋಡಿಯಾಗಿ ನಿರ್ಮಿಸಿದ ಚಿತ್ರ 'ಅಗ್ನಿಸಾಕ್ಷಿ'. ಚಿತ್ರಕಥೆಯೊಡನೆ ನಿರ್ದೇಶನವನ್ನು ಶಿವಮಣಿ ಮಾಡಿದ್ದರು. ಜಿ.ಎ.ಮಧು ಸಂಭಾಷಣೆ. ದೇವರಾಜ್, ಮಾಲಾಶ್ರೀ, ಶ್ವೇತಾ, ಎ.ಟಿ.ರಘು ಮುಖ್ಯ ಭೂಮಿಕೆ. ಪುನರವತರಣಿಕೆ ಚಿತ್ರವಾದರೂ ಇದೇ ಹೆಸರಿನಲ್ಲಿ ಹಿಂದಿಯಲ್ಲಿ ಬಂದ 'ಅಗ್ನಿಸಾಕ್ಷಿ'ಗೂ ಇವಕ್ಕೂ ಕಥೆಯ ಹೋಲಿಕೆ ಇಲ್ಲ. ಬೇರೊಂದು ಹಿಂದಿ ಚಿತ್ರದ ಅವತರಣಿಕೆ ಎನ್ನಬಹುದು. ಶಿವಮಣಿ ಶ್ರಮವಹಿಸಿ ಚಿತ್ರ ಮಾಡಿದ್ದರು. ಇದೊಂದು ಸಸ್ಪೆನ್ಸ್ ಚಿತ್ರವಾದ್ದರಿಂದ ಹಾಡಿನ ಅವಶ್ಯಕತೆ ಇರಲಿಲ್ಲ. ಚಿತ್ರ ಕುತೂಹಲವನ್ನು ಕೊನೆಯವರೆವಿಗೂ ಕಾದಿರಿಸಿಕೊಂಡಿತ್ತು. ಸುರೇಶ್ ಅರಸ್ ಸಂಕಲನ ಚೆನ್ನಾಗಿದೆ. ಸಾಧುಕೋಕಿಲಾ ಹಿನ್ನೆಲೆ ಸಂಗೀತ ಅತಿಯಾಯಿತು. ಉಳಿದಂತೆ ದೇವರಾಜ್, ಎ.ಟಿ.ರಘು ಗಮನ ಸೆಳೆದರು.

'ಬೆಳದಿಂಗಳ ಬಾಲೆ'ಯಿಂದ ಸ್ಫೂರ್ತಿ ಪಡೆದು ತಮಿಳಿನಲ್ಲಿ ಒಂದು ಕಥೆ ಸಿದ್ಧ ಮಾಡಿ ಚಿತ್ರಿಸಿದರು, ಚಿತ್ರ ಗೆದ್ದಿತು. ಆ ಚಿತ್ರ 'ಕಾದಲ್ ಕೋಟ್ಟೈ'. ಅದನ್ನು ರವಿಚಂದ್ರನ್ ಕನ್ನಡಕ್ಕೆ 'ಯಾರೇ ನೀನು ಚೆಲುವೆ' ಮೂಲಕ ತಂದರು. ಇದರ ಹಿಂದೆ 'ಸಿಪಾಯಿ'ಯ ಯಶಸ್ಸು ಬಿಟ್ಟರೆ ರವಿಚಂದ್ರನ್ ಅವರ ಯಾವ ಚಿತ್ರವೂ ಗಮನಾರ್ಹ ಗೆಲುವು ಸಾಧಿಸಿರಲಿಲ್ಲ. ಈ ಚಿತ್ರದಲ್ಲಿ ಸಂಗೀತಾ, ಹೀರಾಳಂಥ ಅಂದಗಾತಿಯರು ನಾಯಕಿಯರಾಗಿದ್ದುದಲ್ಲದೇ ವಿಷ್ಣುವರ್ಧನ್, ರಮೇಶ್, ಜಗ್ಗೇಶ್, ಪ್ರಕಾಶ್‌ರೈರಂತಹ ನಾಯಕನಟರುಗಳೆಲ್ಲ ಒಂದೊಂದು ಮುಖ್ಯ ಪಾತ್ರದ ಅಭಿನಯಿಸಿದ್ದುದು ವಿಶೇಷ. ಎಲ್ಲರೂ ಅಷ್ಟೇ ಅಚ್ಚುಕಟ್ಟಾಗಿ ಅಭಿನಯಿಸಿದ್ದರು. 'ಪ್ರೇಮಲೋಕ' ನಂತರ ಬಹುತಾರೆಗಳನ್ನು ಈ ಚಿತ್ರದಲ್ಲಿ ಬಳಸಿಕೊಂಡಿದ್ದರು. ರಾಕಲೈನ್ ವೆಂಕಟೇಶ್ ಈ ಚಿತ್ರಕ್ಕೆ ಹಣ ಹೂಡಿದ್ದರು. ಜೈಪುರ ಮುಂತಾದ ಸುಂದರ ತಾಣಗಳಲ್ಲಿ ಚಿತ್ರೀಕರಿಸಿದ್ದರು. ಡಿ.ರಾಜೇಂದ್ರಬಾಬು ಯಾವ ನಾಯಕನಟರ ಇಮೇಜ್‌ಗೂ ಚ್ಯುತಿ ಬಾರದಂತೆ ನಿರ್ದೇಶಿಸಿದ್ದರು. ದೊಡ್ಡಣ್ಣ ಗಮನ ಸೆಳೆಯುತ್ತಾರೆ. ಕೇವಲ ಪತ್ರ ಮಾತ್ರದಿಂದ ಒಬ್ಬರ ಮುಖವನ್ನೊಬ್ಬರು ನೋಡದೆ ಚಿತ್ರದ ನಾಯಕ-ನಾಯಕಿಯರು ಪ್ರೀತಿಸುತ್ತಾರೆ. ಅದಕ್ಕೆ ಹೊಂದುವಂತೆ ಗೀತೆ ರಚಿಸಿ ಸಂಗೀತವನ್ನೂ ಒದಗಿಸಿದ್ದಾರೆ ಹಂಸಲೇಖ. ಬಿ.ಜಯಶ್ರೀ-ಪೀಟರ್ ಸುರೇಶ್ ಹಾಡಿರುವ 'ಚಕ್ಕೋತ ಚಕ್ಕೋತ...', ಶ್ರೀನಿವಾಸ್-ಅನುರಾಧ ಶ್ರೀರಾಮ್ ಹಾಡಿದ 'ಕುಶಲವೇ ಕ್ಷೇಮವೇ..' ಹಾಡುಗಳು ಜನಪ್ರಿಯವಾದವು. ಚಿತ್ರ ನೂರು ದಿನದ ಗಡಿ ದಾಟಿ ಓಡಿತು.

ಬಹಳ ವರ್ಷಗಳ ಕಾಲ ವಿಷ್ಣುವರ್ಧನ್ ನಟಿಸಿದ ಚಿತ್ರಗಳ ಸಹನಿರ್ದೇಶಕನಾಗಿ ಕೆಲಸ ಮಾಡುತ್ತಿದ್ದ ವಿ.ಆರ್.ಭಾಸ್ಕರ್ 'ಹೃದಯಾಂಜಲಿ' ನಿರ್ದೇಶಿಸಿದರು.



(ಚಿತ್ರ ೧೧೦) 'ಯಾರೇ ನೀನು ಚೆಲುವೆ' ಚಿತ್ರದಲ್ಲಿ ರವಿಚಂದ್ರನ್



(ಚಿತ್ರ ೧೧೧) 'ಹೃದಯಾಂಜಲಿ' ಚಿತ್ರದಲ್ಲಿ ರಾಜ್‌ಕಮಲ್ ಮತ್ತು ಚಾರುಲತಾ

ಚಾರುಲತಾ, ರಾಜ್‌ಕಮಲ್, ಲೋಕನಾಥ್ ಅಭಿನಯವಿತ್ತು. ಚಿತ್ರವು ಸಂಗೀತ ಮತ್ತು ನಾಟ್ಯ ಕುರಿತದ್ದಾಗಿತ್ತು. ಸವ್ಯಸಾಚಿ ಕ್ರಿಯೇಷನ್ಸ್ ನಿರ್ಮಿಸಿದ್ದ ಈ ಚಿತ್ರಕ್ಕೆ ರಾಜನ್-ನಾಗೇಂದ್ರ ಸಂಗೀತವಿತ್ತು. ಅವರ ರಾಗ ಸಂಯೋಜನೆಯು 'ಓಂಕಾರ ಗಾನಪ್ರಿಯ ನೀನೆ...' ಹಾಡು ಜನಪ್ರಿಯವಾಯಿತು. ಹೇಳಿಕೊಳ್ಳುವಂಥ ಯಶಸ್ಸನ್ನು ಬಿಡುಗಡೆಯಾದಾಗ ಕಾಣಲಿಲ್ಲ. ಒಂದು ವರ್ಷದ ನಂತರ ''ಅಮೆರಿಕಾದ ನ್ಯೂಯಾರ್ಕ್, ವಾಷಿಂಗ್ಟನ್ ಡಿ.ಸಿ., ಚಿಕಾಗೋ, ಲಾಸ್‌ಏಂಜಲ್ಸ್, ಪಿಟ್ಸ್‌ಬರ್ಗ್ ಮುಂತಾದ ನಗರಗಳಲ್ಲಿ ಪ್ರದರ್ಶಿತವಾಗಿ ಅಲ್ಲಿನ ನಮ್ಮ ಕನ್ನಡಿಗರ ಹೃದಯ ಗೆದ್ದುಬಂದ ಚಿತ್ರ'' ಎಂಬ ಶೀರ್ಷಿಕೆಗಳೊಡನೆ ಮತ್ತೆ ಬೆಂಗಳೂರಿನ ಕೈಲಾಸ್ ಚಿತ್ರಮಂದಿರದಲ್ಲಿ ಬಿಡುಗಡೆ ಕಂಡಿತು. ಈ ಚಿತ್ರದ ಗಾಯನಕ್ಕಾಗಿ ೧೯೯೮-೯೯ನೇ ಸಾಲಿನ ಅತ್ಯುತ್ತಮ ಹಿನ್ನೆಲೆ ಗಾಯಕಿ ಪ್ರಶಸ್ತಿ ಅನುರಾಧ ಶ್ರೀರಾಂ ಅವರಿಗೆ ಸಿಕ್ಕಿತು.

'ಮಾಂಗಲ್ಯಂ ತಂತು ನಾನೇನ', ತೆಲುಗಿನಲ್ಲಿ ಜನಪ್ರಿಯವಾದ ಚಿತ್ರವನ್ನೇ ಕನ್ನಡದಲ್ಲಿ ತಯಾರಿಸಿದರು. ತೆಲುಗಿನವರೇ ನಿರ್ಮಾಪಕರು, ನಿರ್ದೇಶಕರು. ಕನ್ನಡ ಚಿತ್ರಕ್ಕೆ ಕೆ.ನಂಜುಂಡ ಸಂಭಾಷಣೆ ಕೇವಲ ಅನುವಾದವಾಗದೇ ಕನ್ನಡದ ಸೊಗಡನ್ನು ತುಂಬಿಸಿದ್ದು, ಚುರುಕಾಗಿದ್ದುದು ಚಿತ್ರದ ಯಶಸ್ಸಿನ ಕಾರಣಗಳಲ್ಲಿ ಒಂದು. ನವ್ಯತನವಿದ್ದುದರಿಂದ ಆಪ್ತವಾಯಿತು. ಕಥೆಯಲ್ಲಿ ಹೊಸತನವಿರಲಿಲ್ಲ. ಆದರೆ ನಿರೀಕ್ಷಿಸುವುದಕ್ಕಿಂತ ಬೇರೆ ಘಟನೆಗಳು ಸಂಭವಿಸುತ್ತಿದ್ದುದೇ ಪ್ರೇಕ್ಷಕನನ್ನು ಆಕರ್ಷಿಸಲು ಕಾರಣವಾಯಿತು. ಶ್ರೀಮಂತ ನಿರ್ಮಾಣ. ವಿ.ಮನೋಹರ್ ಸಂಗೀತ, ಕಲ್ಯಾಣ್ ಗೀತಸಾಹಿತ್ಯ ಮೆಲುಕುಹಾಕುವಂಥ ಹಾಡುಗಳನ್ನಂತೂ ಕೊಟ್ಟವು. ಕಲ್ಯಾಣ್ ಸಾಹಿತ್ಯದಲ್ಲಿ ಅರ್ಥವಂತಿಕೆಯೂ ಇತ್ತು. 'ಪ್ರೇಮಲೋಕ' ಚಿತ್ರದನಂತರ ರವಿಚಂದ್ರನ್ ಚಿತ್ರವೊಂದಕ್ಕೆ ಹಂಸಲೇಖ ಅವರನ್ನು ಹೊರತುಪಡಿಸಿ ಬೇರೆಯವರು ಸಂಗೀತ ನೀಡಿದ ಪ್ರಥಮ ಚಿತ್ರ ಇದು. ಈ ಅವಕಾಶವನ್ನು ಸರಿಯಾಗಿಯೇ ಬಳಸಿಕೊಂಡ ವಿ.ಮನೋಹರ್ ಉತ್ತಮ ಸಂಗೀತವನ್ನೇ ಕೊಟ್ಟರು.

ರಾಕ್‌ಲೈನ್ ಪ್ರೊಡಕ್ಷನ್ಸ್‌ನವರು ತಯಾರಿಸಿದ ಮತ್ತೊಂದು ಚಿತ್ರ 'ಪ್ರೀತ್ಸೋದ್ ತಪ್ಪಾ?'. ರವಿಚಂದ್ರನ್ ಸಿನಿಮಾ ಎಂದ ಮೇಲೆ ಪ್ರೀತಿ, ಹಾಡು ಇರಲೇಬೇಕು. ಅದು ಅವರಿಗೆ ಬಿಲ್ಡಪ್ ಆದ ಇಮೇಜ್‌ಗೂ ಕಾರಣ. ಇದೂ ಒಂದು ರೀಮೇಕ್ ಚಿತ್ರವೆ. ತೆಲುಗಿನಲ್ಲಿ ಬಿಡುಗಡೆಯಾಗಿ ಯಶಕಂಡ ಚಿತ್ರವನ್ನೇ ನಟ-ನಿರ್ದೇಶಕ ರವಿಚಂದ್ರನ್ ಅಯ್ದು ನಿರ್ದೇಶಿಸಿದರು. ನಟನಟಿಯರ ದಂಡೇ ಚಿತ್ರದಲ್ಲಿ ತುಂಬಿತ್ತು. ತುಂಬು ಕುಟುಂಬ, ದೊಡ್ಡ ಬಂಗಲೆ, ಮನೆ ತುಂಬ ಜನ, ಶ್ರೀಮಂತಿಕೆ ಎಲ್ಲವೂ ಮೇಳೈಸಿದ್ದ ಚಿತ್ರ. ಮಂಗಳೂರಿನ ಹುಡುಗಿ, ಬಾಲಿವುಡ್‌ನಲ್ಲಿ ಆಗಲೇ ಖ್ಯಾತಳಾಗಿದ್ದ ಶಿಲ್ಪಾಶೆಟ್ಟಿ ಚಿತ್ರದ ನಾಯಕಿ. ಸೀತಾರಾಂ ಛಾಯಾಗ್ರಹಣದಲ್ಲಿ ಒಳಗೆ, ಹೊರಗೆ ಹಾಗೂ ಪರದೇಶದಲ್ಲಿ ಚಿತ್ರಿಸಿದ್ದ ದೃಶ್ಯಗಳೆಲ್ಲವೂ ಕಣ್ಸೆಳೆದವು. ಹಂಸಲೇಖ ಹಾಡುಗಳನ್ನು ಬರೆದು ಸಂಗೀತವನ್ನೂ ಕೊಟ್ಟರು. 'ರಾಜಾ ರಾಜ... ಹೆಂಗಿರಬೇಕು ಗೊತ್ತಾ ನನ್ನ ರಾಜ...', 'ಸೋನೆ ಸೋನೆ...' ಮತ್ತು 'ಒಂದು ಮೋಡ ಒಂದು ಹನಿಯ ಚೆಲ್ಲಿ..' ಹಾಡುಗಳು ಹಿಟ್ ಆದವು. ಚಿತ್ರವೂ ಉತ್ತಮ ಪ್ರದರ್ಶನ ಕಂಡು ನಿರ್ಮಾಪಕರಿಗೆ ಹಣ ದಕ್ಕಿತು.

ಕೆ.ವಿ.ರಾಜು ಕಥೆ, ಚಿತ್ರಕಥೆ, ಸಂಭಾಷಣೆ ಬರೆದು 'ನಂಬರ್ ೧' ಚಿತ್ರವನ್ನು ನಿರ್ದೇಶಿಸಿದರು. ರಾಮ್‌ಕುಮಾರ್ ನಾಯಕನಾಗಿ, ವಿಜಯಲಕ್ಷ್ಮಿ, ಮಂದಾರ (ಮರೀನಾತಾರ), ಭಾವನಾ, ಹರ್ಷ್ ದರ್ಬಾರ್ ಮುಖ್ಯ ಪಾತ್ರದಲ್ಲಿದ್ದರು. ರಾಜು ಚಿತ್ರಕಥೆ-ನಿರ್ದೇಶನ ಚೆನ್ನಾಗಿದೆ. ಈ ಚಿತ್ರದಲ್ಲಿ ಮುಖ್ಯವಾಗಿ ಗಮನ ಸೆಳೆಯುವುದು ನಟಿ ಭಾವನಾ. ಪೊಲೀಸ್ ಪಾತ್ರದಲ್ಲಿ ಭಾವನಾ ಉತ್ತಮವಾಗಿ ನಟಿಸಿದರು. ಈ ಚಿತ್ರದ ಮುಖಾಂತರ ಅವರ ಬೆಳವಣಿಗೆ ಸಾಧ್ಯವಾಯಿತು. ಸಾಕಷ್ಟು ಅವಕಾಶಗಳು ಅವರನ್ನು ಅರಸಿ ಬಂದವು. ಅವುಗಳಲ್ಲಿ ಅಷ್ಟೇ ಜೀವ ತುಂಬಿ ನಟಿಸಿದ್ದರು. 'ಗಂಡುಗಲಿ' ಮತ್ತು 'ಶ್ !' ಚಿತ್ರದಲ್ಲಿ ಸೊಗಸಾದ ಸಂಗೀತ ನೀಡಿದ್ದ ಸಾಧುಕೋಕಿಲ ಮತ್ತೊಮ್ಮೆ ಈ ಚಿತ್ರದಲ್ಲಿ ಮಧುರ ಸಂಗೀತ ಒದಗಿಸಿದರು. 'ಬೆಳ್ಳಿ ಚುಕ್ಕಿ ಬಾಲೆ ನೀನಿಂದು ಬಂದ ವೇಳೆ...' ಮತ್ತು 'ಓ ಮೈನಾ ನನ್ನ ಮೈನಾ...' ಹಾಡುಗಳು ಗಮನ ಸೆಳೆದವು. ಎಷ್ಟೆಲ್ಲ ಉತ್ತಮ ಅಂಶಗಳಿದ್ದು ಚಿತ್ರ ಜನಮನ ಗೆಲ್ಲುವಲ್ಲಿ ವಿಫಲವಾಯಿತು.

ನಿರ್ದೇಶಕ ಉಪೇಂದ್ರ, ನಟನೆಯನ್ನೂ ಮಾಡುತ್ತಾ ೧೯೯೮-೯೯ ರಲ್ಲಿ 'A' ಮತ್ತು 'ಉಪೇಂದ್ರ' ಚಿತ್ರಗಳ ಮೂಲಕ ಹೆಚ್ಚು ಸುದ್ದಿ ಮಾಡಿದರು. ಉತ್ತಮ ತಾಂತ್ರಿಕ ಪರಿಣತಿಯೊಂದಿಗೆ ಕಥೆಯನ್ನು ನಿರೂಪಿಸುವುದರಲ್ಲಿ ಇವರು ಅನುಸರಿಸಿದ ಮಾರ್ಗ ಭಿನ್ನವಾಗಿತ್ತು. ಆದರೆ ಅವರು ಪ್ರತಿಪಾದಿಸಿದ ವಿಷಯಗಳು ಅಪಾಯಕಾರಿಯಾಗಿದ್ದವು. ಅಪಕ್ವ ಚಿಂತನೆ, ಆತುರ, ಹಿಂಸಾತ್ಮಕ ಪ್ರವೃತ್ತಿ, ಮನೋವಿಕಾರ, ಮಹಿಳೆಯರ ಬಗೆಗಿನ ಕೀಳು ಅಭಿರುಚಿ - ಇವೆಲ್ಲವೂ ಅತ್ಯಂತ ತೀವ್ರವಾಗಿ, ಉಗ್ರವಾಗಿ, ಜಾಹಿರಾತು ಶೈಲಿಯ ನಿರೂಪಣೆಯೊಂದಿಗೆ ವಿಜೃಂಭಿಸಿದವು. ಕನ್ನಡ ಚಿತ್ರರಂಗದಲ್ಲಿ ಇವರ ಬೆಳವಣಿಗೆ ಕಾಶೀನಾಥ್ 'ಅನುಭವ' ಚಿತ್ರದ ಮೂಲಕ ಹಾಕಿದ ಬೀಜ, ಜಗ್ಗೇಶ್ ಮೂಲಕ ಮರವಾಗಿ ಬೆಳೆದು, ರವಿಚಂದ್ರನ್ ಅವರ ರೆಂಬೆ-ಕೊಂಬೆಗಳಲ್ಲಿ ಉಪೇಂದ್ರ ಮೂಲಕ ಸಮೃದ್ಧ ಫಲ ಕೊಟ್ಟಿದೆ ಎಂಬಂತೆ ಗುರುತಿಸಬಹುದು. ಉಪೇಂದ್ರ ನಿರ್ದೇಶಿಸಿದ ಮೂರು ಚಿತ್ರಗಳು ('ಓಂ', 'A', 'ಉಪೇಂದ್ರ') 'ಹೆಣ್ಣು ನೀಚಳು, ನಂಬಿಕೆಗೆ ಅರ್ಹಳಲ್ಲ, ಹಣ, ಆಸ್ತಿ ಅಷ್ಟೇ ಅವಳಿಗೆ ಮುಖ್ಯ, ಪ್ರೇಮವಲ್ಲ' ಎಂಬುದನ್ನು ದೊಡ್ಡ ಧ್ವನಿಯಲ್ಲಿ ಒರಟಾಗಿ ವೈಭವೀಕರಿಸಿ ಹೇಳುತ್ತವೆ. ಅವೆಲ್ಲ ಸಾಂದರ್ಭಿಕ ಎಂದು ನಿರೂಪಿಸಿದರೂ ಮನಸ್ಸಿನಲ್ಲಿ ಉಳಿಯುವುದು ಹಿಂದಿನ ಸಂಗತಿಗಳೇ.

ಭಗ್ನಪ್ರೇಮಿಯೊಬ್ಬನ ಅಖಂಡ ಪ್ರಲಾಪಗಳಾಗಿ ಮಾತ್ರ ಈ ಚಿತ್ರಗಳಿಗೆ ಅಸ್ತಿತ್ವವಿದೆ. ಹಳೆಯ ಕೆಲವು ಕನ್ನಡ ಚಿತ್ರಗಳಲ್ಲಿ ಭಗ್ನ ಪ್ರೇಮಿಯ ನೋವನ್ನು ಹೇಳುವಂಥ ಕೆಲವು ದೃಶ್ಯಗಳಿವೆಯಾದರೂ ಉಪೇಂದ್ರರಂತೆ ಅವನ್ನೇ ಯಾರೂ ಮೂರು ಚಿತ್ರಗಳನ್ನಾಗಿ ಮಾಡಿರಲಿಲ್ಲ. ಸಮಾಜದ ಅಸ್ತಿತ್ವವನ್ನು ಧಿಕ್ಕರಿಸುವವನೊಬ್ಬ ಮನಸ್ಸಿಗೆ ಅನಿಸಿದ್ದನ್ನೆಲ್ಲ ಹೇಳಿದರೆ ಹೇಗಿರುತ್ತದೋ ಹಾಗಿತ್ತು ಉಪೇಂದ್ರರ ಚಿತ್ರಗಳು. ಆಟೋರಿಕ್ಷಾ, ಲಾರಿಗಳ ಹಿಂದೆ 'ಬೋಧಿಸುವ' ವಾಕ್ಯಗಳನ್ನು ಬರೆಯುವ ಪ್ರವೃತ್ತಿಗಿಂತ ಬೇರೆಯ ಪ್ರಬುದ್ಧತೆ ಇವರ ಚಿತ್ರಗಳಲ್ಲಿ ಕಾಣಲಾಗಲಿಲ್ಲ. ಮತ್ತು ಅವರ ಪ್ರೇಕ್ಷಕರೂ ಗುರಿಯಿಟ್ಟಂತೆ ಒಂದು ವರ್ಗ ಮಾತ್ರ ಆಗಿತ್ತು ಎನ್ನಬಹುದು. ಆದರೆ ಅವಕ್ಕೆಲ್ಲ ಒಂದು



(ಚಿತ್ರ ೧೧೨) 'ಮಾಂಗಲ್ಯಂ ತಂತು ನಾನೇನ' ಚಿತ್ರದಲ್ಲಿ ರಮ್ಯಕೃಷ್ಣ ಮತ್ತು ರವಿಚಂದ್ರನ್



(ಚಿತ್ರ ೧೧೩) 'A' ಚಿತ್ರದಲ್ಲಿ ಉಪೇಂದ್ರ

ಗಟ್ಟಿಯಾದ ಬಂಧವನ್ನು ಚಿತ್ರಕಥೆಯಲ್ಲಿ ಅವರು ಹಾಕಿದ್ದರು. ಈ ಅಂಶ ಅವರನ್ನು ಸಾರಾಸಗಟಾಗಿ ತಿರಸ್ಕರಿಸಲಾಗದಂತೆ ಮಾಡಿತು.

ಇವರು ಅನುಸರಿಸಿದ ನಿರೂಪಣೆಯಷ್ಟೇ ವಿಚಿತ್ರವಾಗಿ ಪ್ರಚಾರವನ್ನು ಯೋಜಿಸಿಯುವ ಚಿತ್ರಕಲಾವಿದ ನಾಗಭೂಷಣ ಇನ್ನೊಂದು ವೈಚಿತ್ರ್ಯವನ್ನು ಸೃಷ್ಟಿಸಿದರು. ಪಕ್ಷಿ ದೇಹಕ್ಕೆ ಮುಖ, ಹದ್ದು, ಗಿಡ; ಎರಡು ಪಕ್ಷಿಗೆ ಮನುಷ್ಯ ಮುಖದ ಸ್ಕೆಚ್; ರಾಕ್ಷಸ ರೂಪ ಎಳೆದುಕೊಂಡು ಹೋಗುತ್ತಿರುವ ಗಾಡಿಯಲ್ಲಿ ನಾಯಕಿ ಕುಳಿತಿರುವುದು; ಭಂಗಿ, ಚುಟ್ಟಾ ಸೇದುತ್ತಾ ಉಪೇಂದ್ರ ಕುಕ್ಕರಗಾಲು ಅಥವಾ ವಕ್ರವಾಗಿ ಕುಳಿತಿರುವುದು - ಹೀಗೆ ಹುಚ್ಚಿಗೆ ಹುಚ್ಚು ಬೆರೆಸಿದಂತೆ ಇವರು ಪ್ರಚಾರ ಚಿತ್ರಗಳನ್ನು ಬರೆದರು. ಇದು ೧೮ನೆಯ ಶತಮಾನದಲ್ಲಿ ಯುರೋಪಿನಲ್ಲಿ ಚಾಲ್ತಿಯಲ್ಲಿದ್ದ ಒಂದು ಕಲಾಶೈಲಿಯಿಂದ ಸ್ಫೂರ್ತಿ ಪಡೆದುದಾಗಿತ್ತು. ಯುವಪೀಳಿಗೆಗೆ ಇದೆಲ್ಲ ವಿಶೇಷವಾಗಿ ಕಾಣಿಸಿತು. ಜೊತೆಗೆ 'A' ಚಿತ್ರದ ಹೆಸರಿನ ಕೆಳಗೆ 'ಕಡ್ಡಾಯವಾಗಿ ಬುದ್ಧಿವಂತರಿಗೆ ಮಾತ್ರ' ಎಂಬ ವಾಕ್ಯ ಬೇರೆ. ಇವೆಲ್ಲ ಗಿಮಿಕ್‌ಗಳು ಉಪೇಂದ್ರ ಅವರಿಗೆ ಲಾಭವನ್ನು ತಂದುಕೊಟ್ಟವು. 'ಹೊಸ ಪೀಳಿಗೆ'ಯ ಪಡ್ಡೆ ಹುಡುಗರು ಚಿತ್ರಮಂದಿರಗಳ ಬಳಿ ಘೇರಾಯಿಸಿದರು. ಇದು ಉಪೇಂದ್ರ ನಟರಾಗಿ ಜನಪ್ರಿಯರಾಗಲು ಕೂಡ ಕಾರಣವಾಯಿತು.

ಉಪೇಂದ್ರ ತಮ್ಮ ನಿರ್ದೇಶನದ ಚಿತ್ರಗಳ ಬಗ್ಗೆ ಹೇಳುತ್ತಾ, ''ಫ್ಲಾಶ್‌ಬ್ಯಾಕ್ ತಂತ್ರದಲ್ಲಿ ಎಲ್ಲರೂ ಸತ್ಯವನ್ನೇ ಹೇಳಿಸುತ್ತಾರೆ. ಆದರೆ ನಾನು ಸುಳ್ಳು ಹೇಳಿಸಿ ಒಂದು ಹೊಸ ತಂತ್ರವನ್ನು ಉಪಯೋಗಿಸಿದ್ದೇನೆ. ಇದನ್ನು ಇದುವರೆವಿಗೆ ಯಾರೂ ಮಾಡಿರಲಿಲ್ಲ'' ಎಂದು ಹೇಳಿದ್ದರು. ಈ ಮಾತು ಅವರ ಚಿತ್ರಗಳ ವಸ್ತುವಿನಂತೆ ಅರ್ಧಸತ್ಯವಾಗಿತ್ತು. ಏಕೆಂದರೆ ೨೮ ವರ್ಷಗಳ ಹಿಂದೆ ಕೆ.ಎಸ್.ಎಲ್.ಸ್ವಾಮಿ ತಮ್ಮ 'ಆರೂ ಮೂರೂ ಒಂಬತ್ತು' ಚಿತ್ರದಲ್ಲಿ ಅಂಥದೇ ತಂತ್ರವನ್ನು ಬಳಸಿದ್ದರು. ಖಳ ದಿನೇಶ್‌ರವರ ಒತ್ತಡಕ್ಕೆ ಮಣಿದು ನಾಯಕಿ ಪಾತ್ರದ ಬಿ.ವಿ.ರಾಧಾ ಅವರು ಆರು ಜನರ ಮೇಲೆ ಸುಳ್ಳುಸುಳ್ಳನ್ನು ಡೈರಿಯಲ್ಲಿ ಬರೆದು, ಅದು ಫ್ಲಾಶ್‌ಬ್ಯಾಕ್‌ನಲ್ಲಿ ಬರುವಾಗ ಪ್ರೇಕ್ಷಕರು ನಂಬುವಂತೆ ಚಿತ್ರಿಸಿದ್ದರು. ಅಂತ್ಯದಲ್ಲಿ ಸತ್ಯವನ್ನು ಬಹಿರಂಗಗೊಳಿಸಿದ್ದರು. ಇದೇ ರೀತಿ 'ನಾ ನಿನ್ನ ಬಿಡಲಾರೆ' ಚಿತ್ರದಲ್ಲಿ ದೆವ್ವದ ಪಾತ್ರದಲ್ಲಿ ಕೆ.ವಿಜಯಾ, ನಾಯಕ ಅನಂತ್‌ನಾಗ್ ಮೇಲೆ 'ಮಾನಭಂಗ ಮಾಡಿದ' ಎಂದು ಸುಳ್ಳು ಆರೋಪ ಹೊರಿಸಿ ಫ್ಲಾಶ್‌ಬ್ಯಾಕ್ ತಂತ್ರದಲ್ಲಿ ಪ್ರೇಕ್ಷಕರನ್ನು ದಾರಿ ತಪ್ಪಿಸುವುದು ಮುಖ್ಯ ಎಳೆಯಾಗಿತ್ತು. ಇವೆರಡು ಉದಾಹರಣೆಗಳ ಹಿನ್ನೆಲೆಯಲ್ಲಿ ಉಪೇಂದ್ರ ಅವರ ಸುಳ್ಳು ಅಥವಾ ಕಥೆಯೊಳಗೊಂದು ಕಥೆ ಹೇಳುವ ತಂತ್ರ ಕನ್ನಡ ಚಿತ್ರರಂಗದ ಮಟ್ಟಿಗೆ ಹೊಸದೇನೂ ಆಗಿರಲಿಲ್ಲ. ಅಲ್ಲದೆ ಇವರ ಪ್ರೇಕ್ಷಕರನ್ನು ವಿಸ್ಮಯಗೊಳಿಸುವ ತಂತ್ರ 'A' ಚಿತ್ರದಲ್ಲಿ ಯಶಸ್ವಿಯಾಯಿತಾದರೂ ನಂತರದ 'ಸ್ವಸ್ತಿಕ್'ನಲ್ಲಿ ಸಾಧ್ಯವಾಗಲಿಲ್ಲ.

ಬೆಂಗಳೂರಿನ ಕಪಾಲಿ ಚಿತ್ರಮಂದಿರದಲ್ಲಿ 'A' ಚಿತ್ರ ಯಶಸ್ವಿಯಾಗಿ ಪ್ರದರ್ಶನವಾಗುತ್ತಿದ್ದಾಗ ತೆಗೆದುಹಾಕುವ ಪ್ರಯತ್ನ ನಡೆಯಿತು. ೧೯೯೭ ರಲ್ಲಿ ಇದೇ ಚಿತ್ರಮಂದಿರದಲ್ಲಿ ಇಂಥದೇ ಪರಿಸ್ಥಿತಿ 'ಉಲ್ಟಾ ಪಲ್ಟಾ', 'ಅಂತರ್ಗಾಮಿ' ಚಿತ್ರಗಳಿಗೆ ಎದುರಾಗಿತ್ತು. ಆದರೆ ಇರುವುದರಲ್ಲಿ ಉತ್ತಮ ಗಳಿಕೆ ಇದ್ದುದರಿಂದ 'A' ಚಿತ್ರದ ವಿತರಕರು ನ್ಯಾಯಾಲಯದ ಮೆಟ್ಟಿಲು ಹತ್ತಿದರು. ೧೯೯೮ರ ಮೇ ೨೬ ರವರೆಗೆ ಚಿತ್ರವನ್ನು ತೆಗೆಯುವಂತಿಲ್ಲ ಎಂದು ೧೯೯೮ರ ಏಪ್ರಿಲ್ ಮೊದಲ ವಾರ ನ್ಯಾಯಾಲಯ ತೀರ್ಪು ನೀಡಿತು. ನಿಗದಿಪಡಿಸಿದ ದಿನಾಂಕದ ನಂತರವೂ ಚಿತ್ರ ವಾರಕ್ಕೆ ಎಲ್ಲಾ ಬಾಡಿಗೆ, ಖರ್ಚು ಕಳೆದು ೨,೫೦೦ ರೂಪಾಯಿ ಲಾಭ ಗಳಿಸುತ್ತಿದ್ದರೆ ಪ್ರದರ್ಶನವನ್ನು ಮುಂದುವರಿಸಬೇಕು ಎಂದು ತೀರ್ಪಿನಲ್ಲಿ ಸೂಚಿಸಲಾಗಿತ್ತು.

ರಾಘವೇಂದ್ರ ರಾಜಕುಮಾರ್ ಅವರ ಸಾಕಷ್ಟು ಸಿನಿಮಾಗಳನ್ನು ಪ್ರೇಕ್ಷಕರು 'ನಂಜುಂಡಿ ಕಲ್ಯಾಣ', 'ಗಜಪತಿ ಗರ್ವಭಂಗ'ದಷ್ಟು ಮುಕ್ತವಾಗಿ ಸ್ವೀಕರಿಸಲಿಲ್ಲ. ಸಾಲುಸಾಲು ಚಿತ್ರಗಳು ಸೋತದ್ದು ಅವರಿಗೂ ಆತಂಕವಾಗಿತ್ತು. ಅದಾಗಲೇ ಯಶಸ್ವೀ ಚಿತ್ರಗಳ ನಿರ್ದೇಶಕನೆನಿಸಿಕೊಂಡಿದ್ದ ಉಪೇಂದ್ರರಿಂದ ಶಿವರಾಜ್ ಕುಮಾರ್‌ಗೆ 'ಓಂ' ಚಿತ್ರದ ಮೂಲಕ ಒಂದು ಬ್ರೇಕ್‌ಥ್ರೂ ಸಿಕ್ಕಿತ್ತು. ರಾಘವೇಂದ್ರ ರಾಜಕುಮಾರ್‌ಗಾಗಿ

ಪಾರ್ವತಮ್ಮ ರಾಜಕುಮಾರ್ ನಿರ್ಮಾಣ, ಉಪೇಂದ್ರ ನಿರ್ದೇಶನದಲ್ಲಿ 'ಸ್ವಸ್ತಿಕ್' ತೆರೆಗೆ ಬಂತು. ಈ ಚಿತ್ರದಲ್ಲಿ ರಾಘವೇಂದ್ರರ ಗೆಟಪ್ಪನ್ನೇ ಸಂಪೂರ್ಣವಾಗಿ ಬದಲಿಸಲಾಗಿತ್ತು. ಅವರೊಂದಿಗೆ ವಿಜಯಲಕ್ಷ್ಮಿ, ಶ್ರೀದುರ್ಗಾ ನಾಯಕಿಯರಾಗಿ ಅಭಿನಯಿಸಿದ್ದರು. ಕಥೆ, ಚಿತ್ರಕಥೆಯ ಹೊಣೆಯನ್ನು ಉಪೇಂದ್ರರೇ ಹೊತ್ತಿದ್ದರು. ವಿ.ಮನೋಹರ್ ಸಂಗೀತದಲ್ಲಿ ಪಾಶ್ಚಾತ್ಯ ಟ್ಯೂನ್‌ಗಳು ನುಸುಳಿಕೊಂಡಿದ್ದವು. ಒಂದೆರಡು ಹಾಡುಗಳು ಚೆನ್ನಾಗಿದ್ದವು. 'ಮಿಂಚು ಮಳೆ ಮಿಂಚದಿರು...' ಹಾಡಿನ ಸಾಹಿತ್ಯವೂ ವಿಶೇಷವಾಗಿತ್ತು. ಚಿತ್ರ ನಾನಾ ಕಾರಣಗಳಿಂದ ಸೋತಿದ್ದರೂ, ರಾಘವೇಂದ್ರ ರಾಜಕುಮಾರ್ ಪಾತ್ರಕ್ಕೆ ಜೀವ ತುಂಬಿ ತನ್ನ ಶಕ್ತಿಮೀರಿ ಅಭಿನಯಿಸಿದ್ದರು. ಮುಖ್ಯವಾಗಿ ಉಪೇಂದ್ರರ ಸಿನಿಮಾಗಳಲ್ಲಿರುವ ಕನ್‌ಫ್ಯೂಷನ್ ತಂತ್ರವೇ ಈ ಚಿತ್ರಕ್ಕೆ ಮುಳುವಾಯಿತು. 'A' ಚಿತ್ರದಲ್ಲಿ ಅದನ್ನು ಹೊಸದೆಂಬಂತೆ ಸ್ವೀಕರಿಸಿದ್ದ ಪ್ರೇಕ್ಷಕರು ಇದರಲ್ಲಿ ಅತಿ ಎಂಬ ಕಾರಣಕ್ಕೆ ತಿರಸ್ಕರಿಸಿದ್ದರು. ಆರಂಭದ ದೃಶ್ಯವನ್ನಂತೂ ಆಂಗ್ಲ ಚಿತ್ರಕ್ಕೆ ಎಣೆ ಎಂಬಂತೆ ಕಾಶ್ಮೀರದಲ್ಲಿ ಚಿತ್ರೀಕರಿಸಿದ್ದರು. 'ಕಲರ್ ಕಲರ್...' ಹಾಡಿಗೂ ಮುಂಚೆ ಕಪ್ಪು-ಬಿಳುಪಿನಲ್ಲಿ ಚಿತ್ರಿಸಿ, ಆ ಹಾಡಿನೊಂದಿಗೆ ಇಡೀ ಪರದೆಯೇ ವರ್ಣಮಯವಾಗುವ ಕಾನ್ಸೆಪ್ಟ್ ಚೆನ್ನಾಗಿತ್ತು. ಶ್ರೀನಾಥ್‌ರದ್ದು ನೆಗೆಟಿವ್ ಪಾತ್ರವಾದರೂ ಬಹಳ ಒಳಹೊಕ್ಕು ನಟಿಸಿದ್ದರು. ಅವರು ಒಂದು ದೃಶ್ಯದಲ್ಲಿ ಡೈಲಾಗ್ ಹೇಳುವ ಶೈಲಿಯೇ ಸಿಳ್ಳೆ ಗಿಟ್ಟಿಸುವಂತಿತ್ತು.

ಸಾಹಸಪ್ರವೃತ್ತಿಗೆ ಸಂಕೇತವಾಗಿ 'AK 47'ನಂಥ ಅದ್ದೂರಿ ಚಿತ್ರ ನಿರ್ಮಾಣವಾಗುತ್ತಿದ್ದ ಸಂದರ್ಭದಲ್ಲಿ ದೇಶಪ್ರೇಮದ ಇನ್ನೊಂದು ರೀತಿಯನ್ನು ಪುನರ್ ಸೃಷ್ಟಿಸಿದ ೧೯೯೭ರ ಅವಧಿಯ ಬಹುಮುಖ್ಯ ಚಿತ್ರ ಜಯಮಾಲ ನಿರ್ಮಾಣ, ಗಿರೀಶ್ ಕಾಸರವಳ್ಳಿ ನಿರ್ದೇಶನದ 'ತಾಯಿ ಸಾಹೇಬ'. ರಂಶಾ ಅವರ ಕಾದಂಬರಿಯನ್ನು ಆಧರಿಸಿದ ಈ ಚಿತ್ರದ್ದು ಸ್ವಾತಂತ್ರ್ಯಪೂರ್ವದ ವಸ್ತು. ಅವು ದೇಸಗತ್ತಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ದಿನಗಳು. ದೇಸಗತ್ತಿಯೆಂದರೆ ಒಂದು ರೀತಿಯಲ್ಲಿ ರಾಜವಂಶ ಇದ್ದ ಹಾಗೆ. ವಂಶಪಾರಂಪರ್ಯವಾಗಿ ಬರುವ ಅಧಿಕಾರ, ಆಸ್ತಿ, ಪ್ರತಿಷ್ಠೆಗಳ ಜೊತೆಗೆ ಜಗಳಗಳು, ವೈಮನಸ್ಯ ಇತ್ಯಾದಿಗಳೆಲ್ಲ ಸೇರಿ ಅದಕ್ಕೆ ಅದರದೇ ವೈಶಿಷ್ಟ್ಯವಿದೆ. ಅವರ ಮನೆಗಳೂ ಅಷ್ಟೇ. ಕೋಟೆಯಂಥ ವಾಡೆ; ಅದರೊಳಗಿನ ಬದುಕು. ದೇಸಗತ್ತಿಯ ಹೆಣ್ಣು ಮಗಳು ತಮ್ಮ ಕೋಟೆಯಿಂದಾಚೆಗೆ ಕಾಲಿಡುವಂತಿಲ್ಲ. ಆಕೆಯ ಅಭಿಪ್ರಾಯವಾಗಲಿ, ಅನಿಸಿಕೆಗಳಾಗಲಿ ಗಂಡನಿಗೆ ಮುಖ್ಯವಲ್ಲ. ಅದು ತನ್ನ ಗಂಡನಿಗೆ ಮುಖ್ಯವಾಗಬೇಕೆಂಬ ಹಿರಿಯಾಸೆಯೂ ಮನೆಯಾಕೆಗಿಲ್ಲ. ಆಕೆ ಮೇಲ್ನೋಟಕ್ಕೆ ತನ್ನ ಪರಿಸರ, ಪರಿಸ್ಥಿತಿಗಳನ್ನು ಒಪ್ಪಿಕೊಂಡವಳು. ಹಾಗಾಗಿ ಅವಳಲ್ಲಿ ತನ್ನ ಬಗ್ಗೆ ಕೀಳರಿಮೆಯಿಲ್ಲ. ದೇಸಗತ್ತಿಯ ಆಂತರಿಕ ಸುಖ, ಸಂಭ್ರಮ ಹಾಗೂ ಮೌನದ ನಡುವೆ ಅವಳ ನಿಟ್ಟುಸಿರಷ್ಟೇ ಅವಳ ನೋವನ್ನು ಹೇಳಬೇಕು. ಚಿತ್ರದ ಪ್ರಾರಂಭದಲ್ಲಿ ದೀಪ



(ಚಿತ್ರ ೧೧೫) 'ಹೂಮಳೆ' ಚಿತ್ರದಲ್ಲಿ ಸುಮನ್ ನಗರ್‌ಕರ್ ಮತ್ತು ರಮೇಶ್

ಹಚ್ಚುವ ತಾಯಿ ಸಾಹೇಬಳು ಕೊನೆಯಲ್ಲಿ ವಿದ್ಯುತ್ ದೀಪ ಬೆಳಗಿಸುತ್ತಾಳೆ. ಈ ಬೆಳಕು ಒಂದು ಕೋನದಿಂದ ಪ್ರಭಾವಲಯವಾಗಿ ಕಂಡರೆ ಮತ್ತೊಂದು ಕೋನದಲ್ಲಿ ಸರಪಳಿಯಾಗಿ ಕಾಣುತ್ತದೆ. ತಾಯಿ ಸಾಹೇಬ ಪ್ರಾರಂಭದಲ್ಲಿ ವಸ್ತುವಾಗಿರುತ್ತಾಳೆ. ನಂತರ ಆಕೆ ಪ್ರತಿಭಟನೆಯ ಹಾದಿಯ ಮೂಲಕ ವ್ಯಕ್ತಿಯಾಗುತ್ತಾಳೆ. ಅಪ್ಪಾ ಸಾಹೇಬ ಸತ್ತಾಗ ತಾಯಿ ಸಾಹೇಬ ನಿಜಕ್ಕೂ ಸ್ವತಂತ್ರಳಾಗುತ್ತಾಳೆ. ಚಿತ್ರದ ಇಷ್ಟು ಮುಖ್ಯ ಸನ್ನಿವೇಶಗಳನ್ನು ತಮ್ಮದೇ ಶೈಲಿಯಲ್ಲಿ ಪರಿಣಾಮಕಾರಿಯಾಗಿ ನಿರೂಪಿಸಿದ್ದ ಗಿರೀಶ್ ಕಾಸರವಳ್ಳಿಯವರು ಕಾನೂನಿಗಿಂತ ಸಂಬಂಧಗಳು ಎಷ್ಟು ಮುಖ್ಯ ಎಂಬುದನ್ನು ತೋರಿಸಿಕೊಟ್ಟಿದ್ದರು.

ಜಯಮಾಲಾ ಈ ಚಿತ್ರದ ನಿರ್ಮಾಣದೊಂದಿಗೆ ವಿಶೇಷ ಗೌರವಾದರ ಗಳಿಸಿಕೊಂಡರು. ಗಿರೀಶ್ ಕಾಸರವಳ್ಳಿಯವರಿಗೆ ಮೂರನೆಯ ಬಾರಿಗೆ ಸ್ವರ್ಣಕಮಲ ಪ್ರಶಸ್ತಿಯನ್ನು ತಂದುಕೊಟ್ಟ ಈ ಚಿತ್ರ ಅವರನ್ನು ಅಷ್ಟೇ ಪ್ರಶಸ್ತಿ ಪಡೆದಿರುವ ಬಂಗಾಲಿಯ ಮೃಣಾಲ್‌ಸೇನ್, ಬುದ್ಧದೇವ್ ದಾಸ್ ಗುಪ್ತ ಅವರ ಸಾಲಿನಲ್ಲಿ ನಿಲ್ಲಿಸಿತು. ಇದರೊಂದಿಗೆ ಉಡುಪು ವಿನ್ಯಾಸಕ್ಕಾಗಿ ವೈಶಾಲಿ ಕಾಸರವಳ್ಳಿ ಹಾಗೂ ತಾಯಿ ಸಾಹೇಬ ಪಾತ್ರದ ಅಭಿನಯಕ್ಕಾಗಿ ಜಯಮಾಲಾ ಅವರು ತೀರ್ಪುಗಾರರ ವಿಶೇಷ ಪ್ರಶಸ್ತಿ ಪಡೆದರು. ಕಲಾನಿರ್ದೇಶನಕ್ಕಾಗಿ ಈ ಹಿಂದೆ 'ಗಂಗವ್ವ ಗಂಗಾಮಾಯಿ'ಗೆ ರಾಜ್ಯ ಪ್ರಶಸ್ತಿ ಪಡೆದಿದ್ದ ರಮೇಶ್ ದೇಸಾಯಿ ಕೇಂದ್ರದ ಗೌರವಕ್ಕೆ ಪಾತ್ರರಾದರು.



(ಚಿತ್ರ ೧೧೪) 'ಸ್ವಸ್ತಿಕ್' ಚಿತ್ರದಲ್ಲಿ ವಿಜಯಲಕ್ಷ್ಮೀ, ಶ್ರೀದುರ್ಗಾ, ರಾಘವೇಂದ್ರ ರಾಜಕುಮಾರ್

೧೯೯೭-೯೮ರ ರಾಜ್ಯದ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ 'ತಾಯಿ ಸಾಹೇಬ' ಉಳಿದ ಐದು ವಿಭಾಗಗಳಲ್ಲಿ ಪುರಸ್ಕೃತವಾಯಿತು. ಜಯಮಾಲ - ಅತ್ಯುತ್ತಮ ನಟಿ, ಶಿವರಾಮ್ - ಪೋಷಕ ನಟ, ಕಥೆ - ರಂ.ಶಾ., ಛಾಯಾಗ್ರಹಣ - ಹೆಚ್.ಎಂ.ರಾಮಚಂದ್ರ ಮತ್ತು ಕಲಾನಿರ್ದೇಶನಕ್ಕೆ ರಮೇಶ್ ದೇಸಾಯಿ ಪ್ರಶಸ್ತಿಗಳನ್ನು ಪಡೆದರು.

ಸ್ವಾತಂತ್ರ್ಯೋತ್ಸವದ ಸುವರ್ಣ ಮಹೋತ್ಸವದ ಕೊಡುಗೆಯಾಗಿ ಅತ್ಯಂತ ಮಹತ್ವದ್ದಾಗಿರುವ 'ತಾಯಿ ಸಾಹೇಬ' ದೇಶಕ್ಕೆ ಕರ್ನಾಟಕದ ಹೆಮ್ಮೆಯ ಕೊಡುಗೆಯೆನಿಸಿದೆ. ಏಕೆಂದರೆ ದೇಶಪ್ರೇಮ, ಸ್ವಾತಂತ್ರ್ಯ ಚಳವಳಿಯ ಪರಿಮಳ ಹೊತ್ತ ಚಿತ್ರಗಳು ಕನ್ನಡದಲ್ಲಿ ಬೆರಳೆಣಿಕೆಯಷ್ಟು ಮಾತ್ರ.

ಕನ್ನಡ ಚಲನಚಿತ್ರಗಳಲ್ಲಿ ಗುರುತಿಸಬಹುದಾದ ಸ್ವಾತಂತ್ರ್ಯ ಚಳವಳಿಯ ಹೆಜ್ಜೆಗಳು ಹೀಗೆ ಕೆಲವೇ ಆದರೂ ಅವು ಗಮನಾರ್ಹ ಹಾಗೂ ಕಳಕಳಿಯುಳ್ಳವಾಗಿದ್ದು ನಮ್ಮ ನಿರ್ದೇಶಕರ ಸಾಮಾಜಿಕ ಬದ್ಧತೆಯನ್ನು ಪ್ರತಿಬಿಂಬಿಸುತ್ತವೆ. ಚಳವಳಿ ಮಾತ್ರವಲ್ಲದೆ ಸ್ವಾತಂತ್ರ್ಯಾನಂತರ ನಡೆದ ಯುದ್ಧಗಳಿಗೆ ಸಂಬಂಧಿಸಿದ ಚಿತ್ರಗಳು ಕೂಡ ಕನ್ನಡದಲ್ಲಿಯಂತೆ ಇತರ ಭಾಷೆಗಳಲ್ಲಿಯೂ ಕಡಿಮೆ. ಆದರೆ ಅಂಥ ಚಿತ್ರಗಳು ಯಶಸ್ಸು ಗಳಿಸಿರುವ ಉದಾಹರಣೆಗಳಿವೆ. ಈ ಶತಮಾನದ ಕೊನೆಯ ವರ್ಷ ಬಂದ ಹಿಂದಿಯ 'ಬಾರ್ಡರ್'



(ಚಿತ್ರ ೧೧೬) 'ತಾಯಿ ಸಾಹೇಬ' ಚಿತ್ರದಲ್ಲಿ ಜಯಮಾಲಾ

ಹಾಗೂ ಕೆಲವು ದಶಕಗಳ ಹಿಂದೆ ಬಂದ 'ಹಕೀಕತ್' ಜನರ ಮನಸ್ಸನ್ನು ಗೆದ್ದಿದ್ದವು. ಇವೆರಡು ಚಿತ್ರಗಳಲ್ಲಿ ಯುದ್ಧದ ದೃಶ್ಯಗಳ ಜೊತೆಗೆ ದೇಶಪ್ರೇಮಕ್ಕೆ ಒತ್ತು ನೀಡಲಾಗಿತ್ತು. ೧೯೯೬ ರಲ್ಲಿ ಬಂದ ಕಮಲಹಾಸನ್ ಅಭಿನಯದ 'ಇಂಡಿಯನ್' ಚಿತ್ರದಲ್ಲೂ ರಾಷ್ಟ್ರಪ್ರೇಮಕ್ಕೆ ಮಹತ್ವ ನೀಡಲಾಗಿದೆ. ಕನ್ನಡದಲ್ಲಿ ರಾಜೇಂದ್ರಸಿಂಗ್ ಬಾಬು ಅವರ 'ಮುತ್ತಿನ ಹಾರ'ದಲ್ಲಿ ಯುದ್ಧ, ದೇಶಪ್ರೇಮ, ತ್ಯಾಗ ಎಲ್ಲವೂ ಇತ್ತು. ಆದರೆ ಗಟ್ಟಿಯಾದ ಬಂಧವಿಲ್ಲದ್ದರಿಂದ ಚಿತ್ರ ಯಶಸ್ವಿಯಾಗಲಿಲ್ಲ.

ದೇಶಪ್ರೇಮ, ಗಡಿರಕ್ಷಣೆ ಇತ್ಯಾದಿ ಭಾವನಾತ್ಮಕ ಅಂಶಗಳನ್ನು ಹೊಂದಿದ್ದ ಕೆಲವು ಚಿತ್ರಗಳೊಂದಿಗೆ ಸ್ವಾತಂತ್ರ್ಯಾನಂತರದ ಭಾರತ ಆಂತರಿಕವಾಗಿ ಎದುರಿಸುತ್ತಿರುವ ಪ್ರಮುಖ ಸಮಸ್ಯೆಗಳನ್ನು ಆಧರಿಸಿದ ಎರಡು ಚಿತ್ರಗಳು ೧೯೯೮ ರಲ್ಲಿ ತೆರೆಕಂಡವು. ನಾಗತಿಹಳ್ಳಿ ಚಂದ್ರಶೇಖರ್ 'ಹೂಮಳೆ' ಮೂಲಕ ಭಾರತದ ಈಶಾನ್ಯ ಗಡಿಯ ಅಸ್ಸಾಂ ರಾಜ್ಯ ಎದುರಿಸುತ್ತಿರುವ ಗಂಭೀರ ಸಮಸ್ಯೆಯನ್ನು ವಿವರಿಸಲು ಪ್ರಯತ್ನಿಸಿದರೆ, ರಾಜೇಂದ್ರಸಿಂಗ್ ಬಾಬು ಅವರು ಮಳೆಯಿಲ್ಲದ, ಬೆಳೆದ ಬೆಳೆಗೆ ಬೆಲೆ ಸಿಗದ ಕರ್ನಾಟಕದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಹೃದಯ ಕಲಕುವ ವಸ್ತುವನ್ನು 'ಭೂಮಿ ತಾಯಿಯ ಚೊಚ್ಚಲ ಮಗ'ದಲ್ಲಿ ಚಿತ್ರಿಸಿದರು. ಸಾಧಾರಣ ಲೋಪಗಳ ನಡುವೆಯೂ ಈ ಎರಡೂ ಚಿತ್ರಗಳು ನಿರ್ದೇಶಕರ ಪ್ರತಿಭೆಯಿಂದಾಗಿ ಉತ್ತಮವೆನಿಸಿದವು.

ಅಸ್ಸಾಂನಲ್ಲಿ ಚಿತ್ರಣಗೊಂಡಿರುವ ಈ ಪ್ರಥಮ ಕನ್ನಡ ಚಿತ್ರ 'ಹೂಮಳೆ' ಉಗ್ರಗಾಮಿಗಳಿಂದಾಗಿ ಸೃಷ್ಟಿಯಾಗುವ ಉದ್ರಿಕ್ತ ವಾತಾವರಣ ಅದಕ್ಕೆ ಏನೇನೂ ಸಂಬಂಧಪಡದವರ ಬದುಕಿನಲ್ಲಿ ಎಬ್ಬಿಸುವ ಕೋಲಾಹಲವನ್ನು ವಿವರಣಾತ್ಮಕವಾಗಿ ಸೆರೆ ಹಿಡಿದಿತ್ತು. ಕೆಲವಾರು ಸತ್ಯಘಟನೆಗಳನ್ನು ಆಧರಿಸಿ ನಟ ರಮೇಶ್ ಅವರೇ ಬರೆದಿದ್ದ ಕಥೆ ನೈಜತೆಗೆ ಹತ್ತಿರವಾಗಿತ್ತು. ಸುಖಸಂಸಾರದೊಂದಿಗೆ ಬದುಕುತ್ತಿರುವ ನಾಯಕನದು ಸಂತೋಷದ ಜಗತ್ತು, ಉಲ್ಲಾಸ ತುಂಬಿದ ಜಗತ್ತು. ಸದಾ ಏನಾದರೂ ಹೊಸದನ್ನು ಸಾಧಿಸಬೇಕು ಎಂದು ತುಡಿಯುತ್ತಲೇ ಇರುವ ಇವನಿಗೆ ಅನುರೂಪಳಾದ ಸಂಗಾತಿಯನ್ನು ಹುಡುಕುವ ತವಕ ಕುಟುಂಬದು. ಈ ನಡುವೆ ದೂರದರ್ಶನದಲ್ಲಿ ಕಂಡ ಯುವತಿಯನ್ನು ಮೋಹಿಸುತ್ತಾನೆ. ಇಲ್ಲಿ ಭೇಟಿ ಆದ ನಾಯಕಿ ಒಂದು ಹೆಣ್ಣು ಮಗುವಿರುವ ವಿಧವೆ ಎಂಬುದು ತಿಳಿದಾಗ ಮರುಕಗೊಳ್ಳುತ್ತಾನೆ. ಅಸ್ಸಾಂಗೆ ವರ್ಗಾವಣೆಯಾಗಿ ಹೋದಾಗ ಅಲ್ಲಿ ಮದ್ದುಗುಂಡಿನ ನಡುವೆ ಮಾನವೀಯ ಮೌಲ್ಯಗಳು ಮಣ್ಣುಗೂಡಿರುವ ವಾತಾವರಣ ಕಂಡು ದಿಗ್ಭ್ರಾಂತನಾಗುತ್ತಾನೆ. ಪ್ರತ್ಯೇಕತಾವಾದಿಗಳಿಂದಾಗಿ ಅಲ್ಲಿ ಪ್ರತಿದಿನ ಅಮಾಯಕರ ಹತ್ಯೆ ನಡೆಯುತ್ತಿರುತ್ತದೆ. ಇವರ ನಡುವೆ ನಾಯಕ-ನಾಯಕಿ ಇಬ್ಬರಲ್ಲೂ ಮಾನಸಿಕ ಪರಿವರ್ತನೆಗಳಾಗುತ್ತಾ ಹೋಗುತ್ತವೆ. ವಿಧವೆಯನ್ನು ವಿವಾಹವಾಗಲು ನಾಯಕ, ಮಗು ಮತ್ತು ತನ್ನ ಆಸರೆಗಾಗಿ ಸಂಗಾತಿ ಬೇಕೆಂಬ ನಿರ್ಧಾರಕ್ಕೆ ನಾಯಕಿ ಬರುತ್ತಾರೆ. ತೀರಿಕೊಂಡ ಗಂಡನ ಬಗ್ಗೆ ಪ್ರೀತಿ ಇಟ್ಟುಕೊಂಡೇ ಹೊಸ ಜೀವನವನ್ನು ಅರಸುವ ನಾಯಕಿ ಇಲ್ಲಿನವಳು. ವಿಧವಾ ವಿವಾಹದಂಥ ಗಂಭೀರ ವಿಷಯವನ್ನು ಭಾವಪ್ರಧಾನವಾಗಿ ನಿರೂಪಿಸಿದ್ದ ನಿರ್ದೇಶಕರು ಪರೋಕ್ಷವಾಗಿ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದಿದ್ದರು. ಈ ಅಂಶಗಳು ಚಿತ್ರಕ್ಕೆ ಕೇಂದ್ರದ ಪ್ರಾದೇಶಿಕ ಅತ್ಯುತ್ತಮ ಚಿತ್ರ ಪ್ರಶಸ್ತಿಯೊಂದಿಗೆ ೧೯೯೮-೯೯ರ ರಾಜ್ಯದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಗಳಿಸಿಕೊಟ್ಟವು. ರಮೇಶ್ ಅಭಿನಯಿಸಿ ಕಳೆದೆರಡು ವರ್ಷಗಳಲ್ಲಿ ತೆರೆಕಂಡಿದ್ದ 'ಅಮೆರಿಕಾ ಅಮೆರಿಕಾ', 'ಮುಂಗಾರಿನ ಮಿಂಚು' ಚಿತ್ರಗಳು ಕೂಡ ಪ್ರಾದೇಶಿಕ ಪ್ರಶಸ್ತಿ ಪಡೆದಿದ್ದವು. ಈ ಬಗೆಯ ಸರಣಿ ಗೌರವ ಪಡೆದ ಕನ್ನಡದ ಏಕೈಕ ಕಲಾವಿದ ರಮೇಶ್.

'ಹೂಮಳೆ' ಚಿತ್ರದಲ್ಲಿ ಚಿತ್ರರಂಗದ ಹಿರಿಯ ಕಲಾವಿದ, ಸಂಭಾಷಣೆಕಾರ, ಗೀತರಚನೆಕಾರ ಸೋರಟ್ ಅಶ್ವತ್ ಅಭಿನಯಿಸಿದರು. ಸುಮಾರು ೫೦ ಚಿತ್ರಗಳಲ್ಲಿ ಅಭಿನಯಿಸಿದ ಇವರಿಗೆ 'ಹೂಮಳೆ' ಕೊನೆಯ ಚಿತ್ರವಾಯಿತು. ದತ್ತಾತ್ರೇಯ ಶ್ರೇಷ್ಠ ಅಭಿನಯ ನೀಡುವುದರೊಂದಿಗೆ ಈ ಚಿತ್ರದ ಮೂಲಕ ೫೦ರ ಸಂಖ್ಯೆಯನ್ನು

ತಲುಪಿವರು. ರಮೇಶ್‌ಗೆ ಅತ್ಯುತ್ತಮ ನಟರೆಂದು ೧೯೯೮-೯೯ರ ರಾಜ್ಯದ ಸುಬ್ಬಯ್ಯನಾಯ್ಡು ಪ್ರಶಸ್ತಿ ತಂದುಕೊಟ್ಟ ಈ ಚಿತ್ರ ಬೇಬಿ ಹಿಮಾಗೆ ಉತ್ತಮ ಬಾಲನಟಿ ಪುರಸ್ಕಾರ ಗಳಿಸಿಕೊಟ್ಟಿತು.

'ಭೂಮಿ ತಾಯಿಯ ಚೊಚ್ಚಲ ಮಗ' ಸಮಕಾಲೀನ ಸಮಸ್ಯೆಯನ್ನು ಜನಪ್ರಿಯ ಶೈಲಿಯಲ್ಲಿ ನಿರೂಪಿಸಿದ ಚಿತ್ರ. ಆರಂಭದಲ್ಲಿ ಸ್ನೇಹಿತರಿಬ್ಬರ ಭಾವನಾತ್ಮಕ ಸಂಬಂಧದ ಸುತ್ತ ಸುತ್ತುವ ಕಥೆ ನಂತರ ರೈತರ ಸಮಸ್ಯೆ, ರಾಜಕಾರಣದತ್ತ ಹೊರಳುತ್ತದೆ. ಇಲ್ಲಿ ನಾಯಕನಿಗೆ ಅವನ ತಂದೆಯೇ ಖಳನಾಯಕ. ಹೇಳಬೇಕಾದ್ದನ್ನು ವಿಪರೀತವಾದ ಭಾವನಾತ್ಮಕ ತಿರುವುಗಳಿಗೆ ಇರುಕಿಸಿರುವುದರಿಂದ ಒಟ್ಟು ಬಂಧ ಸಡಿಲಗೊಂಡಿದ್ದರೂ ಮೆಚ್ಚುವಂತಿದ್ದ ಪ್ರಯತ್ನವಾಗಿತ್ತು. ಗಂಭೀರ ಸಂಭಾಷಣೆಗೆ ಮರ್ಯಾದೆ ಇದೆ ಎಂಬುದನ್ನು ಈ ಚಿತ್ರ ಮತ್ತೆ ನೆನಪಿಸಿತು. ವಿಧಾನಸಭೆಯಲ್ಲಿ ಶಾಸಕ ಪಾತ್ರಧಾರಿ ರಮೇಶ್ ಮಾಡುವ ಭಾಷಣ ಹಸಿಹಸಿಯಾಗಿದೆ ಅನ್ನಿಸಿದರೂ ಉತ್ತಮ ಪರಿಣಾಮ ಬೀರಿತು. ಸರಳ ಸಂಭಾಷಣೆಯನ್ನು ರಮೇಶ್ ಆಡುವ ಮಾತುಗಳೆಂದು ತಿಳಿದೇ ಸಂಭಾಷಣಾಕಾರರು ಬರೆದಿದ್ದರಲ್ಲದೆ, ಅದನ್ನು ಹೇಳಬೇಕಾದ ರೀತಿಯನ್ನು ಕೂಡ ಕ್ಯಾಸೆಟ್‌ನಲ್ಲಿ ಧ್ವನಿಮುದ್ರಿಸಿ ರಮೇಶ್ ಅವರಿಗೆ ನೀಡಲಾಗಿತ್ತು. ಇದೆಲ್ಲವರಿಂದಾಗಿ ಆ ಸಂದರ್ಭಕ್ಕೆ ಹಾಗೂ ಪಾತ್ರಕ್ಕೆ ಜೀವ ಬಂದಿತ್ತು. ಶಿವರಾಜ್, ರಮೇಶ್ ಇಬ್ಬರ ನಡುವಿನ ಗಂಭೀರ ಸನ್ನಿವೇಶಗಳಲ್ಲಿ 'ಮಾತುಗಳನ್ನು ಇನ್ನಷ್ಟು ನಿಧಾನವಾಗಿ ಆಡಬಹುದಿತ್ತು' ಅನ್ನಿಸುವಷ್ಟು ಬಿರುಸಿದೆ. ಗಂಭೀರ ವಸ್ತುವನ್ನು ಯುಗಳ ಗೀತೆಗಳು ಮಸುಕು ಮಾಡಿದ್ದವು. ಹಿನ್ನೆಲೆ ಸಂಗೀತದಲ್ಲಿ ಪಾಶ್ಚಾತ್ಯ ಸಂಗೀತವನ್ನು ಅತಿಯಾಗಿ ಬಳಸಲಾಗಿತ್ತು. ಚಿತ್ರ ಬಿಡುಗಡೆಯಾದಾಗ ಸಂಗೀತ ನಿರ್ದೇಶಕ ವಿ.ಮನೋಹರ್ ಬಗ್ಗೆ ರಾಜೇಂದ್ರಸಿಂಗ್ ಬಾಬು ಅಸಮಾಧಾನ ವ್ಯಕ್ತಪಡಿಸಿದರು. ''ಇದು ನನ್ನ ಚಿತ್ರದ ಕಲ್ಪನೆಗೆ ಹೊಂದಿಕೆಯಾಗಲಿಲ್ಲ'' ಎಂದು ಬಾಬು ದೂರಿದರು. ನಿರ್ದೇಶಕರೊಬ್ಬರು ತಮ್ಮ ಚಿತ್ರದ ಸಂಗೀತದ ಬಗ್ಗೆ ನೇರ ಆರೋಪ ಮಾಡಿದ ವಿರಳ ಉದಾಹರಣೆಗಳಲ್ಲಿ ಇದೊಂದು. ಸಂಭಾಷಣೆ, ಛಾಯಾಗ್ರಹಣ, ನಾಯಕರಿಬ್ಬರ ಅಭಿನಯ ಎಲ್ಲವೂ ಬಿಡಿಬಿಡಿಯಾಗಿ ಉತ್ತಮವಾಗಿದ್ದ ಈ ಚಿತ್ರ ಕಥೆಗಾಗಿ ರಾಜೇಂದ್ರಸಿಂಗ್ ಬಾಬು ಅವರಿಗೆ, ಸಂಭಾಷಣೆಗೆ ಎಸ್.ಸುರೇಂದ್ರನಾಥ್ ಅವರಿಗೆ ೧೯೯೮-೯೯ರ ರಾಜ್ಯ ಪ್ರಶಸ್ತಿಯನ್ನು ತಂದುಕೊಟ್ಟಿತು. ಇದರೊಂದಿಗೆ ಚಿತ್ರದ ಹಿಂದಿನ ಅಪೂರ್ವ ಕಳಕಳಿ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರವೆಂದು ವಿಶೇಷ ಪ್ರಶಸ್ತಿ ಗಳಿಸಿಕೊಂಡಿತು.

ಇದೇ ವರ್ಷದ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಗಳಿಸಿದ 'ದೋಣಿ ಸಾಗಲಿ' ರಾಜೇಂದ್ರಸಿಂಗ್ ಬಾಬು ನಿರ್ದೇಶನದ ಚಿತ್ರ. ಇದು ಸ್ತ್ರೀಯೊಬ್ಬಳ ದುರಂತಮಯ ಬದುಕನ್ನು ಪರಿಣಾಮಕಾರಿಯಾಗಿ ನಿರೂಪಿಸಿತ್ತು. ಬಾಲ್ಯದಿಂದಲೂ ಬಡತನದ ಬೇಗೆಯಲ್ಲಿ ಬೆಂದ ಕ್ಷಮಾ ಅಡಿಗಡಿಗೆ ಎದುರಾಗುವ ನಿರಾಸೆ, ವಂಚನೆ, ದ್ರೋಹಗಳಿಂದ ಕಂಗೆಟ್ಟು ಆತ್ಮಹತ್ಯೆ ನಿರ್ಧಾರಕ್ಕೆ ಬರುತ್ತಾಳೆ. ಈ ಹಂತದಲ್ಲಿ ಇನ್ನೊಂದು ಸವಾಲು ಎದುರಾಗಿ ಬೇರೆಯವರಿಗಾಗಿ ಬದುಕುವ ಹೊಸದಾರಿಯನ್ನು ಅಂಗೀಕರಿಸಿ ಮುನ್ನಡೆಯುತ್ತಾಳೆ. ನಟಿ ಸೌಂದರ್ಯ ಅವರ ಶ್ರೇಷ್ಠ ಅಭಿನಯವಿದ್ದ ಈ ಚಿತ್ರಕ್ಕೆ ಡಿ.ವಿ.ರಾಜಾರಾಂ ಶ್ರೇಷ್ಠ ಛಾಯಾಗ್ರಹಣವಿದ್ದು ಅವರಿಗೆ ಪ್ರಶಸ್ತಿ ತಂದುಕೊಟ್ಟಿತು.

ಈ ಚಿತ್ರದ ಅಂತಿಮ ದೃಶ್ಯ ಯಾವುದೇ ವಿದೇಶಿ ಚಿತ್ರಕ್ಕೆ ಸರಿಸಾಟಿಯಾಗಿ ನಿಲ್ಲಬಲ್ಲಷ್ಟು ಸಮರ್ಥವಾಗಿತ್ತು. ಇದು ಸದಭಿರುಚಿಯ ನಿರ್ಮಾಪಕ ಹೆಚ್.ಎನ್. ಮಾರುತಿ ಅವರ ಶ್ರಮದ ಫಲ.

೧೯೯೮ ರಲ್ಲಿನ ಮೇಲಿನ ಕೆಲವು ಪ್ರಮುಖ ಚಿತ್ರಗಳನ್ನು ಹೊರತುಪಡಿಸಿದರೆ ಯಶಸ್ಸು ಹಾಗೂ ಅಲ್ಪಸ್ವಲ್ಪ ಪ್ರಮಾಣದ ವೈವಿಧ್ಯಕ್ಕಾಗಿ ಈ ಕೆಳಗಿನ ಒಂದೆರಡು ಚಿತ್ರಗಳು ಮುಖ್ಯವಾಗಿವೆ. ನಟ ಅರ್ಜುನ್‌ಸರ್ಜಾ ಅವರ ಸೋದರ ಕಿಶೋರ್‌ಸರ್ಜಾ ನಿರ್ದೇಶಿಸಿದ 'ತುತ್ತಾ ಮುತ್ತಾ' ಯಶಸ್ವಿ ಕೌಟುಂಬಿಕ ಚಿತ್ರ. ತಾಯಿ, ಪತಿ ಹಾಗೂ ಪತ್ನಿಯ ಸುತ್ತ ಸುತ್ತುವ ಕಥೆಯ ನಿರೂಪಣೆಯಲ್ಲಿ ಭಿನ್ನತೆಯಿತ್ತು. ಇದರೊಂದಿಗೆ ನಿತ್ಯದ ಅತ್ತೆ-ಸೊಸೆ ಜಗಳಕ್ಕೆ ಸಾರ್ವಕಾಲಿಕ ಸ್ಪರ್ಶ ಕೊಡುವಲ್ಲಿ ರಿಚರ್ಡ್ ಲೂಯಿಸ್ ಅವರ ಸಂಭಾಷಣೆ ಯಶಸ್ಸು ಸಾಧಿಸಿತ್ತು. 'ತುಸು ಮೆಲ್ಲ ಬೀಸು ಗಾಳಿಯೆ...' ಲಾಲಿಹಾಡು, 'ಮುತ್ತು ಕೊಡೋಳು ಬಂದಾಗ ತುತ್ತು ಕೊಟ್ಟೋಳ ಮರೀಬ್ಯಾಡ...' ಹಾಡುಗಳು ಉತ್ತಮವಾಗಿದ್ದವು.

ಪಿ.ಹೆಚ್.ವಿಶ್ವನಾಥ್ ಅವರ ಒಂಬತ್ತನೆಯ ಚಿತ್ರ 'ಅಂಡಮಾನ್' ಪಚ್ಚೆವರ್ಣದ್ದೆನಿಸಿದ ದ್ವೀಪದ ಸುಂದರ ಹೊರಾಂಗಣ ಹಾಗೂ ಒಂದೆರಡು ಹಾಡು ಇಂಪಾಗಿದ್ದ ಚಿತ್ರ. ಈ ಚಿತ್ರದಲ್ಲಿ ಶಿವರಾಜ್ ಕುಮಾರ್ ಅವರ ಮಗಳ ಪಾತ್ರದಲ್ಲಿ ಅವರ ಎರಡನೆಯ ಮಗಳು ನಿವೇದಿತಾ ಚುರುಕಾಗಿ ಅಭಿನಯಿಸಿದ್ದಳಲ್ಲದೆ ೧೯೯೭-೯೮ರ ರಾಜ್ಯದ ಅತ್ಯುತ್ತಮ ಬಾಲನಟಿ ಪ್ರಶಸ್ತಿ ಗಳಿಸಿದರು. ಹೆಸರಾಂತ ಹಾಸ್ಯನಟರಾಗಿದ್ದ ಮುಸುರಿ ಕೃಷ್ಣಮೂರ್ತಿಯವರ ಇಬ್ಬರು ಪುತ್ರರಾದ ಜಯಸಿಂಹ ಮುಸುರಿ, ಗುರುದತ್ ಮುಸುರಿ ನಿರ್ಮಾಣ-ನಿರ್ದೇಶನದ ಹಳ್ಳಿ ಹಿನ್ನೆಲೆಯ ಪ್ರಥಮ ಚಿತ್ರ 'ರಾಜೀವಪ್ಪ'. ಒಂದಂಕಿ ಲಾಟರಿ, ಕುಟುಂಬ ಯೋಜನೆ, ವಿದ್ಯಾವಂತರೆಲ್ಲ ಹಳ್ಳಿಯಲ್ಲಿಯೇ ನೆಲೆಸಬೇಕು - ಇತ್ಯಾದಿ ಹಲವಾರು ಸಂದೇಶಗಳಿದ್ದ ಚಿತ್ರ ತಾಂತ್ರಿಕವಾಗಿ ಶ್ರೀಮಂತವಾಗಿರಲಿಲ್ಲ. ವಿ.ಉಮಾಕಾಂತ್ ನಿರ್ದೇಶನದ 'ಮಿ। ಪುಟ್ಸಾಮಿ' ಫ್ಯಾಂಟಸಿ ಚಿತ್ರ. ಉತ್ತಮ ರಂಜನೆ ನೀಡಬಹುದಾಗಿದ್ದ ಕಥೆಗೆ ಗ್ರಾಫಿಕ್ ತಂತ್ರಜ್ಞಾನವನ್ನು ಬಳಸಿಕೊಳ್ಳುವ ಪ್ರಯತ್ನದಲ್ಲಿ ಚಿತ್ರತಂಡ ಸೋತಿತ್ತು. ಇಂಗ್ಲಿಷ್ ಚಿತ್ರಗಳಿಂದ ಪ್ರಭಾವಿತವಾಗಿದ್ದ 'ಮಿ।ಪುಟ್ಸಾಮಿ'ಯಂತೆಯೇ ಸುನೀಲ್‌ಕುಮಾರ್ ದೇಸಾಯಿಯವರ 'ಪ್ರತ್ಯರ್ಥ' ಕೂಡ ಪರಿಪೂರ್ಣತೆ ಸಾಧಿಸಲಾಗದ, ಪ್ರಾದೇಶಿಕತೆಯ ಸೊಗಡಿಲ್ಲದ ಚಿತ್ರವಾಗಿತ್ತು.

ಬಿ.ಸಿ.ಪಾಟೀಲ್ ಖಳನಟನಾಗಿ, ನಿರ್ಮಾಪಕನಾಗಿ ಚಿತ್ರರಂಗ ಪ್ರವೇಶಿಸಿದವರು. 'ಕೌರವ' ಚಿತ್ರದ ಮೂಲಕ ಪೂರ್ಣ ಪ್ರಮಾಣದ ನಾಯಕನಟರಾದರು. ''...ಈ ಚಿತ್ರ ಕೈಸುಟ್ಟರೆ ಇದೇ ನನ್ನ ಕೊನೆಯ ಚಿತ್ರ'' ಎಂದೂ ಪ್ರಮಾಣ ಮಾಡಿದ್ದರು. ಆದರೆ ಹಾಗಾಗಲಿಲ್ಲ. ಚಿತ್ರ ಯಶಸ್ವಿಯಾಯಿತು. ಎಸ್.ಮಹೇಂದರ್ ಕಥೆ, ಚಿತ್ರಕಥೆ ಜೊತೆಗೆ ನಿರ್ದೇಶನವನ್ನೂ ಮಾಡಿದ್ದರು. ಪಾಟೀಲರಿಗೆ ನಾಯಕಿಯಾಗಿ ಪ್ರೇಮಾ ನಟಿಸಿದ್ದರು. ಹಳ್ಳಿಗೆ ಬರುವ ಶಿಕ್ಷಕಿ ಪಾತ್ರದಲ್ಲಿ ಪ್ರೇಮ ಚೆನ್ನಾಗಿ ನಟಿಸಿದ್ದಾರೆ. ಅವರ ಭಾವಾಭಿನಯ ಮೆಚ್ಚೆನಿಸಿತ್ತು. ಚಿತ್ರದ ಕಥೆ ಮಾಮೂಲಿಗಿಂತ ಒಂದು ಹಂತ ಮೇಲಿತ್ತು. ಹಾಗಾಗಿ ಜನ ಸ್ವೀಕರಿಸಿದರು. ಹಂಸಲೇಖ ಸಂಗೀತ ಚಿತ್ರದ ಓಟಕ್ಕೆ ಒಂದು ಕ್ಯಾಟಲಿಸ್ಟ್‌ನಂತೆ ವರ್ತಿಸಿತ್ತು. 'ಕುಕ್ಕುಕ್ಕು... ಕುಕ್ಕುಕ್ಕು ಪ್ರೀತಿ ಮಾಡೋಣ ಅಂತು ಕುಕ್ಕುಕ್ಕು...', 'ಹಲೋ



(ಚಿತ್ರ ೧೧೭) 'ಭೂಮಿ ತಾಯಿಯ ಚೊಚ್ಚಲ ಮಗ' ಚಿತ್ರದಲ್ಲಿ ರಮೇಶ್, ಶಿವರಾಜ್‌ಕುಮಾರ್



(ಚಿತ್ರ ೧೧೮) 'ದೋಣಿ ಸಾಗಲಿ' ಚಿತ್ರದಲ್ಲಿ ಗಿರೀಶ್ ಶೆಟ್ಟಿ ಮತ್ತು ಸೌಂದರ್ಯ



(ಚಿತ್ರ ೧೧೯) 'ಕೌರವ' ಚಿತ್ರದಲ್ಲಿ ಬಿ.ಸಿ.ಪಾಟೀಲ್



(ಚಿತ್ರ ೧೨೦) 'ತಾತ್ತಾ ಮುತ್ತಾ' ಚಿತ್ರದಲ್ಲಿ ಪ್ರೇಮಾ, ಸುಜಾತ, ಕಸ್ತೂರಿ ಮತ್ತು ರಮೇಶ್

ಹಲೋ ಕೌರವೇಶ...' ಮತ್ತು 'ಹುಡ್ಗೀರಂದ್ರೆ ಡೇಂಜರಪ್ಪೋ...' ಹಾಡುಗಳು ಜನಪ್ರಿಯವಾದವು. ಹಿಂದೆ 'ಹಳ್ಳಿ ಮೇಷ್ಟ್ರು' ಚಿತ್ರಕ್ಕಾಗಿ ಹಂಸಲೇಖ ಗೀತೆ ರಚಿಸಿ ರಾಗ ಸಂಯೋಜಿಸಿದ್ದ 'ಇಳ್ಕಲ್ ಸೀರೆ ಉಟ್ಕೊಂಡು...' 'ಹಳ್ಳಿಮೇಷ್ಟ್ರು' ಚಿತ್ರದ ಆಡಿಯೋ ಕ್ಯಾಸೆಟ್‌ನಲ್ಲಿದ್ದರೂ ಚಿತ್ರದಲ್ಲಿ ಇರಲಿಲ್ಲ. ಅದನ್ನೇ ಕೊಂಚ ಬದಲಾವಣೆಗಳೊಂದಿಗೆ 'ಕೌರವ' ಚಿತ್ರದಲ್ಲಿ ಅಳವಡಿಸಿಕೊಂಡರು ಹಂಸಲೇಖ. ಈ ಚಿತ್ರ ಪಾಟೀಲರಿಗೆ ಬೇಡಿಕೆ ತಂದುಕೊಟ್ಟಿತು. ನಂತರ 'ಚನ್ನಪ್ಪ ಚನ್ನೇಗೌಡ', 'ಪ್ರೇಮಾಚಾರಿ', 'ದಳವಾಯಿ' ಮುಂತಾದ ಚಿತ್ರಗಳಲ್ಲಿ ನಾಯಕರಾದರೂ ಯಶ ಕಾಣಲಿಲ್ಲ.

೧೯೯೮ ರಲ್ಲಿ ಭರವಸೆ, ನಿರೀಕ್ಷೆ ಎರಡನ್ನು ಉಂಟುಮಾಡುತ್ತಾ ಎರಡು ಚಿತ್ರಗಳು ಬಿಡುಗಡೆಯಾದವು. ಒಂದನ್ನು ಮಣಿರತ್ನಂ ಬಳಿ ಸಹಾಯಕರಾಗಿದ್ದ ಕನ್ನಡ ಯುವಕ ಟಿ.ಬಿ.ಶ್ರೀನಿವಾಸ್ ವಿತರಕ ಸಂಜಯ್ ದೇಸಾಯಿ ಅವರಿಗಾಗಿ ನಿರ್ದೇಶಿಸಿದ್ದರೆ, ಇನ್ನೊಂದನ್ನು ಸುಮಾರು ೧೦ ವರ್ಷಗಳಿಂದ ಕನ್ನಡದ ಹಲವಾರು ಚಿತ್ರಗಳಿಗೆ ಕಥೆ, ಸಂಭಾಷಣೆ ಬರೆದು ಅನುಭವವಿದ್ದ ಕೆ.ನಂಜುಂಡ ನಿರ್ದೇಶಿಸಿದ್ದರು. ಮೊದಲನೆಯದು 'ಶಾಂತಿ ಶಾಂತಿ ಶಾಂತಿ', ಎರಡನೆಯದು 'ಕನಸಲೂ ನೀನೆ ಮನಸಲೂ ನೀನೆ'. ಅಗ್ಗದ ಮಸಾಲೆಗೆ ಹೊರತಾಗಿ ನಿರೂಪಣೆಯಲ್ಲಿ ಹೊಸತನಕ್ಕಾಗಿ ಈ ಇಬ್ಬರು ಯುವಕರು ಸಾಕಷ್ಟು ಶ್ರಮಪಟ್ಟಿದ್ದರು. ನಿರ್ಮಾಣ ಅದ್ದೂರಿಯಾಗಿತ್ತು. ಕಲಾವಿದರು ಸಾಕಷ್ಟು ಹೆಸರಿದ್ದವರು. ಆದರೆ ಚಿತ್ರಕಥೆ ಹಾಗೂ ಕಥಾವಿಸ್ತಾರದಲ್ಲಿನ ದೌರ್ಬಲ್ಯ ಅವರಿಗೆ ಮುಳುವಾಯಿತು. ಪ್ರೇಮದ ಎರಡು ರೀತಿಗಳನ್ನು ಪ್ರತಿಪಾದಿಸುವ ಪ್ರಥಮ ಪ್ರಯತ್ನಗಳಲ್ಲಿ ಇಬ್ಬರು ಯುವನಿರ್ದೇಶಕರೂ ಸೋತಿದ್ದರು. ಇರುವುದರಲ್ಲಿ ಪಲ್ಲವಿ ಪ್ರಕಾಶ್ ಮತ್ತು ಶೈಲೇಶ್ ವೈಭವ್ ನಿರ್ಮಿಸಿದ 'ಕನಸಲೂ ನೀನೆ ಮನಸಲೂ ನೀನೆ' ಚಿತ್ರದಲ್ಲಿ ಪ್ರಕಾಶ್ ರೈ, ಎಸ್.ಪಿ.ಬಾಲಸುಬ್ರಹ್ಮಣ್ಯಂ ಪಾತ್ರ ಮನಸ್ಸಿನಲ್ಲಿ ಉಳಿಯುವಂತಿತ್ತು. ಇದೇ ಚಿತ್ರದಲ್ಲಿ ಎಸ್.ಪಿ.ಯವರು ಹಾಡಿ ಅಭಿನಯಿಸಿದ್ದ 'ಹಾಡು ಎಂದರೆ ಹಾಡಮ ಕೋಗಿಲೆ...' ಮತ್ತು ಶಾಸ್ತ್ರಿ ಹಾಡಿದ್ದ 'ಅನುರಾಗದ ಅಲೆ ಮೇಲೆ...' ಅತ್ಯುತ್ತಮ ಗೀತೆಗಳಾಗಿದ್ದವು.

ಒಂದೆರಡು ಚಿತ್ರಗಳು ಮಾತ್ರ ಹೆಚ್ಚು ಸುದ್ದಿ, ಗದ್ದಲ ಮಾಡಿ ೧೯೯೮ರ ೬೨ ಚಿತ್ರಗಳಲ್ಲಿ ಹೆಚ್ಚಿನವು ಸೋಲನ್ನು ಅನುಭವಿಸಿದ ದಿನಗಳಲ್ಲಿ ಸರ್ಕಾರ ೧೯೯೮ರ ಮಾರ್ಚ್ ತಿಂಗಳಿನಲ್ಲಿ ವಿಧಿಸಿದ ಪ್ರದರ್ಶನ ತೆರಿಗೆ ಉದ್ಯಮದಲ್ಲಿ ಆತಂಕವನ್ನು ಹುಟ್ಟಿಸಿತು. ಒಂದು ರೀತಿಯಲ್ಲಿ ಇದು ಉದ್ಯಮವೇ ಮೇಲೆಳೆದುಕೊಂಡ ಹೊರೆಯಾಗಿತ್ತು.

ಚಲನಚಿತ್ರ ಪ್ರದರ್ಶನಗಳ ಮೇಲೆ ವಿಧಿಸಲಾಗುವ ಪ್ರದರ್ಶನ ತೆರಿಗೆಯನ್ನು ಸರ್ಕಾರವು ೧೯೯೮ ರಲ್ಲಿ ಪರಿಷ್ಕರಿಸಿತ್ತು. ಅದರಂತೆ ಪ್ರತಿ ಪ್ರದರ್ಶನಕ್ಕೆ ಚಿತ್ರಮಂದಿರದ ಮಾಲೀಕರು ಸರ್ಕಾರಕ್ಕೆ ೨೫ ರೂಪಾಯಿ ಪ್ರದರ್ಶನ ತೆರಿಗೆ ಹಾಗೂ ೩.೭೫ ರೂಪಾಯಿ ಆರೋಗ್ಯ ತೆರಿಗೆ ಸೇರಿ ೨೮.೭೫ ರೂಪಾಯಿಗಳನ್ನು ನೀಡುತ್ತಿದ್ದರು. ಪರಿಷ್ಕೃತಗೊಂಡ ತೆರಿಗೆಯ ಪ್ರಕಾರ ಈ ಕೆಳಗಿನಷ್ಟು ಮೊತ್ತವನ್ನು ನೀಡಬೇಕಾಗಿ ಬಂತು. ಪ್ರತಿ ಪ್ರದರ್ಶನಕ್ಕೆ ೩೦೦ ರೂಪಾಯಿ ಪ್ರದರ್ಶನ ತೆರಿಗೆ ಮತ್ತು ೪೫ ರೂಪಾಯಿ ಆರೋಗ್ಯ ತೆರಿಗೆ ಸೇರಿ ಒಟ್ಟು ಮೊತ್ತ ೩೪೫ ರೂಪಾಯಿಗಳಾಯಿತು. ಇದರಂತೆ ದಿನದ ನಾಲ್ಕು ಪ್ರದರ್ಶನಗಳಿಗೆ ೧,೩೮೦ ರೂಪಾಯಿಗಳಾಗಿ, ವಾರಕ್ಕೆ ೯,೬೬೦ ರೂಪಾಯಿ ಸರ್ಕಾರದ ಖಜಾನೆ ಸೇರುವಂತಾಯಿತು. ಶೇಕಡಾವಾರು ಲೆಕ್ಕ ಹಾಕಿದರೆ ಇದು ಹಿಂದಿನ ಮೊತ್ತಕ್ಕಿಂತ ಸಾವಿರ ಪಟ್ಟು ಹೆಚ್ಚಿನದಾಗಿತ್ತು. ಆಗಿನ ಹೋಲಿಕೆಯಂತೆ ಇಷ್ಟೊಂದು ಪ್ರದರ್ಶನ ತೆರಿಗೆ ಜಗತ್ತಿನ ಯಾವ ದೇಶದಲ್ಲಿಯೂ ಇರಲಿಲ್ಲ.

ಈ ಹಿಂದೆ ಪರಭಾಷಾ ಚಿತ್ರಗಳಿಗೆ ಪ್ರತಿ ಪ್ರದರ್ಶನಕ್ಕೆ ೧೧೫ ರೂಪಾಯಿ ಪ್ರದರ್ಶನ ತೆರಿಗೆ ಇತ್ತು. ಸರ್ಕಾರದ ಹೊಸ ನಿರ್ಧಾರದಂತೆ ಎಲ್ಲ ಭಾಷಾ ಚಿತ್ರಗಳಿಗೂ ಸಮಾನ ತೆರಿಗೆ ಜಾರಿಗೆ ಬಂತು. ಇದರಿಂದ ಸಹಜವಾಗಿ ಕನ್ನಡ ಚಿತ್ರಗಳಿಗೆ ಹೊಡೆತ ಬಿತ್ತು. ಪೂರ್ಣ ತೆರಿಗೆ ವಿನಾಯ್ತಿಯಿಂದ ಆಗುತ್ತಿದ್ದ ೩.೨ ಕೋಟಿ ರೂಪಾಯಿಗಳ ನಷ್ಟ ತುಂಬುವುದು ಹೇಗೆಂದು ಸರ್ಕಾರ ಕೇಳಿದ್ದರಿಂದ 'ಪ್ರದರ್ಶನ ತೆರಿಗೆಯನ್ನು ಸ್ವಲ್ಪ ಮಟ್ಟಿಗೆ ಏರಿಸಿ ಸರಿದೂಗಿಸಬಹುದು' ಎಂದು ವಾಣಿಜ್ಯ ಮಂಡಳಿಯು ಕೊಟ್ಟ ಸಲಹೆಯೇ ಮುಳುವಾಗಿ, ೧೯೯೮ ರಲ್ಲಿ ಬಹು ದೊಡ್ಡ ಸಮಸ್ಯೆ ಎದುರಾಗಿತ್ತು. ಹಾಗೆ ನೋಡಿದರೆ ೧೯೯೭ರ ಅಂಕಿ-ಅಂಶಗಳು ಬೇರೆಯೇ ವಾಸ್ತವವನ್ನು ಮುಂದಿಡುತ್ತವೆ. ಆ ವರ್ಷ ಮನರಂಜನಾ ತೆರಿಗೆಯಿಂದ ಸರ್ಕಾರಕ್ಕೆ ೪೫ ಕೋಟಿ ರೂಪಾಯಿ ಸಂಗ್ರಹವಾಗಿತ್ತು. ಈ ಮೊತ್ತ ೧೯೯೬ ಕ್ಕಿಂತ ೧೦ ಕೋಟಿ ಹೆಚ್ಚು. ಅಂದಾಗ ನಷ್ಟದ ಮಾತು ಬರುವುದಿಲ್ಲ. ಇಲ್ಲಿನ ಇನ್ನು ಒಂದು ಸೂಕ್ಷ್ಮವೆಂದರೆ ಈ ಹೆಚ್ಚಳದಿಂದ ನಗರದ ಚಿತ್ರಮಂದಿರಗಳ ಮಾಲೀಕರು ಕಳೆದುಕೊಳ್ಳುವುದು ಏನೂ ಇರಲಿಲ್ಲ. ಏಕೆಂದರೆ ಪ್ರದರ್ಶಕರು ವಾರದ ಗಳಿಕೆಯಲ್ಲಿ ಸರ್ಕಾರ ಹೆಚ್ಚಿಸಿದ ಮೊತ್ತವನ್ನು ಕಳೆದುಕೊಂಡೇ ವಿತರಕರ ಕೈಗೆ ಮಿಕ್ಕ ಹಣವನ್ನು ನೀಡುತ್ತಿದ್ದರು. ಆದರೆ ಹಣ ಕೊಟ್ಟು ಚಿತ್ರದ ಪ್ರತಿಯನ್ನು ತೆಗೆದುಕೊಂಡು ಹೋಗುವ 'ಸಿ' ಕೇಂದ್ರಗಳ ಚಿತ್ರಮಂದಿರಗಳವರು



(ಚಿತ್ರ ೧೨೧) 'ಕನಸಲೂ ನೀನೇ ಮನಸಲೂ ನೀನೇ' ಚಿತ್ರದಲ್ಲಿ ಪ್ರಕಾಶ್ ರೈ, ಆಯೇಷಾಜುಲ್ಕಾ ಮತ್ತು ವಿನೀತ್

ಹೆಚ್ಚುವರಿ ಭಾರವನ್ನು ಅನಿವಾರ್ಯವಾಗಿ ಹೊರಲೇಬೇಕಾಗಿತ್ತು. ಏಕೆಂದರೆ ಅವರು ಹಂಚಿಕೆದಾರರ ಮರ್ಜಿಯಲ್ಲಿ ಇರುವಂಥವರು.

ಸರ್ಕಾರ ಹೆಚ್ಚಿಸಿದ ಪ್ರದರ್ಶನ ತೆರಿಗೆಯು ಸಾಕಷ್ಟು ಅಸಮಾಧಾನವನ್ನು ಹುಟ್ಟು ಹಾಕಿತು. ಈ ಅಸಮಾಧಾನದ ಪರಿಣಾಮ ಒತ್ತಡವಾಗಿ ವಾಣಿಜ್ಯ ಮಂಡಳಿಯ ಮೇಲೆ ಬಿದ್ದಿತು. ವಾಣಿಜ್ಯ ಮಂಡಳಿ ಸರ್ಕಾರಕ್ಕೆ ಮೊರೆ ಹೋಯಿತು. ಸರ್ಕಾರ ತಾನು ಹೇರಿದ್ದ ತೆರಿಗೆಯನ್ನು ಸ್ವಲ್ಪ ಪ್ರಮಾಣದಲ್ಲಿ ಕಡಿಮೆ ಮಾಡಿತು.

ಕನ್ನಡ ಚಿತ್ರರಂಗದ ಅರ್ಥವ್ಯವಸ್ಥೆಯ ಈ ಮುಖ್ಯ ಘಟನೆಯೊಂದಿಗೆ ೧೯೯೮ ರಲ್ಲಿ ಸಂಭವಿಸಿದ ಒಂದೆರಡು ಸಾವು ಕೂಡ ವಿಷಾದದ ನೆರಳನ್ನು ಹರಡಿದವು. ವೃತ್ತಿ ರಂಗಭೂಮಿಯೊಂದಿಗೆ ಆರಂಭಿಸಿ, ಚಿತ್ರರಂಗದ ಜೊತೆಯಲ್ಲಿಯೇ ಬೆಳೆದು ಬಂದ ಪ್ರತಿಭಾವಂತ ಚೇತನ ಸೋರಟ್ ಅಶ್ವತ್ಥ್ ಫೆಬ್ರವರಿಯಲ್ಲಿ ನಿಧನರಾದರು. ಚಿತ್ರರಂಗಕ್ಕೆ ಕಾಲಿಟ್ಟ ಒಂದೆರಡು ವರ್ಷದಲ್ಲಿಯೇ ಭರವಸೆಯ ಬೆಳಕಾಗಿ ಬೆಳೆಯುತ್ತಿದ್ದ ಅಪರೂಪದ ಚೆಲುವೆ ನಿವೇದಿತಾ ಜೈನ್ ೧೯೯೮ರ ಮೇ ೧೭ರ ರಾತ್ರಿ ಬೆಂಗಳೂರಿನ ತಮ್ಮ ಮನೆಯ ಮಹಡಿಯಿಂದ ಜಾರಿ ನಿಗೂಢ ರೀತಿಯಲ್ಲಿ ಸಾವನ್ನಪ್ಪಿದರು. ಇದೇ ವರ್ಷದ ಅಕ್ಟೋಬರ್ ಕೊನೆಯ ವಾರ ನಟ, ನಿರ್ದೇಶಕ, ನಿರ್ಮಾಪಕ ಎಸ್.ಆರ್.ರಾಜನ್ ನಿಧನರಾದರು. ಮೂರು ಸಾವುಗಳನ್ನು ಕಂಡ ಅತೃಪ್ತಿಯೋ ಎಂಬಂತೆ ಮರುವರ್ಷ ಸಾವುಗಳ ಸರಣಿಯೇ ಸಂಭವಿಸಿತು. ೧೯೯೯ರ ಜನವರಿ ಮೊದಲ ವಾರ ಬೆಂಗಳೂರಿನ ಪ್ರತಿಷ್ಠಿತ ಉಮಾ, ಶಾಂತಿ ಚಿತ್ರಮಂದಿರಗಳ ಮಾಲೀಕರಾಗಿದ್ದ ಚಂದ್ರಶೇಖರರಾಜು ಹೃದಯಾಘಾತದಿಂದ ತೀರಿಕೊಂಡರು. ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷರಾಗಿ ಸಜ್ಜನಿಕೆ, ಸಹೃದಯತೆಯಿಂದ ಎಲ್ಲರ ಮನಸ್ಸನ್ನು ಗೆದ್ದಿದ್ದ ಇವರು ಕನ್ನಡ ಪ್ರೇಮಿಯಾಗಿದ್ದರಲ್ಲದೆ, ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ತುಂಬಾ ಸಹಕಾರ ನೀಡುತ್ತಿದ್ದರು. ಇದೇ ಜನವರಿ ಸಂಕ್ರಾಂತಿ ಹಬ್ಬದ ಮುನ್ನಾದಿನ ಸುಮಾರು ೨೦೦ ಚಿತ್ರಗಳಲ್ಲಿ ಅಭಿನಯಿಸಿದ್ದ ಅನಂತರಾಮ್ ಮಚ್ಚೇರಿ ಹೃದ್ರೋಗದಿಂದ ಇನ್ನಿಲ್ಲವಾದರು. ನಾಟಕಗಳಲ್ಲೂ ಅಭಿನಯಿಸುತ್ತಿದ್ದ ಇವರು ತಮ್ಮ ಕೊನೆಯ ದಿನಗಳನ್ನು ಕಷ್ಟದಿಂದ ಕಳೆದು ತಮ್ಮ ೬೮ನೇ ವಯಸ್ಸಿನಲ್ಲಿ ಕಣ್ಮುಚ್ಚಿದರು. ಏಪ್ರಿಲ್ ಮೂರನೆಯ ವಾರ ಚಿತ್ರರಂಗದ ಮತ್ತೊಬ್ಬ ದಿಗ್ಗಜ, ಸಾಹಸಿ, ಉತ್ಸಾಹಿ ಅಬ್ಬಾಯಿನಾಯ್ಡು ವೈಯಕ್ತಿಕ ಹಾಗೂ ವೃತ್ತಿಸಂಬಂಧ ಜಂಜಾಟದಿಂದಲೋ ಎಂಬಂತೆ ಆಕಸ್ಮಿಕವಾಗಿ ನಿಧನರಾಗಿದ್ದು ಚಿತ್ರರಂಗವನ್ನು ಬೆಚ್ಚಿಬೀಳಿಸಿತು. ಕಥೆಗಾರ, ನಟ, ನಿರ್ಮಾಪಕ, ಹಂಚಿಕೆದಾರ - ಇವೆಲ್ಲಕ್ಕೂ ಮಿಗಿಲಾಗಿ ಚಿತ್ರರಂಗಕ್ಕೊಂದು ಸುಸಜ್ಜಿತ ಸ್ಟುಡಿಯೋ ನಿರ್ಮಿಸಿ, ಅವೆಲ್ಲದರ ಫಲ ಕಾಣುವ ಮೊದಲೇ ಕಣ್ಮುಚ್ಚಿದರು. ಇವರು ನಿಧನರಾದ ವಾರದ ಅಂತರದಲ್ಲಿ ನಟಿ, ನಿರ್ಮಾಪಕಿ ಎಂ.ವಿ.ರಾಜಮ್ಮ ಇಲ್ಲವಾದರು. ಚಿತ್ರರಂಗದ ಏಳು-ಬೀಳುಗಳೊಂದಿಗೆ ಬೆಳೆದ ರಾಜಮ್ಮನವರು ಮದರಾಸಿನಲ್ಲಿ ಕನ್ನಡ ಕಲಾವಿದರಿಗೆ ಆಶ್ರಯ ನೀಡಿದ್ದ ಹಿರಿಯ ತಾಯಿಯಾಗಿದ್ದರಷ್ಟೇ ಅಲ್ಲ, ಕನ್ನಡ ಚಲನಚಿತ್ರ ಇತಿಹಾಸದ ಪುಟಗಳಲ್ಲಿ ಅಮರ ಹೆಗ್ಗುರುತುಗಳನ್ನು ಬಿಟ್ಟುಹೋದರು. ಎಂ.ವಿ.ರಾಜಮ್ಮ ಕಣ್ಮುಚ್ಚಿದ ದಿನಗಳಲ್ಲೇ ನಟಿ, ಕಂಠದಾನ ಕಲಾವಿದೆ ಸರ್ವಮಂಗಳಾ ಅಕಾಲಿಕ ಸಾವಿಗೀಡಾದರು. ಜೂನ್ ಮೊದಲ ವಾರ ನಿಧನರಾದ ಬಿ.ವಿಠಲಾಚಾರ್ಯ ಅವರೊಂದಿಗೆ ಕನ್ನಡ ಚಿತ್ರರಂಗದ ಒಂದು ಸ್ಮರಣೀಯ ಅಧ್ಯಾಯ ಕೊನೆಗೊಂಡಿತ್ತು. ಇದೇ ತಿಂಗಳ ಎರಡನೆಯ ವಾರ ಕಲಾವಿದ, ಸಾಹಿತಿ, ನಿರ್ದೇಶಕ ಕುಣಿಗಲ್ ವಸಂತ್ ಕ್ಯಾನ್ಸರ್‌ನಿಂದಾಗಿ ಸಾವಿಗೀಡಾದರು. ಆಗಸ್ಟ್ ಒಂದರಂದು ನಿಧನರಾದ ಕಲ್ಯಾಣ್‌ಕುಮಾರ್ ಕನ್ನಡದ ಕುಮಾರತ್ರಯರಲ್ಲಿ ಕಳಚಿಕೊಂಡ ಎರಡನೆಯ ಕೊಂಡಿ. ಏಷ್ಟೇ ಆರ್ಥಿಕ ಸಮಸ್ಯೆಗಳಿದ್ದರೂ, ಯಾರಲ್ಲೂ ನೆರವು ಬೇಡದ ಈ ವರ್ಣರಂಜಿತ ಜೀವ ಕೊನೆ ದಿನಗಳಲ್ಲೂ ಸ್ವಾಭಿಮಾನವನ್ನು ಮೆರೆಯುತ್ತಾ, ದೂರದರ್ಶನ ಧಾರಾವಾಹಿಯೊಂದರಲ್ಲಿ ನಗುನಗುತ್ತಾ ಪಾಲ್ಗೊಳ್ಳುತ್ತಲೇ ರಂಗಸ್ಥಳದ ಯಕ್ಷ ತರಳೆ ಇನ್ನಿಲ್ಲವಾಯಿತು. ಅಕ್ಟೋಬರ್ ೧೭ರಂದು ಕಣ್ಮುಚ್ಚಿದ ಸಾಹಿತಿ, ಸಜ್ಜನ, ನಿರ್ಮಾಪಕ ನರೇಂದ್ರಬಾಬು ಅವರದು ೧೯೯೯ರ ಸಾವಿನ ಸರಮಾಲೆಯ ಕೊನೆಯ ದುರ್ಘಟನೆ. ಈ ಶತಮಾನ ಕೊನೆಗೊಳ್ಳಲು ಒಂದು ವರ್ಷ ಉಳಿದಿರುವಾಗಲೇ ಒಂದೇ ವರ್ಷದಲ್ಲಿ ಒಂಬತ್ತು ಸಾವುಗಳು ಸಂಭವಿಸಿ ೧೯೯೯ಕ್ಕೆ ದುರಂತದ ಸಂಕೇತ ನೀಡಿತು. ಅದೇ ವರ್ಷ ಬಿಡುಗಡೆಯಾದ ಚಿತ್ರಗಳ ಸಂಖ್ಯೆ ೫೮ಕ್ಕೆ ಇಳಿದದ್ದು ಕಾಕತಾಳೀಯ.

೧೯೯೯ ರಲ್ಲಿ ಬಿಡುಗಡೆಯಾದ ೫೮ ಚಿತ್ರಗಳಲ್ಲಿ 'ಅತ್ಯುತ್ತಮ, ಶ್ರೇಷ್ಠ' ಎನ್ನುವಂಥ ನಾಲ್ಕೈದು ಕೃತಿಗಳೂ ಇರಲಿಲ್ಲ. ಪತ್ರಕರ್ತ ಪ್ರವೀಣ್ ನಾಯಕ್ ನಿರ್ದೇಶಿಸಿದ ಪ್ರಥಮ ಚಿತ್ರ 'ಜೆಡ್'. ಸಿಂಗೀತಂ ಶ್ರೀನಿವಾಸರಾವ್ ನಿರ್ದೇಶಿಸಿದ 'ಟುವ್ವಿ ಟುವ್ವಿ ಟುವ್ವಿ' ಆಂಗ್ಲ ಚಿತ್ರಗಳ ಪ್ರಭಾವವಿದ್ದರೂ ಭಿನ್ನ ಚಿತ್ರ. ಕೆಲವಾರು ಭಾವಪ್ರಧಾನ ದೃಶ್ಯಗಳು, ಹಂಸಲೇಖ ಸಂಗೀತ ಗಮನ ಸೆಳೆಯಿತು. ನಾಯಕಿಯ ತಂದೆ-ತಾಯಿ ಪಾತ್ರದಲ್ಲಿ ಅತ್ಯುತ್ತಮ ಅಭಿನಯ ನೀಡಿದ್ದ ದೊಡ್ಡಣ್ಣ, ಜಯಂತಿ ಅವರಿಗೆ ೧೯೯೮-೯೯ರ ರಾಜ್ಯದ ಅತ್ಯುತ್ತಮ ಪೋಷಕ ನಟ, ನಟಿ ಪ್ರಶಸ್ತಿ ಬಂದಿತು. ಅತ್ಯುತ್ತಮ ಸಂಗೀತ ನಿರ್ದೇಶಕರಾಗಿ ಹಂಸಲೇಖ ಆಯ್ಕೆಯಾದರು. ಡಿ.ರಾಜೇಂದ್ರಬಾಬು ನಿರ್ದೇಶನದ 'ಹಬ್ಬ', ಎಸ್.ಮಹೇಂದರ್ ನಿರ್ದೇಶನದ 'ಸ್ನೇಹಲೋಕ' ಅವಿಭಕ್ತ ಕುಟುಂಬಗಳ ಸಡಗರ, ಸಂಭ್ರಮ, ತ್ಯಾಗಗಳ 'ಹಮ್ ಆಪ್ ಕೆ ಹೈ ಕೌನ್' ಶೈಲಿಯ ಚಿತ್ರಗಳು. ಪಂಚತಾರಾ, ಸಪ್ತತಾರಾ ಸಮೂಹದ ಈ ಚಿತ್ರಗಳು ಇದೇ ಕಾರಣದಿಂದಾಗಿ ಆರ್ಥಿಕವಾಗಿಯೂ ಯಶಸ್ಸು ಗಳಿಸಿದವು. ಜನಪ್ರಿಯ ಶೈಲಿಯ ಈ ಚಿತ್ರಗಳಿಗೆ ರಂಜನೆಯನ್ನು ಹೊರತುಪಡಿಸಿದ ಬೇರೆ ಆಯಾಮಗಳಿರಲಿಲ್ಲ.

'ಸೂರ್ಯವಂಶ' ಅದೇ ಹೆಸರಿನ ತಮಿಳು ಚಿತ್ರದ ಪುನರ್‌ನಿರ್ಮಾಣವಾಗಿದ್ದು ಕೆಲವಾರು ಹಾಸ್ಯದೃಶ್ಯಗಳು ಹಾಗೂ ವಿಷ್ಣುವರ್ಧನ್ ಅವರ ಉತ್ತಮ ಅಭಿನಯದಿಂದಾಗಿ ಗಮನ ಸೆಳೆದ ಚಿತ್ರ. 'ವೀರಪ್ಪನಾಯಕ', 'ಸೂರ್ಯವಂಶ' ಚಿತ್ರಗಳ ನಂತರ ವಿಷ್ಣುವರ್ಧನ್‌ರನ್ನು ಅದೇ ಇಮೇಜಿಗೆ ಲಗತ್ತಿಸಿ ನಾಲ್ಕಾರು ಚಿತ್ರಗಳ ನಿರ್ಮಾಣ ನಡೆಯಿತು. ಈ ಚಿತ್ರದ ಯಶಸ್ಸಿನಿಂದ ಉತ್ತೇಜಿತರಾದ ನಿರ್ಮಾಪಕ ಹೆಚ್.ಡಿ.ಕುಮಾರಸ್ವಾಮಿ ನಂತರದ ದಿನಗಳಲ್ಲಿ ಚಿತ್ರ ನಿರ್ಮಾಣವನ್ನು ಗಂಭೀರ ಪ್ರವೃತ್ತಿಯನ್ನಾಗಿಸಿಕೊಂಡರು.

'ಚಂದ್ರಮುಖಿ ಪ್ರಾಣಸಖಿ' ತ್ರಿಕೋನ ಪ್ರೇಮದ ಕಥೆಯ ಚಿತ್ರ. ಇದರ ನಿರೂಪಣೆ ನಿರ್ದೇಶಕ ಸೀತಾರಾಮ ಕಾರಂತರ ಬಗ್ಗೆ ಭರವಸೆ ಇಟ್ಟುಕೊಳ್ಳುವಂತೆ ಮಾಡಿತು. ಅಕ್ಕನನ್ನು ಪ್ರೀತಿಸುತ್ತಿದ್ದವನನ್ನು ತಾನೇ ಅವಳೆಂಬಂತೆ ಭಾವನೆ ಹುಟ್ಟುಹಾಕುತ್ತಾ ಕೇಂದ್ರಬಿಂದುವಾಗುವ ತಂಗಿ ಈ ಚಿತ್ರದ ಮುಖ್ಯ ಆಕರ್ಷಣೆಯಾಗಿದ್ದಳು. ಭಾವನಾ ತಂಗಿಯಾಗಿ ಅತ್ಯುತ್ತಮ ಅಭಿನಯ ನೀಡಿದ್ದ ಚಿತ್ರದಲ್ಲಿ ರಮೇಶ್, ಪ್ರೇಮಾ ಕೂಡ ಉತ್ತಮ ಅಭಿನಯ ನೀಡಿದ್ದರು. ಚೊಕ್ಕ ಚಿತ್ರನಾಟಕ, ಚಿತ್ರಿಕೆಗಳ ಜಾಣ್ಮೆ, ಕಥೆಗೆ ಕೊಟ್ಟ ತಿರುವುಗಳು, ಅಭಿನಯ ತೆಗೆದ ರೀತಿ ಹೀಗೆ ಹತ್ತಾರು ಕಾರಣಗಳಿಂದ ಚಿತ್ರ ಸುದ್ದಿಯಾಯಿತು. ಸರಳವಾದರೂ ಜನಪ್ರಿಯವಾಗುವ ಇಂಥ ಚಿತ್ರಗಳ ಹಿಂದೆ ಇರುವುದು ಯಾವ ಕೌಶಲ ಎಂದು ಕೆಲವರು ಹುಡುಕಿಕೊಳ್ಳುವಂತೆಯೂ ಮಾಡಿತ್ತು. ಸೀತಾರಾಮ ಕಾರಂತರು ಚಿತ್ರಿಕೆಯಿಂದ ಚಿತ್ರಿಕೆಗೆ ಅವಸರದಲ್ಲಿ ಹಾರದೆ, ಬದುಕಿನ ಸಣ್ಣಸಣ್ಣ ವಿವರಗಳನ್ನು ಕೊಡುವುದರಲ್ಲಿ, ಅದಕ್ಕಾಗಿ ಕನ್ನಡದ ಪ್ರಾದೇಶಿಕತೆಯ ಸೊಗಡನ್ನು ತುಂಬಿಕೊಳ್ಳುವುದರಲ್ಲಿ ಜಾಣ್ಮೆ ತೋರಿದ್ದರು. ಎಸ್.ಕೆ.ಪ್ರಕಾಶ್ ಬಾಬು



(ಚಿತ್ರ ೧೨೨) 'ಸೂರ್ಯವಂಶ' ಚಿತ್ರದಲ್ಲಿ ಇಶಾ ಕೊಪ್ಪಿಕರ್, ರಮೇಶ್ ಭಟ್ ಮತ್ತು ವಿಷ್ಣುವರ್ಧನ್



(ಚಿತ್ರ ೧೨೩) 'ಚಂದ್ರಮುಖಿ ಪ್ರಾಣಸಖಿ' ಚಿತ್ರದಲ್ಲಿ ಭಾವನಾ ಮತ್ತು ರಮೇಶ್

ಇಂಥ ಹೊಸ ಪ್ರಯೋಗ ಮಾಡಿ ಹೊಸಬರಿಗೆ ಅವಕಾಶ ಮಾಡಿದರೂ ಗೆದ್ದಿದ್ದರು. ಅವರ ಆಯ್ಕೆಯಲ್ಲಿ ಅಂಥ ಜಾಣತನ-ಲೆಕ್ಕಾಚಾರ ಇತ್ತು ಎಂದರೂ ತಪ್ಪಿಲ್ಲ. ಶಶಿಧರ ಭಟ್ ಚುರುಕಾದ-ಸಹಜವಾದ, ಭಾರವೆನಿಸದ ಸಂಭಾಷಣೆ ರಚಿಸಿ ಅರ್ಧ ಕೆಲಸ ಹಗುರ ಮಾಡಿದ್ದರು. ಛಾಯಾಗ್ರಾಹಕ ಗಿರಿ ಒಳ-ಹೊರಾಂಗಣಗಳನ್ನು ವಿಶಿಷ್ಟವಾಗಿ ಸೆರೆಹಿಡಿದು ಸೌಂದರ್ಯ ತುಂಬಿದ್ದರು. ಕೆ.ಕಲ್ಯಾಣ್ ಸಂಗೀತದಲ್ಲಿದ್ದ ನಾವೀನ್ಯ, ಸಾಹಿತ್ಯದಲ್ಲಿದ್ದ ಬಿಗಿ ಮತ್ತೊಂದು ಪೂರಕ ಅಂಶ. ಅಭಿನಯದಲ್ಲಿ ಭಾವನಾ ರಸಿಕರ ಹೃದಯವನ್ನು ಅಲುಗಾಡಿಸಿಬಿಟ್ಟಿದ್ದರು. ಇಷ್ಟೆಲ್ಲ ಹೇಳುವಾಗಲೂ ಈ ಚಿತ್ರಕ್ಕೆ ಬಹಳ ಹಿಂದೆಯೇ ಕೋಡ್ಲು ರಾಮಕೃಷ್ಣರ 'ಬಿಸಿಲು ಬೆಳದಿಂಗಳು' ಚಿತ್ರದ ಮೊದಲರ್ಧದ ಛಾಯೆ ಅಥವಾ ಹಿಂದಿಯ 'ಸಾಜನ್' ಚಿತ್ರದ ಪ್ರಭಾವ ಇದ್ದಿರಬಹುದೇ ಎಂಬುದು ಸಹಜವಾಗಿಯೇ ಏಳುವ ಪ್ರಶ್ನೆ. ಒಟ್ಟಾರೆ ಚಿತ್ರ ಚೆನ್ನಾಗಿತ್ತು. ಅಂತಿಮ ದೃಶ್ಯದಲ್ಲಿ ನಾಯಕ, ಪ್ರೇಮಿಸದವಳನ್ನು ಮದುವೆಯಾಗುವುದಕ್ಕಿಂತ ತನ್ನ ಭಾವನೆಗಳನ್ನು ಅರಿತವಳನ್ನು ವಿವಾಹವಾಗಲು ಸಮ್ಮತಿಸುವುದು ಪ್ರೇಕ್ಷಕನಿಗೆ ಪ್ರಿಯವಾದ ತಿರುವಾಗಿತ್ತು.

ಚಲನಚಿತ್ರ ಮಾಧ್ಯಮ ಇನ್ನೊಂದು ಶತಮಾನಕ್ಕೆ ದಾಪುಗಾಲು ಇಡುತ್ತಿರುವಾಗಲೂ ಮಾಧ್ಯಮದಲ್ಲಿ ಸ್ತ್ರೀ ಪಾತ್ರ ಹೆಚ್ಚಿನ ಬದಲಾವಣೆಗೆ ಒಳಗಾಗಲಿಲ್ಲ.

"...ಅವಾಸ್ತವತೆಯ ಜೊತೆಗೆ ವೈವಿಧ್ಯವೇ ಇಲ್ಲದೆ, ಒಂದೇ ಬಗೆಯ ಸ್ತ್ರೀ ಪಾತ್ರಗಳನ್ನೇ ನಾವು ಹೆಚ್ಚು ಚಿತ್ರಗಳಲ್ಲಿ ಕಾಣುತ್ತಿದ್ದೇವೆ. ಬದಲಾದ ಇಂದಿನ ಪರಿಸ್ಥಿತಿಯಲ್ಲಿ ಸ್ತ್ರೀ ಎಲ್ಲ ಕ್ಷೇತ್ರಗಳಲ್ಲೂ ದುಡಿಯುತ್ತಿದ್ದಾಳೆ. ಅವಳು ಸಬಲೆ, ಬುದ್ಧಿವಂತೆ, ಅವಳಿಗೂ ಸ್ವತಂತ್ರ ವ್ಯಕ್ತಿತ್ವವಿದೆ ಎಂಬುದು ಚಿತ್ರಿತವಾಗಬೇಕು. ಬಹುತೇಕ ಪ್ರೇಕ್ಷಕರಲ್ಲಿರುವ ಕೀಳು ಅಭಿರುಚಿಯನ್ನು ಸದಭಿರುಚಿಯಾಗಿ ಬದಲಾಯಿಸುವುದು ಚಿತ್ರರಂಗದವರಿಗೆ ಅಸಾಧ್ಯವಾದ ಕೆಲಸವೇನಲ್ಲ..." ಎಂದಿದ್ದರು ಅನುಪಮಾ ನಿರಂಜನ. 'ಋಣಮುಕ್ತಳು' ಚಿತ್ರದ ಹಕ್ಕುಗಳನ್ನು ನೀಡಿದ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಅವರಾಡಿದ ಮಾತುಗಳಿವು. ಅಲ್ಲಿಂದೀಚೆಗೆ ಏನೆಲ್ಲ ನಡೆದಿದೆ, ಬೇಕಾದಷ್ಟು ಚಿತ್ರಗಳು ತಯಾರಾಗಿವೆ. ಆದರೆ ಸ್ತ್ರೀ ಪಾತ್ರಗಳು ಏನಾಗಿವೆ ಎಂದು ಯೋಚಿಸಿದಾಗ ಅವು ಇದ್ದಲ್ಲೇ ಇವೆ. ಬೇಲಿ ದಾಟುವ ಪ್ರಯತ್ನ ಆಗ-ಈಗ ಮಾಡಿದರೂ ಅಂಥ ಬಿಡುಗಡೆಗೆ ಪೂರ್ಣ ಅವಕಾಶ ದೊರೆತಿಲ್ಲ. ಸಂಕೀರ್ಣ ವ್ಯಕ್ತಿತ್ವ, ಸ್ವತಂತ್ರ ಮನೋಭಾವ ಇರುವ ಸ್ತ್ರೀಯನ್ನು ಜನಪ್ರಿಯ ಚಿತ್ರಗಳು ಕಟ್ಟಿಕೊಡಲಿಲ್ಲ. ಅಂಥ ಒಂದೆರಡು ಪ್ರಯತ್ನಗಳು ಜನರ ಹತ್ತಿರಕ್ಕೆ ಹೋಗಲಿಲ್ಲ. ಸಾಮಾಜಿಕ ಸಂದರ್ಭದಲ್ಲಿ ಕೂಡ ದುರ್ಬಲ ವರ್ಗವನ್ನು ಸಮಾನವಾಗಿ ಕಾಣಲಾಗಲೀ, ಸಮಸ್ಯೆಗಳ ಬಗ್ಗೆ ಗಂಭೀರವಾಗಿ ಯೋಚಿಸಲಾಗಲೀ ಇನ್ನೂ ಸರಿಯಾದ ವೇದಿಕೆಯು ನಿರ್ಮಾಣವಾಗಿಲ್ಲ. ಇದು ಸ್ತ್ರೀ ಅಥವಾ ದುರ್ಬಲವರ್ಗಕ್ಕೆ ಮಾತ್ರವಲ್ಲ ಸಮಾಜದ ಪ್ರಬಲವಾದ ನಂಬಿಕೆಗಳಾದ ದೈವಭಕ್ತಿ, ತ್ಯಾಗ ಸಂಬಂಧಿ ವಿವರಗಳಲ್ಲೂ ಇದೇ ಬಗೆಯ ಚಿತ್ರಣಗಳಿರುತ್ತವೆ. ಅಂತಿಮವಾಗಿ ಮೇಲ್ವರ್ಗ, ಪುರುಷ, ದೈವಗಳಿಗೆ ಶರಣಾಗುವುದು ಅನಿವಾರ್ಯ ಎಂಬ ನಿಲುವನ್ನು ತಾಳಲಾಗುತ್ತದೆ. ಈ ಹಿನ್ನೆಲೆಯಲ್ಲಿ ಸ್ತ್ರೀ ಚಿತ್ರಣ ಕೂಡ, "ಸಾವಿತ್ರಿ, ಸಕ್ಕುಬಾಯಿಯರ ಚಿತ್ರಣಗಳಿದ್ದ ಹಾಗೇ 'ಹೀ ಮ್ಯಾನ್' ಮಾದರಿಯ ಚಿತ್ರಗಳಲ್ಲಿ ಸ್ತ್ರೀಪಾತ್ರಗಳು ಹೆಚ್ಚು ಹೆಚ್ಚು ಅಲಂಕಾರಿಕವಾಗುತ್ತಾ ಆಕೆಯ ಬಟ್ಟೆ, ನಡಿಗೆಯ ಜೊತೆ ಕ್ಯಾಮರಾ ಕೋನಗಳೆಲ್ಲ ಅವಳ ಅಂಗಾಂಗಗಳನ್ನು ಬಿಡಿಬಿಡಿಯಾಗಿ ಪ್ರದರ್ಶಿಸುವತ್ತಲೇ ಒತ್ತು ನೀಡುತ್ತಿರುತ್ತವೆ. ಇವುಗಳ ಜೊತೆಗೆ ಪಾವಿತ್ರ್ಯತೆಯ ಸಂಕೇತಗಳನ್ನು ಎತ್ತಿಹಿಡಿಯುವ ಚಿತ್ರಗಳೂ ಬರುತ್ತವೆ" ಎಂದು ಸ್ತ್ರೀವಾದಿ ವಿಮರ್ಶೆಯೊಂದು ಹೇಳುತ್ತದೆ. ಇಲ್ಲಿ ಸ್ತ್ರೀಯನ್ನು 'ಸುಂದರ'ವಾಗಿ ನೋಡುವ ಅವರದೇ ಆದ ಪರಿಕಲ್ಪನೆಯ ಜೊತೆಗೆ ಆಕೆ ಪವಿತ್ರವಾಗಿರಬೇಕೆಂಬ ಅಪೇಕ್ಷೆಯೂ ಇದೆಯಲ್ಲವೆ?

ಕೋಮುವಾದಿ ಶಕ್ತಿಗಳ ಪ್ರಾಬಲ್ಯ ಹೆಚ್ಚುತ್ತಿದೆ, ಇನ್ನೊಂದೆಡೆ ಜಾಗತೀಕರಣದ ಸಂದರ್ಭದಲ್ಲಿ ಸ್ತ್ರೀ ಕೂಡ ಉಪಭೋಗದ ಸಾಧನವಾಗುತ್ತಿದ್ದಾಳೆ. ಈ ಹಿನ್ನೆಲೆಯಲ್ಲಿ ನಮ್ಮ ಸಾಮಾಜಿಕ ಸ್ಥಿತಿಯನ್ನು ಮುಖ್ಯವಾಹಿನಿ ಸಿನಿಮಾಗಳು ಪ್ರತಿಬಿಂಬಿಸುತ್ತವೆ ಎಂದು ಗ್ರಹಿಸಬಹುದಾಗಿದೆ. ಮಹಿಳೆ ತನ್ನ ಕಾರ್ಯಕ್ಷೇತ್ರವನ್ನು ಹಿಗ್ಗಿಸುವ ಪ್ರಯತ್ನ ನಡೆಸುತ್ತಿರುವಾಗಲೇ ಈ ಶಕ್ತಿಗಳು ಆಕೆಯನ್ನು ಹಿಂದೆ ತಳ್ಳುವ ಪ್ರಯತ್ನ ಮಾಡುತ್ತಿವೆ. ಸಿನಿಮಾ ಕೂಡ ಈ ಶಕ್ತಿಗಳನ್ನು ವಾಸ್ತವದ ಅರಿವಿಲ್ಲದೆಯೇ ಬೆಂಬಲಿಸುತ್ತಿವೆ ಅಥವಾ ಮಾಧ್ಯಮದಲ್ಲಿರುವವರ ಮನೋಧರ್ಮವೂ ಅದೇ ಆಗಿದೆ.

"...ಜೀವನ ನಮಗೆ ಪ್ರಿಯವಾಗದ, ಮುದ್ದಾದ ಅಂಶಗಳಿಂದ ತುಂಬಿದೆ ಎಂದಷ್ಟೇ ಭ್ರಮಿಸದೆ, ನಮ್ಮ ನ್ಯೂನತೆ, ದೋಷಗಳನ್ನು ಕಾಣಿಸುವ ಯತ್ನ ಕಲೆಯಲ್ಲಿ ಇರಬೇಕು. ಒಳ್ಳೆಯ ಕಲೆ ಸುಂದರವಾದದ್ದರ ಜೊತೆಗೆ ಸತ್ಯವಾದದ್ದನ್ನೂ ಹೇಳುತ್ತದೆ. ನಮ್ಮ ದೌರ್ಬಲ್ಯ, ಶಕ್ತಿಗಳೆರಡನ್ನೂ ಕಲೆ ಗುರುತಿಸಿ ಕೊಟ್ಟಾಗ ದೊರೆಯುವ ಅರಿವೇ ಸೌಂದರ್ಯಾನುಭೂತಿ... ಸಿನಿಮಾದಲ್ಲಿ ಫ್ರೇಮ್‌ಗಳು ದೃಶ್ಯವಾಗಿ ಮಾತ್ರ ಸುಂದರವಾಗಿದ್ದು, ಒಂದು ರೀತಿಯ ರಮ್ಯತೆಯಿಂದ ತುಂಬಿ ತುಳುಕುತ್ತಿದ್ದರೆ ಅದು ಮೈಮರೆಸುವ ಕ್ರಮ ಆಗುತ್ತದಷ್ಟೆ. ಆದರೆ ಅದು ನಮ್ಮ ನೋಡುವ, ಕೇಳುವ, ಗ್ರಹಿಸುವ ಅನುಭವಿಸುವ ಕ್ರಮವನ್ನು ಬದಲಾಯಿಸವಂಥದ್ದಾಗಿರಬೇಕು." ಗಿರೀಶ್ ಕಾಸರವಳ್ಳಿಯವರ ಈ ಆಲೋಚನೆಗಳನ್ನು ಡಿ.ಜಿ.ವಿನ್‌ಸ್ಟನ್‌ನ "ಸಿನಿಮಾದಲ್ಲಿ ಪರಿಪೂರ್ಣತೆ ಎಂಬುದು ವಸ್ತುವನ್ನು ಅವಲಂಬಿಸಿರುವುದಿಲ್ಲ. ಇದು ನಿರ್ದೇಶಕನ ವ್ಯಕ್ತಿತ್ವ ಮತ್ತು ವಸ್ತುವಿನ ನಡುವೆ ಸಾಧ್ಯವಾಗುವ ಏಕೀಭಾವವನ್ನು ಅವಲಂಬಿಸಿರುತ್ತದೆ. ಎಷ್ಟೋ ಬಾರಿ ಅವನ ವ್ಯಕ್ತಿತ್ವವೇ ಇದರಲ್ಲಿ ವಸ್ತುವಿಗಿಂತ ಮುಖ್ಯವಾಗಬೇಕು" ಈ ಮಾತುಗಳಿಗೆ ಹೋಲಿಸಿದರೆ ಚಿತ್ರನಿರ್ದೇಶಕ ತನ್ನ ಪ್ರೇಕ್ಷಕರಿಗೆ ಹೇಳಬಯಸಿದ್ದನ್ನು ನಿರೂಪಿಸುವಾಗ ಯಾವ ವರ್ಗದ ಆಶಯಗಳನ್ನು ತನ್ನ ಯಾವ ಭಾವನೆಗಳನ್ನು ಪ್ರಧಾನ ಮಾಡಿಕೊಳ್ಳುತ್ತಾನೆ ಅಥವಾ ಏನೂ ತೀರ್ಮಾನ ತೆಗೆದುಕೊಳ್ಳಲಾಗದ ಸಂದಿಗ್ಧದಲ್ಲಿ ಸಿಲುಕುತ್ತಾನೆಯೇ ಎಂಬುದನ್ನು ಗಮನಿಸಬೇಕು. ಅಂಥದೊಂದು ಸಂದಿಗ್ಧವೇ ಇಲ್ಲವಾದರೆ ಸೃಜನಶೀಲತೆಯೂ ಇರುವುದಿಲ್ಲ.

ಜಾಗತೀಕರಣದ ಪರಿಣಾಮವಂತೂ ಭಾರತೀಯ ಬದುಕಿನ ಪ್ರತಿಯೊಂದು ಖಾಸಗೀ ಮೂಲೆಗೂ ನುಗ್ಗಿ ಎಳೆದು ಹಾಕುತ್ತಿದೆ. ಇಂಥ ಹೊತ್ತಿನಲ್ಲಿ ನಮಗೆ ಒಂದು ಕಡೆ 'AK 47' ಇರುತ್ತದೆ, ಇನ್ನೊಂದು ಕಡೆ 'ರಂಜಿತಾ', 'ತಾಯಿ ಸಾಹೇಬ'ಗಳ ಸ್ತ್ರೀ ರೂಪ ವೈರುಧ್ಯವಿರುತ್ತದೆ. ಜೊತೆಗೇ 'A', 'ಉಪೇಂದ್ರ'ಗಳೂ ಬರುತ್ತಿವೆ.

'ಉಪೇಂದ್ರ' ಚಿತ್ರದ್ದು ಅತಿರೇಕ. ಬೆಂಕಿ, ನೀರು, ಗಾಳಿಗೆ ಸಂಕೇತವಾಗಿ ಮೂವರು ನಾಯಕಿಯರನ್ನು ಈ ಚಿತ್ರದಲ್ಲಿ ಬಳಸಿದ್ದೇನೆ ಅಂದರು. ಆದರೆ ಜೀವನಾವಶ್ಯಕವಾದ ಈ ಮೂರನ್ನು ತೃಣಸಮಾನವಾಗಿ, ಹೀನವಾಗಿ ಚಿತ್ರಿಸಲಾಗಿತ್ತು. ಬೆಂಕಿ, ನೀರು, ಗಾಳಿಯ ಮಾತುಗಳನ್ನು ನಂಬಿದ ಕೆಲ ವಿಮರ್ಶೆ, ಬರಹಗಳು ಈ ಚಿತ್ರದಲ್ಲಿ 'ಅಧ್ಯಾತ್ಮ', 'ಪರಮಾರ್ಥ'ದ ಅರ್ಥಗಳನ್ನು ಪತ್ತೆ ಮಾಡಿದ್ದು ಕೂಡ ಈ ದಶಕದ ವ್ಯಂಗ್ಯಗಳಲ್ಲೊಂದು. 'ಉಪೇಂದ್ರ' ಚಿತ್ರ ಹಲವು ಕಾರಣಗಳಿಗೆ ಈ ಶತಮಾನದ ಕೊನೆಯ ದಾಖಲೆಗಳಲ್ಲಿ ಸೇರುತ್ತದೆ. ಅದಕ್ಕೆ ಕೊಡಬಹುದಾದ ಕಾರಣಗಳನ್ನು ಹೀಗೆ ಸಂಗ್ರಹಿಸಬಹುದಾಗಿದೆ :



(ಚಿತ್ರ ೧೨೪) 'ಉಪೇಂದ್ರ' ಚಿತ್ರದಲ್ಲಿ ಉಪೇಂದ್ರ

ನಿರ್ದೇಶಕ ಉಪೇಂದ್ರರ ಎದುರಿಗೆ ದೊಡ್ಡ ಸವಾಲಿತ್ತು. ಅದಾಗಲೇ ಇದ್ದ, ಗೊತ್ತಾದ ಮಾದರಿಗಳಿಂದ ಹೊರತಾದ ನಿರೂಪಣಾ ವಿಧಾನವನ್ನು ಅರಿಸಿಕೊಳ್ಳದೇ ಹೋದರೆ ಹತ್ತರ ಜೊತೆಗೆ ಹನ್ನೊಂದು ಆಗುತ್ತಿದ್ದರು. ಅವರದೇ ಪ್ರತ್ಯೇಕ ಶೈಲಿ ಕಂಡುಕೊಳ್ಳುವುದು ಅನಿವಾರ್ಯವಾಗಿತ್ತು. ಅವರ ಚಿತ್ರರಂಗ ಪ್ರವೇಶದ ದಿನಗಳಿಂದಲೂ ಇದನ್ನು ನಿಧಾನವಾಗಿ ರೂಢಿಸಿಕೊಳ್ಳುತ್ತಾ ಬಂದದ್ದನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ವ್ಯಕ್ತವಾಗುತ್ತದೆ. ಕಾಶೀನಾಥ್‌ರೊಂದಿಗೆ ಸಹಾಯಕರಾಗಿದ್ದಾಗಲೇ ಕಾಶೀನಾಥರೇ ಹಾಗೊಂದು ಹೊಸಹಾದಿ ತುಳಿದದ್ದು, ಅದೇ ಅತನ ಯಶಸ್ಸಿಗೆ ಕಾರಣವಾದದ್ದೂ ಪ್ರತ್ಯಕ್ಷ ಅನುಭವ. ತಾವು ಸ್ವತಂತ್ರರಾಗಿ ನಿರ್ದೇಶಕರಾಗುವ ಹೊತ್ತಿಗೆ ಕಾಲ ಬಹಳ ಕ್ರಮಿಸಿತ್ತು. ಸಾಮಾಜಿಕ ಸಂದರ್ಭ, ಪ್ರೇಕ್ಷಕನ ಅಭಿರುಚಿಗಳಲ್ಲಿ ಬದಲಾವಣೆಗಳಾಗಿದ್ದವು. ಉಪೇಂದ್ರ ನಿರ್ದೇಶಿಸಿದ ಜಗ್ಗೇಶ್ ಅಭಿನಯದ ಮೊದಲ ಚಿತ್ರದಲ್ಲೇ ಕೊಂಚ ಹೊಸತನವೂ ಇತ್ತು. ಆದರೆ ಉಪೇಂದ್ರರ ಪ್ರಯೋಗಗಳಿಗೆ ಸ್ವಚ್ಛಂದ ಅವಕಾಶ, ಸ್ವಾತಂತ್ರ್ಯ ಬೇಕಿತ್ತು. ಅನಂತರ 'ಶ್ !' ಚಿತ್ರದಲ್ಲಿ ಅಂಥ ಅವಕಾಶ ಸಿಕ್ಕಿತು. ಉಪೇಂದ್ರ ಕೊಡುವ ಶೀರ್ಷಿಕೆಯೇ ವಾಡಿಕೆಗಳನ್ನು ಮುರಿಯತೊಡಗಿತ್ತು. ಅದು ನೋಟಕನ ಹುಬ್ಬೇರುವಂತಿತ್ತು. 'ಆಪರೇಷನ್ ಅಂತ'ದಲ್ಲಿ ಹೊಸತನದ ಮೊಳಕೆಗಳಿದ್ದವು. ಅದನ್ನು ಕೂಡಲೇ ಪ್ರೇಕ್ಷಕ ಜೀರ್ಣಿಸಿಕೊಳ್ಳಲಿಲ್ಲ. ಉಪೇಂದ್ರ 'ಓಂ'ನಲ್ಲಿ ಹೊಸತನದ ಜೊತೆಗೇ ಕೊಂಚ ರಾಜಿ ಮಾಡಿಕೊಳ್ಳುವುದೂ ಅಗತ್ಯವಾಯಿತು. ಆದರೆ 'ಓಂ' ಚಿತ್ರದ್ದು ಆ ಜಾಡಿನಲ್ಲಿ ಪ್ರಯತ್ನಿಸಿದರೆ ಯಾರಿಗೂ ಸಾಧ್ಯ ಎಂಬ ಶೈಲಿಯಾಗಿತ್ತು. ಅಂಥ ಕೆಲವರಿಂದ ಪ್ರಯತ್ನಗಳೂ ಆದವು. ಉಪೇಂದ್ರ ಮತ್ತೊಂದು ವಿಧಾನಕ್ಕೆ ಜಿಗಿದರು. ಅವರು ಒಮ್ಮೆಲೇ ಪ್ರೇಮ, ವಿಫಲ ಪ್ರೇಮ, ಸಾಮಾಜಿಕ ವಿಡಂಬನೆ ಎಲ್ಲವನ್ನೂ ಹೇಳುವ, ಅದನ್ನು ವಿಭಿನ್ನವಾಗಿ ಹೇಳುತ್ತಾ, ಜೊತೆಗೊಂದಿಷ್ಟು ಚಿತ್ರರಂಗದ ಆಗು-ಹೋಗುಗಳನ್ನು ಸೇರಿಸಿಕೊಂಡು 'A' ಚಿತ್ರವನ್ನು ನಿರ್ದೇಶಿಸಿದರು. ಇಲ್ಲಿಯೂ ಅವರು ನಾಯಕಿಯೊಂದಿಗೆ ವೈಯಕ್ತಿಕ ಅಂಶಗಳನ್ನು ಬೆಸೆದು ವಿಚಿತ್ರ ಪ್ರಚಾರದ ಗಿಮಿಕ್ಸ್ ಬಳಸಿದರು. ಇದಕ್ಕೆ ತನ್ನ ಪ್ರಯೋಗದ ಬಗ್ಗೆ ಇದ್ದಿರಬಹುದಾದ ಅನಿಶ್ಚಯತೆಯೂ ಕಾರಣವಾಗಿರಬಹುದು. ಉಪೇಂದ್ರ ಏಕಕಾಲಕ್ಕೆ ಮಾಧ್ಯಮಗಳನ್ನು, ಆ ಮೂಲಕ ಓದುಗರನ್ನು ಸಂದೇಹ-ಸಮ್ಮೋಹನದ ಗೊಂದಲದಲ್ಲಿಟ್ಟು ಅದಕ್ಕಾಗಿಯೇ ಪ್ರೇಕ್ಷಕ ಚಿತ್ರಮಂದಿರಕ್ಕೆ ಬರುವ ಹಾಗೆ ಮಾಡಿದರು. ಇಲ್ಲಿ ಅವರ ಪ್ರಯತ್ನ ಯಶಸ್ವಿ ಆಯಿತು.

ಅಲ್ಲಿಂದಾಚೆಗೆ ಅವರ 'ಉಪೇಂದ್ರ' ಚಿತ್ರ ಯಾರನ್ನೂ ಕುರಿತದ್ದಾಗಿರದೇ ಅವರೇ ಆಗಿದ್ದರು. ಪ್ರೇಕ್ಷಕರನ್ನೂ ಆ ಮೂಲಕ 'ನಾನತ್ವ'ದ ಅರ್ಥವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದರು. ಅದು ಬದಲಾಗುತ್ತಿರುವ ಸಮಾಜಕ್ಕೆ ಹೊಂದುವ ಹಾಗೆ ಅಡಕಗೊಳ್ಳುವಂತೆ ನೋಡಿಕೊಂಡದ್ದೇ ಅವರ ಜಾಣತನವಾಗಿತ್ತು. ಮಾಸ್ಟರ್ ಹಿರಣ್ಣಯ್ಯನವರು ಸುದ್ದಿ ಮೂಲಗಳನ್ನೆತ್ತಿ ಮೊನಚು ಮಾತುಗಳಿಂದ ಪ್ರೇಕ್ಷಕರನ್ನು ಸೆಳೆಯುವ ರೀತಿಯನ್ನು ಉಪೇಂದ್ರ ತಮ್ಮದೇ ಮಾತಿನ ಶೈಲಿಯಲ್ಲಿ ಅಳವಡಿಸಿಕೊಂಡದ್ದು ಒಂದು ತಂತ್ರವಾದರೆ, ತತ್ವಗಳನ್ನು ಹೇಳಲು ಶಿಷ್ಟವಲ್ಲದ ಅತಿ ಸರಳ ಭಾಷೆಯನ್ನು ಬಳಸಿದ್ದು ಮತ್ತೊಂದು ಜಾಣತನವಾಯಿತು. ಚಿತ್ರ ನೋಡುವಾಗ ಕೇವಲ ಮಾತು ಅನ್ನಿಸಿದ್ದು ಚಿತ್ರಮಂದಿರದಿಂದ ಹೊರಬಂದ ಮೇಲಿನ ಆಲೋಚನೆಯಲ್ಲಿ ಅರ್ಥಗಳು ಗೋಚರಿಸಿ ಒಂದು ಅನುಭವವಾಗುವ ಪ್ರಕ್ರಿಯೆಯೊಂದು ಪ್ರೇಕ್ಷಕರನ್ನು ವಿಸ್ಮಯ-ಪುಳಕಗಳ ಲೋಕಕ್ಕೆ ತಳ್ಳಿತ್ತು. ಮತ್ತೆ ಮತ್ತೆ ಉಪೇಂದ್ರರ ಮಾತಿಗೆ, ಅವು ಕೊಡುವ ಅನುಭವಕ್ಕೆ ಚಿತ್ರಮಂದಿರಕ್ಕೆ ಬರತೊಡಗಿದ ಪ್ರೇಕ್ಷಕ. ಪ್ರೇಕ್ಷಕನ ಅಂಥ ಅಪೇಕ್ಷೆಗೆ ಉಪೇಂದ್ರ ಬಳಸಿದ ಇನ್ನೊಂದು ತಂತ್ರವೂ ಸಹಕಾರಿಯಾಯಿತು. ಅದು ನೋಡುವ ಕಣ್ಣಿಗೆ ತೊಂದರೆ ಕೊಡುತ್ತ ಹೋಗುವುದು. ಆ ಡಿಸ್ಟರ್ಬೆನ್ಸನ್ನು ಕ್ಯಾಮರಾ ಮೂವ್‌ಮೆಂಟ್‌ನಲ್ಲೇ ಸಾಧಿಸಿದರು. ಒಂದೇ ಚಿತ್ರಿಕೆಯಲ್ಲಿ ನಿಲ್ಲಿಸಿಕೊಳ್ಳುವ, ಸಾಧಿಸುವ ಸಾಧ್ಯತೆಗಳಿಗಿಂತ ಈ ಪಲ್ಲಟಗೊಳ್ಳುವ, ಚೆದುರಿಹೋಗುವ ರೀತಿಯೇ ಹೊಸದೆನಿಸಿತ್ತು. ಸಾಮಾನ್ಯವಾಗಿ ಚಲನಚಿತ್ರದ ವ್ಯಾಕರಣಶಾಸ್ತ್ರ ಈ ಬಗೆಯ ಜರ್ಕ್ಸ್‌ಅನ್ನು ಒಪ್ಪುವುದಿಲ್ಲ. ಚಿತ್ರಿಕೆಗಳು ಒಂದು ನದಿ-ಝರಿಯ ಹಾಗೆ ಸುಲಲಿತವಾಗಿ ಹರಿಯುತ್ತ ಹೊಂದಿಕೊಳ್ಳಬೇಕು. ಆದರೆ, ಅದನ್ನು ಮುರಿಯುವುದೇ ಉಪೇಂದ್ರರ ಹೊಸತನದ ಶೋಧ ಆಗಿತ್ತು. ಈ ಬಗೆಯ ಜಿಗ್‌ಜ್ಯಾಗ್ ಗ್ರಾಫ್‌ಗಳ ಮೂಲಕವೇ ಕಥೆ ಅಥವಾ ಹಾಗೆಂದುಕೊಳ್ಳುವ ಘಟನೆಗಳನ್ನು ಜೋಡಿಸ ಹೊರಟಿದ್ದರು ಉಪೇಂದ್ರ. ಇದರ ಜೊತೆಗೆ ಅವರು ಸಿನಿಮಾಸ್ಕೋಪ್‌ನಲ್ಲಿ ಝೂಂ ಬಳಸಿದ್ದರು. ಸಾಮಾನ್ಯವಾಗಿ ಹೀಗೆ ಮಾಡಕೂಡದೆಂಬ ನಿಯಮವಿದೆ. ಆದರೆ ಎಲ್ಲ ಸೂತ್ರ-ನಿಯಮ ಬದ್ಧತೆಯನ್ನು ಮುರಿಯುವ ಮೂಲಕವೇ ತಮ್ಮ ಶೈಲಿಯನ್ನು



(ಚಿತ್ರ ೧೨೫) 'ಉಪೇಂದ್ರ' ಚಿತ್ರದಲ್ಲಿ ಉಪೇಂದ್ರ ಮತ್ತು ರವೀನಾ ಟಂಡನ್

ರೂಪಿಸಿಕೊಳ್ಳುತ್ತಿದ್ದ ಉಪೇಂದ್ರ ಇದನ್ನೇ 'ಗುಣ'ವಾಗಿಸಿಕೊಂಡರು. ಮಿಂಚು ಕಂಡು ಕಣ್ಣರೆಪ್ಪೆ ಮಿಟುಕಿಸುತ್ತ ಸಂತೋಷಪಡುವ ಹಾಗ ಪ್ರೇಕ್ಷಕರು ಸ್ವೀಕರಿಸಿದ್ದರು. ಏಕತಾನತೆ ಕಳೆದು, ಏನೋ ಹೊಸತು ಬೇಕು ಎಂಬ ತಹತಹಿಕೆಯೂ ಇದಕ್ಕೆ ಕಾರಣವಾಗಿರಬಹುದು.

ಮುಖ್ಯವಾಗಿ ಉಪೇಂದ್ರ ತಮ್ಮ ಪ್ರೇಕ್ಷಕರನ್ನೇ ಬೇರೆಯಾಗಿ ಕಟ್ಟಿಕೊಂಡರು. ಕೆಳಮಧ್ಯಮವರ್ಗದ, ಬಹುತೇಕ ಆಧಿಕ ಶ್ರಮಜೀವಿಗಳ ಸುಪ್ತ ಮನಸ್ಸಿನ ಬಯಕೆ, ಆಸಹನೆ, ಕನಸುಗಳನ್ನು ನೇರವಾಗಿ ಹೇಳಿದರು. ನಿತ್ಯದ ಘಟನೆಗಳು, ಮಾತುಗಳು ತೀರಾ ನೇರವಾಗಿ ರಪ್ಪನೆ ಬಂದು ಬಡಿದವು. ಉಪೇಂದ್ರ ಸಂಘಜೀವಿಯಾದ ಮನುಷ್ಯನ ಖಾಸಗಿ ಮೂಲೆಗಳಾದ ದೇವರಮನೆ, ಅಡುಗೆಮನೆ, ಶಯ್ಯಾಗೃಹಗಳನ್ನು ಹೊಕ್ಕು ಮಾತನಾಡತೊಡಗಿದ್ದರು. ಈ ಬಗೆಯ ಪ್ರಯೋಗ ಉಪೇಂದ್ರರಿಗೆ ಮಾತ್ರ ಸಾಧ್ಯವಿತ್ತು. ಜನಪ್ರಿಯ ನಟರಿಗೆ ಎಲ್ಲರನ್ನೂ ಮೆಚ್ಚಿಸುವ, ಸೌಜನ್ಯದ ಸಭ್ಯತೆಯ ಗೆರೆ ಹಾಕಿಕೊಳ್ಳುವ, ಮುಖ್ಯವಾಗಿ ತಮ್ಮದೇ ಆದ 'ಹೀರೋ' ಇಮೇಜನ್ನು ಕಟ್ಟಿಕೊಳ್ಳುವ ಒತ್ತಾಯಗಳಿರುತ್ತವೆ. ಉಪೇಂದ್ರ ಅಂಥ ಮಿತಿಯ ಆಚೆಗೆ ಜಿಗಿದರು; ಗೆದ್ದರು. ಅದಕ್ಕೆ ಅವರಿಗೆ ಕಾಲವೂ ನೆರವಾಯಿತು. ನೆರೆ-ಹೊರೆ ರಾಷ್ಟ್ರ, ರಾಜ್ಯಗಳಲ್ಲಿಯ ಆಗು-ಹೋಗುಗಳು, ನಮ್ಮ ದೇಶದ ಸ್ಥಿತಿ, ಪ್ರತಿ ನಿಮಿಷ ಪಲ್ಲಟಗೊಳ್ಳುತ್ತಿರುವ ದೇಶದ ಭದ್ರತೆ, ಆರ್ಥಿಕ ಸ್ಥಿತಿ, ಸಾಮಾಜಿಕ ಸಂದರ್ಭದ ಏರುಪೇರು, ಭಯದ ನೆರಳಲ್ಲಿ ಬದುಕಲಾಗದ ಅಸಹನೀಯ ಸ್ಥಿತಿ, ಕೌಟುಂಬಿಕ ನೆಲೆಯಲ್ಲಿಯೂ ನೆಮ್ಮದಿ ಕಾಣದ ಬದುಕು, ಹೀಗೆ ಕಿರಿದರಿಂದ ಹಿರಿದರವರೆಗೆ ಎಲ್ಲಕ್ಕೂ ಅಸ್ಪಷ್ಟಗೊಂಡ ರೋಗಗ್ರಸ್ತ ಸ್ಥಿತಿಯೊಂದು ಎದುರಿಗೆ ಭೂತದಂತೆ ಇತ್ತು. ಇಂಥ ಅಸಹಾಯಕ ಸ್ಥಿತಿಯಲ್ಲಿ ಭ್ರಮೆಯ ಲೋಕದಲ್ಲಾದರೂ ಒಬ್ಬ ನಾಯಕನನ್ನು ಕಂಡುಕೊಂಡಿತು ಶ್ರಮಿಕವರ್ಗ.

ಹಿಂದೊಂದು ಕಾಲಕ್ಕೆ ಪ್ರಾಯಶಃ ನಿರಂತರ ದುಡಿಯುವ, ಉತ್ಸಾಹದ ವ್ಯಕ್ತಿಯಾಗಿದ್ದನೆಂದು ಶಂಕರ್‌ನಾಗ್‌ರನ್ನು ತಮ್ಮ ನಾಯಕನಾಗಿ ಈ ಶ್ರಮಿಕವರ್ಗ ಒಪ್ಪಿಕೊಂಡಿತ್ತು. ಅನಂತರ ಅಂಥ, ಅದನ್ನು ಮೀರಿದ ಅತೃಪ್ತ ಮನಸ್ಸಿನೊಳ್ಳಕ್ಕೆ ಇಳಿದು ಜಗೆದುಹಾಕಬಲ್ಲ ನಾಯಕನಾಗಿ ಉಪೇಂದ್ರ ಸಿಕ್ಕರು. ಹೀಗಾಗಿ ಉಪೇಂದ್ರರ ಪಾತ್ರದ ವರ್ತನೆ, ಅತಿರೇಕಗಳು, ಅತಿ ಮಾತು, ತೆರೆಯ ಮೇಲೆ ನಡೆಯುವ ಕ್ರಿಯೆಯಲ್ಲೂ ಅದೇ ರೀತಿಯ ಅತಿಗಳು, ತುಣುಕುತುಣುಕಾದ ಕುಣಿಯುವ ಚಿತ್ರಿಕೆಗಳು, ಚಿತ್ರದ ಸಂಕಲನದಲ್ಲೂ ಹೊಸ ಶೈಲಿ, ಪಾತ್ರಗಳಿಗೆ ಕೊಡುವ ತಕ್ಷಣದ ತಿರುವುಗಳು ಹೀಗೆ ಎಲ್ಲವೂ ವಿಭಿನ್ನವಾದವು. ಮತ್ತೊಂದು ವರ್ಗದ ಪ್ರೇಕ್ಷಕ ಇದನ್ನು ಒಪ್ಪದಿದ್ದರೂ ಒಳಗೇ ಏನೋ ಆಕರ್ಷಣೀಯ ಅಂಶವಿದೆ ಎಂಬ ಗುಮಾನಿಯಿಂದಲೇ ಆದರೂ ಗಮನಿಸಿತ್ತು. ಈ ವಿಭಿನ್ನ ಮಾರ್ಗವೇ ಉಪೇಂದ್ರ ಶೈಲಿಯಾಗಿ ಚಾಲ್ತಿಗೆ ಬಂತು. ಉಪೇಂದ್ರ ಒಂದರಿಂದ ಮತ್ತೊಂದಕ್ಕೆ ವಿಭಿನ್ನತೆ ತರುವ ಸವಾಲುಗಳ ಹೊರೆ ಹೊತ್ತು ನಿರಂತರ ಪ್ರಯತ್ನ ನಡೆಸಿದ್ದಾರೆ. ಅಬ್ಬರದ ಮುಹೂರ್ತ, ವಿಸ್ಮಯ ತರುವ ಆಹ್ವಾನ, ಹುಬ್ಬೇರಿಸುವಷ್ಟು ಖರ್ಚು - ಎಲ್ಲವೂ 'ಅತಿ'ಗಳು. ಆದರೆ ಇದುವರೆಗೆ ಅವರ ಈ ಪ್ರಯೋಗಗಳು ಗೆದ್ದಿವೆ. ಆ ಮಟ್ಟಿಗೆ 'ಉಪೇಂದ್ರ' ಚಿತ್ರ, ನಿರ್ದೇಶಕ ಉಪೇಂದ್ರ ಮುಖ್ಯರು. ಅಥವಾ ೨೦ನೇ ಶತಮಾನದ ಅಂತ್ಯದಲ್ಲಿ ಕಂಡ ಒಂದು ಅದ್ಭುತ ವಿಸ್ಮಯ.

ಇದೇ ದಿನಗಳಲ್ಲಿ ಸಕಾರಣವಾಗಿ ಹೆಚ್ಚು ಪ್ರಚಾರ ಪಡೆದ ಕನ್ನಡದ ಮುಖ್ಯ ನಿರ್ಮಾಪಕ ರಾಮು. ಇವರು ತಮ್ಮ ಚಿತ್ರಗಳಿಗೆ ಹೆಚ್ಚು ವೆಚ್ಚ ಮಾಡುತ್ತಿದ್ದರು. ಅವರು 'ಕೋಟಿ ನಿರ್ಮಾಪಕ ರಾಮು' ಎಂದೇ ಹೆಸರಾಗಿದ್ದರು. ಮುಂಬೈನಲ್ಲಿ ನಡೆದ ಭೀಕರ ಸರಣಿ ಬಾಂಬ್ ಸ್ಫೋಟ ಘಟನೆಯೇ 'AK 47' ಚಿತ್ರದ ಕಥೆಗೆ ಆಧಾರ. ಪಾಕಿಸ್ತಾನಿ ಉಗ್ರಗಾಮಿಗಳು ಭಾರತದ ಸಾಮಾಜಿಕ ಬದುಕನ್ನು ಬುಡಮೇಲು ಮಾಡುತ್ತಿರುವ ಜೀವಂತ ಘಟನೆಗಳನ್ನು ಹೆಣೆದು ಈ ಚಿತ್ರ ನಿರ್ಮಿಸಲಾಗಿತ್ತು. ಚುರುಕಾದ ಹಿತಮಿತ ಸಂಭಾಷಣೆ, ರೋಮಾಂಚಕಾರಿ ಸಾಹಸ, ಮಧುರ ಹಾಡು, ವಿಧವಾ ವಿವಾಹ - ಇವೆಲ್ಲ ಇದ್ದ ಚಿತ್ರ ಕನ್ನಡದವರಲ್ಲಿ ಕಾಣಿಸಿಕೊಳ್ಳುವ ಅಪರೂಪದ ಸಾಹಸ ಪ್ರವೃತ್ತಿಗೆ ಒಂದು ಉತ್ತಮ ಉದಾಹರಣೆಯೇ.

'AK 47' ಚಿತ್ರದ ಸಂಭಾಷಣೆಯಲ್ಲಿ ಶೇಕಡಾ ೪೦ ರಷ್ಟು ಹಿಂದಿ ಮಾತುಗಳಿದ್ದವು. ವಿಶೇಷವೆಂದರೆ ಈ ಅಂಶವೇ ಚಿತ್ರಕ್ಕೆ ಸಹಜತೆಯ ಸ್ಪರ್ಶ ನೀಡಿತ್ತು. ಶಿವರಾಜ್

ಕುಮಾರ್ ಅಭಿನಯದ ೫೦ನೆಯ ಚಿತ್ರವಾಗಿರುವ ಇದರಲ್ಲಿ ಅವರೊಂದಿಗೆ ದೇಶದ ಪ್ರಖ್ಯಾತ ಕಲಾವಿದ ಓಂಪುರಿ ಹಾಗೂ ಆಶೀಶ್ ವಿದ್ಯಾರ್ಥಿ ಅಭಿನಯಿಸಿದ್ದರು. ಈ ಚಿತ್ರದ ಚಿತ್ರೀಕರಣಕ್ಕೆ ನಟರ ದಿನಾಂಕ ಹಾಗೂ ಇನ್ನಿತರ ಸಮಸ್ಯೆಗಳಿಂದಾಗಿ ಮುಗಿಯಲು ಒಂದು ವರ್ಷ ಮೂರು ತಿಂಗಳಷ್ಟು ಸಮಯ ಹಿಡಿಯಿತು. ೪೬ ಪ್ರಿಂಟ್‌ಗಳನ್ನು ಹಾಕಿಸಿದ ಮೊದಲ ದಾಖಲೆ ಕೂಡ ಈ ಚಿತ್ರದ್ದೇ (೨೦೦೦ದ ನಂತರದ 'ಯಜಮಾನ' ಚಿತ್ರಕ್ಕೆ ೬೩ ಪ್ರತಿಗಳನ್ನು ಹಾಕಿಸಲಾಯಿತು). ರಾಮ್‌ಶೆಟ್ಟಿ ಸಾಹಸ ಸಂಯೋಜನೆ ಈ ಚಿತ್ರದ ವಿಶೇಷಗಳಲ್ಲೊಂದು. ಆಗ್ಗೆ ಐದಾರು ಭಾಷೆಗಳಲ್ಲಿ ಸುಮಾರು ೨೫೦ ಚಿತ್ರಗಳಿಗೆ ಸಾಹಸ ನಿರ್ದೇಶನ ಮಾಡಿದ್ದ ಇವರು ಅವೆಲ್ಲಕ್ಕಿಂತ ಭಿನ್ನವಾದ ಕೌತುಕವನ್ನು ಸೃಷ್ಟಿಸಿ ಯಶಸ್ವಿಯಾಗಿದ್ದರು. ಚಿತ್ರದ ಅಂತಿಮ ದೃಶ್ಯವನ್ನು ಮುಂಬೈನಿಂದ ೧೫೦ ಕಿ.ಮೀ. ದೂರದಲ್ಲಿರುವ ಮುರುಡ್ ಜಂಜೀರ್ ದ್ವೀಪದಲ್ಲಿ ಐದು ಹೆಲಿಕಾಪ್ಟರ್‌ಗಳನ್ನು ಬಳಸಿ ಚಿತ್ರಿಸಲಾಗಿತ್ತು. ಇದಕ್ಕೆ ಹಿಡಿದ ಅವಧಿ ಹತ್ತು ದಿನ. ಇದಕ್ಕಿಂತ ವಿಶೇಷವೆಂದರೆ ಸಂಗೀತ ಹಾಗೂ ವಿಶೇಷ ಶಬ್ದಗಳನ್ನು ಜೋಡಿಸಲು ಹಿಡಿದ ಸಮಯ. ಹಂಸಲೇಖ ಈ ಚಿತ್ರಕ್ಕೆ ಹಿನ್ನೆಲೆ ಸಂಗೀತವನ್ನು ೨೦ ದಿನಗಳ ಕಾಲ ನೀಡಿದರು. ಡಿಟಿಎಸ್ ಸೌಂಡ್ ಎಫೆಕ್ಟ್ ಹೊಂದಿಸಲು ೪೫ ದಿನಗಳು ಹಿಡಿಯಿತು. ಕೊನೆಯ ಹಂತದ ಮಿಕ್ಸಿಂಗ್ ಕೆಲಸಕ್ಕೆ ೩೦ ದಿನಗಳು ಬೇಕಾದವು. ಹೀಗೆ ಈ ಚಿತ್ರದ ಸಂಗೀತ ವಿಭಾಗವೇ ೯೫ ದಿನಗಳಷ್ಟು ಸಮಯವನ್ನು ನುಂಗಿತು. ಇವು ಸಾಂದರ್ಭಿಕ ಗೀತೆಗಳಾಗಿ ಯಶಸ್ಸು ಗಳಿಸಿದವು. ಚಿತ್ರದ ರೀರಿಕಾರ್ಡಿಂಗ್ ಇತ್ಯಾದಿ ಕೆಲಸಗಳು ಮುಗಿದ ಮೇಲೆ ಚಿತ್ರವನ್ನು ನೋಡಿದಾಗ ಕೆಲವು ಕಡೆ ಖಾಲಿ ಖಾಲಿ ಅನ್ನಿಸಿದಾಗ ಆ ಭಾಗವನ್ನು ತುಂಬಿಸಲು ಹಾಡುಗಳನ್ನು ಬಳಸುವ ಸಲಹೆ ಹಂಸಲೇಖ ಅವರಿಂದ ಬಂದು, ಅವರು ಕೂಡಲೇ ಕಾರ್ಯಪ್ರವೃತ್ತರಾದರು. ಆರು ಹಾಡುಗಳನ್ನು ರಚಿಸಿ ಎರಡು ಹಾಡುಗಳನ್ನು ಹರಿಹರನ್ ಅವರೂ ಜೇಸುದಾಸ್, ಎಸ್.ಪಿ.ಬಾಲಸುಬ್ರಹ್ಮಣ್ಯಂ, ರಾಜೇಶ್ ಹಾಗೂ ಚಿತ್ರಾ ಅವರುಗಳು ತಲಾ ಒಂದೊಂದು ಹಾಡನ್ನೂ ಹಾಡಿದರು. ತುಟಿಯ ಹೊಂದಿಕೆಯೇ ಇಲ್ಲದೆ ಹಿನ್ನೆಲೆಯ ಹಾಗೆ ಬಳಸಿದ ಗೀತೆಗಳಿವು. ಚಿತ್ರದ ಉದ್ದದ ಕಾರಣದಿಂದಾಗಿ ಪೂರ್ತಿ ಹಾಡುಗಳನ್ನು ಬಳಸಿಲ್ಲ, ಆರು ಹಾಡುಗಳೂ ಭಾಗಶಃ ಅಳವಡಿಕೆಯಾದವು. ಧ್ವನಿಮುದ್ರಿಕೆಗಳಲ್ಲಿ ಎಲ್ಲವೂ ಇವೆ.

'AK 47' ಕನ್ನಡದಲ್ಲಿ ಡಿಟಿಎಸ್ ತಂತ್ರಜ್ಞಾನವನ್ನು ಸಂಪೂರ್ಣವಾಗಿ ಬಳಸಲಾಗಿರುವ ಪ್ರಥಮ ಚಿತ್ರ. ಇದಕ್ಕೆ ಮುಂಚೆ ಈ ತಂತ್ರಜ್ಞಾನವನ್ನು 'ಶಾಂತಿ ಶಾಂತಿ ಶಾಂತಿ' ಚಿತ್ರದಲ್ಲಿ ಒಂದು ಹಾಡಿಗೆ ಬಳಸಿಕೊಳ್ಳಲಾಗಿತ್ತು. ಆರು ವರ್ಷಗಳಿಂದ ಹಾಲಿವುಡ್‌ನಲ್ಲಿ 'ಜುರಾಸಿಕ್ ಪಾರ್ಕ್', 'ಟೈಟಾನಿಕ್', 'ಗಾಡ್‌ಜಿಲ್ಲಾ', 'ಲಾಸ್ಟ್ ವರ್ಲ್ಡ್' ಮುಂತಾದ ಚಿತ್ರಗಳ ಮೂಲಕ ಜಗತ್ತಿನ ಇತರೇ ದೇಶಗಳ ಚಿತ್ರರಂಗವನ್ನು ಈ ತಂತ್ರಜ್ಞಾನವು ಬಹುವಾಗಿ ಆಕರ್ಷಿಸಿತ್ತು. 'AK 47' ಚಿತ್ರದ ಒಂದೆರಡು ಸನ್ನಿವೇಶಗಳ ಮೂಲಕ ಈ ಶಬ್ದ ತಂತ್ರಜ್ಞಾನದ ಸ್ವರೂಪವನ್ನು ವಿವರಿಸಬಹುದು. ಈ ಚಿತ್ರದಲ್ಲಿ ನಾಯಕ ಮನೆಯಲ್ಲಿ ಹೋಮ ಮಾಡುತ್ತಾ ಕುಳಿತಿರುವ ದೃಶ್ಯವಿದೆ. ಒಮ್ಮೆಲೆ ಹಿಂದಿನಿಂದ ಒಂದಷ್ಟು ರೌಡಿಗಳು ಬಂದು ನಾಯಕನನ್ನು ಅವಾಚ್ಯ ಶಬ್ದಗಳಿಂದ ಬೈಯ್ಯುತ್ತಾರೆ. ಪ್ರೇಕ್ಷಕ ಬೆಚ್ಚಿ ಬೀಳುತ್ತಾನೆ. ಹಿಂತಿರುಗಿ ನೋಡಿದರೆ ಅಲ್ಲಿ ಯಾರೂ ಇರುವುದಿಲ್ಲ. ಇನ್ನೊಂದು ಸನ್ನಿವೇಶದಲ್ಲಿ ನಾಯಕನನ್ನು ಜನಜಂಗುಳಿಯ ನಡುವಿನಿಂದ ಹಿಡಿದುಕೊಂಡು ಬರುತ್ತಿರುತ್ತಾರೆ. ಅಲ್ಲಿನ ಗದ್ದಲ, ಕಿಚಪಿಚ ಸದ್ದು, ಗುಸು ಗುಸು ಮಾತು, ಜನರನ್ನು ದೂರವಿರಿಸುವ ಪೊಲೀಸರ ಧ್ವನಿ - ಎಲ್ಲ ಶಬ್ದವೂ ನಿಮಗೆ ಸ್ಪಷ್ಟವಾಗಿ ಕೇಳುತ್ತಿರುತ್ತದೆ. ಪ್ರೇಕ್ಷಕರಿಗೆ ಜನಜಂಗುಳಿಯಲ್ಲೇ ಇದ್ದೇವೆ ಅನ್ನಿಸುತ್ತದೆ. ಇದನ್ನೇ ಡಿಟಿಎಸ್ ಅಥವಾ ಡಿಜಿಟಲ್ ಥಿಯೇಟರ್ ಸಿಸ್ಟಂ ಎಂದು ಕರೆಯಲಾಗುತ್ತದೆ. ಈ ವ್ಯವಸ್ಥೆ ನಮ್ಮ ಸುತ್ತಲೂ ನೈಜವಾಗಿ ನಡೆಯುವ ಶಬ್ದಗಳ ಚೆಲ್ಲಾಟವನ್ನು ಯಥಾವತ್ತಾಗಿ ಚಿತ್ರಮಂದಿರದಲ್ಲಿ ಸೃಷ್ಟಿ ಮಾಡುತ್ತದೆ. ಕಾಂಪ್ಯಾಕ್ಟ್ ಡಿಸ್ಕ್‌ನಲ್ಲಿ ಆರು ಟ್ರ್ಯಾಕ್‌ನಲ್ಲಿ ವಿವಿಧ ಧ್ವನಿಗಳು ಮುದ್ರಿತವಾಗಿರುತ್ತವೆ. ಇದರಿಂದಲೇ ವಿವಿಧ ಧ್ವನಿಗಳು ವಿವಿಧ ದಿಕ್ಕಿನಿಂದ ಕೇಳಿಸುವಂತೆ ಮಾಡಬಹುದು. ಇದು ಮೇಲ್ನೋಟಕ್ಕೆ ಸರಳ ಅನ್ನಿಸಿದರೂ ಬಳಕೆಯಲ್ಲಿ ಜಾಣತನ ತೋರಬೇಕಾಗುತ್ತದೆ. ನೆರಳು, ಬೆಳಕು, ಬಣ್ಣ, ಕ್ಯಾಮರಾ ಕೋನಗಳನ್ನು ಬಳಸಿಕೊಂಡಷ್ಟೇ ಕಲಾತ್ಮಕವಾಗಿ, ಟ್ರಿಕ್ಕಿ ಆಗಿ ಈ ಶಬ್ದ ತಂತ್ರಜ್ಞಾನವನ್ನು ಬಳಸಿಕೊಂಡರೆ ಮಾತ್ರ ಇದು ಅದ್ಭುತ. ಇಲ್ಲವಾದರೆ ವಿಶೇಷವೆನಿಸುವುದಿಲ್ಲ. ಈ ತಂತ್ರಜ್ಞಾನ ಬಳಕೆಗೆ ಸಂಬಂಧಿಸಿದ ಇನ್ನೊಂದು ಮುಖ್ಯ ಅಂಶವೆಂದರೆ ಚಿತ್ರಕಥೆ ರಚನೆಯ ಸಂದರ್ಭದಲ್ಲಿ ಅಥವಾ ಚಿತ್ರೀಕರಣದ ಸಮಯದಲ್ಲಿ ಇದಕ್ಕೆ ಸೂಕ್ತ ಅವಕಾಶ ಕಲ್ಪಿಸಿಕೊಂಡಿರಬೇಕಾಗುತ್ತದೆ.



(ಚಿತ್ರ ೧೨೬) 'AK 47' ಚಿತ್ರದಲ್ಲಿ ಶಿವರಾಜ್ ಕುಮಾರ್



(ಚಿತ್ರ ೧೨೭) 'ಚೈತ್ರದ ಚಿಗುರು' ಚಿತ್ರದಲ್ಲಿ ಕಾವೇರಿ ಮತ್ತು ಕುಮಾರ್ ಬಂಗಾರಪ್ಪ

'ಹೃದಯಾ ಹೃದಯಾ', ಎಂ.ಎಸ್.ರಾಜಶೇಖರ್ 'ಹೃದಯ ಹಾಡಿತು' ಚಿತ್ರದ ನಂತರ ನಿರ್ದೇಶಿಸಿದ ಉತ್ತಮ ಚಿತ್ರಗಳಲ್ಲೊಂದು. ಒಂದು ಉತ್ತಮ ಕೌಟುಂಬಿಕ ಕಾದಂಬರಿ ಓದಿದ ಅನುಭವ ನೀಡುವಂತಿದ್ದ ಚಿತ್ರ ಶಿವರಾಜ್ ಕುಮಾರ್ ಅವರ ಭಾವಪ್ರಧಾನ ಅಭಿನಯದಿಂದಾಗಿ ಗಮನ ಸೆಳೆಯಿತು. ಸಿದಲಿಂಗಯ್ಯ ನಿರ್ದೇಶಿಸಿದ 'ಪ್ರೇಮ ಪ್ರೇಮ ಪ್ರೇಮ' ಎರಡು ಕುಟುಂಬಗಳ ನಡುವಿನ ದ್ವೇಷದ ನೆಲೆಯಲ್ಲಿ ಅವಿಭಕ್ತ ಕುಟುಂಬದ ಮಹತ್ವವನ್ನು ಸಾರಲು ಪ್ರಯತ್ನಿಸಿದ ಚಿತ್ರ. ಸಿದ್ದಲಿಂಗಯ್ಯನವರ ಹಳ್ಳಿ ದೃಶ್ಯಗಳನ್ನು ನಿರೂಪಿಸುವ ಸಹಜ ಪ್ರತಿಭೆಯನ್ನು ಮತ್ತೊಮ್ಮೆ ಸಾಧಿಸಿಕೊಂಡಿದ್ದ ಚಿತ್ರಬಂಧದಲ್ಲಿ ಸಡಿಲವಾಗಿತ್ತು. ಆದರೆ ಕೆಲವು ಹೊಸ ಕಲಾವಿದರ ಚೊಕ್ಕ ಅಭಿನಯದಿಂದಾಗಿ ಚಿತ್ರಕ್ಕೆ ಮೆರುಗು ಬಂದಿತ್ತು. 'ಆರ್ಯಭಟ' ವಿಜ್ಞಾನ ಮತ್ತು ಕೊಲೆಯೊಂದರ ಸುತ್ತ ಬಿಗಿನಿರೂಪಣೆ ಹೊಂದಿದ್ದ ಚಿತ್ರ. ರಾಮನಾಥ್ ಋಗ್ವೇದಿ ನಿರ್ದೇಶಿಸಿದ್ದ ಈ ಚಿತ್ರದಲ್ಲಿ ಒಳಾಂಗಣ ಛಾಯಾಗ್ರಹಣ ಸೊಗಸಾದ ಅನುಭವ ನೀಡುವಂತಿತ್ತು. ರಮೇಶ್ ಸಂಯಮದ ನಟನೆ ಅವರ ಪ್ರತಿಭೆಯ ಇನ್ನೊಂದು ಮುಖವನ್ನು ಈ ಚಿತ್ರದಲ್ಲಿ ಪರಿಚಯಿಸಿತು. ಉಲ್ಲೇಖಿಸಬಹುದಾದ ಈ ಕೆಲವು ಚಿತ್ರಗಳೊಂದಿಗೆ ಭಾರೀ ನಿರೀಕ್ಷೆಯ ಚಿತ್ರವಾಗಿ ನಿರ್ಮಾಣವಾದ ಕುವೆಂಪು ಅವರ ಮೇರು ಕೃತಿಯನ್ನು ಆಧರಿಸಿದ 'ಕಾನೂರು ಹೆಗ್ಗಡತಿ' ಬಗ್ಗೆ ಪ್ರತ್ಯೇಕವಾಗಿ ದಾಖಲಿಸಬೇಕಾಗುತ್ತದೆ.

ವಿಧವಾ ವಿವಾಹ ವಸ್ತುವನ್ನು ಆಧರಿಸಿ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ ೧೯೯೮ರ ಚಿತ್ರ 'ಚೈತ್ರದ ಚಿಗುರು'. ಮಾಮೂಲಿ ತ್ರಿಕೋನ ಪ್ರೇಮ, ಅತಿ ಆದರ್ಶದಂಥ ದೌರ್ಬಲ್ಯಗಳ ನಡುವೆ ಸಾಂಪ್ರದಾಯಿಕ ಕುಟುಂಬವೊಂದು ತಮ್ಮ ಮನೆಯ ವಿಧವೆ ಸೊಸೆಯನ್ನು ಮರುವಿವಾಹ ಮಾಡಿಕೊಳ್ಳಲು ಒಪ್ಪುವ ಅಂಶ ಈ ಚಿತ್ರದಲ್ಲಿ ಗಮನ ಸೆಳೆಯುವಂತಿತ್ತು. ರಂಗಭೂಮಿ ಹಾಗೂ ಸ್ಥಿರ ಛಾಯಾಗ್ರಹಣಗಳಲ್ಲಿ ತೊಡಗಿಕೊಂಡಿದ್ದ ಕೆ.ಶಿವರುದ್ರಯ್ಯ ಪ್ರಥಮ ನಿರ್ದೇಶನದ ಚಿತ್ರವಿದು. ಶಿವಮೊಗ್ಗೆಯ ಕಾದಂಬರಿಕಾರ್ತಿ ವಿಜಯಶ್ರೀ ಕಾದಂಬರಿ ಆಧರಿಸಿದ ಕಥೆ.

ಗಿರೀಶ್ ಕಾರ್ನಾಡ್ 'ಚೆಲುವಿ' ಹಿಂದಿ ಟೆಲಿಚಿತ್ರದ ನಂತರ ೧೫ ವರ್ಷಗಳ ಕಾಲ ಯಾವುದೇ ಚಿತ್ರವನ್ನು ನಿರ್ದೇಶಿಸಿರಲಿಲ್ಲ. 'ಕಾನೂರು ಹೆಗ್ಗಡತಿ'ಯನ್ನು ಆರಂಭಿಸಿದಾಗ, 'ಚಿತ್ರದಲ್ಲಿ ಕಾದಂಬರಿಯನ್ನು ಪೂರ್ತಿಯಾಗಿ ತರುವುದು ಅಸಾಧ್ಯ' ಎಂದು ಸ್ಪಷ್ಟಪಡಿಸಿ ಕೆಲಸ ಆರಂಭಿಸಿದ್ದರು. ಇದರೊಂದಿಗೆ ಕಾದಂಬರಿಯನ್ನು ಅವರು ಹೇಗೆ ಗ್ರಹಿಸಿದ್ದರು ಎಂಬುದಕ್ಕೆ ಅವರೇ ಈ ಮಾತುಗಳನ್ನು ಹೇಳಿದ್ದರು : ''ಆರಂಭದಲ್ಲಿ ಕಾನೂರು ಹೆಗ್ಗಡತಿಯ ನಾಯಕ ಹೂವಯ್ಯ ಎಂದುಕೊಂಡಿದ್ದೆ. ಆದರೆ ಕುವೆಂಪು ಕಾನೂರು ಹೆಗ್ಗಡತಿ ಅಂತ ಹೆಸರಿಟ್ಟಿದ್ದಾರೆ. ಇನ್ನೊಂದು ಮಗ್ಗುಲಿನಿಂದ ನೋಡಿದಾಗ ಅದು ಇಬ್ಬರು ಹೆಗ್ಗಡತಿಯರ ಕಥೆ. ಕುವೆಂಪು ಅವರಿಗೆ ಸ್ತ್ರೀಯರ ಬಗ್ಗೆ ಇದ್ದ ಕಳಕಳಿಯನ್ನು ಇಲ್ಲಿ ಕಾಣಬಹುದಿತ್ತು. ಸ್ತ್ರೀಯರ ಯಾತನೆ, ಅವರು ನಾಲ್ಕು ಗೋಡೆಗಳ ನಡುವೆಯೇ ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯ ಅವರ ಬರಹದ ಕೇಂದ್ರವಲ್ಲಿದೆ.'' ಗಿರೀಶ್ ಕಾರ್ನಾಡ್ ಅವರ ಈ ಮಾತುಗಳು ೬೭೪ ಪುಟಗಳ ಬೃಹತ್ ಕಾದಂಬರಿಗೆ ಹಲವಾರು ಆಯಾಮಗಳು ಇದ್ದುದನ್ನು ಹೇಳುತ್ತದಲ್ಲದೆ ಅದನ್ನು ಅವರ ಗ್ರಹಿಕೆಗೆ ನಿಲುಕಿದಂತೆ ಅವರು ಚಿತ್ರಿಸಿದ್ದಾರೆ ಎಂಬುದನ್ನು ಒಪ್ಪಿಕೊಳ್ಳುತ್ತದೆ. ಈ ಅಂಶವೇ ಚಿತ್ರದ ಮಿತಿ ಮತ್ತು ಸಾಫಲ್ಯದ ಅಳತೆಗೋಲಾಗಿದೆ. ಇದರಿಂದಾಗಿಯೇ ಕಾದಂಬರಿಯನ್ನು ಓದಿ ಮೆಚ್ಚಿಕೊಂಡಿದ್ದವರಿಗೆ ಚಿತ್ರ ಯಾವುದೇ ವಿಶೇಷಗಳಿಲ್ಲದ ಕಾದಂಬರಿಯ ಒಂದು ಭಾಗದ ಪುನರ್ ಸೃಷ್ಟಿಯಾಗಿ ಕಂಡರೆ, ಕಾದಂಬರಿಯನ್ನು ಓದದವರಿಗೆ 'ಪರವಾಗಿಲ್ಲ' ಅನ್ನಿಸಲು ಕಾರಣವಾಯಿತು.

'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಕಥೆ ನಡೆಯುವುದು ಕೊನೆಯ ೨೦೦ ಪುಟಗಳಲ್ಲಿ. ಅಲ್ಲಿಯತನಕ ವಿವರಗಳ ಮೂಲಕ ಕಾದಂಬರಿ ಬೆಳೆಯುತ್ತದೆ. ಘಟನೆಗಳು ಕೊನೆಯ ಭಾಗದಲ್ಲಿ ನಡೆಯುತ್ತವೆ. ಗಿರೀಶ್ ಕಾರ್ನಾಡ್ ಅದಕ್ಕಷ್ಟೇ ಪ್ರಾಧಾನ್ಯ ಕೊಟ್ಟಿದ್ದರು. ಕಾದಂಬರಿಯಲ್ಲಿ ಒಂದಾಗದ ಹೂವಯ್ಯ-ಸೀತೆ ಇಬ್ಬರನ್ನೂ ಚಿತ್ರದಲ್ಲಿ ಒಂದುಮಾಡಿದ್ದರು. ಒಂದು ರೀತಿಯಲ್ಲಿ ಚಿತ್ರವನ್ನು ಕಾದಂಬರಿಯ ಉತ್ತರಾರ್ಧ ಅನ್ನಬಹುದು. ಕಾದಂಬರಿಯಲ್ಲಿ ಬರುವ ಮೂವರು ಹೆಗ್ಗಡತಿಯರ ಪೈಕಿ ಸುಬ್ಬಮ್ಮ ಮತ್ತು ಸೀತೆಯರಿಗೆ ಪ್ರಾಧಾನ್ಯ ಕೊಡಲಾಗಿದೆ. ಕುವೆಂಪು ಮಹಿಳಾವಾದಿಯಾಗಿದ್ದರು ಎನ್ನುವುದು 'ಕಾನೂರು ಹೆಗ್ಗಡತಿ'ಯಲ್ಲಿ ಗೊತ್ತಾಗುತ್ತದೆ. ಆದರೆ ಯಾರೂ ಅದನ್ನು ಆ ದೃಷ್ಟಿಯಿಂದ ನೋಡುವ ಪ್ರಯತ್ನ ಮಾಡಿರಲಿಲ್ಲ. ಚಿತ್ರದ ಉತ್ತರಾರ್ಧದಲ್ಲಿ ಕಾಡಿನ ಚಿತ್ರಣವಿಲ್ಲ. ಮನೆಯೊಳಗೆ ನಡೆಯುವ ಸಂಗತಿಗಳನ್ನೇ ತೋರಿಸಲಾಗಿದೆ. ಹಾಗೆಯೇ 'ಗಂಗಿ'ಯ ಪಾತ್ರ ಕಾದಂಬರಿಯಲ್ಲಿ ಇರುವುದಕ್ಕಿಂತ ಭಿನ್ನವಾಗಿದೆ. ಸಂಭಾಷಣೆಯ ಭಾಷೆಯನ್ನು ಉದ್ದೇಶಪೂರ್ವಕವಾಗಿಯೇ ಬದಲಾಯಿಸಿಕೊಂಡಿರುವುದಾಗಿ ಕಾರ್ನಾಡ್ ಹೇಳಿಕೊಂಡಿದ್ದರು. ವಿಧವೆ ನಾಗಮ್ಮ, ಒಲ್ಲದ ಗಂಡಿಗೆ ಕೊರಳೊಡ್ಡಿದ ಸೀತೆಯರ ನಡುವೆ ನಿರ್ಭಾವುಕ ಗಡಸು ಸ್ವಭಾವದ ಸುಬ್ಬಮ್ಮ ಚಿತ್ರದ ಕೇಂದ್ರಬಿಂದು. ಚಿತ್ರ ಕಟ್ಟಿಕೊಡುವ ಅನುಭವವನ್ನು ಸುಬ್ಬಮ್ಮನ ಮೂಲಕವೇ ಗ್ರಹಿಸಲು ಸಾಧ್ಯವಾಗುವಂತೆ ಗಿರೀಶ್ ಕಾರ್ನಾಡ್ ಚಿತ್ರಕಥೆಯನ್ನು ರಚಿಸಿಕೊಂಡಿದ್ದರು. ಆದರೆ ಸುಬ್ಬಮ್ಮ ನಿಜವಾಗುವುದು ಚಂದ್ರೇಗೌಡರ ನೆರಳಲ್ಲಿ ಮಾತ್ರ. ಹಾಗೆಯೇ ಎಲ್ಲವನ್ನೂ ನಿರ್ವಿಕಾರವಾಗಿ ನೋಡುವ ಸೇರೆಗಾರ ಊಳಿಗಮಾನ್ಯ ಪದ್ಧತಿಯಲ್ಲಿ ದುಡಿಯುವ ಹಾಗೂ ದುಡಿಸಿಕೊಳ್ಳುವವರ ನಡುವಿನ ಕೊಂಡಿ. ಆತನಿಗೂ ಗೌಡಿಕೆಗೂ ಸಂಬಂಧವಿಲ್ಲ. ಅಧಿಕಾರದ ಪರವಾಗಿ ಕೆಲಸ ಮಾಡುವುದು ಅವನ ಹುಟ್ಟು ಪ್ರವೃತ್ತಿ. ಚಂದ್ರೇಗೌಡರನ್ನು ವಿನಯದಿಂದಲೂ, ಸುಬ್ಬಮ್ಮನನ್ನು ಅನುನಯದಿಂದಲೂ



(ಚಿತ್ರ ೧೨೮) 'ಹೃದಯಾ ಹೃದಯಾ' ಚಿತ್ರದಲ್ಲಿ ಚಿತ್ರಾಶೆಣೈ, ಶಿವರಾಜ್ ಕುಮಾರ್ ಮತ್ತು ಅನುಪ್ರಭಾಕರ್

ಗೆಲ್ಲುವ ಪ್ರಯತ್ನವನ್ನು ಆತ ಮಾಡುತ್ತಾನೆ. ಸುಬ್ಬಮ್ಮನ ಜೊತೆಗಿನ ಲೈಂಗಿಕ ಸಂಬಂಧದಿಂದ ಸೇರೆಗಾರ ಬಯಸುವುದು ಅಧಿಕಾರದ ಸಾಮೀಪ್ಯವನ್ನಷ್ಟೇ ಹೊರತು ತೃಪ್ತಿಯನ್ನಲ್ಲ. ಇದನ್ನು ಗಿರೀಶ್ ಕಾರ್ನಾಡ್ 'ಸುಬ್ಬಮ್ಮ-ಸೇರೆಗಾರ'ನ ಸಮಾಗಮದಲ್ಲಿ ಸುಬ್ಬಮ್ಮನ 'ರಸಕ್ಷಣ'ಗಳನ್ನಷ್ಟೇ ತೋರಿಸುವ ಮೂಲಕ ಹೇಳಲು ಪ್ರಯತ್ನಿಸಿದ್ದಾರೆ.

ಆದರೂ ಒಟ್ಟಾರೆ ಚಿತ್ರ ಜ್ಞಾನಪೀಠ ಪ್ರಶಸ್ತಿಪಾತ್ರ ಸಾಹಿತಿಯೊಬ್ಬರ ಕೃತಿಯನ್ನು ಮತ್ತೊಬ್ಬ ಜ್ಞಾನಪೀಠ ಪ್ರಶಸ್ತಿಪಾತ್ರ ಸಾಹಿತಿ ಚಿತ್ರಿಸಿರುವುದರ ಮಹತ್ವವನ್ನು ದಾಖಲಿಸುವುದರಲ್ಲಿ ಯಶಸ್ವಿಯಾಗಲಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿ, ಅಂದರೆ ೬೫ ವರ್ಷಗಳ ಹಿಂದೆ ರಚಿತವಾಗಿದ್ದ ಕೃತಿ ತನ್ನ ಸಮಗ್ರ ಸ್ಪಂದನವನ್ನು ನೀಡಲಾಗದ ಕುಬ್ಜಗೊಂಡಿತು. ದಟ್ಟ, ಸಮೃದ್ಧ ಮಳೆಗಳಿಂದ ಆವೃತವಾದ ಮಲೆನಾಡು ಚಿತ್ರದಲ್ಲಿ ಕಾಣಲೇ ಇಲ್ಲ. ಮಳೆಯ ಒಂದು ದೃಶ್ಯ ಕೂಡ ಚಿತ್ರದಲ್ಲಿ ಇರಲಿಲ್ಲ. ಚಿತ್ರದ ಪೂರ್ವಾರ್ಧ ನೀರಸವಾಗಿದ್ದರೆ, ಉತ್ತರಾರ್ಧ ಸುಮಾರಾಗಿತ್ತು. ಸಂಗೀತದಲ್ಲಿ ವಿಶೇಷವಿರಲಿಲ್ಲ. ಹೆಗ್ಗಡತಿ ಪಾತ್ರದಲ್ಲಿ ತಾರಾ ಉತ್ತಮವಾಗಿ ನಟಿಸಿದ್ದರು. ಅದುವರೆಗೆ ೧೮೦ ಚಿತ್ರಗಳಲ್ಲಿ ಅಭಿನಯಿಸಿದ್ದ ಅವರಿಗ ಉತ್ತಮ ಪಾತ್ರಗಳು ದೊರಕಿದ್ದುದು 'ಕೋಟೆ', 'ಕ್ರಮ', 'ಮುಂಜಾನೆಯ ಮಂಜು', 'ಕರಿಮಲೆಯ ಕಗ್ಗತ್ತಲು' ಚಿತ್ರಗಳಲ್ಲಿ. ಅದನ್ನು ಬಿಟ್ಟರೆ 'ಹೆಗ್ಗಡತಿ'ಯಾಗಿ ಅವರಿಗ ಒಂದು ವಿಶೇಷ ವೃತ್ತಿಗೌರವ ದೊರಕಿತು. ಇವರೊಂದಿಗೆ ಸೇರೆಗಾರನಾಗಿ ಶ್ರೀನಿವಾಸಪ್ರಭು ನೀಡಿದ್ದ ಅಭಿನಯ ಕೂಡ ವಿಶೇಷವಾಗಿತ್ತು. ಈ ಚಿತ್ರದ 'ನಿರ್ಮಾಣ ಸಲಹೆಗಾರರು' ಎಂಬ ಶೀರ್ಷಿಕೆಯ ಅಡಿಯಲ್ಲಿ ರಾಜ್ಯದ ಹಿರಿಯ ಐಎಎಸ್ ಅಧಿಕಾರಿ, ಸಂಸ್ಕೃತಿ ಮತ್ತು ಸಾಹಿತ್ಯ ಪ್ರೇಮಿ ಐ.ಎಂ.ವಿಠಲಮೂರ್ತಿ ಚಿತ್ರರಂಗಕ್ಕೆ ನೇರವಾಗಿ ಪರಿಚಿತರಾದರು.

'ಕಾನೂರು ಹೆಗ್ಗಡತಿ'ಯನ್ನು ದೆಹಲಿ ದೂರದರ್ಶನಕ್ಕೆ ಹಿಂದಿಯಲ್ಲಿ ೧೩ ಕಂತುಗಳ ಧಾರಾವಾಹಿಯನ್ನು ಚಿತ್ರಿಸುವ ಯೋಜನೆ ಆರಂಭಕ್ಕೆ ಇದದ್ದು. ಅನಂತರ ಅದೇ ಹೊತ್ತಿಗೆ ಜೊತೆಜೊತೆಯಾಗಿ ಕನ್ನಡ ಚಿತ್ರ ನಿರ್ಮಿಸುವ ಯೋಜನೆಯನ್ನು ಕಾರ್ಯರೂಪಗೊಳಿಸಲಾಯಿತು. ಒಂದೇ ಸ್ಥಳ, ಒಂದೇ ರೀತಿಯ ವೇಷ-ಭೂಷಣ, ಒಂದೇ ಅರ್ಥದ ಸಂಭಾಷಣೆ - ಭಾಷೆ ಮಾತ್ರ ಬೇರೆ ಬೇರೆ. ಚಿತ್ರೀಕರಣವನ್ನು ತೀರ್ಥಹಳ್ಳಿ ಬಳಿಯ ಮೂಡುವಳ್ಳಿ ಮನೆ, ಬಾವಿಕೆರೆ ಮನೆ, ಹೆಗಡೇರಕೇರಿ ಮನೆಗಳಲ್ಲಿ ನಡೆಸಲಾಯಿತು. ಚಿತ್ರಮಂದಿರಗಳಲ್ಲಿ ಬಿಡುಗಡೆಯಾದಾಗ ಅಷ್ಟೇನೂ ಯಶಸ್ವಿಯಾಗದಿದ್ದ ಚಿತ್ರ ೧೯೯೯ ರಲ್ಲಿ ನಡೆದ ದೆಹಲಿಯ ಚಿತ್ರೋತ್ಸವದ ಪನೋರಮಾ ವಿಭಾಗಕ್ಕೆ ಆಯ್ಕೆಯಾಗಿತ್ತು.



(ಚಿತ್ರ ೧೨೯) 'ಕಾನೂರು ಹೆಗ್ಗಡತಿ' ಚಿತ್ರದಲ್ಲಿ ತಾರಾ ಮತ್ತು ಗಿರೀಶ್ ಕಾರ್ನಾಡ್

ಎಸ್.ನಾರಾಯಣ್ ಬಹುಕಾಲದಿಂದ ಕನಸುತ್ತಿದ್ದ, ಅವರು ಪ್ರೀತಿಸುವ ಕಥಾವಸ್ತುವನ್ನು 'ವೀರಪ್ಪನಾಯಕ'ನಾಗಿ ಚಿತ್ರಿಸಿದರು. ಅವರದೇ ನಿರ್ಮಾಣ, ನಿರ್ದೇಶನವಿದ್ದ ಚಿತ್ರ. ಗ್ರಾಮೀಣ ಪರಿಸರ, ಜನರಲ್ಲಿ ಗ್ರಾಮದ ಹಿರಿಯನ ಬಗ್ಗೆ ಇರುವ ಪ್ರೀತ್ಯಾದರಗಳನ್ನು ಸೊಗಸಾಗಿ ವಿವರಿಸಿದ್ದರು. ವಿಷ್ಣುವರ್ಧನ್ ಆ ಪಾತ್ರಕ್ಕೆ ಘನತೆ ತಂದುಕೊಟ್ಟರು. ಮುಖ್ಯವಾಗಿ ಚಿತ್ರದಲ್ಲಿ ಮೂರು ಅಂಶಗಳು ಗಮನ ಸೆಳೆದವು. ಗರಗ ಗ್ರಾಮ, ಇಡೀ ಗ್ರಾಮ ಬಾವುಟ ನೇಯ್ದು ಬದುಕುತ್ತದೆ. ಆ ಎಲ್ಲ ವಿವರಗಳು ಮತ್ತು ಭಾರತದಲ್ಲಿ ಎಷ್ಟೋ ಪ್ರದೇಶಗಳಿದ್ದೂ ಬಾವುಟದಂಥ ಗೌರವನೀಯವಾದ್ದನ್ನು ಸಿದ್ಧ ಮಾಡಲು ಕರ್ನಾಟಕದ ಒಂದು ಗ್ರಾಮಕ್ಕೆ ವಹಿಸಲಾಗಿದೆ, ಅಂದಿನಿಂದ ಇಂದಿನವರೆಗೂ ಹಾಗೇ ನಡೆದುಕೊಂಡು ಬಂದಿದೆ ಎಂಬ ವಿವರಗಳು ಮೈ-ಮನಸ್ಸನ್ನು ಪುಳಕಗೊಳಿಸುವಂಥವಾಗಿದ್ದವು. ಅಲ್ಲಿ ಉಳಿಸಿಕೊಂಡ ಪಾವಿತ್ರ್ಯ, ಭಕ್ತಿ-ಗೌರವಗಳು ಇತ್ಯಾದಿ ಗಮನ ಸೆಳೆದಿತ್ತು. ಎರಡನೆಯ ಸಂಗತಿಯೆಂದರೆ ಪ್ರೀತಿಸಿ, ಒತ್ತಾಯದಿಂದ ಯಾವ ವಿರೋಧವನ್ನೂ ಲೆಕ್ಕಿಸದೆ ಮದುವೆಯಾದ ಹೆಂಡತಿ. ಆಕೆಯಲ್ಲಿ ಎಷ್ಟು ವಿನಯ-ಪ್ರೇಮ ಇತ್ತೋ ಅಷ್ಟೇ ಆತ್ಮಾಭಿಮಾನವೂ ಇತ್ತು ಎಂಬುದನ್ನು ಚಿತ್ರಿಸಿರುವ ರೀತಿ. ಇವನ್ನೆಲ್ಲ ಸಣ್ಣಸಣ್ಣ ವಿವರಗಳ ಮೂಲಕ ಹಿಡಿದಿಡುವುದೇ ಒಂದು ಸೊಗಸು. ಮೂರನೆಯದು ತನ್ನ ಪ್ರೀತಿಯ ಮಗನೇ ದುಷ್ಟರ ಜೊತೆ ಸೇರಿ ಉಗ್ರಗಾಮಿಯಾಗುವ ದುರಂತ. ಆ ಮಗನ ಪಾತ್ರಧಾರಿ ತೋರುವ ವಿನಯ, ಮುಗ್ಧತೆಯ ಆಳದಲ್ಲಿ ಇದ್ದ ಕ್ರೌರ್ಯವನ್ನು ಬಗೆಯುವ ನಾರಾಯಣ್ ಅವರ ಕೌಶಲ ಗಮನ ಸೆಳೆಯುವಂಥದ್ದು. ಸಹೋದರನಾದರೇನು, ಮಗನಾದರೇನು ತಪ್ಪು, ದೇಶದ್ರೋಹ ಅನ್ನಿಸಿದಾಗ ಕೈ, ಕಾಲು, ಕತ್ತು ಕಡಿದು ಚೆಂಡಾಡುತ್ತೇನೆಂಬ ಒಂದು ಕಾಲದ ಮಾತಿನ 'ಮಿಥ್' ಇಲ್ಲಿ ಕ್ರಿಯೆಯಾಗಿ ಒಂದು ಹಂತದಲ್ಲಿ ಭೀಭತ್ಸವೂ ಆಗಿಬಿಡುತ್ತದೆ. ಎಲ್ಲಕ್ಕೂ ಅವರದೇ ತರ್ಕವಿದೆ. ನಾರಾಯಣ್ ಇನ್ನಷ್ಟು ಬಿಗಿಯಾದ ಚಿತ್ರಕಥೆಯ ಚೌಕಟ್ಟನ್ನು ಸಿದ್ಧ ಮಾಡಿಕೊಳ್ಳಬೇಕಿತ್ತು. ಪಾತ್ರಗಳನ್ನು ಹಾಸ್ಯಕ್ಕಾಗಿ ಹಗುರ ಮಾಡಬಾರದಿತ್ತು ಇತ್ಯಾದಿ ಆಕ್ಷೇಪಗಳು ಇಂಥ ಗಂಭೀರ ಕಥಾವಸ್ತುವಾದಾಗ



(ಚಿತ್ರ ೧೩೦) 'ವೀರಪ್ಪನಾಯ್ಕ' ಚಿತ್ರದಲ್ಲಿ ಆಗ್ರೋ ಚಿಕ್ಕಣ್ಣ ಮತ್ತು ವಿಷ್ಣುವರ್ಧನ್

ಇದ್ದೇ ಇರುತ್ತದೆ. ಜನಪ್ರಿಯ ಚಿತ್ರಗಳ ಸೂತ್ರದ ಜಾಡಲ್ಲದೆ ಬೇರೆಯಾಗಿ ಯೋಚಿಸುವುದು-ಚಿತ್ರಿಸುವುದು ಸಾಧ್ಯವಾಗಿದ್ದಿದ್ದರೆ ಅದೊಂದು ಅಪರೂಪದ ಕಲಾಕೃತಿಯಾಗುವ ಎಲ್ಲ ಸಾಧ್ಯತೆಯೂ ಇತ್ತು. ಚಿತ್ರದಲ್ಲಿ ಹೇಮಾಚೌಧುರಿ, ಪ್ರುತಿ, ಆಗ್ರೋ ಚಿಕ್ಕಣ್ಣ, ಸುಧೀರ್ ಪಾತ್ರಗಳು, ವಿಷ್ಣುವರ್ಧನ್ ನಿರ್ವಹಿಸಿದ್ದ ಮುಖ್ಯಪಾತ್ರಕ್ಕೆ ಸರ್ವವಿಧದಲ್ಲೂ ಪೋಷಣೆ ನೀಡಿದ್ದವು. ಗಿರಿ ಅವರ ಛಾಯಾಗ್ರಹಣವೂ ಚೆನ್ನಾಗಿತ್ತು. ವಿಷ್ಣುವರ್ಧನ್ ಅವರಿಗೆ ವಿಭಿನ್ನ ವರ್ಚಸ್ಸು ತಂದುಕೊಟ್ಟ ಈ ಚಿತ್ರದಲ್ಲಿ ಅವರಿಗೆ ಮೂರು ಹಂತಗಳ ಬದುಕಿನ ನಿರೂಪಣೆ ಲಭ್ಯವಾಗಿತ್ತು. ಸಂಭಾಷಣೆ, ಎರಡು ಹಾಡುಗಳು ಉತ್ತಮವಾಗಿದ್ದ ಚಿತ್ರ ಆರ್ಥಿಕವಾಗಿ ಯಶಸ್ಸನ್ನು ಗಳಿಸಿ, ರಾಜ್ಯದ ೧೯೯೮-೯೯ರ ಸಾಲಿನ ತೀರ್ಪುಗಾರರ ವಿಶೇಷ ಪ್ರಶಸ್ತಿ ಪಡೆಯಿತು.

'Z' ಚಿತ್ರವನ್ನು ಪ್ರವೀಣ್‌ನಾಯಕ್ ನಿರ್ದೇಶಿಸಿದರು. ಉಪೇಂದ್ರರ 'A' ಚಿತ್ರಕ್ಕೆ ಉತ್ತರ ಎಂಬ ಪ್ರಚಾರವೂ ಇತ್ತು. ಆ ನಡುವೆ ತಾರೆ ಪ್ರೇಮ-ಉಪೇಂದ್ರರ ನಡುವಣ ವಿರಸವನ್ನು ಪ್ರವೀಣ್‌ನಾಯಕ್ ಬೇರೆಯಾಗಿ ಚಿತ್ರಕ್ಕೆ ಹೊಂದಿಸಿಕೊಂಡರೆಂಬ ಮಾತೂ ಇತ್ತು. ಅದೇನೇ ಇರಲಿ, ಸ್ಥಿರಚಿತ್ರ ಛಾಯಾಗ್ರಾಹಕ, ಪತ್ರಕರ್ತ ಪ್ರವೀಣ್ ನಾಯಕ್ ಚಿತ್ರ ನಿರ್ದೇಶಕರಾದರು ಎಂಬುದು ಮುಖ್ಯ. ಪ್ರಚಾರ ಏನೇ ಇರಲಿ, ಚಿತ್ರದ ಹಲವು ಸನ್ನಿವೇಶಗಳಲ್ಲಿ, ಚಿತ್ರಿಕೆಗಳಲ್ಲಿ ನಿರ್ದೇಶಕರ ಕೌಶಲವನ್ನಂತೂ ಕಾಣಬಹುದಿತ್ತು. ಸಿನಿಮಾದೊಳಗೊಂದು ಸಿನಿಮಾ ಮಾಡಿ, ಚಿತ್ರೀಕರಣದಲ್ಲಿ ನಡೆಯುವ ಸಂಗತಿಗಳಿಗೂ, ವ್ಯಕ್ತಿಗತ ವಿಚಾರಗಳಿಗೂ ತಳುಕು ಹಾಕುವ ಪ್ರಯತ್ನವಿತ್ತು. ಚಿತ್ರದ ಮುಖ್ಯ ಪಾತ್ರದಲ್ಲಿ ಪ್ರಕಾಶ್ ರೈ ಸೊಗಸಾದ ಅಭಿನಯ ನೀಡಿದ್ದರು. ಪ್ರವೀಣ್ ನಾಯಕ್ ಅವರ ಅಡಗು ಪ್ರತಿಭೆಯನ್ನು ಹೊರ ತೆಗೆದ ಚಿತ್ರವಾಗಿ ಚಿತ್ರದ ಸೋಲು-ಗೆಲುವಿನ ಆಚೆಗೆ ಮುಖ್ಯವೆನಿಸುವ ಚಿತ್ರ 'Z'. ಪ್ರೇಮರತ್ನ ಕ್ರಿಯೇಶನ್ಸ್ ಲಾಂಛನದಲ್ಲಿ ಅಮರನಾಥ್ ಎನ್ನುವವರು ನಿರ್ಮಿಸಿದ್ದರು. ಅವರ ಬೊಕ್ಕಸವಂತೂ ತುಂಬಲಿಲ್ಲ. ಈ ದಿನಗಳಲ್ಲಿ ಛಾಯಾಗ್ರಾಹಕ ಗಿರಿ ಬಹಳಷ್ಟು ಬಿಜಿಯಾಗಿದ್ದರು. ಅವರ ಪರಿಶ್ರಮ, ಕಸುಬುಗಾರಿಕೆಯೇ ಅವರನ್ನು ಬಹು ಬೇಡಿಕೆಯಲ್ಲಿಟ್ಟಿತ್ತು. 'Z' ಚಿತ್ರಕ್ಕೂ ಗಿರಿಯವರ ಸೊಗಸಾದ ಛಾಯಾಗ್ರಹಣವಿತ್ತು. ಚಿತ್ರಕ್ಕೆ ನಾಲ್ಕಾರು ಜನ ಸಂಗೀತ ನೀಡಿದ್ದೂ ಒಂದು ಗಮನ ಸೆಳೆದ ಅಂಶ. ಪ್ರವೀಣ್ ಅವರ ಸ್ನೇಹ ಹಾಗೆ ಎಲ್ಲರನ್ನೂ ಒಂದಾಗಿಸಿರಬಹುದು.

ಮಹೇಶ್ ಸುಖಧರೆ ನಿರ್ದೇಶಿಸಿದ ಪ್ರಥಮ ಚಿತ್ರ 'ಸಂಭ್ರಮ'. ಮೊದಲ ಚಿತ್ರ ಎಂಬ ಯಾವ ಕುರುಹನ್ನೂ ತೋರದೆ ಅಚ್ಚುಕಟ್ಟಾಗಿ ಮೂಡಿಸಿದ್ದರು. ರಮೇಶ್ ನಾಯಕನಟರಾಗಿದ್ದ ಈ ಚಿತ್ರದಲ್ಲಿ ಕೇರಳದ ನವನಟಿಯಾದ ಕಾವೇರಿ ನಾಯಕಿಯಾಗಿದ್ದರು. ಸಹಜ ಸುಂದರಿಯಾಗಿರುವ ನಟಿ ತಕ್ಕ ಹಾವಭಾವಗಳಿಂದ ಪಾತ್ರವನ್ನು ಅನುಭವಿಸಿ ನಿರ್ವಹಿಸಿದ್ದರು. ಚಿತ್ರದ ಕಥೆಯೂ ಚೆನ್ನಾಗಿದ್ದು, ೫೦ ದಿನಗಳನ್ನು ದಾಟಿ ಚಿತ್ರ ಓಡಿತು. ಹಂಸಲೇಖ ಸಂಗೀತದಲ್ಲಿ 'ಯಾರು ಭೂಮಿಗೆ ಮೊದಲ ಬಾರಿಗೆ...' ಹಾಗೂ 'ಹುಬ್ಬಿ ಹೋಳಿಗೆಯಂಥ ಹುಡುಗಿ...' ಗೀತೆಗಳು ಜನಪ್ರಿಯವಾದವು. ನಟ ಅರವಿಂದ್‌ಗೆ ರೌಡಿ ಅಣ್ಣನಾಗಿ ಉತ್ತಮ ಪಾತ್ರವಿತ್ತು. ಮಹೇಂದ್ರನ್ ಛಾಯಾಗ್ರಹಣ ಚೆನ್ನಾಗಿತ್ತು.

ಐಎಎಸ್ ಅಧಿಕಾರಿ ಶಿವರಾಮು, ವಿಜಯಲಕ್ಷ್ಮಿ ಅಭಿನಯವಿದ್ದ 'ಪ್ರತಿಭಟನೆ' ಚಿತ್ರವನ್ನು ಚಿತ್ರಕಥೆ, ಸಂಭಾಷಣೆ ರಚಿಸಿ ರಾಜೇಂದ್ರಕುಮಾರ್‌ಆರ್ಯ ನಿರ್ದೇಶಿಸಿದರು. ಜೊತೆಗೆ ಹುಚ್ಚನ ಪಾತ್ರವೊಂದನ್ನು ನಿರ್ದೇಶಕರೇ ಮಾಡಿದ್ದರು. ಹಿಂದುಳಿದ ವರ್ಗಗಳಿಗೆ ಸರ್ಕಾರದಿಂದ ದೊರೆಯುವ ಸೌಲಭ್ಯಗಳನ್ನು ಶ್ರೀಮಂತರು ಕಬಳಿಸುವುದು; ಶ್ರೀಮಂತರು ನಡೆಸುವ ಅತ್ಯಾಚಾರ, ಹಿಂಸೆ, ದಬ್ಬಾಳಿಕೆ ಇವುಗಳನ್ನು ಕುರಿತ ಚಿತ್ರ. ಶಿವರಾಮು ಬಸವನ ಪಾತ್ರದಲ್ಲಿದ್ದರು. ವಿ.ಮನೋಹರ್ ಸಂಗೀತದಲ್ಲಿ ಒಂದೆರಡು ಹಾಡುಗಳು ಚೆನ್ನಾಗಿದ್ದವು. ಡಾ। ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನದಿಂದ ಆಯ್ದ 'ಹಸಿವಿನಿಂದ ಸತ್ತೋರು ಸೈಜುಗಲ್ಲು ಹೊತ್ತೋರು...' ಕವನವನ್ನು ಚಿತ್ರದಲ್ಲಿ ರಾಗ ಸಂಯೋಜಿಸಿ ಅಳವಡಿಸಿಕೊಂಡಿದ್ದಾರೆ. ೧೯೯೮-೯೯ನೇ ಸಾಲಿನ ಅತ್ಯುತ್ತಮ ಗೀತರಚನಕಾರ ಪ್ರಶಸ್ತಿ ಡಾ। ಸಿದ್ಧಲಿಂಗಯ್ಯನವರಿಗೆ ಮೇಲಿನ ಹಾಡಿಗಾಗಿ ಲಭಿಸಿತು.

ಜಯಶ್ರೀದೇವಿ ಸಾಹಸಿ. ಆಂಧ್ರದವರಾದರೂ ತಾನೇನಾದರೂ ಸಾಧಿಸಿದರೆ ಕನ್ನಡದಲ್ಲೇ ಎಂದು ಹಠವಾಗಿ ನಿಂತವರು. ಆಕೆಯ ನಿರ್ಮಾಣದ ಚಿತ್ರಗಳು ಉದ್ಯಮದಲ್ಲಿ ವಿಶೇಷವಾಗಿ ಚರ್ಚೆಯಾಗುತ್ತವೆ. ವೀಕ್ಷಕ-ವಿಮರ್ಶಕರಿಬ್ಬರೂ ಆಸ್ಥೆಯಿಂದ ಗಮನಿಸುತ್ತಾರೆ. ಅವರ ಚಿತ್ರಗಳೂ ಸೋಲುಗಳಿಂದ ಹೊರತಲ್ಲ. ಆದರೆ ಆ ಸೋಲು ಆಕೆಯನ್ನು ಧೃತಿಗೆಡಿಸುವುದಿಲ್ಲ. ಮರಳಿ ಯತ್ನವ ಮಾಡುವ ಜಾಯಮಾನ. ಒಂದು ಕಾಲಕ್ಕೆ ಕನ್ನಡ ಚಿತ್ರೋದ್ಯಮದಲ್ಲಿ ಅಂಥ ನಿರ್ಮಾಪಕರೇ ಇದ್ದರು. ವೃತ್ತಿಯೇ ಇದಾದಾಗ ನಷ್ಟವೆಂದು ಓಡಿಹೋಗುವಂತಿರಲಿಲ್ಲ. ಮತ್ತೆ ಮತ್ತೆ



(ಚಿತ್ರ ೧೩೧) 'Z' ಚಿತ್ರದಲ್ಲಿ ಪ್ರೇಮಾ ಮತ್ತು ಪ್ರಕಾಶ್ ರೈ



(ಚಿತ್ರ ೧೩.೨) 'ಪ್ರತಿಭಟನೆ' ಚಿತ್ರದಲ್ಲಿ ವಿಜಯಲಕ್ಷ್ಮೀ ಮತ್ತು ಕೆ.ಶಿವರಾಮು

ಚಿತ್ರ ಮಾಡಿ ಕಳೆದು ಹೋದದ್ದನ್ನು ಅಲ್ಲೇ ಮಡಿಮ ಪಡೆಮಕೊಳ್ಳುತ್ತಿದ್ದರು. ಕ್ರಮೇಣ ಅಂಥ ಸ್ಥಿರ ನಿರ್ಮಾಪಕರು ಕರಗತೊಡಗಿದರು. ಚಿತ್ರ ನಿರ್ಮಾಣ ಒಂದು ವೃತ್ತಿ, ಉದ್ಯಮ ಅನ್ನುವುದನ್ನು ಮೀರಿ ಹಲವರ ಖಯಾಲಿಯೂ ಆವದ್ದುಂಟು. ಹಣವಿದ್ದವರು ಧಾರಾಳ ಖರ್ಚುಮಾಡಿ ಬೇಕಾದಹಾಗೆ ಮೆರೆದ ಉದಾಹರಣೆಯೂ ಉಂಟು. ಕೊಂಚ ಹಣ ತಂದು ಕೈ ಸುಟ್ಟುಕೊಂಡು ಅರ್ಧಕ್ಕೇ ನಿಲ್ಲಿಸಿದವರೂ ಉಂಟು. ಕೊನೆಗೆ ಇಬ್ಬರದೂ ಖಾಲಿ ಕೈಗಳೇ ಆದವು. ಕೆಲವು ಸಜ್ಜನರು ಬಂದು ಒಂದೆರಡು ಪ್ರಯತ್ನಕ್ಕೇ ಕೊನೆಗೊಳಿಸಿ ಊರು ಸೇರಿಕೊಂಡದ್ದೂ ಉಂಟು. ಜಯಶ್ರೀದೇವಿ ಬಂದಾಗ ಅಂಥವೇ ಒಂದು ಕೊನೆಯನ್ನು ನಿರೀಕ್ಷಿಸಿದ್ದರೆ ಆಶ್ಚರ್ಯವಿಲ್ಲ. ಆದರೆ ಆಕೆ ಹಾಗೆ ಸೋಲೊಪ್ಪಲಿಲ್ಲ. ನಿರ್ದೇಶಕರಾಗುವ ಹಂಬಲದಿಂದ ಹೊರತಂದ 'ಕೋಣ ಈದೈತೆ' ಹಸಿ-ಸೇರ ಎಂಬ ಕಾರಣಕ್ಕೇ ಸೆನ್ಸಾರ್ ಸಮಸ್ಯೆ ಎದುರಿಸಿತು. ಅನಂತರ 'ಭವಾನಿ' ಮದ್ಯಪಾನ ವಿರೋಧವೇ ಮೊದಲಾದ ಅಂಶಗಳುಳ್ಳ, ಸ್ತ್ರೀ ಸಮುದಾಯವನ್ನು ಸಂಘಟಿಸುವ ಗಂಭೀರ ಪ್ರಯತ್ನವಾಗಿತ್ತು. ಚಿತ್ರ ದೆಹಲಿಯ ಅಂತರರಾಷ್ಟ್ರೀಯ ಚಿತ್ರೋತ್ಸವವಲ್ಲಿ ಮಹಿಳೆಯರ ಅಭಿವ್ಯಕ್ತಿಯನ್ನೇ ವಿಶೇಷವಾಗಿ ಗಮನಿಸುವ ವಿಭಾಗವಲ್ಲಿ ಆಯ್ಕೆಯಾಗಿ ಪ್ರದರ್ಶಿತವಾಯಿತು. ಅನಂತರ ಜಯಶ್ರೀದೇವಿ ನಿರ್ದೇಶಿಸಲಿಲ್ಲ. ಅವರ ಚಿತ್ರಗಳನ್ನು ಇತರರ ನಿರ್ದೇಶನಕ್ಕ ಬಿಟ್ಟರು. ಚಿತ್ರ ನಿರ್ಮಾಣವಲ್ಲಿ ಒಂದು ಶಿಸ್ತು-ಸಂಯಮ ತಂದರು. ಅದಾವುದನ್ನೂ ಲೆಕ್ಕಿಸದೆ, ತನಗ ಸರಿ ಕಂಡಂತ ಅದ್ದೂರಿ ತಾರಾಗಣದ ಚಿತ್ರಗಳು, ಹೊಸ ತರುಣರಿಗೆ ಅವಕಾಶ ಕಲ್ಪಿಸಿದರು ಆಕೆ.

ಹಾಗೆ ಬಂದ ಹಲವು ಚಿತ್ರಗಳಲ್ಲಿ 'ಹಬ್ಬ'ವೂ ಒಂದು. ಚಿನ್ನಿ ಚಿತ್ರ ಲಾಂಛನದಲ್ಲಿ ತೆರೆಗೆ ಬಂತು. ಬಹು ತಾರಾಗಣ, ಜನಪ್ರಿಯ ನಿರ್ದೇಶಕ ಡಿ.ರಾಜೇಂದ್ರಬಾಬು ನಿರ್ದೇಶನವಿದ್ದ ಚಿತ್ರ. ಇಂಥ ಚಿತ್ರ ಸಲೀಸಾಗಿ ಮುಗಿದೀತೆ ? ಎಂಬ ಪ್ರಶ್ನೆಗಳಿರುವಾಗಲೇ ಚಿತ್ರ ತೆರೆಗ ಬಂದೂಬಿಟ್ಟಿತು. ಬಹಳ ದಿನಗಳ ಮೇಲೆ ಕನ್ನಡದ ಜನಪ್ರಿಯ ನಟರೆಲ್ಲರ ಸಮಾಗಮ. ಅದೇ ಪ್ರೇಕ್ಷಕನಿಗೊಂದು ಥ್ರಿಲ್. 'ಹಬ್ಬ' ಚಿತ್ರಕ್ಕೆ ಮೂಲ ಎಲ್ಲಿಂದಲೇ ಇರಲಿ, ಭಾರವಿ ಅವರು ಅಚ್ಚುಕಟ್ಟಾಗಿ ಜೋಡಿಸಿಕೊಟ್ಟಿದ್ದರು. ಅದಕ್ಕ ಮಹಾಭಾರತದ ವಿರಾಟ್‌ಪರ್ವದ ಪ್ರೇರಣೆ ಎಂದು ಹೇಳಲಾಗಿತ್ತು. ಪಾಂಡವರ ಅಜ್ಞಾತವಾಸದ ಸನ್ನಿವೇಶವನ್ನು ಸೊಗಸಾಗಿ ಈ ಶತಮಾನದ ಕೌಟುಂಬಿಕ ವಿಚಾರಗಳಿಗೆ ಸಮೀಕರಿಸಲಾಗಿತ್ತು. ಸಹೋದರನ ವಿವಾಹದ ಕಾರಣಕ್ಕಾಗಿ ಹೀಗ ಬಗ ಬಗೆಯ ವೇಷಗಳಲ್ಲಿ ಮಾನಾಪಮಾನವನ್ನು ಲೆಕ್ಕಿಸದ ಕಳಮಟ್ಟದ ಕಲಸಕ್ಕೂ ಹೋಗುವ ಸಹೋದರರೇ ಎಂಬ ತರ್ಕಕ್ಕೆ ಇಲ್ಲಿ ಉತ್ತರವಿಲ್ಲ. ಒಟ್ಟಾರೆ ರಂಜನೆ ಎಂದಷ್ಟೇ ಸಮಾಧಾನ. ಕೀಚಕ ಪ್ರಸಂಗವಂಥದ್ದೇ ನಡೆದು ಇಲ್ಲಿ ಒಬ್ಬ ಭೀಮನಲ್ಲ, ಪಾಂಡವರೆಲ್ಲ ಸ್ತ್ರೀ ವೇಷದಲ್ಲಿ ನುಗ್ಗಿ ನರ್ತಿಸಿ, ದುಷ್ಟರ ಮೈ ನುಗ್ಗುನುರಿ ಮಾಡುವ ಪ್ರಸಂಗವೂ ಇತ್ತು. ತಮ್ಮ ನೆಚ್ಚಿನ ನಟರ ಈ ಎಲ್ಲ ಹುಚ್ಚಾಟವನ್ನು ಅಭಿಮಾನದಿಂದಲೇ ಸ್ವೀಕರಿಸಿದ ಪ್ರೇಕ್ಷಕರು ಚಿತ್ರವನ್ನು ಗೆಲ್ಲಿಸಿದರು. ಒಂದು ಕಲೆಯಾಗಿ ಗುರುತಿಸಲಾರದ ಕೇವಲ ರೂಕ್ಷ-ಅತಿ ಅನ್ನಿಸುವ ಚಿತ್ರ ಕೂಡಾ ಅಲ್ಲಿರುವ ರಂಜನೆ-ಹಾಸ್ಯ, ನೃತ್ಯ ಗೀತೆಗಳಿಂದಾಗಿ ಗೆದ್ದಿತ್ತು. ಹಂಸಲೇಖ ಮತ್ತೆ ವಿಜೃಂಭಿಸಿದ್ದರು.

ಸುನೀಲ್ ಕುಮಾರ್ ದೇಸಾಯಿ ಅವರ ಪ್ರತಿಭೆಯನ್ನು ಮತ್ತೆ ಮೆರೆಸಿದ ಚಿತ್ರ 'ಪ್ರತ್ಯರ್ಥ'. ಸರಳ, ಬಹುತೇಕ ಒಂದೇ ಸ್ಥಳದಲ್ಲಿ ನಡೆಯುವ ಕಥೆ. ಕಥೆಗಿಂತ ಘಟನೆ ಎನ್ನಬಹುದಾದ್ದು. ದೇಸಾಯಿ ಅವರ ಕರಗತವಾಗಿರುವ ಹೇಳುವ ಕಲೆ, ಸೊಗಸಾದ ಚಿತ್ರಕಥೆ ಸಿದ್ಧಪಡಿಸುವ ಜಾಣತನ, ವಿಭಿನ್ನ ಕೋನಗಳಲ್ಲಿ ಚಿತ್ರಿಕೆಗಳನ್ನು ಅಣಿಗೊಳಿಸುವ ವಿಧಾನ ಮತ್ತೆಮತ್ತೆ ಮೆಚ್ಚಬೇಕಾದಂಥದ್ದು. 'ಪ್ರತ್ಯರ್ಥ' ಚಿತ್ರಕ್ಕೂ ಮೊದಲು ಅವರು ಬೇರೊಂದು ಕಥೆ ಯೋಚಿಸಿದ್ದರು. 'ಬೆಳದಿಂಗಳ ಬಾಲೆ'ಯಂಥ ಚಿತ್ರ ಮೂಡಿಬರಬೇಕಾದರೆ ವರ್ಷಗಟ್ಟಲೆ ತಪಸ್ಸಿನಂತೆ ಕೂತುಬಿಟ್ಟಿರಬಹುದು ದೇಸಾಯಿ. ಸಾಮಾನ್ಯವಾಗಿ ದೇಸಾಯಿಗೆ ಇಂಗ್ಲಿಷ್ ಚಿತ್ರಗಳ ಪ್ರಭಾವ ಇರುತ್ತದೆ. ಪ್ರತ್ಯರ್ಥ ಚಿತ್ರಕ್ಕೂ ಇತ್ತು. ಒಂದೆರಡು ಚಿತ್ರಿಕೆಗಳು-ಫ್ರೇಮಿಂಗ್ ಸಹ ಮೂಲದ ತದ್ವತ್ ಅನ್ನಿಸಿತ್ತು. ಮೂಲಚಿತ್ರದಲ್ಲಿ ಸ್ತ್ರೀ ಇದ್ದರೆ ಇಲ್ಲಿ ಪುರುಷನಿದ್ದ. ಚಿತ್ರದ ಮುಖ್ಯಪಾತ್ರದಲ್ಲಿ ಗಿರೀಶ್ ಕಾರ್ನಾಡ್ ಅಭಿನಯಿಸಿದ್ದರು. ಹೋಟೇಲ್ ಉದ್ಯಮಿ, ನಿರ್ಮಾಪಕ ಸಂಜೀವ್ ಅವರ ಮಗ ಸುದೀಪ್ ಈ ಚಿತ್ರದಲ್ಲಿ ಪುಟ್ಟ ಪಾತ್ರವೊಂದರಲ್ಲಾದರೂ ಗಮನ ಸೆಳೆದಿದ್ದರು. ಅದೇ ಅವರಿಗೆ ಮತ್ತೂ ಚಿತ್ರಗಳಲ್ಲಿ ಅವಕಾಶಗಳನ್ನು ಒದಗಿಸಿತ್ತು. 'ಪ್ರತ್ಯರ್ಥ' ಚಿತ್ರಕ್ಕೆ ಒಂದು ಕಾಲಕ್ಕೆ ಸ್ಥಿರಚಿತ್ರ ಛಾಯಾಗ್ರಾಹಕ, ಪತ್ರಕರ್ತ ಆಗಿದ್ದ ವೇಣು ಛಾಯಾಗ್ರಾಹಕರಾಗಿದ್ದರು. ಆತನ ಪ್ರತಿಭೆ ಗುರುತಿಸಿ ಮೊದಲ ಅವಕಾಶ ಮಾಡಿದವರು ಉಪೇಂದ್ರರೇ ಆದರೂ ವೇಣು ಬಹುಕಾಲದಿಂದ ದೇಸಾಯಿ ಅವರೊಟ್ಟಿಗಿದ್ದ ತರುಣ. ಅವರ ಸ್ನೇಹದ ನಂಟು ಛಾಯಾಗ್ರಹಣಕ್ಕೆ ಎಳೆದಿದ್ದರೆ ಅಚ್ಚರಿಯಿಲ್ಲ. 'ಪ್ರತ್ಯರ್ಥ' ಮೈಸೂರಿನ ಲಲಿತಮಹಲ್‌ನ ಒಳ-ಹೊರ ವಲಯಗಳಲ್ಲಿ ಹೆಚ್ಚಾಗಿ ಚಿತ್ರೀಕರಣಗೊಂಡಿತು. ಒಂದೆರಡು ಸನ್ನಿವೇಶಗಳಲ್ಲಿ 'ನಿಷ್ಕರ್ಷ'ವನ್ನು ನೆನಪಿಗೆ ತಂದರೂ 'ಪ್ರತ್ಯರ್ಥ' ಗಮನ ಸೆಳೆದ, ತಾಂತ್ರಿಕವಾಗಿ ಮೇಲ್ಮಟ್ಟದ ಚಿತ್ರವಾಗಿತ್ತು.

''ಒಂದು ಕಲಾಕೃತಿ ತಂತಾನೇ ಕ್ರಿಯೇಟ್ ಆಗ್ತಾ ಹೋಗೋದು ಒಂದು ವಿಧವಾದರೆ, ಮೊದಲೇ ಒಂದು ಚೌಕಟ್ಟಿನಲ್ಲಿ ಕೂಡಿಸಿ ಎಲ್ಲ ರಾಗ-ಭಾವಗಳನ್ನು ಒಂದು ಲೆಕ್ಕಾಚಾರದಲ್ಲಿ ಜೋಡಿಸುವ ಕ್ರಮ ಇನ್ನೊಂದು. ನಾನು ಈ ಎರಡನ್ನೂ ಬಳಸಿಕೊಳ್ಳುತ್ತೇನೆ. ಅಷ್ಟರ ಮಟ್ಟಿಗೆ ನಾನು 'ರಾಜಿ' ಆಗಿದ್ದೇನೆ. ಒಂದು ವಸ್ತುವಿನ ಮೂಲಕ ಒಂದು ಮೌಲ್ಯದ ಪ್ರತಿಪಾದನೆ ಅಂದುಕೊಂಡಾಗ ನಮಗೆ ಆ ಮೌಲ್ಯಗಳನ್ನು ತಿಳಿದುಕೊಳ್ಳುವುದೇ ಮುಖ್ಯ. ಮತ್ತು ಅದಕ್ಕಾಗಿ ಈಗಾಗಲೇ ಬಳಕೆ ಆಗಿರುವ ವಿಧಾನವನ್ನು ಬಿಟ್ಟು ಹೊಸ ರೀತಿಯಲ್ಲಿ ಹೇಳುವ ಪ್ರಯತ್ನ ಮಾಡ್ತೀನಿ. ಈ ಹೊಸ ರೀತಿಗಳ ಹುಡುಕಾಟಗಳಲ್ಲಿ ಸ್ವಲ್ಪ ಮಟ್ಟಿಗೆ 'ಮಸಾಲೆ' ಅನ್ನುವಂಥದ್ದನ್ನು ಸಹನೀಯವಾಗುವ ಹಾಗೆ ಬಳಸಿಕೊಂಡಿರಬಹುದು. ಆದರೆ ನಾನು ಹಣ ಗಳಿಕೆಯೇ



(ಚಿತ್ರ ೧೩.೩) 'ಹಬ್ಬ' ಚಿತ್ರದಲ್ಲಿ ಶಶಿಕುಮಾರ್, ಜಯಪ್ರದಾ, ಅಂಬರೀಷ್, ರಾಮ್‌ಕುಮಾರ್, ವಿಷ್ಣುವರ್ಧನ್ ಮತ್ತು ದೇವರಾಜ್



(ಚಿತ್ರ ೧೩೪) 'ಪ್ರತ್ಯರ್ಥ' ಚಿತ್ರದಲ್ಲಿ ರಮೇಶ್ ಮತ್ತು ರಘುವರನ್

ಉದ್ದೇಶವಾಗಿ ಜನರ ಅತೃಪ್ತ ಬಯಕೆಗಳನ್ನು ಉದ್ದೀಪಿಸುವಂಥ ಬ್ಲ್ಯಾಕ್ ಮೈಲರ್ ಆಗಿಲ್ಲ. ಇದಕ್ಕಾಗಿ ರಾಜಿ-ಒಪ್ಪಂದ ಆಗುವಾಗ ಸಂಕೋಚವೂ ಇಲ್ಲ. ನನ್ನದೇ ಆದ ಶೈಲಿ-ಚೌಕಟ್ಟು ರೂಪಿಸಿಕೊಳ್ಳುತ್ತಾ ಇದೀನಿ. ಸರಿ ಅಲ್ಲ ಅನಿಸಿದರೆ ಮತ್ತೆ ಹುಡುಕಾಡ್ತೀನಿ. ಪ್ರೇಕ್ಷಕ ಚಿತ್ರದಲ್ಲಿ ಇಂಥ ಮೌಲ್ಯಗಳ ಚರ್ಚೆ ಆಗಿದೆ ಅಂತ ಗ್ರಹಿಸಿದರೆ ಪ್ರಯತ್ನ ಕೊಂಚವಾದರೂ ಸಾರ್ಥಕವಾಗುವ ಹಾಗೆ..'' ಎನ್ನುತ್ತಾರೆ ನಿರ್ದೇಶಕ ಸುನಿಲ್‌ಕುಮಾರ್ ದೇಸಾಯಿ.

'ನನ್ನಾಸೆಯ ಹೂವೇ' ಚಿತ್ರವನ್ನು ಸದಭಿರುಚಿಯ ನಿರ್ದೇಶಕ-ಸಾಹಸಿ ಚಿನ್ನಗಂಗಪ್ಪ ನಿರ್ದೇಶಿಸಿದರು. ಈ ಮೊದಲೇ ವೈಯುಕ್ತಿಕ ನೆಲೆಯಲ್ಲಿ ಹರಸಾಹಸ ಮಾಡಿ 'ಕರಿಮಲೆಯ ಕಗ್ಗತ್ತಲು' ತೆಗೆದಿದ್ದರು. ಆಗಲೇ ಅವರ ಪ್ರಾಮಾಣಿಕ ಪ್ರಯತ್ನದ ಅರಿವಿತ್ತು. ಜನಪ್ರಿಯ ಚಿತ್ರದಲ್ಲಿ ಸಾಮಾಜಿಕ ಜವಾಬ್ದಾರಿ-ಚಿಂತನೆ ತುಂಬಿಸಲು ಸಾಧ್ಯ ಎಂಬ ನಿಲುವಿನಿಂದ ಅವರು ತೆಗೆದದ್ದು 'ನನ್ನಾಸೆಯ ಹೂವೇ'. ಅವರ ಬಗ್ಗೆ ವಿಶ್ವಾಸವಿಟ್ಟು ಹಣ ತೊಡಗಿಸಿ ನಿರ್ಮಿಸಿದವರು ಡಿ.ಕೃಷ್ಣಕುಮಾರ್. ಚಿನ್ನಗಂಗಪ್ಪನವರ ಅಭಿರುಚಿಯ ನೆಲೆಯೇ ಬೇರೆ. ಅವರು ಚಿತ್ರಕ್ಕೆ ಇಟ್ಟ ಶೀರ್ಷಿಕೆಯೇ ಅದನ್ನು ಹೇಳುತ್ತದೆ. ಒಬ್ಬ ಸರಕಾರಿ ಅಧಿಕಾರಿಯಾಗಿ ಅವರು ಉದ್ಯಮದ ಒಳಗನ್ನೇನು ಬಲ್ಲರು, ಅವರಿಗೆ ತಿಳಿದಿದ್ದೆಲ್ಲ ಇದೊಂದು ಪ್ರಭಾವೀ ಮಾಧ್ಯಮ, ಇದರ ಮೂಲಕ ಏನಾದರೂ ಹೇಳಲು ಸಾಧ್ಯ ಎಂಬುದು. ಆದರೆ ಅವರು ಆಯ್ದದ್ದು ಜಗ್ಗೇಶ್‌ರಂಥ ನಾಯಕನನ್ನು. ಸಹಜವಾಗಿಯೇ ನಾಯಕನಟನ ಸುತ್ತ ಚಿತ್ರನಾಟಕ ಗಿರಕಿ ಹೊಡೆಯಬೇಕಾಯಿತು. ಜಗ್ಗೇಶ್ ಉತ್ತಮ ನಟ. ಈ ಚಿತ್ರದಲ್ಲಿ ಅವರು ಸಂಯಮದಿಂದ, ನಿಜವಾದ ಅಭಿನಯವನ್ನು ತೋರಲು ಪ್ರಯತ್ನಿಸಿದ್ದೂ ಹೌದು. ಆದರೆ ಅವರು ಆಗಲೇ ಕಟ್ಟಿಕೊಂಡಿರುವ ಪ್ರೇಕ್ಷಕರ ಕೋಟೆಯ ಒಳಗೆ ಈ ಮಾದರಿಗೆ ಪ್ರವೇಶವಿಲ್ಲ. ಎಲ್ಲ ಒಳ್ಳೆಯದನ್ನು ತರುವ ಪ್ರಯತ್ನ ಮಾಡಿಯೂ ಚಿತ್ರ ಸೋತಿತು. ಥ್ರಿಲ್ಲರ್‌ಗಳಿಗೇ ಹೆಸರಾದ ಜೆರ್ಕ್ಸ್-ಸ್ಪೀಡ್‌ಗಳನ್ನೇ ಶೈಲಿಯಾಗಿಸಿಕೊಂಡಿದ್ದ ಜೆ.ಜಿ.ಕೃಷ್ಣರ ಛಾಯಾಗ್ರಹಣ, ಚಿನ್ನಗಂಗಪ್ಪನವರ ಸಲುವಾಗಿ ನವಿರಾಗಿ ಕೆಲಸ ಮಾಡಿತ್ತು. ಹಂಸಲೇಖ ಅಪರೂಪದ ಗೀತೆಗಳನ್ನು ಕೊಟ್ಟರು. ಅವು ಜನಪ್ರಿಯ ಗೀತೆಗಳೂ ಆದವು. ಚಿತ್ರ ಎಲ್ಲ ಇದ್ದೂ ಸೊರಗಿತೆಂಬುದು ಈ ಸದ್ಯದ ಚಿತ್ರೋದ್ಯಮದ, ಪ್ರೇಕ್ಷಕರ ಪೂರ್ವನಿರ್ಧಾರಿತ ಆಲೋಚನೆಗಳ ದುರಂತ ಎನ್ನಬೇಕಷ್ಟೆ. ಚಿತ್ರದಲ್ಲಿ ಜಯಂತಿ, ಸಿ.ಆರ್.ಸಿಂಹ, ದೊಡ್ಡಣ್ಣ ಉತ್ತಮವೆನಿಸಿದ್ದರು.

ನಟ ಸಾಯಿಕುಮಾರ್ ಕೆಲವು ವರ್ಷ ಕನ್ನಡ ಚಿತ್ರಗಳಿಂದ ದೂರವಿದ್ದರು. 'ಅಂಡರ್‌ವರ್ಲ್ಡ್' ಅವರ ಎರಡನೇ ಇನ್ನಿಂಗ್ಸ್‌ನ ಮೊದಲ ಚಿತ್ರ. ಸಾಯಿಕುಮಾರ್ ಜೊತೆಗೆ ಅಭಿಜಿತ್, ನಾಜರ್, ಚಾರುಲತಾ, ಶೋಭರಾಜ್ ಅಭಿನಯಿಸಿದರು. ಈ ಚಿತ್ರವನ್ನು ಕೆ.ಮಂಜು ಬಹಳ ನಿರೀಕ್ಷೆಯಿಟ್ಟು ನಿರ್ಮಿಸಿದ್ದರು. ಇದರ ನಿರ್ದೇಶನಕ್ಕಾಗಿ ಮಲಯಾಳಂ ಚಿತ್ರರಂಗದಲ್ಲಿ ಹೆಸರು ಮಾಡಿದ್ದ ಕೆ.ಮಧು ಅವರನ್ನು ಕರೆಸಿ ನಿರ್ದೇಶನದ ಹೊಣೆ ಹೊರಿಸಿದ್ದರು. ಸಂಗೀತಕ್ಕೂ ಅಲ್ಲಿಂದಲೇ ಶ್ಯಾಂ ಅವರನ್ನು ಕರೆಸಿ, ಅವರಿಂದ ಐದು ಹಾಡುಗಳಿಗೆ ರಾಗ ಸಂಯೋಜನೆ ಮಾಡಿಸಿದರು. ವಿ.ಮನೋಹರ್ ಶ್ಯಾಂ ಜೊತೆಗಿದ್ದರು.

'ನಾನೇನೂ ಮಾಡ್ಲಿಲ್ಲ' ಎಂದಿನಂತೆ ದಿನೇಶ್ ಬಾಬು ಚಿಕ್ಕದೊಂದು ಎಳೆ ಹಿಡಿದು ಮಾಡಿಕೊಂಡ ಚಿತ್ರಕಥೆ. ಪೂರ್ತಿಯಾಗಿ ಕಾಮೆಡಿ ಆಫ್ ಎರರ್ಸ್ ಥರದ ನಿರೂಪಣೆಯೇ ಆದರೂ ವೇಶ್ಯಾವೃತ್ತಿಯ ಬಗ್ಗೆ ಅನುಕಂಪ-ಸುಧಾರಣೆಯಂಥದೊಂದು ಎಳೆಯೂ ಸೇರಿಹೋಗಿದೆ. ಒಂದೆರಡು ಶಾಸ್ತ್ರೀಯ ಧಾಟಿಯ ಹಾಡುಗಳನ್ನು ಸೇರಿಸಿರುವ ಕಲ್ಯಾಣ್ ಸಂಗೀತ, ಚಿತ್ರದಿಂದ ಪ್ರತ್ಯೇಕವಾಗಿ ಉಳಿದರೂ ಚೆನ್ನ ಅನ್ನಿಸಿಕೊಂಡಿತು. ಸಾಮಾನ್ಯವಾಗಿ ಎಲ್ಲವನ್ನು ತಾವೇ ನಿರ್ವಹಿಸುವ ದಿನೇಶ್ ಬಾಬು ಈ ಚಿತ್ರಕ್ಕೆ ಪಿ.ಹೆಚ್.ಕೆ.ದಾಸ್ ಛಾಯಾಗ್ರಹಣ ಪಡೆದರು. ಸುಧಾರಾಣಿ, ಶಿಲ್ಪಾ ಗಮನ ಸೆಳೆಯುತ್ತಾರೆ. ದಿನೇಶ್ ಬಾಬು ಅತ್ಯಂತ ಸಮರ್ಥವಾಗಿ ರಾಮಕೃಷ್ಣರ ಪ್ರತಿಭೆಯನ್ನು ದುಡಿಸಿಕೊಳ್ಳುತ್ತಿದ್ದಾರೆಂದರೆ ಅತಿಶಯವೇನಲ್ಲ. ಈ ಚಿತ್ರದಲ್ಲಿ ರಾಮಕೃಷ್ಣ ಮನಸ್ಸನ್ನು ಗೆದ್ದುಬಿಡುತ್ತಾರೆ. ಹಾಗೆಯೇ ಇರುವಷ್ಟೇ ಅವಕಾಶದಲ್ಲಿ ಶಿವರಾಂ ಗಮನ ಸೆಳೆದರು. ಶಿವರಾಂ ಮೊದಲ ಚಿತ್ರಗಳು, ಅಭಿನಯಕ್ಕೆ ಹೋಲಿಸಿದರೆ ಈಗ ಅದೊಂದು ಪಕ್ವ ಫಲದಂತೆ ಪ್ರಿಯವೆನಿಸುತ್ತದೆ. ಭಾವ ತುಂಬಿದ ಮಾತು, ಪೂರಕವಾದ ಚಲನೆ ಅವರಿಗೆ ಒಪ್ಪುತ್ತದೆ. ಅನಂತ್‌ನಾಗ್ ಮಾತ್ರ ಅವರ ಮೊದಲಿನ ಅಭಿನಯದ ಗತ್ತನ್ನು ಬಿಟ್ಟುಕೊಟ್ಟಂತಿತ್ತು. ಅಥವಾ ಅವರಲ್ಲಿ 'ನಾಯಕ'ನ ಛಾರ್ಮ್ ಇಲ್ಲ. ವಯೋಮಾನ ಅರಿತು ಸೂಕ್ತ ಪಾತ್ರ ಹಾಗೂ ಅವರಲ್ಲಿ ತೊಡಗಿ ಅಭಿನಯಿಸುವುದು ವಿಹಿತ ಎಂಬ ಆಕ್ಷೇಪವೂ ಬಂದಿತು.

ಪಿ.ಹೆಚ್.ವಿಶ್ವನಾಥ್ ನಿರ್ದೇಶನದ 'ಅರುಣೋದಯ'. ಸಂದೇಶ್ ನಾಗರಾಜ್ ನಿರ್ಮಿಸಿದ್ದು, ರಮೇಶ್, ವಿಜಯಲಕ್ಷ್ಮಿ, ಶಿಲ್ಪಾ ಮುಖ್ಯ ಪಾತ್ರದಲ್ಲಿದ್ದರು. ಸ್ವತಂತ್ರ ಕಥೆ ಆಧರಿಸಿದ್ದ ಅಚ್ಚುಕಟ್ಟಾದ ಚಿತ್ರ. ಚಿತ್ರದಲ್ಲಿ ವಿಜಯಲಕ್ಷ್ಮಿ ಹುಡುಗಾಟದ ಹುಡುಗಿಯಾಗಿ ನಾಲ್ಕಾರು ಮಕ್ಕಳೊಡನೆ ಕೂಡಿ ನಾಯಕ ರಮೇಶ್‌ರನ್ನು ಸತಾಯಿಸುತ್ತಾ, ಚುಡಾಯಿಸುತ್ತಲೇ ಆತನನ್ನು ತನಗೇ ಅರಿವಿಲ್ಲದಂತೆ ಪ್ರೀತಿಸಲು



(ಚಿತ್ರ ೧೩೫) 'ನನ್ನಾಸೆಯ ಹೂವೇ' ಚಿತ್ರದಲ್ಲಿ ಮೋನಿಕಾ ಬೇಡಿ, ಅವಿನಾಶ್ ಮತ್ತು ಜಗ್ಗೇಶ್



(ಚಿತ್ರ ೧೩೬) 'ನಾನೇನೂ ಮಾಡ್ಲಿಲ್ಲ' ಚಿತ್ರದಲ್ಲಿ ಅನಂತ್‌ನಾಗ್, ಶಿಲ್ಪಾ ಮತ್ತು ಸುಧಾರಾಣಿ

ತೊಡಗುತ್ತಾಳೆ. ಒಂದೇ ಅಪಾರ್ಟ್‌ಮೆಂಟ್‌ನಲ್ಲಿದ್ದ ನಾಯಕ ನಾಯಕಿಯರು ಒಂದಲ್ಲಾ ಒಂದು ಕಾರಣಕ್ಕೆ ಭೇಟಿಯಾಗುತ್ತಾ ಕೊನೆಗೊಮ್ಮೆ ನಾಯಕ ಅವಳನ್ನು ಪ್ರೀತಿಸದಾದಾಗ ವಿಷ ಕುಡಿಯುತ್ತಾಳೆ. ಅದಷ್ಟು ಪ್ರಥಮಾರ್ಧದ ಕಥೆಯಲ್ಲಿ. ಚೆಲ್ಲಾಟದ ಹುಡುಗಿಯಾಗಿ ಕಾಣಿಸಿಕೊಳ್ಳುವ ವಿಜಯಲಕ್ಷ್ಮಿ ಉತ್ತರಾರ್ಧದಲ್ಲಿ ಪ್ರಬುದ್ಧ ಹೆಣ್ಣಿನಂತೆ ಉತ್ತಮ ಅಭಿನಯ ನೀಡಿದ್ದಾರೆ. ರಮೇಶ್ ಮೊದಲ ಪ್ರೇಯಸಿ ಪಾತ್ರದಲ್ಲಿ ಶಿಲ್ಪಾ, ಗೆಳೆಯನ ಪಾತ್ರದಲ್ಲಿ ಶ್ರುತಿಯ ಸೋದರ ಶರಣ್ ನಟಿಸಿದಾರೆ. ಶರಣ್ ಲವಲವಿಕೆಯಿಂದ ನಟಿಸಿ ಪಾತ್ರಕ್ಕೆ ಜೀವ ತುಂಬಿದ್ದಾರೆ. ದೇವಸ್ಥಾನದ ಮುಂದೆ ತೆಂಗಿನಕಾಯಿ ಮಾರುವ ಕುಂಟ ಹುಡುಗಿ ಶಿಲ್ಪರ ಪಾತ್ರಕ್ಕೆ ಮೇಕಪ್ ಸಹಜವಾಗಿತ್ತು. ಹಂಸಲೇಖ ಸಂಗೀತವೆಂದ ಮೇಲೆ ಒಂದೆರಡು ಹಾಡುಗಳು ಚೆನ್ನಾಗಿರಲೇಬೇಕೆಂಬಂತೆ, 'ಓಹೋ... ವಯ್ಯಾರ ಓಹೋ...', 'ಆ ಅರುಣೋದಯ ಚಂದ...' ಹಾಡುಗಳು ಜನಪ್ರಿಯವಾದವು. ಲತಾ ಹಂಸಲೇಖ ಹಾಡಿದ್ದ 'ಆ ಅರುಣೋದಯ ಚಂದ..' ಹಾಡಿನ ಗಾಯನಕ್ಕೆ ೨೦೦೦-೨೦೦೧ನೇ ಸಾಲಿನ ಅತ್ಯುತ್ತಮ ಹಿನ್ನಲೆ ಗಾಯಕಿ ಪ್ರಶಸ್ತಿ ಬಂತು. ಕೃಷ್ಣಕುಮಾರ್ ಛಾಯಾಗ್ರಹಣ ಮನದಲ್ಲುಳಿಯುತ್ತದೆ.

೧೯೯೯ರ ಈ ಕೆಲವು ಚಿತ್ರಗಳನ್ನು ಹೊರತುಪಡಿಸಿದರೆ ಉಳಿದಂತೆ ಹೆಚ್ಚು ಸುದ್ದಿ ಮಾಡಿದ್ದು ನಿರ್ಮಾಪಕ ರಾಕ್‌ಲೈನ್ ವೆಂಕಟೇಶ್ ನಟಿ ಸೌಂದರ್ಯ ಮನೆ ಮುಂದೆ ನಡೆಸಿದ ಧರಣಿ. ಇದಕ್ಕಿಂತ ಹೆಚ್ಚು ಚರ್ಚಾಸ್ಪದವಾದ ಇನ್ನೊಂದು ಪ್ರಕರಣ ರಾಜೇಂದ್ರಸಿಂಗ್ ಬಾಬು ನಿರ್ದೇಶನದ 'ಭಾರತ್ ೨೦೦೦' ಡಬ್ಬಿಂಗ್ ಚಿತ್ರದ್ದು.



(ಚಿತ್ರ ೧೩.೭) 'ಅರುಣೋದಯ' ಚಿತ್ರದಲ್ಲಿ ರಮೇಶ್ ಮತ್ತು ವಿಜಯಲಕ್ಷ್ಮೀ

ನಿರ್ಮಾಪಕರೊಬ್ಬರು ಚಲನಚಿತ್ರ ವಾಣಿಜ್ಯ ಮಂಡಳಿ, ನ್ಯಾಯಾಲಯ, ಕಲಾವಿದರ ಸಂಘ ಇತ್ಯಾದಿ ಉದ್ಯಮದ ಮುಖ್ಯಸಂಸ್ಥೆಗಳನ್ನೆಲ್ಲ ನಿರ್ಲಕ್ಷಿಸಿ, ಕಲಾವಿದೆಯೊಬ್ಬರ ಮನೆಬಾಗಿಲಲ್ಲಿ ನ್ಯಾಯಕ್ಕಾಗಿ ಧರಣಿ ಕುಳಿತ ಪ್ರಸಂಗ ೧೯೯೯ರ ಫೆಬ್ರವರಿ ೨೩ರಂದು ನಡೆಯಿತು. ಇದು 'ನಾನೂ ನನ್ನ ಹೆಂಡ್ತೀರು' ಚಿತ್ರಕ್ಕೆ ಸಂಬಂಧಿಸಿದ ಅಪರೂಪದ ಪ್ರಸಂಗ. ನಿರ್ಮಾಪಕ ರಾಕ್‌ಲೈನ್ ವೆಂಕಟೇಶ್ ''ನಟಿ ಸೌಂದರ್ಯ ಅವರು ಮೇಲಿನ ಚಿತ್ರಕ್ಕೆ ೨೨ ದಿನಗಳ ಡೇಟ್ಸ್ ಕೊಟ್ಟಿದರು. ಮೊದಲ ಮೂರು ದಿನ ಚಿತ್ರೀಕರಣದಲ್ಲಿ ಭಾಗವಹಿಸಿದ ಬಳಿಕ ಮತ್ತೆ ಮೂರು ದಿನ ಗೈರು ಹಾಜರಾದರು. ಮತ್ತೆ ಬಂದು ಎರಡು ದಿನ ಬೆಂಗಳೂರಿನಲ್ಲಿ ಇದ್ದವರು ಕಳೆದ ಮೂರು ದಿನಗಳಿಂದ ಗೈರುಹಾಜರಾಗಿದ್ದಾರೆ. ತಮಗೆ ಕೊಟ್ಟಿದ್ದ ದಿನಾಂಕಗಳನ್ನು ಆಕೆ ರಜನೀಕಾಂತ್ ನಾಯಕತ್ವದ ತಮಿಳು ಚಿತ್ರ 'ಪಡೆಯಪ್ಪನ್'ಗಾಗಿ ಬಳಸಿಕೊಂಡರು'' ಎಂದು ಆರೋಪಿಸಿ ಧರಣಿ ನಡೆಸಿದರು. ಪತ್ರಕರ್ತರಿಗೆ ಮುಂಚಿತವಾಗಿಯೇ ತಿಳಿಸಿ ನಡೆಸಿದ ಈ ಪ್ರತಿಭಟನೆ ಎಷ್ಟು ಯೋಜಿತವಾಗಿತ್ತೆಂದರೆ ಸ್ವಲ್ಪ ಹೊತ್ತಿನಲ್ಲಿಯೇ ಘಟನೆ ನಡೆದ ಸ್ಥಳಕ್ಕೆ ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷ ಕೆ.ಸಿ.ಎನ್.ಚಂದ್ರಶೇಖರ್ ಹಾಜರಾದರು. ನಿರ್ಮಾಪಕರೊಬ್ಬರನ್ನು ಸಮಾಧಾನ ಪಡಿಸಲು ಉದ್ಯಮದ ಮಾತೃಸಂಸ್ಥೆಯೊಂದರ ಅಧ್ಯಕ್ಷರೇ ಖುದ್ದು ಹಾಜರಾದದ್ದು ಅಪರೂಪದ ಪ್ರಸಂಗವಾಗಿತ್ತು. ಕೊನೆಗೆ ವಾಣಿಜ್ಯ ಮಂಡಳಿ ಮಧ್ಯಸ್ಥಿಕೆಯಲ್ಲಿ ಚರ್ಚೆ ನಡೆದು, ದಿನಾಂಕಗಳನ್ನು ಹೊಂದಿಸಿ ರಾಜಿ ಮಾಡಿಸಲಾಯಿತು.

ಡಬ್ಬಿಂಗ್ ಸಂಸ್ಕೃತಿ ಮತ್ತು ಅದರ ಸಾಧಕ-ಬಾಧಕಗಳ ಚರ್ಚೆಗೆ ೪೦ ವರ್ಷಗಳ ನಂತರ ಜೀವ ತಂದುಕೊಟ್ಟು ನಂತರ ತಪ್ಪೊಪ್ಪಿಕೊಂಡವರು ನಿರ್ದೇಶಕ ರಾಜೇಂದ್ರಸಿಂಗ್ ಬಾಬು. ತೆಲುಗಿನ 'ಈ ಟಿವಿ'ಯ ರಾಮೋಜಿರಾವ್‌ರ 'ಭಾರತ್ ೨೦೦೦' ಚಿತ್ರವನ್ನು ನಿರ್ದೇಶಿಸಿ ಬಾಬು ಈ ಬಿರುಗಾಳಿಯನ್ನು ಎಬ್ಬಿಸಿದರು. ಅಸಮಾಧಾನ, ಚರ್ಚೆ, ಖಂಡನೆ, ಸಮರ್ಥನೆ ಇವೆಲ್ಲವೂ ಆಗ ಭುಗಿಲೆದ್ದಿದ್ದವು. ಚಿತ್ರವನ್ನು ತೆಲುಗು, ಕನ್ನಡದಲ್ಲಿ ಏಕಕಾಲಕ್ಕೆ ತಯಾರಿಸಿರುವುದಾಗಿ ಮೊದಲಿಗೆ ಬಾಬು ಹೇಳಿದರು. ಆದರೆ ಅವರ ಮಾತಿಗೆ ಚಿತ್ರದಲ್ಲಿ ಸಮರ್ಥನೆಗಳಿರಲಿಲ್ಲ. ನಾಯಕನಾಗಿ ತೆಲುಗು ಚಿತ್ರರಂಗದ ರಾಜಶೇಖರ್, ನಾಯಕಿಯಾಗಿ ತಮಿಳಿನ ರಂಭಾ, ಉಳಿದಂತೆ ಮನೋರಮಾ, ಎಸ್.ಪಿ.ಬಾಲಸುಬ್ರಹ್ಮಣ್ಯಂ ಮೊದಲಾದವರು ಅಭಿನಯಿಸಿದ್ದರು. ಚಲನಚಿತ್ರವನ್ನು ವೀಕ್ಷಿಸಿದ ವಾಣಿಜ್ಯ ಮಂಡಳಿ ಪದಾಧಿಕಾರಿಗಳು 'ಭಾರತ್ ೨೦೦೦' ಡಬ್ಬಿಂಗ್ ಚಿತ್ರವೆಂಬ ತೀರ್ಮಾನಕ್ಕೆ ಬಂದರು.

ವಾಣಿಜ್ಯ ಮಂಡಳಿ ಸಂಬಂಧಪಟ್ಟ ಚಿತ್ರಕ್ಕೆ ಧ್ವನಿಮುದ್ರಣ ಮಾಡಿದ್ದ ತಂತ್ರಜ್ಞರನ್ನು ಸಮಿತಿಯ ಮುಂದೆ ಕರೆಸಿ ಟ್ರ್ಯಾಕ್‌ನಲ್ಲಿ ಯಾವ ಭಾಷೆ ಇದೆ ಎಂದು ವಿಚಾರಿಸಿದಾಗ, ತೆಲುಗಿನಲ್ಲಿ ಎಂದು ಆತ ಸ್ಪಷ್ಟ ಪಡಿಸಿದ್ದರು. ಚಿತ್ರ ತೆಲುಗಿನಿಂದ ಡಬ್ ಆಗಿದೆ ಎಂದು ತೀರ್ಮಾನಿಸಲಾಯಿತು. ಸಾಮಾನ್ಯವಾಗಿ ಚಿತ್ರಗಳಿಗೆ ಕಂಠದಾನ ಮಾಡುತ್ತಾರೆ. ಅವರೆ ಟ್ರ್ಯಾಕ್‌ನಲ್ಲಿ ಕನ್ನಡ ಮಾತುಗಳಿರುತ್ತವೆ. ಅವರ ತುಟಿ ಚಲನೆ ಆಧರಿಸಿ ಕಂಠದಾನ ಕಲಾವಿದರು ಮಾತಾಡುತ್ತಾರೆ. ಇದು ವಾಡಿಕೆ. ಆದರೆ ಈ ಚಿತ್ರದಲ್ಲಿ ಮೂಲದಲ್ಲೂ ತೆಲುಗೇ ಇತ್ತಾದ್ದರಿಂದ ಏನೂ ಸಬೂಬು ಹೇಳಲು ಆಗಲಿಲ್ಲ. ಚಿತ್ರದಲ್ಲಿ ಅಭಿನಯಿಸಿದ್ದ ಪ್ರೊ। ಜಿ.ಕೆ.ಗೋವಿಂದರಾವ್ ಹೇಳಿಕೆಗಳೂ ಇದನ್ನು ಪುಷ್ಟೀಕರಿಸಿತ್ತು.

ಈ ಸಂದರ್ಭದಲ್ಲಿ ಹಿರಿಯ ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ ನೇತೃತ್ವದಲ್ಲಿ ಕನ್ನಡದ ಮುಖ್ಯ ನಿರ್ದೇಶಕರೆಲ್ಲ ಒಂದಾಗಿ ಸಾರ್ವಜನಿಕರ ಅವಗಾಹನೆಗೆ ಎಂಬಂತೆ ಪತ್ರವೊಂದನ್ನು ಸಿದ್ಧಪಡಿಸಿ ಸಹಿ ಹಾಕಿ, ಪತ್ರಿಕೆಗಳಿಗೆ ಬಿಡುಗಡೆ ಮಾಡಿದರು. ಪತ್ರದ ಮುಖ್ಯ ಭಾಗ - ''...ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಹಾಗೂ ಇತರೆ ಅಂಗಸಂಸ್ಥೆಗಳು ಈ ಚಿತ್ರವನ್ನು ಪರಿಶೀಲಿಸಿದ ನಂತರ ಇದು ಮೂಲ ಕನ್ನಡ ಚಿತ್ರ ಅಲ್ಲವೆಂದೂ, ಕೇವಲ ಕಂಠದಾನ ಪಡೆದ ಬೇರೆ ಭಾಷೆಯ ಚಿತ್ರವೆಂದು ಖಾತ್ರಿಪಡಿಸಿರುವುದು ಇದಕ್ಕೆ ಕಾರಣ. ಕನ್ನಡದ ಹಿತಕ್ಕೆ ವಿರುದ್ಧವಾದ ಡಬ್ಬಿಂಗ್ ಮತ್ತು ರೀಮೇಕ್ ಪರಂಪರೆಯನ್ನು ಹಲವಾರು ವೇದಿಕೆಗಳಲ್ಲಿ ವಿರೋಧಿಸುತ್ತಲೇ ಬಂದಿರುವ ಬಾಬು ಅವರು ಇದೀಗ ತಾವೇ ಚಿತ್ರರಂಗದ ಅಂಗೀಕೃತ ನೀತಿಗಳನ್ನು ಉಲ್ಲಂಘಿಸಿ, ಸರ್ಕಾರದ ಕಣ್ಣಿಗೂ ಮಣ್ಣೆರಚಿದ್ದು ಖಂಡನೀಯ. ಇಂಥದೊಂದು ಹೊಣೆಗೇಡಿ ವರ್ತನೆ ಕನ್ನಡದಲ್ಲಿ ಮತ್ತೊಮ್ಮೆ ಡಬ್ಬಿಂಗ್ ಚಿತ್ರಗಳನ್ನು ಹಿಂಬಾಗಿಲಿನಿಂದ ಒಳ ತರುವ ಪರಂಪರೆಯನ್ನೇ ಸೃಷ್ಟಿಸಬಹುದೆಂಬ ಆತಂಕದಿಂದಾಗಿ, ನಮ್ಮ ಒಕ್ಕೊರಲಿನ ವಿರೋಧ ವ್ಯಕ್ತಪಡಿಸುತ್ತಿದ್ದೇವೆ'' ಎಂದಿದೆ.

ಕನ್ನಡದ ನಿರ್ದೇಶಕ ಸಮುದಾಯವೇ ನಿರ್ದೇಶಕರೊಬ್ಬರ ವಿರುದ್ಧ ಮಾತನಾಡಿದ ಪ್ರಥಮ ಪ್ರಸಂಗ ಇದಾಯಿತು. ಈ ಪತ್ರಕ್ಕೆ ಜಾನಕಿರಾಂ, ಗಿರೀಶ್ ಕಾಸರವಳ್ಳಿ, ಟಿ.ಎಸ್.ನಾಗಾಭರಣ, ಎಂ.ಎಸ್.ರಾಜಶೇಖರ್, ಪ್ರೇಮಾ ಕಾರಂತ್, ಹಂಸಲೇಖ, ಸುನೀಲ್ ಕುಮಾರ್ ದೇಸಾಯಿ, ಎಸ್.ನಾರಾಯಣ್, ಜೋ ಸೈಮನ್, ಪಿ.ಹೆಚ್.ವಿಶ್ವನಾಥ್, ಫಣಿ ರಾಮಚಂದ್ರ, ವಿ.ಮನೋಹರ್, ಶಿವಮಣಿ, ಎನ್.ಎಸ್.ಶಂಕರ್ ಸಹಿ ಹಾಕಿದ್ದರು. ಕರ್ನಾಟಕ ಚಲನಚಿತ್ರ ಕಾರ್ಮಿಕರ ಒಕ್ಕೂಟ ರಾಜೇಂದ್ರಸಿಂಗ್ ಬಾಬು ಅವರಿಗೆ ಬಹಿಷ್ಕಾರ ಹಾಕಿತು. ವಿವಾದದ ಕಾವು ದಿನದಿಂದ ದಿನಕ್ಕೆ ಉಲ್ಬಣಿಸಿದಾಗ ತಪ್ಪಿನ ನೈತಿಕ ಹೊಣೆ ಹೊತ್ತು ನಿರ್ದೇಶಕರ ಸಂಘದ ಅಧ್ಯಕ್ಷ ಸ್ಥಾನಕ್ಕೆ ಬಾಬು ರಾಜಿನಾಮೆ ಕೊಡುವುದು ಅನಿವಾರ್ಯವಾಯಿತು. ಈ ಸಂದರ್ಭದಲ್ಲಿ ಅವರು ತಮ್ಮ ಕೃತಿ ಹಾಗೂ ಕೃತ್ಯದ ಬಗ್ಗೆ ಹೀಗೆ ಹೇಳಿದರು :

'ಭಾರತ್ ೨೦೦೦' ಚಿತ್ರದ ಶೇಕಡಾ ೪೦ ರಷ್ಟು ಭಾಗವನ್ನು ಬೆಂಗಳೂರಿನಲ್ಲಿಯೇ ಚಿತ್ರಿಸಿದ್ದೇನೆ. ಹಾಗೂ ಕರ್ನಾಟಕ ಸರ್ಕಾರದ ಎಲ್ಲ ರೀತಿಯ ಅನುಮತಿಯನ್ನು ಪಡೆದುಕೊಂಡೇ ಹೈದರಾಬಾದಿನ ರಾಮೋಜಿರಾವ್ ಸ್ಟುಡಿಯೋಗೆ ಹೋದೆ. ಕನ್ನಡದ ಅನೇಕ ತಂತ್ರಜ್ಞರೂ, ಕಲಾವಿದರೂ ಚಿತ್ರದಲ್ಲಿದ್ದಾರೆ. ಸಂಗೀತ ನಿರ್ದೇಶಕರು, ಹಾಡು ಬರೆದವರೂ, ಸಂಕಲನಕಾರರೂ ಕನ್ನಡದವರು. ಹಾಗೂ ರಾಜ್ಯದ ನೀತಿಯ ಪ್ರಕಾರ ಶೇಕಡಾ ೫೦ ಭಾಗವನ್ನು ಹೊರಗ ಚಿತ್ರಿಸುವುದಕ್ಕೆ ಅನುಮತಿ ಇದ್ದೇ ಇದೆ. ನಾನು ಮಾಡಿದ ಒಂದೇ ಒಂದು ತಪ್ಪು ಎಂದರೆ ಸಿಂಗಲ್ ನೆಗೆಟಿವ್ ಮಾಡಿದ್ದು. ಇನ್ನೊಂದು ನೆಗೆಟಿವ್ ಮಾಡಬೇಕೆನ್ನುವುದು ನನಗೂ ಗೊತ್ತಿರಲಿಲ್ಲ. ಗ್ರಾಫಿಕ್ ತಂತ್ರಜ್ಞಾನವುಳ್ಳ



(ಚಿತ್ರ ೧೩೮) ಕಾರ್ಗಿಲ್ ನಿಧಿ ಸಂಗ್ರಹಕ್ಕಾಗಿ ನಡೆದ ತಾರಾ ಸಮಾರಂಭದಲ್ಲಿ ರಾಜಕುಮಾರ್

ಚಿತ್ರವಾದ್ದರಿಂದ ಆಗಲೇ ನಾಲ್ಕೈದು ನೆಗೆಟಿವ್ ಮಾಡಿದ್ದೇವು. ಮತ್ತೊಂದು ನೆಗೆಟಿವ್ ಮಾಡುವ ಶ್ರಮ ನಮಗೆ ಬೇಕಿರಲಿಲ್ಲ. ಅದರ ಅಗತ್ಯವೂ ಕಂಡುಬರಲಿಲ್ಲ. ಒಂದು ವೇಳೆ 'ಭಾರತ್ ೨೦೦೦' ಡಬ್ಬಿಂಗ್ ಚಿತ್ರ ಅಂತಲೇ ಇಟ್ಟುಕೊಂಡರೂ ಅದು ಉದ್ದೇಶಪೂರ್ವಕ ಅಪರಾಧವಲ್ಲ, 'ಅಜ್ಞಾತೆಯಿಂದಾದ ಪ್ರಮಾದ' ಅನ್ನುವುದನ್ನು ಗಮನಿಸಬೇಕಾಗಿತ್ತು. ನನ್ನ ಹಿಂದಿನ ಸಾಧನೆಗಳನ್ನು, ಧ್ಯೇಯೋದ್ದೇಶಗಳನ್ನು ಗಮನಿಸಬೇಕಾಗಿತ್ತು.''

ವಿಷಾದದಿಂದ ಕೂಡಿದ ಈ ಮಾತುಗಳನ್ನು ಆಡಿ ಬಾಬು ಕ್ಷಮೆ ಯಾಚಿಸಿದರು. ವಿವಾದ ಉಂಟಾದ ಆರಂಭದ ದಿನಗಳಲ್ಲೇ ನಿರಾಕರಿಸದೆ ತಡವಾಗಿ ಸ್ಪಂದಿಸಿದ್ದು ಹಾಗೂ ನಿರ್ದೇಶಕರ ಸಂಘದ ಅಧ್ಯಕ್ಷ ಸ್ಥಾನಕ್ಕೆ ರಾಜಿನಾಮೆ ಕೊಟ್ಟಿದ್ದು ಆಗಿರುವ ತಪ್ಪನ್ನು ಸಮರ್ಥಿಸಿದವು. ಬಾಬು ತಪ್ಪೊಪ್ಪಿಕೆಯೊಂದಿಗೆ ಪ್ರಕರಣ ಮುಕ್ತಾಯ ಕಂಡಿತು. ೧೯೯೯ರ ಅಕ್ಟೋಬರ್-ನವೆಂಬರ್ ತಿಂಗಳಿನಲ್ಲಿ ಹೆಚ್ಚು ಚರ್ಚೆಗೊಳಗಾದ ಈ ಪ್ರಕರಣದೊಂದಿಗೆ ಐತಿಹಾಸಿಕ 'ಕಾರ್ಗಿಲ್ ಯುದ್ಧ', ಒರಿಸ್ಸಾದ ಭೀಕರ ಚಂಡಮಾರುತ ಕೂಡ ಇನ್ನೊಂದು ಬಗೆಯ ಚಟುವಟಿಕೆಗಳಿಗೆ ಕಾರಣವಾಗಿತ್ತು.

೧೯೯೯ರ ಜುಲೈನಲ್ಲಿ ದೇಶದಾದ್ಯಂತ ದೇಶಪ್ರೇಮದ ಅಲೆ ಉಂಟಾಯಿತು. ಎಲ್ಲರಲ್ಲಿ ಏಕತೆ, ಒಗ್ಗಟ್ಟು, ಭ್ರಾತೃಪ್ರೇಮದ ಸೆಳಕು ಕಾಣಿಸಿಕೊಂಡಿತು. ಪಾಕಿಸ್ತಾನ ತಾನಾಗಿ ಕಾರ್ಗಿಲ್ ಗಡಿ ಪ್ರದೇಶದಲ್ಲಿ ಆರಂಭಿಸಿದ ಅಘೋಷಿತ ಯುದ್ಧ ನಂತರ ಘೋಷಿತ ಸಮರವಾಗಿ ಇಡೀ ಜಗತ್ತಿನ ಗಮನ ಸೆಳೆಯಿತು. ಯುದ್ಧ ಹಾಗೂ ಯುದ್ಧ ಸಂತ್ರಸ್ತರಿಗೆ ದೇಶದ ಪ್ರತಿ ಮೂಲೆಯಿಂದ ಸಹಾಯ, ನೆರವು ಧಾವಿಸಿದ್ದಲ್ಲದೆ, ನಮ್ಮ ಸೈನಿಕರ ನೈತಿಕ ಶಕ್ತಿಯನ್ನು ಹೆಚ್ಚಿಸುವ ಚಟುವಟಿಕೆಗಳು ನಡೆದವು. ಹಿಂದಿ ಚಿತ್ರರಂಗ ಸೇರಿದಂತೆ ದೇಶದ ಇತರ ಭಾಷಾ ಚಿತ್ರರಂಗಗಳು ನಾನಾ ರೀತಿಯಲ್ಲಿ ತಮ್ಮ ಕೊಡುಗೆಗಳನ್ನು ದೇಶಕ್ಕೆ ಸಮರ್ಪಿಸಿದವು. ಈ ಸಂದರ್ಭದಲ್ಲಿ ಕನ್ನಡ ಚಿತ್ರರಂಗ ಹಿಂದೆ ಬೀಳಲಿಲ್ಲ.

ರಾಜಕುಮಾರ್ ವೈಯಕ್ತಿಕ ಕೊಡುಗೆಯಾಗಿ ಐದು ಲಕ್ಷ ರೂಪಾಯಿಗಳನ್ನು ನೀಡಿದ್ದಲ್ಲದೆ 'ಶಬ್ದವೇಧಿ' ಚಿತ್ರದಲ್ಲಿ ತಾವು ಹಾಡಿದ ಆರು ಹಾಡುಗಳಿಂದ (ತಲಾ ೨೫ ಸಾವಿರ) ಬಂದ ಒಂದೂವರೆ ಲಕ್ಷ ರೂಪಾಯಿಗಳನ್ನು ಕಾರ್ಗಿಲ್ ನಿಧಿಗೆ ಅರ್ಪಿಸಿದರು. ವಿಷ್ಣುವರ್ಧನ್ ಎರಡು ಲಕ್ಷ ರೂಪಾಯಿ, ರಮೇಶ್, ಉಪೇಂದ್ರ, ಸೌಂದರ್ಯ ತಲಾ ಒಂದೊಂದು ಲಕ್ಷ ರೂಪಾಯಿ ನಿಧಿಗೆ ಸೇರಿಸಿದರು. 'ಸೂರ್ಯವಂಶ' ಚಿತ್ರದ ಒಂದು ದಿನದ ಗಳಿಕೆಯನ್ನು ಹೆಚ್.ಡಿ.ಕುಮಾರಸ್ವಾಮಿ ಕೊಟ್ಟರು. ಬಿ.ಜಯಶ್ರೀದೇವಿ 'ಸ್ವಪ್ನ' ಮಿನಿ ಚಿತ್ರಮಂದಿರದಲ್ಲಿ ಪ್ರದರ್ಶನವಾಗುತ್ತಿದ್ದ 'ಹಬ್ಬ' ಚಿತ್ರದ ೨೫ ದಿನಗಳ ಗಳಿಕೆಯನ್ನು ಕಾರ್ಗಿಲ್ ಯೋಧರಿಗೆ ನೀಡುವುದಾಗಿ ಪ್ರಕಟಿಸಿದರು. 'ಉಪೇಂದ್ರ' ಚಿತ್ರದ ಒಂದು ದಿನದ ಗಳಿಕೆಯನ್ನು ನೀಡುವುದಾಗಿ ಅದರ ನಿರ್ಮಾಪಕರು ಪ್ರಕಟಿಸಿದರು. ಜಗ್ಗೇಶ್ ಅಭಿಮಾನಿಗಳ ಸಂಘ ಕಾರ್ಗಿಲ್ ಯುದ್ಧದಲ್ಲಿ ಮಡಿದ ೧೪ ಮಂದಿ ಯೋಧರ ಕುಟುಂಬಗಳಿಗೆ ಸಮಾರಂಭ ಏರ್ಪಡಿಸಿ ತಲಾ ಹತ್ತು ಸಾವಿರ ರೂಪಾಯಿಗಳನ್ನು ಹಂಚಿತು. ಜುಲೈ ೩೧ ರಂದು ಬೃಹತ್ ತಾರಾ ಸಮಾರಂಭ ಕಾರ್ಯಕ್ರಮ ಏರ್ಪಡಿಸಿ ಹಣ ಸಂಗ್ರಹಿಸಲಾಯಿತು.

ಕಾರ್ಗಿಲ್ ಸಂತ್ರಸ್ತರಿಗೆ ನಿಧಿ ಸಂಗ್ರಹಿಸುವ ಚಟುವಟಿಕೆಗಳಲ್ಲಿ ವಿಳಂಬ ನೀತಿಯನ್ನು ಅನುಸರಿಸಿದ್ದ ವಾಣಿಜ್ಯ ಮಂಡಳಿ ೧೯೯೯ರ ಅಕ್ಟೋಬರ್‌ನಲ್ಲಿ ಒರಿಸ್ಸಾದಲ್ಲಿ ಸಂಭವಿಸಿದ ಭೀಕರ ಚಂಡಮಾರುತದಿಂದ ಸಂತ್ರಸ್ತರಾದವರ ವಿಷಯದಲ್ಲಿ ಚುರುಕಾಗಿ ಸ್ಪಂದಿಸಿತು. ೧೯೯೯ರ ನವೆಂಬರ್ ೧೩ ರಂದು ರಾಜಕುಮಾರ್ ನೇತೃತ್ವದಲ್ಲಿ ಮಂಡಳಿ ಏರ್ಪಡಿಸಿದ್ದ ನಿಧಿ ಸಂಗ್ರಹಣಾ ಪಾದಯಾತ್ರೆಯಲ್ಲಿ ಚಿತ್ರರಂಗದ ಬಹುತೇಕ ಗಣ್ಯರು ಪಾಲ್ಗೊಂಡಿದ್ದರು. ಬೆಂಗಳೂರಿನ ಮೈಸೂರು ಬ್ಯಾಂಕ್ ವೃತ್ತದಿಂದ ಆರಂಭವಾದ ದೇಣಿಗೆ ಸಂಗ್ರಹಣೆ ಚಿಕ್ಕಪೇಟೆ, ಬಳೇಪೇಟೆ, ನಗರ್ತ ಪೇಟೆ, ಜುಮ್ಮಾ ಮಸೀದಿ ರಸ್ತೆ, ಬಿ.ವಿ.ಕೆ.ಅಯ್ಯಂಗಾರ್ ರಸ್ತೆಗಳಲ್ಲಿ ನಡೆಯಿತು. ಅಂಬರೀಷ್, ಜೈ ಜಗದೀಶ್, ಶಿವರಾಜ್ ಕುಮಾರ್, ದೇವರಾಜ್, ರಾಕ್‌ಲೈನ್ ವೆಂಕಟೇಶ್ ಭಾಗವಹಿಸಿದ್ದ ಪಾದಯಾತ್ರೆಯಲ್ಲಿ ಸಂಜೆ ವೇಳೆಗೆ ೨.೫೦ ಲಕ್ಷ ರೂಪಾಯಿ ಸಂಗ್ರಹವಾಯಿತು. ಕನ್ನಡ ಚಲನಚಿತ್ರ ಉದ್ಯಮ ಹೀಗೆ ಪ್ರತ್ಯಕ್ಷವಾಗಿ ರಾಷ್ಟ್ರದ ಹಲವಾರು ದುರಂತ ಘಟನೆಗಳಿಗೆ ಸ್ಪಂದಿಸುವ ಸತ್‌ಸಂಪ್ರದಾಯವನ್ನು ನಿರಂತರವಾಗಿ ಪಾಲಿಸಿಕೊಂಡು ಬಂದಿತು.

೧೯೯೯ ರಲ್ಲಿನ ಇವೆರಡೂ ಚಿತ್ರೇತರ ಚಟುವಟಿಕೆಗಳು ಸೇರಿದಂತೆ ಒಟ್ಟಾರೆ ಈ ದಶಕದಲ್ಲಿ ರಾಜಕುಮಾರ್‌ರವರು ಸಾರ್ವಜನಿಕವೆನ್ನಬಹುದಾದ ಇಂಥ ಸುಮಾರು ಹತ್ತು ಬಹಿರಂಗ ಕಾರ್ಯಕ್ರಮಗಳಲ್ಲಿ ಕಾಣಿಸಿಕೊಂಡರು. ಈ ದಶಕದಲ್ಲಿ ಅವರು ಅಭಿನಯಿಸಿದ್ದು ಕೇವಲ ನಾಲ್ಕೇ ಚಿತ್ರಗಳಲ್ಲಿ. ಆದರೂ ಗಾಯಕರಾಗಿ, ಸಮೂಹ ಕಾರ್ಯಕ್ರಮಗಳ ಕೇಂದ್ರಬಿಂದುವಾಗಿ ಸದಾ ಸುದ್ದಿಯಲ್ಲಿದ್ದರು. ೧೯೯೪ ರಲ್ಲಿ ಅಂಬರೀಷ್ ಅವರೊಂದಿಗೆ ಅಭಿನಯಿಸಿದ 'ಒಡ ಹುಟ್ಟಿದವರು' ಚಿತ್ರದ ನಂತರ ಐದು ವರ್ಷ ಕಾಲ ಚಿತ್ರಗಳಲ್ಲಿ ಅಭಿನಯಿಸಲಿಲ್ಲವಾದರೂ ೧೯೯೨ರ ನವೆಂಬರ್‌ನಲ್ಲಿ 'ಕರ್ನಾಟಕ ರತ್ನ', ೧೯೯೮ ರಲ್ಲಿ ರಾಷ್ಟ್ರದ ಪ್ರತಿಷ್ಠಿತ ಚಲನಚಿತ್ರ ಪ್ರಶಸ್ತಿಯಾದ 'ದಾದಾ ಸಾಹೆಬ್ ಫಾಲ್ಕೆ' ಪಡೆದದ್ದು, ೧೯೯೬ ರಲ್ಲಿ ಬೆಂಗಳೂರಿನ ಕೆಂಪೇಗೌಡ ರಸ್ತೆಯ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳಿಗೆ ಅಸಡ್ಡೆ ಮಾಡಿದಾಗ ಇಡೀ ಕನ್ನಡ ಚಿತ್ರೋದ್ಯಮ




(ಚಿತ್ರ ೧೩೯) ಒರಿಸ್ಸಾದಲ್ಲಿ ಚಂಡಮಾರುತದಿಂದ ಸಂತ್ರಸ್ತರಾದವರ ಪರಿಹಾರಕ್ಕಾಗಿ ಡಾ|| ರಾಜಕುಮಾರ್ ನೇತೃತ್ವದಲ್ಲಿ ಚಲನಚಿತ್ರ ವಾಣಿಜ್ಯ ಮಂಡಳಿ ಆಯೋಜಿಸಿದ ನಿಧಿ ಸಂಗ್ರಹ ಯಾತ್ರೆ



(ಚಿತ್ರ ೧೪೦) 'ಪ್ರೀತ್ಸೇ' ಚಿತ್ರದಲ್ಲಿ ಸೊನಾಲಿಬೇಂದ್ರ ಮತ್ತು ಶಿವರಾಜ್ ಕುಮಾರ್

ಹೊರಡಿಸಿದ ಜಾಥಾದ ನೇತೃತ್ವ ವಹಿಸಿದ್ದದ್ದು - ಇವೆಲ್ಲ ಅವರನ್ನು ದಿನೇ ದಿನೇ ಉದ್ಯಮದ 'ಅನಿವಾರ್ಯ ಅಂಗ'ವೆಂದು ಭಾವಿಸಲು ಕಾರಣಗಳಾಗಿತ್ತು. ಇದರೊಂದಿಗೆ ಅವರ ಸಹಸ್ರಾರು ಅಭಿಮಾನಿಗಳಿಂದ ಅವರು ಮತ್ತೆ ಚಿತ್ರಗಳಲ್ಲಿ ಅಭಿನಯಿಸಬೇಕೆಂಬ ಒತ್ತಾಯ ತೀವ್ರವಾಗತೊಡಗಿತ್ತು. ವಿಜಯ ಸಾಸನೂರು ಅವರ ಕಾದಂಬರಿ 'ಶಬ್ದವೇಧಿ' ಅಥವಾ 'ಭಕ್ತ ಅಂಬರೀಷ' - ಇವೆರಡರಲ್ಲಿ ಯಾವುದನ್ನು ಮೊದಲು ನಿರ್ಮಿಸಬೇಕೆಂಬ ಬಗ್ಗೆ ಸಂಸ್ಥೆಯಲ್ಲಿ ಗೊಂದಲವಿತ್ತೇನೋ. ಏಕೆಂದರೆ 'ಶಬ್ದವೇಧಿ' ಚಿತ್ರದ ಚಟುವಟಿಕೆಗಳು ಅವರ ಇತರ ಚಿತ್ರಗಳ ಕೆಲಸಗಳಂತೆ ನಿರಾತಂಕವಾಗಿ ನಡೆಯಲಿಲ್ಲ. 'ಶಬ್ದವೇಧಿ' ಚಿತ್ರವನ್ನೇ ಮೊದಲು ನಿರ್ಮಿಸುವ ತೀರ್ಮಾನ ಕೈಗೊಂಡು ಅದರ ಹಾಡುಗಳ ಮೊದಲ ಧ್ವನಿಮುದ್ರಣ ಮಾಡಿದ್ದು ೧೯೯೪ರ ಏಪ್ರಿಲ್ ತಿಂಗಳಲ್ಲಿ. ಇದನ್ನು ಕೈಬಿಟ್ಟು ಐದು ವರ್ಷಗಳ ನಂತರ ಮತ್ತೆ ಹೊಸದಾಗಿ ಜೂನ್‌ನಲ್ಲಿ ಗೀತೆಗಳನ್ನು ಧ್ವನಿಮುದ್ರಿಸಲಾಯಿತು. ಈ ಚಿತ್ರದ ಚಿತ್ರೀಕರಣ ಕಂಠೀರವ ಸ್ಟುಡಿಯೋದಲ್ಲಿ ಆರಂಭವಾದ ದಿನ ವಿಪರೀತ ಸಡಗರವಿತ್ತು. ಏಕೆಂದರೆ ಅದೇ ದಿನ ಅಲ್ಲಿಯೇ ಅವರ ಪುತ್ರ ಶಿವರಾಜ್ ಕುಮಾರ್ ಅವರ 'ಇಂದ್ರಧನುಷ್', 'ಪ್ರೀತ್ಸೇ' ಚಿತ್ರಗಳೊಂದಿಗೆ ರವಿಚಂದ್ರನ್ ಅವರ 'ಚೋರ ಚಿತ್ತ ಚೋರ' ಚಿತ್ರಗಳ ಮುಹೂರ್ತ ನಡೆಯಿತು. ರಾಜಕುಮಾರ್ ಅವರು ತಮ್ಮ ಚಿತ್ರದೊಂದಿಗೆ ಇತರ ಮೂರೂ ಮುಹೂರ್ತಗಳಲ್ಲಿ ಭಾಗವಹಿಸುತ್ತ ಒಂದು ಅಪರೂಪದ ಸಡಗರಕ್ಕೆ ಕಾರಣರಾದರು.

ಈ ದಶಕದ ಕೊನೆಯ ವರ್ಷ ೨೦೦೦ದಲ್ಲಿ ಬಿಡುಗಡೆಯಾದ ಒಟ್ಟು ಚಿತ್ರಗಳ ಸಂಖ್ಯೆ ೫೮. ಈ ವರ್ಷ ಬಿಡುಗಡೆ ಕಂಡ ಮೊದಲ ಚಿತ್ರ 'ಯಾರೇ ನೀ ಅಭಿಮಾನಿ'. ಈ ಚಿತ್ರವು 'ಯಾರೇ ನೀನು ಚೆಲುವೆ'ಯಂತೆ ಒಂದು ಪುನರವತರಣಿಕೆ. ಎರಡಕ್ಕೂ ಸಾಮ್ಯವಿದೆ. ಇವೆರಡೂ ಚಿತ್ರಗಳ ನಿರ್ದೇಶಕರು ಡಿ.ರಾಜೇಂದ್ರಬಾಬು. ಹಾಗೂ ಚಿತ್ರದ ನಾಯಕಿಯರಲ್ಲಿ ಒಬ್ಬರು ಸಂಗೀತ. ಶೀರ್ಷಿಕೆ ಗೀತೆಯೊಂದು ಚೆನ್ನಾಗಿತ್ತು. ಶಿವರಾಜ್ ಕುಮಾರ್, ಸಂಗೀತ, ರಮ್ಯಕೃಷ್ಣ ಅಭಿನಯಿಸಿದ್ದರು. ಪಿ.ಲಕ್ಷ್ಮಣ್, ಪ್ರಮೋದ್ ಕುಮಾರ್ ನಿರ್ಮಿಸಿದ್ದರು.

ಹಿಂದಿಯಲ್ಲಿ ಬಹಳ ಯಶಸ್ವಿಯಾಗಿ ಪ್ರದರ್ಶಿತವಾದ 'ಡರ್' ಚಿತ್ರದ ಕನ್ನಡ ಅವತರಣಿಕೆಯೇ 'ಪ್ರೀತ್ಸೇ'. ಮೊದಲಿಗೆ ಈ ಚಿತ್ರವನ್ನು ಸುನಿಲ್ ಕುಮಾರ್ ದೇಸಾಯಿ ನಿರ್ದೇಶಿಸುತ್ತಾರೆಂದು ಗೊತ್ತಾಯಿತು. ಅವರೂ ಒಪ್ಪಿದರು. ನಂತರ ರೀಮೇಕ್ ಚಿತ್ರವೊಂದನ್ನು ದೇಸಾಯಿಯವರು ನಿರ್ದೇಶಿಸಬಾರದೆಂಬ ಸ್ನೇಹಿತರ, ಹಿತೈಷಿಗಳ ಹಾಗೂ ಅಭಿಮಾನಿಗಳ ಒತ್ತಾಯಕ್ಕ ಮಣಿದು ತಮ್ಮ ನಿರ್ಧಾರವನ್ನು ಬದಲಿಸಿಕೊಂಡ ಮೇಲೆ ಡಿ.ರಾಜೇಂದ್ರಬಾಬು ನಿರ್ದೇಶಕರಾಗಿ ಆಯ್ಕೆಯಾದರು. ಚಿತ್ರಕ್ಕೆ ಹೆಸರಿಡುವಾಗಲೂ ಅನೇಕ ಗೊಂದಲಗಳಾಗಿ 'ಪ್ರೀತ್ಸೇ' ಎಂದಾಗ ಅದು ಬಲವಂತ ಮಾಡಿದಂತೆ ಇರುತ್ತದೆಂದೂ; ಜೊತೆಗೆ ಚಿತ್ರದ ಕಥೆಗೂ ಹೊಂದಿಕೆಯಾಗುತ್ತದೆಂದೂ ಆ ಹೆಸರನ್ನೇ ಅಂತಿಮವಾಗಿ ಇಡಲಾಯಿತು. ರಾಕ್‌ಲೈನ್ ವೆಂಕಟೇಶ್ ಚಿತ್ರವನ್ನು ನಿರ್ಮಿಸಿದರು. ಪ್ರಥಮವಾಗಿ ಉಪೇಂದ್ರ ತಮ್ಮ ಅಭಿನಯದ ಎರಡು ಚಿತ್ರಗಳು ಗೆದ್ದನಂತರ ದ್ವಿತೀಯ ನಾಯಕನಾಗಿ ಶಿವರಾಜ್ ಕುಮಾರ್‌ರೊಂದಿಗೆ ಈ ಚಿತ್ರದಲ್ಲಿ ಕಾಣಿಸಿಕೊಂಡರು. ಹಿಂದಿಯಲ್ಲಿ ಶಾರೂಖ್ ಖಾನ್ ಮಾಡಿದ ಪಾತ್ರ ಇಲ್ಲಿ ಉಪೇಂದ್ರ ಮಾಡಿದರು. ಶಿವರಾಜ್ ಕುಮಾರ್ ಮತ್ತು ಉಪೇಂದ್ರ ಇಬ್ಬರ ಇಮೇಜ್‌ಗೂ ಧಕ್ಕೆ ಬಾರದಂತೆ ಕೆಲವು ದೃಶ್ಯಗಳನ್ನು ಮೂಲಕ್ಕಿಂತ ಭಿನ್ನವಾಗಿ ತೆಗೆಯಲಾಗಿತ್ತು. ಹಿಂದಿಯ ಬಡಗಿ ಸೊನಾಲಿ ಬೇಂದ್ರೆ ಈ ಚಿತ್ರದಲ್ಲಿ ನಾಯಕಿಯಾಗಿದ್ದರು. ಹಂಸಲೇಖ ಸಂಗೀತದಲ್ಲಿ ಹಾಡುಗಳನ್ನು ಆಸ್ಟ್ರೇಲಿಯಾದ ಸುಂದರ ತಾಣಗಳಲ್ಲಿ ಚಿತ್ರಿಸಲಾಗಿತ್ತು. ಟ್ರ್ಯಾಕ್ ಸಿಂಗರ್ ಹೇಮಂತ್‌ಕುಮಾರ್ 'ಪ್ರೀತ್ಸೇ... ಪ್ರೀತ್ಸೇ...' ಹಾಡನ್ನು ಹಾಡುವ ಮೂಲಕ ನೇರ ಗಾಯಕರಾದರು. ಇದೇ ಹಾಡಿಗೆ ಮೊದಲು ಉದಿತ್ ನಾರಾಯಣ್ ಕಂಠ ಜೋಡಿಸಲಾಗಿದ್ದು, ನಿರ್ಮಾಪಕ ರಾಕ್‌ಲೈನ್ ವೆಂಕಟೇಶ್‌ಗೆ ಅವರ ಹಾಡು ಹಿತವೆನಿಸಲಿಲ್ಲ. ಟ್ರ್ಯಾಕ್ ಹಾಡಿದ ಹೇಮಂತ್ ಧ್ವನಿಯೇ ಚೆನ್ನಾಗಿದೆಯೆಂದು ಅದನ್ನೇ ಚಿತ್ರದಲ್ಲಿ ಅಳವಡಿಸಿಕೊಳ್ಳಲಾಯಿತು. ಜೊತೆಗೆ ಆ ಹಾಡು ಜನಪ್ರಿಯವೂ ಆಯಿತು. ಈ ಚಿತ್ರದ ಮತ್ತೊಂದು ವಿಶೇಷವೆಂದರೆ ಇದರ ಕ್ಯಾಸೆಟ್ ಬಿಡುಗಡೆ ಸಮಾರಂಭವನ್ನು ಅದ್ಧೂರಿಯಾಗಿ ಮಾಡಲಾಯಿತು. ನ್ಯಾಷನಲ್ ಕಾಲೇಜ್ ಮೈದಾನದಲ್ಲಿ ಲೇಸರ್ ಶೋ ಜೊತೆಗೆ ಚಿತ್ರದ ನಾಯಕರಾದ ಶಿವರಾಜ್, ಉಪೇಂದ್ರರ ಹಾಡು, ಕುಣಿತ, ಉತ್ತಮವಾದ ಸೆಟ್ ಹಾಕಿದ್ದ ವೇದಿಕೆ, ಸಾಕಷ್ಟು ಡ್ಯಾನ್ಸ್‌ಗಳು, ಇವುಗಳೆಲ್ಲದರ ಕೊನೆಯಲ್ಲಿ ಚಿತ್ತಾಕರ್ಷಕ ಪಟಾಕಿಗಳನ್ನು ಗಗನದಲ್ಲಿ ಸಿಡಿಸಿ ಕಣ್ತಣಿಸಿದ್ದರು. ಹಂಸಲೇಖ ಸಂಗೀತದಲ್ಲಿ ಶೀರ್ಷಿಕೆ ಗೀತೆಯೊಡನೆ 'ಯಾರಿಟ್ಟರೀ ಚುಕ್ಕಿ ಯಾಕಿಟ್ಟರೀ ಚುಕ್ಕಿ...' ಹಾಡುಗಳು ಜನಪ್ರಿಯವಾದವು. ಚಿತ್ರವೂ ಯಶಸ್ವಿಯಾಯಿತು.

ಅನಂತ್‌ನಾಗ್-ಲಕ್ಷ್ಮೀ ಜೋಡಿಯ ಸಾಕಷ್ಟು ಹಿಟ್ ಸಿನಿಮಾಗಳನ್ನು ಕೊಟ್ಟ ಕೆ.ವಿ.ಜಯರಾಂ ತುಂಬ ದಿನಗಳ ನಂತರ ನಿರ್ಮಿಸಿ, ನಿರ್ದೇಶಿಸಿದ 'ಗಾಜಿನ ಮನೆ' ಕಾದಂಬರಿ ಆಧಾರಿತ ಚಿತ್ರ. ರಾಮ್‌ಕುಮಾರ್, ಪ್ರೇಮಾ ಮುಖ್ಯ ಪಾತ್ರದಲ್ಲಿದ್ದರು. ಒಂದು ಹೆಣ್ಣು ತನಗಾದ ಅನ್ಯಾಯದ ವಿರುದ್ಧ ಸಿಡಿದೆದ್ದು ಅನ್ಯಾಯವೆಸಗಿದವನ ಅಣ್ಣನನ್ನೇ ಮದುವೆಯಾಗಿ ಆತನ ಮೇಲೆ ಸೇಡು ತೀರಿಸಿಕೊಳ್ಳುವ ಕಥೆ. ಒಟ್ಟಾರೆ ಚಿತ್ರ ಗೆಲ್ಲಲಿಲ್ಲ.



(ಚಿತ್ರ ೧೪೧) 'ಶಬ್ದವೇಧಿ' ಚಿತ್ರದಲ್ಲಿ ಜಯಪ್ರದಾ ಮತ್ತು ರಾಜಕುಮಾರ್

**ಶಬ್ದವೇಧಿ** (೨೦೦೦) ರಾಜಕುಮಾರ್ - ಜಯಪ್ರದಾ - ಸಾಹುಕಾರ್ ಜಾನಕಿ





ಹಬ್ಬ (೧೯೯೯) ರಾಂಕುಮಾರ್ - ಶಶಿಕುಮಾರ್ - ಕಸ್ತೂರಿ - ದೇವರಾಜ್ - ಊರ್ವಶಿ - ಅಂಬರೀಷ್ - ಜಯಪ್ರದಾ - ವಿಷ್ಣುವರ್ಧನ್



ಕಾನೂರು ಹೆಗ್ಗಡತಿ (೧೯೯೯) ಗಿರೀಶ್ ಕಾರ್ನಾಡ್ - ತಾರಾ

**ಉತ್ತರ ಧ್ರುವದಿಂ.....ದಕ್ಷಿಣ ಧ್ರುವಕೂ** (೨೦೦೦)
ಯೋಗೀಶ್ವರ್ - ಪ್ರೇಮಾ



**ಗೆಜ್ಜೆನಾದ** (೧೯೯೨)
ಶ್ವೇತಾ - ರಾಮ್‌ಕುಮಾರ್



**ಸ್ಪರ್ಶ** (೨೦೦೦) ಸುದೀಪ್ ಸಂಜೀವ್ - ರೇಖಾ

ಯಾರಿಗೆ ಸಾಲುತ್ತೆ ಸಂಬಳ (೨೦೦೦) ಉಮಾಶ್ರೀ - ಸುಹಾಸಿನಿ - ಅನು ಪ್ರಭಾಕರ್





**ಯಜಮಾನ** (೨೦೦೦) ಶಶಿಕುಮಾರ್ - ವಿಷ್ಣುವರ್ಧನ್ - ಅಭಿಜಿತ್



(ಚಿತ್ರ ೧೪೨) 'ಹಗಲುವೇಷ' ಚಿತ್ರದಲ್ಲಿ ಶಿವರಾಜ್ ಕುಮಾರ್

ಪಾರ್ವತಮ್ಮ ರಾಜಕುಮಾರ್ ನಿರ್ಮಿಸಿದ 'ಶಬ್ದವೇಧಿ' ಅಪೇಕ್ಷೆ, ಒತ್ತಾಯದಿಂದ ರೂಪುಗೊಂಡ ಚಿತ್ರವಾಗಿದೆ ಎಂಬುದು ಅದರ ಬಿಡುಗಡೆಯೊಂದಿಗೆ ವೇದ್ಯವಾಯಿತು. ಎಲ್ಲ ಅರ್ಥಗಳಲ್ಲಿ ಅದೊಂದು ಪರಿಪೂರ್ಣ ಚಿತ್ರವಾಗಿರಲಿಲ್ಲ. ಹಾಡುಗಳು ಮತ್ತು ಕಳೆದ ಕೆಲವು ವರ್ಷಗಳಿಂದ ರಾಜಕುಮಾರ್ ಅವರು ತಮ್ಮ ಚಿತ್ರಗಳಲ್ಲಿ ಅಳವಡಿಸಿಕೊಳ್ಳುತ್ತಿದ್ದ ಒಂದು ಸಾಮಾಜಿಕ ಸಮಸ್ಯೆಯಷ್ಟೇ ಈ ಚಿತ್ರದಲ್ಲೂ ಮುಖ್ಯವೆಂದು ಚಿತ್ರಕ್ಕೆ ಮಹತ್ವ ಬಂದಿತು. ಇದರೊಂದಿಗೆ ರಾಜಕುಮಾರ್ ಉತ್ಸಾಹದ ಅಭಿನಯವೂ ಕೂಡ ನಿರೀಕ್ಷಿತ ಅಂಶವಾಗಿತ್ತು. ಇಡೀ ರಾಜ್ಯ ಹಾಗೂ ದೇಶವೇ ಬೆಚ್ಚಿ ಬೀಳುವಂಥ ಘಟನೆಯೊಂದು ಕೆಲವೇ ದಿನಗಳಲ್ಲಿ ಸಂಭವಿಸುವುದರಲ್ಲಿತ್ತು. ಅದನ್ನು ಊಹಿಸುವುದಾಗಲಿ ಅಥವಾ ಭವಿಷ್ಯ ನುಡಿಯುವುದಾಗಲಿ ಯಾರಿಗೂ ಸಾಧ್ಯವಿರಲಿಲ್ಲ.

ಮಾದಕ ಪದಾರ್ಥಗಳಿಗೆ ಬಲಿಯಾಗುತ್ತಿರುವ ಯುವ ಜನಾಂಗವನ್ನು ಎಚ್ಚರಿಸುವಂಥ ಅಂಶಗಳಿದ್ದ 'ಶಬ್ದವೇಧಿ' ೨೫ ವಾರಗಳ ಪ್ರದರ್ಶನ ಕಾಣುವುದರ ಹಿಂದೆ ಅದು ಐದು ವರ್ಷಗಳ ಸುದೀರ್ಘ ಅಂತರದಲ್ಲಿ ಬಂದ ರಾಜಕುಮಾರ್ ಅವರ ಹೊಸ ಚಿತ್ರ ಎಂಬುದು ಮುಖ್ಯ ಅಂಶವಾಗಿತ್ತು. ಇದರೊಂದಿಗೆ 'ಮಯೂರ' ಚಿತ್ರದ 'ನಾನಿರುವುದೆ ನಿಮಗಾಗಿ...', 'ಆಕಸ್ಮಿಕ'ದ 'ಹುಟ್ಟಿದರೆ ಕನ್ನಡ ನಾಡಲ್ ಹುಟ್ಟಬೇಕು..' ಹಾಡುಗಳ ಮುಂದುವರಿದ ರೂಪದಂತೆ ಹಂಸಲೇಖ ಅವರು ಈ ಚಿತ್ರದಲ್ಲಿ 'ಜನರಿಂದ ನಾನು ಮೇಲೆ ಬಂದೆ....' ಎಂಬ ಹಾಡನ್ನು ಬರೆದು ವಿಶಿಷ್ಟವಾಗಿ ರಾಗ ಸಂಯೋಜಿಸಿದ್ದರು. ಚಿತ್ರದ ಹಿಂದಿನ ಕಳಕಳಿಯು ಅದಕ್ಕೆ ರಾಜ್ಯದ ೧೯೯೯-೨೦೦೦ದ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರವೆಂದು ಪ್ರಶಸ್ತಿ ಗಳಿಸಿಕೊಟ್ಟಿತು. ಈ ಪ್ರಚಾರದಲ್ಲಿ ಅಗ್ರಪಂಕ್ತಿಯಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದ ಈ ಚಿತ್ರವನ್ನು ಹೊರತುಪಡಿಸಿದರೆ ಸ್ವತಂತ್ರವಾದ ಉತ್ತಮ ಪ್ರಯತ್ನಗಳಾಗಿ ಕಂಡವು 'ಸ್ಪರ್ಶ', 'ನನ್ನ ಹೆಂಡ್ತಿ ಚೆನ್ನಾಗಿದ್ದಾಳೆ', 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ..' ಹಾಗೂ 'ಹ್ಯಾಟ್ಸ್ ಆಫ್ ಇಂಡಿಯಾ'.

೨೦೦೦ನೇ ವರ್ಷದಲ್ಲಿ ತೆರೆಕಂಡ 'ಹಗಲು ವೇಷ' ಬರಗೂರು ರಾಮಚಂದ್ರಪ್ಪ ಅವರು ಕಥೆ, ಚಿತ್ರಕಥೆ, ಸಂಭಾಷಣೆ ಬರೆದು ನಿರ್ದೇಶಿಸಿದ ಚಿತ್ರ. ಇದು ಮೊದಲ ಬಾರಿಗೆ ಕನ್ನಡ ಚಿತ್ರರಂಗಕ್ಕೆ ಹಗಲು ವೇಷ ತೊಟ್ಟು ಹೊಟ್ಟೆ ಹೊರೆಯುವ ಬುಡಕಟ್ಟು ಜನರ ಸಂಸ್ಕೃತಿಯನ್ನು ಪರಿಚಯಿಸಿತು. ಇವರಲ್ಲಿ ಜನಪದ ಸಂಸ್ಕೃತಿಯಲ್ಲಿ ಬರುವ ಅಲೆಮಾರಿ ಜನರ ಕಥೆಗೆ ಸ್ವಾತಂತ್ರ್ಯ ಹೋರಾಟದ ಕಲ್ಪನೆಯನ್ನು ಬೆರೆಸಲಾಗಿತ್ತು. ಶಿವರಾಜ್ ಕುಮಾರ್‌ಗೆ ಭಿನ್ನಶೈಲಿಯ ಪಾತ್ರವಿತ್ತು.

ಜನರನ್ನು ತಲುಪುವ ಉದ್ದೇಶದಿಂದಲೇ ಒಂದಷ್ಟು ಒಪ್ಪಂದವನ್ನು ಮಾಡಿಕೊಂಡರೂ ಬರಗೂರು ರಾಮಚಂದ್ರಪ್ಪನವರು 'ಹಗಲುವೇಷ'ದ ಮೂಲಕ ತತ್ಕಾಲೀನ ಸಂದರ್ಭದ ಮಹತ್ವದ ಸಂಗತಿಗಳನ್ನು ಹೇಳಲು ಪ್ರಯತ್ನಿಸಿದರು. ಜಾಗತೀಕರಣ, ಮುಕ್ತ ಮಾರುಕಟ್ಟೆಯ ಉಬ್ಬರದಲ್ಲಿ ಮೈ ಮರೆತು ಆರ್ಥಿಕ ದಾಸ್ಯಕ್ಕೆ ಒಡ್ಡಿಕೊಳ್ಳುತ್ತಿರುವವರಿಗೆ ಕಲೆ, ಕಲಾವಿದರು ಸದಾ ಎಚ್ಚೆತ್ತಿರುತ್ತಾರೆ, ಪ್ರತಿಭಟಿಸುತ್ತಾರೆ, ದೇಸೀಯತೆಯ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತಾರೆ ಎಂದು ಗುರುತಿಸಿದ್ದರು. ಸ್ವಾತಂತ್ರ್ಯ ಚಳವಳಿಯಲ್ಲಿ ನಡೆದ ಕರನಿರಾಕರಣೆ, ಸ್ವದೇಶೀ ಚಳವಳಿಗಳನ್ನು ನೆನಪಿಸುವಂಥ ಸನ್ನಿವೇಶಗಳನ್ನು ಸಂಯೋಜಿಸಿದ್ದರು. ಪ್ರತಿಯೊಂದು ಸನ್ನಿವೇಶವೂ ಹೊಸ ಅರ್ಥ, ಕಾಳಜಿಗಳನ್ನು ಹೊಂದಿಕೊಂಡಿತ್ತು. ಬರಗೂರರ ಗೀತರಚನೆಯಲ್ಲೂ ಹೊಸತನವಿತ್ತು. ಹಂಸಲೇಖ ಈ ಗೀತೆಗಳಿಗೆ ರಾಗ ಸಂಯೋಜಿಸುವಾಗಲೂ ಹೊಸ ಉತ್ಸಾಹ ತುಂಬಿಕೊಂಡು, ಪ್ರೀತಿಯಿಂದ ನಿರ್ವಹಿಸಿದ್ದನ್ನು ಹೇಳಿಕೊಂಡಿದ್ದರು. ಇಷ್ಟೆಲ್ಲ ಇದ್ದೂ ಚಿತ್ರ ಯಶಸ್ವಿಯಾಗಲಿಲ್ಲ. ಸಿದ್ಧವಾದ ಚಿತ್ರ ತೆರೆಗೆ ಬರಲು ಬಹುದಿನಗಳ ಕಾಲ ಕಾಯಬೇಕಾಯಿತು. ಪ್ರದರ್ಶನ ದಿನಾಂಕ ಗೊತ್ತಾಗಿ, ಪ್ರಚಾರವಾದ ಮೇಲೂ ಚಿತ್ರದ ನಿರ್ಮಾಪಕರಾದ ಬಿ.ಜಗನ್ನಾಥ್ ಮತ್ತು ಬಿ.ಜಿ.ಮಂಜುನಾಥ್ ಅವರು ಹಣಕಾಸಿನ ಯಾವುದೋ ವಹಿವಾಟಿನಲ್ಲಿ ಸಿಕ್ಕಿಹಾಕಿಕೊಂಡಿದ್ದರಿಂದಾಗಿ ಪ್ರದರ್ಶನ ಮುಂದೆ ಹೋಗಿದ್ದೂ ಚಿತ್ರಕ್ಕೆ ತೊಂದರೆಯಾಯಿತು. 'ಹಗಲುವೇಷ' ದಂಥ ಉದ್ದೇಶ ಪೂರ್ಣ ಚಿತ್ರ ಹೆಚ್ಚು ಜನರನ್ನು ತಲುಪಲಿಲ್ಲ.

'ಮಹಾತ್ಮ' ಚಿತ್ರದಲ್ಲಿ ಸಾಯಿಕುಮಾರ್ ಮುಖ್ಯ ಪಾತ್ರದಲ್ಲಿದ್ದರೆ, ರವಿಚಂದ್ರನ್ ಗೌರವ ಪಾತ್ರವೊಂದರಲ್ಲಿ ಕಾಣಿಸಿಕೊಂಡಿದ್ದರು. ಎಸ್.ಕುಮಾರ್ ನಿರ್ಮಿಸಿದ ಈ ಚಿತ್ರವನ್ನು ಹೆಚ್.ವಾಸು-ಎಸ್.ಶಿವಸ್ವಾಮಿ ಜಂಟಿಯಾಗಿ ನಿರ್ದೇಶಿಸಿದ್ದರು. ಈ ಚಿತ್ರಕ್ಕೆ ರವಿಚಂದ್ರನ್ ಸಂಗೀತ. ವಿಜಯಲಕ್ಷ್ಮಿ, ದೊಡ್ಡಣ್ಣ ನಟಿಸಿದ್ದರು. ಚಿತ್ರ ಗೆಲುವಿನ ಹಂತ ತಲುಪಲಿಲ್ಲ.

ವಿ.ಉಮಾಕಾಂತ್ 'ಮಾಯಾಬಜಾರ್' ಚಿತ್ರದ ಮೂಲಕ ನಿರ್ದೇಶನದ ಜೊತೆಗೆ ಸಂಗೀತ ಕೊಡಲು ಮುಂದಾದರು. ಹಾಗೆಯೇ ಸಂಗೀತದಲ್ಲಿ 'ಪ್ರೇಮವೆ ಬಾಳಿನ ಬೆಳಕು ಬಾ ಪಲುಕು...' ಹಾಡು ತುಂಬ ಜನಪ್ರಿಯವಾಯಿತು. ಮೇಲಿನ ಹಾಡಿನಲ್ಲಿ ಕಪ್ಪು-ಬಿಳುಪು ಹಾಗೂ ವರ್ಣ ಎರಡನ್ನೂ ಮಿಶ್ರ ಮಾಡಿ ಹಾಡನ್ನು ಚಿತ್ರೀಕರಿಸಿದ್ದರು. ಕಪ್ಪು-ಬಿಳುಪಿನ ಫ್ರೇಮ್‌ಗಳಲ್ಲಿ ಪ್ರೇಮ ಸುಂದರವಾಗಿ ಕಂಡರು. ಕುಮಾರ್ ಗೋವಿಂದ್, ದಿವಾಕರ್ ಜೊತೆಗೆ ಪ್ರೇಮ ದ್ವಿಪಾತ್ರದಲ್ಲಿ ಪ್ರಥಮ ಬಾರಿಗೆ ಅಭಿನಯಿಸಿದರು. ಆದರೆ ಚಿತ್ರ ದಯನೀಯ ಸೋಲು ಕಂಡಿತು.

ಗೀತರಚನಕಾರರಾಗಿ, ಸಂಗೀತ ನಿರ್ದೇಶಕರಾಗಿ, ನಟರಾಗಿಯೂ ಬೆಳೆದಿದ್ದ ವಿ.ಮನೋಹರ್ 'ಓ ಮಲ್ಲಿಗೆ' ಮುಖಾಂತರ ಚಿತ್ರನಿರ್ದೇಶಕರಾಗಿ ಯಶ ಕಂಡರು. ಅವರ ನಿರ್ದೇಶನದ ಎರಡನೇ ಚಿತ್ರವೇ 'ಇಂದ್ರಧನುಷ್'. ನಿರ್ಮಾಪಕ ಶೈಲೇಂದ್ರಬಾಬು. ಶಿವರಾಜ್ ಕುಮಾರ್, ಅಭಿಸಾರಿಕಾ ಮುಖ್ಯ ಪಾತ್ರದಲ್ಲಿದ್ದರು. ಈ ಚಿತ್ರದ ಪ್ರಚಾರಕ್ಕೆ ಬಳಸಿದ್ದ ಚಿತ್ರಗಳ ವಿನ್ಯಾಸವೇ ವಿನೂತನವಾಗಿತ್ತು. ಮನೋಹರ್ ಈ ಚಿತ್ರಕ್ಕೆ ಮಾಮೂಲು ಪ್ರೇಮಕಥೆಯಲ್ಲದೆ ಹೊಸ ರೀತಿಯನ್ನು ಜೋಡಿಸಿದ್ದ ಹಾಗೇ ಪ್ರಚಾರ ವಿನ್ಯಾಸದಲ್ಲೂ ವಿಭಿನ್ನವಾಗಲು ಪ್ರಯತ್ನಿಸಿದ್ದರು. ಧನುರ್‍ರಾಶಿಯ ಚಿಹ್ನೆಗಳಾದ ಬಿಲ್ಲು, ಬಾಣ, ಹೆಣ್ಣು, ಕುದುರೆ ಬಳಸಲಾಗಿತ್ತು. ಶಿಲಾಯುಗದ ಪಳೆಯುಳಿಕೆಗಳ ಹಾಗೆ ಅವನ್ನೆಲ್ಲ ಸಂಯೋಜಿಸಲಾಗಿತ್ತು. ಚಿತ್ರದ ಶೀರ್ಷಿಕೆ ಅದರ ಒಳಗೇ ಅಡಕವಾಗಿತ್ತು. ಪ್ರಚಾರದಲ್ಲಿ 'ಉಪೇಂದ್ರ' ಹಾಗೂ 'ಎ' ಚಿತ್ರದಂತೆ ಇದೂ ಭಿನ್ನತೆಯಿಂದ ಕೂಡಿತ್ತು. ಕೆಲವರು ಇಷ್ಟಪಟ್ಟರು. ಶೀರ್ಷಿಕೆ ಪ್ರತ್ಯೇಕವಾಗಿರಬೇಕಿತ್ತು. ಓದಲು ಕಷ್ಟವಾಯಿತು ಎಂದವರೂ ಇದ್ದರು.




(ಚಿತ್ರ ೧೪೩) 'ಇಂದ್ರಧನುಷ್' ಚಿತ್ರದ ಪ್ರಚಾರದ ವಿನ್ಯಾಸ

ಶಿವರಾಜ್ ಕುಮಾರ್ ನಾಯಕನ ಪಾತ್ರದಲ್ಲಿ. ಆತನನ್ನು ಇಬ್ಬರು ಪ್ರೀತಿಸಿದರು. ಒಬ್ಬಳು ಒಳ್ಳೆಯವಳಾದರೆ, ಮತ್ತೊಬ್ಬಳು ಕೆಟ್ಟವಳು ಎಂದು ಭಾಸವಾಗುವಂತೆ ತೋರಲಾಗಿತ್ತು. ಆದರ ಮಧ್ಯಂತರದ ವೇಳೆಗೆ ಸ್ವಭಾವ ತದ್ವಿರುದ್ಧವಾಗುತ್ತವೆ. ಅದೇ ಪ್ರೇಕ್ಷಕನಿಗೆ ಒಂದು ಶಾಕ್‌ನಂಥ ಅನುಭವ ಕೊಡುತ್ತದೆ. ಒಂದು ಹುಡುಗಿ ಸತ್ತಿದ್ದಾಳೆಂದು ನಂಬಿಕೆ ಬಂದ ಮೇಲೆ ಇನ್ನೊಂದು ಹುಡುಗಿಯನ್ನು ಬಳಿಗೆ



(ಚಿತ್ರ ೧೪೪) 'ಸೂರಪ್ಪ' ಚಿತ್ರದಲ್ಲಿ ವಿಷ್ಣುವರ್ಧನ್

ಕರೆದುಕೊಳ್ಳುವ ನಾಯಕ. ಗೋವಾಗೆ ಹೋದಾಗ ಸತ್ತು ಹೋದ ಹುಡುಗಿ ಬದುಕಿರುವ ಸುಳಿವು ಸಿಗುತ್ತದೆ. ಇದಕ್ಕಾಗಿ ನಿರ್ದೇಶಕರು ವಿಶೇಷ ತಂತ್ರಗಳನ್ನು ಬಳಸಿದ್ದರು. ಆ ತರುಣಿ ಸಾಮಾನ್ಯವಾಗಿ ಕಿತ್ತಳೆ ಹಣ್ಣನ್ನು ವಕ್ರ ವರ್ತುಲದಂತೆ ಸುಲಿದು ಆ ಸಿಪ್ಪೆಯ ಕಪ್ ನೋಡಿ ಖುಷಿ ಪಡುವವಳು, ಜೇಡರ ಬಲೆ ಕಂಡರೆ ಅದಕ್ಕೆ ಚಮ್‌ಕಿ ಪುಡಿ ಉದುರಿಸಿ ಗಾಳಿ ಆಡಿದಾಗೆಲ್ಲ ತೂಗುತ್ತ ಹೊಳೆಯುವ ಚಂದ ಕಂಡು ಖುಷಿ ಪಡುವವಳು, ಯಾವಾಗಲೂ ಪರಿಮಳ ಹರಡುವ 'ಖುಷ್ಬೂವಾಲಿ' ಪೆನ್‌ನಿಂದಲ್ಲಿ ಬರೆಯುವವಳು. ಈ ಬಗೆಯ ಪೆನ್ನುಗಳು ವಿದೇಶದಲ್ಲಿ ಹೆಚ್ಚು, ಸಾಮಾನ್ಯವಾಗಿ ಇಲ್ಲಿಯ ಚಿತ್ರಕಾರರು ಬಳಸುತ್ತಾರೆ. ಈ ಕೆಲವು ಸುಳಿವುಗಳನ್ನು ಅಲ್ಲಲ್ಲಿ ಕಂಡ ನಾಯಕನಿಗೆ ಆಕೆ ಬದುಕಿರಬಹುದೇ ಎಂಬ ಸಂದೇಹ ಬಂದು ಹುಡುಕತೊಡಗುತ್ತಾನೆ. ಆ ತರುಣಿ ಇನ್ನಾರನ್ನೋ ಸಾಯಿಸಿ ತಾನೇ ಸತ್ತಳೆಂಬಂತೆ ನಂಬಿಸಿ, ತಾನು ದುಷ್ಟಕೂಟದಲ್ಲಿ ಸೇರಿ ಈ ನಾಯಕನನ್ನು ಕೊಲ್ಲುವ ಸಂಚು ಮಾಡಿರುತ್ತಾಳೆ. ಇಷ್ಟು ಕಥಾಭಾಗ ಮುಂದುವರಿಯುತ್ತದೆ. ಈ ಚಿತ್ರದ ಪರಾಕಾಷ್ಠೆಯನ್ನು ಕೂಡಾ ವಿಭಿನ್ನವಾಗಿ ಸಂಯೋಜಿಸಲಾಗಿತ್ತು. ಅದಕ್ಕೆ ಪ್ರೇರಣೆಯಾದದ್ದು 'ನಮ್ಮೂರ ಮಂದಾರ ಹೂವೇ' ಚಿತ್ರೀಕರಣ ನಡೆದಾಗ ಸಂಭವಿಸಿದ ಒಂದು ಘಟನೆ. ಅಲ್ಲಿ ರಿಫ್ಲೆಕ್ಟರ್‌ನ ಬೆಳಕಿಗೆ ಸಿಟ್ಟಿಗೆದ್ದು ಜೇನ್ನೊಣಗಳು ಗೂಡು ಬಿಟ್ಟೆದ್ದು ಎಲ್ಲರನ್ನೂ ಕಚ್ಚಿಬಿಟ್ಟವು. ಅದೇ ರೀತಿ ಈ ಚಿತ್ರದಲ್ಲಿ ನಾಯಕ ತನ್ನ ಮೋಟಾರ್ ಬೈಕ್‌ನ ಕನ್ನಡಿಯ ಮೂಲಕ ಬೆಳಕು ಜೇನುಗೂಡಿಗೆ ಪ್ರತಿಫಲಿಸುವಂತೆ ಮಾಡಿ, ಎದ್ದ ಜೇನ್ನೊಣಗಳು ಖಳನನ್ನು ಕಚ್ಚಿ ಸಾಯಿಸುವಂತೆ ಮಾಡಲಾಗಿತ್ತು. ಇಂಥ ಹಲವು ಹೊಸ ನಿರೂಪಣಾ ವಿಧಾನಗಳಿದ್ದ ಚಿತ್ರ 'ಇಂದ್ರಧನುಷ್'.

"ಸಾಮಾನ್ಯವಾಗಿ ಚಿತ್ರಗಳಿಗೆ ಧನಸಹಾಯವನ್ನು ಮಾಡುವ ಶೈಲೇಂದ್ರಬಾಬು ಅವರೇ ನಿರ್ಮಾಪಕರಾದ್ದರಿಂದ ಚಿತ್ರಕ್ಕೆ ಹಣದ ಕೊರತೆಯಾಗಲಿಲ್ಲ. ಸುಮಾರು ಒಂದು ಕೋಟಿ, ಹತ್ತು ಲಕ್ಷದವರೆಗೆ ಖರ್ಚಾಗಿತ್ತು. ಧ್ವನಿಸುರುಳಿ, ಟಿ.ವಿ. ಹಕ್ಕುಗಳು, ಹೊನ್ನಾವರ, ಹುಬ್ಬಳ್ಳಿ ವಿಭಾಗದ ಮಾರಾಟ ಇತ್ಯಾದಿಗಳಲ್ಲಿ ಮುಕ್ಕಾಲು ಭಾಗ ಹಣ ಬಂದಿತ್ತು. ಚಿತ್ರ ಯಶಸ್ವೀ ಆಗದಿದ್ದರೂ ನಿರ್ಮಾಪಕರಿಗೆ ತುಂಬಾ ನಷ್ಟ ಆಗಲಿಲ್ಲ" ಎನ್ನುತ್ತಾರೆ ನಿರ್ದೇಶಕ ವಿ.ಮನೋಹರ್. ಛಾಯಾಗ್ರಾಹಕ ಸುಂದರನಾಥ ಸುವರ್ಣ ಹಾಗೂ ವಿ.ಮನೋಹರ್ ಅವರ ನಡುವೆ ಚಿತ್ರದಿಂದ ವೈಮನಸ್ಯ ಉಂಟಾಯಿತು.

'ಸೂರಪ್ಪ' ಚಿತ್ರಕ್ಕೆ ನಾಲ್ವರು ನಿರ್ಮಾಪಕರು. ಅವರ ಲಾಂಛನ 'ಸೂಪರ್ ಹಿಟ್ ಫಿಲಂಸ್'. ಚಿತ್ರವೊಂದು ಸೂಪರ್ ಹಿಟ್ ಆಗಲು ನಾಲ್ವರಾದರೂ ಹೆಣಗಬೇಕು. ಎರವಲು ವಸ್ತು ತರಬೇಕು ಎಂಬ ಅರ್ಥವೇನೂ ಇರಲಾರದು. ಕಮಲಾಕರ್, ಎಂ.ಡಿ.ಬಾಬು, ಸುರೇಶ್ ಬಾಬು, ಜಗದೀಶ್ ಈ ನಾಲ್ವರೂ ನಿರ್ಮಿಸಿದ ಈ ಚಿತ್ರಕ್ಕೆ ಮೂಲ ತಮಿಳು. ತಮಿಳು ಚಿತ್ರವನ್ನು ಆದಷ್ಟೂ ಪ್ರಾಂತೀಯವಾಗಿಸಲು ನಿರ್ದೇಶಕ ನಾಗಣ್ಣ ಶ್ರಮಪಟ್ಟಿದ್ದಾರೆ. ಮೂಲಚಿತ್ರಕ್ಕಿಂತ ಶ್ರೀಮಂತವಾಗಿತ್ತು. ಮೂಲಚಿತ್ರದ ಸರಳತೆ ಕಾಣಲಿಲ್ಲ ಎಂದವರೂ ಉಂಟು. ಒಟ್ಟಿನಲ್ಲಿ ಎಲ್ಲ ಒಳ್ಳೆಯವರೇ ಆದರೂ ಕೆಡುಕುಗಳು ಸಂಭವಿಸಿಬಿಡುತ್ತವೆ ಎಂಬುದನ್ನು ಅಚ್ಚುಕಟ್ಟಾಗಿ ಕುತೂಹಲಕಾರಿ ಸನ್ನಿವೇಶಗಳನ್ನು ಸಂಯೋಜಿಸಿ ಹೇಳುವ ಪ್ರಯತ್ನ ಮಾಡಿದ್ದರು. ವಿಷ್ಣುವರ್ಧನ್ ಕೆಲವು ಆಂಗಿಕ ಚಲನೆಗಳನ್ನು 'ಅಪ್ಪಾಜಿ' ಮೊದಲಾದ ಚಿತ್ರಗಳ ರೀತಿಯಲ್ಲೇ ಜೋಡಿಸಿಕೊಂಡಿದ್ದರಿಂದ ಒಂದೇ ಮಾದರಿ ಅನ್ನಿಸುತ್ತದೆ. ಗ್ರಾಮೀಣ ಬದುಕು, ಊರ ಹಿರಿತನ, ಪ್ರೇಮ, ಸ್ನೇಹ, ಸಾಹಸ, ವಾತ್ಸಲ್ಯಗಳು ಜನಪ್ರಿಯವಾಗತೊಡಗಿದ ಕಾಲಘಟ್ಟವಿದು. ಒಂದೇ ಧಾಟಿಯ ಚಿತ್ರಗಳು ಬರತೊಡಗಿದ ಹಿನ್ನೆಲೆಯಲ್ಲಿ ಇಂಥ ಚಿತ್ರಗಳು ವಿಶ್ಲೇಷಣೆಗೆ ಒಳಪಡುತ್ತವೆ. ರಮೇಶ್ ಭಟ್, ಪ್ರುತಿ ಸಹ ಕೆಲವು ಸನ್ನಿವೇಶಗಳಲ್ಲಿ ಕಲಾವಂತಿಕೆಯನ್ನು ಎತ್ತಿ ಹಿಡಿದಿದ್ದಾರೆ.

'ಶ್ರೀರಸ್ತು ಶುಭಮಸ್ತು' ಸೀತಾರಾಮ್ ಕಾರಂತ್ ನಿರ್ದೇಶನದ ಎರಡನೇ ಚಿತ್ರ. ಕಾರಂತ್ ಅವರು ಚಿತ್ರದ ಹೆಸರಿನ ಆಯ್ಕೆಯಲ್ಲೇ ವಿಶೇಷ ಆಸ್ಥೆ ವಹಿಸುತ್ತಾರೆ. ಈ ಹೆಸರುಗಳೇ ಎಷ್ಟೋ ಬಾರಿ ಪ್ರೇಕ್ಷಕರನ್ನು ಚಿತ್ರಮಂದಿರಕ್ಕೆ ಕರೆದೊಯ್ದು ಬಿಡುತ್ತವೆ. ಈ ಚಿತ್ರಕ್ಕೂ ಹಾಗಾಗಿದೆ. 'ಚಂದ್ರಮುಖಿ ಪ್ರಾಣಸಖಿ' ಚಿತ್ರವನ್ನು ಅಚ್ಚುಕಟ್ಟಾಗಿ ಚಿತ್ರಿಸಿದ್ದ ಕಾರಂತ್ ಈ ಚಿತ್ರದಲ್ಲಿ ಎಡವಿದರು. ನಾಯಕ, ನಾಯಕಿಯರು ಬೇರ್ಪಡಲು ಬಲವಾದ ಕಾರಣ ಕಾಣುವುದಿಲ್ಲ. ಒಂದು ಚಿಕ್ಕ ಕಾರಣವೇ ಇಷ್ಟೆಲ್ಲ ಅನರ್ಥಕ್ಕೆ ಕಾರಣವಾಗಬಲ್ಲದೇ ಎನಿಸುತ್ತದೆ. ರಮೇಶ್, ಅನುಪ್ರಭಾಕರ್ ಅವರ ಪ್ರೇಮಾಂಕುರವಾಗುವ ಸನ್ನಿವೇಶಗಳನ್ನು ಹಾಸ್ಯರಸದೊಂದಿಗೆ ಸ್ವಾರಸ್ಯವಾಗಿ ಚಿತ್ರಿಸಿದ್ದರು. ಛಾಯಾಗ್ರಹಣ ಮೊದಲ ಹಾಡಿನಲ್ಲಿ ಸಿಕ್ಕಾಪಟ್ಟೆ ಓಡುತ್ತದೆ. ನಂತರದ್ದು ಕಣ್ಣಿಗೆ ಹಿತವಾದ ಪರಿಸರವನ್ನು ಸೆರೆಹಿಡಿದು ಮನಸೆಳೆಯುತ್ತದೆ. ನಟ ಶ್ರೀನಿವಾಸಮೂರ್ತಿ ಮಗ ನವೀನ್ ಕೃಷ್ಣನಿಗೆ ಈ ಚಿತ್ರದಿಂದ ಪ್ರವೇಶವಾಯಿತು. ಮೊದಲ ಚಿತ್ರದಲ್ಲೇ ಗಮನ ಸೆಳೆದರು. ಅಪ್ಪ-ಮಗ ಈ ಚಿತ್ರದಲ್ಲಿ ಅಣ್ಣ-ತಮ್ಮನ ಪಾತ್ರದಲ್ಲಿ ಅಭಿನಯಿಸಿದ್ದರು.

'ಚಾಮುಂಡಿ' ರಾಮು ಎಂಟರ್‌ಪ್ರೈಸಸ್ ಅವರ ಚಿತ್ರ. ನಿರ್ದೇಶಕ ಎ.ಮೋಹನ್ ಗಾಂಧಿ. ಮಾಲಾಶ್ರೀ, ಖುಷ್ಬೂ, ಅನಂತ್‌ನಾಗ್, ಪ್ರಕಾಶ್‌ರೈ ಮುಂತಾದವರ



(ಚಿತ್ರ ೧೪೫) 'ಶ್ರೀರಸ್ತು ಶುಭಮಸ್ತು' ಚಿತ್ರದಲ್ಲಿ ನವೀನ್ ಕೃಷ್ಣ, ಶ್ರೀನಿವಾಸಮೂರ್ತಿ, ಚಿತ್ರಾಶೆಣೈ, ಅನು ಪ್ರಭಾಕರ್



(ಚಿತ್ರ ೧೪೬) 'ಚಾಮುಂಡಿ' ಚಿತ್ರದಲ್ಲಿ ಮಾಲಾಶ್ರೀ

ಅಭಿನಯವಿದೆ. ಮಾಲಾಶ್ರೀ ಚಿತ್ರದ ನಾಯಕಿ. ಚುರುಕು ಓಟದ ಈ ಚಿತ್ರದ ಸಂಕಲನವನ್ನು ಸುರೇಶ್ ಅರಸ್ ಸಮರ್ಥವಾಗಿ ನಿಭಾಯಿಸಿದ್ದರು. ರಾಮ್‌ಶೆಟ್ಟಿ ಸಾಹಸವೇ ಚಿತ್ರದ ಜೀವಾಳ. ನೃತ್ಯದಲ್ಲಿ ಯಾವ ಭಂಗಿಯನ್ನೂ ಸಲೀಸಾಗಿ ಮಾಡುತ್ತಿದ್ದ ಮಾಲಾಶ್ರೀಯವರಿಗೆ ಫೈಟ್ಸ್‌ಗಳಲ್ಲಿ ನೇರವಾಗಿ ಭಾಗಿಯಾಗಲು ಕಷ್ಟವೆನಿಸಲಿಲ್ಲ. 'ಡ್ಯೂಪ್ ಬೇಡ, ನಾನೇ ಮಾಡ್ತೀನಿ,' ಎನ್ನುತ್ತಾ ಕೆಲವೊಮ್ಮೆ ರಿಸ್ಕ್ ಎನಿಸುವಂಥ ಸಾಹಸಗಳಲ್ಲೂ ಉತ್ಸಾಹದಿಂದ ಪಾಲ್ಗೊಂಡು ಯಾವುದೇ ತೊಂದರೆಗಳಿಲ್ಲದೆ ಚಿತ್ರೀಕರಣವನ್ನು ಪೂರೈಸಿದ್ದರು. ವಿಶೇಷ ತಂತ್ರಗಳನ್ನು ಫೈಟ್ಸ್‌ಗಳಲ್ಲಿ ಬಳಸಿ ಮೆರುಗನ್ನು ತಂದಿದ್ದರು. ಚಿತ್ರ ನಿರೀಕ್ಷಿತ ಯಶ ಗಳಿಸದಿದ್ದರೂ ಜನಮನ್ನಣೆಯನ್ನಂತೂ ಪಡೆಯಿತು.

'ಯಾರಿಗೆ ಸಾಲುತ್ತೆ ಸಂಬಳ?' ರಂಜನೆಯನ್ನೇ ಪ್ರಧಾನವಾಗಿಟ್ಟುಕೊಂಡು ಮಧ್ಯಮ ವರ್ಗದ ಸಮಸ್ಯೆಗಳನ್ನು ಹೇಳುವ ಚಿತ್ರ. ಬಿ.ಎಸ್.ಗಂಗಾಧರ್ ನಿರ್ಮಿಸಿದರು. ರೀಮೇಕ್ ಆದರೂ ಚುರುಕಾದ ನಿರೂಪಣೆ, ಮಾತು, ಗೀತೆಗಳು ಜನರನ್ನು ಆಕರ್ಷಿಸಿದವು. ಗಂಭೀರ ಪಾತ್ರದಲ್ಲಿ ಗುರುತಿಸಿಕೊಂಡ ಕಲಾವಿದೆ ಸುಹಾಸಿನಿ ಲಘು ಪಾತ್ರದಲ್ಲಿ ಕಾಣಿಸಿಕೊಂಡರು. ಆಕೆಯ ಲವಲವಿಕೆಯೇ ಗಮನ ಸೆಳೆಯುವಂತಿತ್ತು. ಹೊಸ ನಟ ಮೋಹನ್, ಜೊತೆಗೆ ಶಶಿಕುಮಾರ್ ಮೊದಲಾದವರು ಸಲೀಸಾಗಿ ಅಭಿನಯಿಸಿದ್ದರು. ಉಮಾಶ್ರೀ-ಕರಿಬಸವಯ್ಯ ಜೋಡಿಯ ಕೆಲವು ಕೆಳಮಟ್ಟದ ಹಾಸ್ಯವನ್ನು ಬಿಟ್ಟರೆ ಚಿತ್ರ ಮಧ್ಯಮ ವರ್ಗದ ಸಮಸ್ಯೆಗಳ ಬಗ್ಗೆ, ಆರ್ಥಿಕ ಅಸಮತೆ ಬಗ್ಗೆ ಚರ್ಚಿಸುವ ಪ್ರಯತ್ನ ಮಾಡುತ್ತದೆ. ಹಂಸಲೇಖ ಸಂಗೀತವೇ ಚಿತ್ರದ ಎಲ್ಲ ದೋಷಗಳನ್ನು ಮುಚ್ಚಿ ವಿಜೃಂಭಿಸಿಬಿಡುತ್ತದೆ. ಗಂಗಾಧರ್ ಹಿರಿಯ ನಿರ್ಮಾಪಕರು. ಅನೇಕ ಚಿತ್ರಗಳನ್ನು ಧಾರಾಳವಾಗಿ ಖರ್ಚು ಮಾಡಿ ನಿರ್ಮಿಸಿದ್ದಾರೆ. ಚಿತ್ರ ಗೆದ್ದಾಗ ಅಷ್ಟೇ ಧಾರಾಳವಾಗಿ ಉಡುಗೊರೆಗಳನ್ನು ಕೊಟ್ಟು ಗೌರವಿಸಿದರು. ಆದರೆ ಒಂದೇ ಸಮನೆ ಅವರ ಚಿತ್ರಗಳು ಸೋತು, ಕೆಲವು ಅರ್ಧಕ್ಕೆ ನಿಂತವು. ಕಷ್ಟಗಳ ಪರಂಪರೆಯೇ ಎದುರಾಯಿತು. ಧೈರ್ಯದಿಂದ ಚಿತ್ರ ಮಾಡುತ್ತಲೇ ಹೋದ ಅವರಲ್ಲಿ ಜೀವನೋತ್ಸಾಹ ಉಕ್ಕಿಸಿ, ಮತ್ತಷ್ಟು ಚಿತ್ರ ಮಾಡಲು ಪ್ರೇರಿಸಿತೆಂಬ ಕಾರಣಕ್ಕೆ 'ಯಾರಿಗೆ ಸಾಲುತ್ತೆ ಸಂಬಳ ?' ಮುಖ್ಯವಾಗಬಹುದು.

ಎ.ಗಣೇಶ್ ನಿರ್ಮಾಣದಲ್ಲಿ, ಡಿ.ರಾಜೇಂದ್ರಬಾಬು ನಿರ್ದೇಶಿಸಿದ ಚಿತ್ರ 'ದೇವರಮಗ'. ಮೊದಲ ಬಾರಿಗೆ ಅಂಬರೀಷ್, ಶಿವರಾಜ್ ಕುಮಾರ್ ಜೊತೆಯಲ್ಲಿ ಅಭಿನಯಿಸಿದ್ದರು. ಉಳಿದಂತೆ ಭಾನುಪ್ರಿಯ, ಲೈಲಾ, ಶ್ರೀನಾಥ್, ಮುಖ್ಯಮಂತ್ರಿ ಚಂದ್ರು ಮುಖ್ಯಪಾತ್ರದಲ್ಲಿದ್ದರು. ಮೈಸೂರ್ ಹರೀಶ್ ಕಥೆ ಬರೆದಿದ್ದರು. ಹಂಸಲೇಖ ಗೀತೆ ರಚಿಸಿ, ಸಂಗೀತ ಕೊಟ್ಟಿದ್ದರು. ಭಾರಿ ತಾರಾಗಣವಿದ್ದೂ ಚಿತ್ರ ಸೋಲಬೇಕಾಯಿತು.

'ಸ್ಪರ್ಶ' ವಿಭಿನ್ನ ನಿರೂಪಣೆಯಿದ್ದ ಮಾಮೂಲಿ ತ್ರಿಕೋನ ಪ್ರೇಮಕಥೆ. ಈ ಚಿತ್ರದಲ್ಲಿ ಪ್ರೇಮ, ತ್ಯಾಗದೊಂದಿಗೆ ತಪ್ಪು ಮಾಡಿದವರು ಶಿಕ್ಷೆ ಅನುಭವಿಸಲೇಬೇಕು ಎಂಬ ತರ್ಕವನ್ನು ನಿರ್ದೇಶಕ ಸುನೀಲ್ ಕುಮಾರ್ ದೇಸಾಯಿ ಒತ್ತಾಯಪೂರ್ವಕವಾಗಿ ಅದಕ್ಕೆಂದೇ ಘಟನೆಗಳನ್ನು ಸೃಷ್ಟಿಸಿ ಪ್ರತಿಪಾದಿಸಲು ಶ್ರಮಿಸಿದರು. ಮಾಮೂಲಿ ಪ್ರೇಮಕಲಹಗಳಲ್ಲಿ ಅವರ ತತ್ವ, ಆದರ್ಶಗಳಿಗೆ ಆಳ, ವಿಸ್ತಾರ, ಸಾರ್ವಕಾಲಿಕ ಮಹತ್ವ ಇವ್ಯಾವುವೂ ಪ್ರಾಪ್ತವಾಗದಿದ್ದರೂ ಚಿತ್ರ ಸರಾಗವಾಗಿ ಓಡಲು ಒತ್ತು ದೊರಕಿತು. ಚಿತ್ರದಲ್ಲಿ ಒಟ್ಟು ಒಂಬತ್ತು ಹಾಡುಗಳಿದ್ದು ಇವುಗಳಲ್ಲಿ ಮೂರು 'ಶಾಯಿರಿ'ಗಳು. ಕವಿ ರಾಘವೇಂದ್ರ ಇಟಗಿಯವರ 'ಶಾಯಿರಿ' ಪ್ರತಿಭೆಯನ್ನು ದೇಸಾಯಿಯವರು ಅರ್ಥಪೂರ್ಣವಾಗಿ ಬಳಸಿಕೊಳ್ಳುವ ಪ್ರಯತ್ನ ಮಾಡಿದರು. ಜೊತೆಗೆ ಹಾಡಿನ ಮೂಲಕವೇ ಕಥೆ ಬೆಳೆಯುತ್ತಾ ಹೋಗುವಂತೆ ಚಿತ್ರಕಥೆ ರಚಿಸಿದರು. ಸನ್ನಿವೇಶಗಳನ್ನು ಕೂಡ ಹಾಡೇ ಬೆಳೆಸುತ್ತಾ ಹೋಗುತ್ತದೆ. ಇದುವರೆಗಿನ ಕನ್ನಡ ಚಿತ್ರಗಳಲ್ಲಿ ಅಷ್ಟೊಂದು ಶಾಯಿರಿಗಳನ್ನು ಬಳಸಿಕೊಂಡಿರುವ ಉದಾಹರಣೆ ಇರಲಿಲ್ಲ. ನಾಯಕ ತನ್ನ ಭಾವನೆಗಳನ್ನು ವ್ಯಕ್ತಪಡಿಸುವುದಕ್ಕೂ ಶಾಯಿರಿಗಳನ್ನೇ ಬಳಸಿಕೊಳ್ಳುವುದು ವಿಶೇಷ ಖುಷಿ ಕೊಡುತ್ತದೆ. ಶಾಯಿರಿ ಹಾಗೂ ಹಿನ್ನೆಲೆ ಸಂಗೀತವೇ ಜೀವಾಳವಾಗಿದ್ದ ಈ ಚಿತ್ರದ ಬಗ್ಗೆ ನಿರ್ದೇಶಕ ದೇಸಾಯಿ ಅವರು ''ಇದು ತ್ರಿಕೋನ ಪ್ರೇಮದ ಕಥೆಯಲ್ಲ, ಸಂಬಂಧಗಳ ಕುರಿತಾದ ಕಥೆ. ಬದುಕು ದೊಡ್ಡದೋ ಅಥವಾ ಪ್ರೀತಿ ದೊಡ್ಡದೋ ಅನ್ನುವ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಪ್ರಯತ್ನ ಮಾಡಿದ್ದೇನೆ'' ಎಂದು ಹೇಳಿದ್ದರು. ಚಿತ್ರದ ಹಾಡುಗಳನ್ನು ಹಿಂದಿಯ ಹೆಸರಾಂತ ಗಾಯಕರಾದ ಪಂಕಜ್ ಉದಾಸ್, ಕವಿತಾ ಕೃಷ್ಣಮೂರ್ತಿ ಹಾಡಿದ್ದರು. ಸಂಗೀತ ಪ್ರಧಾನವಾದ ಈ ಅಂಶವೇ ಚಿತ್ರದ ಮುಖ್ಯ ಆಕರ್ಷಣೆ ಆಗಿರುವುದು ವಿಶೇಷ. ಈ ಚಿತ್ರದ ಮೂಲಕ ಕನ್ನಡ ಚಿತ್ರರಂಗಕ್ಕೆ ನಾಯಕನಾಗಿ ಸುದೀಪ್ ಉತ್ತಮ ರೀತಿಯಲ್ಲೇ ಪ್ರವೇಶ ಪಡೆದರು. ಸಿಹಿಕಹಿ ಚಂದ್ರು, ಹಾಸ್ಯನಟ ಕಾಶಿಯವರಿಗೆ ಶ್ರೇಷ್ಠ ಅಭಿನಯ ಬೇಡುವಂಥ ಉತ್ತಮ ಪಾತ್ರಗಳು ಇದ್ದವು. ಅವರು ಅವುಗಳಿಗೆ ನ್ಯಾಯ ಸಲ್ಲಿಸಿದ್ದರು.

ಸುದೀಪ್‌ರನ್ನು ಅವರ ತಂದೆ ಹೊಟೇಲ್ ಉದ್ಯಮಿ ಸರೋವರ್ ಸಂಜೀವ್ ಕಲಾವಿದನನ್ನಾಗಿಸಲು 'ಸ್ಪರ್ಶ' ಚಿತ್ರವನ್ನು ನಿರ್ಮಿಸಿದ್ದರೆ, ಸಿ.ಪಿ.ಯೋಗೇಶ್ ಗಾಡ್‌ಫಾದರ್‌ಗಳ ನೆರವು ಬೇಡದೆ ತಮಗೆ ತಾವೇ ನಿರ್ಮಿಸಿಕೊಂಡದ್ದು 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ'. 'ರಣಧೀರ' ಚಿತ್ರದಿಂದ ಆರಂಭಿಸಿ ಸುಮಾರು ೧೫ ಚಿತ್ರಗಳಲ್ಲಿ ಸಣ್ಣ ಪುಟ್ಟ ಪಾತ್ರಗಳಲ್ಲಿ ಕಾಣಿಸಿಕೊಂಡು ಯಾರ ಗಮನಕ್ಕೂ ಬರದೆ ಹಿನ್ನೆಲೆಯಲ್ಲಿದ್ದವರು. ಭೂಮಿ ವ್ಯವಹಾರದಲ್ಲಿ ಯಶಸ್ವಿಯಾಗಿ ಕೊನೆಗೆ ನಾಯಕನಟನಾಗುವ ಅಂತರಂಗದ ಬಯಕೆಯನ್ನು ಅದುಮಿಡಲಾಗದೆ ಈ ಅದ್ದೂರಿ ಚಿತ್ರವನ್ನು ನಿರ್ಮಿಸಿಕೊಂಡರು. ಅವರೇ ಬರೆದಿದ್ದ ಅಲ್ಪಸ್ವಲ್ಪ ಭಿನ್ನತೆಯಿದ್ದ ಕಥೆ ತೆರೆಯ ಮೇಲೆ ಉತ್ತಮವಾಗಿ ರೂಪುಗೊಳ್ಳಲಿಲ್ಲ. ಇದರಿಂದಾಗಿ ಸುದೀಪ್‌ಗೆ ದೊರೆತ ಮನ್ನಣೆ, ಯಶಸ್ಸು, ಯೋಗೇಶ್‌ಗೆ ದೊರಕಲಿಲ್ಲ. ಆದರೆ ಚಿತ್ರದ ಒಂದು ಹಂತದ ಚಿತ್ರೀಕರಣ ನಿಲ್ಲಿಸಿ ೧೯೯೯ರ ರಾಜ್ಯದ ವಿಧಾನಸಭಾ ಚುನಾವಣೆಯಲ್ಲಿ ಇವರು ತಾವು ಹುಟ್ಟಿದ ಚನ್ನಪಟ್ಟಣ ತಾಲ್ಲೂಕಿನಿಂದ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಅತ್ಯಧಿಕ ಮತಗಳಿಂದ ಗೆದ್ದು ಬಂದರು. ಚಿತ್ರದಿಂದ ದೊರಕದ ಯಶಸ್ಸು, ಗೌರವವನ್ನು ಶಾಸಕರಾಗಿ ಗಳಿಸಿಕೊಂಡರು. 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ' ಚಿತ್ರಕ್ಕೆ ಬೇರ್‍ಯಾವ ಅಂಶಗಳಲ್ಲಿ ಅಲ್ಲದಿದ್ದರೂ ಅದರ ಪ್ರಚಾರ ಹಾಗೂ ಕಥಾವಸ್ತುವಿನಿಂದಾಗಿ ಮಹತ್ವವಿದೆ. ರಾಜೇಂದ್ರಸಿಂಗ್ ಬಾಬು ಅವರ 'ಭೂಮಿ ತಾಯಿಯ ಚೊಚ್ಚಲ ಮಗ' ಚಿತ್ರದ ನಂತರ ರಾಜ್ಯದಲ್ಲಿ ನಿರಂತರವಾಗಿ ನಡೆಯುತ್ತಿದ್ದ ರೈತರ ಆತ್ಮಹತ್ಯೆ ಹಾಗೂ ಅವರ ಭೀಕರ




(ಚಿತ್ರ ೧೪೭) 'ಯಾರಿಗೆ ಸಾಲುತ್ತೆ ಸಂಬಳ?' ಚಿತ್ರದಲ್ಲಿ ಕರಿಬಸವಯ್ಯ, ಶಶಿಕುಮಾರ್, ಮೋಹನ್



(ಚಿತ್ರ ೧೪೮) 'ಸ್ಪರ್ಶ' ಚಿತ್ರದಲ್ಲಿ ರೇಖಾ ಮತ್ತು ಸುದೀಪ್

ಬವಣೆ, ಸಂಕಷ್ಟಗಳನ್ನು ತೆರೆಯ ಮೇಲೆ ದಾಖಲಿಸಿದ ಎರಡನೆಯ ಚಿತ್ರವಿದು. ರೈತ ಸಂಘದ ಕಾರ್ಯಕರ್ತನಾದ ಈ ಚಿತ್ರದ ನಾಯಕ ಜಪ್ತಿಗೆ ಬಂದ ಬ್ಯಾಂಕ್ ಅಧಿಕಾರಿಗಳು, ಪೊಲೀಸರ ಮೇಲೆ ಕೈಮಾಡಿ ಭೀತಿಯಿಂದ ಹಳ್ಳಿ ಬಿಟ್ಟು ರಾಜಾಸ್ತಾನಕ್ಕೆ ಓಡಿ ಹೋಗುತ್ತಾನೆ. ಅಲ್ಲಿ ತಾನು ಕೆಲಸ ಮಾಡುವ ಕಲ್ಲಿನ ಗಣಿ ಮಾಲೀಕನ ಮಗಳ ಪ್ರೇಮದಲ್ಲಿ ಸಿಲುಕಿಕೊಳ್ಳುವುದು, ಅಲ್ಲಿಂದ ಹಿಂತಿರುಗಿ ಹಳ್ಳಿಗೆ ಬಂದ ಮೇಲೆ ಅವನಿಗಾಗಿ ಕಾಯುತ್ತಿದ್ದ ಮಾವನ ಮಗಳನ್ನು ಮದುವೆಯಾಗುವ ಒತ್ತಾಯಕ್ಕೆ ಕಟ್ಟುಬೀಳುವುದು - ಇಂಥ ಸಾಮಾನ್ಯ ತ್ರಿಕೋನ ತಿರುವುಗಳು ಚಿತ್ರದಲ್ಲಿದ್ದವು. ಉತ್ತಮ ಕಥೆಯನ್ನು ನಿರ್ದೇಶಕ ರಾಜ್‌ಕಿಶೋರ್ ಸರಿಯಾಗಿ ನಿಭಾಯಿಸಿರಲಿಲ್ಲ. ಗಂಭೀರ ಸನ್ನಿವೇಶಗಳಲ್ಲಿ ಯೋಗೇಶ್ ಅಭಿನಯ ಕೂಡ ಸಪ್ಪೆಯಾಗಿತ್ತು. ದೊಡ್ಡಣ್ಣನವರ ಪಾತ್ರವೇ ವಿಜೃಂಭಿಸಿದ ಇಡೀ ಚಿತ್ರದಲ್ಲಿ ಜಾನಪದ ಗಾಯಕ ಕೆ.ಯುವರಾಜ್ ಅವರ 'ನಮ್ಮ ಮನೆ ಹಂಗಿನ ಅರಮನೆಯಲ್ಲ...' ಗೀತೆ ಮಧುರವಾಗಿತ್ತು. ಚಿತ್ರಕ್ಕೆ ಕರ್ನಾಟಕದಾದ್ಯಂತ ಗೋಡೆಗಳ ಮೇಲೆ ಬರೆಸಿದ ಪ್ರಚಾರ ಆಗ್ಗೆ ಒಂದು ದಾಖಲೆ. ಟೆಂಟು, ಚಿತ್ರಮಂದಿರಗಳು ಇಲ್ಲದಿದ್ದ ಊರುಗಳಲ್ಲೂ ತಮ್ಮ ಚಿತ್ರದ ಜಾಹೀರಾತನ್ನು ಯೋಗೇಶ್ ಬರೆಸಿದ್ದರು. ಇವನ್ನು ಬಿಟ್ಟರೆ ಇದರಷ್ಟೇ ಪ್ರಮುಖವಾಗಿ ಚಿತ್ರದಲ್ಲಿ ಕಂಡದ್ದು ರಾಜಾಸ್ಥಾನದ ಸುಂದರ ಅರಮನೆಗಳು, ಪರಿಸರ ಮಾತ್ರ.

'ನನ್ನ ಹೆಂಡ್ತಿ ಚೆನ್ನಾಗಿದ್ದಾಳೆ' ದಿನೇಶ್ ಬಾಬು ನಿರ್ದೇಶನದಲ್ಲಿ ಹಾಸ್ಯನಟ ಕಾಶಿ ನಾಯಕರಾಗಿ ಅಭಿನಯಿಸಿದ ಚಿತ್ರ. ಈ ಚಿತ್ರದ ಪೂರ್ತಿ ಕಥೆಯನ್ನು ಕಾಶಿಯವರನ್ನು ದೃಷ್ಟಿಯಲ್ಲಿಟ್ಟುಕೊಂಡೇ ಹೆಣೆದಂತಿತ್ತು. ಹಾಸ್ಯನಟರಾಗಿ ತಮ್ಮದೇ ಶೈಲಿಯಿಂದ ಜನಮನ್ನಣೆ ಗಳಿಸಿದ್ದ ಕಾಶಿ ಇಡೀ ಚಿತ್ರವೊಂದರ ಮುಖ್ಯ ಶಕ್ತಿಯಾಗುವಷ್ಟು ಸಮರ್ಥರಾಗಿದ್ದರೆ ಎಂಬ ಅನುಮಾನಕ್ಕೆ ಉತ್ತರ ಕಂಡುಕೊಳ್ಳಲು ಬಹಳ ದಿನ ಬೇಕಾಗಿರಲಿಲ್ಲ. ಚಿತ್ರವು ನಿರೀಕ್ಷೆಯಷ್ಟು ಯಶಸ್ವಿಯಾಗಲಿಲ್ಲ. ಹಾಸ್ಯನಟರು ಪರಿಪೂರ್ಣ ನಾಯಕರಾಗಿ ಅಭಿನಯಿಸಿರುವ ಸೋತ ಚಿತ್ರಗಳ ಸಾಲಿಗೆ ಇನ್ನೊಂದರ ಸೇರ್ಪಡೆಯಾಯಿತು. ೧೯೭೪ ರಲ್ಲಿ ನರಸಿಂಹರಾಜು ಅವರ 'ಪ್ರೊ।ಹುಚ್ಚೂರಾಯ', ೧೯೮೦ ರಲ್ಲಿನ ಎಸ್.ಶಿವರಾಂ ಅವರ 'ಡ್ರೈವರ್ ಹನುಮಂತು', ೧೯೯೪ ರಲ್ಲಿ ಟೆನ್ನಿಸ್ ಕೃಷ್ಣ ಅಭಿನಯಿಸಿದ 'ಅಪ್ಪ ನಂಜಪ್ಪ ಮಗ ಗುಂಜಪ್ಪ' ಈ ಚಿತ್ರಗಳು ಆಯಾ ಕಲಾವಿದರು ಹಾಸ್ಯನಟರಾಗಿ ಗಳಿಸಿದ್ದ ವರ್ಚಸ್ಸನ್ನು ಆಯಾ ನಾಯಕನಟರ ಕಲ್ಪನೆಗೆ ಪರಿವರ್ತಿಸುವುದರಲ್ಲಿ ವಿಫಲವಾಗಿದ್ದವು. ಆದರೆ ದ್ವಾರಕೀಶ್ ಅವರು ವಿಷ್ಣುವರ್ಧನ್‌ರಂಥ ಅಥವಾ ಸಮಕಾಲೀನ ಜನಪ್ರಿಯ ನಾಯಕನಟರ ಜೊತೆಯಲ್ಲಿ ಅಭಿನಯಿಸುತ್ತಾ ಭಿನ್ನ ದಾರಿ ಅನುಸರಿಸಿ ಯಶಸ್ಸನ್ನು ಕಂಡಿದ್ದರು. ಕಾಶಿನಾಥ್, ಜಗ್ಗೇಶ್ ತಮ್ಮ ಮಿತಿಗಳನ್ನು ದ್ವಂದ್ವಾರ್ಥ, ಅಶ್ಲೀಲತೆ ನೆರವಿನಿಂದ ದಾಟುತ್ತಾ ಬೇರೊಂದು ಪ್ರೇಕ್ಷಕ ವರ್ಗವನ್ನು ಸೃಷ್ಟಿಸಿಕೊಂಡು ಚಲಾವಣೆ ಪಡೆದುಕೊಂಡಿದ್ದರು. ಈ ಹಿನ್ನೆಲೆಯಲ್ಲಿ 'ನನ್ನ ಹೆಂಡ್ತಿ ಚೆನ್ನಾಗಿದ್ದಾಳೆ' ಯಶಸ್ಸು ಕಂಡಿದ್ದರೆ ಅಥವಾ ಚಿತ್ರವಾಗಿದ್ದಿದ್ದರೆ ಒಂದು ದಾಖಲೆಯಾಗುತ್ತಿತ್ತು. ಹಾಗಾಗದಿರುವುದಕ್ಕೆ ಕಾಶಿ ಪ್ರತಿಭೆ, ರೂಪ, ವರ್ಚಸ್ಸಿಗೆ ಪಾತ್ರವನ್ನು ಹೊಂದಿಸಿದ್ದು ಮುಖ್ಯ ಕಾರಣವಾಗಿತ್ತು. ಇದರೊಂದಿಗೆ ಕುರೂಪಿ ಗಂಡ ತನ್ನ ಸುಂದರ ಹೆಂಡತಿಯನ್ನು ರಕ್ಷಿಸಿಕೊಳ್ಳಲು ಪಡುವ ತಾಪತ್ರಯದಂಥ ಸಣ್ಣ ಎಳೆಯೇ ಚಿತ್ರದ ಕೇಂದ್ರ ಅಂಶವಾಗಿದ್ದುದು ಅತಿ ಎನಿಸುವಂತಿತ್ತು. ಇದೆಲ್ಲ ದೌರ್ಬಲ್ಯಗಳ ನಡುವೆ ಕಾಶಿ ಅವರದೇ ಶೈಲಿಯಲ್ಲಿ ಶ್ರೇಷ್ಠವಾಗಿ ಅಭಿನಯಿಸಿ ತಮ್ಮ ಪಾತ್ರಕ್ಕೆ ಜೀವ ತುಂಬಿದ್ದರು. ಆದರೆ ಇಡೀ ಚಿತ್ರಕ್ಕೆ ಬೇಕಾಗಿದ್ದ ಜೀವಂತಿಕೆ ತುಂಬುವ ಶಕ್ತಿ ಆ ಪಾತ್ರಕ್ಕೆ ಇರಲಿಲ್ಲ. ಇವರೊಂದಿಗೆ ಬೆಂಗಾವಲಾಗಿ ರಮೇಶ್, ವಿಷ್ಣುವರ್ಧನ್, ಅನಂತ್‌ನಾಗ್ ಇದ್ದರೂ ಚಿತ್ರಕ್ಕೆ ಆಕರ್ಷಣೆ ಮೈಗೂಡಿ ಬಂದಿರಲಿಲ್ಲ.

'ಹ್ಯಾಟ್ಸ್ ಆಫ್ ಇಂಡಿಯಾ' ಗ್ರಾನೈಟ್ ಉದ್ಯಮಿ ನಂದಕುಮಾರ್ ನಿರ್ಮಿಸಿದ ಚಿತ್ರ. 'ಕೊಟ್ರೇಶಿ ಕನಸು', 'ಅಮೆರಿಕಾ ಅಮೆರಿಕಾ'ದಂಥ ಯಶಸ್ವಿ ಚಿತ್ರಗಳನ್ನು ಇವರು ಇದಕ್ಕೆ ಮುಂಚೆ ನಿರ್ಮಿಸಿದ್ದರು. ಪ್ರತಿ ಚಿತ್ರದ ನಂತರ ಅದರ ಯಶಸ್ಸಿನ ಸಿಂಹಪಾಲು ಪಡೆಯಲು ನಿರ್ದೇಶಕರೊಂದಿಗೆ ಘರ್ಷಣೆಗೆ ಇಳಿದು ವಿವಾದಗಳನ್ನು ಸೃಷ್ಟಿಸಿಕೊಂಡಿದ್ದರು. ಈ ಹಿನ್ನೆಲೆಯಲ್ಲಿಯೇ ಇನ್ನೊಂದು 'ಅಮೆರಿಕಾ ಅಮೆರಿಕಾ'ದಂಥ ಚಿತ್ರವನ್ನು ಸೃಷ್ಟಿಸಲು ನನ್ನಿಂದ ಸಾಧ್ಯವಿದೆ ಎಂಬ ಧೋರಣೆಯಿಂದ 'ಹ್ಯಾಟ್ಸ್ ಆಫ್ ಇಂಡಿಯಾ' ತಯಾರಿಸಿದರು. ಅಮೆರಿಕಾದಲ್ಲಿಯೇ ಚಿತ್ರೀಕರಣ ನಡೆಸಿದರು. ಆದರೆ ಈ ಚಿತ್ರದಲ್ಲಿ 'ಅಮೆರಿಕಾ ಅಮೆರಿಕಾ' ಚಿತ್ರಕ್ಕೆಂದು ಚಿತ್ರಿಸಲಾಗಿದ್ದ ಸಾಕಷ್ಟು ದೃಶ್ಯಗಳೂ ಇದ್ದವು. ಜೊತೆಗೆ 'ಅಮೆರಿಕಾ ಅಮೆರಿಕಾ' ಕಥೆಯಲ್ಲಿ ಸಹಜವಾಗಿ ಮೈದಾಳಿ ಬಂದಿದ್ದ ದೇಶಪ್ರೇಮ ಹೊಸಚಿತ್ರದಲ್ಲಿ ಅಸಹಜವಾಗಿ, ಉತ್ಕಟವಾಗಿ, ಘೋಷಣೆಗಳ ಮಟ್ಟವನ್ನು ತಲುಪಿತ್ತು. 'ಅಮೆರಿಕಾ ಅಮೆರಿಕಾ' ಯಶಸ್ಸಿನ ಕಾರಣವನ್ನು ನಂದಕುಮಾರ್ ತಪ್ಪಾಗಿ ಗ್ರಹಿಸಿದ್ದರು. ಇವರ ಮಾಮೂಲಿ ಪ್ರೇಮಕಥೆಗೆ ಯಾವುದೇ ಭಿನ್ನ ಆಯಾಮಗಳಿರಲಿಲ್ಲ. ಇಡೀ ಚಿತ್ರ ಅತಿಯಾದ ಆತ್ಮವಿಶ್ವಾಸದ ನಿರ್ಮಾಣ ಅನ್ನಿಸುವಂತಿತ್ತು. ಅಲ್ಲದೆ ಚಿತ್ರದ ಒಂದು ಮುಖ್ಯ ಪಾತ್ರದಲ್ಲಿ



(ಚಿತ್ರ ೧೪೯) 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ' ಚಿತ್ರದಲ್ಲಿ ಯೋಗೀಶ್ವರ್, ಶೋಭರಾಜ್, ದಿವ್ಯ ಪಲಾಟ್ ಮತ್ತು ದೊಡ್ಡಣ್ಣ



(ಚಿತ್ರ ೧೫೦) 'ನನ್ ಹೆಂಡ್ತಿ ಚೆನ್ನಾಗಿದ್ದಾಳೆ' ಚಿತ್ರದಲ್ಲಿ ಅಂಜನಿ ಠಕ್ಕರ್, ಕಾಶಿ ಮತ್ತು ರಮೇಶ್

ಮಂಗಳೂರಿನಲ್ಲಿ ವಿಶ್ರಾಂತ ಜೀವನ ನಡೆಸುತ್ತಿರುವ ಮುಂಬೈ ಭೂಗತ ಜಗತ್ತಿನ ರೌಡಿ ಸಾಧುಶೆಟ್ಟಿ ಅಭಿನಯಿಸಿದ್ದುದು ಪ್ರತಿಕೂಲ ಪರಿಣಾಮ ಬೀರಿತು. ತಮ್ಮ ಈ ಪ್ರಥಮ ಚಿತ್ರದ ನಿರೂಪಣೆಯಲ್ಲಿ ಹೊಸತನ ಸಾಧಿಸಲು ಹೆಣಗಿದ್ದ ಯುವ ನಿರ್ದೇಶಕ ರಘುನಾಥ್ ಚಿತ್ರ ತೆರೆಕಾಣುವುದಕ್ಕಿಂತ ಮುಂಚೆಯೇ ಅಕಾಲಿಕವಾದ ಸಾವಿಗೆ ಈಡಾದರು. ಚಿತ್ರದ ಸೋಲು, ಗೆಲುವುಗಳನ್ನು ಕಂಡು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಬೇಕಾಗಿದ್ದ ಪ್ರತಿಭಾವಂತ ಯುವಚೇತನ ದುರಂತಮಯವಾಗಿ ಕಣ್ಮರೆಯಾಯಿತು. ಇದೇ ರೀತಿ ಈ ಶತಮಾನದ ಕೊನೆಯ ಹೊತ್ತಿಗೆ ಅದ್ಭುತ ಯಶಸ್ಸನ್ನು ಕಂಡ ರೀಮೇಕ್ ಚಿತ್ರ 'ಯಜಮಾನ' ನಿರ್ದೇಶಕರಲ್ಲೊಬ್ಬರಾದ, ನಟಿ ಭಾರತಿ ಸೋದರ ಶೇಷಾದ್ರಿ ಚಿತ್ರದ ಯಶಸ್ಸಿನ ಸಂಪೂರ್ಣ ಲಾಭ ಅನುಭವಿಸುವ ಮೊದಲೆ ಮದರಾಸಿನಲ್ಲಿ ಹೃದಯಾಘಾತದಿಂದ ನಿಧನರಾದರು. ಈ ಶತಮಾನದ ಕೊನೆಯ ವರ್ಷ ಹಿಂದಿನ ವರ್ಷದಂತೆಯೇ ಸರಣಿ ಸಾವುಗಳಿಂದ, ರೀಮೇಕ್ ಚಿತ್ರಗಳ ಯಶಸ್ಸಿನಿಂದ ಕಲಸುಮೇಲೋಗರವಾಗಿ ಅದರ ನೆರಳಿನಿಂದ ಸಂಪೂರ್ಣವಾಗಿ ಹೊರಬಂದಿರಲಿಲ್ಲ.

'ಸೂರ್ಯವಂಶ' ಚಿತ್ರದ ಯಶಸ್ಸು ಸದ್ದಡಗಿದ್ದ ರೀಮೇಕ್ ಗಾಳಿಯನ್ನು ಮರು ಹುಟ್ಟುಹಾಕುವಲ್ಲಿ ಯಶಸ್ವಿಯಾದಂತೆಯೇ ಚೌಚೌ ಚಿತ್ರಗಳ ಸಂಖ್ಯೆಯನ್ನು ಗಮನಾರ್ಹವಾಗಿ ಹೆಚ್ಚಿಸಿತು. '೧೯೯೯-೨೦೦೦' ಈ ಎರಡೂ ವರ್ಷ ಪೂರ್ತಿ ಕನ್ನಡದ ಬಹುತೇಕ ನಿರ್ಮಾಪಕರು ವಿಶೇಷವಾಗಿ ತಮಿಳು ಹಾಗೂ ತೆಲುಗು ಚಿತ್ರಗಳತ್ತ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದರು. 'ಪ್ರೀತ್ಸೆ', 'ಗಲಾಟೆ ಅಳಿಯಂದ್ರು', 'ಕೃಷ್ಣಲೀಲೆ', 'ದೇವರ ಮಗ', 'ಸೂರಪ್ಪ', 'ಯಾರಿಗೆ ಸಾಲುತ್ತೆ ಸಂಬಳ', 'ಯಜಮಾನ' - ಇಂಥ ಹಲವು ಚಿತ್ರಗಳು ಪರಭಾಷೆಯ ನೇರ ರೀಮೇಕ್‌ಗಳಾಗಿದ್ದವು. ಇವನ್ನು ಕೇವಲ ಕನ್ನಡ ನಟರ ಇಮೇಜಿಗೆ ಹೊಂದುತ್ತದೆಂದೇ ನಿರ್ಮಿಸಲಾಯಿತು. ಈ ಚಿತ್ರಗಳು ಯಶಸ್ಸು ಗಳಿಸಿದ್ದರಿಂದ ಅದೇ ದಾರಿ ಹಿಡಿಯುವವರ ಸಂಖ್ಯೆ ಕೂಡ ಹೆಚ್ಚಿತು. ಇಂಥ ವಾತಾವರಣದಲ್ಲಿ 'ಕಡ್ಲಿ ಮಟ್ಟಿ ಸ್ಟೇಷನ್ ಮಾಸ್ಟರ್', 'ಮುನ್ನುಡಿ', 'ದೇವೀರಿ' ಚಿತ್ರಗಳಂಥ ಪ್ರಾಮಾಣಿಕ ಪ್ರಯತ್ನಗಳು ಮನ್ನಣೆ ಪಡೆದುಕೊಳ್ಳಲಾಗದೆ ಸೊರಗಿದವು.

'ಕಡ್ಲಿಮಟ್ಟಿ ಸ್ಟೇಷನ್ ಮಾಸ್ಟರ್' ಉತ್ತರ ಕರ್ನಾಟಕದಲ್ಲಿ ಲಾವಣಿ ಹಾಗೂ ನಾಟಕ ರೂಪದಲ್ಲಿ ಜನಪ್ರಿಯವಾಗಿರುವ ಕಾಮುಕನೊಬ್ಬನ ಕುಕೃತ್ಯದ ಸತ್ಯಕಥೆಯನ್ನು ಆಧರಿಸಿದ ಚಿತ್ರ. ರೈಲುಗಳಿಲ್ಲ ತೆರಳಿದ ಮೇಲೆ ಪುಟ್ಟ ಕಂದನೊಂದಿಗಿದ್ದ ತಾಯಿಯೊಬ್ಬಳು ಧಾರಾಕಾರವಾಗಿ ಮಳೆ ಸುರಿಯುತ್ತಿದ್ದುದರಿಂದ ಸ್ಟೇಷನ್ ಒಳಗ ಆಶ್ರಯ ಬಯಸುತ್ತಾಳೆ. ಒಬ್ಬನೇ ಇರುವ ಸ್ಟೇಷನ್ ಮಾಸ್ಟರ್ ಅವಳನ್ನು ಅನುಭವಿಸುವ ಆತುರದಿಂದ ಬಲಾತ್ಕರಿಸುತ್ತಾನೆ. ಅವಳು ತಪ್ಪಿಸಿಕೊಂಡು ಹೊರಗ ಓಡಿ ಬರುವಾಗ ಮಗುವನ್ನು ಒಳಗ ಬಿಟ್ಟುಬಿಟ್ಟಿರುತ್ತಾಳೆ. ಕಾಮಾಂಧನಾದ ಮಾಸ್ಟರ್ ಒಳಗೆ ಬರದಿದ್ದರೆ ಮಗುವನ್ನು ಕೊಲ್ಲುವ ಬೆದರಿಕ ಒಡ್ಡುತ್ತಾನೆ. ಅದಕ್ಕೂ ತಿರಸ್ಕರಿಸಿದಾಗ ಮಗುವಿನ ಒಂದೊಂದೇ ಅಂಗಾಂಗವನ್ನು ಕಡಿದು ಆಚಗ ಎಸೆಯುತ್ತಾನೆ. ಶೀಲಕ್ಕಾಗಿ ತನ್ನ ಎಳೆಯ ಕಂದನನ್ನೇ ಕಳೆದುಕೊಂಡ ಘೋರ ಪ್ರಸಂಗವಾಗಿ ಇದು ಬೆಳಗಾಗುವುದರೊಳಗೆ ಎಲ್ಲಾ ಕಡೆ ಹಬ್ಬುತ್ತದೆ. ಆಗ ಭಾರತವಿನ್ನೂ ಬ್ರಿಟಿಷರ ಆಡಳಿತದಲ್ಲಿಯೇ ಇದ್ದು, ಆಂಗ್ಲ ಅಧಿಕಾರಿಗಳಿಗ ವಿಷಯ ತಿಳಿಯುತ್ತದೆ. ಅವರು ಸ್ಥಳಕ್ಕ ಬಂದು ಸ್ಟೇಷನ್ ಮಾಸ್ಟರನಿಗೆ ಮರಣ ದಂಡನೆ ವಿಧಿಸುತ್ತಾರೆ. ಈ ಸತ್ಯಕಥೆಯ ಆತ್ಮವಿರುವುದು ತನ್ನ ಕ್ಷಣಿಕ ತೃಪ್ತಿಗಾಗಿ ಭಾರತೀಯನೊಬ್ಬ ಎಳೆಯ ಮಗುವಿನ ಅಂಗಾಂಗ, ರುಂಡಗಳನ್ನೇ ಕೊಯ್ದು ಚೆಲ್ಲಾಡುವ ಮನುಷ್ಯನ ಕ್ರೌರ್ಯವನ್ನು ತೆರೆದು ತೋರಿಸಿದ್ದರಲ್ಲಿ. ಇದನ್ನು ಬಿಟ್ಟರೆ ತಾಯಿ ತನ್ನ ಕರುಳಿನ ಕುಡಿಯನ್ನ ಉಳಿಸಿಕೊಳ್ಳಲು ಅವನನ್ನು ಅಣ್ಣ, ತಂದೆ, ದೈವ ಎಂದು ಕರೆಯುತ್ತಾ ಗೋಗರೆಯುವ ಹೃದಯವಿದ್ರಾವಕ ವರ್ಣನೆಗಳಲ್ಲಿ. ಮನಕರಗಿಸುವ ಈ ಕಥೆ ಚಿತ್ರಕಥೆ ಹಾಗೂ ನಿರ್ಮಾಣದ ಬಡತನದಿಂದಾಗಿ ರಸಹೀನವಾಗಿತ್ತು. ನಿರ್ದೇಶಕ ಶಂಕರ್ ಸುಗ್ನಳ್ಳಿ ಇನ್ನಷ್ಟು ಶ್ರಮ ವಹಿಸಿದ್ದಿದ್ದರೆ ಒಂದು ಉತ್ತಮ ಕಲಾಕೃತಿಯಾಗುವ ಎಲ್ಲಾ ಸಾಧ್ಯತೆಗಳೂ ಇದ್ದ ಚಿತ್ರವಿದು.

ಕೇರಳದ 'ಅರವಿಂದನ್' ಪುರಸ್ಕಾರ ಪಡೆದ ಚಿತ್ರ ಕವಿತಾ ಲಂಕೇಶ್ ನಿರ್ದೇಶಿಸಿದ್ದ 'ದೇವೀರಿ'. ಲಂಡನ್ ಚಿತ್ರೋತ್ಸವದಲ್ಲಿ ಪ್ರದರ್ಶಿತವಾದ ಈ ಚಿತ್ರ ರಾಜ್ಯದ ೧೯೯೯-೨೦೦೦ ನೇ ವರ್ಷದ ಪ್ರಥಮ ಅತ್ಯುತ್ತಮ ಚಿತ್ರವಾಗಿ ಆಯ್ಕೆಯಾಯಿತು. ಈ ಚಿತ್ರದ ಮುಖ್ಯ ಪಾತ್ರದಲ್ಲಿ ಅಭಿನಯಿಸಿದ್ದ ಸ್ಲಂ ಬಾಲಕ ಮಾ। ಮಂಜು ಅತ್ಯುತ್ತಮ ಬಾಲನಟ ಪ್ರಶಸ್ತಿಯನ್ನು ಗಳಿಸಿದ.

ಲಂಕೇಶ್ ಅವರ 'ಅಕ್ಕ' ಕಾದಂಬರಿ ಆಧರಿಸಿ ನಿರ್ಮಿಸಲಾಗಿದ್ದ 'ದೇವೀರಿ' ಕವಿತಾ ನಿರ್ದೇಶನದ ಪ್ರಥಮ ಚಿತ್ರ. ಹಳ್ಳಿಯಿಂದ ನಗರದ ಬದುಕಿಗೆ ಬಂದು ಬೀಳುವ ಅನಾಥ ಅಕ್ಕ ಹಾಗೂ ತಮ್ಮ ಇಬ್ಬರೂ ಅಲ್ಲಿನ ಚಿತ್ರ-ವಿಚಿತ್ರ ಜನರ ನಡುವೆ ನಡೆಸುವ ಬದುಕನ್ನು, ಶೋಷಣೆಗೊಳಗಾಗುವ ವಿಷಾದಮಯ ಘಟನೆಗಳನ್ನು ಚಿತ್ರ ಒಳಗೊಂಡಿದೆ. ಆದರೆ ಈ ವಾತಾವರಣದಲ್ಲಿ ಅಕ್ಕ, ತಮ್ಮನ ನಡುವಿನ ಸಂಬಂಧದಲ್ಲಿ ಆಗುವ ಬದಲಾವಣೆಗಳು ಸೂಕ್ಷ್ಮ ಸನ್ನಿವೇಶ, ವಿವರಗಳ ಮೂಲಕ ತೆರೆದುಕೊಳ್ಳಬೇಕು. ಇದು ಕೃತಿಯಲ್ಲಿದೆ. ಆದರೆ ಕವಿತಾ 'ಅಕ್ಕ'ನ ನೀತಿಬಾಹಿರ ಸಂಬಂಧಗಳಿಗೆ, ರಾಜಕಾರಣದ ಘಟನೆಗಳಿಗೆ ಹೆಚ್ಚು ಒತ್ತು ಕೊಟ್ಟು ಚಿತ್ರಿಸಿದರು. ನಗರದ ಗೂಂಡಾಗಿರಿ, ರಾಜಕಾರಣ, ಕನ್ನಡ ಚಳವಳಿ, ಸಿನಿಮಾ, ವೇಶ್ಯಾವಾಟಿಕೆ, ಆಟೋದವರ ಮೋಸ ಹೀಗೆ ಎಲ್ಲ ಬಗೆಯ ಬದುಕನ್ನು ತೋರಿಸಬೇಕೆಂಬುದರಿಂದಾಗಿ ನಿರೂಪಣೆಯಲ್ಲಿ ಅವಸರ ಇಣುಕಿತ್ತು. ಇದೇ ಕಾರಣದಿಂದಾಗಿ ಚಿತ್ರಕಥೆ ಧಾರಾವಾಹಿ ರೂಪದ ಕಂತುಗಳಂತೆ ಪ್ರತ್ಯೇಕ ಘಟನೆಗಳಾಗಿ ರೂಪುಗೊಂಡಿತು. ಇದೇನೇ ಇದ್ದರೂ ಸಮಾಜವನ್ನು ತನ್ನ ಅಕ್ಕನ ಚಟುವಟಿಕ, ಸಂಬಂಧಗಳ ಮೂಲಕ ಅರ್ಥ ಮಾಡಿಕೊಳ್ಳುತ್ತಾ ಹೋಗುವ ಬಾಲಕನೊಬ್ಬನ ವಿಶಿಷ್ಟ ಪಾತ್ರವನ್ನು ಈ ಚಿತ್ರ ಒಳಗೊಂಡಿತ್ತು. ಈ ಅಂಶ ಕನ್ನಡ ಚಿತ್ರಗಳಲ್ಲಿ ಅಪರೂಪದ್ದಾಗಿತ್ತು. 'ದೇವೀರಿ' ತನ್ನೆಲ್ಲಾ ದೌರ್ಬಲ್ಯಗಳ ನಡುವೆ ವಿಶಿಷ್ಟವಾಗಿ ಕಾಣಿಸಿದ್ದಕ್ಕೆ ಇದೇ ಮುಖ್ಯ ಕಾರಣವಾಗಿತ್ತು. ತಮ್ಮನನ್ನು ಓದಿಸಬೇಕೆಂಬ ಅಕ್ಕನ ಆಸೆ ಭಗ್ನಗೊಳ್ಳುವುದು ಹಾಗೂ ಅವಳ ಅನಿವಾರ್ಯವಾಗಿರುವ ವೈಯಕ್ತಿಕ ಚಟುವಟಿಕೆಗಳನ್ನು ಅರ್ಥ ಮಾಡಿಕೊಳ್ಳುತ್ತಾ ಅಂತರಂಗದಲ್ಲಿ ಅವಳ ಬಗ್ಗೆ ಅಸಮಾಧಾನಗೊಳ್ಳುತ್ತಿರುವ ಪುಟ್ಟ ತಮ್ಮನಿಂದ ದೂರವಾಗಲು ಅವಳು ತೀರ್ಮಾನಿಸಿ, ಹಾಗೆಯೇ ಮಾಡುವುದು ಚಿತ್ರದ ಮಾರ್ಮಿಕ



(ಚಿತ್ರ ೧೫೧) 'ಕಡ್ಲಿಮಟ್ಟಿ ಸ್ಟೇಷನ್ ಮಾಸ್ಟರ್' ಚಿತ್ರದಲ್ಲಿ ಸ್ವಾತಿ ಮತ್ತು ಜಿ.ವಿ.ಕೃಷ್ಣ

ದೃಶ್ಯಗಳಾಗಿದವು. ಕವಿತಾ ಲಂಕೇಶ್ ಭಾವುಕ ದೃಶ್ಯಗಳನ್ನು ಕೂಡ ನಾಟಕೀಯತೆಗೆ ಎಡೆಯಾಗದಂತೆ ಚಿತ್ರಿಸಿದರು. ಈ ವಿಷಯದಲ್ಲಿ ನಿಧಾನ ಹಾಗೂ ಅಬ್ಬರ ಇವೆರಡರ ನಡುವೆ ಸಮತೋಲನ ಸಾಧಿಸುವ ನಿರೂಪಣೆಗಾಗಿ ಪ್ರಯತ್ನ ನಡೆಸಿದಂತಿತ್ತು. ಚಿತ್ರದಲ್ಲಿ ಅಕ್ಕನಾಗಿ ಅಭಿನಯಿಸಿದ ನಂದಿತಾ ದಾಸ್ ಅವರು ಸ್ಮಿತಾ ಪಾಟೀಲ್, ದೀಪ್ತಿನವಲ್, ಶಬಾನಾ ಆಜ್ಮಿ ಪರಂಪರೆಯ ಕಲಾವಿದೆಯಾಗಿ ಸುದ್ದಿ ಮಾಡಿದ್ದವರು. ಕೇವಲ ಹತ್ತು ಚಿತ್ರಗಳಲ್ಲಿ ಅಭಿನಯಿಸಿದರೂ ಅವು ಹಿಂದಿ, ಒರಿಯಾ, ಬಂಗಾಲಿ, ಮಲಯಾಳಂ ಮುಂತಾದ ಹಲವಾರು ಭಾಷಾ ಚಿತ್ರಗಳಾಗಿದ್ದುದು ವಿಶೇಷ. ಹಿಂದಿಯ ವಿವಾದಾತ್ಮಕ 'ಫೈರ್' ಚಿತ್ರದಲ್ಲಿ ಇವರು ಅಭಿನಯಿಸಿದ್ದ ಸಲಿಂಗಕಾಮಿಯ ಪಾತ್ರ ಕ್ರಾಂತಿಕಾರಕವಾಗಿತ್ತಷ್ಟೇ ಅಲ್ಲದೆ, ನಂದಿತಾ ದಾಸ್ ಅವರಿಗೆ ವಿವಾದಾತ್ಮಕ ಖ್ಯಾತಿ ತಂದುಕೊಟ್ಟಿತ್ತು. ಈ ಹಿನ್ನೆಲೆಯಲ್ಲಿ 'ದೇವೀರಿ'ಯಲ್ಲಿನ ಅಕ್ಕನ ಪಾತ್ರದಲ್ಲಿ ಅವರಿಂದ ನಿರ್ದೇಶಕಿ ಉತ್ತಮ ಅಭಿನಯವನ್ನು ಪಡೆದಿರಬಹುದೆಂಬ ನಿರೀಕ್ಷೆಯಿತ್ತು. ಆದರೆ ಚಿತ್ರ ನೋಡಿದಾಗ ಅದೇನೂ ಆಗಿರಲಿಲ್ಲ. ಪಾತ್ರದ ಆಳವನ್ನು ಮುಟ್ಟುವ ಶ್ರಮ ಎರಡೂ ಕಡೆಗಳಿಂದ ನಡೆದಿರಲಿಲ್ಲ. ಇದೇ ಮಾತು ಭಾವನಾ ಪಾತ್ರದ ಸಂದರ್ಭಕ್ಕೂ ಅನ್ವಯಿಸುತ್ತದೆ. ಆದರೆ ಕವಿತಾ ಅವರು ತಮ್ಮನ ಪಾತ್ರಕ್ಕೆ ನಿಜವಾದ ಕೊಳಚೆ ಪ್ರದೇಶದ ಬಾಲಕನನ್ನು ಆರಿಸಿಕೊಂಡು, ಅವನಿಗೆ ತರಬೇತಿ ಕೊಟ್ಟು ಕೆಲಸ ತೆಗೆದಿದು ಹಾಗೂ ಕೆಲವು ದೃಶ್ಯಗಳನ್ನು ಬೆಂಗಳೂರಿನ ಕೊಳಚೆ ಪ್ರದೇಶದ ಬೀದಿ, ಮನೆಗಳಲ್ಲಿಯೇ



(ಚಿತ್ರ ೧೫೨) 'ದೇವೀರಿ' ಚಿತ್ರದಲ್ಲಿ ನಂದಿತಾ ದಾಸ್ ಮತ್ತು ಮಾ।ಮಂಜು

ಚಿತ್ರೀಕರಿಸಿದ್ದುದು ಸಹಜವಾಗಿತ್ತು. ಇದು ಹಾಗೂ ಹೊಸ ಅಲೆ ಚಿತ್ರ ಪರಂಪರೆಯ ವಿಶೇಷ ಛಾಯಾಗ್ರಾಹಕ ಎಸ್.ರಾಮಚಂದ್ರ ಅವರ ಕ್ಯಾಮೆರಾ ಕೆಲಸ, ಶಶಿಧರ ಅಡಪರ ಕಲಾ ನಿರ್ದೇಶನ 'ದೇವೀರಿ'ಯನ್ನು ಉತ್ತಮ ಚಿತ್ರಗಳ ಪಂಕ್ತಿಯಲ್ಲಿ ನಿಲ್ಲಿಸಿತ್ತು. ಲಂಕೇಶ್ ತಮ್ಮ ಮಗಳಿಗಾಗಿ ಚಿತ್ರಕಥೆ, ಸಂಭಾಷಣೆಯಲ್ಲಿ ತೊಡಗಿಕೊಂಡಿದ್ದವರು ಚಿತ್ರದ ಬಿಡುಗಡೆಯ ಹೊತ್ತಿಗೆ, ಅದು ಪ್ರಶಸ್ತಿ, ಗೌರವಗಳನ್ನು ಗಳಿಸುವ ಕಾಲಕ್ಕೆ ಬದುಕಿರಲಿಲ್ಲ. ಅವರ ಹೆಸರಿನಲ್ಲಿ ನಡೆಸುತ್ತಿದ್ದ ಪತ್ರಿಕೆಯ ಸತ್ವವನ್ನು, ಒಂದು ನಿರ್ಭೀತ ಮನೋಭಾವವನ್ನು ತಮ್ಮೊಂದಿಗೆ ಕರೆದುಕೊಂಡು ೧೯೯೯ ರಲ್ಲಿ ಕಣ್ಮರೆಯಾದರು.

ಕನ್ನಡದ 'ನಾಗದೇವತೆ' ತೆಲುಗಿನ 'ಅಮ್ಮೋರು', 'ದೇವಿ' 'ದೇವಿ ಪುತ್ರುಡು' ಮುಂತಾದ 'ಸಾಮಾಜಿಕ ದೈವಿಕ' ಚಿತ್ರಗಳ ಸ್ಫೂರ್ತಿಯಿಂದ ತಯಾರಾದ ಚಿತ್ರ. ನಾಗರಹಾವನ್ನು, ಅದರ ಕುರಿತಾದ ಜನರ ಭಯ, ಭಕ್ತಿ, ಗೌರವವನ್ನು ದೃಷ್ಟಿಯಲ್ಲಿಟ್ಟುಕೊಂಡು ಭಾರತದ ಎಲ್ಲಾ ಭಾಷೆಗಳಲ್ಲಿ ಹೇರಳವಾಗಿ ಚಿತ್ರಗಳು ಬಂದಿವೆ. ವಿಶೇಷವೆಂದರೆ ಅವುಗಳಲ್ಲಿ ಬಹುತೇಕವು ಯಶಸ್ಸು ಕಂಡಿವೆ. ಆದರೆ ಹಳೆಯ ಚಿತ್ರಗಳಲ್ಲಿ ಮಾಯ, ಮಾಟ, ಮಂತ್ರದ ದೃಶ್ಯಗಳ ಚಿತ್ರಣಕ್ಕೆ ತಾಂತ್ರಿಕ ಅಡಚಣೆಗಳಿರುತ್ತಿದವು. ಆದರೂ ಹಿಂದಿನ ಪ್ರತಿಭಾವಂತರು ಇರುವ ಸೌಲಭ್ಯಗಳಲ್ಲಿಯೇ ಉತ್ತಮ ಪರಿಣಾಮ ಸಾಧಿಸಿದರು. ಅವರ ಈ ಶತಮಾನದ ಕೊನೆಯ ಭಾಗದಲ್ಲಿ ತಂತ್ರಜ್ಞಾನದ ಆವಿಷ್ಕಾರವಾಗಿ ಗ್ರಾಫಿಕ್ ಬಳಕೆಗೆ ಬಂತು. ಇದು ಹಾಲಿವುಡ್‌ನ 'ಟೈಟಾನಿಕ್', 'ದಿ ಮಾಸ್ಕ್', 'ಮೆನ್ ಇನ್ ಬ್ಲಾಕ್' ಮುಂತಾದ ಬೃಹತ್ ಚಿತ್ರಗಳಲ್ಲಿ ಬಳಕೆ ಆಗಿರುವ ರೀತಿ ಮಾಧ್ಯಮದ ಚರಿತ್ರೆಯಲ್ಲಿ ಅದ್ಭುತವೇ ಅನ್ನಿಸಿದೆ. ಆದರೆ ಕನ್ನಡ ಅಥವಾ ಇತರ ಪ್ರಾದೇಶಿಕ ಭಾಷಾ ಚಿತ್ರರಂಗಗಳು ಆ ಮಟ್ಟದ ಮಹಾನ್ ಕಲ್ಪನೆಗಳನ್ನು ಚಿತ್ರ ರೂಪಕ್ಕಿಳಿಸುವ ಸಾಮರ್ಥ್ಯ, ಆರ್ಥಿಕ ಹಿನ್ನೆಲೆ, ಮಾರುಕಟ್ಟೆಯನ್ನು ಹೊಂದಿಲ್ಲ. ಹೀಗಾಗಿ ಈ ತಂತ್ರ ಜ್ಞಾನವನ್ನು ಪೌರಾಣಿಕ, ಜಾನಪದ, ಸಾಮಾಜಿಕ-ದೈವೀಕ ಚಿತ್ರಗಳಲ್ಲಿ ಬಳಸಿಕೊಳ್ಳುವ ಜಾಣತನ ತೋರಿದರು. ಮೊದಲಿಗೆ ತೆಲುಗು, ತಮಿಳಿನಲ್ಲಿ ಕಾಣಿಸಿಕೊಂಡ 'ಗ್ರಾಫಿಕ್' ಅಳವಡಿಕೆ ಪ್ರೇಕ್ಷಕರನ್ನು ಸೆಳೆಯುವಲ್ಲಿ ಉತ್ತಮ ಫಲ ನೀಡಿತು. ರೂಪಾಂತರಗೊಳ್ಳುವುದು, ಗೊಂಬೆ ರೂಪದ ದೇವರುಗಳು ಎದ್ದು ನಡೆಯುತ್ತಾ ಬಂದು ದುಷ್ಟರನ್ನು ಸಂಹರಿಸುವುದು, ಕಾಫಿ ಬಟ್ಟಲಿನಿಂದ ಹೊರಡುವ ಹೊಗೆಯೇ ಹಾವಿನ ರೂಪದಲ್ಲಿರುವುದು, ಕಿವಿ ಕಿತ್ತರೆ ಮಾರುದ್ದ ಹೊರಗೆ ಬಂದು ಮತ್ತೆ ಯಥಾಸ್ಥಿತಿಗೆ ತಲುಪುವುದು - ಇಂಥ ಹತ್ತಾರು ಬಗೆಯ ತಂತ್ರಗಳು ಅದರ ಸಹಜವೆನಿಸುವ ಚಿತ್ರಣದಿಂದಾಗಿ ಜನರಿಗೆ ಇಷ್ಟವಾದವು. ವಾಸ್ತವವೆಂದರೆ ನಮ್ಮ ಪರಿಸ್ಥಿತಿಯಲ್ಲಿ ಮಾಡಲು ಸಾಧ್ಯವಿದ್ದುದು ಕೂಡ ಇಷ್ಟನ್ನೇ. ಇದು ಪ್ರೇಕ್ಷಕನಿಗೆ ಅಪಾರ ಮೋಡಿ ಮಾಡಿತು. 'ದೇವಿ', 'ಅಮ್ಮೋರು' ತೆಲುಗು ಚಿತ್ರಗಳು ಇಡೀ ದಕ್ಷಿಣ ಭಾರತದಾದ್ಯಂತ ಜಯಭೇರಿ ಬಾರಿಸಿದ್ದಲ್ಲದೆ, ಹಿಂದಿ ಮೂಲಕ ಉತ್ತರ ಭಾರತದ ಜನರನ್ನೂ ತಲುಪಿದವು. ಇಂಥ ಯಶಸ್ಸಿನ ದಾರಿಯಲ್ಲಿ ನಡೆಯುವ ಆಶಯವನ್ನಿಟ್ಟುಕೊಂಡೇ ಕನ್ನಡದಲ್ಲಿ 'ನಾಗದೇವತೆ' ನಿರ್ಮಾಣವಾಯಿತು. ಅದ್ದೂರಿ ಅನ್ನಿಸಬಹುದಾದ ಈ ಚಿತ್ರವನ್ನು ೧೦ ವರ್ಷಗಳಿಂದ ಉದ್ಯಮದ ಹಲವಾರು ವಿಭಾಗಗಳಲ್ಲಿ ದುಡಿಯುತ್ತಿದ್ದ ನಟ, ನಿರ್ಮಾಣ ನಿರ್ವಾಹಕ ಕರಿಸುಬ್ಬು, ಸ್ಥಿರಚಿತ್ರ ಛಾಯಾಗ್ರಾಹಕ ರಾಜು, ನಿರ್ದೇಶಕ ಸಾಯಿಪ್ರಕಾಶ್ ಮುಂತಾದವರು ಸೇರಿ ನಿರ್ಮಿಸಿದರು. ಚಿತ್ರ ಆರ್ಥಿಕವಾಗಿ ಯಶಸ್ಸು ಗಳಿಸಿದ್ದಲ್ಲದೆ, ತೆಲುಗಿನಲ್ಲೂ ಡಬ್ ಆಗಿ ಆಂಧ್ರದಲ್ಲೂ ಜಯಭೇರಿ ಬಾರಿಸಿತು. 'ದುಷ್ಟರನ್ನು ದೈವ ಶಿಕ್ಷಿಸದೆ ಬಿಡುವುದಿಲ್ಲ' ಎಂಬ ನಮ್ಮ ಪರಂಪರೆಯ ಗಾಢ ನಂಬಿಕೆಯನ್ನು ಗ್ರಾಫಿಕ್ ತಂತ್ರಜ್ಞಾನದ ಮೂಲಕ ಹೇಳುವ 'ನಾಗದೇವತೆ' ಶತಮಾನದ ಕೊನೆಯ ವರ್ಷದ ಯಶಸ್ವಿ ಚಿತ್ರಗಳಲ್ಲೊಂದಾಯಿತು.

ವರ್ಷಾಂತ್ಯದಲ್ಲಿ ತೆರೆಕಂಡ 'ಯಜಮಾನ' ಗಳಿಕೆ, ಜನಪ್ರಿಯತೆಯ ದೃಷ್ಟಿಯಿಂದ ಇತಿಹಾಸವನ್ನೇ ಸೃಷ್ಟಿಸಿತು. ಬಹಳ ಹಿಂದೆಯೇ ರೆಹಮಾನ್ ಅವರು ವಿಷ್ಣುವರ್ಧನ್ ಅಭಿನಯದ 'ಧಣಿ' ನಿರ್ಮಿಸಿದ್ದರು. ಶ್ರೀಮಂತವೇ ಆದರೂ ಹಲವು ಕಾರಣಗಳಿಂದ ಚಿತ್ರ ಜನರಿಗೆ ಹಿಡಿಸಲಿಲ್ಲ. ವಿಷ್ಣುವರ್ಧನ್ ಸ್ವಭಾವತಃ ಸಂಕೋಚ ಪ್ರವೃತ್ತಿಯವರು. ನಿರ್ಮಾಪಕರಿಗೆ ನಷ್ಟವಾದ್ದನ್ನು ವಿಪರೀತವಾಗಿ ಹಚ್ಚಿಕೊಂಡರು. ಅದೇ ನಿರ್ಮಾಪಕರ ಮತ್ತೊಂದು ಚಿತ್ರ 'ಮಂಗಳಸೂತ್ರ'ಕ್ಕೆ ಸಹಕಾರ ನೀಡಿದರು. ಆಗಲೂ ಏನೂ ಸಾಧಿತವಾಗಲಿಲ್ಲ. ರೆಹಮಾನ್ ಅವರು ಬೇರೆ ಬೇರೆ ಚಿತ್ರಗಳನ್ನು ಮಾಡಿದರು. ಏಕೋ ಸರಣಿ ಸೋಲುಗಳೇ ಎದುರಾದವು. ಬೇರೆ ಬೇರೆಯವರ ಹೆಸರುಗಳಲ್ಲಿ ಚಿತ್ರ ನಿರ್ಮಿಸಿ, ಹೇಗೋ ತೊಂದರೆಗಳಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದರೆಂಬ ಮಾತೂ ಇತ್ತು. ಪ್ರಾರಂಭದಲ್ಲಿ ಕೊಡುಗೈ ದೊರೆ ಎಂದು ಮೆಚ್ಚುಗೆ ಗಳಿಸಿದ್ದ ವ್ಯಕ್ತಿ ತದ್ವಿರುದ್ಧವಾದ ಆಕ್ಷೇಪಗಳನ್ನು ಎದುರಿಸಬೇಕಾಯಿತು. ಅಂತಿಮವಾಗಿ ತಮಿಳಿನ 'ವಾನತ್ತೈಪೋಲ' ಚಿತ್ರದ ಹಕ್ಕನ್ನು ಪಡೆದು ವಿಷ್ಣುವರ್ಧನ್ ಅವರ ಮನವೊಲಿಸಿ 'ಯಜಮಾನ' ಚಿತ್ರಿಸಿದರು. ತಮಿಳಿನಲ್ಲಿ ಚಿತ್ರ ಯಶಸ್ವಿಯಾಗಿತ್ತು. ಕನ್ನಡಕ್ಕೆ ತರುವಾಗ ಬರೀ ಕಥೆಯೇ ಅಲ್ಲ, ಯಶಸ್ವೀ ಸಂಗೀತವನ್ನೂ ನಕಲು ಮಾಡುವ ಯೋಜನೆ ಹಾಕಿದರು. 'ಯಜಮಾನ' ಚಿತ್ರ ಶ್ರೀಮಂತವಾಗಿದೆ. ಹಾಡುಗಳು ಜನಪ್ರಿಯವಾಗಿವೆ. ಪ್ರೇಕ್ಷಕನನ್ನು ಕುಣಿಸುವಂಥ ಲಯ, ಸಾಧಿತ ಸಾಹಿತ್ಯಕ್ಕಿಂತ ವಾದ್ಯಗೋಷ್ಠಿಯ ವಿಜೃಂಭಣೆ. ಚಿತ್ರೀಕರಣವೂ ಚೆನ್ನವೇ. ಛಾಯಾಗ್ರಾಹಕರು ರಮ್ಯ-ಸೌಮ್ಯ ಅನ್ನುವಷ್ಟು ಚೆನ್ನಾಗಿ ಕೆಲಸ ಮಾಡಿದ್ದಾರೆ. ವಿಷ್ಣುವರ್ಧನ್ ಅವರ ಮಗಳು ಕೀರ್ತಿ ಸೊಗಸಾದ ಉಡುಪುಗಳ ವಿನ್ಯಾಸ ಮಾಡಿದಾರೆ. ವಿಷ್ಣುವರ್ಧನ್ ಅವರ ಜೊತೆಗೆ ಪ್ರೇಮಾ ಚೆನ್ನಾಗಿ ಹೊಂದಿಕೊಂಡರೆನ್ನಿಸುತ್ತದೆ. ಆ ಜೋಡಿಯೂ ಜನಪ್ರಿಯವೇ ಆಯಿತು.



(ಚಿತ್ರ ೧೫೩) 'ಯಜಮಾನ' ಚಿತ್ರದಲ್ಲಿ ವಿಷ್ಣುವರ್ಧನ್ ಮತ್ತು ರಮೇಶ್ ಭಟ್

ಮನೆಯ ಹಿರಿಯಣ್ಣನಾಗಿ ಪುಟ್ಟ ತಮ್ಮಂದಿರು, ವಯಸ್ಸಾದ ಅಜ್ಜಿಯನ್ನು ಕಾಪಾಡುತ್ತ ತನ್ನ ಜೀವಮಾನವಿಡೀ ತ್ಯಾಗ-ಪ್ರೀತಿ ಎಂತಲೇ ಬದುಕುವ ವ್ಯಕ್ತಿತ್ವವನ್ನು ವಿಷ್ಣುವರ್ಧನ್ ಸೊಗಸಾಗಿ ಅಭಿನೀತಗೊಳಿಸಿದರು. ದ್ವಿಪಾತ್ರವಾದ್ದರಿಂದ ಮೂವರು ತಮ್ಮಂದಿರಲ್ಲಿ ಹಿರಿಯ ತಮ್ಮನಾಗಿಯೂ ವಿಷ್ಣುವರ್ಧನ್ ಅವರೇ ಅಭಿನಯಿಸಿರುವುದು ಅವರ ಅಭಿಮಾನಿಗಳನ್ನು ತಣಿಸುವ ಪ್ರಯತ್ನ. ಶಶಿಕುಮಾರ್, ಅಭಿಜಿತ್ ಇನ್ನಿಬ್ಬರು ತಮ್ಮಂದಿರು. ಇಡೀ ಚಿತ್ರ ಬಂಧು ಪ್ರೇಮ, ಒಂದಾದ ಬದುಕಿಗಿಂತ ಹೆಚ್ಚಿನ ಶ್ರೀಮಂತಿಕೆ ಇನ್ನೊಂದಿಲ್ಲ ಎಂಬ ತತ್ವದ ಹಿಂದೆ ಸಾಗುತ್ತದೆ. ಒಟ್ಟು ಸಂಸಾರದ ಕಥೆಗಳು ಹೊಸದೇನಲ್ಲ. ಆದರೆ ಈ ಚಿತ್ರದ ಇನ್ನೊಂದು ವಿಶೇಷವೆಂದರೆ ಮತ್ತೆ ಮತ್ತೆ ಒತ್ತಿ ಹೇಳುವ ಸಹೋದರ ಪ್ರೇಮ, ಅದನ್ನು ಭಂಜಿಸುವ ಸವಾಲು ಹಾಕಿ ಪ್ರಯತ್ನಿಸುವವರುಗಳ ಕಾರಣದಿಂದ ನಡೆಯುವ ಕೆಲವು ಕುತೂಹಲಕರ ಪ್ರಸಂಗಗಳು. ಮನೆಗೆ ಸೊಸೆಯರು ಬಂದರು. ಸಾಮಾನ್ಯವಾಗಿ ಇದುವರೆಗಿನ ಚಿತ್ರ ಮಾಧ್ಯಮದಲ್ಲಿ 'ಹೊರಗಿನವರಾಗಿ' ಬರುವ ಸೊಸೆ ಅಥವಾ ಅವಳ ಜೊತೆಯವರು ಒಟ್ಟು ಸಂಸಾರವನ್ನು ಒಡೆಯುವ ಶಕ್ತಿಗಳು ಎಂದು ಹೇಳುತ್ತ ಬರಲಾಗಿದೆಯಷ್ಟೇ. ಇಲ್ಲಿಯೂ ಅಂಥದೇ ಸನ್ನಿವೇಶವನ್ನು ಸೃಷ್ಟಿಸಿ ಹೀಗೇ ಆಗುತ್ತದೆಂದು ನಿರೀಕ್ಷಿಸುತ್ತ ಉತ್ಕಂಠಿತನಾಗಿ ಕಾಯುವ ಪ್ರೇಕ್ಷಕನಿಗೆ ಅಂಥದೇನೂ ಸಂಭವಿಸದೇ ಆ ಸೊಸೆ ಕುಟುಂಬದಲ್ಲಿ ಸೇರಿ ಹೋಗುವ, ಮಿಗಿಲಾದ ವಾತ್ಸಲ್ಯಮಯಿ ಆಗುವ ತಿರುವುಗಳು ಎದುರಾಗುತ್ತವೆ. ಒಮ್ಮೆಲೇ ಉಸಿರು ಕಟ್ಟಿದ ಅನುಭವದಿಂದ ಬಿಡುಗಡೆ. ಇಂಥ ಸನ್ನಿವೇಶಗಳು ಚಿತ್ರದ ಉದ್ದಕ್ಕೂ ಸೇರಿವೆ. ಇದುವರೆಗೆ ಚಿತ್ರಗಳು ಹೇಳಿಕೊಂಡು ಬಂದ ಮನುಷ್ಯ ಸ್ವಭಾವಗಳನ್ನು ತಿರುವು ಮುರುವಾಗಿಸುವುದರಲ್ಲೇ ಬದಲಾಗುತ್ತಿರುವ ಸಾಮಾಜಿಕ ಸಂದರ್ಭ ಮತ್ತು ಬದಲಾವಣೆಯನ್ನು ಬಯಸುವ ಮನಸ್ಸುಗಳನ್ನು ತಣಿಸುವ ಪ್ರಯತ್ನ ಎರಡೂ ಕಾಣುತ್ತದೆ. ಪ್ರತಿನಿತ್ಯದ ಬದುಕಿನಲ್ಲಿ, ಮಾಧ್ಯಮಗಳಲ್ಲಿ ಕ್ರೌರ್ಯದ ಅತಿರೇಕವನ್ನು ಕಾಣುತ್ತಿರುವ ಮನಸ್ಸುಗಳಿಗೆ ನೆಮ್ಮದಿ, ಎಲ್ಲ ಕಡೆ ಸುಖವಿದೆ ಎಂಬುದನ್ನು ಕಾಣುವ ಬಯಕೆ. ಅದನ್ನೇ ಕೊಡುತ್ತದೆ 'ಯಜಮಾನ'. ಈ ಚಿತ್ರದ ಯಶಸ್ಸಿಗೆ ಇವೆಲ್ಲ ಕಾರಣಗಳಾಗಿವೆ ಅನ್ನಿಸುತ್ತದೆ. ಇಂಥ ಕಾರಣಕ್ಕೇ ಕಥೆ-ಸಂಗೀತ ಎಲ್ಲವೂ ಎರವಲಾದರೂ ಪರಿಗಣಿಸದೆ ಪ್ರೇಕ್ಷಕರು ಅದನ್ನು ಒಪ್ಪಿಕೊಂಡಿದ್ದಾರೆ. ಅಭೂತಪೂರ್ವ ಯಶಸ್ಸಿನ ಕಾರಣದಿಂದಾಗಿ ಖುಷಿಯಾದ ಚಿತ್ರ ತಂಡ ಕರ್ನಾಟಕಾದ್ಯಂತ

ಪ್ರವಾಸ ಮಾಡಿತು. ಜನ ತನ್ನ ಮೆಚ್ಚಿನ ನಾಯಕನನ್ನು ಹತ್ತಿರದಿಂದ ಕಂಡು ಹಿಗ್ಗಿತು. 'ಯಜಮಾನ' ಹೀಗೆ ಈ ಶತಮಾನದ ಕೊನೆಯಲ್ಲಿ ಇತಿಹಾಸ ಮಾಡಿದೆ. ಸಂಬಂಧಪಟ್ಟವರನ್ನು ಉದ್ಯಮವನ್ನು ಮತ್ತೆ ನಗುನಗುತ್ತ ಕೆಲಸದಲ್ಲಿ ತೊಡಗಿಕೊಳ್ಳಲು ಪ್ರೇರಿಸಿದ. ಈ ಪ್ರೇರಣೆ ಎಲ್ಲ ಈಗಾಗಲೇ ಇರುವ ಯಶಸ್ವಿಯಾದ ಅನ್ಯ ಭಾಷಾ ಚಿತ್ರಗಳ ಹಕ್ಕು ಪಡೆಯುವ ಕಡೆಗೇ ವಾಲುತ್ತದೋ ಎಂಬ ಆತಂಕವೂ ಇಲ್ಲದಿಲ್ಲ. ಅಂಥ ಕೆಲವು ಪ್ರಸಂಗಗಳೂ ಕಣ್ಣೆದುರಿಗೇ ಇವೆ.

೨೦೦೦ ಮುಗಿಯುತ್ತಿದೆ ಎನ್ನುವ ಹೊತ್ತಿಗೆ ನಾವು ಎಲ್ಲಿದ್ದೇವೆ? ಏನಾಗುತ್ತಿದೆ? ಚಿತ್ರರಂಗ ಕೋಟಿಗಳ ಲೆಕ್ಕದವರಿಗೆ ಮಾತ್ರವೆ? ಅದ್ದೂರಿ, ಸೌಂದರ್ಯ ಎನ್ನುವುದೆಲ್ಲ ತೀರಾ ಪದಾರ್ಥಗಳ ನೆಲೆಗೆ ಸೀಮಿತವೆ? ಅದು ಅಂತರಂಗದ ಭಾವನೆಗಳ ಅರ್ಥದಲ್ಲೂ ವ್ಯಾಖ್ಯಾನ ಯೋಗ್ಯವೆ? ಎಂಬೆಲ್ಲ ಯೋಚನೆಗಳು ಸುಳಿದಾಡುತ್ತಿದ್ದವು. ಅಂಥ ಹೊತ್ತಿನಲ್ಲಿ 'ಮುನ್ನುಡಿ' ಯಂಥ ಚಿತ್ರವೊಂದು ತೆರೆಗೆ ಬಂತು. ಶ್ರೇಷ್ಠ ಕೆಲಸಗಳು, ಪ್ರಶಸ್ತಿ ಗಳಿಕೆ ಕನ್ನಡ ಚಿತ್ರರಂಗಕ್ಕೆ ಹೊಸದೇನಲ್ಲ. 'ಮುನ್ನುಡಿ' ಚಿತ್ರದ ಸಂದರ್ಭದಲ್ಲಿ ವಿಶೇಷವೆನಿಸಿದ್ದೆಂದರೆ ಅತಿ ಕಡಿಮೆ ವೆಚ್ಚದಲ್ಲಿ, ಸಾಮೂಹಿಕ ಪ್ರಯತ್ನವಾಗಿ ಉತ್ತಮ ಅಭಿರುಚಿಯ ಚಿತ್ರವನ್ನು ಕೊಟ್ಟಿದ್ದು. ಚಿತ್ರದ ನಿರ್ದೇಶಕ ಪಿ.ಶೇಷಾದ್ರಿ ಮೂಲತಃ ಪತ್ರಕರ್ತ-ಬರಹಗಾರ. ಅಲ್ಲಿ ಶೂನ್ಯ ಎದುರಾದಾಗ ವೃತ್ತಿಯೇ ಸಿನಿಮಾ ಎಂದುಕೊಂಡು ಹೆಜ್ಜೆ ಇಟ್ಟವರು. ೧೯೯೧ ರಲ್ಲಿ ಅಶೋಕ್ ಬಾದರದಿನ್ನಿ ಅವರ 'ಗೌರಿಶಂಕರ' ಚಿತ್ರಕ್ಕೆ ಚಿತ್ರಕಥೆ-ಸಂಭಾಷಣೆ, ಸಹನಿರ್ದೇಶನ ಮಾಡಿದಾಗ ನೇರವಾದ ಅನುಭವ. ಅಲ್ಲಿ ಪರಿಚಿತರಾದ ನಾಗಾಭರಣ ಆಹ್ವಾನದ ಮೇಲೆ ಅವರ ಚಿತ್ರ ನಿರ್ಮಾಣದಲ್ಲಿ ತೊಡಗಿದರು. "...ನನ್ನ ಮಟ್ಟಿಗೆ ಭರಣರ ಕಾರ್ಯ ವಿಧಾನ ಒಂದು ಸ್ಕೂಲ್ ಇದ್ದ ಹಾಗೆ. ಅಲ್ಲಿ ಕಿರುತೆರೆ, ಹಿರಿತೆರೆ, ಜಾಹಿರಾತು ಚಿತ್ರ, ಸಾಕ್ಷ್ಯಚಿತ್ರ ಎಲ್ಲವನ್ನೂ ನಿರ್ಲಿಪ್ತವಾಗಿ ಅಷ್ಟೇ ಶ್ರದ್ಧೆಯಿಂದ ಮಾಡುತ್ತಾರೆ. ಅದು ನಿಜವಾದ ವೃತ್ತಿಪರತೆ. ನಾನು ಅಲ್ಲಿ ನಿಜವಾದ ವ್ಯಾಕರಣವನ್ನು ಕಲಿತೆ. ಮುಂದೆ ಕಿರುತೆರೆಯಲ್ಲಿ ಮಾಡಬಹುದಾದ ಎಲ್ಲ ತಪ್ಪುಗಳ ಜೊತೆ ಕೆಲಸ-ಗಳಿಕೆ ಎರಡೂ ಸಾಧ್ಯವಾಯಿತು. ದೂರದರ್ಶನ ಬಂದದ್ದು ನಮ್ಮಂಥವರಿಗೆ ಒಂದು ವರವಾಯಿತೆನ್ನಬಹುದು. ಕಿರುತೆರೆಯಾಗಲಿ, ಹಿರಿತೆರೆಯಾಗಲಿ ಏನು ಮಾಡಬಾರದು ಎಂಬುದನ್ನು ತಿಳಿದುಕೊಂಡೆ. ಆ ಹೊತ್ತಿಗೆ ಎಲ್ಲ ಟ್ರಯಲ್ ಅಂಡ್ ಎರರ್‌ಗಳೂ ಆಗಿ ಅನುಭವ ಕೊಂಚ ಕಲಿಸಿತ್ತು. ಅದೇ 'ಮುನ್ನುಡಿ' ಚಿತ್ರ ಮಾಡುವ ಸಾಹಸಕ್ಕೆ ಪ್ರೇರಣೆ" ಎನ್ನುತ್ತಾರೆ ಪಿ.ಶೇಷಾದ್ರಿ.

ಕಥೆಗಾರ ಬೊಳುವಾರು ಮಹಮ್ಮದ್ ಕುಂಞ ಅವರಿಗೆ ಮುಸ್ಲಿಂ ಜನಾಂಗದ ಧಾರ್ಮಿಕ ವಿಧಿಯಾಚರಣೆಯನ್ನು ಕುರಿತು ಹೇಳುವ ಈ ಕಥಾವಸ್ತುವನ್ನು ಚಲನಚಿತ್ರಕ್ಕೆ ಕೊಡುವಾಗಲೇ ಅಳುಕು. ಆದರೆ ಶೇಷಾದ್ರಿ ಅವರು ಬೋಳುವಾರರನ್ನೇ ಸಾಹಿತ್ಯ ಸಿದ್ಧತೆಯಲ್ಲಿ ತೊಡಗಿಸಿಕೊಂಡಿದ್ದರಿಂದಾಗಿ ಕೃತಿಗೆ ಅಪಚಾರವೂ ಆಗದೆ, ಲೇಖಕರ ಆಕ್ಷೇಪಣೆಯೂ ಇಲ್ಲದ ಹಾಗೆ ನಿವಾರಿಸಿಕೊಳ್ಳಲು ಸಾಧ್ಯವಾಯಿತು. ಸಾಹಿತ್ಯ ವಲಯದಲ್ಲಿ ಸಿನಿಮಾ ಬಗ್ಗೆ ಇನ್ನೂ ಗೌರವ-ನಂಬಿಕೆ ಇಲ್ಲ. ನಮ್ಮಲ್ಲಿ ಶ್ರೇಷ್ಠ-ಉತ್ತಮ ಸಾಹಿತ್ಯವಿದ್ದರೂ ಆ ಸಾಹಿತಿಗಳ ಭಾಗವಹಿಕೆಯೂ ಇದ್ದರೆ ಕೃತಿ ಹೆಚ್ಚು ಅರ್ಥಪೂರ್ಣವಾಗಿ ಅಳವಡಿಕೆಯಾಗುತ್ತದೆ. ನಮ್ಮಲ್ಲಿ ಹಾಗಾದ ಉದಾಹರಣೆಗಳು ಬಹಳ ಕಡಿಮೆ ಇವೆ. ಬೊಳುವಾರು ಪ್ರಸಿದ್ಧ ಬರಹಗಾರ ಜನಾನುರಾಗಿ. ಪ್ರಗತಿಶೀಲ ಮನೋಭಾವವನ್ನು ಯುವಕರಲ್ಲಿ ತುಂಬಿದವರು. ಆದರಿಂದಾಗಿ 'ಮುನ್ನುಡಿ'ಯಂಥ ಕಥಾವಸ್ತುವಿಗೆ ಬ್ಯಾರಿ ಜನಾಂಗ, ಮಂಗಳೂರು, ಸುರತ್ಕಲ್ ಮತ್ತಿತರ ಗ್ರಾಮಾಂತರ ಪ್ರದೇಶಗಳಲ್ಲಿ ತುಂಬು ಸಹಕಾರ ಸಿಕ್ಕಿದೆ. ಅವರದೇ ಮನೆಗಳಲ್ಲಿ ಚಿತ್ರಿಸಲಾಯಿತು. ವಾಸ್ತವತೆ ತುಂಬಲು ಆ ಜನಾಂಗದ ಒಳ ಆವರಣದಲ್ಲಿ ಬಳಸುವ ಕೆಲವು ಪಾರಿಭಾಷಿಕ ಶಬ್ದಗಳನ್ನು ಬಳಸಿಕೊಳ್ಳಲಾಗಿತ್ತು. ಮತ್ತು ಅವರ ಜಾನಪದ ಧಾಟಿಗಳಾದ 'ಮಾಪಿಳ್ಳೆ ಪಾಟ್ಟು' ಇತ್ಯಾದಿ ಬಳಸಿ ಹಾಡುಗಳಿಗೆ ರಾಗ ಸಂಯೋಜನೆ ಮಾಡಲಾಗಿತ್ತು. ಹೆಚ್ಚಿನಂಶ ತಂತಿವಾದ್ಯಗಳನ್ನು ಬಳಸಿದರು. ಅನಂತರ ಮನೆ ಮನೆಗಳಿಂದಲೇ ಪೋಷಾಕುಗಳನ್ನು ಪಡೆದುಕೊಂಡರು. ಇವೆಲ್ಲ ತುಂಬ ನೈಜವಾಗಿ ಕಾಣಲು ನೆರವಾದವು. ಚಿತ್ರದ ಕತೆ ಹೇಳುವಾಗಲೂ ಯಾವುದೇ ಪ್ರಯೋಗಗಳಿಗೆ ಹೋಗದೆ ನೇರವಾಗಿ ಕಥೆ ಹೇಳುವ ಪ್ರಯತ್ನವಿತ್ತು. ಹೆಚ್ಚೆಂದರೆ ಕೆಲವೆಡೆ ಸಮುದ್ರದ ಅಲೆಗಳ ಪರಿಳಿತ, ಕಾಗೆ, ಹದ್ದು ಮೊದಲಾದ ಕೆಲವು ಅವರದೇ ದಿನನಿತ್ಯದ ಸಂಗತಿಗಳನ್ನೇ ಸಂಕೇತಗಳಾಗಿ ಬಳಸಲಾಗಿತ್ತು. "ಆ ಜನ ಅದೆಷ್ಟು ಪ್ರೀತಿ ತೋರಿಸಿದರೆಂದರೆ ಅವರ ದರ್ಗಾದಲ್ಲಿ ಚಿತ್ರಿಸಲೂ ನೆರವಾದರು. ಅಲ್ಲಿರುವ ಪ್ರಗತಿಪರ ಚಿಂತಕ ತರುಣರ ಗುಂಪು ನಮ್ಮ ಜೊತೆಗಿತ್ತು. ಹಿರಿಯರ ಹರಕೆ ಇತ್ತು..." ಎನ್ನುತ್ತಾರೆ ಪಿ.ಶೇಷಾದ್ರಿ.

ಯಾವುದೇ ಕಾರಣಕ್ಕೂ ಸಾಲ ಮಾಡದೆ ತಲಾ ಒಂದು ಲಕ್ಷಕ್ಕೆ ಕಡಿಮೆ ಇಲ್ಲದಂತೆ ಹಣ ಹಾಕಿ ಮುಂದೆ ಹಣ ಬರಲಿ, ಬಿಡಲಿ ತಕರಾರು ಮಾಡಕೂಡದೆಂಬ ಒಪ್ಪಂದದೊಡನೆ ಪ್ರಾರಂಭಿಸಿದ 'ನವಚಿತ್ರ'ದ ಒಂಬತ್ತು ಜನ ಸಕ್ರಿಯವಾಗಿ ಚಿತ್ರಕ್ಕೆ ದುಡಿದರು. ಹಣ ಹಾಕಿ ಏನೂ ಮಾಡದವರಿಂದ ಬಂಡವಾಳ ಬೇಡ. ಎಲ್ಲರ ಇನ್ವಾಲ್ವ್‌ಮೆಂಟ್ ಬೇಕು ಎಂಬ ನಿಲುವು. ಅವರವರ ಕೆಲಸಕ್ಕೆ ಒಂದು ಟೋಕನ್ ಎಂಬಂಥ ಸಂಭಾವನೆಯೂ ಇತ್ತು. ಗೆಳೆಯರ ಆಲೋಚನೆ ಎಷ್ಟು ಮುಂದೆ ಹೋಗಿತ್ತೆಂದರೆ ನಾಳೆ ಪ್ರಶಸ್ತಿ ಇತ್ಯಾದಿಗಳು, ವಿದೇಶ ಪ್ರವಾಸದಂಥ ಅವಕಾಶಗಳು ಬಂದರೆ ನಾನು-ತಾನು ಎನ್ನದೆ ಯಾರು ಹೋಗಬೇಕೆಂತಲೂ ಮೊದಲೇ ತೀರ್ಮಾನಿಸಲಾಗಿತ್ತು. 'ನವಚಿತ್ರ' ಶೀರ್ಷಿಕೆಯಲ್ಲೇ ಪ್ರಚಾರವಿರಲಿ, ಒಳಗಿನ ಜನರ ಹೆಸರು ಬೇಡ ಎಂಬ ನಿಲುವು. ಚಿತ್ರವೇನೋ ಸಿದ್ಧವಾಯಿತು. ವಿತರಕರು ಬರಲಿಲ್ಲ. ಪ್ರದರ್ಶನ ಏರ್ಪಾಡು ಮಾಡಿದಾಗಲೂ ಬರಲಿಲ್ಲ. ಕಡೆಗೆ 'ನವಚಿತ್ರ'ವೇ ವಿತರಕನಾಗಲು ಯೋಚಿಸಿತ್ತು. ಕಡೆಗೂ ಚಿತ್ರ ಮಂಗಳೂರಿನಲ್ಲಿ ಬಿಡುಗಡೆಯಾಗುವ ಸಿದ್ಧತೆ. ಅಲ್ಲಿನ ಚಿತ್ರಮಂದಿರದವರಿಗೆ ಇದೊಂದು ತಮಾಷೆಯ ಸಂಗತಿ. ಮಂಗಳೂರಿನಲ್ಲಿ ಕನ್ನಡ ಚಿತ್ರದ ಮೊದಲ ಪ್ರದರ್ಶನವೇ ? ಕಡೆಗೆ ಮುಂಗಡ ಬಾಡಿಗೆ ಕೊಟ್ಟುಬಿಡಿ ಅಂದರು. ಹಾಗೇ ಮಾಡಿದರು. ಆದರೆ ಆಶ್ಚರ್ಯಕರ ರೀತಿಯಲ್ಲಿ ಚಿತ್ರ ಓಡಿತು. ಮೊದಲ ವಾರ ಬಂದ ಕಲೆಕ್ಷನ್ ಹಣದಲ್ಲೇ ಇನ್ನೊಂದು ಪ್ರಿಂಟ್ ಹಾಕಿಸಿದರು. ಬೆಂಗಳೂರಿನಲ್ಲಿ ಬಿಡುಗಡೆಯಾದ ಥಿಯೇಟರ್ ಸರಿಯಿರಲಿಲ್ಲ. ಕನ್ನಡ ಪ್ರೇಕ್ಷಕ ಬರುವ ಅಭ್ಯಾಸ ಇಲ್ಲದ ಚಿತ್ರಮಂದಿರ. ಸವಿತ ಚಿತ್ರಮಂದಿರ ಮೊದಲಾದ ಕಡೆ ಅಧಿಕವಲ್ಲದಿದ್ದರೂ ಬಾಡಿಗೆ ತುಂಬಲು ಸಾಧ್ಯವಾಯಿತು. ಹೀಗೆ 'ಮುನ್ನುಡಿ'ಯದೇ ಒಂದು ರೋಚಕ ಕಥೆ.

ಚಿತ್ರ ಕೇಂದ್ರ ಪ್ರಶಸ್ತಿ ಪಡೆಯಿತು. ಇಂಥದೊಂದು ಚಿತ್ರ ಸಿದ್ಧವಾಗಲು ಸರ್ವ ವಿಧದಲ್ಲೂ ಬೆಂಬಲಿಸಿದ ದತ್ತಾತ್ರೇಯ ಅವರಿಗೂ ಅಭಿನಯಕ್ಕೆ ಪ್ರಶಸ್ತಿ ಬಂತು. ಉತ್ತಮ ಚಿತ್ರ, ಯಶಸ್ಸು, ಅದರ ಹಿಂದಿರುವ ಸಾಹಸದ ಕಥೆ ಹೇಳುವುದರ ಹಿಂದೆ ನಾಳೆಗಳ ಬಗ್ಗೆ ಒಂದು ಆಶಾಕಿರಣ ಮಿಂಚುತ್ತಿದೆ. ಈ ಹಿಂದೆ ಸಹಕಾರಿ ವಿಧಾನದಲ್ಲಿ ಆದ ಚಿತ್ರ ನಿರ್ಮಾಣಗಳು ಮತ್ತೆ ಮುಂದುವರಿದಿಲ್ಲ. ನೆರೆಯ ಕೇರಳ ರಾಜ್ಯದಲ್ಲಿ ಇದೆಲ್ಲ ಸಾಧ್ಯವಾಗುವುದಾದರೆ ನಮಗೇಕೆ ಸಾಧ್ಯವಾಗಬಾರದು? 'ನವಚಿತ್ರ' ಸಹಕಾರ ಯೋಜನೆಗಳು ಏಕೆ ವಿಫಲವಾದವು ಎಂಬುದನ್ನೇ ಶೋಧಿಸಿತು, ಅಂಥ ತೊಡಕುಗಳನ್ನು ಪ್ರಾರಂಭದಲ್ಲೇ ನಿವಾರಿಸಿಕೊಂಡಿತ್ತು. ಚಿತ್ರ ತಯಾರಾದ ಬಗೆ ಉದ್ಯಮದಲ್ಲಿ ಅನೇಕರ ಗಮನ ಸೆಳೆದಿದೆ. 'ನವಚಿತ್ರ'ವೂ ಮುಂದಿನ ಚಿತ್ರ ತಯಾರಿಯಲ್ಲಿದೆ ಮತ್ತು ಅವರನ್ನು ಹಲವರು ಹಾಗೆ ಕಡಿಮೆ ವೆಚ್ಚದಲ್ಲಿ ಉತ್ತಮ ಚಿತ್ರ ಮಾಡಿಕೊಡಿ ಎಂತಲೂ ಕೇಳಿದ್ದಾರೆ. ಇವೆಲ್ಲ ಶುಭ ಸೂಚನೆಗಳಾಗಿಯೇ ತೋರುತ್ತದೆ. 'ಮುನ್ನುಡಿ' ಸಾಮಾಜಿಕ ಕಳಕಳಿ ಇರುವ, ಸ್ತ್ರೀ ಶೋಷಣೆಯನ್ನು ಪ್ರಶ್ನಿಸುವ ಸ್ತ್ರೀಯೊಬ್ಬಳ ಬದುಕಿನ ಚಿತ್ರಣ. ಅಪರೂಪವೆನಿಸುವಂಥ ಗೀತೆಗಳಿವೆ. ಬಳಸಲಾದ ಕುಪ್ಪಾಯ, ಲೇಸು, ಅಂಬತ್ತು, ಕುಪ್ಪಿಬಳೆ ಮೊದಲಾದ ಶಬ್ದಗಳು ಗ್ರಾಮೀಣ ಭಾಷೆಯ ಸೊಗಡನ್ನು ಮತ್ತೆ ನೆನಪಿಸಿವೆ. ಸೊಗಸಾದ ರಾಗ ಸಂಯೋಜನೆ, ಚಿತ್ರಣ, ಅಭಿನಯ, ಗೀತೆಗಳ ವೈಶಿಷ್ಟ್ಯ ಇರುವ ಚಿತ್ರ 'ಮುನ್ನುಡಿ'. "ಹದಿನಾರು ಎಂಎಂನಿಂದ ೩೫ ಎಂಎಂಗೆ ಬ್ಲೋಅಪ್ ಮಾಡಲಾಗಿದೆ. ಎಲ್ಲ ತಾಂತ್ರಿಕ ಸೌಲಭ್ಯವೂ ಇಲ್ಲೇ ಇದೆ. ರಹಸ್ಯವೇನಿಲ್ಲ" ಎನ್ನುತ್ತಾರೆ ನಿರ್ದೇಶಕ ಶೇಷಾದ್ರಿ.

ತಾರಾ ಬಹು ಕಾಲದಿಂದ ಚಿತ್ರರಂಗದಲ್ಲಿದ್ದೂ ಸರಿಯಾದ ಪಾತ್ರಗಳು ಲಭ್ಯವಿಲ್ಲದೆ ಪೋಷಕ ನಟಿಯೂ ಆಗಿ ಅಭಿನಯಿಸಿದ್ದುಂಟು. ಅಲ್ಲಿಯೂ ಆಗ ಈಗ ಪ್ರತಿಭೆ ಮೆರೆದು ಮೆಚ್ಚಿಸಿದ ತರುಣಿಗೆ ಈ ಹೊತ್ತಿಗೆ ಅನುಭವ ಮಾಗಿಸಿದೆ. ಪಕ್ವವಾದ ನಡೆ, ನೋಟ, ಭಾವ ಕೊಡಬಲ್ಲವರಾಗಿದ್ದಾರೆ. ಆಕೆಯ ಈ ಪಕ್ವತೆಯ ಹಿಂದೆ ಚಲನಚಿತ್ರಕ್ಕೂ ಮಿಗಿಲಾಗಿ ಕಿರುತೆರೆಯಲ್ಲಿ ಆಕೆಗೆ ದೊರೆತ ಪಾತ್ರಗಳು ಕಾರಣವಾಗಿವೆ. ಈಚಿನ ಆಕೆಯ ಹಲವು ಪಾತ್ರಗಳಲ್ಲಿ ಘನತೆ ತುಂಬಿಕೊಂಡಿವೆ. 'ಕಾನೂರು ಹೆಗ್ಗಡಿತಿ'ಯ ಅಭಿನಯಕ್ಕೆ ಆಕೆಗೆ ಪ್ರಶಸ್ತಿಯೂ ಬಂದಿದೆ. ಇವೆಲ್ಲ ಕನ್ನಡ ಚಿತ್ರರಂಗಕ್ಕೆ ಮುಳ್ಳು ಕಂಬಿಯ ಬೇಲಿಯ ನಡುವೆ ಕಾಣುತ್ತಿರುವ ಸ್ವಚ್ಛ ಕಂಪಿನ ಮಲ್ಲಿಗೆಯ ಅರಳಿನಂತೆ... ಅವೇ ಆಶಾಕಿರಣಗಳು. ಹತ್ತು ಕಟ್ಟುವೆಡೆ ಒಂದು ಮುತ್ತು ಕಟ್ಟುವ ಬಗೆ.

ಚಿತ್ರರಂಗದ ಚಟುವಟಿಕೆಗಳು ಸಹಜವೆನ್ನಿಸುವಂತೆ ನಡೆದುಕೊಂಡು ಹೋಗುತ್ತಿದ್ದ ಈ ಶತಮಾನದ ಕೊನೆಯ ವರ್ಷದಲ್ಲಿ 'ಶತಮಾನದ ದುರಂತ' ಎಂದು ಕರೆಯಬಹುದಾದ ದುರ್ಘಟನೆ ನಡೆಯಿತು. ಕೇರಳ, ತಮಿಳುನಾಡು, ಕರ್ನಾಟಕ ಮೂರು ರಾಜ್ಯಗಳ ಗಡಿಗಳನ್ನು ಒಳಗೊಂಡ ೫೫ ಸಾವಿರ ಚದರ ಮೀಟರ್‌ಗಳಲ್ಲಿ



(ಚಿತ್ರ ೧೬೪) 'ಮುನ್ನುಡಿ' ಚಿತ್ರದಲ್ಲಿ ನಾ.ದಾಮೋದರ ಶೆಟ್ಟಿ, ವೆಂಕಟೇಶ್ ಮೂರ್ತಿ, ದತ್ತಾತ್ರೇಯ ಮತ್ತು ತಾರಾ,

ವ್ಯಾಪಿಸಿರುವ ಕಾಡನ್ನು ಕಾರ್ಯಕ್ಷೇತ್ರ ಮಾಡಿಕೊಂಡು ೧೯೭೬ ರಿಂದಲೂ ಅಪಹರಣ, ಕೊಲೆ, ದರೋಡೆ, ಪ್ರಾಣಿವಧೆ ಮಾಡುತ್ತಾ ಸರ್ಕಾರ, ಪೊಲೀಸರಿಗೆ ತಲೆನೋವಾಗಿದ್ದ ವೀರಪ್ಪನ್, ರಾಜಕುಮಾರ್ ಅವರನ್ನು ಅಪಹರಿಸಿ ಇಡೀ ದೇಶವೇ ಬೆಚ್ಚಿಬೀಳುವಂತೆ ಮಾಡಿದ. ಯಾರೂ ನಿರೀಕ್ಷಿಸಿರದಿದ್ದ ಈ ಘಟನೆಯಿಂದ ಕರ್ನಾಟಕ, ತಮಿಳುನಾಡು ಸರ್ಕಾರ ಮಾತ್ರವಲ್ಲದೆ ಕೇಂದ್ರಸರ್ಕಾರ ಕೂಡ ಕೈಕಟ್ಟಿ ಕೂರುವಂಥ ಪರಿಸ್ಥಿತಿ ಎದುರಾಯಿತು. ರಾಜಕುಮಾರ್ ಸುರಕ್ಷಿತ ಬಿಡುಗಡೆಗಾಗಿ ಯಾವ ಮಾರ್ಗ ಅಥವಾ ಕ್ರಮ ಅನುಸರಿಸಬೇಕೆಂಬುದರ ಬಗ್ಗೆ ಆಗ ನಡೆದ ಚರ್ಚೆಗಳು ಏನೊಂದೂ ಪರಿಹಾರ ಕಂಡುಕೊಳ್ಳದೆ ಅಂತಿಮವಾಗಿ, 'ವೀರಪ್ಪನ್‌ನನ್ನು ಆ ಮಟ್ಟಕ್ಕೆ ಬೆಳೆಯಲು ಬಿಟ್ಟ ನಮ್ಮ ಸರ್ಕಾರಗಳು ಎಂಥ ಅಪರಾಧ ಮಾಡಿವೆ' ಎಂಬ ಆಕ್ರೋಶ, ಅಸಮಾಧಾನದ ನೆಲೆಗೆ ಬಂದು ನಿಲ್ಲುತ್ತಿದ್ದವು. ಏಕೆಂದರೆ ಅಪಹರಣ ಆದ ದಿನದಿಂದ ಮೊದಲುಗೊಂಡು ರಾಜ್ಯದ ಆರ್ಥಿಕ ವಹಿವಾಟು, ಚಿತ್ರೋದ್ಯಮದ ಚಟುವಟಿಕೆಗಳೆಲ್ಲ ಏರುಪೇರಾಗಿತ್ತು. ಎಲ್ಲವೂ ಸುಖಾಂತ್ಯವಾಗುವುದರೊಳಗೆ ಸುಮಾರು ೩೬೦ ಕೋಟಿ ರೂಪಾಯಿಗಳ ನಷ್ಟವುಂಟಾಯಿತು ಎಂದು ಅಂದಾಜು ಮಾಡಲಾಯಿತು. ಇದೆಲ್ಲ ಆದದ್ದು ಹೀಗೆ :

ಚಾಮರಾಜನಗರ ಸಮೀಪದ ತಮ್ಮ ಜನ್ಮಸ್ಥಳವಾದ ತಾಳವಾಡಿ ಫಿರ್ಕಾ ಗಾಜನೂರಿನಲ್ಲಿ ರಾಜಕುಮಾರ್ ಅತ್ಯಾಧುನಿಕ ಬೃಹತ್ ಬಂಗಲೆ ಕಟ್ಟಿಸಿದ್ದರು. ಇದರ ಗೃಹಪ್ರವೇಶಕ್ಕೆ ಹೋದವರು ಎರಡು ದಿನ ಅಲ್ಲಿಯೇ ಇದ್ದರು. ಜುಲೈ ೩೦ ರಂದು ಭೀಮನ ಅಮವಾಸ್ಯೆ. ಎಲ್ಲರೂ ಊಟ ಮುಗಿಸಿ ವಿಶ್ರಾಂತಿ ಪಡೆಯುತ್ತಾ ಕುಳಿತಿದ್ದಾಗ ವೀರಪ್ಪನ್, ಅವನ ಎಂಟ್ಹತ್ತು ಮಂದಿ ಸಂಗಡಿಗರು ಧುತ್ತನೆ ಬಂದೆರಗಿದರು. ಪಾರ್ವತಮ್ಮನವರನ್ನು ಬಿಟ್ಟು ರಾಜಕುಮಾರ್, ಅಳಿಯ ಎಸ್.ಎ.ಗೋವಿಂದರಾಜ್, ಸಹನಿರ್ದೇಶಕ ನಾಗಪ್ಪ ಮಾರಡಗಿ, ಚಾಲಕ ನಾಗೇಶ್ ಅವರುಗಳನ್ನು ರಾಜಕೀಯ ಪ್ರೇರಿತ ಬೇಡಿಕೆಗಳ ಈಡೇರಿಕೆಗಾಗಿ ಅಪಹರಿಸಿಕೊಂಡು ತಲ್ಲೈಮಲ್ಲೈ ಕಾಡಿನೊಳಕ್ಕೆ ಹೊರಟುಹೋದರು. ಸ್ವಂತಮನೆಯ ಗೃಹಪ್ರವೇಶದ ಖುಷಿಯಲ್ಲಿದ್ದ ರಾಜಕುಮಾರ್ ಅವರನ್ನು ಒತ್ತೆಯಾಳಾಗಿರಿಸಿಕೊಂಡ ಈ ಘಟನೆ ಸಂಭವಿಸಿದಾಗ ಇದೊಂದು 'ಸುದೀರ್ಘ ಒತ್ತೆಯಾಳು ಪ್ರಕರಣ' ಆದೀತೆಂದು ಯಾರೂ ನಿರೀಕ್ಷಿಸಿರಲಿಲ್ಲ. ರಾಜಕುಮಾರ್ ಹಾಗೂ ಉಳಿದವರ ಕೈಗಳನ್ನು ಕಟ್ಟಿ ಕರೆದುಕೊಂಡು ಹೋಗುವಾಗ ವೀರಪ್ಪನ್ ಪಾರ್ವತಮ್ಮನವರ ಕೈಗೆ ಒಂದು ಕ್ಯಾಸೆಟ್ ನೀಡಿ ಅದನ್ನು ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರಿಗೆ ತಲುಪಿಸುವಂತೆ ಹೇಳಿದನು. ಮರುದಿನ ಬೆಳಿಗ್ಗೆ ಜುಲೈ ೩೧ ರಂದು ಘಟನೆಯನ್ನು ಪತ್ರಿಕಾಗೋಷ್ಠಿಯಲ್ಲಿ ವಿವರಿಸಿದ ಮುಖ್ಯಮಂತ್ರಿ ಕೆಲವೇ ಗಂಟೆಗಳಲ್ಲಿ ತಮಿಳುನಾಡು ಮುಖ್ಯಮಂತ್ರಿ ಎಂ.ಕರುಣಾನಿಧಿಯವರನ್ನು ಭೇಟಿ ಮಾಡಿ ನೆರವು ಕೋರಲು ಧಾವಿಸಿದರು.

ಜುಲೈ ೩೧ ರಂದು ಬೆಳಿಗ್ಗೆ ರಾಜ್ಯದಾದ್ಯಂತ ಬರಸಿಡಿಲಿನಂತೆ ಅಪ್ಪಳಿಸಿದ ರಾಜಕುಮಾರ್ ಅಪಹರಣದ ಸುದ್ದಿ ಅಭಿಮಾನಿಗಳಿಂದ ಸಹಜ ಪ್ರತಿಕ್ರಿಯೆಯನ್ನೇ ಹುಟ್ಟುಹಾಕಿತು. ಎರಡು ದಿನಗಳ ಕಾಲ ನಗರದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಪೂರ್ಣ ಹತೋಟಿ ಮೀರಿಹೋಗಿತ್ತು. ಜನಜೀವನ ಅಸ್ತವ್ಯಸ್ತವಾಗಿತ್ತು. ರಾಜಕುಮಾರ್ ಕುಟುಂಬದ ಸದಸ್ಯರೇ ಪರಿಸ್ಥಿತಿಯನ್ನು ಸಂಭಾಳಿಸಿದರು. ತಮ್ಮ ದುಃಖ, ಸಂಕಟವನ್ನೆಲ್ಲ ಹತ್ತಿಕ್ಕಿಕೊಂಡು ಶಾಂತಿ ಕಾಪಾಡಿಕೊಂಡು ಬರಲು ಪದೇ ಪದೇ ಜೊತೆಗೆ ಆಕಾಶವಾಣಿ-ದೂರದರ್ಶನಗಳ ಮೂಲಕ ಮನವಿ ಮಾಡಿಕೊಂಡರು. ಇದು ಫಲ ನೀಡಿತು. ಪರಿಸ್ಥಿತಿಯ ಗಂಭೀರತೆಯಿಂದಾಗಿ ಯಾವುದೇ 'ಕಾರ್ಯಾಚರಣೆ'ಯನ್ನು ನಡೆಸದಿರಲು ಹಾಗೂ ವೀರಪ್ಪನ್‌ನ ಅಡಗುತಾಣಗಳ ಕಲ್ಪನೆಯಿದ್ದ ತಮಿಳು ಪತ್ರಕರ್ತ ಆರ್.ಆರ್.ಗೋಪಾಲ್ ಅವರನ್ನು ಉಭಯ ಸರ್ಕಾರಗಳ ಅಧಿಕೃತ ಸಂಧಾನಕಾರರಾಗಿ ಕಾಡಿಗೆ ಕಳುಹಿಸಲು ತೀರ್ಮಾನಿಸಲಾಯಿತು. ಆಗಸ್ಟ್ ೧ ರಂದು ಕಾಡಿಗೆ ಹೊರಟ ಗೋಪಾಲ್ ತಮ್ಮೊಂದಿಗೆ ರಾಜಕುಮಾರ್ ಅವರಿಗೆ ಅಗತ್ಯವಾಗಿದ್ದ ಔಷಧಿಗಳನ್ನು ಒಯ್ದಿದ್ದರು. ರಾಜಕುಮಾರ್ ಅವರನ್ನು ಗೋಪಾಲ್ ಬಿಡಿಸಿಕೊಂಡು ಬಂದೇ ಬರುತ್ತಾರೆಂದು ಎಲ್ಲರೂ ನಂಬಿದ್ದರು. ಆದರೆ ಆಗಸ್ಟ್ ೧ರಂದು ಮೊದಲ ಪ್ರಯಾಣ ಆರಂಭಿಸಿದ್ದ ಗೋಪಾಲ್ ಸೆಪ್ಟೆಂಬರ್ ೩೦ ರವರೆಗೆ ೬೦ ದಿನಗಳಲ್ಲಿ ನಾಲ್ಕು ಬಾರಿ ಹೋಗಿ-ಬಂದು ಮಾಡಿದರಷ್ಟೇ ಹೊರತು ಪ್ರಯೋಜನವೇನೂ ಆಗಲಿಲ್ಲ. ಆದರೆ ಪ್ರತಿ ಬಾರಿ ವಾಪಸ್ಸು ಬರುವಾಗ ರಾಜ್ ಧ್ವನಿಯಿರುವ ಧ್ವನಿಸುರುಳಿಯನ್ನು ಅಥವಾ ವಿಡಿಯೋ ಕ್ಯಾಸೆಟ್ಟನ್ನು ತರುತ್ತಿದ್ದರು. ಇದು ದೇಶದ ಎಲ್ಲಾ ರೀತಿಯ ಸುದ್ದಿ ಮತ್ತು ಸಂವಹನ ಮಾಧ್ಯಮಗಳ ಮೂಲಕ ಪ್ರಚಾರಕ್ಕೆ ಕಾರಣವಾಯಿತು. ಇದೇ ಹೊತ್ತಿಗೆ ರಾಜಕುಮಾರ್ ಬಿಡುಗಡೆಗೆ ಸರ್ಕಾರ ವೀರಪ್ಪನ್‌ಗೆ ಕೋಟ್ಯಾಂತರ ಹಣ ನೀಡುತ್ತಿದೆ

ಎಂಬ ವರದಿಗಳು. ಗೋಪಾಲ್ ಕೂಡ ಹಣ ಮಾಡುತ್ತಿದ್ದಾರೆಂಬ ಪುಕಾರುಗಳು ವ್ಯಾಪಕವಾಗಿ ಕೇಳಿಬಂದವು. ಈ ಬಗ್ಗೆ ಖಚಿತ ದಾಖಲೆಗಳು ಇರಲಿಲ್ಲವಾದರೂ ವೀರಪ್ಪನ್ ಮುಂದಿಟ್ಟ ಬೇಡಿಕೆಗಳು ಸ್ಪಷ್ಟವಾಗಿದ್ದವು. ಕಾವೇರಿ ನೀರನ್ನು ಅನಿರ್ಬಂಧಿತವಾಗಿ ಹರಿಯಬಿಡುವುದು, ಕರ್ನಾಟಕದಲ್ಲಿ ತಮಿಳನ್ನು ದ್ವಿತೀಯ ಭಾಷೆಯನ್ನಾಗಿ ಮಾಡುವುದು, ಮೈಸೂರಿನ ಜೈಲಿನಲ್ಲಿದ್ದ ಟಾಡಾ ಬಂಧಿಗಳನ್ನು ಬಿಡುಗಡೆ ಮಾಡುವುದು, ಹಿಂದಿನ ಗಲಭೆಗಳಲ್ಲಿ ತಮಿಳರಿಗೆ ಆಗಿದ್ದ ನಷ್ಟವನ್ನು ತುಂಬಿಕೊಡಲು ಪರಿಹಾರಧನ ನೀಡುವುದು, ತಿರುವಳ್ಳುವರ್ ಪ್ರತಿಮೆ ಸ್ಥಾಪಿಸುವುದು ಇತ್ಯಾದಿ ದೊಡ್ಡ ಪಟ್ಟಿಯೊಂದನ್ನು ಗೋಪಾಲ್ ಹೋದಾಗಲೆಲ್ಲಾ ಬೆಳೆಸುತ್ತಾ ಕೊಟ್ಟು ಕಳುಹಿಸುತ್ತಿದ್ದ. ನಾಲ್ಕನೇ ಬಾರಿ ಗೋಪಾಲ್ ಹೋದಾಗ ಸಂಧಾನ ಯಶಸ್ವಿಯಾಗಿ ದಸರಾ ಉತ್ಸವಕ್ಕೆ ಸರಿಯಾಗಿ ರಾಜ್ ಅವರ ಬಿಡುಗಡೆಯಾಗುತ್ತದೆ ಎಂಬ ಪ್ರಬಲ ನಿರೀಕ್ಷೆ ಇತ್ತು. ಆದರೆ ಅದು ನೀರಗುಳ್ಳೆಯಂತೆ ಒಡೆದುಹೋಯಿತು. ರಾಜಕುಮಾರ್ ಜೊತೆ ಅಪಹೃತರಾಗಿದ್ದ ನಾಗಪ್ಪ ಮಾರಡಗಿ ಸೆಪ್ಟೆಂಬರ್ ೨೭ ರಂದು ಮಧ್ಯರಾತ್ರಿ ಕಾಡಿನಿಂದ ತಪ್ಪಿಸಿಕೊಂಡು ೨೮ ರಂದು ಬೆಂಗಳೂರಿನಲ್ಲಿ ಪ್ರತ್ಯಕ್ಷರಾದರು. ಇವರು ವೀರಪ್ಪನ್‌ನನ್ನು ಹೊಡೆದು ಗಾಯಗೊಳಿಸಿ ಬಂದಿದ್ದಾರೆಂಬ ಮಾತು ಕೇಳಿಬಂತು. ಇದರಿಂದ ಅಲ್ಲಿ ಉಳಿದವರ ಜೀವಗಳಿಗೆ ಅಪಾಯ ಕಾದಿದೆ ಎಂಬ ಆತಂಕ ಶುರುವಾಯಿತು. ಇದಕ್ಕೆ ಪೂರಕವೆನ್ನುವಂತೆ ಆರ್.ಆರ್.ಗೋಪಾಲ್ ಸೆಪ್ಟೆಂಬರ್ ೩೦ರಂದು ನಾಲ್ಕನೇ ಬಾರಿಯೂ ಬರಿಗೈಲಿ ವಾಪಸ್ಸಾಗಿ, ನಾಗಪ್ಪ ಪರಾರಿಯಾಗಿ ಬಂದದ್ದೇ ಸಂಧಾನ ವೈಫಲ್ಯಕ್ಕೆ ಕಾರಣ ಎಂದು ಹೇಳಿಕೊಂಡರು. ಪರಿಸ್ಥಿತಿ ದಿನೇ ದಿನೇ ಕೈಮೀರಿ ಹೋಗತೊಡಗಿತು.

ಆರಂಭದ ೩೦ ದಿನಗಳ ಕಾಲ ವಿರೋಧಪಕ್ಷದವರು, ನಾಡಿನ ಜನರು ಸರ್ಕಾರ ತೆಗೆದುಕೊಂಡ ಕ್ರಮಗಳನ್ನು ಸಮರ್ಥಿಸಿ ಬೆಂಬಲ ವ್ಯಕ್ತಪಡಿಸಿದರೂ ರಾಜಕುಮಾರ್ ಮತ್ತು ಜೊತೆಯವರ ಬಿಡುಗಡೆ ವಿಳಂಬವಾಗುತ್ತಾ ಹೋದಂತೆ ವ್ಯತಿರಿಕ್ತವಾಗಿ ಮಾತನಾಡತೊಡಗಿದರು. ಪರ್ಯಾಯ ಮತ್ತು ದಾಳಿಯ ಮಾತುಗಳು ಕೇಳಿಬಂದವು. ಆದರೆ ಸರ್ಕಾರವು ಸಂಧಾನ ಮಾರ್ಗಕ್ಕೇ ಗಟ್ಟಿಯಾಗಿ ಅಂಟಿಕೊಂಡಿತು. ಅಕ್ಟೋಬರ್ ೨೫ ರಂದು ಪ್ರಾರಂಭವಾದ ವಿಧಾನಮಂಡಲದ ಉಭಯ ಸದನಗಳಲ್ಲಿ ರಾಜ್ ಅಪಹರಣದ ಬಗ್ಗೆ ವ್ಯಾಪಕ ಚರ್ಚೆ ನಡೆದು, ಆತಂಕ, ತಳಮಳ ವ್ಯಕ್ತವಾಯಿತು. ಆರ್.ಆರ್.ಗೋಪಾಲ್ ನಾಲ್ಕನೆಯ ಭೇಟಿ ವಿಫಲವಾದಾಗ ಪರಿಸ್ಥಿತಿ ಕೈಮೀರುತ್ತಿರುವುದನ್ನು ಮನಗಂಡ ಕರುಣಾನಿಧಿ, ಗೋಪಾಲ್ ಜೊತೆಗೆ - ವೀರಪ್ಪನ್ ಹಾಗೂ ಆತನ ಜೊತೆಯಲ್ಲಿರುವ ಉಗ್ರಗಾಮಿಗಳು ಇಷ್ಟಪಡುತ್ತಾರೆಂದು ನಂಬಲಾದ - ತಮಿಳು ರಾಷ್ಟ್ರೀಯವಾದಿ ಚಳವಳಿಯ ನಾಯಕ ಪಿ.ನೆಡುಮಾರನ್ ಹಾಗೂ ಇತರ ಇಬ್ಬರನ್ನು ಕಾಡಿಗೆ ಕಳುಹಿಸಲು ತೀರ್ಮಾನಿಸಿದರು.

ಅಕ್ಟೋಬರ್ ೧೦ ರಂದು ನಾಲ್ವರು ಸಂಧಾನಕಾರರ ತಂಡ, ಹೊಸ ನಾಯಕ ನೆಡುಮಾರನ್‌ರ ನೇತೃತ್ವದಲ್ಲಿ ಕಾಡಿಗೆ ತೆರಳಿತು. ಎಲ್‌ಟಿಟಿಇ ಸಮರ್ಥಕರೆನ್ನಲಾದ ನೆಡುಮಾರನ್ ಅವರನ್ನು ಕಳುಹಿಸಿದ್ದು ಸಾರ್ವಜನಿಕ ವಲಯದಲ್ಲಿ ಟೀಕೆಗೆ ಗುರಿಯಾದರೂ ರಾಜ್ ಬಿಡುಗಡೆಯ ದೃಷ್ಟಿಯಿಂದ ಎಲ್ಲರೂ ಸುಮ್ಮನಿರಬೇಕಾಯಿತು. ಕಾಡಿಗೆ ತೆರಳಿದ ನೆಡುಮಾರನ್ ಅಕ್ಟೋಬರ್ ೧೭ ರಂದು ವಾಪಸ್ಸು ಬಂದಾಗ ಅವರ ಜೊತೆ ಅಸ್ವಸ್ಥರಾಗಿದ್ದ ರಾಜ್ ಅಳಿಯ ಎಸ್.ಎ.ಗೋವಿಂದರಾಜ್ ಇದ್ದರು. ವೀರಪ್ಪನ್ ಟಾಡಾ ಬಂಧಿಗಳ ಬಿಡುಗಡೆಯಾಗುವವರೆಗೆ ರಾಜ್ ಅವರನ್ನು ಬಿಡುವುದಿಲ್ಲ ಎಂದು ಮತ್ತೆ ಖಂಡತುಂಡವಾಗಿ ಹೇಳಿಕಳುಹಿಸಿದ್ದನು. ಸುಪ್ರೀಂ ಕೋರ್ಟ್ ಅಕ್ಟೋಬರ್ ೧೯ ರಂದು ಟಾಡಾ ಬಂಧಿಗಳ ಬಿಡುಗಡೆಯಿಂದಾಗುವ ಪರಿಣಾಮಗಳ ಬಗ್ಗೆ ಮತ್ತಷ್ಟು ವಿವರಗಳನ್ನು ಸಲ್ಲಿಸುವಂತೆ ರಾಜ್ಯ ಸರ್ಕಾರಕ್ಕೆ ಆದೇಶಿಸಿತು. ದೀಪಾವಳಿ ಒಳಗೆ ರಾಜ್ ಬಿಡುಗಡೆಯಾಗುತ್ತಾರೆಂಬ ನೆಡುಮಾರನ್ ಮಾತಿನ ವಿಶ್ವಾಸದ ಮೇಲೆ ರಾಜ್ಯದ ಜನತ ದಿನ ನೂಕತೊಡಗಿತು. ಹನ್ನೊಂದು ದಿನಗಳ ನಂತರ ಅಕ್ಟೋಬರ್ ೩೧ ರಂದು ಟಾಡಾ ಬಂಧಿಗಳ ಬಿಡುಗಡೆಯ ವಿಚಾರಣೆಯನ್ನು ಮುಂದುವರಿಸಿದ ಸುಪ್ರೀಂ ಕೋರ್ಟ್ ತೀರ್ಪನ್ನು ಕಾದಿರಿಸಿತು. ರಾಜ್ ಬಿಡುಗಡೆಗೆ ಟಾಡಾ ಬಂಧಿಗಳ ಬಿಡುಗಡೆಯ ವಿಷಯಕ್ಕೆ ಸಂಬಂಧಿಸಿದಂತೆ ಮಧ್ಯ ಪ್ರವೇಶಿಸುವಂತೆ ಕೋರಿದ್ದ ಮನವಿಯನ್ನು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ನವೆಂಬರ್ ೧ ರಂದು ತಿರಸ್ಕರಿಸಿದ್ದು ಕನ್ನಡಿಗರಿಗೆ ಇನ್ನಷ್ಟು ದುಗುಡ ಉಂಟುಮಾಡಿತು. ಕೋರ್ಟ್ ತೀರ್ಪಿಗಾಗಿ ಸಂಧಾನಕಾರರು ಕಾಯತೊಡಗಿದರು. ಎಲ್ಲರೂ ತುದಿಗಾಲಲ್ಲಿ ನಿಂತು ನಿರೀಕ್ಷಿಸುತ್ತಿದ್ದ ತೀರ್ಪು ನವೆಂಬರ್ ೮ ರಂದು ಹೊರಬಿತ್ತು. ೫೧ ಖೈದಿಗಳ ಮತ್ತು ಐದು ಮಂದಿ ಉಗ್ರಗಾಮಿಗಳ ಮೇಲಿನ ಟಾಡಾ ಮತ್ತು ರಾಷ್ಟ್ರೀಯ ಭದ್ರತಾ ಕಾಯಿದೆಯ ಆರೋಪಗಳನ್ನು ಕೈಬಿಡುವ ಮೈಸೂರು ಮತ್ತು ತಮಿಳುನಾಡು ವಿಶೇಷ ನ್ಯಾಯಾಲಯಗಳ ಆದೇಶಗಳನ್ನು ರದ್ದುಮಾಡಿ, ಉಭಯ ರಾಜ್ಯ ಸರ್ಕಾರಗಳನ್ನು ವಾಗ್ದಂಡನೆಗೆ ಈಡು ಮಾಡಿತು. ಆ ದಿನವೇ ನೆಡುಮಾರನ್ ಮತ್ತಿತರರು ವೀರಪ್ಪನ್ ಜೊತೆ ಸಂಧಾನಕ್ಕಾಗಿ ಆರನೆಯ ಬಾರಿಗೆ ಕಾಡಿಗೆ ತೆರಳುತ್ತಾರೆಂದು ವರದಿಯಾಯಿತಾದರೂ ಕೊನೆಗಳಿಗೆಯಲ್ಲಿ ನೆಡುಮಾರನ್ ಹಿಂದೇಟು ಹಾಕಿದರು. ತಮಿಳುನಾಡು ವಿಧಾನಸಭೆಯ ಪ್ರತಿಪಕ್ಷದ ನಾಯಕ ಎಸ್.ಬಾಲಕೃಷ್ಣನ್, ನೆಡುಮಾರನ್ ಅವರನ್ನು 'ರಾಷ್ಟ್ರವಿರೋಧಿ' ಎಂದು ಆಪಾದಿಸಿದ್ದು ಸಂಧಾನಕ್ಕೆ ಹಿನ್ನಡೆಯುಂಟುಮಾಡಿತು. ಅಂದೇ ನೆಡುಮಾರನ್ ಮನವೊಲಿಸಲು ರಾಜ್ ಪುತ್ರರು ಚೆನ್ನೈಗೆ ಧಾವಿಸಿದರು. ಆದರೆ ನೆಡುಮಾರನ್ ಮನಸ್ಸು ಬದಲಾಯಿಸಲಿಲ್ಲ. ಈ ನಡುವೆ ಸಂಸದ ಅಂಬರೀಷ್, ವಾಣಿಜ್ಯ ಮಂಡಳಿಯ ಪದಾಧಿಕಾರಿಗಳು, ಹಲವಾರು ಮಂದಿ ಗಣ್ಯರು ನೆಡುಮಾರನ್‌ರ ಮನಃಪರಿವರ್ತನೆಗೆ ಪ್ರಯತ್ನಗಳನ್ನು ಮುಂದುವರಿಸಿದ್ದರು. ನವೆಂಬರ್ ೧೦ ರಂದು ನಡೆದ ಸರ್ವ ಪಕ್ಷಗಳ ಸಭೆಯಲ್ಲಿ ಟಾಡಾ ಬಂಧಿಗಳ ತ್ವರಿತ ವಿಚಾರಣೆಗಾಗಿ ಮೈಸೂರಿನಲ್ಲಿ ವಿಶೇಷ ನ್ಯಾಯಾಧೀಶರನ್ನು ನೇಮಿಸುವಂತೆ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿಯವರಿಗೆ ಮನವಿ ಮಾಡಿಕೊಳ್ಳಲು ನಿರ್ಧರಿಸಲಾಯಿತು.

ನವೆಂಬರ್ ೧೧, ಆಸೆಗಳನ್ನು ಮುಂದುವರಿಸಿದ ಮತ್ತೊಂದು ದಿನ. ತಮ್ಮ ನಿಲುವು ಬದಲಿಸಿದ ನೆಡುಮಾರನ್ ಅರಣ್ಯದತ್ತ ತೆರಳಿದರು. ಅವರ ಜೊತೆ ಈ ಬಾರಿ ಪ್ರೊ|ಕಲ್ಯಾಣಿ, ಸುಕುಮಾರನ್ ಇರುತ್ತಾರೆಂಬ ಸುದ್ದಿಯಿತ್ತು. ಇವರ ಬಗ್ಗೆ ಕನ್ನಡಿಗರಿಗೆ ಏನೂ ತಿಳಿದಿರಲಿಲ್ಲ. ಉಳಿದ ಕೆಲವರಿದ್ದಾರೆಂಬ ವದಂತಿಯಿದ್ದರೂ ಅವರು ಯಾರೆಂದೂ ಬಹಿರಂಗವಾಗಿರಲಿಲ್ಲ. ಆ ಬಗ್ಗೆ ಯಾರಿಗೂ ಆಗ ಕುತೂಹಲವೂ ಇರಲಿಲ್ಲ. ೧೪ ರಂದು ವೀರಪ್ಪನ್ ಕಡೆಯಿಂದ ಸಂದೇಶ ಪಡೆದ ನೆಡುಮಾರನ್ ಕಾಡಿಗೆ ತೆರಳಿ ೧೫ ರಂದು ರಾಜಕುಮಾರ್ ಮತ್ತು ನಾಗೇಶ್ ಅವರನ್ನು ಬಿಡಿಸಿಕೊಂಡು ಬರುವ ಅವರ ಪ್ರಯತ್ನದಲ್ಲಿ ಯಶಸ್ಸು ಗಳಿಸಿದರು. ರಾಜಕುಮಾರ್ ಬಂಧನದ ಯಾತನೆ, ಆತಂಕ ೧೦೮ನೆಯ ದಿನ ಅಂತ್ಯಗೊಂಡಿತು.

ರಾಜಕುಮಾರ್ ವಿಶೇಷ ಹೆಲಿಕಾಪ್ಟರ್‌ನಲ್ಲಿ ನವೆಂಬರ್ ೧೬ ರಂದು ಬಂದಿಳಿದು ತಾಯ್ನೆಲ ಮುಟ್ಟಿ ನಮಸ್ಕರಿಸಿದರು. ವಿಧಾನಸೌಧದಲ್ಲಿ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಹಾಗೂ ಗೃಹಸಚಿವ ಮಲ್ಲಿಕಾರ್ಜುನ ಖರ್ಗೆ ಹಾಗೂ ಕುಟುಂಬದವರೊಂದಿಗೆ, ಮಾಧ್ಯಮದ ಪ್ರತಿನಿಧಿಗಳೊಂದಿಗೆ ಮಾತನಾಡಿದರು. ಈ ಸಂದರ್ಭದಲ್ಲಿ ಅವರು ಡಾ|ಭಾನು ಹಾಗೂ ನೆಡುಮಾರನ್ ಅವರನ್ನು ಕ್ರಮವಾಗಿ ದೇವತೆ ಹಾಗೂ ಡಾ|ರಾಧಾಕೃಷ್ಣನ್‌ಗೆ ಹೋಲಿಸಿದರು. ಮಾತಿನ ನಡುವೆ 'ಅನಾರೋಗ್ಯದ ಸಣ್ಣ ನಾಟಕವಾಡಿ ಹೊರಗೆ ಬರಬೇಕಾಯಿತು' ಎಂದು ನುಡಿದರು. ಈ ಮಾತುಗಳು ವಿವಾದ ಉಂಟುಮಾಡಿದವು. ಡಾ|ಭಾನು ಹಿನ್ನೆಲೆ ಬಹಿರಂಗವಾಯಿತು. ಆಕೆಯ ವಿವಾದಾತ್ಮಕ ಇತಿಹಾಸ ಕೆದಕಿ ಪತ್ರಿಕೆಗಳು ಬರಹಗಳನ್ನು ಬರೆದವು. ರಾಜಕುಮಾರ್‌ರನ್ನು ಬಿಡಿಸಿಕೊಂಡು ಬಂದ ತಂಡದಲ್ಲಿ ಬೆಂಗಳೂರಿನ ನಿವೃತ್ತ ಪೊಲೀಸ್ ಕಮಿಷನರ್ ರಾಮಲಿಂಗಂ ಪುತ್ರ ರಾಮಕುಮಾರ್ ಇದ್ದದ್ದು ಕೂಡ ಊಹಾಪೋಹಗಳಿಗೆ ಕಾರಣವಾಯಿತು. ಇದೆಲ್ಲ ರಾಜ್‌ರವರ ಸುರಕ್ಷಿತ ಬಿಡುಗಡೆಯ ಹಿನ್ನೆಲೆಯಲ್ಲಿ ಹೆಚ್ಚಿನ ಮಹತ್ವ ಪಡೆದುಕೊಳ್ಳದಿದ್ದರೂ ಅನುಮಾನಗಳನ್ನು ಉಳಿಸಿ, ಅಪಹರಣ ಪ್ರಕರಣದ ನಿಗೂಢತೆಯನ್ನು ಹೆಚ್ಚಿಸಿತು. ಇದರಿಂದಾಗಿ ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ನಡೆದ ರಾಜ್‌ರವರ ಸ್ವಾಗತದ 'ಧನ್ಯ ಮಿಲನ' ಕಾರ್ಯಕ್ರಮದಲ್ಲಿ ಕಾಣಬೇಕಾದಷ್ಟು ಸಂಭ್ರಮ, ಸಡಗರ, ರೋಮಾಂಚನ ಕಾಣಲಿಲ್ಲ. ಅಭಿಮಾನಿಗಳಲ್ಲಿ ಅಷ್ಟಿಷ್ಟು ಕಂಡದ್ದೂ ವೇದಿಕೆಯ ಮೇಲೆ ಇದ್ದ ಗಣ್ಯರಲ್ಲಿ ಇಲ್ಲವಾಗಿತ್ತು. ಒಂದು ಗಂಭೀರ ಕಾರ್ಯಕ್ರಮದ ರೂಪದಲ್ಲಿ ರಾಜಕುಮಾರ್ ಅಪಹರಣದ ಈ ಶತಮಾನದ ಮಹಾ ಪ್ರಸಂಗ ಮುಕ್ತಾಯವಾಯಿತು.

ರಾಜಕುಮಾರ್ ಅಪಹರಣದ ೧೦೮ ದಿನಗಳ ಯಾತನೆಯ ಒಂದು ಮುಖ ಇದಾದರೆ ಈ ಪ್ರಕರಣದಿಂದ ಚಿತ್ರೋದ್ಯಮ ಅನುಭವಿಸಿದ ಕಷ್ಟ-ನಷ್ಟ, ವೈಪರೀತ್ಯ ಅಂದಾಜು-ಅಳತೆಗೆ ನಿಲುಕದಂತಿದ್ದವು. ಕನ್ನಡ ಚಿತ್ರರಂಗ ತನ್ನ ೬೬ ವರ್ಷಗಳ ಇತಿಹಾಸದಲ್ಲಿ ಇಂಥ ಬಿಕ್ಕಟ್ಟನ್ನು ಎದುರಿಸಿಯೇ ಇರಲಿಲ್ಲ. ರಾಜಕುಮಾರ್ ಅಪಹರಣವಾದ ಎರಡನೆಯ ದಿನವೇ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷ ಕೆ.ಸಿ.ಎನ್.ಚಂದ್ರಶೇಖರ್, ರಾಜಕುಮಾರ್ ಅವರು ವಾಪಸ್ಸು ಬರುವವರೆಗೂ ಚಿತ್ರೋದ್ಯಮದ ಚಟುವಟಿಕೆಗಳನ್ನು ಬಂದ್ ಮಾಡುವುದಾಗಿ ಘೋಷಿಸಿದರು. ಈ ಕರಗೆ ಆರಂಭದ ನಾಲ್ಕೈದು ವಾರ ಉದ್ಯಮದ ಎಲ್ಲಾ ವಲಯಗಳಿಂದಲೂ ಬೆಂಬಲ,

ಪ್ರೋತ್ಸಾಹ ದೊರಕಿತು. ಎಲ್ಲರೂ ಸಭೆ ಸೇರಿ, ಚರ್ಚಿಸಿ, ಕ್ರಿಯಾಸಮಿತಿ ರಚಿಸಿಕೊಂಡರು. ವಾಣಿಜ್ಯ ಮಂಡಳಿಯ ಕಚೇರಿಯ ಮುಂದಿನ ಆವರಣದಲ್ಲಿ ಚಪ್ಪರ ಹಾಕಿ ಧರಣಿ, ಸಭೆಗಳನ್ನು ನಡೆಸಲಾಯಿತು. ನಿರ್ದೇಶಕರ ಸಂಘ ಸರದಿ ಉಪವಾಸ ಸತ್ಯಾಗ್ರಹ ಆರಂಭಿಸಿತು. ನಟಿಯರು ಒಟ್ಟಾಗಿ ತೆರಳಿ, ದೇವಾಲಯಗಳಲ್ಲಿ ಉರುಳು ಸೇವೆ ಮಾಡಿದರು. ಯಾವುದೇ ಮತ ಭೇದವಿಲ್ಲದೆ ಸರ್ವಧರ್ಮಗಳ ಮುಖಂಡರು ರಾಜ್ಯವ್ಯಾದ್ಯಂತ ಅವರವರ ಪವಿತ್ರ ದೇವಾಲಯಗಳಲ್ಲಿ ವಿಶೇಷ ಪೂಜೆ, ಪ್ರಾರ್ಥನೆಗಳನ್ನು ಸಲ್ಲಿಸಿದರು. ವಾಣಿಜ್ಯ ಮಂಡಳಿ ಒಂದು ಹೆಜ್ಜೆ ಮುಂದಿಟ್ಟು ತನ್ನ ಕಚೇರಿಯಲ್ಲಿ ರಾಜ್ ಸುರಕ್ಷಿತ ಬಿಡುಗಡೆಗಾಗಿ 'ಹೋಮ'ವನ್ನು ಏರ್ಪಡಿಸಿತ್ತು.

ಚಿತ್ರೋದ್ಯಮ ಅಚ್ಚರಿ ಹುಟ್ಟಿಸುವಂತೆ ಪೂರ್ಣವಾಗಿ ಸ್ತಬ್ಧಗೊಂಡಿತ್ತು. ಚಿತ್ರಮಂದಿರಗಳು ಪ್ರದರ್ಶನ ನಿಲ್ಲಿಸಿದ್ದವು. ಚಿತ್ರೀಕರಣಗಳು ಬಂದ್ ಆದವು. ಸ್ಟುಡಿಯೋಗಳು, ಧ್ವನಿಮುದ್ರಣ ಕೇಂದ್ರಗಳಿಗೆ ಬೀಗ ಹಾಕಿಕೊಂಡವು. ಕಾರ್ಮಿಕರು ತಮ್ಮ ಒಗ್ಗಟ್ಟನ್ನು ಪ್ರದರ್ಶಿಸಿ, ಏನೇ ಆದರೂ, ಹೊಟ್ಟೆಗೆ ಹಿಟ್ಟಿಲ್ಲದಾದರೂ ರಾಜ್ ಬಿಡುಗಡೆಯಾಗಿ ಬರುವವರೆಗೆ ಚಿತ್ರೀಕರಣದಲ್ಲಿ ಭಾಗವಹಿಸುವುದಿಲ್ಲ ಎಂದು ಹಠ ತೊಟ್ಟರು. ಆದರೆ ಪರಿಸ್ಥಿತಿ ದಿನೇ ದಿನೇ ಬಿಗಡಾಯಿಸತೊಡಗಿತು. ರಾಜ್‌ರ ಬಿಡುಗಡೆ ಮರೀಚಿಕೆಯಾಗುತ್ತಿದೆ ಅನ್ನಿಸಿದಾಗ ಅಲ್ಲಲ್ಲಿ ಗೊಣಗಾಟ ಕೇಳಲಾರಂಭಿಸಿತು.



(ಚಿತ್ರ ೧೫೫) ೧೦೮ ದಿನಗಳ ಆರಣ್ಯವಾಸದ ನಂತರ ಮರಳಿದ ರಾಜ್. ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರಿಂದ ಆತ್ಮೀಯ ಸ್ವಾಗತ

ಕಾರ್ಮಿಕರಿಗೆ ದಿನ ದೂಡುವುದು ಕಷ್ಟವಾದಾಗ ಅವರಿಗೆ ಉಚಿತವಾಗಿ ದಿನಸಿ ಹಂಚುವ ವ್ಯವಸ್ಥೆಗಳಾದವು. ಅಲ್ಲಿಯವರೆಗೆ ಇದೆಲ್ಲ ಸಂಕಷ್ಟ, ಬಿಕ್ಕಟ್ಟು ರಾಜ್ ಅವರಿಗೆ ತಿಳಿದಿರಲಿಲ್ಲ ಎಂದು ಭಾವಿಸಲಾಗಿತ್ತು. ಇದನ್ನು ರಜನೀಕಾಂತ್ ಎರಡನೆಯ ಬಾರಿಗೆ ಕಾಡಿಗೆ ತೆರಳಿದ ಗೋಪಾಲ್ ಮೂಲಕ ರಾಜ್ ಅವರಿಗೆ ತಿಳಿಸಿದರು. ಅಪಹರಣವಾದ ೨೫ ದಿನಗಳ ನಂತರ ಅಂದರೆ ಆಗಸ್ಟ್ ೨೫ ರಂದು ಗೋಪಾಲ್ ತಂದ ಎರಡು ಪ್ರತ್ಯೇಕ ಕ್ಯಾಸೆಟ್ ಒಂದರಲ್ಲಿ ರಾಜ್‌ರವರ ವಿಶೇಷ ಮನವಿಯಿತ್ತು. "ಈ ವಿಷಯ ಮೊದಲೇ ಹೇಳದೆ ನಮ್ಮಿಂದ ತಪ್ಪಾಗಿದೆ. ಎಲ್ಲರೂ ಕ್ಷಮಿಸಬೇಕು. ಯಾವ ಕಾರಣಕ್ಕೂ ಚಿತ್ರರಂಗದ ಚಟುವಟಿಕೆಗಳು ನಿಲ್ಲದಂತೆ ಮುಂದುವರಿಸಿಕೊಂಡು ಹೋಗಬೇಕೆಂದು ಕೇಳಿಕೊಳ್ಳುತ್ತಿದ್ದೇನೆ."

ರಾಜಕುಮಾರ್ ಮನವಿಯ ನಂತರವೂ ಚಟುವಟಿಕೆಗಳನ್ನು ಆರಂಭಿಸುವುದಕ್ಕೆ ವ್ಯಾಪಕವಾಗಿ ಒಲವು ಕಂಡುಬರಲಿಲ್ಲ. ಪ್ರಕರಣದ ಗಾಂಭೀರ್ಯ ಹಾಳಾಗಿ ಬಿಡುಗಡೆಯು ಇನ್ನಷ್ಟು ವಿಳಂಬವಾಗಬಹುದೆಂಬ ಅನುಮಾನದಿಂದ ಬಂದ್ ಮುಂದುವರಿಸಿಕೊಂಡು ಹೋಗಲು ನಿರ್ಧರಿಸಲಾಯಿತು. ಇದೇ ಅಭಿಪ್ರಾಯಕ್ಕೆ ಎಷ್ಟೇ ಕಷ್ಟವಾದರೂ ಕಾರ್ಮಿಕರು ಕೂಡ ಅಂಟಿ ಕುಳಿತಿದ್ದರು. ಆದರೆ ತಿಂಗಳಾದರೂ ಏನೊಂದೂ ಪರಿಹಾರ ಕಾಣದೆ, ಬಿಕ್ಕಟ್ಟು ಜಟಿಲವಾಗತೊಡಗಿದಾಗ ರಾಜ್ಯದ ಚಿತ್ರಮಂದಿರಗಳ ಮಾಲೀಕರು ಮೊಟ್ಟಮೊದಲ ಬಾರಿಗೆ ಚಿತ್ರೋದ್ಯಮವನ್ನು ಬಂದ್ ಮಾಡುವುದರ ಬಗ್ಗೆ ತಮ್ಮ ಅಸಮಾಧಾನ ಹಾಗೂ ವಿರೋಧವನ್ನು ವ್ಯಕ್ತಪಡಿಸಲಾರಂಭಿಸಿದರು. ಚಿತ್ರಮಂದಿರಗಳಲ್ಲಿ ಪ್ರದರ್ಶನವನ್ನು ಆರಂಭಿಸಲು ಅನುಮತಿ ನೀಡಬೇಕೆಂದು ವಾಣಿಜ್ಯ ಮಂಡಳಿ ಮೇಲೆ ಒತ್ತಡ ಹೇರಲಾರಂಭಿಸಿದರು. ಈ ಒತ್ತಾಯಕ್ಕೆ ಅವರು ಕೊಟ್ಟ ಕಾರಣಗಳು ಹೀಗಿದ್ದವು. ಚಿತ್ರಮಂದಿರ ನಡೆಯಲಿ, ಬಿಡಲಿ ಕೆಲಸಗಾರರಿಗೆ ಸಂಬಳ ಕೊಡಲೇಬೇಕು. ವಿದ್ಯುತ್ ಸಲುವಾಗಿ ಹಣ ಕಟ್ಟಲೇಬೇಕು. ಇನ್ನಿತರ ನಿರ್ವಹಣಾ ವೆಚ್ಚ ಆದೇ ಆಗುತ್ತದೆ. ಎಷ್ಟು ಕಾಲ ಇವನ್ನೆಲ್ಲ ಕೈಯಿಂದ ಹಾಕಿ ನಿರ್ವಹಿಸಲು ಸಾಧ್ಯ ? ಇದೇ ಅಥವಾ ಇದಕ್ಕಿಂತ ಭಿನ್ನವಾದ ಸಮಸ್ಯೆ ಇನ್ನಿತರ ವಲಯಗಳಿಗೂ ಇರುತ್ತದೆ ಎಂಬುದನ್ನು ಅವರು ಯೋಚಿಸಿಯೇ ಇರಲಿಲ್ಲ. ಆದರೂ ಇದಕ್ಕೆ ಮಂಡಳಿ ಆರಂಭದಲ್ಲಿ ಮಣಿಯಲಿಲ್ಲ. ಆಗ ವಿತರಕರು ಮತ್ತು ಪ್ರದರ್ಶಕರು ವಾಣಿಜ್ಯ ಮಂಡಳಿ ತ್ಯಜಿಸಿ ಬೇರೊಂದು ಸಂಘ ಕಟ್ಟಿಕೊಳ್ಳುವ ನಿರ್ಧಾರಕ್ಕೆ ಬಂದು ವಾಣಿಜ್ಯ ಮಂಡಳಿಗೆ ಗಡುವು ನೀಡಿದರು. ಈ ಹಂತದಲ್ಲಿ ಪರಿಸ್ಥಿತಿ ಗಂಭೀರವಾಯಿತು. ವಾಣಿಜ್ಯ ಮಂಡಳಿ ಹೋಳಾಗುವುದನ್ನು ತಪ್ಪಿಸುವ ಉದ್ದೇಶದಿಂದ ಸೆಪ್ಟೆಂಬರ್ ೧ ರಿಂದ ಪ್ರದರ್ಶನವನ್ನು ಆರಂಭಿಸಲು ಕ್ರಿಯಾಸಮಿತಿ ನಿರ್ಧರಿಸಿತು. ಇದರಿಂದ ಒಂದು ಹಂತದ ಬಿಕ್ಕಟ್ಟನ್ನು ಚಿತ್ರೋದ್ಯಮ ದಾಟಿತು. ಆದರೆ ಬಹುತೇಕ ನಿರ್ಮಾಪಕರು ಬಿಡುಗಡೆಗೆ ಸಿದ್ಧವಾಗಿರುವ ಚಿತ್ರಗಳ ಪ್ರದರ್ಶನಕ್ಕೆ ಒಪ್ಪಲಿಲ್ಲ.

ಇದರಿಂದಾಗಿ ಒಂದು ತೀರ್ಮಾನಕ್ಕೆ ಬಂದು ಹೊಸ ಕನ್ನಡ ಚಿತ್ರಗಳನ್ನು ಬಿಡುಗಡೆ ಮಾಡದೆ ಹಳೆಯ ಚಿತ್ರಗಳನ್ನು ಮಾತ್ರ ಪುನರ್ ಪ್ರದರ್ಶಿಸುವ ಒಪ್ಪಂದಕ್ಕೆ ಬರಲಾಯಿತು. ಚಿತ್ರಮಂದಿರಗಳಲ್ಲೇನೋ ಚಟುವಟಿಕೆ ಆರಂಭವಾಯಿತು. ಆದರೆ ಎಂದಿನಂತೆ ಪ್ರೇಕ್ಷಕರು ಬರದೆ ಚಿತ್ರಮಂದಿರಗಳು ಬಿಕೋ ಅನ್ನತೊಡಗಿದವು. ಚಲನಚಿತ್ರ ಹಾಗೂ ಕಿರುತೆರೆಯ ಚಟುವಟಿಕೆಗಳು ಸಂಪೂರ್ಣವಾಗಿ ಸ್ತಬ್ಧಗೊಂಡಿದ್ದವು. ಕೆಲವರಿಗೆ ಚಿತ್ರೀಕರಣ ಆರಂಭಿಸುವ ಒಲವಿತ್ತಾದರೂ 'ಯಾವುದೇ ಕಾರಣಕ್ಕೂ ಚಿತ್ರೀಕರಣದಲ್ಲಿ ಪಾಲ್ಗೊಳ್ಳುವುದಿಲ್ಲ' ಎಂದು ಕಾರ್ಮಿಕರ ಒಕ್ಕೂಟ ಹಠ ಹಿಡಿದಿದ್ದರಿಂದ ಯಾರೂ ಏನನ್ನೂ ಮಾಡಲಾಗದೆ ಅಸಹಾಯಕರಾಗಿದ್ದರು.

ಕಿರುತೆರೆಗೆ ಧಾರಾವಾಹಿ ಇತ್ಯಾದಿ ನಿರ್ಮಿಸುವವರಿಗೂ ಇದೊಂದು ತೊಡಕಾಗಿತ್ತು. ಅವರೂ ಸಂಘಟಿತರಾಗಿ ಹಲವು ಸಭೆಗಳನ್ನು ನಡೆಸಿದರು. ರಾಜಕುಮಾರ್ ಬಿಡುಗಡೆ ಆಗುವವರೆಗೆ ಚಿತ್ರೀಕರಣ ಇಲ್ಲ ಎಂದರು. ಆದರೆ ಅವಧಿ ಅತಿ ದೀರ್ಘವಾದಾಗ ತೊಂದರೆಗಳಾದವು. ಧಾರಾವಾಹಿಗಳ ಕಂತುಗಳಲ್ಲಿ ಪುನರಾವರ್ತನೆಗಳಾದವು. ಏನೆಲ್ಲ ಕಸರತ್ತು ಮಾಡಿದರೂ ಜಾಹಿರಾತುಗಳು ಸಿಗುವುದು ನಿಂತಿತು. ಹೀಗೆ ಸರಣಿ ಸಮಸ್ಯೆಗಳು. ವಿಧಿಯಿಲ್ಲದೆ ಚಿತ್ರಿಸಹೊರಟ ಕೆಲವರ ಮೇಲೆ ಕ್ಯಾಮರಾ ಇತ್ಯಾದಿ ಕಸಿದುಕೊಂಡು ದಾಳಿ ಮಾಡಿದವರುಂಟು. ಚಿತ್ರೋದ್ಯಮ ಮಾತ್ರವಲ್ಲ, ಅದರ ಸುತ್ತ-ಮುತ್ತ, ಹೊರಗೆ-ಒಳಗೆ ಇರುವ ಎಲ್ಲ ಉದ್ಯಮಗಳೂ ನೆಲಕಚ್ಚಿದವು.

ಬಿಗಿನಿಲುವು, ಗೊಂದಲ, ಬಿಕ್ಕಟ್ಟು, ಅಸಮಾಧಾನಗಳ ಪರಿಸ್ಥಿತಿ ರೂಪಾಂತರಗೊಳ್ಳಲೇಬೇಕಾಗಿದ್ದ ಅನಿವಾರ್ಯತೆ ಬಂದ್ ಗರ್ಭದಲ್ಲಿಯೇ ಅಡಗಿ ಕುಳಿತಿತ್ತು. ಇದರ ಚಿಪ್ಪು ಒಡೆಯಲು ಆರಂಭಿಸಿದ್ದು ೫೦ ದಿನಗಳ ನಂತರ. ಕ್ರಿಯಾ ಸಮಿತಿಯು ದಿನಗಳು ಉರುಳುತ್ತಿದ್ದಂತೆ ತನ್ನ ನಿರ್ಧಾರಕ್ಕೆ ಅಂಟಿಕೊಂಡು ಕುಳಿತುಕೊಳ್ಳುವುದು ಸಾಧ್ಯವಿಲ್ಲದಾಯಿತು. ೨೦೦೦ನೆಯ ಇಸವಿ ಸೆಪ್ಟೆಂಬರ್ ೨೫ ರಂದು ೫೫ ದಿನಗಳ ಸ್ವಯಂ ಘೋಷಿತ, ಸುದೀರ್ಘಾವಧಿಯ ಬಂದ್ ಅನ್ನು ಹಿಂತೆಗೆದುಕೊಳ್ಳಲು ಕ್ರಿಯಾಸಮಿತಿ ನಿರ್ಧಾರ ತೆಗೆದುಕೊಂಡಿತು. ಭಾರತದ ಚಿತ್ರರಂಗದ ಇತಿಹಾಸದಲ್ಲಿ ಇದೊಂದು ಮೊದಲ ದಾಖಲೆಯಾಗಿ ಉಳಿಯಿತು. ಇಡೀ ಚಿತ್ರರಂಗ ರಾಜಕುಮಾರ್ ಅವರಿಗಾಗಿ, ಅವರ ಸುರಕ್ಷಿತ ಬಿಡುಗಡೆಗಾಗಿ ಒಗ್ಗಟ್ಟಿನಿಂದ ನಿಂತದ್ದು ಐತಿಹಾಸಿಕ ಘಟನೆಯೆನಿಸಿತು. ಈ ಘಟನೆಯು ೧೦೮ ದಿನಗಳ ನಂತರದ ರಾಜಕುಮಾರ್ ಅವರ ಬಿಡುಗಡೆಯೊಂದಿಗೆ ನವೆಂಬರ್ ೧೫ ರಂದು ಅಂತ್ಯಗೊಂಡಾಗ ಮರುದಿನ ೧೬ ರಂದು ಪತ್ರಿಕೆಗಳಲ್ಲಿ ಕಂಡ ಉದ್ಗಾರಗಳು, ಶೀರ್ಷಿಕೆಗಳು ಹೀಗಿದ್ದವು : "ಗಾಜನೂರಿನಲ್ಲಿ ಸಂತಸದ ಹೊನಲು", "ಸರಿದ ಕಾರ್ಮೋಡ", "ಒಂದು ದಿನ ಮೊದಲೇ ಬಿಡುಗಡೆಯಾಗಿದ್ದರೆ ?", "ಅಬ್ದುಲ್ ಕರೀಮ್ ಸಂತಸ",

''ಜಗತ್ತಿನ ಅತ್ಯಂತ ಸಂತೋಷದ ಸುದ್ದಿ'', ''ಹೇಗೆ ವರ್ಣಿಸಲಿ ಸಂತೋಷವನ್ನು !'', ''ಕಾರ್ಯಾಚರಣೆ ಭಯದಿಂದ ಕಾಡಿನಿಂದ ವೀರಪ್ಪನ್ ಪರಾರಿ ಸಂಭವ'', ''ನಗರದ ಶಾಲೆ, ಕಾಲೇಜುಗಳಿಗೆ ಇಂದು ರಜೆ.''

ರಾಜಕುಮಾರ್ ಅಪಹರಣ-ಬಿಡುಗಡೆಯ ನಡುವಿನ ಲಾಭ-ನಷ್ಟಗಳನ್ನು ನಂತರದ ದಿನಗಳಲ್ಲಿ ಯಾರೂ ಗುಣಿಸಿ, ಕೂಡಿ, ಕಳೆಯುವ ಪ್ರಯತ್ನಗಳನ್ನು ಮಾಡಲಿಲ್ಲ. ಚಿತ್ರರಂಗದ ದಿನಚರಿಯ ಆರಂಭ ಎಂದಿನಂತೆ ಆಗುತ್ತಾ ಮತ್ತೆ 'ಕೂಡು'ವ ಕೆಲಸಗಳಲ್ಲಿ ಮಗ್ನವಾಯಿತು. 'ಯಜಮಾನ' ರೀಮೇಕ್ ಚಿತ್ರದ ಗಳಿಕೆಯ ಬಗ್ಗೆ ಅಚ್ಚರಿಗೊಳ್ಳುತ್ತಾ ಅದೇ ಜಾಡಿನ ಕಥೆಗಳನ್ನು ಹುಡುಕುವುದರಲ್ಲಿ ನಿರ್ಮಾಪಕರು, ನಿರ್ದೇಶಕರು ತೊಡಗಿದರು. ೧೦ ವರ್ಷಗಳಲ್ಲಿ ರಾಜಕುಮಾರ್ ಅಭಿನಯಿಸಿದ ಕೇವಲ ನಾಲ್ಕು ಚಿತ್ರಗಳಿಗೂ, ೨೦೦೦ ಇಸವಿಯ ಒಂದೇ ವರ್ಷದಲ್ಲಿ ಹಂಸಲೇಖ ಅವರು ಸಂಗೀತ ನೀಡಿದ್ದ ೧೫ ಚಿತ್ರಗಳ ವೇಗಕ್ಕೂ ತಾಳೆಯಾಗದಿರುವಂಥ ಎಂದಿನ ವಾತಾವರಣವನ್ನು ಮುಂದುವರಿಸಿಕೊಂಡೇ ಚಿತ್ರರಂಗ ಮುನ್ನಡೆಯತೊಡಗಿತು.

ವಿವಾದ ಅಥವಾ ಅನಪೇಕ್ಷಿತ ಅನ್ನಿಸುವಂಥ ಒಂದೆರಡು ಘಟನೆಗಳಿಂದ ಈ ಶತಮಾನದ ಕೊನೆಯ ವರ್ಷವು ನೆನಪಿನಲ್ಲಿ ಉಳಿಯಲು ಕಾರಣವಾಗುವಂತಿದೆ. ೧೯೯೮-೯೯ರ ರಾಜ್ಯ ಪ್ರಶಸ್ತಿ ಮೊದಲ ಬಾರಿಗೆ ಅದನ್ನು ಪಡೆದವರಿಂದ ಇಂಥ ತಿರಸ್ಕಾರವನ್ನು ಎದುರಿಸಿತು. ಸುಬ್ಬಯ್ಯನಾಯ್ಡು ಹೆಸರಿನಲ್ಲಿ ಕೊಡುವ ಅತ್ಯುತ್ತಮ ನಟ ಪ್ರಶಸ್ತಿಯನ್ನು ಪ್ರಶಸ್ತಿ ಸಲಹಾ ಮಂಡಳಿ ವಿಷ್ಣುವರ್ಧನ್ (ವೀರಪ್ಪನಾಯ್ಕ) ಹಾಗೂ ರಮೇಶ್ (ಹೂಮಳೆ) ಇಬ್ಬರಿಗೂ ಹಂಚಿತು. ಮಂಡ್ಯದಲ್ಲಿ ನಡೆದ ಸಮಾರಂಭದಲ್ಲಿ ಪ್ರಶಸ್ತಿ ಸ್ವೀಕರಿಸಲು ವೇದಿಕೆಗೆ ಬಂದ ವಿಷ್ಣುವರ್ಧನ್ ಇಬ್ಬರಿಗೆ ಹಂಚಿದ್ದನ್ನು ಪ್ರತಿಭಟಿಸಿ, ಪ್ರಶಸ್ತಿಯನ್ನು ಸ್ವೀಕರಿಸಲಿಲ್ಲ. ಅದು ನಿರ್ದೇಶಕ ಎಸ್.ನಾರಾಯಣ್ ಅವರಿಗೆ ಸಲ್ಲಬೇಕೆಂದು ಅಲ್ಲಿ ಹಾಜರಿದ್ದ ನಾರಾಯಣ್ ಸೋದರನ ಕೈಗೆ ಕೊಟ್ಟರು. ಅನಂತರ ಅವರೂ ಅದನ್ನು ತಿರಸ್ಕರಿಸಿ ವೇದಿಕೆಯ ಮೇಲೆಯೇ ಇಟ್ಟುಬಿಟ್ಟರು. ರಾಜ್ಯದ ಅತ್ಯುನ್ನತ ಪ್ರಶಸ್ತಿಯೊಂದನ್ನು ಹೀಗೆ ಅಗೌರವಿಸಿದ ವರ್ತನೆ ಟೀಕೆಗಳಿಗೆ ಕಾರಣವಾಯಿತು. ಅಲ್ಲದೆ ಸಮಿತಿಯೊಂದು ಸರ್ಕಾರದ ಮೂಲಕ ನೀಡಿದ ಪ್ರಶಸ್ತಿಯನ್ನು ಅದನ್ನು ಪಡೆದವರು ಬೇರೆಯವರಿಗೆ ಕೊಡುವ ಹಕ್ಕನ್ನು ಹೊಂದಿರುತ್ತಾರೆಯೇ, ಹಾಗೆ ಕೊಡುವುದು ಉತ್ತಮ ಸಂಸ್ಕೃತಿಯೇ, ಸರ್ಕಾರದ ವೇದಿಕೆಯ ಮೇಲೆ ತಮಗೆ ತೋಚಿದ ತೀರ್ಮಾನಗಳನ್ನು ತೆಗೆದುಕೊಂಡು ಅದನ್ನು ಘೋಷಿಸುವ ನೈತಿಕ ಅಧಿಕಾರ ಪ್ರಶಸ್ತಿ ವಿಜೇತರಿಗೆ ಇರುತ್ತದೆಯೇ ಎಂಬ ವಿಚಾರಗಳು ಸಾರ್ವತ್ರಿಕವಾಗಿ ಪತ್ರಿಕೆಗಳಲ್ಲಿ ಚರ್ಚೆಗೆ ಬಂದವು. ರಮೇಶ್ ಇಡೀ ಪ್ರಕರಣದಿಂದ ನೊಂದುಕೊಂಡರು.

ಈ ಪ್ರಸಂಗವನ್ನು ಬಿಟ್ಟರೆ ಸರ್ಕಾರಿ ಅಧಿಕಾರಿಗಳು ಚಿತ್ರಗಳಲ್ಲಿ ನಟಿಸಬಾರದೆಂದು ಡಿಸೆಂಬರ್ ಎರಡನೆಯ ವಾರದಲ್ಲಿ ಸರ್ಕಾರ ತೆಗೆದುಕೊಂಡ ತೀರ್ಮಾನ ಹೆಚ್ಚು ಸುದ್ದಿ ಮಾಡಿತು. ಜನಸೇವೆ ಮಾಡಲು ಸಾರ್ವಜನಿಕರ ಹಣದಿಂದ ಸಂಬಳ ಪಡೆಯುವ ಅಧಿಕಾರಿಗಳು, ಕರ್ತವ್ಯ ಕಡೆಗಣಿಸಿ ವ್ಯಾಪಾರಿ ಚಿತ್ರಗಳಲ್ಲಿ ಅಭಿನಯಿಸುತ್ತಿದ್ದ ಪ್ರವೃತ್ತಿಗೆ ಕಡಿವಾಣ ಹಾಕಲು ಈ ನಿರ್ಧಾರವನ್ನು ಕೈಗೊಳ್ಳಲಾಯಿತು. ಐಎಎಸ್ ಅಧಿಕಾರಿ ಕೆ.ಶಿವರಾಮು ''ಸರ್ಕಾರ ಬೇಡವೆಂದರೆ ನಾನು ಅಭಿನಯಿಸುವುದಿಲ್ಲ'' ಎಂದು ಹೇಳಿಕೆ ಕೊಟ್ಟರು. ಮತ್ತೊಬ್ಬ ಐಎಎಸ್ ಅಧಿಕಾರಿ ಐ.ಎಂ.ವಿಠಲಮೂರ್ತಿ ''ನಾನು ನಟಿಯರೊಂದಿಗೆ ಕುಣಿಯುತ್ತಿಲ್ಲ, ಕನ್ನಡದ ಕಂಪನ್ನು ಹೆಚ್ಚಿಸುವಂಥ ಕಲಾತ್ಮಕ ಚಿತ್ರಗಳಿಗೆ ನಿರ್ಮಾಣ ಸಲಹೆಗಾರನಾಗಿ ಸೇವೆ ಸಲ್ಲಿಸುತ್ತಿದ್ದೇನೆ'' ಅಂದರು. ಇವರಿಬ್ಬರಿಗಿಂತ ಭಿನ್ನ ಪರಿಸ್ಥಿತಿಯಲ್ಲಿ ಇನ್ನೊಬ್ಬರಿದ್ದರು. ಸುದೀರ್ಘ ರಜೆಯಲ್ಲಿದ್ದುಕೊಂಡೇ ಚಿತ್ರಗಳನ್ನು ನಿರ್ಮಿಸುತ್ತಿದ್ದು, ಚಿತ್ರಗಳಲ್ಲಿ ಅಭಿನಯಿಸುತ್ತಿದ್ದ ಬಿ.ಸಿ.ಪಾಟೀಲ್ ಬಂಧನದ ಭೀತಿಯಿಂದ ನ್ಯಾಯಾಲಯದಿಂದ ನಿರೀಕ್ಷಣಾ ಜಾಮೀನು ಪಡೆದರು. ಆದರೆ ಸರ್ಕಾರ ಸೇವೆಯಿಂದ ಅಮಾನತ್ತುಗೊಳಿಸುವ ಮುನ್ಸೂಚನೆಯನ್ನು ಅರಿತು ಕೆಲಸಕ್ಕೆ ರಾಜೀನಾಮೆ ಸಲ್ಲಿಸಿದರು. ಆದರೆ ಅವರ ಮೇಲೆ ಸಿಓಡಿ ತನಿಖೆಯನ್ನು ಕೈಗೊಳ್ಳಲಾಯಿತು. ಈ ವಿದ್ಯಮಾನಗಳು ನಡೆಯುತ್ತಿರುವ ಸಂದರ್ಭದಲ್ಲಿಯೇ ''ಕಲೆಯಲ್ಲಿ ಅಭಿರುಚಿ, ಆಸಕ್ತಿ ಇರುವ ಸರ್ಕಾರಿ ನೌಕರರು ಅದರಲ್ಲಿ ತೊಡಗಿಕೊಂಡರೆ ತಪ್ಪೇನು ?'' ಎಂಬ ಅಭಿಪ್ರಾಯವೂ ಸಮಾಜದ ಕೆಲವು ಮಂದಿ ಗಣ್ಯರಿಂದ, ಜನಪ್ರತಿನಿಧಿಗಳಿಂದ ಕೇಳಿ ಬಂತು. ಕೊನೆಗೆ ೨೦೦೧ರ ಮಾರ್ಚ್‌ನಲ್ಲಿ ವಿಧಾನಮಂಡಲದಲ್ಲಿ ಆಯ-ವ್ಯಯದ ಮೇಲೆ ಚರ್ಚೆ ನಡೆಯುತ್ತಿದ್ದಾಗ ವಿರೋಧಿ ಸದಸ್ಯರ ಪ್ರಶ್ನೆಗಳಿಗೆ ಉತ್ತರಿಸುತ್ತಾ ಆಡಳಿತ ಪಕ್ಷ ಸಚಿವರಾದ ಹೆಚ್.ಕೆ.ಪಾಟೀಲ್ ಅವರು ''ನಾವು ಅಭಿನಯಿಸುವುದನ್ನು ನಿಷೇಧಿಸಿಲ್ಲ. ಸರ್ಕಾರದ ಒಪ್ಪಿಗೆ ಪಡೆಯಬೇಕೆಂದು ಮಾತ್ರ ಹೇಳುತ್ತಿದ್ದೇವೆ'' ಎಂದು ಸಮಜಾಯಿಷಿ ನೀಡಿದರು. ಸರ್ಕಾರದ ಅಭಿಪ್ರಾಯ ಏನೇ ಆಗಿದ್ದರೂ ಒಂದಿಬ್ಬರು ಕಲಾವಿದರು ಆರ್ಭಟಿಸಿದ ರೀತಿ ಹಾಗೂ ಅವರು ತರುತ್ತಿದ್ದ ಹಣದ ಮೂಲಗಳ ಬಗ್ಗೆ ಸಂಶಯ ತಾಳಿದ್ದ ಸರ್ಕಾರ ಇಂಥ ನಿರ್ಧಾರಕ್ಕೆ ಬಂದಿತೆಂಬ ಮಾತು ಆಗ ಕೇಳಿ ಬಂತು.

ಈ ಶತಮಾನದ ಕೊನೆಯ ಹೊತ್ತಿಗೆ ಕನ್ನಡ ಚಿತ್ರರಂಗ ತಾನು ಕಂಡ ಸಂಗೀತ ನಿರ್ದೇಶಕರ ಸಮೃದ್ಧ ಪರಂಪರೆಯನ್ನು ನೀಗಿಕೊಳ್ಳುತ್ತಾ ಬಂದಿತು. ಕನ್ನಡ ಚಿತ್ರರಂಗದಲ್ಲಿ ಬದಲಾದ ವಾತಾವರಣಕ್ಕೆ ತಕ್ಕಂತೆ ಸಂಗೀತ ನಿರ್ದೇಶಕರು ಜನ್ಮಿಸಲಿಲ್ಲ. ಹಿಂದಿನ ೪೦ ವರ್ಷಗಳನ್ನು ಆರೇಳು ಮಂದಿ ದಿಗ್ಗಜರು ಮಾಧುರ್ಯಮಯವಾಗಿ ಮುನ್ನಡೆಸಿದ್ದರು. ಅಂಥ ನಾಲ್ಕೈದು ಮಂದಿ ಈ ದಶಕದಲ್ಲಿ ಕಾಣಬೇಕಾಗಿತ್ತು. ಆದರೆ ಹಂಸಲೇಖ ಹೊರತಾಗಿ ಭರವಸೆಯೇ ಇಲ್ಲ ಅನ್ನುವಂಥ ವಾತಾವರಣ ಸೃಷ್ಟಿಯಾಯಿತು. ಇದರಿಂದಾಗಿ ನಿರ್ಮಾಪಕರು ಪರಭಾಷಾ ಚಿತ್ರರಂಗದ ಸಂಗೀತ ನಿರ್ದೇಶಕರ ಮೊರೆ ಹೋದರು. ಇಳಯರಾಜಾ, ಕೀರವಾಣಿ, ವಿಜಯಾನಂದ್, ದೇವಾ ಕನ್ನಡ ಚಿತ್ರಗಳಿಗೆ ನಿರಂತರವಾಗಿ ಸಂಗೀತ ನೀಡುವಂತಾಯಿತು. ಕನ್ನಡದ ಸಾಧುಕೋಕಿಲ, ಮನೋಹರ್, ರಾಜೇಶ್ ರಾಮನಾಥ್, ಎಲ್.ಎನ್.ಶಾಸ್ತ್ರಿ, ಕಲ್ಯಾಣ್, ಗುರುಕಿರಣ್ ತಮ್ಮದೇ ಆದ ಪರಂಪರೆಯನ್ನು ಬೆಳೆಸಲು ಹೊರಟರು. ಆದರೆ ವೆಂಕಟರಾಜು, ರಾಜನ್-ನಾಗೇಂದ್ರ, ಟಿ.ಜಿ.ಲಿಂಗಪ್ಪ, ಜಿ.ಕೆ.ವೆಂಕಟೇಶ್, ಎಂ.ರಂಗರಾವ್, ವಿಜಯಭಾಸ್ಕರ್, ಉಪೇಂದ್ರಕುಮಾರ್ ಮೊದಲಾದವರು ಅಲಂಕರಿಸಿದ್ದ ಸಂಗೀತ ಸಿಂಹಾಸನಗಳ ವಾರಸುದಾರರಾಗುವಷ್ಟು ವೈವಿಧ್ಯವನ್ನು ಇನ್ನೂ ತರಲಾಗಿಲ್ಲ.

ಕನ್ನಡ ಚಿತ್ರರಂಗದ ಒಟ್ಟಾರೆ ಪರಿಸ್ಥಿತಿಯನ್ನು ಅವಲೋಕಿಸಿದರೆ ಸಂಕ್ರಮಣ ಸ್ಥಿತಿಯಲ್ಲಿದೆ, ಪರ್ವ ಕಾಲದಲ್ಲಿದೆ, ಕವಲು ದಾರಿಯಲ್ಲಿದೆ, ಪರಿವರ್ತನೆಯ ಹಂತ ತಲುಪಿದೆ, ಅವನತಿಯ ಹಾದಿಯಲ್ಲಿದೆ, ಪತನದ ಅಂಚಿನಲ್ಲಿದೆ, ಅಮೃತ ಗಳಿಗೆಗಳನ್ನು ಕಾದಿರಿಸಿಕೊಂಡಿದೆ - ಎಂಬುದೇನನ್ನೂ ಹೇಳಲಾಗದ ಪರಿಸ್ಥಿತಿಯಿದೆ. ಇತಿಹಾಸವನ್ನು ಗಮನಿಸಿದರೆ ಅಂದು ಕೂಡ ಇಂದಿನಂಥ ಪರಿಸ್ಥಿತಿಯೇ ಇತ್ತೇನೋ ಎಂಬ ಭಾವನೆ ಬರುತ್ತದೆ. ಹಿರಿಯರ ಕಣ್ಮರೆ, ಕಿರಿಯರ ಅಕಾಲಿಕ ಸಾವುಗಳು, ತಂತ್ರಜ್ಞಾನದ ಬೆಳವಣಿಗೆಗಳು, ಬದಲಾಗುತ್ತಲೇ ಇರುವ ಅಭಿರುಚಿಗಳು, ಅಪರೂಪಕ್ಕೊಮ್ಮೆ ಸೃಷ್ಟಿಯಾಗುವ ಶ್ರೇಷ್ಠ ಚಿತ್ರಗಳು, ಬಯಸದೆ ಪಡೆದ ಭಾಗ್ಯಗಳು, ಬಯಸಿ ಬಂದವರು ಬರಿಗೈಲಿ ನಡೆದ ಸಾವಿರಾರು ಕಥೆಗಳು, ಸುದ್ದಿ ಮಾಡಲಾಗದವರ ನೋವುಗಳು, ಸುದ್ದಿ ಮಾಧ್ಯಮಕ್ಕೆ ಅತ್ತವರ ವೇದನೆಗಳು, ಅರಿಯದೆ ಆದ ತಪ್ಪುಗಳು, ಅರಿತು ಮಾಡುವ ವಂಚನೆಗಳು, ಹೊಸ ಸಂಬಂಧಗಳ ಸಂಭ್ರಮಗಳು, ಹಳಸಿದ ಪ್ರಣಯದ ಒಳಗುಟ್ಟುಗಳು, ಬಯಸಿದ್ದಾಗದೆ ಬೇರೇನೋ ಆದ ಸ್ವಾರಸ್ಯ-ನೋವುಗಳು, ಸಣ್ಣ ದೀಪ ಆರಿದ ಕತ್ತಲ ಕ್ಷಣದಲ್ಲಿ ಧಿಗ್ಗನೆ ಹೊತ್ತಿಕೊಳ್ಳುವ ಬಣ್ಣಬಣ್ಣದ ದೀಪಗಳು - ಎಲ್ಲವೂ ಯಾರೂ ಊಹಿಸಲಾಗದ ಚಲನೆಯಲ್ಲಿ, ಕಾಣದ ಆವರ್ತಗಳಲ್ಲಿ, ನಿರೀಕ್ಷಿಸದ ಪರಿವರ್ತನೆಯಲ್ಲಿ - ಹೊಚ್ಚ ಹೊಸದೆನ್ನಿಸುವ ದಾರಿಯಲ್ಲಿ ಸಾಗುತ್ತಾ ಬಂದಿವೆ; ಸಾಗುತ್ತಾ ನಡೆದಿವೆ.

'ಆತ್ಮ ಪ್ರಶಂಸೆ, ಉತ್ಪ್ರೇಕ್ಷೆಯೇ ಚರಿತ್ರೆಯ ದೇಹ' ಎಂಬ ಮಾತಿದೆ. ಆತ್ಮ ಪ್ರಶಂಸೆ ಇರುವ ಚರಿತ್ರೆಯ ಪುಟಗಳನ್ನು ನಿರಾಸೆ, ನಾಶ, ಮರುಹುಟ್ಟು, ಸಾವು, ನೋವುಗಳು ಮಾತ್ರ ವಾಸ್ತವದ, ಸತ್ಯದ ನೆಲೆಗಟ್ಟಿಗೆ ತಂದುನಿಲ್ಲಿಸಬಲ್ಲವು. ೨೦ನೆಯ ಶತಮಾನದ ಕೊನೆಯ ವರ್ಷದ, ಈ ಬೃಹತ್ ಚರಿತ್ರೆಯ ಕೊನೆಯ ಪುಟದ ಕಣ್ಮರೆಗಳು 'ದೊಡ್ಡವರ ಜೀವನ ಚರಿತ್ರೆಯೆ ಪ್ರಪಂಚದ ಚರಿತ್ರೆ' ಎಂಬ ಮಾತಿಗೆ ಉದಾಹರಣೆಗಳಾಗುವುದರಿಂದ ಇಲ್ಲಿ ಪ್ರಸ್ತಾಪಿಸುವ ಅರ್ಹತೆಯನ್ನು ಪಡೆದಿವೆ. ಸಾಹಿತಿ, ನಿರ್ದೇಶಕ, ಪತ್ರಕರ್ತ ಪಿ.ಲಂಕೇಶ್, ನಿರ್ಮಾಪಕ, ಪತ್ರಕರ್ತ ಎಂ.ರಾಮನ್, ಸಂಗೀತ ನಿರ್ದೇಶಕ ಟಿ.ಜಿ.ಲಿಂಗಪ್ಪ ಮತ್ತು ರಾಜನ್-ನಾಗೇಂದ್ರ ಜೋಡಿಯಲ್ಲಿ ಒಬ್ಬರಾದ ನಾಗೇಂದ್ರ, ಹೆಸರಾಂತ ನಿರ್ದೇಶಕರಾದ ದೊರೆ-ಭಗವಾನ್ ಜೋಡಿಯಲ್ಲಿ ಒಬ್ಬರಾದ ದೊರೆ, ಯುವ ಸುಗಮ ಸಂಗೀತಗಾರ, ಹಿನ್ನೆಲೆಗಾಯಕ ಜಿ.ವಿ.ಅತ್ರಿ, ನಟ ಸುಧೀರ್, ಉಷಾ ನವರತ್ನರಾಂ, ಧೀರೇಂದ್ರಗೋಪಾಲ್ - ಇವರೆಲ್ಲರ ನಿಧನ ಆಗಿರುವುದನ್ನು, ಆಗಬೇಕಾದ್ದನ್ನು ಚಿಂತನೆಗೂಡ್ಡುವ ಸಂಗತಿಯನಿಸುತ್ತದೆ.

ಕನ್ನಡದ ಉತ್ತಮ ಪ್ರಸಾಧನ ಕಲಾವಿದರಲ್ಲೊಬ್ಬರಾಗಿದ್ದ ಮಲ್ಲೇಶ್ ಹರ್ತಿ ಧಾರವಾಡದವರು. ಹೆಸರಾಂತ 'ಸಮುದಾಯ' ತಂಡದ ಮೂಲಕ ನಾಟಕಗಳಿಗೆ ದುಡಿಯುತ್ತಾ ವೃತ್ತಿ ಆರಂಭಿಸಿದ ಇವರು ಪಿ.ಲಂಕೇಶ್ ಅವರ 'ಎಲ್ಲಿಂದಲೋ ಬಂದವರು' ಚಿತ್ರದ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದರು. ಇವರಿಗೆ ಹೆಚ್ಚು ಖ್ಯಾತಿ

ತಂದುಕೊಟ್ಟ ಚಿತ್ರ ಪ್ರೇಮಾ ಕಾರಂತ್‌ರ 'ಫಣಿಯಮ್ಮ'. ೨೦ ವರ್ಷಗಳಷ್ಟು ಹಿಂದಿನ ಕಥೆಯ ಪಾತ್ರಗಳಿಗೆ ಸಮರ್ಥವಾಗಿ ಮೇಕಪ್ ಮಾಡಿ ಕ್ಷೌರಿಕನ ಪಾತ್ರದಲ್ಲೂ ಅಭಿನಯಿಸಿದ್ದರು. ಇವರದೇ 'ನಕ್ಕಳಾ ರಾಜಕುಮಾರಿ', ಹಿಂದಿಯ 'ಬಂಡ್ ಝರೋಕೆ' ಚಿತ್ರಗಳಲ್ಲದೆ ಕನ್ನಡದ ಸುಮಾರು ೩೦ ಚಿತ್ರಗಳಿಗೆ ಕೆಲಸ ಮಾಡಿದ್ದರು. ಮಲ್ಲೇಶ್ ಹರ್ತಿಯವರ ಚಿತ್ರ ಬದುಕಿನ ಬಹುಮುಖ್ಯ ಕೃತಿ ಸ್ವರ್ಣಕಮಲ ಪ್ರಶಸ್ತಿ ಪಡೆದು ೧೯೯೮ರಲ್ಲಿ ತೆರೆಕಂಡ ಗಿರೀಶ್ ಕಾಸರವಳ್ಳಿಯವರ 'ತಾಯಿ ಸಾಹೇಬ'. ಈ ಚಿತ್ರದ ಸ್ವಾತಂತ್ರ್ಯಪೂರ್ವದ ಪಾತ್ರಗಳಿಗೆ ಮೇಕಪ್ ಮೂಲಕ ನೈಜತೆ ತಂದುಕೊಟ್ಟಿದ್ದರು. ಸ್ನೇಹ ಜೀವಿಯಾಗಿದ್ದ ಮಲ್ಲೇಶ್ ಹರ್ತಿ ಹೊಸ ಶತಮಾನದ ಮೊದಲ ಬೆಳಗನ್ನು ಕಾಣದೆ ಡಿಸೆಂಬರ್ ೩೧, ೨೦೦೦ದಂದು ತಮ್ಮ ೪೩ನೆಯ ವಯಸ್ಸಿನಲ್ಲಿ ನಿಧನರಾದರು.

## ಕನ್ನಡ ಸಂಸ್ಕೃತಿಯ ಸೌಧ ಬೆಳಗಿಸಿದವರು

ಕನ್ನಡ ಚಿತ್ರರಂಗದ ಏಳು ದಶಕಗಳ ವರ್ಣರಂಜಿತ ಇತಿಹಾಸದಲ್ಲಿ ಅದ್ಭುತ ಸಾಧನೆಗಳ ಸಾಲುಸಾಲು ಗೋಪುರಗಳು ಕಾಣದಿದ್ದರೂ ಸಾಕಷ್ಟು ಗುಮ್ಮಟಗಳ ನಿರ್ಮಾಣವಂತೂ ಆಗಿದೆ. ಕನ್ನಡಿಗರು ಎಂದಿನಿಂದಲೂ ಪ್ರಗತಿಪರರು, ಪ್ರಯೋಗಪ್ರಿಯರು ಎಂದು ಹೇಳುವುದಕ್ಕೆ ಹಲವಾರು ಶ್ರೇಷ್ಠ ಚಿತ್ರಗಳ ದಾಖಲೆಗಳಿವೆ. ನಿರ್ಮಾಪಕರ ಉತ್ತಮ ಅಭಿರುಚಿಯ ತಳಹದಿಯ ಮೇಲೆ ಹಲವಾರು ಮಂದಿ ನಿರ್ದೇಶಕರು ಕನ್ನಡ ಸಂಸ್ಕೃತಿಯನ್ನು ಬೆಳಗಿಸುವಂಥ ಬಹಳಷ್ಟು ಸೌಧಗಳನ್ನು ನಿರ್ಮಿಸಿದ್ದಾರೆ. ಚರ್ಚಾರ್ಹವಾದ ಯಾವುದೇ ಸಂಗತಿಗಳಿದ್ದರೂ ಕಳೆದಿರುವ ೭೦ ವರ್ಷಗಳಲ್ಲಿ ಗಟ್ಟಿಮುಟ್ಟಾದ ಮಹಾಮನೆಯೊಂದರ ನಿರ್ಮಾಣವಂತೂ ಆಗಿದೆ. ಸಾವಿರಾರು ಮಂದಿ ಕಾರ್ಯನಿರತವಾಗಿರುವ ಈ ಕರ್ಮಸೌಧವನ್ನು ಕಡೆದು ನಿಲ್ಲಿಸಿರುವ ಶಿಲ್ಪಿಗಳು ನಿರ್ದೇಶಕರು-ನಿರ್ಮಾಪಕರು. ವಿಶೇಷವಾಗಿ ನಿರ್ದೇಶಕರು ಕಡಿಮೆ ಸಂಖ್ಯೆಯಲ್ಲಿದ್ದರೂ ಅವರ ಸಾಧನೆ ಅಗಾಧವಾಗಿದೆ.

ಕನ್ನಡದ ಆರಂಭದ ನಾಲ್ಕು ಚಿತ್ರಗಳ ಉದಾಹರಣೆಯನ್ನು ಗಮನಿಸಿದರೂ ಮೇಲಿನ ಮಾತುಗಳಿಗೆ ಇರುವ ಹಿನ್ನೆಲೆ ತಿಳಿಯುತ್ತದೆ. ಹೆಚ್ಚುಕಡಿಮೆ ಏಕಕಾಲದಲ್ಲಿ ತಯಾರಿಕೆ ಆರಂಭಿಸಿದ ಮೊದಲೆರಡು ಚಿತ್ರಗಳು ಪೌರಾಣಿಕವಾದರೆ, ಮೂರನೆಯದು ಜಾನಪದ ಹಿನ್ನೆಲೆಯ 'ಸದಾರಮೆ'. ಇದು ಗುಬ್ಬಿ ವೀರಣ್ಣನವರ ಕಂಪನಿಯ ಜನಪ್ರಿಯ ನಾಟಕವನ್ನು ಆಧರಿಸಿತ್ತು. ಇದರ ನಂತರ ನಾಲ್ಕನೆಯದು ಇಡೀ ದಕ್ಷಿಣ ಭಾರತಕ್ಕೇ ಪ್ರಥಮವೆನಿಸಿದ ಸಾಮಾಜಿಕ ಚಿತ್ರ - 'ಸಂಸಾರ ನೌಕ' - ಇದನ್ನು ನಿರ್ದೇಶಿಸಿದವರು ಹೆಚ್.ಎಲ್.ಎನ್.ಸಿಂಹ. ಅಂದರೆ ಮೊದಲ ಎರಡು ವರ್ಷಗಳಲ್ಲಿಯೇ ನಮಗೆ ತೀರಾ ಹೊಸದಾಗಿದ್ದ ಸಿನಿಮಾ ಭಾಷೆಯಲ್ಲಿ ಮೂರು ಪ್ರಕಾರಗಳ ಪ್ರಯೋಗ ನಡೆಯಿತು. ಇದಾದ ನಂತರ ರಂಗಭೂಮಿಯ ಜನಪ್ರಿಯ ನಾಟಕಗಳು, ಜಾನಪದ ಕಥೆಗಳು, ಐತಿಹಾಸಿಕ ಕಾದಂಬರಿಗಳು, ಸಮಕಾಲೀನ ರಾಜಕೀಯ ಆಗುಹೋಗುಗಳು - ಇವೆಲ್ಲವುಗಳ ಮಿಶ್ರ ಸಂಸ್ಕೃತಿಯಾಗಿಯೇ ಕನ್ನಡ ಸಿನಿಮಾ ಬೆಳೆಯತೊಡಗಿತು. ಈ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪಾಶ್ಚಾತ್ಯ ಶೈಲಿ, ಪ್ರಭಾವಗಳನ್ನೂ ಕೆಲವೊಮ್ಮೆ ಕಾಣದಂತೆ ಒಮ್ಮೊಮ್ಮೆ ಕಾಣುವಂತೆ ಅಳವಡಿಸಿಕೊಂಡಿದೆ.

ಕನ್ನಡ ಸಿನಿಮಾದ ಆರಂಭದ ಇಪ್ಪತ್ತು ವರ್ಷ ನಮ್ಮ ನಿರ್ಮಾಪಕ, ನಿರ್ದೇಶಕರೆದುರು ಅತ್ಯಂತ ಕಠಿಣ ಸವಾಲುಗಳಿದ್ದವು. ಹಣ ಹಾಗೂ ಮೂಲಭೂತ ಸೌಲಭ್ಯಗಳ ತೀವ್ರ ಕೊರತೆ ಇತ್ತು. ಇದರೊಂದಿಗೆ ಆಗ್ಗೆ ಜನರಿಗೆ ಅಪರಿಚಿತರಾಗಿದ್ದ ನಟವರ್ಗವನ್ನು ಇಟ್ಟುಕೊಂಡು ಅವರು ಏನನ್ನಾದರೂ ಸಾಧಿಸಬೇಕಾಗಿತ್ತು. ಇಂಥ ಹಿನ್ನೆಲೆಯಿಂದ ನೋಡಿದರೆ ಆಗ್ಗೆ ನಮ್ಮ ನಿರ್ದೇಶಕರು, ಸಾಹಿತಿಗಳು ಮಾಡಿರುವ ಕೆಲಸ ಸಾಧಾರಣವಾದದ್ದಲ್ಲ ಅನ್ನಿಸುತ್ತದೆ. ಹೆಚ್.ಎಲ್.ಎನ್.ಸಿಂಹ, ವೈ.ವಿ.ರಾವ್, ಆರ್.ನಾಗೇಂದ್ರರಾವ್, ಶಂಕರ್‌ಸಿಂಗ್-ಬಿ.ವಿಠಲಾಚಾರ್ಯ, ಬಿ.ಆರ್.ಪಂತುಲು, ಸಿ.ವಿ.ರಾಜು, ಟಿ.ವಿ.ಸಿಂಗ್ ಠಾಕೂರ್, ಡಿ.ಕೆಂಪರಾಜ ಅರಸ್, ಎಂ.ಆರ್.ವಿಠಲ್, ವೈ.ಆರ್.ಸ್ವಾಮಿ, ಆರೂರು ಪಟ್ಟಾಭಿ, ಬಿ.ಎಸ್.ರಂಗಾ, ಹುಣಸೂರು ಕೃಷ್ಣಮೂರ್ತಿ, ಜಿ.ವಿ.ಅಯ್ಯರ್ - ಇವರು ಹಾಗೂ ಇನ್ನಿತರ ಕೆಲವರಿಂದಾಗಿ ಸಾರ್ವಕಾಲಿಕ ಮಹತ್ವದ ಶ್ರೇಷ್ಠ ಚಿತ್ರಗಳು ಸೃಷ್ಟಿಯಾದವು. ಕಳೆದ ಅರವತ್ತು ವರ್ಷಗಳ ಸುದೀರ್ಘ ಅವಧಿಯ ನಂತರವೂ ಇಪ್ಪತ್ತನೆಯ ಶತಮಾನ ಕಳೆದು ಹೊಸ ಮನ್ವಂತರದ ಹೊಸಿಲಲ್ಲಿ ನಿಂತು ಬದಲಾಗಿರುವ ಸಮಾಜದ ಹಿನ್ನೆಲೆಯಲ್ಲಿ ನೋಡಿದರೂ ಹಳೆಯ ಚಿತ್ರಗಳಲ್ಲಿರುವ ಜೀವಂತಿಕೆ, ಆಗಿನವರ ಸಾಹಸ ಪ್ರವೃತ್ತಿ, ಸಾಧನೆಗಳು ಬೆರಗು ಹುಟ್ಟಿಸುವಂತಿವೆ.

ಕನ್ನಡ ನೆಲ ಹಾಗೂ ಸಂಸ್ಕೃತಿಯ ಅತಿ ಮುಖ್ಯ ಮುತ್ತುಗಳನ್ನು ಅತ್ಯಂತ ಜೋಪಾನವಾಗಿ ಮುಂದಿನ ಜನಾಂಗಕ್ಕಾಗಿಯೇ ಕಾಪಾಡಿ ಇಟ್ಟಿದ್ದಾರೇನೋ ಎಂಬ ಭಾವನೆ ಹಳೆಯ ತಲೆಮಾರಿನವರು ಆಯ್ಕೆ ಮಾಡಿಕೊಂಡಿರುವ ಚಿತ್ರಗಳ ವಸ್ತುವನ್ನು ಗಮನಿಸಿದಾಗ ಬರುತ್ತದೆ. 'ಸತಿ ಸುಲೋಚನಾ', 'ಭಕ್ತ ಧ್ರುವ', 'ಸದಾರಮೆ', 'ಸಂಸಾರ ನೌಕ', 'ಪುರಂದರದಾಸ', 'ವಸಂತಸೇನಾ', 'ಜೀವನ ನಾಟಕ', 'ಭಕ್ತ ಪ್ರಹ್ಲಾದ', 'ಸತ್ಯ ಹರಿಶ್ಚಂದ್ರ', 'ಕೃಷ್ಣ ಸುಧಾಮ', 'ಹೇಮರೆಡ್ಡಿ ಮಲ್ಲಮ್ಮ', 'ಮಹಾತ್ಮ ಕಬೀರ್', 'ಗೋರ ಕುಂಬಾರ', 'ಜಗನ್ಮೋಹಿನಿ', 'ರಾಜಾ ವಿಕ್ರಮ', 'ದಳ್ಳಾಳಿ', 'ಜಾತಕಫಲ', 'ಗುಣಸಾಗರಿ', 'ಬೇಡರ ಕಣ್ಣಪ್ಪ', 'ಮಾಡಿದ್ದುಣ್ಣೋ ಮಹರಾಯ', 'ನಟಶೇಖರ' - ಈ ಚಿತ್ರಗಳು ನಮ್ಮ ನಿರ್ದೇಶಕ-ನಿರ್ಮಾಪಕರ ವೈವಿಧ್ಯಮಯ ಚಿಂತನೆಗಳಿಗಷ್ಟೇ ಅಲ್ಲ, ಆ ಕಾಲದ ಸಾಮಾಜಿಕ ಬದುಕು, ಪೌರಾಣಿಕ, ಐತಿಹಾಸಿಕ ಮೌಲ್ಯಗಳಿಗಿದ್ದ ಮಹತ್ವ ಇವೆಲ್ಲದರ ದಾಖಲೆಗಳಾಗಿವೆ. ಯಾವುದೇ ಕಾಲದಲ್ಲಿ ಯಾವುದೇ ನಿರ್ದೇಶಕನಿಗೆ ಸ್ಫೂರ್ತಿಯ ನಿಜವಾದ ಉಪಯೋಗ ಆಗುವುದು ಎರಡೇ ಹಂತದಲ್ಲಿ. ಒಂದು, ಚಿತ್ರವೊಂದಕ್ಕೆ ವಸ್ತುವಿನ ಆಯ್ಕೆ ಮಾಡುವಾಗ; ಎರಡು, ಪಾತ್ರಗಳಿಗೆ ತಕ್ಕ ಕಲಾವಿದರನ್ನು ಆಯ್ಕೆ ಮಾಡುವಾಗ. ಇವೆರಡು ಸಂಗತಿಗಳಲ್ಲಿ ೧೯೩೪ರಿಂದ ೧೯೭೦ರವರೆಗೆ ಅದ್ಭುತ ಕೆಲಸ ಆಗಿದೆ. ಸರಿಯಾದ ಕಲಾವಿದರ ಆಯ್ಕೆಗೆ ನಿರ್ದೇಶಕರಾದವರು ಸಾಕಷ್ಟು ಕಷ್ಟಪಡಬೇಕು. ಅಂಥ ಶ್ರಮವನ್ನು ಹಳೆಯ ನಿರ್ದೇಶಕರು ಉತ್ಸಾಹದಿಂದ ನಿರ್ವಹಿಸಿದ್ದಾರೆ. ಪಾತ್ರಧಾರಿಗಳ ಆಯ್ಕೆಯನ್ನು ನಿರ್ದೇಶಕನಿಗಾಗಿ ಇನ್ಯಾರು ಮಾಡಿದರೂ ಸಂಪೂರ್ಣ ಫಲ ಕೊಡುವುದಿಲ್ಲ. ನಿರ್ದೇಶಕನಿಗೆ ತನ್ನ ಚಿತ್ರದ ವಸ್ತು ಹೊಳೆದಾಗ ಮತ್ತು ಚಿತ್ರಕಥೆ-ಸಂಭಾಷಣೆ ಸಿದ್ಧಪಡಿಸುವಾಗಲೇ ಆತ ಕಥೆಯ ಪಾತ್ರಗಳಿಗೆ ತಕ್ಕ ಪಾತ್ರಧಾರಿಗಳನ್ನು ಆರಿಸಲು ಆರಂಭಿಸಿರಬೇಕು. ಪಾತ್ರಧಾರಿಗಳ ಆಯ್ಕೆ ಒಂದು ಸೃಜನಾತ್ಮಕ ಕೆಲಸ. ನಿರ್ದೇಶಕನಿಗೆ ಸ್ವತಃ ಶೋಧನೆ ನಡೆಸಿ ತೀರ್ಮಾನಿಸುವ ಶಕ್ತಿ ಇರಬೇಕು. ವಿಶೇಷವೆಂದರೆ ಆರಂಭದ ದಿನಗಳ ಚಿತ್ರಗಳನ್ನು ನೋಡಿದರೆ ನಮ್ಮ ನಿರ್ದೇಶಕರು ಅಂಥ ಪರಿಣತಿಯನ್ನು ತೋರಿರುವುದು ಹೆಮ್ಮೆ ಹುಟ್ಟಿಸುತ್ತದೆ. ಕಲಾವಿದರನ್ನು ಆರಿಸಿಕೊಂಡು ಅವರಿಗೆ ಪಾತ್ರದ ವೇಷಭೂಷಣ ತೊಡಿಸಿ, ಮೇಕಪ್ ಮಾಡಿ ಕ್ಯಾಮರಾದಲ್ಲಿ ಚಿತ್ರಿಸಿ, ಪರೀಕ್ಷಿಸಿ, ಚರ್ಚಿಸಿದ ನಂತರವೇ ಆಯ್ಕೆ ಮಾಡುತ್ತಿದ್ದರು. ಕಲಾವಿದ ಪಾತ್ರದ ಕಲ್ಪನೆಗೆ ಹೊಂದದಿದ್ದರೆ ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುತ್ತಿದ್ದರು.

ಹಳೆಯ ತಲೆಮಾರಿನ ನಿರ್ದೇಶಕರಿಗೆ ಅತ್ಯಂತ ಅಪರಿಚಿತವಾಗಿದ್ದ ಸಿನಿಮಾ ಭಾಷೆಯ ಸವಾಲಷ್ಟೇ ಅಲ್ಲ, ಇನ್ನೂ ಹಲವಾರು ಸಮಸ್ಯೆಗಳಿರುತ್ತಿದ್ದವು. ಆರಂಭದ ಚಿತ್ರಗಳನ್ನು ನೋಡಿದಾಗ ಇದು ಕಾಣುತ್ತದೆ. ಆಗಿನ ಚಿತ್ರಗಳಲ್ಲಿ ದೃಶ್ಯಗಳು ಕ್ಯಾಮರಾ ಹೊರಗಿದ್ದು ಚಿತ್ರಿಸಿದಂತೆ ಭಾಸವಾಗುತ್ತವೆ. ಕ್ಯಾಮರಾ ಆ ದೃಶ್ಯಗಳಲ್ಲಿ ಕೇವಲ ಮೂಕಪ್ರೇಕ್ಷಕನಾಗಿರುತ್ತಿತ್ತು. ಇದಕ್ಕೆ ಆ ಕಾಲದ ಕ್ಯಾಮರಾಗಳ ತೂಕ ಮತ್ತು ಅವುಗಳ ಸಾಗಣೆಯ ಕಷ್ಟವೇ ಪ್ರಧಾನ ಕಾರಣವಾಗಿತ್ತೆನ್ನಬಹುದು. ಹಾಗಿದ್ದೂ ಹಳೆಯ ನಿರ್ದೇಶಕರು, ಛಾಯಾಗ್ರಾಹಕರು ಮಾದರಿ ಅನ್ನಿಸಬಹುದಾದ ಸಾಧನೆ, ವೈಶಿಷ್ಟ್ಯ ತೋರಿದ್ದಾರೆ. ಸಿನಿಮಾ ನಿರ್ದೇಶಕನಿಗೆ ಸಿಗುವ ವಿಸ್ತಾರ, ಹರವು, ಸ್ವಾತಂತ್ರ್ಯ, ರಂಗಭೂಮಿಯೂ ಸೇರಿದಂತೆ ಇನ್ಯಾವ ಪ್ರದರ್ಶನ ಕಲೆಗಳಲ್ಲಿಯೂ ದೊರಕದೆಂಬ ಅರಿವು ಆಗಿನ ನಿರ್ದೇಶಕರಿಗೆ ಆರಂಭದಲ್ಲಿಯೇ ಇತ್ತೆಂಬುದು ಇತಿಹಾಸದ ದೃಷ್ಟಿಯಿಂದ ದಾಖಲಾರ್ಹ ಸಂಗತಿಯಾಗಿದೆ.

ಸಿನಿಮಾ ನಿರ್ದೇಶನದ ಶೈಲಿಯಲ್ಲಿ ಆಮೂಲಾಗ್ರ ಬದಲಾವಣೆ ಬರಲು ಸಾಧ್ಯವಾಗಿದ್ದು ೧೯೭೦ರ ನಂತರ. ಕಡಿಮೆ ತೂಕದ ದೀಪಗಳು, ಸುಲಭವಾಗಿ ಸಾಗಿಸಬಹುದಾದ ಕ್ಯಾಮರಾ ಮತ್ತು ಹಗುರವಾದ ಧ್ವನಿಗ್ರಹಣ ವ್ಯವಸ್ಥೆ ಬಳಕೆಗೆ ಬಂದ ಮೇಲೆ. ಆ ವೇಳೆಗೆ ಚಿತ್ರನಿರ್ಮಾಣದಲ್ಲಿ ಕ್ರಾಂತಿಕಾರಿ ಬದಲಾವಣೆಗಳಾಗಿದ್ದವು. ೨೫ ವರ್ಷಗಳಿಂದ ಇದ್ದ ಪರಿಸ್ಥಿತಿ ಸಂಪೂರ್ಣ ಬದಲಾಯಿತು. ಕ್ಯಾಮರಾ ದೃಶ್ಯವೊಂದರ ನಡುವೆಯೇ ಇರುವುದು ಸಾಧ್ಯವಾಯಿತು. ಅದು ಅತಿ ಕಡಿಮೆ ಅವಧಿಯ ಚಿತ್ರಿಕೆಯಿಂದ ಅತಿ ಸುದೀರ್ಘಾವಧಿಯ ಚಿತ್ರಿಕೆಯವರೆಗೆ, ತರಹೇವಾರಿ ಚಿತ್ರಿಕೆಗಳ ಮೂಲಕ ನಿರ್ದೇಶಕ ಸಂಕಲನ ಕೋಣೆಯಲ್ಲಿ ಆಯ್ದುಕೊಳ್ಳಲು ಅನುವಾಗುವಂಥ ವೈವಿಧ್ಯವನ್ನು ಸಾಧ್ಯ ಮಾಡಿತು. ಇದರಿಂದಾಗಿ ಸಂಕಲನ ಕೋಣೆಯಲ್ಲಿ ಚಿತ್ರನಿರ್ದೇಶಕ ಇಡೀ ಚಿತ್ರದ ಲಯ, ಓಘವನ್ನು ಎಷ್ಟರಮಟ್ಟಿಗೆ ನಿಭಾಯಿಸಲು ಸಾಧ್ಯವಾಯಿತೆಂದರೆ ಒಂದು ಕಾಲದ ಸಿನಿಮಾಗಳಲ್ಲಿ ದೃಶ್ಯದಿಂದ ದೃಶ್ಯಕ್ಕೆ ಸೇತುವಾಗಲು ಬಳಸಲೇಬೇಕಾಗಿದ್ದಂತಹ ಫೇಡ್ ಮತ್ತು ಡಿಸಾಲ್ವ್‌ನಂತಹ ತಂತ್ರಗಳು ತಾವಾಗಿಯೇ ಮರೆಯಾದವು. ಇದರೊಂದಿಗೆ ತಾಂತ್ರಿಕವಾಗಿ ಆಗುತ್ತಿದ್ದ ಅದ್ಭುತ ಬೆಳವಣಿಗೆಗಳು ಸಿನಿಮಾದ ವಸ್ತುವಿನ ಆಯ್ಕೆಯ ಮೇಲೂ ತೀವ್ರ ಪರಿಣಾಮಗಳನ್ನು ಬೀರಿದವು. ಇದರ ಫಲವಾಗಿ ನಿರ್ದೇಶಕರಿಗೆ ಆಧುನಿಕ ನಗರ ಜೀವನದ ಗೊಂದಲವನ್ನು ಅದರ ಸತ್ಯ-ಮಿಥ್ಯಗಳೊಡನೆ ಚಿತ್ರಿಸುವ ಹೊಸತನ ಸಾಧ್ಯವಾಯಿತು. ಸಿನಿಮಾ ಅತ್ಯಂತ ಪರಿಚಿತ ಕಲೆ ಅನ್ನಿಸತೊಡಗಿದ್ದು ಈ

ದಿನಗಳಲ್ಲಿಯೇ. ಇದು ಅತ್ಯಂತ ಭಿನ್ನವಾಗಿ ಯೋಚಿಸುತ್ತಿದ್ದ ನಮ್ಮ ಕೆಲವಾರು ನಿರ್ದೇಶಕರನ್ನು ಉತ್ಕಟವಾಗಿ ಪ್ರಚೋದಿಸಿತು. ಕೆ.ಎಸ್.ಎಲ್.ಸ್ವಾಮಿ, ಎನ್.ಲಕ್ಷ್ಮೀನಾರಾಯಣ್, ಪುಟ್ಟಣ್ಣ ಕಣಗಾಲ್, ಪೇಕೇಟಿ ಶಿವರಾಂ, ಗೀತಪ್ರಿಯ, ಸಿದ್ದಲಿಂಗಯ್ಯ, ದೊರೆ-ಭಗವಾನ್, ಗಿರೀಶ್ ಕಾರ್ನಾಡ್, ವಾದಿರಾಜ್, ಎ.ವಿ.ಶೇಷಗಿರಿರಾವ್, ವಿಜಯ್, ವಿ.ಸೋಮಶೇಖರ್, ಭಾರ್ಗವ ಮುಂತಾದವರು ತುಂಬಾ ನೇರವಾಗಿ ಸಾಮಾಜಿಕ ಬದುಕಿನಲ್ಲಷ್ಟೇ ಅಲ್ಲ, ಜನರ ಮನೆ-ಮನದಂಗಳಗಳಿಗೆ ಲಗ್ಗೆಯಿಡುವ ಪ್ರಯತ್ನ ಮಾಡಿದರು. ತಾಂತ್ರಿಕ ಆವಿಷ್ಕಾರಗಳನ್ನು ಮನುಷ್ಯನ ವಹೌಲ್ಯಪ್ರಜ್ಞೆ ಹಾಗೂ ಮೂಲಪ್ರವೃತ್ತಿಗಳ ಪರಿಣಾಮಕಾರಿ ಅಭಿವ್ಯಕ್ತಿಗೆ ದುಡಿಸಿಕೊಳ್ಳಲು ಪ್ರಾಮಾಣಿಕವಾಗಿ ಶ್ರಮಿಸಿದರು.

ಆದಿಕಾಲದಿಂದಲೂ ಮನುಷ್ಯ ರಕ್ತಸಂಬಂಧಕ್ಕೆ ಹೆಚ್ಚು ಬೇಗ ಪ್ರತಿಕ್ರಿಯಿಸುತ್ತಾನೆಂಬ ಅಂಶದ ಮೇಲೆ ಎರಡನೆಯ ಪೀಳಿಗೆಯ ನಿರ್ದೇಶಕರು ಕೃಷಿಯನ್ನು ನಡೆಸಿದ್ದಾರೆ. ತಂದೆಯನ್ನು ಕುರಿತಂತೆ ಮಗನ ಕರ್ತವ್ಯ. ಮಕ್ಕಳನ್ನು ಕುರಿತ ತಾಯಿಯ ಭಾವನೆ, ಗಂಡ-ಹೆಂಡತಿಯ ನಡುವಿನ ಸಂಬಂಧದ ಸೂಕ್ಷ್ಮಗಳು, ಅವಿಭಕ್ತ ಕುಟುಂಬದ ಸಮಸ್ಯೆ-ಸಾರ್ಥಕ್ಯಗಳು - ಇಂತಹ ಭಾವನಾತ್ಮಕ, ಕೌಟುಂಬಿಕ ಸಂಬಂಧಗಳಿಂದ ಉಂಟಾಗುವ ವಾತಾವರಣ, ಸಂಘರ್ಷಗಳು ೧೯೬೫-೭೫ರ ಅವಧಿಯ ಮುಖ್ಯ ಚಿತ್ರಗಳಲ್ಲಿದೆ. ಈ ಅವಧಿಯಲ್ಲಿ ಪ್ರೇಕ್ಷಕರನ್ನು ಕಥಾ ಪ್ರಪಂಚದಲ್ಲಿ ಅವರೂ ಒಬ್ಬರಾಗಿರುವಂತೆ ಮಾಡಿದ್ದು ಈ ನಿರ್ದೇಶಕರ ವಿಶಿಷ್ಟ ಸಾಧನೆಯಾಗಿದೆ. 'ಬೆಳ್ಳಿಮೋಡ', 'ಲಗ್ನಪತ್ರಿಕೆ', 'ಬಂಗಾರದ ಹೂವು', 'ಚಕ್ರತೀರ್ಥ', 'ಸರ್ವಮಂಗಳಾ', 'ಹಣ್ಣೆಲೆ ಚಿಗುರಿದಾಗ', 'ನಮ್ಮ ಊರು', 'ಮಣ್ಣಿನ ಮಗ', 'ನಮ್ಮ ಮಕ್ಕಳು', 'ಪುನರ್ಜನ್ಮ', 'ಉಯ್ಯಾಲೆ', 'ಗೆಜ್ಜೆಪೂಜೆ', 'ಕರುಳಿನ ಕರೆ', 'ಬಾಳು ಬೆಳಗಿತು', 'ಕಸ್ತೂರಿ ನಿವಾಸ', 'ಶರಪಂಜರ', 'ತಾಯಿದೇವರು', 'ವಂಶವೃಕ್ಷ', 'ಬಂಗಾರದ ಮನುಷ್ಯ', 'ಯಾವ ಜನ್ಮದ ಮೈತ್ರಿ', 'ನಂದಗೋಕುಲ', 'ನಾಗರಹಾವು', 'ದೇವರು ಕೊಟ್ಟ ತಂಗಿ', 'ಎಡಕಲ್ಲು ಗುಡ್ಡದ ಮೇಲೆ', 'ಅಬಚೂರಿನ ಪೋಸ್ಟಾಫೀಸು', 'ಬೂತಯ್ಯನ ಮಗ ಅಯ್ಯು', 'ಎರಡು ಕನಸು', 'ಉಪಾಸನೆ', 'ಶುಭಮಂಗಳ', 'ಭಾಗ್ಯಜ್ಯೋತಿ', 'ಹೊಂಬಿಸಿಲು, 'ಭಾಗ್ಯವಂತರು' ಮತ್ತು 'ಪರಸಂಗದ ಗೆಂಡೆತಿಮ್ಮ' ಮುಂತಾದ ಚಿತ್ರಗಳು ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯದ ಕಂಪನ್ನು ಒಳಗೊಂಡಿದ್ದ ಮಹತ್ ಚಿತ್ರಗಳಷ್ಟೇ ಅಲ್ಲ, ನಮ್ಮ ಸಾಮಾಜಿಕ ಬದುಕಿನ ಸಮರ್ಥ ಪ್ರತಿಬಿಂಬಗಳಾಗಿವೆ.

ಇದೇ ಅವಧಿಯಲ್ಲಿ ಕನ್ನಡ ಚಿತ್ರರಂಗಕ್ಕೆ ವಿಶ್ವಮಟ್ಟದಲ್ಲಿ ಮಾನ್ಯತೆ ದೊರಕಿಸಿಕೊಟ್ಟ ಹೊಸ ಶೈಲಿ ಹಾಗೂ ಪೀಳಿಗೆಯೊಂದು ವಿಜೃಂಭಿಸಿತು. 'ಹೊಸ ಅಲೆ' ಹೆಸರಿನ ಈ ಬಿರುಗಾಳಿ ಆರಂಭದಲ್ಲಿ ಎಷ್ಟು ತೀವ್ರವಾಗಿತ್ತೆಂದರೆ ವಿಶ್ವದ ಆರು ಮಂದಿ ಅಗ್ರಗಣ್ಯ ನಿರ್ದೇಶಕರಲ್ಲಿ ಒಬ್ಬರಾದ ಸತ್ಯಜಿತ್ ರಾಯ್ ಅವರೇ ಸ್ವತಃ "ಪಶ್ಚಿಮ ಬಂಗಾಳ ಮಾಡಲಾಗದುದನ್ನು ಕರ್ನಾಟಕ ಮಾಡುತ್ತಿದೆ" ಎಂದು ಪ್ರಶಂಸಿಸಿದ್ದರು. ಆ ಮಟ್ಟದಲ್ಲಿ ನಮ್ಮ ಸಮಾಜದಲ್ಲಿದ್ದ ಅಂಧಶ್ರದ್ಧೆ, ಮೂಢನಂಬಿಕೆ ಹಾಗೂ ವ್ಯಕ್ತಿವಿಶಿಷ್ಟ ಸಿದ್ಧಾಂತಗಳನ್ನು ಅತ್ಯಂತ ವಿಶಿಷ್ಟವೆನಿಸಿದ ನೈಜಶೈಲಿಯಲ್ಲಿ ಈ ಅಲೆ ತೆರೆಗೆ ತಂದುಕೊಟ್ಟಿತು. ಇದರ ರೂವಾರಿಗಳಾಗಿ ಬಿ.ವಿ.ಕಾರಂತ್, ಗಿರೀಶ್ ಕಾರ್ನಾಡ್, ಪಟ್ಟಾಭಿರಾಮಿರೆಡ್ಡಿ, ಎಂ.ಎಸ್.ಸತ್ಯು, ಗಿರೀಶ್ ಕಾಸರವಳ್ಳಿ, ನಾಗಾಭರಣ, ಪಿ.ಲಂಕೇಶ್, ಚಂದ್ರಶೇಖರ ಕಂಬಾರ, ಬರಗೂರು ರಾಮಚಂದ್ರಪ್ಪ, ಟಿ.ಎಸ್.ರಂಗಾ, ವಿ.ಆರ್.ಕೆ.ಪ್ರಸಾದ್ ಮುಂತಾದವರು ವಿಶೇಷ ಮನ್ನಣೆಗೆ ಪಾತ್ರರಾದರು. ಚಿತ್ರಮಾಧ್ಯಮವನ್ನು ಗಂಭೀರವಾಗಿ ಅವಲಂಬಿಸಿದವರೊಂದಿಗೆ ಅಧ್ಯಾಪಕರು, ಪತ್ರಕರ್ತರು, ಸಾಹಿತಿಗಳೇ ಮೊದಲಾದ ಬುದ್ಧಿಜೀವಿಗಳು ಈ ಹೊಸ ಅಲೆಯೊಂದಿಗೆ ಗುರುತಿಸಿಕೊಂಡು ಕೆಲವೇ ಆದರೂ ವಿಶಿಷ್ಟ ಚಿತ್ರಗಳನ್ನು ನೀಡಿದ್ದಾರೆ. 'ಸಂಸ್ಕಾರ', 'ವಂಶವೃಕ್ಷ', 'ಅಬಚೂರಿನ ಪೋಸ್ಟಾಫೀಸು', 'ಕಾಡು', 'ಚೋಮನ ದುಡಿ', 'ಹಂಸಗೀತೆ', 'ಪಲ್ಲವಿ', 'ಋಷ್ಯಶೃಂಗ', 'ತಬ್ಬಲಿಯು ನೀನಾದೆ ಮಗನೆ', 'ಒಂದಾನೊಂದು ಕಾಲದಲ್ಲಿ', 'ಕಾಡುಕುದುರೆ', 'ಗ್ರಹಣ', 'ಗೀಜಗನ ಗೂಡು', 'ಘಟಶ್ರಾದ್ಧ', 'ಫಣಿಯಮ್ಮ', 'ಮೂರು ದಾರಿಗಳು', 'ಒಂದು ಊರಿನ ಕಥೆ' - ಇವು ಕನ್ನಡ ಚಿತ್ರರಂಗವನ್ನು ನಾನಾ ರೀತಿಯಲ್ಲಿ ಅಂತರರಾಷ್ಟ್ರೀಯ ಭೂಪಟಕ್ಕೆ ಪರಿಚಯಿಸಿದವು. ಸಿನಿಮಾ ಮೂಲಕ ಜನರಿಗೆ ಏನನ್ನಾದರೂ ಹೇಳಲೇಬೇಕೆಂಬ ಬಯಕೆ ಈ ಹೊಸ ಅಲೆಯ ನಿರ್ದೇಶಕರ ಪ್ರಯತ್ನಗಳ ಹಿಂದೆ ಇತ್ತು.

ಇಂಥ ಬೆಳವಣಿಗೆಯ ನಡುವೆಯೇ ಸಿನಿಮಾ ಮನರಂಜನೆಗೆ ಮಾತ್ರ ಹಾಗೂ ತೊಡಗಿಸಿದ ಹಣ ಲಾಭದೊಂದಿಗೆ ಹಿಂದಿರುಗಬೇಕು ಎಂಬ ವ್ಯಾವಹಾರಿಕ ದೃಷ್ಟಿಗೆ ಒತ್ತು ಸಿಗುತ್ತಾ ಬಂದಿತು. ಎರಡು ದಶಕಗಳಿಂದ ಇದ್ದ ವಾತಾವರಣಕ್ಕೆ ಇದು ಸಂಪೂರ್ಣ ತದ್ವಿರುದ್ಧವಾಗಿತ್ತು. ಪಾಶ್ಚಿಮಾತ್ಯ ದೇಶದ ಚಿತ್ರಗಳ ಪ್ರಭಾವ, ಅಲ್ಲಿನ ಶೈಲಿಗಳ ಅನುಕರಣೆ, ಅಪರಿಚಿತ ವ್ಯಕ್ತಿ, ಘಟನೆಗಳ ನಡುವಿನ ಸಂಘರ್ಷ ಮುಂತಾದವು ವಿಜೃಂಭಿಸತೊಡಗಿದವು. ನಿರ್ದೇಶಕನ ಮೌಲ್ಯ ಕುಸಿಯತೊಡಗಿ ನಾಯಕ, ನಾಯಕಿಯರ ಮಹತ್ವ ಹೆಚ್ಚತೊಡಗಿತು. ದ್ವಿಪಾತ್ರಗಳು, ತ್ರಿಪಾತ್ರಗಳು, ನಾಯಕನನ್ನು ವಿಜೃಂಭಿಸುವ ಕಥೆ-ಸಂಭಾಷಣೆಯ ಸೃಷ್ಟಿ ಆರಂಭವಾಯಿತು. ರಾಜಕೀಯ ಆಗುಹೋಗುಗಳು, ದುಷ್ಟರೇ ಪ್ರಧಾನವಾಗಿರುವ ವಂಚನೆ, ಸುಲಿಗೆ, ಭ್ರಷ್ಟಾಚಾರಗಳು ಹೆಚ್ಚಾದವು. ಹೆಣ್ಣನ್ನು ಬಗೆಬಗೆಯಾಗಿ ಬಳಸಿಕೊಳ್ಳುವ ತಂತ್ರಗಳಿಗೆ ನಿರ್ದೇಶಕರು ಮೊರೆಹೋದರು. ಹಣ ಗಳಿಕೆ, ರಂಜನೆ, ಯಶಸ್ಸು ಮಾತ್ರ 'ಅತಿ ಮುಖ್ಯ ಅಂಶ' ಎಂಬ ತತ್ವ ಪ್ರಧಾನವಾಗತೊಡಗಿತು. ಇಂಥ ಬದಲಾದ ವಾತಾವರಣದಲ್ಲಿಯೂ ಹಲವರು ಪ್ರವಾಹಕ್ಕೆ ವಿರುದ್ಧವಾಗಿ ನಡೆದು ವಿಶಿಷ್ಟ ಚಿತ್ರಗಳನ್ನು ಸೃಷ್ಟಿಸಿದ್ದಾರೆ. ಇವನ್ನು ಶಂಕರ್‌ನಾಗ್, ರಾಜೇಂದ್ರಸಿಂಗ್ ಬಾಬು, ಸಿಂಗೀತಂ ಶ್ರೀನಿವಾಸರಾವ್, ನಾಗಾಭರಣ, ರೇಣುಕಾಶರ್ಮ, ದ್ವಾರಕೀಶ್, ಸುರೇಶ್ ಹೆಬ್ಳೀಕರ್, ಡಿ.ರಾಜೇಂದ್ರಬಾಬು ಮುಂತಾದವರು ನಿರ್ದೇಶಿಸಿದ್ದಾರೆ. ಇವರು ಕೆಲವು ಉತ್ತಮ ಚಿತ್ರಗಳನ್ನು ರೂಪಿಸುತ್ತಿದ್ದ ದಿನಗಳಲ್ಲಿಯೇ 'ಸಿನಿಮಾ ಹಲವು ಕಲೆಗಳ, ಕಲಾವಿದರ ಸಂಘಟಿತ ಶಿಸ್ತಿನಿಂದ ಹುಟ್ಟುವುದು' ಎಂಬ ನಂಬಿಕೆ ಶಿಥಿಲವಾಗುತ್ತಾ ನಡೆಯಿತು. ಚಿತ್ರಕಥೆಗಿಂತ ಭಿನ್ನವಾಗಿ ಅದರಲ್ಲಿನ ಸೂಕ್ಷ್ಮ ಅವಕಾಶ, ಸಂದರ್ಭಗಳನ್ನು ಬೆಳೆಸುವ ಸೃಜನಶೀಲ ಪ್ರತಿಭೆ ಈ ಪೀಳಿಗೆಯೊಂದಿಗೆ ನಶಿಸುತ್ತಾ ಬಂದು ಕೊನೆಗೆ ಹೊಸ ತಲೆಮಾರಿನ ಬಹುಸಂಖ್ಯಾತ ನಿರ್ದೇಶಕರಲ್ಲಿ ಕಾಣದಾಯಿತು. ಚಿತ್ರಕಥೆಗಾರ ಆತ ಕಂಡುಕೊಂಡ ಅಥವಾ ಪ್ರತಿಪಾದಿಸುವ ಸತ್ಯ ಅಥವಾ ಅರ್ಥದಿಂದಾಚೆಗೆ ಚಿಂತಿಸದೆ ಅವನು ಬರೆದಷ್ಟನ್ನೇ ಚಿತ್ರಿಸುವ ಪ್ರವೃತ್ತಿ ವ್ಯಾಪಕಗೊಳ್ಳತೊಡಗಿತು. ಇದರಿಂದಾಗಿ ತಾಂತ್ರಿಕವಾಗಿ ಸುಧಾರಣೆಗಳಾಗುತ್ತಿದ್ದರೂ ಮಾಧ್ಯಮದ ಅರ್ಥಪೂರ್ಣ ಬೆಳವಣಿಗೆಯು ಕುಂಠಿತಗೊಂಡಿತು. ಇಷ್ಟರ ನಡುವೆಯೂ 'ಮಿಂಚಿನ ಓಟ', 'ಸ್ಪಂದನ', 'ಆಲೆಮನೆ', 'ಹಾಲು ಜೇನು', 'ಕವಿರತ್ನ ಕಾಳಿದಾಸ', 'ಅಂತರಾಳ', 'ಕಾಮನಬಿಲ್ಲು', 'ಚಕ್ರವ್ಯೂಹ', 'ಹೊಸ ನೀರು', 'ನೋಡಿ ಸ್ವಾಮಿ ನಾವಿರೋದು ಹೀಗೆ', 'ಯಾರಿವನು', 'ಬಂಧನ', 'ಆಕ್ಸಿಡೆಂಟ್', 'ಒಲವಿನ ಉಡುಗೊರೆ' ಮುಂತಾದ ಉತ್ತಮ ಚಿತ್ರಗಳ ನಿರ್ಮಾಣ ಆಗಿದೆ.

ಚಿತ್ರಗಳನ್ನು ವೈಭವವಾಗಿ, ಅದ್ದೂರಿಯಾಗಿ ನಿರ್ಮಿಸುವ ಕಲ್ಪನೆ ಊರ್ಧ್ವಮುಖವಾಗಿ ಬೆಳೆಯತೊಡಗಿದ್ದು ೧೯೮೦ರ ಆರಂಭದ ದಿನಗಳಲ್ಲಿ. ಈ ಕಲ್ಪನೆ ಕಲೆಯ ನೆಲೆಯದಾಗಿರಲಿಲ್ಲ. ವ್ಯವಹಾರದ ವಿಸ್ತಾರ ಮಾತ್ರ ಆಗಿತ್ತು. ಇಂಥದಕ್ಕೆ ನಾಯಕನನ್ನು ಅತೀತನನ್ನಾಗಿಸುವ ಅನಿವಾರ್ಯತೆ ಇತ್ತು. ಕಥೆಗೆ ಹೊಂದದಿರುವುದನ್ನು ಜೋಡಿಸಬೇಕಾಗಿತ್ತು. ಇದಕ್ಕಾಗಿ ಹೊಸದೆನ್ನಿಸುವ ವಿಚಾರಗಳನ್ನಿಟ್ಟುಕೊಂಡವರು ಅಗತ್ಯವಾಗಿತ್ತು. ಒಂದು ಕಡೆ ಸಿದ್ಧ ಸೂತ್ರ, ಇನ್ನೊಂದು ಕಡೆ ನಿರ್ದೇಶಕನ ಆತನದೆಂಬ ಛಾಪನ್ನು ಮೂಡಿಸಲು ಚಡಪಡಿಸುವ ಐಡಿಯಾಗಳು ಬೆರೆತು ಚಿತ್ರಗಳಾದವು. ಆದರೆ ಸಮಸಂಯೋಗದ ಕೊರತೆಯಿಂದಾಗಿ ಅನೇಕ ಬಾರಿ ದೃಶ್ಯಕ್ಕೆ ತುರುಕಿದಂತೆಯೂ ಅಥವಾ ಕೇವಲ ಅಲಂಕಾರದಂತೆಯೂ ಉಳಿದುಬಿಟ್ಟವು. ಇಂಥ ಕಡೆ ಪ್ರತಿ ಹೆಜ್ಜೆಯಲ್ಲೂ ವ್ಯಾವಹಾರಿಕ ಯಶಸ್ಸಿನ ಲೆಕ್ಕಾಚಾರ ಎದುರಾಗುವುದರಿಂದ ಅಂತಿಮವಾಗಿ ಯಾವುದು ಅತ್ಯಗತ್ಯ ಎಂದು ನಿರ್ಧರಿಸುವ ಶಕ್ತಿಯನ್ನು ಬಹುತೇಕ ನಿರ್ದೇಶಕರು ಕಳೆದುಕೊಳ್ಳತೊಡಗಿದರು. ಇದರಿಂದಾಗಿ ಇಂದಿನ ಚಲನಚಿತ್ರಗಳು ಅಥವಾ ವಿದ್ಯುನ್ಮಾನ ಮಾಧ್ಯಮದ ಕಾರ್ಯಕ್ರಮಗಳು ತಮ್ಮ ಬೆನ್ನಿಗಿರುವ ಕಲೆ ಮತ್ತು ರಾಜಕೀಯ ಸ್ವಾತಂತ್ರ್ಯವನ್ನು ಎತ್ತರಕ್ಕೇರಿಸಲು ಅಸಮರ್ಥವಾಗುತ್ತಿವೆ. ಎಲ್ಲಾ ಬಗೆಯ ತಾಂತ್ರಿಕ ಬೆಳವಣಿಗೆಗಳು ಸೇರಿಕೊಂಡು ನಿರ್ದೇಶಕನ ಕೆಲಸ ಕಡಿಮೆಯಾಗುತ್ತಿದೆ. ಇದರಿಂದಾಗಿ ಜನರಿಗೆ ಸಿನಿಮಾ ಕಲೆಯಾಗಿ ದೊರೆಯದೆ, ಕಾಲ ಕಳೆಯುವ ಒಂದು ವ್ಯವಸ್ಥೆಯಾಗಿ ಮಾತ್ರ ದೊರೆಯುತ್ತಿದೆ.

ಇದರೊಂದಿಗೆ ನಮ್ಮಲ್ಲಿ ಇನ್ನೊಂದು ದುರಭ್ಯಾಸ ಬೆಳೆಯತೊಡಗಿತು. ಹೊಸ ಪೀಳಿಗೆಯ ನಿರ್ದೇಶಕರನ್ನು ಕುರಿತು ಮಾತನಾಡುವಾಗ ಇಷ್ಟು ಮಂದಿ ನಿರ್ದೇಶಕರ ಜೊತೆ ದುಡಿದಿದ್ದಾರೆ, ಇಷ್ಟು ಚಿತ್ರಗಳಿಗೆ ಸಹಾಯಕರಾಗಿದ್ದರು ಎಂಬುದನ್ನು ದೊಡ್ಡದಾಗಿ ಪರಿಗಣಿಸಲಾಗುತ್ತದೆ. ದುಡಿಯುವುದು ಬೇರೆ, ಪ್ರತಿಭೆ, ಸೂಕ್ಷ್ಮತೆ, ಅಧ್ಯಯನವೇ ಬೇರೆ ಎನ್ನುವುದನ್ನು ಯಾರೂ ಯೋಚಿಸುವುದಿಲ್ಲ. ಬಹುತೇಕ ಹೊಸ ಪೀಳಿಗೆಯ ನಿರ್ದೇಶಕರು ತಮ್ಮ ಬಳಿ ಆರೇಳು ಕಥೆಗಳಿವೆ ಎಂದು ಹೇಳುತ್ತಿರುತ್ತಾರೆ. ಆ ಕಥೆಗಳು ಆ ನಿರ್ದೇಶಕರ ವಯಸ್ಸಿಗನುಗುಣವಾದ ಪ್ರೇಮ ಕಥೆಗಳಾಗಿರುತ್ತವೆ.

ಇವಕ್ಕೆ ಹೊಡೆದಾಟ, ಹಿಂಸೆ, ಅಶ್ಲೀಲತೆಯನ್ನು ಸೇರಿಸಿ ಹೆಣೆಯಲಾಗಿರುತ್ತದೆ. ಇದಲ್ಲದೆ ಈ ಕಥೆಗಳು ಚಿತ್ರಕಥೆಯಾಗುವ ಹಂತದಲ್ಲಿ ದೃಶ್ಯಗಳಲ್ಲಿ ನಟ-ನಟಿ ಏನು ಮಾಡಬೇಕೆಂಬ ವಿವರಗಳನ್ನೆಲ್ಲ ಒಳಗೊಂಡಿರುತ್ತವೆ. ಹೀಗೆ ಬರೆಯುವಾಗ ಬರೆದವರು, ನಿರ್ದೇಶಕ ತನ್ನಿಚ್ಛೆಗೆ ತಕ್ಕಂತೆ ಬದಲಿಸಿಕೊಳ್ಳುವುದನ್ನು ತಪ್ಪಿಸುತ್ತಿದ್ದೇವೆ, ಆ ಮೂಲಕ ತಮ್ಮ ಐಡಿಯಾ ಅಥವಾ ಕೃತಿಯನ್ನು ಕಾಪಾಡಿಕೊಳ್ಳುತ್ತಿದ್ದೇವೆ ಎಂದುಕೊಳ್ಳುತ್ತಾರೆ. ಇದರೊಂದಿಗೆ ಇಂಥವರ ಬರವಣಿಗೆಯಲ್ಲಿ ಎಲ್ಲ ನಟನಾ ವಿವರಗಳೂ ನಿರ್ದಿಷ್ಟ ನಟನಟಿಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದವಾಗಿರುತ್ತವೆ. ಇದಿಲ್ಲವಾದರೆ ಅವರು ಆದಾಗಲೇ ನೋಡಿರಬಹುದಾದ ನಟನಟಿಯರಿಗೆ ಹೋಲುತ್ತಿರುತ್ತವೆ. ಇದನ್ನು ಆ ಕಲಾವಿದರು ವ್ಯತ್ಯಾಸವಾದಾಗ ಇತರರು ನಿರ್ವಹಿಸುವುದು ಸಮರ್ಥವಾಗಿ ಕಾಣುವುದಿಲ್ಲ. ಕಲೆಯಾಗುವ ಅವಕಾಶವನ್ನು ಇಂಥ ಅನುಕರಣೆಯು ತಪ್ಪಿಸುತ್ತದೆ. ನಮ್ಮ ಬಹುತೇಕ ಕನ್ನಡ ಚಿತ್ರಗಳಲ್ಲಿ ಕಾಣುತ್ತಿರುವುದು ಇಂಥವೇ ವೈಪರೀತ್ಯ. ಷೇಕ್ಸ್‌ಪಿಯರ್‌ನ ಯಾವ ನಾಟಕದಲ್ಲೂ ನಟನೆಯ ವಿವರಗಳಿಲ್ಲ ಎಂಬ ಅಂಶವನ್ನು ಈ ಹಿನ್ನೆಲೆಯಲ್ಲಿ ಉಲ್ಲೇಖಿಸಿದರೆ ನಮ್ಮ ಚಲನಚಿತ್ರ ಬರಹಗಾರರಿಂದ ಆಗುತ್ತಿರುವ ಅನಾಹುತದ ವಿಪರೀತ ಎಂಥದೆಂದು ಅರಿವಾಗುತ್ತದೆ. ಷೇಕ್ಸ್‌ಪಿಯರ್‌ನ ನಾಟಕಗಳಲ್ಲಿ ಕಥೆ ಮುಖ್ಯವಾಗುತ್ತದೆ. ಪಾತ್ರಧಾರಿಗಳು ಕಥೆಗೆ ನಿಷ್ಠವಾದ ಬೇರೆ ಬೇರೆ ಶೈಲಿಗಳಲ್ಲಿ ಅಭಿನಯಿಸಿದರೂ ಕಥೆಯ ಮಹತ್ವ ಕುಗ್ಗುವುದಿಲ್ಲ. ಇಂಥ ಮೂಲಭೂತ ಹಾಗೂ ಮಹತ್ವದ ಅಂಶವನ್ನು ನಮ್ಮ ಬರಹಗಾರರು, ನಿರ್ದೇಶಕರು ಕಡೆಗಣಿಸತೊಡಗಿದ್ದಾರೆ. ಇದರ ಪರಿಣಾಮವು ನಮ್ಮ ಚಿತ್ರಗಳ ಗುಣಮಟ್ಟ ಕುಸಿಯುತ್ತಿರುವುದರಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ.

ನಿರ್ದೇಶಕನಾದವನು ಚಿತ್ರವೊಂದನ್ನು ನಿರ್ದೇಶಿಸುವಾಗ ಅದರಲ್ಲಿರುವ ಕಥೆ, ಕ್ರಿಯೆ ಮತ್ತು ವಸ್ತುವನ್ನು ಮಾತ್ರ ನಿರ್ದೇಶಿಸುತ್ತಿರುವುದಿಲ್ಲ. ಆತ ಒಂದು ಚಿತ್ರೀಕರಣ ತಂಡವನ್ನೇ ನಿರ್ದೇಶಿಸುತ್ತಿರುತ್ತಾನೆ. ಯಾವುದೇ ಚಿತ್ರಕಥೆಯ ಯಾವುದೇ ದೃಶ್ಯ ತೆರೆಯ ಮೇಲೆ ಅತ್ಯಂತ ಉತ್ಸಾಹದಿಂದ ಚಿತ್ರಿಸಿದಂತೆಯೂ ಕಾಣಬಹುದು - ಬೇಸರ ಮತ್ತು ಅರೆಮನಸ್ಸಿನಿಂದ ಚಿತ್ರಿಸಿದಂತೆಯೂ ಕಾಣಬಹುದು. ಎರಡಕ್ಕೂ ಚಿತ್ರತಂಡದ ಮನಸ್ಥಿತಿಯೇ ಕಾರಣ. ನಿರ್ದೇಶಕ ಏಕಾಕಿಯಾಗಿ ಏನನ್ನೂ ಸಾಧಿಸಲಾರ. ಆತನ ಕಲ್ಪನೆಯನ್ನು ಸಾಕಾರಗೊಳಿಸುವವರು ಕೇವಲ ನಟರಲ್ಲ - ಒಟ್ಟು ಚಿತ್ರತಂಡ. ಚಿತ್ರೀಕರಣ ತಂಡದಲ್ಲಿ ಬೇಸರಗಳು, ಕೃತ್ರಿಮಗಳು, ನಿಧಾನದಂತಹ ಆಲೋಚನೆಗಳು ತುಂಬಿಕೊಂಡರೆ ಅದು ತೆರೆಯ ಮೇಲೆಯೂ ಕಾಣಿಸಿಕೊಳ್ಳುತ್ತದೆ. ಅದಕ್ಕಾಗಿಯೇ ಒಬ್ಬ ಅನುಭವಿ ನಿರ್ದೇಶಕ ತನ್ನ ಚಿತ್ರತಂಡವನ್ನು ತಾನೇ ಅತ್ಯಂತ ಎಚ್ಚರಿಕೆಯಿಂದ ಆರಿಸಿ ಕಟ್ಟಿಕೊಳ್ಳಬೇಕು. ಆದರೆ ಇಂದಿನ ಪರಿಸ್ಥಿತಿಯಲ್ಲಿ ಇದು ಅಸಾಧ್ಯ ಎನ್ನುವಂತಾಗಿದೆ. ನಿರ್ದೇಶಕನ ಕೆಲಸ ಈಗ ನೆಪ ಮಾತ್ರ. ನಿರ್ದೇಶಕನ ಗೈರುಹಾಜರಿಯಲ್ಲಿಯೇ ಚಿತ್ರದ ಹಾಡು, ಹೊಡೆದಾಟಗಳ ಚಿತ್ರೀಕರಣ ನಡೆಯುತ್ತಿರುತ್ತದೆ. ಹಿನ್ನೆಲೆ ಸಂಗೀತ ನೀಡುವಂಥ ಸಂದರ್ಭವಿರಲಿ, ಬಹುತೇಕ ನಿರ್ದೇಶಕರು ಸಂಭಾಷಣಾ ದೃಶ್ಯಗಳ ಚಿತ್ರೀಕರಣದಲ್ಲೂ ಹಾಜರಿರುವುದಿಲ್ಲ. ಇನ್ನು ಕೆಲವು ಸಂದರ್ಭಗಳಲ್ಲಿ ಒಬ್ಬನೇ ನಿರ್ದೇಶಕನ ಎರಡು ಮೂರು ಚಿತ್ರಗಳು ಏಕಕಾಲದಲ್ಲಿ ಚಿತ್ರೀಕರಣ ನಡೆಯುತ್ತಿರುತ್ತದೆ. ಅಲ್ಲಿಗೆ ಆಗಾಗ ಭೇಟಿ ನೀಡಿ ಸಹಾಯಕರಿಗೆ ಸೂಚನೆ ಕೊಡುವುದೇ ನಿರ್ದೇಶನ ಎಂದು ಕೆಲವರು ಭಾವಿಸಿದ್ದಾರೆ. ಈ ಭಾವನೆ ಬೆಳೆದು ಯಾವ ರೀತಿಯಲ್ಲಿ ಬಲವಾಗಿದೆ ಎಂದರೆ ದೂರದರ್ಶನಕ್ಕಾಗಿ ಸಿದ್ಧವಾಗುವ ಬಹುತೇಕ ಧಾರಾವಾಹಿ ಹಾಗೂ ಮಹಾಧಾರಾವಾಹಿಗಳು ಜನಪ್ರಿಯ ನಿರ್ದೇಶಕನೊಬ್ಬನ ಹೆಸರಿನಲ್ಲಿ ಬೇರೆಯವರಿಂದ ನಿರ್ದೇಶಿಸಲ್ಪಡುತ್ತವೆ. ಕಲೆ ವ್ಯಾಪಾರೀಕರಣವಾಗುತ್ತಾ ಅತ್ಯಂತ ಕೆಳ ಹಂತವನ್ನು ತಲುಪಿರುವ ದುರಂತವಿದು.

ಚಿತ್ರಮಾಧ್ಯಮದ ಮೂಲಕ ಕನ್ನಡ ಭಾಷೆ, ಸಂಸ್ಕೃತಿಯ ಪ್ರಚಾರ ಸಾಧ್ಯ ಎಂದು ನಂಬಿದ ಜನತೆ ಸಂಘ ಸಂಸ್ಥೆಗಳ ಮೂಲಕ ಅನೇಕ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ಚಲನಚಿತ್ರ ಕಲಾವಿದರನ್ನು, ನಿರ್ದೇಶಕರನ್ನು ಕರೆಸಿ ಸನ್ಮಾನಿಸುವ, ೧೦೦, ೧೫೦, ೨೦೦ ಚಿತ್ರಗಳಾದಾಗ ಸಮಾರಂಭ ಏರ್ಪಡಿಸಿ ಬಿರುದು ಬಾವಲಿಗಳ ಮೂಲಕ ಸಾಧನೆಯ ಸ್ಮರಣೆ ಮಾಡುವ ಕಾರ್ಯಗಳಾದವು. ಕನ್ನಡ ವಿಶ್ವವಿದ್ಯಾಲಯ ರಾಜಕುಮಾರ್ ಅವರಿಗೆ ಸಂಸ್ಥೆಯ ಅತ್ಯುನ್ನತ ಗೌರವವಾದ 'ನಾಡೋಜ' ಪ್ರಶಸ್ತಿ ನೀಡುವುದರವರೆಗೆ ಸಾಲುಸಾಲಾಗಿ ಇಂಥ ಸಂಭ್ರಮಗಳು ಎಲ್ಲ ವಲಯಗಳಲ್ಲೂ ನಡೆದುಕೊಂಡು ಬಂದಿದೆ. ಇಂಥದೊಂದು ಪರಂಪರೆ ಪ್ರಾರಂಭವಾದದ್ದು ಅರುವತ್ತರ ದಶಕದಲ್ಲಿ 'ಚಿತ್ರಪ್ರೇಮಿಗಳ ಸಂಘ' ಪ್ರಾರಂಭಿಸಿ ಕಾರ್ಯೋನ್ಮುಖರಾದವರಿಂದ. ಕಾದಂಬರಿಕಾರ ಮ.ನ.ಮೂರ್ತಿ ಈ ಸಂಸ್ಥೆಗೆ ಪ್ರಥಮಾಧ್ಯಕ್ಷರು. ಅವರೊಂದಿಗೆ ನಾಗರಾಜಸಿಂಗ್, ಕನ್ನಡಪರ ಕೆಲಸಗಳೆಂದರೆ ಹಾಜರಾಗುತ್ತಿದ್ದ ಅರಸುಕುಮಾರ್, ಆಕಾಶವಾಣಿ ಕಲಾವಿದ ವೆಂಕಟಾಚಾಲ, ಎಲ್ಲ ಮರೆತು ಇಂಥ ದುಡಿಮೆಗೆ ಮುಂದಾಗುತ್ತಿದ್ದ ಸಿ.ಎಸ್.ನರಸಿಂಹನ್, ಇವತ್ತಿನವರೆಗೂ ಆ ಪರಂಪರೆಯನ್ನು ಉಳಿಸಿಕೊಂಡು ಬಂದ ಮೋಹನದೇವ ಆಳ್ವ, ಇಂಥ ಕಾರ್ಯಗಳಿಗೆ ಧನಸಹಾಯವನ್ನು ಮಾಡಿ ಕನ್ನಡದ ಕೆಲಸಕ್ಕೆಲ್ಲ ನಾನು ಬೆಂಬಲಿಗ ಎನ್ನುತ್ತಿದ್ದ ಮುಂಚಿವರ್ತಕರಾದ ರಾಜಶೇಖರಯ್ಯ ಹೀಗೆ ಬಹುದೊಡ್ಡ ಪಟ್ಟಿಯೇ ಇದೆ.

ಭಾಷಾವಾರು ಪ್ರಾಂತ್ಯ ರಚನೆಯಾದ ಹಿನ್ನೆಲೆಯಲ್ಲಿ ಕನ್ನಡ ಪ್ರೀತಿಯನ್ನು ಬೆಳೆಸುವ ಕೆಲಸದಲ್ಲಿ ಕಾರ್ಖಾನೆಗಳೇ ಮೊದಲಾದ ಎಲ್ಲ ವಿಭಾಗಗಳಲ್ಲೂ ಕನ್ನಡ ಸಂಘಗಳು ಪ್ರಾರಂಭವಾದವು. ಕಲಾವಿದರನ್ನು ಜನರ ಹತ್ತಿರಕ್ಕೆ ಕರೆದೊಯ್ದರು. ಸ್ನೇಹ ಸಂಪರ್ಕದ ಮಧುರ ನೆನಪಿನಲ್ಲಿ ಕನ್ನಡ ಚಿತ್ರಗಳು ಪ್ರದರ್ಶಿತವಾಗದ ಪ್ರದೇಶಗಳಲ್ಲೂ ಕನ್ನಡ ಚಿತ್ರಗಳನ್ನು ನೋಡುವ ಪ್ರೇಕ್ಷಕರನ್ನು ಬೆಳೆಸುವ ಕೆಲಸ ಮಾಡಿದರು. ಭಾರತ್ ಟಾಕೀಸ್‌ನ ಖಾಸಿಂ ಷರೀಫ್ ಅವರು ಇದನ್ನು ಸರಿಯಾಗಿ ಗ್ರಹಿಸಿದ್ದರು. ರಾಜಕುಮಾರ್ ಅಭಿನಯದ ೧೦೦ನೇ ಚಿತ್ರದ ನೆಪದಲ್ಲಿ ಕರ್ನಾಟಕ ಮೂಲೆಮೂಲೆಗೂ ರಾಜಕುಮಾರ್ ಮತ್ತು ಚಿತ್ರತಂಡವನ್ನು ಕರೆದೊಯ್ದರು.

ಪ್ರವಾಹ ಸಂತ್ರಸ್ತರ ಪರಿಹಾರ ನಿಧಿಯ ಯಾತ್ರೆಯ ಕೆಲಕಾಲದ ನಂತರ ನಡೆದ ಈ ಯಾತ್ರೆ ಕೂಡಾ ಕನ್ನಡಾಭಿಮಾನದ ಹಿನ್ನೆಲೆಯಲ್ಲಿ ಬಹಳ ಮುಖ್ಯವೆನಿಸುತ್ತದೆ. ಈ ಸಂದರ್ಭದಲ್ಲಿ ಏರ್ಪಡಿಸಿದ ಅಭಿನಂದನಾ ಸಮಾರಂಭದ ಸಮಿತಿಯಲ್ಲಿ ಲೀಲಾದೇವಿ ಆರ್.ಪ್ರಸಾದ್ ದಂಪತಿಗಳೂ ಇದ್ದರು. ಇವೆಲ್ಲ ಸಡಗರಗಳನ್ನೂ ಮೀರಿ ಎಲ್ಲರ ಕಷ್ಟ-ಸುಖಗಳಲ್ಲಿ ನನ್ನ ಪಾಲೂ ಇರಲಿ ಎಂದು ದುಡಿಯುವವರು ಮ.ನ.ರಾಮನರಸಯ್ಯ. ಅಶಕ್ತರು, ರೋಗಪೀಡಿತರಲ್ಲಿ ಕಾಳಜಿ, ಕಡೆಗೆ ಯಾವನೇ ಕಲಾವಿದ ನಿಧನ ಹೊಂದಿದಾಗ ಅಂತ್ಯಕ್ರಿಯೆಯವರೆಗೆ ಎಲ್ಲ ಜವಾಬ್ದಾರಿ ಹೊತ್ತುಕೊಳ್ಳುವ ರಾಮನರಸಯ್ಯನವರಿಗೆ ಹೆಗಲೆಣೆಯಾಗಿ ನಿಂತು ದುಡಿದವರು ಬಿ.ಟಿ.ಎಸ್.ರಾಜು. ಇವರೆಲ್ಲರಿಗೆ ಸ್ಫೂರ್ತಿಯಾಗಿ ಬೆಂಬಲವಾಗಿ ಬೆನ್ನಿಗಿದ್ದವರು ಬಿ.ಜಯಮ್ಮ, ಟಿ.ಎಸ್.ಕರಿಬಸವಯ್ಯನವರು. ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನೂರೂ ದಿಕ್ಕಿನಲ್ಲಿ ಕೆಲಸಗಳಾಗಿವೆ, ಆಗುತ್ತಿವೆ. ಎಲ್ಲರಿಗೂ ಈ ಪ್ರಭಾವಶಾಲಿ ಮಾಧ್ಯಮ ನಾಡು-ನುಡಿ, ಸಂಸ್ಕೃತಿಯನ್ನು ಎಲ್ಲ ಕಡೆ ಹರಡುತ್ತ ಸಾಗಲಿ, ರಂಜನೆ, ವ್ಯವಹಾರಗಳ ಆಚೆಗೆ ಸೌಂದರ್ಯಾತ್ಮಕವೂ, ಸಮರ್ಥ ಅಭಿವ್ಯಕ್ತಿ ಮಾಧ್ಯಮವೂ ಆಗಿ, ಅರ್ಥಪೂರ್ಣ ರೀತಿಯಲ್ಲಿ ಜನಾಕರ್ಷಕವಾಗಲಿ ಎಂಬುದು ಎಲ್ಲರ ಮಹದಾಶಯ. ಅದಕ್ಕಾಗಿಯೇ ದುಡಿದರು. ಅದನ್ನೆಲ್ಲ ಧರಿಸುವ ಮತ್ತೆ ಮತ್ತೆ ಎಲ್ಲಿಂದಲೋ ಕವಿದು ಕಂಗಾಲಾಗಿಸುವ ಎಂಥ ಕತ್ತಲೆಯನ್ನೂ ಸೀಳಿಕೊಂಡು ಬೆಳಕಿನೆಡೆಗೆ ಧಾವಿಸುವ ಶಕ್ತಿ ಚಿತ್ರೋದ್ಯಮದ ಎಲ್ಲ ವಲಯಗಳಿಗೂ ಬರಲಿ.

ಕನ್ನಡ ಚಲನಚಿತ್ರ ಕುರಿತು ಪುಸ್ತಕಗಳ ಪ್ರಕಟಣೆ ಆಗಿರುವುದೇ ಕಡಿಮೆ. ಈಗಾಗಲೇ ಪ್ರಸ್ತಾಪಿತವಾಗಿರುವ ಪುಸ್ತಕಗಳನ್ನು ಬಿಟ್ಟು ಮತ್ತೆ ಕೆಲವು ಹೆಸರಿಸಬಹುದಾದವೂ ಇದೆ. ನವಕರ್ನಾಟಕ ಪ್ರಕಾಶನ ಪ್ರಕಟಿಸಿದ ಅಬ್ದುಲ್ ರೆಹಮಾನ್ ಪಾಷಾ ಅವರು ರಚಿಸಿರುವ ಎರಡು ಪುಸ್ತಕಗಳಲ್ಲಿ ಚಲನಚಿತ್ರದ ತಾಂತ್ರಿಕ ವಿಭಾಗದ ಪ್ರಾಥಮಿಕ ಮಾಹಿತಿಯನ್ನು ಚೊಕ್ಕವಾಗಿ ನಿರೂಪಿಸಲಾಗಿದೆ. ಕನ್ನಡದಲ್ಲಿ ಮಿಂಚಿ ಮರೆಯಾದ ನಟಿ ಕಲ್ಪನಾರ ಜೀವನಚಿತ್ರವನ್ನು 'ಮಿನುಗುತಾರೆ'ಯಾಗಿಸಿದ ಪತ್ರಕರ್ತ ಸಿ.ಸೀತಾರಾಂ ಅವರು ಎನ್.ಲಕ್ಷ್ಮೀನಾರಾಯಣ್ ಅವರ ಚಿತ್ರಗಳನ್ನು ಕುರಿತು ಪ್ರೌಢ ಪ್ರಬಂಧ ರಚಿಸಿ ಕನ್ನಡ ವಿಶ್ವವಿದ್ಯಾಲಯದ ಡಿ.ಲಿಟ್ ಪದವಿ ಪಡೆದಿದ್ದಾರೆ (೨೦೦೧ರಲ್ಲಿ ಅಭಿರುಚಿ ಪ್ರಕಾಶನದಿಂದ ಪ್ರಕಟವಾಯಿತು). ರಂಗಕರ್ಮಿ, ಚಲನಚಿತ್ರ ಸಹನಿರ್ದೇಶಕ, ಸಂಗ್ರಾಹಕ ಕಾನಕಾನಹಳ್ಳಿ ಗೋಪಿ 'ಬಯೋಸ್ಕೋಪ್' ಎಂಬ ಕಿರುಹೊತ್ತಿಗೆಯನ್ನು ಪ್ರಕಟಿಸಿದ್ದರು. ಪುಟ್ಟಣ್ಣ ಕಣಗಾಲರ ಬದುಕು, ಸೃಜನಶೀಲತೆ ಕುರಿತಂತೆ ಬಹಳಷ್ಟು ಮಾಹಿತಿ ಇರುವ ಪುಸ್ತಕಗಳನ್ನು ಪತ್ರಕರ್ತ ಆರ್.ಜಿ.ವಿಜಯಸಾರಥಿ, ನಿರ್ಮಾಪಕ-ಅಧಿಕಾರಿ ಡಿ.ಬಿ.ಬಸವೇಗೌಡ, ಚಿತ್ರಸಾಹಿತಿ ವಿಜಯನಾರಸಿಂಹ ಪ್ರಕಟಿಸಿದ್ದಾರೆ. ವಾರ್ತಾ ಇಲಾಖೆಯು ಸಾಂದರ್ಭಿಕವಾಗಿ ಹಲವು ಕಿರುಹೊತ್ತಿಗೆಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಬರಗೂರು ರಾಮಚಂದ್ರಪ್ಪನವರು ರಚಿಸಿದ ಚಲನಚಿತ್ರ ಸಾಹಿತ್ಯ ಕುರಿತ ಕಿರುಹೊತ್ತಿಗೆ ಮುಖ್ಯವಾದ್ದು. ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಸಂವಹನ ವಿಭಾಗದಲ್ಲಿ ನಡೆದ ವಿಚಾರಸಂಕಿರಣದ ಪ್ರಬಂಧಗಳನ್ನು ಸಂಕಲಿಸಿ ಪುಸ್ತಿಕೆ ಹೊರತಂದಿದೆ. ರಾಜ್ಯ ಸಾಹಿತ್ಯ ಅಕಾಡೆಮಿ ಕೂಡಾ ಚಲನಚಿತ್ರ ಕುರಿತ ಕೆಲವು ಕಿರು ಪುಸ್ತಕಗಳನ್ನು ಪ್ರಕಟಿಸಿದೆ. ಕನ್ನಡ ಪುಸ್ತಕ ಅಭಿವೃದ್ಧಿ ಪ್ರಾಧಿಕಾರವು

ಪತ್ರಕರ್ತ ಗಂಗಾಧರ ಮೊದಲಿಯಾರ್ ಅವರು ರಚಿಸಿದ 'ಕನ್ನಡ ಚಲನಚಿತ್ರ' ಇತಿಹಾಸದ ಪುಟಗಳಲ್ಲಿ ಗ್ರಂಥವನ್ನು ತುಂಬ ಅಂದವಾಗಿ ಮುದ್ರಿಸಿದೆ.

ಸುಚಿತ್ರ ಚಲನಚಿತ್ರ ಸಮಾಜ ಕೆಲವು ಪುಸ್ತಕಗಳನ್ನು ಹೊರತಂದಿದೆ. ಸಾಕ್ಷಿ, ಸಂಕ್ರಮಣ, ಶೂದ್ರ, ಅಭಿನವ, ಸಂಚಯ, ಅಂಕಣ ಮೊದಲಾದ ಹಲವು ಸಾಹಿತ್ಯಕ ಪತ್ರಿಕೆಗಳು ಚಲನಚಿತ್ರ ವಿಶೇಷಾಂಕಗಳನ್ನು ಹೊರತಂದಿವೆ. ಕೆ.ವಿ.ಸುಬ್ಬಣ್ಣನವರು ಅಕ್ಷರ ಪ್ರಕಾಶನದ ಮೂಲಕ ಅನೇಕ ಚಲನಚಿತ್ರ ಕುರಿತ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ವಿಶ್ವವಿದ್ಯಾಲಯಗಳಲ್ಲಿ ಅನೇಕರು ಪಿಹೆಚ್.ಡಿ. ಪದವಿಗಾಗಿ ಚಲನಚಿತ್ರ ವಿಷಯಗಳನ್ನು ಆಯ್ದು ಅಧ್ಯಯನ ಮಾಡಿದ್ದಾರೆ. ವಿಶೇಷ ಉಪನ್ಯಾಸಕರೂ ವಿಶ್ವವಿದ್ಯಾಲಯದ ಸಂವಹನ ವಿಭಾಗದಲ್ಲಿದ್ದಾರೆ. ಸಂಬಂಧಪಟ್ಟ ವಿಭಾಗಗಳೇ ನಿರ್ವಹಿಸಲಿ ಎಂಬ ಮಿತಿ ಹಾಕಿಕೊಳ್ಳದೆ ಎಲ್ಲ ವರ್ಗ-ವಿಭಾಗಗಳಿಂದಲೂ ಕಲಾಸಕ್ತರು ಚಲನಚಿತ್ರವನ್ನು ಗಂಭೀರವಾಗಿ ಪರಿಗಣಿಸಿ ತಪ್ಪುಗಳನ್ನು ತೋರಿಸಿ ಎಚ್ಚರಿಸಿದ್ದಾರೆ. ಒಳ್ಳೆಯ ಪ್ರಯತ್ನಗಳಾದಾಗ ಗುರುತಿಸಿಯೂ ಇದ್ದಾರೆ.

ಅಲ್ಲಿ ಇಲ್ಲಿ ಚದುರಿ ಹೋಗಿದ್ದ ಸಂಘ ಸಂಸ್ಥೆಗಳನ್ನು ಒಗ್ಗೂಡಿಸಿ ದೊಡ್ಡ ಪ್ರಮಾಣದಲ್ಲಿ ರಾಜ್ಯ ಮಟ್ಟದಲ್ಲಿ ಒಂದೇ 'ಡಾ।ರಾಜಕುಮಾರ್ ಅಭಿಮಾನಿ ಸಂಘ'ವಾಗಿ ರೂಪಿಸಿದರು ಹಿರಿಯ ನಿರ್ಮಾಪಕರಾದ ಸಿ.ವಿ.ಎಲ್.ಶಾಸ್ತ್ರಿಗಳು. ಜನಪ್ರಿಯ ಕಲಾವಿದನ ಹೆಸರಿನಲ್ಲಿ ಸಮಾಜ ಕಾರ್ಯಗಳು, ಜನೋಪಕಾರಿ ಕೆಲಸಗಳು, ನಾಡು-ನುಡಿಗಾಗಿ ಹೋರಾಟ ಏನೆಲ್ಲ ನಡೆದವು. ಸಂಸ್ಥೆಯ ನೇತೃತ್ವ ವಹಿಸಿ ಮುನ್ನಡೆಸಿದ ಸಾ.ರಾ.ಗೋವಿಂದು ಗಲಭೆಗಳಾದಾಗ ಹೊಣೆ ಹೊತ್ತ ಹಾಗೇ ಅನೇಕ ಕನ್ನಡಪರ ಕಾರ್ಯಕ್ರಮಗಳಲ್ಲಿ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸಿದರು. ರಾಜ್ ಅವರ ನಿರ್ಮಾಣ ಸಂಸ್ಥೆಯಲ್ಲಿ ಸಾಮಾನ್ಯರಲ್ಲಿ ಸಾಮಾನ್ಯರಾಗಿದ್ದವರು ಬಹಳ ಬೇರೆಯಾಗಿ ಬೆಳೆದರು. ದೊಡ್ಡ ಸಮೂಹವನ್ನು ನಿಯಂತ್ರಿಸುವ ಸಾಮರ್ಥ್ಯ ಪಡೆದರು. ರಾಜಕುಮಾರ್ ಅವರ ಅಪಹರಣವಾದ ದಿನಗಳಲ್ಲಿ ಅಷ್ಟು ದೊಡ್ಡ ಸಮುದಾಯವನ್ನು ಶಾಂತಿ-ಸಮಾಧಾನದಿಂದಿರುವಂತೆ ನಿಯಂತ್ರಿಸಿದ ಸಾಮರ್ಥ್ಯ ಸಣ್ಣದಲ್ಲ.

ಡಾ।ರಾಜಕುಮಾರ್ ಅಭಿಮಾನಿ ಸಂಘ ಹಲವು ರೀತಿಯಲ್ಲಿ ಕಾರ್ಯವಿಧಾನ ರೂಪಿಸಿಕೊಂಡರೆ ಮತ್ತಷ್ಟು ಕಲಾವಿದರ ಹೆಸರಿನಲ್ಲಿ ಅಭಿಮಾನಿ ಸಂಘಗಳು ಹುಟ್ಟಿದವು. ವಿಷ್ಣುವರ್ಧನ್ ಅಭಿಮಾನಿಗಳು 'ವಿಷ್ಣುಸೇನೆ' ಎಂದು ಕರೆದುಕೊಂಡರು. ವಿಷ್ಣುವರ್ಧನ್ ಅವರೂ ಒಳ್ಳೆಯ ಕೆಲಸಕ್ಕೆಂದಾಗ ನೆರವಿಗೆ ಬಂದುದರಿಂದ ಅನೇಕ ಸಮಾಜ ಕಾರ್ಯಗಳು, ವಿದ್ಯಾಕ್ಷೇತ್ರ, ಅಸಹಾಯಕರಿಗೆ ನೆರವು ಹೀಗೆ ಹತ್ತು ದಿಕ್ಕಿನಲ್ಲಿ ಅಭಿಮಾನಿಗಳು ತೊಡಗಿಕೊಂಡರು.

ಹೀಗೆ ಅಂಬರೀಷ್ ಅಭಿಮಾನಿಗಳು, (ಟೈಗರ್) ಪ್ರಭಾಕರ್ ಅಭಿಮಾನಿಗಳು (ಇವರಿಗೆ ಮಹಿಳಾ ಅಭಿಮಾನಿಗಳ ಸಂಘವೂ ಇತ್ತು), ರವಿಚಂದ್ರನ್, ಶಿವರಾಜ್ ಕುಮಾರ್ ಮೊದಲಾಗಿ ಎಲ್ಲ ಕಲಾವಿದರ ಹೆಸರಿನಲ್ಲಿ ಅಭಿಮಾನಿ ಸಂಘಗಳಾದವು. ಸಾಹಿತ್ಯ, ಸಂಗೀತ, ಸ್ಪರ್ಧೆ ಮೊದಲ್ಗೊಂಡು ಎಲ್ಲ ರೀತಿಯ ಕಲಸಗಳಾದವು. ಜಗ್ಗೇಶ್ ಅಭಿಮಾನಿ ಸಂಘ ನಿರಾಶ್ರಿತರಿಗೆ, ರೋಗಿಗಳಿಗೆ, ಆಸ್ಪತ್ರೆಗೆ ಆಂಬ್ಯುಲೆನ್ಸ್ ದಾನ ಹೀಗೆ ನೂರೆಂಟು ಬಗೆಯಲ್ಲಿ ಕೆಲಸ ಮಾಡಿತು. ಅಭಿಮಾನಿ ಸಂಘಗಳ ಈ ಕಾರ್ಯವಿಧಾನದ ಹಿಂದೆ ಇದ್ದ ಕಲಾವಿದರು ತಾವೂ ಬೆಳೆದರು, ಸಂಸ್ಕೃತಿಯನ್ನೂ ಬೆಳೆಸಿದರು. ಸಮಾಜ ಕಾರ್ಯಗಳ ಮೂಲಕ ಜನಮಾನಸದಲ್ಲಿ ನಿಲ್ಲುವ ಪ್ರಯತ್ನವೂ ಸಿದ್ಧಿಸಿತು.

ಕನ್ನಡ ಚಲನಚಿತ್ರರಂಗದ ಸ್ಥಿರಚಿತ್ರ ಛಾಯಾಗ್ರಾಹಕರಲ್ಲಿ ವೃಷಭೇಂದ್ರಯ್ಯ, ಬಿ.ನಾಗೇಶ್ ಬಾಬು-ಅಶ್ವತ್ಥನಾರಾಯಣ್, ವೆಂಕಟೇಶ್ವರ್, ಚೆಲ್ಲಪ್ಪ ಪ್ರಮುಖರೆನ್ನಬಹುದು. ಕನ್ನಡ ಚಿತ್ರಗಳ ತಯಾರಿಕೆ ಮದರಾಸಿನಲ್ಲಿ ನಡೆಯುತ್ತಿದ್ದ ಕಾಲದಿಂದಲೂ, ಕನ್ನಡದ ಬಹುತೇಕ ಚಿತ್ರಗಳಿಗೆ ಸ್ಥಿರಚಿತ್ರಗಳನ್ನು ಸಿದ್ಧಪಡಿಸಿ ಕೊಟ್ಟವರು ವೃಷಭೇಂದ್ರಯ್ಯ. ಮದರಾಸಿನ ಟಿ.ನಗರದಲ್ಲಿನ ಶ್ರೀ ಸ್ಟಾರ್ ಸ್ಟುಡಿಯೋ (ವೆಂಕಟೇಶ್ವರ್ ಮತ್ತು ಬಿ.ನಾಗೇಶ್‌ಬಾಬು)ದವರು ಕೂಡ ಹೆಚ್ಚು ಕನ್ನಡ ಚಿತ್ರಗಳಿಗೆ ಸ್ಥಿರಚಿತ್ರಗಳನ್ನು ಒದಗಿಸಿದ್ದಾರೆ. ನಾಗೇಶ್ ಬಾಬು ಅವರ ಸೋದರ ಅಶ್ವತ್ಥನಾರಾಯಣ ಅವರು ಪುಟ್ಟಣ್ಣ ಕಣಗಾಲ್, ರವಿ, ಸಿದ್ಧಲಿಂಗಯ್ಯ ಮುಂತಾದ ಪ್ರಸಿದ್ಧ ನಿರ್ದೇಶಕರ ಚಿತ್ರಗಳಲ್ಲಿ ಸ್ಥಿರಚಿತ್ರ ಛಾಯಾಗ್ರಾಹಕರಾಗಿ ಹೆಸರಾಗಿದ್ದಾರೆ. ಶ್ರೀ ಸ್ಟಾರ್‌ನಲ್ಲಿದ್ದು ಕರುಮಾರಿಯಮ್ಮನ್ ಸ್ಟುಡಿಯೋ ಸ್ಥಾಪಿಸಿ ಸ್ವತಂತ್ರವಾಗಿ ಪ್ರವೃತ್ತಿಗಿಳಿದ ಚೆಲ್ಲಪ್ಪ ಬದುಕಿನ ಕೊನೆಯ ದಿನದವರಗೂ ಸ್ಥಿರಚಿತ್ರ ಛಾಯಾಗ್ರಾಹಕರಾಗಿ ದುಡಿದವರು. ತಿಪಟೂರು ರಾಜು ಈಚಿನ ಪ್ರಸಿದ್ಧ ಸ್ಥಿರಚಿತ್ರ ಛಾಯಾಗ್ರಾಹಕರು.

ಉದ್ಯಮದೊಳಗೆ ಬೆರೆತು ಕಟ್ಟುವ ಕೆಲಸದಲ್ಲಿ ನಿರತರಾದವರಲ್ಲಿ ಮಧುಗಿರಿ ರಾಮು, ನವಜ್ಯೋತಿ ಸ್ಟುಡಿಯೋದಲ್ಲಿದ್ದ ಗೋವಿಂದಸ್ವಾಮಿ ಮೊದಲಿಯಾರ್, ಭವಾನಿ ಸ್ಟುಡಿಯೋದ ಲಕ್ಷ್ಮೀನಾರಾಯಣ್, ಕರ್ನಾಟಕ ಸ್ಟುಡಿಯೋದ ಕುಮಾರ್-ರಾಜಶೇಖರ್ ಸಹೋದರರು, ಕನ್ನಡ ಚಿತ್ರರಂಗ ಕರ್ನಾಟಕದಲ್ಲಿ ನೆಲೆಯೂರುವ ಹೊತ್ತಿನಲ್ಲಿ ಲಭ್ಯವಿಲ್ಲದಿದ್ದ ವರ್ಣಚಿತ್ರಗಳನ್ನು ವಿಶೇಷ ಪ್ರಯೋಗ ಮಾಡಿ ವರ್ಣರಂಜಿತಗೊಳಿಸಿ ಉಪಕರಿಸಿದ ಎಂಪೈರ್ ಸ್ಟುಡಿಯೋದ ರಾಮಣ್ಣನವರು, ಲಾಭದಾಯಕ ರೇಷ್ಮೆ ವ್ಯಾಪಾರವನ್ನು ಕೊಂಚ ಬದಿಗಿಟ್ಟು ಕನ್ನಡ ಚಿತ್ರಗಳನ್ನು ಶ್ರೀಮಂತಗೊಳಿಸಲು ನಿರ್ಮಾಣ, ಹಂಚಿಕೆ, ಪ್ರದರ್ಶನಗಳತ್ತಲೂ ಕೈ ಚಾಚಿದ ಕೆ.ಸಿ.ಎನ್.ಗೌಡರು, ವಜ್ರೇಶ್ವರಿ ಸಂಸ್ಥೆಯೆಂದರೆ ಸಾಹಿತ್ಯ, ಕಲೆಗೆ ಗೌರವ ಕೊಡುವ, ಪೋಷಿಸುವ ಸಂಸ್ಥೆ ಎಂಬಂತೆ ರೂಪಿಸಿದ ಚನ್ನೇಗೌಡರು, ಚಲನಚಿತ್ರ ವಾಣಿಜ್ಯ ಮಂಡಳಿಯನ್ನು ಭಾರತೀಯ ಸಂದರ್ಭದಲ್ಲೇ ಒಂದು ಮಾದರಿ ಎಂಬಂತೆ ರೂಪಿಸುವಲ್ಲಿ ಪ್ರಧಾನ ಪಾತ್ರ ವಹಿಸಿದ ಮೂಲಾ ಭಕ್ತವತ್ಸಲ, ಕಲೆ, ಸಂಸ್ಕೃತಿ, ಭಾಷೆಗಾಗಿ ಸದಾ ಹವಹವಿಸುತ್ತ ಎಲ್ಲ ಸಾಂಸ್ಕೃತಿಕ ವಲಯಗಳನ್ನು ತೆಕ್ಕೆಗೆ ತೆಗೆದುಕೊಳ್ಳಲು ತನು, ಮನ, ಧನಗಳನ್ನೆಲ್ಲ ವ್ಯಯ ಮಾಡಿದ ಸಿ.ವಿ.ಎಲ್.ಶಾಸ್ತ್ರಿಯವರು, ಪ್ರದರ್ಶಕ ವಲಯದಲ್ಲಿ, ವಿತರಣ ವಲಯದಲ್ಲಿ ನಿರಂತರ ಕನ್ನಡ ಚಿತ್ರಗಳನ್ನು ಉಳಿಸಿ, ಬೆಳೆಸಲು ಶ್ರಮಿಸಿದ ಹಿರಿಯರೇನಕರು, ಎಲ್ಲಕ್ಕೂ ಮಿಗಿಲಾಗಿ ಪ್ರತಿ ನಿತ್ಯ ಸಾವು-ಬದುಕಿನ ನಡುವೆ ಸೆಣಸುವ ಸಾಹಸಿಗಳು, ಲೈಟ್‌ಬಾಯ್‌ಗಳು, ನೀರು ಹಾಕುವ, ತುತ್ತು ನೀಡುವ ಹುಡುಗರು, ವಾಹನ ಚಾಲಕರು ಹೀಗೆ ಅದೆಷ್ಟೋ ಜನರಿಗೆ ಕೃತಜ್ಞತೆ ಸಲ್ಲಬೇಕು. ಬೆಳಕಿಗೇ ಬರಲೊಲ್ಲದ ಕಾಯಕನಿಷ್ಠರು, ನಾಯಕರಿಗೆ ನಾಯಕರಿವರು. ಇವರನ್ನು ಕುರಿತು ಎಂದೂ ಯಾರೂ ಹಾಡುವುದಿಲ್ಲ, ಆದರೆ ಆ ಹಾಡಿಗಾಗಿ ಕಾಯುವವರೂ ಇವರಲ್ಲ. ಇತಿಹಾಸಕ್ಕೆ ಮಹತ್ವದ್ದನ್ನು ತಮಗೇ ತಿಳಿಯದಂತೆ ಕೊಡುತ್ತಲೇ ಇರುತ್ತಾರೆ. ಅದೇ ಅವರ ಉಸಿರು, ಬದುಕು.


ಎಸ್.ಪಿ.ವರದರಾಜ್

ಕೆಲವರದು ಉಜ್ವಲವಾಗಿ ಬೆಳಗುವ ಪ್ರತಿಭೆಯಾದರೆ, ಹಲವರು ಅದರ ಹಿಂದಿನ ಶಕ್ತಿಯಾಗಿರುತ್ತಾರೆ. ಚಿತ್ರೋದ್ಯಮದ ಹತ್ತೂ ದಿಕ್ಕನ್ನು ಸಮತೋಲದಲ್ಲಿಡುತ್ತ, ವಾಣಿಜ್ಯವನ್ನು ಮೀರಿ ಸೃಜನಶೀಲತೆಯ ಚಂದಕ್ಕೆ ಆದ್ಯತೆ ಕೊಟ್ಟು ರೂಪಿಸುವವರೂ ಇದ್ದಾರೆ. ಮುಂಚೂಣಿ, ಮೆರವಣಿಗೆ ಒಲ್ಲದವರು ಒಳಿತು, ಒಪ್ಪಗಳ ಜಪ ಮಾಡುತ್ತ ಬದುಕಿನ ಪ್ರತಿ ಕ್ಷಣವನ್ನೂ ತೆತ್ತುಕೊಳ್ಳುತ್ತಿರುತ್ತಾರೆ. ಅಂಥ ಕೆಲವರನ್ನು ಇಲ್ಲಿ ನೆನೆಯುವುದು ಸೂಕ್ತ. ರಾಜಕುಮಾರ್ ಅವರ ಸಹೋದರ ವರದರಾಜ್, ಇವರನ್ನು ಉದ್ಯಮ ವರದಪ್ಪ ಎಂದು ಪ್ರೀತಿಯಿಂದ ಗುರುತಿಸುತ್ತದೆ. ಪ್ರೀತಿಯ ಕ್ಷೇತ್ರ ಅಭಿನಯವೇ ಆಗಿತ್ತಾದರೂ ಅವನ್ನೆಲ್ಲ ಬದಿಗಿಟ್ಟು ತಮ್ಮ ಅಣ್ಣ ರಾಜಕುಮಾರ್ ಅವರ ಸೃಜನಶೀಲ ಹಾಗೂ ವ್ಯಾವಹಾರಿಕ ಕ್ಷೇತ್ರಗಳನ್ನು ತೆಕ್ಕೆಗೆ ತೆಗೆದುಕೊಂಡರು.

ರಾಜಕುಮಾರ್ ಅವರು ಚಿತ್ರೀಕರಣಕ್ಕೆ ದಿನಗಳನ್ನು ಕೊಡುವುದರಿಂದ ಹಿಡಿದು, ಯಾವ ಕಥೆ, ಪಾತ್ರದ ಸ್ವರೂಪವೇನು, ನಿರ್ಮಾಪಕರ ಹಿನ್ನೆಲೆಯೇನು, ಚಿತ್ರ ಪೂರ್ಣಗೊಂಡು ಹೊರಬರುತ್ತದೆಯೋ ಎಂಬ ಅಂಶಗಳನ್ನು ಸರಿಯಾಗಿ ತಿಳಿದುಕೊಂಡು ವ್ಯವಹರಿಸುವುದರಿಂದ ಅವರ ಕಾರ್ಯಾರಂಭವಾಗುತ್ತಿತ್ತು. ಸಂಭಾವನೆ ಮೊದಲುಗೊಂಡು ಎಲ್ಲ ವಿಭಾಗದಲ್ಲೂ ಈ ಸಹೋದರನ ಶ್ರಮವಿರುತ್ತಿತ್ತು. ರಾಜಕುಮಾರ್ ಅವರು ಈ ಕ್ಷೇತ್ರದಲ್ಲಿ ಒಳ್ಳೆಯ ಕಲಾವಿದನೆನಿಸಿ ಜನರಿಗೆ ಪ್ರಿಯವಾಗುವುದರಿಂದ ಎಲ್ಲ ರೀತಿಯಿಂದಲೂ ಹಂತಹಂತವಾಗಿ ಬೆಳೆಯುವಂತೆ ರೂಪಿಸಲು ಮುಖ್ಯ ಕಾರಣರಾದವರು ವರದಪ್ಪ. ಅವರದು ಅಂಥ ಲೆಕ್ಕಾಚಾರದ ನಡೆ, ಖಚಿತವಾದ ಮುನ್ನೋಟ.

ರಾಜಕುಮಾರ್ ಅಭಿನಯಿಸಲು ಒಪ್ಪುವ ಚಿತ್ರಗಳಿಗೆ ಯಾರೇ ನಿರ್ಮಾಪಕರಾದರೂ ವರದಪ್ಪನವರು ಕಥಾವಿಭಾಗದಲ್ಲಿ ತಾವೇ ಇದ್ದು ಸನ್ನಿವೇಶಗಳು, ಸಂಭಾಷಣೆ ಎಲ್ಲವೂ ಕಲಾವಿದನ ಪ್ರತಿಭಾ ಪ್ರಕಾಶಕ್ಕೆ ಅನುವಾಗುವಂತೆ, ಮುಖ್ಯವಾಗಿ ಜನಮಾನಸದಲ್ಲಿ ಒಂದು ಪ್ರತಿಮೆಯಂತೆ ಮೂಡಿ ನಿಲ್ಲಲು ಬೇಕಾದ ಹಾಗೆ ರೂಪಿಸಲು ಪ್ರಯತ್ನಿಸಿದರು. ಹಾಗೆ ಜನನಾಡಿಯನ್ನು ಚೆನ್ನಾಗಿ ಗ್ರಹಿಸಿದ್ದರಿಂದ ಆ ಜನರ ಮುಂದೆ ನಿಲ್ಲುವ ನಾಯಕನು ಮರ್ಯಾದಾ ಪುರುಷೋತ್ತಮನೂ ಸಾಹಸಿಯೂ ಸರಸಿಯೂ ಸಜ್ಜನನೂ ಆಗಿರಬೇಕು, ನಾಡು-ನುಡಿಯ ಬಗ್ಗೆ ಪ್ರೇಮ ಉಳ್ಳವನೂ ಅಂಥ ಪ್ರೇಮವನ್ನು

ಚಲನಚಿತ್ರಗಳ ಸ್ಥಿರಚಿತ್ರ ಛಾಯಾಗ್ರಹಣ : ವಿಶಿಷ್ಟ ಸೇವೆ


ರಾಮಪ್ಪ


ವೃಷಭೇಂದ್ರಯ್ಯ


ಬಿ.ಎಸ್.ಕುಮಾರ್


ಭವಾನಿ ಲಕ್ಷ್ಮೀನಾರಾಯಣ್


ಬಿ.ಎಸ್.ರಾಜಶೇಖರ್


ನಾಗೇಶ್ ಬಾಬ

ಪ್ರೇಕ್ಷಕನ ಮನಸ್ಸಿನಲ್ಲಿ ಬಿತ್ತಿ ಬೆಳೆಸಬಲ್ಲವನೂ ಆಗುವಂತೆ ಪಾತ್ರವನ್ನು, ಕ್ರಿಯೆಯನ್ನು, ಮಾತುಗಳನ್ನು ಬೆಸೆದರು. ಇವಕ್ಕಾಗಿ ಗೀತರಚನೆ, ಧ್ವನಿಮುದ್ರಣ, ಚಿತ್ರೀಕರಣ ಎಲ್ಲ ಕಡೆ ವರದಪ್ಪ ಖುದ್ದಾಗಿ ನಿಂತು ಕಾವಲು ಕಾದುಬಿಟ್ಟರು. ಅಭಿರುಚಿ ನಿರ್ಮಾಣದ ಕೆಲಸ ಆದದ್ದು ಹೀಗೆ.

ಕ್ರಮೇಣ ತಮ್ಮವೇ ನಿರ್ಮಾಣ ಸಂಸ್ಥೆಗಳಾದಾಗಲೂ ವರದಪ್ಪನವರೇ ಈ ಹೊಣೆ ಹೊತ್ತರು. ರಾಜಕುಮಾರ್ ಅವರ ಮಕ್ಕಳ ವಿಷಯದಲ್ಲೂ ಈ ಬಗೆಯ ಆಸಕ್ತಿ ತೋರಿಸುತ್ತಾ ಬಂದಿದ್ದಾರೆ. ವ್ಯಾವಹಾರಿಕ ವಿಷಯದಲ್ಲಿ ಕೂಡಾ ವರದಪ್ಪನವರು ಕೆಲವು ಪ್ರಯೋಗ ಮಾಡಿದರು. ಜಿಲ್ಲಾವಾರು ಹಂಚಿಕಾ ವಿಧಾನಕ್ಕಿಂತ ಬೇರೆಯಾಗಿ ನೆಗೆಟಿವ್ ರೈಟ್ಸ್ ಅನ್ನು ಕೊಡುವ ಹೊಸ ಪರಂಪರೆ ಪ್ರಾರಂಭಿಸಿದರು. 'ಕಾಸಿದ್ರೆ ಕೈಲಾಸ' ಚಿತ್ರದ ನೆಗೆಟಿವ್ ರೈಟ್ಸ್ ಅನ್ನು ಆ ದಿನಗಳಲ್ಲೇ ಹತ್ತು ಲಕ್ಷ ರೂಪಾಯಿಗಳಿಗೆ ವ್ಯವಹರಿಸಿ, ಕನ್ನಡ ಚಿತ್ರಗಳ ಮಾರುಕಟ್ಟೆಯ ಹರಹು ಹಿಗ್ಗುವಂಥದ್ದು ಎಂದು ತೋರಿಸಿದ್ದರು. ಅತಿಯಾದ ಸಿರಿ, ಕೀರ್ತಿಗಳಿಗೆ ಬೆರಗಾಗಿ ಕಳೆದು ಹೋಗದ ಎಚ್ಚರ, ಸಹೋದರನ ವೃತ್ತಿ ಬದುಕಿನ ಬೆಳಕೇ ತನ್ನ ಹಾದಿಯ ಬೆಳಕೂ ಎಂಬ ನಂಬಿಕೆಯಿಂದ ಹೆಜ್ಜೆ ಹಾಕಿದರು. ಇಂಥ ಹಕ್ಕಿಕೂರಳ ಹಾಡಾಗದ ತೆರೆಮರೆಯ ನಾಯಕರನೇಕರು ಉದ್ಯಮದ ಬೇರುಗಳನ್ನು ಆಳಕ್ಕಿಳಿಸುತ್ತ ಬಂದಿದ್ದಾರೆ.

ಚಿತ್ರೋದ್ಯಮದ ಬಹುಮುಖ್ಯ ಆದರೆ ಅಷ್ಟೇನೂ ಗಮನ ಸೆಳೆಯದ ಕ್ಷೇತ್ರದಲ್ಲಿ ಕೆಲಸ ಮಾಡಿದ, ಅದೆಷ್ಟು ಜವಾಬ್ದಾರಿಯ ಕ್ಷೇತ್ರವೆಂದು ತೋರಿಸಿದ ಮತ್ತೊಬ್ಬ ವ್ಯಕ್ತಿ ವಿಕ್ರಂ ಶ್ರೀನಿವಾಸ್. ವಿಕ್ರಂ ಸಂಸ್ಥೆಯಲ್ಲಿದ್ದವರನ್ನು ಗೋಪಾಲ್-ಲಕ್ಷ್ಮಣ್ 'ಬಂಗಾರದ ಮನುಷ್ಯ' ಚಿತ್ರಕ್ಕಾಗಿ ಕರೆತಂದರು. ಮತ್ತೆ ಶ್ರೀನಿವಾಸ್ ಅವರನ್ನು ಹಿಂತಿರುಗಲು ಬಿಡಲಿಲ್ಲ. ಅವರು ಕನ್ನಡ ಚಿತ್ರೋದ್ಯಮಕ್ಕೆ, ಮುಖ್ಯವಾಗಿ ರಾಜಕುಮಾರ್ ಅವರ ನಿರ್ಮಾಣ ಸಂಸ್ಥೆಗಳಿಗೆ ಅನಿವಾರ್ಯವಾಗಿ ಹೋದರು. ಬಂಡೆಗಲ್ಲನ್ನಾದರೂ ಸೀಳಿ ಮಾತಾಡಿಸಿ, ನಗುನಗುತ್ತ ಕೆಲಸ ತೆಗೆಯುವ, ಒಂದು ಕಣ್ಣೋಟದಲ್ಲಿ ವ್ಯಕ್ತಿಯನ್ನು ಅಳೆದುಬಿಡಬಲ್ಲ ಚಾಣಾಕ್ಷರಾದ್ದರಿಂದ ಸಮರ್ಪಕ ಕಾರ್ಯನಿರ್ವಹಣೆ ಅವರಿಗೆ ಸಾಧ್ಯವಿತ್ತು. ಲಕ್ಷಗಳಿಂದ ಕೋಟಿಗಳವರೆಗಿನ ಲೆಕ್ಕ ಪತ್ರ ನೋಡುವುದೂ ಅವರ ಹೊಣೆಯಾಗಿತ್ತು.

ಅಪ್ಪಟ ಗೃಹಿಣಿ, ಎಳೆಯ ಮಕ್ಕಳ ತಾಯಿ, ದೊಡ್ಡ ಕುಟುಂಬದ ನಿರ್ವಹಣೆಯಲ್ಲಿ ಎಳೆ ವಯಸ್ಸಿನ ಬಯಕೆಗಳನ್ನೆಲ್ಲ ಕನಸುಗಳಲ್ಲೇ ಪೂರೈಸಿಕೊಳ್ಳುತ್ತ ಬಂದ ಪಾರ್ವತಮ್ಮ ರಾಜಕುಮಾರ್ ನೂರೆಂಟು ಆಕ್ಷೇಪ-ತೊಡಕುಗಳನ್ನು ತಂದೊಡ್ಡುವವರಿಗೆ ಸವಾಲಾಗಿ ನಿಂತು ಚುಕ್ಕಾಣಿ ಹಿಡಿದರು. ಎಲ್ಲವನ್ನೂ ತಮ್ಮ ಅಂಕೆಯೊಳಗೆ ತೆಗೆದುಕೊಂಡು ನಿರ್ವಹಿಸುವ ಹೊತ್ತಿಗೆ ಸಂಸ್ಥೆ ಒಂದು ಸಂಸ್ಥಾನವಾಗಿತ್ತು. ಹೊರಗಿನ ಸಮಾಜ, ಸಮುದಾಯದ ಎಲ್ಲ ವರ್ಗವನ್ನು, ನಿರ್ಮಾಣ ಸಂಸ್ಥೆಯ ಎಲ್ಲ ಜವಾಬ್ದಾರಿಗಳನ್ನು, ದೊಡ್ಡ ಹಡಗಿನಂತಾಗಿದ್ದ ಕೌಟುಂಬಿಕ ಜವಾಬ್ದಾರಿಗಳನ್ನು ಆಕೆ ತೂಗಿಸುವುದು ಸುಲಭದ ಸಂಗತಿಯಾಗಿರಲಿಲ್ಲ. ಆದರೆ ಸೋರಿ ಹೋಗತೊಡಗಿದ್ದ ಅರ್ಥವಿಚಾರಗಳನ್ನು ಹಿಡಿತದಲ್ಲಿಟ್ಟು, ಕ್ಷಣ ಕ್ಷಣವೂ ಕಾಂಚಾಣವಾಗಿದ್ದ ರಾಜಕುಮಾರ್ ಅವರ ವೃತ್ತಿಯಲ್ಲಿ ಏರುಪೇರಾಗದ ಹಾಗೆ ನೋಡಿಕೊಳ್ಳುವ ಹೊಣೆಹೊತ್ತರು. ಪ್ರಾಯಃ ಈ ಪ್ರಮಾಣದ ಜವಾಬ್ದಾರಿ ಹೊತ್ತು, ಸಮತೋಲದಲ್ಲಿ ನಡೆಸಿದ ಪ್ರಥಮ ಮಹಿಳೆ ಪಾರ್ವತಮ್ಮ ರಾಜಕುಮಾರ್.

ಭವಿಷ್ಯ ಅತ್ಯಂತ ಮಸುಕಾಗಿದೆ ಎಂಬಂಥ ಸ್ಥಿತಿಯಲ್ಲಿ ಬದಲಾವಣೆಯೂ ಕೂಡ ಸಾಧ್ಯವಿದೆ ಎಂಬ ಭರವಸೆಗೆ ಆಗಾಗ ಕೆಲವು ಮಿಂಚಿನಂಥ ಉದಾಹರಣೆಗಳು ಸೃಷ್ಟಿಯಾಗಿವೆ. ರವಿಚಂದ್ರನ್, ಸುನಿಲ್ ಕುಮಾರ್ ದೇಸಾಯಿ, ಫಣಿ ರಾಮಚಂದ್ರ, ಪಿ.ಹೆಚ್.ವಿಶ್ವನಾಥ್, ದಿನೇಶ್ ಬಾಬು, ಎಸ್.ನಾರಾಯಣ್, ಕೋಡ್ಲು ರಾಮಕೃಷ್ಣ, ನಾಗತಿಹಳ್ಳಿ ಚಂದ್ರಶೇಖರ್, ಓಂಪ್ರಕಾಶ್ ರಾವ್, ಉಪೇಂದ್ರ ಮೊದಲಾದವರು ತಮ್ಮದೇ ಶೈಲಿ, ಸ್ವಂತಿಕೆಯನ್ನು ದಾಖಲಿಸಿದ್ದು, ನಂಬಬಹುದಾದ ಭರವಸೆಗಳಾಗಿದ್ದಾರೆ. 'ಪ್ರೇಮಲೋಕ', 'ಬೆಳದಿಂಗಳ ಬಾಲೆ', 'ಗಣೇಶನ ಮದುವೆ', 'ಪಂಚಮವೇದ', 'ಸುಪ್ರಭಾತ', 'ವೀರಪ್ಪನಾಯ್ಕ', 'ಉದ್ಭವ', 'ಅಮೆರಿಕಾ ಅಮೆರಿಕಾ', 'AK 47', 'ಓಂ' ಮುಂತಾದ ಚಿತ್ರಗಳು ವೈವಿಧ್ಯಮಯವಾದ ಚಿಂತನೆಗಳಿಂದಷ್ಟೇ ಅಲ್ಲ, ನಿರೂಪಣೆಯ ಸೊಬಗಿನಲ್ಲೂ ವಿಶೇಷವಾಗಿವೆ. ಕೆಲವು ಚಿತ್ರಗಳಲ್ಲಿರುವ ನಿರೂಪಣೆಯ ಶೈಲಿಯಂತೂ ಭಾರತದ ಯಾವುದೇ ಭಾಷೆಯ ಚಿತ್ರಗಳಿಗೂ ಹೋಲಿಸಲಾಗದಷ್ಟು ಭಿನ್ನತೆಯಿಂದ ಕೂಡಿದೆ. ಕೇವಲ ಅದ್ದೂರಿತನಕ್ಕಿಂತ ಹೊಸತನದ ಪ್ರಯೋಗಪ್ರಿಯ ನಿರ್ಮಾಪಕರ ಸಂಖ್ಯೆ ಹೆಚ್ಚಿದರೆ ಸಹಜವಾಗಿ ಇನ್ನಷ್ಟು ಮಂದಿ ಪ್ರತಿಭಾವಂತ ನಿರ್ದೇಶಕರು ಕನ್ನಡಕ್ಕೆ ದಕ್ಕಬಹುದು. ತಾರಾಸಂಸ್ಕೃತಿಯನ್ನು ಧಿಕ್ಕರಿಸುವಂಥ, ಸಮಾಜದ ಪ್ರಗತಿ ಹಾಗೂ ಚಿಕಿತ್ಸೆಯ ದೃಷ್ಟಿಯನ್ನುಳ್ಳ ಕಥೆಯೇ ಕೇಂದ್ರಪ್ರಜ್ಞೆಯೆಂದು ಭಾವಿಸುವ ಹೊಸ ಪೀಳಿಗೆಯೊಂದು ಸೃಷ್ಟಿಯಾಗಬೇಕಾದ ಸಂದರ್ಭವಿದು.

ಸುಗಮವಾಗಿ ತೋರಿದರೂ ಕಠಿಣವಾಗಿರುವ ಮುಂದಿನ ದಾರಿಯಲ್ಲಿ ನಡೆಯಲು ಸಿದ್ಧರಾಗಿರುವವರ ಗುರಿ ಸತ್ಯಾನ್ವೇಷಣೆ ಆಗಿರಲಿ. 'ನಮ್ಮ ಕಲ್ಪನೆಯ ಒಳಿತು ಕೆಡುಕುಗಳನ್ನು ಪ್ರಕೃತಿ ಮತ್ತು ಇತಿಹಾಸ ಒಪ್ಪುವುದಿಲ್ಲ' ಎಂಬ ಅರಿವು ಈ ಮಹಾ ಮಾಧ್ಯಮದ ಹೆದ್ದಾರಿಯಲ್ಲಿ ನಡೆಯುತ್ತಿರುವವರ ದಿವ್ಯ ಸ್ಮೃತಿಯಲ್ಲಿ ಸದಾ ಜಾಗೃತವಾಗಿರಲಿ. 'ಚರಿತ್ರೆಯನ್ನು ಓದಿದಾಗ ಚರಿತ್ರೆಯನ್ನು ರೂಪಿಸಬಹುದು' ಎಂಬ ಸಾರ್ವಕಾಲಿಕ ಸತ್ಯ ಯುವ ಪೀಳಿಗೆಯ ಮೂಲಕ ಮರು ಸಾಕ್ಷಾತ್ಕಾರಗೊಳ್ಳಲಿ.

)

## ಕೊಂಕಣಿ, ಕೊಡವ, ತುಳು ಉಪಭಾಷಾ ಚಿತ್ರಗಳ ಪ್ರೇರಕ ಶಕ್ತಿಗಳು



(ಚಿತ್ರ ೧) ಎಸ್.ಆರ್.ರಾಜನ್ - ಕೊಡವ, ತುಳು ಚಿತ್ರಗಳ ಆದಿಪುರುಷ



(ಚಿತ್ರ ೨) ಕೆ.ಎನ್.ಟೈಲರ್ - ನಟ, ನಿರ್ದೇಶಕನಾಗಿ ತುಳು ಚಿತ್ರದ ಬೆಳವಣಿಗೆಗೆ ಕಾರಣ ಪುರುಷ



(ಚಿತ್ರ ೩) ಆರೂರು ಪಟ್ಟಾಭಿ - ತುಳು ಭಾಷಾ ಚಲನಚಿತ್ರದ ಭೀಷ್ಮ



(ಚಿತ್ರ ೪) ಡಾ।ರಿಚರ್ಡ್ ಕ್ಯಾಸ್ಟಲಿನೋ - ತುಳು, ಕೊಂಕಣಿ ಚಿತ್ರಗಳ ಪ್ರಯೋಗಶೀಲ ನಿರ್ಮಾಪಕ

# ನಾಲ್ವರು ಸಹೋದರಿಯರ ನಾಲ್ಕು ಹೆಜ್ಜೆ

ಕರ್ನಾಟಕದ ಸಾಂಸ್ಕೃತಿಕ ಪರಂಪರೆಗೆ ಪ್ರಾದೇಶಿಕ ಭಾಷೆಗಳು ಮತ್ತು ಉಪಭಾಷೆಗಳು ನೀಡಿರುವ, ನೀಡುತ್ತಿರುವ ಕೊಡುಗೆ ಅನನ್ಯವಾದುದು. ಚಲನಚಿತ್ರ ಪರಂಪರೆಯನ್ನು ಗಮನಿಸಿದಾಗಲೂ ಈ ವೈಶಿಷ್ಟ್ಯವನ್ನು ಗುರುತಿಸಬಹುದಾಗಿದೆ. ಕನ್ನಡ ಭಾಷೆಯ ಚಲನಚಿತ್ರಗಳೊಂದಿಗೆ ಉಪಭಾಷಾ ಚಿತ್ರಗಳೂ ಯಶಸ್ಸನ್ನು ಕಂಡಿವೆ. ಕಲಾತ್ಮಕ ದೃಷ್ಟಿಕೋನದಿಂದ ಗಮನ ಸೆಳೆದಿವೆ. ಮುಖ್ಯವಾಹಿನಿಯಾದ ಕನ್ನಡ ಚಿತ್ರೋದ್ಯಮವನ್ನು ಶ್ರೀಮಂತಗೊಳಿಸಲು ಕಾರಣವಾಗಿವೆ.

ಸೀಮಿತ ಮಾರುಕಟ್ಟೆ ಈ ಉಪಭಾಷಾ ಚಲನಚಿತ್ರಗಳ ನಿರ್ಮಾಣಕ್ಕೆ ಸಂಬಂಧಿಸಿದ ಪ್ರಮುಖ ಸಮಸ್ಯೆ. ಆದರೂ ಅನೇಕ ಕ್ರಿಯಾಶೀಲರು ಈ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದಾರೆ.

ಕರ್ನಾಟಕಕ್ಕೆ ಸಂಬಂಧಿಸಿದ ಉಪಭಾಷೆಗಳಾದ ತುಳು, ಕೊಂಕಣಿ, ಕೊಡವ, ಲಂಬಾಣಿ ಭಾಷೆಗಳಲ್ಲಿ ಚಲನಚಿತ್ರಗಳು ನಿರ್ಮಾಣವಾಗಿವೆ. ರಾಜ್ಯದಲ್ಲಿ ಇನ್ನೂ ಕೆಲವು ಉಪಭಾಷೆಗಳಿದ್ದರೂ ಸೀಮಿತವಾದ ಅವಕಾಶದ ಕಾರಣ ಯಾರೂ ಚಿತ್ರನಿರ್ಮಾಣದ ಸಾಹಸಕ್ಕೆ ಮುಂದಾಗಿಲ್ಲ.

ಕನ್ನಡ ನಾಡಿನ ಉಪಭಾಷೆಗಳಲ್ಲಿ ಚಿತ್ರನಿರ್ಮಾಣ ಸಾಧ್ಯವೇ ಎಂಬ ಪ್ರಶ್ನೆಯೇ ಬೃಹದಾಕಾರವಾಗಿದ್ದಾಗ ಕೊಂಕಣಿ ಭಾಷಿಗರು ಅರ್ಧಶತಮಾನಕ್ಕೆ ಹಿಂದೆಯೇ ತಮ್ಮ ಭಾಷೆಯಲ್ಲಿ ಚಿತ್ರ ತಯಾರಿಸುವ ಸಾಹಸ ಮಾಡಿದ್ದರು. ಅದೇ ಮೇಲ್ಪಂಕ್ತಿಯಲ್ಲಿ ತುಳು ಭಾಷೆಯಲ್ಲಿ ಚಿತ್ರತಯಾರಿಸುವ ಸಾಹಸ ಮಾಡಿದವರು ನಿರ್ಮಾಪಕ-ನಿರ್ದೇಶಕ-ನಟ ಎಸ್.ಆರ್.ರಾಜನ್. ದಕ್ಷಿಣ ಕನ್ನಡದಲ್ಲಿನ ಗೆಳೆಯರ ಸಹವಾಸ, ಅಲ್ಲಿನ ಪ್ರಕೃತಿ ರಮಣೀಯತೆಗಳಿಂದಾಗಿ ಈ ಸಾಹಸಕ್ಕೆ ಕೈ ಹಾಕಿ 'ಎನ್ನತಂಗಡಿ' ಚಿತ್ರ ನಿರ್ಮಿಸಿ ತುಳು ಚಿತ್ರರಂಗದ ಜನಕನೆನಿಸಿದರು. ನಂತರ ಇನ್ನೊಂದು ಉಪಭಾಷೆಯೆನಿಸಿದ ಕೊಡವ ಭಾಷೆಯತ್ತ ದೃಷ್ಟಿಹರಿಸಿದ ಎಸ್.ಆರ್.ರಾಜನ್ 'ನಾಡಮಣ್ಣೇ ನಾಡಕೂಳು' ತಯಾರಿಸಿ ಕೊಡವ ಭಾಷಾ ಚಿತ್ರರಂಗದ ಆರಂಭಕ್ಕೂ ನಾಂದಿ ಹಾಡಿದರು. ಆ ಪ್ರಯತ್ನಗಳ ನಂತರ ಅವೆರಡೂ ಭಾಷೆಗಳಲ್ಲಿ ಚಿತ್ರಗಳ ಸೃಷ್ಟಿಕಾರ್ಯ ಗಮನಾರ್ಹವಾಗಿ ಮುಂದುವರೆದು, ಕನ್ನಡ ಚಿತ್ರೋದ್ಯಮದ ಬೆಳವಣಿಗೆಗೆ ಸಹಕಾರಿಯಾಯಿತು.

ಇತ್ತೀಚಿಗಿನ ವರ್ಷಗಳಲ್ಲಿ ಉಪಭಾಷಾ ಚಲನಚಿತ್ರಗಳಿಗೆ ಕೂಡ ರಾಷ್ಟ್ರ ಹಾಗೂ ರಾಜ್ಯಮಟ್ಟದ ಪ್ರಶಸ್ತಿಗಳು ದೊರೆಯುತ್ತಿರುವುದರಿಂದ ಚಿತ್ರನಿರ್ಮಾಣಕ್ಕೆ ಪೂರಕವಾದ ವಾತಾವರಣ ಮೂಡಿತು. ಸಹಾಯಧನ ಇತ್ಯಾದಿ ಸೌಲಭ್ಯಗಳೂ ದೊರೆಯುತ್ತಿವೆ. ಹೊಸ ಹೊಸ ಟೆಲಿವಿಷನ್ ಜಾಲಗಳು ಅಸ್ತಿತ್ವಕ್ಕೆ ಬರುತ್ತಿರುವುದರಿಂದ ಪ್ರಸಾರದ ಅವಕಾಶಗಳೂ ಹೆಚ್ಚುತ್ತಿವೆ.

ಆದರೆ ಈ ಎಲ್ಲಾ ಹಿನ್ನೆಲೆಗಳಿದ್ದರೂ ಸದ್ಯದ ಸನ್ನಿವೇಶದಲ್ಲಿ ಹೊಸ ಉಪಭಾಷಾ ಚಲನಚಿತ್ರಗಳು ನಿರ್ಮಾಣವಾಗುತ್ತಿರುವ ಮಾಹಿತಿಗಳಿಲ್ಲ. ಅಲ್ಲೊಂದು ಇಲ್ಲೊಂದು ಎಂಬಂತೆ ಆ ಭಾಷೆಗಳಲ್ಲಿ ಚಿತ್ರಗಳು ನಿರ್ಮಾಣವಾಗುತ್ತಿವೆಯೇ ಹೊರತು ಈಗ ಅದು ಅಭಿಯಾನವಾಗಿ ಉಳಿದಿಲ್ಲ. ತುಳು ಮತ್ತು ಕೊಂಕಣಿ ಚಲನಚಿತ್ರಗಳು ಆರಂಭಿಕ ದಿನಗಳಲ್ಲಿ ಸತತವಾಗಿ ಕಲ ಸಮಯ ನಿರ್ಮಾಣವಾದವು. ಆದರೆ ಆ ಪರಂಪರೆ ಮುಂದುವರೆಯಲಿಲ್ಲ. ನಿರ್ಮಾಣ ವೆಚ್ಚದಲ್ಲಾದ ಹೆಚ್ಚಳ, ಸೀಮಿತ ಮಾರುಕಟ್ಟೆಯನ್ನೇ ಆಧರಿಸಬೇಕಾದ ಪರಿಸ್ಥಿತಿ, ಇನ್ನಿತರ ಅಂಶಗಳು ಇವಕ್ಕೆ ಕಾರಣ.

ಉಪಭಾಷಾ ಚಲನಚಿತ್ರ ಇತಿಹಾಸದ ಹೆಜ್ಜೆ ಗುರುತುಗಳನ್ನು ಇಲ್ಲಿ ಸಂಗ್ರಹಿಸಿ ನೀಡಲಾಗಿದೆ.

### ಕೊಂಕಣಿ ಚಿತ್ರರಂಗ

ಕೊಂಕಣಿ ಚಿತ್ರರಂಗಕ್ಕೆ ಅರ್ಧ ಶತಮಾನಕ್ಕಿಂತ ಹೆಚ್ಚಿನ ಹಿನ್ನೆಲೆ ಇದೆ ಅನ್ನುವುದು ಗಮನಾರ್ಹ. ತುಳು ಚಿತ್ರರಂಗಕ್ಕೆ ಮೂರು ದಶಕಗಳಾದರೆ, ಕೊಂಕಣಿ ಚಿತ್ರರಂಗ ಐವತ್ತು ವರ್ಷ ದಾಟಿದೆ.

ಸಾರಸ್ವತ ಕೊಂಕಣಿ ಮತ್ತು ಕ್ಯಾಥೋಲಿಕ್ ಕೊಂಕಣಿ ಭಾಷೆಗಳಲ್ಲಿ ಮಂಗಳೂರು ಮತ್ತು ಗೋವಾ ಕೇಂದ್ರೀಕರಿಸಿ ಚಿತ್ರಗಳ ನಿರ್ಮಾಣವಾಗಿದೆ.

ತುಳು ಚಿತ್ರರಂಗ ಎದುರಿಸುತ್ತಿರುವ ಸಮಸ್ಯೆಗಳೆಲ್ಲವೂ ಕೊಂಕಣಿ ಚಿತ್ರರಂಗಕ್ಕೆ ಬಳುವಳಿಯಾಗಿಯೇ ಬಂದಿವೆ. ಭಾಷಾವೈವಿಧ್ಯ ಕೊಂಕಣಿ ಚಿತ್ರಗಳ ಪಾಲಿಗೆ ಒಂದು ಅಭಿಶಾಪವೇ ಆಗಿದೆ. ತುಳು ಭಾಷಿಕರಿಗೆ ತುಳುನಾಡು ಎನ್ನುವ ಒಂದು ಕನಿಷ್ಠ ಹಾಗೂ ನಿರ್ದಿಷ್ಟ ಭೌಗೋಳಿಕ ಪ್ರದೇಶವಾದರೂ ಇದೆ. ಆದರೆ ಈ ಸೌಭಾಗ್ಯ ಕೊಂಕಣಿ ಭಾಷಿಕರಿಗೆ ಇಲ್ಲವಾಗಿದೆ. ಅಲ್ಪ ಸಂಖ್ಯಾತರ ಭಾಷೆಯೇ ಆದ ಕೊಂಕಣಿ ಹಲವು ಧರ್ಮೀಯರ ಭಾಷೆಯೂ ಆಗಿದ್ದು ಒಂದು ಸರ್ವಧರ್ಮ ಸಮನ್ವಯದ ಭಾಷೆಯಾಗಿಯೂ ಇದೆ. ಉಪಬೋಲಿ (ಡಯಲೆಕ್ಟ್)ಗಳು ಹಲವಾರು ಇವೆ. ಗೌಡ ಸಾರಸ್ವತರ ಕೊಂಕಣಿ, ದಕ್ಷಿಣ ಕನ್ನಡ-ಉಡುಪಿ ಜಿಲ್ಲೆಗಳ ರೋಮನ್ ಕಥೋಲಿಕರ ಕೊಂಕಣಿ, ಭಟ್ಕಳದ ಮುಸ್ಲಿಮ್ ನವಾಯತರ ಕೊಂಕಣಿ, ಕುಂದಾಪುರ ಖಾರ್ವಿಗಳ ಮನೆಮಾತಾಗಿರುವ ಕೊಂಕಣಿ, ಹಳೆ ಗೋವಾ (ಪೋಂಡಾ, ಮಡಗಾಂವ್) ಮತ್ತು ಹೊಸ ಗೋವೆ (ಪಣಜಿ)ಗಳ ಕೊಂಕಣಿ, ಕೊಚ್ಚಿಯ ಕೊಂಕಣಿ ಎಲ್ಲವೂ ಭಿನ್ನ ಭಿನ್ನ ಶೈಲಿಯವು. ಒಂದು ಕಡೆಯವರದು ಇನ್ನೊಂದು ಕಡೆಯವರಿಗೆ ಅರ್ಥವಾಗಲು ಕಷ್ಟ. ಇದು ಭಾಷಾ ವೈವಿಧ್ಯದ ಸಮಸ್ಯೆ. ಲಿಪಿಯ ವಿಷಯದಲ್ಲೂ ಭಿನ್ನತೆ ಇದೆ. ಕೇರಳದಲ್ಲಿ ಮಲಯಾಳ ಲಿಪಿ ಬಳಸಿದರೆ, ಕರ್ನಾಟಕದಲ್ಲಿ ಕನ್ನಡ ಹಾಗೂ ರೋಮನ್ ಲಿಪಿ ಹಾಗೂ ಗೋವೆಯಲ್ಲಿ ರೋಮನ್ ಹಾಗೂ ದೇವನಾಗರಿ ಲಿಪಿ ಬಳಕೆಯಲ್ಲಿದೆ. ಕರ್ನಾಟಕದಲ್ಲಿ ೨೫ ಲಕ್ಷ, ಗೋವೆಯಲ್ಲಿ ೧೧ ಲಕ್ಷ, ಕೇರಳದಲ್ಲಿ ಹಾಗೂ ಮಹಾರಾಷ್ಟ್ರದಲ್ಲಿ ತಲಾ ೭ ಲಕ್ಷ, ಹೀಗೆ ಒಟ್ಟು ಸುಮಾರು ೫೦ ಲಕ್ಷ ಮಂದಿ ಕೊಂಕಣಿ ಭಾಷಾ ಜನರು ಇದ್ದಾರೆ. ಯಾವ ಪ್ರಾಂತ್ಯದ ಕೊಂಕಣಿಗರ ಕೊಂಕಣಿ ಭಾಷೆಯಲ್ಲಿ, ಯಾವ ಧರ್ಮೀಯರ ಕೊಂಕಣಿ ಭಾಷೆಯಲ್ಲಿ, ಯಾವ ಸಂಸ್ಕೃತಿ-ಪರಂಪರೆಗಳ ವಸ್ತುವಿನ ಕೊಂಕಣಿ ಸಿನಿಮಾ ನಿರ್ಮಿಸಬೇಕೆಂಬುದೇ ತಯಾರಕರ ಮುಂದಿರುವ ಅತ್ಯಂತ ಗಂಭೀರ ಪ್ರಶ್ನೆಯಾಗಿದೆ.

ಈ ಪ್ರಶ್ನೆಗಳಿಗೆ ಈತನಕವೂ ಯಾವುದೇ ಸಮಾಧಾನಕರ ಉತ್ತರ ದೊರಕದಿದ್ದರೂ ಕೊಂಕಣಿ ಭಾಷೆಯಲ್ಲಿ ಈವರೆಗೆ ೨೦ ಚಿತ್ರಗಳು ತೆರೆಕಂಡಿವೆ.

೧೯೪೯ರಿಂದ ೨೦೦೦ವರೆಗೆ ನಿರ್ಮಾಣಗೊಂಡ ೨೦ ಕೊಂಕಣಿ ಚಲನಚಿತ್ರಗಳು:

೧. ಸುಖೀ ಕೋಣ್, ೨. ಮೊಗಾಚೊ ಅಂವ್ಡೊ, ೩. ಅಮ್ಚೆ ನಶೀಬ್, ೪. ನಿರ್ಮೋಣ್, ೫. ಸುಖಾಚೆ ಸ್ವಪಾಣ್, ೬. ಮಜೆ ಘರ್ಕ್ಯಾರ್ನ, ೭. ಜೀವಿತ್ ಅಮ್ಚೆ ಅಶೆಂ, ೮. ಭುಂಯಾರಾತ್ಲೊ ಮನಿಸ್, ೯. ಕರ್ತುಬಾಂಚೊ ಸಂಸಾರ್, ೧೦. ಭೊಗ್ಲಾಂಟ್, ೧೧. ತೀಸ್ರೀ ಚಿಟ್, ೧೨. ಮೋಗ್ ಆನಿ ಮಾಯ್ಪಾಸ್. ೧೩. ಸುಜಾನ್ನಾ, ೧೪. ತಪಸ್ವಿನಿ, ೧೫. ಜನಮನ, ೧೬. ಗಿರೆಸ್ತ್‌ಕಾಯ, ೧೭. ದೇಕಣೆ ಮರಾಯ್, ೧೮. ಜೊಗ್ಸಾಣೆ, ೧೯. ಜೀವನಾಂಚೋ ವೇಳ್, ೨೦. ಪಕಾ ನಗರಾಂತ್

೧೯೪೯ರಲ್ಲಿ ಜೆ.ಎಂ.ಬಿ.ರಾಡ್ರಿಗ್ಸ್ ಅವರು ಎಕ್ಸ್‌ಚೇಂಜ್ ಟಾಕೀಸ್ ಆಫ್ ಇಂಡಿಯಾ, ಚೈನಾ ಆ್ಯಂಡ್ ಆಫ್ರಿಕಾ ಲಿಮಿಟೆಡ್ ಎಂಬ ಚಿತ್ರ ಸಂಸ್ಥೆಯನ್ನು ಸ್ಥಾಪಿಸಿ,

'ಸುಖಿಕೋಣ್' ಕೊಂಕಣಿ ಚಿತ್ರ ನಿರ್ಮಿಸಿದರು. ರಾಡ್ರಿಗ್ಸ್, ಹ್ಯೂ ಲುಡ್ವಿಗ್, ಲಿಲ್ಲಿ ಡಿಸೋಜಾ ಅಭಿನಯಿಸಿದರು. ಮುಂಬಯಿಯ ಜೋಗೇಶ್ವರಿಯಲ್ಲಿ ಚಿತ್ರ ನಿರ್ಮಾಣವಾಯಿತು.

ಆ ಬಳಿಕ ಕೊಂಕಣಿ ಚಿತ್ರ ನಿರ್ಮಾಣವಾದುದು ೧೯೫೮-೬೦ರಲ್ಲಿ. 'ಆಮ್ಚೆ ನಶೀಬ್' ಚಿತ್ರ ಮನರಂಜನೆಯ ದೃಷ್ಟಿಯಿಂದಲೂ ಯಶಸ್ವಿಯಾಯಿತು. ಅಂತೋನಿ ಮೆಂಡಿಸ್ ಅವರ ಹಾಸ್ಯ ಪಾತ್ರದಲ್ಲಿನ ಅಭಿನಯ ಪ್ರೇಕ್ಷಕರನ್ನು ಸೆಳೆಯಿತು. ಆಲ್ಬ್ಯಾ ರೇರ್ಬ್, ರೀಟಾ ಲೋಬೋ ಮುಖ್ಯಪಾತ್ರಗಳಲ್ಲಿ ಮಿಂಚಿದರು.

೧೯೬೬ರಲ್ಲಿ ಗೋಯಂಕರ್ ನಿರ್ಮಿಸಿದ 'ನಿರ್ಮೋಣ್' ಕಥಾ ಪ್ರಧಾನ ಚಿತ್ರ. ಅದರ 'ಕ್ಷಾಪಿ ಯಾ ಮೊಗಾಚ್ಯಾ...' ಹಾಡು ಅತ್ಯಂತ ಜನಪ್ರಿಯ. ಎ.ಸಲಾಂ ನಿರ್ದೇಶನದ ಈ ಚಿತ್ರಕ್ಕ ರಾಷ್ಟ್ರಪತಿ ಪದಕ. ಆಲ್ಬ್ಯಾ ರೇರ್ಬ್, ಶಾಲಿನಿ, ಒಫೇಲಿಯಾ. ಜಾಸಿಂತಾ ವಾಜ್ ಮುಂತಾದವರು ಅಭಿನಯಿಸಿದರು.

'ಸುಖಾಚೆ ಸ್ವಪಾಣ್' ಚಿತ್ರ ಗೋವಾದಲ್ಲಿ ನಿರ್ಮಾಣವಾಯಿತು. ಗೋವಾದ ನಿಸರ್ಗ ಸೌಂದರ್ಯವನ್ನು ಬಿಂಬಿಸಿದ ಚಿತ್ರ 'ಮಜಿ ಘರ್ಕ್ಯಾರ್ನ'. ಬೆಂಗಳೂರಿನಲ್ಲಿ ನಿರ್ಮಾಣವಾದ ಚಿತ್ರ 'ಜೀವಿತ್ ಅಮ್ಚೆ ಅಶೆಂ'. 'ಭುಂಯಾ ರಾತ್ಲೊ ಮನಿಸ್' ಪತ್ತೇದಾರಿ ಕಥೆಯ ಚಿತ್ರ. ಮುಂಬಯಿ, ಗೋವಾ ಮುಂತಾದೆಡೆ ಪ್ರದರ್ಶನಗೊಂಡ


(ಚಿತ್ರ ೫) 'ಬೊಗ್ಸಾಣೆ' ಚಿತ್ರದಲ್ಲಿ ನಂದಿನಿ ಸಿಂಗ್

'ಕರ್ತುರ್ಬಾಂಚೊ ಸಂಸಾರ್' ಚಿತ್ರ ಹೊಸ ರೀತಿಯ ಒಂದು ಪ್ರಯತ್ನ. ಮಂಗಳೂರಿನಲ್ಲಿಯೇ ಚಿತ್ರಿತವಾದ 'ಭೊಗ್ಸಾಂಟ್' ಕೊಂಕಣಿ ಭಾಷೆಯಲ್ಲಿ ಬಿಡುಗಡೆಯಾದ ಹತ್ತನೆಯ ಚಿತ್ರ.

೧೯೭೫ರಲ್ಲಿ ಪ್ರದರ್ಶನಗೊಂಡ ಚಿತ್ರ 'ತೀಸ್ರೀ ಚಿಟ್'. ಪೀಟರ್ ಗೊನ್ಸಾಲ್ವಿಸ್ ಸ್ಫೂರ್ತಿಯಿಂದ ನಿರ್ಮಾಣವಾದ ಈ ಚಿತ್ರದಲ್ಲಿ ಆರ್ಥರ್ ರಸ್ಕಿನ್ಹಾ, ಸೈಮನ್ ರಸ್ಕಿನ್ಹಾ, ಮೇಬಲ್ ಕೆಂಟ್, ವಿನ್ಸೆಂಟ್ ಕಾಮತ್ ಮತ್ತಿತರರು ಅಭಿನಯಿಸಿದರು. ಹೆನ್ರಿ ಟಿ.ಡಿ'ಸೌಜಾ ಸಂಗೀತ ಸಂಯೋಜಕರು.

೧೯೭೭ರಲ್ಲಿ 'ಮೋಗ್ ಆನಿ ಮಾಯ್ಪಾಸ್' ಚಿತ್ರ ಬಿಡುಗಡೆಯಾಯಿತು. ಕ್ಯಾ|ಮೆರ್ವಿನ್ ಜೆ.ಪಿಂಟೋ ಅವರ ನಿರ್ಮಾಣದ ಈ ಸಂಗೀತ ಪ್ರಧಾನ ವರ್ಣಚಿತ್ರಕ್ಕೆ ಸಂಗೀತಗಾರ ವಿಲ್ಫಿ ರೆಬಿಂಬಸ್ ಕಥಾವಸ್ತುವನ್ನೊದಗಿಸಿದ್ದು, ಎಸ್.ಎಲ್.ಆರ್.ಸಹ್ಯಾದ್ರಿ ನಿರ್ದೇಶಿಸಿದರು. ಬಿ.ಗಣೇಶ್ ಪಾಂಡ್ಯನ್ ಛಾಯಾಗ್ರಾಹಕರು. ಓರ್ಫಿ ಸಿಕ್ವೇರಾ, ಲಿನ್ ಫೆರ್ನಾಂಡಿಸ್, ಡಯಾನಾ. ವರುಣಾ, ಮಿಕ್ ಮ್ಯಾಕ್ಸ್, ವಿ.ಪಿ.ಕಾಮತ್, ಎಡ್ವರ್ಡ್ ಕ್ವಾಡ್ರನ್, ಡಾ|ಎಸ್.ಜೆ.ಮೊಂತೇರೋ, ಚಾರ್ಲಿ ಸಿಕ್ವೇರಾ ಈ ಚಿತ್ರದ ತಾರಾಗಣದ ಪ್ರಮುಖರು. ಬಳಿಕ ತೆರೆಗೆ ಬಂದ ಕೊಂಕಣಿ ಚಿತ್ರ 'ಸುಜಾಣ್ನ' ಹಿಂದಿ, ಕನ್ನಡ ಹಾಗೂ ಮಲೆಯಾಳಂ ಭಾಷೆಗಳಲ್ಲಿಯೂ ಪರಿವರ್ತನೆಗೊಂಡಿತು.

ಗೌಡ ಸಾರಸ್ವತ ಸಮಾಜದ ಕಥೆಯನ್ನು ಹೊಂದಿದ 'ತಪಸ್ವಿನಿ' ವರ್ಣಚಿತ್ರ ೧೯೭೮ರಲ್ಲಿ ಬಿಡುಗಡೆಯಾಯಿತು. ಕೆ.ಜಿ.ನಾಯಕ್ ನಿರ್ಮಾಪಕರು. ಮಂಗಳೂರಿನ ಪರಿಸರದಲ್ಲಿ ಸತತ ೩೦ ದಿನಗಳ ಚಿತ್ರೀಕರಣ ನಡೆದ ಈ ಚಿತ್ರದಲ್ಲಿ ರೇಖಾ ಮಾವಿನಕುರ್ವೆ, ಬಿ.ವಿ.ಬಾಳಿಗಾ, ಎಸ್.ಆರ್.ಬಾಲಗೋಪಾಲ್, ಕೆ.ಶ್ರೀನಿವಾಸ ಭಟ್ ಮತ್ತಿತರರು ಅಭಿನಯಿಸಿದರು.

೧೯೮೧ರಲ್ಲಿ ನಿರ್ಮಾಣವಾದ ಕೊಂಕಣಿ ಚಿತ್ರ 'ಜನಮನ' ಕೆ.ರಮೇಶ್ ಕಾಮತ್‌ರ ನಿರ್ದೇಶನ ಹೊಂದಿದ್ದಿತು. ವರದಕ್ಷಿಣೆಯಂತಹ ಸಾಮಾಜಿಕ ಪಿಡುಗುಗಳ ಬಗೆಗಿನ ಕಥಾಚಿತ್ರವಿದು. ಕಥಾರಚನೆ ಮಿತ್ರಾ ಪ್ರಭು ಅವರದು. ದಿನೇಶ್‌ಪ್ರಭು, ಸುಮನಾ ರಾವ್, ಬಿ.ವಿ.ಬಾಳಿಗಾ, ರಾಧಾಬಾಯಿ, ವೀಣಾ ಕಿಣಿ, ಶ್ರೀನಿವಾಸ ಭಟ್, ಅರುಂಧತಿ ಶೆಣೈ, ದೇವದಾಸ ಶೆಣೈ ಪಾತ್ರವರ್ಗದ ಪ್ರಮುಖರು. ಕೊಂಕಣಿಯ ಮೂರನೆಯ ವರ್ಣಚಿತ್ರ 'ಗಿರೇಸ್ತ್ ಕಾಯ'. ಗೋವಾದ ನಾಟಕಕಾರ ಪುಂಡಲೀಕ ನಾರಾಯಣ ಕಾಮತರ ನಾಟಕದ ಸ್ಫೂರ್ತಿಯಲ್ಲಿ ರೂಪುಗೊಂಡ ಚಿತ್ರವಿದು. ಹೇಮಾ ನಾಯಕ ನಿರ್ಮಾಪಕರು. ರಾಜೀವ್ ಶಿಂಧೆ ನಿರ್ದೇಶನದ ಈ ಚಿತ್ರ ೧೯೯೭ರಲ್ಲಿ 'ಗೋಮಂತ್ ತೇಜಸ್ವಿನಿ' ಪ್ರಶಸ್ತಿ ಪಡೆಯಿತು. ಜ್ಯೋತಿ ಕುಂಕೊಳಿಕಾರ್, ಶ್ರೀಧರ ಕಾಮತ್ ಪ್ರಧಾನ ಭೂಮಿಕೆಯಲ್ಲಿದ್ದರು. ೧೯೯೧ನೇ ಜೂನ್ ತಿಂಗಳಲ್ಲಿ ಸೆನ್ಸಾರಾದ 'ಪಿಕಾ ನಗರಾಂತ್'. ಡಾ|ಸಿ.ಅರಂಗ ನಾಯಕಂ ಅವರ ನಿರ್ಮಾಣ-ನಿರ್ದೇಶನದಲ್ಲಿ ತಯಾರಾದ ಚಿತ್ರ. ಮನೋಜ್, ಚಾರ್ಲ್ಸ್ ಪ್ರಿನ್ಸಿಸ್, ಸಂಜಯಕಾಂತ, ಲಾರೆನ್ಸ್ ಪಿಂಟೋ, ಕಿರಣ್, ಸುಗಂಧಿ, ಮೇರಿ, ವತ್ಸಲ ಅಭಿನಯಿಸಿದರು. ಕಥೆ-ಸಾಹಿತ್ಯ ಜೆ.ಸಿ.ಜಾರ್ಜ್. ಜೆ.ಎಂ.ರಾಜು ಸಂಗೀತ ನೀಡಿದರು.

೧೯೯೭ರ ಫೆಬ್ರವರಿ ೨ರಂದು ಡಾ|ರಿಚರ್ಡ್ ಕ್ಯಾಸ್ಟಲಿನೋ ನಿರ್ಮಾಣ-ನಿರ್ದೇಶನದ 'ಬೊಗ್ಸಾಣೆ' ಚಿತ್ರ ಮಂಗಳೂರಿನಲ್ಲಿ ಬಿಡುಗಡೆಯಾಯಿತು. ಡಾ|ರಿಚರ್ಡ್ ಕ್ಯಾಸ್ಟಲಿನೋ ತುಳು ಚಿತ್ರಗಳನ್ನಷ್ಟೇ ಅಲ್ಲದೆ ಕೊಂಕಣಿ ಚಿತ್ರ ಸೃಷ್ಟಿಯಲ್ಲಿಯೂ ತೊಡಗಿಕೊಂಡರು. ವಿಲ್ಫಿರೆ ಬಿಂಬಸ್‌ರ ಸಂಗೀತ, ಅಶೋಕ್ ಕಶ್ಯಪ್ ಛಾಯಾಗ್ರಹಣದ ಈ ಚಿತ್ರಕ್ಕಾಗಿ ಗೋವಾ, ಅಂಡಮಾನ್ ಮುಂತಾದೆಡೆ ಚಿತ್ರೀಕರಣ ನಡೆಸಿದ್ದು ಗಮನಾರ್ಹ. ನಂದಿನಿ ಸಿಂಗ್, ಪ್ರಮೋದ್ ಚಕ್ರವರ್ತಿ, ಬೆನ್ನಾ ರುರ್ಖಾಯಿ, ಮನೋಹರ ಪ್ರಸಾದ್, ಸಂದೀಪ್ ಮಲಾನಿ, ವಿನುತಾ ಮುಂತಾದವರು ಅಭಿನಯಿಸಿದರು. ಸಂಭಾಷಣೆ ಎಡ್ವಿನ್ ಜೆ.ಎಫ್.ಡಿಸೋಜಾ ಮತ್ತು ಡಿಜ್ಜಿಸ್ ತಾಕೊಡೆ. ಡಾ|ಕ್ಯಾಸ್ಟಲಿನೋ ಪ್ರಶಸ್ತಿ ಪುರಸ್ಕೃತರಾದರು. 'ಬೊಗ್ಸಾಣೆ' ದೂರದರ್ಶನದ ರಾಷ್ಟ್ರೀಯ ಜಾಲದಲ್ಲಿ ಪ್ರಸಾರಗೊಂಡ ಚಿತ್ರ.

ಮಂಗಳೂರಿನ ನ್ಯೂ ಚಿತ್ರಾ ಟಾಕೀಸ್‌ನಲ್ಲಿ ೨೦೦೦ದ ಆಗಸ್ಟ್ ೫ರಂದು ಪ್ರೀಮಿಯರ್ ಪ್ರದರ್ಶನ ಕಂಡ ಕೊಂಕಣಿ ಭಾಷಾ ಚಿತ್ರ 'ಜೀವನಾಂಚೋ ಖೇಳ್'. ಶ್ರೀ ಸುಬ್ರಹ್ಮಣ್ಯ ಫಿಲಂಸ್ ಲಾಂಛನದ ಈ ಚಿತ್ರದ ಕಥೆ ಹಾಗೂ ನಿರ್ದೇಶನ ಎ.ಎಸ್.ಮಹದೇವ ರಾಜ್. ವಾಸುದೇವ ಶಾನುಭೋಗ್ ಶಿರಸಿ ಅವರ ಸಾಹಿತ್ಯ, ನವ ಕುಮಾರ್, ಚಂದ್ರೇಶ್, ಪ್ರೇಮಾನಂದ ಜೈವಂತ್, ಮಾಲಾ, ಯಮುನಾ ಶೇಟ್‌ರ ಅಭಿನಯದ ಈ ಚಿತ್ರದಲ್ಲಿ ಟಿ.ರವಿರಾಜ್‌ರ ಸಂಗೀತ ಸಂಯೋಜನೆಯಲ್ಲಿ ಪುತ್ತೂರು ನರಸಿಂಹ ನಾಯಕ್, ಸುನೀತಾ, ಕೆ.ಸದಾಶಿವ ಶೆಣೈ ಮುಂತಾದವರು ಹಾಡಿದ್ದಾರೆ.

ಗೋವೆಯಲ್ಲಿ ಕೊಂಕಣಿಯು ರಾಜ್ಯ ಭಾಷೆಯಾಗಿ ಅಂಗೀಕಾರ ಪಡೆದು ದಶಕವೇ ಸಂದಿದೆಯಾದರೂ ಅಲ್ಲಿ ಇನ್ನೂ ಕೊಂಕಣಿ ಸಿನಿಮಾರಂಗ ಯಾವುದೇ ನೆಲೆಗಟ್ಟು ಕಂಡಿಲ್ಲ. ತುಳುವಿನಂತೆ ಕೊಂಕಣಿ ರಂಗಭೂಮಿಯು ಗೋವೆಯಲ್ಲಿ ಅಗಾಧವಾಗಿ ಬೆಳೆದಿದೆ ಎನ್ನುವುದು ಸತ್ಯ. ಆದರೆ ಅದು ಕಲಾತ್ಮಕ ಕೊಂಕಣಿ ರಂಗಭೂಮಿಯೇ ವಿನಾ ವಾಣಿಜ್ಯ ರಂಗಭೂಮಿ ಅಲ್ಲ ಎನ್ನುವುದು ಕೂಡ ಮುಖ್ಯವೇ. ಕೊಂಕಣಿ ಭಾಷಾ ಚಿತ್ರರಂಗದಲ್ಲಿಯೂ ಭಾರಿ ಬಜೆಟ್‌ನಲ್ಲಿ ಅದ್ದೂರಿಯಾಗಿ ಚಿತ್ರ ನಿರ್ಮಿಸಿದ ಕೀರ್ತಿ ಡಾ|ರಿಚರ್ಡ್ ಕ್ಯಾಸ್ಟಲಿನೋ ಅವರಿಗೆ ಸಲ್ಲುತ್ತದೆ. ಅವರ 'ಬೊಗ್ಸಾಣೆ' ಮಾರಿಷಸ್‌ನ ಚಿತ್ತಾಕರ್ಷಕ ಹೊರಾಂಗಣದಲ್ಲಿ ಚಿತ್ರಿತವಾದ, ರಾಷ್ಟ್ರ ಮಾನ್ಯತೆಗೆ ಪಾತ್ರವಾದ ಚಿತ್ರ. ಆದರೂ ಬಾಕ್ಸಾಫೀಸಿನಲ್ಲಿ ವಿಫಲವಾದದ್ದು ಕೊಂಕಣಿಗರಲ್ಲಿನ ಭಾಷಾ ಸ್ವಾಭಿಮಾನದ ಕೊರತೆಯಿಂದಾಗಿ ಮಾತ್ರ. ಭಾರತ ಸಂವಿಧಾನದ ಎಂಟನೆಯ ಪರಿಚ್ಛೇದದಲ್ಲಿ ಕೊಂಕಣಿ ಭಾಷೆ ಸೇರ್ಪಡೆಗೊಂಡಿದ್ದು, ಈ ಮೂಲಕ ಕೊಂಕಣಿ ಚಿತ್ರರಂಗದಲ್ಲಿ ಮತ್ತಷ್ಟು ಸ್ಫೂರ್ತಿ ಮೂಡೀತೆಂಬ ನಿರೀಕ್ಷೆಯಿದೆ.

## ತುಳು ಭಾಷಾ ಚಿತ್ರಗಳು

ತುಳು ಭಾಷಾ ಚಲನಚಿತ್ರ ಪರಂಪರೆಗೆ ಈಗ ಮೂರು ದಶಕ. ಮೂವತ್ತು ವರ್ಷಗಳಲ್ಲಿ ಮೂವತ್ತು ಸಿನಿಮಾ. ಇದು ಯಾವ ಒಬ್ಬ ಚಿತ್ರ ನಿರ್ದೇಶಕ ಅಥವಾ ಚಿತ್ರ ನಿರ್ಮಾಪಕನ ಸಾಧನೆ ಅಲ್ಲ. ಒಂದು ಭಾಷಾ ಚಿತ್ರರಂಗದ, ದಕ್ಷಿಣ ಕನ್ನಡ ಹಾಗೂ



(ಚಿತ್ರ ೬) 'ಎನ್ನ ತಂಗಡಿ' ಚಿತ್ರದಲ್ಲಿ ಹೇಮಲತಾ ಮತ್ತು ಆನಂದ ಶೇಖರ್

ಉಡುಪಿ ಜಿಲ್ಲೆಗಳನ್ನು ಒಳಗೊಂಡ ತುಳುನಾಡಿನ ತುಳು ಚಿತ್ರರಂಗದ ಸಾಧನೆ. ೧೯೭೦ರಿಂದ ೨೦೦೦ದವರೆಗಿನ ಮೂರು ದಶಕಗಳ ಕೃಪಿ. ಇತರ ಭಾಷಾಚಿತ್ರಗಳಿಗೆ ಹೋಲಿಸಿದರೆ ಸಂಖ್ಯಾದೃಷ್ಟಿಯಿಂದ ನಗಣ್ಯ ಎನಿಸುವ ಬೆಳೆ ಇದು. ತುಳು ಅಲ್ಪಸಂಖ್ಯಾತರ ಭಾಷೆ. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಬಳಕೆಯಲ್ಲಿರುವ ಈ ಭಾಷೆಗೆ ಈ ಜಿಲ್ಲೆಗಳಲ್ಲೂ ಮತ್ತೆ ಒಳ ಗಡಿಗಳಿವೆ. ಉಡುಪಿಗೆ ನಾಲ್ಕೈದು ಕಿಲೋ ಮೀಟರ್ ದೂರದ ಕಲ್ಯಾಣಪುರದ ಹೊಳೆಯಾಚೆಗೆ ಕುಂದಗನ್ನಡವೇ ಆಡುಭಾಷೆ, ತುಳುವಲ್ಲ. ಬಂಟರ ಸಮುದಾಯದ ಆಡುಭಾಷೆ ತುಳು ಆಗಿದ್ದರೂ ಅವರು ತಮ್ಮತಮ್ಮೊಳಗೆ ಬಳಸುವುದು ಶಾಲೆಯಲ್ಲಿ ಕಲಿತ ಅಚ್ಚ ಗ್ರಾಂಥಿಕ ಕನ್ನಡವನ್ನು.

ತುಳು ಭಾಷೆ ಸ್ವಂತ ಲಿಪಿ ಹೊಂದಿ ಬಹುಕಾಲ ವಿಜೃಂಭಿಸಿದ ಶ್ರೀಮಂತ ಭಾಷೆ. ಕೇರಳದ ಮಲೆಯಾಳಿ ಲಿಪಿಯ ಹುಟ್ಟಿಗೆ ಕಾರಣವಾದದ್ದು ತುಳು ಲಿಪಿ. ಆದರೆ ಕಾಲಕ್ರಮೇಣ ತುಳು ಲಿಪಿ ಜನಬಳಕೆಯಿಂದ ಮರೆಯಾಗಿ ಇಂದು ಲಿಪಿಯೇ ಇಲ್ಲದ ಭಾಷೆ ಎಂಬ ಹಣೆಪಟ್ಟಿ ಹೊಂದುವ ದುರಂತಕ್ಕೆ ಗುರಿಯಾಗಿದೆ.

ತುಳು ಭಾಷೆಯ ಚಿತ್ರಗಳ ಪ್ರೇಕ್ಷಕರು ಕಾಸರಗೋಡು ಹಾಗೂ ದಕ್ಷಿಣ ಕನ್ನಡದ ಮಂಗಳೂರು ಮತ್ತು ಉಡುಪಿ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಮಾತ್ರ ಇದ್ದಾರೆ. ಹಲವಾರು ದಶಕಗಳ ಹಿಂದೆ ಉದ್ಯೋಗಾರ್ಥ ಮುಂಬಯಿಗೆ ವಲಸೆ ಹೋಗಿ ನೆಲೆಸಿರುವ ತುಳುವರಿದ್ದಾರೆ. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ತುಳು ನಾಟಕಗಳು ಮೆರೆದಂತೆ ತುಳು ಚಿತ್ರಗಳು ಮೆರೆಯಲಾಗದೆ ಸೋತಿವೆ. ನಾಟಕಗಳು ಸಿನಿಮಾಗಳಷ್ಟು ವೆಚ್ಚದ ಬಾಬಲ್ಲ ಎಂಬುದು ಇದಕ್ಕೆ ಕಾರಣವಿರಬಹುದು. ತುಳು ನಾಟಕರಂಗದ ಅನೇಕ ಪ್ರತಿಭೆಗಳೇ ತುಳು ಚಿತ್ರರಂಗದಲ್ಲೂ ಮೆರೆದಿವೆ. ಆರೂರು ಪಟ್ಟಾಭಿ, ವಿಶುಕುಮಾರ್, ಕೆ.ಎನ್.ಟೈಲರ್, ರಿಚರ್ಡ್ ಕ್ಯಾಸ್ಟಲಿನೋ ಮುಂತಾದ ಅನೇಕ ಪ್ರತಿಭಾವಂತರು ತುಳು ಚಿತ್ರರಂಗವನ್ನು ಶ್ರೀಮಂತಗೊಳಿಸಿದ್ದಾರೆ.

೧೯-೦೨-೧೯೭೧ರಿಂದ ೩೧-೦೮-೨೦೦೦ದವರೆಗಿನ ಅವಧಿಯಲ್ಲಿ ತೆರೆಕಂಡಿರುವ ೩೦ ತುಳು ಚಲನಚಿತ್ರಗಳು:

೧) ಎನ್ನತಂಗಡಿ, ೨) ದಾರದ ಬುಡದಿ, ೩) ಪಗೆತ ಪುಗೆ, ೪) ಬಿಸತ್ತಿ ಬಾಬು, ೫) ಕೋಟಿ ಚೆನ್ನಯ, ೬) ಕಾಸ್‌ದಾಯೆ ಕಂಡನೆ, ೭) ಉಡಲ್ದ ತುಡರ್, ೮) ಯಾನ್ ಸನ್ಯಾಸಿ ಆಪೆ, ೯) ಬಿಯ್ಯ ಮಲ್ಲಿಗೆ, ೧೦) ಯೇರ್ ಮಲ್ತಿನ ತಪ್ಪು, ೧೧) ಸಾವಿರಡೊರ್ತಿ ಸಾವಿತ್ರಿ, ೧೨) ಇಂಕ್ವಿಲಾಬ್ ಜಿಂದಾಬಾದ್, ೧೩) ತುಳುನಾಡ ಸಿರಿ , ೧೪) ಸಂಗಮ ಸಾಕ್ಷಿ, ೧೫) ನ್ಯಾಯೊಗಾದ್ ಎನ್ನ ಬದ್ಕ್, ೧೬) ಬೊಳ್ಳಿ ದೋಟ, ೧೭) ಕರಿಯಣೆ ಕಟ್ಟಂದಿ ಕಂಡನೆ, ೧೮) ಭಾಗ್ಯವಂತೆದಿ, ೧೯) ಬದ್ಕರೆ ಬುಡ್ಲೆ, ೨೦) ದಾರೆದ ಸೀರೆ, ೨೧) ರಾತ್ರಿ ಪಗೆಲ್, ೨೨) ಪೆಟ್ಟಾಯಿ ಪಿಲಿ, ೨೩) ಬದ್ಕೊಂಜಿ ಕಬಿತೆ, ೨೪) ಸತ್ಯ ಓಲುಂಡು ?, ೨೫) ಬಂಗಾರ್ ಪಟ್ಲೇರ್, ೨೬) ಬದ್ಕ್‌ದ ಬಿಲೆ, ೨೭) ಸೆಪ್ಟೆಂಬರ್ ೮, ೨೮) ಕಾಲ, ೨೯) ಮಾರಿಬಲೆ, ೩೦) ಒಂತೆ ಅಡ್ಜಸ್ಟ್ ಮಲ್ಪಿ



(ಚಿತ್ರ ೭) 'ದಾರದ ಬುಡೆದಿ' ಚಿತ್ರದಲ್ಲಿ ಭವಾನಿ ಶಂಕರ್

ಮಂಗಳೂರಿನ ಜ್ಯೋತಿ ಚಿತ್ರಮಂದಿರದಲ್ಲಿ ೧೯೭೧ರ ಫೆಬ್ರವರಿ ೧೯ರಂದು ಮೊದಲ ತುಳು ಚಿತ್ರ 'ಎನ್ನತಂಗಡಿ' ಬಿಡುಗಡೆಯಾಯಿತು. ಕನ್ನಡ ಚಿತ್ರ ನಿರ್ಮಾಪಕ-ನಿರ್ದೇಶಕ-ನಟ ಎಸ್.ಆರ್.ರಾಜನ್ ಈ ಚಿತ್ರದ ನಿರ್ಮಾಪಕ-ನಿರ್ದೇಶಕ. ಪಂಢರಿಬಾಯಿ, ಎಸ್.ಆರ್.ರಾಜನ್, ಆನಂದಶೇಖರ್, ಲೋಕಯ್ಯಶೆಟ್ಟಿ ಮುಂತಾದವರು ಅಭಿನಯಿಸಿದ್ದರು. ಬೆಳ್ಳಿತೆರೆಯಲ್ಲಿ ಮೊದಲ ಬಾರಿಗೆ ತುಳು ಭಾಷೆಯನ್ನು ಕೇಳುವ ರೋಮಾಂಚಕ ಅನುಭವ ನೀಡಿದ ಈ ಚಿತ್ರವನ್ನು ತುಳು ಭಾಷಾಭಿಮಾನಿಗಳು ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಎಸ್.ಆರ್.ರಾಜನ್ ಅವರು 'ಎನ್ನತಂಗಡಿ' ತುಳು ಚಿತ್ರದ ನಿರ್ಮಾಣ-ನಿರ್ದೇಶನಕ್ಕೆ ಕೈ ಹಾಕಿದುದು ೧೯೭೦ರಲ್ಲಿ. ಆದರೆ ಇದಕ್ಕ ಸ್ವಲ್ಪ ಮೊದಲೇ ಆರೂರು ಪಟ್ಟಾಭಿಯವರು 'ದಾರೆದ ಬುಡೆದಿ' ತುಳು ಚಿತ್ರದ ನಿರ್ದೇಶನಕ್ಕೆ ತೊಡಗಿದ್ದರು. ಆದರೆ 'ಎನ್ನತಂಗಡಿ' ಮೊದಲು ಬಿಡುಗಡೆಯಾಗಿ ತುಳು ಭಾಷೆಯ ಪ್ರಥಮ ಚಿತ್ರವೆನಿಸಿತು. 'ದಾರೆದ ಬುಡೆದಿ' ದ್ವಿತೀಯ ತುಳು ಚಿತ್ರವಾಯಿತು. ತುಳು ಮನೆಮಾತಾಗಿಲ್ಲದ ಎಸ್.ಆರ್.ರಾಜನ್ ಮೊದಲ ತುಳು ಚಿತ್ರದ ನಿರ್ಮಾಪಕ-ನಿರ್ದೇಶಕರೆನಿಸಿದರು.

ಆ ವೇಳೆಗೆ ತುಳು ರಂಗಭೂಮಿಯಲ್ಲಿ ಪ್ರಸಿದ್ಧರಾಗಿದ್ದ ಕೆ.ಎನ್.ಟೈಲರ್ ತುಳು ಚಿತ್ರರಂಗವನ್ನು ಪ್ರವೇಶಿಸಿದ್ದರು. 'ದಾರೆದ ಬುಡೆದಿ' ಚಿತ್ರ ನಿರ್ಮಾಣ ನಡೆಸಿದ್ದರು. ತುಳುನಾಡವರೇ ಆದ ಕನ್ನಡ ಚಿತ್ರ ನಿರ್ದೇಶಕ ಆರೂರು ಪಟ್ಟಾಭಿ ನಿರ್ದೇಶಕರು. ಕೆ.ಎನ್.ಟೈಲರ್, ಲೀಲಾವತಿ, ಸೋಮಶೇಖರ್, ನಾರಾಯಣ ಪುತ್ರನ್, ರಾಮಚಂದ್ರ ಕೋಳ್ಯೂರು ಮುಂತಾದವರು ಅಭಿನಯಿಸಿದರು. ರೂಪವಾಣಿ ಟಾಕೀಸ್‌ನಲ್ಲಿ ದಿನವಹಿ ಐದು ಪ್ರದರ್ಶನ ಕಂಡು ಚಿತ್ರ ಪ್ರಚಂಡ ಯಶಸ್ಸು ಪಡೆಯಿತು. ಇದೇ ಚಿತ್ರವನ್ನು ಕನ್ನಡದಲ್ಲಿ 'ಧರ್ಮಪತ್ನಿ' ಎಂಬ ಹೆಸರಿನಲ್ಲಿ ನಿರ್ಮಿಸಲಾಯಿತು.

ಆನಂದಶೇಖರ್, ಕೆ.ಎಸ್.ಮಹಾಬಲಶೆಟ್ಟಿ ಅವರು ಆರೂರು ಪಟ್ಟಾಭಿ ನಿರ್ದೇಶನದಲ್ಲಿ 'ಪಗೆತ ಪುಗೆ' ಚಿತ್ರ ನಿರ್ಮಿಸಿದರು. ಇದು ಸೂರ್ಯನಾರಾಯಣ ಚಡಗರ ಕನ್ನಡ ಕಾದಂಬರಿ ಆಧಾರಿತ ಚಿತ್ರ. ಈವರೆಗೆ ತುಳುವಿನಲ್ಲಿ ಕಾದಂಬರಿ ಆಧಾರಿತವಾದ ಏಕೈಕ ಚಿತ್ರ ಇದು. ಆನಂದಶೇಖರ್, ಕೆ.ಎನ್.ಟೈಲರ್, ಆನಂದ ಗಾಣಿಗ, ಲೀಲಾವತಿ, ಶಶಿಕಲಾ ಅಭಿನಯಿಸಿದ ಈ ಚಿತ್ರ ೧೯೭೨ನೇ ಮಾರ್ಚ್‌ನಲ್ಲಿ ಬಿಡುಗಡೆಯಾಯಿತು.

ಅದೇ ವರ್ಷ ರಮಾನಂದ ಚೂರ್ಯರ ನಾಟಕ ಆಧಾರಿತ 'ಬಿಸತ್ತಿ ಬಾಬು' ಚಿತ್ರ ಬಿಡುಗಡೆಯಾಯಿತು. ಎಂ.ವೈ.ಕೋಲಾ ನಿರ್ಮಾಪಕರು. ಆರೂರು ಪಟ್ಟಾಭಿ ನಿರ್ದೇಶಕರು. ಚಿತ್ರಕಥೆ, ಸಂಭಾಷಣೆ, ಗೀತರಚನೆ ಮತ್ತು ನಟನೆ ಕೆ.ಎನ್.ಟೈಲರ್‌ರದು. ಲೀಲಾವತಿ, ಹೇಮಲತಾ, ಶಶಿಕಲಾ, ರಾಮಚಂದ್ರ ಕೋಳ್ಯೂರು ಇವರು ಭೂಮಿಕೆಯಲ್ಲಿದ್ದರು. ಜ್ಯೋತಿ ಟಾಕೀಸಿನಲ್ಲಿ ದಾಖಲೆಯ ೭೭ ದಿನಗಳ ಪ್ರದರ್ಶನ. ಈ ಸಮಾರಂಭದಲ್ಲಿ ಡಾ|ರಾಜಕುಮಾರ್ ಮುಖ್ಯ ಅತಿಥಿಯಾಗಿದ್ದರು. ರಾಜ್ಯ ಸರ್ಕಾರದಿಂದ ತೃತೀಯ ಪ್ರಶಸ್ತಿ ಪಡೆದ ಈ ಚಿತ್ರ ತುಳು ಚಲನಚಿತ್ರರಂಗದಲ್ಲಿ ವಿನೂತನ ಅಧ್ಯಾಯ ಬರೆಯಿತು.

೧೯೭೩ರ ಏಪ್ರಿಲ್ ೪ರಂದು 'ಉಡಲ್ದ ತುಡರ್' ಚಿತ್ರ ಬಿಡುಗಡೆಯಾಯಿತು. ಎಂ.ಸೀತಾರಾಮ ಕುಲಾಲ್‌ರ ನಾಟಕದ ಆಧಾರ ಈ ಚಿತ್ರದ ನಿರ್ದೇಶಕರು ವಾಸುದೇವನ್. ಶಮ್ಮೀಮ್ ಮತ್ತು ಅನ್ವರ್ ಬೇಗಂ ನಿರ್ಮಾಪಕರು.

ಇದೇ ವೇಳೆ ಸಾಹಿತಿ-ನಿರ್ದೇಶಕ ವಿಶುಕುಮಾರ್ ತುಳುನಾಡಿನ ವೀರಪುರುಷರ ಕಥೆಯ 'ಕೋಟಿ ಚೆನ್ನಯ' ಚಿತ್ರ ನಿರ್ದೇಶಿಸಿದರು. ಮುದು ಸುವರ್ಣ ನಿರ್ಮಾಪಕರು. ತುಳು ಚಿತ್ರರಂಗದಲ್ಲಿ ಇನ್ನೊಂದು ಹೊಸ ಅಧ್ಯಾಯ. ಸುಭಾಷ್, ವಾಮನ್, ಕಲ್ಪನಾ, ಲೋಕಯ್ಯಶೆಟ್ಟಿ, ಆನಂದ ಗಾಣಿಗ, ಕುದ್ಯಾಡಿ ವಿಶ್ವನಾಥ ರೈ, ಬಿ.ಟಿ.ಎಸ್.ಕುಲಾಲ್, ಮಂಜುನಾಥ, ಶಾಲಿವಾಹನ ಮುಂತಾದವರು ಅಭಿನಯಿಸಿದರು. ಸಾಹಸ ಸಂಯೋಜಕ ಫೈಟರ್‌ಶೆಟ್ಟಿ



(ಚಿತ್ರ ೮) 'ಬಿಸತ್ತಿ ಬಾಬು' ಚಿತ್ರದಲ್ಲಿ ಬಾಲಕೃಷ್ಣ ಕದ್ರಿ, ಸೋಮಶೇಖರ್ ಮತ್ತು ಲೀಲಾವತಿ

ಅವರಿಂದ ಅವಿಸ್ಮರಣೀಯ ಅಭಿನಯ. ಅಮೃತ ಸೋಮೇಶ್ವರ, ವಿವೇಕ ರೈ ಹಾಗೂ ವಿಶುಕುಮಾರ್ ರಚಿಸಿ, ಪಿ.ಬಿ.ಶ್ರೀನಿವಾಸ್ ಮತ್ತು ಎಸ್.ಜಾನಕಿ ಹಾಡಿರುವ ಗೀತೆಗಳು ಹಾಗೂ ವಿಜಯಭಾಸ್ಕರ್‌ರ ಸಂಯೋಜನೆಯ ಸಂಗೀತ ಇಂದಿಗೂ ಜನಪ್ರಿಯ. ಜ್ಯೋತಿ ಟಾಕೀಸ್‌ನಲ್ಲಿ ೧೯೭೩ರ ಮಾರ್ಚ್ ೧೫ರಂದು ಬಿಡುಗಡೆ. ೧೭೫ ದಿನಗಳ ಸಾರ್ವಕಾಲಿಕ ದಾಖಲೆಯ ಪ್ರದರ್ಶನ. ರಾಜ್ಯ ಸರ್ಕಾರದ ೫ನೇ ಪ್ರಶಸ್ತಿ. ತುಳುನಾಡಿನ ಜಾನಪದ ಸಂಪದ ಹೇರಳ. ಆದರೆ 'ಕೋಟಿ ಚೆನ್ನಯ' ಮತ್ತು 'ತುಳುನಾಡ ಸಿರಿ' ಚಿತ್ರಗಳನ್ನು ಬಿಟ್ಟರೆ ತುಳು ಚಿತ್ರನಿರ್ಮಾಪಕರ ದೃಷ್ಟಿ ಆ ಸಂಪದದತ್ತ ಹರಿದಂತೆ ಕಾಣುವುದಿಲ್ಲ.

ನಂತರ ಆನಂದ ಶೇಖರ್ ನಿರ್ಮಾಣದ ಕೆ.ಎನ್.ಟೈಲರ್ ಅವರ 'ಕಾಸ್‌ದಾಯೆ ಕಂಡನೆ' ಹಾಗೂ ಎ.ವಿಶ್ವನಾಥರ ನಿರ್ಮಾಣವಾದ ಕೆ.ಎನ್.ಟೈಲರ್ ಅವರ 'ಯಾನ್ ಸನ್ಯಾಸಿ ಆಪೆ' ಎರಡೂ ಚಿತ್ರಗಳನ್ನು ಗೀತಪ್ರಿಯ ನಿರ್ದೇಶಿಸಿದರು. ಜಯಮಾಲಾ ಅವರು ಈ ಚಿತ್ರಗಳ ಮೂಲಕ ಚಿತ್ರರಂಗ ಪ್ರವೇಶಿಸಿದರು. ೧೯೭೪ರ ಫೆಬ್ರವರಿ ೧೫ರಂದು ಬಿಡುಗಡೆಯಾದ 'ಪಿರ್ ಮಲ್ತಿನ ತಪ್ಪು' ಚಿತ್ರದ ಮೂಲಕ ಕೆ.ಎನ್.ಟೈಲರ್ ನಿರ್ದೇಶಕರಾದರು. ಅದೇ ವರ್ಷ ಅಕ್ಟೋಬರ್ ನಲ್ಲಿ ಡಾ। ಸಂಜೀವ ದಂಡಕೇರಿ ಅವರ ನಾಟಕ 'ಬಯ್ಯಮಲ್ಲಿಗೆ' ಆರೂರು ಪಟ್ಟಾಭಿ ನಿರ್ದೇಶನದಲ್ಲಿ ಯಶಸ್ವೀ ಚಲನಚಿತ್ರವಾಗಿ ಬಿಡುಗಡೆಯಾಯಿತು. ಡಾ।ದಂಡಕೇರಿ, ಪಂಢರಿಬಾಯಿ, ಎಂ.ಎನ್.ಲಕ್ಷ್ಮೀದೇವಿ. ಜಯಮಾಲಾ, ರಾಮಣ್ಣ ರೈ, ಜೆ.ರವೀಂದ್ರ ಮುಂತಾದವರು ಅಭಿನಯಿಸಿದರು. ಸಂಭಾಷಣೆ: ಚಂದ್ರಶೇಖರ ಕುಕ್ಕಿಕಟ್ಟೆ.

ಹೀಗೆ ನಾಲ್ಕು ವರ್ಷಗಳಲ್ಲಿ ೧೦ ಚಿತ್ರಗಳ ನಿರ್ಮಾಣವಾದರೂ ಮುಂದಿನ ಚಿತ್ರ ತೆರೆ ಕಂಡಿದ್ದು ಮತ್ತೆ ೨ ವರ್ಷಗಳ ನಂತರ ೧೯೭೭ನೇ ಆಗಸ್ಟ್ ೧೫ರಂದು ಗೀತಪ್ರಿಯ ನಿರ್ದೇಶನದಲ್ಲಿ ಕೆ.ಎನ್.ಟೈಲರ್ ನಿರ್ಮಿಸಿದ 'ಸಾವಿರದೊರ್ತಿ ಸಾವಿತ್ರಿ', ಬಳಿಕ ದೊಡ್ಡಣ್ಣಶೆಟ್ಟಿ, ಬಿ.ಎಸ್.ರಾವ್ ನಿರ್ಮಿಸಿದ 'ಇಂಕ್ವಿಲಾಬ್ ಜಿಂದಾಬಾದ್' ಚಿತ್ರಗಳು ತೆರೆಕಂಡವು.

ತುಳು ಜನಪದ ಕಥಾನಕ 'ತುಳುನಾಡ ಸಿರಿ'ಯನ್ನು ಕೆ.ಎನ್.ಟೈಲರ್ ನಿರ್ದೇಶಿಸಿದರು. ಕೆ.ಜಿ.ಶೆಟ್ಟಿ ಕಡಂದಲೆ ಅವರ ಕಥೆ. ದಯಾನಂದ ಗರೋಟಿ ನಿರ್ಮಾಪಕರು. ಮುಂದಿನ ಚಿತ್ರ 'ಬೊಳ್ಳಿದೋಟ'. ಆರೂರು ಪಟ್ಟಾಭಿ ನಿರ್ದೇಶನವಿದ್ದ ಈ ಚಿತ್ರವನ್ನು ಡಾ।ದಂಡಕೇರಿ ನಿರ್ಮಿಸಿದರು.

ಕೆ.ವಸಂತ ಬಂಗೇರಾ ನಿರ್ಮಿಸಿದ 'ಸಂಗಮ ಸಾಕ್ಷಿ' ಚಿತ್ರವನ್ನು ಸುಂದರ ಕೃಷ್ಣ ಅರಸ್ ನಿರ್ದೇಶಿಸಿದರು. ಅಮೃತ ಸೋಮೇಶ್ವರ ಗೀತೆಗಳನ್ನು ರಚಿಸಿದರು.

ಈವರೆಗೆ ತುಳು ಚಿತ್ರರಂಗದಲ್ಲಿ ತಯಾರಾದ ಎಲ್ಲ ಚಿತ್ರಗಳೂ ಕಪ್ಪುಬಿಳುಪು ಚಿತ್ರಗಳಾಗಿದ್ದವು. ೧೯೭೮ರಲ್ಲಿ ಮೊದಲ ತುಳು ವರ್ಣ ಚಿತ್ರವಾಗಿ 'ಕರಿಯಣಿ ಕಟ್ಟಂದಿ ಕಂಡನೆ' ಬಿಡುಗಡೆಯಾಯಿತು. ಆರೂರು ಪಟ್ಟಾಭಿ ನಿರ್ದೇಶಕರು. ಅವರ ಅಣ್ಣ ಆರೂರು ಭೀಮರಾವ್ ನಿರ್ಮಾಪಕರು. ರಾಮಣ್ಣ ರೈ ಅವರ ಸಂಭಾಷಣೆಯಿದ್ದ ಈ ಚಿತ್ರದ್ದು ೧೨ ವಾರಗಳ ಪ್ರದರ್ಶನದ ಯಶಸ್ಸು. ಇದೇ ಚಿತ್ರವನ್ನು ಏಕಕಾಲದಲ್ಲಿ ಕನ್ನಡದಲ್ಲಿಯೂ ನಿರ್ಮಿಸಲಾಯಿತು.

ಮುಂದಿನ ತುಳು ಚಿತ್ರ ಚಂದ್ರಶೇಖರ್ ಕುಕ್ಕಿಕಟ್ಟೆ ನಿರ್ದೇಶಿಸಿದ 'ನ್ಯಾಯೊಗಾದ್ ಎನ್ನ ಬದ್‌ಕ್' ಡಾ।ರಿಚರ್ಡ್ ಕ್ಯಾಸ್ಟಲಿನೋ ನಿರ್ಮಾಪಕರು. ಅಶೋಕ್-ಚರಣ್ ರಾಗ ಸಂಯೋಜಕರು. ಎರಡು ವರ್ಷಗಳ ನಂತರ 'ಭಾಗ್ಯವಂತೆದಿ' ಚಿತ್ರದ ಮೂಲಕ ಸ್ಥಗಿತಗೊಂಡಿದ್ದ ತುಳು ಚಿತ್ರರಂಗಕ್ಕೆ ಮತ್ತೆ ಚಾಲನೆ. ಎಂಟು ಚಿತ್ರಗಳ ವಿತರಕರಾಗಿ, ಚಿತ್ರ ನಿರ್ಮಾಣಕ್ಕೆ ಸಹಾಯಮಾಡಿದ್ದ ಟಿ.ಎ.ಶ್ರೀನಿವಾಸ್ ಈ ಚಿತ್ರದ ನಿರ್ಮಾಪಕರು. ಆರೂರು ಪಟ್ಟಾಭಿಯವರು ನಿರ್ದೇಶಕರು. ಕೆ.ಎನ್.ಟೈಲರ್ ಅವರ ಕತೆ ಹಾಗೂ ಅಭಿನಯ. ಸದಾಶಿವ ಸಾಲಿಯಾನ್ ಅಭಿನಯಿಸಿದ ಮೊದಲ ಚಿತ್ರ. ಎಂಟು ವಾರ ಪ್ರದರ್ಶನ ಕಂಡ ಈ ಚಿತ್ರಕ್ಕೆ ರಾಜ್ಯ ಸರ್ಕಾರದ ವಿಶೇಷ ಪ್ರಶಸ್ತಿ.

೧೯೮೩ರಲ್ಲಿ ಜಮೀನ್ದಾರಿಕೆಯ ಸಮಸ್ಯೆಗಳನ್ನು ಕುರಿತಾದ 'ಬದ್ಕೆರೆ ಬುಡ್ಲೆ' ಬಿಡುಗಡೆಯಾಯಿತು. ಆರೂರು ಪಟ್ಟಾಭಿ ನಿರ್ದೇಶನ. ರಾಮಣ್ಣ ರೈ ಸಂಭಾಷಣೆ. ಮುಂಬಯಿ ಚಿತ್ರರಂಗದ ಪ್ರಸಿದ್ಧ ಸಾಹಸ ಸಂಯೋಜಕರಾದ ರಾಮ್‌ಶೆಟ್ಟಿ ನಿರ್ಮಾಪಕರು. ಈ ಚಿತ್ರದ ಯಶಸ್ಸಿನ ಸ್ಫೂರ್ತಿಯಿಂದ ರಾಮ್‌ಶೆಟ್ಟಿಯವರು ೧೯೮೪ರಲ್ಲಿ ನಿರ್ಮಿಸಿ, ನಿರ್ದೇಶಿಸಿದ ಚಿತ್ರ 'ದಾರೆದ ಸೀರೆ'. ಈ ಚಿತ್ರದ ಸಂಭಾಷಣೆ ಹಾಗೂ ಗೀತೆಗಳನ್ನು ರಚಿಸಿದವರು ಮಚ್ಚೇಂದ್ರನಾಥ್ ಪಾಂಡೇಶ್ವರ್.

೧೯೮೭ರಲ್ಲಿ ಸದಾಶಿವ ಸಾಲಿಯಾನ್ 'ಪೆಟ್ಟಾಯಿ ಪಿಲಿ' ಚಿತ್ರ ನಿರ್ಮಿಸಿದರು. ರವಿ ಅಂಚನ್ ನಿರ್ದೇಶಿಸಿದರು. ಚಿತ್ರಕಥೆ, ಸಂಭಾಷಣೆ, ಗೀತೆ: ಮಚ್ಚೇಂದ್ರನಾಥ್ ಪಾಂಡೇಶ್ವರ್. ಮುಂದಿನ ವರ್ಷ ದಾಮೋದರ್ ಬಂಗೇರಾ ನಿರ್ದೇಶನದ 'ಬದ್ಕೊಂಜಿ ಕಬಿತೆ' ತೆರೆಕಂಡಿತು. ಶ್ರೀಕಾಂತ್ ನಿರ್ಮಾಪಕರು. ಗುರುಕಿರಣ್, ಕುಮುದಾ ಬಾರ್ಕೂರು ಮುಂತಾದವರು ಅಭಿನಯಿಸಿದರು.



(ಚಿತ್ರ ೯) 'ಉಡಲ್ದ ತುಡರ್' ಚಿತ್ರದಲ್ಲಿ ರವಿಶಂಕರ್



(ಚಿತ್ರ ೧೦) 'ಕೋಟಿ ಚೆನ್ನಯ' ಚಿತ್ರದಲ್ಲಿ ಭೋಜರಾಜ್ ಮತ್ತು ವಾಮನ್



(ಚಿತ್ರ ೧೧) 'ಯಾನ್ ಸನ್ಯಾಸಿ ಆಪೆ' ತುಳು ಚಿತ್ರದ ಚಿತ್ರೀಕರಣ ಸಂದರ್ಭದಲ್ಲಿ ನಿರ್ದೇಶಕ ಗೀತಪ್ರಿಯ, ಸಂಭಾಷಣೆ ಸಹಾಯಕಿ ರತ್ನಮಾಲಾ (ಜಯಮಾಲಾರ ಸಹೋದರಿ), ರಾಮಚಂದ್ರ ಕೋಳ್ಯೂರು, ಕೆ.ಎನ್.ಟೈಲರ್ ಮತ್ತು ಜಯಮಾಲಾ

ಆರೂರು ಪಟ್ಟಾಭಿ ನಿರ್ದೇಶನದ ಕೊನೆಯ ಚಿತ್ರ 'ಸತ್ಯ ಓಲುಂಡು' ೧೯೯೦ನೇ ಮಾರ್ಚಿಯಲ್ಲಿ ಬಿಡುಗಡೆಯಾಯಿತು. ದೇವದಾಸ್ ಕಾಪಿಕಾಡ್‌ರ 'ಬಲೇ ಚಾಪರ್ಕ' ಯಶಸ್ವೀ ತುಳು ನಾಟಕ ಆಧಾರಿತ. ಈ ಚಿತ್ರವನ್ನು ಸದಾಶಿವ ಸಾಲಿಯಾನ್, ಎಸ್.ಎಸ್.ಪುತ್ರನ್ ನಿರ್ಮಿಸಿದರು. ತುಳು ಭಾಷೆಯಲ್ಲಿ ಅತ್ಯಧಿಕ ಚಿತ್ರಗಳ ಸೃಷ್ಟಿಗೆ ಕಾರಣರಾದ ನಿರ್ದೇಶಕ ಆರೂರು ಪಟ್ಟಾಭಿಯವರ ನಿಧನದಿಂದಾಗಿ ತುಳು ಚಿತ್ರರಂಗಕ್ಕೆ ಭಾರೀ ಹೊಡೆತ ಬಿದ್ದಿತು ಎಂದಲ್ಲಿ ಅತಿಶಯವೇನಿಲ್ಲ. ೧೯೯೧ರಲ್ಲಿ ಕೋಡ್ಲು ರಾಮಕೃಷ್ಣ ಅವರು ಬೆಂಗಳೂರಿನ ರಘುರಾಂ, ಡಾ|ಚಂದ್ರಿಕಾ ಅವರು ನಿರ್ಮಿಸಿದ 'ರಾತ್ರಿ ಪಗೆಲ್' ಚಿತ್ರವನ್ನು ನಿರ್ದೇಶಿಸಿ ತೆರೆಗಿತ್ತರು. ಸಂಭಾಷಣೆ ಅಚ್ಚುತ ಕಲ್ಲಾಪು ಅವರದು.

೧೯೯೩ - ತುಳು ಚಿತ್ರರಂಗ ಸುವರ್ಣ ಅಧ್ಯಾಯವನ್ನು ದಾಖಲಿಸಿತು. ಡಾ|ರಿಚರ್ಡ್ ಕ್ಯಾಸ್ಟಲಿನೋ ಅವರು ೧೮ ಲಕ್ಷ ರೂ.ಗಳ ಭಾರೀ ವೆಚ್ಚದಲ್ಲಿ 'ಬಂಗಾರ್ ಪಟ್ಲೇರ್' ಈಸ್ಟ್‌ಮನ್ ಕಲರ್ - ಸ್ಕೋಪ್ ತುಳು ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು. ತುಳು ಚಿತ್ರರಂಗದ ಈ ೨೫ನೇ ಚಿತ್ರ ಮಂಗಳೂರಿನಲ್ಲಿ ೧೦೫ ದಿನ ಪ್ರದರ್ಶನಗೊಂಡಿತು. ಪ್ರದರ್ಶಿತವಾದೆಡೆಯಲ್ಲೆಲ್ಲಾ ಈ ಚಿತ್ರಕ್ಕೆ ಜನಮನ್ನಣೆ ಜೊತೆಗೆ ರಾಜ್ಯ ಸರ್ಕಾರದ ಪ್ರಶಸ್ತಿ ಹಾಗೂ ರಾಷ್ಟ್ರ ಪ್ರಶಸ್ತಿಗಳಲ್ಲದೆ, ಕಲ್ಕತ್ತದಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋದ್ಯಮದ ಮಾರುಕಟ್ಟೆ ವಿಭಾಗದಲ್ಲಿಯೂ ಈ ಚಿತ್ರಕ್ಕೆ ಪ್ರದರ್ಶನಾವಕಾಶ. ನಾರಾಯಣ ಶೆಟ್ಟಿಯವರ 'ಸತ್ಯ ಬತ್ತಲೆ' ನಾಟಕದ ಆಧಾರಿತ ಚಿತ್ರ ರಾಮಣ್ಣ ರೈ ಸಂಭಾಷಣೆ, ಸುಂದರನಾಥ ಸುವರ್ಣರ ಛಾಯಾಗ್ರಹಣದ ಈ ಚಿತ್ರದ ಪ್ರಧಾನ ಭೂಮಿಕೆಯಲ್ಲಿ ಸುಧಾರಾಣಿ, ವಾಮನ ರಾಜ್, ಸರೋಜಿನಿ ಶೆಟ್ಟಿ, ಕಾಸರಗೋಡು ಚಿನ್ನಾ, ರಾಮಣ್ಣ ರೈ, ರೋಹಿದಾಸ್ ಕದ್ರಿ ನಟಿಸಿದರು.

'ಬಂಗಾರ್ ಪಟ್ಲೇರ್' ಯಶಸ್ಸಿನಿಂದ ಉತ್ತೇಜಿತರಾದ ಡಾ|ರಿಚರ್ಡ್ ಕ್ಯಾಸ್ಟಲಿನೋ ಅವರಿಂದ ೨೪ ತಾಸುಗಳಲ್ಲಿ ಚಿತ್ರ ನಿರ್ಮಿಸಿ ಗಿನ್ನಿಸ್ ದಾಖಲೆ ಸೇರುವ ಪ್ರಯತ್ನ. 'ಸೆಪ್ಟೆಂಬರ್ ೮' ಚಿತ್ರದ ಹೆಸರು. ಖ್ಯಾತ ಸಾಹಿತಿ ಡಾ|ಶಿವರಾಮ ಕಾರಂತರು ಅಭಿನಯಿಸಿದ್ದು ವಿಶೇಷ. ಶ್ರುತಿ, ಸುನೀಲ್, ಉಮಾಶ್ರೀ, ಗೀತಾ, ರಮೇಶ್‌ಭಟ್, ರೋಹಿದಾಸ್ ಕದ್ರಿ, ಆನಂದ ಬೋಳಾರ ಅಭಿನಯಿಸಿದರು. ಪ್ರಯೋಗ ಪ್ರಯತ್ನ ಉಲ್ಲೇಖನೀಯವೆನಿಸಿತು. ಮುಂದಿನ ಚಿತ್ರ ಟಿ.ಎ.ಶ್ರೀನಿವಾಸ್ ರ ನಿರ್ಮಾಣವಾದ 'ಬದ್‌ಕ್‌ದ ಬಿಲೆ'. ಗಣೇಶಪ್ರಿಯ ನಿರ್ದೇಶಿಸಿದರು.

ಕನ್ನಡ ಚಿತ್ರ ನಿರ್ಮಾಪಕ ಎ.ಆರ್.ಅಶ್ವತ್ಥನಾರಾಯಣರಾವ್ ನಿರ್ಮಿಸಿದ ತುಳು ಚಿತ್ರ 'ಕಾಲ'. ರಾಜ್ ಬಲ್ಲಾಳ್ ನಿರ್ದೇಶಿಸಿದರು.

ಸ್ಥಳೀಯ ಅಂಶಗಳನ್ನು ಗಮನದಲ್ಲಿರಿಸಿಕೊಂಡು ತಯಾರಾದ 'ಮಾರಿಬಲೆ' ಪ್ರಶಸ್ತಿ ವಿಜೇತ ತುಳು ಚಿತ್ರ. ಕೃಷ್ಣಪ್ಪ ಉಪ್ಪೂರು ನಿರ್ದೇಶಕರು. ಕಥೆ - ಚಿತ್ರಕಥೆಯೂ ಉಪ್ಪೂರರದೇ. ಕುಂಬ್ರ ರಘುನಾಥ ರೈ ನಿರ್ಮಾಪಕರು.

ಈವರೆಗಿನ ಚಿತ್ರಗಳ ಪೈಕಿ ಕೊನೆಯದಾಗಿ ೧೯೯೯ರಲ್ಲಿ ಬಿಡುಗಡೆಯಾಗಿರುವುದು 'ಒಂತೆ ಅಡ್ಜಸ್ಟ್ ಮಲ್ಪಿ'. ಪ್ರಭಾಕರ ಬ್ರಹ್ಮಾವರ ಈ ಚಿತ್ರದ ನಿರ್ದೇಶಕರು. ಕುಂಜಾಡಿ ಪ್ರೇಮನಾಥ ರೈ ನಿರ್ದೇಶಕರು - ವಿಜಯಕುಮಾರ್ ಕೊಡಿಯಾಲಬೈಲ್ ಅವರ ಕಥೆಯನ್ನು ಆಧರಿಸಿ ತಯಾರಾದ ಚಿತ್ರ.

ಈ ಮಧ್ಯೆ ಪತ್ರಕರ್ತ ಪ.ಗೋಪಾಲಕೃಷ್ಣ ಅವರು 'ಸರ್ಪಸಂಕಲೆ' ತುಳು ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು. ರಘು, ಬಾಲಕೃಷ್ಣ ಕದ್ರಿ, ರೋಹಿದಾಸ್ ಕದ್ರಿ, ವಿವೇಕಾನಂದ ತಾರಾಗಣದ ಪ್ರಮುಖರು - ಬಿ.ಬಿ.ಆಚಾರ್ಯ ಸಹ ನಿರ್ಮಾಪಕರು. ಬಿ.ರಾಮ ಕಿರೋಡಿಯನ್ ಹಾಗೂ ಪ.ಗೋಪಾಲಕೃಷ್ಣ ರಚಿಸಿದ ಈ ಚಿತ್ರದ ಹಾಡುಗಳಿಗೆ ಸಂಗೀತ ನೀಡಿದವರು ಅಶೋಕ್ - ಚರಣ್. ಪ.ಗೋಪಾಲಕೃಷ್ಣರ ನಿಧನಾನಂತರ ಈ ಚಿತ್ರ ತೆರೆಕಂಡಿತೇ ಇಲ್ಲವೇ ಎಂಬ ಮಾಹಿತಿಯೂ ಲಭ್ಯವಿಲ್ಲ.

ತುಳು ಭಾಷೆಯಲ್ಲಿ ಹೆಚ್ಚಿನ ಸಂಖ್ಯೆಯ ಚಿತ್ರವನ್ನು ನಿರ್ದೇಶಿಸಿದ ಆರೂರು ಪಟ್ಟಾಭಿಯವರ ನಿಧನಾನಂತರ, ಹಲಕೆಲವು ಉತ್ಸಾಹಿಗಳು ತುಳು ಚಿತ್ರ ತಯಾರಿಕೆಯಲ್ಲಿ ಆಸಕ್ತಿ ವಹಿಸಿದರಾದರೂ ಗಮನಾರ್ಹ ಪ್ರಗತಿ ಕಾಣಬರದಿರುವುದು ಸ್ಪಷ್ಟಗೋಚರ. ಕನ್ನಡದ ಜನಪ್ರಿಯ ಕಲಾವಿದರನೇಕರು ತುಳು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಲೀಲಾವತಿ, ಕಲ್ಪನಾ, ಬಿ.ವಿ.ರಾಧಾ, ಮಂಜುಳಾ, ಪ್ರಮೀಳಾ ಜೋಷಾಯ್, ಅಭಿನಯ, ಸುಧಾರಾಣಿ, ಗೀತಾ, ಶ್ರುತಿ, ಪಂಢರಿಬಾಯಿ, ಸುಮಿತ್ರಾ, ಉಮಾಶ್ರೀ, ರಮೇಶ್‌ಭಟ್, ಸುನಿಲ್ ಇವರು ಪ್ರಮುಖರು. ಹಾಗೆಯೇ ಗೀತಪ್ರಿಯ, ಸುಂದರಕೃಷ್ಣ ಅರಸ್, ಕೋಡ್ಲು ರಾಮಕೃಷ್ಣ ನಿರ್ದೇಶಕರಲ್ಲಿ ಪ್ರಮುಖರು. ತುಳು ಚಿತ್ರರಂಗದ ಪ್ರಗತಿಗೆ ಸ್ಥಳೀಯ ಪ್ರತಿಭಾವಂತರಾದ ಕೆ.ಎನ್.ಟೈಲರ್, ಡಾ| ರಿಚರ್ಡ್



(ಚಿತ್ರ ೧೨) 'ಯಾನ್ ಸನ್ಯಾಸಿ ಆಪೆ' ಚಿತ್ರದಲ್ಲಿ ಕೆ.ಎನ್.ಟೈಲರ್ ಮತ್ತು ಬಿ.ವಿ.ರಾಧಾ



(ಚಿತ್ರ ೧೩) 'ಬಂಗಾರ್ ಪಟ್ಲೇರ್' ಚಿತ್ರದಲ್ಲಿ ಸುಧಾರಾಣಿ, ಸರೋಜಿನಿ ಶೆಟ್ಟಿ, ರಿಚರ್ಡ್ ಕ್ಯಾಸ್ಟಲಿನೊ

ಕ್ಯಾಸ್ಟಲಿನೋ, ವಿಶುಕುಮಾರ್, ಸದಾಶಿವ ಸಾಲಿಯಾನ್, ಆನಂದಶೇಖರ್, ಮುಂತಾದ ಅನೇಕರು ಶ್ರಮಿಸಿರುವರು. ತುಳು ಭಾಷೆಯ ಚಿತ್ರಗಳ ಮೂಲಕ ಚಿತ್ರರಂಗ ಪ್ರವೇಶಿಸಿದ ನಟಿ ಜಯಮಾಲಾ ಕನ್ನಡ ಚಿತ್ರಗಳ ನಾಯಕಿಯಾಗಿ ಜನಪ್ರಿಯರಾಗಿ, 'ತಾಯಿಸಾಹೇಬ' ಕನ್ನಡ ಚಿತ್ರದ ನಿರ್ಮಾಪಕಿಯಾಗಿ ರಾಷ್ಟ್ರಪ್ರಶಸ್ತಿ ಪಡೆದುದು ಗಮನಾರ್ಹ. ಡಾ|ಶಿವರಾಮ ಕಾರಂತರು ಡಾ|ರಿಚರ್ಡ್ ಕ್ಯಾಸ್ಟಲಿನೋ ಅವರ 'ಸೆಪ್ಟೆಂಬರ್ ೮' ಚಿತ್ರದಲ್ಲಿ ನಟಿಸುವ ಮೂಲಕ ತುಳು ಚಿತ್ರರಂಗಕ್ಕೆ ವಿಶೇಷ ಘನತೆಯನ್ನು ತಂದುಕೊಟ್ಟಿದ್ದು ವಿಶೇಷ.

ಆರಂಭದಲ್ಲಿನ ತುಳು ಚಿತ್ರಗಳೆಲ್ಲವೂ ಕಪ್ಪು-ಬಿಳುಪು ಚಿತ್ರಗಳೇ ಆಗಿದ್ದವು. ಆರ್ಥಿಕವಾಗಿ ಯಾವ ಚೈತನ್ಯವೂ ಇಲ್ಲದ ಆ ಕಾಲದಲ್ಲಿ ತುಳು ಭಾಷೆಯಲ್ಲಿ ಚಿತ್ರನಿರ್ಮಾಣ ಮಾಡುವುದೇ ದೊಡ್ಡ ಸಾಹಸವಾಗಿತ್ತು. ಜೊತೆಗೆ ಮಾರುಕಟ್ಟೆಯೇ ಇದ್ದಿರಲಿಲ್ಲ. ಸೀಮಿತ ಮಾರುಕಟ್ಟೆ, ಸೀಮಿತ ಭೌಗೋಳಿಕ ವ್ಯಾಪ್ತಿ, ತಾಂತ್ರಿಕ ಬಡತನ, ತುಳು ಪ್ರಾದೇಶಿಕತೆ, ಪರಂಪರೆ, ಸಂಸ್ಕೃತಿ ಮುಂತಾದ ಹತ್ತು ಹಲವು ಕಟ್ಟುಪಾಡುಗಳನ್ನು ಮೀರಿ ಹೋಗಲು ಸಾಧ್ಯವಾಗದ ಕಥಾವಸ್ತುಗಳನ್ನೇ ನಂಬಿಕೊಂಡು ಸಿನಿಮಾ ಮಾಡಬೇಕಾದ ಅನಿವಾರ್ಯತೆ ಬೇರೆ. ಇವೆಲ್ಲವನ್ನೂ ದಾಟಿ ತುಳು ಚಿತ್ರರಂಗ ಬೆಳೆಯಬೇಕಾಗಿದೆ.



(ಚಿತ್ರ ೧೪) 'ನಾಡಮಣ್ಣ ನಾಡಕೂಳ್'

ಬಾಕ್ಸಾಫೀಸ್ ದೃಷ್ಟಿಯಿಂದ ಅಲ್ಲದಿದ್ದರೂ ಜನಪ್ರಿಯತೆಯ ಅಳತೆಗೋಲಿನಲ್ಲಿ ಹೇಳುವುದಾದರೆ ಎಸ್.ಆರ್.ರಾಜನ್ ಅವರ 'ಎನ್ನತಂಗಡಿ', ಆರೂರು ಪಟ್ಟಾಭಿ ಅವರ 'ದಾರೆದ ಬುಡದಿ', ಕೆ.ಎನ್.ಟೈಲರ್ ಅವರ 'ಬಿಸತ್ತಿ ಬಾಬು' ಹಾಗೂ 'ಯಾನ್ ಸನ್ಯಾಸಿ ಆಪೆ', ವಿಶುಕುಮಾರ್ ಅವರ 'ಕೋಟಿ ಚೆನ್ನಯ', ಡಾ|ರಿಚರ್ಡ್ ಕ್ಯಾಸ್ಟಲಿನೋ ಅವರ 'ಬಂಗಾರ್ ಪಟ್ಲೇರ್' ಅತ್ಯುತ್ತಮ ಯಶಸ್ಸು ಕಂಡ ತುಳು ಚಿತ್ರಗಳಾಗಿವೆ. ಗೀತಪ್ರಿಯ ಅವರ 'ಕಾಸ್‌ದಾಯೆ ಕಂಡೆನೆ', ಸುಂದರಕೃಷ್ಣ ಅರಸ್ ನಿರ್ದೇಶನದ 'ಸಂಗಮಸಾಕ್ಷಿ', ಕೋಡ್ಲು ರಾಮಕೃಷ್ಣ ಅವರ 'ರಾತ್ರೆ ಪಗೆಲ್' ಎಂಬತ್ತರ ದಶಕದಲ್ಲಿ ತುಳುವೇತರ ಚಿತ್ರನಿರ್ದೇಶಕರು ನಿರ್ದೇಶಿಸಿದ ಯಶಸ್ವೀ ತುಳು ಚಿತ್ರಗಳೆನ್ನಬಹುದು.

ಇಷ್ಟೆಲ್ಲ ಆದರೂ ತುಳು ಚಿತ್ರರಂಗ ಇಂದು ಮತ್ತೆ ನಿಷ್ಫಲವಾಗಿದೆ. ನಿಂತ ನೀರಾಗಿದೆ. ಹಿಂದಿನ ಚಟುವಟಿಕೆ, ಉತ್ಸಾಹ, ನಿರೀಕ್ಷೆಗಳೆಲ್ಲ ಈಗ ಮತ್ತೆ ನಿರಾಶೆಯ ಮಡುವಿನಲ್ಲಿ ಹೆಪ್ಪುಗಟ್ಟಿವೆ. ಹೊಸ ತುಳು ಚಿತ್ರಗಳ ನಿರ್ಮಾಣಕ್ಕೆ ಈಗ ಯಾರೂ ಮುಂದಾಗುತ್ತಿಲ್ಲ. ತುಳು ಚಿತ್ರಗಳ ಬಗ್ಗೆ ಅಭಿಮಾನಿಗಳಲ್ಲಿನ ಸ್ವಾಭಿಮಾನದ ಕೊರತೆಯೊಂದೇ ಅದಕ್ಕೆ ಕಾರಣವಲ್ಲ. ಟಿ.ವಿ., ಕೇಬಲ್ ಟಿ.ವಿ., ಸಿ.ಡಿ. ಮುಂತಾದ ಆಧುನಿಕ ಸೌಲಭ್ಯಗಳಿಂದಾಗಿ ಮನೆಯಲ್ಲೇ ಕುಳಿತು ಮನರಂಜನೆ ಪಡೆಯಲು ಇರುವ ಅವಕಾಶಗಳೂ ಅದಕ್ಕೆ ಕಾರಣ.

ಹೊಸ ಶತಮಾನದ ಕಾಣಿಕೆಯಾಗಿ ತಯಾರಾದ 'ತುಡರ್' ತುಳು ಚಿತ್ರವು ರಾಜ್ಯಸರ್ಕಾರದ ೨೦೦೦-೨೦೦೧ನೇ ಸಾಲಿನ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿಗೆ ಪಾತ್ರವಾಗಿರುವುದು ವಿಶೇಷ. ಕೋಡ್ಲು ರಾಮಕೃಷ್ಣ ಈ ಚಿತ್ರದ ನಿರ್ದೇಶಕರು. ಈ ಪ್ರಶಸ್ತಿಯು ಸ್ಫೂರ್ತಿಯಿಂದ ಮತ್ತೆ ತುಳು ಚಿತ್ರರಂಗದಲ್ಲಿ ಹೊಸ ಉತ್ಸಾಹ ಮೂಡಬಹುದೆಂಬ ನಿರೀಕ್ಷೆಯಿದೆ. ಸೀಮಿತ ಮಾರುಕಟ್ಟೆಯ ತುಳು ಚಿತ್ರಗಳನ್ನು ಜನಪ್ರಿಯಗೊಳಿಸಿ ಮಾರುಕಟ್ಟೆಯನ್ನು ವಿಸ್ತರಿಸಿಕೊಳ್ಳುವ ಪ್ರಯತ್ನ ಸಾಗಬೇಕಾಗಿದೆ.

### ಕೊಡವ ಚಿತ್ರರಂಗ

ಕೊಡವ ಚಿತ್ರರಂಗಕ್ಕೆ ಈಗ ಮೂರನೇ ದಶಕದ ಹರೆಯ. ಬೆಳ್ಳಿ ಹಬ್ಬದ ಸಂಭ್ರಮದ ಈ ಅವಧಿಯಲ್ಲಿ ಐದು ಕೊಡವ ಚಿತ್ರಗಳು ನಿರ್ಮಾಣವಾಗಿವೆ. ಮೊದಲ ತುಳು ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿ, ನಟಿಸಿದ ಎಸ್.ಆರ್.ರಾಜನ್ ಅವರೇ ಮೊದಲ ಕೊಡವ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿ, ನಟಿಸಿದರೆನ್ನುವುದು ಉಲ್ಲೇಖನೀಯ. ೧೯೭೨ರಿಂದ ೧೯೯೯ರವರೆಗೆ ಕೊಡವ ಭಾಷೆಯಲ್ಲಿ ನಿರ್ಮಾಣವಾದ ೫ ಚಿತ್ರಗಳು: ೧) ನಾಡಮಣ್ಣ್ ನಾಡಕೂಳು, ೨) ಮಹಾವೀರ ಅಚ್ಚುನಾಯಕ, ೩) ಮಂದಾರಪೂ, ೪) ನಿರೀಕ್ಷೆ, ೫) ಬಾಳ್ ಪೊಲಂದತ್

ಎಸ್.ಆರ್.ರಾಜನ್ ಅವರು ೧೯೭೨ರಲ್ಲಿ ಮೊದಲ ಕೊಡವ ಚಿತ್ರ 'ನಾಡಮಣ್ಣ್ ನಾಡಕೂಳು' ನಿರ್ಮಿಸಿ, ನಿರ್ದೇಶಿಸಿದರು. ಜೊತೆಗೆ ಆ ಚಿತ್ರದಲ್ಲಿ ಅಭಿನಯಿಸಿದರು. ಮೊದಲ ಕೊಡವ ಚಿತ್ರ ಯಶಸ್ವಿಯಾಗಿ ಅನೇಕರಿಗೆ ಸ್ಫೂರ್ತಿ ನೀಡಿದರೂ ಆ ಭಾಷೆಯಲ್ಲಿ ಹೆಚ್ಚು ಚಿತ್ರಗಳು ನಿರ್ಮಾಣವಾಗಲಿಲ್ಲ.



(ಚಿತ್ರ ೧೫) 'ಮಂದಾರ ಪೂ'

ಸುಮಾರು ೧೯ನೆಯ ಶತಮಾನದಲ್ಲಿ ಕೊಡಗನ್ನು ಆಳಿದ ಹನ್ನೊಂದು ಮಂದಿ ಪಾಳೇಗಾರರಲ್ಲಿ ಒಬ್ಬನಾದ ಅಚ್ಚುನಾಯಕನನ್ನು ಕುರಿತಾದ 'ಮಹಾವೀರ ಅಚ್ಚುನಾಯಕ' ಕೊಡವ ಭಾಷೆಯಲ್ಲಿನ ಐತಿಹಾಸಿಕ ಚಿತ್ರ. ಜಿ.ಎಸ್.ಎ.ಈಶ್ ನಿರ್ದೇಶಿಸಿದರು. ಪ್ರಭಾಕರ ಬದ್ರಿ ಸಂಗೀತ ಸಂಯೋಜಿಸಿದರು. ಕೆ.ವಾಸುದೇವರ ಛಾಯಾಗ್ರಹಣದ ಈ ಚಿತ್ರದಲ್ಲಿ ಕೆ.ಎಸ್.ಅಶ್ವತ್ಥ್, ದೇವದಾಸ್, ಶಶಿಕಲಾ, ಚೆಂಗಪ್ಪ, ವಿಜಯಸಿಂಹ, ಮಲ್ಲಿಕಾ ಮುಂತಾದವರು ಅಭಿನಯಿಸಿದರು. ಮೈಸೂರಿನ ಪ್ರೀಮಿಯರ್ ಸ್ಟುಡಿಯೋವಿನಲ್ಲಿ ಚಿತ್ರಿತವಾಯಿತು.

ಕೊಡವ ಚಿತ್ರಸೃಷ್ಟಿಗೆ ನಾಂದಿ ಹಾಡಿದ ಎಸ್.ಆರ್.ರಾಜನ್ ನಿರ್ದೇಶಿಸಿದ ಇನ್ನೊಂದು ಚಿತ್ರ 'ಮಂದಾರಪೂ'. ಜೆಪ್ಪಿ ಚೆಂಗಪ್ಪ ಅವರ ಕಥೆ-ಸಂಭಾಷಣೆಯ ಈ ಚಿತ್ರದ ಛಾಯಾಗ್ರಹಣ ಕೆ.ಮಲ್ಲಿಕ್‌ರದು. ಸಾಧು ಸಂಗೀತ ನಿರ್ದೇಶಕರು. ಜೆಪ್ಪಿ ಚೆಂಗಪ್ಪ, ಶೈಲಾ ಬೋಪಯ್ಯ, ಡಾಲಿ, ರವಿಶಂಕರ್, ಅಂಜಲಿ, ಅಪ್ಪಚ್ಚು ಮುಂತಾದವರು ಅಭಿನಯಿಸಿದರು. ರವಿಶಂಕರ್ ನಿರ್ಮಿಸಿದ ಈ ಚಿತ್ರ ರಾಷ್ಟ್ರಪ್ರಶಸ್ತಿಗೆ ಪಾತ್ರವಾಯಿತು.

ನಾಲ್ಕನೆಯ ಚಿತ್ರ 'ನಿರೀಕ್ಷೆ'. ನಿರ್ಮಾಪಕರು ಪ್ರಸಾದ್. ಕೊಡವ ಭಾಷೆಯ ಐದನೆಯ ಚಿತ್ರ 'ಬಾಳ್ ಪೊಲಂದತ್'. ಸಿಂಗೂರ್ ಪೂವಯ್ಯ ಈ ಚಿತ್ರದ ನಿರ್ಮಾಪಕರು. ಈ ಚಿತ್ರಕ್ಕೆ ರಾಜ್ಯ ಸರ್ಕಾರದ ಪ್ರಶಸ್ತಿ. ಅಡ್ಡಂಡ ಕಾರ್ಯಪ್ಪ ಅವರ ಬಿಗುವಾದ ನಿರ್ದೇಶನ ಹಾಗೂ ಸತ್ವಪೂರ್ಣ ಕಥೆಯಿಂದಾಗಿ ಈ ಚಿತ್ರ ಯಶಸ್ವಿಯಾಯಿತು.

ಯಶಸ್ಸಿನ ಅಳತೆಗೋಲಿನಿಂದ ವಿಶ್ಲೇಷಿಸ ಹೊರಟರೆ ಕೊಡವ ಭಾಷೆಯಲ್ಲಿ ತಯಾರಾದ ಐದು ಚಿತ್ರಗಳಲ್ಲಿ ಮೂರು ಚಿತ್ರ 'ನಾಡಮಣ್ಣೇ ನಾಡಕೂಳು', 'ಮಂದಾರಪೂ' ಮತ್ತು 'ಬಾಳ್ ಪೊಲಂದತ್' ಯಶಸ್ವಿಯಾಗಿವೆ. 'ಮಂದಾರಪೂ' ಕೇಂದ್ರ ಸರ್ಕಾರದ ಪ್ರಶಸ್ತಿಯನ್ನೂ, 'ಬಾಳ್ ಪೊಲಂದತ್' ರಾಜ್ಯ ಸರ್ಕಾರದ ಪ್ರಶಸ್ತಿಯನ್ನೂ ಪಡೆದಿವೆ.

ಕೊಡವ ಭಾಷೆಯು ಚಿತ್ರರಂಗದಲ್ಲಿ ಕಳೆದ ೨೮ ವರ್ಷಗಳಲ್ಲಿ ಅಂಥ ಉತ್ಸಾಹವಾಗಲೀ, ಚಟುವಟಿಕೆಗಳಾಗಲೀ ಕಾಣಬಂದಿಲ್ಲ. ಕೇವಲ ಐದು ಚಿತ್ರಗಳನ್ನಿತ್ತ ಆ ಚಿತ್ರರಂಗ ಆಲಸ್ಯದಿಂದಿರುವಂತಿದೆ. ಕೊಡವ ಭಾಷಾ ಮಾರುಕಟ್ಟೆ ತೀರಾ ಸೀಮಿತ; ಅಲ್ಪ ಎನ್ನುವುದು ಒಂದು ಕಾರಣ. ಸಾಕಷ್ಟು ಶ್ರೀಮಂತಿಕೆ ಇದ್ದರೂ ಚಿತ್ರಸೃಷ್ಟಿಯ ಬಗ್ಗೆ ತಳೆದಿರಬಹುದಾದ ಅಸಡ್ಡೆಯೇ ಇನ್ನೊಂದು ಕಾರಣ.

ಕೊಡವರಲ್ಲದ ಎಸ್.ಆರ್.ರಾಜನ್ ಆ ಭಾಷೆಯಲ್ಲಿ ಪ್ರಥಮ ಚಿತ್ರ ನಿರ್ಮಿಸಿ, ನಂತರ ಮತ್ತೆ ಅದೇ ಭಾಷೆಯಲ್ಲಿ 'ಮಂದಾರಪೂ' ಚಿತ್ರವನ್ನು ನಿರ್ಮಿಸಿ-ನಿರ್ದೇಶಿಸಿ ರಾಷ್ಟ್ರ ಮನ್ನಣೆ ಗಳಿಸಿಕೊಟ್ಟಿದ್ದಾರಾದರೂ ಕೊಡವರು ಚಿತ್ರ ತಯಾರಿಕೆಯಲ್ಲಿ ಅಂತಹ ಆಸಕ್ತಿ ತಳೆಯದೇ ಉಳಿದಿರುವುದು ಅಚ್ಚರಿಯ ಸಂಗತಿಯಾಗಿದೆ.

### ಲಂಬಾಣಿ ಚಿತ್ರರಂಗ

ಕರ್ನಾಟಕದ ನಾಲ್ಕು ಉಪಭಾಷೆಗಳಲ್ಲಿ ಲಂಬಾಣಿ ಭಾಷೆಯೂ ಒಂದು. ಈ ಭಾಷೆಯಲ್ಲಿ ಕೇವಲ ಒಂದು ಚಿತ್ರ ಮಾತ್ರ ತೆರೆ ಕಂಡಿದೆ.



(ಚಿತ್ರ ೧೬) 'ನಿರೀಕ್ಷೆ'

೧೯೯೬ನೇ ಮಾರ್ಚ್ ತಿಂಗಳಂತ್ಯದಲ್ಲಿ ಸೆನ್ಸಾರಾದ ಪ್ರಥಮ ಲಂಬಾಣಿ ಭಾಷಾ ಚಿತ್ರ, ಸೇವಾಭಯ ಕ್ರಿಯೇಷನ್ಸ್ ಲಾಂಛನದಲ್ಲಿ ಸುನಿಲ್ ಕುಮಾರ್ ಚೌಹಾಣ್ ನಿರ್ಮಿಸಿದ 'ಝಾಡಿರೋ ಪಂಖೇರು'. ಕಾಡಿನ ಕಟ್ಟಿಗೆಯನ್ನೇ ನಂಬಿ ಬದುಕುವ ಲಂಬಾಣಿ ಜನಾಂಗದವರ ಮೌಢ್ಯವನ್ನು ತಮ್ಮ ಅನುಕೂಲಕ್ಕೆ-ಪ್ರಗತಿಗೆ ಬಳಸಿಕೊಳ್ಳುವ ಸುಧಾರಿತ ವರ್ಗದವರು, ಆ ಜನಾಂಗವು ಮೌಢ್ಯದ ಕೂಪದಲ್ಲೇ ಉಳಿಯುವಂತೆ ಮಾಡುವ ಪ್ರಯತ್ನಗಳನ್ನು ಕಥೆಯಾಗಿ ಹೆಣೆದು ಮಾತು ಮೂಡಿಸಿದವರು ಚಿತ್ರದ ನಾಯಕ ನಟ ಹೇಮಂತ್ ಕುಮಾರ್. ಈ ದಿಸೆಯಲ್ಲಿ ರಾಜಕಾರಣಿಗಳಾದ ಬಿ.ಟಿ.ಲಲಿತಾ ನಾಯಕ್ ಮತ್ತು ಹೆಚ್.ಡಿ.ಲಮಾಣಿ ಅವರು ನೆರವಾಗಿದ್ದಾರೆ. ರಾಜಪ್ಪನ್ ಛಾಯಾಗ್ರಾಹಕರು. ಹೇಮಂತ ಕುಮಾರ್, ಶುಭಲಕ್ಷ್ಮಿ, ಬಿ.ಟಿ.ಲಲಿತಾ ನಾಯಕ್, ಅಂಜಲಿ, ರಾಮದಾಸ ನಾಯಕ್ ಅಭಿನಯಿಸಿದ್ದಾರೆ. ಹೆಚ್ಚು ಯಶಸ್ಸಿನ ಸಾಧನೆ ಇಲ್ಲವಾದರೂ, ಲಂಬಾಣಿ ಭಾಷೆಯಲ್ಲಿನ ಚಿತ್ರಸೃಷ್ಟಿಯ ದಾಖಲೆಯಾಗಿದೆ.

ಲಂಬಾಣಿ ಭಾಷೆಯಲ್ಲಿ ತಯಾರಾಗಿರುವುದು ಕೇವಲ ಒಂದು ಚಿತ್ರ ಮಾತ್ರ. ನಶಿಸಿ ಹೋಗುತ್ತಿರುವ ಲಂಬಾಣಿ ಜನಾಂಗದವರ ಸಂಸ್ಕೃತಿ, ಆಚಾರ-ವಿಚಾರ, ಉಡುಗೆ-ತೊಡುಗೆ, ಸಂಪ್ರದಾಯಗಳ ಮೇಲೆ ಬೆಳಕು ಚೆಲ್ಲಿ ಮುಂದಿನ ಪೀಳಿಗೆಗೆ ಪರಿಚಯಿಸುವ ಒಂದು ಪ್ರಯತ್ನ ಆ ಭಾಷೆಯ ಚಿತ್ರಸೃಷ್ಟಿಯ ಪ್ರಗತಿ ಬಹುಶಃ 'ಝಾಡಿರೋ ಪಂಖೇರು' ಚಿತ್ರದ ಯಶಸ್ಸನ್ನು ಅವಲಂಬಿಸಿದ್ದಿತೇನೋ ಎಂಬ ಸಂಶಯ ಬರುತ್ತಿದೆ. ಪ್ರಥಮ ಚಿತ್ರ ತಯಾರಾಗಿ ನಾಲ್ಕು ವರ್ಷಗಳಾದರೂ ಮತ್ತೊಂದು ಚಿತ್ರದ ನಿರ್ಮಾಣ ಪ್ರಯತ್ನ ನಡೆಯದಿರುವುದೇ ಆ ಅನುಮಾನಕ್ಕೆ ಕಾರಣವಾಗಿದೆ.

ಸಮಗ್ರವಾಗಿ ಅರ್ಧ ಶತಮಾನದ ಇತಿಹಾಸವಿದ್ದರೂ ಕರ್ನಾಟಕದ ಈ ನಾಲ್ಕೂ ಉಪಭಾಷೆಗಳಲ್ಲಿ ನಿರ್ಮಾಣಗೊಂಡು ತೆರೆಕಂಡ ಒಟ್ಟು ಚಿತ್ರಗಳು ೫೬. ಈ ಅವಧಿಯಲ್ಲಿ ಹಲವಾರು ಚಿತ್ರಗಳ ನಿರ್ಮಾಣ ಪ್ರಯತ್ನಗಳು ವಿವಿಧ ಉಪಭಾಷೆಗಳಲ್ಲಿ ನಡೆದವಾದರೂ ಅವು ವಿವಿಧ ಕಾರಣಗಳಿಂದಾಗಿ ಪೂರ್ಣಗೊಳ್ಳಲಿಲ್ಲ; ಬಿಡುಗಡೆಯಾಗಲಿಲ್ಲ. ಈ ನಾಲ್ಕು ಉಪಭಾಷೆಗಳ ಪ್ರತಿಭಾವಂತರು ಕನ್ನಡ ಚಿತ್ರರಂಗದ ಪ್ರತಿಭಾವಂತರಂತೆಯೇ ಇತರ ಭಾಷೆಗಳ ಚಿತ್ರೋದ್ಯಮೆಯಲ್ಲಿಯೂ ದಾಖಲೆಯ ವಿಶಿಷ್ಟ ಸಾಧನೆಗಳನ್ನು ಮಾಡಿದ್ದಾರೆ. ಕಲಾವಿದರಾಗಿ, ತಂತ್ರಜ್ಞರಾಗಿ, ನಿರ್ದೇಶಕರಾಗಿ,



(ಚಿತ್ರ ೧೭) 'ಝಾಡಿರೋ ಪಂಖೇರು' ಚಿತ್ರದಲ್ಲಿ ಬಿ.ಟಿ.ಲಲಿತಾ ನಾಯಕ್, ಹೇಮಂತ್ ಕುಮಾರ್

ನಿರ್ಮಾಪಕರಾಗಿ ಮಿಂಚುತ್ತಿದ್ದಾರೆ. ಮಾತೃಭಾಷೆಯ ಮೇಲಿನ ಅಭಿಮಾನದಿಂದ ಹಲವರು ಈ ಉಪಭಾಷಾ ಚಿತ್ರಗಳ ಮೂಲಕವೂ ತಮ್ಮ ಕೊಡುಗೆಗಳನ್ನು ನೀಡಿದ್ದಾರೆ; ನಿರ್ಣಾಯಕ ಪಾತ್ರವನ್ನೂ ವಹಿಸಿದ್ದಾರೆ. ಈಚೆಗೆ ಈ ಭಾಷೆಗಳಲ್ಲಿ ಕಿರುಚಿತ್ರಗಳು, ಸಾಕ್ಷ್ಯಚಿತ್ರಗಳು, ಟೆಲಿ ಧಾರಾವಾಹಿಗಳು, ವಿಡಿಯೋ ಚಿತ್ರಗಳ ಸೃಷ್ಟಿಯೂ ನಡೆದಿದೆ. ಪ್ರಚಲಿತ ಸಂದರ್ಭದಲ್ಲಿನ ಪ್ರೋತ್ಸಾಹಕ ವಾತಾವರಣ ಚಲನಚಿತ್ರಗಳ ನಿರ್ಮಾಣದಲ್ಲೂ ಪ್ರಭಾವ ಬೀರೀತು ಎಂಬುದು ನಿರೀಕ್ಷೆ.

(ವಿ.ಸೂ. : ಎಲ್ಲಾ ಚಿತ್ರಗಳ ಸಂಪೂರ್ಣ ಕಲಾವಿದರು, ತಂತ್ರಜ್ಞರ ವಿವರಗಳು ಈ ಲೇಖನದಲ್ಲಿ ಒಳಗೊಂಡಿಲ್ಲ. ಯಾರ ಹೆಸರನ್ನೂ ಉದ್ದೇಶಪೂರ್ವಕವಾಗಿ ಕೈ ಬಿಟ್ಟಿಲ್ಲ ಎಂಬುದನ್ನು ಗಮನಿಸಬೇಕಾಗಿ ವಿನಂತಿ)

# ಬಾಲ ಜಗತ್ತಿನ ಮಿನುಗುತಾರೆಗಳು

ಮಕ್ಕಳಿಗಾಗಿ ನಾವು ನೀಡುವ ಚಿತ್ರಗಳು ಮತ್ತು ಮಕ್ಕಳೇ ಅತ್ಯುತ್ತಮವೆಂದು ಭಾವಿಸಿ ವೀಕ್ಷಣೆಗೆ ಆಯ್ಕೆ ಮಾಡಿಕೊಳ್ಳುವ ಚಿತ್ರಗಳು ಎರಡಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಎಲ್ಲಾ ಸಮಯದಲ್ಲಿಯೂ ಅವರ ಆಯ್ಕೆಯ ಚಿತ್ರಗಳು ಸಮಂಜಸವೆನಿಸುವಂತಿರುವುದಿಲ್ಲ. ಹಿರಿಯರಿಗಾಗಿ ತಯಾರಾದ ಕೆಲವೊಂದು ಚಿತ್ರಗಳು ಮಕ್ಕಳ ಮೇಲೆ ಬೀರುವ ಪರಿಣಾಮದ ಫಲವಾಗಿ ಅವರ ಆಯ್ಕೆ ಅವರ ವಯೋಗುಣಕ್ಕೆ ತಕ್ಕುದಾಗಿರುವುದಿಲ್ಲ. ಸಾಹಸದ ಹೆಸರಿನಲ್ಲಿ ಚಿತ್ರಿತವಾಗಿರುವ ಕ್ರೌರ್ಯ, ಹಿಂಸೆ, ಲೈಂಗಿಕತೆಯ ಪರಿಣಾಮ ಅವರ ಎಳೆಯ ಮನಸ್ಸಿನ ಮೇಲೆ ಆಗಿರುತ್ತದೆ. ಆದುದರಿಂದ ಅಂತಹ ಚಿತ್ರಗಳಿಂದ ಅವರನ್ನು ದೂರವಿಡಬೇಕಾದುದು ಅತ್ಯಗತ್ಯ.

ಚಲನಚಿತ್ರಗಳು ನೋಡುಗರ ಮೇಲೆ ವಿಶೇಷ ಪರಿಣಾಮ ಬೀರುವ ಸಮ್ಮೋಹಕ ಶಕ್ತಿಯನ್ನು ಹೊಂದಿರುತ್ತವೆ. ಅವರಲ್ಲಿಯೂ ಚಿತ್ರದ ನಾಯಕ-ನಾಯಕಿ ಪಾತ್ರಗಳು ಪ್ರೇಕ್ಷಕರ ಮನವನ್ನು ಸೆಳೆದು, ತಾವೂ ಆ ನಾಯಕ/ನಾಯಕಿಯರಂತೆ ಎಂಬ ಭ್ರಮೆ ಮೂಡಿಸಬಲ್ಲುದು. ಆ ಪಾತ್ರಧಾರಿಯ ವೇಷಭೂಷಣ, ಹಾವ-ಭಾವದಿಂದ ಹಿಡಿದು ಪಾತ್ರಧಾರಿಯ ಅಭಿನಯದ ಎಲ್ಲ ಅಂಶಗಳಲ್ಲಿಯೂ ತಮ್ಮನ್ನು ಕಲ್ಪಿಸಿಕೊಂಡು ಮೈಮರೆಯುವಂತೆ ಮಾಡುವ ಅಯಸ್ಕಾಂತವೇ ಸಿನಿಮಾ. ಮಕ್ಕಳೂ ಈ ಆಕರ್ಷಣೆಯಿಂದ ಹೊರತೇನಲ್ಲ. ವಯಸ್ಸಿಗೆ ಮೀರಿದ ಕಲ್ಪನೆ ಅವರಲ್ಲಿ ಬೆಳೆಯುವ ಅಪಾಯವೇ ಅಧಿಕ. ಕೆಲವು ಕೆಟ್ಟ ಹಾಡಿನ ಸಾಲುಗಳು ಎಳೆಯ ಮಕ್ಕಳಲ್ಲಿ ಪ್ರಭಾವ ಬೀರುವ ದುರಂತ ಇಲ್ಲದಿಲ್ಲ. ಆದ ಕಾರಣ ಚಲನಚಿತ್ರಗಳ ಬಗೆಗಿನ ಮಕ್ಕಳ ಆಯ್ಕೆಯ ಬಗ್ಗೆ ತೀವ್ರ ಗಮನ ನೀಡಬೇಕಾದುದು ಹಿರಿಯರ ಆದ್ಯ ಕರ್ತವ್ಯ.

ಮಕ್ಕಳಿಗೆ ಎಂತಹ ಚಿತ್ರ ಕೊಡಬೇಕು ? ಮಕ್ಕಳ ಚಿತ್ರ ಹೇಗಿರಬೇಕು ? - ಎಂಬುದು ನಮ್ಮ ಚಲನಚಿತ್ರ ನಿರ್ಮಾಪಕರಿಗೆ ಎಷ್ಟೋ ಬಾರಿ ಸಮಸ್ಯೆಯನ್ನೇ ಒಡ್ಡಿವೆ. ಸುಮಾರಾಗಿ ಮಕ್ಕಳು ನಾಲ್ಕು ಅಥವಾ ಐದು ವರ್ಷದವರಾದಾಗ ಚಿತ್ರಗಳನ್ನು ನೋಡಿ ಅರ್ಥ ಮಾಡಿಕೊಳ್ಳುವ ಮಟ್ಟಮುಟ್ಟಿರುತ್ತಾರೆ. ಐದರಿಂದ ಹದಿಹರೆಯದ ವಯಸ್ಸಿನವರೆಗೆ ನೋಡಿದ ಚಿತ್ರಗಳ ಬಗ್ಗೆ ತಮ್ಮ ಮನಸ್ಸಿಗೆ ಹಿಡಿಸುವಂತ ಕಲ್ಪನೆಗಳನ್ನು ರೂಪಿಸುವ ಹಂತದಲ್ಲಿರುತ್ತಾರೆ. ಆ ಕಲ್ಪನೆಗಳಲ್ಲಿ ಕೆಲವು ಭವಿಷ್ಯದ ಬದುಕಿಗೆ ಪೂರಕವಾಗುವಂತಿದ್ದರೆ, ಹಲವು ಮಾರಕವೂ ಆಗಬಲ್ಲುದಾಗಿರುತ್ತದೆ.

ಎಳೆಯ ಮನಸ್ಸು ರಬ್ಬರಿನ ಹಾಗೆ - ಯಾವ ಕಡೆ ಬೇಕಾದರೂ ವಾಲಬಲ್ಲದು. ಅಂತಹ ಮನಸ್ಸಿನ ಮೇಲೆ ಸತ್ಪರಿಣಾಮ ಬೀರುವುದು ಆಗತ್ಯ. ಆ ಮನಸ್ಸು ಕ್ರೌರ್ಯ, ಹಿಂಸೆ ಹಾಗೂ ಲೈಂಗಿಕತೆಯ ಆಕರ್ಷಣೆಗೆ ಒಳಗಾಗದಂತೆ ಎಚ್ಚರವಹಿಸಬೇಕಾದುದು ಹಿರಿಯರ, ಚಿತ್ರನಿರ್ಮಾಪಕರ ಆದ್ಯ ಕರ್ತವ್ಯವಾಗಿರುತ್ತದೆ. ಎಳೆಯ ಮನಸ್ಸು ಕಾರ್ಟೂನ್ (ಅನಿಮೇಶನ್) ಚಿತ್ರಗಳಿಂದ ಆಕರ್ಷಿತವಾಗುವುದು ಸಹಜ. ನಮ್ಮಲ್ಲಿನ ವಿಶಿಷ್ಟತಮ ಪಂಚತಂತ್ರದ ಕಥೆಗಳನ್ನು ಕಾರ್ಟೂನ್ ಚಿತ್ರಗಳನ್ನಾಗಿ ರೂಪಿಸಿಕೊಡುವುದು ಉತ್ತಮ. ಹಾಗೆಯೇ ಮಕ್ಕಳೇ ಪ್ರಧಾನಪಾತ್ರವಲ್ಲಿರುವ ಪುರಾಣಕಥೆಗಳ ಚಿತ್ರಣವೂ ಎಳೆಯರ ಮನ ಗೆಲ್ಲಬಲ್ಲವು. ಜೊತೆಗೆ ಮಹಾನ್ ವ್ಯಕ್ತಿಗಳ ಆದರ್ಶಮಯ ಬದುಕು-ಬಾಲ್ಯಗಳ ಚಿತ್ರಗಳು ಅವರ ಜ್ಞಾನವೃದ್ಧಿಗೆ ನೆರವಾಗಬಲ್ಲವು. ಚಂದಮಾಮ-ಬಾಲಮಿತ್ರಗಳಂತಹ ಮಕ್ಕಳ ಪತ್ರಿಕೆಗಳ ಕಥೆಗಳು ಮಕ್ಕಳಿಗೆ ಪ್ರಿಯವಾಗಿರುವಂತೆ, ಆ ಬಗೆಯ ಕಥೆಗಳ ಚಿತ್ರಗಳು ಮಕ್ಕಳಿಗೆ ರುಚಿಸುತ್ತವೆ. ವೈಜ್ಞಾನಿಕ ಚಿತ್ರಗಳು ಎಳೆಯರ ಜಾಣ್ಮೆಗೆ ಸವಾಲಾಗಬಲ್ಲವು. ಚಂದ್ರಲೋಕಯಾತ್ರೆಯ ಕಲ್ಪನೆಗಳು, ಯಕ್ಷಿಣಿ ಮಾಯಾಜಾಲಗಳು ಮಕ್ಕಳಿಗೆ ರುಚಿಸುವುದರಿಂದ ಅಂತಹ ವಸ್ತುವನ್ನು ಆಧರಿಸಿ ಚಿತ್ರಗಳ ನಿರ್ಮಾಣದಿಂದ ಅವರ ಮೆಚ್ಚುಗೆ ಪಡೆಯಲು ಸಾಧ್ಯ. ಜೊತೆಗೆ ಮಕ್ಕಳಲ್ಲಿನ ಕುತೂಹಲಾಸಕ್ತಿ, ಸಾಹಸಮನೋಭಾವವನ್ನು ಬೆಳೆಸುವಂಥ ಚಿತ್ರಗಳಿಂದ ಅವರಿಗೆ ಹೆಚ್ಚು ಪ್ರಯೋಜನವಾಗುತ್ತದೆ. ಯಾವುದೇ ಪೌರಾಣಿಕ ವಸ್ತು ಎಳೆಯರಲ್ಲಿನ ಸಾಂಸ್ಕೃತಿಕ ಜ್ಞಾನವನ್ನು ಬೆಳೆಸಬಲ್ಲುದು.

ಆದರೆ ಟಿ.ವಿ.ಯುಗವಾದ ಇತ್ತೀಚಿನ ದಿನಗಳಲ್ಲಿ ಮಕ್ಕಳು ಹೆಚ್ಚಾಗಿ ಟಿ.ವಿ. ಕಾರ್ಯಕ್ರಮಗಳಿಂದ ಆಕರ್ಷಿತರಾಗಿದ್ದಾರೆ. ಹಿಂದೆ ದೂರದರ್ಶನವು ಹಿರಿಯರ ಚಿತ್ರಗಳನ್ನು ಮಕ್ಕಳು ಮಲಗಿದ ಮೇಲೆ ರಾತ್ರಿ ೧೧ರ ನಂತರ ಪ್ರದರ್ಶಿಸುವ ಪರಿಪಾಠವಿಟ್ಟುಕೊಂಡಿತ್ತು. ಆದರೆ ಈಗ ಖಾಸಗಿ ಚಾನೆಲ್‌ಗಳು ಎಲ್ಲ ಭಾಷೆಗಳಲ್ಲಿಯೂ ಆರಂಭವಾಗಿ ಮನೆಯ ಹಿರಿಯರು ದೂರದರ್ಶನದಿಂದ ದೂರವಾಗಿ, ಬೆಳಗಿನಿಂದ ಮಧ್ಯರಾತ್ರಿಯವರೆವಿಗೂ ಖಾಸಗಿ ಚಾನೆಲ್‌ಗಳು ನೀಡುವ ರಸದೌತಣವನ್ನೇ ಸವಿಯಬಯಸುವಂತಾಗಿರುವುದರಿಂದ ಶಾಲೆಯಿಂದ ಮರಳಿದ ಮಕ್ಕಳು ಇಂದು ನೋಡಬಾರದ್ದನ್ನೆಲ್ಲಾ ನೋಡುವಂತಾಗಿದೆ. ಭವಿಷ್ಯದ ಗುರಿ, ದಾರಿ ಎಳತನದಲ್ಲಿಯೇ ತಪ್ಪುವಂತಾಗಿದೆ. ಅಂತೆಯೇ ಈಚಿನ ಸಿನಿಮಾಗಳಲ್ಲಿನ


(ಚಿತ್ರ ೧) 'ಭಕ್ತ ಧ್ರುವ' - ಮಾ|ಮುತ್ತು


(ಚಿತ್ರ ೨) 'ಭಕ್ತ ಪ್ರಹ್ಲಾದ' - ಮಾ|ಲೋಕೇಶ್


(ಚಿತ್ರ ೩) 'ಭಕ್ತ ಚೇತ' ಮಾ|ರಾಜೇಂದ್ರಸಿಂಗ್ ಬಾಬು


(ಚಿತ್ರ ೪) 'ಭಾಗ್ಯವಂತ' - ಮಾ|ಲೋಹಿತ್


(ಚಿತ್ರ ೫) 'ಬೆಂಕಿಯಲ್ಲಿ ಅರಳಿದ ಹೂ' - ಬೇಬಿ ರೇಖಾ



(ಚಿತ್ರ ೬) 'ಪುಟಾಣಿ ಏಜೆಂಟ್ ೧, ೨, ೩' - ಮಾ|ರಾಮಕೃಷ್ಣ ಹೆಗ್ಡೆ



(ಚಿತ್ರ ೭) 'ಪುಟಾಣಿ ಏಜೆಂಟ್ ೧, ೨, ೩' - ಮಾ|ಭಾನುಪ್ರಕಾಶ್



(ಚಿತ್ರ ೮) 'ಸಿಂಹದ ಮರಿ ಸೈನ್ಯ' - ಮಾ|ಅರ್ಜುನ್ ಸರ್ಜಾ



(ಚಿತ್ರ ೯) 'ಪ್ರಚಂಡ ಪುಟಾಣಿಗಳು' - ಮಾ|ನವೀನ್



(ಚಿತ್ರ ೧೦) 'ನಾಗರಹೊಳೆ' - ಬೇಬಿ ಇಂದಿರಾ

ಹಾಡು-ಕುಣಿತ-ಪ್ರಣಯ-ಹಿಂಸೆ-ಕ್ರೌರ್ಯ-ಸಾಹಸದ ಸನ್ನಿವೇಶಗಳು ಮಕ್ಕಳ ಮನಸ್ಸಿಗೆ ನಿಧಾನವಿಷವಾಗಿ ಪರಿಣಮಿಸಿವೆ.

ಈ ಕಾರಣಗಳಿಂದಾಗಿ ಮಕ್ಕಳಿಗಾಗಿ ಚಲನಚಿತ್ರ ಮಾಡುವವರು ಅತಿ ಎಚ್ಚರಿಕೆಯ ಹೆಜ್ಜೆಯನ್ನಿಡಬೇಕಾಗುತ್ತದೆ. ಮಕ್ಕಳಚಿತ್ರ ನಿರ್ಮಾಪಕ ಮಾರುಕಟ್ಟೆಯ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಮಕ್ಕಳ ಚಿತ್ರನಿರ್ಮಾಣದಲ್ಲಿ ತಾರಾ ಸಂಭಾವನೆಯೊಂದನ್ನುಳಿದು ಉಳಿದೆಲ್ಲ ಖರ್ಚು-ವೆಚ್ಚ ಕಮರ್ಷಿಯಲ್ ಸಿನಿಮಾ ಬಜೆಟ್‌ನ ಅಂಚಿನಲ್ಲೇ ಇರುತ್ತದೆ. ಮಕ್ಕಳ ಚಿತ್ರ ಎಂದೊಡನೆ ಅದರ ವಿತರಣೆಗೆ ಯಾವ ಹಂಚಿಕೆದಾರರೂ ಮುಂದೆ ಬರುವುದಿಲ್ಲ. ಪ್ರದರ್ಶಕರೂ ತಮ್ಮ ಚಿತ್ರಮಂದಿರ ಒದಗಿಸುವಲ್ಲಿ ಹಿಂದೆ-ಮುಂದೆ ನೋಡುತ್ತಾರೆ. ಇದು ಸಹಜ. ಸಿನಿಮಾ ಪ್ರಮುಖವಾಗಿ ವ್ಯಾಪಾರ-ಉದ್ಯಮ. ಕಲೆ ಎಂಬುದು ವ್ಯಾಪಾರದ ಮುಂದೆ ಗೌಣ. ಒಂದು ವೇಳೆ ಮಕ್ಕಳ ಚಿತ್ರ ಬಿಡುಗಡೆಯಾದರೂ ಮಕ್ಕಳನ್ನು ಕರೆದುಕೊಂಡು ಪೋಷಕರು/ಹಿರಿಯರು ಬರುವುದು ಕಡಿಮೆ. ಮಕ್ಕಳ ಚಿತ್ರವನ್ನು ತಯಾರಿಸಿದ ನಿರ್ಮಾಪಕ ಸರ್ಕಾರದ ಮೊರೆ ಹೊಕ್ಕು, ವಿದ್ಯಾ ಇಲಾಖೆಯ ಮರ್ಜಿ ಹಿಡಿದು, ಶಾಲಾಮಕ್ಕಳಿಗೆ ವಿಶೇಷ ರಿಯಾಯಿತಿ ದರದಲ್ಲಿ ಪ್ರವೇಶ ಕಲ್ಪಿಸಬೇಕು. ಶಾಲೆಗಳ ಮುಖ್ಯರನ್ನು ಓಲೈಸಬೇಕು. ಇಷ್ಟಾಗಿಯೂ ನಿರ್ಮಾಪಕ ತಾನು ಹೂಡಿದ ಬಂಡವಾಳ ಮರಳಿ ಪಡೆಯುವ ಸಂಭವ ತೀರಾ ಕಡಿಮೆ. ಪರಿಸ್ಥಿತಿ ಹೀಗಿರುವಾಗ ಯಾವ ನಿರ್ಮಾಪಕ ತಾನೇ ಮಕ್ಕಳ ಚಿತ್ರಗಳನ್ನು ನಿರ್ಮಿಸುವ ಸಾಹಸ ಮಾಡಿಯಾನು ? ಇದ್ದುದರಲ್ಲಿ ಬಾಲಕಲಾವಿದರು ಪ್ರಧಾನ ಭೂಮಿಕೆಯಲ್ಲಿರುವ ಪೌರಾಣಿಕ, ಸಾಮಾಜಿಕ ಕಥೆಗಳನ್ನು, ಆಬಾಲವೃದ್ಧರಾದಿಯಾಗಿ ಎಂಬಂತೆ ಹಿರಿಕಿರಿಯರನ್ನು ಆಕರ್ಷಿಸುವಂಥ ಚಿತ್ರಗಳನ್ನು ಮಕ್ಕಳಿಗೂ ಸೇರಿ ನೀಡುತ್ತಾ ಬಂದಿದ್ದಾರೆ ನಮ್ಮ ಚಿತ್ರನಿರ್ಮಾಪಕರು.

ರಾಷ್ಟ್ರದ ಪ್ರಜೆಗಳೆಲ್ಲರಿಗೂ ಅಕ್ಷರಜ್ಞಾನ-ವಿದ್ಯೆ ಇರಬೇಕೆಂದು ಬಯಸುವ ಸರ್ಕಾರ ಮಕ್ಕಳ ಮನರಂಜನೆಯೊಂದಿಗೆ ಬೌದ್ಧಿಕ ವಿಕಾಸವೂ ಆಗಬೇಕೆಂದು ಬಯಸಬೇಕಾದುದು ಆದ್ಯ ಕರ್ತವ್ಯ. ಈ ನಿಟ್ಟಿನಲ್ಲಿ ಕೇಂದ್ರ ಸರ್ಕಾರ ಮಕ್ಕಳ ಚಲನಚಿತ್ರ ಸೊಸೈಟಿಯೊಂದನ್ನು ರೂಪಿಸಿತಾದರೂ, ಭಾರತದಲ್ಲಿ ಮಕ್ಕಳ ಚಿತ್ರಗಳ ಆಂದೋಲನ ಮಾನ್ಯತೆ ಗಳಿಸಲಿಲ್ಲ. ಮಕ್ಕಳ ಚಲನಚಿತ್ರ ಸೊಸೈಟಿಯು ಕೆಲವು ಚಿತ್ರಗಳನ್ನು ಹಿಂದಿ ಭಾಷೆಯಲ್ಲಿ ತಯಾರಿಸಿ, ನಂತರ ಪ್ರಾದೇಶಿಕ ಭಾಷೆಗಳಿಗೆ ಡಬ್ ಮಾಡಿ (ಎಂ.ನರೇಂದ್ರಬಾಬು ಅವರಿಂದ ಸಾಹಿತ್ಯ ಬರೆಸಿ ಡಬ್ ಮಾಡಿಸುತ್ತಿದ್ದವರು 'ಪಪ್ಪನ್' ಎಂದೇ ಪರಿಚಿತರಾದ ಆರ್.ಪದ್ಮನಾಭನ್) ಸರದಿ ಪ್ರಕಾರ ಒಂದೊಂದು ರಾಜ್ಯದಲ್ಲಿನ ಚಿತ್ರಮಂದಿರಗಳಲ್ಲಿ ಬೆಳಗಿನ ಪ್ರದರ್ಶನಗಳಲ್ಲಿ ರಿಯಾಯಿತಿ ದರದಲ್ಲಿ ಪ್ರದರ್ಶಿಸುತ್ತಿತ್ತು. ಈ ಪ್ರದರ್ಶನಗಳೂ ರಾಜ್ಯ ಸರ್ಕಾರ, ವಿದ್ಯಾ ಇಲಾಖೆ ಹಾಗೂ ಶಾಲಾ ಮುಖ್ಯಸ್ಥರ ಮರ್ಜಿಯಲ್ಲಿ ಏರ್ಪಡುತ್ತಿದ್ದವು. ಈಗ ಮಕ್ಕಳ ಚಲನಚಿತ್ರ ಸೊಸೈಟಿಯ ಹೆಸರು ನ್ಯಾಷನಲ್ ಸೆಂಟರ್ ಆಫ್ ಫಿಲಂಸ್ ಫಾರ್ ಚಿಲ್ಡ್ರನ್ ಅಂಡ್ ಯಂಗ್ ಪೀಪಲ್ ಎಂದು ಬದಲಾಗಿದೆ. ಅದರ ರಾಷ್ಟ್ರದಲ್ಲಿನ ಸುಮಾರು ೨೨ ಕೋಟಿಯಷ್ಟು ಸಂಖ್ಯೆಯ ೫ರಿಂದ ೧೪ರವರೆಗಿನ ವಯೋಮಿತಿಯ ಮಕ್ಕಳಿಗೆ ಈ ಸಂಸ್ಥೆ ನೀಡುತ್ತಿರುವ ಚಿತ್ರಗಳ ಸಂಖ್ಯೆ ವರ್ಷಕ್ಕೆ ಮೂರು ಅಥವಾ ನಾಲ್ಕನ್ನು ಮೀರಿಲ್ಲ. ಹೊರ ರಾಷ್ಟ್ರಗಳಿಂದ ಮಕ್ಕಳ ಚಿತ್ರಗಳನ್ನು ತರಿಸಿಕೊಂಡು ಅಂತರರಾಷ್ಟ್ರೀಯ ಮಕ್ಕಳ ಚಿತ್ರೋತ್ಸವ ನಡೆಸುವುದೇ ಆ ಸಂಸ್ಥೆಗೆ ಬಹು ದೊಡ್ಡ ಕೆಲಸವಾಗಿರುವಂತಿದೆ. ಕೆಲವು ಮಕ್ಕಳ ಚಿತ್ರಗಳು ಖಾಸಗಿ ನಿರ್ಮಾಪಕರಿಂದ ತಯಾರಾದರೂ ಅವು ಆರ್ಥಿಕ ನೆರವಿನ ಕೊರತೆ ಹಾಗೂ ಪ್ರದರ್ಶನ ಸೌಲಭ್ಯಗಳನ್ನು ಎದುರಿಸಬೇಕಾಗಿ ಬಂದು, ಆ ನಿರ್ಮಾಪಕರ ಪಾಲಿಗೆ ಮಕ್ಕಳ ಚಿತ್ರಸೃಷ್ಟಿಯೇ ದುಸ್ಸಾಹಸವೆನಿಸಿದ್ದರಲ್ಲಿ ಅತಿಶಯವೇನಿಲ್ಲ.

ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಸಂಸದರು, ಶಾಸಕರು, ರಾಜಕೀಯ ಧುರೀಣರು ಅಥವಾ ನಾವು ಪ್ರತಿ ವರ್ಷ ನವೆಂಬರ್ ೧೪ - ಮಕ್ಕಳ ದಿನಾಚರಣೆಯ ದಿನ ಮಾತ್ರ ಮಕ್ಕಳು ಹಾಗೂ ಮಕ್ಕಳ ಚಿತ್ರಗಳನ್ನು ನೆನಪು ಮಾಡಿಕೊಳ್ಳುತ್ತಿರುವುದು ಸತ್ಯ. ಸರ್ಕಾರದ ಅಧೀನದ ಸಂಸ್ಥೆಯು ಹಣಕಾಸಿನ ಕೊರತೆಯಿಂದಾಗಿ ಹೆಚ್ಚಿನ ಚಟುವಟಿಕೆ ನಡೆಸಲು ಅಶಕ್ತವಾಗಿದೆ. ಆದರೂ ನವೆಂಬರ್ ೧೪ ಬಂದೊಡನೆ ಮಕ್ಕಳ ಚಿತ್ರಗಳ ನೆನಪು ಮಾಡಿಕೊಳ್ಳುತ್ತದೆ. ಮತ್ತೆ ಮುಂದಿನ ನವೆಂಬರ್ ೧೩ರವರೆಗೆ ಉಳಿದೆಲ್ಲರಂತೆ ಆ ಸಂಸ್ಥೆಯೂ ಮಕ್ಕಳು ಹಾಗೂ ಮಕ್ಕಳ ಚಿತ್ರಗಳನ್ನೇ ಮರೆತುಬಿಡುತ್ತದೆ.

ಖಾಸಗಿ ಚಿತ್ರನಿರ್ಮಾಪಕರು ತಯಾರಿಸಿದ ಮಕ್ಕಳ ಚಿತ್ರಗಳು ಸಾಮಾನ್ಯವಾಗಿ ವ್ಯಾಪಾರಿ ಸೂತ್ರಗಳಿಂದ ಹೊರತಾಗಿಲ್ಲವೆಂದೇ ಹೇಳಬೇಕು. ತಾರಾಬಳಗದಲ್ಲಿ ಮಕ್ಕಳೊಡನೆ ಚಿರಪರಿಚಿತ ಹಿರಿಯ ಕಲಾವಿದರಿರುವುದು, ಹಿರಿಯರು ಮಾಡುವ ಸಾಹಸಗಳನ್ನು ಮಕ್ಕಳು ಮಾಡುವುದು, ಹಾಡು, ಕುಣಿತ, ಪ್ರೇಮ, ಸಾಹಸಗಳ ಮಿಶ್ರಣವಾಗಿರುವುದನ್ನು ಗಮನಿಸಬಹುದು. ಇವಕ್ಕೆ ಮೇಲೆ ಹೇಳಿದ ಸಮಸ್ಯೆ-ಕೊರತೆಗಳೇ ಮುಖ್ಯ ಕಾರಣ.

ಇಡೀ ಭಾರತೀಯ ಚಿತ್ರರಂಗದಲ್ಲಿಯೇ ಮಕ್ಕಳಿಗಾಗಿಯೇ ತಯಾರಾದ, ಮಕ್ಕಳೇ ಅಭಿನಯಿಸಿದ ಮಕ್ಕಳ ಚಿತ್ರಗಳು ತೀರಾ ವಿರಳ. ಮಕ್ಕಳು ಪ್ರಧಾನ ಭೂಮಿಕೆಯಲ್ಲಿದ್ದು, ಹಿರಿಯರೂ ಅಭಿನಯಿಸಿರುವ ಮಕ್ಕಳ ಸಾಹಸಗಳ ಕಥೆಯ ಚಿತ್ರಗಳು ಹಾಗೂ ಬಾಲಕಲಾವಿದರೇ ನಾಯಕ-ನಾಯಕಿಯ ಪಾತ್ರದಲ್ಲಿ ನಟಿಸಿರುವ ಚಿತ್ರಗಳನ್ನು ಮಕ್ಕಳ ಚಿತ್ರಗಳೆಂದು ವರ್ಗೀಕರಿಸಬಹುದಾಗಿದೆ. ರಾಮಾಯಣದ ಕಥೆಯ ಎಲ್ಲ ಪಾತ್ರಗಳನ್ನೂ ಮಕ್ಕಳಿಂದಲೇ ಮಾಡಿಸಿದ ಚಿತ್ರನಿರ್ಮಾಣ ತಮಿಳು, ತೆಲುಗು ಭಾಷೆಗಳಲ್ಲಾಗಿದೆ. ಬಾಲಕಲಾವಿದರು ಪ್ರಧಾನ ಪಾತ್ರಗಳಲ್ಲಿದ್ದು, ಹಿರಿಯರಂತೆ ಸಾಹಸಗಳಲ್ಲಿ ತೊಡಗಿ ಗೆಲುವು ಸಾಧಿಸುವ ಕಥಾನಕಗಳ ಚಿತ್ರಗಳು ಇತರೆ ಭಾಷೆಗಳಲ್ಲಿರುವಂತೆ, ಕನ್ನಡದಲ್ಲಿಯೂ ತಯಾರಾಗಿವೆ. ಬಾಲಕಲಾವಿದನೇ ನಾಯಕನಟನ ಪಾತ್ರದಲ್ಲಿ ಅಭಿನಯಿಸಿದ ಪೌರಾಣಿಕ ಕಥಾವಸ್ತುಗಳ 'ಭಕ್ತಧ್ರುವ', 'ಭಕ್ತ ಪ್ರಹ್ಲಾದ', 'ಚಿರಂಜೀವಿ', 'ಭಕ್ತ ಮಾರ್ಕಂಡೇಯ' ಮತ್ತಿತರ ಚಿತ್ರಗಳು ಕನ್ನಡದಲ್ಲಿ ನಿರ್ಮಾಣವಾಗಿವೆ (ಅವನ್ನು ಮಕ್ಕಳ ಚಿತ್ರಗಳು ಎನ್ನಬಹುದಾಗಿದೆ). ನೆರೆಯ ಕೇರಳದಿಂದ 3D ಚಿತ್ರಗಳು - 'ಕುಟ್ಟಿ ಚಾತನ್'ನಂಥವು ಹಾಗೂ 'ಕಾಡಿನಲ್ಲಿ ಜಾತ್ರೆ' (ಅರೆ ಡಬ್ಬಿಂಗ್) ಚಿತ್ರಗಳೂ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ತಯಾರಾದವು.

'ಭಕ್ತ ಧ್ರುವ' ಕನ್ನಡ ಚಿತ್ರದ ಹಿರಿಮೆ ಎರಡು ಬಗೆಯದು. ಕನ್ನಡದಲ್ಲಿ ತಯಾರಾದ ಮೊದಲ ಚಿತ್ರ ಎಂಬುದು ಒಂದಾದರೆ ಬಾಲನಟನೊಬ್ಬ ನಾಯಕ ಪಾತ್ರದಲ್ಲಿ ಕಾಣಿಸಿಕೊಂಡುದು ಇನ್ನೊಂದು. ಈ ಬಾಲನಟ ನಾಟಕ ಅಥವಾ ಸಿನಿಮಾಗಳಲ್ಲಿ ಅಭಿನಯಿಸಿ ಪರಿಶ್ರಮ ಪಡೆದವನಲ್ಲ. ಈ ಚಿತ್ರದಲ್ಲಿ ನಟಿಸುವಾಗ ಮಾ|ಮುತ್ತು ಆರನೇ ತರಗತಿಯ ವಿದ್ಯಾರ್ಥಿ. ವರದಾಚಾರ್ಯರ ಮೊಮ್ಮಗ ಎಂಬುದಷ್ಟೇ ಪರಿಚಯಾರ್ಹತೆ. ಮುತ್ತು ವಿದ್ಯಾಭ್ಯಾಸಾನಂತರ ಮೈಸೂರಿನ ಕೇಂದ್ರ ಆಹಾರ ಸಂಶೋಧನಾ ಸಂಸ್ಥೆಯಲ್ಲಿ ವಿಜ್ಞಾನಿಯಾಗಿ ದುಡಿದರು. ನಿವೃತ್ತಿಯ ನಂತರ ವಿಶ್ರಾಂತ ಜೀವನ. ಅವರಿಗೆ

ಚಿತ್ರೀಕರಣ ಸಂದರ್ಭದ ಘಟನಾವಳಿ ಮತ್ತು ಚಿತ್ರದಲ್ಲಿ ಹಾಡಿದ ಹಾಡುಗಳ ನೆನಪು ಇನ್ನೂ ಹಸಿರು. (ನೋಡಿ : ದಶಕ ೧೯೩೪-೫೦)

'ಭಕ್ತ ಧ್ರುವ'ದಂತೆಯೇ 'ಭಕ್ತ ಪ್ರಹ್ಲಾದ', 'ಚಿರಂಜೀವಿ', 'ಭಕ್ತ ಮಾರ್ಕಂಡೇಯ'ದಂತಹ ಚಿತ್ರಗಳ ನಾಯಕ ಪಾತ್ರಗಳಲ್ಲಿಯೂ ಬಾಲಕಲಾವಿದರೇ ಅಭಿನಯಿಸಿದ್ದಾರೆ (ಮಕ್ಕಳ ಚಿತ್ರಗಳ ಸಾಲಿನಲ್ಲಿ ಈ ಚಿತ್ರಗಳನ್ನೂ ಪರಿಗಣಿಸಬಹುದು). 'ಭಕ್ತ ಧ್ರುವ' ಬಿಡುಗಡೆಯಾದ ಅರ್ಧ ಶತಮಾನದ ನಂತರ ಬಾಲನಟನೊಬ್ಬ ನಾಯಕ ಪಾತ್ರದಲ್ಲಿ ಅಭಿನಯಿಸಿದ ಸಾಮಾಜಿಕ ಕಥೆಯ 'ಭಾಗ್ಯವಂತ' ತೆರೆಕಂಡಿತು.

'ಭಾಗ್ಯವಂತ' ಚಿತ್ರದ ಅಪ್ರತಿಮ ಯಶಸ್ಸು ಪ್ರತಿಯೊಬ್ಬರನ್ನೂ ಮಕ್ಕಳ ಚಿತ್ರಗಳ ಕುರಿತು ಯೋಚಿಸುವಂತೆ ಮಾಡಿತು. ಈ ಚಿತ್ರದ ನಿರ್ಮಾಣದ ಹೊತ್ತಿಗೆ ಮಕ್ಕಳ ಚಿತ್ರಗಳ ಬಗ್ಗೆ ಅಪೇಕ್ಷಣೀಯವಾದ ಒಂದು ಹದವಾದ ವಾತಾವರಣ ನಿರ್ಮಾಣಗೊಂಡಿತ್ತು. ೧೯೭೭ರಲ್ಲಿ ತೆರೆಕಂಡ 'ನಾಗರ ಹೊಳೆ' ಮತ್ತು ಆನಂತರ ಬಂದ 'ದೊಂಬರ ಕೃಷ್ಣ' (೧೯೭೯), 'ಪುಟಾಣಿ ಏಜೆಂಟ್ ೧, ೨, ೩' (೧೯೭೯), 'ದಂಗೆಯೆದ್ದ ಮಕ್ಕಳು' (೧೯೭೯), ಮಕ್ಕಳ ಸೈನ್ಯ (೧೯೮೦), ಪ್ರಚಂಡ ಪುಟಾಣಿಗಳು (೧೯೮೧) ಹಾಗೂ 'ಸಿಂಹದ ಮರಿ ಸೈನ್ಯ' (೧೯೮೧) ಈ ಎಲ್ಲಾ ಉತ್ತಮ ಚಿತ್ರಗಳ ಹಿನ್ನೆಲೆಯಲ್ಲಿ 'ಭಾಗ್ಯವಂತ'ಕ್ಕೆ ವಿಶೇಷ ಸ್ವಾಗತ ದೊರೆಯಿತು.

ಮಕ್ಕಳೇ ಕಾಡನ್ನು ಹೊಕ್ಕು ಎಸಗುವ ಸಾಹಸದ ಸನ್ನಿವೇಶಗಳ ಜೊತೆಯಲ್ಲಿಯೇ ದೊಡ್ಡವರ ಕಥೆಯೂ ಸಮಾನಾಂತರವಾಗಿ ಬೆಳೆಯುವ ವರುಣಾ ಪಿಕ್ಚರ್ಸ್ ಅವರ 'ನಾಗರಹೊಳೆ' - ಸಾಹಸ, ಕೌತುಕ ಹಾಗೂ ಕಾಡಿನ ವಿಸ್ಮಯಗಳಿಂದ ಕೂಡಿದ ರಂಜನೀಯ ಚಿತ್ರ. ಬಾಲಾಜಿಸಿಂಗ್, ಎಸ್.ಎಸ್.ಪಾರ್ಥನಾಥ್ ಹಾಗೂ ಆರ್.ಎಫ್.ಮಾಣಿಕ್‌ಚಂದ್ ನಿರ್ಮಾಪಕರು. ಎಸ್.ವಿ.ರಾಜೇಂದ್ರಸಿಂಗ್ ಬಾಬು ನಿರ್ದೇಶಕರು. ಮಾ|ಪ್ರಸಾದ್, ಮಾ|ಭಾನು ಪ್ರಕಾಶ್, ಮಾ|ಸತೀಶ್, ಬೇಬಿ ಇಂದಿರಾ ಈ ಚಿತ್ರದಲ್ಲಿ ನಟಿಸಿದ ಬಾಲಪ್ರತಿಭೆಗಳು. ವಿಷ್ಣುವರ್ಧನ್, ಭಾರತಿ, ಅಂಬರೀಷ್, ದಿನೇಶ್, ಶಿವರಾಂ ಮುಂತಾದ ಹಿರಿಯ ಕಲಾವಿದರು ಅಭಿನಯಿಸಿದ ಈ ಚಿತ್ರಕ್ಕೆ ೧೯೭೬-೭೭ರ ರಾಜ್ಯ ಪ್ರಶಸ್ತಿ ದೊರೆತಿದೆ.

ಬುದ್ಧಿ-ಸಾಹಸಗಳನ್ನು ಮೈಗೂಡಿಸಿಕೊಂಡು ಕಾಡಿನಲ್ಲಿ ಬೆಳೆದು, ಪ್ರವಾಹದಲ್ಲಿ ತನ್ನವರೆಲ್ಲರನ್ನೂ ಕಳೆದುಕೊಂಡು ದೊಂಬರ ಗುಂಪೊಂದನ್ನು ಸೇರಿದ ಬಾಲಕನೊಬ್ಬ, ಪಾನ ನಿರೋಧಕ್ಕಾಗಿ, ಮೂಢನಂಬಿಕೆಗಳನ್ನು ಹೊಡೆದೋಡಿಸುವ ಸಲುವಾಗಿ ಮಾಡುವ ಸಾಹಸದ ಕಥೆಯ 'ದೊಂಬರ ಕೃಷ್ಣ' ಚಿತ್ರದ ನಿರ್ಮಾಣ-ನಿರ್ದೇಶನ ಹೆಚ್.ಎಂ.ಕೆ.ಮೂರ್ತಿ ಅವರದು. ಮಾ|ಸುರೇಶ್, ಬೇಬಿ ಇಂದಿರಾ ಬಾಲಕಲಾವಿದರಾಗಿ ಈ ಚಿತ್ರದಲ್ಲಿ ಆಕರ್ಷಿಸಿದರು. ತ.ಪು.ವೆಂಕಟರಾಮ್ ಅವರ ಕಥೆಯ ಆಧಾರಿತ ಚಿತ್ರ.

ಪತ್ತೇದಾರಿ ಸಾಹಸ ಮಾಡುವ ಮಕ್ಕಳ ಸುತ್ತ ಹೆಣೆದ ಕಥೆಯ 'ಪುಟಾಣಿ ಏಜೆಂಟ್ ೧ ೨ ೩' ಚಿತ್ರ ವರುಣಾ ಫಿಲಂಸ್ ಅವರ ನಿರ್ಮಾಣ. ಮಾ|ಭಾನುಪ್ರಕಾಶ್, ಮಾ|ರಾಮಕೃಷ್ಣ ಹೆಗಡೆ ಹಾಗೂ ಬೇಬಿ ಇಂದಿರಾ ಅವರ ಜೊತೆಯಲ್ಲಿ ಮಾ|ಜೇಮ್ಸ್ ಕೂಡ ಪ್ರಧಾನ ಪಾತ್ರಗಳಲ್ಲಿದ್ದರು. ಅಂಬರೀಷ್, ಶ್ರೀನಾಥ್, ಉದಯಕುಮಾರ್, ಕೆ.ಎಸ್.ಅಶ್ವತ್ಥ್, ಲೀಲಾವತಿಯಂತಹ ಹಿರಿಯ ಕಲಾವಿದರೂ ತಾರಾಗಣದಲ್ಲಿದ್ದ ಈ ಚಿತ್ರದ ನಿರ್ದೇಶಕರು ಗೀತಪ್ರಿಯ.

ಟಿ.ಎಸ್.ನರಸಿಂಹನ್ ಮತ್ತು ಬಿ.ಎಸ್.ಸೋಮಸುಂದರ್ ಕೋಮಲ್ ಪ್ರೊಡಕ್ಷನ್ಸ್ ಲಾಂಛನದಲ್ಲಿ ತಯಾರಿಸಿದ ಚಿತ್ರ - 'ದಂಗೆಯೆದ್ದ ಮಕ್ಕಳು'. ಮಾ|ಶ್ರೀಕಾಂತ್, ಮಾ|ಶಶಿಕುಮಾರ್, ಮಾ|ಹರೀಶ್, ಬೇಬಿ ಅನುರಾಧ, ಬೇಬಿ ಪೂರ್ಣಿಮಾ ಮುಂತಾದ ಬಾಲಕಲಾವಿದರು ತಾರಾಗಣದ ಪ್ರಮುಖರು. ಶ್ರೀಮಂತರ ಉದಾರ ನೀತಿಯನ್ನು ಎತ್ತಿ ಹಿಡಿಯುತ್ತಾ ಅದಕ್ಕೆ ಪೋಷಕವಾಗುವಂತೆ ಅನಾಥ ಮಕ್ಕಳ ಸಾಹಸದ ಚಿತ್ರಣ. ಯು.ಎಸ್.ವಾದಿರಾಜ್ ಈ ಚಿತ್ರದ ನಿರ್ದೇಶಕರು.

ನಟಿ ಲಕ್ಷ್ಮಿ ನಿರ್ದೇಶಿಸಿದ 'ಮಕ್ಕಳ ಸೈನ್ಯ' ಚಿತ್ರದಲ್ಲಿ ವಿಷ್ಣುವರ್ಧನ್-ಸುಮಿತ್ರಾರ ತಾರಾಜೋಡಿಯೊಂದಿಗೆ ಬಾಲಪ್ರತಿಭೆಗಳೂ ತಾರಾಗಣದಲ್ಲಿದ್ದವು.

ನಿರ್ಮಾಪಕ ಎಂ.ಕೆ.ಬಾಲಾಜಿಸಿಂಗ್ ಅವರಿಗಾಗಿ ಗೀತಪ್ರಿಯ ನಿರ್ದೇಶಿಸಿದ 'ಪ್ರಚಂಡ ಪುಟಾಣಿಗಳು' ಚಿತ್ರದಲ್ಲಿ ಮಕ್ಕಳ ಸಾಹಸಗಳ ಕಥೆಯೇ ಇದೆ. ಈ ಚಿತ್ರದಲ್ಲಿಯೂ 'ಪುಟಾಣಿ ಏಜೆಂಟ್ ೧ ೨ ೩' ಖ್ಯಾತಿಯ ಬಾಲಕಲಾವಿದರಾದ ಮಾ|ರಾಮಕೃಷ್ಣ ಹೆಗಡೆ, ಮಾ|ಭಾನುಪ್ರಕಾಶ್, ಬೇಬಿ ಇಂದಿರಾ, ಮಾ|ನವೀನ್‌ರ ತಂಡವೇ ಇದ್ದು, ತೂಗುದೀಪ ಶ್ರೀನಿವಾಸ್, ಪ್ರಭಾಕರ್, ಮುಸುರಿ ಕೃಷ್ಣಮೂರ್ತಿ, ದ್ವಾರಕೀಶ್, ಸುಂದರಕೃಷ್ಣ ಅರಸ್‌ರಂಥ ಹಿರಿಯರೂ ತಾರಾಗಣದಲ್ಲಿದ್ದಾರೆ.

ಬೇಬಿ ರೇಖಾ, ಮಾ|ಭಾನುಪ್ರಕಾಶ್, ಬೇಬಿ ಅರುಣಾ, ಬೇಬಿ ಇಂದಿರಾ, ಮಾ|ಅರ್ಜುನ್ ಸರ್ಜಾ, ಮಾ|ಪ್ರಸನ್ನ ಮತ್ತಿತರ ಬಾಲಕಲಾವಿದರು ಪಾಲ್ಗೊಂಡ ಎಸ್.ಆರ್.ಎಸ್.ಪ್ರೊಡಕ್ಷನ್ಸ್ ಅವರ 'ಸಿಂಹದ ಮರಿ ಸೈನ್ಯ' ಚಿತ್ರವೂ ಮಕ್ಕಳು ನಡೆಸುವ ಸಾಹಸದ ಕಥೆಯನ್ನೇ ಹೊಂದಿದೆ. ಎಸ್.ವಿ.ರಾಜೇಂದ್ರಸಿಂಗ್ ಬಾಬು ನಿರ್ದೇಶಕರು. ಅಮರೀಶ್ ಪುರಿ, ಸುಂದರಕೃಷ್ಣ ಅರಸ್, ಜಯಂತಿ, ಮಂಜುಳ, ದ್ವಾರಕೀಶ್, ಶಿವರಾಂ ಈ ಚಿತ್ರದ ತಾರಾಗಣದಲ್ಲಿನ ಹಿರಿಯರು.

ಈ ಸಂದರ್ಭದಲ್ಲಿ ಇನ್ನೂ ಕೆಲವು ಚಿತ್ರಗಳನ್ನು ನೆನಪು ಮಾಡಿಕೊಳ್ಳುವುದು ಉಚಿತ. ಅರವತ್ತು-ಎಪ್ಪತ್ತರ ದಶಕಗಳಲ್ಲಿಯೂ ಮಕ್ಕಳು ಪ್ರಮುಖ ಭೂಮಿಕೆಗಳಲ್ಲಿದ್ದ ಚಿತ್ರಗಳು ನಿರ್ಮಾಣವಾಗುತ್ತಿದ್ದವು. ಅವುಗಳಲ್ಲಿ 'ಮಕ್ಕಳ ರಾಜ್ಯ', 'ನಮ್ಮ ಮಕ್ಕಳು', 'ಜಾಗೃತಿ', 'ಕಳಸಾಪುರದ ಹುಡುಗರು', 'ಭಲೇ ರಾಣಿ' ಪ್ರಮುಖವಾದವು.

ಕನ್ನಡದ ಪ್ರಥಮ ನಿರ್ಮಾಪಕಿ ಎಂ.ವಿ.ರಾಜಮ್ಮ, ಎಂ.ವಿ.ಆರ್.ಪ್ರೊಡಕ್ಷನ್ಸ್ ಲಾಂಛನದಲ್ಲಿ ತಯಾರಿಸಿದ 'ಮಕ್ಕಳ ರಾಜ್ಯ' - ಉಲ್ಲೇಖನಾರ್ಹ ಚಿತ್ರ. ಮಂತ್ರಿಯ ಕುತಂತ್ರದಿಂದಾಗಿ ಅರಸೊತ್ತಿಗೆ ಕಳೆದುಕೊಂಡು ಸೆರೆಮನೆಯಲ್ಲಿ ಬಂದಿಗಳಾಗಿದ್ದ ರಾಜ-ರಾಣಿಯರನ್ನು ರಕ್ಷಿಸಿ ಮತ್ತೆ ಸಿಂಹಾಸನವನ್ನೇರುವಂತೆ ಮಾಡಲು ಮಕ್ಕಳು ಮಾಡುವ ಸಾಹಸ ಕಥೆಯ ಈ ಚಿತ್ರವನ್ನು ಬಿ.ಆರ್.ಪಂತುಲು ಅವರು ನಿರ್ದೇಶಿಸಿದರು. ಇಂದು ಹಾಸ್ಯನಟರಾಗಿ ಚಿರಪರಿಚಿತರಾದ ಎಂ.ಎಸ್.ಉಮೇಶ್ ಈ ಚಿತ್ರದಲ್ಲಿ ಬಾಲನಟರಾಗಿ ಅಭಿನಯಿಸಿ, ಚಿತ್ರರಂಗ ಪ್ರವೇಶಿಸಿದರು. ಬೇಬಿ ಲಕ್ಷ್ಮಿ, ಬೇಬಿ ಚಂದ್ರಕಲಾವತಿ ಉಮೇಶ್‌ರೊಂದಿಗೆ ಅಭಿನಯಿಸಿದ ಬಾಲಕಲಾವಿದೆಯರು. ಪಂತುಲು, ರಾಜಮ್ಮ, ಡಿಕ್ಕಿ ಮಾಧವರಾವ್, ನರಸಿಂಹರಾಜು, ಬಾಲಕೃಷ್ಣ ತಾರಾಬಳಗದ ಹಿರಿಯರು. ತಮಿಳಿನ ಶಿವಾಜಿ ಗಣೇಶನ್ ವಿಜ್ಞಾನಿಯಾಗಿ ಅಭಿನಯಿಸಿದ ಈ ಚಿತ್ರ ೧೯೬೦ರಲ್ಲಿ ಬಿಡುಗಡೆಯಾಯಿತು. ಮಾನವನ ಅಂತರಿಕ್ಷಯಾತ್ರಾ ಪ್ರಯತ್ನಕ್ಕೂ ಮೊದಲೇ ಚಂದ್ರಲೋಕಯಾತ್ರೆಯ ದೃಶ್ಯಗಳನ್ನು ಅಳವಡಿಸಿದ್ದುದು ವಿಶೇಷ.


(ಚಿತ್ರ ೧೧) 'ಭಲೇ ರಾಣಿ' - ಬೇಬಿ ರಾಣಿ


(ಚಿತ್ರ ೧೨) 'ಸೂಪರ್ ಬಾಯ್' - ಮಾ|ಹರೀಶ್


(ಚಿತ್ರ ೧೩) 'ರಾಮ ಲಕ್ಷ್ಮಣ' ಮಾ|ಸತ್ಯಪ್ರಕಾಶ್


(ಚಿತ್ರ ೧೪) 'ಘಟಶ್ರಾದ್ಧ' ಮಾ|ಅಜಿತ್ ಕುಮಾರ್


(ಚಿತ್ರ ೧೫) 'ನಮ್ಮ ಮಕ್ಕಳು' ಮಾ|ಚಂದ್ರಶೇಖರ್



(ಚಿತ್ರ ೧೬) 'ಭಕ್ತ ಜ್ಞಾನದೇವ' - ಬೇಬಿ ಹೇಮಾ



(ಚಿತ್ರ ೧೭) 'ಮಕ್ಕಳ ರಾಜ್ಯ' - ಬೇಬಿ ಲಕ್ಷ್ಮೀ



(ಚಿತ್ರ ೧೮) 'ದೊಂಬರ ಕೃಷ್ಣ' - ಮಾ|ಸುರೇಶ್



(ಚಿತ್ರ ೧೯) 'ಜೀವನ ಜೋಕಾಲಿ' - ಬೇಬಿ ರೋಜಾರಮಣಿ



(ಚಿತ್ರ ೨೦) 'ಭಕ್ತ ಜ್ಞಾನದೇವ' - ಮಾ|ಸಂಜಯ್

ತಾರ ಪರಿಣಿಯವರು ವಿಜಯಭಾರತಿ ಚಿತ್ರ ಲಾಂಛನದಲ್ಲಿ ನಿರ್ಮಿಸಿದ 'ನಮ್ಮ ಮಕ್ಕಳು' - ತಂದೆ-ತಾಯಿಗಳ ಕಟ್ಟುನಿಟ್ಟಿನಲ್ಲಿ ಮಕ್ಕಳ ಪಾಡನ್ನು ಪ್ರತಿಬಿಂಬಿಸಿದ ಚಿತ್ರ. ಹಿರಿಯರಾದ ಆರ್.ನಾಗೇಂದ್ರರಾಯರು ನಿರ್ದೇಶಕರು. ಚಂದ್ರಶೇಖರ್, ನಾಗರಾಜ್, ಅಮರನಾಥ್, ರೋಹಿಣಿ, ಸರೋಜ ಹಾಗೂ ಸರ್ವಮಂಗಳ ಈ ಚಿತ್ರದಲ್ಲಿ ನಟಿಸಿದ ಬಾಲಕಲಾವಿದರು. ಈ ಚಿತ್ರ ೧೯೬೯ರಲ್ಲಿ ತೆರೆಕಂಡಿತು.

೧೯೭೫ರಲ್ಲಿ ತೆರೆಕಂಡ ಶ್ರೀಧರ್ ಚಿತ್ರ ಅವರ 'ಜಾಗೃತಿ' ಐದುನೂರಕ್ಕೂ ಹೆಚ್ಚು ಮಕ್ಕಳು ಅಭಿನಯಿಸಿದ ಚಿತ್ರ. 'ತಾಯಿನಾಡು' ಪತ್ರಿಕೆಯಲ್ಲಿ ವಾಣಿಜ್ಯ ವಿಭಾಗದ ಉಪಸಂಪಾದಕರಾಗಿದ್ದ ಶ್ರೀಧರ್ ಸಾಹಿತ್ಯ ನೀಡಿ, ನಿರ್ದೇಶಿಸಿದರು. ಅಪರ್ಣಾ, ಜಯಂತ್, ಕಾಂತಿ, ರಾಜು, ರವೀಂದ್ರ, ಸಂಧ್ಯಾ, ರಮಾ, ಸೌಮ್ಯ, ಪದ್ಮಜಾ, ಕೌಸಲ್ಯ, ದೀಪಕ್ ಮತ್ತಿತರ ಬಾಲಕಲಾವಿದರು ಪ್ರಧಾನ ಭೂಮಿಕೆಯಲ್ಲಿ ಪಾಲ್ಗೊಂಡಿದ್ದರು.

ಜನಪದ ಸಾಹಿತಿ ಮತಿಘಟ್ಟ ಕೃಷ್ಣಮೂರ್ತಿಯವರ 'ಕಳಸಾಪುರದ ಹುಡುಗರು' ಆಧಾರಿತ ಕಿರಿಯರನ್ನು ದೃಷ್ಟಿಯಲ್ಲಿರಿಸಿಕೊಂಡು ನಿರ್ಮಾಣವಾದ ಚಿತ್ರದಲ್ಲಿ ಜಯಸಿಂಹ, ಮಂಜುನಾಥ್, ಉಮೇಶ್, ರಾಧಾ, ಪಾಂಡು, ನಾಗರಾಜ, ಶಿರೂರ್, ರಮೇಶ್ ಕಲೇಶ್‌ಪುರ, ಶ್ರೀಕಾಂತ್ ಮತ್ತಿತರ ಕಿರಿಯರು ಪ್ರಧಾನ ಪಾತ್ರಗಳಲ್ಲಿದ್ದರು.

ಎಪ್ಪತ್ತರ ದಶಕದಲ್ಲಿ ಅಪಾರ ಜನಪ್ರಿಯತೆ ಗಳಿಸಿದ್ದ ಬಾಲಕಲಾವಿದ ಬೇಬಿ ರಾಣಿಯನ್ನೇ ಪ್ರಧಾನ ಪಾತ್ರವಾಗಿಟ್ಟುಕೊಂಡು ಶ್ರೀರಾಣಿ ಕಂಬೈನ್ಸ್ ಅವರು ನಿರ್ಮಿಸಿದ 'ಭಲೇ ರಾಣಿ' ಪುಟಾಣಿಯೊಬ್ಬಳ ಸಾಹಸದ ಕಥೆಯನ್ನು ಹೊಂದಿದ್ದಿತು. ೧೯೭೨ರಲ್ಲಿ ತೆರೆಕಂಡ ಈ ಚಿತ್ರವನ್ನು ವಿಜಯಾ ಸತ್ಯಂ ನಿರ್ದೇಶಿಸಿದರು.

'ನಾಗರ ಹೊಳೆ'ಯ ಅಭೂತಪೂರ್ವ ಯಶಸ್ಸಿನ ನಂತರ ನಿರ್ಮಾಪಕರಿಗೆ ಮಕ್ಕಳ ಚಿತ್ರಗಳು ಕೂಡ ಆರ್ಥಿಕ ಯಶಸ್ಸು ತರಬಲ್ಲವು ಎಂಬುದರ ಬಗ್ಗೆ ಭರವಸೆ ಮೂಡಿತ್ತು. ಈ ಭರವಸೆಯೇ ನಂತರದ ೮ ವರ್ಷಗಳಲ್ಲಿ ಹಲವಾರು ಮಕ್ಕಳ ಚಿತ್ರಗಳ ನಿರ್ಮಾಣಕ್ಕೆ ಕಾರಣವಾಗಿದೆ. ಇಷ್ಟಾಗಿ ಸಂಪೂರ್ಣವಾಗಿ ಮಕ್ಕಳನ್ನೇ ಮುಖ್ಯವಾಗಿಟ್ಟುಕೊಂಡು ಚಿತ್ರ ತಯಾರಿಸುವ ಧೈರ್ಯ ಬಹಳ ಮಂದಿಗೆ ಇರಲಿಲ್ಲ. ಮಕ್ಕಳೊಂದಿಗೆ ಪ್ರಾಣಿಗಳನ್ನು ಹೊಂದಿಸಿ, ನಾಯಕ-ನಾಯಕಿಯರ ನಡುವೆ ಅಷ್ಟಿಷ್ಟು ಪ್ರೇಮ ಪ್ರಣಯವನ್ನು ಬೆರಸಿ ಕಥೆಗಳನ್ನು ಹೆಣೆದರು.

ಕನ್ನಡದಲ್ಲಿ ಮಕ್ಕಳ ಚಿತ್ರಗಳ ಬಗ್ಗೆ ಹೇಳುವಾಗ ಚಿಕ್ಕಮಗಳೂರಿನವರಾದ ಸದಭಿರುಚಿಯ ಚಿತ್ರಗಳ ನಿರ್ಮಾಪಕ ಎಂ.ಕೆ.ಬಾಲಾಜಿಸಿಂಗ್ ಅವರ ಬಗ್ಗೆ ಹೇಳಬೇಕಾಗುತ್ತದೆ. ಇವರು ಯಾವುದೇ ಬಗೆಯ ಚಿತ್ರ ತಯಾರಿಸಿದರೂ ಅದರಲ್ಲಿ ತಮ್ಮ ಕಾಳಜಿಯೊಂದರ ಅಂಶ ಇರುವಂತೆ ನೋಡಿಕೊಳ್ಳುತ್ತಿದ್ದರು. ಇವರ ವರುಣಾ ಫಿಲಂಸ್ ಲಾಂಛನದಲ್ಲಿ ನಿರ್ಮಾಣವಾದ 'ಪುಟಾಣಿ ಏಜೆಂಟ್ ೧, ೨, ೩' ಹಾಗೂ 'ಪ್ರಚಂಡ ಪುಟಾಣಿಗಳು' ಅವರದೇ ಕಥೆ ಆಧರಿಸಿದ್ದು ಅಪೂರ್ವ ಯಶಸ್ಸು ಗಳಿಸಿದವು. 'ಪ್ರಚಂಡ ಪುಟಾಣಿಗಳು' ಹಿಂದಿ ಭಾಷೆಯಲ್ಲಿ 'ಅನ್‌ಮೋಲ್ ಸಿತಾರೆ' ಎಂಬ ಹೆಸರಿನಲ್ಲಿ ನಿರ್ಮಾಣವಾಯಿತು. ಈ ಚಿತ್ರದ ಹಿಂದಿ ಅವತರಣಿಕೆಯನ್ನು ಗೀತಪ್ರಿಯ ಅವರೇ ನಿರ್ದೇಶಿಸಿದ್ದು ವಿಶೇಷ. ಎಂ.ಪಿ.ಶಂಕರ್ ಮೊದಲ ಬಾರಿಗ ಈ ಹಿಂದಿ ಅವತರಣಿಕೆಯಲ್ಲಿ ಅಭಿನಯಿಸಿದರು. ಇದರೊಂದಿಗ ಕನ್ನಡದ ಮತ್ತೊಬ್ಬ ಬಾಲಕಲಾವಿದ ಮಾ| ನವೀನ್ ಕೂಡ ಹಿಂದಿ ಅವತರಣಿಕೆಯಲ್ಲಿ ಕಾಣಿಸಿಕೊಂಡ. ಈ ಚಿತ್ರ ಹಾಗೂ 'ಪುಟಾಣಿ ಏಜೆಂಟ್ ೧, ೨, ೩' ಪ್ರಾಣಿದಯಾ ಸಂಘದ (ಎಸ್.ಪಿ.ಸಿ.ಎ) ಕರುಣಾ ಪ್ರಶಸ್ತಿ ಗಳಿಸಿದವು. ಬಾಲ್ಯದಿಂದಲೇ ಪ್ರಾಣಿಗಳ ಬಗ್ಗೆ ಪ್ರೀತಿ ಮತ್ತು ಕರುಣೆಯನ್ನು ಬೆಳೆಸುವ ಕಥಾ ಭಾಗಗಳನ್ನೊಳಗೊಂಡ ಚಿತ್ರಗಳಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತದೆ. ಈ ಮೊದಲು 'ಗಂಧದ ಗುಡಿ', 'ರಾಮ ಲಕ್ಷ್ಮಣ', 'ದಂಗೆಯೆದ್ದ ಮಕ್ಕಳು' ಚಿತ್ರಗಳು ಈ ಪ್ರಶಸ್ತಿಯನ್ನು ಪಡೆದಿದ್ದವು. ಈ ಎಲ್ಲಾ ಚಿತ್ರಗಳಲ್ಲಿ ಪುಟಾಣಿ ಮಕ್ಕಳು, ನಾಯಿ ಮತ್ತು ಕೋತಿಯೊಡನೆ ವರ್ತಿಸುವುದು ಆದರ್ಶ ಪ್ರಾಯವಾಗಿದೆ ಎಂದು ಸಮಿತಿ ಅಭಿಪ್ರಾಯ ವ್ಯಕ್ತಪಡಿಸಿತ್ತು. ಇದಲ್ಲದೆ ಬಾಲಾಜಿಸಿಂಗ್ ಅಂಗವಿಕಲರ ವರ್ಷದ ಕೊಡುಗೆಯಾಗಿ 'ಪ್ರೀತಿಸಿ ನೋಡು' ಎಂಬ ಚಿತ್ರವನ್ನು ತಯಾರಿಸಿದರು. ಈ ಚಿತ್ರದ ಮೊದಲ ದಿನದ ಗಳಿಕೆಯನ್ನು ಮತ್ತು ಚಿತ್ರದಲ್ಲಿ ನಾಯಕಿ ಬಳಸಿದ ಗಾಲಿ ಕುರ್ಚಿಯನ್ನು 'ಅಂಗವಿಕಲರ ಸಮಾನಾವಕಾಶ ಸಂಘ'ಕ್ಕೆ ಕೊಡುಗೆಯಾಗಿ ನೀಡಿದರು.

'ಸ್ಟಾರ್' ಬಾಲನಟರಾಗಿದ್ದ ಮಾ| ಸಂಜಯ್ ಹಾಗೂ ಬೇಬಿ ಇಂದಿರಾ ೧೯೮೨ರ ವೇಳೆಗೆ ತಮ್ಮ ಬಾಲ್ಯಾವಸ್ಥೆಯ ಕೊನೆಯ ದಿನಗಳಲ್ಲಿದ್ದರು. ಪ್ರತಿಭಾವಂತೆಯಾದ ಬೇಬಿ ಇಂದಿರಾ ಅಲ್ಲಿಯವರೆಗೆ ಎಷ್ಟು ಜನಪ್ರಿಯತೆ ಗಳಿಸಿಕೊಂಡಿದ್ದಳೆಂದರೆ ಈ ಅವಧಿಯ ಬಹುಮುಖ್ಯ ಮಕ್ಕಳ ಚಿತ್ರಗಳಲ್ಲಿ ಐದನ್ನು ಆಕೆಯ ಇಮೇಜನ್ನು ದೃಷ್ಟಿಯಲ್ಲಿರಿಸಿಕೊಂಡೇ ಯೋಜಿಸಲಾಗಿತ್ತು. ಇಷ್ಟಿದ್ದರೂ ಈ ಚಿತ್ರಗಳಲ್ಲಿ ಇಂದಿರಾಗೆ ಜೊತೆಯಾಗಿ ಮೂವರು ಅಥವಾ ಅದಕ್ಕಿಂತ ಹೆಚ್ಚು ಮಂದಿ ಬಾಲ ಕಲಾವಿದರು ಇದ್ದರು. ೧೯೯೩ರಲ್ಲಿ ಮಾ| ರಾಘವೇಂದ್ರ ಅಭಿನಯದ 'ಚಿನ್ನಾರಿ ಮುತ್ತ' ಹಾಗೂ ೧೯೯೨ರಲ್ಲಿ ತೆರೆಕಂಡ ಬೇಬಿ ಶ್ಯಾಮಿಲಿ ಅಭಿನಯದ 'ಶಾಂಭವಿ' ಚಿತ್ರಗಳು ಬರುವವರೆಗೆ ಕನ್ನಡ ಬೆಳ್ಳಿತೆರೆಯಲ್ಲಿ ಬಾಲನಾಯಕ ನಟನಾಗಿ ಮಿನುಗಿದ ದಾಖಲೆ ಪುನೀತ್‌ನದು ಮಾತ್ರ. 'ಚಿನ್ನಾರಿ ಮುತ್ತ'ದಲ್ಲಿ ಮುಖ್ಯಪಾತ್ರಕ್ಕೆ ನಾಲ್ಕಾರು ಮಂದಿ ಪ್ರತಿಭಾವಂತ ಬಾಲನಟರು ಬೆಂಗಾವಲಾಗಿದ್ದದ್ದು ಹಾಗೂ ಶ್ಯಾಮಿಲಿ ಅಭಿನಯದ ಚಿತ್ರಗಳಲ್ಲಿ ನಾನಾ ಬಗೆಯ ಪ್ರಾಣಿಗಳ ವಿಶೇಷ ಚಮತ್ಕಾರಗಳು ಅನಿವಾರ್ಯವಾಗಿದ್ದುದನ್ನು ಗಮನಿಸಿದರೆ ಮಾ|ಪುನೀತ್ ಪಡೆದುಕೊಂಡಿದ್ದ ಜನಾದರಣೆಯ ವ್ಯಾಪ್ತಿ ತಿಳಿಯುತ್ತದೆ. ಪುನೀತ್ ತನ್ನ ಪಾತ್ರಕ್ಕೆ ತಾನೇ ಹಾಡಿದ ಹಾಡುಗಳು ಕೂಡ ಅತ್ಯಂತ ಜನಪ್ರಿಯತೆ ಪಡೆದಿದ್ದರಿಂದ ರಾಜ್ ಸಂಸ್ಥೆ ಪುನೀತ್ ನಾಯಕತ್ವದಲ್ಲಿ 'ಭಕ್ತ ಪ್ರಹ್ಲಾದ', 'ಎರಡು ನಕ್ಷತ್ರಗಳು', 'ಯಾರಿವನು ?', 'ಬೆಟ್ಟದ ಹೂವು' ಚಿತ್ರಗಳನ್ನು ನಿರ್ಮಿಸಲು ಸಾಧ್ಯವಾಯಿತು. 'ಬೆಟ್ಟದ ಹೂವು' ಅನ್ನು ಬಿಟ್ಟರೆ ಉಳಿದ ಚಿತ್ರಗಳಲ್ಲಿ ರಾಜಕುಮಾರ್ ಅವರು ಅಭಿನಯಿಸಿದ್ದರೂ ಅವು ನೆಪ ಮಾತ್ರದ ಪುಟ್ಟ ಪಾತ್ರಗಳು. 'ಬೆಟ್ಟದ ಹೂವು' ಪುನೀತ್‌ನ ಪೂರ್ಣ ಪ್ರಮಾಣದ ನಾಯಕತ್ವದ ಚಿತ್ರ. ಮುಖ್ಯವಾಗಿ ಆ ವಯಸ್ಸಿನಲ್ಲೇ ದ್ವಿಪಾತ್ರದಲ್ಲಿ ಅಭಿನಯಿಸಿ ಮಾಸ್ಕ್ ಇತ್ಯಾದಿ ತಂತ್ರಗಳನ್ನು ಎದುರಿಸಿದ ಪುನೀತ್‌ಗೆ 'ಎರಡು ನಕ್ಷತ್ರಗಳು' ಚಿತ್ರಕ್ಕೆ ಪ್ರಶಸ್ತಿಯೂ ಬಂದಿತ್ತು. 'ಬೆಟ್ಟದ ಹೂವು' ಚಿತ್ರದಲ್ಲಿ ಅಭಿನಯಿಸುವವರೆವಿಗೂ ಮಾ|ಲೋಹಿತ್ ಎಂದೇ ಚಿರಪರಿಚಿತನಾಗಿದ್ದ ಬಾಲನಟ ಈ ಚಿತ್ರದಲ್ಲಿ ಮಾ|ಪುನೀತ್ ಎಂದು ಪುನರ್ನಾಮಕರಣ ಪಡೆದುದು ಗಮನಾರ್ಹ.

ಇದೇ ಅವಧಿಯಲ್ಲಿ ಪುನೀತ್‌ನಷ್ಟೇ ಜನಪ್ರಿಯತೆ ಗಳಿಸಿದ್ದ ಮತ್ತೊಬ್ಬ ಪ್ರತಿಭಾವಂತ ಬಾಲನಟ ಮಾ|ಮಂಜುನಾಥ್‌ಗೆ ಹೀಗೆ ನಿರ್ಮಾಣ ಸಂಸ್ಥೆಯೊಂದರ

ಬೆಂಬಲ ಇರಲಿಲ್ಲ. ಕಾರ್ಖಾನೆಯ ಕಾರ್ಮಿಕರೊಬ್ಬರ ಮಗ. ಆತನ ಚಿತ್ರರಂಗದ ಬೇಡಿಕೆ ಸಂಪೂರ್ಣವಾಗಿ ಅವನ ಪ್ರತಿಭೆಯನ್ನಷ್ಟೇ ಅವಲಂಬಿಸಿತ್ತು. ಮೂರನೆಯ ವಯಸ್ಸಿಗೆ ಚಿತ್ರರಂಗಕ್ಕೆ ಅಡಿಯಿಟ್ಟ ಪುಟಾಣಿ ಮಂಜುನಾಥ್ ೮ ವರ್ಷದೊಳಗೆ ೨೮ ಚಿತ್ರಗಳಲ್ಲಿ ವೈವಿಧ್ಯಮಯ ಪಾತ್ರಗಳನ್ನು ಅಭಿನಯಿಸಿದ. ಇದರಲ್ಲಿ ನಾಲ್ಕು ಚಿತ್ರಗಳು ಶತದಿನದ ಪ್ರದರ್ಶನ ಕಂಡವು. ನಂತರ ಮಂಜುನಾಥ್ ಬೆಳವಣಿಗೆ ದಕ್ಷಿಣ ಭಾರತವಲ್ಲದೆ ಉತ್ತರಕ್ಕೂ ಹಬ್ಬಿತು. ಕನ್ನಡ, ತೆಲುಗು, ತಮಿಳು, ಮಲೆಯಾಳಂ, ಹಿಂದಿ ಚಿತ್ರಗಳಲ್ಲಿ ಅಭಿನಯಿಸಿ ಕನ್ನಡದ ಮೊದಲ ಪಂಚಭಾಷಾ ಬಾಲತಾರೆ ಎಂಬ ಖ್ಯಾತಿಗೆ ಪಾತ್ರನಾದ. ಗಿರೀಶ್ ಕಾರ್ನಾಡ್, ಶಂಕರ್‌ನಾಗ್, ನಾಗಾಭರಣ, ಕೆ.ವಿಶ್ವನಾಥ್‌ರಂಥ ದಿಗ್ಗಜರ ಚಿತ್ರಗಳಲ್ಲಿ ಅಭಿನಯಿಸಿದ ಭಾಗ್ಯಶಾಲಿ ಈತ. ಶಂಕರ್‌ನಾಗ್‌ರ ಅಚ್ಚುಮೆಚ್ಚಿನ ಬಾಲಕಲಾವಿದನಾಗಿದ್ದುದು ಮಂಜುನಾಥ್ ಹೆಗ್ಗಳಿಕೆ. 'ಜನ್ಮ ಜನ್ಮದ ಅನುಬಂಧ', 'ಎಸ್.ಪಿ.ಸಾಂಗ್ಲಿಯಾನ', 'ನೋಡಿ ಸ್ವಾಮಿ ನಾವಿರೋದು ಹೀಗೆ', 'ಪರಮೇಶಿ ಪ್ರೇಮ ಪ್ರಸಂಗ', 'ಬ್ಯಾಂಕರ್ ಮಾರ್ಗಯ್ಯ', ಹಿಂದಿಯ 'ಉತ್ಸವ್' ಮುಂತಾದವು ಮಂಜುನಾಥ್‌ನ ಮುಖ್ಯ ಚಿತ್ರಗಳು. ಇಂಥ ವಿಶಿಷ್ಟ ಪ್ರತಿಭೆಯ ಬಾಲಕಲಾವಿದನ ಪುಟ್ಟ ಬಾಯಿಯಲ್ಲಿ ರವಿಚಂದ್ರನ್ ಒಳಗೊಂಡಂತೆ ಬಹಳ ಮಂದಿ ನಿರ್ಮಾಪಕರು ಅಗ್ಗದ ಮಾತುಗಳನ್ನು ಹೇಳಿಸುತ್ತಾ ಹಣಗಳಿಕೆಯ ದಾಳವನ್ನಾಗಿ ಬಳಸಿದರು. 'ರಣಧೀರ' ಚಿತ್ರದಲ್ಲಿ ಈತನನ್ನು ಬಳಸಿಕೊಂಡ ರೀತಿ ಟೀಕೆಗಳನ್ನು ಎದುರಿಸಿತು. ಮಾ।ಮಂಜುನಾಥ್‌ಗೆ ರವಿಚಂದ್ರನ್ ಸೃಷ್ಟಿಸಿದ್ದ ಪಾತ್ರ ಸದಭಿರುಚಿಯಿಂದ ಕೂಡಿರಲಿಲ್ಲ. ಇದ್ದುದರಲ್ಲಿ ಶಂಕರ್‌ನಾಗ್‌ರವರು ಮಾತ್ರ ಈತನ ಪ್ರತಿಭೆಯನ್ನು ಸಮರ್ಥವಾಗಿ ಬಳಸಿಕೊಂಡರು.

ಬಾಲಕಲಾವಿದರ ಬಗ್ಗೆ ಬರೆಯುವಾಗ ಇವರು ಕನ್ನಡಕ್ಕೆ ತಂದುಕೊಟ್ಟ ಪ್ರಶಸ್ತಿಗಳ ಹಿರಿಮೆಯನ್ನು ಕಡೆಗಣಿಸುವಂತಿಲ್ಲ. ರಾಷ್ಟ್ರದ ಶ್ರೇಷ್ಠ ಬಾಲನಟ ಪ್ರಶಸ್ತಿ ಪಡೆದ ಜಿ.ಎಸ್.ನಟರಾಜ್ (ಕಾಡು), ಅಜಿತ್ ಕುಮಾರ್ (ಘಟಶ್ರಾದ್ಧ), ಪುನೀತ್ (ಬೆಟ್ಟದ ಹೂವು), ವಿಶ್ವಾಸ್ ('ಕ್ರೌರ್ಯ'), ವಿಜಯ ರಾಘವೇಂದ್ರ (ಕೊಟ್ರೇಶಿ ಕನಸು) ಮತ್ತಿತರ ಪ್ರತಿಭಾವಂತ ಬಾಲಕಲಾವಿದರಿದ್ದುದು ಹೆಮ್ಮೆಯ ವಿಷಯ.

ಬಾಲನಟರ ಕುರಿತು ಬರೆಯುವಾಗ ಅತ್ಯಂತ ಮುಖ್ಯವಾದ ಇನ್ನೊಂದು ಅಂಶವನ್ನು ಪ್ರಸ್ತಾಪಿಸಬೇಕಾಗುತ್ತದೆ. ಚಿತ್ರಗಳಿಗೆ ಮಾತು ಬಂದ ಆರಂಭದಿಂದಲೂ ಆರಂಭದ 'ಭಕ್ತ ಧ್ರುವ'ವೊಂದನ್ನು ಹೊರತುಪಡಿಸಿ ಬಾಲಕಲಾವಿದರ ಅಭಿನಯಕ್ಕೆ ಹಿನ್ನೆಲೆಗಾಯನವನ್ನು ಹಿರಿಯ ಗಾಯಕರೇ ನೀಡುತ್ತಿದ್ದರು. ತಮ್ಮ ಸಹಜ ಧ್ವನಿಯನ್ನು ಮಕ್ಕಳ ಧ್ವನಿಯಂತೆ ಪರಿವರ್ತಿಸಿಕೊಂಡು ಧ್ವನಿ ನೀಡುವ, ಹಾಡುವ ಪರಿಪಾಠವೇ ರೂಢಿಯಲ್ಲಿತ್ತು. ಈ ಪರಂಪರೆ ನಿಂತದ್ದು ಬಾಪಾ ಮೂವೀಸ್‌ನ ನಿರ್ಮಾಪಕ, ನಿರ್ದೇಶಕ ಎ.ಎಂ.ಸಮೀವುಲ್ಲಾ ಅವರು ತಮ್ಮ 'ಚಿನ್ನಾ ನಿನ್ನ ಮುದ್ದಾಡುವೆ' ಚಿತ್ರದ 'ದೇಹಕೆ ಉಸಿರೇ ಸದಾ ಭಾರ...' ಗೀತೆಗೆ ಸಂಗೀತ ನಿರ್ದೇಶಕ ಸಲೀಲ್ ಚೌಧರಿ ಅವರ ಮಗಳು ಪಿಂಕು ಚೌಧುರಿಯಿಂದ ಹಾಡಿಸಿದಾಗ. ಪಿಂಕು ಚೌಧುರಿ ನಂತರದ ದಿನಗಳಲ್ಲಿ ಅತ್ಯಂತ ಜನಪ್ರಿಯ ಗಾಯಕಿಯಾಗಿ ಬೆಳೆದಳು. ಹಿರಿಯ ಗಾಯಕ-ಗಾಯಕಿಯರು ಎಳೆಯರಿಗಾಗಿ ಉತ್ತಮ ರೀತಿಯಲ್ಲಿಯೇ ಹಾಡುತ್ತಿದ್ದರೂ ಭಾವಾಭಿವ್ಯಕ್ತಿ, ಪ್ರಸ್ತುತಿ ಹಾಗೂ ಪರಿಳಿತಗಳಲ್ಲಿ ಪಕ್ವತೆ ಮತ್ತು ಪರಿಣತ ಶೈಲಿ ಇಣುಕುತ್ತಿತ್ತು. ಈ ಹಾಡುಗಳು ಇಂಪಾಗಿರುತ್ತಿದ್ದರೂ ಎಲ್ಲೋ ಒಂದು ಕಡೆ ಮಕ್ಕಳು ಇಷ್ಟೊಂದು ಸಮರ್ಥವಾಗಿ ಹಾಡುವ ಬಗ್ಗೆ ಅನುಮಾನವೂ, ಅಸಹಜತೆಯೂ ತೋರಿದ್ದಿದೆ. ಮಕ್ಕಳ ಹಾಡುಗಳನ್ನು ಮಕ್ಕಳೇ ಹಾಡಿದಾಗ ಹಸಿಹಸಿಯಾಗಿದ್ದರೂ ಅದು ಅತ್ಯಂತ ಸಹಜವಾಗಿದ್ದು ಕೇಳಲು ಇಷ್ಟವಾಗುತ್ತದೆ. ಸಹಜ ಹಾಡುಗಾರಿಕೆಯ ಇಂಥ ಸಂಪೂರ್ಣ ಯಶಸ್ಸು ಕನ್ನಡ ಚಿತ್ರ ಸಂಗೀತ ಇತಿಹಾಸದಲ್ಲಿ ಪುನೀತ್‌ಗೆ ದಕ್ಕಿತು. 'ಕಾಣದಂತ ಮಾಯವಾದನೋ ನಮ್ಮ ಶಿವ', 'ಬಾನದಾರಿಯಲ್ಲಿ ಸೂರ್ಯ ಜಾರಿ ಹೋದ', 'ಆಕಾಶವೇ ಹಾರಾಡುವ, ಆನಂದದಿ ತೇಲಾಡುವ', 'ಬೆಟ್ಟದ ಹೂವು' ಚಿತ್ರದ 'ಬಿಸಿಲೇ ಬರಲಿ, ಮಳೆಯೇ ಬರಲಿ' ಗೀತೆಗಳು ಸಂಗೀತ ಪ್ರಿಯರ ಮೆಚ್ಚುಗೆ ಪಡೆದು ಆಕಾಶವಾಣಿಯಲ್ಲಿ ಅತ್ಯಂತ ಬೇಡಿಕೆ ಪಡೆದ ಗೀತೆಗಳಾದವು. ಪುನೀತ್‌ನ ಈ ಯಶಸ್ಸು 'ರಣಧೀರ'ದಲ್ಲಿ ಮಾ।ಮಂಜುನಾಥ್ ಕೈಲಿ 'ಏನ್ ಹುಡ್ಗಿರೋ ಯಾಕ್ಹಿಂಗ್ ಆಡ್ತೀರೋ...' ಹಾಡನ್ನು ಹಾಡಿಸಲು ಪ್ರೇರಣೆಯಾಯಿತು. ಇದೇ ನಂತರದ ವರ್ಷಗಳಲ್ಲಿ 'ಚಿನ್ನಾರಿ ಮುತ್ತ', 'ನಾವಿದ್ದೀವಿ ಎಚ್ಚರಿಕೆ' ಹಾಗೂ ಬೇಬಿ ಶ್ಯಾಮಿಲಿ ಅಭಿನಯದ ಚಿತ್ರಗಳಲ್ಲಿ ಮಕ್ಕಳಿಂದಲೇ ಹಾಡಿಸುವ ಹೊಸ ಪರಂಪರೆಗೆ ನಾಂದಿ ಹಾಡಿತು.

ಮಾ।ಮಂಜುನಾಥ್‌ಗೆ ಹೋಲಿಸಿದರೆ ಪುನೀತ್ ಅಭಿನಯದ ಚಿತ್ರಗಳ ಸಂಖ್ಯೆ ತುಂಬಾ ಕಡಿಮೆ. ಬೇಬಿ ರೇಖಾ ಬೇಡಿಕೆಯ ಉತ್ತುಂಗ ತಲುಪಿ ತೆಲುಗು, ತಮಿಳು, ಹಿಂದಿ ಸೇರಿದಂತೆ ೬೦ ಚಿತ್ರಗಳಲ್ಲಿ ನಟಿಸಿದ ಪ್ರತಿಭಾವಂತ ಬಾಲಕಿ. ಮೊದಲ ಚಿತ್ರದಲ್ಲಿ ಅಭಿನಯಿಸಿದಾಗ ಈಕೆ ಕೇವಲ ನಾಲ್ಕು ವರ್ಷದವಳು. ಕೆಲವಾರು ಚಿತ್ರಗಳಲ್ಲಿ ಹುಡುಗನ ಪಾತ್ರದಲ್ಲಿಯೂ ಅಭಿನಯಿಸಿದ ಈಕೆ ತೆಲುಗು, ತಮಿಳು ಭಾಷೆಗಳನ್ನೂ ಬಲ್ಲವಳಾಗಿದ್ದಳು. ಈಕೆಯ ಅತ್ಯಂತ ಜನಪ್ರಿಯ ಚಿತ್ರಗಳಲ್ಲಿ 'ಭಕ್ತ ಸಿರಿಯಾಳ' ಕೂಡ ಒಂದು. ಇದು ತೆಲುಗಿನಲ್ಲಿ ಡಬ್ ಆಗಿ ೨೦೦ ದಿನಗಳ ಪ್ರದರ್ಶನ ಕಂಡಿತು. ತೆಲುಗಿನಲ್ಲಿ ತಯಾರಾದ 'ತಾಯಿಯ ನುಡಿ' ಶತದಿನ ಪ್ರದರ್ಶನ ಕಂಡಿತು. ಈ ಎರಡು ಚಿತ್ರಗಳ ಯಶಸ್ಸು ರೇಖಾಳಿಗೆ ತೆಲುಗಿನಲ್ಲೂ ಅವಕಾಶಗಳನ್ನು ಸೃಷ್ಟಿಸಿತು. 'ಭಕ್ತ ಸಿರಿಯಾಳ' ಮಾತ್ರವಲ್ಲದೆ 'ಕುಂಕುಮ ರಕ್ಷೆ', 'ವಂಶ ಜ್ಯೋತಿ', 'ಭಾಗ್ಯವಂತ', 'ಸಿಂಹದ ಮರಿ ಸೈನ್ಯ', 'ಮಧುರ ಸಂಗಮ', 'ಗಂಡು ಭೇರುಂಡ', 'ಕೆರಳಿದ ಸಿಂಹ' ಮುಂತಾದ ಜನಪ್ರಿಯ ಚಿತ್ರಗಳಲ್ಲಿ ಈಕೆಗೆ ಗಮನಾರ್ಹ ಪಾತ್ರಗಳಿವೆ. ಹಾಸ್ಯ, ಅಣಕ, ವೈಯ್ಯಾರ, ವ್ಯಂಗ್ಯ, ಬಳುಕು, ಥಳುಕು - ಹೀಗೆ ಯಾವುದನ್ನೇ ಹೇಳಿಕೊಟ್ಟರೂ ತಕ್ಷಣ ಅಭಿನಯಿಸುತ್ತಿದ್ದ ರೇಖಾ ನಿರ್ದೇಶಕರ ಅಚ್ಚುಮೆಚ್ಚಿನ ಕಣ್ಮಣಿಯಾಗಿದ್ದಳು. ಪುನೀತ್‌ನಂತೆ ರೇಖಾಳ ಕುಟುಂಬ ಚಿತ್ರರಂಗದ ಹಿನ್ನೆಲೆಯುಳ್ಳದ್ದು. ಈಕೆಯ ತಂದೆ ಶ್ರೀರಾಮ್ ನಿರ್ಮಿಸಿದ 'ಋತುಗಾನ' ಚಿತ್ರಕ್ಕೆ ೧೯೭೬-೭೭ರ ರಾಜ್ಯದ ನಾಲ್ಕನೇ ಅತ್ಯುತ್ತಮ ಚಿತ್ರ ಪ್ರಶಸ್ತಿ ಲಭಿಸಿದೆ. ಬೇಬಿ ರೇಖಾ ತನ್ನ ಹತ್ತನೇ ವಯಸ್ಸಿನಲ್ಲೇ 'ತುಳಸೀದಳ', 'ಸಿಂಹದ ಮರಿ ಸೈನ್ಯ', ಚಿತ್ರಗಳ ಅಭಿನಯಕ್ಕಾಗಿ ಎರಡು ಬಾರಿ ಅತ್ಯುತ್ತಮ ಬಾಲನಟಿ ಪ್ರಶಸ್ತಿ ಪಡೆದಿದ್ದಾಳೆ. ಚಿತ್ರಗಳ ಸಂಖ್ಯೆಯಲ್ಲಿ ೬೦ರ ದಾಖಲೆಯಿರುವುದು ಬೇಬಿ ರೇಖಾಳದ್ದು ಮಾತ್ರ.

ಇದೇ ಅವಧಿಯಲ್ಲಿ ಅಪ್ರತಿಮ ಯಶಸ್ಸು ಗಳಿಸಿದ ಇನ್ನೊಬ್ಬ ಬಾಲನಟನೆಂದರೆ ಮಾ।ಅರ್ಜುನ್. ಖ್ಯಾತ ನೃತ್ಯಪಟುಗಳಾದ ಯು.ಕೆ.ಅರುಣ್-ಸವಿತಾ ಅರುಣ್‌ರ ಪುತ್ರನೀತ. ಏಳನೆಯ ವಯಸ್ಸಿಗೆ ೨೯ ಚಿತ್ರಗಳಲ್ಲಿ ಅಭಿನಯಿಸಿದ್ದಲ್ಲದೆ ಕನ್ನಡ, ತೆಲುಗು, ತಮಿಳು, ಹಿಂದಿ ಭಾಷೆಗಳಲ್ಲಿ ನಟಿಸಿದ ಕೀರ್ತಿಗೂ ಪಾತ್ರನಾದ. ಮಾ।ಅರ್ಜುನ್ ಅಭಿನಯಿಸಿದ ಚಿತ್ರಗಳಲ್ಲಿ 'ಸಮಯದ ಗೊಂಬೆ', 'ಕವಿರತ್ನ ಕಾಳಿದಾಸ', 'ಚಕ್ರವ್ಯೂಹ',


(ಚಿತ್ರ ೨೧) 'ಬ್ಯಾಂಕರ್ ಮಾರ್ಗಯ್ಯ' ಮಾ।ಮಂಜುನಾಥ್


(ಚಿತ್ರ ೨೨) 'ಪ್ರಥಮ ಉಷಾಕಿರಣ' - ಮಾ।ಧಮರುಗೇಂದ್ರ


(ಚಿತ್ರ ೨೩) 'ಜಗದೀಶ್ವರಿ' ಬೇಬಿ ಶ್ಯಾಮಿಲಿ


(ಚಿತ್ರ ೨೪) 'ಸಿಂಹದ ಮರಿ ಸೈನ್ಯ' - ಮಾ।ಪ್ರಸನ್ನ


(ಚಿತ್ರ ೨೫) 'ಪಲ್ಲವಿ ಅನುಪಲ್ಲವಿ' - ಮಾ।ರೋಹಿತ್



(ಚಿತ್ರ ೨೬) 'ನಮ್ಮೂರ ಮಂದಾರ ಹೂವೇ' - ಮಾ|ವಿನಾಯಕ ಜೋಷಿ



(ಚಿತ್ರ ೨೭) ಮಾ|ಅರ್ಜುನ್



(ಚಿತ್ರ ೨೮) ಮಾ|ಆನಂದ್



(ಚಿತ್ರ ೨೯) 'ಹೂಮಳೆ' - ಬೇಬಿ ಹಿಮಾ



(ಚಿತ್ರ ೩೦) 'ಕೊಟ್ರೇಶಿ ಕನಸು' - ಮಾ|ವಿಜಯ ರಾಘವೇಂದ್ರ

'ನೀ ಬರೆದ ಕಾದಂಬರಿ', 'ಆಸೆಯ ಬಲೆ' ಮುಂತಾದ ಚಿತ್ರಗಳು ಇದ್ದು ಹಲವು ಶತದಿನ ಹಾಗೂ ರಜತೋತ್ಸವ ಆಚರಿಸಿವೆ. 'ನೀ ಬರೆದ ಕಾದಂಬರಿ' ತಮಿಳು ಅವತರಣಿಕೆಯಲ್ಲಿ ರಜನೀಕಾಂತ್-ಶ್ರೀದೇವಿಯವರೊಂದಿಗೆ ನಟಿಸಿದ ಹೆಗ್ಗಳಿಕೆ ಈತನದು.

'ಜನ್ಮ ಜನ್ಮದ ಅನುಬಂಧ' ಮೂಲಕ ಪರಿಚಿತನಾದ ಮಾ|ರೋಹಿತ್ ಖ್ಯಾತ ನಾಯಕನಟ ಶ್ರೀನಾಥ್‌ರ ಪುತ್ರ. ಪುನೀತ್‌ನಂತೆ ರೋಹಿತ್ ಚಿತ್ರಗಳ ಸಂಖ್ಯೆಯೂ ಕಡಿಮೆ. ಹನ್ನೊಂದನೆಯ ವಯಸ್ಸಿಗೆ ಕೇವಲ ಎಂಟು ಚಿತ್ರಗಳಲ್ಲಿ ಪಾತ್ರ ಅಭಿನಯಿಸಿದ್ದ. ಮಣಿರತ್ನಂ ನಿರ್ದೇಶನದ ಪ್ರಥಮ ಹಾಗೂ ಏಕೈಕ ಕನ್ನಡ ಚಿತ್ರ 'ಪಲ್ಲವಿ ಅನುಪಲ್ಲವಿ'ಯಲ್ಲಿ ಅಭಿನಯಿಸಿದ್ದು ರೋಹಿತ್ ಹೆಗ್ಗಳಿಕೆ.

ಇವರೆಲ್ಲರೊಂದಿಗೆ ಮಾ|ಚೇತನ್ ಸಾಧನೆ ಕೂಡ ಮುಖ್ಯವಾಗುತ್ತದೆ. 'ಚಂಡಿ ಚಾಮುಂಡಿ' ಚಿತ್ರದಿಂದ ಎಳಸೆಯ ವಯಸ್ಸಿಗೆ ಚಿತ್ರರಂಗಕ್ಕೆ ಅಡಿಯಿಟ್ಟ ಚೇತನ್ ಕೇವಲ ಮೂರೇ ವರ್ಷದಲ್ಲಿ ೨೪ ಚಿತ್ರಗಳಲ್ಲಿ ಅಭಿನಯಿಸಿ ದಾಖಲೆ ನಿರ್ಮಿಸಿದ್ದಾನೆ. ಇದರಲ್ಲಿ ಕನ್ನಡ, ತೆಲುಗು, ತಮಿಳು ಭಾಷೆಯ ಚಿತ್ರಗಳೂ ಸೇರಿವೆ. ಟಿ.ಎಸ್.ನರಸಿಂಹನ್ ನಿರ್ದೇಶನದ 'ತ್ರಿಶೂಲ' ಮೂಲಕ ಬೆಳ್ಳಿ ತೆರೆಗೆ ಪರಿಚಿತನಾದ ಮಾ|ಜಯಂತ್ - ಅವರದೇ 'ಸಿಕ್ಕು', '೨೭ ಮಾವಳ್ಳಿ ಸರ್ಕಲ್', ರವೀಂದ್ರನಾಥ್‌ರ 'ಲಂಚ ಲಂಚ ಲಂಚ' ಚಿತ್ರಗಳಲ್ಲಿ ಅಭಿನಯಿಸಿದ. ನಂತರ ೧೯೯೬ರಲ್ಲಿ ತೆರೆಕಂಡ ರವೀಯವರ 'ಜಂಬೂ ಸವಾರಿ'ಯಲ್ಲಿ ಮುಖ್ಯ ಪಾತ್ರ ವಹಿಸಿದ್ದ.

ಈ ಎಲ್ಲಾ ಬಾಲಕಲಾವಿದರ ಸಾಧನೆ, ಚಿತ್ರಗಳ ಸಂಖ್ಯೆಯನ್ನು ಅವಲೋಕಿಸಿದಾಗ ಈ ಎರಡು ಅಂಶಗಳು ಸ್ಪಷ್ಟವಾಗುತ್ತದೆ. ಅತ್ಯಂತ ಕಡಿಮೆ ಸಂಖ್ಯೆಯ ಚಿತ್ರಗಳಲ್ಲಿ ಅಭಿನಯಿಸಿ ಅತಿಹೆಚ್ಚು ಜನಪ್ರಿಯತೆ ಗಳಿಸಿದ ಬಾಲನಟರಲ್ಲಿ ಪುನೀತ್‌ದು ಮೊದಲ ಸ್ಥಾನವಾದರೆ, ನಂತರದ್ದು ೧೯೯೧ರಲ್ಲಿ 'ಮತ್ತೆ ಹಾಡಿತು ಕೋಗಿಲೆ' ಮೂಲಕ ಚಿತ್ರರಂಗ ಪ್ರವೇಶಿಸಿ ಪ್ರಥಮ ಚಿತ್ರಕ್ಕೆ ರಾಜ್ಯ ಪ್ರಶಸ್ತಿ ಪಡೆದ ಪುಟಾಣಿ ಬೇಬಿ ಶ್ಯಾಮಿಲಿಯದು.

ರಾಜಕುಮಾರ್‌ರವರ ಸಂಸ್ಥೆ ಪುನೀತ್‌ಗೆ ಕಲ್ಪಿಸಿದ ಪಾತ್ರಗಳು ವಿಶೇಷವಾಗಿದ್ದವು. 'ಎರಡು ನಕ್ಷತ್ರಗಳು' ಚಿತ್ರದಲ್ಲಿನ ರಾಜಕುಮಾರ-ಬಡವನ ದ್ವಿಪಾತ್ರ, 'ಭಾಗ್ಯವಂತ'ದ ಕೆಟ್ಟ ನಕ್ಷತ್ರದ ಬಾಲಕ, 'ಭಕ್ತ ಪ್ರಹ್ಲಾದ'ದಲ್ಲಿ ಹೆತ್ತ ತಂದೆಯನ್ನು ಎದುರಿಸುವ ಭಕ್ತ, 'ಯಾರಿವನು ?' ಹಾಗೂ 'ಚಲಿಸುವ ಮೋಡಗಳು' ಚಿತ್ರದಲ್ಲಿ ಕೌತುಕಕ್ಕೆ ಕಾರಣವಾಗುವ ಹುಡುಗ. ಇಂಥ ವೈವಿಧ್ಯಮಯವಾದ ಸಾಹಸ, ಕರುಣೆ, ಭಕ್ತಿ, ಅಸಹಾಯಕತೆಯಂಥ ಭಾವ ಪ್ರದರ್ಶನಕ್ಕೆ ಅತಿ ಹೆಚ್ಚು ಅವಕಾಶವಿರುವ ಪಾತ್ರಗಳನ್ನು ಪುನೀತ್‌ಗಾಗಿ ಸೃಷ್ಟಿಸಲಾಯಿತು. ಇವುಗಳಲ್ಲಿ 'ಚಲಿಸುವ ಮೋಡಗಳು' ಮತ್ತು 'ಎರಡು ನಕ್ಷತ್ರಗಳು' ಚಿತ್ರದ ಪಾತ್ರಗಳಿಗೆ ಆಯಾ ವರ್ಷದ ಅತ್ಯುತ್ತಮ ಬಾಲನಟ ಪ್ರಶಸ್ತಿ ದೊರಕಿತು. ಇದು ಪುನೀತ್‌ಗಿದ್ದ ಜನಪ್ರಿಯತೆಯನ್ನು ಹೆಚ್ಚಿಸಿದ್ದಲ್ಲದೆ, ಆತನಲ್ಲಿದ್ದ ಪ್ರತಿಭೆಯನ್ನು ಹೊರಗೆಡವಲು ಇನ್ನಷ್ಟು ಕಾರಣವಾಯಿತು.

'ದಾಕ್ಷಾಯಿಣಿ' ಚಿತ್ರದಲ್ಲಿ ಅಭಿನಯಿಸಿದ್ದ ಬೇಬಿ ಶ್ಯಾಮಿಲಿಯನ್ನು ಹೊರತು ಪಡಿಸಿದರೆ ಮಿಕ್ಕ ಎಲ್ಲಾ ಚಿತ್ರಗಳ ಬಾಲನಟರು ಬೇಡಿಕೆಯ ಕಲಾವಿದರಾಗಿರಲಿಲ್ಲ. ಪಾತ್ರಗಳ ಸ್ವರೂಪ ಮತ್ತು ಅಗತ್ಯಕ್ಕೆ ತಕ್ಕಂತೆ ಅವರುಗಳ ಆಯ್ಕೆಯಾಗಿತ್ತು. ಶ್ಯಾಮಿಲಿ ೧೯೯೫ರವರೆಗೆ ಕನ್ನಡದ ೨೦ ಚಿತ್ರಗಳಲ್ಲಿ ಅಭಿನಯಿಸಿ ಚಿತ್ರವೊಂದಕ್ಕೆ ಒಂದು ಲಕ್ಷ ರೂಪಾಯಿ ಸಂಭಾವನೆ ಪಡೆದ ಏಕೈಕ ಬಾಲಕಲಾವಿದೆ ಎಂಬ ಗೌರವಕ್ಕೆ ಪಾತ್ರಳಾದಳು. ಈ ಸಂದರ್ಭದಲ್ಲಿ ಶ್ಯಾಮಿಲಿಯಂತೆಯೇ ಕೆಲವು ಪಾತ್ರಗಳಿಗೆ ಅತ್ಯಗತ್ಯವೆನಿಸುವಂತೆ ಬೆಳೆದ ಕನ್ನಡದ ಬಾಲಕಲಾವಿದ ಮಾ|ಆನಂದ್. ನಿರ್ಭೀತ ಅಭಿನಯಕ್ಕೆ ಹೆಸರಾದ ಈ ಬಾಲನಟ ಅತ್ಯಂತ ಕಡಿಮೆ ಅವಧಿಯಲ್ಲಿ ಸುಮಾರು ೨೦ ಚಿತ್ರಗಳಲ್ಲಿ ಅಭಿನಯಿಸಿದ. ಮಾ|ಮಂಜುನಾಥ್‌ನನ್ನು ಅಗ್ಗದ, ವ್ಯಾಪಾರಿ ಸೂತ್ರಕ್ಕೆ ಒಗ್ಗಿಸಿಕೊಂಡಂತೆಯೇ ಮಾ|ಆನಂದ್‌ನನ್ನು ಕೂಡ ಬಳಸಿಕೊಳ್ಳಲಾಯಿತು. ಆದರೂ ಒಂದೆರಡು ಚಿತ್ರಗಳ ಉತ್ತಮ ಅವಕಾಶಗಳಲ್ಲಿ ತನ್ನ ಪ್ರತಿಭೆ ತೋರಿದ ಆನಂದ್ 'ಗೌರಿ ಗಣೇಶ' (೧೯೯೧) ಹಾಗೂ 'ತಾಯಿ ಇಲ್ಲದ ತವರು' (೧೯೯೪) ಚಿತ್ರಗಳಿಗೆ ಎರಡು ಬಾರಿ ರಾಜ್ಯ ಪ್ರಶಸ್ತಿಯನ್ನು ಪಡೆದುಕೊಂಡ.

'ಗೌರಿ ಗಣೇಶ' (೧೯೯೧) ಚಿತ್ರದ ಬಹು ಮುಖ್ಯ ಪಾತ್ರದಲ್ಲಿ ಸಮರ್ಥವಾಗಿ ಬಳಕೆಯಾಗಿದ್ದ ಈ ಬಾಲಕನ ಪ್ರತಿಭೆ ಇತರ ಚಿತ್ರಗಳಲ್ಲಿ ದುರ್ಬಳಕೆಯಾಯಿತು. ಶ್ಯಾಮಿಲಿ ಈ ದೃಷ್ಟಿಯಿಂದ ಅದೃಷ್ಟವಂತೆ. ಸೇಡು, ದ್ವಿಪಾತ್ರ, ಪ್ರೇತ, ಬಡವಿ, ಸಾಹಸಿ ಹೀಗೆ ಅತ್ಯಂತ ವೈವಿಧ್ಯಮಯವಾದ ಪಾತ್ರಗಳು ಈಕೆಗೆ ದೊರೆತವು. ಮುಗ್ಧ ನಗು, ಭಾವಪೂರ್ಣ ಅಭಿನಯದಿಂದ ಈ ಬಾಲೆ ಕನ್ನಡ ಪ್ರೇಕ್ಷಕರನ್ನು ಐದು ವರ್ಷಗಳ ಕಾಲ ರಂಜಿಸಿದಳು. 'ಭೈರವಿ' (೧೯೯೧), 'ಶಾಂಭವಿ' (೧೯೯೨), 'ದಾಕ್ಷಾಯಿಣಿ' (೧೯೯೩), 'ಚಿನ್ನ ನೀ ನಗುತಿರು' ಮತ್ತು 'ಭುವನೇಶ್ವರಿ' (೧೯೯೪) ಶ್ಯಾಮಿಲಿಯೇ ಪ್ರಮುಖ ಆಕರ್ಷಣೆಯಾಗಿದ್ದ ಚಿತ್ರಗಳು. 'ಚಿನ್ನ ನೀ ನಗುತಿರು' ಹೊರತುಪಡಿಸಿದರೆ ಉಳಿದ ಚಿತ್ರಗಳೆಲ್ಲವನ್ನು ನಿರ್ದೇಶಿಸಿದವರು ತಮಿಳಿನ ರಾಮನಾರಾಯಣ್. ಈ ಚಿತ್ರಗಳು ಮೊದಲು ತಮಿಳಿನಲ್ಲಿ ನಿರ್ಮಾಣವಾಗಿದ್ದವು. ಇವರ ಚಿತ್ರಗಳಲ್ಲಿ ಶ್ಯಾಮಿಲಿಯೊಂದಿಗೆ ಕೋತಿ, ನಾಯಿ, ಹಾವು ಇತ್ಯಾದಿ ಪ್ರಾಣಿಗಳನ್ನು ಪ್ರಧಾನವಾಗಿ ಬಳಸಲಾಗಿತ್ತು. ತಮಿಳಿನಲ್ಲಿ ತೆಗೆದ ಚಿತ್ರಗಳಲ್ಲಿನ ಪ್ರಾಣಿಗಳ ದೃಶ್ಯಗಳನ್ನು ಯಥಾವತ್ತಾಗಿ ಬಳಸಿಕೊಂಡು ಉಳಿದಂತೆ ಕನ್ನಡ ಕಲಾವಿದರನ್ನು ಈ ಚಿತ್ರಗಳಲ್ಲಿ ಹೊಂದಿಸಲಾಗಿತ್ತು. ಪ್ರಾಣಿಗಳು ಭಾಗವಹಿಸುವ ದೃಶ್ಯಗಳನ್ನು ಮತ್ತೆ ಮತ್ತೆ ಚಿತ್ರಿಸುವುದು ಕಷ್ಟಕರವಾದ್ದರಿಂದ ಹಾಗೂ ಹಣದ ಉಳಿತಾಯದ ದೃಷ್ಟಿಯಿಂದ ಈ ವಿಧಾನ ಅತ್ಯಂತ ಅನಿವಾರ್ಯವಾಗಿತ್ತು. 'ಶಾಂಭವಿ' ಚಿತ್ರದಲ್ಲಿ ಸಿಂಗಾಪೂರ್‌ನಿಂದ ಆಮದು ಮಾಡಿಕೊಳ್ಳಲಾದ ಒಂದು ಲಕ್ಷ ರೂಪಾಯಿ ಬೆಲೆಯ ಪುಟಾಣಿ ಜೀಪನ್ನು ಬಳಸಲಾಗಿದೆ. ಕೋತಿಯನ್ನು ಕುಳ್ಳಿರಿಸಿಕೊಂಡು ಶ್ಯಾಮಿಲಿ ಇದನ್ನು ನಡೆಸುತ್ತಾಳೆ. ಆದರೆ ವಾಸ್ತವವಾಗಿ ಈ ಜೀಪ್ ಚಲಿಸುವುದು ರಿಮೋಟ್ ಕಂಟ್ರೋಲ್ ನೆರವಿನಿಂದ. ರಾಮನಾರಾಯಣ್ ನಿರ್ದೇಶಿಸಿದ ಚಿತ್ರಗಳೆಲ್ಲಕ್ಕೂ ಕನ್ನಡದ ಹಿರಿಯ ತಂತ್ರಜ್ಞ ಕೆ.ಸೀತಾರಾಂ ಅವರು 'ಸಹಕಾರ ನಿರ್ದೇಶನ'ದ ಹೆಸರಿನಲ್ಲಿ ಸಂಪೂರ್ಣವಾಗಿ ತೊಡಗಿಕೊಂಡದ್ದು ಕೂಡ ಇಲ್ಲಿ ಉಲ್ಲೇಖಾರ್ಹ. ಬೇಬಿ ಶ್ಯಾಮಿಲಿಗೆ ಕಂಠದಾನ ಮಾಡುತ್ತಿದ್ದ ಬೇಬಿ ಅಶ್ವಿನಿ ಕನ್ನಡ ಚಿತ್ರರಂಗದ ಇನ್ನೊಬ್ಬ ಬಾಲನಟಿ.

ಬೇಬಿ ಶ್ಯಾಮಿಲಿ ಹಾಗೂ ಮಾ|ಆನಂದ್ ಇಬ್ಬರೂ ತಮ್ಮ ಪ್ರತಿಭೆಯಿಂದ ಗಮನ ಸೆಳೆಯುತ್ತಿದ್ದ ದಿನಗಳಲ್ಲಿ ಪುನೀತ್ ರೀತಿಯಲ್ಲಿ ಆಯ್ದ ಕೆಲವೇ ಪಾತ್ರಗಳ ಮೂಲಕ ಯಶಸ್ಸನ್ನು ಗಳಿಸಿದ ಮತ್ತೊಬ್ಬ ಬಾಲಕಲಾವಿದ ಮಾ|ವಿಜಯ ರಾಘವೇಂದ್ರ. ಚಿತ್ರೋದ್ಯಮಿ ಎಸ್.ಎ.ಚಿನ್ನೇಗೌಡರ ಪುತ್ರ. 'ಚಲಿಸುವ ಮೋಡಗಳು' ಚಿತ್ರದ 'ಮೈಲಾರ್ಡ್ ನನ್ನ ವಾದ ಕೇಳಿ...' ನ್ಯಾಯಾಲಯದ ಹಾಡಿನ ಸನ್ನಿವೇಶದಲ್ಲಿ

ನ್ಯಾಯಮೂರ್ತಿಯಾಗಿ ಕ್ಯಾಮರಾ ಎದುರಿಸಿದ ಈ ಬಾಲಕ 'ಚಿನ್ನಾರಿ ಮುತ್ತ' ಚಿತ್ರದ ಮೂಲಕ ಶ್ರೇಷ್ಠ ಬಾಲನಟನೆಂದು ಅಪಾರ ಖ್ಯಾತಿ ಗಳಿಸಿದ. ಈ ಚಿತ್ರದ ವಸ್ತು ಪ್ರತಿಯೊಬ್ಬ ಮಗುವಿನಲ್ಲೂ ಸುಪ್ತವಾಗಿ ಇರಬಹುದಾದ ಪ್ರತಿಭೆಯನ್ನು ಗುರುತಿಸುವ ಅಗತ್ಯವನ್ನು ಹೇಳುತ್ತದೆ. ಇದೇ ಕಾರಣಕ್ಕ ಈ ಚಿತ್ರ ಏಕಕಾಲಕ್ಕ ಮಕ್ಕಳು ಮತ್ತು ಪೋಷಕರಿಗೆ ಮೆಚ್ಚುಗೆಯಾಯಿತು. ಭಾರತದ ಯಾವುದೋ ಮೂಲೆಯ ಹಳ್ಳಿಯೊಂದರಲ್ಲಿ ಯಾರ ಅರಿವಿಗೂ ಬಾರದೆ ಇದ್ದ ಬಾಲಪ್ರತಿಭೆ ಸೂಕ್ತ ಮಾರ್ಗದರ್ಶನ ದೊರೆತರೆ ಹೇಗೆ ಬೆಳಗಬಲ್ಲದೆಂಬುದನ್ನು ನಾಗಾಭರಣ ಅವರು ಮಾರ್ಮಿಕವಾಗಿ ನಿರೂಪಿಸಿದ್ದರು. ಸುಮಾರು ಹದಿನೈದು ಮಂದಿ ಬಾಲಕಲಾವಿದರಿಗೆ ತರಬೇತಿ ಕೊಟ್ಟು, ಸಂಗೀತವನ್ನೇ ಕೇಂದ್ರವಾಗಿರಿಸಿಕೊಂಡು, ಬ್ಯಾಲೆ ಶೈಲಿಯಲ್ಲಿ ಚಿತ್ರವನ್ನು ನಿರ್ಮಿಸಲಾಗಿತ್ತು. ನಾಯಕ ಪಾತ್ರದಲ್ಲಿ ವಿಜಯರಾಘವೇಂದ್ರ ಪ್ರಬುದ್ಧ ಅಭಿನಯ ನೀಡಿದ್ದ. ದೈಹಿಕ ಶಿಕ್ಷಕನ ಪಾತ್ರದಲ್ಲಿ ಅವಿನಾಶ್ ಅವರು ಅತ್ಯುತ್ತಮವಾಗಿ ನಟಿಸಿದ್ದರು. ಮತ್ತೊಂದು ಪ್ರಮುಖ ಪಾತ್ರದಲ್ಲಿ ದತ್ತಣ್ಣ ಕೂಡ ಗಮನ ಸೆಳೆದರು. 'ಚಿನ್ನಾರಿ ಮುತ್ತ' ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂದು ರಾಷ್ಟ್ರಪ್ರಶಸ್ತಿ ಹಾಗೂ ಅತ್ಯುತ್ತಮ ಮಕ್ಕಳ ಚಿತ್ರವೆಂದು ರಾಜ್ಯಪ್ರಶಸ್ತಿ ಗಳಿಸಿತು. ಸಂಗೀತ ನಿರ್ದೇಶನಕ್ಕೆ ಸಿ.ಅಶ್ವತ್ಥ್, ನಟನೆಗೆ ವಿಜಯರಾಘವೇಂದ್ರ, ಹಿನ್ನೆಲೆ ಗಾಯನಕ್ಕೆ ಮಂಜುಳಾ ಗುರುರಾಜ್ ರಾಜ್ಯ ಪ್ರಶಸ್ತಿಗಳನ್ನು ಪಡೆದರು. ಇವರೊಂದಿಗೆ ಈ ಚಿತ್ರ ೧೯೯೩ರಲ್ಲಿ ಉದಯಪುರದಲ್ಲಿ ನಡೆದ ಅಂತರರಾಷ್ಟ್ರೀಯ ಮಕ್ಕಳ ಮತ್ತು ಯುವ ಚಿತ್ರೋತ್ಸವ, ಚೀನಾದಲ್ಲಿ ನಡೆದ ಅಂತರರಾಷ್ಟ್ರೀಯ ಚಿತ್ರೋತ್ಸವ ಹಾಗೂ ಚಿಕಾಗೋ ಅಂತರರಾಷ್ಟ್ರೀಯ ಮಕ್ಕಳ ಚಿತ್ರೋತ್ಸವಗಳಿಗೆ ಆಯ್ಕೆಯಾಗಿ ಪ್ರದರ್ಶನವಾಯಿತು. ವಿಜಯ ರಾಘವೇಂದ್ರ ಪ್ರಬುದ್ಧ ಅಭಿನಯ ನೀಡಿದ ಇನ್ನೊಂದು ಚಿತ್ರ 'ಗಾನಯೋಗಿ ಪಂಚಾಕ್ಷರ ಗವಾಯಿ'.

೧೯೯೩-೯೪ರಲ್ಲಿ ನಾಗಾಭರಣರದೇ ನಿರ್ದೇಶನದ 'ಆಕಸ್ಮಿಕ' ಚಿತ್ರ ದ್ವಿತೀಯ ಅತ್ಯುತ್ತಮ ಚಿತ್ರವೆಂದೂ ಹಾಗೂ ಶ್ರೇಷ್ಠ ಗಾಯನಕ್ಕೆಂದು ರಾಜಕುಮಾರ್ ಅವರಿಗೂ ಪ್ರಶಸ್ತಿ ಬಂದಿತು. ಇದೇ ವರ್ಷವೇ 'ಚಿನ್ನಾರಿ ಮುತ್ತ' ನಾಲ್ಕು ಪ್ರಶಸ್ತಿಗಳನ್ನು ಗಳಿಸಿ ಎರಡು ಭಿನ್ನ ರೀತಿಯ ಚಿತ್ರಗಳಲ್ಲಿ ಅವರು ಒಟ್ಟು ಏಳು ಪ್ರಶಸ್ತಿಗಳನ್ನು ಪಡೆದರು. ಇನ್ನೂ ವಿಶೇಷವೆಂದರೆ ಇವೆರಡು ಚಿತ್ರಗಳು ೨೫ ವಾರಗಳ ಪ್ರದರ್ಶನ ಕಂಡವು. ಮತ್ತು ೧೯೯೪ರಲ್ಲಿ ಕಲ್ಕತ್ತಾದಲ್ಲಿ ನಡೆದ ಅಂತರರಾಷ್ಟ್ರೀಯ ಚಿತ್ರೋತ್ಸವದ ಎರಡು ವಿಭಾಗಗಳಲ್ಲಿ ಪ್ರದರ್ಶನವಾದವು. ಪನೋರಮಾ ವಿಭಾಗಕ್ಕೆ 'ಚಿನ್ನಾರಿ ಮುತ್ತ' ಆಯ್ಕೆಯಾಗಿದ್ದರೆ, ಪ್ರಮುಖವಾಹಿನಿಯಲ್ಲಿ 'ಆಕಸ್ಮಿಕ' ಪ್ರವೇಶ ಪಡೆದಿತ್ತು. ನಾಗಾಭರಣ ಅವರಿಗೆ ಇಂಥದೇ ಆಕಸ್ಮಿಕ ಸಂಯೋಗ ೧೯೯೭ರಲ್ಲಿ ದೆಹಲಿಯಲ್ಲಿ ನಡೆದ ಅಂತರರಾಷ್ಟ್ರೀಯ ಚಿತ್ರೋತ್ಸವದಲ್ಲಿ ಏರ್ಪಟ್ಟಿತ್ತು. 'ನಾಗಮಂಡಲ' ಪನೋರಮಾಕ್ಕೆ ಆಯ್ಕೆಯಾಗಿದ್ದರೆ 'ಜನುಮದ ಜೋಡಿ' ಪ್ರಮುಖವಾಹಿನಿಯಲ್ಲಿತ್ತು. ಕನ್ನಡದ ಮಟ್ಟಿಗಷ್ಟೇ ಅಲ್ಲ, ಇಂಥ ದಾಖಲೆ ಭಾರತ ಚಿತ್ರರಂಗದಲ್ಲೇ ಅಪರೂಪ. ವ್ಯಾಪಾರಿ ಹಾಗೂ ಹೊಸ ಬಗೆಯ ಶೈಲಿಯ ಎರಡು ರೀತಿಯ ಚಿತ್ರಗಳಲ್ಲಿ ನಾಗಾಭರಣ ಅವರ ಸಾಧನೆ ಗಮನ ಸೆಳೆಯುವಂಥದ್ದು.

'ಚಿನ್ನಾರಿ ಮುತ್ತ' ಚಿತ್ರಕ್ಕೆ ಸಂಬಂಧಿಸಿದಂತೆ ಹಾಡುಗಳು ಅತ್ಯಂತ ಪ್ರಧಾನವಾದ ಆಕರ್ಷಣೆಯಾಗಿತ್ತೆಂಬುದನ್ನು ಮುಖ್ಯವಾಗಿ ಗಮನಿಸಬೇಕು. ಸಿ.ಅಶ್ವತ್ಥ್ ಅವರ ಉತ್ಸಾಹ ಉಕ್ಕಿಸುವ ಮಧುರ ರಾಗಗಳಿಗೆ ಕವಿ ಡಾ|ಹೆಚ್.ಎಸ್.ವೆಂಕಟೇಶಮೂರ್ತಿ ಬರೆದ ಗೀತೆಗಳು ಅತ್ಯಂತ ಸರಳವಾಗಿ ಕಾವ್ಯಾತ್ಮಕವಾಗಿದ್ದವು. ಕನಸು, ಆದರ್ಶ, ಬೋಧನೆ, ನೀತಿ ಎಲ್ಲಾ ಅಂಶಗಳು ಬೆರೆತ ಇಲ್ಲಿನ ರಚನೆಗಳು ಸಮರ್ಥ ಕವಿಯೊಬ್ಬನಿಂದ ಮಾತ್ರ ಸಾಧ್ಯ ಎಂಬಷ್ಟು ಗುಣಾತ್ಮಕವಾಗಿದ್ದವು. 'ಏಷ್ಟೊಂದ್ ಜನಾ ಇಲ್ಲಿ ಯಾರು ನನ್ನೋರು...', 'ಚಂದ್ರ ನಿಂಗೆ ಕರುಣೆ ಇಲ್ಲಿ ಮೋಡದ್ಮರೆಲಿರು...', 'ಹೇಗಿದ ಹೇಗಾದ ಗೊತ್ತಾ...' ಹಾಗೂ ಶ್ರೀಧರ್, ಸುಧಾರಾಣಿಯವರ ಮೇಲೆ ಚಿತ್ರಿಸಿರುವ 'ಪಾರಿಷಾ ಪಾರಿಷಾ ವೃಕ್ಷಕನ್ಯೆ ಪಾರಿಷಾ...' ಗೀತೆ ಎಂದೆಂದಿಗೂ ಇಷ್ಟವಾಗುವಂಥ ಪ್ರತಿಮಾ, ಉಪಮಾ, ಸಹಜಾಲಂಕಾರಗಳಿಂದ ಕೂಡಿವೆ. ಇಲ್ಲಿ ಸಂಯೋಜಿಸಲಾದ ಬ್ಯಾಲೆ ಮಾದರಿಯ ಅಥವಾ ನೃತ್ಯನಾಟಕವನ್ನು ರೂಪಿಸಿದವರು ನಟ-ನೃತ್ಯಪಟು ಶ್ರೀಧರ್ ಹಾಗೂ ಅವರ ಹೆಂಡತಿ ಅನುರಾಧಾ. ಇಡೀ ಚಿತ್ರದಲ್ಲಿ ಪ್ರತಿಯೊಂದು ಗೀತೆಗೂ ನೀಡಿರುವ ಕೊರಿಯಾಗ್ರಫಿ ಸೊಗಸಾಗಿತ್ತು. ಮಕ್ಕಳೇ ಹಾಡಿದ್ದರೆಂಬುದೂ ಮುಖ್ಯ. ಇಲ್ಲಿ ನೆನೆಯಬೇಕಾದ ಇನ್ನೊಂದು ಹೆಸರು ಅರವಿಂದ್ ಸ್ಟುಡಿಯೋದ ಅರವಿಂದ್ ಕಿಗ್ಗಾಲ್ ಮತ್ತು ಜಯಶ್ರೀ ಅರವಿಂದ್.

೧೯೯೩ರಲ್ಲಿ ತೆರೆಕಂಡ 'ಚುಕ್ಕಿ ಚಂದ್ರಮ' ಹಾಗೂ 'ಜಂಬೂ ಸವಾರಿ' ಮುಖ್ಯವೆನಿಸಿದ ಎರಡು ಮಕ್ಕಳ ಚಿತ್ರಗಳು. 'ಚುಕ್ಕಿ ಚಂದ್ರಮ'ದಲ್ಲಿ ಮಕ್ಕಳ ಸಾಹಸ ಪ್ರವೃತ್ತಿಯ ಅಂಶದೊಂದಿಗೆ ಸ್ನೇಹದ ಮಾರ್ಮಿಕ ಸ್ಪರ್ಶವನ್ನು ಪರಿಣಾಮಕಾರಿಯಾಗಿ ನಿರೂಪಿಸಲಾಗಿತ್ತು. ಯಾವುದೇ ಬಗೆಯ ಘೋಷಿತ ಆದರ್ಶಗಳನ್ನು ತರದೆ, ಕಥೆಯ ಒಳಗೇ ಮೌಲ್ಯಗಳನ್ನು ಗರ್ಭೀಕರಿಸಿಕೊಂಡ ಪ್ರಯತ್ನ ಗಮನಾರ್ಹ. 'ಸಂಕ್ರಾಂತಿ' ನಿರ್ದೇಶಿಸಿದ್ದ ನಂಜುಂಡೇಗೌಡರು ಹಳ್ಳಿಗಳಲ್ಲಿನ ಬಡತನ, ಮಕ್ಕಳ ಏಳಿಗೆಯನ್ನು ಬಯಸುವ ಬಡ ತಂದೆ-ತಾಯಿಗಳ ಮಹತ್ವಾಕಾಂಕ್ಷೆಯನ್ನು ಅತ್ಯಂತ ಕಳಕಳಿಯಿಂದ ಚಿತ್ರಿಸಿದ್ದರು. ಉತ್ತಮ ನಿರೂಪಣೆಯಿದ್ದ ಈ ಚಿತ್ರದಲ್ಲಿ, ೧೯೯೮-೯೯ರಲ್ಲಿ 'ಪ್ರಥಮ ಉಷಾಕಿರಣ' ಚಿತ್ರದಲ್ಲಿನ ಅಭಿನಯಕ್ಕೆ ಶ್ರೇಷ್ಠ ಬಾಲನಟ ರಾಜ್ಯ ಪ್ರಶಸ್ತಿ ಪಡೆದಿದ್ದ ತುಮಕೂರಿನ ಬಾಲಕಲಾವಿದ ಮಾ|ಧಮರುಗೇಂದ್ರ ಹಾಗೂ ರಾಜ್ಯದ ಹಿರಿಯ ಐ.ಎ.ಎಸ್. ಅಧಿಕಾರಿ ಐ.ಎಂ.ವಿಠಲಮೂರ್ತಿಯವರ ಪುತ್ರಿ ಶ್ರೀಗೌರಿ ಉತ್ತಮವಾಗಿ ನಟಿಸಿದ್ದರು. ಚಿತ್ರನಾಟಕಕ್ಕಾಗಿ ಅಬ್ದುಲ್ ರೆಹಮಾನ್ ಪಾಷ ೧೯೯೨ರ ರಾಜ್ಯ ಪ್ರಶಸ್ತಿ ಪಡೆದರು. ಕನ್ನಡದ ಹಿರಿಯ ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿಯವರು ನಿರ್ದೇಶಿಸಿದ್ದ ಏಕೈಕ ಮಕ್ಕಳ ಚಿತ್ರ 'ಜಂಬೂ ಸವಾರಿ'. ಮಧ್ಯಮ ವರ್ಗದ ಬವಣೆಗಳನ್ನು, ಕನಸುಗಳನ್ನು ಕೇಂದ್ರವಾಗಿಟ್ಟುಕೊಂಡು ಶಾಲೆ ಮಕ್ಕಳನ್ನು ಬಳಸಿಕೊಂಡು ಹೆಣೆದ ವಿಭಿನ್ನ ಕಥಾವಸ್ತು. ಎ.ಎಸ್.ಮೂರ್ತಿ ಅವರ ಅದೇ ಹೆಸರಿನ ನಾಟಕದ ಸ್ಫೂರ್ತಿ. ವಿಸ್ತರಿಸಿದ ಕಥಾವಸ್ತುವು ಹಲವಾರು ಅಂಶಗಳನ್ನು ಒಳಗೊಂಡಿತ್ತು. ಕೆಲವು ಅಪೂರ್ವ ಅನ್ನಿಸುವಂಥ ಚಿತ್ರಿಕೆಗಳಿದ್ದವು. ಚಿತ್ರೀಕರಣದಲ್ಲಿ ಸರಿಯಾದ ಪರಿಣಾಮ ತರಲು ಸಾಧ್ಯವಾಗದಿದ್ದರೂ ಲಾಟರಿಯಲ್ಲಿ ಬರುವ ಆನೆ, ಬಿಳಿಯಾನೆ. ಊರ ಜನರಿಂದ ಆದರಿಸಲ್ಪಟ್ಟು, ಬಿಳಿಯಾನೆಯಲ್ಲ ಎಂದು ಗೊತ್ತಾದಾಗ ಅದನ್ನು ಅಪಶಕುನವೆಂದು ಭಾವಿಸುವ ಜನ ಇತ್ಯಾದಿ ಅಂಶಗಳು ಧ್ವನಿಪೂರ್ಣವಾಗಿದ್ದವು. ಹೆಚ್.ಎಸ್.ವೆಂಕಟೇಶಮೂರ್ತಿಯವರ ಗೀತೆಗಳು ತುಂಬ ಸೊಗಸಾಗಿದ್ದವು. ಒಂದು ಫ್ಯಾಂಟಸಿಯಂತೆ ಚಿತ್ರಿತವಾದ ಗೀತೆಗೆ ಕಲಾನಿರ್ದೇಶಕ ಜಯದೇವ್ ಅವರ ಮಿನಿಯೇಚರ್ ಸಹ ಗಮನ ಸೆಳೆಯುವಂತಿತ್ತು. ಚಿತ್ರ ವಿದೇಶಗಳನ್ನು ಸುತ್ತಿ ಬಂದಿತು. ಪ್ರಶಸ್ತಿಗಳನ್ನೂ ಪಡೆಯಿತು. ಪ್ರೇಕ್ಷಕರನ್ನು



(ಚಿತ್ರ ೩.೧) 'ಮಾ|ಜಯಂತ್ | (ಚಿತ್ರ ೩.೨) 'ಮಾತೃ ವಾತ್ಸಲ್ಯ' - ಬೇಬಿ ವಿಜಯಶ್ರೀ | (ಚಿತ್ರ ೩.೩) 'ಶೌರ್ಯ' - ಮಾ|ವಿಶ್ವಾಸ್ | (ಚಿತ್ರ ೩.೪) ಬೇಬಿ ಪ್ರಮೋದಿನಿ | (ಚಿತ್ರ ೩.೫) ಮಾ|ನಟರಾಜ್



(ಚಿತ್ರ ೩೬) ೧೯೮೫ರಲ್ಲಿ ನಡೆದ ಮಕ್ಕಳ ಚಿತ್ರೋತ್ಸವದ ಮಕ್ಕಳು ತೀರ್ಪುಗಾರರೊಡನೆ ರಾಜ್ಯ ವಾರ್ತಾ ಇಲಾಖೆ ನಿರ್ದೇಶಕ ಚಿರಂಜೀವ್ ಸಿಂಗ್, ಚಿಲ್ಡ್ರನ್ ಫಿಲಂ ಸೊಸೈಟಿ ಅಧ್ಯಕ್ಷ ಅಮೋಲ್ ಪಾಲೇಕರ್, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷ ಪ್ರಭಾಕರ ರೆಡ್ಡಿ

ಆಕರ್ಷಿಸಲಿಲ್ಲ. ಚಿತ್ರಕ್ಕೆ ಬಿ.ಸುರೇಶ್ ಚಿತ್ರಕಥೆ-ಸಂಭಾಷಣೆ ರಚಿಸಿ, ಸಹನಿರ್ದೇಶನ ಮಾಡಿದ್ದರು. ನರೇಂದ್ರಬಾಬುಗಳ ಸಹಕಾರವಿತ್ತು. ರವೀ ಅವರ ನಿರ್ದೇಶನದಲ್ಲಿ ಅವರದೇ ನಿರ್ಮಾಣದಲ್ಲಿ ತಯಾರಾದ ಚಿತ್ರ. ಮಾ।ಜಯಂತ್ ಮುಖ್ಯ ಪಾತ್ರದಲ್ಲಿದ್ದು, ಹಲವು ಮಕ್ಕಳು ಭಾಗವಹಿಸಿದ್ದರು.

೧೯೯೩ರಲ್ಲಿ ತೆರೆಕಂಡ ಆರು ಮಕ್ಕಳ ಚಿತ್ರಗಳ ಉಬ್ಬರ ನಂತರದ ದಿನಗಳಲ್ಲಿ ಇದ್ದಕ್ಕಿದ್ದಂತೆ ಇಳಿಯಿತು. ೧೯೯೫ರಲ್ಲಿ ಬಂದ 'ನಾವಿದ್ದೀವಿ ಎಚ್ಚರಿಕೆ' ಆ ದಶಕದ ಏಕೈಕ ಮಕ್ಕಳ ಚಿತ್ರ. ಟಿ.ಎಸ್.ನರಸಿಂಹನ್ ನಿರ್ಮಾಣದ ಈ ಚಿತ್ರವನ್ನು ನಿರ್ದೇಶಿಸಿದವರು ನಾಗಾಭರಣ. ೧೯೯೫ರಲ್ಲಿ ದೇಶ-ವಿದೇಶಗಳಲ್ಲಿ ಸುದ್ದಿ ಮಾಡಿದ ಮೂತ್ರಪಿಂಡವನ್ನು ಕಳ್ಳತನದಿಂದ ಕಸಿ ಮಾಡಿ ಮಾರುವ ಬಹು ದೊಡ್ಡ ಹಗರಣವನ್ನು ಆಧರಿಸಿ ಈ ಚಿತ್ರದ ಕಥೆಯನ್ನು ಹೆಣೆಯಲಾಗಿತ್ತು. ಆಸ್ಪತ್ರೆಯೊಂದರಲ್ಲಿ ನಡೆಯುತ್ತಿದ್ದ ಈ ಅಕ್ರಮ ಜಾಲವನ್ನು ಮಕ್ಕಳು ಅತ್ಯಂತ ಸಾಹಸದಿಂದ ಭೇದಿಸುತ್ತಾರೆ. ಕಲ್ಪನೆಯ ಕಥೆಯಲ್ಲಿ ನೈಜತೆ ಇರದಿದ್ದುದು ಹಾಗೂ ಚಿತ್ರಕಥೆ ದುರ್ಬಲವಾಗಿದ್ದುದು ಚಿತ್ರದ ಪ್ರಮುಖ ಕೊರತೆಯಾಗಿತ್ತು. ರಾಜ್ಯದ ೧೯೯೫-೯೬ರ ಅತ್ಯುತ್ತಮ ಮಕ್ಕಳ ಚಿತ್ರ ಪ್ರಶಸ್ತಿ ಪಡೆದ ಈ ಚಿತ್ರ ಅಂತರರಾಷ್ಟ್ರೀಯ ಚಿತ್ರೋತ್ಸವದಲ್ಲೂ ಪ್ರದರ್ಶನವಾಯಿತು. ಇಲ್ಲಿಯೇ ಗಿರೀಶ್ ಕಾಸರವಳ್ಳಿಯವರು ನಿರ್ದೇಶಿಸಿದ 'ಕ್ರೌರ್ಯ' ಚಿತ್ರದ ಪ್ರಮುಖ ಪಾತ್ರದಲ್ಲಿ ಅಭಿನಯಿಸಿದ ಮಾ।ವಿಶ್ವಾಸ್ ಬಗ್ಗೆ ಹೇಳಬಹುದು. ಇವರಲ್ಲಿ ಪದೇ ಪದೇ ಕಿತ್ತು ಹೋಗುವ ಚಪ್ಪಲಿಯೊಂದಿಗೆ ಸೆಣಸಾಡುತ್ತಾ, ಅಜ್ಜಿ ಅನುಭವಿಸುವ ಮಾನಸಿಕ ಹಿಂಸೆಗೆ ಮೂಕಪ್ರೇಕ್ಷಕನಾಗಿ ಉಳಿಯುವ ಬಾಲಕನ ಪಾತ್ರಕ್ಕೆ ವಿಶ್ವಾಸ್ ರಾಷ್ಟ್ರದ ಶ್ರೇಷ್ಠ ಬಾಲನಟ ಪ್ರಶಸ್ತಿ ಪಡೆದ. ಇದಕ್ಕೂ ಮುಂಚೆ ವಿಶ್ವಾಸ್ 'ಪ್ರಚಂಡ ಪುಟಾಣಿಗಳು' (ಮೊದಲ ಚಿತ್ರ) ನಂತರ 'ಮನ ಮೆಚ್ಚಿದ ಸೊಸೆ', 'ಚಿನ್ನಾ ನೀ ನಗುತಿರು', 'ಜಾಣ', 'ಹಾಲುಂಡ ತವರು', 'ರವಿತೇಜ', 'ಪುಟ್ನಂಜ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾನೆ.

ಈ ಚಿತ್ರದ ನಂತರ ಸಂಪೂರ್ಣ ಮಕ್ಕಳ ಚಿತ್ರಗಳ ನಿರ್ಮಾಣದತ್ತ ಯಾರೂ ಆಸಕ್ತಿ ವಹಿಸಿರುವುದು ಕಾಣುವುದಿಲ್ಲ. ಜನರ ಅಭಿರುಚಿ ಬದಲಾಗಿದೆಯೆಂಬ ಕಾರಣವನ್ನು, ಲಾಭ ಬರುವುದಿಲ್ಲ ಎಂಬ ಮಾತನ್ನು, ಸರ್ಕಾರದ ಪ್ರೋತ್ಸಾಹ ಕಡಿಮೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ನಿರ್ಮಾಪಕರು ನಾಡಿನ ಭವಿಷ್ಯದ ಶಕ್ತಿಯಾದ ಮಕ್ಕಳನ್ನು ಸಂಪೂರ್ಣವಾಗಿ ಕಡೆಗಣಿಸಿದರು. ಈ ಮೂಲಕ ಚಲನಚಿತ್ರ ಮಾಧ್ಯಮ ಪ್ರಧಾನವಾಗಿ ವ್ಯವಹಾರದ ಮಾಧ್ಯಮ ಎಂಬ ವ್ಯಾಖ್ಯಾನಕ್ಕೆ ಈ ದಶಕದಲ್ಲಿ ನಿಖರವಾದ ಅರ್ಥ ಪ್ರಾಪ್ತವಾಗತೊಡಗಿತು.

ಬಾಲ ಕಲಾವಿದರನ್ನು ರೂಪಿಸಿದ್ದರಲ್ಲಷ್ಟೇ ಅಲ್ಲ, ಮಕ್ಕಳನ್ನು ಆಧರಿಸಿದ ಚಿತ್ರಗಳನ್ನು ನಿರ್ಮಿಸುವುದರಲ್ಲೂ ಕೂಡ ಕನ್ನಡ ಚಿತ್ರೋದ್ಯಮದ್ದು ವಿಶಿಷ್ಟ ಸಾಧನೆ. ಈ ಹಿನ್ನೆಲೆಯಿಂದಾಗಿ ಮತ್ತು ಅತ್ಯುತ್ತಮವಾದ ಹವಾಮಾನವಿರುವ ಕಾರಣದಿಂದ ಬೆಂಗಳೂರನ್ನು ಮಕ್ಕಳ ಚಲನಚಿತ್ರ ಚಟುವಟಿಕೆಗಳ ಮುಖ್ಯ ಕೇಂದ್ರವನ್ನಾಗಿ ಮಾಡಬೇಕೆಂದು ಕೇಂದ್ರ ಸರ್ಕಾರಕ್ಕೆ ಮುಂಚಿನಿಂದಲೂ ಆಸಕ್ತಿ ಇತ್ತು. ಇದಕ್ಕಾಗಿ ಕೆಲವರು ತಮ್ಮ ಪ್ರಯತ್ನಗಳನ್ನು ಶಕ್ತಿಮೀರಿ ನಡೆಸುತ್ತಲೂ ಬಂದಿದ್ದರು. ಇಂಥ ಆಸಕ್ತಿಯ ಅನುಷ್ಠಾನವೆಂಬಂತೆ ಜವಹರಲಾಲ ನೆಹರೂರವರ ಜನ್ಮ ದಿನಾಂಕವಾದ ೧೯೮೫ರ ನವೆಂಬರ್ ೧೪ರಂದು ಬೆಂಗಳೂರಿನಲ್ಲಿ ೪ನೆಯ ಅಂತರರಾಷ್ಟ್ರೀಯ ಮಕ್ಕಳ ಚಿತ್ರೋತ್ಸವ ನಡೆಯಿತು. ಇದರ ಉದ್ಘಾಟನೆಯನ್ನು ಚೌಡಯ್ಯ ಸ್ಮಾರಕ ಭವನದಲ್ಲಿ ಪ್ರಧಾನಿ ರಾಜೀವ್‌ಗಾಂಧಿಯವರು ನೆರವೇರಿಸಿದರು. ೨೦ ಮಂದಿ ಅಂಗವಿಕಲ ಮಕ್ಕಳು ಭಾಗವಹಿಸಿದ್ದ ಈ ಉತ್ಸವದಲ್ಲಿ ಸ್ಪರ್ಧಾ ವಿಭಾಗವೂ ಸೇರಿದಂತೆ ೧೮೦ ಚಿತ್ರಗಳು ಪ್ರದರ್ಶನಗೊಂಡವು. ಭಾರತವೂ ಸೇರಿದಂತೆ ೨೮ ವಿವಿಧ ದೇಶಗಳು ಪಾಲ್ಗೊಂಡಿದ್ದವು. ಚಿಲ್ಡ್ರನ್ಸ್ ಫಿಲಂ ಸೊಸೈಟಿಯು ಏರ್ಪಡಿಸಿದ್ದ ಈ ಚಿತ್ರೋತ್ಸವಕ್ಕೆ ಆ ಸೊಸೈಟಿಯ ಮುಖ್ಯಸ್ಥರಾಗಿದ್ದ ಅಮೋಲ್ ಪಾಲೇಕರ್ ಅವರ ನೇತೃತ್ವವಿತ್ತು. ಉದ್ಘಾಟನಾ ಸಮಾರಂಭದ ಎಲ್ಲ ವ್ಯವಸ್ಥೆಯ ಹೊಣೆ ಹೊತ್ತಿದ್ದ ಶಂಕರ್‌ನಾಗ್ ಅದೊಂದು ಅಪರೂಪದ ಸಮಾರಂಭ ಎನ್ನಿಸುವಂತೆ ಸಂಯೋಜಿಸಿದ್ದರು. ಎಲ್ಲದರ ಹಿಂದೆ ನಿರ್ಮಾಪಕ ಟಿ.ಎಸ್.ನರಸಿಂಹನ್ ಅವರ ಶ್ರಮ, ಬೆಂಬಲವಿತ್ತು. ಮತ್ತೊಬ್ಬ ಕನ್ನಡಿಗ ನಿರ್ಮಾಪಕ ಆರ್.ಲಕ್ಷ್ಮಣ್ ಉತ್ಸವದ ನಿರ್ದೇಶಕರಾಗಿದ್ದರು. ಹತ್ತಾರು ವಿಷಯಗಳ ಬಗ್ಗೆ ವಿಚಾರ ಸಂಕಿರಣಗಳಾದವು. ಅನೇಕ ಪುಸ್ತಿಕೆಗಳು, ಸ್ಮರಣ ಸಂಚಿಕೆಗಳು ಪ್ರಕಟವಾಗಿದ್ದುವು. ಈ ಉತ್ಸವದ ಸಂದರ್ಭದಲ್ಲಿಯೇ ರಾಜೀವ್‌ಗಾಂಧಿಯವರು ೧೦ ಕೋಟಿ ರೂಪಾಯಿ ವೆಚ್ಚದ ಮಕ್ಕಳ ಚಲನಚಿತ್ರ ಸಂಕೀರ್ಣಕ್ಕೆ ಶಿಲಾನ್ಯಾಸ ಮಾಡಿದರು. ಉದ್ದೇಶಿತ ಯೋಜನೆಯಂತೆ ಬೆಂಗಳೂರಿನ ಸದಾಶಿವನಗರದ ಸ್ಯಾಂಕಿ ಕೆರೆಯ ಸುಂದರ ದಂಡೆಯ ಮೇಲೆ ನಾಲ್ಕೂಮುಕ್ಕಾಲು ಎಕರೆ ಪ್ರದೇಶದಲ್ಲಿ ಮೂರು ವರ್ಷಗಳಲ್ಲಿ ಇದು ಸಿದ್ಧವಾಗಬೇಕಿತ್ತು.

ಆದರೆ ನಮ್ಮ ಸರ್ಕಾರ ಈ ಬಗ್ಗೆ ಆಸಕ್ತಿ ತೋರಿಸಲಿಲ್ಲ. ಜಾಗ ಸೂಕ್ತವಲ್ಲವೆಂದು ಪರಿಸರವಾದಿಗಳು ಅಪಸ್ವರ ಎತ್ತಿದರು. ಈ ಬಗ್ಗೆ ಮುಂದಿನ ಸುಮಾರು ೧೦ ವರ್ಷಗಳ ಕಾಲ ವಾದ ವಿವಾದಗಳು ನಡೆದು ಕೊನೆಗೆ ೧೯೯೬ರಲ್ಲಿ ಆಂಧ್ರಪ್ರದೇಶ ಸರ್ಕಾರದ ಆಸಕ್ತಿಯಿಂದ ಈ ಬೃಹತ್ ಯೋಜನೆಯು ಹೈದರಾಬಾದ್‌ಗೆ ಸ್ಥಳಾಂತರವಾಯಿತು. ಆದರೆ ಅಲ್ಲಿಯೂ ಸರ್ಕಾರ ಕೊಟ್ಟ ಭೂಮಿ ಪ್ರಶಸ್ತವಾಗಿಲ್ಲವೆಂಬ ಕಾರಣಕ್ಕೆ ಯೋಜನೆಯು ಅನುಷ್ಠಾನಗೊಳ್ಳಲಿಲ್ಲ. ಮಕ್ಕಳ ಚಿತ್ರ ಸಮುಚ್ಚಯವನ್ನು ಬೆಂಗಳೂರು ಮಹಾನಗರದಲ್ಲಿ ಆರಂಭಿಸಲು ದೊರೆತ ಅವಕಾಶವನ್ನು ಕರ್ನಾಟಕವು ಕಳೆದುಕೊಂಡುದು ರಾಜ್ಯದ ದೌರ್ಭಾಗ್ಯ. ಕೇವಲ ಬೆಂಗಳೂರು ಮಹಾನಗರದಲ್ಲಿ ಏರ್ಪಡಿಸಲಾದ ಮಕ್ಕಳ ಚಲನಚಿತ್ರೋತ್ಸವಗಳಿಂದಲೇ ತೃಪ್ತಿ ಪಡೆಯಬೇಕಾಯಿತು.

ಇಲ್ಲಿ ದಾಖಲಿಸಬಹುದಾದ ಒಂದೆರಡು ಪ್ರಯತ್ನಗಳ ಉಲ್ಲೇಖ ಅಗತ್ಯ ಎನಿಸುತ್ತದೆ. ಕೆ.ವಿಷನ್ ವಿಡಿಯೋ ಪ್ರೊಡಕ್ಷನ್ಸ್ ಲಾಂಛನದಲ್ಲಿ ಡಾ।ವಿಶ್ವನಾಥ್ ಮತ್ತು ಬಿ.ನಾರಾಯಣ್ ನಿರ್ಮಾಣ 'ನಕ್ಕಳಾ ರಾಜಕುಮಾರಿ' ಮತ್ತು ಜಿ.ಕೆ.ಎಸ್.ಮೂವೀಸ್ ಲಾಂಛನದಲ್ಲಿ ಕ.ಆರ್.ನಾರಾಯಣಮೂರ್ತಿ ತಯಾರಿಸಿದ 'ಚುಕ್ಕಿ ಚಂದ್ರಮ' ಮುಖ್ಯವಾದವು. ಇವೆರಡೂ ಚಿತ್ರಗಳು ಅಬ್ದುಲ್ ರೆಹಮಾನ್ ಪಾಷ ಅವರ ಕಥೆ ಹಾಗೂ ಚಿತ್ರಕಥೆ ಹೊಂದಿದ ಮಕ್ಕಳ ಚಿತ್ರಗಳು.

ಪ್ರೇಮಾ ಕಾರಂತ್ ನಿರ್ದೇಶಿಸಿದ 'ನಕ್ಕಳಾ ರಾಜಕುಮಾರಿ' ೧೯೯೧ರಲ್ಲಿ ತೆರೆಕಂಡಿತು. ಬಿ.ವಿ.ಕಾರಂತ್ ಸಂಗೀತ ಸಂಯೋಜನೆಯ ಈ ಚಿತ್ರದ ಛಾಯಾಗ್ರಾಹಕರು ಪಿ.ರಾಜನ್. ಅರಮನೆಯ ಆಡಂಬರ-ಬಯಸಿದ್ದು ಪಡೆದ ಸೌಕರ್ಯಗಳಿದ್ದೂ ನಗಲಾರದ ರಾಜಕುಮಾರಿ ಜನಸಾಮಾನ್ಯರಂತೆ ನಕ್ಕು ನಲಿಯುವಂತೆ ಮಾಡುವ ಮೂವರು ಕಿರಿಯರ ಪ್ರಯತ್ನವೇ ಕಥಾವಸ್ತು. ತಾರಾಬಳಗದಲ್ಲಿ ಸಂತೋಷ್ ನಂದನವನ್, ಚಂದ್ರಶೇಖರ್, ಚೈತ್ರ. ರಾಗಿಣಿ, ಶಂಕರ್‌ನಾಗ್, ಎಲ್.ವಿ.ಶಾರದಾ, ಸಿ.ಆರ್.ಸಿಂಹ, ಉದಯ್ ಜಾದೂಗಾರ್, ಜಿ.ವಿ.ಶಿವಾನಂದ್, ಮೀರಾ ನಾಯಕ್. ರಮೇಶ್ ಕಾಮತ್, ರಮೇಶ್ ಸಾಲಗುಂದಿ ಮುಂತಾದ ಹಿರಿಕಿರಿಯರಿದ್ದಾರೆ. ಒಂದು ಉತ್ತಮ ಪ್ರಯತ್ನ ಎನಿಸಿದ ಚಿತ್ರವಿದು.

ಎಸ್.ಆರ್.ನಂಜುಂಡೇಗೌಡ ನಿರ್ದೇಶಿಸಿದ 'ಚುಕ್ಕಿ ಚಂದ್ರಮ' ೧೯೯೩ರಲ್ಲಿ ಬಿಡುಗಡೆಯಾಯಿತು. ಮಲ್ಲಿಕಾರ್ಜುನ್ ಛಾಯಾಗ್ರಹಣದ ಈ ಚಿತ್ರಕ್ಕೆ ಉಪೇಂದ್ರಕುಮಾರ್ ಸಂಗೀತ ನೀಡಿದರು. ಧಮರುಗೇಂದ್ರ, ಶ್ರೀಗೌರಿ, ಕಿಟ್ಟಿ, ಬಾಲಾಜಿ, ಕಿರಣ್, ಅರ್ಜುನ್, ಮನು ಪಾಷ, ವಿಜಯ್ ಕುಮಾರ್, ಶ್ರುತಿ, ಅಕ್ಷತಾ ಮತ್ತಿತರ ಬಾಲಪ್ರತಿಭೆಗಳೊಂದಿಗೆ ಸುರೇಶ್ ಹೆಬ್ಳೀಕರ್, ನಳಿನಿಮೂರ್ತಿ, ಶೃಂಗೇರಿ ರಾಮಣ್ಣ, ಅಶೋಕ್ ಬಾದರದಿನ್ನಿ, ರಿಚರ್ಡ್ ಲೂಯಿಸ್‌ರಂಥ ಹಿರಿಯರೂ ತಾರಾಗಣದಲ್ಲಿದ್ದರು. ಪಟ್ಟಣದ ನಾಗರಿಕತೆಯಲ್ಲಿ ಬೆಳೆದ ಬಾಲಕಿ ಹಾಗೂ ಹಳ್ಳಿಯ ಪ್ರಕೃತಿಯ ಮಡಿಲಲ್ಲಿ ಅನಾಗರಿಕನಾಗಿ ಬೆಳೆದ ಬಾಲಕ, ಇವರ ನಡುವಣ ಗೆಳೆತನ, ಬಾಲಕಿಯ ಹಿರಿಯರು ಬಾಲಕನ ಬಗ್ಗೆ ತೋರುವ ಅಲಕ್ಷ್ಯ-ಮೇಲರಿಮೆ, ಗೆಳತಿಯನ್ನರಸುತ್ತ ಪಟ್ಟಣ ಸೇರಿದ ಬಾಲಕ ನಾಗರಿಕ ಜಗತ್ತಿನಲ್ಲಿ ಪಡುವ ಪಾಡು, ಬಾಲಕನನ್ನರಸಿ ಹಳ್ಳಿಗೆ ಹೋಗಿ, ಅವನನ್ನಲ್ಲಿ ಕಾಣಲಾಗದ ಬಾಲಕಿಯ ಮಾನಸಿಕ ನೋವು, ಕೊನೆಗೊಮ್ಮೆ ಪರಸ್ಪರರ ಭೇಟಿಯ ಸುಖಾಂತದ ಕಥೆಯ ಚಿತ್ರ. ಈ ಪ್ರಯತ್ನ ಮೆಚ್ಚುಗೆ ಗಳಿಸಿತು.

೧೯೯೦ರಲ್ಲಿ ತೆರೆಕಂಡ ಮಾನಸ ಆರ್ಟ್ಸ್ ಅವರ 'ಪ್ರಥಮ ಉಷಾಕಿರಣ' ಚಿತ್ರದಲ್ಲಿ ಮಕ್ಕಳ ಮನೋವಿಶ್ಲೇಷಣೆಯಿದೆ. ಭಾರತದ ಗ್ರಾಮೀಣ ಸಂಸ್ಕೃತಿಯಲ್ಲಿ ಬೆಳೆದ ಮಕ್ಕಳ ಮನಸ್ಸಿನ ಮೇಲೆ ವಿದೇಶಕ್ಕೆ ಹೋಗಿ ವಿದೇಶಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಮರಳಿ ಬಂದು ಅ ಸಂಸ್ಕೃತಿಯನ್ನು ಹೇರಿದುದರ ಪರಿಣಾಮವನ್ನು ಕುರಿತ ಕಥೆಯ ಈ ಚಿತ್ರದ ನಿರ್ದೇಶನ ಸುರೇಶ್ ಹೆಬ್ಳೀಕರ್ ಅವರದು. ಡಾ।ಅಶೋಕ್ ಪೈ ನಿರ್ಮಾಪಕರು. ಸುರೇಶ್ ಹೆಬ್ಳೀಕರ್, ಗೀತಾ, ಪ್ರಮೀಳಾ ಜೋಷಾಯ್, ಎಂ.ವಿ.ನಾರಾಯಣರಾವ್, ವನಿತಾವಾಸು, ಶಾಂತಮ್ಮ ಮತ್ತಿತರ ಹಿರಿಯರೊಂದಿಗೆ ಧಮರುಗೇಂದ್ರ, ಬೇಬಿ ಪ್ರೀತಿ ಪೈ, ಮಾ।ಉಮೇಶ್‌ರಂಥ ಎಳೆಯರೂ ತಾರಾಬಳಗದಲ್ಲಿದ್ದರು.

ನಿರ್ಮಾಪಕ-ನಿರ್ದೇಶಕ-ನಟ ವಿ.ರವಿಚಂದ್ರನ್ ತಮ್ಮ 'ಕಿಂದರಜೋಗಿ' ಮತ್ತು 'ಶಾಂತಿ ಕ್ರಾಂತಿ' ಚಿತ್ರಗಳಲ್ಲಿ ಬಹಳಷ್ಟು ಬಾಲಪ್ರತಿಭೆಗಳನ್ನು ಬಳಸಿಕೊಂಡಿದ್ದಾರೆ.

ಮಕ್ಕಳ ಚಿತ್ರಗಳ ಸೃಷ್ಟಿಕಾರ್ಯ ಹೆಚ್ಚಬೇಕು; ಮನರಂಜನೆಯೊಂದಿಗೆ ಮಕ್ಕಳಲ್ಲಿನ ಬೌದ್ಧಿಕಶಕ್ತಿಯೂ ಬೆಳೆಯುವಂತಾಗಬೇಕೆಂಬುದು ನಿರ್ಮಾಪಕ ಟಿ.ಎಸ್.ನರಸಿಂಹನ್ ಹೆಬ್ಬಯಕೆ. ಈ ದಿಸೆಯಲ್ಲಿ ಅವರದು ಸದಾ ಚಿಂತನ. ಭಾರತದ ಮಕ್ಕಳ ಚಲನಚಿತ್ರ ಸಂಸ್ಥೆಯಲ್ಲಿ ಪ್ರಮುಖ ಪಾತ್ರ. ಖ್ಯಾತ ಲೇಖಕ ಆರ್.ಕೆ.ನಾರಾಯಣ್‌ರ 'ಮಾಲ್ಗುಡಿ ಡೇಸ್', 'ಸ್ವಾಮಿ ಅಂಡ್ ಫ್ರೆಂಡ್ಸ್' ಕೃತಿಗಳನ್ನು ಕಿರುತೆರೆಯ ಧಾರಾವಾಹಿಗಳಾಗಿ ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ನಿರ್ಮಿಸಿದರು. ಕನ್ನಡದ ನಟ-ನಿರ್ದೇಶಕ ಶಂಕರ್‌ನಾಗ್ ಈ ಧಾರಾವಾಹಿಯ ನಿರ್ದೇಶಕರು. ಮಾ।ಮಂಜುನಾಥ್, ಮಾ।ರೋಹಿತ್ (ನಟ ಶ್ರೀನಾಥ್‌ರ ಪುತ್ರ) ಮತ್ತಿತರರು ಈ ಧಾರಾವಾಹಿಯ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದ ಕನ್ನಡದ ಬಾಲಪ್ರತಿಭೆಗಳು. ನರಸಿಂಹನ್ ಅವರು ಮಾರಿಷಸ್‌ನಲ್ಲಿ ಚಿತ್ರೀಕರಿಸಿದ 'ಸ್ಟೋನ್ ಬಾಯ್' ಕಿರುತೆರೆಯ ಧಾರಾವಾಹಿಯಲ್ಲಿಯೂ ಮಾ।ಮಂಜುನಾಥ್ ಮತ್ತಿತರ ಬಾಲಕಲಾವಿದರು ಅಭಿನಯಿಸಿದರು. ಮಕ್ಕಳ ಚಲನಚಿತ್ರ ಸಂಸ್ಥೆಗಾಗಿ 'ಇನ್ನೊಂದು ಮುಖ' ಚಿತ್ರವನ್ನು ಕಾರ್ಯನಿರ್ವಾಹಕ ನಿರ್ಮಾಪಕರಾಗಿ ನರಸಿಂಹನ್ ತಯಾರಿಸಿಕೊಟ್ಟಿದ್ದಾರೆ. ಮಕ್ಕಳ ಚಿತ್ರಸಮುಚ್ಚಯವನ್ನು ಬೆಂಗಳೂರಿನಲ್ಲಿ ಸ್ಥಾಪಿಸುವಂತೆ ಮಕ್ಕಳ ಚಲನಚಿತ್ರ ಸಂಸ್ಥೆಯ ಮೇಲೆ ಒತ್ತಡ ಹೇರಿ ಒಪ್ಪಿಸಿದ್ದ ಟಿ.ಎಸ್.ನರಸಿಂಹನ್, ರಾಜ್ಯ ಸರ್ಕಾರದ ಅಲಕ್ಷ್ಯ ಧೋರಣೆಯಿಂದಾಗಿ ಯೋಜನೆ ರಾಜ್ಯದ ಕೈತಪ್ಪಿ ಹೋದಾಗ ತೀವ್ರ ನಿರಾಶೆಹೊಂದಿದರು. ಬೆಂಗಳೂರಿನಲ್ಲಿ ಅಂತರರಾಷ್ಟ್ರೀಯ ಮಕ್ಕಳ ಚಲನಚಿತ್ರೋತ್ಸವ ನಡೆಯಲು ಕಾರಣರಾದವರು ನರಸಿಂಹನ್.

ಕನ್ನಡದಲ್ಲಿ ಇಂದು ಜನಪ್ರಿಯರೆನಿಸಿರುವ ಹಲವಾರು ಮಂದಿ ಹಿಂದೆ ಬಾಲಕಲಾವಿದಾಗಿ ತೆರೆಯ ಮೇಲೆ ಕಾಣಿಸಿಕೊಂಡಿದ್ದಾರೆ. ಮಹಾತ್ಮರವರ 'ಶ್ರೀಕೃಷ್ಣಲೀಲಾ' ಚಿತ್ರದಲ್ಲಿ ಮಕರಂದನ ಪಾತ್ರ ನಿರ್ವಹಿಸಿದ ಬಾಲನಟ ವರದರಾಜ್ ಅವರು ನಟ ರಾಜಕುಮಾರ್ ಅವರ ಕಿರಿಯ ಸೋದರ. 'ಸರ್ವಜ್ಞಮೂರ್ತಿ' ಚಿತ್ರದಲ್ಲಿ ರಾಜ್‌ರೊಂದಿಗೆ ಗೀರ್ವಜ್ಞನಾಗಿಯೂ ನಟಿಸಿದರು. ನಿರ್ಮಾಪಕ-ನಿರ್ದೇಶಕ ಎಸ್.ವಿ.ರಾಜೇಂದ್ರಸಿಂಗ್ ಬಾಬು ಅವರು, ತಮ್ಮ ತಂದೆ ಡಿ.ಶಂಕರ್‌ಸಿಂಗ್ ನಿರ್ದೇಶಿಸಿದ 'ಭಕ್ತ ಚೇತ' ಚಿತ್ರದಲ್ಲಿ ಬಾಲನಟನಾಗಿ ತಮ್ಮ ತಾಯಿ ಪ್ರತಿಮಾದೇವಿಯವರೊಡನೆ ಅಭಿನಯಿಸಿದ್ದಾರೆ. ನಾಯಕನಟ ಲೋಕೇಶ್ ಅವರು 'ಭಕ್ತ ಪ್ರಹ್ಲಾದ' ಚಿತ್ರದಲ್ಲಿ ನಾಯಕ ಪಾತ್ರ ಪ್ರಹ್ಲಾದನಾಗಿ ನಟಿಸಿದವರು. ಬೇಬಿ ಜಯಶ್ರೀಯಾಗಿ ಬಾಲಕಲಾವಿದರ ಪಾತ್ರಗಳಲ್ಲಿ ನಟಿಸಿದ್ದ ಬಾಲಕಿ ಜನಪ್ರಿಯ ನಾಯಕಿ ತಾರೆ ಸುಧಾರಾಣಿಯಾದರು. 'ಎಡಕಲ್ಲು ಗುಡ್ಡದ ಮೇಲೆ' ನಾಯಕ ಚಂದ್ರಶೇಖರ್, ಪತ್ರಕರ್ತ ಕೆ.ಎಸ್.ನಾರಾಯಣಸ್ವಾಮಿಯವರ ಮಗಳು - 'ಮಸಣದ ಹೂವು' ಚಿತ್ರದ ಕಲಾವಿದೆ 'ಅಪರ್ಣಾ', ಕಂಠದಾನ ಕಲಾವಿದೆ ಗಾಯತ್ರಿ ಪ್ರಭಾಕರ್ ಅವರ ಪುತ್ರಿ - ಇಂದಿನ ನಾಯಕಿ ತಾರೆ ಅನು ಪ್ರಭಾಕರ್ ಇವರೆಲ್ಲರೂ ಬಾಲಕಲಾವಿದರಾಗಿ ಪರಿಚಿತರಾದವರೇ. ನಾಯಕನಟ ವಿಷ್ಣುವರ್ಧನ್‌ರ ಅಣ್ಣ ರವಿ ಬಾಲಕಲಾವಿದರಾಗಿ ಅಭಿನಯಿಸುತ್ತಿದ್ದು ನಂತರ ಬೇರೊಂದು ಉದ್ಯೋಗ ಹಿಡಿದವರು. ಬೇಬಿ ಸುಮಳಾಗಿ ತೆರೆಗೆ ಪರಿಚಿತರಾದ ಕಲಾವಿದೆ, ಹಿರಿಯ ನಟಿ ಶಾಂತಮ್ಮನವರ ಪುತ್ರಿ, ನಂತರ ಸುಮಾಳಾಗಿ ಕೆಲವು ಚಿತ್ರಗಳಲ್ಲಿ ಮುಖ್ಯಪಾತ್ರ ನಿರ್ವಹಿಸಿದರು. ಇಂದು ತೆಲುಗು-ತಮಿಳು-ಕನ್ನಡ ಚಿತ್ರರಂಗಗಳಲ್ಲಿ ಬೇಡಿಕೆಯ ನಟರೆನಿಸಿರುವ, ಖಳನಾಯಕ ನಟ ಶಕ್ತಿಪ್ರಸಾದ್‌ರ ಪುತ್ರ ಅರ್ಜುನ್ ಸರ್ಜಾ ಬಾಲಕಲಾವಿದರಾಗಿಯೇ ಚಿತ್ರರಂಗ ಪ್ರವೇಶಿಸಿದವರು.

'ಭಕ್ತ ಜ್ಞಾನದೇವ' ಚಿತ್ರದಲ್ಲಿ ಬಾಲಕಲಾವಿದೆಯಾಗಿ ನಟಿಸಿದ ಬೇಬಿ ಹೇಮಾಮಾಲಿನಿ, ನಂತರದಲ್ಲಿ 'ಅಮೆರಿಕಾ ಅಮೆರಿಕಾ' ಚಿತ್ರದ ನಾಯಕಿಯಾಗಿ ನಟಿಸಿ, ವಿವಾಹಾನಂತರ ಹೇಮಾ ಪಂಚಮುಖಿ ಎನಿಸಿದರು. ಬೇಬಿ ಕಲಾ ಆಗಿ ಚಿತ್ರರಂಗ ಪ್ರವೇಶಿಸಿ, ನಂತರ ಯುವತಿಯ ಪಾತ್ರಗಳಲ್ಲಿ ನಟಿ ಕಲಾ ಕಾಣಿಸಿಕೊಂಡರು.

'ಜೀವನ ಜೋಕಾಲಿ'ಯಲ್ಲಿ ಬಾಲಕಲಾವಿದನಾಗಿ ಅಭಿನಯಿಸಿದ ಮಾ।ರಾಜಕುಮಾರ್ ತಮಿಳು ಚಿತ್ರರಂಗದಲ್ಲಿಯೂ ಬಾಲನಟನಾಗಿ ಮಿಂಚಿದ ಕಲಾವಿದ. ಈಗ ಮದರಾಸಿನಲ್ಲಿ ಖ್ಯಾತ ವಾದ್ಯಸಂಗೀತ ಪಟುವಾಗಿದ್ದಾರೆ. ಈತ ಬಿ.ಹನುಮಂತಾಚಾರ್ ಅವರ ಪುತ್ರ. ಬಾಲನಟಿಯಾಗಿ ಅಭಿನಯಿಸುತ್ತಿದ್ದ ಸರ್ವಮಂಗಳಾ ಅತ್ಯುತ್ತಮ ಕಂಠದಾನ ಕಲಾವಿದೆಯಾಗಿ ಬೆಳೆದವರು.

ಕನ್ನಡ ಬೆಳ್ಳಿತೆರೆಯಲ್ಲಿ ಮಿಂಚಿದ ಬಾಲಪ್ರತಿಭೆಗಳ ದೊಡ್ಡ ಸಮೂಹವೇ ಇದೆ. ಉಮ, ಶ್ಯಾಮಿಲಿ, ಶ್ಯಾಮ್, ಬಿಂದು, ರಾಣಿ, ಇಂದಿರಾ, ರೇಖಾ, ಸಿಂಧು, ಶ್ರೀಗೌರಿ, ಉಷಾ, ಚಂದ್ರಮ್ಮ, ಪದ್ಮಿನಿ, ಲಕ್ಷ್ಮಿ, ರೋಜಾರಮಣಿ, ರತ್ನ, ಜಾಹ್ನವಿ, ಹೇಮಾಮಾಲಿನಿ, ಕಲಾವತಿ, ಚಂದ್ರಕಲಾ, ಅಪರ್ಣಾ, ಚಂದನಾ, ಚಂದ್ರಿಕಾ, ಚೈತ್ರ, ರಾಗಿಣಿ, ವಿಜಯಶ್ರೀ, ಸವಿತ, ಸುನೀತಾ, ಕುಮುದಾ, ಶಶಿ, ಗೀತಾ, ಪ್ರಮೋದಿನಿ, ವಿನೋದಿನಿ. ಸರ್ವಮಂಗಳಾ, ಕಲಾ, ಯಶೋದಾ, ಶ್ರುತಿ, ಅಕ್ಷತಾ, ನಟರಾಜ್, ಮಂಜುನಾಥ್, ಅರುಣ್, ಅರ್ಜುನ್, ಆನಂದ್, ರಾಜೇಶ್, ಹರೀಶ್, ಸಂತೋಷ್, ವಿನಾಯಕ್ ಜೋಶಿ, ರವಿ, ನಾರಾಯಣ್, ನರಸಿಂಹನ್, ವಿಜಯ ರಾಘವೇಂದ್ರ. ಕಿರಣ್, ಸಂಜಯ್, ಧಮರುಗೇಂದ್ರ, ಕಿಟ್ಟಿ, ಬಾಲಾಜಿ, ಮನು ಪಾಷ, ಪ್ರವೀಣ್ ಕುಮಾರ್, ವಿಜಯ್ ಕುಮಾರ್, ಅಮಾನುಲ್ಲಾ, ಉದಯಶಂಕರ್, ಸಂದೀಪ್, ಸಂತೋಷ್ ಪ್ರೀತಿ ಪೈ, ರೇಖಾ ಭೂಷಣ್, ಕೀರ್ತಿ, ಜ್ಯೋತಿ, ಕೀರ್ತನಾ ಹೀಗೆ ಪಟ್ಟಿ ಬೆಳೆಯುತ್ತದೆ.

ಐವತ್ತರ ದಶಕದಲ್ಲಿ, ಮಕ್ಕಳ ಚಲನಚಿತ್ರಗಳ ಆಂದೋಲನವೇ ಇರದಿದ್ದ ಸಮಯದಲ್ಲಿ 'ಪ್ರಜಾಮತ' ಪತ್ರಿಕೆಯ 'ರೂಪವಾಣಿ' ವಿಭಾಗದ ಸಂಪಾದಕರಾಗಿದ್ದ

ಕಳಸ ಸತ್ಯನಾರಾಯಣ ಶ್ರೀ ಅಮರ ಕಲಾನಿಕೇತನ್-ಸಾಂಸ್ಕೃತಿಕ ಸಂಸ್ಥೆಯನ್ನು ಸ್ಥಾಪಿಸಿ ಅಂದಿನ ಮೈಸೂರು ರಾಜ್ಯದಾದ್ಯಂತ ಮಕ್ಕಳ ಚಲನಚಿತ್ರೋತ್ಸವಗಳನ್ನು ಏರ್ಪಡಿಸಿದುದು ಗಮನಾರ್ಹ. ರಾಜ್ಯ ಸರ್ಕಾರದ ವಿದ್ಯಾ ಇಲಾಖೆ, ಮೈಸೂರು ಚಲನಚಿತ್ರ ವಾಣಿಜ್ಯ ಮಂಡಳಿ ಮತ್ತು ಚಲನಚಿತ್ರ ಪ್ರದರ್ಶಕರ ಸಹಕಾರದಿಂದ ೧೯೫೬ರ ನವೆಂಬರ್ ೨೪ರಂದು ಬೆಂಗಳೂರಿನ ಲಿಬರ್ಟಿ ಚಿತ್ರಮಂದಿರದಲ್ಲಿ ಏರ್ಪಟ್ಟ ಮಕ್ಕಳ ಚಿತ್ರೋತ್ಸವವನ್ನು ಅಂದಿನ ವಿದ್ಯಾಮಂತ್ರಿ ಕಡಿದಾಳ್ ಮಂಜಪ್ಪನವರು ಉದ್ಘಾಟಿಸಿದರು. ಐವತ್ತು ಸಾವಿರಕ್ಕೂ ಹೆಚ್ಚು ಮಕ್ಕಳು ವೀಕ್ಷಿಸಿದರು. ಇದರಿಂದ ಉತ್ತೇಜಿತರಾಗಿ ಅವರು ಮರುವರ್ಷ ಮೈಸೂರು ರಾಜ್ಯದ ೧೧೪ ಚಿತ್ರಮಂದಿರಗಳಲ್ಲಿ ಮಕ್ಕಳ ಚಿತ್ರೋತ್ಸವ ನಡೆಸಿದರು. ಅಂದಿನ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪ ಉದ್ಘಾಟಿಸಿದ ಈ ಚಿತ್ರೋತ್ಸವದಲ್ಲಿನ ಚಿತ್ರಗಳನ್ನು ವೀಕ್ಷಿಸಿದ ಮಕ್ಕಳ ಸಂಖ್ಯೆ ನಾಲ್ಕು ಲಕ್ಷ ದಾಟಿತ್ತು.

ಕೇಂದ್ರ ಸರ್ಕಾರದ ಮಕ್ಕಳ ಚಿತ್ರ ಸೊಸೈಟಿ, ಅಮೋಲ್ ಪಾಲೇಕರ್ ಸೊಸೈಟಿಯ ಅಧ್ಯಕ್ಷರಾಗಿದ್ದಾಗ ಹಾಗೂ ಜಯಾ ಬಾಧುರಿ ಅಧಿಕಾರದ ಚುಕ್ಕಾಣಿ ಹಿಡಿದಿದ್ದಾಗ ಬೆಂಗಳೂರಿನಲ್ಲಿ ಮಕ್ಕಳ ಚಲನಚಿತ್ರೋತ್ಸವಗಳನ್ನು ಏರ್ಪಡಿಸಿತ್ತು.

ಮಕ್ಕಳ ಚಲನಚಿತ್ರಗಳು ಎಂಟು ಸಾವಿರ ಅಡಿಗಳನ್ನು ಮೀರಿರಬಾರದು ಎಂದು ಅಂತರರಾಷ್ಟ್ರೀಯ ನಿಯಮ. ಆದರೆ ಕರ್ನಾಟಕ ರಾಜ್ಯ ಸರ್ಕಾರವು ಮಕ್ಕಳ ಚಿತ್ರಗಳಿಗೆ ಸಹಾಯಧನ ನೀಡಲು ಮುಂದಾದಾಗ ಹತ್ತು ಸಾವಿರ ಅಡಿ (ಮೂರು ಸಾವಿರ ಮೀಟರ್) ಉದ್ದಕ್ಕಿಂತ ಕಡಿಮೆ ಇರಬಾರದೆಂದು ನಿಯಮ ಮಾಡಿತು. ಹೀಗಾಗಿ ಕನ್ನಡದಲ್ಲಿ ಮಕ್ಕಳ ಚಿತ್ರ ಮಾಡುವವರು ಹತ್ತು ಸಾವಿರ ಅಡಿಗಳಷ್ಟು ಉದ್ದದ ಚಿತ್ರವನ್ನೇ ಮಾಡುತ್ತಾರೆ. ಅ ಚಿತ್ರ ಮಕ್ಕಳ ಚಿತ್ರೋತ್ಸವಗಳಿಗಾಗಿ ದೇಶ-ವಿದೇಶಗಳಲ್ಲಿ ಪ್ರದರ್ಶಿಸಬೇಕಾದಾಗ, ಅದರಲ್ಲಿನ ಹಾಡು ಮತ್ತಿತರ ಭಾಗಗಳನ್ನು ಪುನರ್ ಸಂಕಲನ ಮಾಡಿ ಎಂಟು ಸಾವಿರ ಅಡಿಯನ್ನು ದಾಟದಂತೆ ಮಾಡಿ ಕಳುಹಿಸಿಕೊಡುತ್ತಾರೆ.

ರಾಜ್ಯ ಸರ್ಕಾರವು ಕನ್ನಡ ಚಿತ್ರಗಳಿಗೆ ಸಹಾಯಧನ ನೀಡುವ ಯೋಜನೆಯನ್ನು ಆರಂಭಿಸಿದಾಗ ೩೦೦೦ ಮೀಟರ್ ಗಳಿಗಿಂತ ಕಡಿಮೆಯಿಲ್ಲದ ಪೂರ್ಣಪ್ರಮಾಣದ ಕನ್ನಡ ಕಥಾನಿರೂಪಕಚಿತ್ರ (ಫುಲ್ ಲೆಂಗ್ತ್ ಕನ್ನಡ ಫೀಚರ್ ಫಿಲಂ)ಗಳಿಗೆ ಮಾತ್ರ ಸಹಾಯಧನವೆಂದು ಆದೇಶ ನೀಡಿತ್ತು. ಸಾಕ್ಷ್ಯಚಿತ್ರಗಳು, ಶೈಕ್ಷಣಿಕ ಚಿತ್ರಗಳು ಹಾಗೂ ಮಕ್ಕಳ ಚಿತ್ರಗಳನ್ನು ಅನರ್ಹವೆಂದು ೧೯೬೭ರ ಆದೇಶದಲ್ಲಿ ಘೋಷಿಸಲಾಗಿತ್ತು. ೧೯೭೯ರ ಸರ್ಕಾರಿ ಆದೇಶದಲ್ಲಿಯೂ ಮಕ್ಕಳ ಚಿತ್ರಗಳಿಗೆ ಸಹಾಯಧನ ನೀಡುವ ಬಗ್ಗೆ ಪ್ರಸ್ತಾಪವಿರಲಿಲ್ಲ. ದಿನಾಂಕ ೮-೮-೧೯೬೭ರ ರಾಜ್ಯ ಸರ್ಕಾರದ ಈ ಸಂಬಂಧದ ಆದೇಶದಲ್ಲಿ ಸಹಾಯಧನ ಪಡೆಯಲು ಮಕ್ಕಳ ಚಿತ್ರಗಳು ಅರ್ಜಿ ಸಲ್ಲಿಸುವಂತಿಲ್ಲ ಎಂಬುದನ್ನು ಸ್ಪಷ್ಟವಾಗಿಯೇ ಉಲ್ಲೇಖಿಸಲಾಗಿತ್ತು.

ಎಪ್ಪತ್ತರ ದಶಕದಲ್ಲಿ ಅತ್ಯುತ್ತಮ ಬಾಲನಟ/ನಟಿ ಪ್ರಶಸ್ತಿಯನ್ನು ರಾಜ್ಯ ಸರ್ಕಾರ ನೀಡಲು ಆರಂಭಿಸಿದ್ದರೂ ಮಕ್ಕಳ ಚಿತ್ರಗಳು ಸಹಾಯಧನ ಪಡೆಯಲು ಸಾಧ್ಯವಾದದ್ದು ತೊಂಬತ್ತರ ದಶಕದ ಕೊನೆಯ ವೇಳೆಗೆ. ದಿನಾಂಕ ೧೦-೧೨-೧೯೯೪ರ ರಾಜ್ಯ ಸರ್ಕಾರದ ಆದೇಶದಲ್ಲಿ ೧೯೯೬ರ ಏಪ್ರಿಲ್ ೧ರ ನಂತರ ಸೆನ್ಸಾರಾದ, ರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಪಡೆದ ಮಕ್ಕಳ ಚಿತ್ರನಿರ್ಮಾಪಕರಿಗೆ ಮೂರು ಲಕ್ಷ ರೂ.ಗಳ ಸಹಾಯಧನ ನೀಡುವ ಬಗ್ಗೆ ಪ್ರಸ್ತಾಪವಿದ್ದಿತು. ದಿನಾಂಕ ೨೭-೨-೧೯೯೯ರ ಆದೇಶದಲ್ಲಿ ರಾಜ್ಯ ಸರ್ಕಾರವು ಸಹಾಯಧನಕ್ಕೆ ಅರ್ಜಿ ಸಲ್ಲಿಸುವ ಮಕ್ಕಳ ಚಿತ್ರಗಳಿಗೆ ಉದ್ದದಲ್ಲಿ ೫೦೦ ಮೀಟರುಗಳ ರಿಯಾಯಿತಿ ತೋರಿಸಿ, ೨೫೦೦ ಮೀಟರುಗಳಿಗಿಂತ ಕಡಿಮೆ ಇರಕೂಡದೆಂದು ಸೂಚಿಸಿತು.

ಕನ್ನಡ ಚಲನಚಿತ್ರಗಳಲ್ಲಿ ಬಾಲಪ್ರತಿಭೆಗಳು ರಾಷ್ಟ್ರ ಹಾಗೂ ರಾಜ್ಯ ಮಟ್ಟಗಳಲ್ಲಿ ಪ್ರಶಸ್ತಿಗೆ ಪಾತ್ರರಾಗುತ್ತಲೇ ಬಂದಿದ್ದಾರೆ. ಆ ವಿವರ ಇಂತಿದೆ :

೧) ಬೇಬಿ ವೃಂದಾ (ಸಂಕಲ್ಪ) - ೧೯೭೨-೭೩ರ ರಾಜ್ಯ ಪ್ರಶಸ್ತಿ, ೨) ಮಾ।ಜಿ.ಎಸ್.ನಟರಾಜ್ (ಕಾಡು) - ೧೯೭೩-೭೪ರ ರಾಷ್ಟ್ರ ಪ್ರಶಸ್ತಿ, ೩) ಬೇಬಿ ಪೂರ್ಣಿಮಾ ರಾಜಕುಮಾರ್ (ಪ್ರೇಮದ ಕಾಣಿಕೆ) - ೧೯೭೫-೭೬ರ ರಾಜ್ಯಪ್ರಶಸ್ತಿ, ೪) ಮಾ।ಪ್ರಸಾದ್ ತಾಗತ್, ಮಾ।ಭಾನುಪ್ರಕಾಶ್, ಮಾ।ಸತೀಶ್ ಮತ್ತು ಬೇಬಿ ಇಂದಿರಾ (ನಾಗರಹೊಳೆ) - ೧೯೭೬-೭೭ರ ರಾಜ್ಯ ಪ್ರಶಸ್ತಿ, ೫) ಮಾ।ಅಜಿತ್ ಕುಮಾರ್ (ಘಟಶ್ರಾದ್ಧ) - ೧೯೭೭-೭೮ರ ರಾಷ್ಟ್ರ-ರಾಜ್ಯ ಪ್ರಶಸ್ತಿ, ೬) ಬೇಬಿ ಮಾಧವಿ (ಸನಾದಿ ಅಪ್ಪಣ್ಣ) - ೧೯೭೭-೭೮ರ ವಿಶೇಷ ರಾಜ್ಯ ಪ್ರಶಸ್ತಿ, ೭) ಮಾ।ಪ್ರಕಾಶ್ (ಅಪರಿಚಿತ) - ೧೯೭೭-೭೮ರ ರಾಜ್ಯ ಪ್ರಶಸ್ತಿ, ೮) ಮಾ।ಶ್ರೀಕಾಂತ್, ಮಾ।ಶಶಿಕುಮಾರ್, ಮಾ।ಹರೀಶ್ ಮತ್ತು ಬೇಬಿ ಅನುರಾಧಾ (ದಂಗೆಯೆದ್ದ ಮಕ್ಕಳು) ೧೯೭೯-೮೦ರ ರಾಜ್ಯ ಪ್ರಶಸ್ತಿ, ೯) ಮಾ।ಸತ್ಯಪ್ರಕಾಶ್ (ರಾಮಲಕ್ಷ್ಮಣ) - ೧೯೮೦-೮೧ರ ರಾಜ್ಯ ಪ್ರಶಸ್ತಿ, ೧೦) ಬೇಬಿ ರೇಖಾ (ಸಿಂಹದ ಮರಿ ಸೈನ್ಯ) - ೧೯೮೧-೮೨ರ ರಾಜ್ಯ ಪ್ರಶಸ್ತಿ, ೧೧) ಮಾ।ಲೋಹಿತ್ (ಪುನೀತ್ ರಾಜಕುಮಾರ್) (ಚಲಿಸುವ ಮೋಡಗಳು) - ೧೯೮೨-೮೩ರ ರಾಜ್ಯ ಪ್ರಶಸ್ತಿ, ೧೨) ಮಾ।ಲೋಹಿತ್ (ಪುನೀತ್ ರಾಜಕುಮಾರ್) (ಎರಡು ನಕ್ಷತ್ರಗಳು) - ೧೯೮೩-೮೪ರ ರಾಜ್ಯ ಪ್ರಶಸ್ತಿ, ೧೩) ಮಾ।ಮಂಜುನಾಥ್ (ಪರಮೇಶಿ ಪ್ರೇಮಪ್ರಸಂಗ) - ೧೯೮೪-೮೫ರ ರಾಜ್ಯ ಪ್ರಶಸ್ತಿ, ೧೪) ಬೇಬಿ ರೇಖಾ (ತುಳಸೀದಳ) - ೧೯೮೬-೮೭ರ ರಾಜ್ಯ ಪ್ರಶಸ್ತಿ, ೧೫) ಮಾ।ಸಂತೋಷ್ (ತಬರನ ಕಥೆ) - ೧೯೮೬-೮೭ರ ರಾಜ್ಯ ಪ್ರಶಸ್ತಿ, ೧೬) ಮಾ।ಶ್ರೀವತ್ಸ (ಮಧ್ವಾಚಾರ್ಯ) - ೧೯೮೬-೮೭ರ ರಾಜ್ಯ ಪ್ರಶಸ್ತಿ, ೧೭) ಮಾ।ಜಯಂತ್ (ದಂಗೆ) - ೧೯೮೭-೮೮ರ ರಾಜ್ಯ ಪ್ರಶಸ್ತಿ, ೧೮) ಬೇಬಿ ಜಾಹ್ನವಿ (ಬೆಳ್ಳಿ ಬೆಳಕು) - ೧೯೮೮-೮೯ರ ರಾಜ್ಯ ಪ್ರಶಸ್ತಿ, ೧೯) ಮಾ।ಪುನೀತ್ ರಾಜಕುಮಾರ್ (ಬೆಟ್ಟದ ಹೂವು) - ೧೯೮೯-೯೦ರ ರಾಷ್ಟ್ರ ಪ್ರಶಸ್ತಿ ಮತ್ತು ಮಾರಿಷಸ್ ದೇಶದ ಪ್ರಶಸ್ತಿ, ೨೦) ಮಾ।ಧಮರುಗೇಂದ್ರ (ಪ್ರಥಮ ಉಷಾಕಿರಣ) - ೧೯೮೯-೯೦ರ ರಾಜ್ಯ ಪ್ರಶಸ್ತಿ, ೨೧) ಬೇಬಿ ಶಾಮಿಲಿ (ಮತ್ತೆ ಹಾಡಿತು ಕೋಗಿಲೆ) - ೧೯೯೦-೯೧ರ ರಾಜ್ಯ ಪ್ರಶಸ್ತಿ, ೨೨) ಮಾ।ಆನಂದ್ (ಗೌರಿ ಗಣೇಶ) - ೧೯೯೧-೯೨ರ ರಾಜ್ಯ ಪ್ರಶಸ್ತಿ, ೨೩) ಮಾ।ಆನಂದ್ (ತಾಯಿ ಇಲ್ಲದ ತವರು) - ೧೯೯೪-೯೫ರ ರಾಜ್ಯ ಪ್ರಶಸ್ತಿ, ೨೪) ಬೇಬಿ ಸಿಂಧು (ಮೌನರಾಗ) - ೧೯೯೫-೯೬ರ ರಾಜ್ಯ ಪ್ರಶಸ್ತಿ, ೨೫) ಮಾ।ವಿನಾಯಕ ಜೋಷಿ (ನಮ್ಮೂರ ಮಂದಾರ ಹೂವೇ) - ೧೯೯೬-೯೭ರ ರಾಜ್ಯ ಪ್ರಶಸ್ತಿ, ೨೬) ಬೇಬಿ ನಿವೇದಿತಾ ಶಿವರಾಜ್‌ಕುಮಾರ್ (ಅಂಡಮಾನ್) - ೧೯೯೭-೯೮ರ ರಾಜ್ಯ ಪ್ರಶಸ್ತಿ, ೨೭) ಬೇಬಿ ಹಿಮಾ (ಹೂಮಳೆ) - ೧೯೯೮-೯೯ರ ರಾಜ್ಯ ಪ್ರಶಸ್ತಿ, ಮತ್ತು ಮಾ।ಸುಖೇಶ್ (ವರ್ಷ ಋತು) - ೧೯೯೮-೯೯ರ ರಾಜ್ಯ ಪ್ರಶಸ್ತಿ.

೧೯೯೫-೯೬ನೇ ಸಾಲಿನ ಅತ್ಯುತ್ತಮ ಮಕ್ಕಳ ಚಿತ್ರಕ್ಕಾಗಿ ನೀಡಲಾಗುವ ರಾಜ್ಯ ಪ್ರಶಸ್ತಿಯನ್ನು ಕೋಮಲ್ ಪ್ರೊಡಕ್ಷನ್ಸ್ ಅವರ 'ನಾವಿದ್ದೇವೆ ಎಚ್ಚರಿಕೆ' ಚಿತ್ರ ಪಡೆಯಿತು. ಮೂತ್ರಪಿಂಡ ಕಳವು ಕುರಿತಂತೆ ಹೆಣೆಯಲಾದ ಕಥೆಯ ಈ ಚಿತ್ರವನ್ನು ಮಕ್ಕಳ ಚಿತ್ರಗಳ ಬಗ್ಗೆ ಅಪಾರ ಆಸಕ್ತಿ-ಅನುಭವ ಹೊಂದಿರುವ ಟಿ.ಎಸ್.ನರಸಿಂಹನ್ ನಿರ್ಮಿಸಿದರು. ಐವರು ಮಕ್ಕಳು ಆಸ್ಪತ್ರೆಗೆ ಬಂದು, ತಮ್ಮ ತುಂಟಾಟಗಳಿಂದಲೇ ವೈದ್ಯೆಯ ಮನ ಗೆದ್ದು, ಮೂತ್ರಪಿಂಡ ದಾನದ ಬಗ್ಗೆ ಅರಿತು, ತಮಗರಿವಿಲ್ಲದೆಯೇ ಮೂತ್ರಪಿಂಡಗಳ ಕಳ್ಳ ವ್ಯಾಪಾರದ ಜಾಲವೊಂದನ್ನು ಕಂಡುಹಿಡಿಯುವ ಸಾಮಾಜಿಕ ಸಮಸ್ಯೆಯ ಸುತ್ತ ಸಾಗುವ ಚಿತ್ರ.

ಅಮಾಯಕ ವ್ಯಕ್ತಿಯೊಬ್ಬ ಸಮಾಜ ವಿದ್ರೋಹಿಶಕ್ತಿಗಳ ನಿಯಂತ್ರಣಕ್ಕೆ ಒಳಗಾಗಿ ಖೋಟಾನೋಟು ಮುದ್ರಣದ ವ್ಯೂಹದಲ್ಲಿ ಸಿಲುಕುತ್ತಾನೆ. ರಜೆ ಕಳೆಯಲು ನಗರದಿಂದ ಬಂದ ಬಾಲಕರು ಹಾಗೂ ಗ್ರಾಮದ ಮಕ್ಕಳು ವ್ಯೂಹವನ್ನು ಭೇದಿಸಲು ಸಾಹಸ ಮಾಡುತ್ತಾರೆ. ಈ ಹಂದರವನ್ನಾಧರಿಸಿ ಎ ಅಂಡ್ ಎಂ ಫಿಲಂಸ್ ಅವರು ತಯಾರಿಸಿರುವ 'ವ್ಯೂಹ' - ೧೯೯೬-೯೭ರ ಅತ್ಯುತ್ತಮ ಮಕ್ಕಳಚಿತ್ರದ ರಾಜ್ಯ ಪ್ರಶಸ್ತಿಗೆ ಪಾತ್ರವಾಗಿದೆ. ಸಿ.ಲಕ್ಷ್ಮೀಬಾಯಿಯವರು ಈ ಚಿತ್ರದ ನಿರ್ಮಾಪಕರು. ಕನ್ನಡ ಚಿತ್ರರಂಗಕ್ಕೆ ಉತ್ತಮ ಚಿತ್ರಗಳನ್ನು ನೀಡುವ ಸದುದ್ದೇಶ ಹೊತ್ತು ಚಿತ್ರರಂಗಕ್ಕೆ ಬಂದವರು.

ಮಕ್ಕಳಚಿತ್ರಗಳನ್ನು ನಿರ್ಮಿಸುವ ಹಂಬಲ ಹೊತ್ತ ನಿರ್ಮಾಪಕರು ಕನ್ನಡದಲ್ಲಿ ಅತಿ ವಿರಳ - ಭಾರತದಲ್ಲಿಯೇ ತೀರಾ ವಿರಳ. ಒಂದು ವೇಳೆ ಮಕ್ಕಳಿಗಾಗಿಯೇ ಚಿತ್ರನಿರ್ಮಾಣ ಮಾಡಲು ಯಾರಾದರೂ ಮುಂದೆ ಬಂದರೆ ಅವರಿಗೆ ದೊರೆಯುವ ಪ್ರೋತ್ಸಾಹವೂ ಬಹಳ ಕಡಿಮೆ. ಪ್ರೇಕ್ಷಕರಿಂದಾಗಲೀ ಸರ್ಕಾರದಿಂದಾಗಲೀ ಯಾವುದೇ ಪ್ರೋತ್ಸಾಹ ಇರುವುದಿಲ್ಲ. ಮಕ್ಕಳ ಚಿತ್ರನಿರ್ಮಾಣದ ಆಶೆಯನ್ನು ಮೊಗ್ಗಿನಲ್ಲಿಯೇ ಚಿವುಟಿ ಬಿಡುವ ಮನೋಭಾವವೇ ಹೆಚ್ಚು. ಎಲ್ಲಕ್ಕಿಂತ ಮಿಗಿಲಾಗಿ ಮಕ್ಕಳ ಮನಸ್ಸನ್ನು ಅರಿತು, ಅವರಿಗಾಗಿ ಮಕ್ಕಳನ್ನೇ ಕಲಾವಿದರನ್ನಾಗಿಸಿ ಚಿತ್ರೀಕರಣ ಮಾಡುವುದು ಸುಲಭ ಸಾಧ್ಯವೇನಲ್ಲ. ಹಾಗಾಗಿ ನಮ್ಮಲ್ಲಿ ಮಕ್ಕಳ ಚಿತ್ರನಿರ್ಮಾಣ ಅಲ್ಲೊಂದು-ಇಲ್ಲೊಂದರಂತೆ ನಡೆದಿದೆ. ಬೆಳವಣಿಗೆ ಕುಂಟಿದೆ. ನಾಮಕಾವಾಸ್ತೆ ಎಂಬಂತೆ ಮಕ್ಕಳ ಚಿತ್ರಗಳು ಸೃಷ್ಟಿಯಾಗುತ್ತವೆ. ಸರ್ಕಾರಗಳು ಮಕ್ಕಳಿಗಾಗಿ ಚಿತ್ರನಿರ್ಮಿಸುವವರನ್ನು ಪ್ರೋತ್ಸಾಹಿಸಬೇಕು; ಮಕ್ಕಳ ಚಿತ್ರಗಳ ಪ್ರದರ್ಶನಕ್ಕೆಂದೇ ಚಿಕ್ಕ ಚಿಕ್ಕ ಚಿತ್ರಮಂದಿರಗಳ ನಿರ್ಮಾಣವನ್ನು ಉತ್ತೇಜಿಸಬೇಕು. ರಾಷ್ಟ್ರದ ಎಲ್ಲೆಡೆಯಲ್ಲೂ ಈ ಉತ್ತೇಜನ ಕಾಣಬಂದರೆ ಮಕ್ಕಳ ಚಿತ್ರಗಳ ಪ್ರಗತಿ ಕಾಣಲಾದೀತೋ ಏನೋ.

# ಮಾತಾಡದ ಮಿನುಗುತಾರೆಗಳು



(ಚಿತ್ರ ೩೭)'ನಾಗರಹೊಳೆ' - ಇಂದಿರಾ

ಚಲನಚಿತ್ರರಂಗ ಮೂಕಿ ಚಿತ್ರಗಳ ಕಾಲದಿಂದಲೂ ವಿವಿಧ ಪ್ರಾಣಿ-ಪಕ್ಷಿಗಳನ್ನು ಚಿತ್ರೀಕರಣದಲ್ಲಿ ಬಳಸುತ್ತಾ ಬಂದಿದೆ. ಪೌರಾಣಿಕ ಚಿತ್ರಗಳಲ್ಲಿ ಆನೆ, ಕುದುರೆ, ಹುಲಿ, ಸಿಂಹ, ಕರಡಿ, ಜಿಂಕೆ, ನವಿಲು, ಹಾವು, ಹಸು, ಬಸವಗಳು ಬಳಕೆಯಾದರೆ, ಐತಿಹಾಸಿಕ ಕಥಾಚಿತ್ರಗಳಲ್ಲಿ ಆನೆ-ಕುದುರೆಗಳ ಬಳಕೆ ಧಾರಾಳವಾಗಿರುತ್ತವೆ. ಇನ್ನು ಜಾನಪದ ಚಿತ್ರಗಳಲ್ಲಿ ಗಿಣಿ, ನಾಯಿ, ಹಾವು, ಕೋತಿಗಳ ಬಳಕೆ ಸಾಮಾನ್ಯ. ಸಾಮಾಜಿಕ ಕಥಾನಕಗಳಲ್ಲಿ ನಾಯಿ, ಕೋತಿ, ಗೂಳಿ ಹಾಗೂ ಹಾವುಗಳ ಚಮತ್ಕಾರಗಳು ಕಾಣಬರುತ್ತವೆ. ನರವಾನರ ಚಿಂಪಾಂಜಿಯೂ ಚಲನಚಿತ್ರಗಳಲ್ಲಿ ಅಭಿನಯಿಸಿದ್ದಿದೆ.

ಸಾಮಾನ್ಯವಾಗಿ ಚಿತ್ರಗಳಲ್ಲಿ ಅಭಿನಯಿಸುವ ಪ್ರಾಣಿ-ಪಕ್ಷಿಗಳಿಗೆ ಯೋಗ್ಯ ತರಬೇತಿಯನ್ನು ನೀಡಬೇಕಾದುದು ಅಗತ್ಯ. ಪ್ರಾಣಿಗಳನ್ನು ಪಳಗಿಸಿ ತರಬೇತಿ ನೀಡಿ ಚಿತ್ರೀಕರಣಗಳಿಗೆ ಒದಗಿಸಿಕೊಟ್ಟು ಜೀವನ ಸಾಗಿಸುವ ಕುಟುಂಬಗಳು ಹಲವಿದ್ದು, ಚಿತ್ರೀಕರಣದ ಸ್ಟುಡಿಯೋಗಳ ಸಮೀಪದಲ್ಲಿಯೇ ವಾಸಿಸುತ್ತವೆ. ಇನ್ನು ಕೆಲವರು - ಅಂದರೆ ಹಾವಾಡಿಗರು, ಕೋತಿ ಆಡಿಸುವವರು, ಕರಡಿ ಆಡಿಸುವವರು ಸಾರ್ವಜನಿಕ ಸ್ಥಳಗಳಲ್ಲಿ ತಾವು ಸಾಕಿದ ಪ್ರಾಣಿಗಳ ಚಮತ್ಕಾರ ಪ್ರದರ್ಶಿಸಿ ಜೀವನ ನಡೆಸುತ್ತಾ, ಅವಕಾಶ ಬಂದಾಗ ಚಿತ್ರೀಕರಣಗಳಿಗೆ ತಮ್ಮ ಪ್ರಾಣಿಗಳನ್ನು ಒದಗಿಸುತ್ತಾರೆ.

ಪೌರಾಣಿಕ ಚಿತ್ರಗಳಲ್ಲಿ ಯುದ್ಧದ ಸನ್ನಿವೇಶಗಳಲ್ಲಿ ಆನೆ, ಕುದುರೆ, ಒಂಟೆಗಳ ಸೈನ್ಯವು ಪದಾತಿದಳದೊಂದಿಗೆ ಸೇರಿ ಕದನದಲ್ಲಿ ಪಾಲ್ಗೊಳ್ಳುವುದು ಸಾಮಾನ್ಯ. ಹಾಗೆಯೇ ಕಾಡಿನ ಸನ್ನಿವೇಶಗಳಲ್ಲಿ ಹುಲಿ, ಕರಡಿ, ಚಿರತೆ, ಕಾಡೆಮ್ಮೆಗಳು ಇರುತ್ತವೆ. ಆಶ್ರಮ-ಪರ್ಣಕುಟೀರಗಳ ದೃಶ್ಯಗಳಲ್ಲಿ ಜಿಂಕೆ, ನವಿಲು, ಗೋವುಗಳನ್ನು ಕಾಣಬಹುದು. 'ರಾಜಸೂಯ ಯಾಗ'ದ ಸಂದರ್ಭದಲ್ಲಿ ಅಲಂಕೃತ ಅಶ್ವವೇ ಪ್ರಮುಖ. ಹಾಗೆಯೇ ಐತಿಹಾಸಿಕ ಚಿತ್ರಗಳಲ್ಲಿನ ಸಮರ ಸನ್ನಿವೇಶಗಳಿಗೂ ಅಶ್ವಸೇನೆ-ಗಜಸೇನೆ ಬೇಕೇ ಬೇಕು.

ಜಾನಪದಕಥೆಗಳಾದರೆ ಮಾಯ, ಮಂತ್ರ, ಮಾಟ, ಮೋಡಿಗಳೊಂದಿಗೆ ಮಂತ್ರವಾದಿ ಮಾನವನನ್ನು ಗಿಣಿಯನ್ನಾಗಿಸುವುದು, ನಾಯಿಯನ್ನಾಗಿಸುವುದು, ಕರಡಿಯನ್ನಾಗಿಸುವುದು, ಹಾವಾಗಿಸುವುದು - ಹೀಗೆ ಕಥೆಯ ಅಗತ್ಯವನ್ನನುಸರಿಸಿ ಪ್ರಾಣಿಗಳನ್ನು ಬಳಸಲಾಗುತ್ತದೆ. ಸಾಮಾಜಿಕ ವಸ್ತುಗಳಾದಲ್ಲಿ ಆಂಜನೇಯ ಕೋತಿಯಾಗಿ ನೆರವಾಗುವುದು, ಸಾಕಿದ ನಾಯಿ ಸಹಾಯ ಮಾಡುವುದು, ಗೂಳಿ ಅಟ್ಟಿಸಿಕೊಂಡು ಬರುವುದು ಅಥವಾ ಕಾಳಗಕ್ಕೆ ನಿಲ್ಲುವುದು, ಹಸುಗಳು ಲಾಲಿಸುವುದು ಇಂಥ ಸನ್ನಿವೇಶಗಳಲ್ಲಿ ಪ್ರಾಣಿಗಳ ಬಳಕೆಯಾಗುತ್ತಾ ಬಂದಿದೆ.



(ಚಿತ್ರ ೩೮)'ಪುಟಾಣಿ ಏಜೆಂಟ್ ೧, ೨, ೩'ಚಿತ್ರದ ಸಾಹಸಿಗಳು

ಶಿವನ ಪಾತ್ರಧಾರಿಗಳು ಕೊರಳಲ್ಲಿ ಹಾವು ಸುತ್ತಿಕೊಂಡಿರಬೇಕೆಂಬುದು ನಂಬಿಬಂದ ಕಲ್ಪನೆಯಷ್ಟೆ. ಮೊದಮೊದಲು ಶಿವನ ಪಾತ್ರವಹಿಸುವವರ ಕೊರಳನ್ನು ರಬ್ಬರ್ ಹಾವುಗಳು ಅಲಂಕರಿಸುತ್ತಿದ್ದವು. ಕ್ರಮೇಣ ಹಾವಾಡಿಗರಿಂದ ನಾಗರಹಾವುಗಳನ್ನೇ ತರಿಸಿಕೊಂಡು ಬಳಸಲಾರಂಭವಾಯಿತು. ಹುಲಿ-ಸಿಂಹ-ಕರಡಿ-ಆನೆ ಮುಂತಾದ ಕಾಡುಪ್ರಾಣಿಗಳನ್ನು ಮಾನವ ಸಂಪರ್ಕಕ್ಕೆ ಹೊಂದಿಕೊಳ್ಳುವಂತೆ ಪಳಗಿಸಿ, ವಿವಿಧ ಚಮತ್ಕಾರಗಳ ತರಬೇತಿ ನೀಡಲಾಗಿರುತ್ತದೆ. ಚಿತ್ರೀಕರಣ ಸ್ಥಳದಲ್ಲಿ ನಿರ್ದೇಶಕನ ಅಭಿಲಾಷೆಯಂತೆ, ತನ್ನ ತರಬೇತುದಾರನ ಇಷಾರೆಯಂತೆ ಪ್ರಾಣಿ-ಪಕ್ಷಿಗಳು ಅಭಿನಯಿಸುವುದು ಸಾಮಾನ್ಯ. ನಾಯಿ-ಕೋತಿ-ಚಿಂಪಾಂಜಿ-ಕುದುರೆಗಳು ಹಾಗೂ ಚಿತ್ರೀಕರಣದಲ್ಲಿ ಬಳಸಲಾಗುವ ಪ್ರತಿ ಪ್ರಾಣಿಯೂ ತರಬೇತು ಪಡೆದಿರುವುದು ಅಗತ್ಯ. ಇಲ್ಲವಾದಲ್ಲಿ ಅವುಗಳಿಂದ ಕೆಲಸ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. ವೆಚ್ಚವೂ ಅಧಿಕವಾಗುತ್ತದೆ.

ಆಂಗ್ಲಭಾಷಾ ಚಿತ್ರರಂಗದಲ್ಲಿ ಪುರಾತನ ಕಾಲದಲ್ಲೆಂದೋ ಇದ್ದವೆನ್ನಲಾದ ಪ್ರಾಣಿಗಳ ಪ್ರತಿರೂಪಗಳನ್ನು ಸಿದ್ಧಪಡಿಸಿ, ಯಾಂತ್ರೀಕೃತಗೊಳಿಸಿ, ಬಳಸಿರುವುದನ್ನು ಕಾಣಬಹುದು. ಡ್ರಾಕುಲಾಗಳು, ಡೈನೋಸಾರ್‌ಗಳು ಮುಂತಾದವುಗಳನ್ನು ಪುನರ್‌ಸೃಷ್ಟಿ ಮಾಡಿರುವುದು ನಿಜಕ್ಕೂ ಅಚ್ಚರಿಯ ಸಂಗತಿ.

ಕನ್ನಡ ಚಿತ್ರರಂಗದಲ್ಲಿ ನಿರ್ಮಾಪಕ-ನಟ ಎಂ.ಪಿ.ಶಂಕರ್ ಅವರು ಕಾಡು ಹಾಗೂ ಪ್ರಾಣಿಗಳ ಬಗ್ಗೆ ಆಸಕ್ತಿ ತಳೆದವರು. ಅವರು ತಯಾರಿಸಿದ ಚಿತ್ರಗಳಲ್ಲಿ ಒಂದಲ್ಲ ಒಂದು ಪ್ರಾಣಿ ಅಭಿನಯಿಸಿರುತ್ತಿತ್ತು. ಕನ್ನಡ ಹಾಗೂ ತುಳು ಚಿತ್ರರಂಗದಲ್ಲಿ ಹೆಸರಾದ ನಿರ್ದೇಶಕ ಆರೂರು ಪಟ್ಟಾಭಿ ಅವರು ಲಿಲ್ಲಿ ಎಂಬ ನಾಯಿಯೊಂದನ್ನು ಸಾಕಿ, ತಾವೇ ಸ್ವತಃ ಅದಕ್ಕೆ ತರಬೇತಿ ನೀಡಿದ್ದರು. ಆ ನಾಯಿ ಅವರ ದಿಗ್ದರ್ಶನದ 'ಭಕ್ತ ವಿಜಯ' ಚಿತ್ರದಲ್ಲಿ ಅಭಿನಯಿಸಿತು. ನಂತರ ಹಲವು ಚಿತ್ರಗಳಲ್ಲಿ ಪಾಲ್ಗೊಂಡಿತು. ಎಂ.ಪಿ.ಶಂಕರ್ ನಿರ್ಮಿಸಿದ 'ಕಾಡಿನ ರಹಸ್ಯ' ಚಿತ್ರದಲ್ಲಿ ಆನೆ, ಚಿರತೆ ಹಾಗೂ ನರಿ ಬಳಸಲಾಗಿದ್ದರೆ, ಅವರದೇ 'ರಾಮಲಕ್ಷ್ಮಣ'ದಲ್ಲಿ ಹುಲಿ ಹಾಗೂ 'ನಾರಿ ಮುನಿದರೆ ಮಾರಿ' ಚಿತ್ರದಲ್ಲಿ ಭೈರವ ಎಂಬ ಕುದುರೆ ಅಭಿನಯಿಸಿದ್ದವು. ನಿರ್ಮಾಪಕ ಎಸ್.ವೀರಾಸ್ವಾಮಿಯವರು ತಯಾರಿಸಿದ 'ಗಂಧದ ಗುಡಿ' ಚಿತ್ರದ ಚಿತ್ರೀಕರಣ ಬಂಡೀಪುರ ಅರಣ್ಯಗಳಲ್ಲಿ ನಡೆದಿದ್ದು ಗಂಧದ ಕಳ್ಳಸಾಗಾಣಿಕೆಯ ಸನ್ನಿವೇಶದಲ್ಲಿ ಆನೆಗಳನ್ನೂ ಬಳಸಿಕೊಳ್ಳಲಾಗಿತ್ತು. ಆ ಚಿತ್ರದ ಚಿತ್ರೀಕರಣ ನಡೆದಿದ್ದ ಸಂದರ್ಭದಲ್ಲಿ ಕಾಡಿನಲ್ಲಿ ಆನೆಯೊಂದು ಮರಣಿಸಿದ್ದು, ಅದರ ಮೂಳೆ-ದಂತಗಳನ್ನು ಅರಣ್ಯ ಸಿಬ್ಬಂದಿ ಬೇರ್ಪಡಿಸುವ ಸಂದರ್ಭ ಹಾಗೂ ಕಾಡಾನೆಯನ್ನು ಹಿಡಿಯುವ ಖೆಡ್ಡಾ ಕಾರ್ಯಕ್ರಮಗಳು ಚಿತ್ರೀಕರಣಕ್ಕೆ ಅನಾಯಸವಾಗಿ ದೊರೆತವು. ಶ್ರೀ ಭಗವತಿ ಸಂಸ್ಥೆಯವರ 'ಧೂಮಕೇತು' ಚಿತ್ರದಲ್ಲಿ ಸರ್ಕಸ್ ಒಂದನ್ನು ಬಳಸಿಕೊಳ್ಳಲಾಗಿತ್ತು. 'ನಾಗರಹೊಳೆ' ಚಿತ್ರದಲ್ಲಿ ಬೇಬಿ ಇಂದಿರಾ ಹೆಬ್ಬಾವಿನೊಂದಿಗೆ ಸೆಣಸುವ ಸನ್ನಿವೇಶ ಇದ್ದಿತ್ತು. ಗೂಳಿ ಕಾಳಗದ ದೃಶ್ಯವನ್ನು 'ಬಂಗಾರದ ಮನುಷ್ಯ' ಚಿತ್ರದಲ್ಲಿ ಅತ್ಯಂತ ರೋಚಕವಾಗಿ ಚಿತ್ರೀಕರಿಸಲಾಗಿದೆ. ಬಾಲಕಲಾವಿದೆ ಬೇಬಿ ಶ್ಯಾಮಿಲಿ ನಟಿಸಿದ ಚಿತ್ರಗಳಲ್ಲೆಲ್ಲಾ ನಾಯಿ ಹಾಗೂ ಕೋತಿಗಳು ಸಂಗಾತಿಗಳಾಗಿದ್ದವು. 'ಭಲೇ ರಾಣಿ'ಯಲ್ಲಿ ಬೇಬಿ ರಾಣಿಯ ಜೊತೆಗಾರನಾಗಿ ಮೋತಿ ಎಂಬ ನಾಯಿ ನಟಿಸಿತು. 'ದೊಂಬರ ಕೃಷ್ಣ', 'ಜಂಬೂ ಸವಾರಿ' ಚಿತ್ರಗಳಲ್ಲಿ ಆನೆ, 'ಸಂಪತ್ತಿಗೆ ಸವಾಲ್' ಚಿತ್ರದ ಎಮ್ಮೆ ಹಾಡಿಗೆ ಎಮ್ಮೆ, 'ಸತಿ ಸಾವಿತ್ರಿ', 'ಭೂಲೋಕದಲ್ಲಿ ಯಮರಾಜ' ಚಿತ್ರಗಳಲ್ಲಿ ಕೋಣ, 'ಮಳೆ ಬಂತು ಮಳೆ'ಯಲ್ಲಿ ಮೊಸಳೆ, ಅಯ್ಯಪ್ಪಸ್ವಾಮಿಯ ಚಿತ್ರಗಳಲ್ಲಿ ಹುಲಿ, 'ಗರುಡ ರೇಖೆ'ಯ ಸರ್ಪ ಜೋಡಿಯ ಪ್ರಣಯ, ಸರ್ಪದ ಸೇಡು, 'ನಿಶ್ಯಬ್ದ'ದಲ್ಲಿ ನಾಯಿಗಳು, 'ನಾಗ ಕಾಳ ಭೈರವ'ದಲ್ಲಿ ಹಾವು, ಕೋತಿ, ನಾಯಿ ಮತ್ತು ಎತ್ತು, 'ಪುಟಾಣಿ ಏಜೆಂಟ್ ೧ ೨ ೩', 'ಸಿಂಹದ ಮರಿ ಸೈನ್ಯ', 'ಪ್ರಚಂಡ ಪುಟಾಣಿಗಳು' ಅಂಥ ಮಕ್ಕಳ ಚಿತ್ರಗಳಲ್ಲಿ ನಾಯಿ, ಕೋತಿ ಹಾಗೂ ಹಾವುಗಳು ಅಭಿನಯಿಸಿವೆ. 'ಮಹಿಷಾಸುರ ಮರ್ದಿನಿ'ಯಲ್ಲಿ ಮಹಿಷ ಕೋಣನಾಗುತ್ತಾನೆ.



(ಚಿತ್ರ ೩೯) 'ಗಂಧದ ಗುಡಿ' - ಚಿರತೆ ಮರಿಗಳೊಂದಿಗೆ ರಾಜಕುಮಾರ್, ನರಸಿಂಹರಾಜು



(ಚಿತ್ರ ೪೦) 'ಜಂಬೂ ಸವಾರಿ' - ಗಜರಾಜನಿಗೆ ಹಣ್ಣಿನ ಕಾಣಿಕೆ - ಪ್ರಹ್ಲಾದ್, ಶ್ರೀನಿಧಿ

ಹಾಗೆಯೇ 'ಸೀತೆಯಲ್ಲ ಸಾವಿತ್ರಿ'ಯಲ್ಲಿ ಹನುಮ ಎಂಬ ಹೋರಿ, 'ಕೌಬಾಯ್ ಕುಳ್ಳ'ದಲ್ಲಿ ಪೀಟರ್ ಎಂಬ ನಾಯಿ, 'ಕಿಲಾಡಿ ತಾತ'ದಲ್ಲಿ ಗಣೇಶ ಎಂಬ ಆನೆಯೂ ನಟಿಸಿವೆ.

'ಶ್ರೀ ರಾಮಾಂಜನೇಯ ಯುದ್ಧ', 'ಕಿತ್ತೂರು ಚೆನ್ನಮ್ಮ', 'ಮಯೂರ', 'ಶ್ರೀಕೃಷ್ಣದೇವರಾಯ', 'ಬಬ್ರುವಾಹನ', 'ಹುಲಿಯ ಹಾಲಿನ ಮೇವು' ಮುಂತಾದ ಚಿತ್ರಗಳ ಸಮರ ಸನ್ನಿವೇಶಗಳಲ್ಲಿ ಆನೆ-ಕುದುರೆಗಳು ಪಾಲ್ಗೊಂಡಿವೆ. 'ನಾಗಕನ್ನಿಕಾ', 'ನಾಗಪೂಜೆ', 'ನಾಗದೇವತೆ', 'ಮಧುಮಾಲತಿ', 'ನಾಗರಹಾವು' ಚಿತ್ರಗಳಲ್ಲಿ ಹಾವುಗಳು ಅಭಿನಯಿಸಿದರೆ, 'ಸಹೋದರರ ಸವಾಲ್', 'ಅಶ್ವಮೇಧ'ದಂಥ ಚಿತ್ರಗಳಲ್ಲಿ ಕುದುರೆಗಳು ಪಾಲ್ಗೊಂಡಿವೆ. ಕಾಡುಗಳ್ಳ ವೀರಪ್ಪನ್‌ನ ಕಥೆಯ ಚಿತ್ರದಲ್ಲಿ ಆನೆಯ ಬಳಕೆಯಾಗಿದೆ. 'ವಿಘ್ನೇಶ್ವರ ವಾಹನ' ಚಿತ್ರದಲ್ಲಿ ಇಲಿಗಳು, ಬಿಳಿ ಇಲಿಗಳ ಬಳಕೆ - ಹೀಗೆ ಅನೇಕ ಉದಾಹರಣೆಗಳನ್ನು ನೀಡಬಹುದಾಗಿದೆ.

ನಮ್ಮ ಚಲನಚಿತ್ರರಂಗದಲ್ಲಿ ಪ್ರಾಣಿಗಳ ಬಳಕೆ ಕಡಿಮೆಯೇನೂ ಆಗಿಲ್ಲ. ಇತ್ತೀಚೆಗೆ ಪ್ರೇಮ-ಪ್ರಣಯ ಕುರಿತ ಚಿತ್ರಗಳ ಸೃಷ್ಟಿ ಹೆಚ್ಚಿರುವ ಕಾರಣ, ಅಲ್ಲೊಂದು ಇಲ್ಲೊಂದು ಚಿತ್ರಗಳಲ್ಲಿ ಪ್ರಾಣಿಗಳ ಬಳಕೆಯಾಗುತ್ತಿದೆ. ಚಿತ್ರಗಳಲ್ಲಿ ಪ್ರಾಣಿಗಳನ್ನು ಬಳಸಿಕೊಳ್ಳುವುದು ಸುಲಭದ ಕೆಲಸವೇನಲ್ಲ. ಅವುಗಳ ಮನಸ್ಥಿತಿಗೂ ನಮಗೆ ಅಗತ್ಯವಾದ ಅಭಿನಯಕ್ಕೂ ಹೊಂದಾಣಿಕೆಯಾಗದೇ ಹೋಗಬಹುದಾದ ಸಂದರ್ಭಗಳೂ ಇಲ್ಲದಿಲ್ಲ. ಎಲ್ಲ ಸಂದರ್ಭಗಳಲ್ಲಿಯೂ ತರಬೇತುದಾರ ಹೇಳಿದಂತೆ ಕೇಳುವವೆಂಬ ನಂಬಿಕೆಯೂ ಇರುವುದಿಲ್ಲ. ಕೆಲವೊಮ್ಮೆ ಸಿಟ್ಟುಗೊಂಡು ಕ್ರೋಧದಿಂದ ಅವು ತಿರುಗಿ ಬೀಳುವುದೂ ಉಂಟು. ಕೆಲವು ಪ್ರಾಣಿಗಳು ಚಿತ್ರೀಕರಣದಲ್ಲಿ ಪಾಲ್ಗೊಳ್ಳುವ ಮೊದಲು ತರಬೇತಿದಾರನಿಂದ ಹಿಂಸೆ-ನೋವು ಅನುಭವಿಸಬೇಕಾಗಿ ಬರುತ್ತದೆ. ಸರ್ಪಗಳನ್ನು ಬಳಸುವ ಮುನ್ನ ಮೊದಲೇ ವಿಷದ ಹಲ್ಲುಗಳನ್ನು ತೆಗೆಯಲಾಗಿದ್ದರೂ ಅಪಾಯದ ಎಚ್ಚರಿಕೆಯಾಗಿ ಅವುಗಳು ಕಚ್ಚಲಾಗದಂತೆ ಬಾಯಿ ಹೊಲಿಯುವುದರಿಂದ ಅವಕ್ಕೆ ನೋವು-ಹಿಂಸೆಯಾಗುತ್ತದೆ. ಹೀಗೆ ಕೆಲವು ಪ್ರಾಣಿಗಳು ಚಿತ್ರೀಕರಣದ ಸಂದರ್ಭದಲ್ಲಿ ಅಪಾಯವನ್ನುಂಟು ಮಾಡುವ ಸಾಧ್ಯತೆಯಿರುವಾಗ, ಅದನ್ನು ತಪ್ಪಿಸುವ ಸಲುವಾಗಿ ತರಬೇತುದಾರರು ತೆಗೆದುಕೊಳ್ಳುವ ಎಚ್ಚರಿಕೆಗಳಿಂದಾಗಿ ಅವಕ್ಕೆ ಹಿಂಸೆಯಾಗುತ್ತದೆ. ಆದರೂ ಚಿತ್ರೀಕರಣಕ್ಕಾಗಿ ಅವೆಲ್ಲವನ್ನೂ ಮಾಡಲೇಬೇಕಾಗುತ್ತದೆ.

'ಹುಲಿಯ ಹಾಲಿನ ಮೇವು' ಚಿತ್ರದ ಚಿತ್ರೀಕರಣ ಸಮಯದಲ್ಲಿ ಅಜಾಗರೂಕತೆಯ ಕಾರಣದಿಂದಾಗಿ ಚಿತ್ರೀಕರಣದಲ್ಲಿ ಪಾಲ್ಗೊಂಡಿದ್ದ ಆನೆಗಳು ಬೆಂಕಿ ಆಕಸ್ಮಿಕದಲ್ಲಿ ಸಿಲುಕಿ ಸತ್ತವು. ಇದೊಂದು ದೊಡ್ಡ ದುರಂತ.

ಯಾವುದೇ ಪ್ರಾಣಿಯನ್ನು ಚಿತ್ರೀಕರಣದಲ್ಲಿ ಬಳಸಿಕೊಳ್ಳುವಾಗ ಅವುಗಳಿಗೆ ಹಿಂಸೆಯಾಗಬಾರದು; ಅವುಗಳ ಸಾವಿಗೆ ಕಾರಣವಾಗಬಾರದು - ಎಂಬ ಕಾನೂನು ಪ್ರಸ್ತುತ ಚಾಲ್ತಿಯಲ್ಲಿದೆ. ಆದ ಕಾರಣ ಪ್ರಾಣಿಗಳನ್ನು ಚಿತ್ರೀಕರಣದಲ್ಲಿ ಬಳಸುವಾಗ ಅತ್ಯಂತ ಜಾಗರೂಕರಾಗಿರಬೇಕಾಗಿದೆ. ಚಲನಚಿತ್ರರಂಗದಲ್ಲಿ ನಟ-ನಟಿಯರೊಂದಿಗೆ ಅಭಿನಯಿಸಲು ಪ್ರಾಣಿಗಳು ಅಗತ್ಯವಾಗಿರುತ್ತವೆ. ದುಂಬಿ ಇಲ್ಲದಿದ್ದಲ್ಲಿ ಶಕುಂತಲೆ-ದುಷ್ಯಂತರ ಪ್ರೇಮ ಪಲ್ಲವಿಸಲು ಸಾಧ್ಯವೇ. ಹಂಸಪಕ್ಷಿ ಇಲ್ಲವಾಗಿದ್ದಲ್ಲಿ ನಳ-ದಮಯಂತಿಯರ ಕಥೆ ಪೂರ್ಣವಾಗಲು ಸಾಧ್ಯವೇ. ಹಾಗೆಯೇ ಚಿತ್ರದ ಕಥೆಗಳಿಗೆ ಅನುಗುಣವಾಗಿ ಪ್ರಾಣಿಗಳೂ ಬೇಕು; ಪಕ್ಷಿಗಳೂ ಅಗತ್ಯ.



(ಚಿತ್ರ ೪೧) 'ಜಗದೀಶ್ವರಿ' - ಬೇಬಿ ಶ್ಯಾಮಿಲಿಯ ಅಪೂರ್ವ ಗೆಳೆಯರು



(ಚಿತ್ರ ೪೨) 'ಬೆಳ್ಳಿ ನಾಗ' - ನಾಗರಾಜನನ್ನು ಓಲೈಸುತ್ತಿರುವ ಬೇಬಿ ಗೀತಾ

ಕರ್ನಾಟಕ ಚಲನಚಿತ್ರ
ವಾಣಿಜ್ಯ ಮಂಡಳಿ

# ಉದ್ಯಮದ ಹಿರಿಯಣ್ಣ

ಯಾವುದೇ ಕಾರ್ಯಕ್ಷೇತ್ರದಲ್ಲಿ ಅತ್ಯಂತ ಮುಖ್ಯವಾದುದು ಸಂಘಟನೆ. ಚಲನಚಿತ್ರೋದ್ಯಮದಂತಹ ಸಂಕೀರ್ಣ ಕ್ಷೇತ್ರದಲ್ಲಂತೂ ಅದರ ಅಗತ್ಯವನ್ನು ಎಷ್ಟು ಒತ್ತಿ ಹೇಳಿದರೂ ಸಾಲದು. ಈ ಕ್ಷೇತ್ರದಲ್ಲಿ ಸೋಲು-ಗೆಲುವುಗಳಿಗೆ ಒಂದು ಮಾಪಕವಾಗಲಿ, ಮಾನದಂಡವಾಗಲಿ ಇಲ್ಲವೇ ಇಲ್ಲ. ಒಂದೊಂದು ದಿನವೂ, ಒಂದೊಂದು ಚಿತ್ರವೂ ಒಂದು ಹೊಸ ಅನುಭವ. ಯಾವೊಂದು ನಿರ್ದಿಷ್ಟ ಸೂತ್ರವನ್ನೂ ಚಿತ್ರರಂಗಕ್ಕೆ ಅನ್ವಯಿಸುವುದು ಸಾಧ್ಯವಿಲ್ಲ. ಇಂದು ಯಶಸ್ವಿಯಾದ ಸೂತ್ರ ನಾಳೆ ನೆಲ ಕಚ್ಚಬಹುದು, ಇಂದಿನ ನಂಬಿಕೆಗಳು ನಾಳೆ ನಿರರ್ಥಕವೆನಿಸಬಹುದು. ಇಂತಹ ಪರಿಸರದಲ್ಲಿ ಅನಿಶ್ಚಯತೆ, ಅಸ್ಥಿರತೆಗಳೇ ಹೆಚ್ಚು.

ಚಿತ್ರ ನಿರ್ಮಾಣ ಕೇವಲ ಒಬ್ಬ ವ್ಯಕ್ತಿಯ ಕ್ರಿಯೆಯಲ್ಲ, ಹತ್ತಾರು ಜನಗಳ ಪ್ರತಿಭೆ, ಪ್ರಾಮಾಣಿಕತೆ, ಬದ್ಧತೆ, ಜವಾಬ್ದಾರಿಗಳಿಂದ ಒಂದು ಚಿತ್ರ ಉದ್ಭವಿಸಬೇಕು. ವ್ಯವಹಾರದ ದೃಷ್ಟಿಯಿಂದಂತೂ ಇಂತಹ ಅನಿಶ್ಚಯತೆ ಇನ್ನಷ್ಟು ಗಾಢ. ಆದ್ದರಿಂದಲೇ ಈ ಉದ್ಯಮದಲ್ಲಿ ತೊಡಗಿರುವವರ ಸಮಸ್ಯೆಗಳೇ ವಿಭಿನ್ನ. ಇಂತಹ ಅಸ್ಥಿರ ಉದ್ಯಮದಲ್ಲಿ ಸಂಘಟನೆಯ ಹಂದರವೊಂದನ್ನು ರೂಪಿಸಬೇಕಾದರೂ ಅದೊಂದು ಮಹಾ ಸಾಹಸವೆ. ಇತರ ಉದ್ಯಮಗಳಂತೆ ಅಧಿಕೃತ ಮಾನ್ಯತೆ ಪಡೆಯಬೇಕಾಗಿದ್ದ ಈ ಉದ್ಯಮದಲ್ಲಿ ಸಂಘಟನೆ ಎಷ್ಟು ಮುಖ್ಯವೋ ಅಷ್ಟೇ ಕ್ಲಿಷ್ಟ ಕೂಡ.

ಚಲನಚಿತ್ರೋದ್ಯಮದಲ್ಲಿ ಮೂರು ಪ್ರಮುಖ ವಿಭಾಗಗಳಿವೆ - ನಿರ್ಮಾಣ, ವಿತರಣೆ ಮತ್ತು ಪ್ರದರ್ಶನ. ಮೇಲ್ನೋಟಕ್ಕೆ ಈ ಮೂರು ವಿಭಾಗಗಳೂ ಒಂದೇ ಉದ್ಯಮದ ಅವಿಭಾಜ್ಯ ಅಂಗಗಳಂತೆ ಕಂಡರೂ ಅವುಗಳ ಹಿತಾಸಕ್ತಿಗಳೇ ಬೇರೆ ಬೇರೆ. ಆದರೂ ಈ ಮೂರು ವಿಭಾಗಗಳಿಗೂ ಒಂದು ಸೂರಿನಡಿಯಿಲ್ಲದೆ ಗತ್ಯಂತರವೇ ಇಲ್ಲ. ಸರ್ಕಾರವಾಗಲಿ, ಜನತೆಯಾಗಲಿ ಅವುಗಳನ್ನೆಂದೂ ಬಿಡಿಬಿಡಿಯಾಗಿ ಪರಿಗಣಿಸುವುದಿಲ್ಲ. ಆದರಿಂದಲೇ ವಿಭಿನ್ನತೆಯಲ್ಲಿ ಏಕತೆಯಿರಬೇಕೆಂಬ ಆದರ್ಶ ಈ ಉದ್ಯಮಕ್ಕೆ ಹೆಚ್ಚು ಅನ್ವಯಿಸುವುದು ಸ್ವಾಭಾವಿಕ.

ಚಿತ್ರೋದ್ಯಮವನ್ನು ಸಮಗ್ರವಾಗಿ ಪ್ರತಿನಿಧಿಸುವ ಸಂಸ್ಥೆಯೊಂದರ ಆಗು-ಹೋಗುಗಳನ್ನು ಇದೇ ಹಿನ್ನೆಲೆಯಲ್ಲಿ ವಿಶ್ಲೇಷಿಸಬೇಕಾಗುತ್ತದೆ. ಭಾರತೀಯ ಚಿತ್ರೋದ್ಯಮದ ಸನ್ನಿವೇಶದಲ್ಲಂತೂ ಈ ಮಾತು ಇನ್ನೂ ಹೆಚ್ಚು ಪ್ರಸ್ತುತ. ಏಕೆಂದರೆ ಈ ಉದ್ಯಮದಲ್ಲಿ ಮೊದಲಿನಿಂದಲೂ ಕಾರ್ಪೊರೇಟ್ ಸಂಸ್ಕೃತಿ ಬೆಳೆದು ಬಂದಿಲ್ಲ. ಇತರ ದೇಶಗಳಲ್ಲಿನ ಚಿತ್ರೋದ್ಯಮದ ಕಾರ್ಯ ವಿಧಾನ ಮತ್ತು ಶಿಸ್ತುಗಳನ್ನು ಇಲ್ಲಿನ ಉದ್ಯಮ ಮೈಗೂಡಿಸಿಕೊಂಡಿಲ್ಲ. ಆದರಿಂದಲೇ ಈ ದೇಶದಲ್ಲಿ ಚಿತ್ರನಿರ್ಮಾಣದ ಆಯವ್ಯಯದ ಮೇಲೆ ನಿಯಂತ್ರಣ ತರುವುದು ಕಷ್ಟ ಸಾಧ್ಯ. ತಾರಾಪದ್ಧತಿ ಮತ್ತು ಕುರುಡು ಸೂತ್ರಗಳೇ ಇಲ್ಲಿ ಚಿತ್ರನಿರ್ಮಾಣದ ಪ್ರೇರಕಶಕ್ತಿಗಳಾಗಿರುವುದರಿಂದ ನಿರ್ಮಾಣ ಘಟ್ಟದಲ್ಲಿ ವಿಪರೀತ ಏರುಪೇರುಗಳಾಗುವುದೇ ಇಲ್ಲಿಯ ಸಂಪ್ರದಾಯ. ಈ ಏರುಪೇರುಗಳು ಸ್ವಾಭಾವಿಕವಾಗಿಯೇ ಉದ್ಯಮದ ಇತರ ವಲಯಗಳ ಮೇಲೆಯೂ ತಮ್ಮ ಪ್ರಭಾವವನ್ನು ಬೀರುವುದರಿಂದಾಗಿ ಈ ವಲಯಗಳ ಅಸ್ಥಿರತೆ ಇನ್ನಷ್ಟು ಹೆಚ್ಚುತ್ತದೆ. ಅವುಗಳ ನಡುವಣ ಸಂಬಂಧ ತನ್ನ ಸವಿರನ್ನು ಕಳೆದುಕೊಂಡು ಪರಸ್ಪರ ನಿಂದನೆ, ಅಪನಂಬಿಕೆ, ಅಸಮಾಧಾನಗಳ ಕಡೆ ತಿರುಗುತ್ತದೆ.

ಇಷ್ಟೆಲ್ಲ ಇದ್ದಾಗಲೂ ಒಂದು ವಲಯ ಇನ್ನೊಂದು ವಲಯವನ್ನು ಅವಲಂಬಿಸಲೇಬೇಕಾದ ಅನಿವಾರ್ಯವಿದೆ. ಆದ್ದರಿಂದ ಇಂತಹ ಸಮಸ್ಯೆಗಳನ್ನು ಪ್ರಜ್ಞಾಪೂರ್ವಕವಾಗಿ, ವಸ್ತುನಿಷ್ಠೆಯಿಂದ ಪರಿಶೀಲಿಸಿ ಇಡೀ ಉದ್ಯಮದ ಹಿತದೃಷ್ಟಿಯಿಂದ ಪರಿಹಾರಗಳನ್ನು ಕಂಡುಹಿಡಿಯುವ ಸೂಕ್ಷ್ಮ ಜವಾಬ್ದಾರಿಯನ್ನು ಸಂಘಟನೆ ಹೊರಬೇಕಾಗುತ್ತದೆ. ಇದೇ ಇಂತಹ ಸಂಘಟನೆಗಳ ಮುಂದಿರುವ ಅತ್ಯಂತ ದೊಡ್ಡ ಸವಾಲು.

ಕರ್ನಾಟಕದಲ್ಲಿ ಈ ಸಮಸ್ಯೆ ಇನ್ನಷ್ಟು ಜಟಿಲಗೊಳ್ಳಲು ಕಾರಣ ಈ ರಾಜ್ಯದಲ್ಲಿ ಪ್ರದರ್ಶಿತವಾಗುವುದು ಕನ್ನಡ ಚಿತ್ರಗಳು ಮಾತ್ರವಲ್ಲ, ಕನಿಷ್ಠ ಐದು ಭಾಷೆಯ ಚಿತ್ರಗಳು. ಕನ್ನಡ, ಹಿಂದಿ, ತೆಲುಗು, ತಮಿಳು ಮತ್ತು ಆಂಗ್ಲ ಭಾಷೆಯ ಚಿತ್ರಗಳೊಂದಿಗೆ ರಾಜ್ಯದ ಕೆಲವು ಕೇಂದ್ರಗಳಲ್ಲಿ ಮಲೆಯಾಳಿ ಚಿತ್ರಗಳು ಕೂಡ ಜನಪ್ರಿಯ. ಹಾಗೆಂದು ಅಷ್ಟು ಭಾಷೆಗಳನ್ನು ಮನೆಯಲ್ಲಿ ಮಾತನಾಡುವ ಜನ ಅಷ್ಟು ಅಧಿಕ ಸಂಖ್ಯೆಯಲ್ಲಿ ಇದ್ದಾರೆಂದಲ್ಲ, ಕನ್ನಡ ಜನರೇ ಇತರ ಭಾಷೆಯ ಚಿತ್ರಗಳನ್ನೂ ಅಷ್ಟು ಆಸಕ್ತಿಯಿಂದ ಸ್ವೀಕರಿಸುತ್ತಾರೆಂದು ಅರ್ಥ.

ಈ ಪರಿಸ್ಥಿತಿ ಇನ್ನಾವ ರಾಜ್ಯದಲ್ಲಿಯೂ ಇಲ್ಲ. ಆದರೆ ಕರ್ನಾಟಕದಲ್ಲಿರಲು ಚಾರಿತ್ರಿಕ ಕಾರಣವೂ ಇದೆ. ೧೯೩೪ರಲ್ಲಿ ಕನ್ನಡದ ಮೊದಲ ವಾಕ್ಚಿತ್ರ ತೆರೆಗೆ ಬಂದ ನಂತರ ೧೯೫೦ರವರೆಗೆ ಬಿಡುಗಡೆಯಾದ ಕನ್ನಡ ಚಿತ್ರಗಳು ಕೇವಲ ೨೭. ಆದರೆ ಅದೇ



(ಚಿತ್ರ ೧) ಬೆಂಗಳೂರಿನ ಕ್ರೆಸೆಂಟ್ ರಸ್ತೆಯಲ್ಲಿರುವ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಪ್ರಸ್ತುತ ಕಟ್ಟಡ.
(ಈ ಕಟ್ಟಡವನ್ನು ಕೆಡವಿ ಬೃಹತ್ ವಾಣಿಜ್ಯ ಸಂಕೀರ್ಣ ನಿರ್ಮಿಸುವ ಯೋಜನೆ ಇದೆ)

ಅವಧಿಯಲ್ಲಿ ತಮಿಳು, ತೆಲುಗು, ಹಿಂದಿ ಭಾಷೆಗಳಲ್ಲಿ ನೂರಾರು ಚಿತ್ರಗಳು ತಯಾರಾದವು. ಆ ವೇಳೆಗೆ ಕನ್ನಡ ನಾಡಿನಲ್ಲಿ ೬೦೦ ಖಾಯಂ ಮತ್ತು ಸಂಚಾರಿ ಚಿತ್ರಮಂದಿರಗಳಿದ್ದವು. ಈ ಎಲ್ಲ ಚಿತ್ರಮಂದಿರಗಳೂ ವರ್ಷವಿಡೀ ನಡೆದುಕೊಂಡು ಹೋಗಲು ಕನ್ನಡೇತರ ಚಿತ್ರಗಳ ಪ್ರದರ್ಶನ ಅನಿವಾರ್ಯವಾಗಿತ್ತು. ಹೀಗಾಗಿ ಕನ್ನಡಿಗರಿಗೂ ಆ ಭಾಷೆಯ ಚಿತ್ರಗಳನ್ನು ನೋಡುವ ಅಭ್ಯಾಸ ಬೆಳೆಯಿತು. ಕನ್ನಡ ಚಿತ್ರಗಳ ನಿರ್ಮಾಣ ಹೆಚ್ಚಾದಾಗಲೂ ಈ ಅಭ್ಯಾಸದಲ್ಲಿ ಹೆಚ್ಚಿನ ಬದಲಾವಣೆಯೇನೂ ಆಗಿಲ್ಲ. ಪದ್ಧತಿಗಳು ಬದಲಾಗುವುದು ದುರ್ಲಭ. ಹೀಗಾಗಿ ಕರ್ನಾಟಕದಲ್ಲಿ ಕನ್ನಡೇತರ ಚಿತ್ರಗಳ ಪ್ರಭಾವ ಸ್ವಲ್ಪಮಟ್ಟಿಗೆ ಕುಗ್ಗಿದ್ದರೂ ಇನ್ನೂ ಮುಂದುವರಿದುಕೊಂಡೇ ಬಂದಿದೆ.

ಅಷ್ಟೇ ಏಕೆ, ಉತ್ತಮ ಅಭಿರುಚಿಯ ಎಷ್ಟೋ ತಮಿಳು, ತೆಲುಗು ಚಿತ್ರಗಳು ತಮಿಳುನಾಡು, ಆಂಧ್ರಪ್ರದೇಶಗಳಿಗಿಂತ ಹೆಚ್ಚು ಜನಪ್ರಿಯವಾಗಿ ಕರ್ನಾಟಕದಲ್ಲಿ ಪ್ರದರ್ಶಿತವಾಗಿರುವ ನಿದರ್ಶನಗಳು ಅನೇಕವಿವೆ. ಕನ್ನಡಿಗರು ತಮ್ಮ ಚಿತ್ರಗಳಿಗೆ ನೀಡಿರುವ ಈ ಪ್ರೋತ್ಸಾಹಕ್ಕಾಗಿ ಅನೇಕ ಕ್ರಿಯಾಶೀಲ ನಿರ್ದೇಶಕರು ತಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತಲೇ ಬಂದಿದ್ದಾರೆ. ಇನ್ನು ಹಿಂದಿ ಚಿತ್ರಗಳ ಮಟ್ಟಿಗೆ ಹೇಳುವುದಾದರೆ ೬೦ರ ದಶಕದವರೆಗೆ ಇಡೀ ದಕ್ಷಿಣ ಭಾರತಕ್ಕೆ, ಅಷ್ಟೇಕೆ, ಸಿಲೋನ್ (ಇಂದಿನ ಶ್ರೀಲಂಕಾ)ಗೆ ಕೂಡ ಬೆಂಗಳೂರು ನಗರವೇ ಹಂಚಿಕೆಯ ಕೇಂದ್ರವಾಗಿತ್ತು. ಚಿತ್ರೋದ್ಯಮದ ಕೇಂದ್ರ ಸ್ಥಾನವಾದ ಗಾಂಧಿನಗರದಲ್ಲಿ ಕನ್ನಡೇತರ ಚಿತ್ರಗಳ ವ್ಯವಹಾರಗಳೇ ಹೆಚ್ಚಾಗಿದ್ದ ಕಾಲ ಅದು. ಬೆಂಗಳೂರು, ಮೈಸೂರುಗಳಲ್ಲಿ ಮೊದಮೊದಲು ಚಿತ್ರಮಂದಿರಗಳನ್ನು ಕಟ್ಟಿದವರಲ್ಲಿ ಬಹುಪಾಲು ಕನ್ನಡದವರೇ ಆದರೂ ಆ ಚಿತ್ರಮಂದಿರಗಳನ್ನು ತಾವೇ ನಡೆಸಿಕೊಂಡು ಹೋಗಲು ನಿರಾಸಕ್ತರಾಗಿ ಕನ್ನಡೇತರರಿಗೆ ಅದರಲ್ಲಿಯೂ ಉತ್ತರ ಭಾರತದವರಿಗೆ-ಗುತ್ತಿಗೆಗೆ ಕೊಡುವ ಪರಿಪಾಠ ಪ್ರಾರಂಭವಾಯಿತು. ಈ ಚಿತ್ರಮಂದಿರಗಳನ್ನು ನಿರ್ಮಿಸಿದ ಬಹುತೇಕ ವ್ಯಕ್ತಿಗಳಿಗೆ ಕನ್ನಡದ ಬಗ್ಗೆ ವಿಶೇಷ ಒಲವಾಗಲಿ, ಮಮತೆಯಾಗಲಿ, ಕಾಳಜಿಯಾಗಲಿ ಇರಲಿಲ್ಲ. ಅವರ ದೃಷ್ಟಿಯಲ್ಲಿ ಅದೊಂದು ವ್ಯಾಪಾರ, ಅಷ್ಟೆ. ಒಮ್ಮೊಮ್ಮೆ ಪ್ರತಿಷ್ಠೆಯ ಪ್ರಶ್ನೆಯೂ ಆಗಿರುತ್ತಿತ್ತು. ಚಿತ್ರಮಂದಿರದ ಮಾಲೀಕನಿಗೆ ಆಗ ಸಮಾಜದಲ್ಲಿ ಒಂದು ವಿಶೇಷ ಸ್ಥಾನವೂ ಇತ್ತು. ಚಿತ್ರಮಂದಿರಗಳನ್ನು ಗುತ್ತಿಗೆ ಪಡೆದವರ ಮನೋಭಾವವೂ ಅಷ್ಟೆ. ಅವರಿಗೆ ಕನ್ನಡ ಚಿತ್ರರಂಗದ ಬೆಳವಣಿಗೆಯ ಬಗ್ಗೆ ವಿಶೇಷವಾದ ಆಸಕ್ತಿಯಿರಲು ಯಾವ ಕಾರಣವೂ ಇರಲಿಲ್ಲ.

ಅಂದಿನ ದಿನಗಳಲ್ಲಿ ದಕ್ಷಿಣ ಭಾರತದ ಪ್ರತಿಷ್ಠಿತ ಚಿತ್ರನಿರ್ಮಾಣ ಹಾಗೂ ವಿತರಣಾ ಸಂಸ್ಥೆಗಳಾಗಿದ್ದ ನಾರಾಯಣನ್ ಅಂಡ್ ಕಂಪೆನಿ, ಜೆಮಿನಿ, ರಾಯಲ್ ಟಾಕಿ ಡಿಸ್ಟ್ರಿಬ್ಯೂಟರ್ಸ್, ಛಮರಿಯಾ ಡಿಸ್ಟ್ರಿಬ್ಯೂಟರ್ಸ್ ಮುಂತಾದವು ಬೆಂಗಳೂರಿನಲ್ಲಿ ತಮ್ಮ ಶಾಖೆಗಳನ್ನು ಹೊಂದಿದ್ದವೆನ್ನುವುದೂ ಗಮನಾರ್ಹ.

ಜೊತೆಗೆ ೭೦ರ ದಶಕದ ಪ್ರಾರಂಭದವರೆಗೆ ಕರ್ನಾಟಕದಲ್ಲಿಯೇ ಕನ್ನಡ ಚಿತ್ರೋದ್ಯಮ ನೆಲೆಯೂರಿರಲೂ ಇಲ್ಲ. ಕನ್ನಡ ಚಿತ್ರಗಳ ನಿರ್ಮಾಣ ಮದರಾಸು ಮತ್ತಿತರ ಕನ್ನಡೇತರ ಕೇಂದ್ರಗಳಲ್ಲೇ ಸೀಮಿತವಾಗಿತ್ತು. ಹೀಗಾಗಿ ಕನ್ನಡ ಚಿತ್ರಗಳ ತಯಾರಿಕೆ ಒಂದು ಕಡೆಯಾದರೆ ಹಂಚಿಕೆ ಮತ್ತು ಪ್ರದರ್ಶನ ಬೇರೊಂದು ಕಡೆಯಾಗಿತ್ತು. ಕನ್ನಡ ನಿರ್ಮಾಪಕರು ಹೆಚ್ಚು ಕಡಿಮೆ ಮದರಾಸಿನಲ್ಲಿಯೇ ಕೇಂದ್ರೀಕೃತವಾಗಿದ್ದರು. ಹಾಗಾಗಿ ಕನ್ನಡ ರಾಜ್ಯದಲ್ಲಿ ಕನ್ನಡ ಚಿತ್ರೋದ್ಯಮದ ಚಟುವಟಿಕೆಯೆಂದರೆ ಹಂಚಿಕೆ ಮತ್ತು ಪ್ರದರ್ಶನ ಮಾತ್ರ. ಹಂಚಿಕೆ ಹೆಚ್ಚು ಕಡಿಮೆ ಕನ್ನಡೇತರರ ಕೈಯಲ್ಲೇ ಇತ್ತು, ತಯಾರಿಕೆ ಹೇಳಿಕೊಳ್ಳುವ ಪ್ರಮಾಣದಲ್ಲಿರಲಿಲ್ಲ. ಆಗಿನ್ನೂ ಕನ್ನಡ ಚಿತ್ರಗಳ ನಿರ್ಮಾಣಕ್ಕೆ ರಾಜ್ಯ ಸರ್ಕಾರದಿಂದ ಯಾವುದೇ ವಿಶೇಷ ರಿಯಾಯಿತಿಯಾಗಲಿ, ಉತ್ತೇಜನವಾಗಲಿ ಇರದಿದ್ದರಿಂದ, ಕನ್ನಡ ಚಿತ್ರಗಳ ತಯಾರಿಕೆ ಕೇವಲ ಕೆಲವೇ ಪ್ರತಿಷ್ಠಿತ ಸಂಸ್ಥೆಗಳ ಕೈಯಲ್ಲಿದ್ದುದರಿಂದ ಅವರಿಗೆ ರಾಜ್ಯಮಟ್ಟದ ಚಲನಚಿತ್ರ ಹಿತಾಸಕ್ತಿಗಳ ಸಂಘಟನೆಯೊಂದರ ಅವಶ್ಯಕತೆಯೂ ಕಂಡುಬಂದಿರಲಿಲ್ಲ. ಕಚ್ಚಾ ಫಿಲಂ ಅಭಾವದಂತಹ ಪ್ರಮುಖ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಕನ್ನಡ ನಿರ್ಮಾಪಕರು ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯನ್ನೇ ಅವಲಂಬಿಸಬೇಕಾಗಿತ್ತು. ಕೇಂದ್ರ ಸರ್ಕಾರವೂ ಆ ಸಂಸ್ಥೆಯ ಮೂಲಕವೇ ವ್ಯವಹರಿಸುತ್ತಿತ್ತು. ಆದರೆ ಆ ಸಂಸ್ಥೆಯಲ್ಲಿ ತಮಿಳು, ತೆಲುಗು ಚಿತ್ರರಂಗಗಳ ಖ್ಯಾತನಾಮರ ಪ್ರಭಾವವೇ ಹೆಚ್ಚಾಗಿದ್ದುದರಿಂದ ಕನ್ನಡ ಮತ್ತು ಮಲೆಯಾಳಿ ಚಿತ್ರನಿರ್ಮಾಪಕರಿಗೆ ಸಾಕಷ್ಟು ತೊಂದರೆಯೇ ಆಗುತ್ತಿದ್ದುದೂ ಹೌದು, ಆದರೂ ವಿಧಿಯಿಲ್ಲ. ಕನ್ನಡ ನಿರ್ಮಾಪಕರ ಸೀಮಿತ ಸಂಖ್ಯಾಬಲದಿಂದಾಗಿ ಅವರು ಇತರರೊಂದಿಗೆ ಹೊಂದಿಕೊಂಡು ಹೋಗಲೇಬೇಕಾಗಿತ್ತು. ಈ ವ್ಯವಸ್ಥೆ ಹಾಗೆಯೇ ಮುಂದುವರಿದುಕೊಂಡು ಬಂದಿತು.

ಅವರೆ ಕನ್ನಡ ರಾಜ್ಯದಲ್ಲಿ (ಆಗಿನ್ನೂ ಮೈಸೂರು ರಾಜ್ಯ) ಉದ್ಯಮದ ಸಂಘಟನೆಗೆ ನಡೆದ ಕೆಲವು ಪ್ರಯತ್ನಗಳ ಫಲವಾಗಿ 'ಮೈಸೂರು ರಾಜ್ಯ ಚಲನಚಿತ್ರ ವಾಣಿಜ್ಯ ಮಂಡಳಿ' (ಮೈಸೂರು ಫಿಲಂ ಚೇಂಬರ್ ಆಫ್ ಕಾಮರ್ಸ್) ೧೯೪೪ರಲ್ಲಿ ಅಸ್ತಿತ್ವಕ್ಕೆ ಬಂತು. ಸಂಸ್ಥೆಯ ಮೊದಲ ಅಧ್ಯಕ್ಷರು ಎಸ್.ಅಬ್ದುಲ್ ವಾಜೀದ್. ಅವರು ಪ್ರದರ್ಶಕರಾಗಿದ್ದರೂ ರಾಜಸ್ವ ಇಲಾಖೆಯ ನಿವೃತ್ತ ಕಾರ್ಯದರ್ಶಿಯೂ ಆಗಿದ್ದರು. ೧೯೪೪ರ ಆಗಸ್ಟ್ ೨೬ರಂದು ನೋಂದಾಯಿತವಾದ ಈ ಸಂಸ್ಥೆಯ ಸ್ಥಾಪಕ ಸದಸ್ಯರು ಆರ್.ಎಂ.ಪಟೇಲ್, ಜಯಂತಿಲಾಲ್ ಠಾಕೂರ್, ಬಿ.ಬಿ.ನಾಯ್ಡು, ಟಿ.ಹೆಚ್.ದೇಸಾಯಿ, ಎ.ಎಸ್.ಹುಸೇನ್, ಎ.ವಿ.ರಮಣಮೂರ್ತಿ, ಪಿ.ಕಿಷನ್‌ದಾಸ್, ವೈ.ವಿ.ರಂಗಯ್ಯ, ವೈ.ವಿ.ಎಸ್.ಮೂರ್ತಿ, ಕೆ.ಎಂ.ನಾಗಣ್ಣ, ಎಂ.ಶ್ರೀನಿವಾಸರಾವ್, ಕೆ.ಎಲ್.ಭಾಟಿಯ, ಆರ್.ಎಂ.ರಾವಲ್ ಮತ್ತು ಟಿ.ಚೆಲುವಾಚಾರ್. ಇವರಲ್ಲಿ ಎಂಟು ಜನ ಹಂಚಿಕೆದಾರರು, ಏಳು ಜನ ಪ್ರದರ್ಶಕರು. ನಿರ್ಮಾಪಕರು ಯಾರೂ ಇಲ್ಲ.

ಮೊದಲು ಮಂಡಳಿಯ ಕಚೇರಿಯಿದ್ದದ್ದು ಕಿಷನ್‌ದಾಸ್‌ರವರ ಮನೆಯಲ್ಲಿಯೆ. ಸ್ವಲ್ಪ ಕಾಲದ ನಂತರ ವೈ.ವಿ.ರಂಗಯ್ಯನವರು ಮೂವೀಲ್ಯಾಂಡ್ ಚಿತ್ರಮಂದಿರದ ಹಿಂದುಗಡೆಯಿದ್ದ ತಮ್ಮ ಕಟ್ಟಡವೊಂದರಲ್ಲಿ ಮಂಡಳಿಯ ಕಚೇರಿ ನಡೆಸಲು ಅವಕಾಶ ಮಾಡಿಕೊಟ್ಟರು. ಅವರು ಮಂಡಳಿಯಿಂದ ಪಡೆದಿದ್ದು ಕೇವಲ ಔಪಚಾರಿಕವಾದ ಬಾಡಿಗೆ ಮಾತ್ರ. ಮಂಡಳಿ ಅಸ್ತಿತ್ವಕ್ಕೆ ಬರುವ ವೇಳೆಗೆ ಕನ್ನಡದ ಮೊದಲ ವಾಕ್ಚಿತ್ರ 'ಸತಿ ಸುಲೋಚನಾ' ತೆರೆಗೆ ಬಂದು ೧೦ ವರ್ಷಗಳಾಗಿದ್ದವು. ಅದುವರೆಗೆ ಬಿಡುಗಡೆಯಾಗಿದ್ದ ಕನ್ನಡ ಚಿತ್ರಗಳ ಸಂಖ್ಯೆ ಕೇವಲ ೧೫. ಪ್ರಾರಂಭಿಕ ದಿನಗಳಲ್ಲಿ ಮಾತ್ರವಲ್ಲದೆ ಮೊದಲ ಎರಡು ದಶಕಗಳೂ ಮಂಡಳಿಯ ಆಸಕ್ತಿ ಕೇವಲ ಬೆಂಗಳೂರು ಮತ್ತು ಮೈಸೂರು ನಗರಗಳಿಗೆ ಹಾಗೂ ಪ್ರದರ್ಶನ ವಲಯಕ್ಕೆ ಮಾತ್ರ ಸೀಮಿತವಾಗಿತ್ತು. ಹೇಳಿಕೊಳ್ಳುವಂತಹ ಚಟುವಟಿಕೆಗಳೇನೂ ಇರಲಿಲ್ಲ - ಚಿತ್ರಮಂದಿರಗಳಿಗೆ ಅಗತ್ಯವಾದ ಕಾರ್ಬನ್‌ಗಳನ್ನು ಪೂರೈಸುವುದು, ಇತ್ಯಾದಿ ಮಾತ್ರ.

ಮಂಡಳಿಯ ಇತಿಹಾಸವನ್ನು ಅವಲೋಕಿಸಿದರೆ ವರ್ಷಗಟ್ಟಲೆ ಒಬ್ಬರೇ ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ಕಾರ್ಯದರ್ಶಿಗಳಾಗಿ ಅಥವಾ ಇತರ ಪದಾಧಿಕಾರಿಗಳಾಗಿ ಮುಂದುವರಿಯುವುದೇ ಸಾಮಾನ್ಯವಾಗಿತ್ತು. ಪ್ರತಿ ವರ್ಷ ವಿಧ್ಯುಕ್ತವಾಗಿ ಚುನಾವಣೆಗಳು ನಡೆಯುವ ಅಗತ್ಯವೇ ಕಂಡುಬರಲಿಲ್ಲ. ಮಂಡಳಿಯ ಕೆಲವೇ ಸದಸ್ಯರು ಒಟ್ಟು ಸೇರಿ ಯಾರನ್ನಾದರೂ ಒತ್ತಾಯ ಮಾಡಿ ಪದಾಧಿಕಾರಿಗಳನ್ನಾಗಿಸುವ ಪರಿಪಾಠವೇ ಹೆಚ್ಚಾಗಿ ಬೆಳೆದಿತ್ತು. ಕಣ್ಣಿಗೆ ಕಂಡ ಒಂದೇ ಬದಲಾವಣೆಯೆಂದರೆ ೧೯೫೪ರಿಂದ ಆಚೆಗೆ ಈ ವಾಣಿಜ್ಯ ಮಂಡಳಿಯಲ್ಲಿ ವೈ.ವಿ.ಶ್ರೀನಿವಾಸಮೂರ್ತಿ, ಎಂ.ಸದಾನಂದರಾವ್, ಬಿ.ಎಸ್.ಗರುಡಾಚಾರ್, ವಿ.ಜಿ.ಚೌಟಿ, ಟಿ.ಎಂ.ಲಕ್ಷ್ಮಣಮೂರ್ತಿ ಮುಂತಾದ ಕನ್ನಡಿಗರು ಮುಂಚೂಣಿಗೆ ಬಂದಿದ್ದು. ಅವರಲ್ಲಿಯೂ ಯಾರೂ ನಿರ್ಮಾಪಕರಿರಲಿಲ್ಲ ಎನ್ನುವುದು ಗಮನಾರ್ಹವಾದ ವಿಷಯ.

ರಾಜ್ಯದ ಹೆಸರು 'ಕರ್ನಾಟಕ' ಎಂದು ಬದಲಾದ ಮೇಲೆ, ೧೯೭೨ರ ನವೆಂಬರ್ ೧೫ರಂದು ನಡೆದ ಮೈಸೂರು ಚಲನಚಿತ್ರ ವಾಣಿಜ್ಯ ಮಂಡಳಿಯ ವಿಶೇಷ ಸರ್ವಸದಸ್ಯರ ಸಭೆಯಲ್ಲಿನ ಒಮ್ಮತದ ಗೊತ್ತುವಳಿಯ ಪ್ರಕಾರ 'ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ'ಯಾಗಿ ಪರಿವರ್ತನೆಯಾಯಿತು.

ಮಂಡಳಿಯ ಸ್ವರೂಪ ಬದಲಾಗಿದ್ದು ೧೯೭೨ರ ನವೆಂಬರ್ ೧೫ರ ನಂತರ, ಎಂ.ಭಕ್ತವತ್ಸಲ ಅಧ್ಯಕ್ಷರಾಗಿ ಚುನಾಯಿತರಾದ ಮೇಲೆ. ೧೯೭೨ರಿಂದ ೧೯೭೭ರವರೆಗೆ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಭಕ್ತ (ಭಕ್ತವತ್ಸಲರವರನ್ನು ಸಾಮಾನ್ಯವಾಗಿ ಎಲ್ಲರೂ ಕರೆಯುತ್ತಿದ್ದ ಸಲಿಗೆಯ ಹೆಸರು) ಅವರೊಂದಿಗೆ ಕೆ.ವಿ.ಗುಪ್ತ, ಬಿ.ಎ.ಅರಸುಕುಮಾರ್, ಇ.ಸುರೇಂದ್ರನಾಥ್, ಆರ್.ಲಕ್ಷ್ಮಣ್, ಹೆಚ್.ಆರ್.ಪ್ರಭಾಕರರೆಡ್ಡಿ ಮುಂತಾದವರು ಮಂಡಳಿಯ ನಾಯಕತ್ವವನ್ನು ವಹಿಸಿಕೊಂಡು ಸಂಸ್ಥೆಯ ಸ್ವರೂಪವನ್ನೇ ಬದಲಾಯಿಸಿದರು. ಭಕ್ತ ಅವರಿಗೆ ಸಮರ್ಥ ನಾಯಕತ್ವ ನೀಡಿದರು. ಚಂದ್ರವದನ ದೇಸಾಯಿ, ಆರ್.ಎನ್.ಮಾಂದ್ರೆ, ಕೆ.ಎ.ಗೋಪಾಲ್ ಮತ್ತು ಮೈಸೂರಿನ ಪ್ರದರ್ಶಕ ಬಿ.ಎಂ.ನರಸಿಂಹಮೂರ್ತಿ ಈ ತಂಡವನ್ನು ಸೇರಿದ ಇತರ ಪ್ರಮುಖರು.

೧೯೭೨ರಿಂದ ಐದು ವರ್ಷಗಳು ಮಂಡಳಿಗೆ ಪರ್ವಕಾಲ. ಈ ಅವಧಿಯಲ್ಲಾದ ಅತ್ಯಂತ ಮಹತ್ವದ ಸಾಧನೆಯೆಂದರೆ ಮಂಡಳಿ ಮೊಟ್ಟಮೊದಲ ಬಾರಿಗೆ ಉದ್ಯಮದ ಮೂರು ಪ್ರಮುಖ ವಲಯಗಳ ಅಧಿಕೃತ ಪ್ರಾತಿನಿಧಿಕ ಸಂಸ್ಥೆಯೆನಿಸಿದ್ದು. ಇದಕ್ಕಾಗಿ ಮಂಡಳಿಯ ಸಂವಿಧಾನದಲ್ಲಿ ಆಮೂಲಾಗ್ರವಾದ ಬದಲಾವಣೆಗಳನ್ನು ಮಾಡಬೇಕಾಯಿತು.

ಈ ಹೊಸ ವ್ಯವಸ್ಥೆಯ ಪ್ರಕಾರ ವಾಣಿಜ್ಯ ಮಂಡಳಿ ಈ ಮೂರೂ ವಲಯಗಳ ಹಿತಾಸಕ್ತಿಗಳನ್ನು ಕಾಪಾಡುವ ಕೇಂದ್ರ ಸಂಸ್ಥೆಯಾಗಿದ್ದು ಆಯಾ ವಲಯಗಳಿಗಾಗಿ ಸ್ವಾಯತ್ತ ಸಮಿತಿಗಳನ್ನು ರಚಿಸಲಾಯಿತು. ಈ ವಲಯ ಸಮಿತಿಗಳು ಮಂಡಳಿಯ ಸೂರಿನಡಿಯಲ್ಲಿಯೇ ರಚನೆಯಾಗಲು ಒಂದು ಪ್ರಬಲ ಕಾರಣವೇ ಇತ್ತು. ಉದ್ಯಮ ರಾಜ್ಯದಲ್ಲಿಯೇ ಬೆಳೆದಂತೆ ನಿರ್ಮಾಪಕರು ಮತ್ತು ನಿರ್ದೇಶಕರು ತಮ್ಮದೇ ಆದ ಸಂಘಟನೆಗಳನ್ನು ರಚಿಸಿಕೊಂಡಿದ್ದರು. ಆ ಸಂಘಟನೆಗಳನ್ನು ರದ್ದು ಮಾಡಿ ಮಂಡಳಿಯಲ್ಲಿಯೇ ನಿರ್ಮಾಪಕರಿಗೆ ಮತ್ತು ನಿರ್ದೇಶಕರಿಗೆ ಅವರ ಸಂಖ್ಯಾಬಲ ಮತ್ತು ಪ್ರಾಮುಖ್ಯಗಳಿಗೆ ತಕ್ಕ ಪ್ರಾತಿನಿಧ್ಯ ಸಿಗಬೇಕಾದರೆ ಈ ವಲಯ ಸಮಿತಿಗಳ ರಚನೆ ಅಗತ್ಯವಾಗಿತ್ತು. ಈ ವಲಯ ಸಮಿತಿಗಳಿಗೆ ತಮ್ಮದೇ ಆದ ಪದಾಧಿಕಾರಿಗಳನ್ನು ಆರಿಸಿಕೊಳ್ಳುವ ಮತ್ತು ಮಂಡಳಿಯ ಕಾರ್ಯಕಾರಿಣಿಯ ನೇರವಾದ ಹಸ್ತಕ್ಷೇಪ ಅಗತ್ಯವಿಲ್ಲದೆ ಸಮಸ್ಯೆಗಳನ್ನು ತಮ್ಮಲ್ಲಿಯೇ ಬಗೆಹರಿಸಿಕೊಳ್ಳುವ ಸ್ವಾತಂತ್ರ್ಯವನ್ನು ನೀಡಲಾಯಿತು. ಕೇಂದ್ರ ಸಂಸ್ಥೆಯ ಕಾರ್ಯಕಾರಿಣಿಯಲ್ಲಿ ಮೂರು ವಲಯಗಳಿಗೂ ಪ್ರಾತಿನಿಧ್ಯ ಕೊಡಲಾಯಿತು. ಮಂಡಳಿಯ ಪದಾಧಿಕಾರಿಗಳನ್ನು ಮೂರೂ ವಲಯಗಳ ಸದಸ್ಯರು ನೇರವಾಗಿ ಚುನಾಯಿಸಬಹುದೆಂದಾಯಿತು. ಹೀಗಾಗಿ ಎಲ್ಲ ವಲಯಗಳ ಹಿತವೂ ಮಂಡಳಿಯ ಹಿತವೆಂದಾಯಿತು. ಸ್ವಲ್ಪ ಕಾಲದ ನಂತರ ಸಂವಿಧಾನಕ್ಕೆ ಮತ್ತೊಂದು ತಿದ್ದುಪಡಿಯಾಗಿ ಪ್ರತಿ ವರ್ಷ ಮಂಡಳಿಯ ಅಧ್ಯಕ್ಷರನ್ನು ಅನುಕ್ರಮವಾಗಿ ಈ ಮೂರೂ ವಲಯಗಳಿಂದ ಚುನಾಯಿಸಬೇಕೆಂದು ತೀರ್ಮಾನವಾಯಿತು. ಇಡೀ ದೇಶದಲ್ಲಿ ಪ್ರಥಮವಾಗಿ ಈ ರೀತಿಯ ಪ್ರಾತಿನಿಧಿಕ ವ್ಯವಸ್ಥೆ ಮೊದಲು ಜಾರಿಗೆ ತಂದಿದ್ದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ.



**(ಚಿತ್ರ ೨) ಪುಟ್ಟಣ್ಣ ಚಿತ್ರಮಂದಿರದಲ್ಲಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಆದ್ಯತೆಗೆ ಒತ್ತಾಯಿಸಿ ವಾಣಿಜ್ಯ ಮಂಡಳಿ ನಡೆಸಿದ ಪ್ರದರ್ಶನದಲ್ಲಿ ಸಿ.ವಿ.ಎಲ್.ಶಾಸ್ತ್ರಿ, ಶಿವರಾಂ, ಪ್ರಭಾಕರ ರೆಡ್ಡಿ, ಜಿ.ವಿ.ಅಯ್ಯರ್ ಮೊದಲಾದವರು**

೧೯೮೭ರಲ್ಲಿ ಸಂವಿಧಾನಕ್ಕೆ ತಂದ ಮತ್ತೊಂದು ತಿದ್ದುಪಡಿಯಿಂದಾಗಿ ಮಂಡಳಿಯ ಅಧ್ಯಕ್ಷರನ್ನು ಕಾರ್ಯಕಾರಿ ಸಮಿತಿಯೇ ಚುನಾಯಿಸಬೇಕೆಂದೂ ಆಯಿತು.

ಈ ಪುನರ್‌ವ್ಯವಸ್ಥೆಯೊಂದಿಗೆ ಮಂಡಳಿ ಮತ್ತೂ ಒಂದು ವಿನೂತನ ನಿಯಮವನ್ನು ಜಾರಿಗೆ ತಂದಿತು. ಉದ್ಯಮದ ಈ ಉತ್ತುಂಗ ಸಂಸ್ಥೆಯೊಳಗೆ ಸ್ವಯಂ ನಿಯಂತ್ರಣ ವ್ಯವಸ್ಥೆ ಜಾರಿಗೆ ಬರದಿದ್ದಲ್ಲಿ ಈ ಪುನರ್‌ವ್ಯವಸ್ಥೆಯ ಹಿಂದಿನ ಆದರ್ಶಗಳೇ ಕಾರ್ಯಗತವಾಗಲಾರದೆಂಬ ದೃಷ್ಟಿಯಿಂದ ಯಾರೇ ನಿರ್ಮಾಪಕ, ಪ್ರದರ್ಶಕ ಅಥವಾ ಹಂಚಿಕೆದಾರ ಮಂಡಳಿಯ ಸದಸ್ಯರಲ್ಲದ ಯಾರೊಂದಿಗೂ ವ್ಯವಹಾರ ಮಾಡಬಾರದೆಂಬ ನಿರ್ಬಂಧವನ್ನು ತರಲಾಯಿತು. ಈ ನಿರ್ಬಂಧ ಪರಿಣಾಮಕಾರಿಯಾಗಿ ಕಾರ್ಯಗತವಾಗಬೇಕೆಂಬ ದೃಷ್ಟಿಯಿಂದ ಈ ಮೂರೂ ವಲಯಗಳ ಸದಸ್ಯರ ನಡುವೆ ಉಂಟಾಗಬಹುದಾದ ಯಾವುದೇ ವ್ಯಾಜ್ಯ ಅಥವಾ ತಕರಾರುಗಳ ಇತ್ಯರ್ಥಕ್ಕಾಗಿ ಯಾರೂ ನ್ಯಾಯಾಲಯದ ಮೆಟ್ಟಿಲನ್ನು ಹತ್ತಬಾರದೆಂದು ನಿರ್ಧರಿಸಿ ಮಂಡಳಿಯಲ್ಲಿಯೇ ಪಂಚಾಯಿತಿ ವ್ಯವಸ್ಥೆಯೊಂದನ್ನು ಜಾರಿಗೆ ತರಲಾಯಿತು. ಇದಕ್ಕಾಗಿ ಪಂಚಾಯಿತಿ ಮತ್ತು ಮೇಲ್ಮನವಿ ಸಮಿತಿಗಳ ರಚನೆಯೂ ಆಯಿತು. ದೂರು ಕೊಟ್ಟವರು ಮತ್ತು ದೂರಿಗೆ ಗುರಿಯಾದವರು ತಮ್ಮದೇ ಪಂಚಾಯಿತಿದಾರರನ್ನು ಆರಿಸಿಕೊಳ್ಳಬಹುದು ಎಂದೂ ಆಯಿತು. ಈ ಎರಡೂ ಸಮಿತಿಗಳ ಮುಂದೆ ವಕೀಲರು ಹಾಜರಾಗುವುದನ್ನು ನಿಷೇಧಿಸಲಾಯಿತು. ಈ ವ್ಯವಸ್ಥೆಯ ಒಟ್ಟಾರೆ ಉದ್ದೇಶ ಉದ್ಯಮದೊಳಗಿನ ಎಲ್ಲ ಸಮಸ್ಯೆಗಳೂ ಉದ್ಯಮದ ಚೌಕಟ್ಟಿನೊಳಗೇ ಸೌಹಾರ್ದಯುತವಾಗಿಯೂ ಮತ್ತು ಶೀಘ್ರವಾಗಿಯೂ ತೀರ್ಮಾನವಾಗಬೇಕು, ಸಾರ್ವಜನಿಕರ ದೃಷ್ಟಿಯಲ್ಲಿ ಉದ್ಯಮದ ಘನತೆಗೆ ಊನ ಬರಬಾರದೆಂಬುದು. ಸುಮಾರು ೩೦ ವರ್ಷಗಳಿಂದ ಈ ವ್ಯವಸ್ಥೆ ಸಮರ್ಪಕವಾಗಿ ನಡೆದುಕೊಂಡು ಬಂದಿದೆಯೆನ್ನುವುದು ಒಂದು ಪವಾಡವೆನಿಸಿದರೂ ಈ ಯಶಸ್ಸಿಗೆ ಅತ್ಯಂತ ದೊಡ್ಡ ಕಾರಣ ಉದ್ಯಮದ ಎಲ್ಲ ಸದಸ್ಯರ ಸಹಕಾರ. ವಾಣಿಜ್ಯ ಮಂಡಳಿ ಬಲಯುತವಾಗಿ, ಜವಾಬ್ದಾರಿಯುತವಾಗಿ ಬೆಳೆದು ಬಂದಿದೆ. ಇದಕ್ಕೆ ಪ್ರಮುಖ ಕಾರಣಗಳಲ್ಲೊಂದು ಈ ವ್ಯವಸ್ಥೆಯ ಯಶಸ್ಸು. ಈ ವ್ಯವಸ್ಥೆಯಿಂದಾಗಿ ಉದ್ಯಮಿಗಳಿಗೆ ಲಕ್ಷಾಂತರ ರೂಪಾಯಿಗಳ ಉಳಿತಾಯವಾಗಿರುವುದೂ ನಿಜ.

ಹಾಗೆಂದರೆ ಉದ್ಯಮದೊಳಗಿನ ವಿರಸಗಳೆಲ್ಲ ಮಾಯವಾಗಿಬಿಟ್ಟಿವೆ ಎಂದೇನೂ ಅರ್ಥವಲ್ಲ. ಇತ್ತೀಚೆಗಂತೂ ಉದ್ಯಮ ದೊಡ್ಡ ಪ್ರಮಾಣದಲ್ಲಿ ಬೆಳೆದು ಚಿತ್ರಗಳ ಬಜೆಟ್ ವಿಪರೀತ ಹೆಚ್ಚಾಗಿ ಅಧಿಕ ಸಂಖ್ಯೆಯಲ್ಲಿ ಚಿತ್ರಗಳು ತಯಾರಾಗುತ್ತಿರುವಾಗ ಇಂತಹ ವಿರಸಗಳೇಳುವುದು ಸ್ವಾಭಾವಿಕವೆ. ಜೊತೆಗೆ ಚಾರಿತ್ರಿಕ ಕಾರಣಗಳಿಂದಾಗಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಕೇವಲ ಕನ್ನಡ ಚಲನಚಿತ್ರ ವಾಣಿಜ್ಯ ಮಂಡಳಿಯಾಗಿ ವ್ಯವಹರಿಸುವುದು ಸಾಧ್ಯವೂ ಇಲ್ಲ. ಆದರೂ ಕನ್ನಡ ಚಿತ್ರೋದ್ಯಮ ಸ್ಥಳೀಯ ಉದ್ಯಮವಾದ್ದರಿಂದ ಕನ್ನಡ ಭಾಷೆಗೆ ಮತ್ತು ಕನ್ನಡ ಚಿತ್ರೋದ್ಯಮಕ್ಕೆ ಪ್ರಥಮ ಆದ್ಯತೆ ನೀಡಿ ರಾಜ್ಯದಲ್ಲಿ ಬಳಕೆಯಲ್ಲಿರುವ ಇತರ ಭಾಷೆಗಳಲ್ಲಿ ತಯಾರಾಗುವ ಚಿತ್ರಗಳಿಗೂ ಯಾವುದೇ ಅನ್ಯಾಯವಾಗದ ರೀತಿಯಲ್ಲಿ ತನ್ನ ಕಾರ್ಯವನ್ನು ರೂಪಿಸಿಕೊಳ್ಳಬೇಕು, ಅಲ್ಲದೆ ಅದಷ್ಟೂ ವಿವಾದಾತೀತವಾಗಿ ನಿರ್ವಹಿಸಿಕೊಂಡು ಹೋಗುವ ಸೂಕ್ಷ್ಮ ಜವಾಬ್ದಾರಿಯನ್ನು ಮಂಡಳಿ ಹೊತ್ತಿದೆ.

ಬೆಂಗಳೂರು ಮಹಾನಗರ ಮಾತ್ರವಲ್ಲದೆ ರಾಜ್ಯದ ಇತರ ಪ್ರಮುಖ ಕೇಂದ್ರಗಳ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳಿಗೆ ಪ್ರದರ್ಶನ ಸೌಲಭ್ಯ ಅಲಭ್ಯವಾದಾಗ ತಾನೇ ಮುಂದೆ ನಿಂತು ಈ ಚಿತ್ರಗಳಿಗೆ ಪ್ರದರ್ಶನಾವಕಾಶವನ್ನು ಒದಗಿಸುವ ಸಹಾಯವನ್ನು ಮಂಡಳಿ ಯಶಸ್ವಿಯಾಗಿ ಮಾಡಿಕೊಂಡು ಬಂದಿದೆ. ಇದು ಮಂಡಳಿಯ ಇನ್ನೊಂದು ದೊಡ್ಡ ಸಾಧನೆಯೆಂದೇ ಹೇಳಬೇಕು.

೮೦ರ ದಶಕದಲ್ಲಿ ಚಿತ್ರಮಂದಿರಗಳ ಸಮಸ್ಯೆ ಉಲ್ಬಣಗೊಂಡಾಗ ರಾಜ್ಯದ ಎಲ್ಲ ಚಿತ್ರಮಂದಿರಗಳಲ್ಲಿಯೂ ವರ್ಷಕ್ಕೆ ೧೨ ವಾರಗಳು ಕನ್ನಡ ಚಿತ್ರಗಳು ಕಡ್ಡಾಯವಾಗಿ ಪ್ರದರ್ಶನವಾಗಲೇಬೇಕೆಂಬ ನಿರ್ಬಂಧವನ್ನು ರಾಜ್ಯ ಸರ್ಕಾರ ಜಾರಿಗೆ ತಂದಿತು. ಈ ಆಜ್ಞೆಯ ವಿರುದ್ಧ ಕೆಲವು ಆಸಕ್ತರು ಕೋರ್ಟಿನ ಮೆಟ್ಟಿಲನ್ನೂ ಹತ್ತಿದರು. ವಾಣಿಜ್ಯ ಮಂಡಳಿ ಈ ಆಜ್ಞೆ ಪರಿಣಾಮಕಾರಿಯಾಗಿ ಕಾರ್ಯಗತವಾಗುವ ಬಗ್ಗೆ ವಿಶೇಷ ಆಸಕ್ತಿ ವಹಿಸಿತು. ಸ್ಥಳೀಯ ಚಿತ್ರೋದ್ಯಮ ಸರಿಯಾದ ಹಣದ ಉತ್ಪತ್ತಿಯಿಲ್ಲದೆ ಸೊರಗಬಾರದೆಂಬುದೇ ಅದರ ಉದ್ದೇಶ.

ಯಾವುದೇ ಪಕ್ಷದ ಸರ್ಕಾರ ರಾಜ್ಯದಲ್ಲಿ ಅಧಿಕಾರಕ್ಕೆ ಬರಲಿ, ಆದರೊಂದಿಗೆ ಅರ್ಥಪೂರ್ಣ ಹಾಗೂ ಸೌಹಾರ್ದಯುತ ಸಂಬಂಧವನ್ನು ಬೆಳೆಸಿಕೊಂಡು ಕೆಲವೊಮ್ಮೆ



(ಚಿತ್ರ ೩) ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್, ಸುಚಿತ್ರ ಫಿಲಂ ಸೊಸೈಟಿ ಹಾಗೂ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಸಹಯೋಗದಲ್ಲಿ ಏರ್ಪಡಿಸಿದ 'ನಾಸ್ಟಾಲ್ಜಿಯಾ' ಕಾರ್ಯಕ್ರಮಕ್ಕೆ ಆಗಮಿಸಿದ ಮುಂಬೈ ನಟಿಯರಾದ ಕಾಮಿನಿ ಕೌಶಲ್, ನರ್ಗಿಸ್, ದೇವಿಕಾರಾಣಿ ಮತ್ತಿತರರನ್ನು ಸ್ವಾಗತಿಸಿದ ಎಂ.ಭಕ್ತವತ್ಸಲ

ಕಠಿಣವಾದರೂ ನಿಷ್ಠುರವಾದ ನಿಲುವನ್ನು ಅನುಸರಿಸಿಕೊಂಡು ಬಂದಿರುವುದು ವಾಣಿಜ್ಯ ಮಂಡಳಿಯ ಇನ್ನೊಂದು ದೊಡ್ಡ ಸಾಧನೆ. ಪರಿಸ್ಥಿತಿ ಪ್ರತಿಕೂಲವಾದಾಗ ಸರ್ಕಾರದೊಡನೆ ಸಂಘರ್ಷಕ್ಕಿಳಿದ ಪ್ರಸಂಗಗಳೂ ಸಾಕಷ್ಟಿವೆ. ರಾಜ್ಯ ಸರ್ಕಾರ ಕನ್ನಡ ಚಿತ್ರೋದ್ಯಮಕ್ಕೆ ಹೆಚ್ಚಿನ ಸವಲತ್ತುಗಳನ್ನು ಮತ್ತು ರಿಯಾಯಿತಿಗಳನ್ನು ಒದಗಿಸಿಕೊಡುವ ವಿಷಯದಲ್ಲಾಗಲಿ, ಸರ್ಕಾರದ ಮನರಂಜನಾ ತೆರಿಗೆ ನೀತಿಯಲ್ಲಿನ ಬದಲಾವಣೆ ಹಾಗೂ ಪರಿಷ್ಕಾರಗಳ ವಿಷಯದಲ್ಲಾಗಲಿ ಮಂಡಳಿ ಇಂತಹ ನಿಷ್ಠುರವಾದ ಮತ್ತು ಉದ್ಯಮದ ಪರವಾದ ನಿಲುವುಗಳಿಗೆ ಬದ್ಧವಾಗಿ ಕಾರ್ಯ ನಿರ್ವಹಿಸಿಕೊಂಡು ಬಂದಿದೆ. ಕೇವಲ ವಾಣಿಜ್ಯ ದೃಷ್ಟಿಯಿಂದ ಮಾತ್ರವಲ್ಲದೆ ಗುಣದ ದೃಷ್ಟಿಯಿಂದ ಕೂಡ ಮಂಡಳಿ ಕನ್ನಡ ಚಿತ್ರೋದ್ಯಮಕ್ಕೆ ಬೆಂಗಾವಲಾಗಿ ನಿಂತಿದೆ. ಉತ್ತಮ ಅಭಿರುಚಿಯ ಚಿತ್ರಗಳಿಗೆ ಸರ್ಕಾರ ಮತ್ತು ಚಿತ್ರಪ್ರೇಮಿಗಳಿಂದ ವಿಶೇಷ ಪುರಸ್ಕಾರ ಸಿಗುವ ಬಗ್ಗೆ ಮಂಡಳಿ ಮಾಡಿಕೊಂಡು ಬಂದಿರುವ ಪ್ರಯತ್ನಗಳು ಗೌಣವೇನೂ ಅಲ್ಲ. ಜೊತೆಗೆ ಕನ್ನಡ ಚಿತ್ರಗಳಿಗೆ ಇಂದಿಗೂ ಹೆಚ್ಚು ಪ್ರದರ್ಶನಾವಕಾಶಗಳಿಲ್ಲದ ಕೋಲಾರ, ಕೆ.ಜಿ.ಎಫ್, ಬೀದರ್, ಗುಲ್ಬರ್ಗಾ ಮತ್ತು ಬೆಳಗಾವಿ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಅವುಗಳಿಗೆ ಹೆಚ್ಚಿನ ಅವಕಾಶಗಳನ್ನು ನೀಡಬೇಕೆಂಬ ಒತ್ತಾಯವನ್ನು ಮಂಡಳಿ ಈ ಭಾಗದ ಪ್ರದರ್ಶಕರ ಮೇಲೆ ಹೇರುತ್ತಲೇ ಬಂದು ಯಶಸ್ವಿಯಾಗಿದೆ.

ಚಿತ್ರವೊಂದರ ತಯಾರಿಕೆ ಪ್ರಾರಂಭವಾಗುವ ಮುಂಚೆ ಅದರ ಹೆಸರನ್ನು ಮಂಡಳಿಯಲ್ಲಿ ನೋಂದಾಯಿಸುವುದು ಕಡ್ಡಾಯ. ಈ ವ್ಯವಸ್ಥೆ ಮೊದಲು ಪ್ರಾರಂಭವಾಗಿದ್ದು ನಿರ್ಮಾಪಕ ಆ ಹೆಸರಿನ ಮೇಲೆ ಹಕ್ಕನ್ನು ಸಂಪಾದಿಸಿಕೊಳ್ಳಲಿ ಎಂಬ ಉದ್ದೇಶದಿಂದ. ಹೆಸರುಗಳ ಬಗ್ಗೆ ಯಾವ ವಿವಾದವೆದ್ದರೂ ಮಂಡಳಿಯೇ ಆ ವಿವಾದವನ್ನು ಪರಿಹರಿಸಲು ವ್ಯವಸ್ಥೆ ಮಾಡಿದೆ. ಈ ಹೆಸರುಗಳು ಉತ್ತಮ ಅಭಿರುಚಿಗೆ ವ್ಯತಿರಿಕ್ತವಾಗಿರದಂತೆ ನೋಡಿಕೊಳ್ಳುವುದು ಕೂಡ ಮಂಡಳಿಯ ಉದ್ದೇಶಗಳಲ್ಲಿ ಒಂದು. ಈ ಕಾರಣಕ್ಕಾಗಿಯೇ ಕೆಲವಾರು ಚಿತ್ರಗಳ ಹೆಸರುಗಳನ್ನು ಮಂಡಳಿ ತಿರಸ್ಕರಿಸಿರುವುದೂ ಉಂಟು.

೬೦ರ ದಶಕದ ತರುಣದಲ್ಲಿ ಅಶ್ಲೀಲ ಭಿತ್ತಿಪತ್ರಗಳ ವಿರುದ್ಧ ಸಾರ್ವಜನಿಕರು ಪ್ರತಿಭಟಿಸಿದಾಗ ಕೇಂದ್ರ ಸರ್ಕಾರ ಈ ಭಿತ್ತಿಪತ್ರಗಳನ್ನು ಕೂಡ ಚಿತ್ರಗಳಂತೆಯೇ ಸೆನ್ಸಾರ್ ಮಂಡಳಿಯೇ ಪರಿಶೀಲಿಸಿ ಪರವಾನಗಿ ನೀಡುವ ವ್ಯವಸ್ಥೆಯನ್ನು ಜಾರಿಗೆ ತರುವ ಇಂಗಿತ ತೋರಿತು. ಆದರೆ ಈ ಜವಾಬ್ದಾರಿಯನ್ನು ತಾನೇ ವಹಿಸಿಕೊಳ್ಳಲು ಚಿತ್ರೋದ್ಯಮವೇ ಮುಂದೆ ಬಂದಾಗ ಅದಕ್ಕೊಪ್ಪಿ ಸರ್ಕಾರ ತನ್ನ ಪ್ರಸ್ತಾಪವನ್ನು ಕೈಬಿಟ್ಟಿತು. ತತ್ಫಲವಾಗಿ ಪ್ರತಿ ಚಿತ್ರನಿರ್ಮಾಣ ಕೇಂದ್ರದಲ್ಲಿಯೂ ಆಯಾ ರಾಜ್ಯದ ಚಲನಚಿತ್ರ ವಾಣಿಜ್ಯ ಮಂಡಳಿ ಭಿತ್ತಿಪತ್ರಗಳ ಪರಿಶೀಲನೆಗಾಗಿ ಸಮಿತಿಗಳನ್ನು ರಚಿಸಬೇಕಾಯಿತು. ಅಂಥದೊಂದು ಸಮಿತಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿಯೂ ಇದೆ. ಅದು ಸಂಪೂರ್ಣವಾಗಿ ಯಶಸ್ಸು ಗಳಿಸದಿದ್ದರೆ ಮುಖ್ಯ ಕಾರಣ ಉದ್ಯಮದಲ್ಲಿನ ಕೆಲವರ ಸಾಮಾಜಿಕ ಬಾಧ್ಯತೆಯ ಕೊರತೆ. ಆದ್ದರಿಂದ ಇದು ಸುಲಭವಾಗಿ ಪರಿಹಾರವಾಗುವ ಸಮಸ್ಯೆಯಲ್ಲವೆಂದು ಮಂಡಳಿಯ ಪ್ರಮುಖರೇ ಒಪ್ಪಿಕೊಳ್ಳುತ್ತಾರೆ. ಆದರೂ ಈ ಬಗ್ಗೆ ಸಾರ್ವಜನಿಕರಿಂದ ದೂರುಗಳು ಬಂದಾಗ ನಿರ್ದಾಕ್ಷಿಣ್ಯವಾದ ಕ್ರಮಗಳನ್ನು ತೆಗೆದುಕೊಂಡು ಕೆಲವೊಮ್ಮೆ ತಪ್ಪಿತಸ್ಥರಿಗೆ ದಂಡವನ್ನು ವಿಧಿಸಿರುವುದೂ ಉಂಟು.

ರಾಜ್ಯ ಸರ್ಕಾರ ಕನ್ನಡ ಚಿತ್ರೋದ್ಯಮದ ಬೆಳವಣಿಗೆಗಾಗಿ ಅನೇಕ ಸವಲತ್ತು ಹಾಗೂ ರಿಯಾಯಿತಿಗಳನ್ನು ನೀಡುತ್ತ ಬಂದಿರುವುದು ಸರಿಯಷ್ಟೆ. ಈ ಸವಲತ್ತುಗಳಲ್ಲಿ ಅತ್ಯಂತ ಮುಖ್ಯವಾದದ್ದು ಸಹಾಯಧನ. ೧೯೬೬ರಲ್ಲಿ ಸಹಾಯಧನದ ನೀಡಿಕೆ ಜಾರಿಗೆ ಬಂದಾಗಿನಿಂದ ಅದರ ಮೊತ್ತ ಕ್ರಮೇಣ ಹೆಚ್ಚುತ್ತಲೇ ಬಂದು ಈಗ ವರ್ಷಕ್ಕೆ ೨೦ ಉತ್ತಮ ಅಭಿರುಚಿಯ ಚಿತ್ರಗಳಿಗೆ ಮಾತ್ರ ಸೀಮಿತವಾಗಿದೆ. ಈ ನೀತಿ ಅನುಷ್ಠಾನಕ್ಕೆ ಬಂದಾಗ ಒಂದು ಚಿತ್ರಕ್ಕೆ ೫೦,೦೦೦ ರೂಪಾಯಿಗಳ ಸಹಾಯಧನವಿತ್ತು. ನಂತರ ವರ್ಣಚಿತ್ರಗಳಿಗೆ ಎರಡರಷ್ಟಾಯಿತು. ಇಂದು ಈ ಮೊತ್ತ ೧೦ ಲಕ್ಷ ರೂಪಾಯಿಗಳಿಗೆ ಏರಿದೆ. ಜೊತೆಗೆ ರಾಷ್ಟ್ರಮಟ್ಟದಲ್ಲಿ ರಾಷ್ಟ್ರಪತಿಗಳ ಸುವರ್ಣ ಪದಕವನ್ನು ಪಡೆದ ಕನ್ನಡ ಚಿತ್ರಕ್ಕೆ ೧೫ ಲಕ್ಷ ರೂಪಾಯಿಗಳ ಸಹಾಯಧನವಿದೆ. ಯಾವುದೇ ವಿಭಾಗದಲ್ಲಿ ಕನ್ನಡ ಚಿತ್ರವೊಂದು ಕೇಂದ್ರ ಪ್ರಶಸ್ತಿ ಪಡೆದರೂ ಕೇಂದ್ರ ಸರ್ಕಾರ ಕೊಡುವಷ್ಟೇ ನಗದು ಬಹುಮಾನವನ್ನು ರಾಜ್ಯ ಸರ್ಕಾರ ಕೂಡ ನೀಡುತ್ತದೆ. ಅನೇಕ ವರ್ಷಗಳ ವಾದವಿವಾದಗಳ ನಂತರ ಸಹಾಯಧನಕ್ಕೆ ಉತ್ತಮ ಅಭಿರುಚಿಯ ಕಡಿವಾಣ ಹಾಕುವ ನೀತಿಯನ್ನು ಮಂಡಳಿ ಒಪ್ಪಬೇಕಾಯಿತು. ಆದರೆ ವರ್ಷಕ್ಕೆ ೨೦ ಚಿತ್ರಗಳಿಗೆ ಮಾತ್ರ ಈ ಸವಲತ್ತನ್ನು ಸೀಮಿತಗೊಳಿಸದೆ ಎಷ್ಟು ಚಿತ್ರಗಳು ಉತ್ತಮ ಗುಣಮಟ್ಟದ್ದೆಂದು ಸರ್ಕಾರ ನೇಮಿಸುವ ಸಮಿತಿ ನಿರ್ಧರಿಸುತ್ತದೆಯೋ ಅವಕ್ಕೆಲ್ಲ



(ಚಿತ್ರ ೪) ದೆಹಲಿಯ ಅಂತರರಾಷ್ಟ್ರೀಯ ಚಿತ್ರೋತ್ಸವ ಸಂದರ್ಭದಲ್ಲಿ ಕನ್ನಡ ಚಿತ್ರೋದ್ಯಮದ ಮಳಿಗೆಗೆ ಭೇಟಿಯಿತ್ತ ಕೇಂದ್ರ ಸಚಿವ ವಿ.ಸಿ.ಶುಕ್ಲಾ ಅಭಿಪ್ರಾಯ ದಾಖಲಿಸುತ್ತಿರುವುದನ್ನು ನೋಡುತ್ತಿರುವವರು ಟಿ.ಎಸ್.ನರಸಿಂಹನ್, ಬಿ.ಕೆ.ಗಂಗಪ್ಪ, ಎಂ.ಭಕ್ತವತ್ಸಲ. ನಂದಾಸಾ

ಹತ್ತು ಲಕ್ಷ ರೂಪಾಯಿಗಳ ಸಹಾಯಧನ ಸಲ್ಲಲೇಬೇಕೆಂಬ ಆಗ್ರಹ ಮುಂದುವರಿಯುತ್ತಲೇ ಇದೆ.

ಇದೀಗ ಮೂರು ದಶಕಗಳಿಗೂ ಮೀರಿ ರಾಜ್ಯ ಸರ್ಕಾರ ಕನ್ನಡ ಚಿತ್ರಗಳಿಗೆ ಸಹಾಯಧನ ನೀಡುತ್ತಲೇ ಬಂದಿದ್ದರೂ ಈ ಹಣವನ್ನು ಬಿಡುಗಡೆ ಮಾಡುವುದರಲ್ಲಿ ಮೂರು-ನಾಲ್ಕು ವರ್ಷಗಳ ತಡವಾಗುವುದು ಸಂಪ್ರದಾಯವಾಗಿಬಿಟ್ಟಿದೆ. ವಾರ್ತಾ ಮತ್ತು ಪ್ರಚಾರ ಇಲಾಖೆಗೆ ಸಂಬಂಧಿಸಿದ ರಾಜ್ಯ ವಿಧಾನಮಂಡಲದ ವಿಷಯ ಸಮಿತಿಗೆ ವಾಟಾಳ್ ನಾಗರಾಜ್ ಅಧ್ಯಕ್ಷರಾಗಿದ್ದರು. ಆ ಸಮಿತಿ ಕನ್ನಡ ಚಿತ್ರಗಳಿಗೆ ಸಹಾಯಧನವನ್ನು ಅವು ಬಿಡುಗಡೆಯಾದ ಮೂರು ತಿಂಗಳೊಳಗಾಗಿ ಸಂದಾಯ ಮಾಡಬೇಕೆಂದು ಶಿಫಾರಸು ಮಾಡಿತ್ತು. ಆದರೆ ನಡೆದುಕೊಂಡಿರುವುದೇ ಬೇರೆ. ಹೀಗಾದಾಗಲೆಲ್ಲ ಚಲನಚಿತ್ರ ವಾಣಿಜ್ಯ ಮಂಡಳಿ ಮಧ್ಯೆ ಪ್ರವೇಶಿಸಿ ಸರ್ಕಾರದೊಂದಿಗೆ ನಿಷ್ಠುರವಾಗಿಯೇ ವ್ಯವಹರಿಸಿ ಬಾಕಿಯಾಗಿದ್ದ ಈ ಹಣ ಬೇಗ ಬಿಡುಗಡೆಯಾಗುವಂತೆ ನೋಡಿಕೊಂಡಿದೆ. ಈ ಸಂದರ್ಭದಲ್ಲಿ ಅಧ್ಯಕ್ಷರಾಗಿದ್ದ ಸಿ.ವಿ.ಎಲ್.ಶಾಸ್ತ್ರಿಯವರು ತಮ್ಮ ಪ್ರಭಾವವನ್ನು ಬೀರಿ ಸರ್ಕಾರದ ಮೇಲೆ ಒತ್ತಡ ತಂದು ಬಾಕಿಯಾಗಿದ್ದ ಮೊತ್ತವನ್ನು ಎರಡು-ಮೂರು ಕಂತುಗಳಲ್ಲಿ ಪಾವತಿಯಾಗುವಂತೆ ಮಾಡುವಲ್ಲಿ ಸಫಲರಾದರು. ಸಹಾಯಧನದ ನೀಡಿಕೆಯಲ್ಲಿನ ತೀವ್ರ ವಿಳಂಬದಿಂದಾಗಿ ಈ ಯೋಜನೆಯ ಉದ್ದೇಶವೇ ಸಫಲವಾಗದೆ ನಿರ್ಮಾಪಕರಿಗೂ ಯಾವೊಂದು ಪ್ರಯೋಜನವಾಗದಿರುವ ಸಾಧ್ಯತೆಯೇ ಹೆಚ್ಚು. ಏಕೆಂದರೆ ಸಾಲ ಮಾಡಿ ಅವರು ಹೂಡಿದ ಬಂಡವಾಳದ ಮೇಲೆ ಬಡ್ಡಿ ಯದ್ವಾತದ್ವಾ ಬೆಳೆದು ಅಸಲಿಗಿಂತ ಹೆಚ್ಚಾಗಿರುವ ಪ್ರಕರಣಗಳೂ ಸಾಕಷ್ಟಿವೆ. ಸಹಾಯಧನವನ್ನೇ ನಂಬಿಕೊಂಡು ನಿರ್ಮಾಪಕರು ತಮ್ಮ ಮುಂದಿನ ಪ್ರಯತ್ನಗಳಿಗಾಗಿ ಅವರ ಆಧಾರದ ಮೇಲೆ ಸಾಲ ಎತ್ತಿ ಕೈ ಕಚ್ಚಿಸಿಕೊಂಡಿರುವ ಉದಾಹರಣೆಗಳೂ ಅನೇಕವಿವೆ. ಸರ್ಕಾರ ಈ ವಿಳಂಬವನ್ನು ನಿಲ್ಲಿಸಿ ಪ್ರತಿ ವರ್ಷ ತಯಾರಾಗುವ ಚಿತ್ರಗಳಿಗೆ ಹೆಚ್ಚೆಂದರೆ ಮುಂದಿನ ವರ್ಷವೇ ಸಹಾಯಧನ ನೀಡುವಂತೆ ಕಟ್ಟುನಿಟ್ಟಾದ ವ್ಯವಸ್ಥೆಯನ್ನು ಮಾಡಬೇಕೆಂದು ಮಂಡಳಿ ಒತ್ತಾಯಿಸುತ್ತಲೇ ಬಂದಿದೆ.

ಉತ್ತಮ ಕನ್ನಡ ಚಿತ್ರಗಳಿಗೆ, ಕಲಾವಿದರಿಗೆ ಮತ್ತು ತಂತ್ರಜ್ಞರಿಗೆ ಸರ್ಕಾರ ಮೂವತ್ತು ವರ್ಷಗಳಿಂದ ಕೊಡುತ್ತ ಬಂದಿರುವ ವಾರ್ಷಿಕ ಪ್ರಶಸ್ತಿಗಳ ವಿಷಯದಲ್ಲಿಯೂ ಅಷ್ಟೆ. ಮೊದಮೊದಲು ಸರ್ಕಾರ ಚಿತ್ರನಿರ್ಮಾಣದ ಎಲ್ಲ ವಿಭಾಗಗಳಿಗೂ ಪ್ರಶಸ್ತಿ ನೀಡುತ್ತಿರಲಿಲ್ಲ. ಪ್ರಶಸ್ತಿಗಳ ಸಂಖ್ಯೆಯನ್ನು ಹೆಚ್ಚಿಸುವಂತೆ ಮಂಡಳಿ ಸರ್ಕಾರವನ್ನು ಒತ್ತಾಯಿಸುತ್ತಲೇ ಬಂದ ಪರಿಣಾಮವಾಗಿ ಈಗ ಹೆಚ್ಚು ಕಡಿಮೆ ಎಲ್ಲ ವಿಭಾಗಗಳಿಗೂ ಪ್ರಶಸ್ತಿಗಳು ಸಲ್ಲುವುದರೊಂದಿಗೆ ಅವುಗಳ ಮೊತ್ತವೂ ಹೆಚ್ಚುತ್ತ ಬಂದಿದೆ. ಈಗ ವರ್ಷದ ಅತ್ಯುತ್ತಮ ಚಿತ್ರಕ್ಕೆ ಒಂದು ಲಕ್ಷ ರೂಪಾಯಿಗಳ ನಗದು ಬಹುಮಾನ ಮತ್ತು ಚಿನ್ನದ ಪದಕ ಲಭ್ಯ. ಈ ಮೊತ್ತ ಕೇಂದ್ರ ಸರ್ಕಾರ ವರ್ಷದ ಅತ್ಯುತ್ತಮ ಚಿತ್ರಕ್ಕೆ ನೀಡುವ ನಗದು ಬಹುಮಾನಕ್ಕೆ ಸಮ. ದೇಶದಲ್ಲಿ ಇನ್ನಾವ ರಾಜ್ಯ ಸರ್ಕಾರವೂ ಇಷ್ಟು ವಿಭಾಗಗಳಲ್ಲಿ ಇಷ್ಟು ಮೊತ್ತದ ಪ್ರಶಸ್ತಿಗಳನ್ನು ನೀಡುತ್ತಿಲ್ಲ.

'ಚಲನಚಿತ್ರ ವಾಣಿಜ್ಯ ಮಂಡಳಿ' ಎಂಬ ಹೆಸರು ಈ ಸಂಸ್ಥೆಯ ಚಟುವಟಿಕೆಗಳು ವ್ಯಾಪಾರ ಮತ್ತು ವಾಣಿಜ್ಯಗಳಿಗೆ ಮಾತ್ರ ಮೀಸಲಾಗಿದೆಯೆಂಬ ಅರ್ಥ ನೀಡಿದರೂ ವಾಸ್ತವವಾಗಿ ಮಂಡಳಿ ತನ್ನ ಕೆಲಸ ಕಾರ್ಯಗಳನ್ನು ಅಷ್ಟಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿಲ್ಲ. ರಾಜ್ಯದ ಹಾಗೂ ರಾಷ್ಟ್ರದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಂಡಳಿ ಸಕ್ರಿಯವಾಗಿಯೇ ಭಾಗವಹಿಸಿಕೊಂಡು ಬಂದಿದೆ. ಮಂಡಳಿಯ ವತಿಯಿಂದ ರಾಜ್ಯದಲ್ಲಿ ಸೋವಿಯತ್ ಒಕ್ಕೂಟ, ಫ್ರಾನ್ಸ್ ಮತ್ತಿತರ ದೇಶಗಳ ಚಿತ್ರೋತ್ಸವಗಳು ಯಶಸ್ವಿಯಾಗಿ ನಡೆದಿವೆ. ರಾಜ್ಯದ ಚಲನಚಿತ್ರ ಸಮಾಜಗಳು, ಪತ್ರಕರ್ತರ ಸಂಘಟನೆಗಳು ಮತ್ತು ಉದ್ಯಮದೊಳಗಿನ ಇತರ ಸಂಘಟನೆಗಳು ಏರ್ಪಡಿಸುವ ಚಿತ್ರೋತ್ಸವಗಳಲ್ಲಿ, ವಿಚಾರ ಸಂಕಿರಣಗಳಲ್ಲಿ, ಸಭೆ ಸಮಾರಂಭಗಳಲ್ಲಿ ಮಂಡಳಿ ಸಕ್ರಿಯವಾಗಿ ಪಾಲ್ಗೊಂಡಿದೆ.

೧೯೮೮ರಲ್ಲಿ ಸುಚಿತ್ರಾ ಚಿತ್ರ ಸಮಾಜ ಮತ್ತು ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ಜಂಟಿಯಾಗಿ ಏರ್ಪಡಿಸಿದ್ದ ಬೃಹತ್ 'ನಾಸ್ಟಾಲ್ಜಿಯಾ' ಚಿತ್ರೋತ್ಸವದಲ್ಲಿ ಮಂಡಳಿಯ ಪಾತ್ರ ಅತ್ಯಂತ ಪ್ರಮುಖವಾಗಿತ್ತು. ಹಲವು ವಿವಿಧ ಭಾಷೆಗಳಲ್ಲಿನ ಚಾರಿತ್ರಿಕವೆನಿಸಿದ ೭೦ಕ್ಕೂ ಹೆಚ್ಚು ಚಿತ್ರಗಳನ್ನು ಬೆಂಗಳೂರಿನ ಐದು ಚಿತ್ರಮಂದಿರಗಳಲ್ಲಿ ಎರಡು ವಾರ ಪ್ರದರ್ಶಿಸಿದ ಈ ಅಪರೂಪದ ಚಿತ್ರೋತ್ಸವಕ್ಕೆ ಚಿತ್ರಗಳನ್ನು ಮತ್ತು ಚಿತ್ರಮಂದಿರಗಳನ್ನು ಒದಗಿಸಿಕೊಡುವ ಮತ್ತು ಈ ಚಿತ್ರಗಳಿಗೆ ಸಂಪೂರ್ಣವಾಗಿ ತೆರಿಗೆ ವಿನಾಯಿತಿಯನ್ನು ಸರ್ಕಾರದಿಂದ ಕೊಡಿಸುವ ಪ್ರಕ್ರಿಯೆಗಳಲ್ಲಿ ಮಂಡಳಿಯ ಸಹಕಾರ ಮತ್ತು ಒತ್ತಾಸೆ ತುಂಬಾ ಸಹಾಯಕವಾಯಿತು. ಉತ್ಸವಕ್ಕೆ ಮದರಾಸು, ಮುಂಬಯಿ, ಕಲ್ಕತ್ತಾ ನಗರಗಳಿಂದ ಚಿತ್ರರಂಗದ ಅನೇಕ ದಿಗ್ಗಜರನ್ನು ಬರಮಾಡಿಕೊಂಡು ಅವರನ್ನು ಸನ್ಮಾನಿಸುವ ಬೃಹತ್ ಕಾರ್ಯಕ್ರಮ ಕೂಡ ಮಂಡಳಿಯ ಪ್ರಯತ್ನವಿಲ್ಲದೆ ಈ ಪ್ರಮಾಣದಲ್ಲಿ ಯಶಸ್ವಿಯಾಗುತ್ತಿರಲಿಲ್ಲ.




(ಚಿತ್ರ ೫) ನವದೆಹಲಿಯಲ್ಲಿ ೧೯೮೧ರಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ಸಂದರ್ಭದಲ್ಲಿ ವಾಣಿಜ್ಯ ಮಂಡಳಿ ತೆರೆದ ಮಳಿಗೆಯ ಎದುರಲ್ಲಿ ವಿ.ಎನ್.ಸುಬ್ಬರಾವ್, ಟಿ.ಎಸ್.ನರಸಿಂಹನ್, ಆರ್.ಲಕ್ಷ್ಮಣ್, ಸುರೇಶ್ ಹೆಬ್ಳೀಕರ್, ಉಮಾ ಶಿವಕುಮಾರ್, ಎಸ್.ಆರ್.ಪುಟ್ಟಣ್ಣ ಕಣಗಾಲ್, ಕೆ.ಸಿ.ಚೌಡಪ್ಪರೆಡ್ಡಿ, ರಷ್ಯಾ ಕಾನ್ಸಲೇಟ್ ಜನರಲ್, ಕೆ.ವಿ.ಗೋಪಾಲ್, ಎಂ.ಭಕ್ತವತ್ಸಲ, ಸಚಿವ ಸುಬ್ಬಯ್ಯ ಶೆಟ್ಟಿ, ಹೆಚ್.ಎನ್.ಮುದ್ದುಕೃಷ್ಣ, ಬಿ.ಕೆ.ಗಂಗಪ್ಪ, ಶ್ರೀನಾಥ್, ಗೀತಾ ಶ್ರೀನಾಥ್ ಮತ್ತು ಸುರೇಂದ್ರ ಇಂಗಳೆ

೧೯೭೮ರಲ್ಲಿ ದೆಹಲಿಯಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಮಾರುಕಟ್ಟೆ ವಿಭಾಗದಲ್ಲಿ ಪ್ರಥಮ ಬಾರಿಗೆ ಕನ್ನಡ ಚಿತ್ರೋದ್ಯಮದ ಪರವಾಗಿ ಮಳಿಗೆಯೊಂದನ್ನು ತೆರೆದ ಮಂಡಳಿ ಈ ಸಂಪ್ರದಾಯವನ್ನು ತಪ್ಪದೆ ನಡೆಸಿಕೊಂಡು ಬಂದಿದೆ. ವ್ಯಾಪಾರಿ ಚಿತ್ರಗಳಿಗಾಗಲಿ, ಕಲಾತ್ಮಕ ಚಿತ್ರಗಳಿಗಾಗಲಿ ಹೊರದೇಶಗಳಲ್ಲಿ ಮಾರಾಟಕ್ಕೆ ವೇದಿಕೆಯೊಂದನ್ನು ಒದಗಿಸಿಕೊಡುವುದು ಈ ಮಾರುಕಟ್ಟೆಯ ಉದ್ದೇಶ. ಆದರೆ ವಿಪರ್ಯಾಸವೆಂದರೆ ಈ ಮಾರುಕಟ್ಟೆಯ ಮುಖಾಂತರ ಇದುವರೆಗೆ ವಿದೇಶಗಳಿಗೆ ಮಾರಾಟವಾದ ಚಿತ್ರ ಒಂದೇ ಒಂದು - 'ಕಳ್ಳ ಕುಳ್ಳ'. ರಾಜ್ಯ ಸರ್ಕಾರ ಕೂಡ ಕನ್ನಡದ ಮಳಿಗೆಗೆ ಪ್ರತಿ ವರ್ಷ ಧನಸಹಾಯ ಮಾಡುತ್ತ ಬಂದಿತ್ತು. ಕರ್ನಾಟಕ ಹಾಕಿಕೊಟ್ಟ ಈ ಸಂಪ್ರದಾಯವನ್ನು ನಂತರ ತಮ್ಮ ಭಾಷೆಗಳಲ್ಲಿ ಚಿತ್ರಗಳನ್ನು ತಯಾರಿಸುತ್ತ ಬಂದಿರುವ ಇತರ ರಾಜ್ಯಗಳೂ ಅನುಕರಿಸಿದವು. ವಾಸ್ತವವಾಗಿ ವಿದೇಶಗಳಿಗೆ ಇನ್ನೂ ಹೆಚ್ಚಿನ ಕನ್ನಡ ಚಿತ್ರಗಳನ್ನು ಮಾರಾಟ ಮಾಡಲು ಅವಕಾಶವಿದೆ. ಮಂಡಳಿ ಈ ಬಗ್ಗೆ ತನ್ನ ಪ್ರಯತ್ನಗಳನ್ನು ಮುಂದುವರಿಸಿಕೊಂಡು ಹೋಗಲಿದೆ. ಕರ್ನಾಟಕ ಸರ್ಕಾರ ಚಿತ್ರರಂಗದ ಸಮಸ್ಯೆಗಳಿಗೆ ಸಂಬಂಧಿಸಿದ ಸಮಿತಿಗಳನ್ನು ರಚಿಸುವಾಗ ಅವುಗಳಲ್ಲಿ ಮಂಡಳಿಗೆ ಸಾಕಷ್ಟು ಪ್ರಾತಿನಿಧ್ಯ ಕೊಡುತ್ತಲೇ ಬಂದಿದೆ. ಹಾಗೆಯೇ ಕೇಂದ್ರ ಸರ್ಕಾರ ಕೂಡ ಮಂಡಲಿಯನ್ನು ಎಷ್ಟೋ ಸಾರಿ ವಿಶ್ವಾಸಕ್ಕೆ ತೆಗೆದುಕೊಂಡಿದೆ. ರಾಜ್ಯ ಮಟ್ಟದ ಚಲನಚಿತ್ರ ಪ್ರಮಾಣೀಕರಣ ಸಮಿತಿಯ ಸದಸ್ಯರ ಆಯ್ಕೆಯಲ್ಲಿ ಕೂಡ ವಾಣಿಜ್ಯ ಮಂಡಳಿಯ ಸಲಹೆಗಳನ್ನು ಪಡೆಯುತ್ತ ಬಂದಿದೆ. ಪನೋರಮಾ ಚಿತ್ರಗಳ ಆಯ್ಕೆಗೂ ಅಷ್ಟೇ. ಕೇಂದ್ರ ಚಲನಚಿತ್ರ ಪ್ರಶಸ್ತಿ ಸಮಿತಿಗಳನ್ನು ಆಯ್ಕೆ ಮಾಡುವಾಗ ಸರ್ಕಾರ ಮಂಡಳಿಯ ಸಲಹೆಯನ್ನು ಪಡೆಯುತ್ತ ಬಂದಿದೆ.

ರಾಜ್ಯ ಸರ್ಕಾರ ೧೯೯೪ರಲ್ಲಿ ಸಮಗ್ರ ಚಲನಚಿತ್ರ ನೀತಿಯೊಂದನ್ನು ರೂಪಿಸಲು ಹಿರಿಯ ಪತ್ರಕರ್ತ ವಿ.ಎನ್.ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಲಹಾ ಸಮಿತಿಯೊಂದನ್ನು ರಚಿಸಿತು. ಚಿತ್ರರಂಗದ ಪ್ರತಿನಿಧಿಗಳನ್ನು ಮಾತ್ರ ಹೊಂದಿದ್ದ ಮೊಟ್ಟಮೊದಲ ಸಮಿತಿ ಅದು - ದೇಶಕ್ಕೇ ಹೊಸದು. ಈ ಸಮಿತಿಯ ಸದಸ್ಯರೆಲ್ಲರೂ ಕನ್ನಡ ಚಿತ್ರರಂಗದ ಖ್ಯಾತನಾಮರು. ಸಮಿತಿ ಒಂದು ವರ್ಷ ಕಾಲ ಶ್ರಮಿಸಿ, ಚಿತ್ರೋದ್ಯಮದ ಹತ್ತಾರು ಪ್ರಮುಖರನ್ನು ಸಂದರ್ಶಿಸಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ ಮುಂಬಯಿ, ಮದರಾಸು, ಹೈದರಾಬಾದ್ ಮತ್ತು ತಿರುವನಂತಪುರಗಳಿಗೂ ಭೇಟಿ ನೀಡಿ ಆ ರಾಜ್ಯಗಳಲ್ಲಿ ಪ್ರಾದೇಶಿಕ ಚಿತ್ರೋದ್ಯಮ ಮತ್ತು ರಾಜ್ಯ ಸರ್ಕಾರಗಳ ಸಂಬಂಧಗಳನ್ನು ಅಧ್ಯಯನ ಮಾಡಿ ಸರ್ಕಾರಕ್ಕೆ ಬೃಹತ್ ವರದಿಯೊಂದನ್ನು ಸಲ್ಲಿಸಿತು. ರಾಜ್ಯ ಸರ್ಕಾರದ ಸಮಿತಿಯೊಂದರಲ್ಲಿ ಕನ್ನಡ ಚಿತ್ರೋದ್ಯಮ ಈ ರೀತಿ ಸಂಪೂರ್ಣವಾಗಿ ತೊಡಗಿಕೊಂಡ ಅಪರೂಪದ ನಿದರ್ಶನ ಇದು. ಪತ್ರಕರ್ತರೊಬ್ಬರ ಅಧ್ಯಕ್ಷತೆಯಲ್ಲಿ ಉದ್ಯಮದ ಹಿರಿಯರೆಲ್ಲ ಸೌಹಾರ್ದಯುತವಾಗಿ ಕೆಲಸ ಮಾಡಿದ ಇನ್ನೊಂದು ನಿದರ್ಶನ ದೇಶದಲ್ಲಿಯೇ ಎಲ್ಲಿಯೂ ಇಲ್ಲ. ಕರ್ನಾಟಕದಲ್ಲಿ ಸ್ಥಳೀಯ ಚಿತ್ರೋದ್ಯಮದ ಒಳಿತಿಗಾಗಿ ರಾಜ್ಯ ಸರ್ಕಾರ, ಚಲನಚಿತ್ರ ವಾಣಿಜ್ಯ ಮಂಡಳಿ ಮತ್ತು ಚಲನಚಿತ್ರ ಪತ್ರಕರ್ತರು ಯಾವ ರೀತಿ ಕೈ ಜೋಡಿಸಿ ದುಡಿಯುತ್ತ ಬಂದಿದ್ದಾರೆಂಬುದಕ್ಕೆ ಇದೊಂದು ಮಹತ್ತರ ಉದಾಹರಣೆ. ದೇಶದ ಇನ್ನಾವ ರಾಜ್ಯದಲ್ಲಿಯೂ ಈ ಮೂರೂ ಕ್ಷೇತ್ರಗಳ ನಡುವೆ ಈ ಪ್ರಮಾಣದ ಸೌಹಾರ್ದವಿಲ್ಲ. ಆದರೆ ಅದೇ ಸಮಯದಲ್ಲಿ ರಾಜ್ಯದ ಚಲನಚಿತ್ರ ಪತ್ರಕರ್ತರು ತಮ್ಮ ವೃತ್ತಿಸ್ವಾತಂತ್ರ್ಯ ಮತ್ತು ವಸ್ತುನಿಷ್ಠೆಗಳನ್ನು ಕಾಪಾಡಿಕೊಂಡು ಬಂದಿರುವುದು ಉಲ್ಲೇಖನಾರ್ಹ.

ಉದ್ಯಮದ ಮೂರು ವಲಯಗಳಿಗೂ (ನಿರ್ಮಾಣ, ವಿತರಣೆ, ಪ್ರದರ್ಶನ) ತಮ್ಮದೇ ಆದ ವಿಶಿಷ್ಟ ಸಮಸ್ಯೆಗಳಿವೆ. ನಿರ್ಮಾಪಕರಿಗಂತೂ ಹಲವಾರು ಸಮಸ್ಯೆಗಳು. ಚಿತ್ರನಿರ್ಮಾಣ ಹೆಜ್ಜೆ ಹೆಜ್ಜೆಗೂ ಸವಾಲುಗಳನ್ನು ತಂದೊಡ್ಡುವ ಕ್ಲಿಷ್ಟಕರ ಪ್ರಕ್ರಿಯೆ. ಒಂದು ಕಡೆ ಕ್ರಿಯಾಶೀಲತೆಗೆ ಸಂಬಂಧಿಸಿದ ಸಮಸ್ಯೆಗಳಾದರೆ ಇನ್ನೊಂದು ಕಡೆ ವ್ಯಾಪಾರಕ್ಕೆ ಸಂಬಂಧಿಸಿದ ಸಮಸ್ಯೆಗಳು. ಜೊತೆಗೆ ಶಿಸ್ತಿನ, ಕಾಲಪ್ರಜ್ಞೆಯ, ಜವಾಬ್ದಾರಿಯ ಕೊರತೆ ಬೇರೆ. ಸಾಮಾಜಿಕ ಬದ್ಧತೆಯ ಕೊರತೆಯೂ ಇನ್ನೊಂದು ಸಮಸ್ಯೆ. ನಿರ್ಮಾಪಕ ಆಗಾಗ ಫೈನಾನ್ಸರುಗಳೊಂದಿಗೆ, ನಿರ್ದೇಶಕರೊಂದಿಗೆ, ಕಲಾವಿದರೊಂದಿಗೆ, ತಂತ್ರಜ್ಞರೊಂದಿಗೆ, ಕಾರ್ಮಿಕರೊಂದಿಗೆ, ಸೆನ್ಸಾರ್‌ನೊಂದಿಗೆ, ಸರ್ಕಾರದೊಂದಿಗೆ ಸಂಘರ್ಷಕ್ಕಿಳಿಯುವುದು ಸಾಮಾನ್ಯ. ಆದರೆ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಈ ಸಮಸ್ಯೆಗಳ ಪರಿಹಾರದಲ್ಲಿ ಸಹಾಯಹಸ್ತ ನೀಡುತ್ತ ಬಂದಿದೆ. ಇಂತಹ ಸಂದರ್ಭಗಳಲ್ಲಿ ಯಾರೊಬ್ಬರ ಪರವಾಗಿಯೂ ಪಕ್ಷಪಾತ ವಹಿಸದ, ವಸ್ತುನಿಷ್ಠೆಯನ್ನು ಮರೆಯದೆ ಜವಾಬ್ದಾರಿಯುತವಾಗಿಯೇ ವರ್ತಿಸಿದೆ. ಎಲ್ಲ ಸಂದರ್ಭಗಳಲ್ಲಿಯೂ ಸಂಪೂರ್ಣ ಜಯ ಗಳಿಸಿದೆಯೆಂದೇನೂ ಅಲ್ಲ. ಆದರೆ



(ಚಿತ್ರ ೬) ರಾಷ್ಟ್ರೀಯ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ಬೆಂಗಳೂರು ಶಾಖೆಯನ್ನು ವಾಣಿಜ್ಯ ಮಂಡಳಿಯ ಆವರಣದಲ್ಲಿ ಮೊದಲ ಬಾರಿಗೆ ಆರಂಭಿಸಿದ ಸಂದರ್ಭದಲ್ಲಿ ಎಂ.ಭಕ್ತವತ್ಸಲ, ರಾಜಕುಮಾರ್ ಮತ್ತು ಆರ್.ಲಕ್ಷ್ಮಣ್

ಸಮಸ್ಯೆಗಳ ಪರಿಹಾರಕ್ಕೆ ಪ್ರಾಮಾಣಿಕವಾಗಿ ಪ್ರಯತ್ನಿಸಿದ ತೃಪ್ತಿಯಂತೂ ಮಂಡಳಿಗೆ ಇದ್ದೇ ಇದೆ.

ಪ್ರದರ್ಶಕರ ಸಮಸ್ಯೆಗಳೇ ಬೇರೆ ರೀತಿಯವು. ಅದರಲ್ಲಿಯೂ ಖಾಯಂ ಚಿತ್ರಮಂದಿರಗಳ ಸಮಸ್ಯೆಗಳೇ ಬೇರೆ, ಪ್ರವಾಸಿ ಮತ್ತು ಅರೆ ಖಾಯಂ ಚಿತ್ರಮಂದಿರಗಳ ಸಮಸ್ಯೆಗಳೇ ಬೇರೆ. ರಾಜ್ಯದಲ್ಲಿ ಈಗ ಜಾರಿಯಲ್ಲಿರುವುದು ಪುರಾತನವಾದ ಸಿನಿಮಾಟೋಗ್ರಫಿ ಕಾಯಿದೆ. ಈ ಕಾಯಿದೆಯಲ್ಲಿ ಆಗಾಗ್ಗೆ ಅಲ್ಪಸ್ವಲ್ಪ-ಇಲ್ಲಷ್ಟು ಬದಲಾವಣೆಗಳಾಗಿದ್ದರೂ ಈಚೆಗೆ ವೇಗವಾಗಿ ಬದಲಾಗುತ್ತಿರುವ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಇನ್ನೂ ಅನೇಕ ಮುಖ್ಯ ಬದಲಾವಣೆಗಳು ಅಗತ್ಯ. ಈ ಬದಲಾವಣೆಗಳು ಎಷ್ಟು ಅನಿವಾರ್ಯವೆಂದು ಸರ್ಕಾರಕ್ಕೆ ಪದೇ ಪದೇ ಮನದಟ್ಟು ಮಾಡಿಕೊಡುತ್ತ ಹೋಗುವುದೇ ಮಂಡಳಿಯ ದೊಡ್ಡ ಹೊಣೆಗಳಲ್ಲಿ ಒಂದೆಂಬ ವಾತಾವರಣವೂ ನಿರ್ಮಾಣವಾಗಿದೆ. ಈ ಬಗ್ಗೆ ಅನೇಕ ಸಮಿತಿಗಳು ಅನೇಕ ಉಪಯುಕ್ತ ಸಲಹೆಗಳನ್ನು ಮಾಡಿಕೊಂಡೇ ಬಂದಿವೆ. ಆದರೆ ಉದ್ಯಮಕ್ಕೆ ಸಾಕಷ್ಟು ಪರಿಹಾರವನ್ನು ಒದಗಿಸಬಹುದಾದಷ್ಟು ಸುಧಾರಣೆಗಳು ಆಗಿಲ್ಲ. ಆಗಾಗ ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸುವ ಪರಿಪಾಠ ಮಂಡಳಿಯ ವತಿಯಿಂದ ನಡೆದುಕೊಂಡೇ ಬಂದಿದೆ. ರಾಜ್ಯದಲ್ಲಿ ಅಪೇಕ್ಷಿತ ಸಂಖ್ಯೆಯಲ್ಲಿ ಚಿತ್ರಮಂದಿರಗಳ ನಿರ್ಮಾಣವಾಗದಿದ್ದರೆ ಅದಕ್ಕೆ ಪ್ರಸ್ತುತ ಸಿನಿಮಾಟೋಗ್ರಾಫ್ ಕಾಯಿದೆಗಳಲ್ಲಿನ ಅನೇಕ ನ್ಯೂನತೆಗಳೇ ಪ್ರಮುಖ ಕಾರಣ. ಸರ್ಕಾರ ಈ ಬಗ್ಗೆ ತೀವ್ರ ಗಮನ ಹರಿಸಬೇಕಷ್ಟೆ.

ಕರ್ನಾಟಕದಲ್ಲಿ ಈಗಿರುವ ಚಿತ್ರಮಂದಿರಗಳ ಸಂಖ್ಯೆ ಸುಮಾರು ೧೨೦೦. ಅವುಗಳಲ್ಲಿ ಅರ್ಧ ಮಾತ್ರ ಖಾಯಂ ಚಿತ್ರಮಂದಿರಗಳು, ಅವುಗಳ ಪೈಕಿ ಸುಮಾರು ೩೦೦ ಚಿತ್ರಮಂದಿರಗಳು ಬೆಂಗಳೂರು, ಮೈಸೂರು, ಹುಬ್ಬಳ್ಳಿ, ಬೆಳಗಾವಿ, ಶಿವಮೊಗ್ಗ, ದಾವಣಗೆರೆಗಳಂತಹ ದೊಡ್ಡ ಸ್ಥಳಗಳಲ್ಲಿಯೇ ಕೇಂದ್ರೀಕೃತವಾಗಿವೆ. ಇಂದಿಗೂ ಗ್ರಾಮಾಂತರ ಜನರಿಗೆ ಮನರಂಜನೆ ಸಿಗುತ್ತಿರುವುದು ಹೆಚ್ಚು ಕಡಿಮೆ ಅರೆ ಖಾಯಂ ಮತ್ತು ಸಂಚಾರಿ ಚಿತ್ರಮಂದಿರಗಳಿಂದಲೆ. ಆದರೆ ಅವುಗಳಿಗೂ ಹಳಸಿದ ಸರ್ಕಾರಿ ನಿಯಮಗಳ, ಕಾನೂನುಗಳ ಪಿಡುಗು ಬಿಟ್ಟಿಲ್ಲ. ಆದ್ದರಿಂದ ಅವು ಸತತವಾಗಿ ಸಮಸ್ಯೆಗಳಲ್ಲಿಯೇ ಮುಳುಗಿ ತೇಲುವ ಅನಿವಾರ್ಯತೆ ಉಂಟಾಗಿದೆ. ೧೯೮೭ರ ಹಿಂದೆ ಈ ಚಿತ್ರಮಂದಿರಗಳು ಒಂದೇ ಜಾಗದಲ್ಲಿ ಆರು ತಿಂಗಳ ಮೇಲೆ ಠಿಕಾಣಿ ಹೂಡಬಾರದೆಂಬ ನಿರ್ಬಂಧ ಜಾರಿಯಲ್ಲಿದ್ದಾಗ ಅವುಗಳ ಗೋಳು ಹೇಳತೀರದು. ಮಂಡಳಿ ಈ ಚಿತ್ರಮಂದಿರಗಳಿಗೆ ಅರೆಖಾಯಂ ಚಿತ್ರಮಂದಿರಗಳೆಂಬ ಹೆಸರನ್ನು ಮಾನ್ಯ ಮಾಡಬೇಕೆಂದು ಸರ್ಕಾರದ ಮೇಲೆ ಒತ್ತಾಯ ತಂದ ಮೇಲೆ ಅವುಗಳ ಪರಿಸ್ಥಿತಿ ಎಷ್ಟೋ ಮಟ್ಟಿಗೆ ಸುಧಾರಿಸಿದೆ. ಆದರೂ ಈ ಚಿತ್ರಮಂದಿರಗಳಿಗೆ ಇನ್ನಷ್ಟು ಸೌಲಭ್ಯಗಳನ್ನೊದಗಿಸಿ ಕೊಡುವುದು ಸರ್ಕಾರದ ಕರ್ತವ್ಯವೆಂಬ ದೃಷ್ಟಿಯಿಂದ ಮಂಡಳಿ ರಾಜ್ಯ ಸರ್ಕಾರದೊಂದಿಗೆ ಆಗಾಗ ವ್ಯವಹರಿಸುತ್ತಲೇ ಬಂದಿದೆ. ಕನ್ನಡ ಚಿತ್ರಗಳಿಗಂತೂ ಈ ಚಿತ್ರಮಂದಿರಗಳಿಂದಾಗುವ ಆರ್ಥಿಕ ಪ್ರಯೋಜನ ಅಪಾರ. ಆದ್ದರಿಂದಲೇ ಅವುಗಳ ಸಮಸ್ಯೆಗಳ ಪರಿಹಾರ ತನ್ನ ಆದ್ಯತೆಗಳಲ್ಲಿ ಒಂದೆಂದು ಮಂಡಳಿ ಮೊದಲಿನಿಂದ ಬಲವಾಗಿ ನಂಬಿಕೊಂಡು ಬಂದಿದೆ.

ಈಗ ಮೊದಲಿನಂತೆ ಒಂದು ಕೇಂದ್ರದಿಂದ ಇನ್ನೊಂದು ಕೇಂದ್ರಕ್ಕೆ ಸಂಚರಿಸುತ್ತಿದ್ದ ಅಲೆಮಾರಿ ಚಿತ್ರಮಂದಿರಗಳಿಲ್ಲ. ಅಂತಹ ಚಿತ್ರಮಂದಿರಗಳೆಲ್ಲ ಅರೆಖಾಯಂ ಚಿತ್ರಮಂದಿರಗಳಾಗಿ ಪರಿವರ್ತಿತವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಕನ್ನಡ ಚಿತ್ರರಂಗದ ಬೆನ್ನೆಲುಬಾಗಿ ನಿಂತಿವೆ. ಅವುಗಳ ಹಿತಾಸಕ್ತಿಗಳನ್ನು ಕಾಪಾಡುವುದರಲ್ಲಿ ಉದ್ಯಮದ ಹಿತಾಸಕ್ತಿಯೂ ಅಡಗಿದೆಯೆಂಬ ಕಾರಣದಿಂದ ಮಂಡಳಿ ಅವುಗಳ ಬಗ್ಗೆ ಕಾಳಜಿ ವಹಿಸಿದೆ. ಅರೆ ಖಾಯಂ ಚಿತ್ರಮಂದಿರಗಳ ಪರವಾನಗಿ ಹತ್ತು ವರ್ಷಗಳು ಮಾತ್ರ.

ಕನ್ನಡ ಚಿತ್ರಗಳು ಇತರ ಭಾಷೆಗಳ ಅನೇಕ ಶ್ರೀಮಂತ ಚಿತ್ರಗಳೊಂದಿಗೆ ಪೈಪೋಟಿಗೆ ನಿಲ್ಲುವುದು ಅನಿವಾರ್ಯವಾಗಿ, ಇದರಿಂದಾಗಿ ಅವುಗಳ ಗಳಿಕೆ ಸೊರಗುತ್ತಿದೆಯೆಂಬ ಕಾರಣದಿಂದ ಮೊದಲು ಅವುಗಳಿಗೆ ಶೇ.೫೦ರಷ್ಟು ತೆರಿಗೆ ವಿನಾಯಿತಿ ಕೊಡುತ್ತಿದ್ದ ರಾಜ್ಯ ಸರ್ಕಾರ ೧೯೯೨ರಲ್ಲಿ ಈ ರಿಯಾಯಿತಿಯನ್ನು ಶೇ.೧೦೦ಕ್ಕೆ ಏರಿಸಿತು. ಈ ಬಗ್ಗೆ ಉದ್ಯಮದ ಕೆಲವು ಪ್ರಮುಖರು ಆಗಾಗ್ಗೆ ಸರ್ಕಾರವನ್ನು ಆಗ್ರಹ ಪಡಿಸುತ್ತಿದ್ದರಾದರೂ ಉದ್ಯಮದಿಂದ ಅಧಿಕೃತವಾಗಿ ಬೇಡಿಕೆಯೇನೂ ಇರಲಿಲ್ಲ. ಉದ್ಯಮಕ್ಕೆ ಈ ಸಂಪೂರ್ಣ ತೆರಿಗೆ ವಿನಾಯಿತಿ ಒಂದು ವರವಾಗಿ ಪರಿಣಮಿಸಿತು. ಆದರೂ ಈ ವಿನಾಯಿತಿ ಜಾರಿಗೆ ಬಂದ ನಂತರ ರಾಜ್ಯದಲ್ಲಿನ ಚಿತ್ರಮಂದಿರಗಳ ಮಾಲೀಕರು ತಮ್ಮ ಬಾಡಿಗೆಯನ್ನು ಏರಿಸುತ್ತಲೇ ಹೋದರು. ಇದು ಸಾಲದೆಂಬಂತೆ ಜನಪ್ರಿಯ ಕಲಾವಿದರು, ನಿರ್ದೇಶಕರು ಮತ್ತು ತಂತ್ರಜ್ಞರು ಕೂಡ ತಮ್ಮ ಸಂಭಾವನೆಗಳನ್ನು ಹೆಚ್ಚಿಸಿಕೊಂಡು ಹೋದ ಬಗ್ಗೆ ವ್ಯಾಪಕವಾದ ದೂರುಗಳು ಕೇಳಿ ಬಂದಾಗ ಮಂಡಳಿ ಮಧ್ಯೆ ಪ್ರವೇಶಿಸುವುದು ಅನಿವಾರ್ಯವಾಯಿತು. ಈ ಸಮಸ್ಯೆಯ ಪರಿಹಾರಕ್ಕೆ ಮಂಡಳಿ ತುಂಬಾ ಸೂಕ್ಷ್ಮವಾದ ಪ್ರಯತ್ನಗಳನ್ನು ಮಾಡಬೇಕಾಯಿತು. ಆದರೆ ಇದು ನಿಲ್ಲದ ಸಮಸ್ಯೆಯಾಗಿಯೇ ಉಳಿದಿದೆ. ನಿರ್ಮಾಪಕರಿಗಂತೂ ಇದೊಂದು ದೊಡ್ಡ ಸವಾಲಾದರೂ ಅವರು ಜನಪ್ರಿಯ ಹೆಸರುಗಳನ್ನೇ ಆಶ್ರಯಿಸಿ ಹೋಗುವುದರಿಂದ ಸಮಸ್ಯೆ ಆಗಾಗ ಬಿಗಡಾಯಿಸುತ್ತಲೇ ಹೋಗುವುದು ಸಹಜ. ಆದ್ದರಿಂದ ಸಂಪೂರ್ಣ ತೆರಿಗೆ ವಿನಾಯಿತಿಯಿಂದ ನಿರ್ಮಾಪಕರಿಗೆ ಮತ್ತು ಹಂಚಿಕೆದಾರರಿಗೆ ಹೆಚ್ಚಿನ ಸಹಾಯವೇನೂ ಆಗಲಿಲ್ಲವೆಂಬ ಅಭಿಪ್ರಾಯ ಬೇರೂರಿದೆ. ಮಂಡಳಿ ಆಗಾಗ್ಗ ಮಧ್ಯೆ ಪ್ರವೇಶಿಸಿ ಪರಿಸ್ಥಿತಿಯನ್ನು ಸರಿಪಡಿಸಲು ಪ್ರಯತ್ನ ಮಾಡುತ್ತಲೇ ಇದೆ. ಎಲ್ಲ ಪ್ರಸಂಗಗಳಲ್ಲೂ ಯಶಸ್ವಿಯಾಗಿಲ್ಲ. ನಿರ್ಮಾಪಕರು ಹೊಸ ಮುಖಗಳೊಂದಿಗೆ ಪ್ರಯೋಗ ಮಾಡುವ ಮನೋಪ್ರವೃತ್ತಿಯನ್ನು ಹೆಚ್ಚು ಬೆಳೆಸಿಕೊಂಡಿದ್ದರೆ, ಅವರು ಮತ್ತು ವಿತರಕರು ಚಿತ್ರದ ಯೋಗ್ಯತೆ ಏನೇ ಇರಲಿ ಅದರ ಪ್ರದರ್ಶನಕ್ಕೆ ಕೆಲವು ಪ್ರತಿಷ್ಠಿತ ಚಿತ್ರಮಂದಿರಗಳೇ ಬೇಕೆಂದು ಹಠ ಹಿಡಿಯದಿದ್ದರೆ, ಪ್ರದರ್ಶಕರು, ಕಲಾವಿದರು ಮತ್ತು ತಂತ್ರಜ್ಞರು ಅವರ ಸಮಸ್ಯೆಗಳಿಗೆ ಹೆಚ್ಚು ಔಚಿತ್ಯಪೂರ್ಣವಾಗಿ ಸ್ಪಂದಿಸಿದ್ದರೆ ಸಂಪೂರ್ಣ ತೆರಿಗೆ ವಿನಾಯಿತಿಯಿಂದಾಗಿ ನಿರ್ಮಾಪಕರಿಗೆ ಹಾಗೂ ಹಂಚಿಕೆದಾರರಿಗೆ ಇನ್ನೂ ಹೆಚ್ಚಿನ ಪ್ರಯೋಜನವಾಗುತ್ತಿತ್ತು. ಮಂಡಳಿ ಅಗತ್ಯ ಬಿದ್ದಾಗಲೆಲ್ಲ ಈ ಬಗ್ಗೆ ಸಕ್ರಿಯವಾಗಿ ಸ್ಪಂದಿಸುತ್ತಲೇ ಇದೆ.



(ಚಿತ್ರ ೨) ಕಾರ್ಗಿಲ್ ಯೋಧರ ನಿಧಿಗಾಗಿ ವಾಣಿಜ್ಯ ಮಂಡಳಿ ಏರ್ಪಡಿಸಿದ್ದ ತಾರಾಮೇಳ ಕಾರ್ಯಕ್ರಮದಲ್ಲಿ ಜೈಜಗದೀಶ್, ಅಂಬರೀಷ್, ರಾಜಕುಮಾರ್, ಸಿ.ವಿ.ಎಲ್.ಶಾಸ್ತ್ರಿ, ಸುಂದರರಾಜ್, ಕೆ.ಸಿ.ಎನ್.ಚಂದ್ರಶೇಖರ್ ಮತ್ತು ಸಾ.ರಾ.ಗೋವಿಂದು

೯೦ರ ದಶಕದ ತರುಣದಲ್ಲಿ ಅನೇಕ ಸಣ್ಣ ಸಣ್ಣ ಊರು, ಪಟ್ಟಣಗಳಲ್ಲಿ ನಾಯಿಕೊಡೆಗಳಂತೆ ಎದ್ದ ವೀಡಿಯೋ ಪಾರ್ಲರ್‌ಗಳಿಂದ ಚಿತ್ರಮಂದಿರಗಳ ಅಸ್ತಿತ್ವಕ್ಕೇ ಆಘಾತವೊದಗುವ ಪರಿಸ್ಥಿತಿ ಉಂಟಾದಾಗ ಮಂಡಳಿ ಮಧ್ಯೆ ಪ್ರವೇಶಿಸಿ ಈ ಬಗ್ಗೆ ರಾಜ್ಯ ಸರ್ಕಾರದ ತುರ್ತು ಗಮನವನ್ನು ಸೆಳೆಯಿತು. ವಾಸ್ತವವಾಗಿ ವಿದ್ಯುನ್ಮಾನ ಮಾಧ್ಯಮಗಳು ಚಿತ್ರಮಂದಿರಗಳಿಗೆ ಪ್ರಬಲವಾದ ಪೈಪೋಟಿಯನ್ನೇ ಒಡ್ಡಿವೆ. ಕೆಲವು ಕಾಲವಂತೂ ವೀಡಿಯೋ ಕಳ್ಳತನದ ಹಾವಳಿ ಎಷ್ಟು ಆಘಾತಕ್ಕೆ ಎಡೆ ಮಾಡಿಕೊಟ್ಟಿತೆಂದರೆ ಮಂಡಳಿ ಈ ಸಮಸ್ಯೆಯನ್ನು ಎದುರಿಸುವುದಕ್ಕಾಗಿಯೇ ಒಂದು ವಿಶೇಷ ಸಮಿತಿಯನ್ನು ರಚಿಸಬೇಕಾಯಿತು. ಈ ಸಮಿತಿ ರಾಜ್ಯದ ಮೂಲೆಮೂಲೆಗಳಲ್ಲಿ ಪ್ರವಾಸ ಮಾಡಿ ಎಷ್ಟೋ ಕಡೆಗಳಲ್ಲಿ ಕಳ್ಳತನವಾಗುತ್ತಿದ್ದರ ಬಗ್ಗೆ ಪೊಲೀಸರ ಗಮನವನ್ನು ಸೆಳೆಯಿತು. ಮಂಡಳಿ ಸರ್ಕಾರದೊಂದಿಗೂ ಈ ವಿಷಯದಲ್ಲಿ ಆಗಾಗ ವಿಚಾರ ವಿನಿಮಯ ಮಾಡಿಕೊಳ್ಳುತ್ತಲೇ ಹೋಯಿತು. ಆಧುನಿಕ ತಂತ್ರಜ್ಞಾನದ ಆವಿಷ್ಕಾರಗಳನ್ನು ಹತ್ತಿಕ್ಕುವುದು ಉದ್ಯಮದ ಉದ್ದೇಶವಲ್ಲವೆಂದು ಹೇಳುತ್ತಲೇ ಮಂಡಳಿ ಇದರಿಂದಾಗಿ ಚಿತ್ರೋದ್ಯಮದ ಅಸ್ತಿತ್ವಕ್ಕೇ ಕುತ್ತು ಬರುವುದಾದರೆ ತಾನು ಮೂಕಪ್ರೇಕ್ಷಕನಾಗಿ ಕೂರಲು ಸಾಧ್ಯವಿಲ್ಲವೆಂದೂ ಸರ್ಕಾರಕ್ಕೆ ಸ್ಪಷ್ಟಪಡಿಸಿತು.

ಈ ವಿಷಯದಲ್ಲಿ ಮಂಡಳಿ ಆಗಾಗ್ಗೆ ರಾಜ್ಯದಾದ್ಯಂತ ಬಂದ್ ಕಾರ್ಯಕ್ರಮಗಳನ್ನು ಹಮ್ಮಿಕೊಂಡೇ ಬಂದಿತು. ೧೯೯೧ರಲ್ಲಿ ನಡೆದ ಇಂತಹ ಒಂದು ಬೃಹತ್ ಕಾರ್ಯಕ್ರಮದ ನೇತೃತ್ವವನ್ನು ರಾಜಕುಮಾರ್ ವಹಿಸಿದರು. ನಿರ್ಮಾಪಕರು, ನಿರ್ದೇಶಕರು, ಕಲಾವಿದರು, ಪ್ರದರ್ಶಕರು, ವಿತರಕರು, ತಂತ್ರಜ್ಞರು ಅಧಿಕ ಸಂಖ್ಯೆಯಲ್ಲಿ ಮೈಸೂರು ಬ್ಯಾಂಕ್ ವೃತ್ತದಿಂದ ವಿಧಾನಸೌಧಕ್ಕೆ ಮೆರವಣಿಗೆ ಹೋಗಿ ಸರ್ಕಾರಕ್ಕೆ ಮನವಿ ಪತ್ರವನ್ನು ನೀಡಿ ವೀಡಿಯೋ ಪಾರ್ಲರ್‌ಗಳು ಮತ್ತು ವೀಡಿಯೋ ಕಳ್ಳ ವ್ಯಾಪಾರದ ವಿರುದ್ಧ ಉಗ್ರವಾದ ಕ್ರಮವನ್ನು ಕೈಗೊಳ್ಳಬೇಕೆಂದು ಸರ್ಕಾರಕ್ಕೆ ಆಗ್ರಹ ಪಡಿಸಿದರು. ಅನೇಕ ತಿಂಗಳ ನಂತರ ಸರ್ಕಾರ ಈ ಬಗ್ಗೆ ಕರಡು ವಿಧೇಯಕವನ್ನೇನೋ ಪ್ರಕಟಿಸಿತು, ಆಸಕ್ತರಿಂದ ಪ್ರತಿಕ್ರಿಯೆಗಳನ್ನೂ ಆಹ್ವಾನಿಸಿತು. ಮಂಡಳಿ ಕೂಡ ತನ್ನ ಪ್ರತಿಕ್ರಿಯೆಗಳನ್ನು ನೀಡಿತು. ಕೆಲವು ಕಾಲ ಈ ಕಡತಗಳು ಸರ್ಕಾರದ ಕಪಾಟುಗಳಲ್ಲಿ ಧೂಳು ತಿಂದ ಮೇಲೆ ಸರ್ಕಾರ ವಿಧಾನಮಂಡಲದ ಮುಂದೆ ವಿಧೇಯಕವನ್ನು ಮಂಡಿಸಿತು. ಆದರೆ ವೀಡಿಯೋ ಕಳ್ಳತನದ ವಿರುದ್ಧ ಕಠಿಣವಾದ ಕ್ರಮಗಳನ್ನು ಕೈಗೊಳ್ಳುವ ಬದಲು ಸರ್ಕಾರ ವೀಡಿಯೋ ಪಾರ್ಲರುಗಳ ಮೇಲೆ ಕೇವಲ ಸಣ್ಣ ಮಟ್ಟದ ತೆರಿಗೆಯನ್ನು ಹೇರಿತು. ಉದ್ಯಮ ಕೊಟ್ಟ ಸಲಹೆಗಳು ಸರ್ಕಾರಕ್ಕೆ ಒಪ್ಪಿಗೆಯಾಗಲಿಲ್ಲ. ಹೀಗಾಗಿ ಸಮಸ್ಯೆ ಹೆಚ್ಚು ಕಡಿಮೆ ಹಾಗೆಯೇ ಉಳಿದಂತಾಗಿದೆ. ಈಗಲೂ ಉತ್ತರ ಕರ್ನಾಟಕದಲ್ಲಿ ಸುಮಾರು ೫೦ ವೀಡಿಯೋ ಚಿತ್ರಮಂದಿರಗಳು ಅಸ್ತಿತ್ವದಲ್ಲಿವೆ. ಪ್ರೇಕ್ಷಕರಿಗೆ ಇನ್ನೂ ಉತ್ತಮ ಸೌಲಭ್ಯಗಳನ್ನು ಒದಗಿಸಲು ಅನುಕೂಲವಾಗುವಂತೆ ರಾಜ್ಯ ಸರ್ಕಾರ ಪ್ರತಿ ಚಿತ್ರಮಂದಿರಕ್ಕೂ ಅಲ್ಲಿ ಮಾರಾಟವಾದ ಟಿಕೆಟ್‌ಗಳ ಆಧಾರದ ಮೇಲೆ ಸೇವಾ ಶುಲ್ಕವನ್ನು ನೀಡಬೇಕೆಂಬ ಬೇಡಿಕೆಯನ್ನು ಪ್ರದರ್ಶಕರು ಮಂಡಳಿಯ



(ಚಿತ್ರ ಲ) ಒರಿಸ್ಸಾ ಸಂತ್ರಸ್ಥರಿಗಾಗಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಸಂಗ್ರಹಿಸಿದ ನಿಧಿಯನ್ನು ವಾಣಿಜ್ಯ ಮಂಡಳಿ ಅಧ್ಯಕ್ಷ ಕೆ.ಸಿ.ಎನ್.ಚಂದ್ರಶೇಖರ್ ಅವರು ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರಿಗೆ ಅರ್ಪಿಸಿದರು. ಪಾರ್ವತಮ್ಮ ರಾಜಕುಮಾರ್, ಎಸ್.ಎ.ಗೋವಿಂದರಾಜ್, ರಾಘವೇಂದ್ರ ರಾಜಕುಮಾರ್, ಸಾ.ರಾ.ಗೋವಿಂದು ಮತ್ತು ಥಾಮಸ್ ಡಿಸೋಜ ಚಿತ್ರದಲ್ಲಿದ್ದಾರೆ.

ಮೂಲಕ ಸರ್ಕಾರದ ಮುಂದಿಡುತ್ತಲೇ ಬಂದಿದ್ದರು. ಮಂಡಳಿ ಈ ಬಗ್ಗೆ ಸರ್ಕಾರದೊಂದಿಗೆ ಎಡಬಿಡದೆ ವ್ಯವಹರಿಸಿತು. ಮಾರಾಟವಾದ ಪ್ರತಿ ಟಿಕೆಟ್‌ನ ಮೇಲೆಯೂ ಹವಾನಿಯಂತ್ರಿತ ಚಿತ್ರಮಂದಿರಗಳಲ್ಲಿ ೫೦ ಪೈಸೆ ಮತ್ತು ಇತರ ಚಿತ್ರಮಂದಿರಗಳಲ್ಲಿ ೨೫ ಪೈಸೆ ಸೇವಾಶುಲ್ಕವನ್ನು ಪಡೆಯುವ ಪದ್ಧತಿ ಜಾರಿಗೆ ಬಂದು ಸ್ವಲ್ಪ ಕಾಲದ ನಂತರ ಈ ಶುಲ್ಕ ಟಿಕೆಟ್‌ಗೆ ಕ್ರಮಶಃ ಒಂದು ರೂಪಾಯಿ ಮತ್ತು ೫೦ ಪೈಸೆಗೆ ಏರಿತು. ಇದರಿಂದ ಪ್ರತಿ ವರ್ಷ ಹೆಚ್ಚುತ್ತಲೇ ಹೋಗುವ ವಿದ್ಯುತ್ ದರಗಳಿಂದಾಗಿ ಮತ್ತು ಇತರ ಬಾಬುಗಳಲ್ಲಿಯೂ ಏರುತ್ತಿರುವ ವೆಚ್ಚಗಳಿಂದಾಗಿ ಪ್ರದರ್ಶಕರ ಮೇಲಿನ ಹೊರೆ ಸಾಕಷ್ಟು ಇಳಿದಿದೆ. ಆದರೆ ಈ ಪ್ರಮಾಣದಲ್ಲಿ ಸೇವಾಶುಲ್ಕವನ್ನು ಪಡೆದರೂ ಪ್ರದರ್ಶಕರು ಪ್ರೇಕ್ಷಕರಿಗೆ ಸಾಕಷ್ಟು ಸೌಲಭ್ಯಗಳನ್ನು ಒದಗಿಸುತ್ತಿಲ್ಲವೆಂಬ ದೂರು ಬಂದಾಗಲೆಲ್ಲ ಮಂಡಳಿ ಅದನ್ನು ಗಂಭೀರವಾಗಿ ಪರಿಗಣಿಸಿ ಸಂಬಂಧಪಟ್ಟ ಪ್ರದರ್ಶಕರೊಂದಿಗೆ ಮಾತನಾಡಿ ಈ ನ್ಯೂನತೆ ಸಾಧ್ಯವಾದಷ್ಟು ಕಡಿಮೆಯಾಗುವಂತೆ ನೋಡಿಕೊಂಡಿದೆ. ಆದರೂ ಈ ಬಗ್ಗೆ ಆಗಬೇಕಾದ ಕೆಲಸ ಇನ್ನೂ ಇದೆ.

ದೇಶದ ಯಾವ ಭಾಗದಲ್ಲಿಯೇ ಆಗಲಿ ಜನತೆ ಪ್ರಕೃತಿಯ ವಿಕೋಪಕ್ಕೆ ಸಿಕ್ಕಿ ಅಪಾರ ಪ್ರಾಣ ಹಾನಿ, ಆಸ್ತಿ ಹಾನಿ ಸಂಭವಿಸಿದಾಗ ಮಂಡಳಿ ಪ್ರಮುಖ ಕಲಾವಿದರ ಮತ್ತು ಉದ್ಯಮಿಗಳ ನೆರವನ್ನು ಪಡೆದು ಲಕ್ಷಾಂತರ ರೂಪಾಯಿಗಳ ಪರಿಹಾರ ಧನವನ್ನು ಸಂಗ್ರಹಿಸಿದೆ. ಕಾರ್ಗಿಲ್ ಸಮರದಲ್ಲಿ ಮಡಿದ ಕರ್ನಾಟಕದ ವೀರ ಯೋಧರ ಕುಟುಂಬಗಳಿಗೆ ನೆರವಾಗಲು ಸರ್ಕಾರಕ್ಕೆ ೪೦ ಲಕ್ಷ ರೂಪಾಯಿಗಳಿಗೂ ಹೆಚ್ಚು ಹಣವನ್ನು ಸಂಗ್ರಹಿಸಿ ಕೊಟ್ಟಿದ್ದು ಈಚಿನ ಒಂದು ನಿದರ್ಶನ.

ಕನ್ನಡ ಚಲನಚಿತ್ರೋದ್ಯಮದ ಬೆಳವಣಿಗೆಗೆ ರಾಜ್ಯ ಸರ್ಕಾರ ಅನೇಕ ವಿಧಗಳಲ್ಲಿ ನೆರವಾಗಿದ್ದರೂ ಈ ಉದ್ಯಮ ಇತರ ರಾಜ್ಯಗಳಲ್ಲಿನ ಚಿತ್ರೋದ್ಯಮದಷ್ಟು ಪ್ರಗತಿಯನ್ನು ಸಾಧಿಸಲು ಸಾಧ್ಯವಾಗಿಲ್ಲ. ಇದಕ್ಕೆ ಕನ್ನಡ ಚಿತ್ರಗಳ ಮಿತವಾದ ಮಾರುಕಟ್ಟೆಯೇ ಒಂದು ಕಾರಣವಾದರೂ ಇನ್ನೊಂದು ಪ್ರಮುಖ ಕಾರಣ ಇಲ್ಲಿಯ ಉದ್ಯಮ ಆರೋಗ್ಯಕರವಾಗಿ ಬೆಳೆಯಲು ಸಹಾಯಕವಾಗುವ ಯೋಜನೆಗಳಿಗೆ ಸರ್ಕಾರ ಸಕಾಲದಲ್ಲಿ ಅರ್ಥಪೂರ್ಣವಾಗಿ ಮುಂದಾಗದಿರುವುದೂ ಕೂಡ.

ಉದಾಹರಣೆಗೆ ಹೆಸರಘಟ್ಟದಲ್ಲಿ ಚಿತ್ರನಗರಿಯನ್ನು ನಿರ್ಮಿಸುವ ಯೋಜನೆ ಕಾಗದದಲ್ಲಿ ಹಾಗೆಯೇ ಉಳಿದಿದೆ. ಅದರ ಬಗ್ಗೆ ಸರ್ಕಾರ ಯಾವ ಆಸಕ್ತಿಯನ್ನೂ ತೋರಿಸುತ್ತಿಲ್ಲ. ಚಿತ್ರನಗರಿಗೆಂದೇ ಮೀಸಲಾದ ಸುಮಾರು ೩೦೦ ಎಕರೆ ಜಮೀನಿನ ಸ್ವಾಮ್ಯ ಹೊಂದಿರುವ ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮ ಈ ಯೋಜನೆಗೆ ಹಣ ಹೂಡುವ ಸ್ಥಿತಿಯಲ್ಲಿಲ್ಲ. ಕಂಠೀರವ ಸ್ಟುಡಿಯೋ ಸರ್ಕಾರಿ ಸ್ವಾಮ್ಯದಲ್ಲಿದ್ದರೂ ಅದರ ಅಭಿವೃದ್ಧಿಯೂ ನನೆಗುದಿಗೆ ಬಿದ್ದಿದೆ. ಈ ಎರಡು ಸಂಸ್ಥೆಗಳಲ್ಲಿಯೂ ಖಾಸಗಿ ಬಂಡವಾಳವಿದೆ. ಆದರೆ ಸರ್ಕಾರವೇ ಆಗಲಿ, ಖಾಸಗಿ ಷೇರುದಾರರೇ ಆಗಲಿ ಅವುಗಳ ಬಗ್ಗೆ ನಿರಾಸಕ್ತರಾಗಿದ್ದಾರೆ. ಸರ್ಕಾರ ಕನ್ನಡ ಚಿತ್ರೋದ್ಯಮದ ಅಭಿವೃದ್ಧಿಗೆ ಏನೆಲ್ಲ ಮಾಡಿದ್ದರೂ ಇಂತಹ ಅಗತ್ಯ ಸೌಲಭ್ಯಗಳ ಬಗ್ಗೆ ತೋರುತ್ತಿರುವ ನಿರ್ಲಿಪ್ತತೆ ಆಶ್ಚರ್ಯಕರ. ಮನರಂಜನೆ ತೆರಿಗೆ ಮತ್ತು ಇತರ ಬಾಬುಗಳಲ್ಲಿ ಚಿತ್ರೋದ್ಯಮದಿಂದ ಸರ್ಕಾರಕ್ಕೆ ಕೋಟ್ಯಂತರ ರೂಪಾಯಿಗಳ ಆದಾಯ ಬರುತ್ತಿದ್ದರೂ ಅದರ ಶೇ.೧೦ ಭಾಗವನ್ನಾದರೂ ಸರ್ಕಾರ ಈ ಉದ್ಯಮದ ಬೆಳವಣಿಗೆಗೆ ವಿನಿಯೋಗಿಸದಿರುವುದು ಒಂದು ಸೋಜಿಗ. ಆಂಧ್ರಪ್ರದೇಶ ಮತ್ತು ಒರಿಸ್ಸಾ ಸರ್ಕಾರಗಳು ಹಾಗೆ ಮಾಡುತ್ತಿರುವುದರಿಂದಲೇ ಅವು ಚಿತ್ರೋದ್ಯಮದ ಮೇಲೆ ವೆಚ್ಚ ಮಾಡುವ ಹಣ ಸದ್ವಿನಿಯೋಗವಾಗುತ್ತಿರುವುದು.

ರಾಜ್ಯ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮವನ್ನು ಭದ್ರವಾದ ನೆಲೆಯ ಮೇಲೆ ನಿಲ್ಲಿಸಬೇಕೆಂದು ಚಲನಚಿತ್ರ ವಾಣಿಜ್ಯ ಮಂಡಳಿ ಸರ್ಕಾರವನ್ನು ಒತ್ತಾಯಿಸುತ್ತಲೇ ಬಂದಿದೆ. ಆದರೆ ಈ ಪ್ರಯತ್ನ ನಿರರ್ಥಕವೆನಿಸಿದೆ. ಕನ್ನಡ ಚಿತ್ರಗಳನ್ನು ಕನ್ನಡೇತರ ರಾಜ್ಯಗಳಲ್ಲಿ ಮತ್ತು ವಿದೇಶಗಳಲ್ಲಿ ಜನಪ್ರಿಯಗೊಳಿಸುವ ನಿಟ್ಟಿನಲ್ಲಿಯೂ ನಿಗಮ ಶ್ರಮಿಸಬೇಕಾಗಿದೆ. ಆದರೆ ಈ ಬಗ್ಗೆ ನಿಗಮ ಇದುವರೆಗೆ ಒಂದು ಹೆಜ್ಜೆಯನ್ನೂ ಮುಂದಿಟ್ಟಿಲ್ಲ.

ಆದರೂ ಈ ದಿಸೆಯಲ್ಲಿ ಮಂಡಳಿ ತನ್ನದೇ ಆದ ಪ್ರಾಮಾಣಿಕ ಪ್ರಯತ್ನಗಳನ್ನು ಆಗಾಗ ಮಾಡುತ್ತಲೇ ಇದೆ. ಮದರಾಸಿನಲ್ಲಿ ಲಕ್ಷಾಂತರ ಕನ್ನಡಿಗರಿದ್ದಾರೆ. ಆದರೆ ಅವರಿಗೆ ಕನ್ನಡ ಚಿತ್ರಗಳನ್ನು ನೋಡುವ ಅವಕಾಶವೇ ಇಲ್ಲ. ಈ ಕೊರತೆಯನ್ನು ನೀಗಿಸಲು ಮಹಾನಗರದಲ್ಲಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆಂದೇ ಒಂದೆರಡು ಚಿತ್ರಮಂದಿರಗಳನ್ನು ಪಡೆಯುವ ಪ್ರಯತ್ನಗಳನ್ನು ಮಂಡಳಿ ಮುಂದುವರಿಸಿಕೊಂಡು ಬಂದಿದೆ. ಆದರೆ ಇದುವರೆಗೆ ಯಾವ ಖಾಯಂ ವ್ಯವಸ್ಥೆಯೂ ಸಾಧ್ಯವಾಗಿಲ್ಲ.

೮೦ರ ದಶಕದ ತರುಣದಲ್ಲಿಯೇ ಮಂಡಳಿ ಮದರಾಸಿನಲ್ಲಿ ಕನ್ನಡ ಚಿತ್ರಗಳ ಬಗ್ಗೆ ಬೃಹತ್ ಸಮಾವೇಶವೊಂದನ್ನು ಏರ್ಪಡಿಸಿತ್ತು. ಅದಕ್ಕೂ ಮುಂಚೆ ಆರ್.ಗುಂಡೂರಾಯರು ರಾಜ್ಯದ ಮುಖ್ಯಮಂತ್ರಿಯಾಗಿದ್ದಾಗ ಮದರಾಸಿನಲ್ಲಿ ದೇವಿಬಾಲಾ ಎಂಬ ಪ್ರತಿಷ್ಠಿತ ಸಣ್ಣ ಚಿತ್ರಮಂದಿರವನ್ನು ಕನ್ನಡ ಚಿತ್ರಗಳ ಪ್ರದರ್ಶನಕ್ಕೆಂದೇ ಗುತ್ತಿಗೆಗೆ ಪಡೆದುಕೊಳ್ಳಲಾಯಿತು. ಹಾಗೆಯೇ ಹೈದರಾಬಾದಿನಲ್ಲಿ ಕೂಡ ಇಂತಹ ಪ್ರಯತ್ನ ನಡೆಯಿತು. ಆದರೆ ಎರಡು ಪ್ರಯತ್ನಗಳೂ ಫಲಪ್ರದವಾಗಲಿಲ್ಲ. ಇದಕ್ಕೆ ಸ್ಥಳೀಯ ಕನ್ನಡಿಗರ ಅನಾಸಕ್ತಿಯೂ ಕಾರಣ.

ಹೊರರಾಜ್ಯಗಳಲ್ಲಿ ಕನ್ನಡ ಚಿತ್ರಗಳನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಮಂಡಳಿ ೧೯೮೮ರಲ್ಲಿ ಇನ್ನೊಂದು ದೊಡ್ಡ ಹೆಜ್ಜೆಯನ್ನಿಟ್ಟಿತು. ಆ ವರ್ಷದ ನವೆಂಬರ್ ತಿಂಗಳಲ್ಲಿ ಕೇರಳದ ರಾಜಧಾನಿ ತಿರುವನಂತಪುರದಲ್ಲಿ ಮಂಡಳಿ ಪ್ರಥಮ ಬಾರಿಗೆ ಕನ್ನಡ ಚಲನಚಿತ್ರೋತ್ಸವವೊಂದನ್ನು ಅದ್ದೂರಿಯಾಗಿ ನಡೆಸಿತು. ಆಗ ಮಂಡಳಿಯ ಅಧ್ಯಕ್ಷರಾಗಿದ್ದ ಸಿ.ವಿ.ಎಲ್.ಶಾಸ್ತ್ರಿಯವರು ಈ ಸಾಹಸದ ಪ್ರೇರಕಶಕ್ತಿ-ಉತ್ಸವಕ್ಕೆ ತಗುಲಿದ ಐದು ಲಕ್ಷ ರೂಪಾಯಿಗಳನ್ನು ತಾವೇ ಸಂಪೂರ್ಣವಾಗಿ ಭರಿಸಿದರು. ಉತ್ಸವ ಯಶಸ್ವಿಯಾಗಿ ನೆರವೇರಿತು. ಆದರೆ ಕೇರಳದಲ್ಲಿ ಕನ್ನಡ ಚಿತ್ರಗಳನ್ನು ವ್ಯವಸ್ಥಿತವಾಗಿ ಪ್ರದರ್ಶಿಸುವ ಬಗ್ಗೆ ನಂತರ ಯಾವ ಪ್ರಯತ್ನವೂ ನಡೆಯದೆ ಆ ಉತ್ಸವದ ಮೂಲ ಉದ್ದೇಶವೇ ಸಫಲವಾಗಲಿಲ್ಲ. ಕೇರಳ ಮತ್ತು ಕರ್ನಾಟಕದ ಅಂದಿನ ಮುಖ್ಯಮಂತ್ರಿಗಳಾಗಿದ್ದ ಇ.ಕೆ.ನಯನಾರ್ ಮತ್ತು ಎಸ್.ಆರ್.ಬೊಮ್ಮಾಯಿ ಉತ್ಸವವನ್ನು ವೈಭವದ ಸಮಾರಂಭದಲ್ಲಿ ಜಂಟಿಯಾಗಿ ಉದ್ಘಾಟಿಸಿದರು. ಹಿರಿಯ ಕಲಾವಿದರಾದ ರಾಜಕುಮಾರ್, ಪ್ರೇಂ ನಜೀರ್, ಮಧು ಮುಂತಾದವರು ಉತ್ಸವದಲ್ಲಿ ಉತ್ಸಾಹದಿಂದ ಪಾಲ್ಗೊಂಡರು. ತಿರುವನಂತಪುರದ ಕಲಾಭವನದಲ್ಲಿ ಒಂದು ವಾರ ಕಾಲ ೨೦ ಪ್ರಾತಿನಿಧಿಕ ಕನ್ನಡ ಚಿತ್ರಗಳು ಪ್ರದರ್ಶಿತವಾದವು. ಉತ್ಸವದ ಅಂಗವಾಗಿ ಒಂದು ವಿಚಾರಣ ಸಂಕಿರಣ ನಡೆಯಿತು. ಮಲೆಯಾಳಿ ಮತ್ತು ಕನ್ನಡ ಚಿತ್ರೋದ್ಯಮಗಳಿಗೆ ಸಂಬಂಧಿಸಿದ ಹಲವು ಹತ್ತು ಸಮಸ್ಯೆಗಳ ಬಗ್ಗೆ ಮುಕ್ತವಾದ ವಿಚಾರ ವಿನಿಮಯ ನಡೆಯಿತು. ಆದರೆ ಇದಾದ ನಂತರ ಇನ್ನಾವ ಪ್ರಯತ್ನವೂ ನಡೆಯಲಿಲ್ಲ.

ಇದಕ್ಕೂ ಮೊದಲು ಸಿ.ವಿ.ಎಲ್.ಶಾಸ್ತ್ರಿಗಳು ಮದರಾಸಿನಲ್ಲಿ ಕನ್ನಡ ಚಿತ್ರಗಳ ಉತ್ಸವವೊಂದನ್ನು ಏರ್ಪಡಿಸಿದ್ದರು. ಈ ಉತ್ಸವವನ್ನು ತಮಿಳು ಚಿತ್ರ ನಿರ್ಮಾಪಕ-ನಿರ್ದೇಶಕ ಕೆ.ಬಾಲಚಂದರ್ ಉದ್ಘಾಟಿಸಿದ್ದರು.

ಅರುವತ್ತರ ದಶಕದಲ್ಲಿ ಇತರ ಭಾಷೆಗಳಲ್ಲಿ ತಯಾರಾದ ಚಿತ್ರಗಳನ್ನು ಕನ್ನಡ ಭಾಷೆಯಲ್ಲಿ ಡಬ್ ಮಾಡಿ ಬಿಡುಗಡೆ ಮಾಡುವುದು ಲಾಭಕರವೆನಿಸಿ ಒಂದರ ಹಿಂದೊಂದು ಡಬ್ಬಿಂಗ್ ಚಿತ್ರಗಳೂ ತೆರೆಕಾಣತೊಡಗಿದವು. ಇದರಿಂದ ಮೂಲ ಕನ್ನಡ

ಚಿತ್ರಗಳಿಗೆ ಅಪಾರ ಹಾನಿಯಾಗತೊಡಗಿತು. ಕನ್ನಡ ಸಾಹಿತ್ಯಕ್ಷೇತ್ರದ ಅ.ನ.ಕೃಷ್ಣರಾಯರು, ಮ.ರಾಮಮೂರ್ತಿ, ನಾಡಿಗೇರ್ ಕೃಷ್ಣರಾಯರು, ಚಿತ್ರಪ್ರೇಮಿಗಳ ಸಂಘದ ಆರ್.ಲಕ್ಷ್ಮಣ್ ಮತ್ತು ಕೆ.ಎ.ಗೋಪಾಲ್, ವಾಟಾಳ್ ನಾಗರಾಜ್ ಮತ್ತಿತರರು ಕನ್ನಡ ಚಿತ್ರೋದ್ಯಮದ ಉಳಿವಿಗಾಗಿ ಡಬ್ಬಿಂಗ್ ಚಿತ್ರಗಳ ನಿಷೇಧಕ್ಕಾಗಿ ಭಾರಿ ಪ್ರತಿಭಟನೆ-ಚಳವಳಿಯನ್ನೇ ಆರಂಭಿಸಿದರು. ಡಬ್ಬಿಂಗ್ ಚಿತ್ರಗಳಿಗೆ ಕಂಠದಾನ ಮಾಡುವವರು, ಸಾಹಿತ್ಯ ಬರೆಯುವವರು ಈ ಚಳವಳಿಯನ್ನು ವಿರೋಧಿಸಿದರು. ಆದರೂ ಡಬ್ಬಿಂಗ್ ವಿರುದ್ಧ ಚಳವಳಿಯ ಕಾವು ದಿನದಿನೇ ಹೆಚ್ಚಿತು. ಈ ಚಳವಳಿ ಕನ್ನಡ ನಾಡಿನಲ್ಲಿ ಕನ್ನಡ ಚಿತ್ರಗಳ ಉಳಿವಿಗಾಗಿ ನಡೆದಿತ್ತು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯು ಚಳವಳಿಯ ಹಿಂದಡಗಿರುವ ಮೂಲ ಉದ್ದೇಶವನ್ನು ಅರಿತು ಚಳವಳಿಯನ್ನು ಬೆಂಬಲಿಸಿತು.

ಇತರ ಭಾಷೆಗಳಿಂದ ಡಬ್ ಆದ ಚಿತ್ರಗಳನ್ನು ಸಂಪೂರ್ಣವಾಗಿ ನಿಷೇಧಿಸಿರುವುದು ಮಂಡಳಿಯ ದೊಡ್ಡ ಸಾಧನೆ. ಡಬ್ಬಿಂಗ್ ವಿರೋಧದ ಚಳವಳಿ ೬೦ರ ದಶಕದಲ್ಲಿಯೇ ಕನ್ನಡ ಸಾರಸ್ವತ ಪ್ರಪಂಚದ ಹಲವು ಪ್ರಮುಖರ ನಾಯಕತ್ವದಲ್ಲಿ ಪ್ರಖರವಾಗಿ ನಡೆಯಿತಾದರೂ ಡಬ್ ಆದ ಚಿತ್ರಗಳನ್ನು ಅಧಿಕೃತವಾಗಿ ಬಹಿಷ್ಕರಿಸಿದ ಕೀರ್ತಿ ಮಂಡಳಿಗೆ ಸಲ್ಲಬೇಕು.

ಇದರಿಂದ ಕನ್ನಡ ಚಿತ್ರೋದ್ಯಮ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬರಲು ಸಾಕಷ್ಟು ಸಹಾಯಕವಾಗಿದೆ. ೯೦ರ ದಶಕದಲ್ಲಿ ಖ್ಯಾತ ಹಿಂದಿ ನಟ ಮತ್ತು ನಿರ್ದೇಶಕ ಸಂಜಯ್‌ಖಾನ್ ತಮ್ಮ ಜನಪ್ರಿಯ ಕಿರುತೆರೆಯ ಧಾರಾವಾಹಿ 'ದಿ ಸ್ವೋರ್ಡ್ ಆಫ್ ಟಿಪ್ಪುಸುಲ್ತಾನ್' ಅನ್ನು ಕನ್ನಡದಲ್ಲಿ ಡಬ್ ಮಾಡುವ ಪ್ರಯತ್ನ ಮಾಡಿದಾಗ ಕರ್ನಾಟಕದಾದ್ಯಂತ ತೀವ್ರ ಪ್ರತಿಭಟನೆಯೆದ್ದಿತು. ಮಂಡಳಿ ಅದರ ಮುಂದಾಳತ್ವವನ್ನು ವಹಿಸಿದ್ದೊಂದು ವಿಶೇಷ. ಚಳವಳಿ ಪ್ರಾರಂಭವಾದಾಗ ಹಿರಿಯ ನಟ ರಾಜಕುಮಾರ್ ಅವರೇ ಅದರ ನೇತೃತ್ವ ವಹಿಸಿದರು. ಪ್ರತಿಭಟನೆ ಯಶಸ್ವಿಯಾಗಿ 'ಟಿಪ್ಪು' ಕನ್ನಡ ಅವತರಣಿಕೆಯ ಪ್ರಸಾರ ರದ್ದಾಯಿತು. ನಂತರವೂ ಕೆಲವು ಧಾರಾವಾಹಿಗಳನ್ನು ಡಬ್ ಮಾಡುವ ಆಶಯ ವ್ಯಕ್ತಪಟ್ಟಾಗ, ಮಂಡಳಿ ವಿರೋಧಿಸಿ ಆ ಪ್ರಯತ್ನ ಕೈಬಿಡುವಂತೆ ಮಾಡಿತು. ಆದರೆ ಈ ಚಳವಳಿ ಹಾಗೂ ಕನ್ನಡ ಚಿತ್ರೋದ್ಯಮವನ್ನು ಇತರ ಭಾಷೆಗಳ ಪೈಪೋಟಿಯಿಂದ ರಕ್ಷಿಸಲು ಮಂಡಳಿ ತೆಗೆದುಕೊಂಡ ಕೆಲವು ನಿರ್ಧಾರಗಳು, ಭಾರತೀಯ ಚಿತ್ರೋದ್ಯಮದ ಮೇರು ಸಂಸ್ಥೆ 'ಫಿಲಂ ಫೆಡರೇಷನ್ ಆಫ್ ಇಂಡಿಯಾ'ದ ಕೆಂಗಣ್ಣಿಗೆ ಕಾರಣವಾಯಿತು. ಕರ್ನಾಟಕದಲ್ಲಿ ಇತರ ಭಾಷೆಗಳ ಚಿತ್ರಗಳ ಪ್ರದರ್ಶನಕ್ಕೆ ಊನ ಬರುವುದರೊಂದಿಗೆ ಅನ್ಯಭಾಷೆಗಳ ಬಗ್ಗೆ ವೈರ ಹಾಗೂ ಅಸಹನೆಗಳು ಹುಟ್ಟಬಹುದೆಂಬ ಕಾರಣದಿಂದ ವಾಣಿಜ್ಯ ಮಂಡಳಿಯ ಕ್ರಮಗಳನ್ನು ಫೆಡರೇಷನ್ ವಿರೋಧಿಸಿತು. ಫೆಡರೇಷನ್‌ನ ಅನೇಕ ಪ್ರಮುಖ ನಾಯಕರು ಬೆಂಗಳೂರಿಗೂ ಬಂದು ಮಂಡಳಿಯ ಪದಾಧಿಕಾರಿಗಳೊಂದಿಗೆ ವಿಚಾರ ವಿನಿಮಯ ನಡೆಸಿದರು. ಆದರೆ ತಮ್ಮ ಅಸಮಾಧಾನವನ್ನು ಸಂಪೂರ್ಣವಾಗಿ ಬಿಟ್ಟುಕೊಡಲಿಲ್ಲ. ಈ ಪ್ರಕರಣ ಎರಡೂ ಸಂಸ್ಥೆಗಳ ನಡುವಣ ವಿರಸಕ್ಕೂ ದಾರಿ ಮಾಡಿಕೊಟ್ಟಿತು. ಆದರೂ ಮಂಡಳಿಯ ಸತತ ಪ್ರಯತ್ನಗಳಿಂದಾಗಿ ಕರ್ನಾಟಕದಲ್ಲಿ ಕನ್ನಡೇತರ ಭಾಷೆಗಳ ಬಗ್ಗೆ ದ್ವೇಷವಾಗಲಿ, ವೈಷಮ್ಯವಾಗಲಿ ಇಲ್ಲವೆಂದು ಫೆಡರೇಷನ್‌ನ ಮುಖ್ಯಸ್ಥರಿಗೆ ಮನದಟ್ಟಾಯಿತು. ಮುಂದೆ ಅನೇಕ ಬೃಹತ್ ಹಾಲಿವುಡ್ ಚಿತ್ರಗಳು ಹಿಂದಿ ಭಾಷೆಗೆ ಡಬ್ ಆಗಿ ಬಂದು ಅವುಗಳೆದುರು ತಾಂತ್ರಿಕವಾಗಿ ಪಿಚ್ಚೆನಿಸಿದ ಹಿಂದಿ ಚಿತ್ರಗಳೊಂದಿಗೆ ನೇರ ಪೈಪೋಟಿಗೆ ಇಳಿದಾಗ, ಈ ರೀತಿ ಸ್ಥಳೀಯ ಚಿತ್ರಗಳಿಗಿಂತ ಆರ್ಥಿಕವಾಗಿ ಪ್ರಬಲವಾದ ಚಿತ್ರಗಳು ಈ ಚಿತ್ರಗಳ ಮೇಲೆ ಎರಗಿದಾಗ ಸ್ಥಳೀಯ ಚಿತ್ರೋದ್ಯಮದ ಮೇಲೆ ಆಗುವ ಅಹಿತಕರ ಪರಿಣಾಮವನ್ನು ಫೆಡರೇಷನ್ ಕಣ್ಣಾರೆ ಕಂಡು ಅನುಭವಿಸಿದಾಗ ಸ್ಥಳೀಯ ಚಿತ್ರೋದ್ಯಮ ಇಂತಹ ಸಂದರ್ಭಗಳಲ್ಲಿ ಕಿಚ್ಚಿಗೇಳುವ ಅನಿವಾರ್ಯತೆಯ ಬಗ್ಗೆ ಅವರಿಗೆ ಅರಿವಾಯಿತು.



(ಚಿತ್ರ ೯) ಗಿರೀಶ್ ಕಾರ್ನಾಡ್‌ರಿಂದ ವಾಣಿಜ್ಯ ಮಂಡಳಿ ಆಶ್ರಯದಲ್ಲಿ ನಡೆದ ಚಲನಚಿತ್ರ ಸಾಹಿತ್ಯ ಕಮ್ಮಟದ ಸಮಾರೋಪ ಭಾಷಣ. ವೇದಿಕೆಯ ಮೇಲೆ ಮಂಡಳಿಯ ಅಧ್ಯಕ್ಷ ಕೆ.ಸಿ.ಎನ್.ಚಂದ್ರಶೇಖರ್, ಪತ್ರಕರ್ತ ಎ.ಎನ್.ಸುಬ್ಬರಾವ್ ಮತ್ತು ವಿಜಯಲಕ್ಷ್ಮೀ ಸಿಂಗ್.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಆರಂಭದಿಂದಲೂ 'ಫಿಲಂ ಫೆಡರೇಶನ್ ಆಫ್ ಇಂಡಿಯಾ'ದೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಿದೆ. ಆ ಸಂಸ್ಥೆಯ ಸದಸ್ಯತ್ವವನ್ನೂ ಪಡೆದಿದೆ. ಉದ್ಭವವಾದ ವಿರಸಗಳನ್ನು ಪರಸ್ಪರ ವಿಚಾರ ವಿನಿಮಯದಿಂದ ಪರಿಹರಿಸಲಾಗಿದೆ. ಕೆಲವೊಮ್ಮೆ ಆ ಸಂಸ್ಥೆಯಲ್ಲಿ ಮೂಡಿದ ತಪ್ಪು ಅಭಿಪ್ರಾಯಗಳನ್ನು ಸ್ಪಷ್ಟ ಚಿತ್ರಣ ನೀಡಿ ಬದಲಿಸಿದೆ. ಎಂ.ಭಕ್ತವತ್ಸಲ ಅವರು






(ಚಿತ್ರ ೧೦) ಮೈಸೂರು ಚಲನಚಿತ್ರ ವಾಣಿಜ್ಯ ಮಂಡಳಿಯು ೧೯೬೯ರಲ್ಲಿ ತನ್ನ ರಜತೋತ್ಸವವನ್ನು ಆಚರಿಸಿದ ಸಂದರ್ಭದಲ್ಲಿ ರಾಜಕುಮಾರ್ ಮಾತನಾಡುತ್ತಿದ್ದಾರೆ (ಎಡ ಚಿತ್ರ). ವೇದಿಕೆಯ ಮೇಲೆ ಫಿಲಂ ಫೆಡರೇಷನ್ ಅಧ್ಯಕ್ಷ ಸಾಂಗ್ಲಿ, ಬಿ.ಎ.ಅರಸುಕುಮಾರ್, ಎಂ.ಭಕ್ತವತ್ಸಲ, ಮುಖ್ಯಮಂತ್ರಿ ಡಿ.ದೇವರಾಜ ಅರಸು, ಸಚಿವ ಎಸ್.ಎಂ.ಕೃಷ್ಣ, ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷ ಎ.ಎಲ್.ಶ್ರೀನಿವಾಸನ್ ಮತ್ತು ವಿ.ಜಿ.ಚೌಟ



(ಚಿತ್ರ ೧೧) ರಾಜಕುಮಾರ್ ಅವರು ಪದ್ಮಭೂಷಣ ಪ್ರಶಸ್ತಿ ಪುರಸ್ಕೃತರಾದ ಸಂದರ್ಭದಲ್ಲಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಏರ್ಪಡಿಸಿದ ಅಭಿನಂದನಾ ಸಮಾರಂಭ. (ಎಡದಿಂದ) ಸಚಿವ ಎಸ್.ಎಂ.ಕೃಷ್ಣ, ವಾಣಿಜ್ಯ ಮಂಡಳಿ ಅಧ್ಯಕ್ಷ ಬಿ.ಎ.ಅರಸುಕುಮಾರ್, ರಾಜಕುಮಾರ್, ಪಾರ್ವತಮ್ಮ ರಾಜಕುಮಾರ್, ರಾಜ್‌ರ ತಾಯಿ ಲಕ್ಷ್ಮಮ್ಮ, ಸಚಿವ ಎಂ.ರಘುಪತಿ, ಅಮಿತಾಭ್ ಬಚ್ಚನ್ ಮತ್ತು ಹಿರಿಯ ಚಿತ್ರೋದ್ಯಮಿ ಎಲ್.ವಿ.ಪ್ರಸಾದ್

ಫೆಡರೇಶನ್ನಿನ ಅಧ್ಯಕ್ಷರಾಗಿ, ಸಿ.ವಿ.ಎಲ್.ಶಾಸ್ತ್ರಿ ಮತ್ತು ಆರ್.ಲಕ್ಷ್ಮಣ್ ಅವರು ಉಪಾಧ್ಯಕ್ಷರುಗಳಾಗಿ ಆಯ್ಕೆಯಾಗಿ ಆ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ್ದಾರೆ ಎನ್ನುವುದು ಫೆಡರೇಶನ್ ಮತ್ತು ವಾಣಿಜ್ಯ ಮಂಡಳಿಯ ನಡುವಣ ಸೌಹಾರ್ದತೆಯ, ಬಾಂಧವ್ಯದ ಕುರುಹಾಗಿದೆ. ಫೆಡರೇಶನ್ನಿನ ಕೆಲವು ಸಭೆಗಳನ್ನು ಬೆಂಗಳೂರಿನಲ್ಲಿ ನಡೆಸಲು ವಾಣಿಜ್ಯ ಮಂಡಳಿ ಸಹಕರಿಸಿದೆ. ಫೆಡರೇಶನ್ನಿನ ರಜತಮಹೋತ್ಸವ ಸಮಾರಂಭ ಬೆಂಗಳೂರಿನಲ್ಲಿ ನಡೆಯಲು, ವಾಣಿಜ್ಯ ಮಂಡಳಿಯು ರಾಜ್ಯ ಸರ್ಕಾರ (ಆಗ ದೇವರಾಜ ಅರಸು ಅವರು ಮುಖ್ಯಮಂತ್ರಿಗಳಾಗಿದ್ದರು)ದ ಸಹಕಾರ ದೊರಕಿಸಿಕೊಟ್ಟುದಲ್ಲದೆ, ಪೂರ್ಣ ಸಹಕಾರದೊಂದಿಗೆ ತನ್ನನ್ನು ತೊಡಗಿಸಿಕೊಂಡಿತು. ಆ ಸಮಾರಂಭದ ಯಶಸ್ಸಿಗೆ ವಾಣಿಜ್ಯ ಮಂಡಳಿ ಬಹುಮಟ್ಟಿಗೆ ಕಾರಣವಾಯಿತು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಚಲನಚಿತ್ರವನ್ನು ಕೇವಲ ಒಂದು ವ್ಯಾಪಾರಿ ಪ್ರಕ್ರಿಯೆಯೆಂದು ಪರಿಗಣಿಸದೆ ಅದು ಒಂದು ಮಾಧ್ಯಮವಾಗಿ ಬೆಳೆಯುವುದರಲ್ಲಿ ಕೂಡ ತನ್ನ ಪಾತ್ರವಿದೆಯೆಂದು ಮನಗಂಡು ೧೯೯೮ರಲ್ಲಿ ಇಂತಹ ವಾಣಿಜ್ಯ ಸಂಘಟನೆಯೊಂದಕ್ಕೆ ಅಪರೂಪವೆನಿಸುವ ವಿಶಿಷ್ಟ ಕಾರ್ಯಕ್ರಮವೊಂದನ್ನು ಏರ್ಪಡಿಸಿತ್ತು. ಮಂಡಳಿ ಒಂದು ವಾರ ಕಾಲ ಬೆಂಗಳೂರಿನ ಸಚಿವಾಲಯ ಕ್ಲಬ್ ಆವರಣದಲ್ಲಿ ನಡೆಸಿದ ಚಲನಚಿತ್ರ ಸಾಹಿತ್ಯ ಕಮ್ಮಟ ಅದರ ಇತಿಹಾಸದಲ್ಲಿ ಎಂದೂ ನೆನೆಯಬೇಕಾದ ಒಂದು ಅಧ್ಯಾಯ.

ಕನ್ನಡ ಚಿತ್ರರಂಗದ ಕಲಾತ್ಮಕ ಮೌಲ್ಯಗಳ ಬಗ್ಗೆ ಈ ಕಮ್ಮಟದಲ್ಲಿ ಗಂಭೀರವಾದ ಚಿಂತನೆ ನಡೆಯುವುದರೊಂದಿಗೆ ಸಾಹಿತ್ಯ ದೃಷ್ಟಿಯಿಂದ ಕನ್ನಡ ಚಿತ್ರೋದ್ಯಮ ಯಾವ ಹಾದಿಯಲ್ಲಿ ಸಾಗುತ್ತಿದೆಯೆಂಬ ಬಗ್ಗೆಯೂ ಪ್ರಾಮಾಣಿಕ ಆತ್ಮಾವಲೋಕನ ನಡೆಯಿತು. ಕೇವಲ ವಿಚಾರ ವಿನಿಮಯವೇ ಅಲ್ಲದೆ ಚಿತ್ರಕಥೆಯನ್ನು ರಚಿಸುವುದು ಹೇಗೆಂಬ ಬಗ್ಗೆ ಅನೇಕ ಪರಿಣತರಿಂದ ವಿದ್ವತ್ಪೂರ್ಣ ಉಪನ್ಯಾಸಗಳೂ ನಡೆದವು. ಖ್ಯಾತ ನಿರ್ದೇಶಕ ಗಿರೀಶ್ ಕಾಸರವಳ್ಳಿಯವರ ನೇತೃತ್ವದಲ್ಲಿ ನಡೆದ ಈ ಕಮ್ಮಟದಲ್ಲಿ ಈಗಾಗಲೇ ಉದ್ಯಮದಲ್ಲಿರುವ ಸಹಾಯಕ ನಿರ್ದೇಶಕರು, ಸಾಹಿತಿಗಳು, ಚಲನಚಿತ್ರ ಸಾಹಿತ್ಯವನ್ನು ತಮ್ಮ ವೃತ್ತಿಯನ್ನಾಗಿಸಿಕೊಳ್ಳುವುದರಲ್ಲಿ ಆಸಕ್ತಿಯಿರುವವರು ಶಿಬಿರಾರ್ಥಿಗಳಾಗಿದ್ದರು. ಪ್ರಬಲವಾದ ಚಿತ್ರಕಥೆಗಳನ್ನೇ ಆಧಾರವಾಗಿ ಹೊಂದಿದ ಕೆಲವು ಚಿತ್ರಗಳ ಪ್ರದರ್ಶನವೂ ನಡೆದು ಶಿಬಿರಾರ್ಥಿಗಳು ತಜ್ಞರ ನೆರವಿನಿಂದ ಅವುಗಳನ್ನು ವಿಶ್ಲೇಷಿಸಿದರು. ಕೊನೆಯಲ್ಲಿ ಚಿತ್ರಕಥೆ ರಚನೆಯ ತಾಲೀಮು ಕೂಡ ನಡೆಯಿತು. ಭಾರತದಲ್ಲಿ ವ್ಯಾಪಾರಿ ಹಾಗೂ ಕಲಾತ್ಮಕ ಚಿತ್ರಗಳ ನಿರ್ದೇಶಕರಾಗಿ, ಸಾಹಿತಿಗಳಾಗಿ ಖ್ಯಾತಿ ಗಳಿಸಿದ ಮಹೇಶ್ ಭಟ್, ಶ್ಯಾಂ ಬೆನಗಲ್, ಸಿಂಗೀತಂ ಶ್ರೀನಿವಾಸರಾವ್, ಹರಿಹರನ್, ಪ್ರಯಾಗ್ ರಾಜ್, ಸತೀಶ್ ಬಹದ್ದೂರ್ ಮುಂತಾದವರು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡುವ ಜೊತೆಗೆ ಅವರೊಂದಿಗೆ ರೋಚಕವಾಗಿ ವಿಚಾರ ವಿನಿಮಯವನ್ನೂ ಮಾಡಿಕೊಂಡರು. ದೇಶದ ಇನ್ನಾವ ರಾಜ್ಯದಲ್ಲಿಯೂ ಯಾವ ಚಲನಚಿತ್ರ ವಾಣಿಜ್ಯ ಮಂಡಳಿಯೂ ಹಮ್ಮಿಕೊಳ್ಳದಂತಹ ವಿನೂತನ ರೀತಿಯ ಕಾರ್ಯಕ್ರಮ ಇದು.

ಕಮ್ಮಟದ ಕೊನೆಯ ದಿನ ಕನ್ನಡ ಚಿತ್ರರಂಗದ ಅನೇಕ ಪ್ರಮುಖ ನಿರ್ಮಾಪಕರು, ನಿರ್ದೇಶಕರು, ನಟನಟಿಯರು, ತಂತ್ರಜ್ಞರು, ವಿತರಕರು, ಪ್ರದರ್ಶಕರು ವೇದಿಕೆಗೆ ಬಂದು ತುಂಬಿದ ಸಭೆಯಿಂದ ಅಂದಿನ ಕನ್ನಡ ಚಿತ್ರರಂಗದ ಸ್ಥಿತಿಗತಿಗಳ ಬಗ್ಗೆ ಕೇಳಲಾದ ತೀಕ್ಷ್ಣವಾದ ಪ್ರಶ್ನೆಗಳಿಗೆ ಮುಕ್ತವಾದ ಉತ್ತರಗಳನ್ನಿತ್ತರು. ಇಂತಹ ಬಹಿರಂಗ ಆತ್ಮಾವಲೋಕನ ನಡೆದಿದ್ದು ಕೂಡ ಇದೇ ಮೊದಲು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಇತಿಹಾಸದಲ್ಲಿ ಒಂದು ಪ್ರಮುಖ ಹೆಜ್ಜೆಯಿರಿಸಿದ ಈ ಕಮ್ಮಟಕ್ಕೆ ಮಂಡಳಿಯ ಅಧ್ಯಕ್ಷ ಕೆ.ಸಿ.ಎನ್.ಚಂದ್ರಶೇಖರ್‌ರವರ ಪ್ರೇರಣೆ ಮತ್ತು ನಾಯಕತ್ವ ಮೂಲ ಕಾರಣವಾಯಿತು. ಇವರಿಂದಾಗಿ ಮಂಡಳಿಯಲ್ಲಿ ತನ್ನ ಕಾರ್ಯವ್ಯಾಪ್ತಿಯ ಬಗ್ಗೆ ಹೊಸದೊಂದು ಚಿಂತನೆಯೇ ಮೂಡಿತು.

ನಟ ರಾಜಕುಮಾರ್‌ರಿಗೆ ೧೯೮೩ರಲ್ಲಿ ಪದ್ಮಭೂಷಣ ಪ್ರಶಸ್ತಿ ಲಭ್ಯವಾದಾಗ ಮಂಡಳಿ ಲಾಲ್‌ಬಾಗ್‌ನ ಗಾಜಿನ ಮನೆಯಲ್ಲಿ ಅವರನ್ನು ವೈಭವದಿಂದ ಸನ್ಮಾನಿಸಿತು. ಕೇಂದ್ರದ ಅಂದಿನ ಹಿರಿಯ ಮಂತ್ರಿಗಳು ತಮಿಳು-ತೆಲುಗು ಚಿತ್ರರಂಗಗಳ ಶ್ರೇಷ್ಠರು, ಉದ್ಯಮದ ಹಿರಿಯರು ಭಾಗವಹಿಸಿ ಕಳೆ ತಂದುಕೊಟ್ಟ ಈ ಸಮಾರಂಭದ ಒಂದು ವಿಶೇಷವೆಂದರೆ ಖ್ಯಾತ ನಟ ಅಮಿತಾಭ್ ಬಚ್ಚನ್ ಸಿದ್ಧಪಡಿಸಿದ ಭಾಷಣವನ್ನು ಕನ್ನಡದಲ್ಲಿ ಓದಿದ್ದು.

೧೯೮೪ರಲ್ಲಿ ಕನ್ನಡ ವಾಕ್ಚಿತ್ರಕ್ಕೆ ೫೦ ವರ್ಷಗಳು ತುಂಬಿದ ಸಂದರ್ಭದಲ್ಲಿ ಅದರ ನೆನಪಿಗಾಗಿ ಮಂಡಳಿ ರಾಜ್ಯ ಸರ್ಕಾರದ ಸಂಪೂರ್ಣ ಸಹಕಾರದೊಂದಿಗೆ ಸಮಾರಂಭವನ್ನು ವಿಜೃಂಭಣೆಯಿಂದ ಏರ್ಪಡಿಸಿತ್ತು. ಈ ಬೃಹತ್ ಸಮಾರಂಭದಲ್ಲಿ ಕನ್ನಡ ಚಿತ್ರೋದ್ಯಮದ ಬೆಳವಣಿಗೆಗೆ ಸತತವಾಗಿ ದುಡಿದ ಅನೇಕ ಪ್ರಮುಖರನ್ನು ಸನ್ಮಾನಿಸಲಾಯಿತು. ಉತ್ಸವದ ಅಂಗವಾಗಿ ಬೆಂಗಳೂರಿನ ಚಿತ್ರಮಂದಿರಗಳಲ್ಲಿ ಪ್ರಶಸ್ತಿ ವಿಜೇತ ಕನ್ನಡ ಚಿತ್ರಗಳ ಉತ್ಸವವೂ ನಡೆಯಿತು. ಕನ್ನಡ ಚಿತ್ರರಂಗ ನಡೆದು ಬಂದ ದಾರಿಯ ಬಗ್ಗೆ ಛಾಯಾಚಿತ್ರ ಪ್ರದರ್ಶನವೂ ಏರ್ಪಾಡಾಗಿತ್ತು. ಇದರೊಂದಿಗೆ ಚಿತ್ರನಿರ್ಮಾಣದಲ್ಲಿ ಬಳಸುವ ತಾಂತ್ರಿಕ ಸಾಧನಗಳ ಪ್ರದರ್ಶನ ಬೆಂಗಳೂರಿನ ಜಯಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ನಡೆಯಿತು. ಮೈಸೂರು, ಹುಬ್ಬಳ್ಳಿ,



(ಚಿತ್ರ ೧೨) ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಏರ್ಪಡಿಸಿದ ಕನ್ನಡ ಚಿತ್ರರಂಗದ ಸ್ವರ್ಣಮಹೋತ್ಸವ ಸಂದರ್ಭದಲ್ಲಿ ಹೃಷಿಕೇಶ್ ಮುಖರ್ಜಿ, ಎಂ.ರಘುಪತಿ, ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ, ರಾಜಕುಮಾರ್, ನಿರ್ಮಾಪಕ ಶಾಂತಾರಾಂ, ಸಚಿವ ರಾಜವರ್ಧನ್, ರಜನೀಕಾಂತ್, ಬಿ.ಎ.ಅರಸುಕುಮಾರ್, ಸಿ.ವಿ.ಎಲ್.ಶಾಸ್ತ್ರಿ ಮತ್ತು ಜೀವರಾಜ ಆಳ್ವ

ಮಂಗಳೂರು, ಬೆಳಗಾವಿಗಳಲ್ಲಿಯೂ ಉತ್ಸವವನ್ನು ಆಚರಿಸಲಾಯಿತು. ಗುಲ್ಬರ್ಗಾದಲ್ಲಿ ನಡೆದ ಮುಕ್ತಾಯ ಸಮಾರಂಭ ಕೂಡ ವೈಭವೋಪೇತವಾಗಿತ್ತು.

ಮಂಡಳಿಯ ಇನ್ನೊಂದು ದೊಡ್ಡ ಸಾಧನೆ ಕೇಂದ್ರ ಸರ್ಕಾರದೊಂದಿಗೆ ವರ್ಷಗಟ್ಟಲೆ ಸೆಣಸಾಡಿ ಕನ್ನಡ ಚಿತ್ರಗಳ ಪ್ರಮಾಣೀಕರಣ (ಸೆನ್ಸಾರ್)ಕ್ಕಾಗಿ ಬೆಂಗಳೂರಿನಲ್ಲಿಯೇ ಕೇಂದ್ರ ಚಲನಚಿತ್ರ ಪ್ರಮಾಣೀಕರಣ ಮಂಡಳಿಯ ಪ್ರಾದೇಶಿಕ ಕಚೇರಿಯನ್ನು ಸ್ಥಾಪಿಸುವಂತೆ ಮಾಡಿದ್ದು. ಮದರಾಸಿನಲ್ಲಿ ಕನ್ನಡ ಚಿತ್ರಗಳು ಸೆನ್ಸಾರ್ ಆಗುತ್ತಿದ್ದ ಕಾಲದಲ್ಲಿ ಕನ್ನಡ ಚಿತ್ರ ನಿರ್ಮಾಪಕರು ಮತ್ತು ನಿರ್ದೇಶಕರು ಕರ್ನಾಟಕದಿಂದ ಅಲ್ಲಿಗೆ ತೆರಳಿ ದಿನಗಟ್ಟಲೆ ಅಲ್ಲಿಯೇ ತಂಗಿ ಅನುಭವಿಸಬೇಕಾಗಿದ್ದ ದೈಹಿಕ ಶ್ರಮ ಮತ್ತು ಆರ್ಥಿಕ ವೆಚ್ಚ ಕಡಿಮೆಯೇನೂ ಅಲ್ಲ. ಇದು ಸಾಲದೆಂಬಂತೆ ಮದರಾಸಿನಲ್ಲಿದ್ದ ಸೆನ್ಸಾರ್ ಸಮಿತಿಯ ಕನ್ನಡ ಸದಸ್ಯರಿಗೆ ಕನ್ನಡ ಭಾಷೆ ಮತ್ತು ಸಂಸ್ಕೃತಿ ಹಾಗೂ ಬದಲಾಗುತ್ತಿದ್ದ ಜೀವನ ಶೈಲಿಯ ಸಂಪೂರ್ಣ ಪರಿಚಯವೂ ಇರಲಿಲ್ಲ. ಪ್ರಾದೇಶಿಕ ಸೆನ್ಸಾರ್ ಪದಾಧಿಕಾರಿಗಳಿಗಂತೂ ಕನ್ನಡದ ಗಂಧವೇ ಇರಲಿಲ್ಲ.

ಹೀಗಾಗಿ ಕನ್ನಡ ಚಿತ್ರಗಳ ಪ್ರಮಾಣೀಕರಣ ಅತೃಪ್ತಿಕರವಾಗಿತ್ತು. ಕರ್ನಾಟಕದಲ್ಲಿಯೇ ಕನ್ನಡ ಚಿತ್ರಗಳ ತಯಾರಿಕೆ ಹೆಚ್ಚಿದ ನಂತರ ಸಂಖ್ಯಾವೃದ್ಧಿಯಿಂದ ಕೂಡ ಈ ಚಿತ್ರಗಳ ಪ್ರಮಾಣೀಕರಣ ಬೆಂಗಳೂರಿನಲ್ಲಿ ಆಗಬೇಕೆಂಬ ಆಗ್ರಹ ತರ್ಕಬದ್ಧವಾಗಿತ್ತು. ಆದರೂ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಕೇಂದ್ರ ಸರ್ಕಾರದೊಂದಿಗೆ ಈ ಬಗ್ಗೆ ದೀರ್ಘ ಕಾಲವೇ ವ್ಯವಹರಿಸಬೇಕಾಯಿತು. ಕೊನೆಗೂ ೧೯೮೩ರಲ್ಲಿ ಪ್ರಮಾಣೀಕರಣ ಮಂಡಳಿಯ ಸ್ಥಳೀಯ ಕಾರ್ಯಾಲಯ ಬೆಂಗಳೂರಿನಲ್ಲಿ ಆರಂಭವಾಯಿತು. ಹೈದರಾಬಾದ್ ಮತ್ತು ತಿರುವನಂತಪುರಗಳಲ್ಲಿ ಪ್ರಮಾಣೀಕರಣ ಮಂಡಳಿಯ ಕಚೇರಿಗಳು ಪ್ರಾರಂಭವಾದದ್ದು ಕೆಲವು ಕಾಲದ ನಂತರ. ಬೆಂಗಳೂರಿನಲ್ಲಿ ಕಚೇರಿ ಪ್ರಾರಂಭವಾಗಲೇಬೇಕೆಂದು ಕೇಂದ್ರ ಸರ್ಕಾರದ ಮನವೊಲಿಸುವುದರಲ್ಲಿ ಕರ್ನಾಟಕದ ಸಂಸದರು ಪಟ್ಟ ಶ್ರಮ ಉಲ್ಲೇಖನಾರ್ಹ.

೧೯೮೦ರಲ್ಲಿ ಬೆಂಗಳೂರಿನಲ್ಲಿ ಫಿಲ್ಮೋತ್ಸವ ಏರ್ಪಡಲು ಕೇಂದ್ರದ ಡೈರೆಕ್ಟೊರೇಟ್ ಆಫ್ ಫಿಲಂ ಫೆಸ್ಟಿವಲ್ಸ್ ಅವರಿಗೆ ಸಂಪೂರ್ಣ ಸಹಕಾರ ನೀಡಿದ ವಾಣಿಜ್ಯಮಂಡಳಿಯು ಅಂತರರಾಷ್ಟ್ರೀಯ ಚಲನ ಚಿತ್ರೋತ್ಸವವೊಂದನ್ನು ೧೨ ವರ್ಷಗಳ ನಂತರ ಬೆಂಗಳೂರಿನಲ್ಲಿ ನಡೆಸಲು ಆಹ್ವಾನಿಸಿತು. ೧೯೯೨ರಲ್ಲಿ ಈ ಉತ್ಸವ ಬೆಂಗಳೂರಿನಲ್ಲಿ ನಡೆಯುವ ಮುನ್ನ ರಾಜ್ಯಾದ್ಯಂತ ಕಾವೇರಿ ನದಿ ನೀರಿನ ಬಗ್ಗೆ ಭುಗಿಲೆದ್ದ ಬೃಹತ್ ಪ್ರದರ್ಶನಗಳಿಂದಾಗಿ ಚಿತ್ರೋತ್ಸವ ನೆನೆಗುದಿಗೆ ಬಿದ್ದಿತು. ಹಿಂಸಾಚಾರ-ಪ್ರತಿಭಟನೆ ಪ್ರಬಲವಾಗಿದ್ದ ಕಾರಣ ಉತ್ಸವ ವ್ಯವಸ್ಥೆ ತೂಗುಯ್ಯಾಲೆಯಾಡಿತು. ಆಗ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದ ಸಿ.ವಿ.ಎಲ್.ಶಾಸ್ತ್ರಿಯವರು, ಮಾಜಿ ಅಧ್ಯಕ್ಷ ಆರ್.ಲಕ್ಷ್ಮಣ್, ಕಾಂಗ್ರೆಸ್ ಧುರೀಣ, ನಿರ್ಮಾಪಕ ಎಸ್.ರಮೇಶ್ ಮತ್ತು ವಾಣಿಜ್ಯ ಮಂಡಳಿಯ ಸದಸ್ಯರ ಸಹಕಾರದೊಂದಿಗೆ ಸರಳವಾಗಿ ಉತ್ಸವ ವ್ಯವಸ್ಥೆ ಮಾಡುವ ಮೂಲಕ ರಾಜ್ಯದ ಮಾನ ಕಾಪಾಡಲು ನಿರ್ಧರಿಸಿದರು. ಆಗ ಮುಖ್ಯಮಂತ್ರಿಗಳಾಗಿದ್ದ ಎಸ್.ಬಂಗಾರಪ್ಪ ಮತ್ತು ಅವರ ಸರ್ಕಾರದ ಸಂಪೂರ್ಣ ಸಹಕಾರ ಪಡೆದು, ಅಂತರರಾಷ್ಟ್ರೀಯ ಚಲನಚಿತ್ರೋತ್ಸವವನ್ನು ಆ ಪ್ರತಿಭಟನೆಯ ನಡುವೆಯೂ ಯಶಸ್ವಿಯಾಗಿಸಿದ್ದು ಒಂದು ದಾಖಲೆ.

ಯಾವುದೇ ಉದ್ಯಮದ ವ್ಯವಹಾರಗಳು ಸುಸೂತ್ರವಾಗಿ ಮತ್ತು ವ್ಯವಸ್ಥಿತವಾಗಿ ನಡೆಯಬೇಕಾದರೆ ಕಾರ್ಮಿಕರ ಸಹಕಾರ ಮತ್ತು ಪರಸ್ಪರ ಸದ್ಭಾವನೆಗಳು ತೀರಾ ಅಗತ್ಯ. ಉದ್ಯಮ ಕಾರ್ಮಿಕರ ಸಮಸ್ಯೆಗಳಿಗೆ ರಚನಾತ್ಮಕವಾಗಿ ಸ್ಪಂದಿಸಬೇಕು, ಕಾರ್ಮಿಕರು ಉದ್ಯಮದ ಹಿತಾಸಕ್ತಿಯ ಬಗ್ಗೆಯೂ ಅಷ್ಟೇ ಕಾಳಜಿ ವಹಿಸಬೇಕು. ಅವರ ನಡುವೆ




(ಚಿತ್ರ ೧೩) ವೀರಪ್ಪನ್ ಅಪಹರಿಸಿದ ನಟ ರಾಜಕುಮಾರ್ ಅವರ ಶೀಘ್ರ ಬಿಡುಗಡೆಗಾಗಿ ವಾಣಿಜ್ಯ ಮಂಡಳಿ ಹಮ್ಮಿಕೊಂಡ ಮೆರವಣಿಗೆ - ಸಾ.ರಾ.ಗೋವಿಂದು, ಎಸ್.ಎ.ಗೋವಿಂದರಾಜು, ಕುಮಾರ್ ಗೋವಿಂದು, ರಾಘವೇಂದ್ರ ರಾಜಕುಮಾರ್, ಶಿವರಾಜ್ ಕುಮಾರ್, ಕೆ.ಸಿ.ಎನ್.ಚಂದ್ರಶೇಖರ್, ರಾಕ್‌ಲೈನ್ ವೆಂಕಟೇಶ್, ಸುಂದರರಾಜ್, ಶಿವಕುಮಾರ್



(ಚಿತ್ರ ೧೪) ವಾಣಿಜ್ಯ ಮಂಡಳಿಯ ಆಶ್ರಯದಲ್ಲಿ ಕನ್ನಡ ರಾಜ್ಯೋತ್ಸವ ಆಚರಣೆಗೆ ನಾಂದಿ. ರಾಜಕುಮಾರ್‌ರವರಿಂದ ಧ್ವಜಾರೋಹಣ

ಇಂತಹ ಸೌಹಾರ್ದ ಏರ್ಪಡದಿದ್ದರೆ ಉದ್ಯಮದ ಸಮಸ್ಯೆಗಳು ಇನ್ನಷ್ಟು ಬಿಗಡಾಯಿಸುವುದು ಖಂಡಿತ. ಈ ದೃಷ್ಟಿಯಿಂದ ವಾಣಿಜ್ಯ ಮಂಡಳಿಯು ಕಾರ್ಮಿಕರೊಂದಿಗೆ ಆದರ್ಶಪ್ರಾಯವೆನ್ನಬಹುದಾದ ಸಂಬಂಧವನ್ನು ಉಳಿಸಿಕೊಂಡು ಬಂದಿದೆ. ಕನ್ನಡ ಚಿತ್ರರಂಗದಲ್ಲಿ ವಿವಿಧ ಕ್ಷೇತ್ರಗಳನ್ನು ಪ್ರತಿನಿಧಿಸುವ ಅನೇಕ ಕಾರ್ಮಿಕ ಸಂಘಗಳಿವೆ. ಅವುಗಳನ್ನೆಲ್ಲ ಒಂದೇ ಸೂರಿನಡಿ ಸಂಘಟಿಸಿರುವ ಸಂಸ್ಥೆ ಕರ್ನಾಟಕ ಚಲನಚಿತ್ರ ಕಾರ್ಮಿಕರ, ತಂತ್ರಜ್ಞರ ಮತ್ತು ಕಲಾವಿದರ ಒಕ್ಕೂಟ. ಈ ಒಕ್ಕೂಟ ಇತ್ತೀಚಿನ ವರ್ಷಗಳಲ್ಲಿ ಶಕ್ತಿಯುತವಾಗಿ ಬೆಳೆದಿದೆ. ಈ ಸಂಸ್ಥೆಯೊಂದಿಗೆ ಮಂಡಳಿ ಸಂಘರ್ಷಕ್ಕಿಳಿಯಬೇಕಾದ ಅನೇಕ ಸಂದರ್ಭಗಳೂ ಇದ್ದವು, ಆದರೆ ಕೆಲವು ವರ್ಷಗಳ ಹಿಂದೆ ಮಾತ್ರ. ಈಚಿನ ವರ್ಷಗಳಲ್ಲಿ ಮಂಡಳಿ ಮತ್ತು ಒಕ್ಕೂಟಗಳ ನಡುವೆಯ ಸಂಬಂಧ ಬಹಳ ಸುಧಾರಿಸಿದೆ. ಕಾರ್ಮಿಕರಿಗೆ ಸಿಗಬೇಕಾದ ವೇತನ ಮತ್ತು ಸವಲತ್ತುಗಳ ಬಗ್ಗೆ ಎರಡೂ ಸಂಘಟನೆಗಳ ನಡುವೆ ಸುದೀರ್ಘ ಚರ್ಚೆಗಳು ನಡೆದು ಆಗಿಂದಾಗ್ಗೆ ಒಪ್ಪಂದದ ಸಹಿಯಾಗುತ್ತದೆ. ಈ ಒಪ್ಪಂದದ ಅವಧಿಯಲ್ಲಿ ಎರಡು ಕಡೆಗಳವರೂ ಸಾಧ್ಯವಾದಷ್ಟು ಮಟ್ಟಿಗೂ ಯಾವುದೇ ಅಹಿತಕರ ಘಟನೆಗಳಿಗೆ ಅವಕಾಶ ಮಾಡಿಕೊಡುವುದಿಲ್ಲ. ಈಚಿನ ವರ್ಷಗಳಲ್ಲಿ ಉದ್ಯಮ ಏರ್ಪಡಿಸುವ ಅನೇಕ ಸಭೆ ಸಮಾರಂಭಗಳಲ್ಲಿ ಒಕ್ಕೂಟದ ಸದಸ್ಯರೂ ಸಕ್ರಿಯವಾಗಿ ಭಾಗವಹಿಸುತ್ತಾರೆ, ವೇದಿಕೆಯನ್ನು ಹಂಚಿಕೊಳ್ಳುತ್ತಾರೆ. ಉದ್ಯಮಿಗಳು ಮತ್ತು ನೌಕರರು ತಮ್ಮ ತಮ್ಮ ಹಿತಗಳಿಗೆ ಧಕ್ಕೆ ತಂದುಕೊಳ್ಳದೆ, ಅದೇ ಸಮಯದಲ್ಲಿ ಇಷ್ಟೊಂದು ಅನ್ಯೋನ್ಯವಾಗಿ ಸಂಬಂಧ ಬೆಳೆಸಿಕೊಂಡ ಉದಾಹರಣೆಗಳು ಪ್ರಾಯಶಃ ಇನ್ನಾವ ಪ್ರಾದೇಶಿಕ ಚಿತ್ರೋದ್ಯಮದಲ್ಲಿಯೂ ಇಲ್ಲ.

೨೦೦೦ದ ಮಧ್ಯಭಾಗದಲ್ಲಿ ವೀರಪ್ಪನ್ ೧೦೫ ದಿನಗಳ ಕಾಲ ಚಲಚ್ಚಿತ್ರ ನಟ ರಾಜಕುಮಾರ್ ಅವರನ್ನು ದಟ್ಟವಾದ ಅರಣ್ಯಗಳಿಗ ಅಪಹರಿಸಿಕೊಂಡು ಹೋಗಿದ್ದಾಗ ಈ ಅಪೂರ್ವ ಸೌಹಾರ್ದ ಅದ್ಭುತವಾದ ಫಲ ನೀಡಿತು. ಸುಮಾರು ನಾಲ್ಕು ತಿಂಗಳ ಕಾಲ ಇಡೀ ಕನ್ನಡ ಚಿತ್ರರಂಗ ಮತ್ತು ಟೆಲಿವಿಷನ್ ರಂಗಗಳ ಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡು ಉದ್ಯಮ ಕೋಟ್ಯಂತರ ರೂಪಾಯಿಗಳ ನಷ್ಟವನ್ನು ಅನುಭವಿಸಿತು. ಚಲನಚಿತ್ರ ಕಾರ್ಮಿಕರು ತಿಂಗಳುಗಟ್ಟಲೆ ಸಂಪಾದನೆಯಿಲ್ಲದೆ ಆರ್ಥಿಕವಾಗಿ ಕಂಗಾಲಾದರು. ಆದರೂ ಕನ್ನಡ ಚಿತ್ರರಂಗದ ಆಧಾರಸ್ತಂಭವಾದ ರಾಜಕುಮಾರ್ ಸಮಾಜಘಾತುಕ ವ್ಯಕ್ತಿಯೊಬ್ಬನ ಸೆರೆಗೆ ಸಿಕ್ಕಿ ಕಾಡುಮೇಡುಗಳಲ್ಲಿ ನರಳುತ್ತಿರುವಾಗ ತಾವು ಅನುಭವಿಸಬೇಕಾದ ಉಪವಾಸ ಗೌಣವೆಂಬ ಉದಾತ್ತ ಭಾವನೆಯಿಂದ ಎಲ್ಲ ಕಾರ್ಮಿಕರೂ ಒಕ್ಕೊರಲಿನಿಂದ ರಾಜಕುಮಾರ್ ಕಾಡಿನಿಂದ ನಾಡಿಗೆ ಮರಳಿ ಬರುವವರೆಗೆ ಕೆಲಸಕ್ಕೆ ಹಿಂದಿರುಗುವುದಿಲ್ಲವೆಂದು ನಿರ್ಧರಿಸಿದರು. ಇದು ಇಡೀ ದೇಶವನ್ನು ಮೂಕವಿಸ್ಮಿತಗೊಳಿಸಿದ ಘಟನೆ. ರಾಜಕುಮಾರ್ ಅವರ ಬಿಡುಗಡೆಗಾಗಿ ಉದ್ಯಮದ ವತಿಯಿಂದ ನಡೆದ ಎಲ್ಲ ಪ್ರಯತ್ನಗಳಿಗೂ ಮಂಡಳಿಯ ಕಚೇರಿಯೇ ಕೇಂದ್ರವಾಯಿತು. ಒಕ್ಕೂಟದ ಸದಸ್ಯರೂ ಆ ಕಚೇರಿಯಲ್ಲಿಯೇ ನಿತ್ಯ ಪೂಜೆ-ಪುನಸ್ಕಾರಗಳನ್ನು, ಹೋಮಹವನಗಳನ್ನು ನಡೆಸಿ ಒಗ್ಗಟ್ಟನ್ನು ಪ್ರದರ್ಶಿಸಿದರು.

ಕರ್ನಾಟಕದಲ್ಲಿ ಈ ಸಂಬಂಧ ಎಷ್ಟು ಅನ್ಯೋನ್ಯವಾಗಿದೆಯೆಂದರೆ ಕೆಲವು ವರ್ಷಗಳ ಹಿಂದೆ ಕನ್ನಡ ಚಿತ್ರೋದ್ಯಮ ತೀವ್ರ ಆರ್ಥಿಕ ಬಿಕ್ಕಟ್ಟಿಗೆ ಸಿಕ್ಕಿದಾಗ ಕಾರ್ಮಿಕರು ತಮ್ಮ ವೇತನದಲ್ಲಿ ಶೇ.೧೦ರಷ್ಟು ಕಡಿಮೆ ಮಾಡಿಕೊಳ್ಳಲು ಒಪ್ಪಿದರು.

ಇದೇ ರೀತಿ ಮಂಡಳಿ ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘ, ನಿರ್ದೇಶಕರ ಸಂಘ, ಕಲಾವಿದರ ಸಂಘ, ತಂತ್ರಜ್ಞರ ಸಂಘ ಮುಂತಾದ ಸಂಘಟನೆಗಳೊಂದಿಗೂ ಅತ್ಯಂತ ಸೌಹಾರ್ದಯುತ ಬಾಂಧವ್ಯವನ್ನು ಕಾಪಾಡಿಕೊಂಡು ಬಂದಿದೆ. ಹಾಗೆಂದರೆ ಅಭಿಪ್ರಾಯ ಭೇದಗಳಿಲ್ಲವೇ ಇಲ್ಲವೆಂದಲ್ಲ. ಆದರೆ ಚರ್ಚೆಯ ಮೂಲಕ ಬಹು ಪಾಲು ಭೇದಗಳನ್ನು ನಿರ್ಮೂಲ ಮಾಡುವ ಸಕಾರಾತ್ಮಕ ನಿಲುವನ್ನು ಮಂಡಳಿಯಾಗಲಿ, ಈ ಸಂಘಟನೆಗಳಾಗಲಿ ಮುಂದುವರಿಸಿಕೊಂಡು ಬಂದಿರುವುದು ಉಲ್ಲೇಖನಾರ್ಹ.

ಉದ್ಯಮದ ಸಮಸ್ಯೆಗಳ ಪ್ರಶ್ನೆ ಬಂದಾಗ ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘ ಸಕ್ರಿಯವಾಗಿ ಸ್ಪಂದಿಸುವ ಸಂಘಟನೆ, ಕೆಲವೊಮ್ಮೆ ವಾಣಿಜ್ಯ ಮಂಡಳಿ ಮತ್ತು ಈ ಸಂಘದ ನಡುವೆ ವಿರಸವುಂಟಾಗಬಹುದಾದ ಪ್ರಸಂಗಗಳು ನಡೆದರೂ ಇದೇ ರೀತಿಯ ಸೌಹಾರ್ದ ಮನೋಭಾವದಿಂದಾಗಿ ಸಮಸ್ಯೆಗಳು ಸಮಾಧಾನಕರವಾಗಿಯೇ ಇತ್ಯರ್ಥವಾಗಿವೆ. ಈ ಸಂಸ್ಥೆಗಳು ಒಂದರ ಹಿತಾಸಕ್ತಿಯ ವಿರುದ್ಧವಾಗಿ ಇನ್ನೊಂದು ಎಂದಿಗೂ ವರ್ತಿಸಿಲ್ಲವಾದ್ದರಿಂದ ಅವುಗಳ ನಡುವೆ ಯಾವುದೇ ಕಸಿವಿಸಿಯೂ ಉಳಿದುಕೊಂಡಿಲ್ಲ. ಇತರ ಚಿತ್ರನಿರ್ಮಾಣ ಕೇಂದ್ರಗಳಿಗೆ ಹೋಲಿಸಿದರೆ ಇದು ಅತ್ಯಂತ ಸಮರ್ಪಕವಾದ ಪರಿಸ್ಥಿತಿ.

ಮಂಡಳಿ ಆಗಾಗ ರಕ್ತದಾನ ಶಿಬಿರಗಳನ್ನು ಏರ್ಪಡಿಸಿ ತನ್ನ ಸಮಾಜಪ್ರಜ್ಞೆಯನ್ನು ತೋರಿದೆ. ದೇಶದಲ್ಲಿ ಸಂಕಟ ಪರಿಸ್ಥಿತಿ ತಲೆದೋರಿದಾಗ ಈ ಶಿಬಿರಗಳಿಂದ ಅಮೂಲ್ಯವಾದ ರಕ್ತ ಸಂಗ್ರಹಕ್ಕೆ ಅನುಕೂಲವಾಗಿದೆ. ಮಂಡಳಿ ಸ್ವಾತಂತ್ರ್ಯ ಮತ್ತು ರಾಜ್ಯೋತ್ಸವ ದಿನಗಳಂದು ರಾಷ್ಟ್ರ ಮತ್ತು ಕನ್ನಡ ಧ್ವಜಗಳನ್ನು ಆರೋಹಣ ಮಾಡುವ ಕಾರ್ಯಕ್ರಮವನ್ನು ತಪ್ಪದೆ ನಡೆಸಿಕೊಂಡು ಬರುತ್ತಿದೆ.

ಬೆಂಗಳೂರಿನ ಮಧ್ಯಭಾಗದ ಕ್ರೆಸೆಂಟ್ ರಸ್ತೆಯಲ್ಲಿರುವ ಮಂಡಳಿಯ ಕಟ್ಟಡ ಅದರ ಸ್ವಂತದ್ದು. ಈ ಕಟ್ಟಡದ ಮೊದಲ ಮಹಡಿಯನ್ನು ಶಂಕರ್‌ನಾಗ್ - ಅನಂತ್‌ನಾಗ್

ಸಹೋದರರ ಸಂಕೇತ್ ಸಂಸ್ಥೆಗೆ ಅತ್ಯಾಧುನಿಕ ಧ್ವನಿಗ್ರಹಣ ಕೇಂದ್ರವೊಂದನ್ನು ನಡೆಸಲು ೧೫ ವರ್ಷಗಳ ಗುತ್ತಿಗೆಗೆ ನೀಡಿತ್ತು. ಗುತ್ತಿಗೆಯ ಅವಧಿ ೨೦೦೦ದಲ್ಲಿ ಮುಗಿಯಿತು. ಕನ್ನಡ ಚಿತ್ರೋದ್ಯಮದಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಸಿದ ಇಂತಹ ಕೇಂದ್ರವೊಂದು ಅಸ್ತಿತ್ವಕ್ಕೆ ಬಂದರೆ ಉದ್ಯಮಕ್ಕೇ ಒಳಿತೆಂಬ ದೃಷ್ಟಿಯಿಂದ ಮಂಡಳಿ ಸಂಕೇತ್‌ಗೆ ರಿಯಾಯಿತಿ ದರದಲ್ಲಿಯೇ ಈ ಜಾಗವನ್ನು ಗುತ್ತಿಗೆಗೆ ನೀಡಿತ್ತು. ಖಾಲಿ ಬಿದ್ದಿದ್ದ ಸ್ಥಳದ ಸದುಪಯೋಗವೂ ಆಯಿತು. ಸಂಕೇತ್ ಅನೇಕ ವರ್ಷಗಳ ಕಾಲ ಉದ್ಯಮಕ್ಕೆ ಉತ್ತಮ ಸೇವೆ ಸಲ್ಲಿಸಿತು. ಮಂಡಳಿಯ ಉದ್ದೇಶವೂ ಸಾರ್ಥಕವಾಯಿತು. ೨೦೦೧ರಲ್ಲಿ ಮಂಡಳಿಯ ಕಟ್ಟಡವನ್ನು ಕೆಡವಿ ಅದರ ಜಾಗದಲ್ಲಿ ಬಹುಮಹಡಿಗಳ ಆಧುನಿಕ ಕಟ್ಟಡವೊಂದನ್ನು ನಿರ್ಮಿಸಿ ಅದರಲ್ಲಿ ಉದ್ಯಮಕ್ಕೆ ಅಗತ್ಯವಾದ ಕೆಲವು ಮೂಲಭೂತ ಸೌಕರ್ಯಗಳನ್ನು ಅಳವಡಿಸುವ ಯೋಜನೆಯಿದೆ.

ಉದ್ಯಮಕ್ಕೆ ಗಣನೀಯ ಸೇವೆ ಸಲ್ಲಿಸಿದವರಿಗೆ ಮಂಡಳಿ ಪ್ರಶಸ್ತಿ, ಪುರಸ್ಕಾರಗಳನ್ನು ನೀಡುತ್ತ ಬಂದಿದೆ. ಕನ್ನಡ ರಾಜ್ಯೋತ್ಸವ ದಿನದಂದು ಈ ಪ್ರಶಸ್ತಿಗಳನ್ನು ವಿತರಿಸುವ ಪರಿಪಾಠ ಕೆಲವು ಕಾಲ ನಡೆದುಕೊಂಡು ಬಂತು. ಅತ್ಯಂತ ಹೆಚ್ಚು ಸಂಖ್ಯೆಯಲ್ಲಿ ಚಿತ್ರಗಳನ್ನು ನಿರ್ಮಿಸಿದವರಿಗೆ, ಹಂಚಿದವರಿಗೆ ಕೂಡ ಈ ಪ್ರಶಸ್ತಿಗಳು ಸಂದಿವೆ.

ವಾಣಿಜ್ಯ ಮಂಡಳಿ ತನ್ನ ದಿನನಿತ್ಯದ ವ್ಯಾಪಾರ-ವ್ಯವಹಾರಗಳ ನಡುವೆಯೂ ಉದ್ಯಮದ ಬೆಳವಣಿಗೆಯನ್ನು ಸಮಗ್ರವಾಗಿ ಎಲ್ಲರಿಗೂ ಮುಟ್ಟಿಸಲು ವಿಶೇಷ ಸಂದರ್ಭಗಳಲ್ಲಿ ಸ್ಮರಣಸಂಚಿಕೆಗಳನ್ನು ಪ್ರಕಟಿಸುತ್ತಾ ಬಂದಿದೆ. ಬೆಂಗಳೂರಿನಲ್ಲಿ ೧೯೯೨ರಲ್ಲಿ ಪ್ರಥಮ ಬಾರಿಗೆ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಸಂದರ್ಭದಲ್ಲಿ ಕನ್ನಡ ಚಿತ್ರೋದ್ಯಮವನ್ನು ಪರಿಚಯಿಸುವ ಪುಸ್ತಕವೊಂದನ್ನು ರಾಜ್ಯ ಸರ್ಕಾರದ ಸಹಯೋಗದಲ್ಲಿ ವಾಣಿಜ್ಯ ಮಂಡಳಿ ಆಂಗ್ಲಭಾಷೆಯಲ್ಲಿ ಹೊರತಂದಿತು. ಕನ್ನಡ ವಾಕ್ಚಿತ್ರದ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಕನ್ನಡ ಚಿತ್ರರಂಗದ ಬಗ್ಗೆ ಮಾಹಿತಿ ಹಾಗೂ ಆತನಕ ಬಿಡುಗಡೆಯಾದ ಕನ್ನಡ ಚಿತ್ರಗಳ ಪಟ್ಟಿಯೊಂದಿಗೆ ೫೦೦ ಪುಟಗಳ ಬೃಹತ್ ಸ್ಮರಣಸಂಚಿಕೆಯನ್ನು ಪ್ರಕಟಿಸಿತು. ಈ ಸಂಚಿಕೆ ಕನ್ನಡ ಚಿತ್ರರಂಗದ ಒಂದು ಅಧಿಕೃತ ದಾಖಲೆ ಎನಿಸಿತು.

೧೯೯೪ರಲ್ಲಿ ವಾಣಿಜ್ಯ ಮಂಡಳಿಗೆ ೫೦ ವರ್ಷ ತುಂಬಿ ಚಿನ್ನದ ಹಬ್ಬ ಆಚರಿಸಿಕೊಂಡಾಗ ಬೃಹತ್ ಸಮಾರಂಭವೊಂದನ್ನು ಏರ್ಪಡಿಸಿತ್ತು. ಆ ಸಂದರ್ಭದಲ್ಲಿ ಕನ್ನಡ ಚಿತ್ರೋದ್ಯಮದ ಪ್ರಗತಿಗೆ ರಾಜ್ಯ ಸರ್ಕಾರದ ನೆರವು ಒದಗಿಸಿದ ರಾಮಕೃಷ್ಣ ಹೆಗಡೆ ಮತ್ತು ವೀರಪ್ಪಮೊಯಿಲಿಯವರಲ್ಲದೆ ಉದ್ಯಮದಲ್ಲಿ ಸೇವೆ ಸಲ್ಲಿಸಿದ ರಾಜಕುಮಾರ್, ಪಾರ್ವತಮ್ಮ ರಾಜಕುಮಾರ್, ಕೆ.ಸಿ.ದೇಸಾಯಿ, ಎಂ.ಭಕ್ತವತ್ಸಲ, ಕೆ.ವಿ.ಗುಪ್ತ, ಎಸ್.ನಾಗರಾಜ ಶೆಟ್ಟಿ, ಎ.ಆರ್.ರಾಜು, ಬಿ.ಸಿ.ಎಸ್.ನಾರಾಯಣ್, ಆರ್.ಲಕ್ಷ್ಮಣ್, ಟಿ.ರಾಮಕೃಷ್ಣ, ಸಿ.ವಿ.ಎಲ್.ಶಾಸ್ತ್ರಿ, ಎಸ್.ರಮೇಶ್, ಜಿ.ಎನ್.ಲಕ್ಷ್ಮೀಪತಿ, ಕೆ.ವೆಂಕಟರಮಣ (ಬಾಬ್ಜಿ), ಕೆ.ಎಸ್.ಎಲ್.ಸ್ವಾಮಿ (ರವೀ), ಎಸ್.ಎನ್.ಖಾದ್ರಿ ಹಾಗೂ ಪತ್ರಕರ್ತರಾದ ವಿ.ಎನ್.ಸುಬ್ಬರಾವ್ ಮತ್ತು ಎಂ.ವಿ.ರಾಮಕೃಷ್ಣಯ್ಯ ಅವರನ್ನು ಸನ್ಮಾನಿಸಿತು. ಆ ಸಂದರ್ಭದಲ್ಲಿ ಪ್ರಕಟಿಸಿದ ಸ್ಮರಣಸಂಚಿಕೆಯಲ್ಲಿ ಉದ್ಯಮ-ವಾಣಿಜ್ಯ ಮಂಡಳಿಯ ಅರ್ಧದಶಕದ ಸಾಧನೆಯ ಪರಿಚಯದೊಂದಿಗೆ, ಆವರೆಗೆ ತೆರೆಕಂಡ ಕನ್ನಡ ಚಿತ್ರಗಳ ಪಟ್ಟಿಯನ್ನೂ ಕೊಡಲಾಗಿತ್ತು. ಇದಲ್ಲದೆ ತನ್ನ ಸದಸ್ಯರಿಗಾಗಿ ಉದ್ಯಮದಲ್ಲಿನ ವಿವಿಧ ವಿವರಗಳನ್ನೊಳಗೊಂಡ ಪತ್ರಿಕೆ (ಹೌಸ್ ಜರ್ನಲ್)ಯೊಂದನ್ನು ಪ್ರತಿ ತಿಂಗಳೂ ವಾಣಿಜ್ಯ ಮಂಡಳಿಯು ಆರ್.ಲಕ್ಷ್ಮಣ್ ಅವರ ಸಂಪಾದಕತ್ವದಲ್ಲಿ ಪ್ರಕಟಿಸುತ್ತಿದೆ.

ಇದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ತನ್ನ ೫೭ ವರ್ಷಗಳ ಬದುಕಿನಲ್ಲಿ ದಾಟಿ ಬಂದ ಅನೇಕ ಮಜಲುಗಳ ಸ್ಥೂಲವಾದ ಪರಿಚಯ. ೧೯೭೦ರ ನಂತರವಂತೂ ಮಂಡಳಿ ಮಾಡಿರುವ ಸಾಧನೆಗಳು ಯಾವುದೇ ಉದ್ಯಮದ ಒಂದು ಸಂಘಟನೆಗೆ ಹೆಮ್ಮೆ ತರುವ ಸಾಧನೆಗಳು. ಆಗಿರುವ ಕೆಲಸಗಳು ಸಾಕಷ್ಟಿವೆ, ಆಗಬೇಕಾದ್ದು ಅಗಾಧವಾಗಿದೆ. ಮಂಡಳಿಯ ಬದುಕು ತೀರಾ ಸುಗಮವಂತೂ ಅಲ್ಲ. ಅಥವಾ ಉದ್ಯಮದ ಎಲ್ಲ ಸಮಸ್ಯೆಗಳಿಗೂ ಮಂಡಳಿ ತಕ್ಷಣ ಸಂಜೀವಿನಿಯನ್ನು ಹುಡುಕಿ ಎಲ್ಲವನ್ನೂ ನೆಟ್ಟಗೆ ಮಾಡಿದೆಯೆಂದೂ ಅಲ್ಲ. ಮಂಡಳಿಯ ಕೆಲಸ ತೃಪ್ತಿಕರವಲ್ಲವೆಂದು ಆಡಿಕೊಂಡವರೂ ಇದ್ದಾರೆ, ಅದರ ಕಾರ್ಯವಿಧಾನದಲ್ಲಿ ನ್ಯೂನತೆಗಳನ್ನು ಕಂಡುಹಿಡಿಯುವ ಪ್ರಾಮಾಣಿಕ ಪ್ರಯತ್ನ ಮಾಡಿದವರೂ ಇದ್ದಾರೆ. ಅವರೆಲ್ಲರ ಟೀಕೆಗಳಿಗೆ, ಅಭಿಪ್ರಾಯಗಳಿಗೆ ಮಂಡಳಿ ಮನ್ನಣೆ, ಮಾನ್ಯತೆಗಳನ್ನು ಕೊಟ್ಟೇ ಇದೆ. ತನ್ನ ಸಾಧನೆಗಳ ಬಗ್ಗೆ ಮಂಡಳಿಗೆ ತೀರಾ ತೃಪ್ತಿಯೂ ಇಲ್ಲ, ಅತೃಪ್ತಿಯೂ ಇಲ್ಲ. ಅದರ ಬದುಕು ಸಾರ್ಥಕವಾಗಿಯಂತೂ ಇದೆ.

೧೯೩೪ರಿಂದ ೨೦೦೦ನೇ ವರ್ಷ ಪೂರ್ಣ ಕನ್ನಡ ಚಲನಚಿತ್ರರಂಗ ನಡೆದು ಬಂದ ದಾರಿಯನ್ನು ಸಮಗ್ರವಾಗಿ ರೂಪಿಸಿ, ಉದ್ಯಮದಲ್ಲಿ ತೊಡಗಿಕೊಂಡವರ ಸಾಹಸಗಾಥೆಯನ್ನು ದಾಖಲಿಸುವ ಪ್ರಯತ್ನ ಚಲನಚಿತ್ರ ವಾಣಿಜ್ಯ ಮಂಡಳಿಯ



(ಚಿತ್ರ ೧೫) ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಸುವರ್ಣ ಮಹೋತ್ಸವದ ಸಂದರ್ಭದ ಈ ಚಿತ್ರದಲ್ಲಿ ಬಿ.ಎಲ್.ಶಂಕರ್, ಪಾರ್ವತಮ್ಮ ರಾಜಕುಮಾರ್, ಕೆ.ಸಿ.ಎನ್.ಚಂದ್ರಶೇಖರ್, ಹಿಂದಿ ಚಿತ್ರ ನಿರ್ಮಾಪಕ ಜಿ.ಪಿ.ಸಿಪ್ಪಿ, ರಾಜಕುಮಾರ್, ಎ.ನಾಗೇಶ್ವರರಾವ್, ಮುಖ್ಯಮಂತ್ರಿ ದೇವೇಗೌಡ, ಎಂ.ಸಿ.ನಾಣಯ್ಯ ಮತ್ತು ಕೆ.ಬಾಲಚಂದರ್



(ಚಿತ್ರ ೧೬) ಹೆಚ್ಚು ಕನ್ನಡ ಚಿತ್ರಗಳನ್ನು ನಿರ್ದೇಶಿಸಿದ ಭಗವಾನ್, ಅತ್ಯಂತ ಹೆಚ್ಚಿನ ಕನ್ನಡ ಚಿತ್ರಗಳನ್ನು ಪ್ರದರ್ಶಿಸಿದ ಬೆಳಗಾವಿಯ ಎ.ಎನ್.ಮುಧೋಳ್ಕರ್ ಹಾಗೂ ಅತ್ಯಂತ ಹೆಚ್ಚು ಕನ್ನಡ ಚಿತ್ರಗಳನ್ನು ವಿತರಿಸಿದ ವಿಜಯ ಪಿಕ್ಚರ್ಸ್ ಸರ್ಕ್ಯೂಟ್‌ನ ಎ.ಎನ್.ಪಾರ್ಥಸಾರಥಿ ಮತ್ತು ಎಸ್.ಎಂ.ಲಕ್ಷ್ಮಣ್‌ರಾವ್ ಅವರಿಗೆ ವಾಣಿಜ್ಯ ಮಂಡಳಿಯ ಅಧ್ಯಕ್ಷ ಎ.ಆರ್.ರಾಜು ಅವರಿಂದ ರಾಜ್ಯೋತ್ಸವ ಪ್ರಶಸ್ತಿ ನೀಡಿಕೆ

ಮಹಾಕನಸು. ಕನ್ನಡ ಚಲನಚಿತ್ರ ಇತಿಹಾಸವನ್ನು ಪ್ರಕಟಿಸುವ ಕೆಲವೊಂದು ಪ್ರಯತ್ನಗಳು ಕನ್ನಡ ನಾಡಿನಲ್ಲಿ ನಡೆದಿದ್ದರೂ ಯಾವುದೂ ಸಫಲವಾಗಿರಲಿಲ್ಲ. ವಾಣಿಜ್ಯ ಮಂಡಳಿ ತನ್ನ ಕನಸನ್ನು ನನಸಾಗಿಸಿಕೊಳ್ಳುವ ಪ್ರಯತ್ನದಲ್ಲಿ ದಿಟ್ಟಹೆಜ್ಜೆಯನ್ನು ೨೦೦೦ನೇ ವರ್ಷದಲ್ಲಿ ಇಟ್ಟಿತು. ''ಕನ್ನಡ ಚಲನಚಿತ್ರ ಇತಿಹಾಸ'ದ ಸಮಗ್ರ ದಾಖಲೆಗಳ ಸಂಗ್ರಹವಾಗಿ ಎರಡು ಬೃಹತ್ ಸಂಪುಟಗಳನ್ನು ರೂಪಿಸುವಲ್ಲಿ ಆದ ಸಂಪೂರ್ಣ ವೆಚ್ಚವನ್ನು ವಾಣಿಜ್ಯ ಮಂಡಳಿ ಭರಿಸಿದೆ.

೨೦೦೧ನೇ ವರ್ಷದಲ್ಲಿ ಇತಿಹಾಸದ ಸಂಪುಟಗಳು ಮುದ್ರಣಗೊಂಡು ಚಲನಚಿತ್ರ ಇತಿಹಾಸಾಸಕ್ತರ ಕೈ ಸೇರುತ್ತಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯ ಈ ಸಂಪುಟಗಳನ್ನು ತುಂಬು ಪ್ರೀತಿಯಿಂದ, ಅಭಿಮಾನದಿಂದ ಪ್ರಕಟಿಸಿದೆ. ಈ ಮೂಲಕ ಚಲನಚಿತ್ರ ಕ್ಷೇತ್ರದೊಂದಿಗೆ ವಿಶ್ವವಿದ್ಯಾಲಯದ ಸ್ನೇಹ ಸಂವರ್ಧನೆಯಾಗಿರುವುದು ಸಂತೋಷದ ಸಂಗತಿ.

೧೯೪೪ರಲ್ಲಿ ಸ್ಥಾಪನೆಗೊಂಡ ಚಲನಚಿತ್ರ ವಾಣಿಜ್ಯ ಮಂಡಳಿಯ ಮೊದಲ ಅಧ್ಯಕ್ಷರಾಗಿ ರುಕ್-ಉಲ್-ಮುಲ್ಕ್ ಎಸ್.ಅಬ್ದುಲ್ ವಾಜೀದ್ ಅವರು ೧೯೪೬ರವರೆವಿಗೂ ಅಧ್ಯಕ್ಷರಾಗಿದ್ದರು. ನಂತರದಲ್ಲಿ ಡಾ।ವಿ.ಎಂ.ಪಟೇಲ್, ಪಿ.ಕಿಷನ್‌ದಾಸ್, ಕೆ.ಎಲ್.ಭಾಟಿಯಾ, ಕೆ.ಎಂ.ನಾಗಣ್ಣ, ವೈ.ವಿ.ಶ್ರೀನಿವಾಸಮೂರ್ತಿ, ಬಿ.ಹೆಚ್.ತಾರಾಪುರ್, ಅರ್.ಎಂ.ಪಟೇಲ್, ಬಿ.ಎಸ್.ಗರುಡಾಚಾರ್, ಕೆ.ಸಿ.ದೇಸಾಯಿ, ವಿ.ಜಿ.ಚೌಟಿ, ಎಂ.ಸದಾನಂದರಾವ್, ಎಂ.ಭಕ್ತವತ್ಸಲ, ಕೆ.ವಿ.ಗುಪ್ತ, ಎಸ್.ವೀರಾಸ್ವಾಮಿ, ಎಸ್.ನಾಗರಾಜಶೆಟ್ಟಿ, ಎ.ಆರ್.ರಾಜು, ಬಿ.ಎ.ಅರಸುಕುಮಾರ್, ಬಿ.ಸಿ.ಎಸ್.ನಾರಾಯಣ್, ಹೆಚ್.ಆರ್.ಪ್ರಭಾಕರರೆಡ್ಡಿ, ಆರ್.ಲಕ್ಷ್ಮಣ್, ಟಿ.ರಾಮಕೃಷ್ಣ, ಸಿ.ವಿ.ಎಲ್.ಶಾಸ್ತ್ರಿ, ಎಸ್.ರಮೇಶ್, ಕೆ.ಸಿ.ಎನ್.ಚಂದ್ರಶೇಖರ್ ಕ್ರಮವಾಗಿ ಮಂಡಳಿಯ ಅಧ್ಯಕ್ಷರಾಗಿ ವಾಣಿಜ್ಯ ಮಂಡಳಿಯ ಅಭ್ಯುದಯಕ್ಕೆ ಕಾರಣರಾಗಿದ್ದಾರೆ.

ಮೊದಲೇ ಹೇಳಿದಂತೆ ಕನ್ನಡ ಚಿತ್ರೋದ್ಯಮ ಕನ್ನಡದ ಭೂಮಿಯಲ್ಲಿಯೇ ನೆಲೆಯೂರುವ ಮುಂಚೆ ವಾಣಿಜ್ಯ ಮಂಡಳಿಯ ಕಾರ್ಯಕ್ಷೇತ್ರ ತೀರಾ ಸೀಮಿತವಾಗಿತ್ತು. ಈ ಸಂಸ್ಥೆಗೊಂದು ನಿರ್ದಿಷ್ಟ ಸ್ವರೂಪ ಮತ್ತು ಕಾರ್ಯವ್ಯಾಪ್ತಿಯೂದಗಿದ್ದು ಈ ಸ್ಥಳಾಂತರದ ನಂತರವೇ. ಹೊಸ ಸವಾಲುಗಳನ್ನು ಸ್ವೀಕರಿಸಿ ಕೆಲವು ಪ್ರಮುಖ ಮತ್ತು ವಿನೂತನ ಸಾಂಸ್ಥಿಕ ಸುಧಾರಣೆಗಳ ಮೂಲಕ ಮಂಡಳಿಯ ಸ್ವರೂಪವನ್ನೇ ಬದಲಾಯಿಸಿದ ಕೀರ್ತಿ ೧೯೭೧ರಿಂದ ೧೯೭೭ರವರೆಗೆ ಅಧ್ಯಕ್ಷ ಸ್ಥಾನದಲ್ಲಿದ್ದ ಎಂ.ಭಕ್ತವತ್ಸಲ ಅವರದ್ದಾದರೆ ಅವರು ಸಂಸ್ಥೆಗಿತ್ತ ಹೊಸ ಆಡಳಿತ ವ್ಯವಸ್ಥೆಯಲ್ಲಿ ಶಿಸ್ತು ಮತ್ತು ಪದ್ಧತಿಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದ ಶ್ರೇಯಸ್ಸು ೧೯೭೭-೭೮ ಮತ್ತು ೭೮-೭೯ರಲ್ಲಿ ಅಧ್ಯಕ್ಷಗಿರಿಯನ್ನು ವಹಿಸಿಕೊಂಡ ಕೆ.ವಿ.ಗುಪ್ತ ಅವರಿಗೆ ಸಲ್ಲುತ್ತದೆ. ಮಂಡಳಿಯ ದಿನನಿತ್ಯದ ವ್ಯವಹಾರಗಳು ಸಲೀಸಾಗಿ ಮತ್ತು ಸುವ್ಯವಸ್ಥಿತವಾಗಿ ನಡೆದುಕೊಂಡು ಹೋಗಲು ಅನುವಾಗುವಂತ ನೀತಿ-ನಿಯಮಗಳನ್ನು ರಚಿಸಿದ ಅವರು ಸಂಸ್ಥೆಗೆ ಆಡಳಿತ ಸಂಸ್ಕೃತಿಯ ಒಂದು ಬಳುವಳಿಯನ್ನೇ ನೀಡಿದ್ದಾರೆ. ಅವರ ಸಂಪ್ರದಾಯಗಳನ್ನು ಚಾಚೂ ತಪ್ಪದೆ ಅನುಸರಿಸಿಕೊಂಡು ಹೋದವರು ಅವರ ನಂತರ ೧೯೭೯-೮೦ರಲ್ಲಿ ಅಧ್ಯಕ್ಷರಾದ ಎಸ್.ವೀರಾಸ್ವಾಮಿಯವರು, ೧೯೮೦-೮೧ರಲ್ಲಿ ಅಧ್ಯಕ್ಷರಾದ ಚಿಕ್ಕಮಗಳೂರಿನ ಪ್ರದರ್ಶಕರು ಮತ್ತು ನಿರ್ಮಾಪಕರಾದ ಎಸ್.ನಾಗರಾಜಶೆಟ್ಟರು ಹಾಗೂ ೧೯೮೧-೮೨ರಲ್ಲಿ ಅಧ್ಯಕ್ಷರಾದ ವಿತರಕ-ನಿರ್ಮಾಪಕ ಎ.ಆರ್.ರಾಜು ಅವರು.

ಚಲನಚಿತ್ರ ವಾಣಿಜ್ಯ ಕ್ಷೇತ್ರದಲ್ಲಿ ಅಪಾರ ಅನುಭವ ಹೊಂದಿದ ಕೆ.ವಿ.ಗುಪ್ತ ಅವರು ಹಾಕಿಕೊಟ್ಟ ಮೇಲ್ಪಂಕ್ತಿ ನಂತರದಲ್ಲಿ ಶಕ್ತಿಯುತವಾಗಿ ಬೆಳೆಯಿತು. ೧೯೭೯-೮೦ರಲ್ಲಿ ಅಧ್ಯಕ್ಷರಾಗಿದ್ದ ಎಸ್.ವೀರಾಸ್ವಾಮಿಯವರು ೧೯೮೦ರ ಜನವರಿಯಲ್ಲಿ ಬೆಂಗಳೂರಿನಲ್ಲಿ ಮೊಟ್ಟ ಮೊದಲ ಬಾರಿಗೆ ನಡೆದ ಅಂತರರಾಷ್ಟ್ರೀಯ ಚಿತ್ರೋತ್ಸವ, ಫಿಲ್ಮೋತ್ಸವ್-೮೦ರ ಸಮಯದಲ್ಲಿ ಉದ್ಯಮದ ಪರವಾಗಿ ಮುಂಚೂಣಿಯಲ್ಲಿ ನಿಂತು ಉತ್ಸವವನ್ನು ಅದ್ದೂರಿಯಾಗಿ, ಅರ್ಥಪೂರ್ಣವಾಗಿ ನಡೆಸಿಕೊಟ್ಟರು. ವೀರಾಸ್ವಾಮಿಯವರಿಗೆ ವಾಣಿಜ್ಯ ಮಂಡಳಿ ತನ್ನದೇ ಆದ ಬೃಹತ್ ಕಟ್ಟಡವೊಂದನ್ನು ನಿರ್ಮಿಸಬೇಕೆಂಬ ಮಹದಾಸೆ ಇದ್ದಿತ್ತು. ಭಕ್ತವತ್ಸಲ ಅವರ ಕಾಲದಲ್ಲಿ ಕ್ರೆಸೆಂಟ್ ರಸ್ತೆಯ ಕಟ್ಟಡಕ್ಕೆ ವಾಣಿಜ್ಯ ಮಂಡಳಿ ಸ್ಥಳಾಂತರಗೊಂಡಿದ್ದಿತು. ವೀರಾಸ್ವಾಮಿಯವರು ಕಟ್ಟಡ ನಿಧಿಗಾಗಿ ರಾಜ್ಯದಾದ್ಯಂತ ಪ್ರದರ್ಶಕರು ಪ್ರತಿ ಪ್ರದರ್ಶನಕ್ಕೂ ಒಂದು ರೂಪಾಯಿಯಂತೆ ಕಾಣಿಕೆ ಸಲ್ಲಿಸುವ ಮೂಲಕ ನಿಧಿಯನ್ನು ಸಂಗ್ರಹಿಸುವುದನ್ನು ಜಾರಿಗೆ ತರುವ ನಿರ್ಧಾರಕ್ಕೆ ಬಂದರು. ಇದರಿಂದಾಗಿ ಕೆಲವೇ ತಿಂಗಳಲ್ಲಿ ಸಾಕಷ್ಟು ಹಣ ಸಂಗ್ರಹವಾಯಿತು. ವಾಣಿಜ್ಯ ಮಂಡಳಿಯ ಕಟ್ಟಡ ನವೀಕರಣಗೊಂಡಿತು. ಸ್ವಲ್ಪ ಕಾಲದ ನಂತರ ಈ ಯೋಜನೆಯೇ ನಿಂತುಹೋಯಿತು.

೧೯೮೦-೮೧ರಲ್ಲಿ ಅಧ್ಯಕ್ಷರಾದ ಎಸ್.ನಾಗರಾಜಶೆಟ್ಟರು ಮತ್ತು ೧೯೮೧-೮೨ರಲ್ಲಿ ಅಧ್ಯಕ್ಷರಾದ ಎ.ಅರ್.ರಾಜು ಅವರು ತಮ್ಮ ಅವಧಿಯಲ್ಲಿ ವಾಣಿಜ್ಯ ಮಂಡಳಿ ಗಟ್ಟಿಯಾಗಿ ಬೆಳೆಯುವಂತೆ ನೋಡಿಕೊಂಡರು. ೧೯೮೨-೮೩ರಲ್ಲಿ ಅಧ್ಯಕ್ಷ ಪಟ್ಟವೇರಿದ ನಿರ್ಮಾಪಕ-ನಿರ್ದೇಶಕ ಬಿ.ಎ.ಅರಸುಕುಮಾರ್ ಪತ್ರಿಕೋದ್ಯಮ, ಸಾಹಿತ್ಯ ಮತ್ತು ಕನ್ನಡಪರ ಹೋರಾಟಗಳ ಹಿನ್ನೆಲೆಯಿಂದ ಬಂದವರು. ರಂಗಭೂಮಿ ಹಾಗೂ ಚಿತ್ರರಂಗಗಳ ಅನುಭವವನ್ನೂ ಹೊಂದಿದ್ದವರು. ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿ ಕೂಡ ಅವರು ರಾಜ್ಯದಲ್ಲಿನ ಚಲನಚಿತ್ರ ವ್ಯವಹಾರಗಳಲ್ಲಿ ಕನ್ನಡಕ್ಕೇ ಪ್ರಥಮ ಆದ್ಯತೆ ಇರಬೇಕೆಂದು ಅವಿರತವಾಗಿ ಹೋರಾಡಿದರು.

ಅವರ ನಂತರ ೧೯೮೩-೮೪ರ ಅವಧಿಯಲ್ಲಿ ಮಂಡಳಿಯ ಅಧ್ಯಕ್ಷರಾದ ಬಿ.ಸಿ.ಎಸ್.ನಾರಾಯಣ್ ಅವರು ಪಕ್ಕಾ ವ್ಯಾಪಾರಸ್ಥರು. ಹಣಕಾಸು ವಹಿವಾಟುಗಳ ಮೇಲೆ ಅವರದ್ದು ಹದ್ದಿನ ಕಣ್ಣು. ಸಂಸ್ಥೆ ವೆಚ್ಚ ಮಾಡಿದ ಪ್ರತಿ ಪೈಸೆಯೂ ಸದ್ವಿನಿಯೋಗವಾಗಬೇಕೆಂಬ ಅವರ ಹಠ ವಾಣಿಜ್ಯ ಮಂಡಳಿಯ ಹಣಕಾಸು ವ್ಯವಹಾರಗಳ ಮೇಲೆ ಅವರು ಬಿಗಿ ಮುಷ್ಟಿಯಿಡುವಂತೆ ಮಾಡಿತು. ಆ ವೇಳೆಗಾಗಲೇ

ಅವರು ಒಂದು ವರ್ಷ ಕರ್ನಾಟಕ ವಾಣಿಜ್ಯ ಮಹಾ ಮಂಡಳಿಯ ಅಧ್ಯಕ್ಷರಾಗಿಯೂ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದರಿಂದ ಅವರಿಗೆ ಈ ರೀತಿಯ ಆರ್ಥಿಕ ನಿಯಂತ್ರಣ ಹೊಸದೇನೂ ಆಗಿರಲಿಲ್ಲ. ಇದರಿಂದಾಗಿ ಚಲನಚಿತ್ರ ವಾಣಿಜ್ಯ ಮಂಡಳಿ ಕೂಡ ಅವರ ಈ ಜಾಣ್ಮೆಯ ಲಾಭ ಪಡೆಯುವಂತಾಯಿತು. ಅನೇಕ ಅನಗತ್ಯ ಖಾಬುಗಳಿಗೆ ನಾರಾಯಣ್ ಕಡಿವಾಣ ಹಾಕಿದರು. ಅಪ್ರಿಯತೆಗೆ ಹೆದರಲಿಲ್ಲ. ನಾರಾಯಣ್ ಅಧ್ಯಕ್ಷಗಿರಿ ಮುಗಿದ ಕೂಡಲೇ ಆ ಪಟ್ಟವನ್ನು ಅಲಂಕರಿಸಿದವರು ವಿತರಕ ನಿರ್ಮಾಪಕ ಹೆಚ್.ಆರ್.ಪ್ರಭಾಕರರೆಡ್ಡಿ. ಇವರು ನಾರಾಯಣ್ ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ನಡೆದವರು.

೧೯೮೬-೮೭ರಲ್ಲಿ ವಾಣಿಜ್ಯ ಮಂಡಳಿಗೆ ಹೊಸ ಸಂವಿಧಾನ ಲಭ್ಯವಾಯಿತು. ಇದರ ಪ್ರಕಾರ ಸಂಸ್ಥೆಗೆ ಒಬ್ಬ ಅಧ್ಯಕ್ಷರು, ಮೂವರು ಉಪಾಧ್ಯಕ್ಷರು, ಮೂವರು ಕಾರ್ಯದರ್ಶಿಗಳು ಮತ್ತು ಒಬ್ಬ ಖಜಾಂಚಿ ಲಭ್ಯವಾದರು. ಅಧ್ಯಕ್ಷ ಪದವಿಯು ವಿತರಕರು, ಪ್ರದರ್ಶಕರು ಹಾಗೂ ನಿರ್ಮಾಪಕ ವಲಯಗಳವರಿಗೆ ಸರದಿಯ ಪ್ರಕಾರ ಲಭಿಸುತ್ತಿತ್ತು. ಮೂರು ವಲಯಗಳನ್ನು ಪ್ರತಿನಿಧಿಸಲು ಉಪಾಧ್ಯಕ್ಷರು ಹಾಗೂ ಕಾರ್ಯದರ್ಶಿಗಳು ಆಯಾ ವಲಯಗಳಿಂದ ಆರಿಸಿಬರಬೇಕಾಯಿತು. ಈ ಹೊಸ ವ್ಯವಸ್ಥೆಯ ಫಾಯದೆಯನ್ನು ಮೊದಲ ಬಾರಿಗೆ ಪಡೆದವರು ಆರ್.ಲಕ್ಷ್ಮಣ್. ಅವರು ಚಿತ್ರೋದ್ಯಮದಲ್ಲಿ ತಮಗಿದ್ದ ಅಪಾರವಾದ ಅನುಭವವನ್ನು ಅಧ್ಯಕ್ಷ ಸ್ಥಾನದ



(ಚಿತ್ರ ೧೭) ಕನ್ನಡ ಚಿತ್ರಗಳ ಪ್ರದರ್ಶನಕ್ಕೇ ಮೀಸಲು ಎಂದು ಹೇಳಿದ್ದ ಬೆಂಗಳೂರಿನ ಪುಟ್ಟಣ್ಣ ಕಣಗಾಲ್ ಚಿತ್ರಮಂದಿರದಲ್ಲಿ ಹಿಂದಿ ಚಿತ್ರ ಪ್ರದರ್ಶನಕ್ಕೆ ಅವಕಾಶ ನೀಡಿದುದನ್ನು ಪ್ರತಿಭಟಿಸಿ ದಿನಾಂಕ ೨೫-೪-೧೯೮೬ರಂದು ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ ಹಾಗೂ ಕರ್ನಾಟಕ ಚಲನಚಿತ್ರ ಕಲಾವಿದರ ಸಂಘದ ಸಹಯೋಗದಲ್ಲಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ನಡೆಸಿದ ಧರಣಿಯ ಸಂದರ್ಭದ ಈ ಚಿತ್ರದಲ್ಲಿ ಜಿ.ವಿ.ಅಯ್ಯರ್, ಸುಂದರರಾಜ್, ಹೆಚ್.ಆರ್.ಪ್ರಭಾಕರ ರೆಡ್ಡಿ, ಎನ್.ಲಕ್ಷ್ಮೀನಾರಾಯಣ್, ಎಸ್.ಶಿವರಾಂ, ಸಿ.ವಿ.ಎಲ್.ಶಾಸ್ತ್ರಿ, ಎಸ್.ಎ.ಚಿನ್ನೇಗೌಡ ಮತ್ತಿತರರು.

ಜವಾಬ್ದಾರಿಗಳಿಗೆ ಒರೆ ಹಚ್ಚುವ ಒಳ್ಳೆಯ ಅವಕಾಶವನ್ನು ತಮ್ಮ ೧೯೮೬-೮೭ರ ಅಧ್ಯಕ್ಷ ಪದದ ಅವಧಿಯಲ್ಲಿ ಸದುಪಯೋಗ ಪಡಿಸಿಕೊಂಡರು. ಹಲವು ಹೊಸ ವಿನ್ಯಾಸವನ್ನು ಮಂಡಳಿಗೆ ತಂದಿತ್ತರು. ೧೯೮೭-೮೮ರಲ್ಲಿ ಅಧ್ಯಕ್ಷರಾದ ಟಿ.ರಾಮಕೃಷ್ಣ ಅವರು ಕೂಡ ಈ ಒಳ್ಳೆಯ ಕೆಲಸವನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಯಶಸ್ವಿಯಾದರು.

ಸಿ.ವಿ.ಎಲ್.ಶಾಸ್ತ್ರಿಗಳು ಅಧ್ಯಕ್ಷರಾಗಿದ್ದು ೧೯೮೮-೮೯ರಲ್ಲಿ. ಅಲ್ಲಿಂದ ನಾಲ್ಕು ವರ್ಷಗಳ ಕಾಲ ಅದೇ ಸ್ಥಾನದಲ್ಲಿ ಮುಂದುವರಿದ ಶಾಸ್ತ್ರಿಗಳನ್ನು ವಾಣಿಜ್ಯ ಮಂಡಳಿ ವಿಶೇಷವಾಗಿ ನೆನೆಯಬೇಕಾದದ್ದು ಅವರು ಸಂಸ್ಥೆಯ ಎಲ್ಲ ಚಟುವಟಿಕೆಗಳಿಗೂ ಇತ್ತ ವಿಶೇಷ ಮೆರುಗಿಗಾಗಿ. ನಿಜಜೀವನದಲ್ಲಿಯೂ 'ಷೋ ಮ್ಯಾನ್' ಎನಿಸಿಕೊಂಡಿದ್ದ ಶಾಸ್ತ್ರಿಗಳು ಮುಟ್ಟಿದ ಕಾರ್ಯಕ್ರಮಗಳೆಲ್ಲ ಅದ್ದೂರಿಯಾಗಿಯೇ ನಡೆದವು. ತಮ್ಮ ಸ್ವಂತ ಖರ್ಚಿನಲ್ಲಿ ಶಾಸ್ತ್ರಿಗಳು ಮಂಡಳಿಯ ಅನೇಕ ಕಾರ್ಯಕ್ರಮಗಳನ್ನು ಕಣ್ಣಿಗೆ ಕಟ್ಟುವ ರೀತಿಯಲ್ಲಿ ಆಚರಿಸಿ, ಸಂಸ್ಥೆಗೆ ತಮ್ಮದೇ ಆದ ಛಾಪನ್ನೊತ್ತಿದರು. ಶಾಸ್ತ್ರಿಗಳು ಕೊಡುಗೈ ದಾನಿಗಳಾಗಿದ್ದರಿಂದ ಯಾವ ನಿಧಿ ಸಂಗ್ರಹಕ್ಕೂ ಕೈ ಹಾಕದೆ ಮಂಡಳಿಯ ಅನೇಕ ಪ್ರಮುಖ ಚಟುವಟಿಕೆಗಳಿಗಾಗಿ ತಮ್ಮ ಸ್ವಂತ ಹಣವನ್ನೇ ವೆಚ್ಚ ಮಾಡಲಾರಂಭಿಸಿದರು. ಅವರಿಗೆ ನಾನಾ ಕ್ಷೇತ್ರಗಳಲ್ಲಿ ಹಾಗೂ ಸಹಕಾರಿ ಮತ್ತು ರಾಜಕೀಯ ವಲಯಗಳಲ್ಲಿ ಒಳ್ಳೆಯ ಪ್ರಭಾವ ಮತ್ತು ಹಿಡಿತಗಳಿದ್ದುದರಿಂದ ಮಂಡಳಿ ಕೈಗೊಂಡ ಕೆಲವು ಭಾರಿ ಯೋಜನೆಗಳಿಗೆ ಹಣಕಾಸಿನ ತಾಪತ್ರಯ ಎಂದೂ ತಟ್ಟಲಿಲ್ಲ. ಸರ್ಕಾರದಲ್ಲಿಯೂ ಮಂಡಳಿಯ ಕೆಲಸಗಳು ಸಲೀಸಾಗಿ ನಡೆಯಲು ಪ್ರಾರಂಭವಾದವು. ಶಾಸ್ತ್ರಿಗಳು ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದ ಕೊನೆಯ ವರ್ಷ ೧೯೯೨ರಲ್ಲಿ ಬೆಂಗಳೂರಿನಲ್ಲಿ ಇನ್ನೊಂದು ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ಏರ್ಪಾಟಾಯಿತು. ಆದರೆ ಅದೇ ಸಮಯದಲ್ಲಿ ಕರ್ನಾಟಕ-ತಮಿಳುನಾಡುಗಳ ನಡುವೆ ಕಾವೇರಿ ನದಿ ನೀರಿನ ಹಂಚಿಕೆ ಕುರಿತ ವಿವಾದ ಭುಗಿಲೆದ್ದು ವ್ಯಾಪಕ ಹಿಂಸಾಚಾರ ನಡೆದು ಅದರ ಕರಿನೆರಳು ಈ ಉತ್ಸವದ ಮೇಲೆಯೂ ಬಿದ್ದಿತು. ಉದ್ಯಮದ ಪ್ರಮುಖ ವರ್ಗಗಳಲ್ಲಿ ಕೆಲವು ವಿರೋಧಿ ಧೋರಣೆ ತಳೆಯಿತು. ಶಾಸ್ತ್ರಿಗಳು ಈ ಸವಾಲನ್ನು ದಿಟ್ಟತನದಿಂದ ಜಾಣಾಕ್ಷತನದಿಂದಲೇ ನಿಭಾಯಿಸಿದರು. ಈ ಸಂದರ್ಭದಲ್ಲಿ ಚಿತ್ರ ನಿರ್ಮಾಪಕರೂ ರಾಜಕಾರಣಿಯೂ ಆಗಿದ್ದ ಎಸ್.ರಮೇಶ್ ಅವರು ಶಾಸ್ತ್ರಿಗಳಿಗೆ ಬೆಂಬಲಿಸಿ ನಿಂತರು.

೧೯೯೨-೯೩ನೇ ಸಾಲಿಗೆ ವಾಣಿಜ್ಯ ಮಂಡಳಿ ಪಡೆದ ಹೊಸ ಅಧ್ಯಕ್ಷರು ರಾಜಕಾರಣಿ ಹಾಗೂ ಚಿತ್ರನಿರ್ಮಾಪಕ ಎಸ್.ರಮೇಶ್, ಅವರದ್ದು ಭಾರಿ ಓಘದ ಶೈಲಿ. ರಾಜಕೀಯದಲ್ಲಿ ಹೇಗೆಯೋ ಚಲನಚಿತ್ರೋದ್ಯಮದಲ್ಲಿ ಕೂಡ ನಿರ್ಮಾಪಕರಾಗಿ ರಭಸವಾಗಿಯೇ ನುಗ್ಗಿದರು. ವಾಣಿಜ್ಯ ಮಂಡಳಿ ಅಧ್ಯಕ್ಷರಾಗಿ ಕೂಡ ಅವರ ಈ ಮನೋಧರ್ಮ ಬದಲಾಗಲಿಲ್ಲ.

೧೯೯೩ರಲ್ಲಿ ಮೊದಲ ಬಾರಿಗೆ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿ ಗದ್ದುಗೆಯೇರಿದ ನಿರ್ಮಾತೃ-ವಿತರಕ ಕೆ.ಸಿ.ಎನ್.ಚಂದ್ರಶೇಖರ್ ಅವರು ೧೯೯೫ರವರೆಗೂ ಆ ಸ್ಥಾನದಲ್ಲಿ ಮುಂದುವರಿದು, ೧೯೯೫-೯೬ ಮತ್ತು ೯೬-೯೭ನೇ ಸಾಲಿಗೆ ಪ್ರದರ್ಶಕ ಎ.ಎಂ.ಚಂದ್ರಶೇಖರರಾಜು ಅವರಿಗೆ ಆ ಸ್ಥಾನವನ್ನು ತೆರವು ಮಾಡಿ, ೧೯೯೭ರಲ್ಲಿ ಮತ್ತೆ ಅಧ್ಯಕ್ಷ ಪದಕ್ಕೆ ವಾಪಸಾದರು. ವಾಣಿಜ್ಯ ಮಂಡಳಿಯನ್ನು ೨೧ನೆಯ ಶತಮಾನಕ್ಕೆ ಕೊಂಡೊಯ್ಯುವ ಸದವಕಾಶ ಅವರಿಗೆ ದೊರೆಯಿತು. ಗಾಂಭೀರ್ಯವನ್ನೇ ಮೈವೆತ್ತ ಚಂದ್ರಶೇಖರರಾಜು ನಿಷ್ಠುರದ ಮನುಷ್ಯ. ಅವರಿದ್ದ ಕಡೆ ಯಾವುದೇ ಲಘುವಾದ ಉಪದ್ವ್ಯಾಪಗಳಿಗೆ ಅವಕಾಶವಿರಲಿಲ್ಲ. ಉದ್ಯಮದ ಎಲ್ಲ ವಲಯಗಳನ್ನು ವಿಶ್ವಾಸದಿಂದ ತಮ್ಮೊಂದಿಗೆ ಕೊಂಡುಹೋದ ರಾಜು ಮೂರೂ ವಲಯಗಳ ನಡುವೆಯ ವಿವಾದಗಳನ್ನು ರಾಜತಾಂತ್ರಿಕ ಜಾಣತನವನ್ನಬಹುದಾದ ತಂತ್ರಗಳಿಂದ ಬಹಳ ನಾಜೂಕಾಗಿ, ಯಶಸ್ವಿಯಾಗಿ ಬಗೆಹರಿಸಿದರು. ಸುರಿತ ಪ್ರದರ್ಶಕರಾದ ಅವರು ಯಾವೊಂದು ವಲಯದ ಬಗ್ಗೆಯೂ ಪಕ್ಷಪಾತ ತೋರದಿದ್ದುದೇ ಅವರ ದೊಡ್ಡ ಗುಣ. ಈಚೆಗೆ ಅನಿರೀಕ್ಷಿತವಾಗಿ ತೀರಿಕೊಂಡ ರಾಜು ಮಂಡಳಿಯ ಮೇಲೆ ತಮ್ಮದೇ ಆದ ವಿಶಿಷ್ಟ ಮುದ್ರೆಯನ್ನು ಒತ್ತಿ ಹೋಗಿದ್ದಾರ.

೧೯೯೩ರಲ್ಲಿ ಕ.ಸಿ.ಎನ್.ಚಂದ್ರಶೇಖರ್ (ಚಂದ್ರು) ಅವರು ಅಧ್ಯಕ್ಷರಾಗುವುದರೊಂದಿಗೆ ಮಂಡಳಿಗೆ ಯೌವನದ ಕಳೆ-ಉತ್ಸಾಹ ಬಂತು. ವಯಸ್ಸಿನಲ್ಲಿ ಚಿಕ್ಕವರಾದರೂ ವ್ಯವಹಾರದಲ್ಲಿ ಪ್ರಬುದ್ಧರಾದ ಚಂದ್ರು ಚಲನಚಿತ್ರ ಮಾತ್ರವಲ್ಲದೆ ಇನ್ನೂ ಅನೇಕ ಕ್ಷೇತ್ರಗಳಲ್ಲಿ ಆಸಕ್ತರಾದ್ದರಿಂದ ಎಲ್ಲ ವರ್ಗಗಳ ಸಂಪರ್ಕಗಳನ್ನೂ ಮಂಡಳಿಯ ಒಳಿತಿಗೆ ಉಪಯೋಗಿಸಿಕೊಂಡರು. ಆದರೆ ಅವರ ದಾರಿ ಸುಗಮವಾಗಿಯೇನೂ ಇರಲಿಲ್ಲ. ಅವರು ಎದುರಿಸಬೇಕಾಗಿದ್ದ ಸಮಸ್ಯೆಗಳು, ಸವಾಲುಗಳು ಅನೇಕ. ಬದಲಾಗುತ್ತ ಹೋದ ರಾಜ್ಯ ಸರ್ಕಾರದ ಚಲನಚಿತ್ರ ನೀತಿಯಿಂದ ಉದ್ಭವವಾದ ಸಮಸ್ಯೆಗಳೇ ಹೆಚ್ಚು. ಸರ್ಕಾರ ಚಿತ್ರಪ್ರತಿಗಳ ಮೇಲೆ ಮಾರಾಟ ತೆರಿಗೆಯನ್ನು ಹೇರಿದಾಗ, ಚಲನಚಿತ್ರ ಪ್ರದರ್ಶನ ಹಾಗೂ ವಿತರಣೆಗಳ ಘಟ್ಟದಲ್ಲಿ ವಹಿವಾಟು ತೆರಿಗೆಯನ್ನು ವಿಧಿಸಿದಾಗ, ಸಂಚಾರಿ ಚಿತ್ರಮಂದಿರಗಳಿಗೆ ಲೈಸನ್ಸ್ ನೀಡಿಕೆಯ ವಿಷಯದಲ್ಲಿ ತನ್ನ ನಿಲುವನ್ನು ಬದಲಾಯಿಸಿಕೊಳ್ಳುತ್ತ ಹೋದಾಗ, ಚಂದ್ರು ಅವರು ಉದ್ಯಮದ ಎಲ್ಲ ವಲಯಗಳ ಸಂಪೂರ್ಣ ಸಹಕಾರವನ್ನು ಕ್ರೋಢೀಕರಿಸಿ, ನಟ ರಾಜಕುಮಾರ್ ಅವರ ನೇತೃತ್ವದಲ್ಲಿ ಪ್ರತಿಭಟನೆಗಳನ್ನು, ಚಳವಳಿಗಳನ್ನೂ ಸಂಘಟಿಸಿ, ಅದೇ ಸಮಯದಲ್ಲಿ ಯಾವ ಪಕ್ಷದ ಸರ್ಕಾರ ರಾಜ್ಯದಲ್ಲಿ ಅಧಿಕಾರಕ್ಕೆ ಬಂದರೂ ಅವರೊಂದಿಗೆ ಸೌಹಾರ್ದಯುತ ಸಂಬಂಧವನ್ನೂ ಉಳಿಸಿಕೊಂಡೇ ಬಂದು ಸಮಸ್ಯೆಗಳನ್ನು ಬಗೆಹರಿಸಿದ ರೀತಿ ಅವರನ್ನೊಬ್ಬ ವಿಶಿಷ್ಟ ನಾಯಕರನ್ನಾಗಿ ಬೆಳೆಸಿತು.

ಈ ಎಲ್ಲ ಕ್ಲಿಷ್ಟ ಸನ್ನಿವೇಶಗಳಲ್ಲಿಯೂ ಅವರು ತಮ್ಮ ಚಿತ್ತ ಸ್ವಾಸ್ಥ್ಯವನ್ನು ಕಳೆದುಕೊಳ್ಳಲಿಲ್ಲ. ಅವರ ಸ್ನೇಹಪರ, ವಸ್ತುನಿಷ್ಠ ಮನೋಧರ್ಮದಿಂದಾಗಿ ಉದ್ಯಮದ ಎಲ್ಲ ವಲಯಗಳೂ ಅವರಿಗೆ ಸಂಪೂರ್ಣ ಸಹಕಾರವನ್ನು ನೀಡಿದವು. ಚಂದ್ರು ಅನೇಕ



**ಮಂಡಳಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಹಿರಿಯರು (೧೯೪೪ - ೨೦೦೦)**

ಡಾ।ಎ.ಎಂ.ಪಟೇಲ್ (೧೯೪೬-೪೭, ೫೦-೫೧), ಕೆ.ಎಂ.ನಾಗಣ್ಣ (೪೯-೫೦), ಆರ್.ಎಂ.ಪಟೇಲ್ (೫೨-೫೫), ಬಿ.ಎನ್.ಗರುಡಾಚಾರ್ (೬೦-೬೭), ಕೆ.ಸಿ.ದೇಸಾಯಿ (೬೭-೬೮), ವಿ.ಜೆ.ಚೌಟ (೬೮-೬೯), ಎಂ.ಸದಾನಂದರಾವ್ (೬೯-೭೧), ಎಂ.ಭಕ್ತವತ್ಸಲ (೭೧-೭೭), ಕೆ.ವಿ.ಗುಪ್ತ (೭೭-೭೯), ಎನ್.ವೀರಾಸ್ವಾಮಿ (೭೯-೮೦), ಎಸ್.ನಾಗರಾಜಶೆಟ್ಟಿ (೮೦-೮೧), ಎ.ಆರ್.ರಾಜು (೮೧-೮೨), ಬಿ.ಎ.ಅರಸುಕುಮಾರ್ (೮೨-೮೩), ಬಿ.ಸಿ.ಎಸ್.ನಾರಾಯಣ್ (೮೩-೮೫), ಹೆಚ್.ಆರ್.ಪ್ರಭಾಕರ್ ರೆಡ್ಡಿ (೮೫-೮೬), ಆರ್.ಲಕ್ಷ್ಮಣ್ (೮೬-೮೭), ಟಿ.ರಾಮಕೃಷ್ಣ (೮೭-೮೮), ಸಿ.ವಿ.ಎಲ್.ಶಾಸ್ತ್ರಿ (೮೮-೯೨), ಎಸ್.ರಮೇಶ್ (೯೨-೯೩), ಎ.ಎಂ.ಚಂದ್ರಶೇಖರರಾಜು (೯೫-೯೭), ಕೆ.ಸಿ.ಎನ್.ಚಂದ್ರಶೇಖರ್ (೯೩-೯೫ ಮತ್ತು ೯೭ ರಿಂದ)

(ಚಲನಚಿತ್ರ ವಾಣಿಜ್ಯ ಮಂಡಳಿಯ ಸಂಸ್ಥಾಪಕ ಅಧ್ಯಕ್ಷರಾದ ರುಕ್ ಉಲ್-ಮುಲ್ ಎಸ್.ಅಬ್ದುಲ್ ವಾಜೀದ್ (೧೯೪೪-೪೬), ಪಿ.ಕ್ರಿಷನ್‌ದಾಸ್ (೪೭-೪೮), ಕೆ.ಎಲ್.ಭಾಟಿಯಾ (೧೯೪೮-೪೯), ವೈ.ವಿ.ಶ್ರೀನಿವಾಸಮೂರ್ತಿ (೫೧-೫೨ ಮತ್ತು ೫೫-೬೦), ಬಿ.ಹೆಚ್.ತಾರಾಪುರ್ (೫೨-೫೩) ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದರು. ಅವರ ಭಾವಚಿತ್ರಗಳು ಲಭ್ಯವಿಲ್ಲ.)

ಅಗ್ನಿಪರೀಕ್ಷೆಗಳಿಂದ ಯಶಸ್ವಿಯಾಗಿ ಹೊರಬಂದರು. ರಾಜಕುಮಾರ್ ಅವರ ಅಪಹರಣ ಪ್ರಸಂಗ ದೇಶದಲ್ಲಿಯೇ ಕೋಲಾಹಲವನ್ನುಂಟು ಮಾಡಿದಾಗಲಂತೂ ಸುಮಾರು ನಾಲ್ಕು ತಿಂಗಳು ಇಡೀ ಕನ್ನಡ ಚಿತ್ರರಂಗದ ಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡವು. ಉದ್ಯಮಕ್ಕೆ ರಾವು ಬಡಿಯಿತು. ಇದರಿಂದಾಗಿ ಉಂಟಾದ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳು ಅಪಾರ. ಈ ಐತಿಹಾಸಿಕ ಘಟನೆಯಿಂದ ಉದ್ಭವವಾದ ಸಮಸ್ಯೆಗಳ ಮಹಾಪೂರವನ್ನು ಚಂದ್ರು ಅವರು ನಿರ್ವಹಿಸಿದ ರೀತಿ, ಅವರು ತೋರಿದ ಸಂಯಮ ಮತ್ತು ಮಾನಸಿಕ ಸಮತೋಲನ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು.

ಹೀಗೆ ತನ್ನ ಸುದೀರ್ಘ ಜೀವನದಲ್ಲಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ವಿವಿಧ ರೀತಿಯ, ವಿವಿಧ ಚೈತನ್ಯಗಳ ಅಧ್ಯಕ್ಷರಿಂದ ಮಾರ್ಗದರ್ಶನ ಪಡೆದು ಒಂದು ಪರಿಪೂರ್ಣ ಸಂಸ್ಥೆಯಾಗಿ ಬೆಳೆದು ನಿಂತಿದೆ. ಅನೇಕತೆಯಲ್ಲಿ ಐಕ್ಯತೆಯೆಂಬ ನಾಣ್ನುಡಿಗೆ ಕನ್ನಡಿಯಾಗಿದೆ.




# ಲಾಭ-ನಷ್ಟದ ತೂಗುಯ್ಯಾಲೆ

ಹತ್ತೊಂಬತ್ತನೇ ಶತಮಾನದ ಅದ್ಭುತ ಶೋಧ ಚಲನಚಿತ್ರ (ಸೆಲ್ಯುಲಾಯ್ಡ್ ಲೋಕ). ಆರಂಭದಲ್ಲಿ ಹೊಸ ಆವಿಷ್ಕಾರವಾಗಿ, ನಂತರ ಕುತೂಹಲವಾಗಿ, ಕೊನೆಗೆ ಬಹು ದೊಡ್ಡದೊಂದು ಉದ್ಯಮವಾಗಿ ಚಲನಚಿತ್ರ ಪರಿವರ್ತಿತವಾಯಿತು. ಕಲಾಮಾಧ್ಯಮಗಳಲ್ಲಿ ಚಲನಚಿತ್ರ ಕೂಡ ಒಂದಾದರೂ ಇದು ವ್ಯಾಪಾರಿ ಕ್ಷೇತ್ರ ಎಂಬುದೂ ಅಷ್ಟೇ ಸತ್ಯ. ಇತ್ತೀಚೆಗೆ ಮನರಂಜನಾ ಉದ್ಯಮದ ಒಂದು ಅಂಗವಾಗಿ ಇದನ್ನು ವರ್ಗೀಕರಿಸಲಾಗಿದೆ.

ವಿಶ್ವದಲ್ಲಿ ಅತಿ ಹೆಚ್ಚು ಚಲನಚಿತ್ರಗಳ ನಿರ್ಮಾಣ ಭಾರತದಲ್ಲಿ ಆಗುತ್ತದೆ. ವಿವಿಧ ಭಾಷೆಗಳ ಸುಮಾರು ೮೦೦ ಚಿತ್ರಗಳು ಭಾರತದಲ್ಲಿ ವರ್ಷಂಪ್ರತಿ ತಯಾರಾಗುತ್ತಿವೆ. ಅವುಗಳಲ್ಲಿ ಹಿಂದಿ, ತಮಿಳು, ತೆಲುಗು ಭಾಷೆಗಳಲ್ಲಿ ಪ್ರತಿ ವರ್ಷ ತಲಾ ನೂರಕ್ಕೂ ಹೆಚ್ಚು ಚಿತ್ರಗಳು ತಯಾರಾದರೆ, ವರ್ಷಕ್ಕೆ ೭೦-೮೦ ಚಿತ್ರಗಳನ್ನು ನಿರ್ಮಿಸುವ ಕನ್ನಡ ಚಿತ್ರರಂಗ ನಾಲ್ಕನೆಯ ಸ್ಥಾನದಲ್ಲಿದೆ.

ಪ್ರಯೋಗ, ಕುತೂಹಲಗಳ ನಂತರ ಇದರಲ್ಲಿ ತೊಡಗಿಸಿಕೊಂಡ ಜನ, ಉದ್ಯಮ-ವ್ಯವಹಾರ ಎನ್ನುವುದರಿಂದ ಬೇರೆ ಯಾವುದೇ ಉದ್ಯಮದಲ್ಲಿ ತೊಡಗಿಸಿಕೊಳ್ಳುವಂತೆ ಈ ವ್ಯವಹಾರದತ್ತಲೂ ಆಕರ್ಷಿತರಾದರು; ಹಣ ತೊಡಗಿಸಿದರು. ಚಲನಚಿತ್ರ ಬರೀ ಉದ್ಯಮವಷ್ಟೇ ಅಲ್ಲ. ಅದೊಂದು ಸಂಕೀರ್ಣ ಕಲೆಯೂ ಹೌದು. ಆ ಕಾರಣದಿಂದಲೇ ಉಳಿದ ಉದ್ಯಮಗಳೊಂದಿಗೆ ಇದನ್ನು ಹೋಲಿಸಿಕೊಳ್ಳುವುದು ಕಷ್ಟವೇ. ಹಾಗಾಗಿ ಇಲ್ಲಿ ಉಳಿದವುಗಳಂತೆ ಶಾಸ್ತ್ರೀಯ ರೀತಿಯ ತೊಡಗಿಸಿಕೊಳ್ಳುವಿಕೆಯಾಗಲೀ, ವ್ಯವಸ್ಥಿತ ರೀತಿಯ ವ್ಯವಹಾರ ನೀತಿಯಾಗಲೀ ಇಲ್ಲ. ಇದೇ ಈ ಉದ್ಯಮದ ದೌರ್ಬಲ್ಯ ಹಾಗೂ ಶಕ್ತಿ. ಇದರ ಮೂಲ ಬಲ್ಲವನಿಗೆ ಇದೊಂದು ಭಾರಿ ವ್ಯವಹಾರ ಕ್ಷೇತ್ರ.

ಚಿತ್ರೋದ್ಯಮ ಕುರಿತಂತೆ ಹಿರಿಯ ವಿತರಕ ಕೆ.ವಿ.ಗುಪ್ತ ಅವರು ಹೇಳುವ ಮಾತು ಇಡೀ ಚಿತ್ರರಂಗದ ವ್ಯವಹಾರ ನೀತಿಗೆ ಕನ್ನಡಿ ಹಿಡಿಯುವಂತಿದೆ. ಅವರು ಹೇಳುತ್ತಾರೆ: ''ಪ್ರಪಂಚದಲ್ಲಿ ಯಾವುದೇ ವಸ್ತುವಿನ ತಯಾರಿಕೆಗೆ ಮೊದಲು ಅದರ ಮಾರುಕಟ್ಟೆಯ ಅಧ್ಯಯನ ನಡೆಯುತ್ತದೆ ಮತ್ತು ವ್ಯವಹಾರ ಸಾಧ್ಯತೆಗಳನ್ನು ಮೊದಲು ತಿಳಿದುಕೊಳ್ಳಲಾಗುತ್ತದೆ. ನಂತರ ಮಾರುಕಟ್ಟೆಯ ಬೇಡಿಕೆಗನುಗುಣವಾಗಿ ವಸ್ತುಗಳು ತಯಾರಾಗುತ್ತವೆ. ಲಾಭ ನಷ್ಟಗಳ ಸ್ಪಷ್ಟಚಿತ್ರ ಇದರಿಂದ ಸಾಧ್ಯ. ಆದರೆ, ಸಿನಿಮಾ ಮಾತ್ರ ಮಾರುಕಟ್ಟೆಯ ಅರಿವಿಲ್ಲದೆಯೇ ತಯಾರಾಗುತ್ತದೆ.''

ಸೃಜನಶೀಲ ಕಲೆಯೊಂದು ಮಾರುಕಟ್ಟೆಯ ಬೇಡಿಕೆಯಂತೆ ತಯಾರಾಗುವುದು ಹೇಗೆ? ಚಲನಚಿತ್ರರಂಗದಲ್ಲಿ ಒಂದು ಚಿತ್ರಕ್ಕೂ ಇನ್ನೊಂದಕ್ಕೂ ತಯಾರಿಕಾ ವೆಚ್ಚ ಒಂದೇ ಆಗಿರುವುದು ಸಾಧ್ಯವಿಲ್ಲ. ಮಾರುಕಟ್ಟೆಯಲ್ಲಿ ದೊರಕುವ ಅಥವಾ ಮಾರುಕಟ್ಟೆಗಾಗಿ ತಯಾರಾಗುವ ಇತರ ವಸ್ತುಗಳ ಹಾಗೂ ಸಿನಿಮಾದ ಬಳಕೆ. ಅವುಗಳ ಗ್ರಾಹಕರಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಮಾರುಕಟ್ಟೆಯ ಇತರ ವಸ್ತುಗಳಂತೆ ಸಿನಿಮಾ ತಯಾರಿಕೆ ಮತ್ತು ವ್ಯಾಪಾರ ಸಾಧ್ಯವಿಲ್ಲ.

ಸಿನಿಮಾ ಒಂದು ಸಂಕೀರ್ಣಕಲೆ. ಹಲವು ಕಲೆಗಳ ಮೇಳವೂ ಹೌದು. ಸಾಹಿತ್ಯ, ಸಂಗೀತ, ಅಭಿನಯ, ಚಿತ್ರಕಲೆ, ತಾಂತ್ರಿಕ ವಿಜ್ಞಾನ ಇವೆಲ್ಲವನ್ನೂ ಒಂದು ಬಂಧದಲ್ಲಿ ಸೇರಿಸುವ ಸಿನಿಮಾ ಮನರಂಜನೆಯ ಮಾಧ್ಯಮವಾಗಿ ಜನಪ್ರಿಯವಾಗಿ ಬೆಳೆಯ ತೊಡಗಿತು. ಹಾಗಾಗಿ ಸಿನಿಮಾ ಇಂದು ಕೇವಲ ಕಲಾಭಿವ್ಯಕ್ತಿಯಾಗಿ ಉಳಿದಿಲ್ಲ. ಅದು ಒಳಗೊಳ್ಳುವ ಬಂಡವಾಳದ ಕಾರಣಕ್ಕೆ ಅದೊಂದು ಬೃಹತ್ ವ್ಯವಹಾರವಾಗಿ ಬೆಳೆದಿದೆ. ಇಂದು ಕೈಗಾರಿಕಾ ಮನ್ನಣೆ ಪಡೆದು ಬೃಹತ್ ಉದ್ಯಮವೆನಿಸಿದೆ. ಸಿನಿಮಾ ನಿರ್ದೇಶಕನ ಮಾಧ್ಯಮವೆನ್ನುವುದು ನಿಜವಾದರೂ ಅಂತಿಮವಾಗಿ ವ್ಯಾಪಾರವೆಂದೇ ಪರಿಗಣಿತವಾಗಿದೆ. ವ್ಯಾಪಾರಿ ಚಿತ್ರಗಳೆಂಬ ವರ್ಗೀಕರಣ ಪಡೆದಿದೆ. ಕಲಾತ್ಮಕ, ಸಮಾನಾಂತರ, ಗಂಭೀರ, ಹೊಸ ಅಲೆ ಇವೆಲ್ಲವೂ ಇತ್ತೀಚಿನ ವರ್ಗೀಕರಣಗಳು. ವರ್ಗೀಕರಣ ಯಾವುದೇ ಆದರೂ ಮೂಲ ಉದ್ದೇಶ ಒಂದೇ, ಅದು ವ್ಯಾಪಾರ. ಹೂಡಿದ ಬಂಡವಾಳ ಲಾಭದೊಡನೆ ಮರಳಿ ಬರಬೇಕೆಂಬುದೇ ಗುರಿ.

### ಹೆಚ್ಚಿದ ಬಂಡವಾಳ

ಆರಂಭದ ದಿನಗಳಲ್ಲಿ ಒಂದು ಕಪ್ಪು-ಬಿಳುಪು ಕನ್ನಡ ಚಿತ್ರ ೪೦ರಿಂದ ೮೦ ಸಾವಿರ ರೂ.ಗಳ ವೆಚ್ಚದಲ್ಲಿ ತಯಾರಾಗುತ್ತಿತ್ತು. ಎಪ್ಪತ್ತು-ಎಂಬತ್ತರ ದಶಕದಲ್ಲಿ ಒಂದು ಕಪ್ಪುಬಿಳುಪು ಕನ್ನಡ ಚಿತ್ರದ ತಯಾರಿಕಾ ವೆಚ್ಚ ೨-೩ ಲಕ್ಷ ರೂ.ಗಳಷ್ಟಾಯಿತು. ಬಣ್ಣದ ಚಿತ್ರಗಳ ಯುಗ ಆರಂಭವಾದ ಮೇಲೆ ೨೦-೨೫ ಲಕ್ಷ ರೂ.ಗಳ ವೆಚ್ಚದಲ್ಲಿ ಬಣ್ಣದ ಚಿತ್ರ ನಿರ್ಮಾಣವಾಗತೊಡಗಿತು. ಪ್ರಾರಂಭದ ದಿನಗಳಲ್ಲಿ ವರ್ಷದಲ್ಲಿ ೩-೪ ಕನ್ನಡ ಚಿತ್ರಗಳು ತಯಾರಾಗುವುದೇ ಕಷ್ಟವಾಗಿತ್ತು. ಕೆಲವು ವರ್ಷಗಳಲ್ಲಿ ಒಂದು ಚಿತ್ರವೂ ತೆರೆಕಾಣಲಿಲ್ಲ. ಆ ಕಾಲದಲ್ಲಿ ವರ್ಷವೆಲ್ಲ ಕನ್ನಡ ಚಿತ್ರಗಳ ನಿರ್ಮಾಣಕ್ಕಾಗಿ ಹೂಡಲಾಗುತ್ತಿದ್ದ ಬಂಡವಾಳ ಬೆರಳೆಣಿಕೆಯ ಲಕ್ಷಗಳಷ್ಟು ಮಾತ್ರವೇ ಆಗಿತ್ತು. ಎಪ್ಪತ್ತರ ದಶಕದ ಸುಮಾರಿನಲ್ಲಿ ಕನ್ನಡ ಚಿತ್ರಗಳ ನಿರ್ಮಾಣಕ್ಕಾಗಿ ವರ್ಷದಲ್ಲಿ ಹೂಡಲಾಗುತ್ತಿದ್ದ ಬಂಡವಾಳ ಸುಮಾರು ಒಂದು-ಒಂದೂವರೆ ಕೋಟಿಯಷ್ಟಾಯಿತು. ಬಣ್ಣದ ಯುಗದಲ್ಲಿ ಬಂಡವಾಳ ಹೂಡಿಕೆ ವರ್ಷಕ್ಕೆ ೧೮-೨೦ ಕೋಟಿಗಳಷ್ಟಾಯಿತು. ಮರಳಿ ಬರುತ್ತಿದ್ದುದು ಶೇಕಡಾ ೪೦-೪೫ ರಷ್ಟು ಮಾತ್ರ. ಶೇಕಡಾ ಸುಮಾರು ೫೫-೬೦ ರಷ್ಟು ನಷ್ಟವಾಗುತ್ತಿದ್ದರೂ ಉದ್ಯಮದಲ್ಲಿ ತಯಾರಿಕಾ ಪ್ರಮಾಣ ಸಂಖ್ಯೆಯ ದೃಷ್ಟಿಯಲ್ಲಿ ಕಡಿಮೆಯಾಗಲಿಲ್ಲ, ಹೂಡಿಕೆಯ ಮೊತ್ತ ಮಾತ್ರ ಹೆಚ್ಚುತ್ತಲೇ ಇದ್ದಿತು. ೮೦ರ ದಶಕದ ಮಧ್ಯಭಾಗದಲ್ಲಿ ೫೫-೬೦ ಲಕ್ಷ ರೂ.ಗಳ ವೆಚ್ಚದಲ್ಲಿ ತಯಾರಾದ ಬಣ್ಣದ ಚಿತ್ರವೇ ಅತಿ ಹೆಚ್ಚು ವೆಚ್ಚದ ಚಿತ್ರವೆನಿಸಿದರೆ, ಶತಮಾನದ ಅಂತ್ಯದ ವರ್ಷಗಳಲ್ಲಿ ಅಧಿಕ ವೆಚ್ಚದ ಚಿತ್ರಗಳಿಗೆ ಹೂಡಿದ ಬಂಡವಾಳ ಕೆಲವು ಕೋಟಿಗಳಷ್ಟಿದ್ದಿತು. ಪ್ರಸ್ತುತ ಕನ್ನಡ ಚಿತ್ರರಂಗದಲ್ಲಿ ಹೂಡಿಕೆಯಾಗುವ ಹಣ ವರ್ಷಕ್ಕೆ ನೂರು ಕೋಟಿ ರೂ.ಗಳನ್ನೂ ಮೀರುತ್ತಿದೆ.

ಅತ್ಯಂತ ಕಿರಿದಾದ ಮಾರುಕಟ್ಟೆಯನ್ನು ಹೊಂದಿದ ಕನ್ನಡ ಚಿತ್ರರಂಗದಲ್ಲಿ ಅಧಿಕ ಹಣ ತೊಡಗಿಸುವುದು ದುಸ್ಸಾಧ್ಯ ಎಂಬ ಮೊದಲಿನ ಭಾವನೆ ಈಗಿಲ್ಲ. ಕೋಟಿ ಹೂಡಿ ಕೋಟಿ ತೆಗೆಯುವ ಧೈರ್ಯ ಕನ್ನಡ ಚಿತ್ರ ನಿರ್ಮಾಪಕರಲ್ಲಿ ಬಂದಂತಿದೆ. ವರ್ಷದಲ್ಲಿ ಬಿಡುಗಡೆ ಕಾಣುವ ೭೦-೮೦ ಕನ್ನಡ ಚಿತ್ರಗಳಲ್ಲಿ ನಷ್ಟದ ಭಾರವನ್ನು ಹೊರುವವೇ ಹೆಚ್ಚು. ಒಂದು ಅಂದಾಜಿನಂತೆ ಶೇಕಡಾ ೬೦ ಚಿತ್ರಗಳು ನಷ್ಟವನ್ನುಂಟುಮಾಡುವುದು ಸಾಮಾನ್ಯ. ಉಳಿದವು ಯಶಸ್ವಿ-ಲಾಭದಾಯಕ ಎನಿಸಿದರೂ ಅಪಾರ ಯಶ - ಅಧಿಕ ಸಂಪಾದನೆ ಕಾಣುವ ಚಿತ್ರಗಳ ಸಂಖ್ಯೆ ಕೈ ಬೆರಳೆಣಿಕೆಯಷ್ಟು ಮಾತ್ರ. ಮಿಕ್ಕವು ಅಲ್ಪ-ಸ್ವಲ್ಪ ಲಾಭ ಕಂಡವು, ಅಲ್ಲಿಂದಲ್ಲಿಗೆ ಆದವು ಅಥವಾ ಅಲ್ಪಸ್ವಲ್ಪ ನಷ್ಟವನ್ನು ಅನುಭವಿಸಿದವು. ಹೀಗಿದ್ದೂ ಕನ್ನಡದಲ್ಲಿ ತಯಾರಾಗುವ ಚಿತ್ರಗಳ ಸಂಖ್ಯೆ ಕಡಿಮೆಯಾಗಿಲ್ಲ, ಎಂದೂ ಸ್ಥಗಿತವಾಗಿಲ್ಲ. ಚಿತ್ರನಿರ್ಮಾಣದ ಸಂಖ್ಯೆ ವರ್ಷಂಪ್ರತಿ ಏರುತ್ತಲೇ ಇದೆ. ತಾವು ಕಳೆದುಕೊಂಡಿದ್ದನ್ನು, ಕಳೆದುಕೊಂಡಲ್ಲಿಯೇ ಹುಡುಕಿ ಮರಳಿ ಪಡೆಯ ಬಯಸುವ ನಿರ್ಮಾಪಕರು ಮತ್ತೆ ಹೊಸ ಚಿತ್ರದ ಸೃಷ್ಟಿಯಲ್ಲಿ ತೊಡಗಿಕೊಳ್ಳುವುದು ಒಂದು ಕಾರಣವಾದರೆ, ಯಾವುದೋ ಆಸೆ, ಆಕಾಂಕ್ಷೆ, ಆಮಿಷಗಳ ಆಕರ್ಷಣೆಯಿಂದಾಗಿ ಚಿತ್ರ ತಯಾರಿಸಲು ಹೊಸ ನಿರ್ಮಾಪಕರು ಸಾಕಷ್ಟು ಸಂಖ್ಯೆಯಲ್ಲಿ ಈ ಉದ್ಯಮಕ್ಕೆ ಬರುತ್ತಿರುವುದು ಇನ್ನೊಂದು ಕಾರಣ. ಕೆಲವು



ಕೆ.ವಿ.ಗುಪ್ತ ಕೆ.ಸಿ.ದೇಸಾಯಿ ಎಸ್.ಎಂ. ಲಕ್ಷ್ಮಣರಾವ್ ಕೆ.ಸಿ.ಎನ್.ಗೌಡ



ಕೆ.ವಿ.ರಾಜು ಸಿ.ಆರ್.ಬಸವರಾಜು ಪ್ರಭಾಕರರೆಡ್ಡಿ ಕೆ.ವೆಂಕಟರಮಣ(ಬಾಬ್ಬಿ)

ನಿರ್ಮಾಪಕರು ಈ ಸೋಲು ಗೆಲುವಿನ ಮಧ್ಯ ನೆಲೆಯೂರಿದರೆ, ಹಲವಾರು ಮಂದಿ ನೆಲೆ ತಪ್ಪಿದ್ದಾರೆ.

ಸೀಮಿತ ಮಾರುಕಟ್ಟೆಯುಳ್ಳ ಕನ್ನಡ ಚಿತ್ರರಂಗದಲ್ಲಿನ ವಾರ್ಷಿಕ ಬಂಡವಾಳ ಹೂಡಿಕೆಯೇ ೧೦೦-೧೨೦ ಕೋಟಿಗಳಷ್ಟಿರುವಾಗ, ವಿಶಾಲ ಮಾರುಕಟ್ಟೆ ಹೊಂದಿರುವ ಹಿಂದಿ, ತಮಿಳು, ತೆಲುಗು ಭಾಷಾ ಚಿತ್ರಗಳ ಹೂಡಿಕೆ ೧೫-೨೦ ಪಟ್ಟು ಹೆಚ್ಚಿರುವುದು ಸಹಜ. ಬಿತ್ತಿದ್ದೆಲ್ಲ ಬೆಳೆಯಾಗದೆಂಬಂತೆ ಬಿಡುಗಡೆಯಾದ ಚಿತ್ರಗಳೆಲ್ಲವೂ ಯಶಸ್ವಿಯಾಗಲಾರವು. ಇದು ಎಲ್ಲ ಭಾಷಾ ಚಿತ್ರರಂಗಗಳಿಗೂ ಅನ್ವಯ. ಯಾವುದೇ ವ್ಯಾಪಾರಿ ಮಾರುಕಟ್ಟೆಗಾಗಿ ತಾನು ಹೂಡುವ ಬಂಡವಾಳ ತರುವ ಲಾಭದ ಬಗ್ಗೆ ಅಂದಾಜು ಮಾಡಬಲ್ಲ. ಆದರೆ ಚಲನಚಿತ್ರ ನಿರ್ಮಾಪಕರು ಆ ಅಂದಾಜು ಮಾಡುವುದು ಸಾಧ್ಯವಿಲ್ಲ. ಪ್ರತಿಯೊಬ್ಬ ಚಿತ್ರ ನಿರ್ಮಾಪಕರೂ ಈ ಉದ್ಯಮದ ವ್ಯಾಪಾರ-ವ್ಯವಹಾರದಲ್ಲಿ ತಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಳ್ಳಲೇ ಬೇಕಾಗುತ್ತದೆ. ಹಾಗೆಂದೇ ಹೊರಗಿನವರ ದೃಷ್ಟಿಯಲ್ಲಿ ಇದು ಒಂದು ಬಗೆಯ ಜೂಜು (ಗ್ಯಾಂಬ್ಲಿಂಗ್) ಎನಿಸಿದೆ.

### ವಿತರಕರ ಪಾತ್ರ

ಚಿತ್ರದ ಅಂತಿಮ ಗುರಿಯಾದ ಪ್ರೇಕ್ಷಕರನ್ನು ತಲುಪುವ ಕೆಲಸಕ್ಕೆ ಚಿತ್ರಮಂದಿರಗಳ ಮಾಲೀಕರು ಅಥವಾ ಪ್ರದರ್ಶಕರು ನೆರವಾಗುತ್ತಾರೆ. ಚಿತ್ರ ನಿರ್ಮಾಣದ ಕೆಲಸ ನಿರ್ಮಾಪಕರದು. ಪ್ರದರ್ಶಕರು ಮತ್ತು ನಿರ್ಮಾಪಕರ ನಡುವೆ ಸೇತುವಾಗಿ ಇರುವವರು ವಿತರಕರು ಅಥವಾ ಹಂಚಿಕೆದಾರರು. ಈ ಮೂರು ಮುಖ್ಯ ಸ್ತಂಭಗಳೇ ಚಿತ್ರೋದ್ಯಮದ ಮೂಲಭೂತ ಅರ್ಥವ್ಯವಸ್ಥೆಯಲ್ಲಿ ಹಾಸು ಹೊಕ್ಕಾಗಿವೆ. ಇವು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿವೆ.

ಆರಂಭದ ದಿನಗಳಲ್ಲಿ ಚಿತ್ರನಿರ್ಮಾಣ ಪೂರ್ತಿಯಾಗಿ ನಿರ್ಮಾಪಕರಿಂದಲೇ ಆಗುತ್ತಿತ್ತು. ಪೂರ್ಣ ವೆಚ್ಚವನ್ನು ತಯಾರಕರೇ ಭರಿಸಬೇಕಾಗಿತ್ತು. ಚಿತ್ರ ತಯಾರಾದ ಮೇಲೆ ಚಿತ್ರದ ಪ್ರತಿಯನ್ನು ಹೊತ್ತು ಚಿತ್ರಮಂದಿರಗಳಿಗೆ ತಲುಪಿಸುವ ಹೊಣೆ ನಿರ್ಮಾಪಕರದೇ ಆಗಿತ್ತು. ಆರಂಭದ ದಿನಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿ ಚಿತ್ರಗಳು ನಿರ್ಮಾಣವಾಗುತ್ತಿರಲಿಲ್ಲ. ತಯಾರಾದ ೩-೪ ಚಿತ್ರಗಳ ಪ್ರತಿಗಳನ್ನು ಒಂದೂರಿನಿಂದ ಇನ್ನೊಂದೂರಿಗೆ ಕೊಂಡೊಯ್ಯಲಾಗುತ್ತಿತ್ತು. ಚಿತ್ರದ ನಿರ್ಮಾಣ ವೆಚ್ಚವೂ ಕಡಿಮೆ ಇದ್ದಿತು. ನಿರ್ಮಾಪಕ-ನಿರ್ದೇಶಕ-ನಟ ಜಿ.ವಿ.ಅಯ್ಯರ್ ಈ ಬಗ್ಗೆ ತಮ್ಮ ಅನುಭವವನ್ನು ಹೀಗೆ ಹೇಳಿದ್ದಾರೆ: ''ಎಂ.ವಿ.ರಾಜಮ್ಮನವರು 'ರಾಧಾರಮಣ' ಸಿನಿಮಾ ಮಾಡೋಕೆ ಅಂಥ ದೊಡ್ಡ ಕಾರಣವೇನಿಲ್ಲ. ಆಕೆ ಆಗಿನ ಕಾಲಕ್ಕೆ ದೊಡ್ಡ ನಾಯಕಿ. ತಮಿಳಿನಲ್ಲಿ ಆಗಲೇ ಒಂದು ಲಕ್ಷ ಸಂಭಾವನೆ ತಗೋತಾ ಇದ್ದರು. ನಾವು ಕೆಲವರು ಒತ್ತಾಯ ಮಾಡಿದ್ವಿ. ಅವರ ಭಾವನವರೂ ಒಪ್ಪಿದರು. ಕಾಶಿ ಚೆಟ್ಟಿಯಾರ್ ೩೫ ಸಾವಿರ ಕೊಟ್ರು, ರಾಜಮ್ಮನವರು ೫೦ಸಾವಿರ ಹಾಕಿರಬೇಕು. ೮೫ ಸಾವಿರದಲ್ಲಿ 'ರಾಧಾರಮಣ' ಸಿದ್ಧವಾಯಿತು. ಆ ಸಿನಿಮಾ ಚೆನ್ನಾಗಿ ಓಡ್ತು. ನಾನೇ ರೆಪ್ರಸೆಂಟೇಟಿವ್ ಆಗಿ, ಒಂದು ಕಾರು ಮಾಡ್ಕೊಂಡು ಅದಕ್ಕೆ ಬ್ಯಾನರೆಲ್ಲ ಕಟ್ಕೊಂಡು, ಸ್ಪೀಕರ್ ಕಟ್ಟಿಕೊಂಡು, ಫಿಲಂ ಬಾಕ್ಸನ್ನೂ ಇಟ್ಕೊಂಡು ಊರಿಂದ ಊರಿಗೆ ತಗೊಂಡ್ಹೋಗ್ತಿದ್ದೆ. ಫಿಲಂ ಬಾಕ್ಸ್‌ನ್ನ ಆ ಊರಿನ ಥಿಯೇಟರ್‌ಗೆ ಕೊಟ್ಟು, ಊರಲ್ಲಿ ಅಡ್ವರ್‌ಟೈಸ್ ಮಾಡ್ತಿದ್ದೆ. ರೆಪ್ರಸೆಂಟೇಟಿವ್ ಆಗಿ ಕಲೆಕ್ಷನ್ ಎಲ್ಲ ನೋಡಿ ಅದನ್ನು ತಗೊಂಡು



ಸಂಜಯ್ ದೇಸಾಯಿ ಸೇತುರಾಮ್ ಜಿ.ಎಸ್.ತಲ್ಲಂ ನಿತಿನ್ ಕೆ.ಷಾಹ್

ಮುಂದಿನ ಊರಿಗೆ ಹೋಗ್ತಿದ್ದೆ. ಥಿಯೇಟರ್‌ನವರು ಕಲೆಕ್ಷನ್ ಹಣದಲ್ಲಿ ಶೇಕಡಾ ೩೦ ಭಾಗ ತಾವಿಟ್ಟುಕೊಂಡು, ಉಳಿದ ೭೦ ಭಾಗ ನಮಗೆ ಕೊಡ್ತಿದ್ರು. ಶಿರಸಿಯ ಥಿಯೇಟರಿನಲ್ಲಿ ಹೆಂಗಸರ ಗೇಟ್ನಲ್ಲಿ ಹೆಂಗಸರೇ ನಿಂತ್ಕೊಳ್ಳೋರು. ಅವರು ಟಿಕೆಟ್ ಹರೀದೆ ಒಳಗೆ ಕಳಿಸಿ, ಮುಂದಿನ ಷೋಗೆ ಅದೇ ಟಿಕೆಟ್ ಕೊಡೋರು. ೫೦೦ ಜನ ಒಳಗೆ ಕೂತಿದ್ರೂ ಮಾರಾಟ ಆಗಿರೋದು ೧೦೦ ಟಿಕೆಟ್ ಅಂತ ಲೆಕ್ಕ ಕೊಡ್ತಿದ್ರು. ಅದನ್ನು ಚೆಕ್ ಮಾಡಲು ಹೋಗಿ ಅವರಿಂದ ಕೈಕಾಲು ಮುರಿಯೋ ಹಾಗೆ ಹೊಡೆಸ್ಕೊಂಡ ನೆನಪೂ ನನಗಿದೆ''.

'ರಾಧಾರಮಣ' ಬಿಡುಗಡೆಯಾದದ್ದು ೧೯೪೩ರಲ್ಲಿ. ಕನ್ನಡದ ಮೊದಲ ಚಿತ್ರ ಬಿಡುಗಡೆಯಾಗಿ ಕೇವಲ ಒಂಬತ್ತು ವರ್ಷಗಳಷ್ಟೇ ಆಗಿದ್ದಾಗ, ಆ ಚಿತ್ರದ ನಿರ್ಮಾಣಕ್ಕೆ ಆ ದಿನಗಳಲ್ಲಿ ತಗುಲಿದ ಖರ್ಚು ಸರಿ ಸುಮಾರು ೮೫ ಸಾವಿರ. ಚಿತ್ರದ ಪ್ರದರ್ಶನದಿಂದ ಬಂದ ಗಳಿಕೆಯಲ್ಲಿ ಪ್ರದರ್ಶಕರ ಪಾಲು ಶೇಕಡಾ ೩೦ ರಷ್ಟು ಮಾತ್ರ. ಆದರೂ ಆ ಕಾಲದಲ್ಲೇ ವಂಚನೆ ಹೇಗೆ ನಡೆಯುತ್ತಿತ್ತು, ಗಳಿಕೆ ಎಲ್ಲಿ-ಹೇಗೆ ಸೋರಿ ಹೋಗುತ್ತಿತ್ತು ಎಂಬುದನ್ನು ಅಯ್ಯರ್‌ರ ಮಾತಿನಿಂದ ತಿಳಿಯಬಹುದು.

ಆರಂಭದ ದಿನಗಳಲ್ಲಿ ನಮ್ಮಲ್ಲಿನ ಹಂಚಿಕಾವ್ಯವಸ್ಥೆ ಸಂಪೂರ್ಣವಾಗಿ ಗುಜರಾತಿಗಳ ಹಿಡತದಲ್ಲಿದ್ದಿತು. ಬೆಂಗಳೂರು ಇಡೀ ದೇಶದ ಚಿತ್ರೋದ್ಯಮದ ಅತ್ಯಂತ ಪ್ರಮುಖ ಕೇಂದ್ರವೆನಿಸಿತ್ತು. ಹಿಂದಿ ಚಿತ್ರಗಳು ಕೂಡ ಮೊದಲು ಬೆಂಗಳೂರಿನಲ್ಲಿ ಪ್ರದರ್ಶನ ಕಂಡು , ನಂತರ ಹಿಂದಿ ಭಾಷಾ ಪ್ರಾಂತ್ಯಗಳಲ್ಲಿ ಬಿಡುಗಡೆಯಾಗುತ್ತಿದ್ದವು. ಮುಂಬಯಿನ ಫಿಲ್ಮಿಸ್ತಾನ್, ರಾಜಶ್ರೀ ಮುಂತಾದ ಚಿತ್ರ ನಿರ್ಮಾಣ ಸಂಸ್ಥೆಗಳು ಬಂಗಳೂರಿನ ಗಾಂಧಿನಗರದಲ್ಲಿ ಹಂಚಿಕಾ ಕಚೇರಿಯನ್ನು ತೆರೆದಿದ್ದವು. ಬೆಂಗಳೂರಿನ ಗಾಂಧಿನಗರದಲ್ಲಿಯೇ ಬಹುತೇಕ ಎಲ್ಲ ಚಿತ್ರ ವಿತರಕರ ಸಂಸ್ಥೆಗಳು ಇದ್ದವು. ಆರಂಭದಲ್ಲಿ ಬೆಂಗಳೂರಿನ ಸುಲ್ತಾನ್ ಪೇಟೆ, ಚಿಕ್ಕಪೇಟೆಗಳಲ್ಲಿ ಚಿತ್ರವಿತರಣ ಸಂಸ್ಥೆ ಇದ್ದು , ನಂತರ ಗಾಂಧಿನಗರ ಹಂಚಿಕಾ ವ್ಯವಸ್ಥೆಯ ಮುಖ್ಯ ಕೇಂದ್ರವಾಗಿ ಬೆಳೆಯಿತು.

ಗಾಂಧಿನಗರದ ಹಂಚಿಕೆದಾರರು ಇಡೀ ದಕ್ಷಿಣ ಭಾರತ ಹಾಗೂ ಸಿಲೋನ್ ದೇಶಗಳ ಹಂಚಿಕೆಯ ಹಕ್ಕನ್ನು ಪಡೆದು, ಬೆಂಗಳೂರಿನಿಂದಲೇ ಆ ಪ್ರದೇಶಗಳಲ್ಲೆಲ್ಲಾ ಚಿತ್ರವಿತರಣೆ ಮಾಡುತ್ತಿದ್ದರು. ಗಾಂಧಿನಗರದ ಚಿತ್ರ ಹಂಚಿಕಾ ಕ್ಷೇತ್ರದಲ್ಲಿ ಗುಜರಾತಿಗಳ ಏಕಸ್ವಾಮ್ಯವನ್ನು ಮುರಿದವರು ಶಾಂತಾ ಪಿಕ್ಚರ್ಸ್ ಸಂಸ್ಥೆಯ ಶಾಮಣ್ಣ, ಕೆ.ವೆಂಕಟಸುಬ್ಬಶೆಟ್ಟಿ ಮತ್ತು ಗೋಪಾಲಶೆಟ್ಟರು. ಇವರೊಂದಿಗೆ ಶ್ರೀನಿವಾಸ ಪಿಕ್ಚರ್ಸ್‌ನ ಕೃಷ್ಣಯ ಶೆಟ್ಟಿ, ಜಯಲಕ್ಷ್ಮೀ ಫಿಲಂಸ್‌ನ ಜಯಪ್ಪ ಮತ್ತಿತರರೂ ಕೂಡ. ನಂತರ ಇತರರೂ ಈ ಕ್ಷೇತ್ರವನ್ನು ಪ್ರವೇಶಿಸಿದರು.

ಚಲನಚಿತ್ರ ನಿರ್ಮಾಪಕರು ತಮ್ಮ ಚಿತ್ರ ಸಿದ್ಧವಾದ ನಂತರ ಅದರ ಬಿಡುಗಡೆ ಬಗ್ಗೆ ಮೊದಲೇ ಪ್ಲಾನ್ ಮಾಡುವುದಾಗಲಿ, ಬಿಡುಗಡೆಗಾಗಿ ಪ್ರತಿ ಊರಿನ ಚಿತ್ರಮಂದಿರಗಳವರೊಡನೆ ವ್ಯವಹರಿಸುವುದಾಗಲಿ ಕಷ್ಟಸಾಧ್ಯವಾಗಿತ್ತು. ಆಗ ನಿರ್ಮಾಪಕರು ಹಾಗೂ ಪ್ರದರ್ಶಕರ ನಡುವಣ ಕೊಂಡಿಯಾದವರು ಚಲನಚಿತ್ರ ಹಂಚಿಕೆದಾರರು. ಇವರು ಚಿತ್ರದ ಕಥೆ, ತಾರಾಗಣ, ತಾಂತ್ರಿಕ ತಜ್ಞರ ವಿವರ, ಸಂಗೀತ, ಅಂದಾಜು ವೆಚ್ಚ, ಚಿತ್ರ ಸಿದ್ಧವಾಗಲು ಬೇಕಾಗುವ ಕಾಲಾವಧಿ- ಇವೆಲ್ಲದರ ಮಾಹಿತಿ ಪಡೆದು ಚಿತ್ರದ ಹಂಚಿಕೆಯ ಹಕ್ಕನ್ನು ಪಡೆಯುತ್ತಿದ್ದರಲ್ಲದೆ, ವಿತರಕರು ಚಲನಚಿತ್ರ ನಿರ್ಮಾಣದ ವಿವಿಧ ಹಂತಗಳಲ್ಲಿ ನಿರ್ಮಾಪಕರಿಗೆ ಬಂಡವಾಳವನ್ನೂ ಒದಗಿಸುತ್ತಿದ್ದರು. ಗಳಿಕೆಯಲ್ಲಿ ಶೇಕಡಾವಾರು ಆಧಾರದ ಮೇಲೆ ಕಮಿಷನ್ ಪಡೆದು ಚಿತ್ರ ವಿತರಣೆ ಮಾಡುತ್ತಿದ್ದರು. ಚಿತ್ರ ವಿತರಕರು ಕೆಲವು ಪ್ರದರ್ಶಕರ ಚಿತ್ರಮಂದಿರಗಳಿಗೆ ಚಿತ್ರವನ್ನು ಪ್ರದರ್ಶನಕ್ಕೆ ಒದಗಿಸುವ ಭರವಸೆ ನೀಡಿ ಅವರಿಂದ ಮುಂಗಡ ಹಣ ಪಡೆದು ನಿರ್ಮಾತೃಗಳಿಗೆ ಬಂಡವಾಳವಾಗಿ ಒದಗಿಸುತ್ತಿದ್ದರು. ಚಿತ್ರ ಬಿಡುಗಡೆಯಾದಾಗ ಪ್ರದರ್ಶಕರು ತಾವು ನೀಡಿದ ಮುಂಗಡ ಹಣ ಹಾಗೂ ತಮ್ಮ ಪಾಲಿನ ಷೇರು ಹಣ ಮೊದಲು ತೆಗೆದುಕೊಂಡು, ಉಳಿದ ಮೊತ್ತವನ್ನು ಹಂಚಿಕೆದಾರರಿಗೆ

ಪಾವತಿ ಮಾಡುತ್ತಿದರು. ಚಿತ್ರನಿರ್ಮಾಪಕರಿಗೆ ಹಂಚಿಕೆದಾರರು ಒದಗಿಸುತ್ತಿದ್ದ ಬಂಡವಾಳಕ್ಕೆ ಗೊತ್ತು ಮಾಡಿಕೊಂಡ ಅವಧಿಯವರೆಗೆ ಬಡ್ಡಿ ಪಡೆಯುತ್ತಿರಲಿಲ್ಲ. ಸರಿಸುಮಾರು ೮೦ರ ದಶಕದ ಅಂತ್ಯದವರೆಗೆ ಈ ಪದ್ಧತಿ ನಡೆದುಕೊಂಡು ಬಂದಿತು.

ಕನ್ನಡ ಚಿತ್ರರಂಗ ಅರುವತ್ತರ ದಶಕದ ನಂತರವೇ ಒಂದು ಉದ್ಯಮವಾಗಿ ಬೆಳೆದುದು. ರಾಜ್ಯ ಪುನರ್ವಿಂಗಡಣೆಯ ನಂತರ ಕನ್ನಡಕ್ಕಾಗಿ ನಡೆದ ಚಳವಳಿಗಳಿಂದಾಗಿ ಭಾರತೀಯ ಚಿತ್ರರಂಗದಲ್ಲಿ ಚಿತ್ರನಿರ್ಮಾಣದಲ್ಲಿ ನಾಲ್ಕನೆಯ ಸ್ಥಾನ ಗಳಿಸಲು ಸಾಧ್ಯವಾಯಿತು ಎನ್ನುತ್ತಾರ ವಿತರಕ ಕೆ.ವಿ.ಗುಪ್ತ.

ಏಕೀಕೃತ ಕರ್ನಾಟಕ ರಚನೆಯಾಗುವ ಮೊದಲು ಕನ್ನಡನಾಡು ಮುಂಬೈ ಪ್ರಾಂತ್ಯ, ಹೈದರಾಬಾದ್ ಪ್ರದೇಶ, ಮದರಾಸು ಪ್ರೆಸಿಡೆನ್ಸಿ ಹಾಗೂ ಹಳೇ ಮೈಸೂರು ಪ್ರಾಂತ್ಯಗಳಲ್ಲಿ ಹಂಚಿಹೋಗಿದ್ದಿತು. ಆ ದಿನಗಳಲ್ಲಿ ಮೈಸೂರು ಪ್ರಾಂತ್ಯವೆಂದರೆ ಎಂಟು ಜಿಲ್ಲೆಗಳ ಕೇವಲ ಹಳೇ ಮೈಸೂರು ರಾಜ್ಯ ಮಾತ್ರ. ಉತ್ತರ ಕರ್ನಾಟಕದ ಕೆಲವೊಂದು ಪ್ರದೇಶಗಳು ಬಾಂಬೆ ಕರ್ನಾಟಕದಲ್ಲೂ, ಉಳಿದ ಭಾಗಗಳು ಹೈದರಾಬಾದ್ ಪ್ರದೇಶದಲ್ಲೂ ಸೇರಿ ಹೋಗಿದ್ದು, ಮುಂಬೈ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕವೆಂದು ಕರೆಯಲಾಗುತ್ತಿತ್ತು. ಕೊಡಗು ಮತ್ತು ದಕ್ಷಿಣ ಕನ್ನಡ ಭಾಗಗಳು ಮದರಾಸು ಪ್ರೆಸಿಡೆನ್ಸಿ ಆಡಳಿತದಲ್ಲಿದ್ದವು. ಹಾಗಾಗಿ ಹಳೇ ಮೈಸೂರು ಪ್ರದೇಶದಲ್ಲಿ ಮಾತ್ರ ಕನ್ನಡ ಚಿತ್ರಗಳು ಪ್ರದರ್ಶಿತವಾಗುತ್ತಿದ್ದವು. ಇಲ್ಲೂ ಕೂಡ, ಕನ್ನಡ ಚಿತ್ರಗಳಿಗಿಂತ ಕನ್ನಡೇತರ ಚಿತ್ರಗಳದೇ ಮೇಲುಗೈ.

ಸ್ವಾತಂತ್ರ್ಯ ಪೂರ್ವದ ದಿನಗಳಲ್ಲಿ ಇಂಗ್ಲಿಷ್ ಚಿತ್ರಗಳೇ ಹೆಚ್ಚು. ಜೊತೆಗೆ ಕನ್ನಡೇತರ ಭಾಷೆಗಳಾದ ಹಿಂದಿ, ತಮಿಳು ಹಾಗೂ ತಲುಗು ಚಿತ್ರಗಳದೇ ಪ್ರಾಬಲ್ಯ. ಹಾಗೆಂದು ಪರರಾಜ್ಯಗಳಲ್ಲಿ ಕನ್ನಡ ಚಿತ್ರಗಳನ್ನು ಪ್ರದರ್ಶಿಸಲು ಪ್ರಯತ್ನ ನಡದಿಲ್ಲವೆಂದೇನಿಲ್ಲ. ನಡೆದಿವೆ - ಪೋಷಣೆ ಕಾಣದೆ ಪ್ರಯತ್ನ ವಿಫಲವಾಗಿದೆ. ಭಾಷಾವಾರು ಪ್ರಾಂತ್ಯಗಳ ರಚನೆಯ ಪೂರ್ವದಲ್ಲಿ ಕೊಡಗು ಹಾಗೂ ದಕ್ಷಿಣ ಕನ್ನಡ, ಕೊಳ್ಳೇಗಾಲ, ಬಳ್ಳಾರಿ, ಅನಂತಪುರ, ಕಡಪ, ಕರ್ನೂಲು ಮುಂತಾದ ಪ್ರದೇಶಗಳನ್ನು ಸೀಡೆಡ್ ಡಿಸ್ಟ್ರಿಕ್ಟ್‌ಗಳೆಂದು ವ್ಯವಹಾರ ಸಂದರ್ಭಗಳಲ್ಲಿ ಪರಿಗಣಿಸಲಾಗುತ್ತಿತ್ತು.


ಎಸ್.ಎ.ಗೋವಿಂದರಾಜು


ಎಸ್.ಎ.ಚಿನ್ನೇಗೌಡ


ಎನ್.ವೀರಾಸ್ವಾಮಿ

## ದಿನವಹಿ ಪ್ರದರ್ಶನಗಳು

ಚಿತ್ರವೊಂದರ ಗಳಿಕೆಯನ್ನು ಆ ಚಿತ್ರವನ್ನು ವೀಕ್ಷಿಸುವ ಪ್ರೇಕ್ಷಕರು ಹಾಗೂ ಚಿತ್ರಮಂದಿರಗಳ ಪ್ರವೇಶ ದರಗಳ ಆಧಾರದ ಮೇಲೆ ನಿಗದಿಮಾಡಲಾಗುತ್ತದೆ. ಆರಂಭದ ದಿನಗಳಲ್ಲಿ ವಾರದ ಕಡೇ ಎರಡು ದಿನಗಳಾದ ಶನಿವಾರ, ಭಾನುವಾರ ಹಾಗೂ ರಜಾದಿನಗಳಲ್ಲಿ ಮೂರು ಹಾಗೂ ಉಳಿದ ದಿನಗಳಲ್ಲಿ ದಿನವಹಿ ಎರಡು ಪ್ರದರ್ಶನಗಳು ನಡೆಯುತ್ತಿದ್ದವು. ಕ್ರಮೇಣ ವಾರದ ಕಡೆ ಮೂರು ದಿನ - ಶುಕ್ರ, ಶನಿ ಹಾಗೂ ಭಾನುವಾರಗಳಂದು ಬೆಳಗಿನ ಪ್ರದರ್ಶನ, ಉಳಿದೆಲ್ಲಾ ದಿನಗಳಲ್ಲೂ ದಿನವಹಿ ಮೂರು ಪ್ರದರ್ಶನಗಳಾಗತೊಡಗಿದವು. ಕ್ರಮೇಣ ದಿನನಿತ್ಯ ಬೆಳಿಗ್ಗೆ, ಮಧ್ಯಾಹ್ನ, ಸಂಜೆ ಹಾಗೂ ರಾತ್ರಿಯಲ್ಲಿ ನಾಲ್ಕು ಆಟಗಳಾದವು. ಆನಂತರ ನೂನ್ ಷೋವೊಂದು ಆರಂಭವಾಗಿ ದಿನವಹಿ ಐದು ಪ್ರದರ್ಶನ ನಡಯತೊಡಗಿತು. ಮಾರ್ನಿಂಗ್ ಷೋ ಹಾಗೂ ನೂನ್ ಷೋಗಳಲ್ಲಿ ಬೇರೆ ಬೇರೆ ಚಿತ್ರಗಳು, ಉಳಿದ ಮೂರು ಆಟಗಳಲ್ಲಿ ಒಂದೇ ಚಿತ್ರ ಪ್ರದರ್ಶನವಾಗುತ್ತಿದ್ದವು.

ಚಿತ್ರಮಂದಿರಗಳನ್ನು ಪ್ರತಿ ಪ್ರದರ್ಶನಾನಂತರ ಶುಚಿಯಾಗಿಡಲು ಕಾಲಾವಕಾಶ ಇಲ್ಲ. ಪ್ರೇಕ್ಷಕರ ಆರೋಗ್ಯದ ಮೇಲೆ ಪರಿಣಾಮ ಬೀರುವುದರಿಂದ ಮತ್ತು ರಾತ್ರಿಯ ಆಟ ಬಿಡುವಾಗ ಮಧ್ಯರಾತ್ರಿ ದಾಟಿರುತ್ತಿದ್ದು ಸಾರಿಗೆ ಸೌಲಭ್ಯದ ಕೊರತೆ ಹಾಗೂ ಅಹಿತಕರ ಘಟನೆಗಳ ಭೀತಿ ತಲೆದೋರಿದ್ದರಿಂದ ನಾಲ್ಕು ಪ್ರದರ್ಶನಗಳಿಗಿಳಿದು, ರಾತ್ರಿ ೧೦-೩೦ಕ್ಕೆಲ್ಲಾ ಪ್ರದರ್ಶನ ಮುಗಿಯುವ ವ್ಯವಸ್ಥೆ ಬಂದಿತು. ಬೆಳಿಗ್ಗೆ ೧೦.೦೦, ಮಧ್ಯಾಹ್ನ ೧.೦೦, ಸಂಜೆ ೪.೦೦ ಹಾಗೂ ರಾತ್ರಿ ೭.೦೦ ಘಂಟೆ ಎಂದಾಯಿತು. ಆದರೂ ಕೆಲವು ಪ್ರದರ್ಶಕರು ಹಿಂದಿನಂತೆಯೇ, ೩.೩೦, ೬.೩೦ ಮತ್ತು ೯.೩೦ ಆಟಗಳನ್ನು ನಡೆಸಿದರು.

ಚಿತ್ರವೊಂದರ ವ್ಯವಹಾರ ಸಾಧ್ಯತೆಗಳೇನೇ ಇರಲಿ, ಅದರ ಗಳಿಕೆಯ ನಿಜವಾದ ಸ್ವರೂಪ ಇತ್ಯರ್ಥವಾಗುವುದು ಅದು ಚಿತ್ರಮಂದಿರಕ್ಕೆ ಬಂದಾಗಲೇ. ಚಿತ್ರದ ಏಳು-ಬೀಳುಗಳ ನಿರ್ಧಾರವಾಗುವುದು, ನಿರ್ಮಾಪಕರ ಅಥವಾ ವಿತರಕರ ಲಾಭ-ನಷ್ಟಗಳ ನಿರ್ಧಾರವಾಗುವುದು ಇಲ್ಲಿಯೇ.

ಚಿತ್ರವೊಂದು ಬಿಡುಗಡೆಯಾಗುವ ಮೊದಲೇ ವ್ಯಾಪಾರ ಮಾಡಿರಲಿ, ಇಲ್ಲವೆ ಮೊದಲ ಕೆಲವು ವಾರಗಳ ಗಳಿಕೆಯ ಆಧಾರದ ಮೇಲೆ ವ್ಯಾಪಾರವಾಗಲಿ, ಚಿತ್ರದ ಯಶಸ್ಸು, ಸೋಲು ಅದು ಗಳಿಸುವ ಗಳಿಕೆಯನ್ನು ಮತ್ತು ಚಿತ್ರಮಂದಿರಗಳಲ್ಲಿ ಚಿತ್ರ ನೋಡುವ ಪ್ರೇಕ್ಷಕರನ್ನು ಆಧರಿಸಿದೆ.

ವಾಕ್ಚಿತ್ರದ ಆರಂಭದ ದಿನಗಳಲ್ಲಿನ ಪ್ರದರ್ಶನ ವ್ಯವಸ್ಥೆಗೂ ಈಗಿನ ವ್ಯವಸ್ಥೆಗೂ ಸಾಕಷ್ಟು ಬದಲಾವಣೆಯಾಗಿದೆ. ಪ್ರವೇಶದರ. ಪ್ರದರ್ಶನಗಳ ಸಂಖ್ಯೆ, ತೆರಿಗೆ ಹೀಗೆ ಎಲ್ಲ ವಿಷಯಗಳಲ್ಲೂ ಬದಲಾವಣೆಯಾಗಿದೆ. ಜೊತೆಗೆ ಬಾಡಿಗೆ ಅಥವಾ ಗಳಿಕೆಯ ಹಂಚಿಕಯ ರೀತಿ ಕೂಡ.

ಕನ್ನಡ ಚಿತ್ರಗಳಿಗೂ ಉಳಿದ ಭಾಷೆಗಳ ಚಿತ್ರಗಳಂತೆ ಆರಂಭದ ದಿನಗಳಲ್ಲಿ ತೆರಿಗೆ ವಸೂಲಿ ಮಾಡುವ ಪದ್ಧತಿ ಇತ್ತು. ಆದರೆ ಸಹಾಯಧನ ನೀಡಲಾರಂಭಿಸಿದ ನಂತರ, ಕನ್ನಡ ಚಿತ್ರಗಳಿಗೆ ಶೇಕಡಾ ೫೦ ತೆರಿಗೆ ವಿನಾಯಿತಿ ನೀಡುವ ಆದೇಶ ಬಂತು.

ಪ್ರವೇಶ ದರದ ಮೇಲೆ ಶೇಕಡಾ ೫೦ ತೆರಿಗೆ, ಶೇಕಡಾ ೫೦ ಪ್ರವೇಶದರ ನೀಡುವಂತೆ ಸರ್ಕಾರ ಆದೇಶ ಹೊರಡಿಸಿತು. ಚಿತ್ರರಂಗದ ಬೆಳವಣಿಗೆಗಾಗಿ ಸರ್ಚಾರ್ಜ್‌ನ ಹಣವನ್ನು ಬಳಸುವುದಾಗಿ ಈ ಆದೇಶದಲ್ಲಿ ಹೇಳಲಾಗಿತ್ತು. ತೆರಿಗೆ, ಸರ್ಚಾರ್ಜ್ ಕಾರಣ ಪ್ರವೇಶದರ ಏರುತ್ತಲೇ ಹೋಯಿತು. ೯೦ರ ದಶಕದಲ್ಲಿ ಆಂಧ್ರದಲ್ಲಿರುವಂತೆ ಸ್ಲ್ಯಾಬ್ ವ್ಯವಸ್ಥೆಯಲ್ಲಿ ತೆರಿಗೆ ವಿಧಿಸಲಾಯಿತು. ಆಗ ಚಿತ್ರಮಂದಿರದಲ್ಲಿರುವ ಆಸನಗಳ ಸಂಖ್ಯೆ ಹಾಗೂ ಚಿತ್ರಮಂದಿರದ ಒಂದು ಪ್ರದರ್ಶನದ ಒಟ್ಟು ಗಳಿಕೆಯ ಆಧಾರದಲ್ಲಿ ತೆರಿಗೆ ಕೊಡಬೇಕಾಯಿತು. ಚಿತ್ರದ ಗಳಿಕೆ ಕಡಿಮೆಯಾದಾಗ ಇದು ಪ್ರದರ್ಶಕರಿಗೆ ತೊಂದರೆಯಾಗುವುದನ್ನು ಮನಗಂಡು ನಂತರ ಅದನ್ನು ಹಿಂದಕ್ಕೆ ಪಡೆಯಲಾಯಿತು. ೧೯೯೬ರಿಂದೀಚೆಗೆ ಕನ್ನಡ ಚಿತ್ರಗಳಿಗೆ ಸಂಪೂರ್ಣ ತೆರಿಗೆ ವಿನಾಯಿತಿ ನೀಡಲಾಯಿತು.

ಪೂರ್ಣ ತೆರಿಗೆ ವಿನಾಯಿತಿ ಬಂದರೂ ಪ್ರವೇಶ ದರದಲ್ಲಿ ಯಾವ ಇಳಿಮುಖವಾಗಲಿಲ್ಲ. ಆದರೆ ಹಿಂದೆ ಇದ್ದ ಪ್ರವೇಶದರಗಳೇ ಮುಂದುವರಿದವು. ಕೆಲವೊಮ್ಮೆ ಇಮ್ಮಡಿಗೊಂಡಿದ್ದೂ ಉಂಟು. ಒಟ್ಟು ಗಳಿಕೆಯು ನಿವ್ವಳ ಗಳಿಕೆ ಎನಿಸಿತು. ಅದೂ ಹೆಚ್ಚಿತು.

ಚಿತ್ರ ನಿರ್ಮಾಣದ ಸಂಖ್ಯೆ ಆರಂಭದ ದಿನಗಳಲ್ಲಿ ಬಹಳ ಕಡಿಮೆ. ಪರಭಾಷಾ ಚಿತ್ರಗಳು ಆ ಸಂದರ್ಭದಲ್ಲಿ ಹೆಚ್ಚು ಹೆಚ್ಚು ಪ್ರದರ್ಶನವಾಗುತ್ತಿದ್ದವು. ಇದು ಅನಿವಾರ್ಯವೂ ಆಗಿತ್ತು. ಸಿನಿಮಾ ನಿರ್ಮಾಣ ಹೆಚ್ಚಾದಂತೆ, ಚಿತ್ರಮಂದಿರಗಳ ಸಮಸ್ಯೆಯೂ ಹೆಚ್ಚಾಗಿದೆ. ಕಳೆದ ಹದಿನೈದು ವರ್ಷಗಳಲ್ಲಿ ಸಾವಿರಕ್ಕೂ ಹೆಚ್ಚು ಚಿತ್ರಗಳು ತಯಾರಾಗಿವೆ. ಆದರೆ ಚಿತ್ರಮಂದಿರಗಳು, ಅವುಗಳ ಗುಣಮಟ್ಟ ಹೆಚ್ಚಾಗಿಲ್ಲ. ಜೊತೆಗೆ ಹಿಂದಿನ ದಿನಗಳಲ್ಲಿದ್ದ ಟೆಂಟ್ ಚಿತ್ರಮಂದಿರಗಳು ಈಗಿಲ್ಲ. ಎರಡು ಕಂಬದ, ಮೂರು ಕಂಬದ ತುಂಡು ಟೆಂಟ್ ಎಂದು ಊರೂರಲ್ಲಿ ಡೇರೆಗಳನ್ನು ಹಾಕಿ ಚಿತ್ರ ತೋರಿಸುವ ಪದ್ಧತಿ ಇಲ್ಲ. ಈಗ ತಾತ್ಕಾಲಿಕ ಶೆಡ್‌ಗಳನ್ನು ಹಾಕಿ ವರ್ಷಪೂರ್ತಿ ಚಿತ್ರಪ್ರದರ್ಶಿಸುವ ಚಿತ್ರಮಂದಿರಗಳು ಸಂಚಾರಿ ಚಿತ್ರಮಂದಿರಗಳು.

ಕನ್ನಡ ಚಿತ್ರಗಳ ಗಳಿಕೆಯ ನಿಟ್ಟಿನಲ್ಲಿ ಗಮನಿಸಿದರೆ, ರಾಜ್ಯ ಪುನರ್ ವಿಂಗಡಣೆಯ ಮುನ್ನಾ ದಿನಗಳಲ್ಲಿದ್ದ ಪರಭಾಷಾ ಚಿತ್ರಗಳ ಪ್ರದರ್ಶನದ ಪೈಪೋಟಿ ಭಾಷಾವಾರು ರಾಜ್ಯ ರಚನೆಯ ನಂತರವೂ ಮುಂದುವರಿದಿದೆ. ಇಡೀ ಪ್ರದರ್ಶನ ವ್ಯವಸ್ಥೆಯಲ್ಲಿ ಕರ್ನಾಟಕದಲ್ಲಿ ಪರರಾಜ್ಯಗಳಂತೆ, ಆಯಾ ರಾಜ್ಯಭಾಷೆಯ ಚಿತ್ರಗಳಿಗೆ ಆದ್ಯತೆ ಇಲ್ಲ. ಸರ್ಕಾರ ಈ ನಿಟ್ಟಿನಲ್ಲಿ ಸಾಕಷ್ಟು ವರತ್ತುಗಳನ್ನು ಹಾಕಿದರೂ ಅವು ಪ್ರಯೋಜನವಾಗಿಲ್ಲ. ವರ್ಷದಲ್ಲಿ ಕನಿಷ್ಠ ೧೨ವಾರ ಕನ್ನಡ ಕಡ್ಡಾಯ ಚಿತ್ರ ಪ್ರದರ್ಶನದ ಆದೇಶ ಚಿತ್ರಮಂದಿರಗಳಿಗಿದ್ದರೂ ಅದನ್ನು ಪ್ರದರ್ಶಕರು ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದಾರೆ.

ಚಿತ್ರಮಂದಿರಗಳಲ್ಲಿ ಪ್ರದರ್ಶನ ವ್ಯವಸ್ಥೆಗೆ ಮುನ್ನ ಪ್ರದರ್ಶಕರು ಮತ್ತು ವಿತರಕರ ನಡುವೆ ಒಪ್ಪಂದವಾಗುವುದು ವಾಡಿಕೆ. ಗಳಿಕೆಯ ಹಣವನ್ನು ಶೇಕಡಾವಾರು ಹಂಚಿಕೊಳ್ಳುವುದೇ, ಇಲ್ಲವೇ ಬಾಡಿಗೆಯ ರೂಪದಲ್ಲೋ ಎನ್ನುವುದು ಈ ಒಪ್ಪಂದ. ಹಿಂದ ಈ ಒಪ್ಪಂದ ಬಹುತೇಕ ಸಂದರ್ಭದಲ್ಲಿ ಲಿಖಿತ ರೂಪದಲ್ಲಿರುತ್ತಿತ್ತು. ಆದರೆ ಈಗ ಅದು ಬಾಯಿ ಮಾತಿಗೇ ಸೀಮಿತ. ಇದಕ್ಕೆ ಅಪವಾದಗಳೂ ಇಲ್ಲದಿಲ್ಲ.


ಎ.ಆರ್.ರಾಜು


ಮಾಣಿಕ್‌ಚಂದ್


ಹೆಚ್.ಎನ್.ಮುದ್ದುಕೃಷ್ಣ


ಸರ್ವೋತ್ತಮ ಬಾಳಿಗಾ


ಸಮೀ ಉಲ್ಲಾ


ಎನ್.ಭಕ್ತವತ್ಸಲ


ಬಿ.ಕೆ.ಗಂಗಪ್ಪ

ಚಿತ್ರಮಂದಿರದ ಮಾಲೀಕರು ಹಿಂದೆ ತೆರಿಗೆಯ ದಿನಗಳಲ್ಲಿ ಗಳಿಕೆಯ ಮೂರನೇ ಒಂದು ಭಾಗವನ್ನು ಬಾಡಿಗೆಯಾಗಿ ಪಡೆಯುತ್ತಿದ್ದರು. ಆಗ ತೆರಿಗೆಯೂ ಪ್ರವೇಶದರದ ಸಮನಾಗಿದ್ದರಿಂದ ತೆರಿಗೆ ಕಳೆದು ಉಳಿದ ಮೊತ್ತದಲ್ಲಿ ಮೂರನೇ ಒಂದು ಅಂಶ ಎಂದರೆ ಅದು ಒಟ್ಟು ಗಳಿಕೆಯ ಆರನೆ ಒಂದರಷ್ಟಾಗುತ್ತಿತ್ತು. ಕನ್ನಡ ಚಿತ್ರಗಳಿಗೆ ಪೂರ್ಣ ತೆರಿಗೆ ವಿನಾಯಿತಿ ಸೌಲಭ್ಯ ಸಿಕ್ಕಿದ ನಂತರವೂ ಈ ಬಾಡಿಗೆ ನೀಡಬೇಕು ಎನ್ನುವ ಪ್ರದರ್ಶಕರ ಬೇಡಿಕೆ ನಿತ್ಯ ಸಮಸ್ಯೆಯಾಗಿ ಉಳಿದಿದೆ.

ಚಿತ್ರಮಂದಿರದ ಮಾಲೀಕರು ಹಿಂದಿನ ದಿನಗಳಲ್ಲಿ ತಾವೇ ಚಿತ್ರದ ಬಿಡುಗಡ ವ್ಯವಸ್ಥೆ ಮಾಡುತ್ತಿದ್ದರು. ಆದರೆ ಮುಂದೆ ಅದು ಬದಲಾಗಿ ನಿರ್ಮಾಪಕರು, ವಿತರಕರೇ ಆ ವೆಚ್ಚವನ್ನು ವಹಿಸುವ ಪ್ರಸಂಗ ಬಂದಿದೆ. ಪ್ರದರ್ಶಕರೇ ವಿತರಕರಾಗಿರುವ ಸಂದರ್ಭಗಳಲ್ಲಿ ಮಾತ್ರ ಈ ವ್ಯವಸ್ಥೆ ಬೇರೆ. ಸಣ್ಣ ಪುಟ್ಟ ಊರುಗಳ ಚಿತ್ರಮಂದಿರಗಳ ಮಾಲೀಕರು ಮಾತ್ರ ನಿಗದಿತ ಮೊತ್ತ ನೀಡಿ ಚಿತ್ರದ ಪ್ರತಿಯನ್ನು ಪಡೆದು ಪ್ರದರ್ಶಿಸುವುದು ವಾಡಿಕೆ. ಹಿಂದೆ ಬಿಡುಗಡೆ ಪೂರ್ವ ಪ್ರಚಾರ ವೆಚ್ಚವನ್ನು ನಿರ್ಮಾಪಕರೇ ಭರಿಸುತ್ತಿದ್ದರಾದರೂ ಕೆಲವೊಂದು ಸಂದರ್ಭಗಳಲ್ಲಿ ಪ್ರದರ್ಶಕರೂ ಆ ವೆಚ್ಚದ ಬಾಬ್ತು ಒಂದಷ್ಟು ಮೊತ್ತವನ್ನು ಒಟ್ಟಿಗೆ ಅಥವಾ ವಾರದ ಕಂತಿನಲ್ಲಿ ನೀಡುತ್ತಿದ್ದರು. ಚಿತ್ರಗಳ ಪ್ರದರ್ಶನ ಸಂಖ್ಯೆ ಏರಿಸಿದಾಗ ಬೆಳಗಿನ ಪ್ರದರ್ಶನ ಕೇವಲ ಹಳೆಯ ಚಿತ್ರಗಳಿಗೆ ಮೀಸಲಾಗಿತ್ತು. ಅವುಗಳ ಪ್ರವೇಶ ದರವೂ ಕಡಿಮೆ. ಚಿತ್ರಮಂದಿರಗಳ ಮುಂದೆ ಇಳಿಸಿದ ದರಗಳಲ್ಲಿ ಪ್ರದರ್ಶನ ಎಂದು ಫಲಕ ತೂಗು ಹಾಕಲಾಗುತ್ತಿತ್ತು. ಆದರೆ ಅದು ಬದಲಾಗಿ, ಬಿಡುಗಡೆಯಾಗುವ ಹೊಸ ಚಿತ್ರಗಳೇ ಬೆಳಗಿನ ಪ್ರದರ್ಶನವನ್ನೂ ಆಕ್ರಮಿಸಿಕೊಂಡಿವೆ. ಬೆಳಗಿನ ಆಟಗಳ ಪ್ರವೇಶ ದರ ಮಾಮೂಲು ಆಟಗಳ ಪ್ರವೇಶ ದರದಷ್ಟೇ ಆಗಿದೆ.

ಚಿತ್ರೋದ್ಯಮದಲ್ಲಿರುವ ಜನಪ್ರಿಯ ವಾದದ ಪ್ರಕಾರ ಪ್ರದರ್ಶಕರೇ ಸಾಮಾನ್ಯವಾಗಿ ಸುರಕ್ಷಿತ ವ್ಯವಹಾರಸ್ಥರು. ನೇರ ಖರೀದಿ ಮಾಡಿ ಪ್ರದರ್ಶಿಸುವ ಸಂದರ್ಭಗಳನ್ನು ಹೊರತು ಪಡಿಸಿದರೆ ಉಳಿದ ಸಂದರ್ಭಗಳಲ್ಲಿ ನಿಗದಿತ ಬಾಡಿಗ ಅಥವಾ ಶೇಕಡಾವಾರು ಪದ್ಧತಿ ಏನೇ ಆಗಲಿ, ಪ್ರದರ್ಶಕರಿಗೆ ನಷ್ಟವೆಂಬುದಿಲ್ಲ.

ನಿಗದಿತ ಬಾಡಿಗೆ ಅಲ್ಲದ ಸಂದರ್ಭದಲ್ಲಿ ಶೇಕಡಾವಾರು ಆಧಾರದ ಮೇಲೆ ಬಾಡಿಗೆ ಪಡೆಯುವ ಪದ್ಧತಿ ಮೊದಲು ಜಾರಿಯಲ್ಲಿತ್ತಷ್ಟೆ. ಗಳಿಕೆ ಇಳಿಮುಖವಾದಂತೆ ಪ್ರದರ್ಶಕರು ಪಡೆಯುವ ಶೇಕಡಾವಾರು ಮೊತ್ತ ಏರುತ್ತಲೇ ಹೋಗುತ್ತದೆ. ಚಲನಚಿತ್ರ ವಾಣಿಜ್ಯ ಮಂಡಳಿ ಕಾಲ ಕಾಲಕ್ಕೆ ಅವುಗಳ ಪ್ರಮಾಣವನ್ನು ನಿರ್ಧರಿಸುತ್ತಿತ್ತು. ಹೊಸಚಿತ್ರ ಬಿಡುಗಡೆಯ ಸಂದರ್ಭವಲ್ಲಷ್ಟೆ ಈ ವ್ಯವಸ್ಥೆ. ಜಿಲ್ಲಾ ಕೇಂದ್ರಗಳ ಚಿತ್ರಮಂದಿರಗಳಿಗೆ ಇದು ಸೀಮಿತವಾಗಿತ್ತು.

ಚಿತ್ರಮಂದಿರಗಳ ಗಳಿಕೆಯ ಮೇಲೆ ಕಣ್ಣಿಡಲು ವಿತರಕರು ತಮ್ಮ ಪ್ರತಿನಿಧಿಗಳನ್ನು ಅಲ್ಲಿ ಕಳುಹಿಸಿಕೊಡುತ್ತಿದ್ದರು. ಈಗಲೂ ಈ ವ್ಯವಸ್ಥೆ ಇದೆ. ತಮ್ಮ ಚಿತ್ರದ ಗಳಿಕೆಯ ವಿವರವನ್ನು ಆಯಾ ಪ್ರದರ್ಶನದ ನಂತರ ಪಡೆದು ವಿತರಕರಿಗೆ ತಲುಪಿಸುವ ಪ್ರತಿನಿಧಿಗಳು ಕೆಲವೊಮ್ಮೆ ಪ್ರದರ್ಶಕರ ಕೈಗೊಂಬೆಗಳಾಗಿಬಿಡುವ ಉದಾಹರಣೆಗಳು ಇವೆ. ಗಳಿಕೆಯ ಮಾಹಿತಿ ಏರುಪೇರಾಗಿ ಬಿಡುವುದು ಇಂತಹ ಸಂದರ್ಭಗಳಲ್ಲಿಯೇ.

## ಪ್ರದರ್ಶನ ವ್ಯವಹಾರ

ಚಿತ್ರಮಂದಿರಗಳ ಮಾಲೀಕರು, ವಿತರಕರು ಅಥವಾ ನಿರ್ಮಾಪಕರ ನಡುವೆ ನಡೆಯುವ ವ್ಯವಹಾರ ಮಾತ್ರ ಮೊದಲಿನಿಂದಲೂ ಒಂದೇ ರೀತಿ ಇದೆ. ಸಾಮಾನ್ಯವಾಗಿ ಈ ವ್ಯವಹಾರ ನಾಲ್ಕು ರೀತಿಯಲ್ಲಿದೆ: ೧) ಬಾಡಿಗೆ, ೨) ಗಳಿಕೆಯ ಶೇಕಡಾವಾರು, ೩) ಕನಿಷ್ಠ ಮೊತ್ತ ನೀಡಿಕೆ, ೪) ನಿಗದಿತ ಮೊತ್ತ.

**ಬಾಡಿಗೆ:** ಚಿತ್ರಮಂದಿರಗಳ ನಿವ್ವಳ ಗಳಿಕೆಯ ಆಧಾರದ ಮೇಲೆ ಅದರ ಇಂತಿಷ್ಟು ಶೇಕಡಾ ಬಾಡಿಗೆಯಾಗಿ ನಿಗದಿಪಡಿಸಿ ಚಿತ್ರಪ್ರದರ್ಶನ ಮಾಡುವುದು ನಗರ ಪ್ರದೇಶಗಳ ಚಿತ್ರಮಂದಿರಗಳಲ್ಲಿ ವಾಡಿಕೆ. ಹಿಂದೆ ಪ್ರವೇಶ ದರ ಕಡಿಮೆ ಇದ್ದ ಸಂದರ್ಭಗಳಲ್ಲಿ ಚಿತ್ರಮಂದಿರ ಭರ್ತಿಯಾದಾಗ ಆಗುವ ಗಳಿಕೆಯ ಮೂರನೇ ಒಂದು ಭಾಗವನ್ನು ಬಾಡಿಗೆಯಾಗಿ ನಿಗದಿಪಡಿಸುತ್ತಿದ್ದರು. ಪ್ರವೇಶದರ ಹೆಚ್ಚಿದಂತೆಲ್ಲಾ ಬಾಡಿಗೆಯ ಪ್ರಮಾಣವೂ ಹೆಚ್ಚಾಗುತ್ತಿತ್ತು. ಈಚೆಗೆ ಸಿದ್ಧಾಂತ ಬದಲಾಗಿದೆ. ಚಿತ್ರಮಂದಿರದ ನಿರ್ವಹಣೆ ಮಾಲೀಕರ ಕೈಯಿಂದ ಗುತ್ತಿಗೆದಾರರ ಕೈ ಸೇರತೊಡಗಿದ ನಂತರ ಬಾಡಿಗೆ ತೀರಾ ದುಬಾರಿಯಾಗಿದೆ. ಪ್ರತಿಯೊಬ್ಬ ಗುತ್ತಿಗೆದಾರರೂ ತಮ್ಮ ಲಾಭಾಂಶವನ್ನು ಬಾಡಿಗೆಯ ಮೊತ್ತಕ್ಕೆ ಸೇರಿಸುವುದೇ ಅದಕ್ಕೆ ಕಾರಣ. ಈಚೆಗೆ ಚಿತ್ರಮಂದಿರಗಳ ಬಾಡಿಗೆ ಸದಾ ವಿವಾದ - ತಕರಾರುಗಳ ಕೇಂದ್ರ ವಿಷಯವಾಗಿ ಬಿಟ್ಟಿದೆ. ನಿರ್ಮಾಪಕರು ಮತ್ತು ಪ್ರದರ್ಶಕರ ನಡುವೆ ದುಬಾರಿ ಬಾಡಿಗೆಯು ಭಿನ್ನಾಭಿಪ್ರಾಯ ಉಂಟು ಮಾಡಿದೆ. ವಾಕ್ಚಿತ್ರದ ಆರಂಭದ ಮೊದಲ ದಿನಗಳಿಂದಲೂ ಬಾಡಿಗೆ ಪದ್ಧತಿ ಇದ್ದಿತು. ಗುಬ್ಬಿ ವೀರಣ್ಣನವರು ತಮ್ಮ ಚಿತ್ರಮಂದಿರಗಳಾದ ಗೀತಾ (ಸೆಲೆಕ್ಟ್) ಮತ್ತು ಸಾಗರ್‌ಗಳಿಗೆ ಕ್ರಮವಾಗಿ ೬೦೦ ರೂ. ಮತ್ತು ೯೦೦ ರೂ. ಬಾಡಿಗೆ ನಿಗದಿ ಮಾಡಿದ್ದುದಾಗಿ ಹೇಳುತ್ತಾರೆ. ಸಾಗರ್ ಚಿತ್ರಮಂದಿರದ ಬಾಡಿಗೆ ಈಗ ವಾರಕ್ಕೆ ಲಕ್ಷ ರೂ. ದಾಟಿದೆ.

**ಶೇಕಡಾವಾರು ಬಾಡಿಗೆ:** ಚಿತ್ರಮಂದಿರಗಳಲ್ಲಿ ಪ್ರದರ್ಶನವಾಗುವ ಚಿತ್ರಗಳ ಗಳಿಕೆಯ ಆಧಾರದ ಮೇಲೆ ಶೇಕಡಾವಾರು ಬಾಡಿಗೆ ಒಪ್ಪಂದ ಇನ್ನೊಂದು ರೀತಿ. ಇದು ಮೊದಲಿನಿಂದಲೂ ಜಾರಿಯಲ್ಲಿತ್ತು. ಗಳಿಕೆಯ ಮೊತ್ತ ಇಳಿದಂತೆ ಪ್ರದರ್ಶಕರ ಬಾಡಿಗೆಯ ಪರ್ಸೆಂಟೇಜ್ ಏರುತ್ತಿತ್ತು. ವಾಣಿಜ್ಯ ಮಂಡಳಿ ಕಾಲಕಾಲಕ್ಕೆ ಇದರ ಕೋಷ್ಟಕವನ್ನು ಸಿದ್ಧಪಡಿಸಿ ಕೊಡುತ್ತಿತ್ತು. ಉಳಿದ ಸಂದರ್ಭಗಳಲ್ಲಿ ಪ್ರದರ್ಶಕರು ಮತ್ತು ವಿತರಕರು (ನಿರ್ಮಾಪಕರು) ತಾವೇ ಒಂದು ಒಪ್ಪಂದಕ್ಕೆ ಬರುತ್ತಿದ್ದರು. ಯಶಸ್ವಿ ಚಿತ್ರಗಳು ದೀರ್ಘಕಾಲ ಪ್ರದರ್ಶನವಾದ ಸಂದರ್ಭಗಳಲ್ಲಿ, ಪ್ರದರ್ಶಕರಿಗೆ ನಿಗದಿತ ಬಾಡಿಗೆಗಿಂತ ಶೇಕಡಾವಾರು ಬಾಡಿಗೆಗಳೇ ಹೆಚ್ಚು ಅನುಕೂಲಕರಕವಾಗಿ ಪರಿಣಮಿಸುತ್ತಿತ್ತು. ಆದರೆ ಗಳಿಕೆ ಇಳಿಮುಖವಾದಾಗ ಅದು ನಿರ್ಮಾಪಕರಿಗೆ ಅನುಕೂಲ, ಪೂರ್ವ ನಿರ್ಧಾರಿತ ಕನಿಷ್ಠ ಗಳಿಕೆಯನ್ನು ಮುಟ್ಟದಿದ್ದಲ್ಲಿ ಚಿತ್ರವನ್ನು ತೆಗೆದು ಬೇರೆ ಚಿತ್ರ ಪ್ರದರ್ಶಿಸುವ ಹಕ್ಕು ಪ್ರದರ್ಶಕರಿಗೆ ಇರುತ್ತಿತ್ತು.

**ಕನಿಷ್ಠ ಮೊತ್ತ ನೀಡಿಕೆ ಭರವಸೆ :** ಚಿತ್ರವೊಂದರ ಗಳಿಕೆಯ ಸಾಧ್ಯತೆಯ ಮೇಲೆ ಇಷ್ಟು ಕನಿಷ್ಠ ಮೊತ್ತ ನೀಡುತ್ತೇವೆ ಎಂದು ಪ್ರದರ್ಶಿಸುವುದು ಇನ್ನೊಂದು ರೀತಿ. ಚಿತ್ರ ಯಶಸ್ವಿಯಾಗಲಿ, ಸೋಲಲಿ ಒಪ್ಪಂದವಾದ ಮೊತ್ತವನ್ನು ಪ್ರದರ್ಶಕರು ವಿತರಕರಿಗೆ ನೀಡಬೇಕಾಗುತ್ತದೆ. ಗಳಿಕೆ ಏರಿದರೆ ಏರಿಕೆಯ ಮೊತ್ತದಲ್ಲಿ ಹಂಚಿಕೊಳ್ಳುವ ಬಗ್ಗೆ ಮೊದಲೇ ಮಾತನಾಡಿಕೊಂಡಿರುತ್ತಾರೆ. ಕನಿಷ್ಠ ಮೊತ್ತದ ನೀಡಿಕೆಯ ವ್ಯವಹಾರ, ಪ್ರದರ್ಶಕರು ಮತ್ತು ವಿತರಕರಷ್ಟೇ ಅಲ್ಲ, ನಿರ್ಮಾಪಕರು ಮತ್ತು ವಿತರಕರ ನಡುವೆ ಕೂಡ ನಡೆಯುತ್ತದೆ. ಸಾಮಾನ್ಯ ಸಂದರ್ಭಗಳಲ್ಲಿ ಇದು ಎಲ್ಲರಿಗೂ ಅನುಕೂಲಕರವಾದ ವ್ಯಾಪಾರ, ಗಳಿಕೆ ಹೆಚ್ಚಾದಾಗ ನಿರ್ಮಾಪಕರಿಗೂ ಅದರ ಲಾಭಾಂಶ ದೊರೆಯುತ್ತದೆ.

**ನಿಗದಿತ ಮೊತ್ತ (Fixed Hire) :** ಚಿತ್ರೋದ್ಯಮದಲ್ಲಿ ಬಹಳ ಪ್ರಚಲಿತವಿರುವ ವಿಧಾನವಿದು. ನಿರ್ಮಾಪಕರಿಗೆ ಅಥವಾ ವಿತರಕರಿಗೆ ನಿಗದಿತ ಮೊತ್ತ ನೀಡಿ, ನಿಗದಿತ ಅವಧಿಗೆ ಚಿತ್ರ ಪ್ರದರ್ಶಿಸುವ ರೀತಿ ಇದು. ಸಾಮಾನ್ಯವಾಗಿ ನಗರ ಕೇಂದ್ರಗಳ ಚಿತ್ರಮಂದಿರಗಳು ಹಾಗೂ ಸಣ್ಣಪುಟ್ಟ ಕೇಂದ್ರಗಳಲ್ಲಿ ಥಿಯೇಟರುಗಳು ಈ ರೀತಿಯ ವ್ಯವಹಾರ ಮಾಡುತ್ತವೆ. ನಿಗದಿತ ಮೊತ್ತ ನೀಡಿ ಆ ಕೇಂದ್ರಗಳಲ್ಲಿ ನಿಗದಿತ ದಿನಗಳ ಪ್ರದರ್ಶನಕ್ಕಾಗಿ ಚಿತ್ರವನ್ನು ಪಡೆಯುತ್ತವೆ. ನಿಗದಿತ ಮೊತ್ತದ ವ್ಯವಹಾರ ಇಡೀ ಚಿತ್ರೋದ್ಯಮದಲ್ಲಿನ ಅತ್ಯಂತ ಲಾಭದಾಯಕ ವ್ಯವಹಾರವೂ ಹೌದು; ಹಾಗೆಯೇ ನಷ್ಟದ ವ್ಯಾಪಾರವೂ ನಿಜ. ಕೆಲವೊಮ್ಮೆ ಒಂದು ವಾರದ ಅವಧಿಗೆ ಪ್ರದರ್ಶನಕ್ಕೆಂದು ಪಡೆದ ಚಿತ್ರವನ್ನು ವಾರ ಮುಗಿದೊಡನೆ ವಾಪಸು ಕಳುಹಿಸದೆ ಎರಡನೆಯ ವಾರವೂ ಪ್ರದರ್ಶಿಸಿ ವಂಚಿಸಿದ ಘಟನೆಗಳೂ ಇವೆ. ಅಲ್ಲದ ಗಳಿಕೆ ಉತ್ತಮವಾಗಿದ್ದರೂ ಬೇರೆ

ಬೇರೆ ಕಾರಣಗಳನ್ನು ಮುಂದೊಡ್ಡಿ ತಮಗೆ ನಷ್ಟವಾಗಿದೆಯೆಂದು ಗೋಗರೆವ ಪ್ರಸಂಗಗಳೂ ಇವೆ.

ಹಿಂದೆ ಟೂರಿಂಗ್ ಚಿತ್ರಮಂದಿಗಳವರೂ ಶೇಕಡಾವಾರು ಗಳಿಕೆಯ ಆಧಾರದ ಮೇಲೆಯೇ ಕನ್ನಡ ಚಿತ್ರಗಳನ್ನು ಪ್ರದರ್ಶನಕ್ಕ ಪಡೆಯುತ್ತಿದ್ದರು. ಅವರುಗಳಲ್ಲೇ ಮೂಡಿದ ಸ್ಪರ್ಧಾಮನೋಭಾವ ಕನಿಷ್ಠ ನಿಗದಿತ ಪದ್ಧತಿಯಲ್ಲಿ ಚಿತ್ರಗಳನ್ನು ಪ್ರದರ್ಶನಕ್ಕೆ ಪಡೆಯುವಂತಾಗಿಸಿತು ಎಂಬುದು ವಿತರಕ ಗುಪ್ತ ಅವರ ಅನುಭವ.

ಪ್ರದರ್ಶನ ವ್ಯವಸ್ಥೆ ಕನ್ನಡ ಚಿತ್ರಗಳ ಏಳು ಬೀಳುಗಳನ್ನು ನಿಯಂತ್ರಿಸುತ್ತದೆ. ಅಂತಿಮವಾಗಿ ಗಳಿಕೆಯನ್ನು ನಿರ್ಧರಿಸುವುದು ಚಿತ್ರಮಂದಿರಗಳಿಗೆ ಬರುವ ಪ್ರೇಕ್ಷಕರು. ಆ ಗಳಿಕೆಯನ್ನ ಹಂಚಿಕೊಳ್ಳುವವರು ಯಾರೇ ಆಗಲಿ, ಒಂದು ಚಿತ್ರದ ಗಳಿಕೆಯ ಸಾಧ್ಯತೆ ಅಲ್ಲಿ ತಿಳಿಯುತ್ತದೆ.

ಆರಂಭದ ದಿನಗಳಲ್ಲಿ ದೈನಂದಿನ ಪ್ರದರ್ಶನಗಳು ಕಡಿಮೆ, ಪ್ರವೇಶದರವೂ ಕಡಿಮೆ. ಪ್ರದರ್ಶನ ವ್ಯವಸ್ಥೆಯ ನಿಯಂತ್ರಣ ಕೆಲವೇ ಕೆಲವು ಮಂದಿಯ ಕೈಯಲ್ಲಿದೆ. ಹಾಗಾಗಿ ರಾಜ್ಯದಾದ್ಯಂತ ಚಿತ್ರಗಳ ಪ್ರದರ್ಶನ ಮಾಡಲು ಸಾಧ್ಯವಾಗುತ್ತಿಲ್ಲ. ನಿಯಂತ್ರಕರ ಸಂಪರ್ಕದಲ್ಲಿದ್ದವರು ಮಾತ್ರ ಚಿತ್ರಗಳನ್ನು ಬಿಡುಗಡೆ ಮಾಡಲು ಸಾಧ್ಯವೆನ್ನುವ ಆರೋಪ ಸದಾ ಇದೆ.

ಕರ್ನಾಟಕದ ೨೦ ಜಿಲ್ಲಾ ಕೇಂದ್ರಗಳು (ಈಗ ೨೭) ಹಾಗೂ ೨೦೦೦ದವರೆಗೆ ತಾಲೂಕು ಕೇಂದ್ರಗಳ ಸುಮಾರು ೧೨೦೦ ಚಿತ್ರಮಂದಿರಗಳ ಪೈಕಿ ಚಿತ್ರವೊಂದು ಎಲ್ಲ ಕೇಂದ್ರಗಳನ್ನೂ ತಲುಪುವುದು ಅಪರೂಪ. ಯಶಸ್ವಿ ಎನಿಸಿಕೊಂಡ ಚಿತ್ರಗಳು, ಯಶಸ್ವಿ ನಿರ್ಮಾಪಕರ - ವಿತರಕರ ಚಿತ್ರಗಳಿಗೆ ಮಾತ್ರ ಈ ಯೋಗ ಲಭಿಸುತ್ತದೆ. ಒಂದು ಕನ್ನಡ ಚಿತ್ರ ರಾಜ್ಯದ ೧೨೦೦ ಚಿತ್ರಮಂದಿರಗಳಲ್ಲಿ ಕನಿಷ್ಠ ೪೦೦ ಚಿತ್ರಮಂದಿರಗಳಲ್ಲಾದರೂ ಪ್ರದರ್ಶನ ಕಂಡರೆ ನಿರ್ಮಾಪಕರಿಗೆ ನಷ್ಟವಾಗುವುದಿಲ್ಲ. ಆದರೆ ಚಿತ್ರ ಮೊದಲ ಸುತ್ತಿನಲ್ಲೇ ಗಲ್ಲಾಪೆಟ್ಟಿಗೆಯಲ್ಲಿ ವಿಫಲವಾದರೆ ಅಂತಹ ಚಿತ್ರಗಳು ಉಳಿದ ಕೇಂದ್ರಗಳಿಗ ತಲುಪುವುದು ಕಷ್ಟ.

ಪ್ರದರ್ಶನ ವ್ಯವಸ್ಥೆಯಲ್ಲಿ ಪ್ರವೇಶದರವೊಂದನ್ನು ಹೊರತುಪಡಿಸಿ ಆರಂಭದಿಂದ ಇಂದಿನವರೆಗೆ ಹೆಚ್ಚಿನ ಬದಲಾವಣೆಗಳೇನೂ ಆಗಿಲ್ಲ. ಪ್ರದರ್ಶನದ ತಂತ್ರಜ್ಞಾನದಲ್ಲಷ್ಟೆ ಬದಲಾವಣೆಗಳಾಗಿವೆ. ಆರಂಭದಲ್ಲಿ ನೈಟ್ರೇಟ್ ಫಿಲಂಗಳ ಬಳಕೆ ಇತ್ತು, ನಂತರ ಅದು ಬದಲಾಯಿತು. ಕಪ್ಪು ಬಿಳುಪು ಚಿತ್ರಗಳಿಂದ ವರ್ಣ ಚಿತ್ರಗಳು, ಬದಲಾದ ಶಬ್ದತಂತ್ರಜ್ಞಾನ ಇವು ಪ್ರೇಕ್ಷಕ ಕಂಡ ಬದಲಾವಣೆ. ಹಣಕಾಸಿಗ ಸಂಬಂಧಿಸಿದಂತೆ ಹೇಳುವುದಾದರೆ ಪ್ರದರ್ಶಕರಿಗೆ ಪ್ರೇಕ್ಷಕರಿಂದ ಬರುವ ಹಣದಲ್ಲಿ ಕರ ರಹಿತ ಸೇವಾಶುಲ್ಕವೊಂದು ದೊರೆಯತೊಡಗಿದೆ. ಪ್ರೇಕ್ಷಕರಿಗೆ ನೀಡುವ ಸೌಲಭ್ಯಕ್ಕಾಗಿ ನೀಡಲಾಗುವ ಸೇವಾಶುಲ್ಕವನ್ನು ಯಾರು ಹಂಚಿಕೊಳ್ಳಬೇಕು ಎನ್ನುವ ಚರ್ಚೆಯೂ ಕೆಲಕಾಲ ಇತ್ತು. ಪ್ರದರ್ಶಕರು ನೀಡುವ ಪ್ರದರ್ಶನ ತೆರಿಗೆ ಮೊದಲ್ಗೊಂಡು ಎಲ್ಲವನ್ನೂ ನಾವೇ ಭರಿಸುವಾಗ ಸೇವಾಶುಲ್ಕದಲ್ಲಿ ನಮಗ ಪಾಲಿರಬೇಕು ಎನ್ನುವುದು ಒಂದು ವರ್ಗದ ನಿರ್ಮಾಪಕರ ವಾದವಾಗಿತ್ತು.

ಪ್ರದರ್ಶನ ಮಂದಿರಗಳಿಗೆ ಬಂಡವಾಳ ಹೂಡಿಕೆ ಕುರಿತಂತೆ ಕೂಡ ಉದ್ಯಮದಲ್ಲಿ ಇರುವ ಅಭಿಪ್ರಾಯ ಬೇರೆಯೇ. ಚಿತ್ರಮಂದಿರದ ಮಾಲೀಕರಿಗೆ ಒಮ್ಮೆ ಬಂಡವಾಳ ಹೂಡಿದರೆ ಮುಗಿಯಿತು.ಆದರೆ ನಿರ್ಮಾಪಕರು ಹಾಗಲ್ಲ, ಪ್ರತಿ ಚಿತ್ರಕ್ಕೂ ಬಂಡವಾಳ ಹೂಡಬೇಕು. ಸೋಲು ಗೆಲುವಿಗ ತನ್ನನ್ನು ಒಡ್ಡುತ್ತಲೇ ಇರಬೇಕು. ಪ್ರದರ್ಶಕರಿಗೆ ಚಿತ್ರಗಳು ಗೆಲ್ಲಲಿ, ಸೋಲಲಿ, ಹಣ ನಷ್ಟವಾಗುವ ಚಿಂತೆ ಇಲ್ಲ ಎನ್ನುವುದು ಸಾರ್ವತ್ರಿಕ ಅಭಿಪ್ರಾಯ. ಇದನ್ನು ಪ್ರದರ್ಶಕರು ಒಪ್ಪಲು ಸಿದ್ಧರಿಲ್ಲ ಎನ್ನುವುದು ಬೇರ ಮಾತು. ಪ್ರದರ್ಶಕರು ಒಪ್ಪಲಿ, ಬಿಡಲಿ, ಸಾಧಾರಣ ಗಳಿಕೆಯ ಸಂದರ್ಭದಲ್ಲಿ ಸಿಂಹಪಾಲು ಅವರಿಗೆ ಸಲ್ಲುತ್ತದ ಎನ್ನುವುದರಲ್ಲಿ ಎರಡು ಮಾತಿಲ್ಲ.

ಚಿತ್ರವೊಂದು ಬಿಡುಗಡೆಯಾದ ಮೊದಲ ಕೆಲವು ದಿನಗಳ ಗಳಿಕೆಯ ಆಧಾರದ ಮೇಲೆ ಇತರ ಪ್ರದೇಶಗಳಲ್ಲಿ ವ್ಯಾಪಾರವಾಗುವುದೂ ಇದೆ. ಪ್ರದರ್ಶಕರು ನಿಗದಿತ ಆಧಾರದ ಮೇಲೆ ಚಿತ್ರಗಳನ್ನು ಪಡೆಯುತ್ತಿದ ರೀತಿಯಲ್ಲಿಯೇ ವಿತರಕರೂ ವ್ಯಾಪಾರ ಮಾಡುವುದಿದೆ. ನಿಗದಿತ ಮೊತ್ತ ಮತ್ತು ಕನಿಷ್ಠ ಮೊತ್ತಗಳ ವ್ಯವಹಾರ ಪ್ರದರ್ಶಕ ಮತ್ತು ವಿತರಕರ ನಡುವೆ ಮಾತ್ರವಲ್ಲ, ವಿತರಕರು ಹಾಗೂ ನಿರ್ಮಾಪಕರ ನಡುವೆಯೂ ನಡೆಯುತ್ತದ.

ಚಲನಚಿತ್ರ ಮನರಂಜನೆಯ ಮಾಧ್ಯಮವಾಗಿರುವುದರಿಂದ ಸರ್ಕಾರ ಅದಕ್ಕ ಮನರಂಜನಾ ತೆರಿಗೆ ವಿಧಿಸುತ್ತದೆ. ಈಗ ಕನ್ನಡ ಚಿತ್ರಗಳಿಗ ಮನರಂಜನಾ ತೆರಿಗ ಮನ್ನಾ ಮಾಡಲಾಗಿದೆ. ೬೦-೭೦ರ ದಶಕಗಳಲ್ಲಿ ಚಿತ್ರವೊಂದರ ಸರಾಸರಿ ಗಳಿಕೆಯಲ್ಲಿ ವಿವಿಧ ವಿಭಾಗಗಳು ಪಡೆಯುವ ಮೊತ್ತವನ್ನು ಹೀಗೆ ವಿಭಾಗಿಸಲಾಗುತ್ತಿತ್ತು. ಪ್ರತಿ ರೂಪಾಯಿ ಗಳಿಕೆಯಲ್ಲಿ ಮನರಂಜನಾ ತೆರಿಗೆ ರೂಪದಲ್ಲಿ ೫೪ ಪೈಸೆ ಸರ್ಕಾರದ ಬೊಕ್ಕಸಕ್ಕೆ ಸಲ್ಲುತ್ತಿತ್ತು. ೨೭ ಪೈಸೆ ಪ್ರದರ್ಶಕರ ಪಾಲು, ೪ ರಿಂದ ೬ ಪೈಸೆ ವಿತರಕರಿಗೆ, ಉಳಿದ ೧೩ ರಿಂದ ೧೫ ಪೈಸೆ ಮಾತ್ರ ನಿರ್ಮಾಪಕರಿಗೆ.

ಪ್ರವೇಶದರ ಬಹಳ ಕಡಿಮೆ ಇದ್ದ ದಿನಗಳಲ್ಲಿ ನಗರ ಪ್ರದೇಶಗಳಲ್ಲಿ ಬಾಲ್ಕನಿ ತರಗತಿಗ ೧೨ ಆಣೆ, ಏಳೂಮುಕ್ಕಾಲು ಆಣೆ, ಕೆಳಗೆ ಆರಾಣೆ, ನಾಲ್ಕಾಣೆ ಹಾಗೂ ಎರಡಾಣೆ ಇದ್ದಿತು. ಇದು ಮನರಂಜನಾ ತೆರಿಗೆಯೂ ಸೇರಿದಂತೆ ಪ್ರವೇಶ ದರ. ಎರಡಾಣೆ ಕ್ಲಾಸು, ಮೂರೂಮುಕ್ಕಾಲಾಣೆಯಾಯಿತು. ಈಗ ಬಾಲ್ಕನಿ ತರಗತಿಗೆ ೪೦-೪೫ರೂ.ಗಳಾಗಿದ್ದು, ಕೆಳಗಿನ ತರಗತಿಯ ಆರಂಭದ ಮೊತ್ತವೇ ೨೦ ರೂ. ಆಗಿದ.

## ಮಾರುಕಟ್ಟೆ ವಿಶ್ಲೇಷಣೆ

ಕನ್ನಡ ಚಿತ್ರಗಳ ಮಾರುಕಟ್ಟೆಯನ್ನು ಕುರಿತಂತೆ ಮೊದಲಿನಿಂದಲೂ ವೈಜ್ಞಾನಿಕ ರೀತಿಯಲ್ಲಿ ವಿಶ್ಲೇಷಣೆ ನಡೆದಿಲ್ಲ. ಅದರ ಗಳಿಕೆಯ ಸಾಧ್ಯತೆಯನ್ನು ಕುರಿತಂತೆ ಯಾರೂ ಗಂಭೀರ ಅಧ್ಯಯನ ಕೈಗೊಂಡಿಲ್ಲ. ಪರಭಾಷಾ ಚಿತ್ರಗಳು ಹೆಚ್ಚು ಹೆಚ್ಚು ಪ್ರದರ್ಶನವಾಗುತ್ತಿದ್ದುದರಿಂದ ಕನ್ನಡ ಚಿತ್ರಗಳ ವ್ಯಾಪಾರ ಸಾಧ್ಯತೆ ಬಗ್ಗೆ ತಿಳಿಯುವ ಪ್ರಯತ್ನಗಳೇ ನಡೆಯಲಿಲ್ಲ. ನಿರ್ಮಾಪಕರು ಉಳಿದ ಉದ್ಯಮಗಳಲ್ಲಿಯಂತೆ ವ್ಯವಹಾರ ಸಾಧ್ಯತೆಯನ್ನು ಅರಿಯುವ, ಅಧ್ಯಯನ ಮಾಡುವ ಯೋಚನೆಯನ್ನೂ ಮಾಡಲಿಲ್ಲ. ಆರಂಭದ ದಿನಗಳಿಂದಲೂ ಇಲ್ಲಿನ ವ್ಯವಹಾರಗಳು ನೇರವಾಗಿಲ್ಲ, ಪಾರದರ್ಶಕ ಅಲ್ಲ ಎನ್ನುವುದು ಉದ್ಯಮದಲ್ಲಿನ ಅವರಿವರ ಮಾತುಗಳಲ್ಲಿ ತಿಳಿಯಬಹುದು. ಗಳಿಕೆ ಮೂರು ವಲಯಗಳ ನಡುವೆ ಸರಿಸಮನಾಗಿ ಹಂಚಿಕೆಯಾಗುತ್ತಿರಲಿಲ್ಲ ಎನ್ನುವುದಕ್ಕೆ ನಿರ್ಮಾಪಕ ಬಿ.ವಿಠಲಾಚಾರ್ಯರ ಈ ಮಾತುಗಳು ಸಾಕ್ಷಿ. ''...'ಕೃಷ್ಣ ಸುಧಾಮ', 'ರಾಧಾರಮಣ', 'ಸುಭದ್ರ', 'ಸದಾರಮೆ' ಮುಂತಾದ ಚಿತ್ರಗಳು 'ಫೈಲ್ಯೂರ್' ಅಂತ ವಾರಕ್ಕೆ ೫೦ ರೂಪಾಯಿ ಬಾಡಿಗೆಗ ಕೊಡುತ್ತಿದ್ದರು. ಆದರೆ ಟೂರಿಂಗ್ ಟಾಕೀಸ್‌ಗಳಲ್ಲಿ ನಮಗೆ ದಿನಕ್ಕೆ ಮುನ್ನೂರು ರೂಪಾಯಿ ಬರುತ್ತಿತ್ತು. ಈಗಲೂ ಅಷ್ಟೆ, ಯಾವುದೇ ಚಿತ್ರ ನಗರದಲ್ಲಿ 'ಫೈಲ್ಯೂರ್' ಅಂದ್ರೆ ಅದನ್ನು ಕಡಿಮೆ ಬಾಡಿಗೆಗೆ ಕೊಡ್ತಾರೆ. ಆದರಿಂದ ಒಳ್ಳೆಯ ಲಾಭ ಬರುತ್ತದೆ.'' ವಿಠಲಾಚಾರ್ಯರು ೪೦ರ ದಶಕದಲ್ಲಿ ಟೆಂಟ್ ಸಿನಿಮಾ ನಡೆಸುತ್ತಿದ್ದವರು. ಅವರು ಉದಾಹರಿಸಿದ ಚಿತ್ರಗಳೆಲ್ಲವೂ ಆರಂಭದ ದಿನಗಳವು. ಚಿತ್ರಗಳು ಹಣ ಗಳಿಕೆಯಲ್ಲಿ ಸೋತಿವೆ ಎಂದು ದಾಖಲೆಯಾದರೂ ಕ್ರಮೇಣ ಅವು ಹಣ ಗಳಿಸಿದ್ದವು. ಆದರೆ ಆ ಗಳಿಕೆ ನಿರ್ಮಾಪಕರಿಗೆ ದೊರೆಯದಿರುವುದಕ್ಕೆ ಕಾರಣವಿಲ್ಲದೆ ಇಲ್ಲ. ಚಿತ್ರ ಬಿಡುಗಡೆಯ ಮೊದಲ ಸುತ್ತಿನಲ್ಲಿ ಸೋತಾಗ ನಂತರದಲ್ಲಿ ಅದನ್ನು ಕಡಿಮೆ ಮೊತ್ತದ ನಿಗದಿತ ಬಾಡಿಗ ( fixed hire )ಗೆ ಕೊಡುವ ಪದ್ಧತಿ ಇದ್ದು, ಆ ಪದ್ಧತಿಯಂತ ಪ್ರದರ್ಶನಕ್ಕೆ ಚಿತ್ರವನ್ನು ಪಡೆದ ಚಿತ್ರಮಂದಿರಗಳವರಿಗೆ ಎಷ್ಟೇ ಹೆಚ್ಚು ಗಳಿಕೆಯಾದರೂ ಆ ಗಳಿಕೆ ನಿರ್ಮಾಪಕರಿಗ ದೊರೆಯುವುದಿಲ್ಲ. ಹೀಗಾಗಿ ಕೆಲವು ಚಿತ್ರಗಳು ಈ ಪದ್ಧತಿಯಲ್ಲಿ ಚಿತ್ರಮಂದಿರದವರಿಗೆ ಕೊಟ್ಟಾಗ ಮೊದಲ ಸುತ್ತಿನ ಬಿಡುಗಡೆಗಿಂತ ಹೆಚ್ಚು ಮೊತ್ತ ಸಂಪಾದಿಸಿರುವುದುಂಟು. ಅದು ಪ್ರದರ್ಶಕರು ಗಳಿಸಿದ ಲಾಭವಾಗುತ್ತದೆಯೇ ಹೊರತು ನಿರ್ಮಾಪಕನ ಪಾಲಿಗೆ ಸೇರುವುದಿಲ್ಲ.

ಜಿಲ್ಲಾವಾರು ಹಂಚಿಕ ಪದ್ಧತಿ ಬರುವವರೆವಿಗೂ ಮೈಸೂರು ಪ್ರಾಂತ್ಯ, ಮುಂಬೈ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕ ಎಂದು ಮೂರು ವಿಭಾಗಗಳಲ್ಲಿ ಕನ್ನಡ ಚಿತ್ರಗಳ ಹಂಚಿಕಾ ವ್ಯವಸ್ಥೆ ಇದ್ದಿತು. ಹಳೇ ಮೈಸೂರು ವಿಭಾಗ ದೊಡ್ಡದಾಗಿದ್ದು, ಹೆಚ್ಚಿನ ಗಳಿಕ ಆ ವಿಭಾಗದಲ್ಲಾಗುತ್ತಿತ್ತು. ಉಳಿದ ಎರಡು ವಿಭಾಗಗಳಲ್ಲಿ ಹಿಂದಿ ಭಾಷೆಯ ಚಿತ್ರಗಳ ಪ್ರಾಬಲ್ಯವಿದ್ದು, ಕನ್ನಡ ಚಿತ್ರಗಳ ಗಳಿಕೆ ಕಡಿಮೆ ಇದ್ದಿತು. ಅಂದರೆ ಶೇ.೬೫ ಹಳೇ ಮೈಸೂರಿನಲ್ಲಾದರೆ ಮುಂಬೈ ಕರ್ನಾಟಕದಲ್ಲಿ ಶೇ. ೨೦ ಹಾಗೂ ಹೈದರಾಬಾದ್ ಕರ್ನಾಟಕದಲ್ಲಿ ಶೇ.೧೫ರಷ್ಟಾಗುತ್ತಿತ್ತು. ಸಾಮಾನ್ಯವಾಗಿ ಹಿಂದೆ ಕನ್ನಡ ಚಿತ್ರವೊಂದರ ಎಂಟು-ಹತ್ತು ಪ್ರತಿಗಳನ್ನು (ಪ್ರಿಂಟ್ಸ್) ಸಿದ್ಧಪಡಿಸುತ್ತಿದ್ದು, ಅಷ್ಟನ್ನೂ ಹಳೇ ಮೈಸೂರಿನ ವಿಭಾಗದ ವಿತರಕರಿಗ ಒಪ್ಪಿಸಲಾಗುತ್ತಿತ್ತು. ಭಾರೀ ಬಜೆಟ್ ಚಿತ್ರಗಳೆಂದರೆ ಸ್ವಲ್ಪ ಹೆಚ್ಚು ಪ್ರತಿಗಳನ್ನು ತಗೆಯಲಾಗುತ್ತಿತ್ತು. ಅತ್ಯಲ್ಪ ವೆಚ್ಚದ ಚಿತ್ರಗಳವರು ಐದರಿಂದ ಎಂಟು ಪ್ರತಿ ಮಾಡಿಸುತ್ತಿದ್ದರು. ಹಳೇ ಮೈಸೂರು ಪ್ರಾಂತ್ಯದ ಹಂಚಿಕೆದಾರರು ತಮ್ಮ ವಿಭಾಗದ ಚಿತ್ರಮಂದಿರಗಳಿಗ ಚಿತ್ರದ ಪ್ರಿಂಟ್‌ಗಳನ್ನು ಕಳುಹಿಸಿ ಪ್ರದರ್ಶನ ವ್ಯವಸ್ಥೆ ಮಾಡುತ್ತಿದ್ದರು. ಮೊದಲ ಹಂತದ ಎಕ್ಸ್‌ಪ್ಲಾಯ್‌ಟೇಶನ್ ನಂತರ ಮುಂಬೈ ಕರ್ನಾಟಕದ ವಿತರಕರಿಗೆ ಎರಡು ಪ್ರತಿ ಮತ್ತು ಹೈದರಾಬಾದ್ ಕರ್ನಾಟಕದವರಿಗೆ ಒಂದು ಪ್ರತಿಯನ್ನು ಹಳೇ ಮೈಸೂರು ವಿಭಾಗದ ಹಂಚಿಕೆದಾರರೇ ಲೆಂಡ್‌ಪ್ರಿಂಟಾಗಿ

ಕಳುಹಿಸಿಕೊಡುತ್ತಿದ್ದರು. ಹೀಗೆ ಚಾಲ್ತಿಯಲ್ಲಿದ್ದ ಹಂಚಿಕೆ ವ್ಯವಸ್ಥೆಯು ಒಂದು ರೀತಿಯಲ್ಲಿ ಶಿಸ್ತು ಬದ್ಧವಾಗಿಯೇ ನಡೆದುಕೊಂಡು ಬಂದಿತು. ಈ ವಿತರಣೆಯ ಹಕ್ಕು ಮೂರು ವರ್ಷ, ಐದು ವರ್ಷ ಹಾಗೂ ಹತ್ತು ವರ್ಷಗಳ ಅವಧಿಯದಾಗಿರುತ್ತಿತ್ತು. ಚಿತ್ರ ನಿರ್ಮಾಣ ಸಂದರ್ಭದಲ್ಲಿ ಒದಗಿಸಲಾದ ಹಣ ಬಿಡುಗಡೆಯಾದ ಹನ್ನೊಂದು ತಿಂಗಳೊಳಗಾಗಿ ಚಿತ್ರ ಗಳಿಸಿಕೊಡಬೇಕಾಗಿತ್ತು.

ಒಂದು ವೇಳೆ ಯಾವುದೇ ಚಿತ್ರ ಗಳಿಕೆಯಲ್ಲಿ ಸೋತರೆ, ನಿರ್ಮಾಪಕರು ಪ್ರತಿಷ್ಠಿತರೆನಿಸಿದ್ದಲ್ಲಿ ವಿತರಕರೇ ಇನ್ನೊಂದು ಚಿತ್ರದ ನಿರ್ಮಾಣಕ್ಕೆ ಮತ್ತೆ ಬಂಡವಾಳದ ನೆರವು ನೀಡುತ್ತಿದ್ದರು. ಹಾಗೆಯೇ ಕೆಲವು ಪ್ರತಿಷ್ಠಿತ ನಿರ್ಮಾತೃಗಳೂ ವಿತರಕರಿಗೆ ನಷ್ಟ ಉಂಟಾದ ಸಂದರ್ಭಗಳಲ್ಲಿ ಆ ನಷ್ಟ ಕಟ್ಟಿಕೊಟ್ಟುದೂ ಇದೆ. ರಾಜ್‌ಕಪೂರ್ ತಮ್ಮ ಮಹತ್ವಾಕಾಂಕ್ಷೆಯ ಚಿತ್ರವೊಂದು ನೆಲಕಚ್ಚಿದಾಗ, ತಕ್ಷಣವೇ ಮತ್ತೊಂದು ಚಿತ್ರ ಮಾಡಿ ಬೇರೆ ವಿತರಕರು ಅಧಿಕ ಮೊತ್ತ ನೀಡಲು ಮುಂದೆ ಬಂದಿದ್ದರೂ ನಷ್ಟಕ್ಕೊಳಗಾದ ಹಿಂದಿನ ವಿತರಕರಿಗೇ ನೀಡಿದ ಉದಾಹರಣೆ ಇದೆ. ಹಾಗೆಯೇ ವಿ.ಶಾಂತಾರಾಂ ತಮ್ಮ ಚಿತ್ರವೊಂದರ ಬಗ್ಗೆ ಅಪಸ್ವರ ಬಂದಾಗ, ಆ ಚಿತ್ರದ ಪ್ರತಿಗಳನ್ನು ಹಿಂದಕ್ಕೆ ತರಿಸಿಕೊಂಡು ಮುಂದಿನ ಚಿತ್ರವನ್ನು ಆ ವಿತರಕರಿಗೇ ಕೊಟ್ಟ ನಿದರ್ಶನವೂ ಇದೆ. ಕೆಲವು ಪ್ರತಿಷ್ಠಿತ ನಿರ್ಮಾಪಕರ ಚಿತ್ರಗಳನ್ನು ಕೆಲವು ಹಂಚಿಕಾ ಸಂಸ್ಥೆಗಳು ಸತತ ವಿತರಣೆ ಮಾಡಿದ್ದೂ ಇದೆ. ಗುಬ್ಬಿ ಕರ್ನಾಟಕ ಹಾಗೂ ಎವಿಎಂ ಸಂಸ್ಥೆಗಳ ಚಿತ್ರಗಳನ್ನು ಕರ್ನಾಟಕ ಫಿಲಂಸ್, ವಿಜಯ-ವಾಹಿನಿ ಸಂಸ್ಥೆಗಳ ಚಿತ್ರಗಳನ್ನು ವಿಜಯ ಟಾಕೀ ಡಿಸ್ಟ್ರಿಬ್ಯೂಟರ್ಸ್ (ಈಗ ವಿಜಯ ಪಿಕ್ಚರ್ಸ್ ಸರ್ಕ್ಯೂಟ್) ವಿತರಣೆ ಮಾಡಿದಂತೆಯೇ ಬಿ.ಆರ್.ಪಂತಲು, ಬಿ.ಎಸ್.ರಂಗಾ ಅವರ ಚಿತ್ರಗಳಿಗೆಂದೇ ಪ್ರತ್ಯೇಕ ವಿತರಕರೂ ಇದ್ದರು.

ಹಿಂದೆ ವಿತರಕರು ತಮ್ಮ ಹಂಚಿಕೆಯಲ್ಲಿನ ಯಾವುದೇ ಗಳಿಕೆಯಲ್ಲಿ ವಿಫಲವಾದಲ್ಲಿ, ತಮ್ಮಲ್ಲಿರುವ ಯಶಸ್ವಿ ಚಿತ್ರದ ಪ್ರದರ್ಶನ ಮಾಡಲು ಮುಂದೆ ಬರುವ ಪ್ರದರ್ಶಕರಿಗೆ ಒತ್ತಾಯ ಮಾಡಿ ವಿಫಲ ಚಿತ್ರವನ್ನೂ ಪ್ರದರ್ಶಿಸುವಂತೆ ಮಾಡಿ ನಿರ್ಮಾಪಕರಿಗಾಗುತ್ತಿದ್ದ ನಷ್ಟವನ್ನು ತುಂಬಿಕೊಡಲು ಶಕ್ತಿಮೀರಿ ಪ್ರಯತ್ನಿಸುತ್ತಿದ್ದರು.

ಪ್ರದರ್ಶಕರು ಯಶಸ್ವಿ ಚಿತ್ರವನ್ನು ಪ್ರದರ್ಶಿಸುವ ಮೂಲಕ ಹಣ ಹಾಗೂ ಪ್ರತಿಷ್ಠೆಗಳನ್ನು ಗಳಿಸುತ್ತಿದ್ದುದರಿಂದ ವಿತರಕರ ಒತ್ತಾಯಕ್ಕೆ ಮಣಿದು ಮೊದಲ ಸುತ್ತಿನ ಪ್ರದರ್ಶನದಲ್ಲಿ ಗಳಿಕೆಯಲ್ಲಿ ವಿಫಲವೆನಿಸಿದ ಚಿತ್ರಗಳನ್ನು ಕಡಿಮೆ ಅವಧಿಗಾದರೂ ಪ್ರದರ್ಶಿಸಿ, ಒಂದಷ್ಟು ಹಣ ಸಂಪಾದಿಸಿಕೊಡುತ್ತಿದ್ದರು. ವಿತರಕರ ಈ ವ್ಯವಹಾರದಿಂದಾಗಿ ಎಷ್ಟೋ ಕನ್ನಡ ಚಿತ್ರಗಳು ಸೋಲಿನ ದವಡೆಯಿಂದ ಪಾರಾಗಿ ಅಲ್ಲಿಂದಲ್ಲಿಗೆ ಎಂಬಂಥ ವರಮಾನ ಪಡೆಯಲು ಸಾಧ್ಯವಾಗುತ್ತಿತ್ತು.

ಆ ದಿನಗಳಲ್ಲಿ ಹಂಚಿಕಾ ವ್ಯವಸ್ಥೆಯಲ್ಲದೆ, ಈಗಿನಂತೆ ನೇರ ಖರೀದಿ ವ್ಯವಹಾರವೂ ಇದ್ದಿತು. ಹಳೆಯ ಮೈಸೂರು ಪ್ರಾಂತ್ಯಕ್ಕೆ ಚಿತ್ರಗಳು ಮಾರಾಟವಾಗುತ್ತಲೂ ಇದ್ದವು. ಆಗ ವರ್ಷದಲ್ಲಿ ೩೦-೪೦ ಚಿತ್ರಗಳು ಬರುತ್ತಿದ್ದುದರಿಂದ ಒಂದು ರೀತಿಯ ಆರೋಗ್ಯಕರ ಸ್ಪರ್ಧೆಯೂ ಇದ್ದಿತು. ೧೯೩೩ರಿಂದಲೂ ವಿತರಕರಾಗಿರುವ ಬೃಂದಾವನ್ ಫಿಲಂಸ್‌ನ ಬಿ.ಎನ್.ಸೂರಪ್ಪನವರ ಪ್ರಕಾರ ೧೯೪೨ರಲ್ಲಿ ತೆರೆಕಂಡ 'ಭಕ್ತ ಪ್ರಹ್ಲಾದ' ಚಿತ್ರವನ್ನು ಪ್ರಿಂಟ್‌ಗಳ ಸಹಿತ ೯೮ ಸಾವಿರ ರೂ.ಗಳಿಗೆ ಮೈಸೂರು ಫಿಲಂ ಕಾರ್ಪೊರೇಷನ್ ಕೊಂಡುಕೊಂಡಿತ್ತು. ಅಖ್ತರ್ ಸೈಯದ್ ಹುಸೇನ್ ಆ ಸಂಸ್ಥೆಯ ಮುಖ್ಯಸ್ಥರು. ಆರಂಭದ ದಿನಗಳಲ್ಲಿ 'ಸತಿ ಸುಲೋಚನಾ' ಚಿತ್ರ ವಿತರಿಸಿದ ಯುನೀಕ್ ಪಿಕ್ಚರ್ಸ್‌ನವರು 'ಸಂಸಾರನೌಕ', 'ಪುರಂದರದಾಸ' ಚಿತ್ರಗಳನ್ನು ವಿತರಿಸಿದರು. ಇವರೂ ಮೂಲತಃ ಪರಭಾಷಾ ಚಿತ್ರವಿತರಕರೇ. ಬೆಂಗಳೂರಿನ ಗಾಂಧಿನಗರ ಚಲನಚಿತ್ರ ಹಂಚಿಕೆದಾರರ ತವರುಮನೆಯಾಗಿದ್ದು ಎಲ್ಲ ಭಾರತೀಯ ಭಾಷೆಗಳ ಹಂಚಿಕೆಯೂ ಇಲ್ಲಿನ ವಿತರಕರಿಂದ ನಡೆಯುತ್ತಿತ್ತು. ತಲ್ಲಂ ಪಿಕ್ಚರ್ಸ್, ಶಾಂತಾ ಪಿಕ್ಚರ್ಸ್, ಶೋಭನಾಚಲ ಪಿಕ್ಚರ್ಸ್, ಯಶೋಧರಾ ಫಿಲಂಸ್, ವಿಜಯಾ ಟಾಕೀ ಡಿಸ್ಟ್ರಿಬ್ಯೂಟರ್ಸ್ ಮತ್ತು ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್, ಶ್ರೀಕಾಂತ್ ಅಂಡ್ ಶ್ರೀಕಾಂತ್ ಪಿಕ್ಚರ್ಸ್, ಪ್ರಕಾಶ್ ಪಿಕ್ಚರ್ಸ್, ವೀನಸ್ ಮೂವೀಸ್, ವಿಕ್ರಂ ಪಿಕ್ಚರ್ಸ್, ಶಾಸ್ತ್ರಿ ಫಿಲಂ ಡಿಸ್ಟ್ರಿಬ್ಯೂಟರ್ಸ್, ಭಂಡಾರಿ ಮೂವೀಸ್, ಈಶ್ವರಿ ಪಿಕ್ಚರ್ಸ್, ಕೆ.ಸಿ.ಎನ್.ಮೂವೀಸ್, ಎವರ್‌ಷೈನ್ ಪಿಕ್ಚರ್ಸ್, ವಾಣಿ ಫಿಲಂ ಡಿಸ್ಟ್ರಿಬ್ಯೂಟರ್ಸ್, ಅಜಂತಾ ಕಂಬೈನ್ಸ್, ಹಂಸ ಪಿಕ್ಚರ್ಸ್, ಮಾಂಡ್ರೆ ಪಿಕ್ಚರ್ಸ್ ಹೀಗೆ ಹಲವಾರು ಹಂಚಿಕಾ ಸಂಸ್ಥೆಗಳು ನಿರ್ಮಾಪಕರು ಹಾಗೂ ಪ್ರದರ್ಶಕರ ನಡುವಣ ಸೇತುವಾಗಿದ್ದವು.

ಮೊದಲಿನ ಎರಡು ದಶಕಗಳಲ್ಲಿ ಚಿತ್ರೋದ್ಯಮ ಕಾರ್ಪೊರೇಟ್ ಸಂಸ್ಥೆಗಳ ಮೂಲಕವೇ ಹೆಜ್ಜೆ ಇಟ್ಟಿತು. ನಿರ್ಮಾಣ ಸಂಸ್ಥೆಗಳು ಹಾಗೂ ಹಂಚಿಕಾ ಸಂಸ್ಥೆಗಳು ಕಾರ್ಪೊರೇಟ್ ಆಗಿದ್ದವು. ಎಲ್ಲವೂ ನೋಂದಣಿಯಾಗಿದ್ದವು. ವ್ಯವಹಾರದಲ್ಲಿ ಬಹಳಷ್ಟು ಪಾರದರ್ಶಕತೆ ಇರುತ್ತಿತ್ತು. ಭಾಷಾವಾರು ಪ್ರಾಂತ್ಯ ವಿಂಗಡಣೆಯ ನಂತರ ಕನ್ನಡ ಚಿತ್ರರಂಗದ ಮಾರುಕಟ್ಟೆಯಲ್ಲಿ ಸ್ವಲ್ಪ ಮಟ್ಟಿನ ವಿಸ್ತರಣೆ ಕಾಣಬಂದಿತು. ಹಳೇ ಮೈಸೂರು ಪ್ರಾಂತದೊಂದಿಗೆ ಕೊಡಗು, ದಕ್ಷಿಣಕನ್ನಡ, ಉತ್ತರ ಕರ್ನಾಟಕ, ಬಾಂಬೆ ಕರ್ನಾಟಕ ಹಾಗೂ ಹೈದರಾಬಾದ್ ಕರ್ನಾಟಕ ಪ್ರದೇಶಗಳೂ ಸೇರ್ಪಡೆಯಾದವು. ೧೯೮೫ರ ವರೆವಿಗೂ ಬೆಂಗಳೂರಿನಿಂದ ರಾಜ್ಯದ ಉದ್ದಗಲಕ್ಕೂ ನಿಯಂತ್ರಿತವಾಗುವ ಕೇಂದ್ರೀಯ ಹಂಚಿಕಾ ವ್ಯವಸ್ಥೆ ಇದ್ದಿತು. ೫೦ರ ದಶಕದಿಂದ ೮೦ರ ದಶಕದ ಮಧ್ಯದವರೆಗೆ ಕನ್ನಡ ಚಿತ್ರಗಳ ವಿತರಣೆಗೇ ಸೀಮಿತವಾದ ಕೆಲವು ಹಂಚಿಕಾ ಸಂಸ್ಥೆಗಳೂ ಆರಂಭವಾದವು. ಕನ್ನಡಕ್ಕೆಂದೇ ಸ್ಥಾಪನೆಯಾದುದು ಗುಬ್ಬಿ ವೀರಣ್ಣನವರ ಪ್ರಯತ್ನದಿಂದ ಆರಂಭವಾದ ಕರ್ನಾಟಕ ಫಿಲಂಸ್. ಇದು ಲಿಮಿಟೆಡ್ ಸಂಸ್ಥೆ. ಈ ಸಂಸ್ಥೆ ಮೊದಲು ವಿತರಿಸಿದ ಕನ್ನಡ ಚಿತ್ರ 'ಕೃಷ್ಣಸುಧಾಮ'. ಆ ದಿನಗಳಲ್ಲಿ ಭಾರಿ ಸುದ್ದಿ ಮಾಡಿದ 'ಜಗನ್ಮೋಹಿನಿ' ಚಿತ್ರವನ್ನು ವಿತರಣೆ ಮಾಡಿದ ಹೆಮ್ಮೆ ಶಾಂತಾ ಪಿಕ್ಚರ್ಸ್‌ನವು. ಕೆ.ಎಲ್. ಶಾಮಣ್ಣ, ಕೆ.ವೆಂಕಟಸುಬ್ಬಶೆಟ್ಟಿ ಮತ್ತು ಎಸ್.ವಿ.ಗೋಪಾಲಶೆಟ್ಟಿ ಈ ಮೂವರೂ ಶಾಂತಾ ಪಿಕ್ಚರ್ಸ್ ಸಂಸ್ಥೆಯ ಆಧಾರಸ್ತಂಭಗಳು. ನಂತರ ಹಲವು ಕನ್ನಡ ಚಿತ್ರಗಳ ಹಂಚಿಕಾ ಸಂಸ್ಥೆಗಳು ಸ್ಥಾಪನೆಯಾದವು. ಈ ಹಂಚಿಕಾ ಪದ್ಧತಿಯು ಜಿಲ್ಲಾವಾರು ಹಂಚಿಕಾ ವ್ಯವಸ್ಥೆಯ ಆರಂಭದವರೆವಿಗೂ ಅಬಾಧಿತವಾಗಿ ನಡೆದುಕೊಂಡು ಬಂದಿತು.

## ಹಂಚಿಕೆ ವಿಕೇಂದ್ರೀಕರಣ

೧೯೮೫ರ ನಂತರದಲ್ಲಿ ಚಿತ್ರಹಂಚಿಕಾ ವ್ಯವಸ್ಥೆಯಲ್ಲಿ ಬದಲಾವಣೆ ಆಯಿತು. ನೆರೆಯ ರಾಜ್ಯಗಳಲ್ಲಿದ್ದಂತೆ ಹಂಚಿಕಾ ವ್ಯವಸ್ಥೆಯ ವಿಕೇಂದ್ರೀಕರಣವಾಯಿತು. ಬೇರೆ ಬೇರೆ ಪ್ರಮುಖ ಕೇಂದ್ರಗಳಲ್ಲಿ ಆಗುತ್ತಿದ್ದ ಗಳಿಕೆ ಹಾಗೂ ನಿರ್ಮಾಪಕರಿಗೆ ಬರುತ್ತಿದ್ದ ಪಾಲಿನಲ್ಲಿ ಗಣನೀಯ ವ್ಯತ್ಯಾಸ ಈ ಬೆಳವಣಿಗೆಗೆ ಕಾರಣವಾಯಿತು. ಜಿಲ್ಲಾವಾರು ಹಂಚಿಕೆಗೆ ಇಡೀ ರಾಜ್ಯದ ಜಿಲ್ಲೆಗಳನ್ನು ಏಳು ವಲಯಗಳಾಗಿ ವಿಭಾಗಿಸಲಾಯಿತು. ಅವು ಹೀಗಿವೆ :

೧. ಬೆಂಗಳೂರು, ಕೋಲಾರ, ತುಮಕೂರು (ಬೆಂಗಳೂರು ಗ್ರಾಮಾಂತರವೂ ಸೇರಿದಂತೆ)

೨. ಮೈಸೂರು, ಮಂಡ್ಯ, ಕೊಡಗು, ಹಾಸನ (ಚಾಮರಾಜನಗರ ಸೇರಿದಂತೆ)

೩. ಶಿವಮೊಗ್ಗ, ಚಿಕ್ಕಮಗಳೂರು

೪. ಚಿತ್ರದುರ್ಗ, ಬಳ್ಳಾರಿ (ದಾವಣಗೆರೆ ಸೇರಿದೆ)

೫. ದಕ್ಷಿಣ ಕನ್ನಡ (ಉಡುಪಿ ಸೇರಿದೆ)

೬. ಬಾಂಬೆ ಕರ್ನಾಟಕ (ಬೆಳಗಾಂ, ಧಾರವಾಡ, ಹುಬ್ಬಳ್ಳಿ, ಗದಗ, ಉತ್ತರ ಕನ್ನಡ, ಬಿಜಾಪುರ, ಬಾಗಲಕೋಟೆ, ಹಾವೇರಿ ಸೇರಿದೆ)

೭. ಹೈದರಾಬಾದ್ ಕರ್ನಾಟಕ (ಬೀದರ್, ಗುಲ್ಬರ್ಗ, ರಾಯಚೂರು, ಕೊಪ್ಪಳ)

## ಜಿಲ್ಲಾವಾರು ಹಂಚಿಕೆ

ಈ ಜಿಲ್ಲಾವಾರು ಹಂಚಿಕೆಗೆ ಮೊದಲು ಪೀಠಿಕೆ ಹಾಕಿದವರು ನಿರ್ಮಾಪಕ ಎ.ಎಲ್.ಅಬ್ಬಾಯಿನಾಯ್ಡು. ಆರ್.ಎಫ್.ಮಾಣಿಕ್‌ಚಂದ್ ಕೂಡ ಈ ಪದ್ಧತಿಯ ಬಗ್ಗೆ ಒಲವು ತೋರಿದರು. ಇಲ್ಲಿ ಹಂಚಿಕೆಗಿಂತ ಮಾರಾಟಕ್ಕೇ ಇವರ ಒಲವು ಹೆಚ್ಚಾಗಿತ್ತು. ಆರಂಭದಿಂದಲೂ ದಕ್ಷಿಣ ಕನ್ನಡ, ಬಾಂಬೆ ಕರ್ನಾಟಕ ಹಾಗೂ ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಪ್ರತ್ಯೇಕ ಹಂಚಿಕಾ ಸಂಸ್ಥೆಗಳಿದ್ದವು. ಆದರೆ ಸಂಪೂರ್ಣ ವಿಕೇಂದ್ರೀಕರಣದ ಕೆಲಸವಾದದ್ದು ೧೯೮೫ರಲ್ಲಿ. ಅಬ್ಬಾಯಿನಾಯ್ಡು ಅವರಷ್ಟೇ ಅಲ್ಲ, ವಜ್ರೇಶ್ವರಿ ಸಂಸ್ಥೆಯೂ ಹುಬ್ಬಳ್ಳಿಯಲ್ಲಿ ತನ್ನ ಶಾಖೆಯನ್ನು ಆರಂಭಿಸಿತು. ಈಶ್ವರಿ ಸಂಸ್ಥೆ, ಶಾಸ್ತ್ರೀ ಮೂವೀ ಡಿಸ್ಟ್ರಿಬ್ಯೂಟರ್ಸ್ ನಂತಹ ಸಂಸ್ಥೆಗಳು ಮೈಸೂರಿನಲ್ಲಿ ತಮ್ಮ ಶಾಖೆಗಳನ್ನು ತೆರೆದವು. ಮೊದಲು ರಾಜ್ಯದ ಪ್ರದರ್ಶಕರು ತಮ್ಮ ಚಿತ್ರಮಂದಿರಗಳಿಗೆ ಚಿತ್ರಗಳಿಗಾಗಿ ಬೆಂಗಳೂರಿನ ಗಾಂಧಿನಗರಕ್ಕೆ ಬರಬೇಕಾಗಿತ್ತು. ಜಿಲ್ಲಾವಾರು ಹಂಚಿಕೆ ಬಂದ ಮೇಲೆ ಪ್ರತಿಷ್ಠಿತ ಹಂಚಿಕಾ ಸಂಸ್ಥೆಗಳ ಶಾಖೆಗಳು ಆರಂಭವಾದ ಮೇಲೆ ಇತರ ಜಿಲ್ಲೆಗಳ ಪ್ರದರ್ಶಕರು ಗಾಂಧಿನಗರಕ್ಕೆ ಬರುವುದು ಕಡಿಮೆಯಾಯಿತು. ಜಿಲ್ಲಾವಾರು ಹಂಚಿಕೆಯು ವಿತರಣ ವ್ಯವಸ್ಥೆಯ ದ್ವಿತೀಯ ಪಂಕ್ತಿಯಾಗಿ ಹುಟ್ಟಿತು. ಅದರ ನಂತರದಲ್ಲಿ ಅದೇ ಪ್ರಮುಖವಾಯಿತು.

## ಜಿಲ್ಲಾವಾರು ಮಾರಾಟ

ಮೊದಮೊದಲು ಜಿಲ್ಲಾವಾರು ಹಂಚಿಕೆಯ ವ್ಯವಸ್ಥೆ ನಿರ್ಮಾಪಕರಿಗೆ ಅನುಕೂಲಕರವಾಗಿಯೇ ಪರಿಣಮಿಸಿತು. ಆದರೆ ಅದೇ ಸಂದರ್ಭದಲ್ಲಿ ಬೆಂಗಳೂರು ಕೇಂದ್ರದ ಹಂಚಿಕಾ ಸಂಸ್ಥೆಗಳು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡವು. ಅವುಗಳಲ್ಲಿ ಹಲವು ಕ್ರಮೇಣ ಮುಚ್ಚುವ ಸ್ಥಿತಿಗೆ ಬಂದವು. ಬೆಂಗಳೂರಿನ ಒಬ್ಬ ವಿತರಕರಿಂದ ದೊರೆಯಬಹುದಾದ ಮೊತ್ತಕ್ಕಿಂತ ಜಿಲ್ಲಾವಾರಿನ ಏಳು ವಲಯಗಳ ವಿತರಕರಿಂದ ದೊರೆಯಬಹುದಾದ ಒಟ್ಟು ಮೊತ್ತ ಹೆಚ್ಚಾಗಿರುತ್ತಿದ್ದುದರಿಂದ ಚಿತ್ರ ನಿರ್ಮಾಪಕರು ಜಿಲ್ಲಾವಾರು ಹಂಚಿಕೆಯತ್ತ ವಾಲಿದರು. ಈಚೆಗೆ ಜಿಲ್ಲಾವಾರು ಹಂಚಿಕೆಗಿಂತ ಜಿಲ್ಲಾವಾರು ಮಾರಾಟವೇ ಪ್ರಬಲವಾಗಿದೆ. ಚಿತ್ರೀಕರಣದ ಆರಂಭ ದಿಸೆಯಲ್ಲಿಯೇ ಎಲ್ಲ ಜಿಲ್ಲೆಗಳಿಗೂ ಚಿತ್ರ ಮಾರಾಟವಾಗತೊಡಗಿದೆ. ಕೆಲವು ನಾಯಕನಟರ ಚಿತ್ರಗಳು ಸೆಟ್ಟೇರುತ್ತಿದ್ದಂತೆಯೇ ವ್ಯವಹಾರ ಪೂರ್ಣವಾಗಿರುವ ನಿದರ್ಶನಗಳಿವೆ. ಎಂಬತ್ತರ ದಶಕದಲ್ಲಿ ಏರಿಯಾ ಮಾರಾಟ ವ್ಯವಸ್ಥೆ ಹುಟ್ಟಿತು.

ರಾಜಕುಮಾರ್ ಅಭಿನಯದ 'ಮಯೂರ' ಆ ದಿನಗಳಲ್ಲಿನ ಅದ್ದೂರಿ ಚಿತ್ರ. ಆ ಚಿತ್ರವನ್ನು ನಿಗದಿತ ಮೊತ್ತದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗಲಿಲ್ಲ. ತಯಾರಿಕೆಯ ವೆಚ್ಚಕ್ಕೆ ಸಮನಾಗಿ ಚಿತ್ರವನ್ನು ಕೊಳ್ಳಲು ಹುಬ್ಬಳ್ಳಿಯ ವಿತರಕರು ಹಿಂಜರಿದರು. ಬೆಂಗಳೂರಿನ ವಿತರಕರಾದ ಬಾಳಿಗಾ ಸಹೋದರರು ಆ ಏರಿಯಾಗೆ ಚಿತ್ರವನ್ನು ಹೆಚ್ಚು ಬೆಲೆ ಕೊಟ್ಟು ಕೊಂಡುಕೊಳ್ಳಬೇಕಾಯಿತು. ಹಾಗೆಯೇ ಆ ಸಂದರ್ಭದಲ್ಲಿ ಕಲವು ಕನ್ನಡ ಚಿತ್ರಗಳನ್ನು ಅದೇ ಮೇಲ್ಪಂಕ್ತಿಯನ್ನು ಅನುಸರಿಸಿ ಮಾರಲಾಯಿತು. ಮಾರಾಟದಿಂದ ಬಂದ ಮೊತ್ತವೂ ಆಗ ಆಕರ್ಷಕವೆನಿಸಿತು. ಆರಂಭದಲ್ಲಿ ಹಾಗ ಕೊಂಡ ಕೆಲವು ಚಿತ್ರಗಳು ಚೆನ್ನಾಗಿ ಗಳಿಸಿದವು. ನಂತರ ಇದೊಂದು ಅಪಾಯಕಾರಿ ಬೆಳವಣಿಗೆ ಎನಿಸಿತು.

ಜಿಲ್ಲಾವಾರು ಹಂಚಿಕೆಯ ಸದುಪಯೋಗಕ್ಕಿಂತ ಅದು ದುರುಪಯೋಗವಾದುದೇ ಹೆಚ್ಚು ಎನ್ನುವುದು ಉದ್ಯಮದ ಹಲವು ಹಿರಿಯರ ಅಭಿಪ್ರಾಯ. ಚಿತ್ರವೊಂದರ ನಿರ್ಮಾಣ ಹಂತದಲ್ಲಿ ಅದರ ವಿತರಣೆಯ ಹಕ್ಕನ್ನು ಒಬ್ಬರಿಗಿಂತ ಹೆಚ್ಚುಮಂದಿಗ ನೀಡುವ ಆಶ್ವಾಸನೆ, ಒಪ್ಪಂದ ಮಾಡಿ ಮೋಸ ಮಾಡಿದ ಪ್ರಕರಣಗಳೂ ಇಲ್ಲದಿಲ್ಲ. ಈ ಪ್ರವೃತ್ತಿ ಇಡೀ ಜಿಲ್ಲಾವಾರು ಹಂಚಿಕೆಯ ಮೇಲೆ ದುಷ್ಪರಿಣಾಮ ಬೀರಿತಲ್ಲದೆ ಇಡೀ ಚಿತ್ರರಂಗದ ವ್ಯವಹಾರದ ಮೇಲೂ ತನ್ನ ಪ್ರಭಾವ ಬೀರಿತು. ಜಿಲ್ಲಾವಾರು ಹಂಚಿಕೆ ಚಿತ್ರವೊಂದರ ವ್ಯಾಪಾರದ ಗರಿಷ್ಠ ಸಾಧ್ಯತೆಯನ್ನು ಎತ್ತಿ ತೋರಿಸಿತು. ನಟ-ನಿರ್ಮಾಪಕ ರವಿಚಂದ್ರನ್‌ರಂತಹವರು ತಮ್ಮ ಚಿತ್ರಗಳು ಗಳಿಸುವ ಆಧಾರದ ಮೇಲೆ ಚಿತ್ರಗಳ ನಿರ್ಮಾಣ ವೆಚ್ಚವನ್ನು ಏರಿಸುತ್ತಾ ಹೋದರು. ಚಿತ್ರಗಳ ನಿರ್ಮಾಣ ವೆಚ್ಚ ಕೋಟಿ ದಾಟತೊಡಗಿದ್ದೂ ಕಲಾವಿದರ ಸಂಭಾವನೆ ಏರಿದ್ದೂ ಕೂಡ ಈ ಹಂತದಲ್ಲೇ. ಕಳೆದ ದಶಕದಲ್ಲಿ ಎಲ್ಲೆಡೆ ಸಂಭಾವನೆ, ಭತ್ಯೆಗಳ ಏರಿಕೆಯಿಂದಾಗಿ ಚಿತ್ರನಿರ್ಮಾಣ ವೆಚ್ಚ ಗಣನೀಯವಾಗಿ ಏರತೊಡಗಿತು. ೯೦ರ ದಶಕದ ಕೊನೆಯ ವೇಳೆಗ ಸಾಧಾರಣ ಬಣ್ಣದ ಚಿತ್ರವೊಂದರ ನಿರ್ಮಾಣ ವೆಚ್ಚ ಕನಿಷ್ಠವೆಂದರೂ ೬೦-೮೦ ಲಕ್ಷ ಎನ್ನುವ ಪರಿಸ್ಥಿತಿ ನಿರ್ಮಾಣವಾಯಿತು.

ಜಿಲ್ಲಾವಾರು ಹಂಚಿಕೆಯ ವ್ಯವಸ್ಥೆ ಆರಂಭವಾದ ನಂತರ ಹೆಚ್ಚು ಹೆಚ್ಚು ವಿತರಕರು, ಚಿತ್ರವ್ಯಾಪಾರಿಗಳು ಹುಟ್ಟಿಕೊಂಡರು. ಚಿತ್ರವೊಂದರ ಹಂಚಿಕೆ ಅಥವಾ ಪೂರ್ಣ ಹಕ್ಕನ್ನು ಪಡೆಯುವ ರೀತಿಯೇ ಬೇರೆಯಾದದು ನಂತರದ ಬೆಳವಣಿಗೆ. ಇಡೀ ಚಿತ್ರವನ್ನು ಕೊಂಡುಕೊಂಡು ನಂತರ ಜಿಲ್ಲಾವಾರು ಹಂಚಿಕೆದಾರರಿಗ ಮಾರುವ ವಾಡಿಕೆಯೂ ಇದೆ. ಇಲ್ಲಿ ಕೂಡ ಬೇರೆ ಬೇರೆ ಶರತ್ತುಗಳ ಮೇಲೆ ಮಾರಾಟವಾಗುತ್ತದೆ. ಆಯಾ ಪ್ರದೇಶಕ್ಕೆ ಕನಿಷ್ಠ ಮೊತ್ತದ ಗ್ಯಾರಂಟಿಯೊಂದಿಗ ವ್ಯವಹಾರ ಮಾಡುವುದು ಒಂದು ವಿಧ. ಚಿತ್ರ ತೆರೆ ಕಂಡು ನಗರ ಪ್ರದೇಶದಲ್ಲಿ ಗಳಿಸಿದ ಮೊತ್ತದ ಮೇಲೆ ವ್ಯಾಪಾರ ಮಾಡುವುದು ಇನ್ನೊಂದು ರೀತಿ. ಉದಾಹರಣೆಗೆ ಬೆಂಗಳೂರು, ತುಮಕೂರುಗಳಲ್ಲಿನ ಗಳಿಕೆಯ ರೂ.೧೦೦, ೧೨೫, ೧೫೦ರಷ್ಟು ಸೇರಿಸಿ ಅದರ ಹಕ್ಕನ್ನು ಕೊಂಡುಕೊಳ್ಳುವುದು ವಾಡಿಕೆ. ಈಚೆಗೆ ಈ ಮೊತ್ತ ಇಳಿದಿದೆ.

ಈ ಬೆಳವಣಿಗಗಳ ನಡುವೆ ಚಿತ್ರಮಂದಿರಗಳವರು ಪ್ರವೇಶ ದರಗಳನ್ನು ವಿಪರೀತ ಹೆಚ್ಚಿಸಿದರು. ಇದರ ಪರಿಣಾಮವಾಗಿ ಕೆಲವು ಚಿತ್ರಗಳು ಹೆಚ್ಚು ಗಳಿಕೆ ಪಡೆಯಲು ಸಾಧ್ಯವಾಯಿತು. ಆದರೆ ಎಲ್ಲ ಚಿತ್ರಗಳೂ ಅಲ್ಲ. ಪ್ರವೇಶ ದರ ಹೆಚ್ಚಳದಿಂದ ಚಿತ್ರಮಂದಿರಗಳ ಗಳಿಕೆಯ ಮೊತ್ತವು ಹೆಚ್ಚಿದಂತೆ ಅದಕ್ಕ ಅನುಗುಣವಾಗಿ ಅವುಗಳ ಬಾಡಿಗೆಯೂ ಸಿಕ್ಕಾಪಟ್ಟೆ ಏರಿತು.

ಜನಪ್ರಿಯ ನಟರು, ವಿದೇಶಿ ಹೊರಾಂಗಣ ಮುಂತಾದ ಆಕರ್ಷಣೆಗಳು ಗಲ್ಲಾಪೆಟ್ಟಿಗೆಯಲ್ಲಿನ ಗಳಿಕೆಯ ಯಶಸ್ಸಿನ ಸೂತ್ರ ಎಂದು ಭಾವಿಸಿದ ಹಲವರು ಅಂತಹ ಚಿತ್ರಗಳನ್ನು ಇಡೀ ರಾಜ್ಯಕ್ಕೆ ಅಥವಾ ಕೆಲವು ಜಿಲ್ಲೆಗಳಲ್ಲಿನ ಪ್ರದರ್ಶನಕ್ಕೆ ಕೊಂಡುಕೊಳ್ಳಲು ಮುಂದಾದರು. ಇವರು ವಿತರಕರೇನೂ ಆಗಿರಲಿಲ್ಲ. ಕೇವಲ 'ಬಯ್ಯರ್ಸ್' (ಕೊಂಡುಕೊಳ್ಳುವವರು) ಮಾತ್ರ. ಆದರೆ ಈ ನಿಟ್ಟಿನಲ್ಲಿ ಕೊಂಡುಕೊಂಡವರೆಲ್ಲ ಗಲ್ಲಲಿಲ್ಲ - ಸೋತು ಸುಣ್ಣವಾದವರೇ ಹೆಚ್ಚು.

ಹಿಂದೆ, ಚಿತ್ರದ ತಯಾರಿಕೆಯ ವಿವಿಧ ಹಂತಗಳಲ್ಲಿ ಚಿತ್ರನಿರ್ಮಾಣದ ಪ್ರಗತಿಗ ಅನುಗುಣವಾಗಿ ಹಣದ ಬೆಂಬಲ ಒದಗಿಸುತ್ತಿದ್ದ ವಿತರಕರನ್ನು ಈ ಪದ್ಧತಿ ನಿರ್ಮಾಪಕರಿಂದ ದೂರ ಮಾಡಿತು. ಅದರ ಬದಲಾಗಿ ಚಿತ್ರಗಳ ನೆಗೆಟಿವ್ ಹಕ್ಕುಗಳ ಮೇಲೆ ಬಡ್ಡಿಗೆ ಸಾಲ ನೀಡಿ, ಚಿತ್ರದ ಬಿಡುಗಡೆಗೆ ಮೊದಲು ಬಡ್ಡಿಸಹಿತ ಸಾಲದ ಮರುಪಾವತಿ ಪಡೆಯುವ ದೊಡ್ಡ ದೊಡ್ಡ ಬಂಡವಾಳಗಾರರು ರಂಗಪ್ರವೇಶ ಮಾಡಲು ಅನುವು ಮಾಡಿಕೊಟ್ಟಿತು. ಆರಂಭದಲ್ಲಿ ಸ್ವಲ್ಪಮಟ್ಟಿಗೆ ಅನುಕೂಲವೆನಿಸಿದರೂ ನಂತರದಲ್ಲಿ ಈ ಪದ್ಧತಿ ನಿರ್ಮಾಪಕರಿಗೆ ಹಲವು ಸಮಸ್ಯೆಗಳನ್ನು ತಂದೊಡ್ಡಿತು. ಚಿತ್ರದ ನಿರ್ಮಾಣ ವೆಚ್ಚ ಹೆಚ್ಚಿದಂತೆಯೇ ನಿರ್ಮಾಪಕರು ಈ ಬಂಡವಾಳಗಾರರಿಂದ ಹೆಚ್ಚು ಮೊತ್ತದ ಸಾಲವನ್ನು ಪಡೆಯುವುದು ಅಗತ್ಯವಾಯಿತು. ಹಾಗೆಯೇ ಚಿತ್ರಗಳ ಅಪಯಶಸ್ಸು-ಸೋಲು ಕೂಡ ಗಣನೀಯವಾಗಿ ಹೆಚ್ಚಿತು.

ಹಿಂದೆ ಚಿತ್ರ ತಯಾರಿಕೆಯಲ್ಲಿ ನಿರಂತರವಾಗಿ ತೊಡಗಿಕೊಂಡಿದ್ದ ನಿರ್ಮಾಪಕರು ಚಿತ್ರ ಗಲ್ಲಾಪೆಟ್ಟಿಗೆ ಗಳಿಕೆಯಲ್ಲಿ ಸೋಲುತ್ತಾ ಬಂದಲ್ಲಿ ಇಲ್ಲದ ತೊಂದರೆ, ಕಷ್ಟ-ನಷ್ಟಗಳನ್ನು ಮೈಮೇಲೆಳೆದುಕೊಂಡಂತಾಗುವುದೆಂಬುದನ್ನು ಅರಿತು ಚಿತ್ರನಿರ್ಮಾಣದಲ್ಲಿ ಆಸಕ್ತಿ ವಹಿಸಲು ಹಿಂಜರಿದರು. ಹಾಗೆಯೇ ವಿತರಕರೂ ಹೆಚ್ಚು ಮೊತ್ತ ನೀಡಿ ಚಿತ್ರದ ವಿತರಣೆ ಹಕ್ಕನ್ನು ಪಡೆಯಲು ಹಿಂಜರಿಯುವಂತಾಯಿತು. ಪ್ರಥಮ ಬಿಡುಗಡೆ ಪೂರ್ವದಲ್ಲಿ ಚಿತ್ರದ ಯಶ-ಅಪಯಶಗಳನ್ನು ನಿರ್ಧರಿಸುವುದು ದುಸ್ತರವಾದುದೇ ಈ ಹಿಂಜರಿಕೆಗೆ ಕಾರಣ.

## ಅಪಾರ ವೆಚ್ಚದಲ್ಲಿ ನಿರ್ಮಾಣ

ನೇರ ಖರೀದಿ, ಕನಿಷ್ಠ ಗ್ಯಾರಂಟಿ, ಹಂಚಿಕೆ ಈ ಎಲ್ಲ ರೀತಿಯ ವಹಿವಾಟುಗಳೂ ಬದಲಾದದ್ದು ಟಿ.ವಿ - ಸ್ಯಾಟಲೈಟ್ ಚಾನೆಲ್‌ಗಳು ಬಂದ ಮೇಲೆ. ಚಿತ್ರರಂಗಕ್ಕೆ ಆತಂಕವಾಗಿ ಬಂದ ಟಿ.ವಿ, ಚಿತ್ರೋದ್ಯಮವನ್ನು ಸಾಕಷ್ಟು ಗೊಂದಲಕ್ಕೀಡು ಮಾಡಿತು. ಮನೆಮನೆಯಲ್ಲಿ ಟಿ.ವಿ.ತೆರೆಯ ಮುಂದೆ ಕುಳಿತು ಚಿತ್ರ ನೋಡುವ ಸಾಧ್ಯತೆ ಇರುವಾಗ ಚಿತ್ರಮಂದಿರಕ್ಕೆ ಬರುವವರ ಸಂಖ್ಯೆ ಇಳಿಮುಖವಾದದ್ದು ಜಾಗತಿಕ ಬೆಳವಣಿಗೆ. ಕನ್ನಡವೂ ಇದಕ್ಕೆ ಹೊರತಾಗಲಿಲ್ಲ. ಟಿ.ವಿ ಮುಂದೆ ಕುಳಿತ ಪ್ರೇಕ್ಷಕರನ್ನು ಚಿತ್ರಮಂದಿರಗಳಿಗೆ ಸೆಳೆಯಲು ಅಪಾರ ವೆಚ್ಚದಲ್ಲಿ ಅದ್ದೂರಿ ಚಿತ್ರಗಳ ನಿರ್ಮಾಣ ಅಗತ್ಯವಾಯಿತು. ದೃಶ್ಯವೈಭವಗಳ, ವಿದೇಶಿ ಲೊಕೇಶನ್‌ಗಳ ಚಿತ್ರಗಳ ಹಿಂದಿದ್ದ ಉದ್ದೇಶ ಇದೊಂದೇ. ಪ್ರೇಕ್ಷಕರನ್ನು ಮತ್ತೆ ಚಿತ್ರಮಂದಿರಗಳ ಕಡೆ ಆಕರ್ಷಿಸುವ ಈ ನಿಟ್ಟಿನಲ್ಲಿ ಕಲವರು ಯಶಸ್ವಿಯಾದರು.

ಚಲನಚಿತ್ರ ನಿರ್ಮಾಪಕರ ಗಳಿಕೆ ಹಾಗೂ ಚಿತ್ರದ ಹಕ್ಕುಗಳ ಮಾರಾಟ ಎಲ್ಲವೂ ಈಗ ಬದಲಾದ ಹಾದಿಯಲ್ಲಿವೆ. ಮೊದಲು ಚಿತ್ರಮಂದಿರಗಳ ಗಳಿಕೆಯೊಂದೇ ನಿರ್ಮಾಪಕರಿಗೆ ಆಧಾರವಾಗಿತ್ತು. ಈಗ ಆಡಿಯೋ ಹಕ್ಕು, ಹೋಮ್ ವೀಡಿಯೋ ಹಕ್ಕು, ದೂರದರ್ಶನ ಮತ್ತು ಇತರ ಉಪಗ್ರಹ ವಾಹಿನಿಗಳ ಹಕ್ಕು ಹೀಗೆ ಹತ್ತಾರು ಆದಾಯ ಮೂಲಗಳು ಒಂದು ಚಿತ್ರಕ್ಕಿವೆ. ಇಂಟರ್‌ನೆಟ್, ವಿದೇಶಿ ಮಾರುಕಟ್ಟೆ ಇನ್ನಿತರ ಸಾಧ್ಯತೆಗಳೂ ಕಾಣಬರುತ್ತಿವೆ.

## ಅಲುಗಾಡಿದ ಅಸ್ತಿತ್ವ

ಹಿಂದೆ ನಿರ್ಮಾಪಕರಿಗ ವಿವಿಧ ಹಂತಗಳಲ್ಲಿ ಆರ್ಥಿಕವಾಗಿ ನೆರವಾಗುತ್ತಿದ್ದ ಚಿತ್ರವಿತರಕರು ಚಿತ್ರ ನಿರ್ಮಾಣ ವೆಚ್ಚ ಹೆಚ್ಚಿದಂತೆ ಜಿಲ್ಲಾವಾರು ಮಾರಾಟ ವ್ಯವಸ್ಥೆ ಜಲಿತಂತ ತಮ್ಮ ಕೇಂದ್ರೀಕೃತ ಹಂಚಿಕಾ ವ್ಯವಸ್ಥೆಗೆ ಮುಳುವಾದ ಕಾರಣ ಮುಂದೆ ಬರುವುದು ಕಡಿಮೆಯಾಯಿತು. ಚಿತ್ರಹಂಚಿಕಾ ಸಂಸ್ಥೆಗಳ ಅಸ್ತಿತ್ವವೇ ಅಲುಗಾಡತೊಡಗಿತು. ಇಂತಹ ಸಂದರ್ಭದಲ್ಲಿ ಚಿತ್ರಗಳ ನಿರ್ಮಾಣ ಹಂತದಲ್ಲಿ ಬಡ್ಡಿಗೆ ಹಣವನ್ನು ಸಾಲವಾಗಿ ನೀಡುವ ಫೈನಾನ್ಷಿಯರ್‌ಗಳು ಬಂದರು. ಆ ಮೊದಲು ಕೂಡ ಚಿತ್ರಗಳಿಗ ಆರ್ಥಿಕ ಸಾಲ ಕೊಡುವವರಿದ್ದರಾದರೂ ಅವರ ವ್ಯವಹಾರ ಈ ಮಟ್ಟದಲ್ಲಿದ್ದಿರಲಿಲ್ಲ. ಈಚೆಗೆ ಬಂದ ಫೈನಾನ್ಷಿಯರ್‌ಗಳು ಚಿತ್ರದ ನೆಗೆಟಿವ್ ಹಕ್ಕು ಪಡೆದು, ಚಿತ್ರ ನಿರ್ಮಾಪಕರಿಗ ಚಿತ್ರೀಕರಣ ಪೂರೈಸಲು ಪೂರ್ಣ ಹಣ

ಒದಗಿಸತೊಡಗಿದರು. ಚಿತ್ರದ ಬಿಡುಗಡೆಗೆ ಮುನ್ನ ಸಾಲದ ಮೊತ್ತ ಹಾಗೂ ಬಡ್ಡಿ ಎರಡೂ ಪಾವತಿಯಾಗಿರಬೇಕಾಗಿತ್ತು-ಇದು ಸಾಮಾನ್ಯ ಷರತ್ತು. ಚಿತ್ರ ನಿರ್ಮಾಣದ ವಿವಿಧ ಹಂತಗಳಲ್ಲಿ ಹಣ ವ್ಯಯಿಸಿದ ನಿರ್ಮಾಪಕರು ಬಿಡುಗಡೆಯ ಮೊದಲು ಚಿತ್ರವನ್ನು ಮಾರಾಟ ಮಾಡಲಾಗದೆ, ಪಡೆದ ಸಾಲದ ಅಸಲು-ಬಡ್ಡಿ ತೀರಿಸಲಾಗದೆ ಸಾಕಷ್ಟು ತೊಂದರೆ ಅನುಭವಿಸಿದ ಪ್ರಸಂಗಗಳೂ ಇವೆ. ದುಬಾರಿ ಬಡ್ಡಿಯೊಂದಿಗೆ ಫೈನಾನ್ಸಿಯರ್ ನೀಡಿದ ಹಣವನ್ನು ಹಿಂದಿರುಗಿಸಿ, ಸಂಸ್ಕರಣ ಕೇಂದ್ರದ ಬಾಕಿಯನ್ನೂ ಚುಕ್ತಾ ಮಾಡಿ, ಯಾವುದೇ ಕಮಿಟ್‌ಮೆಂಟ್ ಇಲ್ಲದ ಚಿತ್ರವನ್ನು ಬಿಡುಗಡೆ ಮಾಡುವುದು ಬಹಳಷ್ಟು ಸಂದರ್ಭಗಳಲ್ಲಿ ಸುಲಭವೇನಾಗಿರಲಿಲ್ಲ.

### ಚಿತ್ರಮಂದಿರಗಳ ಬಾಡಿಗೆ

ಪ್ರದರ್ಶನ ವ್ಯವಹಾರದಲ್ಲಿಯೂ ಸಾಕಷ್ಟು ಬದಲಾವಣೆಗಳು ಕಂಡು ಬಂದವು. ಮೊದಲು ಚಿತ್ರಮಂದಿರ ಕಟ್ಟಿದವರೇ ಪ್ರದರ್ಶಕರಾಗಿ ತಮ್ಮ ಚಿತ್ರಮಂದಿರಗಳನ್ನು ನಡೆಸುತ್ತಿದ್ದರು. ಗಳಿಕೆಯ ಶೇಕಡಾವಾರು ಆಧಾರದ ಮೇಲೆ ಚಿತ್ರಮಂದಿರಗಳಲ್ಲಿ ಚಿತ್ರಗಳ ಪ್ರದರ್ಶನಕ್ಕೆ ಅವಕಾಶವಿತ್ತು. ಗಳಿಕೆಯಲ್ಲಿ ಶೇ.೩೦-೩೫ರಷ್ಟು ಪಾಲನ್ನು ತಮ್ಮದಾಗಿ ಪಡೆಯುತ್ತಿದ್ದರು. ಚಿತ್ರ ಹೆಚ್ಚು ವಾರಗಳ ಕಾಲ ಪ್ರದರ್ಶಿತವಾದಾಗ ಈ ಶೇಕಡಾವಾರು ಪ್ರಮಾಣ ಸ್ವಲ್ಪ ಮಟ್ಟಿಗೆ ೩೦-೭೦ ರಿಂದ ೪೦-೬೦, ೫೦-೫೦ ಹೀಗೆ ಬದಲಾಗುತ್ತಿತ್ತು. ಯಾವುದೇ ಚಿತ್ರದ ಗಳಿಕೆ ತೀರಾ ಇಳಿಮುಖವಾದ ಸಂದರ್ಭದಲ್ಲಿ ಬೇರೆ ಚಿತ್ರಕ್ಕೆ ಪ್ರದರ್ಶನಾವಕಾಶ ಕಲ್ಪಿಸಿಕೊಡುತ್ತಿದ್ದರು. ಬದಲಾವಣೆಯ ಗಾಳಿ ಬೀಸಿದಂತೆ, ಚಿತ್ರಗಳಿಗೆ ಗಳಿಕೆಯ ಶೇಕಡಾವಾರು ಆಧಾರದ ಮೇಲೆ ಚಿತ್ರಮಂದಿರಗಳನ್ನೊದಗಿಸುವ ಪದ್ಧತಿ ತಪ್ಪಿತು. ಚಿತ್ರಮಂದಿರಗಳ ಸಾಮರ್ಥ್ಯವನ್ನು ಅವಲಂಬಿಸಿ ವಾರದ ಬಾಡಿಗೆಯನ್ನು ನಿರ್ಧರಿಸುವ ಪದ್ಧತಿ ಬಂದಿತು. ಚಿತ್ರದ ಗಳಿಕೆ ಎಷ್ಟೇ ಇರಲಿ, ವಾರದ ಬಾಡಿಗೆಯನ್ನು ಕೊಟ್ಟು ಚಿತ್ರ ಪ್ರದರ್ಶಿಸಬೇಕಾದ ಪರಿಸ್ಥಿತಿಯುಂಟಾಯಿತು. ಕ್ರಮೇಣ ಚಿತ್ರಮಂದಿರಗಳನ್ನು ಮಾಲೀಕರಿಂದ ಗುತ್ತಿಗೆಗೆ ಪಡೆದು ಬೇರೆಯವರು ನಡೆಸಲಾರಂಭಿಸಿದರು. ಆಗ ಸಹಜವಾಗಿಯೇ ವಾರದ ಬಾಡಿಗೆಯಲ್ಲಿ ಹೆಚ್ಚಳ ಅನಿವಾರ್ಯವಾಯಿತು. ಚಿತ್ರಮಂದಿರವೊಂದರ ಸಾಮರ್ಥ್ಯ ಹಾಗೂ ಪ್ರತಿಷ್ಠೆಗಳೂ ಬಾಡಿಗೆ ಹೆಚ್ಚಳಕ್ಕೆ ಕಾರಣವಾದವು. ಚಿತ್ರಮಂದಿರಗಳ ನಿರ್ವಹಣೆ ಕೈಯಿಂದ ಕೈಗೆ ಬದಲಾದಂತೆಲ್ಲಾ ಬಾಡಿಗೆಯೂ ಹೆಚ್ಚಿತು. ದುಬಾರಿಯೂ ಆಯಿತು. ಇದು ಕನ್ನಡ ಚಲನಚಿತ್ರೋದ್ಯಮವನ್ನು ತತ್ತರಿಸುವಂತೆ ಮಾಡಿತು.

ಈ ನಿಟ್ಟಿನಲ್ಲಿ ಕನ್ನಡ ಚಿತ್ರ ನಿರ್ಮಾಪಕರು ಸಹಜವಾಗಿಯೇ ಜಿಲ್ಲಾವಾರು ಮಾರಾಟದತ್ತ ಆಸಕ್ತಿ ವಹಿಸಿದರು. ಮಾರಾಟವಾದ ಮೇಲೆ ಪ್ರದರ್ಶನದ ಹೊಣೆ ಕೊಂಡುಕೊಂಡವರದಾಗುವುದರಿಂದ ತಮ್ಮ ಚಿತ್ರಗಳನ್ನು ಜಿಲ್ಲಾವಾರು ಮಾರಾಟ ಮಾಡಲು ಮುಂದಾದರು. ಚಿತ್ರನಿರ್ಮಾಣದ ವೆಚ್ಚದಲ್ಲಿನ ಹೆಚ್ಚಳದಿಂದಾಗಿ, ಲಕ್ಷಗಳ ಲೆಕ್ಕದಲ್ಲಿದ್ದ ಚಿತ್ರನಿರ್ಮಾಣ ಕೋಟಿಗಳ ಲೆಕ್ಕಕ್ಕೆ ಏರಿದಾಗ ಸಂಪೂರ್ಣ ಕರ್ನಾಟಕದ ಹಕ್ಕುಗಳನ್ನು ಕೊಳ್ಳುವವರೂ ಕಡಿಮೆಯಾದರು. ನಿರ್ಮಾಪಕರು ಜಿಲ್ಲಾವಾರು ಮಾರಾಟದತ್ತ ಆಕರ್ಷಿತರಾಗಲು ಇದೂ ಒಂದು ಕಾರಣವಾಯಿತು. ಇತ್ತೀಚಿನ ಸೋಲುಗಳ ಭಾರಿ ಹೊಡೆತದಿಂದಾಗಿ ಜಿಲ್ಲಾವಾರು ಮಾರಾಟದ ವ್ಯವಹಾರವೂ ತತ್ತರಿಸಿದೆ. ವಿತರಕರ ಜಾಗದಲ್ಲಿ ಕೊಳ್ಳುವವರು, ಫೈನಾನ್ಸಿಯರ್‌ಗಳು ಬಂದಿದ್ದಾರೆ. ಹೀಗೆ ಇಡೀ ವ್ಯವಹಾರ ಸಾಕಷ್ಟು ಬದಲಾವಣೆಗಳನ್ನು, ಏರಿಳಿತಗಳನ್ನು ಕಂಡಿದೆ.

ಕನ್ನಡ ಚಿತ್ರರಂಗಕ್ಕೆ ಸಂಬಂಧಿಸಿಂತೆ ಹೇಳುವುದಾದರೆ ಇಲ್ಲಿನ ಉದ್ಯಮ ತಲೆ ಎತ್ತಿದ್ದೇ ಬಹಳ ತಡವಾಗಿ. ಮದರಾಸಿನಲ್ಲಿ ನೆಲೆಯೂರಿದ್ದ ಕನ್ನಡ ಚಿತ್ರೋದ್ಯಮ ಪೂರ್ತಿಯಾಗಿ ಕರ್ನಾಟಕಕ್ಕೆ ವರ್ಗವಾಗಲು ನಾಲ್ಕೈದು ದಶಕಗಳೇ ಬೇಕಾದವು. ಪರಭಾಷಾ ಚಿತ್ರಗಳೊಂದಿಗೆ ಸ್ಪರ್ಧಿಸಿ ಗೆಲ್ಲಲು, ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಕನ್ನಡ ಚಿತ್ರರಂಗವು ಆರಂಭದ ದಿನಗಳಿಂದಲೂ ಹೆಣಗಾಡುತ್ತಿದೆ. ಕನ್ನಡ ಚಿತ್ರೋದ್ಯಮದ ಅರ್ಥವ್ಯವಸ್ಥೆಯನ್ನು ಈ ಹಿನ್ನೆಲೆಯಲ್ಲೇ ನೋಡಬೇಕು. ವರ್ಷಕ್ಕೆ ಒಂದೋ ಎರಡೋ ಚಿತ್ರಗಳನ್ನು ನೀಡುತ್ತಿದ್ದ ಕನ್ನಡ ಚಿತ್ರರಂಗ ಇಂದು ೭೦-೮೦ ಚಿತ್ರಗಳನ್ನು ಕೊಡುವ ಹಂತ ತಲುಪಿದೆ. ಕೋಟಿಗಟ್ಟಲೆ ನಿರ್ಮಾಣ ವೆಚ್ಚಮಾಡುವ ಧೈರ್ಯವಂತ ನಿರ್ಮಾಪಕರೂ ಬಂದಿದ್ದಾರೆ. ಪರಭಾಷಾ ಚಿತ್ರಗಳ ಸವಾಲನ್ನು ಎದುರಿಸುವ ಚಿತ್ರಗಳೂ ತಯಾರಾಗುತ್ತಿವೆ. ಕೋಟ್ಯಾಂತರ ರೂಪಾಯಿಗಳ ಅಪಾರ ವೆಚ್ಚದಲ್ಲಿ, ವಿದೇಶಿ ಹೊರಾಂಗಣವುಳ್ಳ ಭಾರಿ ಚಿತ್ರಗಳೂ ಬರುತ್ತಿವೆ. ಇಪ್ಪತ್ತು ಮೂವತ್ತು ಲಕ್ಷಗಳಲ್ಲಿ ವರ್ಣ ಚಿತ್ರಗಳನ್ನು ತಯಾರಿಸುತ್ತಿದ್ದ ಕಾಲ ಮರೆಯಾಗಿ ೨-೩ ಕೋಟಿ ರೂ.ಗಳ ವೆಚ್ಚ ಮಾಡುವ ಧೈರ್ಯವಂತರು ನಿರ್ಮಾಣ ಕಣದಲ್ಲಿಳಿಯುವಂಥ ಸಮಯ ಬಂದಿದೆ. ಸತ್ವಪೂರ್ಣ ಚಿತ್ರಗಳ ಸಂಖ್ಯೆ ಇಳಿಮುಖವಾಗಿದೆ ಎನ್ನುವ ಕೊರಗಿದ್ದರೂ ನಿರ್ಮಾಣವಾಗುವ ಚಿತ್ರಗಳ ಸಂಖ್ಯೆ ಇಳಿದಿಲ್ಲ.

### ಚಿತ್ರನಿರ್ಮಾಣದಲ್ಲಿ ಬಂಡವಾಳದ ಹಂಚಿಕೆ

ಚಿತ್ರವೊಂದರ ನಿರ್ಮಾಣದ ವಿವಿಧ ಹಂತಗಳಲ್ಲಿ ನಿರ್ಮಾಪಕರು ಹಣ ತೊಡಗಿಸಬೇಕಾಗುತ್ತದೆ. ಚಿತ್ರಕ್ಕೊಬ್ಬ ನಿರ್ದೇಶಕ ಹಾಗೂ ಚಿತ್ರಕ್ಕೊಂದು ಕಥೆಯ ಆಯ್ಕೆಯೊಂದಿಗೆ ನಿರ್ಮಾಪಕರು ತಮ್ಮ ಚಿತ್ರದ ಮೇಲೆ ಹಣ ಹೂಡುವ ಕಾರ್ಯ ಆರಂಭವಾಗುತ್ತದೆ. ಕಥೆ, ಚಿತ್ರಕಥೆ, ಚಿತ್ರನಾಟಕ, ಸಂಭಾಷಣೆ ರಚನೆ-ಗೀತರಚನೆ ಸಾಹಿತಿ, ಛಾಯಾಗ್ರಾಹಕ, ಸಂಗೀತ ನಿರ್ದೇಶಕರಾದಿಯಾಗಿ ತಂತ್ರಜ್ಞರ (ಕಲಾ ನಿರ್ದೇಶಕ, ಮೇಕಪ್, ಕಾಸ್ಟ್ಯೂಮರ್, ಪ್ರೊಡಕ್ಷನ್ ಮ್ಯಾನೇಜರ್, ಸಂಕಲನಕಾರ ಮತ್ತು ಇವರೆಲ್ಲರ ಸಹಾಯಕರು) ನೇಮಕ, ತಾರಾಗಣದ ಆಯ್ಕೆ, ಹಾಡುಗಳ ಸಾಹಿತ್ಯ ರಚನೆ - ರಾಗ ಸಂಯೋಜನೆ, ರಿಕಾರ್ಡಿಂಗ್ ಥಿಯೇಟರಿನಲ್ಲಿ ಹಾಡುಗಳ ಧ್ವನಿಮುದ್ರಣ- ಹೀಗೆ ಒಂದರ ಹಿಂದೆ ಇನ್ನೊಂದು ಖರ್ಚಿನ ಬಾಬುಗಳಿಗೆ ದಿನ ನಿತ್ಯ ಹಣ ಪೂರೈಸಬೇಕಾಗುತ್ತದೆ. ಈ ಹಂತ ಪೂರ್ಣವಾದ ಮೇಲೆ ನಿರ್ಮಾಪಕರು ಈಚೆಗೆ ಒಂದು ವರ್ಗದಿಂದ ಆದಾಯ ಪಡೆಯುವಂತಾಗಿದೆ. ಆ ವರ್ಗವೇ ಚಿತ್ರದ ಸಂಗೀತ ವಿಭಾಗ. ಈ ಬಗ್ಗೆ ಆಡಿಯೋ ವ್ಯವಹಾರದಲ್ಲಿ ಮುಂದೆ ಪ್ರಸ್ತಾಪಿಸಲಾಗಿದೆ.

ಅನಂತರ ಚಿತ್ರೀಕರಣ ಸಿದ್ಧತೆ. ಒಳಾಂಗಣ ಚಿತ್ರೀಕರಣವಾದರೆ ಸ್ಟುಡಿಯೋ -ಸೆಟ್‌ಗಳು ಅಗತ್ಯ. ಸ್ಟುಡಿಯೋ ಗೊತ್ತು ಮಾಡಿದೊಡನೆ ಕಲಾ ನಿರ್ದೇಶಕ ತನ್ನ ಸಹಾಯಕರು, ಬಡಗಿಗಳು ಹಾಗೂ ಪೆಯಿಂಟರ್‌ಗಳ ಸಹಕಾರದೊಂದಿಗೆ ಚಿತ್ರದ ನಿರ್ದೇಶಕರ ಕಲ್ಪನೆಗೆ ಅನುಗುಣವಾಗಿ ತಾನು ರಚಿಸಿದ ನಕ್ಷೆಯ ಆಧಾರಿತ ಸ್ಟುಡಿಯೋ ಫ್ಲೋರ್‌ನಲ್ಲಿ ಸೆಟ್‌ಗಳ ಸಿದ್ಧತೆ; ಸೆಟ್‌ನಲ್ಲಿ ಅಗತ್ಯ ಪರಿಕರಗಳ ಜೋಡಣೆ, ಹೊರಾಂಗಣ ಚಿತ್ರೀಕರಣವಾದರೆ ಸೂಕ್ತ ಮನೆ ಅಥವಾ ಬಂಗಲೆಯ ಆಯ್ಕೆ, ಅಗತ್ಯ ಪರಿಕರ ಜೋಡಣೆ, ಜನರೇಟರ್ ಸಹಿತ ಚಿತ್ರೀಕರಣಕ್ಕೆ ಅಗತ್ಯ ಉಪಕರಣಗಳನ್ನುಳ್ಳ ಹೊರಾಂಗಣ ಚಿತ್ರೀಕರಣ ಘಟಕ ಇವೆಲ್ಲವೂ ಅವಶ್ಯಕ. ಹಿಂದೆ ವಿದ್ಯುತ್ ಇಲಾಖೆಯಿಂದ ವಿದ್ಯುತ್ ಪಡೆದು ಚಿತ್ರೀಕರಣ ನಡೆಸುತ್ತಿದ್ದುದು ಪ್ರಯಾಸವೆನಿಸಿದ್ದರಿಂದ ಡೀಸೆಲ್ ಜನರೇಟರ್ ಬಳಕೆ ಆರಂಭವಾಯಿತು. ಸಾಮಾನ್ಯವಾಗಿ ಒಂದು ಚಿತ್ರದ ನಾಯಕ - ನಾಯಕಿ ತಾರೆಯರ ಡೇಟ್ಸ್ ಅವಲಂಬಿಸಿ ಹಲವು ಹಂತಗಳ ಚಿತ್ರೀಕರಣ ನಡೆಯುತ್ತದೆ. ಕೆಲವೊಮ್ಮೆ ಚಿತ್ರೀಕರಣ ಒಂದು ಅಥವಾ ಎರಡೇ ಹಂತಗಳಲ್ಲಾಗುತ್ತದೆ. ಚಿತ್ರೀಕರಣ ಸಂದರ್ಭಗಳಲ್ಲಿ ಅಗತ್ಯವಾದ ಪಿಕ್ಚರ್ ನಗೆಟಿವ್ ರೋಲ್‌ಗಳನ್ನು ರಾ ಸ್ಟಾಕ್, ಸಂಸ್ಕರಣ - ಸಂಕಲನ ಸಂದರ್ಭಗಳಲ್ಲಿ ಅಗತ್ಯವಾದ ಪಿಕ್ಚರ್ ಪಾಸಿಟಿವ್, ಆರ್.ಟಿ., ಲೀಡರ್, ಟೇಪ್, ಫಿಲಂ ಸಿಮೆಂಟ್ ಇತ್ಯಾದಿ, ಡಬ್ಬಿಂಗ್, ರಿ-ರಿಕಾರ್ಡಿಂಗ್ ಸಂದರ್ಭದಲ್ಲಿ ಅಗತ್ಯವಾದ ಸೌಂಡ್‌ನೆಗಟಿವ್ ರೋಲ್‌ಗಳು ಹಾಗೂ ಅಂತಿಮವಾಗಿ ಪ್ರಿಂಟ್ಸ್‌ಗಾಗಿ ಲ್ಯಾಬ್‌ಗೆ ಅಗತ್ಯವಾದ ಪಿಕ್ಚರ್ ಪಾಸಿಟಿವ್ ರೋಲ್‌ಗಳನ್ನು ಕೊಂಡು ಸರಬರಾಜು ಮಾಡಬೇಕಾಗುತ್ತದೆ. ಚಿತ್ರೀಕರಣ ಹಂತಗಳ ನಡುವೆ ಅಥವಾ ಚಿತ್ರೀಕರಣ ಪೂರ್ಣಗೊಂಡ ನಂತರ ಲ್ಯಾಬ್‌ನಲ್ಲಿ ಸಂಸ್ಕರಣಗೊಂಡ ಚಿತ್ರಿತ ಭಾಗಗಳ ಸಂಕಲನ ನಡೆದು ಚಿತ್ರದ ರಫ್ ಸಿದ್ಧವಾಗುತ್ತದೆ. ನಂತರ ಮಾತಿನ ಮನೆಯಲ್ಲಿ ಡಬ್ಬಿಂಗ್, ರಿಕಾರ್ಡಿಂಗ್, ಸ್ಟುಡಿಯೋವಿನಲ್ಲಿ ರಿ-ರಿಕಾರ್ಡಿಂಗ್, ಸ್ಪೆಷಲ್ ಎಫೆಕ್ಟ್ಸ್ ಮಿಶ್ರಣ ನಡೆದು, ಅಂತಿಮ ಘಟ್ಟದ ಸಂಕಲನದಲ್ಲಿ ದೃಶ್ಯ-ಶ್ರಾವ್ಯಗಳ ಸಮ್ಮಿಲನ, ಲ್ಯಾಬ್‌ನಲ್ಲಿ ಚಿತ್ರದ ಅಗತ್ಯ ಪ್ರತಿಗಳ ಸಿದ್ಧತೆ. ಈ ಎಲ್ಲ ಸಂದರ್ಭಗಳಲ್ಲಿನ ವೆಚ್ಚವನ್ನು ನಿರ್ಮಾಪಕರೇ ಭರಿಸಬೇಕಾಗುತ್ತದೆ.

ಬಿಡುಗಡೆಗೆ ಚಿತ್ರದ ಪ್ರಿಂಟುಗಳು ಸಿದ್ಧವಾಗುತ್ತಿರುವಂತೆಯೇ ವಿವಿಧ ರೀತಿಯ ಪ್ರಚಾರಕ್ಕಾಗಿ ಪೋಸ್ಟರು, ಬ್ಯಾನರು, ಸ್ಟಿಕರ್ಸ್, ಕಟೌಟ್ಸ್, ಹೋರ್ಡಿಂಗ್ಸ್, ಪತ್ರಿಕಾ ಜಾಹಿರಾತು, ರೇಡಿಯೋ ಹಾಗೂ ಟಿ.ವಿ.ಜಾಹಿರಾತುಗಳಿಗಾಗಿ ಆಗುವ ವೆಚ್ಚವನ್ನು ನಿರ್ಮಾಪಕರೇ ಭರಿಸಬೇಕು. ಬಿಡುಗಡೆಯ ದಿನ ಚಿತ್ರ ಪ್ರದರ್ಶಿತವಾಗುವ ಚಿತ್ರಮಂದಿರಗಳ ಅಲಂಕರಣದ ಖರ್ಚು ನಿರ್ಮಾಪಕರದೇ. ಹೀಗೆ ಚಿತ್ರೀಕರಣ ಆರಂಭದಿಂದ ಚಿತ್ರ ಬಿಡುಗಡೆಯಾಗುವವರೆಗಿನ, ಬಿಡುಗಡೆಯ ನಂತರದ ಪ್ರಚಾರ ಮತ್ತಿತರ ಬಾಬಿನ ಎಲ್ಲ ವೆಚ್ಚವನ್ನು ನಿರ್ಮಾಪಕರೇ ಭರಿಸಬೇಕಾಗುತ್ತದೆ.

ಒಂದು ಚಿತ್ರದ ನಿರ್ಮಾಣ ಸಂದರ್ಭದಲ್ಲಿ ಕಥೆಗಾರ, ಚಿತ್ರನಾಟಕಕಾರ, ಸಂಭಾಷಣೆಕಾರ, ಗೀತರಚನೆಕಾರ, ನಿರ್ದೇಶಕ, ಸಹಾಯಕ ನಿರ್ದೇಶಕ, ಛಾಯಾಗ್ರಾಹಕ, ಛಾಯಾಗ್ರಹಣ ಸಹಾಯಕರು, ಸಂಗೀತ ನಿರ್ದೇಶಕ, ಅವರ ಸಹಾಯಕರು, ಹಿನ್ನೆಲೆ ಗಾಯಕ-ಗಾಯಕಿಯರು, ವಾದ್ಯವಟುಗಳು, ಕಲಾ ನಿರ್ದೇಶಕ ಮತ್ತು ಆತನ ಸಹಾಯಕರು, ನೃತ್ಯ ನಿರ್ದೇಶಕ ಮತ್ತು ಆತನ ಸಹಾಯಕರು,

ನರ್ತಕ-ನರ್ತಕಿಯರು, ಸಾಹಸ ಸಂಯೋಜಕ ಮತ್ತು ಆತನ ಸಹಾಯಕರು ಹಾಗೂ ಡ್ಯೂಪ್ ಕಲಾವಿದರು, ವಸ್ತ್ರವಿನ್ಯಾಸಕ ಮತ್ತು ಆತನ ಸಹಾಯಕರು, ಮೇಕಪ್‌ಮ್ಯಾನ್ ಮತ್ತು ಆತನ ಸಹಾಯಕರು, ಕೇಶಾಲಂಕಾರ ಪಟು, ಪ್ರೊಡಕ್ಷನ್ ಮ್ಯಾನೇಜರ್ ಮತ್ತು ಪ್ರೊಡಕ್ಷನ್ ಅಸಿಸ್ಟೆಂಟ್ಸ್, ಕಲಾವಿದರು, ಸಹ ಕಲಾವಿದರು, ಸಂಕಲನಕಾರ ಮತ್ತು ಆತನ ಸಹಾಯಕರು, ಸ್ಟುಡಿಯೋ, ಹೊರಾಂಗಣ ಘಟಕ, ಜನರೇಟರು, ಕ್ರೇನ್ ಮತ್ತು ಇತರೆ ಉಪಕರಣ, ಲೈಟ್‌ಮನ್, ಕ್ಯಾಮರಾ ಅಸಿಸ್ಟೆಂಟ್, ಸೌಂಡ್ ಅಸಿಸ್ಟೆಂಟ್, ಎಡಿಟಿಂಗ್ ರೂಂ ರಿಕಾರ್ಡಿಂಗ್, ರಿ-ರಿಕಾರ್ಡಿಂಗ್, ಡಬ್ಬಿಂಗ್ ಥಿಯೇಟರುಗಳು, ಸ್ಪೆಷಲ್ ಎಫೆಕ್ಟ್ ಪರಿಣತ,ಲ್ಯಾಬೊರೇಟರಿ, ಪತ್ರಿಕಾ ಸಂಪರ್ಕದವರು, ಪ್ರಚಾರ ವಿನ್ಯಾಸಕಾರರು, ಪೋಸ್ಟರ್ -ಸ್ಟಿಕರ್ಸ್ ಮುದ್ರಕರು, ಬ್ಯಾನರ್-ಕಟೌಟ್ ಸಿದ್ಧಪಡಿಸುವವರು, ಪತ್ರಿಕೆ ಹಾಗೂ ರೇಡಿಯೋ ಟಿ.ವಿ.ಪ್ರಚಾರ ಏಜೆನ್ಸಿಗಳು, ಬ್ಯಾನರ್ ಕಟ್ಟುವವರು, ಪೋಸ್ಟರ್ ಅಂಟಿಸುವವರು, ಥಿಯೇಟರಿನ ಮುಂದೆ ಅಲಂಕಾರ ಮಾಡುವವರು, ಹೀಗೆ ಸುಮಾರು ೭೦-೮೦ ಜನರು ದುಡಿಯಬೇಕಾಗಿದ್ದು, ಅವರೆಲ್ಲರ ಸಂಭಾವನೆ, ಕಚ್ಚಾ ಫಿಲಂ, ಉಡುಗೆ-ತೊಡುಗೆ, ಊಟೋಪಚಾರ, ಸಾರಿಗೆ ಸೌಲಭ್ಯ, ಮೇಕಪ್ ಪರಿಕರ ಮುಂತಾದ ಹಲವು ಬಗೆಯ ಖರ್ಚುಗಳನ್ನು ಚಿತ್ರ ನಿರ್ಮಾಪಕರೇ ನಿಭಾಯಿಸಬೇಕಾಗುತ್ತದೆ.

### ವೈಪರೀತ್ಯ

ಚಲನಚಿತ್ರ ಉದ್ಯಮವಾಗಿದ್ದರೂ ಸಹ ಇತರೆ ಎಲ್ಲ ಉದ್ದಿಮೆಗಳಿಗಿಂತ ಭಿನ್ನ. ಬೇರೆ ಯಾವುದೇ ಉದ್ಯಮಗಳಲ್ಲಿ ಕೆಲಸಮಾಡುವವರಿಗೆ ತಿಂಗಳ ಸಂಬಳ ಮತ್ತು ಭತ್ಯೆ ಮಾತ್ರ ದೊರೆಯುತ್ತದೆ. ದಿನಗೂಲಿ ನೌಕರರಿಗೆ ಕೆಲಸ ಮಾಡಿದ ದಿನದ ಕೂಲಿ ಸಿಗುತ್ತದೆ. ಆದರೆ ಚಲನಚಿತ್ರೋದ್ಯಮದಲ್ಲಿ ಸಂಭಾವನೆಯಲ್ಲದೆ, ಊಟ-ಉಪಚಾರ-ವಸತಿ-ಸಾರಿಗೆ ಸೌಲಭ್ಯಗಳನ್ನೂ ಒದಗಿಸುವುದು ಪದ್ಧತಿಯೇ ಆಗಿದೆ. ಇಷ್ಟೆಲ್ಲಾ ನೀಡುವ ನಿರ್ಮಾಪಕ ಮಾಲೀಕನೇ ಆದರೂ ಕೆಲಸ ಮಾಡುವವರ ಮರ್ಜಿಯನ್ನೇ ಅವಲಂಬಿಸಬೇಕಾಗುತ್ತದೆ. ಯಾವುದೇ ಆಜ್ಞೆ-ಆದೇಶಗಳನ್ನು ಆತ ಮಾಡಲಾರ. ಇದೊಂದು ವೈಪರೀತ್ಯವನ್ನು ಈ ಉದ್ಯಮದಲ್ಲಿ ಕಾಣಬಹುದಾಗಿದೆ. ಇನ್ನೊಂದು ಮುಖ್ಯವಾದ ವಿಷಯವೆಂದರೆ ಚಿತ್ರೋದ್ಯಮ ವ್ಯವಹಾರ ಕ್ಷೇತ್ರವೇ ಆಗಿದ್ದರೂ ಇಲ್ಲಿ ತಯಾರಾಗುವ ಚಿತ್ರಗಳು ಒಂದರಂತೆ ಇನ್ನೊಂದಿಲ್ಲ; ಒಂದಕ್ಕೆ ಇನ್ನೊಂದು ಮಾದರಿಯೂ ಅಲ್ಲ. ಅದಕ್ಕೆ ಅದೇ ಮಾದರಿ. ಬೇರೆ ಉದ್ಯಮಗಳು ಹೀಗಿಲ್ಲ. ಅಲ್ಲಿ ತಯಾರಾಗುವ ವಸ್ತುವಿನ ಬಗ್ಗೆ ಒಂದು ನಿರ್ದಿಷ್ಟ ಗ್ಯಾರಂಟಿ ಇರುತ್ತದೆ. ಚಿತ್ರೋದ್ಯಮದಲ್ಲಿ ಕೆಲಸಮಾಡುವವರಿಗೆ ಎಲ್ಲವನ್ನೂ ಕೊಟ್ಟು ಚಿತ್ರ ತಯಾರಿಸುವ ನಿರ್ಮಾಪಕನಿಗೆ ಚಿತ್ರ ಬಿಡುಗಡೆಯಾದ ಮೇಲಿನ ತನ್ನ ಅದೃಷ್ಟದ ಬಗ್ಗೆ ಖಾತರಿ ಇರುವುದೇ ಅಪರೂಪ. ಚಿತ್ರ ಚೆನ್ನಾಗಿ ಬಂದಿದೆ, ಚೆನ್ನಾಗಿ ಹೋಗುತ್ತೆ-ಲಾಭ ತರುತ್ತೆ ಎಂದು ಆಶಿಸಿದರೂ ಪ್ರೇಕ್ಷಕ ಪ್ರಭು ಒಪ್ಪಿ ಪ್ರೋತ್ಸಾಹಿಸುವುದೂ ಅಪರೂಪ. ಇತರೆ ಉದ್ದಿಮೆಗಳಲ್ಲಿ ನಿರ್ದಿಷ್ಟ ಲಾಭಾಂಶದ ಮಾಹಿತಿ ಇರುತ್ತದೆ. ಇಲ್ಲಿ ಅದು ಸಾಧ್ಯವಿಲ್ಲ.

### ರೀಮೇಕ್

ಈಚೆಗೆ ಯಶಸ್ವೀ ಕನ್ನಡೇತರ ಚಿತ್ರಗಳನ್ನು ಕನ್ನಡದಲ್ಲಿ ಪುನರಾವರ್ತಿಸುವತ್ತ ನಿರ್ಮಾಪಕರು ಹೆಚ್ಚು ಆಸಕ್ತರಾಗಿದ್ದಾರೆ. ಒಂದು ಭಾಷೆಯಲ್ಲಿ ಯಶಸ್ವಿಯಾದ ಚಿತ್ರವನ್ನು ಕನ್ನಡೀಕರಿಸುವುದು (ರೀಮೇಕ್) ಹೆಚ್ಚು ಕ್ಷೇಮಕರ ಎಂದು ಅವರ ಅನಿಸಿಕೆ; ಕಥೆಗಾಗಿ ಹುಡುಕಾಟ, ಆಯ್ದ ಕಥೆಯನ್ನು ಚಿತ್ರರೂಪಕ್ಕೆ ಅಳವಡಿಸುವ ಶ್ರಮ ಇವು ತಪ್ಪುವುದಲ್ಲದೆ ಅದಕ್ಕಾಗಿ ವ್ಯಯವಾಗುವ ಸಮಯವೂ ಉಳಿಯುತ್ತದೆ ಎಂಬ ನಂಬಿಕೆ; ಚಿತ್ರೀಕರಣ ಸಂದರ್ಭದಲ್ಲಿಯೂ ಮೂಲವೇ ಗೈಡ್ ಆಗುವ ಆಸೆ. ಹೀಗೆ ಹಲವು ಆಕರ್ಷಣೆಗಳು ನಿರ್ಮಾಪಕರನ್ನು ರೀಮೇಕ್‌ನತ್ತ ಸೆಳೆದಿವೆ. ಹಲವು ರೀಮೇಕ್‌ಗಳು ಸೋತರೂ ಕಾಕತಾಳೀಯವಾಗಿ ಕೆಲವು ಅಪಾರ ಯಶಗಳಿಸಿದ್ದು, ಕ್ಷೇಮಕರ ಎಂಬ ಭಾವನೆಯನ್ನು ಉಳಿಸಿ ಬೆಳೆಸುತ್ತಿವೆ. ಅಲ್ಲದೆ ಕನ್ನಡದ ಕೆಲವು ಜನಪ್ರಿಯ ನಟರ ಒಲವೂ ಆ ಕಡೆಗೇ ಇದೆ. ಹಿಂದೆ ಕಥೆ ಆಯ್ಕೆ ಮಾಡಿ ಹಲವು ತಿಂಗಳು ಶ್ರಮಿಸಿ ಸಾಹಿತ್ಯ ಸಿದ್ಧವಾಗುತ್ತಿದ್ದುದು, ಈಗ ಸಿದ್ಧಸಾಹಿತ್ಯವನ್ನು ಕನ್ನಡದಲ್ಲಿ ಭಟ್ಟಿ ಇಳಿಸುವುದು; ಮಕ್ಕಿಕಾಮಕ್ಕಿ ಕನ್ನಡೀಕರಿಸುವುದಷ್ಟಕ್ಕೇ ಸೀಮಿತಗೊಂಡಿದೆ. ಆದರೂ ಮಕ್ಕೀಕಾಮಕ್ಕಿ ಚಿತ್ರಗಳಲ್ಲಿ ಮಣ್ಣಿನ ವಾಸನೆ ಕಾಣಬರದ ಅಪಾಯ ಅಧಿಕ. ಕೆಲವೊಮ್ಮೆ ನಮ್ಮ ರೀತಿ-ರಿವಾಜುಗಳಿಂದ ದೂರ. ಹೀಗಾಗಿ ಅಂತಹ ಚಿತ್ರಗಳು ಜನಪ್ರಿಯವಾಗುವಲ್ಲಿ ವಿಫಲವಾಗುತ್ತವೆ. ನಿರ್ಮಾಪಕರು ಕನ್ನಡೇತರ ಚಿತ್ರಗಳನ್ನು ಕನ್ನಡದಲ್ಲಿ ಭಟ್ಟಿ ಇಳಿಸಲು ಹಕ್ಕುಗಳಿಗಾಗಿ ನೀಡುತ್ತಿರುವ ಮೊತ್ತ ಅಲ್ಪವೇನಲ್ಲ. ಒಂದು ಭಾಷೆಯಲ್ಲಿ ಯಶಸ್ವಿಯಾದುದು ಇಲ್ಲಿಯೂ ಯಶಸ್ವಿಯಾಗುತ್ತದೆ ಎನ್ನುವ ನಂಬಿಕೆ-ಹಣ ಮಾಡಲು ಕ್ಷೇಮಕರ ಎಂಬ ಭಾವನೆ ರೀಮೇಕ್ ಹೆಚ್ಚಲು ಕಾರಣವಾಗಿದೆ.

ಒಂದು ಚಿತ್ರದ ಕಥೆ, ಚಿತ್ರಕಥೆ, ಸಂಭಾಷಣೆ ಹಾಗೂ ಹಾಡುಗಳನ್ನು ಸಿದ್ಧಪಡಿಸಲು ಆರಂಭದ ದಿನಗಳಲ್ಲಿ ಖರ್ಚಾಗುತ್ತಿದ್ದುದು ಕೆಲವೇ ಸಾವಿರಗಳಷ್ಟಿದ್ದಿತು. ಹಿಂದೆ ಕನ್ನಡ ಚಿತ್ರಗಳ ತಯಾರಿಕೆ ಮದರಾಸಿನಲ್ಲಿ ನಡೆಯುತ್ತಿದ್ದಾಗ ಕನ್ನಡ ಚಿತ್ರ ನಿರ್ಮಾಪಕರು ಮೊಟ್ಟಮೊದಲಾಗಿ ಒಂದು ದೊಡ್ಡ ಮನೆಯನ್ನು ಬಾಡಿಗೆಗೆ ಪಡೆಯುತ್ತಿದ್ದರು. ಆ ಮನೆಯಲ್ಲಿಯೇ ಆಫೀಸು, ಚಿತ್ರದ ಸಾಹಿತ್ಯ ರಚನೆ, ಹಾಡುಗಳ ರಚನೆ, ಸಂಗೀತ ಸಂಯೋಜನೆ, ಉಡುಗೆ ತೊಡುಗೆಗಳ ಸಿದ್ಧತೆ ಎಲ್ಲವೂ ನಡೆಯುತ್ತಿತ್ತು. ಆರಂಭದ ದಿನಗಳಲ್ಲಿ ಚಿತ್ರೀಕರಣ ಪೂರ್ವದ ಪೂರ್ವಾಭ್ಯಾಸ-ರಿಹರ್ಸಲ್‌ಗಳನ್ನೂ ಮಾಡಲಾಗುತ್ತಿತ್ತು. ಅಲ್ಲಿಯೇ ಕಲಾವಿದರಿಗೆ-ಸಾಹಿತಿಗಳಿಗೆ-ತಂತ್ರಜ್ಞರಿಗೆ ಊಟೋಪಚಾರ, ವಸತಿ ಸೌಲಭ್ಯವನ್ನೂ ಒದಗಿಸಲಾಗುತ್ತಿತ್ತು. ಕ್ರಮೇಣ ಹೊರ ಊರಿನಿಂದ ಮದರಾಸಿಗೆ ಬಂದ ಚಿತ್ರತಂಡದ ಪ್ರಮುಖರು ಹೋಟೇಲುಗಳಲ್ಲಿ ತಂಗುವ ಪರಿಪಾಠ ಆರಂಭವಾಯಿತು. ಚಿತ್ರದ ಸಾಹಿತ್ಯ, ರಾಗ ಸಂಯೋಜನೆ ಹೋಟೇಲು ರೂಮುಗಳಲ್ಲಿ ಸೃಷ್ಟಿಯಾಗತೊಡಗಿದವು. ಕನ್ನಡ ಚಿತ್ರೋದ್ಯಮ ಕನ್ನಡ ನೆಲದಲ್ಲಿ ನೆಲೆಯೂರುತ್ತಾ ಬಂದಂತೆ, ಬೆಂಗಳೂರಿನ ಹೋಟೇಲುಗಳಲ್ಲಿ ಆ ಕೆಲಸ ಮುಂದುವರಿಯ ತೊಡಗಿತು. ಹಿಂದೆ ಚಿತ್ರದ ಕಥೆ, ಚಿತ್ರಕಥೆ, ಸಾಹಿತ್ಯದ ಸೃಷ್ಟಿಗಾಗಿ ಸುಮಾರು ೩೦-೩೫ಸಾವಿರ ರೂ. ಖರ್ಚಾಗುತ್ತಿದ್ದರೆ, ಈಗ ಅದರ ದುಪ್ಪಟ್ಟು ಆಗುತ್ತಿದೆ. ಕನ್ನಡೇತರ ಚಿತ್ರಗಳ ರೀಮೇಕ್ ಹಕ್ಕಿಗಾಗಿಯೇ ಲಕ್ಷಾಂತರ ರೂಪಾಯಿಗಳನ್ನು ಕೊಡಬೇಕಾಗಿದೆ.

### ಆಡಿಯೋ ವ್ಯವಹಾರ

ಕನ್ನಡ ಚಿತ್ರಗಳ ವ್ಯವಹಾರಕ್ಕೆ ಸಂಬಂಧಪಟ್ಟ ಹಾಗೆ ಹೊಸತೊಂದು ಸಾಧ್ಯತೆಯನ್ನು ತೋರಿಸಿಕೊಟ್ಟದ್ದು ಆಡಿಯೋ ವ್ಯವಹಾರ. ಇದು ಕಳೆದ ಹದಿನೈದು ವರ್ಷಗಳಲ್ಲಿನ ಬೆಳವಣಿಗೆ. ಅದಕ್ಕೆ ಮೊದಲು ಈ ವ್ಯವಹಾರ ಗಮನಾರ್ಹವಾಗಿರಲಿಲ್ಲ.

ಚಿತ್ರದ ತಾರಾಗಣ, ತಾಂತ್ರಿಕತೆ ಹಾಗೂ ಸಂಗೀತ ಮಾಧುರ್ಯವನ್ನು ಅವಲಂಬಿಸಿ ಆಡಿಯೋ ಹಕ್ಕುಗಳನ್ನು ಧ್ವನಿಸುರುಳಿ ತಯಾರಿಕಾ ಸಂಸ್ಥೆಗಳು ಒಳ್ಳೆಯ ಬೆಲೆಗೆ ಕೊಳ್ಳುತ್ತಿರುವುದರಿಂದ ನಿರ್ಮಾಪಕರು ತಮ್ಮ ಚಿತ್ರದ ಸಂಗೀತದಿಂದ ಹೆಚ್ಚಿನ ಲಾಭ ಕಾಣಲು ಸಾಧ್ಯವಾಗಿದೆ. ಆರಂಭದ ೪-೫ ದಶಕಗಳ ಅವಧಿಯಲ್ಲಿ ಈ ಸೌಲಭ್ಯ ನಿರ್ಮಾಪಕರಿಗಿರಲಿಲ್ಲ.

ವಾಕ್ಚಿತ್ರದ ಆರಂಭದ ದಿನಗಳಲ್ಲಿ ಚಿತ್ರೀಕರಣದ ವೇಳೆಯೇ ಹಾಡುಗಳ ಧ್ವನಿಮುದ್ರಣವೂ ನಡೆಯುತ್ತಿತ್ತು. ನಂತರ ಹಿನ್ನಲೆಗಾಯನ, ಪೂರ್ವಧ್ವನಿಮುದ್ರಣ ವ್ಯವಸ್ಥೆಗಳು ಬಂದವು. ಗ್ರಾಮಾಫೋನ್ ತಟ್ಟೆಗಳನ್ನು ಸಿದ್ಧಪಡಿಸುತ್ತಿದ್ದ ಗ್ರಾಮಾಫೋನ್ ಕಂಪೆನಿಗಳು ಚಿತ್ರದ ಹಾಡುಗಳಲ್ಲಿ ಆಸಕ್ತಿ ತಳೆದವು.

ಗ್ರಾಮಫೋನ್ ಕಂಪೆನಿಗಳು ಹಾಡಿನ ಹಕ್ಕನ್ನು ಪಡೆದು ನಿರ್ಮಾಪಕರಿಗೆ ಇಂತಿಷ್ಟು ಎಂದು ಗೌರವಧನ ನೀಡಲು ಆರಂಭಿಸಿದವು. ಅದೇನಿದ್ದರೂ ಸಾಂಕೇತಿಕ ಮೊತ್ತವಷ್ಟೆ. ಒಟ್ಟು ಚಿತ್ರದ ನಿರ್ಮಾಣ ವೆಚ್ಚದಲ್ಲಿ ನಗಣ್ಯ ಎನ್ನುವಷ್ಟು. ಆಕಾಶವಾಣಿ ಮೂಲಕ ಪ್ರಸಾರವಾದ ಹಾಡುಗಳಿಗೆ ಅತ್ಯಲ್ಪ ಗೌರವಧನ ನೀಡುವ ಪದ್ಧತಿಯೂ ಇತ್ತು. ಜನಪ್ರಿಯ ಹಾಡುಗಳು ಹೆಚ್ಚು ಹೆಚ್ಚು ಪ್ರಸಾರವಾದಂತೆ, ಅವುಗಳ ನಿರ್ಮಾಪಕರು ಮತ್ತು ಗ್ರಾಮಫೋನ್ ಕಂಪೆನಿಗಳಿಗೆ ಹೆಚ್ಚು ಗೌರವಧನ ಸಂದಾಯವಾಗುತ್ತಿತ್ತು. ಗ್ರಾಮಾಫೋನ್ ತಟ್ಟೆಗಳ ಮಾರಾಟದ ಲೆಕ್ಕದಲ್ಲಿ ನಿರ್ಮಾಪಕರಿಗೆ ಕಂತುಗಳಲ್ಲಿ ಗೌರವಧನ ಪಾವತಿಯಾಗುತ್ತಿತ್ತು.

ಆರಂಭದ ದಿನಗಳಲ್ಲಿ ಬಹುತೇಕ ಕನ್ನಡ ಚಿತ್ರಗಳ ಹಾಡುಗಳ ಆಡಿಯೋ ಹಕ್ಕು ಪಡೆಯುತ್ತಿದ್ದ ಸಂಸ್ಥೆ ಎಂದರೆ ಎಚ್.ಎಂ.ವಿ. ಇದು ಭಾರತದ ಅತ್ಯಂತ ಹಿರಿಯ ಗ್ರಾಮಫೋನ್ ಸಂಸ್ಥೆ.

ಗ್ರಾಮಫೋನ್ ರಿಕಾರ್ಡ್‌ಗಳ ಜಾಗವನ್ನು ಧ್ವನಿಸುರುಳಿಗಳು ಆವರಿಸುವುದರೊಂದಿಗೆ, ಇದರ ವ್ಯವಹಾರ ರೀತಿಯೇ ಬದಲಾಯಿತು. ಗ್ರಾಮಫೋನ್ ಸಂಸ್ಥೆಗಳ ವ್ಯವಹಾರ ಕುಸಿಯಿತು. ಧ್ವನಿಸುರುಳಿ ಮುದ್ರಿಸುವ ಸಂಸ್ಥೆಗಳ ಉದಯವಾಯಿತು. ಕನ್ನಡ ಚಿತ್ರರಂಗಕ್ಕೆ ಕನ್ನಡಿಗ ಎಚ್. ಎಂ.ಮಹೇಶ್ ಅವರ ಸಂಗೀತಾ ಸಂಸ್ಥೆಯ ಉದಯವಾಯಿತು.ಮದರಾಸಿನಲ್ಲಿ ಆರಂಭವಾದ ಈ ಸಂಸ್ಥೆ ೬೦ರ ದಶಕದ ಆರಂಭದವರೆಗೆ ಬಹುತೇಕ ಕನ್ನಡ ಚಿತ್ರಗಳ ಆಡಿಯೋ ಹಕ್ಕನ್ನು ಪಡೆಯುತ್ತಿತ್ತು. ಕನ್ನಡಿಗರೊಬ್ಬರು ಹುಟ್ಟು ಹಾಕಿದ 'ಸಂಗೀತಾ' ನಿರ್ಮಾಪಕರಿಗೆ ಪ್ರಿಯವಾದ ಸಂಸ್ಥೆಯಾಯಿತು. ಆದರೆ ಆಡಿಯೋ ಹಕ್ಕಿಗಾಗಿ ನಿರ್ಮಾಪಕರು ಪಡೆಯುತ್ತಿದ್ದ ಗೌರವಧನ ಕಡಿಮೆ ಎಂದೇ ಹೇಳಬೇಕು. ಸಾಧಾರಣ ಚಿತ್ರಗಳಿಗೆ

ಕೆಲವೇ ಸಾವಿರ ರೂಪಾಯಿ ಗೌರವಧನ ನೀಡಿ ನೇರ ಖರೀದಿ ಮಾಡಿಬಿಡುತ್ತಿದ್ದ ಎಚ್.ಎಂ. ಮಹೇಶ್ ಕೆಲವು ಚಿತ್ರಗಳಿಗೆ ವ್ಯವಹಾರದ ಆಧಾರದ ಮೇಲೆ ಗೌರವಧನ ಗೊತ್ತುಪಡಿಸುತ್ತಿದ್ದುದೂ ಇದೆ.

ಕನ್ನಡ ಚಿತ್ರಗಳ ಧ್ವನಿಸುರುಳಿ ಲೋಕದಲ್ಲಿ ಅತಿ ಹೆಚ್ಚು ಗೌರವಧನ ನೀಡಿ ಆಡಿಯೋ ಹಕ್ಕನ್ನು ಪಡೆದ ಮೊದಲ ಸಂಸ್ಥೆ ಲಹರಿ. ಲಹರಿ ಆಡಿಯೋ ಸಂಸ್ಥೆ ಕನ್ನಡ ಸಿನಿಮಾಗಳ ಆಡಿಯೋ ಮಾರುಕಟ್ಟೆಯ ಸಾಧ್ಯತೆಯನ್ನು ತೋರಿಸಿಕೊಟ್ಟಿದ್ದೇ ಅಲ್ಲದೆ ಹಲವು ಆಡಿಯೋ ಸಂಸ್ಥೆಗಳ ಉಗಮಕ್ಕೆ ಸ್ಫೂರ್ತಿಯೂ ಆಯಿತು. ರವಿಚಂದ್ರನ್ ನಿರ್ದೇಶಿಸಿ, ನಟಿಸಿದ, ಹಂಸಲೇಖ ಸಂಗೀತ ಸಂಯೋಜಿಸಿದ 'ಪ್ರೇಮಲೋಕ' ಈ ದಾಖಲೆಯ ಚಿತ್ರ. ಅದರ ಆಡಿಯೋ ಹಕ್ಕುಗಳನ್ನು ಒಂದು ಲಕ್ಷದ ಎಂಬತ್ತು ಸಾವಿರ ರೂ.ಗಳಿಗೆ ಮಾರಾಟ ಮಾಡಿದ್ದಾಗಿ ರವಿಚಂದ್ರನ್ ಹೇಳುತ್ತಾರೆ. ಈ ವ್ಯವಹಾರ ನಡೆದಾಗ ಇಡೀ ಗಾಂಧಿನಗರ ಮೂಗಿನ ಮೇಲೆ ಬೆರಳಿಟ್ಟಿತು. ಇಷ್ಟೊಂದು ವ್ಯವಹಾರ ಸಾಧ್ಯವೇ ಎಂದು ಅನುಮಾನಿಸಿತು. ಇದು ನಡೆದದ್ದು ೧೯೮೭ರಲ್ಲಿ.

ಆದರೆ ಅಂದು ಆರಂಭವಾಗಿದ್ದು ಆಡಿಯೋ ಕ್ಷೇತ್ರದ ತ್ರಿವಿಕ್ರಮ ಪಾದದ ಮೊದಲ ಹೆಜ್ಜೆ.ಪಂಚಿಕಾ ಕ್ಷೇತ್ರವಂತೆ, ಹಾಡುಗಳ ಮಾರುಕಟ್ಟೆಯ ವ್ಯಾಪ್ತಿಯ ಪರೀಕ್ಷೆಯೂ ಆದಾಯಿತು. ರವಿಚಂದ್ರನ್-ಹಂಸಲೇಖ ಜೋಡಿಯ ಮೋಡಿ ಆಡಿಯೋ ಕ್ಷೇತ್ರದಲ್ಲಿ ಹೊಸ ಅಧ್ಯಾಯಕ್ಕೆ ನಾಂದಿ ಹಾಡಿತು. ಇದರ ಪರಿಣಾಮವಾಗಿ ಹಲವು ಹೊಸ ಆಡಿಯೋ ಸಂಸ್ಥೆಗಳು ಹುಟ್ಟಿಕೊಂಡವು. ಮಧು ಬಂಗಾರಪ್ಪ ಅವರ ಆಕಾಶ್‌ಆಡಿಯೋ, ರವಿಚಂದ್ರನ್‌ರ ಈಶ್ವರಿ ಆಡಿಯೋ, ಹಂಸಲೇಖರ ಹಂಸಲೋಕ ಇವೆಲ್ಲ ಹುಟ್ಟಲು ಕಾರಣ ಚಿತ್ರಸಂಗೀತಕ್ಕಿರುವ ಮಾರುಕಟ್ಟೆ. ಚಿತ್ರೋದ್ಯಮದ ಮಂದಿಯ ಈ ಸಾಹಸಗಳಲ್ಲದೆ ಬೇರೆ ಕ್ಯಾಸೆಟ್ ಕಂಪೆನಿಗಳು ಕೂಡ ಚಿತ್ರಗೀತೆಗಳನ್ನು ಮಾರುಕಟ್ಟೆಗೆ ತರಲು ಮುಂದೆ ಬಂದವು. ಆನಂದ್, ಮನೋರಂಜನ್, ಝೂಂಕಾರ್ ನಂತಹ ಸಂಸ್ಥೆಗಳು ಇವುಗಳಲ್ಲಿ ಸೇರುತ್ತವೆ.

ದೇಶದ ದೊಡ್ಡ ದೊಡ್ಡ ಸಂಸ್ಥೆಗಳು ಕನ್ನಡ ಚಿತ್ರಸಂಗೀತ ಕ್ಷೇತ್ರದ ಕಡೆ ನೋಡತೊಡಗಿದವು. ದೇಶವಿದೇಶಗಳಲ್ಲಿ ಶಾಖೆಗಳನ್ನು ಹೊಂದಿರುವ ಮ್ಯಾಗ್ನಸೌಂಡ್ ಸಂಸ್ಥೆ ಹಲವು ಕನ್ನಡ ಚಿತ್ರಗಳ ಆಡಿಯೋ ಹಕ್ಕನ್ನು ಪಡೆದಿದೆ. ಹಿಂದೆ ಗ್ರಾಮಫೋನ್ ರಿಕಾರ್ಡ್‌ಗಳ ದಿನಗಳಲ್ಲಿ ಹೆಸರಾಂತ ಎಚ್.ಎಂ.ವಿ ಈಗ 'ಸರಿಗಮ' ಹೆಸರಲ್ಲಿ ಮತ್ತೆ ಮಾರುಕಟ್ಟೆ ಪ್ರವೇಶಿಸಿದೆ. ಸಿನಿಮಾ ಹಾಡುಗಳ ಹಕ್ಕು ಪಡೆಯಲು ನೀಡುವ ಗೌರವಧನ ಈಗ ಸಿನಿಮಾದ ಗಳಿಕೆಯ ಮುಖ್ಯ ಅಂಶಗಳಲ್ಲಿ ಒಂದಾಗಿದೆ. ಚಿತ್ರದ ನಾಯಕ ನಟರು, ಗಾಯಕರು, ನಿರ್ಮಾಣ ಸಂಸ್ಥೆ, ನಿರ್ದೇಶಕರು ಇವುಗಳ ಆಧಾರದ ಮೇಲೆ ಒಂದು ಆಡಿಯೋ ಸಂಸ್ಥೆ ಚಿತ್ರದ ಹಾಡುಗಳ ಹಕ್ಕುಗಳಿಗೆ ಗೌರವಧನ ನಿಗದಿ ಪಡಿಸುತ್ತದೆ. ನಾಯಕ ನಟರ ಜನಪ್ರಿಯತೆಯ ಮೇಲೆ ಬಹಳಷ್ಟು ಸಂದರ್ಭಗಳಲ್ಲಿ ಈ ವ್ಯವಹಾರದ ಒಪ್ಪಂದಗಳಾಗುತ್ತವೆ.

ಕಳೆದ ದಶಕದ ಕೊನೆಯಲ್ಲಿ ರಾಮು ನಿರ್ಮಾಣದ 'ಹಾಲಿವುಡ್' ಚಿತ್ರಕ್ಕಾಗಿ ಹಾಡಿನ ಧ್ವನಿಮುದ್ರಣವಾಗುತ್ತಿತ್ತು. ಆ ಸಂದರ್ಭದಲ್ಲಿ ಆಡಿಯೋ ಹಕ್ಕನ್ನು ಪಡೆದಿದ್ದ ಆಕಾಶ್ ಆಡಿಯೋ ಮಧು ಬಂಗಾರಪ್ಪ ಅವರು ಹೇಳಿದ ಮಾತುಗಳು, ಇಡೀ ಕ್ಷೇತ್ರದ ವ್ಯವಹಾರ ಕೋಟಿಗಳನ್ನು ಮೀರುವ ಸಾಧ್ಯತೆ ಇರುವುದಕ್ಕೆ ಕನ್ನಡಿ ಹಿಡಿಯುವಂತಿತ್ತು. ಅವರು ಹೇಳಿದ್ದಿಷ್ಟೇ : ಇದೊಂದು ದಾಖಲೆಯ ವ್ಯವಹಾರವಾಗಬಹುದು. ಇನ್ನೂ ಅಂತಿಮ ನಿರ್ಧಾರವಾಗದ ಈ ಚಿತ್ರದ ಹಾಡುಗಳ ಹಕ್ಕಿಗೆ ಒಂದು ಕೋಟಿಗೂ ಮಿಗಿಲಾಗಿ ಗೌರವಧನ ಸಲ್ಲುವ ಸಾಧ್ಯತೆಯನ್ನು ಅವರು ದಾಖಲಿಸಿದರು.

ಆಡಿಯೋ ಕ್ಷೇತ್ರ ಬೆಳೆಯುತ್ತಿರುವಂತೆಯೇ ಅದರೊಂದಿಗೆ ಅನಧಿಕೃತ ಕ್ಯಾಸೆಟ್‌ಗಳ ಮಾರುಕಟ್ಟೆಯೂ ಬೆಳೆದಿದೆ. ಆಡಿಯೋ ಪೈರಸಿ ಇನ್ನಿಲ್ಲದಂತೆ ಕ್ಯಾಸೆಟ್ ಸಂಸ್ಥೆಗಳಿಗೆ ಮುಳ್ಳಾಗತೊಡಗಿದೆ. ಬೇರೆ ಬೇರೆ ಸಂಸ್ಥೆಗಳು ಇದನ್ನು ತಡೆಯಲು ತಮ್ಮದೇ ಆದ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ಲಹರಿ ಸಂಸ್ಥೆ ಬೆಲೆಯನ್ನು ಇಳಿಸುವ ಮೂಲಕ ಸ್ಪರ್ಧೆ ಒಡ್ಡಿದೆ. ೧೯೯೯ರಲ್ಲಿ ತನ್ನ ೨೦ನೇ ಹುಟ್ಟು ಹಬ್ಬದ ಸಂದರ್ಭದಲ್ಲಿ ಕ್ಯಾಸೆಟ್ ಬೆಲೆಯನ್ನು ಅದು ೨೦ ರೂಪಾಯಿಗೆ ಇಳಿಸಿತು. ಉಳಿದ ಕಂಪನಿಗಳು ಬೆಲೆ ಇಳಿಸಿಲ್ಲ.ಆದರೆ ಭಾರಿ ಬಜೆಟ್‌ನ ಚಿತ್ರಗಳ ಧ್ವನಿಸುರುಳಿ ಹಕ್ಕುಗಳನ್ನು ಪಡೆಯುವಲ್ಲಿ ಸ್ಪರ್ಧೆ ನಡೆಸಿವೆ.

ಕನ್ನಡ ಚಿತ್ರವೊಂದರ ಹಾಡುಗಳ ಧ್ವನಿಸುರುಳಿ ಹಲವು ಲಕ್ಷಗಳಷ್ಟು ಮಾರಾಟವಾಗುತ್ತವೆ. ಇತ್ತೀಚಿನ ದಿನಗಳಲ್ಲಿ 'ಯಜಮಾನ' ಧ್ವನಿಸುರುಳಿ ದಾಖಲೆ ಮಾರಾಟ ಮಾಡಿದೆ. 'ಜನುಮದ ಜೋಡಿ' ಚಿತ್ರದ ಹಾಡುಗಳ ಧ್ವನಿಸುರುಳಿ ಮಾರಾಟದಲ್ಲಿ ಸಾರ್ವಕಾಲಿಕ ದಾಖಲೆ ಎನ್ನುವ ಮಾತು ಇದೆ.

## ಚಿತ್ರ ಸಂಗೀತದ ವೆಚ್ಚ

ಹಿಂದೆ, ಆರಂಭದ ದಿನಗಳಲ್ಲಿ, ಹಾಡುಗಳನ್ನು ಮೊದಲೇ ಧ್ವನಿ ಮುದ್ರಿಸಿಕೊಳ್ಳುವ ವ್ಯವಸ್ಥೆ ಇರಲಿಲ್ಲ. ಚಿತ್ರೀಕರಣ ಸಂದರ್ಭದಲ್ಲಿಯೇ ನಟ ನಟಿಯರು ಹಾಡುತ್ತಿದ್ದು ವಾದ್ಯಗಾರರು ಸೆಟ್‌ನಲ್ಲಿಯೇ ಹಿನ್ನಲೆ ಸಂಗೀತ ಒದಗಿಸಿ ಏಕಕಾಲದಲ್ಲಿ ಧ್ವನಿಮುದ್ರಣ ಮಾಡಿಕೊಳ್ಳಲಾಗುತ್ತಿತ್ತು. ನಂತರ ರಿಕಾರ್ಡಿಂಗ್ ಸ್ಟುಡಿಯೋಗಳಲ್ಲಿ ಹಾಡುಗಳನ್ನು ಪ್ರತ್ಯೇಕವಾಗಿ ಮೊದಲೇ ಧ್ವನಿಮುದ್ರಿಸಿಕೊಂಡು ನಂತರ ಚಿತ್ರೀಕರಣ ಮಾಡುವ ಪದ್ಧತಿ ಬಂದಿತು. ಹಾಡುಗಳಿಗೆ ಕಂಠದಾನ ಮಾಡುವ ಹಿನ್ನೆಲೆ ಗಾಯಕರು ಬೆಳಕಿಗೆ ಬಂದು, ನಟ ನಟಿಯರು ತುಟಿ ಚಲನೆ ನೀಡತೊಡಗಿದರು. ಆರಂಭದ ದಿನಗಳಲ್ಲಿ ೧೨ರಿಂದ ೧೮ ಹಾಡುಗಳು ಒಂದು ಚಿತ್ರದಲ್ಲಿರುತ್ತಿದ್ದವು. ಕ್ರಮೇಣ ಎಂಟು ಹಾಡುಗಳಿರುವುದು ಸೂತ್ರವಾಯಿತು. ಬರಬರುತ್ತಾ ನಾಲ್ಕು ಹಾಡುಗಳಿಗೆ ಇಳಿಯಿತು. ಅದು ಕಥೆಯ ಅಗತ್ಯವನ್ನನುಸರಿಸಿ ಹೆಚ್ಚು ಕಮ್ಮಿಯಾಗುತ್ತಿತ್ತು. ಎಪ್ಪತ್ತರ ದಶಕದಲ್ಲಿ ಐದು-ಆರು ಸಾವಿರ ರೂ.ಗಳ ವೆಚ್ಚದಲ್ಲಿ ಒಂದು ಹಾಡಿನ ಧ್ವನಿಮುದ್ರಣ ಮುಗಿಯುತ್ತಿತ್ತು. ಹಿನ್ನೆಲೆ ಗಾಯಕರ ಸಂಭಾವನೆ, ವಾದ್ಯಗೋಷ್ಠಿಯವರ ಸಂಭಾವನೆ, ಥಿಯೇಟರು ಬಾಡಿಗೆ, ಊಟೋಪಚಾರ ವೆಚ್ಚ ಎಲ್ಲವೂ ಅದರಲ್ಲಿ ಸೇರಿರುತ್ತಿತ್ತು. ಹೆಚ್ಚು ವಾದ್ಯಗಳ ಬಳಕೆಯಾದರೆ ವೆಚ್ಚ ಸ್ವಲ್ಪ ಮಟ್ಟಿಗೆ ಹೆಚ್ಚುತ್ತಿತ್ತು. ಪ್ರಸ್ತುತ ವೆಚ್ಚ ಐದಾರು ಪಟ್ಟು ಹೆಚ್ಚಿದೆ. ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ ಇದು ಇನ್ನೂ ಹೆಚ್ಚಾಗಿರುವುದು ಕಾಣಬರುತ್ತದೆ. ಕರ್ನಾಟಕದಲ್ಲಿಯೇ ಹಾಡುಗಳ ರಿಕಾರ್ಡಿಂಗ್ ಆರಂಭವಾದ ತರುಣದಲ್ಲಿ ಮದರಾಸಿನಿಂದಲೇ ಹಿನ್ನೆಲೆಯ ವಾದ್ಯಪಟುಗಳನ್ನು ಕರೆಸಿಕೊಳ್ಳಬೇಕಾಗುತ್ತಿತ್ತಾದ್ದರಿಂದ ಅವರ ಪ್ರಯಾಣದ ಸಮಯಕ್ಕೂ ಕಾಲ್‌ಶೀಟ್ ಆಧಾರದ ಮೇಲೆ ಸಂಭಾವನೆ ನೀಡಬೇಕಾಗಿತ್ತು. ಕರ್ನಾಟಕದಲ್ಲಿ ವಾದ್ಯಪಟುಗಳಿದ್ದರೂ ಸಿನಿಮಾಕ್ಕೆ ನುಡಿಸುವ ಅನುಭವ ಅವರಿಗಿರಲಿಲ್ಲ. ನುರಿತ ವಾದ್ಯಪಟುಗಳನ್ನು ಮದರಾಸಿನಿಂದ ಕರೆಸಿಕೊಂಡಲ್ಲಿ ಧ್ವನಿ ಮುದ್ರಣ ಕಾರ್ಯ ಚುರುಕಾಗಿ ನಡೆದು ಬೇಗ ಮುಗಿಯುತ್ತಿತ್ತು. ಕ್ರಮೇಣ ಇಲ್ಲಿನ ವಾದ್ಯಪಟುಗಳು ಸಿನಿಮಾಕ್ಕೆ ನುಡಿಸುವುದರಲ್ಲಿ ಪರಿಣತಿ ಪಡೆದರು. ಆದುದರಿಂದ ಈಗ ಕೆಲವೊಂದು ವಿಶೇಷ-ವಿಶಿಷ್ಟ ವಾದ್ಯಗಾರರನ್ನು ಮಾತ್ರ ಹೊರಗಿನಿಂದ ಕರೆಸಿಕೊಳ್ಳಲಾಗುತ್ತದೆ. ಉಳಿದಂತೆ ಸ್ಥಳೀಯ ಕಲಾವಿದರನ್ನೇ ಹೆಚ್ಚಾಗಿ ಬಳಸಿಕೊಳ್ಳಲಾಗುತ್ತಿದೆ. ಹಿಂದೆ ಕೆಲವಾರು ಸಾವಿರಗಳಲ್ಲಿ ಚಿತ್ರದ ಹಾಡುಗಳ ಧ್ವನಿಮುದ್ರಣವಾಗುತ್ತಿದ್ದುದು ಈಗ ಲಕ್ಷದ ಅಂಕೆಯನ್ನು ಮೀರುತ್ತಿದೆ. ಅಮೆರಿಕ, ಸ್ವಿಟ್ಜರ್ಲೆಂಡ್, ಆಸ್ಟ್ರೇಲಿಯಾ, ಮಾರಿಷಸ್, ಲಂಡನ್ ಹೀಗೆ ಹೊರರಾಷ್ಟ್ರಗಳಲ್ಲಿ ಚಿತ್ರೀಕರಣವಾಗುವುದರಿಂದ ಹಾಡುಗಳ ಶ್ರೀಮಂತಿಕೆಯೂ ಹೆಚ್ಚಾಗಿರಬೇಕಾದುದು ಅಗತ್ಯ. ಹಾಗೆಯೇ ಆಡಿಯೋ ಹಕ್ಕುಗಳ ಮಾರಾಟದಿಂದ ನಿರ್ಮಾಪಕರು ಲಕ್ಷಗಟ್ಟಲೆ ಸಂಪಾದನೆ ಮಾಡಿಕೊಳ್ಳಲೂ ಈಗ ಸಾಧ್ಯವಾಗಿದೆ.

ಹಿಂದೆ ಗ್ರಾಮಾಫೋನ್ ಹೊಂದಿರುವವರು ಮಾತ್ರ ರಿಕಾರ್ಡ್‌ಗಳನ್ನು ಕೊಳ್ಳುತ್ತಿದ್ದರು. ಹೀಗಾಗಿ ಒಮ್ಮೆಗೆ ಸಿದ್ಧಪಡಿಸುವ ಗ್ರಾಮಫೋನ್ ತಟ್ಟೆಗಳ ಸಂಖ್ಯಾ ಪ್ರಮಾಣ ಕೆಲವು ನೂರುಗಳಷ್ಟು ಮಾತ್ರ ಇರುತ್ತಿದ್ದಿತು. ಈಗ ಟ್ರಾನ್ಸಿಸ್ಟರ್‌ಗಳು, ಟೂ ಇನ್ ಒನ್‌ಗಳು, ಟೇಪ್‌ರಿಕಾರ್ಡರ್‌ಗಳು, ವಾಕ್‌ಮನ್‌ಗಳು ಪ್ರತಿಮನೆಯಲ್ಲಿಯೂ ಇದ್ದು, ಧ್ವನಿ ಸುರುಳಿಗಳಿಗೆ ಹೆಚ್ಚು ಬೇಡಿಕೆ ಇರುವುದರಿಂದ ಕ್ಯಾಸೆಟ್ ವ್ಯವಹಾರವೂ ಚೆನ್ನಾಗಿದ್ದು, ಕ್ಯಾಸೆಟ್ ಉದ್ಯಮವೂ ಬೆಳೆದಿದೆ. ಜೊತೆಗೆ ಸಿ.ಡಿ.ಗಳು, ಕಂಪ್ಯೂಟರ್‌ಗಳೂ ಸಾಮಾನ್ಯವಾಗಿವೆ. ಗ್ರಾಮಫೋನ್ ತಟ್ಟೆಗಳು ಆಕರ್ಷಣೆ ಕಳೆದುಕೊಂಡಿವೆ. ಇದರಿಂದಾಗಿ ಆಡಿಯೋ ಹಕ್ಕುಗಳಿಗೆ ಒಳ್ಳೆಯ ಬೆಲೆ ದೊರೆಯುತ್ತಿದೆ. ಹಿಂದೆ ಮಾರಾಟದ ಗಳಿಕೆಯ ಶೇಕಡಾವಾರು ಆಧಾರದಲ್ಲಿ ಹಕ್ಕುಗಳನ್ನು ಕೊಳ್ಳಲಾಗುತ್ತಿದ್ದುದು ತಪ್ಪಿ ಈಗ ಒಟ್ಟು ಗೌರವಧನ ನಿಗದಿಮಾಡಿಕೊಂಡು ಒಮ್ಮೆಲೇ ಹಣ ನಿರ್ಮಾಪಕರಿಗ ಕೈ ಸೇರುವಂತಾಗಿರುವುದರಿಂದ ನಿರ್ಮಾಪಕರಿಗೆ ಹೆಚ್ಚು ಅನುಕೂಲವಾಗಿದೆ.

## ನಿತ್ಯ ತಯಾರಿಕೆ ವೆಚ್ಚ

ಆರಂಭದ ದಿನಗಳಲ್ಲಿ ದಿನನಿತ್ಯದ ಚಿತ್ರೀಕರಣ ವೆಚ್ಚ ಎರಡು-ಮೂರು ಸಾವಿರಗಳಷ್ಟಿದ್ದಿತು. ಬರಬರುತ್ತಾ ನಾಲ್ಕಾರು ಸಾವಿರಕ್ಕೆ ಏರಿತು. ಈಚೆಗೆ ಅದರ ನಾಲ್ಕಾರು ಪಟ್ಟು, ಕೆಲವೊಮ್ಮೆ ಇನ್ನೂ ಹೆಚ್ಚು ಏರಿದೆ. ಹಿಂದೆ ನಿರ್ಮಾಪಕರ ಸಂಸ್ಥೆಯು ಗೊತ್ತು ಮಾಡಿದ ಕಾಸ್ಟ್ಯೂಮರ್, ಮೇಕಪ್‌ಮ್ಯಾನ್‌ಗಳೇ ಇಡೀ ಕಲಾವಿದರ ತಂಡದ ಅಗತ್ಯಗಳನ್ನು ಪೂರೈಸಿಕೊಡುತ್ತಿದ್ದರು. ಈಗ ಎಲ್ಲ ನಟ-ನಟಿಯರೂ ಪ್ರತ್ಯೇಕ

ಕಾಸ್ಟ್ಯೂಮರ್,ಕಾಸ್ಟ್ಯೂಂ ಅಸಿಸ್ಟೆಂಟ್‌ಗಳು, ಮೇಕಪ್‌ಮ್ಯಾನ್‌ಗಳನ್ನು ಹೊಂದಿರುವುದರಿಂದ ಆ ಎಲ್ಲ ವೆಚ್ಚದ ಭಾರವನ್ನೂ ನಿರ್ಮಾಪಕರೇ ಹೊರಬೇಕಾಗಿದೆ. ಮೊದಲಲ್ಲಿ ಒಂದೆರಡು ಕಾರುಗಳಲ್ಲೇ ಎಲ್ಲ ಕೆಲಸ ಸಾಗಲು ಸಾಧ್ಯವಿದ್ದಿತು.ಈಗ ಪ್ರತ್ಯೇಕ ಪ್ರತ್ಯೇಕ ಕಾರುಗಳು, ಟೆಂಪೋ ಟ್ರಾವಲರ್‌ಗಳು ಅಗತ್ಯವಾಗುತ್ತಿವೆ. ಅವುಗಳ ನಿರ್ವಹಣೆ ವೆಚ್ಚ ಬಾಟಾ ಎಲ್ಲವೂ ದುಬಾರಿಯಾಗಿವೆ. ಸಂಭಾವನೆಯಂತೂ ಕೆಲವು ಸಾವಿರಗಳಷ್ಟಿದ್ದುದು, ಲಕ್ಷಗಳನ್ನು ದಾಟಿ ಗಗನದತ್ತ ತೀವ್ರಗತಿಯಲ್ಲಿ ಏರುತ್ತಲೇ ಇದೆ. ಜೀವನ ಮಟ್ಟ-ಜೀವನ ವೆಚ್ಚ ಎರಡೂ ಹೆಚ್ಚಳವಾಗಿದ್ದು ತತ್ಸಮದಲ್ಲಿ ಚಿತ್ರೋದ್ಯಮದ ಪ್ರತಿ ವಿಭಾಗ-ಪ್ರತಿ ಹಂತದಲ್ಲೂ ಏರಿಕೆಗೆ ಕಾರಣವಾಗಿದೆ. ೭೦ರ ದಶಕದಲ್ಲಿ ೫೦-೬೦ ಲಕ್ಷ ರೂ.ಗಳ ವೆಚ್ಚದಲ್ಲಿ ತಯಾರಾದ ಚಿತ್ರವೇ ಅಪಾರವೆಚ್ಚದ ಅದ್ದೂರಿಯ ಚಿತ್ರವೆನಿಸಿದ್ದಿತು. ಆದರೆ ಇಂದು ಯಾವುದೇ ಸಾಮಾನ್ಯ ಚಿತ್ರವೂ ಆ ಬಜೆಟ್‌ನಲ್ಲಿ ಪೂರ್ಣವಾಗುತ್ತಿಲ್ಲ. ಮೊದಲೇ ಹೇಳಿದಂತೆ ಯಾವುದೇ ಒಂದು ಚಿತ್ರ ಇನ್ನೊಂದರಂತೆ ಇರುವುದಿಲ್ಲ. ಒಂದು ಚಿತ್ರದ ವೆಚ್ಚ ಇನ್ನೊಂದರ ಮಾನದಂಡವಾಗುವುದೂ ಸಾಧ್ಯವಿಲ್ಲ.

ಸ್ಟುಡಿಯೋದಲ್ಲಿ ಚಿತ್ರೀಕರಣ ನಡೆದಾಗ ಮಾತುಗಳ ಧ್ವನಿಮುದ್ರಣ ಚಿತ್ರೀಕರಣದ ಜೊತೆಯಲ್ಲೇ ನಡೆಯುತ್ತದೆ. ಹೊರಾಂಗಣದಲ್ಲಿ, ಸ್ಟುಡಿಯೋ ಬಿಟ್ಟು ಮನೆ-ಬಂಗಲೆಗಳಲ್ಲಿ ಚಿತ್ರೀಕರಣ ನಡೆದಾಗ ಸೌಂಡ್ ಪ್ರೂಫಿಂಗ್ ಕೊರತೆಯಿಂದಾಗಿ ಮಾತುಗಳ ಪೈಲಟ್‌ಟ್ರಾಕ್ ಮಾತ್ರ ರಿಕಾರ್ಡ್ ಮಾಡಿಕೊಳ್ಳಲು ಸಾಧ್ಯ. ಆಗ ಹೊರಾಂಗಣದಲ್ಲಿ ಚಿತ್ರೀಕೃತವಾದ ಭಾಗಗಳಷ್ಟನ್ನು ಮಾತ್ರ ಡಬ್ ಮಾಡಿಕೊಳ್ಳಲಾಗುತ್ತಿತ್ತು. ತಾಂತ್ರಿಕವಾಗಿ ಒಳಾಂಗಣ ಹಾಗೂ ಹೊರಾಂಗಣಗಳ ಧ್ವನಿಮುದ್ರಣಗಳ ಲೆವೆಲ್ ಒಂದೇ ಸಮನಾಗಿರುತ್ತಿರಲಿಲ್ಲವೆಂಬ ಕಾರಣಕ್ಕೆ ಪೂರ್ಣ ಚಿತ್ರದ ಮಾತುಗಳನ್ನು ಡಬ್ ಮಾಡಿಕೊಳ್ಳುವ ಪದ್ಧತಿ ಹುಟ್ಟಿತು. ನಂತರದಲ್ಲಿ ಬಹುತೇಕ ಚಿತ್ರಗಳು ಸ್ಟುಡಿಯೋ-ಫ್ಲೋರ್‌ನಿಂದ ಹೊರಗೇ ಚಿತ್ರಿತವಾಗತೊಡಗಿ ಇಡೀ ಚಿತ್ರದ ಮಾತುಗಳನ್ನು ಕ್ಯಾಸೆಟ್‌ಗಳಲ್ಲಿ ಪೈಲಟ್ ಟ್ರ್ಯಾಕ್ ಆಗಿ ಧ್ವನಿಮುದ್ರಿಸಿಕೊಂಡು ಮಾತಿನ ಮನಯಲ್ಲಿ ಅಭಿನಯಿಸಿದ ಕಲಾವಿದರಿಂದಲೇ ಪುನಃ ಮಾತನಾಡಿಸಿ ಡಬ್ ಮಾಡಿಕೊಳ್ಳುವ ಪದ್ಧತಿ ಜನಪ್ರಿಯವಾಯಿತು. ಈಚೆಗೆ ಸಾಮಾನ್ಯವಾಗಿ ಎಲ್ಲ ಚಿತ್ರಗಳೂ ಚಿತ್ರೀಕರಣ ನಂತರವೇ ಡಬ್ ಆಗುತ್ತಿವೆ. ಇಲ್ಲಿ ನಿರ್ಮಾಪಕರಿಗೆ ಸ್ವಲ್ಪಮಟ್ಟಿನ ಉಳಿತಾಯವಾದರೂ, ಮತ್ತೆ ಥಿಯೇಟರ್ ಬಾಡಿಗೆ, ತಂತ್ರಜ್ಞರ ಬಾಟಾ, ಊಟೋಪಚಾರ, ಸಾರಿಗೆ ಸೌಲಭ್ಯ ಇತ್ಯಾದಿ ಬೇರೆ ರೂಪದ ಖರ್ಚುಗಳು ಎದುರಾಗುತ್ತವೆ. ಮಾತುಗಳ ಡಬ್ಬಿಂಗ್‌ಗೂ ಮೊದಲು ಸಂಸ್ಕರಣಗೊಂಡು ಮುದ್ರಿತವಾದ ಚಿತ್ರಿತ ಭಾಗಗಳ ಸಂಕಲನ ನಡೆದು ಒಂದು ರೂಪ ಬಂದಿರುತ್ತದೆ. ಮಾತುಗಳನ್ನು ಸೆರೆ ಹಿಡಿದ ನಂತರ ಮತ್ತೆ ಸಂಕಲನಕಾರರ ಮೇಜು ಸೇರಿ ಟ್ರಿಮ್ ಆಗುವ ಚಿತ್ರ ರಿ-ರಿಕಾರ್ಡಿಂಗ್, ಸ್ಪೆಷಲ್ ಎಫೆಕ್ಟ್, ಮಿಕ್ಸಿಂಗ್‌ಗಳಿಗಾಗಿ ರಿಕಾರ್ಡಿಂಗ್ ಥಿಯೇಟರ್‌ಗೆ ಮರಳಿ ಬರಬೇಕಾಗುತ್ತದೆ. ನಂತರ ಮತ್ತೆ ಸಂಕಲನಕಾರರ ಮೇಜಿನ ಮೇಲೆ ದೃಶ್ಯ-ಶ್ರಾವ್ಯಗಳ ಸಮ್ಮಿಲನ ನಡೆದು, ಫೈನಲ್ ಪ್ರಿಂಟ್‌ಗಾಗಿ ಲ್ಯಾಬ್‌ಗೆ ಮರಳುವುದು. ಚಿತ್ರದ ಮೊದಲ ಪ್ರತಿ ಸಿದ್ಧವಾದ ಮೇಲೆ ಚಿತ್ರ ಸೆನ್ಸಾರ್‌ಗೆ ಹೋಗುತ್ತದೆ.

### ಸೆನ್ಸಾರ್ ಖರ್ಚು

ಸೆನ್ಸಾರ್‌ಗೆ ಹೋಗುವಾಗ ಚಿತ್ರದ ಪ್ರತಿಯೊಂದು ರೀಲಿನಲ್ಲಿನ ಪ್ರತಿ ಷಾಟ್‌ಗಳ ಬಗ್ಗೆ ಕ್ಯಾಮರಾ ಹಾಗೂ ಆರ್ಟಿಸ್ಟ್‌ಗಳ ಚಲನೆಯ ಸಹಿತ ವಿವರ, ಪ್ರತಿ ಷಾಟ್‌ನ ಉದ್ದ (ಮೀಟರು ಮತ್ತು ಫ್ರೇಮ್‌ಗಳೂ ಕೂಡ), ಪ್ರತಿ ರೀಲಿನ ಉದ್ದ, ಚಿತ್ರದ ಉದ್ದಗಳ ವಿವರಗಳಿರುವ ಸೆನ್ಸಾರ್ ಸ್ಕ್ರಿಪ್ಟ್ ಬರೆಸಬೇಕು. ಹೀಗೆ ಬರೆಯುವಾಗ ಎಡಿಟಿಂಗ್ ರೂಂ ಹಾಗೂ ಮೂವಿಯೋಲಾ ಬಳಕೆಯಾಗುತ್ತದೆ. ಚಿತ್ರೋದ್ಯಮದಲ್ಲಿ ಸೆನ್ಸಾರ್ ಸ್ಕ್ರಿಪ್ಟ್ ಬರೆದುಕೊಡುವವರೇ ಬೇರೆ ಇರುತ್ತಾರೆ. ಸೆನ್ಸಾರ್ ಸ್ಕ್ರಿಪ್ಟ್, ತಾರಾಬಳಗ, ತಾಂತ್ರಿಕ ಬಳಗಗಳ ವಿವರದೊಂದಿಗೆ ಹಾಡುಗಳು ಮತ್ತು ಕಥಾಸಾರಾಂಶವಿರುವ ಬುಕ್‌ಲೆಟ್ ಅಥವಾ ಕೈ ಬರಹ/ಟೈಪ್ಡ್/ಡಿಟಿಪಿಯಲ್ಲಿನ ಎಂಟು ಪ್ರತಿಗಳು, ಚಿತ್ರದ ವೀಡಿಯೋ ಪ್ರತಿ ಹಾಗೂ ಶುಲ್ಕವನ್ನು ಸಲ್ಲಿಸಬೇಕು. ಸೆನ್ಸಾರ್ ಮಂಡಳಿಯ ಸದಸ್ಯರು ಪರಿಶೀಲಿಸಿದ ಮೇಲೆ ಸರ್ವರೂ ನೋಡಬಹುದಾದ ಚಿತ್ರಕ್ಕೆ 'ಯು' ಸರ್ಟಿಫಿಕೇಟ್ ದೊರೆಯುತ್ತದೆ. ವಯಸ್ಕರು ಮಾತ್ರ ನೋಡಬಹುದಾದ ಚಿತ್ರಕ್ಕೆ 'ಎ' ಸರ್ಟಿಫಿಕೇಟ್ ದೊರೆಯುತ್ತದೆ. ಕೆಲವು ಸಂದರ್ಭಗಳಲ್ಲಿ ಕೆಲವು ಷಾಟ್‌ಗಳನ್ನೋ, ಧ್ವನಿಯನ್ನೋ, ಚಿತ್ರಿಕೆಯನ್ನೋ ಸೆನ್ಸಾರ್ ಮಂಡಳಿ ಕತ್ತರಿಸುವಂತೆ ಸೂಚಿಸಿ, ಆ ಭಾಗ ಕತ್ತರಿ ಪ್ರಯೋಗಕ್ಕೊಳಗಾದಲ್ಲಿ ಸರ್ಟಿಫಿಕೇಟ್ ಮೇಲೆ ತ್ರಿಕೋಣ (ಟ್ರಯಾಂಗಲ್) ಮುದ್ರೆ ಹಾಗೂ ಕತ್ತರಿ ಪ್ರಯೋಗಕ್ಕೆ ಸಿಲುಕಿದ ಭಾಗಗಳ ವಿವರಣೆ (ಫುಟೇಜ್ ಸಹಿತ) ಸರ್ಟಿಫಿಕೇಟ್‌ಗೆ ಹಿಂಭಾಗದಲ್ಲಿ ಅಂಟಿಸಿಕೊಡಲಾಗುವುದು.

ಈ ರೀತಿ ಕತ್ತರಿ ಪ್ರಯೋಗಕ್ಕೊಳಗಾದ ಭಾಗಗಳ ವಿವರಣೆಯನ್ನು ಆ ಚಿತ್ರ ಪ್ರದರ್ಶನಗೊಳ್ಳುವ ಚಿತ್ರಮಂದಿರಗಳಲ್ಲಿ ಪ್ರೇಕ್ಷಕರ ಗಮನಕ್ಕೆ ಬರುವಂತೆ ಪ್ರದರ್ಶಿಸಬೇಕೆಂಬ ಕಾನೂನಿದೆ. ಕೆಲವೊಮ್ಮೆ ಮಂಡಳಿಯಿಂದ ತಿರಸ್ಕೃತವಾಗಿ ನಂತರ ರಿವೈಸಿಂಗ್ ಕಮಿಟಿಗೆ ಹೋಗಿ ನಂತರ ಟ್ರಿಬ್ಯೂನಲ್‌ಗೆ ಹೋಗಿ ಪ್ರದರ್ಶನಾನುಮತಿ ಪಡೆಯಬೇಕಾಗುತ್ತದೆ.

ಹೀಗೆ ಸೆನ್ಸಾರ್ ಆಗಿ ಸರ್ಟಿಫಿಕೇಟ್ ಬಂದೊಡನೆ ಆ ಸರ್ಟಿಫಿಕೇಟನ್ನು ಚಿತ್ರಿಸಿಕೊಂಡು, ಚಿತ್ರದ ಆರಂಭಕ್ಕೆ ಲಗತ್ತಿಸಿ, ಚಿತ್ರದ ಪ್ರದರ್ಶನಕ್ಕೆ ಅಗತ್ಯವಾದ ರಿಲೀಸ್ ಪ್ರಿಂಟ್‌ಗಳಿಗಾಗಿ ಲ್ಯಾಬ್‌ಗೆ ಹೋಗಬೇಕಾಗುತ್ತದೆ. ಹಿಂದೆ ಸಾಮಾನ್ಯವಾಗಿ ೮ ರಿಂದ ೧೦ ಪ್ರಿಂಟ್‌ಗಳನ್ನು ಹಾಕಿಸುತ್ತಿದ್ದರು. ಆರಂಭದಲ್ಲಿ ಕೇವಲ ಬೆರಳೆಣಿಕೆಯಷ್ಟು - ಒಂದರಿಂದ ಐದಾರು- ಪ್ರಿಂಟ್ ಹಾಕಿಸುತ್ತಿದ್ದರು. ಹತ್ತು ಪ್ರಿಂಟ್‌ಗಳಲ್ಲಿ ಮೂರು ನಾಲ್ಕು ಬೆಂಗಳೂರು ನಗರಕ್ಕೆ, ಉಳಿದುದು ತುಮಕೂರು,ಮೈಸೂರು, ಶಿವಮೊಗ್ಗ ಮತ್ತಿತರ ಜಿಲ್ಲಾ ಕೇಂದ್ರಗಳಿಗೆ ಹಂಚಿಕೆದಾರರ ಮೂಲಕ ತಲುಪುತ್ತಿತ್ತು.

### ಪ್ರಚಾರ ವೆಚ್ಚ

ಚಿತ್ರದ ಪ್ರತಿಗಳನ್ನು ಹಂಚಿಕೆದಾರರಿಗೆ ತಲುಪಿಸುವ ಮೊದಲೇ ಚಿತ್ರದ ಪೋಸ್ಟರ್ -ಪತ್ರಿಕಾ ಜಾಹಿರಾತು, ಜಾಹಿರಾತು ವಿನ್ಯಾಸಗಳು ಸಿದ್ಧವಾಗಿ, ಪೋಸ್ಟರ್‌ಗಳು ವಿವಿಧ ಸೈಜುಗಳಲ್ಲಿ ಮುದ್ರಿತವಾಗಿರುತ್ತವೆ. ಪತ್ರಿಕಾ ಜಾಹಿರಾತಿಗಾಗಿ ಹಿಂದೆ ಪಡಿಯಚ್ಚುಗಳು ಸಿದ್ಧವಾಗುತ್ತಿದ್ದವು. ಈಗ ಜಾಹಿರಾತು ವಿನ್ಯಾಸದ ಫಿಲಂಗಳು ಸಿದ್ಧವಾಗಿ ಪ್ರಚಾರ ಕಾರ್ಯ ಆರಂಭವಾಗುತ್ತದೆ. ಬ್ಯಾನರ್‌ಗಳು-ಕಟೌಟ್‌ಗಳು ಸಿದ್ಧವಾಗುತ್ತವೆ. ಹಂಚಿಕೆದಾರರೇ ಪ್ರಚಾರಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ನಿರ್ಮಾಪಕರ ಪರವಾಗಿ ಮಾಡುತ್ತಾರೆ. ಚಿತ್ರಮಂದಿರಗಳನ್ನು ಗೊತ್ತು ಮಾಡಿ, ಬಿಡುಗಡೆಯ ದಿನಾಂಕವನ್ನು ನಿರ್ಧರಿಸಿ ಬಿಡುಗಡೆಯ ಪೂರ್ವ ಹಾಗೂ ಬಿಡುಗಡೆಯ ದಿನಗಳ ಪ್ರಚಾರ ನಡೆಸುತ್ತಾರೆ. ಬಿಡುಗಡೆಯ ದಿನ ಚಿತ್ರವನ್ನು ಪ್ರದರ್ಶಿಸುವ ಚಿತ್ರಮಂದಿರಗಳ ಮುಂದೆ ಬ್ಯಾನರ್ ಕಟ್ಟಿಸಿ, ಕಟೌಟ್ ನಿಲ್ಲಿಸಿ ಚಿತ್ರಮಂದಿರವನ್ನು ತಳಿರು-ತೋರಣ, ಸೀರಿಯಲ್ ಲೈಟ್ಸ್ ಮುಂತಾದ ಅಲಂಕರಣ ಮಾಡಿಸುತ್ತಾರೆ.

ಹೀಗೆ ಚಿತ್ರದ ಆರಂಭದಿಂದ ಬಿಡುಗಡೆಯ ಪೂರ್ಣ ಪ್ರತಿಹಂತದಲ್ಲೂ ನಿರ್ಮಾಪಕರು ಖರ್ಚು ಮಾಡಬೇಕಾಗುತ್ತದೆ. ನಿರ್ಮಾಪಕರು ಸಾಮಾನ್ಯವಾಗಿ ಕೆಲವು ಹಂತಗಳ ಖರ್ಚು-ವೆಚ್ಚಗಳನ್ನು ನಿರ್ಮಾಣ ವ್ಯವಸ್ಥಾಪಕ/ನಿರ್ವಾಹಕರ ಮೂಲಕವಾಗಿ ಮಾಡುತ್ತಾರಾದರೂ ಇನ್ನು ಕೆಲವು ಹಂತಗಳಲ್ಲಿ ತಾವೇ ನೇರವಾಗಿ ಖರ್ಚು-ವೆಚ್ಚಗಳನ್ನು ನೋಡಿಕೊಳ್ಳುತ್ತಾರೆ. ಚಿತ್ರದ ಆರಂಭದಿಂದ ಚಿತ್ರ ನಿರ್ಮಾಣಕ್ಕೆ ಬಂಡವಾಳ ಸುರಿಯುವ ನಿರ್ಮಾಪಕರು ಹಾಡುಗಳ ಧ್ವನಿ ಮುದ್ರಣಾನಂತರ ಆಡಿಯೋ ಹಕ್ಕುಗಳ ಮಾರಾಟ ಮಾಡುವ ಒಂದು ಸಂದರ್ಭದಲ್ಲಿ ಮಾತ್ರ ಆದಾಯದ ಮುಖ ನೋಡಿರುತ್ತಾರಷ್ಟೆ. ಉಳಿದ ಹಾಗೆ ಚಿತ್ರ ತೆರೆಕಾಣುವವರೆಗೂ ಖರ್ಚು ಮಾಡುವುದು ಏಕಮುಖವಾಗಿರುತ್ತದೆ.

### ಬಂಡವಾಳದ ಮರಳುವಿಕೆ

ಚಲನಚಿತ್ರ ನಿರ್ಮಾಪಕರು ಚಿತ್ರವೊಂದರ ಮೇಲೆ ಬಂಡವಾಳ ಹೂಡಿ, ತಾವು ಹೂಡಿದ ಬಂಡವಾಳವನ್ನು ಮರಳಿ ಪಡೆಯಲಾರಂಭಿಸುವುದು ಚಿತ್ರ ಬಿಡುಗಡೆಯಾದ ಕೆಲವು ವಾರಗಳ ನಂತರವೇ. ಹಿಂದಿನ ಈ ಪದ್ಧತಿ ಜಿಲ್ಲಾವಾರು ಮಾರಾಟದಿಂದಾಗಿ ತಪ್ಪಿದೆ. ಜಿಲ್ಲಾವಾರು ಹಕ್ಕುಗಳನ್ನು ಪಡೆಯುವವರಿಂದ ನಿರ್ಮಾಪಕರು ಈಗ ಮುಂಗಡ ಪಡೆಯುವ ಮೂಲಕ ಬಂಡವಾಳವನ್ನು ತೂಗಿಸಿಕೊಳ್ಳುತ್ತಾರೆ. ಹಿಂದೆ ಹಂಚಿಕೆದಾರರು ಚಿತ್ರ ನಿರ್ಮಾಣ ಸಮಯದಲ್ಲಿ ಬಂಡವಾಳಕ್ಕೆ ನೆರವಾಗುತ್ತಿದ್ದರು.

ಚಿತ್ರವೊಂದು ಬಿಡುಗಡೆಯಾದರೆ ಆ ಚಿತ್ರದ ಆರಂಭದ ಗಳಿಕೆಯಲ್ಲಿ ಹಿಂದೆ ಪ್ರದರ್ಶಕರ ಷೇರು ಹಾಗೂ ವಿತರಕರ ಕಮಿಷನ್ ವಜಾ ಆಗಿ ಉಳಿದ ಹಣ ನಿರ್ಮಾಪಕರು ಎರವಲು ಪಡೆದ ಬಂಡವಾಳದ ಲೆಕ್ಕಕ್ಕೆ ಜಮಾ ಆಗುತ್ತಿತ್ತು. ಹಲವು ವಾರಗಳ ನಂತರದ ಗಳಿಕೆಯಲ್ಲಿ ಪ್ರದರ್ಶಕ ಹಾಗೂ ವಿತರಕರ ಪಾಲು, ಪ್ರಚಾರಾದಿ ಖರ್ಚು ಕಳೆದು ಉಳಿದದ್ದು ನಿರ್ಮಾಪಕರ ಪಾಲಾಗುತ್ತಿತ್ತು. ಈಗ ಆರಂಭದ ವಾರದಿಂದಲೂ ಥಿಯೇಟರ್ ಬಾಡಿಗೆ, ಪ್ರಚಾರಾದಿ ವೆಚ್ಚವನ್ನೂ ಕಳೆದು ಉಳಿದದ್ದು ಜಿಲ್ಲಾವಾರು ಹಕ್ಕು ಕೊಂಡವರು ನೀಡಿದ ಬಂಡವಾಳಕ್ಕೆ ಜಮಾ ಆಗುತ್ತದೆ. ಯಾವುದೇ ಚಿತ್ರವು ಎಲ್ಲಾ ಜಿಲ್ಲೆಗಳಿಗೂ ಒಳ್ಳೆಯ ಬೆಲೆಗೆ ಮಾರಾಟವಾಗಿಬಿಟ್ಟರೆ, ನಿರ್ಮಾಪಕರು ಸುರಕ್ಷಿತ. ಅಷ್ಟೇ ಅಲ್ಲ ಲಾಭವೂ ಬಂದಿರುತ್ತದೆ. ಒಂದು ಅಂದಾಜಿನಂತೆ ಜಿಲ್ಲಾವಾರು

ಮಾರಾಟದಿಂದ ನಿರ್ಮಾಪಕರು ಚಿತ್ರವೊಂದರ ಸಂಬಂಧದಲ್ಲಿ ೨೦-೩೦ ಲಕ್ಷ ಲಾಭ ಗಳಿಸಿರುವುದೂ ಇದೆ. ಜಿಲ್ಲಾವಾರು ಹಕ್ಕು ಕೊಂಡವರೂ ಒಳ್ಳೆಯ ಲಾಭ ಪಡೆದ ನಿದರ್ಶನಗಳೂ ಉಂಟು. ಭರಿಸಲಾಗದ ನಷ್ಟವಾಗಿರುವ ಉದಾಹರಣೆಗಳೂ ಇವೆ.

### ಸಾವಿರ ಪಟ್ಟು ಹೆಚ್ಚಳ

ಚಿತ್ರವೊಂದರ ನಿರ್ಮಾಪಕ, ಅದರ ಹಂಚಿಕೆದಾರ ಮತ್ತು ಪ್ರದರ್ಶಕ ಇವರ ನಡುವಣ ಸಂಬಂಧ ಹಲವಾರು ಸಂದರ್ಭಗಳಲ್ಲಿ ಚಿತ್ರದ ಯಶಸ್ಸನ್ನು ನಿರ್ಧರಿಸುತ್ತದೆ. ಆರಂಭದ ದಿನಗಳಲ್ಲಿ ಚಿತ್ರ ನಿರ್ಮಾಣ ಪ್ರಮಾಣ ಕಡಿಮೆಯಿತ್ತು. ಹಾಗಾಗಿ ಸ್ಪರ್ಧೆಯೂ ಕಡಿಮೆಯಾಗಿತ್ತು. ಆದರೆ ಚಿತ್ರ ನಿರ್ಮಾಣದ ಸಂಖ್ಯೆ ಹೆಚ್ಚಿದಂತೆ ಸ್ಪರ್ಧೆಯೂ ಹೆಚ್ಚಾಯಿತು. ಚಿತ್ರವೊಂದರ ಮೇಲೆ ಹೂಡುವ ಬಂಡವಾಳವೂ ಸ್ಪರ್ಧಾತ್ಮಕವಾಗಿ ಹೆಚ್ಚಾಯಿತು. ಆರಂಭದ ದಿನಗಳಲ್ಲಿ ಒಂದು ಚಿತ್ರ ೪೫-೫೦ ಸಾವಿರ ರೂ.ಗಳ ವೆಚ್ಚದಲ್ಲಿ ತಯಾರಾಗಿದ್ದರೆ, ಇಂದು ಸರಿಸುಮಾರು ಅದರ ಸಾವಿರ ಪಟ್ಟು ಹೆಚ್ಚು ವೆಚ್ಚದಲ್ಲಿ ಚಿತ್ರವೊಂದು ತಯಾರಾಗುವ ಹಂತ ಮುಟ್ಟಿದೆ. ಅಂದಿನ ದಿನಗಳಲ್ಲಿ ಚಿತ್ರೋದ್ಯಮ ಅಂತಹ ಆಕರ್ಷಕ ಉದ್ಯಮವಾಗಿರಲಿಲ್ಲ. ತೀರಾ ಹೊಸ ಉದ್ಯಮ, ಪ್ರಯೋಗಶೀಲ ಮನೋಭಾವದವರ ಹೆಚ್ಚಾಗಿ ಇದರಲ್ಲಿ ತೊಡಗಿಕೊಂಡದ್ದು ಕಾರಣವಾಗಿರಲೂಬಹುದು. ಮೊದಲ ದಶಕದಲ್ಲಿ ತಯಾರಾದ ಚಿತ್ರಗಳ ಸಂಖ್ಯೆಯೇ ಇದನ್ನು ಹೇಳುತ್ತದೆ. ಆ ಅವಧಿಯಲ್ಲಿ ಕೇವಲ ೧೫ ಚಿತ್ರಗಳು ಮಾತ್ರ ತಯಾರಾದವು. ಆಗ ಇದ್ದ ಚಿತ್ರಮಂದಿರಗಳ ಸಂಖ್ಯೆಯೂ ಕಡಿಮೆಯೇ. ಆಗ ಅಸ್ತಿತ್ವದಲ್ಲಿದ್ದ ವಿತರಕರಲ್ಲಿ ಪರಭಾಷಾ ವ್ಯಾಮೋಹವೂ ಅಧಿಕವಾಗಿತ್ತು. ೫೦-೬೦ರ ದಶಕಗಳಲ್ಲಿ ಕನ್ನಡ ಚಿತ್ರೋದ್ಯಮದ ನಿರ್ಮಾಣ ಚಟುವಟಿಕೆಗಳ ಕೇಂದ್ರವಾಗಿದ್ದುದು ಮದರಾಸು. ಮದರಾಸಿನ ಸ್ಟುಡಿಯೋಗಳಲ್ಲಿ ರಾತ್ರಿ ವೇಳೆಯ ಚಿತ್ರೀಕರಣಕ್ಕೆ ರಿಯಾಯಿತಿ ದೊರೆಯುತ್ತಿತ್ತಲ್ಲದೆ, ಕನ್ನಡೇತರ ಚಿತ್ರಗಳಿಗಾಗಿ ನಿರ್ಮಿಸಲಾಗಿದ್ದ ಸೆಟ್‌ಗಳೂ ರಿಯಾಯಿತಿ ದರದಲ್ಲಿ ಲಭ್ಯವಿದ್ದವು. ಬೇರೆ ಭಾಷೆಯ ಪೌರಾಣಿಕ-ಜಾನಪದ ಚಿತ್ರಗಳ ವಸ್ತ್ರಾಲಂಕರಣ-ಪರಿಕರಗಳು ಸುಲಭ ಬೆಲೆಗೆ ಬಾಡಿಗೆ ರೂಪದಲ್ಲಿ ದೊರೆಯುತ್ತಿದ್ದವು. ಹೀಗಾಗಿ ಕಡಿಮೆ ವೆಚ್ಚದಲ್ಲಿ ಈ ಸೌಲಭ್ಯಗಳನ್ನು ಬಳಸಿಕೊಂಡು ಕನ್ನಡ ಚಿತ್ರಗಳನ್ನು ನಿರ್ಮಿಸಲಾಗುತ್ತಿತ್ತು. ಕನ್ನಡ ಚಿತ್ರಗಳಿಗೆ ಹೆಚ್ಚು ವೆಚ್ಚ ಮಾಡಿದಲ್ಲಿ ಎಲ್ಲಿ ನಷ್ಟದ ಭಾರ ಬೀಳುವುದೋ ಎಂಬ ಭೀತಿ ನಿರ್ಮಾಪಕರಿಗಿದ್ದುದ್ದೂ ಅವರು ಕಡಿಮೆ ವೆಚ್ಚದಲ್ಲಿ ಚಿತ್ರ ನಿರ್ಮಾಣ ಮಾಡಲು ಇನ್ನೊಂದು ಕಾರಣ. ಈಗ ವ್ಯವಸ್ಥೆಯೇ ಬದಲಾಗಿದೆ. ಜಿಲ್ಲಾವಾರು ಹಂಚಿಕೆಯಿಂದ ಜಿಲ್ಲಾವಾರು ಮಾರಾಟಕ್ಕೆ ವ್ಯವಹಾರ ಜಿಗಿದಿದೆ. ನಿರ್ಮಾಪಕರು ಚಿತ್ರ ಬಿಡುಗಡೆಯಾಗುವ ಮೊದಲೇ ಲಾಭವನ್ನು ಕಾಣಬಹುದಾಗಿದೆ. ಇಲ್ಲಿಯೂ ಅದೃಷ್ಟದಾಟದ ಕೈವಾಡ ಎನ್ನುತ್ತಾರೆ. ಅದೃಷ್ಟ ಯಾರಿಗೆ - ನಿರ್ಮಾಪಕರಿಗೋ ಅಥವಾ ಚಿತ್ರಕೊಂಡವರಿಗೋ - ಕೈ ಕೊಡುತ್ತದೆಂದು ಹೇಳುವುದು ಕಷ್ಟ. ಕೆಲವೊಮ್ಮೆ ನಿರ್ಮಾಪಕನ ಅದೃಷ್ಟ ಗಟ್ಟಿಯಾಗಿ, ಕೊಂಡವರ ನಶೀಬು ಖೋಟಾ ಆಗುವ ಸಂಭವವೂ ಇಲ್ಲದಿಲ್ಲ. ಇನ್ನು ಕೆಲವು ಸಲ ಎರಡೂ ವರ್ಗಗಳವರು ಅದೃಷ್ಟಶಾಲಿಗಳಾಗಿರುವುದೂ ಉಂಟು.

### ಸೋರಿಕೆ

ಸಾಮಾನ್ಯವಾಗಿ ಚಿತ್ರವೊಂದರ ನಿರ್ಮಾಣ ಕಾರ್ಯ ಆರಂಭವಾದಾಗಲೇ ನಿರ್ಮಾಪಕ ಖರ್ಚು-ವೆಚ್ಚವನ್ನು ಭರಿಸಬೇಕಾಗುವಂತೆಯೇ ಸೋರಿಕೆಯ ನಷ್ಟವನ್ನೂ ಅನುಭವಿಸಬೇಕಾಗಿ ಬರಬಹುದು. ಪ್ರತಿ ಹಂತದ ಪ್ರತಿ ಸಂದರ್ಭವನ್ನೂ ನಿರ್ಮಾಪಕ ಹದ್ದಿನ ಕಣ್ಣಿನಲ್ಲಿಯೇ ನೋಡಬೇಕಾಗುತ್ತದೆ. ಆದ ಒಂದು ಖರ್ಚಿಗೆ ಎರಡರ ಲೆಕ್ಕ ಬರುವುದೂ ಸಾಮಾನ್ಯ. ಜೇನುಗೂಡಿಗೆ ಕೈ ಹಾಕಿ ಜೇನಿಳಿಸುವವ ಕೈಗೆ ಅಂಟಿದ ಜೇನನ್ನು ನೆಕ್ಕುವಂತೆ ಅನುದಿನದ ವ್ಯವಹಾರದಲ್ಲಿ ಸಾಧ್ಯವಾದಷ್ಟನ್ನೂ ಜೋಬಿಗೆ ಇಳಿಸಿಕೊಳ್ಳುವವರೂ ಇಲ್ಲದಿಲ್ಲ. ಇಂತಹ ಸಂದರ್ಭಗಳಲ್ಲಿ ನಿರ್ಮಾಪಕರು ಎಚ್ಚರವಾಗಿರಬೇಕಾದುದು ಅಗತ್ಯ. ವ್ಯವಹಾರದ ಹರವು-ಆಳ ಅಗಲಗಳನ್ನು ಅರಿತುಕೊಳ್ಳಲು ಪ್ರಯತ್ನಿಸಬೇಕಾಗುತ್ತದೆ. ಟೈಮ್ ಟೇಬಲಿನಂತೆ ಕೆಲಸ ನಡೆಯುವಂತೆ ನೋಡಿಕೊಳ್ಳಬೇಕಾದ ಹೊಣೆ ಆತನದೆ. ಎರಡು ಮೂರು ಗಂಟೆ ಚಿತ್ರೀಕರಣ ಆರಂಭವಾಗುವುದು ತಡವಾದರೂ, ಆ 'ಸಮಯ'ದ ಮೌಲ್ಯ ನಷ್ಟಕ್ಕೆ ಕಾರಣವಾಗುತ್ತದೆ. ಉಪಕರಣಗಳ ಬಾಡಿಗೆ, ಅವುಗಳನ್ನು ನಿರ್ವಹಿಸುವವರ ಭತ್ಯೆ ಇವೆಲ್ಲವೂ ಮೀಟರ್ ಓಡುವಂತೆ ಓಡಿ ಬಿಡುತ್ತದೆ. ಅದಕ್ಕಾಗಿ ಆಯಾ ದಿನದ ಚಿತ್ರೀಕರಣಕ್ಕೆ ಅಗತ್ಯವಾದ ಪರಿಕರಗಳನ್ನು ಮುಂಚಿತವಾಗಿ ಹೊಂದಿಸಿಕೊಳ್ಳುವ, ಕಲಾವಿದರು-ತಂತ್ರಜ್ಞರು ಸಮಯಕ್ಕೆ ಸರಿಯಾಗಿ ಚಿತ್ರೀಕರಣ ಆರಂಭಿಸುವಂತೆ ಮಾಡುವ ನಿಟ್ಟಿನಲ್ಲಿ ಜಾಗ್ರತರಾಗಿರಬೇಕಾಗುತ್ತದೆ. ಈ ಎಚ್ಚರ ಚಿತ್ರ ನಿರ್ಮಾಣದ ಎಲ್ಲ ಹಂತದಲ್ಲಿಯೂ ಅತ್ಯಗತ್ಯ.

ಚಿತ್ರ ಪೂರ್ಣಗೊಂಡು ತೆರೆ ಕಂಡ ಮೇಲೆಯೂ ವಿವಿಧ ರೂಪಗಳಲ್ಲಿ ಸೋರಿಕೆಗಳೇರ್ಪಡುವ ಸಂಭವವಿರುತ್ತದೆ. ಚಿತ್ರ ಪ್ರದರ್ಶನಗೊಳ್ಳುವ ಚಿತ್ರಮಂದಿರಗಳಲ್ಲಿಯೇ ಈ ಸೋರಿಕೆ ಹೆಚ್ಚು. ತುಂಬಿದ ಗೃಹಗಳಿಗೆ ಚಿತ್ರ ಪ್ರದರ್ಶಿತವಾಗುವವರೆಗೂ ಪರವಾಗಿಲ್ಲ. ಆ ಮೇಲೆ ಥಿಯೇಟರಿನಲ್ಲಿ ಆಗಿರುವ ಗಳಿಕೆಗೂ, ಅಲ್ಲಿಂದ ಬಂದ ದೈನಿಕ ಕಲೆಕ್ಷನ್ ರಿಪೋರ್ಟಿಗೂ ಸಂಬಂಧವಿರದಂಥ ಸ್ಥಿತಿ. ನಿರ್ಮಾಪಕರ ಪರವಾಗಿ ವಿತರಕ ಚಿತ್ರಮಂದಿರಗಳಿಗೆ ಕಳುಹಿಸುವ ಪ್ರತಿನಿಧಿ ಚಿತ್ರಮಂದಿರದವರೊಡನೆ ಶಾಮೀಲಾದರೆ, ಚಿತ್ರಮಂದಿರದ ಗೇಟ್‌ಕೀಪರ್‌ಗಳು ಟಿಕೆಟನ್ನು ಪರಿಶೀಲಿಸಿ ಅರ್ಧಭಾಗ ಹರಿದು ಪ್ರೇಕ್ಷಕರಿಗೆ ಕೊಡದಿದ್ದರೆ, ಚಿತ್ರಮಂದಿರದವರು ವೆಚ್ಚ ಮಾಡದ ಖರ್ಚುಗಳನ್ನು ನಮೂದಿಸಿ ಗಳಿಕೆಯಲ್ಲಿ ಕಳೆದರೆ ಗಳಿಕೆ ಸೋರದೆ ಇರಲು ಸಾಧ್ಯವೇ? ಒಂದು ಚಿತ್ರದಿಂದ ತಾನು ಅದಕ್ಕಾಗಿ ಹೂಡಿದ ಮೊತ್ತ ಹಿಂತಿರುಗಿ ಬಂದ ಮೇಲೆ ವಿತರಕ ಮಹಾಶಯ ಅನಾಸಕ್ತಿ ತೋರಿಸಿ, ತನ್ನ ಹಣ ಬಂದಾಯಿತಲ್ಲಾ ಇನ್ನು ಏನಾದರೆ ತನಗೇನೆಂದು ಎಕ್ಸ್‌ಪ್ಲಾಯಿಟೇಶನ್ ನಿಲ್ಲಿಸಿದರೆ ನಿರ್ಮಾಪಕ ತನ್ನ ಹಣ ಕಾಣುವುದು ಕನಸಿನ ಮಾತು. ಕೆಲವು ಉತ್ತಮವೆನ್ನಬಹುದಾದ ಚಿತ್ರಗಳು ಆರಂಭದಲ್ಲಿ ಗಳಿಕೆಯಲ್ಲಿ ಹಿಂದೆ ಬಿದ್ದರೆ, ಥಿಯೇಟರ್ ಖರ್ಚೂ ಹುಟ್ಟೋಲ್ಲ ಎಂದು, ಜನಾಭಿಪ್ರಾಯ ಹರಡಿ ಪ್ರೇಕ್ಷಕರು ಚಿತ್ರಮಂದಿರದತ್ತ ಬರುವ ಮೊದಲೇ ಚಿತ್ರವನ್ನು ಎತ್ತಂಗಡಿ ಮಾಡುವುದೂ ಉಂಟು. ಹಾಗೆಯೇ ಚಿತ್ರ ನೋಡಲು ಕ್ಯೂನಲ್ಲಿ ನಿಂತವರ ಮನಸ್ಸಿನ ಮೇಲೆ ಚಿತ್ರದ ಬಗ್ಗೆ ಬೇರೆ ಅಭಿಪ್ರಾಯ ಮೂಡಿಸುವ ಮೂಲಕ ಕ್ಯೂ ಕರಗಿಸಿ ಉತ್ತಮ ಚಿತ್ರವೂ ಮರಳಿ ಡಬ್ಬಾ ಸೇರುವಂತೆ ಮಾಡುವ ವರ್ಗವೂ ನಮ್ಮಲ್ಲಿಲ್ಲದಿಲ್ಲ. ಹೀಗೆ ಯಾವುದೇ ಕನ್ನಡ ಚಿತ್ರ ಬೆಂಗಳೂರು ನಗರದಲ್ಲಿ ವಿಫಲವಾದರೆ ಅದು ಸತ್ತಂತೆಯೇ ಸರಿ. ಅಲ್ಲೇ ಹೋಗಿಲ್ಲ ಅಂದ ಮೇಲೆ ನಮ್ಮಲ್ಲಿ ಓಡೋದಾದರೂ ಹೇಗೆ ಎಂಬ ಪ್ರಶ್ನೆ ಮುಂದಿಟ್ಟುಕೊಂಡೇ ಉಳಿದ ಜಿಲ್ಲೆಯವರು, ತಾಲ್ಲೂಕಿನವರು ಚಿತ್ರವನ್ನು ಅಸ್ಪೃಶ್ಯವಾಗಿಸಿ ಬಿಡುತ್ತಾರೆ. ಗೇಟ್ ಕಲೆಕ್ಷನ್‌ನಲ್ಲಿನ ವಂಚನೆ ಬಿ ಮತ್ತು ಸಿ ಕೇಂದ್ರಗಳಲ್ಲಿ ಹೆಚ್ಚು. ಪ್ರಾಂತ್ಯದ ಎಲ್ಲಾ ಕಡೆಗೂ ನಿರ್ಮಾಪಕ ತನ್ನ ಹಸ್ತ ಚಾಚುವುದು ಸಾಧ್ಯವಿಲ್ಲ. ಕೆಲವು ಸಂದರ್ಭಗಳಲ್ಲಿ ಚಿತ್ರಮಂದಿರಗಳಲ್ಲಿನ ಆಪರೇಟರುಗಳೂ ಚಿತ್ರದ ಸೋಲಿಗೆ ಕಾರಣವಾಗುತ್ತಾರೆ. ಕಾರ್ಬನ್ ಬಳಸದೆ, ಪ್ರೊಜೆಕ್ಷನ್ ಮತ್ತು ಸೌಂಡ್‌ಗಳ ಬಗ್ಗೆ ಅವರು ತೋರುವ ಅಲಕ್ಷ್ಯ-ಅಸಡ್ಡೆಗಳಿಂದಾಗಿಯೂ ಚಿತ್ರದ ಉತ್ತಮ ತಾಂತ್ರಿಕತೆಯೂ ಮಸುಕಾಗಿ ಚಿತ್ರದ ವೈಫಲ್ಯಕ್ಕೆ ಕಾರಣವಾದ ನಿದರ್ಶನಗಳೂ ಇಲ್ಲದಿಲ್ಲ. ಪ್ರದರ್ಶನ ಮಂದಿರಗಳ ಮೈಂಟೆನೆನ್ಸ್ ಕೂಡ ಪ್ರೇಕ್ಷಕರನ್ನು ಚಿತ್ರಮಂದಿರದಿಂದ ದೂರವಿರಿಸಿ ಚಿತ್ರದ ಸೋಲಿಗೆ ಕಾರಣವಾದುದೂ ಇದೆ. ಇವೆಲ್ಲಕ್ಕಿಂತ ಮಿಗಿಲಾಗಿ ಚಿತ್ರದ ಬಿಡುಗಡೆಯನ್ನು ಸೂಕ್ತ ಸಮಯ ಆರಿಸಿಕೊಂಡು ಮಾಡದಿದ್ದಲ್ಲಿಯೂ ಚಿತ್ರದ ಕೊಲೆ ಆಗುವ ಸಂಭವವಿರುತ್ತದೆ. ಕಲಾವಿದರ ಅಭಿಮಾನಿಗಳು ತಮ್ಮ ಅಭಿಮಾನದ ಕಲಾವಿದರಿಲ್ಲದ ಚಿತ್ರದ ಪ್ರದರ್ಶನ ಸಂದರ್ಭದಲ್ಲಿ ಚಿತ್ರಮಂದಿರದಲ್ಲಿ ಕುಳಿತೇ ಮಾಡುವ ಗದ್ದಲ-ಕೇಕೆ-ಟೀಕೆಗಳೂ ಮಾರಕವಾಗಬಲ್ಲವು. ಒಂದು ಚಿತ್ರದಂತೆ ಮತ್ತೊಂದಿರಲು ಸಾಧ್ಯವಿಲ್ಲ. ಭಿನ್ನ ಎಂದು ತಿಳಿದೂ ಅಭಿಮಾನಿ ವೃಂದ ನಡೆಸುವ ಅಪಪ್ರಚಾರ ಉತ್ತಮ ಚಿತ್ರವನ್ನೂ ಕೊಲ್ಲಬಲ್ಲದು. ಈ ಎಲ್ಲ ಲಾಭ-ನಷ್ಟಗಳ ಹೊಣೆಯೂ ನಿರ್ಮಾತೃವಿನ ಹೆಗಲಿಗೇನೇ.

ಎಪ್ಪತ್ತರ ದಶಕದಲ್ಲಿ ವಿದ್ಯಾರ್ಥಿಗಳ ಚಳವಳಿ ನಡೆದಿದ್ದ ಸಂದರ್ಭದಲ್ಲಿ ಸಾಮಾಜಿಕ-ಸಾಂಸಾರಿಕ ಕಥೆಯ ಉತ್ತಮವೆನ್ನಬಹುದಾದ ಚಿತ್ರವೊಂದು ಬಿಡುಗಡೆಯಾಯಿತು. ಚಿತ್ರಮಂದಿರದ ಮುಂದೆ ಭಾರಿ ಕ್ಯೂ ಇಲ್ಲದಿದ್ದರೂ ಸುಮಾರಾಗಿ ಪ್ರೇಕ್ಷಕರು ನೆರೆದಿದ್ದರು. ಬುಕ್ಕಿಂಗ್ ಆಫೀಸಿನಲ್ಲಿ ಟಿಕೇಟ್ ಕೊಡುವಾತ ಚಿತ್ರ ತಲೆನೋವು ತರುತ್ತೆ ಎಂದು ಗೊಣಗುತ್ತಲೇ ಟಿಕೆಟ್ ವಿತರಿಸುತ್ತಿದ್ದ. ಅ ವೇಳೆಗೆ ಆ ಆಟದ ಹಿಂದಿನ ಪ್ರದರ್ಶನ ಮುಗಿದು ಹೊರ ಬರುತ್ತಿದ್ದ ಪ್ರೇಕ್ಷಕರೊಂದಿಗಿದ್ದ ನಟನೊಬ್ಬನ ಅಭಿಮಾನಿಗಳು ಚಿತ್ರದ ಬಗ್ಗೆ ಕೆಟ್ಟದಾಗಿ ಗೊಣಗುತ್ತ ಬಂದರು. ಕ್ಯೂ ಅರ್ಧ ಕರಗಿತು. ಅದೇ ಸಮಯದಲ್ಲಿ ಕಿಡಿಗೇಡಿಗಳು ವಿದ್ಯಾರ್ಥಿ ಚಳವಳಿಯ ಲಾಭ ಪಡೆದು, ಲಾಠಿ ಚಾರ್ಜ್ ಗೋಲಿಬಾರ್ ಎಂದು ಕೂಗುತ್ತಾ ರಸ್ತೆಯಲ್ಲಿ ಓಡಿದರು. ಕ್ಯೂನಲ್ಲಿ ಉಳಿದಿದ್ದ ಕೆಲವೇ ಕಲವರು ಕೂಡ ಕರಗಿ ಹೋದರು. ಇದೇ ಬಗೆಯ ಕಿಡಿಗೇಡಿತನ ಆ ವಾರದಲ್ಲಿ ಹಲವಾರು ಬಾರಿ ನಡೆದು ಕಲೆಕ್ಷನ್ ನಿಗದಿತ ಮೊತ್ತಕ್ಕಿಂತ ಕಡಿಮೆ ಆಯಿತು. ಮರುವಾರ ಚಿತ್ರಮಂದಿರದಿಂದ ಆ ಚಿತ್ರ ಎತ್ತಂಗಡಿಯಾಯಿತು. ಇದು ಒಂದು ನಿದರ್ಶನವಾದರೆ ತಮ್ಮ ಅಭಿಮಾನಿ ನಟನೊಂದಿಗೆ ಚಿತ್ರದ ನಾಯಕಿ

ಅಭಿನಯಿಸುತ್ತಿಲ್ಲವೆಂಬ ಕ್ಷುಲ್ಲಕ ಕಾರಣಗಳಿಗಾಗಿ ಆ ನಟಿ ಅಭಿನಯಿಸಿದ ಕನ್ನಡ ಕಾದಂಬರಿ ಆಧರಿಸಿದ ಕನ್ನಡ ಚಿತ್ರದ ಕೊಲೆ ಅದೇ ದಶಕದಲ್ಲಿ ನಡೆದುದು ಇನ್ನೊಂದು ದುರಂತದ ಉದಾಹರಣೆ. ಅದೇ ಚಿತ್ರ ತೆಲುಗು-ತಮಿಳು ಹಾಗೂ ಹಿಂದಿಯಲ್ಲಿ ರೀಮೇಕ್ ಆದಾಗ ಗಲ್ಲಾಪೆಟ್ಟಿಗೆಯನ್ನೇ ದೋಚಿತು. ತಮಿಳು-ತೆಲುಗು ಭಾಷೆಗಳಲ್ಲಿ ನಟಿಸಿದ ನಾಯಕನಟಿಗೆ ರಾಷ್ಟ್ರದ ಅತ್ಯುನ್ನತ ಪ್ರಶಸ್ತಿಯೂ ಬಂದಿತು.

ಮುಖ್ಯವಾಗಿ ಚಲನಚಿತ್ರೋದ್ಯಮದಲ್ಲಿನ ವ್ಯವಹಾರ ಪಾರದರ್ಶಕವಾಗಿಲ್ಲ. ಸರ್ಕಾರ ಇತ್ತೀಚೆಗೆ ಚಲನಚಿತ್ರ ಕ್ಷೇತ್ರವನ್ನು ಉದ್ಯಮ-ಕೈಗಾರಿಕೆ ಎಂದು ಅಧಿಕೃತವಾಗಿ ಮನ್ನಣೆ ನೀಡಿದೆ. ಆದರೆ ಅಗತ್ಯವಾದ ಸವಲತ್ತುಗಳನ್ನು ಪಡೆಯುವ ಸ್ಥಿತಿಯಲ್ಲಿ ಚಿತ್ರರಂಗ ಇಲ್ಲ. ಎಲ್ಲಿಯವರೆಗೆ ಚಿತ್ರೋದ್ಯಮ ಪಾರದರ್ಶಕವಾಗಿ ವ್ಯವಹಾರದಲ್ಲಿ ತೊಡಗಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಈ ಉದ್ಯಮ ನಷ್ಟವನ್ನು ಅನುಭವಿಸುವುದು ತಪ್ಪದು ಎಂಬುದು ಇಲ್ಲಿನ ಅರ್ಥಶಾಸ್ತ್ರಜ್ಞರ ಅಭಿಮತ. ನಿರ್ಮಾಪಕ-ವಿತರಕ ಹಾಗೂ ಪ್ರದರ್ಶಕರಲ್ಲಿ ಬಹಳಷ್ಟು ಸಂದರ್ಭಗಳಲ್ಲಿ ಪ್ರದರ್ಶಕರು ನಿತ್ಯಲಾಭದಲ್ಲಿರುತ್ತಾರೆ. ವಿತರಕರು ತಮ್ಮ ವ್ಯವಹಾರ ಕುಶಲತೆಯಿಂದ ನಷ್ಟದಿಂದ ದೂರ ಉಳಿಯಬಲ್ಲವರಾಗಿರುತ್ತಾರೆ. ನಿರ್ಮಾಪಕರಂತೂ ಲಾಭ-ನಷ್ಟದ ತೂಗುಯ್ಯಾಲೆಯಲ್ಲಿಯೇ ಇರುತ್ತಾರೆ.

### ಫೈನಾನ್ಶಿಯರ್‌ಗಳ ಪ್ರವೇಶ; ಹಿಡಿತ

ಚಿತ್ರನಿರ್ಮಾಣದ ವೆಚ್ಚ ಏರಿದಂತೆ ನಿರ್ಮಾಪಕರಿಗೆ ನೆರವಾದವರು ಫೈನಾನ್ಶಿಯರ್‌ಗಳು. ಚಿತ್ರಗಳಿಗೆ ಹಣಕಾಸು ಒದಗಿಸುವವರದೇ ಒಂದು ವಿಭಾಗ ಹುಟ್ಟಿಕೊಂಡಿತು. ಮೊದಲಿನ ದಶಕಗಳಲ್ಲಿ ಈ ಫೈನಾನ್ಶಿಯರ್‌ಗಳಿರಲಿಲ್ಲ. ಬೇರೆ ಬೇರೆ ಕಡೆ ಸಾಲ ತಂದು ನಿರ್ಮಾಪಕರೇ ಚಿತ್ರ ಪೂರ್ಣಗೊಳಿಸುತ್ತಿದ್ದರು. ನಿರ್ಮಾಣ ವೆಚ್ಚಕ್ಕಾಗಿ ಅವರದೇ ಕಾರ್ಪೊರೇಟ್ ಕಂಪೆನಿಗಳು, ನಿರ್ಮಾಣ ಸಂಸ್ಥೆಗಳು ನಿರ್ಮಾಣದಲ್ಲಿ ತೊಡಗಿಕೊಳ್ಳುತ್ತಿದ್ದುದರಿಂದ ಪ್ರತ್ಯೇಕ ಫೈನಾನ್ಶಿಯರ್‌ಗಳು ಆಗ ಇರಲಿಲ್ಲ. ಚಲನಚಿತ್ರ ನಿರ್ಮಾಣ, ಹಂಚಿಕೆಗಳಿಗಾಗಿ ಲೇವಾದೇವಿದಾರರು ಹುಟ್ಟಿಕೊಂಡದ್ದೂ ಈಚಿನ ದಶಕಗಳಲ್ಲಿ. ವಿತರಕರು ನಿರ್ಮಾಪಕರಿಗೆ, ನಿರ್ಮಾಣ ವೆಚ್ಚದಲ್ಲಿ ಭಾಗಶಃ ನೆರವಾಗುವುದಿತ್ತು. ಉಳಿದ ಹಣವನ್ನು ನಿರ್ಮಾಪಕರೇ ಹೊಂದಿಸಿಕೊಳ್ಳಬೇಕಾಗಿತ್ತು. ಮೊದಮೊದಲು ಇದು ಸಣ್ಣ ಕ್ಷೇತ್ರವಾದ್ದರಿಂದ ನಿರ್ಮಾಪಕರಲ್ಲಿ ಬಹಳಷ್ಟು ಮಂದಿ ಅವರೇ ಹೊಂದಿಸಿಕೊಳ್ಳುತ್ತಿದ್ದರು. ನಿರ್ಮಾಣ ವೆಚ್ಚ ಏರಿಕೆಯಾದಾಗ ಸಹಜವಾಗಿ ವಿತರಕರಲ್ಲದೆ, ಬೇರೆಯೊಬ್ಬರ ನೆರವು ಅಗತ್ಯವಾಯಿತು. ಆಗ ತಲೆ ಎತ್ತಿದ ವಿಭಾಗ ಚಲನಚಿತ್ರ ಲೇವಾದೇವಿಗಾರರು (ಫಿಲಂ ಫೈನಾನ್ಶಿಯರ್ಸ್)

ಮೊದಲೇ ಹೇಳಿದಂತೆ ಚಿತ್ರ ನಿರ್ಮಾಣದ ಎಲ್ಲವೂ ಪಾರದರ್ಶಕವಲ್ಲ. ಅದು ನಿರ್ಮಾಣರಂಗಕ್ಕೆ ಬರುವ ಹೊಸಬರಿಗೆ ವರವಾಗಿ ಪರಿಣಮಿಸಿತು. ಮಾರುಕಟ್ಟೆಯ ಮಿತಿ ಏನೇ ಇರಲಿ, ಚಿತ್ರ ನಿರ್ಮಾಣ ವೆಚ್ಚ ಏರುಮುಖವಾಗುತ್ತಲೇ ಹೋದದ್ದೂ ೮೦ರ ದಶಕದ ನಂತರದ ಬೆಳವಣಿಗೆ. ವಿತರಣಾ ವ್ಯವಸ್ಥೆಯ ವಿಕೇಂದ್ರೀಕರಣವಾದ ಮೇಲಂತೂ ಇದು ಬಹಳ ಮೇಲಕ್ಕೆ ಹೋಯಿತು. ಕನ್ನಡ ಕಲಾವಿದರಿಗೆ ತಾರಾವರ್ಚಸ್ಸು ಬಂದದ್ದು ಇದಕ್ಕೆ ಕಾರಣವಾಯಿತು. ನೆರೆಯ ತಮಿಳು-ತೆಲುಗು ಚಿತ್ರರಂಗಗಳಲ್ಲಿದ್ದಂತೆ, ಯಶಸ್ವಿ ಚಿತ್ರಗಳಲ್ಲಿ ಅಭಿನಯಿಸಿ ಜನಪ್ರಿಯರಾದ ನಟರು ಮುಂದಿನ ಚಿತ್ರಗಳಿಗೆ ತಮ್ಮ ಸಂಭಾವನೆಯನ್ನು ಏರಿಸುತ್ತಲೇ ಹೋದರು. ಕನ್ನಡದಲ್ಲಿ ಅರ್ಧಕೋಟಿಗೂ ಮೀರಿ ಸಂಭಾವನೆ ಪಡೆಯುವ ನಟರಿದ್ದಾರೆ ಎಂದರೆ ಕನ್ನಡ ಚಿತ್ರರಂಗದ ನಿರ್ಮಾಣ ವೆಚ್ಚ ಏರಿರುವುದರ ಬಗ್ಗೆ ಒಂದು ಅಂದಾಜು ಸಿಗಬಹುದು. ನಾಯಕನಟರ ಜನಪ್ರಿಯತೆಯ ಮೇಲೆಯೇ ಚಿತ್ರದ ಯಶಸ್ಸನ್ನು ಅಳೆಯುವ ವ್ಯವಸ್ಥೆಯೂ ಇಲ್ಲಿದೆ. ನಾಯಕನಟರೊಬ್ಬರ ಕಾಲ್‌ಶೀಟೊಂದನ್ನೇ ಬಂಡವಾಳವಾಗಿಟ್ಟುಕೊಂಡು ಚಿತ್ರ ನಿರ್ಮಿಸಿದ ಸಾಹಸಿಗರೂ ನಮ್ಮಲ್ಲಿದ್ದಾರೆ.

ಕಳೆದೆರಡು ದಶಕಗಳಲ್ಲಿ, ವಿತರಕರು ನಿರ್ಮಾಣ ಹಂತದಲ್ಲಿ ಆರ್ಥಿಕ ನೆರವು ನೀಡುವುದು ಕಡಿಮೆ ಮಾಡಿದ ಸಂದರ್ಭದಲ್ಲಿ, ಚಲನಚಿತ್ರ ಲೇವದೇವಿಗಾರರು ಹುಟ್ಟಿಕೊಂಡರು. ಚಿತ್ರದ ನೆಗೆಟಿವ್ ಹಕ್ಕನ್ನು ಅಡವಿಟ್ಟುಕೊಂಡು ಜೊತೆಗ ಬೇರೆ ಜಾಮೀನುಗಳನ್ನು ಪಡೆದು ಚಿತ್ರದ ಮಾರಾಟ ಯೋಗ್ಯತಾನುಸಾರ ಅದಕ್ಕೆ ಸಾಲ ನೀಡತೊಡಗಿದರು.

ಚಿತ್ರವೊಂದಕ್ಕೆ ನಿರ್ಮಾಣ ಹಂತದಲ್ಲಿ ಧನಸಹಾಯ ನೀಡುವ ಫೈನಾನ್ಶಿಯರ್ ಅದರ ನಿರ್ಮಾಪಕರು, ಕಲಾವಿದರು, ಯಾರು ಎನ್ನುವದರ ಆಧಾರದ ಮೇಲೆ ನೆರವಾಗುವುದು ವಾಡಿಕೆ. ನಿರ್ಮಾಪಕರು ಹಿಂದೆ ನಿರ್ಮಿಸಿದ ಚಿತ್ರಗಳು, ಅವರ ವ್ಯವಹಾರ ರೀತಿ, ಹಣಕಾಸು ಹೊಂದಿಸುವ ಹಾಗೂ ನಿಭಾಯಿಸುವ ರೀತಿ ಇವು ಒಂದೆಡೆ ಆಧಾರವಾದರೆ, ಚಿತ್ರದ ನಾಯಕ ನಟ ಯಾರು ಎನ್ನುವುದರ ಆಧಾರದ ಮೇಲೆ ಈ ನೆರವು ದೊರೆಯುತ್ತದೆ.

ಸರ್ಕಾರದ ಸಹಾಯಧನ ಪದ್ಧತಿ ಆರಂಭವಾದ ಮೇಲೆ ನಿಧಾನವಾಗಿ ಚಿತ್ರರಂಗ ಕರ್ನಾಟಕದತ್ತ ಮುಖ ಮಾಡಿತಷ್ಟೆ. ಇಲ್ಲೇ ನಿರ್ಮಾಣ ಚಟುವಟಿಕೆ ಏರತೊಡಗಿತು. ಹೊಸ ಹೊಸ ನಿರ್ಮಾಪಕರು, ನಿರ್ಮಾಣ ಸಂಸ್ಥೆಗಳು ಹುಟ್ಟಿಕೊಂಡವು. ಅವರಿಗೆಲ್ಲ ನೆರವಾಗುವ ಫೈನಾನ್ಶಿಯರ್‌ಗಳು ಹುಟ್ಟಿಕೊಂಡದ್ದು ಇದರ ಜೊತೆಯಲ್ಲೇ.

ಚಿತ್ರ ನಿರ್ಮಾಣ ರಂಗದಲ್ಲಿ ಕಳೆದ ಆರೂವರೆ ದಶಕದಲ್ಲಿ ಮೊದಲ ಮೂರು ದಶಕಗಳದ್ದು ನಿಧಾನ ಗತಿ. ಅದಕ್ಕೆ ಕಾರಣಗಳೆಂದರೆ ಮೂಲಸೌಲಭ್ಯಕ್ಕಾಗಿ ಉದ್ಯಮ ರಾಜ್ಯದ ಹೊರಗಿನ ಸ್ಟುಡಿಯೊಗಳನ್ನೇ ಹೆಚ್ಚು ನೆಚ್ಚಿಕೊಳ್ಳಬೇಕಾಗಿ ಬಂದದ್ದು. ನಿರ್ಮಾಣ ವೆಚ್ಚ ಕಡಿಮೆಯಾಗುತ್ತದೆ ಎನ್ನುವುದು ಇದಕ್ಕೆ ಕೊಡುವ ಕಾರಣವಾದರೆ, ಚಿತ್ರ ನಿರ್ಮಾಣಕ್ಕೆ ಬೇಕಾದ ಎಲ್ಲ ಸೌಲಭ್ಯಗಳು ಅಲ್ಲಿ ದೊರಕುತ್ತವೆ ಎನ್ನುವುದು ಈ ಬೆಳವಣಿಗೆಗೆ ಇನ್ನೊಂದು ಕಾರಣ. ಅರುವತ್ತರ ದಶಕದ ವರೆಗಿನ ಈ ಬೆಳವಣಿಗೆಯನ್ನು ಬದಲಾಯಿಸಿದ್ದು ಸರ್ಕಾರದ ಸಹಾಯಧನ ನೀತಿ. ನಿರ್ಮಾಣ ಸಂಖ್ಯೆ ಕೂಡ ಸಹಾಯಧನ ನೀತಿಯ ಘೋಷಣೆಯ ನಂತರ ಗಣನೀಯವಾಗಿ ಏರಿತು. ಈ ನಡುವೆ ರಾಜ್ಯ ಪುನರ್ವಿಂಗಡಣೆ, ಕನ್ನಡ ಚಳವಳಿಗಳು ಕೂಡಾ ಕನ್ನಡ ಚಿತ್ರಗಳ ಬೆಳವಣಿಗೆಗೆ ದೇಣಿಗೆ ನೀಡಿದವು. ಚಿತ್ರನೋಡುವ ಪ್ರೇಕ್ಷಕರ ಸಂಖ್ಯೆ ಹೆಚ್ಚಿತು. ಸಹಜವಾಗಿಯೇ ಚಿತ್ರಗಳ ನಿರ್ಮಾಣವೂ ಹೆಚ್ಚಾಯಿತು. ವಿತರಕರು ಕನ್ನಡ ಚಿತ್ರಗಳಿಗೆ ಪ್ರೋತ್ಸಾಹ ನೀಡತೊಡಗಿದರು. ಕನ್ನಡ ಚಿತ್ರಗಳನ್ನಷ್ಟೇ ವಿತರಿಸುವ ಸಂಸ್ಥೆಗಳೂ ಹುಟ್ಟಿಕೊಂಡವು.

ರಾಜ್ಯ ಪುನರ್ವಿಂಗಡಣೆಯ ನಂತರ ಮುಂಬೈ ಹಾಗೂ ಹೈದರಾಬಾದ್ ಕರ್ನಾಟಕದ ಕನ್ನಡ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ಕನ್ನಡ ಚಿತ್ರಗಳು ಪ್ರದರ್ಶನ ಕಾಣತೊಡಗಿದವು. ಆದರೆ ಅಲ್ಲಿನ ಆದಾಯದ ಕುರಿತಂತೆ ಖಚಿತವಾಗಿ ಇನ್ನೂ ಹೇಳಲಾರೆವು ಎನ್ನುವ ಕಾರಣಕ್ಕೆ ವಿತರಣಾ ವ್ಯವಸ್ಥೆ ವಿಕೇಂದ್ರೀಕರಣವಾಯಿತು. ೧೯೮೫ರಲ್ಲಿ ಈ ಬೆಳವಣಿಗೆ ಚಿತ್ರರಂಗದ ಅರ್ಥವ್ಯವಸ್ಥೆಯನ್ನೇ ಬದಲಾಯಿಸಿತು. ಜಿಲ್ಲಾವಾರು ಹಂಚಿಕೆ ಕ್ರಮ ಆರಂಭವಾದ ಕೆಲವು ವರ್ಷಗಳ ಕಾಲ, ಚಿತ್ರಗಳ ಮುಹೂರ್ತದ ದಿನವೇ ಅವುಗಳು ಮಾರಾಟವಾದ ಉದಾಹರಣೆಗಳಿವೆ. ಈಗಲೂ ಕೆಲವು ನಾಯಕರ ಚಿತ್ರಗಳಿಗೆ ಆ ಅವಕಾಶ ಸಿಗುವುದಿದೆ.

ಕೇಂದ್ರೀಯ ಹಂಚಿಕಾ ವ್ಯವಸ್ಥೆಯ ಬದಲು, ಜಿಲ್ಲಾವಾರು ಹಂಚಿಕಾ ವ್ಯವಸ್ಥೆ ಆರಂಭವಾಗುತ್ತಲೇ ಇಡೀ ಚಿತ್ರ ನಿರ್ಮಾಣದ ರೀತಿಯೇ ಬದಲಾಯಿತು. ನಿರ್ಮಾಪಕರು ಚಿತ್ರ ನಿರ್ಮಾಣದಲ್ಲಿ ಶ್ರದ್ಧೆ, ಪ್ರೀತಿ ಮರೆತರು. ಇದೊಂದು ಲಾಭದಾಯಕ ಉದ್ಯಮ ಎಂದು ಇದರಲ್ಲಿ ತೊಡಗಿಸುಕೊಳ್ಳುವವರು ಹೆಚ್ಚಿದರು. ಆದರೆ ವೈಜ್ಞಾನಿಕವಾಗಿ ಇಂತಹದೊಂದು ವ್ಯವಹಾರದ ಸಾಧ್ಯತೆಗಳನ್ನು ತಿಳಿದು ಬಂದವರು ಕಡಿಮೆ. ನಿರ್ಮಾಪಕರ ಪ್ರವಾಹವೇನೋ ಬಂತು. ಆದರೆ ಅದೊಂದು ರೀತಿಯ ಹುಚ್ಚು ಹೊಳೆಯಾಯಿತು. ಹಿಂದಿನಿಂದಲೂ ವ್ಯವಹಾರದಲ್ಲಿ ತೊಡಗಿದ್ದ ವಿತರಕರು ಉದ್ಯಮದಲ್ಲಿನ ತೀವ್ರಗತಿಯ ಈ ಬದಲಾವಣೆ ಕಂಡು ಸಾಂಪ್ರದಾಯಿಕವಾಗಿ ತಾವು ನಡೆಸಿಕೊಂಡು ಬಂದಿದ್ದ ಹಂಚಿಕೆ ವ್ಯವಹಾರದಿಂದ ದೂರ ಸರಿಯುವಂತಾಯಿತು. ನಲುವತ್ತು ವರ್ಷಗಳಲ್ಲಿ ನಡೆಯದಿದ್ದುದು ಕೇವಲ ಐದು ವರ್ಷಗಳಲ್ಲಿ ನಡೆದು ಹೋಯಿತು.

ನಿರ್ಮಾಣ ವೆಚ್ಚ ಗಗನಕ್ಕೇರಿತು, ವ್ಯವಹಾರದಲ್ಲೂ ಪಾರದರ್ಶಕ ನಿಲುವಿರಲಿಲ್ಲ. ಪ್ರತಿ ಚಿತ್ರದ ವ್ಯವಹಾರವೂ ಸಿಕ್ಕವನಿಗೆ ಸೀರುಂಡೆಯಾಯಿತು. ಆರಂಭದ ದಿನಗಳಲ್ಲಿ ಚಿತ್ರ ನಿರ್ಮಾಣದ ರೀತಿಗೂ ಈ ದಿನಗಳಲ್ಲಿನ ಚಿತ್ರ ನಿರ್ಮಾಣದ ರೀತಿಗೂ ಅಜಗಜಾಂತರ ಎನ್ನುವಂತೆ ನಿರ್ಮಾಣರಂಗ ಬದಲಾಯಿತು. ಆಗ ಕೆಲವೇ ಸಾವಿರ ರೂ.ಗಳ ವೆಚ್ಚದಲ್ಲಿ ಮೊದಲಪ್ರತಿ ಸಿದ್ಧವಾಗುತ್ತಿದ್ದುದು ಲಕ್ಷಕ್ಕೇರಿ, ಕೋಟಿ ತಲುಪಿತು. ಇದು ಆರಂಭದ ದಿನಗಳ ಎಲ್ಲ ಚಿತ್ರಗಳಿಗೂ ಅನ್ವಯಿಸುವುದು ಸಾಧ್ಯವಿಲ್ಲ. ಉದಾಹರಣೆಗೆ ಸಿ.ವಿ.ರಾಜು ಅವರ 'ಕೃಷ್ಣಲೀಲಾ' ಚಿತ್ರಕ್ಕೆ ನೆರವಾದ ವಿಠಲಾಚಾರ್ಯ ಅವರು ಎಪ್ಪತ್ತೈದು ಸಾವಿರ ರೂಪಾಯಿ ಬಂಡವಾಳ ಹೂಡಿದರೆ ಸಾಕು ಎಂದು ನೆರವಾಗಲು ಹೋದವರು, ಚಿತ್ರ ಮುಗಿದಾಗ ಎರಡೂ ಮುಕ್ಕಾಲು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಬೇಕಾಯಿತು. ಯಶಸ್ವಿ ಚಿತ್ರವಾಗಲಿ, ಸೋತ



ಶೈಲೇಂದ್ರ ಬಾಬು    ಎ.ಎಸ್.ಕಮಲಾಕರ್    ಪಾಲ್ ಎಸ್.ಚಂದಾನಿ    ಬಸಂತ್‌ಕುಮಾರ್‌ಪಾಟೀಲ್

ಚಿತ್ರಗಳಾಗಲಿ ಎರಡಕ್ಕೂ ತಗುಲುವ ವೆಚ್ಚ ಒಂದೇ ಆಗಿರುವಾಗ ಚಿತ್ರನಿರ್ಮಾಣದ ವೆಚ್ಚವಲ್ಲಾದ ಏರಿಕೆ ಉದ್ಯಮದಲ್ಲಿನ ಹಾನಿಯ ಪ್ರಮಾಣವನ್ನು ಹೆಚ್ಚಿಸಿತು.

ಚಿತ್ರ ನಿರ್ಮಾಣದ ಅವ್ಯವಸ್ಥೆಗೆ ಈ ಉದಾಹರಣೆಯೊಂದೇ ಸಾಕು. ಅಂದಿನಿಂದ ಇಂದಿನವರೆಗೆ ಬಹುತೇಕ ಸಂದರ್ಭಗಳಲ್ಲಿ ಇಂತಹುದೇ ಘಟನೆಗಳಾಗಿವೆ. ಸಾಕಷ್ಟು ಮಂದಿ ಭ್ರಮ ನಿರಸನಗೊಂಡು, ಎಲ್ಲವನ್ನೂ ಕಳೆದುಕೊಂಡು ಹಿಂದಿರುಗಿದರ ಇನ್ನು ಹಲವರು ಇಲ್ಲಿ ಕಳೆದುಕೊಂಡದ್ದನ್ನು ಇಲ್ಲೇ ಪುನಃ ಪಡೆಯುವ ಹಟದೊಂದಿಗ ನೆಲೆ ನಿಂತದ್ದಿದೆ. ಅವರಲ್ಲಿ ಕೆಲವರು ಗೆದ್ದರು, ಮತ್ತೆ ಕೆಲವರು ಬಿದ್ದರು. ಈ ಏಳು ಬೀಳುಗಳೇ ಚಿತ್ರರಂಗದ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದು.

ಕನ್ನಡ ಚಿತ್ರ ನಿರ್ಮಾಪಕರಿಗ ಕಳೆದ ಕೆಲವೆರಡು ದಶಕಗಳಿಂದಲೂ ಭಜನ್‌ಲಾಲ್, ವಿ.ಎಸ್.ಕಮಲಾಕರ್, ಶೈಲೇಂದ್ರಬಾಬು, ಬಿ.ಕೆ.ಚನ್ನಣ್ಣ, ಆರ್.ವಿ.ಗಣೇಶ್, ಪಾಲ್ ಎಸ್.ಚಂದಾನಿ ಮತ್ತಿತರರು ಆರ್ಥಿಕ ಬಂಡವಾಳವನ್ನು ಒದಗಿಸಿಕೊಟ್ಟು, ಚಿತ್ರ ಸಿದ್ಧವಾಗಲು ಸಹಕರಿಸುತ್ತಾ ಬಂದವರು. ಚಿತ್ರ ಸಿದ್ಧವಾಗಿ ಬಿಡುಗಡೆಯ ಪೂರ್ವದಲ್ಲಿ ತಾವು ಒದಗಿಸಿದ ಸಾಲವನ್ನು ಬಡ್ಡಿ ಸಮೇತ ಮರಳಿ ಪಡೆಯುತ್ತಿದ್ದರು. ಇವರಲ್ಲದೆ ನಿರ್ಮಾಪಕ-ನಟ ಬಸಂತ್‌ಕುಮಾರ್ ಪಾಟೀಲ್ ಅನೇಕ ಚಿತ್ರಗಳಿಗೆ ಬಂಡವಾಳ ನೀಡಿ ಚಿತ್ರಗಳು ಪೂರ್ಣಗೊಳ್ಳಲು ನೆರವಾದರು.

ಚಿತ್ರದ ಲೇವಾದೇವಿಗಾರರಿಗೆ ಸಂಬಂಧಪಟ್ಟಂತೆ ಹೇಳುವುದಾದರ ಗಾಂಧಿನಗರದಲ್ಲಿ ಅಧಿಕೃತ ಫೈನಾನ್ಸಿಯರ್‌ಗಳ ಜೊತೆ ಅನಧಿಕೃತ ವ್ಯವಹಾರಸ್ಥರು ಈ ಹಸರಲ್ಲಿ ಹುಟ್ಟಿಕೊಂಡರು. ಕಪ್ಪುಹಣ, ಬೇನಾಮಿ ಜನರ ಹಣ ಇಲ್ಲಿ ಹರಿದು ಬರತೊಡಗಿತು. ಇವರಿಂದ ಚಿತ್ರಗಳು ಹೆಚ್ಚು ಹೆಚ್ಚು ತಯಾರಾಗತೊಡಗಿತೇನೋ ನಿಜ. ಜೊತೆಗೆ ನಿರ್ಮಾಪಕರು ಮಬಾರಿಬಡ್ಡಿಯ ಸುಳಿಯಲ್ಲಿ ಬೀಳಬೇಕಾದ ಅನಿವಾರ್ಯ ಪರಿಸ್ಥಿತಿಯೂ ತಲೆದೋರಿತು. ಭೂಗತ ಜಗತ್ತು ಇಂತಹ ಲೇವಾದೇವಿಯಲ್ಲಿ ತನ್ನ ಹಸ್ತ ಚಾಚಿದ್ದು ಗುಟ್ಟಾಗಿ ಏನೂ ಉಳಿದಿಲ್ಲ. ನಿರ್ಮಾಪಕ ಚಿದಂಬರ ಶೆಟ್ಟಿಯ ಸಾವು ಹಾಗೂ ನಂತರದ ಬೆಳವಣಿಗೆಗಳು ಈ ಸಂಬಂಧವನ್ನು ಸಾರಿದ ಘಟನೆಗಳು.

ಫೈನಾನ್ಸಿಯರ್‌ಗಳಿಂದ ಚಿತ್ರಗಳ ನಿರ್ಮಾಣ ಸಂಖ್ಯೆ ಹೆಚ್ಚಲು ಸಹಾಯವೇನೋ ಆಯಿತು, ಆದರೆ ಉದ್ಯಮದ ಬೆಳವಣಿಗೆಯಾಗಲಿಲ್ಲ. ಒಟ್ಟು ಚಿತ್ರೋದ್ಯಮದ ವ್ಯವಹಾರ ರೀತಿ-ನೀತಿಗಳು ವೈಜ್ಞಾನಿಕವಾಗಿ ಮುಂದುವರಿಯುವುದು ಸಾಧ್ಯವಾಗದೆ ಇರುವ ಪರಿಸ್ಥಿತಿಗೆ ಇದು ಕೂಡ ತನ್ನ ದೇಣಿಗೆ ನೀಡಿತು.

ಚಿತ್ರ ನಿರ್ಮಾಪಕರಾಗಬಯಸಿ ಬಂದವರಲ್ಲಿ ನಿರ್ಮಾಣದ ಒಳಹೊರಗುಗಳ ಪರಿಚಯವಿರುವವರ ಸಂಖ್ಯೆ ಕಡಿಮೆ. ಚಿತ್ರ ನಿರ್ಮಾಣಕ್ಕಿಂತಲೂ ಚಿತ್ರರಂಗದ ಆಕರ್ಷಣೆಯೇ ಹೆಚ್ಚಾಗಿರುವುದರಿಂದ ಹೇಗಾದರೂ ಮಾಡಿ ಚಿತ್ರ ನಿರ್ಮಿಸಲು ಬರುವವರ ಸಂಖ್ಯೆಯೇ ಕನ್ನಡ ಚಿತ್ರರಂಗವನ್ನು ಮುನ್ನಡೆಸತೊಡಗಿರುವುದು ಕಳೆದೆರಡು ದಶಕಗಳಲ್ಲಿ ಕಂಡುಬಂದ ಬೆಳವಣಿಗೆ. ಕೆಲವೇ ಕೆಲವು ನಿರ್ಮಾಣ ಸಂಸ್ಥೆಗಳು ಕನ್ನಡ ಚಿತ್ರರಂಗದಲ್ಲಿ ತಮ್ಮದೇ ಆದ ಸ್ಥಾನ-ಮಾನಗಳನ್ನು ಹೊಂದಿವೆ. ಅದೇ ರೀತಿ ವಿತರಣಾ ಸಂಸ್ಥೆಗಳು ಕೂಡಾ. ಅಂತಹ ಸಂಸ್ಥೆಗಳಿಗೆ ಫೈನಾನ್ಸಿಯರ್‌ಗಳ ನೆರವು ಅಗತ್ಯವಿಲ್ಲವೆಂದಿಲ್ಲ. ಅವುಗಳೂ ನೆರವು ಪಡೆಯುತ್ತವೆ.

ಭಾಷಾವಾರು ರಾಜ್ಯ ಪುನರ್ವಿಂಗಡಣೆಗೆ ಪೂರ್ವದಲ್ಲಿ ಕನ್ನಡ ಚಿತ್ರಗಳು ಅಂದಿನ ಮೈಸೂರು ರಾಜ್ಯ ಮಾತ್ರವಲ್ಲದೆ ಹೊರ ರಾಜ್ಯಗಳಲ್ಲೂ ಪ್ರದರ್ಶನವಾಗುತ್ತಿದ್ದವು. ಹರಿಣಿಯವರ ಸೋದರರಾದ ಜವಹರ್ ಮೈಸೂರಿನ ಹೊರಗಿದ್ದ ಪ್ರದೇಶಗಳಾದ ಸೇಲಂ, ಊಟಿ, ಚೆನ್ನೈ, ಮಧುರೈಗಳಲ್ಲಿ ಕನ್ನಡ ಚಿತ್ರಗಳನ್ನು ಪ್ರದರ್ಶಿಸಿದರು. ಹರಿಣೀಸ್ ವೀನಸ್ ಪಿಕ್ಚರ್ ಹೆಸರಲ್ಲಿ ಹಂಚಿಕಾಸಂಸ್ಥೆಯನ್ನು ಹೊಂದಿದ್ದ ಈ ಸೋದರರು ಆ ದಿನಗಳಲ್ಲಿ ರಾಜ್ಯದ ಹೊರಗೆ ಕನ್ನಡ ಚಿತ್ರಗಳಿಗೆ ಮಾರುಕಟ್ಟೆಯನ್ನು ಕಂಡುಕೊಂಡಿದ್ದರು. ಆದರ ಅದು ಮುಂದುವರಿಯಲಿಲ್ಲ. ಪರಭಾಷಾ ಚಿತ್ರಗಳು ಕರ್ನಾಟಕದಲ್ಲಿ ಪ್ರದರ್ಶನ ಕಾಣುವ ಹಾಗೆ ಕನ್ನಡ ಚಿತ್ರಗಳು ಬೇರೆ ರಾಜ್ಯಗಳಲ್ಲಿ ಪ್ರದರ್ಶನವಾಗುವ ಸಂದರ್ಭದಲ್ಲಿ ಅಲ್ಲಿನ ಕನ್ನಡಿಗರಿಂದಲೇ ಪ್ರೋತ್ಸಾಹ ದೊರೆಯುತ್ತಿಲ್ಲ. ಅಂದಮೇಲೆ ಕನ್ನಡ ಚಿತ್ರಗಳ ಬಗ್ಗೆ ಸ್ಥಳೀಯರಿಗೇನು ಆಸಕ್ತಿ? ಆದರೆ ಕರ್ನಾಟಕದಲ್ಲಿನ ಕನ್ನಡಿಗರಿಗೆ ಇತರ ಭಾಷೆಗಳೂ ಅರ್ಥವಾಗುವುದರಿಂದ ತಮಿಳು-ತೆಲುಗು-ಹಿಂದಿ ಚಿತ್ರಗಳಿಗೂ ಇಲ್ಲಿ ಪ್ರೋತ್ಸಾಹವಿದೆ. ಅಷ್ಟೇ ಏಕೆ, ಕರ್ನಾಟಕದಲ್ಲಿ ಗಡಿ ಪ್ರದೇಶಗಳಲ್ಲೇ ಕನ್ನಡ ಚಿತ್ರಗಳ ಪ್ರದರ್ಶನ ಕಷ್ಟಸಾಧ್ಯವೆನಿಸಿದೆ.

ಪರಭಾಷಾ ಚಿತ್ರಗಳು ಕನ್ನಡ ಚಿತ್ರೋದ್ಯಮಕ್ಕೆ ಸಾಕಷ್ಟು ಹೊಡೆತ ನೀಡಿವೆ. ಇರುವ ಪ್ರದರ್ಶನ ಮಂದಿರಗಳನ್ನು ಕನ್ನಡವಷ್ಟೇ ಅಲ್ಲದೆ ಇತರ ಭಾಷಾ ಚಿತ್ರಗಳಿಗೂ ಹೊಂದಿಸಿಕೊಳ್ಳಬೇಕಾದ ಪರಿಸ್ಥಿತಿ ಉದ್ಯಮದ್ದು. ಕನ್ನಡ ಚಿತ್ರಗಳಿಗೆ ಪರರಾಜ್ಯಗಳಲ್ಲಿ ಮಾರುಕಟ್ಟೆ ಇಲ್ಲ; ಆದರೂ ನಮ್ಮ ಮಾರುಕಟ್ಟೆಯಲ್ಲಿ ಪರಭಾಷಾ ಚಿತ್ರಗಳಿಗೆ ಅವಕಾಶ ನೀಡಬೇಕು. ಇದರ ಮಧ್ಯೆ ಕೂಡ ಸತ್ವದ ಕಾರಣಕ್ಕೋ ಅದೂರಿತನದ ಕಾರಣಕ್ಕೋ ಅಭಿಮಾನದಿಂದಲೋ ಕನ್ನಡ ಚಿತ್ರೋದ್ಯಮ ಬೆಳೆದಿದೆ.

ರಾಜ್ಯ ಪುನರ್ ವಿಂಗಡಣೆ, ಅನಂತರ ಪ್ರವಾಹ ಪರಿಹಾರ ನಿಧಿಗೆ ಕನ್ನಡ ಕಲಾವಿದರ ಜಾಥಾ, ನಂತರ ನಡೆದ ಕನ್ನಡದ ಚಳವಳಿಗಳು, ಕನ್ನಡ ಚಿತ್ರರಂಗದ ಆಗಿನ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸುವಲ್ಲಿ ಗಣನೀಯ ಪ್ರಭಾವ ಬೀರಿದವು. ಚಿತ್ರಗಳನ್ನು ನೋಡುವ ಪ್ರೇಕ್ಷಕರ ಸಂಖ್ಯೆ ಹೆಚ್ಚಿತು. ಗಳಿಕೆಯೂ ಏರತೊಡಗಿತು. ಜೊತೆಗೆ ಚಿತ್ರ ನಿರ್ಮಾಣದ ವೆಚ್ಚವೂ ಗಗನಕ್ಕೇರಿದೆ.

ಹಣ ಗಳಿಕೆಯ ದೃಷ್ಟಿಯಿಂದ ಕನ್ನಡ ಚಿತ್ರೋದ್ಯಮಕ್ಕೆ ಮುಂಬೈ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕಗಳು ಅಸ್ಪಷ್ಟ ಪ್ರದೇಶಗಳೇ. 'ಸತ್ಯ ಹರಿಶ್ಚಂದ್ರ'ದಂತಹ ಚಿತ್ರ ೧೯೪೩-೪೪ರ ಅವಧಿಯಲ್ಲಿ ಹುಬ್ಬಳ್ಳಿಯಲ್ಲಿ ೨೯ ವಾರ ಪ್ರದರ್ಶನವಾದ ದಾಖಲೆ ಇದ್ದರೂ ಆ ಪ್ರದೇಶ ಚಿತ್ರರಂಗದ ಮುಖ್ಯವಾಹಿನಿಯೊಂದಿಗೆ ಸೇರಿದ್ದು ಬಹಳ ತಡವಾಗಿ. ೧೯೩೬ರಲ್ಲಿ 'ಚಿರಂಜೀವಿ' ಹಾಗೂ ೧೯೪೭ರಲ್ಲಿ 'ಚಂದ್ರಹಾಸ' ಚಿತ್ರಗಳನ್ನು ಹೊರತು ಪಡಿಸಿದರೆ ಮೊದಲ ೪೦ ವರ್ಷಗಳಲ್ಲಿ ಆ ಕಡೆಯ ಉದ್ಯಮಿಗಳು ಚಿತ್ರನಿರ್ಮಾಣದಲ್ಲಿ ತೊಡಗಿಸಿಕೊಂಡದ್ದೂ ಕಡಿಮೆ. ಅಲ್ಲಿನ ವಿತರಕರ ಪ್ರಕಾರ ಬೆಂಗಳೂರಿನಿಂದ ಸರಿಯಾದ ಸಹಕಾರ ಸಿಗುತ್ತಿರಲಿಲ್ಲ. ಅದೂ ಅಲ್ಲದೆ ಆ ಭಾಗದಲ್ಲಿ ಹಿಂದಿಯದೇ ಪ್ರಾಬಲ್ಯವಿತ್ತು. ಮುಂಬೈ ಹಾಗೂ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿದಂತೆ ಗದಗಿನ ಶ್ರೀನಿವಾಸ ಪಿಕ್ಚರ್ಸ್ ಒಂದೇ ಕನ್ನಡ ಚಿತ್ರಗಳ ಪ್ರಮುಖ ವಿತರಣಾ ಸಂಸ್ಥೆಯಾಗಿತ್ತು. ಕಲಾ ಪಿಕ್ಚರ್ಸ್, ಡಿ ಎಂಟರ್‌ಟೈನರ್ಸ್, ಗೋಪಿನಾಥ ಸಾಂಧ್ರರ ದಿನೇಶ್ ಫಿಲಂಸ್ ಅನಂತರ ಜೊತೆಗೂಡಿದವು.

## ನಿಖರತೆಯಿಲ್ಲದ ವ್ಯವಹಾರ

ಕನ್ನಡ ಚಿತ್ರಗಳ ಗಳಿಕೆಯ ಸಾಧ್ಯತೆ ಎಲ್ಲಿ, ಎಷ್ಟು ಎನ್ನುವುದು ಯಾರಿಗೂ ನಿಖರವಾಗಿ ತಿಳಿದಿಲ್ಲ. ಪ್ರದರ್ಶಕರು ಮತ್ತು ವಿತರಕರ ಬಾಂಧವ್ಯ, ಬಿಡುಗಡೆಯ ರೀತಿ ಹಾಗೂ ಸಂದರ್ಭ ಹಾಗೂ ಬಿಡುಗಡೆಯಾಗುವ ಚಿತ್ರಗಳ ಸರದಿ ಎಲ್ಲವೂ ಕನ್ನಡ ಚಿತ್ರಗಳ ಗಳಿಕೆಯ ಮೇಲೆ ಪರಿಣಾಮ ಬೀರುತ್ತವೆ.



ಭಜನ್ ಲಾಲ್



ಆರ್.ವಿ.ಗಣೇಶ್



ಬಿ.ಕೆ.ಚನ್ನಣ್ಣ

ಕನ್ನಡ ಚಿತ್ರಗಳ ಮಾರುಕಟ್ಟೆ ಕುರಿತಂತೆ, ಸಾಧ್ಯತೆ ಮತ್ತು ಇಂದಿನ ಸ್ಥಿತಿ ಕುರಿತಂತ ನಿರ್ಮಾಪಕ-ನಟ ರವಿಚಂದ್ರನ್ ಒಂದಷ್ಟು ವಿವರವಾಗಿ ತಿಳಿಸಿಕೊಂಡಿದ್ದಾರೆ. ಅವರ ತಂದೆ ಎನ್.ವೀರಾಸ್ವಾಮಿಯವರು ಹಂಚಿಕೆದಾರರೂ, ನಿರ್ಮಾಪಕರೂ ಆಗಿದ್ದುದರಿಂದ ಅವರಿಗೆ ವ್ಯವಹಾರದ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಾಗಿದೆ. "ಇಲ್ಲಿ ಸಾಕಷ್ಟು ಹಣವಿದೆ. ಆದರೆ ಯಾರೂ ಇಲ್ಲಿನ

ಸರಿಯಾದ ಚಿತ್ರ ಕೊಡುತ್ತಿಲ್ಲ. ಇಲ್ಲಿ ದುಡ್ಡು ತಿನ್ನೋದಷ್ಟೇ ಅಲ್ಲ; ಏಕಾಧಿಪತ್ಯ ಬೇರೆ. ಪ್ರತಿ ಸಲ ಕೆಲವೇ ಸಾವಿರ ಗಳಿಕೆ ಆಗುತ್ತಿದ್ದ ಒಂದು ಕೇಂದ್ರದಲ್ಲಿ ಒಂದು ಬಾರಿ ಎರಡೂವರೆ ಲಕ್ಷ ಗಳಿಕೆ ಆಯಿತು. ನಾನು ಅಷ್ಟು ಬೇಡಿಕೆ ಗಳಿಸಿದ್ದೆ. ಮುಂದಿನ ಸಲ ಅದೇ ಕೇಂದ್ರಕ್ಕೆ ನನ್ನ ಚಿತ್ರವನ್ನು ಆರು ಲಕ್ಷಕ್ಕೆ ಕೊಂಡುಕೊಂಡರು. ಅದರ ಅರ್ಥ ಏನು ಅಂದರೆ, ಇಲ್ಲಿ ದುಡ್ಡಿದೆ, ಆದರೆ ಅದನ್ನು ನಿರ್ಮಾಪಕರೊಂದಿಗೆ ಹಂಚಿಕೊಳ್ಳುವ ಮನಸ್ಸಿಲ್ಲ. ಕಡಿಮೆಗೆ ಪಡೆದು ಹೆಚ್ಚು ತಮ್ಮದಾಗಿಸಿಕೊಳ್ಳುವ ದುರಾಸೆ. ಕನ್ನಡ ಚಿತ್ರರಂಗ ತಲೆ ಎತ್ತದಂತಾಗಲು ಇದು ಕಾರಣ. ಉಳಿದ ರಾಜ್ಯಗಳಲ್ಲಿ ಹಾಗಿಲ್ಲ, ಅದಕ್ಕೇ ಅಲ್ಲಿನ ಚಿತ್ರರಂಗಗಳು ಬೆಳೆದಿವೆ'' ಎನ್ನುತ್ತಾರೆ ರವಿಚಂದ್ರನ್.

ವಿಠಲಾಚಾರ್ಯ ಮತ್ತು ರವಿಚಂದ್ರನ್ ಅವರ ಮಾತುಗಳು ಕನ್ನಡ ಚಿತ್ರರಂಗದ ಒಟ್ಟು ವ್ಯವಹಾರ ನೀತಿಗೆ, ಅರ್ಥ ವ್ಯವಸ್ಥೆಗೆ ಹಿಡಿದ ಕನ್ನಡಿ. ಪ್ರದರ್ಶಕರು ಮತ್ತು ಸಣ್ಣ ಪುಟ್ಟ ಕೇಂದ್ರಗಳ ವಿತರಕರಿಗೆ ಒಟ್ಟು ಚಿತ್ರೋದ್ಯಮ ಕುರಿತಂತೆ ಇರುವ ಮನಸ್ಥಿತಿಯೇ ಕನ್ನಡ ಚಿತ್ರೋದ್ಯಮವನ್ನು ಕುಂಟುತ್ತಾ, ಮುಗ್ಗರಿಸುತ್ತಾ, ತೆವಳುತ್ತಾ ಸಾಗುವಂತೆ ಮಾಡಿದೆ. ವಾಕ್ಚಿತ್ರದ ಆರಂಭದ ಕಾಲದಿಂದಲೂ ನಿರ್ಮಾಪಕರು-ವಿತರಕರು ಒಂದೆಡೆಯಾದರೆ, ಪ್ರದರ್ಶಕರು ಮತ್ತೊಂದೆಡೆ ಇರುವುದನ್ನು ಕಾಣಬಹುದಾಗಿದೆ. ಪ್ರದರ್ಶಕರೇ ವಿತರಕರೂ ಆಗಿರುವ ಸಂದರ್ಭದಲ್ಲಿ ಈ ಸಂಬಂಧದ ರೂಪವೇ ಬೇರೆ. ಚಿತ್ರ ನಿರ್ಮಾಣದ ಪೂರ್ವ ಸಿದ್ಧತೆಯ ಹಂತದಲ್ಲಿಯೇ ವಿತರಕರೊಂದಿಗೆ ಸಮಾಲೋಚಿಸಿ ನಿರ್ಮಾಣ ವೆಚ್ಚದಲ್ಲಿ ತಾವೂ ದೇಣಿಗೆ ನೀಡುವ ಅಭ್ಯಾಸ ಮೊದಲಿನ ದಿನಗಳಲ್ಲಿ ಪ್ರದರ್ಶಕರಲ್ಲಿತ್ತು. ಚಿತ್ರವೊಂದರ ತಯಾರಿಕೆಯ ಹಂತದಲ್ಲಿಯೇ ಇಂತಹ ಚಿತ್ರ ತಮ್ಮ ಚಿತ್ರಮಂದಿರದಲ್ಲಿ ಪ್ರದರ್ಶನವಾಗುತ್ತದೆ ಎಂದು ಪ್ರಚಾರ ಮಾಡುತ್ತಿದ್ದ ಪ್ರದರ್ಶಕರಿದ್ದರು. ಚಿತ್ರ ಬಿಡುಗಡೆಯಾದಾಗ ಅದರ ಪ್ರಚಾರ ವ್ಯವಸ್ಥೆಯನ್ನೂ ಅವರೇ ನೋಡಿಕೊಳ್ಳುತ್ತಿದ್ದರು. ಆದರೆ ಅವೆಲ್ಲ ಅನಂತರ ಬದಲಾಯಿತು.

ಕನ್ನಡ ನಾಡಿನಲ್ಲಿ ಕನ್ನಡ ಚಿತ್ರಗಳಿಗಿಂತ ಪರಭಾಷಾ ಚಿತ್ರಗಳದೇ ಮೊದಲಿನಿಂದಲೂ ಮೇಲುಗೈ. ಪರಭಾಷಾ ಚಿತ್ರಗಳ ಮೇಲಿದ್ದ ಪ್ರೀತಿ, ಕನ್ನಡ ಚಿತ್ರಗಳ ಮೇಲೆ ಇಲ್ಲ ಎನ್ನುತ್ತಿದ್ದರು ವಿಠಲಾಚಾರ್ಯರು. ''ತೆಲುಗು, ತಮಿಳು ಚಿತ್ರಗಳಿಗೆ ೬೦-೭೦ ಸಾವಿರ ಕೊಟ್ಟು ಮೈಸೂರು ಸ್ಟೇಟಿಗೆ ಕೊಳ್ಳುತ್ತಿದ್ದರು. ಆದರೆ ಕನ್ನಡ ಚಿತ್ರಗಳಿಗೆ ಪ್ರಿಂಟ್ ಸೇರಿ ೪೦ ಸಾವಿರಕ್ಕೆ ಕೊಳ್ಳಲು ಹಿಂಜರಿಯುತ್ತಿದ್ದರು. ವಾಸ್ತವವಾಗಿ ಕನ್ನಡಕ್ಕೆ ಅಲ್ಪಸ್ವಲ್ಪ ಪ್ರೋತ್ಸಾಹ ದೊರೆತದ್ದು ಅ.ನ.ಕೃ, ರಾಮಮೂರ್ತಿ, ವಾಟಾಳ್ ನಾಗರಾಜ್ ಮುಂತಾದವರ ಚಳವಳಿಯ ನಂತರವೇ'' ಎನ್ನುತ್ತಾರೆ ಅವರು.

ಇದರಿಂದಾಗಿ ಕನ್ನಡ ಚಿತ್ರನಿರ್ಮಾಪಕರು ಆರಂಭದ ವಿತರಣೆ ಹಾಗೂ ಪ್ರದರ್ಶನ ವ್ಯವಸ್ಥೆಯಿಂದ ದೂರ ಸರಿಯುತ್ತಾ ಬಂದರು. ವಿತರಣೆಯ ಕೇಂದ್ರ ವ್ಯವಸ್ಥೆಗಿಂತ ಜಿಲ್ಲಾವಾರು ವ್ಯವಸ್ಥೆಯಲ್ಲಿ ಚಿತ್ರ ನಿರ್ಮಾಣಕ್ಕೆ ಹೆಚ್ಚು ಬಂಡವಾಳ ಸಿಗುವುದೆಂಬ ಆಶೆಯಿಂದಲೇ ಜಿಲ್ಲಾವಾರು ಮಾರಾಟ ಮಾಡುವ ಮೂಲಕ ದೊರೆಯಬಹುದಾದ ಲಾಭಕ್ಕೆ ತೃಪ್ತಿ ಪಡತೊಡಗಿದರು.

**ವೀಡಿಯೋ**

ಕಿರುತೆರೆಯ ಪ್ರವೇಶವಾಗುತ್ತಲೇ ಅದರ ವಿರುದ್ಧ ಬೆಳ್ಳಿ ತೆರೆಯ ಮಂದಿ ಕೂಗೆಬ್ಬಿಸಿದರು. ಬೆಳ್ಳಿ ತೆರೆಗೆ ಕಿರುತೆರೆ ಮಾರಕವಾಗಲಿದೆ ಎನ್ನುವುದು ಈ ವಿರೋಧಕ್ಕೆ ಕಾರಣ. ಆರಂಭದ ದಿನಗಳಲ್ಲಿ ಚಿತ್ರರಂಗಕ್ಕೆ ತೊಂದರೆಯಾಯಿತು ಕೂಡಾ. ಮನೆಯಲ್ಲೇ ಮನರಂಜನೆ ದೊರೆಯುವಾಗ ಮನರಂಜನೆ ಪಡೆಯಲು ಚಿತ್ರಮಂದಿರಗಳಿಗೆ ಬರುವವರ ಸಂಖ್ಯೆ ಇಳಿಮುಖವಾಯಿತು. ಇದು ಕನ್ನಡ ಚಿತ್ರರಂಗಕ್ಕಷ್ಟೇ ಅಲ್ಲ, ಪ್ರಪಂಚದಾದ್ಯಂತದ ಬೆಳವಣಿಗೆಯಾಯಿತು. ಜೊತೆಗೆ ವೀಡಿಯೋ ಪಾರ್ಲರ್‌ಗಳು ಅನಧಿಕೃತ ವೀಡಿಯೋ ಪ್ರದರ್ಶನಗಳು ಚಿತ್ರರಂಗಕ್ಕೆ ಶತ್ರುವಾಗತೊಡಗಿದವು. ಆದರೆ ಇದು ಕೆಲಕಾಲದವರೆಗೆ ಮಾತ್ರ.

ದೂರದರ್ಶನ, ಖಾಸಗಿ ಉಪಗ್ರಹ ಚಾನಲ್‌ಗಳ ಸಂಖ್ಯೆ ಏರುತ್ತಲೇ ಪೈಪೋಟಿ ಆರಂಭವಾಯಿತು. ಒಳ್ಳೆಯ ಕಾರ್ಯಕ್ರಮಗಳೊಂದಿಗೆ ಒಳ್ಳೆಯ ಸಿನಿಮಾಗಳನ್ನು ಪ್ರಸಾರ ಮಾಡಲು ಕೂಡ ಪೈಪೋಟಿ ಆರಂಭವಾಯಿತು. ಈ ಪೈಪೋಟಿ ಈಗ ಚಿತ್ರರಂಗಕ್ಕೆ ಲಾಭದಾಯಕವಾಗಿ ಪರಿಣಮಿಸಿದೆ.

ಕನ್ನಡ ಚಿತ್ರರಂಗಕ್ಕೆ ಸೀಮಿತವಾಗಿ ಹೇಳುವುದಾದರೆ ಖಾಸಗಿ ಚಾನಲ್‌ಗಳ ಆರಂಭಕ್ಕೆ ಮೊದಲು ದೂರದರ್ಶನಕ್ಕೆ ತಮ್ಮ ಚಿತ್ರಗಳನ್ನು ಪ್ರಸಾರಕ್ಕಾಗಿ ನೀಡುತ್ತಿದ್ದರು. ಪ್ರಾದೇಶಿಕ ಕೇಂದ್ರಗಳಲ್ಲಿ ಅದಕ್ಕಾಗಿ ನಿಗದಿಪಡಿಸಿದ ಮೊತ್ತವನ್ನು ಗೌರವಧನವಾಗಿ ನೀಡುತ್ತಿದ್ದರು. ರಾಷ್ಟ್ರೀಯ ಜಾಲದಲ್ಲಿ ಪ್ರಸಾರವಾದರೆ ನಾಲ್ಕರಿಂದ ಹತ್ತು ಲಕ್ಷ ರೂಪಾಯಿ ಗೌರವಧನ. ಆದರೆ ಎಲ್ಲ ಚಿತ್ರಗಳಿಗೆ ರಾಷ್ಟ್ರೀಯಜಾಲದಲ್ಲಿ ಪ್ರಸಾರವಾಗುವ ಅರ್ಹತೆ ಇರುವುದಿಲ್ಲ. ಪ್ರಶಸ್ತಿ ವಿಜೇತ ಚಿತ್ರಗಳು, ಅಂತರರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಪಾಲ್ಗೊಂಡ ಚಿತ್ರಗಳು, ಶತದಿನೋತ್ಸವ ಕಂಡಚಿತ್ರಗಳು ಮಾತ್ರ ರಾಷ್ಟ್ರೀಯ ಜಾಲದಲ್ಲಿ ಪ್ರಸಾರವಾಗುತ್ತವೆ.

ಕನ್ನಡದಲ್ಲಿ ಪ್ರಸಾರ ಆರಂಭಿಸಿದ ಮೊದಲ ಕನ್ನಡ ಚಾನಲ್ 'ಉದಯ'. ಅದು ಕನ್ನಡದಲ್ಲಿ ತಯಾರಾದ ಸುಮಾರು ಸಾವಿರದ ಐದುನೂರರವರೆಗೆ ಚಿತ್ರಗಳ ಪ್ರಸಾರದ ಹಕ್ಕನ್ನು ಪಡೆದುಕೊಂಡಿದೆ.ಆರಂಭದ ದಿನಗಳಲ್ಲಿ ಈ ಚಾನಲ್‌ಗಳ ಸಾಧ್ಯತೆಯನ್ನು ಅರಿಯದೆ ಅವರಿಗೆ ಬಹಳ ಕಡಿಮೆ ಮೊತ್ತಕ್ಕೆ ಜೀವಿತಾವಧಿಗೆ ಚಿತ್ರಗಳ ಪ್ರಸಾರದ ಹಕ್ಕನ್ನು ಮಾರಿದವರಿದ್ದಾರೆ. ಆದರೆ ಈಗ ಪರಿಸ್ಥಿತಿ ಬದಲಾಗಿದೆ. 'ಈ ಟಿವಿ', 'ಸುಪ್ರಭಾತ', 'ಕಾವೇರಿ' ಚಾನಲ್‌ಗಳ ಪ್ರಸಾರ ಆರಂಭವಾದ ಮೇಲೆ ಚಿತ್ರಗಳಿಗೆ ವೀಡಿಯೋ ಹಕ್ಕುಗಳಿಗೆ ಸಾಕಷ್ಟು ಸಂಭಾವನೆ ದೊರಕತೊಡಗಿವೆ. ಆ ಮೊತ್ತ ಐದು ಲಕ್ಷದಿಂದ ಆರಂಭವಾಗಿ ಇಪ್ಪತ್ತು ಲಕ್ಷದವರೆಗೆ ಇದೆ. ತಾರಾಗಣ, ನಿರ್ಮಾಪಕರು, ಸಂಗೀತ ಇವುಗಳ ಆಧಾರದ ಮೇಲೆ ಈ ಬೆಲೆ ನಿಗದಿಯಾಗುತ್ತದೆ.

ಆರಂಭದ ದಿನಗಳಲ್ಲಿನ ಈ ಅನುಕೂಲಗಳ ದುರುಪಯೋಗವೂ ನಡೆದದ್ದಿವೆ. ಖಾಸಗಿ ಚಾನಲ್‌ಗಳು ನೀಡುವ ಸಂಭಾವನೆಯನ್ನೇ ಬಂಡವಾಳವಾಗಿಸಿ ಚಿತ್ರ ಆರಂಭಿಸಲು ನಿರ್ಮಾಪಕರು ಮುಂದಾದ ಉದಾಹರಣೆಗಳಿವೆ. ಆದರೆ ಅದು ಹೆಚ್ಚು ಕಾಲ ನಡೆಯಲಿಲ್ಲ. ಖಾಸಗಿ ವಾಹಿನಿಗಳು ಕೂಡಾ ಈ ನಿಟ್ಟಿನಲ್ಲಿ ಎಚ್ಚರವಾಗಿವೆ. ಒಪ್ಪಂದದಲ್ಲಿ ಚಿತ್ರ ಪೂರ್ಣವಾದ ಮೇಲೆಯೇ ಹಣಕೊಡುವ ಶರತ್ತು ವಿಧಿಸುವುದೂ ಇದೆ.

ವ್ಯವಹಾರ ರೀತಿಗೆ ತೊಂದರೆಯಾಗದಂತೆ ಚಿತ್ರ ತೆರೆಕಂಡು ಮೂರು ವರ್ಷಗಳ ಕಾಲ ಪ್ರಸಾರವಾಗದಂತೆ ಮೊದಲೇ ಒಪ್ಪಂದಗಳಾಗುತ್ತವೆ. ವಾಣಿಜ್ಯಮಂಡಳಿ ಇಂತಹದೊಂದು ಶರತ್ತನ್ನು ವ್ಯಾಪಾರದ ಮೇಲೆ ಹಾಕಿದೆ. ಚಿತ್ರವೊಂದರ ಹಂಚಿಕೆದಾರ ಅದರ ಪ್ರದರ್ಶನ ಸಾಧ್ಯತೆಯನ್ನು ಕಂಡುಕೊಳ್ಳಲು ಕನಿಷ್ಠ ಮೂರುವರ್ಷ ಬೇಕಾಗಿರುವುದರಿಂದ ಆ ದಿನಗಳಲ್ಲಿ ಪ್ರಸಾರವಾಗದಂತೆ ನೋಡಿಕೊಳ್ಳಲಾಗುತ್ತಿದೆ. ಚಿತ್ರಗಳು ಗಳಿಕೆಯಲ್ಲಿ ಸೋಲನ್ನು ಅನುಭವಿಸಿದ ಸಂದರ್ಭಗಳಲ್ಲಿ ಈ ನಿಯಮವನ್ನು ಸ್ವಲ್ಪಮಟ್ಟಿಗೆ ಸಡಿಲಿಸಿದ ನಿದರ್ಶನಗಳೂ ಇವೆ.

ದೂರದರ್ಶನ ಮತ್ತು ಖಾಸಗಿ ಚಾನಲ್‌ಗಳು ಚಿತ್ರನಿರ್ಮಾಣಕ್ಕೆ ನೆರವಾಗುತ್ತವೆ. ಈ ಹಿಂದೆ ದೂರದರ್ಶನ ಮತ್ತು ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮದೊಂದಿಗೆ ಸೇರಿ ಹಿಂದಿ ಚಿತ್ರಗಳ ನಿರ್ಮಾಣಕ್ಕೆ ನೆರವಾಗಿತ್ತು. ಈಗ ಖಾಸಗಿ ವಾಹಿನಿಗಳು ಈ ನಿಟ್ಟಿನಲ್ಲಿ ಹೆಜ್ಜೆ ಇಟ್ಟಿವೆ. ಕನ್ನಡ ಚಿತ್ರರಂಗದಲ್ಲೂ ಇಂತಹ ಪ್ರಯೋಗಗಳು ಆರಂಭವಾಗಿವೆ. ವೀಡಿಯೋ ತಂತ್ರಜ್ಞಾನ ಮುಂದುವರಿದಂತೆ ಚಿತ್ರರಂಗಕ್ಕೆ ಪೂರಕ ಬೆಳವಣಿಗೆಗಳಾಗಿವೆ. ಅಂತಹವುಗಳಲ್ಲೊಂದು ವೀಡಿಯೋ. ಚಲನಚಿತ್ರವೊಂದು ವೀಡಿಯೋ ರೂಪದಲ್ಲಿ ಮನೆ ಮನೆಗೆ ತಲುಪುವಂತೆ, ವೀಡಿಯೋ ಲೈಬ್ರರಿಗಳು ನೋಡಿಕೊಂಡವು. ವೀಡಿಯೋ ಲೈಬ್ರರಿಗೆ ಅಧಿಕೃತ ಅನುಮತಿ ಪಡೆದ ಚಿತ್ರಗಳ ವೀಡಿಯೋಗಳು ಬಂದವು. ಅನಧಿಕೃತವಾದವೂ ಸೇರಿದವು.

ಚಿತ್ರನಿರ್ಮಾಪಕರಿಂದ ವೀಡಿಯೋ ಹಕ್ಕನ್ನು ಪಡೆದು, ವೀಡಿಯೋ ರೂಪದಲ್ಲಿ ಮರು ಸೆನ್ಸಾರ್ ಮಾಡಿ ಲೈಬ್ರರಿಗಳಿಗೆ ಚಿತ್ರಗಳನ್ನು ಸರಬರಾಜು ಮಾಡುವ ಕಂಪನಿಗಳು ಹಲವಿವೆ. ಜೊತೆಗೆ ಅನಧಿಕೃತವಾಗಿ ಈ ಕೆಲಸ ಮಾಡುವ ಬೇನಾಮಿ ಸಂಸ್ಥೆಗಳೂ ಬೇಕಾದಷ್ಟಿವೆ. ಬೇನಾಮಿ ಸಂಸ್ಥೆಗಳು ಹೊಸ ಚಿತ್ರಗಳ ಬಿಡುಗಡೆಯಾಗುತ್ತಲೇ ಅಥವಾ ಅದಕ್ಕೂ ಮೊದಲೇ ಹೇಗೋ ಅದರ ಕ್ಯಾಸೆಟ್‌ಗಳನ್ನು ಪಡೆದು ಲೈಬ್ರರಿಗಳಿಗೆ, ಕೇಬಲ್ ಆಪರೇಟರ್‌ಗಳಿಗೆ ಒದಗಿಸಿ ಚಿತ್ರದ ಗಳಿಕೆಯನ್ನು ಕುಗ್ಗಿಸಿದ ಹಲವು ಉದಾಹರಣೆಗಳಿವೆ. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಸೇರಿದಂತೆ ದೇಶಾದ್ಯಂತ ಉದ್ಯಮದ ಹಲವಾರು ಸಂಘಟನೆಗಳು ಈ ವೀಡಿಯೋ ಪೈರಸಿ(ಕಳ್ಳತನ)ಯ ವಿರುದ್ಧ ಸರ್ಕಾರದ ಮೊರೆಹೋದವು. ಇದನ್ನು ತಡೆಯಲಾಗದೆ ಹೋದರೆ ಚಿತ್ರರಂಗಕ್ಕೆ ಉಳಿಗಾಲವಿಲ್ಲ ಎನ್ನುವುದನ್ನು ಮನಗಂಡ ಸರ್ಕಾರವೂ ಈ ಅಪರಾಧವನ್ನು ಸಾಕಷ್ಟು ಗಂಭೀರವಾಗಿಯೇ ಪರಿಗಣಿಸಿದೆ. ವೀಡಿಯೋ ಪೈರಸಿಗೆ ಏಳುವರ್ಷಗಳ ವರೆಗೆ ಸೆರೆವಾಸ, ಎರಡು ಲಕ್ಷರೂ.ಗಳ ದಂಡ ಹಾಕಲಾಗುತ್ತದೆ.

ಚಿತ್ರ ನಿರ್ಮಾಪಕರಿಗೆ ಚಿತ್ರಮಂದಿರಗಳ ಮೂಲಕ ಬರುವ ಆದಾಯವಲ್ಲದೆ ಖಾಸಗಿ ವೀಡಿಯೋ, ದೂರದರ್ಶನ, ಉಪಗ್ರಹ ಪ್ರಸಾರದ ಹಕ್ಕುಗಳು ಸೇರಿದಂತೆ

ಈ ಮಾಧ್ಯಮ ಹೊಸದೊಂದು ವ್ಯವಹಾರ ಕ್ಷೇತ್ರವನ್ನು ತೆರೆದಿಟ್ಟಿದೆ. ವಿದೇಶೀ ಚಾನಲ್‌ಗಳೂ ಸೇರಿದಂತೆ ಕನ್ನಡ ನಿರ್ಮಾಪಕರು ಈಗೀಗ ಈ ಸಾಧ್ಯತೆಗಳತ್ತ ಕಣ್ಣು ಹಾಯಿಸುತ್ತಿದ್ದಾರೆ.

### ಉದ್ಯಮವೆನಿಸಿದ ಚಿತ್ರರಂಗ

ಚಿತ್ರೋದ್ಯಮವನ್ನು ಉದ್ಯಮ-ಕೈಗಾರಿಕೆ ಎಂದು ಘೋಷಿಸಿ, ಇತರ ಉದ್ಯಮಗಳಿಗೆ ದೊರೆಯುವಂತೆ ಬ್ಯಾಂಕುಗಳ ಹಾಗೂ ಸರಕಾರಿ ಹಣಕಾಸು ಸಂಸ್ಥೆಗಳ ಆರ್ಥಿಕ ಸಾಲ ಸೌಲಭ್ಯಗಳು ಚಿತ್ರರಂಗಕ್ಕೂ ದೊರೆಯಬೇಕೆಂಬುದು ಕಳೆದ ಕೆಲವು ದಶಕಗಳಿಂದ ಕೇಳಿ ಬರುತ್ತಿದ್ದ ಬೇಡಿಕೆ. ೧೯೬೦ರಲ್ಲಿ ಖೋಸ್ಲಾ ಸಮಿತಿಯೂ ಚಲನಚಿತ್ರರಂಗವನ್ನು ಉದ್ಯಮ ಎಂದು ಘೋಷಿಸಲು ಹಾಗೂ ಆರ್ಥಿಕ ಸಂಸ್ಥೆಗಳಿಂದ ಈ ಕ್ಷೇತ್ರವೂ ಸಾಲದ ನೆರವು ಪಡೆಯುವಂತಾಗಲು ಸರ್ಕಾರಕ್ಕೆ ಶಿಫಾರಸು ಮಾಡಿತು. ಕಾರಂತರ ಸಮಿತಿಯೂ ಖೋಸ್ಲಾ ಸಮಿತಿಯ ಶಿಫಾರಸ್ಸಿಗೇ ಒತ್ತು ನೀಡಿತು. ಆದರೂ ಚಲನಚಿತ್ರರಂಗವನ್ನು ಉದ್ಯಮವೆಂದು ಘೋಷಿಸಲು ಸರ್ಕಾರ ದಿಢೀರ್ ನಿರ್ಧಾರ ತೆಗೆದುಕೊಂಡಿರಲಿಲ್ಲ. ೧೯೯೪ರಲ್ಲಿ ಕರ್ನಾಟಕ ಸರ್ಕಾರ ವಿ.ಎಸ್.ಸುಬ್ಬರಾವ್ ಸಮಿತಿ ವರದಿಯ ಆಧಾರದ ಮೇಲೆ ಚಿತ್ರನಿರ್ಮಾಣವನ್ನು ಹೊರತುಪಡಿಸಿ ಉದ್ಯಮದ ನಾನಾ ಚಟುವಟಿಕೆಗಳನ್ನು ಉದ್ಯಮವೆಂದು ಘೋಷಿಸಿತು.

ಈಚೆಗೆ ಕೇಂದ್ರಸರ್ಕಾರ ಚಲನಚಿತ್ರರಂಗವನ್ನು ಉದ್ಯಮವಾಗಿ ಘೋಷಿಸಿದೆ. ಬ್ಯಾಂಕುಗಳು ಹಾಗೂ ಹಣಕಾಸು ಸಂಸ್ಥೆಗಳು ಚಿತ್ರೋದ್ಯಮಕ್ಕೆ ಸಾಲ ನೀಡಲು ಮುಂದೆ ಬಂದಿವೆ. ಆದರೆ ಸಾಲ ನೀಡಿಕೆಗಾಗಿ ಬೇರೆ ಉದ್ಯಮಗಳಿಗೆ ನಿಗದಿಪಡಿಸಿರುವ ನಿಯಮಗಳೇ ಈ ಉದ್ಯಮಕ್ಕೂ ಅನ್ವಯವಾಗಬೇಕಾಗಿದ್ದು ಆ ನಿಯಮಗಳನ್ನು ಅನುಷ್ಠಾನಗೊಳಿಸುವುದು ನಿರ್ಮಾಪಕರಿಗೆ ಅಸಾಧ್ಯವಾಗಿದೆ. ಬೇರೆ ಉದ್ಯಮಗಳಿಗೂ ಚಿತ್ರೋದ್ಯಮಕ್ಕೂ ವ್ಯತ್ಯಾಸವಿರುವುದರಿಂದ ಆ ನಿಯಮಗಳಲ್ಲಿ ಕೆಲವಾದರೂ ಸರಳೀಕೃತಗೊಳ್ಳಬೇಕಾಗುತ್ತದೆ. ಅದು ಸಾಧ್ಯವಾಗದ ಮಾತಾದರೆ ಚಿತ್ರೋದ್ಯಮ ಉದ್ಯಮವೆನಿಸಿಯೂ ಆರ್ಥಿಕವಾಗಿ ಅದಕ್ಕೆ ಯಾವುದೇ ನೆರವು ದೊರೆಯುವುದು ಅಸಂಭವವೇ ಆದೀತು. ಆ ನಿಯಮಗಳನ್ನು ಚಿತ್ರ ನಿರ್ಮಾಪಕರು ಪೂರೈಸುವುದೂ ಸಾಧ್ಯವಾಗದ ಮಾತು. ಪ್ರತಿ ಚಿತ್ರವೂ ಲಾಭದಾಯಕವಾಗುವ ಭರವಸೆಯಾದರೂ ಚಿತ್ರೋದ್ಯಮದಲ್ಲಿ ಎಲ್ಲಿದೆ? ಈ ಪ್ರಶ್ನೆಗೆ ಉತ್ತರವೂ ಸಿಕ್ಕದು.

### ವಿದೇಶಿ ಮಾರುಕಟ್ಟೆ - ಹೊಸ ಅಲೆ ಚಿತ್ರಗಳು

ಹೊಸ ಅಲೆಯ ಚಿತ್ರಗಳು- ಕಲಾ ಚಿತ್ರಗಳು-ಸಮಾನಾಂತರ ಚಿತ್ರಗಳು- ಸೇತು ಚಿತ್ರಗಳು ಎಂದೆಲ್ಲಾ ವರ್ಗೀಕರಣಕ್ಕೊಳಗಾದ ಚಿತ್ರಗಳ ವರ್ಗವೊಂದಿದೆ. 'ಸಂಸ್ಕಾರ'ದಿಂದ ಆರಂಭವಾದ ಈ ವರ್ಗದ ಚಿತ್ರಗಳ ಸೃಷ್ಟಿಯಿಂದ ಕನ್ನಡ ಚಿತ್ರರಂಗಕ್ಕೆ ಕೀರ್ತಿ ಲಾಭವಾಗಿದೆ. ಪ್ರತಿಷ್ಠೆ ದೊರೆತಿದೆ ಎಂಬುದರಲ್ಲಿ ಎರಡು ಮಾತಿಲ್ಲ. ರಾಜ್ಯದ ಮಾರುಕಟ್ಟೆಯ ವಿಶ್ಲೇಷಣೆ ಮಾಡುವಾಗ ಈ ಬಗೆಯ ಚಿತ್ರಗಳ ಗಳಿಕೆ ತೀರಾ ಗೌಣ ಎನಿಸಬಹುದಾದರೂ ಬಹಳಷ್ಟು ಈ ವರ್ಗದ ಚಿತ್ರಗಳು ಲಾಭ ಕಂಡಿವೆ ಎಂಬುದು ಗಮನಾರ್ಹ.

ಕಮರ್ಷಿಯಲ್ ಎಂದು ಕರೆಯಲ್ಪಡುವ ಚಿತ್ರಗಳ ನಿರ್ಮಾಣ ವೆಚ್ಚ ಕೋಟಿಯನ್ನು ದಾಟಿದ್ದರೆ ಆರ್ಟ್ ಫಿಲಂ-ನ್ಯೂವೇವ್ ಎನಿಸಿಕೊಂಡ ಈ ಚಿತ್ರಗಳ ತಯಾರಿಕಾ ವೆಚ್ಚ ಕೆಲವು ಲಕ್ಷಗಳನ್ನು ಮೀರಿರುವುದಿಲ್ಲ. ಕಮರ್ಷಿಯಲ್‌ನಲ್ಲಿ ಅತ್ಯಗತ್ಯವೆನಿಸುವ ಅದ್ದೂರಿತನ-ಬೃಹತ್ ತಾರಾ ಸಮ್ಮಿಳನ- ಅಪಾರ ವೆಚ್ಚದ ವಿದೇಶಿ ಹೊರಾಂಗಣ-ಅಧಿಕ ವಾದ್ಯಗಳ ಬಳಕೆಯ ಸಂಗೀತ ಇವೆಲ್ಲವುಗಳಿಂದಲೂ ಈ ಚಿತ್ರಗಳು ದೂರ-ಬಹಳ ದೂರ. ವ್ಯಾಪಾರಿ ಚಿತ್ರಗಳಲ್ಲಿ ಆಗುವ ಅನಗತ್ಯ ವಿಳಂಬ-ಅನಗತ್ಯ ವೆಚ್ಚ ಇವಾವುದೂ ಈ ಬಗೆಯ ಚಿತ್ರಗಳಿಗೆ ಸಲ್ಲ. ಅವುಗಳಂತೆ ಒಮ್ಮೆಲೆ ಹಲವಾರು ಚಿತ್ರಮಂದಿರಗಳಲ್ಲಿನ ಪ್ರದರ್ಶನಕ್ಕಾಗಿ ಅತ್ಯಧಿಕ ಸಂಖ್ಯೆಯ ಪ್ರಿಂಟ್‌ಗಳನ್ನು ಹಾಕಿಸಬೇಕಾದ ಅವಶ್ಯಕತೆಯೂ ಇವಕ್ಕಿಲ್ಲ.

ಹೊಸ ಅಲೆಯ ಚಿತ್ರಗಳದು ಚಿಕ್ಕ ಬಜೆಟ್. ಇಲ್ಲಿ ಅಭಿನಯಿಸುವ ಕಲಾವಿದರಾರೂ ಲಕ್ಷ-ಕೋಟಿ ಸಂಭಾವನೆ ಕೇಳುವವರಲ್ಲ. ಪ್ರತ್ಯೇಕ ಕಾರುಗಳ ಅಗತ್ಯವಿರುವುದಿಲ್ಲ. ಅವರವರ ಉಡುಗೆ-ತೊಡುಗೆಗಳೇ ಸಾಕು. ಎಲ್ಲರೂ ಒಂದು ಕುಟುಂಬದಂತೆ ನಿರ್ಮಾಣ ಸಂದರ್ಭದಲ್ಲಿ ಇರುತ್ತಾರೆ. ಯಾವುದೇ ಗೂಣಗಾಟವಿಲ್ಲದ ಬೆಳಿಗ್ಗೆಯಿಂದ ರಾತ್ರಿಯವರೆಗೆ ಚಿತ್ರೀಕರಣದಲ್ಲಿ ಭಾಗವಹಿಸುತ್ತಾರೆ. ನಿರ್ದಿಷ್ಟ ಅವಧಿಯೊಳಗೆ ಚಿತ್ರೀಕರಣ ಮುಗಿಯುತ್ತದೆ. ಡಬ್ಬಿಂಗ್, ರೀ ರಿಕಾರ್ಡಿಂಗ್ ಮುಂತಾದವೂ ಅದ್ದೂರಿಯಾಗಿರದ ಕ್ಲುಪ್ತ ಸಮಯದಲ್ಲಿ ಮುಗಿಯುತ್ತದೆ. ಹೀಗಾಗಿ ಯಾವುದೇ ಅನಗತ್ಯ ವೆಚ್ಚ ಅನವಶ್ಯ ವಿಳಂಬವಿಲ್ಲದೆ ಚಿತ್ರ ಸಿದ್ಧವಾಗುವುದರಿಂದ ತಯಾರಿಕಾ ವೆಚ್ಚ ಕೆಲವೇ ಲಕ್ಷಗಳಲ್ಲಿರುತ್ತದೆ. ಈ ವರ್ಗದ ಚಿತ್ರಗಳ ನಿರ್ಮಾಪಕರು ನಿರ್ದೇಶಕರು ಹಾಕಿಕೊಳ್ಳುವ ಬಜೆಟ್ ಕೂಡ ಕಡಿಮೆ. ವ್ಯಾಪಾರೀ ಚಿತ್ರಗಳಂತಿರುವುದಿಲ್ಲ. ಚಿತ್ರೀಕರಣ ನಿಗದಿತ ಟೈಂ ಟೇಬಲ್‌ನಂತೆ ನಡೆಯುತ್ತದೆ. ಎಲ್ಲವೂ ಕಡಿಮೆ ವೆಚ್ಚದಲ್ಲಿ ಮುಗಿಯುವಂತೆ ಪ್ಲಾನ್ ಮಾಡಿಕೊಂಡಿರುತ್ತಾರೆ. ಚಿತ್ರ ಸಿದ್ಧವಾದ ಮೇಲೆ ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿಗೆ ಸ್ಪರ್ಧಿಸುವುದು ಈ ಬಗೆಯ ಚಿತ್ರಗಳ ನಿರ್ಮಾಪಕರ ಗುರಿಯಾಗಿರುತ್ತದೆ. ಪ್ರಶಸ್ತಿ ಪಡೆದ ನಂತರ ದೂರದರ್ಶನದಲ್ಲಿ ಪ್ರಸಾರ ಮಾಡುವ ಹಕ್ಕುಗಳನ್ನು ಮಾರುತ್ತಾರೆ. ಬಿಡುಗಡೆಯ ಪೂರ್ವದಲ್ಲೆ ದೂರದರ್ಶನದಲ್ಲಿ ಪ್ರಸಾರವಾದರೆ ಒಳ್ಳೆಯ ಮೊತ್ತದ ಗೌರವ ಧನ ಸಿಗುತ್ತದೆ. ಚಿತ್ರ ಬಿಡುಗಡೆಯಾಗಿ ಒಂದೆರಡು ವಾರ ಓಡಬಹುದು. ಒಂದೊಂದು ವೇಳೆ ಇನ್ನೂ ಹೆಚ್ಚು ಕಾಲ ಪ್ರದರ್ಶನಗೊಳ್ಳಬಹುದು. ನಂತರದಲ್ಲಿ ನಿರ್ಮಾಪಕರ ದೃಷ್ಟಿ ಹರಿಯುವುದು ಅಂತರರಾಷ್ಟ್ರೀಯ ಚಿತ್ರೋತ್ಸವಗಳತ್ತ. ಅಲ್ಲಿ ಅವಕಾಶ ಪಡೆದು, ವಿದೇಶಗಳ ಮಾರುಕಟ್ಟೆಗಳಿಗೆ ಪರ್ಯಟನವಾಗುವುದೂ ಉಂಟು. ದೇಶ-ವಿದೇಶಗಳಲ್ಲಿನ ಚಿತ್ರೋತ್ಸವಗಳಲ್ಲಿ ಪಾಲ್ಗೊಂಡು, ಅಲ್ಲಿ ಮಾರುಕಟ್ಟೆ ಗಳಿಸುವ ಸಾಧ್ಯತೆಯೂ ಈ ಬಗೆಯ ಚಿತ್ರಗಳಿಗುಂಟು. ಹೀಗಾಗಿ ಹೂಡಿದ ಬಂಡವಾಳ ಈ ಮಾರ್ಗಗಳ ಮೂಲಕ ಮರಳಿ ಬರುವ ಸಾಧ್ಯತೆ ಹೆಚ್ಚಾಗಿರುವುದರಿಂದ ಬಹಳಷ್ಟು ಕನ್ನಡದ ಹೊಸ ಅಲೆಯ ಚಿತ್ರಗಳು ನಿರ್ಮಾಪಕರಿಗೆ ಲಾಭ ತಂದುಕೊಟ್ಟಿವೆ. ವ್ಯಾಪಾರೀ ಚಿತ್ರಗಳು ಗಳಿಸುವ ಪ್ರಮಾಣದಲ್ಲಿ ಅಲ್ಲವಾದರೂ ಸ್ವಲ್ಪ ಮಟ್ಟಿನ ತೃಪ್ತಿ ತರಬಹುದಾದ ಲಾಭವನ್ನು ಗಳಿಸಿಕೊಟ್ಟಿರುವುದುಂಟು.

ಹೊಸ ಅಲೆಯ ಚಿತ್ರಗಳು 'ಸಂಸ್ಕಾರ'ದ ನಂತರ ಸ್ವಲ್ಪ ಹೆಚ್ಚಿನ ಸಂಖ್ಯೆಯಲ್ಲಿಯೇ ತಯಾರಾದವು. ಪ್ರಶಸ್ತಿಗಳನ್ನು ಬಾಚಿಕೊಂಡದ್ದೂ ಉಂಟು. ತೀರಾ ಇತ್ತೀಚೆಗೆ ಈ ಅಲೆ ಗಮನಾರ್ಹವಾಗಿ ಬೆಳೆಯಲಾಗದೆ ಕುಂಟಿತು. ಪ್ರಯತ್ನಗಳು ಸ್ಥಗಿತವಾದವು. ಹೊಸ ಅಲೆಯ ಆಂದೋಲನವೇ ಸ್ಥಗಿತವಾಯಿತೇನೋ ಎಂದು ಅನ್ನಿಸಿದ್ದೂ ನಿಜ. ಆದರೆ ಕ್ರಮೇಣ ಮತ್ತೆ ಅಲ್ಲೊಂದು ಇಲ್ಲೊಂದರಂತೆ ಆ ವರ್ಗದ ಚಿತ್ರಗಳು ತಯಾರಿಕೆ ಕಂಡವು. ವ್ಯಾಪಾರೀ-ಗ್ಲಾಮರ್‌ಲೋಕದ ನಟಿಯರಾದ ಜಯಮಾಲಾ, ಸೌಂದರ್ಯರಂಥವರು ಈ ಬಗೆಯ ಚಿತ್ರಸೃಷ್ಟಿಯ ಬಗ್ಗೆ ಆಸಕ್ತಿ ತಳೆದರು. ವ್ಯಾಪಾರಿ ಚಿತ್ರ ನಿರ್ಮಾಪಕ ಚಂದೂಲಾಲ್ ಜೈನ್‌ರಂಥವರು ಈ ವರ್ಗದ ಚಿತ್ರ ನಿರ್ಮಾಣಕ್ಕಿಳಿದರು. ಈ ಬಗೆಯ ಚಿತ್ರ ಸೃಷ್ಟಿಯಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿದ್ದ ಗಿರೀಶ್ ಕಾಸರವಳ್ಳಿ ಮತ್ತಿತರರು ಇವರಿಗಾಗಿ ಸೃಷ್ಟಿಯಲ್ಲಿ ತೊಡಗಿದರು. ಈಗ ಮತ್ತೆ ಈ ಅಲೆ ಜೀವ ಪಡೆದಿದೆ.

ಕನ್ನಡ ಚಿತ್ರಗಳಲ್ಲಿ ಅದ್ದೂರಿಯ ಚಿತ್ರಗಳು-ಹೊಸ ಅಲೆಯ ಚಿತ್ರಗಳು ಕಡಲಾಚೆಯ ನೆಲದಲ್ಲಿಯೂ ಮಾರುಕಟ್ಟೆಯನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿವೆ. ಕಡಲಾಚೆಯ ಜನರಿಗೆ ಕನ್ನಡ ಹಾಗೂ ಕರ್ನಾಟಕದ ಬಗ್ಗೆ ಪರಿಚಯಿಸುತ್ತಿವೆ. ಇಂಟರ್‌ನೆಟ್- ವೆಬ್‌ಸೈಟ್ ಮುಂತಾದ ಕಂಪ್ಯೂಟರ್ ತಾಂತ್ರಿಕತೆಯಿಂದಾಗಿ, ಟಿ.ವಿ.ಜಾಲಗಳಿಂದಾಗಿ ಕನ್ನಡ ಚಿತ್ರಗಳು ಕನ್ನಡದ್ದಲ್ಲದ ನೆಲವನ್ನೂ ಮುಟ್ಟಲು ಸಾಧ್ಯವಾಗಿದೆ. ಕೆಲವೊಂದು ಅದ್ದೂರಿಯ ಚಿತ್ರಗಳು ಹೊರನಾಡಿನಲ್ಲಿಯೂ ಮಾರುಕಟ್ಟೆ ಕಂಡುಕೊಳ್ಳುತ್ತಿವೆ. ಪ್ರಶಸ್ತಿ ಪಡೆದ ಹೊಸ ಅಲೆಯ ಚಿತ್ರಗಳು ನಿಗದಿತ ಸಮಯ-ನಿಗದಿತ ವೆಚ್ಚಗಳ ಕಾರಣದಿಂದ ಕಡಿಮೆ ವೆಚ್ಚದಲ್ಲಿನ ಸೃಷ್ಟಿಯಾಗಿ ವಿದೇಶಿ ಮಾರುಕಟ್ಟೆಯಲ್ಲಿ ತಮ್ಮ ಇರುವನ್ನು ಗುರುತಿಸಿಕೊಳ್ಳುವ ಪ್ರಯತ್ನ ನಡೆದಿದೆ. ಒಂದು ದೃಷ್ಟಿಯಲ್ಲಿ ಅಲ್ಪವೆಚ್ಚದ ಹೊಸ ಅಲೆಯ ಚಿತ್ರ ಸೃಷ್ಟಿ 'ಸೇಫ್' ಎನಿಸಿದಲ್ಲಿ ಅದು ಅತಿಶಯವೇನಲ್ಲ.

### ಚಿತ್ರ ನಿರ್ಮಾಣಕ್ಕೆ ಆರ್ಥಿಕ ನೆರವು ನೀಡುವ ಸಂಸ್ಥೆಗಳು

ಭಾರತೀಯ ಚಿತ್ರರಂಗದಲ್ಲಿ ಸೃಷ್ಟಿ ಹೆಚ್ಚಿದಂತೆ, ತಯಾರಿಕೆಯ ವೆಚ್ಚವೂ ಹೆಚ್ಚಿತು. ಸ್ಪರ್ಧೆಯೂ ಹೆಚ್ಚಿತು. ಕಮರ್ಷಿಯಲ್ ಸೂತ್ರಗಳ ಚಿತ್ರಗಳ ನಿರ್ಮಾಣ ಭರದಿಂದ ಸಾಗಿತು. ಹೊಸ ಚಿಂತನೆಯ, ಕಡಿಮೆ ಬಜೆಟ್‌ನ ಚಿತ್ರಗಳ ಸೃಷ್ಟಿಗೆ ಮಾರುಕಟ್ಟೆಯಲ್ಲಿ ಆರ್ಥಿಕ ಬೆಂಬಲ ದೊರೆಯುವುದೇ ಕಷ್ಟ ಸಾಧ್ಯವಾಯಿತು. ಕಡಿಮೆ ವೆಚ್ಚದ ಉತ್ತಮ ಚಿತ್ರಗಳ ನಿರ್ಮಾಣಕ್ಕೆ ಆರ್ಥಿಕ ಸಹಕಾರ ಒದಗಿಸಲು ಕೇಂದ್ರ ಸರ್ಕಾರ ಫಿಲಂ ಫೈನಾನ್ಸ್ ಕಾರ್ಪೊರೇಷನ್ (ಎಫ್.ಎಫ್.ಸಿ) ಸಂಸ್ಥೆಯನ್ನು ಸ್ಥಾಪಿಸಿತು. ಮುಂಬೈನಲ್ಲಿ ಕೇಂದ್ರ ಕಛೇರಿಯನ್ನು ಹೊಂದಿದ ಈ ಸಂಸ್ಥೆಯ ಸದಸ್ಯರಾಗಿ ಚಿತ್ರೋದ್ಯಮದ ಪ್ರಮುಖರು, ಪತ್ರಕರ್ತರು ಮುಂತಾದವರು ನೇಮಕರಾದರು.

ಆರಂಭದಲ್ಲಿ ಎಫ್.ಎಫ್.ಸಿ.ಯಿಂದ ಕನ್ನಡ ಚಿತ್ರಗಳಿಗೇನೂ ಸಹಾಯವಾಗಲಿಲ್ಲ. ಅದರ ದೃಷ್ಟಿ ಸಹಜವಾಗಿಯೇ ಹಿಂದಿ ಚಿತ್ರಗಳತ್ತ ಇತ್ತು. ದಕ್ಷಿಣ ಎಂದರೆ ಮದರಾಸು ಮಾತ್ರವಾಗಿತ್ತು. ಪ್ರಾದೇಶಿಕ ಭಾಷೆಗಳಿಗೂ ಎಫ್.ಎಫ್.ಸಿ.ಯ ನೆರವು ದೊರಕುವಂತಾಗಬೇಕೆಂಬುದು ಕನ್ನಡ ಚಿತ್ರೋದ್ಯಮದ ಒತ್ತಾಯವಾಗಿತ್ತು. ಅರುವತ್ತರ ದಶಕದಲ್ಲಿ ನಿರ್ಮಾಪಕ ಆರ್.ನಾಗೇಂದ್ರರಾಯರಿಗೆ 'ವಿಜಯನಗರದ ವೀರಪುತ್ರ' ಕನ್ನಡ ಚಿತ್ರವನ್ನು ನಿರ್ಮಿಸಲು ಎಫ್.ಎಫ್.ಸಿ ಆರ್ಥಿಕ ಸಹಾಯ ನೀಡಿತು. 'ವಿಜಯನಗರದ ವೀರಪುತ್ರ'-ಎಫ್.ಎಫ್.ಸಿ ಯಿಂದ ಧನ ಸಹಾಯ ಪಡೆದ ಮೊದಲ ಕನ್ನಡ ಚಿತ್ರವಾಗಿ ೧೯೬೧ರಲ್ಲಿ ತೆರೆಗೆ ಬಂದಿತು.

ಚಿತ್ರದ ಕಥಾ ಸಾರಾಂಶ, ಶೂಟಿಂಗ್ ಸ್ಕ್ರಿಪ್ಟ್, ತಾರಾಗಣ-ತಾಂತ್ರಿಕ ವರ್ಗದ ವಿವರ ಹಾಗೂ ತಯಾರಿಕೆಯ ವೆಚ್ಚ ಕುರಿತ ಬಜೆಟ್- ಇವನ್ನು ಸಂಸ್ಥೆಗೆ ನಿರ್ಮಾಪಕರು ಸಲ್ಲಿಸಬೇಕಾಗಿತ್ತು. ಸಮಿತಿಯು ತನ್ನ ಉಪ ಸಮಿತಿಗಳಾದ ಸ್ಕ್ರಿಪ್ಟ್ ಕಮಿಟಿ, ಫೈನಾನ್ಸ್ ಕಮಿಟಿಗಳ ಶಿಫಾರಸ್ಸುಗಳನ್ನು ಪರಿಶೀಲಿಸಿದ ನಂತರವೇ ಆರ್ಥಿಕ ನೆರವು ನೀಡುವ ಬಗ್ಗೆ ನಿರ್ಧಾರ ಕೈಗೊಳ್ಳುತ್ತಿತ್ತು. ಯಾವುದೇ ಚಿತ್ರದ ತಯಾರಿಕೆಗೆ ಪೂರ್ತಿ ವೆಚ್ಚವನ್ನು ಸಂಸ್ಥೆಯು ಭರಿಸುತ್ತಿರಲಿಲ್ಲ. ಆರಂಭದಲ್ಲಿ ಚಿತ್ರ ನಿರ್ಮಾಪಕರೇ ಒಟ್ಟು ವೆಚ್ಚದ ಕಾಲು ಭಾಗವನ್ನು ಭರಿಸಬೇಕಾಗಿತ್ತು. ನಿರ್ಮಾಪಕರು ತಮ್ಮ ಪಾಲಿನ ಬಂಡವಾಳವನ್ನು ವಿನಿಯೋಗಿಸಿ ಚಿತ್ರೀಕರಣ ಪ್ರಾರಂಭಿಸಿ ಒಂದು ಹಂತ ಪೂರ್ಣಗೊಳಿಸಿದ ನಂತರ ಆ ಭಾಗಗಳನ್ನು ವೀಕ್ಷಿಸಿ ನಿಗಮವು ತನ್ನ ಪಾಲಿನ ಬಂಡವಾಳದ ನೆರವನ್ನು ಚಿತ್ರ ನಿರ್ಮಾಣದ ಪ್ರಗತಿಗನುಗುಣವಾಗಿ ಕಂತು ಕಂತಾಗಿ ಪಾವತಿ ಮಾಡುತ್ತಿತ್ತು. ಹೀಗೆ ಚಿತ್ರೀಕರಣ ಪೂರ್ಣಗೊಂಡು ಚಿತ್ರ ಬಿಡುಗಡೆಯಾದ ಮೇಲೆ ಪಡೆಯುವ ಗಳಿಕೆಯಲ್ಲಿ ಎಫ್.ಎಫ್.ಸಿ.ಯ ಸಾಲವನ್ನು ಸಾಮಾನ್ಯ ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗಿತ್ತು.

ಎಫ್.ಎಫ್.ಸಿ.ಯಿಂದ ಆರ್ಥಿಕ ನೆರವು ಪಡೆದ ಎರಡನೇ ಪ್ರಯತ್ನ ಎಂ.ವಿ.ಕೃಷ್ಣಸ್ವಾಮಿ ನಿರ್ದೇಶಿಸಿದ 'ಸುಬ್ಬಾಶಾಸ್ತ್ರಿ', 'ಪಾಪ ಪುಣ್ಯ' ಇವೆರಡು ಚಿತ್ರಗಳೂ ಬಿಡುಗಡೆಯಾಗಿ ಗಲ್ಲಾಪೆಟ್ಟಿಗೆ ಗಳಿಕೆಯಲ್ಲಿ ವಿಫಲವಾದವು. ಎಫ್.ಎಫ್.ಸಿ.ನೀಡಿದ ಸಾಲ ತೀರಿಸಲು ಅಶಕ್ತವಾದವು. ನಂತರದಲ್ಲಿ ಎಫ್.ಎಫ್.ಸಿ ಕನ್ನಡ ಚಿತ್ರಗಳಿಗೆ ಆರ್ಥಿಕ ನೆರವು ನೀಡುವುದನ್ನು ಸ್ಥಗಿತಗೊಳಿಸುವಂತಹ ಪರಿಸ್ಥಿತಿ ಉಂಟಾಯಿತು.

ಈ ಸಂದರ್ಭದಲ್ಲಿ ಒಂದು ಘಟನೆಯನ್ನು ನೆನಪಿಸಬಹುದಾಗಿದೆ. ಕನ್ನಡದ ಮಹಾಕವಿಯೊಬ್ಬನನ್ನು ಕುರಿತ ಚಿತ್ರವೊಂದನ್ನು ಮಾಡಲು ಉದ್ದೇಶಿಸಿದ ನಿರ್ಮಾಪಕರೊಬ್ಬರು ಎಪ್ಪತ್ತರ ದಶಕದಲ್ಲಿ ಎಫ್.ಎಫ್.ಸಿ.ಯನ್ನು ಸಂಪರ್ಕಿಸಿದರು. ಆಗ ಸಮಿತಿಯಲ್ಲಿ ಬಿ.ಕೆ.ಕಾರಂಜಿಯಾ, ಸಿ.ಜೆ.ಧರ್ಮ, ವಸಂತ್ ಜೋಗಳೇಕರ ಮುಂತಾದ ಪ್ರತಿಷ್ಠಿತರಿದ್ದರು.

ಸಮಿತಿಗೆ ಕಥಾವಸ್ತು-ನಿರೂಪಣಾ ಸಾಹಿತ್ಯ ಬಹಳ ಹಿಡಿಸಿತು. ನಿರ್ಮಾಪಕರು ಆಗ ಕಪ್ಪು-ಬಿಳುಪಿನಲ್ಲಿ ಚಿತ್ರ ನಿರ್ಮಿಸಲು ಬಜೆಟ್ ಕೊಟ್ಟಿದ್ದರು. ಅವರನ್ನು ಕರೆಸಿ ವರ್ಣದಲ್ಲಿ ತಯಾರಿಸಲು ಬಜೆಟ್ ಕೇಳಿ ಪಡೆದು, ವರ್ಣದಲ್ಲಿಯೇ ತಯಾರಿಸುವಂತೆ ಸಲಹೆ ಮಾಡಿದರು. ಆದರೆ ಫೈನಾನ್ಸ್ ಉಪ ಸಮಿತಿಯು ಹಿಂದೆ ನೆರವು ಪಡೆದ ಎರಡು ಕನ್ನಡ ಚಿತ್ರಗಳಿಂದ ಸಾಲ ಮರುಪಾವತಿಯಾಗಿಲ್ಲವೆಂಬ ಕಾರಣದಿಂದ ಆ ಚಿತ್ರಕ್ಕೆ ದೊರೆಯಬಹುದಾಗಿದ್ದ ಆರ್ಥಿಕ ನೆರವನ್ನು ತಡೆಹಿಡಿಯಿತು. ಹೀಗಾಗಿ ಆ ಪ್ರಾಜೆಕ್ಟ್ ಅಲ್ಲಿಗೇ ಸ್ಥಗಿತಗೊಂಡಿತು.

ಎಫ್.ಎಫ್.ಸಿ.ಗೆ ಸರ್ಕಾರವು ನಂತರದಲ್ಲಿ ರಾಷ್ಟ್ರೀಯ ಸ್ವರೂಪ ನೀಡಿತು. 'ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮ'ವಾಗಿ ಪರಿವರ್ತಿತವಾಯಿತು. 'ನ್ಯಾಷನಲ್ ಫಿಲಂ ಡೆವಲಪ್‌ಮೆಂಟ್ ಕಾರ್ಪೋರೇಷನ್ (ಎನ್.ಎಫ್.ಡಿ.ಸಿ) ಆಗಿ ಮಾರ್ಪಟ್ಟ ನಂತರ ನಿಗಮದ ಹರವು ವಿಸ್ತಾರಗೊಂಡಿತು. ಆಯಾ ಭಾಷಾ ಚಿತ್ರರಂಗಗಳ ಕೇಂದ್ರಗಳಲ್ಲಿ ನಿಗಮ ತನ್ನ ಶಾಖೆಗಳನ್ನು ತೆರೆಯಿತು. ಬೆಂಗಳೂರಿನಲ್ಲಿ ಎನ್.ಎಫ್.ಡಿ.ಸಿ.ಯ ಶಾಖೆಯು ಮೊದಲು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಕಟ್ಟಡದ ಆವರಣದಲ್ಲಿ ಆರಂಭವಾಯಿತು. ನಂತರ ಸಮೀಪದ ಕುಮಾರ ಕೃಪಾ ರಸ್ತೆಗೆ ಸ್ಥಳಾಂತರಗೊಂಡಿತು.

ಎನ್.ಎಫ್.ಡಿ.ಸಿ ಆದ ಮೇಲೆ ಕನ್ನಡ ಚಿತ್ರಗಳ ನಿರ್ಮಾಣಕ್ಕೆ ಅವಕಾಶ ಹೆಚ್ಚಾಯಿತು. ಗಿರೀಶ್ ಕಾಸರವಳ್ಳಿ, ಜಿ.ವಿ.ಅಯ್ಯರ್, ಎಂ.ಎಸ್.ಸತ್ಯು, ಕವಿತಾ ಲಂಕೇಶ್ ಮುಂತಾದವರ ಚಿತ್ರಗಳಿಗೆ ಎನ್.ಎಫ್.ಡಿ.ಸಿ. ಆರ್ಥಿಕ ನೆರವು ದೊರೆತಿದೆ. ಎನ್.ಎಫ್.ಡಿ.ಸಿ.ಯು ತಾನು ಆರ್ಥಿಕ ನೆರವು ನೀಡುವ ಚಿತ್ರಗಳ ಹಂಚಿಕೆಯ ಹಕ್ಕನ್ನು ತಾನೇ ಹೊಂದಿರುತ್ತದೆ. ಎನ್.ಎಫ್.ಡಿ.ಸಿ ಈಗಲೂ ಕನ್ನಡ ಚಿತ್ರಗಳ ನಿರ್ಮಾಣಕ್ಕೆ ಆರ್ಥಿಕ ನೆರವು ನೀಡುತ್ತಿದೆ.

### ಕೆ.ಎಫ್.ಐ.ಡಿ.ಸಿ

ಕರ್ನಾಟಕ ರಾಜ್ಯ ಸರ್ಕಾರವು ಕನ್ನಡ ಚಿತ್ರಗಳ ಅಭಿವೃದ್ಧಿಗೆ ನೆರವಾಗಲು ರೂಪಿಸಿದ ಸಂಸ್ಥೆಯೇ 'ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮ' (ಕೆ.ಎಫ್.ಐ.ಡಿ.ಸಿ). ಡಿ.ದೇವರಾಜ ಅರಸರು ಮುಖ್ಯಮಂತ್ರಿಗಳಾಗಿದ್ದಾಗ ಈ ನಿಗಮಕ್ಕೆ ಕಾಯಕಲ್ಪವೊದಗಿಸಲು ಮನಸ್ಸು ಮಾಡಿ, ತಮ್ಮ ಸೋದರ ನಿರ್ಮಾಪಕ-ನಿರ್ದೇಶಕ-ನಟರಾಗಿ ಹೆಸರಾಗಿದ್ದ ಡಿ.ಕೆಂಪರಾಜ ಅರಸ್ ಅವರನ್ನು ನಿಗಮದ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ಮಾಡಿದರು.

ಅತ್ಯಾಧುನಿಕ ಬ್ಲಿಂಪ್ ಸಹಿತ ಆ್ಯರಿಫ್ಲೆಕ್ಸ್ ಕ್ಯಾಮರಾ, ನಾಗರಾ ರಿಕಾರ್ಡರ್, ಲೈಟು-ಟ್ರಾಲಿ-ಟ್ರ್ಯಾಕ್--ರಿಫ್ಲೆಕ್ಟರ್‌ಗಳನ್ನು ಹೊಂದಿದ್ದ ಹೊರಾಂಗಣ ಚಿತ್ರೀಕರಣ ಘಟಕ ಮತ್ತು ಸ್ಟೀನ್‌ಬೆಕ್ ಮೂವಿಯೋಲಾ ಸಹಿತ ಸಜ್ಜಾದ ಎಡಿಟಿಂಗ್ ರೂಂಗಳನ್ನು ಹೊಂದಿದ್ದ ನಿಗಮದ ಮೂಲಕ ಸಣ್ಣ ಪ್ರಮಾಣದ ಜನತಾ ಚಿತ್ರಮಂದಿರಗಳು ಹಾಗೂ ಕನ್ನಡ ಚಿತ್ರಗಳನ್ನು ನಿರ್ಮಾಣ ಮಾಡುವ ಕನಸನ್ನು ಹೊತ್ತು ಬಂದಿದ್ದರು ಕೆಂಪರಾಜ ಅರಸ್. ನಿಗಮದ ಮೂಲಕ ಪ್ರತಿ ತಾಲ್ಲೂಕು ಕೇಂದ್ರದಲ್ಲಿಯೂ ಜನತಾ ಚಿತ್ರಮಂದಿರ ನಿರ್ಮಿಸುವ ಯೋಜನೆಯಲ್ಲಿ ಕೆಲವೆರಡು ಚಿತ್ರಮಂದಿರಗಳಾದವು. ಅವುಗಳಲ್ಲಿ ಚಿಕ್ಕಜೋಗಿ ಹಳ್ಳಿಯಲ್ಲಿ ಆರಂಭವಾದ ಜನತಾ ಚಿತ್ರಮಂದಿರವೂ ಒಂದು.

ಕೆಂಪರಾಜ ಅರಸರು ಮೊದಲಿಗೆ ನಾಲ್ಕು ಚಿತ್ರಗಳಿಗೆ ಸಂಪೂರ್ಣ ಆರ್ಥಿಕ ನೆರವು ನೀಡುವ ನಿರ್ಧಾರ ಹೊತ್ತರು. ಇಬ್ಬರು ಹಳೆಯ ನಿರ್ಮಾಪಕರು ಮತ್ತು ಇಬ್ಬರು ಹೊಸ ನಿರ್ಮಾಪಕರನ್ನು ಆಯ್ಕೆ ಮಾಡಿದರು. ಬಿ.ಎಸ್.ರಂಗಾ (ಸುಳಿ) ಮತ್ತು ಹೊನ್ನಪ್ಪ ಭಾಗವತರ್ (ಸದಾನಂದ) ಹಳಬರು. ಪ್ರೇಮಜ್ವಾಲೆ ಮತ್ತು ಲಕ್ಷ್ಮೀ ಪ್ರಸನ್ನ- ಇವೆರಡು ಚಿತ್ರಗಳೂ ಹೊಸಬರದು. ಇಲ್ಲಿ ಯಾವ ನಿರ್ಮಾಪಕರೂ ನಿರ್ಮಾಣ ವೆಚ್ಚದಲ್ಲಿ ಪಾಲ್ಗೊಳ್ಳಬೇಕಾಗಿರಲಿಲ್ಲ. ಆದರೆ ಬದಲಾಗಿ ತಮ್ಮ ಸಾಂಸಾರಿಕ ತೊಂದರೆ-ತಾಪತ್ರಾಯಗಳನ್ನು ಮರೆತು ಚಿತ್ರ ತಯಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಸಲುವಾಗಿ ಈ ನಾಲ್ಕು ಚಿತ್ರಗಳ ನಿರ್ಮಾಪಕರಿಗೆ ಪ್ರತಿ ತಿಂಗಳು ಹತ್ತು ಸಾವಿರ ರೂ.ಗಳ ಗೌರವ ಧನವನ್ನು ನೀಡಲಾಗುತ್ತಿತ್ತು. ಆದರೆ ನಿರ್ಮಾಪಕರು ಆ ಸೌಲಭ್ಯಗಳನ್ನು ಸರಿಯಾಗಿ ಬಳಸಿಕೊಳ್ಳುವಲ್ಲಿ ವಿಫಲರಾದರು. ಕೆಂಪರಾಜ ಅರಸರು ಹೊಂದಿದ್ದ ಯೋಜನೆಗಳು ಪ್ರಥಮ ಪ್ರಯತ್ನದಲ್ಲೇ ವಿಫಲವಾಗಲು ಕಾರಣರಾದರು. ನಿಗಮವನ್ನು ಚಿತ್ರೋದ್ಯಮದ ರೀತಿ-ನೀತಿಯಂತೆಯೇ ನಡೆಸುವ ಬದಲು ಸರ್ಕಾರಿ ದಫ್ತರಗಳಂತೆ ನಡೆಸಿದುದೂ ಆ ವೈಫಲ್ಯಕ್ಕೆ ಇನ್ನೊಂದು ಕಾರಣ. ಈ ಯೋಜನೆಯ ಬಗೆಗಿನ ಅಪಪ್ರಚಾರ, ಚಿತ್ರೋದ್ಯಮದ ಬಗ್ಗೆ ಅರಿವಿರದವರು ನಿಗಮದ ಅಧಿಕಾರ ವಹಿಸಿದುದು, ಅಲಕ್ಷ್ಯ ಇವುಗಳಿಂದಾಗಿ ಕೆ.ಎಫ್.ಐ.ಡಿ.ಸಿ. ಸಂಪೂರ್ಣ ಕುಸಿಯಿತು. ನಿಗಮದಲ್ಲಿದ್ದ ಚಿತ್ರೀಕರಣ ಹಾಗೂ ಸಂಕಲನಗಳಿಗೆ ಅಗತ್ಯವಿದ್ದ ಉಪಕರಣಗಳು ಹಾಳು ಬಿದ್ದವು. ಸರ್ಕಾರ ಯಾವುದೇ ಮಾಡಿದರೂ ಹಾಳು ಎಂಬ ಅಪಪ್ರಚಾರಕ್ಕೆ ದಾರಿಯಾಯಿತು. ಬೆಂಗಳೂರಿನ ಸದಾಶಿವನಗರ ಬಳಿಯಿಂದ ಸರ್ಪಾಂಟೈನ್ ರಸ್ತೆಗೆ ಬಂದಿದ್ದ ನಿಗಮದ ಕಚೇರಿ, ಪುಟ್ಟಣ್ಣ ಚಿತ್ರಮಂದಿರದ ಹೊಣೆಯನ್ನು ನಿಗಮ ಹೊತ್ತ ನಂತರ ಆ ಚಿತ್ರಮಂದಿರದ ಆವರಣಕ್ಕೇ ಸ್ಥಳಾಂತರಗೊಂಡಿತು. ಅರಿವಿಲ್ಲದವರ ಕೈಲಿ ಸಿಕ್ಕ ಆಟದ ಬುಗುರಿಯಂತಾಯಿತು ನಿಗಮ.

### ದೂರದರ್ಶನ

ಬೆಂಗಳೂರು ದೂರದರ್ಶನವು ತಾನು ಪ್ರಸಾರ ಮಾಡಲು ಕೆಲವೆರಡು ಚಿತ್ರಗಳನ್ನು ತಯಾರಿಸಿದ್ದುಂಟು. ಉದಾ : ಗಿರೀಶ್ ಕಾಸರವಳ್ಳಿಯವರ 'ಬಣ್ಣದ ವೇಷ', ಚಂದ್ರಶೇಖರ ಕಂಬಾರರ 'ಜಿ.ಕೆ.ಮಾಸ್ತರರ ಪ್ರಣಯ ಪ್ರಸಂಗ' ಚಿತ್ರಗಳು. ದೂರದರ್ಶನ ತಯಾರಿಸಿದ ಚಿತ್ರಗಳು ಸಾರ್ವಜನಿಕವಾಗಿ ಚಿತ್ರಮಂದಿರಗಳಲ್ಲಿ ಬಿಡುಗಡೆಯಾಗುವುದಿಲ್ಲವಾದುದರಿಂದ ಚಿತ್ರೋದ್ಯಮದ ಆರ್ಥಿಕ ವ್ಯವಸ್ಥೆಯ ಪರಿಧಿಯಲ್ಲಿ ಅದು ಬರುವುದಿಲ್ಲ. ದೂರದರ್ಶನ ಚಿತ್ರ ನಿರ್ಮಾಣಕ್ಕಾಗಿ ವ್ಯಯಿಸಿದ ಮೊತ್ತವನ್ನು ಜಾಹಿರಾತುಗಳ ಮೂಲಕವೇ ಪಡೆದುಕೊಳ್ಳುತ್ತದೆ. ಆ ಕಾರಣ ಮಾರುಕಟ್ಟೆಯ ಸೋಲು-ಗೆಲುವುಗಳು ಅವಕ್ಕೆ ಸಂಬಂಧಿಸಿರುವುದಿಲ್ಲ.

### ಜಾಹಿರಾತಿನ ಆದಾಯ

ಚಿತ್ರಮಂದಿರಗಳಲ್ಲಿ ಚಿತ್ರ ಪ್ರದರ್ಶನಕ್ಕೆ ಮೊದಲು ಮತ್ತು ವಿರಾಮಾನಂತರ ಚಿತ್ರದ ದ್ವಿತೀಯಾರ್ಧದ ಪ್ರದರ್ಶನಕ್ಕೆ ಮೊದಲು ಪ್ರಮುಖ ವ್ಯಾಪಾರ ಸಂಸ್ಥೆಗಳು ತಮ್ಮ

ವ್ಯಾಪಾರ-ವಹಿವಾಟಿನ ಜಾಹಿರಾತುಗಳನ್ನು ಸ್ಲೈಡುಗಳ ಮೂಲಕ ಬರೆಸಿ ಪ್ರದರ್ಶಿಸುವ ವ್ಯವಸ್ಥೆ ಹಿಂದೆ ಇದ್ದಿತು. ಅದರಿಂದ ಚಿತ್ರಮಂದಿರಗಳವರಿಗೆ ಆದಾಯ ಬರುತ್ತಿತ್ತು. ನಂತರದ ಅಡ್ವರ್ಟೈಸಿಂಗ್ ಷಾರ್ಟ್ಸ್ (ಕಿರು ಜಾಹಿರಾತು ಚಿತ್ರಗಳು) ತಯಾರಾಗಿ ಬರತೊಡಗಿದವು. ಇವೂ ಪ್ರದರ್ಶಕರ ಆದಾಯದ ಇನ್ನೊಂದು ಮೂಲವೆಂದು ಪರಿಗಣಿಸಲಾಯಿತು.

### ಅಸ್ತಿತ್ವ ಅಲುಗಾಡುತ್ತಿರುವ ವಿತರಣಾ ವ್ಯವಸ್ಥೆ

ಮೂಕಿ ಚಿತ್ರಗಳು ಬೆಂಗಳೂರಿನಲ್ಲಿಯೇ ತಯಾರಾಗುತ್ತಿದ್ದವಾದರೂ ಟಾಕೀ ಚಿತ್ರಗಳು ಹೊರ ರಾಜ್ಯಗಳಲ್ಲಿ ನಿರ್ಮಾಣವಾಗುತ್ತಿದ್ದು, ಬೆಂಗಳೂರು ಭಾರತದ ಚಿತ್ರೋದ್ಯಮದ ವಿತರಣ ವ್ಯವಸ್ಥೆಯಲ್ಲಿ ಪ್ರಮುಖ ಕೇಂದ್ರವೆನಿಸಿತ್ತು. ಬೆಂಗಳೂರಿನಲ್ಲಿದ್ದ ಚಿತ್ರ ಹಂಚಿಕಾ ಸಂಸ್ಥೆಗಳು ದಕ್ಷಿಣ ಭಾರತದಲ್ಲಿ ಚಿತ್ರಗಳ ವಿತರಣೆ ನಡೆಸುತ್ತಿದ್ದುದೇ ಅಲ್ಲದೆ, ಸಿಲೋನ್ (ಈಗಿನ ಶ್ರೀಲಂಕಾ) ನಲ್ಲಿಯೂ ತಮ್ಮ ವಿತರಣೆಯ ಹಸ್ತ ಚಾಚಿದ್ದವು. ಆ ದಿನಗಳಲ್ಲಿ ಹಿಂದಿಯೂ ಸೇರಿದಂತೆ ಎಲ್ಲ ಭಾಷೆಗಳ ಮಾರುಕಟ್ಟೆಯ ಪ್ರಮುಖ ಕೇಂದ್ರವೆನಿಸಿದ್ದ ಬೆಂಗಳೂರಿನ ವಿತರಣ ಕ್ಷೇತ್ರ ಕನ್ನಡೇತರರ ಏಕ ಸ್ವಾಮ್ಯಕ್ಕೆ ಒಳಪಟ್ಟಿದ್ದಿತು.

ಈ ಏಕಸ್ವಾಮ್ಯವನ್ನೂ ಮುರಿದ ಮೊದಲಿಗರು ಶಾಂತಾ ಪಿಕ್ಚರ್ಸ್ ಮತ್ತು ಪ್ರಕಾಶ್ ಪಿಕ್ಚರ್ಸ್ ಸಂಸ್ಥೆಗಳವರು. ಕನ್ನಡೇತರರಿಗೆ ಹಿಂದಿ ಚಿತ್ರಗಳ ವಿತರಣೆಯನ್ನು ಬಿಟ್ಟು, ಕನ್ನಡ ಚಿತ್ರಗಳ ಹಂಚಿಕೆಯನ್ನು ತಾವು ಪಡೆದು ವಿತರಣ ಕ್ಷೇತ್ರವನ್ನು ಪ್ರವೇಶಿಸಿದವರಿವರು. ಕೆ.ಎಲ್. ಶಾಮಣ್ಣ, ಕೆ.ವೆಂಕಟಸುಬ್ಬಶೆಟ್ಟಿ, ಎನ್. ವಿ. ಗೋಪಾಲ ಶೆಟ್ಟಿ, ಅಪ್ಪಾಸ್ವಾಮಿಶೆಟ್ಟಿ ಇವರು ಶಾಂತಾ ಪಿಕ್ಚರ್ಸ್ ಸಂಸ್ಥೆಯ ಮೂಲಕ ಆಗ ತಯಾರಾಗುತ್ತಿದ್ದ ಕನ್ನಡ ಚಿತ್ರಗಳಲ್ಲಿ ಬಹುತೇಕ ಚಿತ್ರಗಳ ಹಂಚಿಕೆಯ ಹಕ್ಕನ್ನು ಪಡೆದು ಬಿಡುಗಡೆ ಮಾಡತೊಡಗಿದರು. ಎನ್. ವಿ.ಗೋಪಾಲ ಶೆಟ್ಟಿಯವರು ತಮ್ಮದೇ ಆದ ಪ್ರಕಾಶ್ ಪಿಕ್ಚರ್ಸ್ ಸಂಸ್ಥೆಯನ್ನು ತೆರೆದು, ಆ ಮೂಲಕವಾಗಿಯೂ ಕನ್ನಡ ಚಿತ್ರಗಳ ಹಂಚಿಕೆ ನಡೆಸಿದರು. ನಟಿ ಜಿ. ವರಲಕ್ಷ್ಮಿಯವರು ಮದ್ರಾಸಿನಲ್ಲಿ ಹೊಂದಿದ್ದ ಪ್ರಕಾಶ್ ಸ್ಟುಡಿಯೋವಿನೊಂದಿಗೆ ವ್ಯವಹಾರ ಬಾಂಧವ್ಯವನ್ನು ಹೊಂದಿದ್ದ ಗೋಪಾಲಶೆಟ್ಟರು ಆ ಸ್ಟುಡಿಯೋವಿನಲ್ಲಿ ಕನ್ನಡ ಚಿತ್ರಗಳ ಚಿತ್ರೀಕರಣಕ್ಕೆ ನೆರವಾದರು. ಕನ್ನಡ ವಾಕ್ಚಿತ್ರಗಳ ಆರಂಭಕಾಲದಿಂದ ಸುಮಾರು ಎಪ್ಪತ್ತರ ದಶಕದವರೆವಿಗೂ ಈ ಎರಡೂ ಸಂಸ್ಥೆಗಳು ಕನ್ನಡ ಚಿತ್ರ ಹಂಚಿಕಾ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದ್ದವು. ಡಿ.ಶಂಕರ್‌ಸಿಂಗ್, ಬಿ.ವಿಠಲಾಚಾರ್ಯ, ಡಿ.ಕೆಂಪರಾಜ ಅರಸ್ ಮುಂತಾದವರು ತಯಾರಿಸಿದ ಬಹುತೇಕ ಕನ್ನಡ ಚಿತ್ರಗಳನ್ನು ವಿತರಣೆ ಮಾಡಿದ ಸಂಸ್ಥೆಗಳೆನಿಸಿದ್ದವು.



ಬಿ.ಎನ್.ಗುಪ್ತ

ಮೂಕಿ ಕಾಲದಿಂದ ಚಿತ್ರಸೃಷ್ಟಿ ಕಾರ್ಯದಲ್ಲಿ ಆಸಕ್ತಿ ತಳೆದು ಹಲವು ಪ್ರಯತ್ನ-ಪ್ರಯೋಗಗಳನ್ನು ನಡೆಸಿದ್ದ ಗುಬ್ಬಿವೀರಣ್ಣನವರು ಟಿ.ಎಸ್.ಕರಿಬಸಯ್ಯ, ಎಸ್.ಗುರುನಾಥ್, ಸಿ.ಆರ್.ಬಸವರಾಜು, ದುಮ್ಮಿ ಮುರಿಗೆಪ್ಪ ಮುಂತಾದವರನ್ನು ಸೇರಿಸಿಕೊಂಡು ಕನ್ನಡ ಚಿತ್ರಗಳ ವಿತರಣೆಗೆಂದೇ ಸ್ಥಾಪಿಸಿದ ಲಿಮಿಟೆಡ್ ಸಂಸ್ಥೆಯೇ ಕರ್ನಾಟಕ ಫಿಲಂಸ್ ಲಿಮಿಟೆಡ್. ಷೇರು ಬಂಡವಾಳದ ಮೇಲೆ ಆರಂಭಗೊಂಡ ಈ ಸಂಸ್ಥೆಯ ಪ್ರಥಮ ಅಧ್ಯಕ್ಷರು ವೀರಬಸಪ್ಪನವರು. ಗುಬ್ಬಿ ಕರ್ನಾಟಕ ಪ್ರೊಡಕ್ಷನ್ಸ್, ಎ.ವಿ.ಎಂ.ಸಂಸ್ಥೆಗಳು ನಿರ್ಮಿಸಿದ ಅದ್ದೂರಿಯ ಕನ್ನಡ ಚಿತ್ರಗಳೇ ಅಲ್ಲದೆ ಅನೇಕ ಉತ್ತಮ ಅಭಿರುಚಿಯ-ನಿರ್ಮಾಣ ಮೌಲ್ಯದ ಕನ್ನಡ ಚಿತ್ರಗಳನ್ನು ವಿತರಣೆ ಮಾಡಿದ ಹೆಮ್ಮೆ ಈ ಸಂಸ್ಥೆಯದು. ಬಸವಯ್ಯನವರು ಈ ಸಂಸ್ಥೆಯಲ್ಲಿ ಅಧಿಕ ಕಾಲ ದುಡಿದರು.

ಉದ್ಯಮಿಗಳಾದ ತಲ್ಲಂ ಕುಟುಂಬದ ಜಿ.ಎಸ್.ತಲ್ಲಂ ಅವರ ತಲ್ಲಂ ಪಿಕ್ಚರ್ಸ್ ಸ್ಥಾಪನೆಯಾಗಿ, ಅದೂ ಕನ್ನಡ ಚಿತ್ರಗಳ ಹಂಚಿಕೆಯಲ್ಲಿ ತೊಡಗಿದ್ದಲ್ಲದೆ ತಮಿಳು, ತೆಲುಗು ಚಿತ್ರಗಳ ವಿತರಣೆಯನ್ನೂ ಮಾಡಿತು. ತಲ್ಲಂರ ಸಂಬಂಧಿಕರದೇ ಆದ ಯಶೋಧರಾ ಪಿಕ್ಚರ್ಸ್ ಕೂಡ ಇತರ ಭಾಷಾ ಚಿತ್ರಗಳ ವಿತರಣೆಯಲ್ಲಿ ತೊಡಗಿಕೊಂಡಿದ್ದಿತು. ತಲ್ಲಂ ಅವರ ಸಂಸ್ಥೆಯಲ್ಲಿ ಟಿ.ಡಿ.ಸ್ವಾಮಿ, ಎ.ದ್ವಾರಕನಾಥ್ ಮುತ್ತಿತ್ತರು ಚಿತ್ರಹಂಚಿಕಾ ಕ್ಷೇತ್ರದಲ್ಲಿ ಪರಿಣತಿ ಪಡೆದವರಾಗಿದ್ದರು.

ಪತ್ರಿಕೋದ್ಯಮ ಹಾಗೂ ಚಿತ್ರೋದ್ಯಮಗಳೆರಡರಲ್ಲೂ ಅನುಭವಿಗಳಾದ ಬಿ.ಎನ್.ಗುಪ್ತ ಅವರು ಎಸ್.ಎಲ್.ಮನ್ನಾಜಿ ರಾವ್ ಮತ್ತು ಎಸ್.ಎಂ.ರಾಮಕೃಷ್ಣ ರಾವ್ ಅವರೊಂದಿಗೆ ವಿಜಯ ಟಾಕೀ ಡಿಸ್ಟ್ರಿಬ್ಯೂಟರ್ಸ್ ಸಂಸ್ಥೆಯನ್ನು ಆರಂಭಿಸಿ ಕನ್ನಡ ಚಿತ್ರರಂಗದಲ್ಲೊಂದು ಹೊಸ ಆಶಾಕಿರಣ ಮೂಡಿಸಿದರು. ದೊಡ್ಡ ದೊಡ್ಡ ಲಾಂಛನಗಳ ಚಿತ್ರಗಳು ಮಾತ್ರವಲ್ಲದೆ ಉತ್ತಮವೆನಿಸಿದ ಅನೇಕ ಚಿತ್ರಗಳನ್ನು ಈ ಸಂಸ್ಥೆ ವಿತರಣೆ ಮಾಡಿತು. ಕನ್ನಡ ಚಿತ್ರೋದ್ಯಮದಲ್ಲಿ ಸ್ಥೈರ್ಯವನ್ನು ಹೆಚ್ಚಿಸಿದ ಸಂಸ್ಥೆಯೂ ಹೌದು. ಕೆ.ವಿ.ಗುಪ್ತ ಮತ್ತು ಎಸ್. ಎಂ.ಲಕ್ಷ್ಮಣರಾಯರೂ ವಿ.ಟಿ.ಡಿ.ಸಂಸ್ಥೆಯಲ್ಲಿ ಅನುಭವ ಪಡೆದೇ ಬಂದವರು.

ಮದರಾಸಿನ ವಾಹಿನಿ-ವಿಜಯ ಸ್ಟುಡಿಯೋ ಹಾಗೂ ಚಿತ್ರ ನಿರ್ಮಾಣ ಸಂಸ್ಥೆಗಳ ಬಿ.ನಾಗಿರೆಡ್ಡಿಯವರ ನೇತೃತ್ವದಲ್ಲಿ ನಂತರ ಆರಂಭವಾದುದೇ ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್. ವಿ.ಟಿ.ಡಿ.ಯಲ್ಲಿದ್ದ ಎಸ್.ಎಂ.ಲಕ್ಷ್ಮಣರಾವ್, ಕೆ.ವಿ.ಗುಪ್ತರಲ್ಲದೆ ಮಹಾರಾಜಾ ಪ್ರೆಸ್ ವರ್ಕ್ಸ್‌ನ ಬಿ.ಆರ್.ಚಿನ್ನಯ್ಯ ಶೆಟ್ಟರು ಮತ್ತು ಅವರ ಮಕ್ಕಳು,ಬಿ.ಸಿ.ಪಾರ್ಥಸಾರಥಿ ವಿ.ಪಿ.ಸಿ ಸಂಸ್ಥೆಯ ಆಡಳಿತ ವರ್ಗದಲ್ಲಿದ್ದರು. ನಾಯರ್ ಈ ಸಂಸ್ಥೆಯ ಮ್ಯಾನೇಜರ್ ಆಗಿ ಹಲವಾರು ವರ್ಷಗಳ ಕಾಲ ದುಡಿದರು. ಇತ್ತೀಚಿನವರೆವಿಗೂ ಕನ್ನಡ ಚಿತ್ರಗಳ ವಿತರಣೆಯಲ್ಲಿ ಮುಂಚೂಣಿಯಲ್ಲಿದ್ದು ಅನೇಕ ಕನ್ನಡ ಚಿತ್ರಗಳನ್ನು ಬಿಡುಗಡೆ ಮಾಡಿದ ಖ್ಯಾತಿ ಈ ಸಂಸ್ಥೆಯದು.

ನಿರ್ಮಾಪಕ-ನಿರ್ದೇಶಕ ಬಿ.ಎಸ್.ರಂಗಾ ಅವರು ನಿರ್ಮಿಸಿದ ಕನ್ನಡ ಚಿತ್ರಗಳ ವಿತರಣೆಗಾಗಿಯೇ ಸ್ಥಾಪಿತವಾದ ವಿಕ್ರಮ್ ಪಿಕ್ಚರ್ಸ್ ಸಂಸ್ಥೆಯನ್ನು ಬಿ.ಎಸ್.ರಂಗಾ ಅವರ ಸಹೋದರರಾದ ಬಿ.ಎಸ್.ಗರುಡಚಾರ್ ಅವರೇ ನೋಡಿಕೊಳ್ಳುತ್ತಿದ್ದರು. ಇತರ ಸಂಸ್ಥೆಗಳು ನಿರ್ಮಿಸಿದ ಚಿತ್ರಗಳನ್ನೂ ಈ ಸಂಸ್ಥೆ ಬಿಡುಗಡೆ ಮಾಡಿದೆ.

ಮದರಾಸಿನ ವೀನಸ್ ಸಂಸ್ಥೆಯ ರತ್ನಂ ಅಯ್ಯರ್, ಕೃಷ್ಣಮೂರ್ತಿ ಅವರು ಬೆಂಗಳೂರಿನಲ್ಲಿಯೂ ವೀನಸ್ ಸಂಸ್ಥೆಯನ್ನು ಆರಂಭಿಸಿದರು. ಶ್ರೀರಾಮ ಎಂಟರ್‌ಪ್ರೈಸಸ್ ಸಂಸ್ಥೆಯವರು ನಿರ್ಮಿಸಿದ ಕನ್ನಡ ಚಿತ್ರಗಳನ್ನು, ಹಲವು ಕನ್ನಡ ಹಾಗೂ ತಮಿಳು ಚಿತ್ರಗಳನ್ನೂ ಈ ಸಂಸ್ಥೆಯು ಕರ್ನಾಟಕದಲ್ಲಿ ವಿತರಣೆ ಮಾಡಿತು. ಈ ಸಂಸ್ಥೆಯಲ್ಲಿ ತ್ಯಾಗರಾಜನ್ ಅವರು ಮ್ಯಾನೇಜರಾಗಿದ್ದು, ತಲ್ಲಂ ಸಂಸ್ಥೆಯಲ್ಲಿದ್ದು ಪರಿಣತರಾಗಿದ್ದ ಟಿ.ಡಿ.ಸ್ವಾಮಿ, ವೆಂಕಟರಾಮನ್ ಮುಂತಾದವರು ಜೊತೆಗಿದ್ದರು. ಈ ಸಂಸ್ಥೆ ಆರಂಭದಲ್ಲಿ ಭಾರಿ ಭರಾಟೆಯಿಂದಲೇ ಚಿತ್ರವಿತರಣೆ ನಡೆಸಿದ್ದಿತು. ಎಂಬತ್ತರ ದಶಕದಲ್ಲಿ ನಿರ್ಮಾಪಕ ಸಿ.ವಿ.ಎಲ್.ಶಾಸ್ತ್ರಿಯವರು ಈ ಸಂಸ್ಥೆಯನ್ನು ಕೊಂಡುಕೊಂಡು ತಮ್ಮದೇ ಆಗಿದ್ದ ಶಾಸ್ತ್ರಿ ಮೂವೀ ಡಿಸ್ಟ್ರಿಬ್ಯೂಟರ್ಸ್ ಸಂಸ್ಥೆಯೊಂದಿಗೆ ವಿಲೀನಗೊಳಿಸಿದರು. ವೀನಸ್ ಸಂಸ್ಥೆಯಲ್ಲಿದ್ದ ಟಿ.ಡಿ.ಸ್ವಾಮಿಯವರು ಸಿ.ವಿ.ಎಲ್.ಶಾಸ್ತ್ರಿಗಳ ಶಾಸ್ತ್ರಿ ಮೂವೀ ಡಿಸ್ಟ್ರಿಬ್ಯೂಟರ್ಸ್ ಸಂಸ್ಥೆಯ ಮ್ಯಾನೇಜರಾದರು. ಶಾಸ್ತ್ರಿಗಳು, ಅವರ ಮಿತ್ರರು ತಯಾರಿಸಿದ ಚಿತ್ರಗಳಲ್ಲದೆ ಇತರೆ ನಿರ್ಮಾಪಕರು ತಯಾರಿಸಿದ ಚಿತ್ರಗಳನ್ನೂ ಈ ಸಂಸ್ಥೆಯು ವಿತರಣೆ ಮಾಡಿತು. ಮೈಸೂರಿನಲ್ಲಿಯೂ ಈ ಸಂಸ್ಥೆ ತನ್ನ ಶಾಖೆಯನ್ನು ತೆರೆದು ಮೈಸೂರು ವಲಯಕ್ಕಾಗಿಯೂ ಕೆಲವು ಚಿತ್ರಗಳ ಹಂಚಿಕೆಯ ಹಕ್ಕು ಪಡೆದು ವಿತರಿಸಿತು.

ಎ.ದ್ವಾರಕನಾಥ್ ಅವರು ಎಮರಾಲ್ಡ್ ಪಿಕ್ಚರ್ಸ್ ಸಂಸ್ಥೆಯನ್ನು ಆರಂಭಿಸಿದರು. ನಂತರ ಪದ್ಮಶ್ರೀ ಪಿಕ್ಚರ್ಸ್ ಸ್ಥಾಪಿಸಿದರು. ಅನುಪಮ ಸಂಸ್ಥೆಯನ್ನು ನಡೆಸಿದರು. ಚಿತ್ರ ನಿರ್ಮಾಣದಲ್ಲಿಯೂ ತೊಡಗಿಕೊಂಡರು.

ಕನ್ನಡದಲ್ಲಿ ಅತಿ ದೊಡ್ಡ ಪ್ರಮಾಣದಲ್ಲಿ ಚಿತ್ರ ಹಂಚಿಕಾ ಕ್ಷೇತ್ರವನ್ನು ಪ್ರವೇಶಿಸಿದವರು ಬೆಂಗಳೂರು ಮತ್ತು ದೊಡ್ಡಬಳ್ಳಾಪುರಗಳಲ್ಲಿ ಪ್ರದರ್ಶಕರಾಗಿ ಖ್ಯಾತರಾಗಿದ್ದ ರೇಷ್ಮೆ ಉದ್ಯಮಿ ಕೆ.ಸಿ.ಎನ್.ಗೌಡರು. ಅವರು ಗಾಂಧಿನಗರದಲ್ಲಿ ಆರಂಭಿಸಿದ ಕೆ.ಸಿ.ಎನ್ ಮೂವೀಸ್. ಅತ್ಯಂತ ಪ್ರತಿಷ್ಠಿತ ಚಿತ್ರವಿತರಣಾ ಸಂಸ್ಥೆಯಾಗಿ ಬೆಳೆಯಿತು. ಈ ಸಂಸ್ಥೆ ಅನೇಕ ಉತ್ತಮ ಅಭಿರುಚಿಯ ಹಾಗೂ ಅದ್ದೂರಿಯ ಚಿತ್ರಗಳ ನಿರ್ಮಾಣಕ್ಕೆ ಕಾರಣೀಭೂತವಾಯಿತು. ಕೆ.ಸಿ.ಎನ್.ಗೌಡರೊಂದಿಗೆ ಅವರ ಮಕ್ಕಳಾದ ಕೆ.ಸಿ.ಎನ್.ಚಂದ್ರಶೇಖರ್ ಮತ್ತು ಕೆ.ಸಿ.ಎನ್.ಮೋಹನ್‌ರೂ ಕೂಡಿ ಸಂಸ್ಥೆಯನ್ನು ಬೆಳೆಸಿದರು. ಈ ಸಂಸ್ಥೆಯ ಸೋದರ ಸಂಸ್ಥೆಯಾಗಿ ರೂಪುಗೊಂಡ ರಾಜಕಮಲ್ ಆರ್ಟ್ಸ್ ಮೂಲಕ ಈ ಸಂಸ್ಥೆ ಅನೇಕ ಉತ್ತಮ ಚಿತ್ರಗಳನ್ನು ನಿರ್ಮಾಣ ಮಾಡಿತು.

ಬಿನ್‌ಸುಮ್ ಪಿಕ್ಚರ್ಸ್ ಅತ್ಯಂತ ಹಿರಿಯ ಚಿತ್ರ ವಿತರಣಾ ಸಂಸ್ಥೆ. ನರಸಿಂಹಯ್ಯ ಮತ್ತು ಇತರರು ಇದರ ಮಾಲೀಕರು. ಇವರ ಮಕ್ಕಳಾದ ಹೆಚ್.ಎನ್.ಮುದ್ದುಕೃಷ್ಣ

ಮತ್ತು ಹೆಚ್.ಎನ್.ಮಾರುತಿ 'ಪಾರಿಜಾತ' ಲಾಂಛನದಲ್ಲಿ ಚಿತ್ರನಿರ್ಮಾಣ ಹಾಗೂ ಚಿತ್ರ ಹಂಚಿಕ ಎರಡೂ ಕ್ಷೇತ್ರದಲ್ಲಿ ಹೆಸರು ಮಾಡಿದರು.

ಶ್ರೀವರ್‌ಲ್ಯಾಂಡ್ ಪಿಕ್ಚರ್ಸ್‌ನಲ್ಲಿದ್ದು ಚಿತ್ರ ವಿತರಣೆಯಲ್ಲಿ ಅನುಭವಿಗಳಾದ ಎನ್.ವೀರಾಸ್ವಾಮಿಯವರೂ ಶ್ರೀ ಈಶ್ವರಿ ಪಿಕ್ಚರ್ಸ್ ಮತ್ತು ರವಿಕಲಾ ಪಿಕ್ಚರ್ಸ್‌ಗಳ ಮೂಲಕ ದೊಡ್ಡ ಮಟ್ಟದಲ್ಲಿಯೇ ಚಿತ್ರವಿತರಣ ಕ್ಷೇತ್ರದಲ್ಲಿಳಿದರು. ಅನೇಕ ಉತ್ತಮ ಚಿತ್ರಗಳನ್ನು ನಿರ್ಮಿಸಿದರಲ್ಲದ, ಉತ್ತಮ ಚಿತ್ರ ನಿರ್ಮಾಣದ ಹಲವರ ಪ್ರಯತ್ನಗಳನ್ನೂ ಪ್ರೋತ್ಸಾಹಿಸಿದರು. ಇವರೊಂದಿಗೇ ಇವರ ಮಿತ್ರರಾದ ಬಿ.ಕ.ಗಂಗಪ್ಪನವರು ತಮ್ಮದೇ ಆದ ಶ್ರೀ ಚಾಮುಂಡೇಶ್ವರಿ ಫಿಲಂಸ್ ಸಂಸ್ಥೆಯ ಮೂಲಕ ಚಿತ್ರಗಳ ಹಂಚಿಕ ನಡಸುತ್ತಿದ್ದರು.



ಪಾರ್ವತಮ್ಮ ರಾಜಕುಮಾರ್

ಶ್ರೀ ಈಶ್ವರಿ ಪ್ರೊಡಕ್ಷನ್ಸ್ ಲಾಂಛನದಲ್ಲಿ ಹಲವು ಯಶಸ್ವೀ ಚಿತ್ರಗಳನ್ನೂ ನಿರ್ಮಾಣ ಮಾಡಿದ ವೀರಾಸ್ವಾಮಿ ಅವರು ಚಂದೂಲಾಲ್ ಜೈನ್, ಎಸ್.ಪಿ.ವರದರಾಜ್, ನಿರ್ದೇಶಕ ಸಿದ್ದಲಿಂಗಯ್ಯನವರೊಂದಿಗೆ ಕೂಡಿ ಜೈನ್ ಕಂಬೈನ್ಸ್ ಲಾಂಛನದಲ್ಲಿಯೂ ಉತ್ತಮ ಯಶಸ್ವೀ ಚಿತ್ರಗಳ ನಿರ್ಮಾಣ-ಹಂಚಿಕೆ ನಡೆಸಿದರು. ವೀರಾಸ್ವಾಮಿಯವರ ಹಿರಿಯ ಪುತ್ರ ವಿ.ರವಿಚಂದ್ರನ್ ತಮ್ಮ ಸಹೋದರ ಬಾಲಾಜಿಯವರೊಂದಿಗೆ ಈ ಸಂಸ್ಥೆಯ ಜವಾಬ್ದಾರಿ ಹೊತ್ತಿದ್ದು, ಉದ್ಯಮದಲ್ಲಿ ನಟರಾಗಿ, ನಿರ್ಮಾಪಕರಾಗಿ, ನಿರ್ದೇಶಕರಾಗಿ ಹೆಸರಾಗಿದ್ದಾರೆ.

ಬಾಳಿಗಾ ಸಹೋದರರು ಮಯೂರಾ ಮೂವೀಸ್ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಭಾರಿ ವೆಚ್ಚದ ಕನ್ನಡ ಚಿತ್ರದ ಹಂಚಿಕೆಯನ್ನು ನಡೆಸಿದರು. ಅಲ್ಲದೆ ಕೆಲವು ಕನ್ನಡ ಚಿತ್ರಗಳನ್ನು ನಿರ್ಮಿಸಿ ಬಿಡುಗಡ ಮಾಡಿದರು.

ಕೃಷ್ಣ ಅವರ ನಟೇಶ್ ಫಿಲಂ ಎಕ್ಸ್‌ಚೇಂಜ್, ಎ.ವಿ.ಎಸ್.ವಾಸನ್ ಮತ್ತು ಎ.ಎಸ್.ಮೋಹನ್ ಅವರ ಸಪ್ತಗಿರಿ ಎಂಟರ್ ಪ್ರೈಸಸ್ ಸಂಸ್ಥೆಗಳೂ ಕನ್ನಡ ಚಿತ್ರ ವಿತರಣ ಕ್ಷೇತ್ರದಲ್ಲಿ ಗಮನಾರ್ಹವಾಗಿವೆ. ಸಪ್ತಗಿರಿ ಲಾಂಛನದಲ್ಲಿ ವಾಸನ್ ಮತ್ತು ಮೋಹನ್ ಕನ್ನಡ ಚಿತ್ರ ಸೃಷ್ಟಿಗೂ ಇಳಿದರು. ಅನೇಕ ಹಿಂದಿನ ಕನ್ನಡ ಚಿತ್ರಗಳ ಹಂಚಿಕೆಯ ಹಕ್ಕನ್ನೂ ಪಡೆದಿದ್ದಾರೆ. ಹಾಗೆಯೇ ವಾಸುದೇವರಾವ್ ಅವರು ಆರಂಭಿಸಿದ ಸಫೈರ್ ಮೂವೀಸ್ ಸಂಸ್ಥೆಯೂ ಚಿತ್ರ ಹಂಚಿಕೆ ಹಾಗೂ ಚಿತ್ರ ನಿರ್ಮಾಣ ಕ್ಷೇತ್ರಗಳೆರಡರಲ್ಲಿಯೂ ತೊಡಗಿಕೊಂಡಿರುವ ಸಂಸ್ಥೆ. ಹಿಂದಿನ ಅನೇಕ ಚಿತ್ರಗಳ ವಿತರಣೆಯ ಹಕ್ಕನ್ನು ಪಡೆದಿರುವ ಈ ಸಂಸ್ಥೆಯನ್ನು ಪ್ರಸ್ತುತ ವಾಸುದೇವರಾಯರ ಮಕ್ಕಳಾದ ಮಂಜುನಾಥ ಮತ್ತು ವೆಂಕಟೇಶ್ ಅವರು ನಿರ್ವಹಿಸುತ್ತಿದ್ದಾರೆ.

ಮೆಹತಾ ಪಿಕ್ಚರ್ಸ್‌ನ ಪ್ರಾಣ್‌ಲಾಲ್ ಮೆಹತಾ, ಚಂದನ್ ಫಿಲಂಸ್‌ನ ಚಂದನ್‌ಮಲ್ ಬಾಫ್ನಾ, ಬಹಾರ್ ಫಿಲಂಸ್‌ನ ಬಾಪಾ, ಕುಂಗ್‌ಫೂ ಫಿಲಂಸ್, ಹೇಮಾ ಫಿಲಂ ಎಕ್ಸ್‌ಚೇಂಜ್‌ನ ಹೀರಾಲಾಲ್-ಬಾಬೂಲಾಲ್ ಮುಂತಾದವರೂ ಕನ್ನಡ ಚಿತ್ರಗಳ ಹಂಚಿಕೆ ನಡೆಸಿ ಕನ್ನಡ ಚಿತ್ರ ಸೃಷ್ಟಿಗ ಆರ್ಥಿಕ ನೆರವನ್ನು ಒದಗಿಸಿದರು.

ಅಜಂತಾ ಮೂವೀಸ್, ಅಜಂತಾ ಕಂಬೈನ್ಸ್ ಸಂಸ್ಥೆಗಳ ಮೂಲಕ ಎ.ಆರ್.ರಾಜು ಅವರು ಅನೇಕ ಕನ್ನಡ ಚಿತ್ರಗಳ ವಿತರಣೆ ಮಾಡಿದರು. ತಾವೇ ಚಿತ್ರ ನಿರ್ಮಾಣವನ್ನೂ ಮಾಡಿದರು. ಆಂಧ್ರದ ಪ್ರಸಿದ್ಧ ನಿರ್ಮಾಪಕರನ್ನು ಕನ್ನಡಕ್ಕೆ ಕರೆತಂದು ಅವರಿಂದ ಕನ್ನಡ ಚಿತ್ರ ನಿರ್ಮಾಣ ಮಾಡಿಸಿ, ನಿರ್ಮಾಣ ಮೇಲುಸ್ತುವಾರಿಯನ್ನೂ ನೋಡಿಕೊಂಡರು. ರಾಜು ಅವರೊಡನೆ ಅವರ ತಮ್ಮ ಎ.ಆರ್.ರಾಧಾಕೃಷ್ಣ ರಾಜು ಅವರೂ ಜೊತೆಗೂಡಿದಲ್ಲದೆ, ವಿ.ಎಲ್.ಶ್ರೀನಿವಾಸ ಮೂರ್ತಿಯವರೊಂದಿಗೆ ತಾವೂ ಚಿತ್ರಗಳ ನಿರ್ಮಾಣದಲ್ಲಿ ಭಾಗಿಯಾಗಿದ್ದರು.

ಫೇರ್ ಫಿಲಂಸ್ ಸಂಸ್ಥೆಯ ಸಂಜಯ್ ದೇಸಾಯಿಯವರು ಹಿಂದಿ ಭಾಷೆಗಳ ಚಿತ್ರಗಳೊಂದಿಗೆ ಕನ್ನಡ ಚಿತ್ರಗಳ ವಿತರಣೆಯನ್ನೂ ಮಾಡಿದರು. ಸ್ವತಃ ಚಿತ್ರ ನಿರ್ಮಾಣದಲ್ಲಿಯೂ ಇಳಿದರು. ಇವರ ತಂದೆ ಮಧುಸೂದನ ದೇಸಾಯಿಯವರ ಕಾಲದಿಂದಲೂ ಚಿತ್ರ ವಿತರಣೆಯಲ್ಲಿ ತೊಡಗಿಕೊಂಡ ಹಳೆಯ ಸಂಸ್ಥೆ ಇದು.

ಆರ್.ಎಸ್.ಮಾಂಡ್ರೆಯವರು ಚಿತ್ರ ವಿತರಣೆ ಹಾಗೂ ಪ್ರದರ್ಶನ ಎರಡೂ ಕ್ಷೇತ್ರಗಳಲ್ಲಿಯೂ ಪ್ರಮುಖರು. ಇವರ ಹಂಚಿಕಾ ಸಂಸ್ಥೆ ಮಾಂಡ್ರೆ ಪಿಕ್ಚರ್ಸ್. ಹಿಂದಿ ಚಿತ್ರಗಳನ್ನೇ ಹೆಚ್ಚಾಗಿ ವಿತರಣೆ ಮಾಡುತ್ತಿದ್ದ ಮಾಂಡ್ರೆಯವರು ಕೆಲವೊಂದು ಕನ್ನಡ ಚಿತ್ರಗಳ ಹಂಚಿಕೆಯನ್ನೂ ಮಾಡಿದ್ದಾರೆ.

ಡೆಕ್ಕನ್ ಹೆರಾಲ್ಡ್-ಪ್ರಜಾವಾಣಿ ಪತ್ರಿಕೆಗಳ ಜಾಹಿರಾತುಗಳ ಸ್ವಾಮ್ಯ ಪಡೆದು ವಿಜಯ ಪಬ್ಲಿಸಿಟೀಸ್ ಹೆಸರಿನ ಪತ್ರಿಕಾ ಪ್ರಚಾರ ಸಂಸ್ಥೆಯನ್ನೂ ನಡೆಸುತ್ತಿದ್ದ ಎ.ಸಿ.ನರಸಿಂಹಮೂರ್ತಿಯವರು, ಜಯಚಾಮರಾಜೇಂದ್ರ ಔದ್ಯೋಗಿಕ ಶಿಕ್ಷಣ ಶಾಲೆಯಲ್ಲಿ ಚಲನಚಿತ್ರ ಛಾಯಾಗ್ರಹಣ ಹಾಗೂ ಶಬ್ದಗ್ರಹಣ ವಿಭಾಗದ ಟಿ.ದ್ವಾರಕನಾಥ್‌ರೊಂದಿಗೆ ಚಿತ್ರನಿರ್ಮಾಣ-ನಿರ್ದೇಶನಗಳಲ್ಲಿ ಹಾಗೂ ಶೈಲಶ್ರೀ ಲಾಂಛನದಲ್ಲಿ ಹಂಚಿಕಾ ಕಚೇರಿ ತೆರೆದು ವಿತರಣ ಕ್ಷೇತ್ರದಲ್ಲಿಯೂ ದುಡಿದರು.

ಹೈದರಾಬಾದ್ ಕರ್ನಾಟಕದ ಚಿತ್ರ ವಿತರಣೆ ಪಡೆಯುತ್ತಿದ್ದ ರವಿಲಾಲ್ ಎಲ್.ಷಾ ಅವರು ತಮ್ಮ ಜಗತ್ ಪಿಕ್ಚರ್ಸ್ ಹಂಚಿಕಾ ಸಂಸ್ಥೆಯನ್ನು ಬೆಂಗಳೂರು ಗಾಂಧಿನಗರ ಹಾಗೂ ಸಿಕಂದರಾಬಾದ್‌ಗಳಲ್ಲಿ ತೆರೆದಿದ್ದು ಆ ಭಾಗಗಳಲ್ಲಿ ಹಂಚಿಕೆಯನ್ನು ಸಮರ್ಪಕವಾಗಿ ನಡೆಸಿ ಹೆಸರಾದರು. ಕನ್ನಡೇತರ ಚಿತ್ರಗಳ ಹಂಚಿಕೆ ಮಾಡುತ್ತಿದ್ದ ಶ್ರೀಕಾಂತ್ ಅಂಡ್ ಶ್ರೀಕಾಂತ್ ಎಂಟರ್‌ಪ್ರೈಸಸ್‌ನ ಶ್ರೀಕಾಂತ್ ನಹತಾ ಮತ್ತು ಶ್ರೀಕಾಂತ್ ಪಟೇಲ್ ಅವರು ಕನ್ನಡ ಚಿತ್ರಗಳನ್ನು ನಿರ್ಮಿಸಿ ವಿತರಣೆ ಮಾಡಿದರು.

ಒಂದೊಮ್ಮೆ ಬೆಂಗಳೂರಿನ ಮೇಯರ್ ಆಗಿದ್ದ ಕೆ.ಎಂ.ನಾಗಣ್ಣನವರು ಚಿತ್ರ ನಿರ್ಮಾಪಕರು, ಚಿತ್ರ ಪ್ರದರ್ಶಕರು ಹಾಗೂ ಚಿತ್ರ ವಿತರಕರೂ ಆಗಿದ್ದರು. ನಂದಿ ಪಿಕ್ಚರ್ಸ್ ಲಾಂಛನದಲ್ಲಿ ಚಿತ್ರಗಳನ್ನು ತಯಾರಿಸಿ ವಿತರಣೆ ಮಾಡಿದರು. ನಗರದ ಪ್ರತಿಷ್ಠಿತ ಚಿತ್ರಮಂದಿರಗಳ ಖ್ಯಾತಿಯ ಕೆ.ಸಿ.ದೇಸಾಯ್ ಅವರು ಹಿಂದಿ ಚಿತ್ರಗಳ ಪ್ರಮುಖ ಹಂಚಿಕೆದಾರರು. ಕನ್ನಡ ಚಿತ್ರಗಳ ವಿತರಣೆಯನ್ನೂ ಮಾಡಿದರು. ಅವರ ಸಂಸ್ಥೆಯ ಹೆಸರು ಅಮೀ ಫಿಲಂಸ್.

ಕನ್ನಡ ವಾಕ್ಚಿತ್ರದ ಆರಂಭ ಕಾಲದಿಂದ ಉದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡ ಜಿ.ಎನ್.ವಿಶ್ವನಾಥಶೆಟ್ಟರು ಹಲವು ಚಿತ್ರಗಳನ್ನು ನಿರ್ಮಿಸಿದುದೇ ಅಲ್ಲದೆ, ಕಾವೇರಿ ಫಿಲಂಸ್ ಪ್ರೈ. ಲಿ., ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಚಿತ್ರ ತಯಾರಿಕೆ-ಹಂಚಿಕೆ ಎರಡನ್ನೂ ನಿರ್ವಹಿಸಿದರು.

ನಿರ್ಮಾಪಕ, ನಿರ್ದೇಶಕ ಎ.ಎಂ.ಸಮೀಉಲ್ಲಾ ಅವರು ಹಲವು ಚಿತ್ರಗಳನ್ನು ನಿರ್ಮಿಸಿದ್ದಲ್ಲದೆ, ಬಾವಾ ಮೂವೀಸ್ ಮೂಲಕ ವಿತರಣೆ ಮಾಡಿದರು. ನಿರ್ಮಾಪಕ-ನಿರ್ದೇಶಕ-ಛಾಯಾಗ್ರಾಹಕ ಕೆ.ಜಾನಕೀರಾಂ ಅವರೂ ಸಮೀ ಉಲ್ಲಾ ಅವರೊಂದಿಗಿದ್ದರು. ವಿ.ಎಸ್.ಎನ್. ಪಿಕ್ಚರ್ಸ್‌ನ ವಿ.ಸ್ವಾಮಿನಾಥನ್ ಅವರು ಹಂಚಿಕೆದಾರರೂ ಹೌದು. ಚಿತ್ರ ನಿರ್ಮಾಪಕರೂ ಕೂಡ. ಅಂತೆಯೇ ಜಿ.ಕೆ.ಕೆ.ಪಿಕ್ಚರ್ಸ್ ಹಾಗೂ ಬೀನಾ ಫಿಲಂಸ್‌ಗಳ ಜಿ.ಕೆ.ಕುಟ್ಟಿ ವಿತರಕರಾಗಿರುವಂತೆಯೇ ಕನ್ನಡ ಚಿತ್ರ ನಿರ್ಮಾಪಕರೂ ಆಗಿದ್ದಾರೆ.

ಪಾಲ್ ಎಸ್.ಚಂದಾನಿ ಅವರು ಅನೇಕ ಚಿತ್ರ ನಿರ್ಮಾಪಕರಿಗೆ ಚಿತ್ರೀಕರಣ ಸಂದರ್ಭದಲ್ಲಿ ಆರ್ಥಿಕ ಸಹಕಾರ ನೀಡಿ, ಆ ಚಿತ್ರಗಳ ವಿತರಣೆ ನಡೆಸಿ, ಪ್ರತಿಷ್ಠಿತ ಹಂಚಿಕೆದಾರರಲ್ಲಿ ಒಬ್ಬರೆನಿಸಿದ್ದಾರೆ. ಪಾಲ್ ಎಂಟರ್ ಪ್ರೈಸಸ್ ಇವರ ಸಂಸ್ಥೆ. ಅಪೂರ್ವ ಚಿತ್ರಗಳಿಗೆ ಹೆಸರಾದ ನಿರ್ಮಾಪಕ ರಾಮು ಅವರು ರಾಮು ಎಂಟರ್ ಪ್ರೈಸಸ್ ಸಂಸ್ಥೆಯ ಮೂಲಕ ತಮ್ಮ ಚಿತ್ರಗಳೇ ಅಲ್ಲದೆ ಇತರರ ನಿರ್ಮಾಣದ ಚಿತ್ರಗಳ ವಿತರಣೆಯನ್ನೂ ನಡೆಸಿದ್ದಾರೆ. ವಿ.ಪಿ.ಸಿ.ಯ ಕೆ.ವಿ.ಗುಪ್ತ ಅವರು ಗುರುಜ್ಯೋತಿ ಕಂಬೈನ್ಸ್ ಹಾಗೂ ನಂದಿನಿ ಫಿಲಂಸ್ ಮೂಲಕ ಹಲವು ಕನ್ನಡ ಚಿತ್ರಗಳ ಹಂಚಿಕ ಮಾಡಿದರು. ಚಿತ್ರ ನಿರ್ಮಾಪಕ ಚಿದಂಬರ ಶೆಟ್ಟಿಯವರೂ ಚಿತ್ರ ಹಂಚಿಕಾ ಸಂಸ್ಥೆಯನ್ನು ಹೊಂದಿದ್ದರು.

ಸಯ್ಯದ್ ಹುಸೇನ್ (ಮೈಸೂರ್ ಫಿಲಂಸ್), ಡಾ।ವಿ.ಎಂ.ಪಟೇಲ್ (ಸೆಲೆಕ್ಟ್ ಪಿಕ್ಚರ್ಸ್ ಸರ್ಕ್ಯೂಟ್), ಭೀಮಪ್ಪ ನಾಯಕ್ (ಏಶಿಯಾಟಿಕ್ ಫಿಲಂಸ್), ನಾಗಮಯ್ಯ (ಶ್ರೀ ರಾಘವೇಂದ್ರ ಪಿಕ್ಚರ್ಸ್), ಪ್ರಸಾದ್ ಮತ್ತು ಶ್ರೀನಿವಾಸ್ (ಚಿತ್ರಶ್ರೀ ಪಿಕ್ಚರ್ಸ್), ರಾಜಗೋಪಾಲ ಚೆಟ್ಟಿಯಾರ್ (ದೇವಿ ಫಿಲಂಸ್), ಬಿ.ಎಸ್.ಸೂರಪ್ಪ (ಬೃಂದಾವನ್ ಫಿಲಂಸ್), ಎಂ.ಭಕ್ತವತ್ಸಲಂ (ಶಾರದಾ ಮೂವೀಸ್), ಸುರೇಂದ್ರನಾಥ್ ಬ್ಯಾನರ್ಜಿ (ವಾಣಿ ಫಿಲಂ ಡಿಸ್ಟ್ರಿಬ್ಯೂಟರ್ಸ್), ಸುಬ್ಬರಾಜು (ರಜಸ್ಸು ಕಂಬೈನ್ಸ್), ಪ್ರೇಂಕುಮಾರ್ (ಭಾರತ್ ಫಿಲಂಸ್), ಡಿ.ಆರ್. ಎಂ.ಕಂಬೈನ್ಸ್, ಪಿ.ಎಲ್.ವಿ.ಶೆಟ್ಟಿ (ಕಲ್ಪನ ಚಿತ್ರ), ತಾರಕಾರಾಮ ಪಿಕ್ಚರ್ಸ್, ಬೆಂಗಳೂರು ಫಿಲಂಸ್, ಜನರಲ್ ಫಿಲಂ ಡಿಸ್ಟ್ರಿಬ್ಯೂಟರ್ಸ್, ಈಸ್ಟ್ ಇಂಡಿಯಾ ಫಿಲಂಸ್, ಎನ್.ಜಿ.ಅಹ್ಮದ್, ಜೆನಿತ್ ಮೂವೀಸ್, ಶಿವಸ್ವಾಮಿ



(ಚಿತ್ರ ೧) ತೆರೆಯ ಮೇಲೆ ಶತದಿನೋತ್ಸವ ಆಚರಿಸುವ ಸಿನಿಮಾ ಮಂದಿಗೆ ಮೈದಾನದಲ್ಲಿ ಶತಕ ಬಾರಿಸುವ ಉತ್ಸಾಹ. ಬೆಂಗಳೂರಿನ ಮೇಯರ್ ಅನಂತಕೃಷ್ಣ ಅವರ ಉಪಸ್ಥಿತಿಯಲ್ಲಿ ಬೆಂಗಳೂರಿನಲ್ಲಿ ನಡೆದ ಚಿತ್ರ ನಿರ್ಮಾಪಕರು, ಪ್ರದರ್ಶಕರು, ವಿತರಕರು, ಕಲಾವಿದರು ಮತ್ತು ಚಲನಚಿತ್ರ ಪತ್ರಕರ್ತರು ಕೂಡಿ ಆಡಿದ ಕ್ರಿಕೆಟ್ ಪಂದ್ಯದ ಒಂದು ಸ್ಮೃತಿ ಚಿತ್ರ. ನಿರ್ಮಾಪಕ ಕರಿಬಸವಯ್ಯ, ಪ್ರದರ್ಶಕ-ಹಂಚಿಕೆದಾರ ಕೆ.ಸಿ.ದೇಸಾಯಿ, ಎಂ.ಭಕ್ತವತ್ಸಲ, ಚಂದ್ರವದನ್ ದೇಸಾಯಿ, ಪತ್ರಕರ್ತರಾದ ವಿ.ಎನ್.ಸುಬ್ಬರಾವ್, ರಾಮಕೃಷ್ಣಯ್ಯ, ಶ್ರೀಕೃಪಾ ಮತ್ತು ಕೆ.ಎಸ್.ನಾರಾಯಣಸ್ವಾಮಿ ಮತ್ತಿತರರನ್ನು ಕಾಣಬಹುದು.

ಅಯ್ಯರ್, ರಾಜಶಿವ ಪಿಕ್ಚರ್ಸ್, ನಾರಾಯಣ ರೆಡ್ಡಿ (ನವಯುಗ ಪಿಕ್ಚರ್ಸ್), ಕೆ.ಆರ್.ಪ್ರಭು (ಕ.ಆರ್.ಪಿ.ಫಿಲಂಸ್), ಕೆ.ಎಸ್.ನಂದಕುಮಾರ್, ಕೆ.ಎನ್.ನಾಗೇಶ್ ಕುಮಾರ್ ಹೀಗೆ ಅನೇಕ ಮಂದಿ ಕರ್ನಾಟಕದಲ್ಲಿ ಚಿತ್ರ ಹಂಚಿಕಾ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆ. ಕೆಲವರು ಕನ್ನಡ ಚಿತ್ರಗಳ ನಿರ್ಮಾಣದಲ್ಲಿ ಆರ್ಥಿಕ ಬೆಂಬಲ ನೀಡಿದ್ದರೆ ಇನ್ನು ಕೆಲವರು ಸ್ವತಃ ಕನ್ನಡ ಚಿತ್ರಗಳನ್ನು ತಯಾರಿಸಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ನಟ ರಾಜಕುಮಾರ್ ಅವರು ಅಭಿನಯಿಸಿದ ಚಿತ್ರಗಳ ವಿತರಣೆಯನ್ನು ಮೊದಲು ಬೇರ ಬೇರ ವಿತರಕರು ಹಂಚಿಕೆಗೆ ಪಡೆಯುತ್ತಿದ್ದರು. ಆ ಸಂದರ್ಭದಲ್ಲಿ ವ್ಯವಹಾರದಲ್ಲಿ ಒಂದು ಬಗೆಯ ಸ್ಪರ್ಧೆಯೇ ಏರ್ಪಡುತ್ತಿತ್ತು. ಅವರು ಅಭಿನಯಿಸಿದ ಚಿತ್ರಗಳನ್ನು ಬೇರೆ ಬೇರೆ ನಿರ್ಮಾಪಕರು ತಯಾರಿಸುತ್ತಿದ್ದರು. ಅದೆಲ್ಲವೂ ತಪ್ಪಿ ರಾಜಕುಮಾರ್ ಮತ್ತು ಅವರ ಮಕ್ಕಳು ಅಭಿನಯಿಸಿದ ಚಿತ್ರಗಳ ಹಂಚಿಕೆಗೆಂದೇ ಮೊದಲು ವಜ್ರೇಶ್ವರಿ ಕಂಬೈನ್ಸ್ ಸ್ಥಾಪನೆಗೊಂಡಿತು. ಆರಂಭದಲ್ಲಿ ರಾಜಕುಮಾರ್ ಅವರ ಭಾವಮೈದುನರಾದ ಎಸ್.ಎ.ಚಿನ್ನೇಗೌಡ, ಎಸ್.ಎ.ಶ್ರೀನಿವಾಸ್, ಎಸ್.ಎ.ಗೋವಿಂದರಾಜ್ ಈ ಹಂಚಿಕಾ ಸಂಸ್ಥೆಯ ಚುಕ್ಕಾಣಿ ಹಿಡಿದಿದ್ದರು. ನಂತರದಲ್ಲಿ ಎಸ್.ಎ.ಚಿನ್ನೇಗೌಡ ಮತ್ತು ಎಸ್.ಎ.ಶ್ರೀನಿವಾಸ್ ಅವರು ಸರ್ವೇಶ್ವರಿ ಕಂಬೈನ್ಸ್ ಸ್ಥಾಪಿಸಿಕೊಂಡರು. ಪ್ರತ್ಯೇಕ ಚಿತ್ರ ನಿರ್ಮಾಣ ಸಂಸ್ಥೆಯನ್ನೂ ಕೂಡ. ಎಸ್.ಎ.ಗೋವಿಂದರಾಜ್ ಅವರು ನಿರುಪಮಾ ಕಂಬೈನ್ಸ್ ಮೂಲಕ ಚಿತ್ರ ನಿರ್ಮಾಣ ಹಾಗೂ ಹಂಚಿಕೆ ಆರಂಭಿಸಿದರು.

ಪಾರ್ವತಮ್ಮ ರಾಜಕುಮಾರ್ ಅವರು ನಿರ್ಮಾಣ ಹಾಗೂ ಹಂಚಿಕಾ ವ್ಯವಸ್ಥೆಯ ಸೂತ್ರಗಳನ್ನು ತಮ್ಮ ಕೈಗೆ ತೆಗೆದು ಕೊಂಡರು. ಪುನೀತ್ ರಾಜಕುಮಾರ್ ತಾಯಿಗೆ ನೆರವಾದರು. ರಾಘವೇಂದ್ರ ರಾಜಕುಮಾರ್ ಕೂಡ. ಆರಂಭದಲ್ಲಿ ರಾಜಕುಮಾರ್ ಹಾಗೂ ಅವರ ಮಕ್ಕಳು ಅಭಿನಯಿಸಿದ ಚಿತ್ರಗಳೆಲ್ಲವನ್ನೂ ವಜ್ರೇಶ್ವರಿ ಸಂಸ್ಥೆಯ ಮೂಲಕವೇ ವಿತರಣೆ ಮಾಡಲಾಗುತ್ತಿತ್ತು. ಕ್ರಮೇಣ ಶಿವರಾಜ್ ಕುಮಾರ್ ಅವರು ಇತರೆ ನಿರ್ಮಾಪಕರ ಚಿತ್ರಗಳಲ್ಲೂ ಅಭಿನಯಿಸಿತೊಡಗಿದಾಗ ಆ ಚಿತ್ರಗಳ ವಿತರಕರು ಬೇರೆಯವರಾದರು. ರಾಜಕುಮಾರ್ ಅಭಿನಯದ ಇತ್ತೀಚಿನ ಚಿತ್ರ ಕೂಡ ವಜ್ರೇಶ್ವರಿ ಸಂಸ್ಥೆಯ ಮೂಲಕವೇ ಬಿಡುಗಡೆಯಾಗಿತ್ತು. ಈ ಸಂಸ್ಥೆ ಹುಬ್ಬಳ್ಳಿಯಲ್ಲಿ ಶಾಖೆಯನ್ನು ಹೊಂದಿದೆ. ಅದೇ ಚಂದ್ರಿಕಾ ಮೂವೀಸ್.

ಇದು ಕನ್ನಡ ಚಿತ್ರರಂಗದ ಮಾರುಕಟ್ಟೆಯ ಕ್ಷೇತ್ರದಲ್ಲಿ ಹಂಚಿಕೆದಾರರ ಪಾತ್ರವನ್ನು ಕುರಿತ ಸಂಕ್ಷಿಪ್ತ ನೋಟ ಮಾತ್ರ. ಈಚೆಗೆ ಮಾರಾಟವೇ ಪ್ರಮುಖವಾಗಿ, ಹಂಚಿಕಾ ವ್ಯವಸ್ಥೆಯೇ ಕುಸಿದಿದೆ. ಹಲವು ಹಂಚಿಕಾ ಸಂಸ್ಥೆಗಳು ಹಿಂದೆ ಪ್ರತಿಷ್ಠಿತವೆನಿಸಿದ್ದು ಈಗ ಅಸ್ತಿತ್ವದಲ್ಲಿಯೇ ಇಲ್ಲವಾಗಿದೆ. ಕನ್ನಡ ಚಿತ್ರಗಳನ್ನು ಮಾರಾಟಕ್ಕೆ ಕೊಂಡವರೇ ನೇರವಾಗಿ ಅಥವಾ ಯಾವುದಾದರೂ ಹಂಚಿಕಾ ಸಂಸ್ಥೆಗಳ ಮೂಲಕ ವಿತರಣೆ ಮಾಡುತ್ತಿದ್ದಾರೆ. ಹಾಗಾಗಿ ಪ್ರಸ್ತುತ ಅಲ್ಲೊಂದು ಇಲ್ಲೊಂದು ಎಂಬಂತೆ ಹಿಂದಿನ ಹಂಚಿಕಾ ಸಂಸ್ಥೆಗಳು ಉಳಿದಿವೆ.

ಕರ್ನಾಟಕದಲ್ಲಿ ಸುಮಾರು ೧೨೦೦ ಚಿತ್ರಮಂದಿರಗಳಿವೆ. ಇಲ್ಲಿ ಹಿಂದಿ, ತಮಿಳು, ತೆಲುಗು, ಕನ್ನಡ ಹಾಗೂ ಇಂಗ್ಲಿಷ್ ಚಿತ್ರಗಳು ಪ್ರದರ್ಶಿತವಾಗುತ್ತವೆ. ಮಲೆಯಾಳಂ ಚಿತ್ರಗಳೂ ಪ್ರದರ್ಶಿತವಾಗುತ್ತವೆ. ಹಾಗೆಯೇ ನೆರೆಯ ತಮಿಳುನಾಡಿನಲ್ಲಿ ಸುಮಾರು ೨೬೦೦ ಚಿತ್ರಮಂದಿರಗಳಿವೆ. ಕೆಲವೊಂದೆಡೆ ಇಂಗ್ಲಿಷ್ ಚಿತ್ರಗಳು ಪ್ರದರ್ಶಿತವಾದರೂ ಎಲ್ಲೆಡೆಯಲ್ಲಿಯೂ ತಮಿಳು ಚಿತ್ರಗಳೇ ಪ್ರದರ್ಶಿತವಾಗುತ್ತವೆ. ತಮಿಳು ಬಿಟ್ಟು ಬೇರೆ ಚಿತ್ರಗಳ ಪ್ರದರ್ಶನಕ್ಕೆ ಅವಕಾಶವಿಲ್ಲದಿರುವುದರಿಂದ ಅಲ್ಲಿನ ಚಿತ್ರಮಂದಿರಗಳವರು 'ಎ' ಕೇಂದ್ರಗಳಲ್ಲಿ ವಿಫಲವೆನಿಸಿದ ಚಿತ್ರಗಳನ್ನೂ ಪ್ರದರ್ಶಿಸಲೇಬೇಕಾಗುವುದು ಅನಿವಾರ್ಯ. ಆದರೆ ಕರ್ನಾಟಕದಲ್ಲಿ 'ಎ' ಕೇಂದ್ರಗಳಲ್ಲಿ ವಿಫಲವಾದ ಕನ್ನಡ ಚಿತ್ರಗಳಿಗೆ ಆ ಭಾಗ್ಯ ದೊರೆಯುವುದೇ ಇಲ್ಲ. ಉಳಿದ ಕೇಂದ್ರಗಳಲ್ಲಿನ ಚಿತ್ರಮಂದಿರಗಳವರು ವಿಫಲ ಕನ್ನಡ ಚಿತ್ರಗಳನ್ನು ಪ್ರದರ್ಶಿಸುವ ಬದಲು ಇತರೆ ಭಾಷೆಯ ಚಿತ್ರಗಳಿಗೆ ಅವಕಾಶ ನೀಡುತ್ತಾರೆ. ತಮಿಳುನಾಡಿನ ಎಲ್ಲಾ ಚಿತ್ರಮಂದಿರಗಳಲ್ಲಿಯೂ ಯಶಸ್ವಿ ಇರಲಿ, ವಿಫಲವೇ ಇರಲಿ, ತಮಿಳು ಭಾಷೆಯ ಚಿತ್ರ ಪ್ರದರ್ಶಿತವಾಗುವ ಅವಕಾಶವಿರುವುದರಿಂದ ವಿಫಲವೆನ್ನಿಸಿದ ಚಿತ್ರವೂ ಸಾಕಷ್ಟು ಗಳಿಸಿರುತ್ತದೆ. ಕನ್ನಡದಲ್ಲಿ ಮೊದಲ ಹಂತದ ಬಿಡುಗಡೆಯಲ್ಲಿಯೇ ಚಿತ್ರ ವಿಫಲವಾದರೆ, ನಂತರ ಯಾವ ಚಿತ್ರಮಂದಿರವೂ ಸಿಕ್ಕುವುದಿಲ್ಲ. ಸುಮಾರು ಎನಿಸಿದ ಕನ್ನಡ ಚಿತ್ರವೇ ಕರ್ನಾಟಕದಲ್ಲಿನ ೧೨೦೦ ಚಿತ್ರಮಂದಿರಗಳಲ್ಲಿ ಕೇವಲ ೪೦೦ ಚಿತ್ರಮಂದಿರಗಳಲ್ಲೂ ಪ್ರದರ್ಶನ ಕಂಡಿರುವುದಿಲ್ಲ. ಹೀಗಾಗಿ 'ಎ' ಕೇಂದ್ರದಲ್ಲಿ ವಿಫಲವಾದ ಚಿತ್ರ ಮತ್ತೆ ಯಾವುದೇ ಚಿತ್ರಮಂದಿರದಲ್ಲೂ ಪ್ರದರ್ಶನ ಕಾಣುವ ಸಂಭವ ಇರುವುದಿಲ್ಲ. ಕನ್ನಡ ಚಿತ್ರಗಳು ನಾಡಿನ ೧೨೦೦ ಚಿತ್ರಮಂದಿರಗಳಲ್ಲಿಯೂ ಯಥಾನುಶಕ್ತಿ ಪ್ರದರ್ಶಿತವಾದಲ್ಲಿ ಕನ್ನಡ ಚಿತ್ರಗಳು ನಷ್ಟವಾಗುವುದು ತಪ್ಪುತ್ತದೆ. ಆದರೆ ಆ ಅವಕಾಶವೇ ಕನ್ನಡನಾಡಿನಲ್ಲಿ ಕನ್ನಡ ಚಿತ್ರಗಳಿಗೆ ಇಲ್ಲ. ಆರಂಭದ ಸೋಲೇ ಕಡೇ ತನಕ ಎಂಬಂಥ ಪರಿಸ್ಥಿತಿ ಕನ್ನಡ ಚಿತ್ರಗಳದ್ದು. ಇದೂ ಕನ್ನಡ ಚಿತ್ರಗಳ ವಿತರಣಾ ವ್ಯವಸ್ಥೆಯ ಮೇಲೆ ಭಾರಿ ಪರಿಣಾಮ ಬೀರಿದೆ.

(ಅಗತ್ಯ ಮಾಹಿತಿಗಳ ಕೊರತೆಯಿಂದಾಗಿ ಎಲ್ಲ ಹಂಚಿಕಾ ಸಂಸ್ಥೆಗಳ ಬಗ್ಗೆಯೂ ಇಲ್ಲಿ ಪ್ರಸ್ತಾಪಿಸಲು ಸಾಧ್ಯವಾಗಿಲ್ಲ. - ಸಂ)

೦




# ಕಲೋದ್ಯಮದಲ್ಲಿ ಸಂಘಶಕ್ತಿ

ಕನ್ನಡ ಚಲನಚಿತ್ರರಂಗ ತನ್ನ ಪ್ರಾರಂಭದ ಕಾಲದಿಂದಲೂ ಒಂದಲ್ಲ ಒಂದು ಸಮಸ್ಯೆಗಳನ್ನು ಎದುರಿಸುತ್ತಲೇ ಬೆಳೆದು ಬಂದಿದೆ. ಆರಂಭದ ದಿನಗಳಲ್ಲಿ ವರ್ಷಕ್ಕೆ ಒಂದೋ-ಎರಡೋ ಕನ್ನಡ ಚಿತ್ರಗಳು ತಯಾರಾಗುತ್ತಿದ್ದವು. ದಶಕ ಕಳೆದ ಮೇಲೆ ವರ್ಷದಲ್ಲಿ ತಯಾರಾಗುತ್ತಿದ್ದ ಚಿತ್ರಗಳ ಸಂಖ್ಯೆ ಸ್ವಲ್ಪಮಟ್ಟಿಗೆ ಹೆಚ್ಚಿತು. ನೆರಯ ಮದರಾಸಿನಲ್ಲಿ ಕನ್ನಡ ಚಲನಚಿತ್ರರಂಗ ನೆಲೆಯೂರಿತು. ಕಾಲು ಶತಮಾನದ ನಂತರವೇ ಕನ್ನಡನಾಡಿನ ಸರ್ಕಾರ ಸಹಾಯಧನ-ಪ್ರಶಸ್ತಿ ಮತ್ತಿತರ ಪ್ರೋತ್ಸಾಹಕಗಳನ್ನು ಜಾರಿಗೆ ತಂದ ಮೇಲೆ ಕನ್ನಡ ಭಾಷೆಯಲ್ಲಿ ಚಲನಚಿತ್ರಗಳ ತಯಾರಿಕೆ ಸಂಖ್ಯೆಯಲ್ಲಿ ಹೆಚ್ಚಿತು. ತಯಾರಾಗುತ್ತಿದ್ದ ಚಿತ್ರಗಳ ಸಂಖ್ಯೆ ಹೆಚ್ಚಾದಂತೆಯೇ ಹೊಸ ಹೊಸ ಸಮಸ್ಯೆಗಳೂ ಎದುರಾಗತೊಡಗಿದವು.

ಕನ್ನಡ ಚಲನಚಿತ್ರಗಳಿಗೆ ಸೀಮಿತ ಮಾರುಕಟ್ಟೆಯಿಂದಾಗಿ ಸೀಮಿತ ಬಜೆಟ್‌ನಲ್ಲಿಯೇ ಚಿತ್ರನಿರ್ಮಾಣ ಸಾಗಬೇಕಾಗಿತ್ತು. ಕರ್ನಾಟಕದಲ್ಲಿಯೇ ಹಲವು ಭಾಗಗಳಲ್ಲಿ ಕನ್ನಡ ಚಲನಚಿತ್ರಗಳು ಪ್ರದರ್ಶನವಾಗುವುದಿಲ್ಲ. ಕನ್ನಡ ಚಿತ್ರಗಳಿಗೆ ತಮಿಳು, ತೆಲುಗು, ಹಿಂದಿ ಭಾಷೆಗಳೇ ಅಲ್ಲದೆ ಕೆಲವೊಮ್ಮೆ ಮಲೆಯಾಳಂ ಚಿತ್ರಗಳ ಪೈಪೋಟಿ. ನಿರ್ಮಾಣ ದೃಷ್ಟಿಯಲ್ಲಿ ಹಿಂದಿ, ತೆಲುಗು ಹಾಗೂ ತಮಿಳು ಚಿತ್ರಗಳು ಶ್ರೀಮಂತವಾಗಿದ್ದರೆ, ಮಲೆಯಾಳಂ ಚಿತ್ರಗಳು ಪ್ರಚೋದಕವಾಗಿರುತ್ತಿದ್ದು ಅವುಗಳನ್ನು ಎದುರಿಸಿ ಮಾರುಕಟ್ಟೆಯಲ್ಲಿ ನಿಲ್ಲಬೇಕಾದ ಪರಿಸ್ಥಿತಿ ಕನ್ನಡ ಚಿತ್ರಗಳದ್ದು. ಈ ಸ್ಪರ್ಧೆ ಕನ್ನಡದ ಮಟ್ಟಿಗಂತೂ ಆರೋಗ್ಯಕರವಾದುದೇನಾಗಿರಲಿಲ್ಲ.

## ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘ

ಕನ್ನಡ ಚಲನಚಿತ್ರಗಳನ್ನು ಪೆಡಂಭೂತವಾಗಿ ಕಾಡಲಾರಂಭಿಸಿದ್ದು ಚಿತ್ರಮಂದಿರಗಳ ಸಮಸ್ಯೆ. ನಮ್ಮಲ್ಲಿನ ಚಿತ್ರಪ್ರದರ್ಶಕರು ಮೊದಲು ಮಣೆ ಹಾಕುತ್ತಿದ್ದುದು ಅನ್ಯಭಾಷಾ ಚಿತ್ರಗಳಿಗೇ. ಕನ್ನಡನಾಡಿನ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳಿಗೇ ಪ್ರಾಧಾನ್ಯವಿರಬೇಕೆಂಬ ಪ್ರತಿಭಟನೆ ಆರಂಭವಾದಾಗ ಚಲನಚಿತ್ರ ಮಂದಿರಗಳವರು ಬಾಡಿಗೆ ಪದ್ಧತಿ ಮುಂದಿಟ್ಟರು. ಚಿತ್ರಮಂದಿರಗಳ ವಾರದ ಬಾಡಿಗೆ ದುಬಾರಿಯಾಗುತ್ತ ಬಂದಿತು. ಇದು ಕನ್ನಡ ಚಿತ್ರನಿರ್ಮಾಪಕನ ಪಾಲಿಗೆ ನುಂಗಲಾರದ ತುತ್ತಾಯಿತು.

ಹಾಗೆಯೇ ಚಲನಚಿತ್ರ ತಯಾರಿಕೆಯಲ್ಲಿ ಕೆಲಸ ಮಾಡುವ ಕಾರ್ಮಿಕರು, ವಾಹನ ಚಾಲಕರು, ಕೆಲ ವರ್ಗದ ತಂತ್ರಜ್ಞರು ಸಂಘಟಿತರಾದಾಗ ಅವರ ಸಂಭಾವನೆಯು ಹೆಚ್ಚಿ, ನಿರ್ಮಾಪಕರು ಕಂಗಾಲಾಗುವಂಥ ಪರಿಸ್ಥಿತಿ ಉಂಟಾಯಿತು. ಹೆಚ್ಚಿದ ನಿರ್ಮಾಣ ವೆಚ್ಚ, ಚಿತ್ರಮಂದಿರಗಳ ದುಬಾರಿ ಬಾಡಿಗೆ ಹೀಗೆ ಪಟಿನ ಮೇಲಿನ ಪಟಾಗಿ ಸಮಸ್ಯೆಗಳು ಎದುರಾದವು. ತೆರಿಗೆಗಳು ಹೆಚ್ಚಿದವು. ಇಷ್ಟೆಲ್ಲ ಸಮಸ್ಯೆಗಳು ಕಾಡುತ್ತಿದ್ದರೂ ಕನ್ನಡ ಚಲನಚಿತ್ರ ನಿರ್ಮಾಪಕರಲ್ಲಿ ಸಂಘಟನೆ ಮೂಡಲೇ ಇಲ್ಲ, ಎಪ್ಪತ್ತರ ದಶಕದಲ್ಲಿ ಕನ್ನಡ ಚಲನಚಿತ್ರ ನಿರ್ಮಾಪಕರನ್ನು ಸಂಘಟಿಸುವ ಕೆಲವೆರಡು ಪ್ರಯತ್ನಗಳು ನಡೆದವಾದರೂ ಫಲಪ್ರದವಾಗಿರಲಿಲ್ಲ.

ಅಲ್ಲದೆ ಆಗಿನ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿದ್ದವರು ಕೇವಲ ಹಂಚಿಕೆದಾರರು ಹಾಗೂ ಪ್ರದರ್ಶಕರು. ನಿರ್ಮಾಪಕರಿಗೆ ಅವರದೇ ಆದ ಅಸ್ತಿತ್ವವೇ ಇರಲಿಲ್ಲ. ಇಂತಹ ಸಮಯದಲ್ಲಿ ಕನ್ನಡ ಚಲನಚಿತ್ರ ನಿರ್ಮಾಪಕರು ಕನ್ನಡ ಚಿತ್ರೋದ್ಯಮದ ಸಮಸ್ಯೆಗಳನ್ನು ಎದುರಿಸಲು ಮತ್ತೊಮ್ಮೆ ಸಂಘಟನೆಯ ಪ್ರಯತ್ನ ಮಾಡಿದರು. ಕೊನೆಗೂ ೧೯೮೨ರ ಏಪ್ರಿಲ್-ಮೇ ತಿಂಗಳಲ್ಲಿ ಕನ್ನಡ ಚಲನಚಿತ್ರ ನಿರ್ಮಾಪಕರು ತಮ್ಮದೇ ಆದ ಸಂಘವೊಂದನ್ನು ರಚಿಸಿಕೊಳ್ಳುವ ನಿರ್ಧಾರಕ್ಕೆ ಬಂದರು. ೧೯೮೨ರ ಮೇ ೧೯ರಂದು ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘ ನೋಂದಾವಣೆಯಾಯಿತು. ಹೆಚ್.ಎಂ.ಕೆ.ಮೂರ್ತಿ ಅಧ್ಯಕ್ಷರಾಗಿ, ಸಿ.ಜಯರಾಮ್ ಉಪಾಧ್ಯಕ್ಷರಾಗಿ, ಟಿ.ಜಿ.ಆರಾಧ್ಯ ಪ್ರಧಾನ ಕಾರ್ಯದರ್ಶಿಯಾಗಿ, ಸಿ.ನಾರಾಯಣ ಜಂಟಿ ಕಾರ್ಯದರ್ಶಿಯಾಗಿ, ಚಂದೂಲಾಲ್ ಜೈನ್ ಖಜಾಂಚಿಯಾಗಿ ನೋಂದಾವಣೆಗೊಂಡ ಈ ಸಂಘದ ಕಾರ್ಯಕಾರಿ ಸಮಿತಿಯಲ್ಲಿ ಆರ್.ಲಕ್ಷ್ಮಣ್, ಜಿ.ಎನ್.ಲಕ್ಷ್ಮೀಪತಿ, ಟಿ.ಎಸ್.ನರಸಿಂಹನ್, ಎಂ.ಎಸ್.ಎಸ್.ಮೂರ್ತಿ, ಕೆ.ಜಾನಕಿರಾಮ್, ಎಸ್.ಡಿ.ಅಂಕಲಗಿ, ಎಸ್.ನಾರಾಯಣಸ್ವಾಮಿ ಹಾಗೂ ಪಿ.ಆರ್.ರಾಮದಾಸನಾಯ್ಡು ಸದಸ್ಯರಾಗಿದ್ದರು.

ಅದೇ ದಿನ ಬೆಂಗಳೂರು ಚೌಡಯ್ಯ ಸ್ಮಾರಕ ಭವನದಲ್ಲಿ ಆಗಿನ ಮುಖ್ಯಮಂತ್ರಿ ಆರ್.ಗುಂಡೂರಾವ್ ಅವರಿಂದ ಸಂಘದ ಉದ್ಘಾಟನೆ. ಅವರು ತಮ್ಮ ಭಾಷಣದಲ್ಲಿ ಪ್ರಸ್ತಾಪ ಮಾಡಿದ್ದು ಕರ್ನಾಟಕದಲ್ಲಿನ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಆದ್ಯತೆ ಕುರಿತು, ಪ್ರದರ್ಶಕರಿಗೆ ಅವರು ಹಾಕಿದ ಪ್ರಶ್ನೆ - ''ನಾವೇನೂ ಮುಂಬಯಿಯಲ್ಲಿ ಕನ್ನಡ ಚಿತ್ರ ಹಾಕಿ ಅನ್ನುತ್ತಿಲ್ಲ, ಕಲ್ಕತ್ತೆಯಲ್ಲಿ ಹಾಕಿ ಅಂತ ಕೇಳುತ್ತಿಲ್ಲ. ನಮ್ಮ ರಾಜಧಾನಿಯಲ್ಲಿ ಬೇರೆ ಭಾಷೆಗಳ ಜೊತೆ ನಮ್ಮ ಚಿತ್ರಗಳಿಗೆ ಆದ್ಯತೆ ನೀಡಿ ಎನ್ನುತ್ತಿದ್ದೇವೆ ಅಷ್ಟೆ. ಇದೂ ಆಗದಿದ್ದರ ಹೇಗೆ ?'' ಆ ವೇಳೆಗಾಗಲೇ ವರ್ಷದಲ್ಲಿ ಹನ್ನೆರಡು ವಾರ ಕನ್ನಡ ಚಿತ್ರಗಳ ಪ್ರದರ್ಶನ ಕಡ್ಡಾಯಗೊಳಿಸಿ ಸರ್ಕಾರ ಮಾಡಿದ ಆಜ್ಞೆಯ ವಿರುದ್ಧ ಪ್ರದರ್ಶಕರು ನ್ಯಾಯಾಲಯಕ್ಕೆ ಹೋಗಿದ್ದರು. ಸರ್ಕಾರ ಕನ್ನಡ ಚಿತ್ರಗಳಿಗೆ ಹೆಚ್ಚಿನ ಪ್ರೇಕ್ಷಕರನ್ನು ಸೆಳೆಯದಿರುವಂತೆ ಪ್ರದರ್ಶಕರು ಪ್ರವೇಶ ದರ ಹೆಚ್ಚಿಸಿದ್ದರು. ಇವುಗಳ ಬಗ್ಗೆ ಮುಖ್ಯಮಂತ್ರಿಗಳು ಇದಕ್ಕಿಂತ ದೊಡ್ಡ ವಿಪರ್ಯಾಸವಿಲ್ಲ ಎಂದು ಟೀಕಿಸಿದರು. ಅಂದಿನ ಹಣಕಾಸು ಸಚಿವ ವೀರಪ್ಪಮೊಯಿಲಿ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ನಾಯಕನಟ ರಾಜಕುಮಾರ್ ಮುಖ್ಯ ಅತಿಥಿಗಳಾಗಿದ್ದರು.

ಹೀಗೆ ಕನ್ನಡ ಚಲನಚಿತ್ರ ನಿರ್ಮಾಪಕರು ಸಂಘಟಿತರಾಗಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸ ಹೊರಟ ಮೇಲೆ ವಾಣಿಜ್ಯ ಮಂಡಳಿಯಲ್ಲಿ ನಿರ್ಮಾಪಕರಿಗೆ ಪ್ರತ್ಯೇಕ ವಲಯ ಸ್ಥಾಪನೆಯಾಗಿ ಪ್ರದರ್ಶಕರ ವಲಯ, ವಿತರಕರ ವಲಯಗಳ ಜೊತೆ ಕೆಲಸ ಮಾಡಲಾರಂಭಿಸಿತು. ಆದರೂ ಕನ್ನಡ ಚಿತ್ರೋದ್ಯಮದ ಸಮಸ್ಯೆಗಳ ಭಾರವೇನೂ ತಗ್ಗಿರಲಿಲ್ಲ. ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘ ಹೋರಾಟ ನಡೆಸುತ್ತಲೇ ಇತ್ತು. ಹೆಚ್.ಎಂ.ಕೆ.ಮೂರ್ತಿಯವರ ನಂತರ ಜಾನಕಿರಾಮ್ ಸಂಘದ ಅಧ್ಯಕ್ಷರಾದರು. ಕೆಲಕಾಲ ಚಟುವಟಿಕೆ ನಡೆಸಿದ ಸಂಘ ನಂತರ ಸ್ಥಗಿತವಾಯಿತು.

ದಿನೇ ದಿನೇ ಉಲ್ಬಣಗೊಳ್ಳುತ್ತಿರುವ ನಿರ್ಮಾಪಕರ ಸಮಸ್ಯೆಗಳಿಂದಾಗಿ ಕನ್ನಡ ಚಿತ್ರೋದ್ಯಮ ಅಳಿವು-ಉಳಿವಿನ ತೂಗುಯ್ಯಾಲೆಯಲ್ಲಿದ್ದಾಗ ಸಿ.ವಿ.ಎಲ್.ಶಾಸ್ತ್ರಿ ಸಂಘದ ಚುಕ್ಕಾಣಿ ಹಿಡಿದರು. ಶಾಸ್ತ್ರಿಗಳೊಂದಿಗೆ ಕೆ.ಎಸ್.ಎಲ್.ಸ್ವಾಮಿ (ರವೀ) ಹಾಗೂ ಆರ್.ಲಕ್ಷ್ಮಣ್ ಸಂಘದ ಕಾರ್ಯದರ್ಶಿಗಳಾಗಿ ಬಲ ನೀಡಿದರು. ಫೀನಿಕ್ಸ್ ಪಕ್ಷಿಯಂತೆ ಸಂಘ ಮತ್ತೊಮ್ಮೆ ಮೈ ಕೊಡವಿಕೊಂಡು ಎದ್ದು ನಿಂತಿತು. ಕನ್ನಡ ಚಿತ್ರೋದ್ಯಮದ ಪಾಲಿಗೆ ಮಾರಕವಾಗಿದ್ದ ಚಿತ್ರಪ್ರದರ್ಶಕರ ಧೋರಣೆಯ ವಿರುದ್ಧ ಸಂಘ ಸೆಟೆದು ನಿಂತಿತು. ಸರ್ಕಾರದಲ್ಲಿ ಪ್ರಭಾವ ಬೀರಿದ ಆಗಿನ ಅಧ್ಯಕ್ಷ ಸಿ.ವಿ.ಎಲ್.ಶಾಸ್ತ್ರಿಗಳು ಬಹುಕಾಲದಿಂದ ಬಾಕಿ ಉಳಿದಿದ್ದ ಸಹಾಯಧನದ ಕಡತಗಳ ವಿಲೇವಾರಿಯಾಗಲು, ಕನ್ನಡ ಚಿತ್ರಗಳಿಗೆ ಶೇಕಡಾ ನೂರರಷ್ಟು ತೆರಿಗೆ ವಿನಾಯಿತಿ ದೊರೆಯಲು, ಪ್ರಶಸ್ತಿಯ ನಗದು ಮೊತ್ತ ಹೆಚ್ಚಾಗಲು ಶ್ರಮಿಸಿದರು.

ರಾಜಧಾನಿಯಲ್ಲಿನ ಚಿತ್ರಮಂದಿರಗಳವರಿಂದ ಕನ್ನಡ ಚಿತ್ರಗಳಿಗಾಗುತ್ತಿದ್ದ ಅನ್ಯಾಯದ ವಿರುದ್ಧ ಭಾರಿ ಹೋರಾಟವನ್ನೇ ಆರಂಭಿಸಿದ ಸಂಘ ರಾಜಕುಮಾರ್ ನೇತೃತ್ವದಲ್ಲಿ ಚಿತ್ರ ನಿರ್ಮಾಪಕರ, ತಂತ್ರಜ್ಞರ, ಕಾರ್ಮಿಕರ ಬೃಹತ್ ಪ್ರತಿಭಟನಾ ಮೆರವಣಿಗೆಯನ್ನು ೧೯೯೫ರಲ್ಲಿ ನಡೆಸಿತು. ಸಿನಿಮಾ ಬಂದ್ ಆಚರಿಸಿತು. ಆಗಿನ ಮುಖ್ಯಮಂತ್ರಿ ದೇವೇಗೌಡ, ವಾರ್ತಾಮಂತ್ರಿ ನಾಣಯ್ಯ, ಇಲಾಖಾ ಕಾರ್ಯದರ್ಶಿಗಳು ಹಾಗೂ ಉದ್ಯಮದ ಎಲ್ಲ ವಿಭಾಗಗಳವರನ್ನೂ ಕರೆಸಿಕೊಂಡು ವಿಚಾರ ವಿನಿಮಯ ನಡೆಸಿತು. ಸರ್ಕಾರದ ಕೋರಿಕೆಯಂತೆ ಬಂದ್ ಕರೆಯನ್ನು ಹಿಂತೆಗೆದುಕೊಳ್ಳಲಾಯಿತು. ಈ ಎಲ್ಲ ಹೋರಾಟಗಳ ಫಲಶೃತಿಯಾಗಿ ಸಂಘವು ಚಟುವಟಿಕೆಯ ಮುಂಚೂಣಿಯಲ್ಲಿತ್ತು.

ಇತ್ತೀಚೆಗೆ ತಯಾರಾದ ಎಲ್ಲಾ ಕನ್ನಡ ಚಿತ್ರಗಳಿಗೂ ಸಾರಾಸಗಟಾಗಿ ನೀಡುತ್ತಿದ್ದ ಸಹಾಯಧನ ಯೋಜನೆಗೆ ಸರ್ಕಾರ ಮಾರ್ಪಾಟು ತಂದು, ಗುಣಮಟ್ಟದ ಅಳತೆಗೋಲಿರಿಸಿ, ಗುಣಮಟ್ಟದ ದೃಷ್ಟಿಯಿಂದ ಸಮಿತಿ ಆಯ್ಕೆ ಮಾಡಿದ ಇಪ್ಪತ್ತು ಚಿತ್ರಗಳಿಗೆ ತಲಾ ಹತ್ತು ಲಕ್ಷ ರೂಪಾಯಿಗಳ ಸಹಾಯಧನ ನೀಡಲು ಆರಂಭಿಸಿತು. ನಿರ್ಮಾಪಕರ ಸಂಘ ಕೇವಲ ಇಪ್ಪತ್ತು ಚಿತ್ರಗಳ ಮಿತಿಯನ್ನು ವಿರೋಧಿಸಿತು. ಮತ್ತೆ ಸಂಘ ಚಟುವಟಿಕೆಯಲ್ಲಿ ಉಳಿಯಿತು.

ಸೀಮಿತ ಮಾರುಕಟ್ಟೆಯಿದ್ದರೂ ಕೋಟ್ಯಾಂತರ ರೂಪಾಯಿಗಳ ವೆಚ್ಚದಲ್ಲಿ ಚಿತ್ರಗಳ ನಿರ್ಮಾಣ, ವಿದೇಶಗಳಲ್ಲಿ ಚಿತ್ರೀಕರಣ, ಹೊರಗಿನ ದುಬಾರಿ ತಾರೆಯರ ಬಳಕೆ ಮತ್ತಿತರ ವೈಭವ ಕನ್ನಡ ಚಲನಚಿತ್ರರಂಗದಲ್ಲಿ ಕಾಣಬರುತ್ತಿದೆ. ಇದು ಕನ್ನಡ ಚಿತ್ರನಿರ್ಮಾಪಕರ ಸಾಹಸವೆನ್ನಬೇಕೋ, ಪ್ರಯೋಗವೆನ್ನಬೇಕೋ ಎಂಬ ಪ್ರಶ್ನೆಗೆ ಉತ್ತರ ಸಿಕ್ಕುತ್ತಿಲ್ಲ. ಹೀಗಿದ್ದೂ ನಿರ್ಮಾಪಕರ ಸಂಘ ನಿರ್ಮಾಣ ವೆಚ್ಚ ಕಡಿಮೆ ಮಾಡುವ ಪ್ರಯತ್ನದಲ್ಲಿರುವುದು ಒಂದು ಬಗೆಯ ವಿಪರ್ಯಾಸವೇ ಸರಿ.

### ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ

ಎಂಬತ್ತರ ದಶಕಕ್ಕೂ ಮೊದಲು ಕನ್ನಡ ಚಲನಚಿತ್ರರಂಗದ ನಿರ್ದೇಶಕರು ಮತ್ತು ಅವರ ಸಹಾಯಕರು ಮದರಾಸಿನಲ್ಲಿನ ದಕ್ಷಿಣ ಭಾರತ ಚಲನಚಿತ್ರ ನಿರ್ದೇಶಕರ ಸಂಘ (ಸೌತ್ ಇಂಡಿಯನ್ ಫಿಲಮ್ ಡೈರೆಕ್ಟರ್ಸ್ ಅಸೋಸಿಯೇಷನ್ - ಸಿಫ್ಡಾ)ದ ಸದಸ್ಯರಾಗಿ ಕೆಲಸ ಮಾಡುತ್ತಿದ್ದರು. ಆ ದಿನಗಳಲ್ಲಿ ಚಿತ್ರದ ನಿರ್ದೇಶಕರ ಬಗ್ಗೆ ತಿಳಿಯುವ ಕುತೂಹಲ ಪ್ರೇಕ್ಷಕರಲ್ಲಿ ತೀರಾ ಕಡಿಮೆಯಿದ್ದಿತು. ಚಿತ್ರದ ತಾರಾಗಣದಲ್ಲಿನ ನಾಯಕ-ನಾಯಕಿಯರ ಬಗ್ಗೆ ಮಾತ್ರ ನೋಡುಗರು ಆಸಕ್ತರಾಗಿದ್ದರು. ಚಲನಚಿತ್ರದ ಎಲ್ಲ ವಿಭಾಗಗಳನ್ನು ನಿಯಂತ್ರಿಸಿ ದಿಗ್ದರ್ಶಿಸುವ ಕಪ್ತಾನನಾದ ನಿರ್ದೇಶಕ ಅವರ ದೃಷ್ಟಿಯಲ್ಲಿ ಗೌಣವೆನಿಸಿಯೇ ಉಳಿದಿದ್ದ.

ಕನ್ನಡ ಚಲನಚಿತ್ರಗಳಲ್ಲಿಯ ಪರಿಸ್ಥಿತಿಯೂ ಅದೇ ಆಗಿತ್ತು. ಚಿತ್ರದ ಇಡೀ ಕಥೆಯನ್ನು ತಪ್ಪು ಕಲ್ಪನೆಯ ಮೂಸೆಯಲ್ಲಿ ಸೆಲ್ಯೂಲಾಯ್ಡ್ ಮೇಲೆ ರೂಪಿಸುವ ಬಗ್ಗೆ ಕಲ್ಪಿಸಿಕೊಂಡು ತನ್ನ ಕಲ್ಪನೆಯಂತೆ ಇತರ ವಿಭಾಗಗಳವರಿಂದ ಕೆಲಸ ತೆಗೆದುಕೊಳ್ಳುವ ನಿರ್ದೇಶಕನಿಗೆ ಒಂದು ಮೌಲ್ಯವನ್ನು ತಂದುಕೊಡದೆ ಪರಿಸ್ಥಿತಿ ಸುಧಾರಿಸುವುದು ಕಷ್ಟವೇ ಆಗಿತ್ತು. ಎಸ್.ಆರ್.ಪುಟ್ಟಣ್ಣ ಕಣಗಾಲ್, ಎಸ್.ಲಕ್ಷ್ಮೀನಾರಾಯಣ್, ರವೀ (ಕೆ.ಎಸ್.ಎಲ್.ಸ್ವಾಮಿ), ಸಿದ್ಧಲಿಂಗಯ್ಯ ಮುಂತಾದವರು ನಿರ್ದೇಶಕರಿಗೊಂದು ಮೌಲ್ಯ ದೊರಕಿಸಿಕೊಡಲು ಪ್ರಯತ್ನ ನಡೆಸಿದರು. ಸ್ಟಾರ್ ವ್ಯಾಲ್ಯೂವಿನಂತೆ ಡೈರೆಕ್ಟರ್‌ವ್ಯಾಲ್ಯೂ ಮೇಲೆ ಚಿತ್ರ ಜನಪ್ರಿಯತೆ ಕಾಣಬೇಕೆಂದು ಬಯಸಿದರು. ಆ ಸಂದರ್ಭದಲ್ಲಿ ಕರ್ನಾಟಕದಲ್ಲಿನ ನಿರ್ದೇಶಕರೆಲ್ಲರನ್ನೂ ಸಂಘಟಿಸಿ ತಮ್ಮದೇ ಆದ ಸಂಘಟನೆಯೊಂದನ್ನು ಸ್ಥಾಪಿಸಲು ಮುಂದಾದರು. ಆ ಸಂದರ್ಭದಲ್ಲಿ ಎಸ್.ವಿ.ರಾಜೇಂದ್ರಸಿಂಗ್ (ಬಾಬು), ಎಸ್.ಶಿವರಾಂ ಮತ್ತಿತರರೂ ಜೊತೆ ಸೇರಿದರು. ಅವರೆಲ್ಲರ ಪ್ರಯತ್ನದಿಂದಾಗಿ ೧೯೮೪ರ ಏಪ್ರಿಲ್ ೧೪ರಂದು, ಸೌರಮಾನ ಯುಗಾದಿಯಂದು ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ (**ಕರ್ನಾಟಕ ಫಿಲಮ್ ಡೈರೆಕ್ಟರ್ಸ್ ಅಸೋಸಿಯೇಷನ್ - ಕಾನ್ಫಿಡಾ**) ಪ್ರಾರಂಭವಾಯಿತು. ದಾದಾಸಾಹೇಬ್ ಫಾಲ್ಕೆ ಪುರಸ್ಕೃತರಾದ ಹಿರಿಯ ಚಲನಚಿತ್ರ ನಿರ್ದೇಶಕ-ನಿರ್ಮಾಪಕ-ನಟ ಎಲ್.ವಿ.ಪ್ರಸಾದ್ ಈ ಸಂಘಟನೆಯನ್ನು ಉದ್ಘಾಟಿಸಿದರು. ಎಸ್.ಆರ್.ಪುಟ್ಟಣ್ಣ ಕಣಗಾಲ್ ಈ ಸಂಘದ ಸ್ಥಾಪಕ ಅಧ್ಯಕ್ಷರಾದರು. ಕನ್ನಡ ಚಲನಚಿತ್ರಗಳಲ್ಲಿ ಕೆಲಸ ಮಾಡುವ ನಿರ್ದೇಶಕರು, ಸಹನಿರ್ದೇಶಕರು ಹಾಗೂ ಸಹಾಯಕ ನಿರ್ದೇಶಕರು ಈ ಸಂಘದ ಸದಸ್ಯರಾಗಲು ಅವಕಾಶ ಕಲ್ಪಿಸಲಾಯಿತು. ನಿರ್ದೇಶಕ ಎಸ್.ಲಕ್ಷ್ಮೀನಾರಾಯಣ್ ಸ್ಥಾಪಕ ಉಪಾಧ್ಯಕ್ಷರು, ರವೀ (ಕೆ.ಎಸ್.ಎಲ್.ಸ್ವಾಮಿ) ಕಾರ್ಯದರ್ಶಿಗಳು.

ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ ಚಿತ್ರದ ನಿರ್ದೇಶಕರ ತಂಡದಲ್ಲಿ ಶಿಸ್ತು ಮತ್ತು ಸಂಯಮವನ್ನು ಬೆಳೆಸುವ ಗುರಿಗೆ ತನ್ನ ಪ್ರಥಮ ಆದ್ಯತೆ ನೀಡಿತು. ಕನ್ನಡ ಚಲನಚಿತ್ರೋದ್ಯಮದಲ್ಲಿ ಸಮಸ್ಯೆಗಳು ತಲೆದೋರಿದಾಗಲೆಲ್ಲಾ ನಿರ್ದೇಶಕರ ಸಂಘ ಉದ್ಯಮದ ಇತರ ಅಂಗಗಳೊಂದಿಗೆ ಹೋರಾಟ ನಡೆಸಿತು. ರಾಜ್ಯ ಸರ್ಕಾರವು ಕನ್ನಡ ಚಿತ್ರರಂಗದಲ್ಲಿ ಗಣನೀಯ ಸೇವೆ ಸಲ್ಲಿಸಿದ ಚಲನಚಿತ್ರ ನಿರ್ದೇಶಕರಿಗೆ ದಿವಂಗತ ಪುಟ್ಟಣ್ಣ ಕಣಗಾಲ್‌ರ ಹೆಸರಿನಲ್ಲಿ ಪ್ರಶಸ್ತಿಯನ್ನು ಘೋಷಿಸಿತು. ನಿರ್ದೇಶಕ ಪುಟ್ಟಣ್ಣ ಕಣಗಾಲರು ನಿಧನರಾದ ತರುಣವಲ್ಲೇ ಅವರ ಸಂಸ್ಮರಣಾರ್ಥ ಈ ಪ್ರಶಸ್ತಿಯನ್ನು ಕೊಡಮಾಡಿತು. ೧೯೮೬-೮೭ರಲ್ಲಿ ಈ ಪ್ರಶಸ್ತಿ ಆರಂಭವಾಗಿ ಮೊದಲ ಮೂರು ವರ್ಷಗಳಲ್ಲಿ ಹುಣಸೂರು ಕೃಷ್ಣಮೂರ್ತಿ, ಜಿ.ವಿ.ಅಯ್ಯರ್ ಮತ್ತು ಬಿ.ಎಸ್.ರಂಗಾ ಈ ಪ್ರಶಸ್ತಿಗೆ ಪಾತ್ರರಾದರು. ನಾಲ್ಕನೆಯ ವರ್ಷದಲ್ಲಿ ಆಯ್ಕೆ ಸಮಿತಿ ಕನ್ನಡ ಚಲನಚಿತ್ರರಂಗದಲ್ಲಿ ಗಣನೀಯ ಸೇವೆ ಮಾಡಿದವರಿಗಾಗಿ ಗುಬ್ಬಿ ವೀರಣ್ಣ ಪ್ರಶಸ್ತಿಯನ್ನು[೧] ಪುಟ್ಟಣ್ಣ ಪ್ರಶಸ್ತಿಗೆ ಸಮನಾಗಿಯೇ ಸ್ಥಾಪಿಸಿತು.

ನಿರ್ದೇಶಕರ ಸಂಘ ನಿರ್ಮಾಪಕರ ಸಂಘದೊಂದಿಗೆ ಸಖ್ಯವಿರಿಸಿಕೊಂಡು ಕನ್ನಡ ಚಿತ್ರರಂಗದ ವಿವಿಧ ಸಮಸ್ಯೆಗಳ ವಿರುದ್ಧ ಕಳೆದ ಹದಿನೈದು ವರ್ಷಗಳಿಂದಲೂ ಹೋರಾಟ-ಪ್ರತಿಭಟನೆ ನಡೆಸಿದೆ. ಚಲನಚಿತ್ರರಂಗದ ಸೋಲು-ಗೆಲುವು ಕುರಿತು ಚಿಂತನೆ ನಡೆಸಿ ಚಿತ್ರತಯಾರಿಕಾ ವೆಚ್ಚ ಕಡಿತಗೊಳಿಸಲು, ಉದ್ಯಮದಲ್ಲಿ ಶಿಸ್ತು ಮೂಡಿಸಲು, ಕಟ್ಟುನಿಟ್ಟಿನ ವ್ಯವಸ್ಥೆ ರೂಪಿಸಲು ನಿರಂತರ ಪ್ರಯತ್ನ ನಡೆಸಿದೆ. ತಾವು ಶ್ರಮವಹಿಸಿ ದಿಗ್ದರ್ಶಿಸಿದ ಚಿತ್ರವು ಚಿತ್ರಮಂದಿರದಲ್ಲಿ ಪ್ರದರ್ಶನವಾದಾಗ ಶಬ್ದ ಹಾಗೂ ಬೆಳಕುಗಳ ಬಗ್ಗೆ ಪ್ರದರ್ಶಕರು ಅಸಡ್ಡೆ-ಅಲಕ್ಷ್ಯ ತೋರುತ್ತಿದ್ದು, ಪ್ರೇಕ್ಷಕರನ್ನು ವಂಚಿಸುತ್ತಿರುವುದರ ವಿರುದ್ಧ, ಅಂತಹ ಚಿತ್ರಮಂದಿರಗಳ ವಿರುದ್ಧ ನಿರ್ದೇಶಕರ ಸಂಘ ಧರಣಿ ನಡೆಸಿದೆ. ಪ್ರೇಕ್ಷಕರಿಂದ ಸೇವಾ ಶುಲ್ಕ ಪಡೆದೂ ಚಿತ್ರಮಂದಿರಗಳವರು ತಮ್ಮ ಥಿಯೇಟರುಗಳನ್ನು ಶುಚಿಯಾಗಿಟ್ಟುಕೊಳ್ಳದೆ, ಹವಾನಿಯಂತ್ರಣವನ್ನು ಸಮರ್ಪಕವಾಗಿ ಒದಗಿಸದೆ, ಮುರಿದ ಆಸನಗಳನ್ನು ದುರಸ್ತಿ ಮಾಡಿಸದೆ ಪ್ರೇಕ್ಷಕರು ಹೆಚ್ಚಿನ ಸಂಖ್ಯೆಯಲ್ಲಿ ಚಿತ್ರಮಂದಿರಗಳಿಗೆ ಬಾರದಂತಾಗಿರುವ ಪರಿಸ್ಥಿತಿಯ ವಿರುದ್ಧ ಪ್ರತಿಭಟಿಸಿದ ಈ ಸಂಘ ಪ್ರೇಕ್ಷಕರ ಹಕ್ಕನ್ನು ನೆನಪು ಮಾಡಿಕೊಡುವ ಕರಪತ್ರಗಳನ್ನು ಮುದ್ರಿಸಿ ಹಂಚಿತು.

ಚಿತ್ರಮಂದಿರಗಳ ದುಬಾರಿ ಬಾಡಿಗೆ ಪದ್ಧತಿಯನ್ನು ವಿರೋಧಿಸಿ ಚಿತ್ರನಿರ್ಮಾಪಕರ ಸಂಘ ಸಿನಿಮಾ ಬಂದ್‌ಗೆ ಕರೆ ನೀಡಿದಾಗ ನಿರ್ದೇಶಕರ ಸಂಘ ಪೂರ್ಣ ಸಹಕಾರ ನೀಡಿ, ಬೃಹತ್ ಮೆರವಣಿಗೆಯಲ್ಲಿ ಭಾಗವಹಿಸಿ ಸರ್ಕಾರದ ಸಮ್ಮುಖದಲ್ಲಿ ಅಹವಾಲು ಸಲ್ಲಿಸಿತು. ಸಂಪೂರ್ಣ ತೆರಿಗೆ ವಿನಾಯಿತಿ, ಹೊರಾಂಗಣ ಚಿತ್ರೀಕರಣದ ಅನುಮತಿಗಾಗಿ ಏಕಗವಾಕ್ಷಿ ಯೋಜನೆ ಮತ್ತಿತರ ಹಲವು ಸಮಸ್ಯೆಗಳ ಬಗ್ಗೆ ಹೋರಾಟ ನಡೆಸಿದೆ. ಕನ್ನಡ ಚಿತ್ರೋದ್ಯಮ ಸಮಸ್ಯೆಗಳ ಸಂದಿಗ್ಧವನ್ನು ಎದುರಿಸಿದಾಗಲೆಲ್ಲ ನಡೆದ ಹೋರಾಟಗಳಲ್ಲಿ, ಪ್ರತಿಭಟನೆಗಳಲ್ಲಿ ನಿರ್ದೇಶಕರ ಸಂಘ ಮುಂಚೂಣಿಯಲ್ಲಿದ್ದು ಭಾಗವಹಿಸಿದೆ.

ನಿರ್ದೇಶಕರ ಸಂಘ ಕನ್ನಡೇತರ ಭಾಷೆಗಳ ಪ್ರಸಿದ್ಧ ನಿರ್ದೇಶಕರೊಂದಿಗೆ ಸಂವಾದ, ವಿಚಾರ ಸಂಕಿರಣ, ಮಂಥನ ಮುಂತಾದ ಕಾರ್ಯಕ್ರಮವನ್ನು ಏರ್ಪಡಿಸುತ್ತದೆ. ಇತರ ಭಾಷೆಗಳ, ದೇಶ-ವಿದೇಶಗಳ ಪ್ರಮುಖ ಚಿತ್ರಗಳ ಪ್ರದರ್ಶನ, ನಂತರ ಆ ಬಗ್ಗೆ ಮಂಥನ ಕಾರ್ಯಕ್ರಮಗಳನ್ನು ನಡೆಸಿದೆ. ಪ್ರತಿ ವಾರ್ಷಿಕೋತ್ಸವ ಸಂದರ್ಭದಲ್ಲಿ ಹೊರಗಿನ ಖ್ಯಾತ ನಿರ್ದೇಶಕರನ್ನು ಮುಖ್ಯ ಅತಿಥಿಗಳಾಗಿ ಕರೆಸಿ ಅವರನ್ನು ಗೌರವಿಸುವುದು, ವಿವಿಧ ಸಾಧನೆಗಳಿಗೆ ಕಾರಣರಾದ ನಿರ್ದೇಶಕರಿಗೆ ಪ್ರಶಸ್ತಿಗಳನ್ನು ನೀಡಿ ಪುರಸ್ಕರಿಸುವುದು ಈ ಸಂಘ ಅನುಸರಿಸಿಕೊಂಡು ಬಂದಿರುವ ಸತ್ಸಂಪ್ರದಾಯಗಳು.

ಚಲನಚಿತ್ರ ನಿರ್ದೇಶಕರ ಸಂಘ ತನ್ನದೇ ಆದ ಒಂದು ಪತ್ರಿಕೆಯನ್ನು ಹೊರತರುವ ಉದ್ದೇಶದಿಂದ ಎಸ್.ವಿ.ರಾಜೇಂದ್ರಸಿಂಗ್ ಬಾಬು, ಕೆ.ವಿ.ಜಯರಾಮ್, ಜೋಸೈಮನ್, ತಿಪಟೂರು ರಘು, ಕೋಡ್ಲು ರಾಮಕೃಷ್ಣ, ಪಿ.ಹೆಚ್.ವಿಶ್ವನಾಥ್, ಸುರೇಶ್ ರೆಡ್ಡಿ, ರಾಜೇಂದ್ರಕುಮಾರ್ ಆರ್ಯ, ಚಂದ್ರಹಾಸ ಆಳ್ವ, ಚಂದ್ರಶೇಖರ ಶರ್ಮ ಇವರನ್ನೊಳಗೊಂಡ ಸಮಿತಿಯೊಂದರ ಸಲಹೆಯಂತೆ ಎಸ್.ಆರ್.ನಂಜುಂಡೇಗೌಡರ ಸಂಪಾದಕತ್ವದಲ್ಲಿ 'ಚಿತ್ರನಿರ್ದೇಶಕ' ಪತ್ರಿಕೆಯನ್ನು ೧೯೯೫ನೇ ಡಿಸೆಂಬರ್‌ನಲ್ಲಿ ಹೊರತಂದಿತು. ಜಿ.ವಿ.ಅಯ್ಯರ್, ಸಿದ್ಧಲಿಂಗಯ್ಯ

೧. ರಂಗಭೂಮಿಗೆ ಮಾತ್ರ 'ಗುಬ್ಬಿ ವೀರಣ್ಣ ಪ್ರಶಸ್ತಿ' ಇರಬೇಕೆಂದು ಒತ್ತಡಗಳು ಬಂದಿದ್ದರಿಂದ ಈ ಪ್ರಶಸ್ತಿ 'ಡಾ।ರಾಜಕುಮಾರ್ ಪ್ರಶಸ್ತಿ' ಎಂದು ಬದಲಾಯಿತು.



(ಚಿತ್ರ ೧) 'ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ'ದ ವಾರ್ಷಿಕೋತ್ಸವ ಸಮಾರಂಭವೊಂದರಲ್ಲಿ ಸಂಘದ ಅಧ್ಯಕ್ಷ ವಿ.ಸೋಮಶೇಖರ್, ವಾರ್ತಾ ಸಚಿವ ಎಂ.ಪಿ.ಪ್ರಕಾಶ್, ದೀಪ ಬೆಳಗಿ ಉದ್ಘಾಟಿಸುತ್ತಿರುವ ಮಲೆಯಾಳಂ ಚಿತ್ರರಂಗದ ನಿರ್ದೇಶಕ ಅಡೂರು ಗೋಪಾಲಕೃಷ್ಣನ್, ಎಸ್.ವಿ.ರಾಜೇಂದ್ರಸಿಂಗ್ (ಬಾಬು), ಕೆ.ಎಸ್.ಎಲ್.ಸ್ವಾಮಿ (ರವೀ) ಮತ್ತು ಎಸ್.ಶಿವರಾಂ

ಕೆ.ಎಸ್.ಎಲ್.ಸ್ವಾಮಿ (ರವೀ), ವಿ.ಸೋಮಶೇಖರ್, ಗಿರೀಶ್ ಕಾಸರವಳ್ಳಿ ಹಾಗೂ ಟಿ.ಎಸ್.ನಾಗಾಭರಣ ಇವರು ಪತ್ರಿಕೆಯ ಸಲಹಾ ಮಂಡಳಿಯ ಸದಸ್ಯರಾಗಿದ್ದರು. ೨-೩ ಸಂಚಿಕೆ ಮಾತ್ರ ಪ್ರಕಟವಾಯಿತು.

೧೯೯೫ರ ಡಿಸೆಂಬರ್‌ನಲ್ಲಿ ಸಂಘದ ಸದಸ್ಯರಿಗೆ ಗ್ರೂಪ್ ಇನ್‌ಶ್ಯೂರೆನ್ಸ್ ಸೌಲಭ್ಯವನ್ನು ಸಂಘ ಒದಗಿಸಿತು. ಸರ್ಕಾರ ಚಲನಚಿತ್ರಗಳಿಗೆ ಸಂಬಂಧಿಸಿದಂತೆ ರಚಿಸುವ ಸಮಿತಿಗಳು ಹಾಗೂ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ರಚಿಸಿದ ಕೇಂದ್ರ ಸಂಧಾನ ಸಮಿತಿಗಳಲ್ಲಿ ಸಂಘದ ಪ್ರತಿನಿಧಿಗಳಿಗೆ ಅವಕಾಶ ನೀಡಿ ಮನ್ನಣೆ ನೀಡಲಾಗಿದೆ. ಸರ್ಕಾರದ ವಾರ್ತಾ ಇಲಾಖೆಯಿಂದ ನಿರ್ಮಾಣಗೊಳ್ಳುವ 'ಅವಲೋಕನ' ಧಾರಾವಾಹಿ ಕಾರ್ಯಕ್ರಮಗಳನ್ನು ಸಂಘದ ಸದಸ್ಯರಾದ ನಿರ್ದೇಶಕರು ಸಿದ್ಧಪಡಿಸಿಕೊಡುತ್ತಿದ್ದಾರೆ.

ಸುಮಾರು ೪೯ ಮಂದಿ ಆಜೀವ ಸದಸ್ಯರನ್ನು ಹೊಂದಿರುವ ಈ ಸಂಘದಲ್ಲಿ ಜಿ.ವಿ.ಅಯ್ಯರ್, ಎಲ್.ವಿ.ಪ್ರಸಾದ್, ಬಿ.ಎಸ್.ರಂಗಾ, ಕ್ರಿಸ್ಟೋಫರ್ ಮೈಲ್ಸ್ (ಲಂಡನ್), ಅಡೂರು ಗೋಪಾಲಕೃಷ್ಣನ್, ಬಿ.ಆರ್.ಛೋಪ್ರಾ, ಭಾರತಿರಾಜಾ, ಕನ್‌ಮ್ಯಾಕ್ ಮುಲ್ಲೇನ್, ಕೆ.ವಿಶ್ವನಾಥ್, ಗುಲ್ಜಾರ್, ದಾಸರಿ ನಾರಾಯಣರಾವ್, ಬಾಲುಮಹೇಂದ್ರ, ಭಾನುಮತಿ ರಾಮಕೃಷ್ಣ, ಕೆ.ಬಾಪು, ಮಣಿರತ್ನಂ, ಯಶ್‌ಛೋಪ್ರಾ ಮತ್ತಿತರರು ಗೌರವ ಸದಸ್ಯತ್ವ ಪಡೆದಿದ್ದಾರೆ.

೨೦೦೦ನೇ ವರ್ಷದಲ್ಲಿ ಎಸ್.ವಿ.ರಾಜೇಂದ್ರಸಿಂಗ್ (ಬಾಬು) ಸಂಘದ ಅಧ್ಯಕ್ಷರು. ಕೋಡ್ಲು ರಾಮಕೃಷ್ಣ ಮತ್ತು ಜೋಸೈಮನ್ ಉಪಾಧ್ಯಕ್ಷರು. ತಿಪಟೂರು ರಘು ಮತ್ತು ಎನ್.ಆರ್.ನಂಜುಂಡೇಗೌಡ ಕಾರ್ಯದರ್ಶಿಗಳು. ಕೆ.ಎನ್.ಚಂದ್ರಶೇಖರಶರ್ಮ ಖಜಾಂಚಿ. ಬೂದಾಳ್ ಕೃಷ್ಣಮೂರ್ತಿ, ಪಿ.ಹೆಚ್.ವಿಶ್ವನಾಥ್, ಸುರೇಶ್ ರೆಡ್ಡಿ, ಹೆಚ್.ಆರ್.ಭಾರ್ಗವ, ರಾಜೇಂದ್ರಕುಮಾರ್ ಆರ್ಯ, ವೈದ್ಯನಾಥ್, ಬಿ.ರಾಮಮೂರ್ತಿ, ಆನಂದ್ ಪಿ.ರಾಜು ಹಾಗೂ ಎಸ್.ವಿ.ಪ್ರಸಾದ್ ಕಾರ್ಯಕಾರಿ ಸಮಿತಿ ಸದಸ್ಯರು. ಸಹನಿರ್ದೇಶಕರ ಪ್ರತಿನಿಧಿಗಳಾಗಿ ಕಿಟ್ಟಿ ರಂಗಮಂಚ, ಎಸ್.ವಿ.ಉದಯ್, ರಘುನಂದನ್, ಕಲಾಗಂಗೋತ್ರಿ ಮಂಜು ಹಾಗೂ ಟಿ.ಎನ್.ನಾಗೇಶ್ ಇದ್ದಾರೆ. ಟಿ.ಎಸ್.ನಾಗಾಭರಣ, ನಾಗತಿಹಳ್ಳಿ ಚಂದ್ರಶೇಖರ್, ಕವಿತಾ ಲಂಕೇಶ್, ಸಿ.ವಿ.ಶಿವಶಂಕರ್, ಅಬ್ದುಲ್ ರೆಹಮಾನ್ ಪಾಷ, ಟಿ.ಎನ್.ಸೀತಾರಾಮ್ ಹಾಗೂ ಪಿ.ಆರ್.ರಾಮದಾಸನಾಯ್ಡು ಕಾರ್ಯಕಾರಿಣಿಗೆ ವಿಶೇಷ ಆಹ್ವಾನಿತ ಸದಸ್ಯರಾಗಿದ್ದಾರೆ. ಬೆಂಗಳೂರಿನ ಶ್ರೀರಾಮಪುರದಲ್ಲಿ ಓವರ್ ಬ್ರಿಡ್ಜ್ ಸಮೀಪದಲ್ಲಿ ಈ ಸಂಘ ತನ್ನ ಕಚೇರಿಯನ್ನು ಹೊಂದಿದೆ.

## ಕರ್ನಾಟಕ ಚಲನಚಿತ್ರ ಕಲಾವಿದರ ಸಂಘ

ಐವತ್ತರ ದಶಕಗಳ ಮಾತು. ಕನ್ನಡ ಚಲನಚಿತ್ರರಂಗ ಸಂಪೂರ್ಣವಾಗಿ ಮದರಾಸಿನಲ್ಲಿ ನೆಲೆಯೂರಿದ ದಿನಗಳು. ಕನ್ನಡ ಚಿತ್ರಗಳ ತಯಾರಿಕೆ ಅಲ್ಲಿಯೇ ನಡೆಯುತ್ತಿದ್ದುದರಿಂದ ಕನ್ನಡದ ಬಹುತೇಕ ಕಲಾವಿದರು ಹಾಗೂ ತಂತ್ರಜ್ಞರು ಕೂಡ ಮದರಾಸಿನಲ್ಲಿಯೇ ನೆಲಸುವುದು ಅನಿವಾರ್ಯವಾಗಿತ್ತು. ಆ ದಿನಗಳಲ್ಲಿ ಈಗಿನಂತೆ ಹೆಚ್ಚು ಚಿತ್ರಗಳು ಕನ್ನಡದಲ್ಲಿ ತಯಾರಾಗುತ್ತಿರಲಿಲ್ಲ. ವರ್ಷದಲ್ಲಿ ಮೂರು ಅಥವಾ ನಾಲ್ಕು ಚಿತ್ರಗಳಾದರೆ ಅದೇ ಹೆಚ್ಚು. ಕೆಲವು ವರ್ಷಗಳು ಯಾವುದೇ ಕನ್ನಡ ಚಿತ್ರ ಸೆಟ್ಟೇರುತ್ತಿರಲಿಲ್ಲ. ಆದರೂ ಕನ್ನಡದ ಯಾವುದೇ ತಂತ್ರಜ್ಞ ಅಥವಾ ಕಲಾವಿದ ಮದರಾಸಿನ ಆ ನೆಲೆಯನ್ನು ಬಿಟ್ಟು ಬರುತ್ತಿರಲಿಲ್ಲ. ಯಾವುದೇ ಕ್ಷಣದಲ್ಲಿ ಯಾವುದಾದರೂ ಒಂದು ಚಿತ್ರದಲ್ಲಿನ ಅವಕಾಶ ಹುಡುಕಿಕೊಂಡು ಬರಬಹುದೆಂಬ ನಿರೀಕ್ಷೆಯಲ್ಲಿ ಪ್ರತಿಯೊಬ್ಬರೂ ಚಾತಕಪಕ್ಷಿಯಂತೆ ಕಾಯುತ್ತಿರಬೇಕಾಗಿತ್ತು. ಹೀಗೆ ಇಡೀ ಕನ್ನಡ ಚಿತ್ರೋದ್ಯಮವೇ ಅಲ್ಲಿ ಬೀಡುಬಿಟ್ಟಿತ್ತು. ಕೇವಲ ಬೆರಳೆಣಿಕೆಯಷ್ಟು ಮಂದಿ ಕಲಾವಿದರು-ತಂತ್ರಜ್ಞರು ಬೆಂಗಳೂರು-ಮೈಸೂರುಗಳಲ್ಲಿ ನೆಲಸಿದ್ದರು.

ಇಂತಹ ಸಂದರ್ಭದಲ್ಲಿ ಕನ್ನಡ ಚಲನಚಿತ್ರರಂಗದ ಕಲಾವಿದರ ಸಂಘಟನೆಯ ಬಗ್ಗೆ ಚಿಂತನೆ ಮಾಡಿದವರು ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ 'ಚಲಚ್ಚಿತ್ರ' ವಾರಪತ್ರಿಕೆಯ ಸಂಪಾದಕರಾದ ಕೆ.ವಿ.ಗಂಗರತ್ನ ಮತ್ತು ಅವರ ಪತ್ರಿಕೆಯ ತಂಡ. ಬಹು ದಿನಗಳಿಂದ ಅನೇಕ ಕಲಾವಿದರು ತಮ್ಮದೇ ಆದ ಸಂಘಟನೆಯೊಂದನ್ನು ಹೊಂದುವ ಆಸೆಯನ್ನು ಹೊತ್ತಿದ್ದರಾದರೂ ಅದು ಕಾರ್ಯರೂಪಗೊಳ್ಳುವ ಹಾದಿ ಕಾಣದೆ ಅವರ ಮನಸ್ಸಿನಲ್ಲಿಯೇ ಬೂದಿ ಮುಚ್ಚಿದ ಕೆಂಡದಂತಾಗಿತ್ತು. ಗಂಗರತ್ನ ತಮ್ಮ ಚಿಂತನೆಯನ್ನು ಆ ದಿನಗಳಲ್ಲಿ ನಾಯಕನಟರಾಗಿ ಪ್ರವರ್ಧಮಾನಕ್ಕೆ ಬಂದಿದ್ದ ಕಲ್ಯಾಣ್‌ಕುಮಾರ್ ಮುಂದಿಟ್ಟರು. ಅದರ ಫಲಶ್ರುತಿಯಾಗಿ ೧೯೫೭ನೇ ಜೂನ್ ತಿಂಗಳಲ್ಲಿ ಮದರಾಸಿನಲ್ಲಿ ಕನ್ನಡ ಚಲನಚಿತ್ರರಂಗದ ಕಲಾವಿದರ ಸಭೆಯೊಂದು ನಡೆಯಿತು. ರಂಗಭೂಮಿ ಹಾಗೂ ಚಿತ್ರರಂಗಗಳ ಹಿರಿಯ ನಟ ಎಂ.ವಿ.ಸುಬ್ಬಯ್ಯನಾಯ್ಡು ಆ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಹೆಸರಾಂತ ಕಲಾವಿದರಾದ ಕಲ್ಯಾಣ್‌ಕುಮಾರ್, ಕೆ.ಎಸ್.ಅಶ್ವತ್ಥ್, ಬಿ.ಸರೋಜಾದೇವಿ, ಪದವೀಧರೆ ತಾರೆ ಲಲಿತಾರಾವ್, ಟಿ.ಎನ್.ಬಾಲಕೃಷ್ಣ, ಟಿ.ಆರ್.ನರಸಿಂಹರಾಜು, ಜಿ.ವಿ.ಅಯ್ಯರ್, ಹರಿಣಿ, ಎಚ್.ಎಸ್.ಕೃಷ್ಣಸ್ವಾಮಿ, ಬಿ.ರಮಾದೇವಿ, ಆದವಾನಿ ಲಕ್ಷ್ಮೀದೇವಿ, ಎಂ.ಎಸ್.ಸುಬ್ಬಣ್ಣ, ಹೆಚ್.ರಾಮಚಂದ್ರಶಾಸ್ತ್ರಿ, ಸಿದ್ದಯ್ಯಸ್ವಾಮಿ, ಚಂದ್ರಯ್ಯಸ್ವಾಮಿ ಮತ್ತಿತರರಲ್ಲದೆ ಹಿರಿಯರಾದ ಡಿ.ಕೆಂಪರಾಜ ಅರಸ್, ಆರ್.ನಾಗೇಂದ್ರರಾವ್ ಆ ಸಭೆಯಲ್ಲಿ ಭಾಗವಹಿಸಿದ್ದರು. **'ಕನ್ನಡ ಚಲನಚಿತ್ರ ಕಲಾವಿದರ ಸಂಘ'**ವೊಂದನ್ನು ಸ್ಥಾಪಿಸುವ ಒಮ್ಮತದ ನಿರ್ಧಾರ ಸಭೆಯಲ್ಲಿ ಮೂಡಿತು.

ಕನ್ನಡ ಚಲನಚಿತ್ರರಂಗದ ಕಲಾವಿದರ ಸಂಘದ ಅಂಗರಚನೆಯನ್ನು ಸಿದ್ಧಪಡಿಸಲು ಒಂದು ಸಮಿತಿಯನ್ನು ಆ ಸಭೆ ರಚಿಸಿತು. ಸಮಿತಿಯ ಅಧ್ಯಕ್ಷರಾಗಿ ಎಂ.ವಿ.ಸುಬ್ಬಯ್ಯನಾಯ್ಡು, ಉಪಾಧ್ಯಕ್ಷರಾಗಿ ಜಿ.ವಿ.ಅಯ್ಯರ್, ಕಾರ್ಯದರ್ಶಿಯಾಗಿ ಕಲ್ಯಾಣ್‌ಕುಮಾರ್ ಹಾಗೂ ಜಂಟಿ ಕಾರ್ಯದರ್ಶಿಗಳಾಗಿ ಲಲಿತಾರಾವ್ ಮತ್ತು ಕೆ.ವಿ.ಗಂಗರತ್ನರನ್ನು ಆಯ್ಕೆ ಮಾಡಲಾಯಿತು. ಇದು ಕನ್ನಡ ಚಲನಚಿತ್ರರಂಗದಲ್ಲಿ ಕಲಾವಿದರ ಸಂಘಟನೆಯ ಮೊದಲ ಪ್ರಯತ್ನ. ಆದರೆ ನಂತರದ ದಿನಗಳಲ್ಲಿ ಉತ್ಸಾಹ ಉಳಿಯದೆ, ಸಂಘಟನೆಯ ಪ್ರಯತ್ನ ಸ್ಥಗಿತವಾಯಿತು.

ಹೀಗೆ ಇಡೀ ಕನ್ನಡ ಚಿತ್ರೋದ್ಯಮವೇ ಮದರಾಸಿನಲ್ಲಿ ಉಳಿದಿದ್ದ ಕಾಲದಲ್ಲಿ ಕನ್ನಡ ಚಲನಚಿತ್ರ ನಟನಟಿಯರು ಆಗೊಮ್ಮೆ ಈಗೊಮ್ಮೆ ಪ್ರಾಕೃತಿಕ ದುರಂತಗಳು ಹಾಗೂ ಇನ್ನಾವುದೋ ದುರಂತಗಳು ಸಂಭವಿಸಿದಾಗ ಧಾವಿಸಿ ಬಂದು ನಿಧಿ ಸಂಗ್ರಹಿಸಿಕೊಟ್ಟ ಸಂದರ್ಭಗಳೂ ಉಂಟು. ಅಂತಹ ಒಂದು ಸಂದರ್ಭ ೧೯೬೧ರಲ್ಲಿ ನಡೆದ ಪ್ರವಾಹ ಪರಿಹಾರ ನಿಧಿ ಸಂಗ್ರಹ ಯಾತ್ರೆ. ಮದರಾಸಿನಿಂದ ಬೆಂಗಳೂರಿಗೆ ಬಂದ ಕನ್ನಡ ಚಿತ್ರರಂಗದ ಎಲ್ಲ ಕಲಾವಿದರು ಎರಡು ಬಸ್ಸುಗಳಲ್ಲಿ ಕರ್ನಾಟಕಾದ್ಯಂತ ಸುತ್ತಿ ನಿಧಿ ಸಂಗ್ರಹಿಸಿಕೊಟ್ಟರು. ಆ ಸಂದರ್ಭದಲ್ಲಿ ಕಲಾವಿದರು ಹಾಗೂ ತಂತ್ರಜ್ಞರು ದಿನನಿತ್ಯ ಎದುರಿಸುತ್ತಿರುವ ಹತ್ತು ಹಲವು ಜೀವಂತ ಸಮಸ್ಯೆಗಳ ಬಗ್ಗೆ ಚಿಂತನೆ ವ್ಯಕ್ತವಾಯಿತು.

ಕಲಾವಿದರ ನಡುವಣ ಸಂಪರ್ಕ ಸೇತುವಿನ ಪರಿಕಲ್ಪನೆ ಮೂಡಿತು. ಇದಾದ ನಂತರ ಕಲಾವಿದರ ಸಂಘವೊಂದನ್ನು ಸ್ಥಾಪಿಸಿಕೊಳ್ಳಬೇಕೆಂದು ಕಲಾವಿದರು ಮತ್ತು ಉದ್ಯಮದ ಹಿತೈಷಿಗಳು ಮತ್ತೊಮ್ಮೆ ನಿರ್ಧಾರಕ್ಕೆ ಬಂದರು. ಮೂರು ಬಾರಿ ಸಂಘ ಸ್ಥಾಪನೆಯ ಪ್ರಯತ್ನ ನಡೆಯಿತಾದರೂ ಕಾರಣಾಂತರಗಳಿಂದ ಅದು ಮುಂದೆ ಹೋಯಿತು.

ಇದೇ ಸಂದರ್ಭದಲ್ಲಿ ಕೆಲವೊಂದು ಕಾರಣಗಳಿಂವಾಗಿ - ಮುಖ್ಯವಾಗಿ ಚಿತ್ರನಿರ್ಮಾಣ ಪ್ರಯತ್ನ ಕಡಿಮೆಯಾಗಿ ಕಲಾವಿದರಿಗೆ ಕೆಲಸವೇ ಇಲ್ಲವೆಂಬಂತಾದಾಗ ಕೆಲ ಕಲಾವಿದರು ಸಂಘಟಿತರಾಗಿ ಕನ್ನಡ ರಾಜ್ಯದಾದ್ಯಂತ ನಾಟಕಗಳನ್ನಾಡಿ ಸಹಕಲಾವಿದರಿಗೆ ಜೀವನೋಪಾಯ ಕಲ್ಪಿಸುವ ಪ್ರಯತ್ನ ಮಾಡಿದರು. ನಾಟಕರಂಗವಲ್ಲಿ ಪಳಗಿದ್ದ ಜಿ.ವಿ.ಅಯ್ಯರ್, ರಾಜಕುಮಾರ್, ನರಸಿಂಹರಾಜು ಮತ್ತು ಬಾಲಕೃಷ್ಣ ಅವರು ಕನ್ನಡ ಚಲನಚಿತ್ರ ಕಲಾವಿದರ ಸಂಘವೊಂವನ್ನು ಹುಟ್ಟುಹಾಕಿ ರಾಜ್ಯಾದ್ಯಂತ ಪ್ರವಾಸ ಮಾಡಿ ಜನಪ್ರಿಯ ನಾಟಕಗಳನ್ನು ಪ್ರದರ್ಶಿಸತೊಡಗಿದರು. ಈ ನಾಲ್ವರೊಂದಿಗೆ ಹಲವು ಮಂದಿ ಕಲಾವಿದರೂ ತಂಡವಲ್ಲಿ ಸೇರಿದ್ದರು. ಈ ನಾಲ್ವರು ಪ್ರತಿಭಾವಂತರ ಸಂಗಮದ ಫಲವೇ ಕನ್ನಡ ಚಲನಚಿತ್ರ ಕಲಾವಿದರ ಸಂಘದ ಲಾಂಛನವಲ್ಲಿ ನಿರ್ಮಿತವಾದ ಪ್ರಥಮ ಚಿತ್ರ - 'ರಣಧೀರ ಕಂಠೀರವ'.

ಕರ್ನಾಟಕ ಸರ್ಕಾರ ಕನ್ನಡ ಚಲನಚಿತ್ರರಂಗ ಕನ್ನಡ ನೆಲದಲ್ಲಿಯೆ ನೆಲೆಯೂರಿ ಬೃಹತ್ ಉದ್ಯಮವಾಗಿ ಬೆಳೆಯಬೇಕೆಂಬ ಸದಾಶಯದಿಂದ ಕನ್ನಡ ಚಿತ್ರಗಳಿಗೆ ಸಹಾಯಧನ-ಪ್ರಶಸ್ತಿ ಮತ್ತಿತರ ಸೌಲಭ್ಯಗಳನ್ನು ನೀಡಲಾರಂಭಿಸಿತು. ಕರ್ನಾಟಕವಲ್ಲಿಯೇ ತಯಾರಾಗುವ ಚಿತ್ರಗಳಿಗೆ ಸಹಾಯಧನ ನೀಡುವ ಘೋಷಣೆಯನ್ನು ರಾಜ್ಯ ಸರ್ಕಾರ ಮಾಡಿದಾಗ ಕನ್ನಡ ಚಿತ್ರೋದ್ಯಮ ತನ್ನ ವಾಸ್ತವ್ಯವನ್ನು ಮದರಾಸಿನಿಂದ ಕರ್ನಾಟಕಕ್ಕೆ ಬದಲಾಯಿಸಲೇಬೇಕಾದ ಪರಿಸ್ಥಿತಿ ಉಂಟಾಯಿತು. ಕರ್ನಾಟಕದಲ್ಲಿ ಕನ್ನಡ ಚಿತ್ರೋದ್ಯಮ ನೆಲೆಗೊಳ್ಳುತ್ತಿದ್ದಂತೆ ಕನ್ನಡ ಚಿತ್ರಗಳ ನಿರ್ಮಾಣವೂ ಕೂಡ ಹೆಚ್ಚಾಯಿತು. ನಿರ್ಮಾಣ ಹೆಚ್ಚಾದಂತೆ ಕಲಾವಿದರ ಸಂಖ್ಯೆಯೂ ಹೆಚ್ಚಾಯಿತು. ಹೊಸ ಕಲಾವಿದರ ಆಗಮನದ ಜೊತೆಗೆ ರಂಗಭೂಮಿಯ ಹಿನ್ನೆಲೆಯಿರುವ ಕಲಾವಿದರಿಗೆ ಅವಕಾಶ ದೊರೆಯಲಾರಂಭವಾಯಿತು. ಕಲಾವಿದರ ಬಳಗ ಹೆಚ್ಚಿದಂತೆ ಅವರ ಸಮಸ್ಯೆಗಳೂ ಹೆಚ್ಚಿದವು. ಪರದೆಯ ಮೇಲೆ ಬಣ್ಣ ಹಚ್ಚಿಕೊಂಡು ಹಾಡಿ ಕುಣಿದು ಪ್ರೇಕ್ಷಕರನ್ನು ಕಲ್ಪನಾಲೋಕದಲ್ಲಿ ವಿಹರಿಸುವಂತೆ ಮಾಡುವ ಕಲಾವಿದರ ಬಾಳು ಹೂವಿನ ಹಾಸಿಗೆಯಲ್ಲ, ಸಾಮಾನ್ಯರಂತೆ ಅವರೂ ಸಂಸಾರದ ಕಷ್ಟ-ನಷ್ಟಗಳಲ್ಲಿ ನಲುಗಿ ಹಣ್ಣಾಗುತ್ತಾರೆ. ಅವರ ಬದುಕಿನಲ್ಲಿಯೂ ಅವರದೇ ಆದ ಅವಶ್ಯಕತೆಗಳಿವೆ ಎಂಬುದು ಕಾಣತೊಡಗಿತು. ಕಲಾವಿದರ ಕುಂದುಕೊರತೆಗಳನ್ನು ನಿವಾರಿಸಲು, ಕಷ್ಟ-ಸುಖಗಳನ್ನು ಪರಸ್ಪರ ಹಂಚಿಕೊಳ್ಳಲು, ಪರಸ್ಪರ ಸ್ನೇಹ ಸೌಹಾರ್ದ ಬೆಳೆಸಿಕೊಳ್ಳಲು ಒಂದು ಸಂಘದ ಅವಶ್ಯಕತೆ ತೋರಿತು. ವೃತ್ತಿಬಾಂಧವರ ಮೇಲ್ಮೆಗಾಗಿ ಒಂದಾಗಿ ಶ್ರಮಿಸುವ ಪ್ರಯತ್ನಕ್ಕೆ ಒಂದು ನಿರ್ದಿಷ್ಟ ವೇದಿಕೆ ಅಗತ್ಯವೆನಿಸಿತು. ಕಲಾವಿದರ ಸಂಘ ರೂಪುಗೊಳ್ಳಲು ಅದೇ ಮೂಲವಾಯಿತು. ಕಲಾವಿದರಿಗೆ ಸಂಘಟನೆಯ ಅಗತ್ಯ ಕುರಿತಂತೆ ಸಹಿ ಸಂಗ್ರಹಣೆ ಆರಂಭವಾಯಿತು. ೧೯೭೬ರಿಂದಲೇ ಈ ಕಾರ್ಯ ಪ್ರಾರಂಭವಾಗಿ, ನೂರಾರು ಮಂದಿ ಕಲಾವಿದರ ವಿಳಾಸಗಳನ್ನೂ ಸಂಗ್ರಹಿಸಲಾಯಿತು. ಸುಮಾರು ೧೫ ಮಂದಿ ಸಂಘ ಸ್ಥಾಪನೆಗೆ ಚಾಲನೆ ಕೊಟ್ಟರು. ೧೯೭೮ರಲ್ಲಿ **'ಕರ್ನಾಟಕ ಚಲನಚಿತ್ರ ಕಲಾವಿದರ ಸಂಘ'** ಅಸ್ತಿತ್ವಕ್ಕೆ ಬಂದಿತು. ಬೆಂಗಳೂರಿನ ಕಾವೇರಿ ಕಾಂಟಿನೆಂಟಲ್ ಹೊಟೇಲ್ ಆವರಣದಲ್ಲಿ ಪ್ರಥಮವಾಗಿ ಸಭೆ ಸೇರಿದ ಕಲಾವಿದರು ೧೫ ಮಂದಿಯ ಮೊದಲ ಕಾರ್ಯಕಾರಿ ಸಮಿತಿಯನ್ನು ರಚಿಸಿದರು. ಅಧ್ಯಕ್ಷರಾಗಿ ಡಾ।ರಾಜಕುಮಾರ್, ಉಪಾಧ್ಯಕ್ಷರಾಗಿ ಬಿ.ಸರೋಜಾದೇವಿ ಮತ್ತು ವಿಷ್ಣುವರ್ಧನ್, ಕಾರ್ಯದರ್ಶಿಯಾಗಿ ಎಸ್.ಶಿವರಾಂ, ಉಪ ಕಾರ್ಯದರ್ಶಿಯಾಗಿ ದ್ವಾರಕೀಶ್, ಖಜಾಂಚಿಯಾಗಿ ಸಿ.ಹೆಚ್.ಲೋಕನಾಥ್ ಹಾಗೂ ಸದಸ್ಯರಾಗಿ ಶ್ರೀನಾಥ್, ಅನಂತ್‌ನಾಗ್, ಕೆ.ಎಸ್.ಅಶ್ವತ್ಥ್, ಬಿ.ಎಂ.ವೆಂಕಟೇಶ್, ಮಾನು, ಜಿ.ವಿ.ಶಿವಾನಂದ್, ಶಕ್ತಿಪ್ರಸಾದ್, ಉಮಾಶಿವಕುಮಾರ್ ಮತ್ತು ಶೈಲಶ್ರೀ ಮೊದಲ ಕಾರ್ಯಕಾರಿ ಸಮಿತಿಯ ಸದಸ್ಯರಾದರು.

೧೯೮೦ರ ಸೆಪ್ಟೆಂಬರ್ ೧೪, ಕನ್ನಡ ಚಲನಚಿತ್ರ ಕಲಾವಿದರ ಪಾಲಿಗೆ ಸಂಘಟನೆ ಹಾಗೂ ಏಕತೆಯ ದಿಕ್ಕಿನಲ್ಲಿ ಅಪರೂಪವೆನಿಸುವ ಇತಿಹಾಸ ಸೃಷ್ಟಿಯಾದ ದಿನ. ಕನ್ನಡ ಚಲನಚಿತ್ರ ಕಲಾವಿದರು ತಮ್ಮದೇ ಆದ ಸಂಘವೊಂದನ್ನು ಸ್ಥಾಪಿಸಿಕೊಂಡಿರುವ ವಿಚಾರವನ್ನು ಮೊದಲ ಬಾರಿಗೆ ಸಾರ್ವತ್ರಿಕವಾಗಿ ಪ್ರಕಟಿಸಿದರು, ಬೆಂಗಳೂರಿನ ಕಂಠೀರವ ಸ್ಟೇಡಿಯಂನಲ್ಲಿ ನಡೆದ ರಸಸಂಜೆ ಮನರಂಜನೆ ಕಾರ್ಯಕ್ರಮ ಯಾತ್ರೆಯ ನಾಂದಿಯಾಗಿ ಏರ್ಪಡಿಸಲಾದ ಕಾರ್ಯಕ್ರಮದಲ್ಲಿ. ರಸಸಂಜೆಯೊಂದಿಗೆ ನಿಧಿ ಸಂಗ್ರಹಣೆ ಯತ್ನವೂ ಸೇರಿದ್ದ ಈ ಸಮಾರಂಭವನ್ನು ಆಗಿನ ಮುಖ್ಯಮಂತ್ರಿ ಆರ್.ಗುಂಡೂರಾವ್ ಉದ್ಘಾಟಿಸಿದರು. ಆಗಿನ ಹಣಕಾಸು ಸಚಿವ ವೀರಪ್ಪಮೊಯಿಲಿ ಅಧ್ಯಕ್ಷತೆ ವಹಿಸಿದ್ದರು. ಆಗಿನ ಕಂದಾಯ ಸಚಿವ ಎಸ್.ಬಂಗಾರಪ್ಪ ಸ್ಮರಣ ಸಂಚಿಕೆ ಬಿಡುಗಡೆ ಮಾಡಿದರು.

ಸುಮ್ಮನೆ ಕುಳಿತ ಕಲಾವಿದರು ಮತ್ತೆ ಚಟುವಟಿಕೆಯಿಂದ ತಮ್ಮ ಕಲಾಪ್ರತಿಭೆಯನ್ನು ಪ್ರದರ್ಶಿಸುವ ಮೂಲಕ ತಮ್ಮ ಜೀವನವನ್ನು ಮುಂದುವರಿಸಲು



(ಚಿತ್ರ ೨) 'ಕನ್ನಡ ಚಲನಚಿತ್ರ ಕಲಾವಿದರ ಸಂಘ'ವೊಂದು ೧೯೫೭ರಲ್ಲಿ ಮೊದಲ ಬಾರಿಗೆ ಮದರಾಸಿನಲ್ಲಿ ಚಲನಚಿತ್ರ ಪತ್ರಕರ್ತರ ಸಹಕಾರದಿಂದ ಆರಂಭವಾದಾಗ - ಕಣಗಾಲ್ ಪ್ರಭಾಕರಶಾಸ್ತ್ರಿ, ಹುಣಸೂರು ಕೃಷ್ಣಮೂರ್ತಿ, ಎಂ.ವಿ.ಸುಬ್ಬಯ್ಯನಾಯ್ಡು, ಡಿ.ಕೆಂಪರಾಜ ಅರಸ್, ಕಲ್ಯಾಣ್ ಕುಮಾರ್, ಪತ್ರಕರ್ತ ಕೆ.ವಿ.ಗಂಗರತ್ನ, ಸಿ.ಹೊನ್ನಪ್ಪ ಭಾಗವತರ್, ರೇವತಿ ಕಲ್ಯಾಣ್‌ಕುಮಾರ್, ಮೈನಾವತಿ, ವಿಜಯಭಾಸ್ಕರ್, ಬಿ.ಸರೋಜಾದೇವಿ, ಲಕ್ಷ್ಮೀಬಾಯಿ ಮತ್ತು ಇತರರು.



(ಚಿತ್ರ ೩) ಕನ್ನಡ ಚಲನಚಿತ್ರಗಳ ತಯಾರಿಕೆ ತೀರಾ ಕಡಿಮೆ ಇದ್ದಾಗ, ಚಿತ್ರರಂಗದ ಕಲಾವಿದರು ಎರಡನೆಯ ಬಾರಿಗೆ ಮದರಾಸಿನಲ್ಲಿ 'ಕನ್ನಡ ಚಲನಚಿತ್ರ ಕಲಾವಿದರ ಸಂಘ' ಸ್ಥಾಪಿಸಿಕೊಂಡು ಕನ್ನಡ ನಾಡಿನಾದ್ಯಂತ ನಾಟಕಗಳ ಪ್ರದರ್ಶನ ನೀಡಿದರು. ಆ ಸಂದರ್ಭದಲ್ಲಿ ಪ್ರದರ್ಶಿಸಿದ 'ಎಚ್ಚಮ ನಾಯಕ' ನಾಟಕದಲ್ಲಿ ಚಾಂದ್‌ಖಾನ್‌ನಾಗಿ ಜಿ.ವಿ.ಅಯ್ಯರ್ ಮತ್ತು ಎಚ್ಚಮನಾಯಕನಾಗಿ ರಾಜಕುಮಾರ್

ಹಾಗೂ ನಾಟಕ ಕಲೆಯನ್ನು ಉಳಿಸಲು ಒಂದು ಸುಸಜ್ಜಿತ-ಭವ್ಯ ರಂಗಮಂಟಪ ನಿರ್ಮಾಣ, ಇತರರಿಗೆ ಮನರಂಜನೆ ನೀಡುವ ಕಲಾವಿದರು ತಮ್ಮ ಮನಸ್ಸನ್ನು ರಂಜನೀಯವಾಗಿರಿಸಿಕೊಳ್ಳಲು ವ್ಯವಸ್ಥೆ, ನೆಲೆ ಇಲ್ಲದ ಕಲಾವಿದರಿಗೆ ಮನೆ ಮಾಡಿಕೊಳ್ಳಲು ನೆರವು, ಕಲಾವಿದರು ಪರಸ್ಪರ ಅರಿತು ಸ್ವಯಂ ನಿಯಂತ್ರಣ ಇತರರಿಗೆ ಮಾರ್ಗದರ್ಶನ, ಸಹಾಯ, ಕಲೆ ಮತ್ತು ಕಲಾವಿದರ ಬಗೆಗಿನ ಮಾಹಿತಿಗಳು, ವಿಶೇಷ ಭಾವಚಿತ್ರಗಳನ್ನು ಶೇಖರಿಸಿಡುವ ಸಂಗ್ರಹಾಲಯ ಸ್ಥಾಪನೆ, ಕಲಾವಿದರಿಂದ ಕಲಾವಿದರಿಗೆ ತರಬೇತಿ ನೀಡುವ ಕೇಂದ್ರದ ಸ್ಥಾಪನೆಯ ಜೊತೆಗೆ ವಿಚಾರ ವಿನಿಮಯ, ವಿಚಾರಗೋಷ್ಠಿ ಹಾಗೂ ಸಂಬಂಧ ಬೆಳೆಸಿಕೊಂಡು ಒಳ ಮತ್ತು ಹೊರನಾಡ ವಿಚಾರಗಳ ಬಗ್ಗೆ ಅರಿವು ಪಡೆಯುವುದು - ಇವೆಲ್ಲವೂ ಈ ಸಂಘಟನೆಯ ಮೂಲ ಹಾಗೂ ಮುಖ್ಯ ಉದ್ದೇಶಗಳಾಗಿವೆ. ಈ ನಿಟ್ಟಿನಲ್ಲಿ ನಿವೇಶನವೊಂದನ್ನು ಪಡೆದಿರುವ ಈ ಸಂಘ ಪ್ರತಿ ವರ್ಷವೂ ರಾಜ್ಯೋತ್ಸವ ಆಚರಣೆಯ ಸಂದರ್ಭದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಕಲಾವಿದರನ್ನು ಗುರುತಿಸಿ ಸನ್ಮಾನಿಸುತ್ತಾ ಬಂದಿದೆ. ಟಿ.ಎನ್.ಬಾಲಕೃಷ್ಣ, ಕೆ.ಎಸ್.ಅಶ್ವತ್ಥ್, ಪಂಢರಿಬಾಯಿ, ಕಲ್ಯಾಣ್‌ಕುಮಾರ್, ಪಾಪಮ್ಮ, ಜಯಶ್ರೀ, ಎಂ.ವಿ.ವಾಸುದೇವರಾವ್, ಜಿ.ವಿ.ಅಯ್ಯರ್, ಪ್ರತಿಮಾದೇವಿ, ಹರಿಣಿ ಎಸ್.ರಾವ್, ಲೀಲಾವತಿ, ರಾಜೇಶ್ ಮತ್ತು ಗಂಗಾಧರ್ ಈವರೆಗೆ ಈ ಸಂಘ ಗೌರವಿಸಿದ ಹಿರಿಯ ಕಲಾವಿದರಾಗಿದ್ದಾರೆ. ರಾಜಕುಮಾರ್ ಅವರು ದಾದಾ ಸಾಹೇಬ್ ಫಾಲ್ಕೆಯವರ ಹೆಸರಿನಲ್ಲಿ ಕೇಂದ್ರ ಸರ್ಕಾರವು ನೀಡುವ ಅತ್ಯುನ್ನತ ಹಾಗೂ ಪ್ರತಿಷ್ಠಿತ ಪ್ರಶಸ್ತಿ ಪುರಸ್ಕೃತರಾದ ಸಂದರ್ಭದಲ್ಲಿ ಕರ್ನಾಟಕ ಚಲನಚಿತ್ರ ಕಲಾವಿದರ ಸಂಘ ಅವರನ್ನು ಗೌರವಿಸಿ ಸನ್ಮಾನಿಸಿದೆ.

ದಶಕಕ್ಕೂ ಹೆಚ್ಚು ಕಾಲ ಸಂಘದ ಅಧ್ಯಕ್ಷರಾಗಿ ಸಂಘಟನೆಯ ಮಾರ್ಗದರ್ಶಕರಾಗಿ ಸಂಘವನ್ನು ಮುನ್ನಡೆಸಿದ ರಾಜಕುಮಾರ್ ಗೌರವಾಧ್ಯಕ್ಷರಾದಾಗ ಜನಪ್ರಿಯ ನಟ ಅಂಬರೀಷ್ ಅಧ್ಯಕ್ಷರಾದರು. ಬಿ.ಸರೋಜಾದೇವಿ ಮತ್ತು ಜಯಂತಿ ಉಪಾಧ್ಯಕ್ಷರಾಗಿ, ಎಂ.ಕೆ.ಸುಂದರರಾಜ್ ಕಾರ್ಯದರ್ಶಿಯಾಗಿ, ಜೈಜಗದೀಶ್ ಜಂಟಿ ಕಾರ್ಯದರ್ಶಿಯಾಗಿ, ಜಿ.ವಿ.ಶಿವಾನಂದ್ ಕೋಶಾಧಿಕಾರಿಯಾಗಿ ಮತ್ತು ಪ್ರಮಿಳಾ ಜೋಷಾಯ್, ಡಿಂಗ್ರಿ ನಾಗರಾಜ್, ಎಂ.ಎಸ್.ಕಾರಂತ್, ಅವಿನಾಶ್, ಮಮತಾರಾವ್, ಬ್ಯಾಂಕ್ ಜನಾರ್ದನ್, ಎಂ.ಡಿ.ಕೃಷ್ಣೇಗೌಡ, ಕೆ.ಎಸ್.ರಮೇಶ್ ಹಾಗೂ ಎಂ.ಡಿ.ಕೌಶಿಕ್ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಅಂಬರೀಷ್‌ರ ಜೊತೆಗೂಡಿದರು.

## ಅಶಕ್ತ ಕಲಾವಿದರ ಕಲ್ಯಾಣ ಸಮಿತಿ

ಚಲನಚಿತ್ರರಂಗ ಹಾಗೂ ರಂಗಭೂಮಿಗಳಲ್ಲಿ ದುಡಿಯುವ ಕಲಾವಿದರಲ್ಲಿ ಬಹಳಷ್ಟು ಮಂದಿಗೆ ಬದುಕಿನಲ್ಲಿ ಭದ್ರತೆಯೇ ಇರುವುದಿಲ್ಲ. ಬಣ್ಣ ಹಚ್ಚಿಕೊಂಡು ಪಾತ್ರವೇ ತಾವಾಗಿ ನೋಡುಗರಿಗೆ ರಂಜನೆಯೊದಗಿಸಿ ಮುದ ನೀಡುವ ಕಲಾವಿದರಾಗಿದ್ದರೂ ಅವರಲ್ಲಿ ಅನೇಕರು ಜೀವನದ ಕಷ್ಟ ಕಾರ್ಪಣ್ಯಗಳ ಬೇಗೆಗ ಹೊರತಾದವರೇನಲ್ಲ. ವೃದ್ಧಾಪ್ಯ, ಬಡತನ, ಕಷ್ಟಕಾರ್ಪಣ್ಯ, ಅವಕಾಶ ವಂಚನೆ ಇವು ಅಂಥವರನ್ನು ಅಶಕ್ತರನ್ನಾಗಿಸಿಬಿಡುತ್ತವೆ. ಕಲೆಯನ್ನುಳಿದು ಬೇರಾವ ವೃತ್ತಿಯೂ ಗೊತ್ತಿಲ್ಲದ ಅವರಿಗೆ ಸಮಾಜದಲ್ಲಿ ಬದುಕೇ ದುಸ್ತರವೆನಿಸುತ್ತದೆ. ಅಂತಹ ಅಶಕ್ತ ಕಲಾವಿದರಿಗೆ ನೆರವಾಗುವ ಹಾದಿಯ ಬಗ್ಗೆ ಚಿಂತನೆ ನಡೆಸಿದವರು ಕನ್ನಡ ಚಿತ್ರರಂಗದ ಜನಪ್ರಿಯ ನಟ ಕಲ್ಯಾಣ್‌ಕುಮಾರ್. ಅದಕ್ಕಾಗಿ ಒಂದು ಸಂಸ್ಥೆಯನ್ನು ಕಟ್ಟಿ ಬೆಳೆಸುವ ಹಂಬಲದಿಂದ ಹಿರಿಯ ಕಲಾವಿದರಿಂದ ಗುಬ್ಬಿ ವೀರಣ್ಣ, ಆರ್.ನಾಗೇಂದ್ರರಾವ್, ಬಿ.ಜಯಮ್ಮ, ನಿರ್ಮಾಪಕ ಟಿ.ಎಸ್.ಕರಿಬಸವಯ್ಯ, ವಿತರಕ ಕೆ.ವಿ.ಗುಪ್ತ ಮತ್ತು ತಮ್ಮ ಗೆಳೆಯರನೇಕರನ್ನು ಈ ನಿಟ್ಟಿನಲ್ಲಿ ಸಂಪರ್ಕಿಸಿದರು, ಸಮಾಲೋಚಿಸಿದರು. ಅದರ ಫಲಶ್ರುತಿಯಾಗಿ ೧೯೬೯ರ ಮಾರ್ಚ್ ೯ರಂದು ಅಶಕ್ತ ಕಲಾವಿದರ ಕಲ್ಯಾಣ ಸಮಿತಿ ಬೆಂಗಳೂರು ನಗರದಲ್ಲಿ ಸ್ಥಾಪನೆಗೊಂಡಿತು. ಜೂನ್ ೨ರಂದು ರಾಜ್ಯಮಟ್ಟದಲ್ಲಿ ಹಾಗೂ ಆಗಸ್ಟ್ ತಿಂಗಳಲ್ಲಿ ರಾಷ್ಟ್ರಮಟ್ಟದಲ್ಲಿ ನೋಂದಾವಣೆಯಾದ ಈ ಸಂಘದ ನಿಧಿಗೆ ಕಲ್ಯಾಣ್‌ಕುಮಾರ್ ಪ್ರಥಮ ದಾನಿಯಾದರಷ್ಟೇ ಅಲ್ಲ, ಸ್ಥಾಪಕ ಅಧ್ಯಕ್ಷರಾಗಿಯೂ ಆಯ್ಕೆಯಾದರು. ಸಮಿತಿಯ ಆರಂಭದಿಂದ ಈವರೆಗೆ ಮ.ನ.ರಾಮನರಸಯ್ಯನವರು ಪ್ರಧಾನ ಕಾರ್ಯದರ್ಶಿ ಹೊಣೆ ಹೊತ್ತು ಸಂಸ್ಥೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ತ್ರಿಭಾಷಾ ತಾರೆ ಬಿ.ಜಯಮ್ಮ ಸ್ಥಾಪಕ ಖಜಾಂಚಿಗಳು. ನಂತರದಲ್ಲಿ ಸಮಿತಿಯ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದರು. ಆರ್.ನಾಗೇಂದ್ರರಾಯರು ಸಲಹಾ ಸಮಿತಿಯ ಅಧ್ಯಕ್ಷರಾದರು.

ಈ ಸಮಿತಿ ಸ್ಥಾಪನೆಯಾದ ತರುಣದಲ್ಲೇ ಕನ್ನಡ ಚಿತ್ರರಂಗದ ಪೋಷಕ ನಟ ಕುಪ್ಪುರಾಜ್ ಅಪಘಾತವೊಂದರಲ್ಲಿ ಸಿಲುಕಿದರು. ಅವರ ಕಾಲಿನ ಮೂಳೆ ಮುರಿಯಿತು. ಮೇ ೧೫ರಂದು ಸಮಿತಿ ಕುಪ್ಪುರಾಜ್ ಅವರ ಕಾಲಿನ ಚಿಕಿತ್ಸೆಯ ಭಾರವನ್ನು ಸ್ವೀಕರಿಸಿತು. ಚಿಕಿತ್ಸೆಯಿಂದ ಕಾಲು ಮರಳಿ ಪಡೆದ ಕುಪ್ಪುರಾಜ್ ಊರುಗೋಲಿನ ನೆರವಿನಿಂದ ನಡೆಯುವ ಮಟ್ಟಿಗೆ ಗುಣಮುಖರಾದಾಗ ಸಮಿತಿ ಅವರನ್ನು ಬೀಳ್ಕೊಟ್ಟಿತು. ನಂತರದಲ್ಲಿ ಅಶಕ್ತ ಕಲಾವಿದರ ಕಲ್ಯಾಣ ಸಮಿತಿಯು ಚಲನಚಿತ್ರರಂಗ ಹಾಗೂ ರಂಗಭೂಮಿಯಲ್ಲಿ ದುಡಿದು ಹಣ್ಣಾದ, ಅಶಕ್ತರಾದ ಕಲಾವಿದರನ್ನು ಗುರುತಿಸಿ ಅವರ ಅನಾರೋಗ್ಯದ ಸಂದರ್ಭದಲ್ಲಿನ ಚಿಕಿತ್ಸೆಗೆ, ಅವರ ಹೆಣ್ಣು ಮಕ್ಕಳ ಮದುವೆಯ ಸಂದರ್ಭಗಳಲ್ಲಿ ಮಾಂಗಲ್ಯ, ಅರಿಶಿನ-ಕುಂಕುಮ ವೆಚ್ಚಕ್ಕೆ ನೆರವು ನೀಡುತ್ತಾ ಬಂದಿತು. ಬಿಜಾಪುರದ ಬಾಬುರಾವ್ ರಾಯಚೂರ್, ಆರ್.ನಾಗೇಂದ್ರರಾವ್, ಮುರಾರಾಚಾರ್, ನಾಡಿಗೇರ ಕೃಷ್ಣರಾವ್, ಹಾರ್ಮೋನಿಯಂ ಕೃಷ್ಣರಾವ್, ಹವ್ಯಾಸಿ ಕಲಾವಿದ ಶ್ರೀಕಾಂತ್‌ರ ಕುಟುಂಬ, ಪದ್ಮರಾಜಮ್ಮ, ಸತ್ಯನಾರಾಯಣರಾವ್, ರಮೇಶ್‌ಕುಮಾರ್, ಶ್ರೀಕಂಠಯ್ಯ, ಹೆಚ್.ಎಂ.ಎಸ್.ಆರಾಧ್ಯ, ಸಂಬಂಧಮೂರ್ತಿ ಭಾಗವತರ್, ಕೃಷ್ಣಪ್ಪ, ಹಾರ್ಮೋನಿಯಂ ಪಟು ವೆಂಕಟಾಚಲಯ್ಯನವರ ಧರ್ಮಪತ್ನಿ, ಆಕಾಶವಾಣಿ ಕಲಾವಿದ ಎಂ.ಎಸ್.ನಂಜಪ್ಪನವರ ಧರ್ಮಪತ್ನಿ, ಮೃದಂಗಪಟು ಗೋವಿಂದರಾಜು ಅವರ ಕುಟುಂಬ, ಜಗದಾಂಬ, ಯು.ಮಹಾಬಲರಾವ್, ಮೃದಂಗ ವಿದ್ವಾನ್ ಹೆಚ್.ಎಂ.ಮಾಳಿಗಾಚಾರ್ ಮುಂತಾದವರಿಗೆ ಸಮಿತಿ ನೆರವು ನೀಡಿತು.

ಮುಂದೆ ಸಮಿತಿಯ ಪದಾಧಿಕಾರಿಗಳಾದ ಮಾಸ್ಟರ್ ಹಿರಣ್ಣಯ್ಯ, ಗುಬ್ಬಿ ಕಂಪೆನಿಯ ಜಿ.ವಿ.ಚನ್ನಬಸವಣ್ಣ, ಕಂಠೀರವ ಕಲಾವೃಂದ ಮತ್ತಿತರರು ತಮ್ಮ ನಾಟಕ ಪ್ರದರ್ಶನದಿಂದ ಬಂದ ಗಳಿಕೆಯನ್ನು ಸಮಿತಿಯ ನಿಧಿಗೆ ನೀಡಿ, ಸಮಿತಿಯ ಆರ್ಥಿಕ ಸ್ಥಿತಿ ಬಲಪಡಿಸಿದರು. ಗುಬ್ಬಿ ವೀರಣ್ಣನವರ ಪುತ್ರರಾದ ಜಿ.ವಿ.ಶಿವಾನಂದ್



ಮ.ನ.ರಾಮನರಸಯ್ಯ

ಸ್ಥಗಿತಗೊಂಡ ತಪ್ಪು 'ರಂಗಭೂಮಿ ಕಲಾವಿದರ ಹಿತಾಸಕ್ತಿ ಸಂಘ'ದ ಆರ್ಥಿಕ ಬಲವನ್ನು ಈ ಸಮಿತಿಗೆ ವರ್ಗಾಯಿಸಿದರು. ನಟ ಹಾಗೂ ಹರಿಕಥಾಪಟು ಗುರುರಾಜುಲುನಾಯ್ಡು (ಅರುಣಕುಮಾರ್) ಸಮಿತಿಯ ನಿಧಿಗಾಗಿ ಹರಿಕಥಾ ಕಾರ್ಯಕ್ರಮದ ಮೂಲಕ ಹಣ ಸಂಗ್ರಹಿಸಿ ಕೊಟ್ಟರಲ್ಲದೆ ಕಾರ್ಯದರ್ಶಿಯಾಗಿಯೂ ಸಮಿತಿಯ ಮುನ್ನಡೆಗೆ ಕಾರಣರಾದರು.

ಕಲ್ಯಾಣ್‌ಕುಮಾರ್ ನಂತರ ಚಿತ್ರನಿರ್ಮಾಪಕ ಟಿ.ಎಸ್.ಕರಿಬಸಯ್ಯ, ಹಿರಿಯ ಕಲಾವಿದೆ ಬಿ.ಜಯಮ್ಮನವರಂತಹ ಹಿರಿಯರು ಈ ಸಮಿತಿಯ ಅಧ್ಯಕ್ಷರಾದರು. ಹಿರಿಯ ನಿರ್ಮಾಪಕ-ವಿತರಕರಾದ ಸಿ.ವಿ.ಎಲ್.ಶಾಸ್ತ್ರಿ ಸಮಿತಿಯ ಅಧ್ಯಕ್ಷರು. ನಿರ್ದೇಶಕ ರವೀ (ಕೆ.ಎಸ್.ಎಲ್.ಸ್ವಾಮಿ) ಮತ್ತು ವಿತರಕ ಕೆ.ವಿ.ಗುಪ್ತ ಉಪಾಧ್ಯಕ್ಷರು. ವಿತರಕ ಬಿ.ಟಿ.ಎಸ್.ರಾಜು, ನಿರ್ಮಾಪಕ ಎಸ್.ಎಸ್.ವೈದ್ಯ, ರಾಜಕಾರಣಿ ನಾಗನೂರ್, ಉದ್ಯಮಿ ಎಸ್.ಶ್ರೀನಿವಾಸ್ ಉಡುಪ, ಕಲಾವಿದೆ ರೇವತಿ ಕಲ್ಯಾಣ್‌ಕುಮಾರ್, ನಗೆಪಟು ಟಿ.ಆರ್.ನರಸಿಂಹರಾಜು, ಪತ್ರಕರ್ತ ಶ್ರೀಕೃಪ. ಸಮಾಜಸೇವಕ ಮೋಹನ್‌ದೇವ ಆಳ್ವ, ಕಾನೂನು ತಜ್ಞ ಹೆಚ್.ಎಸ್.ರಾಮಚಂದ್ರ, ನಿರ್ಮಾಪಕ-ಸಾಹಿತಿ ಬಸವೇಗೌಡ, ಶಿಕ್ಷಕ ಅಶ್ವತ್ಥನಾರಾಯಣ, ಚಿತ್ರಮಾಹಿತಿ ಸಂಗ್ರಾಹಕ ಎಸ್.ಜಯಸಿಂಹ, ಪತ್ರಿಕಾ ಸಂಪರ್ಕಾಧಿಕಾರಿ ವಿಜಯಕುಮಾರ್ ಮತ್ತಿತರರು ಕಾಲಕಾಲಕ್ಕೆ ಸಮಿತಿಯ ಕಾರ್ಯಕಾರಿಣಿಯಲ್ಲಿದ್ದು ಸಂಸ್ಥೆಯ ಬೆಳವಣಿಗೆಗೆ ನೆರವಾಗಿದ್ದರು.

೧೯೭೧ರ ನವೆಂಬರ್‌ನಲ್ಲಿ ಅಂದಿನ ರಾಜ್ಯಪಾಲರಾದ ಧರ್ಮವೀರ ಅವರನ್ನು ಗುಬ್ಬಿ ವೀರಣ್ಣ ಹಾಗೂ ಕಲ್ಯಾಣ್‌ಕುಮಾರ್ ನೇತೃತ್ವದಲ್ಲಿ ಸಮಿತಿಯ ಕಾರ್ಯಕಾರಿಣಿ ಸದಸ್ಯರು ಭೇಟಿ ಮಾಡಿ ಅಶಕ್ತ ಕಲಾವಿದರ ಕಾಲೋನಿ ನಿರ್ಮಾಣಕ್ಕಾಗಿ ನಿವೇಶನ, ಮನೆ ಕಟ್ಟಿಕೊಳ್ಳಲು ಅಶಕ್ತ ಕಲಾವಿದರಿಗೆ ಸುಲಭ ಕಂತಿನಲ್ಲಿ ಮರುಪಾವತಿ ಮಾಡಬಹುದಾದ ಸಾಲಸೌಲಭ್ಯ, ಅಶಕ್ತ ಕಲಾವಿದರ ಮಕ್ಕಳ ವಿದ್ಯಾಭ್ಯಾಸ ಹಾಗೂ ಹೆಣ್ಣು ಮಕ್ಕಳ ವಿವಾಹಗಳಿಗೆ ನೆರವಾಗಲು ಸರ್ಕಾರದಿಂದ ವಾರ್ಷಿಕ ಅನುದಾನ ಮುಂತಾದ ಬೇಡಿಕೆಗಳನ್ನು ಅವರ ಮುಂದಿಟ್ಟರು.

ಅವಕಾಶ ವಂಚಿತರಾದ ಅಶಕ್ತ ಕಲಾವಿದರಿಗಾಗಿ ರಂಗಮಂದಿರವೊಂದನ್ನೂ ಆಸರೆ ರಹಿತರಿಗೆ ಆಶ್ರಯ ಕಲ್ಪಿಸಲು ವಸತಿ ಸೌಲಭ್ಯವನ್ನೂ ಒದಗಿಸುವ ಉದ್ದೇಶದಿಂದ ಸಮಿತಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ದೊಡ್ಡ ಮೊತ್ತದ ಹಣ ತೆತ್ತು ನಿವೇಶನ ಪಡೆಯಲು ಪ್ರಯತ್ನಿಸಿತು. ಆದರೆ ಪ್ರಾಧಿಕಾರದ ನಿರ್ಲಕ್ಷ್ಯ ಹಾಗೂ ಅಸಡ್ಡೆಗಳ ಫಲವಾಗಿ ನನೆಗುದಿಗೆ ಬಿದ್ದು ನ್ಯಾಯಾಲಯದ ಕಟಕಟೆ ಹತ್ತಿದೆ.

ಸರ್ಕಾರ ಹಾಗೂ ಉದ್ಯಮದಿಂದ ನೆರವುನಿಧಿ ಇಲ್ಲದಿದ್ದರೂ ಸಮಿತಿಯು ತಾನು ರೂಢಿಸಿಕೊಂಡ ಸಂಪನ್ಮೂಲಗಳಿಂದಲೇ ಜೀವನ ನಿರ್ವಹಣೆಯೂ ಅಸಾಧ್ಯವಾಗಿರುವ ಅಶಕ್ತರಾಗಿರುವ ಕಲಾವಿದರನ್ನು ಗುರುತಿಸಿ, ಪ್ರತಿ ತಿಂಗಳೂ ಅವರವರ ಮನೆಯ ಬಾಗಿಲಿಗೇ ಮಾಸಾಶನವನ್ನು ತಲುಪಿಸುತ್ತಿದೆ. ಅಶಕ್ತರಾದ ಕಲಾವಿದರ ಮಕ್ಕಳ ವಿದ್ಯಾಭ್ಯಾಸಕ್ಕೆ ನೆರವಾಗುತ್ತಿದೆ. ಅಂತಹ ಕಲಾವಿದರ ಹೆಣ್ಣುಮಕ್ಕಳ ವಿವಾಹಕ್ಕೂ ನೆರವು ನೀಡುತ್ತಾ ಬಂದಿದೆ. ಪ್ರಾಯಶಃ ಈ ನಿಟ್ಟಿನಲ್ಲಿ ಶ್ರಮಿಸುತ್ತಿರುವ ಸಂಘ ಇದೊಂದೇ ಎನ್ನಬಹುದು.

## ಕರ್ನಾಟಕ ಚಲನಚಿತ್ರ ಸ್ಥಿರಛಾಯಾಗ್ರಾಹಕರ ಸಂಘ

ಚಲನಚಿತ್ರರಂಗದಲ್ಲಿ ಸ್ಥಿರಚಿತ್ರ ಛಾಯಾಗ್ರಾಹಕರದೂ ಮುಖ್ಯವಾದ ಪಾತ್ರ ಎನ್ನಬಹುದು. ಚಿತ್ರದ ತಯಾರಿಕೆಯ ಆರಂಭದ ಮುಹೂರ್ತ ದಿನದಿಂದ ಅಂತಿಮ ಚಿತ್ರೀಕರಣ ದಿನದವರೆಗೂ ಅವರ ಅಗತ್ಯ ಚಿತ್ರರಂಗಕ್ಕಿರುತ್ತದೆ. ಮುಹೂರ್ತ ಸಮಾರಂಭದ ಸ್ಥಿರಚಿತ್ರಗಳಿಂದ ಹಿಡಿದು ಪ್ರತಿದಿನದ ಚಿತ್ರೀಕರಣ ಸಮಯದಲ್ಲಿ ಸನ್ನಿವೇಶಗಳ ಸ್ಥಿರಚಿತ್ರಗಳನ್ನು ಸಿದ್ಧಪಡಿಸಿಕೊಡುವುದು, ಅವುಗಳ ಆಲ್ಬಮ್ ಮಾಡಿಕೊಡುವುದು ಸ್ಥಿರಚಿತ್ರ ಛಾಯಾಗ್ರಾಹಕರು. ಇವರು ಒದಗಿಸುವ ಚಿತ್ರಗಳನ್ನು ನಿರ್ಮಾಪಕರು, ಪತ್ರಿಕಾ ಪ್ರಚಾರ - ಪತ್ರಿಕಾ ಜಾಹಿರಾತು - ಪೋಸ್ಟರು ಹಾಗೂ ಬ್ಯಾನರುಗಳ ವಿನ್ಯಾಸಗಳು, ಚಿತ್ರಮಂದಿರಗಳಲ್ಲಿ ಪ್ರದರ್ಶಿಸಲಾಗುವ ಶೋ ಕಾರ್ಡ್‌ಗಳು ಮುಂತಾದ ಪ್ರಚಾರ ಕಾರ್ಯಗಳಿಗೆ ಬಳಸಿಕೊಳ್ಳುವರು. ಚಿತ್ರದ ವ್ಯಾಪಾರ ಸಂಬಂಧದಲ್ಲಿ ಚಿತ್ರ ವಿತರಕರು, ಚಿತ್ರ ಕೊಳ್ಳುವವರು ಹಾಗೂ ಚಿತ್ರಗಳ ಪ್ರದರ್ಶಕರಾದ ಚಿತ್ರಮಂದಿರಗಳವರಿಗೆ ಚಿತ್ರದ ಬಗ್ಗೆ ಮಾಹಿತಿ ನೀಡಲು ಆಲ್ಬಮ್ ಬಳಸುವುದು ಸಾಮಾನ್ಯ. ಈ ಕಾರಣಗಳಿಂದ ಚಲನಚಿತ್ರ ನಿರ್ಮಾಣ ಕ್ಷೇತ್ರದಲ್ಲಿ ಸ್ಥಿರಚಿತ್ರ ಛಾಯಾಗ್ರಾಹಕರ ಪಾತ್ರವೂ ಮುಖ್ಯ.

ಕನ್ನಡ ಚಿತ್ರರಂಗದಲ್ಲಿ ಈ ವೃತ್ತಿಯಲ್ಲಿ ಹೆಸರಾದವರಲ್ಲಿ ವೃಷಭೇಂದ್ರಯ್ಯ, ಅಶ್ವತ್ಥನಾರಾಯಣ್ ಹಾಗೂ ಎಂ.ಆರ್.ಕೆ.ಮೂರ್ತಿ ಹಿರಿಯರು, ಪ್ರಮುಖರು. ನಂತರದಲ್ಲಿ ಮದರಾಸಿನ ಶ್ರೀಸ್ಟಾರ್ಸ್ ಸ್ಟುಡಿಯೋವಿನಲ್ಲಿದ್ದು ಸ್ವತಂತ್ರರಾಗಿ ವೃತ್ತಿ ಆರಂಭಿಸಿದ ಚೆಲ್ಲಪ್ಪ ಹೆಸರಾದವರು. ಪ್ರಸ್ತುತ ಕನ್ನಡದಲ್ಲಿ ನಲವತ್ತಕ್ಕೂ ಹೆಚ್ಚು ಮಂದಿ ಸ್ಥಿರಚಿತ್ರ ಛಾಯಾಗ್ರಾಹಕರು ವೃತ್ತಿನಿರತರಾಗಿದ್ದಾರೆ. ಸ್ಥಿರಚಿತ್ರ ಛಾಯಾಗ್ರಾಹಕರಾಗಿದ್ದ ಕೆಲವರು ಚಿತ್ರಛಾಯಾಗ್ರಾಹಕರಾಗಿ, ಚಿತ್ರ ನಿರ್ದೇಶಕರಾಗಿ, ಚಿತ್ರನಿರ್ಮಾಪಕರೂ ಆಗಿದ್ದಾರೆ.

೧೯೮೫ರಲ್ಲಿ ಪ್ರಗತಿ ಸ್ಟುಡಿಯೋವಿನ ಅಶ್ವತ್ಥನಾರಾಯಣ ಅವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಚಲನಚಿತ್ರ ಸ್ಥಿರಛಾಯಾಗ್ರಾಹಕರ ಸಂಘ ಬೆಂಗಳೂರಿನಲ್ಲಿ ಸ್ಥಾಪನೆಯಾಯಿತು. ಅಂದಿನಿಂದಲೂ ಅವರೇ ಸಂಘದ ಅಧ್ಯಕ್ಷರಾಗಿ ಮುಂದುವರೆದಿದ್ದಾರೆ. ನಿರ್ಮಾಪಕ-ನಿರ್ದೇಶಕ-ಛಾಯಾಗ್ರಾಹಕರಾಗಿರುವ ಜೆ.ಜಿ.ಕೃಷ್ಣ ಈ ಸಂಘದ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದಾರೆ.

ಸಂಘದ ಅಧ್ಯಕ್ಷರಾಗಿ ಅಶ್ವತ್ಥನಾರಾಯಣ್, ಕಾರ್ಯದರ್ಶಿಯಾಗಿ ಹೆಚ್.ಆರ್.ಮಲ್ಲಾರಾಧ್ಯ ಹಾಗೂ ಖಜಾಂಚಿಯಾಗಿ ಎಂ.ಎಸ್.ಶಂಕರ್‌ಸಿಂಗ್ ಕಾರ್ಯ ನಿರ್ವಹಿಸಿದರು.

## ತಂತ್ರಜ್ಞರ ಗಿಲ್ಡ್

ಎಪ್ಪತ್ತರ ದಶಕದಲ್ಲಿ ಕನ್ನಡ ಚಿತ್ರಗಳಲ್ಲಿ ಕೆಲಸ ಮಾಡುತ್ತಿರುವ ತಂತ್ರಜ್ಞರೆಲ್ಲರೂ ಸೇರಿ ಸಂಘಟನೆಯೊಂದನ್ನು ರಚಿಸಿಕೊಳ್ಳಲು ಪ್ರಯತ್ನಿಸಿದರು. ಆ ಕಾಲದಲ್ಲಿ ಚಲನಚಿತ್ರ ನಿರ್ದೇಶಕರು, ಛಾಯಾಗ್ರಾಹಕರು, ಮೇಕಪ್ ಪಟುಗಳು, ಸಂಕಲನಕಾರರು, ಕಲಾನಿರ್ದೇಶಕರು, ಶಬ್ದಗ್ರಾಹಕರು, ನಿರ್ಮಾಣ ವ್ಯವಸ್ಥಾಪಕರು - ಹೀಗೆ ಚಿತ್ರರಂಗದಲ್ಲಿ ತೆರೆಯ ಮರೆಯಲ್ಲಿ ಕೆಲಸ ಮಾಡುತ್ತಿದ್ದ ತಂತ್ರಜ್ಞರು ಮದರಾಸು, ಮೈಸೂರು ಹಾಗೂ ಬೆಂಗಳೂರುಗಳಲ್ಲಿದ್ದರು.

ಆಗಿನ ಮೈಸೂರು ರಾಜ್ಯದಲ್ಲಿ ಕೆಲಸ ಮಾಡುತ್ತಿರುವ ಸಿನಿತಂತ್ರಜ್ಞರಿಗೆ ಅವರ ಹಿತವನ್ನು ರಕ್ಷಿಸುವ, ಅವರಿಗೆ ಉತ್ತಮ ಸೇವಾ ಸೌಲಭ್ಯವನ್ನು ಒದಗಿಸುವ ಒಂದು ಸಂಘಟನೆ ಅಗತ್ಯವಾಗಿತ್ತು. ೧೯೭೧ರ ಆಗಸ್ಟ್ ೨೫ರಂದು ಮೈಸೂರು ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ಸಿನಿಮಾ ತಂತ್ರಜ್ಞರ ಸಭೆಯೊಂದನ್ನು ಕರೆಯಲಾಯಿತು. ಚಲನಚಿತ್ರರಂಗದ ತಾಂತ್ರಿಕ ವರ್ಗದಲ್ಲಿ ಕೆಲಸ ಮಾಡುತ್ತಿರುವ ತಂತ್ರಜ್ಞರು ಮದರಾಸು, ಮೈಸೂರು, ಬೆಂಗಳೂರನ್ನು ಪ್ರತಿನಿಧಿಸಿ ಸಭೆಯಲ್ಲಿ ಪಾಲ್ಗೊಂಡಿದ್ದರು.

ಈ ಸಭೆಯಲ್ಲಿ ಸಂಘಟನೆಯ ಅಗತ್ಯವನ್ನು ಮನಗಂಡ ತಂತ್ರಜ್ಞರು ಮೈಸೂರು ಸ್ಟೇಟ್ ಸಿನಿ ಟೆಕ್ನೀಶಿಯನ್ಸ್ ಗಿಲ್ಡ್ ಸ್ಥಾಪಿಸಿಕೊಳ್ಳಲು ತೀರ್ಮಾನಿಸಿದರು. ಆ ಹೊತ್ತಿಗಾಗಲೇ ಎಂಬತ್ತೈದಕ್ಕೂ ಹೆಚ್ಚು ಮಂದಿ ಸದಸ್ಯರಾಗಿದ್ದು, ಇನ್ನೂ ಎಪ್ಪತ್ತೈದು ಮಂದಿ ಸದಸ್ಯರಾಗಲು ಒಪ್ಪಿಗೆ ನೀಡಿದ್ದರು. 'ಬಂಗಾರದ ಮನುಷ್ಯ' ನಿರ್ಮಾಪಕರಲ್ಲೊಬ್ಬರಾದ ಕೆ.ಎ.ಗೋಪಾಲ್, ಚಲನಚಿತ್ರ ನಿರ್ದೇಶಕ ಬಿ.ಎ.ಅರಸುಕುಮಾರ್ ಹಾಗೂ ಪ್ರಸಿದ್ಧ ಛಾಯಾಗ್ರಾಹಕ ಎಸ್.ಜಿ.ರಾವ್ ಈ ಸಂಘಟನೆಯ ಪ್ರೇರಕಶಕ್ತಿಯಾಗಿ ಕೆಲಸ ಮಾಡಿದರು. ತೀರ್ಮಾನ ಕಾರ್ಯರೂಪಕ್ಕೆ ಬಂದು ಗಿಲ್ಡ್ ರಚನೆಯಾಯಿತು. ನಟ ರಾಜಕುಮಾರ್ ಗಿಲ್ಡ್‌ನ ಪೋಷಕರಾಗಿರಲು ಒಪ್ಪಿದರು. ಗಿಲ್ಡ್‌ನ ಪದಾಧಿಕಾರಿಗಳು ಹಾಗೂ ಕಾರ್ಯಕಾರಿ ಸಮಿತಿಯ ಆಯ್ಕೆ ನಡೆಯಿತು.

ನಿರ್ದೇಶಕ ವೈ.ಆರ್.ಸ್ವಾಮಿ (ಅಧ್ಯಕ್ಷರು), ನಿರ್ದೇಶಕ ಪೇಕೇಟಿ ಶಿವರಾಂ (ಉಪಾಧ್ಯಕ್ಷರು), ನಿರ್ಮಾಪಕ-ನಿರ್ವಾಹಕ ಕೆ.ಎ.ಗೋಪಾಲ್ (ಉಪಾಧ್ಯಕ್ಷರು), ನಿರ್ದೇಶಕ ಬಿ.ಎ.ಅರಸುಕುಮಾರ್ (ಪ್ರಧಾನ ಕಾರ್ಯದರ್ಶಿ), ಛಾಯಾಗ್ರಾಹಕ ಎಸ್.ಜಿ.ರಾವ್, ಶಬ್ದಗ್ರಾಹಕ ಕೆ.ಆರ್.ಸೀತಾರಾಮ್ ಮತ್ತು ಶಬ್ದಗ್ರಾಹಕ ಕೆ.ಶ್ರೀನಿವಾಸ್ (ಜಂಟಿ ಕಾರ್ಯದರ್ಶಿಗಳು), ನಿರ್ಮಾಣ ನಿರ್ವಾಹಕ ಆರ್.ಲಕ್ಷ್ಮಣ್ (ಖಜಾಂಚಿ) ಹಾಗೂ ನಿರ್ದೇಶಕ ಎಸ್.ಲಕ್ಷ್ಮೀನಾರಾಯಣ್, ಛಾಯಾಗ್ರಾಹಕ ಗೋವಿಂದಸ್ವಾಮಿ, ಸಂಕಲನಕಾರ ಜಿ.ವೆಂಕಟರಾಮನ್, ನಿರ್ದೇಶಕ ಕೆ.ಎಂ.ಶಂಕರಪ್ಪ, ನಿರ್ದೇಶಕ ಬಿ.ನಾಗೇಶ್ ಬಾಬ, ಲ್ಯಾಬ್ ಚೀಫ್ ಸೀತಾರಾಮ್ ಕಪಾಲ್‌ಕರ್,

ನಿರ್ಮಾಣ ವ್ಯವಸ್ಥಾಪಕ ಎಂ.ಶಿವರಾಜಿರಾವ್, ನಿರ್ದೇಶಕ ಸಿದ್ಧಲಿಂಗಯ್ಯ, ಸಹನಿರ್ದೇಶಕ ಉಗ್ರನರಸಿಂಹ ಮತ್ತು ಬೆಳಕು ತಂತ್ರಜ್ಞ ಯಾಕೂಬ್ (ಕಾರ್ಯಕಾರಿ ಸಮಿತಿ ಸದಸ್ಯರು) ಇವರನ್ನೊಳಗೊಂಡ ಸಮಿತಿಯನ್ನು ಸಭೆಯು ಆಯ್ಕೆ ಮಾಡಿತು. ಈ ಗಿಲ್ಡ್ ಕೆಲವು ಕಾಲ ಅಸ್ತಿತ್ವದಲ್ಲಿದ್ದರೂ ಯಾವುದೇ ಗಣನೀಯವಾದ ಚಟುವಟಿಕೆಯನ್ನು ನಡೆಸಲಿಲ್ಲ. ತಂತ್ರಜ್ಞರ ಮಹತ್ವಾಕಾಂಕ್ಷೆಯ ಪ್ರಥಮ ಪ್ರಯತ್ನವಾದ ಸಂಘಟನೆ ಅಲ್ಪಾಯುಷಿಯಾಗಿ ಕೊನೆಗೊಮ್ಮೆ ಸದ್ದಿಲ್ಲದೆ ಸ್ಥಗಿತಗೊಂಡಿತು.

### ಕರ್ನಾಟಕ ಚಲನಚಿತ್ರ ನಿರ್ಮಾಪಕರ ಸಂಘಟನೆ

ಕನ್ನಡ ಚಲನಚಿತ್ರೋದ್ಯಮದಲ್ಲಿ ೧೯೭೨ರಲ್ಲಿ ಕೆಲವು ಮಂದಿ ಪ್ರಮುಖ ಚಿತ್ರನಿರ್ಮಾಪಕರು ಕೂಡಿ ಯೂನಿಟಿ ಪ್ರೊಡ್ಯೂಸರ್ಸ್ ಕೌನ್ಸಿಲ್ ಎಂಬ ಹೊಸ ಸಂಸ್ಥೆಯೊಂದನ್ನು ಸ್ಥಾಪಿಸಿದರು. ಕನ್ನಡ ಚಿತ್ರನಿರ್ಮಾಪಕರು ಎದುರಿಸುತ್ತಿರುವ ಅನೇಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಪ್ರಯತ್ನ ನಡೆಸುವುದೇ ಹೊಸ ಸಂಘಟನೆಯ ಮುಖ್ಯ ಧ್ಯೇಯ ಹಾಗೂ ಗುರಿಯಾಗಿತ್ತು. ಜೊತೆಗೆ ಪರಸ್ಪರ ಸಹಕಾರ-ಸಹಾಯದ ಹಸ್ತ ಚಾಚುವುದೂ ಉದ್ದೇಶವಾಗಿತ್ತು. ಈ ಸಂಘಟನೆಯಲ್ಲಿ ಒಂಬತ್ತು ಮಂದಿ ಹೆಸರಾಂತ ನಿರ್ಮಾಪಕರು ಒಂದುಗೂಡಿದ್ದು ಗೌರಿ ಎಂಟರ್‌ಪ್ರೈಸಸ್‌ನ ರಂಗಾ ಅವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು. ರಾಜಕಮಲ್ ಆರ್ಟ್ಸ್‌ನ ಕೆ.ಸಿ.ಎನ್.ಗೌಡ ಕೋಶಾಧ್ಯಕ್ಷರು ಹಾಗೂ ಶ್ರೀನಿಧಿ ಪ್ರೊಡಕ್ಷನ್ಸ್‌ನ ಕೆ.ಎ.ಗೋಪಾಲ್ ಕಾರ್ಯದರ್ಶಿಯಾದರು. ಕಾರ್ಯಕಾರಿ ಸದಸ್ಯರಾಗಿ ಆರ್.ಶ್ರೀನಿವಾಸ್, ದೊರೆ-ಭಗವಾನ್, ವಿಕ್ರಮ್ ಶ್ರೀನಿವಾಸ್, ಟಿ.ಪಿ.ವೇಣುಗೋಪಾಲ್, ರಾಮಮೂರ್ತಿ ಮತ್ತು ಕೆ.ಎಸ್.ಎಲ್.ಸ್ವಾಮಿ (ರವೀ) ಆಯ್ಕೆಯಾದರು.

### ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟ

ಯಾವುದೇ ಒಂದು ಕೈಗಾರಿಕೆ ನಡೆಯುವುದು ಕಾರ್ಮಿಕರಿಂದ. ಕಾರ್ಮಿಕರನ್ನು ಬಿಟ್ಟು ಕೈಗಾರಿಕೋದ್ಯಮ ಇಲ್ಲ; ಕೈಗಾರಿಕೋದ್ಯಮವನ್ನು ಬಿಟ್ಟು ಕಾರ್ಮಿಕರಿಲ್ಲ. ಒಟ್ಟಿನಲ್ಲಿ ಕಾರ್ಮಿಕಶಕ್ತಿ ಉದ್ಯಮದ ಬೆನ್ನೆಲುಬು. ಕೈಗಾರಿಕೋದ್ಯಮ ಬೆಳೆದಂತೆ ಕಾರ್ಮಿಕ ಸಮುದಾಯವೂ ಬೆಳೆದಿದೆ. ತಮ್ಮತಮ್ಮ ಹಕ್ಕುಬಾಧ್ಯತೆಗಳ ಅರಿವೂ ಕಾರ್ಮಿಕರಲ್ಲಿ ಮೂಡಿದೆ. ಅದಕ್ಕಾಗಿ ಅವರು ಈಗ ಸಂಘಟಿತರಾಗಿದ್ದಾರೆ. ತಮ್ಮತಮ್ಮ ಸಂಘಟನೆಗಳ ಮೂಲಕ ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಬಲ್ಲರು; ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಬಲ್ಲರು; ತಮ್ಮತಮ್ಮ ಉದ್ಯಮ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸಿ ತೋರಬಲ್ಲರು. ಒಟ್ಟಿನಲ್ಲಿ ಕಾರ್ಮಿಕರ ಹಿತರಕ್ಷಣೆಯಲ್ಲಿ ಉದ್ಯಮದ ಪ್ರಗತಿ; ಉದ್ಯಮದ ಪ್ರಗತಿಯಲ್ಲಿ ಕಾರ್ಮಿಕರ ಹಿತ ಅಡಕವಾಗಿದೆ.

ಕೈಗಾರಿಕೆಗಳ ಅಭಿವೃದ್ಧಿ ಸಾಧನೆಯಲ್ಲಿ ಕಾರ್ಮಿಕ ಸಂಘಟನೆಗಳು ರಚನಾತ್ಮಕ ಪಾತ್ರ ವಹಿಸಬಲ್ಲವು; ಉದ್ಯಮದ ಅಭಿವೃದ್ಧಿಗೆ ಅವು ಪೂರಕವಾಗಿವೆ ಎಂಬ ವಾಸ್ತವಾಂಶ ಈಗ ಎಲ್ಲೆಡೆ, ಎಲ್ಲರಿಗೂ ಮನವರಿಕೆಯಾಗಿದೆ. ತಮ್ಮ ಹಕ್ಕು-ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುವ ಏಕೈಕ ಉದ್ದೇಶದಿಂದ ಕಾರ್ಮಿಕರು ಸಂಘಟಿತರಾಗುತ್ತಿದ್ದಾರೆ ಎಂಬ ಭಾವನೆ ಈಗ ಇಲ್ಲವಾಗಿದೆ. ಆದರೂ ಕಾರ್ಮಿಕ ವರ್ಗದಲ್ಲಿ ಅರ್ಧಕ್ಕಿಂತಲೂ ಹೆಚ್ಚು ಭಾಗ ಇನ್ನೂ ಅಸಂಘಟಿತ ವಲಯದಲ್ಲೇ ಉಳಿದುಕೊಂಡಿದೆ. ಇಂತಹ ಅಸಂಘಟಿತ ಕಾರ್ಮಿಕ ಸಮುದಾಯವನ್ನು ಹೊಂದಿರುವ ಬೃಹತ್ ಉದ್ಯಮಗಳ ಪೈಕಿ ಚಲನಚಿತ್ರೋದ್ಯಮವೂ ಸೇರಿದೆ.

ಚಲನಚಿತ್ರೋದ್ಯಮ ಇತರ ಉದ್ಯಮ ಕ್ಷೇತ್ರಗಳಿಂದ ತೀರಾ ಭಿನ್ನವಾಗಿದೆ. ದೈಹಿಕ ಪರಿಶ್ರಮ ಹಾಗೂ ಬೌದ್ಧಿಕ ವ್ಯವಸಾಯ ಎರಡನ್ನೂ ಇದು ಸಮ-ಸಮ ಪ್ರಮಾಣದಲ್ಲಿ ಅಪೇಕ್ಷಿಸುತ್ತದೆ. ಕಲೆಯ ಕ್ಷೇತ್ರದ ವಿವಿಧ ಪ್ರಕಾರಗಳಲ್ಲಿ-ಶಾಖೆಗಳಲ್ಲಿ ನಿಷ್ಣಾತರಾಗಿರುವ ಕುಶಲಕರ್ಮಿಗಳು, ತಂತ್ರಜ್ಞರು, ಕುಶಲಕಾರ್ಮಿಕರು, ಅರೆತಾಂತ್ರಿಕ ಕಾರ್ಮಿಕರಿಂದ ಅಪರಿಣತ ಸಾಮಾನ್ಯ ಕಾರ್ಮಿಕರವರೆಗೆ ಹತ್ತಾರು ಬಗೆಯ ಜನರ ಶ್ರಮ ಪರಿಶ್ರಮಗಳನ್ನು ಅದು ಬಯಸುತ್ತದೆ. ಅಂದರೆ ನಾನಾ ಕ್ಷೇತ್ರಗಳಲ್ಲಿನ ಕೆಲಸಗಾರರು, ಪರಿಣತರು ಇಲ್ಲಿ ಬೇಕಾಗುತ್ತಾರೆ. ಇತರ ಕೈಗಾರಿಕೆ-ಉದ್ಯಮಗಳಲ್ಲಿ ಇರುವಂತೆ ಒಬ್ಬ ಕಾರ್ಮಿಕನಿಗೆ ಒಂದೇ ಘಟಕದಲ್ಲಿ ಖಾಯಂ ಉದ್ಯೋಗ ಸೌಲಭ್ಯ ಚಲನಚಿತ್ರರಂಗದಲ್ಲಿ ಸಿಗುವುದಿಲ್ಲ. ಚಲನಚಿತ್ರರಂಗದಲ್ಲಿನ ಪರಿಸ್ಥಿತಿಯೇ ಬೇರೆ. ಒಬ್ಬ ಚಲನಚಿತ್ರ ನಿರ್ಮಾಪಕ ಒಂದು ಚಿತ್ರದ ತಯಾರಿಕೆ ಪ್ರಾರಂಭಿಸಿ ಅದು ಪೂರ್ಣಗೊಳ್ಳುವವರೆಗೆ ಮಾತ್ರವೆ ಒಬ್ಬ ಕಾರ್ಮಿಕನಿಗೆ ಉದ್ಯೋಗ ನೀಡಬಲ್ಲ. ಮುಂದಿನ ಚಿತ್ರದ ತಯಾರಿಕೆಯಲ್ಲಿ ಅದೇ ಕಾರ್ಮಿಕನಿಗೆ ಅವಕಾಶ ನೀಡಬೇಕೆಂದು ಕಡ್ಡಾಯವೇನೂ ಇಲ್ಲ. ಮೇಲಾಗಿ ಒಂದು ನಿರ್ದಿಷ್ಟ ಸಂದರ್ಭದಲ್ಲಿ-ಹಂತದಲ್ಲಿ ಆಯ್ದುಕೊಂಡ ಕಾರ್ಮಿಕನೊಬ್ಬನ ಸೇವೆಯನ್ನು ಚಿತ್ರನಿರ್ಮಾಣ ಪೂರ್ಣಗೊಳ್ಳುವ ತನಕವೂ ಮುಂದುವರೆಸಿಕೊಂಡು ಹೋಗಬೇಕೆಂಬ ನಿರ್ಬಂಧವೂ ನಿರ್ಮಾಪಕನ ಮೇಲೆ ಇರುವುದಿಲ್ಲ. ಒಟ್ಟಿನಲ್ಲಿ ಹೇಳಬಹುದಾದರೆ ದಿನಗೂಲಿ ನೌಕರ ಮತ್ತು ಚಲನಚಿತ್ರ ಕಾರ್ಮಿಕರ ನಡುವೆ ಇಂದಿಗೂ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ.

ಕನ್ನಡ ಚಲನಚಿತ್ರರಂಗದ ಕುಶಲ, ಅರೆ ಕುಶಲ ಮತ್ತು ಕಾರ್ಮಿಕರ ಸ್ಥಿತಿ-ಗತಿ ತೀರಾ ಇತ್ತೀಚಿನವರೆಗೂ ನಿಕೃಷ್ಟವಾಗಿಯೇ ಇತ್ತು. ೧೯೬೭ರಲ್ಲಿ ದಿನವಿಡೀ ದುಡಿಯುವ ಲೈಟ್‌ಮನ್ ಒಬ್ಬನಿಗೆ ದೊರೆಯುತ್ತಿದ್ದ ವೇತನ ದಿನವೊಂದಕ್ಕೆ ಒಂದು ರೂಪಾಯಿ ಇಪ್ಪತ್ತೈದು ಪೈಸೆ ಮಾತ್ರ. ೧೯೬೯ರ ವೇಳೆಗೆ ಒಂದು ರೂಪಾಯಿ ಹೆಚ್ಚಿತು. ೧೯೭೩-೭೪ರ ಹೊತ್ತಿಗೆ ಅದು ಐದು ರೂಪಾಯಿಗೆ ಏರಿತು. ಈ ಅಲ್ಪ ಮೊತ್ತದ ವೇತನ ಕೂಡ ತಿಂಗಳಿನ ಮೂವತ್ತು ದಿನಗಳೂ ಸಿಗುವ ಖಾತರಿ ಇರಲಿಲ್ಲ. ಈ ಅತ್ಯಲ್ಪ ಪ್ರಮಾಣದ ಆದಾಯದಿಂದ ಕುಟುಂಬದ ನಿರ್ವಹಣೆ-ಪೋಷಣೆ ಹೇಗೆ ಎಂಬ ಪ್ರಶ್ನೆ ಎದುರಾದರೂ ಉತ್ತರವನ್ನು ತಾನೇ ಕಂಡುಕೊಳ್ಳಬೇಕಾದಂಥ ವಿಚಿತ್ರ ಪರಿಸ್ಥಿತಿ. ತಮ್ಮ ವೇತನವನ್ನು ಪ್ರತಿದಿನ ಪಡೆಯುವುದಕ್ಕಿಂತ ವಾರಕ್ಕೊಮ್ಮೆಯೋ ಅಥವಾ ಎರಡು ವಾರಕ್ಕೊಮ್ಮೆಯೋ ಪಡೆಯುವುದು ಒಳ್ಳೆಯದು ಎಂದು ನಿರ್ಧರಿಸಿದ ಕಾರ್ಮಿಕರೂ ಇದ್ದರು. ಅದೇ ವೇಳೆಗೆ ಚಿತ್ರನಿರ್ಮಾಣವನ್ನು ಇದ್ದಕ್ಕಿದ್ದಂತೆ ಕೈಬಿಟ್ಟು ಸ್ಥಗಿತಗೊಳಿಸಿ ನಿರ್ಮಾಪಕರೂ ಇಂತಹ ಕಾರ್ಮಿಕರನ್ನು ನಡುನೀರಿನಲ್ಲಿ ಕೈಬಿಡುತ್ತಿದ್ದ ಸಂದರ್ಭಗಳೂ ಇರುತ್ತಿದ್ದವು. ಒಟ್ಟಿನಲ್ಲಿ ತೀರಾ ಅನಿಶ್ಚಿತ, ಅಭದ್ರ ಸ್ಥಿತಿಯಲ್ಲಿಯೇ ಜೀವನ ನಿರ್ವಹಿಸಬೇಕಾದ ಅಸಹಾಯಕತೆ, ದೈನ್ಯತೆಗಳಲ್ಲೇ ಅವರ ಬದುಕು ಸಾಗಬೇಕಾಗಿದ್ದುದು ಅನಿವಾರ್ಯವಾಗಿತ್ತು.

ಸುಮಾರು ಐದು ದಶಕಗಳ ಕಾಲ ಇಂತಹ ಅನಿಶ್ಚಿತ ವಾತಾವರಣ-ದುರ್ಭರ ಸ್ಥಿತಿಯಲ್ಲಿ ಜೀವನ ನಿರ್ವಹಣೆ ಮಾಡಿದ ಚಲನಚಿತ್ರರಂಗದ ಕಾರ್ಮಿಕರು ಒಂದು ಸಂಘಟನೆಯನ್ನು ಕಟ್ಟಿಕೊಳ್ಳಬೇಕೆಂದು ಆಲೋಚಿಸಿದ್ದು ೧೯೮೪ರಲ್ಲಿ. ಕನ್ನಡ ಚಿತ್ರರಂಗದ ಕೇಂದ್ರ ಬಿಂದು ಎನಿಸಿದ ಗಾಂಧಿನಗರ ಬಡಾವಣೆಯ ರಸ್ತೆಯೊಂದರ ಬದಿಯ ಫುಟ್‌ಪಾತಿನ ಮೇಲೆ ಸಂಘಟನೆ ಕಟ್ಟುವ ಕನಸು ಚಿಗುರೊಡೆಯಿತು. ಈ ಕನಸು ಕಂಡವರು ಎಂ.ಎ.ಡೆಲ್ಲಿ, ಮೀಸೆ ಕೃಷ್ಣ, ಮಹಾಬಲ, ಭೋಜ, ಶಿವರಾಮ್ ಉಪ್ಪುಂದ, ಆನಂದ್ ಮತ್ತಿತರರು. ಸಂಘಟನೆ ಆರಂಭವಾದಾಗ ಡೆಲ್ಲಿ ಅವರೇ ಪ್ರಧಾನ ಕಾರ್ಯದರ್ಶಿಗಳಾದರು. ಕೆಲ ವರ್ಷಗಳ ನಂತರ ಅನಾರೋಗ್ಯದ ಕಾರಣ ಪ್ರಧಾನ ಕಾರ್ಯದರ್ಶಿಯ ಸ್ಥಾನವನ್ನು ಬಿಟ್ಟುಕೊಟ್ಟರು. ಬಿ.ಕೃಷ್ಣ ಆ ಸ್ಥಾನವನ್ನು ತುಂಬಿದರು. ಒಕ್ಕೂಟದ ಸಂಸ್ಥಾಪಕರಲ್ಲಿ ಒಬ್ಬರಾದ ಡೆಲ್ಲಿಯವರು ಈಗ ಇಲ್ಲ. ಚಲನಚಿತ್ರಗಳ ಚಿತ್ರೀಕರಣಕ್ಕೆ ಬೇಕಾದ ಬೆಳಕಿನ ವ್ಯವಸ್ಥೆಯನ್ನು ಒದಗಿಸಲು ಶ್ರಮಿಸುವ ಲೈಟ್‌ಬಾಯ್‌ಗಳು (ಈಗ ಲೈಟ್‌ಮನ್ ಎಂದು ಬದಲಾಗಿದೆ). ಮತ್ತು ಚಿತ್ರೀಕರಣ ಸಮಯದಲ್ಲಿ ಇಡೀ ತಂಡಕ್ಕೆ ಊಟೋಪಚಾರದ ಹೊಣೆ ಹೊರುವ ಪ್ರೊಡಕ್ಷನ್ ಬಾಯ್ಸ್ (ಈಗ ಪ್ರೊಡಕ್ಷನ್ ಅಸಿಸ್ಟೆಂಟ್ಸ್ - ನಿರ್ಮಾಣ ಸಹಾಯಕರೆಂದು ಬದಲಾಗಿದೆ) ಜೊತೆಗೂಡಿ 'ಪ್ರೊಡಕ್ಷನ್ ಬಾಯ್ಸ್ ಅಂಡ್ ಲೈಟ್ ಬಾಯ್ಸ್ ಯೂನಿಯನ್' ಎಂಬ ಸಂಘಟನೆಯೊಂದನ್ನು ಸ್ಥಾಪಿಸಿದರು. ಈ ಸಂಘಕ್ಕೆ ಅಧ್ಯಕ್ಷರಾಗಿ ಬಿ.ಕೃಷ್ಣ ಮತ್ತು ಕಾರ್ಯದರ್ಶಿಯಾಗಿ ಶಾಂತರಾಜ್ ಆಯ್ಕೆಯಾದರು. ೧೯೮೪ರಲ್ಲಿ ಈ ಸಂಘಟನೆ ಅಸ್ತಿತ್ವಕ್ಕೆ ಬಂದಾಗ ಚಲನಚಿತ್ರ ನಿರ್ಮಾಪಕರು ಮುಕ್ತ ಮನಸ್ಸಿನಿಂದ ಸ್ವಾಗತಿಸಲಿಲ್ಲ. ಚಿತ್ರರಂಗದಲ್ಲಿ ಅಸಮಾಧಾನದ ಅಲೆಗಳೆದ್ದವು. ಚಲನಚಿತ್ರ ಕಾರ್ಮಿಕರನ್ನು ಚಿತ್ರನಿರ್ಮಾಪಕರ ವಿರುದ್ಧ ಎತ್ತಿಕಟ್ಟುವ ಪ್ರಯತ್ನ ಇದು ಎಂಬ ಆರೋಪಗಳೂ ಲೇವಡಿ ಮಾತುಗಳೂ ಕೇಳಿಬಂದವು.



ಎಂ.ಎ.ಡೆಲ್ಲಿ ಅಶೋಕ್ ಕೃಷ್ಣ

ದೇಶದಲ್ಲಿ ಕಾರ್ಮಿಕ ಸಂಘ-ಸಂಘಟನೆಗಳು ತಲೆ ಎತ್ತಿ ದಶಕಗಳೇ ಕಳೆದಿದ್ದರೂ ಚಲನಚಿತ್ರರಂಗಕ್ಕೆ ಈ ಸಂಘಟನೆ ಸಹ್ಯವಾಗಲಿಲ್ಲ. ನಿರ್ಮಾಪಕರ ಆಕ್ಷೇಪ ಒತ್ತಟ್ಟಿಗಿರಲಿ, ಚಲನಚಿತ್ರರಂಗದ ವಿವಿಧ ವಿಭಾಗಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರೆ ಸಂಘಟಿತರಾಗುವ ಉತ್ಸಾಹವನ್ನು ತೋರಲಿಲ್ಲ. ಇದೊಂದು ದೊಡ್ಡ ವಿಪರ್ಯಾಸ.

ಕನ್ನಡ ಚಲನಚಿತ್ರರಂಗದ ಕಾರ್ಮಿಕ ವೃಂದಕ್ಕೆ ಸಂಘಟನೆಯ ಅಗತ್ಯ ಹಾಗೂ ಮಹತ್ವ, ಕಾರ್ಮಿಕರಿಗೆ ಸಂಘಟನೆಯಿಂದ ದೊರೆಯಬಹುದಾದ ಅನುಕೂಲ ಹಾಗೂ ಪ್ರಯೋಜನಗಳನ್ನು ಮನದಟ್ಟು ಮಾಡಿಕೊಟ್ಟವರು ಚಿತ್ರನಟ ಅನಂತ್‌ನಾಗ್, ಚಿತ್ರನಟ ಶಂಕರ್‌ನಾಗ್, ರಂಗಭೂಮಿಯ ಖ್ಯಾತ ಮಾಸ್ಟರ್ ಹಿರಣ್ಣಯ್ಯ ಹಾಗೂ ಕೂಲಿಕಾರ್ಮಿಕನೇ ಆಗಿದ್ದು ಯಶಸ್ವಿ ಚಲನಚಿತ್ರ ನಿರ್ಮಾಪಕರಾದ ಎ.ಎಲ್.ಅಬ್ಬಾಯಿನಾಯ್ಡು ಅವರು. ಇದರಿಂದಾಗಿ ೧೯೮೨ರ ವೇಳೆಗೆ ಕನ್ನಡನಾಡಿನಲ್ಲಿ ಕನ್ನಡ ಚಲನಚಿತ್ರ ಕಾರ್ಮಿಕರದೇ ಆದ ಸಂಘಟನೆಯೊಂದು ರೂಪುಗೊಳ್ಳಲು ಒಂದು ಸ್ಪಷ್ಟ ಸ್ವರೂಪ ಬಂದಿತು. ಈ ದಿಸೆಯಲ್ಲಿ ಬಹಳಷ್ಟು ಕೆಲಸ ಮಾಡಿದವರು ಚಲನಚಿತ್ರ ನಿರ್ಮಾಣ ವ್ಯವಸ್ಥಾಪಕರಾದ ಎಂ.ಎ.ಡೆಲ್ಲಿ ಅವರು. ಅಂದಿನ ದಿನಗಳಲ್ಲಿ ಚಲನಚಿತ್ರರಂಗದ ಹಲವು ಚಟುವಟಿಕೆಗಳಿಗ ಗಾಂಧಿನಗರದ ಹೈಲ್ಯಾಂಡ್ ಹೊಟೇಲ್ ಒಂದು ಕೇಂದ್ರಬಿಂದುವಾಗಿದ್ದು ಕಾರ್ಮಿಕರ ಈ ಸಂಘಟನೆ ಅಲ್ಲಿಯೇ ರೂಪುಗೊಂಡಿತು. ಮೊದಲಿಗೆ ನಿರ್ಮಾಣ ಸಹಾಯಕರು (ಪ್ರೊಡಕ್ಷನ್ ಅಸಿಸ್ಟೆಂಟ್ಸ್) ಹಾಗೂ ಲೈಟ್‌ಬಾಯ್‌ಗಳ ಸಂಘ ಅಸ್ತಿತ್ವಕ್ಕೆ ಬಂದಿತು. ನಂತರ ಸಹಕಲಾವಿದರು, ಸಾಹಸ ಕಲಾವಿದರು ಮತ್ತು ವಾಹನ ಚಾಲಕರು ಈ ಸಂಘಟನೆಯನ್ನು ಸೇರಿಕೊಂಡರು. ಈ ಸಂಘಟನೆಯೇ **'ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟ'**.

ಕನ್ನಡ ಚಲನಚಿತ್ರರಂಗದ ಈ ವಿಸ್ತೃತ ನಲೆಯ ಸಂಘಟನೆಗ ಚಿತ್ರನಟ ಅನಂತ್‌ನಾಗ್ ಗೌರವ ಅಧ್ಯಕ್ಷರಾಗಿ, ಚಿತ್ರನಟ ಅಶೋಕ್ ಅಧ್ಯಕ್ಷರಾಗಿ ನಿಯುಕ್ತರಾದರು. ಮುಂದೆ ಕೆಲವೇ ದಿನಗಳಲ್ಲಿ ವರ್ಣಾಲಂಕಾರ-ಕೇಶಾಲಂಕಾರ ಕಲಾವಿದರು, ವಸ್ತ್ರವಿನ್ಯಾಸ-ವಸ್ತ್ರಾಲಂಕಾರ ಕಲಾವಿದರು, ಸಿನಿಮಾ ನಿರ್ಮಾಣ ನಿರ್ವಾಹಕರು, ಕಲಾನಿರ್ದೇಶಕರು ಹಾಗೂ ನೃತ್ಯ ನಿರ್ದೇಶಕರು ಕೂಡ ಈ ಸಂಘಟನಯಲ್ಲಿ ಸೇರಿಕೊಂಡರು. ಹೀಗೆ ವ್ಯಾಪ್ತಿಯನ್ನು ಬೆಳೆಸಿಕೊಂಡ ಕರ್ನಾಟಕ ಚಲನಚಿತ್ರ ಕಾರ್ಮಿಕ, ಕಲಾವಿದ ಹಾಗೂ ತಂತ್ರಜ್ಞರ ಒಕ್ಕೂಟ ೧೯೮೭ರಲ್ಲಿಯೇ ಪ್ರಾರಂಭವಾಗಿದ್ದರೂ ೧೯೮೯ರಲ್ಲಿ ಅಧಿಕೃತವಾಗಿ ಉದ್ಘಾಟನೆಗೊಂಡಿತು.

ಯಾವುದೇ ಕ್ಷೇತ್ರದಲ್ಲಿ ಹೊಸ ಬದಲಾವಣೆ-ಬೆಳವಣಿಗೆಗಳು ಆದಾಗಲೆಲ್ಲ ಅನುಮಾನ-ಗೊಂದಲ ಉಂಟಾಗುವುದು ಸಹಜ. ನೆರ ರಾಜ್ಯಗಳಲ್ಲಿ ಚಲನಚಿತ್ರ ಕಾರ್ಮಿಕರು ಸಂಘಟಿತರಾಗಿ ಎಷ್ಟೋ ಕಾಲವಾಗಿದ್ದರೂ ಕರ್ನಾಟಕದ ಮಟ್ಟಿಗೆ ಇದೊಂದು ಹೊಸ ಸಂಗತಿಯಾಗಿತ್ತು. ಚಿತ್ರನಿರ್ಮಾಪಕರಿಗೆ ಬೇಡವಾದ ಅನಗತ್ಯ ಬದಲಾವಣೆಯಾಗಿತ್ತು. ಕಾರ್ಮಿಕರು ಈ ರೀತಿ ಒಗ್ಗಟ್ಟಾಗಿ ಬಿಟ್ಟರೆ ಅವರ ಬೇಡಿಕೆಗಳು ಹೆಚ್ಚಿ ಆ ಮೂಲಕ ಚಿತ್ರ ನಿರ್ಮಾಣ ವೆಚ್ಚವೂ ಹೆಚ್ಚಾಗಿ ತಮ್ಮ ಕಿಸೆಗ ಕತ್ತರಿ ಬೀಳುವುದು ಖಂಡಿತ ಎಂದು ಚಿತ್ರನಿರ್ಮಾಪಕರು ಅಂಜಿದರು. ಕಾರ್ಮಿಕರ ಹಕ್ಕುಗಳಿಗಾಗಿ ಮತ್ತು ಕಾರ್ಮಿಕರ ಹಿತರಕ್ಷಣೆಗಾಗಿ ಹೋರಾಟ ನಡೆಸುವ ಸಲುವಾಗಿಯೇ ಈ ಒಕ್ಕೂಟ ರಚನೆಯಾಗಿದೆ ಎಂದು ಒಕ್ಕೂಟದ ವಕ್ತಾರರು ಹೇಳಿಕೆ ನೀಡಿದ್ದೂ ಚಿತ್ರನಿರ್ಮಾಪಕರ ವಲಯದಲ್ಲಿ ಆತಂಕ ಹಾಗೂ ಭೀತಿ ಮೂಡಲು ದಾರಿ ಮಾಡಿಕೊಟ್ಟಿತು. ಈ ಅಂಜಿಕೆಯಿಂದಾಗಿ ಕಾರ್ಮಿಕ ವರ್ಗದ ಈ ಸಂಘಟನೆಯನ್ನು ಒಡೆಯುವ ಪ್ರಯತ್ನಗಳು ನಡೆದವು. ಈ ಸಂದರ್ಭದಲ್ಲಿ ನಿರ್ಮಾಪಕರು ಕಾರ್ಮಿಕರನ್ನು ಅನುಮಾನಿಸಿದ್ದೂ ಉಂಟು.

ಮುಂಬಯಿಯಲ್ಲಿರುವ ಅಖಿಲ ಭಾರತ ಚಲನಚಿತ್ರ ಕಾರ್ಮಿಕರ ಮಹಾ ಮಂಡಳ ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ಮತ್ತು ತಂತ್ರಜ್ಞರ ಒಕ್ಕೂಟಕ್ಕೆ ಮನ್ನಣೆ ನೀಡಿದಾಗ ಕನ್ನಡದ ಈ ಒಕ್ಕೂಟಕ್ಕೆ ಅಧಿಕೃತ ಮುದ್ರೆ ಬಿದ್ದು ಅದರ ಸ್ಥಾನ-ಮಾನ ಹೆಚ್ಚಿತು. ಆ ದಿನಗಳಲ್ಲಿ ಕನ್ನಡ ಚಲನಚಿತ್ರಗಳಲ್ಲಿ ಬಹುತೇಕ ಮದರಾಸಿನಲ್ಲೇ ಚಿತ್ರೀಕರಣವಾಗುತ್ತಿದ್ದು ರಾಜ್ಯದ ಕಲಾವಿದರಿಗೆ, ತಂತ್ರಜ್ಞರಿಗೆ ಮತ್ತು ಕಾರ್ಮಿಕರಿಗೆ ಕೆಲಸ ಸಿಗುತ್ತಿರಲಿಲ್ಲ. ಬಹಳಷ್ಟು ಸಿನಿಮಾ ಜನ ನಿರುದ್ಯೋಗಿಗಳಾಗಿ ಇರಬೇಕಾಗಿತ್ತು. ಅವಕಾಶಗಳಿಗಾಗಿ ಚಾತಕಪಕ್ಷಿಯಂತೆ ನಿರೀಕ್ಷೆಯಲ್ಲೇ ದಿನದೂಡಬೇಕಾಗಿತ್ತು. ಮೊದಲಿಗೆ ಈ ಸಮಸ್ಯೆಯತ್ತ ಒಕ್ಕೂಟ ತನ್ನ ಗಮನವನ್ನು ಕೇಂದ್ರೀಕರಿಸಿತು. ಕನ್ನಡ ಚಲನಚಿತ್ರಗಳ ನಿರ್ಮಾಣ ಸಂಪೂರ್ಣವಾಗಿ ಕರ್ನಾಟಕದಲ್ಲಿಯೇ ನಡೆಯಬೇಕೆಂಬ ಕೇಳಿಕೆಯನ್ನು ಅದು ಮುಂದಿಟ್ಟಿತು. ಈ ನಿಟ್ಟಿನಲ್ಲಿ ದೊಡ್ಡ ಹೋರಾಟವನ್ನು ಸಂಘಟಿಸಿ ಕಬ್ಬನ್‌ಪಾರ್ಕ್‌ನಲ್ಲಿ ಬೃಹತ್ ಪ್ರದರ್ಶನವನ್ನು ನಡೆಸಿತು. ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ, ವಾರ್ತಾ ಸಚಿವ ಜೀವರಾಜ ಆಳ್ವ, ಸಚಿವ ಎಂ.ಪಿ.ಪ್ರಕಾಶ್ ಸಿನಿಮಾ ಕಾರ್ಮಿಕರ ಅಹವಾಲನ್ನು ಕೇಳಿ. ಈ ನಿಟ್ಟಿನಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳುವ ಭರವಸೆಯನ್ನು ನೀಡಿದರು. ಕನ್ನಡ ಚಲನಚಿತ್ರರಂಗದ ಪಾಲಿಗೆ ಇದೊಂದು ಮಹತ್ವದ ಬೆಳವಣಿಗೆ.




(ಚಿತ್ರ ೪) 'ಅಖಿಲ ಕರ್ನಾಟಕ ಚಲನಚಿತ್ರ ಕಲಾವಿದರ ಸಂಘ'ದ ಕಾರ್ಯಕ್ರಮವೊಂದರಲ್ಲಿ ಕನ್ನಡ ಚಳವಳಿಯ ನಾಯಕ ವಾಟಾಳ್ ನಾಗರಾಜ್ ಮತ್ತು ಇತರರು

ಕಾರ್ಮಿಕ ಸಂಘಟನೆಯ ಉದ್ದೇಶ ಕಾರ್ಮಿಕರ ಹಕ್ಕುಗಳಿಗಾಗಿ-ಹಿತಾಸಕ್ತಿಗಳಿಗಾಗಿ ಹೋರಾಡುವುದಷ್ಟೇ ಅಲ್ಲ, ನಿರ್ಮಾಪಕರ ಹಿತರಕ್ಷಣೆ ಮತ್ತು ಉದ್ಯಮದ ಉತ್ಕರ್ಷವೂ ಸೇರಿದೆ ಎಂಬುದನ್ನು ನಿರ್ಮಾಪಕರಿಗೆ ಮನವರಿಕೆ ಮಾಡಿಕೊಡಲು ಹೆಚ್ಚು ಸಮಯ ಬೇಕಾಗಲಿಲ್ಲ. ಇದರಿಂದಾಗಿ ನೆಲೆಯಿಲ್ಲದೆ ಅಲೆಯುತ್ತಿದ್ದ ನೂರಾರು ಮಂದಿ ಸಿನಿಮಾ ಕಾರ್ಮಿಕರಿಗೆ ಅನಾಯಾಸವಾಗಿ ಒಂದು ನೆಲೆ ಸಿಕ್ಕಿತು. ಅದೇ ಸಮಯದಲ್ಲಿ ಕನ್ನಡ ಚಿತ್ರ ನಿರ್ಮಾಪಕರಿಗೆ ತಮಗೆ ಅಗತ್ಯವಿರುವ ಕಾರ್ಮಿಕರನ್ನು ಒಂದೇ ಸೂರಿನಡಿ ಆಯ್ಕೆ ಮಾಡಿಕೊಳ್ಳುವ ಅನುಕೂಲವೂ ಏರ್ಪಟ್ಟಿತು.

ಕಾರ್ಮಿಕರಲ್ಲಿ ಶಿಸ್ತನ್ನು ಮೂಡಿಸುವುದು ಕೂಡ ತನ್ನ ಧ್ಯೇಯಗಳಲ್ಲಿ ಒಂದು ಎಂದು ಒಕ್ಕೂಟ ಮನವರಿಕೆ ಮಾಡಿಕೊಟ್ಟಾಗ ಚಲನಚಿತ್ರ ಉದ್ಯಮ ವಲಯಗಳಲ್ಲಿ ಈ ಸಂಘಟನೆಯ ವಿಷಯದಲ್ಲಿ ಭರವಸೆ ಮೂಡಿತು. ಕರ್ತವ್ಯನಿರತ ಕಾರ್ಮಿಕರು ಬೇಜವಾಬ್ದಾರಿಯಿಂದ, ಅಶಿಸ್ತಿನಿಂದ ವರ್ತಿಸಿದ್ದಾರೆ ಎಂಬ ದೂರು ಬಂದಾಕ್ಷಣ ಒಕ್ಕೂಟದ ಪದಾಧಿಕಾರಿಗಳು ವಿಚಾರಣೆ ನಡೆಸಿ ತಪ್ಪಿತಸ್ಥ ಕಾರ್ಮಿಕರ ವಿರುದ್ಧ ಕ್ರಮ ಜರುಗಿಸಲಾರಂಭಿಸಿದರು. ಇದರಿಂದ ಸಿನಿಮಾ ನಿರ್ಮಾಪಕರ ವಲಯದಲ್ಲಿ ಒಕ್ಕೂಟದ ಬಗ್ಗೆ ಸದಭಿಪ್ರಾಯ ಮೂಡಿತು.

ಕನ್ನಡ ಚಿತ್ರಗಳ ಚಿತ್ರೀಕರಣ-ನಿರ್ಮಾಣ ಸಂಪೂರ್ಣವಾಗಿ ಕರ್ನಾಟಕದಲ್ಲಿ ಆಗಬೇಕು. ಈ ಷರತ್ತನ್ನು ಚಿತ್ರನಿರ್ಮಾಪಕರು ಪಾಲಿಸಿದರೆ ಮಾತ್ರ ಅಂತಹ ಚಿತ್ರಗಳಿಗೆ ಸಹಾಯಧನ ನೀಡಬೇಕು ಎಂಬುದು ಒಕ್ಕೂಟದ ಪ್ರಮುಖ ಅಹವಾಲಾಗಿತ್ತು.

ಕನ್ನಡ ಚಲನಚಿತ್ರೋದ್ಯಮದ ಪ್ರಾರಂಭದ ದಿನಗಳಲ್ಲಿ ಚಲನಚಿತ್ರಗಳ ಹಾಡುಗಳ ಧ್ವನಿಮುದ್ರಣ (ರಿಕಾರ್ಡಿಂಗ್) ಮತ್ತು ಪುನರ್ ಧ್ವನಿಮುದ್ರಣ (ರಿ-ರಿಕಾರ್ಡಿಂಗ್)ಗಳಿಗ ರಾಜ್ಯದಲ್ಲಿ ಸರಿಯಾದ ಸೌಲಭ್ಯ ಇರಲಿಲ್ಲ. ಹಾಗಾಗಿ ರಿಕಾರ್ಡಿಂಗ್, ರಿ-ರಿಕಾರ್ಡಿಂಗ್ ಕಾರ್ಯಗಳಿಗಾಗಿ ಮದರಾಸಿನ ಸ್ಟುಡಿಯೋಗಳನ್ನೇ ಅವಲಂಬಿಸುವುದು

ಅನಿವಾರ್ಯವಾಗಿತ್ತು. ಈ ಹಂತದಲ್ಲಿ ನಾಗ್ ಸಹೋದರರು ರಿಕಾರ್ಡಿಂಗ್ ಸೌಲಭ್ಯ ಇಲ್ಲದ ಕೊರತೆಯನ್ನು ನೀಗಲು ಚಿತ್ರನಿರ್ಮಾಪಕ-ವಿತರಕ ಹಾಗೂ ವಾಣಿಜ್ಯ ಮಂಡಳಿಯ ಪ್ರಮುಖರಾಗಿದ್ದ ಸಿ.ವಿ.ಎಲ್.ಶಾಸ್ತ್ರಿ ಅವರ ಸಹಕಾರದೊಂದಿಗೆ ವಾಣಿಜ್ಯ ಮಂಡಳಿ ಕಟ್ಟಡದ ಮೊದಲ ಅಂತಸ್ತಿನಲ್ಲಿ ಸಂಕೇತ್ ಸ್ಟುಡಿಯೋ ಪ್ರಾರಂಭಿಸಿದರು. ಇದರಿಂದ ಸ್ಥಳೀಯ ತಂತ್ರಜ್ಞರಿಗೆ, ಪರಿಣತರಿಗೆ ಹೆಚ್ಚಿನ ಅವಕಾಶ-ಉತ್ತೇಜನ ದೊರೆಯಿತು.

ಈ ಮಧ್ಯೆ ೧೯೮೭ರಲ್ಲಿ ರಾಜ್ಯದಲ್ಲಿ ಪ್ರದರ್ಶಿಸಲಾಗುವ ಇತರೆ ಎಲ್ಲ ಭಾಷೆಗಳ - ತೆಲುಗು, ತಮಿಳು, ಹಿಂದಿ - ಚಿತ್ರಗಳಿಗೂ ಶೇಕಡಾ ೫೦ರಷ್ಟು ತೆರಿಗೆ ವಿನಾಯಿತಿಯು ಅನ್ವಯವಾಗಬೇಕೆಂದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಸರ್ಕಾರದ ಮುಂದೆ ಅಹವಾಲಿಟ್ಟಿತು. ಆ ಸಂದರ್ಭದಲ್ಲಿ ಕನ್ನಡ ಚಿತ್ರಗಳಿಗೆ ಮಾತ್ರ ಮನರಂಜನೆ ತೆರಿಗೆಯಲ್ಲಿ ಶೇಕಡಾ ೫೦ರಷ್ಟು ವಿನಾಯಿತಿ ದೊರೆಯುತ್ತಿತ್ತು. ಆದರೆ ಚಲನಚಿತ್ರ ಕಾರ್ಮಿಕರ ಒಕ್ಕೂಟ ವಾಣಿಜ್ಯ ಮಂಡಳಿಯ ಅಹವಾಲನ್ನು ಪ್ರಬಲವಾಗಿ ವಿರೋಧಿಸಿತು. ಅಲ್ಲದೆ ಯಾವುದೇ ಕಾರಣಕ್ಕೂ ಆ ಬೇಡಿಕೆಯನ್ನು ಸರ್ಕಾರ ಒಪ್ಪಕೂಡದೆಂದು ಚಳವಳಿಗೆ ಮುಂದಾಯಿತು.

ಪ್ರತಿಭಟನೆಯ ರೂಪದಲ್ಲಿ ಚಲನಚಿತ್ರೋದ್ಯಮ ಬಂದ್ ಘೋಷಿಸಿತು. ಈ ಬಂದ್ ೧೦-೧೨ ದಿನಗಳವರೆಗೆ ಮುಂದುವರೆಯಿತು. ಚಲನಚಿತ್ರ ಕಾರ್ಮಿಕರ ಒಕ್ಕೂಟದ ಅಧ್ಯಕ್ಷ ಅಶೋಕ್ ಬಂದ್ ಹಿಂತೆಗೆದುಕೊಳ್ಳಬೇಕೆಂದು ಮಹಾತ್ಮಾ ಗಾಂಧೀಜಿಯವರ ಪ್ರತಿಮೆಯ ಎದುರಲ್ಲಿ ಆಮರಣಾಂತ ಉಪವಾಸ ಸತ್ಯಾಗ್ರಹ ಆರಂಭಿಸಿದರು. ಪರಿಸ್ಥಿತಿ ವಿಕೋಪಕ್ಕೆ ತಿರುಗುವ ಸಂದರ್ಭ ತಲೆದೋರಿತು. ಈ ಹಂತದಲ್ಲಿ ವಾರ್ತಾ ಸಚಿವರಾಗಿದ್ದ ಎಂ.ಪಿ.ಪ್ರಕಾಶ್ ಮಧ್ಯೆ ಪ್ರವೇಶಿಸಿ ವಿವಾದ ಬಗೆಹರಿಯಲು ಸಹಕರಿಸಿದರು. ಸರ್ಕಾರವು ವಾಣಿಜ್ಯ ಮಂಡಳಿಯ ಪದಾಧಿಕಾರಿಗಳು, ನಿರ್ಮಾಪಕರು ಹಾಗೂ ನಿರ್ದೇಶಕರ ಸಂಘಗಳ ಪ್ರತಿನಿಧಿಗಳು, ಕಲಾವಿದರ ಸಂಘದಿಂದ ರಾಜಕುಮಾರ್ ಮತ್ತು ಕೆಲವರು ಹಾಗೂ ಒಕ್ಕೂಟದ ಪ್ರತಿನಿಧಿಗಳನ್ನು ಕರೆಸಿಕೊಂಡು ವಸ್ತುಸ್ಥಿತಿಯ ಸಮಗ್ರ ವಿಶ್ಲೇಷಣೆ ನಡೆಸಿ ಕನ್ನಡ ಚಿತ್ರಗಳಿಗೆ ಮಾತ್ರವೇ ಶೇಕಡಾ ೫೦ರ ಮನರಂಜನೆ ತೆರಿಗೆ ವಿನಾಯಿತಿ ಅನ್ವಯವಾಗಬೇಕೆಂಬ ತೀರ್ಮಾನಕ್ಕೆ ಬಂದಿತು. ಇದು ಒಕ್ಕೂಟ ಸಾಧಿಸಿದ ಐತಿಹಾಸಿಕ ವಿಜಯ.

ಇದರ ಬೆನ್ನಿನಲ್ಲೇ ೧೯೮೮ರಲ್ಲಿ ಕನ್ನಡ ಚಿತ್ರರಂಗದ ಮೇಲೆ ಘೋರ ದುರಂತವೊಂದು ಬಂದೆರಗಿತು. ಹಿಂದಿ ಚಿತ್ರರಂಗದ ಪ್ರಮುಖ ನಿರ್ಮಾಪಕ-ನಿರ್ದೇಶಕ-ನಟ ಸಂಜಯ್‌ಖಾನ್ ಮೈಸೂರಿನ ಪ್ರೀಮಿಯರ್ ಸ್ಟುಡಿಯೋವಿನಲ್ಲಿ ಕಿರುತೆರೆಗಾಗಿ ಟಿಪ್ಪು ಸುಲ್ತಾನ್ (ದಿ ಸ್ವೋರ್ಡ್ ಆಫ್ ಟಿಪ್ಪು ಸುಲ್ತಾನ್) ಹಿಂದಿ ಧಾರಾವಾಹಿಯ ಚಿತ್ರೀಕರಣ ನಡೆಸಿದ್ದ ಸಂದರ್ಭದಲ್ಲಿ ಸಂಭವಿಸಿದ ಭೀಕರ ಅಗ್ನಿದುರಂತದಲ್ಲಿ ಹಲವಾರು ಸಿನಿಮಾ ತಂತ್ರಜ್ಞರು, ಕಲಾವಿದರು ಮತ್ತು ಕಾರ್ಮಿಕರು (ಒಟ್ಟು ೪೮ ಮಂದಿ) ಸಜೀವ ದಹನ ಹೊಂದಿದರು. ಅನೇಕ ಮಂದಿ ಅಂಗಹೀನರಾದರು. ಈ ಸಂದರ್ಭದಲ್ಲಿ ಸಂತ್ರಸ್ತರಿಗೆ ನ್ಯಾಯ ಒದಗಿಸಲು ಒಕ್ಕೂಟ ಬಹಳಷ್ಟು ಶ್ರಮವಹಿಸಿತು. ನೊಂದವರಿಗೆ ಸೂಕ್ತ ಪರಿಹಾರ ದೊರಕಿಸುವ ನಿಟ್ಟಿನಲ್ಲಿ ಅದು ಯಶಸ್ವಿಯೂ ಆಯಿತು. ಈ ಸಮಯದಲ್ಲಿ ಒಕ್ಕೂಟ ನಡೆಸಿದ ಹೋರಾಟದಿಂದಾಗಿ ಹೆಚ್ಚಿನ ಘನತೆ-ಗೌರವಗಳನ್ನೂ ಸಂಪಾದಿಸಿತು. ಈ ಸಂದರ್ಭದಲ್ಲಿ ಸಂತ್ರಸ್ತರಿಗೆ ನೆರವಾಗಲು ಮಾಸ್ಟರ್ ಹಿರಣ್ಣಯ್ಯ, ಎ.ಎಲ್.ಅಬ್ಬಾಯಿನಾಯ್ಡು, ಕೆ.ಸಿ.ಎನ್.ವೇಣು ಆರ್ಥಿಕ ಸಹಾಯ ನೀಡಿ ನೆರವಾದರು. ಸಿ.ವಿ.ಎಲ್.ಶಾಸ್ತ್ರಿಗಳು ಕೂಡಲೇ ಸ್ಥಳಕ್ಕೆ ಧಾವಿಸಿ ಮರಣ ಹೊಂದಿದವರ ಕುಟುಂಬಗಳಿಗೆ ಸಾಂತ್ವನ ಹೇಳಿ, ಕೊಂಚ ಆರ್ಥಿಕ ನೆರವನ್ನು ಒದಗಿಸಿದರು.

ಪ್ರೀಮಿಯರ್ ಸ್ಟುಡಿಯೋವಿನಲ್ಲಿ ಸಂಭವಿಸಿದ ಈ ಅನಾಹುತದಲ್ಲಿ ಸತ್ತವರು ಕಲಾವಿದರಲ್ಲ, ಚಿತ್ರೀಕರಣ ವೀಕ್ಷಿಸಲು ಬಂದವರು ಎಂದು ನಿರ್ಮಾಪಕ ಸಂಜಯ್‌ಖಾನ್ ಮತ್ತು ಸ್ಟುಡಿಯೋ ಮಾಲೀಕ ಎಂ.ಎನ್.ಬಸವರಾಜಯ್ಯ ಪರಿಹಾರ ನೀಡಲು ತಕರಾರು ಎತ್ತಿದರು. ಆಗ ಒಕ್ಕೂಟದ ಪ್ರತಿನಿಧಿಗಳು ದೆಹಲಿಗೆ ಹೋಗಿ ಕೇಂದ್ರ ಕಾರ್ಮಿಕ ಮಂತ್ರಿ ರಾಮ್‌ವಿಲಾಸ್ ಪಾಸ್ವಾನ್ ಮತ್ತು ಮುಕ್ತ ಕಾರ್ಮಿಕ ಆಯುಕ್ತರನ್ನು ಭೇಟಿಯಾಗಿ ಅಗತ್ಯ ಸಾಕ್ಷ್ಯ-ಪುರಾವೆಗಳನ್ನೊದಗಿಸಿ ವಿವಾದವನ್ನು ಬಗೆಹರಿಸುವಂತೆ ಮನವಿ ಮಾಡಿಕೊಂಡರಲ್ಲದೆ ಕೇಂದ್ರ ಸರ್ಕಾರದ ಮೂಲಕ ಧಾರಾವಾಹಿಯ ಪ್ರಸಾರವನ್ನು ತಡೆಹಿಡಿಯುವಂತೆ ಮಾಡುವಲ್ಲಿ ಯಶಸ್ವಿಯಾದರು. ಕಾರ್ಮಿಕ ನ್ಯಾಯಾಲಯದ ಮೂಲಕ ಹೋರಾಟ ನಡೆಸಿದ ಒಕ್ಕೂಟ ೧೯೯೦, ೧೯೯೧ ಮತ್ತು ೧೯೯೨ರಲ್ಲಿ ಸಂತ್ರಸ್ತರಿಗೆ ಪರಿಹಾರವನ್ನು ಕೊಡಿಸಿತು. ಪರಿಹಾರದ ಮೊತ್ತದಲ್ಲಿ ಶೇಕಡಾ ೫೦ರಷ್ಟನ್ನು ನಿರ್ಮಾಪಕರೂ, ಶೇಕಡಾ ೫೦ರಷ್ಟನ್ನು ಸ್ಟುಡಿಯೋ ಮಾಲೀಕರೂ ನೀಡಬೇಕೆಂದು ನ್ಯಾಯಾಲಯ ನಿರ್ಧರಿಸಿ ಅದರಂತೆಯೇ ಆದೇಶಿಸಿತು.

೧೯೯೦ರಲ್ಲಿ ಕನ್ನಡ ಚಲನಚಿತ್ರರಂಗದ ಕಾರ್ಮಿಕರಿಗೆ ಮತ್ತೊಂದು ಸಮಸ್ಯೆ ಎದುರಾಯಿತು. ಒಕ್ಕೂಟ ಚಿತ್ರರಂಗದ ಪ್ರತಿ ವಿಭಾಗದ ಕೆಲಸಗಾರರಿಗೆ ಕನಿಷ್ಠ ವೇತನವನ್ನು ನಿರ್ಧರಿಸಿತು. ಉದ್ಯಮಕ್ಕೆ ಬಂದೊದಗಿದ ಅನಿವಾರ್ಯ ಸ್ಥಿತಿಯಲ್ಲಿ ಕಾರ್ಮಿಕರು ವೇತನ ಕಡಿತವನ್ನು ಒಪ್ಪಿಕೊಳ್ಳಬೇಕೆಂದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ನೋಟೀಸು ಜಾರಿಮಾಡಿತು. ಈ ಸಂದರ್ಭದಲ್ಲಿ ಸುಮಾರು ಒಂದು ತಿಂಗಳು ಶೂಟಿಂಗ್ ನಿಂತಿತು. ಕಾರ್ಮಿಕರು ದುಡಿಮೆಯಿಲ್ಲದೆ ಉಪವಾಸ ಬಿದ್ದರು. ಒಕ್ಕೂಟ ತತ್‌ಕ್ಷಣ ಅವರ ನೆರವಿಗೆ ಬಂದಿತು. ಕಾರ್ಮಿಕರಿಗೆ ಕಮ್ಯೂನಿಟಿ ಕಿಚನ್ ತೆರೆದು ಒಂದು ಹೊತ್ತು ಊಟದ ವ್ಯವಸ್ಥೆ ಮಾಡಿತು. ಈ ವಿಷಯ ಆಗಿನ ಮುಖ್ಯಮಂತ್ರಿ ಎಸ್.ಬಂಗಾರಪ್ಪನವರ ಗಮನಕ್ಕೆ ಬಂದಿತು. ಅವರು ವಾಣಿಜ್ಯ ಮಂಡಳಿಯ ಪ್ರತಿನಿಧಿಗಳನ್ನು ಕರೆಸಿಕೊಂಡು ವೇತನ ಕಡಿಮೆ ಮಾಡುವ ನಿರ್ಧಾರ ಸರಿಯಲ್ಲವೆಂದೂ, ನಿರ್ಮಾಣ ವೆಚ್ಚ ತಗ್ಗಿಸಲು ಬೇರೆ ಯಾವುದಾದರೂ ಉಪಾಯ ಹುಡುಕುವಂತೆಯೂ ಸೂಚಿಸಿದರು. ಮುಷ್ಕರ ಅಂತ್ಯಗೊಂಡಿತು.

ಒಕ್ಕೂಟ ಕೇಂದ್ರ ಸರ್ಕಾರದ ಕಾರ್ಮಿಕರ ಕ್ಷೇಮಾಭಿವೃದ್ಧಿ ಆಯುಕ್ತರಲ್ಲಿ ತನ್ನ ಸದಸ್ಯರಿಗೆ, ಅವರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ವಿದ್ಯಾರ್ಥಿ ವೇತನ ಹಾಗೂ ವೈದ್ಯಕೀಯ ಸೌಲಭ್ಯಗಳನ್ನು ದೊರಕಿಸಿಕೊಡುವಂತೆ ಮನವಿ ಮಾಡಿತು. ಈ ಸೌಲಭ್ಯಗಳನ್ನು ಸದಸ್ಯರಿಗೆ ಒದಗಿಸಿಕೊಡುವಲ್ಲಿ ಯಶಸ್ವಿಯೂ ಆಯಿತು. ೧೯೯೧ರಲ್ಲಿ ಒಕ್ಕೂಟವು ತನ್ನ ಅಂಗಸಂಸ್ಥೆಗಳ ಸಹಕಾರದೊಂದಿಗೆ 'ಕ್ಷೇಮನಿಧಿ'ಯೊಂದನ್ನು ಸ್ಥಾಪಿಸಿತು. ಪ್ರತಿಯೊಬ್ಬ ಸದಸ್ಯನೂ ದಿನಕ್ಕೊಂದು ರೂಪಾಯಿಯಂತೆ ಕ್ಷೇಮನಿಧಿಗೆ ವಂತಿಗೆ ನೀಡುತ್ತಾ ಬಂದು, ಸದಸ್ಯರು ಕಾಲವಶರಾದಾಗ ಅವರ ಕುಟುಂಬ ೫,೦೦೦ ರೂಪಾಯಿಗಳ ನೆರವನ್ನು ಪಡೆಯಲು ಈ ನಿಧಿಯಿಂದ ಸಾಧ್ಯವಾಯಿತು. ಕ್ರಮೇಣ ಆ ನೆರವು ೧೫,೦೦೦ ರೂಪಾಯಿಗಳಿಗೇರಿದೆ. ೧೯೯೨ರಲ್ಲಿ ಕೇಂದ್ರ ಸರ್ಕಾರದ ಕಾರ್ಮಿಕರ ಕ್ಷೇಮಾಭಿವೃದ್ಧಿ ಆಯುಕ್ತರು ಒಕ್ಕೂಟದ ಸದಸ್ಯರ ಮಕ್ಕಳ ವ್ಯಾಸಂಗಕ್ಕೆ ವಿದ್ಯಾರ್ಥಿ ವೇತನವನ್ನು ಮಂಜೂರು ಮಾಡಿದರು. ಪ್ರಾರಂಭದಲ್ಲಿ ಅದಕ್ಕಾಗಿ ದೊರೆತ ಅನುದಾನ ೧೭ ಸಾವಿರ ರೂಪಾಯಿಗಳು ಮಾತ್ರ. ೧೯೯೩ರಲ್ಲಿ ಅದು ೯೮ ಸಾವಿರ ರೂಪಾಯಿಗಳಷ್ಟಾಯಿತು. ಈ ಅನುದಾನದ ಮೊತ್ತ ವರ್ಷ ವರ್ಷವೂ ಹೆಚ್ಚುತ್ತಾ ಬಂದಿದೆ. ಒಕ್ಕೂಟ ತನ್ನ ಸದಸ್ಯರಿಗಾಗಿ ಸಾಮೂಹಿಕ ವಿಮಾ ಯೋಜನೆ, ವೈದ್ಯಕೀಯ ಸೌಲಭ್ಯಗಳನ್ನು ಜಾರಿಗೆ ತಂದಿದೆಯಲ್ಲದೆ, ವೈದ್ಯಕೀಯ ಚಿಕಿತ್ಸೆಗಾಗಿ ಮಾಡಲಾದ ವೆಚ್ಚವನ್ನು ಸದಸ್ಯರು ಮರಳಿ ಪಡೆಯಲೂ ಸಾಧ್ಯವಾಗಿದೆ. ಪ್ರತಿಭಾವಂತರಿಗೆ ಮೆರಿಟ್ ಸ್ಕಾಲರ್‌ಶಿಪ್ ಹಾಗೂ ವಿದ್ಯಾರ್ಥಿನಿಯರಿಗೆ ಪ್ರೋತ್ಸಾಹಕ ಸ್ಕಾಲರ್‌ಶಿಪ್‌ಗಳೂ ಸದಸ್ಯರ ಮಕ್ಕಳಿಗೆ ದೊರೆಯುವಂತಾಗಿದೆ.

ಕೇವಲ ೪೫ ಮಂದಿ ಸದಸ್ಯರೊಂದಿಗೆ ಪ್ರಾರಂಭವಾದ ಈ ಒಕ್ಕೂಟದಲ್ಲಿ ಚಲನಚಿತ್ರರಂಗದ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ೧೩ ಸಂಘಟನೆಗಳು ವಿಲೀನಗೊಂಡಿದ್ದು ಈಗ ಒಕ್ಕೂಟದ ಸದಸ್ಯರ ಸಂಖ್ಯೆ ಹೆಚ್ಚಾಗಿದೆ. ನಿರ್ಮಾಣ ಸಹಾಯಕರ ಸಂಘ, ಮೈಸೂರಿನ ಜ್ಯೂನಿಯರ್ ಕಲಾವಿದರ ಸಂಘ, ಸಾಹಸ ನಿರ್ದೇಶಕರು ಮತ್ತು ಸಾಹಸ ಕಲಾವಿದರ ಸಂಘ, ವಾಹನ ಚಾಲಕರ ಸಂಘ, ನಿರ್ಮಾಣ ನಿರ್ವಾಹಕರು ಮತ್ತು ವ್ಯವಸ್ಥಾಪಕರ ಸಂಘ, ಲೈಟ್‌ಮನ್‌ಗಳ ಸಂಘ, ವರ್ಣಾಲಂಕರಣಕಾರರು ಮತ್ತು ಕೇಶವಿನ್ಯಾಸಕರ ಸಂಘ, ಹೊರಾಂಗಣ ಚಿತ್ರಣ ತಂಡದವರ ಸಂಘ ಹಾಗೂ ಸಂಗೀತಗಾರರ ಸಂಘ ಇವು ಒಕ್ಕೂಟದ ಅಂಗಸಂಸ್ಥೆಗಳಾಗಿವೆ. ಸುಮಾರು ೪,೫೦೦ಕ್ಕೂ ಹೆಚ್ಚು ಸದಸ್ಯರಿದ್ದಾರೆ.

ಪ್ರತಿ ತಿಂಗಳ ಎರಡನೇ ಭಾನುವಾರದಂದು ಚಿತ್ರೀಕರಣಕ್ಕೆ ರಜಾ ದಿನವಾಗಿದ್ದು, ಆ ದಿನ ಒಕ್ಕೂಟದ ಸದಸ್ಯರೆಲ್ಲ ತಪ್ಪದೆ ಸಭೆ ನಡೆಸಿ, ಎದುರಾದ ಸಮಸ್ಯೆಗಳು ಮತ್ತು ಎಲ್ಲರ ಕ್ಷೇಮಾಭಿವೃದ್ಧಿಗಾಗಿ ಕೈಗೊಳ್ಳಬೇಕಾದ ವಿಚಾರಗಳ ಬಗ್ಗೆ ಚರ್ಚಿಸಿ ನಿರ್ಧಾರಗಳನ್ನು ಕೈಗೊಳ್ಳುವ ಪರಿಪಾಠ ಈ ಒಕ್ಕೂಟದ್ದು. ಸದಸ್ಯರ ಭವಿಷ್ಯ ನಿಧಿ ಯೋಜನೆ, ಒಕ್ಕೂಟಕ್ಕಾಗಿ ಒಂದು ಕಟ್ಟಡ, ಬೆಂಗಳೂರಿನಲ್ಲಿ ಕೇಂದ್ರ ಸರ್ಕಾರ ನಡೆಸುವ ಆಸ್ಪತ್ರೆಗಾಗಿ ಕಟ್ಟಡ, ವಯಸ್ಸಾದವರಿಗೆ ಪಿಂಚಣಿ - ಹೀಗೆ ವಿವಿಧ ಸೌಲಭ್ಯಗಳನ್ನು ಒದಗಿಸುವ ಪ್ರಯತ್ನ ನಡೆದಿದೆ. ಪ್ರಸ್ತುತ ಒಕ್ಕೂಟದ ಸದಸ್ಯರು ಸಂಚಾರಿ ಆಸ್ಪತ್ರೆಯೊಂದರ ಸೌಲಭ್ಯವನ್ನು ಪ್ರತಿ ಗುರುವಾರ ಪಡೆಯುತ್ತಿದ್ದಾರೆ.

೧೯೯೮-೯೯ರಲ್ಲಿ ಚಲನಚಿತ್ರ ನಿರ್ಮಾಣ ಕ್ಷೇತ್ರದಲ್ಲಿ ದುಡಿಯುವ ಕಾರ್ಮಿಕ ವರ್ಗದ ವೇತನ ಹೆಚ್ಚು, ಕಡಿಮೆ ಮಾಡಿಕೊಳ್ಳಬೇಕಾದ ಅಗತ್ಯವಿದೆಯೆಂಬ ಪ್ರಸ್ತಾಪ ಬಂದು ವೇತನ ಕಡಿತವಾದರೂ ಒಂದೂವರೆ ವರ್ಷದ ನಂತರ ಮತ್ತೆ ಹಿಂದಿನ ಸ್ಥಿತಿಯೇ ಮುಂದುವರೆಯಿತು. ಒಟ್ಟಿನಲ್ಲಿ ಕರ್ನಾಟಕ ಚಲನಚಿತ್ರ ಕಲಾವಿದರ, ತಂತ್ರಜ್ಞರ, ಕಾರ್ಮಿಕರ ಒಕ್ಕೂಟ ಇಂದು ಒಂದು ಶಕ್ತಿಯುತ ಸಂಘಟನೆಯಾಗಿ ಬೆಳೆದು ನಿಂತಿದೆ. ಕನ್ನಡ ಚಿತ್ರರಂಗ ಕರ್ನಾಟಕಕ್ಕೆ ಮರಳಿ ಬಂದು ನೆಲೆ ನಿಲ್ಲಲು, ಕಾರ್ಮಿಕರಿಗೆ ಅಗತ್ಯ ಸೌಲಭ್ಯ ಒದಗಿಸಲು, ಕಾರ್ಮಿಕ ವರ್ಗದಲ್ಲಿ ಶಿಸ್ತು ಮೂಡಿಸಲು ಕಾರಣವಾಗಿದೆ. ಕೆಲವೊಮ್ಮೆ ನಿರ್ಮಾಪಕರು ಹಾಗೂ ಕಾರ್ಮಿಕರ ನಡುವೆ ಅಭಿಪ್ರಾಯಭೇದ-ಗೊಂದಲ ಮೂಡಿರಬಹುದಾದರೂ ಚಲನಚಿತ್ರ ನಿರ್ಮಾಪಕರು ಮತ್ತು ಕಾರ್ಮಿಕರ ನಡುವೆ ಶಾಂತಿ, ಸೌಹಾರ್ದತೆ ಹಾಗೂ ಸಂತಸದ ಸೇತುವಾಗಿ ಒಕ್ಕೂಟ ಕಾರ್ಯ ನಿರ್ವಹಿಸುತ್ತಿದೆ. ೨೦೦೦ನೇ ವರ್ಷದಲ್ಲಿ ನಟ ಅನಂತ್‌ನಾಗ್ ಗೌರವ ಅಧ್ಯಕ್ಷರು, ನಟ ಅಶೋಕ್ ಅಧ್ಯಕ್ಷರು. ಈ ಒಕ್ಕೂಟದ ಪ್ರಧಾನ ಕಾರ್ಯದರ್ಶಿಯಾಗಿ ಬಿ.ಕೃಷ್ಣ ಕಾರ್ಯ ನಿರ್ವಹಿಸಿದರೆ, ಬಿ.ಎಂ.ಕೃಷ್ಣಮೂರ್ತಿ ಉಪಾಧ್ಯಕ್ಷರು. ಜಂಟಿ ಕಾರ್ಯದರ್ಶಿಯಾಗಿ ಶಂಕರನಾರಾಯಣ ಐತಾಳ, ಕಾರ್ಯದರ್ಶಿಗಳಾಗಿ ಆನಂದ್ ಸಿಂಗ್, ಕೆ.ಶಿವರಾಮ ಉಪ್ಪುಂದ ಮತ್ತು ವೈ.ಬಿ.ನಾಗರಾಜ್ ಹಾಗೂ ಖಜಾಂಚಿಯಾಗಿ ಕೆ.ಮಹಾಬಲ ಒಕ್ಕೂಟದ ಇತರ ಪದಾಧಿಕಾರಿಗಳು.

### ಕರ್ನಾಟಕ ಚಲನಚಿತ್ರ ನಿರ್ಮಾಣ ಸಹಾಯಕರ ಸಂಘ

ಚಲನಚಿತ್ರ ಸೃಷ್ಟಿಕಾರ್ಯದಲ್ಲಿ ನಿರ್ಮಾಣ ಸಹಾಯಕರ ಪಾತ್ರ ಗಣನೀಯವಾದುದು. ಎಲ್ಲರಿಗಿಂತ ಮುಂಚಿತವಾಗಿ ಚಿತ್ರೀಕರಣ ತಾಣ ತಲುಪಿ, ಚಿತ್ರತಂಡ ಬಂದು ಸೇರುವ ವೇಳೆಗೆ ಉಪಹಾರ-ಕಾಫಿಗಳೊಂದಿಗೆ ಸಿದ್ಧವಾಗಿರುವ ನಿರ್ಮಾಣ ಸಹಾಯಕರು ಬೆಳಿಗ್ಗೆ ೧೧ರ ವೇಳೆಗೆ ಟೀ, ಮಧ್ಯಾಹ್ನ ಭೋಜನ, ಸಂಜೆ ನಾಲ್ಕಕ್ಕೆ ಮತ್ತೆ ಟೀ, ಸಂಜೆ ಆರಕ್ಕೆ ಲಘು ಉಪಹಾರ-ಕಾಫಿ ಹೀಗೆ ಕ್ರಮಬದ್ಧವಾಗಿ ಸಮಯಕ್ಕೆ ಸರಿಯಾಗಿ ಒದಗಿಸುವುದರೊಂದಿಗೆ, ಚಿತ್ರೀಕರಣಕ್ಕೆ ಕಾಲಕಾಲಕ್ಕೆ ಅಗತ್ಯವಾದ ಪರಿಕರಗಳನ್ನು ಒದಗಿಸುತ್ತಾರೆ, ಹಿಂದೆ ಪ್ರೊಡಕ್ಷನ್ ಬಾಯ್ಸ್ ಎಂದು ಕರೆಯಲಾಗುತ್ತಿತ್ತು. ಅನಂತರ ಪ್ರೊಡಕ್ಷನ್ ಅಸಿಸ್ಟೆಂಟ್ಸ್ ಎಂದು ಬದಲಾಗಿದೆ.

ಈ ನಿರ್ಮಾಣ ಸಹಾಯಕರಿಗೆ ಒಟ್ಟು ಮೊತ್ತದ ಸಂಭಾವನೆಯಿಲ್ಲ. ಒಂದು ಕಾಲ್‌ಷೀಟ್‌ಗೆ ಇಷ್ಟು ಎಂದು ನಿಗದಿಯಾಗಿರುವ ಮೊತ್ತ ಸಿಗುತ್ತದೆ. ವಾರಕ್ಕೊಮ್ಮೆಯೋ ಅಥವಾ ಚಿತ್ರೀಕರಣದ ಒಂದು ಹಂತ ಪೂರ್ಣಗೊಂಡಾಗಲೋ ಅವರ ಕೆಲಸಕ್ಕೆ ದೊರೆಯಬೇಕಾದ ಮೊತ್ತವನ್ನು ಅವರು ಪಡೆಯುತ್ತಾರೆ. ಹೊರ ಊರುಗಳಲ್ಲಿ ಚಿತ್ರೀಕರಣ ನಡೆದಾಗ ಚಿತ್ರತಂಡದ ಇತರರಿಗೆ ದೊರೆಯುವಂತೆ ವಿಶೇಷ ಸೌಲಭ್ಯಗಳಾವುದೂ ಇವರಿಗೆ ಸಿಕ್ಕುವುದಿಲ್ಲ. ಹೊರ ಊರುಗಳಲ್ಲಿ ಚಿತ್ರೀಕರಣ ನಡೆದಾಗ ಬೆಳಿಗ್ಗೆ ಚಿತ್ರತಂಡದ ಎಲ್ಲರ ಸ್ನಾನಕ್ಕಾಗಿ ಬಿಸಿನೀರು ಕಾಯಿಸುವುದನ್ನೂ ಈ ನಿರ್ಮಾಣ ಸಹಾಯಕರು ತಮ್ಮ ಕರ್ತವ್ಯವಾಗಿ ಭಾವಿಸುತ್ತಾರೆ. ಚಿತ್ರೀಕರಣ ನಡೆದಿರುವಾಗ ಚಿತ್ರೀಕರಣ ನೋಡಲು ಬಂದವರನ್ನು ನಿಯಂತ್ರಿಸುವ ಕೆಲಸವನ್ನು ಮಾಡುತ್ತಾರೆ. ಹೀಗೆ ಚಿತ್ರತಂಡದವರ ಊಟೋಪಚಾರ-ಯೋಗಕ್ಷೇಮಗಳ ನಿರ್ವಹಣೆಯೊಂದಿಗೆ ಚಿತ್ರೀಕರಣಕ್ಕೆ ಅಗತ್ಯ ಪರಿಕರಗಳನ್ನು ಒದಗಿಸುವ ಈ ಜನರಲ್ಲಿ ಎಲ್ಲರಿಗೂ ಎಲ್ಲ ದಿನಗಳೂ ಕೆಲಸವಿರುತ್ತದೆ ಎಂದು ನಿಖರವಾಗಿ ಹೇಳಲು ಸಾಧ್ಯವಾಗದು. ಇವರು ನಿರ್ಮಾಣ ನಿರ್ವಾಹಕರ ಕೈಕೆಳಗೆ, ಅವರ ಆದೇಶವನ್ನು ಅನುಸರಿಸಿ ಕೆಲಸ ಮಾಡಬೇಕಾಗುತ್ತದೆ.

ದಶಕಗಳ ಹಿಂದೆ ಅಸಂಘಟಿತರಾಗಿದ್ದ ನಿರ್ಮಾಣ ಸಹಾಯಕರು ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟದ ಅಡಿಯಲ್ಲಿ ಸಂಘಟಿತರಾಗಿ, ತಮ್ಮದೇ ಸಂಘವೊಂದನ್ನು ಮಾಡಿಕೊಂಡರು. ಕರ್ನಾಟಕ ಚಲನಚಿತ್ರ ನಿರ್ಮಾಣ ಸಹಾಯಕರ ಸಂಘ ಒಕ್ಕೂಟದ ಅಂಗಸಂಸ್ಥೆಯಾಗಿ ಒಕ್ಕೂಟದ ಮಾರ್ಗದರ್ಶನದಲ್ಲಿ ಮುನ್ನಡೆದಿದೆ. ೨೦೦೦ನೇ ವರ್ಷದಲ್ಲಿ ಎನ್.ರಾಮು ನಿರ್ಮಾಣ ಸಹಾಯಕರ ಸಂಘದ ಅಧ್ಯಕ್ಷರಾಗಿದ್ದು, ಪ್ರಧಾನ ಕಾರ್ಯದರ್ಶಿಯಾಗಿ ಸಿ.ಮಹಾದೇವ ಮತ್ತು ಖಜಾಂಚಿಯಾಗಿ ಬಿ.ಚಂದ್ರಶೇಖರ ಬಡಿಗೇರ ಕಾರ್ಯ ನಿರ್ವಹಿಸಿದರು.

### ಅಖಿಲ ಕರ್ನಾಟಕ ಚಲನಚಿತ್ರ ಸಾಹಸ ನಿರ್ದೇಶಕರ ಮತ್ತು ಸಾಹಸ ಕಲಾವಿದರ ಸಂಘ

ಕನ್ನಡ ಚಲನಚಿತ್ರಗಳಲ್ಲಿ ಸಂಗೀತ, ನೃತ್ಯಗಳಂತೆಯೇ ಸಾಹಸಕ್ಕೂ ಈಚೆಗೆ ಅಗ್ರಸ್ಥಾನ ಸಿಕ್ಕಿದೆ. ಮೊದಮೊದಲಲ್ಲಿ ಚಿತ್ರದ ಕಥೆಯ ಅಗತ್ಯಕ್ಕೆ ಅನುಗುಣವಾಗಿ ಒಂದೋ ಎರಡೋ ಫೈಟ್ಸ್ (ಸಾಹಸದ) ಸನ್ನಿವೇಶಗಳು ಇರುತ್ತಿದ್ದವು. ಪ್ರೇಕ್ಷಕರಿಗೆ ಈ ಫೈಟ್‌ಗಳು ಪ್ರಿಯವಾಗುತ್ತಾ ಬಂದುದರಿಂದಾಗಿ ಚಿತ್ರಗಳಲ್ಲಿ ಅವುಗಳ ಸಂಖ್ಯೆ ಹೆಚ್ಚಾಯಿತು. ಮೂಲತಃ ಸಿನಿಮಾ ಎಂಬುದೇ ಪ್ರೇಕ್ಷಕನ ಪಾಲಿಗೆ ಹಲವು ಕಲ್ಪನೆ, ಕನಸುಗಳ ರಸಮಿಲನ. ಯಾವುದನ್ನೇ ಆಗಲಿ ಹೆಚ್ಚು ವೈಭವೀಕರಿಸಿ ತೋರಿಸಿದಲ್ಲಿ ಪ್ರೇಕ್ಷಕರು ಅದರಿಂದ ಆಕರ್ಷಿತನಾಗುವುದು ಸಹಜ. ಹಲವೊಮ್ಮೆ ವಾಸ್ತವಕ್ಕೆ ದೂರವಾಗಿದ್ದರೂ ಪ್ರೇಕ್ಷಕರ ದೃಷ್ಟಿಯಲ್ಲಿ ವಾಸ್ತವ-ಅವಾಸ್ತವಗಳು ಗೌಣವೆನಿಸಿ ಅವರು ಅವುಗಳಿಂದ ರಂಜನೆ ಪಡೆಯುತ್ತಾರೆ. ಪ್ರೇಮಿಗಳು ಉದ್ಯಾನವನಗಳಲ್ಲಿ ಹಲವು ಮಂದಿ ನರ್ತಕಿಯರೊಡಗೂಡಿ ಕುಣಿದು ಪ್ರೇಮ ವ್ಯಕ್ತಪಡಿಸುವುದನ್ನು ಸ್ವೀಕರಿಸಿದಂತೆಯೇ ಕಥಾನಾಯಕನು ಹತ್ತಾರು ಮಂದಿಯೊಡನಿರುವ ಖಳನಾಯಕನನ್ನು ಅವನ ಸಂಗಡಿಗರ ಸಹಿತ ಹಣ್ಣುಗಾಯಿ ನೀರುಗಾಯಿ ಮಾಡುವುದನ್ನು ಪ್ರೇಕ್ಷಕರು ಸ್ವಾಗತಿಸುತ್ತಾರೆ. ಅಂತಹ ಸಾಹಸವನ್ನು ಅದು ಅಸಹಜವೆನಿಸಿದರೂ ರಂಜನೆಯ ದೃಷ್ಟಿಯಿಂದ ಸ್ವಾಗತಿಸುತ್ತಾರೆ. ಅವನ ಮನಸ್ಸು ಅಂತಹ ಸನ್ನಿವೇಶಗಳನ್ನು ಕಂಡಾಗ ಮುದಗೊಳ್ಳುತ್ತದೆ.

ಹೀಗೆ ಪ್ರೇಕ್ಷಕರನ್ನು ರಂಜಿಸಲು ಸಾಹಸ ಕಲಾವಿದರು ಜೀವದ ಹಂಗು ತೊರೆದು ನಟಿಸಬೇಕಾಗುತ್ತದೆ. ಸಾಹಸ ನಿರ್ದೇಶಕರು ಹೊಸ ಹೊಸ ಬಗೆಯ ಸಾಹಸಗಳ ಆವಿಷ್ಕರಣ ಮಾಡಬೇಕಾಗುತ್ತದೆ. ನಾಯಕನನ್ನು ಅತಿಮಾನವನನ್ನಾಗಿಸಲು ಅತ್ಯಂತ ಅಪಾಯಕರ ಸಾಹಸದ ದೃಶ್ಯಗಳನ್ನು ಸಂಯೋಜಿಸಬೇಕಾಗುತ್ತದೆ. ಭಾರತೀಯ ಚಿತ್ರರಂಗದಲ್ಲಿ ಸಾಹಸ ಸನ್ನಿವೇಶಗಳ ಚಿತ್ರೀಕರಣ ಸಂದರ್ಭದಲ್ಲಿ ಹಲವು ಅನಾಹುತಗಳು ಸಂಭವಿಸಿದ್ದುಂಟು; ಅಪಾಯಗಳು ಎದುರಾದದ್ದುಂಟು. ಕನ್ನಡ ಚಿತ್ರಗಳ ಚಿತ್ರೀಕರಣ ಸಮಯದಲ್ಲಿಯೂ ಸಾಹಸ ದೃಶ್ಯಗಳನ್ನು ಚಿತ್ರಿಸುವ ಸಂದರ್ಭದಲ್ಲಿಯೂ ಪ್ರಾಣಾಂತಿಕ ಅಪಾಯಗಳು ಉಂಟಾಗಿವೆ.

ಮೊದಮೊದಲಲ್ಲಿ ಸಾಹಸ ಕಲಾವಿದರು ಹಾಗೂ ಸಾಹಸ ನಿರ್ದೇಶಕರನ್ನು ಕನ್ನಡ ಚಿತ್ರಗಳಿಗಾಗಿ ಮದರಾಸಿನಿಂದ ಕರೆಸಿಕೊಳ್ಳಲಾಗುತ್ತಿತ್ತು. ಮುಂಬೈನ ಸಾಹಸಿಗರನ್ನು ಕರೆತರುತ್ತಿದ್ದುದೂ ಉಂಟು. ಕ್ರಮೇಣ ಕನ್ನಡದವರು ಚಲನಚಿತ್ರ ಸಾಹಸಕಲೆಯಲ್ಲಿ ಪರಿಣತರಾಗುತ್ತ ಬಂದರು. ಕನ್ನಡ ಚಿತ್ರಗಳಲ್ಲಿ ಸಾಹಸ ಕಲಾವಿದರಾಗಿ ಅಭಿನಯಿಸುವುದರೊಂದಿಗೆ ಹೊಸ ಹೊಸ ಸಾಹಸಗಳನ್ನು ಸಂಯೋಜಿಸುತ್ತಾ ಸಾಹಸ ನಿರ್ದೇಶಕರಾಗಿಯೂ ಹೆಸರಾದರು. ಹೀಗೆ ಸಾಹಸ ನಿರ್ದೇಶಕರಾಗಿ ಹೆಸರಾದ ಹಾಸನ್ ರಘು (ಕೆ.ಹೆಚ್.ರಘು) ಮತ್ತು ಅವರ ಸಂಗಡಿಗರು ಸಾಹಸಕಲೆಯ ಶಿಕ್ಷಣ ನೀಡಲು ತರಬೇತಿ ಕೇಂದ್ರವನ್ನು ಸ್ಥಾಪಿಸಿದರು. ಹಿಂದಿನ ಕಾಲದ ಶ್ಯಾಮಸುಂದರ್, ವೈ.ಶಿವಯ್ಯ, ಜ್ಯೂಡೋ ರತ್ನಂ ಅವರಂತಹ ಹಿರಿಯರ ಹಾದಿಯಲ್ಲಿ ನಡೆಯುತ್ತಾ ಕನ್ನಡ ಚಿತ್ರರಂಗದ ಸಾಹಸ ಕಲಾವಿದರು ಹೊಸ ಬಗೆಯ ಸಾಹಸ ಸೃಷ್ಟಿಯ ಪ್ರಯತ್ನಗಳಿಗೆ ಮೊದಲಿಟ್ಟರು. ಮುಂಬಯಿ ಚಿತ್ರಜಗತ್ತಿನಲ್ಲಿ ಹೆಸರಾದ ಕನ್ನಡಿಗ ರಾಮ್‌ಶೆಟ್ಟಿ ಕನ್ನಡದ ಸಾಹಸ ಕಲಾವಿದರಿಗೆ ಸ್ಫೂರ್ತಿಯಾದರು.

ಕನ್ನಡ ಚಿತ್ರರಂಗದಲ್ಲಿ ಸಾಹಸ ಕಲಾವಿದರು ಹಾಗೂ ಸಾಹಸ ನಿರ್ದೇಶಕರು ಸಂಖ್ಯಾ ಪ್ರಮಾಣದಲ್ಲಿ ಹೆಚ್ಚಾದಂತೆ ಸಾಹಸ ನಿರ್ದೇಶಕ ಹಾಸನ್ ರಘು ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಚಲನಚಿತ್ರ ಸಾಹಸ ನಿರ್ದೇಶಕರ ಮತ್ತು ಸಾಹಸ ಕಲಾವಿದರ ಸಂಘ ರೂಪುಗೊಂಡು ನೋಂದಾವಣೆಯಾಯಿತು. ಎಂ.ಡಿ.ಪ್ರಕಾಶ್ ಮತ್ತು ಎಸ್.ಮಧುಸೂದನ್ ಉಪಾಧ್ಯಕ್ಷರುಗಳಾಗಿಯೂ, ಎಸ್.ದೇವರಾಜ್ ಕಾರ್ಯದರ್ಶಿಯಾಗಿಯೂ, ಜಾನಿ ಜಂಟಿಕಾರ್ಯದರ್ಶಿಯಾಗಿಯೂ, ಎಸ್.ಸುಬ್ರಮಣಿ ಸಹಕಾರ್ಯದರ್ಶಿಯಾಗಿಯೂ, ಫಯಾಜ್‌ಖಾನ್ ಖಜಾಂಚಿಯಾಗಿಯೂ ಪದಾಧಿಕಾರದಲ್ಲಿದ್ದರು. ಕೆ.ನಾಗರಾಜ್ ವ್ಯವಸ್ಥಾಪಕರಾಗಿದ್ದರು. ಕಾರ್ಯಕಾರಿ ಸಮಿತಿಯಲ್ಲಿ ಪಿ.ಅಶೋಕ್, ಬಿ.ಎಸ್.ಸಿದ್ದರಾಜ್, ಅದಿ ಹಾಗೂ ಚೆನ್ನಬೀಚಯ್ಯ ಇದ್ದರು. ಜಿ.ಗೋವಿಂದ್, ಎನ್.ನರಸಿಂಹಮೂರ್ತಿ, ಪಿ.ವಿಜಯನ್, ಜಾಲಿ ಬಾಸ್ಟಿನ್, ವಿಕ್ರಮ್, ಸಿ.ಸುಬ್ರಮಣಿ, ಕೆ.ಡಿ.ವೆಂಕಟೇಶ್, ಆರ್.ಶಿವಕುಮಾರ್, ಡ್ಯಾನಿ, ಕೆ.ವೆಂಕಟೇಶ್, ನೀಗ್ರೋ ಜಾನಿ, ನಂಜುಂಡಿ ನಾಗರಾಜ್, ಎ.ಎಸ್.ಬಾಲಕೃಷ್ಣ ಮತ್ತಿತರ ಸಾಹಸ ನಿರ್ದೇಶಕರು ಸಂಘದ ಸದಸ್ಯರಾಗಿದ್ದರಲ್ಲದೆ ಅನೇಕ ಮಂದಿ ಸಾಹಸ ಕಲಾವಿದರೂ ಇದ್ದು ಸಂಘದ ಸದಸ್ಯಬಲ ನೂರ ಎರಡು ಆಯಿತು. (ನೋಡಿ : ಸಾಹಸ)

ಸಾಹಸ ನಿರ್ದೇಶಕರು ಮತ್ತು ಸಾಹಸ ಕಲಾವಿದರ ಅಖಿಲ ಕರ್ನಾಟಕ ಮಟ್ಟದ ಈ ಸಂಘಟನೆ ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟದ

ಅಂಗಸಂಸ್ಥೆಯಾಗಿ ಮಾನ್ಯತೆ ಪಡೆದಿದೆ. ತನ್ನದೇ ನಿಯಮಾವಳಿಯನ್ನು ರೂಪಿಸಿಕೊಂಡಿದು ಚಿತ್ರೋದ್ಯಮದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ೨೦೦೦ ವರ್ಷದಲ್ಲಿ ಜಿ.ಗೋವಿಂದ್ ಈ ಸಂಘದ ಅಧ್ಯಕ್ಷರು. ಎನ್.ನರಸಿಂಹಮೂರ್ತಿ ಕಾರ್ಯದರ್ಶಿ. ಎಂ.ಕೃಷ್ಣಮೂರ್ತಿ ಖಜಾಂಚಿ.

### ಕರ್ನಾಟಕ ಚಲನಚಿತ್ರ ನಿರ್ಮಾಣ ನಿರ್ವಾಹಕರ ಸಂಘ

ಚಲನಚಿತ್ರ ನಿರ್ಮಾಣ ಕ್ಷೇತ್ರದಲ್ಲಿ ನಿರ್ಮಾಣ ನಿರ್ವಾಹಕರದು ಅತ್ಯಂತ ಗುರುತರವಾದ, ಜವಾಬ್ದಾರಿಯುತವಾದ ಕೆಲಸ. ನಿರ್ಮಾಣ ನಿರ್ವಾಹಕನಿಲ್ಲದಿದ್ದಲ್ಲಿ ವ್ಯವಸ್ಥೆಯಲ್ಲಿ ಅವ್ಯವಸ್ಥೆಯಾಗುವ ಸಂಭವ ಖಚಿತ. ಚಿತ್ರ ತಯಾರಿಕಾ ಕ್ಷೇತ್ರದ ಎಲ್ಲ ಅಂಗಗಳೊಡನೆಯೂ ಆತನಿಗೆ ಸಂಬಂಧವಿರಬೇಕಾದುದು ಅತ್ಯಗತ್ಯ. ನಿರ್ಮಾಪಕರ ಪ್ರತಿನಿಧಿಯಾಗಿ ಆತ ಕೆಲಸ ಮಾಡಬೇಕು. ಯೋಜನಾಬದ್ಧವಾಗಿ ವ್ಯವಸ್ಥೆ ಮಾಡದಿದ್ದರೆ ಆ ಚಿತ್ರೀಕರಣ ಕಾರ್ಯವೇ ತಲೆಕೆಳಗಾಗುತ್ತದೆ. ಹಾಗಾಗಿ ಅವರನ್ನು ಪ್ರೊಡಕ್ಷನ್ ಮ್ಯಾನೇಜರ್, ಪ್ರೊಡಕ್ಷನ್ ಎಕ್ಸಿಕ್ಯೂಟಿವ್ ಎಂದು ಕರೆಯಲಾಗುತ್ತದೆ.

ಚಲನಚಿತ್ರದ ಚಿತ್ರೀಕರಣ ಸಮಯದಲ್ಲಿ ನಿರ್ದೇಶಕರ ಆದೇಶದಂತೆ ಕಾಲಕ್ಕೆ ಸರಿಯಾಗಿ ಚಿತ್ರದ ತಾಂತ್ರಿಕ ವರ್ಗದವರನ್ನು, ಕಲಾವಿದರನ್ನು ಚಿತ್ರೀಕರಣ ನಡೆಯುವ ಸ್ಥಳದಲ್ಲಿ ಇರುವಂತೆ ವಾಹನ ವ್ಯವಸ್ಥೆ ಮಾಡುವುದು, ಚಿತ್ರತಂಡದವರ ಊಟ-ಉಪಹಾರಾದಿ ವ್ಯವಸ್ಥೆ ಮಾಡುವುದು, ಚಿತ್ರೀಕರಣಕ್ಕೆ ಅಗತ್ಯವಾದ ರಂಗಪರಿಕರ (ಸೆಟ್ ಪ್ರಾಪರ್ಟಿ)ಗಳನ್ನು ಒದಗಿಸುವುದು, ಅಗತ್ಯ ಬಿದ್ದಾಗ ಕಿರುಪಾತ್ರ ಕಲಾವಿದರನ್ನು ಕರೆತರುವುದು, ಹೊರಾಂಗಣ ಚಿತ್ರೀಕರಣಕ್ಕೆ ಅನುಮತಿ ಪಡೆದುಕೊಂಡು ಬರುವುದು, ಸಹಾಯಧನಕ್ಕೆ ಅಗತ್ಯವಾದ ಮಾಹಿತಿಗಳನ್ನು ಕಾಲಕಾಲಕ್ಕೆ ಸಂಬಂಧಪಟ್ಟ ಕಚೇರಿಗೆ ಒಪ್ಪಿಸುವುದು, ಚಿತ್ರೀಕರಣಕ್ಕೆ ಅಗತ್ಯವಾದಲ್ಲಿ ಪೊಲೀಸ್ ಬಂದೋಬಸ್ತು ಏರ್ಪಡಿಸುವುದು, ಚಿತ್ರೀಕರಣಾನಂತರ ಕಲಾವಿದರು-ತಂತ್ರಜ್ಞರನ್ನು ಕಳುಹಿಸಿಕೊಡಲು ವ್ಯವಸ್ಥೆ ಮಾಡುವುದು, ಚಿತ್ರೀಕರಣ ಘಟಕ, ನಿರ್ಮಾಣ ಸಹಾಯಕರು ಮತ್ತಿತರರ ಬಾಟಾ ಸಂಭಾವನೆ ಪಾವತಿ ಮಾಡುವುದು, ಕಚ್ಚಾ ಫಿಲಮ್ ತರುವುದು, ಸೆನ್ಸಾರ್‌ಗೆ ಅಣಿ ಮಾಡುವುದು - ಹೀಗೆ ಹತ್ತು ಹಲವು ಜವಾಬ್ದಾರಿಯುತ ಕೆಲಸಗಳನ್ನು ನಿರ್ವಹಿಸುತ್ತಾ ನಿರ್ಮಾಪಕರ, ನಿರ್ದೇಶಕರ ಪ್ರತಿನಿಧಿಯಾಗಿ ದುಡಿಯುವ ಪ್ರೊಡಕ್ಷನ್ ಮ್ಯಾನೇಜರ್ ವೃತ್ತಿ ಸುಲಭ ಸಾಧ್ಯವಾದುದೇನಲ್ಲ.

ಆರಂಭದ ದಿಸೆಯಲ್ಲಿ ಕನ್ನಡ ಚಿತ್ರರಂಗ ಮದರಾಸಿನಲ್ಲಿದ್ದ ಕಾಲದಲ್ಲಿ ಬಹುಪಾಲು ಕನ್ನಡ ಚಿತ್ರಗಳ ನಿರ್ಮಾಣ ವ್ಯವಸ್ಥೆಯ ಹೊಣೆ ಹೊರುತ್ತಿದ್ದವರು ಅಲ್ಲಿನ ತಮಿಳು ಭಾಷೀಯರೆ. ಕ್ರಮೇಣ ಕನ್ನಡದ ನಿರ್ಮಾಣ ವ್ಯವಸ್ಥಾಪಕರು ಅವಕಾಶ ಪಡೆದರು. ಕನ್ನಡ ಚಲನಚಿತ್ರೋದ್ಯಮ ಕನ್ನಡ ನೆಲಕ್ಕೆ ಬಂದು ನೆಲೆ ನಿಂತ ಮೇಲೆ ಈ ವೃತ್ತಿಯಲ್ಲಿ ಕನ್ನಡದ ಅನೇಕರು ಪ್ರವೇಶ ಪಡೆದರು. ಸುಮಾರು ಅರುವತ್ತಾರು ಮಂದಿ ಪ್ರೊಡಕ್ಷನ್ ಮ್ಯಾನೇಜರ್ / ಪ್ರೊಡಕ್ಷನ್ ಎಕ್ಸಿಕ್ಯೂಟಿವ್‌ಗಳು ಇಂದು ರಂಗದಲ್ಲಿದ್ದಾರೆ. ಇವರೆಲ್ಲರ ಸಂಘಟನೆಯೇ **ಕರ್ನಾಟಕ ಚಲನಚಿತ್ರ ನಿರ್ಮಾಣ ನಿರ್ವಾಹಕರ ಸಂಘ.**

ಈ ಸಂಸ್ಥೆ ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟದ ಅಂಗಸಂಸ್ಥೆಯಾಗಿ ಮಾನ್ಯತೆ ಪಡೆದಿದೆ. ಶಿವಾಜಿರಾವ್, ಎಂ.ಎ.ಡೆಲ್ಲಿ, ಎನ್.ಎಲ್.ರಾಮಣ್ಣ, ಬಿ.ಕೃಷ್ಣ, ಕೆ.ಎಂ.ಈಶ್ವರ್, ವಿಜಯಕುಮಾರ್, ಆನಂದ್ ಸಿಂಗ್, ಎ.ವಿ.ರಮೇಶ್ ಬಾಬು, ಎ.ವಿ.ಎಂ.ಚನ್ನಯ್ಯ, ಕನ್ನಡ ರಾಜು, ಕೆ.ವಿ.ಮಂಜಯ್ಯ, ಎಂ.ಎ.ಸುಂದರರಾಜ್ ಮತ್ತಿತರರದು ಈ ಕ್ಷೇತ್ರದಲ್ಲಿ ಪರಿಚಿತ ಹೆಸರುಗಳು. ಶಿವಾಜಿರಾವ್ ಮತ್ತು ಡೆಲ್ಲಿ ನಿಧನರಾಗಿದ್ದಾರೆ. ಸುಂದರರಾಜ್ ಅವರು ಕರ್ನಾಟಕದಲ್ಲಿ ಚಿತ್ರೀಕರಣಕ್ಕಾಗಿ ಆಗಮಿಸುವ ಹಲವು ವಿದೇಶಿ ಹಾಗೂ ಪರಭಾಷೆಯ ಚಿತ್ರಗಳಿಗೂ ಕೆಲಸ ಮಾಡಿದ್ದಾರೆ. ಶಿವಾಜಿರಾವ್ ದಶಕಗಳ ಹಿಂದೆ ಚಿತ್ರಗಳಲ್ಲಿ ಅಭಿನಯಿಸಿದ್ದರು ಕೂಡ. ಯಶಸ್ವಿ ಕನ್ನಡ ಚಿತ್ರನಿರ್ಮಾಪಕರಲ್ಲಿ ಒಬ್ಬರಾದ ವಿಕ್ರಮ್ ಶ್ರೀನಿವಾಸ್ ಮದರಾಸಿನಲ್ಲಿ ಹಿರಿಯ ನಿರ್ಮಾಪಕ-ನಿರ್ದೇಶಕ ಛಾಯಾಗ್ರಾಹಕ ಬಿ.ಎಸ್.ರಂಗಾ ಅವರ ವಿಕ್ರಮ್ ಸ್ಟುಡಿಯೋವಿನಲ್ಲಿದು ಆ ಕಾಲದ ಹಲವು ಚಿತ್ರಗಳ ನಿರ್ಮಾಣ ನಿರ್ವಹಣೆಯನ್ನು ಯಶಸ್ವಿಯಾಗಿ ನಿರ್ವಹಿಸಿ ಹೆಸರಾದವರು.

ನಿರ್ಮಾಣ ನಿರ್ವಾಹಕರ ಸಂಘಕ್ಕೆ ೨೦೦೦ನೇ ವರ್ಷದಲ್ಲಿ ಅಧ್ಯಕ್ಷರು ಬಿ.ಕೃಷ್ಣ. ಅವರೊಂದಿಗೆ ಆನಂದ್ ಸಿಂಗ್ ಪ್ರಧಾನ ಕಾರ್ಯದರ್ಶಿಯಾಗಿ ಮತ್ತು ಬಿ.ಕೆ.ಬದರೀಪ್ರಸಾದ್ ಖಜಾಂಚಿಯಾಗಿ ಸಂಘದ ಪದಾಧಿಕಾರಿಗಳಲ್ಲಿ ಪ್ರಮುಖರಾಗಿದ್ದಾರೆ. ಈ ಸಂಘದಲ್ಲಿ ಅರುವತ್ತಾರು ಮಂದಿ ಸದಸ್ಯರಿದರು.

### ಕರ್ನಾಟಕ ಚಲನಚಿತ್ರ ವಸ್ತ್ರಾಲಂಕಾರ ಕಲಾವಿದರ ಸಂಘ

ಚಲನಚಿತ್ರಗಳಲ್ಲಿ ವಸ್ತ್ರಾಲಂಕರಣ ಒಂದು ಪ್ರಮುಖ ಅಂಶ. ಈಗಿನಂತೆ ದಶಕ-ದಶಕಗಳ ಹಿಂದೆ ಸಾಮಾಜಿಕ ಕಥೆಗಳ ಭರಾಟೆ ಇರಲಿಲ್ಲ. ಪೌರಾಣಿಕ ಕಥೆಗಳೇ ಹೆಚ್ಚು ತಯಾರಾಗುತ್ತಿದವು. ಅವನ್ನು ಬಿಟ್ಟರೆ ಜಾನಪದ ಕಥೆಗಳು ಚಿತ್ರ ತಯಾರಕರ ಪ್ರಿಯವಾದ ವಸ್ತುಗಳಾಗಿರುತ್ತಿದ್ದವು. ಹೀಗಾಗಿ ಸಾಮಾಜಿಕ ಕಥೆಗಳು ಅಪರೂಪಕ್ಕೊಮ್ಮೆ ತಯಾರಾಗುತ್ತಿದ್ದವು. ಪೌರಾಣಿಕ ಹಾಗೂ ಜಾನಪದ ಕಥೆಗಳ ಚಿತ್ರಗಳು ತಯಾರಾಗುತ್ತಿದ್ದ ಆ ಕಾಲದಲ್ಲಿ ವಸ್ತ್ರಾಲಂಕಾರಪಟುಗಳು ಹೆಚ್ಚು ಶ್ರಮಪಡಬೇಕಾಗುತ್ತಿತ್ತು. ಪೌರಾಣಿಕ ಹಾಗೂ ಜಾನಪದ ಕಥೆಗಳನ್ನು ಚಿತ್ರಕ್ಕೆ ಆಯ್ಕೆ ಮಾಡಿಕೊಂಡಾಗ ನಿರ್ದೇಶಕರು ಚಿತ್ರದ ಕಲಾನಿರ್ದೇಶನದ ಹೊಣೆ ಹೊತ್ತವರಿಗೆ ಚಿತ್ರದ ಕಥೆಯನ್ನು ಮನದಟ್ಟು ಮಾಡಿಕೊಡುತ್ತಿದ್ದರು. ಕಲಾನಿರ್ದೇಶಕರು ಕಥೆಯ ಕಾಲಕ್ಕನುಗುಣವಾಗಿ ಸೆಟ್‌ಗಳನ್ನು ಸ್ಕೆಚ್ ಮಾಡಿಕೊಡುವುದಲ್ಲದೆ ಅದಕ್ಕೆ ಅನುಗುಣವಾದ ಉಡುಗೆ-ತೊಡುಗೆಗಳ ಬಗ್ಗೆ ಸ್ಕೆಚ್ ಮಾಡಿಕೊಡುತ್ತಿದ್ದರು. ವಸ್ತ್ರಾಲಂಕಾರಪಟುಗಳು ಆ ಸ್ಕೆಚ್‌ಗೆ ಅನುಗುಣವಾಗಿ, ಹೊಲಿಗೆ ಯಂತ್ರವನ್ನು ನಿರ್ಮಾಪಕರ ಕಚೇರಿಗೋ ಅಥವಾ ನಿರ್ಮಾಪಕರು ವ್ಯವಸ್ಥೆ ಮಾಡಿದ ಸ್ಥಳಕ್ಕೋ ಒಯ್ದು, ಛಾಯಾಗ್ರಾಹಕರೊಂದಿಗೆ ಸಮಾಲೋಚಿಸಿ ಬಟ್ಟೆಗಳನ್ನು ತಂದು ಪಾತ್ರಧಾರಿಗಳ ಉಡುಪುಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಸಾಮಾಜಿಕ ಕಥೆಯ ಚಿತ್ರಸೃಷ್ಟಿಯ ಸಂದರ್ಭದಲ್ಲಿಯೂ ಇದೇ ಪದ್ಧತಿ ಮುಂದುವರೆದಿತ್ತು. ಕ್ರಮೇಣ ಸಿದ್ಧಪಡಿಸಿದ ಉಡುಪುಗಳನ್ನು ತಂದು ಬಳಸುವುದು ಆರಂಭವಾಯಿತು.

ಈ ಪ್ರಕ್ರಿಯೆಯ ನಡುವೆ ಕನ್ನಡ ಚಲನಚಿತ್ರೋದ್ಯಮದಲ್ಲಿ ಕೆಲವು ಪ್ರಮುಖ ನಾಯಕ ನಟರು ಹಾಗೂ ನಾಯಕಿ ಪಾತ್ರಧಾರಿ ನಟಿಯರು ವೈಯಕ್ತಿಕವಾಗಿ ತಮ್ಮದೇ ವಸ್ತ್ರಾಲಂಕಾರಪಟು (ಡ್ರೆಸ್ ಮೇಕರ್ಸ್)ಗಳನ್ನು ಹೊಂದಲು ಆರಂಭಿಸಿದರು. ಆಗ ಈ ವಸ್ತ್ರಾಲಂಕಾರಪಟುಗಳನ್ನು ಇಂಥವರ ಕಾಸ್ಟ್ಯೂಮರ್ ಎಂದು ಗುರುತಿಸುವಂತಾಯಿತು. ಉಳಿದ ಪಾತ್ರಧಾರಿಗಳ ಉಡುಪುಗಳನ್ನು ಕಂಪೆನಿಯ ಕಾಸ್ಟ್ಯೂಮರ್ ತನ್ನ ಸಹಾಯಕರೊಂದಿಗೆ ಸಿದ್ಧಮಾಡುವುದು ನಡೆದು ಬಂದಿತು.

ಇಂದು ಜನಸಾಮಾನ್ಯರಲ್ಲಿ ಕಾಣಬರುವ ಆಧುನಿಕ ಫ್ಯಾಷನ್‌ಗಳನ್ನು ಮೂಲವಾಗಿ ಚಲನಚಿತ್ರರಂಗದ ಕಾಸ್ಟ್ಯೂಮರ್‌ಗಳೇ ರೂಪಿಸಿದರು ಎಂದೇ ಹೇಳಬೇಕು. ನಾಯಕ ಧರಿಸುವ ಕೋಟು, ಪ್ಯಾಂಟು, ಶರಟುಗಳಿಂದ ಹಿಡಿದು ನಾಯಕಿಯ ಚೋಲಿ, ಸಲ್ವಾರ್‌ಕಮೀಜ್‌ನವರೆಗೆ ಎಲ್ಲ ಬಗೆಯ ಉಡುಗೆಯೂ ಕಾಲಕಾಲದಲ್ಲಿ ಹೊಸ ವಿನ್ಯಾಸಗಳೊಂದಿಗೆ ರೂಪುಗೊಳ್ಳುವಂತಾಗಲು, ಹೊಸ ಹೊಸ ಫ್ಯಾಷನ್‌ಗಳು ಚಲಾವಣೆಗೆ ಬರಲು ಚಲನಚಿತ್ರಗಳ ಕಾಸ್ಟ್ಯೂಮರ್‌ಗಳೇ ಪ್ರೇರಕಶಕ್ತಿಗಳು. ಚಿತ್ರಗಳ ತಯಾರಿಕೆ ಹೆಚ್ಚಾದಂತೆ ಅವುಗಳಲ್ಲಿ ಅಭಿನಯಿಸುವ ಕಲಾವಿದರೂ ಹೆಚ್ಚಿದರು. ಹಾಗೆಯೇ ಅವರನ್ನು ಹೊಸ ವಿನ್ಯಾಸದ ಫ್ಯಾಷನ್‌ನಲ್ಲಿ ತೋರಿಸುವುದೂ ಹೆಚ್ಚಿತು. ಯಾವುದೇ ಒಂದು ಚಿತ್ರದಲ್ಲಿನ ವಸ್ತ್ರವಿನ್ಯಾಸ ಹೊಸತಾಗಿದ್ದರೆ ಮರುಕ್ಷಣವೇ ಅದೇ ಬಗೆಯ ಉಡುಗೆ-ತೊಡುಗೆ ಜನಸಾಮಾನ್ಯರನ್ನು ಅಲಂಕರಿಸುವುದು ಇಂದು ಸರ್ವೇಸಾಮಾನ್ಯವೆನಿಸಿದೆ.

ಈ ನಿಟ್ಟಿನಲ್ಲಿ ಕನ್ನಡ ಚಲನಚಿತ್ರೋದ್ಯಮವೂ ಹೊರತೇನಲ್ಲ. ಆರಂಭದ ದಶಕಗಳಲ್ಲಿ ಮದರಾಸಿನಲ್ಲಿ ಕನ್ನಡ ಚಿತ್ರೋದ್ಯಮ ನೆಲೆಯೂರಿದ್ದಾಗ ಕನ್ನಡ ಚಿತ್ರಗಳಿಗೆ ಕೆಲಸ ಮಾಡಿದ ವಸ್ತ್ರಾಲಂಕಾರ ಕಲಾವಿದರಲ್ಲಿ ತಮಿಳು-ತೆಲುಗರೇ ಅಧಿಕ. ವರ್ಣಾಲಂಕಾರ-ಕಲಾನಿರ್ದೇಶನ ವಿಭಾಗಗಳಲ್ಲಿಯೂ ಅಷ್ಟೆ. ಕ್ರಮೇಣ ಕನ್ನಡ ಚಿತ್ರರಂಗ ಕರ್ನಾಟಕದಲ್ಲಿ ನೆಲೆಯೂರಿ ನಿಂತಿತು. ಕನ್ನಡದ ಪ್ರತಿಭಾವಂತರೂ ಈ ವಿಭಾಗದಲ್ಲಿ ಈಗ ಮಿಂಚುತ್ತಿದ್ದಾರೆ. ಕನ್ನಡ ಚಿತ್ರೋದ್ಯಮೆಯಲ್ಲಿ ಕೆಲಸ ಮಾಡುತ್ತಿರುವ ವಸ್ತ್ರಾಲಂಕಾರ ಕಲಾವಿದರೂ ಸಂಘಟಿತರಾಗಿದ್ದಾರೆ. 'ಕರ್ನಾಟಕ ಚಲನಚಿತ್ರ ವಸ್ತ್ರಾಲಂಕಾರ ಕಲಾವಿದರ ಸಂಘ'ವನ್ನು ಮಾಡಿಕೊಂಡಿದ್ದಾರೆ. ವಸ್ತ್ರಾಲಂಕಾರ ಕಲಾವಿದರ ಈ ಸಂಘವು ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟದ ಅಂಗಸಂಸ್ಥೆಯಾಗಿ ಮಾನ್ಯತೆ ಪಡೆದಿದೆ. ೨೦೦೦ನೇ ವರ್ಷದಲ್ಲಿ ಅಧ್ಯಕ್ಷರಾಗಿ ಎಸ್.ವೀರರಾಜು, ಪ್ರಧಾನ ಕಾರ್ಯದರ್ಶಿ ಬಿ.ಟಿ.ಶಿವಪ್ಪ ಹಾಗೂ ಖಜಾಂಚಿ ಬಿ.ಬಿ.ನಾಗರಾಜ್ ಈ ಸಂಘದ ಮುಖ್ಯ ಪದಾಧಿಕಾರಿಗಳು. (ನೋಡಿ : ವಸ್ತ್ರಾಲಂಕಾರ)

### ಕರ್ನಾಟಕ ಚಲನಚಿತ್ರ ಕಲಾನಿರ್ದೇಶಕ ಮತ್ತು ಸಹಾಯಕರ ಸಂಘ

ಕಲಾನಿರ್ದೇಶನ ಚಲನಚಿತ್ರವೊಂದರ ಅವಿಭಾಜ್ಯ ಅಂಗ. ಚಿತ್ರದ ಕಥೆ ಪೌರಾಣಿಕವಾಗಿರಲಿ, ಜಾನಪದವಾಗಿರಲಿ ಅಥವಾ ಸಾಮಾಜಿಕವಾಗಿರಲಿ ಕಥೆಗೆ,

ಕಥೆಯ ಕಾಲಕ್ಕೆ ಅನುಗುಣವಾಗಿ ಸೆಟ್ ರಚಿಸುವುದು, ಪರಿಕರಗಳನ್ನು ಒದಗಿಸುವುದು ಕಲಾನಿರ್ದೇಶಕನ ಪ್ರಮುಖ ಕರ್ತವ್ಯ. ಜೊತೆಗೆ ಕಥೆಯ ಕಾಲದ ಉಡುಗೆ-ತೊಡಿಗೆ, ಆಯುಧ-ಅಸ್ತ್ರಗಳು, ಬಳಕೆಯ ಸಾಮಗ್ರಿಗಳನ್ನು ಗುರುತಿಸುವುದೂ ಆತನ ಕಾರ್ಯಕ್ಷೇತ್ರದ ವ್ಯಾಪ್ತಿಯಲ್ಲಿರುತ್ತದೆ. ಬಡತನ-ಸಿರಿತನಗಳನ್ನು ತಮ್ಮ ಕಲಾ ನೈಪುಣ್ಯತೆಯಿಂದ ತಾವು ರೂಪಿಸುವ ಸೆಟ್‌ಗಳಲ್ಲಿ ಬಿಂಬಿಸಬೇಕಾಗುತ್ತದೆ. ಪುರಾಣ-ಐತಿಹಾಸಿಕ ಕಥೆಗಳಾದರೆ ಅವು ನಡೆಯಿತೆನ್ನಲಾದ ಕಾಲದ ಸಂಪ್ರದಾಯ-ಸಂಸ್ಕೃತಿ-ಜನಜೀವನಗಳನ್ನು ಅಧ್ಯಯನ ಮಾಡಿ ಸ್ಕೆಚ್ ರಚಿಸಬೇಕಾಗುತ್ತದೆ. ಜಾನಪದ ಕಥೆಗಳಾದರೆ ಪೌರಾಣಿಕಕ್ಕೆ ಹತ್ತಿರವಾಗಿ ಕಲ್ಪನೆಯಿಂದ ರೂಪಿಸಬೇಕಾಗುತ್ತದೆ.

ಅಧ್ಯಯನ-ಕಲ್ಪನೆಗಳ ಸಮ್ಮಿಳನವಾಗಿ ಕಲಾನಿರ್ದೇಶಕ ನೀಡುವ ಸ್ಕೆಚ್ ಅನ್ನು ಅನುಸರಿಸಿ ಸೆಟ್ ಅನ್ನು ಸಿದ್ಧಪಡಿಸುವಲ್ಲಿ ಕಲಾನಿರ್ದೇಶಕರೊಂದಿಗೆ ಸಹಾಯಕರು, ಕಾರ್ಪೆಂಟರುಗಳು, ಪೇಂಟರುಗಳು ಕೆಲಸ ಮಾಡುತ್ತಾರೆ. ಮರದ ಫ್ರೇಮ್‌ಗಳನ್ನು ಸಿದ್ಧಪಡಿಸಿ, ದಪ್ಪನೆಯ ಕೋರಾ ಬಟ್ಟೆಯನ್ನು ಆ ಫ್ರೇಮ್‌ಗಳಿಗೆ ಮೊಳೆಗಳ ಮೂಲಕ ಅಳವಡಿಸಿ ಸಿದ್ಧಮಾಡಿದ ಸೆಟ್ಟುಗಳಿಗೆ ಛಾಯಾಗ್ರಾಹಕರ ಸೂಚನೆಯಂತೆ ಪೇಂಟ್ ಮಾಡಿ ಸಿದ್ಧಗೊಳಿಸುವುದು ಪದ್ಧತಿ. ಇತ್ತೀಚಿನ ದಶಕಗಳಲ್ಲಿ, ನಿರ್ದೇಶಕ ಎಸ್.ಆರ್.ಪುಟ್ಟಣ್ಣ ಕಣಗಾಲ್ ಸ್ಟುಡಿಯೋ ಅಂಗಳದಿಂದ ಹೊರಗೆ ನೈಜ ವಾತಾವರಣ-ಮನೆಗಳಲ್ಲಿ ಚಿತ್ರೀಕರಣ ನಡೆಸುವ ಪದ್ಧತಿಗೆ ನಾಂದಿ ಹಾಡಿದ ನಂತರ ಬಹುತೇಕ ಚಿತ್ರಗಳು ಸ್ಟುಡಿಯೋ ಅಂಗಳದ ಹೊರಗೇ ಚಿತ್ರಿತವಾಗತೊಡಗಿದವು. ಎಲ್ಲೋ ಅಲ್ಲೊಂದು ಇಲ್ಲೊಂದೆಂಬಂತೆ ಬೆರಳೆಣಿಕೆಯಷ್ಟು ಚಿತ್ರಗಳು ಮಾತ್ರ ಸ್ಟುಡಿಯೋ ಒಳಗೆ ಚಿತ್ರೀಕರಣಗೊಳ್ಳುತ್ತಿವೆ. ಹಾಗಾಗಿ ಸೆಟ್ ನಿರ್ಮಾಣದ ಶ್ರಮ ಕಲಾನಿರ್ದೇಶಕನಿಗೆ ಇಲ್ಲವಾಯಿತು. ಆದರೆ ಕಥೆಗಾಗಿ ನಿರ್ದೇಶಕರು ಆಯ್ಕೆ ಮಾಡಿದ ಮನೆಯನ್ನು ಕಥಾವಸ್ತುವಿಗೆ ತಕ್ಕಂತೆ ಅಗತ್ಯ ಪರಿಕರಗಳೊಂದಿಗೆ ಸಜ್ಜುಗೊಳಿಸುವ, ಕಥೆಯ ಕಾಲದ ವೇಷ ಭೂಷಣಗಳ ಬಗ್ಗೆ ವಸ್ತ್ರಾಲಂಕಾರ ಹಾಗೂ ವರ್ಣಾಲಂಕಾರ ಕಲಾವಿದರಿಗೆ ಮಾರ್ಗದರ್ಶನ ನೀಡಬೇಕಾದ ಹೊಣೆ ಚಿತ್ರದ ಕಲಾನಿರ್ದೇಶಕನದೇ ಆಗಿದೆ. (ನೋಡಿ : ಕಲಾನಿರ್ದೇಶನ)

ಈ ಕಲಾನಿರ್ದೇಶಕರು ಮತ್ತು ಅವರ ಸಹಾಯಕರು **ಕರ್ನಾಟಕ ಚಲನಚಿತ್ರ ಕಲಾನಿರ್ದೇಶಕರ ಮತ್ತು ಸಹಾಯಕರ ಸಂಘ**ವನ್ನು ರೂಪಿಸಿಕೊಳ್ಳುವ ಮೂಲಕ ತಮ್ಮದೇ ಆದ ಸಂಘಟನೆಯನ್ನು ಮಾಡಿಕೊಂಡಿದ್ದಾರೆ. ಈ ಸಂಘಟನೆಯು ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟದ ಅಂಗಸಂಸ್ಥೆಯಾಗಿದೆ. ಆರ್.ಕೆ.ಸುಂದರಂ ೨೦೦೦ನೇ ವರ್ಷದಲ್ಲಿ ಕಲಾನಿರ್ದೇಶಕರ ಈ ಸಂಘಟನೆಗೆ ಅಧ್ಯಕ್ಷರು. ಪಿ.ರಮೇಶ್‌ಬಾಬು ಪ್ರಧಾನ ಕಾರ್ಯದರ್ಶಿ, ಕೆ.ಕೃಷ್ಣಾಚಾರ್ ಖಜಾಂಚಿ.

### ಕರ್ನಾಟಕ ಚಲನಚಿತ್ರ ಲೈಟ್‌ಮನ್‌ಗಳ ಸಂಘ

ಚಲನಚಿತ್ರ ಛಾಯಾಗ್ರಹಣದಲ್ಲಿ ಛಾಯಾಗ್ರಾಹಕರಿಗೆ ನೆರವಾಗುವುದು ವಿವಿಧ ಪ್ರಮಾಣ-ಶಕ್ತಿಗಳ ವಿದ್ಯುದ್ದೀಪಗಳು ಮತ್ತು ಅವುಗಳಿಗೆ ಸಂಬಂಧಿಸಿದ ಪರಿಕರಗಳು. ಬೇಬಿ, ಜ್ಯೂನಿಯರ್, ಸೀನಿಯರ್, ೫ ಕೆ.ವಿ. - ಹೀಗೆ ಅವುಗಳ ಶಕ್ತಿಯನ್ನನುಸರಿಸಿ ವಿದ್ಯುದ್ದೀಪ (ಲೈಟ್)ಗಳಿಗೆ ಹೆಸರಿದ್ದು, ಮುಗ್ಗಾಲಿನ ಸ್ಟ್ಯಾಂಡ್‌ಗಳ ಮೇಲೆ ಆ ಲೈಟ್‌ಗಳು ಉಪಸ್ಥಿತವಿರುತ್ತವೆ. ಈ ವಿದ್ಯುದ್ದೀಪಗಳನ್ನು ಹೊತ್ತು ತಂದು ಛಾಯಾಗ್ರಾಹಕನ ನಿರ್ದೇಶನದಂತೆ ಅತ್ತ-ಇತ್ತ, ಮೇಲೆ-ಕೆಳಗೆ ಅಣಿಗೊಳಿಸುವುದು, ಸ್ಟುಡಿಯೋ ಅಂಗಳದಲ್ಲಿನ ಅಟ್ಟಣಿಗೆಯ ಮೇಲೆ ನಿಂತು ಅಲ್ಲಿ ಕಟ್ಟಲಾದ ಬೃಹತ್ ವಿದ್ಯುದ್ದೀಪಗಳನ್ನು ಬೇಕಾದ ದಿಕ್ಕಿಗೆ-ಕೋನಕ್ಕೆ ಅಳವಡಿಸುವುದು ಲೈಟ್‌ಮನ್‌ಗಳ ಕೆಲಸ. ಮೊದಲು ಇವರನ್ನು ಲೈಟ್‌ಬಾಯ್‌ಗಳೆಂದು ಕರೆಯಲಾಗುತ್ತಿತ್ತು. ಬಾಯ್ ಅವಸ್ಥೆಯನ್ನು ಮೀರಿದವರು ಈ ಉದ್ಯೋಗದಲ್ಲಿರುವುದರಿಂದ ಲೈಟ್‌ಮನ್‌ಗಳೆಂದು ಪರಿವರ್ತಿಸಲಾಯಿತು. ಛಾಯಾಗ್ರಾಹಕನ ಲೈಟಿಂಗ್ ಕಲ್ಪನೆಯನ್ನು ಅನುಸರಿಸಿ, ಅವುಗಳಿಗೆ ನೆಟ್‌ಗಳನ್ನೋ ಗಾರ್ಝ್‌ಗಳನ್ನೋ ತಗುಲಿಸಿ ಅಗತ್ಯ ಬೆಳಕು ಪಸರಿಸುವಂತೆ ಮಾಡುವ ನಿಪುಣರಿವರು. ಒಂದು ಚಿತ್ರತಂಡದಲ್ಲಿ ಸುಮಾರು ೮ರಿಂದ ೧೦ ಮಂದಿ ಲೈಟ್‌ಮನ್‌ಗಳಿರುವುದು ವಾಡಿಕೆ. ಕೆಲವೊಮ್ಮೆ ಒಂದಿಬ್ಬರು ಕಡಿಮೆಯಾಗಬಹುದು ಅಥವಾ ಒಂದಿಬ್ಬರು ಹೆಚ್ಚಲೂಬಹುದು.

ಸ್ಟುಡಿಯೋದಿಂದ ಹೊರಗೆ ಹೊರಾಂಗಣದಲ್ಲಿ ಸೂರ್ಯನ ಬೆಳಕಿನಲ್ಲಿ ಚಿತ್ರೀಕರಣ ನಡೆದಾಗ ರಜತವರ್ಣದ ಜಿನ್ನೇರಿ ಕಾಗದಗಳನ್ನು ಅಂಟಿಸಿದ ಪ್ರತಿಫಲಕ (ರಿಫ್ಲೆಕ್ಟರ್)ಗಳ ಮೂಲಕ ಚಿತ್ರೀಕರಣ ತಾಣ ಹಾಗೂ ಕಲಾವಿದರಿಗೆ ಸೂರ್ಯನ ಬೆಳಕನ್ನು ಪ್ರತಿಫಲಿಸುವ ಕೆಲಸವನ್ನು ಈ ಲೈಟ್‌ಮನ್‌ಗಳೇ ನಿರ್ವಹಿಸುತ್ತಾರೆ. ಇತ್ತೀಚೆಗೆ ಥರ್ಮೋಕೋಲ್ ಶೀಟುಗಳ ಮೂಲಕವಾಗಿಯೂ ಈ ಸೂರ್ಯನ ಬೆಳಕಿನ ಪ್ರತಿಫಲನ ಕಾರ್ಯ ನಡೆಯುತ್ತಿದ್ದು ಅದನ್ನು ನಿರ್ವಹಿಸುವವರೂ ಇವರೇ ಆಗಿದ್ದಾರೆ. ಇವರದು ಶ್ರಮದ ಕೆಲಸದ ಜೊತೆಗೆ ಜಾಣ್ಮೆಯ ಕೆಲಸವೂ ಹೌದು. ಇವರು ಸ್ಟುಡಿಯೋಗಳಲ್ಲಿ ಹಾಗೂ ಹೊರಾಂಗಣ ಚಿತ್ರೀಕರಣ ಘಟಕಗಳಲ್ಲಿ ಕೆಲಸ ಮಾಡುವವರು. ಇವರಲ್ಲಿ ಎಲೆಕ್ಟ್ರೀಶಿಯನ್‌ಗಳೂ ಇದ್ದು ವಿದ್ಯುದ್ದೀಪಗಳ ಆರೋಗ್ಯದ ಬಗ್ಗೆ ಕಾಳಜಿ ವಹಿಸುವುದಲ್ಲದೆ, ಅವುಗಳ ನಿಯಂತ್ರಣವನ್ನು ಛಾಯಾಗ್ರಾಹಕನ ಆದೇಶದಂತೆ ಮಾಡಬೇಕಾಗುತ್ತದೆ.

ಕರ್ನಾಟಕದಲ್ಲಿನ ಚಲನಚಿತ್ರೋದ್ಯಮದಲ್ಲಿ ಕೆಲಸ ಮಾಡುತ್ತಿರುವ ಲೈಟ್‌ಮನ್‌ಗಳು **ಕರ್ನಾಟಕ ಚಲನಚಿತ್ರ ಲೈಟ್‌ಮನ್‌ಗಳ ಸಂಘ**ವನ್ನು ಸ್ಥಾಪಿಸಿಕೊಂಡಿದ್ದಾರೆ. ಕರ್ನಾಟಕ ಚಲನಚಿತ್ರ ಕಾರ್ಮಿಕರ, ಕಲಾವಿದರ ತಂತ್ರಜ್ಞರ ಒಕ್ಕೂಟದ ಅಂಗಸಂಸ್ಥೆಯಾದ ಈ ಸಂಘಟನೆಯ ೨೦೦೦ನೇ ವರ್ಷದ ಅಧ್ಯಕ್ಷರು ಬಿ.ಸಿ.ಷಣ್ಮುಖಪ್ಪ. ಬಿ.ಎಂ.ಶಂಕರ್ ಪ್ರಧಾನ ಕಾರ್ಯದರ್ಶಿಗಳು. ವೈ.ಬಿ.ನಾಗರಾಜ್ ಖಜಾಂಚಿ.

### ಕರ್ನಾಟಕ ರಾಜ್ಯ ಚಲನಚಿತ್ರ ವರ್ಣಾಲಂಕಾರ ಮತ್ತು ಕೇಶಾಲಂಕಾರ ಕಲಾವಿದರ ಸಂಘ

ಚಲನಚಿತ್ರ ಸೃಷ್ಟಿಕಾರ್ಯದಲ್ಲಿ ಹಲವು ಕಲಾಪ್ರಾಕಾರಗಳ ಸಮ್ಮಿಳನ ಅಗತ್ಯ. ಸಾಹಿತ್ಯ ಹಾಗೂ ಅಭಿನಯ ಕಲೆಗಳ ಜೊತೆ ಜೊತೆಯಲ್ಲಿ ಕಲಾನಿರ್ದೇಶನ, ಛಾಯಾಗ್ರಹಣ, ಸಂಗೀತ, ವರ್ಣಾಲಂಕರಣ, ಕೇಶಾಲಂಕರಣ, ವಸ್ತ್ರಾಲಂಕರಣ, ಸಂಕಲನ ಹೀಗೆ ವಿವಿಧ ವಿಭಾಗಗಳ ಕೆಲಸವೂ ಬಹಳ ಮುಖ್ಯ. ಈ ಎಲ್ಲ ವಿಭಾಗಗಳೂ ಕಥೆಗೆ ಪೂರಕವಾಗಿ ಕೆಲಸ ಮಾಡಬೇಕಾದುದು ಅತ್ಯಗತ್ಯ. ಒಂದು ವಿಭಾಗ ಪೇಲವವಾದರೂ ಎಲ್ಲ ಬಣ್ಣವನ್ನೂ ಮಸಿ ನುಂಗಿದಂತೆ ಇಡೀ ಚಿತ್ರಕ್ಕೇ ಕಪ್ಪು ಚುಕ್ಕೆ ಇಟ್ಟಂತಾಗುತ್ತದೆ. ಹಾಗಾಗಿ ಚಲನಚಿತ್ರ ಕ್ಷೇತ್ರದಲ್ಲಿನ ಎಲ್ಲ ವಿಭಾಗಗಳೂ ಜವಾಬ್ದಾರಿಯುತವಾಗಿವೆ - ಹಾಗಿರಬೇಕಾದ ಅವಶ್ಯಕತೆಯೂ ಇದೆ.

ಚಲನಚಿತ್ರ ಕ್ಷೇತ್ರದಲ್ಲಿ ವರ್ಣಾಲಂಕರಣ-ಮೇಕಪ್ ಕೂಡ ಒಂದು ಪ್ರಮುಖ ಅಂಗ. ಈ ವರ್ಣಾಲಂಕರಣ ಕಲೆ ಚಲನಚಿತ್ರಗಳಿಗಷ್ಟೇ ಅಲ್ಲ, ರಂಗಭೂಮಿಗೂ ಅಗತ್ಯ. ಕಥೆಗೆ ತಕ್ಕಂತೆ, ಪಾತ್ರಗಳಿಗೆ ಅನುಗುಣವಾಗಿ ಕಲಾವಿದರ ಮುಖವನ್ನು ಬಣ್ಣಗಳಿಂದ ತಿದ್ದಿ ಕಲಾವಿದರೇ ಪಾತ್ರಗಳಾಗುವಂತೆ ಮಾಡುವಂತಹ ಚಮತ್ಕಾರಿಕ ಕಲೆಯೇ ಮೇಕಪ್. ಹಾಗೆಂದಾಕ್ಷಣ ನಾಟಕ ಹಾಗೂ ಸಿನಿಮಾಗಳೆರಡರ ಮೇಕಪ್ ಒಂದೇ ವಿಧವಲ್ಲ. ಸಿನಿಮಾಗಳಲ್ಲಿ ಛಾಯಾಗ್ರಹಣ ಕಲೆಗೆ ಅಗತ್ಯವಿರುವಂತೆ ಮೇಕಪ್ ಇರಬೇಕಾದುದು ಅತ್ಯಗತ್ಯ. ನಾಟಕದಲ್ಲಿ ಸ್ವಲ್ಪ ಹೆಚ್ಚಾಗಿದ್ದರೂ ನಡೆಯುತ್ತದೆ. ಆದರೆ ಸಿನಿಮಾದಲ್ಲಿ ಅತಿ ಸೂಕ್ಷ್ಮ. ನಿರ್ದೇಶಕನ ಕಲ್ಪನೆ, ಕಥೆಯ ಹಿನ್ನೆಲೆ, ಪಾತ್ರಗಳ ಅಗತ್ಯವರಿತು ಪಾತ್ರಗಳ ವಯಸ್ಸನ್ನು ಅನುಸರಿಸಿ ಚಹರೆಯನ್ನು ರೂಪಿಸುವ ಕ್ಲಿಷ್ಟ ಕಾರ್ಯ ಸಿನಿಮಾಗಳಲ್ಲಿ ಮೇಕಪ್‌ಮನ್‌ಗಳದು.

ನಮ್ಮ ಕನ್ನಡ ಚಲನಚಿತ್ರರಂಗದಲ್ಲಿ ಮೇಕಪ್ ತಜ್ಞರು ಬಹಳ ಮಂದಿ ಇದ್ದಾರೆ. ಪ್ರತಿಯೊಬ್ಬ ಕಲಾವಿದರಿಗೂ ಅವರ ಆಯ್ಕೆಯ ಮೇಕಪ್‌ಮನ್ ಇರುವುದೂ ಸಹಜ. ಕಲಾವಿದರು ತಾವೇ ಆ ವಿಭಾಗದಲ್ಲಿ ಪರಿಣತರಾಗಿ, ತಾವೇ ಮೇಕಪ್ ಮಾಡಿಕೊಳ್ಳುವರಾದರೂ ಅದಕ್ಕೆಂದೇ ಒಬ್ಬ ಸಹಾಯಕನನ್ನು ಹೊಂದಿರುವುದೂ ಉಂಟು. ಕನ್ನಡ ಚಲನಚಿತ್ರಗಳಲ್ಲಿ ನಾಯಕ-ನಾಯಕಿ ಹಾಗೂ ಮುಖ್ಯ ಕಲಾವಿದರು ಈ ವಿಭಾಗದಲ್ಲಿ ತಮ್ಮದೇ ವ್ಯವಸ್ಥೆಯನ್ನು ಹೊಂದಿದ್ದರೂ ಉಳಿದ ಪೋಷಕ ಪಾತ್ರಗಳಿಗಾಗಿ ಕಂಪೆನಿ ಮೇಕಪ್‌ಮನ್ ಹಾಗೂ ಟಚ್‌ಅಪ್‌ಮ್ಯಾನ್‌ಗಳಿರುವುದು ಸರ್ವೇಸಾಮಾನ್ಯ. ಚಿತ್ರದ ಕಥೆ ಪೌರಾಣಿಕವಾಗಿದ್ದರೆ, ಜಾನಪದವಾಗಿದ್ದರೆ ಆ ಕಥೆಯ ಪಾತ್ರಗಳ ಕಲ್ಪನೆಯೇ ಬೇರೆ ತೆರನಾಗಿರುತ್ತದೆ. ಸಾಮಾಜಿಕವಾಗಿದ್ದರೆ ಆ ಪಾತ್ರ ಗ್ರಾಮೀಣ ಸೊಗಡಿನಿಂದಲೋ, ಪಟ್ಟಣ-ನಗರಗಳ ಸೊಗಸಿನಿಂದಲೋ ಕೂಡಿರಬಹುದಾಗಿರುತ್ತದೆ. ತುಂಬು ಕೂದಲಿನ ಪಾತ್ರದಲ್ಲಿ ಬಕ್ಕತಲೆಯ ಕಲಾವಿದ ಇರುವ ಸಾಧ್ಯತೆ ಇರುತ್ತದೆ. ಹದಿಹರೆಯದ ಕಲಾವಿದೆ ವೃದ್ಧೆಯ ಪಾತ್ರದಲ್ಲಿರಲೂ ಬಹುದು. ವಯಸ್ಕ ಕಲಾವಿದ ಹದಿಹರೆಯದ ಯುವಕನ ಪಾತ್ರ ನಿರ್ವಹಿಸುತ್ತಿರಬಹುದು. ಹೇಗೇ ಇರಲಿ, ಕಥೆಗೆ ಅನುಗುಣವಾಗಿ ಪಾತ್ರಗಳಿಗೆ ಕಲಾವಿದರನ್ನು ಆಯ್ಕೆ ಮಾಡಿದ ನಿರ್ದೇಶಕನ ಕಲ್ಪನೆಯನ್ನು ಅನುಸರಿಸಿ ಮೇಕಪ್‌ಮನ್ ವರ್ಣಾಲಂಕರಣ ಮಾಡಬೇಕಾಗುತ್ತದೆ. ಪೌರಾಣಿಕ ಹಾಗೂ

ಜಾನಪದ ಕಥಾಚಿತ್ರಗಳಲ್ಲಿ ಅವರ ಕೆಲಸ ಕ್ಲಿಷ್ಟಕರ. ನಮ್ಮಲ್ಲಿ ಅನೇಕ ಮಂದಿ ವರ್ಣಾಲಂಕರಣಪಟುಗಳು ಹಿಂದೆ ಇದ್ದರು. ಈಗಲೂ ಈ ಕಲೆಯಲ್ಲಿ ಪರಿಣತರಾದವರು ಸಾಕಷ್ಟು ಮಂದಿ ಇದ್ದಾರೆ.

ಇವರೊಂದಿಗೆ ಕೇಶಾಲಂಕರಣ ಕಲಾವಿದರೂ ದುಡಿಯುತ್ತಿದ್ದಾರೆ. ವಿವಿಧ ಕೇಶವಿನ್ಯಾಸದಲ್ಲಿ ಇವರು ಪರಿಣತರು. ಸ್ವತಃ ನಕಲಿ ಕೇಶ (ವಿಗ್)ಗಳನ್ನು ಸಿದ್ಧಪಡಿಸುವಲ್ಲಿಯೂ ಇವರು ಸಿದ್ಧಹಸ್ತರು. ನಟಿಯರ ಕೇಶವಿನ್ಯಾಸವನ್ನು ಪಾತ್ರಕ್ಕನುಗುಣವಾಗಿ ರೂಪಿಸುವಲ್ಲಿ ಪರಿಣತರು. ಈ ಎರಡೂ ವರ್ಗಗಳವರೂ ಕೂಡಿ ಮಾಡಿಕೊಂಡಿರುವ ಸಂಘಟನೆಯೇ **ಕರ್ನಾಟಕ ರಾಜ್ಯ ಚಲನಚಿತ್ರ ವರ್ಣಾಲಂಕಾರ ಮತ್ತು ಕೇಶಾಲಂಕಾರ ಕಲಾವಿದರ ಸಂಘ**.

ಕರ್ನಾಟಕ ಚಲನಚಿತ್ರ ಕಲಾವಿದರ, ತಂತ್ರಜ್ಞರ, ಕಾರ್ಮಿಕರ ಒಕ್ಕೂಟದಲ್ಲಿ ವಿಲೀನಗೊಂಡಿರುವ ಮೇಕಪ್ ಹಾಗೂ ಹೇರ್‌ಡ್ರೆಸ್ಸರ್‌ಗಳ ಸಂಘಟನೆಯಾದ ಈ ಅಂಗಸಂಸ್ಥೆಯಲ್ಲಿ ನೂರಕ್ಕೂ ಹೆಚ್ಚು ಮಂದಿ ಸದಸ್ಯರಿದ್ದಾರೆ (ದಾಖಲೆಯ ಪ್ರಕಾರ ಒಟ್ಟು ಸದಸ್ಯರ ಸಂಖ್ಯೆ ೧೦೧). ಇವರಲ್ಲಿ ಮುಖ್ಯ ಕಲಾಕಾರರೂ, ಅವರ ಸಹಾಯಕರೂ ಸೇರಿದ್ದಾರೆ. (ನೋಡಿ : ಪ್ರಸಾದನ, ಕೇಶಾಲಂಕಾರ)

### ಕರ್ನಾಟಕ ಚಲನಚಿತ್ರ ನೃತ್ಯ ನಿರ್ದೇಶಕರ ಮತ್ತು ನೃತ್ಯ ಕಲಾವಿದರ ಸಂಘ

ಚಲನಚಿತ್ರವೊಂದರಲ್ಲಿ ಎಷ್ಟು ಹೊಡೆದಾಟದ ಸನ್ನಿವೇಶಗಳಿವೆ ಎಂಬುದು ಈಗಿನ ಯುವ ಪೀಳಿಗೆಯ ಪ್ರೇಕ್ಷಕರ ಪ್ರಶ್ನೆಯಾದರೆ ಪ್ರಾರಂಭದ ದಿನಗಳಲ್ಲಿ ಎಷ್ಟು ಹಾಡುಗಳಿವೆ, ಎಷ್ಟು ಡ್ಯಾನ್ಸ್‌ಗಳಿವೆ ಎಂಬುದು ಅಂದಿನ ಪ್ರೇಕ್ಷಕರ ಪ್ರಶ್ನೆಯಾಗಿರುತ್ತಿತ್ತು. ಕನ್ನಡ ಚಿತ್ರಗಳಲ್ಲಿ ಇಷ್ಟು ಹಾಡು, ಇಷ್ಟು ಡ್ಯಾನ್ಸ್, ಇಷ್ಟು ಫೈಟ್ ಇರಬೇಕೆಂಬುದು ಕೆಲಕಾಲ ಅಲಿಖಿತ ಸೂತ್ರವೂ ಆಗಿತ್ತು. ಹೀಗಾಗಿ ಆ ಕಾಲದ ಚಿತ್ರಗಳು ಬಹುತೇಕ ಫಾರ್ಮುಲಾ ಚಿತ್ರಗಳೆಂದೇ ವರ್ಗೀಕೃತವಾಗುತ್ತಿತ್ತು.

ಚಲನಚಿತ್ರಗಳಲ್ಲಿನ ನೃತ್ಯಗಳಲ್ಲಿ ಭರತನಾಟ್ಯ, ಕೂಚುಪುಡಿ ನೃತ್ಯಗಳು ಒಂದು ಕಾಲದಲ್ಲಿ ಹೆಚ್ಚು ಬಳಕೆಯಲ್ಲಿದ್ದವು. ಶಾಸ್ತ್ರೀಯ ನೃತ್ಯ ಕಲಿತವರಿಗೆ ಅವಕಾಶವೂ ಇರುತ್ತಿತ್ತು. ನಂತರದಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯ ಗಾಳಿ ಬೀಸಿದಾಗ ಚಿತ್ರದಲ್ಲಿ ಕ್ಯಾಬರೆ ನೃತ್ಯಕ್ಕೆ ಅವಕಾಶವಾಯಿತು. ನಂತರ ಅದೇ ಹಾದಿಯಲ್ಲಿ ಟ್ವಿಸ್ಟ್, ಬ್ರೇಕ್ ಮುಂತಾದ ನೃತ್ಯಪ್ರಕಾರಗಳೂ ಬಂದವು.

ಚಿತ್ರವೊಂದರ ನಾಯಕ-ನಾಯಕಿಯರ ಹಾಡಿಗೂ ನೃತ್ಯದ ಹೆಜ್ಜೆಗಳು ಸೇರ್ಪಡೆಯಾದವು. ನರ್ತಕಿಯರ ಸಮೂಹವೂ ಸೇರ್ಪಡೆಯಾಯಿತು. ಅಪರೂಪಕ್ಕೊಮ್ಮೆ ಎಂಬಂತೆ ಸಂಗೀತಪ್ರಧಾನ-ನೃತ್ಯಪ್ರಧಾನ ಚಿತ್ರಗಳೂ ಸೃಷ್ಟಿಯಾದವು. ಒಟ್ಟಿನಲ್ಲಿ ಚಿತ್ರವೊಂದರ ಮೂಲಕ ಪ್ರೇಕ್ಷಕರಿಗೆ ರಂಜನೆಯನ್ನು ಒದಗಿಸಲು ಕಥೆ, ಸಂಭಾಷಣೆ, ಸಾಹಿತ್ಯದಂತೆಯೇ ಸಂಗೀತ, ಸಾಹಸ, ನೃತ್ಯಗಳೂ ಅಗತ್ಯವಾದವು. ಹೀಗೆ ನೃತ್ಯವೂ ಕೂಡ ಚಿತ್ರದ ಆಕರ್ಷಣೆಯ ಪ್ರಮುಖ ಅಂಶವೆನಿಸಿದೆ.

ಮೋಹನ್‌ಲಾಲ್, ಉಡುಪಿ ಬಿ.ಜಯರಾಂ, ಚಿನ್ನಿ-ಸಂಪತ್, ಮೂಗೂರು ಸುಂದರ್, ಲಕ್ಷ್ಮೀನಾರಾಯಣ್, ಕೃಷ್ಣಕುಮಾರ್, ಕೆ.ಎನ್.ದಂಡಾಯುಧಪಾಣಿ, ರಾಮಯ್ಯಪಿಳ್ಳೆ, ಭೋಪ್ರ, ಹೀರಾಲಾಲ್, ಸಲೀಂ, ಪುಲಿಯೂರ್ ಸರೋಜ, ತಾರಾ, ದೇವಕಿ, ತಂಗಪ್ಪನ್, ಪಿ.ಎಲ್.ಗೋಪಾಲಕೃಷ್ಣ ಹೀಗೆ ಹಲವಾರು ಮಂದಿ ನೃತ್ಯ ಪರಿಣತರು ಕನ್ನಡ ಚಲನಚಿತ್ರಗಳಲ್ಲಿ ನೃತ್ಯ ನಿರ್ದೇಶನ ಮಾಡಿ ಹೆಸರಾಗಿದ್ದಾರೆ. ಉಡುಪಿ ಜಯರಾಂ ದಕ್ಷಿಣ ಭಾರತದ ಎಲ್ಲಾ ಭಾಷೆಗಳ ಚಿತ್ರಗಳೇ ಅಲ್ಲದೆ ಸಿಂಹಳಿ ಭಾಷೆಯ ಚಿತ್ರಗಳಿಗೂ ನೃತ್ಯ ನಿರ್ದೇಶನ ನೀಡಿದ್ದು, ಅತ್ಯಂತ ಹೆಚ್ಚು ಚಿತ್ರಗಳಿಗೆ ನೃತ್ಯ ನಿರ್ದೇಶನ ನೀಡಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಮುಂಬಯಿ ಚಿತ್ರರಂಗದ ಹೆಲೆನ್, ಟಿ.ಜಯಶ್ರೀ, ದಾಕ್ಷಿಣಾತ್ಯ ನೃತ್ಯತಾರೆಯರೆನಿಸಿದ ಲಲಿತಾ, ಪದ್ಮಿನಿ, ರಾಗಿಣಿ, ಜಯಮಾಲಿನಿ, ಹಲಂ, ಜಯಕುಮಾರಿ, ಅನುರಾಧಾ, ವಿಜಯಲಲಿತಾ, ಕಥಕ್ ನೃತ್ಯಪಟು ಗೋಪಿಕೃಷ್ಣ ಮುತ್ತಿತರರನೇಕರು ಕನ್ನಡ ಚಿತ್ರಗಳಲ್ಲಿ ನರ್ತಿಸಿದ್ದಾರೆ.

ಕನ್ನಡ ಚಿತ್ರಗಳಲ್ಲಿ ನೃತ್ಯ ರಂಜನೆ ಒದಗಿಸುತ್ತಿರುವ ನೃತ್ಯ ನಿರ್ದೇಶಕರು ಮತ್ತು ನೃತ್ಯ ಕಲಾವಿದರೆಲ್ಲರೂ ಸೇರಿ **ಕರ್ನಾಟಕ ಚಲನಚಿತ್ರ ನೃತ್ಯ ನಿರ್ದೇಶಕರ ಮತ್ತು ನೃತ್ಯ ಕಲಾವಿದರ ಸಂಘ**ವನ್ನು ರಚಿಸಿಕೊಂಡಿದ್ದು, ಸಂಘವು ಒಕ್ಕೂಟದ ಅಂಗಸಂಸ್ಥೆಯಾಗಿ ಮಾನ್ಯತೆ ಗಳಿಸಿದೆ. ೨೦೦೦ನೇ ವರ್ಷದಲ್ಲಿ ಬಿ.ವಿಶಾಲ್‌ರಾಜ್ ಅಧ್ಯಕ್ಷರು. ನೃತ್ಯಪಟು ಲಕ್ಷ್ಮಣ್ ಪ್ರಧಾನ ಕಾರ್ಯದರ್ಶಿಯಾಗಿ, ಕೆ.ರಾಮಕೃಷ್ಣ ಖಜಾಂಚಿಯಾಗಿ ಸಂಘದ ಚುಕ್ಕಾಣಿ ಹಿಡಿದರು. (ನೋಡಿ : ನೃತ್ಯ)

### ಕರ್ನಾಟಕ ಚಲನಚಿತ್ರ ಹೊರಾಂಗಣ ಘಟಕ ತಂತ್ರಜ್ಞರ ಸಂಘ

ಚಲನಚಿತ್ರ ಸೃಷ್ಟಿಕಾರ್ಯ ಸ್ಟುಡಿಯೋ ಅಂಗಳ ಬಿಟ್ಟು ಹೊರಗೆ ನೈಜ ಕಟ್ಟಡಗಳಲ್ಲಿ ನಡೆಯಲಾರಂಭಿಸಿದ ಮೇಲೆ ಹೊರಾಂಗಣ ಚಿತ್ರೀಕರಣ ಘಟಕಗಳಿಗೆ ಬೇಡಿಕೆ ಹೆಚ್ಚಿತು. ಪ್ರಾರಂಭದ ದಿನಗಳಲ್ಲಿ ಚಿತ್ರವೊಂದರ ಚಿತ್ರೀಕರಣದ ಬಹುಭಾಗ ಸ್ಟುಡಿಯೋ ಅಂಗಳದಲ್ಲಿ ನಡೆಯುತ್ತಿದ್ದು ಕೆಲವೊಂದು ಹಾಡುಗಳ ಅಥವಾ ಪ್ರಮುಖ ಸನ್ನಿವೇಶಗಳ ಚಿತ್ರೀಕರಣ ಮಾತ್ರ ಹೊರಾಂಗಣದಲ್ಲಿ ನಡೆಯುತ್ತಿತ್ತು. ಆ ದಿನಗಳಲ್ಲಿ ಈ ಔಟ್‌ಡೋರ್ ಯೂನಿಟ್‌ಗಳ ಸಂಖ್ಯೆ ಕಡಿಮೆ ಇದ್ದಿತು. ಈಗ ಹೊರಾಂಗಣದಲ್ಲಿಯೇ, ನೈಜ ಕಟ್ಟಡಗಳಲ್ಲಿಯೇ ಚಿತ್ರದ ಸಂಪೂರ್ಣ ಚಿತ್ರೀಕರಣ ನಡೆಯುತ್ತಿದ್ದು ಬೆಂಗಳೂರು ನಗರದಲ್ಲಿ ಈ ಘಟಕಗಳು ಹೆಚ್ಚು ಸಂಖ್ಯೆಯಲ್ಲಿರಲು ಕಾರಣವಾಗಿದೆ. ಈ ಘಟಕಗಳ ತಂತ್ರಜ್ಞರು ಒಂದೆಡೆ ಸೇರಿ ಸಂಘಟಿತರಾಗಿದ್ದಾರೆ. ಆ ಸಂಘಟನೆಯೇ '**ಕರ್ನಾಟಕ ಚಲನಚಿತ್ರ ಹೊರಾಂಗಣ ಘಟಕ ತಂತ್ರಜ್ಞರ ಸಂಘ**'. ೨೦೦೦ನೇ ವರ್ಷದಲ್ಲಿ ಎಸ್.ರಂಗಸ್ವಾಮಿ (ಅಧ್ಯಕ್ಷರು), ರಾಮಚಂದ್ರ (ಪ್ರಧಾನ ಕಾರ್ಯದರ್ಶಿ) ಮತ್ತು ಎಂ.ಬಿ.ಬದರಿನಾರಾಯಣ (ಖಜಾಂಚಿ) ಇವರು ಪದಾಧಿಕಾರಿಗಳಾಗಿರುವ ಈ ಸಂಘ ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟದ ಅಂಗಸಂಸ್ಥೆಯಾಗಿ ಮಾನ್ಯತೆ ಪಡೆದಿದೆ.

ಈ ಹೊರಾಂಗಣ ಘಟಕಗಳು ಚಿತ್ರೀಕರಣಕ್ಕೆ ಅಗತ್ಯವಾದ ಕ್ಯಾಮರಾ, ಲೈಟ್ಸ್, ರಿಫ್ಲೆಕ್ಟರ್ಸ್, ಟ್ರಾಲಿ ಟ್ರ್ಯಾಕ್, ರೌಂಡ್ ಟ್ರ್ಯಾಲಿ ಕೇಬಲ್, ಸೌಂಡ್ ರಿಕಾರ್ಡಿಂಗ್ ಸಲಕರಣೆ ಮತ್ತಿತರ ಪರಿಕರಗಳನ್ನು ಜನರೇಟರ್ ಸಹಿತ ಒದಗಿಸುತ್ತವೆ. ಸಾಮಾನ್ಯವಾಗಿ ೧೨-೧೫ ಮಂದಿಯ ತಂಡವನ್ನು ಈ ಘಟಕ ಹೊಂದಿರುತ್ತದೆ.

### ಕರ್ನಾಟಕ ಚಲನಚಿತ್ರ ಕಂಠದಾನ ಮತ್ತು ಕಿರುಪಾತ್ರ ಕಲಾವಿದರ ಸಂಘ

ಕನ್ನಡ ಚಲನಚಿತ್ರರಂಗದ ಆರಂಭದ ದಶಕಗಳಲ್ಲಿ ಕಂಠದಾನ ಕಲೆಗೆ ಅಂತಹ ಪ್ರಾಮುಖ್ಯ ಇರಲಿಲ್ಲ. ಚಿತ್ರದಲ್ಲಿ ಪಾತ್ರವಹಿಸುವ ಕಲಾವಿದರು ಚಿತ್ರೀಕರಣ ಸಮಯದಲ್ಲಿಯೇ ತಮ್ಮ ತಮ್ಮ ಪಾತ್ರದ ಸಂಭಾಷಣೆಗಳನ್ನು ಸೆಟ್‌ನಲ್ಲಿಯೇ ಹೇಳುತ್ತಿದ್ದು ಛಾಯಾಗ್ರಹಣ-ಶಬ್ದಗ್ರಹಣ ಏಕಕಾಲದಲ್ಲಿ ನಡೆಯುತ್ತಿದ್ದುದೇ ಅದಕ್ಕೆ ಮುಖ್ಯ ಕಾರಣ. ಅಲ್ಲದೆ ಕೇವಲ ಕೆಲವು ಹಾಡುಗಳ ಚಿತ್ರೀಕರಣ ಮಾತ್ರ ಹೊರಾಂಗಣದಲ್ಲಿ ನಡೆಯುತ್ತಿದ್ದವು. ಕೆಲವು ಸಂದರ್ಭಗಳಲ್ಲಿ ಚಿತ್ರಗಳಲ್ಲಿ ಅಭಿನಯಿಸಿದ ಕಲಾವಿದರ ಸ್ವರವು ಒಪ್ಪವಾಗಿಲ್ಲವೆಂದು ನಿರ್ದೇಶಕರಿಗೆ ಅನಿಸಿದರೆ ಆ ಕಲಾವಿದರಿಗೆ ಬೇರೆ ಕಲಾವಿದರ ಕಂಠದಾನ ಒದಗಿಸಲಾಗುತ್ತಿತ್ತು. ಅನಿವಾರ್ಯವೆನಿಸಿದರೆ ಮಾತ್ರ ಕಂಠದಾನ ಕಲಾವಿದರಿಗೆ ಕರೆ ಬರುತ್ತಿತ್ತು. ಆ ಕಾಲದಲ್ಲಿ ಕೆಲವೊಂದು ಪೋಷಕ ಪಾತ್ರಗಳಲ್ಲಿ ನಟಿಸಿದ ಕಲಾವಿದರಿಗೆ ಕಂಠದಾನ ಅಗತ್ಯವಾಗುತ್ತಿತ್ತು.

ನಿರ್ದೇಶಕ ಎಸ್.ಆರ್.ಪುಟ್ಟಣ್ಣ ಕಣಗಾಲ್ ಕನ್ನಡ ಚಿತ್ರವನ್ನು ಪೂರ್ಣವಾಗಿ ಸ್ಟುಡಿಯೋದಿಂದ ಹೊರಗೆ ಚಿತ್ರಿಸುವ ಮೂಲಕ ಹೊಸ ಹಾದಿ ತೋರಿದರು. ಕ್ರಮೇಣ ಕನ್ನಡ ಚಿತ್ರಗಳ ಚಿತ್ರೀಕರಣಕ್ಕಾಗಿ ಸ್ಟುಡಿಯೋಗಳ ಫ್ಲೋರ್‌ಗಳನ್ನು ಬಳಸುವುದು ಅಪರೂಪವಾಗತೊಡಗಿತು. ಈ ಸಂದರ್ಭದಲ್ಲಿ ಚಿತ್ರದ ಸಂಭಾಷಣೆಯನ್ನು ಪೂರ್ಣವಾಗಿ ಮಾತಿನ ಮನೆಗಳಲ್ಲಿ, ಪೈಲಟ್ ಸೌಂಡ್ ಟ್ರ್ಯಾಕ್ ಆಧಾರದಿಂದ ಮತ್ತೆ ಧ್ವನಿ ಮುದ್ರಿಸಿಕೊಳ್ಳಲಾರಂಭವಾಯಿತು. ಆ ಸಂದರ್ಭದಲ್ಲಿಯೂ ಕಂಠದಾನ ಕಲಾವಿದರಿಗೆ ಕರೆ ಬರುವುದು ಅಪರೂಪವೇ ಆಗಿತ್ತು.

ಕನ್ನಡ ಚಲನಚಿತ್ರಗಳಲ್ಲಿ ಅಭಿನಯಿಸಲು ಪರಭಾಷೆಯ ಕಲಾವಿದರನ್ನು ಕರೆತರಲು ಆರಂಭವಾದ ನಂತರ ಕಂಠದಾನ ಕಲಾವಿದರಿಗೆ ಅವಕಾಶ ಹೆಚ್ಚಾಯಿತು. ಕನ್ನಡದ ಪ್ರತಿಭಾವಂತ ನಟ-ನಿರ್ದೇಶಕರೆನಿಸಿದ ಸುಂದರಕೃಷ್ಣ ಅರಸ್ ಅವರ ಕಂಠ ಸಿರಿಯಿಂದಾಗಿ ಕನ್ನಡದಲ್ಲಿ ನಟಿಸಿದ ಕೆಲವು ಹಿಂದಿ ನಟರು ಕನ್ನಡದಲ್ಲಿಯೂ ಖ್ಯಾತಿ ಗಳಿಸಲು ಆ ದಿನಗಳಲ್ಲಿ ಸಾಧ್ಯವಾಯಿತು. ಆರ್.ಎಸ್.ನಾಯ್ಡು, ಸರ್ವಮಂಗಳ, ಗಾಯತ್ರಿ ಪ್ರಭಾಕರ್ ಮುಂತಾದ ಅನೇಕರು ದಶಕಗಳಿಂದ ಕಂಠದಾನ ಕಲಾವಿದರಾಗಿ ಹೆಸರಾದವರು. ಕನ್ನಡದ ಯಶಸ್ವಿ ನಾಯಕಿಯಾಗಿ ಮೆರೆದ ಮಿನುಗುತಾರೆ ಕಲ್ಪನಾ ಅವರ ಮೊದಲ ಚಿತ್ರದಲ್ಲಿ ಅವರ ಅಭಿನಯಕ್ಕೆ ಕಂಠದಾನ ಕಲಾವಿದೆಯೊಬ್ಬರ ಕಂಠವನ್ನು ಬಳಸಲಾಯಿತು. ಹಾಗೆಯೇ ಕನ್ನಡದ ಯಶಸ್ವಿ ನಟರೊಬ್ಬರು ಅಭಿನಯಿಸಿದ ಹಲವಾರು ಚಿತ್ರಗಳಲ್ಲಿ ಅವರ ಅಭಿನಯಕ್ಕೆ ಮತ್ತೊಬ್ಬ ಕಂಠದಾನ

ಕಲಾವಿದ ಕಂಠಸಿರಿ ನೀಡಿದ್ದರು. 'ಮಲಯಮಾರುತ'ದವರೆವಿಗೂ ನಟಿ ಮಾಧವಿಯವರ ಪಾತ್ರಾಭಿನಯಕ್ಕೆ ಬೇರೊಬ್ಬ ಕಲಾವಿದೆ ಕಂಠ ನೀಡುತ್ತಿದರು.

ಹೀಗೆ ಕಂಠದಾನ ಮಾಡುತ್ತಿದ್ದ ಕಲಾವಿದರು, ಚಲನಚಿತ್ರಗಳಲ್ಲಿ ಪೋಷಕ ಕಿರುಪಾತ್ರಗಳಲ್ಲಿ ಅಭಿನಯಿಸುವ ನಟ-ನಟಿಯರನ್ನು ಸೇರಿಸಿಕೊಂಡು ತಮ್ಮದೇ ಆದ ಸಂಘಟನೆಯೊಂದನ್ನು ಮಾಡಿಕೊಂಡಿದ್ದಾರೆ. **'ಕರ್ನಾಟಕ ಚಲನಚಿತ್ರ ಕಂಠದಾನ ಮತ್ತು ಕಿರುಪಾತ್ರ ಕಲಾವಿದರ ಸಂಘ'**- ಇದೇ ಆ ಸಂಘಟನೆ. ಸುಮಾರು ೪೦೦ ಮಂದಿ ಕಲಾವಿದರು ಈ ಸಂಘಟನೆಯ ಸದಸ್ಯರು.

ಈ ಸಂಘಕ್ಕೆ ಹಿರಿಯ ಕಂಠದಾನ ಕಲಾವಿದರಾದ ಆರ್.ಎಸ್.ನಾಯ್ಡು ಅಧ್ಯಕ್ಷರು. ಆರ್.ಸುದರ್ಶನಕುಮಾರ್ ಪ್ರಧಾನ ಕಾರ್ಯದರ್ಶಿಗಳು. ಕೆ.ರಾಜೇಂದ್ರಬಾಬು ಖಜಾಂಚಿ. ಈ ಸಂಘಟನೆ ಒಕ್ಕೂಟದಿಂದ ಮಾನ್ಯತೆ ಪಡೆದು, ಅದರ ಅಂಗಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಈ ಸಂಘಟನೆಯಲ್ಲಿ ವಿವಿಧ ಪಾತ್ರಗಳಿಗೆ ತಕ್ಕಂಥ ಕಂಠಸಿರಿಯನ್ನು ಹೊಂದಿದ ಅನೇಕ ಮಂದಿ ಕಲಾವಿದರು, ಬಗೆ ಬಗೆಯ ಚಿಕ್ಕಪುಟ್ಟ ಪಾತ್ರಗಳನ್ನು ನಿರ್ವಹಿಸಬಲ್ಲ ಕಿರುಪಾತ್ರ ಕಲಾವಿದರು ಇದ್ದಾರೆ.

### ಚಲನಚಿತ್ರ ಸಹಕಲಾವಿದರ ಸಂಘ (ಮೈಸೂರು)

ಮೈಸೂರಿನ ಚಿತ್ತರಂಜನ್ ಮಹಲ್‌ನಲ್ಲಿ ೧೯೫೪ರ ಆಗಸ್ಟ್ ತಿಂಗಳಲ್ಲಿ ಪ್ರೀಮಿಯರ್ ಸ್ಟುಡಿಯೋ ಪ್ರಾರಂಭವಾಯಿತು. ಆದರೆ ಮೊದಮೊದಲಲ್ಲಿ ಚಟುವಟಿಕೆಗಳು ಮಂದಗತಿಯಲ್ಲಿದ್ದವು. ಕ್ರಮೇಣ ಚೇತರಿಕೆ ಕಂಡು ಚಿತ್ರೀಕರಣ ಕಾರ್ಯ ಬಿರುಸಾಗುತ್ತಿದ್ದಂತೆ ಸಹಕಲಾವಿದರ ಅವಶ್ಯಕತೆಯೂ ಹೆಚ್ಚಾಯಿತು. ಸಹಕಲಾವಿದರ ಸಂಖ್ಯೆ ಹೆಚ್ಚಾದಂತೆ ಅವರ ಕುಂದುಕೊರತೆಗಳೂ ಹೆಚ್ಚಿದವು. ಆ ಕುಂದುಕೊರತೆಗಳನ್ನೂ ಪರಿಹರಿಸಿ ಸಹಕಲಾವಿದರಿಗೊಂದು ವ್ಯವಸ್ಥಿತ ಜೀವನ ರೂಪಿಸಿಕೊಡಲೆಂದೇ ೧೯೭೫-೭೬ರಲ್ಲಿ ನಾಗಲಿಂಗಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ಮೈಸೂರಿನಲ್ಲಿ ಚಲನಚಿತ್ರ ಸಹಕಲಾವಿದರ ಸಂಘ ಅಸ್ತಿತ್ವಕ್ಕೆ ಬಂದಿತು. ಚಲನಚಿತ್ರ ಪತ್ರಕರ್ತ ಎಸ್.ಪದ್ಮನಾಭ ಗೌರವ ಅಧ್ಯಕ್ಷರಾಗಿದ್ದ ಈ ಸಂಘದ ಕಾರ್ಯದರ್ಶಿಯಾಗಿ ಪಾಲಹಳ್ಳಿ ರಾಮಕೃಷ್ಣ, ಜಂಟಿ ಕಾರ್ಯದರ್ಶಿಯಾಗಿ ಶಿವಮ್ಮ ಹಾಗೂ ಖಜಾಂಚಿಯಾಗಿ ಪುಟ್ಟಮ್ಮ ಮುಖ್ಯ ಪದಾಧಿಕಾರಿಗಳಾದರು. ಸಹಕಲಾವಿದರಿಗೆ ಸರಿಯಾದ ಸಂಭಾವನೆ, ಕಾರ್ಮಿಕ ನಿಧಿ ಸೌಲಭ್ಯ, ಸಹಕಲಾವಿದರ ಮಕ್ಕಳ ವಿದ್ಯಾಭ್ಯಾಸಕ್ಕೆ ವಿದ್ಯಾರ್ಥಿ ವೇತನ, ಇ.ಎಸ್.ಐ. ಸೌಲಭ್ಯ, ಸಾಮೂಹಿಕ ವಿಮಾ ಯೋಜನೆ, ಬಡ ಕಲಾವಿದರಿಗೆ ನಿವೇಶನ ಇವುಗಳನ್ನು ಒದಗಿಸುವ ಗುರಿ ಈ ಸಂಘದ್ದಾಗಿತ್ತು.

ಎಸ್.ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಹೋರಾಟ ನಡೆಸಿದ ಸಹಕಲಾವಿದರ ಸಂಘ ಬಡವರಿಗೆ ಮನೆಗಳನ್ನು ಪಡೆಯುವಲ್ಲಿ ಯಶಸ್ವಿಯಾಯಿತು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ವಿದ್ಯಾರ್ಥಿ ವೇತನ ಸೌಲಭ್ಯ ದೊರಕಿಸಲಾಯಿತು. ಬೀಡಿ ಕಾರ್ಮಿಕರ ಆಸ್ಪತ್ರೆಯಲ್ಲಿ ಉಚಿತ ಚಿಕಿತ್ಸೆ ದೊರೆಯುವಂತೆ ಈ ಸಂಘ ಮಾಡಿತು. ತಮಿಳುನಾಡಿನಲ್ಲಿ ಕಲಾವಿದರ ಕಾಲೋನಿ ಇರುವಂತೆ ಮೈಸೂರಿನಲ್ಲಿ ಕಾಲೋನಿ ಪಡೆಯಲು 'ತಲೆಗೊಂದು ಸೂರು' ಹೋರಾಟವನ್ನು ಸಂಘ ನಿರಂತರವಾಗಿ ನಡೆಸುತ್ತಿದೆ.

ಮೈಸೂರಿನ ಪ್ರೀಮಿಯರ್ ಸ್ಟುಡಿಯೋದಲ್ಲಿ ಚಿತ್ರೀಕರಣ ಚಟುವಟಿಕೆ ಹೆಚ್ಚಿತು. ಸಹಕಲಾವಿದರ ಅವಶ್ಯಕತೆ ಹೆಚ್ಚಾಯಿತು. ೧೯೮೪ರಲ್ಲಿ ಮುಚ್ಚಲಾಗಿ, ನಿರುದ್ಯೋಗಿಗಳಾದ ಮೈಸೂರಿನ ಕೆ.ಆರ್.ಮಿಲ್‌ನ ಕಾರ್ಮಿಕರಿಗೆ ಸಹಕಲಾವಿದರ ಸಂಘ ಆಶ್ರಯ ನೀಡಿದೆ. ಇತರೆ ಕೆಲವು ಸಂಘಟನೆಗಳಂತೆ ಸದಸ್ಯತ್ವ ಮಾಸಿಕ ಶುಲ್ಕವನ್ನು ವಿಧಿಸದೆ ವಾರ್ಷಿಕ ಸದಸ್ಯತ್ವ ಶುಲ್ಕವಾಗಿ ರೂ.೨೫ನ್ನು ಪಡೆಯುತ್ತಿದೆ. ಮೈಸೂರು ಹಾಗೂ ಸುತ್ತಮುತ್ತಲಲ್ಲಿ ನಡೆಯುವ ಎಲ್ಲ ಭಾಷೆಯ ಚಿತ್ರಗಳ ಚಿತ್ರೀಕರಣದಲ್ಲಿಯೂ ಈ ಸಂಘದ ಸದಸ್ಯರು ಪಾಲ್ಗೊಂಡು, ಚಿತ್ರತಂಡದವರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಮೈಸೂರಿನ ಈ ಸಂಘದ ಬಗ್ಗೆ ಸದಭಿಪ್ರಾಯ ಮೂಡಿದೆ. ಈ ಸಂಘಕ್ಕೆ ಪ್ರತಿಸ್ಪರ್ಧಿಯಾಗಿ ಮೂರು ಸಂಘಟನೆಗಳು - ಪೈಲ್ವಾನ್ ಲಕ್ಷ್ಮಣ್‌ರ ನೇತೃತ್ವದಲ್ಲಿನ ಸಂಘ, ಭಾಸ್ಕರ, ಕೃಷ್ಣ, ಶಿವಣ್ಣ, ಮಹದೇವು ಮೊದಲಾದವರು ಸ್ಥಾಪಿಸಿದ ಸಂಘ ಮತ್ತು ಲೈಟ್‌ಬಾಯ್‌ಗಳ ಸಂಘ - ತಲೆಯೆತ್ತಿದವು. ಕೆಲಕಾಲ ಅಸ್ತಿತ್ವದಲ್ಲಿದ್ದು ಈ ಸಂಘಟನೆಗಳು ಕಣ್ಮರೆಯಾದವು. ಮೈಸೂರಿನ ಸಹಕಲಾವಿದರ ಸಂಘ ಮಾತ್ರ ನಿರಂತರವಾಗಿ ಉಪಯುಕ್ತ ಹಾದಿಯಲ್ಲಿ ಮುನ್ನಡೆಯುತ್ತಾ ಬಂದಿದೆ. ಪ್ರತಿ ಬಾರಿ ವಾರ್ಷಿಕ ಚುನಾವಣೆಗೆ ಮುನ್ನ ಕಾರ್ಯಕಾರಿ ಸಮಿತಿಯವರೆಲ್ಲರೂ ರಾಜೀನಾಮೆ ನೀಡಿ ಚುನಾವಣೆಯಲ್ಲಿ ಸದಸ್ಯರ ಅಭಿಮತದ ಆಧಾರದಿಂದ ಹೊಸ ಕಾರ್ಯಕಾರಿ ಸಮಿತಿ ಆಯ್ಕೆಯಾಗಿ ಆಡಳಿತದ ಚುಕ್ಕಾಣಿ ಹಿಡಿಯುವುದು ಈ ಸಂಘ ಅನುಸರಿಸಿಕೊಂಡು ಬಂದಿರುವ ಸಂಪ್ರದಾಯ. ೨೦೦೦ನೇ ವರ್ಷದಲ್ಲಿದ್ದ ಪದಾಧಿಕಾರಿಗಳು : ಪಾಲಹಳ್ಳಿ ರಾಮಕೃಷ್ಣ ಅಧ್ಯಕ್ಷರು. ಪತ್ರಕರ್ತ ಕೆ.ಜಿ.ಕುಮಾರ್ ಸಂಘದ ಗೌರವಾಧ್ಯಕ್ಷರು. ಶಿವಮ್ಮ ಕಾರ್ಯದರ್ಶಿಯಾಗಿ, ಪುಟ್ಟಮ್ಮ. ಖಜಾಂಚಿ. ಧ್ರುವಕುಮಾರ್, ನಿರ್ಮಾಪಕ ಸಂದೇಶ್ ನಾಗರಾಜ್. ನಟ-ಸಂಸದ ಅಂಬರೀಷ್ ಸಂಘದ ಮಹಾ ಪೋಷಕರು. ಪಿ.ಗೋವಿಂದರಾಜ್ ಮಹಾ ಪೋಷಕರಾಗಿ ಕೆಲಕಾಲ ಇದ್ದರು. ಆರ್.ಜಿ.ನರಸಿಂಹ ಅಯ್ಯಂಗಾರ್ ಕಾನೂನು ಸಲಹೆಗಾರರು.

ಮೈಸೂರಿನ ಪ್ರೀಮಿಯರ್ ಸ್ಟುಡಿಯೋವಿನಲ್ಲಿ ಸಂಜಯ್‌ಖಾನ್ ಅವರ 'ಟಿಪ್ಪುವಿನ ಖಡ್ಗ' (ಟಿಪ್ಪು ಸುಲ್ತಾನ್) ಚಿತ್ರೀಕರಣ ನಡೆದಿದ್ದಾಗ ಸಂಭವಿಸಿದ ದುರಂತದಲ್ಲಿ ಸಂತ್ರಸ್ತರಾದವರಿಗೆ ಪರಿಹಾರ ದೊರಕಿಸಿಕೊಡುವ ಪ್ರಯತ್ನದಲ್ಲಿ ನಡೆದ ಹೋರಾಟದ ಮುಂಚೂಣಿಯಲ್ಲಿ ಈ ಸಂಘವೂ ಇದ್ದಿತು.

### ಕರ್ನಾಟಕ ಚಲನಚಿತ್ರ ವಾದ್ಯಗಾರರ ಸಂಗೀತ ಸಂಘ

ಚಲನಚಿತ್ರವೊಂದಕ್ಕೆ ಸಂಗೀತ ನಿರ್ದೇಶಕರು ರಾಗ ಸಂಯೋಜಿಸಿ ಅದಕ್ಕೆ ತಕ್ಕ ಹಾಗೆ ವಿವಿಧ ವಾದ್ಯಗಳನ್ನು ಬಳಸಿಕೊಂಡು ನೊಟೇಷನ್ ನೀಡುತ್ತಾರೆ. ಆ ನೊಟೇಶನ್ ಅನ್ನು ಅನುಸರಿಸಿ ವಿವಿಧ ಸಂಗೀತ ವಾದ್ಯಪಟುಗಳು ವಾದ್ಯದ ನಾದ ತುಂಬಬೇಕಾಗುತ್ತದೆ. ಚಿತ್ರದ ಹಾಡುಗಳ ಬಿ.ಜಿ.ಎಂ. (ಹಿನ್ನೆಲೆ ವಾದ್ಯ ಸಂಗೀತ) ಹಾಗೂ ಪುನರ್ ಧ್ವನಿಮುದ್ರಣ ಸಂದರ್ಭದಲ್ಲಿ ಸನ್ನಿವೇಶಗಳ ಭಾವಕ್ಕೆ ತಕ್ಕಂತೆ ಸಂಗೀತ ನಿರ್ದೇಶಕರು ಸಂಗೀತವನ್ನು ರೂಪಿಸಿ ನೀಡಿದ ನೊಟೇಶನ್ ಅನುಸರಿಸಿ ವಿವಿಧ ವಾದ್ಯಗಾರರು ತಮ್ಮ ವಾದ್ಯಗಳನ್ನು ನುಡಿಸಬೇಕಾಗುತ್ತದೆ. ವಾದ್ಯವಾದನ ಪಟುಗಳಿಗೆ ಭಾಷೆಯ ಗೊಂದಲವಿಲ್ಲ. ಭಾರತೀಯ ಸಂಗೀತದ ಸ್ವರಗಳು ಹಾಗೂ ಪಾಶ್ಚಿಮಾತ್ಯ ಸಂಗೀತದ ನೋಟ್ಸ್ ತಿಳಿದಿರಬೇಕು. ಏಕೆಂದರೆ ಹಿನ್ನೆಲೆ ಸಂಗೀತಕ್ಕಾಗಿ ಬಳಸಲಾಗುವ ಸಂಗೀತ ವಾದ್ಯಗಳಲ್ಲಿ ಭಾರತೀಯ ವಾದ್ಯಗಳು ಹಾಗೂ ಪಾಶ್ಚಿಮಾತ್ಯ ವಾದ್ಯಗಳೂ ಇದ್ದು ಅವುಗಳ ಬಳಕೆ ಸರ್ವೇ ಸಾಧಾರಣ. ಕೆಲವೊಮ್ಮೆ ಸಂಗೀತ ವಾದ್ಯಗಳ ಮೂಲಕವೇ ಕೆಲವೊಂದು ವಿಶೇಷ ಪರಿಣಾಮವನ್ನೂ ಉಂಟುಮಾಡಬೇಕಾಗುತ್ತದೆ.

ಚಲನಚಿತ್ರಗಳಿಗೆ ವಾದ್ಯ ನುಡಿಸುವುದು ಸುಲಭವೇನಲ್ಲ. ಚಲನಚಿತ್ರದ ಹಾಡುಗಳ ಧ್ವನಿಮುದ್ರಣ ಸಂದರ್ಭದಲ್ಲಿ ಒಂದು ಹಾಡಿಗೆ ಇಷ್ಟು ಸಂಭಾವನೆ, ರಿ-ರಿಕಾರ್ಡಿಂಗ್ ಸಂದರ್ಭದಲ್ಲಿ ಒಂದು ಕಾಲ್‌ಶೀಟ್‌ಗೆ ಇಷ್ಟು ಸಂಭಾವನೆ ಎಂದು ಪ್ರತಿಯೊಂದು ವಾದ್ಯಗಾರರಿಗೂ ಅವರು ನುಡಿಸುವ ವಾದ್ಯವನ್ನು ಅವಲಂಬಿಸಿ ನಿಗದಿ ಪಡಿಸಲಾಗಿದೆ. ಆ ಸಂಭಾವನೆಯ ಜೊತೆಗೆ ಆ ಮಾನದಲ್ಲಿಯೇ ಭತ್ಯೆಯನ್ನು ನಿಗದಿ ಮಾಡಲಾಗಿದೆ. ಹಾಡುಗಳ ಧ್ವನಿಮುದ್ರಣವಾದರೆ ಒಬ್ಬೊಬ್ಬ ಕಲಾವಿದ ಬೆಳಗಿನಿಂದ ರಾತ್ರಿಯೊಳಗೆ ೩-೪ ಹಾಡುಗಳಿಗೆ ವಾದ್ಯ ನುಡಿಸಲೂ ಸಾಧ್ಯ.

ಕನ್ನಡ ಚಲನಚಿತ್ರೋದ್ಯಮ ಕರ್ನಾಟಕ ನೆಲದಲ್ಲಿ ನೆಲೆಯೂರುವುದಕ್ಕೆ ಮೊದಲು ಕನ್ನಡಚಿತ್ರಗಳ ಹಾಡುಗಳ ಧ್ವನಿಮುದ್ರಣ ಹಾಗೂ ಪುನರ್ ಧ್ವನಿಮುದ್ರಣ ಕಾರ್ಯಗಳನ್ನೆಲ್ಲಾ ಮದರಾಸಿನಲ್ಲಿಯೇ ಮಾಡಬೇಕಾಗುತ್ತಿತ್ತು. ಕೆಲವೊಂದು ಚಿತ್ರಗಳ ಹಾಡುಗಳನ್ನು ಮುಂಬಯಿಯಲ್ಲಿ ಮಾಡಿದ ನಿದರ್ಶನಗಳೂ ಇವೆ. ಇದರಿಂದಾಗಿ ಅಲ್ಲಿಯ ಸ್ಥಳೀಯ ಸಂಗೀತ ವಾದ್ಯಗಾರರಿಗೇ ಹೆಚ್ಚಿನ ಅವಕಾಶ ಸಹಜ. ಕನ್ನಡ ನೆಲದ ಕೆಲವು ಸಂಗೀತ ವಾದ್ಯಗಾರರೂ ಮದರಾಸಿನಲ್ಲಿ ನೆಲೆಸಿ ಚಲನಚಿತ್ರ ಸಂಗೀತಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದರು. ಕನ್ನಡಿಗರಾದ ಸಂಗೀತ ನಿರ್ದೇಶಕರೂ ಆ ದಿನಗಳಲ್ಲಿ ಮದರಾಸಿನಲ್ಲಿಯೇ ನೆಲೆಸಿದ್ದರು. ಹೀಗೆ ಮದರಾಸಿನಲ್ಲಿ ನೆಲೆಸಿದ ಸಂಗೀತ ವಾದ್ಯಗಾರರಲ್ಲಿ ಯೂನಿವಾಕ್ಸ್ ಪಟು ಬಿ.ಹನುಮಂತಾಚಾರ್ ಕೂಡ ಒಬ್ಬರು. ವಿವಿಧ ವಾದ್ಯಗಳ ಸಂಗಮದಂತೆ ವಿವಿಧ ವಿಶೇಷ ಪರಿಣಾಮಗಳನ್ನು ಉಂಟುಮಾಡಬಲ್ಲ ಸಂಗೀತವಾದ್ಯ ಯೂನಿವಾಕ್ಸ್. ಆ ಕಾಲಕ್ಕೆ ಅದೊಂದು ಹೊಸ ಆವಿಷ್ಕರಣ. ಹಾಗಾಗಿ ರಿ-ರಿಕಾರ್ಡಿಂಗ್ ಸಮಯದಲ್ಲಿ ಆ ವಾದ್ಯಕ್ಕೆ ಬೇಡಿಕೆ ಅಧಿಕ. ಈಚೆಗೆ ತಂತ್ರಜ್ಞಾನ ಬೆಳೆದು ಅತ್ಯಾಧುನಿಕ ತಂತಿವಾದ್ಯಗಳು, ಮತ್ತಿತರ ಸಂಗೀತ ಸಾಧನಗಳು ಬಂದ ನಂತರ ಯೂನಿವಾಕ್ಸ್‌ನ ಜನಪ್ರಿಯತೆ ತಗ್ಗಿತು. ಬಿ.ಹನುಮಂತಾಚಾರ್ ಈಗಿಲ್ಲ. ಅವರ ಮಗ ರಾಜಕುಮಾರ್ ಮದರಾಸಿನಲ್ಲಿ ಬಹು ಬೇಡಿಕೆಯ ವಾದ್ಯಪಟುವೆನಿಸಿದ್ದಾರೆ.

ಉದ್ಯಮ ಕನ್ನಡ ನೆಲಕ್ಕೆ ಮರಳಿ ಬಂದು ನೆಲೆಸಿದ ಮೇಲೆ ಕನ್ನಡಿಗರಾದ ವಾದ್ಯಗಾರರ ಬಳಕೆ ಹೆಚ್ಚಿದೆ. ವಾದ್ಯಸಂಗೀತದಲ್ಲಿ ಶಿಕ್ಷಣ-ತರಬೇತಿ ನೀಡಲು ಆವರ್ಶ್ ಫಿಲಮ್ ಇನ್‌ಸ್ಟಿಟ್ಯೂಟ್‌ನಂತಹ ಹಲವಾರು ಸಂಸ್ಥೆಗಳು ಹುಟ್ಟಿಕೊಂಡಿವೆ.

ಚಲನಚಿತ್ರಗಳಿಗೆ ವಾದ್ಯ ನುಡಿಸುವ ಕನ್ನಡಿಗರ ಸಂಖ್ಯೆಯೂ ಹೆಚ್ಚಿದೆ. ಮೊದಲು ಮದರಾಸಿನಿಂದ ವಾದ್ಯ ನುಡಿಸುವವರನ್ನು ಕರೆಸಿಕೊಂಡು ಧ್ವನಿಮುದ್ರಣ ನಡೆಯುತ್ತಿದ್ದುದು ತಪ್ಪಿದೆ. ಕನ್ನಡ ಚಿತ್ರಗಳಿಗೆ (ಕನ್ನಡದ ಉಪಭಾಷೆಗಳೂ ಸೇರಿ) ಸಂಗೀತ ಧ್ವನಿಮುದ್ರಣ ನಡೆಸಲು ಕರ್ನಾಟಕದಲ್ಲಿ ರಿಕಾರ್ಡಿಂಗ್ ಸ್ಟುಡಿಯೋಗಳೂ ಹೆಚ್ಚು ಸಂಖ್ಯೆಯಲ್ಲಿ ಸ್ಥಾಪನೆಗೊಂಡು ಕಾರ್ಯ ನಿರ್ವಹಿಸುತ್ತಿವೆ. ಕೆಲವೊಂದು ಅಪರೂಪದ ಸಂದರ್ಭಗಳನ್ನು ಬಿಟ್ಟರೆ ಸಂಪೂರ್ಣವಾಗಿ ಸಂಗೀತಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳೂ ಕರ್ನಾಟಕದಲ್ಲೇ ನಡೆಯುತ್ತಿವೆ. ಹೊಸ ಹೊಸ ವಾದ್ಯಗಾರರು, ಸಂಗೀತ ನಿರ್ದೇಶಕರು ಉದ್ಯಮದೊಳಗೆ ಪ್ರವೇಶ ಪಡೆದಿದ್ದಾರೆ. ಕರ್ನಾಟಕದಲ್ಲಿರುವ ಚಲನಚಿತ್ರ ಸಂಗೀತ ವಾದ್ಯಗಾರರು 'ಕರ್ನಾಟಕ ಚಲನಚಿತ್ರ ವಾದ್ಯಗಾರರ ಸಂಗೀತ ಸಂಘ' ಎಂಬ ತಮ್ಮದೇ ಸಂಘಟನೆಯನ್ನು ಸ್ಥಾಪಿಸಿಕೊಂಡಿದ್ದಾರೆ. ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಅಂಗಸಂಸ್ಥೆಯಾಗಿ ಈ ಸಂಘಕ್ಕೆ ಮಾನ್ಯತೆ ದೊರಕಿದೆ. ೨೦೦೦ನೇ ವರ್ಷದಲ್ಲಿ ಪದಾಧಿಕಾರಿಗಳು : ಸಂಗೀತ ನಿರ್ದೇಶಕ ವಿ.ಮನೋಹರ್ ಅಧ್ಯಕ್ಷರು. ಮೈಸೂರು ಅನಂತಸ್ವಾಮಿಯವರ ಪುತ್ರ ರಾಜು ಅನಂತಸ್ವಾಮಿ ಪ್ರಧಾನ ಕಾರ್ಯದರ್ಶಿ. ಎಲ್.ಎನ್.ಶಾಸ್ತ್ರಿ ಖಜಾಂಚಿ. (ನೋಡಿ : ಸಂಗೀತ)

### ಚಲನಚಿತ್ರ ವಾಹನ ಚಾಲಕರ ಸಂಘ

ಚಲನಚಿತ್ರವೊಂದರ ತಯಾರಿಕೆ ಹಂತದಲ್ಲಿ ಕೆಲಸ ಮಾಡುವ ವಿವಿಧ ಹಂತಗಳು ಹಾಗೂ ವಿಭಾಗಗಳಲ್ಲಿ ಸಾರಿಗೆ ಸೌಲಭ್ಯ ಪ್ರಮುಖವಾದುದು. ಕಾರುಗಳು, ಮಟಾಡೋರ್, ಟೆಂಪೋ ಟ್ರಾವಲರ್ ವಾಹನಗಳು, ಯೂನಿಟ್-ಜನರೇಟರ್ ವ್ಯಾನ್‌ಗಳು ಹೀಗೆ ಬಗೆ ಬಗೆಯ ವಾಹನಗಳು ಚಿತ್ರೀಕರಣ ಸಮಯದಲ್ಲಿ ಓಡಾಡಬೇಕಾಗುತ್ತದೆ. ಈ ವಾಹನಗಳನ್ನು ನಿರ್ಮಾಪಕರು ಬಾಡಿಗೆಗೆ ಪಡೆಯುವುದು ಸರ್ವೇ ಸಾಮಾನ್ಯ. ವಾಹನಗಳಿಗೆ ಅಗತ್ಯವಾದ ಇಂಧನ ಪೂರೈಸುವುದು, ವಾಹನಗಳ ಚಾಲಕರಿಗೆ ದಿನಭತ್ಯೆ (ಬಾಟಾ) ನೀಡುವುದು ನಿರ್ಮಾಪಕರ ಹೊಣೆ. ದಿನನಿತ್ಯದ ಪರಿಪಾಠ.

ಹೀಗೆ ಚಲನಚಿತ್ರಗಳಿಗಾಗಿ ಓಡಾಡುವ ವಾಹನಗಳ ಚಾಲಕರೂ ಒಂದು ವಿಧದಲ್ಲಿ ಚಲನಚಿತ್ರ ಕಾರ್ಮಿಕರೆಂದೇ ಪರಿಗಣಿತರಾಗಿದ್ದಾರೆ. ಚಲನಚಿತ್ರಗಳಿಗಾಗಿ ವಾಹನ ಓಡಿಸುವ ಚಾಲಕರಿಗೆ ಅವರದೇ ಆದ ಸಂಘಟನೆಯೊಂದು ಕರ್ನಾಟಕ ಚಲನಚಿತ್ರ ಕಾರ್ಮಿಕರ ಕಲಾವಿದರ ತಂತ್ರಜ್ಞರ ಒಕ್ಕೂಟದಡಿಯಲ್ಲಿ ಅಸ್ತಿತ್ವದಲ್ಲಿದೆ. ಅದೇ **ಚಲನಚಿತ್ರ ವಾಹನ ಚಾಲಕರ ಸಂಘ**. ವಾಹನ ಚಾಲಕರ ಈ ಸಂಘ ಒಕ್ಕೂಟದ ಅಂಗಸಂಸ್ಥೆಗಳಲ್ಲೊಂದಾಗಿದೆ. ಚಾಲಕರ ದಿನಭತ್ಯೆ ಮತ್ತಿತರ ಸೌಲಭ್ಯಗಳನ್ನು ನಿಗದಿಪಡಿಸಲಾಗಿದ್ದು, ವಾಹನ ಚಾಲಕರು ನಿಗದಿಯಾಗಿರುವಂತೆಯೇ ನಿರ್ಮಾಪಕರಿಂದ ಅವನ್ನು ಪಡೆಯಬೇಕಾಗಿದೆ.

ಚಲನಚಿತ್ರ ನಿರ್ಮಾಪಕರ ಬಳಿ ಸ್ವಂತ ವಾಹನಗಳು ಬೇಕಷ್ಟಿದ್ದರೂ ಈ ಸಂಘಟನೆಯ ಸದಸ್ಯರ ವಾಹನಗಳನ್ನು ಚಿತ್ರೀಕರಣ ತಯಾರಿಕೆ ಸಂದರ್ಭದಲ್ಲಿ ಬಳಸಬೇಕೆಂಬ ನಿಯಮವಿರುವುದರಿಂದ ಸಂಘಟನೆಯ ಸದಸ್ಯರಾದ ವಾಹನ ಚಾಲಕರಿಗೆ ಅವಕಾಶ ಹೆಚ್ಚಾಗಿ ಕಲ್ಪಿತವಾಗುವುದು ಸಹಜ. ಸಂಘಟನೆಯ ಸದಸ್ಯರಲ್ಲದವರು ಉದ್ಯಮದಲ್ಲಿ ಕೆಲಸ ಮಾಡುವಂತಿಲ್ಲ, ಇದೊಂದು ಮೌಖಿಕ ನಿಯಮ. ಹೀಗಾಗಿ ಯಾವುದೇ ಚಲನಚಿತ್ರ ನಿರ್ಮಾಪಕರೂ ಈ ಸಾರಿಗೆಯ ಸೌಲಭ್ಯವನ್ನೇ ಸಾಕಷ್ಟು ಬಳಸಿಕೊಳ್ಳಬೇಕಾದುದು ಅನಿವಾರ್ಯ. ಸರಿಸುಮಾರಾಗಿ ಒಕ್ಕೂಟದ ಅಂಗಸಂಸ್ಥೆಗಳಾದ ಎಲ್ಲ ಸಂಘಟನೆಗಳಿಗೂ ಈ ನಿಯಮ ಅನ್ವಯವಾಗುತ್ತದೆ. ಈ ವಾಹನ ಚಾಲಕರು ಉದ್ಯಮದಲ್ಲಿನ ಕಲಾವಿದರು ಹಾಗೂ ತಂತ್ರಜ್ಞರಲ್ಲರ ವಿಶ್ವಾಸವನ್ನು ಗಳಿಸಿರುತ್ತಾರೆ.

೨೦೦೦ದಲ್ಲಿ ಪಿ.ಕೃಷ್ಣ ವಾಹನ ಚಾಲಕರ ಸಂಘದ ಅಧ್ಯಕ್ಷರು. ಪ್ರಧಾನ ಕಾರ್ಯದರ್ಶಿಯಾಗಿ ಕೆ.ಮಹಾಬಲ ಮತ್ತು ಖಜಾಂಚಿಯಾಗಿ ಪುಟ್ಟಸ್ವಾಮಿಗೌಡ ಪ್ರಮುಖ ಪದಾಧಿಕಾರಿಗಳು.

### ಕರ್ತೃ ಮತ್ತು ಸಂಯೋಜಕರ ಹಕ್ಕುಗಳನ್ನು ಕಾಯುವ ಸಂಸ್ಥೆ: ಐಪಿಆರ್‌ಎಸ್

ಭಾರತೀಯ ಚಲನಚಿತ್ರರಂಗದಲ್ಲಿನ ಗೀತರಚನಕಾರರು ಮತ್ತು ಸಂಗೀತ ನಿರ್ದೇಶಕರಿಗೆ ತಾವು ಸೃಷ್ಟಿಸಿದ ಹಾಡುಗಳ ಮೇಲಿನ ಸ್ವಾಮ್ಯ ಹಾಗೂ ಹಕ್ಕುಗಳನ್ನು ಕಾಪಾಡುವ ಮಹತ್ವದ ಗುರಿ ಹೊತ್ತು ಭಾರತದಲ್ಲಿ ೧೯೬೯ರಲ್ಲಿ ಸ್ಥಾಪನೆಯಾದುದು 'ದಿ ಇಂಡಿಯನ್ ಪರ್‌ಫಾರ್ಮಿಂಗ್ ರೈಟ್ಸ್ ಸೊಸೈಟಿ ಲಿಮಿಟೆಡ್' ಸಂಸ್ಥೆ. ಲಂಡನ್ನಿನ ದಿ ಪರ್‌ಫಾರ್ಮಿಂಗ್ ರೈಟ್ಸ್ ಸೊಸೈಟಿಯ ಸಹಾಯ-ಸಹಕಾರದಿಂದ ಅದೇ ಮೇಲ್ಪಂಕ್ತಿಯನ್ನನುಸರಿಸಿ ಆರಂಭವಾದ ಈ ಸಂಸ್ಥೆ ಅಂತರರಾಷ್ಟ್ರೀಯ ಲೇಖಕರ ಹಾಗೂ ಸಂಯೋಜಕರ ಸಂಸ್ಥೆ (ಸಿಐಎಸ್‌ಎಸಿ)ಯ ಭಾಗವೇ ಆಗಿದೆ. ಲಂಡನ್ ಸಂಸ್ಥೆಯ ಭಾರತದಲ್ಲಿನ ಏಜೆಂಟ್ ಆಗಿದ್ದ ನ್ಯಾಟ್ಕಿನ್ ಇಂಡಿಯಾ ಅವರಿಗೆ ಭಾರತದ ಸಂಸ್ಥೆಯ ವ್ಯವಸ್ಥೆಯ ಹೊಣೆ ಒಪ್ಪಿಸಲಾಗಿತ್ತು. ಆದರೆ ಆ ಏಜೆಂಟ್ ವಸೂಲಿ ಮಾಡಿದ ರಾಯಲ್ಟಿ ಹಣವನ್ನು ಆ ಗೀತೆಯ ಹಕ್ಕುದಾರರಾದ ಲೇಖಕರು ಹಾಗೂ ಸಂಗೀತ ನಿರ್ದೇಶಕರಿಗೆ ನ್ಯಾಯ ಸಮ್ಮತವಾಗಿ ವಿತರಿಸುತ್ತಿರಲಿಲ್ಲ. ಆ ಏಜೆಂಟರ ವ್ಯವಹಾರದ ವಿರುದ್ಧ ದಕ್ಷಿಣ ಭಾರತದಲ್ಲಿಯ ಪ್ರಸಿದ್ಧ ಸಂಗೀತ ನಿರ್ದೇಶಕರುಗಳಾದ ಎಂ.ಬಿ.ಶ್ರೀನಿವಾಸನ್, ವಿಜಯಭಾಸ್ಕರ್, ಕೆ.ವಿ.ಮಹಾದೇವನ್, ಟಿ.ಕೆ.ಪುಗಳೇಂದಿ ಹಾಗೂ ಚಿತ್ರಸಾಹಿತಿ ಆರ್.ಎನ್.ಜಯಗೋಪಾಲ್ ಸಮರವನ್ನೇ ಹೂಡಿದರು. ೧೯೭೭ರಲ್ಲಿ ನ್ಯಾಟ್ಕಿನ್ ಇಂಡಿಯಾ ಅವರಿಂದ ಸಂಸ್ಥೆಯನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು, ಭಾರತೀಯ ಚಿತ್ರಜಗತ್ತಿನ ಎಲ್ಲ ಸಾಹಿತಿಗಳು ಹಾಗೂ ಸಂಗೀತ ಸಂಯೋಜಕರನ್ನು ಒಂದೆಡೆ ಒಂದೇ ವೇದಿಕೆಯಲ್ಲಿ ತರಲು ಶ್ರಮಿಸಿದರು. ಇದು ಮಂದಗತಿಯ ಕೆಲಸ. ಹಾಗೆಯೇ ಈ ಸಂಗೀತವನ್ನು ಬಳಸುವವರಿಂದ ರಾಯಲ್ಟಿ ಹಣ ಸಂಗ್ರಹಿಸುವುದು ಇನ್ನೂ ವಿಳಂಬಗತಿಯ ಕಾರ್ಯ.

ರಾಗ ಸಂಯೋಜಕ ಮತ್ತು ಗೀತರಚನೆಕಾರ ಚಲನಚಿತ್ರದ ಸೌಂಡ್ ಟ್ರ್ಯಾಕ್‌ಗಾಗಿ ಗೀತೆಯನ್ನು ಸೃಷ್ಟಿಸುತ್ತಾರೆ. ಆ ಎರಡೂ ವರ್ಗದವರಿಗೆ ಆ ಹಾಡಿನ ಗಳಿಕೆಯಲ್ಲಿ ರಾಯಲ್ಟಿಯಾಗಿ ಪಾಲು ಪಡೆಯುವ ಹಕ್ಕಿರುತ್ತದೆ. ಆದುದರಿಂದ ಲೈವ್ ಪರ್‌ಫಾರ್ಮೆನ್ಸ್‌ಗಳು, ಟೇಪ್ ರಿಕಾರ್ಡರ್‌ಗಳು, ಸಿ.ಡಿ.ಗಳು, ರಿಕಾರ್ಡ್‌ಗಳು ಇತ್ಯಾದಿಗಳ ಮೂಲಕ ಹೋಟೇಲುಗಳು, ಅಂಗಡಿ ಮುಂಗಟ್ಟುಗಳು, ರೈಲ್ವೆ ಮತ್ತು ಬಸ್ ನಿಲ್ದಾಣಗಳು, ರೈಲು ಮತ್ತು ಬಸ್ಸುಗಳು, ವಿಮಾನ ನಿಲ್ದಾಣಗಳು, ಬಿಲಿಯರ್ಡ್ಸ್ ಪಾರ್ಲರ್‌ಗಳು ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ, ಭಾರತದ ಯಾವುದೇ ಪ್ರದೇಶಗಳಲ್ಲಿ ಐಪಿಆರ್‌ಎಸ್‌ನಿಂದ ಅನುಮತಿ ಪಡೆಯದೆ ಬಳಸುವುದು ಕಾನೂನುಬಾಹಿರವೆನಿಸುತ್ತದೆ. ಈ ಸಂಸ್ಥೆಯು ರೇಡಿಯೋ ಕೇಂದ್ರಗಳು ಮತ್ತು ಟಿ.ವಿ.ಚಾನಲ್‌ಗಳಂತಹ ಹೆಚ್ಚು ಹೆಚ್ಚು ಚಿತ್ರಸಂಗೀತಗಳನ್ನು ಬಳಸುವವರಿಂದ ಲೈಸೆನ್ಸ್ ಫೀ ಸಂಗ್ರಹಿಸಿ ಅದನ್ನು ಆ ಗೀತೆಯ ಹಕ್ಕುದಾರರಾದ ಸಂಗೀತ ನಿರ್ದೇಶಕರು ಹಾಗೂ ಲೇಖಕರಿಗೆ ವ್ಯವಸ್ಥಿತವಾಗಿ ಹಂಚುವ ಹೊಣೆ ಹೊತ್ತಿದೆ.

೧೯೭೭ರಲ್ಲಿ ಸರ್ವೋಚ್ಚ ನ್ಯಾಯಾಲಯವು ಚಿತ್ರದ ಗೀತೆಯ ಸಂಪೂರ್ಣ ಹಕ್ಕು ಚಿತ್ರನಿರ್ಮಾಪಕರಿಗೇ ಸೇರುತ್ತದೆ ಎಂದು ತೀರ್ಪು ನೀಡಿದೆ. ಇದರಿಂದಾಗಿ ಈ ಸಂಸ್ಥೆಯ ಪ್ರಗತಿಗೆ ಅಡ್ಡಿಯುಂಟಾದುದು ಸಹಜ. ಆ ಸಂದರ್ಭದಲ್ಲಿಯೇ ಈ ಸಂಸ್ಥೆಯು ಲೇಖಕರು ಹಾಗೂ ಸಂಗೀತ ನಿರ್ದೇಶಕರ ರಾಯಲ್ಟಿ ಹಕ್ಕುಗಳನ್ನು ರಕ್ಷಿಸಲು ಭಗೀರಥ ಪ್ರಯತ್ನವನ್ನೇ ಮಾಡಿತು. ಭಾರತ ಸರ್ಕಾರವು ಸಂಸ್ಥೆಯ ಉದ್ದೇಶವನ್ನು ಅರಿತು ಕಾಪಿರೈಟ್ ಕಾಯಿದೆಗೆ ತಿದ್ದುಪಡಿ ತರಲು ಎರಡು ದಶಕಗಳೇ ಹಿಡಿಯಿತು. ಲೇಖಕರು ಮತ್ತು ಸಂಗೀತ ನಿರ್ದೇಶಕರೊಡನೆ ಕಾಪಿರೈಟ್ ಹಕ್ಕುಗಳಿಗೆ ಸಂಬಂಧಿಸಿದಂತೆ ನಿರ್ದಿಷ್ಟ ಕರಾರಿನ ಅಗತ್ಯವನ್ನು ಕಾನೂನು ಒತ್ತಿ ಹೇಳಿತು. ಈ ನಿಟ್ಟಿನಲ್ಲಿಯೂ ಐಪಿಆರ್‌ಎಸ್ ಶ್ರಮವಹಿಸಿ ನಿರ್ಮಾಪಕರು ಹಾಗೂ ರಿಕಾರ್ಡ್‌ಗಳ ತಯಾರಕರನ್ನು ಒಗ್ಗೂಡಿಸಿತು. ಇದರ ಫಲವಾಗಿ ಒಂದು ಸಿನಿಮಾ ಹಾಡು ಹತ್ತು ರೂಪಾಯಿಗಳ ಗೌರವಧನ ಗಳಿಸಿದರೆ, ನಿರ್ಮಾಪಕ ಅಥವಾ ಹಕ್ಕು ಹೊಂದಿರುವ ರಿಕಾರ್ಡ್ ತಯಾರಕನಿಗೆ ಐದು ರೂಪಾಯಿ, ಸಂಗೀತ ನಿರ್ದೇಶಕನಿಗೆ ಮೂರು ರೂಪಾಯಿ ಹಾಗೂ ಲೇಖಕರಿಗೆ ಎರಡು ರೂಪಾಯಿಗಳಂತೆ ರಾಯಲ್ಟಿಯ ಮೊತ್ತವನ್ನು ವಿತರಿಸುತ್ತದೆ.

ಪ್ರಸ್ತುತ ಭಾರತೀಯ ಚಲನಚಿತ್ರರಂಗದ ಬಹಳಷ್ಟು ಮಂದಿ ಸಂಗೀತ ನಿರ್ದೇಶಕರು ಮತ್ತು ಲೇಖಕರು ಐಪಿಆರ್‌ಎಸ್‌ನ ಸದಸ್ಯತ್ವ ಪಡೆದಿದ್ದಾರೆ. ಅಲ್ಲದೆ ರಾಷ್ಟ್ರದ ಪ್ರಮುಖ ರಿಕಾರ್ಡ್ ತಯಾರಕರು ಹಾಗೂ ನಿರ್ಮಾಪಕರು ಸದಸ್ಯರಾಗಿ ಎಲ್ಲರೂ ಒಂದೇ ವೇದಿಕೆಯಡಿ ಸೇರಿದ್ದಾರೆ. ಆದರೆ ಬಹಳಷ್ಟು ಕನ್ನಡ ಚಲನಚಿತ್ರ ನಿರ್ಮಾಪಕರು ಇನ್ನೂ ಈ ಸಂಸ್ಥೆಯ ಸದಸ್ಯರಾಗಬೇಕಾಗಿದೆ.

ಎಂ.ಬಿ.ಶ್ರೀನಿವಾಸನ್ ಅವರ ನಿಧನಾನಂತರ ಹಿರಿಯ ಖ್ಯಾತ ಸಂಗೀತ ನಿರ್ದೇಶಕ ನೌಷದ್ ಅಲಿ ಐಪಿಆರ್‌ಎಸ್‌ನ ಅಧ್ಯಕ್ಷರಾಗಿದ್ದಾರೆ. ಕನ್ನಡ ಚಿತ್ರಸಾಹಿತಿ-ನಿರ್ದೇಶಕ ಆರ್.ಎನ್.ಜಯಗೋಪಾಲ್ ಉಪಾಧ್ಯಕ್ಷರಾಗಿ ಮತ್ತು ಸಂಗೀತ ನಿರ್ದೇಶಕ ವಿಜಯಭಾಸ್ಕರ್ ನಿರ್ದೇಶಕ ಮಂಡಳಿಯ ಸದಸ್ಯರಾಗಿ ೧೯೭೨ರಿಂದಲೂ ಸಂಸ್ಥೆಯ

ಪ್ರಗತಿಗಾಗಿ ನಿರಂತರ ದುಡಿಯುತ್ತಿದ್ದಾರೆ. ಕಲ್ಯಾಣ್‌ಜಿ-ಆನಂದ್‌ಜಿ ಜೋಡಿಯ ಆನಂದ್‌ಜಿ ಹಾಗೂ ಎಂ.ಎಸ್.ವಿಶ್ವನಾಥನ್ ಇವರು ಪ್ರಸ್ತುತ ನಿರ್ದೇಶಕ ಮಂಡಳಿಯಲ್ಲಿದ್ದಾರೆ. ಈ ಹಿಂದೆ ನಿರ್ದೇಶಕ ಮಂಡಳಿಯಲ್ಲಿ ದುಡಿದವರಲ್ಲಿ ಸಂಗೀತ ನಿರ್ದೇಶಕರುಗಳಾದ ಖಯ್ಯಾಮ್, ಕೆ.ವಿ.ಮಹಾದೇವನ್, ರಮೇಶ್‌ನಾಯ್ಡು, ಡಾ|ದಾಶರಥಿ ಅವರು ಪ್ರಮುಖರು. ಈ ಸಂಸ್ಥೆಯು ಮದರಾಸು ಹಾಗೂ ಹೊಸ ದಹಲಿಗಳಲ್ಲಿ ಸ್ವಂತ ಕಾರ್ಯಾಲಯಗಳನ್ನು ಹೊಂದಿದೆ. ಅಲ್ಲದೆ ಮುಂಬಯಿಯಲ್ಲಿ ಎರಡೂವರೆ ಕೋಟಿ ರೂಪಾಯಿಗಳಿಗೂ ಮೀರಿದ ವೆಚ್ಚದಲ್ಲಿ ಬೃಹತ್ ಕಚೇರಿಯನ್ನು ನಿರ್ಮಿಸಿಕೊಂಡಿದೆ. ಡೈರೆಕ್ಟರ್ ಜನರಲ್ ಸಂಜಯ್ ಟಾಂಡನ್ ಸಂಸ್ಥೆಯನ್ನು ವ್ಯಾಪಕವಾಗಿ ಬೆಳೆಸಿದ್ದು, ಭಾರತ ಸರ್ಕಾರವು ಕಾಪಿರೈಟ್‌ಗೆ ಸಂಬಂಧಿಸಿದ ಎಲ್ಲ ವಿಚಾರಗಳ ಬಗ್ಗೆಯೂ ಈ ಸಂಸ್ಥೆಯೊಡನೆ ಸಮಾಲೋಚನೆ ನಡೆಸಿ ಸಲಹೆ ಪಡೆಯುತ್ತಿದ.

ಕರ್ತೃಪೂಜ್ಞನ ಕೃತಿಯ ಕಾಪಿರೈಟ್ ಹಕ್ಕುಗಾರಿಕೆ ಆ ಕರ್ತೃವಿನ ಮರಣಾನಂತರವ ಅರುವತ್ತು ವರ್ಷ ಕಾಲ ಅಮಲಿನಲ್ಲಿರುವುದರಿಂದ, ಆ ಕರ್ತೃವಿನ ಕುಟುಂಬದವರಿಗೆ ಆತನ ಕೃತಿಯ ಪ್ರಸರಣದಿಂದಾಗಿ ಗೌರವಧನ ದೊರೆಯುತ್ತದೆ. ಬಿ.ಬಿ.ಸಿ.ಯಂತಹ ಕೇಂದ್ರಗಳು ಕರ್ತೃವಿನ ಸಂಗೀತ ಪ್ರಸಾರದ ಕಾಲಾವಧಿಗಳ ಲೆಕ್ಕ ನೀಡಿ ರಾಯಲ್ಟಿ ಕಳುಹಿಸುತ್ತದೆ. ಅದು ನೇರವಾಗಿ ತತ್ಸಂಬಂಧಿ ವ್ಯಕ್ತಿಗೆ ತಲುಪುತ್ತದೆ. ಸಂಸ್ಥೆಯು ತನ್ನ ಎಲ್ಲ ಸದಸ್ಯರೂ ತಮ್ಮ ಉತ್ತರಾಧಿಕಾರಿಯನ್ನು ನಾಮಕರಣ ಮಾಡುವ ಸಲಹ ಮಾಡಿದ್ದರಿಂದಾಗಿ, ಕರ್ತೃವಿನ ನಿಧನದ ನಂತರ ಆ ವಾರಸುದಾರರಿಗೆ ರಾಯಲ್ಟಿ ತಲುಪುವಂತಾಗಿದೆ. ಕನ್ನಡಿಗರಾದ ವಿಜಯಭಾಸ್ಕರ್ ಮತ್ತು ಆರ್.ಎನ್.ಜಯಗೋಪಾಲ್ ಅವರು ಕಳೆದ ೨೫ ವರ್ಷಗಳಿಂದ ನಿರ್ದೇಶಕ ಮಂಡಳಿಯಲ್ಲಿದ್ದು ಸಂಸ್ಥೆಯ ಬೆಳವಣಿಗೆಗ ನೆರವಾಗಿದ್ದಾರೆ. ಹಾಗೆಯೇ ಡೈರೆಕ್ಟರ್ ಜನರಲ್ ಸಂಜಯ್ ಟಾಂಡನ್ ಸಹ. ಇವರೆಲ್ಲರ ಶ್ರಮದಿಂದಾಗಿ ಲೇಖಕರು, ಸಂಯೋಜಕರು, ನಿರ್ಮಾಪಕರು ಹಾಗೂ ರಿಕಾರ್ಡ್ ತಯಾರಕರು ತಮ್ಮ ಹಕ್ಕಿನ ಗೌರವಧನ ಪಡೆಯಲು ಸಾಧ್ಯವಾಗಿದೆ.

ಹೊಸ ತಾಂತ್ರಿಕ ಆವಿಷ್ಕಾರದಿಂದಾಗಿ ಇಂಟರ್‌ನೆಟ್‌ಗಳಲ್ಲಿ ಹಾಗೂ ೩೦೦೦ ರೇಡಿಯೋ ಕೇಂದ್ರಗಳಲ್ಲಿ ಸಂಗೀತ ಮತ್ತೆ ಮತ್ತೆ ಪ್ರಸಾರವಾಗುತ್ತಿದೆ. ಇದು ಈ ಸಂಸ್ಥೆಗೆ ಎದುರಾದ ಹೊಸ ಸಮಸ್ಯೆ. ಉಪಗ್ರಹ ಟಿ.ವಿ. ವಾಹಿನಿಗಳೂ ಹೊಸ ಸವಾಲುಗಳಾಗಿ ಪರಿಣಮಿಸಿವೆ. ಅದನ್ನು ಎದುರಿಸಿ ತನ್ನ ಸದಸ್ಯರ ಹಕ್ಕುಗಳನ್ನು ಕಾಪಾಡುವಲ್ಲಿ ಐಪಿಆರ್‌ಎಸ್ ನಿರಂತರ ನಿರತವಾಗಿದೆ.

## ಕನ್ನಡ ಚಿತ್ರೋದ್ಯಮದಲ್ಲೊಂದು ಸಹಕಾರ ಸಂಸ್ಥೆ

ಕನ್ನಡ ಚಿತ್ರೋದ್ಯಮದಲ್ಲಿ ಸಹಕಾರ ಸಂಸ್ಥೆಯೊಂದರ ಸ್ಥಾಪನೆಯ ಕನಸು ನನಸಾದುದು ಕಳೆದ ಶತಮಾನದ ಅಂತ್ಯದಲ್ಲಿ. ಆ ಮೊದಲು ಅಂತಹ ಸಂಸ್ಥೆಯನ್ನು ಸ್ಥಾಪಿಸಲು ಉದ್ಯಮದ ಹಲವರು ನಡೆಸಿದ ಹಲವು ಪ್ರಯತ್ನಗಳು ಫಲಕಾರಿಯಾಗಿರಲಿಲ್ಲ. ಎಪ್ಪತ್ತರ ದಶಕದ ಸುಮಾರಿನಿಂದಲೂ ಅಲ್ಲೊಂದು ಇಲ್ಲೊಂದು ಪ್ರಯತ್ನಗಳು ನಡೆದವು. ಆ ಪ್ರಯತ್ನಗಳೆಲ್ಲವೂ ಹಲವರು ಒಂದುಗೂಡಿ ಚಿತ್ರ ಮಾಡುವುದಕ್ಕಷ್ಟೇ ಸೀಮಿತವಾದುದಾಗಿತ್ತು. ಸಹಕಾರ ಚಿತ್ರಸುಧಾ ಅಂತಹ ಪ್ರಯತ್ನಗಳಲ್ಲಿ ಒಂದು. ಕೇವಲ ಪ್ರಚಾರವಷ್ಟರಲ್ಲೇ ಪ್ರಯತ್ನ ಹಾದಿ ಬದಲಿಸಿತು. ನೂರು ಮಂದಿ ಒಕ್ಕೂಟ ತಲಾ ಸಮಾನ ಬಂಡವಾಳ ಹೂಡಿ ಚಿತ್ರನಿರ್ಮಾಣ ಮಾಡಿದುದು ಇನ್ನೊಂದು ಪ್ರಯತ್ನ. ಬಿಡುಗಡೆಯ ನಂತರ ಅದಕ್ಕಾಗಿ ಕಂಕಣ ಕಟ್ಟಿದ್ದವರು ಬೇರೆಬೇರೆಯಾಗಿ ಮತ್ತೆ ಸಾಮೂಹಿಕ ಪ್ರಯತ್ನ ಮಾಡಲಿಲ್ಲ. ತೆರೆಯ ಹಿಂದಿನ ದಶಮರು ಕೂಡಿ ಚಿತ್ರ ಮಾಡಿ, ಬಿಡುಗಡೆಯ ನಂತರ ಪರಸ್ಪರ ದೂರ ಸರಿದುದು ಮತ್ತೊಂದು ಪ್ರಯತ್ನದ ವೈಫಲ್ಯ.




(ಚಿತ್ರ ೫) ರಾಜ್ಯದಲ್ಲಿಯೇ ಪ್ರಥಮ 'ಕರ್ನಾಟಕ ಚಲನಚಿತ್ರೋದ್ಯಮ ಸಹಕಾರ ಸಂಘ'ದ ಉದ್ಘಾಟನಾ ಸಮಾರಂಭದಲ್ಲಿ ಆಡಳಿತ ನಿರ್ದೇಶಕ ಆರ್.ಲಕ್ಷ್ಮಣ್ ಸಂಘದ ಧ್ಯೇಯೋದ್ದೇಶಗಳ ಪರಿಚಯ ಮಾಡಿಕೊಡುತ್ತಿದ್ದಾರೆ. ಸಂಘದ ಅಧ್ಯಕ್ಷ ಕೆ.ಸಿ.ಎನ್.ಚಂದ್ರಶೇಖರ್ (ವಾಣಿಜ್ಯ ಮಂಡಳಿ ಅಧ್ಯಕ್ಷರೂ ಕೂಡ), ನಿರ್ಮಾಪಕ ಸಂಘದ ಅಧ್ಯಕ್ಷ ಸಿ.ವಿ.ಎಲ್.ಶಾಸ್ತ್ರಿ, ಉದ್ಘಾಟಿಸಿದ ರಾಜ್ಯದ ವಾರ್ತಾ ಮಂತ್ರಿ ಪ್ರೊ|ಬಿ.ಕೆ.ಚಂದ್ರಶೇಖರ್

ಕರ್ನಾಟಕದಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಚಿತ್ರಮಂದಿರಗಳಿಲ್ಲದೆ, ಎಷ್ಟೋ ಕನ್ನಡ ಚಿತ್ರಗಳು ಗ್ರಾಮಾಂತರಗಳಲ್ಲಿ ಪ್ರದರ್ಶನ ಕಾಣದೇ ಹೋಗುತ್ತಿರುವ ಅಪಾಯವನ್ನು ತಪ್ಪಿಸಲು ಗ್ರಾಮಾಂತರ ಪ್ರದೇಶಗಳಲ್ಲಿ ಚಿತ್ರಮಂದಿರಗಳ ನಿರ್ಮಾಣವನ್ನು ಪ್ರೋತ್ಸಾಹಿಸುವುದು, ಚಿತ್ರಮಂದಿರಗಳ ನಿರ್ಮಾಣಕ್ಕೆ ಅಡ್ಡಗಾಲಾಗಿರುವ ಸರ್ಕಾರದ ನಾಲ್ಕು ದಶಕಗಳಷ್ಟು ಹಳೆಯದಾದ ಕಾನೂನುಗಳನ್ನು ಪ್ರಸಕ್ತ ಸ್ಥಿತಿಗನುಗುಣವಾಗಿ ಮಾರ್ಪಡಿಸಲು ಸರ್ಕಾರವನ್ನು ಒತ್ತಾಯಿಸುವುದು, ರಾಜ್ಯದಲ್ಲಿನ ಚಿತ್ರಮಂದಿರಗಳು ಅಗತ್ಯ ಸಲಕರಣೆಗಳನ್ನು ಹೊಂದಲು ಸಾಲ ಸೌಲಭ್ಯಗಳನ್ನು ಒದಗಿಸುವುದು, ಚಿತ್ರನಿರ್ಮಾಣಕ್ಕೆ ಸಾಲ ಸೌಲಭ್ಯ ಒದಗಿಸುವುದು, ತಾಂತ್ರಿಕ ವರ್ಗದವರಿಗೆ ವಿಶೇಷ ಪರಿಣತಿ ಪಡೆಯಲು ನೆರವಾಗುವುದು, ಚಿತ್ರೋದ್ಯಮ ಹಾಗೂ ಸರ್ಕಾರದ ನೆರವಿನಿಂದ ಚಿತ್ರನಗರಿ ಸ್ಥಾಪನೆ ಪ್ರಯತ್ನದಲ್ಲಿ ನೆರವಾಗುವುದು, ಪ್ರಸಕ್ತ ಚಾಲ್ತಿಯಲ್ಲಿರುವ ಸಂಚಾರಿ ಚಿತ್ರಮಂದಿರಗಳು ಅರೆಖಾಯಂ ಚಿತ್ರಮಂದಿರಗಳಾಗಿ ಪರಿವರ್ತಿತಗೊಳ್ಳಲು ಅಗತ್ಯ ಸಹಾಯ ಮಾಡುವುದು, ಚಿತ್ರಗಳ ತಯಾರಿಕಗೆ ಅಗತ್ಯವಾದ ಕಚ್ಚಾ ಫಿಲಮ್, ಸೌಂಡ್, ಫೋಟೋಗ್ರಫಿಗೆ ಸಂಬಂಧಿಸಿದ ಸಾಮಗ್ರಿಗಳು, ಮೇಕಪ್‌ಗೆ ಅಗತ್ಯ ಸಾಮಗ್ರಿಗಳು, ಚಿತ್ರಮಂದಿರಗಳಲ್ಲಿನ ಯಂತ್ರಗಳ ಬಿಡಿಭಾಗಗಳು ಮತ್ತು ಕಾರ್ಬನ್‌ಗಳನ್ನು ದಾಸ್ತಾನು ಮಾಡಿ ಸರಬರಾಜು ಮಾಡುವುದು ಅಲ್ಲದೆ, ಚಿತ್ರ ಬಿಡುಗಡೆ ಸಮಯದಲ್ಲಿ ವಿತರಕರು ಎದುರಿಸಬಹುದಾದ ಆರ್ಥಿಕ ಅಡಚಣೆಯನ್ನು ಪರಿಹರಿಸುವುದು - ಈ ನಿಟ್ಟಿನಲ್ಲಿ ಕೆಲಸ ಮಾಡುವ ತನ್ನದೇ ಆದ ಸಹಕಾರ ಸಂಘವೊಂದರ ಅವಶ್ಯಕತೆ ಚಿತ್ರೋದ್ಯಮಕ್ಕಿದ್ದಿತ್ತು.

ನಿರ್ಮಾಪಕ ಆರ್.ಲಕ್ಷ್ಮಣ್ ಈ ದಿಸೆಯಲ್ಲಿ ಚಿಂತನೆ ನಡೆಸಿ ಕಾರ್ಯಪ್ರವೃತ್ತರಾಗಿ ಉದ್ಯಮದ ಅನೇಕರೊಂದಿಗೆ ಸಮಾಲೋಚಿಸಿ, ಉದ್ಯಮಿಗಳ ಸಹಕಾರದ ಪೂರ್ಣ ಭರವಸೆ ಪಡೆದರು. ಅಂತಹ ಸಂಸ್ಥೆಯೊಂದರ ರೂಪುರೇಷೆ ಸಿದ್ಧಗೊಳಿಸಿದರು. ಉದ್ಯಮದ ಎಲ್ಲ ವಲಯಗಳ ಪ್ರತಿಷ್ಠಿತರ ಸಹಕಾರದಿಂದ ೧೯೯೯ರಲ್ಲಿ 'ಕರ್ನಾಟಕ ಚಲನಚಿತ್ರೋದ್ಯಮ ಸಹಕಾರ ಸಂಘ (ನಿಯಮಿತ)'ವನ್ನು ಸರ್ಕಾರದ ಸಹಕಾರ ಸಂಸ್ಥೆಗಳ ನಿಯಮಾವಳಿಯನ್ವಯ ನೋಂದಾವಣೆ ಮಾಡಿಸಿದರು.

೧೯೯೯ನೇ ನವೆಂಬರ್ ೨೭ರಂದು ರಾಜ್ಯದ ವಾರ್ತಾ ಮಂತ್ರಿಗಳಾದ ಪ್ರೊ|ಬಿ.ಕೆ.ಚಂದ್ರಶೇಖರ್ ಅವರು ಉದ್ಘಾಟಿಸಿದ ಕರ್ನಾಟಕ ಚಲನಚಿತ್ರೋದ್ಯಮ ಸಹಕಾರ ಸಂಘ ಭಾರತದಲ್ಲಿಯೇ ಪ್ರಪ್ರಥಮ ಸಹಕಾರ ಸಂಘ. ಈ ಸಂಸ್ಥೆ ಉಳಿದೆಲ್ಲ ಭಾಷೆಯ ಚಿತ್ರೋದ್ಯಮಕ್ಕೂ ಮಾದರಿಯಾಯಿತು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಸಹಕಾರ ಪಡೆದ ಈ ಸಂಸ್ಥೆಯ ಪ್ರಥಮ ಅಧ್ಯಕ್ಷರು ವಾಣಿಜ್ಯ ಮಂಡಳಿಯ ಅಧ್ಯಕ್ಷರಾದ ಕ.ಸಿ.ಎನ್.ಚಂದ್ರಶೇಖರ್. ನಿರ್ಮಾಪಕ ಜೆ.ಚಂದೂಲಾಲ್ ಜೈನ್

ಉಪಾಧ್ಯಕ್ಷರು. ನಿರ್ಮಾಪಕ ಆರ್.ಲಕ್ಷ್ಮಣ್ ಅವರೇ ಆಡಳಿತ ನಿರ್ದೇಶಕರಾಗಿದ್ದು, ನಿರ್ಮಾಪಕರಾದ ಪಾರ್ವತಮ್ಮ ರಾಜಕುಮಾರ್, ನಿರ್ಮಾಪಕ-ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ (ರವೀ), ನಿರ್ಮಾಪಕ-ವಿತರಕ ಸಿ.ವಿ.ಎಲ್.ಶಾಸ್ತ್ರಿ, ನಿರ್ಮಾಪಕ ಟಿ.ಎಸ್.ನರಸಿಂಹನ್, ನಿರ್ಮಾಪಕ-ವಿತರಕ ಆರ್.ಎಫ್.ಮಾಣಿಕ್‌ಚಂದ್, ನಿರ್ಮಾಪಕ ಬಸಂತಕುಮಾರ್ ಪಾಟೀಲ್, ನಿರ್ಮಾಪಕ ಜಿ.ಆರ್.ಶ್ರೀನಿವಾಸ್, ನಿರ್ಮಾಪಕ ತಾರೇ ಜಯಮಾಲಾ, ಪ್ರದರ್ಶಕ ಆರ್.ವಿ.ಗಣೇಶ್ ಹಾಗೂ ವಕೀಲರಾದ ಬಿ.ಜಿ.ರಾಜಶೇಖರ್ ಮಂಡಳಿಯ ಸದಸ್ಯರು.

## ಛಾಯಾಗ್ರಾಹಕರ ಸಂಘಟನೆ

ಚಲನಚಿತ್ರ ಕ್ಷೇತ್ರದಲ್ಲಿ ನಿರ್ದೇಶನದಷ್ಟೇ ಮಹತ್ವವಾದ ವಿಭಾಗ ಛಾಯಾಗ್ರಹಣ. ವ್ಯಾಪಾರಿ ಚಿತ್ರವಾಗಿರಲಿ ಅಥವಾ ಕಲಾತ್ಮಕ ಚಿತ್ರವಾಗಿರಲಿ ಛಾಯಾಗ್ರಹಣ ಕಲೆ ಒಂದು ಸೃಜನಾತ್ಮಕ, ಪ್ರಭಾವೀ ಕಲಾಪ್ರಕಾರವಾಗಿದೆ. ನಿರ್ದೇಶಕನ ಕಲ್ಪನೆಯನ್ನು ಛಾಯಾಚಿತ್ರವಾಗಿ ಸೃಷ್ಟಿಸಿಕೊಡುವಲ್ಲಿ ಛಾಯಾಗ್ರಾಹಕನ ಹೊಣೆ ಗುರುತರವಾದುದು. ಭಾರತೀಯ ಚಿತ್ರರಂಗದಲ್ಲಿ ಛಾಯಾಗ್ರಾಹಕರ ಕೊಡುಗೆಯೂ ಅನನ್ಯ. ಕನ್ನಡದಲ್ಲಿಯೂ ಸಹ ಛಾಯಾಗ್ರಹಣ ಕಲೆ ಯಾವುದೇ ಭಾಷೆಯ ಛಾಯಾಗ್ರಹಣಕ್ಕಿಂತ ಕಡಿಮೆಯೇನಲ್ಲ. ಛಾಯಾಗ್ರಾಹಕರು ತಮ್ಮ ಕೆಲಸದ ಪೂರ್ಣ ಜವಾಬ್ದಾರಿಯನ್ನು ನಿರ್ವಹಿಸಲು, ಆರ್ಥಿಕವಾಗಿ ಹಾಗೂ ಅವರ ನ್ಯಾಯಯುತ ಹಕ್ಕುಗಳನ್ನು ರಕ್ಷಿಸಲು ಅವರದೇ ಆದ ಸಂಘಟನೆಯೊಂದು ಪಶ್ಚಿಮ ಭಾರತದಲ್ಲಿ ಆರಂಭವಾಯಿತು. ಆ ಸಂಘಟನೆಯ ಸದಸ್ಯರಾದ ಛಾಯಾಗ್ರಾಹಕರು ತಾವು ಕೆಲಸ ಮಾಡಿದ ಚಿತ್ರಗಳ ಶೀರ್ಷಿಕೆಗಳಲ್ಲಿ ತಮ್ಮ ಹೆಸರಿನ ಪಕ್ಕದಲ್ಲಿ ಡಬ್ಲ್ಯು.ಐ.ಸಿ.ಎ. ಎಂದು ಹಾಕಿಕೊಂಡು ತಾವು ಸದಸ್ಯತ್ವ ಪಡೆದ ಸಂಘಟನೆಯ ಮೂಲಕ ಗುರುತಿಸಿಕೊಳ್ಳುತ್ತಿದ್ದರು.

ಮದರಾಸಿನಲ್ಲಿ ದಕ್ಷಿಣ ಭಾರತದ ಭಾಷೆಗಳಾದ ತಮಿಳು, ತೆಲುಗು, ಕನ್ನಡ ಮತ್ತು ಮಲೆಯಾಳಂ ಚಿತ್ರಗಳ ನಿರ್ಮಾಣ ಭರದಿಂದ ನಡೆದಾಗ ದಾಕ್ಷಿಣಾತ್ಯರೂ ಛಾಯಾಗ್ರಹಣ ಕ್ಷೇತ್ರದಲ್ಲಿ ತಮ್ಮ ಕೃಷಿಯನ್ನಾರಂಭಿಸಿದರು. ದಕ್ಷಿಣ ಭಾರತದವರದೇ ಆದ ವಾಣಿಜ್ಯ ಮಂಡಳಿ, ನಿರ್ಮಾಪಕರ ಒಕ್ಕೂಟ, ನಿರ್ದೇಶಕರ ಸಂಘ, ಸಂಗೀತ ನಿರ್ದೇಶಕರು ಮತ್ತು ಸಂಗೀತಗಾರರ ಸಂಘ ಆರಂಭವಾದಂತೆಯೇ ದಕ್ಷಿಣ ಭಾರತದಲ್ಲಿನ ಛಾಯಾಗ್ರಾಹಕರ ಸಂಘಟನೆಯೂ ರೂಪುಗೊಂಡಿತು. ಈ ಸಂಘಟನೆಯ ಸದಸ್ಯರು ತಮ್ಮ ಹೆಸರಿನ ನಂತರ ಎಸ್.ಐ.ಸಿ.ಎ. ಸೇರಿಸಿಕೊಳ್ಳುವ ಮೂಲಕ ಗುರುತಿಸಿಕೊಳ್ಳತೊಡಗಿದರು.

ಕರ್ನಾಟಕ ಸರ್ಕಾರದ ಪ್ರೋತ್ಸಾಹ ಹಾಗೂ ಸವಲತ್ತುಗಳಿಂದಾಗಿ ಕನ್ನಡ ಚಿತ್ರರಂಗ ಕನ್ನಡ ನೆಲದಲ್ಲಿಯೇ ನೆಲೆಯೂರಿದಂತೆ, ಕನ್ನಡ ಚಿತ್ರಗಳಲ್ಲಿ ಕೆಲಸ ಮಾಡುವ ಬಹುತೇಕ ಛಾಯಾಗ್ರಾಹಕರು ತಮ್ಮ ನೆಲೆಯನ್ನು ಕರ್ನಾಟಕಕ್ಕೆ ಬದಲಿಸಿದರು. ಉದ್ಯಮ ಇಲ್ಲಿ ಬೆಳೆದಂತೆ ಕನ್ನಡ ಚಿತ್ರಗಳಲ್ಲಿ ಕೆಲಸ ಮಾಡುವ ಛಾಯಾಗ್ರಾಹಕರದೇ ಪ್ರತ್ಯೇಕ ಸಂಘಟನೆ ಅನಿವಾರ್ಯವಾಯಿತು. ಹೀಗೆ ಆರಂಭವಾದುದೇ 'ಕರ್ನಾಟಕ ಚಲನಚಿತ್ರ ಛಾಯಾಗ್ರಾಹಕರ ಸಂಘ'.

ಚಲನಚಿತ್ರ ಛಾಯಾಗ್ರಾಹಕರನ್ನಷ್ಟೇ ಅಲ್ಲದೆ ಟಿ.ವಿ., ವೀಡಿಯೋ, ಕಿರುಚಿತ್ರ ಹಾಗೂ ಸಾಕ್ಷ್ಯಚಿತ್ರಗಳ ಛಾಯಾಗ್ರಾಹಕರನ್ನೂ ಸದಸ್ಯರನ್ನಾಗಿ ಹೊಂದಿರುವ ಈ ಸಂಸೆ ತನ್ನ ಸದಸ್ಯರಲ್ಲಿ ಸ್ವಯಂ ಶಿಸ್ತು ಮೂಡಿಸುವ ಹಾಗೂ ಛಾಯಾಗ್ರಾಹಕರ ಹಿತ ಸಂರಕ್ಷಿಸುವ ಗುರಿ ಹೊತ್ತಿದೆ. ಛಾಯಾಗ್ರಹಣ ಕಲೆಗೆ ಸಂಬಂಧಿಸಿದಂತೆ ಗ್ರಂಥ ಭಂಡಾರವೊಂದನ್ನು ಹೊಂದುವ ಹೆಬ್ಬಯಕೆ ಹೊಂದಿರುವ ಈ ಸಂಸ್ಥೆಯು ಪರಸ್ಪರ ವಿಚಾರ ವಿನಿಮಯ, ವಿಚಾರ ಸಂಕಿರಣ ಹಾಗೂ ಗೋಷ್ಠಿಗಳ ಮೂಲಕ ತಮಗೆ ಸಂಬಂಧಿಸಿದ ಕಲೆಯ ಪ್ರಕಾರದಲ್ಲಿ ನಡೆಯುವ ಆವಿಷ್ಕಾರ-ತಾಂತ್ರಿಕತೆಯ ಮುನ್ನೋಟಗಳ ಬಗ್ಗೆ ಸದಸ್ಯರಲ್ಲಿ ಅರಿವು ಮೂಡಿಸುವ ಗುರಿಯನ್ನೂ ಹೊಂದಿದೆ.

ಕನ್ನಡದ ಪ್ರಸಿದ್ಧ ಛಾಯಾಗ್ರಹಣ ನಿರ್ದೇಶಕ ಡಿ.ವಿ.ರಾಜಾರಾಂ ಈ ಸಂಘಟನೆಯ ಅಧ್ಯಕ್ಷರು. ಪದಾಧಿಕಾರಿಗಳಾಗಿ ಎಸ್.ರಾಮಚಂದ್ರ (ಉಪಾಧ್ಯಕ್ಷರು), ವಿ.ಚಂದ್ರಶೇಖರ್ (ಪ್ರಧಾನ ಕಾರ್ಯದರ್ಶಿಗಳು), ಬಿ.ಎಸ್.ಶಾಸ್ತ್ರಿ (ಕಾರ್ಯದರ್ಶಿ) ಮತ್ತು ಬಿ.ಎಸ್.ಬಸವರಾಜ್ (ಖಜಾಂಚಿ) ಅವರಲ್ಲದೆ, ಜೆ.ಜಿ.ಕೃಷ್ಣ, ಆರ್.ಮಂಜುನಾಥ್, ಜಿ.ಎಸ್.ಭಾಸ್ಕರ್, ಮನೋಹರ, ಮಲ್ಲಿಕಾರ್ಜುನ, ಕೆ.ವಿ.ನಾಗರಾಜ್ ಆದವಾನಿ, ಎ.ಸಿ.ಮಹೇಂದ್ರನ್, ರವಿ ಸುವರ್ಣ ಮತ್ತು ಹೆಚ್.ನರಸಿಂಹಮೂರ್ತಿ ೨೦೦೦ನೇ ವರ್ಷದಲ್ಲಿ ಕಾರ್ಯಕಾರಿ ಸಮಿತಿ ಸದಸ್ಯರುಗಳಾಗಿ ಸಂಘಟನೆಯ ಚುಕ್ಕಾಣಿ ಹಿಡಿದಿದ್ದರು. ಛಾಯಾಗ್ರಾಹಕ ಆರ್.ಸಿ.ಮಾಪಾಕ್ಷಿ ಈ ಮೊದಲು ಪ್ರಧಾನ ಕಾರ್ಯದರ್ಶಿಗಳಾಗಿ ಕರ್ತವ್ಯ ನಿರ್ವಹಿಸಿದರು.

ಚಲನಚಿತ್ರ, ಕಿರುಚಿತ್ರ, ಸಾಕ್ಷ್ಯಚಿತ್ರ, ವೀಡಿಯೋ ಹಾಗೂ ಟಿ.ವಿ. ಜಾಲಗಳಂತಹ ಕಿರುತೆರೆಯ ಛಾಯಾಗ್ರಾಹಕರನ್ನೂ ಒಳಗೊಂಡಿರುವ ಈ ಸಂಸ್ಥೆ ಸಿನಿಮಾಟೋಗ್ರಫಿ ಕಲೆಯ ಬೆಳವಣಿಗೆಗಾಗಿ ಟೊಂಕ ಕಟ್ಟಿದೆ. ಬೆಂಗಳೂರಿನ ಮಹಾಲಕ್ಷ್ಮಿ ಬಡಾವಣೆಯಲ್ಲಿ ಈ ಸಂಸ್ಥೆಯ ಕಚೇರಿ ಇದೆ.

## ಸಂಕಲನಕಾರರ ಸಂಘಟನೆ

ಕನ್ನಡ ಚಿತ್ರಗಳ ತಯಾರಿಕಾ ಕೇಂದ್ರವಾಗಿ ಮದ್ರಾಸು ಇದುದರಿಂದ ಆಗ ಕನ್ನಡ ಚಿತ್ರಗಳಲ್ಲಿ ಸಂಕಲನ ಕಾರ್ಯವನ್ನು ನಡೆಸುತ್ತಿದ್ದವರ ವಾಸ್ತವ್ಯ ಕೂಡ ಮದ್ರಾಸೇ ಆಗಿದ್ದಿತು. ಅಲ್ಲದೆ ಕನ್ನಡಿಗರಾದ ಸಂಕಲನಕಾರರೂ ಕೂಡ ಬೆರಳೆಣಿಕೆಯಷ್ಟು ಮಂದಿ ಮಾತ್ರ ಇದ್ದರು. ಕನ್ನಡೇತರರೇ ಬಹುಪಾಲು ಕನ್ನಡ ಚಿತ್ರಗಳ ಸಂಕಲನದ ಹೊಣೆ ಹೊತ್ತು ನಿರ್ವಹಿಸುತ್ತಿದ್ದರು. ಆ ಸಮಯದಲ್ಲಿ ದಕ್ಷಿಣ ಭಾರತದ ಚಲನಚಿತ್ರ ತಂತ್ರಜ್ಞರ ಸಂಘ ಮದರಾಸಿನಲ್ಲಿ ಪ್ರಭಾವೀ ಸಂಘಟನೆಯಾಗಿತ್ತು. ಮದರಾಸಿನಲ್ಲಿಯೇ ಕನ್ನಡ ಚಿತ್ರಗಳು ತಯಾರಾಗುತ್ತಿದ್ದುದರಿಂದ, ಆ ಚಿತ್ರಗಳ ಸಂಕಲನಕಾರರಲ್ಲಿ ಬಹಳಷ್ಟು ಮಂದಿ ಕನ್ನಡೇತರರೇ ಆಗಿದ್ದುದರಿಂದ ಮದರಾಸಿನಲ್ಲಿದ್ದ ಸಂಘಟನೆಯಲ್ಲಿಯೇ ಸೇರಿಕೊಂಡಿದ್ದರು.

ಕನ್ನಡ ಚಿತ್ರರಂಗವು ಕನ್ನಡದ ನೆಲದಲ್ಲಿಯೇ ನೆಲೆಯೂರಿ ಕನ್ನಡ ಚಿತ್ರಸೃಷ್ಟಿ ಕರ್ನಾಟಕದಲ್ಲಿಯೇ ನಡೆಯತೊಡಗಿದ ನಂತರದಲ್ಲಿಯೂ ಸಂಕಲನಕಾರರು ಕೆಲಸವಿದ್ದಾಗ ಮದರಾಸಿನಿಂದ ಬಂದುಹೋಗುವುದೇ ಪರಿಪಾಠವಾಯಿತು. ಕನ್ನಡದವರೇ ಆದ ಸಂಕಲನಕಾರರು ಮಾತ್ರ ಇಲ್ಲಿ ಉಳಿದಿದ್ದರಾದರೂ ಅವರ ಪ್ರತಿಭೆಯನ್ನು ಗುರುತಿಸಿದ ನೆರೆಯ ಭಾಷಾ ಚಿತ್ರರಂಗದವರು ತಮ್ಮ ಚಿತ್ರಗಳಲ್ಲಿ ಅವಕಾಶ ಕಲ್ಪಿಸಿದ ಕಾರಣದಿಂದಾಗಿ ಅವರು ಮದರಾಸಿಗೆ ಹೋಗಿ ಬಂದು ಮಾಡುವಂತಾಯಿತು. ಹೀಗಾಗಿ ಸಂಕಲನಕಾರರ ಸಂಘಟನೆ ಕರ್ನಾಟಕದಲ್ಲಿ ರೂಪುಗೊಳ್ಳುವುದು ಕಷ್ಟಸಾಧ್ಯವಾಗಿತ್ತು.

ಸಂದರ್ಭ ಹಾಗಿದ್ದಾಗಲೂ ಕರ್ನಾಟಕದಲ್ಲಿ ಚಲನಚಿತ್ರ ಸಂಕಲನಕಾರರ ಸಂಘವನ್ನು ಆರಂಭಿಸುವ ಪ್ರಯತ್ನವೊಂದನ್ನು ಕೆಲವರು ಉತ್ಸಾಹಿಗಳು ನಡೆಸಿದರು. ನಿರ್ದೇಶಕ-ಲೇಖಕ-ಸಂಕಲನಕಾರ ಕೆ.ವಿ.ರಾಜು ಅವರ ಅಧ್ಯಕ್ಷತೆಯಲ್ಲಿ 'ಕರ್ನಾಟಕ ಚಲನಚಿತ್ರ ಸಂಕಲನಕಾರರ ಸಂಘ' ಆರಂಭವಾಯಿತು. ಆದರೆ ಅದು ಹೆಚ್ಚು ಕಾಲ ಉಳಿಯಲಿಲ್ಲ. ಬಹುಬೇಗನೆ ಸಂಘವು ತನ್ನ ಚಟುವಟಿಕೆಯನ್ನು ಸ್ಥಗಿತಗೊಳಿಸಿತು.

## ಚಲನಚಿತ್ರ ಪತ್ರಿಕಾ ಪ್ರಚಾರಕರ ಸಂಘ

ಯಾವುದೇ ಚಿತ್ರಕ್ಕೆ ಪ್ರಚಾರ ಅಗತ್ಯ. ಅದರಲ್ಲಿಯೂ ಪತ್ರಿಕೆಗಳ ಮೂಲಕ ದೊರೆಯುವ ಪ್ರಚಾರ ಅತ್ಯಂತ ಮುಖ್ಯ. ಕನ್ನಡದಲ್ಲಿ ಚಿತ್ರದ ತಯಾರಿಕೆಯ ಬಗ್ಗೆ ನಿರ್ಮಾಪಕರು ಹೊಳಹು ಹಾಕಿಕೊಂಡಾಗಿನಿಂದ ಚಿತ್ರ ಬಿಡುಗಡೆಯವರೆಗೆ ಚಿತ್ರವನ್ನು ಸುದ್ದಿಯಲ್ಲಿಡುವವರು ಪತ್ರಿಕಾ ಸಂಪರ್ಕಕಾರರು (ಪಿ.ಆರ್.ಓ).

ನಿರ್ಮಾಪಕರು ಚಿತ್ರದ ತಯಾರಿಕೆಯ ಬಗ್ಗೆ ನಿರ್ಧಾರ ಮಾಡಿದೊಡನೆ ಈ ಪತ್ರಿಕಾ ಸಂಪರ್ಕಕಾರರ ಕೆಲಸ ಆರಂಭವಾಗುತ್ತದೆ. ಚಿತ್ರದ ಹಾಡುಗಳ ಧ್ವನಿಮುದ್ರಣ, ಮುಹೂರ್ತ ಸಮಾರಂಭ, ಚಿತ್ರೀಕರಣದ ಪ್ರಗತಿ, ಚಿತ್ರದ ತಯಾರಿಕೆ ಮುಕ್ತಾಯ, ಸೆನ್ಸಾರ್, ಚಿತ್ರದ ಬಿಡುಗಡೆ, ಚಿತ್ರದ ಹಾಡುಗಳ ಕ್ಯಾಸೆಟ್ ಬಿಡುಗಡೆ - ಹೀಗೆ ಪ್ರತಿಯೊಂದು ಹಂತದಲ್ಲಿಯೂ ಚಿತ್ರದ ಬಗ್ಗೆ ಸುದ್ದಿ ಹಾಗೂ ಸ್ಥಿರಚಿತ್ರಿಕೆಗಳನ್ನು ಆಯಾ ಸಮಯದಲ್ಲಿ ಪತ್ರಿಕೆಗಳಿಗೆ ಒದಗಿಸುವ, ಚಿತ್ರೀಕರಣ ಸ್ಥಳಗಳಿಗೆ ಪತ್ರಕರ್ತರನ್ನು ಕರೆದೊಯ್ಯುವ ಮೂಲಕ ಸದಾ ಸುದ್ದಿಯಲ್ಲಿಡುತ್ತಿರುವ ಇವರು ಉದ್ಯಮ ಹಾಗೂ ಪತ್ರಿಕೆಗಳ ನಡುವಣ ಸೇತುವಾಗಿ ಕಳೆದೆರಡು ದಶಕಗಳ ಹಿಂದಿನಿಂದ ದುಡಿಯುತ್ತಾ ಬಂದಿದ್ದಾರೆ. ೧೯೯೧ರಲ್ಲಿ ಈ ಉತ್ಸಾಹಿಗಳು ಸಂಘಟಿತರಾಗಿ ರೂಪಿಸಿಕೊಂಡ ಸಂಸ್ಥೆ **'ಕರ್ನಾಟಕ ಚಲನಚಿತ್ರ ಪತ್ರಿಕಾ ಪ್ರಚಾರಕರ್ತರ ಸಂಘ'**.

ನಟ-ಸಂಸದ ಅಂಬರೀಷ್ ಅವರು ಗೌರವ ಅಧ್ಯಕ್ಷರಾಗಿರುವ ಈ ಸಂಘ ಗಾಂಧಿನಗರದ ಜಿಂಕಾ ಪ್ಲಾಜಾ ಆವರಣದಲ್ಲಿ ತನ್ನ ಕಚೇರಿಯನ್ನು ಹೊಂದಿದೆ. ಕಚೇರಿ ಸದಾ ಕಾಲ ಚಟುವಟಿಕೆಯನ್ನು ಹೊಂದಿರುವುದು ಗಮನಾರ್ಹ. ೨೦೦೦ದಲ್ಲಿ ನಾಗೇಂದ್ರ ಸಂಘದ ಅಧ್ಯಕ್ಷರಾಗಿದ್ದು, ವಿಜಯಕುಮಾರ್ ಕಾರ್ಯದರ್ಶಿಯಾಗಿಯೂ, ಡಿ.ವಿ.ಸುಧೀಂದ್ರ ಖಜಾಂಚಿಯಾಗಿಯೂ, ಹರೀಶ್, ರಾಮಕೃಷ್ಣ, ಎಂ.ಜಿ.ಲಿಂಗರಾಜ್, ಬಸವರಾಜ್ ಕಾರ್ಯಕಾರಿ ಸಮಿತಿಯ ಸದಸ್ಯರಾಗಿಯೂ ಇದ್ದಾರಲ್ಲದೆ, ಸಹಾಯಕರ ಪ್ರತಿನಿಧಿಗಳಾಗಿ ವೆಂಕಟೇಶ್, ಬಾಬು ಮತ್ತು ಕಲ್ಲೇಶಿ ಪಾಲ್ಗೊಂಡಿದ್ದಾರೆ.



(ಚಿತ್ರ ೬) ಮೈಸೂರು ವಲಯ ಚಲನಚಿತ್ರ ಹಂಚಿಕೆದಾರರ ಸಂಘ (ರಿ) - ಸಂಘದ ಗೌರವಾಧ್ಯಕ್ಷರಾದ ಕೆ.ಎಸ್.ವೇದನಾರಾಯಣ್, ಕೆ.ಕೃಷ್ಣೇಗೌಡ (ಅಧ್ಯಕ್ಷ), ಹೆಚ್.ಪಿ.ಬಸವರಾಜು (ಉಪಾಧ್ಯಕ್ಷ), ಹೊನ್ನಪ್ಪ (ಕಾರ್ಯದರ್ಶಿ), ಸೋಮು (ಸಹಕಾರ್ಯದರ್ಶಿ), ಪ್ರಕಾಶ್ ಬಾಬು (ಖಜಾಂಚಿ), ರಾಮಣ್ಣ

ಯಶ್‌ಪತಿ (ಅಧ್ಯಕ್ಷರು), ಉಮೇಶ್ ಬಣಕಾರ್ (ಉಪಾಧ್ಯಕ್ಷರು), ಜಿ.ಎಸ್.ನಟರಾಜ್ (ಪ್ರಧಾನ ಕಾರ್ಯದರ್ಶಿ), ಹಿಂದುಶ್ರೀ (ಜಂಟಿ ಕಾರ್ಯದರ್ಶಿ), ಟಿ.ವಿ.ಪಂಚಾಕ್ಷರಿ (ಖಜಾಂಚಿ) ಹಾಗೂ ರಮಣ್ ಕಣಗಾಲ್, ಹೆಚ್.ಎಸ್.ಜೈಕುಮಾರ್, ತುಮಕೂರು ನಾಣಿ, ಬಿ.ಎಸ್.ಶಿವಕುಮಾರ್, ಹೆಚ್.ವಿ.ಪ್ರಕಾಶ್, ಪ್ರೇಮನಾಥ ರೈ (ಕಾರ್ಯಕಾರಿ ಸಮಿತಿ ಸದಸ್ಯರು), ಎಂ.ಎನ್.ಬಾಲಕೃಷ್ಣ (ಕಾನೂನು ಸಲಹೆಗಾರರು) ಮತ್ತು ಅಂಜನಪ್ಪ (ಲೆಕ್ಕ ಪತ್ರ ಪರಿಶೋಧಕರು).

## ವಿತರಕರು - ಪ್ರದರ್ಶಕರ ಸಂಘಟನೆಗಳು

ಕನ್ನಡ ಚಿತ್ರಗಳ ವಿತರಣೆ ಹಾಗೂ ಪ್ರದರ್ಶನಗಳನ್ನು ನಡೆಸುತ್ತಿರುವವರು ರಾಜ್ಯಾದ್ಯಂತ ಜಿಲ್ಲಾಮಟ್ಟಗಳಲ್ಲಿ ತಮ್ಮದೇ ಆದ ಸಂಘಟನೆಗಳನ್ನು ಮಾಡಿಕೊಂಡು ತಮ್ಮ ತಮ್ಮ ವಲಯಗಳ ಹಿತಾಸಕ್ತಿಯ ರಕ್ಷಣೆಗಾಗಿ ದುಡಿಯುತ್ತಿದ್ದಾರೆ.

ಮೈಸೂರಿನ ಹಳ್ಳದಕೇರಿಯಲ್ಲಿರುವ 'ಮೈಸೂರು ವಲಯ ಚಲನಚಿತ್ರ ವಿತರಕರ ಸಂಘ' ಹೆಚ್ಚು ಚಟುವಟಿಕೆಯಿಂದ ಕೂಡಿರುವ ಚಿತ್ರ ಹಂಚಿಕೆದಾರರ ಸಂಘ ಎಂದು ಹೇಳಬಹುದು.

ಆರಂಭದಲ್ಲಿ ಕನ್ನಡ ಚಿತ್ರಗಳು ಬೆಂಗಳೂರಿನಿಂದಲೇ ರಾಜ್ಯಾದ್ಯಂತದ ಚಿತ್ರಮಂದಿರಗಳಿಗೆ ಹಂಚಿಕೆಯಾಗುತ್ತಿದ್ದವು. ನಂತರ ಗದಗ್-ಹುಬ್ಬಳ್ಳಿಯಲ್ಲಿ ಹಂಚಿಕಾ ಕೇಂದ್ರಗಳು ಪ್ರಾರಂಭವಾದವು. ಕ್ರಮೇಣ ರಾಜ್ಯದಲ್ಲಿ ವಲಯಮಟ್ಟದಲ್ಲಿ ಚಿತ್ರ ಹಂಚಿಕಾ ಸಂಸ್ಥೆಗಳು ಆರಂಭವಾದವು. ಮೈಸೂರಿನಲ್ಲಿ ೧೯೪೬ರಲ್ಲಿ, ಮೈಸೂರಿನ ರಾಜಕಮಲ್ ಚಿತ್ರಮಂದಿರದ ಮಾಲೀಕರಾದ ಜಿ.ಬಿ.ನಾಗವರ್ಮ ಅವರ ಭಾವನವರಾದ ಸಿ.ಬಿ.ಎಂ.ಚಂದ್ರಯ್ಯನವರು ಅಶೋಕಾ ರಸ್ತೆಯಲ್ಲಿನ ತಮ್ಮ ಬಣ್ಣದ ಅಂಗಡಿಯಲ್ಲಿ ಹಂಚಿಕಾ ಸಂಸ್ಥೆಯನ್ನು ಪ್ರಥಮವಾಗಿ ಅರಂಭಿಸುವ ಮೂಲಕ ಮೈಸೂರಿನಲ್ಲಿ ಚಿತ್ರ ಹಂಚಿಕಾ ವ್ಯವಸ್ಥೆಗೆ ನಾಂದಿ ಹಾಡಿದರು. ಇವರ ಬಳಿ ಪ್ರತಿನಿಧಿಯಾಗಿದ್ದ ಆರ್.ಜಿ.ಕೇಶವಮೂರ್ತಿಯವರು ೧೯೫೦ರಲ್ಲಿ ಲಲಿತಾ ಮೂವೀಸ್ ಸಂಸ್ಥೆಯನ್ನು ಆರಂಭಿಸಿದರು. ಇವರು ೧೯೬೬ರಲ್ಲಿ ರಾಜಕುಮಾರ್ ಅಭಿನಯದ 'ತೂಗುದೀಪ' ಚಿತ್ರದ ನಿರ್ಮಾಪಕರೂ ಹೌದು. ೧೯೫೬ರಲ್ಲಿ ಆರ್.ಆಂಜನೇಯಲು ಮತ್ತು ಗುರುನಾಥ್ ಅವರೂ, ೧೯೬೦ರಲ್ಲಿ ಕಲ್ಯಾಣ್ ಪಿಕ್ಚರ್ಸ್ ಸಂಸ್ಥೆಯೂ ಮತ್ತು ಶಿವಣ್ಣ, ಕೆ.ರಾಘವೇಂದ್ರರಾವ್ ಮತ್ತು ಕೆ.ಎಸ್.ವೇದನಾರಾಯಣ್ ಅವರ ತ್ರಿಮೂರ್ತಿ ಪಿಕ್ಚರ್ಸ್ ಸಂಸ್ಥೆಯೂ ಚಿತ್ರ ಹಂಚಿಕಾ ಕ್ಷೇತ್ರವನ್ನು ಪ್ರವೇಶಿಸಿದವು. 'ಬೀಗರ ಪಂದ್ಯ' ಚಿತ್ರದಿಂದ ಮೈಸೂರು ವಲಯದಲ್ಲಿ ಶೇಕಡಾವಾರು ಗಳಿಕೆಯ ಅಧಾರದಲ್ಲಿ ವ್ಯಾಪಾರ ಆರಂಭವಾಯಿತು.

೧೯೭೦ರಲ್ಲಿ ಎಸ್.ವಿ.ಸುಬ್ಬರಾವ್, ಕಪಾಲಿ ಕಂಬೈನ್ಸ್‌ನ ಕೆ.ನಾಗೇಶ್ ಮತ್ತು ಸಿದ್ಧರಾಮಪ್ಪ, ಪುಷ್ಪಾಂಜಲಿ ಪಿಕ್ಚರ್ಸ್ ಜಯರಾಮ್ - ಹಂಚಿಕಾ ಸಂಸ್ಥೆಗಳನ್ನಾರಂಭಿಸಿದರು. ಸುಮಾರು ಒಂದು ಸಾವಿರಕ್ಕೂ ಹೆಚ್ಚು ಕನ್ನಡ ಚಿತ್ರಗಳ ವಿತರಣೆ ಮಾಡಿದ ಜಯರಾಮ್ ಅವರು ೧೯೮೨ರಲ್ಲಿ 'ಜೋಡಿ ಜೀವ' ಚಿತ್ರವನ್ನು ಪ್ರಥಮ ಬಾರಿಗೆ ಮೈಸೂರು ವಲಯ (ಮೈಸೂರು, ಮಂಡ್ಯ, ಹಾಸನ ಮತ್ತು ಕೊಡಗು ಜಿಲ್ಲೆಗಳು ಈ ವಲಯದ ವ್ಯಾಪ್ತಿಯಲ್ಲಿದೆ) ವಿತರಣೆಗೆ ಪಡೆದರು. ಈ ಚಿತ್ರದ ನಂತರವೇ ಬೇರೆ ಕನ್ನಡ ಚಿತ್ರಗಳು ಮೈಸೂರಿನ ಹಂಚಿಕಾ ಸಂಸ್ಥೆಗಳಿಂದ ಬಿಡುಗಡೆಯಾಗತೊಡಗಿದವು. ಎಂಬತ್ತರ ದಶಕದಲ್ಲಿ ಡಿ.ಆರ್.ನಟರಾಜನ್ ಅವರು ಶ್ರೀವೇಲು ಮುರುಗನ್ ಫಿಲಂಸ್, ಎಸ್.ಎನ್.ಪಾರ್ಥನಾಥ್ ಅವರು ಶ್ರೀಧರ ಕೃಪಾ ಕಂಬೈನ್ಸ್, ಎ.ಎಲ್.ಅಬ್ಬಾಯಿನಾಯ್ಡು, ಎಸ್.ವಿ.ರಾಜೇಂದ್ರಸಿಂಗ್ ಬಾಬು, ಎ.ಬಿ.ಕೆಂಪಗಣ್ಣಶೆಟ್ಟಿ (ಇವರು ಪ್ರದರ್ಶಕರೂ ಕೂಡ), ಇತರ ಸಂಸ್ಥೆಗಳು ಹಾಗೂ ದೀಪಾ ಫಿಲಮ್ಸ್, ಲಕ್ಷ್ಮೀ ಪ್ರಸಾದ್ ಫಿಲಮ್ಸ್, ಮಹದೇವಿ ಫಿಲಮ್ಸ್, ಶಾಸ್ತ್ರಿ ಮೂವೀ ಡಿಸ್ಟ್ರಿಬ್ಯೂಟರ್ಸ್ ಹಂಚಿಕಾ ಸಂಸ್ಥೆಗಳು ಪ್ರಾರಂಭವಾದವು. ೧೯೬೫ರಲ್ಲಿ ಸಂಚಾರಿ ಚಿತ್ರಮಂದಿರವನ್ನು ಆರಂಭಿಸಿ ನಡೆಸುತ್ತಿದ್ದ ಹೆಚ್.ಆರ್.ಹೊನ್ನಪ್ಪನವರು (ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಕಾರ್ಯಕಾರಿ ಸಮಿತಿಯಲ್ಲಿ

## ಚಲನಚಿತ್ರ ಜಾಹಿರಾತುದಾರರ ಸಂಘ

ಚಲನಚಿತ್ರಗಳ ಜಾಹಿರಾತುಗಳನ್ನು ಪತ್ರಿಕೆಗಳಿಗೆ ಕಳುಹಿಸಿ ಕೊಡುವುದು, ಚಿತ್ರಗಳಿಗೆ ಸೂಕ್ತ ಪ್ರಚಾರವನ್ನು ಒದಗಿಸುವುದು ಅಡ್ವರ್ಟೈಸಿಂಗ್ ಏಜೆನ್ಸಿಗಳ ಜವಾಬ್ದಾರಿ. ಕನ್ನಡದಲ್ಲಿ ಈ ಪ್ರಚಾರಕರ್ತರು ಹಿಂದೆ ಇದ್ದುದು ಕೇವಲ ಕೆಲವೇ ಮಂದಿ; ಈಗ ಇರುವುದು ಕೂಡ ಕೇವಲ ಬೆರಳೆಣಿಕೆಯಷ್ಟೇ ಸಂಸ್ಥೆಗಳು. ಇರುವ ಅಷ್ಟೇ ಸಂಸ್ಥೆಗಳು ಸಂಘಟಿತರಾಗಿ ಸಂಘವೊಂದನ್ನು ರಚಿಸಿಕೊಂಡಿದ್ದಾರೆ. ಬೆಂಗಳೂರಿನ ಗಾಂಧಿನಗರದಲ್ಲಿರುವ 'ಕರ್ನಾಟಕ ಚಲನಚಿತ್ರ ಜಾಹಿರಾತುದಾರರ ಸಂಘ'ವೇ ಅದು. ಇತ್ತೀಚೆಗೆ ರೂಪುಗೊಂಡ ಈ ಸಂಘದ ಅಧ್ಯಕ್ಷರು ಪ್ರವೀಣ್ ಜಾಹಿರಾತು ಸಂಸ್ಥೆಯ ಎಂ.ಎಸ್.ಶ್ರೀನಿವಾಸ್. ಉಪಾಧ್ಯಕ್ಷರಾಗಿ ಎಂಪಿಜಿ ಆ್ಯಡ್ಸ್‌ನ ಎಂ.ಪ್ರಭಾಕರ ಗುಪ್ತ, ಕಾರ್ಯದರ್ಶಿಯಾಗಿ ಯುನೈಟೆಡ್ ಆ್ಯಡ್ಸ್‌ನ ಪಿ.ನಾರಾಯಣರೆಡ್ಡಿ ಮತ್ತು ಕೋಶಾಧಿಕಾರಿಯಾಗಿ ಚಿತ್ರ ಪಬ್ಲಿಸಿಟೀಸ್‌ನ ಗೋಪಾಲ್ ಸಂಘದ ಪದಾಧಿಕಾರಿಗಳಾಗಿದ್ದಾರೆ. ಶುಭ ಜಾಹಿರಾತು ಸಂಸ್ಥೆಯ ಎಂ.ಎಸ್.ರಾಮಮೂರ್ತಿ, ಮಣಿ ಜಾಹಿರಾತು ಸಂಸ್ಥೆ ಜಿ.ಸೂರ್ಯನಾರಾಯಣ (ಸೂರಿ), ಎಂ.ಎಸ್.ಪ್ರಸಾದ್ ಮತ್ತು ಎಂ.ಎಸ್.ಪ್ರವೀಣ್ ಇವರು ಸಮಿತಿಯ ಸದಸ್ಯರು.

## ಕರ್ನಾಟಕ ಚಲಚ್ಚಿತ್ರ ನಿರ್ದೇಶಕರ ಸಂಘ

ಪುಟ್ಟಣ್ಣ ಕಣಗಾಲ್, ಎನ್.ಲಕ್ಷ್ಮೀನಾರಾಯಣ್, ರವೀ, ಸಿದ್ಧಲಿಂಗಯ್ಯ ಮತ್ತಿತರರು ಸೇರಿ ಸ್ಥಾಪಿಸಿದ 'ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ' ಒಂದೆಡೆ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿದ್ದರೆ ಗಾಂಧಿನಗರದಲ್ಲಿ ಇನ್ನೊಂದು 'ಕರ್ನಾಟಕ ಚಲಚ್ಚಿತ್ರ ನಿರ್ದೇಶಕರ ಸಂಘ' ಸಂಸ್ಥೆ ೧೯೯೪ರಿಂದಲೂ ಅಸ್ತಿತ್ವದಲ್ಲಿದೆ. ಕರ್ನಾಟಕ ಚಲನಚಿತ್ರೋದ್ಯಮದ ನಿರ್ದೇಶಕರು, ಸಹನಿರ್ದೇಶಕರು ಮತ್ತು ಸಹಾಯಕ ನಿರ್ದೇಶಕರ ಯೋಗಕ್ಷೇಮ ಹಾಗೂ ಅಭಿವೃದ್ಧಿಯ ಸದುದ್ದೇಶದಿಂದ ಎಂ.ಎ.ಡೆಲ್ಲಿಯವರ ಸಲಹೆಯಂತೆ ರೂಪುಗೊಂಡ ಈ ಸಂಘಟನೆ ೧೯೯೪ರಲ್ಲಿ ಕಾರ್ಮಿಕ ಕಾಯಿದೆಯಡಿಯಲ್ಲಿ ದೃಢೀಕರಣಗೊಂಡು ನೋಂದಾವಣೆಗೊಂಡಿದೆ. ಸದಸ್ಯರ ಮಕ್ಕಳಿಗೆ ವಿದ್ಯಾರ್ಥಿ ವೇತನ ಮತ್ತು ಅವಲಂಬಿತರಿಗೆ ಉಚಿತ ವೈದ್ಯಕೀಯ ಚಿಕಿತ್ಸೆಯ ಸೌಲಭ್ಯ ಒದಗಿಸುವುದು, ಸದಸ್ಯರ ವಸತಿ ಸಮಸ್ಯೆ ನಿವಾರಣೆಗೆ ಯತ್ನಿಸುವುದು ಮತ್ತಿತರ ಹಿತಚಿಂತನೆ ಕಾರ್ಯಗಳಲ್ಲಿ ತೊಡಗಿರುವ ಈ ಸಂಘಟನೆ ಸದಸ್ಯರ ಕಷ್ಟನಷ್ಟಗಳಿಗೆ ಸ್ಪಂದಿಸುತ್ತಾ ಬಂದಿದೆ. ಸದಸ್ಯರಿಗೆ ಅನ್ಯಾಯವಾದಾಗ ಕಾರ್ಮಿಕ ಕಾಯಿದೆಯಡಿಯಲ್ಲಿ ಪರಿಹಾರ ದೊರಕುವಂತೆ ಮಾಡುವಲ್ಲಿ ಯಶಸ್ವಿಯಾಗಿದೆ. ಆಕಸ್ಮಿಕದಲ್ಲಿ ದುರ್ಮರಣಕ್ಕೊಳಗಾದವರ ಕುಟುಂಬಕ್ಕೆ ನೆರವು ಕಲ್ಪಿಸಿದೆ. ಈ ಸಂಘಟನೆಯ ಪದಾಧಿಕಾರಿಗಳ ವಿವರ ಈ ಕೆಳಕಂಡಂತಿದೆ :

೧೯೮೯ರಿಂದಲೂ ಸದಸ್ಯರಾಗಿದ್ದಾರೆ.) ಶ್ರೀರಂಗ ಫಿಲಮ್ ವಿತರಣ ಸಂಸ್ಥೆಯನ್ನಾರಂಭಿಸಿದರು.

ಮಧು ಬಂಗಾರಪ್ಪನವರ ಶ್ರೀ ರೇಣುಕಾಂಬ ಕಂಬೈನ್ಸ್, ಹೆಚ್.ಡಿ.ಕುಮಾರಸ್ವಾಮಿಯವರ ಶ್ರೀ ಚೆನ್ನಾಂಬಿಕಾ ಫಿಲಮ್ಸ್, ವಿ.ರವಿಚಂದ್ರನ್ ಅವರ ಶ್ರೀ ಈಶ್ವರೀ ಪಿಕ್ಚರ್ಸ್ - ಇವು ಮೈಸೂರು ವಲಯದಲ್ಲಿ ಆರಂಭವಾದ ಚಿತ್ರ ಹಂಚಿಕಾ ಸಂಸ್ಥೆಗಳು.

೧೯೮೯ರಲ್ಲಿ ಕೆ.ಎಸ್.ವೇದನಾರಾಯಣ್, ಜಯರಾಮ್ (ಆನಂದ್ ಪಿಕ್ಚರ್ಸ್), ಕೆ.ನಾಗೇಶ್ (ಕಪಾಲಿ ಕಂಬೈನ್ಸ್), ಕೆ.ಕೃಷ್ಣೇಗೌಡ ಹಾಗೂ ಕೆ.ರಾಘವೇಂದ್ರರಾವ್ ಅವರು ಮೈಸೂರು ವಲಯದ ವಿತರಕರ ಸಂಘಟನೆಗಾಗಿ ನಡೆಸಿದ ಪ್ರಯತ್ನದ ಫಲವೇ **'ಮೈಸೂರು ವಲಯ ಚಲನಚಿತ್ರ ವಿತರಕರ ಸಂಘ'**.

೨೦೦೦ನೇ ವರ್ಷದಲ್ಲಿ ಸಂಘದ ಗೌರವಾಧ್ಯಕ್ಷರಾಗಿ ಕೆ.ಎಸ್.ವೇದನಾರಾಯಣ್ ಹಾಗೂ ಅಧ್ಯಕ್ಷರಾಗಿ ಕೆ.ಕೃಷ್ಣೇಗೌಡ ಸಂಘದ ಚುಕ್ಕಾಣಿ ಹಿಡಿದಿದ್ದಾರೆ. ಹುಲ್ಲಹಳ್ಳಿ ಹೆಚ್.ಪಿ.ಬಸವರಾಜು (ಉಪಾಧ್ಯಕ್ಷರು), ಹೆಚ್.ಆರ್.ಹೊನ್ನಪ್ಪ (ಕಾರ್ಯದರ್ಶಿ), ಎಂ.ಕರೀಗೌಡ(ಸೋಮು)(ಸಹಕಾರ್ಯದರ್ಶಿ) ಮತ್ತು ಎಸ್.ಎನ್.ಪ್ರಕಾಶ್ ಬಾಬು (ಕೋಶಾಧ್ಯಕ್ಷ) ಇವರು ಪದಾಧಿಕಾರಿಗಳಾಗಿದ್ದು, ಕಾರ್ಯಕಾರಿ ಸಮಿತಿಯಲ್ಲಿ ಮಾಂಬಳ್ಳಿ ಪಿ.ದೇವರಾಜ್, ಎ.ಬಿ.ಕೆಂಡಗಣ್ಣಶೆಟ್ಟಿ, ಎಂ.ಬಿ.ನರೇಂದ್ರಬಾಬು, ಜಿ.ಎಸ್.ಗುಂಡಣ್ಣ, ಎಂ.ವಿ.ರಾಜೇಂದ್ರ ಮತ್ತು ಎಂ.ರಾಮಣ್ಣ ಸದಸ್ಯರಾಗಿದ್ದಾರೆ.

ಮೈಸೂರು ವಲಯದಲ್ಲಿ ಸಂಚಾರಿ ಚಿತ್ರಮಂದಿರಗಳ ಪರವಾನಗಿ ಸಮಸ್ಯೆಗಳ ಪರಿಹಾರಕ್ಕಾಗಿ ಬಿ.ಎಸ್.ನಂಜುಂಡಪ್ಪ ಮತ್ತು ಹೆಚ್.ಆರ್.ಹೊನ್ನಪ್ಪನವರ ಶ್ರಮದ ಫಲವಾಗಿ ೧೯೮೭ರಲ್ಲಿ ಆರಂಭಗೊಂಡ ಸಂಘಟನೆಯೇ 'ಕರ್ನಾಟಕ ರಾಜ್ಯ ಸಂಚಾರಿ ಚಿತ್ರಮಂದಿರಗಳ ಸಂಘ'.

ಈ ಸಂಘದ ಆಶ್ರಯದಲ್ಲಿ ೧೯೮೯ರಲ್ಲಿ ಕರ್ನಾಟಕದ ಚಲನಚಿತ್ರರಂಗದ ನಿರ್ಮಾಪಕರು, ವಿತರಕರು, ಪ್ರದರ್ಶಕರು ಹಾಗೂ ಚಿತ್ರೋದ್ಯಮಿಗಳ ಬೃಹತ್ ಸಮಾವೇಶವೊಂದನ್ನು ಮೈಸೂರಿನಲ್ಲಿ ಏರ್ಪಡಿಸಲಾಗಿತ್ತು. ಈ ಸಭೆಯಲ್ಲಿ ಸಂಚಾರಿ ಚಿತ್ರಮಂದಿರಗಳ ಸಮಸ್ಯೆ ಪರಿಹರಿಸಲು 'ತಾತ್ಕಾಲಿಕ ಚಿತ್ರಮಂದಿರ' ಎಂಬ ವರ್ಗವನ್ನು ತರಲು ಒತ್ತಾಯಿಸಲಾಯಿತಲ್ಲದೆ, ವೀಡಿಯೋ ಹಾವಳಿಯಿಂದ ಕನ್ನಡ ಚಿತ್ರಗಳ ವ್ಯಾಪಾರಕ್ಕೆ ಉಂಟಾಗುತ್ತಿದ್ದ ಧಕ್ಕೆಯನ್ನು ತಪ್ಪಿಸಲು ಕನ್ನಡ ಚಿತ್ರಗಳ ವೀಡಿಯೋ ಹಕ್ಕುಗಳನ್ನು ಚಿತ್ರ ಬಿಡುಗಡೆಯಾದ ಐದು ವರ್ಷಗಳ ನಂತರವೇ ನೀಡಬೇಕೆಂದೂ ತೀರ್ಮಾನಿಸಲಾಯಿತು. 'ತಾತ್ಕಾಲಿಕ ಚಿತ್ರಮಂದಿರ'ವನ್ನು ೧೯೯೦ರ ಕರ್ನಾಟಕ ಸಿನಿಮಾ ನಿಯಮಾವಳಿಯಲ್ಲಿ ಅಡಕಗೊಳಿಸಲಾಯಿತು. ಹೆಚ್.ಆರ್.ಹೊನ್ನಪ್ಪ, ಬಿ.ಎಸ್.ನಂಜುಂಡಪ್ಪ ಮತ್ತು ಬೆಂಗಳೂರಿನ ಎಂ.ಎಸ್.ಶಂಕರಯ್ಯ ಈ ಸಮಾವೇಶವನ್ನು ಸಂಘಟಿಸಿದ್ದರು.

ಇವರಲ್ಲದೆ, ಮೈಸೂರಿನ ನಾರಾಯಣಶಾಸ್ತ್ರಿ ರಸ್ತೆಯಲ್ಲಿನ 'ಚಲನಚಿತ್ರ ಪ್ರದರ್ಶಕರ ಸಂಘ', ಕೋಲಾರ ಜಿಲ್ಲೆಯಲ್ಲಿನ 'ಕೋಲಾರ ಜಿಲ್ಲಾ ಚಲನಚಿತ್ರ ಪ್ರದರ್ಶಕರ ಸಂಘ' ಹಾಗೂ ಮಂಗಳೂರಿನ 'ದಕ್ಷಿಣ ಕನ್ನಡ ಸಿನಿಮಾ ಪ್ರದರ್ಶಕರ ಸಂಘ' ಇವೂ ಪ್ರದರ್ಶನ ಕ್ಷೇತ್ರವನ್ನು ಪ್ರತಿನಿಧಿಸಿ ಕೆಲಸ ಮಾಡುತ್ತಿರುವ ಸಂಘಟನೆಗಳಲ್ಲಿ ಪ್ರಮುಖವಾದವಾಗಿವೆ. ಒಂದು ಅಂದಾಜಿನಂತೆ ಚಲನಚಿತ್ರ ಪ್ರದರ್ಶನ ಹಾಗೂ ವಿತರಣೆಗೆ ಸಂಬಂಧಿಸಿದಂತೆ ರಾಜ್ಯಾದ್ಯಂತ ಎರಡು ಡಜನ್‌ಗಳಿಗೂ ಮೀರಿ ಸಂಘಟನೆಗಳಿವೆ. ಪ್ರತಿ ವರ್ಷ ಸರ್ವಸದಸ್ಯ ಸಭೆ ಕರೆದು ಲೆಕ್ಕಪತ್ರಗಳನ್ನೊಪ್ಪಿಸುವುದು, ವಿವಿಧ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು, ಉದ್ಯಮದ ಹಿತಾಸಕ್ತಿ ರಕ್ಷಿಸುವುದು ಈ ಮುಂತಾದವುಗಳ ಮೂಲಕ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವಂಥವು ಬೆರಳೆಣಿಕೆಯಷ್ಟು ಇಲ್ಲ ಎನ್ನುವುದು ವಿಷಾದದ ಸಂಗತಿ. ಕೆಲವು ಸಂಘಟನೆಗಳ ಸ್ವರ ಕೇಳಿಬರುವುದೇ ಎಂದೋ ಒಮ್ಮೆ ಮಾತ್ರ ಎಂಬಂತಾಗಿರುವುದು ದುರಂತವೇ ಸರಿ.

ರಾಜ್ಯದಲ್ಲಿನ ವಿವಿಧ ವಿತರಕರ ಹಾಗೂ ಪ್ರದರ್ಶಕರ ಜಿಲ್ಲಾಮಟ್ಟದ ಸಂಘಟನೆಗಳು ಈ ಕೆಳಕಂಡಂತಿವೆ:

ಉತ್ತರ ಕರ್ನಾಟಕ ಚಲನಚಿತ್ರ ವಿತರಕರ ಸಂಘ (ಹುಬ್ಬಳ್ಳಿ), ಚಲನಚಿತ್ರ ಪ್ರದರ್ಶಕರ ಸಂಘ (ಮೈಸೂರು), ಜಿಲ್ಲಾ ಚಲನಚಿತ್ರ ಪ್ರದರ್ಶಕರ ಸಂಘ (ಚಿಕ್ಕಮಗಳೂರು), ಹುಬ್ಬಳ್ಳಿ-ಧಾರವಾಡ ಚಲನಚಿತ್ರ ವಿತರಕರ ಸಂಘ (ಹುಬ್ಬಳ್ಳಿ), ಬೆಳಗಾಂ ಸಿನಿ ಎಕ್ಸಿಬಿಟರ್ಸ್ ಅಸೋಸಿಯೇಷನ್ (ಬೆಳಗಾಂ), ಬಿಜಾಪುರ ಸಿನಿಮಾ ಪ್ರದರ್ಶಕರ ಸಂಘ (ಬಿಜಾಪುರ), ಜಿಲ್ಲಾ ಸಿನಿಮಾ ಪ್ರದರ್ಶಕರ ಸಂಘ (ಶಿವಮೊಗ್ಗ), ಉತ್ತರ ಕರ್ನಾಟಕ ಜಿಲ್ಲಾ ಸಿನಿಮಾ ಪ್ರದರ್ಶಕರ ಸಂಘ (ಶಿರಸಿ), ಶಿವಮೊಗ್ಗ-ಚಿಕ್ಕಮಗಳೂರು ಚಲನಚಿತ್ರ ಜಿಲ್ಲಾ ಸಂಘ (ಶಿವಮೊಗ್ಗ), ಮೈಸೂರು ತಾಲ್ಲೂಕು ಗ್ರಾಮಾಂತರ ಕೇಂದ್ರಗಳ ಪ್ರದರ್ಶಕರ ಸಂಘ (ಮೈಸೂರು), ಜಿಲ್ಲಾ ಸಂಚಾರಿ ಚಿತ್ರಮಂದಿರಗಳ ಪ್ರದರ್ಶಕರ ಸಂಘ (ಬಿಜಾಪುರ), ಧಾರವಾಡ ಜಿಲ್ಲಾ ಸಂಚಾರಿ ಚಿತ್ರಮಂದಿರಗಳ ಪ್ರದರ್ಶಕರ ಸಂಘ (ಹುಬ್ಬಳ್ಳಿ), ಕೋಲಾರ ಜಿಲ್ಲಾ ಸಿನಿಮಾ ಪ್ರದರ್ಶಕರ ಸಂಘ (ಬಾಗೇಪಲ್ಲಿ), ಜಿಲ್ಲಾ ಸಿನಿಮಾ ಮಂದಿರಗಳ ಮಾಲೀಕರ ಸಂಘ (ಹಾಸನ), ದಾವಣಗೆರೆ ಪ್ರದರ್ಶಕರ ಸಂಘ (ದಾವಣಗೆರೆ), ಕೋಲಾರ ಜಿಲ್ಲಾ ಸಂಚಾರಿ ಚಿತ್ರಮಂದಿರಗಳ ಮಾಲೀಕರ ಸಂಘ (ಕೈವಾರ), ಕೆನರಾ ಚಲನಚಿತ್ರ ಪ್ರದರ್ಶಕರ ಸಂಘ (ಮಂಗಳೂರು), ದಕ್ಷಿಣ ಕನ್ನಡ ಚಲನಚಿತ್ರ ಪ್ರದರ್ಶಕರ ಸಂಘ (ಮಂಗಳೂರು), ಉತ್ತರ ಕರ್ನಾಟಕ ಸಿನಿಮಾ ಪ್ರದರ್ಶಕರ ಸಂಘ (ಹುಬ್ಬಳ್ಳಿ), ಜಿಲ್ಲಾ ಚಿತ್ರ ಪ್ರದರ್ಶಕರ ಸಂಘ (ಬಾಗಲಕೋಟೆ), ಬಳ್ಳಾರಿ ಜಿಲ್ಲಾ ಚಲನಚಿತ್ರ ಪ್ರದರ್ಶಕರ ಸಂಘ (ಹೊಸಪೇಟೆ) ಮತ್ತು ಜಿಲ್ಲಾ ಚಲನಚಿತ್ರ ಪ್ರದರ್ಶಕರ ಸಂಘ (ತುಮಕೂರು) ಇವು ಪ್ರಮುಖವಾಗಿವೆ.

ಬೆಂಗಳೂರು ನಗರದಲ್ಲಿ ಪ್ರದರ್ಶಿತವಾಗುವ ಕನ್ನಡೇತರ ಭಾಷಾ ಚಿತ್ರಗಳ ಹಂಚಿಕೆದಾರರೂ ಕೂಡ ತಮ್ಮದೇ ಆದ ವಿತರಕರ ಸಂಘಗಳ ಮೂಲಕ ಸಂಘಟಿತರಾಗಿದ್ದಾರೆ.



# ಸ್ಥಿರತೆಗೆ ಸಹಾಯಹಸ್ತ

ಬ್ರಿಟಿಷರಿಗೆ ನಮ್ಮನ್ನು ಆಳುವುದೇ ಪರಮಧ್ಯೇಯವಾಗಿತ್ತು. ನಮ್ಮಲ್ಲಿನ ಹಲವಾರು ಭಾಷೆ, ಜಾತಿ, ಜನಾಂಗ ಇವುಗಳನ್ನು ಬಳಸಿಕೊಂಡು, ಭೌಗೋಳಿಕವಾಗಿ ತಮಗೆ ಅನುಕೂಲವಾಗುವಂತೆ ನಮ್ಮನ್ನು ಒಡೆದು ಆಳಿದರು.

ಸ್ವಾತಂತ್ರ್ಯ ಸಿಕ್ಕ ತಕ್ಷಣ ಪ್ರತಿ ಭಾರತೀಯನ ಮನದಲ್ಲೂ ಭಾಷಾವಾರು ಪ್ರಾಂತ್ಯ ರಚನೆಯ ಹಂಬಲ ಮೂಡಿತು. ಕರ್ನಾಟಕದಲ್ಲೂ ಏಕೀಕರಣ ಚಳವಳಿ ನಡೆಯಿತು.

ಕರ್ನಾಟಕ ಏಕೀಕರಣವಾಗಿ ವಿಶಾಲ ಮೈಸೂರು ರಾಜ್ಯ ರಚನೆಯಾದ ನಂತರ ರಾಜ್ಯದ ಪ್ರತಿ ಪ್ರಜೆಯ ಮನದಲ್ಲೂ ಇಲ್ಲಿನ ಸಾಹಿತ್ಯ, ಸಂಗೀತ, ನೃತ್ಯ, ನಾಟಕ ಇವುಗಳನ್ನು ಸ್ವಾವಲಂಬನೆ, ಸ್ವಂತಿಕೆ ಹಾಗೂ ವೈಭವದ ಮಾರ್ಗದಲ್ಲಿ ಕೊಂಡೊಯ್ಯಬೇಕೆಂಬ ತುಡಿತ ಆರಂಭವಾಯಿತು. ಹೀಗಾಗಿ ಅದುವರೆಗೆ ಆಳರಸರ ಬೆಂಬಲ, ಕೃಪಾಪೋಷಣೆಯಲ್ಲಿ ಬೆಳೆದ ಬದುಕಿನ ಎಲ್ಲ ಕ್ಷೇತ್ರಗಳು, ಈಗ ಪ್ರಜಾಪ್ರಭುತ್ವದಲ್ಲಿ ರಾಜ್ಯ ಸರ್ಕಾರದತ್ತ ನಿರೀಕ್ಷೆಯಿಂದ ನೋಡುವಂತಾಯಿತು.

೧೯ನೇ ಶತಮಾನದ ಹೊಸ ಅವಿಷ್ಕಾರ ಚಲನಚಿತ್ರ, ಈಗಾಗಲೇ ಸಿನಿಮಾ ಎಂಬ ಉದ್ಯಮವಾಗಿ ರೂಪಿತಗೊಳ್ಳತೊಡಗಿತ್ತು. ಅದರ ವ್ಯಾಪಕತೆ, ಪರಿಣಾಮ ಹಾಗೂ ಅದು ನೀಡಬಹುದಾದ ವರಮಾನದ ಸಾಧ್ಯತೆಗಳನ್ನು ಅರಿತ ಯಾವ ಸರ್ಕಾರವೂ ಈ ಕ್ಷೇತ್ರವನ್ನು ನಿರ್ಲಕ್ಷಿಸುವಂತಿರಲಿಲ್ಲ. ಹೀಗಾಗಿ ಅನೇಕ ಬುದ್ಧಿಜೀವಿಗಳ, ಕಲಾಸಕ್ತರ, ಉದ್ಯಮಿಗಳ ಕೂಗಿಗೆ ಓಗೊಟ್ಟು ಸರ್ಕಾರ ಈ ಹಿಂಡುವ ಹಸುವಿಗೆ ಹುಲ್ಲು ನೀರು ಹಾಕಬೇಕಾಯಿತು.

೧೯೩೪ ರಲ್ಲಿ ಪ್ರಥಮ ಕನ್ನಡ ವಾಕ್‌ಚಿತ್ರ ನಿರ್ಮಾಣ ರಾಜ್ಯದ ಹೊರಗಡೆ ತಯಾರಾದರೂ, ಇಲ್ಲಿ ಬಿಡುಗಡೆಯಾಗಿ, 'ಕನ್ನಡ ಚಿತ್ರೋದ್ಯಮ' ಕನ್ನಡ ನಾಡಿನಲ್ಲಿ ಆರಂಭವಾದಂತಾಯಿತು. ಅಲ್ಲಿಂದ ಹೇಗೋ ಕುಂಟುತ್ತ, ತೆವಳುತ್ತ ನೆರೆ ಹೊರೆಯವರ ಕೃಪಾದೃಷ್ಟಿ, ಅನುಕಂಪ, ಔದಾರ್ಯದಲ್ಲಿ ವರ್ಷಕ್ಕೆ ಒಂದೋ ಎರಡೋ ಕನ್ನಡ ಚಿತ್ರಗಳನ್ನು ನಿರ್ಮಿಸಿ 'ನಾವೂ ಇದ್ದೇವೆ' ಎಂಬಂತೆ ತನ್ನ ಅಸ್ತಿತ್ವ ಉಳಿಸಿಕೊಂಡಿತು. ೧೯೫೪ರ ವರೆಗೂ ಒಂದಂಕಿಯ ಲಾಟರಿಯಂತೆ, ಚಿತ್ರನಿರ್ಮಾಣವೂ ಒಂದಂಕಿ ದಾಟಲೇ ಇಲ್ಲ. ೧೯೩೪ ರಿಂದ ೧೯೫೦ರವರೆಗೆ ನಾವು ೬೦ ಕನ್ನಡ ಚಿತ್ರಗಳನ್ನು ನಿರ್ಮಿಸಿದರೆ, ೧೯೫೬ರಲ್ಲಿ ಅಖಂಡ ಮೈಸೂರು ರಾಜ್ಯ ಸ್ಥಾಪನೆಯಾಗಿ ನಂತರ ೧೯೫೭ ರಿಂದ ೧೯೬೫ರ ವರೆಗೆ ನಾವು ನಿರ್ಮಿಸಿದ ಕನ್ನಡ ಚಿತ್ರಗಳ ಸಂಖ್ಯೆ ೧೧೩. ಸರ್ಕಾರದ ಯಾವ ಪೋಷಣೆ ಇಲ್ಲದೇ ಹುಲುಸಾಗಿ ಬೆಳೆದ ಈ ಬೆಳೆ, ತನ್ನ ಅಂತಃಸತ್ವ, ಚಿತ್ರರಂಗದ ಛಲ, ದೂರದರ್ಶಿತ್ವದ ಸಂಕೇತವಾಗಿ ಕಂಡಿತು. ನಮ್ಮ ರಾಜ್ಯ ಪುನರ್‌ರಚನೆಯಾದ ಹತ್ತು ವರ್ಷದವರೆಗೆ ಚಿತ್ರರಂಗದ ಅಭಿವೃದ್ಧಿಗೆ ಏನೂ ಮಾಡದೇ ಕಾಲಹರಣ ಮಾಡಿದ ಸರ್ಕಾರ ಈಗ ಎದ್ದು ಕುಳಿತಿತು. ಏಪ್ರಿಲ್ ಒಂದು, ಸಾವಿರದ ಒಂಬೈನೂರ ಅರುವತ್ತಾರನೇ (೦೧-೦೪-೧೯೬೬) ಆರ್ಥಿಕ ವರ್ಷದಿಂದ ಮೈಸೂರು ರಾಜ್ಯದಲ್ಲಿ ತಯಾರಾದ ಎಲ್ಲ ಚಿತ್ರಗಳಿಗೆ ಸಹಾಯಧನ (ಸಬ್ಸಿಡಿ) ನೀಡುವ ಯೋಜನೆ ಜಾರಿಗೆ ಬಂದಿತು. ೧೯೬೭-೬೮ರ ರಾಜ್ಯ ಮುಂಗಡ ಪತ್ರ ಮಂಡಿಸುವಾಗ ಅಂದಿನ ಅರ್ಥ ಸಚಿವರು ಮನರಂಜನಾ ತೆರಿಗೆಯ ಮೇಲೆ 'ಸರ್‌ಚಾರ್ಜ್' ವಿಧಿಸಿ, ಇದರಿಂದ ಸಂಗ್ರಹವಾಗುವ ಸಮಗ್ರ ಮೊತ್ತವನ್ನು ಕನ್ನಡ ಚಿತ್ರೋದ್ಯಮದ ಅಭಿವೃದ್ಧಿಗೆ ಬಳಸುವ ಖಚಿತ ಭರವಸೆ ನೀಡಿದರು. ಇಂದಿಗೂ ಆ ಸರ್‌ಚಾರ್ಜ್ ಹೆಚ್ಚುತ್ತಲೇ ಇದೆ; ಸರ್ಕಾರ ಕೋಟಿಗಟ್ಟಲೆ ಹಣ ಚಿತ್ರರಂಗದಿಂದ ಸಂಗ್ರಹಿಸುತ್ತಿದೆ. ಅದರೆ ಕನ್ನಡ ಚಿತ್ರರಂಗದ ಸಮಗ್ರ ಅಭಿವೃದ್ಧಿಗೆ ಅದನ್ನು ಬಳಸುವ ಭರವಸೆ ಮಾತ್ರ ಇನ್ನೂ ಭರವಸೆಯಾಗೇ ಉಳಿದಿದೆ. ಈ ದೃಷ್ಟಿಯಿಂದ ಸರ್ಕಾರ ಸಹಾಯಧನ, ಪ್ರಶಸ್ತಿಗಳು, ಮನರಂಜನಾ ತೆರಿಗೆ ವಿನಾಯಿತಿ ಬಗ್ಗೆ ಕೈಗೊಂಡ ಕ್ರಮಗಳ ಸಮಗ್ರ ಪರಿಶೀಲನೆ ಇಲ್ಲಿದೆ.

### ಸಹಾಯಧನ

೧೯೬೬ ಜುಲೈ ೧ ರಂದು ಸರ್ಕಾರ ತನ್ನ ಪ್ರಥಮ ಆದೇಶ (ಸಂಖ್ಯೆ : ಹೆಚ್‌ಡಿ ೯೫, ಪಿಐಎಫ್-೬೬, ೧-೭-೬೬) ಹೊರಡಿಸಿತು. ಅದರಲ್ಲಿ: ಈ ಹಿಂದೆ ಬಹಳಷ್ಟು ಕಾಲದಿಂದ ಸರ್ಕಾರವು ಕನ್ನಡ ಚಿತ್ರಗಳ ನಿರ್ಮಾಣಕ್ಕೆ ಬೆಂಬಲಿಸಲು ಚಿತ್ರರಂಗದ ನೆರವಿಗೆ ಬರುವ ಕುರಿತು ಪರಿಶೀಲಿಸುತ್ತಿತ್ತು. ನಿರ್ಮಾಪಕರು, ವಿತರಕರು ಹಾಗೂ ಕಲಾವಿದರು ಕನ್ನಡ ಚಿತ್ರಗಳ ನಿರ್ಮಾಣದಲ್ಲಿರುವ ಸಮಸ್ಯೆಗಳತ್ತ ಸರ್ಕಾರದ ಗಮನ ಸೆಳೆದು, ಇದು ಈಗ ಲಾಭಕರ ವೃತ್ತಿಯೇನಲ್ಲವಾದ್ದರಿಂದ ಸರ್ಕಾರವು ರಕ್ಷಣೆಗೆ ಬರದ ಹೊರತು ಹೆಚ್ಚು ಸಂಖ್ಯೆಯಲ್ಲಿ ಕನ್ನಡ ಚಿತ್ರಗಳ ನಿರ್ಮಾಣ ಹಾಗೂ ಅವುಗಳ ಗುಣಮಟ್ಟದಲ್ಲಿ ವೃದ್ಧಿಗೆ ಆಸ್ಪದ ಇಲ್ಲವೆಂದು ಮನವಿ ಸಲ್ಲಿಸಿ ಈ ಕೆಳಕಂಡಂತೆ ಸಹಾಯ ನೀಡಲು ಸೂಚಿಸಿದರು,

೧) ಮೈಸೂರು ರಾಜ್ಯದಲ್ಲಿ ನಿರ್ಮಿತ, ಸಂಸ್ಕರಿತ ಪ್ರತಿಯೊಂದು ಪೂರ್ಣಪ್ರಮಾಣದ ರೂಪಕ ಚಿತ್ರಗಳಿಗೆ ಸಹಾಯ ಧನ.
೨) ಕನ್ನಡದ ಅತ್ಯುತ್ತಮ ಮೂರು ಚಿತ್ರಗಳಿಗೆ ವಾರ್ಷಿಕ ಪ್ರಶಸ್ತಿ
೩) ಆಸ್ತಿಯ ಅಡವು ನೀಡಲು ಒತ್ತಾಯಿಸದೇ ಸಾಲ ನೀಡುವಿಕೆ.
೪) ವಿವಿಧ ಪರಿಣಾಮಗಳನ್ನು ಅಧ್ಯಯನ ಮಾಡಿ, ನಂತರ ಸ್ಟುಡಿಯೋ ನಿರ್ಮಾಣ.

ಸರ್ಕಾರ ಈ ಎಲ್ಲ ಅಂಶಗಳನ್ನು ಸೂಕ್ತವಾಗಿ ಪರಿಶೀಲಿಸಿದ ನಂತರ, ಈ ಕೆಳಗಿನಂತೆ ರಿಯಾಯಿತಿ ಮಂಜೂರು ಮಾಡಿತು.

(I) ಮೈಸೂರು ರಾಜ್ಯದಲ್ಲಿ ನಿರ್ಮಿಸಿ, ಸಂಸ್ಕರಿಸಲಾದ ಪ್ರತಿಯೊಂದು ಪೂರ್ಣ ಪ್ರಮಾಣದ ರೂಪಕ ಚಿತ್ರಗಳಿಗೆ ಮೂವತ್ತು ಸಾವಿರ ರೂಪಾಯಿಗಳವರೆಗೂ ಸಹಾಯಧನ ನೀಡುತ್ತದೆ. ಹಾಗೂ ಪ್ರಥಮ ವರ್ಷದಲ್ಲಿ ಅಂದರೆ ೧೯೬೬-೬೭ರಲ್ಲಿ ಚಿತ್ರವು ಮೈಸೂರು ರಾಜ್ಯದಲ್ಲಿ ಸಂಸ್ಕರಣವಾಗಿರಬೇಕೆಂಬ ನಿಯಮವನ್ನು ಸಡಿಲಗೊಳಿಸಲಾಗುತ್ತದೆ.

ಈ ಸರ್ಕಾರಿ ಆಜ್ಞೆ ಬಂದ ಐದು ತಿಂಗಳಿಗೇ, ಮತ್ತೊಂದು ಸರ್ಕಾರಿ ಆದೇಶ ಜಾರಿ ಮಾಡಲಾಯಿತು. (ಸಂಖ್ಯೆ: ಹೆಚ್‌ಡಿ ೯೫, ಪಿಐಎಫ್-೬೬, ೩೦-೧೧-೬೬) ಇದರಲ್ಲಿ ಚಲನಚಿತ್ರ ನಿರ್ಮಾಪಕರು ಸರ್ಕಾರಕ್ಕೆ ಮನವಿ ಮಾಡಿ ಚಿತ್ರ ನಿರ್ಮಾಣದ ಸಾಮಗ್ರಿಗಳ ಬೆಲೆ ಗಣನೀಯವಾಗಿ ಹೆಚ್ಚಾಗಲು ರೂಪಾಯಿ ಅಪಮೌಲ್ಯ ಕಾರಣವಾಗಿದ್ದು ಈಗಿನ ಸಹಾಯಧನ ಮೊತ್ತ ಅಸಮರ್ಪಕವಾಗಿದೆ ಎಂದರು.

ಈ ಅಂಶ ಗಮನಿಸಿದ ಸರ್ಕಾರವು ಸಹಾಯಧನ ಮೊತ್ತವನ್ನು ೩೦ ಸಾವಿರದಿಂದ ೫೦ ಸಾವಿರ ರೂಪಾಯಿಗೆ ಹೆಚ್ಚಿಸಿತು.

ಸರ್ಕಾರಿ ಆದೇಶ[1] (ಸಂಖ್ಯೆ ಹೆಚ್‌ಡಿ ೯೫, ಪಿಐಎಫ್ ೬೬, ೧೮-೪-೬೭)ದಲ್ಲಿ ತಜ್ಞರ ಸಮಿತಿ ರಚಿಸಿ ಅವರ ಹೆಸರುಗಳನ್ನು ಪ್ರಕಟಿಸಿತು. ಈ ಸಮಿತಿಯೇ ಸಹಾಯಧನ ನೀಡಲು ಅರ್ಜಿಗಳನ್ನು ಆಹ್ವಾನಿಸಿ ಸೂಕ್ತ ಶಿಫಾರಸ್ಸುಗಳನ್ನು ಸರ್ಕಾರಕ್ಕೆ ಕಳುಹಿಸಬೇಕೆಂದು ಸೂಚಿಸಿತು.

೧.ಇದರ ವಿವರವಾದ ಉಲ್ಲೇಖ ಪುಟ ೫೮೪ರಲ್ಲಿದೆ.

ಇವಾದ ನಾಲ್ಕು ತಿಂಗಳಿಗೆ ಸರ್ಕಾರ ಮತ್ತೊಂದು **ಆದೇಶ** ಹೊರಡಿಸಿತು. (ಸಂಖ್ಯೆ: ಹೆಚ್‌ಡಿ ೫೫,ಪಿಐಎಫ್-೬೭, ದಿನಾಂಕ ೮-೮-೬೭) ಇದರ ಪ್ರಕಾರ 'ವಿಶೇಷಜ್ಞರ ಸಮಿತಿ'ಯನ್ನು **'ಸಲಹಾ ಸಮಿತಿ'** ಎಂದು ಮರುನಾಮಕರಣ ಮಾಡಿತು. ಈ ಹಿಂದೆ ಜಾರಿಗೊಳಿಸಿದ್ದ ಆಜ್ಞೆಯಲ್ಲಿದ್ದಂತೆ ಐವತ್ತು ಸಾವಿರ ರೂಪಾಯಿಯವರೆಗೂ ಎನ್ನುವುದರ ಬದಲು, ಐವತ್ತುಸಾವಿರ ರೂಪಾಯಿ ಸಹಾಯಧನವನ್ನು ಸರ್ಕಾರವೇ ನೇರವಾಗಿ ನೀಡುವುದಾಗಿ ಸ್ಪಷ್ಟಪಡಿಸಿತು. ೦೧-೦೪-೧೯೬೬ಕ್ಕಿಂತ ಮೊದಲು ನಿರ್ಮಿಸಿ, ಸೆನ್ಸಾರಾದ ಚಿತ್ರಗಳು ಸಹಾಯಧನಕ್ಕೆ ಅರ್ಹವಲ್ಲ ಎಂದು ತೀರ್ಮಾನಿಸಿತು.

ಈ ಹಿಂದಿನ ಆಜ್ಞೆಗಳಲ್ಲಿಯ ನಿಯಮಗಳನ್ನು ಪಾಲಿಸಿದ್ದ ಬೇರೆ ಯಾವುದೇ ಭಾಷೆಯ ಚಿತ್ರಗಳಿಗೂ ಸಹಾಯಧನ ನೀಡುವ ಉಲ್ಲೇಖವಿತ್ತು.

ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೫೫, ಪಿಐಎಫ್-೬೭, ೦೮-೦೮-೧೯೬೭) ಜೊತೆಗೆ, ''ಮೈಸೂರು ರಾಜ್ಯ ಪೂರ್ಣಪ್ರಮಾಣದ ರೂಪಕ ಚಿತ್ರಗಳ ಸಹಾಯಧನ ನಿಯಮಗಳು ೬೭'' ಆಜ್ಞೆ ಪತ್ರದಲ್ಲಿ ಪ್ರಕಟಿಸಿದ 'ಸಹಬಂಧ'ದಲ್ಲಿ ಪೂರ್ಣಪ್ರಮಾಣದ ರೂಪಕ ಚಿತ್ರ ಎಂದರೆ ೩೫ ಎಂ.ಎಂ.ನಲ್ಲಿ ಮಾತ್ರ ತಯಾರಿಸಲಾದ, ೩೦೦೦ ಮೀಟರುಗಳಿಗೂ ಕಡಿಮೆ ಉದ್ದ ಇಲ್ಲದಂತಹ ಚಿತ್ರಗಳಿಗೆ - ಆದರೆ ಸಾಕ್ಷ್ಯ ಚಿತ್ರ, ಶೈಕ್ಷಣಿಕ ಚಿತ್ರ ಹಾಗೂ ಮಕ್ಕಳ ಚಿತ್ರವನ್ನು ಹೊರತುಪಡಿಸಿ - ಎಂದು ಸ್ಪಷ್ಟ ಪಡಿಸಿತು. ಸೆನ್ಸಾರ್ ಆದ ಚಿತ್ರದ ಶೀರ್ಷಿಕೆಗಳಲ್ಲಿ ನಮೂದಿಸಲಾದ ಹೆಸರನ್ನೇ 'ನಿರ್ಮಾಪಕರು' ಎಂದು ಪರಿಗಣಿಸುವ ಉಲ್ಲೇಖವಿತ್ತು.

ಮೈಸೂರು ರಾಜ್ಯದಲ್ಲೇ ಚಿತ್ರ ಸಂಪೂರ್ಣ ನಿರ್ಮಾಣವಾದ ಬಗ್ಗೆ ನಿರ್ಮಾಪಕರಿಂದ ಪ್ರಮಾಣಪತ್ರ, ಸ್ಟುಡಿಯೋವಲ್ಲಿ ಚಿತ್ರೀಕರಿಸಿದ ಬಗ್ಗೆ ಆ ಸಂಸ್ಥೆಗಳಿಂದ ಪ್ರಮಾಣಪತ್ರದ ಜೊತೆಗೆ ಛಾಯಾಗ್ರಾಹಕ, ಧ್ವನಿಗ್ರಾಹಕರಿಂದ ನಿತ್ಯ ಚಿತ್ರೀಕರಣದ ವರದಿ ಪ್ರತಿಗಳು, ಚಲನಚಿತ್ರ ಸಂಸ್ಕರಣ ಕೇಂದ್ರದಿಂದ, ಚಿತ್ರದ ಎಲ್ಲ ದೃಶ್ಯಗಳ ಮುದ್ರಣ, ಸಂಸ್ಕರಣ ರಾಜ್ಯದಲ್ಲೆ ಕೈಗೊಂಡ ಬಗ್ಗೆ, ಲ್ಯಾಬೋರೇಟರಿಗಳ ಪ್ರಮಾಣಪತ್ರಗಳೊಂದಿಗೆ ನಿಗದಿತ ಅರ್ಜಿಫಾರ್ಮ್‌ನಲ್ಲಿ, ಕೋರ್ಟ್ ಫೀ ಸ್ಟಾಂಪ್ ಲಗತ್ತಿಸಿ ವಿಶೇಷ ಕರ್ತವ್ಯಾಧಿಕಾರಿ, ಚಲನಚಿತ್ರ ಘಟಕ'ಕ್ಕೆ ಸಲ್ಲಿಸಬೇಕಾಗಿತ್ತು.

ರಾಜ್ಯದಲ್ಲಿ ಇಲ್ಲದಿರುವ ಸಂಸ್ಕರಣ ಸೌಲಭ್ಯವನ್ನು ಹೊರಗಡೆ ಪಡೆಯಲು ಹಾಗೂ ಕೆಲವು ಅವಶ್ಯಕ ದೃಶ್ಯಗಳ ಚಿತ್ರೀಕರಣ ರಾಜ್ಯದ ಹೊರಗಡೆ ಚಿತ್ರೀಕರಿಸಲು ಹಾಗೂ ಈ ರೀತಿ ಚಿತ್ರಿಸಿದ ದೃಶ್ಯಗಳ ಉದ್ದ, ಚಿತ್ರದ ಒಟ್ಟು ಉದ್ದಕ್ಕಿಂತ ಶೇಕಡಾ ೨೫ ಕ್ಕಿಂತಲೂ ಹೆಚ್ಚಿಗೆ ಇರಕೂಡದೆಂದು ಶರತ್ತು ಹಾಕಿ ವಿನಾಯಿತಿ ನೀಡಿತು.

ಚಿತ್ರವನ್ನು ನಿರ್ಮಿಸುವ ನಿರ್ಮಾಣ ಸಂಸ್ಥೆಯ ನೋಂದಣಿಯಾದ ಕಾರ್ಯಾಲಯ ಮೈಸೂರು ರಾಜ್ಯದಲ್ಲಿ ಇರಬೇಕೆಂದು ಅಥವಾ ಸಹಾಯಧನಕ್ಕ ಅರ್ಜಿ ಸಲ್ಲಿಸಿದ ದಿನಾಂಕದಿಂದ ಆರು ತಿಂಗಳೊಳಗೆ ಮೈಸೂರು ರಾಜ್ಯದೊಳಗೆ ನಿರ್ಮಾಣ ಸಂಸ್ಥೆ ನೆಲೆ ವರ್ಗಾಯಿಸಿದಲ್ಲಿ ಸಹಾಯಧನ ಪಡೆಯಲು ಅರ್ಹವಾಗುತ್ತದೆಂದು ಸೂಚಿಸಿತು.

ಪೂರ್ಣಪ್ರಮಾಣದ ರೂಪಕ ಚಿತ್ರ 'ಡಬ್' ಆವೃತ್ತಿ, ರೀಟೇಕ್ ಆಗಿದ್ದಲ್ಲಿ ಯಾವುದೇ ಸಹಾಯಧನಕ್ಕೆ ಅರ್ಹವಿಲ್ಲವೆಂದು ಸಾರಿತು. (ರೀಮೇಕ್ ಅನ್ನು ರೀಟೇಕ್ ಎಂದು ಹೇಳಲಾಗಿತ್ತು.)

ಏಕಕಾಲಕ್ಕೆ ಹಲವಾರು ಭಾಷೆಗಳಲ್ಲಿ ಒಂದೇ ಚಿತ್ರದ ಹಲವಾರು ಆವೃತ್ತಿಗಳನ್ನು ನಿರ್ಮಿಸಿದ್ದರೆ, ಎಲ್ಲ ಭಾಷೆಯ ಆವೃತ್ತಿಗಳು ಸಹಾಯಧನಕ್ಕೆ ಅರ್ಜಿ ಸಲ್ಲಿಸಬಹುದಾಗಿದ್ದು, ಯಾವುದಾದರೂ ಒಂದು ಭಾಷೆಗೆ ಸಂಪೂರ್ಣ ಮೊತ್ತದ ಸಹಾಯಧನ ಹಾಗೂ ಉಳಿದ ಆವೃತ್ತಿಗಳನ್ನು ಸಣ್ಣ ಮೊತ್ತದ ಸಹಾಯಧನಕ್ಕೆ ಪರಿಶೀಲಿಸಬಹುದೆಂಬ ನಿಲುವು ತಾಳಿತು.

ಯಾವುದೇ ಚಿತ್ರ, ರೂಪಕಚಿತ್ರ ಹೌದೋ ಅಲ್ಲವೋ ಅಥವಾ ಯಾವುದೇ ಚಿತ್ರ ಸಹಾಯಧನಕ್ಕೆ ಅರ್ಹವೋ ಅನರ್ಹವೋ ಎಂಬ ಸರ್ಕಾರದ ತೀರ್ಮಾನವೇ ಅಂತಿಮವೆಂದು ಸ್ಪಷ್ಟಪಡಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೧೭೦, ಪಿಐಎಫ್ ೬೯, ೧೦-೦೯-೭೦) ಹೊರಡಿಸಿ ಈ ಮೊದಲಿನ ಸಹಾಯಧನ ನಿಯಮಾವಳಿಗೆ ಸ್ವಲ್ಪ ಬದಲಾವಣೆ ತಂದಿತು. ಹಾಗೂ ಅದು ಅಂದಿನಿಂದಲೇ ಜಾರಿಗೆ ಬಂದಿತು. ಇದರಲ್ಲಿ ಸೇರ್ಪಡೆಯಾದ ಅಂಶವೆಂದರೆ ಸಹಾಯಧನ ಪಡೆಯಲು ಚಿತ್ರದ ಧ್ವನಿಮುದ್ರಣ, ಮರುಮುದ್ರಣವೂ ಕರ್ನಾಟಕದಲ್ಲೇ ಕೈಗೊಂಡಿರಬೇಕು. ೩೫ ಎಂ.ಎಂ. ಹಾಗೂ ಅದಕ್ಕೂ ಹೆಚ್ಚಿನ ಅಗಲದ ಚಿತ್ರಗಳು ಅರ್ಹವೆಂದು, ಆದರೆ ಸಾಕ್ಷ್ಯಚಿತ್ರ, ಶೈಕ್ಷಣಿಕ ಚಿತ್ರ ಒಳಗೊಂಡಿಲ್ಲವೆಂದೂ ತಿಳಿಸಿತು. (ಮಕ್ಕಳ ಚಿತ್ರದ ಉಲ್ಲೇಖವನ್ನು ಕಿತ್ತುಹಾಕಿ ಅದರ ಬಗ್ಗೆ ಮೌನ ತಾಳಿತು) ಅತ್ಯಂತ ಮಹತ್ವದ ಮತ್ತೊಂದು ಸೇರ್ಪಡೆಯೆಂದರೆ ಚಿತ್ರ ನಿರ್ಮಾಣ ಆರಂಭ ಮಾಡುವ ಹತ್ತು ದಿವಸಕ್ಕೂ ಮುನ್ನ, ಚಿತ್ರದ ಕಥಾಸಾರಾಂಶ, ಕಲಾವಿದರ ಪಟ್ಟಿ, ಒಳಾಂಗಣ, ಹೊರಾಂಗಣ ಚಿತ್ರೀಕರಣ ವಿವರಗಳನ್ನು ನಿರ್ಮಾಪಕ 'ಸರ್ಕಾರದ ನಿರ್ದೇಶಕರು, ಚಲನಚಿತ್ರ ಘಟಕ, ಬೆಂಗಳೂರು' ಇವರಿಗೆ ಸಲ್ಲಿಸಬೇಕಿತ್ತು.

ಮೊದಲ ಹತ್ತು ದಿನಗಳ ಚಿತ್ರೀಕರಣದ ಛಾಯಾಗ್ರಹಣ, ಧ್ವನಿಗ್ರಹಣ ವರದಿಯ ಜೊತೆಗೆ ಮುಂದಿನ ಚಿತ್ರೀಕರಣದ ಒಳಾಂಗಣ, ಹೊರಾಂಗಣ, ಧ್ವನಿಗ್ರಹಣ ಕಾರ್ಯಕ್ರಮ ವಿವರ ಸಲ್ಲಿಸಬೇಕಾಗಿತ್ತು. ಚಲನಚಿತ್ರ ವಿಶೇಷಾಧಿಕಾರಿ ಚಿತ್ರೀಕರಣ ವೀಕ್ಷಿಸಲು, ದಾಖಲೆ ಪರೀಕ್ಷಿಸಲು ಬಂದರೆ, ಅವರಿಗೆ ಎಲ್ಲ ಅನುಕೂಲಗಳನ್ನು ನಿರ್ಮಾಪಕ ಒದಗಿಸಬೇಕಿತ್ತು.

ಇನ್ನೊಂದು ಮಹತ್ವದ ಅಂಶವೆಂದರೆ, ಈ ಸಹಾಯಧನವನ್ನು ಬೇರೆ ಯಾರಿಗಾದರೂ ನೀಡುವಂತೆ ಅಧಿಕಾರ ಪತ್ರ ನೀಡುವಂತಿರಲಿಲ್ಲ. ಹಾಗು ಇದನ್ನು ಅಡವು ಇಡುವಂತೆಯೂ ಇರಲಿಲ್ಲ. ಚಿತ್ರದ ಬಿಡುಗಡೆಯ ನಂತರ ನಿರ್ಮಾಪಕನಿಗೆ ಇದು ಸಂದಾಯವಾಗುತ್ತಿತ್ತು. ಚಿತ್ರ ಬಿಡುಗಡೆಯಾಗುವ ಚಿತ್ರಮಂದಿರಗಳ ವಿವರಗಳನ್ನೂ ನೀಡಬೇಕಿತ್ತು.

ಚಿತ್ರೀಕರಿಸಿದ ಒಳಾಂಗಣ, ಹೊರಾಂಗಣ ಸ್ಥಳಗಳ ಸ್ಥಿರಚಿತ್ರಗಳನ್ನು ಸಣ್ಣ ಬರಹದೊಂದಿಗೆ ಒದಗಿಸಬೇಕಾಗಿತ್ತು.

ಚಿತ್ರದಲ್ಲಿ ಬಳಸಲಾದ 'ದಾಸ್ತಾನು ಚಿತ್ರಿಕೆ' (stockshots)ಗಳ ಉದ್ದ ಹಾಗೂ ಪಡೆದ ಮೂಲವನ್ನು ತಿಳಿಸುವುದು ಅವಶ್ಯವಾಗಿತ್ತು.

ಮೈಸೂರು ರಾಜ್ಯದಲ್ಲಿನ ಅರ್ಹ ಅಧಿಕಾರಿಗಳಿಂದ 'ಆದಾಯ ತೆರಿಗೆ ಚುಕ್ತ' (clearance)ಪ್ರಮಾಣ ಪತ್ರ ಒದಗಿಸಬೇಕಿತ್ತು.

ಪೂರ್ವಾನುಮತಿ ಪಡೆದು, ರಾಜ್ಯದ ಹೊರಗಡೆ ಅವಶ್ಯವಾದ ದೃಶ್ಯಗಳನ್ನು ಚಿತ್ರೀಕರಿಸಿದರೆ ಅದು ಸಂಕಲಿತ ಚಿತ್ರದ ಒಟ್ಟು ಉದ್ದಕ್ಕಿಂತ ಶೇಕಡಾ ೨೫ಕ್ಕೂ ಹೆಚ್ಚಾಗಿರ ಕೂಡದು.

ಪ್ರಥಮ ಬಾರಿಗೆ ರಾಜ್ಯ ಸರ್ಕಾರ 'ರೀಟೇಕ್' ಪದವನ್ನು ಹೀಗೆ ವ್ಯಾಖ್ಯಾನಿಸಿತು: ''ರೀಟೇಕ್ ಎಂದರೆ ಬೇರೆ ಭಾಷೆಯ ಚಿತ್ರದ ತದ್ರೂಪ ಆವೃತ್ತಿಯಂತೆ ಇನ್ನೊಂದು ಭಾಷೆಗೆ ಚಿತ್ರಿಸುವುದು, ಅಥವಾ ಕೆಲವು ಬದಲಾವಣೆ ಮಾಡಿ ಚಿತ್ರಿಸುವುದು.''

ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ಏಕಕಾಲಕ್ಕೆ ಚಿತ್ರ ತಯಾರಿಸಿದ್ದರೆ ಕೇವಲ ಒಂದು ಭಾಷೆಗೆ ಸಂಪೂರ್ಣ ಸಹಾಯಧನ ಹಾಗು ಇತರೆ ಆವೃತ್ತಿಗಳಿಗೆ ೨೫ ಸಾವಿರ ರೂಪಾಯಿ ಸಹಾಯಧನ ನೀಡಬಹುದು ಎಂದು ಸ್ಪಷ್ಟಪಡಿಸಿತು.

ನಿರ್ಮಾಪಕ ನೀಡಿದ ಘೋಷಣಾ ಪತ್ರ, ದಾಖಲೆಗಳು ಸುಳ್ಳು ಎಂದು ಕಂಡು ಬಂದಲ್ಲಿ ಅವನ ಚಿತ್ರ ಸಹಾಯಧನಕ್ಕೆ ಅನರ್ಹವಾಗುತ್ತದೆ ಹಾಗೂ ಸಹಾಯಧನ ಪಡೆದಿದ್ದರೆ ಅದನ್ನು ಮರಳಿಸಬೇಕಾಗುತ್ತದೆ. ಈ ಕುರಿತು ಅವನು 'ನಷ್ಟ ಭರ್ತಿ ಮುಚ್ಚಳಿಕೆ (Indemnity Bond)' ಬರೆದು ಕೊಡಬೇಕಿತ್ತು.

ಈ ಬಾರಿ ಸರ್ಕಾರ ಇನ್ನೊಂದು ವಿಶೇಷ ಸರ್ಕಾರಿ **ಆದೇಶ** ಹೊರಡಿಸಿತು. (ಸಂಖ್ಯೆ: ಹೆಚ್‌ಡಿ ೭೯, ಪಿಐಎಫ್ ೭೦, ೧೮-೫-೭೧) ಇದರಲ್ಲಿ ಈ ಮೊದಲು ಹೊರಡಿಸಲಾದ ನಿಯಮಾವಳಿ ಉಲ್ಲೇಖಿಸಿ ಸಂಪನ್ಮೂಲ ಸಂಗ್ರಹಣಾ ಸಮಿತಿ ನೀಡಿದ ಮಧ್ಯಾವಧಿ ವರದಿ ಆಧರಿಸಿ ಹಣಕಾಸು ಇಲಾಖೆಯ ಹಾಗು ವೇತನ ಆಯೋಗದ ಅಭಿಪ್ರಾಯ ಗಮನದಲ್ಲಿಟ್ಟುಕೊಂಡು ರಾಜ್ಯದಲ್ಲಿ ನಿರ್ಮಿಸಿ, ಸಂಸ್ಕರಿಸಲಾದ ಚಿತ್ರಗಳ ಗುಣಮಟ್ಟ ಕುರಿತು ಯಾವುದೇ ಷರತ್ತಿನ ಅನುಪಸ್ಥಿತಿಯಲ್ಲಿ ಹಲವಾರು ಚಿತ್ರಗಳು ಯಾವುದೇ ಬಗೆಯ ಪ್ರೋತ್ಸಾಹ, ಬೆಂಬಲ ಪಡೆಯಲು ಅರ್ಹವಲ್ಲದಿದ್ದರೂ, ಸರ್ಕಾರವು ಎಲ್ಲ ಚಿತ್ರಗಳಿಗೆ ಸಹಾಯಧನ ಅನಿವಾರ್ಯವಾಗಿ ನೀಡಬೇಕಾಗಿದೆ.

೧೯೬೭-೬೮ರಲ್ಲಿ ಸಹಾಯಧನ ಯೋಜನೆ ಜಾರಿಗೆ ಬಂದಾಗ, ಒಂದು ವರ್ಗದ ವಿಚಾರಧಾರೆಯವರು, ಸಹಾಯಧನ ಮತ್ತು ಗುಣಮಟ್ಟಕ್ಕೆ ಸಂಬಂಧ ಸೃಷ್ಟಿಸುವುದು ಕನ್ನಡ ಚಿತ್ರೋದ್ಯಮದ ಪ್ರಗತಿಯ ಈ ಹಂತದಲ್ಲಿ ಆತುರದ ನಿಲುವೆಂದು ಸೂಚಿಸಿದಾಗ, ಅದೇ ವರ್ಷದ ಮಾರ್ಚ್‌ತಿಂಗಳಲ್ಲಿ ಸರ್ಕಾರ ಒಂದು ನಿರ್ಣಯ ಕೈಗೊಂಡು, ಈಗಿರುವ ನಿಯಮಾವಳಿಯಂತೆ ಸಹಾಯಧನ ನೀಡಿಕೆ ಮುಂದುವರಿಸಿತು. ಹಾಗೆಯೇ ಶಿಕ್ಷಣ ಸಚಿವರಿಗೆ ಹಣಕಾಸು ಮತ್ತು ಗೃಹ ಕಾರ್ಯದರ್ಶಿಗಳ ನೆರವು ಪಡೆದು ಒಂದು ಉಪ ಸಮಿತಿ ರಚಿಸಿ ಈ ಯೋಜನೆಯ ಬಹುಮುಖಿ ಅಧ್ಯಯನ ಮಾಡಿ ಸರ್ಕಾರದ ಪರಿಶೀಲನೆಗೆ ವರದಿ ಸಲ್ಲಿಸಬೇಕೆಂದು ಸೂಚಿಸಿತು.

ಆದರೆ ಮಂತ್ರಿ ಮಂಡಳದ ರಾಜೀನಾಮೆಯಿಂದಾಗಿ ಗೃಹ, ಹಣಕಾಸು, ಶಿಕ್ಷಣ, ವಾಣಿಜ್ಯ ಮತ್ತು ಉದ್ಯಮ ಇಲಾಖೆ ಕಾರ್ಯದರ್ಶಿಗಳಿದ್ದ ಸರ್ಕಾರಿ ಸಮಿತಿ ರಚಿಸಿ, ಚಲನಚಿತ್ರ ಘಟಕದ ವಿಶೇಷಾಧಿಕಾರಿ ಸಮನ್ವಯ ಸದಸ್ಯರಾಗಿ ಈ ಮೇಲಿನ ಕಾರ್ಯ ವಹಿಸಿಕೊಂಡರು.

**ಸಹಾಯಧನಕ್ಕೆ ಸಲಹಾ ಸಮಿತಿ**

ಸಮಿತಿ, ಚಿತ್ರರಂಗದ ಪ್ರಗತಿಯ ಬಗ್ಗೆ ಆಸಕ್ತಿ ಹೊಂದಿರುವ ಹಲವಾರು ಸಂಘ ಸಂಸ್ಥೆಗಳ ಪ್ರತಿನಿಧಿಗಳನ್ನು ಭೇಟಿ ಮಾಡಿ ಸಹಾಯಧನ ಯೋಜನೆ ಬಗ್ಗೆ ಅಭಿಪ್ರಾಯ ಸಂಗ್ರಹಿಸಿ, ಚಿತ್ರರಂಗದ ಪ್ರತಿನಿಧಿಗಳಿಂದಲೂ ಸಲಹೆ ಸೂಚನೆ ಪಡೆದು ಕೂಲಂಕಷವಾದ ವರದಿ ಸಲ್ಲಿಸಿತು. ಅದರ ಸಾರಾಂಶ:

೧) ನಿರ್ಮಿಸುವ ಪ್ರತಿಯೊಂದು ಚಿತ್ರಕ್ಕೂ ಅದರ ಅಂತರಿಕ ಸಹಜತೆ, ಶ್ರೇಷ್ಠತೆ ಗಣನೆಗೆ ತಂದುಕೊಳ್ಳದೆ ಸಹಾಯಧನ ನೀಡುವ ಪದ್ಧತಿಯನ್ನು ತಿದ್ದುಪಡಿ ಮಾಡಬೇಕು. ಇನ್ನು ಮುಂದೆ ಸೂಚಿಸಿದಂತೆ ಕನಿಷ್ಠ ಗುಣಮಟ್ಟ ಆಧರಿಸಿ ಸಹಾಯಧನ ನೀಡಬೇಕು.

೨) ರಾಜ್ಯ ಸರ್ಕಾರ ನೇಮಿಸುವ ಸಲಹಾ ಸಮಿತಿಯು ಚಿತ್ರರಂಗಕ್ಕೆ ಯಾವುದೇ ರೀತಿ ಸಂಬಂಧ ಇಲ್ಲದಂತಹವರನ್ನು ಒಳಗೊಂಡಿರಬೇಕು. ಈ ಸಮಿತಿ ಚಿತ್ರದ ಕನಿಷ್ಠ ಗುಣಮಟ್ಟ ಆಧರಿಸಿ ಸಹಾಯಧನ ಪಡೆಯಲು ಅರ್ಹವೆಂದು ಶಿಫಾರಸ್ಸು ಮಾಡಬೇಕು.

೩) ಸಮಿತಿಯು ಸಾಹಿತ್ಯ, ಕಲೆಯ ಕ್ಷೇತ್ರದಿಂದ ಒಬ್ಬ ಅಧ್ಯಕ್ಷ, ಆರು ಸದಸ್ಯರು ಹಾಗೂ ಚಿತ್ರ ಘಟಕದ ವಿಶೇಷಾಧಿಕಾರಿಯನ್ನು ಸದಸ್ಯ ಕಾರ್ಯದರ್ಶಿಯಾಗಿ ಹೊಂದಿ ತಮ್ಮದೇ ಕಾರ್ಯ ಪದ್ಧತಿ ರೂಪಿಸಿಕೊಂಡು ಕಾರ್ಯಕೈಗೊಳ್ಳಬೇಕು. ಆದರೆ ಈ ಕೆಳಗಿನ ಅಂಕ (points)ಗಳನ್ನು ಗಮನದಲ್ಲಿಟ್ಟುಕೊಂಡು ಚಿತ್ರವನ್ನು ನಿರ್ಣಯಿಸಬೇಕು.

ಇವರಂತೆ, ನಿರ್ದೇಶನ ೧೦, ಕಥಾಂಶ ಬೆಳವಣಿಗೆ ೧೦, ಛಾಯಾಗ್ರಹಣ ೧೦, ಧ್ವನಿಗ್ರಹಣ ೫. ಕಲಾತ್ಮಕ ಅಂಶ ೧೦, ಅಭಿನಯ ೧೦, ಸಂಭಾಷಣೆ ೧೦, ಚಿತ್ರಕಥೆ ೧೦, ಸಂಗೀತ ೫, ಸಂಕಲನ ೫, ಶೈಕ್ಷಣಿಕ ಅಥವಾ ನೈತಿಕ ಅಂಶಗಳಿದ್ದರೆ ೫, ಮನರಂಜನಾ ಮೌಲ್ಯಗಳು ೫, ಇತರೆ ಅಂಶಗಳಿಗೆ ೫ ಎಂದು ಒಟ್ಟು ನೂರು ಅಂಕಗಳನ್ನು ನೀಡಲಾಗಿತ್ತು.

೪) ಸಮಿತಿಯು ಪ್ರತಿ ಚಿತ್ರಕ್ಕೂ ಅಂಕಗಳನ್ನು ನೀಡಬೇಕು. ಸಹಾಯಧನ ಪಡೆಯುವ ಚಿತ್ರ ಕನಿಷ್ಠ ಐವತ್ತು ಅಂಕಗಳನ್ನಾದರೂ ಪಡೆದಿರಬೇಕು.

೫) ಈ **ಆದೇಶ** ಇಂದಿನಿಂದಲೇ ಜಾರಿಗೆ ಬರಬೇಕು. ಈ ದಿನಾಂಕಕ್ಕೂ ಮೊದಲು ಸೆನ್ಸಾರಾದ ಬಿಡುಗಡೆಯಾದ ಚಿತ್ರಗಳಿಗೆ ಈ ಮೊದಲಿರುವ ನಿಯಮಾವಳಿಯಂತೆ ಸಹಾಯಧನ ನೀಡಬೇಕು.

೬) ಈ ಆಜ್ಞೆಯೊಂದಿಗೆ ಪ್ರಶಸ್ತಿ ಹಾಗೂ ಸಹಾಯಧನ ಮಂಜೂರು ಮಾಡಲು ಸಲಹಾ ಸಮಿತಿಗೆ ಸೇರ್ಪಡೆಯಾಗಬೇಕಾದ ತಜ್ಞರ ಹೆಸರುಗಳನ್ನು ಸೂಚಿಸಿತು.

ಎಸ್.ಡಿ.ಕೊಠಾವಳೆ ಅಧ್ಯಕ್ಷರು, ಸದಸ್ಯರಾಗಿ ಆದ್ಯ ರಂಗಾಚಾರ್ಯ, ಎಂ.ಎ.ಪಾರ್ಥಸಾರಥಿ, ಜಿ.ಎಸ್.ಶಿವರುದ್ರಪ್ಪ, ವಿ.ಎನ್.ಸುಬ್ಬರಾವ್, ವಿಮಲಾರಂಗಾಚಾರ್, ಮೈಸೂರಿನ ಗಾನವಿಶಾರದ ಬಿ.ದೇವೇಂದ್ರಪ್ಪ, ಸದಸ್ಯ ಕಾರ್ಯದಶಿಯಾಗಿ ಚಲನಚಿತ್ರ ಘಟಕದ ವಿಶೇಷಾಧಿಕಾರಿ ಡಿ.ಎನ್.ಪಾಳ್ಳೇಗಾರ್.

೧೯೭೧ರ ಮೇ ತಿಂಗಳಲ್ಲಿ ಜಾರಿಗೊಳಿಸಿದ ಗುಣಮಟ್ಟ ಆಧಾರಿತ ಸಹಾಯಧನ ಸರ್ಕಾರಿ ಆಜ್ಞೆಯನ್ನು ಎರಡು ವರ್ಷ ಅನುಭವಿಸಿದ ಚಿತ್ರರಂಗ, ೧೯೭೩ರಲ್ಲಿ ಬೀಸಿದ ದೊಣ್ಣೆ ತಪ್ಪಿದರೆ ಸಾಕು ಎಂಬಂತೆ ಒಂದು ಹೊಸ **ಆದೇಶ**ವನ್ನು ಹೊರಡಿಸುವಲ್ಲಿ ಯಶಸ್ವಿಯಾಯಿತು. (ಸಂಖ್ಯೆ: ಹೆಚ್‌ಡಿ ೧೧೪, ೭೨(೧). ದಿನಾಂಕ: ೨೦-೦೬-೭೩). ಇದರ ಪ್ರಕಾರ ಈ ಮೊದಲು ಜಾರಿಯಾಗಿದ್ದ ೧೯೭೧ರ ಸರ್ಕಾರಿ ಆಜ್ಞೆಯನ್ನು ಜಾರಿಗೊಳಿಸದೇ ಎರಡು ವರ್ಷಗಳ ಅವಧಿಯವರೆಗೆ (೨೦-೦೬-೧೯೭೩ ರಿಂದ ೧೯-೦೬-೧೯೭೫)ರ ವರೆಗೆ ಅದನ್ನು ಮುಂದಕ್ಕೆ ಹಾಕಲಾಯಿತು.

ಸರ್ಕಾರವು ಸಹಾಯಧನ ನಿಯಮಾವಳಿಗೆ ಇನ್ನಷ್ಟು ತಿದ್ದುಪಡಿಯನ್ನು ಇನ್ನೊಂದು ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೪೩, ಪಿಐಎಫ್ ೧೪, ದಿನಾಂಕ: ೯-೧೨-೭೪) ಮೂಲಕ ಜಾರಿಗೊಳಿಸಿತು. ಸಲಹಾ ಸಮಿತಿ ೧೨-೬-೭೪ರಂದು ಸಭೆ ನಡೆಸಿ, ನಿರ್ಮಾಪಕರು ಒಳಾಂಗಣ, ಹೊರಾಂಗಣ ಚಿತ್ರೀಕರಣ ವಿವರ,ಮುಂದಿನ ಚಿತ್ರೀಕರಣದ ವಿವರಗಳನ್ನು ನೀಡುವುದಕ್ಕೆ ತೊಂದರೆಯಾಗುತ್ತದೆ ಎಂದಿದ್ದರಿಂದ ಸಮಿತಿಯು ಶಿಫಾರಸ್ಸು ಆಧರಿಸಿ ಹಾಗೂ ಆಂಧ್ರ ಪ್ರದೇಶದಲ್ಲಿ ಚಾಲ್ತಿಯಲ್ಲಿರುವ ನಿಯಮಾವಳಿಯನ್ನು ಗಮನದಲ್ಲಿರಿಸಿ ಈ ಬದಲಾವಣೆ ಮಾಡಲಾಗಿದೆ ಎಂದು ತಿಳಿಸಿತು.

ಈ ನಿಯಮವು 'ಚಲನಚಿತ್ರ ಘಟಕದ ನಿರ್ದೇಶಕರು ಯಾವುದೇ ಕಾಲದಲ್ಲಿ ಚಿತ್ರೀಕರಣ ಪರೀಕ್ಷಣ ಮಾಡಲು ಹಕ್ಕುಳ್ಳವರು' ಎಂದಿತು. ಅವರಿಗೆ ಎಲ್ಲ ಅನುಕೂಲಗಳನ್ನು ಒದಗಿಸಬೇಕೆಂಬ ಅಂಶ ಹೋಯಿತು. ಚಿತ್ರ ಬಿಡುಗಡೆಯಾದ ನಂತರ ಸಹಾಯಧನ ನೀಡುವ ಕ್ರಮ ಸಡಿಲಗೊಳಿಸಿ 'ಸೆನ್ಸಾರ್ ಪ್ರಮಾಣ ಪತ್ರ ದೊರೆತೊಡನೆ' ಎಂದು ಮಾರ್ಪಾಡಾಯಿತು. ಇದರಿಂದಾಗಿ ನಿರ್ಮಾಪಕ ಚಿತ್ರ ಬಿಡುಗಡೆಯಾಗುವ ಚಿತ್ರಮಂದಿರಗಳ ವಿವರ ನೀಡುವ ಪದ್ಧತಿ ನಿಂತಿತು. ಡಬ್ ಆದ ಚಿತ್ರಗಳು ಯಾವುದೇ ಸಹಾಯಧನಕ್ಕೆ ಅರ್ಹವಲ್ಲವೆಂದು ತೀರ್ಮಾನಿಸಿತು. ಆದರೆ ರೀಟೇಕ್ ಬಗ್ಗೆ ಮೌನ ವಹಿಸಿತು. ಚಿತ್ರಿಸಿದ ಒಳಾಂಗಣ, ಹೊರಾಂಗಣದ ಸೆಟ್ಟು, ಸ್ಥಳಗಳು, ಕಟ್ಟಡಗಳ ಛಾಯಾಚಿತ್ರಗಳನ್ನು ನೀಡುವ ಪದ್ಧತಿ ನಿಲ್ಲಿಸಿ, ಅದರ ಬದಲು ವಿವರವಾದ ಛಾಯಾಗ್ರಹಣ ವರದಿ ಅವಶ್ಯಕವೆಂದಿತು. ಲ್ಯಾಬೊರೇಟರಿಗಳು ಚಿತ್ರದ ಸಂಪೂರ್ಣ ಧ್ವನಿಗ್ರಹಣ, ಪುನರ್‌ಧ್ವನಿಗ್ರಹಣ ರಾಜ್ಯದಲ್ಲೇ ಕೈಗೊಳ್ಳಲಾಗಿದೆ ಎಂದು ಪ್ರಮಾಣ ಪತ್ರ ನೀಡಬೇಕಾದ ಪ್ರಮೇಯ ತಪ್ಪಿಸಲಾಯಿತು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ೧-೪-೭೪ರಂದು ಸಲ್ಲಿಸಿದ ಮನವಿ ಆಧರಿಸಿ, ಸಹಾಯಧನ ಹೆಚ್ಚಳ ಕುರಿತು ಸರ್ಕಾರ ಹೊಸದೊಂದು **ಆದೇಶ** ಹೊರಡಿಸಿತು (ಸಂಖ್ಯೆ: ಹೆಚ್‌ಡಿ ೨೪, ಪಿಐಎಫ್ ೭೪, ದಿನಾಂಕ:೧೨-೧೨-೭೫). ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯೊಂದಿಗೆ ಅನೇಕ ಕನ್ನಡ ಸಂಘ ಸಂಸ್ಥೆಗಳೂ ದನಿಗೂಡಿಸಿದ್ದವು. ಕನ್ನಡ ಚಿತ್ರೋದ್ಯಮದ ಹಿತದೃಷ್ಟಿಯಿಂದ ಸಲ್ಲಿಸಲಾದ ಈ ಮನವಿಯಲ್ಲಿ ಕನ್ನಡ ಚಿತ್ರಗಳಿಗಿರುವ ಸೀಮಿತ ಮಾರುಕಟ್ಟೆಯಿಂದಾಗಿ ಉತ್ತಮ ಗುಣಮಟ್ಟದ ಹಾಗೂ ಶ್ರೇಷ್ಠ ಕಲಾ ಮೌಲ್ಯಗಳಿರುವ ಚಿತ್ರಗಳನ್ನು ನಿರ್ಮಿಸಲು ಸಾಧ್ಯವಾಗುತ್ತಿಲ್ಲ. ಸರ್ಕಾರ ಕೊಡುತ್ತಿರುವ ಐವತ್ತು ಸಾವಿರ ರೂಪಾಯಿ ಸಹಾಯಧನ ಸಾಕಾಗುವುದಿಲ್ಲ, ಸಹಾಯಧನ ಮೊತ್ತ ಹೆಚ್ಚಿಸಿ ಎನ್ನಲಾಗಿತ್ತು.

ಹೀಗಾಗಿ, ೧೯೭೫-೭೬ನೇ ವರ್ಷದ ಕನ್ನಡ, ತುಳು, ಕೊಡವ ಮತ್ತು ಕೊಂಕಣಿ ಭಾಷೆಯ ಪೂರ್ಣ ಪ್ರಮಾಣದ ರೂಪಕ ಚಿತ್ರಗಳು, ಅವುಗಳ ನಿರ್ಮಾಣ ೧-೪-೭೪ರ ನಂತರ ಅರಂಭವಾಗಿದ್ದು ೧-೪-೭೫ರ ನಂತರದ ಸೆನ್ಸಾರ್ ಮಂಡಳಿಯ ಪ್ರಮಾಣ ಪತ್ರ ಪಡೆದರೆ, ಪಡೆದಿದ್ದರೆ ಅಂತಹ ಕಪ್ಪು ಬಿಳುಪು ಚಿತ್ರಗಳಿಗೆ ಒಂದು ಲಕ್ಷ ರೂಪಾಯಿ ಹಾಗೂ ವರ್ಣ ಚಿತ್ರಕ್ಕೆ ಒಂದೂವರೆ ಲಕ್ಷ ರೂಪಾಯಿ ಸಹಾಯಧನ ಎಂದು ಸರ್ಕಾರ ಘೋಷಿಸಿತು.

ಇತರ ಭಾಷೆಯ, ಆದರೆ ರಾಜ್ಯದಲ್ಲೇ ತಯಾರಾದ ಚಿತ್ರಗಳಿಗೆ ಹಳೆಯ ದರವಾದ ಐವತ್ತು ಸಾವಿರ ರೂಪಾಯಿ ಸಹಾಯಧನ ನೀಡಿಕೆ ಮುಂದುವರಿಸಲು ತೀರ್ಮಾನಿಸಲಾಯಿತು.

೧-೪-೭೪ರಲ್ಲಿ ಮೊದಲೇ ನಿರ್ಮಾಣ ಆರಂಭಿಸಿ ೧-೪-೭೫ರೊಳಗೆ ನಿರ್ಮಾಣ ಪೂರ್ಣಗೊಳ್ಳದೇ ಇರುವ ಕನ್ನಡ ಚಿತ್ರಗಳಿಗೆ ಐವತ್ತು ಸಾವಿರ ರೂಪಾಯಿ ಸಹಾಯಧನ ನೀಡುವುದಾಗಿ ಪ್ರಕಟಿಸಿತು.

ಸರ್ಕಾರ ಗುಣಮಟ್ಟ ಆಧಾರಿತ ಸಹಾಯಧನ ರೂಪಿಸುವ ಯೋಜನೆಯನ್ನು ಗ್ರಹಿಸಿದ ಕರ್ನಾಟಕ ವಾಣಿಜ್ಯ ಮಂಡಳಿ ತಯಾರಾಗುತ್ತಿದ್ದ ಚಿತ್ರಗಳ ಸಂಖ್ಯೆ ಹಾಗೂ ಅವುಗಳ ಗುಣಮಟ್ಟ ಗಮನಿಸಿ ಆ ಯೋಜನೆಯನ್ನು ಇನ್ನೂ ಎರಡು ವರ್ಷವಾದರೂ ತಡೆ ಹಿಡಿಯಬೇಕೆಂದು ಮನವಿಮಾಡಿತು.

ಹೀಗಾಗಿ ಸರ್ಕಾರ ಮತ್ತೊಂದು ಸರ್ಕಾರಿ **ಆದೇಶ** (ಸಂಖ್ಯೆ: ಎಚ್‌ಡಿ ೭೯, ಪಿಐಎಫ್ ೭೫, ದಿನಾಂಕ:೧೪-೦೨-೭೬) ಹೊರಡಿಸಿ, ಕರ್ನಾಟಕದಲ್ಲಿ ತಯಾರಾಗುವ ಎಲ್ಲ ಭಾಷೆಯ ಚಿತ್ರಗಳಿಗೆ ಸಹಾಯಧನ ನೀಡುವ ನಿಲುವು ತಳೆದು ಗುಣಮಟ್ಟದ ದಿಗ್ಬಂಧನವನ್ನು ೨೦-೦೬-೭೫ ರಿಂದ ಮತ್ತೆ ಎರಡು ವರ್ಷ ಕಾಲಾವಧಿಗಾಗಿ ಮುಂದೂಡಿತು.

ಸರ್ಕಾರ ಇನ್ನೊಂದು **ಆದೇಶ** (ಸಂಖ್ಯೆ: ಹೆಚ್‌ಡಿ ೪೪, ಪಿಐಎಫ್ ೭೭, ದಿನಾಂಕ:೦೪-೦೫-೭೭) ಹೊರಡಿಸಿ, ಇದರನ್ವಯ ನಿರ್ಮಾಪಕರು ಚಿತ್ರದ ವರ್ಣಸಂಸ್ಕರಣ, ಧ್ವನಿಗ್ರಹಣ, ಧ್ವನಿ ಮರುಮುದ್ರಣ, ವಿಶೇಷ ದೃಶ್ಯ ಪ್ರಭಾವ, ಹಿಂಬದಿ ಪ್ರಕ್ಷೇಪಣ (back projection) ಈ ಸೌಲಭ್ಯಗಳನ್ನು ರಾಜ್ಯದ ಹೊರಗಡೆ ೧-೪-೭೭ರಿಂದ ಒಂದು ವರ್ಷ ಕಾಲ ಬಳಸಲು ಅನುಮತಿ ನೀಡಿತು. ಈಗ ಸದ್ಯ

ವರ್ಣಸಂಸ್ಕರಣದ ಸಂಪೂರ್ಣ ಸೌಲಭ್ಯ ರಾಜ್ಯದಲ್ಲಿ ಲಭ್ಯವಿಲ್ಲವೆಂದು ಸಮರ್ಥಿಸಿತು. ಈ ಆದೇಶದಲ್ಲಿ ಉಲ್ಲೇಖಿಸಿದ ಇನ್ನೊಂದು **ಆದೇಶ** (ಸಂಖ್ಯೆ: ಹೆಚ್‌ಡಿ ೨೩, ಪಿಐಎಫ್ ೭೬, ದಿನಾಂಕ:೦೭-೦೪-೭೬)ದ ಪ್ರತಿ ಲಭ್ಯವಿಲ್ಲ.

**ಡಬ್ಬಿಂಗ್ - ವರ್ಣಚಿತ್ರಗಳು**

೧೯೭೦ರ ಸರ್ಕಾರಿ ಆದೇಶದಲ್ಲಿ ಡಬ್ ಆವೃತ್ತಿ ಯಾವುದೇ ಸಹಾಯಧನಕ್ಕೆ ಅರ್ಹವಿಲ್ಲವೆಂದು ನಿಲುವು ತಾಳಿತು. ಆದರೂ ಚಲನಚಿತ್ರ ಇಲಾಖೆಯ ನಿರ್ದೇಶಕರು ಸರ್ಕಾರಕ್ಕೆ ೨೭-೧೦-೭೬ರಂದು ಪತ್ರ ಬರೆದು, ಇತ್ತೀಚೆಗೆ ರೀಮೇಕ್ ಚಿತ್ರಗಳ ಸಂಖ್ಯೆ ಹೆಚ್ಚಾಗುತ್ತಿದೆ. ಅದಕ್ಕೆ ಕಾರಣ ರಿಮೇಕ್ ಚಿತ್ರ ಮಾಡುವುದು ಬಹಳ ಸುಲಭ ಹಾಗೂ ಇದಕ್ಕಾಗಿ ಬೇರ ಭಾಷೆಯ ಚಿತ್ರದ ಸಿದ್ಧವಿರುವ ಚಿತ್ರಕಥೆ ಸುಲಭವಾಗಿ ಸಿಗುತ್ತದೆ. ಆದರ ಇದರಿಂದ ಕನ್ನಡ ಚಿತ್ರಗಳಲ್ಲಿ ಸ್ವಂತಿಕೆಯ ಅಭಾವ ಕಾಣುತ್ತಿದೆ. ಈ ಹಿನ್ನೆಲೆಯಲ್ಲಿ ರಿಮೇಕ್ ಚಿತ್ರಗಳಿಗೆ ಸಬ್ಸಿಡಿ ನೀಡಬೇಕೆ ಎಂಬುದರ ಬಗ್ಗೆ ಗಮನ ಸೆಳೆದು, ಆಜ್ಞೆಗಾಗಿ ಕಾದಿದ್ದರು. ಹೀಗಾಗಿ ಸರ್ಕಾರ ಮತ್ತೊಂದು **ಆದೇಶ** (ಸಂಖ್ಯೆ: ಹೆಚ್‌ಡಿ ೧೨೩, ಪಿಐಎಫ್ ೭೬, ದಿನಾಂಕ:೪-೭-೭೭) ಹೊರಡಿಸಿ ಸ್ಪಷ್ಟನೆ ನೀಡಿತು.

ಸರ್ಕಾರ ಈ ಮೊದಲು ರೀಮೇಕ್ ಚಿತ್ರ - ಡಬಿಂಗ್ ಆವೃತ್ತಿ ಚಿತ್ರದ ವ್ಯಾಖ್ಯೆ ಮಾಡಿದ್ದರೂ, 'ರೀಮೇಕ್ ಚಿತ್ರ ಎಂದರೆ ಬೇರೆ ಭಾಷೆಯಲ್ಲಿನ ಚಿತ್ರದ ತದ್ರೂಪ, ಮತ್ತೊಂದು ಭಾಷೆಗೆ ಚಿತ್ರಿಸುವುದು, ಕೆಲವೊಮ್ಮೆ ಬದಲಾವಣೆ ಸಹಿತ/ರಹಿತವೂ ಆಗಿರಬಹುದು' ಎಂದಿತು.

'ಡಬಿಂಗ್ ಆವೃತ್ತಿಯೆಂದರೆ ಒಂದು ಚಿತ್ರದ ಮೂಲ ದೃಶ್ಯ ಟ್ರ್ಯಾಕ್‌ನ್ನು ಉಳಿಸಿಕೊಂಡು, ಕೇವಲ ಭಾಷೆಮಾತ್ರ ಬದಲಾಯಿಸುವುದು. ಮೂಲ ಚಿತ್ರದ ಕಲಾವಿದರೇ ಇದ್ದರೂ ಬೇಕಾದ ಭಾಷೆಯನ್ನು ಬೇರೆ ಟ್ರ್ಯಾಕ್‌ನಲ್ಲಿ ಧ್ವನಿ ಮುದ್ರಿಸುವುದು. ಪಾತ್ರಗಳ ಮಾಡಿದ ಧ್ವನಿ ಮೂಲ ಕಲಾವಿದನದೇ ಆಗಿರಬೇಕಿಲ್ಲ, ಬೇರೆ ಯಾರಾದರೂ ಕಂಠದಾನ ಕಲಾವಿದರದಾಗಿರಬಹುದು. ಅಂತಿಮ ಪ್ರತಿಮಾತ್ರ, ಮೂಲ ಭಾಷೆಯ ದೃಶ್ಯ ಬಳಸಿ ಹೊಸದಾಗಿ ಧ್ವನಿ ಗ್ರಹಣ ಮಾಡಿದ ಧ್ವನಿಯನ್ನು ಮುದ್ರಿಸಲಾಗಿರುತ್ತದೆ' ಎಂದಿತು.

ಒಂದು ಸರ್ಕಾರಿ ಆದೇಶ ಜಾರಿಗೆ ಬರುವ ಹತ್ತು ದಿನ ಮೊದಲು, ಅಂದರೆ ದಿನಾಂಕ ೨೫-೪-೭೭ರಂದು ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ಮಂಡಳಿ ನಿರ್ದೇಶಕರು ಸರ್ಕಾರಕ್ಕೆ ಪತ್ರ ಬರೆದರು. ಅದರಲ್ಲಿ, ಈಗ ಕಂಠೀರವ ಸ್ಟುಡಿಯೋ ಆವರಣದಲ್ಲಿ, ಸ್ಟುಡಿಯೋದ ಪ್ರಗತಿ ಕಾರ್ಯಕ್ರಮಗಳ ಅಂಗವಾಗಿ ಕಪ್ಪು-ಬಿಳುಪು ಹಾಗೂ ವರ್ಣ ಸಂಸ್ಕರಣ ಲ್ಯಾಬೊರೇಟರಿ ಸ್ಥಾಪಿಸಲಾಗಿದೆ. ಕರ್ನಾಟಕ ಚಲನಚಿತ್ರ ಅಭಿವೃದ್ಧಿ ಮಂಡಳಿ ಆರ್ಥಿಕ ನೆರವು ನೀಡಿದ ಚಿತ್ರಗಳ ಸಂಸ್ಕರಣ ಕಾರ್ಯ ಮೇಲೆ ಉಲ್ಲೇಖಿಸಿದ ಲ್ಯಾಬೊರೇಟರಿಯಲ್ಲಿ ಕೈಗೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಸಹಾಯಧನ ನಿಯಮಾವಳಿ ಪೂರ್ವದಲ್ಲಿದ್ದಂತೆ ಜಾರಿಗೊಳಿಸಿ, ನಿರ್ಮಾಪಕರು ತಮ್ಮ ಚಿತ್ರಗಳನ್ನು ಕರ್ನಾಟಕದಲ್ಲಿಯೇ ಚಿತ್ರಿಸಿ, ರಾಜ್ಯದಲ್ಲಿ ಸಂಸ್ಕರಿಸಲು ನಿರ್ದೇಶನ ಮಾಡಬೇಕೆಂದು ಕೋರಿದರು.

ಚಲನಚಿತ್ರ ಇಲಾಖೆಯ ನಿರ್ದೇಶಕರು ಕಂಠೀರವ ಸ್ಟುಡಿಯೋ ಆವರಣದಲ್ಲಿನ 'ಕ್ವಾಲಿಟಿ ಲ್ಯಾಬ್'ಗೆ ತಪಾಸಣೆ ಭೇಟಿ ನೀಡಿ, ದಿನಾಂಕ ೧೬ ೬ ೭೭ರಂದು ಸರ್ಕಾರಕ್ಕೆ ಪತ್ರ ಬರೆದು, ಎಲ್ಲ ೩೫ ಎಂ.ಎಂ ವರ್ಣ ಚಿತ್ರಗಳ ಸಂಸ್ಕರಣ, ಮುದ್ರಣ ಸೌಲಭ್ಯ ಕರ್ನಾಟಕ ರಾಜ್ಯದಲ್ಲೇ ಲಭ್ಯ ಇರುವುದರಿಂದ ಹಾಗು ಅನುಕೂಲಗಳು ಸ್ಥಳೀಯ ಸ್ಟುಡಿಯೋದಲ್ಲೂ ಇರುವುದರಿಂದ ೩೫ ಎಂ.ಎಂ ವರ್ಣಚಿತ್ರಗಳನ್ನು ರಾಜ್ಯದ ಹೊರಗೆ ಸಂಸ್ಕರಿಸಲು ಒಂದು ವರ್ಷದ ವರೆಗೆ ನೀಡಲಾಗಿದ ವಿನಾಯತಿಯನ್ನು ೧೯೭೭ರ ಜುಲೈ ೧ರಿಂದ ರದ್ದುಪಡಿಸಲು ಆಗ್ರಹಿಸಿತು.

ಹೀಗಾಗಿ ಸರ್ಕಾರ ಮೂರೇ ವಾರದಲ್ಲಿ ಮತ್ತೊಂದು **ಆದೇಶ** ಹೊರಡಿಸಿ ಈ ಸಮಸ್ಯೆಗೆ ನಾಟಕೀಯ ತಿರುವು ನೀಡಿ, (ಸಂಖ್ಯೆ: ಹೆಚ್‌ಡಿ ೪೪, ಪಿಐಎಫ್ ೭೭, ದಿನಾಂಕ:೧೬-೦೭-೧೯೭೭) ಮೊದಲು ನೀಡಿದ ವಿನಾಯತಿ ರದ್ದುಗೊಳಿಸುವ ತಿದ್ದುಪಡಿ ಹೊರಡಿಸಿತು. ನಿರ್ಮಾಪಕರು ಮತ್ತ ಮರಳಿ ಮಣ್ಣಿಗೆ ಬಂದರು.

ಕಥೆಯಲ್ಲೊಂದು ಉಪಕಥೆ ಎಂಬಂತೆ ಇನ್ನೊಂದು ಮಹತ್ತರ ತಿರುವು ಸರ್ಕಾರದಲ್ಲಿ ಘಟಿಸಿತು.ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಯ ವ್ಯವಸ್ಥಾಪಕ ಸಮಿತಿಯ ನಿರ್ದೇಶಕರು ಸರ್ಕಾರಕ್ಕೆ ೧೧-೬-೭೭ರಂದು ಪತ್ರ ಬರೆದು, ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಯು ಸಂಪೂರ್ಣ ಆರ್ಥಿಕ ನೆರವು ನೀಡಿ, ನಿರ್ಮಾಪಕರ ಮುಖಾಂತರ ನಿರ್ಮಿಸಿದ ಚಿತ್ರಗಳ ಸಹಾಯಧನವನ್ನು ಸರ್ಕಾರದಿಂದ ನೇರವಾಗಿ ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಯೇ ಪಡೆಯುವಂತೆ ಸಹಾಯಧನ ನಿಯಮಾವಳಿ ತಿದ್ದುಪಡಿ ಮಾಡಲು ಕೋರಿದರು.

ತಕ್ಷಣ ಸರ್ಕಾರ ಒಂದು **ಆದೇಶ** (ಸಂಖ್ಯೆ: ಹೆಚ್‌ಡಿ ೯೩, ಪಿಐಎಫ್ ೭೬, ದಿನಾಂಕ ೨-೮-೭೭) ಹೊರಡಿಸಿ, ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿ ಚಿತ್ರ ನಿರ್ಮಾಣಕ್ಕೆ ಸಂಪೂರ್ಣ ಆರ್ಥಿಕ ನೆರವು ನೀಡಿದ್ದರೆ, ಅಂತಹ ಸಂದರ್ಭಗಳಲ್ಲಿ ನಿರ್ಮಾಪಕ ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಗೆ ಅಧಿಕಾರ ಪತ್ರ ಮುಚ್ಚಳಿಕೆ ನೀಡಿದ್ದರೆ, ಚಿತ್ರದ ನಿರ್ಮಾಪಕರ ಬದಲು ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಗೆ ಸಹಾಯಧನ ನೀಡಲಾಗುವುದೆಂದು ಘೋಷಿಸಿದರು. ಅಂತಯೇ ಕರ್ನಾಟಕ ಚಲನಚಿತ್ರ ಅಭಿವೃದ್ಧಿ ಮಂಡಳಿ ಸಹಾಯಧನ ಪಡೆದುಕೊಂಡಿತು.

ಈ ಮೊದಲು ಸರ್ಕಾರಿ **ಆದೇಶ** (ಸಂಖ್ಯೆ : ಹೆಚ್‌ಡಿ ೭೫, ಪಿಐಎಫ್ ೭೫, ದಿನಾಂಕ:೧೮-೨-೭೬) ಮೂಲಕ ಗುಣಮಟ್ಟದ ಮಾನದಂಡ ಜಾರಿಗೊಳಿಸುವುದನ್ನು ೨೦-೬-೭೫ ರಿಂದ ಎರಡು ವರ್ಷಗಳ ೨೦-೬-೭೭ ಜಾರಿಯಾಗದಂತೆ ತಡೆಯಲಾಗಿತ್ತು. ಇದನ್ನೇ ಮತ್ತೊಂದು ಆಜ್ಞೆ (ಸಂಖ್ಯೆ: ಹೆಚ್‌ಡಿ ೫೩, ಪಿಐಎಫ್ ೭೭, ೨೦-೯-೭೭) ಮೂಲಕ ೨೦-೬-೭೭ ರಿಂದ ೩೧-೩-೭೮ರ ತನಕ ಗುಣಮಟ್ಟದ ಆಜ್ಞೆ ಜಾರಿಯಾಗದಂತ ತಡೆಯಿತು.

೦೩-೧೧-೭೭ ರಂದು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಕಾರ್ಯದರ್ಶಿ ಸರ್ಕಾರಕ್ಕೆ ಪತ್ರ ಬರೆದು, ಹೆಚ್ಚುತ್ತಿರುವ ಚಿತ್ರನಿರ್ಮಾಣಗಳ ಸಂಖ್ಯೆಯಿಂದಾಗಿ, ಆಧುನಿಕ ಚಿತ್ರೀಕರಣ ಉಪಕರಣಗಳು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲದಿರುವುದರಿಂದ, ಅವು ಸುಲಭವಾಗಿ ಲಭ್ಯವಾಗುತ್ತಿಲ್ಲ. ಹೀಗಾಗಿ ಸ್ಥಳೀಯ ಉಪಕರಣ ಬಳಸಬೇಕೆಂಬ ನಿಯಮವನ್ನು ಸಡಿಲಿಸಬೇಕೆಂದು ಮನವಿ ಮಾಡಿದರು.

ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೧೩೫, ಪಿಐಎಫ್ ೭೭, ದಿನಾಂಕ:೧೬-೦೧-೭೮)ಹೊರಡಿಸಿ, ಮೂಲ ನಿಯಮಾವಳಿಗೆ ತಿದ್ದುಪಡಿ ಮಾಡಿ, ಇಂತಹ ಆಧುನಿಕ ಹೊರಾಂಗಣ ಘಟಕದ ಸೇವೆಯನ್ನು ಪಡೆದು ಚಿತ್ರೀಕರಣ ಆರಂಭಿಸುವ ಮುನ್ನ ಚಲನಚಿತ್ರ ಇಲಾಖೆಯ ನಿರ್ದೇಶಕರ ಪೂರ್ವಾನುಮತಿ ಪಡೆಯಬೇಕು. ಹಾಗೂ ಅಂತಹದೊಂದು ಅನುಮತಿ ಪ್ರಮಾಣಪತ್ರ ಇಲಾಖೆಯಿಂದ ಪಡೆದು ಸಹಾಯಧನ ಅರ್ಜಿಯೊಂದಿಗೆ ಸಲ್ಲಿಸಬೇಕೆಂದು ಸೂಚಿಸಿತು.

ಆದರೆ ಈಗಾಗಲೇ ರಾಜ್ಯದ ಹೊರಗಿನಿಂದ ಚಿತ್ರೀಕರಣ ಉಪಕರಣ ತಂದು ಬಳಸಿದ ನಿರ್ಮಾಪಕರಿಗೆ ಈ ನಿಯಮ ಅನ್ವಯವಾಗುವುದಿಲ್ಲ ಎಂದೂ ಸ್ಪಷ್ಟಪಡಿಸಿತು.

ಈ ಮೊದಲು ೧೨-೧೨-೭೭ ಮತ್ತು ೨-೨-೭೮ ರಂದು ಹೊರಡಿಸಿದ ಸರ್ಕಾರಿ **ಆದೇಶ**ಗಳ ಪ್ರಕಾರ, ರಾಜ್ಯದಲ್ಲಿ ನಿರ್ಮಿಸಿದ ಈಸ್ಟಮನ್, ಫ್ಯೂಜಿ, ಆರ್ವೋಕಲರ್ ಚಿತ್ರಗಳು ರಾಜ್ಯದಲ್ಲೇ ಸಂಸ್ಕರಣಗೊಳ್ಳಬೇಕೆಂಬ ನಿಯಮದಿಂದ ೩೧-೩-೭೮ರ ವರೆಗೆ ರಿಯಾಯಿತಿ ನೀಡಿತು.

ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೪೪, ಪಿಐಎಫ್ ೭೭, ದಿನಾಂಕ:೬-೪-೭೮,I) ಪ್ರಕಟಿಸಿ, ತಜ್ಞರ ಸಮಿತಿಯೊಂದನ್ನು ರಚಿಸಿ ವರ್ಣ ಚಿತ್ರಗಳ ಸಂಸ್ಕರಣ ಕಾರ್ಯ ಕುರಿತು ಬೆಂಗಳೂರಿನ ಕ್ವಾಲಿಟಿ ಲ್ಯಾಬೊರೇಟರಿಯ ಅರ್ಹತೆ ಪರೀಕ್ಷಿಸಿ, ಸರ್ಕಾರಕ್ಕೊಂದು ವರದಿ ಸಲ್ಲಿಸಲು ಸೂಚಿಸಿತು.

ಈಗ ಮತ್ತೊಂದು **ಆದೇಶ** (ಸಂಖ್ಯೆ: ಹೆಚ್‌ಡಿ ೪೪, ಪಿಐಎಫ್ ೭೭, ದಿನಾಂಕ:೬-೪-೭೮,II) ಹೊರಡಿಸಿ, ಈ ವಿನಾಯಿತಿಯನ್ನು ಪುನಃ ೧೫-೫-೭೮ರ ವರೆಗೆ, ಅಥವಾ ಸಮಿತಿಯ ವರದಿ ಅಥವಾ ಸರ್ಕಾರದ ಆಜ್ಞೆ, ಯಾವುದು ಮೊದಲು ಬರುವುದೋ ಅಲ್ಲಿಯವರೆಗೆ ಎಂದು ವಿಸ್ತರಿಸಿತು. (ಈ ಆದೇಶದಲ್ಲಿ ಉಲ್ಲೇಖಿಸಲಾದ ಮೂರು ಸರ್ಕಾರಿ ಆದೇಶಗಳ ಪ್ರತಿ ನಮಗೆ ದೊರೆತಿಲ್ಲ. ಅವೆಂದರೆ ಸರ್ಕಾರಿ **ಆದೇಶ** ಸಮ ಸಂಖ್ಯೆ ದಿನಾಂಕ ೨೮-೦೯-೭೭, ಸರ್ಕಾರಿ **ಆದೇಶ** ಸಮ ಸಂಖ್ಯೆ ದಿನಾಂಕ ೧೨-೧೨-೭೭, ಸರ್ಕಾರಿ **ಆದೇಶ** ಸಮ ಸಂಖ್ಯೆ ದಿನಾಂಕ ೦೨ ೦೨-೭೮.)

ಈಗ ಮತ್ತೊಮ್ಮೆ ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೫೩, ಪಿಐಎಫ್ ೭೭, ದಿನಾಂಕ ೨೨-೯-೭೮) ಹೊರಡಿಸಿ ೧-೪-೭೮ ರಿಂದ ಇನ್ನೆರಡು ವರ್ಷಗಳ ಕಾಲ ಸಹಾಯಧನ ನೀಡಿಕೆಯಲ್ಲಿ ಗುಣಮಟ್ಟದ ನಿಯಮ ಜಾರಿಯಾಗದಂತೆ ಸೂಚಿಸಿ, ಸಹಾಯಧನ ಯೋಜನೆ ಮುಂದುವರಿಸಲು ತೀರ್ಮಾನಿಸಿತು.

೧. ಸರ್ಕಾರ ಪ್ರಥಮ ಬಾರಿಗೆ ತನ್ನ ಆದೇಶದಲ್ಲಿ ಈ ಪದ ಬಳಸಿತು

ಈಗ **ಆದೇಶ** (ಸಂಖ್ಯೆ: ಹೆಚ್‌ಡಿ ೪೪, ಪಿಐಎಫ್ ೭೭, ದಿನಾಂಕ ೩-೧೦-೭೮) ಮೂಲಕ, ತಜ್ಞರ ಸಮಿತಿಯು ವರದಿ ಶಿಫಾರಸ್ಸಿನ ಮೇರೆಗೆ, ರಾಜ್ಯದಲ್ಲಿ ನಿರ್ಮಿತಗೊಂಡರೂ ಹೊರ ರಾಜ್ಯದಲ್ಲಿ ಚಿತ್ರದ ವರ್ಣಸಂಸ್ಕರಣ ಮಾಡಿಸಿದರೆ, ಅಂತಹ ಚಿತ್ರಗಳ ನಿರ್ಮಾಪಕರಿಗೆ ನೀಡುವ ಸಹಾಯಧನದಲ್ಲಿ ೨೫ ಸಾವಿರ ರೂಪಾಯಿ ಕಡಿತ ಮಾಡಬೇಕೆಂಬ ನಿಯಮ ರೂಪಿಸಿತು. ಈ ಆಜ್ಞೆಯನ್ನು ೧೬-೫-೭೮ ರಿಂದ ಜಾರಿಗೆ ತರಲಾಯಿತು. ಆದರೆ ಈ ಮೊದಲೇ ಸರ್ಕಾರಿ **ಆದೇಶದಲ್ಲಿ** (ಸಂಖ್ಯೆ: ಹೆಚ್‌ಡಿ ೪೪, ಪಿಐಎಫ್ ೭೭, ದಿನಾಂಕ:೬-೪-೭೮), ಸರ್ಕಾರ ಒಂದು ತಜ್ಞರ ಸಮಿತಿ ರಚಿಸಿ, ಬೆಂಗಳೂರಿನ ಕ್ವಾಲಿಟಿ ಲ್ಯಾಬೊರೇಟರಿಯ ವರ್ಣ ಚಿತ್ರಗಳ ಸಂಸ್ಕರಣ ಸೂಕ್ತತೆಯ ಬಗ್ಗೆ ವರದಿಯನ್ನು ಸರ್ಕಾರದ ಪರಿಶೀಲನೆಗೆ ಸಲ್ಲಿಸಲು ಸೂಚಿಸಿತು. (ಈ **ಆದೇಶದ** ಪ್ರತಿ ಲಭ್ಯವಿಲ್ಲ)

ನಿರ್ಮಾಪಕರು ಕೇವಲ ತಮ್ಮಲ್ಲಿರುವ ಬಂಡವಾಳದಿಂದ ಚಿತ್ರ ನಿರ್ಮಾಣ ಪೂರ್ತಿಗೊಳಿಸಲು ಸಾಧ್ಯವಿಲ್ಲವೆಂಬ ಅಳಲನ್ನು ಅರ್ಥಮಾಡಿಕೊಂಡ ಸರ್ಕಾರ, ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೧೬, ಪಿಐಎಫ್ ೭೯, ದಿನಾಂಕ:೧೪-೩-೭೯) ಪ್ರಕಟಿಸಿ, ಚಿತ್ರ ನಿರ್ಮಾಣ ಪೂರ್ತಿಗೊಂಡು, ಸೆನ್ಸಾರಾದ ಬಳಿಕ ನೀಡಲಾಗುವ ಸಹಾಯಧನವನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕು ಅಥವಾ ಕರ್ನಾಟಕ ರಾಜ್ಯ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿಗೆ ಅಥವಾ ರಾಷ್ಟ್ರೀಯ ಚಲನಚಿತ್ರ ಹಣಕಾಸು ನಿಗಮ ಅಡವಿಟ್ಟುಕೊಂಡು, ಸಂಪೂರ್ಣ ಅಥವಾ ಭಾಗಶಃ ಹಣಕಾಸು ನೆರವು ನೀಡಿದ್ದರೆ, ಅದಕ್ಕೆ ನಿರ್ಮಾಪಕನಿಂದ ಅನುಮತಿ ಪತ್ರ ಪಡೆದಿದ್ದರೆ ಅದಷ್ಟೇ ಮೊತ್ತವನ್ನು ಈ ಸಂಸ್ಥೆಗೆ ನೇರವಾಗಿ ನೀಡಿ, ಏನಾದರೂ ಮೊತ್ತ ಉಳಿದರೆ ಅದನ್ನು ನಿರ್ಮಾಪಕರಿಗೆ ನೀಡುವ ಉದಾರ ನೀತಿ ತಾಳಿತು.

ಕರ್ನಾಟಕ ಸರ್ಕಾರವು ಸಹಾಯಧನ ನಿಯಮಾವಳಿಯನ್ನು ಸರಳಗೊಳಿಸಲು ನಿರ್ಧರಿಸಿ, ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೬, ಪಿಐಎಫ್ ೭೯, ದಿನಾಂಕ ೨೬-೭-೭೯) ಪ್ರಕಾರ, ''ಕರ್ನಾಟಕ ರಾಜ್ಯ ಪೂರ್ಣ ಪ್ರಮಾಣದ ರೂಪಕ ಚಿತ್ರಗಳ ಸಹಾಯಧನ ನಿಯಮಾವಳಿ ೧೯೭೯'' ರಚಿಸಿ, ಒಂದನೇ ಆಗಸ್ಟ್ ೧೯೭೯ರಿಂದ ಜಾರಿಗೊಳಿಸಿತು. ಈ ಮೊದಲು ನೀಡಲಾದ ಕೆಲವು ವಿಶೇಷ ವಿನಾಯಿತಿಗಳನ್ನು ಮುಂದುವರಿಸಿತು. (ಇದರಲ್ಲಿ ಉಲ್ಲೇಖಿಸಲಾದ ಸರ್ಕಾರಿ **ಆದೇಶ** ಸಂಖ್ಯೆ: ಹೆಚ್‌ಡಿ ೧೭೫, ಪಿಐಎಫ್ ೭೮, ದಿನಾಂಕ:೩-೩-೭೯ ಇದರ ಪ್ರತಿ ಲಭ್ಯವಿಲ್ಲ. ಇದರಲ್ಲಿ ಹಿಂಬದಿ ಪ್ರಕ್ಷೇಪಣೆ, ವಿಶೇಷ ದೃಶ್ಯ ಪ್ರಭಾವ, ಧ್ವನಿ ಮುದ್ರಣ, ಮರುಮುದ್ರಣಕ್ಕೆ ರಾಜ್ಯದ ಹೊರಗಡೆ ಮಾಡಲು ೩೧-೩-೮೦ರ ವರೆಗೆ ವಿಸ್ತರಣೆ ನೀಡಿದ ಉಲ್ಲೇಖವಿದೆಯೆಂದು ತಿಳಿದುಬರುತ್ತದೆ.)

ನಿಯಮಾವಳಿಯಲ್ಲಿ ಪೂರ್ಣಪ್ರಮಾಣದ ಚಿತ್ರ ವ್ಯಾಖ್ಯೆಯಲ್ಲಿ, ಇದುವರೆವಿಗೂ ಇದ್ದ ಶೈಕ್ಷಣಿಕಚಿತ್ರ ಪದವನ್ನು ತ್ಯಜಿಸಿ, ಕೇವಲ ಸಾಕ್ಷ್ಯಚಿತ್ರಗಳನ್ನು ಅರ್ಹವಲ್ಲ ಎಂದು ನಿರ್ಧರಿಸಿತು. ಈ ಮೊದಲೇ ಮಕ್ಕಳ ಚಿತ್ರ ಪದವನ್ನು ತ್ಯಜಿಸಿಯಾಗಿತ್ತು.

ರಿಮೇಕ್ ಚಿತ್ರ ಎಂದರೆ, ಈ ಮೊದಲು ಯಾವುದೇ ಭಾಷೆಯಲ್ಲಿ ಬಿಡುಗಡೆಯಾದ ಚಿತ್ರವನ್ನು ಆಧರಿಸಿ, ಅದೇ ಕಥೆ ಆಧರಿಸಿ, ಅದೇ ಭಾಷೆ ಅಥವಾ ಬೇರೆ ಭಾಷೆಯಲ್ಲಿ ನಿರ್ಮಿಸಿದ ಚಿತ್ರ ಎಂದು ಸ್ಪಷ್ಟಪಡಿಸಿತು. ಆದರೆ ಇದರಲ್ಲಿ ಪೌರಾಣಿಕ, ಐತಿಹಾಸಿಕ ಅಥವಾ ಜಾನಪದ ಚಿತ್ರಗಳನ್ನು ರಿಮೇಕ್ ಎಂದು ಭಾವಿಸುವಂತಿಲ್ಲ ಎಂಬ ನಿಲುವು ತೋರಿತು.

ಏಕಕಾಲದಲ್ಲಿ ಬಹು ಆವೃತ್ತಿ ಎಂದರೆ, ಒಂದಕ್ಕಿಂತಲೂ ಹೆಚ್ಚು ಭಾಷೆಯಲ್ಲಿ ಅದೇ ಚಿತ್ರೀಕರಣ ಹಂತದಲ್ಲಿ, ಪ್ರತ್ಯೇಕ ನೆಗೆಟಿವ್ ಹಾಗೂ ಧ್ವನಿ ಟ್ರ್ಯಾಕ್‌ಗಳನ್ನು ಬಳಸಿ ನಿರ್ಮಿಸಿದ ಚಿತ್ರ ಎಂದು ವ್ಯಾಖ್ಯಾನಿಸಿತು.

ಬಹು ಮುಖ್ಯವಾದ ನಿಲುವೆಂದರೆ, ಕನ್ನಡ,ಕೊಡವ, ಕೊಂಕಣಿ ಹಾಗು ತುಳು ಅಲ್ಲದೇ ಬೇರೆ ಯಾವುದೇ ಭಾಷೆಯ ಚಿತ್ರ ಒಂದನೇ ಆಗಸ್ಟ್ ೧೯೭೯ರ ನಂತರ ನಿರ್ಮಾಣ ಆರಂಭಿಸಿದಲ್ಲಿ ಅವು ಸಹಾಯಧನಕ್ಕೆ ಅರ್ಹವಲ್ಲವೆಂದು ಸಾರಿತು. ರಿಮೇಕ್ ಅಥವಾ ಡಬ್ ಆದ ಚಿತ್ರಗಳು ಯಾವುದೇ ರೀತಿಯ ಸಹಾಯಧನಕ್ಕೆ ಅರ್ಹವಲ್ಲ ಎಂಬ ನಿಲುವು ತಾಳಿತು.

ಏಕಕಾಲದಲ್ಲಿ ಬಹು ಆವೃತ್ತಿ ಚಿತ್ರ ತಯಾರಿಸಿದರೆ, ಯಾವುದಾದರೂ ಒಂದು ಆವೃತ್ತಿ, ಕನ್ನಡ, ಕೊಡವ, ಕೊಂಕಣಿ, ತುಳು ಪೂರ್ಣ ಸಹಾಯಧನಕ್ಕೆ ಅರ್ಹವೆಂದೂ, ಉಳಿದ ಆವೃತ್ತಿಗಳಿಗೆ, ಪ್ರತಿ ಭಾಷೆಗೂ ಐವತ್ತು ಸಾವಿರ ರೂಪಾಯಿ ಸಹಾಯಧನ ನೀಡಲಾಗುವದೆಂದೂ ತಿಳಿಸಿತು.

ನಿರ್ಮಾಣ ಆರಂಭ ಮಾಡುವ ಮೊದಲೇ, ನಿರ್ಮಾಪಕರು ಚಲನಚಿತ್ರ ಇಲಾಖೆಯ ನಿರ್ದೇಶಕರಿಗೆ ಲಿಖಿತ ಮೂಲಕ ತಿಳಿಸಬೇಕು ಎಂದು ಸೂಚಿಸಿತು, ಆದರೆ ಎಷ್ಟು ದಿನ ಮೊದಲು ಎಂಬುದನ್ನು ಉಲ್ಲೇಖಿಸಲಿಲ್ಲ.

ಸಹಾಯಧನವನ್ನು ನಿರ್ಮಾಪಕರಿಗೆ ಮಾತ್ರ ನೀಡಲಾಗುವುದು. ಒಂದು ವೇಳೆ ಆರ್ಥಿಕ ಸಹಾಯ ಪಡೆದು, ಸಹಾಯಧನವನ್ನು ಪೂರ್ಣ ಅಥವಾ ಅದರ ಭಾಗಶಃ ಮೊತ್ತವನ್ನು ರಾಷ್ಟ್ರೀಕೃತ ಬ್ಯಾಂಕು, ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ಮಂಡಳಿ ಅಥವಾ ಮುಂಬಯಿಯ ಚಲನಚಿತ್ರ ವಿತ್ತ ನಿಗಮ ಇವುಗಳಿಗೆ ಅಡವಿಟ್ಟಿದ್ದರೆ, ನಿರ್ಮಾಪಕನ ಅಧಿಕಾರ ಪತ್ರ ಆಧರಿಸಿ ಈ ಸಂಸ್ಥೆಗಳಿಗೆ ನೀಡಿ, ಏನಾದರೂ ಮೊತ್ತ ಉಳಿದರೆ ನಿರ್ಮಾಪಕನಿಗೆ ನೀಡುವದೆಂದು ಸ್ಪಷ್ಟಪಡಿಸಿತು.

ಸುಳ್ಳು ದಾಖಲೆ ಸಲ್ಲಿಸಿದರೆ ಕೇವಲ ನಿರ್ಮಾಪಕನಷ್ಟೇ ಸಹಾಯಧನ ಪಡೆಯಲು ಅನರ್ಹನಲ್ಲ, ಪಡೆದಿದ್ದರೆ ಅದನ್ನು ಮರಳಿಸುವ ಜವಾಬ್ದಾರಿಗ ಅವನು, ಅವನಿಗೆ ಆರ್ಥಿಕ ನೆರವು ನೀಡಿ , ಸರ್ಕಾರದಿಂದ ಸಹಾಯಧನ ಪಡೆದ ಬಂಡವಾಳದಾರನೂ ಬಾಧ್ಯನೆಂದು ನಷ್ಟ ಭರ್ತಿ ಮುಚ್ಚಳಿಕೆ ಬರೆದು ಕೊಡಬೇಕು ಎಂದಿತು.

### ಉಪಭಾಷಾ ಚಿತ್ರಗಳು

ರಾಜ್ಯದಲ್ಲಿನ ಚಿತ್ರೋದ್ಯಮದ ಪ್ರಗತಿಯನ್ನು ಬೆಂಬಲಿಸಲು ನಿರ್ಧರಿಸಿದ ಸರ್ಕಾರ **ಆದೇಶ** (ಸಂಖ್ಯೆ: ಹೆಚ್‌ಡಿ ೬೬, ಪಿಐಎಫ್ ೮೧, ದಿನಾಂಕ:೨೯-೩-೮೨) ಪ್ರಕಟಿಸಿ ಕನ್ನಡ, ಕೊಡವ, ತುಳು ಹಾಗೂ ಕೊಂಕಣಿ ಭಾಷೆಯ ಪೂರ್ಣ ಪ್ರಮಾಣದ ಕಥಾ ವರ್ಣ ಚಿತ್ರಗಳಿಗೆ ಒಂದು ಲಕ್ಷ ರೂಪಾಯಿ ಹಾಗೂ ಕಪ್ಪು ಬಿಳುಪು ಚಿತ್ರಕ್ಕೆ ಐವತ್ತು ಸಾವಿರ ರೂಪಾಯಿ ಸಹಾಯಧನ ಘೋಷಿಸಿತು. ಏಕಕಾಲದಲ್ಲಿ ತಯಾರಿಸಿದ ಇತರ ಆವೃತ್ತಿಗೆ, ಪ್ರತಿ ಚಿತ್ರಕ್ಕೆ ೨೫ ಸಾವಿರ ರೂಪಾಯಿ ಸಹಾಯಧನ ನೀಡಲು ನಿರ್ಧರಿಸಿತು. ಈ ಆದೇಶ ಏಪ್ರಿಲ್ ಒಂದು ೧೯೮೧ರಿಂದ ಜಾರಿಗೆ ಬಂದಿತು. ಈ ಚಿತ್ರಗಳು ರಾಜ್ಯದಲ್ಲೇ ವರ್ಣ ಸಂಸ್ಕರಣ ಹೊಂದಿರಬೇಕಿತ್ತು. ಈ ರೀತಿ ಅಲ್ಲದ ಚಿತ್ರಗಳು, ಈ ದಿನಾಂಕದ ನಂತರ ಸಹಾಯಧನಕ್ಕೆ ಅನರ್ಹವೆಂದು ಸಾರಿತು.

ರಾಜ್ಯದಲ್ಲಿ ಲಭ್ಯವಿಲ್ಲದಿರುವ ತಾಂತ್ರಿಕ ಸೌಲಭ್ಯಗಳಾದ ಹಿನ್ನೆಲೆ ಪ್ರಕ್ಷೇಪಣೆ, ವಿಶೇಷ ದೃಶ್ಯ ಪ್ರಭಾವ, ಧ್ವನಿಗ್ರಹಣ ಹಾಗೂ ಮರುಮುದ್ರಣ ಇವುಗಳನ್ನು ರಾಜ್ಯದ ಹೊರಗಡೆ ಪಡೆಯಲು ನಿರ್ಮಾಪಕನಿಗೆ ಸಮಯ ವಿಸ್ತರಣೆಯನ್ನು ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೧೭೫, ಪಿಐಎಫ್ ೭೮, ದಿನಾಂಕ:೩-೩-೭೯)ದ ಮೂಲಕ ೧-೪-೭೮ರಿಂದ ಎರಡು ವರ್ಷಗಳ ಕಾಲ, ಸರ್ಕಾರಿ **ಆದೇಶ** ಸಂಖ್ಯೆ: ಹೆಚ್‌ಡಿ ೪೫, ಪಿಐಎಫ್ ೮೦, ದಿನಾಂಕ:೧೫-೧೨-೮೦ರ ಮೂಲಕ ೧-೪-೮೦ರಿಂದ ಎರಡು ವರ್ಷಗಳ ಕಾಲ, ಸರ್ಕಾರಿ **ಆದೇಶ** ಸಂಖ್ಯೆ: ಹೆಚ್‌ಡಿ ೭೯; ಪಿಐಎಫ್ ೮೨, ದಿನಾಂಕ:೪-೧೦-೮೨ರ ಮೂಲಕ ೧-೪-೮೨ ರಿಂದ ಮತ್ತೆ ಒಂದು ವರ್ಷ ಕಾಲ ಅವಕಾಶ ಒದಗಿಸಿತು. ಸರ್ಕಾರಿ **ಆದೇಶ** ಸಂಖ್ಯೆ: ಐಟಿವೈ ೧೨೫, ಪಿಐಎಫ್ ೮೩, ದಿನಾಂಕ:೯-೯-೮೩ ಪ್ರಕಟಿಸುವ ಮೂಲಕ ಈ ಸಮಯಾವಕಾಶವನ್ನು ೧-೪-೮೩ರಿಂದ ೩೧-೧೨-೮೫ರ ವರೆಗೆ ವಿಸ್ತರಿಸಿತು. ಸರ್ಕಾರಿ **ಆದೇಶ** ಸಂಖ್ಯೆ: ಐಟಿವೈ ೧೮೦, ಪಿಐಎಫ್ ೮೫, ದಿನಾಂಕ ೯-೯-೮೫ರಲ್ಲಿ ೧೯೮೫-೮೬ರ ಆಯವ್ಯಯ ಮಂಡನೆ ಭಾಷಣದಲ್ಲಿ ಮುಖ್ಯ ಮಂತ್ರಿಗಳು ಡಿಸೆಂಬರ್ ೧೯೮೫ರ ವರೆಗೆ ಈಗಿರುವ ಸಹಾಯಧನ ನೀತಿ ಮುಂದುವರಿಯುವುದೆಂದು, ೧-೧-೮೬ರಿಂದ ಚಲನಚಿತ್ರ ಕುರಿತು ಹೊಸನೀತಿ ಜಾರಿಗೆ ಬರುವುದೆಂದೂ ತಿಳಿಸಿದರು. ಇದರಲ್ಲೇ, ಈ ಮೊದಲಿನ ಸರ್ಕಾರಿ **ಆದೇಶ** ಸಂಖ್ಯೆ: ಐಟಿವೈ ೧೯೭, ಪಿಐಎಫ್ ೮೨, ದಿನಾಂಕ:೧೮-೭-೮೫ ಪ್ರಕಾರ ಕನ್ನಡ, ತುಳು, ಕೊಂಕಣಿ, ಕೊಡವ ಭಾಷೆಯ ಕಥಾ ಚಿತ್ರಗಳಿಗೆ, ೧-೪-೮೪ ರಿಂದ ೩೧-೧೨-೮೫ರೊಳಗೆ ಸೆನ್ಸಾರಿನಿಂದ ಪ್ರಮಾಣ ಪತ್ರ ಪಡೆದಿದ್ದರೆ ಇಂತಹ ವರ್ಣ ಚಿತ್ರಕ್ಕೆ ಒಂದೂವರೆ ಲಕ್ಷ ಹಾಗು ಕಪ್ಪು ಬಿಳುಪು ಚಿತ್ರ ಕ್ಕೆ ಒಂದು ಲಕ್ಷ ಸಹಾಯಧನ ನೀಡುವುದಾಗಿ ಘೋಷಿಸಿತು. ವರ್ಣ ಚಿತ್ರದ ಸಂಸ್ಕರಣ ಕರ್ನಾಟಕದಲ್ಲೇ ಆಗಿರಬೇಕು, ಆದರೆ ಚಿತ್ರಗಳಿಗೆ ಯಾವುದೇ ಗುಣಮಟ್ಟದ ನಿರ್ಬಂಧವಿಲ್ಲವೆಂದು ತಿಳಿಸಿತು. ಏಕಕಾಲದಲ್ಲಿ ಬಹು ಆವೃತ್ತಿ ಚಿತ್ರ ನಿರ್ಮಿಸಿದ್ದರೆ, ಯಾವುದಾದರೂ ಒಂದು ಭಾಷೆಗೆ ಪೂರ್ತಿ ಮೊತ್ತದ ಸಹಾಯಧನ ಉಳಿದ ಆವೃತ್ತಿಗೆ, ಪ್ರತಿಯೊಂದಕ್ಕೂ ಐವತ್ತು ಸಾವಿರ ರೂಪಾಯಿಗಳ ಸಹಾಯಧನ ಅರ್ಹತೆ ಪ್ರಕಟಿಸಿತು. (೯-೯-೮೫ ಆದೇಶ, ಹಾಗೂ ನಂತರದ ಆದೇಶಗಳ ಒಂದು ಪ್ರತಿ ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘಕ್ಕೂ ಕಳಿಸಲು ಪ್ರಾರಂಭಿಸಿತು.) ರಾಜ್ಯದ ಹೊರಗಡೆ ವರ್ಣ ಸಂಸ್ಕರಿಸಿದ ಚಿತ್ರಗಳಿಗೆ ಸರ್ಕಾರಿ ಆದೇಶ ಸಂಖ್ಯೆ ಹೆಚ್‌ಡಿ ೬೬, ಪಿಐಎಫ್ ೪೧, ದಿನಾಂಕ ೨೯-೦೩-೮೨ ರ ಪ್ರಕಾರ ೩೧-೧೨-೮೫ರ ವರೆಗೆ ನೀಡಲಾಗುವದೆಂದು ತಿಳಿಸಿತು.

ಈ ಮೊದಲಿನ ನಿಯಮಾವಳಿ ಪ್ರಕಾರ, ಚಿತ್ರವು ಸೆನ್ಸಾರಾದ ಮೂರು ತಿಂಗಳೊಳಗೆ ಎಲ್ಲ ಅಗತ್ಯ ದಾಖಲೆಗಳೊಂದಿಗೆ ಸಹಾಯಧನಕ್ಕೆ ಕಡತ ಸಲ್ಲಿಸಬೇಕು, ಹಾಗೂ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಿಂದ ಕಡತ ಮರಳಿ ಬಂದರೆ, ಅದರಲ್ಲಿ ಕೇಳಲಾದ ದಾಖಲೆ ಸಹಿತ ೧೫ ದಿವಸದೊಳಗೆ ಮರು ಸಲ್ಲಿಸಬೇಕು. ಹಾಗೆ ಮಾಡದಿದ್ದ ಪಕ್ಷದಲ್ಲಿ ಆ ಚಿತ್ರದ ನಿರ್ಮಾಪಕರು ಸಹಾಯಧನ ಪಡೆಯಲು ಅನರ್ಹರೆಂದು ಘೋಷಿಸಿತು.

ವಾರ್ತಾ ಇಲಾಖೆಯ ನಿರ್ದೇಶಕರು ಪತ್ರ ಬರೆದು ಅನೇಕ ನಿರ್ಮಾಪಕರು ಸಹಾಯಧನ ಕಡತವನ್ನು ೧೫ ದಿನದೊಳಗೆ ಅಗತ್ಯ ದಾಖಲೆ ಸಹಿತ ಸಲ್ಲಿಸಲು ಸಾಧ್ಯವಾಗುತ್ತಿಲ್ಲ, ಆದಾಯ ತೆರಿಗೆ ಚುಕ್ತಾ ಪ್ರಮಾಣ ಪತ್ರ, ಲ್ಯಾಬ್ ಪ್ರಮಾಣ ಪತ್ರ, ಸ್ಟುಡಿಯೋ ಪ್ರಮಾಣ ಪತ್ರ ಹಾಗೂ ಹೊರಾಂಗಣ ಘಟಕದ ಪ್ರಮಾಣ ಪತ್ರ ಇವುಗಳನ್ನು ಈ ಅಲ್ಪ ಅವಧಿಯಲ್ಲಿ ಪಡೆಯುವುದು ಅಸಾಧ್ಯ. ಆದ್ದರಿಂದ ಒಂದು ತಿಂಗಳ ಕಾಲಾವಕಾಶ ಹಾಗೂ ವಿಶೇಷ ಸಂದರ್ಭಗಳಲ್ಲಿ ಇನ್ನೂ ಒಂದು ತಿಂಗಳು ಕಾಲಾವಕಾಶದ ವಿಸ್ತರಣೆ ಕೋರಿದರು.

ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್‌ಡಿ ೧೯೮, ಪಿಐಎಫ್ ೪೧, ದಿನಾಂಕ:೨೪-೮-೮೨) ಹೊರಡಿಸಿ, ನಿರ್ಮಾಪಕರ ಬೇಡಿಕೆ ಮನ್ನಿಸಿತು. ಆದರೆ ವಾರ್ತಾ ಇಲಾಖೆಯ ನಿರ್ದೇಶಕರು ವಿಶೇಷ ಸಂದರ್ಭಗಳಲ್ಲಿ ನೀಡುವ ಹೆಚ್ಚುವರಿ ಸಮಯಾವಕಾಶದ ಅಧಿಕಾರವನ್ನು ೧೫ ದಿನಗಳಿಗೆ ಮೊಟಕುಗೊಳಿಸಿತು. (ಇದರಲ್ಲಿ ಉಲ್ಲೇಖಿಸಿದ ಸರ್ಕಾರಿ ಆಜ್ಞೆ ಸಂಖ್ಯೆ: ಹೆಚ್‌ಡಿ ೧೬, ಪಿಐಎಫ್ ೮೧, ದಿನಾಂಕ:೪-೮-೮೧ ಇದರ ಪ್ರತಿ ಲಭ್ಯವಿಲ್ಲ)

ಕರ್ನಾಟಕದಲ್ಲಿನ ಚಿತ್ರೋದ್ಯಮ ಬೆಳವಣಿಗೆ ಪ್ರೋತ್ಸಾಹಿಸಲು, ೧೯೮೩-೮೪ರ ಮುಂಗಡ ಪತ್ರ ಮಂಡನೆ ಭಾಷಣದಲ್ಲಿ ಮುಖ್ಯಮಂತ್ರಿಗಳು ಸಹಾಯಧನದಲ್ಲಿ ಹೆಚ್ಚಳ ಘೋಷಿಸಿದರು. ಜೊತೆಗೆ ೧-೪-೮೪ರ ನಂತರ ರಾಜ್ಯದ ಹೊರಗಡೆ ಸಂಸ್ಕರಣ ಮಾಡುವ ಚಿತ್ರಗಳಿಗೆ ರಿಯಾಯಿತಿ ಇರುವುದಿಲ್ಲವೆಂದೂ ಆ ವೇಳೆಗಾಗಲೇ ರಾಜ್ಯದಲ್ಲಿ ಈ ಸೌಲಭ್ಯ ಸ್ಥಾಪಿತವಾಗಿರುತ್ತದೆಂದೂ ತಿಳಿಸಿದರು.

### ಚಿತ್ರೀಕರಣಕ್ಕೆ ಅನುಮತಿ

ಸರ್ಕಾರಿ **ಆದೇಶ** (ಸಂಖ್ಯೆ: ಹೆಚ್‌ಡಿ ೩೧, ಪಿಐಎಫ್ ೭೨, ದಿನಾಂಕ:೮-೯-೭೨) ಪ್ರಕಟಿಸಿ, ರಾಜ್ಯದಲ್ಲಿ ಚಿತ್ರೀಕರಿಸಲು ಅನುಮತಿ ನೀಡುವ ಬಗ್ಗೆ ನಿಯಮಗಳು ಹಾಗೂ ನೀಡಬೇಕಾದ ದರಪಟ್ಟಿಗಳನ್ನು ರೂಪಿಸಿತ್ತು. (ಈ ಸರ್ಕಾರಿ ಆದೇಶದ ಪ್ರತಿಯು ವಾರ್ತಾ ಇಲಾಖೆಯಲ್ಲಿ ಲಭ್ಯವಿಲ್ಲ) ಇದೇ ರೀತಿ, ಇದೇ ವಿಷಯಕ್ಕೆ ಸಂಬಂಧಪಟ್ಟ ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್‌ಡಿ ೨೧೨, ಪಿಐಎಫ್ ೭೮, ದಿನಾಂಕ:೨೦-೩-೭೯ ಹಾಗೂ ಸಂಖ್ಯೆ: ಹೆಚ್‌ಡಿ ೨೧೨, ಪಿಐಎಫ್ ೭೮, ದಿನಾಂಕ:೨೬-೫-೮೦ ಪ್ರತಿಯು ಲಭ್ಯವಿಲ್ಲ.) ಇದರ ನಂತರದ **ಆದೇಶ** (ಸಂಖ್ಯೆ:ಹೆಚ್‌ಡಿ ೨೧೭, ಪಿಐಎಫ್ ೮೧, ದಿನಾಂಕ:೨೪-೬-೮೨)ರಲ್ಲಿ, ನಿಯಮ ಒಂಬತ್ತನ್ನು ತಿದ್ದುಪಡಿ ಮಾಡಲಾಯಿತು. ಇದರ ಪ್ರಕಾರ, ಚಿತ್ರ ನಿರ್ಮಿಸುವ ಸಂಸ್ಥೆಯು ಚಿತ್ರೀಕರಣ ಆರಂಭಿಸುವ ಮೊದಲೇ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಿಂದ ಲಿಖಿತ ಅನುಮತಿ ಪಡೆಯಬೇಕು. ಕರ್ನಾಟಕ ಪೊಲೀಸು ಮಹಾ ನಿರ್ದೇಶಕರು, ಬೆಂಗಳೂರು ಇವರ ಸಹಮತಿಯ ನಂತರವೇ ನಿಯಮಗಳ ಪ್ರಕಾರ ಚಿತ್ರೀಕರಣಕ್ಕೆ ಅನುಮತಿ ನೀಡಲಾಗುವುದು ಎಂದು ತಿಳಿಸಿತು. ಆದರೆ ಕೊನೆ ಗಳಿಗೆಯಲ್ಲಿ ಚಿತ್ರದ ನಿರ್ಮಾಪಕರು ಚಿತ್ರೀಕರಣ ಅನುಮತಿಗೆ ಬರುವುದರಿಂದ, ಪೊಲೀಸು ಮಹಾ ನಿರ್ದೇಶಕರು ಹಾಗೂ ಸಂಬಂಧ ಪಟ್ಟ ಸ್ಥಳಗಳ ಇಲಾಖೆಯ ನಿರ್ದೇಶಕರುಗಳಿಂದ ಸಹಮತಿ ಪಡೆಯುವುದು ಬಹಳ ಕಷ್ಟಕರವಾದ್ದರಿಂದ, ವಾರ್ತಾ ಇಲಾಖೆಯ ನಿರ್ದೇಶಕರು ಚಿತ್ರೀಕರಣಕ್ಕೆ ಅನುಮತಿ ನೀಡುವಲ್ಲಿ ವಿಫಲರಾಗುತ್ತಾರೆ. ಇದರಿಂದಾಗಿ ನಿರ್ಮಾಪಕರು ಚಿತ್ರೀಕರಣದ ಎಲ್ಲ ವ್ಯವಸ್ಥೆಗಳನ್ನೂ ರದ್ದುಗೊಳಿಸ ಬೇಕಾಗುತ್ತಿತ್ತು.

ಹೀಗಾಗಿ ಸರ್ಕಾರಿ **ಆದೇಶ** (ಸಂಖ್ಯೆ: ಐಟಿವೈ ೧೦೮, ಪಿಐಎಫ್ ೮೩, ದಿನಾಂಕ: ೧೭-೫-೮೩) ಪ್ರಕಟಿಸಿ, ಚಿತ್ರ ನಿರ್ಮಾಣ ಸಂಸ್ಥೆಯು ಚಿತ್ರೀಕರಣ ಅನುಮತಿಗೆ ಅಗತ್ಯವಾಗಿ ಸಲ್ಲಿಸಬೇಕಾದ ಚಿತ್ರೀಕರಣ ಶುಲ್ಕವನ್ನು ಚಿತ್ರೀಕರಣಕ್ಕೆ ಮುಂಚೆಯೇ ಸಲ್ಲಿಸಿ, ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಿಂದ ಲಿಖಿತ ಅನುಮತಿ ಪಡೆಯಬೇಕು. ವಾರ್ತಾ ಇಲಾಖೆಯ ನಿರ್ದೇಶಕರು ಈ ರೀತಿಯ ಅನುಮತಿ ಪತ್ರದ ಪ್ರತಿಗಳನ್ನು ಸಂಬಂಧಿತ ಇಲಾಖೆಗಳಿಗೆ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿಗಳಿಗೆ ಹಾಗೂ ಬೆಂಗಳೂರಿನ ಪೊಲೀಸು ಕಮಿಷನರ್‌ಗೆ ಮುಂಚಿತವಾಗಿ ಕಳಿಸಿಕೊಡಬೇಕು. ಚಿತ್ರೀಕರಣ ಆರಂಭಿಸುವ ಮುನ್ನ ಸಂಬಂಧಪಟ್ಟ ಅಧಿಕಾರಿಗಳಿಗೆ ಮಾಹಿತಿಯನ್ನು ನೀಡುವ ಹೊಣೆಗಾರಿಕೆ ಆಯಾ ಚಿತ್ರದ ನಿರ್ಮಾಪಕರಿಗೆ ಸಂಬಂಧಪಟ್ಟದ್ದು ಎಂದು ಮರು ತಿದ್ದುಪಡಿ ಮಾಡಿತು.

ಚಿತ್ರೀಕರಣ ಅನುಮತಿ ವಿಸ್ತರಣೆ ಬೇಕಾಗಿದ್ದಲ್ಲಿ, ನಿರ್ಮಾಣ ಸಂಸ್ಥೆಯು ಸರ್ಕಾರಕ್ಕೆ ನಿಗದಿತ ಶುಲ್ಕವನ್ನು (TMO) ಮನಿಯಾರ್ಡರ್‌ ತಂತಿ ಮೂಲಕ ಕಳಿಸಿ, ಪೂರ್ವಭಾವಿ ಹಣನೀಡಿ, ತಂತಿ ಮರುಸಂದೇಶದ ಮೂಲಕ, ಸೂಕ್ತ ಕಾಲದೊಳಗೆ ಅನುಮತಿ ಪಡೆಯಬಹುದು. ಈ ರೀತಿ ಅನುಮತಿ ಪಡೆಯದೇ ಇದ್ದ ಸಂಸ್ಥೆಗೆ ಚಿತ್ರೀಕರಣ ವಿಸ್ತರಣೆಗೆ ಅನುಮತಿ ಯಾವುದೇ ಇಲಾಖೆ ನೀಡಕೂಡದು. ಈ ಆದೇಶ ಸರ್ಕಾರಿ ಪತ್ರದಲ್ಲಿ ಪ್ರಕಟವಾದ ದಿವಸದಿಂದಲೇ ಜಾರಿಗೆ ತಂದಿತು.

ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್‌ಡಿ ೧೦೨, ಪಿಐಎಫ್ ೮೩, ದಿನಾಂಕ:೨೭-೧೦-೮೩) ಹೊರಡಿಸಿ, ೧-೪-೮೩ ರ ನಂತರ ಸೆನ್ಸಾರಾದ ಕನ್ನಡ, ತುಳು, ಕೊಡವ ಹಾಗೂ ಕೊಂಕಣಿ ಭಾಷೆಯ ಚಿತ್ರಗಳಿಗೆ, ಕಪ್ಪು-ಬಿಳುಪು ಚಿತ್ರಕ್ಕೆ ಒಂದು ಲಕ್ಷ ರೂಪಾಯಿ, ವರ್ಣ ಚಿತ್ರಗಳಿಗೆ ಒಂದೂವರೆ ಲಕ್ಷ ರೂಪಾಯಿ ಸಹಾಯಧನ ಘೋಷಿಸಿತು. ಈ ಮೇಲಿನ ಚಿತ್ರಗಳು ಏಕಕಾಲದಲ್ಲಿ ಬಹು ಆವೃತ್ತಿ ನಿರ್ಮಾಣವಾಗಿದ್ದರೆ, ಯಾವುದಾದರೂ ಒಂದು ಭಾಷೆಗೆ ಸಂಪೂರ್ಣ ಮೊತ್ತ, ಉಳಿದ ಪ್ರತಿಯೊಂದು ಭಾಷೆ ಆವೃತ್ತಿಗೆ ಐವತ್ತು ಸಾವಿರ ರೂಪಾಯಿ ಸಹಾಯಧನ ಎಂದು ಮರು ಸ್ಪಷ್ಟಪಡಿಸಿತು. ರಾಜ್ಯದ ಹೊರಗಡೆ ಸಂಸ್ಕರಣವಾದ ಚಿತ್ರಗಳಿಗೆ ಮೊದಲಿನ ನಿಯಮದಂತೆ, ಹಳೆಯ ದರದಲ್ಲಿ ಸಹಾಯಧನವನ್ನು ೩೧-೩-೮೪ರ ವರೆಗೆ ನೀಡಲಾಗುವದೆಂದು ತಿಳಿಸಿತು. (ಇದರಲ್ಲಿ ಉಲ್ಲೇಖಿಸಲಾದ ಸರ್ಕಾರಿ **ಆದೇಶ** ಸಂಖ್ಯೆ:ಹೆಚ್‌ಡಿ ೮೨, ಪಿಐಎಫ್ ೮೨, ದಿನಾಂಕ:೧೬-೨-೮೨ ರ ಪ್ರತಿ ದೊರೆತಿಲ್ಲ. ಇದರಲ್ಲಿ ಗುಣಮಟ್ಟ ಆಧರಿಸದೇ ಸಹಾಯಧನ ನೀಡುವುದನ್ನು ೧-೪-೮೨ ರಿಂದ ಇನ್ನೊಂದು ವರ್ಷ ಮುಂದುವರಿಸುವ ಅಂಶ ಇದೆ.)

ಮೇಲೆ ತಿಳಿಸಿದ ಸರ್ಕಾರಿ **ಆದೇಶ**ದ ಜೀವಿತಾವಧಿ ಮುಗಿದಿದ್ದರಿಂದ, ಮತ್ತೊಂದು ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೧೮೦, ಪಿಐಎಫ್ ೮೫, ದಿನಾಂಕ:೯-೯-೮೫) ಹೊರಡಿಸಿತು. ಇದರಲ್ಲಿ ಈ ಮೊದಲು ಘೋಷಿಸಿದಂತೆ ಸಹಾಯಧನ ನೀಡುವಿಕೆ ಗುಣಮಟ್ಟದ ಸೂತ್ರಕ್ಕೆ ತಳುಕು ಹಾಕದೇ ೧-೪-೮೪ ರ ವರೆಗೆ ಒಂದು ವರ್ಷದವರೆಗೆ ವಿಸ್ತರಿಸಿತು. ಹೆಚ್ಚಳ ಮಾಡಿದ ಸಹಾಯಧನ ಯೋಜನೆಯನ್ನು ೧೯೮೫ ರ ಡಿಸೆಂಬರ್ ಅಂತ್ಯದವರೆಗೆ ಮುಂದುವರಿಸಿ, ೧-೧-೮೬ ರಿಂದ ಹೊಸ ನೀತಿ ಜಾರಿಗೆ ಬರುವದಾಗಿ ಪ್ರಕಟಪಡಿಸಿತು.

ಚಿತ್ರ ನಿರ್ಮಾಣದ ವೆಚ್ಚಗಳು ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಹಾಗೂ ನಿರ್ಮಾಪಕರು ಸರ್ಕಾರಕ್ಕೆ ಮನವಿ ಸಲ್ಲಿಸಿ ಸಹಾಯಧನ ಹೆಚ್ಚಿಸಲು ಕೋರಿದರು. ಆಗ ಸರ್ಕಾರ ಇನ್ನೊಂದು **ಆದೇಶ** (ಸಂಖ್ಯೆ:ಐಟಿವೈ ೨೧೨, ಪಿಐಎಫ್ ೮೫, ದಿನಾಂಕ:೮-೭-೮೬) ಪ್ರಕಟಿಸಿತು. ಇದರ ಪ್ರಕಾರ ೧-೧-೮೬ರ ನಂತರ ನಿರ್ಮಾಣ ಆರಂಭಿಸಿದ ಕರ್ನಾಟಕ ರಾಜ್ಯದಲ್ಲಿನ ಎಲ್ಲ ಭಾಷೆಯ ಚಿತ್ರಗಳಿಗೆ, ಕಪ್ಪು-ಬಿಳುಪು ಚಿತ್ರಕ್ಕೆ ಒಂದೂವರೆ ಲಕ್ಷ ಹಾಗೂ ವರ್ಣ ಚಿತ್ರಕ್ಕೆ ಎರಡೂವರೆ ಲಕ್ಷ ರೂಪಾಯಿ ಸಹಾಯಧನ ಘೋಷಿಸಿತು. ಆದರೆ ಈ ಚಿತ್ರಗಳ ಸಂಪೂರ್ಣ ನಿರ್ಮಾಣ, ಸಂಸ್ಕರಣ ಹಾಗೂ ಸೆನ್ಸಾರು ಕರ್ನಾಟಕ ರಾಜ್ಯದಲ್ಲೇ ಆಗಿರಬೇಕು ಎಂದಿತು. ಪೂರ್ವಾನುಮತಿ ಪಡೆದು ರಾಜ್ಯದ ಹೊರಗಡೆ ಚಿತ್ರಿಸಿದ್ದರೆ, ಅಂತಹ ಚಿತ್ರೀಕರಣದ ಉದ್ದ, ಚಿತ್ರದ ಒಟ್ಟು ಸಂಕಲಿತ ಉದ್ದದ ಶೇಕಡಾ ೧೫ಕ್ಕಿಂತ ಹೆಚ್ಚಿಗಿರಬಾರದು ಎಂದು ನಿರ್ಬಂಧ ಹಾಕಿತು. ೧-೧-೮೬ರ ನಂತರ ಯಾವುದೇ ಚಿತ್ರದ ಧ್ವನಿಗ್ರಹಣ, ಮರು ಧ್ವನಿಮುದ್ರಣ, ಡಬ್ಬಿಂಗ್, ಸಂಸ್ಕರಣ ಕಾರ್ಯ ರಾಜ್ಯದ ಹೊರಗಡೆ ಕೈಗೊಂಡರೆ ಅದು ಸಹಾಯಧನಕ್ಕೆ ಅರ್ಹವಾಗುವುದಿಲ್ಲ ಎಂದಿತು. ೧-೧-೮೬ರ ನಂತರ ಸೆನ್ಸಾರಾಗಿದ್ದರೂ ಸಹ, ಈ ಮೊದಲೇ ಚಿತ್ರ ನಿರ್ಮಾಣ ಆರಂಭವಾಗಿದ್ದರೆ ಅಂತಹ ಚಿತ್ರಗಳಿಗೆ ಹಳೆಯ ದರದಲ್ಲಿ ಸಹಾಯಧನ ನೀಡುವುದೆಂದು ತಿಳಿಸಿತು.

ಒಂದು ವಿಶೇಷ ಉಲ್ಲೇಖಾರ್ಹ ಬೆಳವಣಿಗೆಯೆಂದರೆ, ಕರ್ನಾಟಕದಲ್ಲಿಯೇ ಕನ್ನಡದಲ್ಲಿ ನಿರ್ಮಿಸಲಾದ ಕಲಾತ್ಮಕ, ಹೊಸಪಂಥದ (offbeat)ಚಿತ್ರಗಳಿಗೆ ಹೆಚ್ಚಿನ ದರದಲ್ಲಿ, ಮೂರುಲಕ್ಷ ರೂಪಾಯಿಗಳ ಸಹಾಯಧನ ನೀಡುವುದೆಂದು, ಅದಕ್ಕಾಗಿ ಸರ್ಕಾರ ಸಮಿತಿಯೊಂದನ್ನು ನೇಮಿಸಿ, ಈ ಬಗೆಯ ಅರ್ಹ ಚಿತ್ರಗಳನ್ನು ಆಯ್ಕೆ ಮಾಡುವುದೆಂದು ತಿಳಿಸಿತು.

ಉಳಿದಂತೆ ನಿರ್ಮಾಪಕ ಸಹಾಯಧನಕ್ಕಾಗಿ ಸಲ್ಲಿಸಬೇಕಾದ ದಾಖಲೆಗಳಲ್ಲಿ, ನಿರ್ಮಾಣ ಸಂಸ್ಥೆ ಪಾಲುದಾರಿಕೆಯದಾಗಿದ್ದರೆ, ಪಾಲುದಾರಿಕೆ ಒಪ್ಪಂದದ ಪ್ರತಿ ಹಾಗೂ

ಖಾಸಗಿ ಸ್ಥಳಗಳಲ್ಲಿ ಚಿತ್ರೀಕರಿಸಿದರೆ ಅದರ ಮಾಲೀಕರಿಂದ ಹತ್ತು ರೂಪಾಯಿ ಛಾಪಾ ಕಾಗದದ ಮೇಲೆ ಒಪ್ಪಿಗೆ ಪ್ರಮಾಣ ಪತ್ರ ಸಲ್ಲಿಸಬೇಕಾಯಿತು. (ಇದರಲ್ಲಿ ಉಲ್ಲೇಖಿಸಿದ ಸರ್ಕಾರಿ ಆಜ್ಞೆ ಸಂಖ್ಯೆ:ಐಟಿವೈ ೧೨೫, ಪಿಐಎಫ್ ೮೩, ದಿನಾಂಕ:೯-೯-೮೩ರ ಪ್ರತಿ ದೊರೆತಿಲ್ಲ. ಇದರಲ್ಲಿ ರಾಜ್ಯದಲ್ಲಿ ಲಭ್ಯವಿರದ ಸೌಕರ್ಯಗಳಾದ ಹಿನ್ನೆಲೆ ಪ್ರಕ್ಷೇಪಣೆ, ವಿಶೇಷ ದೃಶ್ಯಪ್ರಭಾವ, ಧ್ವನಿಗ್ರಹಣ ಹಾಗೂ ಮರು ಮುದ್ರಣ ರಾಜ್ಯದ ಹೊರಗ ೩೧-೧೨-೮೫ ರ ವರೆಗೆ ಬಳಸಿಕೊಳ್ಳಲು ಅನುಮತಿ ನೀಡಿದ ಅಂಶ ಇದೆ.)

ಸರ್ಕಾರ ಈ ಮೊದಲು ಘೋಷಿಸಿದಂತೆ ೧-೧-೮೬ರ ನಂತರ ನಿರ್ಮಿಸಲಾದ ಕಲಾತ್ಮಕ/ಹೊಸಪಂಥದ ಚಿತ್ರಗಳಿಗೆ, ಹೆಚ್ಚಿನ ದರದ ಮೂರು ಲಕ್ಷ ರೂಪಾಯಿ ಸಹಾಯಧನ ನೀಡಲು ಚಿತ್ರಗಳ ಆಯ್ಕೆಗಾಗಿ ಸಲಹಾ ಸಮಿತಿಯನ್ನು ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೨೧೨, ಪಿಐಎಫ್ ೮೫, ದಿನಾಂಕ:೧೧-೮-೮೬) ಪ್ರಕಟಿಸಿ, ಅಮೋಲ್ ಪಾಲೇಕರ್, ಗಿರೀಶ್ ಕಾರ್ನಾಡ್, ಶಶಿಕಪೂರ್, ಶಬನಾ ಅಜ್ಮಿ ಇವರನ್ನು ಸದಸ್ಯರನ್ನಾಗಿ, ವಾರ್ತೆ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆಯ ಕಾರ್ಯದರ್ಶಿಯನ್ನು ಸದಸ್ಯ ಕಾರ್ಯದರ್ಶಿಯಾಗಿ ನೇಮಕ ಮಾಡಿತು. ಹೆಚ್ಚಿನ ಸಹಾಯಧನಕ್ಕೆ ಸ್ಪರ್ಧಿಸುವ ಚಿತ್ರಗಳಿಗೂ ಈ ಸದಸ್ಯರಿಗೂ ಯಾವುದೇ ಪ್ರತ್ಯಕ್ಷ/ ಪರೋಕ್ಷ ಸಂಬಂಧ ಇರಕೂಡದು ಎಂದು ತಿಳಿಸಿತು.,

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯು ಸರ್ಕಾರದ ಗಮನಕ್ಕೆ ಈ ಅಂಶವನ್ನು ತಂದಿತು: ೧-೧-೮೬ ರಿಂದ ಚಲನಚಿತ್ರ ಹೊಸ ನೀತಿ ಜಾರಿಗೆ ಬಂದಿತಾದರೂ ಅದಕ್ಕೆ ಸಂಬಂಧಪಟ್ಟ ಸರ್ಕಾರಿ **ಆದೇಶವು** ಜಾರಿಯಾಗಿದ್ದು ೮-೭-೮೬ರಂದು. ಈ ಏಳು ತಿಂಗಳ ಕಾಲ ಈ ನೀತಿಯ ಚಾಲನೆ ಸ್ಥಗಿತಗೊಂಡಿತ್ತು. ಆದರೆ ರಾಜ್ಯದ ಹೊರಗಡೆಯ ಸೌಲಭ್ಯಗಳನ್ನು ಬಳಸದಿರಲು ಮಿತಿ ಹೇರುವ ಸರ್ಕಾರದ ನೀತಿಯನ್ನು ನಿರೀಕ್ಷಿಸದ ಕೆಲವು ನಿರ್ಮಾಪಕರು, ಅವರು ಮಾಡದೇ ಇರುವ ತಪ್ಪಿಗಾಗಿ ಶಿಕ್ಷೆ ಅನುಭವಿಸುವಂತಾಗಿದೆ. ಅದ್ದರಿಂದ ಹೊಸ ನೀತಿಯ ಜಾರಿಯಲ್ಲಿ ತಿದ್ದುಪಡಿ ತರಬೇಕೆಂದು ಕೋರಿತು. ಇದನ್ನು ಪರಿಗಣಿಸಿ ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೨೧೨, ಪಿಐಎಫ್ ೮೫, ದಿನಾಂಕ:೨೭-೧-೮೮) ಹೊರಡಿಸಿ, ಕನ್ನಡ ಮತ್ತು ಇತರ ಪ್ರಾದೇಶಿಕ[೧] ಭಾಷೆಯ ಚಿತ್ರಗಳು ೧-೧-೮೬ರಿಂದ ೮-೭-೮೬ರ ಕಾಲಾವಧಿಯಲ್ಲಿ ನಿರ್ಮಿತವಾಗಿ, ರಾಜ್ಯದ ಹೊರಗಡೆಯ ಸೌಲಭ್ಯ ಬಳಸಿದ್ದರೂ ಸಹ ಆ ಚಿತ್ರಗಳಿಗೆ ೧-೧-೮೬ರ ಮುನ್ನ ಜಾರಿಯಲ್ಲಿದ್ದ ದರದಂತೆ ಸಹಾಯಧನ ನೀಡಲು ನಿರ್ಧರಿಸಿತು.

ಚಲನಚಿತ್ರ ನಿರ್ಮಾಪಕರು ಖಾಸಗೀ ಒಡೆತನದ ಚಿತ್ರೀಕರಣ ಸ್ಥಳಗಳ ಬಗ್ಗೆ ಐದು ರೂಪಾಯಿ ಸ್ಟಾಂಪ್ ಪೇಪರಿನಲ್ಲಿ ಪ್ರಮಾಣ ಪತ್ರ ಪಡೆದು, ವಾರ್ತಾ ಇಲಾಖೆಗೆ ಸಹಾಯಧನಕ್ಕಾಗಿ ಸಲ್ಲಿಸುವುದು ಕಷ್ಟಕರವೆಂದು ತಮ್ಮ ಸಮಸ್ಯೆ ತೋಡಿಕೊಂಡರು. ಪುನಃ ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೩೦೧, ಪಿಐಎಫ್ ೮೭, ದಿನಾಂಕ:೫-೯-೮೮) ಹೊರಡಿಸಿ ಖಾಸಗಿ ಒಡೆತನದ ಚಿತ್ರೀಕರಣ ಸ್ಥಳಗಳ ಒಡೆಯನ ಹೆಸರು, ವಿಳಾಸ ವಿವರಗಳನ್ನು ದೃಢೀಕರಿಸಿ ಪತ್ರ (ಅಫಿಡವಿಟ್) ರೂಪದಲ್ಲಿ ನೀಡಲು ಹಾಗೂ ಖಾಸಗಿ ಮನೆಗಳ ಯಜಮಾನರಿಂದ ಪ್ರಮಾಣ ಪತ್ರ ಸಲ್ಲಿಸಲು ಸೂಚಿಸಿತು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರು, ಕಲಾತ್ಮಕ ಚಿತ್ರಗಳ ಬಗ್ಗೆ ತೀರ್ಮಾನಿಸಲು ಕನ್ನಡ ಸಂಸ್ಕೃತಿ, ಕಲೆ, ಸಂಪ್ರದಾಯ ಹಾಗೂ ಕನ್ನಡ ಚಲನಚಿತ್ರಗಳ ಬಗ್ಗೆ ತಜ್ಞರನ್ನು ಸಲಹಾ ಸಮಿತಿಗೆ ನೇಮಿಸಬೇಕೆಂದೂ ಈ ಮೊದಲು ಘೋಷಿಸಿದ್ದ ಸಮಿತಿಯನ್ನು ಪುನರ್ರಚಿಸಲು ಕೋರಿದರು. ಇದಕ್ಕೆ ಪ್ರತಿಕ್ರಿಯಿಸಿ, ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೨೧೭, ಪಿಐಎಫ್ ೮೭,ದಿನಾಂಕ:೨೧-೦೯-೮೮) ಪ್ರಕಟಿಸಿ, ಆಯ್ಕೆ ಸಮಿತಿ ಸದಸ್ಯರಾಗಿ ಜಿ.ವಿ.ಅಯ್ಯರ್, ಎಂ.ಭಕ್ತವತ್ಸಲ, ಬಿ.ಎ.ಅರಸುಕುಮಾರ್, ಗಿರೀಶ್ ಕಾಸರವಳ್ಳಿ, ಪ್ರೇಮಾ ಕಾರಂತ, ಕೆ.ಎಸ್.ನಾರಾಯಣಸ್ವಾಮಿ, ಎಂ.ವಿ.ರಾಮಕೃಷ್ಣಯ್ಯ ಇವರನ್ನು ನೇಮಿಸಿತು. ವಾರ್ತಾ ಇಲಾಖೆಯ ನಿರ್ದೇಶಕರು ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯ ವಹಿಸಿಕೊಂಡರು. ಯಾವುದೇ ಚಿತ್ರ ಕುರಿತು ನಿರ್ಣಯ ಕೈಗೊಳ್ಳುವಾಗ, ಅದಕ್ಕೆ ಸಂಬಂಧಿಸಿದ ಸದಸ್ಯರಿದ್ದಲ್ಲಿ ಅವರು ಸಮಿತಿಯ ಕಾರ್ಯಕಲಾಪಗಳಲ್ಲಿ ಪಾಲ್ಗೊಳ್ಳಲು ಅನರ್ಹರು ಎಂದು ಸಹ ಸೂಚಿಸಿತು. ಈ ಮೇಲಿನ ಸಲಹಾ ಸಮಿತಿಗೆ ಇನ್ನಿಬ್ಬರು ಸದಸ್ಯರನ್ನಾಗಿ ಅಮೋಲ್ ಪಾಲೇಕರ್, ಗಿರೀಶ್ ಕಾರ್ನಾಡ್ ಇವರನ್ನು ಸರ್ಕಾರಿ ನಡಾವಳಿಗಳು ಸಂಖ್ಯೆ:ಐಟಿವೈ ೨೧೭, ಪಿಐಎಫ್ ೮೭, ದಿನಾಂಕ:೧೯-೧೨-೮೮ರ ಮೂಲಕ ನೇಮಿಸಿತು. ಈ ಮಧ್ಯೆ ಬಿ.ಎ.ಅರಸುಕುಮಾರ್ ನಿಧನದಿಂದಾಗಿ, ಅವರ ಸ್ಥಾನದಲ್ಲಿ ಟಿ.ಎಸ್.ನಾಗಾಭರಣರನ್ನು ಸರ್ಕಾರಿ **ಆದೇಶ** ಸಂಖ್ಯೆ :ಐಟಿವೈ ೨೪೮, ಪಿಐಎಫ್ ೯೦, ದಿನಾಂಕ:೧-೩-೯೧ ರ ಮೂಲಕ ಸದಸ್ಯರಾಗಿ ನೇಮಿಸಿತು.

೧೯೯೦-೯೧ನೇ ಸಾಲಿನ ಆಯವ್ಯಯ ಚರ್ಚೆಯಲ್ಲಿ ಹಣಕಾಸು ಸಚಿವರು ರಾಜ್ಯದಲ್ಲಿ ತಯಾರಾಗುವ ಕನ್ನಡ ಚಿತ್ರಗಳಿಗೆ ನೀಡುತ್ತಿರುವ ಸಹಾಯಧನವನ್ನು ಹೆಚ್ಚಿಸುವುದಾಗಿ ನುಡಿದರು. ಇದರಂತೆ ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೮೨, ಪಿಐಎಫ್ ೯೦, ದಿನಾಂಕ:೨೩-೨-೯೧) ಹೊರಡಿಸಿ, ಕನ್ನಡ ಮತ್ತು ಕರ್ನಾಟಕದ ಪ್ರಾದೇಶಿಕ ಭಾಷೆಯ ಚಿತ್ರಗಳಿಗೆ ನೀಡುವ ಸಹಾಯಧನವನ್ನು ಎರಡೂವರೆ ಲಕ್ಷದಿಂದ ಮೂರೂವರ ಲಕ್ಷ ರೂಪಾಯಿಗಳಿಗೆ ಹೆಚ್ಚಿಸಿತು. ಇದನ್ನು ೧-೪-೯೦ರ ನಂತರ ತಯಾರಿಕೆ ಪ್ರಾರಂಭಿಸಿದ ಚಿತ್ರಗಳಿಗ ನೀಡುವದೆಂದು ಸ್ಪಷ್ಟಪಡಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೧೮೧, ಪಿಐಎಫ್ ೮೯, ದಿನಾಂಕ:೧೨-೧೧-೯೧) ಪ್ರಕಟಿಸಿ, ಈ ಮೊದಲು ನಿರ್ಮಾಪಕರಿಂದ ವಾರ್ತಾ ಇಲಾಖಯ ನಿರ್ದೇಶಕರಿಗ ಸಹಾಯಧನ ಅರ್ಜಿ ಹಾಗೂ ದಾಖಲೆಗಳನ್ನು ಸ್ವೀಕರಿಸುವುದಕ್ಕೆ ನೀಡಲಾಗಿದ್ದ ೪೫ ದಿನಗಳ ಅವಧಿಯ ಬದಲು ಅದನ್ನು ೭೫ ದಿವಸಗಳ ಕಾಲಾವಕಾಶಕ್ಕೆ ವಿಸ್ತರಿಸಿತು. ಇದೇ ರೀತಿ, ನಿರ್ಮಾಪಕ ಸಹಾಯಧನ ಅರ್ಜಿಯ ಜೊತೆ ಸಲ್ಲಿಸಬೇಕಾಗಿದ್ದ ಆದಾಯ ತೆರಿಗೆ ಪ್ರಮಾಣ ಪತ್ರವನ್ನು ನಿಗದಿತ ಅವಧಿಯೊಳಗೆ ಸಲ್ಲಿಸಲಾಗದಿದ್ದ ಪಕ್ಷದಲ್ಲಿ, ಅವರ ಚಿತ್ರ ಕ್ಕೆ ಸಹಾಯಧನ ಮಂಜೂರಾದ ಮೂರು ತಿಂಗಳ ಒಳಗೆ ಸಲ್ಲಿಸಲು ಅವಕಾಶ ನೀಡಲಾಯಿತು. ಇದನ್ನು ಆದೇಶ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ತರಲಾಯಿತು.

ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೧೩೧, ಪಿಐಎಫ್ ೯೧, ದಿನಾಂಕ:೨೭-೧೧-೯೧) ಹೊರಡಿಸಿ ಕನ್ನಡ ಮತ್ತು ಪ್ರಾದೇಶಿಕ ಭಾಷಾ ಚಲನಚಿತ್ರಗಳಿಗೆ ನೀಡುವ ಸಹಾಯಧನವನ್ನು ಮೂರು ಲಕ್ಷದಿಂದ ಮೂರೂವರೆ ಲಕ್ಷ ರೂಪಾಯಿಗಳಿಗೂ, ಕಲಾತ್ಮಕ ಚಿತ್ರದ ಸಹಾಯಧನವನ್ನು ಮೂರೂವರೆ ಲಕ್ಷದಿಂದ ನಾಲ್ಕು ಲಕ್ಷ ರೂಪಾಯಿಗಳಿಗೂ ಹೆಚ್ಚಿಸಿತು.

ದಿನಾಂಕ ೧-೪-೯೦ರಿಂದ ತಯಾರಿಕೆ ಪ್ರಾರಂಭಿಸಿದ ಬಣ್ಣದ ಚಲನಚಿತ್ರಗಳಿಗೆ ಸಹಾಯಧನವನ್ನು ಎರಡೂವರೆ ಲಕ್ಷದಿಂದ ಮೂರೂವರೆ ಲಕ್ಷ ರೂಪಾಯಿಗಳಿಗೆ ಹೆಚ್ಚಿಸಿತ್ತು. ಹೀಗಾಗಿ ಕೆಲವು ಚಿತ್ರಗಳು ಎರಡೂವರೆ ಲಕ್ಷಕ್ಕಿಂತ ಹೆಚ್ಚಿನ ಮೊತ್ತದ ಸಹಾಯಧನಕ್ಕೆ ಅರ್ಹತೆ ಪಡೆದವು. ಈ ರೀತಿ ಚಿತ್ರಗಳ ಬಾಕಿ ಇರುವ ಸಹಾಯಧನವನ್ನು ಜೇಷ್ಠತೆ ಆಧರಿಸಿ ಪಾವತಿ ಮಾಡಲು ಸರ್ಕಾರಿ**ಆದೇಶ** (ಸಂಖ್ಯೆ:ಐಟಿವೈ ೧೫೨, ಪಿಐಎಫ್ ೯೨, ದಿನಾಂಕ:೩೧-೩-೯೨) ಹೊರಡಿಸಿ ಎರಡು ಕೋಟಿ ಎಪ್ಪತ್ಮೂರು ಲಕ್ಷ ಪೂರಕ ಅನುದಾನ ೧೯೯೧-೯೨ ನೇ ಸಾಲಿನಲ್ಲಿ ಬಿಡುಗಡೆ ಮಾಡಿತು. ಇದರನ್ವಯ ಪ್ರತಿಯೊಂದು ಚಿತ್ರಕ್ಕೂ ಪ್ರತ್ಯೇಕ ಸರ್ಕಾರಿ **ಆದೇಶಗಳನ್ನು** ಹೊರಡಿಸಿ 'ಹಾವಿನ ಹೆಜ್ಜೆ' ಚಿತ್ರಕ್ಕೆ ಎರಡು ಕಂತಿನಲ್ಲಿಯೂ, 'ತ್ರಿನೇತ್ರ' ಮತ್ತು 'ಬಾರೇ ನನ್ನ ಮುದ್ದಿನ ರಾಣಿ' ಚಿತ್ರಗಳಿಗೆ ವ್ಯತ್ಯಾಸದ ಹೆಚ್ಚಿನ ಮೊತ್ತದ ಸಹಾಯಧನವನ್ನೂ 'ಏಳು ಕೋಟಿ ಮಾರ್ತಾಂಡ ಭೈರವ' ಚಿತ್ರಕ್ಕೆ ಭಾಗಶಃ ಸಹಾಯಧನವನ್ನೂ ಮಾತ್ರ ನೀಡಿ, ಉಳಿದದ್ದು ಮುಂದಿನ ವರ್ಷ ಮಂಜೂರು ಮಾಡುವುದಾಗಿ ತಿಳಿಸಿತು. (ಈ ರೀತಿಯ ಕಾರ್ಯವೈಖರಿಗೆ ಈ ಸರ್ಕಾರಿ **ಆದೇಶವನ್ನು** ಕೇವಲ ಒಂದು ಮಾದರಿಯಾಗಿ ಉಲ್ಲೇಖಿಸಲಾಗಿದೆ. ಇಂತಹ ಇನ್ನೂ ಹಲವಾರು ಸರ್ಕಾರಿ ಆದೇಶಗಳಿವೆ. ಹೀಗಾಗಿ ಅವುಗಳ ಉಲ್ಲೇಖ ಅಪ್ರಸ್ತುತವೆಂದು ಕೈ ಬಿಡಲಾಗಿದೆ.)

ಈ ಮೊದಲು ಪ್ರಾದೇಶಿಕ ಭಾಷೆಗಳಾದ ಕೊಡವ, ಕೊಂಕಣಿ, ತುಳು ಭಾಷೆಯಲ್ಲಿನ ಚಿತ್ರಗಳಿಗೆ ಮಾತ್ರ ಸಹಾಯಧನ ನೀಡಲು ಅವಕಾಶವಿತ್ತು. ೨೧-೨-೯೧ರಂದು ವಿಧಾನ ಪರಿಷತ್ತಿನ ಸದಸ್ಯರಾದ ಬಿ.ಟಿ.ಲಲಿತ ನಾಯಕ್ ಮುಖ್ಯಮಂತ್ರಿಗೆ ಮನವಿ ಸಲ್ಲಿಸಿ, ಕರ್ನಾಟಕದ ಲಂಬಾಣಿ ಜನಾಂಗದವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದು, ರಾಜ್ಯದ ಹಲವೆಡೆ ಇವರು ಛಿದ್ರವಾಗಿ ಬಾಳುತ್ತಿದ್ದಾರೆಂದು ತಿಳಿಸಿದರು. ಎಲ್ಲಾ ಜನರನ್ನು ಒಂದುಗೂಡಿಸಿದಾಗಲೇ ಈ ಜನಾಂಗದ ಏಳಿಗೆ ಸಾಧ್ಯವೆಂದು ಮತ್ತು ಇಂತಹ ಒಗ್ಗೂಡುವಿಕೆಗೆ ಜನಾಂಗದ ಭಾಷೆಗೆ ಮಾನ್ಯತೆ ದೊರೆಯಬೇಕೆಂದು ತಿಳಿಸಿದರು. ಬಂಜಾರಾ ಭಾಷೆಗೆ ರಾಜ್ಯ ಸರ್ಕಾರದ ಮಟ್ಟದಲ್ಲಿ ದೊರಕುವ

೧.ಕರ್ನಾಟಕದ ಉಪಭಾಷೆಗಳಾದ ಕೊಂಕಣಿ, ಕೊಡವ, ತುಳು ನಂತರ ಲಂಬಾಣಿ ಭಾಷಯ ಉಲ್ಲೇಖವನ್ನು ಸರ್ಕಾರ ತನ್ನ ಎಲ್ಲ ಆದೇಶಗಳಲ್ಲಿ **ಪ್ರಾದೇಶಿಕ ಭಾಷೆಯೆಂದು** ಬಳಸಿದೆ. - ಸಂ

ಸೌಲಭ್ಯಗಳನ್ನು ನೀಡಬೇಕೆಂದು ತಿಳಿಸಿ, ಈ ನಿಟ್ಟಿನಲ್ಲಿ ದೃಶ್ಯ ಮತ್ತು ಶಬ್ದ ಮಾಧ್ಯಮಗಳಿಂದ ಜನಾಂಗದ ಒಂದುಗೂಡುವಿಕೆಗೆ ಸಹಾಯಕವಾಗುವದರಿಂದ, ಲಂಬಾಣಿ ಜನಾಂಗದ ಬಂಜಾರಾ ಭಾಷೆಯಲ್ಲಿ ಚಲನಚಿತ್ರಗಳನ್ನು ತಯಾರಿಸಿದಲ್ಲಿ ಅವುಗಳಿಗೆ ಸರ್ಕಾರ ನೀಡುತ್ತಿರುವ ಸಹಾಯಧನದ ಸವಲತ್ತನ್ನು ನೀಡಲು ಕೋರಿದರು. ಹೀಗಾಗಿ ಸರ್ಕಾರ **ಆದೇಶ** (ಸಂಖ್ಯೆ:ಐಟಿವೈ ೪೪, ಪಿಐಎಫ್ ೯೦, ದಿನಾಂಕ:೧೦-೦೪-೯೨) ಪ್ರಕಟಿಸಿ, ೧-೪-೯೨ರ ನಂತರ ತಯಾರಿಕೆ ಪ್ರಾರಂಭಿಸಿದ ಹಾಗೂ ರಾಜ್ಯದಲ್ಲಿ ಜಾರಿಯಿರುವ ಸಹಾಯಧನ ನಿಯಮಾವಳಿಗಳ ಅನ್ವಯ ಅರ್ಹವಿರುವ ಬಂಜಾರ ಭಾಷೆಯ ಚಲನಚಿತ್ರಗಳಿಗೂ ಸಹಾಯಧನ ನೀಡಲು ಮಂಜೂರಾತಿ ನೀಡಿತು.

ಕರ್ನಾಟಕ ಚಲನಚಿತ್ರ ಪತ್ರಕರ್ತರ ವೇದಿಕೆಯು 'ಕನ್ನಡ ಸಿನಿಮಾ ಅಭಿವೃದ್ಧಿ' ಕುರಿತು ಏರ್ಪಡಿಸಿದ ವಿಚಾರಗೋಷ್ಠಿಯಲ್ಲಿ ಭಾಗವಹಿಸಿ ಚಲನಚಿತ್ರ ಸಮಗ್ರ ನೀತಿಯನ್ನು ರೂಪಿಸಲು ಪರಿಣತರ ಸಮಿತಿಯನ್ನು ರಚಿಸುವುದಾಗಿ ಮುಖ್ಯಮಂತ್ರಿ ಆಶ್ವಾಸನೆ ನೀಡಿದ ಮೇರೆಗೆ, ಸರ್ಕಾರ ಒಂದು **ಆದೇಶ** (ಸಂಖ್ಯೆ:ಐಟಿವೈ ೯೩, ಪಿಐಎಫ್ ೯೩, ದಿನಾಂಕ:೨೯-೬-೯೩) ಪ್ರಕಟಿಸಿತು. ಅದರ ಪ್ರಕಾರ ವಿ.ಎನ್.ಸುಬ್ಬರಾವ್ ಅಧ್ಯಕ್ಷತೆಯಲ್ಲಿ, ಪಾರ್ವತಮ್ಮ ರಾಜಕುಮಾರ್, ಕೆ.ವಿ.ಗುಪ್ತ, ಕುಪ್ಪುಸ್ವಾಮಿನಾಯ್ಡು, ಸುರೇಶ್ ಹೆಬ್ಳೀಕರ್, ಎಸ್.ವಿ.ರಾಜೇಂದ್ರ ಸಿಂಗ್ ಬಾಬು, ಆರ್.ಲಕ್ಷ್ಮಣ್, ಕೆ.ಎಸ್.ಎಲ್.ಸ್ವಾಮಿ (ರವೀ), ಟಿ.ಎಸ್.ನರಸಿಂಹನ್, ಟಿ.ಎಸ್.ನಾಗಾಭರಣ, ಭಾರತಿ ವಿಷ್ಣುವರ್ಧನ್ ಹೀಗೆ ಹತ್ತು ಸದಸ್ಯರನ್ನು ನೇಮಿಸಿತು. ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು ಸದಸ್ಯ ಕಾರ್ಯದರ್ಶಿಯಾದರು.

ಸಮಿತಿ ಪರಿಶೀಲಿಸಬೇಕಾದ ಅಂಶಗಳೆಂದು ಕೆಲವು ವಿಷಯಗಳನ್ನು ಅನುಬಂಧದಲ್ಲಿ ಸೂಚಿಸಿತು. ಅದರಲ್ಲಿ, ಕನ್ನಡ ಹಾಗೂ ಪ್ರಾದೇಶಿಕ ಭಾಷಾ ಚಲನಚಿತ್ರೋದ್ಯಮಕ್ಕೆ ಸರ್ಕಾರವು ನೀಡುತ್ತಿರುವ ಸವಲತ್ತುಗಳ ಬಗ್ಗೆ ಸಮೀಕ್ಷೆ, ಮನರಂಜನಾ ತೆರಿಗೆ, ಪರವಾನಗಿ ನೀಡಲು ನಿರ್ಧರಿಸುವ ಕ್ರಮ ಮತ್ತು ಏಕಗವಾಕ್ಷಿಯನ್ನು ಪ್ರಾರಂಭಿಸುವ ಬಗ್ಗೆ ರೂಪುರೇಷೆಗಳ ಪರಿಶೀಲನೆ, ಹೆಸರಘಟ್ಟ ಬಳಿ ಚಿತ್ರನಗರಿಯ ನಿರ್ಮಾಣದ ಬಗ್ಗೆ ಇದುವರೆಗೆ ಆಗಿರುವ ಕಾರ್ಯ ಸಮೀಕ್ಷೆ ಮತ್ತು ಖಚಿತ ಮಾರ್ಗಸೂಚಿಗಳನ್ನು ಸಿದ್ಧಪಡಿಸಿ, ಈ ಯೋಜನೆ ಶೀಘ್ರ ಅನುಷ್ಠಾನಗೊಳಿಸಲು ಈ ದಿಸೆಯಲ್ಲಿ ಖಾಸಗೀ ಉದ್ದಿಮೆದಾರರನ್ನು ಆಹ್ವಾನಿಸುವ ಬಗ್ಗೆ, ಕರ್ನಾಟಕ ಚಲನಚಿತ್ರ ಅಭಿವೃದ್ಧಿ ನಿಗಮ ಮತ್ತು ಕಂಠೀರವ ಸ್ಟುಡಿಯೋಗಳ ಆಡಳಿತ ವ್ಯವಸ್ಥೆಯ ಪುನರ್ರಚನೆಯ ಸಾಧ್ಯತೆ, ಕನ್ನಡ ಚಿತ್ರಗಳ ನಿರ್ಮಾಣ ಚಟುವಟಿಕೆಗಳನ್ನು ಉತ್ತಮ ಪಡಿಸಲು ಅನುವಾಗುವಂತೆ ಸವಲತ್ತುಗಳ ಪರಿಶೀಲನೆ, ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಚಿತ್ರಮಂದಿರಗಳ ನಿರ್ಮಾಣಗಳಲ್ಲಿ ಸರ್ಕಾರಿ ಹಾಗೂ ಖಾಸಗೀ ಉದ್ದಿಮೆದಾರರನ್ನು ತೊಡಗಿಸುವ ಬಗ್ಗೆ, ಈಗಿರುವ ಸಿನಿಮಾಟೊಗ್ರಾಫಿ ಕಾಯ್ದೆಯನ್ನು ಮಾರ್ಪಡಿಸುವ ಬಗ್ಗೆ ಸಲಹೆ, ಕಳ್ಳತನದಿಂದ ಪ್ರದರ್ಶಿಸುವ ವೀಡಿಯೋ ಮಾಧ್ಯಮವನ್ನು ಹತೋಟಿಯಲ್ಲಿ ಇಡಲು ಮತ್ತು ಅಕ್ರಮವಾಗಿ ನಡೆಸುತ್ತಿರುವ ಕೇಬಲ್ ಟಿ.ವಿಯವರ ಬಗ್ಗೆ ಸರ್ಕಾರ ಕೈಗೊಳ್ಳಬೇಕಾದ ಕ್ರಮ, ರಾಜ್ಯದಲ್ಲಿ ಕನ್ನಡ ಚಲನಚಿತ್ರೋದ್ಯಮ ಮುಂದಿನ ಐದು ವರ್ಷಗಳ ಯೋಜನಾವಧಿಯಲ್ಲಿ ಆರೋಗ್ಯದಾಯಕ ಬೆಳವಣಿಗೆ ಬಗ್ಗೆ ಕೈಗೊಳ್ಳಬೇಕಾದ ಕಾರ್ಯಗಳ ಬಗ್ಗೆ ಸಲಹೆ ಎಂದು ಕಾರ್ಯಕ್ಷೇತ್ರ ನಿಗದಿಪಡಿಸಿತು.ಈ ಬಗ್ಗೆ ಶಿಫಾರಸ್ಸುಗಳ ವರದಿಯನ್ನು ಸರ್ಕಾರಕ್ಕೆ ಎರಡು ತಿಂಗಳಲ್ಲಿ ಸಲ್ಲಿಸಲು ಸೂಚಿಸಿತು.

೧೯೯೩-೯೪ ಆಯವ್ಯಯ ಭಾಷಣದಲ್ಲಿ ಮುಖ್ಯಮಂತ್ರಿಗಳು ಸೃಜನಾತ್ಮಕ ಕನ್ನಡ ಚಿತ್ರಗಳಿಗೆ ಸಹಾಯಧನ ಹೆಚ್ಚಿಸುವ ನಿರ್ಧಾರ ಪ್ರಕಟಿಸಿದರು.

## ಸಹಾಯಧನ ಏರಿಕೆ

ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೬೧, ಪಿಐಎಫ್ ೯೩, ದಿನಾಂಕ:೨೯-೯-೯೩) ಪ್ರಕಟಿಸಿ, ೧-೪-೯೩ ರ ನಂತರ ನಿರ್ಮಿಸಲಾಗುವ ಕನ್ನಡ ಮತ್ತು ಪ್ರಾದೇಶಿಕ ಭಾಷಾ ವರ್ಣಚಿತ್ರಗಳಿಗೆ ಮೂರೂವರೆ ಲಕ್ಷದಿಂದ ನಾಲ್ಕು ಲಕ್ಷರೂ.ಗೆ ಮತ್ತು ಕಲಾತ್ಮಕ ಚಿತ್ರಗಳಿಗೆ ನಾಲ್ಕು ಲಕ್ಷದಿಂದ ಐದು ಲಕ್ಷರೂ.ಗಳಿಗೆ ಸಹಾಯಧನ ಹೆಚ್ಚಿಸಿತು. ಆದರೆ ಪ್ರತಿಯೊಂದು ಚಿತ್ರವನ್ನು ಸಹಾಯಧನಕ್ಕೆ ಶಿಫಾರಸ್ಸು ಮಾಡುವ ಮುನ್ನ, ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು, ಚಲನಚಿತ್ರವು ಮೂಲ ಚಿತ್ರವೇ ಅಥವಾ ಪುನರಾವೃತ್ತ ಚಿತ್ರವೋ ಎಂಬ ಬಗ್ಗೆ ನಿರ್ದಿಷ್ಟ ಅಭಿಪ್ರಾಯ ವ್ಯಕ್ತಪಡಿಸಬೇಕೆಂದು ಸೂಚಿಸಿತು.

೧೯೯೩-೯೪ರ ಆಯವ್ಯಯ ಭಾಷಣದಲ್ಲಿ ಮುಖ್ಯಮಂತ್ರಿಗಳು,ಇನ್ನು ಮುಂದೆ ಕನ್ನಡದಲ್ಲಿನ ರೀಮೇಕ್ ಚಿತ್ರಗಳು ಯಾವುದೇ ಸಹಾಯಧನಕ್ಕೆ ಅರ್ಹವಾಗುವುದಿಲ್ಲ ಎಂದು ಘೋಷಿಸಿದರು. ಆದರೆ **ಆದೇಶ** (ಸಂಖ್ಯೆ:ಐಟಿವೈ ೧೦೯, ಪಿಐಎಫ್ ೮೯, ದಿನಾಂಕ:೧೦-೦೪-೯೦)ರ ಮಾರ್ಗಸೂಚಿಯ ಅನ್ವಯ, ಹದಿನೈದು ವರ್ಷಗಳ ಹಿಂದೆ ತಯಾರಾಗಿದ್ದ ಯಾವುದೇ ಭಾಷೆಯ ಚಲನಚಿತ್ರವನ್ನು ಕನ್ನಡದಲ್ಲಿ ನಿರ್ಮಾಣ ಮಾಡಿದರೆ ಸಹಾಯಧನಕ್ಕೆ ಅರ್ಹವಾಗುತ್ತದೆ ಎಂಬ ಅಂಶ ಮುಂದುವರೆಯುವುದೋ ಅಥವಾ ಇಲ್ಲವೋ ಎಂಬುದರ ಬಗ್ಗೆ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು ಸರ್ಕಾರಕ್ಕೆ ಸ್ಪಷ್ಟೀಕರಣ ಕೋರಿದರು. ಪುನಃ ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೨೬೬, ಪಿಐಎಫ್ ೯೩, ದಿನಾಂಕ:೨೧-೧೦-೯೫) ಪ್ರಕಟಿಸಿ, ಈ ಮೊದಲು ಹೊರಡಿಸಲಾದ ೧೦-೦೪-೯೦ರ ಹಳೆಯ ಮಾರ್ಗ ಸೂಚಿಯನ್ನು ಹಿಂದಕ್ಕೆ ಪಡೆಯಲಾಗಿದೆ. ರದ್ದು ಪಡಿಸಲಾಗಿದೆ ಎಂದು ತಿಳಿಸಿತು. ಈ ಆದೇಶದ ಪ್ರತಿಯನ್ನು ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರ ಮುಖಾಂತರ ಪುನರಾವೃತ ಚಲನಚಿತ್ರ ಸಲಹಾ ಸಮಿತಿಯ ಸದಸ್ಯರುಗಳಿಗೆ ಒದಗಿಸಿತು. (೧೦-೦೪-೯೦ರ ಸರ್ಕಾರಿ ಆದೇಶ ಪ್ರತಿ ಲಭ್ಯವಿಲ್ಲ. ೨೧-೧೦-೯೫ರ ಆದೇಶದಿಂದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಿಗೆ ಆದೇಶಗಳ ಒಂದು ಪ್ರತಿಯನ್ನು ಒದಗಿಸುವ ಪರಂಪರೆ ಆರಂಭವಾಗಿದೆ.)

ಮಕ್ಕಳ ಚಿತ್ರವೆಂದು ಸೆನ್ಸಾರ್ ಮಂಡಳಿಯಿಂದ ದೃಢೀಕರಣ ಪತ್ರ ಪಡೆದ ಚಿತ್ರಗಳಿಗೂ ಸಹಾಯಧನ ಸೌಲಭ್ಯ ನೀಡುವ ಬಗ್ಗೆ ವಿ.ಎನ್.ಸುಬ್ಬರಾವ್ ಸಮಿತಿ ತನ್ನ ವರದಿಯಲ್ಲಿ ಶಿಫಾರಸ್ಸು ಮಾಡಿರುವದರಿಂದ, ಮಕ್ಕಳ ಚಿತ್ರಗಳಿಗೂ ನಿಗದಿಪಡಿಸಿದ ಸಹಾಯಧನ ಪಾವತಿ ಮಾಡಬೇಕಾಯಿತು. ಆದ್ದರಿಂದ ಪ್ರಸ್ತುತ ಚಾಲನೆಯಲ್ಲಿದ್ದ ಸಹಾಯಧನ ನಿಯಮಗಳಿಗೆ ಈ ಅಂಶ ಸೇರ್ಪಡೆ ಮಾಡಿ **ಆದೇಶ** (ಸಂಖ್ಯೆ:ಐಟಿವೈ ೩೪೭, ಪಿಐಎಫ್ ೯೫, ದಿನಾಂಕ:೧೫-೧೧-೯೫) ಪ್ರಕಟಿಸಿತು. ಮಕ್ಕಳ ಚಲನಚಿತ್ರದ ಉದ್ದ ಕನಿಷ್ಠ ೨೫೦೦ ಮೀಟರುಗಳಿದ್ದು, ಸೆನ್ಸಾರ್ ಮಂಡಳಿಯಿಂದ ಮಕ್ಕಳ ಚಿತ್ರವೆಂದು ದೃಢೀಕರಣ ಪತ್ರ ಪಡೆದ ಮಕ್ಕಳ ಚಿತ್ರಗಳಿಗೂ ಸಹಾಯಧನ ನೀಡಲಾಗುವದು. ಇದನ್ನು ೧-೬-೯೫ ರಿಂದ ಜಾರಿಗೆ ತರಲಾಯಿತು.

ಕನ್ನಡ ಚಲನಚಿತ್ರ ರಂಗದ ಸಮಸ್ಯೆಗಳ ಬಗ್ಗೆ ಅಧ್ಯಯನ ಮಾಡಿ ಸೂಕ್ತ ಶಿಫಾರಸ್ಸುಗಳನ್ನು ಮಾಡಲು ನೇಮಿಸಲಾದ ವಿ.ಎನ್.ಸುಬ್ಬರಾವ್ ನೇತೃತ್ವದ ಸಮಿತಿಯು ರಾಜ್ಯದಲ್ಲಿ ಕನ್ನಡ ಚಲನಚಿತ್ರ ಅಕಾಡೆಮಿ ಸ್ಥಾಪಿಸಲು ಸಲಹೆ ಮಾಡಿತ್ತು. ೧೯೯೬ರಲ್ಲಿ ರಾಜ್ಯ ವಿಧಾನಮಂಡಲದ ಜಂಟೀ ಅಧಿವೇಶನದ ರಾಜ್ಯಪಾಲರ ಭಾಷಣದಲ್ಲಿ ಒಂದು ಕಲಾ ಪ್ರಕಾರವಾಗಿ, ಒಂದು ಉದ್ಯಮವಾಗಿ, ಸಮೂಹ ಮನರಂಜನೆಯ ಒಂದು ಮಾಧ್ಯಮವಾಗಿ ಚಲನಚಿತ್ರ ಮಾಧ್ಯಮದ ವ್ಯಾಪಾರ ಸಂವಹನ ಸಾಧ್ಯತೆ ಹಾಗೂ ಸಾಮರ್ಥ್ಯಗಳು ಸದಸ್ಯರಿಗೆ ತಿಳಿದೇ ಇದೆ. ಈ ಎಲ್ಲಾ ದೃಷ್ಟಿಯಿಂದ ಕನ್ನಡ ಚಲನಚಿತ್ರ ಉದ್ಯಮವನ್ನು ಅಭಿವೃದ್ಧಿಪಡಿಸುವ ಉದ್ದೇಶದಿಂದ 'ಕನ್ನಡ ಚಲನಚಿತ್ರ ಅಕಾಡೆಮಿ'ಯನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ ಎಂದು ಪ್ರಕಟಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೫೮, ಪಿಐಎಫ್ ೯೬, ದಿನಾಂಕ:೨೨-೦೭-೯೬) ಪ್ರಕಟಿಸಿ, ಕನ್ನಡ ಚಲನಚಿತ್ರ ಅಕಾಡೆಮಿ ಸ್ಥಾಪಿಸಲು ಮಂಜೂರಾತಿ ನೀಡಿತು. ಇದರಲ್ಲಿ ಒಟ್ಟು ೧೫ ಮಂದಿ ಸದಸ್ಯರಾಗಿರುತ್ತಾರೆ. ಕನ್ನಡ ಚಲನಚಿತ್ರರಂಗದ ವಿವಿಧ ಪ್ರಕಾರಗಳಲ್ಲಿ ಅಪಾರ ಸೇವೆ ಸಲ್ಲಿಸಿದ, ಸಮಾಜಸೇವೆ, ಶಿಕ್ಷಣ ಕ್ಷೇತ್ರ ಮತ್ತು ಪತ್ರಿಕೋದ್ಯಮ ರಂಗದಲ್ಲಿ ಅಪಾರಸೇವೆ ಸಲ್ಲಿಸಿರುವ ವ್ಯಕ್ತಿಯನ್ನು ಅಧ್ಯಕ್ಷರಾಗಿ ನೇಮಿಸಬಹುದು. ಇದೇ ರೀತಿ ಮೇಲಿನ ಎಲ್ಲ ಅರ್ಹತೆಗಳೊಂದಿಗೆ ಸಮಾಜದ ಇನ್ನಿತರ ಪ್ರಮುಖ ರಂಗಗಳಲ್ಲಿ ಅಪಾರ ಸೇವೆ ಸಲ್ಲಿಸಿದ ಏಳು ಮಂದಿ ಪುರುಷರು ಹಾಗೂ ಕನಿಷ್ಠ ಇಬ್ಬರು ಮಹಿಳೆಯರನ್ನು ಸದಸ್ಯರಾಗಿ ಆಯ್ಕೆ ಮಾಡಬೇಕು. ಈ ಏಳು ಜನ ಸದಸ್ಯರಲ್ಲಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷರು ಹಾಗೂ ಮಂಡಳಿಯ ಒಬ್ಬ ಪ್ರತಿನಿಧಿ, ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘ, ನಿರ್ದೇಶಕರ ಸಂಘ, ಚಲನಚಿತ್ರ ಕಲಾವಿದರ ಸಂಘ, ಚಲನಚಿತ್ರ ಕಾರ್ಮಿಕರ ಒಕ್ಕೂಟದಿಂದ ಒಬ್ಬ ಪ್ರತಿನಿಧಿ ಹಾಗೂ ರಾಜ್ಯದಲ್ಲಿರುವ ವಿವಿಧ ಚಲನಚಿತ್ರ ಸೊಸೈಟಿಗಳಿಂದ ಒಬ್ಬ ಪ್ರತಿನಿಧಿ ಸರ್ಕಾರದಿಂದ ನೇಮಕವಾಗಬೇಕು. ಹಾಗೂ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರೂ ಇರುತ್ತಾರೆ. ವಾರ್ತಾ ಮತ್ತು ಪ್ರಚಾರ ಇಲಾಖೆಯ ಒಬ್ಬ ಅಧಿಕಾರಿಯನ್ನು ಅಕಾಡೆಮಿಯ ರಿಜಿಸ್ಟಾರ್ ಆಗಿ ನೇಮಿಸಲಾಯಿತು.

ಚಲನಚಿತ್ರ ಅಕಾಡೆಮಿಯ ಪ್ರಮುಖ ಕರ್ತವ್ಯಗಳಲ್ಲಿ, ಕರ್ನಾಟಕ ಚಲನಚಿತ್ರ ರಾಜ್ಯ ಪ್ರಶಸ್ತಿಗಳು, ಡಾಕ್ಟರ್ ರಾಜಕುಮಾರ್ ಪ್ರಶಸ್ತಿ, ಪುಟ್ಟಣ್ಣ ಕಣಗಾಲ್ ಪ್ರಶಸ್ತಿಗೆ ಸೂಕ್ತ ವ್ಯಕ್ತಿಗಳನ್ನು ಶಿಫಾರಸ್ಸು ಮಾಡುವುದು. ೧೯೯೬-೯೭ರಲ್ಲಿ ಹಾಗೂ ನಂತರ ತಯಾರಾದ, ಆಗುವ ಕನ್ನಡ ಹಾಗೂ ಪ್ರಾದೇಶಿಕ ಚಲನಚಿತ್ರಗಳಿಗೆ ಸಹಾಯಧನ ಮಂಜೂರು ಮಾಡಲು ಅವುಗಳ ಗುಣಮಟ್ಟ ಹಾಗೂ ಇತರ ವಿಷಯಗಳನ್ನು

ಪರಿಶೀಲಿಸಿ ಅವು ಸಹಾಯಧನ ಪಡೆಯಲು ಅರ್ಹವಾಗಿವೆಯೇ ಎಂಬ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಬೇಕು. ರಾಜ್ಯದಲ್ಲಿ ಚಲನಚಿತ್ರ ಸೊಸೈಟಿಗಳ ಅಭಿವೃದ್ಧಿಗೆ ಅವಶ್ಯವಿರುವ ಕ್ರಮ ಕೈಗೊಳ್ಳುವುದು, ಚಲನಚಿತ್ರ ರಂಗದ ವಿವಿಧ ಪ್ರಕಾರಗಳಲ್ಲಿ ಅವಶ್ಯವಿರುವ ತರಬೇತಿ ಏರ್ಪಡಿಸುವದು ಹಾಗೂ ಇತ್ತೀಚಿನ ತಾಂತ್ರಿಕ ಮತ್ತು ಇತರ ಬೆಳವಣಿಗೆಗಳನ್ನು ಗಮನದಲ್ಲಿರಿಸಿ ಕನ್ನಡ ಚಲನಚಿತ್ರ ರಂಗವು ಈ ನಿಟ್ಟಿನಲ್ಲಿ ಅವಶ್ಯಕತೆಗೆ ತಕ್ಕಂತೆ ಅಭಿವೃದ್ಧಿಗೊಳ್ಳುವಲ್ಲಿ ಅಗತ್ಯವಾದ ಕ್ರಮ ಕೈಗೊಳ್ಳುವುದು. ಕನ್ನಡ ಚಿತ್ರರಂಗದಲ್ಲಿ ಅಶ್ಲೀಲತೆ ಮತ್ತು ಹಿಂಸೆಯನ್ನು ಕಡಿಮೆ ಮಾಡಿ ಕುಟುಂಬವರ್ಗದವರು ಒಟ್ಟಿಗೆ ಚಲನಚಿತ್ರವನ್ನು ವೀಕ್ಷಿಸಲು ಸಹಕಾರಿಯಾಗುವಂತೆ ಕನ್ನಡ ಚಿತ್ರಗಳ ಗುಣಮಟ್ಟವನ್ನು ಉತ್ತಮಗೊಳಿಸಲು ಅವಶ್ಯವಿರುವ ಎಲ್ಲಾ ಕ್ರಮಗಳನ್ನು ಕೈಗೊಳ್ಳುವದು, ಸರ್ಕಾರದಿಂದ ಆಗಿಂದಾಗ್ಗೆ ನಿರ್ದಿಷ್ಟವಾಗಿ ಸೂಚಿಸಲಾದ ಕಾರ್ಯವನ್ನು ಕೈಗೊಳ್ಳಲು ಅವಶ್ಯವಿರುವ ಕ್ರಮ ಕೈಗೊಳ್ಳುವುದು ಎಂದು ಕಾರ್ಯವ್ಯಾಪ್ತಿಯನ್ನು ನಿಗದಿಪಡಿಸಿತು. ಅಕಾಡೆಮಿಗೆ ಸರ್ಕಾರದಿಂದ ನೀಡುವ ಅನುದಾನದ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುತ್ತದೆಂದು ಸ್ಪಷ್ಟಪಡಿಸಲಾಯಿತು.

### ರಾಜ್ಯದ ಹೊರಗೆ ಚಿತ್ರೀಕರಣ

ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘದವರು ಸರ್ಕಾರಕ್ಕೆ ಪತ್ರ ಬರೆದು, ರಾಜ್ಯದಲ್ಲಿ ಹೆಚ್ಚು ಕನ್ನಡ ಚಿತ್ರಗಳು ನಿರ್ಮಾಣವಾಗಬೇಕಾಗಿದ್ದು, ಪರಭಾಷಾ ಚಿತ್ರಗಳ ಪೈಪೋಟಿ ಎದುರಿಸಲು ಕನ್ನಡ ಚಿತ್ರಗಳು ಕೂಡ ವೈವಿಧ್ಯಮಯವಾಗಿ ಮತ್ತು ಅದ್ದೂರಿಯಾಗಿ ಹೊಸ ಹೊಸ ತಾಣಗಳಲ್ಲಿ ಚಿತ್ರೀಕರಣವಾಗಬೇಕು. ವಿ.ಎಸ್.ಸುಬ್ಬರಾವ್ ಸಮಿತಿ ಶಿಫಾರಸ್ಸಿನಲ್ಲಿರುವಂತೆ ರಾಜ್ಯದ ಹೊರಗಡೆ ಹೆಚ್ಚಿನ ಚಿತ್ರೀಕರಣ ಅವಕಾಶಕ್ಕ ಅನುಮತಿ ಕೋರಿದರು. ಸೀಮಿತ ಮಾರುಕಟ್ಟೆ ಹೊಂದಿರುವ ಕನ್ನಡ ಚಲನಚಿತ್ರಗಳಲ್ಲಿ ವೈವಿಧ್ಯವನ್ನು ತಂದು ಜನಪ್ರಿಯಗೊಳಿಸಬೇಕಾದ ಹಿನ್ನೆಲೆಯಲ್ಲಿ, ಸರ್ಕಾರವು **ಆದೇಶ** (ಸಂಖ್ಯೆ:ಐಟಿವೈ ೧೦, ಪಿಐಎಫ್ ೯೬, ದಿನಾಂಕ:೧೦-೦೯-೯೬) ಪ್ರಕಟಿಸಿ, ಕನ್ನಡ ಚಲನಚಿತ್ರದ ಒಟ್ಟಾರ ಉದ್ದದ ಶೇಕಡಾ ೨೫ರಷ್ಟು ಭಾಗವನ್ನು ಕರ್ನಾಟಕ ರಾಜ್ಯದ ಹೊರಗಡೆ, ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರ ಪೂರ್ವಾನುಮತಿಯೊಂದಿಗೆ ಚಿತ್ರೀಕರಿಸಲು ಅನುಮತಿ ನೀಡಿದ್ದರು. ಈ ವಿನಾಯಿತಿಯು ರಾಜ್ಯದ ಹೊರಗಡೆ ಹೊರಾಂಗಣ ಚಿತ್ರೀಕರಣಕ್ಕ ಮಾತ್ರ ಅನ್ವಯಿಸುತ್ತದೆಯೇ ಹೊರತು ಒಳಾಂಗಣ ಚಿತ್ರೀಕರಣಕ್ಕೆ ಅನ್ವಯಿಸುವುದಿಲ್ಲ. ಈ ಆದೇಶ ಹೊರಡಿಸಿದ ದಿನಾಂಕದಿಂದ ಈ ಸೌಲಭ್ಯವೂ ಜಾರಿಗೆ ಬಂದಿತು. ಈ ಮೊದಲು ಜಾರಿಯಲ್ಲಿದ್ದ ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೨೧೨, ಪಿಐಎಫ್ ೮೫, ದಿನಾಂಕ:೮-೭-೮೬)ದಲ್ಲಿ ಇತರೇ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲವೆಂದು ತಿಳಿಸಿತು. ಆದರೆ ಅದರಲ್ಲಿ ನಿಗದಿಪಡಿಸಲಾದ ಕನ್ನಡ ಚಲನಚಿತ್ರದ ಒಟ್ಟಾರೆ ಉದ್ದದ ಶೇಕಡಾ ೧೫ರಷ್ಟು ಭಾಗವನ್ನು ಶೇಕಡಾ ೨೫ಕ್ಕೆ ಹೆಚ್ಚಿಸಿ, ರಾಜ್ಯದ ಹೊರಗಡೆ ಚಿತ್ರಿಸಲು ಅನುಕೂಲ ಕಲ್ಪಿಸಿತು.

ಕನ್ನಡ ಚಲನಚಿತ್ರ ರಂಗವನ್ನು ಪುನಶ್ಚೇತನಗೊಳಿಸುವ ದೃಷ್ಟಿಯಿಂದ ಚಲನಚಿತ್ರ ಕ್ಷೇತ್ರದ ಗಣ್ಯರೊಂದಿಗೆ ಸಮಾಲೋಚಿಸಿ ಹೊಸ ನೀತಿಯನ್ನು ರೂಪಿಸಲು, ಚಾಲ್ತಿಯಲ್ಲಿರುವ ಸಹಾಯಧನ ನಿಯಮಾವಳಿಗೆ ತಿದ್ದುಪಡಿ ರೂಪಿಸಲು ನಿರ್ಧರಿಸಿತು. ಇದನ್ನು ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೧೮೦, ಪಿಐಎಫ್ ೯೮, ದಿನಾಂಕ:೧೦-೧೨-೯೮) ಪ್ರಕಟಿಸಿ ದಿನಾಂಕ ೧-೪-೯೬ರಿಂದ ಜಾರಿಗೊಳಿಸಿತು.

ಇದರ ಪ್ರಕಾರ, ೧-೪-೯೬ರಿಂದ ಸಂಪೂರ್ಣವಾಗಿ ರಾಜ್ಯದಲ್ಲೇ ನಿರ್ಮಾಣಗೊಂಡು ಸೆನ್ಸಾರ್ ಪ್ರಮಾಣಪತ್ರ ಪಡೆದ ಗುಣಾತ್ಮಕ ಕನ್ನಡ ಚಲನಚಿತ್ರಗಳಿಗೆ **ಮಾತ್ರ** ಸಹಾಯಧನ ನೀಡಲಾಗುವುದು.

ಗುಣಾತ್ಮಕ ಸಲಹಾ ಸಮಿತಿ ಆಯ್ಕೆ ಮಾಡಿದ ಕನ್ನಡ ಭಾಷಾ ಚಿತ್ರಗಳಿಗೆ ಗರಿಷ್ಠ ಹತ್ತು ಲಕ್ಷ ರೂಪಾಯಿ, ಇತರ ಪ್ರಾದೇಶಿಕ ಭಾಷಾ ಚಿತ್ರಗಳಿಗೆ ಐದು ಲಕ್ಷ ರೂಪಾಯಿಗಳ ಸಹಾಯಧನ ನೀಡಲಾಗುವುದು. ಒಂದು ಆರ್ಥಿಕ ವರ್ಷದಲ್ಲಿ ತಯಾರಾದ ಚಿತ್ರಗಳಿಗೆ ಗರಿಷ್ಠ ಇಪ್ಪತ್ತು ಚಲನಚಿತ್ರಗಳಿಗೆ ಮೇಲಿನಂತೆ ಸಹಾಯಧನ ನೀಡಬಹುದು. ಸಹಾಯಧನಕ್ಕೆ ಅರ್ಜಿ ಸಲ್ಲಿಸುವ ನಿರ್ಮಾಪಕರು ಅರ್ಜಿಯ ಜೊತೆ ಸದರಿ ಚಿತ್ರದ ವಿ.ಸಿ.ಡಿ ಪ್ರತಿಯನ್ನು ಸಲ್ಲಿಸಬೇಕು.

ರಾಜ್ಯದ ಹೊರಗಡೆ ಪೌರಾಣಿಕ, ಐತಿಹಾಸಿಕ, ವೈಜ್ಞಾನಿಕ ಚಲನಚಿತ್ರಗಳಿಗ ಬೇಕಾದ ಅದ್ದೂರಿ ಸೆಟ್‌ಗಳಲ್ಲಿ ಚಿತ್ರಿಸಲು ರಾಜ್ಯದಲ್ಲಿ ಲಭ್ಯವಿಲ್ಲದ ಡಿ.ಟಿ.ಎಸ್/ಡಾಲ್ಬಿ ಪದ್ಧತಿ ಮುದ್ರಣವನ್ನೂ ರಾಜ್ಯದ ಹೊರಗಡೆ ಇಲಾಖೆಯ ಪೂರ್ವಾನುಮತಿ ಪಡೆದು ಕೈಗೊಳ್ಳಬಹುದು.

ವಿದೇಶಗಳಲ್ಲಿ ಚಿತ್ರೀಕರಣಗೊಳ್ಳುವ ಕನ್ನಡ ಹಾಗೂ ಇತರ ಪ್ರಾದೇಶಿಕ ಚಿತ್ರಗಳು, ಕಥೆಗೆ ಪೂರಕವಾಗಿದ್ದಲ್ಲಿ ಅಲ್ಲಿನ ಖಾಸಗೀ ಮನೆಗಳಲ್ಲಿ ಚಿತ್ರಿಸಬಹುದು.

### ಏಕಗವಾಕ್ಷಿ ಸೌಲಭ್ಯ

ಚಿತ್ರೀಕರಣಕ್ಕೆ ಅನುಕೂಲವಾಗುವಂತೆ ಅನುಮತಿ ಪಡೆಯಲು ಏಕಗವಾಕ್ಷಿ ಯೋಜನೆ ಜಾರಿಗೆ ತಂದಿತು. ಇದರ ಪ್ರಕಾರ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರನ್ನು ಹೊರತುಪಡಿಸಿ, ರಾಜ್ಯದ ಬೇರೆ ಇಲಾಖೆಗಳ ಮುಖ್ಯಸ್ಥರು, ನಿಗಮ ಮಂಡಳಿಗಳು, ಜಿಲ್ಲಾಧಿಕಾರಿಗಳು ಪ್ರತ್ಯೇಕವಾಗಿ ಚಲನಚಿತ್ರ ಚಿತ್ರೀಕರಣ ಶುಲ್ಕ ವಿಧಿಸುವುದನ್ನು ನಿರ್ಬಂಧಿಸಿತು.

ಕನ್ನಡ ಹಾಗೂ ಪ್ರಾದೇಶಿಕ ಭಾಷಾ ಚಲನಚಿತ್ರಗಳ ಚಿತ್ರೀಕರಣ ಶುಲ್ಕವನ್ನು ಹತ್ತು ಸಾವಿರ ರೂಪಾಯಿಗಳಿಗ ಹೆಚ್ಚಿಸಿತು.

ಅತ್ಯಂತ ಮಹತ್ವದ ಹಾಗೂ ಚಿತ್ರರಂಗ ಕಾತರದಿಂದ ಕಾಯುತ್ತಿದ್ದ ತೆರಿಗೆ ವಿನಾಯಿತಿ ಬಗ್ಗೆ, ಈ ಹಿಂದೆ ಇದ್ದ ನಿಯಮಗಳಿಗೆ ಬದಲಾಗಿ ಪರಭಾಷೆಗಳಿಂದ ಕನ್ನಡಕ್ಕೆ ಪುನರಾವೃತ್ತವಾದ ಎಲ್ಲಾ ಚಿತ್ರಗಳಿಗೂ ಶೇಕಡಾ ನೂರು ಮನರಂಜನಾ ತೆರಿಗ ವಿನಾಯಿತಿ ನೀಡಲಾಗುವುದು. ಆದರೆ ಇಂತಹ ಚಿತ್ರಗಳಿಗೆ ಸಹಾಯಧನ ಸೌಲಭ್ಯ ಇರುವುದಿಲ್ಲ. ಚಿತ್ರವು ಪುನರಾವೃತ್ತವೋ ಅಲ್ಲವೋ ಎಂಬುದನ್ನು ಸರ್ಕಾರ ರಚಿಸುವ ಗುಣಾತ್ಮಕ ಚಿತ್ರಗಳ ಸಲಹಾ ಸಮಿತಿಯು ನಿರ್ಧರಿಸತಕ್ಕದ್ದು ಎಂದು ನಿಲುವು ತಾಳಿತು.

ಕನ್ನಡ ಹಾಗೂ ಇತರ ಪ್ರಾದೇಶಿಕ ಭಾಷೆಯ ಗುಣಾತ್ಮಕ ಚಿತ್ರಗಳನ್ನು ಗುರುತಿಸಲು, ಸೆನ್ಸಾರ್ ನಿಯಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾರ್ಗ ಸೂಚಿ ನಿಗದಿಪಡಿಸಿ ಆದೇಶ ಹೊರಡಿಸಿತು. **ಆದೇಶ** (ಸಂಖ್ಯೆ:ಐಟಿವೈ ೧೩, ಪಿಐಎಫ್ ೯೯, ದಿನಾಂಕ:೨೭-೦೨-೯೯) ದಲ್ಲಿ ಈ ಮಾರ್ಗಸೂಚಿಯನ್ನು 'ಕರ್ನಾಟಕ ರಾಜ್ಯದಲ್ಲಿ ನಿರ್ಮಿಸಲಾಗುವ ಚಿತ್ರಗಳಿಗೆ ಗುಣಾತ್ಮಕ ಆಧಾರದ ಮೇಲೆ ಸಹಾಯಧನ ನೀಡುವ ನಿಯಮಾವಳಿಗಳು' ಎಂದಿತು. ಈ ನಿಯಮಾವಳಿಗಳು ೦೧-೦೪-೯೬ರ ನಂತರ ಸೆನ್ಸಾರಾದ ಚಲನಚಿತ್ರಗಳಿಗೆ ಅನ್ವಯಿಸಿತು. ಸರ್ಕಾರ ರಚಿಸುವ 'ಗುಣಾತ್ಮಕ ಆಯ್ಕೆ ಸಲಹಾ ಸಮಿತಿ' ವೀಕ್ಷಿಸಿ, ಶಿಫಾರಸ್ಸು ಮಾಡಿದ ಚಿತ್ರಗಳು ಈ ಸಹಾಯಧನಕ್ಕೆ ಅರ್ಹ ಎಂದಿತು.

ಕಥಾನಕ ಚಲನಚಿತ್ರಗಳ ಉದ್ದ ಈ ಮೊದಲಿದ್ದಂತೆ '೩೫ ಎಂ.ಎಂ ನಲ್ಲಿ ಮೂರು ಸಾವಿರ ಮೀಟರ್‌ಗಳಿಗಿಂತ ಕಡಿಮೆ ಇಲ್ಲದ' ಎಂಬ ನಿಯಮ ಮುಂದುವರಿಯಿತು. ಆದರೆ ಮಕ್ಕಳ ಚಿತ್ರಗಳು ಎರಡೂವರೆ ಸಾವಿರ ಮೀಟರ್‌ಗಿಂತ ಕಡಿಮೆ ಇರಬಾರದು ಎಂಬ ಹೊಸ ಅಂಶ ಸೇರಿತು.

ಪ್ರಾದೇಶಿಕ ಭಾಷೆಗಳೆಂದರೆ ಕನ್ನಡ, ಕೊಂಕಣಿ, ತುಳು ಜೊತೆ ಲಂಬಾಣಿ ಭಾಷೆ ಸೇರಿತು, ಆದರೆ ಕೊಡವ ಭಾಷೆ ಕಳಚಿಕೊಂಡಿತು.

ಪ್ರತಿ ಮೂರು ವರ್ಷಕ್ಕೊಮ್ಮೆ ಪುನರ್‌ರಚಿತವಾಗುವ ಗುಣಾತ್ಮಕ ಆಯ್ಕೆ ಸಲಹಾ ಸಮಿತಿ ಚಿತ್ರಗಳನ್ನು ವೀಕ್ಷಿಸಿ, ಅವುಗಳಲ್ಲಿ ಗುಣಾತ್ಮಕ ಚಿತ್ರಗಳನ್ನು ಸಹಾಯಧನಕ್ಕಾಗಿ ಆಯ್ಕೆ ಮಾಡುವುದು. ಈ ಸಮಿತಿಗೆ ಅಧ್ಯಕ್ಷರಾಗಿ ಸಾಹಿತ್ಯ, ಸಂಗೀತ, ಕಲೆ ಕ್ಷೇತ್ರದ, ಆದರೆ ಚಲನಚಿತ್ರಗಳ ಬಗ್ಗೆ ಅಭಿರುಚಿ ಇರುವ ಸರ್ಕಾರೇತರ ವ್ಯಕ್ತಿ ಹಾಗೂ ಇಂತಹುದೇ ಹಿನ್ನೆಲೆಯ ಏಳು ಸದಸ್ಯರನ್ನು ಸರ್ಕಾರ ನೇಮಿಸುವುದು.

ರಾಜ್ಯ ವಾರ್ತಾ ಇಲಾಖೆಯ ನಿರ್ದೇಶಕ, ಅಥವಾ ಅವರು ನಾಮ ನಿರ್ದೇಶಿಸಿದ ಉಪನಿರ್ದೇಶಕ ಅಥವಾ ಅವರಿಗಿಂತ ಮೇಲ್ಪಟ್ಟ ಅಧಿಕಾರಿ ಸದಸ್ಯ ಕಾರ್ಯದರ್ಶಿಯಾಗಿರುವರು. ಸಮಿತಿಯು ಯಾವುದೇ ನಿರ್ಧಾರವನ್ನು ಕೈಗೊಳ್ಳಲು, ಸದಸ್ಯ ಕಾರ್ಯದರ್ಶಿಯೂ ಸೇರಿ ಅರುಮಂದಿ ಸದಸ್ಯರ ಕೋರಂ ಹೊಂದಿರಬೇಕು. ಸಲಹಾ ಸಮಿತಿಯ ಶಿಫಾರಸ್ಸು ಅಂತಿಮವಾಗಿರುತ್ತದೆ.

ಪುನರಾವೃತ, ಡಬ್ ಆದ ಚಿತ್ರಗಳು ಈ ಸಹಾಯಧನಕ್ಕೆ ಅನರ್ಹವಾಗುತ್ತವೆ. ಒಂದು ವೇಳೆ ಪುನರಾವೃತ್ತವೆಂದು ಕಂಡುಬಂದಲ್ಲಿ, ಸರ್ಕಾರ ರಚಿಸಿರುವ 'ಪುನಾರವೃತ್ತ ಸಲಹಾ ಸಮಿತಿ' ಈ ಬಗ್ಗೆ ನಿರ್ಧಾರ ಕೈಗೊಳ್ಳುತ್ತದೆ.

ನಿರ್ಮಾಪಕ ಸೆನ್ಸಾರ್ ಪ್ರಮಾಣಪತ್ರ ಪಡೆಯುವಾಗ ಮಂಡಳಿಗೆ ಸಲ್ಲಿಸಿರುವ ಚಿತ್ರದ ಯಥಾ ಪ್ರತಿಯನ್ನೇ ಸಹಾಯಧನ ಸಮಿತಿಗೆ ಸಲ್ಲಿಸಬೇಕು. ಅರ್ಜಿಯ ಜೊತೆಗೆ ಒಂದು ವಿ.ಸಿ.ಡಿ ಪ್ರತಿ ಹಾಗೂ ಐದುನೂರು ರೂಪಾಯಿ ಪ್ರವೇಶ ಶುಲ್ಕ ನೀಡಬೇಕು.

ಸೆನ್ಸಾರ್ ನಿಯಮ ಆಧರಿಸಿ ರೂಪಿಸಲಾದ ಮಾರ್ಗಸೂಚಿಗಳ ಪ್ರಕಾರ, ರಾಷ್ಟ್ರೀಯ ಸಮಗ್ರತೆಗ ಧಕ್ಕೆ ತರುವಂತಹ, ವಿದ್ಯಾರ್ಥಿ ಸಮುದಾಯದಲ್ಲಿ ಅಶಿಸ್ತು

ಮೂಡಿಸುವಂತಹ, ಕೀಳು ಅಭಿರುಚಿಯ, ದ್ವಂದ್ವಾರ್ಥದ, ಮತೀಯ ಗಲಭೆಗಳಿಗೆ ಪ್ರಚೋದನೆ ನೀಡುವ ಕಥೆ, ದೃಶ್ಯ, ಸಂಭಾಷಣೆ ಇರಬಾರದು. ಅನಾವಶ್ಯಕವಾಗಿ ಮಹಿಳೆಯರ ಮೇಲೆ ಹಿಂಸೆ, ಅತ್ಯಾಚಾರ, ಲೈಂಗಿಕತೆ, ಕಾಮ ಪ್ರಚೋದನೆ ಹಾಗೂ ಹೊಡೆದಾಟ, ಕ್ರೌರ್ಯ ವಿಜೃಂಭಿಸುವ ಕಥೆ, ದೃಶ್ಯ, ಸಂಭಾಷಣೆ ಇರಬಾರದು. ಚಿತ್ರ ಸಮಾಜದ ಮೇಲೆ, ವಿಶೇಷವಾಗಿ ಯುವ ಜನಾಂಗದ ಮೇಲೆ ದುಷ್ಪರಿಣಾಮ ಬೀರಿ, ಪ್ರಚೋದಿತರಾಗಿ ಅವುಗಳನ್ನು ನಿಜಜೀವನದಲ್ಲಿ ಜಾರಿಗೆ ತರುವಂತಹ ಕನಿಷ್ಠ ಪ್ರಚೋದನೆ ಇರುವಂತಹ ಕಥೆ, ದೃಶ್ಯ, ಸಂಭಾಷಣೆ ಇದ್ದರೆ ಅಂತಹ ಚಿತ್ರಗಳು ಅನರ್ಹವಾಗಬೇಕು.

ಈ ಹಿನ್ನೆಲೆಯಲ್ಲಿ ಇದಕ್ಕೆ ಪೂರಕವಾಗುವಂತಹ ಅಂಶಗಳನ್ನು ಪರಿಗಣಿಸಿ, ಒಂದು ಆರೋಗ್ಯಕರವಾದ ಸಾಂಸ್ಕೃತಿಕ ವಾತಾವರಣವನ್ನುಂಟು ಮಾಡುವಂತಹ ಮತ್ತು ನಾಡಿನ ಸಂಸ್ಕೃತಿ ಘನತೆಯನ್ನು ಹೆಚ್ಚಿಸುವಂತಹ ಚಿತ್ರಗಳಿಗೆ ಪ್ರೋತ್ಸಾಹ ನೀಡಬೇಕು. ಸರ್ಕಾರದ ಈ ಆಶಯಗಳನ್ನು ಈಡೇರಿಸುವ ಚಿತ್ರಗಳನ್ನು ಆಯ್ಕೆ ಮಾಡಲು ಬೇಕಾಗುವಂತಹ ಮಾರ್ಗ ಸೂಚಿಗಳನ್ನು ಸಮಿತಿಯೇ ರೂಪಿಸಿ, ಅಳವಡಿಸಿಕೊಳ್ಳಬೇಕು ಎಂದು ಸ್ಪಷ್ಟಪಡಿಸಿತು.

### ಗುಣಾತ್ಮಕ ಚಿತ್ರಗಳ ಆಯ್ಕೆಗೆ ತಜ್ಞರ ಸಮಿತಿ

ಕನ್ನಡ ಹಾಗೂ ಇತರ ಪ್ರಾದೇಶಿಕ ಭಾಷಾ ಚಿತ್ರಗಳ ಪೈಕಿ ಸಹಾಯಧನಕ್ಕಾಗಿ ಗುಣಾತ್ಮಕ ಚಲನಚಿತ್ರ ಆಯ್ಕೆ ಸಲಹಾ ಸಮಿತಿಯನ್ನು ರಚಿಸಲು ಚಿತ್ರೋದ್ಯಮ, ಕಲೆ, ಸಂಸ್ಕೃತಿ, ಸಾರ್ವಜನಿಕ ಸೇವೆ, ಇನ್ನಿತರ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಗಣ್ಯರ ಪಟ್ಟಿಯನ್ನು ಕಳುಹಿಸಿ, ಸಲಹಾ ಸಮಿತಿ ರಚಿಸಲು ಸರ್ಕಾರವನ್ನು ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು ಕೋರಿದರು.

ಸರ್ಕಾರಿ **ಆದೇಶ** (ಸಂಖ್ಯೆ:ಐಟಿಪಿ ೧೩, ಪಿಐಎಫ್ ೯೯, ದಿನಾಂಕ:೨೭-೨-೯೯) ಪ್ರಕಟಿಸಿ, ಕನ್ನಡ ಚಲನಚಿತ್ರ ಉದ್ಯಮವನ್ನು ಅಭಿವೃದ್ಧಿ ಪಡಿಸುವ ಬಗ್ಗೆ, ಸಹಾಯಧನಕ್ಕಾಗಿ ಗುಣಾತ್ಮಕ ಚಲನಚಿತ್ರ ಆಯ್ಕೆ ಸಲಹಾ ಸಮಿತಿಗೆ ಅಧ್ಯಕ್ಷರಾಗಿ ಬಿ.ವಿ.ಕಾರಂತ್‌ಅವರನ್ನು, ಸದಸ್ಯರಾಗಿ ನಟ ಕಲ್ಯಾಣ್‌ಕುಮಾರ್, ಕವಿ ಸಿದ್ದಲಿಂಗಯ್ಯ, ಲೇಖಕಿ ವೈದೇಹಿ, ಪತ್ರಕರ್ತ-ಕವಿ ರಮಜಾನ ದರ್ಗಾ, ಪತ್ರಕರ್ತ ಸದಾಶಿವ ಶೆಣೈ, ಬಿ.ಮಹದೇವಪ್ಪ,ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷ ಅಥವಾ ಅವರ ಪ್ರತಿನಿಧಿ ನೇಮಕವಾದರು. ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಇದರ ಸದಸ್ಯ ಕಾರ್ಯದರ್ಶಿ. ಹೀಗೆ ಎಂಟು ಜನರು ನೇಮಕವಾದರು. ಈ ಸಮಿತಿಯು ಮೂರು ವರ್ಷಗಳ ಅವಧಿಗೆ ಮಾತ್ರ ಜಾರಿಯಲ್ಲಿರುತ್ತದೆ. ಇದು ೧೯೯೬-೯೭ ಸಾಲಿನಲ್ಲಿ, ತದನಂತರ ಸೆನ್ಸಾರ್ ಆದ, ಆಗುವ ಕನ್ನಡ ಹಾಗೂ ಇತರ ಪ್ರಾದೇಶಿಕ ಭಾಷಾ ಚಲನಚಿತ್ರಗಳಿಗೆ ಸಹಾಯಧನ ಮಂಜೂರು ಮಾಡಲು, ಅವುಗಳ ಗುಣಮಟ್ಟ ಹಾಗೂ ಇತರ ವಿಷಯಗಳನ್ನು ಪರಿಶೀಲಿಸಿ, ಅವು ಸಹಾಯಧನ ಪಡೆಯಲು ಅರ್ಹವಾಗಿವೆಯೇ ಎಂದು ಶಿಫಾರಸ್ಸು ಮಾಡಬೇಕು ಎಂದು ತಿಳಿಸಿತು.

ಗುಣಾತ್ಮಕ ಚಲನಚಿತ್ರ ಆಯ್ಕೆ ಸಲಹಾ ಸಮಿತಿ ಅಧ್ಯಕ್ಷರಾದ ಬಿ.ವಿ.ಕಾರಂತರು ಸರ್ಕಾರಕ್ಕೆ ೨೦-೦೫-೨೦೦೦ದಂದು ಪತ್ರ ಬರೆದು, ಸಹಾಯಧನ ನೀಡಿಕೆಯ ವಿಷಯದಲ್ಲಿ ಕನ್ನಡ ಭಾಷಾ ಚಿತ್ರಗಳು ಮತ್ತು ಪ್ರಾದೇಶಿಕ ಭಾಷಾ ಚಿತ್ರಗಳ ನಡುವೆ ಮೊತ್ತದಲ್ಲಿ ತಾರತಮ್ಯ ಕಂಡುಬರುತ್ತಿದೆ. ಈ ವಿಷಯದಲ್ಲಿ ಆಯ್ಕೆಗೆ ಒಂದೇ ಮಾನದಂಡ ಅಳವಡಿಸಿದಲ್ಲಿ, ಇತರ ಪ್ರಾದೇಶಿಕ ಭಾಷಾ ಚಿತ್ರಗಳಿಗೂ ಹತ್ತು ಲಕ್ಷ ರೂಪಾಯಿ ಸಹಾಯಧನ ನೀಡುವುದು ಸೂಕ್ತ ಎಂದು ತಿಳಿಸಿ, ಸರ್ಕಾರದಿಂದ ಸ್ಪಷ್ಟ ಮಾರ್ಗದರ್ಶನ ಕೋರಿದರು.

ವಾರ್ತಾ ಇಲಾಖೆಯ ನಿರ್ದೇಶಕರು ತಮ್ಮ ಪತ್ರದಲ್ಲಿ, ಆಯಾ ಸಾಲಿಗೆ ಸಹಾಯಧನಕ್ಕೆ ಅರ್ಹತೆ ಪಡೆದಿರುವ ಚಲನಚಿತ್ರಗಳಲ್ಲಿ, ೧೯ ಕನ್ನಡ ಚಲನಚಿತ್ರಗಳನ್ನು, ಎರಡು ಪ್ರಾದೇಶಿಕ ಭಾಷಾ ಚಿತ್ರಗಳನ್ನು ಸಹಾಯಧನಕ್ಕೆ ಆಯ್ಕೆ ಮಾಡಬಹುದಾಗಿದೆ, ಸದರಿ ಸಾಲಿನಲ್ಲಿ ಯಾವುದೇ ಪ್ರಾದೇಶಿಕ ಭಾಷಾ ಚಲನಚಿತ್ರಗಳು ಅರ್ಹತೆ ಗಳಿಸದಿದ್ದಲ್ಲಿ ಒಟ್ಟು ೨೦ ಕನ್ನಡ ಚಿತ್ರಗಳನ್ನೇ ಸಹಾಯಧನಕ್ಕೆ ಆಯ್ಕೆ ಮಾಡಬಹುದು ಎಂದು ತಿಳಿಸಿದರು.

ಸರ್ಕಾರಿ **ಆದೇಶ** (ಸಂಖ್ಯೆ:ವಾಪ್ರಯು ೯೧, ಪಿಐಎಫ್ ೨೦೦೦, ದಿನಾಂಕ:೨೪.೩.೨೦೦೧) ಹೊರಡಿಸಿ ಚಾಲ್ತಿ ನಿಯಮಗಳಿಗೆ ಕೆಲವು ತಿದ್ದುಪಡಿ ತಂದಿತು. ಇದರ ಪ್ರಕಾರ, ೧.೪.೯೯ರ ನಂತರ ರಾಜ್ಯದಲ್ಲೇ ನಿರ್ಮಾಣಗೊಂಡು, ಸೆನ್ಸಾರಾಗಿ, ಬಿಡುಗಡೆಯಾಗಿರುವ ಚಲನಚಿತ್ರಗಳಲ್ಲಿ ೧೮ ಕನ್ನಡ ಹಾಗೂ ೨ ಪ್ರಾದೇಶಿಕ ಭಾಷಾ ಗುಣಾತ್ಮಕ ಚಿತ್ರಗಳಿಗೆ ತಲಾ ಹತ್ತು ಲಕ್ಷ ರೂಪಾಯಿ ಸಹಾಯಧನ ನೀಡಲಾಗುವುದು.

ಗುಣಾತ್ಮಕ ಚಲನಚಿತ್ರಗಳ ಆಯ್ಕೆ ಸಲಹಾ ಸಮಿತಿಯು ರಾಜ್ಯ ಪ್ರಶಸ್ತಿ ಪಡೆದ ನಾಲ್ಕು ಚಿತ್ರಗಳನ್ನು ಹೊರತುಪಡಿಸಿ, ೧೬ ಚಿತ್ರಗಳನ್ನು ಮಾತ್ರ ಆಯ್ಕೆ ಮಾಡಬೇಕು. ಒಂದು ವೇಳೆ ಪ್ರಾದೇಶಿಕ ಭಾಷಾ ಚಿತ್ರಗಳು ಅರ್ಹತೆ ಪಡೆಯದಿದ್ದರೆ, ಎಲ್ಲಾ ಚಿತ್ರಗಳೂ ಕನ್ನಡ ಚಿತ್ರಗಳೇ ಆಗಿರಬಹುದು ಎಂದಿತು.

ಅಂತರರಾಷ್ಟ್ರೀಯ ಪ್ರಶಸ್ತಿ ಪಡೆದ ಚಿತ್ರವೂ ನೇರವಾಗಿ ಸಹಾಯಧನ ಅರ್ಹತೆ ಪಡೆಯುವುದು. ಆಗ ಗುಣಾತ್ಮಕ ಚಿತ್ರಗಳ ಆಯ್ಕೆ ಸಮಿತಿ ಒಂದು ಚಿತ್ರವನ್ನು ಕಡಿಮೆ ಆಯ್ಕೆ ಮಾಡಬೇಕು. ಈ ಆದೇಶವು ದಿನಾಂಕ ೧-೪-೯೯ರಿಂದ ಜಾರಿಗೆ ಬಂದಿತು.

ಸಹಾಯಧನ ನೀತಿ ಜಾರಿಗೊಳಿಸುವಲ್ಲಿ ಸರ್ಕಾರ ಮತ್ತು ಚಿತ್ರರಂಗದ ಪರಸ್ಪರ ಸಂಬಂಧ ಕುರಿತು ಒಂದು ಸಣ್ಣ ವಿಶ್ಲೇಷಣೆ ಅಗತ್ಯ:

ಕನ್ನಡ ಚಲನಚಿತ್ರಗಳಿಗೆ ಸಹಾಯಧನ ನೀಡುವಿಕೆಯಲ್ಲಿ ಮೊತ್ತ ಹೆಚ್ಚಿಸಲು ಆರಂಭದಲ್ಲೇ ರೂಪಾಯಿ ಅಪಮೌಲ್ಯ, ಕಚ್ಚಾ ಸಾಮಗ್ರಿಗಳ ಬೆಲೆ ಏರಿಕೆಯ ಅಂಶ ಗುರುತಿಸಿದ ಸರ್ಕಾರ, ನಂತರದ ಅವಧಿಯಲ್ಲಿ ಆಗಾಗ ಇದನ್ನೇ ಆಧಾರ ಇಟ್ಟುಕೊಂಡು ತಾನೇ ಸಹಾಯಧನ ಹೆಚ್ಚಿಸುತ್ತ ಹೋಗಬಹುದಾಗಿತ್ತು. ಆದರೆ ಚಿತ್ರರಂಗದವರ ಮನವಿ ನಂತರ ಯಾವ ವೈಜ್ಞಾನಿಕ ತಳಹದಿಯ ಲೆಕ್ಕಾಚಾರವನ್ನು ಆಧರಿಸದೆ ಮನಬಂದಂತೆ ಸಹಾಯಧನ ಮೊತ್ತ ಹೆಚ್ಚಳ ಮಾಡುತ್ತ ಹೋದದ್ದು ಸರ್ಕಾರದ ದೌರ್ಬಲ್ಯ ಎಂದೇ ಹೇಳಬೇಕು.

ಕರ್ನಾಟಕದಲ್ಲಿ ತಯಾರಾದ ಬೇರೆ ಭಾಷೆಗಳ ಚಿತ್ರಗಳಿಗೂ ಸಹಾಯಧನ ನೀಡುವ ನೀತಿಯನ್ನು ೧-೭-೧೯೬೬ರಿಂದ ೧-೮-೧೯೭೭ರವರೆಗೆ, ಸುಮಾರು ೧೩ ವರ್ಷಗಳ ಕಾಲ ಮುಂದುವರಿಸಿ, ನೀಡಿದ ಒಟ್ಟು ಮೊತ್ತವೆಷ್ಟು, ಹಾಗೂ ಇದರಿಂದ ಕನ್ನಡ ರಾಜ್ಯದ ಚಿತ್ರೋದ್ಯಮಕ್ಕೆ ಆದ ಲಾಭ, ಅನುಕೂಲವೇನು ಎಂಬುದರ ಮೌಲ್ಯಮಾಪನ ಮಾಡಲು ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಯಾವ ನಿಶ್ಚಿತ ದಾಖಲೆಗಳೂ ಇಲ್ಲ; ಈ ಕುರಿತು ಚಿಂತನೆಯೂ ಆಗಿಲ್ಲ. 'ಶೋಲೆ'ಯಂತಹ ಚಿತ್ರಕ್ಕೆ ನೀಡಿದ ೫೦ ಸಾವಿರ ಸಹಾಯಧನವನ್ನು ಅದರ ಸ್ಥಳೀಯ ಪ್ರೊಡಕ್ಷನ್ ಮ್ಯಾನೇಜರ್‌ಗೆ ಸಂಬಳಕ್ಕೆಂದು ನಿರ್ಮಾಪಕರು ಅಧಿಕಾರ ಪತ್ರ ಬರೆದು ಕೊಟ್ಟರಂತೆ. ಈ ಹಿನ್ನೆಲೆಯಲ್ಲಿ ಔಚಿತ್ಯದ ಕುರಿತು ವಿಚಾರ ವಿಮರ್ಶೆ ಅಗತ್ಯ.

ಈ ರೀತಿ ಸಹಾಯಧನ ಪರಭಾರೆ ಮಾಡುವ ಅವಕಾಶ ಇದ್ದಾಗ, ಮೈಸೂರಿನ ಪ್ರೀಮಿಯರ್ ಸ್ಟುಡಿಯೋ ತನ್ನ ವ್ಯಾಪ್ತಿಯಲ್ಲಿರುವ ಸಕಲ ಸೌಲಭ್ಯಗಳನ್ನು ಕಪ್ಪು-ಬಿಳುಪು ಚಿತ್ರ ನಿರ್ಮಾಣ ಮಾಡುವ ನಿರ್ಮಾಪಕರಿಗೆ ಸಹಾಯಧನ ಬರೆಸಿಕೊಂಡು ನೀಡುವ ಪರಂಪರೆ ಆರಂಭಿಸಿ, ಒಂದು ವರ್ಷದಲ್ಲಿ ಅತಿ ಹೆಚ್ಚು ಸಹಾಯಧನ ಆ ಸಂಸ್ಥೆಯೇ ಪಡೆದು ದಾಖಲೆ ಸೃಷ್ಟಿಸಿತು. ಆಗ ವಿಧಾನಸೌಧಕ್ಕೆ ಹತ್ತಿರವಿದ್ದ ಸ್ಥಳೀಯ ಸ್ಟುಡಿಯೋ ಲ್ಯಾಬ್‌ಗಳು ಎಚ್ಚೆತ್ತು ಸರ್ಕಾರದಿಂದ ಈ ರೀತಿ ಅಡವು ಇಡುವುದನ್ನು ಆದೇಶದ ಮೂಲಕ ನಿರ್ಬಂಧಿಸಿತು. ಕರ್ನಾಟಕ ರಾಜ್ಯ ಚಲನಚಿತ್ರ ಅಭಿವೃದ್ಧಿ ಮಂಡಳಿಗೆ ಅಡವಿಡಲು ಅನುಕೂಲ ಕಲ್ಪಿಸಿದರೂ ಅಲ್ಲಿನ ಎಲ್ಲ ಸೌಲಭ್ಯ ಹಾಗೂ ಸರ್ಕಾರಿ ಧೋರಣೆಗೆ ಹೆದರಿ, ಚಿತ್ರರಂಗದವರು ಅದರ ಬಳಿಯೂ ಹೋಗಲಿಲ್ಲ. ಅಪವಾದವಾಗಿ 'ಅರಿವು' ಚಿತ್ರದ ನಿರ್ಮಾಪಕಿ ಪದ್ಮಾಕುಮಟಾ ಒಬ್ಬರೇ ಈ ಸೌಲಭ್ಯ ಪಡೆದು ಬವಣೆಪಟ್ಟರು. ಈ ವಿಷಯದಲ್ಲಿ ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮವೇ ಅದೃಷ್ಟಶಾಲಿ ಎನ್ನಬಹುದು. ಕನ್ನಡಕ್ಕೆ ಅನೇಕ ಉತ್ತಮ ಚಿತ್ರ ನೀಡಿ, ಸಹಾಯಧನ, ಪ್ರಶಸ್ತಿ ಎರಡನ್ನೂ ಗಿಟ್ಟಿಸಿತು.

ಈ ಮೇಲಿನ ಸಂದರ್ಭ ಹೊರತು ಪಡಿಸಿ, ಉಳಿದಂತೆ ನಿರ್ಮಾಪಕರಿಗೇ ನೇರವಾಗಿ ಸಹಾಯಧನದ ಚೆಕ್ಕನ್ನು ಇಲಾಖೆ ನೀಡುತ್ತಿತ್ತು. ಆದರೆ ಪಾಲುದಾರಿಕೆ ಸಂಸ್ಥೆಯ ಪಾಲುದಾರರೊಬ್ಬರು ಚೆಕ್ಕು ಪಡೆದ ಇನ್ನೊಬ್ಬ ಪಾಲುದಾರರನ್ನು ವಾರ್ತಾ ಇಲಾಖೆಯ ಕಚೇರಿಯ ಅಂಗಳದಿಂದಲೇ ಕಾರಿನಲ್ಲಿ ಅಪಹರಿಸಿ, ಕನ್ನಡ ಚಿತ್ರರಂಗದಲ್ಲೇ ದಾಖಲೆ ನಿರ್ಮಿಸಿದರು. ಹೀಗಾಗಿ ಇಲಾಖೆಯು ನಂತರ ಈ ರೀತಿಯ ಎಲ್ಲ ಚೆಕ್ಕುಗಳನ್ನೂ ನೋಂದಾಯಿತ ಅಂಚೆ ಮೂಲಕ ಕಳಿಸುವ ಪದ್ಧತಿ ಪ್ರಾರಂಭಿಸಿತು.

ತನ್ನ ಹಿತಾಸಕ್ತಿಗೆ ಡಬ್ಬಿಂಗ್ ಚಿತ್ರ ಮುಳುವಾಗುವುದೆಂದು ಬೇಗ ಅರಿತ ನಮ್ಮ ಚಿತ್ರರಂಗ, ಅದರ ಪ್ರವೇಶವನ್ನು ಖಚಿತ ಧೋರಣೆ ತಾಳಿ ದೂರವಿಟ್ಟಿತು. ಆದರೆ ರೀಮೇಕ್ ಚಿತ್ರದ ಬಗ್ಗೆ ಮಾತನಾಡುವಾಗ ಮಾತ್ರ ಸ್ಪಷ್ಟ ನಿಲುವು ತಾಳಲಿಲ್ಲ. ಆದರೂ ಇಂತಹ ಚಿತ್ರಗಳನ್ನು ನಿರ್ಮಿಸಿ, ಅದಕ್ಕೆ ನಿಮ್ಮ ಪ್ರಶಸ್ತಿ ಬೇಡ, ನಿಮ್ಮ ಔದಾರ್ಯದ ಭಿಕ್ಷೆಯ ಸಹಾಯಧನವೂ ಬೇಡ. ಆದರೆ ತೆರಿಗೆ ವಿನಾಯಿತಿ ಮಾತ್ರ ನೀಡಿ ಎಂಬ ವ್ಯಾಪಾರಿ ನಿಲುವು ಸರ್ಕಾರಕ್ಕ ಸ್ಪಷ್ಟಪಡಿಸಿತು. ಹೀಗಾಗಿ ಸ್ಥಳೀಯ ಭಾಷೆ, ಕಲೆ, ಸಾಹಿತ್ಯ, ಪ್ರತಿಭೆ, ಸೊಬಗು ಇವುಗಳ ಬೆಳಕೆಯ ಹೊಣೆ ಕೇವಲ ಪ್ರಶಸ್ತಿ-ಸಹಾಯಧನ ಬಯಸುವ ಕಲಾತ್ಮಕ ಪಂಥದವರ, ಕಡಿಮೆ ಬಂಡವಾಳದವರ ಹೊಣೆ ಆಯಿತು.

ಗುಣಮಟ್ಟ ಆಧರಿಸಿ ಸಹಾಯಧನ ನೀಡಿಕೆ, ರಾಜ್ಯದ ಹೊರಗೆ ಚಿತ್ರೀಕರಣ, ವರ್ಣ ಸಂಸ್ಕರಣ, ಹಾಡುಗಳ ಧ್ವನಿಮುದ್ರಣ, ಮರುಮುದ್ರಣ, ಧ್ವನಿ ಮಿಶ್ರಣ, ಹೊರಗಿನವರ ಹೊರಾಂಗಣ ಉಪಕರಣ ಬಳಕೆ ಹೀಗೆ ಈ ಎಲ್ಲಾ ವಿಷಯಗಳ ಕುರಿತು ಕನ್ನಡ ಚಿತ್ರರಂಗ ತನ್ನ ಅಂಗ ಸಂಸ್ಥೆಯಾದ 'ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ'ಯ ಮುಖಾಂತರ ಸತತವಾಗಿ ಸರ್ಕಾರಕ್ಕ ದುಂಬಾಲು ಬಿದ್ದು, ಅಂಗಲಾಚಿ, ಕಾಡಿಬೇಡಿ ಸಮಯ ವಿಸ್ತರಣೆ ಪಡೆಯಿತೇ ಹೊರತು, ಸ್ವಾಭಿಮಾನದಿಂದ ಸೆಟೆದು ನಿಂತು ಚಿತ್ರೋದ್ಯಮಕ್ಕೆ ಬೇಕಾದ ಸೌಲಭ್ಯಗಳ ನಿರ್ಮಾಣದತ್ತ ಗಮನ ಹರಿಸಲೇ ಇಲ್ಲ. ಸಹಾಯಧನ ನೀಡಲು ಆರಂಭಿಸಿದ ೧೦ ವರ್ಷದ ಬಳಿಕ ಸ್ಥಳೀಯರು ಹಾಡುಗಳ ಧ್ವನಿಮುದ್ರಣ, ಮರುಮುದ್ರಣ, ಮಿಶ್ರಣಕ್ಕೆ ಆಧುನಿಕ ಸ್ಟುಡಿಯೋ ಸ್ಥಾಪಿಸಿದರು. ಅಷ್ಟೇಕೆ, ಸೆನ್ಸಾರಿನಂತಹ ಸೌಲಭ್ಯವೂ ಸಹ ಮದ್ರಾಸು ಕೇಂದ್ರವೇ ರುಚಿಕರವೆನಿಸಿದಾಗ, ನಿರ್ಮಾಪಕರಿಗೆ ಸಹಾಯಧನ ನಿಯಮಾವಳಿಯ ಮೂಲಕ ಸ್ಥಳೀಯ ಸೆನ್ಸಾರಿನ ಬಳಕೆಯ ಬಲವಂತದ ಮಾಘಸ್ನಾನ ಮಾಡಿಸಬೇಕಾಯಿತು.

ಚಿತ್ರರಂಗದವರು ಸರ್ಕಾರವನ್ನು ಬಗ್ಗಿಸುವ ಮೊದಲೇ ಅದು ಬಾಗಲಾಗುವ ನೀತಿಗೆ ಉತ್ತಮ ಪ್ರಸಂಗವೆಂದರೆ, ಸಹಾಯಧನ ಪಡೆಯಲು ನಿರ್ಮಾಪಕ ಸ್ಥಳೀಯ ಆದಾಯಕರ ಇಲಾಖೆಯ ಚಲನಚಿತ್ರ ಘಟಕದಿಂದ ಚುಕ್ತಾ ಪ್ರಮಾಣಪತ್ರ ತಂದು ಸಲ್ಲಿಸಬೇಕು. ಅದು ನಿರ್ಮಾಪಕನ ಮತ್ತು ಕೇಂದ್ರ ಸರ್ಕಾರದ ನಡುವಿನ ಸಮಸ್ಯೆ ಮತ್ತು ಪಾಲಿಸಬೇಕಾದ ಕರ್ತವ್ಯ. ಆದರೆ ಈ ವಿಷಯದಲ್ಲೂ ರಾಜ್ಯ ಸರ್ಕಾರದ ವಾರ್ತಾ ಇಲಾಖೆ ಈ ರೀತಿಯ ಪ್ರಮಾಣಪತ್ರ ಸಲ್ಲಿಸುವುದನ್ನೇ ಮನ್ನಾ ಮಾಡಲು ಕೇಳಿ, ಸರ್ಕಾರ ಒಪ್ಪದೇ ಹೋದಾಗ ಆದ ಮುಖಭಂಗ, ಅದರ ವಿಡಂಬನಾತ್ಮಕತನಕ್ಕ ಒಂದು ದಾಖಲೆ ಅಷ್ಟೇ.

'ಪ್ರಶಸ್ತಿ ಸಲಹಾ ಸಮಿತಿ', 'ಪ್ರಶಸ್ತಿ ಆಯ್ಕೆ ಸಮಿತಿ', 'ಪ್ರಶಸ್ತಿ ನ್ಯಾಯ ಸಮಿತಿ, 'ಕಲಾತ್ಮಕ ಚಿತ್ರಗಳ ಆಯ್ಕೆ ಸಮಿತಿ', 'ಗುಣಾತ್ಮಕ ಚಿತ್ರಗಳ ಆಯ್ಕೆ ಸಮಿತಿ', 'ಕನ್ನಡ ಚಲನಚಿತ್ರರಂಗದ ಸಮಗ್ರ ನೀತಿ ನಿರೂಪಣಾ ಸಮಿತಿ' ಇವೆಲ್ಲವುಗಳ ರಚನೆಯಲ್ಲಿ, ಸರ್ಕಾರಿ ಆದೇಶದಲ್ಲಿ ಉಲ್ಲೇಖಿಸಿರುವ ಸದಸ್ಯರ ಹೆಸರುಗಳನ್ನು ನಮೂದಿಸಲು ಸಾಧ್ಯವೇ ಹೊರತು, ಈ ಕಾರ್ಯಭಾರ ಒಪ್ಪದ, ತಾಂತ್ರಿಕ ಕಾರಣಗಳಿಂದ ಒಪ್ಪಲಾಗದ, ಅಥವಾ ಅಂತಹ ಸಂದರ್ಭಗಳಲ್ಲಿ ಬೇರೆಯ ಸದಸ್ಯರನ್ನು ಒಳಗೊಂಡಿಸಿಕೊಂಡಿದ್ದರ ಅಥವಾ ಹೆಸರುಗಳನ್ನು ಸೂಕ್ತವಾಗಿ ಇಲಾಖೆ ದಾಖಲೀಕರಿಸಿ ಸಂಗ್ರಹಿಸಿ ಇಡದೇ ಇರುವುದರಿಂದ ಹಾಗೂ ಕೆಲವೊಮ್ಮೆ ಇಂತಹ ಮಾಹಿತಿ ಲಭ್ಯಗೊಳಿಸುವುದು. ಸರ್ಕಾರಿ ರಹಸ್ಯವನ್ನು ಕಾಪಾಡುವ ದೃಷ್ಟಿಯಿಂದ ಹಿತಕರವಲ್ಲವೆಂಬ ನಿಲುವು ತಾಳುವುದರಿಂದ, ಕ್ಲಿಷ್ಟಕರ ವಿಷಯದ ಚರ್ಚೆಯನ್ನು ಲೇಖನದ ವ್ಯಾಪ್ತಿಗೆ ಒಳಪಡಿಸಿಲ್ಲ. ಅದು ಸಾಧ್ಯವೂ ಇಲ್ಲ, ಸಾಧುವೂ ಅಲ್ಲ.

ಅತಿ ಉತ್ಸಾಹದಿಂದ ಆರಂಭಗೊಂಡ 'ಕರ್ನಾಟಕ ಚಲನಚಿತ್ರ ಅಕಾಡೆಮಿ'ಯ ರಚನೆ ಕುರಿತು ಚಿತ್ರೋದ್ಯಮ ಮತ್ತು ಸರ್ಕಾರ ಪರಸ್ಪರ ನಡೆದುಕೊಂಡ ರೀತಿ, ಟೀಕೆ ಟಿಪ್ಪಣಿ, ಅನುಮಾನ, ಆತಂಕಗಳ ಹಿನ್ನೆಲೆಯಲ್ಲಿ ಚರ್ಚೆ ಹಾಗೂ ಕುಂಠಿತ ಪ್ರಗತಿಯ ಉಲ್ಲೇಖ ಅತಿ ಅವಶ್ಯ. ಆದರೆ ಉಭಯಪಕ್ಷಗಳು ಮೌನ ತಾಳಿ, ವಿವರಗಳು ಹೊರಬಾರದೇ ಇದ್ದಾಗ, ಇದಕ್ಕೂ ಸಹ ಇತಿಹಾಸದ ಗೂಢ ಪುಟಗಳಲ್ಲಿ ಅಡಗಿಕೊಳ್ಳಲು ಅವಕಾಶ ನೀಡುವುದೇ ಉತ್ತಮ ಮಾರ್ಗ.

ಇಂದು ಹಾಲಿವುಡ್ ನಿರ್ದೇಶಕನಿಗೆ ಇರುವ ಸ್ವಾತಂತ್ರ್ಯ ಕನ್ನಡದ ನಿರ್ದೇಶಕನಿಗ ಇಲ್ಲ. ಇತ್ತೀಚೆಗೆ ಕಪ್ಪು ಬಿಳುಪಿನಲ್ಲಿ, ಸ್ಟೀವನ್ ಸ್ಪಿಲ್‌ಬರ್ಗ್ ಎರಡನೇ ಮಹಾ ಯುದ್ಧದ ಹಿನ್ನೆಲೆಯ 'ಶಿಂಡ್ಲರ್ಸ್ ಲಿಸ್ಟ್' ಚಿತ್ರ ನಿರ್ದೇಶಿಸಿದ. ಆದರೆ ಕನ್ನಡದಲ್ಲಿ ಕಲಾತ್ಮಕ ದೃಷ್ಟಿಯಿಂದ ಅಗತ್ಯವೆಂದು ಕಪ್ಪು-ಬಿಳುಪು ಚಿತ್ರ ನಿರ್ಮಿಸಿದರೆ, ಅದಕ್ಕೆ ಸಿಗಬೇಕಾದ ಸಹಾಯಧನ ಕುರಿತು ವಿಶೇಷ ಸರ್ಕಾರಿ ಆದೇಶ ಹೊರಡಿಸಬೇಕಾಗುತ್ತದೆ. ಕಾರಣ ಈಗ ಅದು ಅಸ್ತಿತ್ವದಲ್ಲಿಲ್ಲ.

ಕನ್ನಡ ಚಿತ್ರಗಳ ನಿರ್ಮಾಣಕ್ಕೆ ಬರುವ ಹೊಸ ಹೊಸ ನಿರ್ಮಾಪಕರಿಗೆ ಆಕರ್ಷಿಸುವ ಹಲವಾರು ಆಕರ್ಷಣೆಗಳಲ್ಲಿ ಸಹಾಯಧನವೂ ಒಂದು. ಚಿತ್ರರಂಗದಲ್ಲಿದ್ದವರೇ ಸಹಾಯಧನ ಮೊತ್ತದಲ್ಲೇ ಚಿತ್ರ ನಿರ್ಮಿಸುವ ಕುರಿತು ಚಿಂತಿಸಿದರೆ, ಹೊಸ ನಿರ್ಮಾಪಕ ಈ ದೊಡ್ಡ ಮೊತ್ತ ಕಬಳಿಸಲು ಹುನ್ನಾರ ಹಾಕಿದರೆ ಅಚ್ಚರಿ ಪಡಬೇಕಾಗಿಲ್ಲ. ಈ ಕಾರಣದಿಂದಲೇ ಇಲ್ಲಿ ಅಭಿರುಚಿ ಇಲ್ಲದ, ಕೇವಲ ಹಣ ಗಳಿಸುವ ಹಬ್ಬಯಕೆಯುಳ್ಳ ನಿರ್ಮಾಪಕರ ಆಗಮನ ನಿರ್ಗಮನ ನಡೆದೇ ಇರುತ್ತದೆ. ಪ್ರದರ್ಶನ, ವಿತರಣ ಕ್ಷೇತ್ರಕ್ಕಿಂತಲೂ ನಿರ್ಮಾಣದಲ್ಲಿ ಈ ರೀತಿ ವಲಸೆ ಬಂದ, ವಲಸೆ ಹೋಗುವವರಿಂದಲೇ ಚಿತ್ರೋದ್ಯಮದ ಚೌಕಟ್ಟು ಇನ್ನೂ ಭದ್ರವಾಗಿರುವುದು.

ಆದರೆ ಹೆಚ್ಚಿನ ಪ್ರಸಂಗಗಳಲ್ಲಿ ನಿರ್ಮಾಪಕರಿಗೆ ಭ್ರಮನಿರಸನವಾಗುವುದು ಸಹಾಯಧನ ಪಡೆಯುವ ಹಂತದಲ್ಲಿ ಹಿಂದಿನ ವರ್ಷಗಳ ಬಾಕಿ ತೀರಿಸಿ, ಜ್ಯೇಷ್ಠತೆ ಆಧಾರದ ಮೇಲೆ ಸಹಾಯಧನ ಸಿಗಲು ಒಂದೆರಡು ವರ್ಷವಾದರೂ ಕಾಯಬೇಕು ಎಂದಾಗ ನಿರ್ಮಾಪಕ ಹೌಹಾರುತ್ತಾನೆ. ಇದನ್ನೇ ನಂಬಿ ಬಡ್ಡಿಗೆ ಸಾಲ ತಂದವರ ಎದೆಗುಂದುತ್ತಾನೆ. ಎಷ್ಟೋ ಸಂದರ್ಭಗಳಲ್ಲಿ ಸಹಾಯಧನದ ಅಸಲಿ ಮೊತ್ತಕ್ಕಿಂತ ಹೆಚ್ಚಿನ ಬಡ್ಡಿ ತೆತ್ತ ಪ್ರಸಂಗಗಳೂ ಇವೆ. ಆದರೆ ಇಂತಹ ದುರಂತಗಳಿಗ ಸರ್ಕಾರ ಇಲಾಖೆಯೇ ಕಾರಣವೆಂದು ಖಚಿತವಾಗಿ ಹೇಳುವುದುಂಟು. ಸಹಾಯಧನದ ಕಡತ ಸಲ್ಲಿಸುವಲ್ಲಿನ ವಿಳಂಬ ಮನ್ನಾ ಮಾಡುವ ಅಧಿಕಾರ ಕುರಿತ ಗೋಜಲು ನೀತಿಯಿಂದಾಗಿ ನಷ್ಟ ಅನುಭವಿಸಿದ ನಿರ್ಮಾಪಕರೂ ನೂರಾರು ಜನ.

ಪ್ರತಿ ವರ್ಷ ಎಷ್ಟು ಚಿತ್ರಗಳ ನಿರ್ಮಾಣವಾಗುವುದೆಂದು ಅಂದಾಜಿರುವ ಇಲಾಖೆ, ಇದುವರವಿಗೂ ತನ್ನ ಅಗತ್ಯಕ್ಕಿಂತ ಹೆಚ್ಚಿನ ಮೊತ್ತವನ್ನು ತನ್ನ ಆಯವ್ಯಯದಲ್ಲಿ ನಮೂದಿಸಿ, ಪಡೆದ ದಾಖಲೆಗಳೇ ಇಲ್ಲ. ಹೀಗಾಗಿ ಈ ವರ್ಷದ ಬಾಕಿ ಮರುವರ್ಷಕ್ಕೆ ವರ್ಗಾಯಿಸುವ ಅನಿಷ್ಟ ಪದ್ಧತಿ ಜಾರಿಗೆ ತರಬೇಕಾಗುತ್ತದ. ಸರ್ಕಾರವೂ ಸಹ ಚಿತ್ರರಂಗದ ಮೂಲದಿಂದಲೇ ಕೋಟಿ ಕೋಟಿ ಸಂಪಾದಿಸಿದರೂ ಚಿತ್ರರಂಗಕ್ಕ ಮಾಡಿದ ವಾಗ್ದಾನ ಪೂರೈಸಲು ಕಲವು ಕೋಟಿಗಳನ್ನು ಉದಾರವಾಗಿ ನೀಡಿ, ಚಿತ್ರರಂಗದ ಹುಲುಸಾದ ಪೋಷಣೆಗ ನೆರವಾಗುವುದಿಲ್ಲ. ಹೀಗಾಗಿ ಒತ್ತಡದಿಂದಾಗಿ ಬೇರೆ ದಾರಿ ಕಾಣದೇ ಹಲವಾರು ಚಿತ್ರಗಳಿಗ ಇಲಾಖೆ ಇರುವಷ್ಟನ್ನೇ ಹಂಚಿ, ಕಂತು ಕಂತಾಗಿ ಕೊಡುವ ಬದಲು ಸಂಬಂಧಪಟ್ಟ ಚಿತ್ರದ ನಿರ್ಮಾಪಕರಿಗೆ ಸಹಾಯಧನ ಆಯಾ ವರ್ಷವೇ ನೀಡದಿದ್ದರೆ ಉತ್ತಮ ಚಿತ್ರ ನಿರ್ಮಾಣಕ್ಕ ಸರ್ಕಾರವು ನೆರವಾಗುವ ಅದರ ಮೂಲ ಉದ್ದೇಶದಿಂದಲೇ ವಂಚಿತವಾಗುತ್ತದೆ ಎಂದು ಖಚಿತವಾಗಿ ಹೇಳಬೇಕಾಯಿತು. ಈ ಅಂಶವನ್ನು ಶಾಸಕ ವಾಟಾಳ ನಾಗರಾಜ್ ಸಮಿತಿ, ವಿ.ಎನ್.ಸುಬ್ಬರಾವ್ ಸಮಿತಿ ಒತ್ತಿ ಹೇಳಿವೆ. ಈ ಸಲಹೆ ಪಾಲಿಸಿದಾಗ ಮಾತ್ರ ಇಲ್ಲಿನ ಉತ್ತಮ ನಿರ್ಮಾಪಕರು ಇಲ್ಲೇ ಉಳಿಯಬಹುದು, ಉತ್ತಮ ಉದ್ದೇಶವಿರುವ ಹೊಸ ನಿರ್ಮಾಪಕರು ಇತ್ತ ಹೆಜ್ಜೆ ಇಡುವ ಧೈರ್ಯ ತೋರಬಹುದು. ಸಹಾಯಧನ ಸಮಯಕ್ಕೆ ಸಿಗಲಿಲ್ಲವೆಂದು ಪ್ರಶಸ್ತಿ ಸಮಾರಂಭದಲ್ಲಿ ತೊಟ್ಟ ಅಂಗಿ ಕಳಚಿ ನಿಂತ ವಿ.ಆರ್.ಕೆ.ಪ್ರಸಾದ್‌ರಂಥ ನಿರ್ದೇಶಕ-ನಿರ್ಮಾಪಕರೊಂದು ಕಡೆ, 'ಹಂಸಗೀತೆ', 'ತಾಯಿಸಾಹೇಬ'ದಂಥ ಚಿತ್ರಗಳು ಕ್ರಮವಾಗಿ ಕೂಡಲೇ ಹಾಗೂ ಹೆಚ್ಚಿನ ಸಹಾಯಧನ ಪಡೆದ ಸುಖ ಕ್ಷಣಗಳು ಒಂದೇ ನಾಣ್ಯದ ಎರಡು ಮುಖಗಳಂತೆ ಕಣ್ಣೆದುರಿಗೆ ಕಾಣುತ್ತಿರುತ್ತವೆ.



# ಪ್ರತಿಭೆಗೆ ಪುರಸ್ಕಾರ

೧೯೬೬ನೇ ಜುಲೈ ೧ ರಂದು ಸರ್ಕಾರ ತನ್ನ ಪ್ರಥಮ ಆದೇಶ (ಸಂಖ್ಯೆ:ಹೆಚ್.ಡಿ.೯೫ ಪಿ ಐ ಎಫ್ ೬೬ ದಿನಾಂಕ ೧-೭-೬೬) ಪ್ರಕಟಿಸಿತು. ಇದರಲ್ಲಿ ಕನ್ನಡದ ಅತ್ಯುತ್ತಮ, ಮೂರು ಚಿತ್ರಗಳಿಗೆ ಪ್ರತಿವರ್ಷ ವಾರ್ಷಿಕ ಬಹುಮಾನ ನೀಡುವ ಸಲಹೆಯನ್ನು ಚಿತ್ರರಂಗ ಮಾಡಿತ್ತು. ಅದರಂತೆ ಸರ್ಕಾರವು ಮೈಸೂರು ರಾಜ್ಯದಲ್ಲಿ ನಿರ್ಮಿಸಲಾದ ಪೂರ್ಣ ಪ್ರಮಾಣದ ಮೂರು ರೂಪಕ ಕನ್ನಡ ಚಿತ್ರಗಳಿಗೆ, ಪ್ರತಿ ವರ್ಷವೂ ಮೊದಲನೆ, ಎರಡನೆ ಹಾಗೂ ಮೂರನೆಯ ಬಹುಮಾನವಾಗಿ ೫೦, ೨೫ ಮತ್ತು ೧೦ ಸಾವಿರ ರೂಪಾಯಿಗಳ ನಗದು ಬಹುಮಾನ ನೀಡಲು ನಿರ್ಧರಿಸಿತು. ಇವಕ್ಕಾಗಿ ವಿಶೇಷಜ್ಞರ ಸಮಿತಿ ವರದಿ ಆಧರಿಸಿ ೧೯೬೬-೬೭ರಲ್ಲಿ ಪ್ರಥಮ ತಂಡದ ಪ್ರಶಸ್ತಿ ನೀಡಲಾಗುವುದೆಂದು ಘೋಷಿಸಿತು. ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು, ಪ್ರಸಕ್ತ ವರ್ಷಕ್ಕೆ ಅವಶ್ಯವಿರುವ ಪ್ರಶಸ್ತಿಗಳ ವಿತರಣೆಯ ಮೊತ್ತಕ್ಕಾಗಿ ಆರ್ಥಿಕ ಅನುದಾನ ಹಾಗೂ ವಿಶೇಷಜ್ಞರ ಸಮಿತಿ ರಚನೆಗೆ ಪ್ರಸ್ತಾವನೆ ಕಳುಹಿಸಲು ಸೂಚಿಸಿತು.

ಸರ್ಕಾರಿ ಆದೇಶ (ಸಂಖ್ಯೆ:ಹೆಚ್ ಡಿ ೯೫, ಪಿ.ಐ.ಎಫ್ ೬೬ ದಿನಾಂಕ ೧೮-೪-೬೭) ಮೂಲಕ, ತಜ್ಞರ ಸಮಿತಿ ರಚಿಸಿ ಪ್ರಕಟಿಸಿತು. ಈ ಸಮಿತಿಯ ಅಧ್ಯಕ್ಷರಾಗಿ ಮೈಸೂರು ರಾಜ್ಯ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶ ಮಳೀಮಠ ಹಾಗೂ ಸದಸ್ಯರಾಗಿ ಕ.ಶಿವರಾಮಕಾರಂತ, ದೇವಿಕಾರಾಣಿ ರೋರಿಚ್, ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಾದ ಎಂ.ಡಿ.ಮರಿಪುಟ್ಟಣ್ಣ, ಸದಸ್ಯ ಕಾರ್ಯದರ್ಶಿಯಾಗಿ ಚಲನಚಿತ್ರ ಘಟಕದ ವಿಶೇಷ ಕರ್ತವ್ಯಾಧಿಕಾರಿ ಶಾಂತೇಶ್ ಸಿ.ಪಾಟೀಲ್ ಇವರನ್ನು ನೇಮಿಸಿತು. ಈ ಸಮಿತಿಗೆ ಸಹಾಯಧನ ಮತ್ತು ಪ್ರಶಸ್ತಿ ನೀಡಲು ಅರ್ಜಿಗಳನ್ನು ಆಹ್ವಾನಿಸಿ ಸೂಕ್ತ ಶಿಫಾರಸ್ಸುಗಳನ್ನು ಸರ್ಕಾರಕ್ಕೆ ಕಳುಹಿಸಲು ಸೂಚಿಸಿತು.

ಇದಾದ ನಾಲ್ಕು ತಿಂಗಳಿಗೆ ಸರ್ಕಾರ ಮತ್ತೊಂದು ಆದೇಶ ಹೊರಡಿಸಿತು. (ಸಂಖ್ಯೆ:ಹೆಚ್ ಡಿ ೫೫ ಪಿ.ಐ.ಎಫ್ ೬೭ ದಿನಾಂಕ ೮-೮-೬೭) ಇದರ ಪ್ರಕಾರ ವಿಶೇಷಜ್ಞರ ಸಮಿತಿಯನ್ನು ಸಲಹಾ ಸಮಿತಿ ಎಂದು ಮರುನಾಮಕರಣ ಮಾಡಲಾಯಿತು, ಹಾಗೂ ಸಲಹಾ ಸಮಿತಿ ಚಿತ್ರಗಳಿಗೆ (ಕೇವಲ) ಪ್ರಶಸ್ತಿಯನ್ನು ಮಾತ್ರ ಶಿಫಾರಸ್ಸು ಮಾಡಲು ಸೂಚಿಸಿತು. ಇದರಲ್ಲೇ ಇನ್ನೊಂದು ಗಮನಾರ್ಹ ತಿದ್ದುಪಡಿಯೆಂದರೆ ಮೂರು ಅತ್ಯುತ್ತಮ ಚಿತ್ರಗಳ ಪ್ರಶಸ್ತಿಗೆ ಕೇವಲ ಮೈಸೂರು ರಾಜ್ಯದಲ್ಲಿ ಮಾತ್ರವಲ್ಲ, ಇತರೆಡೆ ನಿರ್ಮಿಸಲಾದ ಕನ್ನಡ ಚಿತ್ರಗಳೂ ಅರ್ಹವೆಂದೂ ಬಹುಮಾನಗಳ ಜೊತೆಗೆ ಅತ್ಯುತ್ತಮ ಚಿತ್ರಗಳ ಆಯಾ ನಿರ್ದೇಶಕರ ಕಲೆಯನ್ನು ಗುರುತಿಸಲು ಅವರಿಗೂ ಪ್ರತ್ಯೇಕ ಪದಕಗಳನ್ನು ನೀಡಲು ನಿರ್ಧರಿಸಿತು. ಇದೇ ಆದೇಶದ ಜೊತೆಗೆ "ಮೈಸೂರು ರಾಜ್ಯ ಪೂರ್ಣ ಪ್ರಮಾಣದ ಕನ್ನಡ ರೂಪಕ ಚಿತ್ರಗಳ ಪ್ರಶಸ್ತಿ, ನಿಯಮಗಳು ೧೯೬೭" ರಚಿಸಿ ಒಪ್ಪಿಗೆ ನೀಡಿ ಸರ್ಕಾರಿ ಪತ್ರ (ಗೆಜೆಟ್) ದಲ್ಲಿ ಪ್ರಕಟಿಸಿತು. ಇದರಲ್ಲಿ ಸರ್ಕಾರ ನೇಮಿಸಿದ ಸಲಹಾ ಸಮಿತಿಗೆ ಕಲೆ ಮತ್ತು ಸಾಹಿತ್ಯ ಕ್ಷೇತ್ರಗಳ, ಸಿನಿಮಾದ ಕಲಾತ್ಮಕ ಮತ್ತು ತಾಂತ್ರಿಕ ಮೌಲ್ಯ ಗುರುತಿಸುವ ಸಾಮರ್ಥ್ಯವುಳ್ಳ ಹಾಗೂ ಪ್ರಶಸ್ತಿಗೆ ಸ್ಪರ್ಧಿಸುವ ಚಿತ್ರದೊಡನೆ ಪ್ರತ್ಯಕ್ಷ/ಅಪ್ರತ್ಯಕ್ಷ ಸಂಬಂಧ ಇಲ್ಲದೇ ಇರುವ ಒಬ್ಬ ಅಧ್ಯಕ್ಷ ಹಾಗೂ ಐದಕ್ಕಿಂತಲೂ ಹೆಚ್ಚು ಸಂಖ್ಯೆ ಇರದಂತೆ ಸದಸ್ಯರು ಮತ್ತು ಸರ್ಕಾರದ ಸದಸ್ಯ ಕಾರ್ಯದರ್ಶಿಯಾಗಿ ಚಲನಚಿತ್ರ ಘಟಕದ ವಿಶೇಷಾಧಿಕಾರಿ ಇರುವರೆಂದು ತಿಳಿಸಿತು. ಸೆನ್ಸಾರ್ ಮಂಡಳಿ ನೀಡುವ ಪ್ರಮಾಣ ಪತ್ರದ ದಿನಾಂಕ ಆಧರಿಸಿ ಹಾಗೂ ಸರ್ಕಾರ ಆಗಾಗ ನಿರ್ಧರಿಸುವ ದಿನಾಂಕಗಳನ್ನು ಅವಲಂಬಿಸಿ, ಚಿತ್ರಗಳು ಪ್ರಶಸ್ತಿಗೆ ಸ್ಪರ್ಧಿಸಲು ಅರ್ಹತೆ ಪಡೆಯುವುದೆಂದು ಸ್ಪಷ್ಟಪಡಿಸಿತು. ಪ್ರಥಮ ಅತ್ಯುತ್ತಮ ಕನ್ನಡ ಚಿತ್ರಕ್ಕೆ ೫೦ ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಅದರ ನಿರ್ದೇಶಕನಿಗೆ ಚಿನ್ನದ ಪದಕ, ದ್ವಿತೀಯ ಅತ್ಯುತ್ತಮ ಕನ್ನಡ ಚಿತ್ರಕ್ಕೆ ೨೫ ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಅದರ ನಿರ್ದೇಶಕನಿಗೆ ಬೆಳ್ಳಿ ಪದಕ, ತೃತೀಯ ಅತ್ಯುತ್ತಮ ಕನ್ನಡ ಚಿತ್ರಕ್ಕೆ ೧೦ ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಅದರ ನಿರ್ದೇಶಕನಿಗೆ ಕಂಚಿನ ಪದಕ ನೀಡಲು ನಿರ್ಧರಿಸಿತು. ಪ್ರಶಸ್ತಿಗಾಗಿ ಅರ್ಜಿ ಆಹ್ವಾನಿಸುವ ಪ್ರಕಟಣೆ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸುವುದೆಂದೂ ನಿಗದಿತ ಅರ್ಜಿ ಫಾರಂನೊಂದಿಗೆ ನೂರು ರೂಪಾಯಿ ಪ್ರವೇಶಧನ, ಕಥಾ ಸಾರಾಂಶದ ಹತ್ತು ಪ್ರತಿ, ಹಾಡಿನ ಹತ್ತು ಪ್ರತಿ, ಹಾಗೂ ನಿರ್ಮಾಪಕನ ಸ್ವಂತ ಖರ್ಚಿನಲ್ಲಿ ಚಿತ್ರ ಪ್ರತಿ (ಪ್ರಿಂಟ್) ತಲುಪಿಸಲು ತಿಳಿಸಲಾಯಿತು.

ಸಾಮಾನ್ಯವಾಗಿ ಡಬ್ಬಿಂಗ್ ಆದ ಚಿತ್ರ, ರೀಟೇಕ್ ಚಿತ್ರ, ಬೇರೆ ಚಿತ್ರ ಅಳವಡಿಸಿ ನಿರ್ಮಿಸಲಾದ ಚಿತ್ರ ಪ್ರಶಸ್ತಿಗೆ ಅರ್ಹವಲ್ಲವೆಂದು ತಿಳಿಸಿತು. ಆದರೆ ಇಂತಹ ರೀಟೇಕ್/ಅಳವಡಿತ ಚಿತ್ರ, ಕನ್ನಡ ಚಿತ್ರರಂಗಕ್ಕೆ ಹೊಸ ಕೊಡುಗೆ ನೀಡುವಂತಿದ್ದರೆ ಅದು ಪ್ರವೇಶಾರ್ಹತೆ ಪಡೆಯುತ್ತದೆ. ಶ್ರೇಷ್ಠ ಸಾಹಿತ್ಯ ಕೃತಿ, ಪೌರಾಣಿಕ, ಐತಿಹಾಸಿಕ ಆಧರಿತ ಚಿತ್ರಗಳು, ಕಥಾವಸ್ತು ಒಂದೇ ಆದ ಮಾತ್ರಕ್ಕೆ ಅವು ಅಳವಡಿತ ಚಿತ್ರಗಳೆಂದು ಪರಿಗಣಿಸಬೇಕಾಗಿಲ್ಲವೆಂದೂ ತಿಳಿಸಿತು.

ಪ್ರಶಸ್ತಿ ಪಡೆದ ಚಿತ್ರದ ಪ್ರತಿಯನ್ನು ಯಾವುದೇ ಸಂಭಾವನೆ ನೀಡದೆ ಸರ್ಕಾರವೇ ಉಳಿಸಿಕೊಳ್ಳುವ ತನ್ನ ಹಕ್ಕು ಪ್ರಕಟಿಸಿತು. ಇಂತಹ ಚಿತ್ರವನ್ನು ಚಿತ್ರೋತ್ಸವಗಳಲ್ಲಿ ಪ್ರದರ್ಶಿಸುವ ಹಕ್ಕು ಮತ್ತು ಪ್ರವೇಶದರದೊಂದಿಗೆ ಪ್ರದರ್ಶಿಸಿದಾಗ ಅಂತಹ ಗಳಿಕೆಯ ಮೇಲಿನ ಹಕ್ಕು ತಾನೇ ಇಟ್ಟುಕೊಂಡಿತು. ಚಿತ್ರದ ಬಗ್ಗೆ ಯಾವುದೇ ಬಗೆಯ ಪ್ರಚಾರ ಮಾಡಿದಲ್ಲಿ ಪ್ರಶಸ್ತಿಗೆ ಅನರ್ಹವಾಗುತ್ತದೆ. ಸಮಿತಿಯ ಸದಸ್ಯರು ಯಾವುದೇ ಚಿತ್ರದ ಬಗ್ಗೆ ಪ್ರಚಾರ ಮಾಡಿದರೆ ಅವರೂ ಸಮಿತಿಯಲ್ಲಿ ಸದಸ್ಯರಾಗಿರಲು ಅನರ್ಹರಾಗುತ್ತಾರೆ ಎಂದು ಸ್ಪಷ್ಟಪಡಿಸಿತು.



(ಚಿತ್ರ ೩) ರಾಜಕುಮಾರ್ ಅವರಿಗೆ ೧೯೯೨-೯೩ರ ಗುಬ್ಬಿ ವೀರಣ್ಣ ಪ್ರಶಸ್ತಿ ನೀಡಿಕೆ; ಮುಖ್ಯಮಂತ್ರಿ ವೀರಪ್ಪ ಮೊಯಿಲಿ ಅವರಿಂದ.

ಸಮಿತಿ ಕಾರ್ಯನಿರ್ವಹಿಸಲು ಬೇಕಾದ ಅವಶ್ಯ ಸದಸ್ಯರ ಸಂಖ್ಯೆ, ಅಳವಡಿಸಲಾದ ಸದಸ್ಯರ ಸಂಖ್ಯೆಯೂ ಸೇರಿದಂತೆ, ಒಟ್ಟು ಸಂಖ್ಯೆಯ ಅರ್ಧದಷ್ಟಿರಬೇಕು. ಚಿತ್ರದ ಮೌಲ್ಯ ನಿರ್ಧರಿಸಲು ಅನುಸರಿಸಬೇಕಾದ ಕಾರ್ಯವಿಧಾನವನ್ನು ಆಯಾ ಸಮಿತಿಯೇ ನಿರ್ಧರಿಸುವುದು.

ಪ್ರಶಸ್ತಿಗಾಗಿ ಸಲ್ಲಿಸಬೇಕಾದ ನಿಗದಿತ ನಮೂನೆಯ ಅರ್ಜಿ ಫಾರಂನಲ್ಲಿ ಚಿತ್ರ ಬಿಡುಗಡೆಯಾದ ದಿನಾಂಕ ಹಾಗೂ ಚಿತ್ರ ಡಬ್, ರೀಟೇಕ್ ಆಗಿದ್ದರೆ ಅದು ಯಾವ ಚಿತ್ರವನ್ನು ಆಧರಿಸಿದ್ದು ಎಂಬುದರ ವಿವರ ನೀಡಬೇಕಿತ್ತು. ಪ್ರಶಸ್ತಿಗಳ ಬಗ್ಗೆ ಸರ್ಕಾರದ ತೀರ್ಮಾನವೇ ಅಂತಿಮ ಎಂದು ಘೋಷಿಸಿತು.

---

೧. ಆರಂಭದಲ್ಲಿ ಸರ್ಕಾರವು ಸಹಾಯಧನ ಮತ್ತು ಪ್ರಶಸ್ತಿ ಈ ಎರಡು ವಿಷಯದ ಬಗ್ಗೆ ಒಂದೇ ಆದೇಶದಲ್ಲಿ ಉಲ್ಲೇಖಿಸುತ್ತಿತ್ತು. ಹೀಗಾಗಿ ಅದೇ ಆದೇಶದ ಸಂಖ್ಯೆಯ ಉಲ್ಲೇಖವು ಸಹಾಯ ಧನ-ಪ್ರಶಸ್ತಿ ಈ ಎರಡೂ ಲೇಖನದಲ್ಲಿ ಪುನಃ ಪುನಃ ಬಂದಿದೆ ಹಾಗೂ ಲೇಖನದ ಅವಶ್ಯಕತೆಗೆ ತಕ್ಕಂತೆ ವಿಷಯವನ್ನು ವಿಭಜಿಸಿ, ಭಾಗಶಃ ಆಯಾ ಲೇಖನದಲ್ಲಿ ನೀಡಲಾಗಿದೆ. ಆಸಕ್ತರು ಆದೇಶದ ಪೂರ್ಣ ಪಾಠಕ್ಕೆ ಮೂಲ ಆದೇಶದ ಪ್ರತಿಯನ್ನು ನೋಡಬೇಕು - ಸಂ.



(ಚಿತ್ರ ೨) ಪುಟ್ಟಣ್ಣ ಕಣಗಾಲ್ ಪ್ರಶಸ್ತಿ (೧೯೮೯-೯೦) - ಮುಖ್ಯಮಂತ್ರಿ ಬಂಗಾರಪ್ಪ ಅವರಿಂದ ಟಿ.ಎನ್.ಬಾಲಕೃಷ್ಣ ಅವರಿಗೆ ನೀಡಿಕೆ

ಚಿತ್ರದ ಉದ್ದ, ಅಗಲ, ನಿರ್ಮಾಪಕ ಅಂದರೆ ಯಾರು, ಯಾವ ಬಗೆಯ ಚಿತ್ರ ಪ್ರಶಸ್ತಿಗೆ ಅರ್ಹ ಇತ್ಯಾದಿ ಅಂಶಗಳ ತೀರ್ಮಾನಕ್ಕೆ ಸಹಾಯಧನ ಹಾಗೂ ಪ್ರಶಸ್ತಿಗೆ ಒಂದೇ ಮಾನದಂಡ ಬಳಸಲಾಯಿತು.

ಸರ್ಕಾರ ಇನ್ನೊಂದು **ಆದೇಶ** (ಸಂಖ್ಯೆ:ಹೆಚ್ ಡಿ ೧೩೧ ಪಿಐಎಫ್ ೬೭ ದಿನಾಂಕ ೨೫ ಸೆಪ್ಟೆಂಬರ್ ೬೭) ಹೊರಡಿಸಿ, ಪ್ರಶಸ್ತಿ ನಿಯಮಾವಳಿಯಲ್ಲಿ ಒಂದಿಷ್ಟು ಸೇರ್ಪಡೆ ಮಾಡಿತು. ಇದರ ಪ್ರಕಾರ ಆಯ್ಕೆಯಾದ ಅರ್ಜಿದಾರ ತಿಳಿಸಲಾದ ದಿನಾಂಕದೊಳಗೆ ಕಥಾ ಸಾರಾಂಶ, ಗೀತೆಗಳ ಪದ ಪುಂಜ ಹಾಗೂ ಚಿತ್ರದ ಪ್ರತಿ ಸಲ್ಲಿಸಬೇಕು. ಯಾವುದೇ ಚಿತ್ರವು ರೀಮೇಕ್ ಆಳವಡಿತ ಚಿತ್ರವೇ ಎಂಬುದರ ಬಗ್ಗೆ ಸಮಿತಿಯೇ ತೀರ್ಮಾನಿಸುವುದು. ಸಮಿತಿಯು ಹೆಚ್ಚಿನ ಇಬ್ಬರು ಸದಸ್ಯರನ್ನು ಮಾತ್ರ ಅಳವಡಿಸಿಕೊಳ್ಳಬಹುದು. ತೀರ್ಮಾನಗಳನ್ನು ಬಹುಮತದಿಂದ ಕೈಗೊಳ್ಳಲಾಗುವುದು ಹಾಗೂ ಅಧ್ಯಕ್ಷರಿಗೆ ಹೆಚ್ಚಿನ ಮತ ನೀಡುವ ಅಧಿಕಾರವಿದೆ. ಸರ್ಕಾರದ ನಿಯಮಗಳು ಹಾಗೂ ಸಮಿತಿಯ ಸಲಹೆ ಸೂಚನೆ ಪಾಲಿಸದ ಅರ್ಜಿದಾರನನ್ನು ಸ್ಪರ್ಧೆಯಿಂದ ಅನರ್ಹಗೊಳಿಸಬಹುದು ಎಂದು ಸ್ಪಷ್ಟಪಡಿಸಿತು.

ಸರ್ಕಾರ ಮತ್ತೊಂದು ತಿದ್ದುಪಡಿ ಮಾಡಿ **ಆದೇಶ** (ಸಂಖ್ಯೆ:೨೧೮ ಪಿಐಎಫ್ ೬೮, ದಿನಾಂಕ ೧-೩-೬೯) ಪ್ರಕಟಿಸಿತು. ಈ ಮೊದಲು ನೀಡಲು ನಿರ್ಧರಿಸಿದ್ದ ಮೂರು ಅತ್ಯುತ್ತಮ ಚಿತ್ರಗಳ ಜೊತಗೆ ಅವರ ನಿರ್ದೇಶಕರಿಗೂ ಪದಕಗಳ ಜೊತೆಗೆ ಕ್ರಮವಾಗಿ ಐದು ಸಾವಿರ, ಎರಡೂವರೆ ಸಾವಿರ ಹಾಗೂ ಒಂದು ಸಾವಿರ ರೂಪಾಯಿ ನಗದು ಬಹುಮಾನ ನೀಡಲು ನಿರ್ಧರಿಸಿತು. ಇದಲ್ಲದೆ, ವರ್ಷದ ಅತ್ಯುತ್ತಮ ನಟ-ನಟಿಗೆ ತಲಾ ನಾಲ್ಕು ಸಾವಿರ ರೂಪಾಯಿ ಹಾಗೂ ಸ್ವರ್ಣ ಪದಕ, ಅತ್ಯುತ್ತಮ ಪೋಷಕ ನಟ-ನಟಿಗೆ ತಲಾ ಎರಡು ಸಾವಿರ ರೂಪಾಯಿ ಹಾಗೂ ಬೆಳ್ಳಿ ಪದಕ, ಅತ್ಯುತ್ತಮ ಕಥಾಲೇಖಕ, ಚಿತ್ರಕಥಾ ಲೇಖಕ, ಸಂಭಾಷಣಕಾರನಿಗೆ ತಲಾ ಒಂದೂವರೆ ಸಾವಿರ ರೂಪಾಯಿ ಹಾಗೂ ಪ್ರಶಸ್ತಿ ಪತ್ರ, ಅತ್ಯುತ್ತಮ ಸಂಗೀತ ನಿರ್ದೇಶಕನಿಗ ಎರಡೂವರ ಸಾವಿರ ರೂಪಾಯಿ ಹಾಗೂ ಪ್ರಶಸ್ತಿ ಪತ್ರ. ಅತ್ಯುತ್ತಮ ಛಾಯಾಗ್ರಾಹಕ, ಧ್ವನಿ ತಂತ್ರಜ್ಞ ಹಾಗೂ ಸಂಕಲನಕಾರನಿಗೆ ತಲಾ ಒಂದು ಸಾವಿರ ರೂಪಾಯಿ ಹಾಗೂ ಪ್ರಮಾಣ ಪತ್ರ ನೀಡುವಿಕೆ ಸೇರ್ಪಡೆ ಮಾಡಿತು. ಪ್ರಶಸ್ತಿಗೆ ಅರ್ಹವ್ಯಕ್ತಿಗಳ ಹೆಸರು, ವಿಳಾಸ ಹಾಗೂ ಚಿತ್ರದ ಕಥೆ, ಸಂಭಾಷಣೆ, ಚಿತ್ರಕಥೆಯ ಜೊತಗ ಕಥಾಸಾರ ಹಾಗೂ ಹಾಡುಗಳ ಪದಿನ್ಯಮ ಪ್ರತಿ ಸಲ್ಲಿಸಬೇಕಿತ್ತು.

ಸರ್ಕಾರ ಇನ್ನೊಂದು **ಆದೇಶ** (ಸಂಖ್ಯೆ:ಹೆಚ್ ಡಿ ೭೯ ಪಿ.ಐ.ಎಫ್ ೭೦, ದಿನಾಂಕ ೧೮-೫-೭೧) ಪ್ರಕಟಿಸಿ, ರಾಜ್ಯ ಸರ್ಕಾರ ಸಹಾಯಧನ ನೀಡಿಕೆಗೆ ಚಿತ್ರಗಳನ್ನು ಅಂಕ (point)ಗಳ ಆಧಾರದ ಮೇಲೆ ಆಯ್ಕೆ ಮಾಡುವ ಸಲಹಾ ಸಮಿತಿಯೆ ಪ್ರಶಸ್ತಿಗಾಗಿ ಪ್ರವೇಶಿಸಿದ ಚಿತ್ರಗಳನ್ನು ವೀಕ್ಷಿಸಿ, ಉತ್ತಮ ಚಿತ್ರಗಳು, ನಿರ್ದೇಶಕರು, ಲೇಖಕರು, ಕಲಾವಿದರು, ತಂತ್ರಜ್ಞರ ಹೆಸರುಗಳನ್ನು ಬಹುಮಾನ ಪದಕ, ಅರ್ಹತಾ ಪತ್ರ ಪಡೆಯಲು ಶಿಫಾರಸ್ಸು ಮಾಡಬೇಕು ಎಂದಿತು. ಹಾಗೂ ಒಂದು ಸಲಹಾ ಸಮಿತಿ ರಚಿಸಿ ತಜ್ಞರ ಹೆಸರುಗಳನ್ನು ಪ್ರಕಟಿಸಿತು.

೧೯೭೩ರ ನವೆಂಬರ್ ೧ರಂದು ಮೈಸೂರು ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣವಾಯಿತು. ಕರ್ನಾಟಕ ಸರ್ಕಾರ ಹೊರಡಿಸಿದ ಮೊದಲ ಸರ್ಕಾರಿ ಆದೇಶ ಇದಾಯಿತು. ಈ ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್ ಡಿ ೪೫ ಪಿಐಎಫ್ ೭೩, ದಿನಾಂಕ ೩೧-೫-೭೩) ಪ್ರಕಾರ, ಪ್ರಶಸ್ತಿ ವಿಜೇತ ಚಿತ್ರದ ಪ್ರತಿಯನ್ನು ಹಾಗೇ ಬಿಟ್ಟುಕೊಡಲು ನಿರ್ಮಾಪಕನಿಗೆ ಒತ್ತಾಯಿಸದೆ, ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು, ಪ್ರಶಸ್ತಿ ವಿಜೇತ ಚಿತ್ರದ ನಿರ್ಮಾಪಕರಿಂದ ಸರ್ಕಾರದ ಉದ್ದೇಶಗಳಿಗಾಗಿ ಬೇಕಾದಾಗಲೆಲ್ಲಾ ಚಿತ್ರದ ಪ್ರತಿಯನ್ನು ಒದಗಿಸುತ್ತೇವೆಂಬ ಭರವಸೆಯ ಪತ್ರ ಪಡೆದ ನಂತರವೇ ಚಿತ್ರದ ಪ್ರತಿ ಮರಳಿಸಲು ತಿಳಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್ ಡಿ ೬೪ ಪಿ ಐ ಎಫ್ ೭೩, ದಿನಾಂಕ ೨೬-೬-೭೩) ಪ್ರಕಟಿಸಿ, ಸಲಹಾ ಸಮಿತಿಯ ಶಿಫಾರಸ್ಸಿನಂತೆ ಕನ್ನಡ ಚಿತ್ರಗಳ ನಿರ್ಮಾಣಕ್ಕೆ ಬೆಂಬಲಿಸಲು ಹೊಸ ಎರಡು ಪ್ರಶಸ್ತಿಗಳನ್ನು ಘೋಷಿಸಿತು. ಕನ್ನಡ ಚಿತ್ರಗಳ ವರ್ಷದ ಅತ್ಯುತ್ತಮ ನಿರ್ದೇಶಕನಿಗೆ ಐದು ಸಾವಿರ ರೂಪಾಯಿಗಳ ಹೆಚ್ಚಿನ ಪ್ರಶಸ್ತಿ, ಹಾಗೂ ಕರ್ನಾಟಕದ ಪ್ರಾಂತೀಯ (ಉಪಭಾಷೆ) ಭಾಷೆಗಳಾದ ತುಳು, ಕೊಂಕಣಿ, ಕೂರ್ಗಿ(ಕೊಡವ) ಅತ್ಯುತ್ತಮ ಚಿತ್ರಗಳಿಗೆ ಇಪ್ಪತ್ತು ಸಾವಿರ ರೂಪಾಯಿಗಳ ವಿಶೇಷ ಪ್ರಶಸ್ತಿ . ಆದರೆ ಈ ಮೂರು ಭಾಷೆಗಳಲ್ಲಿ ನಿರ್ಮಿಸಲಾದ ಒಟ್ಟು ಕನಿಷ್ಠ ಹತ್ತು ಚಿತ್ರಗಳು ಸ್ಪರ್ಧೆಯಲ್ಲಿ ಇರಲೇಬೇಕು ಎಂದು ತೀರ್ಮಾನಿಸಿತು. ಹಾಗೂ ಈ ಪ್ರಶಸ್ತಿಗಳನ್ನು ೧೯೭೨-೭೩ನೇ ವರ್ಷದಿಂದ ಜಾರಿಗೆ ತಂದಿತು.

ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್‌ಡಿ೬೪, ಪಿಐಎಫ್ ೭೩, ದಿನಾಂಕ ೧-೫-೭೪) ಪ್ರಕಟಿಸಿ, ಮತ್ತೆ ಕಲವು ಬದಲಾವಣೆ ಸೂಚಿಸಿತು. ಈ ಮೊದಲು ಕನ್ನಡ ಮತ್ತು ಇತರ ಪ್ರಾಂತೀಯ ಭಾಷೆಗಳಾದ ತುಳು, ಕೊಡವ, ಕೊಂಕಣಿ ಭಾಷೆಗಳಿಗೆ ಇದ್ದ ಪ್ರತ್ಯೇಕ ಪ್ರಶಸ್ತಿ ಪದ್ಧತಿ ತ್ಯಜಿಸಿ, ಈಗ ಎಲ್ಲಾ ಭಾಷೆಗಳ ಒಟ್ಟು ಚಿತ್ರಗಳಲ್ಲಿ ಪ್ರಥಮ, ದ್ವಿತೀಯ, ತೃತೀಯ ಅತ್ಯುತ್ತಮ ಚಿತ್ರಗಳಿಗೆ ಕ್ರಮವಾಗಿ ೫೦, ೨೫ ಮತ್ತು ೨೦ ಸಾವಿರ ರೂಪಾಯಿ ಹಾಗೂ ಅವುಗಳ ನಿರ್ದೇಶಕರಿಗೆ ಕ್ರಮವಾಗಿ ಐದು, ಎರಡು, ಒಂದು ಸಾವಿರ ರೂಪಾಯಿ ಹಾಗೂ ಎಲ್ಲರಿಗೂ ಸುವರ್ಣ ಪದಕ ನೀಡಲುನಿರ್ಧರಿಸಿತು. ನಾಲ್ಕನೇ ಅತ್ಯುತ್ತಮ ಚಿತ್ರಕ್ಕೆ ಹತ್ತು ಸಾವಿರ ರೂಪಾಯಿ, ಆ ಚಿತ್ರದ ನಿರ್ದೇಶಕನಿಗೆ ಐದುನೂರು ರೂಪಾಯಿ ಹಾಗೂ ಕಂಚಿನ ಪದಕ ನೀಡಲು ನಿರ್ಧರಿಸಿತು. ಇದಲ್ಲದೆ ಈ ಎಲ್ಲ ಭಾಷೆಗಳಲ್ಲಿನ ವರ್ಷದ ಅತ್ಯುತ್ತಮ ನಿರ್ದೇಶಕನೊಬ್ಬನಿಗೆ ಐದು ಸಾವಿರ ರೂಪಾಯಿ ಬಹುಮಾನ ಕೊಡುವುದಾಗಿಯೂ ಇವು ೧೯೭೩-೭೪ರಲ್ಲಿ ನಿರ್ಮಿಸಲಾದ ಚಿತ್ರಗಳಿಗೆ ಅನ್ವಯಿಸುವುದೆಂದೂ ತೀರ್ಮಾನಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್ ಡಿ ೧೪೫, ಪಿ ಐ ಎಫ್ ೭೬, ದಿನಾಂಕ ೧೩-೭-೭೮) ಪ್ರಕಟಿಸಿ, ಪ್ರಶಸ್ತಿಯ ಮೊತ್ತದಲ್ಲಿ ಹೆಚ್ಚಳ, ಒಂದೆರಡು ಹೊಸ ಪ್ರಶಸ್ತಿಗಳ ಸೇರ್ಪಡೆ ಮಾಡಿತು. ಇದರ ಪ್ರಕಾರ ದ್ವಿತೀಯ ಅತ್ಯುತ್ತಮ ಚಿತ್ರದ ನಿರ್ದೇಶಕನಿಗೆ ೩೦೦೦ ರೂಪಾಯಿ ನಗದು (ಅಂದರೆ ಒಂದು ಸಾವಿರ ರೂಪಾಯಿ ಹೆಚ್ಚಳ) ಹಾಗೂ ಚಿನ್ನದ ಪದಕ, ತೃತೀಯ ಅತ್ಯುತ್ತಮ ನಿರ್ದೇಶಕನಿಗೆ ೨೦೦೦ ನಗದು (ಒಂದು ಸಾವಿರ ರೂಪಾಯಿ ಹೆಚ್ಚಳ) ಹಾಗೂ ಬೆಳ್ಳಿ ಪದಕ. ನಾಲ್ಕನೇ ಅತ್ಯುತ್ತಮ ನಿರ್ದೇಶಕನಿಗೆ ೧೫೦೦ ನಗದು (ಒಂದು ಸಾವಿರ ರೂಪಾಯಿ ಹೆಚ್ಚಳ) ಹಾಗೂ ಕಂಚಿನ ಪದಕ ನೀಡಲು ನಿರ್ಧರಿಸಿತು. ಅತ್ಯುತ್ತಮ ಕಥಾ ಲೇಖಕನಿಗೆ ೨೫೦೦ ರೂಪಾಯಿ (ಒಂದು ಸಾವಿರ ಹೆಚ್ಚಳ), ಚಿತ್ರಕಥೆಗೆ ಎರಡು ಸಾವಿರ (ಐದು ನೂರು ರೂಪಾಯಿ ಹೆಚ್ಚಳ). ಸಂಭಾಷಣೆಗೆ ೨೦೦೦ ರೂಪಾಯಿ (ಐದು ನೂರು ಹೆಚ್ಚಳ), ವರ್ಣಮತ್ತು ಕಪ್ಪು ಬಿಳುಪು ಛಾಯಾಗ್ರಹಣಕ್ಕೆ ಎರಡು ಸಾವಿರ ರೂಪಾಯಿ (ಒಂದು ಸಾವಿರ ಹೆಚ್ಚಳ), ಧ್ವನಿ ತಂತ್ರಜ್ಞನಿಗೆ ಒಂದೂವರೆ ಸಾವಿರ ರೂಪಾಯಿ (ಐದು ನೂರು ಹೆಚ್ಚಳ) ಮತ್ತು ಇವರೆಲ್ಲರಿಗೂ ಪ್ರಶಸ್ತಿ ಪ್ರಮಾಣ ಪತ್ರ ನೀಡಲು ನಿರ್ಧರಿಸಿತು. ಇದಲ್ಲದೆ ಅತ್ಯುತ್ತಮ ಗೀತರಚನಕಾರನಿಗ ಒಂದು ಸಾವಿರ ರೂಪಾಯಿ, ಬಾಲ ಕಲಾವಿದರಿಗೆ ಒಂದು ಸಾವಿರ ರೂಪಾಯಿ ಮತ್ತು ಪ್ರಶಸ್ತಿ ಪ್ರಮಾಣ ಪತ್ರ ನೀಡುವ ಹೊಸ ಸೇರ್ಪಡೆ ಮಾಡಿತು. ಆದರೆ ೧೯೭೬-೭೭ನೇ ವರ್ಷವನ್ನು ಮಾತ್ರ ವಿಶೇಷ ಪ್ರಕರಣವೆಂದು ಮನ್ನಿಸಿ ಬಾಲ ಕಲಾವಿದನಿಗ ಎರಡು ಸಾವಿರ ರೂಪಾಯಿ ನಗದು ಪ್ರಶಸ್ತಿ ಘೋಷಿಸಿತು. ಉಳಿದ ಎಲ್ಲ ಪ್ರಶಸ್ತಿಗಳನ್ನೂ ೧೯೭೭-೭೮ನೇ ವರ್ಷದಿಂದ ಜಾರಿಗೊಳಿಸಲಾಯಿತು.

ಮತ್ತೊಂದು ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್ ಡಿ ೯೮ ಪಿಐಎಫ್ ೭೮, ದಿನಾಂಕ ೩-೧-೭೯) ಪ್ರಕಟಿಸಿದ್ದಕ್ಕೆ ಕೆಲವು ವಿಶೇಷ ಕಾರಣಗಳಿವೆ. ಚಿತ್ರರಂಗದ ಹಲವಾರು ಗಣ್ಯರು ಪ್ರಶಸ್ತಿಗಳ ಮೊತ್ತ ಹಾಗೂ ನೀಡುತ್ತಿರುವ ರೀತಿ ಈ ಕುರಿತು ಮನವಿ

ಮಾಡಿದರು. ಸರ್ಕಾರವು ಚಲನಚಿತ್ರ ಸಲಹಾ ಸಮಿತಿಗೆ ಈ ಮನವಿ ಪರಿಶೀಲಿಸಿ, ಶಿಫಾರಸ್ಸುಗಳನ್ನು ನೀಡಲು ಕೋರಿತು. ಸಮಿತಿಯು ತನ್ನ ವರದಿಯಲ್ಲಿ ಕಲಾವಿದರು ಹಾಗೂ ಹಲವಾರು ತಂತ್ರಜ್ಞರು ಒಂದೇ ತಂಡದಂತೆ ದುಡಿಯುವರು, ಚಿತ್ರದ ಗುಣಮಟ್ಟ ಮತ್ತು ಯಶಸ್ಸಿನ ಬಗ್ಗ ಅವರ ಸಂಯುಕ್ತ ಕೊಡುಗೆಯನ್ನು ಗುರುತಿಸಿ ಪ್ರಶಸ್ತಿ ನೀಡುವಾಗ ಸಮಾನವಾಗಿ ಕಾಣಬೇಕೆಂದು ಸೂಚಿಸಿತು. ಹೀಗಾಗಿ ಮತ್ತೆ ಪ್ರಶಸ್ತಿಗಳಲ್ಲಿ ಕೆಲವು ಬದಲಾವಣೆಗಳು ಅನಿವಾರ್ಯವಾದವು.

ಈಗ ಅತ್ಯುತ್ತಮ ಪ್ರಥಮ ಚಿತ್ರದ ನಿರ್ಮಾಪಕನಿಗೂ ಈ ಮೊದಲಿನಂತ ನಗದು ಬಹುಮಾನ, ಜೊತೆಗೆ ಸ್ವರ್ಣ ಪದಕ, ಅತ್ಯುತ್ತಮ ದ್ವಿತೀಯ ಚಿತ್ರದ ನಿರ್ಮಾಪಕನಿಗೂ ನಗದು ಜೊತೆ ಬೆಳ್ಳಿ ಪದಕ, ತೃತೀಯ ಅತ್ಯುತ್ತಮ ಚಿತ್ರದ ನಿರ್ಮಾಪಕನಿಗೂ ನಗದು ಬಹುಮಾನದ ಜೊತ ಬೆಳ್ಳಿ ಪದಕ ನೀಡಲು ನಿರ್ಧರಿಸಿತು. ದ್ವಿತೀಯ ಚಿತ್ರದ ನಿರ್ದೇಶಕರಿಗೆ ಬೆಳ್ಳಿ ಪದಕ ಹಾಗೂ ನಾಲ್ಕು ಸಾವಿರ ರೂಪಾಯಿ ನಗದು, ತೃತೀಯ ಚಿತ್ರದ ನಿರ್ದೇಶಕರಿಗೆ ಬೆಳ್ಳಿ ಪದಕ ಹಾಗೂ ಮೂರು ಸಾವಿರ ರೂಪಾಯಿ ನಗದು ಘೋಷಿಸಿತು. ಆದರೆ ನಾಲ್ಕನೆಯ ಅತ್ಯುತ್ತಮ ಚಿತ್ರ ಹಾಗೂ ಅದರ ನಿರ್ಮಾಪಕನಿಗ ಮತ್ತು ನಿರ್ದೇಶಕನಿಗೆ ನೀಡುವ ನಗದು ಹಾಗೂ ಕಂಚಿನ ಪದಕ ಈ ಎಲ್ಲವನ್ನೂ ಸ್ಥಗಿತ ಗೊಳಿಸಿತು. ಇದಲ್ಲದ ವರ್ಷದ ಅತ್ಯುತ್ತಮ ನಿರ್ದೇಶಕನೆಂದು ನೀಡಲು ತೀರ್ಮಾನಿಸಿದ ಐದುಸಾವಿರ ರೂಪಾಯಿ ನಗದು ಬಹುಮಾನ ರದುಗೊಳಿಸಿತು. ಇದರಂತೆ ಅತ್ಯುತ್ತಮ



(ಚಿತ್ರ ೩) ಪುಟ್ಟಣ್ಣ ಕಣಗಾಲ್ ಪ್ರಶಸ್ತಿ (೧೯೯೪-೯೫) ಫಲಕ ಪ್ರದರ್ಶಿಸುತ್ತಿರುವ ಕೆ.ಎಸ್.ಎಲ್.ಸ್ವಾಮಿ (ರವೀ). ವಾರ್ತಾ ಇಲಾಖೆ ನಿರ್ದೇಶಕ ಕೆ.ಎ.ಆರ್.ಠ್ಯಾಗೋರ್, ರವಿ, ಮುಖ್ಯಮಂತ್ರಿ ಜೆ.ಹೆಚ್.ಪಟೇಲ್, ವಾರ್ತಾ ಸಚಿವ ಎಂ.ಸಿ.ನಾಣಯ್ಯ.

ನಟ ನಟಿಗೆ ನೀಡುವ ಸುವರ್ಣ ಪದಕ ರದುಗೊಳಿಸಿ ಬೆಳ್ಳಿ ಪದಕ ನೀಡಲು ನಿರ್ಣಯಿಸಿತು. ಅತ್ಯುತ್ತಮ ಕಥಾ ಲೇಖಕನಿಗ, ಚಿತ್ರಕಥೆಗಾರನಿಗೆ, ಸಂಭಾಷಣಾಕಾರನಿಗ, ಸಂಗೀತ ನಿರ್ದೇಶಕನಿಗೆ, ಧ್ವನಿಗ್ರಾಹಕನಿಗೆ, ಸಂಕಲನಕಾರನಿಗೆ, ಹಾಗೂ ಕಪ್ಪು ಬಿಳುಪು ಮತ್ತು ವರ್ಣ ಛಾಯಾಗ್ರಾಹಕನಿಗ ಪ್ರತ್ಯೇಕವಾಗಿ ಈ ಎಲ್ಲರಿಗೂ ತಲಾ ನಾಲ್ಕು ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಪ್ರಮಾಣ ಪತ್ರದ ಜೊತಗೆ ಬೆಳ್ಳಿ ಪದಕ ನೀಡಲು ನಿರ್ಧರಿಸಿತು. ಬಾಲ ಕಲಾವಿದನಿಗ ಎರಡು ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಬೆಳ್ಳಿ ಪದಕ ನೀಡಲು ತೀರ್ಮಾನಿಸಿತು. ಪ್ರಶಸ್ತಿ ಸಮಿತಿ ಗುರುತಿಸಿ ಶಿಫಾರಸ್ಸು ಮಾಡಿದ ಯಾವುದೇ ಕಲಾವಿದ, ಕಲಾನಿರ್ದೇಶಕ, ಗೀತರಚನೆಕಾರ, ವಿಶೇಷ ದೃಶ್ಯ ಪರಿಣಾಮ ಸೃಷ್ಟಿಸುವ ತಂತ್ರಜ್ಞ ಅಥವಾ ವಸ್ತ್ರಾಲಂಕಾರ ವಿಶೇಷಜ್ಞ ಅಥವಾ ಇನ್ನಾವುದೇ ವಿಭಾಗದ ತಂತ್ರಜ್ಞನಿಗೂ ನಾಲ್ಕು ಸಾವಿರ ರೂಪಾಯಿ ನಗದು ಹಾಗೂ ಬೆಳ್ಳಿ ಪದಕ ನೀಡುವುದಾಗಿ ಘೋಷಿಸಿತು.

ಈಗಾಗಲೇ ಯಾವುದಾದರೂ ಒಂದೇ ವಿಭಾಗದಲ್ಲಿ ಮೂರು ಬಾರಿ ಪ್ರಶಸ್ತಿಗಳನ್ನು ಪಡೆದವರ, ಅವರು ಮೂರನ ಬಾರಿ ಪ್ರಶಸ್ತಿ ಪಡೆದ ವರ್ಷದಿಂದ ಮುಂದಿನ ಮೂರು ವರ್ಷಗಳ ಕಾಲ ಅಂತಹವರನ್ನು ಪ್ರಶಸ್ತಿಗೆ ಪರಿಶೀಲಿಸಬಾರದು. ಆದರೆ ಅಂತಹ ವ್ಯಕ್ತಿಗಳು ಮೂರು ವರ್ಷದ ನಂತರ ಮತ್ತ ಪ್ರಶಸ್ತಿಗ ಅರ್ಹರಾಗುವರು. ಚಿತ್ರಕ್ಕೆ ಯಾವುದೇ ರೀತಿಯಲ್ಲಿ ಸಂಬಂಧಪಟ್ಟವರು ಯಾರೂ ಸದಸ್ಯರಾಗಿ ಸಮಿತಿಯಲ್ಲಿ ಇರಬಾರದು. ಅವರ ಜಾಗದಲ್ಲಿ ಇತರ ಸದಸ್ಯರನ್ನು ಸೇರ್ಪಡೆ ಮಾಡಿ ಚಿತ್ರವನ್ನು ವೀಕ್ಷಿಸಬೇಕು. ಇವುಗಳೆಲ್ಲವೂ ೧೯೭೭-೭೮ರಿಂದ ಜಾರಿಗೆ ಬರಬೇಕು.

ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್ ಡಿ ೧೧೪-೭೮, ದಿನಾಂಕ ೧೬ ೨-೭೯)ದ ಪ್ರಕಾರ, ಪ್ರಶಸ್ತಿ ವಿಜೇತ ಚಿತ್ರ ನಿರ್ಮಾಪಕರು, ಪ್ರಶಸ್ತಿ ವಿಜೇತ ಚಿತ್ರದ ಪ್ರತಿಯನ್ನು ಮೂರ್‍ನಾಲ್ಕು ತಿಂಗಳುಗಳ ಸಲುವಾಗಿ, ದೆಹಲಿ ಹಾಗೂ ಇತರೆಡ ಪ್ರದರ್ಶಿಸಲು ಉಚಿತವಾಗಿ ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆಗೆ ನೀಡಬೇಕು. ನಂತರ ಇದನ್ನು ನಿರ್ಮಾಪಕರಿಗೆ ಮರಳಿಸಲಾಗುವುದು. ಈ ನಿಯಮವನ್ನು ೧೯೭೮-೭೯ ಹಾಗೂ ನಂತರದ ವರ್ಷಗಳ ಸ್ಪರ್ಧೆಯಲ್ಲೂ ಪ್ರಶಸ್ತಿ ನೀಡುವಾಗ ಒಂದು ಷರತ್ತಾಗಿ ಪಾಲಿಸಬೇಕು ಎಂದು ಸ್ಪಷ್ಟಗೊಳಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ಹೆಚ್‌ಡಿ ೧, ಪಿಐಎಫ್ ೭೯, ದಿನಾಂಕ:೩-೩-೭೯) ಪ್ರಕಟಿಸಿ ಈ ಮೊದಲಿನ ಚಲನಚಿತ್ರ ಸಲಹಾ ಸಮಿತಿಯನ್ನು ವಿಸರ್ಜಿಸಿತು. ಈಗ ಇನ್ನೊಂದು **ಆದೇಶ** (ಸಂಖ್ಯೆ:ಹೆಚ್‌ಡಿ ೧, ಪಿಐಎಫ್ ೭೯(೧), ದಿನಾಂಕ: ೩೧-೧-೮೧) ಪ್ರಕಟಿಸಿ, ಪ್ರಶಸ್ತಿಗಾಗಿ ಚಲನಚಿತ್ರಗಳು,ಕಲಾವಿದರು, ತಂತ್ರಜ್ಞರಿಗ ನಗದು ಬಹುಮಾನ, ಪದಕ ನೀಡಲು 'ನ್ಯಾಯ ಸಮಿತಿ'(Jury) ರಚಿಸಿತು. ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು ಈ ಸಮಿತಿಯ ಅಧ್ಯಕ್ಷರಾಗಿರುವರು ಹಾಗೂ ಒಂಬತ್ತು ಜನ ಸದಸ್ಯರು, ಸದಸ್ಯರ ಅನುಪಸ್ಥಿತಿ ಸಂದರ್ಭದಲ್ಲಿ, ಮೂರಕ್ಕಿಂತಲು ಹೆಚ್ಚಿಲ್ಲದಂತೆ ಹೊಸ ಸದಸ್ಯರ ಸೇರ್ಪಡ, ಹಾಗೂ ಸದಸ್ಯರಾರಿಗೂ ಚಿತ್ರದೊಡನೆ ಪ್ರತ್ಯಕ್ಷ / ಅಪ್ರತ್ಯಕ್ಷ ಸಂಬಂಧವಿರಬಾರದು ಎಂದು ತಿಳಿಸಿತು.

ಈ ಮೊದಲೇ ಸರ್ಕಾರಿ **ಆದೇಶ**(ಸಂಖ್ಯೆ:ಹೆಚ್‌ಡಿ ೨೬, ಪಿಐಎಫ್ ೭೮, ದಿನಾಂಕ:೯-೩-೭೯) ಪ್ರಕಟಿಸಿ, ರಾಜ್ಯ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಪ್ರಶಸ್ತಿ ಪಡೆದ ಕನ್ನಡ, ಕೊಂಕಣಿ, ತುಳು, ಕೊಡವ ಭಾಷೆಯ ಚಿತ್ರಗಳಿಗೆ ಇಂಗ್ಲಿಷ್, ಹಿಂದಿ ಅಥವಾ ಯಾವುದೇ ವಿದೇಶಿ ಭಾಷೆಯಲ್ಲಿ ಉಪಶೀರ್ಷಿಕ (sub-title) ಮಾಡಿಸಲು ಆರು ಸಾವಿರ ರೂಪಾಯಿ ಅಥವಾ ಶೇಕಡಾ ಐವತ್ತರಷ್ಟು ಇವಕ್ಕೆ ವ್ಯಯಿಸಲಾದ ಮೊತ್ತ (ಯಾವುದು ಕಡಿಮೆ ಮೊತ್ತವೋ ಅದು) ಧನಸಹಾಯವಾಗಿ ನೀಡುವುದಾಗಿ ಘೋಷಿಸಿತು. ಈಗ ಅದನ್ನು ಈ ಸೇವೆಯಲ್ಲಿ ಬೆಲೆಯ ಹೆಚ್ಚಳ ಹಾಗೂ ಕಚ್ಚಾ ಸಾಮಗ್ರಿಗಳ ಏರಿಕೆ ಗಮನಿಸಿ ಹತ್ತು ಸಾವಿರ ರೂಪಾಯಿಗಳಿಗ ಈ ಮೊದಲಿನ ಪದ್ಧತಿ ಅನುಸರಿಸಿ, ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೧೮೫, ಪಿಐಎಫ್ ೮೦, ದಿನಾಂಕ: ೨೪-೧-೮೩) ಪ್ರಕಟಿಸಿ, ಹೆಚ್ಚಿನ ಧನಸಹಾಯ ನೀಡಲು ನಿರ್ಧರಿಸಿತು.

ಇದುವರೆಗೆ ಗೃಹಖಾತೆ (ಹೆಚ್ ಡಿ) ಸರ್ಕಾರಿ ಆದೇಶ ಹೊರಡಿಸುತ್ತಿತ್ತು. ಇಲ್ಲಿಂದಾಚೆಗೆ ಅದನ್ನು ವಾರ್ತೆ,ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳ ಇಲಾಖೆ (ಐ.ಟಿ.ವೈ) ಹೊರಡಿಸತೊಡಗಿತು. ಅವರ ಪ್ರಥಮ **ಆದೇಶ** (ಸಂಖ್ಯೆ:ಐ ಟಿ ವೈ೧೫೬, ಪಿ ಐ ಎಫ್೮೩, ದಿನಾಂಕ ೧೪-೯-೮೪) ಪ್ರಕಟಿಸಿತು. ಅದುವರೆಗಿದ್ದ ಮೈಸೂರು ರಾಜ್ಯ ಚಲನಚಿತ್ರ ಪ್ರಶಸ್ತಿ ನಿಯಮಾವಳಿ ೧೯೬೭ನ್ನು ಸರಳಗೊಳಿಸಲು ಹೊಸ ನಿಯಮಾವಳಿ ರಚಿಸಿ, ಅದನ್ನು 'ಕರ್ನಾಟಕ ರಾಜ್ಯ ರೂಪಕ ಚಿತ್ರಗಳ ಪ್ರಶಸ್ತಿ ನಿಯಮಗಳು ೧೯೮೪ ಎಂದು ಪ್ರಕಟಿಸಿತು. ಇದರ ಉದ್ದೇಶ ನಿಯಮಗಳನ್ನು ಸರಳಗೊಳಿಸುವುದಾಗಿತ್ತು. ಇವು ಸರ್ಕಾರದ ಪತ್ರ (ಗೆಜೆಟ್)ದಲ್ಲಿ ಪ್ರಕಟವಾದ ದಿನದಿಂದ ಜಾರಿಗೆ ಬಂದುವು.ಈ ನಿಯಮಗಳಲ್ಲಿ ಪ್ರಥಮ ಬಾರಿಗೆ ಕನ್ನಡ ಹಾಗೂ ಪ್ರಾಂತೀಯ ಭಾಷೆಗಳೆಂದರೆ ತುಳು. ಕೊಂಕಣಿ, ಕೊಡವ ಎಂದು ವಿವರಣೆ ನೀಡಿತು. ಸಾಕ್ಷ್ಯಚಿತ್ರ, ಶೈಕ್ಷಣಿಕ ಚಿತ್ರ, ಮಕ್ಕಳ ಚಿತ್ರಗಳು ಪ್ರಶಸ್ತಿಯ ವ್ಯಾಪ್ತಿಗೆ ಬರುವುದಿಲ್ಲವೆಂದು ತಿಳಿಸಿತು. ಪ್ರತಿವರ್ಷವೂ ಸರ್ಕಾರವು ಪ್ರಶಸ್ತಿ, ಬಹುಮಾನಗಳ ಶಿಫಾರಸ್ಸು ಮಾಡಲು ಸಲಹಾ ಸಮಿತಿ ರಚಿಸುವುದೆಂದೂ ಅದಕ್ಕೆ ಸರ್ಕಾರೇತರ ಸದಸ್ಯರ ಸಂಖ್ಯೆ ಒಂಬತ್ತು ಮೀರಬಾರದೆಂದೂ ಹೇಳಿತು. ಸರ್ಕಾರಿ ಸದಸ್ಯಕಾರ್ಯದರ್ಶಿಯನ್ನೂ ಸರ್ಕಾರವೇ ನೇಮಿಸುವುದು ಹಾಗೂ ಇವರು ವಾರ್ತಾ ಮತ್ತು ಪ್ರಚಾರ ಇಲಾಖೆಯ ಉಪನಿರ್ದೇಶಕರಿಗಿಂತ ಕಡಿಮೆ ಹುದ್ದೆಯಲ್ಲಿರುವ ವ್ಯಕ್ತಿ ಆಗಿರಕೂಡದೆಂದು ನಿಯಮ ವಿಧಿಸಿತು. ಆದರೆ ಇವರು



(ಚಿತ್ರ ೪) ಪುಟ್ಟಣ್ಣ ಕಣಗಾಲ್ ಪ್ರಶಸ್ತಿ (೧೯೯೬-೯೭) ಪ್ರದಾನ. ರಾಜ್ಯ ವಾರ್ತಾ ಇಲಾಖೆ ನಿರ್ದೇಶಕ ಐ.ಎಂ.ವಿಠಲಮೂರ್ತಿ, ಉಪಮುಖ್ಯಮಂತ್ರಿ ಸಿದ್ಧರಾಮಯ್ಯ, ಪ್ರಶಸ್ತಿ ಪಡೆದ ರಾಜೇಂದ್ರಸಿಂಗ್ ಬಾಬು, ವಾರ್ತಾ ಸಚಿವ ಎಂ.ಸಿ.ನಾಣಯ್ಯ ಮತ್ತು ಎಚ್.ಎನ್.ಮಾರುತಿ

ಪ್ರಶಸ್ತಿಗೆ ಪ್ರವೇಶಿಸಿದ ಚಿತ್ರಗಳ ಜೊತೆಗೆ ಯಾವುದೇ ರೀತಿಯ ಸಂಬಂಧ, ಆಸಕ್ತಿ ಹೊಂದಿದ್ದರೆ ಅವರು ಸದಸ್ಯರಾಗಲು ಅನರ್ಹರು ಎಂದು ಸಾರಿತು. ಯಾವುದೇ ಕಾರಣಕ್ಕೆ ಸದಸ್ಯರ ಸಂಖ್ಯೆ ಕಡಿಮೆಯಾದ ಪಕ್ಷದಲ್ಲಿ, ಸರ್ಕಾರೇತರ ಬೇರೆ ಸದಸ್ಯರಾಗಿ ಸಮಿತಿಯು ಗರಿಷ್ಠ ಮೂವರನ್ನು ನೇಮಿಸಿಕೊಳ್ಳಬಹುದೆಂದು (ಕೋ ಆಪ್ಟ್) ಸೂಚಿಸಿತು. ಈ ಮೊದಲು ಅತ್ಯುತ್ತಮ ಕಥೆಗಾರ, ಚಿತ್ರಕಥಾಲೇಖಕ, ಸಂಭಾಷಣಕಾರ, ವರ್ಣ ಹಾಗೂ ಕಪ್ಪು ಬಿಳುಪು ಛಾಯಾಗ್ರಾಹಕ, ಸಂಗೀತ ನಿರ್ದೇಶಕ, ಧ್ವನಿಗ್ರಾಹಕ, ಸಂಕಲನಕಾರ, ಬಾಲಕಲಾವಿದ ಹಾಗೂ ಸಮಿತಿ ಸೂಚಿಸಿದ ವಿಶೇಷ ಪ್ರಶಸ್ತಿ ಪಡೆದ ವ್ಯಕ್ತಿಗೆ ನೀಡುತ್ತಿದ್ದ ಪ್ರಮಾಣ ಪತ್ರದ ನೀಡಿಕೆ ಮಾತ್ರ ರದ್ದುಗೊಳಿಸಿತು. ಉಳಿದಂತೆ ನಗದು ಮೊತ್ತ, ಪದಕಗಳು ಹಾಗೇ ಮುಂದುವರಿದುವು. ಪ್ರಾದೇಶಿಕ ಭಾಷೆಯ ಅತ್ಯುತ್ತಮ ಚಿತ್ರಕ್ಕೆ ೨೦,೦೦೦ ರೂಪಾಯಿ ನಗದು ಬಹುಮಾನ ಘೋಷಿಸಿತು. ಆದರೆ ಈ ಭಾಷೆಯಲ್ಲಿ ನಿರ್ಮಾಣವಾದ ಕನಿಷ್ಠ ಆರು ಚಿತ್ರಗಳಾದರೂ ಪ್ರಶಸ್ತಿಗೆ ಸ್ಪರ್ಧಿಸಿದ್ದರೆ ಮಾತ್ರ ಈ ಪ್ರಶಸ್ತಿ ನೀಡಬಹುದೆಂದು ಸೂಚಿಸಿತು. ಯಾವುದೇ ವ್ಯಕ್ತಿ ಮೂರು ಪ್ರಶಸ್ತಿಗಳನ್ನು ಯಾವುದೇ ಒಂದು ವಿಭಾಗದಲ್ಲಿ ಪಡೆದಿದ್ದರೆ, ಅಂತಹವರಿಗೆ ಮೂರನೇ ಬಾರಿ ಪ್ರಶಸ್ತಿ ಪಡೆದ ವರ್ಷದಿಂದ, ಮುಂದಿನ ಮೂರು (ಆರ್ಥಿಕ) ವರ್ಷಗಳವರೆಗೆ ಪ್ರಶಸ್ತಿಗೆ ಪರಿಗಣಿಸಬಾರದು. ಆದರೆ ಇಂತಹ ವ್ಯಕ್ತಿಗಳು ಮೂರು ವರ್ಷಗಳ ನಂತರ ಪ್ರಶಸ್ತಿ ಪಡೆಯಲು ಪುನಃ ಅರ್ಹರಾಗುವರು ಎಂಬ ನಿಲುವು ತಾಳಿತು. ಅರ್ಜಿಯ ಜೊತೆ ನಿರ್ಮಾಪಕರು ಪ್ರವೇಶಧನ ೨೫೦ ರೂಪಾಯಿ ಹಾಗೂ ಪ್ರದರ್ಶನ ಶುಲ್ಕವಾಗಿ ೧೫೦ ರೂಪಾಯಿಗಳನ್ನು ಸಂದಾಯ ಮಾಡಬೇಕಾಯಿತು. ಇದರೊಂದಿಗೆ ತಲಾ ೧೨ ಪ್ರತಿ ಕಥಾಸಾರಾಂಶ, ಹಾಗೂ ಹಾಡುಗಳ ಪ್ರತಿಗಳನ್ನು ಒದಗಿಸಬೇಕಿತ್ತು. ರೀಮೇಕ್/ಡಬ್ ಆದ ಚಿತ್ರ ಸಾಮಾನ್ಯವಾಗಿ ಪ್ರಶಸ್ತಿಗೆ ಅರ್ಹವಲ್ಲದಿದ್ದರೂ ಸರ್ಕಾರವು ವಿಶೇಷ ಸಂದರ್ಭಗಳಲ್ಲಿ ರೀಮೇಕ್/ಅಳವಡಿತ ಚಿತ್ರವೂ ಕನ್ನಡ ಚಲನಚಿತ್ರ ಕ್ಷೇತ್ರಕ್ಕೆ ಹೊಸ ಕೊಡುಗೆ ನೀಡಿದೆ ಎಂದು ತೃಪ್ತಿಯಾದರ ಅಂತಹ ಚಿತ್ರಕ್ಕೆ ಪ್ರವೇಶಾನುಮತಿ ನೀಡಬೇಕು. ಆದರೆ ಯಾವುದೇ ಚಿತ್ರ ರೀಮೇಕ್, ಡಬ್ ಆವೃತ್ತಿ, ಅಳವಡಿತವೇ ಎಂಬುದನ್ನು ಸಮಿತಿಯೇ ತೀರ್ಮಾನಿಸಬೇಕು. ಸಮಿತಿಯಲ್ಲಿನ ಅಳವಡಿತ ಹಾಗೂ ಸದಸ್ಯ -ಕಾರ್ಯದರ್ಶಿಯೂ ಸೇರಿ ಇರುವ ಸಂಖ್ಯೆಯ ಅರ್ಧದಷ್ಟಾದರೂ ಕನಿಷ್ಠ ಸದಸ್ಯರು ತೀರ್ಪು ಕೈಗೊಳ್ಳುವಾಗ ಭಾಗಿಯಾಗಿರಲೇಬೇಕು. ಸಮಿತಿಯು ಶಿಫಾರಸ್ಸು ಮಾಡಿದ ಬಳಿಕ, ಸರ್ಕಾರವೇ ಪ್ರಶಸ್ತಿಯನ್ನು ಘೋಷಿಸುವುದು ಹಾಗೂ ಸರ್ಕಾರದ ತೀರ್ಮಾನವೇ ಅಂತಿಮ ಎಂದು ಸಾರಿತು. ಇವುಗಳನ್ನು ಹೊರತುಪಡಿಸಿ ಕನ್ನಡ ಹಾಗೂ ಪ್ರಾದೇಶಿಕ ಭಾಷಾ ಚಿತ್ರಗಳ ಕುರಿತು ೧೯೬೭ರ ಮೈಸೂರು ರಾಜ್ಯ ರೂಪಕ ಚಲನಚಿತ್ರ ಪ್ರಶಸ್ತಿ ನಿಯಮಾವಳಿಗಳನ್ನು ರದ್ದು ಪಡಿಸಲಾಯಿತು.

ಸರ್ಕಾರ ಒಂದು **ಆದೇಶ** (ಸಂಖ್ಯೆ:ಐಟಿವ್ಯ ೮೮ ಪಿ ಐ ಎಫ್೮೭, ದಿನಾಂಕ ೧೬-೮-೮೫) ಪ್ರಕಟಿಸಿತು. ಅದರಲ್ಲಿ ಮೊದಲಿನ ನಿಯಮವೊಂದನ್ನು ರದ್ದುಮಾಡಿ, ಹೊಸ ಸೇರ್ಪಡೆ ಮಾಡಿತು. ಅದರಲ್ಲಿ ಯಾವುದೇ ವ್ಯಕ್ತಿ ಮೂರು ವರ್ಷಗಳ ಕಾಲ ಸತತವಾಗಿ ಒಂದೇ ವಿಭಾಗದಲ್ಲಿ ಪ್ರಶಸ್ತಿ ಪಡೆದಿದ್ದರೆ, ಅವರು ಮುಂದಿನ ವರ್ಷ ಪ್ರಶಸ್ತಿಗೆ ಅರ್ಹರಾಗುವುದಿಲ್ಲ. ಆದರೆ ಅಂತಹ ವ್ಯಕ್ತಿಗಳು ಒಂದು ವರ್ಷದ ಲೋಪದ ನಂತರ ಮುಂದಿನ ವರ್ಷ **ಅದೇ ವಿಭಾಗದ** ಪ್ರಶಸ್ತಿಗೆ ಸ್ಪರ್ಧಿಸಲು ಅರ್ಹರಾಗುತ್ತಾರ ಎಂದು ಸ್ಪಷ್ಟನೆ ನೀಡಿತು.

೧೯೮೫-೮೬ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಅಂದಿನ ಮುಖ್ಯಮಂತ್ರಿಗಳು ದಿವಂಗತ ಪುಟ್ಟಣ್ಣ ಕಣಗಾಲ್ ಹೆಸರಿನಲ್ಲಿ ಚಲನಚಿತ್ರ ನಿರ್ದೇಶಕರಿಗೆ ಒಂದು ಲಕ್ಷ ರೂಪಾಯಿ ಪ್ರಶಸ್ತಿ ನೀಡಲಾಗುವುದು ಎಂದು ಆಶ್ವಾಸನೆ ನೀಡಿದರು. ಅದರಂತೆ ಸರ್ಕಾರಿ **ಆದೇಶ** (ಸಂಖ್ಯೆ:ಐಟಿವ್ಯ ೨೦೭ ಪಿಐಎಫ್ ೮೫, ದಿನಾಂಕ ೮-೭-೮೬) ಪ್ರಕಟಿಸಿತು.

ಇದರಲ್ಲಿ ಕರ್ನಾಟಕ ರಾಜ್ಯದಲ್ಲಿ ತಯಾರಾದ ಉತ್ತಮ ಕನ್ನಡ ಚಲನಚಿತ್ರ ನಿರ್ದೇಶಕರಿಗೆ ದಿವಂಗತ ಪುಟ್ಟಣ್ಣ ಕಣಗಾಲ್ ಹೆಸರಿನಲ್ಲಿ ಪ್ರತಿವರ್ಷವೂ ಒಂದು ಲಕ್ಷ ರೂಪಾಯಿಗಳ ಪ್ರಶಸ್ತಿಯನ್ನು ೧೯೮೬-೮೭ನೇ ಸಾಲಿನಿಂದ ನೀಡುವುದಾಗಿ ಘೋಷಿಸಿತು. ರಾಜ್ಯ ಚಲನಚಿತ್ರ ಪ್ರಶಸ್ತಿಗಳ ಆಯ್ಕೆಗೆ ರಚಿಸಲಾದ ಸಮಿತಿಯೇ ಈ ಪ್ರಶಸ್ತಿಯ ಬಗ್ಗೆ ನಿರ್ಧಾರ ಕೈಗೊಳ್ಳುವುದೆಂದು ಸ್ಪಷ್ಟಪಡಿಸಿತು. ವಿಶೇಷವೆಂದರೆ ಇದುವರೆಗೆ ಇಂಗ್ಲಿಷ್ ಭಾಷೆಯಲ್ಲಿ ಪ್ರಕಟವಾಗುತ್ತಿದ್ದ ಸರ್ಕಾರಿ ಆಜ್ಞೆ, ಇದರೊಂದಿಗೆ ಕನ್ನಡದಲ್ಲಿ ಪ್ರಕಟಗೊಳ್ಳಲು ಆರಂಭಿಸಿತು.

ಸರ್ಕಾರ ಒಂದು **ತಿದ್ದುಪಡಿ** (ಸಂಖ್ಯೆ:ಐಟಿವ್ಯ ೨೨ ಪಿ ಐ ಎಫ್೮೯ ದಿನಾಂಕ ೨೬-೬-೮೯) ಪ್ರಕಟಿಸಿ, ತನ್ನ ಮೊದಲಿನ ಸರ್ಕಾರಿ **ಆದೇಶದಲ್ಲಿ** (ದಿನಾಂಕ ೮-೭-೮೬) ಬದಲಾವಣೆ ತಂದಿತು. ಈ ಮೊದಲು ಕರ್ನಾಟಕ ರಾಜ್ಯದಲ್ಲಿ ತಯಾರಾದ ಉತ್ತಮ ಕನ್ನಡ ಚಲನಚಿತ್ರ ನಿರ್ದೇಶಕರಿಗೆ ಮಾತ್ರ ಮೀಸಲಾಗಿದ್ದ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ಅದರ ಬದಲಾಗಿ ಕನ್ನಡ ಚಲನಚಿತ್ರರಂಗದಲ್ಲಿ ನಿರ್ದೇಶನ, ನಟನೆ, ಸಂಗೀತ, ತಾಂತ್ರಿಕ ಕಾರ್ಯಗಳೂ ಸೇರಿದಂತೆ ಚಲನಚಿತ್ರ ರಂಗದ ವಿವಿಧ ಪ್ರಕಾರಗಳಲ್ಲಿ ಯಾವುದರಲ್ಲಾದರೂ ಶ್ರಮಿಸಿ ಕನ್ನಡ ಚಲನಚಿತ್ರೋದ್ಯಮದ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದ ಗಣ್ಯವ್ಯಕ್ತಿಗೆ ನೀಡಬಹುದೆಂಬ ನಿಲುವು ತಾಳಿತು.

ಸರ್ಕಾರಿ **ಆದೇಶ** (ಸಂಖ್ಯೆ:ಐಟಿವ್ಯ ೯೦, ಪಿ ಐ ಎಫ್೮೯, ದಿನಾಂಕ ೧೬-೧೦-೮೯) ಪ್ರಕಟಿಸಿ, ಪ್ರಶಸ್ತಿಗೆ ರಚಿಸುವ ಸಲಹಾ ಸಮಿತಿಗೆ ಈ ಮೊದಲು ಒಂಬತ್ತು ಜನರಿಗೂ ಮೀರದಂತೆ ಇದ್ದ ಸರ್ಕಾರೇತರ ಸದಸ್ಯರ ಸಂಖ್ಯೆಯನ್ನು ಹನ್ನೆರಡು ಜನರಿಗೂ ಮೀರದಂತೆ ಎಂದು ೧೯೮೪ರ ಪ್ರಶಸ್ತಿ ನಿಯಮಾವಳಿಗೆ ತಿದ್ದುಪಡಿ ತಂದಿತು.

ಕನ್ನಡ ಚಿತ್ರರಂಗದಲ್ಲಿ ಮಹತ್ತರ ಮೈಲಿಗಲ್ಲು ಎನ್ನಬಹುದಾದಂತಹ ವಿಶೇಷ **ಆದೇಶ** (ಸಂಖ್ಯೆ:ಐಟಿವ್ಯ ೧೮೬ಪಿ ಐ ಎಫ್೮೭, ದಿನಾಂಕ ೧೬-೪-೯೦) ಪ್ರಕಟಿಸಿತು.ಸಾಕ್ಷ್ಯ ಚಿತ್ರಗಳು, ಶೈಕ್ಷಣಿಕ ಚಿತ್ರ ಹಾಗೂ ಮಕ್ಕಳ ಚಿತ್ರಗಳಿಗೆ ಪ್ರಶಸ್ತಿ ನೀಡಲು ಈಗಿರುವ ಕನ್ನಡ ಮತ್ತು ಪ್ರಾಂತೀಯ ಭಾಷೆಯ ರೂಪಕ ಚಿತ್ರಗಳ ಪ್ರಶಸ್ತಿ ನಿಯಮಾವಳಿಯಲ್ಲಿ ಅವಕಾಶವಿಲ್ಲ. ಆದರೆ ಇವುಗಳಿಗೆ ಪ್ರಶಸ್ತಿಗಳನ್ನು ನೀಡಬೇಕೆಂದು ಚಲನಚಿತ್ರರಂಗದ ಗಣ್ಯರು, ಸಂಘ ಸಂಸ್ಥೆಗಳು ಸರ್ಕಾರಕ್ಕೆ ಮನವಿ ಮಾಡಿದ್ದವು. ಹೀಗಾಗಿ, ಆದೇಶದ ಜೊತೆಗೇ **ಅನುಬಂಧ** ಪ್ರಕಟಿಸಿತು. ಅದನ್ನು 'ಸಾಕ್ಷ್ಯ ಚಿತ್ರ, ಶೈಕ್ಷಣಿಕ ಚಿತ್ರ ಹಾಗೂ ಮಕ್ಕಳ ಚಿತ್ರಗಳಿಗೆ ಕರ್ನಾಟಕ ರಾಜ್ಯ ಪ್ರಶಸ್ತಿ ನಿಯಮಗಳು - ೧೯೯೦' ಎಂದು ಬಿಡುಗಡೆ ಮಾಡಿತು. ಹಾಗೂ ಇವು ತಕ್ಷಣದಿಂದ ಜಾರಿಗೆ ಬಂದವು. ಕನ್ನಡ ಹಾಗೂ ಇತರ ಪ್ರಾಂತೀಯ ತುಳು,ಕೊಂಕಣಿ, ಕೊಡವ ಭಾಷೆಗಳಲ್ಲಿ ತಯಾರಾದ ಸೆನ್ಸಾರ್ ಪ್ರಮಾಣ ಪತ್ರ ಪಡೆದ ೬೦ ನಿಮಿಷ ಮೀರದ ಯಾವುದೇ ವಿಷಯ ಕುರಿತು ೩೫ ಎಂ ಎಂ ಅಥವಾ ೧೬ ಎಂ ಎಂ ಅಥವಾ ವೀಡಿಯೋ ಸಾಕ್ಷ್ಯಚಿತ್ರ, ಶೈಕ್ಷಣಿಕ ಚಿತ್ರ ಹಾಗೂ ಮಕ್ಕಳ ಚಿತ್ರಗಳು ಪ್ರಶಸ್ತಿಗೆ ಅರ್ಹವಾದವು. ಇದಕ್ಕಾಗಿ ಪ್ರತಿವರ್ಷ ಸರ್ಕಾರ ಸಲಹಾ ಸಮಿತಿ ರಚಿಸುವುದು ಹಾಗೂ ಇದರಲ್ಲಿ ಚಲನಚಿತ್ರ, ಕಲೆ, ಸಾಹಿತ್ಯದಲ್ಲಿ

ಪರಿಣಿತ ಒಬ್ಬ ಖಾಸಗೀ ವ್ಯಕ್ತಿ ಅಧ್ಯಕ್ಷರಾಗಿ ಹಾಗೂ ಇಬ್ಬರಿಗೂ ಮೀರದಂತೆ ಖಾಸಗಿ ವ್ಯಕ್ತಿಗಳು ಸದಸ್ಯರಾಗಿ, ಜಂಟಿ ನಿರ್ದೇಶಕರಿಗಿಂತ ಕಡಿಮೆಯಿಲ್ಲದ ಹುದ್ದೆಯ ವಾರ್ತಾ ಮತ್ತು ಪ್ರಚಾರ ಇಲಾಖೆಯ ಅಧಿಕಾರಿ ಸರ್ಕಾರಿ ಸದಸ್ಯ ಕಾರ್ಯದರ್ಶಿಯಾಗಿರುವಂತ ಸರ್ಕಾರ ನೇಮಿಸುವುದು. ಸಂಬಂಧಪಟ್ಟ ವರ್ಷದ ಏಪ್ರಿಲ್ ಒಂದರಿಂದ ಮುಂದೆ ಮಾರ್ಚ್ ೩೧ ರೊಳಗಿನ ಅವಧಿಯಲ್ಲಿ ಸೆನ್ಸಾರ್ ಮಂಡಳಿ ಪ್ರಮಾಣ ಪತ್ರ ಪಡೆದ ಕಿರುಚಿತ್ರಗಳು ಪ್ರಶಸ್ತಿ ಪರಿಶೀಲನಗೆ ಅರ್ಹ. ಆದರೆ ಸಂಬಂಧಪಟ್ಟ ವರ್ಷದಲ್ಲಿ ತಯಾರಾದ ಕನಿಷ್ಠ ಐದು ಸಾಕ್ಷ್ಯಚಿತ್ರ ಹಾಗೂ ಶೈಕ್ಷಣಿಕ ಚಿತ್ರ, ಮಕ್ಕಳ ಕಿರು ಚಿತ್ರಗಳು ಸ್ಪರ್ಧಿಸಿದರ ಮಾತ್ರ ಪ್ರಶಸ್ತಿಗೆ ಪರಿಶೀಲಿಸಿ ಆಯ್ಕೆ ಮಾಡಬಹುದು.

ಅತ್ಯುತ್ತಮ ಸಾಕ್ಷ್ಯಚಿತ್ರ, ಶೈಕ್ಷಣಿಕ ಚಿತ್ರ, ಮಕ್ಕಳ ಚಿತ್ರ ನಿರ್ದೇಶಕರಿಗೆ ತಲಾ ೪೦೦೦ ರೂಪಾಯಿ ನಗದು ಬಹುಮಾನ ಹಾಗೂ ಬೆಳ್ಳಿ ಪದಕಗಳನ್ನು ನೀಡಲು ನಿರ್ಧರಿಸಿತು. ಪ್ರಶಸ್ತಿಗೆ ಅರ್ಜಿ ಸಲ್ಲಿಸುವ ನಿರ್ಮಾಪಕರು ಚಿತ್ರದ ಪ್ರತಿಯ ಜೊತೆ ಚಿತ್ರದ ನಿರೂಪಣೆಯ ಸಾಹಿತ್ಯದ ಎಂಟು ಪ್ರತಿಗಳನ್ನು ಸಲ್ಲಿಸಬೇಕು. ಬೇರ ಭಾಷೆಯ ಭಾಷಾಂತರ ರೀಮೇಕ್ ಚಿತ್ರಗಳು ಈ ಪ್ರಶಸ್ತಿಗೆ ಅರ್ಹವಲ್ಲ. ಯಾವುದೇ ಚಿತ್ರ ಡಬ್/ ರೀಮೇಕ್ ಹೌದೋ ಅಲ್ಲವೋ ಎಂಬುದನ್ನು ಸಮಿತಿಯೇ ತೀರ್ಮಾನಿಸುವುದು. ಒಟ್ಟು ಸದಸ್ಯರ ಅರ್ಧದಷ್ಟು ಸದಸ್ಯರು ತೀರ್ಪು ಕೈಗೊಳ್ಳುವಾಗ ಹಾಜರಿರಲೇಬೇಕು. ಸಮಿತಿಯು ಪ್ರಶಸ್ತಿಗಾಗಿ ನೀಡಿದ ಸಲಹೆಯನ್ನು ಸರ್ಕಾರವೇ ಘೋಷಿಸುವುದು ಹಾಗೂ ಸರ್ಕಾರದ ತೀರ್ಮಾನವೇ ಅಂತಿಮವೆಂದು ಸಾರಿತು.



(ಚಿತ್ರ ೫) ಪ್ರೀಮಿಯರ್ ಸ್ಟುಡಿಯೋ ಮಾಲೀಕರಾದ ಎಂ.ಎನ್.ಬಸವರಾಜಯ್ಯ ಅವರಿಗೆ ೧೯೯೬-೯೭ರ ಡಾ|ರಾಜಕುಮಾರ್ ಪ್ರಶಸ್ತಿ ನೀಡಲಾಯಿತು. ಚಿತ್ರದಲ್ಲಿ ವಾರ್ತಾ ಇಲಾಖೆ ನಿರ್ದೇಶಕ ಐ.ಎಂ.ವಿಠಲಮೂರ್ತಿ, ಎಸ್.ವಿ.ರಾಜೇಂದ್ರಸಿಂಗ್ ಬಾಬು, ವಾರ್ತಾ ಸಚಿವ ನಾಣಯ್ಯ, ಉಪಮುಖ್ಯಮಂತ್ರಿ ಸಿದ್ಧರಾಮಯ್ಯ, ಎಂ.ಎನ್.ಬಸವರಾಜಯ್ಯ, ಕೆ.ವಿ.ಗುಪ್ತ, ಆರ್.ಲಕ್ಷ್ಮಣ್ ಮತ್ತು ಕರ್ನಾಟಕ ಚಲನಚಿತ್ರ ಅಭಿವೃದ್ಧಿ ಮಂಡಳಿಯ ಅಧ್ಯಕ್ಷ ಆರ್.ವಿ.ಹರೀಶ್

ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೧೪೮ ಐ ಪಿ ಎಫ್ ೯೧, ದಿನಾಂಕ ೩-೧೨-೯೨) ಪ್ರಕಟಿಸಿ, ಇನ್ನೊಂದು ಹೊಸ ಪ್ರಶಸ್ತಿ ಸ್ಥಾಪಿಸಿತು. ೧೯೯೨-೯೩ನೇ ಸಾಲಿನ ರಾಜ್ಯದ ಆಯವ್ಯಯ ಮಂಡನೆಯ ಸಂದರ್ಭದಲ್ಲಿ ಆಗಿನ ಮುಖ್ಯಮಂತ್ರಿಗಳು ಉತ್ತಮ ಗುಣಮಟ್ಟದ ಚಿತ್ರಗಳ ತಯಾರಿಕೆಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಕನ್ನಡ ಮತ್ತು ಪ್ರಾದೇಶಿಕ ಭಾಷಾ ಚಿತ್ರಗಳ ಅಭಿವೃದ್ಧಿಗೆ ಸಮಗ್ರ ಕೊಡುಗೆ ನೀಡಿದ ಗಣ್ಯರಿಗೆ ದಿವಂಗತ ಗುಬ್ಬಿ ವೀರಣ್ಣನವರ ಹೆಸರಿನಲ್ಲಿ ಪ್ರತಿವರ್ಷ ಒಂದು ಲಕ್ಷ ರೂಪಾಯಿಗಳ ಪ್ರಶಸ್ತಿ ನೀಡುವುದಾಗಿ ಘೋಷಿಸಿದರು. ಇದನ್ನು ಒಪ್ಪಿ, ೧೯೯೨-೯೩ನೇ ಸಾಲಿನಿಂದ ಜಾರಿಗೆ ತರಲಾಯಿತು. ಇದುವರೆಗೆ ಚಲನಚಿತ್ರೋದ್ಯಮದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದವರಿಗೆ ನೀಡುತ್ತಿದ್ದ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ಇನ್ನು ಮುಂದೆ ಅತ್ಯುತ್ತಮ ಚಲನಚಿತ್ರ ನಿರ್ದೇಶಕರಿಗೇ ನೀಡುವಂತೆ ತಿದ್ದುವುದಾಗಿ ತಿಳಿಸಿತು.

೧೯೯೪ ೯೫ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಅಂದಿನ ಮುಖ್ಯಮಂತ್ರಿಗಳು ರಾಜ್ಯ ಚಲನಚಿತ್ರ ಪ್ರಶಸ್ತಿಗಳ ಮೊತ್ತವನ್ನು ಹೆಚ್ಚಿಸುವುದಾಗಿಯೂ ಹೊಸದಾಗಿ ಕಲವು ಪ್ರಶಸ್ತಿಗಳನ್ನು ನೀಡುವುದಾಗಿಯೂ ಪ್ರಕಟಿಸಿದರು. ಇದಕ್ಕಾಗಿ ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೧೭೧, ಪಿ ಐ ಎಫ್ ೯೪, ದಿನಾಂಕ ೫-೧೨-೯೪) ಹೊರಟಿತು.

ಇದರ ಪ್ರಕಾರ ಪ್ರಥಮ, ದ್ವಿತೀಯ, ತೃತೀಯ ಅತ್ಯುತ್ತಮ ಚಿತ್ರದ ನಿರ್ಮಾಪಕರಿಗೆ ಕ್ರಮವಾಗಿ ಒಂದು ಲಕ್ಷ, ಎಪ್ಪತ್ತೈದು ಸಾವಿರ ರೂಪಾಯಿ, ಐವತ್ತು ಸಾವಿರ ರೂಪಾಯಿ ಮತ್ತು ಚಿನ್ನದ ಪದಕ, ಬೆಳ್ಳಿ ಪದಕ ನೀಡುವುದು. ಆ ಚಿತ್ರಗಳ ನಿರ್ದೇಶಕರಿಗೂ ಕ್ರಮವಾಗಿ ಇಪ್ಪತ್ತು, ಹದಿನೈದು, ಹತ್ತುಸಾವಿರ ಹಾಗೂ ಚಿನ್ನ, ಬೆಳ್ಳಿ ಪದಕಗಳನ್ನು ನೀಡುವುದಾಗಿ ಘೋಷಿಸಿತು.ಅತ್ಯುತ್ತಮ ನಟ ಹಾಗೂ ನಟಿಗೆ ತಲಾ ೨೦ಸಾವಿರ, ಅತ್ಯುತ್ತಮ ಪೋಷಕ ನಟ, ನಟಿ, ಕಥಾಲೇಖಕ, ಚಿತ್ರಕಥೆ, ಸಂಭಾಷಣಕಾರ, ಛಾಯಾಗ್ರಾಹಕ, ಸಂಗೀತ ನಿರ್ದೇಶಕ, ಧ್ವನಿಗ್ರಾಹಕ, ಸಂಕಲನಕಾರ, ಬಾಲಕಲಾವಿದ ಮತ್ತು ಸಮಿತಿ ಸೂಚಿಸಿದ ವಿಶೇಷ ತಂತ್ರ ಅಳವಡಿಕೆ, ಉಡುಗೆ ತೊಡಿಗೆ ಇನ್ನಾವುದೇ ಪ್ರಶಸ್ತಿ ವಿಜೇತರಿಗೆ ತಲಾ ಹತ್ತು ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಬೆಳ್ಳಿ ಪದಕ ನೀಡಲು ನಿರ್ಧರಿಸಿತು.

ಹೊಸದಾಗಿ ಮಂಜೂರು ಮಾಡಿದ ಪ್ರಶಸ್ತಿಗಳಲ್ಲಿ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರದ ನಿರ್ಮಾಪಕನಿಗೆ ೭೫ ಸಾವಿರ ರೂಪಾಯಿ-ಚಿನ್ನದ ಪದಕ, ಉತ್ತಮ ಮಕ್ಕಳ ಚಿತ್ರದ ನಿರ್ಮಾಪಕನಿಗ ಐವತ್ತು ಸಾವಿರ ರೂಪಾಯಿ-ಚಿನ್ನದ ಪದಕ, ಉತ್ತಮ ಕಲಾನಿರ್ದೇಶಕನಿಗ ಹತ್ತು ಸಾವಿರ ರೂಪಾಯಿ ನಗದು-ಬೆಳ್ಳಿ ಪದಕ ನೀಡುವ ತೀರ್ಮಾನ ಕೈಗೊಂಡಿತು. ಜೊತಗ ಉತ್ತಮ ಗೀತರಚನೆ, ಹಿನ್ನಲ ಗಾಯಕ, ಹಿನ್ನೆಲೆ ಗಾಯಕಿಗ ತಲಾ ಐದು ಸಾವಿರ ರೂಪಾಯಿ ನಗದು ಹಾಗೂ ಬೆಳ್ಳಿ ಪದಕ ನೀಡಲು ನಿರ್ಧರಿಸಿತು. ಇವುಗಳನ್ನು ೧೯೯೩-೯೪ನೇ ಸಾಲಿನಲ್ಲಿ ತಯಾರಾದ ಹಾಗೂ ನಂತರದ ಕನ್ನಡ ಹಾಗೂ ಇತರ ಉಪಭಾಷಾ ಚಿತ್ರಗಳಿಗ, ನಟ ನಟಿಯರಿಗ, ತಾಂತ್ರಿಕ ವರ್ಗಕ್ಕೆ ಇತರ ತಂತ್ರಜ್ಞರಿಗ ನೀಡುವಂತೆ ಸೂಚಿಸಿತು.

೧೯೯೫ರ ಜನವರಿ ೩೦ರಂದು ವಾರ್ತಾ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದಂತೆ,ಸದರಿಯವರು ಚಲನಚಿತ್ರ ವಾಣಿಜ್ಯ ಮಂಡಳಿಯ ಪ್ರತಿನಿಧಿಗಳೊಂದಿಗೆ ರಾಜಕುಮಾರ್ ಅವರನ್ನು ಸಂದರ್ಶಿಸಿ, ಚಲನಚಿತ್ರೋದ್ಯಮದ ಸರ್ವತೋಮುಖ ಅಭಿವೃದ್ಧಿಗೆ ಸೇವೆ ಸಲ್ಲಿಸಿದವರಿಗ ನೀಡುವ ಪ್ರಶಸ್ತಿಯನ್ನು ಡಾ|ರಾಜಕುಮಾರ್ ಹಸರಿನಲ್ಲಿ ನೀಡಲು ಒಪ್ಪಿಗ ನೀಡಿದರು. ಹೀಗಾಗಿ ಇದುವರೆಗೆ ನೀಡುತ್ತಿದ್ದ ಪ್ರಶಸ್ತಿಯನ್ನು ಗುಬ್ಬಿ ವೀರಣ್ಣ ಅವರ ಹೆಸರಿಗೆ ಬದಲು ಡಾ|ರಾಜಕುಮಾರ್ ಪ್ರಶಸ್ತಿಯೆಂದು ಮಾರ್ಪಡಿಸಬೇಕಾಯಿತು.

ಹೀಗಾಗಿ ಮತ್ತೊಂದು ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೨೪೬, ದಿನಾಂಕ ೨-೨-೯೫) ಪ್ರಕಟಿಸಿ, 'ಗುಬ್ಬಿ ವೀರಣ್ಣ ಪ್ರಶಸ್ತಿ'ಯನ್ನು 'ಡಾ|ರಾಜಕುಮಾರ್ ಪ್ರಶಸ್ತಿ' ಎಂದು ಹೆಸರು ಬದಲಾಯಿಸಿತು.

ರಂಗಭೂಮಿ ಹಾಗೂ ಚಲನಚಿತ್ರ ರಂಗಗಳಲ್ಲಿ ಸುಬ್ಬಯ್ಯನಾಯ್ಡುರವರು ಅಮೋಘ ಸೇವೆ ಸಲ್ಲಿಸಿದ್ದಾರೆಂದು ಹಾಗೂ ಅವರ ಶತಮಾನೋತ್ಸವ ಆಚರಣೆ ಸಂದರ್ಭದಲ್ಲಿ, ಪ್ರತಿ ವರ್ಷ ರಾಜ್ಯ ಸರ್ಕಾರ ನೀಡುತ್ತಿರುವ ಉತ್ತಮ ನಟ ಪ್ರಶಸ್ತಿಯನ್ನು ಪ್ರಥಮ ವಾಕ್ಚಿತ್ರದ ನಾಯಕನಟರಾದ ಸುಬ್ಬಯ್ಯನಾಯ್ಡು ಹೆಸರಿನಲ್ಲಿ ನೀಡಬೇಕೆಂದು ಬೆಂಗಳೂರಿನ ಎಂ.ವಿ.ಸುಬ್ಬಯ್ಯನಾಯ್ಡು ಶತಮಾನೋತ್ಸವ ಸಮಿತಿ ಮನವಿ ಸಲ್ಲಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ಐಟಿವೈ ೩೫೩, ಪಿಐಎಫ್ ೯೫, ದಿನಾಂಕ ೧೧-೧-೯೬) ಪ್ರಕಟಿಸಿ, ರಾಜ್ಯ ಸರ್ಕಾರವು ಪ್ರತಿವರ್ಷ ನೀಡುತ್ತಿರುವ ಪ್ರಶಸ್ತಿಗಳಲ್ಲಿ ಒಂದಾದ ಅತ್ಯುತ್ತಮ ನಟ ಪ್ರಶಸ್ತಿಯನ್ನು 'ಸುಬ್ಬಯ್ಯನಾಯ್ಡು ಪ್ರಶಸ್ತಿ' ಎಂದು ಪುನರ್ ನಾಮಕರಣ ಮಾಡಿ ತಕ್ಷಣದಿಂದ ಜಾರಿಗೆ ಬರುವಂತೆ ಸೂಚಿಸಿತು.

೧೯೯೪-೯೫ನೇ ಸಾಲಿನ ರಾಜ್ಯ ಚಲನಚಿತ್ರ ಪ್ರಶಸ್ತಿ ಆಯ್ಕೆ ಸಲಹಾ ಸಮಿತಿಯು ತನ್ನ ಶಿಫಾರಸ್ಸುಗಳನ್ನು ವಾರ್ತಾ ಸಚಿವರಿಗೆ ಸಲ್ಲಿಸಿದಾಗ, ಈ ಸಂದರ್ಭದಲ್ಲಿ ಪ್ರಾದೇಶಿಕ ಭಾಷಾ ಚಿತ್ರಗಳಾದ ತುಳು, ಕೊಂಕಣಿ, ಕೊಡವ ಹಾಗು ಲಂಬಾಣಿ ಚಿತ್ರಗಳಿಗೆ ಉತ್ತೇಜನ ನೀಡುವ ಸಲುವಾಗಿ ಒಂದು ವಿಶೇಷ ಪ್ರಶಸ್ತಿಯನ್ನು ಮುಂದಿನ ವರ್ಷದಿಂದ ನೀಡಲಾಗುವುದೆಂದು ಘೋಷಿಸಿದರು.

ಸರ್ಕಾರಿ **ಆದೇಶ** (ಸಂಖ್ಯೆ:ಪಿಟಿವೈ ೧೦೪ ಪಿಐಎಫ್ ೯೪, ದಿನಾಂಕ ೨೩-೫-೯೬)ಪ್ರಕಟಿಸಿ ೧೯೯೬-೯೭ನೇ ಸಾಲಿನಿಂದ ತುಳು, ಕೊಡವ, ಕೊಂಕಣಿ ಮತ್ತು ಲಂಬಾಣಿ ಭಾಷೆಗಳಲ್ಲಿ ರಾಜ್ಯದಲ್ಲಿ ತಯಾರಾದ ಉತ್ತಮ ಚಲನಚಿತ್ರಕ್ಕೆ ಹತ್ತು ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಬೆಳ್ಳಿ ಪದಕವನ್ನೊಳಗೊಂಡ ವಿಶೇಷ ಪ್ರಶಸ್ತಿ ನೀಡಲು ನಿರ್ಧರಿಸಿತು.

ಕನ್ನಡ ಚಲನಚಿತ್ರರಂಗವನ್ನು ಪುನಶ್ಚೇತನಗೊಳಿಸುವುದಕ್ಕೆ ಸಂಬಂಧಿಸಿದಂತೆ ಚಲನಚಿತ್ರರಂಗದ ಗಣ್ಯರೊಂದಿಗೆ ಸಮಾಲೋಚಿಸಿ ಹೊಸ ನೀತಿಯನ್ನು ರೂಪಿಸುವ ಸಲುವಾಗಿ ಚಾಲ್ತಿಯಲ್ಲಿರುವ ನೀತಿ ನಿಯಮಗಳಲ್ಲೂ ತಿದ್ದುಪಡಿ ರೂಪಿಸಿ ಒಂದು **ಆದೇಶ** (ಸಂಖ್ಯೆ:ಐಟಿವೈ ೧೮೦, ಪಿಐಎಫ್ ೯೮, ದಿನಾಂಕ ೧೦-೧೨-೯೮) ಹೊರಡಿಸಿತು. ಇದು ೧೯೯೬ರ ಏಪ್ರಿಲ್ ೧ರಿಂದ ಜಾರಿಗೆ ಬಂದಿತು. ಇದರಲ್ಲಿ ಸಹಾಯಧನ, ರಾಜ್ಯದ ಹೊರಗಡೆ ಚಿತ್ರೀಕರಣ, ಪುನರಾವೃತವಾದ ಚಿತ್ರಗಳಿಗೆ ಮನರಂಜನಾ ತೆರಿಗೆ ವಿನಾಯಿತಿ, ಚಿತ್ರೀಕರಣಕ್ಕೆ ಅನುಮತಿಗೆ ಏಕಗವಾಕ್ಷಿ ಯೋಜನೆ, ಚಿತ್ರೀಕರಣ ಶುಲ್ಕದ ಬಗ್ಗೆ ವಿವರಗಳಿದ್ದವು.

ಉಳಿದಂತೆ ಪ್ರಶಸ್ತಿಗಳ ಬಗ್ಗೆ ಉಲ್ಲೇಖಿಸಬೇಕಾದ ಅಂಶವೆಂದರೆ ರಾಜ್ಯ ಚಲನಚಿತ್ರ ಪ್ರಶಸ್ತಿಗಳನ್ನು ಆಯಾ ವರ್ಷದ ಡಿಸೆಂಬರ್ ತಿಂಗಳ ಒಳಗೆ ವಿತರಿಸುವುದಾಗಿ ಕೈಗೊಂಡ ನಿರ್ಣಯ.



(ಚಿತ್ರ ೬) ಮುಖ್ಯಮಂತ್ರಿ ಜೆ.ಎಚ್.ಪಟೇಲ್ ದೊರೆ-ಭಗವಾನ್ ಅವರಿಗೆ ೧೯೯೫-೯೬ರ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ನೀಡಿದರು. ಚಿತ್ರದಲ್ಲಿ ಎಸ್.ಕೆ.ಭಗವಾನ್, ದೊರೈರಾಜ್, ಜೆ.ಎಚ್.ಪಟೇಲ್ ಮತ್ತು ಎಂ.ಸಿ.ನಾಣಯ್ಯ ಇದ್ದಾರೆ.

ಅತ್ಯಂತ ಮಹತ್ವದ ಹಾಗೂ ಹೊಸದಾದ ಒಂದು ನಿಲುವು ಎಂದರೆ ಇನ್ನು ಮುಂದೆ ರಾಷ್ಟ್ರ ಪ್ರಶಸ್ತಿ ವಿಜೇತ ಕನ್ನಡ ಮತ್ತು ಉಪಭಾಷಾ ಚಲನಚಿತ್ರಗಳಿಗೆ, ಕಲಾವಿದರಿಗೆ, ಹಾಗೂ ತಂತ್ರಜ್ಞರಿಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಕೆಲವು ನಗದು ಬಹುಮಾನದ ಘೋಷಣೆ.

ರಾಷ್ಟ್ರಮಟ್ಟದಲ್ಲಿ ಸ್ವರ್ಣಕಮಲ ಪ್ರಶಸ್ತಿ ಪಡೆದ ಚಿತ್ರಕ್ಕೆ ೧೫ ಲಕ್ಷ ರೂಪಾಯಿ ನಗದು, ಅತ್ಯುತ್ತಮ ಪ್ರಾದೇಶಿಕ ಭಾಷಾ ಚಲನಚಿತ್ರ ಪ್ರಶಸ್ತಿ ಪಡೆದ ಕನ್ನಡ ಚಲನಚಿತ್ರ ಹಾಗೂ ಉಪಭಾಷಾ ಚಿತ್ರಗಳಿಗೆ ಎರಡೂವರೆ ಲಕ್ಷ ರೂಪಾಯಿ, ಅತ್ಯುತ್ತಮ ಪರಿಸರ ಚಿತ್ರ, ಮಕ್ಕಳ ಚಿತ್ರ ಪ್ರಶಸ್ತಿ ಪಡೆದರೆ ತಲಾ ಮೂರು ಲಕ್ಷ ರೂಪಾಯಿ ಹಾಗೂ ರಾಷ್ಟ್ರಮಟ್ಟದಲ್ಲಿ ಶ್ರೇಷ್ಠ ನಟ ಅಥವಾ ನಟಿ ಪ್ರಶಸ್ತಿ ಪಡೆದರೆ ಒಂದು ಲಕ್ಷ ರೂಪಾಯಿ, ಉಳಿದಂತೆ ರಾಷ್ಟ್ರಮಟ್ಟದಲ್ಲಿ ಇನ್ನಾವುದೇ ಚಲನಚಿತ್ರ ಪ್ರಶಸ್ತಿ ಪಡೆದವರಿಗೆ ಕೇಂದ್ರ ಸರ್ಕಾರ ನೀಡುವಷ್ಟೇ ನಗದು ಬಹುಮಾನ ರಾಜ್ಯ ಸರ್ಕಾರ ನೀಡುವುದೆಂದು ಘೋಷಿಸಿತು.

ಯಾವುದೇ ಚಲನಚಿತ್ರ ಉತ್ತಮ ಚಿತ್ರವೆಂದು ಪ್ರಶಸ್ತಿಗೆ ಆಯ್ಕೆಯಾಗಲು ಹಾಗೂ ಪ್ರಶಸ್ತಿಗೆ ಅರ್ಹತೆ ಪಡೆಯಲು ಚಿತ್ರಕ್ಕೆ ಜೀವಕೊಡುವುದರಲ್ಲಿ ನಿರ್ದೇಶಕನ ಪಾತ್ರ ಬಹುಮುಖ್ಯವಾಗಿದ್ದು, ಅದರಲ್ಲೂ ಮಕ್ಕಳ ಚಿತ್ರಗಳು ಅತಿ ಕಡಿಮೆ ಸಂಖ್ಯೆಯಲ್ಲಿ ತಯಾರಾಗುತ್ತಿರುವುದರಿಂದ, ನಿರ್ದೇಶಕರಿಗೆ ಪ್ರಶಸ್ತಿ ಸಹ ಇಲ್ಲದಿದ್ದರೆ, ಯಾವ ನಿರ್ದೇಶಕರೂ ಮಕ್ಕಳ ಚಿತ್ರಗಳನ್ನು ನಿರ್ಮಿಸಲು ಆಸಕ್ತಿ ವಹಿಸುವುದಿಲ್ಲವೆಂದು ಅಭಿಪ್ರಾಯಪಟ್ಟು, ರಾಜ್ಯ ಸರ್ಕಾರ ಉತ್ತಮ ಮಕ್ಕಳ ಚಿತ್ರದ ನಿರ್ದೇಶಕರಿಗೆ, ಕೇಂದ್ರ ಸರ್ಕಾರದ ಮಾದರಿಯಲ್ಲಿ ನಗದು ಹಾಗೂ ಪದಕ ನೀಡಿ ಪ್ರೋತ್ಸಾಹಿಸಲು ನಿರ್ಧರಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ವಾಪ್ರಯು ೨೦೬, ಪಿಐಎಫ್ ೯೯(ಪ), ದಿನಾಂಕ ೨೮-೮-೨೦೦೦)ಪ್ರಕಟಿಸಿ, ಪ್ರಶಸ್ತಿಗೆ ಆಯ್ಕೆಯಾದ ಉತ್ತಮ ಮಕ್ಕಳ ಚಿತ್ರದ ನಿರ್ದೇಶಕರಿಗೂ ಸಹ ಹತ್ತು ಸಾವಿರ ರೂಪಾಯಿ ನಗದು ಮತ್ತು ಬೆಳ್ಳಿ ಪದಕ ನೀಡುವ ಪದ್ಧತಿ ೨೦೦೦-೨೦೦೧ನೇ ವರ್ಷದಿಂದ ಜಾರಿಗೆ ತರಲು ಒಪ್ಪಿಗೆ ನೀಡಿತು.

ರಾಜ್ಯ ಸರ್ಕಾರ ಪ್ರತಿ ವರ್ಷ ನೀಡುತ್ತಿರುವ ಕನ್ನಡ ಹಾಗೂ ಅದರ ಉಪಭಾಷೆಗಳ ಅತ್ಯುತ್ತಮ ಚಿತ್ರಗಳಲ್ಲಿ, ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರಕ್ಕೆ ೭೫ ಸಾವಿರ ರೂಪಾಯಿ ನಗದು ಬಹುಮಾನ, ಒಂದು ಚಿನ್ನದ ಪದಕ ನೀಡುತ್ತಿದೆ. ಆದರೆ ಈ ಪ್ರಶಸ್ತಿ ಚಿತ್ರದ ನಿರ್ಮಾಪಕರಿಗೆ ಮಾತ್ರ ಸಲ್ಲುತ್ತಿರುವುದರಿಂದ ಚಿತ್ರಕ್ಕೆ ಜೀವ ತುಂಬುವಲ್ಲಿ ತನ್ನ ಬುದ್ಧಿವಂತಿಕೆ ಹಾಗೂ ಹೃದಯವಂತಿಕೆಯ ಪ್ರತಿಭೆಯನ್ನು ಉಪಯೋಗಿಸುವ ವ್ಯಕ್ತಿಯಾದ ನಿರ್ದೇಶಕರಿಗೂ ಸೂಕ್ತ ಪ್ರಶಸ್ತಿ ಕೊಡುವುದು ಅವಶ್ಯ ಎಂದು ನಿರ್ಧರಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ವಾಪ್ರಯು ೫೧ ಪಿಐಎಫ್೨೦೦೦, ದಿನಾಂಕ ೫-೦೧-೨೦೦೦) ಪ್ರಕಟಿಸಿ, ಪ್ರಶಸ್ತಿಗೆ ಆಯ್ಕೆಯಾದ ಉತ್ತಮ ಸಾಮಾಜಿಕ ಕಳಕಳಿಯ ಚಿತ್ರದ ನಿರ್ದೇಶಕರಿಗೂ ಹತ್ತು ಸಾವಿರ ರೂಪಾಯಿ ನಗದು ಮತ್ತು ಬೆಳ್ಳಿ ಪದಕವನ್ನು ೨೦೦೦-೨೦೦೧ನೇ ಸಾಲಿನಿಂದಲೇ ನೀಡಲು ನಿರ್ಧರಿಸಿತು.

ರಾಜ್ಯ ಸರ್ಕಾರ ನೀಡುವ ಚಲನಚಿತ್ರ ಪ್ರಶಸ್ತಿಗಳ ವ್ಯಾಪ್ತಿ ಸಾಕಷ್ಟು ವಿಸ್ತಾರವಾಗಿ ಇದ್ದರೂ ಸಹಿತ, ಜೀವನ ಪೂರ್ತಿ ಸಾಧನೆಗಾಗಿ ನೀಡುವ ಪ್ರಶಸ್ತಿ ಕೇವಲ ಒಂದೇ ಒಂದು ಆಗಿರುವುದರಿಂದ ಚಿತ್ರರಂಗಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿದ ತಂತ್ರಜ್ಞರಾಗಲಿ, ಸಾಮಾಜಿಕ ಕಳಕಳಿಯನ್ನು ಪ್ರತಿಬಿಂಬಿಸುವ ಅಥವಾ ಮಕ್ಕಳ ಚಿತ್ರಗಳನ್ನೇ ತಯಾರು ಮಾಡುವಂತಹ ನಿರ್ಮಾಪಕರುಗಳಾಗಲಿ, ತೆರೆಮರೆಯಲ್ಲಿ ಕೆಲಸ ಮಾಡುವ ಇತರರಾಗಲಿ ಕಾರಣಾಂತರಗಳಿಂದ ಪ್ರಶಸ್ತಿಗಳಿಗೆ ಆಯ್ಕೆಯಾಗುತ್ತಿಲ್ಲವೆಂದು, ಹಾಗೂ ಇಂತಹವರುಗಳಿಗಾಗಿಯೇ ವಿಶೇಷ ಪ್ರಶಸ್ತಿಯೊಂದನ್ನು ಸರ್ಕಾರ ನೀಡಬೇಕೆಂಬ ಹಲವಾರು ಜನರ ಬೇಡಿಕೆಯನ್ನು ಗಮನದಲ್ಲಿರಿಸಿಕೊಂಡು ಒಂದು **ವಿಶೇಷ ಆದೇಶ** ಹೊರಡಿಸಿತು.

**ಆದೇಶ** (ಸಂಖ್ಯೆ:ವಾಪ್ರಯು ೫೩, ಪಿಐಎಫ್ ೨೦೦೧, ದಿನಾಂಕ ೨೩-೦೩- ೨೦೦೧) ಪ್ರಕಟಿಸಿ, ಚಲನಚಿತ್ರ ರಂಗಕ್ಕೆ ಜೀವನಪೂರ್ತಿ ಸಾಧನೆಗಾಗಿ ಐವತ್ತು ಸಾವಿರ ರೂಪಾಯಿ ನಗದು ಬಹುಮಾನವನ್ನು "ಚಿತ್ರರಂಗಕ್ಕೆ ಜೀವನಾದ್ಯಂತ ವಿಶಿಷ್ಟ ಕೊಡುಗೆ ಪ್ರಶಸ್ತಿ" ಎಂಬ ಒಂದು ವಿಶೇಷ ಪ್ರಶಸ್ತಿಯನ್ನು ೨೦೦೦-೨೦೦೧ನೇ ಸಾಲಿನಿಂದ ನೀಡಲು ನಿರ್ಧರಿಸಿತು. ಈ ಪ್ರಶಸ್ತಿ ಬಗ್ಗೆ ಸರ್ಕಾರವು ರಾಜ್ಯ ಪ್ರಶಸ್ತಿಗಳಿಗಾಗಿ ರಚಿಸುವ ಸಲಹಾ ಸಮಿತಿಯೇ ನಿರ್ಧಾರ ಕೈಗೊಳ್ಳಬೇಕು ಎಂದು ಸೂಚಿಸಿತು.

೧೯೯೯ರ ಜನವರಿ ೨ರಂದು ಒಂದು ಸರ್ಕಾರಿ **ಆದೇಶ** ಹೊರಡಿಸಿ ೧೯೯೬ರ ಏಪ್ರಿಲ್ ೧ರ ನಂತರ ಸೆನ್ಸಾರಾದ ಚಲನಚಿತ್ರಗಳನ್ನು ವೀಕ್ಷಿಸಿ ಸಹಾಯಧನ ನೀಡಲು ಶಿಫಾರಸ್ಸು ಮಾಡಲು 'ಗುಣಾತ್ಮಕ ಆಧಾರದ ಮೇಲೆ ಚಲನಚಿತ್ರ ಆಯ್ಕೆ ಸಲಹಾ ಸಮಿತಿ' ರಚಿಸಿತು. ಈ ಸಮಿತಿಯು ೧೮ ಕನ್ನಡ, ೨ ಉಪಭಾಷಾ ಚಿತ್ರಗಳನ್ನು ಸಹಾಯಧನಕ್ಕೆ ಆಯ್ಕೆ ಮಾಡಬೇಕಿತ್ತು. ಆದರೆ ಸರ್ಕಾರ ಮತ್ತೊಂದು **ಆದೇಶ** (ಸಂಖ್ಯೆ:ವಾಪ್ರಯು ೯೧, ಪಿಐಎಫ್ ೨೦೦೦, ದಿನಾಂಕ ೨೪-೦೩-೨೦೦೧) ಪ್ರಕಟಿಸಿ, ಈ ಮೊದಲು ತಿಳಿಸಲಾದ ೧೮ ಕನ್ನಡ ಚಲನಚಿತ್ರಗಳಲ್ಲಿ ೪ ಚಲನಚಿತ್ರಗಳು ರಾಜ್ಯ ಪ್ರಶಸ್ತಿವಿಜೇತ ಚಲನಚಿತ್ರಗಳಾಗಿರಬೇಕು. ಅಂದರೆ ಪ್ರಥಮ, ದ್ವಿತೀಯ., ತೃತೀಯ ಮತ್ತು ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರಗಳು ನೇರವಾಗಿ ಹತ್ತು ಲಕ್ಷ ರೂಪಾಯಿಗಳ ಸಹಾಯಧನಕ್ಕೆ ಅರ್ಹವಾಗಿರುತ್ತವೆ ಎಂಬ ನಿಲುವು ತಾಳಿತು. ಸಮಿತಿಗೆ ಕೇವಲ ೧೬ ಚಿತ್ರಗಳನ್ನು ಆಯ್ಕೆ ಮಾಡಬೇಕು ಮತ್ತು ಅರ್ಹವಾದ ಎರಡು ಉಪಭಾಷಾ ಚಿತ್ರಗಳು ಇಲ್ಲದಿದ್ದಲ್ಲಿ ಎಲ್ಲವೂ ಕನ್ನಡ ಚಿತ್ರಗಳ ಆಯ್ಕೆ ಆಗಿರಬಹುದು ಎಂದಿತು. ಇದೇ ರೀತಿ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಪ್ರಶಸ್ತಿ ಗಳಿಸಿದ ಕನ್ನಡ ಚಿತ್ರಕ್ಕೂ



(ಚಿತ್ರ ೭) ೧೯೯೪-೯೫ರ ಡಾ|ರಾಜಕುಮಾರ್ ಪ್ರಶಸ್ತಿಯನ್ನು ಎಂ.ಪಂಢರಿಬಾಯಿ ಅವರಿಗೆ ನೀಡಲಾಯಿತು. ಚಿತ್ರದಲ್ಲಿ ರವೀ, ರಾಮರಾವ್, ರಾಜಕುಮಾರ್, ಪಂಢರಿಬಾಯಿ, ಜೆ.ಎಚ್.ಪಟೇಲ್ ಮತ್ತು ಎಂ.ಸಿ.ನಾಣಯ್ಯ

ನೇರವಾಗಿ ಸಹಾಯಧನ ನೀಡಬೇಕು. ಇಂತಹ ಸಂದರ್ಭದಲ್ಲಿ ಗುಣಾತ್ಮಕ ಸಮಿತಿ ಕೇವಲ ೧೫ ಚಿತ್ರಗಳನ್ನು ಆಯ್ಕೆ ಮಾಡಬೇಕು ಎಂದು ತಿಳಿಸಿತು. ಇದು ೧೯೯೬ನೇ ಏಪ್ರಿಲ್ ೧ರಿಂದ ಜಾರಿಗೆ ಬಂದಿತು.

*  *  *

೧೯೬೭ರಿಂದ ೨೦೦೦ ವರ್ಷದ ವರೆಗೆ, ಈ ೩೪ ವರ್ಷಗಳಲ್ಲಿ ಕನ್ನಡ ಚಲನಚಿತ್ರ ಪ್ರಶಸ್ತಿಗಳು ನಡೆದು ಬಂದ ದಾರಿ ಪಡೆದ ಸ್ವರೂಪ ಜಾರಿಗೆ ತಂದ ರೀತಿ ನೀತಿ, ವಿತರಿಸಿದ ಶೈಲಿ ಇವುಗಳ ಬಗ್ಗೆ ಇದುವರೆಗೆ ಹೇಳಿದೆ. ಇನ್ನು ಮುಂದೆ ಚಿತ್ರರಂಗ ಹಾಗೂ ಸರ್ಕಾರ ಪರಸ್ಪರ ನಡೆದುಕೊಂಡ ರೀತಿಯನ್ನು ವಿಶ್ಲೇಷಿಸಲಾಗಿದೆ.

ಸರ್ಕಾರ ಎಂಬುದು ಒಂದು ವ್ಯವಸ್ಥೆ. ಅಲ್ಲಿ ಒಬ್ಬರ ಚಿಂತನೆಯ ಕ್ರಮ ಸಾಧ್ಯವೇ ಇಲ್ಲ. ಈ ನ್ಯೂನತೆಗೆ ಪೂರಕವಾದ ಇನ್ನೊಂದೆರಡು ವಿಕೃತ ಅಂಶಗಳೆಂದರೆ ಆಗಾಗ ಬದಲಾಗುವ ಸರ್ಕಾರಗಳು, ಆಡಳಿತ ಪಕ್ಷಗಳು. ಹೀಗಾಗಿ ಈ ಹಿಂದೆ ಕೈಗೊಂಡ ಯಾವುದೇ ಕಾರ್ಯಕ್ರಮವನ್ನು ಕೈ ಬಿಟ್ಟು, ಹೊಸದೊಂದು ಕಾರ್ಯಕ್ರಮ ರೂಪಿಸಿ ಜಾರಿಗೊಳಿಸುವುದೇ ಪ್ರತಿಷ್ಠೆಯ ಪರಂಪರೆ. ಈ ಹಿನ್ನೆಲೆಯಲ್ಲಿ ಹಲವಾರು ಬಗೆಯ ಬದಲಾವಣೆ, ಪರಿಣಾಮವನ್ನು ಸರ್ಕಾರ ಮತ್ತು ಸಿನಿಮಾ ನಡುವಿನ ಸಂಬಂಧಗಳಲ್ಲಿ ಗುರುತಿಸಬಹುದು.

ಆರಂಭ ಕಾಲದಲ್ಲಿ ಸರ್ಕಾರಕ್ಕಿದ್ದುದು ಅಪಾರ ಉತ್ಸಾಹ ಹಾಗೂ ಅಪರಿಪಕ್ವ ಕಲ್ಪನೆ. ತ್ವರಿತಗತಿಯಲ್ಲಿ ಜಾರಿಗೆ ತರಲಾದ, ಅನಂತರ ಸ್ವಲ್ಪ ಸ್ವಲ್ಪವೇ ಸುಧಾರಿತಗೊಳ್ಳುತ್ತ ಹೋದ ಸರ್ಕಾರಿ ಆದೇಶಗಳೇ ಇದಕ್ಕೆ ಸಾಕ್ಷಿ.

ಆರಂಭದಲ್ಲಿ ಮೂರು ಅತ್ಯುತ್ತಮ ಕನ್ನಡ ಚಿತ್ರಗಳಿಗೆ ಪ್ರಶಸ್ತಿ ಕೊಡಲು ತೀರ್ಮಾನಿಸಿದರೂ ಯಾವ ದಿನಾಂಕದಿಂದ ಯಾವ ದಿನಾಂಕದೊಳಗೆ ಸೆನ್ಸಾರಾದ ಚಿತ್ರಗಳು ಪ್ರಶಸ್ತಿಗೆ ಅರ್ಹ ಎಂಬುದರ ಬಗ್ಗೆ ಸ್ಪಷ್ಟ ನಿಲುವು ಸರ್ಕಾರ ತಾಳಲಿಲ್ಲ. 'ಆಗಾಗ ಸರ್ಕಾರ ಸ್ಥಿರಪಡಿಸುವ ದಿನಾಂಕಗಳನ್ನು ಆಧರಿಸಿ' ಎಂದು ಅಡ್ಡಗೋಡೆ ಮೇಲೆ ದೀಪವಿಟ್ಟಂತೆ ನಿಲುವು ತಾಳಿತು.

ವಿಶೇಷಜ್ಞರ ಸಮಿತಿಯೇ ಅರ್ಜಿ ಆಹ್ವಾನಿಸಬೇಕು ಎಂಬ ಸರ್ಕಾರದ ನಿಲುವು ಬದಲಾಗಿ, ಸಮಿತಿ ಕೇವಲ ಪ್ರಶಸ್ತಿಗಳಿಗೆ ಮಾತ್ರ ಶಿಫಾರಸ್ಸು ಮಾಡಬೇಕೆಂದಿತು. ಸಮಿತಿಯ ಹೆಸರು 'ಸಲಹಾ ಸಮಿತಿ' ಎಂದು ಬದಲಾಯಿತು. ಆರಂಭದಲ್ಲಿ ಸಲಹಾ ಸಮಿತಿಗೆ ಅಧ್ಯಕ್ಷರಾಗಿ ನಿವೃತ್ತ ನ್ಯಾಯಧೀಶರನ್ನು ನೇಮಿಸುವ ಪರಂಪರೆ ಕ್ರಮೇಣ ನಿಂತೇ ಹೋಯಿತು.

ಹೇಗಾದರೂ ಸಾಕು ಕನ್ನಡದಲ್ಲಿ ಉತ್ತಮ ಚಿತ್ರಗಳು ಬರಲಿ ಎಂಬ ಏಕೈಕ ಉದ್ದೇಶದಿಂದ 'ರಾಜ್ಯದ ಹೊರಗಡೆ ತಯಾರಾದ ಚಿತ್ರಗಳು' (ರಾಜ್ಯದ ಹೊರಗಡೆ ಸಂಸ್ಕರಣ ಹೊಂದಿದ್ದರು ಸಹ) ಪ್ರಶಸ್ತಿ ಪ್ರವೇಶಕ್ಕೆ ಅರ್ಹ ಎಂಬ ನಿಲುವು ತಾಳಿತು ಸರ್ಕಾರ. ಆದರೆ ಅದನ್ನೇ ಮುಂದುವರಿಸಿಕೊಂಡು ಬರಲಿಲ್ಲ.

ಡಬ್ ರೀಟೇಕ್-ಆಳವಡಿತ ಚಿತ್ರ, ಪ್ರಶಸ್ತಿಗೆ ಅರ್ಹವಾಗುವುದಿಲ್ಲ, ಆದರೆ ಅಂತಹ ಚಿತ್ರ ಕನ್ನಡ ಚಿತ್ರರಂಗಕ್ಕೆ ವಿಶೇಷ ಕೊಡುಗೆ ನೀಡುವುದಾದರೆ ಅವನ್ನು ಪರಿಗಣಿಸಬೇಕೆಂಬ ಪೀಠಿಕೆ ಹಾಗೇ ಉಳಿಯಿತೇ ಹೊರತು ಈ ಹಿನ್ನೆಲೆಯಲ್ಲಿ ಯಾವುದೇ ಒಂದು ಚಿತ್ರವಾದರೂ ಪ್ರಶಸ್ತಿ ಪಡೆಯಲಿಲ್ಲ. ರೀಮೇಕ್ ಅನ್ನು ರೀಟೇಕ್ ಅಂದದ್ದೂ ಟೀಕೆಗೆ ಕಾರಣವಾಯಿತು. (ಕನ್ನಡದ 'ಘಟಶ್ರಾದ್ಧ' ಹಿಂದಿಯಲ್ಲಿ 'ದೀಕ್ಷಾ' ಆಗಿ ರಾಷ್ಟ್ರ ಪ್ರಶಸ್ತಿ ಪಡೆದಂತೆ, ಇಲ್ಲಿ ಯಾವ ಉದಾಹರಣೆಯೂ ಇಲ್ಲ.) ಇಷ್ಟಾದರೂ ಪ್ರಶಸ್ತಿಯ ಅರ್ಜಿ ಫಾರಂನಲ್ಲಿ ಪ್ರವೇಶವಾಗುತ್ತಿರುವ ಚಿತ್ರ ಯಾವ ಚಿತ್ರದ ಡಬ್, ರೀಟೇಕ್ ಎಂಬುದರ ಉಲ್ಲೇಖ ಮಾಡಬೇಕಾಗಿತ್ತು. ಶ್ರೇಷ್ಠ ಸಾಹಿತ್ಯದ ಕೃತಿ, ಪೌರಾಣಿಕ, ಐತಿಹಾಸಿಕ ಚಿತ್ರಗಳು ಒಂದೇ ಬಗೆಯಾಗಿದ್ದರೂ ಅವು ಅಳವಡಿತ ಎಂದು ಪರಿಗಣಿಸದೆ ಚಿತ್ರರಂಗ ಯಶಸ್ಸನ್ನು ಅನುಕರಿಸಿ ಚರ್ವಿತಚರ್ವಣ ಚಿತ್ರ ಮಾಡಲು ಪ್ರಶಸ್ತಿಯ ಪದ್ಧತಿ ಹಸಿರು ಬಾವುಟ ತೋರಿಸಿತು.

ಚಿತ್ರದ ಬಿಡುಗಡೆಯ ದಿನಾಂಕ, ಆರಂಭದ ಪ್ರಶಸ್ತಿ ಪ್ರವೇಶ ಪತ್ರದಲ್ಲಿ ಉಲ್ಲೇಖಿಸಬೇಕಿತ್ತು. ಕ್ರಮೇಣ ಅದರ ಅಗತ್ಯವಿಲ್ಲವೆಂದು ತೆಗೆದು ಹಾಕಲಾಯಿತು. ಕೆಲವು ಸಂದರ್ಭಗಳಲ್ಲಿ 'ಉತ್ತಮ ಸಾಮಾಜಿಕ ಪರಿಣಾಮ ಬೀರುವ' ಪ್ರಶಸ್ತಿ ಚಿತ್ರ, ತೆರೆಯ ಮೇಲೆ ಮೆರೆಯುವ ಭಾಗ್ಯ ಕಾಣದೇ, ಕೇವಲ ಸಮಿತಿ ಸದಸ್ಯರ ಮನಸ್ಸಿನ ಮೇಲೆ ಪರಿಣಾಮ ಬೀರುವ ಚಿತ್ರವಾಗಿಯೇ ಉಳಿದುಬಿಡುವ ಸಂಭವಗಳು ಅನೇಕ.

ಆರಂಭದ ವರ್ಷದಲ್ಲಿ ಪ್ರಶಸ್ತಿ ಪಡೆದ ಚಿತ್ರದ ಪ್ರತಿ (ಪ್ರಿಂಟನ್ನು) ಯಾವುದೇ (Royalty)ರಾಯಧನ ನೀಡದೆ ಉಳಿಸಿಕೊಳ್ಳುವ ಹಕ್ಕು, ಮೂರನೇ ಬಹುಮಾನ ಹತ್ತು ಸಾವಿರ ರೂಪಾಯಿ ಸರ್ಕಾರದಿಂದ ಪಡೆದು, ಹದಿನೈದು ಸಾವಿರ ರೂಪಾಯಿ ಬೆಲೆಯ ಚಿತ್ರದ ಪ್ರತಿಯನ್ನು ಸರ್ಕಾರಕ್ಕೆ ನಿರ್ಮಾಪಕನೇ ಬಹುಮಾನವಾಗಿ ಕೊಡಬೇಕಾದ ನಿಯಮ ನೋಡಿ ಬೆದರಿದ ನಿರ್ಮಾಪಕ, ಪ್ರಶಸ್ತಿಗೆ ದೂರದಿಂದಲೇ ಕೈ ಮುಗಿದ. ನಂತರ ಈ ನಿಯಮ ತಿಳಿಗೊಂಡು, ಪ್ರಿಂಟನ್ನು ಕೇಳಿದಾಗಲೆಲ್ಲಾ - ಸಾಲವಾಗಿ - ನಿರ್ಮಾಪಕ ಪ್ರತಿ ನೀಡಬೇಕೆಂದು ಬದಲಾಯಿತು.

ಮೊದಲಿನಿಂದಲೂ ಒಂದು ಉತ್ತಮ ಚಿತ್ರವನ್ನು ಬೆಂಬಲಿಸಲು ಯಾರಿಗೆ ಪ್ರೋತ್ಸಾಹ ನೀಡಬೇಕೆಂಬುದರ ಸ್ಪಷ್ಟ ಅರಿವು ಯಾರಿಗೂ ಇದ್ದಿರಲಿಕ್ಕಿಲ್ಲ. ಹೀಗಾಗಿ ಆರಂಭದಿಂದಲೂ ಉತ್ತಮ ಚಿತ್ರಕ್ಕೆ ಅದರ ನಿರ್ಮಾಪಕನಿಗೆ ನಗದು ಫಲಕ ನೀಡುವ ಬಗ್ಗೆ ಚಿಂತಿಸಿದರೇ ಹೊರತು ನಿರ್ದೇಶಕ ಸರ್ಕಾರದ ಗಮನಕ್ಕೆ ಬರಲೇ ಇಲ್ಲ. ಬಂದರೂ ಸಹ ಐದುನೂರು ರೂಪಾಯಿ ನಗದು ಹಾಗೂ ಕಂಚಿನ ಪದಕ ಪಡೆಯುವ ಸ್ಥಿತಿಯಲ್ಲಿದ್ದ. ನಿರ್ದೇಶಕನ ಕೊಡುಗೆ, ಸ್ಥಾನಮಾನದ ಬಗ್ಗೆ ಸಹ ಇತ್ತೀಚೆಗೆ ನೀಡಲು ನಿರ್ಧರಿಸಿದ ಅತ್ಯುತ್ತಮ ಮಕ್ಕಳ ಚಿತ್ರ, ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರ ಪ್ರಶಸ್ತಿಗಳ ಸಂದರ್ಭದಲ್ಲಿ ನಿರ್ದೇಶಕನ ಬಗ್ಗೆ ವಿಶೇಷವಾಗಿ ಉಲ್ಲೇಖಿಸಿ ಗಮನ ಸೆಳೆದು ಪ್ರಶಸ್ತಿ ಪಡೆಯಬೇಕಾದ ಸಂದರ್ಭ, ಒಂದು ವಿರೋಧಾಭಾಸ. ಇದ್ದಕ್ಕಿದ್ದಂತೆ ತೀರ್ಮಾನಿಸಿ ವರ್ಷದ ಅತ್ಯುತ್ತಮ ಕನ್ನಡ ನಿರ್ದೇಶಕ ಪ್ರಶಸ್ತಿ ನೀಡಲು ನಿರ್ಧರಿಸಿತು. ನಂತರ ಅದು ಕರ್ನಾಟಕದಲ್ಲಿನ ಎಲ್ಲ ಭಾಷಾ ಚಿತ್ರಗಳ ನಿರ್ದೇಶಕರಿಗೂ ಅನ್ವಯಿಸಿ, ಮರು ವರ್ಷದಿಂದ ಅದನ್ನು ನಿಲ್ಲಿಸಿದ್ದೂ ಆಯಿತು. ನಾಲ್ಕನೇ ಅತ್ಯುತ್ತಮ ಚಿತ್ರಕ್ಕೂ ಪ್ರಶಸ್ತಿ ನೀಡಲು ನಿರ್ಧರಿಸಿ, ಅನಂತರ ಸ್ಥಗಿತಗೊಳಿಸಿದ ಕೌತುಕವೂ ಇದೆ.

ತಾರೆಯರು ಮತ್ತು ತಂತ್ರಜ್ಞರ ನಡುವೆ ತಾರತಮ್ಯ ನೀತಿಯನ್ನು ಆರಂಭದಿಂದಲೂ ಸರ್ಕಾರ ಪ್ರಶಸ್ತಿ ನೀಡಿಕೆಯಲ್ಲಿ ಅನುಸರಿಸಿತು. ಸ್ವಾಭಿಮಾನಿಗಳು, ಬುದ್ಧಿಜೀವಿಗಳು ಇದರವಿರುದ್ಧ ಪ್ರತಿಭಟಿಸಿದಾಗ ನಗದು ಹಾಗೂ ಪದಕಗಳನ್ನು ಸಮಾನಸ್ತರಕ್ಕೆ ತರಲಾಯಿತು.

ತಂತ್ರಜ್ಞರಲ್ಲಿ ಅತ್ಯುತ್ತಮ ಧ್ವನಿ ತಂತ್ರಜ್ಞನಿಗೆ (ಸೌಂಡ್ ಇಂಜಿನಿಯರ್) ನೀಡುವ ಪ್ರಶಸ್ತಿ ಹತ್ತು ವರ್ಷದ ನಂತರ ಅತ್ಯುತ್ತಮ ಧ್ವನಿಗ್ರಾಹಕ (ಸೌಂಡ್ ರಿಕಾರ್ಡಿಸ್ಟ್) ಪ್ರಶಸ್ತಿಯಾಗಿ ಪರಿವರ್ತಿತವಾಯಿತು. ಇದೇ ರೀತಿ ಬಾಲ ಕಲಾವಿದರಿಗೆ ನೀಡುವ ಪ್ರಶಸ್ತಿ ಒಂದು ಸಾವಿರ ರೂಪಾಯಿ ಎಂದು ನಿರ್ಧರಿಸಿ, ೧೯೬೭-೬೮ರಲ್ಲಿ ವಿಶೇಷ

ಸಂದರ್ಭವೆಂದು ಎರಡು ಸಾವಿರ ರೂಪಾಯಿ ನೀಡಲು ನಿರ್ಧರಿಸಿತು. ಇದರ ಕಾರಣವೇನೆಂಬುದರ ಸ್ಪಷ್ಟ ಉಲ್ಲೇಖವಿಲ್ಲ. ಅದು ಅಂತರರಾಷ್ಟ್ರೀಯ ಮಕ್ಕಳ ವರ್ಷವೂ ಆಗಿರಲಿಲ್ಲ.

ಅತ್ಯಂತ ಅನುಮಾನಾಸ್ಪದವಾದ ನಿಯಮವೊಂದು ೧೯೭೯ರಲ್ಲಿ ಜಾರಿಗೆ ಬಂದಿತು. ಯಾವುದೇ ವ್ಯಕ್ತಿಗೆ ಮೂರು ಬಾರಿ ಪ್ರಶಸ್ತಿ ಬಂದಿದ್ದರೆ ಮುಂದೆ ಮೂರು ವರ್ಷಕಾಲ ಆ ಪ್ರಶಸ್ತಿಗೆ ಅರ್ಹರಲ್ಲ ಎಂಬ ತೀರ್ಮಾನ ಕ್ರಮೇಣ ಮುಂದಿನ ಮೂರು ಆರ್ಥಿಕ ವರ್ಷಕ್ಕೆ ನೀಡಬೇಕಾಗಿಲ್ಲ ಎಂದು ಪರಿವರ್ತಿತವಾಗಿ, ಕೊನೆಗೆ ೧೯೮೫ರಲ್ಲಿ **ಸತತ ಮೂರು ವರ್ಷ ಪ್ರಶಸ್ತಿ ಪಡೆದವರು**, ಒಂದು ವರ್ಷದ ಲೋಪದ ನಂತರ, ಮುಂದಿನ ವರ್ಷ ಅದೇ ವಿಭಾಗದ ಪ್ರಶಸ್ತಿಗೆ ಅರ್ಹರೆಂದು ಹೇಳಲಾಯಿತು. ಈ ಪ್ರಶಸ್ತಿ ನಿಯಮದ ಹಿಂದಿನ ಉದ್ದೇಶ ಆರೋಗ್ಯಕರ ಸ್ಪರ್ಧೆಯೇ ಆಗಿದ್ದರೆ, ಈ ಬಗ್ಗೆ ಪ್ರಶಸ್ತಿ ವಿಜೇತರ ನಿಲುವನ್ನು ತಿಳಿಯುವ ಗೋಜಿಗೂ ಹೋಗಲಿಲ್ಲ. ಒಂದು ವೇಳೆ ಕಲಾವಿದ, ತಂತ್ರಜ್ಞ ಮೂರನೇ ಬಾರಿ ಪ್ರಶಸ್ತಿ ಪಡೆದು, ಮುಂದಿನ ಮೂರು ವರ್ಷ ಅನರ್ಹನಾಗಿರಲು ಬಯಸಿದರೆ ಸಿದ್ಧನಿದ್ದರೆ ಆ ಘಟ್ಟದಲ್ಲಿ ತೀರ್ಮಾನ ಅವರಿಗೇ ಬಿಡದ ಸರ್ಕಾರವೇ ಕೈಗೊಂಡಿತು. ನಾಲ್ಕೈದು ವರ್ಷಕ್ಕೊಂದು ಚಿತ್ರ ನಿರ್ಮಾಣ ಮಾಡುವಂಥವರ ಚಿತ್ರಗಳ ವರ್ಚಸ್ಸಿಗೆ ಇದೊಂದು ಇತಿಮಿತಿಯಾಗಿ ಪರಿಣಮಿಸಿತು.

ಪ್ರಶಸ್ತಿ ನೀಡುವ ಪರಂಪರೆಯಲ್ಲಿ ಆದ ಒಂದೇ ಒಂದು ಉತ್ತಮ ಆರೋಗ್ಯಕರ ಬೆಳವಣಿಗೆಯೆಂದರೆ ೧೯೭೯ರ ಪ್ರಶಸ್ತಿ ಸಲಹಾ ಸಮಿತಿಯು ಸರ್ಕಾರಕ್ಕೆ, ಚಿತ್ರರಂಗದ ಇತರ ವಿಭಾಗಗಳಲ್ಲಿ ತೊಡಗಿದ ತಂತ್ರಜ್ಞರಿಗೂ ವಿವಿಧ ಕಲಾವಿದರಿಗೂ ವಿಶೇಷವಾಗಿ ಗುರುತಿಸಿ ಪ್ರಶಸ್ತಿ ನೀಡಲು ಮಾಡಿದ ಸಲಹೆಯನ್ನು ಅನುಸರಿಸಿಕೊಂಡು ಬಂದ ಬಗೆ. ಚಿತ್ರರಂಗದ ಹಲವಾರು ಮುಖಗಳ ಮೇಲೆ ಮೊದಲಬಾರಿ ಸಂತೃಪ್ತಿ ಸಮಾಧಾನ ಮೂಡಿಸುವಲ್ಲಿ ಸಫಲವಾಯಿತು.

ಸರ್ಕಾರ ಆರಂಭದಿಂದಲೂ ಒಂದೇ ಮಟ್ಟದಲ್ಲಿ ಅನುಸರಿಸಿಕೊಂಡು ಬಂದ ಕೊಂಚ ಗೋಜಲು ಅನ್ನಿಸಿದ ಒಂದು ನೀತಿ, ಕನ್ನಡದ ಉಪ ಭಾಷೆಗಳಾದ ತುಳು, ಕೊಂಕಣಿ, ಕೊಡವ, ನಂತರದ ಲಂಬಾಣಿ ಚಿತ್ರಗಳಿಗೆ ನೀಡುವ ನಗದು ಬಹುಮಾನ, ಪದಕದಲ್ಲಿ ತಾರತಮ್ಯ. ಪ್ರಶಸ್ತಿಗೆ ಅರ್ಹತೆ ಪಡೆಯಲು ಈ ಉಪಭಾಷೆಯ ಕನಿಷ್ಠ ಹತ್ತು ಚಿತ್ರಗಳಾದರೂ ಪ್ರವೇಶವಾಗಿರಬೇಕೆಂಬ ನಿಯಮ. ಮೂರು ಭಾಷೆಯೂ ಸೇರಿ ಒಟ್ಟು ಚಿತ್ರಗಳೇ ಅಥವಾ ಪ್ರತಿ ಭಾಷೆಯಿಂದಲೂ ಹತ್ತು ಚಿತ್ರವೋ ಎಂಬುದರ ಸ್ಪಷ್ಟ ಉಲ್ಲೇಖವಿಲ್ಲ. ಆದರೆ ಇಂತಹದೊಂದು ಕನಿಷ್ಠ ಸಂಖ್ಯೆಯ ಇತಿಮಿತಿ ಕನ್ನಡ ಭಾಷೆಯ ಪ್ರವೇಶ ಸಂಖ್ಯೆ ಕುರಿತು ಎಂದೂ ಇರಲಿಲ್ಲ. ಕರ್ನಾಟಕದ ಎಲ್ಲ ಉಪಭಾಷೆಯ ಚಿತ್ರಗಳಿಗೂ ಬೆಂಬಲ ಎಂಬ ನೀತಿ ಘೋಷಿಸಿದ್ದರೆ ಸಾಕಿತ್ತು. ಲಂಬಾಣಿ ಭಾಷೆಯ ಚಿತ್ರ ತಯಾರಾಗಿ ಆ ಭಾಷೆಯ ಶಾಸಕಿ/ಸಚಿವೆ ಶಿಫಾರಸ್ಸು ಮಾಡಿದ ಬಳಿಕ ಸರ್ಕಾರ ಪ್ರೋತ್ಸಾಹ ನೀಡುವ ವಿಪರ್ಯಾಸದ ಸಂಗತಿ ಎದುರಿಸಬೇಕಾಯಿತು. ಇನ್ನೂ ನಿಯಮವನ್ನು ತಿದ್ದಿಕೊಂಡಿಲ್ಲವಾದ್ದರಿಂದ ಭವಿಷ್ಯದಲ್ಲಿ ಯಾರಾದರೂ ಹವ್ಯಕ ಭಾಷೆಯಲ್ಲಿ ಚಿತ್ರ ತಯಾರಿಸಿದರೆ, ಸಂಬಂಧಿಸಿದ ಮಂತ್ರಿಯ ಶಿಫಾರಸ್ಸಿಗೆ ಕಾಯುವಂಥ ನಗೆಪಾಟಲೂ ಆಗಬಹುದು.

ಕುವೆಂಪುರವರ ಕೃತಿ 'ಬೆರಳ್ಗೆ ಕೊರಳ್' ಆಧರಿಸಿದ ಚಿತ್ರದಲ್ಲಿ ಹಳಗನ್ನಡ ಭಾಷೆ ಇದೆ. ಅದು ಇತ್ತ ಕನ್ನಡವೂ ಅಲ್ಲ, ಅತ್ತ ಪ್ರಾಂತೀಯ ಭಾಷೆಗಳಾದ ತುಳು, ಕೊಂಕಣಿ, ಕೊಡವದಂತೆ ಪ್ರಶಸ್ತಿ ನಿಯಮಾವಳಿಯಲ್ಲಿ ಉಲ್ಲೇಖಿತ ಸ್ಥಾನಮಾನ ಪಡೆದಿಲ್ಲ ಎಂಬ ವಿಚಿತ್ರ ನಿಲುವು ತಾಳಿ, ಆ ಚಿತ್ರಕ್ಕೆ ತೆರಿಗೆ ವಿನಾಯತಿ ನೀಡಲು ತಕರಾರು ಮಾಡಿ, ನಿರ್ಮಾಪಕರನ್ನು ಅಲೆಸಿದ್ದು ರಾಜ್ಯ ಸರ್ಕಾರದ ಪ್ರಶಸ್ತಿ ನೀಡಿಕೆ ಪರಂಪರೆಯಲ್ಲಿ ನಡೆದ ಅಪಹಾಸ್ಯಕರ ಸಂಗತಿಗಳಲ್ಲೊಂದು.

ಸರ್ಕಾರಿ ಆದೇಶದಲ್ಲಿನ ಪದಗಳೊಡನೆ ಸರಸವಾಡಿದ ಅಧಿಕಾರಿಗಳ ಪ್ರತಿಭೆಗೆ ಇನ್ನೊಂದು ಉದಾಹರಣೆ ಕೊಡಬೇಕೆಂದರೆ, ರಾಜ್ಯ ಪ್ರಶಸ್ತಿಗಳಲ್ಲಿ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ ಚಿತ್ರ ಶೇಕಡಾ ನೂರು ತೆರಿಗೆ ವಿನಾಯಿತಿಗೆ ಅರ್ಹ ಎಂಬ ನಿಯಮದಲ್ಲಿ 'ಅತ್ಯುತ್ತಮ ಚಿತ್ರ' ಎಂದಿದೆಯೇ ಹೊರತು, 'ಅತ್ಯುತ್ತಮ ಚಿತ್ರಗಳು' ಎಂದಿಲ್ಲ. ಆದ್ದರಿಂದ ಮೊದಲನೇ ಬಹುಮಾನ ಪಡೆದ ಚಿತ್ರ ಮಾತ್ರ ತೆರಿಗೆ ವಿನಾಯಿತಿಗೆ ಅರ್ಹವೆಂಬ ಮೊಂಡುವಾದ ಹೂಡಿ, ಎರಡನೇ, ಮೂರನೇ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ ಚಿತ್ರಗಳಿಗೆ ತೆರಿಗೆ ವಿನಾಯಿತಿ ನಿರಾಕರಿಸಿ, ನಿರ್ಮಾಪಕನ ನಿರುತ್ಸಾಹಕ್ಕೆ ಕಾರಣವಾಗಿದ್ದವು. ನಂತರ ಈ ನಿಯಮ ತಿದ್ದುಪಡಿ ಆಗಿ, ಅತ್ಯುತ್ತಮ ಚಿತ್ರವೆಂದು ಪ್ರಶಸ್ತಿ ಪಡೆದ ಎಲ್ಲ ಚಿತ್ರಗಳು ತೆರಿಗೆ ವಿನಾಯಿತಿ ಪಡೆಯುವಂತಾದವು.

ಕೆಲವು ವರ್ಷ ಕರ್ನಾಟಕದ ಎಲ್ಲ ಭಾಷೆಯ ಚಿತ್ರಗಳಿಗೂ ಪ್ರಶಸ್ತಿ ನೀಡಿಕೆಯಲ್ಲಿ ಒಂದೇ ಮಾನದಂಡ ಅನುಸರಿಸಿದ್ದುಂಟು. ಅನಂತರದ ವರ್ಷಗಳಲ್ಲಿ ಅದು ನಾಪತ್ತೆಯಾದ ದಾಖಲೆಗಳೂ ಇವೆ. ಇದರ ಹಿಂದೆ ಆಯಾ ವರ್ಷಗಳಲ್ಲಿ ಅಧಿಕಾರದಲ್ಲಿದ್ದ ಮುಖ್ಯಮಂತ್ರಿ, ವಾರ್ತಾ ಸಚಿವರು ಪ್ರಾಂತ್ಯ, ಭಾಷೆಯ ಹಿನ್ನೆಲೆಯಲ್ಲಿ ಅವರವರ ಹಿತಾಸಕ್ತಿ ಕಾಯ್ದುಕೊಂಡಿರಬಹುದೆಂಬ ಗುಮಾನಿ ಬರುವ ಹಾಗೆ ಜಾರಿಯಾದ ನಿಯಮಗಳು, ನಂತರ ನಾಪತ್ತೆಯಾದ ಪ್ರಸಂಗಗಳು ಇವೆ. ಈ ಮಾತು ವರ್ಷದ ಅತ್ಯುತ್ತಮ ನಿರ್ದೇಶಕರ ಪ್ರಶಸ್ತಿ ನೀಡಿಕೆಯ ನೀತಿಗೂ ಅನ್ವಯಿಸುತ್ತದೆ. ಆದರೆ ಚಿತ್ರೀಕರಣ ಶುಲ್ಕ ಮಾತ್ರ, ಕನ್ನಡ ಹಾಗೂ ಉಪಭಾಷಾ ಚಿತ್ರಗಳಿಗೆ ಒಂದೇ ದರವೆಂಬ ಸರ್ಕಾರದ ನೀತಿಗೆ ಯಾವ ಮಾನದಂಡ ಎಂಬ ಪ್ರಶ್ನೆ ಉಳಿದುಬಿಡುತ್ತದೆ.

ಚಲನಚಿತ್ರವೆಂದರೆ ಮನರಂಜನಾ ಮಾಧ್ಯಮ ಎಂಬ ನೀತಿಗೆ ಬಲವಾಗಿ ಅಂಟಿಕೊಂಡ ಸರ್ಕಾರ, ಆರಂಭದಿಂದಲೂ ಪ್ರಶಸ್ತಿಗಳ ವ್ಯಾಪ್ತಿಗೆ ಬರದಂತೆ ಸಾಕ್ಷ್ಯ ಚಿತ್ರ, ಶೈಕ್ಷಣಿಕ ಚಿತ್ರ ಹಾಗೂ ಮಕ್ಕಳ ಚಿತ್ರಗಳನ್ನು ದೂರವಿಟ್ಟಿತು. ಪ್ರಶಸ್ತಿ ಸ್ಥಾಪಿಸಿದ ೨೫ ವರ್ಷದ ಬಳಿಕ ಸಾಕ್ಷ್ಯಚಿತ್ರ, ಮಕ್ಕಳ ಚಿತ್ರಗಳಿಗೆ ಬಾಗಿಲು ತೆರೆದ ಸರ್ಕಾರ ಶೈಕ್ಷಣಿಕ ಚಿತ್ರಗಳಿಗೆ ಇನ್ನು ಎಷ್ಟು ವರ್ಷ ಕಾಯಿಸುವುದೋ ! ಈ ಚಿತ್ರಗಳಿಗೆ ಮಾತ್ರ ಸೆನ್ಸಾರಿನ ದಿನಾಂಕ, ಕನಿಷ್ಟ ಐದು ಚಿತ್ರಗಳಾದರೂ ನಿರ್ಮಿತವಾಗಿರಬೇಕು. (ಒಟ್ಟೋ ಅಥವಾ ಪ್ರತಿಯೊಂದು ವಿಭಾಗದಲ್ಲೋ ಎಂಬುದರ ಬಗ್ಗೆ ಸ್ಪಷ್ಟನೆ ಇಲ್ಲ.) ೬೦ ನಿಮಿಷ ಅವಧಿ ಮೀರಿರಬಾರದು, ೧೬ ಎಂ.ಎಂ ಅಥವಾ ವೀಡಿಯೋ ಚಿತ್ರ ಆಗಿರಬಹುದು ಎಂದು ಉಲ್ಲೇಖಿಸುತ್ತದೆ. ಆದರೆ ಇದೇ ಸರ್ಕಾರ ಕಥಾಚಿತ್ರಗಳ ನಿರ್ಮಾಣದಲ್ಲಿ ೧೬ ಎಂ.ಎಂ ಕುರಿತು ತನ್ನ ನಿಲುವು ಏನು ಎಂಬುದನ್ನು ಈವರೆಗೆ ಎಲ್ಲೂ ಸ್ಪಷ್ಟಪಡಿಸಿಲ್ಲ. ಆದರೂ ಹಲವಾರು ಚಿತ್ರಗಳು ಖಾಸಗೀ ನಿರ್ಮಾಪಕರ ಪ್ರಯತ್ನದಿಂದ, (ಎನ್.ಎಫ್.ಡಿ.ಸಿ) ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮದ ನೆರವಿನಿಂದ ತಯಾರಾಗಿ, ಪ್ರಶಸ್ತಿ ಪಡೆದಿವೆ.

ಆರಂಭದಿಂದಲೂ ಪ್ರಶಸ್ತಿ ಸಮಿತಿಗೆ ಸದಸ್ಯರನ್ನು ನೇಮಿಸುವಲ್ಲಿ ಅನುಸರಿಸಿದ ನೀತಿ. ಕೈಗೊಂಡ ರೀತಿ ಚಿತ್ರರಂಗದವರಿಗೂ ಅನುಮಾನಕ್ಕೆ ಆಸ್ಪದ ನೀಡಿದೆ. ಸರ್ಕಾರ ಟೀಕೆಗೆ ಗುರಿಯಾಗಿದೆ. ಹೆಚ್ಚಿನ ಸಂದರ್ಭಗಳಲ್ಲಿ ಅಧಿಕಾರದಲ್ಲಿರುವ ಸರ್ಕಾರವು ಪಕ್ಷದ ಬೆಂಬಲಿಗರು, ಹಿತೈಷಿಗಳನ್ನು ಖುಷಿಪಡಿಸಲು ಅವರ ಅರ್ಹತೆ ಗಮನಿಸದೇ ಸಿನಿಮಾದಂತಹ ಕ್ಲಿಷ್ಟ ಕಲೆಯ ಬಗ್ಗೆ ತೀರ್ಪು ನೀಡಲು ಸಮಿತಿಯಲ್ಲಿ ಸೇರಿಸುತ್ತದೆ. ಅದರ ಬಗ್ಗೆ ಪತ್ರಿಕೆಯಲ್ಲಿ ಹಗರಣ, ಚಿತ್ರರಂಗದವರ ಪ್ರತಿಭಟನೆ ಪದೇ ಪದೇ ಆಗುತ್ತಲೇ ಇರುತ್ತದೆ. ಸದಸ್ಯರ ಪೂರ್ವಾನುಮತಿ ಪಡೆಯದೇ ನೇಮಿಸುವುದರಿಂದ ಕಾರ್ಯದ ಒತ್ತಡದಿಂದ ಕೆಲವರು ದೂರ ಉಳಿದುಬಿಡುತ್ತಾರೆ. ಅಥವಾ ತಮಗಿಂತ ಅನರ್ಹರು ಸಮಿತಿಯ ಅಧ್ಯಕ್ಷರಾದಾಗ ಸದಸ್ಯರಾಗಿರಲು ಅವಮಾನವೆಂದು ಭಾವಿಸಿ ಈ ಹೊಣೆಯಿಂದ ತಪ್ಪಿಸಿಕೊಂಡವರೂ ಉಂಟು. ಚಿತ್ರರಂಗದವರೇ ಸದಸ್ಯರಾಗಿ ನೇಮಕವಾದಾಗಲೂ ಚಿತ್ರರಂಗದವರೇ ಪ್ರತಿಭಟಿಸಿದ ಉದಾಹರಣೆಗಳೂ ಇವೆ. ಆದರೆ ಅದಕ್ಕೆ ವ್ಯಾಪಾರಿ ಚಿತ್ರ, ಕಲಾತ್ಮಕ ಚಿತ್ರ ಪಂಥದ ಅನುಯಾಯಿಗಳೆಂಬ ತಾತ್ವಿಕ ತಳಹದಿ ನೀಡಿ ಅನುಭವಿಗಳು ಜೀರ್ಣಿಸಿಕೊಳ್ಳುತ್ತಾರೆ.

ಸದಸ್ಯರು ತಮ್ಮ ನೇಮಕಾತಿ ಒಪ್ಪದಿದ್ದಲ್ಲಿ, ಬರದೇ ಇದ್ದಲ್ಲಿ ಸಮಿತಿಗೆ ಹೊಸ ಸದಸ್ಯರನ್ನು ನೇಮಿಸಿಕೊಳ್ಳುವ ಅಧಿಕಾರವೂ ಇರುತ್ತದೆ. ಇದಂತೂ ತೂಕಡಿಸುವವನಿಗೆ ಹಾಸಿಗೆ ಹಾಕಿಕೊಡುವ ವ್ಯವಸ್ಥೆ. ಅಧ್ಯಕ್ಷರ ತಾಳಕ್ಕೆ ಕುಣಿಯುವ ಸದಸ್ಯರೇ ಇದರಲ್ಲಿ ತುಂಬಿಕೊಳ್ಳುವ ಸಾಧ್ಯತೆಯೂ ಇದೆ. ಹಿಂದೆ ಹೀಗಾಗಿದೆ. ಕೆಲವರು ಕೆಲವು ಚಿತ್ರ ನೋಡಿದ ಬಳಿಕ ತಾವು ತೊಡಗಿಕೊಂಡಿದ್ದ ಯಾವುದೋ ಚಿತ್ರ ಈಗ ಸೆನ್ಸಾರಾಗಿ ಪ್ರಶಸ್ತಿಗೆ ಬಂದುದರ ಅರಿವಾಗಿ ಸಮಿತಿಯಿಂದ ಹೊರ ಬರಬೇಕಾಗುತ್ತದೆ. ಇನ್ನು ಕೆಲವರು ಆ ಚಿತ್ರ ಪ್ರದರ್ಶನವಾದಾಗ ಸಮಿತಿಯಲ್ಲಿ ನಾನಿರಲಿಲ್ಲ ಅಥವಾ ನಾನು ಸೇವೆಗೈದ ವಿಭಾಗದ ಪ್ರಶಸ್ತಿಗೆ ಆ ಚಿತ್ರವನ್ನು ಪರಿಗಣಿಸಲೇ ಇಲ್ಲ ಎಂಬ ಸಮಾಧಾನ ನೀಡಿದ ಸಂದರ್ಭಗಳೂ ಇವೆ.

ಸಮಿತಿಯ ಅಧ್ಯಕ್ಷ, ಸದಸ್ಯರಾರಿಗೂ ಸ್ಪರ್ಧಿಸಿದ ಚಿತ್ರಗಳೊಡನೆ ಪ್ರತ್ಯಕ್ಷ / ಅಪ್ರತ್ಯಕ್ಷ ಸಂಬಂಧವಿರಬಾರದು ಎಂಬ ನಿಯಮ ಅದರ ಸರ್ಕಾರಿ ಸದಸ್ಯ-ಕಾರ್ಯದರ್ಶಿಗೂ ಅನ್ವಯವೇ ಎಂಬ ಸಂಶಯದ ಲಾಭ ಪಡೆದು ಹಿನ್ನೆಲೆ ಹಾಡು ಹಾಡಿದವರ ಶೀರ್ಷಿಕೆ ಚಿತ್ರದಲ್ಲಿ ಇದ್ದರೂ ಆ ಧ್ವನಿಮುದ್ರಣ ತೆಗೆಸಿ, ಇಲಾಖೆಯ ಅಧಿಕಾರಿಯೇ ಹಿನ್ನೆಲೆ ಗೀತೆ ಹಾಡಿ, ಚಿತ್ರಕ್ಕೆ ಹಲವಾರು ಪ್ರಶಸ್ತಿ ಬರಲು ಕಾರಣರಾದರೆಂಬ ಆಪಾದನೆಗೆ ಈಡಾಗಿ ಕೋರ್ಟಿನವರೆಗೆ ದೂರು ಹೋದ ಸಂದರ್ಭವಿದೆ. ಕೋರ್ಟಿಗೆ ತಗಾದೆ ಕೊಂಡೊಯ್ದವರು ವಾಪಸ್ ತೆಗೆದುಕೊಳ್ಳುವವರೆಗೆ ಸುಮಾರು ಮೂರು-ನಾಲ್ಕು

ವರ್ಷಗಳ ಕಾಲ ಪ್ರಶಸ್ತಿ ಸಮಾರಂಭವೇ ನಡೆಯಲಿಲ್ಲ. ಇದರಿಂದಾಗಿ ೧೯೮೪ರಲ್ಲಿ ವಾರ್ತಾ ಇಲಾಖೆಯ ನಿರ್ದೇಶಕರು ಪ್ರಶಸ್ತಿ ಸಮಿತಿಯ ಅಧ್ಯಕ್ಷರಾಗಿರಬೇಕೆಂಬ ನಿಯಮಕ್ಕೆ ತಿದ್ದುಪಡಿ ಮಾಡಲಾಯಿತು. ಹೀಗಾಗಿ ಇಲಾಖೆಗೆ ಕೇವಲ ಒಬ್ಬ ಸದಸ್ಯ ಕಾರ್ಯದರ್ಶಿಯ ಸ್ಥಾನ ಮಾತ್ರ ಸಮಿತಿಯಲ್ಲಿ ಉಳಿಯಿತು.

ನಿರಂತರ ಚಿತ್ರರಂಗದೊಡನೆ ಒಡನಾಟ ಇದ್ದರೂ ಸರ್ಕಾರ ಎಂದೂ ಅವರನ್ನು ತನ್ನ ವಿಶ್ವಾಸದ ತೆಕ್ಕೆಗೆ ತೆಗೆದುಕೊಂಡು ಪ್ರಶಸ್ತಿ ನೀತಿ ರೂಪಿಸಿದ ಉದಾಹರಣೆ ಇಲ್ಲ. ಉದಾಹರಣೆಗೆ ೧೯೮೬ರಲ್ಲಿ ಸ್ಥಾಪಿತವಾದ ಪುಟ್ಟಣ್ಣ ಪ್ರಶಸ್ತಿ ಆರಂಭದಲ್ಲಿ ಕೇವಲ ನಿರ್ದೇಶಕರಿಗೆ ಮೀಸಲಿದ್ದದ್ದು ೧೯೯೮ರಲ್ಲಿ ಅದು ಚಿತ್ರರಂಗದ ಎಲ್ಲಾ ವರ್ಗದವರು ಪಡೆಯಲು ಅರ್ಹವಾಗುತ್ತದೆ. ೧೯೯೨-೯೩ರ ಗುಬ್ಬಿ ವೀರಣ್ಣ ಪ್ರಶಸ್ತಿ ೧೯೯೫ರಲ್ಲಿ ಡಾ|ರಾಜಕುಮಾರ್ ಪ್ರಶಸ್ತಿಯಾಗಿ ಪರಿವರ್ತಿತವಾಗುತ್ತದೆ. ಅತ್ಯುತ್ತಮ ನಟನಿಗಾಗಿ ನೀಡುವ ಪ್ರಶಸ್ತಿಯು ೧೯೯೬ರಲ್ಲಿ ಸುಬ್ಬಯ್ಯನಾಯ್ಡು ಪ್ರಶಸ್ತಿಯಾಗಿ ಬದಲಾಗುತ್ತದೆ. ಜೀವಮಾನದ ವಿಶಿಷ್ಟ ಕೊಡುಗೆಗೆ ಪ್ರಶಸ್ತಿ ನೀಡಬೇಕೆಂದು ಸರ್ಕಾರಕ್ಕೆ ಅರಿವು ಮೂಡಲು ಹೊಸ ಶತಮಾನಕ್ಕೆ ಕಾಲಿಡುವವರೆಗೆ ಕಾಯಬೇಕಾಗುತ್ತದೆ.

ಈ ಬಗ್ಗೆ ಇನ್ನಷ್ಟು ವಿವರವಾಗಿ ಹೇಳಬಹುದಾದರೆ, ಪುಟ್ಟಣ್ಣ ಕಣಗಾಲರು ನಿಧನ ಹೊಂದಿದ ವರ್ಷ ಅವರ ನೆನಪಿನಲ್ಲಿ ಶ್ರೇಷ್ಠ ನಿರ್ದೇಶಕರಿಗೆಂದು ಯೋಜಿತವಾದದ್ದು ಪುಟ್ಟಣ್ಣ ಕಣಗಾಲ್ ಪ್ರಶಸ್ತಿ. ಆಯ್ಕೆ ಸಮಿತಿಯ ಒಂದು ಅವಧಿಯ ಸದಸ್ಯರು ಅಂಥ ಪ್ರಶಸ್ತಿಗೆ ಅರ್ಹ ನಿರ್ದೇಶಕರೇ ಕಡಿಮೆ. ಆದ್ದರಿಂದ ಸರ್ವತೋಮುಖ ಸಾಧನೆ ಮಾಡಿದವರಿಗೆ ಕೊಡಿ ಎಂದು ಶಿಫಾರಸು ಮಾಡಿದಾಗ ನಿಯಮ ಬದಲಿಸಿ ೧೯೯೮ರಲ್ಲಿ ಚಿತ್ರರಂಗದ ಎಲ್ಲ ವರ್ಗದವರಿಗೂ ಅನ್ವಯವಾಗುತ್ತದೆ ಎನ್ನಲಾಯಿತು. ನಿರ್ದೇಶಕರು ಇದನ್ನು ವಿರೋಧಿಸಿ, ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ನಿರ್ದೇಶಕರಿಗೇ ಮೀಸಲಾಗಿರಬೇಕು ಎಂದು ಒತ್ತಾಯಿಸಿದರು. ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ನಿರ್ದೇಶಕರಿಗೇ ಎಂದು ನಿಯಮ ಮಾಡಿ, ಉದ್ಯಮ-ಪತ್ರಕರ್ತರ ಒತ್ತಡಕ್ಕೆ ಮಣಿದು ಗುಬ್ಬಿ ವೀರಣ್ಣ ಪ್ರಶಸ್ತಿಯನ್ನು ಚಿತ್ರೋದ್ಯಮದಲ್ಲಿ ಸೇವೆ ಸಲ್ಲಿಸಿದ ಹಿರಿಯರಿಗೆ ಜೀವಮಾನದ ವಿಶಿಷ್ಟ ಕೊಡುಗೆಯಾಗಿ ಕೊಡಲು ತೀರ್ಮಾನಿಸಲಾಯಿತು.

ಅದೇ ವರ್ಷ ಗುಬ್ಬಿ ವೀರಣ್ಣ ಶತಮಾನೋತ್ಸವವೂ ನಡೆದ ಕಾರಣ ರಂಗಭೂಮಿಯಲ್ಲೂ ಹಿರಿಯರಿಗೆ ಅದೇ ಹೆಸರಿನಲ್ಲಿ ಪ್ರಶಸ್ತಿ ಕೊಡುವಂತೆ ಪ್ರಕಟಿಸಲಾಯಿತು. ನಾಟಕ ಅಕಾಡೆಮಿ, ರಂಗಾಸಕ್ತರು ಗುಬ್ಬಿ ವೀರಣ್ಣ ಪ್ರಶಸ್ತಿ ರಂಗಭೂಮಿಗೇ ಮೀಸಲು, ಸಿನಿಮಾಕ್ಕೆ ಕೂಡದು ಎಂಬ ವಿವಾದ ಪ್ರಾರಂಭಿಸಿದರು. ಚಿತ್ರರಂಗಕ್ಕೂ ವೀರಣ್ಣನವರ ಕೊಡುಗೆ ಅಪಾರವಾಗಿದೆ. ಇಲ್ಲೂ ಪ್ರಶಸ್ತಿ ಸಲ್ಲಬೇಕು ಎಂದು ಚಿತ್ರೋದ್ಯಮ ಸೊಲ್ಲೆತ್ತಲಿಲ್ಲ. ಸರ್ಕಾರ ತನ್ನ ನಿಲುವು ಪ್ರಶ್ನಾತೀತವಾಗುವಂತೆ ಡಾ|ರಾಜಕುಮಾರ್ ಹೆಸರಿನಲ್ಲಿ ಪ್ರಶಸ್ತಿಯನ್ನು ಜಾರಿಗೊಳಿಸಿ, ಗುಬ್ಬಿ ವೀರಣ್ಣ ಪ್ರಶಸ್ತಿಯನ್ನು ರಂಗಭೂಮಿಗೆ ಮೀಸಲಿಟ್ಟಿತು. ಈ ಹೊತ್ತಿಗೆ ರಾಜಕುಮಾರ್ ಅವರಿಗೆ ಚಲನಚಿತ್ರಕ್ಕಾಗಿ ಇದ್ದ ಗುಬ್ಬಿ ವೀರಣ್ಣ ಪ್ರಶಸ್ತಿ ಸಂದಾಯವಾಗಿತ್ತು. ಬಹಳ ಜಾಣತನದಿಂದ ಸಮಸ್ಯೆಗಳ ಗಂಟನ್ನು ಸರ್ಕಾರ ಬಿಡಿಸಿಕೊಂಡಿತು. ಇದೇ ಜಾಡಿನಲ್ಲಿ ಸುಬ್ಬಯ್ಯನಾಯ್ಡು ಶತಮಾನೋತ್ಸವ ಸಂದರ್ಭದಲ್ಲಿ ಶ್ರೇಷ್ಠ ನಟನಿಗೆ ಕೊಡುವ ಪ್ರಶಸ್ತಿ ಅವರ ಹೆಸರಿನಲ್ಲಿರಲಿ ಎಂಬ ಒತ್ತಾಯ ಬಂದಾಗ ಅಂತೇ ಜಾರಿಗೊಳಿಸಲಾಯಿತು. ಇನ್ನುಳಿದ ಪ್ರಶಸ್ತಿಗಳಿಗೂ ಹಾಗೆ ಶ್ರೇಷ್ಠ ನಟ-ನಟಿಯರ, ತಂತ್ರಜ್ಞರ ಹೆಸರೇಕೆ ಇಲ್ಲ ಎಂಬ ಪ್ರಶ್ನೆ ಸಹಜ. ಯಾರೂ ಕೇಳಲಿಲ್ಲ, ಒತ್ತಾಯಿಸಲಿಲ್ಲ, ಯಾವ ಸಲಹಾ ಸಮಿತಿಯೂ ಇಂಥ ಸಲಹೆ ಕೊಟ್ಟಿಲ್ಲ ಎಂದಷ್ಟೇ ಸಮಾಧಾನ ಹೇಳಬಹುದು.

ಸರ್ಕಾರ ಯಾವುದೇ ಕಾನೂನು ಜಾರಿಗೆ ತರುವಾಗ, ನಿಯಮಗಳಿಗೆ ಪದಗಳನ್ನು ಜೋಡಿಸುವಾಗ ಔಚಿತ್ಯಪೂರ್ಣವಾಗಿ ಯೋಚಿಸುವ, ಸಂಬಂಧಿಸಿದವರೊಟ್ಟಿಗೆ ಸಮಾಲೋಚಿಸಿ ತೀರ್ಮಾನ ಕೈಗೊಳ್ಳುವ ಶ್ರದ್ಧೆ ತೋರುವುದಿಲ್ಲವಾದ್ದರಿಂದ, ಆಳುವ ಪಕ್ಷ, ಮಂತ್ರಿಮಹೋದಯರು ಅವರಿಗೆ ಸರಿಕಂಡಂತೆ ತೀರ್ಮಾನಿಸುತ್ತಾರೆ. ನಿಯಮಗಳನ್ನು ಅಧಿಕಾರಿಗಳು, ಸಲಹಾ ಸಮಿತಿಯ ಅಧ್ಯಕ್ಷರು ಅವರಿಗೆ ತೋರಿದಂತೆ ವ್ಯಾಖ್ಯಾನಿಸಿಕೊಂಡು ಅನೇಕ ತೊಡಕುಗಳುಂಟಾಗುತ್ತವೆ, ಆಗಿವೆ. ಉದಾಹರಣೆಗೆ ಗೀತರಚನೆ, ಗಾಯಕರಿಗೆ ಪ್ರತ್ಯೇಕ ಪ್ರಶಸ್ತಿಗಳಿಲ್ಲವಾದರೂ ಅಧ್ಯಕ್ಷರು ನಿಯಮವನ್ನು ಬೇರೆಯಾಗಿ ವ್ಯಾಖ್ಯಾನಿಸಿಕೊಂಡು ಒಂದು ಅವಧಿಯಲ್ಲಿ ಆ ವಿಭಾಗಕ್ಕೆ ಪ್ರಶಸ್ತಿ ನೀಡಿದರು, ವಾರಿ ನೀಡಿದರು. ಮತ್ತೊಂದು ಅವಧಿಯಲ್ಲಿ ಅಧ್ಯಕ್ಷರು ಅದೇ ನಿಯಮವನ್ನು ಒಂದು ಇಡೀ ಚಿತ್ರವನ್ನೇ ವಿಶೇಷ ಪ್ರಶಸ್ತಿಯಡಿಗೆ ಅನ್ವಯಿಸಿಕೊಂಡರು. (ಗಾಯಕ ಪುತ್ತೂರು ನರಸಿಂಹನಾಯಕ್, ಗಾಯಕಿ ಬಿ.ಆರ್.ಛಾಯಾ, 'ಶೃಂಗಾರ ಮಾಸ' ಚಿತ್ರ, ಒಮ್ಮೆ ಸಾಹಸ ನಿರ್ದೇಶನಕ್ಕೆ. ಹೀಗೆ ದೊಡ್ಡ ಪಟ್ಟಿ ಮಾಡಬಹುದು.)

ಸರ್ಕಾರದ ದೂರದರ್ಶಿತನದ ಅಭಾವದಿಂದಾಗಿ ಕೆಲವೊಮ್ಮೆ ತಾನೇ ಅದು ಸಂಕಷ್ಟಕ್ಕೆ ಸಿಲುಕಿಕೊಳ್ಳುತ್ತದೆ. ಹೆಚ್ಚಿನ ಸಹಾಯಧನ, ಹೆಚ್ಚಳವಾದ ಸಹಾಯಧನ ನೀಡಲು ೧೦-೧೨-೯೮ರಂದು ಸರ್ಕಾರಿ ಆಜ್ಞೆ ಹೊರಡಿಸಿ, ಅದನ್ನು ೦೧-೦೪-೯೬ರಿಂದ (ಪೂರ್ವಾವಧಿಯಿಂದ) ಜಾರಿಗೆ ತಂದು, ೧೯೯೬ರಿಂದ ಜಾರಿಯಲ್ಲಿದ್ದ ಎಲ್ಲ ಚಿತ್ರಗಳಿಗೂ ಸಹಾಯಧನ ನೀಡುವ ನೀತಿ ನಂಬಿ ಚಿತ್ರ ತಯಾರಿಸಿದ ನಿರ್ಮಾಪಕ ನರಳಿ ನ್ಯಾಯಾಲಯದ ಮೊರೆ ಹೋಗುವಂತೆ ಮಾಡುತ್ತದೆ. ಯಾವುದೊ ಒಂದೆರಡು ಉತ್ತಮ ಚಿತ್ರಗಳಿಗೆ ನೆರವಿನ ಹಸ್ತ ನೀಡುವ ಉಪಕಾರ ಮಾಡಲು ಹೋಗಿ ಇಡೀ ಚಿತ್ರರಂಗವೇ ಸರ್ಕಾರವನ್ನು ಅನುಮಾನದ ಕಣ್ಣಿನಿಂದ ನೋಡುವಂತಾಗುತ್ತದೆ. ಹೆಚ್ಚಿನ ಸಹಾಯಧನ ಪಡೆಯಲು ಗುಣಾತ್ಮಕ ಸಮಿತಿ ಕೆಲವು ಚಿತ್ರಗಳನ್ನು ಆಯ್ಕೆ ಮಾಡದೇ ಹೋದಾಗ, ರಾಜ್ಯ ಪ್ರಶಸ್ತಿ ವಿಜೇತ ಚಿತ್ರಗಳು ಪ್ರಶಸ್ತಿಯ ಬಲದ ಮೇಲೆ ಹೆಚ್ಚಿನ ಸಹಾಯಧನಕ್ಕೆ ತಾವೇ ತಾವಾಗಿ ಅರ್ಹವಾಗುವಂತಹ ವಿಶೇಷ ಆದೇಶ ಹೊರಡಿಸಿ, ಹಿಂಬಾಗಿಲಿನಿಂದ ಸರ್ಕಾರಿ ಕೋಟೆಗೆ ನುಗ್ಗಲು ಅನುವು ಮಾಡಿ, ತಾನು ನೀಡಿದ ಪ್ರಶಸ್ತಿಯ ಮಾನವನ್ನು ತಾನೇ ಕಾಪಾಡಿಕೊಳ್ಳಬೇಕಾದಂತಹ ಇರಿಸು ಮುರಿಸು ಸನ್ನಿವೇಶ ಸೃಷ್ಟಿಸಿಕೊಳ್ಳುತ್ತದೆ.

ಚಿತ್ರರಂಗದವರನ್ನು ರಾಜಕೀಯದವರು, ರಾಜಕೀಯದವರನ್ನು ಚಿತ್ರರಂಗದವರು ಸವಾರಿ ಮಾಡಲು ಪ್ರಯತ್ನಿಸುವ ಆಟ ಅನೇಕ ವರ್ಷಗಳಿಂದ ನಡೆದು ಬಂದಿದೆ. ಹೀಗಾಗಿ ಸರ್ಕಾರ ಚಲನಚಿತ್ರ ಪ್ರಶಸ್ತಿಗಳನ್ನು ಚಿತ್ರರಂಗದವರನ್ನು ಒಲಿಸಲು, ಕೆಣಕಲು ಬಳಸಿದ ಸಂದರ್ಭಗಳು, ಸಾಧ್ಯತೆಗಳು ಇವೆ. ಇದರಿಂದಾಗಿಯೇ ಪ್ರಶಸ್ತಿಗೆ ಅರ್ಜಿ ಆಹ್ವಾನಿಸುವ ಕಾಲ, ಸಮಿತಿ ನೇಮಕಾತಿಯ ರೀತಿ, ಪ್ರಶಸ್ತಿಯ ಘೋಷಣೆ ಹಾಗೂ ನಂತರ ಅದನ್ನು ನೀಡಲು ಕೈಗೊಳ್ಳುವ ಸಮಯ ಈ ಎಲ್ಲದರಲ್ಲೂ ರಾಜಕೀಯ ಲೆಕ್ಕಾಚಾರ ಇರುತ್ತದೆ. ಇದಕ್ಕೆ ಪೂರಕವಾಗಿ ಚುನಾವಣೆ, ರಾಜ್ಯಪಾಲರ ಆಡಳಿತ, ಮಂತ್ರಿ ಮಂಡಳ ವಿಸ್ತರಣೆ, ಬರಗಾಲ, ಪ್ರವಾಹ, ಕೋರ್ಟಿನ ತಡೆಯಾಜ್ಞೆ ಈ ಅಂಶಗಳೂ ಸೇರಿಕೊಳ್ಳುತ್ತವೆ. ಹೀಗಾದಾಗ ಅತ್ಯುತ್ತಮ ಬಾಲನಟ ಪ್ರಶಸ್ತಿ ಪಡೆದ ಬಾಲಕ, ಪ್ರಶಸ್ತಿ ಪಡೆಯಲು ವೇದಿಕೆಗೆ ಬಂದಾಗ, ಮೀಸೆ ಮೂಡಿದ ತರುಣನಾಗಿರುತ್ತಾನೆ.

ಸರ್ಕಾರ ಪ್ರಶಸ್ತಿ ನೀಡುವ ರೀತಿ ನೋಡಿದಾಗ ಅದು ಚಿತ್ರರಂಗಕ್ಕಿಂತ ಅಧಿಕಾರದಲ್ಲಿರುವವರನ್ನು ಸಂಪ್ರೀತಗೊಳಿಸಲು ಪ್ರಯತ್ನಿಸುತ್ತದೆಯೇ ಎಂಬ ಸಂಶಯ ಬರುವಂಥ ಪ್ರಸಂಗಗಳೂ ಸಂಭವಿಸಿವೆ. ೧೯೮೬ರಿಂದ ರಾಜ್ಯದ ರಾಜಧಾನಿಯ ಹೊರಗಡೆ ಪ್ರಶಸ್ತಿ ನೀಡಲು ಆರಂಭಿಸಿದ ಸರ್ಕಾರ ಇದುವರೆಗೆ ಕೋಲಾರ, ಮಡಿಕೇರಿ, ಮೈಸೂರು, ಮಂಗಳೂರು, ಹಾಸನ, ಹುಬ್ಬಳ್ಳಿ, ಶಿವಮೊಗ್ಗ, ಗುಲ್ಬರ್ಗ ಈ ಜಿಲ್ಲಾ ಕೇಂದ್ರಗಳಲ್ಲಿ ಪ್ರಶಸ್ತಿ ಸಮಾರಂಭ ನಡೆಸಿತು. ಆಗ ಆ ಜಿಲ್ಲೆಯವರು ಮುಖ್ಯಮಂತ್ರಿಯೋ ಅಥವಾ ವಾರ್ತಾ ಮಂತ್ರಿಯೋ ಆಗಿದ್ದುದು ಕಾಕತಾಳೀಯ ಎಂಬುದಂತೂ ಸಾಧ್ಯವಿಲ್ಲ.

ವಾರ್ತಾ ಇಲಾಖೆಯೂ ಸಹ ರಾಜಕೀಯವಾಗಿ ಅನಿಶ್ಚಿತ ವಾತಾವರಣದಲ್ಲಿ ಕಾರ್ಯ ಕೈಗೊಳ್ಳಬೇಕಾದ ಪರಿಸ್ಥಿತಿಯಿದೆ. ಅದು ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಹಂಚುವ, ಪ್ರಶಸ್ತಿ ವಿಜೇತ ಚಿತ್ರ ಹಾಗೂ ತಂಡದವರ ಪರಿಚಯ ಪುಸ್ತಿಕೆಯಲ್ಲಿ ಸಾಮಾನ್ಯವಾಗಿ ಆ ಪ್ರಶಸ್ತಿ ನೀಡಲಾಗುವ ಜಿಲ್ಲೆ ಹಾಗೂ ಸಭಾಂಗಣದ ಹೆಸರನ್ನು ಮುದ್ರಿಸುವ ಪೇಚಿನ ಪ್ರಸಂಗಕ್ಕೆ ಹೋಗುವುದಿಲ್ಲ. ಯಾವ ಕ್ಷಣದಲ್ಲಾದರೂ ಸ್ಥಳ ಬದಲಾವಣೆ ಅಥವಾ ಸಮಾರಂಭವೇ ಸ್ಥಗಿತಗೊಳ್ಳಬಹುದೆಂಬ ಆತಂಕ ಇದಕ್ಕೆ ಕಾರಣವಾಗಿರಬಹುದು. ಆದರೆ ಒಬ್ಬ ಸಿನಿಮಾ ಸಂಶೋಧಕ ಈ ಪುಸ್ತಿಕೆಗಳನ್ನು ಸಂದರ್ಭಗ್ರಂಥವಾಗಿ ಬಳಸಿದಾಗ ಅವನು ಕೆಲವು ಉಪಯುಕ್ತ ಮಾಹಿತಿಯಿಂದ ವಂಚಿತನಾಗುತ್ತಾನೆ.

ವಿವಾದ, ಅಸಮಾಧಾನ, ಅತೃಪ್ತಿಯ ಹೊಗೆಯಾಡದೇ ಪ್ರಶಸ್ತಿ ಘೋಷಣೆಯಾದ ವರ್ಷವೇ ಇಲ್ಲ ಎನ್ನಬಹುದು. ಪ್ರಶಸ್ತಿಗಳ ಬಗ್ಗೆ ಅತೃಪ್ತಿ ಹೊರಗೆಡವಿದ ರೀತಿ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆ ಬೇರೆ ಆಗಿರಬಹುದು. ಕೆಲವರು ಕೇವಲ ಪತ್ರಿಕಾಗೋಷ್ಠಿಯಲ್ಲಿ ಪ್ರಲಾಪಿಸಬಹುದು, ಸಮಾರಂಭಕ್ಕೆ ಬರದೆ ಇರಬಹುದು. ಬಂದರೂ ಪ್ರಶಸ್ತಿ ಪಡೆಯದೇ ಇರಬಹುದು. ಪಡೆದರೂ ಅದನ್ನು ಸ್ಥಳದಲ್ಲೇ ಬೇರೆಯವರಿಗೆ ನೀಡಿರಬಹುದು. ಇನ್ನು ಕೆಲವರು ಕೋರ್ಟಿನ ಕದ ತಟ್ಟಿರಬಹುದು. ಕೊನೆಗೆ ಜನಮನ್ನಣೆಯಾದರೂ ಗಳಿಸಿತಲ್ಲಾ ಎಂಬ ಖುಷಿಯಲ್ಲಿ ಪ್ರಶಸ್ತಿ ಬಾರದ ದುಃಖ ಮರೆತಿರಬಹುದು. ಇಂತಹವರ ಒಂದು ದೊಡ್ಡ ಪಟ್ಟಿಯನ್ನೇ ಕೊಡಬಹುದು.

ಪ್ರಶಸ್ತಿಗೇಕೆ ಇಷ್ಟು ಮಹತ್ವ ಎಂದು ಯೋಚಿಸಿದಾಗ ಕೆಲವು ಉತ್ತರಗಳು ಸಿಗುತ್ತವೆ. ಆರಂಭದಲ್ಲಿ ಚಲನಚಿತ್ರವೊಂದೇ ಮನರಂಜನೆಯ ಸಾಧನವಾಗಿತ್ತು. ಈಗಿನಂತೆ ಟಿ.ವಿ. ಹಾಗೂ ವಿವಿಧ ಚಾನೆಲುಗಳ ಹಾವಳಿ ಇರಲಿಲ್ಲ. ಯಾವುದೇ ಚಿತ್ರ

ಪ್ರಶಸ್ತಿ ಪಡೆದೊಡನೆ ಅದು ಉತ್ತಮ ಚಿತ್ರವಾಗಿರಬಹುದು, ಬಂದರ ಅವಶ್ಯ ನೋಡಲೇಬೇಕೆಂಬ ಮಾನಸಿಕ ಸಿದ್ಧತೆಯನ್ನು ಪ್ರೇಕ್ಷಕ ಮಾಡಿಕೊಳ್ಳುವಲ್ಲಿ ಈ ಪ್ರಶಸ್ತಿ ನೆರವಾಗುತ್ತಿತ್ತು. ಆಗ ಪ್ರಶಸ್ತಿ ವಿಜೇತ ಚಿತ್ರಗಳಿಗೆ ಮಾತ್ರ ಮನರಂಜನಾ ತೆರಿಗೆ ವಿನಾಯಿತಿ ಸಿಗುತ್ತಿದ್ದುದರಿಂದ ಕಡಿಮೆ ಪ್ರವೇಶ ದರದಲ್ಲಿ ಮನರಂಜನೆ ಸಿಗುವ ಖುಷಿಯೂ ಪ್ರೇಕ್ಷಕನಿಗೆ ಮುದ ನೀಡುತ್ತಿತ್ತು. ಹೀಗಾಗಿ ಹೆಚ್ಚಿನ ಸಂಖ್ಯೆಯ ಪ್ರೇಕ್ಷಕರು ಚಿತ್ರಮಂದಿರಕ್ಕೆ ಧಾವಿಸುತ್ತಿದ್ದರು. ತನ್ನ ಪ್ರಥಮ ಪ್ರಯತ್ನದಲ್ಲಿ ಏನಾದರೂ ಹೊಸತು, ಸಮಾಜಕ್ಕೆ ಒಳಿತಾಗುವಂತಹುದನ್ನು ಹೇಳಬೇಕೆಂಬ ನಿರ್ಮಾಪಕನ ಸಾಹಸ, ನಿರ್ದೇಶಕನ ತುಡಿತಕ್ಕೆ ಸರ್ಕಾರದ ಪ್ರೋತ್ಸಾಹ ದೊರೆತು, ಹೆಚ್ಚಿನ ಜನತೆಗೆ ಅದು ತಲುಪಿದಾಗ ಎಲ್ಲರಿಗೂ ಶ್ರಮ ಸಾರ್ಥಕವೆನಿಸುತ್ತಿತ್ತು. ಹಲವು ಬಾರಿ ಉತ್ತಮ ಚಿತ್ರ ಗಲ್ಲಾಪೆಟ್ಟಿಗೆಯಲ್ಲಿ ಸೋತರೂ ಸಹ, ಪ್ರಶಸ್ತಿಯು ತಳಹದಿಯ ಮೇಲೆ ದೂರದರ್ಶನದಲ್ಲಿ ಪ್ರದರ್ಶನದ ಅರ್ಹತೆ ಪಡೆದು, ಹೆಚ್ಚಿನ ರಾಯಧನ ಪಡೆದು ಹಾಕಿದ ಬಂಡವಾಳ ಮರಳಿ ಪಡೆಯಲು ನೆರವಾಗುತ್ತಿತ್ತು. ಈ ಎಲ್ಲ ಕಾರಣದಿಂದ ಪ್ರಶಸ್ತಿಗಾಗಿ ಚಾತಕ ಪಕ್ಷಿಯಂತೆ ಕಾಯ್ದು ಅದರ ಲಾಭ ಪಡೆಯಲು ಹವಣಿಸಿದವನಿಗೆ ಸರ್ಕಾರ, ಸಮಿತಿ ಗುರುತಿಸದೇ ಹೋದಾಗ ರೋಷ, ಪ್ರತಿಭಟನೆ ಸಹಜವೇ ಆಗುತ್ತದೆ.

ಇದು ಸಾಲದೆಂಬಂತೆ ಪ್ರಶಸ್ತಿಯ ಸಮಿತಿಗಳು ಅನುಸರಿಸುವ ಮಾರ್ಗದರ್ಶಿ ಸೂತ್ರಗಳೇನು ಎಂಬುದರ ಬಗ್ಗೆ ಅನುಮಾನ ಬರುವಂತಹ ಕೆಲವು ಪ್ರಸಂಗಗಳೂ ಇವೆ. ಬ್ಯಾಂಕ್ ದರೋಡೆ, ಜೈಲಿನಿಂದ ತಪ್ಪಿಸಿಕೊಳ್ಳುವಿಕೆಯಂಥ ಕಥಾವಸ್ತುವಿರುವ ಚಿತ್ರ ನಾಲ್ಕಾರು ಪ್ರಶಸ್ತಿ ಗಿಟ್ಟಿಸಿದರೆ, ದಲಿತರ ಶೋಷಣೆ, ಅಧಿಕಾರದ ವಿಕೇಂದ್ರೀಕರಣ, ಗ್ರಾಮಪಂಚಾಯಿತಿಯಂಥ ಕಥಾವಸ್ತು ಪ್ರಶಸ್ತಿ ವಿಜೇತರ ಪಟ್ಟಿಯಲ್ಲಿ ಇರುವುದಿಲ್ಲ. ನೂರಾರು ಕ್ರಿಮಿನಲ್ ಮೊಕದ್ದಮೆ ಎದುರಿಸಬೇಕಾದ ನರಹಂತಕ ಕಾಡುಗಳ್ಳನ ಕುರಿತ ಚಿತ್ರ ಪ್ರಶಸ್ತಿ ಪಡೆದರೆ, ಮಕ್ಕಳ ಚಿತ್ರವೆಂದು ಸೆನ್ಸಾರಿನಿಂದ ಪ್ರಮಾಣಪತ್ರ ಪಡೆದ ಚಿತ್ರ, ಪ್ರಶಸ್ತಿ ಸಮಿತಿಯ ಪಾಲಿಗೆ ಮಕ್ಕಳ ಚಿತ್ರವೇ ಆಗುವುದಿಲ್ಲ. ಒಂದು ಚಿತ್ರಕ್ಕೆ ಉತ್ತಮ ಚಿತ್ರವೆಂದು ಗುರುತಿಸಿ ಪ್ರಶಸ್ತಿ ನೀಡಿದಾಗ, ಅದರಲ್ಲಿನ ಕಥಾವಸ್ತು ಸಮಾಜಕ್ಕೆ ಉತ್ತಮ, ಅದನ್ನು ಜನ ನೋಡಲಿ ಎಂದು ತೆರಿಗೆ ವಿನಾಯಿತಿ ನೀಡಿ ಪ್ರೋತ್ಸಾಹಿಸುವ ಸರ್ಕಾರ, ಸಮಾಜ ವಿರೋಧಿ ತತ್ವಗಳನ್ನು ನಿರೂಪಿಸುವ ಚಿತ್ರಗಳಿಗೆ ಹೇಗೆ ಬೆಂಬಲಿಸಿತು ಎಂಬುದು ಚಿದಂಬರ ರಹಸ್ಯವಾಗೇ ಉಳಿಯುತ್ತದೆ. ಇಂತಹ ಸಮಾಜ ವಿರೋಧಿ ಚಿತ್ರಗಳಲ್ಲಿನ ಯಾವುದೋ ತಾಂತ್ರಿಕ ಅಂಶ, ಕಲಾವಿದನ ವೈಯಕ್ತಿಕ ಕೊಡುಗೆಯನ್ನು ಸಮಿತಿ ಗುರುತಿಸಿದರೆ ಅದು ಅಪಾಯಕಾರಿ ನಿಲುವೇನೂ ಅಲ್ಲ. ಆದರೆ ಚಿತ್ರವನ್ನೇ ಉತ್ತಮ ಎಂದು ಬೆಂಬಲಿಸಿದಾಗ ವಿಸ್ಮಯವೆನಿಸುತ್ತದೆ.

ಈ ಪ್ರಶಸ್ತಿ ನೀಡಿಕೆಯ ಮಾನದಂಡವೇನು ಎಂದು ಗುಮಾನಿ ಮೂಡಲು ಇನ್ನೊಂದು ಪ್ರಬಲ ಕಾರಣ, ಎಷ್ಟೋ ಚಿತ್ರಗಳು ರಾಜ್ಯದಲ್ಲಿ ಪ್ರಶಸ್ತಿಗೆ ಅನರ್ಹವಾದದ್ದು, ರಾಷ್ಟ್ರಮಟ್ಟದಲ್ಲೂ ಪ್ರಶಸ್ತಿ ಪಡೆದಿವೆ. ರಾಷ್ಟ್ರಮಟ್ಟದಲ್ಲೂ ಅತ್ಯುನ್ನತ ಪ್ರಶಸ್ತಿ ಪಡೆದ ಚಿತ್ರ, ರಾಜ್ಯದಲ್ಲಿ ಪ್ರಶಸ್ತಿ ಪಟ್ಟಿಯಲ್ಲಿ ಕೆಳಗಡೆ ಎಲ್ಲೋ ಸೇರಿರುವುದು ಅಥವಾ ಇಲ್ಲದೆಯೇ ಇರುವುದನ್ನೂ ಗಮನಿಸಬಹುದು. ಸ್ಥಳೀಯರು ಒಂದು ಚಿತ್ರ ನೋಡುವ ರೀತಿಗೂ ಹೊರಗಿನವರು ನೋಡುವ ರೀತಿಗೂ ವ್ಯತ್ಯಾಸ ಇರುತ್ತದೆಂಬ ಅಂಶ ಗಮನದಲ್ಲಿಟ್ಟಾಗಲೂ ಈ ಪ್ರಶ್ನೆ ಕಾಡುತ್ತದೆ.

ಚಿತ್ರರಂಗದಲ್ಲಿ ವ್ಯಾಪಾರಿ ಮತ್ತು ಕಲಾತ್ಮಕ ಪಂಥದವರು ಒಬ್ಬರಿನ್ನೊಬ್ಬರನ್ನು ಅನುಮಾನದಿಂದ ನೋಡುವ ಪ್ರವೃತ್ತಿಯೂ ಈ ಸಮಸ್ಯೆಯನ್ನು ಸಾಕಷ್ಟು ಜಟಿಲಗೊಳಿಸಿದೆ. ಸರ್ಕಾರವು ಉದಾರವಾಗಿ ಬೆಂಬಲ ನೀಡಲು ಸಿದ್ಧವಿರುವಾಗ ಅದನ್ನು ಸರಿಯಾಗಿ ಬಳಸಿಕೊಳ್ಳದೇ 'ಮೊದಲನೆ ಅತ್ಯುತ್ತಮ ಚಿತ್ರ ಪ್ರಶಸ್ತಿಗೆ ಯಾವುದೇ ಚಿತ್ರ ಅರ್ಹವಿಲ್ಲ' ಎಂದು ಸ್ಥಳವನ್ನು ಖಾಲಿ ಬಿಡುವ ಕ್ರಮ ಪ್ರಶ್ನಾರ್ಹ ಎನ್ನಿಸಿದೆ. ಒಂದು ಚಿತ್ರದ ಹಿಂದಿರುವ ಶ್ರಮ, ಬಂಡವಾಳ, ನಿರೀಕ್ಷೆ, ನಿರಾಸೆ ಅರಿತುಕೊಂಡು ಎಲ್ಲ ವಿಭಾಗಕ್ಕೂ ಚಿತ್ರ ಆಯ್ಕೆ ಮಾಡಿದರೆ ಉತ್ತಮ ಚಿತ್ರ ನಿರ್ಮಾಣದ ಪರಂಪರೆ ಮುಂದುವರಿಸಲು ನೆರವಾಗುತ್ತದೆಂಬುದರ ಬಗ್ಗೆ ಯೋಚಿಸುವುದಿಲ್ಲ. ಸಮಿತಿಯ ಸದಸ್ಯರಿಗೆ ಚಿತ್ರದ ತರ್ಕಬದ್ಧ ನಿರೂಪಣೆ, ಕಲಾತ್ಮಕತೆ, ಮಾಧ್ಯಮ ನಿಷ್ಠೆ, ವಸ್ತುವಿನ ಅಧಿಕೃತತೆಯನ್ನು ಗಂಭೀರವಾಗಿ ಪರಿಗಣಿಸಬೇಕೆಂಬುದೇ ಮುಖ್ಯವಾಗಿ ಪ್ರತಿಷ್ಠೆಯ ಸಂಕೇತವಾಗಿ ಪರಿಣಾಮಗಳು ಹೊರಬೀಳುವುದೂ ಉಂಟು.

ಪ್ರಶಸ್ತಿ ಸ್ಥಾಪಿತವಾದಾಗಿನಿಂದಲೂ ಎಷ್ಟೇ ಆದೇಶಗಳು ಜಾರಿಯಲ್ಲಿ ಬಂದರೂ ಇದುವರೆವಿಗೂ ಯಾವುದೇ ಬದಲಾವಣೆ ತರದೇ ಇರುವ ನಿಯಮವೆಂದರೆ ಪ್ರಶಸ್ತಿಗಳ ಬಗ್ಗೆ ಸರ್ಕಾರದ ತೀರ್ಮಾನವೇ ಅಂತಿಮ ಎಂಬ ಚರಮವಾಕ್ಯ. ಎಷ್ಟೋ ಪಕ್ಷಗಳು ಅಧಿಕಾರಕ್ಕೆ ಬಂದರೂ ಅವರೆಲ್ಲರ ವಿಚಾರ ಕ್ರಮ ಒಂದೇ. ಅಧಿಕಾರದ ವಿಕೇಂದ್ರೀಕರಣ, ಸಮಿತಿಯ ಸ್ವಾಯತ್ತತೆ, ನ್ಯಾಯಾಂಗದ ನೇಮಕ ಈ ಎಲ್ಲ ತೋರಿಕೆಯ ಪಾರದರ್ಶಕತೆಯ ಹಿಂದೆ ಈ ಕರಾಳ ನಿಯಮ ಕೆಲಸ ಮಾಡುತ್ತಲೇ ಇರುತ್ತದೆ. ಈ ನಿಯಮವೇ ನ್ಯಾಯಾಲಯದ ಕಟ್ಟೆ ಹತ್ತಿದ ನಿರ್ಮಾಪಕ ನ್ಯಾಯ ಪಡೆಯುವ ಕನಸನ್ನು ನುಚ್ಚುನೂರು ಮಾಡಲು ಒಂದು ಪ್ರಬಲ ಆಯುಧವಾಗಿದೆ.

ಈ ನಿಯಮ ಹೋಗದ ಹೊರತು ಪ್ರಶಸ್ತಿಗಳು ಸರ್ಕಾರದ ಕೈಯಲ್ಲಿ ಒಂದು ಆಟಿಕೆ, ಪ್ರಶಸ್ತಿ ಸಮಿತಿಗಳು ಆಟದ ಸಾಧನವಾಗೇ ಬಳಕೆಯಾಗುತ್ತವೆ. ಸಮಿತಿಯ ಸ್ವಾತಂತ್ರ್ಯಕ್ಕೆ, ನಿಷ್ಠೆಗೆ ಪೆಟ್ಟು ಬಿದ್ದಾಗಲೆಲ್ಲ ಸ್ವಾಭಿಮಾನವಿದ್ದವರು ರಾಜೀನಾಮೆ ನೀಡಿ ಹೊರಬರುವ ಪ್ರಸಂಗಗಳು ಸರ್ವೇ ಸಾಮಾನ್ಯವಾಗಬಹುದು. ಸರ್ಕಾರದ ನಿಲುವೇ ಅಂತಿಮವಾಗುವುದಾದರೆ ಸಮಿತಿಯಾದರೂ ಯಾಕೆ ಬೇಕು ಎಂದು ಅಂತಹ ಹೊಣೆ ಹೊರಲು ಕೆಲವರು ಒಪ್ಪದೇ ಹೋಗಬಹುದು. ಹಾಗಾದಲ್ಲಿ ಅದು ಈ ಶತಮಾನದ ಬೆಳವಣಿಗೆ ಎನ್ನಬಹುದು.

ಉತ್ತಮ ಚಿತ್ರಗಳು ಚಲನಚಿತ್ರ ಸಮಾಜಗಳಿಗೆ ಸುಲಭವಾಗಿ ಲಭ್ಯವಾಗಲು ಅನುಕೂಲವಾಗುವಂತೆ ಎಲ್ಲ ಪ್ರಶಸ್ತಿ ವಿಜೇತ ಚಿತ್ರಗಳ ಪ್ರತಿಗಳನ್ನು ರಾಜ್ಯ ಚಲನಚಿತ್ರ ಭಂಡಾರ, ನಿರ್ಮಾಪಕರಿಂದ ಕೊಂಡುಕೊಳ್ಳುವುದಕ್ಕೆ ಆದ್ಯತೆ ನೀಡಬೇಕು. ಅಪರೂಪ, ವಿರಳ ಎಂಬ ಒಂದೇ ಕಾರಣಕ್ಕೆ ಅಪಕ್ವ, ಅಯೋಗ್ಯ ಚಿತ್ರಗಳು 'ಇತಿಹಾಸ'ದ ಹಣೆಪಟ್ಟಿ ಗಿಟ್ಟಿಸಿ ರಾಜ್ಯ ಚಲನಚಿತ್ರ ಭಂಡಾರ ಸೇರುವ ಬದಲು ರಾಷ್ಟ್ರ, ರಾಜ್ಯ ಪ್ರಶಸ್ತಿ ಚಿತ್ರಗಳಿಗೆ ಮನ್ನಣೆ ಸಿಗಬೇಕು. ಈ ರೀತಿ ನೀಡುವ ರಾಯಧನ ಮೊತ್ತ ಉತ್ತಮ ಚಿತ್ರಗಳ ನಿರ್ಮಾಪಕನ ಮನಸ್ಸಿಗೆ ಸಮಾಧಾನ ತರುವಂತಿರಬೇಕು.

ಹಲವಾರು ವಿಷಯಗಳಲ್ಲಿ ಕೇಂದ್ರ ಸರ್ಕಾರದ ಚಲನಚಿತ್ರ ಪ್ರಶಸ್ತಿಗಳನ್ನು ನೀಡುವ ಕ್ರಮ ಅಧ್ಯಯನ ಮಾಡಿ, ಅದನ್ನು ಅನುಸರಿಸುವ ರಾಜ್ಯ ಸರ್ಕಾರ, ಕನ್ನಡದಲ್ಲಿ ಚಲನಚಿತ್ರ ತಂತ್ರ ಕುರಿತು ಉತ್ತಮ ಕನ್ನಡ ಸಾಹಿತ್ಯ ಕೃತಿ, ಉತ್ತಮ ಚಲನಚಿತ್ರಗಳನ್ನು ಪ್ರೇಕ್ಷಕರು ಹೆಚ್ಚು ಹೆಚ್ಚು ನೋಡಲು ಚಲನಚಿತ್ರ ವಿಮರ್ಶಾ ಸಾಹಿತ್ಯ ಕೃತಿಗಳನ್ನು ಗುರುತಿಸಿ ಪ್ರಶಸ್ತಿಗಳನ್ನು ಕೇಂದ್ರದ ಮಾದರಿಯಲ್ಲಿ ನೀಡಲು ಇನ್ನಾದರೂ ಗಮನ ಹರಿಸಬೇಕು.

ಇದೇ ರೀತಿ, ಪ್ರತಿಯೊಂದು ಚಿತ್ರಕ್ಕೂ, ವ್ಯಕ್ತಿಗೂ ಪ್ರಶಸ್ತಿ ನೀಡುವಾಗ ಕೇಂದ್ರ ಸರ್ಕಾರದ ಪ್ರಶಸ್ತಿ ಸಮಿತಿ ಅನುಸರಿಸುವ 'ಪ್ರಶಸ್ತಿ ಪೀಠಿಕೆ' (citation) ಪದ್ಧತಿ ಬಳಸಬೇಕು. ಇದರಿಂದ ಚಿತ್ರದಲ್ಲಿನ ಯಾವ ಅಂಶವನ್ನು ಗುರುತಿಸಿ ಪ್ರಶಸ್ತಿ ನೀಡಿತು ಎಂದು ತಿಳಿಯಲು ಸಾಧ್ಯ. ಉದಾ: ಗಿರೀಶ್ ಕಾಸರವಳ್ಳಿಯ 'ತಬರನ ಕತೆ' ಚಿತ್ರಕ್ಕೆ ಪ್ರಶಸ್ತಿ ದೊರೆತಾಗ ಪ್ರಶಸ್ತಿ ಪೀಠಿಕೆಯಲ್ಲಿ, 'ಆಡಳಿತ ಯಂತ್ರದ ಜಾಲದಲ್ಲಿ ಸಿಕ್ಕು, ತನ್ನ ವಿಶ್ರಾಂತಿ ವೇತನ ಪಡೆಯಲು ವ್ಯಕ್ತಿಯೊಬ್ಬ ಪಡುವ ಬವಣೆ, ಅವನ ನಿಸ್ಸಹಾಯಕತೆ, ರೋಷವನ್ನು ಅತಿ ಸೂಕ್ಷ್ಮವಾಗಿ, ನವಿರಾಗಿ, ಸಂವೇದನಾಶೀಲವಾಗಿ ಭಾವುಕ ಹಾಗೂ ಪರಿಣಿತ ಶೈಲಿಯಲ್ಲಿ ಚಿತ್ರಿಸಿದ ರೀತಿ' ಎಂದು ಉಲ್ಲೇಖಿಸಿತು. ಇದೇ ರೀತಿ, ಅತ್ಯುತ್ತಮ ನಟ ಚಾರುಹಾಸನ್ ಕುರಿತು 'ಕೊನೆತನಕ ನ್ಯಾಯಕ್ಕಾಗಿ ಕಾಯುವ ವ್ಯಕ್ತಿಯೊಬ್ಬನ ಕೋಪವನ್ನು ಹೃದಯ ಕಲಕುವಂತೆ, ಸಂಯಮದಿಂದ ರೂಪಿಸಿದ ರೀತಿಗಾಗಿ' ಎಂದು ದಾಖಲಿಸಿತು. ಇದೇ ಮಾದರಿಯಲ್ಲಿ 'ಮಧ್ವಾಚಾರ್ಯ' ಚಿತ್ರದ ಕಲಾನಿರ್ದೇಶಕ ಪಿ.ಕೃಷ್ಣಮೂರ್ತಿಗೆ 'ಮಧ್ವಾಚಾರ್ಯ ಯುಗದ ವಾತಾವರಣವನ್ನು ಪ್ರಭಾವಶಾಲಿಯಾಗಿ ಪುನರ್ ನಿರ್ಮಿಸಿದ್ದಕ್ಕೆ' ಎಂದು, ಸಂಗೀತ ನಿರ್ದೇಶಕ ಡಾ।ಎಂ.ಬಾಲಮುರುಳಿಕೃಷ್ಣರ ಕುರಿತು 'ಚಿತ್ರದಲ್ಲಿ ಶಾಸ್ತ್ರೀಯ ಸಂಗೀತದೊಡನೆ ಜನಪದ ಸಂಗೀತವನ್ನು ಬೆರೆಸಿ ಪರಿಣಾಮಕಾರಿಯಾಗಿ ಬಳಸಿದ ಬಗ್ಗೆ' ಎಂದು ವಿವರಣೆ ನೀಡಿತು. ಇದೇ ಸರಣಿಯಲ್ಲಿ ಪ್ರಾಂತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ ಉಮೇಶ್ ಕುಲಕರ್ಣಿ ನಿರ್ದೇಶನದ 'ಶಂಖನಾದ' ಕುರಿತು 'ಗ್ರಾಮೀಣ ಗುಂಪುಗಾರಿಕೆಯಲ್ಲಿ ಪಂಚಾಯತ್ ವ್ಯವಸ್ಥೆಯ ಅಂಶಗಳ ವಿಡಂಬನಾತ್ಮಕ ನಿರೂಪಣೆಗೆ' ಎಂದು ಉಲ್ಲೇಖಿಸಿತು. ಅದೇ ವರ್ಷ, ಇಂಗ್ಲಿಷ್‌ನಲ್ಲಿ ಶಂಕರ್‌ನಾಗ್ ನಿರ್ದೇಶಿಸಿದ 'ವಾಚ್‌ಮನ್' ಚಿತ್ರ ಕುರಿತು 'ತನ್ನ ಬದುಕಿನಲ್ಲಿ ಹತ್ತಿರದ ನೆಂಟರಿಷ್ಟರು, ಮಿತ್ರರನ್ನು ಕಳೆದುಕೊಂಡಿದ್ದರೂ, ಕಿರಿ ವಯಸ್ಸಿನ ಬಾಲಕಿಯೋರ್ವಳನ್ನು ಆತ್ಮಹತ್ಯೆಯಿಂದ ಉಳಿಸಿ, ಜೀವ ಕಾಪಾಡುವ ಮುದುಕ ವಾಚ್‌ಮನ್ ಒಬ್ಬನ ಜೀವನದ ಕಥೆಯ ಆಕರ್ಷಕ ನಿರೂಪಣೆ'ಗೆ ಎಂದು ಗುರುತಿಸಿತ್ತು. ಹೀಗಾಗಿ ಈ ಪದ್ಧತಿಯ ಪಾಲನೆ ಪ್ರಶಸ್ತಿ ಪಡೆದವರ ಪ್ರಯತ್ನ ಗುರುತಿಸಿ, ಸಮಾಧಾನದ ಒಂದು ನುಡಿ ಆಡಿದ್ದನ್ನು ಕೇಳಿಸಿಕೊಂಡ ಹಿತವಾದ ಅನುಭವ ನೀಡುತ್ತದೆ. ಕಾರಣ ಈ ಪ್ರಶಸ್ತಿ ಪೀಠಿಕೆಯ ಪದಗಳನ್ನೇ ಪ್ರಶಸ್ತಿ ನೀಡುವಾಗ ಸಮಾರಂಭದಲ್ಲಿ ವಾಚಿಸಲಾಗುವುದು. ಇಂಥ ಪರಂಪರೆ ಕರ್ನಾಟಕ ಪ್ರಶಸ್ತಿ ಪರಂಪರೆಯಲ್ಲಿ ಸೇರಿದರೆ ಚೆನ್ನ.

# ತೆರಿಗೆ ಇಲ್ಲದ ಮನರಂಜನೆ

ಸರ್ಕಾರವು ಚಲನಚಿತ್ರಕ್ಕೆ ನೀಡುವ ಸಹಾಯಧನ ನಿರ್ಮಾಪಕನಿಗೆ, ಕೇಂದ್ರ ಹಾಗೂ ರಾಜ್ಯ ಸರ್ಕಾರ ನೀಡುವ ಪ್ರಶಸ್ತಿ, ಪದಕ ಹಾಗೂ ಬಹುಮಾನಗಳು ಚಿತ್ರದ ಕಲಾವಿದರು, ತಂತ್ರಜ್ಞರಿಗೆ ಲಭಿಸಿದರೆ, ಸರ್ಕಾರ ನೀಡುವ ಮನರಂಜನಾ ತೆರಿಗೆ ವಿನಾಯಿತಿಯ ಅನುಕೂಲ, ಲಾಭ ಮಾತ್ರ ನೇರವಾಗಿ ಪ್ರೇಕ್ಷಕರಿಗೇ ದೊರಕುವ ಏಕೈಕ ಸೌಲಭ್ಯ. ಇದನ್ನು ಪಡೆಯುವುದರಿಂದ ಅಪ್ರತ್ಯಕ್ಷವಾಗಿ ಚಿತ್ರಮಂದಿರದ ಗಳಿಕೆ ಹೆಚ್ಚಬಹುದು. ನಿರ್ಮಾಪಕನ ಗಲ್ಲಾ ಪೆಟ್ಟಿಗೆ ಹೆಚ್ಚಳದೊಂದಿಗೆ ಅವನ ಚಿತ್ರದ ಮನರಂಜನೆ ಸಂದೇಶ ಅಧಿಕ ಜನರಿಗೆ ತಲುಪಿಸುವ ಸದುದ್ದೇಶವೂ ಸಹ ಪೂರ್ಣವಾಗುವದರಿಂದ, ಈ ಯೋಜನೆಗೆ ಮಹತ್ವ. ಇದನ್ನು ಪಡೆಯಲು ಕಸರತ್ತು ಮಾಡುವುದೂ ಅನಿವಾರ್ಯ. ಕರ್ನಾಟಕ ಸರ್ಕಾರ ಹಂತ ಹಂತವಾಗಿ ಚಿತ್ರರಂಗದವರಿಗೆ ನೀಡಿದ ನೆರವಿನಲ್ಲಿ ಇದು ಮೂರನೇ ಘಟ್ಟ. ಇದು ೧೯೬೭ರಿಂದ ಜಾರಿಗೆ ಬಂದಿತು. ಇದಕ್ಕೆ ಮೊದಲು ರಾಜ್ಯ ಪ್ರಶಸ್ತಿ, ರಾಷ್ಟ್ರ ಪ್ರಶಸ್ತಿ, ಹಾಗೂ ಅಂತರರಾಷ್ಟ್ರೀಯ ಪ್ರಶಸ್ತಿ ಪಡೆದ ಕನ್ನಡ ಹಾಗೂ ರಾಜ್ಯದ ಪ್ರಾಂತೀಯ ಭಾಷೆಯ ಚಿತ್ರಗಳಿಗೆ ಶೇಕಡಾ ನೂರು ತೆರಿಗೆ ವಿನಾಯಿತಿ ಒಂದು ವರ್ಷ ಕಾಲ ಹಾಗೂ ಇತರ ಭಾಷೆಯ ಚಿತ್ರಗಳಿಗೆ ಆರು ತಿಂಗಳ ಅವಧಿಗೆ ನೀಡುವ ಪದ್ಧತಿ ಚಾಲ್ತಿಯಲ್ಲಿದ್ದು, ಅದು ಬೇರೆಯೇ ಯೋಜನೆಯಾಗಿತ್ತು. ಅದನ್ನು ಹೊರತುಪಡಿಸಿ, ರಾಜ್ಯದೊಳಗೆ/ರಾಜ್ಯದ ಹೊರಗೆ ತಯಾರಿಸಲಾದ ಎಲ್ಲ ಚಿತ್ರಗಳಿಗೆ, ಅದು ಪ್ರಶಸ್ತಿ ಪಡೆಯಲಿ ಬಿಡಲಿ, ತೆರಿಗೆ ವಿನಾಯಿತಿ ನೀಡುವ ನೀತಿ , ನಂತರ ಚಾಲನೆಗೆ ಬಂದು ಅದು ಚಿತ್ರೋದ್ಯಮ ಸದೃಢವಾಗಿ ನಿಲ್ಲಲು ಬೆನ್ನೆಲುಬಾಯಿತು.

ಆರಂಭದಲ್ಲಿ ಕೆಲವು ವರ್ಷಗಳ ಕಾಲ, ರಾಜ್ಯ ಸರ್ಕಾರ ವಿಶೇಷ ಆದೇಶದ ಮೂಲಕ ಒಂದು ಸಮಿತಿ ರಚಿಸಿ, ಅದು ಮನವಿ ಸಲ್ಲಿಸಿದ ನಿರ್ಮಾಪಕರ ಚಿತ್ರಗಳನ್ನು ವೀಕ್ಷಿಸಿ, ಶೇಕಡಾ ನೂರು ಮನರಂಜನಾ ತೆರಿಗೆಯ ವಿನಾಯಿತಿ ನೀಡುವಂತೆ ಶಿಫಾರಸ್ಸು ಮಾಡಲು ಅಧಿಕಾರ ಹೊಂದಿತ್ತು. ಇಂತಹ ಸಂದರ್ಭಗಳಲ್ಲಿ, ಚಿತ್ರದ ಗುಣಮಟ್ಟ ನಿರ್ಧರಿಸಲು ಯಾವುದೇ ಮಾರ್ಗಸೂಚಿಗಳು ಇರಲಿಲ್ಲವಾದ್ದರಿಂದ, ಚಿತ್ರದ ಬಲಕ್ಕಿಂತ ನಿರ್ಮಾಪಕನ ರಾಜಕೀಯ ಬಲ ಆಧರಿಸಿ, ಚಿತ್ರಕ್ಕೆ ತೆರಿಗೆ ವಿನಾಯತಿ ನಿರ್ಧರಿಸುವಂತಹ ಅನಿಶ್ಚಿತ ವಾತಾವರಣವಿತ್ತು. ಈ ಕಾಲಾವಧಿಯಲ್ಲಿಯೇ 'ಛಲಗಾರ', 'ತೀರದ ಬಯಕೆ' ಯಂತಹ ಕನ್ನಡ ಚಿತ್ರಗಳು, ಸಂಜಯಖಾನ್ ನಿರ್ಮಿಸಿದ 'ಅಬ್ದುಲ್ಲಾ' ನಂತಹ ಹಿಂದಿ ಚಿತ್ರಗಳು ಈ ಸೌಲಭ್ಯವನ್ನು ಪಡೆದು, ಪ್ರೇಕ್ಷಕರು, ಪತ್ರಿಕೆಗಳೂ ಹುಬ್ಬೇರಿಸುವಂತೆ ಮಾಡಿದವು. ನಂತರ ಸರ್ಕಾರ ಈ ಪದ್ಧತಿಯನ್ನು ಕೈ ಬಿಟ್ಟು, ಈ ಸಮಿತಿಯನ್ನು ವಿಸರ್ಜಿಸಿ, ರಾಜ್ಯದ ಆದಾಯ ಸೋರಿಕೆ ನಿಲ್ಲಿಸಿತು. ನಂತರ ಒಂದು ವ್ಯವಸ್ಥಿತ ಆಲೋಚನಾ ಕ್ರಮದಲ್ಲಿ ತೆರಿಗೆ ವಿನಾಯಿತಿ ನೀತಿ ರೂಪಿಸಿ, ರಾಜ್ಯದಲ್ಲಿ ಚಿತ್ರೋದ್ಯಮ ಬೆಳೆಯಲು ಬೆಂಬಲವಾಗುವಂತೆ, ಚಿತ್ರಗಳು ತೆರಿಗೆ ವಿನಾಯಿತಿ ಪಡೆಯಲು ಕೆಲವು ಅರ್ಹತೆಗಳನ್ನು ಹೊಂದಿರಬೇಕು, ಹಾಗೂ ಕರ್ನಾಟಕ ರಾಜ್ಯದಲ್ಲೇ ಸಂಪೂರ್ಣವಾಗಿ ಚಿತ್ರ ತಯಾರಾಗಿರಬೇಕು ಎಂಬ ಅಂಶಕ್ಕೆ ಒತ್ತು ನೀಡಿತು.

ಕನ್ನಡ ಮತ್ತು ಪ್ರಾಂತೀಯ ಭಾಷೆಗಳಾದ ತುಳು, ಕೊಂಕಣಿ, ಕೊಡವ, ಲಂಬಾಣಿ ಭಾಷೆಯ ಚಿತ್ರಗಳ ನಿರ್ಮಾಪಕರು ತೆರಿಗೆ ವಿನಾಯಿತಿ ಪಡೆಯಲು ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಿಗೆ ನೀಡಬೇಕಾದ ದಾಖಲೆಗಳಲ್ಲಿ, ಚಿತ್ರವು ರಾಜ್ಯದಲ್ಲಿ ಅಥವಾ ಹೊರಗಡೆ ನಿರ್ಮಾಣವಾದ ಬಗ್ಗೆ ಹತ್ತು ರೂಪಾಯಿ ಛಾಪಾ ಕಾಗದದಲ್ಲಿ ಬರೆದು ಕೊಟ್ಟ ಘೋಷಣಾ ಪತ್ರ, ಚಿತ್ರೀಕರಿಸಲಾದ ಸ್ಟುಡಿಯೋದಿಂದ ಪಡೆದ ಪ್ರಮಾಣಪತ್ರ, ಹೊರಾಂಗಣ ಘಟಕದ ಪ್ರಮಾಣಪತ್ರ ಹಾಗೂ ಛಾಯಾಗ್ರಹಣ ವರದಿ, ಸೆನ್ಸಾರ್ ಮಂಡಳಿಯ ಪ್ರಮಾಣ ಪತ್ರ, ಚಲನಚಿತ್ರ ಸಂಸ್ಕರಣ, ಧ್ವನಿಗ್ರಹಣದ ಬಗ್ಗೆ ಲ್ಯಾಬೊರೇಟರಿಯಿಂದ ಪ್ರಮಾಣ ಪತ್ರ, ಹತ್ತು ರೂಪಾಯಿ ಛಾಪಾ ಕಾಗದದ ಮೇಲೆ ಬರೆದ ಕಥಾ ಬರಹಗಾರರ ಪ್ರಮಾಣ ಪತ್ರ, ಚಿತ್ರವು ಪುನರಾವೃತ (ರೀಮೇಕ್) ಚಿತ್ರವಲ್ಲವೆಂದು ನಿರ್ಮಾಪಕರು ಬರೆದು ಕೊಟ್ಟ ಸ್ವಯಂ ಘೋಷಣಾ ಪತ್ರ ನೀಡಬೇಕು. ಛಾಪಾ ಕಾಗದದ ದಾಖಲೆಗಳನ್ನು ನೋಟರಿ ಸಮ್ಮುಖದಲ್ಲಿ ಪ್ರಮಾಣೀಕರಿಸಿ ಸಲ್ಲಿಸಬೇಕು. ಶೇಕಡಾ ೫೦ರ ತೆರಿಗೆ ವಿನಾಯಿತಿಗಾಗಿ ನಿರ್ಮಾಪಕರು ಸಲ್ಲಿಸುವ ಪ್ರಮಾಣ ಪತ್ರದಲ್ಲಿ 'ಕರ್ನಾಟಕ ರಾಜ್ಯದ ಒಳಗಡೆ' ಚಿತ್ರೀಕರಣ, ಡಬಿಂಗ್, ಸಂಸ್ಕರಣ, ಹಾಡುಗಳ ಧ್ವನಿಮುದ್ರಣ, ಪುನರ್ ಧ್ವನಿಮುದ್ರಣ, ಸಂಕಲನ, ಸಂಯೋಜನೆ (ಮಿಕ್ಸಿಂಗ್) ಮಾಡಿ ಚಿತ್ರ ತಯಾರಿಸಲಾಗಿದೆ ಎಂದು ಘೋಷಿಸಬೇಕಾಗಿತ್ತು.

ಇದೇ ಪ್ರಮಾಣ ಪತ್ರದಲ್ಲಿ ಮುಂದಿನ ಪ್ಯಾರಾದಲ್ಲಿ ನಿರ್ಮಾಪಕ ಘೋಷಿಸಬೇಕಾದ ಅಂಶವೆಂದರೆ, ಮುಂದೆ ಯಾವ ದಿನಾಂಕದಿಂದಲೂ ಸದರಿ ಸಂಸ್ಥೆಯ ಪರವಾಗಿ ನಾನು ಮೇಲೆ ಮಾಡಿರುವ ಘೋಷಣೆ ಸುಳ್ಳು ಎಂದು ಕಂಡುಬಂದ ಪಕ್ಷದಲ್ಲಿ, ಇಲ್ಲವೇ ಇನ್ನಾವುದೇ ಕಾರಣಕ್ಕಾಗಿಯಾಗಲೀ ಮೇಲೆ ತಿಳಿಸಿರುವ ಚಲನಚಿತ್ರವು ಕರ್ನಾಟಕ ಮನರಂಜನಾ ತೆರಿಗೆ (ತಿದ್ದುಪಡಿ) ಕಾಯ್ದೆ ೧೯೫೮ರ ೩ಸಿ ಮತ್ತು ೪ಎ ಹಾಗೂ ಪರಿಚ್ಛೇದ ೪೭(ಬಿ) ಮತ್ತು ಸರ್ಕಾರಿ ಆಜ್ಞೆ ಸಂಖ್ಯೆ ಐಟಿಪ್ಯ ೪೬, ಪಿಐಎಫ್ ೮೭, ದಿನಾಂಕ ೨-೯-೮೭ರ ಅನ್ವಯ ಈ ಸೌಲಭ್ಯಗಳನ್ನು ಹೊಂದಲು ಅವಕಾಶವಿಲ್ಲದಿದ್ದಲ್ಲಿ ಅದರಿಂದ ಕರ್ನಾಟಕ ಸರ್ಕಾರಕ್ಕೆ ಮನರಂಜನಾ ತೆರಿಗೆ ಸಂಗ್ರಹಣೆಯಲ್ಲಿ ಆಗಿರುವ ನಷ್ಟಕ್ಕೆ ನಾನು ಜವಾಬ್ದಾರನಾಗಿರುತ್ತೇನೆ ಮತ್ತು ಆ ರೀತಿ ವಿನಾಯಿತಿ ಪಡೆದು ನಾನು ಅನುಭವಿಸಿದ ತೆರಿಗೆಯನ್ನು ಮರುಪಾವತಿ ಮಾಡುತ್ತೇನೆಂದು ಪ್ರಮಾಣೀಕರಿಸುತ್ತೇನೆ ಎಂದಿತು.

ಈ ಘೋಷಣೆ ಹಾಗೂ ಇತರ ದಾಖಲೆಗಳನ್ನು ಆಧರಿಸಿ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು ನಿರ್ಮಾಪಕರಿಗೆ-'**ಸಂಬಂಧಪಟ್ಟವರೆಲ್ಲರಿಗೂ**' ಎಂಬ ತಲೆಬರಹದಡಿ ಮೆ।'ಅ' (ಚಿತ್ರ ನಿರ್ಮಾಣ ಸಂಸ್ಥೆಯ ಹೆಸರು) ತಯಾರಿಸಿರುವ 'ಇ' (ಚಿತ್ರದ ಹೆಸರು) ಕನ್ನಡ ವರ್ಣ ಚಲನಚಿತ್ರವು, ಸದರಿ ಚಿತ್ರದ ನಿರ್ಮಾಪಕರು ಈ ಇಲಾಖೆಗೆ ಒದಗಿಸಿದ ದಾಖಲೆಗಳ ಪ್ರಕಾರ ಎಲ್ಲಾ ಕಾರ್ಯಗಳನ್ನು '**ರಾಜ್ಯದ ಒಳಗೆ**' ಮಾಡಿ ನಿರ್ಮಿಸಲಾಗಿದೆ ಎಂದು ದೃಢೀಕರಿಸಲಾಗಿದೆ ಎಂದು ದೃಢೀಕರಣ ಪತ್ರ ನೀಡುತ್ತಿತ್ತು. ಇದರ ಪ್ರತಿಗಳನ್ನು ವಿತರಕನ ಮೂಲಕ ಪ್ರತಿಯೊಬ್ಬ ಪ್ರದರ್ಶಕ ಪಡೆದು, ಸ್ಥಳೀಯ ವಾಣಿಜ್ಯ ತೆರಿಗೆ ಅಧಿಕಾರಿಗಳಿಂದ ಮನರಂಜನಾ ತೆರಿಗೆ ವಿನಾಯಿತಿ ಪತ್ರ ಪಡೆಯುತ್ತಿದ್ದರು.

ಇಷ್ಟೆಲ್ಲ ಕಾನೂನಿನ ಜರಡಿ ಹಿಡಿದರೂ, ಈ ರಂಧ್ರಗಳಿಂದ ನೀರಿನಷ್ಟು ಸರಾಗವಾಗಿ ನಿರ್ಮಾಪಕರು ಸಾಗಿಬರುತ್ತಾರೆ. ಅಪವಾದವೆಂಬಂತೆ ಸಿಕ್ಕಿಬಿದ್ದ ಒಂದೆರಡು ಪ್ರಕರಣಗಳು ಸುದ್ದಿಯಾಗುತ್ತವೆ. ಅದಕ್ಕೆ ಕಾರಣಗಳೂ ಇವೆ. ಯಾಕೆಂದರೆ ಚಿತ್ರರಂಗ ಚತುರರ ಹಾಗೂ ಅತಿ ಚತುರರ ಕ್ಷೇತ್ರವೆಂದೇ ಹೇಳಬೇಕು. ಇಲ್ಲಿ ಸಲ್ಲುವವರು ಎಲ್ಲಿ ಬೇಕಾದರೂ ಸಲ್ಲುವರೆಂದೇ ಹೇಳಬಹುದು.

ಕನ್ನಡ ಚಿತ್ರರಂಗ ಕರ್ನಾಟಕದಲ್ಲೇ ನೆಲೆಸಲೆಂಬ ಹೆಬ್ಬಯಕೆ ರಾಜ್ಯ ಸರ್ಕಾರಕ್ಕಿದ್ದರೆ, ಅಷ್ಟೇ ವಿರುದ್ಧವಾದ ವ್ಯಾಮೋಹ ಚಿತ್ರರಂಗದ ಕೆಲವರಿಗೆ ರಾಜ್ಯದ ಹೊರಗಡೆ ಕಾರ್ಯ ಕೈಗೊಳ್ಳುವಿಕೆಯಲ್ಲಿ ಇರುವುದನ್ನು ಚಿತ್ರರಂಗದ ಇತಿಹಾಸದ ಉದ್ದಕ್ಕೂ ಕಾಣಬಹುದು. ಈ ಹಿನ್ನೆಲೆಯಲ್ಲಿ ರಾಜ್ಯದ ಹೊರಗಡೆ ತಾಂತ್ರಿಕ ಕಾರ್ಯ ಕೈಗೊಂಡು ಸಹಾಯಧನ, ತೆರಿಗೆ ವಿನಾಯಿತಿ ಪಡೆದು, ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ಮುಖಭಂಗವಾದ ಚಿತ್ರ 'ಶರವೇಗದ ಸರದಾರ'.

ಸರ್ಕಾರ ಒಂದು **ಆದೇಶ** (ಸಂಖ್ಯೆ:ಎಫ್‌ಡಿ ೮೧, ಸಿಇಎಫ್ ೧೯೮೯, ದಿನಾಂಕ:೧೩-೬-೮೯) ಪ್ರಕಟಿಸಿ 'ಶರವೇಗದ ಸರದಾರ' ಕನ್ನಡ ಕಥಾ ಚಿತ್ರಕ್ಕೆ ಶೇಕಡಾ ೫೦ ತೆರಿಗೆ ವಿನಾಯಿತಿ ನೀಡಿತು. ಈ ನಿರ್ಣಯದ ವಿರುದ್ಧ ರಾಜ್ಯ ಹೈಕೋರ್ಟಿನಲ್ಲಿ ಸಾರ್ವಜನಿಕ ಹಿತಾಸಕ್ತಿಯ ಎರಡು ದಾವೆಗಳನ್ನು ಕರ್ನಾಟಕ ಸರ್ಕಾರದ ವಿರುದ್ಧ ಹೂಡಲಾಯಿತು. ಅದರಲ್ಲಿ ಕರ್ನಾಟಕ ಸಿನಿ-ಜೂನಿಯರ್ ಆರ್ಟಿಸ್ಟ್ ಅಸೋಸಿಯೇಶನ್ ಒಬ್ಬ ವಾದಿಯಾಗಿ ಪ್ರತಿನಿಧಿಸಿತು.

ಸರ್ಕಾರದಲ್ಲಿ ಜಾರಿಯಿದ್ದ ಕ್ರಮದಂತೆ, ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು 'ಶರವೇಗದ ಸರದಾರ' ಚಿತ್ರಕ್ಕೆ ತೆರಿಗೆ ವಿನಾಯಿತಿ ಅರ್ಹತೆಯ ಬಗ್ಗೆ ಪ್ರಮಾಣ ಪತ್ರ ನೀಡಲು ಅಧಿಕಾರ ಹೊಂದಿದ್ದರು. ಆದರೆ ಅವರು ಈ ರೀತಿ ಪ್ರಮಾಣ ಪತ್ರ ನೀಡಲು ತಮ್ಮ ಅಸಹಾಯಕತೆ ತೋರಿದರು. ಇಲಾಖೆಯ ನಿರ್ದೇಶಕರು ಚಿತ್ರದ ನಿರ್ಮಾಪಕರಿಗೆ, ರಾಜ್ಯದಲ್ಲಿ ಲಭ್ಯವಿರುವ ಧ್ವನಿಗ್ರಹಣ, ಧ್ವನಿ ಮರು ಮುದ್ರಣದ ಸೌಲಭ್ಯ ಬಳಸಿಕೊಳ್ಳದೇ ರಾಜ್ಯದ ಹೊರಗಡೆ ಈ ಕಾರ್ಯ ಕೈಗೊಂಡ ಪಕ್ಷದಲ್ಲಿ ನಿಮ್ಮ ಚಿತ್ರವು ತೆರಿಗೆ ವಿನಾಯಿತಿ ಹಾಗೂ ಸಹಾಯಧನ ಪಡೆಯಲು ಅನರ್ಹವಾಗುವುದೆಂದು ತಿಳಿಸಿದರು. ಇದರ ನಂತರ ಚಿತ್ರದ ನಿರ್ಮಾಪಕರು ಇಲಾಖೆಯ ನಿರ್ದೇಶಕರನ್ನು ಉಪೇಕ್ಷಿಸಿ ಸಂಬಂಧಪಟ್ಟ ಸಚಿವರನ್ನು ಸಂಪರ್ಕಿಸಿ, ನಾಲ್ಕು ಟ್ರ್ಯಾಕುಗಳ ಸ್ಟೀರಿಯೋ ಫೋನಿಕ್ ಧ್ವನಿಮುದ್ರಣ ಕಾರ್ಯ ಮದ್ರಾಸಿನಲ್ಲಿ ಕೈಗೊಳ್ಳಲು ಅನುಮತಿ ಕೋರಿದರು. ಸಚಿವರ ಭರವಸೆಯ ಮೇಲೆ, ಇದರ ಧ್ವನಿಮುದ್ರಣ, ಮರು ಮುದ್ರಣ, ಧ್ವನಿಮಿಶ್ರಣ ಹಾಗೂ ೭೦ಎಂ.ಎಂ ಸಿಕ್ಸ್ ಟ್ರ್ಯಾಕ್ ಧ್ವನಿಲೇಪನ ಕಾರ್ಯವನ್ನು ಮದ್ರಾಸಿನಲ್ಲಿ ಕೈಗೊಳ್ಳಲಾಯಿತು. ಆದರೆ ಈ ವಿಷಯ ಕುರಿತು ಸಚಿವರು ನೀಡಿದ ಮೌಖಿಕ ಆಶ್ವಾಸನೆ, ಲಿಖಿತ ಅನುಮತಿ ಬಗ್ಗೆ ತಮಗೆ ಯಾವುದೇ ಮಾಹಿತಿ ಇರಲಿಲ್ಲವೆಂದು ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು ಸ್ಪಷ್ಟಪಡಿಸಿ, ತೆರಿಗೆ ವಿನಾಯಿತಿ

ಪಡೆಯಲು ನಿಯಮದಂತೆ ರಾಜ್ಯದಲ್ಲಿನ ಸೌಲಭ್ಯಗಳನ್ನು ಬಳಸುವುದು ಅನಿವಾರ್ಯವೆಂಬ ತಮ್ಮ ತಾರ್ಕಿಕ ಅಭಿಪ್ರಾಯ ತಿಳಿಸಿ, ಇಂತಹ ಸಂದರ್ಭದಲ್ಲಿ ವಿನಾಯಿತಿಯನ್ನು ನೀಡುವ ಕುರಿತು ತೀರ್ಮಾನ ಕೈಗೊಳ್ಳಲು ಸರ್ಕಾರಕ್ಕೇ ವಹಿಸಿಬಿಟ್ಟರು. ಈ ಚಿತ್ರದ ಕಡತದಲ್ಲಿರುವ ದಾಖಲೆಗಳ ಪ್ರಕಾರ ಹಣಕಾಸು ಕಮೀಶನರ್ ಅಭಿಪ್ರಾಯವೂ ಸಹ ಈ ಚಿತ್ರ ತೆರಿಗೆ ವಿನಾಯಿತಿಗೆ ಅರ್ಹವಾಗಿಲ್ಲವೆಂದು ದಾಖಲಿಸಿತ್ತು. ಈಗ ನಿರ್ಮಾಪಕರು ರಾಜ್ಯಪಾಲರಿಂದ ವಾರ್ತಾ ಇಲಾಖೆಯ ನಿರ್ದೇಶಕರಾದ ಡಾ|ಕೃಷ್ಣಮೂರ್ತಿ ಇವರಿಗೆ ಪತ್ರ ಬರೆಸಿ, ವಿಷಯ ಮರು ಪರಿಶೀಲಿಸಲು ಸೂಚಿಸಿದರು. ಈಗ ವಿಶೇಷ ಸಂದರ್ಭವೆಂದು ಪರಿಗಣಿಸಿ ಈ ಚಿತ್ರಕ್ಕೆ ತೆರಿಗೆ ವಿನಾಯಿತಿ ನೀಡುವ ಮನವಿ ಪರಿಶೀಲಿಸುವಂತೆ ವರದಿಯ ಕಡತ ರಾಜ್ಯಪಾಲರ ಮುಂದೆ ಬಂದಿತು. ರಾಜ್ಯಪಾಲರು ವಿನಾಯಿತಿ ನೀಡಲು ಒಪ್ಪಿಗೆ ನೀಡಿ, ಅದನ್ನು ಕಾರ್ಯಕಾರಿ ಸಮಿತಿಯು ಅನುಮೋದಿಸಿತು. ವಾರ್ತಾ ಇಲಾಖೆಯ ನಿರ್ದೇಶಕರ, ಹಣಕಾಸು ಕಮೀಶನರ್ ಅವರ ಅಭಿಪ್ರಾಯಗಳನ್ನು ಬದಿಗೊತ್ತಿ, ವಾರ್ತೆ, ಕನ್ನಡ ಮತ್ತು ಸಂಸ್ಕೃತಿ ಸಚಿವರು ವಿಧಾನಸಭೆಯಲ್ಲಿ ನೀಡಿದ ಆಶ್ವಾಸನೆಯ ಆಶ್ರಯ ಪಡೆದು ಇಂತಹ ಒಂದು ನಿರ್ಣಯ ಕೈಗೊಳ್ಳಲಾಯಿತು. ಹೀಗಾಗಿ ಸರ್ಕಾರ ತನ್ನ ಅಧಿಕಾರ ವ್ಯಾಪ್ತಿ ಮೀರಿ ಚಲಾಯಿಸಿ, ಸಂಬಂಧಪಟ್ಟ ಅಧಿ ನಿಯಮಗಳನ್ನು ಉಲ್ಲಂಘಿಸಿರುವುದು ಖಚಿತವಾಯಿತು. ರಾಜ್ಯಪಾಲರು ವಿಶೇಷ ಆಸಕ್ತಿ ತೋರಿ, ಅವರ ಕುಮ್ಮಕ್ಕಿನಿಂದ ಈ ನಿರ್ಣಯ ಕೈಗೊಳ್ಳಲಾಯಿತು. ಇಲಾಖೆಯ ನಿರ್ದೇಶಕರ ಪ್ರಮಾಣ ಪತ್ರವಿಲ್ಲದೇ, ಅವರ ತಾಂತ್ರಿಕ ಅಭಿಪ್ರಾಯ ಬದಿಗೊತ್ತಿ ಇಂತಹ ನಿರ್ಣಯದ ಮೂಲಕ ಸರ್ಕಾರದ ಆದಾಯಕ್ಕೆ ನಷ್ಟವಾಗಿದ್ದರೂ ತನ್ನ ನಿಲುವನ್ನು ಸಮರ್ಥಿಸಿಕೊಳ್ಳುತ್ತಿರುವುದು ವಿಶೇಷ ಎಂದು, ಅವರೂ ಆಪಾದನೆಗಳು ಸೂಕ್ತ, ಅರ್ಥಪೂರ್ಣ ಹಾಗೂ ದೃಢಪಟ್ಟಿರುವುದರಿಂದ ಈ ಆದೇಶವನ್ನು ರದ್ದುಪಡಿಸುವ ಮೂಲಕ ನ್ಯಾಯಾಂಗವು ಕರ್ನಾಟಕ ಚಲನಚಿತ್ರ ಇತಿಹಾಸದಲ್ಲಿ ಒಂದು ಅಪೂರ್ವ ದಾಖಲೆ ನಿರ್ಮಿಸಿತು.

ಕನ್ನಡ ಚಿತ್ರರಂಗಕ್ಕೆ ನುಂಗಲಾರದ ಬಿಸಿ ತುತ್ತು. ತಮ್ಮ ಚಿತ್ರವನ್ನು ಇದು ಪುನರಾವೃತ (ರೀಮೇಕ್) ಅಲ್ಲ ಎಂಬ ಘೋಷಣಾ ಪತ್ರ ನೀಡುವ ಹಂತ. ಸಾರ್ವಜನಿಕರ ಬಳಕೆಯ ವಸ್ತುವಾದಂತಹ ಸಿನಿಮಾ ಕುರಿತು ಸುಳ್ಳು ಹೇಳಿ ಜೀರ್ಣಿಸಿಕೊಳ್ಳುವುದು ಅಸಾಧ್ಯದ ಮಾತು. ಅದಲ್ಲದೇ ಸಾರ್ವಜನಿಕ ಕ್ಷೇತ್ರದಲ್ಲಿನ ವಿರುದ್ಧ ಆಶಯ-ಆಸಕ್ತಿಗಳ ಗುಂಪು ಇಂತಹ ಒಂದು ಅವಕಾಶವನ್ನು ಬಯಲಿಗೆಳೆಯದೇ ಬಿಡಲಾರವು. ಇದರಿಂದಾಗಿ ಅವಕಾಶ ಕೈ ತಪ್ಪಿ ಹೋದ ಪ್ರಕರಣಗಳು ಹಲವು. ಉದಾಹರಣೆಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾಜಿ ಸಚಿವರಾಗಿ, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಲು ಚುನಾವಣೆಗೆ ಸ್ಪರ್ಧಿಸಿ ಚರ್ಚೆಗೆ ಗ್ರಾಸವಾದ ಎಸ್.ರಮೇಶ್ ನಿರ್ಮಿಸಿದ ಚಿತ್ರ 'ಚೆಲುವ'. ಇದು ತೆಲುಗಿನ ಯಶಸ್ವಿ 'ಹಲೋ ಬ್ರದರ್ಸ್' ಚಿತ್ರದ ರೀಮೇಕ್ ಎಂದು ವಾರ್ತಾ ಮತ್ತು ಪ್ರಚಾರ ಇಲಾಖೆಯ ಅಧಿಕಾರಿಗಳೇ ಶಿಫಾರಸ್ಸು ಮಾಡಿದರೂ ತಮ್ಮ ಪ್ರಭಾವ ಬಳಸಿ ಶೇಕಡಾ ನೂರು ತೆರಿಗೆ ವಿನಾಯಿತಿ ಪಡೆದದ್ದುಂಟು. ಈ ತೆರಿಗೆ ವಿನಾಯಿತಿ ಚಕ್ರವ್ಯೂಹದ ಇನ್ನೊಂದು ಮುಖ, ನಿರ್ಮಾಪಕ ಒದಗಿಸಬೇಕಾದ ಛಾಯಾಗ್ರಹಣ ವರದಿ. ನಿತ್ಯ ಚಿತ್ರೀಕರಣದ ಒಂದೊಂದು ಅಡಿ ಚಿತ್ರಣದ ಉಲ್ಲೇಖ ಸಿಗುವ, ಛಾಯಾಗ್ರಾಹಕ ಹಾಗೂ ನಿರ್ದೇಶಕನ ಸಹಿ ಇರುವ ನಿತ್ಯ ದಾಖಲೆ. ಈ ವರದಿ ಸಹಾಯಧನ, ತೆರಿಗೆ ವಿನಾಯಿತಿ ಈ ಎರಡೂ ಸೌಲಭ್ಯಕ್ಕೂ ಬೇಕು. ನಿರ್ಮಾಪಕ ನಿರ್ದೇಶಕನ ನಡುವೆ ಯಾವುದೇ ಒಪ್ಪಂದ ಇಲ್ಲದ ಸಂದರ್ಭದಲ್ಲಿ, ನಿರ್ದೇಶಕ ಚಿತ್ರದ ಪ್ರಥಮ ಪ್ರತಿ ಬರುವವರೆಗೂ ತನ್ನ ಸಂಭಾವನೆಯ ಬೇಡಿಕೆ ಮುಂದಿಡದೆ ಕಾರ್ಯ ಮಾಡುವನು. ನಂತರ ಹೇಗಿದ್ದರೂ ಚಿತ್ರ ಬಿಡುಗಡೆಯ ಮುನ್ನ ತೆರಿಗೆ ವಿನಾಯಿತಿಗಾಗಿ ಛಾಯಾಗ್ರಹಣ ವರದಿಯ ಮೇಲೆ ತನ್ನ ಸಹಿ ಪಡೆಯಲು ಬಂದೇ ಬರುವನಲ್ಲ ಎಂಬ ಅಚಲ ನಂಬಿಕೆಯನ್ನು ವೃತ್ತಿರಹಸ್ಯವಾಗಿ ಬಳಸಿಕೊಂಡು ಸಹಕಾರ ನೀಡುವನು. ನಿರ್ದೇಶಕ ಒಮ್ಮೆ ಈ ದಾಖಲೆಗೆ ಸಹಿ ಹಾಕಿದರೆ, ನಂತರ ನಿರ್ಮಾಪಕನನ್ನು ಸಂಭಾವನೆ ವಸೂಲಿಗೆ ತಡೆಹಿಡಿಯುವುದು ಅಸಾಧ್ಯ. ಈ ವಿಷಯದಲ್ಲಿ ಉಳಿದ ಎಲ್ಲ ಸಂಘ, ಸಂಸ್ಥೆಗಳೂ ಸಹಾಯಧನ/ತೆರಿಗೆ ವಿನಾಯಿತಿ ದಾಖಲೆ ನೀಡುವ ಮುನ್ನ ಬಾಕಿ ಚುಕ್ತದ ತಂತ್ರ ಬಳಸುವರು.

ಇಂತಹ ಸಂದರ್ಭದಲ್ಲಿ ಸಿಕ್ಕಿಕೊಂಡ ಅನುಭವಿ ನಿರ್ಮಾಪಕ ಅಬ್ಬಾಯಿನಾಯ್ಡು 'ತಾಯಪ್ಪ' ಚಿತ್ರದ ನಿರ್ದೇಶಕ ಉಮಾಕಾಂತ್‌ಗೆ ಸಂಭಾವನೆ ಬಾಕಿ ನೀಡಲಾಗಲಿಲ್ಲ. ಅವರು ಛಾಯಾಗ್ರಹಣ ವರದಿಗೆ ಸಹಿ ಹಾಕಲು ತಿರಸ್ಕರಿಸಿದ್ದರಿಂದ, ನಿರ್ಮಾಪಕರು ತೆರಿಗೆ ವಿನಾಯಿತಿ ಸೌಲಭ್ಯ ಪಡೆಯದೇ ಚಿತ್ರ ಬಿಡುಗಡೆ ಮಾಡಿದರು. ನಂತರ ಚಿತ್ರದ ಸೋಲಿಗೆ ಇದೇ ಕಾರಣವಾಯಿತೆಂದು ಪತ್ರಿಕೆಗಳಲ್ಲಿ ತಮ್ಮ ಅಳಲನ್ನು ತೋಡಿಕೊಂಡರು.

ಅದರೆ ಇಂತಹದೇ ಸಂದರ್ಭದಲ್ಲಿ ನಿರ್ದೇಶಕನಿಗೆ ಸಂಭಾವನೆ ನೀಡದೆ, ಛಾಯಾಗ್ರಹಣ ವರದಿಗಳಿಗೆ ನಿರ್ಮಾಪಕ ತಾನೇ ನಿರ್ದೇಶಕನ ನಕಲಿ ಸಹಿ ಮಾಡಿ, ತೆರಿಗೆ ವಿನಾಯಿತಿ ಪಡೆದು, ಕಾನೂನಿನ ಕ್ರಮಕ್ಕೆ ಒಳಗಾಗಿ ಕಂಬಿ ಎಣಿಸಿದ ಪ್ರಕರಣವೂ ಇದೆ. ಕಲವು ಚಿತ್ರಗಳ ನಿರ್ಮಾಪಕರು ಅಕ್ರಮವಾಗಿ ಪಡೆದ ತೆರಿಗೆ ವಿನಾಯಿತಿ ಸೌಲಭ್ಯದ ಮೊತ್ತವನ್ನು, ನಂತರ ಸರ್ಕಾರಕ್ಕೆ ಮರಳಿಸಿದ ದಾಖಲೆಗಳೂ ಇವೆ. ಆದರೆ ಅವು ವೃತ್ತಿರಹಸ್ಯ (trade secret) ಸ್ಥಾನ ಪಡೆದಿದ್ದರಿಂದ ಅವುಗಳ ಮುಕ್ತ ಚರ್ಚೆ ಅಸಾಧ್ಯ.

ಇದೇ ಸಂದರ್ಭದಲ್ಲಿ ಸರ್ಕಾರದ ಎಡಬಿಡಂಗಿತನ ಕುರಿತು ಒಂದೆರಡು ಉಲ್ಲೇಖ ಮಾಡಲೇಬೇಕು. ಹಣಕಾಸು ಇಲಾಖೆ **ಆದೇಶ** (ಸಂಖ್ಯೆ:ಎಫ್‌ಡಿ ೪೦, ಸಿಇಎಕ್ಸ್ ೮೧ (ಪಿಎಫ್), ದಿನಾಂಕ ೮-೪-೮೧) ಹೊರಡಿಸಿ, ಕರ್ನಾಟಕ ಮನರಂಜನಾ ತೆರಿಗೆ (ತಿದ್ದುಪಡಿ) ಅಧಿನಿಯಮ ೧೯೮೧ರ ಅನ್ವಯ ಕನ್ನಡ, ತುಳು, ಕೊಂಕಣಿ, ಕೊಡವ ಭಾಷೆಯ, **ರಾಜ್ಯದ ಒಳಗಡೆ** ನಿರ್ಮಿಸಲಾದ ಚಿತ್ರಗಳು ಶೇಕಡಾ ೫೦ ತೆರಿಗೆ ವಿನಾಯಿತಿ ಸೌಲಭ್ಯ ಪಡೆಯಲು ಅರ್ಹ. ಆದರೆ ರಾಜ್ಯದಲ್ಲೇ ಚಿತ್ರ ತಯಾರಾಗಿರುವ ಕುರಿತು ನಿರ್ಮಾಪಕರಿಗೆ ಪ್ರಮಾಣ ಪತ್ರ ನೀಡಲು ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಿಗೆ ನಿರ್ದೇಶಿಸಿತು. ಇದೇ ಆದೇಶದಲ್ಲಿ ರಾಜ್ಯದಲ್ಲಿ ನಿರ್ಮಿಸಿದ 'ರೀಮೇಕ್', 'ಡಬ್' ಆದ ಕನ್ನಡ, ಕೊಂಕಣಿ, ತುಳು, ಕೊಡವ ಭಾಷೆಯ ಚಿತ್ರಗಳಿಗೂ ಇಂತಹ ಪ್ರಮಾಣ ಪತ್ರ ನೀಡಲು ಪರಿಶೀಲಿಸಬಹುದು ಎಂದು ತಿಳಿಸಿತು.

ಆದರೆ ಅಧಿಸೂಚನೆ (ಸಂಖ್ಯೆ: ಎಫ್‌ಡಿ ೧೩೦, ಸಿಇಎಕ್ಸ್ ೮೫, ದಿನಾಂಕ: ೨೩-೬-೮೬) ಇದರ ಪ್ರಕಾರ ಹೊರಡಿಸಿದ ಕರ್ನಾಟಕ ಮನರಂಜನಾ ತೆರಿಗೆ ಕಾಯ್ದೆ ೧೯೮೫ರ ವಿಭಾಗ ೩ಸಿ ಮತ್ತು ೪ಎ ಪ್ರಕಾರ **ರಾಜ್ಯದ ಹೊರಗಡೆ** ತಯಾರಾದ ಪ್ರಾದೇಶಿಕ ಭಾಷೆಯ ಚಿತ್ರಗಳಿಗೆ ಶೇಕಡಾ ೫೦ ಮನರಂಜನಾ ತೆರಿಗೆ ವಿನಾಯಿತಿ ನೀಡಲು, ಕಾಯಿದೆ ೪೭(ಬಿ) ಅನ್ವಯ ದೃಢೀಕರಿಸಿ ಪ್ರಮಾಣ ಪತ್ರವನ್ನು ನಿರ್ಮಾಪಕನಿಗೆ ಸಹಾಯಧನ ಮಂಜೂರು ಮಾಡುವ ಅಧಿಕಾರವುಳ್ಳ ಪ್ರಾಧಿಕಾರ ನೀಡಬೇಕು. ಈ ಅಧಿಕಾರವನ್ನು ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಿಗೆ ನೀಡಲು ಸರ್ಕಾರ **ಆದೇಶ** (ಸಂಖ್ಯೆ: ಪಿಟಿವೈ ೪೬, ಪಿಐಎಫ್ ೮೭, ದಿನಾಂಕ: ೨-೯-೮೭) ಹೊರಡಿಸಿತು.

ವಾಣಿಜ್ಯ ತೆರಿಗೆ ಆಯುಕ್ತರ ಕಚೇರಿ ಪತ್ರ (ಸಂಖ್ಯೆ: ಇಎಸ್‌ಟಿ'ಸಿ ಆರ್ ೪೫/೮೬-೮೭, ದಿನಾಂಕ: ೨೩-೯-೮೮, ಅನುಬಂಧ ಸಹಿತ) ಹೊರಡಿಸಿ, ಕರ್ನಾಟಕ ಅಧಿನಿಯಮ ೨೨/೮೫ರಲ್ಲಿ ತಿದ್ದುಪಡಿಯಾಗಿ ದಿನಾಂಕ ೧೫-೨-೮೬ರಿಂದ ಜಾರಿಗೆ ಬಂದಿರುವ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮದ ಪ್ರಕರಣ ೩ಸಿ(೧) ಮತ್ತು ೪-ಎ ಉಲ್ಲೇಖಿಸಿತು. ಇದರ ಪ್ರಕಾರ, ದಿನಾಂಕ ೧೫-೨-೮೬ಕ್ಕೆ ಮೊದಲೇ ಬಿಡುಗಡೆಯಾದ ಕನ್ನಡ ಚಿತ್ರಗಳು, ಅವುಗಳು ಎಲ್ಲೇ ತಯಾರಾಗಿರಲಿ, ಕಾಲಮಿತಿ ಇಲ್ಲದೆ ಶೇಕಡಾ ೫೦ರ ಮನರಂಜನಾ ತೆರಿಗೆ ವಿನಾಯಿತಿಗೆ ಅರ್ಹವಾಗಿದೆ. ದಿನಾಂಕ ೧೫-೨-೮೬ರ ಒಳಗೆ, ರಾಜ್ಯದಲ್ಲಿ ಮತ್ತು ರಾಜ್ಯದ ಹೊರಗೆ ತಯಾರಾದ ಕನ್ನಡ, ಕೊಡವ, ಕೊಂಕಣಿ ಹಾಗೂ ತುಳು ಭಾಷೆಯ ೧೦೨೮ ಚಿತ್ರಗಳ ಪಟ್ಟಿಯನ್ನು ಅಕ್ಷರ ಮಾಲೆಗೆ ಅನುಗುಣವಾಗಿ ಅನುಬಂಧದಲ್ಲಿ ಲಗತ್ತಿಸಿತು. ಈ ಎಲ್ಲ ಚಿತ್ರಗಳು ಶೇಕಡಾ ೫೦ರ ಮನರಂಜನಾ ತೆರಿಗೆ ವಿನಾಯಿತಿಗೆ ಅರ್ಹವಾಗಿವೆ, ಈ ಚಲನಚಿತ್ರಗಳಿಗೆ ಪ್ರತ್ಯೇಕವಾದ ಪ್ರಮಾಣ ಪತ್ರವನ್ನು ಸಲ್ಲಿಸಲು ಚಿತ್ರಪ್ರದರ್ಶಕರನ್ನು ಒತ್ತಾಯಿಸಬಾರದು ಎಂದು ನಿರ್ದೇಶಿಸಿತು.

೧೫-೨-೮೬ರಿಂದ ಈಚೆಗೆ, ರಾಜ್ಯದಲ್ಲಿ ಪ್ರಥಮವಾಗಿ ಬಿಡುಗಡೆಯಾದ ಕನ್ನಡ, ಕೊಡವ, ಕೊಂಕಣಿ ಮತ್ತು ತುಳು ಭಾಷೆಯ ಚಿತ್ರಗಳಿಗೆ ಮನರಂಜನಾ ತೆರಿಗೆಯ ದರದಲ್ಲಿ ಶೇಕಡಾ ೫೦ ವಿನಾಯಿತಿ ಇದೆ. ಈ ವಿನಾಯಿತಿ ರಾಜ್ಯದೊಳಗೆ ತಯಾರಾದ ಚಿತ್ರಗಳಿಗೆ ಕಾಲಮಿತಿ ಇಲ್ಲದೆ ಲಭಿಸುತ್ತದೆ ಮತ್ತು ರಾಜ್ಯದ ಹೊರಗೆ ತಯಾರಾದ ೩೧-೧೨-೮೭ಕ್ಕೆ ಮೊದಲೇ ಸೆನ್ಸಾರಾಗಿರುವ ಚಿತ್ರಗಳಿಗೆ, ಅವುಗಳಿಗೆ ರಾಜ್ಯದಲ್ಲಿ ಪ್ರಥಮವಾಗಿ ಬಿಡುಗಡೆಯಾದ ದಿನಾಂಕದಿಂದ ಆರು ತಿಂಗಳುಗಳ ಕಾಲ ಲಭಿಸುತ್ತದೆ. ಆದ್ದರಿಂದ ನಿರ್ಮಾಪಕರು ತಮ್ಮ ಚಿತ್ರದ ಬಿಡುಗಡೆಯ ಪ್ರಥಮ ದಿನಾಂಕವನ್ನು ರಾಜ್ಯ ಪತ್ರ (ಗೆಜೆಟ್)ದಲ್ಲಿ ಪ್ರಕಟಿಸಬೇಕಾಯಿತು. (ಆದರೆ ಈ ಕಾಲಮಿತಿ ೩೧-೧೨-೯೧ರಿಂದ ರದ್ದಾಯಿತು)

ಕರ್ನಾಟಕ ರಾಜ್ಯದ ಒಳಗೆ ತಯಾರಾದ ೧೫-೨-೮೬ರಿಂದೀಚೆಗೆ ಬಿಡುಗಡೆಯಾದ ಕನ್ನಡ, ಕೊಡವ, ಕೊಂಕಣಿ ಮತ್ತು ತುಳು ಭಾಷೆಯ ಚಿತ್ರಗಳಿಗೆ ಶೇಕಡಾ ೫೦ರ ಮನರಂಜನಾ ತೆರಿಗೆ ವಿನಾಯಿತಿಯನ್ನು ಪಡೆಯಲು ನಿರ್ಮಾಪಕರು, ವಾರ್ತಾ ಮತ್ತು

ಪ್ರಚಾರ ಇಲಾಖೆಯ ನಿರ್ದೇಶಕರಿಂದ ಪಡೆದ 'ಪ್ರಮಾಣ ಪತ್ರ' (ಆದರೆ ವಾಣಿಜ್ಯ ತೆರಿಗೆ ಕಚೇರಿ ೧೩-೫-೮೮ ರ ಪತ್ರದಲ್ಲಿ ತಿಳಿಸಿರುವ ಚಿತ್ರಗಳನ್ನು ಹೊರತುಪಡಿಸಿ) ಸಲ್ಲಿಸಬೇಕು. ಇನ್ನುಳಿದ ಎಲ್ಲಾ ಕನ್ನಡ ಚಿತ್ರಗಳಿಗೆ ಪ್ರಮಾಣ ಪತ್ರವನ್ನು ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಿಂದ ಪಡೆಯಲೇಬೇಕು ಎಂದು ತಿಳಿಸಿತು.

ಸರ್ಕಾರಿ **ಆದೇಶ** (ಸಂಖ್ಯೆ:ಐಟಿಪ್ಯ ೯೩, ಪಿಐಎಫ್ ೯೩, ದಿನಾಂಕ:೨೯-೬-೯೩) ಪ್ರಕಟಿಸಿ ಕನ್ನಡ ಚಲನಚಿತ್ರರಂಗವನ್ನು **ಉದ್ಯಮವೆಂದು** ಘೋಷಿಸಿತು. ಮತ್ತೆ **ಆದೇಶ** (ಸಂಖ್ಯೆ: ಪಿಟಿಪ್ಯ ೧೦೮, ಪಿಐಎಫ್ ೯೪, ದಿನಾಂಕ : ೩ ೬-೯೪) ಪ್ರಕಟಿಸಿ, ಕನ್ನಡ ಚಿತ್ರರಂಗದ ಕೆಲವು ಚಟುವಟಿಕೆಗಳನ್ನು ಕೈಗಾರಿಕೆ ಎಂದು ಘೋಷಿಸಿತು. ಇದರಲ್ಲಿ ಬೆಂಗಳೂರು ನಗರ ಸಂಕೀರ್ಣ ಪ್ರದೇಶವನ್ನು ಹೊರತುಪಡಿಸಿ, ರಾಜ್ಯದ ಇತರ ಪ್ರದೇಶಗಳಲ್ಲಿ ಅಧಿಕೃತವಾಗಿ ಮಂಜೂರಾತಿ ಪಡೆದು ನಿರ್ಮಿಸಲಾಗುವ ಚಲನಚಿತ್ರ ಮಂದಿರಗಳಿಗೆ ಅವುಗಳ ಒಟ್ಟು ಅಧಿಕೃತ ನಿರ್ಮಾಣ ವೆಚ್ಚದ ಶೇಕಡಾ ೧೦ರಷ್ಟು, ಗರಿಷ್ಠ ೫ ಲಕ್ಷ ರೂಪಾಯಿಗಳಿಗೆ ಸೀಮಿತಗೊಳಿಸಿ ಸಹಾಯಧನ ನೀಡುವುದಾಗಿ ಸಾರಿತು. ಇಂತಹ ಚಿತ್ರಮಂದಿರಗಳಲ್ಲಿ ಪ್ರದರ್ಶನ ಆರಂಭವಾದ ಪ್ರಥಮ ದಿನದಿಂದ ಮೂರು ವರ್ಷಗಳ ಅವಧಿಗೆ **ಪೂರ್ತಿಯಾಗಿ ಮನರಂಜನಾ ತೆರಿಗೆಯಿಂದ ವಿನಾಯಿತಿ** ನೀಡಲಾಗುವುದು. ಆದರೆ ಅಂತಹ ಅವಧಿಯಲ್ಲಿ ಚಲನಚಿತ್ರಮಂದಿರಗಳಲ್ಲಿ ಅವುಗಳ ಪ್ರದರ್ಶನ ಅವಧಿಯಲ್ಲಿ ಶೇಕಡಾ ೭೫ರಷ್ಟು ಪ್ರದರ್ಶನದ ಅವಧಿಯನ್ನು ಕನ್ನಡ ಚಲನಚಿತ್ರಗಳ ಪ್ರದರ್ಶನಕ್ಕಾಗಿಯೇ ಮೀಸಲಿಡಬೇಕು ಎಂದು ಸೂಚಿಸಿತು. ಆದರೂ ವಿವಿಧ ಟಿ.ವಿ ಚಾನೆಲುಗಳು, ಹಾಗೂ ಕೇಬಲ್ ಟಿ.ವಿಯ ದಾಳಿಯಿಂದ ತತ್ತರಿಸಿದ ಚಿತ್ರಪ್ರದರ್ಶಕರು ಈ ಯೋಜನೆಯತ್ತ ಕಣ್ಣೆತ್ತಿ ನೋಡಲೂ ಸಿದ್ಧರಿಲ್ಲದಿರುವುದು ಈ ಶತಮಾನದ ಬೆಳವಣಿಗೆ.

ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮದಲ್ಲಿನ ಹಂತಹಂತದ ಬದಲಾವಣೆಗಳನ್ನು ಗುರುತಿಸಲು ಇನ್ನು ಮುಂದೆ ಪ್ರಯತ್ನಿಸಲಾಗಿದೆ.

೧೯೫೬ರಲ್ಲಿ, ಹರಿದು ಹಂಚಿ ಹೋಗಿದ್ದ ಕನ್ನಡ ಪ್ರದೇಶಗಳು ಒಂದಾಗಿ, ವಿಶಾಲ ಮೈಸೂರು ರಾಜ್ಯ ರಚನೆ ಆಯಿತು. ಅದರೊಂದಿಗೆ ಹಲವಾರು ಸಮಸ್ಯೆಗಳೂ ಉದ್ಭವಿಸಿದವು. ಆಗ ಹೈದರಾಬಾದ್, ಮದ್ರಾಸ್ ಹಾಗೂ ಮೈಸೂರು ಪ್ರಾಂತ್ಯದಲ್ಲಿನ ಪ್ರದೇಶಗಳಲ್ಲಿ ಮನರಂಜನಾ ತೆರಿಗೆ ಬೇರೆ ಬೇರೆ ರೀತಿಯಲ್ಲಿ ವಿಧಿಸಿ ಸಂಗ್ರಹಿಸಲಾಗುತ್ತಿತ್ತು. ಅದನ್ನು ತಕ್ಷಣವೇ ೧೯೫೮ರಲ್ಲಿ ಅಧಿನಿಯಮ (ಆ್ಯಕ್ಟ್) ರಚಿಸಿ ಈ ಕುಂದು ನಿವಾರಿಸಿ, ಮನರಂಜನಾ ತೆರಿಗೆಯಲ್ಲಿ ಇಡೀ ರಾಜ್ಯಕ್ಕೆ ಸಮಾನ ಕಾಯ್ದೆ ಜಾರಿಗೊಳಿಸಲಾಯಿತು. ಇದರಲ್ಲಿ ಮನರಂಜನಾ ತೆರಿಗೆಯಾಗಿ ಸಂಗ್ರಹಿಸಿದ ಮೊತ್ತದಲ್ಲಿ ಶೇಕಡಾ ೯೦ , ಸಂಬಂಧ ಪಟ್ಟ ಸ್ಥಳೀಯ ಪ್ರಾಧಿಕಾರಗಳಿಗೆ, ಹಾಗೂ ಪ್ರತಿ ಪ್ರದರ್ಶನಕ್ಕೆ ೧ ರಿಂದ ೩ ರೂ.ನಂತೆ ಸಂಗ್ರಹಿಸಿದ ಪ್ರದರ್ಶನ ತೆರಿಗೆಯ ಆದಾಯವು ರಾಜ್ಯದ ಬೊಕ್ಕಸಕ್ಕೆ ಜಮಾ ಆಗುತ್ತಿತ್ತು.

೧೯೬೨ರ ಮನರಂಜನಾ ತೆರಿಗೆ ನಿಯಮವನ್ನು ಮನರಂಜನಾ ತೆರಿಗೆಯ ಮೇಲೆ ಮೇಲುಕರ (ಸರ್‌ಚಾರ್ಜ್) ವಿಧಿಸಲಾಯಿತು. ಇದರಲ್ಲಿ ವಿಧಿಸಲಾಗಿದ್ದ ಸಿನಿಮಾಟೋಗ್ರಾಫ್ ಪ್ರದರ್ಶನದ ಮೇಲಿನ ಸರ್‌ಚಾರ್ಜ್ ರದ್ದುಗೊಳಿಸಿ, ಮನರಂಜನಾ ತೆರಿಗೆ ಅಧಿನಿಯಮದಲ್ಲಿಯೇ ಮಾರ್ಪಾಡು ಮಾಡಿ, ೧೯೬೬ರಲ್ಲಿ ಮನರಂಜನಾ ತೆರಿಗೆಯನ್ನೇ ೨೫ಕ್ಕೆ ಹೆಚ್ಚಿಸಲಾಯಿತು. ಬೆಂಗಳೂರು ನಗರದಲ್ಲಿನ ಒಂದನೇ ದರ್ಜೆ ಚಿತ್ರಮಂದಿರಗಳಿಗೆ ಪ್ರತಿ ಪ್ರದರ್ಶನಕ್ಕೆ ಬೇರೆ ದರದ ಪ್ರದರ್ಶನ ತೆರಿಗೆ ವಿಧಿಸಲಾಯಿತು.

೧೯೭೪ರಲ್ಲಿ ಮತ್ತೆ ಮೇಲುಕರ ಮತ್ತು ಪ್ರದರ್ಶನ ತೆರಿಗೆ (ಶೋ ಟ್ಯಾಕ್ಸ್)ಗಳನ್ನು ವಿಧಿಸಿ ರಾಜ್ಯದ ಆದಾಯವನ್ನು ಹೆಚ್ಚಿಸಲಾಯ್ತು.

೧೯೭೬ರಲ್ಲಿ ರಾಜ್ಯದ ಬೊಕ್ಕಸಕ್ಕೆ ಬೆಂಬಲ ನೀಡಲು, ಮನರಂಜನ ತೆರಿಗೆ ಹಾಗೂ ಸರ್‌ಚಾರ್ಜ್ ಮೇಲೆ ಅಧಿಕೃತ ತೆರಿಗೆಯನ್ನು ಪ್ರದರ್ಶನದ ಟಿಕೆಟ್‌ಗಳ ಮೌಲ್ಯ ಆಧರಿಸಿ ವಿಧಿಸಿತು. ಇದೇ ಕಾಯ್ದೆಯಡಿ, ತೆರಿಗೆಗಳ್ಳತನ ತಡೆಯಲು ದಂಡದ ಮೊತ್ತ ಹೆಚ್ಚಿಸಿದ್ದಲ್ಲದೇ, ಪರ್ಯಾಯ ಶಿಕ್ಷೆಯಾಗಿ ಜೈಲುವಾಸದ ನಿಯಮವನ್ನು ಜಾರಿಗೊಳಿಸಲಾಯಿತು. ವಿದ್ಯುತ್ ಕೈಕೊಟ್ಟಾಗ, ತಾಂತ್ರಿಕ ಕಾರಣಗಳಿಂದ ಪ್ರದರ್ಶನ ರದ್ದಾದರೆ, ತೆರಿಗೆಯನ್ನು ಮರಳಿಸುವ ವಿಧಿಯನ್ನು ಕಲ್ಪಿಸಲಾಯಿತು.

ಗ್ರಾಮೀಣ ಕ್ಷೇತ್ರದ ಚಿತ್ರಮಂದಿರಗಳಲ್ಲಿ ತೆರಿಗೆ ಸೋರಿಕೆ ಪ್ರಕರಣಗಳು ಬೆಳಕಿಗೆ ಬರತೊಡಗಿದವು. ಇದನ್ನು ತಡೆಯಲು ಸರ್ಕಾರವು ೧೯೭೭ರಲ್ಲಿ, ಹತ್ತು ಸಾವಿರಕ್ಕಿಂತಲೂ ಕಡಿಮೆ ಜನಸಂಖ್ಯೆಯ ಕೇಂದ್ರಗಳಲ್ಲಿನ ಚಿತ್ರಮಂದಿರಗಳಿಗೆ 'ತುಂಬಿದ ಗೃಹ'ದಲ್ಲಿ ಪ್ರತಿ ಪ್ರದರ್ಶನಕ್ಕೆ ಸಂಗ್ರಹಿಸಲಾದ ಸಮಸ್ತ (gross) ಮೊತ್ತದ ಮೇಲೆ ಶೇಕಡಾ ೧೨ರಷ್ಟು ಎಂದು ನಿಶ್ಚಿತ ಮೊತ್ತದ ಮನರಂಜನಾ ತೆರಿಗೆಯ ಪರಿಷ್ಕೃತ ಯೋಜನೆ ಜಾರಿಗೊಳಿಸಿತು.

ಮನರಂಜನಾ ತೆರಿಗೆ ಅಧಿನಿಯಮ ೧೯೫೮ರ ಅನ್ವಯ ಸರ್ಕಾರಕ್ಕೆ ಬಾಕಿ ಬರಬೇಕಾದ ಮೊತ್ತವನ್ನು ಸ್ಥಳೀಯ ನ್ಯಾಯಾಧೀಶರು, ಅವರು ವಿಧಿಸಿದ ದಂಡದ ಮೊತ್ತವೆಂದಾದರೂ ಅದನ್ನು ಸಂಗ್ರಹಿಸಬೇಕೆಂದು ನಿರ್ಧರಿಸಿದಾಗ, ಕರ್ನಾಟಕ ಉಚ್ಚ ನ್ಯಾಯಾಲಯವು ದಂಡ ಸಂಹಿತೆ ಪ್ರಕ್ರಿಯೆ (CRPC) ಮೀರಿ ಇಂತಹ ಕ್ರಮ ಕೈಗೊಳ್ಳಲು ನ್ಯಾಯಾಧೀಶರು ಅಸಮರ್ಥರು ಎಂಬ ನಿಲುವು ತಾಳಿತು. ಆಗ ಸರ್ಕಾರ ೧೯೭೯ರಲ್ಲಿ ನಿಯಮಾವಳಿ ತಿದ್ದುಪಡಿ ಮಾಡಿ ದಂಡ ಸಂಹಿತೆ ಪ್ರಕ್ರಿಯೆ ಹೊರತುಪಡಿಸಿ, ಮೊತ್ತವನ್ನು ಸಂಗ್ರಹಿಸಬಹುದು ಎಂದು ಸ್ಪಷ್ಟಪಡಿಸಿತು.

೧೯೭೯ರ 'ಕರ್ನಾಟಕ ತೆರಿಗೆ ಮತ್ತು ಇತರ ಕಾನೂನುಗಳ (ತಿದ್ದುಪಡಿ) ಕಾಯ್ದೆ' ಅನ್ವಯ ಸೆನ್ಸಾರಿನಿಂದ 'ಎ' ಪ್ರಮಾಣ ಪತ್ರ ಪಡೆದ ಚಿತ್ರಗಳಿಗೆ ಶೇಕಡಾ ನೂರರಷ್ಟು ತೆರಿಗೆಯನ್ನು ಹೆಚ್ಚಿಸಿ ದ್ವಿಗುಣಗೊಳಿಸಲಾಗಿತ್ತು. ಹಲವಾರು ಮನವಿಗಳು ಬಂದ ಹಿನ್ನೆಲೆಯಲ್ಲಿ ೧೯೮೦ ರಲ್ಲಿ ಈ ಬಗೆಯ ಚಿತ್ರಗಳ ಮೇಲಿನ ತೆರಿಗೆಯ ದರ ಕಡಿತಗೊಳಿಸಿ ಇತರ ಚಿತ್ರಗಳಷ್ಟೇ ಎಂದು ಸರಿ ಮಾಡಲಾಯಿತು. ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮ ೫೮ ಇದಕ್ಕೆ ತಿದ್ದುಪಡಿ ಮಾಡಿ, ೧೯೭೯ ಅಂತರರಾಷ್ಟ್ರೀಯ ಮಕ್ಕಳ ವರ್ಷವಾದ್ದರಿಂದ ಮಕ್ಕಳ ಚಿತ್ರಗಳಿಗೆ ತೆರಿಗೆ ವಿನಾಯಿತಿ ನೀಡಿತು.

೧೯೮೧-೮೨ರ ರಾಜ್ಯ ಆಯವ್ಯಯ ಮಂಡನೆಯಲ್ಲಿ ಘೋಷಿಸಿದಂತೆ, ರಾಜ್ಯದಲ್ಲಿ ನಿರ್ಮಿಸಲಾದ ಕನ್ನಡ, ಕೊಂಕಣಿ, ತುಳು ಚಿತ್ರಗಳಿಗೆ ವಿಧಿಸಲಾದ ತೆರಿಗೆಯಲ್ಲಿ ಕಡಿತ ಹಾಗೂ ಸರ್ಕಾರದ ಆದಾಯಕ್ಕೂ ಧಕ್ಕೆ ಬರದಿರಲು, ಭಾಷೆ, ಕಲಾತ್ಮಕತೆ ಆಧರಿಸಿ ಚಿತ್ರದ ಮೇಲೆ ವಿಧಿಸಿದ ತೆರಿಗೆ ಮನ್ನಾ ಮಾಡಲು ನಿರ್ಧರಿಸಲಾಯಿತು. ಈ ಮೊದಲು ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿ ವಿಜೇತ ಚಿತ್ರಗಳಿಗೆ ನೀಡಲಾಗುತ್ತಿದ್ದ ತೆರಿಗೆ ವಿನಾಯಿತಿ ನೀತಿಯನ್ನು ಮುಂದುವರಿಸಿಕೊಂಡು ಬರಲು ನಿರ್ಧರಿಸಿತು.

ಈ ಮೊದಲು ಜಾರಿಯಲ್ಲಿದ್ದ ೧೯೫೮ರ ಮನರಂಜನಾ ತೆರಿಗೆ ಅಧಿನಿಯಮವನ್ನೂ ೧೫ ರಿಂದ ೨೫ ಸಾವಿರ ಜನಸಂಖ್ಯೆಯ ಕ್ಷೇತ್ರದಲ್ಲಿನ ಚಿತ್ರಮಂದಿರಗಳವರು ಸಂಗ್ರಹಣ ಸಾಮರ್ಥ್ಯದ ಸಮಸ್ತ ಮೊತ್ತದ ಮೇಲೆ ಶೇಕಡಾ ೨೫ ಅಥವಾ ಪ್ರತಿ ದಿವಸ ಪ್ರದರ್ಶಿತವಾಗುವ ಅತಿ ಹೆಚ್ಚು ಪ್ರದರ್ಶನದ ಸಂಗ್ರಹಣಾ ಸಾಮರ್ಥ್ಯದ ಸಮಸ್ತ ಮೊತ್ತದ ಮೇಲೆ ಶೇಕಡಾ ೨೦ರಷ್ಟು ಎಂದು ತೆರಿಗೆ ವಿಧಿಸಿತ್ತು. ಇದು ಜಾರಿ ಮಾಡುವುದು ಕಷ್ಟವಾಯಿತು. ಚಿತ್ರಮಂದಿರದವರೂ ಈ ಕರಭಾರ ತಡೆಯಲಾಗದೇ ಪರಿಹಾರಕ್ಕೆ ಮನವಿ ಮಾಡಿದರು. ಆಗ ನಿಯಮದಲ್ಲಿ ಮತ್ತೆ ತಿದ್ದುಪಡಿ ಮಾಡಿ ಮನರಂಜನಾ ತೆರಿಗೆ ಹಾಗೂ ಮೇಲುಕರ ನೀಡಬಹುದು ಅಥವಾ ಮನರಂಜನಾ ತೆರಿಗೆ ಮತ್ತು ಶೇಕಡಾ ೨೦ರಷ್ಟು, ಅನುಮತಿ ನೀಡಲಾದ ಅತಿ ಹೆಚ್ಚು ಪ್ರದರ್ಶನದ ಸಮಸ್ತ ಸಂಗ್ರಹಣಾ ಮೊತ್ತ ಆಧರಿಸಿ ನೀಡಬಹುದು ಎಂಬ ಎರಡು ಪರ್ಯಾಯ ಮಾರ್ಗ ಸೂಚಿಸಿ, ಚಿತ್ರಮಂದಿರದ ಮಾಲೀಕನಿಗೇ ಆಯ್ಕೆಯನ್ನು ಬಿಟ್ಟುಕೊಟ್ಟಿತು. ಈ ನಿಯಮದಡಿ ಡ್ರೈವ್-ಇನ್-ಚಿತ್ರಮಂದಿರಗಳು ಬರುವುದಿಲ್ಲವೆಂದು ಸ್ಪಷ್ಟಪಡಿಸಿತು. ಕನ್ನಡ, ಕೊಂಕಣಿ, ಕೊಡವ ಹಾಗೂ ತುಳು ಚಿತ್ರಗಳಿಗೆ ನೀಡಲಾದ ಶೇಕಡಾ ಐವತ್ತು ತೆರಿಗೆ ವಿನಾಯಿತಿಯನ್ನು, ರಾಜ್ಯದಲ್ಲಿ ನಿರ್ಮಿಸಿದ ಚಿತ್ರಗಳಿಗೆ ಮಾತ್ರ ಎಂದು ಸೀಮಿತಗೊಳಿಸಿತ್ತು. ಆದರೆ ಪ್ರಾಂತೀಯ ಭಾಷೆಗಳ ಚಿತ್ರರಂಗದ ಬೆಳವಣಿಗೆಯನ್ನು ಬಯಸುತ್ತ, ಈ ಮಿತಿಯನ್ನು ಸಹ ೧೯೮೩ರಲ್ಲಿ ಕಿತ್ತುಹಾಕಿತು.

೧೯೮೪-೮೫ರ ಆಯವ್ಯಯ ಮಂಡನೆಯಲ್ಲಿ ಮುಖ್ಯಮಂತ್ರಿಗಳು, ಸಂಯುಕ್ತ ಯೋಜನೆಯಡಿಯಲ್ಲಿನ ಚಿತ್ರಮಂದಿರಗಳಲ್ಲಿ ಮನರಂಜನಾ ತೆರಿಗೆ ಮನ್ನಾ ಮಾಡಿದ ಅಥವಾ ಕಡಿತಗೊಳಿಸಿದ ಲಾಭ ಪ್ರೇಕ್ಷಕರಿಗೆ ತಲುಪಿಸಲು ನಿರ್ಣಯಿಸಿತು. ೧೯೮೪ರಲ್ಲಿ ಈ ಕುರಿತು ಹಾಗೂ ತೆರಿಗೆಗಳ್ಳತನಕ್ಕೆ ಕನಿಷ್ಠ ದಂಡ ವಿಧಿಸಲು, ಕರ್ನಾಟಕ ತೆರಿಗೆ ಪರಿಶೀಲನ ಸಮಿತಿ ಸಲಹೆ ನೀಡಿತು.

೧೯೮೫ರಲ್ಲಿ ಪ್ರಶಸ್ತಿ ವಿಜೇತ ಚಿತ್ರಗಳು, ಶೈಕ್ಷಣಿಕ ಚಿತ್ರಗಳು ಹಾಗೂ ಮಕ್ಕಳ ಚಿತ್ರಗಳಿಗೆ ಸೂಕ್ತ ತೆರಿಗೆ ವಿಧಿಸಲು ಅಥವಾ ಉದಾರವಾಗಿ ತೆರಿಗೆ ವಿನಾಯಿತಿ ನೀಡಲು ಅನುಕೂಲವಾಗುವಂತೆ ಕೆಲವು ವ್ಯಾಖ್ಯೆಗಳನ್ನು ರೂಪಿಸಿ, ತಿದ್ದುಪಡಿ ಮಾಡಿತು.

೧೯೮೫-೮೬ರ ಆಯವ್ಯಯ ಮಂಡನೆಯ ಪರಿಣಾಮದಿಂದಾಗಿ ೧೯೮೫ರ ಮನರಂಜನಾ ತೆರಿಗೆ ಅಧಿನಿಯಮಕ್ಕೆ ತಿದ್ದುಪಡಿ ಮಾಡಿ, ರಾಜ್ಯದ ಹೊರಗಡೆ ತಯಾರಾದ ಪ್ರಾಂತೀಯ ಭಾಷಾ ಚಿತ್ರಗಳಿಗೆ ನೀಡುವ ಕರ ವಿನಾಯಿತಿಯನ್ನು ಒಂದು

ನಿಶ್ಚಿತ ಅವಧಿಯವರೆಗೆ ಮಾತ್ರ ಸೀಮಿತಗೊಳಿಸಿ, ಅಥವಾ ೧-೧-೮೭ರಿಂದ ಒಂದು ವರ್ಷ ಕಾಲಾವಧಿಗೆ ಹಾಗೂ ರಾಜ್ಯದಲ್ಲಿ ತಯಾರಾದ ಚಿತ್ರಗಳಿಗೆ ಈ ವಿನಾಯಿತಿಯನ್ನು ಮುಂದುವರಿಸುವ ನೀತಿ ಜಾರಿಗೆ ತಂದಿತು.

೧೯೮೭-೮೮ರ ಆಯವ್ಯಯ ಮಂಡನೆ ಭಾಷಣ ಆಧರಿಸಿ, ೧೯೫೮ರ ಕರ್ನಾಟಕ ಮನರಂಜನಾ ಅಧಿನಿಯಮದಲ್ಲಿ ಕಾಲಂ ೪(ಎ)ನಲ್ಲಿ ತಿದ್ದುಪಡಿ ಮಾಡಿತು.

೧೯೮೮ರಲ್ಲಿ ವಿಧಾನ ಸಭೆಯಲ್ಲಿ ಮುಖ್ಯಮಂತ್ರಿಗಳು ಮಾಡಿದ ಘೋಷಣೆಗೆ ಅನುಗುಣವಾಗಿ, ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ ೧೯೫೭ರ ಅನ್ವಯ ಕಥಾಚಿತ್ರಗಳ ಗುತ್ತಿಗೆಯ ಮೇಲೆ ವಿಧಿಸಿದ ತೆರಿಗೆಯನ್ನು ಮನ್ನಾ ಮಾಡಿದ್ದರ ಬದಲು ಪ್ರದರ್ಶನ ತೆರಿಗೆಯ ದರವನ್ನು ಹೆಚ್ಚಿಸಲಾಯಿತು.

ಕನ್ನಡ ಚಿತ್ರಗಳ ಪ್ರದರ್ಶಕರಿಗೆ ಪ್ರದರ್ಶನ ತೆರಿಗೆಯಲ್ಲಿನ ಹೆಚ್ಚಳದಲ್ಲಿ ಸ್ವಲ್ಪ ಪರಿಹಾರ ಒದಗಿಸುವ ದೃಷ್ಟಿಯಿಂದ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮ ೧೯೫೮ನ್ನು ತಿದ್ದುಪಡಿ ಮಾಡಲು ನಿರ್ಧರಿಸಿತು. ಇದು ತುರ್ತಾಗಿ ಆಗಬೇಕಾದ ಕಾರ್ಯವಾದ್ದರಿಂದ, ಆಗ ಕರ್ನಾಟಕ ಶಾಸಕರ ಪರಿಷತ್ತಿನ ಸಭೆಯು ಸೇರಿರಲಿಲ್ಲವಾದ್ದರಿಂದ, ಕರ್ನಾಟಕ ಮನರಂಜನಾ ಅಧಿನಿಯಮ ೧೯೮೭ ಅಧ್ಯಾದೇಶ (ಆರ್ಡಿನೆನ್ಸ್) ಜಾರಿಗೆ ತಂದಿತು. ಕ್ರಮೇಣ ವಿಧೇಯಕ (ಬಿಲ್ಲು) ರಚಿಸಿ ಅಧ್ಯಾದೇಶದ ಸ್ಥಾನವನ್ನು ವಹಿಸುವುದೆಂದು ತೀರ್ಮಾನಿಸಿತು.

ಕನ್ನಡ, ಕೊಡವ, ಕೊಂಕಣಿ ಅಥವಾ ತುಳು ಭಾಷೆಯಲ್ಲಿ ಅತ್ಯುತ್ತಮ ಕಥಾ ಚಿತ್ರ ಪ್ರಶಸ್ತಿ ಪಡೆದರೆ ಮಾತ್ರ ಮನರಂಜನಾ ತೆರಿಗೆಯಿಂದ ವಿನಾಯಿತಿ ದೊರಕುತ್ತಿರುವಾಗ, ಇತರೆ ಭಾಷೆಯ ಚಿತ್ರಗಳು ಯಾವುದೇ ಪ್ರಶಸ್ತಿ ಪಡೆದರೂ ತೆರಿಗೆ ವಿನಾಯಿತಿ ಪಡೆಯುವ ಅಸಂಗತತೆ ತೊಡೆದು ಹಾಕಲು, ಇತರೆ ಭಾಷೆಯ ಚಿತ್ರಗಳು ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದರೆ ಮಾತ್ರ ಮನರಂಜನಾ ತೆರಿಗೆ ವಿನಾಯಿತಿ ಮಂಜೂರಿಗೆ ಅರ್ಹವೆಂದು ೧೯೮೮ರಲ್ಲಿ ನಿರ್ಧರಿಸಿತು. ಇದರಲ್ಲೇ ಕನ್ನಡ, ಕೊಂಕಣಿ, ಕೊಡವ ,ತುಳು ಭಾಷೆಯಲ್ಲದೇ ಇತರ ಚಿತ್ರಗಳಿಗೂ ಸ್ವಲ್ಪ ಪರಿಹಾರ ಒದಗಿಸಲು, ಪ್ರದರ್ಶನ ತೆರಿಗೆಯಲ್ಲಿ ಕಡಿತ ಮಾಡಲಾಯಿತು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಮನವಿ ಪರಿಶೀಲಿಸಿದ ನಂತರ, ಶೇಕಡಾ ೫೦ ಮನರಂಜನಾ ತೆರಿಗೆ ವಿನಾಯಿತಿಯನ್ನು ಕನ್ನಡ, ಕೊಡವ, ಕೊಂಕಣಿ , ತುಳುವಿನ ಎಲ್ಲ ಚಿತ್ರಗಳಿಗೂ ಅವು ೩-೧೨-೮೭ಕ್ಕೂ ಮೊದಲೇ ಸೆನ್ಸಾರಾಗಿದ್ದರೆ, ಅವು ರಾಜ್ಯದಲ್ಲೇ ಅಥವಾ ಹೊರಗಡೆ ಎಲ್ಲೇ ನಿರ್ಮಾಣವಾಗಿದ್ದರೂ ಯಾವುದೇ ಕಾಲಮಿತಿ ಹಾಕದೆ ನೀಡುವ ಅಗತ್ಯ ಮನಗಂಡು ಕರ್ನಾಟಕ ಮನರಂಜನಾ ತೆರಿಗೆ (ತಿದ್ದುಪಡಿ) ಅಧ್ಯಾದೇಶ ೧೯೯೧ ಜಾರಿಗೆ ತಂದಿತು. ಇದೇ ಅವಧಿಯಲ್ಲಿ ಮೇಲುಕರ (ಸರ್‌ಚಾರ್ಜ್) ವಿಧಿಸಿ ಸಂಗ್ರಹಿಸಿದ ಮೊತ್ತದಿಂದ ಸ್ಥಳೀಯ ಪ್ರಾಧಿಕಾರಕ್ಕೆ ಪರಿಹಾರ ಒದಗಿಸುವ ತಿದ್ದುಪಡಿಯನ್ನು ರೂಪಿಸಿತು.

ಕನ್ನಡ ಚಲನಚಿತ್ರೋದ್ಯಮ ಕುರಿತು ಸಮಗ್ರ ನೀತಿ ರೂಪಿಸಲು ರಚಿಸಲಾಗಿದ ವಿ.ಎನ್.ಸುಬ್ಬರಾವ್ ಅಧ್ಯಕ್ಷತೆಯ ಸಮಿತಿಯು ನೀಡಿದ ವರದಿಗೆ ಚಾಲನೆ ನೀಡಲು ಅವಶ್ಯಕ ಅಂಶವಾಗಿ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮ ೧೯೫೮ನ್ನು ತಿದ್ದುಪಡಿ ಮಾಡುವುದು ಅತ್ಯವಶ್ಯಕವೆನಿಸಿತು.ಈ ತಿದ್ದುಪಡಿಯಲ್ಲಿ,

೧) ವಿಡಿಯೋ ಹೊರತು ಪಡಿಸಿ ಸಿನಿಮಾಟೋಗ್ರಾಫ್ ಪ್ರದರ್ಶನಗಳ ಮೇಲೆ, ಪ್ರತಿ ಪ್ರದರ್ಶನಕ್ಕೆ ೧೫ ಸಾವಿರಕ್ಕೂ ಹೆಚ್ಚು ಜನಸಂಖ್ಯೆಯ ಕ್ಷೇತ್ರದ ಚಿತ್ರಮಂದಿರಗಳಿಗೆ, ಅದರ ಸಮಸ್ತ ಗಳಿಕೆಯ ಆಧಾರದ ಮೇಲ ತೆರಿಗೆ ವಿಧಿಸಲು,

೨) ಬೇರೆ ಯಾವುದೇ ಭಾಷೆಯ ಚಿತ್ರಕ್ಕೆ ಕೇಂದ್ರ ಸೆನ್ಸಾರ್ ಮಂಡಳಿಯು ಪ್ರಮಾಣ ಪತ್ರ ನೀಡಿದ ಹತ್ತು ವರ್ಷಗಳ ನಂತರ ಕನ್ನಡದಲ್ಲಿ ಇಂತಹ ಚಿತ್ರ ರೀಮೇಕ್ ಆದರೆ, ಈ ಚಿತ್ರಗಳ ಮೇಲೆ ವಿಧಿಸಲಾಗುವ ಮನರಂಜನಾ ತರಿಗೆ ಶೇಕಡಾ ಅರ್ಧ ದರದಲ್ಲಿ ವಿಧಿಸಲು,

೩) ಅಂತರರಾಷ್ಟ್ರೀಯ ಚಿತ್ರೋತ್ಸವದ ಪನೋರಮಾ ವಿಭಾಗದಲ್ಲಿ ಆಯ್ಕೆಯಾದ, ರಾಜ್ಯ ಅಥವಾ ಕೇಂದ್ರದಿಂದ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ ಯಾವುದೇ ಭಾಷೆಯ ಚಿತ್ರ ಆಧರಿಸಿ ಕನ್ನಡದಲ್ಲಿ ರೀಮೇಕ್ ಚಿತ್ರ ತಯಾರಿಸಿದ್ದರೆ ಅವುಗಳಿಗೆ ಶೇಕಡಾ ಅರ್ಧದರದಲ್ಲಿ ಮನರಂಜನಾ ತೆರಿಗೆ ವಿಧಿಸಲು,

೪) ಹದಿನೈದು ಸಾವಿರಕ್ಕೂ ಹೆಚ್ಚು ಜನ ಸಂಖ್ಯೆಯುಳ್ಳ ಪ್ರದೇಶದಲ್ಲಿನ ಚಿತ್ರಮಂದಿರಗಳಲ್ಲಿ ಎಷ್ಟು ಪ್ರದರ್ಶನಗಳು ಆದವೋ ಇಲ್ಲವೋ ಎಂಬುದು ಗಣನೆಗೆ ತಂದುಕೊಳ್ಳದೇ, ಪ್ರತಿ ಪ್ರದರ್ಶನದ ಸಮಸ್ತ ಸಂಗ್ರಹಣಾ ಸಾಮರ್ಥ್ಯ ಆಧರಿಸಿ, ನಿಗದಿತ ಮೊತ್ತವನ್ನು ತೆರಿಗೆಯಾಗಿ ವಿಧಿಸಲು,

೫) ಅಂತರರಾಷ್ಟ್ರೀಯ ಮಾನ್ಯತೆ ಪಡೆದ ಯಾವುದೇ ಪ್ರಶಸ್ತಿ, ಯಾವುದೇ ರಾಜ್ಯ ಅಥವಾ ರಾಷ್ಟ್ರ ಪ್ರಶಸ್ತಿ ಪಡೆದ ಕನ್ನಡ, ತುಳು, ಕೊಡವ, ಕೊಂಕಣಿ ಭಾಷೆಯ ಅತ್ಯುತ್ತಮ ಕಥಾ ಚಿತ್ರಕ್ಕೆ, ಒಂದು ವರ್ಷ ಅವಧಿಗಾಗಿ ಮನರಂಜನಾ ತೆರಿಗೆ ವಿನಾಯಿತಿ ನೀಡಿಕೆ ನಿರ್ಧರಿಸಲು,

೬) ಮೇಲೆ ತಿಳಿಸಲಾದಂತಹ ಪ್ರಶಸ್ತಿ ಪಡೆದ, ಮೇಲೆ ಉಲ್ಲೇಖಿಸಲಾದ ಭಾಷೆಯ ಚಿತ್ರಗಳನ್ನು ಹೊರತುಪಡಿಸಿ ಇತರ ಭಾಷೆಯ ಅತ್ಯುತ್ತಮ ಚಿತ್ರಗಳಿಗೆ ಆರು ತಿಂಗಳ ಅವಧಿಗೆ ಮನರಂಜನಾ ತೆರಿಗೆ ವಿನಾಯಿತಿ ನೀಡಿಕೆ ನಿರ್ಧರಿಸಲು,

೭) ರಾಜ್ಯದಲ್ಲಿ ನಿರ್ಮಿಸಲಾದ ಕನ್ನಡ, ತುಳು, ಕೊಂಕಣಿ, ಕೊಡವ ಭಾಷೆಯ ಚಿತ್ರಗಳ ಪ್ರದರ್ಶನಕ್ಕೆ ಅರ್ಧದಷ್ಟು ದರದ ತೆರಿಗೆ ವಿಧಿಸಲು,

೮) ರಾಜ್ಯದ ಹೊರಗಡೆ ನಿರ್ಮಿಸಲಾದ, ಆದರೆ ೩೧ ಡಿಸೆಂಬರ್ ೧೯೮೭ರ ಒಳಗೆ ಸೆನ್ಸಾರ್‌ನಿಂದ ಪ್ರಮಾಣ ಪತ್ರ ಪಡೆದ ಕನ್ನಡ, ತುಳು, ಕೊಂಕಣಿ, ಕೊಡವ ಭಾಷೆಯ ಚಿತ್ರಗಳ ಪ್ರದರ್ಶನದ ಮೇಲೆ ಅರ್ಧದಷ್ಟು ದರದಲ್ಲಿ ತೆರಿಗೆ ವಿಧಿಸಲು, ವಿಧೇಯಕವನ್ನು ೧೯೯೪ರಲ್ಲಿ ಜಾರಿಗೆ ತರಲಾಯಿತು.

೧೯೯೬-೯೭ರ ಹಾಗೂ ೧೯೯೯-೨೦೦೦ದ ಆಯವ್ಯಯ ಮಂಡನೆಯ ಭಾಷಣದಲ್ಲಿನ ಅಂಶ ಆಧರಿಸಿ, ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮಕ್ಕೆ ಮತ್ತೊಂದಿಷ್ಟು ತಿದ್ದುಪಡಿ ೧೯೯೬ರಲ್ಲಿ ಹಾಗೂ ೨೦೦೧ರಲ್ಲಿ ಕೈಗೊಳ್ಳಲಾಯಿತು.

ಕರ್ನಾಟಕ ರಾಜ್ಯ ಮನರಂಜನಾ ತೆರಿಗೆ ಅಧಿನಿಯಮ ೧೯೫೮ರಲ್ಲಿ, ನಿಯಮ ೭ (೧೯)ರ ಪ್ರಕಾರ, ರಾಜ್ಯ ಸರ್ಕಾರವು ಹೊರಡಿಸಿ, ಕನ್ನಡ ಮತ್ತು ಕರ್ನಾಟಕ ಪ್ರಾಂತೀಯ ಭಾಷೆಗಳ ಚಿತ್ರಗಳಿಗೆ ಆರು ವಾರಗಳ ಅವಧಿಗೂ ಹೆಚ್ಚದಂತೆ ಹಾಗೂ ಉಳಿದ ಭಾಷೆಗಳಿಗೆ ಮೂರು ವಾರಗಳ ಅವಧಿಗೂ ಮೀರದಂತೆ, ಮನರಂಜನಾ ತೆರಿಗೆ ನೀಡುವಿಕೆಯು ಕಡಿತ ಅಥವಾ ಮನ್ನಾ ಮಾಡಬಹುದು. ಈ ಸೌಲಭ್ಯವನ್ನು ಲೋಕೋಪಕಾರಿ, ದಾನ, ಧಾರ್ಮಿಕ ಉದ್ದೇಶಗಳಿಗೆ, ಸಂಪೂರ್ಣವಾಗಿ ಶೈಕ್ಷಣಿಕ ಸ್ವರೂಪದ ಮನರಂಜನೆಗೆ, ಲಾಭಾಂಶವಿಲ್ಲದ ಚಿತ್ರಸಮಾಜದ ಪ್ರದರ್ಶನಗಳಿಗೆ, ಶೈಕ್ಷಣಿಕ, ಸಾಂಸ್ಕೃತಿಕ, ವೈಜ್ಞಾನಿಕ ಉದ್ದೇಶಗಳಿಗೆ ಮನರಂಜನೆ ನೀಡುವ ಸಂಸ್ಥೆಗಳು ಪಡೆಯಬಹುದು. ನಿಯಮ (೧೬) ಪ್ರಕಾರ, ಯಾವುದೇ ಚಿತ್ರ ಕೇಂದ್ರ ಅಥವಾ ರಾಜ್ಯ ಸರ್ಕಾರದಿಂದ ಪ್ರಶಸ್ತಿ ಪಡೆದಿದ್ದರೆ, ಅಥವಾ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ಸಂಸ್ಥೆ, ಶೈಕ್ಷಣಿಕ ಅಥವಾ ಮಕ್ಕಳ ಚಿತ್ರವೆಂಬ ಪ್ರಮಾಣ ಪತ್ರ ನೀಡಿದ್ದರೆ, ಕನ್ನಡ ಮತ್ತು ಪ್ರಾಂತೀಯ ಭಾಷೆಗಳಲ್ಲದೇ ಇತರ ಚಿತ್ರಗಳಲ್ಲಿನ ಭಾಷೆ, ಕಥಾವಸ್ತು, ಕಲಾತ್ಮಕ ಮೌಲ್ಯ ಅಥವಾ ಇನ್ನಿತರ ಯಾವುದೇ ಅಂಶಗಳನ್ನು, ರಾಜ್ಯ ಸರ್ಕಾರ ತೆರಿಗೆ ವಿನಾಯಿತಿ ಉದ್ದೇಶಕ್ಕಾಗಿ ರಚಿಸಿದ ಸಮಿತಿಯು ಗುರುತಿಸಿ ಪ್ರಮಾಣ ಪತ್ರ ನೀಡಿದರೆ, ಅಂತಹ ಚಿತ್ರಗಳು ಶೇಕಡಾ ಐವತ್ತು ತೆರಿಗೆ ವಿನಾಯಿತಿಗೆ ಅರ್ಹತೆ ಪಡೆಯುತ್ತವೆ.

ನಂತರ ಈ ನಿಯಮದಲ್ಲಿ ತಿದ್ದುಪಡಿ ಮಾಡುವ ಮೂಲಕ ಕೇಂದ್ರ ಅಥವಾ ಅಂತರರಾಷ್ಟ್ರೀಯ ಪ್ರಶಸ್ತಿ ಪಡೆದ ಕನ್ನಡ ಮತ್ತು ಕರ್ನಾಟಕ ಪ್ರಾದೇಶಿಕ ಭಾಷೆಯ ಮಕ್ಕಳ ಚಿತ್ರಗಳು ಒಂದು ವರ್ಷದ ಅವಧಿಗೆ ಹಾಗೂ ಕನ್ನಡೇತರ ಮಕ್ಕಳ ಚಿತ್ರಗಳಿಗೆ ಬಿಡುಗಡೆಯಾದ ದಿನದಿಂದ ಆರು ತಿಂಗಳ ಅವಧಿಗೆ, ಶೇಕಡಾ ನೂರು ತೆರಿಗೆ ವಿನಾಯಿತಿಗೆ ಅರ್ಹವಾದವು.

ಈ ಸೌಲಭ್ಯ ಪಡೆದು ಕರ್ನಾಟಕದಲ್ಲಿ ಇಂಗ್ಲಿಷ್ ಭಾಷೆಯ 'ಏಪ್ ಆ್ಯಂಡ್ ಸೂಪರ್ ಏಪ್' ಹತ್ತು ವಾರಗಳ ಕಾಲ ಎಲ್ಲ ವರ್ಗದವರನ್ನೂ ರಂಜಿಸಿತು. ರವಿಚಂದ್ರನ್ ನಿರ್ದೇಶನದ 'ಶಾಂತಿ ಕ್ರಾಂತಿ' ಮಕ್ಕಳ ಚಿತ್ರ ಎಂದು ಹೇಳಿಕೊಂಡು ಶೇಕಡಾ ನೂರು ತೆರಿಗೆ ವಿನಾಯಿತಿ ಪಡೆದು, ಉದ್ಯಮದಲ್ಲಿ ಅಚ್ಚರಿ ಮೂಡಿಸಿತು.




# ಉದ್ಯಮದ ಮಿತ್ರ - ಮಾರ್ಗದರ್ಶಿ

ಮೂಕಿಚಿತ್ರ ನಮ್ಮ ದೇಶಕ್ಕೆ ಬಂದದ್ದು ೧೯ನೇ ಶತಮಾನದ ಕೊನೆಯಲ್ಲಿ; ೧೮೯೬ರ ಜುಲೈ ೭ರಂದು. ಇದಾದ ಮೂರು ವರ್ಷಗಳಲ್ಲಿ, ಅಂದರೆ ೧೯೧೨ರಿಂದ ನಮ್ಮಲ್ಲೂ ಮೂಕಿಚಿತ್ರಗಳ ನಿರ್ಮಾಣ ಪ್ರಾರಂಭವಾಯಿತು. ೧೯೩೧ರಲ್ಲಿ ಭಾರತದ ಮೊತ್ತಮೊದಲ ಮಾತಿನ ಚಿತ್ರ 'ಆಲಂ ಆರಾ' ಬಿಡುಗಡೆಗೊಂಡು ಟಾಕಿಚಿತ್ರಗಳ ಯುಗ ಪ್ರಾರಂಭವಾಯಿತು. ೧೯೩೪ರಿಂದ ಮೂಕಿ ಚಿತ್ರಗಳ ನಿರ್ಮಾಣ ಸಂಪೂರ್ಣವಾಗಿ ನಿಂತುಹೋಯಿತು.

ಭಾರತಕ್ಕೆ ಸಿನಿಮಾ ಕಾಲಿಡುವ ಮೊದಲೇ ದೇಶದಲ್ಲಿ ಇಂಗ್ಲಿಷ್ ಮತ್ತು ಪ್ರಾದೇಶಿಕ ಭಾಷಾ ಪತ್ರಿಕೆಗಳು ಭದ್ರವಾಗಿ ನೆಲೆಯೂರಿದ್ದವು. 'ದಿ ಟೈಮ್ಸ್ ಆಫ್ ಇಂಡಿಯಾ' (೧೮೩೮), 'ದಿ ಪಯನೀರ್' (೧೮೬೫), 'ದಿ ಅಮೃತ ಬಜಾರ್ ಪತ್ರಿಕಾ' (೧೮೬೮), 'ದಿ ಸ್ಟೇಟ್ಸ್‌ಮನ್' (೧೮೭೫) ಮತ್ತು 'ದಿ ಹಿಂದೂ' (೧೮೭೮) ಆ ವೇಳೆಗಾಗಲೇ ದೇಶದ ದೊಡ್ಡ ಪತ್ರಿಕೆಗಳೆನಿಸಿದ್ದವು. 'ಬಾಂಬೆ ಸಮಾಚಾರ್' ಗುಜರಾತಿ ಪತ್ರಿಕೆ ೧೮೨೨ರಲ್ಲೇ ಪ್ರಕಟಣೆ ಪ್ರಾರಂಭಿಸಿತ್ತು. ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ಪ್ರಕಟಣೆ ಆರಂಭವಾದದ್ದು ೧೮೪೩ರಲ್ಲಿ.

ಕ್ರೈಸ್ತ ಮಿಶನರಿಗಳು ಮತ ಪ್ರಚಾರಕ್ಕಾಗಿ ಪ್ರಾರಂಭಿಸಿದ ಪತ್ರಿಕೋದ್ಯಮ ಕ್ರಮೇಣ ಸುದ್ದಿಪ್ರಸಾರ, ಸಾಹಿತ್ಯ, ಶಿಕ್ಷಣ ಪ್ರಸರಣ, ವಿವಿಧ ಕಲೆಗಳು, ಆರೋಗ್ಯ, ಆಧ್ಯಾತ್ಮ ಹೀಗೆ ಹತ್ತಾರು ಕ್ಷೇತ್ರಗಳಿಗೆ ವಿಸ್ತರಿಸಿತು. ಪ್ರಾರಂಭದಲ್ಲಿ ಬಹುತೇಕ ಎಲ್ಲ ದೇಶ ಭಾಷಾ ಪತ್ರಿಕೆಗಳ ಮೂಲ ಉದ್ದೇಶ ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಗೆ ಒತ್ತಾಸೆ ನೀಡುವುವಾಗಿತ್ತು. ಕನ್ನಡ ಪತ್ರಿಕೋದ್ಯಮವೂ ಅದಕ್ಕೆ ಹೊರತಾಗಿರಲಿಲ್ಲ.

ಕನ್ನಡ ಭಾಷೆಯ ಪತ್ರಿಕೆಗಳೂ ಮೊದಲಲ್ಲಿ ಇದೇ ಕೆಲಸವನ್ನು ಮಾಡಿದವು. ಪತ್ರಿಕೆ ಓದುವ ಅಭ್ಯಾಸ ಜನರಲ್ಲಿ ಬೇರೂರಿದಂತೆ ಜನ ಬಯಸಿದ್ದೆಲ್ಲವನ್ನೂ ಪತ್ರಿಕೆಗಳು ನೀಡುವುದು ಅನಿವಾರ್ಯವಾಯಿತು. ಈ ವಿಷಯದಲ್ಲಿ ಪೈಪೋಟಿ ಪ್ರಾರಂಭವಾಯಿತು.

ಮುಂಬಯಿನ 'ಟೈಂಸ್ ಆಫ್ ಇಂಡಿಯಾ' ಪತ್ರಿಕೆಯು ೧೮೯೬ರ ಜುಲೈ ೭ರ ಸಂಚಿಕೆಯಲ್ಲಿ ಪ್ರಕಟವಾದ ಲ್ಯುಮಿಯೆರ್ ಸೋದರರ ಸಿನಿಮಾಟೋಗ್ರಾಫ್ ಪ್ರದರ್ಶನದ ಜಾಹಿರಾತಿನೊಂದಿಗೆ ಚಲನಚಿತ್ರ ಹಾಗೂ ಪತ್ರಿಕೆಗಳ ನಂಟು ಆರಂಭವಾಯಿತು. ಅಂದು ಆರಂಭವಾದ ನಂಟು ಇಂದು ಮತ್ತಷ್ಟು ಗಾಢವಾಗಿ, ವ್ಯಾಪಕವಾಗಿ ಹರಡಿದೆ. ಲ್ಯುಮಿಯೆರ್ ಸೋದರರ ಕಿರುಚಿತ್ರಗಳ ಬಗ್ಗೆ ಒಂದು ವಿಮರ್ಶಾತ್ಮಕವಾದ ಹಾಗೂ ಮೆಚ್ಚುಗೆಯ ವರದಿಯನ್ನು 'ಟೈಂಸ್ ಆಫ್ ಇಂಡಿಯಾ' ಪ್ರಕಟಿಸಿತು. ನಾಲ್ಕು ವಾರಗಳ ಕಾಲ ಕಿರುಚಿತ್ರ ಪ್ರದರ್ಶನದ ನಂತರ, ಆರಂಭದಲ್ಲಿ ಇದ್ದ ಆಕರ್ಷಣೆ ಕಡಿಮೆಯಾಯಿತು. ಪ್ರೇಕ್ಷಕರ ಸಂಖ್ಯೆ ಇಳಿಮುಖವಾದಾಗ ಅಪೂರ್ವವೆನಿಸಿದ ಚಿತ್ರಗಳ ಬಗ್ಗೆ ಪಾರ್ಸಿ ಮಿತ್ರರು ಸಾಕಷ್ಟು ಆಸಕ್ತಿ ತೋರುತ್ತಿಲ್ಲ, ಎಂದು ಆಕ್ಷೇಪಿಸಿ, 'ಟೈಂಸ್ ಆಫ್ ಇಂಡಿಯಾ' ಸಂಪಾದಕೀಯವನ್ನು ಬರೆಯಿತು.

ಚಲನಚಿತ್ರಗಳು ಹೊಸ ಆವಿಷ್ಕಾರವೆನಿಸಿದರೂ ಮುಂಬಯಿಯಲ್ಲಿ ಅವುಗಳ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ದಾದಾ ಸಾಹೇಬ್ ಫಾಲ್ಕೆ ಮೊದಲ ಚಲನಚಿತ್ರ ನಿರ್ಮಿಸಿದ ಸಂದರ್ಭದಲ್ಲಿ ಅವರಿಗೆ ಸ್ತ್ರೀಪಾತ್ರಗಳನ್ನು ನಿರ್ವಹಿಸಲು ಯಾರೂ ಸಿಗಲಿಲ್ಲ. ವೇಶ್ಯೆಯರೂ ಸಹ ಪಾತ್ರ ವಹಿಸಲು ನಿರಾಕರಿಸಿದಂಥ ಪರಿಸ್ಥಿತಿ. ಆದರೆ ಬಂಗಾಳ ಅದಕ್ಕೆ ತದ್ವಿರುದ್ಧ. ಜೆ.ಎಫ್.ಮದನ್ ಚಿತ್ರಗ್ರಾಹಿ ಹಾಗೂ ಪ್ರದರ್ಶಕಗಳನ್ನು ಆಮದು ಮಾಡಿದ ಮೇಲೆ ಬಂಗಾಳದಲ್ಲಿ ಚಲನಚಿತ್ರ ನಿರ್ಮಾಣ ಚಟುವಟಿಕೆಗಳು ಆರಂಭವಾದವು. ಕಲ್ಕತ್ತ (ಈಗಿನ ಕೊಲ್ಕತ್ತ)ದ ಕ್ಲಾಸಿಕ್ ಥಿಯೇಟರ್‌ನಲ್ಲಿ ಪ್ರದರ್ಶಿಸಲಾದ ನಾಟಕಗಳನ್ನೇ ಸಾಕ್ಷ್ಯಚಿತ್ರಗಳಾಗಿ ಚಿತ್ರೀಕರಿಸಿ, ಅವನ್ನೂ ಅದೇ ಥಿಯೇಟರಿನಲ್ಲಿ ಪ್ರದರ್ಶಿಸಲಾಯಿತು. ಅವು ಜನಪ್ರಿಯವಾಗಿದ್ದವು. ಹೀಗಾಗಿ ಚಲನಚಿತ್ರ ಬುದ್ಧಿಜೀವಿಗಳ ಸಮೀಪಕ್ಕೆ ಬಂದಿತು. ಚಲನಚಿತ್ರ ಮಾಧ್ಯಮದ ಸಾಧ್ಯತೆಗಳನ್ನು ಮನಗಂಡ ಬುದ್ಧಿಜೀವಿಗಳು ಅದರ ಬಗ್ಗೆ ಆಸಕ್ತಿ ವಹಿಸಿದರು. ಆರಂಭದಲ್ಲಿ ಸಾಹಿತ್ಯ ಪತ್ರಿಕೆಗಳಲ್ಲಿ ರಂಗಭೂಮಿಯ ಜೊತೆಗೆ ಚಲನಚಿತ್ರಗಳ ಬಗ್ಗೆಯೂ ಗಂಭೀರ ಸ್ವರೂಪದ ಲೇಖನಗಳು ಪ್ರಕಟವಾಗತೊಡಗಿದವು.

'ಭಾರತ ವರ್ಷ' ೧೯೧೩ರಲ್ಲಿ ಆರಂಭವಾದ ಬಂಗಾಳಿ ಸಾಹಿತ್ಯ ಪತ್ರಿಕೆ. ಮೊದಲ ಸಂಚಿಕೆಯಲ್ಲೇ ಚಲನಚಿತ್ರ ಕುರಿತು ಎರಡು ಲೇಖನಗಳು ಪ್ರಕಟವಾದವು. 'ಬಯಾಸ್ಕೋಪ್' ಶೀರ್ಷಿಕೆಯಲ್ಲಿ ಪ್ರಕಟವಾದ ಲೇಖನ ಚಲನಚಿತ್ರ ಮಾಧ್ಯಮ ಕುರಿತಾದದ್ದು. ಮತ್ತೊಂದು 'ಛಾಯಾ ಮಾಯಾ ವಿಚಿತ್ರ ರಹಸ್ಯ' - ಚಲನಚಿತ್ರ ತಂತ್ರಜ್ಞಾನದ ಬಗ್ಗೆ ವಿಸ್ತೃತವಾದ ಲೇಖನ. ಮುಂದೆ ಇದು ಪುಸ್ತಕ ರೂಪದಲ್ಲಿ ಪ್ರಕಟವಾಯಿತು.

ಚಲನಚಿತ್ರ ಪತ್ರಿಕೋದ್ಯಮದ ಪ್ರಾರಂಭ ಬಂಗಾಳದಲ್ಲಿ ಎನ್ನಬೇಕು. ಕಾರಣ ಬಂಗಾಳದ ಬುದ್ಧಿಜೀವಿಗಳು ಚಲನಚಿತ್ರ ಮಾಧ್ಯಮದ ಸಾಧ್ಯತೆಗಳನ್ನು ಮನಗಂಡಿದ್ದರು. 'ಬಿಜೋಲಿ' (೧೯೨೦), 'ಸಚಿತ್ರ ಸಿಸಿರ್' (೧೯೨೭), ಇಂಗ್ಲಿಷಿನ 'ಫೋಟೋ ಪ್ಲೇ' (೧೯೨೬) ಇವು ಬಂಗಾಳದ ಪ್ರಮುಖ ಚಲನಚಿತ್ರ ಪತ್ರಿಕೆಗಳು. ಇವುಗಳ ಜೊತೆಗೆ ಸಾಹಿತ್ಯ ಹಾಗೂ ರಂಗಭೂಮಿಗೆ ಮೀಸಲಾದ ಪತ್ರಿಕೆಗಳಲ್ಲೂ ಚಲನಚಿತ್ರಕ್ಕೆ ಸಂಬಂಧಿಸಿದ ಲೇಖನಗಳು ಪ್ರಕಟವಾಗುತ್ತಿದ್ದವು.

ಮುಂಬಯಿಯಲ್ಲಿ ಪ್ರಾರಂಭವಾದ ಚಲನಚಿತ್ರ ನಿಯತಕಾಲಿಕ 'ಮೌಜ್ ಮಜಿಬ್' (೧೯೨೪) ಒಂದು ಪರಿಪೂರ್ಣವಾದ ಗುಜರಾತಿ ಭಾಷಾ ಪತ್ರಿಕೆ. 'ಕಿನಿಮಾ' (೧೯೨೭) ಮುಂಬಯಿಯಿಂದ ಪ್ರಾರಂಭವಾದ ಇಂಗ್ಲಿಷ್ ನಿಯತಕಾಲಿಕ. ೧೯೨೯ರಲ್ಲಿ ಆರಂಭವಾದ 'ಚಿತ್ರಪಟ್' ಗುಜರಾತಿ ಪತ್ರಿಕೆ ಹಾಗೂ ಮರುವರ್ಷ ಪ್ರಕಟನೆ ಆರಂಭಿಸಿದ 'ಮೂವಿಂಗ್ ಪಿಕ್ಚರ್ ಮಂತ್ಲಿ' ಇಂಗ್ಲಿಷ್ ಪತ್ರಿಕೆಗಳೂ ಸಿನಿಮಾ ಪತ್ರಿಕೆಗಳೇ. ೧೯೨೭ರಲ್ಲಿ ಮದರಾಸಿನಲ್ಲಿ 'ಮೂವೀ ಮಿರರ್' ಇಂಗ್ಲಿಷ್ ಸಿನಿಮಾ ನಿಯತಕಾಲಿಕ ಪ್ರಕಟಣೆ ಆರಂಭಗೊಂಡಿತು. 'ಚಿತ್ರಲೇಖ', 'ವಾತಾಯನ' (ಬಂಗಾಳಿ), 'ರೂಪಲೇಖ' (೧೯೩೯), 'ಸಿನಿಮಾ ಸಂಸಾರ' - ೧೯೩೨ರಲ್ಲಿ ಮುಂಬಯಿಯಿಂದ ಆರಂಭವಾದ ಹಿಂದಿ ವಾರಪತ್ರಿಕೆ - ಇವು ಆರಂಭ ಕಾಲದ ಸಿನಿಮಾ ಪತ್ರಿಕೆಗಳು.

ಬಾಬೂರಾವ್ ಪಟೇಲ್ ಮಾಲೀಕತ್ವದಲ್ಲಿ ೧೯೩೫ರಲ್ಲಿ ಮುಂಬಯಿಯಲ್ಲಿ ಪ್ರಾರಂಭವಾದ 'ಫಿಲ್ಮ್ ಇಂಡಿಯಾ' ಕನ್ನಡದ ಚಲನಚಿತ್ರ ಪತ್ರಿಕೋದ್ಯಮದಲ್ಲಿ ವಿಶೇಷ ಪ್ರಭಾವ ಬೀರಿದ ಪತ್ರಿಕೆ. ಮದರಾಸಿನಿಂದ ೧೯೩೯ರಲ್ಲಿ ಪ್ರಕಟವಾಗತೊಡಗಿದ ಇಂಗ್ಲಿಷ್ ಭಾಷೆಯ 'ಫಿಲಂ ಇಂಡಸ್ಟ್ರಿ' ಉದ್ಯಮದ ವಾರ್ತಾಪತ್ರಿಕೆ. ಹಾಗೆಯೇ ಬಿ.ಕೆ.ಆದರ್ಶ್ ೧೯೫೩ರಲ್ಲಿ ಮುಂಬಯಿಯಿಂದ ಪ್ರಕಟಣೆ ಆರಂಭಿಸಿದ 'ಟ್ರೇಡ್ ಗೈಡ್' ಪತ್ರಿಕೆಯೂ ಉದ್ಯಮದ ವಾರ್ತಾಪತ್ರಿಕೆಯೆ. ಇಂದಿಗೂ ಜನಪ್ರಿಯವಾಗಿರುವ 'ಫಿಲಂ ಫೇರ್' ೧೯೫೨ರಿಂದಲೂ ಮುಂಬಯಿಯಿಂದ ಪ್ರಕಟವಾಗುತ್ತಿದೆ.

ಬಂಗಾಳದಂತೆ ಕರ್ನಾಟಕದ ಬುದ್ಧಿಜೀವಿಗಳೂ ಚಲನಚಿತ್ರ ಮಾಧ್ಯಮದ ಬಗ್ಗೆ ಆಸಕ್ತರಾಗಿದ್ದರು. ಮೂಕಿ ಚಿತ್ರಗಳ ಕಾಲದಲ್ಲೇ ನಂಟು. 'ಮೃಚ್ಛಕಟಿಕ' ಒಂದು ಉದಾಹರಣೆ. 'ರಂಗಭೂಮಿ' ಪತ್ರಿಕೆಯಲ್ಲಿ ದೇವುಡು-ಅ.ನ.ಕೃ. ಚಲನಚಿತ್ರಗಳ ಬಗ್ಗೆ ಲೇಖನಗಳನ್ನು ಬರೆಯುತ್ತಿದ್ದರು. ವಿಮರ್ಶೆಗಳೂ ಪ್ರಕಟವಾಗುತ್ತಿದ್ದವು. ವಿಮರ್ಶಾತ್ಮಕ ಲೇಖನಗಳೂ ಬರುತ್ತಿದ್ದವು. ಇಬ್ಬರು ಸಾಹಿತಿಗಳು ಒಂದೇ ಚಿತ್ರದ

ವಿಮರ್ಶೆ ಮಾಡಿದ ಸಂದರ್ಭವೂ ಇದೆ. ಅ.ನ.ಕೃ. ಬರೆದ ವಿಮರ್ಶೆಗೆ ದೇವುಡು, ಅ.ನ.ಕೃ. ಅವರ ಅಭಿಪ್ರಾಯಗಳ ಬಗ್ಗೆ ತಮ್ಮ ಸಹಮತ ಇಲ್ಲವಾದರೂ, ಚಿತ್ರದ ಬಗ್ಗೆ ಅವರು ಬರೆದಿರುವ ಅಭಿಪ್ರಾಯಕ್ಕೆ ತಮ್ಮ ಸಹಮತವಿದೆ ಎಂಬ ಅಡಿ ಟಿಪ್ಪಣಿ ಬರೆದಿದ್ದುದೂ ವಿಮರ್ಶೆಯೊಡನೆ ಪ್ರಕಟವಾಯಿತು.

'ವಿಶ್ವ ಕರ್ನಾಟಕ' ರಾಜಕೀಯ ದಿನಪತ್ರಿಕೆಯಾಗಿದ್ದರೂ ತಿ.ತಾ.ಶರ್ಮ ಅವರ ಕಾಲದಲ್ಲಿ ೧೯೪೭-೪೮ರ ಸುಮಾರಿನಲ್ಲಿ ಚಲನಚಿತ್ರಗಳ ಬಗ್ಗೆ ಲೇಖನಗಳು, ಬರಹಗಳು ಹಾಗೂ ವಿಮರ್ಶೆಗಳನ್ನು ಪ್ರಕಟಿಸುತ್ತಿತ್ತು. ಚಿತ್ರೋದ್ಯಮದ ಬಗ್ಗೆ ಸ್ವಾರಸ್ಯಕರ ಚಟುವಟಿಕೆಗಳೂ ಪ್ರಕಟವಾಗುತ್ತಿದ್ದವು. 'ಭರತ್ ಮಿಲಾಪ್', 'ರಾಮರಾಜ್ಯ' ಚಿತ್ರಗಳು ತೆರೆಕಂಡ ಆ ದಿನಗಳಲ್ಲಿ ಪ್ರಕಟವಾದ ಚಿತ್ರದ ನಾಯಕಿ ತಾರೆ ಶೋಭನಾ ಸಮರ್ಥರನ್ನು ಕುರಿತ ಒಂದು ಸ್ವಾರಸ್ಯ ಚುಟುಕವನ್ನು ಇಲ್ಲಿ ಉಲ್ಲೇಖಿಸಬಹುದು. ''ಶೋಭನಾ ಸಮರ್ಥ - ಳು.... ಅರೆ ನಮಗೆ ಇದು ಗೊತ್ತೇ ಇರಲಿಲ್ಲವಲ್ಲ.'' ಎಂದು ವ್ಯಂಗ್ಯವಾಡಲಾಗಿತ್ತು.

ಸಿನಿಮಾ ದೇಶದ ಉದ್ದಗಲಗಳಲ್ಲಿ ಜನರಂಜನೆಯ ಪ್ರಮುಖ ಮಾಧ್ಯಮವೆನಿಸಿದಾಗ ಸಹಜವಾಗಿಯೇ ಪತ್ರಿಕೆಗಳೂ ಅದನ್ನು ತಮ್ಮ ತೆಕ್ಕೆಗೆ ಸೇರಿಸಿಕೊಳ್ಳಬೇಕಾಯಿತು. ಮೊದಲಿಗೆ ವಿದೇಶಗಳಿಂದ ಬಂದ ಮೂಕಿಚಿತ್ರಗಳ ಪ್ರದರ್ಶನದ ಜಾಹಿರಾತುಗಳು ಇಂಗ್ಲಿಷ್ ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳತೊಡಗಿದವು. ಕುತೂಹಲಿ ಪತ್ರಕರ್ತರು ಇಂಥ ಮೂಕಿ ಕಿರುಚಿತ್ರಗಳನ್ನು ನೋಡಿ ಇವುಗಳ ಬಗ್ಗೆ ಪತ್ರಿಕೆಗಳಲ್ಲಿ ಬರೆಯತೊಡಗಿದರು. ಆಸಕ್ತಿ ಬೆಳೆದಂತೆ ಚಲನಚಿತ್ರಗಳ ಕುರಿತು ಇನ್ನೂ ಹೆಚ್ಚಿನ ಹೊಸಹೊಸ ಸಮಾಚಾರಗಳನ್ನು ತಿಳಿದುಕೊಳ್ಳಲು ಜನ ಕಾತರಪಡತೊಡಗಿದರು. ಓದುಗರ ಮನ ತಣಿಸಲು ಪತ್ರಿಕೆಗಳು ಸಿನಿಮಾ ಅಂಕಣ ಪ್ರಾರಂಭಿಸಬೇಕಾಯಿತು. ಇದು ಸಿನಿಮಾ ಬರವಣಿಗೆಗೆ ನಾಂದಿ ಹಾಡಿತು.

ಅದು ವೃತ್ತಿ ರಂಗಭೂಮಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲ. ಪತ್ರಿಕೆಗಳಲ್ಲಿ ರಂಗಭೂಮಿಯ ಆಗುಹೋಗುಗಳ ಬಗ್ಗೆ ಏನಾದರೊಂದು ಸುದ್ದಿ-ಬರಹ ಇರುತ್ತಿತ್ತು. ಬೆಂಗಳೂರು ಅದಾಗಲೇ ಮೂಕಿಚಿತ್ರಗಳ ತಯಾರಿಕಾ ಕೇಂದ್ರವಾಗಿಯೂ ಬೆಳೆದಿತ್ತು. ದೊಡ್ಡದೊಡ್ಡ ಕಲಾವಿದರು, ತಂತ್ರಜ್ಞರು ಇಲ್ಲಿ ಓಡಾಡುತ್ತಿದ್ದರು. ಪತ್ರಿಕೆಗಳ ಓದುಗರು ಸಿನಿಮಾ ಸುದ್ದಿಗಳಿಗಾಗಿ ತಡಕಾಡತೊಡಗಿದರು. ಮೂಕಿ ಯುಗ ಸರಿದು ಟಾಕಿ ಯುಗ ಆರಂಭವಾದಂತೆ ಸಿನಿಮಾ ಜನರ ಬದುಕಿನ ಅನಿವಾರ್ಯ ಅಂಗ ಎನ್ನುವಂತಾಯಿತು. ಈ ಹಂತದಲ್ಲಿ ಸಿನಿಮಾ ಸುದ್ದಿ-ಸಮಾಚಾರಗಳು ಪತ್ರಿಕೆಗಳ ಅವಿಭಾಜ್ಯ ಅಂಗವೆನಿಸಿದವು. ಚಲನಚಿತ್ರಗಳ ಸುದ್ದಿ-ಸಮಾಚಾರಗಳಿಗೆ ಮೀಸಲಾದ ಪ್ರತ್ಯೇಕ ಸಿನಿಮಾ ಪತ್ರಿಕೆಗಳೂ ಪ್ರಾರಂಭವಾದವು. ಕನ್ನಡ ಭಾಷೆಯಲ್ಲಿ ಚಲನಚಿತ್ರ ನಿರ್ಮಾಣ ಪ್ರಾರಂಭವಾದದ್ದು ೧೯೩೩ರಲ್ಲಿ. ಕನ್ನಡದ ಮೊಟ್ಟಮೊದಲ ಮಾತಿನ ಚಿತ್ರ 'ಸತಿ ಸುಲೋಚನಾ' ೧೯೩೪ರಲ್ಲಿ ಬಿಡುಗಡೆಯಾಯಿತು. ರಂಗಭೂಮಿಯ ಮೂಲಕ ತಮಗೆ ಪರಿಚಿತರಾಗಿದ್ದ ಕಲಾವಿದರೇ ಈ ಚಿತ್ರದಲ್ಲಿದ್ದುದನ್ನು ಕಂಡು ಜನ ಹಿಗ್ಗಿದರು. ಅಂದಿನ ದಿನಪತ್ರಿಕೆ, ಸಾಪ್ತಾಹಿಕ ಮತ್ತು ಮಾಸಪತ್ರಿಕೆಗಳಲ್ಲಿ ಈ ಚಿತ್ರದ ಪರಿಚಯ-ವಿಮರ್ಶೆಗಳು ಪ್ರಕಟವಾದವು. ಆ ದಿನಗಳಲ್ಲಿ ಕನ್ನಡದಲ್ಲಿ ಚಿತ್ರವೊಂದು ತಯಾರಾದದ್ದೇ ದೊಡ್ಡ ಸುದ್ದಿ. ಮೈಸೂರು ಪ್ರಾಂತ್ಯದ ಪತ್ರಿಕೆಗಳಲ್ಲಿ ಅದು ಭಾರಿ ಪ್ರಚಾರ ಗಿಟ್ಟಿಸಿಕೊಂಡಿತು. ಮುಂಬಯಿ, ಮದರಾಸು, ಹೈದರಾಬಾದ್ ಪ್ರಾಂತ್ಯಗಳ ಪತ್ರಿಕೆಗಳು ಆಗ ತಮಿಳು, ತೆಲುಗು, ಹಿಂದಿ ಭಾಷೆಗಳ ಚಿತ್ರಗಳ ಸುದ್ದಿ-ಸಮಾಚಾರ ಪ್ರಕಟಿಸುತ್ತಿದ್ದವು.

ಸಂಖ್ಯೆಯಲ್ಲೂ ವ್ಯವಹಾರದಲ್ಲೂ ಹಿಂದಿ, ತಮಿಳು, ತೆಲುಗು ಚಿತ್ರಗಳು ಮುಂದಿದ್ದವು. ಮದ್ರಾಸ್ (ಈಗಿನ ಚೆನ್ನೈ) ತಮಿಳು-ತೆಲುಗು ಚಿತ್ರನಿರ್ಮಾಣದ ಏಕೈಕ ಕೇಂದ್ರವಾಗಿತ್ತು. ಚಿತ್ರರಂಗದ ತಂತ್ರಜ್ಞರೆಲ್ಲರೂ ತೆಲುಗರು ಅಥವಾ ಬಂಗಾಳಿಗಳು. ಆದರೆ ಕನ್ನಡ ಕಲಾವಿದರಿಗೆ ಅಲ್ಲಿ ಒಳ್ಳೆಯ ಸ್ಥಾನಮಾನಗಳಿದ್ದವು. ಏಕೆಂದರೆ ಇವರಲ್ಲಿ ಹೆಚ್ಚಿನವರು ಕನ್ನಡ ರಂಗಭೂಮಿಯ ಸುಪ್ರಸಿದ್ಧರೇ ಆಗಿದ್ದರು.

ಆ ದಿನಗಳಲ್ಲಿ ಕನ್ನಡ ಚಿತ್ರ ನಿರ್ಮಾಣಕ್ಕೆ ಅಷ್ಟೇನೂ ಪ್ರೋತ್ಸಾಹ ಇರಲಿಲ್ಲ. ಹೀಗಾಗಿ ಮೈಸೂರು ಪ್ರಾಂತ್ಯದ ಇಂಗ್ಲಿಷ್ ಹಾಗೂ ಕನ್ನಡ ಪತ್ರಿಕೆಗಳೆಲ್ಲವೂ ಪ್ರಕಟಿಸುತ್ತಿದ್ದುದು ಹಿಂದಿ, ತಮಿಳು ಹಾಗೂ ತೆಲುಗು ಚಿತ್ರಗಳ ಸುದ್ದಿ-ಸಮಾಚಾರಗಳನ್ನೇ. ೧೯೩೪ರಿಂದ ೧೯೫೪ರವರೆಗಿನ ೨೦ ವರ್ಷಗಳ ಅವಧಿಯಲ್ಲಿ ವರ್ಷವೊಂದರಲ್ಲಿ ಐದೋ-ಆರೋ ಚಿತ್ರಗಳು ತಯಾರಾಗುತ್ತಿದ್ದವು. ಇಂಥ ಸನ್ನಿವೇಶದಲ್ಲಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಬೆಳೆಯುವುದಾದರೂ ಹೇಗೆ ಸಾಧ್ಯ ? ಕನ್ನಡ ಪತ್ರಿಕೋದ್ಯಮವೇ ಲಾಭದಾಯಕ ಚಟುವಟಿಕೆ ಆಗಿರದಿದ್ದ ಆ ಕಾಲದಲ್ಲಿ ಸಿನಿಮಾ ಪತ್ರಿಕೆಗಳನ್ನು ಪ್ರಾರಂಭಿಸುವುದು ಸಾಹಸದ ಮಾತೇ ಆಗಿತ್ತು. ಆದರೂ ಕೆಲವರು ಅಂಥ ಸಾಧ್ಯತೆಯ ಕನಸನ್ನಂತೂ ಕಂಡಿದ್ದರು.

೧೯೩೪ರಿಂದಲೇ ಕನ್ನಡ ಪತ್ರಿಕೆಗಳು ಸಿನಿಮಾ ಬಗ್ಗೆ ಲೇಖನಗಳನ್ನು ಪ್ರಕಟಿಸಲಾರಂಭಿಸಿದವು. ಕನ್ನಡದ ಪ್ರಾರಂಭದ ಚಿತ್ರಗಳನ್ನು ಕುರಿತು ಪರಿಚಯ ಲೇಖನಗಳು, ಸುದ್ದಿ-ಸಮಾಚಾರಗಳನ್ನು ಪ್ರಕಟಿಸಿದ್ದಲ್ಲದೆ ವಿಮರ್ಶೆಗಳನ್ನು ಬರೆದರು. ಆ ಕಾಲದ ಹಿರಿಯ ಲೇಖಕರು, ಪ್ರಾಧ್ಯಾಪಕರು ಚಿತ್ರಗಳನ್ನು ವೀಕ್ಷಿಸಿ ವಿಮರ್ಶೆಗಳನ್ನು ಬರೆಯುತ್ತಿದ್ದುದು ವಿಶೇಷ. ಒಂದು ರೀತಿ ಚಲನಚಿತ್ರ ವಿಮರ್ಶೆಗಳಿಗೆ ಇದು ನಾಂದಿಯೂ ಆಯಿತು.

ಕನ್ನಡದಲ್ಲಿ ಸಿನಿಮಾ ಪತ್ರಿಕೆಯೊಂದನ್ನು ಪ್ರಾರಂಭಿಸುವ ಮೊದಲ ಪ್ರಯತ್ನ ೧೯೩೬ರಲ್ಲಿ ಉತ್ತರ ಕರ್ನಾಟಕದಲ್ಲಿ ನಡೆಯಿತು. ಆಗ ಧಾರವಾಡ ಜಿಲ್ಲೆಗೆ ಸೇರಿದ್ದ - ಈಗ ಪ್ರತ್ಯೇಕ ಜಿಲ್ಲೆ - ಗದಗ್‌ನಿಂದ ೧೯೨೫ರಿಂದಲೇ ಪ್ರಕಟವಾಗುತ್ತಿದ್ದ 'ಕರ್ನಾಟಕ ಬಂಧು' ವಾರಪತ್ರಿಕೆ ಅದಾಗಲೇ ಅಲ್ಲಿನ ಏಕೈಕ ಸಿನಿಮಾ ಮಂದಿರ ಸರಸ್ವತಿಯಲ್ಲಿ ಪ್ರದರ್ಶಿತವಾಗುತ್ತಿದ್ದ ಮೂಕಿಚಿತ್ರಗಳ ಜಾಹಿರಾತುಗಳನ್ನು ಪ್ರಕಟಿಸುತ್ತಿತ್ತು. ಈ ಪತ್ರಿಕೆಯ ಸಂಪಾದಕ ಚನ್ನಬಸವಸ್ವಾಮಿ ಹಿರೇಮಠ, ಪಂಚಾಕ್ಷರಿ ಹಿರೇಮಠ ಸೋದರರು ೧೯೩೬ರಲ್ಲಿ 'ಸಿನಿಮಾ' ಹೆಸರಿನಲ್ಲಿ ಮಾಸಪತ್ರಿಕೆಯ ಪ್ರಕಟಣೆ ಪ್ರಾರಂಭಿಸಿದರು. ಹತ್ತು ವರ್ಷಗಳಿಂದ ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿರುವ ಅನುಭವ ಹಾಗೂ ಸ್ವಂತ ಮುದ್ರಣಾಲಯ ಸೌಲಭ್ಯ ಹಿರೇಮಠ ಸಹೋದರರಿಗಿದ್ದಿತ್ತು. ಪತ್ರಿಕೆಯನ್ನು ಮಾರುವವರೂ ಇದ್ದುದಲ್ಲದೆ, ಸಿನಿಮಾ ಸುದ್ದಿ ಹಾಗೂ ಛಾಯಾಚಿತ್ರಗಳನ್ನು ಸಂಗ್ರಹಿಸುವ ಮಾಹಿತಿಯೂ ಅವರಿಗಿತ್ತು. ಆ ದಿನಗಳಲ್ಲಿ ಉತ್ತರ ಕರ್ನಾಟಕ ಮುಂಬಯಿ ಪ್ರಾಂತ್ಯದ ಆಡಳಿತಕ್ಕೆ ಒಳಪಟ್ಟಿತ್ತು. ಹೀಗಾಗಿ ಅಲ್ಲಿ ಹೆಚ್ಚಾಗಿ ಹಿಂದಿ ಮತ್ತು ಮರಾಠಿ ಚಿತ್ರಗಳೇ ಪ್ರದರ್ಶಿತವಾಗುತ್ತಿದ್ದವು.

ಸಿನಿಮಾ ಪತ್ರಿಕೆಯ ಎರಡನೇ ಪ್ರಯತ್ನ ನಡೆದದ್ದು ೧೯೩೭ರಲ್ಲಿ; ಆಗಿನ ಮದರಾಸು ಪ್ರಾಂತ್ಯಕ್ಕೆ ಸೇರಿದ್ದ ಮಂಗಳೂರಿನಲ್ಲಿ. ಅಲ್ಲಿನ 'ಕಂಠೀರವ' ಪತ್ರಿಕೆಯ ಸಂಪಾದಕೀಯ ವರ್ಗದಲ್ಲಿದ್ದ ಕುಮಾರ ವೆಂಕಣ್ಣ ಚಲನಚಿತ್ರ ಪತ್ರಿಕೆ ಹೊರಡಿಸಲು ಮುಂದಾದರು. ಆಗ ಮಂಗಳೂರಿನಲ್ಲಿ ಇದ್ದದ್ದು ಎರಡೇ ಚಿತ್ರಮಂದಿರಗಳು. ಒಂದು - ಚಿತ್ರಾ, ಇನ್ನೊಂದು - ಕೃಷ್ಣಾ (ಈಗ ಅವು ಕ್ರಮವಾಗಿ ನ್ಯೂಚಿತ್ರಾ ಮತ್ತು ಸೆಂಟ್ರಲ್ ಚಿತ್ರಮಂದಿರಗಳಾಗಿವೆ). ಕುಮಾರ ವೆಂಕಣ್ಣ ಚಿತ್ರಾ ಥಿಯೇಟರಿನ ಪ್ರಚಾರ-ಸಂಚಾಲಕರೂ ಆಗಿದ್ದರು. ಆ ದಿನಗಳಲ್ಲಿ ಸಿನಿಮಾ ಪ್ರಚಾರಕ್ಕೆ ಕರಪತ್ರಗಳನ್ನು (ಹ್ಯಾಂಡ್‌ಬಿಲ್ಸ್) ಹಂಚಲಾಗುತ್ತಿತ್ತು. ದಿನಪತ್ರಿಕೆಯ ಒಂದು ಪುಟ ಗಾತ್ರದ ಕರಪತ್ರಗಳನ್ನು ಪ್ರಚಾರಕ್ಕಾಗಿ ರಸ್ತೆಯಲ್ಲಿ ಚೆಲ್ಲುತ್ತಿದ್ದರು.

ಇಂಗ್ಲಿಷ್ ಚಿತ್ರಗಳ ಜತೆ 'ಹೆರಾಲ್ಡ್' ಎಂದು ಕರೆಯಲಾಗುತ್ತಿದ್ದ ನಾಲ್ಕು ಪುಟಗಳ ಮಡಿಕೆಪತ್ರಗಳಲ್ಲಿರುತ್ತಿದ್ದ ಸಿನಿಮಾ ಮಾಹಿತಿಯನ್ನು ವೆಂಕಣ್ಣ ಕನ್ನಡಕ್ಕೆ ಭಾಷಾಂತರಿಸಿ ಮಡಿಕೆ ಪತ್ರದ ಮುಖಪುಟವನ್ನೇ ಜಾಣತನದಿಂದ 'ಚಿತ್ರಾ' ಶೀರ್ಷಿಕೆಯಲ್ಲಿ ಮುದ್ರಿಸಿ ವಿತರಿಸತೊಡಗಿದರು. ಈ ಮಡಿಕೆ ಪತ್ರಗಳಲ್ಲಿನ ಮಾಹಿತಿಯನ್ನು ಸುಮಾರು ಇಪ್ಪತ್ತು ಪುಟಗಳಷ್ಟು ಹಿಗ್ಗಿಸಿ ಬರೆಯುತ್ತಿದ್ದರು. ಒಂದಾಣೆ ಬೆಲೆಯ ಈ ಮಾಸಪತ್ರಿಕೆ ಸಿನಿಮಾ ಪ್ರಚಾರಕ್ಕಾಗಿಯೇ ಜನ್ಮ ತಳೆಯಿತು. ಅದೇ ಕನ್ನಡದ ಎರಡನೇ ಸಿನಿಮಾ ಪತ್ರಿಕೆ. ಹಿಂದಿ, ಇಂಗ್ಲಿಷ್ ಭಾಷಾ ಚಲನಚಿತ್ರರಂಗಗಳ ಮುಖವಾಣಿಯಾಗಿ 'ಚಿತ್ರಾ' ಕೆಲಸ ಮಾಡಿತು. 'ಸಿನಿಮಾ' ಒಂದು ಪತ್ರಿಕಾಲಯದ ಪ್ರಯತ್ನವಾಗಿದ್ದರೆ, 'ಚಿತ್ರಾ' ಜಾಣ ಪತ್ರಕರ್ತರೊಬ್ಬರ ದಿಢೀರ್ ಪ್ರಯತ್ನವಾಗಿತ್ತು.

ಮೂಕಿ ಚಿತ್ರಗಳು ಚಿತ್ರಮಂದಿರಗಳಲ್ಲಿ ಪ್ರದರ್ಶನಕ್ಕೆ ಬರುತ್ತಿದ್ದಾಗ ಅವುಗಳೊಂದಿಗೆ ಅವುಗಳಿಗೆ ಸಂಬಂಧಿಸಿದ ಸುದ್ದಿ-ಸಮಾಚಾರಗಳು, ಕರಪತ್ರಗಳು, ಛಾಯಾಚಿತ್ರಗಳು ಚಿತ್ರಮಂದಿರಗಳಿಗೆ ತಲುಪುತ್ತಿದ್ದವು.

೧೯೩೬ರಲ್ಲಿ ಪ್ರಾರಂಭವಾದ ಮೊದಲ ಚಲನಚಿತ್ರ ಪತ್ರಿಕೆಯೇ 'ಸಿನಿಮಾ'. ಆದರೆ ಇಂಗ್ಲಿಷ್ ಮತ್ತು ಪರಭಾಷೆಗಳಲ್ಲಿ ಇದಕ್ಕೂ ಬಹಳ ಮೊದಲೇ ಸಿನಿಮಾ ಪತ್ರಿಕೆಗಳು ಪ್ರಾರಂಭಗೊಂಡು ಜನಪ್ರಿಯವಾಗಿದ್ದವು. ಈ ವೇಳೆಗೆ ಕನ್ನಡದಲ್ಲಿಯೂ ಹಲವು ಮಂದಿ ಸಿನಿಮಾ ಪತ್ರಕರ್ತರು ಹುಟ್ಟಿಕೊಂಡರು. ಈ ರಂಗದೊಂದಿಗೆ ಬೆಳೆದು ಚಲನಚಿತ್ರ ಉದ್ಯಮವನ್ನು ಬೆಳೆಸಿದ ಅನೇಕ ಪತ್ರಕರ್ತರು ಇಂದಿಗೂ ನಮ್ಮೊಂದಿಗಿದ್ದಾರೆ. 'ಕನ್ನಡದ ಮೊದಲ ಚಲನಚಿತ್ರ ಮಾಸಪತ್ರಿಕೆ ಚಿರಾಯುವಾಗಲಿ' ಎಂಬ ನಾಟಕರತ್ನ ಗುಬ್ಬಿ ವೀರಣ್ಣನವರ ಹೊನ್ನುಡಿಯೊಂದಿಗೆ ಮೊದಲ ಸಂಚಿಕೆ ಹೊರಬಂದಿತು. ಹರಿತ, ನೇರ,

ರೋಚಕ ಬರಹಗಳಿಂದಾಗಿ ಪತ್ರಿಕೆ ಬೇಗ ಜನಪ್ರಿಯವಾಯಿತು. ಪತ್ರಿಕೆಗೆ ಬೇಕಾದ ಪಡಿಯಚ್ಚುಗಳನ್ನು ಧಾರವಾಡದ ಶ್ರೀನಿವಾಸ ಕಂಪೆನಿಯ ಪೋತದಾರ ಶೀನಪ್ಪ ತಯಾರಿಸಿ ಕೊಡುತ್ತಿದ್ದರು.

ಈ ಪತ್ರಿಕೆಯಲ್ಲಿ ಹಿಂದಿ ಚಲನಚಿತ್ರರಂಗದ ನಟ-ನಟಿಯರ ಬಗ್ಗೆ ತುಂಟತನದ ವರದಿಗಳು, ವ್ಯಂಗ್ಯ ಲೇಖನಗಳು ಪ್ರಕಟವಾಗುತ್ತಿದ್ದು ಓದುಗರ ಮನಸೆಳೆದವು. ಆಗ ಮರಾಠಿ ಚಿತ್ರರಂಗದಲ್ಲಿ ಹೆಸರು ಮಾಡಿ ಜನಪ್ರಿಯ ನಟಿಯಾಗಿದ್ದ ಹುಬ್ಬಳಿಯವರೇ ಆಗಿದ್ದ ಶಾಂತಾ ಆಪ್ಟೆ ಬಗ್ಗೆ ಚಿತ್ರ ವಿಚಿತ್ರ-ರೋಚಕ ವರದಿಗಳನ್ನು ಪ್ರಕಟಿಸಿ ಪತ್ರಿಕೆ ಪ್ರಸಾರ ಹೆಚ್ಚಿಸಿಕೊಂಡಿತು. ಗದುಗಿನ ಬಳಿಯ ರೋಣದ ರಾಜಕೀಯ ಪುಢಾರಿಯೊಬ್ಬರು ಪುಣೆಗೆ ಹೋಗಿ ಶಾಂತಾ ಆಪ್ಟೆಯವರೊಡನೆ ಸರಸವಾಡಲೆತ್ನಿಸಿ ಮುಖಭಂಗ ಮಾಡಿಸಿಕೊಂಡು ಮರಳಿ ಬಂದ ಸಂಗತಿ ಸಂಪಾದಕರ ಚುರುಕು ಬರಹಗಳಲ್ಲಿ ಮೂಡಿಬಂದಾಗ ಜನ ಸಮುದಾಯದಲ್ಲಿ ಕಂಪನವನ್ನುಂಟುಮಾಡಿತು. ಆ ಕಾಲದ ಸುಪ್ರಸಿದ್ಧ ನಿರ್ಮಾಪಕ-ನಿರ್ದೇಶಕ-ನಟ ವಿ.ಶಾಂತಾರಾಮ್ ಅವರ ಜನ್ನುಹತ್ತಿ, ತನ್ನನ್ನು ಮದುವೆಯಾಗುವಂತೆ ಕಾಡಿಬೇಡಿ ಸೋತ ಶಾಂತಾ ಆಪ್ಟೆ, ನಿರುದ್ಯೋಗಿ ಅಣ್ಣನ ಆಶ್ರಯದಲ್ಲಿದ್ದಾಳೆಂಬುದಾಗಿ 'ತಂಗಿಯ ದುಡಿತ, ಅಣ್ಣನ ಮೋಡಿತ' ಎಂದೆಲ್ಲಾ ಲೇವಡಿ ಮಾಡಿ ಬರೆದು ಓದುಗರಲ್ಲಿ ರೋಮಾಂಚನ ಉಂಟುಮಾಡಿತ್ತು. ಪತ್ರಿಕೆಯ ಸಂಪಾದಕರಾದ ಹಿರೇಮಠ ಸೋದರರಲ್ಲಿ ಮೂಡಿದ ಭಿನ್ನಾಭಿಪ್ರಾಯದಿಂದಾಗಿ 'ಸಿನಿಮಾ' ಪತ್ರಿಕೆ ನಿಂತಿತು. ಪಂಚಾಕ್ಷರಿ ಹಿರೇಮಠ ದಾವಣಗೆರೆಯಿಂದ 'ಸಂಸಾರ' ವಾರಪತ್ರಿಕೆಯನ್ನು ಆರಂಭಿಸಿ, ಅದರಲ್ಲಿ ಸಿನಿಮಾಕ್ಕಾಗಿ ಎರಡು ಪುಟಗಳನ್ನು ಮೀಸಲಿಟ್ಟರು. 'ಕರ್ನಾಟಕ ಬಂಧು' ೧೯೭೫ರಲ್ಲಿ ಸುವರ್ಣ ಮಹೋತ್ಸವ ಆಚರಿಸಿತು. ಆದರೆ ಬೆಳ್ಳಿಹಬ್ಬ ಕಾಣಬಹುದಾಗಿದ್ದ ಮೊಟ್ಟಮೊದಲ 'ಸಿನಿಮಾ' ಪತ್ರಿಕ ಮಾತ್ರ ಆ ವೇಳೆಗೆ ಜೀವಂತವಾಗಿ ಉಳಿದಿರಲಿಲ್ಲ.

ಎರಡನೇ ಸಿನಿಮಾ ಪತ್ರಿಕೆ 'ಚಿತ್ರಾ' ಕೂಡ ಬಹುಕಾಲ ಬಾಳಲಿಲ್ಲ. ಮಹಾಯುದ್ಧ ಆರಂಭವಾಗಿ ಮುದ್ರಣ ಕಾಗದದ ಬೆಲೆ ಹತ್ತರಷ್ಟು ಹೆಚ್ಚಿದಾಗ ಬೆಲೆ ಏರಿಕೆಯ ಬಿಸಿಯಿಂದ ಉಸಿರುಗಟ್ಟಿದ ಆ ಪತ್ರಿಕೆ ಅಂತಿಮ ತೆರೆ ಎಳೆಯಿತು. ಆನಂತರ ಬೆಂಗಳೂರು-ಮೈಸೂರುಗಳಲ್ಲಿ ಕುಮಾರ ವೆಂಕಣ್ಣ ಪತ್ರಿಕೆ ಹಾಗೂ ಸಿನಿಮಾ ಎರಡೂ ಕ್ಷೇತ್ರಗಳಲ್ಲಿ ದುಡಿದರು. ಆ ಸಮಯದಲ್ಲೇ 'ಬಿಂದು ಬಿ.ಎ.' ಕನ್ನಡ ಚಿತ್ರದಲ್ಲಿ ನಾಯಕನಾಗಿಯೂ ಅಭಿನಯಿಸಿದರು. ಅನೇಕ ಪುಸ್ತಕಗಳನ್ನು ಬರೆದು ಸಾಹಿತಿಯಾದರು. ಮೈಸೂರಿನಲ್ಲಿ ನವಜ್ಯೋತಿ ಸ್ಟುಡಿಯೋ ಆರಂಭವಾದಾಗ ಅದರ ಪ್ರಚಾರ ಅಧಿಕಾರಿ ಹುದ್ದೆ ನಿರ್ವಹಿಸಿದರು. ಮಕ್ಕಳ ಸಾಹಿತ್ಯದಲ್ಲಿ ಕೈಯಾಡಿಸಿ 'ಪಾಪಚ್ಚಿ' ಮಕ್ಕಳ ಪತ್ರಿಕೆ ಹೊರತಂದರು. ಬೆಂಗಳೂರಿನಲ್ಲಿ 'ವಿಶ್ವ ಕರ್ನಾಟಕ', 'ತಾಯಿನಾಡು' ದಿನಪತ್ರಿಕೆಗಳಲ್ಲಿಯೂ ಕೆಲಸ ಮಾಡಿದರು. ತಮ್ಮ ೭೫ನೇ ವಯಸ್ಸಿನಲ್ಲಿ ನಿಧನರಾದರು.

ಕನ್ನಡದ ಮೂರನೇ ಚಲನಚಿತ್ರ ಪತ್ರಿಕೆ 'ಚಿತ್ರ ಸಮಾಚಾರ್'. ಕಲ್ಕತ್ತೆಯ ಪ್ರಸಿದ್ಧ ಇಂಗ್ಲಿಷ್ ದಿನಪತ್ರಿಕೆ 'ಅಮೃತ ಬಜಾರ್ ಪತ್ರಿಕಾ' ಸ್ಥಳೀಯ ಪ್ರತಿನಿಧಿ ಹೆಚ್.ಆರ್.ಕೃಷ್ಣಮೂರ್ತಿ ಸಂಪಾದಕರು-ಪ್ರಕಾಶಕರು. ಪತ್ರಿಕೆಯಲ್ಲಿ ಕನ್ನಡ, ಇಂಗ್ಲಿಷ್ ಲೇಖನಗಳು ಪ್ರಕಟವಾಗುತ್ತಿದ್ದವು. ಮುಂಬಯಿಯಿಂದ ಪ್ರಕಟವಾಗುತ್ತಿದ್ದ 'ಫಿಲ್ಮಿಂಡಿಯಾ' ಪತ್ರಿಕೆಯ ಧೋರಣೆಯನ್ನೇ ಈ ಪತ್ರಿಕೆ ಅನುಸರಿಸುತ್ತಿತ್ತು. ಫಿಲ್ಮಿಂಡಿಯಾದ ಬಾಬುರಾವ್ ಪಟೇಲರ ಧಾಟಿಯಲ್ಲೇ ಈ ಪತ್ರಿಕೆಯ ಪ್ರಶ್ನೋತ್ತರ ವಿಭಾಗವೂ ಇದ್ದು ಅಪಾರ ಜನಪ್ರಿಯತೆ ಹೊಂದಿತು. ಕೃಷ್ಣಮೂರ್ತಿಯವರ ಮೊನಚಾದ, ನೇರ ಬರವಣಿಗೆ ಅವರಿಗೆ ಚಿತ್ರೋದ್ಯಮದಲ್ಲಿ ಮಿತ್ರರನ್ನು ಒದಗಿಸಿದಂತೆಯೇ ಶತ್ರುಗಳನ್ನೂ ಕೊಟ್ಟಿತು. ಅವರ ಲೇಖನಿ ಚಲನಚಿತ್ರ ಕುರಿತ ಬರವಣಿಗೆಗೆ ದಾರಿ ತೋರಿಸಿತು ಎನ್ನುವವರಿದ್ದಂತೆಯೇ ಅದು ಸರಿಯಾದ ಪತ್ರಿಕೋದ್ಯಮವಲ್ಲ ಎಂದು ಟೀಕಿಸುವವರೂ ಇದ್ದರು. ಹೆಚ್.ಆರ್.ಕೃಷ್ಣಮೂರ್ತಿ ಸಿನಿಮಾರಂಗದ ರಾಜಕೀಯವನ್ನು ಒಳಹೊಕ್ಕು ನೋಡಿದವರು. ಭಾರತೀಯ ಚಲನಚಿತ್ರರಂಗದ ಪ್ರಸಿದ್ಧರು ಮನೆಗೆ ಬಂದು ಮಾತಾಡಿಸಿಕೊಂಡು ಹೋಗುವಷ್ಟು ಪ್ರಭಾವಶಾಲಿಗಳಾಗಿದ್ದರು. ಓದುಗರ ಮೆದುಳಿಗೆ ಕೆಲಸ ಕೊಡುವ ಸಿನಿಮಾಗೆ ಸಂಬಂಧಿಸಿದ ಚಾತುರ್ಯ ಪರೀಕ್ಷೆಯ ಅಂಶಗಳೂ ಈ ಪತ್ರಿಕೆಯಲ್ಲಿ ಇರುತ್ತಿದ್ದವು. ದೇವುಡು, ಅ.ನ.ಕೃ. ಮುಂತಾದ ಪ್ರಸಿದ್ಧರ ಬರವಣಿಗೆ ಇರುತ್ತಿದ್ದ ಈ ಪತ್ರಿಕೆಯಲ್ಲಿನ ಸ್ಪರ್ಧೆಗಳಿಗೆ ರಂಗಭೂಮಿ ಹಾಗೂ ಚಲನಚಿತ್ರರಂಗದ ಅಂದಿನ ದಿಗ್ಗಜರಲ್ಲಿ ಒಬ್ಬರಾಗಿದ್ದ ಆರ್.ನಾಗೇಂದ್ರರಾಯರು ಪ್ರಶ್ನೆಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಮುಂದೆ ಕನ್ನಡದ ಪ್ರತಿಭಾವಂತ ನಿರ್ದೇಶಕರಲ್ಲಿ ಒಬ್ಬರಾದ ಎನ್.ಲಕ್ಷ್ಮೀನಾರಾಯಣ್ ಈ ಸ್ಪರ್ಧೆಗಳಲ್ಲಿ ಭಾಗವಹಿಸಿ ಹಲವು ಬಹುಮಾನಗಳನ್ನು ಪಡೆದಿದ್ದರು. ಯಶಸ್ವಿ ಸಿನಿಮಾ ಪತ್ರಿಕೆ ಎನಿಸಿದ್ದ 'ಚಿತ್ರಸಮಾಚಾರ' ೧೯೪೭ರಲ್ಲಿ ಬೆಂಗಳೂರಿನ ಪುರಭವನದಲ್ಲಿ ಚಲನಚಿತ್ರಗೀತೆಗಳ ಸ್ಪರ್ಧೆಯನ್ನೂ ಏರ್ಪಡಿಸಿತ್ತು. ಭಾರತೀಯ ಚಿತ್ರರಂಗದ ದಿಗ್ಗಜಗಳೆನಿಸಿದ್ದ ಪಂಕಜ್ ಮಲ್ಲಿಕ್, ವಿ.ನಾಗಯ್ಯ, ವಸುಂಧರಾದೇವಿ ಅತಿಥಿಗಳಾಗಿದ್ದರು. ವಸುಂಧರಾದೇವಿ ತಾವು ಅಭಿನಯಿಸಿದ್ದ 'ಮಂಗಮ್ಮ ಶಪಥಂ' ಚಿತ್ರದ ಹಾಡನ್ನು ಅತ್ಯುತ್ತಮವಾಗಿ ಹಾಡಿದವರಿಗೆ ಒಂದು ಸವರನ್ ಚಿನ್ನದ ನಾಣ್ಯವನ್ನು ಬಹುಮಾನವಾಗಿ ನೀಡಿದರು. ಈ ಎಲ್ಲದರಿಂದ ಪತ್ರಿಕೆ ಬಹುಬೇಗ ಜನಪ್ರಿಯವಾಯಿತು. ರಕ್ಷಾಪುಟದಲ್ಲಿ 'ಚಿತ್ರಸಮಾಚಾರ್' ಹೆಸರು ಇಂಗ್ಲಿಷ್ ಹಾಗೂ ಕನ್ನಡದಲ್ಲಿ ಮುದ್ರಿತವಾಗುತ್ತಿತ್ತು. ಒಳಪುಟದಲ್ಲಿ 'ಚಿತ್ರಸಮಾಚಾರ್' ಇಂಗ್ಲಿಷ್ ಶೀರ್ಷಿಕೆ ಜೊತೆಯಲ್ಲಿ The Anglo - Kannada Monthly ಎಂದು ಹೆಮ್ಮೆಯಿಂದ ಮುದ್ರಿಸುತ್ತಿತ್ತು. ಇದರ ವಿಶ್ಲೇಷಣೆಯಿಂದ ಅಂದಿನ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಹಾಗೂ ಉದ್ಯಮದ ನಡುವಣ ಸಂಬಂಧ ಹೇಗಿದ್ದಿತು ಎಂಬುದನ್ನು ಸುಲಭವಾಗಿ ಊಹಿಸಬಹುದು. ಇವೆಲ್ಲ ಕಾರಣಗಳಿಂದ ಈ ಪತ್ರಿಕೆ ಸಿನಿಮಾ ಪತ್ರಿಕೆಗಳ ಮುಂಚೂಣಿಯಲ್ಲಿ ನಿಂತಿತು. ಕೃಷ್ಣಮೂರ್ತಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮದ ಯಜಮಾನರ ಸ್ಥಾನದಲ್ಲಿದ್ದರು. ಹಲವಾರು ಏರಿಳಿತಗಳನ್ನು ಕಂಡ ಈ ಪತ್ರಿಕೆ ೧೯೫೬-೫೭ರ ಸಮಯದಲ್ಲಿ ಪ್ರಕಟಣೆ ನಿಲ್ಲಿಸಿತು. ಆನಂತರದ ದಿನಗಳಲ್ಲಿ ಕೃಷ್ಣಮೂರ್ತಿ ಒಲವು ಆಧ್ಯಾತ್ಮದತ್ತ ತಿರುಗಿ ೧೯೭೦ರಲ್ಲಿ ನಿಧನರಾದರು.

ಚಿತ್ರಸಮಾಚಾರ್

೧೯೩೮ರಲ್ಲಿ ಮೈಸೂರಿಂದ 'ತಮಾಷ್' ಪ್ರಕಟಣೆ ಆರಂಭಿಸಿತು. ರಾಮಾನುಜ ರಸ್ತೆಯಲ್ಲಿ ಅದರ ಕಾರ್ಯಾಲಯ. ಮೂಲತಃ ರಂಗಭೂಮಿಗಾಗಿ ಆರಂಭವಾದ ಪತ್ರಿಕೆ ಇದು. ನಾಟಕ, ಸಿನಿಮಾಗಳ ಜನಪ್ರಿಯ ನಟ, 'ಸಂಸಾರನೌಕ' ಖ್ಯಾತಿಯ ಎಂ.ಎಸ್.ಮಾಧವರಾವ್ ಸಂಪಾದಕರು. ಪತ್ರಿಕೆ, ಸಿನಿಮಾ, ನಾಟಕ, ಬರವಣಿಗೆ ಎಂದು ಎಲ್ಲದರಲ್ಲೂ ತೊಡಗಿಸಿಕೊಂಡ ಮಾಧವರಾಯರು ತಮಾಷ್ ಮಾಧವರಾವ್ ಎಂದೇ ಪರಿಚಿತರಾದರು. ನಾಟಕ ಕಂಪೆನಿ ಪ್ರಾರಂಭಿಸಿ ಊರೂರು ಅಲೆದರು. ಬೆಂಗಳೂರಿಗೂ ಬಂದರು. ಪತ್ರಿಕೆ ಹೇಗೋ ಮುಂದುವರೆಯಿತು. ೧೯೫೩ರ ವೇಳೆಗೆ ಸಾಹಿತಿ ಮೈ.ಸು.ಶೇಷಗಿರಿರಾವ್ ಪತ್ರಿಕೆಯ ಸಂಪಾದಕ ವಿಭಾಗಕ್ಕೆ ಸೇರಿಕೊಂಡರು. ಹಾಗೂ ಹೀಗೂ ಮುಂದುವರೆದ 'ತಮಾಷ್' ೧೯೬೦ರ ದಶಕದಲ್ಲಿ ಕೊನೆಯುಸಿರೆಳೆಯಿತು. ಅನಂತರ ಮೈ.ಸು.ಶೇಷಗಿರಿರಾವ್ 'ತಾಯಿನಾಡು', 'ಕನ್ನಡಪ್ರಭ' ಸಂಪಾದಕ ಬಳಗದಲ್ಲಿ ಕೆಲಸ ಮಾಡಿದರು.

೧೯೪೨ರಲ್ಲಿ ಪ್ರಕಟಣೆ ಪ್ರಾರಂಭಿಸಿದ 'ವಾಕ್ಚಿತ್ರ' ಮಾಸಪತ್ರಿಕೆ ಉತ್ತಮ ವಿನ್ಯಾಸ, ಮುದ್ರಣಗಳೊಂದಿಗೆ ವೃತ್ತಿಪರ ವ್ಯಾಪಾರಿ ದೃಷ್ಟಿಯಲ್ಲಿ ರೂಪುಗೊಂಡ ಮೊದಲ ಕನ್ನಡ ಚಲನಚಿತ್ರ ಪತ್ರಿಕೆ ಎನಿಸಿಕೊಂಡಿತು. ಸಿನಿಮಾ ಪ್ರಚಾರ ಕ್ಷೇತ್ರದಲ್ಲಿ ಶ್ರಮಿಸುತ್ತಿದ್ದ ಹೆಚ್.ವೆಂಕೋಬರಾವ್ ಪ್ರಕಾಶಕರು. ಆರಂಭದಲ್ಲಿ 'ಸುಬೋಧ', 'ನಗುವನಂದ' ಪತ್ರಿಕೆಗಳ ನಂಟು ಹೊಂದಿದ್ದ ಬಿ.ರಂಗನಾಥರಾವ್ ಸಂಪಾದಕರಾಗಿದ್ದರು. ಹೀಗಾಗಿ 'ವಾಕ್ಚಿತ್ರ' ಅಚ್ಚುಕಟ್ಟಾಗಿ ಹೊರಬರಲು ಅನುಕೂಲವಾಯಿತು. ೧೯೪೬ರಲ್ಲಿ 'ಪ್ರಜಾಮತ' ಪತ್ರಿಕೆಯ ಸಂಪಾದಕ ಬಳಗದಲ್ಲಿದ್ದ ಮಾ.ನಾ.ಚೌಡಪ್ಪ ಸಂಪಾದಕರಾದರು. ಆ ವೇಳೆಗೆ ಪ್ರಕಾಶಕ ವೆಂಕೋಬರಾವ್ ಬೆಂಗಳೂರಿನ ಸೌರಾಷ್ಟ್ರಪೇಟೆಯಲ್ಲಿ ಚಿತ್ರಾಪಿಂಟರಿ ಮುದ್ರಣಾಲಯವನ್ನು ಹೊಂದಿದ್ದು ಪತ್ರಿಕೆ ಬೆಳೆಯಲು ಅವಕಾಶವಾಯಿತು. ಶ್ರೀರಂಗ, ಅ.ನ.ಕೃ., ಚದುರಂಗ, ನಾ.ಕಸ್ತೂರಿ, ಪ್ರೊ|ಎ.ಎನ್.ಮೂರ್ತಿರಾವ್, ನಾಡಿಗೇರ ಕೃಷ್ಣರಾವ್‌ರಂಥ ಹೆಸರಾಂತ ಲೇಖಕರು ರಂಗಭೂಮಿ, ಸಿನಿಮಾರಂಗಗಳ ಅನುಭವಿಗಳು ಲೇಖನ-ವಿಮರ್ಶೆಗಳನ್ನು ಬರೆಯುತ್ತಿದ್ದುದರಿಂದ ವಾಕ್ಚಿತ್ರ ಜನಪ್ರಿಯತೆ ಗಳಿಸಿ, ಸುಶಿಕ್ಷಿತ ವರ್ಗದ ಮೆಚ್ಚುಗೆಗೆ ಪಾತ್ರವಾಗಿ ಪ್ರತಿಷ್ಠಿತ ಸ್ಥಾನ ಸಂಪಾದಿಸಿಕೊಂಡಿತು. ಅ.ನ.ಕೃ. ನಾಡಿಗೇರ್, ಅ.ನ.ಕೃ.-ಮಾ.ನಾ.ಚೌಡಪ್ಪ ಇವರ ಜಂಟಿ-ವಿಮರ್ಶೆಗಳು ಈ ಪತ್ರಿಕೆಯ ವಿಶೇಷ. ಅ.ನ.ಕೃ. ಅವರು ಚಿತ್ರಸಾಹಿತ್ಯದ ಬಗೆಗೂ ಈ ಪತ್ರಿಕೆಯಲ್ಲಿ ಬರೆದರು. ಈ ಹಂತದಲ್ಲಿ ಚಲನಚಿತ್ರ ಪತ್ರಿಕೋದ್ಯಮ ಒಂದು ಗೌರವದ ಸ್ಥಾನ ಪಡೆಯಿತು. ಚೌಡಪ್ಪ ಚಿತ್ರಸಾಹಿತಿಯಾಗಿ ಚಲನಚಿತ್ರರಂಗದತ್ತ ತೆರಳಿದಾಗ ಪ್ರಕಾಶಕ ವೆಂಕೋಬರಾವ್ ೧೯೫೩ರಲ್ಲಿ 'ವಾಕ್ಚಿತ್ರ'ವನ್ನು ನಿಲ್ಲಿಸಿಬಿಟ್ಟರು, ಆದರೂ ಚಲನಚಿತ್ರ ಪ್ರಚಾರ ಕಾರ್ಯವನ್ನು ಮಾತ್ರ ಮುಂದುವರೆಸಿದರು.

ಚಲನಚಿತ್ರ ಪತ್ರಿಕೆಯೆಂದರೆ ಹೇಗಿರಬೇಕು, ಸಲಹೆ-ಸೂಚನೆ-ವಿಮರ್ಶೆಗಳನ್ನು ರಚನಾತ್ಮಕವಾಗಿ ಹೇಗೆ ನೀಡಬಹುದು ಎನ್ನುವುದಕ್ಕೆ 'ವಾಕ್ಚಿತ್ರ' ಮುಂದಿನ ಸಿನಿಮಾ ಪತ್ರಿಕೆಗಳಿಗೆ ಮಾದರಿಯಾಯಿತು. ಆ ಕಾಲದಲ್ಲಿ ಚಲನಚಿತ್ರ ಮಾಧ್ಯಮ, ತಾಂತ್ರಿಕತೆ ಬಗ್ಗೆ ಹೆಚ್ಚಿನ ಕಾಳಜಿ ತೋರಿದ ಪತ್ರಿಕೆ ಇನ್ನೊಂದಿರಲಿಲ್ಲ. ಪತ್ರಿಕೆಯ ಅನೇಕ ಲೇಖನಗಳು ಇಂದಿಗೂ ಆಕರವಾಗಿಯೇ ಉಳಿದುಕೊಂಡಿವೆ. ಕನ್ನಡ ಚಿತ್ರರಂಗ ಸುವರ್ಣ ಮಹೋತ್ಸವ ಆಚರಿಸುವ ಹೊತ್ತಿಗೆ ಮಾ.ನಾ.ಚೌಡಪ್ಪ ತೀವ್ರ ಅನಾರೋಗ್ಯದಿಂದ ವಿಧಿವಶರಾದರು. ವೆಂಕೋಬರಾಯರು ಚಿತ್ರರಂಗದ ನಂಟನ್ನು ಉಳಿಸಿಕೊಂಡು ಬಂದರು.


ಮಾ.ನ.ಚೌಡಪ್ಪ

ಮುಂದಿನ ಎಂಟು-ಹತ್ತು ವರ್ಷಗಳಲ್ಲಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮದಲ್ಲಿ ಕೆಲವೊಂದು ಹೊಸ ಬೆಳವಣಿಗೆಗಳು ಕಾಣಿಸಿಕೊಂಡವು. ಈ ಅವಧಿಯಲ್ಲಿ ಅನೇಕ ಚಲನಚಿತ್ರ ಪತ್ರಕರ್ತರು ರೂಪುಗೊಂಡರು. ಕನ್ನಡ ಚಿತ್ರನಿರ್ಮಾಣದ ಅಂದಂದಿನ ಚಿತ್ರೀಕರಣ ಚಟುವಟಿಕೆಗಳ ಮಾಹಿತಿ, ಚಿತ್ರರಂಗದ ಆಗು-ಹೋಗುಗಳನ್ನು ಕಲೆ ಹಾಕುವ ಪದ್ಧತಿ ಈ ಘಟ್ಟದಿಂದ ಪ್ರಾರಂಭವಾಯಿತು. ಸೃಜನಶೀಲ ಸಿನಿಮಾ ಕಲೆಗೆ, ಸಿನಿಮಾ ಕಲಾವಿದರನ್ನು ಮಿನುಗುತಾರೆಗಳನ್ನಾಗಿಸುವ ಗ್ಲಾಮರ್ ಸೇರಿಕೊಂಡಿತು.

೧೯೪೪-೪೫ರಲ್ಲಿ ಬಿ.ಕೆ.ಗುರುರಾಜ್ 'ಚಿತ್ರಾಂಗಿನಿ' ಪತ್ರಿಕೆ ಹೊರತಂದರು. ೧೯೪೦ರ ದಶಕದ ಕೊನೆ, ೧೯೫೦ರ ದಶಕದ ಪ್ರಾರಂಭದಲ್ಲಿ 'ಚಿತ್ರ', 'ಚಿತ್ರವಾಣಿ' ಪತ್ರಿಕೆಗಳು ಬಂದವು. ಎಸ್.ನರಸಿಂಹಯ್ಯ 'ಚಿತ್ರ' ಸಂಪಾದಕರು. ಪ್ರಸಿದ್ಧ ಹಿಂದಿ, ಕನ್ನಡ ಚಿತ್ರ ನಿರ್ಮಾಪಕ-ನಿರ್ದೇಶಕ ಎಸ್.ರಾಮನಾಥನ್ 'ಚಿತ್ರವಾಣಿ' ಸಂಪಾದಕರಾಗಿದ್ದರು. ಪ್ರಸಿದ್ಧ ಚಿತ್ರಸಾಹಿತಿ-ನಿರ್ದೇಶಕ ಕು.ರ.ಸೀತಾರಾಮಶಾಸ್ತ್ರಿ, ಲೇಖಕ ಮೈ.ಸು.ಶೇಷಗಿರಿರಾವ್ ಪತ್ರಿಕೆಯ ಬಳಗದಲ್ಲಿದ್ದರು. ಆ ದಿನಗಳಲ್ಲಿ ಕನ್ನಡ ಚಿತ್ರೋದ್ಯಮದ ಚಟುವಟಿಕೆಗಳು ಗೌಣವಾಗಿಯೇ ಇದ್ದರೂ ಈ ಪತ್ರಿಕೆಗಳು ಅವುಗಳಿಗೆ ಸಾಕಷ್ಟು ಪ್ರಾಮುಖ್ಯ ಕೊಡುವುದರ ಜೊತೆಗೆ ಹಿಂದಿ ಚಿತ್ರರಂಗ ಮತ್ತು ಹಾಲಿವುಡ್‌ನ ವಿದ್ಯಮಾನಗಳಿಗೆ ಸಾಕಷ್ಟು ಸ್ಥಳ ವಿನಿಯೋಗಿಸುತ್ತಿದ್ದವು. ಇದು ಅನಿವಾರ್ಯವಾಗಿತ್ತು ಕೂಡ.

ಈ ಮಧ್ಯೆ ಇಂಗ್ಲಿಷ್ ಸಿನಿಮಾ ಪತ್ರಿಕೆಯೊಂದನ್ನು ಹೊರತರುವ ಪ್ರಯತ್ನವೂ ನಡೆಯಿತು. ಬ್ರೂಕ್‌ಬಾಂಡ್ ಸಂಸ್ಥೆಯಲ್ಲಿ ಪ್ರಚಾರ ಸಹಾಯಕರಾಗಿದ್ದ ಟಿ.ಎಸ್.ರಾಮಚಂದ್ರರಾವ್ (ಮುಂದೆ 'ಪ್ರಜಾವಾಣಿ' ದಿನಪತ್ರಿಕೆಯ ಸಂಪಾದಕರಾಗಿ ಪ್ರಸಿದ್ಧರಾದರು) ಸಂಪಾದಕತ್ವದಲ್ಲಿ ಹೊರಬಂದ 'ಮೂನ್‌ಲೈಟ್' ಮಾಸಪತ್ರಿಕೆ ಪ್ರಾರಂಭವಾದಾಗ ಕನ್ನಡ ಚಿತ್ರರಂಗ ಇನ್ನೂ ಶೈಶವಾವಸ್ಥೆಯಲ್ಲೇ ಇದ್ದು ವರ್ಷಕ್ಕೆ ಒಂದೆರಡು ಚಿತ್ರ ತಯಾರಾಗುವುದೂ ಕಷ್ಟವಾಗಿದ್ದಿತು. ಕನ್ನಡ ಚಿತ್ರಗಳ ಬಗ್ಗೆ ಒಂದೆರಡು ಪುಟಗಳ ವರದಿ-ಲೇಖನಗಳಷ್ಟೇ ಅದರಲ್ಲಿ ಪ್ರಕಟವಾಗುತ್ತಿದ್ದವು. ಹೀಗಾಗಿ ಈ ಪತ್ರಿಕೆ ಸಹಜವಾಗಿಯೇ ಇಂಗ್ಲಿಷ್-ಹಿಂದಿ ಚಿತ್ರಗಳ ಮುಖವಾಣಿಯಾಗಿತ್ತು. ಸಂಗ್ರಹಕಾರ ರಾಮಸ್ವಾಮಿ ಅವರೂ ಟಿಯೆಸ್ಸಾರ್‌ರೊಂದಿಗೆ ಈ ಪತ್ರಿಕೆಯಲ್ಲಿ ದುಡಿದರು. ಇದೇ ದಿನಗಳಲ್ಲಿ 'ಚಿತ್ರ ಸಮಾಜ' ಪತ್ರಿಕೆಯ ಪ್ರಸರಣಾಧಿಕಾರಿಯಾಗಿದ್ದ ಎಸ್.ಸಿ.ಶೇಖರ್ ೧೯೪೯-೫೦ರಲ್ಲಿ ಪ್ರಾರಂಭಿಸಿದ 'ಚಿತ್ರಪಥ', ಹುಬ್ಬಳ್ಳಿಯಿಂದ ಎಸ್.ಎ.ಪಾಟೀಲ ಹೊರತಂದ 'ಕಲ್ಪನಾ' ಇವು ಹೆಸರಿಸಬೇಕಾದ ಸಿನಿಮಾ ಪತ್ರಿಕೆಗಳು.

೧೯೫೦ರ ದಶಕ ಕನ್ನಡ ಚಲನಚಿತ್ರರಂಗ ಹಾಗೂ ಕನ್ನಡ ಚಲನಚಿತ್ರ ಪತ್ರಿಕೆಗಳ ಇತಿಹಾಸದಲ್ಲಿ ಸ್ಥಿತ್ಯಂತರದ ಘಟ್ಟ. ಈ ದಶಕದಲ್ಲಿ ಕನ್ನಡ ಚಲನಚಿತ್ರಗಳ ಸಂಖ್ಯೆಯಲ್ಲಿ ಗಣನೀಯ ಹೆಚ್ಚಳ ಕಂಡುಬರದಿದ್ದರೂ, ಚಲನಚಿತ್ರ ಪತ್ರಿಕೋದ್ಯಮದಲ್ಲಿ ಕೆಲವು ದಿಟ್ಟ ಪ್ರಯತ್ನಗಳು ನಡೆದವು. ಕನ್ನಡ ಚಿತ್ರಗಳಿಗಿದ್ದ ಸೀಮಿತ ಮಾರುಕಟ್ಟೆ, ಪರಭಾಷಾ ಚಿತ್ರಗಳ ಪೈಪೋಟಿ, ಇವೆಲ್ಲವನ್ನೂ ಮೀರಿದ ಡಬ್ಬಿಂಗ್ ಹಾವಳಿ ನಡುವೆ ಕನ್ನಡ ಚಿತ್ರರಂಗ ತಲೆ ಎತ್ತುವುದೇ ದುಸ್ತರವಾಗಿದ್ದ ಆ ದಿನಗಳಲ್ಲಿ ಕೆಲ ಉತ್ಸಾಹಿ ಪತ್ರಕರ್ತರು ಚಿತ್ರರಂಗದ ಅಭ್ಯುದಯಕ್ಕಾಗಿಯೇ ಮೀಸಲಾದ ಪತ್ರಿಕೆಗಳನ್ನು ಹುಟ್ಟುಹಾಕಿದರು.

೧೯೫೧ರಲ್ಲಿ ಪತ್ರಕರ್ತ ಎಂ.ಜೀವನ ಸಂಪಾದಕತ್ವದಲ್ಲಿ ಗದಗ್‌ನಿಂದ ಪ್ರಕಟವಾಗುತ್ತಿದ್ದ 'ತರಂಗ' ಸಿನಿಮಾ ವಾರಪತ್ರಿಕೆ, ಎ.ಜಿ.ಸೀತಾಲಕ್ಷ್ಮಿಯವರ 'ನಿಪುಣ' ಈ ಯಾದಿಯಲ್ಲಿ ಸೇರಬೇಕಾದ ಸಿನಿಮಾ ಪತ್ರಿಕೆಗಳು.




೧೯೫೫ರಲ್ಲಿ ಬೆಂಗಳೂರಿನಿಂದ ಪ್ರಕಟಣೆ ಪ್ರಾರಂಭಿಸಿದ 'ಚಲಚ್ಚಿತ್ರ' ವಾರಪತ್ರಿಕೆ, ಅದೇ ಸುಮಾರಿನಲ್ಲಿ ಹೊರಬಂದ 'ಛಾಯಾಲೋಕ' ಪಾಕ್ಷಿಕ ಹಾಗೂ ಮರುವರ್ಷ ಪ್ರಾರಂಭವಾದ 'ಸಿನಿಮಾ' ಪಾಕ್ಷಿಕ ಇವು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿರುವ ಪತ್ರಿಕೆಗಳಾಗಿದ್ದವು. ಈ ಪತ್ರಿಕೆಗಳು ಆ ದಿನಗಳಲ್ಲೇ ಡಬ್ಬಿಂಗ್, ರೀಮೇಕ್ ಚಿತ್ರಸೃಷ್ಟಿಯ ವಿರುದ್ಧ ಉಗ್ರಹೋರಾಟ ನಡೆಸಿದ್ದವು.

ಕನ್ನಡ ಚಲನಚಿತ್ರ ಪತ್ರಿಕೋದ್ಯಮಕ್ಕೊಂದು ಚೌಕಟ್ಟು ನೀಡಿ ಗಾಂಭೀರ್ಯ ತುಂಬಿ ಮಾದರಿಯೆನಿಸಿದ್ದು 'ಚಲಚ್ಚಿತ್ರ' ವಾರಪತ್ರಿಕೆ. ಕೆ.ವಿ.ಗಂಗರತ್ನ ಈ ಪತ್ರಿಕೆಯ ಸಂಪಾದಕ-ಪ್ರಕಾಶಕರು. ಕನ್ನಡದ ಮೊಟ್ಟಮೊದಲ ಟ್ಯಾಬ್ಲಾಯ್ಡ್ ಎಂಬ ಹೆಗ್ಗಳಿಕೆ ಅದರದ್ದು. ಅವರೆಗಿನ ಪತ್ರಿಕೆಗಳೆಲ್ಲ ಟ್ರೆಡ್ಲ್ ಮುದ್ರಣಯಂತ್ರದಲ್ಲಿ ಮುದ್ರಣಗೊಳ್ಳುತ್ತಿದ್ದರೆ ಇದು ಸಿಲೆಂಡರ್ ಯಂತ್ರದಲ್ಲಿ ಮುದ್ರಣ ಕಂಡ ಮೊದಲ ಪತ್ರಿಕೆಯಾಯಿತು. ನಾಡಿಗೇರ ಕೃಷ್ಣರಾವ್, ಮೈ.ಸು.ಶೇಷಗಿರಿರಾವ್, ಚಿ.ಉದಯಶಂಕರ್, ಬಿ.ಎ.ಅರಸುಕುಮಾರ್, ಕೆ.ಎ.ಗೋಪಾಲ್ ('ಬಂಗಾರದ ಮನುಷ್ಯ' ಚಿತ್ರದ ನಿರ್ಮಾಪಕರಲ್ಲಿ ಒಬ್ಬರು), ಶ್ರೀಕೃಪಾ, ಬಿ.ಕೆ.ಗುರುರಾಜ್, ಎಂ.ರಾಮನ್ (ಅನಂತರ 'ರೂಪಲೇಖಾ' ಪ್ರಕಟಿಸಿದರು)- ಹೀಗೆ ಅನೇಕ ಹಿರಿ-ಕಿರಿಯ ಲೇಖಕರು, ಪತ್ರಕರ್ತರು ಈ ಪತ್ರಿಕೆಯಲ್ಲಿ ಬರೆದರು. ಟ್ಯಾಬ್ಲಾಯ್ಡ್ ಆಕಾರದ ಸಿನಿಮಾ ಪತ್ರಿಕೆ ಹೇಗಿರಬೇಕು ಎಂಬುದಕ್ಕೆ ಈ ಪತ್ರಿಕೆ ಮಾದರಿ ಆಯಿತು. ಸ್ವಂತ ಮುದ್ರಣಾಲಯವಿದ್ದೂ ಲಾಭದಾಯಕ ಎನಿಸದಿದ್ದಾಗ ಗಂಗರತ್ನ ಪತ್ರಿಕೆಯನ್ನು ದಿನಪತ್ರಿಕೆ ಆಕಾರದಲ್ಲಿ ಹೊರತರಲಾರಂಭಿಸಿದರು. ಆದರೂ ಯಶಸ್ಸು ಸಿಗಲಿಲ್ಲ. ಅನಂತರ ಪತ್ರಿಕೆ ಹೆಚ್ಚು ದಿನ ಬದುಕಿ ಉಳಿಯಲಿಲ್ಲ.

೫೦ರ ದಶಕದಿಂದ ಸಿನಿಮಾ ಪತ್ರಕರ್ತರಾಗಿ ಈ ಕ್ಷೇತ್ರದಲ್ಲಿರುವ ಪಿ.ಜಿ.ಶ್ರೀನಿವಾಸಮೂರ್ತಿ ೧೯೫೬ರಲ್ಲೇ 'ಸಿನಿಮಾ' ಚಲನಚಿತ್ರ ಪಾಕ್ಷಿಕ ಪ್ರಾರಂಭಿಸಿದವರು. ಅನಂತರ 'ತಾಯಿನಾಡು' ಬಳಗದ 'ಗೋಕುಲ' ಪತ್ರಿಕೆಯಲ್ಲಿ ಸಿನಿಮಾ ವಿಭಾಗದ ಸಂಪಾದಕರಾದರು. ೧೯೬೬ರಲ್ಲಿ ಮದರಾಸಿನಲ್ಲಿರುವ ಅಮೆರಿಕೆಯ ರಾಯಭಾರ ಕಚೇರಿಯವರು 'ಅಮೆರಿಕನ್ ರಿಪೋರ್ಟರ್' ಪತ್ರಿಕೆಯ ಕನ್ನಡ ಆವೃತ್ತಿ ಆರಂಭಿಸಿದಾಗ ಅದರಲ್ಲಿ ಕೆಲಸ ಮಾಡಲು ಮದರಾಸಿಗೆ ತೆರಳಿದ ಅವರಿಗೆ ಕನ್ನಡ ಚಲನಚಿತ್ರರಂಗಕ್ಕಾಗಿ ಹೆಚ್ಚಿನ ಕೆಲಸ ಮಾಡುವ ಅವಕಾಶ ಅನಾಯಾಸವಾಗಿ ದೊರೆಯಿತು. 'ಪ್ರಜಾವಾಣಿ' ದಿನಪತ್ರಿಕೆಗಾಗಿ ರಾಜಕುಮಾರ್ ಜೀವನ ಚರಿತ್ರ ಬರೆದುಕೊಟ್ಟರು. ಸಿನಿಮಾ ಸುದ್ದಿಗಳನ್ನು ವರದಿ ಮಾಡಿದರು. 'ಅಮೆರಿಕನ್ ರಿಪೋರ್ಟರ್' ಪತ್ರಿಕೆಯಲ್ಲಿ ಕೆಲಸ ಮಾಡುತ್ತಲೇ 'ವಿಜಯಚಿತ್ರ'ದ ಸಂಪಾದಕವರ್ಗದಲ್ಲೂ ತೊಡಗಿಕೊಂಡರು. 'ಅಮೆರಿಕನ್ ರಿಪೋರ್ಟರ್'ನಿಂದ ನಿವೃತ್ತರಾದ ನಂತರ ಅವರು ಬೆಂಗಳೂರಿಗೆ ಬಂದರು. 'ವಿಜಯಚಿತ್ರ' ಪ್ರಕಟಣೆ ನಿಲ್ಲಿಸುವವರೆಗೂ ಅದಕ್ಕಾಗಿ ಕೆಲಸ ಮಾಡಿದರು. ಸಂಗೀತ ಕ್ಷೇತ್ರ ಕುರಿತಂತೆ 'ಕನ್ನಡಪ್ರಭ'ದಲ್ಲಿ ಬರೆಯುವ ಪಿ.ಜಿ.ಶ್ರೀನಿವಾಸಮೂರ್ತಿ ಚಲನಚಿತ್ರ ಪತ್ರಕರ್ತರಾಗಿಯೇ ಇದ್ದು ಲೇಖನ ವ್ಯವಸಾಯ ಮುಂದುವರೆಸಿದ್ದಾರೆ.

ಇದೇ ಸುಮಾರಿನಲ್ಲಿ ಕನ್ನಡ ಪತ್ರಿಕೋದ್ಯಮದ ಹಿರಿಯರಲ್ಲಿ ಒಬ್ಬರಾದ ವಿ.ಎನ್.ಸುಬ್ಬರಾವ್ 'ಲಲಿತಾಪ್ರಿಯ' ಕಾವ್ಯನಾಮದಲ್ಲಿ 'ಛಾಯಾಲೋಕ' ಸಿನಿಮಾ ಪಕ್ಷ ಪತ್ರಿಕೆಯ ಸಂಪಾದಕರಾಗಿ ಸಿನಿಮಾ ಬರಹಗಳಲ್ಲಿ ಉತ್ತಮ ಅಭಿರುಚಿ ಮೂಡಿಸುವ ಪ್ರಯತ್ನ ನಡೆಸಿದರು. ಬೆಂಗಳೂರಿನ ಗಾಂಧಿಬಜಾರ್‌ನ ಡೀಲಕ್ಸ್ ಸ್ಟುಡಿಯೋ ಮಾಲೀಕರಾಗಿದ್ದ ವಿ.ಎಸ್.ರತ್ನಂ ಇದರ ಪ್ರಕಾಶಕರು. ಈ ಪತ್ರಿಕೆ ಆದಾಗಲೇ ಜನಪ್ರಿಯವಾಗಿದ್ದ 'ಚಲಚ್ಚಿತ್ರ' ಪತ್ರಿಕೆಗೆ ಸ್ಪರ್ಧೆ ನೀಡಿತು. ಕಾರಣಾಂತರಗಳಿಂದ ಪತ್ರಿಕೆ ನಿಂತಿತು. ಸುಬ್ಬರಾವ್ ಇಂಗ್ಲಿಷ್ ಪತ್ರಿಕೋದ್ಯಮದ ವಿಶಾಲ ಜಗತ್ತನ್ನು ಸೇರಿದರು. ಮುಂಬಯಿಯ 'ಸ್ಕ್ರೀನ್' ಪತ್ರಿಕೆಯ ಉಪಸಂಪಾದಕ ಹಾಗೂ ವಿಮರ್ಶಕರಾಗಿ ಸೇರಿ ಆ ದೇಶವ್ಯಾಪಿ ಪತ್ರಿಕೆಯಲ್ಲಿ ಕನ್ನಡ ಚಿತ್ರೋದ್ಯಮಕ್ಕೆ ಉತ್ತಮ ಪ್ರಾತಿನಿಧ್ಯ ತಂದುಕೊಟ್ಟರು. ಅವರು 'ಛಾಯಾಲೋಕ'ದ ಸಂಪಾದಕರಾಗಿದ್ದಾಗಲೇ 'ಸ್ಕ್ರೀನ್' ಇಂಗ್ಲಿಷ್ ಪತ್ರಿಕೆಯ

ಬೆಂಗಳೂರು ಬಾತ್ಮೀದಾರರಾಗಿಯೂ ಕೆಲಸ ನಿರ್ವಹಿಸಿ ಆ ರಾಷ್ಟ್ರಮಟ್ಟದ ಪತ್ರಿಕೆಯಲ್ಲಿ ಪ್ರತಿವಾರ ಎರಡು-ಮೂರು ಕಾಲಂಗಳನ್ನು ಕನ್ನಡ ಚಿತ್ರರಂಗದ ಸುದ್ದಿಗಳು, ವಿಮರ್ಶೆಗಳು, ಸಂದರ್ಶನಗಳಿಂದ ತುಂಬುತ್ತಿದ್ದರು.

'ವಿಶ್ವ ಕರ್ನಾಟಕ'ದಿಂದ 'ಪ್ರಜಾವಾಣಿ' ದಿನಪತ್ರಿಕೆ ಸೇರಿದ ಎಂ.ಬಿ.ಸಿಂಗ್ 'ಪ್ರಜಾವಾಣಿ'ಯ ಸಂಪಾದಕೀಯ ವಿಭಾಗದಲ್ಲಿ ದುಡಿಯುತ್ತ 'ಪ್ರಜಾವಾಣಿ'ಯಲ್ಲಿ ಚುರುಕು ವಿಮರ್ಶೆಗಳನ್ನು, ಉಪಯುಕ್ತ ಲೇಖನಗಳನ್ನು ಬರೆದರು. 'ಪ್ರಜಾವಾಣಿ' ದೀಪಾವಳಿ ವಿಶೇಷಾಂಕಗಳಲ್ಲಿ ಕನ್ನಡ ಸಿನಿಮಾ ಕುರಿತು ವಿಶೇಷ ಲೇಖನಗಳನ್ನು ಬರೆದರು. ೧೯೭೨ರ ಇಂಥದೊಂದು ವಿಶೇಷಾಂಕದಲ್ಲಿ ಕನ್ನಡ ಚಿತ್ರರಂಗ ನಡೆದುಬಂದ ದಾರಿ ಕುರಿತ ಅವರ ವಿಸ್ತಾರವಾದ ಲೇಖನ ಮೊಟ್ಟಮೊದಲ ಚಾರಿತ್ರಿಕ ದಾಖಲೆ. ಮೊದಲ ಕನ್ನಡ ಚಿತ್ರ 'ಸತಿ ಸುಲೋಚನಾ'ದಿಂದ ಮುಂದಿನ ಮೂವತ್ತು ವರ್ಷಗಳ ಖಚಿತ ವಿವರಗಳನ್ನು ಆ ಲೇಖನದಲ್ಲಿ ಕಾಣಿಸಿದರು. ಕನ್ನಡ ಚಲನಚಿತ್ರ ಅದೇ ಬೆಳೆಯುತ್ತಿದ್ದ ಸಂದರ್ಭದಲ್ಲಿ ಚಲನಚಿತ್ರರಂಗದವರ ಪ್ರತಿ ಹೆಜ್ಜೆಯೊಂದಿಗೂ ದಾರಿದೀಪವಾಗುವಂಥ ಬೆಂಬಲವನ್ನು ಎಂ.ಬಿ.ಸಿಂಗ್ ನೀಡಿದ್ದಾರೆ. ಕನ್ನಡದಲ್ಲಿ ಡಬ್ಬಿಂಗ್ ಚಿತ್ರಗಳ ಹಾವಳಿ ಪ್ರಾರಂಭವಾದಾಗ ಎಂ.ಬಿ.ಸಿಂಗ್ ಇವರ ವಿರುದ್ಧ ಗಟ್ಟಿ ಲೇಖನಗಳನ್ನು ಬರೆದು ಕನ್ನಡಿಗರೆಲ್ಲರ ಗಮನ ಸೆಳೆದರು. ಪ್ರವಾಹ ಪರಿಹಾರ ನಿಧಿ ಕೂಡಿಸುವ ಪ್ರಯತ್ನದಲ್ಲಿ 'ಡೆಕ್ಕನ್ ಹೆರಾಲ್ಡ್'-'ಪ್ರಜಾವಾಣಿ' ಸಂಸ್ಥೆಯನ್ನು, ಕನ್ನಡ ಚಿತ್ರರಂಗದ ಪ್ರಮುಖ ತಾರೆಯರನ್ನೂ ಒಂದುಗೂಡಿಸಿ ಚಿತ್ರಪ್ರೇಮಿಗಳ ಹತ್ತಿರಕ್ಕೆ ಹೋಗಿ ನಿಧಿ ಕೂಡಿಸುವ ಕೆಲಸದಲ್ಲಿಯೂ ಎಂ.ಬಿ.ಸಿಂಗ್ ಪ್ರಮುಖ ಪಾತ್ರ ವಹಿಸಿದರು. ಕನ್ನಡ ಚಿತ್ರಗಳ ಆಗು-ಹೋಗುಗಳು, ಅಗತ್ಯಗಳ ಬಗ್ಗೆ ಬೆಂಬಲವಾಗಿ ನಿಂತರು. ಮುಂದೆ 'ಪ್ರಜಾವಾಣಿ', 'ಸುಧಾ', 'ಮಯೂರ' ಪತ್ರಿಕೆಗಳ ಸಂಪಾದಕರಾಗಿ ೩೭ ವರ್ಷ ದುಡಿದು ನಿವೃತ್ತರಾದರು. ಎಂ.ಬಿ.ಸಿಂಗ್‌ರಿಗೆ ೧೯೯೭ರ ವರ್ಷದ ಪ್ರತಿಷ್ಠಿತ ಟಿಯೆಸ್ಸಾರ್ ಪ್ರಶಸ್ತಿ ದೊರಕಿದೆ. ಇವರು ಚಲನಚಿತ್ರ ಪತ್ರಿಕೋದ್ಯಮದ ಹಿರಿಯರಲ್ಲೊಬ್ಬರು.

೧೯೫೭ರಲ್ಲಿ ಮದರಾಸಿನ ಚಂದಮಾಮ ಸಂಸ್ಥೆ 'ಕಿನಿಮಾ' ಹೆಸರಿನಲ್ಲಿ ಸಿನಿಮಾ ಮಾಸಪತ್ರಿಕೆಯೊಂದನ್ನು ವರ್ಣರಂಜಿತವಾಗಿ ಹೊರತಂದಿತು. ಕನ್ನಡ ಚಿತ್ರರಂಗದ ಸಾಹಿತಿ ವಿಜಯನಾರಸಿಂಹ ಪತ್ರಿಕೆಯ ಸಂಪಾದಕ ಬಳಗದಲ್ಲಿದ್ದರು. ಕೆಲ ಸಮಯದಲ್ಲಿಯೇ ಈ ಪತ್ರಿಕೆ ನಿಂತುಹೋಯಿತು. ವಿಜಯನಾರಸಿಂಹ ಕೆಲವೆರಡು ಪತ್ರಿಕೆಗಳಿಗೆ ಮದರಾಸಿನ ಚಲನಚಿತ್ರ ಪ್ರತಿನಿಧಿಯಾಗಿಯೂ ಕೆಲಸ ಮಾಡಿದರು. ಎರಡು ದಶಕದನಂತರ 'ಚಂದಮಾಮ' ಸಂಸ್ಥೆಯವರು ಹೊಸ ಶೈಲಿ, ವಿನ್ಯಾಸಗಳೊಂದಿಗೆ 'ವಿಜಯಚಿತ್ರ' ಚಲನಚಿತ್ರ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು.

ಚಿಕ್ಕಂದಿನಿಂದಲೂ ಸಿನಿಮಾ ಹಾಗೂ ರಂಗಭೂಮಿಗಳ ನಂಟು ಬೆಳೆಸಿಕೊಂಡಿದ್ದ ಹ.ವೆಂ.ಸೀತಾರಾಮಯ್ಯ ಅಂದಿನ ಸಿನಿಮಾ ಪತ್ರಿಕೆಗಳಿಗೆ ಸುದ್ದಿ, ಸಂದರ್ಶನ, ಲೇಖನಗಳಲ್ಲದೆ ಜಾಹಿರಾತುಗಳನ್ನು ತಂದುಕೊಡುತ್ತಿದ್ದು ೧೯೫೦ರ ಸುಮಾರಿನಲ್ಲಿ ನಾಲ್ಕು ಪುಟಗಳ 'ಚಿತ್ರಪ್ರಭ' ಚಲನಚಿತ್ರ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಅದು ಹೆಚ್ಚು ದಿನ ಬಾಳಲಿಲ್ಲ. ಇದಾದ ಮೇಲೆ 'ತಾಯಿನಾಡು', 'ಕನ್ನಡಪ್ರಭ' ಪತ್ರಿಕೆಗಳಲ್ಲಿ ದುಡಿದು ೧೯೮೮ರಲ್ಲಿ ವಿಧಿವಶರಾದರು. ರಂಗಭೂಮಿಯ ಹಿಂದಿನ ತಲೆಮಾರಿನ ಕಲಾವಿದರನ್ನು ಕುರಿತ ಪುಸ್ತಕ ಪ್ರಕಟಣೆ ಇವರ ಸಾಧನೆ. ಅದೇ ರೀತಿ ಕನ್ನಡ ಚಲನಚಿತ್ರರಂಗದ ಪ್ರಾರಂಭದ ಇತಿಹಾಸವನ್ನೂ ದಾಖಲಿಸಿದರಲ್ಲದೆ, ಛಾಯಾಚಿತ್ರಗಳನ್ನೂ ಸಂಗ್ರಹಿಸಿದ್ದರು.

ಕಾನಕಾನಹಳ್ಳಿಗೋಪಿ ಅವರೂ ರಂಗಭೂಮಿ, ಸಿನಿಮಾ ವಲಯಗಳಲ್ಲಿ ಚಿರಪರಿಚಿತರು. ಕನ್ನಡ ಚಲನಚಿತ್ರಗಳ ಅಪರೂಪದ ಛಾಯಾಚಿತ್ರಗಳು, ಬುಕ್‌ಲೆಟ್‌ಗಳು ಹಾಗೂ ಪೋಸ್ಟರುಗಳನ್ನು ಸಂಗ್ರಹಿಸಿದರು. ಕನ್ನಡ ಚಲನಚಿತ್ರಗಳ ಇತಿಹಾಸವನ್ನು ಬಿಂಬಿಸುವ ಛಾಯಾಚಿತ್ರಗಳ ಪ್ರದರ್ಶನಗಳನ್ನು ದೇಶ ವಿದೇಶಗಳಲ್ಲಿ ಏರ್ಪಡಿಸಿ ಮೆಚ್ಚುಗೆ ಗಳಿಸಿದರು.



(ಚಿತ್ರ ೧) 'ಸಿನಿಮಾ' ಪ್ರಿಯ ರಾಜಕುಮಾರ್

೧೯೫೭ನೇ ವರ್ಷದಲ್ಲಿ ಬಿ.ಕೆ.ಗುರುರಾಜ್, ಎಸ್.ಗುರುರಾಜ್, ಶ್ರೀಕೃಪಾ ಸೇರಿ 'ರೂಪಲೇಖಾ' ಚಲನಚಿತ್ರ ಮಾಸಪತ್ರಿಕೆಯನ್ನು ಪ್ರಾರಂಭಿಸಿ ಕೆಲಕಾಲ ನಡೆಸಿದರು. ಅದೇ ಸುಮಾರಿನಲ್ಲಿ ಇನ್ನೂ ಕೆಲವು ಸಿನಿಮಾ ಪತ್ರಿಕೆಗಳು ಬಂದವು. ಅವುಗಳಲ್ಲಿ ಶ್ರೀಕೃಪಾ ಸಂಪಾದಕತ್ವದಲ್ಲಿ ಪ್ರಕಟವಾದ 'ಚಿತ್ರಪ್ರಗತಿ' ಹಾಗೂ 'ಪ್ರಪಂಚ' ವಾರಪತ್ರಿಕೆಯ ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ ೧೯೫೮-೫೯ರಲ್ಲಿ ಹೊರತಂದ 'ಮನೋರಮಾ' ಸಿನಿಮಾ ಮಾಸಪತ್ರಿಕೆ ಮತ್ತು ಅ.ನ.ಕೃ. ನೇತೃತ್ವದ ಕನ್ನಡ ಚಳವಳಿಯಿಂದ ಪ್ರೇರಿತರಾಗಿ ಎಂ.ರಾಮನ್ ೧೯೬೧ರಲ್ಲಿ ಹೊರತಂದ 'ಚಿತ್ರಾಲಯ' ಸಿನಿಮಾ ವಾರಪತ್ರಿಕೆ ಪ್ರಮುಖವಾದವು.

೧೯೭೦ರ ದಶಕದಲ್ಲಿ ಬಂದ ಸಿನಿಮಾ ಪತ್ರಿಕಗಳಲ್ಲಿ 'ಚಿತ್ರಲೇಖಾ', 'ಮೇನಕಾ', 'ರೂಪಲೇಖಾ' ಗಮನ ಸೆಳೆದವು. ೧೯೭೩ರ ನವೆಂಬರ್‌ನಲ್ಲಿ ಪ್ರಾರಂಭವಾದ 'ಚಿತ್ರಲೇಖಾ' ಮದ್ರಾಸ್‌ನಿಂದ ಪ್ರಕಟವಾಗುತ್ತಿದ್ದ 'ಪಿಕ್ಚರ್ ಪೋಸ್ಟ್-ಪೇಸುಮ್ ಪಡಮ್' ಮಾದರಿಯದು. ಕನ್ನಡ ಚಲನಚಿತ್ರರಂಗ ಇತಿಹಾಸದಲ್ಲಿಯೇ ಹೊಸದೊಂದು ದಾಖಲೆ ನಿರ್ಮಿಸಿದ 'ಬಂಗಾರದ ಮನುಷ್ಯ' ಚಿತ್ರದ ನಿರ್ಮಾಪಕರಾದ ಆರ್.ಲಕ್ಷ್ಮಣ್ (ಇವರು ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಮೀಸಲಾಗಿದ್ದ ಭಾರತ್ ಚಿತ್ರಮಂದಿರದ ವ್ಯವಸ್ಥಾಪಕರಾಗಿದ್ದರು) ಮತ್ತು ಕೆ.ಎ.ಗೋಪಾಲ್ ಈ ಪತ್ರಿಕೆಯ ಬೆನ್ನೆಲುಬಾಗಿದ್ದರು. ಲಕ್ಷ್ಮಣ್ ಈ ಪತ್ರಿಕೆಯ ಸಂಪಾದಕ-ಪ್ರಕಾಶಕ. ತ್ರಿವರ್ಣ ಮುಖಚಿತ್ರ, ಒಳಪುಟಗಳಲ್ಲಿನ ವರ್ಣಚಿತ್ರಗಳು ಪತ್ರಿಕೆಯ ಪ್ರಮುಖ ಆಕರ್ಷಣೆ. 'ಕಾಲದೂತಳಾಗಿ ವಿಚಾರಜಾತಳಾಗಿ ಕನ್ನಡ ಕುಲಕೋಟಿಯ ಮನೆಯ ಹೊಸ್ತಿಲಿಗೆ 'ಚಿತ್ರಲೇಖ' ಬರುತ್ತಿದ್ದಾಳೆ' ಎಂಬ ಆಶಯ ವಾಕ್ಯದೊಂದಿಗೆ ಅದು ಬರುತ್ತಿತ್ತು. ಮೊದಲ ಸಂಚಿಕೆಯಿಂದಲೇ ಈ ಪತ್ರಿಕೆಗೆ ಹಿರಿಯ ಲೇಖಕರು, ಕನ್ನಡ ಚಿತ್ರರಂಗದ ನಿರ್ದೇಶಕರು, ನಿರ್ಮಾಪಕರು, ಕಲಾವಿದರು, ತಂತ್ರಜ್ಞರು ಲೇಖನಗಳನ್ನು ಬರೆಯತೊಡಗಿದರು. (ಈಗ ಇದು ತೀರಾ ಅಪರೂಪ). ಚಿತ್ರರಂಗಕ್ಕೆ ಸಂಬಂಧಿಸಿದ ಬರಹಗಳು, ಚಿತ್ರೀಕರಣಕ್ಕೆ ಸಂಬಂಧಿಸಿದ ಸುದ್ದಿ-ಸಮಾಚಾರಗಳು ಛಾಯಾಚಿತ್ರಗಳೊಂದಿಗೆ ಅದರಲ್ಲಿ ಪ್ರಕಟವಾಗುತ್ತಿದ್ದವು. ಈ ಪತ್ರಿಕೆಯ ದೀಪಾವಳಿ ವಿಶೇಷ ಸಂಚಿಕೆಗೆ ಅತಿ ಹೆಚ್ಚಿನ ಬೇಡಿಕೆ ಇತ್ತು. ಮುಖಪುಟ ಮತ್ತು ಹಿಂಬದಿಯ ಪುಟಗಳಲ್ಲಿ ಕನ್ನಡ ಚಲನಚಿತ್ರಗಳ ಜಾಹಿರಾತುಗಳು ಇರುತ್ತಿದ್ದವು. ಚಲನಚಿತ್ರೋದ್ಯಮದ ವಾಣಿಜ್ಯ, ಆರ್ಥಿಕ ವಿಚಾರಗಳನ್ನು ಕುರಿತ ವಿಚಾರಪೂರ್ಣ ಲೇಖನಗಳು ಹೆಚ್ಚು ಕಡಿಮೆ ಪ್ರತಿ ಸಂಚಿಕೆಯಲ್ಲಿಯೂ ಇರುತ್ತಿದ್ದವು. ಕೆಲವು ವರ್ಷ ಪತ್ರಿಕೆ ಚೆನ್ನಾಗಿಯೇ ನಡೆಯಿತು.

೧೯೭೮ರ ಏಪ್ರಿಲ್‌ನಲ್ಲಿ ಬೆಂಗಳೂರಿನ ಗಾಂಧಿನಗರದಿಂದ ಪ್ರಕಟಣೆ ಪ್ರಾರಂಭಿಸಿದ ಕನ್ನಡ ಚಲನಚಿತ್ರ ವಾರಪತ್ರಿಕೆ 'ಮೇನಕಾ' ಕನ್ನಡ ನಾಡಿನ ಚಲನಚಿತ್ರ ಪತ್ರಿಕೋದ್ಯಮದಲ್ಲಿ ಒಂದು ಮೈಲಿಗಲ್ಲಾಗಿ ನಿಂತ ಪತ್ರಿಕೆ. ಕನ್ನಡ ಚಿತ್ರರಂಗದ ಒಳ-ಹೊರಗನ್ನು ತೆರೆದಿಟ್ಟ ಪತ್ರಿಕೆ. ಪತ್ರಕರ್ತ ಸಿ.ಆರ್.ಕೃಷ್ಣರಾವ್ ಸಂಪಾದಕರು. ಹಿರಿಯರಾದ ವಿ.ಎನ್.ಸುಬ್ಬರಾವ್ ಪತ್ರಿಕೆಯ ಸೂತ್ರಧಾರರು. ಆ ವೇಳೆಗಾಗಲೇ 'ಸ್ಕ್ರೀನ್' ಪತ್ರಿಕೆಗಾಗಿ ಹತ್ತು ವರ್ಷಗಳಿಗೂ ಹೆಚ್ಚುಕಾಲ ದುಡಿದಿದ್ದರಿಂದ ಸುಬ್ಬರಾಯರಲ್ಲಿ ಕನ್ನಡದಲ್ಲಿಯೂ ಅದೇ ವಿಧದ ಚಲನಚಿತ್ರ ವಾರಪತ್ರಿಕೆಯೊಂದು ಹೊರಬರಬೇಕೆಂಬ ಉದ್ದೇಶ ಬಲವಾಗಿತ್ತು. ರಂಜನಾ ಪಬ್ಲಿಕೇಷನ್ಸ್ ಸಂಸ್ಥೆಯ ಪ್ರಕಟಣೆಯಾಗಿ ಬಂದ ಪತ್ರಿಕೆ, ಟ್ಯಾಬ್ಲಾಯ್ಡ್ ಸಿನಿಮಾ ಪತ್ರಿಕೆಗಳಲ್ಲಿ ೧೨ ವರ್ಷಗಳ ಕಾಲ ವಿಜೃಂಭಿಸಿತು. 'ಮೇನಕಾ' ಪತ್ರಿಕೆಯ ಸ್ಥಾಪನೆಗೆ ಮೂಲ ಕಾರಣರಾದವರಲ್ಲಿ 'ಪ್ರಜಾವಾಣಿ' ದೈನಿಕದ ವರದಿಗಾರ ಟಿ.ದಾಸಪ್ಪನವರೂ ಒಬ್ಬರು. ಚಲನಚಿತ್ರರಂಗದ ಬಗ್ಗೆ ಅಭಿಮಾನ ತಳೆದಿದ್ದ ಅವರು ಬೆಂಗಳೂರಿನಲ್ಲಿ ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್ ಆರಂಭವಾಗಲೂ ಕಾರಣರು. ದಾಸಪ್ಪನವರು ನಿಧನರಾಗುವವರೆವಿಗೂ 'ಮೇನಕಾ' ಪತ್ರಿಕೆಯೊಂದಿಗೆ ನಂಟನ್ನು ಹೊಂದಿದ್ದರು. ಪತ್ರಿಕಯು ಚಿತ್ರರಂಗ ಮತ್ತು





ಪತ್ರಿಕೋದ್ಯಮಗಳೆರಡನ್ನೂ ಹತ್ತಿರಕ್ಕೆ ತಂದಿತು. ಆ ಕಾಲಕ್ಕೆ ಕನ್ನಡ ಸಿನಿಮಾ ಪತ್ರಿಕೆಗಳಲ್ಲೇ ಅತ್ಯುತ್ತಮ ಪ್ರಯತ್ನವೆನಿಸಿ ಜನಮೆಚ್ಚುಗೆ ಗಳಿಸಿತು. ಈ ಅವಧಿಯಲ್ಲಿ ಸರಿಸಮನಾದ ಬೇರೊಂದು ಪ್ರಭಾವಿ ಪತ್ರಿಕೆ ಇಲ್ಲದಿದ್ದುದೂ ಈ ಪತ್ರಿಕೆಯ ಯಶಸ್ಸಿಗೆ ಮತ್ತೊಂದು ಕಾರಣ. ಪತ್ರಿಕೋದ್ಯಮಕ್ಕೆ 'ಮೇನಕಾ' ವಿಶೇಷ ಬಳುವಳಿ ನೀಡಿತು. ಈ ಪತ್ರಿಕೆಯಿಂದಾಗಿ ಕನ್ನಡ ಪತ್ರಿಕೋದ್ಯಮದಲ್ಲಿ ಕೆಲ ಹೊಸ ಚಲನಚಿತ್ರ ಪತ್ರಕರ್ತರು ರೂಪುಗೊಂಡರು. ಅಂಥವರಲ್ಲಿ ಸಿ.ಸೀತಾರಾಮ್, ಟಿ.ಜಿ.ಅಶ್ವತ್ಥನಾರಾಯಣ (ಇವರ 'ಅಶ್ವತ್ಥ ಪ್ರದಕ್ಷಿಣೆ' - 'ಮೇನಕಾ'ದಲ್ಲಿನ ಅಂಕಣ ಹೆಸರುವಾಸಿ), 'ಡೆಕ್ಕನ್ ಹೆರಾಲ್ಡ್'ನಲ್ಲಿದ್ದು ಅಕಾಲ ಮೃತ್ಯುವಿಗೀಡಾದ ವಿ.ಆರ್.ಗಿರಿಧರ್, ಮಹೇಶ್‌ಸ್ವಾಮಿ, ಎನ್.ಕೆ.ಮೋಹನ್‌ರಾಮ್ ಅವರೂ ಸೇರಿದ್ದಾರೆ.

'ಮೇನಕಾ' ಬಳಗದಿಂದ 'ಕನ್ನಡಪ್ರಭ'ಕ್ಕೆ ಬಂದ ಸಿ.ಸೀತಾರಾಮ್ ಕೆ.ಎಸ್.ನಾರಾಯಣಸ್ವಾಮಿಯವರ ನಂತರ 'ಚಿತ್ರಪ್ರಭ'ದ ನಾಲ್ಕು ಪುಟಗಳ ಸಿನಿಮಾ ಪುರವಣಿಯ ಜವಾಬ್ದಾರಿ ಹೊತ್ತರು. ಆ ವರ್ಣಮಯ ಪುರವಣಿಯಲ್ಲಿ ಕನ್ನಡ ಚಲನಚಿತ್ರರಂಗದ ಆಗು-ಹೋಗುಗಳನ್ನು, ಕುತೂಹಲಕಾರಿ ಸುದ್ದಿ-ಸಮಾಚಾರಗಳನ್ನು ನೀಡುವ ಮೂಲಕ ಜನರ ಸಮೀಪಕ್ಕೆ ಉದ್ಯಮವನ್ನು ಒಯ್ದರು. 'ಚಪ್ಪಲಿ' ಕಾವ್ಯನಾಮದಲ್ಲಿಯೂ ಬರೆಯುತ್ತಿದ್ದ ಸೀತಾರಾಮ್ 'ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್' ಅಧ್ಯಕ್ಷರಾಗಿಯೂ ಉದ್ಯಮದೊಡನೆ ಚಲನಚಿತ್ರ ಪತ್ರಕರ್ತರ ಸಂಬಂಧ-ಬಾಂಧವ್ಯ ಬೆಳೆಯಲು ಕಾರಣರಾದರು. 'ಕನ್ನಡಪ್ರಭ'ದಿಂದ ನಿವೃತ್ತರಾದ ನಂತರ 'ದಿ ಏಷಿಯನ್ ಏಜ್' ಇಂಗ್ಲಿಷ್ ಪತ್ರಿಕೆಯಲ್ಲಿ ಚಲನಚಿತ್ರೋದ್ಯಮದ ಬಗ್ಗೆ ಸ್ವಲ್ಪ ಕಾಲ ಬರೆದರು. ನಂತರ 'ಸಂಯುಕ್ತ ಕರ್ನಾಟಕ' ಪತ್ರಿಕೆಗೆ ಬರೆಯತೊಡಗಿದರು. ಮಹೇಶ್‌ಸ್ವಾಮಿ ಚಿತ್ರ, ಕಿರುತೆರೆಗಳಿಗೂ ದುಡಿದರು. ಎನ್.ಕೆ.ಮೋಹನ್‌ರಾಮ್ ದೂರದರ್ಶನದಲ್ಲಿ ದುಡಿಯಲು ಹೊರಟರು.

೧೯೬೬ರಲ್ಲಿ ಅ.ನ.ಕೃ. ಅವರ ಕನ್ನಡ ಚಳವಳಿ ಗರಡಿಯ ಪೈಲ್ವಾನ್ ಎಂದೇ ಹೆಸರಾಗಿದ್ದ ಕಾದಂಬರಿಕಾರರೂ ಆದ ಎಂ.ರಾಮನ್ 'ರೂಪಲೇಖಾ' ಚಲನಚಿತ್ರ ವಾರಪತ್ರಿಕೆ ಆರಂಭಿಸಿದರು. ಆಧುನಿಕ ಆಫ್‌ಸೆಟ್ ಮುದ್ರಣದಲ್ಲಿ ಹೊರಬಂದ ಮೊಟ್ಟಮೊದಲ ಕನ್ನಡ ಚಲನಚಿತ್ರ ವಾರಪತ್ರಿಕೆ ಎಂಬ ಹೆಗ್ಗಳಿಕೆ ಅದರದು. ಪತ್ರಿಕೆಯ ರಕ್ಷಾಪುಟ ವರ್ಣದಲ್ಲಿ ಶ್ರೀಮಂತವಾಗಿ ಮುದ್ರಣಗೊಳ್ಳುತ್ತಿತ್ತು. ಹೆಚ್ಚು ಜನಪ್ರಿಯತೆ ಗಳಿಸಿದರೂ ಲಾಭದಾಯಕವಾಗಿರದೆ ಆಗಾಗ ಕುಂಟುತ್ತಿತ್ತು. ಪತ್ರಿಕೆಯ ಸಂಪಾದಕ-ಪ್ರಕಾಶಕ ರಾಮನ್ ಅವರಿಗೆ ಸಿನಿಮಾ ನಿರ್ಮಾಣ ಹತ್ತಿರವಾಗುತ್ತ ಬಂದು ಪತ್ರಿಕೆ ಹಿಂದೆ ಬೀಳತೊಡಗಿತು. 'ಒಲವಿನ ಉಡುಗೊರೆ', 'ಎದುರು ಮನೆ ಮೀನಾ', 'ಹೊಸರಾಗ' ಚಿತ್ರಗಳ ನಿರ್ಮಾಪಕರಲ್ಲಿ ಒಬ್ಬರಾದ ರಾಮನ್, ತಾವೇ ನಿರ್ದೇಶಕರಾಗಿ 'ಕೆರಳಿದ ಕನ್ಯೆಯರು' ಮತ್ತು 'ಮಲಮಗಳು' ಚಿತ್ರಗಳ ಸೃಷ್ಟಿಯಲ್ಲಿ ತೊಡಗಿಕೊಂಡಾಗ ಪತ್ರಿಕೆಯ ಪ್ರಕಟಣೆ ನಿಂತಿತು. ಅವರ ನಿರ್ದೇಶನದ ಚಿತ್ರಗಳೂ ಪೂರ್ಣಗೊಂಡು ತೆರೆಕಾಣಲಿಲ್ಲ. ಹೊಸ ಸಹಸ್ರಮಾನದ ಆದಿಯಲ್ಲಿ ಎಂ.ರಾಮನ್ ವಿಧಿವಶರಾದರು.

ಈ ಸಂದರ್ಭದಲ್ಲಿ ಇನ್ನೊಂದು ಅಂಶವನ್ನು ಇಲ್ಲಿ ದಾಖಲಿಸಬೇಕು. ಆ ದಿನಗಳಲ್ಲಿ ಉದ್ಯೋಗ ನಿಮಿತ್ತ ಮದ್ರಾಸ್‌ನಲ್ಲಿ ವಾಸವಾಗಿದ್ದ ಅನೇಕ ಕನ್ನಡಿಗರು ಕನ್ನಡ ಪತ್ರಿಕೆಗಳಿಗೆ ಸಿನಿಮಾ ಸುದ್ದಿಗಳನ್ನು ಬರೆದು ಕಳುಹಿಸುತ್ತಿದ್ದರು. ಅಂಚೆ ಇಲಾಖೆಯಲ್ಲಿ ನೌಕರರಾಗಿದ್ದ ಎನ್.ಪಿ.ಶಂಕರನಾರಾಯಣರಾಯರು 'ಪ್ರಜಾವಾಣಿ' ಪತ್ರಿಕೆಗೆ ವರದಿಗಾರ. ಚಲನಚಿತ್ರಗಳಲ್ಲಿ ಪಾತ್ರಧಾರಿಯೂ ಆಗಿದ್ದರು. ಚಿತ್ರಸಾಹಿತಿ ವಿಜಯನಾರಸಿಂಹ, ಸಂಗೀತ ಧ್ವನಿಮುದ್ರಿಕೆ ಸಂಸ್ಥೆಯ ಎಚ್.ಎಂ.ಮಹೇಶ್, ಅಮೆರಿಕನ್ ದೂತಾವಾಸದಲ್ಲಿ ಕನ್ನಡ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ಪಿ.ಜಿ.ಶ್ರೀನಿವಾಸಮೂರ್ತಿ, ಚಲನಚಿತ್ರ ನಿರ್ಮಾಪಕ - ಸಾಹಿತಿ ಎಂ.ನರೇಂದ್ರಬಾಬು, ಪ್ರಸಿದ್ಧ ಛಾಯಾಗ್ರಾಹಕ ಕೆ.ಎಸ್.ರಾಘವೇಂದ್ರರಾವ್, ರಘುಸುತ ಇವರೆಲ್ಲ ಸಿನಿಮಾ ವಿಶೇಷಗಳನ್ನು ಪತ್ರಿಕೆಗಳಿಗೆ ವರದಿ ಮಾಡುತ್ತಿದ್ದರು.



ಅದೇ ರೀತಿ ಮೊದಲು ವಿ.ಎನ್.ಸುಬ್ಬರಾವ್ 'ಪ್ರಜಾವಾಣಿ' ಪತ್ರಿಕೆಗೆ ಮುಂಬಯಿಯಿಂದ ಹಿಂದಿ ಸಿನಿಮಾ ಸುದ್ದಿಗಳನ್ನು, ವಿಶೇಷ ಸಂದರ್ಶನಗಳನ್ನು ಕಳುಹಿಸಲು ಪ್ರಾರಂಭಿಸಿದರು. ಸಂತೋಷಕುಮಾರ ಗುಲ್ವಾಡಿಯವರೂ ಮುಂಬಯಿಯಿಂದ ಹಿಂದಿ ಸಿನಿಮಾ ಸುದ್ದಿಗಳನ್ನು ಕನ್ನಡ ಪತ್ರಿಕೆಗಳಿಗೆ ರವಾನಿಸುತ್ತಿದ್ದರು. ತಮ್ಮ ಸೋದರ, ಛಾಯಾಗ್ರಾಹಕ ಶಿವರಂಜನ ಗುಲ್ವಾಡಿ ಜೊತೆಗೂಡಿ ವಿಶೇಷ ಸಂದರ್ಶನಗಳನ್ನು ಕಳುಹಿಸಿಕೊಡುತ್ತಿದ್ದರು. ೧೯೮೩ರಲ್ಲಿ ಸಂತೋಷಕುಮಾರ ಗುಲ್ವಾಡಿ ಮಣಿಪಾಲದಿಂದ ಪ್ರಾರಂಭವಾದ 'ತರಂಗ' ಸಾಪ್ತಾಹಿಕದ ಸಂಪಾದಕರಾದರು. 'ತರಂಗ'ದಿಂದ ಹೊರಬಂದು ಬೆಂಗಳೂರಿನಲ್ಲಿ ಆರಂಭವಾದ 'ನೂತನ' ಪತ್ರಿಕೆಯಲ್ಲಿಯೂ ಕೆಲಕಾಲ ಪ್ರಧಾನ ಸಂಪಾದಕರಾಗಿದ್ದರು.

೧೯೬೭ರಲ್ಲಿ ಟಿ.ಎಂ.ರಾಮಚಂದ್ರನ್ ದಕ್ಷಿಣ ಭಾರತದ ನಾಲ್ಕು ಭಾಷೆಗಳಲ್ಲಿ ಹೊರಡಿಸಿದ 'ಫಿಲ್ಮಾಲಯ' ಮಾಸಪತ್ರಿಕೆಯ ಕನ್ನಡ ಆವೃತ್ತಿಗೆ ಚಿತ್ರಸಾಹಿತಿ ವಿಜಯನಾರಸಿಂಹ ಸಂಪಾದಕರಾಗಿದ್ದರು. ಅದೇ ವರ್ಷದಲ್ಲಿ ಎಸ್.ಎಸ್.ಜೋಶಿ ಹುಬ್ಬಳ್ಳಿಯಿಂದ 'ಚಿತ್ರಲತಾ' ಚಲನಚಿತ್ರ ಮಾಸಪತ್ರಿಕೆಯನ್ನು ಆರಂಭಿಸಿದರು. ಜೋಶಿಯವರೇ ಪತ್ರಿಕೆಯ ಸಂಪಾದಕ-ಪ್ರಕಾಶಕರು. ದೂರದ ಹುಬ್ಬಳ್ಳಿಯಿಂದ ಬೆಂಗಳೂರು, ಮೈಸೂರುಗಳಿಗೆ ಪದೇಪದೇ ಬಂದು ಇಲ್ಲಿಯ ಚಿತ್ರನಿರ್ಮಾಣ ಚಟುವಟಿಕೆಗಳು ಹಾಗೂ ಸಮಾರಂಭಗಳ ವಿವರಗಳನ್ನು ಸಂಗ್ರಹಿಸಿಕೊಂಡು ವರದಿ ಮಾಡುವ ಮೂಲಕ ಆ ಭಾಗದ ಜನರನ್ನು ಕನ್ನಡ ಚಿತ್ರಗಳತ್ತ ಹೆಚ್ಚು ಸೆಳೆಯುವುದರಲ್ಲಿ ಜೋಶಿ ಪ್ರಮುಖ ಪಾತ್ರ ವಹಿಸಿದರು. ವರ್ಣಮುದ್ರಣದೊಂದಿಗೆ ಪತ್ರಿಕೆ ಎರಡು ದಶಕಗಳ ಕಾಲ ಚೆನ್ನಾಗಿಯೇ ನಡೆಯಿತು. ೭೨ರ ಸುಮಾರಿನಲ್ಲಿ ತಮಿಳುನಾಡಿಂದ ಬೆಂಗಳೂರಿಗೆ ಬಂದ ಸುಲ್ತಾನ್ ದಿನಪತ್ರಿಕೆಯ ಆಕಾರದಲ್ಲಿ ಹನ್ನೆರಡು ಪುಟಗಳ 'ರೇಣುಕಾ' ಸಿನಿಮಾ ವಾರಪತ್ರಿಕೆ ಪ್ರಾರಂಭಿಸಿದರು. ಶ್ರೀಕೃಪಾ ಸಂಪಾದಕರು. ಇದು 'ಸ್ಕ್ರೀನ್' ಪತ್ರಿಕೆಯ ಆಕಾರದಲ್ಲಿ ಹೆಚ್ಚು ಪುಟಗಳೊಂದಿಗೆ ಪ್ರಕಟವಾದ ಮೊದಲ ಚಲನಚಿತ್ರ ವಾರಪತ್ರಿಕೆ. ಅದ್ಧೂರಿ ಪ್ರಚಾರದೊಂದಿಗೆ ಮಾರುಕಟ್ಟೆಗೆ ಬಂದ ಈ ಪತ್ರಿಕೆಯ ಪ್ರಕಾಶಕರು ಹೆಚ್ಚು ಕಾಲ ನಷ್ಟವನ್ನು ಭರಿಸಲು ಶಕ್ತರಾಗಲಿಲ್ಲ.

ಸಿನಿಮಾ ಪತ್ರಿಕೋದ್ಯಮದ ಬಗ್ಗೆ ಬರೆಯುವಾಗ ಅಂದಿನ ಪ್ರಮುಖ ದಿನಪತ್ರಿಕೆಗಳಾದ 'ಪ್ರಜಾವಾಣಿ', 'ತಾಯಿನಾಡು', 'ಸಂಯುಕ್ತ ಕರ್ನಾಟಕ' ಮತ್ತಿತರ



(ಚಿತ್ರ ೨) ಹೊರಾಂಗಣ ಚಿತ್ರೀಕರಣ ವರದಿಗೆಂದು ಹೋಗಿದ್ದ ಪತ್ರಕರ್ತರು ಶ್ರೀಕೃಪಾ, ಎಸ್.ಆರ್.ಕೃಷ್ಣಮೂರ್ತಿ, ಬಿ.ಎಂ.ಕೃಷ್ಣಸ್ವಾಮಿ, ವಿ.ಎನ್.ಸುಬ್ಬರಾವ್ ಮತ್ತು ಎಂ.ದ್ವಾರಕಾನಾಥರಾವ್. ೬೦ರ ದಶಕದ ಒಂದು ಸ್ಮೃತಿಚಿತ್ರ

# ಪ್ರಜಾವಾಣಿ ಸಿನಿಮಾ ರಂಜನೆ

ದಿನಪತ್ರಿಕೆಗಳ ಭಾನುವಾರದ ಸಿನಿಮಾ ಅಂಕಣಗಳು, ಅದೇ ರೀತಿ ಪ್ರಸಿದ್ಧ ವಾರಪತ್ರಿಕಗಳಾಗಿದ್ದ 'ಪ್ರಜಾಮತ', 'ಜನಪ್ರಗತಿ' ಮತ್ತಿತರ ವಾರಪತ್ರಿಕೆಗಳ ಸಿನಿಮಾ ವಿಭಾಗಗಳ ಕೊಡುಗೆಯನ್ನು ಸ್ಮರಿಸಲೇಬೇಕು. ಕನ್ನಡ ಚಲನಚಿತ್ರರಂಗದ ಸ್ಥಿತ್ಯಂತರದ ಈ ಘಟ್ಟದಲ್ಲಿ ಉದ್ಯಮದ ಶ್ರೇಯೋಭಿವೃದ್ಧಿಗಾಗಿ ತಮ್ಮ ಲೇಖನಿಗಳನ್ನು ಸವೆಸಿದವರಲ್ಲಿ ಪತ್ರಕರ್ತ ಎಂ.ಬಿ.ಸಿಂಗ್, ಎಸ್ಸಾರ್ಕೆ. ವಿ.ಎನ್.ಸುಬ್ಬರಾವ್, ಸೀಯಾರ್ಕೆ. ಬಿ.ಎಂ.ಕೃಷ್ಣಸ್ವಾಮಿ, ಕೆ.ಎಸ್.ನಾರಾಯಣಸ್ವಾಮಿ, ಶ್ರೀಕೃಪಾ, ಎಂ.ದ್ವಾರಕಾನಾಥರಾವ್, ಪಿ.ಜಿ.ಶ್ರೀನಿವಾಸಮೂರ್ತಿ, ಬಿ.ಕೆ.ಗುರುರಾಜ್, ಕ.ವಿ.ಗಂಗರತ್ನ, ಹ.ವೆಂ.ಸೀತಾರಾಮಯ್ಯ, ಎಂ.ರಾಮನ್, ಬಿ.ವಿ.ವೈಕುಂಠರಾಜು, ಎಂ.ವಿ.ರಾಮಕೃಷ್ಣಯ್ಯ ಅಗ್ರಗಣ್ಯರು. ಸುಮಾರು ಇದೇ ಕಾಲದ ಗಂಗಾಧರ ಮೊದಲಿಯಾರ್ 'ಪ್ರಜಾವಾಣಿ' 'ಸುಧಾ' ಸಂಸ್ಥೆಯ ಚಲನಚಿತ್ರ ವರದಿಗಾರ-ವಿಮರ್ಶಕರಾಗಿದ್ದರಲ್ಲದೆ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ 'ಕನ್ನಡ ಸಿನಿಮಾ ಇತಿಹಾಸದ ಪುಟಗಳಲ್ಲಿ' ಗ್ರಂಥದ ಲೇಖಕರಾಗಿದ್ದಾರೆ.


ಎಂ.ರಾಮನ್


ಕೆ.ಎಸ್.ನಾರಾಯಣಸ್ವಾಮಿ

ಉಳಿವು-ಅಳಿವಿನ ಪ್ರಶ್ನೆಯನ್ನೆದುರಿಸುತ್ತಿದ್ದ ಕನ್ನಡ ಚಿತ್ರರಂಗವನ್ನು ಉಳಿಸಲು ಕರ್ನಾಟಕ ರಾಜ್ಯ ಸರ್ಕಾರದ ಗಮನ ಸೆಳೆದು ಸರ್ಕಾರದ ಪತಿಯಿಂದ ಕನ್ನಡ ಚಿತ್ರನಿರ್ಮಾಣಕ್ಕೆ ವಿಶೇಷ ಸವಲತ್ತು ಹಾಗೂ ನೆರವನ್ನು ಒದಗಿಸಿಕೊಡುವ ಪ್ರಯತ್ನದಲ್ಲಿ ಚಲನಚಿತ್ರ ಪತ್ರಕರ್ತರು ಮಹತ್ವದ ಪಾತ್ರ ವಹಿಸಿದ್ದರು. ಜೊತೆಗೆ ಕನ್ನಡ ಚಲನಚಿತ್ರೋದ್ಯಮದತ್ತ ಪ್ರೇಕ್ಷಕ ವರ್ಗದ ಒಲವು ಹೆಚ್ಚಾಗಲೂ ಕಾರಣರಾದರು. ಇಂದು ಕನ್ನಡ ಚಿತ್ರೋದ್ಯಮ ಪಡೆಯುತ್ತಿರುವ ಸರ್ಕಾರದ ಸಹಾಯ ಹಾಗೂ ಸೌಲಭ್ಯಗಳಿಗಾಗಿ ಈ ಪತ್ರಕರ್ತರ ಲೇಖನಿಗಳು ಅಪಾರವಾಗಿ ಶ್ರಮಿಸಿವೆ. ಉದ್ಯಮ ಅಳಿವಿನ ಅಂಚಿನತ್ತ ನಡೆದಾಗಲೆಲ್ಲ ಉದ್ಯಮದ ಕೈಹಿಡಿದು ನಿಲ್ಲಿಸಿದವರು ಚಲನಚಿತ್ರ ಪತ್ರಕರ್ತರೆ. ಉದ್ಯಮದ ಪ್ರತಿ ಹೋರಾಟದ ಸಂದರ್ಭದಲ್ಲಿಯೂ ಬೆನ್ನೆಲುಬಾಗಿ ನಿಂತವರು ಪತ್ರಕರ್ತರು. ಚಿತ್ರೋದ್ಯಮದ ಚಟುವಟಿಕೆಗಳಿಗಾಗಿಯೇ ಪತ್ರಿಕೆಗಳು ಹೆಚ್ಚು ಸ್ಥಳಾವಕಾಶ ಒದಗಿಸಿಕೊಡಲು ಆರಂಭಿಸಿ ಇಂದು ಯಾವುದೇ ಪತ್ರಿಕೆಯೂ ಚಲನಚಿತ್ರ ವಿಭಾಗವಿಲ್ಲದೆ ಪೂರ್ಣವೆನಿಸದ ಸ್ಥಿತಿಗೆ ಮುಟ್ಟಿದೆ.

ಈ ದಿಸೆಯಲ್ಲಿ ಚಲನಚಿತ್ರಗಳ ಸುದ್ದಿ-ಸಮಾಚಾರ, ವರದಿ-ವಿಮರ್ಶೆಗಳಿಗಾಗಿ ಪ್ರತಿ ಭಾನುವಾರ ಸಂಪೂರ್ಣ ಕೊನೆಯ ಒಂದು ಪುಟವನ್ನು ಮೀಸಲಿಡುವ ಪರಿಪಾಠವನ್ನು ಶ್ರೀಕೃಪಾ 'ತಾಯಿನಾಡು' ದಿನಪತ್ರಿಕೆಯಲ್ಲಿ ೧೯೫೭ರಲ್ಲಿ ಆರಂಭಿಸಿದರು. 'ತಾಯಿನಾಡು' ಪತ್ರಿಕೆಯ ಸಿನಿಮಾ ವಿಭಾಗದಲ್ಲಿ ಪ್ರಕಟವಾಗುತ್ತಿದ್ದ ಸ್ಥಿರಚಿತ್ರಗಳಿಗೆ ಅವರು ನೀಡುತ್ತಿದ್ದ ಕಾವ್ಯಮಯ ಕ್ಯಾಪ್ಷನ್‌ಗಳು ಆ ಪುಟದ ವಿಶೇಷ ಆಕರ್ಷಣೆಯಾಗಿದ್ದವು. ಅನಂತರ ಇತರ ದಿನಪತ್ರಿಕೆಗಳೂ ಸಿನಿಮಾ ಸಂಬಂಧದ ಸುದ್ದಿಗಳಿಗೆ ಹೆಚ್ಚು ಸ್ಥಳಾವಕಾಶ ಕಲ್ಪಿಸಿಕೊಡತೊಡಗಿದವು. ಪ್ರಧಾನಿ ನೆಹರೂ ಸಂಸ್ಮರಣೆಯಲ್ಲಿ 'ತಾಯಿನಾಡು' ಪತ್ರಿಕೆ ತನ್ನ ಕಾರ್ಯಾಲಯದ ಆವರಣದಲ್ಲಿ ನೆಹರೂ ಮೈಸೂರು ದರ್ಶನ ಕಾರ್ಯಕ್ರಮವೇರ್ಪಡಿಸಿ, ಕನ್ನಡ ಚಿತ್ರರಂಗದವರನ್ನು ತನ್ನ ಓದುಗರ ಸಮೀಪಕ್ಕೆ ಕರೆದೊಯ್ದುದನ್ನೂ ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬಹುದು.

೧೯೭೦ರಲ್ಲಿ ಕನ್ನಡನಾಡು ಪ್ರವಾಹದಿಂದ ತತ್ತರಿಸಿದಾಗ 'ಪ್ರಜಾವಾಣಿ', 'ಡೆಕ್ಕನ್ ಹೆರಾಲ್ಡ್' ಪತ್ರಿಕಾ ವರ್ಗದವರು ಇತರ ಎಲ್ಲ ಪತ್ರಿಕೆಗಳವರ ಸಹಯೋಗದಲ್ಲಿ ಕನ್ನಡ ಚಿತ್ರರಂಗದ ಅತಿರಥ-ಮಹಾರಥರನ್ನೆಲ್ಲ ಸೇರಿಸಿಕೊಂಡು ಕರ್ನಾಟಕಾದ್ಯಂತ ಪರಿಹಾರ ನಿಧಿ ಸಂಗ್ರಹಿಸಿಕೊಟ್ಟುದು ಉಲ್ಲೇಖನೀಯ. ಈ ಸಂದರ್ಭದಲ್ಲಿ ಚಲನಚಿತ್ರ ಪತ್ರಕರ್ತರು ಹಾಗೂ ಕನ್ನಡ ಚಲನಚಿತ್ರರಂಗದವರು ನಾಡಿನ ಜನತೆಯಲ್ಲಿ ಆತ್ಮೀಯತೆಯ ಸ್ಪಂದನ ಮಿಡಿದರು. ಪತ್ರಕರ್ತ ಎಂ.ಬಿ.ಸಿಂಗ್ ಪರಿಹಾರ ನಿಧಿ ಸಂಗ್ರಹ ಕಾರ್ಯದಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದರು.

ದೊಡ್ಡ ಪತ್ರಿಕೆಗಳಲ್ಲಿ ಚಲನಚಿತ್ರ ಪತ್ರಕರ್ತರೆಂದೇನೂ ಪ್ರತ್ಯೇಕವಾಗಿ ಇದ್ದಿರಲಿಲ್ಲ. ಡೆಸ್ಕ್‌ನಲ್ಲಿ ಕೆಲಸ ಮಾಡುತ್ತಿದ್ದವರೇ ಸಿನಿಮಾ ವಿಭಾಗಕ್ಕೆ ಬರೆಯುತ್ತಿದ್ದರು. ನಂತರದ ದಿನಗಳಲ್ಲಿ ಸಿನಿಮಾ ವಿಭಾಗಕ್ಕೆಂದೇ ಪತ್ರಕರ್ತರನ್ನು ನೇಮಿಸಿಕೊಳ್ಳುವ ಪರಿಪಾಠ ಆರಂಭವಾಯಿತು. ಆದರೆ ೧೯೫೦ರ ನಂತರ ಬಂದ ಚಲನಚಿತ್ರ ಪತ್ರಕರ್ತರು ಆ ವೇಳೆ ಲಭ್ಯವಿದ್ದ ಗ್ರಂಥಗಳನ್ನು ಓದಿದರು, ಮಾಧ್ಯಮದ ಬಗ್ಗೆ ಅರಿತರು. 'ಪ್ರಜಾವಾಣಿ' ಪತ್ರಿಕೆಯು ತನ್ನಲ್ಲಿನ ಚಲನಚಿತ್ರ ಪತ್ರಕರ್ತರಿಗೆ ಫಿಲಂ ಇನ್‌ಸ್ಟಿಟ್ಯೂಟ್ ಹಾಗೂ ಹೆಗ್ಗೋಡಿನ ರಸಗ್ರಹಣ ಶಿಬಿರಗಳಲ್ಲಿ ತರಬೇತಿ ಪಡೆಯಲು ಮತ್ತು ರಾಷ್ಟ್ರೀಯ-ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಭಾಗವಹಿಸಲು ಪ್ರೋತ್ಸಾಹ ನೀಡಿತು. ಜಿ.ಎಸ್.ಸದಾಶಿವ, ಬಿ.ವಿ.ವೈಕುಂಠರಾಜು, ಜಿ.ಎನ್.ರಂಗನಾಥರಾವ್, ಗಂಗಾಧರ ಮೊದಲಿಯಾರ್ ಮುಂತಾದ ಹಲವರು ಚಲನಚಿತ್ರ ಕುರಿತಂತೆ ಹೆಚ್ಚು ಅನುಭವ ಪಡೆದರು.

ಭಾರತೀಯ ವಾಕ್ಚಿತ್ರದ ರಜತಮಹೋತ್ಸವ ನಡೆದಾಗ 'ಪ್ರಜಾವಾಣಿ' ವಿಶೇಷ ಪುರವಣಿ ಪ್ರಕಟಿಸಿತು. ಚಲನಚಿತ್ರದ ಬಗ್ಗೆ ಅಧಿಕ ಪ್ರಸಾರವುಳ್ಳ ಕನ್ನಡ ದೈನಿಕವೊಂದು ಪುರವಣಿ ತಂದುದು ವಿಶೇಷವೆ. ಮುಂದೆ ಹಲವರಿಗೆ ಇದು ಪ್ರೇರಣೆಯಾಯಿತು.

ಚಿತ್ರೋದ್ಯಮದ ಆರಂಭದ ದಿನಗಳಲ್ಲಿ ಚಿತ್ರನಿರ್ಮಾಣಕ್ಕೆ ಸಂಬಂಧಿಸಿದ ತಾರೆಯರಾದಿಯಾಗಿ ಎಲ್ಲರೂ ತಿಂಗಳ ವೇತನದ ಮೇಲೆ ಕೆಲಸ ಮಾಡುತ್ತಿದ್ದರು. ಪ್ರತಿದಿನ ಬೆಳಿಗ್ಗೆ ಕಚೇರಿಗಳಿಗೆ ಬರುವಂತೆ ಬಂದು ತಮ್ಮ ಕೆಲಸ ಮುಗಿಸಿ ಸಂಜೆಗೆ ಮರಳುತ್ತಿದ್ದರು. ನಟ-ನಟಿಯರು ಪೂರ್ವಾಭ್ಯಾಸಕ್ಕೂ ಹಾಜರಿರಬೇಕಾಗಿತ್ತು. ಚಿತ್ರದ ಆರಂಭದಿಂದ ಅಂತ್ಯದ ತನಕ ಮಾಸಿಕವೇತನದ ಮೇಲೆಯೇ ಕೆಲಸ ಮಾಡುತ್ತಿದ್ದರು. ಯುದ್ಧಕಾಲದಲ್ಲಿ ದಿಢೀರ್ ಶ್ರೀಮಂತರಾದವರು ತಮ್ಮಲ್ಲಿನ ಕಪ್ಪು ಹಣವನ್ನು ಪರಿವರ್ತಿಸಿಕೊಳ್ಳಲು ಸಿನಿಮಾರಂಗವೇ ಸುಲಭ ಮಾರ್ಗವೆಂಬುದನ್ನು ಕಂಡುಕೊಂಡರು. ಅವರು ಚಿತ್ರನಿರ್ಮಾಣಕ್ಕಿಳಿದರು. ಆ ವೇಳೆಗೆ 'ತಾರೆ'ಯರು ಜನಪ್ರಿಯರಾಗಿದ್ದರು. ಇಮೇಜ್ ಬೆಳೆದಿತ್ತು. ತಾವು ಹೂಡುವ ಹಣಕ್ಕೆ ನಿರೀಕ್ಷಿತ ಪ್ರತಿಫಲ ಬಯಸಿದವರು. ತಾರೆಯರಿಗೆ ಹೆಚ್ಚು ಹಣದ ಆಮಿಷ ನೀಡಿದರು. ಇದರಿಂದಾಗಿ ಮಾಸಿಕವೇತನದ ಕಂಪೆನಿ ವ್ಯವಸ್ಥೆ ಮುರಿದು ಬಿತ್ತು. ಹೆಚ್ಚು ಹಣ ಸಿಗುವತ್ತ ತಾರೆಯರು ವಾಲಿದರು. ತಾರೆಯರ ಹಾದಿಯನ್ನು ನಿರ್ದೇಶಕರು, ಸಂಗೀತಗಾರರು, ತಂತ್ರಜ್ಞರು ಹಿಡಿದರು. ಹೀಗಾಗಿ ತಾರಾಪದ್ಧತಿ ಜಾರಿಗೆ ಬಂದಿತು. ಪತ್ರಿಕೆಗಳು ಸಿನಿಮಾದ ಬಗ್ಗೆ ಬರೆಯುತ್ತಿದ್ದವು. ತಾರೆಯರ ಬಗ್ಗೆ, ಅವರ ಅಭಿನಯದ ಬಗೆಗಿನ ಮಾಹಿತಿಗಿಂತ ತೆರೆಯ ಮೇಲಿನ ಜನರ, ತಾರೆಯರ ವೈಯಕ್ತಿಕ ಬದುಕು ಕೆಲವು ಪತ್ರಕರ್ತರಿಗೆ ಆಕರ್ಷಕವಾಗಿ ಕಂಡಿತು. ಅದನ್ನೇ ಬರೆದರು - ರೋಚಕವಾಗಿ ಬರೆದರು. ಓದುಗರು ಆ ಬರಹಗಳಿಂದ ಆಕರ್ಷಿತರಾದರು. ಗಾಸಿಪ್ ಬರವಣಿಗೆ ಚಟವಾಯಿತು. ಪತ್ರಿಕ ಪ್ರಸಾರ ಬೆಳೆಯಿತು. ಆರಂಭದಲ್ಲಿ ತಾರೆಯರು ಪತ್ರಿಕೆಗಳನ್ನು ಅವಲಂಬಿಸಿದರು. ಆದರೆ ಕಾಲ ಬದಲಾಯಿತು. ಪತ್ರಿಕೆಗಳು ತಾರೆಯರನ್ನು ಅವಲಂಬಿಸತೊಡಗಿದವು. ಈ ನಿಟ್ಟಿನಲ್ಲಿ ಈಗಿನ ಪತ್ರಿಕೆಗಳ ಶುಕ್ರವಾರದ ಸಿನಿಮಾ ಪುರವಣಿಗಳನ್ನೇ ಉದಾಹರಿಸಬಹುದಾಗಿದೆ. ಸಂಚಿಕೆಯನ್ನು ಆಕರ್ಷಕಗೊಳಿಸಲು ತಾರೆಯರ ಆಕರ್ಷಕ ಚಿತ್ರಗಳು, ಹಾಟ್ ಪಿಕ್ಚರ್ಸ್, ಆಕರ್ಷಕ ಬರವಣಿಗೆ - ತಾರೆಯರ ವೈಭವೀಕರಣ - ಘಟನೆಗಳ ಉತ್ಪ್ರೇಕ್ಷೆಗೆ ಮೊರೆ ಹೋಗಿರುವುದು ಸ್ಪಷ್ಟ. ಇದರಿಂದಾಗಿ ಎಲ್ಲ ತಾರೆಯರಿಗೆ, ಮನ್ಮಥ ನೋಡಿದ್ದರೆ ರತಿದೇವಿಗೇ ವಿವಾಹ ವಿಚ್ಛೇದನ ನೀಡುವಷ್ಟು ರತಿವರ್ಚಸ್ಸು ಬಂದಿತು.


ಎಂ.ವಿ.ರಾಮಕೃಷ್ಣಯ್ಯ


ಟಿ.ಜಿ.ಅಶ್ವತ್ಥನಾರಾಯಣ


ಪಿ.ಜಿ.ಶ್ರೀನಿವಾಸಮೂರ್ತಿ

ಸಂಯುಕ್ತ ಕರ್ನಾಟಕ ಚಿತ್ರ ಸೌರಭ

ಪತ್ರಿಕೆಗೆ ಜಾಹಿರಾತು ಬೇಕು. ಜಾಹಿರಾತು ಬರಬೇಕಾದರೆ ಓದುಗರು ಹೆಚ್ಚಬೇಕು. ಓದುಗರನ್ನು ಸೆರೆ ಹಿಡಿಯಲು ತಾರೆಯರ ವೈಭವೀಕರಣ, ಉತ್ಪ್ರೇಕ್ಷೆಯ ಬರಹಗಳು ಮೂಲಮಂತ್ರವಾದವು. ರಾಜಕಾರಣಿಗಳಿಗೆ, ಇತರ ಕಲಾಮಾಧ್ಯಮದವರಿಗೆ, ವಿಜ್ಞಾನಿಗಳಿಗೆ ಸಲ್ಲದ ತಾರಾ ಸ್ತುತಿಪಾಠ ಈಗ ಪರಾಕಾಷ್ಠೆ ಮುಟ್ಟಿದೆ. ಪತ್ರಿಕೆಗಳು ತಮ್ಮನ್ನು ಅವಲಂಬಿಸಿವೆಯೆಂಬ ಅರಿವು ತಾರೆಯರ ಪ್ರತಿಷ್ಠೆಗೆ ಕಾರಣವಾಗಿದೆ. ತಾವು ಬೆಳೆಸಿದ ತಾರ ತಮ್ಮ ಮೇಲೆಯೇ ತಿರುಗಿ ಬೀಳುವುದೆ ? - ಇದು ಪತ್ರಕರ್ತರ ಪ್ರತಿಷ್ಠೆ. ಈ ಪ್ರತಿಷ್ಠೆಯ ತಾಕಲಾಟ ಹಲವಾರು ಘರ್ಷಣೆಗಳ ಮೂಲವಾದುದೂ ಉಂಟು.

೧೯೪೫ರಿಂದ ೧೯೬೫ರವರೆಗಿನ ಎರಡು ದಶಕಗಳಲ್ಲಿನ ಪತ್ರಿಕೆಗಳನ್ನು ಅವಲೋಕಿಸಿದಾಗ 'ಕಸ್ತೂರಿ', 'ನಗುವನಂದ', 'ವಿನೋದ', 'ಕೊರವಂಜಿ'ಯಂತಹ ಪತ್ರಿಕೆಗಳನ್ನುಳಿದು ಇತರ ಪತ್ರಿಕೆಗಳಲ್ಲಿ, ಅಂದರೆ 'ಪ್ರಜಾಮತ', 'ಜನಪ್ರಗತಿ', 'ಕರ್ಮವೀರ', 'ಚಿತ್ರಗುಪ್ತ', 'ಕತೆಗಾರ', 'ಕಥಾವಳಿ', 'ಚಿತ್ರ ಸಮಾಚಾರ್', 'ವಾಕ್ಚಿತ್ರ', 'ರೂಪವಾಣಿ' ಮುಂತಾದವುಗಳಲ್ಲಿ ತಾರೆಯರೇ ಮುಖಪುಟವನ್ನು ಅಲಂಕರಿಸುತ್ತಿದ್ದರು. ಚಿತ್ರಪ್ರಚಾರದ ಏಜೆಂಟ್ ಅಥವಾ ಹಂಚಿಕೆದಾರರು ಮುಖಪುಟಕ್ಕೆ ಪಡಿಯಚ್ಚುಗಳನ್ನು ಸರದಿ ಪ್ರಕಾರ ಒದಗಿಸುತ್ತಿದ್ದರು. ಇದರಿಂದ ಒಂದು ಪತ್ರಿಕೆಯಲ್ಲಿ ಪ್ರಕಟವಾದ ಪಡಿಯಚ್ಚೇ ಮತ್ತೊಂದು ಪತ್ರಿಕೆಯ ಮುಂದಿನ ಸಂಚಿಕೆಯಲ್ಲಿ ಪ್ರಕಟವಾಗಬೇಕಾಗಿದ್ದ ಪರಿಸ್ಥಿತಿ ಇತ್ತು.

'ಸುಧಾ' ಪತ್ರಿಕೆ ಆರಂಭಕ್ಕೆ ಮುನ್ನ ಪತ್ರಿಕೆಯ ಏಜೆಂಟರ ಸಭೆಯಲ್ಲಿ ಮುಖಚಿತ್ರದಲ್ಲಿ ಚಿತ್ರತಾರೆಯರ ಚಿತ್ರ ಮುದ್ರಿಸದಿದ್ದಲ್ಲಿ ಪತ್ರಿಕೆ ಬಾಳದು ಎಂಬ ಸಲಹೆ-ಸೂಚನೆ ಬಂದಿತು. ಒಳಪುಟಗಳಲ್ಲಿ ಸಿನಿಮಾ ವಿಭಾಗವಿರುತ್ತದೆ ಎಂಬುದೂ ಅವರಿಗೆ ತೃಪ್ತಿ-ಭರವಸೆ ನೀಡಲಿಲ್ಲ. ಮಾಲೀಕರು ಏಜೆಂಟರ ಒತ್ತಾಯಕ್ಕೆ ಮಣಿಯಲೇಬೇಕಾದ ಪರಿಸ್ಥಿತಿ ಉಂಟಾಯಿತು. ಆದರೆ ಚಿತ್ರತಾರೆಯರ ಮುಖಚಿತ್ರವಿಲ್ಲದ ಪತ್ರಿಕೆ ತಂದು ಯಶಗಳಿಸುವಲ್ಲಿ ಮಾಲೀಕರು-ಸಂಪಾದಕ ವರ್ಗದ ಛಲ ಯಶಸ್ವಿಯಾಯಿತು. ನಂತರದಲ್ಲಿ 'ಸುಧಾ' 'ಪ್ರಜಾವಾಣಿ' ಪತ್ರಿಕೆಗಳು ಸಿನಿಮಾಕ್ಕೆ ಸಂಬಂಧಪಟ್ಟ ಕೆಲವು ಪ್ರಯೋಗಗಳನ್ನು ನಡೆಸಿದವು. ಚಿತ್ರವಿಮರ್ಶೆಗಳು ಭಿನ್ನವಾಗಿರುತ್ತಿದ್ದವು.

'ಪ್ರಜಾವಾಣಿ' ವೈಭವೀಕರಣವಿಲ್ಲದ ಸಮತೋಲನ ದೃಷ್ಟಿಯ ಚಲನಚಿತ್ರ ವಿಭಾಗವನ್ನು ಪತ್ರಿಕೆಯ ಒಂದು ಭಾಗವನ್ನಾಗಿಸಿತಲ್ಲದೆ, ಚಲನಚಿತ್ರ ಪತ್ರಕರ್ತರಿಗೆ ತರಬೇತಿಗೆ ಪ್ರೋತ್ಸಾಹ ನೀಡಿತು. ಗ್ರಂಥಭಂಡಾರ ಸೌಲಭ್ಯವನ್ನು ಒದಗಿಸಿತು. ಬೆಂಗಳೂರು ಫಿಲಂ ಸೊಸೈಟಿ ಆರಂಭವಾದಾಗ ಕನ್ನಡ ಚಲನಚಿತ್ರ ಇತಿಹಾಸದ ದಾಖಲೆಯಾಗುವಂಥಹ 30"x40" ಸೈಜಿನ ಭಾವಚಿತ್ರಗಳ ಪ್ರದರ್ಶನವೊಂದನ್ನು 'ಪ್ರಜಾವಾಣಿ' ಪತ್ರಿಕೆಯ ಮೂಲಕ ಎಂ.ಬಿ.ಸಿಂಗ್ ವ್ಯವಸ್ಥೆ ಮಾಡಿದ್ದರು. ಯಾವುದೇ ಚಿತ್ರವನ್ನು ತನ್ನ ವಿಮರ್ಶಕರು ಟಿಕೆಟ್ ಕೊಂಡು ವೀಕ್ಷಿಸಿ ವಿಮರ್ಶೆ ಬರೆಯುವಂತೆ ಮಾಡಿದ 'ಪ್ರಜಾವಾಣಿ' ಎಂದಿಗೂ ವಿಮರ್ಶೆ ಹಾಗೂ ಜಾಹಿರಾತುಗಳ ನಡುವೆ ತಳುಕು ಹಾಕಲಿಲ್ಲ. ಸಿನಿಮಾ ಜಾಹಿರಾತೇ ಇಲ್ಲದಿದ್ದರೂ ಸಿನಿಮಾ ಪುರವಣಿ-ವಿಮರ್ಶೆಯನ್ನು ಇಂದಿಗೂ ನೀಡುತ್ತಿದೆ.

ಸಿನಿಮಾ ಸುದ್ದಿ-ಸಮಾಚಾರಗಳನ್ನು ದಿನಪತ್ರಿಕೆಯಲ್ಲಿ ಪ್ರತಿದಿನ ಪ್ರಕಟಿಸುವ ಪರಿಪಾಠ ಪ್ರಾರಂಭಿಸಿದ ಹೆಗ್ಗಳಿಕೆ ಕನ್ನಡದ ಹಿರಿಯ ದಿನಪತ್ರಿಕೆ 'ಸಂಯುಕ್ತ ಕರ್ನಾಟಕ'ಕ್ಕೆ ಸಲ್ಲುತ್ತದೆ. ಈ ಸಂಪ್ರದಾಯ ೧೯೬೪ರಿಂದ ಪ್ರಾರಂಭವಾಯಿತು. ಪತ್ರಿಕೆಯ ಸಾಪ್ತಾಹಿಕ ವಿಭಾಗದ ಸಂಪಾದಕರಾಗಿದ್ದ ಶ್ಯಾಮಸುಂದರ ಕುಲಕರ್ಣಿ ಇದರ ಜವಾಬ್ದಾರಿ ಹೊತ್ತುಕೊಂಡರು.

ಎಸ್ಸಾರ್ಕೆ ಎಂದೇ ಚಿರಪರಿಚಿತರಾದ ಎಸ್.ಆರ್.ಕೃಷ್ಣಮೂರ್ತಿ ಕಲ್ಕತ್ತಾದ 'ಸಿನಿ ಅಡ್ವಾನ್ಸ್' ಸಿನಿಮಾ ವಾರಪತ್ರಿಕೆಯ ಕರ್ನಾಟಕದ ಪ್ರತಿನಿಧಿಯಾಗಿದ್ದವರು. 'ಪ್ರಜಾವಾಣಿ' ದಿನಪತ್ರಿಕೆಯ ಭಾನುವಾರದ ಪುರವಣಿಯ ಸಂಪಾದಕರಾಗಿದ್ದು ವಸ್ತುನಿಷ್ಠ ಬರಹ ವಿಮರ್ಶೆಗಳಿಂದ ಹೆಸರಾದವರು. ಇವರ ಚಲನಚಿತ್ರ ವಿಮರ್ಶೆಗಳು ಚುರುಕಾಗಿರುತ್ತಿದ್ದು ಜನಪ್ರಿಯವಾಗಿದ್ದವು. 'ಕನ್ನಡಪ್ರಭ' ಪತ್ರಿಕೆಯ ಸುದ್ದಿ ಸಂಪಾದಕರಾಗಿದ್ದು, ಅರುವತ್ತರ ದಶಕದಲ್ಲಿ 'ಅಮೆರಿಕನ್ ರಿಪೋರ್ಟರ್' ಪತ್ರಿಕೆಯ ಕನ್ನಡ ಆವೃತ್ತಿಯ ಸಂಪಾದಕರಾಗಿ ಸೇರಿದರು. ಆ ಪತ್ರಿಕೆಯ ಪ್ರಕಟಣೆ ನಿಂತ ಮೇಲೆ 'ಪ್ರಜಾಮತ' ವಾರಪತ್ರಿಕೆ ಸೇರಿದರು.

'ಕನ್ನಡಪ್ರಭ' ಪತ್ರಿಕೆಯ ಆಡಳಿತವರ್ಗ ಓದುಗರು ಹಾಗೂ ವ್ಯಾಪಾರ ಎರಡನ್ನೂ ದೃಷ್ಟಿಯಲ್ಲಿ ಇರಿಸಿಕೊಂಡು ಪ್ರತಿ ಶುಕ್ರವಾರದ ಸಂಚಿಕೆಯೊಂದಿಗೆ ನಾಲ್ಕು ಪುಟಗಳ 'ಚಿತ್ರಪ್ರಭ' ಪುರವಣಿಯನ್ನು ಹೊರತರಲು ನಿರ್ಧರಿಸಿ ಪ್ರೋತ್ಸಾಹದ ಹೊಸ ಮಜಲಿಗೆ ನಾಂದಿ ಹಾಡಿತು. ಪತ್ರಿಕೆಯ ಸಾಪ್ತಾಹಿಕ ವಿಭಾಗದ ಸಂಪಾದಕರಾಗಿದ್ದ ಕೆ.ಎಸ್.ನಾರಾಯಣಸ್ವಾಮಿ ಆ 'ಚಿತ್ರಪ್ರಭ' ಚಲನಚಿತ್ರ ಪುರವಣಿಯ ಹೊಣೆ ಹೊತ್ತರು. ಅನಂತರ ಇತರ ದಿನಪತ್ರಿಕೆಗಳೂ ಈ ಮೇಲ್ಪಂಕ್ತಿಯನ್ನು ಅನುಸರಿಸಿದವು. ಪ್ರಸ್ತುತ ಬೆಂಗಳೂರಿಂದ ಪ್ರಕಟವಾಗುತ್ತಿರುವ ಎಲ್ಲ ದಿನಪತ್ರಿಕೆಗಳೂ ಪ್ರತಿ ಶುಕ್ರವಾರ ನಾಲ್ಕು ಪುಟಗಳ ಸಿನಿಮಾ ಪುರವಣಿ ನೀಡುತ್ತಿವೆ. ಇದರಿಂದಾಗಿ ಚಿತ್ರೋದ್ಯಮಕ್ಕೆ ಹೆಚ್ಚಿನ ಪ್ರಚಾರಲಾಭವಾಗುತ್ತಿದೆ. ಈಚೆಗಂತೂ ದಿನಪತ್ರಿಕೆಗಳ ಈ ಸಿನಿಮಾ ಪುರವಣಿಗಳು ವರ್ಣರಂಜಿತವಾಗಿದ್ದು ಹೆಚ್ಚು ಆಕರ್ಷಣೀಯವೆನಿಸಿವೆ. ಈ ಬೆಳವಣಿಗೆಯಿಂದಾಗಿ ಚಲನಚಿತ್ರಕ್ಕೇ ಮೀಸಲಾದ ವಾರಪತ್ರಿಕೆಗಳಿಗೆ ಬೇಡಿಕೆ ಗಮನಾರ್ಹವಾಗಿ ಕಡಿಮೆಯಾಯಿತು. ಬಹುವರ್ಣಗಳಲ್ಲಿ ಪ್ರಕಟವಾಗುವ ಚಲನಚಿತ್ರ ಮಾಸಪತ್ರಿಕೆಗಳೂ ಈ ಬಿಸಿಯಿಂದ ಪಾರಾಗಲು ಆಗಲಿಲ್ಲ. ಇತ್ತೀಚೆಗೆ ಕನ್ನಡ ದಿನಪತ್ರಿಕೆಗಳು ಶುಕ್ರವಾರದ ಸಿನಿಮಾ ಪುರವಣಿಯನ್ನು ಸುದ್ದಿ-ಸಮಾಚಾರ, ಸಮಾರಂಭದ ವರದಿಗಳಿಗೇ ಪೂರ್ಣವಾಗಿ ಮೀಸಲಿಟ್ಟು, ಶುಕ್ರವಾರ ಬಿಡುಗಡೆಯಾಗುವ ಕನ್ನಡ ಚಿತ್ರಗಳ ವಿಮರ್ಶೆಗಳಿಗೆ ಭಾನುವಾರದ ಸಂಚಿಕೆಯ ಸುದ್ದಿಪುಟದಲ್ಲಿ ಅವಕಾಶ ಕಲ್ಪಿಸಿವೆ.

ಕನ್ನಡ ಪತ್ರಿಕಾರಂಗದಲ್ಲಿ ಚಲನಚಿತ್ರಗಳಿಗೆ ದೊರೆತ ಪ್ರಾಧಾನ್ಯ ಕಂಡು ರಾಜ್ಯದ ಇಂಗ್ಲಿಷ್ ಪತ್ರಿಕೆಗಳು ಕನ್ನಡ ಚಲನಚಿತ್ರಗಳ ಸುದ್ದಿ-ಸಮಾಚಾರ ವರದಿ ಹಾಗೂ ವಿಮರ್ಶೆಗಳಿಗೆ ಹೆಚ್ಚು ಸ್ಥಳಾವಕಾಶ ನೀಡತೊಡಗಿದವು.

ಚಿತ್ರಪ್ರಭ ಕನ್ನಡಪ್ರಭ ಸಿನಿಮಾ ಪುರವಣಿ

೧೯೬೦ರ ದಶಕದ ಕೊನೆಯ ವೇಳೆಗೆ ಕನ್ನಡ ಚಿತ್ರರಂಗ ನಿಧಾನವಾಗಿ ತನ್ನ ನೆಲೆ ಕಂಡುಕೊಳ್ಳತೊಡಗಿತು. ಬಹುತೇಕ ಪರಭಾಷಾ ಚಿತ್ರಗಳನ್ನೇ ಅನುಕರಿಸುತ್ತಿದ್ದ, ಮನರಂಜನೆಯನ್ನಷ್ಟೇ ಪ್ರಧಾನವಾಗಿಟ್ಟುಕೊಂಡಿದ್ದ ಚಿತ್ರರಂಗ ಸ್ವಂತಿಕೆಯನ್ನು ತೋರತೊಡಗಿತು. ಈ ಹಂತದಲ್ಲಿ ಕನ್ನಡದ ಸುಪ್ರಸಿದ್ಧ ಕಾದಂಬರಿಗಳು ಕನ್ನಡದಲ್ಲಿ ಚಲನಚಿತ್ರವಾಗಿ ತೆರೆಗೆ ಬರತೊಡಗಿದವು. ಚಿತ್ರರಂಗ ಬುದ್ಧಿಜೀವಿ-ಸಾಹಿತಿಗಳ ಸಮುದಾಯವನ್ನು ತನ್ನೆಡೆಗೆ ಆಕರ್ಷಿಸಿತು. ಎನ್.ಲಕ್ಷ್ಮೀನಾರಾಯಣ್, ಪುಟ್ಟಣ್ಣ ಕಣಗಾಲ್‌ರಂಥ ನಿರ್ದೇಶಕರು ವಸ್ತುನಿಷ್ಠ-ಸದಭಿರುಚಿಯ ಚಿತ್ರಗಳ ಒಂದು ಪರಂಪರೆಯನ್ನು ಹಾಕಿಕೊಟ್ಟರು.

ಇದೇ ಜಾಡಿನಲ್ಲಿ ಮುಂದುವರಿದು ಅನೇಕ ನಿರ್ದೇಶಕರು ಹೊಸ ಜಾಡಿನ ಚಿತ್ರಗಳನ್ನು ನೀಡಿದರು. ಸ್ವಂತಿಕೆ ತೋರಲು, ಪ್ರಾದೇಶಿಕ ಸೊಗಡನ್ನು ತುಂಬಲು ಪ್ರಯತ್ನಿಸಿದರು. ಈ ಹಂತದಲ್ಲಿ ಕೆಲವು ನಿರ್ದೇಶಕರು ಹೊಸ ಅಲೆಯ ಚಿತ್ರಗಳ ನಿರ್ಮಾಣಕ್ಕೂ ಮುಂದಾದರು. ಗಿರೀಶ್ ಕಾರ್ನಾಡ್, ಬಿ.ವಿ.ಕಾರಂತ್, ಜಿ.ವಿ.ಅಯ್ಯರ್ ಮುಂತಾದವರು 'ಸಂಸ್ಕಾರ', 'ವಂಶವೃಕ್ಷ'ಗಳಂತಹ ನವ್ಯ ಶೈಲಿಯ ಹೊಸ ಅಲೆಯ ಚಿತ್ರಗಳನ್ನು ನೀಡಿದಾಗ ಕನ್ನಡ ಚಲನಚಿತ್ರ ಪತ್ರಿಕೋದ್ಯಮವೂ ಅದನ್ನು ಮನಸಾರ ಸ್ವಾಗತಿಸಿತು. ಚಲನಚಿತ್ರ ಪತ್ರಕರ್ತರು ಹೊಸ ಅಲೆಯ ಸಿನಿಮಾಗಳನ್ನು ಕುತೂಹಲದಿಂದ ಗಮನಿಸಿದ್ದು ಮಾತ್ರವಲ್ಲದೆ, ಈ ಜಾಡಿನ ಚಿತ್ರಗಳ ಸೃಷ್ಟಿಗೆ ಪರೋಕ್ಷವಾಗಿ ಪ್ರಚೋದನೆ, ಪ್ರೇರಣೆ ನೀಡಿದರು. ಇದರಿಂದಾಗಿ ಕನ್ನಡ ಚಿತ್ರೋದ್ಯಮ ರಾಜ್ಯಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಪುರಸ್ಕೃತಗೊಂಡಿತಲ್ಲದೆ ಸಾಗರದಾಚೆಗೂ ತನ್ನ ಸಾಧನೆಯನ್ನು ಬಿಂಬಿಸಲು ಸಾಧ್ಯವಾಯಿತು.

ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಹೊಸ ಸಂವೇದನೆಯ ಚಿತ್ರಗಳನ್ನು ದೊಡ್ಡದಾಗಿಯೇ ಪ್ರೋತ್ಸಾಹಿಸಿತು. ಬೆಳೆಸಿತು. ಈ ಹಂತದಲ್ಲಿ ಸಾಹಿತಿಗಳು, ಲೇಖಕರು, ಕಾಲೇಜು ಅಧ್ಯಾಪಕರು ಸಿನಿಮಾ ಮಾಧ್ಯಮವನ್ನು ಪ್ರವೇಶಿಸಿದರು. ಸಾಹಿತಿ-ಕಾದಂಬರಿಕಾರ ಪಿ.ಲಂಕೇಶ್, ಪ್ರೊ|ಜಿ.ಕೆ.ಗೋವಿಂದರಾವ್, ಸಿಂಧುವಳ್ಳಿ

ಅನಂತಮೂರ್ತಿ, ಚಂದ್ರಶೇಖರ ಕಂಬಾರ, ಪಾನಂಜರಾಜ ಅರಸ್ ಅಂಥವರಲ್ಲಿ ಅಗ್ರಗಣ್ಯರು. ಹೊಸ ಅಲೆಯ ಚಿತ್ರಗಳಿಗೆ ನೂರೆಂಟು ಅಡ್ಡಿ ಆತಂಕಗಳು ಎದುರಾದ ಸಂದರ್ಭದಲ್ಲಿ ವೈಎಸ್‌ಕೆ ('ಕನ್ನಡಪ್ರಭ' ಸಂಪಾದಕರಾಗಿದ್ದ ವೈ.ಎನ್.ಕೃಷ್ಣಮೂರ್ತಿ) ಅವರಂಥ ಪತ್ರಕರ್ತರು ನೆರವಾದರು. ಹೊಸ ಅಲೆಯ ಚಿತ್ರಗಳ ಹೊಸ ಪೀಳಿಗೆಯನ್ನು ವೈಎನ್‌ಕೆ ಬಹುವಾಗಿ ಪ್ರೋತ್ಸಾಹಿಸಿದರು. ಅನೇಕ ಹೊಸ ಅಲೆ ಚಿತ್ರಗಳ ಶೀರ್ಷಿಕೆಯಲ್ಲಿ ವೈಎನ್‌ಕೆಯವರಿಗೆ ಕೃತಜ್ಞತೆ ಸೂಚಿಸುವ ಪರಿಪಾಠವೂ ಬೆಳೆಯಿತು.



ಹೊಸ ಅಲೆಯ ಚಿತ್ರಗಳು ಕನ್ನಡ ಚಲನಚಿತ್ರೋದ್ಯಮದ ನೆಲೆ-ಬೆಲೆಗಳನ್ನು ಹಿಗ್ಗಿಸಿದವು. ಸಿನಿಮಾ ಕಲೆಯ ಆಯಾಮಗಳನ್ನು ಅವು ಪರಿಚಯಿಸಿಕೊಟ್ಟವು. ಸುಸಂಸ್ಕೃತರೂ ಸುಶಿಕ್ಷಿತರೂ ಚಿತ್ರರಂಗದಲ್ಲಿ ಆಸಕ್ತಿ ತಳೆಯುವಂತ ಮಾಡಿದವು. ಕನ್ನಡ ಚಲನಚಿತ್ರರಂಗದ ಎಲ್ಲ ದಿಕ್ಕಿನ ಬಾಗಿಲುಗಳನ್ನೂ ಅವು ತೆರೆದುಕೊಟ್ಟವು. ಈ ಹಂತದಲ್ಲಿ ಕನ್ನಡ ಚಲನಚಿತ್ರ ಪತ್ರಕರ್ತರಿಗೆ ಜಗತ್ತಿನ ಹೊಸ ಸಂವೇದನೆಯ ಚಿತ್ರಗಳ ಪರಿಚಯ ಮಾಡಿಕೊಳ್ಳಬೇಕಾದ ಅನಿವಾರ್ಯ ಎದುರಾಯಿತು. ಇದು ಸಿನಿಮಾ ಪತ್ರಕರ್ತರಲ್ಲಿ ಅಧ್ಯಯನ ಪ್ರವೃತ್ತಿ ಚಿಗುರುವಂತೆ ಮಾಡಿತು. ಅಲ್ಲಲ್ಲಿ ಫಿಲಂ ಸೊಸೈಟಿಗಳು ಹುಟ್ಟಿಕೊಂಡವು. ಜಗತ್ತಿನ ಶ್ರೇಷ್ಠ ಚಿತ್ರಗಳನ್ನು ವೀಕ್ಷಿಸುವ, ಬೇರೆಬೇರೆ ದೇಶಗಳ ಚಿತ್ರಗಳನ್ನು ತುಲನಾತ್ಮಕ ದೃಷ್ಟಿಯಿಂದ ಅಭ್ಯಸಿಸುವ ಅವಕಾಶವೂ ಪತ್ರಕರ್ತರಿಗೆ ದೊರೆಯಿತು. ಇದರಿಂದಾಗಿ ಚಲನಚಿತ್ರ ಪತ್ರಕರ್ತರ ವೃತ್ತಿಗೆ ಚಿಂತನೆಯ ಹೊಳಪೂ ಬೆರೆಯುವಂತಾಯಿತು.

ಇಷ್ಟಾದರೂ ದಿನಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಬಹುತೇಕ ವಿಮರ್ಶೆಗಳಲ್ಲಿ ಅಧ್ಯಯನಶೀಲತೆ ಹಾಗೂ ತಂತ್ರಜ್ಞಾನಗಳ ಕೊರತೆಯಿದ್ದುದ್ದೂ ನಿಜ. ತಾವು ವಿಮರ್ಶೆಗಳನ್ನು ಬರೆಯುತ್ತಿದ್ದುದು ಪಂಡಿತರಿಗಾಗಿ ಮಾತ್ರವಲ್ಲ, ಜನಸಾಮಾನ್ಯರಿಗಾಗಿ ಎಂಬ ಕಾರಣ ಕೊಟ್ಟು ಕೆಲವು ವಿಮರ್ಶಕರು ಈ ಕೊರತೆಯನ್ನು ಸಮರ್ಥಿಸಿಕೊಳ್ಳುತ್ತಿದ್ದರಾದರೂ ತಾಂತ್ರಿಕತೆ ಹಾಗೂ ಮಾಧ್ಯಮದ ಸಾಧ್ಯತೆಗಳ ದೃಷ್ಟಿಯಿಂದ ಸಾಮಾನ್ಯ ಮಟ್ಟದ ಪ್ರೇಕ್ಷಕರಿಗೆ ಈ ವಿಮರ್ಶೆಗಳಿಂದ ಹೆಚ್ಚಿನ ಜ್ಞಾನವಾಗಲಿ, ಮಾಹಿತಿಯಾಗಲಿ ಸಿಗಲಿಲ್ಲವೆನ್ನುವುದು ಒಂದು ಅಪ್ರಿಯ ಸತ್ಯ.

೧೯೭೦ರ ದಶಕದಲ್ಲಿಯೂ ಹಲವಾರು ಸಿನಿಮಾ ಪತ್ರಿಕೆಗಳು ಹುಟ್ಟಿಕೊಂಡವು. ಹುಬ್ಬಳ್ಳಿಯ 'ನಟರಾಜ' (೧೯೭೧ - ಸಂಪಾದಕರು : ಲೋಕನಾಥ ಪಿ.ಬಂಕಾಪುರ), ಲೋಕ ಶಿಕ್ಷಣ ಟ್ರಸ್ಟ್ ಅವರ 'ಚಿತ್ರದೀಪ' (೧೯೭೭ - ಸಂಪಾದಕರು : ಶಂಕರ ಪಾಟೀಲ), 'ಚಿತ್ರತಾರಾ' (ಸಂಪಾದಕರು : ಆರ್.ನರಸಿಂಹ), 'ಚಿತ್ರಮಾಲಾ' (೧೯೭೭), 'ಸಿನಿಫ್ಯಾಷನ್ಸ್'(೧೯೭೮), 'ಚಿತ್ರಸುಧಾ', 'ರೂಪಶಿಲ್ಪಿ', 'ಚಂದ್ರಚಕೋರಿ' ಅವುಗಳಲ್ಲಿ ಹೆಸರಿಸಬಹುದಾದವು. ಅವುಗಳಲ್ಲಿ ಲೋಕನಾಥ ಬಂಕಾಪುರರ 'ನಟರಾಜ' ಚಲನಚಿತ್ರ ಮಾಸಪತ್ರಿಕೆ ಮಾತ್ರ ಉತ್ತರ ಕರ್ನಾಟಕದಲ್ಲಿ ಇಂದಿಗೂ ಜನಪ್ರಿಯವಾಗಿ ಮುಂದುವರೆಯುತ್ತಿದೆ. ಇವುಗಳಲ್ಲಿ ಅನೇಕವು ಆ ವೇಳೆಗೆ ಮುಂಬಯಿಯಲ್ಲಿ ಜನಾನುರಾಗ ಗಳಿಸಿದ್ದ 'ಫ್ಯಾನ್ ಮ್ಯಾಗಝೀನ್'ಗಳ ಮಾದರಿಯಲ್ಲೇ ಪ್ರಕಟವಾದವು. ಅವುಗಳಲ್ಲಿ ಚಲನಚಿತ್ರ ಮಾಧ್ಯಮದ ಬಗೆಗಾಗಲೀ, ಔದ್ಯಮಿಕ ವಿಷಯಗಳ ಬಗೆಗಾಗಲೀ ಹೆಚ್ಚಿನ ಆಸಕ್ತಿ ಕಾಣಬರಲಿಲ್ಲ. ಮೇಲಾಗಿ ಚಲನಚಿತ್ರೋದ್ಯಮದ ಬೆಳವಣಿಗೆಗೆ ಸಾಧಕವಾಗುವಂತಹ ಯಾವ ಅಂಶಗಳೂ ಕಂಡುಬರಲಿಲ್ಲ.

ಪತ್ರಕರ್ತರಾದ ಎಂ.ವಿ.ರಾಮಕೃಷ್ಣಯ್ಯ ('ತಾಯಿನಾಡು' ಪತ್ರಿಕೆಯ ಸಂಪಾದಕರಾಗಿದ್ದವರು), ಶ್ರೀಕೃಪಾ, ಮ.ನ.ರಾಮನರಸಯ್ಯ ಮತ್ತು ಶುಭಾ ಜಾಹಿರಾತು ಸಂಸ್ಥೆಯ ಎಂ.ಎಸ್.ಶ್ರೀನಿವಾಸ್ ಜೊತೆಗೂಡಿ ೧೯೭೫ರಲ್ಲಿ ಆರಂಭಿಸಿದ 'ಲಾವಣ್ಯ' - ಟ್ಯಾಬ್ಲಾಯ್ಡ್ ಆಕಾರದ ಎಂಟು ಪುಟಗಳ ಚಲನಚಿತ್ರ ವಾರಪತ್ರಿಕೆ. ಪತ್ರಿಕೆಯ ನಾಲ್ಕು ವಿಭಾಗಗಳ ಹೊಣೆಯನ್ನು ಒಬ್ಬೊಬ್ಬರು ಒಂದೊಂದರಂತೆ ಹೊತ್ತು ಪತ್ರಿಕೆಯನ್ನು ನಡೆಸುವ ಗುರಿ ಹೊತ್ತಿದ್ದರು. ಶ್ರೀಕೃಪಾ ಪತ್ರಿಕೆಯ ಸಂಪಾದಕರಾಗಿದ್ದರು. ಮುದ್ರಣದ ಹೊಣೆ ಎಂ.ವಿ.ರಾಮಕೃಷ್ಣಯ್ಯನವರದು. ಜಾಹಿರಾತು ವಿಭಾಗದ ಮೇಲ್ವಿಚಾರಣೆ ಎಂ.ಎಸ್.ಶ್ರೀನಿವಾಸ್ ನಿರ್ವಹಿಸಿದರೆ, ಪ್ರಸರಣ ವಿಭಾಗದ ಉಸ್ತುವಾರಿ ಮ.ನ.ರಾಮನರಸಯ್ಯನವರದಾಗಿತ್ತು. ಸತ್ವಪೂರ್ಣ ಬರಹಗಳು ಪತ್ರಿಕೆಯ ವೈಶಿಷ್ಟ್ಯವಾಗಿದವು. ಕನ್ನಡ ಚಲನಚಿತ್ರ ಪತ್ರಿಕೋದ್ಯಮದಲ್ಲಿ 'ಲಾವಣ್ಯ' ಇನ್ನೊಂದು ಮೈಲಿಗಲ್ಲೆನಿಸಿತು. ಈ ಪತ್ರಿಕಾ ಬಳಗದ ಮತ್ತೊಂದು ಸ್ತುತ್ಯಕಾರ್ಯವೆಂದರೆ 'ಲಾವಣ್ಯ ಲೇಖಕರ ಬಳಗ'ದ ಸ್ಥಾಪನೆ. ಚಿತ್ರರಂಗದ ವ್ಯಕ್ತಿಗಳನ್ನು ಕರೆಸಿಕೊಂಡು ಅವರೊಂದಿಗೆ ಈ ಲೇಖಕರ ಬಳಗದ ಸದಸ್ಯರು ಸಂವಾದ-ಚರ್ಚೆಗಳನ್ನು ನಡೆಸುವುದು, ಚಿತ್ರಸೃಷ್ಟಿಯ ವಿವಿಧ ಅಂಗಗಳ ಬಗ್ಗೆ ಹೆಚ್ಚಿನ ಪರಿಚಯ ಪಡೆಯಲು ಅವಕಾಶ ಕಲ್ಪಿಸಿ ಉದ್ಯಮದ ಬಗ್ಗೆ ಹೆಚ್ಚಿನ ತಿಳಿವಳಿಕೆ ಪಡೆಯುವಂತೆ ಮಾಡುವ ಮೂಲಕ ಬರವಣಿಗೆಯಲ್ಲಿ ವಸ್ತುನಿಷ್ಠೆಯನ್ನು ಬೆಳೆಸಲೆಂದೇ ಲೇಖಕರ ಬಳಗ ಸ್ಥಾಪನೆಯಾಗಿ, ಉದ್ಯಮದವರೊಡನೆ ನಿಕಟ ಸಂಪರ್ಕ ಪಡೆಯಲು, ಹೆಚ್ಚಿನ ಅರಿವು ಪಡೆಯಲು ಸಾಧ್ಯವಾಯಿತು. ಇಂದು ಕನ್ನಡ ಚಲನಚಿತ್ರೋದ್ಯಮದಲ್ಲಿ ವ್ಯಾಪಕತೆ ಪಡೆದಿರುವ ಪತ್ರಿಕಾ ಸಂಪರ್ಕಾಧಿಕಾರಿಗಳು (ಪಿ.ಆರ್.ಓ) ರೂಪುಗೊಳ್ಳಲು ಪತ್ರಿಕೆ ಕಾರಣವಾಯಿತು. ಜೊತೆಗೆ ಚಲನಚಿತ್ರೋದ್ಯಮದ ವಿವಿಧ ಭಾಗಗಳಲ್ಲಿನ ಸಾಧಕರ ಸಾಧನೆಯನ್ನು ಗುರುತಿಸಿ ಚಿತ್ರರಂಗದ ೨೩ ವಿಭಾಗಗಳಲ್ಲಿ ಪ್ರತಿವರ್ಷವೂ ಲಾವಣ್ಯ ಪ್ರಶಸ್ತಿಯನ್ನು ನೀಡಲಾಗುತ್ತಿದ್ದುದು ಗಮನಾರ್ಹ. ಒಂದು ಚಲನಚಿತ್ರ ಪತ್ರಿಕೆ ಉದ್ಯಮದ ಶ್ರೇಯೋಭಿವೃದ್ಧಿಗೆ ಯಾವ ರೀತಿಯಲ್ಲಿ ಕಾರಣೀಭೂತವಾಗಲು ಸಾಧ್ಯ ಎಂಬುದಕ್ಕೆ 'ಲಾವಣ್ಯ' ಮಾದರಿಯಾಯಿತು. ಬಹುಬೇಗನೆ ಪತ್ರಿಕೆ ಬೇಗ ಬೆಳೆಯಿತು. ವಿನ್ಯಾಸದಿಂದ, ಉಪಯುಕ್ತ ಸ್ವಾರಸ್ಯಕರ-ದಿಟ್ಟ ಬರಹಗಳಿಂದ ಓದುಗರಿಗೂ ಇಷ್ಟವಾಯಿತು. ಕಲ ವರ್ಷ ನಡೆದು ಕಣ್ಣು ಮುಚ್ಚಿತು.

೧೯೭೦ರ ದಶಕದ ಈ ಕಣ್ಣುಮುಚ್ಚಾಲೆ ಆಟದ ನಡುವೆ ದೊಡ್ಡ ಪ್ರಮಾಣದಲ್ಲಿ ಪ್ರಾರಂಭವಾಗಿ ಚಿತ್ರರಂಗಕ್ಕೆ ಅದೇ ಪ್ರಮಾಣದ ಸೇವೆಯನ್ನು ಸಲ್ಲಿಸಿದ ಎರಡು ಚಲನಚಿತ್ರ ಮಾಸಪತ್ರಿಕೆಗಳೆಂದರೆ ಮದರಾಸಿನ 'ಚಂದಮಾಮ' ಸಂಸ್ಥೆಯ ಪ್ರಕಟಣೆ 'ವಿಜಯಚಿತ್ರ' (೧೯೭೫), ಮಣಿಪಾಲದ 'ಉದಯವಾಣಿ' ಪತ್ರಿಕಾ ಸಮೂಹದ ಪ್ರಕಟಣೆ 'ರೂಪತಾರಾ' (೧೯೭೭). ಇವು ಈವರೆಗೆ ಚಲನಚಿತ್ರ ಪತ್ರಿಕಾರಂಗ ಕಂಡ ಅತ್ಯುತ್ತಮ, ಶ್ರೀಮಂತ, ಬೃಹತ್ ಪ್ರಯತ್ನಗಳು. ಅತ್ಯಾಧುನಿಕ ಮುದ್ರಣ, ಆಕರ್ಷಕ ವಿನ್ಯಾಸ ಇವು ಈ ಪತ್ರಿಕೆಗಳು ಕಂಡ ಯಶಸ್ಸಿಗೆ ದೊಡ್ಡ ಕಾರಣಗಳು.

ವಿಜಯವಾಹಿನಿ ಸ್ಟುಡಿಯೋ, ಚಂದಮಾಮ ಪಬ್ಲಿಕೇಷನ್ಸ್ ಮತ್ತು ಪ್ರಸಾದ್ ಮುದ್ರಣಾಲಯಗಳ ಹಿನ್ನೆಲೆ ಹೊಂದಿದ್ದ 'ವಿಜಯಚಿತ್ರ' ಚಲನಚಿತ್ರ ಮಾಸಪತ್ರಿಕೆ ಕನ್ನಡದಲ್ಲಿ ಮಾತ್ರವಲ್ಲದೆ, ತೆಲುಗಿನಲ್ಲಿ 'ವಿಜಯಚಿತ್ರ' ಹಾಗೂ ತಮಿಳಿನಲ್ಲಿ 'ಬೊಮ್ಮೈ'ಯಾಗಿಯೂ ಹೊರಬರುತ್ತಿತ್ತು. ಪತ್ರಿಕೆಯ ಸಂಪಾದಕರು ವಿಶ್ವಂ. ಕನ್ನಡ ಆವೃತ್ತಿಯ ಸಹಾಯಕ ಸಂಪಾದಕರು ಚಿತ್ರಸಾಹಿತಿಗಳಾಗಿದ್ದ ಚಿ.ಸದಾಶಿವಯ್ಯ. ಇವರೊಂದಿಗೆ ಚಿ.ದತ್ತರಾಜ್ (ಅನಂತರ ಸಿನಿಮಾ ನಿರ್ದೇಶಿಸಿದರು), ಮದರಾಸಿನ ಯು.ಎಸ್.ಐ.ಎಸ್.ನಲ್ಲಿದ್ದ ಪಿ.ಜಿ.ಶ್ರೀನಿವಾಸಮೂರ್ತಿ ಪತ್ರಿಕೆಯ ಯಶಸ್ಸಿಗೆ ದುಡಿದರು. 'ವಿಜಯಚಿತ್ರ' ಹೊರತಂದ ಎರಡು ವಿಶೇಷ ಸಂಚಿಕೆಗಳು ಕನ್ನಡ ಚಲನಚಿತ್ರೋದ್ಯಮದ ಪಾಲಿಗೆ ಆಕರ ಗ್ರಂಥಗಳಾಗಿವೆ. ಈ ಕಾರ್ಯದಲ್ಲಿ ನೆರವಾದವರು ಪತ್ರಕರ್ತ ಬಿ.ಎಂ.ಕೃಷ್ಣಸ್ವಾಮಿ. ಉದ್ಯಮದ ಸಮಸ್ಯೆಗಳನ್ನು ಚರ್ಚಿಸುವ ಮತ್ತು ಉದ್ಯಮದವರನ್ನು ಪರಿಚಯಿಸುವ ಕೆಲಸವನ್ನು ಈ ಪತ್ರಿಕೆ ಅಚ್ಚುಕಟ್ಟಾಗಿ ನಿರ್ವಹಿಸಿತು. ರಾಜಕುಮಾರ್ ಅವರ ಆತ್ಮಕಥೆಯನ್ನು ಧಾರಾವಾಹಿಯಾಗಿ ಪ್ರಕಟಿಸಿತು. ಇಷ್ಟೊಂದು ವೈಭವಯುತವಾಗಿ ನಡೆದುಕೊಂಡು ಬಂದ 'ವಿಜಯಚಿತ್ರ' ೧೯೯೦ರ ದಶಕದ ಮಧ್ಯದ ವೇಳೆಗೆ ಸುಮಾರು ಎರಡು ದಶಕಗಳ ಬದುಕನ್ನು ಮುಗಿಸಿ ಹಠಾತ್ತನೆ ನಿಂತುಹೋಯಿತು. ಪತ್ರಿಕೆಯನ್ನು ಪುನರಾರಂಭಿಸುವ ಪ್ರಯತ್ನ ನಡೆಯಿತಾದರೂ ಅದು ಕಾರ್ಯರೂಪಕ್ಕೆ ಬರಲಿಲ್ಲ.

ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಕ್ಷೇತ್ರದಲ್ಲೇ ಏಕೈಕ ಎಂಬ ರೀತಿಯಲ್ಲಿ ಪ್ರಕಟವಾಗುತ್ತಿರುವ 'ರೂಪತಾರಾ' ಅತ್ಯಾಧುನಿಕ ಮುದ್ರಣ ಸೌಲಭ್ಯ ಹೊಂದಿರುವ ಪತ್ರಿಕೆ. 'ಉದಯವಾಣಿ' ದಿನಪತ್ರಿಕೆಯ ಸಂಪಾದಕ ಸತೀಶ್.ಯು.ಪೈ ಈ ಪತ್ರಿಕೆಯ ಸಂಪಾದಕರು. ಪಿ.ಸುರೇಶಮಲ್ಯ ಸಹಾಯಕ ಸಂಪಾದಕರು. 'ಪ್ರಜಾಮತ', 'ಮಲ್ಲಿಗೆ'ಯಿಂದ ಪತ್ರಿಕೋದ್ಯಮ ಪ್ರವೇಶಿಸಿದ ಡಾ।ವಿಜಯಾ ಈ ಪತ್ರಿಕೆಯಿಂದ ಸಿನಿಮಾ ಪತ್ರಿಕೋದ್ಯಮವನ್ನು ಪ್ರವೇಶಿಸಿದರು. ಸುದ್ದಿ ಸಂಪಾದಕ ಎನ್.ಗುರುರಾಜ್ ಸಹ ಪ್ರಮುಖಹಿಸಿದರು. ಚಲನಚಿತ್ರ ಪತ್ರಿಕೆಯಲ್ಲಿ ಪ್ರಸಿದ್ಧ ಸಾಹಿತಿಗಳನ್ನು ತೊಡಗಿಸಿಕೊಂಡರು. ಅದೇ ಬಳಗದ 'ತುಷಾರ' ಮಾಸಪತ್ರಿಕೆಯ ಸಹಸಂಪಾದಕಿಯೂ ಆಗಿದ್ದ ಡಾ।ವಿಜಯಾ ತಮ್ಮ



ವಿಜಯಚಿತ್ರ

ರೂಪತಾರಾ

ಲವಲವಿಕೆಯ ವಿಶಿಷ್ಟ-ವಸ್ತುನಿಷ್ಠ ಬರವಣಿಗೆಯಿಂದ ಪತ್ರಿಕೆಗೆ ಮೆರುಗನ್ನು ನೀಡಿದರು. 'ತರಂಗ' ಸಾಪ್ತಾಹಿಕದ ಸಂಪಾದಕ ಸಂತೋಷಕುಮಾರ್ ಗುಲ್ವಾಡಿ ಸಂಪಾದಕತ್ವದಲ್ಲಿ 'ರೂಪತಾರಾ' ಹೊರತಂದ 'ಸ್ಮೃತಿ' ವಿಶೇಷ ಸಂಚಿಕೆಗಳು ಚಿತ್ರರಂಗದ ಪಾಲಿಗೆ ಸಾರ್ವಕಾಲಿಕ ದಾಖಲೆಯಾಗಿ ಉಳಿದಿವೆ. ಡಾ|ವಿಜಯಾ 'ಉದಯವಾಣಿ' ಬಳಗದಿಂದ ಹೊರಬಂದು ಕಲಕಾಲ ಬೆಂಗಳೂರಿನ 'ಅರಗಿಣಿ' ವರ್ಣರಂಜಿತ ವಾರಪತ್ರಿಕೆಯ ಉಸ್ತುವಾರಿ ಹೊತ್ತರು. ಅನಂತರ ರಂಗಭೂಮಿ, ಚಿತ್ರಕಲೆ ಮತ್ತು ಸಿನಿಮಾರಂಗಕ್ಕೆ ಮೀಸಲಾದ ತಮ್ಮದೇ 'ಸಂಕುಲ' ನಿಯತಕಾಲಿಕ ನಡೆಸಿದರು. 'ರೂಪತಾರಾ'ದ ಮೈಸೂರು ಪ್ರತಿನಿಧಿಯಾಗಿ ಕ.ಚಿ.ಕುಮಾರ್ ಕೆಲಸ ಮಾಡುತ್ತಿದ್ದಾರೆ. ಮೈಸೂರಿನಲ್ಲಿನ ಚಲನಚಿತ್ರ ನಿರ್ಮಾಣ ಚಟುವಟಿಕೆಗಳನ್ನು ಪತ್ರಿಕೆಗಳಿಗೆ ವರದಿ ಮಾಡುವ ಇವರು, ಮೈಸೂರಿನ ಏಕೈಕ ಸ್ಟುಡಿಯೋ ಪ್ರೀಮಿಯರ್ ಮುಚ್ಚುವ ನಿರ್ಧಾರ ತಳೆದಾಗ ಆ ನಿರ್ಧಾರದ ವಿರುದ್ಧ ಹೋರಾಟ ನಡೆಸಿ ಪ್ರೀಮಿಯರ್ ಮತ್ತೆ ಕಾರ್ಯಾರಂಭ ಮಾಡುವಂತೆ ಮಾಡಿದವರಲ್ಲಿ ಪ್ರಮುಖರು. 'ರೂಪತಾರಾ'ದಲ್ಲಿ ಕುಮಾರ್ ಅವರದೂ ಗಮನಾರ್ಹ ಪಾತ್ರ.

೧೯೭೦ ಮತ್ತು ೧೯೮೦ರ ದಶಕಗಳಲ್ಲಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಕ್ಷೇತ್ರ ಅನೇಕ ವೈಯಕ್ತಿಕ ಪ್ರಯತ್ನಗಳನ್ನು ಕಂಡಿತು. ಒಂದು ಪತ್ರಿಕೆಯಿಂದ ಸಿಡಿದವರು ಇನ್ನೊಂದು ಪತ್ರಿಕೆ ಹುಟ್ಟುಹಾಕಿದರು. ಚಿತ್ರರಂಗದ ಅನುಭವ ಇದ್ದವರು, ಇಲ್ಲದವರು ಎಲ್ಲರೂ ರಂಗಪ್ರವೇಶ ಮಾಡಿದರು. ಇವರಲ್ಲಿ ಗ್ಲಾಮರ್ ಜಗತ್ತಿನ ಸೆಳವಿಗೆ ಸಿಕ್ಕಿಬಂದವರೂ ಅನೇಕರಿದ್ದರು. ಈ ಹಂತದಲ್ಲಿ ಪತ್ರಿಕಾ ವೃತ್ತಿಯನ್ನು ನೋಡುವ ದೃಷ್ಟಿ, ಬಳಸುವ ರೀತಿ ಎರಡೂ ಬದಲಾದವು. ಲೇಖನಿ ಕೆಲವರಿಗೆ ಆಯುಧವಾಯಿತು. ಚಿತ್ರರಂಗದ ಗುಸುಗುಸು ಸುದ್ದಿಗಳು, ಅಲ್ಲಿನ ಮಂದಿಯ ಖಾಸಗಿ ಬದುಕು, ಅವರ ಗುಣಾವಗುಣಗಳು ಈ ಸಿನಿಮಾ ಪತ್ರಿಕೆಗಳಿಗೆ ಆಹಾರವಾಯಿತು. ಕೆಲವು ಕಾಲ ಪ್ರಶಂಸಾರೂಪದ ಪ್ರಚಾರಕ್ಕೂ ಪತ್ರಿಕೆಗಳು ಮಾಧ್ಯಮವಾದವು.

ಸುಚಿತ್ರಾ

ಉದಯವಾಣಿ ಸಿನಿಮಾ ಪುರವಣಿ

೧೯೭೭ರಲ್ಲಿ ಕೆಲವು ಗೆಳೆಯರು ಸೇರಿ ಬೆಂಗಳೂರಿನಿಂದ 'ಚಿತ್ರಮಾಲಾ' ಸಿನಿಮಾ ಮಾಸಪತ್ರಿಕೆಯೊಂದನ್ನು ಪ್ರಾರಂಭಿಸಿದರು. ಪತ್ರಕರ್ತ ಸೂ.ರಮಾಕಾಂತ್ ಸಂಪಾದಕರು. 'ಸಂಯುಕ್ತ ಕರ್ನಾಟಕ' ಪತ್ರಿಕೆಯನ್ನು ನಡೆಸುತ್ತಿದ್ದ ಲೋಕ ಶಿಕ್ಷಣ ಟ್ರಸ್ಟ್ 'ಚಿತ್ರದೀಪ' ಸಿನಿಮಾ ವಾರಪತ್ರಿಕೆ ಹೊರತಂದಿತು. 'ಕರ್ಮವೀರ' ಪತ್ರಿಕೆಯ ಸಂಪಾದಕರಾಗಿದ್ದ ಶಂಕರಪಾಟೀಲರೇ ಈ ಪತ್ರಿಕೆಯ ಸಂಪಾದಕರು. ಲೋಕ ಶಿಕ್ಷಣ ಟ್ರಸ್ಟ್ ಪ್ರಕಟಿಸುತ್ತಿದ್ದ ಪತ್ರಿಕೆಗಳು ಬೇರೊಂದು ಸಂಸ್ಥೆಗೆ ಹಸ್ತಾಂತರಗೊಂಡಾಗ 'ಚಿತ್ರದೀಪ' ನಿಂತಿತು. ೧೯೭೯ರಲ್ಲಿ ಈ ಪತ್ರಿಕೆಗಳು ಜಯಕರ್ನಾಟಕ ಪ್ರಕಾಶನ ಸಂಸ್ಥೆಗೆ ವರ್ಗಾವಣೆಗೊಂಡಾಗ ಅದು ಮತ್ತೆ ಪ್ರಕಟವಾಗತೊಡಗಿತು. ಹಿರಿಯ ಪತ್ರಕರ್ತ ಎಸ್.ವಿ.ಜಯಶೀಲರಾವ್ ಸಂಪಾದಕರಾದರು. ಮುಂದೆ ಅದು ಇಂಗ್ಲಿಷ್ ಚಲನಚಿತ್ರ ಸಾಪ್ತಾಹಿಕ 'ಸ್ಕ್ರೀನ್'ನ ಆಕಾರದಲ್ಲಿ ಬರತೊಡಗಿತು. ೧೯೮೨ರಲ್ಲಿ ಪತ್ರಕರ್ತ ಆರ್.ನರಸಿಂಹ ಸಂಪಾದಕತ್ವ ವಹಿಸಿಕೊಂಡರು. ಆದರೆ ಅದೂ ಹೆಚ್ಚು ಕಾಲ ಬಾಳಲಿಲ್ಲ.

೧೯೮೧ರಲ್ಲಿ ಹಿರಿಯ ಪತ್ರಕರ್ತ ವಿ.ಎನ್.ಸುಬ್ಬರಾವ್ ಸಂಪಾದಕತ್ವದಲ್ಲಿ 'ಚಿತ್ರಜ್ಯೋತಿ' ಚಲನಚಿತ್ರ ವಾರಪತ್ರಿಕೆ ಪ್ರಾರಂಭವಾಯಿತು. ಹಿರಿಯ ಪತ್ರಕರ್ತ ಎಂ.ವಿ.ರಾಮಕೃಷ್ಣಯ್ಯ ಈ ಪತ್ರಿಕೆಯ ಪ್ರಕಾಶಕರು. ಉತ್ತಮ ಗುಣಮಟ್ಟದ ಬರವಣಿಗೆಯಿಂದ ಜನಪ್ರಿಯವಾಗಿದ್ದ ಈ ಪತ್ರಿಕೆ ೧೯೮೮ರಲ್ಲಿ ಪ್ರಕಟಣೆ ನಿಲ್ಲಿಸಿತು. ಅದೇ ವರ್ಷ 'ಮನೋರಮಾ ಚಿತ್ರ' ಚಲನಚಿತ್ರ ಪತ್ರಿಕೆ ಪ್ರಾರಂಭವಾಗಿ ಕೆಲ ಸಮಯದಲ್ಲೇ ನಿಂತುಹೋಯಿತು.

೧೯೮೦ರ ದಶಕದಲ್ಲೇ ಬಂದ ಜನಪ್ರಿಯ ಸಿನಿಮಾ ವಾರಪತ್ರಿಕೆಗಳಲ್ಲಿ 'ಚಿತ್ರತಾರಾ' (೧೯೮೪), 'ಅರಗಿಣಿ' (೧೯೮೫) ಗಮನಾರ್ಹವಾದವು. 'ಚಿತ್ರದೀಪ' ಸಂಪಾದಕರಾಗಿ ಪರಿಚಿತರಾಗಿದ್ದ ಆರ್.ನರಸಿಂಹ ಈ ಪತ್ರಿಕೆಯ ಸಂಪಾದಕರು. ಸಹಾಯಕರಾಗಿ ಉತ್ಸಾಹಿ ಯುವಕರಾದ ಬಿ.ಎನ್.ಸುಬ್ರಹ್ಮಣ್ಯ, ಗಣೇಶ್ ಕಾಸರಗೋಡು ಜೊತೆಗಿದ್ದರು. ಇವರೆಲ್ಲರ ಚುರುಕಾದ ಬರವಣಿಗೆ, ಪ್ರಕಾಶ್ ಶೆಟ್ಟಿ ವಿನ್ಯಾಸ ಕಲೆ, ವಿಶ್ವನಾಥ್ ಸುವರ್ಣ ಛಾಯಾಗ್ರಹಣ ನೈಪುಣ್ಯ ಇವುಗಳಿಂದಾಗಿ 'ಚಿತ್ರತಾರಾ' ಬಹುಬೇಗ ಜನಮನ ಸೆಳೆಯಿತು. ನಂತರದಲ್ಲಿ ಬಿ.ಎನ್.ಸುಬ್ರಹ್ಮಣ್ಯ 'ಜನವಾಹಿನಿ' ಬಳಗ ಸೇರಿದರು. ಗಣೇಶ್ ಕಾಸರಗೋಡು 'ಸಂಯುಕ್ತ ಕರ್ನಾಟಕ' ಗುಂಪಿನ 'ಕರ್ಮವೀರ' ಸೇರಿದರು. ಅನಂತರ 'ವಿಜಯ ಕರ್ನಾಟಕ'ಕ್ಕೆ. ಅದೇ ರೀತಿ ಅಭಿಮಾನಿ ಪ್ರಕಾಶನ ಸಂಸ್ಥೆ ಹೊರತಂದ 'ಅರಗಿಣಿ' ಚಲನಚಿತ್ರ ವಾರಪತ್ರಿಕೆ ನಿರೀಕ್ಷೆಗೂ ಮೀರಿ ಯಶಸ್ಸನ್ನು ಸಾಧಿಸಿತು. ಪ್ರಕಾಶಕ-ಸಂಪಾದಕ ಟಿ.ವೆಂಕಟೇಶ್ ಸಿನಿಮಾ ಪತ್ರಕರ್ತರ ಒಂದು ದೊಡ್ಡ ತಂಡವನ್ನೇ ಕಟ್ಟಿದರು. ಹಲವು ಚಲನಚಿತ್ರ ಪತ್ರಕರ್ತರು 'ಅರಗಿಣಿ' ಮೂಲಕ ಬೆಳಕಿಗೆ ಬಂದರು. ಈ ಪತ್ರಿಕೆ 'ಚಿತ್ರತಾರಾ' ಪತ್ರಿಕೆಗೆ ನೇರಸ್ಪರ್ಧೆಯನ್ನೇ ಒಡ್ಡಿತು. ನಿರ್ಭಯ ಬರವಣಿಗೆ ಕೂಡ ಈ ಪತ್ರಿಕೆಯ ಯಶಸ್ಸಿಗೆ ಒಂದು ಕಾರಣವಾಯಿತು. ಪ್ರಾರಂಭದಲ್ಲಿ ಜಾಣಗೆರೆ ವೆಂಕಟರಾಮಯ್ಯ ಇದ್ದರು. ಆ ಮೊದಲು 'ಮೂಕಿ ಟಾಕಿ', 'ಕಾಜಾಣ' ಪತ್ರಿಕೆಗಳನ್ನು ನಡೆಸಿದವರು. ಅನಂತರ ತಮ್ಮ ಹೆಸರಿನ ಪತ್ರಿಕೆಯನ್ನೇ ಆರಂಭಿಸಿದರು. ಈಗ ಚಲನಚಿತ್ರ ವಾರಪತ್ರಿಕೆಗಳಲ್ಲಿ 'ಅರಗಿಣಿ'ಯೊಂದೇ ಉಳಿದು ಜನಪ್ರಿಯವಾಗಿ ಮುನ್ನಡೆಯುತ್ತಿದೆ. ಪ್ರತಿ ಪುಟವನ್ನೂ ಬಹು ವರ್ಣಗಳಲ್ಲಿ ಮುದ್ರಿಸುತ್ತಿರುವ ಏಕೈಕ ಚಲನಚಿತ್ರ ವಾರಪತ್ರಿಕೆ ಎನಿಸಿದೆ. ಬೆಲಗೂರು ಸಮೀವುಲ್ಲಾ, ಸತ್ಯಮೂರ್ತಿ ಆನಂದೂರು, ಆರ್.ಜಿ.ವಿಜಯಸಾರಥಿ, ಗಿರಿಶಾಸ್ತ್ರಿ, ಎನ್.ಎಸ್.ರಾಮಚಂದ್ರ ಮತ್ತಿತರ ಹಲವರು ಬಹುಕಾಲ 'ಅರಗಿಣಿ'ಯ ಚುಕ್ಕಾಣಿ ಹಿಡಿದು ನಡೆಸಿದರು. ಗಿರಿಶಾಸ್ತ್ರಿ 'ಮಂಗಳ' ಸೇರಿದರು. ವಿಜಯಸಾರಥಿ ತಮ್ಮ ಅಭಿನಯ ಕಲೆಯಿಂದ ಕಿರುತೆರೆ ಹಾಗೂ ವಿಶಾಲ ತೆರೆಗಳೆರಡರಲ್ಲೂ ಮಿಂಚುತ್ತಾ, 'ಅರಗಿಣಿ', 'ಈಸಂಜೆ', 'ವಿಷನ್ ವಿಜ್' ಮತ್ತು ಹಲವಾರು ಪತ್ರಿಕೆಗಳ ಚಲನಚಿತ್ರ ಪತ್ರಕರ್ತರಾಗಿದ್ದಾರೆ. ಎನ್.ಎಸ್.ರಾಮಚಂದ್ರ 'ಅರಗಿಣಿ'ಯಲ್ಲಿಯೇ ಮುಂದುವರೆದಿದ್ದಾರೆ.

ದಶಕದ ಇತರ ಸಿನಿಮಾ ಪತ್ರಿಕೆಗಳಲ್ಲಿ 'ಕಾಜಾಣ', 'ಚಿತ್ರವಿಹಾರಿ', 'ರಂಗವಲ್ಲಿ' ಹೀಗೆ ಹಲವಾರು ಪತ್ರಿಕೆಗಳನ್ನು ಉದಾಹರಿಸಬಹುದು. ಜಾಣಗೆರೆ ವೆಂಕಟರಾಮಯ್ಯ 'ಕಾಜಾಣ'ದ ಸೂತ್ರಧಾರರು. ನಂತರ ದೊಡ್ಡಹುಲ್ಲೂರು ರುಕ್ಕೋಜಿ 'ಕಾಜಾಣ'ದ ಸಂಪಾದಕರಾಗಿ ದುಡಿದರು. 'ವಾರಪತ್ರಿಕೆ'ಯಲ್ಲಿದ್ದ ಬಾಲಕೃಷ್ಣ ಕಾಕತ್ಕರ್ 'ರಂಗವಲ್ಲಿ', 'ರಾಜಧಾನಿ' ಪತ್ರಿಕೆಗಳನ್ನು ಹೊರತಂದವರು. 'ರಂಗವಲ್ಲಿ' ಸಿನಿಮಾ ಸಂಬಂಧದ ಪತ್ರಿಕೆ. ಕಾಕತ್ಕರ್ ಸಂಪಾದಕರು. ಈ ದಶಕದ ಕೊನೆಯಲ್ಲಿ ವಿ.ಎನ್.ಸುಬ್ಬರಾವ್ ಆಕರ್ಷಕ 'ತಾರಾಲೋಕ' ಪತ್ರಿಕೆಯನ್ನು ಹುಟ್ಟುಹಾಕಿದರು.

ಚಿತ್ರಜ್ಯೋತಿ

ಅರಗಿಣಿ

ಚಲನಚಿತ್ರ ವಾರಪತ್ರಿಕೆ

ಚಿತ್ರವಿಹಾರಿ

ರಾಜವಾಣಿ

ಚಿತ್ರತಾರಾ

ಆರಂಭದಲ್ಲಿ ಒಳ್ಳೆಯ ಪ್ರತಿಕ್ರಿಯೆ ಪಡೆದರೂ ಈ ಪತ್ರಿಕೆಯೂ ಹೆಚ್ಚು ಕಾಲ ಬಾಳಲಿಲ್ಲ. ನಂತರ ೧೯೫೫ರಲ್ಲಿ ಡಾ।ವಿಜಯಾ ಕಾರ್ಯನಿರ್ವಾಹಕ ಸಂಪಾದಕರಾಗಿ, ವಿ.ಎನ್.ಸುಬ್ಬರಾವ್ ಪ್ರಧಾನ ಸಂಪಾದಕರಾಗಿ, ನವದೆಹಲಿಯ ಕೈಗಾರಿಕೋದ್ಯಮಿ ವೀರೇಂದ್ರ ಮೋಹನ್ ಟ್ರೆಹಾನ್ ಅವರ ಸಾರಥ್ಯದಲ್ಲಿ ವರ್ಣರಂಜಿತ ವಾರಪತ್ರಿಕೆ 'ನಕ್ಷತ್ರಲೋಕ' ಹೊರತಂದರು. ವಿನ್ಯಾಸ ಹಾಗೂ ವಸ್ತು ಎರಡರಲ್ಲಿಯೂ ಹೊಸ ಆವಿಷ್ಕಾರಗಳನ್ನು ಕಂಡ ಪತ್ರಿಕೆಯಿದು. ತೀಕ್ಷ್ಣ ವಿಮರ್ಶೆಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಚಿತ್ರಗಳ ನಿರ್ಮಾಪಕರು ಹಾಗೂ ನಿರ್ದೇಶಕರ ಅಷ್ಟೇ ತೀಕ್ಷ್ಣವಾದ ಪ್ರತಿಕ್ರಿಯೆ ಈ ಪತ್ರಿಕೆಯ ಹೆಚ್ಚುಗಾರಿಕೆಗಳಲ್ಲಿ ಒಂದೆನಿಸಿತ್ತು. ಜಾಹಿರಾತು ಪ್ರಕಟಣೆಯಲ್ಲಿ ಹೊಸ ವಿಧಾನ ಆರಂಭಿಸಿದರು. ಆದರೆ ಈ ಪತ್ರಿಕೆಯ ಆಯಸ್ಸು ಕೂಡ ಕೆಲವು ತಿಂಗಳುಗಳನ್ನು ಮೀರಲಿಲ್ಲ.

ಈ ಸಂದರ್ಭದಲ್ಲಿ ಕನ್ನಡ ಸಿನಿಮಾ ಪತ್ರಿಕೋದ್ಯಮಕ್ಕೆ ತಳಪಾಯ ಹಾಕಿ, ಅದಕ್ಕೊಂದು ಚೌಕಟ್ಟು ಹಾಕಿಕೊಟ್ಟ ಕೆಲವು ಪತ್ರಿಕೆಗಳನ್ನು ಹೆಸರಿಸಲೇಬೇಕು. ಅವುಗಳಲ್ಲಿ ಮೊದಲ ಸ್ಥಾನ ೧೯೩೧ರಲ್ಲೇ ಪ್ರಕಟಣೆ ಆರಂಭವಾದ 'ಪ್ರಜಾಮತ' ವಾರಪತ್ರಿಕೆಗೆ ಸಲ್ಲುತ್ತದೆ. ವಾಣಿಜ್ಯೋದ್ಯಮಿ-ಸಿನಿಮಾ ಹಂಚಿಕೆದಾರ ಬಿ.ಎನ್.ಗುಪ್ತ ಬೆಂಗಳೂರಿನ ಮಾವಳ್ಳಿಯಿಂದ ಪ್ರಾರಂಭಿಸಿದ ಈ ಪತ್ರಿಕೆ ರಾಜಕೀಯ, ಸಾಹಿತ್ಯ ಮತ್ತಿತರ ವಿಷಯಗಳ ಜೊತೆಗೆ ಸಿನಿಮಾಕ್ಕೂ ಆದ್ಯತೆ ನೀಡಿತು. ಗುಪ್ತ ಅವರಿಗೆ ತೆಲುಗು-ತಮಿಳು ಚಿತ್ರನಿರ್ಮಾಪಕರ ನೇರಸಂಪರ್ಕ ಇದ್ದುದರಿಂದ ಅವರು ಮದರಾಸಿಂದ ಸಿನಿಮಾ ಸುದ್ದಿ, ಛಾಯಾಚಿತ್ರ ತರಿಸಿಕೊಳ್ಳುತ್ತಿದ್ದರು. ಆ ದಿನಗಳಲ್ಲಿ ಎಲ್ಲೂ ಕಾಣದ ಸಿನಿಮಾ ಸುದ್ದಿ-ಸಮಾಚಾರಗಳು 'ಪ್ರಜಾಮತ'ದಲ್ಲಿ ಪ್ರಕಟವಾಗುತ್ತಿದ್ದವು. ಆನಂತರ, ಅಂದರೆ ೧೯೪೩ರಲ್ಲಿ, ಬಿ.ಎನ್.ಗುಪ್ತ ವೈಯಕ್ತಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಮುಂಬಯಿಯ ವಾಣಿಜ್ಯೋದ್ಯಮಿ ಜಿ.ಎಂ.ಶ್ರೀನಿವಾಸಯ್ಯ ಅವರಿಗೆ ಮಾರಾಟ ಮಾಡಿದರು. ಮುಂದೆ ಹೊಸ ಮುದ್ರಣ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಅದು ರಾಜ್ಯದ ಮೊದಲ ಶ್ರೇಣಿಯ ವಾರಪತ್ರಿಕೆಯಾಗಿ ಮೆರೆಯಿತು.

ಕನ್ನಡ ಬಾವುಟದಂತೆ ಹಳದಿ-ಕೆಂಪು ಪಟ್ಟಿಗಳೊಂದಿಗೆ ಪ್ರಕಟವಾಗುತ್ತಿದ್ದ 'ಪ್ರಜಾಮತ'ದ ಮಧ್ಯದ ಪುಟಗಳೆರಡೂ 'ರೂಪವಾಣಿ' ಹೆಸರಿನಲ್ಲಿ ಸಿನಿಮಾರಂಗದ ಸುದ್ದಿ-ಸಮಾಚಾರಗಳಿಗೆ ಮೀಸಲಾಗಿದ್ದವು. ಕಳಸ ಸತ್ಯನಾರಾಯಣ ಸಿನಿಮಾ ಪುಟಗಳನ್ನು ಅಚ್ಚುಕಟ್ಟಾಗಿ ರೂಪಿಸುತ್ತಿದ್ದರು. ಅವರದು ಲಾಲಿತ್ಯಪೂರ್ಣ ಶೈಲಿ. ಚುರುಕಾದ ವಿಮರ್ಶೆಗಳನ್ನವರು ಬರೆಯುತ್ತಿದ್ದರು. ೧೯೫೬ರಲ್ಲಿ ಗುಬ್ಬಿ ಕಂಪೆನಿಯ 'ಸದಾರಮೆ' ಕನ್ನಡ ಚಿತ್ರ ಬಿಡುಗಡೆಯಾದಾಗ 'ಸತ್ತ ಸದಾರಮೆಯನ್ನು ಬದುಕಿಸಿದ ಕಲ್ಯಾಣ್‌ಕುಮಾರ್' ಎಂಬ ತಲೆಬರಹದಲ್ಲಿ ಅವರು ಬರೆದು ಪ್ರಕಟಿಸಿದ ವಿಮರ್ಶೆ ಆಗ ದೊಡ್ಡ ಸುದ್ದಿಯೇ ಆಯಿತು. ಚಲನಚಿತ್ರ ನಟ-ನಟಿಯರನ್ನು ತುಂಡು ಹೆಸರುಗಳಿಂದ ಸಂಬೋಧಿಸಿ, ಅತ್ಯಂತ ಆತ್ಮೀಯತೆಯಿಂದೆಂಬಂತೆ ಬರೆಯುತ್ತಿದ್ದರು. ಉದಾಹರಣೆಗೆ ದಕ್ಷಿಣ ಭಾರತದ ಅಂದಿನ ಖ್ಯಾತ ನೃತ್ಯ ತಾರಾ ಸಹೋದರಿಯರಾದ ಲಲಿತಾ, ಪದ್ಮಿನಿ, ರಾಗಿಣಿ - ಈ ಮೂವರೂ ಅವರ ಲೇಖನಿಯಲ್ಲಿ ಲಲ್ಲೂ, ಪದ್ದೂ, ರಾಗಿ ಆಗಿರುತ್ತಿದ್ದರು. ಈ ರೀತಿಯ ಬರವಣಿಗೆ ಯುವ ಮನಸ್ಸನ್ನು ಬಹು ಸುಲಭವಾಗಿ ಆಕರ್ಷಿಸಿತು. ಸಿನಿಮಾರಂಗಕ್ಕೆ ಸಂಬಂಧಿಸಿದ ಪ್ರಶ್ನೆ ಉತ್ತರ ಅಂಕಣವೂ ಜನಪ್ರಿಯವಾಗಿತ್ತು. ತಾರೆಯರ ವಿಳಾಸ ನೀಡುತ್ತಿದ್ದರು. ಪ್ರಶ್ನೆ-ಉತ್ತರದ ಅಂಕಣಕ್ಕೆ ಸಂಪೆಮನೆ ಕೃಷ್ಣಮೂರ್ತಿ ಸಹಾಯಕರಾಗಿದ್ದರು.




ಕಳಸ ಸತ್ಯನಾರಾಯಣ ಬಹುಮಟ್ಟಿಗೆ 'ಫಿಲ್ಮಿಂಡಿಯಾ' ಪತ್ರಿಕೆಯಿಂದ ಪ್ರಭಾವಿತರಾಗಿದ್ದರು. ವಕೀಲ ಪರೀಕ್ಷೆಯೂ ಸೇರಿದಂತೆ ಎರಡು ಪದವಿಗಳನ್ನು ಪಡೆದಿದ್ದ ಸುಶಿಕ್ಷಿತ ಕಳಸ ಸತ್ಯನಾರಾಯಣ ಕನ್ನಡದಲ್ಲಿ ಸಿನಿಮಾ ಬರವಣಿಗೆಯ ಒಂದು ಮಾದರಿಯನ್ನೇ ಸೃಷ್ಟಿಸಿಕೊಟ್ಟರು. 'ರೂಪವಾಣಿ' ವಿಭಾಗ ಆ ಕಾಲದಲ್ಲಿ ಅತ್ಯಂತ ಜನಪ್ರಿಯವೆನಿಸಿತ್ತು.

ಒಟ್ಟಾರೆಯಾಗಿ ನೋಡಿದರೆ ೧೯೩೧ರಲ್ಲಿ ಪ್ರಕಟಣೆ ಪ್ರಾರಂಭಿಸಿದ 'ಪ್ರಜಾಮತ' ವಾರಪತ್ರಿಕೆಯ ಸಂಪಾದಕ-ಪ್ರಕಾಶಕ ಬಿ.ಎನ್.ಗುಪ್ತ ಅವರೇ ಕನ್ನಡ ಸಿನಿಮಾ ಪತ್ರಿಕೋದ್ಯಮದ ಅಡಿಗಲ್ಲು ಎಂದು ಹೇಳಬಹುದು. ಆ ಕಾಲದ ಪ್ರಸಿದ್ಧ ಲೇಖಕರಾಗಿದ್ದ ಮಾ.ನಾ.ಚೌಡಪ್ಪ, ನಾಡಿಗೇರ ಕೃಷ್ಣರಾವ್, ಕೆ.ಬಿ.ಶ್ರೀನಿವಾಸನ್ ತಮ್ಮ ಲೇಖನಗಳಿಂದ 'ಪ್ರಜಾಮತ' ಸಿನಿಮಾ ಪುಟಗಳನ್ನು ಶ್ರೀಮಂತಗೊಳಿಸಿದರು.

'ಪ್ರಜಾಮತ' ಪತ್ರಿಕೆಯ 'ರೂಪವಾಣಿ' ವಿಭಾಗವನ್ನು ಜನಪ್ರಿಯಗೊಳಿಸಿದ ಕಳಸ ಸತ್ಯನಾರಾಯಣ ೧೯೫೫-೫೬ರ ಸುಮಾರಿನಲ್ಲಿ 'ಪ್ರಜಾಮತ'ದಿಂದ ಹೊರಬಂದ ಮೇಲೆ ೧೯೫೭ರಲ್ಲಿ ತಾವೇ ಸ್ಥಾಪಿಸಿದ 'ಶ್ರೀ ಅಮರಕಲಾ ನಿಕೇತನ' ಸಾಂಸ್ಕೃತಿಕ ಸಂಸ್ಥೆಯ ಬೆಳವಣಿಗೆಯಲ್ಲಿ ತೊಡಗಿಕೊಂಡರು. ರಾಜಕಾರಣಿ ಕೆ.ಹನುಮಂತಯ್ಯ ಗೌರವಾಧ್ಯಕ್ಷರಾಗಿದ್ದ ಈ ಸಂಸ್ಥೆಯ ಕಾರ್ಯದರ್ಶಿ ಹಾಗೂ ಮುಖ್ಯ ಸಂಘಟಕರಾಗಿ ಕಳಸ ಸತ್ಯನಾರಾಯಣ, ಮುಂಬಯಿಯ ಫಿಲಂ ಫಂಕ್ಷನ್ಸ್ ಕಮಿಟಿಯ ಪಂಡಿತ ದಿವಾನ್ ಶರಾರ್‌ರ ಸಹಕಾರದಲ್ಲಿ ಬೆಂಗಳೂರಿನಲ್ಲಿ ತಾರಾಮೇಳ - ತಾರಾಕ್ರಿಕೆಟ್ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡುತ್ತಿದ್ದರು. ನಂದನವನ ಶಾಲಾ ಸಮೂಹವನ್ನು ಸ್ಥಾಪಿಸಿ ನಡೆಸುತ್ತಿದ್ದರು. ರಾಜ್ಯದಾದ್ಯಂತ ಮಕ್ಕಳ ಚಲನಚಿತ್ರೋತ್ಸವವನ್ನು ಮೊದಲು ನಡೆಸಿದ ಹೆಗ್ಗಳಿಕೆಯೂ ಇವರದು.




ನಂತರ 'ರೂಪವಾಣಿ'ಯ ಹೊಣೆಹೊತ್ತವರು ಹಿರಿಯ ಪತ್ರಕರ್ತರಾದ ಬಿ.ಎಂ.ಕೃಷ್ಣಸ್ವಾಮಿ. ಬಿಎಂಕೆ ಎಂದೇ ಪರಿಚಿತರಾಗಿದ್ದ ಅವರದು ಗಾಂಭೀರ್ಯ ತುಂಬಿದ ತೂಕದ ಬರವಣಿಗೆ. ಮುಂಬಯಿಯ 'ಸ್ಕ್ರೀನ್' ಪತ್ರಿಕೆಯ ಬೆಂಗಳೂರು ವರದಿಗಾರರಾಗಿ ದುಡಿದವರು. ನಂತರ ಅವರು 'ಪ್ರಜಾವಾಣಿ' ಸೇರಿದರು. ಇವರು ಮದರಾಸಿನಿಂದ ಪ್ರಕಟವಾಗುತ್ತಿದ್ದ 'ವಿಜಯಚಿತ್ರ' ಸಿನಿಮಾ ಮಾಸಪತ್ರಿಕೆಯ ಬೆಂಗಳೂರು ಪ್ರತಿನಿಧಿಯಾಗಿಯೂ ಕೆಲಸ ಮಾಡಿದರು.

ಬಿಎಂಕೆ ನಂತರ 'ಪ್ರಜಾಮತ'ದ 'ರೂಪವಾಣಿ' ವಿಭಾಗದ ಜವಾಬ್ದಾರಿ ಹೊತ್ತವರು ಎಂ.ದ್ವಾರಕಾನಾಥರಾವ್. ಗಂಭೀರ ಪ್ರವೃತ್ತಿಯ ಅವರ ಬರವಣಿಗೆಯೂ ಗಂಭೀರವಾಗಿತ್ತು. ಅವರದು ಬಿಚ್ಚು ಮಾತು. ಪತ್ರಿಕೆಯಲ್ಲಿನ ಬರವಣಿಗೆಯ ಮೌಲ್ಯವನ್ನು ಹೆಚ್ಚಿಸಿದರು. ದ್ವಾರಕಾನಾಥ್ ಅವರಿಗೆ ಕನ್ನಡ ಚಿತ್ರೋದ್ಯಮದ ಬೆಳವಣಿಗೆ ಕುರಿತಂತೆ ಅಪಾರ ಆಸಕ್ತಿ. ಉದ್ಯಮ ನಡೆದುಬರುತ್ತಿರುವ ಹಾದಿ ದಾಖಲಿಸಿ ಇಡುವ ತವಕ. ಕನ್ನಡ ಚಿತ್ರಗಳ ಇತಿಹಾಸ ಸಂಗ್ರಹಣೆಯಲ್ಲಿ ತೊಡಗಿಕೊಂಡ ಅವರು ಕನ್ನಡ ಚಿತ್ರಗಳ ಸ್ಥಿರಚಿತ್ರಗಳನ್ನು, ಬುಕ್‌ಲೆಟ್‌ಗಳನ್ನು ಸಂಗ್ರಹಿಸಿ ಜೋಪಾನ ಮಾಡುವುದನ್ನೂ ಹವ್ಯಾಸವಾಗಿಸಿಕೊಂಡಿದ್ದರು. ದ್ವಾರಕಾನಾಥರಾವ್ ಅಕಾಲ ಮೃತ್ಯುವಿಗೆ ತುತ್ತಾದರು. ಅವರು ಸಂಗ್ರಹಿಸಿಟ್ಟಿದ್ದ, ಕನ್ನಡ ಚಲನಚಿತ್ರೋದ್ಯಮ ನಡೆದು ಬಂದ ಹಾದಿಯ ಹೆಜ್ಜೆ ಗುರುತುಗಳ ದಾಖಲೆಯಾಗಬಹುದಾಗಿದ್ದ ಅಪೂರ್ವ ಸಂಗ್ರಹ ಅವರ ನಿಧನಾನಂತರ ನಾಪತ್ತೆಯಾಯಿತು. ಆನಂತರ ಎನ್.ಎಸ್.ರಾಮಚಂದ್ರ, ಗಿರಿಶಾಸ್ತ್ರಿ ಅವರು




'ಪ್ರಜಾಮತ' ಬಳಗ ಸೇರಿದರು. 'ಪ್ರಜಾಮತ' ಪತ್ರಿಕೆ ಪ್ರಕಟಣೆ ನಿಂತಿತು. ಎಸ್.ಎಸ್.ರಾಮಚಂದ್ರ 'ಅರಗಿಣಿ' ಬಳಗವಾದರೆ, ಗಿರಿಶಾಸ್ತ್ರಿ 'ಅರಗಿಣಿ'ಯಲ್ಲಿ ಇದ್ದು ಅನಂತರ 'ಮಂಗಳ' ಪತ್ರಿಕೆಯತ್ತ ನಡೆದರು.

'ಪ್ರಜಾಮತ' ಜನಪ್ರಿಯವಾಗಿದ್ದ ಸಮಯದಲ್ಲೇ 'ಮೈಸಿಂಡಿಯಾ' ಪತ್ರಿಕೆಯವರ 'ಜನಪ್ರಗತಿ' ಪತ್ರಿಕೆಯಲ್ಲಿ ಹಿರಿಯ ಚಲನಚಿತ್ರ ಪತ್ರಕರ್ತ ಬಿ.ಕೆ.ಗುರುರಾಜ್ ಸಿನಿಮಾ ಅಂಕಣದ ಸಂಪಾದಕರಾಗಿದ್ದರು. ಹೊಸಾಳಿ ಅವರಿಂದ ಬಿ.ಎನ್.ಗುಪ್ತರು ಮಾಲೀಕತ್ವ ಪಡೆದು ಹಲವು ವರ್ಷ ಕಾಲ 'ಜನಪ್ರಗತಿ' ಪ್ರಕಟಿಸಿದರು.

೧೯೫೦ರಲ್ಲಿ ಬಿ.ಕೆ.ಗುರುರಾಜ್ 'ಜನಪ್ರಗತಿ' ವಾರಪತ್ರಿಕೆಯಲ್ಲಿ ಚಲನಚಿತ್ರ ವಿಭಾಗದ ಸಂಪಾದಕರಾಗಿದ್ದರು. ಇದಕ್ಕೆ ಮೊದಲು ಅವರು 'ಪ್ರಜಾಮತ' ವಾರಪತ್ರಿಕೆಯಲ್ಲಿ ಸಿನಿಮಾ ಬರಹಗಾರರಾಗಿದ್ದರು. 'ರೂಪಲೇಖಾ' ಸಿನಿಮಾ ಪತ್ರಿಕೆ ಸಂಪಾದಿಸಿದರು. ಅನಂತರ ಕೆಲವು ಮಿತ್ರರೊಂದಿಗೆ ಸೇರಿ 'ಚಿತ್ರಶ್ರೀ' ಸಿನಿಮಾ ಮಾಸಪತ್ರಿಕೆ ಸಂಪಾದಿಸಿ ಪ್ರಕಟಿಸಿದರು. ಚಿತ್ರರಂಗದ ಬಗ್ಗೆ ವಿಚಾರಪೂರ್ಣ ಲೇಖನಗಳನ್ನು ಪ್ರಕಟಿಸಿದ ಹಿರಿಮೆ ಅವರದಾಗಿತ್ತು. ಆನಂತರದಲ್ಲಿ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆಗೆ ಸೇರಿ ನಿವೃತ್ತರಾಗುವವರೆಗೂ ದುಡಿದರು.

ಕನ್ನಡ ಸಿನಿಮಾ ಪತ್ರಿಕೋದ್ಯಮಕ್ಕೆ ಗಣನೀಯ ಸೇವೆ ಸಲ್ಲಿಸಿದ ದಿನಪತ್ರಿಕೆಗಳಲ್ಲಿ ಮೊದಲ ಸ್ಥಾನ ನಿಸ್ಸಂಶಯವಾಗಿ 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕಾ ಸಮೂಹಕ್ಕೆ ಸೇರಿರುವ 'ಕನ್ನಡಪ್ರಭ' ಪತ್ರಿಕೆಗೆ ಸಲ್ಲಬೇಕು. ೧೯೬೭ರಲ್ಲಿ ಬೆಂಗಳೂರಿನಿಂದ ಪ್ರಕಟಣೆ ಆರಂಭಿಸಿದ ಈ ಪತ್ರಿಕೆ ೧೯೭೫ರಲ್ಲಿ 'ಚಿತ್ರಪ್ರಭ' ಹೆಸರಿನಲ್ಲಿ ಪ್ರತಿ ಶುಕ್ರವಾರ ಸಿನಿಮಾ ಪುರವಣಿ ನೀಡುವ ಪರಿಪಾಠ ಆರಂಭಿಸಿದ ಬಗ್ಗೆ ಈ ಮೊದಲೇ ಪ್ರಸ್ತಾಪಿಸಲಾಗಿದೆ. ಪತ್ರಿಕೆಯ ಹಿರಿಯ ಸಹಾಯಕ ಸಂಪಾದಕರಾಗಿದ್ದ ಕೆ.ಎಸ್.ನಾರಾಯಣಸ್ವಾಮಿ ಅವರೇ ಈ ಸಿನಿಮಾ ಪುರವಣಿಯನ್ನು ಸಂಪಾದಿಸುತ್ತಿದ್ದರು. ಅನಂತರ ಸಿ.ಸೀತಾರಾಮ್ ಪುರವಣಿಯ ಸಂಪಾದಕರಾದರು. ಪುರವಣಿಯನ್ನು ಶೈಕ್ಷಣಿಕವಾಗಿ-ರಂಜನೀಯವಾಗಿ ತರಲು ಇಬ್ಬರೂ ಬಹಳವಾಗಿ ಶ್ರಮಿಸಿದರು. ನಾಲ್ಕು ಪುಟಗಳಲ್ಲೂ ಹಲವು ಸ್ವಾರಸ್ಯಕರ ವಿಷಯಗಳು ತುಂಬಿರುತ್ತಿದ್ದವು. ಪ್ರತಿ ವಾರವೂ ಒಂದಲ್ಲ ಒಂದು ಬಿಸಿ ಸಿನಿಮಾ ಸುದ್ದಿ ಇರುತ್ತಿತ್ತು. 'ಚಿತ್ರಪ್ರಭ'ದ ಆಕರ್ಷಣೆಯಿಂದ ಪತ್ರಿಕೆಯ ಪ್ರಸಾರವೂ ಗಣನೀಯ ಪ್ರಮಾಣದಲ್ಲಿ ಹೆಚ್ಚಿತು. ಅನಂತರ ಉದಯ ಮರಕಿಣಿ (ಉಮ) 'ಚಿತ್ರಪ್ರಭ' ಪುಟಗಳ ಹೊಣೆ ಹೊತ್ತರೆ, ಗಿರೀಶರಾವ್ (ಜೋಗಿ) ಅವರು 'ಕನ್ನಡಪ್ರಭ'ದ ಚಲನಚಿತ್ರ ವಿಮರ್ಶಕರಲ್ಲೊಬ್ಬರಾಗಿದ್ದು 'ಚಿತ್ರಪ್ರಭ' ಪುಟಗಳಲ್ಲಿಯೂ ಬರೆಯುತ್ತಿದ್ದಾರೆ. ಕೆ.ಎಸ್.ವಾಸು 'ಕನ್ನಡಪ್ರಭ' ಸಿನಿಮಾ ವಿಭಾಗದಲ್ಲಿ ಬರೆಯುತ್ತಿರುವುದಲ್ಲದೆ 'ಸ್ಕ್ರೀನ್' ಪತ್ರಿಕೆಯ ಪ್ರತಿನಿಧಿಯೂ ಆಗಿದ್ದಾರೆ.

'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯಲ್ಲಿ ವಿ.ಎನ್.ಸುಬ್ಬರಾವ್ ಕನ್ನಡ ಸಿನಿಮಾ ಸುದ್ದಿ-ಸಮಾಚಾರ ಹಾಗೂ ವಿಮರ್ಶೆಗಳಿಗೆ ಹೆಚ್ಚು ಅವಕಾಶ ಕಲ್ಪಿಸಿದರು. 'ಡೆಕ್ಕನ್ ಹೆರಾಲ್ಡ್', 'ದಿ ಹಿಂದು' ಇಂಗ್ಲಿಷ್ ಪತ್ರಿಕೆಗಳೂ ಕನ್ನಡ ಚಲನಚಿತ್ರೋದ್ಯಮದ ಸುದ್ದಿ-ವಿಮರ್ಶೆಗಳಿಗೆ ಹೆಚ್ಚಿನ ಸ್ಥಳಾವಕಾಶ ಮಾಡಿಕೊಟ್ಟವು. ಹಿರಿಯ ಪತ್ರಕರ್ತ ಎಂ.ವಿ.ರಾಮಕೃಷ್ಣಯ್ಯ 'ದಿ ಹಿಂದು' ಪತ್ರಿಕೆಯಲ್ಲಿ ಕನ್ನಡ ಚಿತ್ರೋದ್ಯಮ ಕುರಿತಂತೆ ಹೆಚ್ಚು ಸುದ್ದಿ, ವಿಮರ್ಶೆಗಳನ್ನು ನೀಡಿದ್ದಲ್ಲದೆ ವಿಶೇಷ ಲೇಖನಗಳನ್ನು ಬರೆದರು. ಕೆಲವೊಮ್ಮೆ ಕನ್ನಡ ಚಲನಚಿತ್ರರಂಗದ ಬಗ್ಗೆ ವಿಶೇಷ ಪುರವಣಿ ಪ್ರಕಟವಾಗಲು ನೆರವಾದರು. ಎಂ.ವಿ.ರಾಮಕೃಷ್ಣಯ್ಯನವರೂ ಕನ್ನಡ ಚಲನಚಿತ್ರೋದ್ಯಮದ ಇತಿಹಾಸ ಸಂಗ್ರಹಣೆಯಲ್ಲಿ ಆಸಕ್ತಿ ಹೊಂದಿದವರು. ಉತ್ತಮ ಸಂಗ್ರಹಣಾ ಕಾರ್ಯವೂ ಅವರಿಂದ ನಡೆದಿದೆ.

ಹೀಗೆ ಇಂಗ್ಲಿಷ್ ಪತ್ರಿಕೆಗಳೂ ಕನ್ನಡ ಚಲನಚಿತ್ರರಂಗದ ಬಗ್ಗೆ ಆಸಕ್ತಿ ತಳೆದವು. ಪತ್ರಿಕೆಯ ಪುಟಗಳಲ್ಲಿ ಹೆಚ್ಚಿನ ಸ್ಥಳಾವಕಾಶ ಒದಗಿಸಲಾರಂಭಿಸಿದವು. ಎಲ್ಲ ಇಂಗ್ಲಿಷ್ ಪತ್ರಿಕೆಗಳೂ ಕನ್ನಡ ಚಲನಚಿತ್ರೋದ್ಯಮದ ಬಗ್ಗೆ ವಾರದ ಅಂಕಣ ನೀಡಲು ಪ್ರಾರಂಭಿಸಿದವು. 'ಇಂಡಿಯನ್ ಎಕ್ಸ್‌ಪ್ರೆಸ್', 'ಡೆಕ್ಕನ್ ಹೆರಾಲ್ಡ್'ಗಳಲ್ಲಿ ವಿ.ಎನ್.ಸುಬ್ಬರಾವ್ ಅವರ ವಾರದ ಅಂಕಣಗಳು, 'ಡೆಕ್ಕನ್ ಹೆರಾಲ್ಡ್'ನಲ್ಲಿ ಎಂ.ಸಿ.ವಿ.ಮೂರ್ತಿ ಅವರ ತೀಕ್ಷ್ಣ ಲೇಖನಗಳು, ಎಸ್.ಜಿ.ಮೈಸೂರು ಮಠ ಅವರ ವಿಮರ್ಶೆಗಳು ಜನಪ್ರಿಯವೆನಿಸಿದ್ದವು. ಪತ್ರಕರ್ತ ಎಸ್.ಜಿ.ಮೈಸೂರುಮಠ ಅವರು ಉತ್ತಮ ನಟರೂ ಆಗಿದ್ದು ಕೆಲವು ಚಿತ್ರಗಳಲ್ಲಿ ಅಭಿನಯಿಸಿದರು.

ಇವರೊಂದಿಗೆ ಜಿಲ್ಲಾಮಟ್ಟದಲ್ಲಿ ಸಿನಿಮಾ ವರದಿಗಾರರಾಗಿ ದುಡಿದ ಸಿನಿಮಾ ಪತ್ರಕರ್ತರ ಹೆಸರುಗಳನ್ನು ಇಲ್ಲಿ ದಾಖಲಿಸಬೇಕು. ಅದರಲ್ಲಿಯೂ ಹುಬ್ಬಳ್ಳಿಯ ಶಿವಾನಂದಜೋಶಿ (ಸಂಯುಕ್ತಕರ್ನಾಟಕ), ಜಿ.ಜಿ.ಹೆಗಡೆ, ದಾಂಡೇಲಿ-ಅಂಕೋಲಾಗಳಿಂದ ದತ್ತಾತ್ರೇಯ ಆರ್.ಪ್ರಭು (ಚಿತ್ರಲತಾ, ಹುಬ್ಬಳ್ಳಿ) ಮತ್ತು ಮೈಸೂರಿನ ದಿಲೀಪ್ ಕುಮಾರ್ (ಕನ್ನಡ ಫಿಲಂ ಡೈರೆಕ್ಟರಿ ಹೊರತರುವ ಸಾಹಸಕ್ಕೆ ಕೈ ಹಾಕಿದ ಮೊದಲಿಗರು).

ಮೈಸೂರಿನ ಹಿರಿಯ ಪತ್ರಕರ್ತರಲ್ಲಿ ಎಸ್.ಪದ್ಮನಾಭ ಒಬ್ಬರು. ನಾಲ್ಕು ದಶಕಗಳಿಂದ ಚಲನಚಿತ್ರ ಪತ್ರಕರ್ತರಾಗಿ ರಂಗದಲ್ಲಿದ್ದಾರೆ. ಕನ್ನಡದ ದೊಡ್ಡ ಪತ್ರಿಕೆಗಳಿಗೆ ಇವರು ಸಿನಿಮಾ ಲೇಖನಗಳನ್ನು ಬರೆದರು. ಚಿತ್ರರಂಗದಲ್ಲಿಯೂ ಪತ್ರಿಕಾ ವೃತ್ತಿಯಲ್ಲಿಯೂ ಗೌರವಾನ್ವಿತ ಸ್ಥಾನ ಗಳಿಸಿಕೊಂಡವರು.

ಮೈಸೂರಿನ ಇನ್ನೊಬ್ಬ ಹಿರಿಯ ಪತ್ರಕರ್ತ ಎಸ್.ಪಟ್ಟಾಭಿರಾಮನ್ ಚಿತ್ರರಂಗದೊಂದಿಗೆ ನಿಕಟ ಸಂಬಂಧ ಇಟ್ಟುಕೊಂಡವರು. ಮೈಸೂರಿನ ಸ್ಟುಡಿಯೋಗಳು, ಕಿರಿಯ ಕಲಾವಿದರು ಮತ್ತು ಟಿಪ್ಪು ಸುಲ್ತಾನ್ ಅಗ್ನಿ ಆಕಸ್ಮಿಕ ದುರಂತ ಮತ್ತಿತರ ಚಿತ್ರರಂಗದ ಹಲವಾರು ಸಮಸ್ಯೆಗಳ ಪರಿಹಾರಕ್ಕಾಗಿ ಶ್ರಮಿಸಿದರು.

ಮೈಸೂರಿನ ದೈನಿಕಗಳಾದ 'ಆಂದೋಲನ', 'ಮೈಸೂರು ಮಿತ್ರ', 'ಕನ್ನಡಿಗರ ಪ್ರಜಾನುಡಿ' ಪತ್ರಿಕಗಳು ಸಿನಿಮಾ ಪುರವಣಿ ಪ್ರಕಟಿಸುತ್ತಿವೆ. ಮಣಿಪಾಲದ

ಜನವಾಹಿನಿ
ಚಿತ್ರ ಸಂಚಯ

ವಿಜಯ ಕರ್ನಾಟಕ
ಸಿನಿ ವಿಜಯ

ಚಿತ್ರಲತಾ

'ಉದಯವಾಣಿ' ದಿನಪತ್ರಿಕೆಯಲ್ಲಿದ್ದ ಜಿ.ಬಿ. (ಗಣಪತಿ ಭಟ್) ಆ ಪ್ರಾಂತದ ಹಳೆಯ, ಹಿರಿಯ ಸಿನಿಮಾ ಸುದ್ದಿಗಾರರು ಮತ್ತು ಛಾಯಾಗ್ರಾಹಕರು. ಉಡುಪಿ-ಮಂಗಳೂರು ಆಸುಪಾಸಿನಲ್ಲಿ ಚಿತ್ರೀಕರಣ ತಂಡಗಳನ್ನು ಮಾತನಾಡಿಸಿ ಛಾಯಾಚಿತ್ರ-ಲೇಖನಗಳನ್ನು ಬರೆಯುತ್ತಿದ್ದರು. ಕಳೆದ ಮೂರು-ನಾಲ್ಕು ದಶಕಗಳಿಂದ ಚಿತ್ರರಂಗ ಹಾಗೂ ಪತ್ರಿಕಾ ರಂಗಕ್ಕೆ ಇವರ ಸೇವೆ ಸಂದಿದೆ. 'ಉದಯವಾಣಿ'-'ರೂಪತಾರಾ' ಪತ್ರಿಕೆಗಳ ಮೈಸೂರು ಪ್ರತಿನಿಧಿ ಕೆ.ಜಿ.ಕುಮಾರ್ ಹೊಸ ತಲೆಮಾರಿನ ಉತ್ಸಾಹಿ ಚಲನಚಿತ್ರ ಪತ್ರಕರ್ತರಲ್ಲಿ ಒಬ್ಬರು. ಪತ್ರಿಕಾ ಮಾರಾಟದ ಏಜೆನ್ಸಿ, ಸ್ವಂತ ಮುದ್ರಣಾಲಯ ಹಾಗೂ ಪತ್ರಿಕೆಗಳನ್ನು ಹೊಂದಿದ್ದಾರೆ. ಕನ್ನಡ ಚಿತ್ರರಂಗದವರೊಡನೆ ಉತ್ತಮ ಸ್ನೇಹ ಸಂಬಂಧ ಇರಿಸಿಕೊಂಡವರು. ಮೈಸೂರಿನ ಚಲನಚಿತ್ರ ಪತ್ರಕರ್ತರ ತಂಡದಲ್ಲಿ ಪ್ರಮುಖರು.

ಪಿ.ಎಂ.ರಾಜನ್ ಕಳೆದ ನಾಲ್ಕು ದಶಕಗಳಿಂದ ಕನ್ನಡ ಚಿತ್ರರಂಗದೊಡನೆ ನಿಕಟ ಸಂಪರ್ಕವನ್ನು ಹೊಂದಿದವರು. ಪತ್ರಿಕೆ ಹಾಗೂ ಸಿನಿಮಾ ಎರಡು ಕ್ಷೇತ್ರಗಳವರ ನಡುವೆ ಸ್ನೇಹ-ಸಂಬಂಧ ಬೆಳೆಯಲು ಕಾರಣರಾದವರು. ಸುಬ್ರಹ್ಮಣ್ಯ ಹಲವು ಪ್ರಮುಖ ಪತ್ರಿಕಗಳ ಮೈಸೂರಿನ ಪ್ರತಿನಿಧಿಯಾಗಿ ದುಡಿದ ಹಿರಿಯ ಚಲನಚಿತ್ರ ಪತ್ರಕರ್ತರು. 'ಲಾವಣ್ಯ' ಪತ್ರಿಕೆಯ ಮೈಸೂರು ವರದಿಗಾರರಾಗಿದ್ದರು. ಎಲ್ಲಕ್ಕೂ ಮಿಗಿಲಾಗಿ ಕನ್ನಡ ಚಿತ್ರೋದ್ಯಮ ಸಂಪೂರ್ಣವಾಗಿ ಕನ್ನಡ ನೆಲದಲ್ಲಿ ನೆಲೆಯೂರುವ ಮೊದಲು, ಕರ್ನಾಟಕ ಹಾಗೂ ತಮಿಳುನಾಡು ಎರಡೂ ಕಡೆಗಳಲ್ಲಿ ಕನ್ನಡ ಚಿತ್ರಗಳು ಸೃಷ್ಟಿಯಾಗುತ್ತಿದ್ದಾಗ ಮದರಾಸಿನಲ್ಲಿ ತಯಾರಾಗುತ್ತಿದ್ದ ಕನ್ನಡ ಚಿತ್ರಗಳ ಸುದ್ದಿ ಸಮಾಚಾರಗಳನ್ನು, ಛಾಯಾಚಿತ್ರಗಳನ್ನು ಬೆಂಗಳೂರಿನ ಪತ್ರಿಕಗಳಿಗೆ ಕಳುಹಿಸಿಕೊಡುತ್ತಿದ್ದ ಮದರಾಸಿನ 'ಫಿಲಂ ನ್ಯೂಸ್'ನ ಕಲ್ಲೆಮಾಮಣೆ ಆನಂದನ್ ಅವರ ಸೇವೆಯೂ ಈ ನಿಟ್ಟಿನಲ್ಲಿ ಉಲ್ಲೇಖನೀಯ.




ಚಲನಚಿತ್ರೋದ್ಯಮವನ್ನು ಬ್ರಿಟಿಷರ ಕಾಲದಲ್ಲಿಯೇ ಕಡೆಗಣಿಸಲಾಗಿತ್ತು. ಅವರ ಕಾಲದಲ್ಲಿ ಆರಂಭವಾದ ಪರ್ಮಿಟ್ ಸಿಸ್ಟಮ್ ಹೊಸಬರ ಪ್ರವೇಶಕ್ಕೆ ಅವಕಾಶವಿಲ್ಲದಂತೆ ಮಾಡಿತು. ಪರಿಣಾಮವಾಗಿ ಉದ್ಯಮ ಬೆಳೆಯಲಿಲ್ಲ. ಸ್ವಾತಂತ್ರ್ಯಾನಂತರ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಅದೇ ನಿಯಮಗಳನ್ನು ಅನುಸರಿಸಿತು. ಹೊಸ ನಿರ್ಮಾಪಕರಿಲ್ಲದೆ ಸ್ಟುಡಿಯೋಗಳು ಮುಚ್ಚಿದವು. ಮೂರು ದಶಕಗಳ ಚಿತ್ರೋದ್ಯಮ ಕುಂಟುತ್ತಾ ಸಾಗಿತ್ತು. ಕನ್ನಡ ಚಿತ್ರರಂಗವನ್ನೂ ತತ್ತರಿಸುವಂತೆ ಮಾಡಿತು. ಜೊತೆಗ ಅನ್ಯಭಾಷೆಯ ಚಿತ್ರಗಳ ಆಕ್ರಮಣವನ್ನು ಎದುರಿಸಿ ನಿಲ್ಲಬೇಕಾದ ಪರಿಸ್ಥಿತಿ. ಕನ್ನಡ ಚಿತ್ರೋದ್ಯಮ ಬೆಳೆಯಬೇಕು. ಇದು ಅಂದಿನ ಚಲನಚಿತ್ರ ಪತ್ರಕರ್ತರೆಲ್ಲರ ಆಸೆ, ಆಶಯ. ಹೀಗಾಗಿ ಬರವಣಿಗೆಯಲ್ಲಿ ಕನ್ನಡ ಚಿತ್ರಗಳ ಬಗ್ಗೆ ಮೃದುಧೋರಣೆ. ಕಟು ವಿಮರ್ಶೆಗಳಿರಲಿಲ್ಲ. ಮಾರ್ಗದರ್ಶಕ ರೀತಿಯ ಬರವಣಿಗೆ ಅವರದು. ಹಿರಿಯನ ಸ್ಥಾನದಲ್ಲಿ ನಿಂತು ಉದ್ಯಮವನ್ನು ಕೈಹಿಡಿದು ನಡೆಸುವ ಕೆಲಸ ಪತ್ರಕರ್ತರದಾಗಿತ್ತು. ಆ ಜವಾಬ್ದಾರಿಯನ್ನು ಹೊತ್ತ ಅಂದಿನ ಪತ್ರಕರ್ತರು ತಮ್ಮ ಹೊಣೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು. ಕನ್ನಡ ಚಿತ್ರೋದ್ಯಮ ಬೆಳೆಯಿತು.

ಕನ್ನಡ ಚಲನಚಿತ್ರೋದ್ಯಮ ಇತರ ಭಾಷಾ ಚಿತ್ರಗಳ ಸ್ಪರ್ಧೆಯಿಂದ ನಶಿಸಿ ಹೋಗುವ ಭೀತಿ ಅರುವತ್ತರ-ಎಪ್ಪತ್ತರ ದಶಕಗಳಲ್ಲಿ ಮೂಡಿದಾಗ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಕನ್ನಡ ಚಿತ್ರರಂಗವನ್ನು ಉಳಿಸಿ ಬೆಳೆಸಲು ಕಂಕಣ ಕಟ್ಟಿದಂತೆ ತನ್ನ ಲೇಖನಿಯ ಪ್ರಭಾವವನ್ನು ಬಳಸಿತು. ಆ ಸಂದರ್ಭದಲ್ಲಿ ಮೇಲೆ ಉಲ್ಲೇಖಿಸಿದವರಲ್ಲದೆ ಇನ್ನೂ ಅನೇಕ ಚಲನಚಿತ್ರ ಪತ್ರಕರ್ತರು ಶ್ರಮಿಸಿದರು. 'ಸ್ಟಾರ್' ಪತ್ರಿಕೆಯ ಸರಸ್ವತಿ ಜಾಗೀರ್ದಾರ್, 'ಲಂಕೇಶ್ ಪತ್ರಿಕೆ'ಯ ರೇಖಾರಾಣಿ ಹಾಗೂ ತೇಜಸ್ವಿನಿ (ತೇಜಸ್ವಿನಿ ರಮೇಶ್), ಶಮಂತ, ತುಂಗ ರೇಣುಕಾ (ಅರಗಿಣಿ, ಈವಾರ), ಉತ್ತರ ಕುಮಾರಿ (ಇಂಡಿಯನ್ ಎಕ್ಸ್‌ಪ್ರೆಸ್), ಇವರು ಆ ಸಂದರ್ಭದಲ್ಲಿ ದುಡಿದ ಮಹಿಳಾ ಚಲನಚಿತ್ರ ಪತ್ರಕರ್ತರಲ್ಲಿ ಪ್ರಮುಖರು. ಸೆಟ್ಲೂರು ರಾಮು (ದಿ ಹಿಂದೂ), ಹೆಚ್.ಎಸ್.ರಂಗನಾಥ್ (ಸಂಯುಕ್ತ ಭಾರತ), ಹರಿಶ್ಚಂದ್ರಭಟ್ (ಲಂಕೇಶ್ ಪತ್ರಿಕೆ), ಶ್ರೀನಿವಾಸನ್ (ಮಂಗಳಾ), ಕೆ.ಎನ್.ವೆಂಕಟಸುಬ್ಬರಾವ್ (ಕನ್ನಡಪ್ರಭ, ದಿ ಹಿಂದೂ), ಮೈಸೂರು ಹರೀಶ್, ಹರೀಶ ಪುತ್ತೂರಾಯ, ಕೆ.ಎಸ್.ನಾಗಭೂಷಣ, ಬಾಲಕೃಷ್ಣ ಕಾಕತ್ಕರ್, ಅಲ್ಲದೆ 'ತೀರ್' ಸಂಪಾದಕ ಸಂಪತ್‌ಕುಮಾರ್, ಲಿಂಗೇನಹಳ್ಳಿ ಸುರೇಶ್ಚಂದ್ರ (ಸಂಜೆವಾಣಿ), ಕೆ.ಬಿ.ಪಂಕಜಾ (ಸಂಜೆವಾಣಿ), ದೊಡ್ಡಹುಲ್ಲೂರು ರುಕ್ಕೋಜಿರಾವ್ (ಕಾಜಾಣ), ಶ್ರೀಧರ ದೀಕ್ಷಿತ್ (ಪ್ರಜಾವಾಣಿ), ಗೋಪಾಲಕೃಷ್ಣಭಟ್ (ಉದಯವಾಣಿ), ವಿರೂಪಾಕ್ಷ (ಕಾಜಾಣ), ಜೆ.ಎಂ.ಪ್ರಹ್ಲಾದ್, ಚಿರಂಜೀವಿ (ತುಷಾರ), ಸತ್ಯನಾರಾಯಣ (ಈ ಸಂಜೆ), ಆರ್.ಜಿ.ಹಳ್ಳಿ ನಾಗರಾಜ್, ಎ.ಎಸ್.ಮೂರ್ತಿ (ಮೈಸೂರು ಮಿತ್ರ), ಸದಾಶಿವ ಶೆಣೈ (ಲಂಕೇಶ್ ಪತ್ರಿಕೆ), ಜಿ.ಎಸ್.ಕುಮಾರ್ (ಟೈಮ್ಸ್ ಆಫ್ ಇಂಡಿಯಾ), ಬಿ.ಎಸ್.ಸುಬ್ರಹ್ಮಣ್ಯ (ಜನವಾಹಿನಿ) ಇವರು ಕನ್ನಡ ಚಿತ್ರೋದ್ಯಮ ಒಂದು ನೆಲೆ ಕಂಡುಕೊಳ್ಳುವಂತೆ ಮಾಡಲು ಶ್ರಮಿಸಿದವರಲ್ಲಿ ಪ್ರಮುಖರು. ಪತ್ರಕರ್ತ ಮೇಗರವಳ್ಳಿ ಮೂರ್ತಿ ಅವರು ಪತ್ರಿಕೆಗಳ ಸಂಗ್ರಹಣಾಕಾರ್ಯದಲ್ಲಿ ನಿಸ್ಸೀಮರು. ಕನ್ನಡದಲ್ಲಿ ಪ್ರಕಟವಾದ ಎಲ್ಲಾ ಪತ್ರಿಕೆಗಳನ್ನು ಸಂಗ್ರಹಿಸಿರುವುದು ಅವರ ಹೆಗ್ಗಳಿಕೆ.

ಕನ್ನಡ ಚಲನಚಿತ್ರ ಪತ್ರಿಕೋದ್ಯಮವೂ ಆಧುನಿಕ ಮುದ್ರಣ ತಂತ್ರಜ್ಞಾನವನ್ನು ಚೆನ್ನಾಗಿ ಬಳಸಿಕೊಳ್ಳುತ್ತಿದ. 'ರೂಪತಾರಾ', 'ವಿಜಯಚಿತ್ರ' ಹಾಗೂ 'ಅರಗಿಣಿ' ಪತ್ರಿಕಗಳು ಸ್ವಂತ ಮುದ್ರಣ ವ್ಯವಸ್ಥೆ ಹೊಂದಿರುವ ಪತ್ರಿಕೆಗಳು. ಹಲವು ಪತ್ರಿಕಗಳು ಸ್ವಂತ ಮುದ್ರಣ ಸೌಲಭ್ಯ ಹೊಂದಿರದಿದ್ದರೂ ಬೇರೆಡೆ ಮುದ್ರಿಸಿ ಪ್ರಕಟಣೆ ಹೊರತರುತ್ತಿವೆ. ಹಾಗಾಗಿ ಇಂದಿನ ದಿನಗಳಲ್ಲಿ ಮಾರುಕಟ್ಟೆಯಲ್ಲಿ ಕಾಣಬರುತ್ತಿರುವ ಚಲನಚಿತ್ರ ಪತ್ರಿಕಗಳಲ್ಲಿ 'ಶಿವರಾಜಕುಮಾರ್ ಪತ್ರಿಕ', 'ರೆಬೆಲ್‌ಸ್ಟಾರ್', 'ಸಾಹಸಸಿಂಹ', 'ಸ್ಟಾರ್', 'ಸಿನಿಮಾ ಪತ್ರಿಕೆ', 'ಚಿತ್ರವಿಹಾರಿ' ಮತ್ತಿತರ ಪತ್ರಿಕೆಗಳನ್ನೂ ನಾವು ಕಾಣಬಹುದಾಗಿದೆ. ಮೈಸೂರಿನವರಾದ ಹರೀಶ್ ಹಲವು ಪತ್ರಿಕಗಳಿಗೆ ದುಡಿದರು. 'ಸಿನಿಮಾ ಮಕರಂದ' ಅವರದೇ ಪ್ರಕಾಶನ, ಸಂಪಾದನ ಇರುವ ಚಲನಚಿತ್ರ ಪತ್ರಿಕೆ.

ಕನ್ನಡದ ಹೊಸ ಅಲೆಯ ಚಿತ್ರ ಚಳವಳಿಯ ಬೆಳವಣಿಗೆಯಲ್ಲಿ ಬಹುಮುಖ್ಯ ಪಾತ್ರ ವಹಿಸಿದ್ದು ಗಂಭೀರ ಚಿತ್ರಗಳನ್ನು ಕುರಿತ ವಿಶ್ಲೇಷಣೆ / ವಿಮರ್ಶೆಯನ್ನು ವಿಸ್ತೃತವಾಗಿ ಮಾಡಿದ ಸಾಹಿತ್ಯ ಪತ್ರಿಕೆಗಳು. ಇವು ಖಾಸಗಿ ಪ್ರಸಾರಕ್ಕಾಗಿ ಹೊರಡುತ್ತಿದ್ದ, ಆಸಕ್ತರನ್ನು ಮಾತ್ರ ತಲುಪುತ್ತಿದ್ದ, ವಾಣಿಜ್ಯೇತರ ಆಸಕ್ತಿಯೊಡನೆ ಹುಟ್ಟಿದ ಪತ್ರಿಕಗಳು. ಇಂತಹವುಗಳಲ್ಲಿ ಕೆ.ವಿ.ಸುಬ್ಬಣ್ಣನವರ ಸಂಪಾದಕತ್ವವಿದ್ದ 'ಸಾಕ್ಷಿ', ಚಂದ್ರಶೇಖರ ಪಾಟೀಲರ ಸಂಪಾದಕತ್ವವಿದ್ದ 'ಸಂಕ್ರಮಣ', ಅನಂತಮೂರ್ತಿಯವರು ಸಂಪಾದಿಸುತ್ತಿದ್ದ 'ರುಜುವಾತು', ಶ್ರೀನಿವಾಸ್ ಅವರು ಸಂಪಾದಿಸುತ್ತಿದ್ದ 'ಶೂದ್ರ', ವಿಶ್ವೇಶ್ವರ ಅವರು ಸಂಪಾದಿಸುತ್ತಿದ್ದ 'ಅನ್ವೇಷಕ' ಪತ್ರಿಕೆಗಳು ಈ ಚಳವಳಿಯ ಆರಂಭದಲ್ಲಿ ಹೊಸ ಅಲೆಯನ್ನು ಪೋಷಿಸಿದವು. ಈ ಅಲೆ ಕುಂಠಿತವಾಗಿರುವ ದಿನಗಳಲ್ಲಿ ಗಂಭೀರ ಸಿನಿಮಾ ಕುರಿತು ಎಚ್ಚರ ಮೂಡಿಸುವ ಯತ್ನವನ್ನು 'ಸಂಚಯ', 'ಸಂಕುಲ', 'ಅಭಿವ್ಯಕ್ತಿ', 'ಅನ್ವೇಷಣೆ'ಯಂತಹ ಪತ್ರಿಕೆಗಳು ಮುಂದುವರೆಸಿದವು.

## ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಕಂಡ ಛಾಯಾಗ್ರಾಹಕರು

ಕಳೆದ ಎಪ್ಪತ್ತೈದು ವರ್ಷಗಳಲ್ಲಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಅನೇಕ ಸಮರ್ಥ, ಪ್ರತಿಭಾಸಂಪನ್ನ ಛಾಯಾಗ್ರಾಹಕರನ್ನು ಕಂಡಿದೆ. ಇವರಲ್ಲಿ ಬಿ.ಎನ್.ಕುಮಾರ್, ಬಿ.ಎನ್.ರಾಜಶೇಖರ್, ಜಿ.ಎಸ್.ನಾರಾಯಣಸ್ವಾಮಿ, ರಾಮಚಂದ್ರಸ್ವಾಮಿ, 'ಸುಧಾ' ಶ್ರೀನಿವಾಸಮೂರ್ತಿ, 'ಪ್ರಗತಿ' ಗೋಪಾಲಕೃಷ್ಣ, ಎಸ್.ಎಂ.ಸಾಗರ್, ಚಿಕ್ಕಬಳ್ಳಾಪುರದ 'ಭವಾನಿ' ಲಕ್ಷ್ಮೀನಾರಾಯಣ, ಟಿ.ಎನ್.ಎಸ್. ಪ್ರಸಾದ್, ಎಸ್. ತಿಪ್ಪೇಸ್ವಾಮಿ ಮುಂಬಯಿಯ ಶಿವರಂಜನ ಗುಲ್ವಾಡಿ, ಬೆಂಗಳೂರಿನಲ್ಲಿ ಚಲನಚಿತ್ರ ಪತ್ರಿಕಾ ಛಾಯಾಗ್ರಹಣ ವೃತ್ತಿಯಲ್ಲಿ ಸಕ್ರಿಯರಾಗಿರುವ ಡಿ.ಸಿ.ನಾಗೇಶ್, ನಾಗೇಶ್‌ಕುಮಾರ್, ವಿಶ್ವನಾಥ ಸುವರ್ಣ, ಕೆ.ಎಂ.ವೀರೇಶ್, ಪ್ರವೀಣ್ ನಾಯಕ್ ಗಮನಾರ್ಹರು. ಇವರಲ್ಲಿ ಪ್ರವೀಣ್ ನಾಯಕ್ ಚಲನಚಿತ್ರ ನಿರ್ದೇಶಕ ನಿರ್ಮಾಪಕರಾದರು.

'ರೂಪತಾರಾ'ದಿಂದ ಪ್ರವೇಶಿಸಿ ಬಹಳ ವರ್ಷಗಳ ಕಾಲ ಈ ಕ್ಷೇತ್ರದಲ್ಲಿ ದುಡಿದು ಮನೆಮಾತಾದವರು ವಿಶ್ವನಾಥ ಸುವರ್ಣ. ಇವರ ಅಣ್ಣ ಸುಂದರನಾಥ ಸುವರ್ಣ ಮೊಟ್ಟಮೊದಲು 'ಮೇನಕಾ' ಪತ್ರಿಕೆಯ ಸ್ಥಿರಚಿತ್ರ ಛಾಯಾಗ್ರಾಹಕರಾಗಿ ವಿಶೇಷ ಗಮನ ಸೆಳೆದರು. ಪ್ರಸ್ತುತ ಚಿತ್ರರಂಗದ ಬೇಡಿಕೆಯ ಛಾಯಾಗ್ರಾಹಕರು. ಜಿ.ಎಸ್.ನಾರಾಯಣಸ್ವಾಮಿ 'ತಾಯಿನಾಡು' ಪತ್ರಿಕೆಯ ಮೂಲಕ ರಂಗ ಪ್ರವೇಶ ಮಾಡಿ 'ಲಾವಣ್ಯ'ದ ಅಧಿಕೃತ ಛಾಯಾಗ್ರಾಹಕರಾಗಿದ್ದರು. ಕರ್ನಾಟಕ ನ್ಯೂಸ್ ಫೋಟೋಸ್‌ನ ರಾಮಚಂದ್ರಸ್ವಾಮಿ ಅವರಂತೂ ಬೆಂಗಳೂರಿನ ಹಲವು ಪತ್ರಿಕೆಗಳನ್ನು ಪ್ರತಿನಿಧಿಸಿದ್ದರು. ಡಿ.ಸಿ.ನಾಗೇಶ್ 'ವಿಜಯಚಿತ್ರ'ಕ್ಕೆ ಸ್ಥಿರಚಿತ್ರಗಳನ್ನು ನೀಡುತ್ತಿದ್ದರು.



(ಚಿತ್ರ ೩) ೫೦ರ ದಶಕದ ಸರಳ ಪತ್ರಿಕಾಗೋಷ್ಠಿ. ಕಳಸ ಸತ್ಯನಾರಾಯಣ (ಸೋಫಾದಲ್ಲಿ ಕುಳಿತವರಲ್ಲಿ ಎರಡನೆಯವರು), ಎಂ.ಬಿ.ಸಿಂಗ್, ಉರ್ದು ಪತ್ರಿಕೆಯ ಇಸ್ಮಾಯಿಲ್ ಷರೀಫ್ ಮತ್ತು ಪ್ರೇಮನಾಥ್

### ವಿಡಿಯೋ ಪತ್ರಿಕೆಗಳು




ನಮ್ಮಲ್ಲಿ ಟಿ.ವಿ. ಮಾಧ್ಯಮ ಒಂದು ಅತ್ಯಂತ ಜನಪ್ರಿಯ ಮಾಧ್ಯಮ. ಆದರೂ ಕನ್ನಡದಲ್ಲಿ ವಿಡಿಯೋ ಪತ್ರಿಕೋದ್ಯಮ ಈತನಕ ಯಶಸ್ಸು ಕಂಡಿಲ್ಲ. ವಿಡಿಯೋ ಪತ್ರಿಕೆಗಳನ್ನು ಹೊರತರುವ ಪ್ರಯತ್ನಗಳು ನಡೆಯಿತಾದರೂ ಯಾವುದೂ ಹೆಚ್ಚು ಕಾಲ ಉಳಿಯಲಿಲ್ಲ. ಲೇಖಕ, ನಾಟಕಕಾರ, ರಂಗಕರ್ಮಿ, ಪತ್ರಕರ್ತ, 'ಆಕಾಶವಾಣಿ ಈರಣ್ಣ' ಎಂದೇ ಚಿರಪರಿಚಿತರಾದ ಎ.ಎಸ್.ಮೂರ್ತಿ ೧೯೮೮ರಲ್ಲಿ 'ಚಿತ್ರಲಹರಿ' ಎಂಬ ವಿಡಿಯೋ ಮಾಸಿಕವನ್ನು ಹೊರತಂದರು. ಮೂರ್ತಿಯವರ ಈ ಪ್ರಯತ್ನ ಪ್ರಶಂಸನೀಯವಾದರೂ ಪ್ರಯತ್ನ ಫಲಪ್ರದವಾಗಲಿಲ್ಲ. ಪತ್ರಿಕಗಳಲ್ಲಿ ನಾವು ಓದುವುದನ್ನು ಕಣ್ಣೆದುರಲ್ಲೇ ತೋರಿಸುವ ಇಂತಹ ವಿಡಿಯೋ ಮ್ಯಾಗಜೀನ್‌ಗಳು ನೋಡಲು ಚೆನ್ನಾಗಿರುತ್ತವೆ. ಅದರೆ ಸಾಮಾನ್ಯ ಓದುಗರ ಕೈಗೆ ಎಟುಕುವುದಿಲ್ಲ. ಹೀಗಾಗಿ 'ಚಿತ್ರಲಹರಿ' ಮುಂದೆ ಸಾಗಲಿಲ್ಲ. ಎ.ಎಸ್.ಮೂರ್ತಿಯವರು ಕನ್ನಡ ಚಲನಚಿತ್ರ ಪತ್ರಿಕೋದ್ಯಮದ ಪ್ರತಿಭಾವಂತರಲ್ಲಿ ಒಬ್ಬರಾಗಿದ್ದು ಕ್ರಿಯಾಶೀಲರಾಗಿದ್ದಾರೆ. ಬೆಂಗಳೂರಿನಾಚೆಯಿಂದ ಪ್ರಕಟವಾಗುವ ಪತ್ರಿಕೆಗಳ ಬೆಂಗಳೂರು ಪ್ರತಿನಿಧಿಯಾಗಿದ್ದಾರೆ. ರಂಗಭೂಮಿ, ಕಿರುತೆರೆಗಳಲ್ಲದೆ, ಚಿತ್ರನಟರೂ ಆಗಿದ್ದಾರೆ. ಆದೇ ರೀತಿ ಪತ್ರಕರ್ತ ವಿ.ಎನ್.ಸುಬ್ಬರಾವ್ 'ಬೆಳ್ಳಿಚುಕ್ಕಿ' ಎಂಬ ವಿಡಿಯೋ ಪತ್ರಿಕೆಯನ್ನು ಪ್ರಾರಂಭಿಸಿ ಕೈಸುಟ್ಟುಕೊಂಡರು. ಸೊಗಸಾದ ಚೌಕಟ್ಟನ್ನು ಹೊಂದಿದ್ದರೂ ಸ್ಯಾಟಲೈಟ್ ಮೂಲಕ ಟಿ.ವಿ. ಕಾರ್ಯಕ್ರಮ ಪ್ರಸಾರ ಪ್ರಾರಂಭವಾದಾಗ, ಮನೆಗಳಲ್ಲಿನ ವಿ.ಸಿ.ಆರ್.ಗಳಿಗೆ ಕೆಲಸವಿಲ್ಲದಂತಾಗಿ ವಿಡಿಯೋ ಪತ್ರಿಕೆಗಳು ಕೂಡ ಗತಿಸುವುದು ಅನಿವಾರ್ಯವಾಯಿತು. ಅನೇಕ ಖಾಸಗಿ ಟೆಲಿವಿಷನ್ ಜಾಲಗಳು ಅಸ್ತಿತ್ವಕ್ಕೆ ಬಂದ ಮೇಲಂತೂ ಒಂದೊಂದು ಜಾಲದಿಂದಲೂ ವೀಕ್ಷಕರಿಗೆ ಚಲನಚಿತ್ರ ಸುದ್ದಿಗಳು, ಸಂದರ್ಶನಗಳು, ವಿಮರ್ಶೆಗಳು ಹೇರಳವಾಗಿ ಸಿಗಲಾರಂಭಿಸಿದವು. ವಿಡಿಯೋ ಮ್ಯಾಗಜೀನ್‌ಗಳು ಮಾಡುತ್ತಿದ್ದ ಕೆಲಸವನ್ನೇ ಈ ಜಾಲಗಳು ಮಾಡಲಾರಂಭಿಸಿದವು. ಟೆಲಿವಿಷನ್ ಸಿನಿಮಾ ಪತ್ರಕರ್ತರ ಒಂದು ಹೊಸ ಗುಂಪೇ ಬೆಳೆಯಲಾರಂಭವಾಯಿತು.

ಇಂಟರ್‌ನೆಟ್ ಅಂತರ್ ಜಾಲದಲ್ಲಿ ಕನ್ನಡ ಚಲನಚಿತ್ರಗಳ ಸುದ್ದಿ ಪ್ರಸಾರ ಮಾಡುವ ಮೊಟ್ಟ ಮೊದಲ ಪ್ರಯತ್ನವನ್ನು ನಡೆಸಿದವರು ಛಾಯಾಗ್ರಾಹಕ ಕೆ.ಎಂ.ವೀರೇಶ್. ಅವರ ಕನ್ನಡ-ಇಂಗ್ಲಿಷ್ ಭಾಷೆಯ ವೆಬ್‌ಸೈಟ್ ಹೆಸರು ಚಿತ್ರಲೋಕ ಡಾಟ್ ಕಾಮ್ (CHITRALOKA dot COM). ವೀರೇಶ್ ಫಿಲಂ ಡೈರೆಕ್ಟರಿ ಕೂಡ ರೂಪಿಸಿದರು.

### ಕನ್ನಡ ಚಲನಚಿತ್ರೋದ್ಯಮ ಮತ್ತು ಸಿನಿಮಾ ಪತ್ರಕರ್ತರು

ಈ ಮೊದಲೇ ಪ್ರಸ್ತಾಪಿಸಿದಂತೆ ಕನ್ನಡ ಚಲನಚಿತ್ರೋದ್ಯಮದ ಬೆಳವಣಿಗೆಯಲ್ಲಿ ಚಲನಚಿತ್ರ ಪತ್ರಕರ್ತರು ವಹಿಸಿದ ಪಾತ್ರ, ನೀಡಿದ ಕೊಡುಗೆ ಮಹತ್ವದ್ದು. ಕನ್ನಡ ಚಿತ್ರಗಳನ್ನು ಜನತೆಯ ಹತ್ತಿರಕ್ಕೆ ತರುವಲ್ಲಿ, ಕನ್ನಡ ಚಿತ್ರಗಳ ಬಗ್ಗೆ ಪ್ರೇಕ್ಷಕರಲ್ಲಿ ಒಲವು-ಅಭಿರುಚಿಗಳನ್ನು ಬೆಳೆಸುವಲ್ಲಿ ವಹಿಸಿದ ಶ್ರಮ ಅಪಾರ. ಸಿನಿಮಾ ಪತ್ರಿಕೆಗಳು, ಚಲನಚಿತ್ರ ಪತ್ರಿಕೋದ್ಯಮ ಕಾಲಕಾಲಕ್ಕೆ ಚಿತ್ರರಂಗದ ಅಶೋತ್ತರಗಳನ್ನು ಬಿಂಬಿಸಿವೆ, ಎತ್ತಿ ಹಿಡಿದಿವೆ. ಜನರ ಪ್ರೋತ್ಸಾಹ, ಸಹಕಾರ, ಬೆಂಬಲಗಳಿಲ್ಲದೆ ಕನ್ನಡ ಚಿತ್ರರಂಗ ಕಂಗಾಲಾದ ದಿನಗಳಲ್ಲಿ ಉದ್ಯಮವನ್ನು ಉಳಿಸಿಕೊಟ್ಟವರು ಸಿನಿಮಾ ಪತ್ರಕರ್ತರೇ ಎಂಬುದನ್ನು ಮರೆಯುವಂತಿಲ್ಲ.

ಪರಭಾಷಾ ಚಿತ್ರಗಳ ದಾಳಿ, ಡಬ್ಬಿಂಗ್ ಹಾವಳಿ ಇವನ್ನೆಲ್ಲಾ ಸಮರ್ಥವಾಗಿ ಎದುರಿಸಲು ಕನ್ನಡ ಚಿತ್ರರಂಗವನ್ನು ಅಣಿಗೊಳಿಸಲು ಸಿನಿಮಾ ಪತ್ರಕರ್ತರು ಬಹಳಷ್ಟು ಶ್ರಮಿಸಿದರು. ಕನ್ನಡ ಚಿತ್ರಗಳಿಗೆ ಸಹಾಯಧನ (ಸಬ್ಸಿಡಿ), ತೆರಿಗೆ ವಿನಾಯಿತಿ, ಪ್ರಶಸ್ತಿಗಳು, ಹೊರಾಂಗಣ ಚಿತ್ರೀಕರಣ ಸೌಲಭ್ಯ ಮತ್ತಿತರ ಪ್ರಶ್ನೆಗಳ ಬಗ್ಗೆ ಸರ್ಕಾರದ ಗಮನ ಸೆಳೆದು, ಉದ್ಯಮಕ್ಕೆ ಸರ್ಕಾರದಿಂದ ಸವಲತ್ತುಗಳನ್ನು ಗಳಿಸಿಕೊಡುವಲ್ಲಿ ಪತ್ರಕರ್ತರು ಅತ್ಯಂತ ಮಹತ್ವದ ಪಾತ್ರ ವಹಿಸಿದರು.

೧೯೫೭ರ ಸುಮಾರಿನಲ್ಲಿ ಮದರಾಸಿನಲ್ಲಿ ನಲೆ ನಿಂತಿದ ಕನ್ನಡ ಚಲನಚಿತ್ರ ಕಲಾವಿದರನ್ನು ಒಂದುಗೂಡಿಸಿ ಪ್ರಥಮ ಬಾರಿಗೆ ಕನ್ನಡ ಚಲನಚಿತ್ರ ಕಲಾವಿದರ ಸಂಘವೊಂದು ರೂಪುಗೊಳ್ಳಲು ಕಾರಣರಾದವರು ಚಲನಚಿತ್ರ ಪತ್ರಕರ್ತರು. 'ಚಲಚ್ಚಿತ್ರ' ಪತ್ರಿಕೆಯ ಸಂಪಾದಕ ಕೆ.ವಿ.ಗಂಗರತ್ನ ಹಾಗೂ ಅದೇ ಪತ್ರಿಕೆಯ ಶ್ರೀಕೃಪಾ ಜನಪ್ರಿಯ ನಟ ಕಲ್ಯಾಣ್‌ಕುಮಾರ್ ಸಹಕಾರದಿಂದ ಮದರಾಸಿನಲ್ಲಿ ಕನ್ನಡ ಚಲನಚಿತ್ರ ಕಲಾವಿದರ ಸಂಘ ಮೊಟ್ಟಮೊದಲ ಬಾರಿಗೆ ಅಸ್ತಿತ್ವಕ್ಕೆ ಬರಲು ಶ್ರಮಿಸಿದರು. ಆ ಕಾಲದ ಕನ್ನಡ ಚಿತ್ರಜಗತ್ತಿನ ದಿಗ್ಗಜಗಳೆನಿಸಿದ ಎಂ.ವಿ.ಸುಬ್ಬಯ್ಯನಾಯ್ಡು, ಕೆಂಪರಾಜ ಅರಸ್, ಆರ್.ನಾಗೇಂದ್ರರಾವ್, ಹೊನ್ನಪ್ಪ ಭಾಗವತರ್ ಮತ್ತಿತರ ಹಿರಿಯರು ಈ ಸಂಘದ ಪದಾಧಿಕಾರಿಗಳಾಗಿದ್ದರು.

ಕನ್ನಡ ಚಿತ್ರರಂಗ ಮದರಾಸಿನಿಂದ ಕನ್ನಡ ನಾಡಿಗೆ ಬಂದು ನೆಲೆಯೂರಬೇಕೆಂದು ನಿರ್ಭಿಡೆಯಿಂದ ಹೇಳಿ, ಕೇಳಿ, ಒತ್ತಾಯಿಸಿ, ಬೆಂಬಲಿಸಿ, ಸತತ ಹೋರಾಟ ನಡೆಸಿ ಯಶಸ್ಸು ಕಂಡ ಶ್ರೇಯಸ್ಸು ಕನ್ನಡ ಚಲನಚಿತ್ರ ಪತ್ರಕರ್ತರಿಗೆ ಸೇರಬೇಕಾದುದು.

ಐವತ್ತರ ದಶಕದಲ್ಲಿ ಕನ್ನಡ ಚಿತ್ರಗಳ ತಯಾರಿಕೆ ತೀರಾ ಇಳಿಮುಖವಾಗಿ ಕನ್ನಡ ಕಲಾವಿದರಿಗೆ ಕೆಲಸವಿಲ್ಲದೆ ಬದುಕು ದುರ್ಭರವೆನಿಸುವಂತಹ ಶೋಚನೀಯ ಪರಿಸ್ಥಿತಿ ಏರ್ಪಟ್ಟಾಗ ರಾಜಕುಮಾರ್, ಜಿ.ವಿ.ಅಯ್ಯರ್, ಬಾಲಕೃಷ್ಣ ಮತ್ತು ನರಸಿಂಹರಾಜು ಈ ನಾಲ್ಕು ಮಂದಿಯೂ ಇತರೆ ಕೆಲವು ಮಂದಿ ಕಲಾವಿದರನ್ನು ಸೇರಿಸಿಕೊಂಡು ಕನ್ನಡ ಚಲನಚಿತ್ರ ಕಲಾವಿದರ ಸಂಘವನ್ನು ಕಟ್ಟಿಕೊಂಡು ಕನ್ನಡ ನಾಡಿನಲ್ಲಿ ನಾಟಕಗಳನ್ನು ಪ್ರದರ್ಶಿಸುವ ಗುರಿ ಹೊತ್ತು ಬೆಂಗಳೂರಿಗೆ ಬಂದು ನಾಟಕ ಪ್ರದರ್ಶನಗಳನ್ನು ಏರ್ಪಡಿಸಿದ್ದರು. ಆ ಸಂದರ್ಭದಲ್ಲಿ ಅವರಿಗೆ ಪ್ರೋತ್ಸಾಹ-ಬೆಂಬಲ ನೀಡಲು, ಅವರಲ್ಲಿನ ಸ್ಥೈರ್ಯವನ್ನು ಉಳಿಸಲು 'ಸಿನಿಮಾ' ಪತ್ರಿಕೆಯ ಪಿ.ಜಿ.ಶ್ರೀನಿವಾಸಮೂರ್ತಿ ಪ್ರಥಮ ಬಾರಿಗೆ ಕರ್ನಾಟಕ ಚಲನಚಿತ್ರ ಪತ್ರಕರ್ತರ ಸಂಘವನ್ನು ರೂಪಿಸಿದರು. ಪತ್ರಕರ್ತ ಬಿ.ಎಂ.ಕೃಷ್ಣಸ್ವಾಮಿ ಅಧ್ಯಕ್ಷರಾಗಿದ್ದ ಆ ಸಂಘದ ಮೂಲಕ ಗಾಂಧಿನಗರದಲ್ಲಿ ಆಗ ಇದ್ದ ಕೆಫೆ ದಿ ಪ್ಯಾರಡೈಸ್‌ನಲ್ಲಿ ಆ ಚಿತ್ರತಂಡದವರ ಗೌರವಾರ್ಥ ಸತ್ಕಾರ ಕೂಟವನ್ನು ಏರ್ಪಡಿಸಿತ್ತು. ಕೆಲಕಾಲ ಚಟುವಟಿಕೆ ನಡೆಸಿದ ನಂತರ ಸಂಘ ಸ್ಥಗಿತಗೊಂಡಿತು. ಕನ್ನಡ ಚಲನಚಿತ್ರ ಕಲಾವಿದರ ಸಂಘದ ಲಾಂಛನದಲ್ಲಿಯೇ 'ರಣಧೀರ ಕಂಠೀರವ' ಚಿತ್ರ ನಂತರ ತಯಾರಾಗಿ ತೆರೆಕಂಡಿತು.

ಮುಂದೆ ಮತ್ತೊಮ್ಮೆ ಕರ್ನಾಟಕ ಚಲನಚಿತ್ರ ಪತ್ರಕರ್ತರ ಸಂಘವನ್ನು ಸ್ಥಾಪಿಸಲು ಇನ್ನು ಕೆಲವು ಮಂದಿ ಪತ್ರಕರ್ತರು ಪ್ರಯತ್ನಿಸಿದರು. ೧೯೭೪ರಲ್ಲಿ ಕರ್ನಾಟಕದ ಕನ್ನಡ ಮತ್ತು ಇಂಗ್ಲಿಷ್ ಪತ್ರಿಕೆಗಳ ಚಲನಚಿತ್ರ ಪತ್ರಕರ್ತರೆಲ್ಲ ಸೇರಿ ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ಹೆಸರಿನಲ್ಲಿ ಸಂಘಟನೆಯನ್ನು ಆರಂಭಿಸಿದರು. ವಿ.ಎನ್.ಸುಬ್ಬರಾವ್ ಅದರ ಮೊದಲ ಅಧ್ಯಕ್ಷರು. ಕೆ.ಎಸ್.ನಾರಾಯಣಸ್ವಾಮಿ ಉಪಾಧ್ಯಕ್ಷರು. ಎಂ.ವಿ.ರಾಮಕೃಷ್ಣಯ್ಯ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಕ್ರಮವಾಗಿ ಕೆ.ಎಸ್.ನಾರಾಯಣಸ್ವಾಮಿ, ಆರ್.ನರಸಿಂಹ, ಡಾ।ವಿಜಯಾ, ಸಿ.ಸೀತಾರಾಮ್, ಚಿರಂಜೀವಿ ಇವರೆಲ್ಲ ಪರಿಷತ್ತಿನ ಅಧ್ಯಕ್ಷರಾಗಿ ದುಡಿದರು.

ಕನ್ನಡ ಚಲನಚಿತ್ರರಂಗಕ್ಕೆ ಸಂಬಂಧಿಸಿದಂತೆ ಪರಿಷತ್ತು ಕಾಲಕಾಲಕ್ಕೆ ಗೋಷ್ಠಿ ವಿಚಾರ ಸಂಕಿರಣಗಳನ್ನು ಸಂಘಟಿಸಿದೆ. ಚಿತ್ರೋದ್ಯಮ ಮತ್ತು ಚಲನಚಿತ್ರ ಕಲೆಗ ಸಂಬಂಧಿಸಿದ ಹತ್ತು ಹಲವು ವಿಷಯಗಳು ಹಾಗೂ ಸಮಸ್ಯೆಗಳ ಬಗ್ಗೆ ಈ ಗೋಷ್ಠಿಗಳು ಕೇಂದ್ರೀಕೃತವಾಗಿರುತ್ತಿದ್ದವು. ಪತ್ರಿಕೆಗಳಲ್ಲಿ ಪ್ರಕಟವಾದ ಚಲನಚಿತ್ರ ವಿಮರ್ಶೆಗಳನ್ನು ಕುರಿತಂತೆ ಮುಕ್ತವಾದ ವಿಮರ್ಶೆ, ವಿಮರ್ಶೆಯ ಚರ್ಚೆ ನಡೆಯುತ್ತಿದುದು ಒಂದು ವಿಶೇಷ. ಚಿತ್ರ ಬಿಡುಗಡೆಯಾದಾಗ ಚಿತ್ರತಂಡದವರೊಂದಿಗೆ ಚರ್ಚೆ ಹಾಗೂ ಸಂವಾದ ಕಾರ್ಯಕ್ರಮಗಳೂ ನಡೆಯುತ್ತಿದ್ದವು.

೧೯೭೭ರಲ್ಲಿ ಪರಿಷತ್ತು 'ನಾಸ್ಟಾಲ್ಜಿಯಾ' ಎಂಬ ಹೆಸರಿನಲ್ಲಿ ಭಾರತೀಯ ಚಿತ್ರಗಳ ಪ್ರದರ್ಶನದ ನೆನಪಿನ ಬೃಹತ್ ಉತ್ಸವವನ್ನು ಸಂಘಟಿಸಿತು. ಬೆಂಗಳೂರಿನ ಐದು ಪ್ರಮುಖ ಚಿತ್ರಮಂದಿರಗಳಲ್ಲಿ ಎರಡು ವಾರಗಳ ಕಾಲ ನಡೆದ ಈ ವಿಶಿಷ್ಟ ಉತ್ಸವದಲ್ಲಿ ಎಂಟು ಭಾಷೆಗಳ ಎಪ್ಪತ್ತಕ್ಕೂ ಹೆಚ್ಚು ಚಿತ್ರಗಳು ಪ್ರದರ್ಶಿತವಾದವು. ಮದರಾಸು, ಮುಂಬಯಿ, ಕಲ್ಕತ್ತಗಳಿಂದ ಹಳೆಯ ಕಾಲದ ಅನೇಕ ಶ್ರೇಷ್ಠ ನಟ-ನಟಿಯರು, ಸಂಗೀತ ನಿರ್ದೇಶಕರು ಉತ್ಸಾಹದಿಂದ ಉತ್ಸವದಲ್ಲಿ ಭಾಗವಹಿಸಿದ್ದೂ ಒಂದು ದೊಡ್ಡ ಘಟನೆ. ಅವರಿಗಾಗಿಯೇ ಹಳೆಯ ಮಾದರಿಯ ಕಾರುಗಳ ಒಂದು ಆಕರ್ಷಕ ಮೆರವಣಿಗೆಯನ್ನು ನಡೆಸಿ, ಆ ಕಾರುಗಳಲ್ಲಿ ಹೊರ ರಾಜ್ಯಗಳಿಂದ ಅತಿಥಿಗಳಾಗಿ ಬಂದ ಚಿತ್ರರಂಗದ ದಿಗ್ಗಜರು ಮತ್ತು ಕನ್ನಡ ಚಿತ್ರರಂಗದ ಪ್ರತಿಷ್ಠಿತರು ವೆಸ್ಟ್‌ಎಂಡ್ ಹೋಟೇಲ್‌ನಿಂದ ರವೀಂದ್ರ ಕಲಾಕ್ಷೇತ್ರದವರೆಗ ಪ್ರಯಾಣ ಮಾಡಿ ಸಹಸ್ರ ಸಹಸ್ರ ಸಂಖ್ಯೆಯ ಅಭಿಮಾನಿಗಳಿಗೆ ಮುದ ನೀಡಿದರು. ಈ ಬೃಹತ್ ಉತ್ಸವದ ಸಂಯೋಜನೆಯಲ್ಲಿ ಪರಿಷತ್ತಿನೊಡನೆ ಸುಚಿತ್ರ ಫಿಲಂ ಸೊಸೈಟಿ ಸಂಸ್ಥೆಯೂ ಸಹಯೋಗ ನೀಡಿದಿತು.



(ಚಿತ್ರ ೪) ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ತನ್ನ ಎಂದಿನ ಸಂಪ್ರದಾಯದಂತೆ ೧೯೭೬-೭೭ರ ಪ್ರಶಸ್ತಿ ಪಡೆದ 'ಪಲ್ಲವಿ' ಚಿತ್ರ ತಂಡದವರನ್ನು ಅಭಿನಂದಿಸಿದ ಸಂದರ್ಭದಲ್ಲಿ ಚಿತ್ರದ ಛಾಯಾಗ್ರಾಹಕ ಎಸ್.ರಾಮಚಂದ್ರ, ಸಂಗೀತ ನಿರ್ದೇಶಕ ರಾಜೀವ ತಾರಾನಾಥ್, ನಟ ಸಿ.ಆರ್.ಸಿಂಹ ಮತ್ತು ಚಿತ್ರದ ನಿರ್ಮಾಪಕ-ನಿರ್ದೇಶಕ ಪಿ.ಲಂಕೇಶ್

ಇಂತಹ ಒಂದು ಬೃಹತ್ ಕಾರ್ಯಕ್ರಮವನ್ನು ಕೇವಲ ಚಲನಚಿತ್ರ ವಾಣಿಜ್ಯ ಮಂಡಳಿ, ಚಲನಚಿತ್ರ ಪತ್ರಕರ್ತರು ಮತ್ತು ಸುಚಿತ್ರಾ ಫಿಲಂ ಸೊಸೈಟಿ ಜೊತೆಗೂಡಿ ಸಂಘಟಿಸಿದ್ದು ಅಂದಿನ ಕಾಲದಲ್ಲಿನ ಒಂದು ದೊಡ್ಡ ಸಾಹಸ.

ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ಆಯಾ ವರ್ಷದಲ್ಲಿ ಕನ್ನಡ ಚಿತ್ರರಂಗದಲ್ಲಿ ಗಮನಾರ್ಹ ಸಾಧನೆ ಮಾಡಿದ ಚಿತ್ರರಂಗದ ವ್ಯಕ್ತಿಗಳನ್ನು ಗುರುತಿಸಿ ಆರೆನ್ನಾರ್ ಪ್ರಶಸ್ತಿಯನ್ನು ನೀಡಿ ಗೌರವಿಸುವ ಸತ್ಸಂಪ್ರದಾಯವನ್ನು ಹಲವಾರು ವರ್ಷಗಳ ಕಾಲ ಅನುಸರಿಸಿಕೊಂಡು ಬಂದಿತ್ತು. ಕನ್ನಡ ಚಿತ್ರರಂಗದ ಭೀಷ್ಮರೆನಿಸಿದ, ಬಹುಮುಖ ಪ್ರತಿಭೆಯ ಆರ್.ನಾಗೇಂದ್ರರಾಯರ ಹೆಸರಿನಲ್ಲಿ ನೀಡಲಾಗುತ್ತಿದ್ದ ಆ ಪ್ರಶಸ್ತಿ ಅತ್ಯಂತ ಮೌಲ್ಯವುಳ್ಳದ್ದಾಗಿತ್ತು. ಡಾ|ವಿಜಯಾ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಹಿಂದಿನ ಹಲವು ವರ್ಷಗಳಲ್ಲಿ ನೀಡಲು ಸಾಧ್ಯವಾಗದಿದ್ದ ಪ್ರಶಸ್ತಿಗಳನ್ನು ಸೇರಿಸಿ, ದಶಕದ ಶ್ರೇಷ್ಠರೆಂದು ಜಿ.ವಿ.ಅಯ್ಯರ್, ಶಂಕರ್‌ನಾಗ್‌ರನ್ನು ಒಳಗೊಂಡಂತೆ ಆರೆನ್ನಾರ್ ಪ್ರಶಸ್ತಿ ವಿತರಿಸಲಾಯಿತು. ಪ್ರಶಸ್ತಿಯನ್ನು ನೀಡುವ ಸಂದರ್ಭದಲ್ಲಿ ಪ್ರಶಸ್ತಿಗೆ ಪಾತ್ರರಾದವರನ್ನು ಕುರಿತು ಹಾಗೂ ಮೊದಲ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ಪುರಸ್ಕೃತ ಹಿರಿಯ ವ್ಯಕ್ತಿ ಹುಣಸೂರು ಕೃಷ್ಣಮೂರ್ತಿ, ಹಿರಿಯ ಸಾಧಕ ಆರ್.ನಾಗೇಂದ್ರರಾವ್ ಮತ್ತು ಚಲನಚಿತ್ರ ಪತ್ರಿಕೆಗಳು ಸೇರಿದಂತೆ ಒಟ್ಟಾರೆ ೧೪ ಪುಸ್ತಕಗಳನ್ನು ವಿಶೇಷವಾಗಿ ಬರೆಸಿ ಪ್ರಕಟಿಸಿದರು.

ಮೈಸೂರಿನಲ್ಲಿಯೂ ಪತ್ರಕರ್ತರ ಸಂಘಟನೆ ನಡೆಯಿತು. ಹಿರಿಯ ಪತ್ರಕರ್ತ ಕೃಷ್ಣ ವಟ್ಟಂ ಅಧ್ಯಕ್ಷತೆಯಲ್ಲಿ ಚಲನಚಿತ್ರ ಪತ್ರಕರ್ತರ ಸಂಘ ಸ್ಥಾಪನೆಗೊಂಡಿತು. ಎಸ್.ಪದ್ಮನಾಭ ಉಪಾಧ್ಯಕ್ಷ-ಖಜಾಂಚಿಯಾಗಿ, ಡಾ|ಸತ್ಯನಾರಾಯಣ ಕಾರ್ಯದರ್ಶಿಯಾಗಿ ದುಡಿದರು. ಆ ದಿನಗಳಲ್ಲಿ ಮೈಸೂರು ಚಿತ್ರ ತಯಾರಿಕಾ ಕೇಂದ್ರವಾಗಿದ್ದುದರಿಂದ ಅನೇಕ ಸ್ಥಳೀಯ ಸಮಸ್ಯೆಗಳ ಪರಿಹಾರಕ್ಕೆ ಚಿತ್ರರಂಗ ಮತ್ತು ಪತ್ರಕರ್ತರ ಸಾಮರಸ್ಯಕ್ಕೆ ಈ ಸಂಘ ಒಂದು ಕೊಂಡಿಯಾಯಿತು. ಪ್ರೀಮಿಯರ್ ಸ್ಟುಡಿಯೋ ಬದುಕಿ ಉಳಿದದ್ದು ಚಲನಚಿತ್ರ ಪತ್ರಕರ್ತರಿಂದಲೇ.

ಚಲನಚಿತ್ರ ಪತ್ರಕರ್ತರಲ್ಲಿ ಅಭಿಪ್ರಾಯ ಭೇದ, ಭಿನ್ನಾಭಿಪ್ರಾಯ ಬಂದಾಗಲೆಲ್ಲ ಒಂದೊಂದು ಸಂಘಟನೆ ತಲೆ ಎತ್ತಿದೆ. ೧೯೯೦ರ ದಶಕದಲ್ಲಿ ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು ಹೊಸ ತಲೆಮಾರಿನವರ ಜಾಡಿನಲ್ಲಿ ಸಾಗಿದಾಗ ಹಿರಿಯ ಪತ್ರಕರ್ತರು ಕರ್ನಾಟಕ ಚಲನಚಿತ್ರ ಪತ್ರಕರ್ತರ ವೇದಿಕೆಯನ್ನು ಹುಟ್ಟುಹಾಕಿದರು. ಅದು ಪ್ರತಿ ತಿಂಗಳೂ ಚಿತ್ರರಂಗಕ್ಕೆ ಸಂಬಂಧಿಸಿದ ಉಪಯುಕ್ತ ವಿಚಾರ ಸಂಕಿರಣಗಳು, ಚಲನಚಿತ್ರ ಕುರಿತ ಚರ್ಚೆಗಳನ್ನು ನಡೆಸಿಕೊಂಡು ಬಂದಿತು. ಈ ವೇದಿಕೆ ಸಂಘಟಿಸಿದ ಅಖಿಲ ಭಾರತ ಚಲನಚಿತ್ರ ಸಂಗೀತ ಗೋಷ್ಠಿ 'ಸಂಗೀತ ಸಂಭ್ರಮ' ಚಿತ್ರಸಂಗೀತದ ಇತಿಹಾಸದ ಒಂದು ಅವಲೋಕನದ ಕಾರ್ಯಕ್ರಮವಾಗಿ ದೊಡ್ಡ ಮಟ್ಟದಲ್ಲಿ ಅತ್ಯಂತ ಯಶಸ್ವಿಯಾಗಿ ನಡೆಯಿತು.

ಪ್ರಸ್ತುತ ವಾರಪತ್ರಿಕೆಯ ಸಂಪಾದಕರಾಗಿರುವ, ಅಂದು 'ಪ್ರಜಾವಾಣಿ' ಪತ್ರಿಕೆಯಲ್ಲಿ ಸಾಪ್ತಾಹಿಕ ಪುರವಣಿಯ ಸಂಪಾದಕರಾಗಿದ್ದ ಬಿ.ವಿ.ವೈಕುಂಠರಾಜು, ಎಂ.ಕೆ.ಭಾಸ್ಕರರಾವ್ ಚಲನಚಿತ್ರ ಪತ್ರಕರ್ತರ ಸಂಘ ಪ್ರಾರಂಭಿಸಿದರು. ಈ ಸಂಘದ ವತಿಯಿಂದ ವಿಮರ್ಶಕರ ಪ್ರಶಸ್ತಿ ಯೋಜನೆಯೊಂದನ್ನು ರೂಪಿಸಿ, ವರ್ಷದ ಅತ್ಯುತ್ತಮ ಚಿತ್ರ ನಿರ್ದೇಶಕರೊಬ್ಬರನ್ನು ಆಯ್ಕೆ ಮಾಡಿ ಪ್ರಶಸ್ತಿ ನೀಡುವ ಪರಿಪಾಠ ಆರಂಭವಾಯಿತಾದರೂ ಕೆಲವೇ ಸಮಯದಲ್ಲಿ ಅದು ಸ್ಥಗಿತವಾಯಿತು.

## ಕನ್ನಡ ಚಲನಚಿತ್ರ ಪತ್ರಕರ್ತರು ಮತ್ತು ಚಿತ್ರೋದ್ಯಮ

ಚಲನಚಿತ್ರ ಪತ್ರಿಕೋದ್ಯಮ ಅಥವಾ ಚಲನಚಿತ್ರ ಪತ್ರಕರ್ತರು ಪತ್ರಿಕೋದ್ಯಮದ ಇತರೇ ವಿಭಾಗಗಳಿಗಿಂತ ವಿಭಿನ್ನವಾದ ಪರಿಸ್ಥಿತಿ ಹಾಗೂ ಮನಃಸ್ಥಿತಿಗಳಲ್ಲಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಏಕೆಂದರೆ ಸೃಜನಶೀಲ ಹಾಗೂ ಹಲವು ಕಲಾಪ್ರಾಕಾರ ಮತ್ತು ತಾಂತ್ರಿಕತೆಗಳ ಸಂಗಮವಾಗಿರುವ ಮಾಧ್ಯಮ ಅದರ ಅಥವಾ ಅವರ ಕಾರ್ಯಕ್ಷೇತ್ರ. ಇಂಥ ಸಿನಿಮಾ ಮಾಧ್ಯಮದ ಪ್ರಮುಖ ಲಕ್ಷಣವೇ ಜನಪ್ರಿಯತೆ. ಇಂತಹ ಜನಪ್ರಿಯ ಮಾಧ್ಯಮದ ಬಗ್ಗೆ ಅಪ್ರಿಯ ಸತ್ಯಗಳನ್ನು ಹೊರಗೆಡಹುವ ವೃತ್ತಿನಿಷ್ಠೆ-ವಸ್ತುನಿಷ್ಠೆಯಿಂದಾಗಿ ಚಲನಚಿತ್ರ ಪತ್ರಕರ್ತ ಹಾಗೂ ಪತ್ರಿಕೋದ್ಯಮ ಜನಕ್ಕೆ ಅಪಥ್ಯವಾಗುವ ಆತಂಕ ಒಂದೆಡೆಯಾದರೆ, ಜನಪ್ರಿಯ ಮಾಧ್ಯಮವೆಂದು ಅದಕ್ಕೆ ಮತ್ತಷ್ಟು ಬಣ್ಣ ಹಚ್ಚಿ, ರಂಗೇರಿಸುವುದರ ಜೊತೆಗೆ ಅದರೊಡನೆ ತಾನು ಜನಪ್ರಿಯತೆಗೆ ಜೋತು ಬಿದ್ದು ಚಲನಚಿತ್ರ ಪತ್ರಿಕೋದ್ಯಮ ಜಾಹಿರಾತಿನ ಮತ್ತೊಂದು ರೂಪವಾಗಿ ಅಸ್ತಿತ್ವಹೀನವಾಗುವ ಅಪಾಯ ಮತ್ತೊಂದೆಡೆ ಇರುತ್ತದೆ. ಇದು ಕತ್ತಿ ಅಲುಗಿನ ಮೇಲಿನ ನಡೆ. ಈ ಇಬ್ಬಂದಿತನ ಚಲನಚಿತ್ರ ಪತ್ರಕರ್ತರನ್ನು ಕಾಡುವ ಒಂದು ದೊಡ್ಡ ಸಮಸ್ಯೆ. ಏಕೆಂದರೆ ರಾಜಕೀಯವಾಗಲಿ, ಕ್ರೀಡೆಯಾಗಲಿ ನಮ್ಮಲ್ಲಿ ಚಲನಚಿತ್ರದಷ್ಟು ಜನಪ್ರಿಯವಾಗಿಲ್ಲ.

ಈ ಹಿನ್ನೆಲೆಯಲ್ಲಿ ಚಲನಚಿತ್ರ ಪತ್ರಕರ್ತ ಚಲನಚಿತ್ರ ಉದ್ಯಮದ ಬಗ್ಗೆ ನಕಾರಾತ್ಮಕ ಧೋರಣೆ ತಾಳುವುದಕ್ಕಿಂತ ಸಕಾರಾತ್ಮಕ ಧೋರಣೆಯನ್ನು ಅನುಸರಿಸುವುದೇ ಹೆಚ್ಚು. ಈ ಧೋರಣೆ ಆತನನ್ನು ಚಲನಚಿತ್ರದಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳುವ ಸಂದರ್ಭಗಳನ್ನು ಹೆಚ್ಚಿಸುತ್ತದೆ. ಈ ಮನೋವೃತ್ತಿ, ಧೋರಣೆಗಳಿಂದಾಗಿ ಹಲವು ಕನ್ನಡ ಚಲನಚಿತ್ರ ಪತ್ರಕರ್ತರು ಲೇಖಕರಾಗಿ, ನಿರ್ಮಾಪಕರಾಗಿ, ನಿರ್ದೇಶಕರಾಗಿ, ಕಲಾವಿದರಾಗಿ ಚಿತ್ರರಂಗದಲ್ಲಿ ತಮ್ಮನ್ನು ತೊಡಗಿಸಿಕೊಂಡು ಹೆಸರು ಮಾಡಿದ್ದಾರೆ.

ಪತ್ರಕರ್ತರಾಗಿದ್ದ ತೆಲುಗಿನ ರಾಮೋಜಿರಾವ್, ತಮಿಳಿನ ಚೋ ರಾಮಸ್ವಾಮಿ ಎರಡೂ ಕ್ಷೇತ್ರಗಳಲ್ಲಿ ಹೆಸರು ಮಾಡಿದರು. ಹಿಂದಿ ಚಿತ್ರರಂಗದ ಬಿ.ಆರ್.ಛೋಪ್ರ ಚಿತ್ರೋದ್ಯಮಕ್ಕೆ ಬರುವ ಮುನ್ನ ಪತ್ರಕರ್ತರಾಗಿದ್ದವರು. ರಾಜ್‌ಕಪೂರ್ ಚಿತ್ರಗಳಿಗೆ ಲೇಖಕರಾಗಿ ಹೆಸರಾದ ಕೆ.ಎ.ಅಬ್ಬಾಸ್ ಅವರು 'ಬ್ಲಿಟ್ಸ್' ಪತ್ರಿಕೆಗೆ ಸತತ ಅಂಕಣ ಬರೆದಿದ್ದಾರೆ.

ಕನ್ನಡದ ಹಿರಿಯ ಪತ್ರಕರ್ತರಾಗಿ ಚಲನಚಿತ್ರರಂಗದೊಂದಿಗೆ ಸುದೀರ್ಘ ಕಾಲದ ನಂಟನ್ನು ಹೊಂದಿರುವ ವಿ.ಎನ್.ಸುಬ್ಬರಾವ್ ಚಲನಚಿತ್ರ ಮತ್ತು ರಾಜಕೀಯ ಕ್ಷೇತ್ರಗಳೆರಡರಲ್ಲೂ ತಮ್ಮ ಲೇಖನಿಯನ್ನು ಎಡಬಿಡದೆ ಬಳಸುತ್ತಾ ಬಂದಿದ್ದಾರೆ. 'ಮೇನಕಾ', 'ತಾರಾಲೋಕ' ಚಲನಚಿತ್ರ ಪತ್ರಿಕೆಗಳನ್ನು ನಡೆಸಿದ ಇವರು 'ಪ್ರೇಮಾಯಣ' ಮತ್ತು 'ಹಾವು ಏಣಿಯಾಟ' ಚಿತ್ರಗಳ ನಿರ್ಮಾಪಕರಾಗಿ ಚಿತ್ರೋದ್ಯಮದಲ್ಲಿ ತಮ್ಮನ್ನು ನೇರವಾಗಿ ತೊಡಗಿಸಿಕೊಂಡವರು.

೧೯೯೩ರಲ್ಲಿ ವೀರಪ್ಪಮೊಯ್ಲಿಯವರ ಸರ್ಕಾರ ಸಮಗ್ರ ಚಲನಚಿತ್ರ ನೀತಿಯೊಂದನ್ನು ರೂಪಿಸಲು ಸಮಿತಿಯೊಂದನ್ನು ನೇಮಿಸಿತು. ಚಿತ್ರೋದ್ಯಮದ ಪ್ರತಿನಿಧಿಗಳೇ ಸದಸ್ಯರಾಗಿದ್ದ ಈ ಸಮಿತಿಯ ಅಧ್ಯಕ್ಷರನ್ನಾಗಿ ವಿ.ಎನ್.ಸುಬ್ಬರಾವ್ ಅವರನ್ನು ಆಯ್ಕೆ ಮಾಡಿದ್ದು ಕನ್ನಡ ಚಿತ್ರೋದ್ಯಮ ಮತ್ತು ಚಲನಚಿತ್ರ ಪತ್ರಿಕೋದ್ಯಮಗಳ ನಡುವಣ ನಿಕಟ ಬಾಂಧವ್ಯಕ್ಕೆ ದ್ಯೋತಕವಾಗಿತ್ತು.

'ಕನ್ನಡಪ್ರಭ' ಪತ್ರಿಕೆಯಲ್ಲಿ ಶುಕ್ರವಾರದ ಚಿತ್ರಪ್ರಭ ಪುರವಣಿಯನ್ನು ಆರಂಭಿಸಿ ದೀರ್ಘಕಾಲ ನಡೆಸಿದ ಕೆ.ಎಸ್.ನಾರಾಯಣಸ್ವಾಮಿ ಖ್ಯಾತ ನಿರ್ದೇಶಕ

ಲಕ್ಷ್ಮೀನಾರಾಯಣ್ ಅವರ ನಿರ್ದೇಶನದಲ್ಲಿ ವಿ.ಎಂ.ಇನಾಂದಾರ್‌ರ ಕಾದಂಬರಿಯನ್ನು ಆಧರಿಸಿ 'ಮುಕ್ತಿ' ಚಿತ್ರವನ್ನು ನಿರ್ಮಿಸಿದರು. ಚಿತ್ರಕ್ಕೆ ೧೯೬೯-೭೦ರ ರಾಜ್ಯ ಪ್ರಶಸ್ತಿ ದೊರೆಯಿತು. ಮಾವಿನಕೆರೆ ರಂಗನಾಥ್ ಅವರೊಂದಿಗೆ 'ಸಂಘರ್ಷ' ಚಿತ್ರನಿರ್ಮಾಣದಲ್ಲೂ ಭಾಗವಹಿಸಿದರು.

'ಮೇನಕಾ' ಮತ್ತು 'ಕನ್ನಡಪ್ರಭ' ಪತ್ರಿಕೆಗಳಲ್ಲಿ ದುಡಿದ ಟಿ.ಜಿ.ಅಶ್ವತ್ಥನಾರಾಯಣ ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಮಸಣದ ಹೂವು' ಚಿತ್ರಕ್ಕೆ ಸಂಭಾಷಣೆ ಬರೆದರು. ಅದಕ್ಕಾಗಿ ೧೯೮೪-೮೫ರ ರಾಜ್ಯ ಪ್ರಶಸ್ತಿ ಪಡೆದರು. 'ಋಣ ಮುಕ್ತಳು' ಚಿತ್ರದ ಸಹನಿರ್ದೇಶಕರೂ ಆಗಿದ್ದರು. 'ಕನ್ನಡಪ್ರಭ' ಪತ್ರಿಕೆಯ ಸಿಂಹಹೆಮ್ಮಿಗೆ ಅವರು 'ಪಂಜರದ ಗಿಳಿ' ಚಿತ್ರಕ್ಕೆ ಸಂಭಾಷಣೆ ಬರೆದರು. ಅಭಿನಯದಲ್ಲೂ ಪರಿಶ್ರಮಿಗಳಾದ ಸಿಂಹಹೆಮ್ಮಿಗೆ ಟಿ.ವಿ.ಧಾರಾವಾಹಿಗಳಲ್ಲೂ ನಟಿಸಿದ್ದಾರೆ.

ಹಲವು ಚಿತ್ರಗಳಿಗೆ ಸಾಹಿತ್ಯ ರಚಿಸಿ ಹೆಸರಾದ ವಿ.ಆರ್.ಶ್ಯಾಮ್ (ಕಾವ್ಯನಾಮ : ಇಂದಿರಾತನಯ) ಜನಪ್ರಿಯ ಕಾದಂಬರಿಕಾರರಾಗಿದ್ದುದಲ್ಲದೆ, 'ತಾಯಿನಾಡು', 'ಪ್ರಜಾವಾಣಿ' ಪತ್ರಿಕೆಗಳಲ್ಲಿ ಪತ್ರಕರ್ತರಾಗಿಯೂ ಕೆಲಸ ಮಾಡಿದರು. 'ತಾಯಿನಾಡು' ಹಾಗೂ 'ಲಾವಣ್ಯ' ಪತ್ರಿಕೆಯ ಶ್ರೀಕೃಪಾ ಅವರು ಪತ್ರಕರ್ತರಾಗಿದ್ದುಕೊಂಡೇ ಎಪ್ಪತ್ತರ ದಶಕದಿಂದ ಕನ್ನಡ ಚಿತ್ರಗಳಲ್ಲಿ ಸಹನಿರ್ದೇಶಕರಾಗಿ ಕೆಲಸ ಮಾಡುತ್ತಿರುವುದೇ ಅಲ್ಲದೆ ಕೆಲವು ಚಿತ್ರಗಳಿಗೆ ಸಂಭಾಷಣೆಯನ್ನೂ ಮತ್ತೆ ಕೆಲವಕ್ಕೆ ಹಾಡುಗಳನ್ನೂ ಬರೆದಿದ್ದಾರೆ. ಅಲ್ಲದೆ ಕಿರುತೆರೆಯ ಧಾರಾವಾಹಿಗಳ ನಿರ್ದೇಶನ ಹಾಗೂ ಸಾಹಿತ್ಯ ವಿಭಾಗಗಳಲ್ಲಿ ದುಡಿದಿದ್ದಾರೆ. ನಿರ್ದೇಶಕರ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಹತ್ತಾರು ವರ್ಷ ಶ್ರಮಿಸಿದರು.

ಅರುವತ್ತರ ದಶಕದಲ್ಲಿ ಪ್ರಕಟಣೆ ಆರಂಭಿಸಿದ 'ರೂಪಲೇಖಾ' ಪತ್ರಿಕೆಯ ಸಂಪಾದಕ ಹಾಗೂ ಪ್ರಕಾಶಕ ಎಂ.ರಾಮನ್ 'ಒಲವಿನ ಉಡುಗೊರೆ', 'ಎದುರು ಮನೆ ಮೀನಾ' ಮತ್ತು 'ಹೊಸ ರಾಗ' ಚಿತ್ರಗಳನ್ನು ನಿರ್ಮಿಸಿದರು. ಮತ್ತಿಬ್ಬರು ಪತ್ರಕರ್ತರಾದ ಎನ್.ಎಸ್.ರಾಮಚಂದ್ರ ಮತ್ತು ಶ್ಯಾಮಸುಂದರ ಕುಲಕರ್ಣಿ 'ಒಲವಿನ ಉಡುಗೊರೆ' ಮತ್ತು 'ಹೊಸರಾಗ' ಚಿತ್ರಗಳ ನಿರ್ಮಾಣದಲ್ಲಿ ಪಾಲುದಾರರಾಗಿದರು. ನಂತರ ರಾಮನ್ ತಮ್ಮದೇ ಕಥೆಗಳನ್ನಾಧರಿಸಿ 'ಕೆರಳಿದ ಕನ್ಯೆಯರು' ಮತ್ತು 'ಮದುಮಗಳು' ಚಿತ್ರಗಳೆರಡರ ತಯಾರಿಕೆಯನ್ನಾರಂಭಿಸಿ ಅವುಗಳ ನಿರ್ದೇಶನ ಹಾಗೂ ಸಾಹಿತ್ಯ ರಚನೆಗಳ ಹೊಣೆಯನ್ನೂ ಹೊತ್ತರು. ಆದರೆ ಈ ಚಿತ್ರಗಳು ಬಿಡುಗಡೆಯಾಗುವ ಮೊದಲೇ ರಾಮನ್ ನಿಧನರಾದುದು ಒಂದು ದುರಂತ. 'ಒಲವಿನ ಉಡುಗೊರೆ', 'ಹೊಸ ರಾಗ', 'ಗುಂಡನ ಮದುವೆ' ಚಿತ್ರಗಳ ನಿರ್ಮಾಪಕರಲ್ಲಿ ಒಬ್ಬರಾದ ಎನ್.ಎಸ್.ರಾಮಚಂದ್ರ 'ಪ್ರಜಾಮತ'ದಲ್ಲಿದ್ದರು. ಅನಂತರ 'ಅರಗಿಣಿ' ಪತ್ರಿಕೆಯ ಸಂಪಾದಕೀಯ ವಿಭಾಗದಲ್ಲಿ ಸೇರಿದರು. 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿ ವೃತ್ತಿಯನ್ನಾರಂಭಿಸಿ, 'ತರಂಗ' ಪತ್ರಿಕೆಯ ಸಿನಿಮಾ ವಿಭಾಗಕ್ಕೂ ಬರೆಯುತ್ತಿದ್ದ ಶ್ಯಾಮಸುಂದರ ಕುಲಕರ್ಣಿ ಗೀತೆ ರಚನಾಕಾರರಾಗಿ ಚಿತ್ರರಂಗದಲ್ಲಿ ಪರಿಚಿತರಾಗಿ ಚಿತ್ರಸಾಹಿತಿಯಾಗಿ ಹೆಸರು ಮಾಡಿದ್ದಾರೆ. ಇವರು 'ಒಂದು ಸಿನಿಮಾ ಕಥೆ', 'ಗಣೇಶ ಸುಬ್ರಹ್ಮಣ್ಯ', 'ಗುಂಡನ ಮದುವೆ' ಚಿತ್ರಗಳ ಕಥಾಲೇಖಕರು. 'ಒಲವಿನ ಉಡುಗೊರೆ', 'ಹೊಸರಾಗ', 'ಗುಂಡನ ಮದುವೆ' ಚಿತ್ರಗಳ ಸಹನಿರ್ಮಾಪಕರೂ ಹೌದು. ಇವರು ಚಿತ್ರಗಳಿಗೆ ಬರೆದ ಗೀತೆಗಳು ಜನಪ್ರಿಯವಾಗಿವೆ. ಕುಲಕರ್ಣಿ ಕಿರುತೆರೆಯಲ್ಲೂ ಕೆಲಸ ಮಾಡಿದರು.

'ಪ್ರಜಾವಾಣಿ' ಪತ್ರಿಕೆಯಲ್ಲಿ ತಮ್ಮ ಸಿನಿಮಾ ಬರವಣಿಗೆಯಿಂದ ಹೆಸರಾದ ಬಿ.ವಿ.ವೈಕುಂಠರಾಜು ನಂತರ ತಮ್ಮದೇ ಸ್ವಂತ 'ವಾರಪತ್ರಿಕೆ', 'ರಾಜುಪತ್ರಿಕೆ' ಹಾಗೂ 'ಗೋಧೂಳಿ' ಪತ್ರಿಕೆಗಳನ್ನು ಆರಂಭಿಸಿ ಅವುಗಳ ಸಂಪಾದಕರಾದರು. ಇವರ ಆಕ್ರಮಣ ಮತ್ತು ಉದ್ಭವ ಕಾದಂಬರಿಗಳು ಚಲನಚಿತ್ರಗಳಾಗಿ ಯಶಸ್ವಿಯಾಗಿವೆ.

'ಲಂಕೇಶ್ ಪತ್ರಿಕೆ'ಯ ಪಿ.ಲಂಕೇಶ್ ಸಾಹಿತಿಯಾಗಿ, ಕಾದಂಬರಿಕಾರರಾಗಿ ಜನಪ್ರಿಯರು. ಅವರೇ ನಿರ್ಮಿಸಿ, ನಿರ್ದೇಶಿಸಿದ ಮೊದಲ ಚಿತ್ರ 'ಪಲ್ಲವಿ' ರಾಷ್ಟ್ರ ಪ್ರಶಸ್ತಿ ಪಡೆಯಿತು. ನಂತರ ಅವರು 'ಅನುರೂಪ', 'ಖಂಡವಿದೆಕೋ ಮಾಂಸವಿದೆಕೋ', 'ಎಲ್ಲಿಂದಲೋ ಬಂದವರು' ಚಿತ್ರಗಳನ್ನು ನಿರ್ದೇಶಿಸಿದರು. 'ಸಂಸ್ಕಾರ', 'ಪಲ್ಲವಿ' ಚಿತ್ರದಲ್ಲಿ ಅಭಿನಯಿಸಿದರು. ಲಂಕೇಶ್‌ರ ಪುತ್ರಿ ಕವಿತಾ ಲಂಕೇಶ್ 'ದೇವೀರಿ' ಚಿತ್ರವನ್ನು ನಿರ್ಮಾಣ ಮಾಡಿ ನಿರ್ದೇಶಿಸಿದರು.

ಹಲವು ಪತ್ರಿಕೆಗಳಲ್ಲಿ ಚಲನಚಿತ್ರ ಪತ್ರಕರ್ತರಾಗಿ ಕೆಲಸ ಮಾಡಿ, 'ಸಿನಿಮಾ ಮಕರಂದ' ಪತ್ರಿಕೆಯ ಸಂಪಾದಕರಾಗಿರುವ ಮೈಸೂರು ಹರೀಶ್ ಅವರು ಕೆಲವು ಚಿತ್ರಗಳಿಗೆ ಕಥೆಗಳನ್ನು ಬರೆದಿರುವುದಲ್ಲದೆ, ಕೆಲವು ಚಿತ್ರಗಳಿಗೆ ಸಂಭಾಷಣೆ, ಸಾಹಿತ್ಯವನ್ನೂ ರಚಿಸಿದ್ದಾರೆ.

ಚಲನಚಿತ್ರ ಪತ್ರಕರ್ತರಲ್ಲಿ ಕೆಲವರು ಕಲಾವಿದರಾಗಿ ತೆರೆಯ ಮೇಲೆ ಕಾಣಿಸಿಕೊಂಡದ್ದೂ ಉಂಟು. 'ಡೆಕ್ಕನ್ ಹೆರಾಲ್ಡ್' ಪತ್ರಿಕೆಯ ಎಸ್.ಜಿ.ಮೈಸೂರುಮಠ ಅವರು 'ಹಂಸಗೀತೆ', 'ಸದಾನಂದ' ಚಿತ್ರಗಳಲ್ಲದೆ ಇನ್ನೂ ಕೆಲವು ಚಿತ್ರಗಳಲ್ಲಿ ಅಭಿನಯಿಸಿದರು. 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಮೈಸೂರು ವರದಿಗಾರ ಎಸ್.ಪದ್ಮನಾಭ 'ಆರಂಭ' ಚಿತ್ರದ ಪ್ರಮುಖ ಪಾತ್ರವೊಂದರಲ್ಲಿ ನಟಿಸಿದರು. ಹಲವಾರು ಪತ್ರಿಕೆಗಳಿಗೆ ಅಂಕಣ ಹಾಗೂ ಲೇಖನಗಳನ್ನು ಬರೆಯುತ್ತಿರುವ ಆರ್.ಜಿ.ವಿಜಯಸಾರಥಿ 'ಭವಾನಿ', 'ಶಿವಸೈನ್ಯ' ಮುಂತಾದ ಹಲವಾರು ಚಿತ್ರಗಳಲ್ಲಿ ಕಾಣಿಸಿಕೊಂಡವರು. ಅನೇಕ ಟಿ.ವಿ. ಧಾರಾವಾಹಿಗಳಲ್ಲಿಯೂ ನಟಿಸುತ್ತಾರೆ. 'ಸಂಜೆವಾಣಿ' ಪತ್ರಿಕೆಯ ಸುರೇಶ್ಚಂದ್ರ 'ಜಂಬೂಸವಾರಿ'ಯಲ್ಲಿ ನಟಿಸಿದ್ದಾರೆ. ಹಲವು ಟಿ.ವಿ. ಧಾರಾವಾಹಿಗಳಲ್ಲಿ ಕೆಲಸ ಮಾಡಿದರು.

ಪತ್ರಿಕೆಗಳಿಗೆ ಲೇಖನ, ಅಂಕಣಗಳನ್ನು ಬರೆಯುತ್ತಾ, ಮೈಸೂರಿನ ಪತ್ರಿಕೆಯೊಂದರ ವರದಿಗಾರರೂ ಆಗಿರುವ ಹವ್ಯಾಸಿ ರಂಗಭೂಮಿಯ ಹಿರಿಯ ನಟ ಎ.ಎಸ್.ಮೂರ್ತಿಯವರು 'ಸುಭದ್ರಾ ಕಲ್ಯಾಣ', 'ದೇವರ ದುಡ್ಡು', 'ಎದುರು ಮನೆ ಮೀನಾ' ಮತ್ತಿತರ ಚಿತ್ರಗಳಲ್ಲಿಯೂ, ಹಲವು ಧಾರಾವಾಹಿಗಳಲ್ಲಿಯೂ ಅಭಿನಯಿಸಿದ್ದಾರೆ. 'ಕುರಿದೊಡ್ಡಿ ಕುರುಕ್ಷೇತ್ರ' ಚಿತ್ರಕ್ಕೆ ಸಂಭಾಷಣೆಯನ್ನೂ ಬರೆದರು. ಪತ್ರಿಕೆಗಳಿಗೆ ಅಂಕಣ ಲೇಖಕರಾಗಿರುವ ಹಾ.ಸಾ.ಕೃ. 'ಗಣೇಶನ ಗಲಾಟೆ' ಚಿತ್ರಕ್ಕೆ ಸಂಭಾಷಣೆ ಬರೆದರು. ಡೇವಿಡ್ ಲೀನ್‌ರ 'ಪ್ಯಾಸೇಜ್ ಟು ಇಂಡಿಯಾ' ಹಾಗೂ ಕೆಲವು ಚಿತ್ರಗಳಲ್ಲೂ ಅಭಿನಯಿಸಿದ್ದಾರೆ.

'ಸುದ್ದಿಸಂಗಾತಿ' ಪತ್ರಿಕೆಯಲ್ಲಿದ್ದ ಪಿ.ಶೇಷಾದ್ರಿ 'ಆಕಸ್ಮಿಕ', 'ಚಿನ್ನಾರಿಮುತ್ತ', 'ಸಾಗರದೀಪ', 'ಸಮರ' ಮುಂತಾದ ಚಿತ್ರಗಳ ಸಹನಿರ್ದೇಶಕರಾಗಿ ಚಿತ್ರರಂಗದಲ್ಲಿ ಪೂರ್ಣಾವಧಿ ತೊಡಗಿಸಿಕೊಂಡು 'ಮುನ್ನುಡಿ' ಚಿತ್ರದ ನಿರ್ದೇಶಕರಾದರು. 'ಮುನ್ನುಡಿ' ಚಿತ್ರ ಪ್ರಶಸ್ತಿ ಪುರಸ್ಕೃತವಾಯಿತು. ಅದೇ ಪತ್ರಿಕೆಯಲ್ಲಿದ್ದ ಕೆ.ರಾಮಯ್ಯ ಹಲವು ಚಿತ್ರಗಳಿಗೆ ಸಂಭಾಷಣೆ ಬರೆದರು. ರಾಜ್ಯ ಪ್ರಶಸ್ತಿಗಳು ಬಂದಿವೆ. ಕಿರುತೆರೆಯ ಬರಹಗಳಿಗೂ ಪ್ರಸಿದ್ಧರು. ಪತ್ರಿಕೆಗಳಲ್ಲಿ ವ್ಯಂಗ್ಯ ಚಿತ್ರಗಳನ್ನು ಬರೆಯುತ್ತಿದ್ದ ವಿ.ಮನೋಹರ್ ಗೀತಲೇಖಕರಾಗಿ, ಸಂಗೀತ ನಿರ್ದೇಶಕರಾಗಿ ಹೆಸರು ಮಾಡಿದರಲ್ಲದೆ, 'ಓ ಮಲ್ಲಿಗೆ' ಚಿತ್ರದ ಮೂಲಕ ನಿರ್ದೇಶಕರೂ ಆದರು.

'ಲಂಕೇಶ್ ಪತ್ರಿಕೆ', 'ಈವಾರ' ಪತ್ರಿಕೆಗಳಲ್ಲಿ ದುಡಿದ ಚಂದ್ರಶೇಖರ ಆಲೂರು ಮತ್ತು ಸತ್ಯಮೂರ್ತಿ ಆನಂದೂರು ತಲಾ ಒಂದೊಂದು ಚಿತ್ರಕ್ಕೆ ಸಂಭಾಷಣೆ ಬರೆದರು. ಕನ್ನಡದ ಹಿರಿಯ ಪತ್ರಕರ್ತರಲ್ಲಿ ಒಬ್ಬರಾದ ಸದಾಶಿವ 'ಆಕ್ರಮಣ' ಚಿತ್ರಕ್ಕೆ ಹಾಗೂ ಎಸ್.ದಿವಾಕರ್ ನಿರ್ದೇಶನದ 'ಇತಿಹಾಸ' ಚಿತ್ರಕ್ಕೆ ಸಾಹಿತ್ಯ ರಚಿಸಿಕೊಟ್ಟರು.

ಪತ್ರಕರ್ತ ಎ.ಬಾಲಕೃಷ್ಣ 'ಎದುರು ಮನೆ ಮೀನಾ' 'ಅಂತರ್ಗಾಮಿ' ಚಿತ್ರಗಳ ನಿರ್ದೇಶಕರಾಗಿ ಚಿತ್ರರಂಗದಲ್ಲಿ ತೊಡಗಿಸಿಕೊಂಡರು. 'ಲೋಕವಾಣಿ', 'ವಾರದ ಆರಂಭ' ಪತ್ರಿಕೆಗಳ ಸಂಪಾದಕರಾಗಿದ್ದ ಮಹದೇವಪ್ರಕಾಶ್ ಪಾಲುದಾರಿಕೆಯಲ್ಲಿ 'ಕೆಂಪು ಮುಗಿಲು' ಚಿತ್ರವನ್ನು ತಯಾರಿಸಿದರು. 'ಸಂಜೆವಾಣಿ'ಯಲ್ಲಿ ದುಡಿದ ಕೆ.ಬಿ.ಪಂಕಜಾ ಈ ಟಿ.ವಿ. ಕನ್ನಡ ವಾಹಿನಿಯನ್ನು ಸೇರಿದರು.

ಚಲನಚಿತ್ರ ಕ್ಷೇತ್ರದಲ್ಲಿ ಹೆಸರು ಮಾಡಿದ ಕೆಲವರು ಪತ್ರಿಕಾ ವೃತ್ತಿಯಲ್ಲಿ ತೊಡಗಿಸಿಕೊಂಡ ನಿದರ್ಶನಗಳೂ ಉಂಟು. 'ಬಂಗಾರದ ಮನುಷ್ಯ' ನಿರ್ಮಾಪಕರಲ್ಲೊಬ್ಬರಾದ ಆರ್.ಲಕ್ಷ್ಮಣ್ ಅರುವತ್ತರ ದಶಕದಲ್ಲಿ ಹಲವಾರು ವರ್ಷ 'ಚಿತ್ರಲೇಖ' ಪತ್ರಿಕೆಯನ್ನು ಪ್ರಕಟಿಸಿದರಲ್ಲದೆ, ಅದರ ಸಂಪಾದಕರಾಗಿಯೂ ಕಾರ್ಯ ನಿರ್ವಹಿಸಿದರು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಹೊರತರುವ 'ಜರ್ನಲ್' ಸಂಪಾದಕರಾಗಿದ್ದಾರೆ. ಚಿತ್ರೋದ್ಯಮ ಹಾಗೂ ಸರ್ಕಾರಿ ನೀತಿ ನಿಯಮಾವಳಿಯ ಬಗ್ಗೆ ಲಕ್ಷ್ಮಣ್ ಅವರಿಗೆ ಅಪಾರ ಅನುಭವ.

ಕನ್ನಡ ಚಿತ್ರರಂಗದ ಹಿರಿಯ ಸಾಹಿತಿಗಳಾದ ಚಿ.ಸದಾಶಿವಯ್ಯನವರು 'ವಿಜಯಚಿತ್ರ' ಚಲನಚಿತ್ರ ಮಾಸಿಕದ ಸಂಪಾದಕ ಬಳಗದಲ್ಲಿ ದುಡಿದರು. ಅವರ ಮಗ ಚಿ.ಉದಯಶಂಕರ್ ಮಕ್ಕಳ ಪುಸ್ತಕದ ಸಂಪಾದನಾ ಕಾರ್ಯ ನಿರ್ವಹಿಸಿದರಲ್ಲದೆ 'ಚಟಾಕಿ' ಎಂಬ ಮಕ್ಕಳ ಪತ್ರಿಕೆಯ ಸಂಪಾದಕರಾಗಿದ್ದರು. 'ಅರಗಿಣಿ', 'ಕಾಜಾಣ', 'ಸಿರಿರೇಖಾ' ಪತ್ರಿಕೆಗಳಲ್ಲಿ ದುಡಿದಿರುವ ಜಿ.ಎಂ.ಪ್ರಹ್ಲಾದ್ ಹಲವಾರು ಚಿತ್ರಗಳಿಗೆ ಕಥೆ, ಚಿತ್ರಕಥೆ, ಸಂಭಾಷಣೆ ಹಾಗೂ ಗೀತರಚನೆ ಮಾಡಿದ್ದಾರೆ. 'ಕಾಜಾಣ'ದ ಸಂಪಾದಕ

ದೊಡ್ಡಹುಲ್ಲೂರು ರುಕ್ಕೋಜಿರಾವ್ 'ಜನುಮದಾತ' ಚಿತ್ರಕ್ಕೆ ಕಥೆ ಬರೆದವರು. ಮಂಗಳೂರಿನ ಮನೋಹರ ಪ್ರಸಾದ್ ತುಳು ಚಿತ್ರಕ್ಕೆ ಸಾಹಿತ್ಯ ಬರೆದು ಅಭಿನಯಿಸಿಯೂ ಇದ್ದಾರೆ.

ರೇವತಿ ಕಲ್ಯಾಣ್‌ಕುಮಾರ್ ಕತೆಗಾರ್ತಿ. ಅವರ ಕತೆಗಳು, ಲೇಖನಗಳು ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಕೆಲವು ಕನ್ನಡ ಚಿತ್ರಗಳಿಗೆ ಕಥೆ, ಚಿತ್ರಕಥೆ, ಸಂಭಾಷಣೆಗಳನ್ನು ರಚಿಸಿದ್ದಾರೆ. ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ದಕ್ಷಿಣ ಕನ್ನಡದಿಂದ ೩೦ರ ದಶಕದಲ್ಲಿ ಪ್ರಕಟವಾಗುತ್ತಿದ್ದ 'ಅಂತರಂಗ' ವಾರಪತ್ರಿಕೆಯ ಸಂಸ್ಥಾಪಕ ಸಂಪಾದಕರಾದ ಫಣಿಯಾಡಿ ಅವರ ಮಗಳು ಹರಿಣಿ ಪತ್ರಕರ್ತೆಯಾಗಿ ದೊರೆತ ಸದವಕಾಶವನ್ನು ಸಮರ್ಥವಾಗಿ ಉಪಯೋಗಿಸಿಕೊಂಡರು. 'ಸುಧಾ' ವಾರಪತ್ರಿಕೆ ಆರಂಭವಾದಾಗ ಆ ಪತ್ರಿಕೆಗಾಗಿ ಅವರು ಬರೆದ ಚಲನಚಿತ್ರ ಕಲಾವಿದರ ಕುರಿತಾದ ಸಂದರ್ಶನ ಲೇಖನಮಾಲೆ ಅತಿ ವಿಶಿಷ್ಟವಾದುದು. ಪತ್ರಿಕೆ ಹಾಗೂ ಪತ್ರಕರ್ತರೊಡನೆ ನಿಕಟ ಸಂಪರ್ಕ ಇಟ್ಟುಕೊಂಡಿದ್ದ ಎಸ್.ಲಕ್ಷ್ಮೀನಾರಾಯಣ್ ಕನ್ನಡ ಇಂಗ್ಲಿಷ್ ಭಾಷೆಗಳಲ್ಲಿ ಚಲನಚಿತ್ರಕ್ಕೆ ಸಂಬಂಧಪಟ್ಟಂತೆ ಮೌಲಿಕ ಸಂಗ್ರಹಯೋಗ್ಯ ಲೇಖನಗಳನ್ನು ಬರೆಯುತ್ತಿದ್ದರು. ತಾವು ಒಬ್ಬ ಗೌರವ ಪತ್ರಕರ್ತ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು.


(ಚಿತ್ರ ೫) ರೇವತಿ ಕಲ್ಯಾಣ್‌ಕುಮಾರ್

ಕನ್ನಡ ಚಲನಚಿತ್ರೋದ್ಯಮ ಮತ್ತು ಪತ್ರಿಕೋದ್ಯಮದ ನಡುವೆ ಈ ರೀತಿ ಹಲವು ಕೊಡು-ಕೊಳ್ಳುವಿಕೆಗಳು ನಡೆದು ಎರಡೂ ಕ್ಷೇತ್ರಗಳೂ ಶ್ರೀಮಂತವಾಗಿವೆ. ಚಲನಚಿತ್ರ ಪತ್ರಕರ್ತರು ಚಿತ್ರರಂಗದ ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಸಮಿತಿ, ಸಂಘ ಸಂಸ್ಥೆಗಳ ಮೂಲಕ ಚಿತ್ರೋದ್ಯಮದ ಪರವಾಗಿ ಹೋರಾಟ ನಡೆಸಿದ್ದಾರೆ.

ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಹಾಗೂ ಕನ್ನಡ ಚಲನಚಿತ್ರರಂಗದ ನಡುವೆ ಸಂಘರ್ಷ-ವಾಗ್ವಾದಗಳೂ ನಡೆದಿವೆ. ಹಲವು ಸಂದರ್ಭಗಳಲ್ಲಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಚಿತ್ರರಂಗದ ಅಭಿವೃದ್ಧಿಗಾಗಿ ಬರೆದುದು ಚಿತ್ರೋದ್ಯಮದ ಪಾಲಿಗೆ ಅಪಥ್ಯ ಎನಿಸಿದ್ದೂ ಉಂಟು. ಏನೇ ಸಂಘರ್ಷ ಮಾಡಿದ್ದರೂ ಅದನ್ನು ಮೀರಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಹಾಗೂ ಕನ್ನಡ ಪತ್ರಿಕೋದ್ಯಮ ಕನ್ನಡ ಚಲನಚಿತ್ರರಂಗಕ್ಕೆ ನೀಡಿರುವ ಕೊಡುಗೆ ಗಮನಾರ್ಹ. ಇಂದು ಕೋಟ್ಯಾಂತರ ರೂ.ಗಳ ವೆಚ್ಚದಲ್ಲಿ ಕನ್ನಡ ಚಿತ್ರ ತಯಾರಿಸಲು ನಿರ್ಮಾಪಕರು ಮುಂದಡಿ ಇಡುವುದಕ್ಕೆ ಚಲನಚಿತ್ರ ಪತ್ರಿಕೋದ್ಯಮ ನೀಡಿರುವ ಆ ಕೊಡುಗೆಯೇ ಸ್ಫೂರ್ತಿಯಾಗಿದೆ ಎಂದರೆ ಅತಿಶಯವೇನಿಲ್ಲ. ಕನ್ನಡದ ಗಡಿ ದಾಟಿ ತಮಿಳು-ತೆಲುಗು ಚಿತ್ರರಂಗದಲ್ಲಿ ಮೈಮರೆತ ಕಲಾವಿದ-ಕಲಾವಿದೆಯರು ಅಹಂಭಾವದಿಂದ ಕನ್ನಡ ಚಲನಚಿತ್ರ ಪತ್ರಕರ್ತರನ್ನು ತಾತ್ಸಾರವಾಗಿ ಕಂಡ, ಕಡೆಗಣಿಸಿದ ನಿದರ್ಶನಗಳೂ ಸಾಕಷ್ಟಿವೆ. ಇಂತಹ ಸಂದರ್ಭಗಳಲ್ಲಿ ಇಡೀ ಪತ್ರಿಕೋದ್ಯಮವೇ ಅಂಥವರನ್ನು ಬಹಿಷ್ಕರಿಸಿದ ಸಂದರ್ಭಗಳೂ ಇವೆ. ಒಮ್ಮೆ ಕನ್ನಡ ಚಿತ್ರರಂಗದ ಕಲಾವಿದೆಯೊಬ್ಬರು ತಮಿಳು ಭಾಷೆಯ ಚಿತ್ರಗಳಲ್ಲಿ 'ಸ್ಟಾರ್' ಆದಾಗ ಕನ್ನಡವನ್ನು ಮತ್ತು ಕನ್ನಡ ಪತ್ರಕರ್ತರನ್ನು ನಿಕೃಷ್ಟವಾಗಿ ಕಂಡ ಘಟನೆಯೊಂದಿದೆ. ಆ ಕಲಾವಿದೆ ಅಭಿನಯಿಸಿದ ಕನ್ನಡ ಚಿತ್ರವೊಂದು ಬಿಡುಗಡೆಯಾಗಿ ರಜತೋತ್ಸವ ವಾರ ಕಂಡಿತು. ಮೊಟ್ಟಮೊದಲ ಬಾರಿಗೆ ಕನ್ನಡ ಚಿತ್ರವೊಂದು ೨೫ ವಾರ ಪ್ರದರ್ಶನ ಕಂಡು ರಜತೋತ್ಸವ ಆಚರಿಸುವುದು ಕನ್ನಡ ಚಲನಚಿತ್ರ ಪತ್ರಕರ್ತರಿಗೆ ಹೆಮ್ಮೆ ಹಾಗೂ ಸಂತೋಷ ಉಂಟುಮಾಡಿತ್ತು. ಪತ್ರಕರ್ತರು ಆ ಚಲನಚಿತ್ರ ತಂಡದವರಿಗೆ ಸತ್ಕಾರ ಕೂಟವೊಂದನ್ನು ಏರ್ಪಡಿಸಿ ಆ ಕಲಾವಿದೆಯನ್ನು ಆಹ್ವಾನಿಸಿದಾಗ ಆ ಸಮಾರಂಭಕ್ಕಿಂತಲೂ ತಮಿಳು ಚಿತ್ರದ ಚಿತ್ರೀಕರಣವೇ ಮಹತ್ವದ್ದೆಂದು ಆಕೆ ಪರಿಗಣಿಸಿದರು. ಇದು ತಮಗಾದ ಅಪಮಾನವೆಂದೇ ಚಲನಚಿತ್ರ ಪತ್ರಕರ್ತರು ಭಾವಿಸಿದರು. ಪರಿಣಾಮವಾಗಿ ಕನ್ನಡ ಚಲನಚಿತ್ರ ಪತ್ರಕರ್ತರು ಆಕೆ ಅಭಿನಯಿಸಿದ ಚಿತ್ರಗಳ ಬಗ್ಗೆ ಬರೆದರಾದರೂ ಆಕೆಯ ಬಗ್ಗೆ ಬರೆಯುವುದನ್ನು ನಿಲ್ಲಿಸಿದರು. ಆಕೆಯ ಭಾವಚಿತ್ರಗಳನ್ನು-ಸ್ಥಿರಚಿತ್ರಗಳನ್ನು ಪ್ರಕಟಿಸುವುದನ್ನು ನಿಲ್ಲಿಸಿ ಅಲಕ್ಷಿಸಿದರು. ಕೆಲ ಕಾಲ ಆಕೆ ಅಭಿನಯಿಸಿದ ಯಾವುದೇ ಚಿತ್ರದ ಸುದ್ದಿಯಾಗಲಿ, ಛಾಯಾಚಿತ್ರವಾಗಲಿ ಪ್ರಕಟವಾಗಲಿಲ್ಲ. ಮುಂದೆ ಅದೇ ಚಿತ್ರದ ನಿರ್ಮಾಪಕರು ತಮ್ಮ ಮಹತ್ವಾಕಾಂಕ್ಷೆಯ ಇನ್ನೊಂದು ಚಿತ್ರದ ತಯಾರಿಕೆ ಆರಂಭಿಸುವಾಗ ಆ ಚಿತ್ರದ ಪ್ರಧಾನ ಭೂಮಿಕೆಗೆ ಯಾವ ಕಲಾವಿದೆಯನ್ನು ಆಯ್ಕೆ ಮಾಡಿಕೊಳ್ಳಬೇಕೆಂಬ ಬಗ್ಗೆ ಪತ್ರಕರ್ತರನ್ನು ಕೇಳಿದಾಗ ಪತ್ರಕರ್ತರು ಆಕೆಯನ್ನೇ ಶಿಫಾರಸು ಮಾಡಿದರು. ಅದೇ ನಿರ್ಮಾಪಕ-ನಿರ್ದೇಶಕರು ಆ ಕಲಾವಿದೆಯನ್ನು ಬೆಂಗಳೂರಿಗೆ ಕರೆತಂದು ಆಕೆ ಕ್ಷಮೆ ಕೋರುವಂತೆ ಮಾಡಿದರು. ನಂತರ ಪರಿಸ್ಥಿತಿ ತಿಳಿಯಾಯಿತು. ಪತ್ರಕರ್ತರು ಆಕೆಯ ಬಗ್ಗೆ ಕಟುವಾಗಿ ಬರೆಯುವ ಅವಕಾಶ ಸಾಕಷ್ಟಿದ್ದರೂ ಲೇಖನಿಯನ್ನು ಆ ದಿಸೆಯಲ್ಲಿ ಬಳಸದೆ ಅತ್ಯಂತ ಸಂಯಮದಿಂದ ವರ್ತಿಸಿದ್ದರು. ಆ ಕಲಾವಿದೆ ಉದ್ಯಮದ ಕೆಲವರನ್ನು ಮುಂದಿಟ್ಟುಕೊಂಡು ಪತ್ರಿಕೆಗಳ ಮಾಲೀಕರು ಮತ್ತು ಸಂಪಾದಕರನ್ನು ಒಲಿಸಿಕೊಂಡು ಬಹಿಷ್ಕಾರವನ್ನು ಮುರಿಯುವ ವಿಫಲ ಯತ್ನ ನಡೆಸಿದರು. ವಿಷಯದ ಪೂರ್ಣ ಮಾಹಿತಿ ತಿಳಿದಿದ್ದ ಸಂಪಾದಕರು-ಮಾಲೀಕರು ಚಲನಚಿತ್ರ ಪತ್ರಕರ್ತರ ನಿರ್ಧಾರವನ್ನೇ ಬೆಂಬಲಿಸಿದರು ಎಂಬುದು ಇಲ್ಲಿ ಗಮನಾರ್ಹ. ಕನ್ನಡ ಚಲನಚಿತ್ರ ಪತ್ರಕರ್ತರ ಈ ನಿರ್ಧಾರ ಇತರರಿಗೂ ಮಾದರಿ ಎನಿಸಿತು.

'ಮೇನಕಾ' ಪತ್ರಿಕೆಯಲ್ಲಿನ ತಮ್ಮ ಅಶ್ವತ್ಥ ಪ್ರದಕ್ಷಿಣೆ ಅಂಕಣದಲ್ಲಿ ಪತ್ರಕರ್ತ ಟಿ.ಜಿ.ಅಶ್ವತ್ಥನಾರಾಯಣ ಮೈಸೂರು ಪ್ರೀಮಿಯರ್ ಸ್ಟುಡಿಯೋ ಬಗ್ಗೆ ಬರೆದಾಗ ಅದನ್ನು ಇಷ್ಟಪಡದ ಸ್ಟುಡಿಯೋ ಮಾಲೀಕರು ಅವರನ್ನು ಸ್ಟುಡಿಯೋ ಆವರಣದಲ್ಲೇ ಕೂಡಿ ಹಾಕಿ ಪ್ರಾಣ ಬೆದರಿಕೆ ಒಡ್ಡಿದರು. ಈ ಘಟನೆಯ ಬಗ್ಗೆ ಓದುಗರಿಂದ, ಪತ್ರಕರ್ತರಿಂದ ದೊಡ್ಡ ಪ್ರತಿಭಟನೆಯೇ ಎದ್ದಿತು. ವಿಧಾನಸಭೆಯಲ್ಲೂ ಈ ವಿಷಯ ಪ್ರಸ್ತಾಪಕ್ಕೆ ಬಂದಿತು.

ಅದೇ ರೀತಿಯದು 'ಸುಧಾ' ಪತ್ರಿಕೆಯ ಗಂಗಾಧರ ಮೊದಲಿಯಾರ್ ಪ್ರಕರಣ. ಈ ವಿವಾದ ಕೊನೆಗಾಣದಾದಾಗ ಪತ್ರಿಕೆಯ ಸಂಪಾದಕರು ವಿಷಾದ ವ್ಯಕ್ತಪಡಿಸಿ ಅದಕ್ಕೆ ಮಂಗಳ ಹಾಡಬೇಕಾಯಿತು. ಅದೇ ರೀತಿ ಬೆಂಗಳೂರಿನಲ್ಲಿ ನಡೆದ ಚಲನಚಿತ್ರೋತ್ಸವದಲ್ಲಿ ಕೆ.ಎಸ್.ನಾಗೇಶ್‌ಕುಮಾರ್ ಅವರ ಮೇಲೆ ನಟರೊಬ್ಬರು ಕೈ ಮಾಡಿದ್ದು ಅಂತಹ ಇನ್ನೊಂದು ದುರ್ಘಟನೆ. ಐವತ್ತು-ಅರುವತ್ತರ ದಶಕದಲ್ಲಿ ತಮ್ಮ ಚಿತ್ರಗಳ ಬಗ್ಗೆ ವಿಮರ್ಶೆ ಕಟುವಾಯಿತೆಂದು ಕುಪಿತಗೊಂಡ ಕನ್ನಡ ಚಿತ್ರನಿರ್ಮಾಪಕರೊಬ್ಬರು ಮದರಾಸಿಗೆ ಹೋಗಿ ನೆಲೆಸಿ ತೆಲುಗು ಚಿತ್ರನಿರ್ಮಾಣದಲ್ಲಿ ತೊಡಗಿಕೊಂಡದ್ದು ಒಂದು ವಿಸ್ಮಯ ಪ್ರಸಂಗ.

ಮೆಚ್ಚಿ ಬರೆದರೆ ಸರಿ, ಟೀಕಿಸಿದರೆ ಮುನಿಸು. ಸಿನಿಮಾ ಪತ್ರಿಕೋದ್ಯಮವೂ ಇದಕ್ಕೆ ಹೊರತಲ್ಲ. ಚಿತ್ರರಂಗದ ಒಳ ರಾಜಕೀಯ, ವೈಮನಸ್ಯ, ವ್ಯಕ್ತಿಗತ ಜಿದ್ದು, ವೈಷಮ್ಯಗಳು ಕಲಕಾಲ ಸಂಘರ್ಷಕ್ಕೆ ಕಾರಣವಾದದ್ದೂ ಉಂಟು. 'ಮೇನಕಾ' ಪತ್ರಿಕಾ ಬಳಗಕ್ಕೆ ಟಿ.ಜಿ.ಅಶ್ವತ್ಥನಾರಾಯಣ ಸೇರಿದ ಹೊಸತರಲ್ಲಿ ಕನ್ನಡ ಜನಪ್ರಿಯ ನಾಯಕನಟರೊಬ್ಬರ ಬಗ್ಗೆ ಬರೆಯುತ್ತ 'ಆತ ವರವಲ್ಲ, ಶಾಪ' ಎಂದು ಬರೆದುದು ಕೋಲಾಹಲಕ್ಕೆ ಕಾರಣವಾಯಿತು. 'ವಿಶ್ವಾಮಿತ್ರ'ರ ಕಾಲಂನಲ್ಲಿ ಆ ಬಗ್ಗೆ ವಿಷಾದ ವ್ಯಕ್ತಪಡಿಸಿದ್ದು ಒಂದು ಪ್ರಸಂಗ.

ಬೆಂಗಳೂರಿನ ಚಾಮುಂಡೇಶ್ವರಿ ಸ್ಟುಡಿಯೋವಿನಲ್ಲಿ ಹಿಂದಿ ಚಿತ್ರವೊಂದರ ಚಿತ್ರೀಕರಣ ಸಂದರ್ಭ. ಫ್ಲೋರಿನೊಳಗೆ ಯಾರನ್ನೂ ಬಿಡದೆ ಚಿತ್ರೀಕರಣ ನಡೆಯುತ್ತಿತ್ತು. 'ಡೆಕ್ಕನ್ ಹೆರಾಲ್ಡ್' ಪತ್ರಿಕೆಯ ಎಸ್.ಜಿ.ಮೈಸೂರುಮಠ್‌ರು ಅಲ್ಲಿಗೆ ಹೋದಾಗ ಚಿತ್ರದ ನಿರ್ದೇಶಕರು ಅವಮಾನಿಸಿದರು. ಕೆ.ಎಸ್.ನಾರಾಯಣಸ್ವಾಮಿ ಅಧ್ಯಕ್ಷರಾಗಿದ್ದ ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತಿನಿಂದ ಬಹಿಷ್ಕಾರ ಹಾಕಲಾಯಿತು. ನಂತರ ನಿರ್ಮಾಪಕರೇ ಬಂದು ಕ್ಷಮೆ ಕೇಳಿದ ಮೇಲೆಯೇ ಬಹಿಷ್ಕಾರ ಕ್ರಮವನ್ನು ಹಿಂತೆಗೆದುಕೊಳ್ಳಲಾಯಿತು. ಇಂತಹ ಅಪರೂಪದ ಕೆಲ ಘಟನೆಗಳನ್ನು ಬಿಟ್ಟರೆ ಒಟ್ಟಾರೆಯಾಗಿ ಚಲನಚಿತ್ರರಂಗ ಮತ್ತು ಪತ್ರಿಕೋದ್ಯಮದ ನಡುವಣ ಸಂಬಂಧ ಆರೋಗ್ಯಕರವಾಗಿಯೇ ಬೆಳೆದು ಬಂದಿದೆ ಎನ್ನಬೇಕು. ಈ ಸಾಮರಸ್ಯ ಸತತವಾಗಿದೆ. ಮೇಲೆ ಪ್ರಸ್ತಾಪಿಸಲಾದ ಅನಪೇಕ್ಷಿತ ಘಟನೆಗಳು ನಡೆದಾಗಲೆಲ್ಲ ಚಲನಚಿತ್ರ ಪತ್ರಕರ್ತರು ಸಂಘಟಿತರಾಗಿ, ಐಕ್ಯತೆಯಿಂದ ಅಂತಹ ಕಹಿ ಪ್ರಸಂಗಗಳಿಗೆ ಮುಕ್ತಾಯ ಹಾಡಿದ್ದಾರೆ. ಅಂತಹ ಘಟನೆಗಳು ಮರುಕಳಿಸದಂತೆ ಎಚ್ಚರ ವಹಿಸಿ ಪ್ರಜ್ಞಾವಂತಿಕೆ ತೋರಿದ್ದಾರೆ ಎಂಬುದು ಗಮನಾರ್ಹ.

ಕನ್ನಡ ಚಲನಚಿತ್ರರಂಗ ಈ ೨೦೦೦ಕ್ಕೆ ಅರುವತ್ತೇಳನೆಯ ವರ್ಷಕ್ಕೆ ಕಾಲಿಟ್ಟಿದೆ. ಕನ್ನಡ ಚಲನಚಿತ್ರ ಪತ್ರಿಕೋದ್ಯಮಕ್ಕೆ ಅರುವತ್ತೈದು ವರ್ಷಗಳಾಗಿವೆ. ಕಳೆದ ಆರೂವರೆ ದಶಕಗಳಲ್ಲಿ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಹಲವು ಘಟ್ಟಗಳನ್ನು-ಮಜಲುಗಳನ್ನು

ದಾಟಿಕೊಂಡು ಬಂದಿದೆ. ಕನ್ನಡ ಚಿತ್ರರಂಗದ ಬೆಳವಣಿಗೆಗೆ, ಚಿತ್ರೋದ್ಯಮದ ಪ್ರಗತಿ ಸಾಧನೆಗೆ ಅದು ಹಲವು ಹತ್ತು ಬಗೆಗಳಲ್ಲಿ ಶ್ರಮಿಸಿದೆ. ಕನ್ನಡ ಚಲನಚಿತ್ರಗಳಿಗೆ ಪ್ರೇಕ್ಷಕರನ್ನು ಸಂಪಾದಿಸಿಕೊಡುವಲ್ಲಿಂದ ಪ್ರಗತಿಯ ಹಂತಹಂತದಲ್ಲೂ ತನ್ನ ಕಾಣಿಕೆಯನ್ನು ಸಲ್ಲಿಸಿದೆ. ಕನ್ನಡ ಚಿತ್ರರಂಗದ ಪ್ರತಿಯೊಂದು ಹೆಜ್ಜೆ ಗುರುತುಗಳನ್ನೂ ಅದು ದಾಖಲಿಸಿದೆ. ಉದ್ಯಮದ ಏಳು-ಬೀಳುಗಳಿಗೆ, ಸಮಸ್ಯೆಗಳಿಗೆ, ಸಾಧನೆಗಳಿಗೆ ಕನ್ನಡಿ ಹಿಡಿದಿದೆ. ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ನೆರವಾಗಿದೆ. ಉದ್ಯಮದ ಮುಖವಾಣಿಯಾಗಿ ನಿಂತು ಹೋರಾಟ-ಚಳವಳಿಗಳಿಗೆ ಪ್ರೇರಣೆಗಳನ್ನೂ ಮಾರ್ಗದರ್ಶನವನ್ನೂ ನೀಡಿದೆ.

ಇಷ್ಟಾದರೂ ಕನ್ನಡ ಚಲನಚಿತ್ರ ಪತ್ರಿಕೋದ್ಯಮ ಇನ್ನೂ ಸಂಪೂರ್ಣವಾಗಿ ವೃತ್ತಿಪರ ನಿರೀಕ್ಷೆ-ಮಟ್ಟಗಳಿಗೆ ತಕ್ಕಂತೆ ಬೆಳೆದು ನಿಂತಿಲ್ಲ ಎಂದೇ ಹೇಳಬೇಕು. ಒಟ್ಟಾರೆಯಾಗಿ ಚಲನಚಿತ್ರ ಪತ್ರಿಕೋದ್ಯಮಕ್ಕೆ ಪತ್ರಿಕೋದ್ಯಮದ ಮುಖ್ಯವಾಹಿನಿಯಲ್ಲಿ ದೊರೆಯಬೇಕಾದ ಸ್ಥಾನ-ಮಾನಗಳೂ ದೊರೆತಿಲ್ಲ. ಕರ್ನಾಟಕ ಪತ್ರಿಕೋದ್ಯಮದ ಇತಿಹಾಸದಲ್ಲೂ ಚಲನಚಿತ್ರ ಪತ್ರಿಕೋದ್ಯಮದ ಪರಿಶ್ರಮ-ಸಾಧನೆ ದಾಖಲಾಗಿಲ್ಲ.

ಆರೂವರೆ ದಶಕಗಳಲ್ಲಿ ಹತ್ತಾರು ಪತ್ರಿಕೆಗಳು ಹುಟ್ಟಿಕೊಂಡರೂ ಬಹುತೇಕ ಪತ್ರಿಕೆಗಳು ಸ್ಥಿರವಾಗಿ ನಿಲ್ಲಲಿಲ್ಲ. ಬಹುತೇಕ ಅಲ್ಪಾಯುಷಿಗಳೆ. ಚಲನಚಿತ್ರ ಪತ್ರಿಕೆಯೊಂದನ್ನು ಆರಂಭಿಸುವುದು ಕೇವಲ ಹವ್ಯಾಸ ಅಥವಾ ಜನಪ್ರಿಯ ಮಾಧ್ಯಮವೊಂದರ ಲಾಭ ಪಡೆಯುವ ಯತ್ನ ಎಂಬಂತಾಯಿತು. ಪ್ರಾರಂಭದ ಹಂತವಲ್ಲಿ ಅದು ಚಿತ್ರರಂಗದ ರಂಗು-ರಂಗಿನ ಸುದ್ದಿ-ಸಮಾಚಾರ, ನಟ-ನಟಿಯರ ಬಗ್ಗೆ ಒಂದಷ್ಟು ಗಾಸಿಪ್ ಬರೆದರೆ ಅದೇ ಸಿನಿಮಾ ಪತ್ರಿಕೆ ಎಂಬ ಭಾವನೆ ಇತ್ತು. ಹೀಗಾಗಿ ಸಿನಿಮಾ ಪತ್ರಿಕೆಗಳಿಗೆ ಸಹಜವಾಗಿಯೇ ಒಂದು ಅಂತಸ್ತು ಇರಲಿಲ್ಲ. ಬರವಣಿಗೆಯೂ ತೀರಾ ಹಗುರವಾಗಿರುತ್ತಿತ್ತು. ಕೆಲವು ಸಂದರ್ಭಗಳಲ್ಲಿ ಸ್ವಂತ ಮುದ್ರಣಾಲಯ ಹೊಂದಿದ್ದ ಕೆಲವರು ಖಯಾಲಿಗಾಗಿ ಚಲನಚಿತ್ರ ಪತ್ರಿಕೆಗಳನ್ನು ಹೊರಡಿಸುವುದೂ ಇತ್ತು. ಸರಿಯಾದ ಪರಿಕಲ್ಪನೆ ಇಲ್ಲದೆ ಹಣಕಾಸಿನ ಭದ್ರತೆ ಇಲ್ಲದೆ ಹಲವು ಪ್ರಯತ್ನಗಳು ಆರಂಭದಲ್ಲೇ ವಿಫಲವಾದವು. ವೈಯಕ್ತಿಕ ನೆಲೆಯ ಪ್ರಯತ್ನಗಳೆಲ್ಲವೂ ಬಹುತೇಕ ಸೋಲನ್ನೇ ಕಂಡವು. ಆರು ದಶಕಗಳು ಸರಿದಿದ್ದರೂ ಕನ್ನಡ ಚಲನಚಿತ್ರ ಪತ್ರಿಕೋದ್ಯಮಕ್ಕೆ ಇನ್ನೂ ಸರಿಯಾದ ನೆಲೆ ದಕ್ಕಿಲ್ಲ ಎಂದೇ ಹೇಳಬೇಕು. ಈಗ ಇರುವ ಐದು-ಆರು ಸಿನಿಮಾ ಪತ್ರಿಕೆಗಳಲ್ಲಿ ಒಂದೆರಡು ಮಾತ್ರ ಸಶಕ್ತವಾಗಿವೆ.

ದಿನ ಪತ್ರಿಕೆಗಳೇ ಬಹುತೇಕ ಜನ ಬಯಸುವ ಎಲ್ಲ ರೀತಿಯ ಸುದ್ದಿ-ಸಮಾಚಾರ, ಸಾಹಿತ್ಯ, ಸಂಸ್ಕೃತಿ, ಕಲೆಗಳಿಗೆ ಸಂಬಂಧಿಸಿದ ವಿಷಯಗಳನ್ನು ನೀಡುತ್ತಿದ್ದು ಸಿನಿಮಾ ರಂಗಕ್ಕೆ ಸಂಬಂಧಿಸಿದ ಪ್ರತ್ಯೇಕ ಪುರವಣಿಗಳನ್ನು ಪ್ರಕಟಿಸುತ್ತಿರುವುದರಿಂದ ಸ್ವತಂತ್ರ ಸಿನಿಮಾ ಪತ್ರಿಕೆಗಳ ನೆಲೆ ಸೀಮಿತಗೊಂಡಿರುವುದು ಅದಕ್ಕೆ ಮತ್ತೊಂದು ಕಾರಣ. ಅಲ್ಲದೆ ಇನ್ನೊಂದೆಡೆಯಿಂದ ಸಾಹಿತ್ಯ ಪ್ರಧಾನ ವಾರಪತ್ರಿಕೆಗಳು, ಮಾಸಪತ್ರಿಕೆಗಳು, ನಿಯತಕಾಲಿಕಗಳು, ವ್ಯಾಪಾರ-ವಾಣಿಜ್ಯ-ಕ್ರೀಡೆ-ಕಲೆಗಳಿಗೆ ಮೀಸಲಾದ ಇತರ ಪತ್ರಿಕೆಗಳೊಂದಿಗೂ ಸ್ವಲ್ಪಮಟ್ಟಿನ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ. ಕಾಲ ಬದಲಾಗಿದ್ದರೂ ಇಂದಿನ ನಮ್ಮ ಪತ್ರಿಕೆಗಳು ತಮ್ಮ ದಾರಿಯನ್ನು ಬದಲಿಸಿಲ್ಲ. ಎಲ್ಲ ಸಿನಿಮಾ ಪತ್ರಿಕೆಗಳೂ ಆಧುನಿಕ ಆಫ್‌ಸೆಟ್ ಮುದ್ರಣದಲ್ಲಿ ಹೊರಬರುತ್ತಿವೆ ಎಂಬ ಅಂಶವನ್ನು ಬಿಟ್ಟರೆ ಮಿಕ್ಕ ವಿಷಯದಲ್ಲಿ ಯಾವ ಗಮನಾರ್ಹ ಬದಲಾವಣೆಗಳೂ ಕಾಣುತ್ತಿಲ್ಲ. ಆಕರ್ಷಕ ಭಂಗಿಗಳಲ್ಲಿ ತಾರೆಯರ ಭಾವಚಿತ್ರಗಳನ್ನು ಮುಖಪುಟಗಳಲ್ಲಿ ಪ್ರಕಟಿಸಿ ಅವರನ್ನು ವೈಭವೀಕರಿಸುವ ಪರಿಪಾಠವನ್ನು ಕೈ ಬಿಟ್ಟಿಲ್ಲ. ಕನ್ನಡ ಸಿನಿಮಾಗಳಲ್ಲಿರುವಂತೆಯೇ ಸಿನಿಮಾ ಪತ್ರಿಕೆಗಳಿಗೂ ನಾಯಕ-ನಾಯಕಿಯರೇ ಮುಖ್ಯ. ಇಡೀ ಚಿತ್ರರಂಗದ ಸಾಧನೆ ಅಲ್ಲಿ ಇನ್ನೂ ಸಮಗ್ರವಾಗಿ ಮೂಡಿ ಬರುತ್ತಿಲ್ಲ. ರಂಗದ ತಂತ್ರಜ್ಞರನ್ನೂ ಸಾಧನಶೀಲರನ್ನೂ ಎತ್ತಿ ಹಿಡಿಯುವುದು ಅಪರೂಪ. ಚಿತ್ರವಿಮರ್ಶೆಯೂ ನಮ್ಮಲ್ಲಿ ನಿರೀಕ್ಷೆಯ ಮಟ್ಟಕ್ಕೆ ಬೆಳೆದಿಲ್ಲ ಎನ್ನಬಹುದು. ಅದಕ್ಕೆ ಇನ್ನೂ ವೃತ್ತಿಪರತೆ ಬಂದೇ ಇಲ್ಲ. ಚಲನಚಿತ್ರ ಪತ್ರಿಕೋದ್ಯಮದ ಆರಂಭದ ಹಂತಗಳಲ್ಲಿ ಬರುತ್ತಿದ್ದ ಮಟ್ಟದ ವಿಮರ್ಶೆಗಳೂ ಇಂದು ಬರುತ್ತಿಲ್ಲ. ಪರಿಣತ ದೃಷ್ಟಿಯ ವಿಮರ್ಶೆಗಳು ಇಲ್ಲವೇ ಇಲ್ಲ ಎನ್ನುವಷ್ಟು ವಿರಳವಾಗಿವೆ. ಒಟ್ಟಿನಲ್ಲಿ ಸಿನಿಮಾರಂಗದಿಂದ ವಿಮರ್ಶೆ ಅಸ್ತಮಿಸಿದೆ ಎಂದು ಹೇಳಬಹುದು. ಚಲನಚಿತ್ರ ವಿಮರ್ಶೆಯನ್ನು ಸಿನಿಮಾರಂಗದವರು-ಪ್ರೇಕ್ಷಕರು ಗಂಭೀರವಾಗಿ ತೆಗೆದುಕೊಳ್ಳದಿರುವುದೂ ಅದಕ್ಕೊಂದು ಕಾರಣವಾಗಿರಬಹುದು.

ಚಲನಚಿತ್ರ ಪತ್ರಿಕೋದ್ಯಮ ಕ್ಷೇತ್ರವನ್ನು ಪ್ರವೇಶಿಸುವವರಿಗೆ ಇರಬೇಕಾದ ಅರ್ಹತೆ, ಮಾನದಂಡಗಳು ಇಂದು ಸಂಪೂರ್ಣವಾಗಿ ಬದಿಗೆ ಸರಿದಿವೆ. ಆಕಸ್ಮಿಕವಾಗಿ ಈ ಕ್ಷೇತ್ರ ಪ್ರವೇಶಿಸಿದವರೂ ತೋಚಿದಂತೆ ಬರೆಯುವ ಪರಿಪಾಠ ಬೆಳೆಯುತ್ತಿದೆ. ಇಲ್ಲಿ ದಾರಿ ತೋರಿಸುವ ಕೆಲಸಕ್ಕಿಂತ ಅಂಥವರ ನಡೆಗೆ ಕನ್ನಡಿ ಹಿಡಿಯುವ ಕೆಲಸ ಚುರುಕಾಗಿ ಆಗಬೇಕಾಗಿದೆ.

ಪತ್ರಕರ್ತರು ಸತ್ಯನಿಷ್ಠರಾಗಿರಬೇಕು. ಅಂದರೆ ಆಯಾ ರಂಗದ ಸಾಧನೆಗಳೊಂದಿಗೆ ಅಲ್ಲಿನ ವೈಫಲ್ಯ-ವೈರುಧ್ಯಗಳನ್ನು ತೋರಿಸಿಕೊಡಬೇಕು. ಇದು ಪತ್ರಿಕಾ ಧರ್ಮ. ಸಾಮಾನ್ಯವಾಗಿ ದೊಡ್ಡ ಪತ್ರಿಕಾ ಸಂಸ್ಥೆಗಳಲ್ಲಿ ಈ ನೀತಿ ಸಂಹಿತೆಯ ಚೌಕಟ್ಟಿನೊಳಗೇ ಕೆಲಸ ಮಾಡಬೇಕಾಗುತ್ತದೆ. ಆದರೆ ಖಾಸಗಿ ಪತ್ರಿಕೆಗಳಲ್ಲಿ ಸ್ವಚ್ಛಂದತೆ ಹೆಚ್ಚು. ಕೆಲವು ಸಂದರ್ಭಗಳಲ್ಲಿ ಈ ಸ್ವಾತಂತ್ರ್ಯ ಅತಿ ಎನಿಸುವ ಮಟ್ಟ ಮುಟ್ಟಿದ್ದೂ ಉಂಟು. ವಸ್ತುನಿಷ್ಠೆ ಎಂದಾಗ ಸಿಹಿ-ಕಹಿ, ಒಳಿತು-ಕೆಡುಕು ಎರಡೂ ಸಹಜವೇ. ಪತ್ರಿಕೋದ್ಯಮದ ಇತಿಹಾಸವನ್ನು ಗಮನಿಸಿದರೆ ತಪ್ಪು-ಒಪ್ಪುಗಳು ಸಾಕಷ್ಟಾಗಿವೆ. ದುರದೃಷ್ಟಕರ ಎನಿಸುವ ಘಟನೆಗಳೂ ಸಂಭವಿಸಿವೆ.

ಕನ್ನಡದಲ್ಲಿ ಟಾಕಿ ಚಿತ್ರಗಳು ತಯಾರಾಗತೊಡಗಿದಾಗ ರಂಗಭೂಮಿಯಿಂದ ಈ ಹೊಸರಂಗಕ್ಕೆ-ಮಾಧ್ಯಮಕ್ಕೆ ಬಂದವರಿಗೆ ಸಿನಿಮಾ ಪತ್ರಿಕೆಗಳು ಸಾಕಷ್ಟು ಪ್ರಚಾರ ನೀಡಿದವು. ಚಿತ್ರರಂಗ ಉದ್ಯಮವಾಗಿ ಬೆಳೆದು ಅದು ರಂಗುರಂಗಿನ ತಾರಾಲೋಕವಾದಾಗ ಪತ್ರಿಕಾ ಬರವಣಿಗೆಯ ರೀತಿ-ನೀತಿಗಳೂ ಬದಲಾದವು. ತಾಂತ್ರಿಕತೆ ಸುಧಾರಿಸುತ್ತ ಹೋದಂತೆ ವಿಮರ್ಶೆ-ವಿಶ್ಲೇಷಣೆಗಳ ಮಾನದಂಡಗಳೂ ಬದಲಾದವು. ಇನ್ನೊಂದೆಡೆಯಿಂದ ತಾರಾಮೌಲ್ಯಗಳೂ ಹುಟ್ಟಿ ವ್ಯಕ್ತಿಪೂಜೆಗೂ ದಾರಿ ಮಾಡಿಕೊಟ್ಟಿತು. ಪತ್ರಿಕೆಗಳು ಈ ತಾರೆಗಳನ್ನು ಗಗನಕ್ಕೇರಿಸಿದಾಗ ಅಂಥವರು ಸಾಮಾನ್ಯರ ಕೈಗೆ ಎಟುಕದಂತಾದರು. ಅವರು ತ್ರಿವಿಕ್ರಮಾವತಾರ ತಾಳತೊಡಗಿದ್ದ ಈ ಹಂತದಲ್ಲಿ ಚಿತ್ರರಂಗಕ್ಕೆ ಪತ್ರಕರ್ತ ವಾಮನನಂತೆ ಕಾಣತೊಡಗಿದ್ದರೆ ಅಚ್ಚರಿಯೇನಿಲ್ಲ.

ಈ ಸಂದರ್ಭದಲ್ಲಿ ಒಂದು ವಿಷಯವನ್ನು ನಿಷ್ಠುರವಾಗಿ ಹೇಳಲೇಬೇಕು. ಚಲನಚಿತ್ರ ಪತ್ರಿಕೆಗಳ ಆರ್ಥಿಕ ಬೆಳವಣಿಗೆಗೆ ಕನ್ನಡ ಚಿತ್ರೋದ್ಯಮದ ನೆರವು ತೀರಾ ಕಡಿಮೆ. ಒಂದು ಚಿತ್ರದ ಪ್ರಾರಂಭದಿಂದ ಕೊನೆಯವರೆಗೆ ಅದಕ್ಕೆ ಕಾಲಂಗಟ್ಟಲೆ ಪ್ರಚಾರ ಕೊಟ್ಟು ಸುದ್ದಿಗಳ, ಸ್ಟುಡಿಯೋ ಪ್ರದಕ್ಷಿಣೆಗಳ, ಪತ್ರಿಕಾಗೋಷ್ಠಿಯ ವರದಿಗಳ, ಸಂದರ್ಶನಗಳ ಮೂಲಕ ಹೇರಳವಾದ ಪ್ರಚಾರವನ್ನು ಕೊಡುವ ಚಲನಚಿತ್ರ ಪತ್ರಿಕೆಗಳ ಉಳಿವಿನ ಬಗ್ಗೆ ಉದ್ಯಮ ಹೆಚ್ಚು ಕಾಳಜಿ ವಹಿಸದಿರುವುದು ಒಂದು ವಿಪರ್ಯಾಸವೇ ಸರಿ. ಕೋಟ್ಯಾಂತರ ರೂಪಾಯಿಗಳ ವೆಚ್ಚದಲ್ಲಿ ಕನ್ನಡ ಚಿತ್ರಗಳು ತಯಾರಾಗುವ ಮಟ್ಟಕ್ಕೆ ಬಂದಿರುವಾಗಲೂ ಪತ್ರಿಕೆಗಳ ಮೂಲಕ ಪ್ರಚಾರಕ್ಕೆ ನಿರ್ಮಾಪಕರು, ವಿತರಕರು ವೆಚ್ಚ ಮಾಡುವ ಹಣ ತೀರಾ ಕಡಿಮೆ. ಪ್ರಚಾರಕ್ಕೆಂದು ಮೀಸಲಿಡುವ ಹಣದಲ್ಲಿಯೂ ಬಹಳಷ್ಟು ಭಾಗ ಎರಡು-ಮೂರು ದಿನಪತ್ರಿಕೆಗಳಿಗೇ ಹೋಗುತ್ತದೆ. ಚಲನಚಿತ್ರಗಳಿಗಾಗಿಯೇ ಮೀಸಲಾಗಿರುವ ಪತ್ರಿಕೆಗಳ ಬಗ್ಗೆ ಉದ್ಯಮ ಹೆಚ್ಚು ಆಸಕ್ತಿ ವಹಿಸಿ ಅವುಗಳಿಗೆ ಸರಿಯಾದ ದರದಲ್ಲಿ ಹೆಚ್ಚು ಜಾಹಿರಾತುಗಳನ್ನು ಕೊಡುವ ಪದ್ಧತಿ ಬೆಳೆಯದಿದ್ದರೆ ಕನ್ನಡದಲ್ಲಿ ಚಲನಚಿತ್ರ ಪತ್ರಿಕೋದ್ಯಮ ಒಂದು ವಿಶೇಷ ವಿಭಾಗವಾಗಿ ಬೆಳೆಯುವುದು ತೀರಾ ದುರ್ಲಭ.

# ಪ್ರತಿಭಾ ಸಂಪದ

*ಕನ್ನಡ ಚಲನಚಿತ್ರರಂಗ ನಡೆದು ಬಂದ ದಾರಿ ಹುಲ್ಲು ಹಾಸಿನದಲ್ಲ. ಅಡಿಗಡಿಗೆ ಎದುರಾದ ಮುಳ್ಳುಕಂಟಿಗಳನ್ನು ಸರಿಸುತ್ತ ಅವರವರ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದವರು ಅಸಂಖ್ಯಾತರು. ಇತಿಹಾಸ, ಬಿಡಿ ಲೇಖನಗಳು, ಚಿತ್ರಸಂಪದಗಳಲ್ಲಿ ಇವರೆಲ್ಲರನ್ನೂ ಒಂದಲ್ಲ ಒಂದು ಸಂದರ್ಭದಲ್ಲಿ ಸ್ಮರಿಸಲಾಗಿದೆ. ಕೆಲವು ಮಾಹಿತಿಗಳನ್ನು ಒಂದೇ ಕಡೆ ಸಿಗುವಂತೆ ಮಾಡಿ, ಸಾಧಕರನ್ನು ಪರಿಚಯಿಸಲು 'ಪ್ರತಿಭಾ ಸಂಪದ' ಪ್ರಯತ್ನಿಸಿದೆ. ಪದೇ ಪದೇ ಪ್ರಾರ್ಥಿಸಿದಾಗ್ಯೂ ಕೆಲವರು ನಿರಾಸಕ್ತರು; ಹಲವರು ಎಲ್ಲಿದ್ದಾರೋ ತಿಳಿಯದು. ಹುಡುಕಾಟ-ಅರಸಾಟ ಪೂರ್ಣವಾಗಿ ಫಲಿಸಲಿಲ್ಲ. ಬಹುತೇಕ ಪತ್ರಿಕೆಗಳು, ಹಿರಿಯರಿಂದ ಕೇಳಿ ತಿಳಿದ ಸಂಗತಿಗಳನ್ನು, ಮಾಹಿತಿಗಳನ್ನು ಆಧರಿಸಿ ಈ ಕಿರು ಪರಿಚಯಗಳನ್ನು ಸಿದ್ಧಪಡಿಸಲಾಗಿದೆ. ಹಲವು ಮಹನೀಯರನ್ನು ಇಲ್ಲಿ ಕಾಣದೆ ಹೋದರೆ ಅವರ ಬಗ್ಗೆ ಅವಗಣನೆಯೆಂದು ಭಾವಿಸಬಾರದು. ಅಷ್ಟು ಮಟ್ಟಿಗೆ ನಾವು ಅಸಹಾಯಕರು, ಅಷ್ಟೆ.*

*ಆದರೆ ಇದು ಒಂದು ಪ್ರಾರಂಭವಷ್ಟೆ. ಶೋಧ ನಿರಂತರವಾಗಿ ಮುಂದುವರಿಯುತ್ತದೆ. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಗಣಕಯಂತ್ರ ಮತ್ತಷ್ಟು ವಿವರಗಳನ್ನು ದಾಖಲಿಸಲು ಪ್ರಯತ್ನಿಸುತ್ತದೆ. ಈ ಅವಧಿಯ ನಂತರದ ಕನ್ನಡ ಚಿತ್ರರಂಗದ ನಡೆಯನ್ನು ದಾಖಲಿಸಿಡಲು ಪ್ರಯತ್ನ ನಡೆದಿದೆ. ಗ್ರಂಥದ ಮರುಮುದ್ರಣದಲ್ಲಿ ದೊರೆತ ಹೆಚ್ಚಿನ ಮಾಹಿತಿಗಳನ್ನು ಸೇರಿಸಲಾಗುವುದು.*



### ಅಂಕಲಗಿ ಎಸ್.ಡಿ



ಕನ್ನಡ ಚಿತ್ರಗಳ ಹಿರಿಯ ನಿರ್ಮಾಪಕ ಹಾಗೂ ವಿತರಕ. 'ಶ್ರೀ ಭುವನೇಶ್ವರಿ ಆರ್ಟ್ಸ್ ಪ್ರೊಡಕ್ಷನ್ಸ್' ಸಂಸ್ಥೆಯ ಮ್ಯಾನೇಜಿಂಗ್ ಪಾರ್ಟನರ್. ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಅಂಕಲಗಿ ಇವರ ಹುಟ್ಟೂರು. ಎಸ್.ಎಸ್.ಎಲ್.ಸಿ ವರೆಗೆ ವಿದ್ಯಾಭ್ಯಾಸ. ಗದಗಿನ ಶ್ರೀನಿವಾಸ ಪಿಕ್ಚರ್ಸ್ ಇವರಲ್ಲಿ ರಪ್ರೆಸೆಂಟೆಟಿವ್ ಆಗಿ ಕೆಲಸ. ಐದು ವರ್ಷಗಳ ನಂತರ ಮುಂಬಯಿನ ಫಿಲ್ಮಿಸ್ತಾನ್ ಸಂಸ್ಥೆಯ ಹುಬ್ಬಳ್ಳಿ ಬ್ರಾಂಚ್‌ನಲ್ಲಿ ಮ್ಯಾನೇಜರ್ ಆಗಿ ಉದ್ಯೋಗ. ನಂತರ ಮಿತ್ರರಾದ ಸುರೇಂದ್ರ ಇಂಗಳೆ ಅವರೊಂದಿಗೆ ಸಂತೋಷ ಫಿಲಂಸ್ ಎಂಬ ಪಾಲುಗಾರಿಕ ಸಂಸ್ಥೆ ಪ್ರಾರಂಭಿಸಿದರು. ೧೯೬೦ರಲ್ಲಿ ಸ್ವತಂತ್ರವಾಗಿ 'ಜಗದೀಶ್ ಫಿಲಂಸ್' ಎಂಬ ವಿತರಣಾ ಸಂಸ್ಥೆಯ ಸ್ಥಾಪನೆ. ಎಂ.ಜಿ.ಹುಬ್ಳೀಕರ್, ಬಿ.ಹೆಚ್.ಚಂದಣ್ಣನವರ್, ಸುರೇಂದ್ರ ಇಂಗಳೆ ಇವರೊಂದಿಗೆ 'ಭುವನೇಶ್ವರಿ ಆರ್ಟ್ಸ್ ಪ್ರೊಡಕ್ಷನ್ಸ್' ಸಂಸ್ಥೆಯ ಸ್ಥಾಪನೆ. 'ಬದುಕು ಬಂಗಾರವಾಯಿತು', 'ಪಟ್ಟಣಕ್ಕೆ ಬಂದ ಪತ್ನಿಯರು', 'ಗುಣ ನೋಡಿ ಹೆಣ್ಣು ಕೊಡು', 'ಸೊಸೆ ತಂದ ಸೌಭಾಗ್ಯ' ಹಾಗೂ 'ಪ್ರಾಣ ಸ್ನೇಹಿತ' ಮೊದಲಾದ ಚಿತ್ರಗಳು ಈ ಗೆಳೆಯರು ನಿರ್ಮಿಸಿದ ಚಿತ್ರಗಳು. ಉತ್ತರ ಕರ್ನಾಟಕದ ಜನಪ್ರಿಯ ನಾಟಕಗಳನ್ನು ತೆರೆಗೆ ತಂದದು ಮತ್ತು ಕನ್ನಡದಲ್ಲಿ ಮೊದಲ ಬಾರಿಗೆ ಸಿನಿಮಾಸ್ಕೋಪ್ ಚಿತ್ರವನ್ನು ನಿರ್ಮಿಸಿದು ವಿಶೇಷ.

### ಅಂಜಲಿ

ಕನ್ನಡ ಚಿತ್ರರಂಗ ಕಂಡ ೮೦ರ ದಶಕದ ಜೋಲ್ಡ್ ನಟಿ. ಬೆಂಗಳೂರಿನಲ್ಲಿ ಹುಟ್ಟಿ ಬೆಳೆದ ಅಂಜಲಿ ಪ್ರಥಮವಾಗಿ ಚಿತ್ರರಂಗ ಪ್ರವೇಶ ಮಾಡಿದು ಪೇರಾಲ ನಿರ್ದೇಶನದ 'ಕಂಕಣ ಭಾಗ್ಯ' ಚಿತ್ರದಿಂದ . ಆದರೆ ಪೂರ್ಣ



ಪ್ರಮಾಣದ ನಾಯಕಿಯಾಗಿ ಕಾಶೀನಾಥ್‌ರ 'ಅನಂತನ ಅವಾಂತರ'ದ ಮೂಲಕ ಹೆಸರು. ನಂತರ ಸುಮಾರು ೪೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಉಪನಾಯಕಿ, ಖಳನಾಯಕಿ ಇನ್ನಿತರ ಪೋಷಕ ಪಾತ್ರಗಳಲ್ಲಿ ಅಭಿನಯ. 'ಸಿಡುಕಬೇಡ ಸಿಂಗಾರಿ' 'ನೀನು ಸಕ್ಕರೆ ಹಾಲು ಸಕ್ಕರೆ', 'ಗಣೇಶನ ಮದುವೆ', 'ಉತ್ಕರ್ಷ' ಮೊದಲಾದ ಚಿತ್ರಗಳಲ್ಲಿ ಅಭಿನಯ.

### ಅಂಬರೀಷ್



ಕನ್ನಡ ಚಿತ್ರರಂಗದ ಖ್ಯಾತ ನಾಯಕ ನಟರಾದ ಅಂಬರೀಷ್ ತಮ್ಮ ವರ್ಣಮಯ ವ್ಯಕ್ತಿತ್ವ ಹಾಗೂ ರಾಜಕೀಯ ಚಟುವಟಿಕೆಗಳಿಂದಲೂ ಅಪಾರ ಜನಪ್ರಿಯತೆ ಗಳಿಸಿದವರು. ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಲೋಕಸಭೆಗೆ ಮಂಡ್ಯ ಕ್ಷೇತ್ರದಿಂದ ಸ್ಪರ್ಧಿಸಿ ಆಯ್ಕೆಯಾದರು. ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ನಾಗರಹಾವು' ಚಿತ್ರದಿಂದ ಚಲನಚಿತ್ರ ರಂಗವನ್ನು ಪ್ರವೇಶಿಸಿದ ಅಂಬರೀಷ್ ಆಗಲೇ ಗಮನ ಸೆಳೆದರು. ಕೆಲವು ಚಿತ್ರಗಳಲ್ಲಿ ಖಳನಾಯಕನಾಗಿ ಅಭಿನಯಿಸಿದರು. ಬೇಗನೆ ನಾಯಕಪಾತ್ರಗಳಿಗೆ ಜಿಗಿದರು. ಇದುವರೆಗೆ ೨೦೦ ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವ ಅಂಬರೀಷ್ ಅವರ ಚಿತ್ರವೃತ್ತಿ ಜೀವನದ ಮೈಲಿಗಲ್ಲು ರಾಜೇಂದ್ರಸಿಂಗ್ ಬಾಬು ನಿರ್ದೇಶನದ 'ಅಂತ' ಚಿತ್ರ. ಈ ಚಿತ್ರದಲ್ಲಿ ಸ್ಮರಣೀಯ ಅಭಿನಯ ನೀಡಿದ ಅವರು ಕನ್ನಡ ಚಿತ್ರರಂಗದ 'ರೆಬೆಲ್ ಸ್ಟಾರ್' ಆದರು. ಸಾಹಸಪ್ರಧಾನ ಚಿತ್ರಗಳಲ್ಲಿ ವಿಶೇಷ ಜನಮನ್ನಣೆ ಗಳಿಸಿಕೊಂಡ ಅಂಬರೀಷ್ ಅವರು 'ಮಸಣದ ಹೂವು', 'ನ್ಯೂಡೆಲ್ಲಿ', 'ಒಲವಿನ ಉಡುಗೊರೆ', 'ಹೃದಯ ಹಾಡಿತು' ಮುಂತಾದ ಚಿತ್ರಗಳಲ್ಲಿ ಭಾವಪ್ರಧಾನ ಪಾತ್ರಗಳಲ್ಲಿಯೂ ಸೊಗಸಾಗಿ ಅಭಿನಯಿಸಿದರು. ರಾಜಕೀಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ ನಂತರ ಕೆಲವು ಕಾಲ ಚಿತ್ರರಂಗದಿಂದ ದೂರವಿದ್ದರು. ನಟಿ ಸುಮಲತಾರನ್ನು ವಿವಾಹವಾಗಿರುವ ಅಂಬರೀಷ್ ಅತ್ಯಂತ ಸ್ನೇಹಕ್ಕೆ, ಹೃದಯವಂತಿಕೆಗೆ ಹೆಸರಾದವರು. 'ಮಸಣದ ಹೂವು' ಚಿತ್ರದಲ್ಲಿನ ಅವರ ಅಭಿನಯಕ್ಕಾಗಿ ಅಂಬರೀಷ್ ೧೯೮೫-೮೬ರ ರಾಜ್ಯ ಸರ್ಕಾರದ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ಪಡೆದರು.

### ಅಂಬಿಕಾ

ತಮಿಳು ಚಿತ್ರರಂಗದಿಂದ ಆಮದಾಗಿ ಬಂದ ನಾಯಕಿ. ನಟ ಶ್ರೀನಾಥ್ ನಿರ್ಮಾಣದ 'ಗರುಡ ರೇಖೆ' ಯ ನಾಯಕಿಯಾಗಿ ೧೯೮೨ರಲ್ಲಿ ಕನ್ನಡ ಚಿತ್ರರಂಗ ಪ್ರವೇಶಿಸಿದ



ಅಂಬಿಕಾ ಕನ್ನಡ ಚಿತ್ರರಂಗದ ಬಹು ಬೇಡಿಕೆಯ ತಾರೆಯಾಗಿ ಬೆಳೆದರು. ಅಂಬರೀಷ್ ನಾಯಕರಾಗಿದ್ದ 'ಚಕ್ರವ್ಯೂಹ' ಚಿತ್ರದಿಂದ ಕನ್ನಡದ ಪ್ರಮುಖ ತಾರೆಯಾದ ಅಂಬಿಕಾ, ಅಂಬರೀಷ್ ರೊಂದಿಗ ಹಲವಾರು ಯಶಸ್ವಿ ಚಿತ್ರಗಳಲ್ಲಿ ಅಭಿನಯಿಸಿ ಜನಪ್ರಿಯ ಜೋಡಿಯೆನಿಸಿದರು. ರಾಜ ಕುಮಾರ್‌ರೊಂದಿಗೆ ನಾಯಕಿಯಾಗಿ 'ಅಪೂರ್ವ ಸಂಗಮ', 'ಎರಡು ನಕ್ಷತ್ರಗಳು'. 'ಚಲಿಸುವ ಮೋಡಗಳು' ಚಿತ್ರಗಳಲ್ಲಿ ಅಭಿನಯಿಸಿದರು. ಸುಮಾರು ನಲವತ್ತು ಚಿತ್ರಗಳಲ್ಲಿ ಅಭಿನಯಿಸಿದ ಅಂಬಿಕಾ ಕನ್ನಡದ ಎಲ್ಲಾ ಅಗ್ರ ಶ್ರೇಣಿಯ ನಾಯಕರೊಂದಿಗೆ ಅಭಿನಯಿಸಿದರು. 'ಪೂರ್ಣಚಂದ್ರ', 'ಬೇಟೆ', 'ಮೂರು ಜನ್ಮ', 'ಅವಳ ನೆರಳು', 'ಶುಭಮಿಲನ', 'ನಾಯ್ಯಕ್ಕೆ ಶಿಕ್ಷೆ', 'ಅತಿರಥ ಮಹಾರಥ', 'ಕಿರಾತಕ', ಮೊದಲಾದವು ಇವರ ಯಶಸ್ವಿ ಚಿತ್ರಗಳು. ವಿವಾಹವಾಗಿ ಕೆಲವು ವರ್ಷಗಳು ಚಿತ್ರರಂಗದಿಂದ ದೂರವಿದ್ದ ಅಂಬಿಕಾ ಮತ್ತೆ ೧೯೯೭ ರಲ್ಲಿ ಅಮ್ಮನಾಗಿ 'ಸಿಂಹದ ಮರಿ' ಚಿತ್ರದೊಂದಿಗೆ ಚಿತ್ರರಂಗಕ್ಕೆ ವಾಪಸಾದರು. 'ಜನುಮದಾತ', 'ಸುಲ್ತಾನ್' ಚಿತ್ರಗಳಲ್ಲಿ ಗಮನ ಸೆಳೆಯುವ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ.

## ಅರ್ಚನಾ

ತೊಂಬತ್ತರ ದಶಕದ ಅಂತ್ಯದಲ್ಲಿ ಬೆಳಕಿಗ ಬಂದ ನಟಿ. ನಿರ್ಮಾಪಕ



ಚಿದಂಬರ ಶೆಟ್ಟಿ ಅವರ, ೧೯೯೬ರಲ್ಲಿ ತೆರೆಕಂಡ 'ನಿರ್ಣಯ' ಚಿತ್ರದ ನಾಯಕಿಯಾಗಿ ತೆರೆಗೆ ಪರಿಚಿತರಾದ ಅರ್ಚನಾ ಕನ್ನಡ ಚಿತ್ರರಂಗದಲ್ಲಿ ಯುವ ನಾಯಕಿಯರ ಕೊರತೆಯನ್ನು ನೀಗಿಸುವುದರಲ್ಲಿ ಯಶಸ್ವಿಯಾದರು. 'ಎ', 'ಮಾರಿ ಕಣ್ಣು ಹೋರಿಮ್ಯಾಗೆ', 'ಪ್ರೋಲಿ ಬಾವ', 'ಈ ಹೃದಯ ನಿನಗಾಗಿ', 'ಹೈ ಕಮಾಂಡ್', 'ತರೀಕೆರೆ ಏರಿಮೇಲೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ವಿಷ್ಣುವರ್ಧನ್ ಅವರ ಸಹನಾಯಕಿಯಾಗಿ ಅಭಿನಯಿಸಿದ 'ಯಜಮಾನ' ಚಿತ್ರದ ಯಶಸ್ಸು ಅರ್ಚನಾ ಅವರಿಗೆ ಹಲವು ಅವಕಾಶಗಳನ್ನು ನೀಡಿತು.

## ಅರ್ಜುನ್ ಸರ್ಜಾ

ಹಿರಿಯ ನಟ ಶಕ್ತಿಪ್ರಸಾದ್ ಅವರ ಕಿರಿಯ ಮಗ. ಬಾಲನಟನಾಗಿ 'ಸಿಂಹದ ಮರಿ ಸೈನ್ಯ'ದಲ್ಲಿ ಗಮನ ಸೆಳೆದ ಅರ್ಜುನ್‌ಸರ್ಜಾ 'ಆಶಾ' ಚಿತ್ರದ ಮೂಲಕ ಹದಿಹರೆಯದ ನಾಯಕನಾಗಿ ಚಿತ್ರರಂಗದಲ್ಲಿ ಪರಿಚಿತರಾದರು. ನಂತರ 'ಮಳೆ ಬಂತು ಮಳೆ', 'ನಾ ನಿನ್ನ ಪ್ರೀತಿಸುವೆ', 'ಸೇಡಿನ ಸಂಚು', 'ಪ್ರಳಯಾಂತಕ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರಾದರೂ ನಾಯಕನಾಗಿ ಸ್ಥಿರವಾದ ನೆಲೆಯನ್ನು ಕಂಡು



ಕೊಳ್ಳಲಾಗಲಿಲ್ಲ. ಈ ಸಂದರ್ಭದಲ್ಲಿ ನೆರೆಯ ತೆಲುಗು, ತಮಿಳು ಚಿತ್ರಗಳಿಗೆ ವಲಸೆ ಹೋಗಿ ಅಲ್ಲಿ ತಮ್ಮ ದೇಹದಾರ್ಢ್ಯ, ಪ್ರತಿಭೆಗಳನ್ನು ಪಣವಾಗಿ ಒಡ್ಡಿ ಗೆದ್ದರು. ಮಾತೃಭಾಷೆಯ ವ್ಯಾಮೋಹದಿಂದ 'ಸ್ನೇಹದ ಕಡಲಲ್ಲಿ', 'ಪ್ರತಾಪ್', 'ಅಳೀಮಯ್ಯ', 'ಇದೇ ಪೊಲೀಸ್ ಬೆಲ್ಟ್', 'ಪ್ರೇಮಾಗ್ನಿ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದಾರೆ. ನಿರ್ದೇಶಕ ಸಹೋದರ ಕಿಶೋರ್‌ಸರ್ಜಾ ಸಲುವಾಗಿ ಕನ್ನಡ ಚಿತ್ರಗಳನ್ನು ನಿರ್ಮಿಸಿದ್ದಾರೆ.

## ಅಣ್ಣಯ್ಯ

ಕನ್ನಡದ ಹಿರಿಯ ಛಾಯಾಗ್ರಾಹಕ. ಹುಟ್ಟಿದ್ದು ಚಿತ್ರದುರ್ಗದಲ್ಲಿ. ಹದಿನಾಲ್ಕನೆಯ ವಯಸ್ಸಿನಲ್ಲೇ ಚಿತ್ರರಂಗದ ಜೊತೆಗೆ ಸಂಪರ್ಕ ಪಡೆದ ಅಣ್ಣಯ್ಯ, ಹೆಚ್.ಎಂ.ರೆಡ್ಡಿಯವರ ಪ್ರೋತ್ಸಾಹದಿಂದ 'ಸತ್ಯಮೇ ಜಯಂ' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. 'ಗೌರಿ' ಚಿತ್ರದಿಂದ ಕನ್ನಡ ಚಿತ್ರರಂಗ ಪ್ರವೇಶ ಮಾಡಿದ ಅಣ್ಣಯ್ಯ ನೂರಕ್ಕೂ ಹೆಚ್ಚು ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದಾರೆ. ೧೯೭೩-೭೪ನೇ ಸಾಲಿನ ಅತ್ಯುತ್ತಮ ಛಾಯಾಗ್ರಹಣಕ್ಕಾಗಿ 'ಬಿಡುಗಡೆ' ಚಿತ್ರಕ್ಕೆ ರಾಜ್ಯ ಪ್ರಶಸ್ತಿಯನ್ನು ಪಡೆದಿದ್ದಾರೆ. ಕನ್ನಡದ ಪ್ರಥಮ ಸಿನಿಮಾಸ್ಕೋಪ್ ವರ್ಣಚಿತ್ರ 'ಸೊಸೆ ತಂದ ಸೌಭಾಗ್ಯ'ಕ್ಕ ಅಣ್ಣಯ್ಯ, ಮಲ್ಲಿಕ್ ಜೊತೆಗೂಡಿ ಕೆಲಸ ಮಾಡಿದರು.



ಸಾಕಷ್ಟು ತಮಿಳು, ತೆಲುಗು ಚಿತ್ರಗಳಲ್ಲೂ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. ಮಗ ಮಲ್ಲಿಕ್ ಹಲವಾರು ಕನ್ನಡ ಚಿತ್ರಗಳಿಗೆ ಛಾಯಾಗ್ರಾಹಕರು.

## ಅತ್ತರ್ ಸಯ್ಯದ್ ಹುಸೇನ್

ಮೈಸೂರು ಅಗರಬತ್ತಿ ಕಾರ್ಪೊರೇಷನ್‌ನ ಮಾಲೀಕರಾದ ಇವರು ಬೆಂಗಳೂರಿನವರು. ಮೈಸೂರು ಫಿಲ್ಮ್ ಕಾರ್ಪೊರೇಷನ್ ಮಾಲೀಕರು. ಈ ಸಂಸ್ಥೆ ಗಾಂಧಿನಗರದ ೬ನೇ ಕ್ರಾಸ್‌ನಲ್ಲಿ ೧೯೪೧-೪೨ರಲ್ಲಿ ಸ್ಥಾಪಿತವಾಯಿತು. ಕರ್ನಾಟಕ ಫಿಲಂ ಛೇಂಬರ್‌ನ ಅಜೀವ



ಸದಸ್ಯರು. ಕಲ್ಯಾಣಿ ಫಿಲಂಸ್ ರವರ 'ಭಕ್ತಪ್ರಹ್ಲಾದ'ದ ಸಂಪೂರ್ಣ ಹಕ್ಕುಗಳನ್ನು ಖರೀದಿಸಿದ್ದರು. ತಮ್ಮ ಸಂಸ್ಥೆಯ ಮೂಲಕ ತೆಲುಗು, ತಮಿಳು, ಹಿಂದಿ, ಇಂಗ್ಲಿಷ್ ಚಿತ್ರಗಳ ವಿತರಣೆ ಮಾಡಿದ್ದರು. ೧೯೮೪ರಲ್ಲಿ ಈ ಸಂಸ್ಥೆ ಮುಚ್ಚಿಹೋಯಿತು. ಬೆಂಗಳೂರಿನ ರೀಗಲ್ ಟಾಕೀಸ್ (ನಾಜ್ ಥಿಯೇಟರ್) ಅನ್ನೂ ಇವರು ನಡೆಸಿಕೊಂಡುಬರುತ್ತಿದ್ದರು.

## ಅನಂತ್ ನಾಗ್

ಭಾರತೀಯ ಚಿತ್ರರಂಗದಲ್ಲಿಯೇ ಅತ್ಯಂತ ಪ್ರತಿಭಾವಂತ ನಟರಲ್ಲಿ



ಒಬ್ಬರೆನಿಸಿಕೊಂಡ ಅನಂತ್ ನಾಗ್ ವ್ಯಾಪಾರಿ ಮತ್ತು ಕಲಾತ್ಮಕ ಚಿತ್ರಗಳೆರಡರಲ್ಲೂ ಸಂದವರು. ರಾಜಕಾರಣದಲ್ಲಿ ಒಲವು, ಕರ್ನಾಟಕದಲ್ಲಿ ಮಂತ್ರಿಪದವಿಗೂ ಏರಿದರು. ಒಂದು ಅವಧಿಗೆ ವಿಧಾನಸಭೆ, ಇನ್ನೊಂದು ಅವಧಿಗೆ ವಿಧಾನಪರಿಷತ್ತಿನ ಸದಸ್ಯರಾಗಿ ಚುನಾವಣೆಗಳಲ್ಲಿ ಸೋಲು-ಗೆಲುವುಗಳೆರಡನ್ನು ಅನುಭವಿಸಿದರು. ಮುಂಬೈನಲ್ಲಿ ಬ್ಯಾಂಕ್ ನೌಕರರಾಗಿದ್ದ ಅನಂತ್ ನಾಗರಕಟ್ಟೆ ಮರಾಠಿ ರಂಗಭೂಮಿಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದರು. ಅನಂತ್ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದು ೧೯೭೩ರಲ್ಲಿ. ಅವರ ಮೊದಲ ಚಿತ್ರ ಪಿ.ವಿ.ನಂಜರಾಜ ಅರಸು ನಿರ್ದೇಶನದ 'ಸಂಕಲ್ಪ'. ಜಿ.ವಿ.ಅಯ್ಯರ್ ನಿರ್ದೇಶನದ 'ಹಂಸಗೀತೆ' ಅನಂತ್ ನಾಗ್ ಅಭಿನಯದ ಶ್ರೇಷ್ಠತೆಗೆ ಉತ್ತಮ ಉದಾಹರಣೆ. ದೊರೆ-ಭಗವಾನ್ ನಿರ್ದೇಶನದ 'ಬಯಲುದಾರಿ', 'ಬೆಂಕಿಯಬಲೆ' ಮತ್ತು 'ಚಂದನದ ಗೊಂಬೆ' ಅವರಿಗೆ ಒಂದು ಹೊಸ ಇಮೇಜನ್ನೇ ತಂದುಕೊಟ್ಟವು. 'ಕನ್ನೇಶ್ವರ ರಾಮ', 'ಬರ', 'ಅವಸ್ಥೆ', 'ಗಂಗವ್ವ ಗಂಗಾಮಾಯಿ', 'ಮಿಂಚಿನ ಓಟ' ಮತ್ತು 'ಬೆಳದಿಂಗಳ ಬಾಲೆ'ಯಂತಹ ವಿಭಿನ್ನ ರೀತಿಯ ಚಿತ್ರಗಳು ಅವರ ಅಭಿನಯ ಪ್ರತಿಭೆಯ ಅನೇಕ ಆಯಾಮಗಳನ್ನು ಪ್ರದರ್ಶಿಸಿದವು. ಅನಂತ್ ಅಭಿನಯಿಸಿದ ಅನೇಕ ಹಾಸ್ಯಪ್ರಧಾನ ಚಿತ್ರಗಳು ಮಧ್ಯಮ ವರ್ಗದ ಪ್ರೇಕ್ಷಕರಿಗೆ ಮೆಚ್ಚಾದವು. 'ನಾರದ ವಿಜಯ', 'ಗೋಲ್ ಮಾಲ್ ರಾಧಾಕೃಷ್ಣ' 'ಪ್ರೇಮಾಯಣ', 'ಗಣೇಶನ ಮದುವೆ', 'ಗಣೇಶ ಸುಬ್ರಮಣ್ಯ', 'ಹೆಂಡ್ತಿಗ್ಹೇಳ್ಬೇಡಿ' ಅವುಗಳಲ್ಲಿ ಕೆಲವು ಮಾತ್ರ. ಅಭಿನಯಕ್ಕೆ ಹತ್ತು ಹಲವು ಪ್ರಶಸ್ತಿಗಳನ್ನು ಪಡೆದಿರುವ ಅನಂತ್‌ನಾಗ್ 'ಮಿಂಚಿನ ಓಟ' (೧೯೭೯-೮೦), 'ಹೊಸ ನೀರು' (೧೯೮೫-೮೬), 'ಅವಸ್ಥೆ' (೧೯೮೭-೮೮) ಮತ್ತು 'ಗಂಗವ್ವ ಗಂಗಾಮಾಯಿ' (೧೯೯೪-೯೫) ಚಿತ್ರಗಳಲ್ಲಿನ ಅಭಿನಯಕ್ಕಾಗಿ ನಾಲ್ಕು ಬಾರಿ ರಾಜ್ಯ ಸರ್ಕಾರದ ಶ್ರೇಷ್ಠ ನಟ ಪ್ರಶಸ್ತಿಯನ್ನು ಪಡೆದಿದ್ದಾರೆ. ಹಿಂದಿ ಚಿತ್ರರಂಗದಲ್ಲೂ ಅನಂತ್ ಉತ್ತಮ ನಟನೆಂದು ಗುರುತಿಸಲ್ಪಟ್ಟಿದ್ದಾರೆ. ಎಡ ಪಂಥೀಯ ಒಲವುಳ್ಳ ಅನಂತ್‌ನಾಗ್ ಹೊಟೇಲ್ ಕಾರ್ಮಿಕರನ್ನು ಸಂಘಟಿಸಿದರು. ಚಲನಚಿತ್ರ ಕಾರ್ಮಿಕರ ಒಕ್ಕೂಟದ ಗೌರವಾಧ್ಯಕ್ಷ, ಸಂಕೇತ್ ಎಲೆಕ್ಟ್ರಾನಿಕ್ಸ್‌ನ ನಿರ್ವಹಣೆ ಹೀಗೆ ಹತ್ತಾರು ಚಟುವಟಿಕೆಗಳಲ್ಲಿ ತೊಡಗಿದ್ದರು.

## ಅನಂತಾಚಾರಿ .ಎಸ್.ಕೆ



ವಿದ್ಯಾವಂತ. ಕನ್ನಡ ಸಾಹಿತ್ಯದ ಬಗ್ಗೆ ಗೌರವ. ಹಿರಿಯ ಸಾಹಿತಿಗಳನ್ನು ಕಂಡರೆ ಮಮತೆ, ಅವರ ಕೃತಿಗಳ ಬಗ್ಗೆ ನಿರಂತರ ಅಧ್ಯಯನ-ಚರ್ಚೆ. ೧೯೬೩ರಲ್ಲಿ ಅವರು ತಮ್ಮ ಪ್ರಥಮ ಚಿತ್ರ 'ಗೌರಿ'ಯನ್ನು ನಿರ್ದೇಶಿಸಿದರು. ಅವರು ನಿರ್ದೇಶಿಸಿದ ಒಟ್ಟು ಚಿತ್ರಗಳು ಒಂಬತ್ತು. 'ನವಕೋಟಿ ನಾರಾಯಣ', 'ಮಾವನ ಮಗಳು', 'ಮಧುಮಾಲತಿ', 'ಮನಸ್ಸಾಕ್ಷಿ', 'ಮುಕುಂದಚಂದ್ರ', 'ಸೋತು ಗೆದ್ದವಳು', 'ಮಧುರ ಮಿಲನ', 'ಮನೆ ಅಳಿಯ'. ಕನ್ನಡ ಸಾಹಿತ್ಯ ಮೌಲ್ಯಗಳಿಗೆ ಮಣಿದ ಚಾರಿಯವರು ತಮ್ಮ ಚಿತ್ರಗಳಲ್ಲಿ ಕುವೆಂಪು, ನರಸಿಂಹಸ್ವಾಮಿ ಮುಂತಾದ ಶ್ರೇಷ್ಠ ಕವಿಗಳ ಭಾವಗೀತೆಗಳನ್ನು ಧಾರಾಳವಾಗಿ ಬಳಸಿಕೊಂಡರು. 'ಮಧುರ

ಮಿಲನ' (೧೯೬೯) ಚಿತ್ರದ ಮೂಲಕ ಶ್ರೀನಾಥ್ ಅವರನ್ನು ಜಾಲಿಯವರು ನಾಯಕನಟರಾಗಿ ಪರಿಚಯಿಸಿದರು. ಕಿರುತೆರೆಗೆ ಸೀರಿಯಲ್‌ಗಳನ್ನು ಮಾಡುವುದರಲ್ಲೂ ಆಸಕ್ತರು.

### ಅನಂತರಾಂ ಮಚ್ಚೇರಿ

ಮೂಲತಃ ರಂಗಭೂಮಿ ನಟರಾದ ಅನಂತರಾಂ ಮಚ್ಚೇರಿ ಓದಿದ್ದು ಇಂಟರ್‌ಮೀಡಿಯಟ್‌ವರೆಗೆ. ರಾಜಸ್ಥಾನದ ಉದಯಪುರದಲ್ಲಿ ಸರ್ವೇಯರ್ ಆಗಿ ನೀರಾವರಿ ಇಲಾಖೆಯಲ್ಲಿ ಕೆಲಸದಲ್ಲಿದ್ದರು. ಅನಂತರಾಂ ಮಚ್ಚೇರಿ ಅವರು



ಶಂಕರ್‌ಸಿಂಗ್ ನಿರ್ಮಿಸಿದ 'ಧರ್ಮಸ್ಥಳ ಮಹಾತ್ಮೆ' ಚಿತ್ರದಿಂದ ತೆರೆಗೆ ಬಂದರು. ನಂತರ ಖಳನಾಯಕ, ಪೋಷಕನಟ ಹೀಗೆ ಸಣ್ಣ ಪುಟ್ಟ ಪಾತ್ರಗಳಲ್ಲಿ ಅಭಿನಯಿಸುತ್ತ ಸುಮಾರು ೧೫೫ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಕಪ್ಪು-ಬಿಳುಪು', 'ಮಲ್ಲಮ್ಮನ ಪವಾಡ', 'ಸಾಕ್ಷಾತ್ಕಾರ', 'ಪಡುವಾರಹಳ್ಳಿ ಪಾಂಡವರು' ಇವರ ಅಭಿನಯದ ಕೆಲವು ಮುಖ್ಯ ಚಿತ್ರಗಳು. ೧೯೯೯ರಲ್ಲಿ ನಿಧನರಾದರು.

### ಅನಿಲ್ ಕುಮಾರ್

ರಂಗಭೂಮಿ ಹಿನ್ನೆಲೆಯಿಂದ ಬೆಳ್ಳಿತೆರೆ ಪ್ರವೇಶಿಸಿದ ನಟ. ಪುಣೆಯ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಅಭಿನಯ ಕಲೆಯಲ್ಲಿ ತರಬೇತಿ. ಶಬಾನ ಆಜ್ಮಿ, ರೀಟಾ ಭಾದುರಿ, ಜರೀನಾ ವಹಾಬ್, ಕೋಕಿಲಾ ಮೋಹನ್‌ರ ಸಹಪಾಠಿ. ಪುಟ್ಟಣ್ಣ ಕಣಗಾಲರ 'ಬಿಳಿಹೆಂಡ್ತಿ' ಚಿತ್ರದ ನಾಯಕನಾಗಿ ಚಿತ್ರರಂಗ ಪ್ರವೇಶ. 'ಪ್ರೇಮಾಯಣ', 'ನಾ ನಿನ್ನ ಬಿಡೆನು', 'ನಮ್ಮಮ್ಮನ ಸೊಸೆ', 'ರಾಜೇಶ್ವರಿ', 'ನಾಗರ ಚಿನ್ಹೆ', ಮೊದಲಾದವು ಇವರ ಅಭಿನಯದ ಚಿತ್ರಗಳು. ಮುಂದೆ ೧೯೭೯ರಲ್ಲಿ 'ಆಕ್ರಾಂತ್' ನಾಟಕ ತಂಡ ಸ್ಥಾಪನೆ. ನಾಟಕಗಳಲ್ಲಿ ಅಭಿನಯ, ನಿರ್ದೇಶನ ಮಾಡಿದರು. ಅವರ್ಶ ಫಿಲ್ಮ್ ಇನ್‌ಸ್ಟಿಟ್ಯೂಟ್ ನ ಅಭಿನಯ ತರಬೇತಿ ಶಿಕ್ಷಕನಾಗಿ ಉದ್ಯೋಗ. 'ಬೆಟ್ಟದ ಹೂವು', ನಮ್ಮೂರ ಹುಡುಗ', 'ಅಣ್ಣಾವ್ರ ಮಕ್ಕಳು' ಮೊದಲಾದವು ಇವರ ಹೆಸರಿಸಬಹುದಾದ ಚಿತ್ರಗಳು.



### ಅನು ಪ್ರಭಾಕರ್



ಅನು ಪ್ರಭಾಕರ್ ಕಂಠದಾನ ಕಲಾವಿದೆ ಗಾಯತ್ರಿ ಪ್ರಭಾಕರ್ ಅವರ ಪುತ್ರಿ. ಬಾಲನಟಿಯಾಗಿ ಚಿತ್ರರಂಗ ಪ್ರವೇಶಿಸಿದ ಅನುಪ್ರಭಾಕರ್ 'ನವಭಾರತ', 'ಸ್ವರ್ಣ ಸಂಸಾರ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ೧೯೯೯ರಲ್ಲಿ ಎಂ.ಎಸ್.ರಾಜಶೇಖರ್ ನಿರ್ದೇಶನದ 'ಹೃದಯಾ ಹೃದಯಾ' ಚಿತ್ರದಿಂದ ನಾಯಕಿಯಾಗಿ ಪರಿಚಿತರಾದರು. 'ಸೂರಪ್ಪ', 'ಶ್ರೀರಸ್ತು ಶುಭಮಸ್ತು', 'ಯಾರಿಗೆ ಸಾಲುತ್ತೆ ಸಂಬಳ' ಚಿತ್ರದಲ್ಲಿ ಅಭಿನಯಿಸಿದರು. 'ಶಾಪ' ಚಿತ್ರದಲ್ಲಿನ ಅಭಿನಯಕ್ಕಾಗಿ ೨೦೦೦ನೇ ಸಾಲಿನ ಶ್ರೇಷ್ಠನಟಿ ರಾಜ್ಯಪ್ರಶಸ್ತಿ ಪಡೆದಿದ್ದಾರೆ.

### ಅನ್ನಪೂರ್ಣಮ್ಮ



ಮೂಕಿಚಿತ್ರಗಳ ಕಾಲದಿಂದ ಬೆಳ್ಳಿತೆರೆಯನ್ನು ಬೆಳಗಿದ ಕಲಾವಿದೆ ಅನ್ನಪೂರ್ಣಮ್ಮ. ಆಕೆಯ ತಂದೆ ಮುದ್ದಪ್ಪ ಶಾಸ್ತ್ರಿಗಳು ರಂಗಕಲಾವಿದರು. ಹಾಗಾಗಿ ಆಕೆಗೂ ಅಭಿನಯದ ಗೀಳು. ಸೂರ್ಯ ಫಿಲಂ ಕಂಪನಿ, ಮುಂಬೈನ ಸಾಗರ್ ಫಿಲಂ ಕಂಪನಿಗಳಲ್ಲಿ ಕಲಾವಿದೆಯಾಗಿ ಹಲವು ಚಿತ್ರಗಳಲ್ಲಿ ಅಭಿನಯಿಸಿದರು. ಹಿಂದಿ, ತಮಿಳು, ತೆಲುಗು ಟಾಕಿ ಚಿತ್ರಗಳಲ್ಲೂ ಅಭಿನಯಿಸುತ್ತಿದ್ದಾಗ ಪಂಢರಿಬಾಯಿ ಅವರ 'ಸಂತ ಸಖು', ಕೆಂಪರಾಜರ 'ನಳ ದಮಯಂತಿ'ಗಳ ಮೂಲಕ ಮತ್ತೆ ಕನ್ನಡ ಚಿತ್ರರಂಗ ಪ್ರವೇಶವಾಯಿತು. ಆಕೆಯ ಅಭಿನಯದ 'ಸ್ಕೂಲ್ ಮಾಸ್ಟರ್'ನ ಬಂಗ್ಲೆ ಕಾವೇರಮ್ಮ, 'ಗೆಜ್ಜೆ ಪೂಜೆ'ಯ ಸಂಗಪ್ಪ ಬಹುಕಾಲ ನೆನಪಿನಲ್ಲಿ ಉಳಿಯುವಂಥ ಪಾತ್ರಗಳು.

### ಅಪರ್ಣ.ಎನ್

ಹಿರಿಯ ಪತ್ರಕರ್ತ ಕೆ.ಎಸ್.ನಾರಾಯಣಸ್ವಾಮಿ ಅವರ ಮಗಳು. ಶಾಲಾ ದಿನಗಳಿಂದಲೇ ಸಾಹಿತ್ಯ ಮತ್ತಿತರೆ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದ ಈಕೆ



'ಜಾಗೃತಿ' ಚಿತ್ರದ ಮೂಲಕ ಬಾಲನಟಿಯಾಗಿ ಚಿತ್ರರಂಗ ಪ್ರವೇಶಿಸಿದರು. ನಂತರ ನಾಯಕಿಯಾಗಿ ನಿರ್ದೇಶಕ ಪುಟ್ಟಣ್ಣ ಕಣಗಾಲ್‌ರ ಮಹತ್ವಾಕಾಂಕ್ಷೆಯ ಚಿತ್ರ 'ಮಸಣದ ಹೂವು'ದಿಂದ (೧೯೮೫) ಬೆಳ್ಳಿತೆರೆಗೆ ಪರಿಚಿತರಾದರು. ನಂತರ ಸುಮಾರು ೧೦ ಚಿತ್ರಗಳಲ್ಲಿ ಗಮನಾರ್ಹ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. 'ಸಂಗ್ರಾಮ', 'ನಮ್ಮೂರ ರಾಜ', 'ಚಕ್ರವರ್ತಿ', 'ಒಂಟಿ ಸಲಗ', 'ಇನ್‌ಸ್ಪೆಕ್ಟರ್ ವಿಕ್ರಂ', 'ಸಾಹಸ ವೀರ' ಮುಖ್ಯ ಚಿತ್ರಗಳು. ಬೆಂಗಳೂರು ದೂರದರ್ಶನದಲ್ಲಿ ಸೀನಿಯರ್ ಗ್ರೇಡ್ ಉದ್ಘೋಷಕಿಯಾಗಿ ಕಾರ್ಯ ನಿರ್ವಹಿಸಿರುತ್ತಾರೆ. ಆಕಾಶವಾಣಿಯಲ್ಲೂ ಅನೌನ್ಸರ್ ಆಗಿ ಕೆಲಸ ಮಾಡಿದ್ದಾರೆ. ಕಿರುತೆರೆಯಲ್ಲಿ ಅಭಿನಯ, ಸಮಾರಂಭಗಳ ನಿರ್ವಹಣೆ-ನಿರೂಪಣೆ ಮೊದಲಾದ ಕಾರ್ಯಗಳಿಗೆ ಹೆಸರಾಗಿದ್ದಾರೆ.

### ಅಬ್ಬಾಯಿನಾಯ್ಡು .ಎ.ಎಲ್

೧೯೬೮ರಲ್ಲಿ 'ಹೂವು ಮುಳ್ಳು' ಚಿತ್ರದ ಮೂಲಕ ನಿರ್ಮಾಪಕರಾದ ಎ.ಎಲ್.ಅಬ್ಬಾಯಿನಾಯ್ಡು, ಸುಮಾರು ೧೯ ಕನ್ನಡ ಚಿತ್ರಗಳನ್ನು ತಯಾರಿಸಿದ್ದಷ್ಟೇ ಅಲ್ಲದೆ ಹಲವು ಚಿತ್ರಗಳಿಗೆ ಕಥೆಯನ್ನು ರಚಿಸಿದರು.



ಕರಣೆ ಹಿಡಿದು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಕೆಲಸಗಾರರಾಗಿ ಜೀವನ ಪ್ರಾರಂಭಿಸಿದ ಅಬ್ಬಾಯಿನಾಯ್ಡು ತಮ್ಮ ಚಿತ್ರ ನಿರ್ಮಾಣ ಸಂಸ್ಥೆ ಮಧು ಆರ್ಟ್ ಫಿಲಂಸ್‌ಗೆ ಲಾಂಛನವಾಗಿ 'ಕರಣೆ'ಯನ್ನೇ ಬಳಸಿದರು. ಶಂಕರ್‌ನಾಗ್‌ರನ್ನು ವಾಣಿಜ್ಯ ಪ್ರಧಾನ ಚಿತ್ರಗಳಿಗೆ ಕರೆತಂದು 'ಸೀತಾರಾಮು' ಚಿತ್ರ ನಿರ್ಮಿಸಿದರು. ತಮ್ಮ ಚಿತ್ರಗಳ ಮೂಲಕ ವಿನೋದ್ ಆಳ್ವ, ಚರಣ್‌ರಾಜ್ ಮುಂತಾದ ಹಲವು ಕಲಾವಿದರನ್ನು ಬೆಳ್ಳಿತೆರೆಗೆ ಪರಿಚಯ ಮಾಡಿದರು. ಮರೆಯಾಗ ತೊಡಗಿದ ಕಲ್ಯಾಣ್‌ಕುಮಾರ್ ಅವರನ್ನು ಮತ್ತೆ ತೆರೆಗೆ ತಂದರು. ಕನ್ನಡ ಭಾಷೆಯಲ್ಲಿ ಒಲವು. ಅವರ ಚಿತ್ರಗಳಲ್ಲಿ ಬಳಸಲಾದ ಕನ್ನಡ ನಾಡು-ನುಡಿ ಕುರಿತ ಗೀತೆಗಳು ಅತ್ಯಂತ ಜನಪ್ರಿಯವಾಗಿವೆ.

ಅಬ್ಬಾಯಿನಾಯ್ಡು ಅವರ ಅತಿ ದೊಡ್ಡ ಸಾಧನೆಯೆಂದರೆ ಅವರು ತಮ್ಮ ಗಳಿಕೆಯನ್ನೆಲ್ಲ ಧಾರೆ ಎರೆದು, ಸಾಲಸೋಲ ಮಾಡಿ ನಿರ್ಮಿಸಿದ ಮಧು ಆರ್ಟ್ ಸ್ಟುಡಿಯೋ. ಎರಡು ಬೃಹತ್ ಚಿತ್ರೀಕರಣದ ಫ್ಲೋರ್‌ಗಳನ್ನಲ್ಲದೆ, ಆಸ್ಪತ್ರೆ, ಪೊಲೀಸ್ ಸ್ಟೇಷನ್ ಮುಂತಾದ ಖಾಯಂ ಸೆಟ್‌ಗಳನ್ನು ಹೊಂದಿರುವ ಈ ಸ್ಟುಡಿಯೋ ಅವರ ನೆನಪಾಗಿ ಉಳಿದಿದೆ. ತಮ್ಮದೇ ಸುಸಜ್ಜಿತ ಸ್ಟುಡಿಯೋದಲ್ಲಿ ಅವರು ತಯಾರಿಸಿದ ಕೊನೆಯ ಚಿತ್ರ 'ತಾಯಮ್ಮ'. ಅಬ್ಬಾಯಿಯವರು ಕಾರ್ಮಿಕರ, ಸಾಹಸ ಕಲಾವಿದರ ಸಂಘಟನೆಗೆ ಪ್ರೇರಕ ಶಕ್ತಿಯಾದರು. ವೀಡಿಯೋ ಪೈರಸಿ ವಿರುದ್ಧ ದೊಡ್ಡ ಸಮರವನ್ನೇ ಸಾರಿದರು. ೧೯೯೯ರಲ್ಲಿ ವಿಧಿ ವಶರಾದರು.

### ಅಬ್ದುಲ್ ರೆಹಮಾನ್ ಪಾಷ

ಅಬ್ದುಲ್ ರೆಹಮಾನ್ ಪಾಷ ರೇಡಿಯೋ ಮತ್ತು ಟೆಲಿವಿಷನ್ ಮಾಧ್ಯಮಗಳಲ್ಲಿ ಹಾಗೂ ಸಾಕ್ಷ್ಯ ಮತ್ತು ಶೈಕ್ಷಣಿಕ ಕಿರುಚಿತ್ರಗಳ ಕ್ಷೇತ್ರದಲ್ಲಿ ಬಹಳಷ್ಟು ಕೆಲಸವನ್ನು ಮಾಡಿದ್ದಾರೆ. ಚಲನಚಿತ್ರ ಮಾಧ್ಯಮವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿರುವ ಪಾಷ ಭಾಷಾ ಶಾಸ್ತ್ರದಲ್ಲಿ



ಎಂ.ಎ.ಪದವೀಧರರು. ಚಲನಚಿತ್ರ ಮಾಧ್ಯಮದ ಬಗ್ಗೆ ಪುಸ್ತಕಗಳನ್ನು ರಚಿಸಿದ್ದಾರೆ. ಪ್ರೇಮಾ ಕಾರಂತ್ ನಿರ್ದೇಶನದ 'ನಕ್ಕಳಾ ರಾಜಕುಮಾರಿ' ಮಕ್ಕಳ ಚಿತ್ರಕ್ಕೆ ಕಥೆ, ಚಿತ್ರಕಥೆ ಮತ್ತು ಸಂಭಾಷಣೆಯನ್ನು ಬರೆಯುವುದರೊಂದಿಗೆ ಚಿತ್ರದ ಸಹ ನಿರ್ದೇಶಕರೂ ಆಗಿದ್ದರು. ನಂತರ 'ಚುಕ್ಕಿ ಚಂದ್ರಮ' ಚಿತ್ರದ ಕಥೆಗಾಗಿ ಅವರು ೧೯೯೧-೯೨ನೇ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ಕಥಾ ಲೇಖಕ ಪ್ರಶಸ್ತಿಯನ್ನು ಪಡೆದರು. ಪಾಷರವರು ನಿರ್ದೇಶಿಸಿದ ಮಕ್ಕಳ ರೂಪಕ ಚಿತ್ರ 'ಚಂದನ ಚಿಗುರು'.

### ಅಭಿಜಿತ್

ಕಿರುತೆರೆಯಿಂದ ಬೆಳ್ಳಿತೆರೆಗೆ ಬಂದ ನಟ. ತಾರ ಲೀಲಾವತಿ ಅವರ ನಿರ್ಮಾಣದ 'ಕಾಲೇಜು ಹೀರೋ' ಚಿತ್ರದಲ್ಲಿ



ಖಳನಾಯಕನಾಗಿ ಪ್ರವೇಶ. ೧೯೯೦ರ ನಂತರ ನಿರ್ದೇಶಕ ಕೆ.ವಿ.ಜಯರಾಂರವರ 'ರಂಜಿತ' ಚಿತ್ರದಿಂದ ನಾಯಕ ಪಟ್ಟ. 'ರಶ್ಮಿ', 'ಪ್ರೀತಿಯ ಉಡುಗೊರೆ','ಕಂಡಲ್ಲಿ ಗುಂಡು' ಮೊದಲಾದ ಚಿತ್ರಗಳಲ್ಲಿ ನಾಯಕನಾಗಿ ಅಭಿನಯಿಸಿದ ಅಭಿಜಿತ್, ನಂತರದ ದಿನಗಳಲ್ಲಿ 'ಹೈಕಮಾಂಡ್', ಒನ್ ಮ್ಯಾನ್ ಆರ್ಮಿ','ಬಾಳೊಂದು ಚದುರಂಗ'ದಲ್ಲಿ ಉಪನಾಯಕನಾಗಿ ಅಭಿನಯಿಸಿದರು. 'ಚಿನ್ನ ನೀ ನಗುತಿರು', 'ಜೀವನ ಚೈತ್ರ', 'ಯಜಮಾನ' ಅವರ ಇನ್ನಿತರ ಚಿತ್ರಗಳು.

## ಅಭಿನಯ

'ನಾರಿ ಸ್ವರ್ಗಕ್ಕೆ ದಾರಿ' ಚಿತ್ರದ ಮೂಲಕ ಬಾಲನಟಿಯಾಗಿ ಚಿತ್ರರಂಗವನ್ನು ಪ್ರವೇಶಿಸಿ, ಕಾಶೀನಾಥ್ ನಿರ್ಮಿಸಿ, ನಿರ್ದೇಶಿಸಿದ 'ಅನುಭವ'ದಲ್ಲಿ ನಾಯಕಿಯಾಗಿ ಅಭಿನಯಿಸಿದರು. ಆ ಚಿತ್ರದ ಅಭಿನಯಕ್ಕೆ ರಾಜ್ಯ ಸರ್ಕಾರದ ಅತ್ಯುತ್ತಮ ನಟಿ ಪ್ರಶಸ್ತಿ ಪಡೆದುಕೊಂಡರು. ಬೆಡಗುಗಿತ್ತಿಯಲ್ಲದಿದ್ದರೂ ಗಂಭೀರ ಪಾತ್ರಗಳಲ್ಲಿ ಅಚ್ಚುಕಟ್ಟಾಗಿ ಅಭಿನಯಿಸುವ ಸಾಮರ್ಥ್ಯವಿರುವ ಅಭಿನಯ ಅಲ್ಲಿಂದ ಸುಮಾರು ೨೦



ಚಿತ್ರಗಳಲ್ಲಿ ಬಹುತೇಕ ಪೋಷಕ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ನಾಯಕಿಯಾಗಿ ಆಕೆ ಗಮನಸೆಳೆದ ಇನ್ನೊಂದು ಚಿತ್ರ ಉಮೇಶ್ ಕುಲಕರ್ಣಿ ನಿರ್ದೇಶನದ 'ಶಂಖನಾದ' 'ಗಜಪತಿ ಗರ್ವಭಂಗ', 'ಬಂಧಮುಕ್ತ', 'ಯೌವನದ ಸುಳಿಯಲ್ಲಿ','ಎದುರು ಮನೆ ಮೀನ', 'ಸುರಸುಂದರಾಂಗ', 'ಅನಾಮಿಕ', 'ನಿಷ್ಕರ್ಷ', 'ಮುತ್ತಿನಂಥ ಮನುಷ್ಯ', ಇತ್ಯಾದಿ ಚಿತ್ರಗಳು ಮುಖ್ಯವಾದವು. ಅಭಿನಯ ಎರಡು ತಮಿಳು ಮತ್ತು ಒಂದು ತುಳು ಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. ಚಲನಚಿತ್ರಗಳಿಗಿಂತ ಕಿರುತೆರೆಯಲ್ಲಿಯೇ ಹೆಚ್ಚು ಜನಪ್ರಿಯವಾಗಿರುವ ಅಭಿನಯ ಸುಮಾರು ೫೦೦ಕ್ಕೂ ಹೆಚ್ಚು ಧಾರಾವಾಹಿಗಳಲ್ಲಿ ನಟಿಸಿದ್ದಾರೆ.

## ಅಯ್ಯರ್.ಎಲ್.ಎಸ್

ಎಲ್.ಎಸ್.ಅಯ್ಯರ್ ಮೂಕಿ ಕಾಲದಿಂದಲೂ ಚಿತ್ರರಂಗದೊಂದಿಗೆ ನಿಕಟ ಸಂಪರ್ಕ ಹೊಂದಿದ್ದ ಹಿರಿಯರು. ಹಿಂದಿ ಚಿತ್ರರಂಗದೊಂದಿಗೆ ನಂಟನ್ನು ಹೊಂದಿದ್ದವರು. ಚಿತ್ರರಂಗದ ಒಳ ಹೊರಗುಗಳನ್ನು ಸಾಕಷ್ಟು ತಿಳಿದು ಚಿತ್ರೋದ್ಯಮಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಇವರು ಸಿದ್ಧಹಸ್ತರು. ಪ್ರದರ್ಶಕ ವಲಯದ, ವಿತರಕ ವಲಯದ ಯಾವುದೇ ಸಮಸ್ಯೆಗಳನ್ನು ನಿವಾರಿಸುವಲ್ಲಿ ಇವರು ತಮ್ಮ ಸೂಕ್ತ ಸಲಹೆಗಳನ್ನು ನೀಡಬಲ್ಲವರು.



ಗಾಂಧಿನಗರದಲ್ಲಿ ಸಾಕಷ್ಟು ಜನಪ್ರಿಯರಾದಂಥವರು. ಕೆ.ಸಿ.ಎನ್ ಪರಿವಾರದೊಂದಿಗೆ ನಿಕಟ ಸಂಪರ್ಕ ಹೊಂದಿದವರು.ಇವರ ಮಾರ್ಗದರ್ಶನ ಕೆ.ಸಿ.ಎನ್ ಸಂಸ್ಥೆಗಳ ಉಸ್ತುವಾರಿ ಬೆಳವಣಿಗೆಗಳಿಗೆ ಸಹಕಾರಿಯಾಗಿದೆ. ಮೋಹನ್ ಮುರುಳಿ ಪ್ರೊಡಕ್ಷನ್ಸ್‌ನ ಕೃಷ್ಣರಾಜು ಇವರ ಅಳಿಯಂದಿರು. ಆ ಸಂಸ್ಥೆಯ ಚಿತ್ರಗಳಿಗೆ ಕಥೆಗಳನ್ನೂ ರಚಿಸಿದ್ದಾರೆ.

## ಅಯ್ಯರ್.ಜಿ.ವಿ

ಕನ್ನಡ ಚಿತ್ರರಂಗಕ್ಕೆ ಅಪಾರ ಕೊಡುಗೆ ನೀಡಿದ ಬಹುಮುಖ ಪ್ರತಿಭಾವಂತ. ಮೈಸೂರು ಜಿಲ್ಲೆಯ ನಂಜನಗೂಡಿನಲ್ಲಿ ಜನನ (ಸೆಪ್ಟೆಂಬರ್ ೩, ೧೯೧೭). ತಂದೆ-ತಾಯಿ ಇಟ್ಟ ಹೆಸರು ವೆಂಕಟರಮಣ. ತಂದೆ ಗಣಪತಿ ಅಯ್ಯರ್. ಬಡತನದ ಕುಟುಂಬ. ಬಾಲಕನಾಗಿದ್ದಾಗಲೇ ಗುಬ್ಬಿ ಕಂಪನಿಯಲ್ಲಿ ಪರಿಚಾರಕನಾಗಿ ಸೇರಿದರು. ಅಲ್ಲಿಂದ ಹೊರಬಂದು ಭಿತ್ತಿಪತ್ರಗಳನ್ನು ಬರೆದರು. ಚಲನಚಿತ್ರಗಳಲ್ಲಿ ಅಭಿನಯಕ್ಕೆ ಅವಕಾಶಗಳನ್ನು ಅರಸಿ ಪುಣೆಗೆ ಹೋದರು. ಅಲ್ಲಿ ದೊರೆತದ್ದು ಹೋಟೇಲ್ ಮಾಣಿ ಕೆಲಸ. ಪುನಃ ನಂಜನಗೂಡನ್ನು ಸೇರಿ ನಾಟಕಗಳಲ್ಲಿ ಸಣ್ಣ ಪುಟ್ಟ ಪಾತ್ರಗಳನ್ನು ಮಾಡಿದರು. ೧೮ನೆಯ ವಯಸ್ಸಿನಲ್ಲಿ ನಟ ಬಾಲಕೃಷ್ಣ ಅವರೊಂದಿಗೆ 'ಅಡ್ಡದಾರಿ', 'ಬೇಡರ ಕಣ್ಣಪ್ಪ' ನಾಟಕಗಳನ್ನು ಬರೆದರು. 'ರಾಧಾರಮಣ' (೧೯೪೨) ಮೊದಲ ಚಿತ್ರ. ಕೇಶಿದೈತ್ಯನ ಪಾತ್ರ ಇವರಿಗೆ ದೊರೆಯಿತು. 'ಬೇಡರ ಕಣ್ಣಪ್ಪ' (೧೯೫೪) ಚಿತ್ರದಲ್ಲಿ ಮುಖ್ಯವಾದ ಪಾತ್ರ ದೊರೆಯಿತು. 'ಸೋದರಿ' (೧೯೫೫) ಚಿತ್ರಕ್ಕಾಗಿ ಸಂಭಾಷಣೆ ಮತ್ತು ಹಾಡುಗಳನ್ನು ರಚಿಸಿದರು. ರಾಜಕುಮಾರ್, ಬಾಲಕೃಷ್ಣ, ನರಸಿಂಹರಾಜು ಅವರೊಂದಿಗೆ 'ರಣಧೀರ ಕಂಠೀರವ' ಚಿತ್ರ



ನಿರ್ಮಿಸಿದರು. 'ಭೂದಾನ' (೧೯೬೨) ಇವರು ನಿರ್ದೇಶಿಸಿದ ಮೊದಲ ಚಿತ್ರ. 'ತಾಯಿ ಕರುಳು' ನಿರ್ಮಿಸಿ, ನಿರ್ದೇಶಿಸಿದ ಮೊದಲ ಚಿತ್ರ. ಇವರು ನಿರ್ಮಿಸಿದ 'ವಂಶವೃಕ್ಷ', ನಿರ್ದೇಶಿಸಿದ 'ಹಂಸಗೀತೆ' ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದವು. 'ಶಂಕರಾಚಾರ್ಯ', 'ರಾಮಾನುಜಾಚಾರ್ಯ', 'ಮಧ್ವಾಚಾರ್ಯ' ತತ್ವ ತ್ರಿವಳಿಗಳು ಮತ್ತು 'ವಿವೇಕಾನಂದ','ಭಗವದ್ಗೀತೆ' ರಾಷ್ಟ್ರದ ಗಮನ ಸೆಳೆದ ಇವರ ಚಿತ್ರಗಳು. 'ಶಂಕರಾಚಾರ್ಯ','ಭಗವದ್ಗೀತೆ' ಸಂಸ್ಕೃತ ಚಿತ್ರಗಳಿಗೆ ರಾಷ್ಟ್ರಪತಿಗಳ ಸ್ವರ್ಣಪದಕ ಲಭ್ಯವಾಯಿತು. ಹತ್ತಾರು ಚಲನಚಿತ್ರಗಳಿಗೆ ಸಾಹಿತ್ಯ, ನೂರಾರು ಗೀತೆಗಳ ರಚನೆ, ಇಪ್ಪತ್ತು ಚಲನಚಿತ್ರಗಳನ್ನು ನಿರ್ದೇಶಿಸಿರುವ ಇವರಿಗೆ ರಾಜ್ಯ ಸರ್ಕಾರ ೧೯೮೭-೮೮ನೆಯ ಸಾಲಿನಲ್ಲಿ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ನೀಡಿ ಗೌರವಿಸಿದೆ. ಬದಲಾಗುತ್ತಿದ್ದ ಚಿತ್ರೋದ್ಯಮದಲ್ಲಿ ತನ್ನನ್ನು ತೊಡಗಿಸಿಕೊಂಡರು, ಹೊಸ ಪರಂಪರೆಯನ್ನು ಬೆಳೆಸಿದರು. ಪ್ರಯೋಗಶೀಲತೆಯೇ ಅವರ ಅಭಿವ್ಯಕ್ತಿಯ ಮೂಲಧನವಾಯಿತು. 'ಕುದುರೆ ಮೊಟ್ಟೆ', 'ವಾಲ್ ಪೋಸ್ಟರ್' ತೆರೆ ಕಾಣಲಿಲ್ಲ. ಸಹಕಾರಿ ಯೋಜನೆಯಡಿ ತಯಾರಿಸಿದ 'ನಾಳೆಗಳನ್ನು ಮಾಡುವವರು' ಒಂದು ಪ್ರಯೋಗ. ಕಿರುತೆರೆಗೆ 'ಕೃಷ್ಣಲೀಲಾ', 'ನಾಟ್ಯರಾಣಿ ಶಾಂತಲಾ' ಚಿತ್ರಿಸಿದ್ದಾರೆ. ರಾಜ್ಯ ಸರ್ಕಾರಕ್ಕಾಗಿ ತಗಡೂರು ರಾಮಚಂದ್ರರಾಯರನ್ನು ಕುರಿತ ಸಾಕ್ಷ್ಯಚಿತ್ರ ತಯಾರಿಸಿದರು.

## ಅರವಿಂದ್ (ರಥಸಪ್ತಮಿ)

ಜನಪ್ರಿಯ ಖಳನಾಯಕ ಅರವಿಂದ್ ದಿವಂಗತ ಶಂಕರ್‌ನಾಗ್ ಶೋಧ. ಶಂಕರ್



ನಿರ್ದೇಶಿಸಿದ 'ಗೀತಾ' ಅವರ ಮೊದಲ ಚಿತ್ರ. ನಂತರ ೧೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ೨೦೦ಕ್ಕೂ ಹೆಚ್ಚು ಚಿತ್ರಗಳಿಗೆ ಕಂಠದಾನ ಕಲಾವಿದರಾಗಿ ದುಡಿದಿದ್ದಾರೆ. ಅನೇಕ ಕಿರುತೆರೆಯ ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ. ಗ್ರಾಮೀಣ ಪ್ರದೇಶದಿಂದ ಬಂದ ಅರವಿಂದ್ ಬಹುತೇಕ ಎಲ್ಲ ಖ್ಯಾತ ನಿರ್ದೇಶಕರೊಂದಿಗೆ ಕೆಲಸ ಮಾಡಿದ್ದಾರೆ. 'ಗಾಳಿ ಮಾತು', 'ಮಿಡಿದ ಶೃತಿ', 'ರಣರಂಗ', 'ಬಾ ನನ್ನ ಪ್ರೀತಿಸು', 'ಎರಡು ರೇಖೆಗಳು', 'ಶಂಖನಾದ','ರಣರಂಗ','ಅಂಜದ ಗಂಡು', 'ರೋಲ್ ಕಾಲ್ ರಾಮಕೃಷ್ಣ','ಅಸುರ','ಓ ಪ್ರೇಮವೇ' ಇತ್ಯಾದಿ ಅವರು ಅಭಿನಯಿಸಿದ ಚಿತ್ರಗಳಲ್ಲಿ ಮುಖ್ಯವಾದವು.

## ಅರವಿಂದ್ (ಅನುಭವ)

ಖ್ಯಾತ ಹಾಸ್ಯ ನಟ. ರಂಗಭೂಮಿ ಹಾಗೂ ಸಿನಿಮಾ ಎರಡುಕ್ಷೇತ್ರಗಳಲ್ಲೂ ಅವಿರತವಾಗಿ ದುಡಿದ ಅನುಭವವಿರುವ ಅರವಿಂದ್, ಉಮೇಶ್ ಕುಲಕರ್ಣಿ ನಿರ್ದೇಶನದ ರಾಷ್ಟ್ರಪ್ರಶಸ್ತಿ ವಿಜೇತ ಚಿತ್ರ 'ಶಂಖನಾದ' ದಲ್ಲಿ ನಾಯಕರಾಗಿ ಅಭಿನಯಿಸಿದರು.



ನಂತರ 'ಗಪ್‌ಚಿಪ್' ಚಿತ್ರದ ನಿರ್ಮಾಪಕರಾದರು. ಇದಲ್ಲದೆ 'ಅನುಭವ', 'ಆಗಂತುಕ', 'ಕಾಡಿನಬೆಂಕಿ', 'ಬೆಟ್ಟದ ಹೂವು' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಅನುಭವ' ಚಿತ್ರದಲ್ಲಿನ ಅಭಿನಯಕ್ಕಾಗಿ ಅವರು ೧೯೮೩-೮೪ನೇ ಸಾಲಿನ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ಪಡೆದಿದ್ದಾರೆ.

## ಅರವಿಂದ ಕಿಗ್ಗಾಲ್

ಸದಾ ಪ್ರಯೋಗ ಪ್ರಿಯ ಶಬ್ದಗ್ರಾಹಕರಲ್ಲಿ ಅರವಿಂದ ಕಿಗ್ಗಾಲ್ ಒಬ್ಬರು. ಹುಟ್ಟಿದ್ದು ಮಡಿಕೇರಿ ಜಿಲ್ಲೆಯ ಕಿಗ್ಗಾಲ್ ಗ್ರಾಮದಲ್ಲಿ. ಬಿ.ಎಸ್‌ಸಿ., ಪದವೀಧರರಾದ ಇವರು



ಮದರಾಸಿನ ತರಂಗಿಣಿ ಮತ್ತು ವಿಜಯಾ ಸ್ಟುಡಿಯೋಗಳಲ್ಲಿ ಶಬ್ದಗ್ರಹಣ ತರಬೇತಿ ಪಡೆದಿದ್ದಾರೆ. ತಮ್ಮದೇ ಆದ ಗಾನಲಹರಿ ರಿಕಾರ್ಡಿಂಗ್ ಸ್ಟುಡಿಯೋ ನಡೆಸುತ್ತಿದ್ದಾರೆ. 'ಆಸ್ಫೋಟ', 'ಉದ್ಭವ', 'ನೀನೇ ನನ್ನ ಜೀವ', 'ನನಗೂ ಹೆಂಡ್ತಿ ಬೇಕು', 'ಪ್ರಣಯದ ಪಕ್ಷಿಗಳು', 'ಸಂತ ಶಿಶುನಾಳ ಷರೀಫ', 'ಕ್ರಮ' ಮುಂತಾದ ೪೯ಕ್ಕೂ ಹೆಚ್ಚು ಚಿತ್ರಗಳ ಹಾಡುಗಳನ್ನು ಧ್ವನಿ ಮುದ್ರಿಸಿದ್ದಾರೆ. ೧೯೯೧-೯೨ನೇ ಸಾಲಿನ ಅತ್ಯುತ್ತಮ ಧ್ವನಿಗ್ರಾಹಕ ಪ್ರಶಸ್ತಿಯನ್ನು 'ಮೈಸೂರು ಮಲ್ಲಿಗೆ' ಚಿತ್ರಕ್ಕಾಗಿ ಪಡೆದಿದ್ದಾರೆ.

## ಅರಸು.ಹೆಚ್.ಟಿ

ಹಿರಿಯ ರಂಗಭೂಮಿ ಹಾಗೂ ಚಲನಚಿತ್ರ ಕಲಾವಿದರು. ೧೯೨೦ರಲ್ಲಿ ರಾಯಚೂರು ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ



ಹನುಮಸಾಗರದಲ್ಲಿ ಜನಿಸಿದರು. ವೃತ್ತಿಯಿಂದ ನೇಕಾರರು. ಮೂಲ ನಾಮಧೇಯ ಶಿವರಾಜ್‌ಅರಸು. ಏಳನೇ ತರಗತಿವರೆಗೆ ಶಿಕ್ಷಣ. ತಮ್ಮ ಏಳನೇ ವಯಸ್ಸಿಗೆ 'ಭಕ್ತ ಪ್ರಹ್ಲಾದ' ನಾಟಕದಲ್ಲಿ ಪ್ರಹ್ಲಾದನ ಪಾತ್ರವಹಿಸುವ ಮೂಲಕ ರಂಗಪ್ರವೇಶ ಮಾಡಿದರು. ಜಯಲಕ್ಷ್ಮಿ ನಾಟ್ಯಸಂಘ, ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯ ಸಂಘ, ಗೋಕಾಕ್ ಕಂಪೆನಿ, ಕನ್ನಡ ಥೇಟರ್ಸ್ ಹಾಗೂ ದೇಸಾಯಿ ಕಂಪೆನಿಗಳಲ್ಲಿ ಕಲಾ ಸೇವೆ ಮಾಡಿದರು. ರಂಗಭೂಮಿಯ ಹಿನ್ನೆಲೆಯೊಂದಿಗೆ ಮಹಾತ್ಮಾ ಪಿಕ್ಚರ್ಸ್ ಅವರ 'ಮಂಗಳ ಸೂತ್ರ' ಚಿತ್ರದ ನಾಯಕರಾಗಿ ಚಿತ್ರರಂಗ ಪ್ರವೇಶಿಸಿದರು. ಆದವಾನಿ ಲಕ್ಷ್ಮೀದೇವಿ ಈ ಚಿತ್ರದ ನಾಯಕಿ. 'ಧರ್ಮಸ್ಥಳ ಮಹಾತ್ಮೆ', 'ಪಾತಾಳ ಮೋಹಿನಿ', 'ಕಿತ್ತೂರು ಚೆನ್ನಮ್ಮ', 'ಚಿನ್ನದ ಗೊಂಬೆ', 'ಶ್ರೀ ಕೃಷ್ಣದೇವರಾಯ', 'ಮಾರ್ಗದರ್ಶಿ', 'ಮೇಯರ್ ಮುತ್ತಣ್ಣ', 'ಮಯೂರ' ಹೀಗೆ ಸುಮಾರು ಐವತ್ತಕ್ಕೂ ಹೆಚ್ಚು ಚಿತ್ರಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ಇವರು ರಂಗಭೂಮಿಯಲ್ಲಿ ಸಲ್ಲಿಸಿರುವ ಸೇವೆಗಾಗಿ 'ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ' ಹಾಗೂ 'ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ' ಸಂದಿವೆ.

## ಅರಸುಕುಮಾರ್ .ಬಿ.ಎ

ಹವ್ಯಾಸಿ ನಾಟಕಕಾರರಾಗಿದ್ದ ಅರಸುಕುಮಾರ್‌ರವರು ಕನ್ನಡ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ, ಚಿತ್ರರಂಗವನ್ನು ಪ್ರವೇಶಿಸುವ ಉದ್ದೇಶದಿಂದಲೇ ಮದರಾಸಿಗೆ ಪ್ರಯಾಣ ಬೆಳೆಸಿದರು. ಸ್ವಲ್ಪಕಾಲ ನಿರ್ದೇಶಕ ವಿಠಲಾಚಾರ್ಯರೊಂದಿಗೆ ಸಹಾಯಕ ನಿರ್ದೇಶಕರಾಗಿ ದುಡಿದು ಈ ಮಾಧ್ಯಮದ



ಪರಿಚಯ ಮಾಡಿಕೊಂಡರು. ಅರಸುಕುಮಾರ್‌ರವರು ತಾವೇ ನಿರ್ಮಿಸಿ ನಿರ್ದೇಶಿಸಿದ ಸದಭಿರುಚಿಯ ಪ್ರಥಮ ಚಿತ್ರ 'ಬಂಗಾರದ ಹೂವು' (೧೯೬೭) ರಾಷ್ಟ್ರಪ್ರಶಸ್ತಿಗಳಲ್ಲಿ ಪ್ರಾದೇಶಿಕ ರಜತ ಪದಕ ಪಡೆಯಿತು. ನಂತರ ಅವರು ನಿರ್ಮಿಸಿ ನಿರ್ದೇಶಿಸಿದ 'ಬೋರೇಗೌಡ ಬೆಂಗಳೂರಿಗೆ ಬಂದ' ಚಿತ್ರವೂ ಪ್ರೇಕ್ಷಕರ ಗಮನ ಸೆಳೆಯಿತು. 'ಬೀಸಿದ ಬಲೆ' ಮೂಲಕ ಪೂನಾ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ತರಬೇತಿ ಪಡೆದ ಜಯಲಕ್ಷ್ಮಿ ಯವರನ್ನು ಪರಿಚಯಿಸಿದರು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ಕೂಡ ಸಕ್ರಿಯವಾಗಿ ತೊಡಗಿಕೊಂಡು ಸಂಸ್ಥೆಯ ಕಾರ್ಯದರ್ಶಿಯಾದರು. ನಂತರ ಅಧ್ಯಕ್ಷ ಸ್ಥಾನಕ್ಕೂ ಏರಿ ನಿರ್ಮಾಣ, ವಿತರಣೆ ಹಾಗೂ ಪ್ರದರ್ಶನ ಕ್ಷೇತ್ರಗಳ ನಡುವೆಯ ಒಗ್ಗಟ್ಟಿಗೆ ಬಹಳ ಶ್ರಮಿಸಿದರು, ಉತ್ತಮ ಸಂಘಟಕರೆನಿಸಿದರು. ಭಾರತ-ಚೀನಾ ಯುದ್ಧ ಸಮಯದಲ್ಲಿ ರಾಷ್ಟ್ರೀಯ ರಕ್ಷಣಾ ನಿಧಿಗೆ ಹಣ ಸಂಗ್ರಹಿಸಲು ಚಿತ್ರರಂಗದ ಪ್ರಮುಖರ ತಂಡವನ್ನು ರಾಜ್ಯದ ಅನೇಕ ಕಡೆಗಳಿಗೆ ಕೊಂಡೊಯ್ದು ಧನ ಸಂಗ್ರಹ ಮಾಡಿ ಉದ್ಯಮದ ಗೌರವವನ್ನು ಹೆಚ್ಚಿಸಲು ಶ್ರಮಿಸಿದವರು ಅರಸುಕುಮಾರ್.

## ಅರುಂಧತಿನಾಗ್

ಮುಂಬಯಿ ರಂಗಭೂಮಿಯಿಂದ ಕನ್ನಡದ ರಂಗಭೂಮಿಗೆ ಕೊಡುಗೆಯಾಗಿ



ಬಂದ ಅರುಂಧತಿ ರಾವ್, ಗಿರೀಶ್ ಕಾರ್ನಾಡರ 'ಅಂಜು ಮಲ್ಲಿಗೆ' ನಾಟಕದ ದುರಂತನಾಯಕಿ ಯಾಮಿನಿಯಾಗಿ ನೀಡಿದ ಅಭಿನಯ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾಯಿತು. ಮುಂದೆ 'ನೋಡಿ ಸ್ವಾಮಿ ನಾವಿರೋದು ಹೀಗೆ', 'ಬ್ಯಾರಿಸ್ಟರ್' ನಾಟಕಗಳು. ಶಂಕರ್‌ನಾಗ್ ಅವರೊಂದಿಗೆ ವಿವಾಹ. ೧೯೮೩ರಲ್ಲಿ ತೆರೆಕಂಡ 'ನೋಡಿ ಸ್ವಾಮಿ ನಾವಿರೋದು ಹೀಗೆ' ಚಿತ್ರದಿಂದ ಚಿತ್ರರಂಗ ಪ್ರವೇಶ. ನಂತರ 'ಆಕ್ಸಿಡೆಂಟ್', 'ಪರಮೇಶಿ ಪ್ರೇಮ ಪ್ರಸಂಗ', 'ಗೋಲಿಬಾರ್', 'ಶಿವಸೈನ್ಯ' ಮೊದಲಾದ ಚಿತ್ರಗಳಲ್ಲಿ ಅಭಿನಯ. 'ಆಕ್ಸಿಡೆಂಟ್' ಚಿತ್ರದಲ್ಲಿನ ಅಭಿನಯಕ್ಕಾಗಿ ೧೯೮೪-೮೫ರ ರಾಜ್ಯ ಸರ್ಕಾರದ ಶ್ರೇಷ್ಠ ಪೋಷಕ ನಟಿ ಪ್ರಶಸ್ತಿಯನ್ನು ಪಡೆದಿದ್ದಾರೆ. ಶಂಕರ್‌ನಾಗ್ ಕನಸಾದ 'ಸಂಕೇತ್ ಎಲೆಕ್ಟ್ರಾನಿಕ್ಸ್', ಕಂಟ್ರಿಕ್ಲಬ್ ಎರಡರ ಸ್ಥಾಪನೆಗೂ ಪ್ರೇರಕ ಶಕ್ತಿಯಾಗಿ ನಿಂತರು. ಶಂಕರ್ ನಿಧನದಿಂದ ಕೊಂಚಕಾಲ ಅಜ್ಞಾತವಾಸದಲ್ಲಿದ್ದ ಅರುಂಧತಿ ಮತ್ತೆ ಕ್ರಿಯಾಶೀಲರಾಗಿ 'ರಂಗಶಂಕರ' ರಂಗಮಂದಿರ ನಿರ್ಮಾಣದಲ್ಲಿ ತೊಡಗಿಕೊಂಡರು.

## ಅವಿನಾಶ್

ಕನ್ನಡ ಚಿತ್ರರಂಗದ ಪೋಷಕ ನಟ. ಮೈಸೂರು ಜಿಲ್ಲೆಯ ಯಳಂದೂರು ಹುಟ್ಟಿದ ಊರು. ಎಂ.ಎ., ಎಂ.ಫಿಲ್ ಮಾಡಿ ಹವ್ಯಾಸಿ



ರಂಗ ಸಂಸ್ಥೆಗಳಾದ 'ಸ್ಪಂದನ', 'ಸಂಕೇತ್' ನಾಟಕ ತಂಡಗಳಲ್ಲಿದ್ದು ಅಭಿನಯಿಸಿದರು. ಟಿ.ಎಸ್.ನರಸಿಂಹನ್ ಅವರ ತೆರೆಕಾಣದ 'ತ್ರಿಶೂಲ' ಚಿತ್ರಕ್ಕೆ ಆಯ್ಕೆ. ಕಮರ್ಷಿಯಲ್ ಚಿತ್ರವಾದ 'ಬಂಧಮುಕ್ತ'ದಿಂದ ಚಿತ್ರರಂಗಕ್ಕೆ ಪರಿಚಿತರಾದ ಅವಿನಾಶ್ ಚಿತ್ರರಂಗ ಹಾಗೂ ರಂಗಭೂಮಿ ಎರಡನ್ನೂ ನಿಭಾಯಿಸಿಕೊಂಡು ಹೋಗುತ್ತಿರುವ ಪ್ರತಿಭಾವಂತ. ನಟನಾಗಿ ಸುಮಾರು ಎಪ್ಪತ್ತಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವ ಅವಿನಾಶ್ ಅಭಿನಯದ 'ಬಂಧಮುಕ್ತ', 'ಕೃಷ್ಣ ಮೆಚ್ಚಿದ ರಾಧೆ', 'ಸಂಯುಕ್ತ', 'ತರ್ಕ', 'ದಾದಾ', 'ಒಂದಾಗಿ ಬಾಳು', 'ಉತ್ಕರ್ಷ', 'ಅಶ್ವಮೇಧ', 'ಹುಲಿಯಾ', 'ಮತದಾನ', 'ಚಿನ್ನಾರಿ ಮುತ್ತ' ಮೊದಲಾದವು ಯಶಸ್ವಿ ಚಿತ್ರಗಳು. ಕಿರುತೆರೆಗೂ ಪ್ರವೇಶಿಸಿರುವ ಅವಿನಾಶ್ 'ಮಾಯಾಮೃಗ' ಧಾರಾವಾಹಿಯಿಂದ ಕರ್ನಾಟಕದ ಮೂಲಮೂಲೆಗೂ ಪರಿಚಿತರು. 'ಮತದಾನ' ಚಿತ್ರದ ಅಭಿನಯಕ್ಕೆ ಶ್ರೇಷ್ಠ ಪೋಷಕ ನಟ ಪ್ರಶಸ್ತಿ (೨೦೦೦) ಬಂದಿದೆ.

## ಅಶ್ವತ್ಥ್.ಕೆ.ಎಸ್

ಮುನ್ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವ ಜನಾನುರಾಗಿ ನಟ. ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕು ಕರಗನಹಳ್ಳಿ ಸ್ವಂತ ಊರು. ಮೈಸೂರಿನಲ್ಲಿ ೧೯೨೫ರಲ್ಲಿ ಜನನ. ಅಶ್ವತ್ಥನಾರಾಯಣ ನಾಮಕರಣವಾದ ಹೆಸರು. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು, ಆಹಾರ ಇಲಾಖೆಯಲ್ಲಿ (೧೯೪೪) ಕೆಲಸಕ್ಕೆ ಸೇರಿದರು. ಆಕಾಶವಾಣಿ



ನಾಟಕಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಹವ್ಯಾಸಿ ಕಲಾವಿದರೊಂದಿಗೆ ಸೇರಿಕೊಂಡು ಮೈಸೂರಿನಲ್ಲಿ ಹಲವಾರು ನಾಟಕಗಳಲ್ಲಿ ಅಭಿನಯಿಸಿದರು. ನಾಟಕದಲ್ಲಿನ ಇವರ ಅಭಿನಯ ಕಂಡು ಚಿತ್ರ ನಿರ್ದೇಶಕ ಕ.ಸುಬ್ರಹ್ಮಣ್ಯಂ ಚಿತ್ರರಂಗಕ್ಕೆ ಆಹ್ವಾನಿಸಿದರು. ಭಾಗಶಃ ವರ್ಣದಲ್ಲಿ ತೆರೆಕಂಡ 'ಸ್ತ್ರೀರತ್ನ' (೧೯೫೫) ಅಶ್ವತ್ಥ್ ಅಭಿನಯದ ಮೊದಲ ಚಿತ್ರ. ಕೊಂಚ ಕಾಲ ಚಿತ್ರರಂಗದಲ್ಲಿ ಅವಕಾಶವಿಲ್ಲದೆ ನಾಟಕಗಳಲ್ಲಿ ಅಭಿನಯಿಸಿದರಾದರೂ ಅನಂತರ ಹೇರಳವಾದ ಅವಕಾಶಗಳು ದೊರೆಯಲಾರಂಭಿಸಿದವು. 'ನಮ್ಮ ಮಕ್ಕಳು' (೧೯೬೮-೬೯), 'ನಾಗರಹಾವು' (೧೯೭೨-೭೩), 'ಮುತ್ತಿನ ಹಾರ' (೧೯೯೦-೯೧) ಚಿತ್ರಗಳಲ್ಲಿನ ಮನೋಜ್ಞ ಅಭಿನಯಕ್ಕಾಗಿ ಅವರಿಗೆ ಅತ್ಯುತ್ತಮ ಪೋಷಕನಟ ಪ್ರಶಸ್ತಿ ದೊರೆತಿದೆ. ೧೯೯೩-೯೪ನೆಯ ಸಾಲಿನಲ್ಲಿ ರಾಜ್ಯ ಸರ್ಕಾರ ಪ್ರತಿಷ್ಠಿತ ಡಾ।ರಾಜಕುಮಾರ್ ಪ್ರಶಸ್ತಿ ನೀಡಿ ಗೌರವಿಸಿತು. ಚಿತ್ರರಂಗಕ್ಕೆ ವಿದಾಯ ಹೇಳಿ ಐದು ವರ್ಷಗಳ ಕಾಲ ಅಭಿನಯಿಸದೇ ಉಳಿದಿದ್ದ ಇವರು ರಾಜಕುಮಾರ್ ಅಭಿನಯದ 'ಶಬ್ದವೇಧಿ' ಮೂಲಕ ಪುನಃ ಬಣ್ಣ ಹಚ್ಚಿದರು. ತಮ್ಮ ಶಿಸ್ತು ಮತ್ತು ಸುಸಂಸ್ಕೃತ ನಡವಳಿಕೆಗೆ ಹೆಸರಾದ ಅಶ್ವತ್ಥ್ ಕನ್ನಡ ಚಿತ್ರರಂಗ ಕಂಡ ವಿಶಿಷ್ಟ ವ್ಯಕ್ತಿಗಳಲ್ಲೊಬ್ಬರು.

## ಅಶ್ವತ್ಥ್ .ಸಿ

ಕನ್ನಡ ರಂಗಭೂಮಿ, ಸುಗಮ ಸಂಗೀತ ಹಾಗೂ ಚಲನಚಿತ್ರರಂಗದ ಸಂಗೀತ ಕ್ಷೇತ್ರದಲ್ಲಿ ಹಿನ್ನೆಲೆ ಗಾಯಕರಾಗಿ, ಸಂಗೀತ



ನಿರ್ದೇಶಕರಾಗಿ ಖ್ಯಾತರಾಗಿರುವ ಸಿ.ಅಶ್ವತ್ಥ್ ೧೯೩೯ರಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ಸಂಗೀತದೆಡೆಗೆ ಆಕರ್ಷಿತರಾದ ಇವರು ದೇವಗಿರಿ ಶಂಕರರಾವ್ ಅವರ ಬಳಿ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತ ಕಲಿತರು. ನಾಟಕಗಳಿಗೆ ಸಂಗೀತ ನೀಡಿದರು. ನಂತರ ಚಿತ್ರರಂಗಕ್ಕೆ ಬಂದರು. 'ಕಾಕನ ಕೋಟೆ', 'ಸ್ಪಂದನ', 'ಸಂತ ಶಿಶುನಾಳ ಷರೀಫ', 'ಮೈಸೂರು ಮಲ್ಲಿಗೆ', 'ನಾಗಮಂಡಲ' ಮುಂತಾದ ಪ್ರಶಸ್ತಿ ವಿಜೇತ ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ಇನ್ನೋರ್ವ ಸಂಗೀತ ನಿರ್ದೇಶಕ ಎಲ್.ವೈದ್ಯನಾಥನ್ ಜೊತೆಯಲ್ಲಿ 'ಅಶ್ವತ್ಥ್-ವೈದಿ' ಎಂಬ ಹೆಸರಿನಲ್ಲಿ 'ನಾರದ ವಿಜಯ', 'ಆಲೆಮನೆ', 'ಬಾಡದ ಹೂ' ಮುಂತಾದ ಜನಪ್ರಿಯ ಚಿತ್ರಗಳಿಗೆ ಸಂಗೀತ ನೀಡಿದ್ದಾರೆ. ೧೯೭೭-೭೮ ರಲ್ಲಿ 'ಸ್ಪಂದನ' ಚಿತ್ರ, 'ಚಿನ್ನಾರಿ ಮುತ್ತ' ಚಿತ್ರದ ಸಂಗೀತ ನಿರ್ದೇಶನಕ್ಕಾಗಿ ೧೯೯೩-೯೪ನೇ ಸಾಲಿನಲ್ಲಿ ರಾಜ್ಯಸರ್ಕಾರದ ಶ್ರೇಷ್ಠ ಸಂಗೀತ ನಿರ್ದೇಶಕ ಪ್ರಶಸ್ತಿ ಪಡೆದಿದ್ದಾರೆ. 'ಪರ್ವ ಕಾಲ'(?) ಚಿತ್ರದಲ್ಲಿ ಹಾಡಿದ 'ಮೋಡಿ ಮೋಡ...' ಗೀತಗೆ ೧೯೯೮-೯೯ನೇ ಸಾಲಿನ ಅತ್ಯುತ್ತಮ ಗಾಯಕ ರಾಜ್ಯಪ್ರಶಸ್ತಿ ಪಡೆದಿದ್ದಾರೆ. ಸಂಗೀತ ಕ್ಷೇತ್ರದಲ್ಲಿ ಅನೇಕ ವಿಶಿಷ್ಟ ಪ್ರಯೋಗಗಳನ್ನು ಮಾಡಿದ್ದಾರೆ. ಸುಗಮ ಸಂಗೀತ ಕ್ಷೇತ್ರದ ಸಾಧನೆಗಾಗಿ ರಾಜ್ಯಸರ್ಕಾರದ ಶಿಶುನಾಳ ಷರೀಫ ಪ್ರಶಸ್ತಿ ಸಂದಿದೆ.

## ಅಶ್ವತ್ಥ್ ಸೋರಟ್ (೧೯೧೫-೧೯೯೪)

ನಂಜನಗೂಡಿನ ವೈದಿಕ ಮನೆತನವೊಂದರಲ್ಲಿ ೧೯೧೫ರ ಫೆಬ್ರವರಿ ೩೦ನೇ ತಾರೀಖು ಜನಿಸಿದ ಅಶ್ವತ್ಥನಾರಾಯಣಶಾಸ್ತ್ರಿ ೧೯೩೦ರಲ್ಲಿ ರಂಗಭೂಮಿ ಪ್ರವೇಶಿಸಿದರು. ಹೆಚ್.ಎಲ್.ಎನ್.ಸಿಂಹ ಅವರ 'ಸಂಸಾರನೌಕ' ನಾಟಕದ ಮಾಧು ಪಾತ್ರದ ಖ್ಯಾತಿಯಿಂದಾಗಿ ೧೯೩೯ರಲ್ಲಿ ಮದರಾಸಿಗೆ ಪ್ರಯಾಣ. ಎಂ.ವಿ.ರಾಜಮ್ಮನವರ ಮೂಲಕ ಕೆ.ಸುಬ್ರಹ್ಮಣ್ಯಂ ನಿರ್ದೇಶನದ 'ಭಕ್ತ ಪ್ರಹ್ಲಾದ'



ಚಿತ್ರದಲ್ಲಿ ಅಭಿನಯ. ಎಂ.ವಿ.ರಾಜಮ್ಮ ತಯಾರಿಸಿದ 'ರಾಧಾರಮಣ', ಅನಂತರ 'ಮಹಾನಂದ' ಚಿತ್ರಗಳಲ್ಲಿ ಅಭಿನಯಿಸಿದರು. 'ವಿಚಿತ್ರ ಪ್ರಪಂಚ' ಚಿತ್ರಕ್ಕೆ ಸಂಭಾಷಣೆ ಬರೆದರು. ವಾದಿರಾಜ್-ಜವಹರ್ ಅವರ 'ನಂದಾದೀಪ' ಚಿತ್ರಕ್ಕೆ ಸಂಭಾಷಣೆ ಮತ್ತು ಹಾಡುಗಳನ್ನು ಬರೆದ ಖ್ಯಾತಿ. ಮುಂದೆ ಅನೇಕ ಚಿತ್ರಗಳಲ್ಲಿ ಸಾಹಿತ್ಯ ರಚಿಸುವುದರ ಜತೆಗೆ ಅಭಿನಯಿಸಿದರು. ಸ್ವಂತವಾಗಿ 'ಬಾಂಧವ್ಯ' ಚಿತ್ರ ತಯಾರಿಸಿದರು. 'ಶನಿ ಪ್ರಭಾವ' ಚಿತ್ರ ತಯಾರಿಸಲು ಹೊರಟು ಸಾಕಷ್ಟು ಕಷ್ಟ ನಷ್ಟ ಅನುಭವಿಸಿದ ಸೋರಟ್ ಅಶ್ವತ್ಥ್ ಜೀವನದ ಕಡೆಯಲ್ಲಿ ರಾಜ್ಯ ಪ್ರಶಸ್ತಿಯನ್ನು ಗಳಿಸಿಕೊಂಡರು. ನಾಟಕವೊಂದರಲ್ಲಿ ಅವರು ಅಭಿನಯಿಸುತ್ತಿದ್ದ 'ಸೋರಟ್' ಪಾತ್ರ ಅವರ ಹೆಸರಿಗೇ ಅಂಟಿಕೊಂಡು ಸೋರಟ್ ಅಶ್ವತ್ಥ್ ಅವರು. ಅವರು ಅಭಿನಯಿಸಿದ ಕಟ್ಟ ಕಡೆಯ ಚಿತ್ರ 'ಹೂಮಳೆ'. ೧೯೯೮ನೆಯ ಇಸವಿಯಲ್ಲಿ ಅವರು ನಿಧನರಾದರು.

### ಅಶ್ವತ್ಥ್‌ನಾರಾಯಣ.ಟಿ.ಆರ್

ಟಿ.ಆರ್.ಅಶ್ವತ್ಥ್‌ನಾರಾಯಣ, ಸಿ.ಎಸ್.ರಾವ್ ನಿರ್ದೇಶಿಸಿದ 'ವಾಲ್ಮೀಕಿ' ಚಿತ್ರದ ಮೂಲಕ ಚಿತ್ರರಂಗವನ್ನು



ಪ್ರವೇಶಿಸಿದರು. ಪ್ರೇಕ್ಷಕರ ಮತ್ತು ವಿಮರ್ಶಕರ ಗಮನವನ್ನು ವಿಶೇಷವಾಗಿ ಸೆಳೆದಿದ್ದು 'ಚಂದವಳ್ಳಿಯ ತೋಟದಲ್ಲಿ' ನಕಾರಾತ್ಮಕ ಮತ್ತು ಭಾವಪೂರ್ಣ ಪಾತ್ರಗಳೆರಡನ್ನೂ ಇಷ್ಟಪಡುವ ಅಶ್ವತ್ಥ್‌ನಾರಾಯಣ್ ೧೮೦ ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವು 'ಭಲೇ ಹುಚ್ಚ', 'ಮಣ್ಣಿನ ಮಗ', 'ದಂಗೆ ಎದ್ದ ಮಕ್ಕಳು', 'ಕವಿರತ್ನ ಕಾಳಿದಾಸ', 'ಬಬ್ರುವಾಹನ', 'ಜೀವನ ಚೈತ್ರ', 'ನಂಜುಂಡಿ ಕಲ್ಯಾಣ', 'ಓಂ' ಇತ್ಯಾದಿ. ಪೋಷಕ ಪಾತ್ರಕ್ಕೆ ಹೆಸರಾದ ಹಿರಿಯರು. ರಂಗಭೂಮಿಯಲ್ಲಿ ಸೇವೆ.

### ಅಶ್ವತ್ಥನಾರಾಯಣರಾವ್.ವೈ.ಆರ್

ಅಂಚೆ ಇಲಾಖೆಯಲ್ಲಿ ನೌಕರಿಯಲ್ಲಿದ್ದು ಹವ್ಯಾಸಿ ರಂಗಭೂಮಿಯ ನಂಟನ್ನು ಹೊಂದಿದ್ದರು. ಹುಣಸೂರು ಕೃಷ್ಣಮೂರ್ತಿ



ಅವರಿಂದ ಚಿತ್ರರಂಗದಲ್ಲಿ ಅವಕಾಶ. ಸಣ್ಣಪುಟ್ಟ ಪಾತ್ರಗಳ ನಿರ್ವಹಣೆ. ೧೯೭೫ರಲ್ಲಿ ಸಿ.ವಿ.ಎಲ್.ಶಾಸ್ತ್ರಿ ಮತ್ತು ಮಿತ್ರರೊಂದಿಗೆ ಸೇರಿ 'ಕಳ್ಳ ಕುಳ್ಳ' ಚಿತ್ರವನ್ನು ನಿರ್ಮಿಸುವಲ್ಲಿ ಪಾಲುದಾರರಾದರು. ನಂತರ ಕೆಲವು ಚಿತ್ರಗಳನ್ನು ನಿರ್ಮಿಸಿದರು. 'ಕಾಲ' ತುಳು ಚಿತ್ರವನ್ನು ನಿರ್ಮಿಸಿದರು.

### ಅಶ್ವತ್ಥಮ್ಮ.ಕೆ (೧೯೧೦-೪೪)

೧೯೩೫ರಲ್ಲಿ ತಯಾರಾದ ಗುಬ್ಬಿ ವೀರಣ್ಣನವರ 'ಸದಾರಮೆ' ಚಿತ್ರದ ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದ ಕೆ.ಅಶ್ವತ್ಥಮ್ಮ ಅಭಿನಯಿಸಿದ್ದು ಕೇವಲ ಮೂರು ಚಿತ್ರಗಳಲ್ಲಿ - ಒಂದು ಕನ್ನಡ ಹಾಗೂ ಎರಡು ತಮಿಳು. 'ಸಕ್ಕೂಬಾಯಿ' (೧೯೩೯) ಮತ್ತು 'ಚಿಂತಾಮಣಿ' (೧೯೩೭). ಮಧುರ ಕಂಠ ಹಾಗೂ ಸಹಜಾಭಿನಯದಿಂದ ದಕ್ಷಿಣ



ಭಾರತದಾದ್ಯಂತ ದಂತಕಥೆಯಾದರು. ಈಕೆ ಹಾಡಿದ ಹಾಡುಗಳ ಧ್ವನಿಮುದ್ರಿಕೆಗಳು (ಕೊಲಂಬಿಯ ರಿಕಾರ್ಡ್ಸ್) ಆ ದಿನಗಳಲ್ಲಿ ಹೆಚ್ಚು ಮಾರಾಟವಾಗಿ ಈಕೆ ಪ್ರಖ್ಯಾತರಾದರು. ೧೯೧೦ರ ಜುಲೈ ೩೦ರಂದು ಬೆಂಗಳೂರಿನಲ್ಲಿ ಜನನ. ತಂದೆ ವಿಶ್ವೇಶ್ವರಶಾಸ್ತ್ರಿ ಸಂಸ್ಕೃತದಲ್ಲಿ, ಸಂಗೀತದಲ್ಲಿ ಪಂಡಿತರು. ಹೀಗಾಗಿ ಅಶ್ವತ್ಥಮ್ಮನವರಿಗೆ ಬಾಲ್ಯದಲ್ಲಿಯೇ ಸಂಗೀತ ಶಿಕ್ಷಣ. ಬಾಲನಟಿಯಾಗಿ 'ಕಮಲಾಕರ ನಾಟಕ ಸಭಾ'ದಿಂದ ಆರಂಭಿಸಿ ಮುಂದೆ ಗುರಿಕಾರ್ ಅವರ ಭಾರತ ಜನ ಮನೋಲ್ಲಾಸಿನಿ ನಾಟಕ ಸಭಾ, ಸೀತು ಕಂಪೆನಿ ಹಾಗೂ ಗುಬ್ಬಿ ಕಂಪೆನಿಗಳಲ್ಲಿ ನಟಿಯಾಗಿ, ಗಾಯಕಿಯಾಗಿ ಪ್ರಸಿದ್ಧರಾದರು. ೧೯೩೫ರಲ್ಲಿ ಗುಬ್ಬಿ ವೀರಣ್ಣ ತಮ್ಮ ಜನಪ್ರಿಯ ನಾಟಕ 'ಸದಾರಮೆ'ಯನ್ನು ಚಲನಚಿತ್ರವಾಗಿ ತಯಾರಿಸಲು ನಿರ್ಧರಿಸಿದಾಗ ಅಶ್ವತ್ಥಮ್ಮ ಆ ಚಿತ್ರದ ನಾಯಕಿಯಾಗಿ ಆಯ್ಕೆಯಾದರು. 'ಮಾತಾ ದೇಶ ಹಿತ ಹಾಕು ಬೆಂಕೀಲಿ ಉರೀಲಿ ಧಗಧಗ ಧರಿಸು ಖಾದಿ ಪವಿತ್ರವ..' ಎಂಬ ರಾಷ್ಟ್ರಭಕ್ತಿ ಗೀತೆಯನ್ನು ಮೈಸೂರು ಯುವರಾಜರ ಸಮ್ಮುಖದಲ್ಲಿ ಹಾಡಿ ಅವರಿಂದ ಪಾರಿತೋಷಕವನ್ನು ಪಡೆದರು. ೧೯೪೪ರ ನವೆಂಬರ್ ೨೧ರಲ್ಲಿ ವಿಧಿವಶರಾದರು.

### ಅಶೋಕ್

೮೦ರ ದಶಕದ ಜನಪ್ರಿಯ ನಾಯಕ ನಟ. ಎ.ವಿ.ಶೇಷಗಿರಿರಾವ್ ನಿರ್ದೇಶನದ 'ಹೆಣ್ಣು ಸಂಸಾರದ ಕಣ್ಣು' ಚಿತ್ರದ ಮೂಲಕ ೧೯೭೫ರಲ್ಲಿ ಚಿತ್ರರಂಗ ಪ್ರವೇಶಿಸಿದರು. ಅಶೋಕ್ ನಂತರದ ದಿನಗಳಲ್ಲಿ ನಾಯಕನಾಗಿ ಹೆಸರು ಗಳಿಸಿದರು. 'ಭಾಗ್ಯವಂತರು', 'ಬಯಲುದಾರಿ', 'ದೀಪಾ',



'ಗೆದ್ದವಳು ನಾನೇ', 'ರಂಗನಾಯಕಿ', 'ಚೆಲ್ಲಿದ ರಕ್ತ', 'ರಾಮ ಲಕ್ಷ್ಮಣ' ಮೊದಲಾದವು ಅವರ ಅಭಿನಯದ ಯಶಸ್ವಿ ಚಿತ್ರಗಳು. ಕರ್ನಾಟಕ ಚಲನಚಿತ್ರ ಕಾರ್ಮಿಕರ ತಂತ್ರಜ್ಞರ ಒಕ್ಕೂಟದ ಅಧ್ಯಕ್ಷರಾಗಿ ದಶಕಕ್ಕೂ ಹೆಚ್ಚಿನ ಕಾಲದಿಂದ ಸೇವೆ ಸಲ್ಲಿಸುತ್ತಿದ್ದಾರೆ. ಪೋಷಕ ನಟ ಹಾಗೂ ಖಳ ನಟರಾಗಿ ಮುಂದುವರೆದ ಅಶೋಕ್, ಶಿವರಾಜ್ ಕುಮಾರ್ ನಾಯಕತ್ವದ 'ನಮ್ಮೂರ ಹುಡುಗ' ಚಿತ್ರದ ನಿರ್ಮಾಪಕರು.

### ಅಶೋಕ್ ಪೈ

ಶಿವಮೊಗ್ಗದ ಡಾ।ಅಶೋಕ್ ಪೈ ದೇಶ ವಿದೇಶಗಳಲ್ಲಿ ಖ್ಯಾತಿ ಹೊಂದಿದ ಮನೋವಿಜ್ಞಾನಿ ಹಾಗೂ ವೈದ್ಯರು. ಮನೋವಿಜ್ಞಾನದ ಬಗ್ಗೆ ಜನಸಾಮಾನ್ಯರಿಗೂ ಚಲನಚಿತ್ರ ಮಾಧ್ಯಮದ ಮೂಲಕ ಹೆಚ್ಚಿನ ತಿಳಿವಳಿಕೆಗಳನ್ನು ಕೊಡಬೇಕೆಂಬ ಧ್ಯೇಯದಿಂದ ಇವರು ಮಾನಸ ಆರ್ಟ್ಸ್ ಲಾಂಛನದಲ್ಲಿ ಇದುವರೆಗೆ ಮೂರು ಚಿತ್ರಗಳನ್ನು ನಿರ್ಮಿಸಿದ್ದಾರೆ. ೧೯೮೮ರಲ್ಲಿ ಡಾ।ಅಶೋಕ್ ಪೈರವರು ತಮ್ಮ ಮೊದಲ ಚಿತ್ರ 'ಕಾಡಿನ ಬೆಂಕಿ'ಯನ್ನು ನಿರ್ಮಿಸಿದರು. ಈ ಚಿತ್ರ ಕೇಂದ್ರ ಸರ್ಕಾರದಿಂದ ಆ ವರ್ಷ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂಬ ಪ್ರಶಸ್ತಿಯನ್ನು ಗಳಿಸಿಕೊಂಡಿತು. ಇವರ



ಎರಡನೆಯ ಚಿತ್ರ 'ಪ್ರಥಮ ಉಷಾಕಿರಣ' ಹುಸಿ ಸಂಸ್ಕೃತಿಯು ಮಕ್ಕಳ ಮೇಲೆ ಬೀರುವ ದುಷ್ಪರಿಣಾಮಗಳನ್ನು ಕುರಿತ ಚಿತ್ರವಾಗಿತ್ತು. ಅದಕ್ಕೆ ರಾಜ್ಯ ಸರ್ಕಾರದಿಂದ ೧೯೮೯-೯೦ನೇ ಸಾಲಿನ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಲಭ್ಯವಾಯಿತು. ಪೈರವರು 'ಅಘಾತ' ಚಿತ್ರವನ್ನು ನಿರ್ಮಿಸುವುದರ ಜೊತೆಗೆ ಗಿರೀಶ್ ಕಾರ್ನಾಡ್‌ರವರ ನಿರ್ದೇಶನದಲ್ಲಿ ವಿವಿಧ ಮಾನಸಿಕ ರೋಗಗಳನ್ನು ಆಧರಿಸಿದ ಕಥೆಗಳ ಹಿಂದಿ ದೂರದರ್ಶನ ಧಾರಾವಾಹಿಯೊಂದನ್ನು ನಿರ್ಮಿಸಿದರು. ಅವರ ಮೂರೂ ಚಿತ್ರಗಳನ್ನು ಸುರೇಶ್ ಹೆಬ್ಳೀಕರ್‌ರವರೇ ನಿರ್ದೇಶಿಸಿರುವುದು ಒಂದು ವಿಶೇಷ.

### ಅಶೋಕ್ ರಾವ್

೯೦ರ ದಶಕದಲ್ಲಿ ಬೆಳಕಿಗೆ ಬಂದ ಪೋಷಕ ನಟ. ರಂಗಭೂಮಿ ಹಿನ್ನೆಲೆಯ ಅಶೋಕ್‌ರಾವ್ ಬಿ.ಎಲ್.ಟಿ ತಂಡದ ಹಲವಾರು ಇಂಗ್ಲಿಷ್ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ರಂಗಭೂಮಿ



ಹಿನ್ನೆಲೆಯಲ್ಲಿ ಚಿತ್ರರಂಗ ಪ್ರವೇಶಿಸಿದ ಅಶೋಕ್‌ರಾವ್ ತಮ್ಮ ಅಪರೂಪದ ಕಂಠಸಿರಿಯಿಂದ ಪೋಷಕ ಪಾತ್ರಗಳು ಹಾಗೂ ಖಳನಾಯಕನ ಪಾತ್ರಗಳಿಗೆ ತಮ್ಮದೇ ಆದ ರೀತಿಯ ಛಾಪನ್ನು ಒತ್ತಿದ್ದಾರೆ. 'ಪರಶುರಾಮ', 'ಶಿವರಾಜ್', 'ಮತ್ತೆ ಹಾಡಿತು ಕೋಗಿಲೆ', 'ಭವ್ಯ ಭಾರತ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದಾರೆ.

### ಅನಂದ್ ಪಿ.ರಾಜು

ಪ್ರತಿಭಾವಂತ ಯುವ ನಿರ್ದೇಶಕರು. ಚಾಮರಾಜನಗರ ತಾಲ್ಲೂಕಿನವರು. ಮೈಸೂರಿನಲ್ಲಿ ಓದಿ ಪದವಿ ಪಡೆದರು. 'ನಂಬರ್ ಐದು ಎಕ್ಕ' ಚಿತ್ರದಿಂದ ಸಹ ನಿರ್ದೇಶಕರಾಗಿ ಚಿತ್ರರಂಗ ಪ್ರವೇಶ. 'ಕುರಿದೊಡ್ಡಿ ಕುರುಕ್ಷೇತ್ರ', 'ಗಿರಿಬಾಲೆ', 'ಪ್ರೇಮಜಾಲ', 'ಹಾಂಕಾಂಗ್‌ನಲ್ಲಿ ಏಜೆಂಟ್ ಅಮರ್', 'ಸಾಮ್ರಾಟ್', 'ವಿಷ್ಣು ವಿಜಯ', 'ಸಮರಸಿಂಹ' ಮೊದಲಾದ ಹತ್ತಾರು ಚಿತ್ರಗಳಲ್ಲಿ ಸಹ ನಿರ್ದೇಶನ. 'ಗಾಜನೂರು ಗಂಡು' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. 'ಹಾಯ್ ಬೆಂಗಳೂರು', 'ಅಗ್ನಿ ಐ.ಪಿ.ಎಸ್', 'ಕಿಲ್ಲರ್', 'ಖಡ್ಗ' ಮೊದಲಾದ ಸಾಹಸ ಪ್ರಧಾನ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ೧೯೯೯ರಲ್ಲಿ 'ಚೆನ್ನಪ್ಪ ಚೆನ್ನೇಗೌಡ' ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು.



### ಆರತಿ

ಭಾವಪೂರ್ಣ ಅಭಿನಯಕ್ಕೆ ಹೆಸರಾದ ಅಭಿನೇತ್ರಿ ಆರತಿ. ಮೈಸೂರಿನ ಅರಗಲ್‌ನಲ್ಲಿ



೧೯೫೪ರಲ್ಲಿ ಜನಿಸಿದರು. ಪಿ.ಯು.ಸಿ.ವರೆಗೆ ವ್ಯಾಸಂಗ. 'ಗೆಜ್ಜೆಪೂಜೆ' ಚಿತ್ರದ ಮೂಲಕ ಆಕಸ್ಮಿಕವಾಗಿ ಚಿತ್ರರಂಗ ಪ್ರವೇಶಿಸಿದರು. ಪುಟ್ಟಣ್ಣ ಕಣಗಾಲ್ ಅವರ ಗರಡಿಯಲ್ಲಿ ತರಬೇತಿ ಪಡೆದ ಆರತಿ 'ನಾಗರ ಹಾವು', 'ಕಥಾಸಂಗಮ', 'ಉಪಾಸನೆ', 'ಶುಭಮಂಗಳ', 'ಧರ್ಮಸೆರೆ', 'ರಂಗನಾಯಕಿ' ಮುಂತಾದ ಚಿತ್ರಗಳಲ್ಲಿ ಉತ್ತಮ ಅಭಿನಯ ನೀಡಿದ್ದಾರೆ. ರಾಜಕುಮಾರ್ ಅವರೊಂದಿಗೆ 'ರಾಜ ನನ್ನ ರಾಜ', 'ಸಿಪಾಯಿ ರಾಮು', 'ಭಲೇ ಹುಚ್ಚ', 'ಪ್ರತಿಧ್ವನಿ', 'ಪ್ರೇಮದ ಕಾಣಿಕೆ', 'ಬಂಗಾರದ ಪಂಜರ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಕಣ್ಣೀರು ಸುರಿಸುವ ನಾಯಕಿ ಪಾತ್ರದಿಂದ ಹಿಡಿದು ವೈರಿಗಳನ್ನು ಸದೆ ಬಡಿವ ವೀರನಾರಿಯ ಪಾತ್ರಗಳನ್ನು ಮಾಡಿದರು. 'ವಸಂತ ಲಕ್ಷ್ಮಿ', 'ಭಕ್ತ ಸಿರಿಯಾಳ', 'ಹೊಂಬಿಸಿಲು', 'ಮುಳ್ಳಿನ ಗುಲಾಬಿ', 'ಸುವರ್ಣ ಸೇತುವೆ' ಮುಂತಾದ ಚಿತ್ರಗಳು ಆರತಿ ಅಭಿನಯದ ಜನಪ್ರಿಯ ಚಿತ್ರಗಳು. 'ನಾಗರಹಾವು' (೧೯೭೨-೭೩), 'ಕಥಾಸಂಗಮ' (೧೯೭೫-೭೬), 'ಧರ್ಮಸೆರೆ' (೧೯೭೮-೭೯) ಹಾಗೂ 'ರಂಗನಾಯಕಿ' (೧೯೮೦-೮೧) ಚಿತ್ರಗಳಲ್ಲಿನ ಅಭಿನಯಕ್ಕಾಗಿ ನಾಲ್ಕು ಬಾರಿ ಶ್ರೇಷ್ಠನಟಿ ರಾಜ್ಯ ಪ್ರಶಸ್ತಿಯನ್ನು ಪಡೆದಿದ್ದಾರೆ. 'ನಮ್ಮ ನಮ್ಮಲ್ಲಿ' ಎಂಬ ದೂರದರ್ಶನ ಧಾರಾವಾಹಿಯನ್ನು ನಿರ್ದೇಶಿಸಿದರು. ಕರ್ನಾಟಕ ರಾಜ್ಯದ ವಿಧಾನ ಪರಿಷತ್ತಿನ ಸದಸ್ಯೆಯಾಗಿ ಕಾರ್ಯನಿರ್ವಹಿಸಿದರು. ೧೯೮೫ರಲ್ಲಿ ಚಿತ್ರರಂಗಕ್ಕೆ ವಿದಾಯ ಹೇಳಿ ಅಮೆರಿಕಾದಲ್ಲಿ ನೆಲೆಸಿದರು.

### ಆರಾಧ್ಯ. ಆರ್

ಪ್ರತಿಭಾವಂತ ಛಾಯಾಗ್ರಾಹಕ. ತುಮಕೂರಿನವರು. ಎಸ್.ಎಸ್.ಎಲ್.ಸಿ. ವರೆಗೂ ಓದಿದ ಆರಾಧ್ಯ ಅಭಿಮಾನ್ ಸ್ಟುಡಿಯೋದಲ್ಲಿ ಕ್ಯಾಮರಾಮನ್ ಸಹಾಯಕನಾಗಿ ಕೆಲಸಕ್ಕೆ ಸೇರಿದರು.



ಹೆಚ್.ಜಿ.ರಾಜು ಬಳಿ ಸಹಾಯಕರಾಗಿ ಒಂಬತ್ತು ವರ್ಷಗಳ ಕಾಲ ದುಡಿದ. 'ಮಿಂಚಿನ ಓಟ' ಇವರು ಸಹಾಯಕರಾಗಿ ಕೆಲಸ ಮಾಡಿದ ಚಿತ್ರ. ಸ್ವತಂತ್ರ ಛಾಯಾಗ್ರಾಹಕರಾಗಿ ೧೯೮೨ರಲ್ಲಿ ಪರಿಚಿತರಾದ ಇವರು ಹಲವಾರು ಸಾಕ್ಷ್ಯ ಚಿತ್ರಗಳಿಗೆ ಛಾಯಾಗ್ರಹಣ ನೀಡಿದ್ದಾರೆ. 'ಭಲೇ ಕೇಶವ', 'ಮರ್ಡರ್', 'ಹೆತ್ತವಳ ಕೂಗು', 'ವಿಜಯ ಕಂಕಣ', 'ತಾಯಿಯ ಋಣ', 'ಕಟ್ಟಿ ಮಟ್ಟಿ ಸ್ಟೇಷನ್ ಮಾಸ್ಟರ್', 'ಮೈಸೂರು ಹುಲಿ', 'ನಾಗರಿಕ' ಮೊದಲಾದ ಚಿತ್ರಗಳಲ್ಲಿ ಛಾಯಾಗ್ರಾಹಕರಾಗಿ ಕಾರ್ಯ ನಿರ್ವಹಿಸಿದ್ದಾರೆ.

### ಆಶಾಲತಾ

ರಂಗಭೂಮಿ ನಂಟಿನಿಂದ ರಕ್ತಗತವಾಗಿ ಬಂದಿದ್ದ ಅಭಿನಯ ಕಲೆ ಚಿತ್ರರಂಗಕ್ಕೆ ಕರೆ ತಂದಿತು. ಗುಬ್ಬಿ ವೀರಣ್ಣನವರ ಮನೆತನಕ್ಕೆ



ಸೇರಿದವರು. ಆಶಾಲತಾ ಬಿ.ಆರ್.ಪಂತುಲು ಅವರ 'ಶ್ರೀಕೃಷ್ಣದೇವರಾಯ' ಚಿತ್ರದಲ್ಲಿ ಬಾಲನಟಿಯಾಗಿ ಪ್ರವೇಶಿಸಿದರು. 'ನಾಗ ಕಾಳ ಭೈರವ', 'ಭೂಮಿಗೆ ಬಂದ ಭಗವಂತ', 'ಆಹುತಿ', 'ಊರ್ವಶಿ ಕಲ್ಯಾಣ', 'ಋಣ ಮುಕ್ತಳು' ಮೊದಲಾದ ಅನೇಕ ಚಿತ್ರಗಳಲ್ಲಿ ಪೋಷಕನಟಿಯಾಗಿ ಅಭಿನಯಿಸಿದ್ದಾರೆ. ಆಶಾಲತಾ ಕಿರುತೆರೆಯಲ್ಲೂ ಜನಪ್ರಿಯರು.

### ಇಸ್ಮಾಯಿಲ್. ಎಂ

ಪ್ರತಿಭಾವಂತ ಕಲಾ ನಿರ್ದೇಶಕ. ಹನ್ನೆರಡು ವರ್ಷದ ಬಾಲಕನಾಗಿದ್ದಾಗಲೇ



ಪ್ರೀಮಿಯರ್ ಸ್ಟುಡಿಯೋನಲ್ಲಿ ಸಾಟ್‌ಬಾಯ್ ಆಗಿ ಕೆಲಸಕ್ಕೆ ಸೇರಿ ಹಂತ ಹಂತವಾಗಿ ಬೆಳೆದವರು. ನಂತರ ಶಂಕರ್‌ನಾಗ್ ಅವರಿಂದ ಸೆಟ್ ಸಹಾಯಕರಾಗಿ ನೇಮಕ. ಹೆಸರಾಂತ ಕಲಾ ನಿರ್ದೇಶಕರ ಕೈ ಕೆಳಗೆ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದರು. ಡೇವಿಡ್ ಲೀನ್‌ರವರ 'ಪ್ಯಾಸೇಜ್ ಟು ಇಂಡಿಯಾ' ಹಾಗೂ 'ಬ್ಲಡ್ ಸ್ಟೋನ್' ಇಂಗ್ಲಿಷ್ ಚಿತ್ರಗಳಲ್ಲಿ ಕಾರ್ಯ ನಿರ್ವಹಿಸಿದರು. 'ಕ್ಷೀರ ಸಾಗರ' ಚಿತ್ರದಿಂದ ಸ್ವತಂತ್ರ ಕಲಾ ನಿರ್ದೇಶಕರಾದರು. 'ಸಿಪಾಯಿ', 'ಸ್ವಸ್ತಿಕ್', 'ಟುವ್ವಿ ಟುವ್ವಿ ಟುವ್ವಿ', 'ಕಲಾವಿದ' ಮೊದಲಾದ ಚಿತ್ರಗಳಿಗೆ ಕಲಾ ನಿರ್ದೇಶನ ಮಾಡಿದರು. 'ಸಿಪಾಯಿ' ಚಿತ್ರದ ಕಲಾ ನಿರ್ದೇಶನಕ್ಕಾಗಿ ರಾಜ್ಯ ಸರ್ಕಾರದ ೧೯೯೫-೯೬ರ ಅತ್ಯುತ್ತಮ ಕಲಾ ನಿರ್ದೇಶಕ ಪ್ರಶಸ್ತಿಯನ್ನು ಕಲಾ ನಿರ್ದೇಶಕ ನಜೀರ್ ಅವರೊಡನೆ ಹಂಚಿಕೊಂಡಿದ್ದಾರೆ. ೧೯೯೮-೯೯ನೇ ಸಾಲಿನಲ್ಲಿ 'ಸ್ವಸ್ತಿಕ್' ಚಿತ್ರದ ಕಲಾ ನಿರ್ದೇಶನಕ್ಕಾಗಿ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ.

### ಇಳಯರಾಜ

ದಕ್ಷಿಣ ಭಾರತದ ಖ್ಯಾತ ಸಂಗೀತ ನಿರ್ದೇಶಕ. ತಮಿಳುನಾಡಿನ ಮಧುರೈ ಜಿಲ್ಲೆಯ ಪನ್ನೈಪುರಂನಲ್ಲಿ ಜನಿಸಿದರು. ಮೂಲ ಹೆಸರು ಡೇನಿಯಲ್ ರಾಜಯ್ಯ. ಬಾಲ್ಯದಿಂದಲೂ ಕೊಳಲು ವಾದನದಲ್ಲಿ ಆಸಕ್ತಿ ಹೊಂದಿದ್ದರು. ಅಣ್ಣ ವರದರಾಜನ್ ಅವರಿಂದ ಸಂಗೀತ ಕ್ಷೇತ್ರದಲ್ಲಿ ಒಲವು ಮೂಡಿತು. ಮದ್ರಾಸಿನ ಮೃದಂಗ ವಾದ್ಯಗಾರ ಹಾಗೂ ಸಂಗೀತ ವಿದ್ವಾಂಸರರಾದ ಟಿ.ವಿ.ಗೋಪಾಲಕೃಷ್ಣನ್ ಅವರ ಬಳಿ ಶಿಷ್ಯವೃತ್ತಿ ಮಾಡಿದರು. ಕನ್ನಡದ ಖ್ಯಾತ ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ಅವರ ಶಿಷ್ಯರಾಗಿ ಚಿತ್ರರಂಗದ ಅನುಭವ ಗಳಿಸಿದರು. ತಮಿಳಿನಲ್ಲಿ ಸಾಕಷ್ಟು ಚಿತ್ರಗಳಿಗೆ ಸಂಗೀತ ನೀಡಿದ ಅವರು 'ಪ್ರಿಯಾ' ಚಿತ್ರದ ಮೂಲಕ



ಕನ್ನಡ ಚಿತ್ರರಂಗ ಪ್ರವೇಶಿಸಿದರು. 'ಗೀತಾ', 'ಜನ್ಮ ಜನ್ಮದ ಅನುಬಂಧ', 'ಪಲ್ಲವಿ ಅನುಪಲ್ಲವಿ', 'ಶಿಕಾರಿ', 'ಆಜೇಯ', 'ನೀ ನನ್ನ ಗೆಲ್ಲಲಾರೆ', 'ಗುಲಾಬಿ', 'ಶಿವಸೈನ್ಯ', 'ನಮ್ಮೂರ ಮಂದಾರ ಹೂವೆ', 'ಪ್ರೇಮ ರಾಗ ಹಾಡು ಗೆಳತಿ' ಮುಂತಾದ ಚಿತ್ರಗಳಿಗೆ ಸಂಗೀತ ಸಂಯೋಜಿಸಿದರು. ಸ್ವತಃ ಗಾಯಕರೂ ಆದ ಅವರು 'ಭಾರಿ ಭರ್ಜರಿ ಬೇಟೆ' ಚಿತ್ರದಲ್ಲಿ 'ಹಕ್ಕಿ ಗೂಡು ಒಂದು...' ಗೀತೆಯನ್ನು ಹಾಡಿದ್ದಾರೆ. ಭಕ್ತಿ ಗೀತೆಗಳ ಧ್ವನಿಸುರುಳಿಗಳನ್ನು ಕನ್ನಡದಲ್ಲಿ ತಂದಿದ್ದಾರೆ. 'ಶಿವಸೈನ್ಯ' ಚಿತ್ರದ ಗೀತೆಗಳಿಗೆ ಸಾಹಿತ್ಯವನ್ನು ರಚಿಸಿದ್ದಾರೆ.

### ಈಶ್ವರಪ್ಪ .ಬಿ.ಕೆ

ಅತ್ಯುತ್ತಮ ಅಭಿನಯಕ್ಕೆ ನಾಯಕ ಪಾತ್ರವೇ ಆಗಬೇಕಿಲ್ಲ; ಪೋಷಕ ಪಾತ್ರಗಳೂ ಜೀವ ತುಂಬಬಹುದು ಎನ್ನುವುದಕ್ಕೆ ಬಿ.ಕೆ.ಈಶ್ವರಪ್ಪ ಅವರ ಅಭಿನಯ ಕೌಶಲ ಒಂದು ನಿದರ್ಶನ. ರಂಗಭೂಮಿಯಲ್ಲಿ ಖ್ಯಾತನಾಮರಾಗಿದ್ದ ಈಶ್ವರಪ್ಪ ಕನ್ನಡ ಚಿತ್ರರಂಗ ಶೈಶವಾವಸ್ಥೆಯಲ್ಲಿದ್ದಾಗಲೇ ಚಿತ್ರರಂಗ ಪ್ರವೇಶಿಸಿದರು. 'ಜಗಜ್ಯೋತಿ',



'ರಣಧೀರ ಕಂಠೀರವ' ಮುಂತಾದ ಚಿತ್ರಗಳಲ್ಲಿನ ಅವರ ಅಭಿನಯ ಜನ ಮೆಚ್ಚುಗೆಗೆ ಪಾತ್ರವಾಗಿತ್ತು. ಆರಂಭದ ಆ ದಿನಗಳಲ್ಲಿ ಕನ್ನಡ ಚಿತ್ರಗಳ ತಯಾರಿಕೆ ಸ್ಥಗಿತಗೊಂಡಿದ್ದಾಗ ಅನಿವಾರ್ಯವಾಗಿ ಅವರು ರಂಗಭೂಮಿಗೆ ಮರಳಬೇಕಾಯಿತು, ಡಬ್ಬಿಂಗ್ ಚಿತ್ರಗಳಿಗೆ ಕಂಠದಾನ ಮಾಡಬೇಕಾಯಿತು. ಭ್ರಮನಿರಸನಗೊಂಡ ಈಶ್ವರಪ್ಪ ಸ್ವಗ್ರಾಮಕ್ಕೆ ತೆರಳಿದರು; ಅಜ್ಞಾತರಾಗಿಯೇ ಅಳಿದರು (೧೯೮೧).

### ಈಶ್ವರಿ. ಎಲ್.ಆರ್

೬೦-೭೦ರ ದಶಕದಲ್ಲಿ ತಮ್ಮ ಮಾದಕ ಕಂಠದಿಂದ ದಕ್ಷಿಣ ಭಾರತದಲ್ಲಿ ಹೆಸರು ವಾಸಿಯಾಗಿದ್ದ ಗಾಯಕಿ. ಮೂಲ ಹೆಸರು ರಾಜೇಶ್ವರಿ. ಹುಟ್ಟಿ ಬೆಳೆದದ್ದು ಮದ್ರಾಸಿನಲ್ಲಿ. ಸಂಗೀತದಲ್ಲಿ ಮೊದಲಿನಿಂದಲೂ ಆಸಕ್ತಿ ಹೊಂದಿದ್ದ ರಾಜೇಶ್ವರಿ ಚಿತ್ರರಂಗ ಪ್ರವೇಶಿಸಿ ಎಲ್.ಆರ್.ಈಶ್ವರಿ ಆದರು. ೧೯೬೩ರಲ್ಲಿ ಸರಸ್ವತಿ ಚಿತ್ರ ಅವರ 'ಜೇನುಗೂಡು' ಚಿತ್ರದಲ್ಲಿ ಎ.ಎಲ್.ರಾಘವನ್ ಅವರೊಂದಿಗೆ 'ಜಗಿ ಜಗಿಯುತ ನಲಿ....' ಗೀತೆಯನ್ನು ಹಾಡುವುದರ ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದರು. ನಂತರ ಸುಮಾರು ಅರುವತ್ತು ಕನ್ನಡ ಚಿತ್ರಗಳಿಗೆ ತಮ್ಮ ಮಾದಕ ದನಿಯಿಂದ ಮೋಡಿ ಮಾಡಿದರು. ಇವರು ಹಾಡಿದ 'ಸುಮಬಾಲೆಯ ಪ್ರೇಮದ ಸಿರಿಯೆ...' (ಚಂದವಳ್ಳಿಯ ತೋಟ), 'ಸಿಟ್ಯಾಕೋ ಸಿಡುಕ್ಯಾಕೋ ನನ ಜಾಣ....' (ವೀರಸಂಕಲ್ಪ), 'ಜೋಕೆ! ನಾನು ಬಳ್ಳಿಯ ಮಿಂಚು....' (ಪರೋಪಕಾರಿ), 'ದೂರದಿಂದ ಬಂದಂಥ....' (ಸಂಶಯ ಫಲ) ಮುಂತಾದ ಶೃಂಗಾರ-ರೋಚಕ-ರೋಮಾಂಚಕ ಗೀತೆಗಳಲ್ಲಿ ಕೆಲವು ಮತ್ತು 'ಪತಿಯೇ ದೈವವು ಸತಿಯರ ಸೌಭಾಗ್ಯವು....' (ಮಹಾಸತಿ ಅನುಸೂಯ), 'ಕಂದ ಕಣ್ಮಣಿಯೇ....' (ಬಾಲನಾಗಮ್ಮ) ಮುಂತಾದ ಭಕ್ತಿ, ಜೋಗುಳದ ಹಾಡುಗಳಿಂದ ತಾವು ಎಂತಹ ಹಾಡುಗಳನ್ನೂ ಹಾಡಬಲ್ಲರು ಎಂದು ಸಾಬೀತು ಪಡಿಸಿದರು. ಕನ್ನಡ ರಸಿಕರ ಮನಸ್ಸಿನಲ್ಲಿ ನಿಂತು ಹೋದರು.



## ಉದಯಕುಮಾರ್ (೧೯೩೫-೮೫)



ಕನ್ನಡ ಚಿತ್ರರಂಗದ ಹೆಸರಾಂತ ನಾಯಕ-ಪೋಷಕನಟ. ಬೆಂಗಳೂರು ಜಿಲ್ಲೆ ಆನೇಕಲ್‌ನ ಶಾನುಭೋಗ ಶ್ರೀನಿವಾಸಶಾಸ್ತ್ರಿಗಳ ಮಗ. ಜನನ : ಮಾರ್ಚ್ ೧೬, ೧೯೩೫. ಜನ್ಮನಾಮ ಸೂರ್ಯನಾರಾಯಣಶಾಸ್ತ್ರಿ. ವ್ಯಾಯಾಮ ಶಿಕ್ಷಕರಾಗಿ, ಭಾಷಕಣಕಾರರಾಗಿ ಉದ್ಯೋಗ. ಗುಬ್ಬಿ ವೀರಣ್ಣನವರ ನಾಟಕ ಕಂಪನಿ ಮೂಲಕ ಕಲಾವಿದರಾಗಿ ಪ್ರವೇಶಿಸಿದರು. 'ಭಾಗ್ಯೋದಯ' (೧೯೫೬) ಮೂಲಕ ಉದಯಕುಮಾರ್ ಆಗಿ ಚಿತ್ರರಂಗ ಪ್ರವೇಶ. 'ರತ್ನಗಿರಿ ರಹಸ್ಯ' ಚಿತ್ರದಿಂದ ನಾಯಕ ನಟರಾದರು. 'ಚಂದವಳ್ಳಿಯ ತೋಟ'ದ ಶಿವನಂಜಪ್ಪ, 'ಶ್ರೀ ರಾಮಾಂಜನೇಯ ಯುದ್ಧ'ವ ಹನುಮಂತ, 'ಸತ್ಯ ಹರಿಶ್ಚಂದ್ರ'ದ ವಿಶ್ವಾಮಿತ್ರ ಅವರ ಉತ್ತಮ ಅಭಿನಯಕ್ಕೆ ಕೆಲವು ಉದಾಹರಣೆಗಳು. 'ಸೇಡಿಗೆ ಸೇಡು' (೧೯೭೦) ನೂರನೆಯ ಚಿತ್ರ. 'ಇದೇ ಮಹಾಸುದಿನ' ಸ್ವಂತ ನಿರ್ಮಾಣದ ಚಿತ್ರ. ಉವಯ ಕಲಾನಿಕೇತನ ಆರಂಭಿಸಿ ಕಲೆ, ಸಂಸ್ಕೃತಿಗಳ ಶಿಕ್ಷಣ ನೀಡಿದರು. ತಮಿಳು, ತೆಲುಗು ಚಿತ್ರಗಳಲ್ಲೂ ನಟಿಸಿ ಜನಪ್ರಿಯರಾದರು. 'ಹೇಮಾವತಿ' ಚಿತ್ರದ ಅಭಿನಯಕ್ಕಾಗಿ ಅತ್ಯುತ್ತಮ ಪೋಷಕ ನಟ (೧೯೭೭-೭೮)ನಾಗಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದು ಕೊಂಡ ಇವರಿಗೆ ೧೯೮೪ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಹಲವಾರು ನಾಟಕಗಳನ್ನು, ಚಲನಚಿತ್ರ ಗೀತೆಗಳನ್ನು ರಚಿಸಿದ್ದಾರೆ. 'ಮೌನಕಣಾ' ಎಂಬ ದ್ವಿಪದಿಗಳನ್ನು ಬರೆದಿದ್ದಾರೆ. ತಮ್ಮ ೫೦ನೆಯ ವಯಸ್ಸಿನಲ್ಲಿ ಡಿಸೆಂಬರ್ ೨೬, ೧೯೮೫ರಂದು ನಿಧನರಾದರು.

## ಉದಯ ಚಂದ್ರಿಕ

ಅರುವತ್ತರ ದಶಕಗಳಲ್ಲಿ ಕನ್ನಡ ಚಿತ್ರರಂಗಕ್ಕೆ ಪ್ರವೇಶ ಪಡೆದವರು. ಸುಪ್ರಸಿದ್ಧ ನಿರ್ದೇಶಕ ವೈ.ಆರ್.ಸ್ವಾಮಿ ನಿರ್ದೇಶನದ 'ಕಠಾರಿ ವೀರ' ಚಿತ್ರದ ಮೂಲಕ ನಾಯಕಿಯಾಗಿ ಪ್ರವೇಶಿಸಿದರು. ನಂತರ 'ಭಲೇ ಕಿಲಾಡಿ', 'ಧೂಮ ಕೇತು',



'ಒಂದೇ ಕುಲ ಒಂದೇ ದೈವ', 'ಉತ್ತರ ದಕ್ಷಿಣ', 'ನಮ್ಮೂರ ದೇವರು', 'ಉಡುಗೊರೆ' ಮೊದಲಾದ ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯಿಸಿದ್ದಾರೆ. ಚಿತ್ರ ನಿರ್ಮಾಣಕ್ಕೂ ಕೈ ಹಾಕಿ ಹಲವು ಚಿತ್ರಗಳನ್ನು ನಿರ್ಮಿಸಿದ್ದಾರೆ. 'ಅಸಾಧ್ಯ ಅಳಿಯ' ಇವರು ನಿರ್ಮಿಸಿದ ಚಿತ್ರ.

## ಉದಯ ಶಂಕರ್.ಚಿ (೧೯೩೪-೯೩)

ಚಲನಚಿತ್ರಗಳಿಗಾಗಿ ಅತಿ ಹೆಚ್ಚು ಗೀತೆಗಳನ್ನು ರಚಿಸಿದ ಸಾಹಿತಿ. ತುಮಕೂರು ಜಿಲ್ಲೆಯ ಚಿಟ್ನಹಳ್ಳಿ ಗ್ರಾಮ ಸ್ವಂತ ಸ್ಥಳ. ಜನನ: ೧೯-೦೨-೩೪. ತಂದೆ ಚಿ.ಸದಾಶಿವಯ್ಯ ಸಹ ಚಲನಚಿತ್ರ ಸಾಹಿತಿ . ಬೆಂಗಳೂರು ನ್ಯಾಷನಲ್ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ. ಮಕ್ಕಳ ಕೂಟದ 'ಬಾವುಟ' ಪತ್ರಿಕೆಗೆ ಆಗಲೇ ಸಂಪಾದಕ. ಪ್ರೌಢಶಾಲೆ ನಂತರ ಸಿನಿಮಾಟೋಗ್ರಾಫಿ ಕಲಿಕೆ. ಮದರಾಸಿನಲ್ಲಿ ಅವರಿಗೆ ತಂದೆಯವರ ಸಹಕಾರವೂ ದೊರೆತು 'ವಿಜಯನಗರದ ವೀರಪುತ್ರ' ಸೇರಿದಂತೆ ಹಲವು ಚಿತ್ರಗಳಲ್ಲಿ ಸಣ್ಣ ಪುಟ್ಟ ಪಾತ್ರ ದೊರೆತವು. 'ಸಂತ



ತುಕಾರಾಂ'(೧೯೬೩) ಚಿತ್ರಕ್ಕೆ ಸಂಭಾಷಣೆ ರಚಿಸುವ ಮೂಲಕ ಸಾಹಿತಿಯಾಗಿ ಚಿತ್ರರಂಗ ಪ್ರವೇಶ. 'ಶಿವರಾತ್ರಿ ಮಹಾತ್ಮೆ' (೧೯೬೪) ಚಿತ್ರಕ್ಕಾಗಿ ಮೊದಲ ಹಾಡು ರಚಿಸಿದರು. 'ಮಹಾಸತಿ ಅನುಸೂಯ' (೧೯೬೫) ಇವರು ಸಂಭಾಷಣೆ-ಹಾಡುಗಳನ್ನು ಬರೆದ ಪ್ರಥಮ ಚಿತ್ರ. ನೂರಾರು ಚಿತ್ರಗಳಿಗೆ ಸಾಹಿತ್ಯ, ಸಂಭಾಷಣೆ ಹಾಗೂ ಸಾವಿರಾರು ಹಾಡುಗಳನ್ನು ರಚಿಸಿದರು. ಸಾಹಿತ್ಯ, ಗೀತೆ ರಚನಾ ವಿಧಾನದಲ್ಲಿ ಇವರಿಗೆ ಸಾಧಿತವಾಗಿದ್ದ ವೇಗ ಮತ್ತು ಅಷ್ಟೇ ಉತ್ತಮ ಲಯ ಬದ್ಧ ನಡೆ, ಸರಳತೆ ಇವರನ್ನು ಉದ್ಯಮದ ಅನಿವಾರ್ಯ ವ್ಯಕ್ತಿಯಾಗಿಸಿತ್ತು. ಇವರ ಮೊದಲ ಗೀತೆ 'ಮನಮೋಹಿನಿ ಸರಿಸೆಯಾ ನಾಚಿಕೆಯ ತೆರೆಯಾ....'ಯನ್ನು ಪಿ.ಬಿ.ಶ್ರೀನಿವಾಸ್‌ರವರು ರಾಜಕುಮಾರ್ ಅವರಿಗಾಗಿ ಹಾಡಿದರು. 'ಮಯೂರ' ಚಿತ್ರಕ್ಕಾಗಿ ಇವರು ದೀರ್ಘವಾದ ಸಂಭಾಷಣೆಗಳನ್ನೂ ರಚಿಸಿದರು. ಐವತ್ತಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಲಗ್ನ ಪತ್ರಿಕೆ' ಚಿತ್ರದಲ್ಲಿ 'ಬಲು ಅಪರೂಪ ನಮ್ ಜೋಡಿ...' ಹಾಡಿಗೆ ಅಭಿನಯಿಸಿ ಜನಪ್ರಿಯರಾದರು. ಇವರ ಪುತ್ರ ರವಿಶಂಕರ್ ಉದಯೋನ್ಮುಖ ನಟ. ಹರೆಯದಲ್ಲೇ ಅಪಘಾತದಲ್ಲಿ ತೀರಿಕೊಂಡರು. ಚಿತ್ರ ನಿರ್ದೇಶಕ ಚಿ.ದತ್ತರಾಜ್ ಇವರ ಸಹೋದರ. ಚಿ|ಉದಯಶಂಕರ್ ಅವರಿಗೆ 'ಕುಲಗೌರವ' (೧೯೭೦-೭೧), 'ನಾಗರಹಾವು' (೧೯೭೨-೭೩), 'ಪ್ರೇಮದ ಕಾಣಿಕೆ' (೧೯೭೫-೭೬), 'ಜೀವನ ಚೈತ್ರ' (೧೯೯೨-೯೩) ಚಿತ್ರಗಳ ಸಂಭಾಷಣೆಗಳಿಗಾಗಿ, 'ಭಾಗ್ಯದ ಲಕ್ಷ್ಮಿ ಬಾರಮ್ಮ' (೧೯೮೫-೮೬) ಮತ್ತು 'ಆನಂದ್' (೧೯೮೬-೮೭) ಚಿತ್ರಗಳ ಚಿತ್ರಕತೆಗಾಗಿ ರಾಜ್ಯಸರ್ಕಾರದ ಶ್ರೇಷ್ಠ ಸಂಭಾಷಣಕಾರ ಹಾಗೂ ಶ್ರೇಷ್ಠ ಚಿತ್ರನಾಟಕ ಕರ್ತೃ ಪ್ರಶಸ್ತಿ ಲಭಿಸಿದೆ. ಹಲವಾರು ಸಂಸ್ಥೆಗಳ ಪ್ರಶಸ್ತಿ, ಸನ್ಮಾನಗಳು ಇವರಿಗೆ ಸಂದಿವೆ. ತಮ್ಮ ೫೯ನೇ ವಯಸ್ಸಿನಲ್ಲಿ (೦೨-೦೭-೧೯೯೩) ನಿಧನರಾದರು.

## ಉಪೇಂದ್ರ

ಕನ್ನಡ ಚಿತ್ರರಂಗದಲ್ಲಿ ತೀವ್ರಗತಿಯಲ್ಲಿ ಒಬ್ಬ 'ಫಿನಾಮಿನನ್' ಆಗಿ ಬೆಳೆದಿರುವ



ನಿರ್ದೇಶಕ ಹಾಗೂ ನಟ ಉಪೇಂದ್ರ. ಕನ್ನಡ ಚಿತ್ರಗಳಲ್ಲಿ ಅತ್ಯಂತ ಹೆಚ್ಚು ಸಂಭಾವನೆ ಪಡೆದ ನಾಯಕ-ನಿರ್ದೇಶಕ ಮಾತ್ರವಲ್ಲ, ಅನೇಕ ವಿವಾದಗಳ ಕೇಂದ್ರ ಬಿಂದು ಕೂಡ. ಅವರ ಅಭಿಮಾನಿಗಳ ಸಂಖ್ಯೆಯೂ ಅಷ್ಟೇ ದೊಡ್ಡದು. ಉಪೇಂದ್ರರದ್ದು ಒಂದು ವಿಶೇಷ ಪ್ರತಿಭೆ. ಎಲ್ಲ ಸಂಪ್ರದಾಯಗಳನ್ನೂ ಮುರಿಯುವ ಕಾತರ ಹಾಗೂ ಛಲದ ವ್ಯಕ್ತಿತ್ವ. ತಮ್ಮ ಪ್ರತಿಭೆಯ ಹಲವು ಹತ್ತು ಮುಖಗಳನ್ನು ಪ್ರದರ್ಶಿಸುವಾಗ ಅತಿರೇಕಕ್ಕೂ ಹೋಗಿರುವುದುಂಟು. ಉಪೇಂದ್ರ ಪ್ರಯೋಗಶೀಲರು, ಕ್ರಿಯಾಶೀಲರು. ಹವ್ಯಾಸಿ ರಂಗಭೂಮಿಯಲ್ಲಿ ನಾಟಕಗಳನ್ನು ರಚಿಸಿ ನಿರ್ದೇಶಿಸುತ್ತಿದ್ದರು. 'ಅನಂತನ ಅವಾಂತರ' ಚಿತ್ರಕ್ಕೆ ನಿರ್ದೇಶಕ ಕಾಶೀನಾಥ್‌ರಿಗೆ ಸಹಾಯಕರಾದರು. ಸಂಭಾಷಣೆ ಮತ್ತು ಗೀತೆಗಳನ್ನು ಬರೆಯಲಾರಂಭಿಸಿದರು. 'ಲವ್ ಮಾಡಿ ನೋಡು', 'ಕಲಿಯುಗ ಕೃಷ್ಣ', 'ಆಟ ಬೊಂಬಾಟ', 'ಸೆಂಟ್ರಲ್ ರೌಡಿ' ಚಿತ್ರಗಳಲ್ಲಿ ದುಡಿದರು. ಕೆಲವು ಚಿತ್ರಗಳಲ್ಲಿ ನಟರಾಗಿಯೂ ಕಾಣಿಸಿಕೊಂಡರು. ಉಪೇಂದ್ರ ಸ್ವತಂತ್ರ ನಿರ್ದೇಶಕರಾಗಿದ್ದು 'ತರ್ಲೆ ನನ್ಮಗ' ಚಿತ್ರದಿಂದ. ಆದರೆ ಅವರು ನಿರ್ದೇಶಕರಾಗಿ ವಿಶೇಷ ಗಮನ ಸೆಳೆದ, ಕನ್ನಡ ಚಿತ್ರರಂಗಕ್ಕೆ ಅನೇಕ ನೂತನ ಪ್ರತಿಭೆಗಳನ್ನು ಪರಿಚಯ ಮಾಡಿಕೊಟ್ಟ, ಕುತೂಹಲಭರಿತ ಚಿತ್ರ 'ಶ್!'. 'ಓಂ' ಚಿತ್ರ ಅವರ ವೃತ್ತಿಜೀವನದಲ್ಲಿ ಮತ್ತು ಕನ್ನಡ ಚಿತ್ರರಂಗದಲ್ಲಿ ಒಂದು ಮೈಲಿಗಲ್ಲಾಯಿತು. ಉಪೇಂದ್ರ ನಿರ್ದೇಶಿಸಿದ 'ಆಪರೇಷನ್ ಅಂತ', 'ಎ', 'ಉಪೇಂದ್ರ' ಮತ್ತು 'ಸ್ವಸ್ತಿಕ್' ಗಮನಾರ್ಹ ಚಿತ್ರಗಳು. ಡಿ.ರಾಜೇಂದ್ರಬಾಬು ನಿರ್ದೇಶನದ 'ಪ್ರೀತ್ಸೆ' ಹಾಗೂ ಅವರದೇ ನಿರ್ದೇಶನದ 'ಉಪೇಂದ್ರ'ದಲ್ಲಿನ ಅಭಿನಯ ವಿಭಿನ್ನ ಎಂಬ ಕಾರಣಕ್ಕಾಗಿ ಗಮನ ಸೆಳೆದವು. ಉಪೇಂದ್ರ ತೆಲುಗು ಚಿತ್ರರಂಗದಲ್ಲೂ ನಟ, ನಿರ್ದೇಶಕನಾಗಿ ಶ್ರಮಿಸಿದರು. ಕನ್ನಡ ಚಿತ್ರರಂಗದಲ್ಲಿ ಸಂಪ್ರದಾಯ ವಿರೋಧಿ, ಕ್ರಿಯಾಶೀಲ ನಿರ್ದೇಶಕರಾಗಿ ತಳವೂರಿದ್ದಾರೆ.

## ಉಪೇಂದ್ರ ಕುಮಾರ್

ಹೆಸರಾಂತ ಸಂಗೀತ ನಿರ್ದೇಶಕರು. ೧೯೪೧ರಲ್ಲಿ ಚೆನ್ನೈಯಲ್ಲಿ ಜನನ. ಕಟಕ್‌ನ ಉತ್ಕಲ್ ಕಾಲೇಜ್ ಆಫ್ ಮ್ಯೂಸಿಕ್ ಅಂಡ್ ಡ್ಯಾನ್ಸ್‌ನಲ್ಲಿ ಬಿ.ಮ್ಯೂಸಿಕ್ ಪದವಿ. ಕನ್ನಡ



ಚಿತ್ರರಂಗಕ್ಕೆ ೧೯೬೬ರಲ್ಲಿ 'ಕಠಾರಿ ವೀರ' ಚಿತ್ರದ ಸಂಗೀತ ನಿರ್ದೇಶಕರಾಗಿ ಪ್ರವೇಶ. ಸರಿಸುಮಾರು ೨೦೦ ಚಿತ್ರಗಳಿಗೆ ಸಂಗೀತ ನಿರ್ದೇಶನ ನೀಡಿರುವ ಇವರು ಕನ್ನಡವಲ್ಲದೇ ತಮಿಳು, ತೆಲುಗು, ಮಲೆಯಾಳಿ, ಕೊಂಕಣಿ, ಒರಿಯಾ, ಬಂಗಾಳಿ ಚಿತ್ರಗಳಿಗೂ ಸಂಗೀತ ನಿರ್ದೇಶಿಸಿದ್ದಾರೆ. 'ಶಂಕರ್ ಗುರು', ರಥ ಸಪ್ತಮಿ', 'ಅನುರಾಗ ಅರಳಿತು', 'ಮನ ಮೆಚ್ಚಿದ ಹುಡುಗಿ', 'ನಂಜುಂಡಿ ಕಲ್ಯಾಣ', 'ಗಜಪತಿ ಗರ್ವ ಭಂಗ', 'ಹೃದಯ ಹಾಡಿತು', 'ಕಾಮನ ಬಿಲ್ಲು', 'ಸಿಪಾಯಿ ರಾಮು', 'ಧ್ರುವತಾರೆ', 'ಧರ್ಮ ಸೆರೆ', 'ದೇವ', 'ಜೀವನ ಚೈತ್ರ' ಹೀಗೆ ಹಲವು ಯಶಸ್ವೀ ಚಿತ್ರಗಳ ಸಂಗೀತ ನಿರ್ದೇಶಕರಾಗಿದ್ದಾರೆ. ೧೯೮೮-೮೯ರಲ್ಲಿ 'ನಂಜುಂಡಿ ಕಲ್ಯಾಣ', ೧೯೯೦-೯೧ರಲ್ಲಿ 'ಹೃದಯ ಹಾಡಿತು', ೧೯೯೨-೯೩ರಲ್ಲಿ 'ಜೀವನ ಚೈತ್ರ' ಚಿತ್ರಗಳ ಸಂಗೀತ ನಿರ್ದೇಶನಕ್ಕಾಗಿ ಮೂರು ಬಾರಿ ಕರ್ನಾಟಕ ರಾಜ್ಯ ಸರ್ಕಾರದ ಅತ್ಯುತ್ತಮ ಸಂಗೀತ ನಿರ್ದೇಶಕ ಪ್ರಶಸ್ತಿಯನ್ನು ಪಡೆದಿದ್ದಾರೆ.

## ಉಮಾ ಶಿವಕುಮಾರ್

ಗಯ್ಯಾಳಿ ಪಾತ್ರಗಳಿಗೆ ಜೀವ ತುಂಬಿದ ಪ್ರತಿಭಾವಂತ ನಟಿ. ಬೆಂಗಳೂರು ಹುಟ್ಟೂರು. ಎಂ.ಎ.ಪದವೀಧರೆ. ಶಾಸ್ತ್ರೀಯ ಸಂಗೀತದಲ್ಲಿ ಪರಿಣತರು. ತಮ್ಮ ೩೦ನೇ ವಯಸ್ಸಿನಲ್ಲಿ 'ವಂಶವೃಕ್ಷ' (೧೯೭೧) ಮೂಲಕ ಚಿತ್ರರಂಗ



ಪ್ರವೇಶಿಸಿದರು. ನಂತರದ ಚಿತ್ರ 'ಕಾಡು'. 'ಕೆಸರಿನ ಕಮಲ' ಇವರು ಅಭಿನಯಿಸಿದ

ಮೊದಲ ವ್ಯಾಪಾರಿ ಚಿತ್ರ. 'ನಟರಂಗ' ನಾಟಕ ತಂಡದಲ್ಲಿ ಇವರದು ಪ್ರಮುಖ ಪಾತ್ರ. ಚಿತ್ರಗಳಲ್ಲಿ ಅತ್ತೆ, ಅಮ್ಮ, ಅಕ್ಕ, ನಾದಿನಿ, ವೈದ್ಯೆ, ಶಿಕ್ಷಕಿ ಹೀಗೆ ಇವರು ಅಭಿನಯಿಸದ ಪಾತ್ರಗಳಿಲ್ಲ. 'ಬಿಸ್ತಿ ಬಂಗಾರಮ್ಮ' ಇವರನ್ನೇ ಪ್ರಮುಖವಾಗಿರಿಸಿಕೊಂಡು ರೂಪಿಸಿದ ಚಿತ್ರ. ಸುಮಾರು ೧೨೦ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಮುಗ್ಧಮಾನವ', 'ಚಂದನದ ಗೊಂಬೆ', 'ಭಾಗ್ಯದ ಲಕ್ಷ್ಮೀ ಬಾರಮ್ಮ', 'ಅದೇ ಕಣ್ಣು', 'ಸುಖ ಸಂಸಾರಕ್ಕೆ ೧೨ ಸೂತ್ರಗಳು', 'ಸತಿ ಸಕ್ಕೂಬಾಯಿ' ಮೊದಲಾದವು ಇವರ ಅಭಿನಯದ ಜನಪ್ರಿಯ ಚಿತ್ರಗಳು. 'ಚಂದನದ ಗೊಂಬೆ' (೧೯೭೯-೮೦) ಚಿತ್ರದಲ್ಲಿನ ಅಭಿನಯಕ್ಕಾಗಿ ಶ್ರೇಷ್ಠ ಪೋಷಕ ನಟಿ ರಾಜ್ಯ ಪ್ರಶಸ್ತಿಯನ್ನು ಪಡೆದಿದ್ದಾರೆ. ಬ್ಯೂಟಿ ಪಾರ್ಲರ್‌ಗಳನ್ನು ಆರಂಭಿಸಿ ತರಬೇತಿಯನ್ನೂ ನೀಡಿ ಹೆಸರಾದರು.

### ಉಮಾಶ್ರೀ

ಕನ್ನಡ ಹವ್ಯಾಸಿ ರಂಗಭೂಮಿ ಮತ್ತು ಚಲನಚಿತ್ರ ರಂಗಗಳ ಅಪೂರ್ವ ಪ್ರತಿಭೆಗಳಲ್ಲೊಂದು ಉಮಾಶ್ರೀ. ಚಿತ್ರರಂಗಕ್ಕೆ ಬಂದಿದ್ದು ನಾಟಕ ರಂಗದಿಂದ. ವೃತ್ತಿರಂಗಭೂಮಿ ಮತ್ತು ಹವ್ಯಾಸಿ



ರಂಗಭೂಮಿ ಎರಡರಲ್ಲೂ ಮೊದಲಿನಿಂದಲೂ ಬಹಳ ಆಸಕ್ತರಾಗಿದ್ದ ಉಮಾಶ್ರೀ 'ಒಡಲಾಳ' ನಾಟಕದಲ್ಲಿ ಸಾಕವ್ವನಾಗಿ ನೀಡಿದ ಶ್ರೇಷ್ಠ ಅಭಿನಯ ಅಕೆಯನ್ನು ಚಿತ್ರರಂಗಕ್ಕೆ ಎಳೆತಂದಿತು. ರಾಜ್ಯಾದ್ಯಂತ 'ಒಡಲಾಳ'ದ ಸಾಕವ್ವನಾಗಿ ಸಾಕಷ್ಟು ಪರಿಚಿತರಾದ ಉಮಾಶ್ರೀ, ಪುಟ್ಟಣ್ಣ ಕಣಗಾಲ್‌ರವರ 'ಅಮೃತ ಘಳಿಗೆ' ಚಿತ್ರದ ಒಂದು ಪುಟ್ಟ ಪಾತ್ರದ ಮೂಲಕ ಬೆಳ್ಳಿ ತೆರೆ ಪ್ರವೇಶಿಸಿದರು. ಕಾಶಿನಾಥ್‌ರ 'ಅನುಭವ' ಉಮಾಶ್ರೀಗೆ ಬಹಳ ಹೆಸರು ತಂದ ಚಿತ್ರ. ನಂತರ ಸತ್ವವಿಲ್ಲದ ಹಲವಾರು ಪಾತ್ರಗಳು ಅವರನ್ನು ಅರಸಿಬಂದವು. ಉಮಾಶ್ರೀ ಎನ್.ಎಸ್.ರಾವ್ ಜೋಡಿ ದ್ವಂದ್ವಾರ್ಥದಿಂದ ಕೂಡಿದ ಸಂಭಾಷಣೆಗಳಿಂದ ಜನಪ್ರಿಯತೆ ಪಡೆದುಕೊಂಡಿತ್ತು. ಬಹಳಷ್ಟು ಟೀಕೆಗೆ ಒಳಗಾದ ಉಮಾಶ್ರೀ ಇದರಿಂದ ಹೊರಗೆ ಬಂದು ತಾವೊಬ್ಬ ಸಮರ್ಥ ನಟಿ ಎಂದು ನಿರೂಪಿಸಿದ್ದು 'ಯಾರು ಹೊಣೆ' ಚಿತ್ರದಲ್ಲಿನ ಪರಿಣಾಮಕಾರಿ ಅಭಿನಯದಿಂದ. ರವಿಚಂದ್ರನ್ ನಿರ್ದೇಶನದ 'ಪುಟ್ನಂಜ' ಇವರೊಳಗಿದ್ದ ಕಲಾವಿದೆಯನ್ನು ಹೊರಗೆ ಎಳೆಯಿತು. ನಂತರ ವಯಸ್ಸಿಗೆ ಮೀರಿದ, ಪ್ರಬುದ್ಧತೆಯಿಂದ ಕೂಡಿದ ಪಾತ್ರಗಳು ಸಾಲು ಸಾಲಾಗಿ ಬಂದವು. 'ತುಂಬಿದ ಮನೆ', 'ಧಣಿ' ಹೆಸರಿಸಬಹುದಾದ ಚಿತ್ರಗಳು. ಸುಮಾರು ೨೦೦ ಚಿತ್ರಗಳಲ್ಲಿ ಅಭಿನಯಿಸಿರುವ ಉಮಾಶ್ರೀ ಪ್ರತಿಯೊಂದು ಪಾತ್ರದಲ್ಲೂ ತನ್ನದೇ ಆದ ಛಾಪನ್ನು ಒತ್ತಿದ್ದಾರೆ. 'ಸಂಗ್ಯಾಬಾಳ್ಯ', 'ಕೊಟ್ರೇಶಿ ಕನಸು', 'ಒಡಹುಟ್ಟಿದವರು', 'ಶಾಂತಿ ನಿವಾಸ', 'ಯಾರಿಗೆ ಸಾಲುತ್ತೆ ಸಂಬಳ' ಮೊದಲಾದವು ಉಮಾಶ್ರೀ ಅಭಿನಯದ ಚಿತ್ರಗಳು. 'ಯಾರು ಹೊಣೆ' (೧೯೮೮-೮೯), 'ಸಂಗ್ಯಾಬಾಳ್ಯ' (೧೯೯೨-೯೩), 'ಕೊಟ್ರೇಶಿ ಕನಸು' (೧೯೯೪-೯೫) ಚಿತ್ರಗಳಲ್ಲಿನ ಅಭಿನಯಕ್ಕಾಗಿ ಮೂರು ಬಾರಿ ಶ್ರೇಷ್ಠ ಪೋಷಕ ನಟಿ ರಾಜ್ಯಪ್ರಶಸ್ತಿ ಪಡೆದಿದ್ದಾರೆ. ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿನ ಸದಸ್ಯೆಯಾಗಿ ನಾಮಕರಣಗೊಂಡಿದ್ದಾರೆ.

### ಉಮೇಶ್.ಎಸ್

ಸಹನಿರ್ದೇಶಕರಾಗಿ ಚಿತ್ರರಂಗ ಪ್ರವೇಶಿಸಿದ ಎಸ್.ಉಮೇಶ್ ತಾವು ಸಹನಿರ್ದೇಶಕರಾಗಿ ದುಡಿದ ಚಿತ್ರಗಳ



ಸಂಕಲನ ಕಾರ್ಯಗಳಲ್ಲಿ ಆಸಕ್ತರಾಗಿ ಆ ವಿಭಾಗದಲ್ಲಿಯೂ ಪರಿಣತರಾದರು. ನಿರ್ಮಾಪಕರಾದ ಕೆ.ಪ್ರಭಾಕರ್ ಅವರೊಡನೆ ೧೯೮೮ರಲ್ಲಿ 'ಅವಳೇ ನನ್ನ ಹೆಂಡ್ತಿ' ಚಿತ್ರವನ್ನು ನಿರ್ದೇಶಿಸಿದರು. 'ಅವನೇ ನನ್ನ ಗಂಡ', 'ನಂಬಿದ್ರೆ ನಂಬಿ ಬಿಟ್ರೆ ಬಿಡಿ', 'ಸಿಡಿದೆದ್ದ ಗಂಡು', 'ರಾಜಾ ಕೆಂಪು ರೋಜಾ', 'ಪ್ರೇಮ ಪರೀಕ್ಷೆ', 'ಬನ್ನಿ ಒಂದ್ಸಲ ನೋಡಿ', 'ತುಂಬಿದ ಮನೆ', 'ಸನ್ಯಾಸಿಯ ನಂದಿನಿ', 'ಬದುಕು ಜಟಕಾ ಬಂಡಿ', 'ದಾಯಾದಿ', 'ಅವಳೇ ನನ್ನ ಹುಡುಗಿ', 'ಎಲ್ಲರಂಥಲ್ಲ ನನ್ನ ಗಂಡ' ಚಿತ್ರಗಳನ್ನು ನಿರ್ದೇಶಿಸಿದ್ದಾರೆ.

### ಉಮೇಶ್.ಎಂ.ಎಸ್

ರಂಗಭೂಮಿ ಹಾಗೂ ಚಿತ್ರರಂಗಕ್ಕೆ ಬಾಲನಟರಾಗಿ ಪ್ರವೇಶಿಸಿದರು. ಜನನ : ೧೯೪೪. ಎಂ.ಸಿ.ಮಹಾದೇವಸ್ವಾಮಿಯವರ ನಾಟಕ ಸಂಸ್ಥೆಗೆ ಬಾಲನಟರಾಗಿ ಸೇರಿಕೊಂಡರು. ಎಂ.ವಿ.ರಾಜಮ್ಮನವರ 'ಮಕ್ಕಳ ರಾಜ್ಯ' (೧೯೬೦) ಚಿತ್ರದ ಮೂಲಕ ಬಾಲನಟರಾಗಿ ಚಿತ್ರರಂಗ ಪ್ರವೇಶಿಸಿದರು. 'ಕಥಾಸಂಗಮ'ದ (೧೯೭೬) ಕೊನೆಯ ಭಾಗ



'ಮುನಿತಾಯಿ'ಯಲ್ಲಿ ತಿಮ್ಮರಾಯಿ ಪಾತ್ರದಿಂದ ಮತ್ತೆ ಪ್ರಸಿದ್ಧಿಗೆ ಬಂದರು. ಚಲನಚಿತ್ರರಂಗದ ಖ್ಯಾತ ಹಾಸ್ಯನಟರಾಗಿರುವ ಇವರು ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅವುಗಳಲ್ಲಿ ಅನೇಕ ಪಾತ್ರಗಳು ವೈವಿಧ್ಯಪೂರ್ಣ. 'ಮುನಿತಾಯಿ' ಚಿತ್ರದ ಪಾತ್ರಕ್ಕೆ ಸರ್ಕಾರ ಅತ್ಯುತ್ತಮ ಪೋಷಕನಟ ಪ್ರಶಸ್ತಿ ನೀಡಿ ಗೌರವಿಸಿದೆ. ಇವರ ಅಣ್ಣ ಎಂ.ಎಸ್.ಸತ್ಯ ಕೂಡ ಕನ್ನಡ ಚಿತ್ರರಂಗದಲ್ಲಿ ಜನಪ್ರಿಯ ಹಾಸ್ಯನಟರಾಗಿದ್ದರು. ಉಮೇಶ್ ಕಿರುತೆರೆಯಲ್ಲಿಯೂ ಜನಪ್ರಿಯರಾಗಿರುವ ಕಲಾವಿದರು. ಅಂಕಣಕಾರರೂ ಕೂಡ.

### ಉಮೇಶ್ ಕುಲಕರ್ಣಿ

ಸಂಕಲನಕಾರರಾಗಿ ಪರಿಚಿತರಾಗಿ ನಂತರ ನಿರ್ದೇಶಕರಾಗಿ ಯಶಸ್ಸು ಗಳಿಸಿದವರು ಉಮೇಶ್ ಕುಲಕರ್ಣಿ. ಬೀದರ್‌ನಲ್ಲಿ ಪ್ರೌಢ ಶಿಕ್ಷಣ. ಗುಲ್ಬರ್ಗದಲ್ಲಿ ಕಾಲೇಜು ಕಲಿಕೆ. ಸರ್ಕಾರಿ ಕೆಲಸವನ್ನು ತೊರೆದು ಚಿತ್ರರಂಗದ ಸೆಳೆತಕ್ಕೆ ಪಾರು ಹೋಗಿ ಪುಣೆಯ ಫಿಲಂ ಮತ್ತು ಟೆಲಿವಿಷನ್ ಸಂಸ್ಥೆಯಲ್ಲಿ ಪದವಿ ಪಡೆದರು. ಸಂಕಲನಕಾರರಾಗಿ 'ಸಂಕಲ್ಪ' ಚಿತ್ರದಿಂದ ಚಿತ್ರರಂಗ ಪ್ರವೇಶ. 'ಮಾಡಿ ಮಡಿದವರು', 'ಕಂಕಣ', 'ಘಟಶ್ರಾದ್ಧ' ಹಾಗೂ 'ಕೋಕಿಲಾ' ಚಿತ್ರಗಳಿಗೆ ಸಂಕಲನಕಾರನಾಗಿ ದುಡಿದರು. 'ಶಂಖನಾದ' ಚಿತ್ರದ ಮೂಲಕ ನಿರ್ದೇಶಕರಾದರು. 'ಶಂಖನಾದ' ಅತ್ಯುತ್ತಮ ಪ್ರಾದೇಶಿಕ ಚಿತ್ರವಾಗಿ ರಾಷ್ಟ್ರೀಯ ಪ್ರಶಸ್ತಿ ಪಡೆಯಿತು. ನೂರು ದಿನ ಪ್ರದರ್ಶಿತಗೊಂಡು ಉಮೇಶ್‌ಕುಲಕರ್ಣಿಯವರ ಜನಪ್ರಿಯತೆಯನ್ನು ಹೆಚ್ಚಿಸಿತು. 'ಉತ್ತರ



ಧ್ರುವ' ಹಾಗೂ 'ಗಂಡು ಗೂಳಿಗಳು' ಇವರ ವಿಭಿನ್ನ ಶೈಲಿಯ ಚಿತ್ರಗಳು. ತತ್ಕಾಲೀನ ರಾಜಕೀಯ, ಸಾಮಾಜಿಕ ಸಮಸ್ಯೆಗಳನ್ನು ವಿಡಂಬನಾತ್ಮಕವಾಗಿ ಚಿತ್ರಿಸಿ ಪ್ರೇಕ್ಷಕರನ್ನು ಚಿಂತನೆಗೆ ಹಚ್ಚಿದ ಕ್ರಿಯಾಶೀಲ ನಿರ್ದೇಶಕ ಉಮೇಶ್ ಕುಲಕರ್ಣಿ. ಪ್ರಥಮ ಚಿತ್ರದಲ್ಲೇ ಸಂಕಲನಕ್ಕಾಗಿ ಕರ್ನಾಟಕ ಸರ್ಕಾರದ ೧೯೭೨-೭೩ರ ಪ್ರಶಸ್ತಿಯನ್ನು ಪಡೆದರು.

### ಓಂ ಪ್ರಕಾಶ್

ಹಿರಿಯ ಹಾಸ್ಯನಟ ಹಾಗೂ ಚಿತ್ರಸಾಹಿತಿ ಎನ್.ಎಸ್.ರಾವ್ ಅವರ ಪುತ್ರರಾದ ಓಂ ಪ್ರಕಾಶ್‌ರಾವ್ ಚಿತ್ರರಂಗಕ್ಕೆ ಓಂಪ್ರಕಾಶ್ ಎಂದೇ ಪರಿಚಿತರು. ಸಾಹಸ ಚಿತ್ರಗಳ ನಿರ್ದೇಶಕರಾದ ವಿ.ಸೋಮಶೇಖರ್, ಕೆ.ಎಸ್.ಆರ್.ದಾಸ್ ಅವರ ಬಳಿ ಸಹ



ನಿರ್ದೇಶಕರಾಗಿ ಅನುಭವ ಗಳಿಸಿ ೧೯೯೪ರಲ್ಲಿ 'ಅಧಿಪತಿ' ಚಿತ್ರ ನಿರ್ದೇಶಿಸಿದರು. ನಂತರ 'ಲಾಕಪ್‌ಡೆತ್', 'ಗೋಲ್ಡ್‌ಮೆಡಲ್', 'AK 47' ಮುಂತಾದ ಜನಪ್ರಿಯ ಚಿತ್ರಗಳನ್ನು ನಿರ್ದೇಶಿಸಿದರು. ಅದ್ದೂರಿ ಚಿತ್ರ ನಿರ್ದೇಶನಕ್ಕೆ ಮತ್ತು ಯಶಸ್ಸಿಗೆ ಹೆಸರಾಗಿದ್ದಾರೆ.

### ಕಣ್ಣನ್.ಆರ್

ನಾಲ್ಕು ದಶಕಗಳಿಗೂ ಹೆಚ್ಚು ಕಾಲದಿಂದ ಚಲನಚಿತ್ರರಂಗದಲ್ಲಿ ದುಡಿಯುತ್ತಿರುವ



ಹಿರಿಯ ಶಬ್ದಗ್ರಾಹಕ. ಸೌಂಡ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾ ಪಡೆದು ೧೯೪೯ರಲ್ಲಿ ಸಹಾಯಕರಾಗಿ ಮದರಾಸಿನ ರೇವತಿ ಸ್ಟುಡಿಯೋ ಸೇರಿದರು. ಐದು ವರ್ಷಗಳ ಕಾಲ ಸಹಾಯಕ ಶಬ್ದಗ್ರಾಹಕರಾಗಿದ್ದ ಕಣ್ಣನ್ ಅವರು ಭಾರತಿ ಸ್ಟುಡಿಯೋದಲ್ಲಿ ಕೆಲಸ ಮಾಡಿ ನಂತರ ಪ್ರಸಾದ್ ರಿಕಾರ್ಡಿಂಗ್ ಸ್ಟುಡಿಯೋದಲ್ಲಿ ಹಿರಿಯ ತಂತ್ರಜ್ಞರಾಗಿ ಸೇವೆ ಆರಂಭಿಸಿದರು. 'ಶರ ಪಂಜರ', 'ಬೆಳ್ಳಿ ಮೋಡ', 'ಸ್ವಾಮೀಜಿ', 'ಬಾಲಕ ಅಂಬೇಡ್ಕರ್', 'ಪತಿ ಪತ್ನಿ', 'ರಾಮಾಚಾರಿ', 'ಶಾಂತಿ ಕ್ರಾಂತಿ' ಮುಂತಾದ ಚಿತ್ರಗಳಿಗೆ ಶಬ್ದಗ್ರಾಹಕರಾಗಿ ಕೆಲಸ ಮಾಡಿದ್ದಾರೆ. ೧೯೯೨-೯೩ನೇ ಸಾಲಿನಲ್ಲಿ 'ಆಂಗ್ಲಿ ಅಪ್ಸರೆ' ಚಿತ್ರದ ಶಬ್ದಗ್ರಹಣ ಕಾರ್ಯಕ್ಕೆ ರಾಜ್ಯ ಸರ್ಕಾರದ ಅತ್ಯುತ್ತಮ ಧ್ವನಿಗ್ರಾಹಕ ಪ್ರಶಸ್ತಿ ಗಳಿಸಿದಾರೆ.

### ಕಮಲಾಬಾಯಿ

ಮೂಕಿಚಿತ್ರಗಳಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದ ಕಲಾವಿದೆ. ಈಗ ಬೆಂಗಳೂರಿನ ಭಾಗವಾಗಿರುವ ಮತ್ತಿಕೆರೆ ಹುಟ್ಟೂರು. ಬಾಲ್ಯದಲ್ಲಿ ಬಡತನದಿಂದಾಗಿ ವಿದ್ಯಾಭ್ಯಾಸವೂ ನಡೆಯಲಿಲ್ಲ. ಹದಿನಾರನೆ ವಯಸ್ಸಿನಲ್ಲಿ ಸೂರ್ಯ ಫಿಲಂ ಕಂಪೆನಿಯ 'ರಾಧೇ ಶ್ಯಾಂ' ಮೂಕಿಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ೩೦ ಮೂಕಿ ಚಿತ್ರಗಳಲ್ಲಿ ಅಭಿನಯಿಸಿದರು. ಆರ್.ನಾಗೇಂದ್ರರಾಯರೊಂದಿಗೆ ಹಲವಾರು



ನಾಟಕಗಳಲ್ಲಿ ಅಭಿನಯಿಸಿದರು. ಇವರಿಬ್ಬರ ಜೋಡಿ ಅತ್ಯಂತ ಜನಪ್ರಿಯವಾಗಿತ್ತು. ಈಕೆ ರಾಯರ ಧರ್ಮಪತ್ನಿ. 'ವಸಂತಸೇನಾ' (೧೯೪೧), 'ಮಹಾತ್ಮಾ ಕಬೀರ್'(೧೯೪೭), 'ಜಾತಕಫಲ' (೧೯೫೩), 'ಅಳಿಯ ಗೆಳೆಯ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಇವರು ೧೯೮೦ರಲ್ಲಿ ನಿಧನರಾದರು.

### ಕಮಿನೀಧರನ್

ಕನ್ನಡ ಚಿತ್ರರಂಗದ ಜನಪ್ರಿಯ ಪೋಷಕ ನಟಿ. ಮೂಲತ. ಮಲೆಯಾಳಿ ಕುಟುಂಬಕ್ಕೆ ಸೇರಿದ ಇವರು ಹುಟ್ಟಿದ್ದು ಗುರುವಾಯೂರ್‌ನಲ್ಲಿ. ಓದಿದ್ದು ಬೆಂಗಳೂರಿನಲ್ಲಿ. ವ್ಯಾಸಂಗದ ನಂತರ ಬಿ.ಇ.ಎಲ್.ನಲ್ಲಿ ಉದ್ಯೋಗ. ರಂಗಭೂಮಿ ನಂಟಿನ ಹಿರಿಯ ಕಲಾವಿದ. 'ಭಕ್ತ ಬಸವಣ್ಣ', 'ಆ ಊರು ಈ ಊರು' ಮೊದಲಾದ ನಾಟಕಗಳಲ್ಲಿ ಅಭಿನಯ. ಚಂದ್ರಶೇಖರ ಕಂಬಾರ ನಿರ್ದೇಶನದ ಬಿಡುಗಡೆಯಾಗದ 'ಸಾಕು ಮಾಡು ಶಿವನ' ಸಾಕ್ಷ್ಯಚಿತ್ರದ ನಾಯಕಿಯಾಗಿ ಚಿತ್ರರಂಗ ಪ್ರವೇಶ. ನಂತರ



'ಹೊಂಬಿಸಿಲು', 'ಅನುಭವ', 'ಕಾಮ ಕುಮಾರ', 'ಅಪರಿಚಿತ', 'ಜ್ವಾಲ', 'ಭಾಗ್ಯವಂತ', 'ಕೂಡಿ ಬಾಳಿದರೆ ಸ್ವರ್ಗ ಸುಖ', 'ಊರಿಗಿಟ್ಟ ಕೊಳ್ಳಿ', 'ಊರಿಗೆ ಉಪಕಾರಿ' ಮೊದಲಾದ ಚಿತ್ರಗಳಲ್ಲಿ ಅವಕಾಶ. 'ಅನುಭವ' ಚಿತ್ರದ ಪಾತ್ರ ಪೋಷಣೆಗಾಗಿ ೧೯೮೩-೮೪ರಲ್ಲಿ ರಾಜ್ಯ ಸರ್ಕಾರದ ಶ್ರೇಷ್ಠ ಪೋಷಕ ನಟಿ ಪ್ರಶಸ್ತಿ ಲಭಿಸಿತು.

### ಕರಿಬಸಯ್ಯ.ಟಿ.ಎಸ್

ಬೆಂಗಳೂರಿನಲ್ಲಿ ಸುಸಜ್ಜಿತವಾದ ಚಲನಚಿತ್ರ ಸ್ಟುಡಿಯೋ ಸ್ಥಾಪಿಸಬೇಕೆಂಬ ಆಸೆಹೊತ್ತು, ಸತತ ಪ್ರಯತ್ನಗಳ ಮೂಲಕ ಕನಸನ್ನು ನನಸು ಮಾಡಿದವರು, ಚಿತ್ರ ನಿರ್ಮಾಪಕರಾದ ಕರಿಬಸಯ್ಯನವರು. ಕರ್ನಾಟಕ ಏಕೀಕರಣವಾದ ಸಮಯದಲ್ಲಿ ಕನ್ನಡ ಚಿತ್ರೋದ್ಯಮಕ್ಕೆ ರಾಜ್ಯ ಸರ್ಕಾರದ ಪ್ರೋತ್ಸಾಹ ನೆರವು ಅಗತ್ಯ ಎನ್ನುವ ಕೂಗು ವಿಧಾನ ಸಭೆಯಲ್ಲಿ, ಸಾರ್ವಜನಿಕವಾಗಿ ಕೇಳಿ ಬಂತು. ಕನ್ನಡ ಚಿತ್ರಗಳ ಬಗೆಗೆ ಜನತೆಯ ಆಸಕ್ತಿಯೂ ಹೆಚ್ಚಿತು. ನಿರ್ಮಾಪಕರಿಗೆ ಗಳಿಕೆಯ ಪ್ರಮಾಣವೂ ಏರಿತು. ಬೆಂಗಳೂರಿನಲ್ಲಿ ಸ್ಟುಡಿಯೋ ಸ್ಥಾಪಿಸುವ, ಕಾರ್ಯಸಾಧ್ಯವಾದ ಯೋಜನೆಯೊಡನೆ ಮುಂದೆ ಬರುವ ಉದ್ಯಮಿಗಳಿಗೆ ಎಲ್ಲ ನೆರವನ್ನು ನೀಡುವ ನಿರ್ಧಾರವನ್ನು ಸರ್ಕಾರ ಪ್ರಕಟಿಸಿತು. ಈ ಹಿನ್ನೆಲೆಯಲ್ಲಿ ಹಲವರು ಸಾಹಸಿ ಉದ್ಯಮಿಗಳು ಪ್ರಯತ್ನ ನಡೆಸಿದರು. ಚಿತ್ರ ನಿರ್ಮಾಣದಲ್ಲಿ ಅಪಾರ ಆಸಕ್ತಿ ಹೊಂದಿದ ಗುಬ್ಬಿ ವೀರಣ್ಣನವರು ಮತ್ತು ನಾಟಕ ಹಾಗೂ ಚಲನಚಿತ್ರ ತಯಾರಿಕೆಯಲ್ಲಿ ಅವರ ಸಹವರ್ತಿಯಾಗಿದ್ದ ಚಿತ್ರ ನಿರ್ಮಾಪಕರಾದ ಟಿ.ಎಸ್.ಕರಿಬಸಯ್ಯ ಅವರುಗಳ ಪ್ರಯತ್ನದಿಂದ, ಕೆಲವು ಉತ್ಸಾಹಿ ಮಿತ್ರರನ್ನು ಸೇರಿಸಿಕೊಂಡು 'ಶ್ರೀ ಕಂಠೀರವ



ಸ್ಟುಡಿಯೋಸ್' ಸಂಸ್ಥೆಯನ್ನು ೧೮ ಮಾರ್ಚ್ ೧೯೬೬ರಂದು ಸ್ಥಾಪಿಸಿದರು. ೧೦೫ ಮಂದಿ ಷೇರುದಾರರಿಂದ ಏಳೂವರೆ ಲಕ್ಷ ರೂ ಬಂಡವಾಳ ಸಂಗ್ರಹಿತವಾಯಿತು. ರಾಜ್ಯ ಸರ್ಕಾರ ತನ್ನ ಘೋಷಿತ ನೀತಿಯಂತೆ ೫ ಲಕ್ಷ ಷೇರು ಬಂಡವಾಳ ಒದಗಿಸಿತು. ಬೆಂಗಳೂರು - ತುಮಕೂರು ರಸ್ತೆಯಲ್ಲಿ ನಗರಕ್ಕೆ ಐದು ಮೈಲಿ ದೂರದಲ್ಲಿರುವ ಹದಿನೇಳು ಎಕರೆ ಪ್ರದೇಶದಲ್ಲಿ 'ಕಂಠೀರವ ಸ್ಟುಡಿಯೋಸ್' ೧೯೭೦ನೇ ಜನವರಿ ೧೬ರಂದು ಕಾರ್ಯಾರಂಭ ಮಾಡಿತು. ಸಂಸ್ಥೆಗೆ ಮ್ಯಾನೇಜಿಂಗ್ ಡೈರೆಕ್ಟರ್ ಆಗಿ, ಸ್ಟುಡಿಯೋ ಏಳಿಗೆಗೆ ಶ್ರಮಿಸಿದರು. 'ರಾಣಿ ಹೊನ್ನಮ್ಮ' ಮತ್ತು 'ಅಣ್ಣ ತಂಗಿ' ಕರಿಬಸಯ್ಯನವರು ಗಿರಿಜಾ ಪ್ರೊಡಕ್ಷನ್ಸ್ ಲಾಂಛನದಿಂದ ತಯಾರಿಸಿದ ಚಿತ್ರಗಳು. ಕರಿಬಸಯ್ಯನವರು ಚಲನಚಿತ್ರ ನಿರ್ಮಾಪಕರಷ್ಟೇ ಅಲ್ಲ, ಪ್ರದರ್ಶಕರೂ ಕೂಡ. ತಿಪಟೂರಿನ 'ವಿನೋದ' ಚಿತ್ರಮಂದಿರದ ಮಾಲೀಕರು. ಜೊತೆಗೆ ರಂಗಭೂಮಿಯ ನಂಟೂ ಅವರಿಗಿತ್ತು. 'ಶ್ರೀ ಕಂಠೀರವ ಕಲಾ ವೃಂದ' ಸಂಸ್ಥೆಯನ್ನು ಸ್ಥಾಪಿಸಿಕೊಂಡು ಆ ಮೂಲಕ ನಾಟಕಗಳನ್ನು ಪ್ರದರ್ಶಿಸುತ್ತಿದ್ದರು. 'ಭಕ್ತಿ ಭಂಡಾರಿ ಬಸವಣ್ಣ' ಆ ಸಂಸ್ಥೆಯ ಜನಪ್ರಿಯ ನಾಟಕ; ನೂರಾರು ಪ್ರದರ್ಶನಗಳನ್ನು ಕಂಡಿದೆ. 'ಅಶಕ್ತ ಕಲಾವಿದರ ಕಲ್ಯಾಣ ಸಮಿತಿ'ಯ ಅಧ್ಯಕ್ಷರಾಗಿ ೧೯೭೩ರಿಂದ ಮೂರು ವರ್ಷಗಳ ಕಾಲ ದುಡಿದರು. ಅಶಕ್ತರಾದ ಕಲಾವಿದರಿಗಾಗಿ ನೊಂದ ಕಲಾವಿದರಿಗಾಗಿ ಮಿಡಿದವರು.

### ಕರಿಬಸವಯ್ಯ

ಹಾಸ್ಯ ಪ್ರಧಾನ ಪಾತ್ರಗಳಲ್ಲಿ ಹೆಚ್ಚು ಜನಪ್ರಿಯವಾಗುತ್ತಿರುವ ಕರಿಬಸವಯ್ಯನವರು ಅಪ್ಪಟ ಗ್ರಾಮೀಣ ಪ್ರತಿಭೆ. ಬಿ.ಎ.ಪದವೀಧರರಾದ ಅವರು



ಸರ್ಕಾರಿ ನೌಕರಿಯ ರುಚಿ, ನೋವುಗಳನ್ನು ಕಂಡವರು ಕೂಡ. ಅಭಿನಯ ಅವರ ಹವ್ಯಾಸ. ಆದರಿಂದಲೇ ಅವರು ೧೫ ವರ್ಷಗಳ ಕಾಲ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡರು. ದೂರದರ್ಶನ ಧಾರಾವಾಹಿಗಳ ಮೂಲಕ ರಾಜ್ಯವ್ಯಾಪ್ತಂತ ಪರಿಚಿತರಾದರು. ಕರಿಬಸವಯ್ಯನವರು ಅನೇಕ ವ್ಯಾಪಾರಿ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ವಿಶೇಷವಾಗಿ ಗಮನ ಸೆಳೆದು ರಾಜ್ಯ ಸರ್ಕಾರದಿಂದ ೧೯೯೪-೯೫ನೇ ಸಾಲಿನ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ಗಳಿಸಿದ್ದು 'ಕೊಟ್ರೇಶಿ ಕನಸು' ಚಿತ್ರದಲ್ಲಿ ಕೊಟ್ರೇಶಿಯ ತಂದೆಯಾಗಿ ನೀಡಿದ ಅಭಿನಯದಿಂದ. ಕರಿಬಸವಯ್ಯನವರು ಚಿತ್ರರಂಗವನ್ನು ಪ್ರವೇಶಿಸಿದ್ದು ನಾಗತಿಹಳ್ಳಿ ನಿರ್ದೇಶನದ 'ಉಂಡೂ ಹೋದ ಕೊಂಡೂ ಹೋದ' ಚಿತ್ರದಿಂದಲೆ. ಹರಿಕಥೆ, ನಾಟಕಗಳ ಮೂಲಕ ಸಮಾಜ ಸೇವೆ ಮಾಡುವುದು ಅವರ ಬಲವಾದ ಹಂಬಲ. 'ಜನುಮದ ಜೋಡಿ', 'ಉಲ್ಟಾ ಪಲ್ಟಾ', 'ಯಾರಿಗೆ ಸಾಲುತ್ತೆ ಸಂಬಳ' ಮತ್ತು 'ಓ ನನ್ನ ನಲ್ಲೆ' ಅವರು ಇದುವರೆಗೆ ಅಭಿನಯಿಸಿರುವ ೪೫ ಚಿತ್ರಗಳ ಪೈಕಿ ವಿಶೇಷ ಜನಪ್ರಿಯತೆಯನ್ನು ಗಳಿಸಿಕೊಟ್ಟಿರುವ ಚಿತ್ರಗಳು.

### ಕರೀಂ ಖಾನ್.ಎಸ್.ಕೆ

ಹಿರಿಯ ಸಾಹಿತಿ, ಜಾನಪದ ಯಕ್ಷಗಾನ ಅಕಾಡೆಮಿ ಮಾಜಿ ಅಧ್ಯಕ್ಷರಾದ ಎಸ್.ಕೆ.ಕರೀಂಖಾನ್ ಅವರಿಗೆ ಚಲನಚಿತ್ರರಂಗದ ಒಂದು ವಿಶಿಷ್ಟ ರೀತಿಯ ನಂಟು. ಜಾನಪದ ಗೀತೆಗಳು ಹಾಗೂ ಕಥೆಗಳ ಸಂಗ್ರಹಕ್ಕೆ ಕರೀಂಖಾನ್‌ರ ಕೊಡುಗೆ ದೊಡ್ಡದು. ತಾವಿದ್ದ ಪರಿಸರ, ಕಲಿತ ಶಾಲೆಯಿಂದ ಕನ್ನಡ ಭಾಷೆ, ಹಿಂದೂ ಜೀವನ ಶೈಲಿ ಮೈಗೂಡಿಸಿಕೊಂಡ ಖಾನರಿಗೆ ಸಾಹಿತ್ಯದ ಗೀಳು. ಜಾನಪದದ ಹುಚ್ಚು ಅವರಿಂದ ವಿಶಿಷ್ಟವಾದ ಕೆಲಸ ಮಾಡಿಸಿದೆ. ಸಾಹಿತ್ಯದಿಂದ ದುಡ್ಡು ಬರುವುದಿಲ್ಲ ಎಂದು ಗೊತ್ತಿದ್ದರೂ, 'ಜಾನಪದ ಪ್ರಕಾಶನ'ದ ಮೂಲಕ ಐವತ್ತು ಪೈಸೆಗಳ ಬೆಲೆಗೆ ಜಾನಪದ



ಗೀತೆಗಳ ಸಂಗ್ರಹ ಪ್ರಕಟಿಸಿ ಮಾರಾಟ ಮಾಡುತ್ತಿದ್ದರು. ೧೯೬೨ರಲ್ಲಿ ತೆರೆಕಂಡ ಟಿ.ಆರ್.ನಾಯ್ಡು ನಿರ್ಮಾಣದ 'ಸ್ವರ್ಣಗೌರಿ' ಚಿತ್ರದ ಚಿತ್ರಕತೆ, ಸಂಭಾಷಣೆ, ಹಾಡುಗಳನ್ನು ಬರೆದರು. ಇದರ ನಂತರ 'ಗಂಗೆಗೌರಿ', 'ಶಿವಲಿಂಗಸಾಕ್ಷಿ', 'ಜೀವನ ತರಂಗ', 'ಬೇವುಬೆಲ್ಲ', 'ರಾಜೇಶ್ವರಿ', 'ದೊಂಬರಕೃಷ್ಣ' ಮುಂತಾದ ಚಿತ್ರಗಳಿಗೆ ಹಾಡುಗಳನ್ನು ಬರೆದರು. ಸುಮಾರು ೨೫೦ ಹಾಡುಗಳನ್ನು, ೩೦ ಚಿತ್ರಗಳಿಗೆ ಕಥೆ, ಚಿತ್ರಕಥೆ, ಸಂಭಾಷಣೆ ಬರೆದಿದ್ದಾರೆ. 'ನಟವರ ಗಂಗಾಧರ ಉಮಾಶಂಕರ....', 'ಜಯಗೌರಿ ಜಗದೀಶ್ವರೀ....', 'ಮಡಿಮನ ಶಿವಗುಣ ಸಂಕೀರ್ತನ....', 'ಈ ಜೀವನ ಬೇವು ಬೆಲ್ಲ....' ಮೊದಲಾದ ಹಾಡುಗಳು ಸಾರ್ವಕಾಲಿಕ ಜನಪ್ರಿಯತೆ ಪಡೆದ ಹಾಡುಗಳಾಗಿವೆ. ಕರ್ನಾಟಕದ ಹಿರಿಯ ಜನಪದ ಸಾಹಿತಿ, ಸ್ವಾತಂತ್ರ್ಯಯೋಧರಾದ ಕರೀಂಖಾನ್ ಜೋಳಿಗೆಯಲ್ಲಿ ಸಿಗುವುದು ಜಾನಪದ ನುಡಿಮುತ್ತುಗಳು, ಹಿಂದೂ ಪುರಾಣಗಳು, ಉಪಕಥೆಗಳು. ಅವರು ನಾಡು ನುಡಿಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡಿರುವುದಕ್ಕೆ ಅವೇ ಸಾಕ್ಷಿಯಾಗಿವೆ.

### ಕಲ್ಪನಾ

ಕನ್ನಡ ಚಲನಚಿತ್ರರಂಗದಲ್ಲಿ ಪುಟ್ಟಣ್ಣ ಕಣಗಾಲ್ ನಿರ್ದೇಶಕರಿಗೆ ವಿಶೇಷ ಗೌರವ ಮತ್ತು ಅಂತಸ್ತನ್ನು ತಂದುಕೊಟ್ಟಂತೆ,



ನಟಿಯರಿಗೆ ಉನ್ನತ ಸ್ಥಾನವನ್ನು ಕಲ್ಪಿಸಿಕೊಟ್ಟವರು ಕಲ್ಪನಾ. ಒಂದು ದಶಕದ ಕಾಲ ಕನ್ನಡ ಚಿತ್ರರಂಗದಲ್ಲಿ ವಿಜೃಂಭಿಸಿದರು. ಮಂಗಳೂರಿನಲ್ಲಿ ಹುಟ್ಟಿ ಬೆಳೆದರು. ಪಂತುಲುರವರು ಪದ್ಮಿನಿ ಪಿಕ್ಚರ್ಸ್ ಲಾಂಛನದಡಿ ನಿರ್ಮಿಸಿದ 'ಸಾಕುಮಗಳು' ಚಿತ್ರದಿಂದ ಬೆಳ್ಳಿತೆರೆಯನ್ನು ಪ್ರವೇಶಿಸಿದರು. ಕನ್ನಡ ಚಿತ್ರರಂಗದ ಮೈಲಿಗಲ್ಲುಗಳಲ್ಲೊಂದಾದ ಪುಟ್ಟಣ್ಣ ನಿರ್ದೇಶನದ 'ಬೆಳ್ಳಿಮೋಡ' ಚಿತ್ರ ಕಲ್ಪನಾರವರ ತಾರಾಜೀವನಕ್ಕೆ ಬಹಳ ದೊಡ್ಡ ತಿರುವು ನೀಡಿತು. ಕನ್ನಡ ಚಿತ್ರಗಳಲ್ಲಿ ಸ್ತ್ರೀ ಪಾತ್ರಗಳು ಪ್ರಧಾನವಾಗುವುದಕ್ಕೆ ಈ ಚಿತ್ರ ನಾಂದಿ ಹಾಡಿತೆಂದರೂ ಉತ್ಪ್ರೇಕ್ಷೆಯಲ್ಲ. ಕಲ್ಪನಾ ಅನೇಕ ವೈವಿಧ್ಯಮಯ ಪಾತ್ರಗಳಲ್ಲಿ ನಟಿಸಿ ಕರ್ನಾಟಕದಲ್ಲಿ ಮನೆಮಾತಾಗಿ ಅಭಿಮಾನಿಗಳಿಂದ 'ಮಿನುಗುತಾರೆ' ಎಂಬ ಬಿರುದನ್ನು ಪಡೆದರು. ಅವರ ಬಹುಮುಖ ಪ್ರತಿಭೆ, ಮಾತುಗಾರಿಕೆ, ಅಸಾಂಪ್ರದಾಯಿಕ ಜೀವನ ಶೈಲಿ ಆಕೆಗೆ ಪ್ರಚಂಡ ಜನಪ್ರಿಯತೆಯನ್ನು ತಂದುಕೊಟ್ಟವು. ಆಕೆಯ ಪ್ರತಿಭೆಯನ್ನು ವಿಶೇಷವಾಗಿ ಎತ್ತಿ ಹಿಡಿದ

ಅವರು ಸ್ವತಂತ್ರ ಸಂಕಲನಕಾರರಾಗಿ ಕಾರ್ಯನಿರ್ವಹಿಸಿದ ಚಿತ್ರ. ೧೯೬೧ರಲ್ಲಿ ನಿರ್ದೇಶಕ ಎಂ.ಆರ್.ವಿಠಲ್ ಅವರ ಸಂಪರ್ಕ. ಬಹುತೇಕ ಅವರ ಎಲ್ಲ ಚಿತ್ರಗಳಲ್ಲೂ ಅವಕಾಶ. 'ನಕ್ಕರೆ ಅದೇ ಸ್ವರ್ಗ', 'ಮಿಸ್ ಲೀಲಾವತಿ', 'ಸ್ವರ್ಣ ಗೌರಿ', 'ಕರುಳಿನ ಕರೆ', 'ಮಾರ್ಗದರ್ಶಿ' ಮೊದಲಾದ ಚಿತ್ರಗಳಲ್ಲಿ ಸಂಕಲನಕಾರರಾಗಿ ಸೇವೆ. ೧೯೬೮-೬೯ರಲ್ಲಿ 'ಮಾರ್ಗದರ್ಶಿ', ೧೯೬೯-೭೦ರಲ್ಲಿ 'ಕರುಳಿನ ಕರೆ' ಚಿತ್ರಗಳಲ್ಲಿನ ಸಂಕಲನಕ್ಕಾಗಿ ರಾಜ್ಯಸರ್ಕಾರದ ಅತ್ಯುತ್ತಮ ಸಂಕಲನಕಾರ ಪ್ರಶಸ್ತಿ ಪಡೆದರು.

### ಕೃಷ್ಣ.ಜೆ.ಜಿ

ಕನ್ನಡ ಚಿತ್ರರಂಗದ ಯುವ ಛಾಯಾಗ್ರಾಹಕರು. ೧೪-೧೦-೧೯೫೬ರಂದು ಜಾವಗಲ್‌ನಲ್ಲಿ ಜನಿಸಿದರು. ಈವರೆಗೆ ಸುಮಾರು ೬೫ಕ್ಕೂ ಹೆಚ್ಚು ಚಿತ್ರಗಳಿಗೆ ದುಡಿದಿದ್ದಾರೆ. 'ಯುದ್ಧಕಾಂಡ', 'ಇಂದ್ರಜಿತ್', 'ಕದನ', 'ಗಗನ', 'ನೀನು ನಕ್ಕರೆ ಹಾಲು ಸಕ್ಕರೆ', 'ಪೊಲೀಸ್ ಸ್ಟೋರಿ' ಹಾಗೂ 'ನನ್ನಾಸೆಯ ಹೂವೆ' ಮೊದಲಾದವು ಇವರು ಛಾಯಾಗ್ರಹಣ ನೀಡಿರುವ



ಚಿತ್ರಗಳು. 'ಕರ್ನಾಟಕ ಪೊಲೀಸ್' ಚಿತ್ರದಿಂದ ನಿರ್ದೇಶಕರಾಗಿಯೂ ಪರಿಚಿತರಾದ ಇವರು ನಿರ್ದೇಶಿಸಿದ ಮತ್ತೊಂದು ಚಿತ್ರ 'ಟಿಕೆಟ್ ಟಿಕೆಟ್'ಗ. ೧೯೯೯-೨೦೦೦ನೇ ಸಾಲಿಗೆ 'ನನ್ನಾಸೆಯ ಹೂವೆ' ಚಿತ್ರದ ಉತ್ತಮ ಛಾಯಾ ಗ್ರಹಣಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ.

### ಕೃಷ್ಣಕುಮಾರ್ (ಧಾರವಾಡ)

ಐವತ್ತು-ಎಂಬತ್ತರ ದಶಕದಲ್ಲಿ ನೃತ್ಯ ನಿರ್ದೇಶಕರಾಗಿ ಖ್ಯಾತರಾದವರು. ಧಾರವಾಡದಲ್ಲಿ ಜನಿಸಿದ ಇವರು ನೃತ್ಯದಲ್ಲಿ ಆಸಕ್ತಿ ಹೊಂದಿದ್ದು ಸಾಕಷ್ಟು ಪರಿಶ್ರಮದಿಂದ ಆ ವಿಭಾಗದಲ್ಲಿ



ಅನುಭವಗಳಿಸಿ ಚಿತ್ರರಂಗ ಪ್ರವೇಶಿಸಿದರು. 'ಸಂಘರ್ಷ', 'ವೀರ ಸಿಂಧೂರ ಲಕ್ಷ್ಮಣ', 'ದೇವರೆ ದಿಕ್ಕು', 'ನಾಗಕನ್ಯೆ', 'ದುಡ್ಡೇದೊಡ್ಡಪ್ಪ', 'ರಂಗನಾಯಕಿ', 'ಗಂಗೆಗೌರಿ' ಮುಂತಾದ ಚಿತ್ರಗಳಿಗೆ ನೃತ್ಯ ನಿರ್ದೇಶನ ಮಾಡಿದ್ದಾರೆ.

### ಕೃಷ್ಣಕುಮಾರಿ

೧೯೫೪ರಲ್ಲಿ ಕೆಂಪರಾಜ ಅರಸರ



'ಜಲದುರ್ಗ' ಚಿತ್ರದ ಮೂಲಕ ಕನ್ನಡ ಚಿತ್ರರಂಗಕ್ಕೆ ಬಂದ ಕೃಷ್ಣಕುಮಾರಿ ತೆಲುಗು, ತಮಿಳು ಚಿತ್ರರಂಗಗಳ ಸುಪ್ರಸಿದ್ಧ ನಟಿ. ತೆಲುಗು-ತಮಿಳು-ಕನ್ನಡ ಚಿತ್ರಗಳ ಸುಪ್ರಸಿದ್ಧ ನಟಿ ಸಾಹುಕಾರು ಜಾನಕಿ ಇವರ ಹಿರಿಯ ಸಹೋದರಿ. ಕನ್ನಡದಲ್ಲಿ ಅವರಿಗೆ ಹೆಸರು ತಂದ ಚಿತ್ರಗಳು 'ಶ್ರೀಶೈಲ ಮಹಾತ್ಮೆ', 'ಸ್ವರ್ಣಗೌರಿ' ಹಾಗೂ 'ಭಕ್ತ ಕನಕದಾಸ', ೧೯೬೮ರಲ್ಲಿ ಬಿಡುಗಡೆಯಾದ 'ನಮ್ಮ ಊರು' ಕೃಷ್ಣಕುಮಾರಿಯವರ ಕೊನೆಯ ಕನ್ನಡ ಚಿತ್ರ. ಮುಂದೆ ತೆಲುಗು ಚಿತ್ರರಂಗದಲ್ಲಿಯೇ ಹೆಚ್ಚು ತೊಡಗಿಸಿಕೊಂಡ ಕೃಷ್ಣಕುಮಾರಿ ಅನಂತರ ಚಿತ್ರರಂಗದಿಂದ ನಿವೃತ್ತರಾಗಿ ಬೆಂಗಳೂರಿನಲ್ಲಿ ನೆಲೆಸಿದರು.

### ಕೃಷ್ಣ ಟೆನ್ನಿಸ್

೬೦ರ ದಶಕದಲ್ಲಿ ಕನ್ನಡ ಚಿತ್ರರಂಗ ಪ್ರವೇಶಿಸಿದ ಹಾಸ್ಯ ನಟ. ೬೦-೭೦ರ



ದಶಕದಲ್ಲಿ ತಮ್ಮ ಹಾಸ್ಯದ ಹೊನಲನ್ನು ಹರಿಸಿ ಚಿತ್ರಪ್ರೇಮಿಗಳನ್ನು ರಂಜಿಸಿದ ನರಸಿಂಹರಾಜು, ಬಾಲಕೃಷ್ಣರ ನಂತರ ಮುಸುರಿ ಕೃಷ್ಣಮೂರ್ತಿ, ದ್ವಾರಕೀಶ್, ಎನ್.ಎಸ್.ರಾವ್ ಅವರಾದರೆ, ನಂತರ ತಮ್ಮ ಡೈಲಾಗ್ ಹೇಳುವ ವೈಖರಿಯಿಂದಲೇ ಬಹಳ ಬೇಗ ಜನಪ್ರಿಯರಾದ ಟೆನ್ನಿಸ್‌ಕೃಷ್ಣ ಒಂದೆರಡು ಚಿತ್ರಗಳಲ್ಲಿ ನಾಯಕನಟರಾಗಿಯೂ ಅಭಿನಯಿಸಿದರು. 'ಅಪ್ಪ ನಂಜಪ್ಪ ಮಗ ಗುಂಜಪ್ಪ'ದ ದ್ವಿಪಾತ್ರ ಹಾಗೂ 'ಛಾಲೆಂಜ್', 'ಜೊಂಬಾಟ್‌ಹೆಂಡ್ತಿ', 'ಚಿನ್ನ ನೀ ನಗುತಿರು', 'ಸಿ.ಬಿ.ಐ.ಶಿವ' ಮೊದಲಾದ ಚಿತ್ರಗಳಲ್ಲಿ ನಟಿಸಿದ್ದಾರೆ. ಮೂಲತಃ ರಂಗನಟರಾದ ಕೃಷ್ಣ ಹಾಸ್ಯದ ಮೋಡಿಯಿಂದ ಹೆಸರಾಗಿದ್ದಾರೆ.



### ಕೃಷ್ಣನ್ ವಿ.ಪಿ

ಪ್ರಶಸ್ತಿ ವಿಜೇತ ಸಂಕಲನಕಾರ. ಕೇರಳದ ಚಿರಯಿನ್ ಕೀಳ ಗ್ರಾಮದಲ್ಲಿ ಜನನ. ತಂದೆ ವಾಸುದೇವನ್ ಪ್ರಾಥಮಿಕ ಶಾಲಾ ಅಧ್ಯಾಪಕ. ತಾಯಿ ಜಾನಕಿ ಅಮ್ಮಾಳ್. ಏಳನೇ ತರಗತಿಯವರೆಗೆ ಶಿಕ್ಷಣ. ಮದರಾಸಿನ ಪ್ರಗತಿ ಸ್ಟುಡಿಯೋದಲ್ಲಿ ಸಂಕಲನ ಕಲೆಯ ಸಹವಾಸ. ಚಿತ್ರರಂಗದಲ್ಲಿ ಸಂಕಲನಕಾರನಾಗಿ ಪ್ರವೇಶ. ೧೯೬೬-೬೭ರಲ್ಲಿ 'ಬೆಳ್ಳಿ ಮೋಡ' ಚಿತ್ರದ ಸಂಕಲನಕ್ಕಾಗಿ, ನಂತರ ೧೯೭೪-೭೫ರಲ್ಲಿ 'ಉಪಾಸನೆ' ಚಿತ್ರದ ಸಂಕಲನಕ್ಕಾಗಿ ಎರಡು ಬಾರಿ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ.

### ಕೃಷ್ಣಪ್ರಸಾದ್.ಆರ್.ಎನ್

ಕನ್ನಡ ಚಿತ್ರರಂಗದ ಹಿರಿಯ ವ್ಯಕ್ತಿ



ಪದ್ಮಶ್ರೀ ಆರ್.ನಾಗೇಂದ್ರರಾವ್ ಅವರ ಮಗ. ಹೆಸರಾಂತ ಛಾಯಾಗ್ರಾಹಕರಲ್ಲಿ ಒಬ್ಬರು. ಬಿ.ಎಸ್‌ಸಿ., ಪದವಿಯನ್ನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ, ಸಿನಿಮಾಟೋಗ್ರಫಿಯಲ್ಲಿ ಡಿಪ್ಲೊಮಾವನ್ನು ಬೆಂಗಳೂರಿನ ಎಸ್.ಜೆ.ಪಾಲಿಟೆಕ್ನಿಕ್‌ನಲ್ಲಿ ಪಡೆದರು. ಎ.ವಿ.ಎಂ ಸ್ಟುಡಿಯೋದ ಮುಖ್ಯ ಕ್ಯಾಮರಾಮನ್ ಟಿ.ಮುತ್ತುಸ್ವಾಮಿಯವರ ಬಳಿ ತರಬೇತಿ ಪಡೆದು ೧೯೫೭ರಲ್ಲಿ ಸ್ವತಂತ್ರ ಛಾಯಾಗ್ರಾಹಕರಾಗಿ ಚಿತ್ರರಂಗ ಪ್ರವೇಶಿಸಿದರು. ಆರ್.ಎನ್.ಆರ್ ಪ್ರೊಡಕ್ಷನ್ಸ್ ತಯಾರಿಕೆಯ ಎಲ್ಲಾ ವಿಭಾಗಗಳಲ್ಲೂ ಕೆಲಸ ಮಾಡಿದ್ದಾರೆ. ಇವರ ಛಾಯಾಗ್ರಹಣದ ಪ್ರಥಮ ಚಿತ್ರ 'ಪ್ರೇಮದ ಪುತ್ರಿ'. 'ಬೆಳ್ಳಿ ಮೋಡ' ಚಿತ್ರದ ಛಾಯಾಗ್ರಹಣಕ್ಕಾಗಿ ೧೯೬೭-೬೮ನೇ ಸಾಲಿನ ರಾಜ್ಯಪ್ರಶಸ್ತಿ. ಹಲವು ಚಿತ್ರಗಳಲ್ಲಿ ಛಾಯಾಗ್ರಾಹಕರಾಗಿ ಕೆಲಸ ಮಾಡಿದರಲ್ಲದೆ, ನಿರ್ದೇಶನ ಕ್ಷೇತ್ರದಲ್ಲಿಯೂ ತೊಡಗಿಕೊಂಡರು. ಕನ್ನಡದಲ್ಲಿ ಆರ್ವೋ-ಎನ್‌ಸಿ-೧-ವರ್ಣ ನೆಗೆಟಿವ್ ಫಿಲಂಅನ್ನು ಬಳಸಿ ಛಾಯಾಗ್ರಹಣ ಮಾಡಿದ ಮೊದಲಿಗರು. 'ನಗುವ ಹೂವು' ಚಿತ್ರದ ನಿರ್ದೇಶನಕ್ಕಾಗಿ ಉತ್ತಮ ಪ್ರಾಂತೀಯ ಭಾಷಾ ಚಿತ್ರವೆಂದು ಬೆಳ್ಳಿ ಪದಕ ಪ್ರಶಸ್ತಿ, ನಂತರ ೧೯೮೦-೮೧ನೇ ಸಾಲಿನಲ್ಲಿ 'ಮರೆಯದ ಹಾಡು' ಚಿತ್ರದ ವರ್ಣ ಛಾಯಾಗ್ರಹಣಕ್ಕಾಗಿ ಎರಡನೇ ಬಾರಿ ರಾಜ್ಯ ಪ್ರಶಸ್ತಿ ಪಡೆದರು. ಛಾಯಾಗ್ರಹಣ ತಂತ್ರ ಕುರಿತಂತೆ ಕನ್ನಡದಲ್ಲಿ ಪುಸ್ತಕವೊಂದನ್ನು ಹೊರ ತಂದಿದ್ದಾರೆ.

### ಕೃಷ್ಣಮೂರ್ತಿ.ಕೆ.ಎಸ್

ಪ್ರತಿಭಾವಂತ ಧ್ವನಿಗ್ರಾಹಕ.



ಬೆಂಗಳೂರಿನವರು. ವಿಜ್ಞಾನ ಪದವಿಯ ನಂತರ ಪುಣೆಯ ಚಲನಚಿತ್ರ ತರಬೇತಿ ಸಂಸ್ಥೆಯಲ್ಲಿ ಧ್ವನಿಗ್ರಹಣ ಕ್ಷೇತ್ರದಲ್ಲಿ ಡಿಪ್ಲೊಮೋ ಪದವಿ ಗಳಿಸಿದರು. 'ಮಾಡಿ ಮಡಿದವರು' ಚಿತ್ರಕ್ಕೆ ಪ್ರಥಮ ಬಾರಿಗೆ ಧ್ವನಿಗ್ರಹಣ ನೀಡಿದರು. ನಂತರ 'ಚೋಮನ ದುಡಿ', 'ಹಂಸಗೀತೆ', 'ಘಟಶ್ರಾದ್ಧ', 'ಕಂಕಣ', 'ಪಲ್ಲವಿ', 'ಮಧ್ವಾಚಾರ್ಯ', 'ರಾಮಾನುಜಾಚಾರ್ಯ' ಮುಂತಾದ ರಾಷ್ಟ್ರೀಯ, ಅಂತರ ರಾಷ್ಟ್ರೀಯ ಮನ್ನಣೆ ಗಳಿಸಿದ ಚಿತ್ರಗಳಿಗೆ ಧ್ವನಿಗ್ರಾಹಕರಾಗಿ ಕಾರ್ಯನಿರ್ವಹಿಸಿದರು. ಶಂಕರ್‌ನಾಗ್ ಅವರ ಸಂಕೇತ್ ಎಲೆಕ್ಟ್ರಾನಿಕ್ಸ್‌ನಲ್ಲಿ ಬಹಳ ಕಾಲ ಕೆಲಸ ಮಾಡಿದರು. ೧೯೭೫-೭೬ರಲ್ಲಿ 'ಚೋಮನ ದುಡಿ', ೧೯೮೮-೮೯ರಲ್ಲಿ 'ತರ್ಕ', ೧೯೯೦-೯೧ರಲ್ಲಿ 'ಮಹೇಶ್ವರ' ಹಾಗೂ ೧೯೯೧-೯೨ರಲ್ಲಿ 'ಮೈಸೂರು ಮಲ್ಲಿಗೆ' ಚಿತ್ರಗಳಿಗಾಗಿ ನಾಲ್ಕು ಬಾರಿ ರಾಜ್ಯ ಸರ್ಕಾರದ ಅತ್ಯುತ್ತಮ ಧ್ವನಿಗ್ರಾಹಕ ಪ್ರಶಸ್ತಿ ಪಡೆದರು. ೧೯೯೯ರಲ್ಲಿ ವಿಧಿವಶರಾದರು.

### ಕೃಷ್ಣಮೂರ್ತಿ ಮುಸುರಿ (೧೯೩೦-೮೫)

ಖ್ಯಾತ ರಂಗಭೂಮಿ ಹಾಗೂ ಚಿತ್ರನಟ. ಮೈಸೂರು ಜಿಳೆಯ ಬೆಟ್ಟದಪುರದಲ್ಲಿ ಜನನ



(೧೯೩೦). ಬಾಲ್ಯದಲ್ಲಿಯೇ ಹಾಡುಗಾರಿಕೆ, ನಟನೆಯತ್ತ ಗಮನ. ಪ್ರೌಢಶಾಲೆಯಲ್ಲಿರುವಾಗಲೇ ಕಣಗಾಲ್ ಪ್ರಭಾಕರಶಾಸ್ತ್ರಿಗಳು ಇವರಿಗೆ ಚಾಮುಂಡೇಶ್ವರಿ ನಾಟಕ ಕಂಪೆನಿಯಲ್ಲಿ ಅವಕಾಶ ದೊರಕಿಸಿಕೊಟ್ಟರು.

ಅಂಗಡಿಯೊಂದರಲ್ಲಿ ಕುಳಿತು ಸುಶ್ರಾವ್ಯವಾಗಿ ಹಾಡುತ್ತಿದುದನ್ನು ಕೇಳಿಸಿಕೊಂಡ ಗುಬ್ಬಿ ವೀರಣ್ಣನವರು ತಮ್ಮ ನಾಟಕ ಸಂಸ್ಥೆಗೆ ಇವರನ್ನು ಸೇರಿಸಿಕೊಂಡರು. ಹಿರಣ್ಣಯ್ಯನವರ ನಾಟಕ ಕಂಪನಿಯಲ್ಲಿದ್ದಾಗ 'ವಾಣಿ' (೧೯೪೩) ಚಿತ್ರದಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ಈ ಚಿತ್ರಕ್ಕೆ ಕೊಯಮತ್ತೂರಿನಲ್ಲಿ ಚಿತ್ರೀಕರಣ ನಡೆಯುತ್ತಿದ್ದಾಗ ಮುಸುರಿ ಸುಬ್ರಹ್ಮಣ್ಯ ಅಯ್ಯರ್ ಅವರ ಸಂಗೀತ ಕಛೇರಿಯಲ್ಲಿ ಸಂಗೀತ ನೀಡಿದ ಕಾರಣ ಇವರ ಹೆಸರಿನೊಂದಿಗೆ ಮುಸುರಿ ಸೇರಿಕೊಂಡಿತು. ತಮ್ಮದೇ ನಾಟಕ ಸಂಸ್ಥೆಯನ್ನು ಕಟ್ಟಿದವರು. ಮಹಾತ್ಮ ಪಿಕ್ಚರ್ಸ್‌ನವರ ಚಿತ್ರಗಳಲ್ಲಿ ಅಭಿನಯಿಸಿದರು. ಸಿ.ವಿ.ರಾಜು ಅವರ ಬಳಿ ಇದ್ದು ಸಂಕಲನ ಕೆಲಸ ಕಲಿತರು. 'ಪಡುವಾರಳ್ಳಿ ಪಾಂಡವರು' ಚಿತ್ರದಲ್ಲಿ 'ಕನೆಕ್ಷನ್ ಕಾಳಪ್ಪ'ನಾಗಿ ಅಭಿನಯಿಸಿದ ನಂತರ ಹೆಚ್ಚು ಬೇಡಿಕೆಯ ಹಾಸ್ಯ-ಖಳನಟರಾದರು. 'ನಂಬರ್ ಐದು ಎಕ್ಕ' (೧೯೮೧) ಚಿತ್ರವನ್ನು ನಿರ್ಮಿಸಿದರು. ಸುಮಾರು ೧೫೦ ಚಿತ್ರಗಳಲ್ಲಿ ಅಭಿನಯಿಸಿದರು. ಇವರ ಮಕ್ಕಳೂ ಚಿತ್ರರಂಗದಲ್ಲಿ ಮುಂದುವರಿದಿದ್ದಾರೆ. ತಂದೆಯ ಬಗ್ಗೆ 'ನಟ ಚಾಣಕ್ಯ ಮುಸುರಿ' ಸಾಕ್ಷ್ಯಚಿತ್ರ ತಯಾರಿಸಿದ್ದಾರೆ.

### ಕೃಷ್ಣಮೂರ್ತಿ ಹುಣಸೂರು (೧೯೧೪-೮೯)



ಬಾಲ್ಯದಿಂದಲೂ ನಾಟಕದಲ್ಲಿ ಒಲವು. ನಾಟಕಗಳಲ್ಲಿ ನಟಿಸುವ ಆಸೆ ಹೊತ್ತು, ಮನೆ ಬಿಟ್ಟು ಮುಂಬಯಿಗೆ ಹೋದರು. ಅಲ್ಲಿ ಬಾಲ ಗಂಧರ್ವ ನಾಟಕ ಕಂಪನಿಯನ್ನು ಸೇರಿದರು. ಮೊದ ಮೊದಲು ಬಾಂಬೆ ಟಾಕೀಸ್ ಚಿತ್ರಗಳಲ್ಲಿ ಸಣ್ಣ ಪುಟ್ಟ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಅಲ್ಲಿಯ ವಾತಾವರಣ ಮನಸ್ಸಿಗೆ ಸರಿ ಹೊಂದಲಿಲ್ಲ. ಕಾರಣ ಪುನಃ ಹುಣಸೂರರು ತವರಿಗೆ ಹಿಂದಿರುಗಿ ಪೀರ್ ಕಂಪನಿ, ವರದಾಚಾರ್ ಕಂಪನಿ ಹಾಗೂ ಗುಬ್ಬಿ ಕಂಪನಿಗಳಲ್ಲಿ ಪಾತ್ರ ವಹಿಸುತ್ತ ಬರವಣಿಗೆಯ ಕಡೆ ಹೆಚ್ಚು ಗಮನ ನೀಡಿದರು. 'ಧರ್ಮ ರತ್ನಾಕರ', 'ಗೌತಮ ಬುದ್ಧ', 'ರಾಜಾ ಗೋಪಿಚಂದ್' ಮುಂತಾದ ನಾಟಕಗಳನ್ನು ಬರೆದರು. 'ಧರ್ಮ ರತ್ನಾಕರ' ಬಹಳ ಯಶಸ್ವಿಯಾಯಿತು. ಅವರ ಸಂಭಾಷಣೆ ಮೆಚ್ಚುಗೆ ಗಳಿಸಿತು. ಅಲ್ಲಿಂದ ಮುಂದೆ ತಮ್ಮ ಲೇಖನಿಗೆ ಪ್ರಾಮುಖ್ಯತೆ ನೀಡಿ ಮುಂದುವರೆದರು. ನಿರ್ಮಾಪಕರುಗಳಾದ ಶಂಕರ್‌ಸಿಂಗ್ ಮತ್ತು ವಿಠಲಾಚಾರ್ಯ ಅವರ ಸಂಪರ್ಕ ಹೊಂದಿದ ಮೇಲೆ ಅವರ ಎಲ್ಲಾ ಚಿತ್ರಗಳಿಗೂ ಸಂಭಾಷಣೆ ಮತ್ತು ಗೀತೆಗಳನ್ನು ರಚಿಸಿ ಸಮರ್ಥ ಸಾಹಿತಿಯೆನಿಸಿದರು. ಭಕ್ತಿ ಪ್ರಧಾನ, ಚಾರಿತ್ರಿಕ, ಪೌರಾಣಿಕ, ಜಾನಪದ ಚಿತ್ರಗಳಲ್ಲಂತೂ ಅವರ ಸಂಭಾಷಣೆಯೇ ಜೀವಾಳ. ಆಡುಭಾಷೆಯನ್ನು ಚಿತ್ರರಂಗಕ್ಕೆ ಪರಿಚಯಿಸಿದವರು ಹುಣಸೂರರು. 'ಜಗನ್ಮೋಹಿನಿ', 'ಕನ್ಯಾದಾನ', 'ವೀರಸಂಕಲ್ಪ', 'ಬಂಗಾರದ ಮನುಷ್ಯ', 'ಬೂತಯ್ಯನ ಮಗ ಅಯ್ಯು', 'ಸತ್ಯ ಹರಿಶ್ಚಂದ್ರ', 'ಬಬ್ರುವಾಹನ', 'ಭಕ್ತ ಕುಂಬಾರ' ಮುಂತಾದ ಅನೇಕ ಚಿತ್ರಗಳಲ್ಲಿ ಕನ್ನಡ ಚಿತ್ರಪ್ರೇಮಿಗಳು ಅವರ ಮೊನಚು ಮಾತುಗಳಿಗೆ ಸ್ಪಂದಿಸಿ ಮೆಚ್ಚಿಕೊಂಡರು. ಅವರ ಗೀತರಚನೆಯೂ ಅಷ್ಟೇ ಸೊಗಸಾಗಿರುತ್ತಿತ್ತು. ಎಲ್ಲಾ ದರ್ಜೆಯ ಪ್ರೇಕ್ಷಕರನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯ ರಚಿಸುತ್ತಿದ್ದರು, ಚಿತ್ರ ನಿರ್ದೇಶಿಸುತ್ತಿದ್ದರು. ಹುಣಸೂರರು 'ರತ್ನ ಮಂಜರಿ' ಚಿತ್ರದ ಮೂಲಕ ನಿರ್ಮಾಪಕ-ನಿರ್ದೇಶಕರಾದರು. 'ವೀರಸಂಕಲ್ಪ' ಚಿತ್ರ ನಿರ್ಮಿಸಿ, ನಿರ್ದೇಶಿಸಿ, ನಟಿಸಿದರು. ಹಲವಾರು ನಟ-ನಟಿಯರನ್ನು ಚಿತ್ರರಂಗಕ್ಕೆ ಪರಿಚಯಿಸಿದರು. ಹುಣಸೂರರು ನಿರ್ದೇಶಿಸಿದ 'ಸತ್ಯ ಹರಿಶ್ಚಂದ್ರ'ದಿಂದ 'ಭಕ್ತ ಸಿರಿಯಾಳ'ದವರೆಗೆ ಜನಪ್ರಿಯತೆ ಅವರನ್ನು ಹಿಂಬಾಲಿಸಿತು. ರಾಜ್ಯ ಸರ್ಕಾರದ ಪ್ರತಿಷ್ಠಿತ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ಮೊಟ್ಟ ಮೊದಲು ಪಡೆದವರು ಹುಣಸೂರರು. ಜನವರಿ ೧೩, ೧೯೮೯ ರಂದು ತಮ್ಮ ೭೫ನೆಯ ವಯಸ್ಸಿನಲ್ಲಿ ವಿಧಿವಶರಾದರು.

### ಕೃಷ್ಣರಾಜ್.ಪಿ

ಕನ್ನಡ ಚಿತ್ರರಂಗದ ನಿರ್ಮಾಪಕ, ನಟ. ಕೋಲಾರದಲ್ಲಿ ಹುಟ್ಟಿದ ಕೃಷ್ಣರಾಜ್ ನಿರ್ಮಿಸಿದ ಪ್ರಥಮ ಚಿತ್ರ 'ಸ್ಪಂದನ' ೧೯೭೭-೭೮ನೇ ಸಾಲಿನ ರಾಜ್ಯ ಸರ್ಕಾರದ ದ್ವಿತೀಯ 'ಅತ್ಯುತ್ತಮ ಚಿತ್ರ ಪ್ರಶಸ್ತಿ' ಜೊತೆಗೆ ಒಟ್ಟಾರೆಯಾಗಿ ಐದು ಪ್ರಶಸ್ತಿಗಳನ್ನು ಗಳಿಸಿತ್ತು. ಹತ್ತಾರು ಚಿತ್ರಗಳನ್ನು ನಿರ್ಮಿಸಿರುವ ಇವರು ೧೨ ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿದ್ದಾರೆ. ಹದಿನೈದು ವರ್ಷಗಳ ಕಾಲ ರಂಗಭೂಮಿಯಲ್ಲಿ ನಟರಾಗಿ ದುಡಿದಿದ್ದಾರೆ. ಜನಪ್ರಿಯ ಯಶಸ್ವೀ ಚಿತ್ರಗಳನ್ನು ನಿರ್ಮಿಸಿದ ಪ್ರತಿಷ್ಠಿತ ನಿರ್ಮಾಪಕರು. ಅವರ ಮತ್ತೊಂದು ನಿರ್ಮಾಣ 'ಅಭಿಮಾನ' ಚಿತ್ರಕ್ಕೆ ೧೯೮೫-೮೬ರ ರಾಜ್ಯ ಸರ್ಕಾರದ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಲಭಿಸಿದೆ. ಮೋಹನ ಮುರಳಿ ಪ್ರೊಡಕ್ಷನ್ಸ್ ಲಾಂಛನದಲ್ಲಿ 'ಅವಳಿ-ಜವಳಿ', 'ಹದಿನ ಕಣ್ಣು',



'ವಜ್ರಮುಷ್ಟಿ' ಮೊದಲಾದ ಜನಪ್ರಿಯ ಚಿತ್ರಗಳನ್ನು ನಿರ್ಮಿಸಿದ್ದಾರೆ. 'ಕನ್ನಡ ಚಲನಚಿತ್ರ ನಿರ್ಮಾಪಕ ಸಂಘ'ದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ.

### ಕೃಷ್ಣಶಾಸ್ತ್ರಿ .ಹೆಚ್

'ಸಂಸಾರನೌಕ' (೧೯೩೬) ಚಿತ್ರದ ಸಿದ್ದನ ಪಾತ್ರದ ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದ ಹೆಚ್.ಕೃಷ್ಣಶಾಸ್ತ್ರಿ ರಂಗಭೂಮಿ,



ಚಿತ್ರರಂಗಗಳೆರಡರಲ್ಲೂ ಸೇವೆ ಸಲ್ಲಿಸಿರುವ ಅಭಿಜಾತ ಕಲಾವಿದ. ಹಿರಿಯ ಸಹೋದರ ಹೆಚ್.ಆರ್.ಶಾಸ್ತ್ರಿ ಮತ್ತು ಕಿರಿಯ ಸಹೋದರ ಹೆಚ್.ಕೆ.ವಿಜಯನಾರಸಿಂಹ (ಚಿತ್ರ ಸಾಹಿತಿ) ಅವರೊಡಗೂಡಿ ಮದರಾಸಿನಲ್ಲಿ ಅನೇಕ ವರ್ಷಗಳವರೆಗೆ ನೆಲೆಸಿ ನೂರಾರು ಚಿತ್ರಗಳಲ್ಲಿ ಅಭಿನಯಿಸಿದ್ದರು. 'ಸಂಸಾರನೌಕ' ಚಿತ್ರದ ನಂತರ ಮತ್ತೆ ವೃತ್ತಿ ರಂಗಭೂಮಿಗೆ ಹಿಂದಿರುಗಿ ಸುಬ್ಬಯ್ಯ ನಾಯ್ಡು ಅವರ ಕಂಪೆನಿಯಲ್ಲಿ ನಟ ಹಾಗೂ ಹಾರ್ಮೋನಿಯಂ ಮೇಷ್ಟ್ರು ಆಗಿ ಕೆಲಸ ಮಾಡುತ್ತಿದ್ದಾಗ ಅಲ್ಲಿ ನಟರಾಗಿದ್ದ ಮುತ್ತುರಾಜ್ (ಡಾ.ರಾಜಕುಮಾರ್) ಅವರಿಗೆ ಸಂಗೀತ ಗುರುಗಳಾಗಿದ್ದರು. ರಂಗಭೂಮಿಯಲ್ಲಿ ಒಳ್ಳೆಯ ನಟರಾಗಿದ್ದ ಶಾಸ್ತ್ರಿಗಳು ಚಿತ್ರರಂಗದಲ್ಲಿ ಸಣ್ಣ ಪುಟ್ಟ ಪಾತ್ರಗಳಿಗೇ ತೃಪ್ತಿ ಪಟ್ಟುಕೊಳ್ಳಬೇಕಾದಂಥ ಪರಿಸ್ಥಿತಿ ಬಂದದ್ದು ದುರ್ದೈವ. ಕನ್ನಡ ವೃತ್ತಿರಂಗಭೂಮಿ ಅವನತಿಯ ಹಾದಿಯಲ್ಲಿದ್ದಾಗ ಚಿತ್ರರಂಗದಲ್ಲಿ ಏನನ್ನಾದರೂ ಸಾಧಿಸ ಬಹುದೆಂಬ ನಿರೀಕ್ಷೆಯಿಂದ ಚಿತ್ರರಂಗಕ್ಕೆ ಬಂದ ಬಹುತೇಕ ಕಲಾವಿದರಿಗೆ ಒದಗಿ ಬಂದಂಥ ಸ್ಥಿತಿ ಇದು.

### ಕೃಷ್ಣಸ್ವಾಮಿ.ಎಂ.ವಿ.ಕೆ.



ಚಿತ್ರರಂಗವೆಂದರೆ ಬುದ್ಧಿಜೀವಿಗಳು ಮೂಗು ಮುರಿಯುತ್ತಿದ್ದ ಕಾಲದಲ್ಲಿ ಪದವೀಧರರಾದ ಕೃಷ್ಣಸ್ವಾಮಿಯವರು 'ಭಾರತಿ' (೧೯೪೯) ಚಿತ್ರದಲ್ಲಿ ನಟಿಸುವ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದರು. ಪ್ಯಾರಿಸ್‌ನಲ್ಲಿ ಚಿತ್ರರಂಗದ ಬಗ್ಗೆ ವ್ಯಾಸಂಗ ಮಾಡಿ, ಶಿಕ್ಷಣ ಪಡೆದು ಬಂದವರು. ಚಲನಚಿತ್ರ ಕಲೆ ಮತ್ತು ತಾಂತ್ರಿಕತೆ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲವರು. ದೇಶದ ಅನೇಕ ಚಿತ್ರೋತ್ಸವಗಳಲ್ಲಿ ಭಾಗಿಯಾಗಿ ಚಿತ್ರರಂಗದ ಚರಿತ್ರೆಯನ್ನು ಅನೇಕ ವಿಚಾರಗೋಷ್ಠಿಗಳಲ್ಲಿ ಪ್ರತಿಪಾದಿಸಿದವರು. ರಾಬರ್ಟ್ ರೋಸೆಲಿನಿ ಯವರಂತಹ ಅಂತಾರಾಷ್ಟ್ರೀಯ ಖ್ಯಾತಿಯ ಚಿತ್ರ ನಿರ್ದೇಶಕರೊಂದಿಗೆ ಕೆಲಸ ಮಾಡಿ ಪಳಗಿದವರು. ಕೇಂದ್ರ ಚಲನಚಿತ್ರೋತ್ಸವ ನಿರ್ದೇಶನಾಲಯದ ಮುಖ್ಯಸ್ಥರಾಗಿ, ಫಿಲಂ ಡಿವಿಷನ್‌ನ ಹಿರಿಯ ಅಧಿಕಾರಿಯಾಗಿ ರಾಷ್ಟ್ರದಾದ್ಯಂತ ಹೆಸರು ಗಳಿಸಿದವರು. 'ಸುಬ್ಬಾಶಾಸ್ತ್ರಿ' (೧೯೬೬), 'ಪಾಪ-ಪುಣ್ಯ' (೧೯೭೧) ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ರಾಜ್ಯ ಸರ್ಕಾರಕ್ಕೆ ಹಾಗೂ ಖಾಸಗಿ ಸಂಸ್ಥೆಗಳಿಗೆ ಅನೇಕ ಸಾಕ್ಷ್ಯಚಿತ್ರಗಳನ್ನು ತಯಾರಿಸಿ ಕೊಟ್ಟಿರುತ್ತಾರೆ.

### ಕೃಷ್ಣ ಹೊನ್ನವಳ್ಳಿ

ರಾಜಕುಮಾರ್ ಕುಟುಂಬ ನಿರ್ಮಿಸುವ ಎಲ್ಲ ಚಿತ್ರಗಳಲ್ಲಿಯೂ ತಪ್ಪದೇ ಅಭಿನಯಿಸಿಕೊಂಡು ಬರುತ್ತಿದ್ದು ಇತರ ಅನೇಕ ಚಿತ್ರಗಳಲ್ಲಿಯೂ ಹಾಸ್ಯ ಪಾತ್ರಗಳಲ್ಲಿ ಜನಪ್ರಿಯತೆ ಗಳಿಸಿಕೊಂಡು ಬಂದಿರುವ ಪೋಷಕನಟ ಹೊನ್ನವಳ್ಳಿ ಕೃಷ್ಣ. ಕನ್ನಡ



ಚಿತ್ರರಂಗವನ್ನು ಪ್ರವೇಶಿಸಿದ್ದು ೧೯೭೦ರಲ್ಲಿ, 'ನ್ಯಾಯವೇ ದೇವರು' ಚಿತ್ರದ ಮೂಲಕ. ಇವರು ಇದುವರೆಗೆ ಅಭಿನಯಿಸಿರುವ ಚಿತ್ರಗಳ ಸಂಖ್ಯೆ ೨೬೦ನ್ನು ಮೀರಿದೆ. ರಂಗಭೂಮಿಯಲ್ಲಿಯೂ ಪರಿಣತರಾದ ಕೃಷ್ಣ ಅವರು ೧೨೫ಕ್ಕೂ ಹೆಚ್ಚು ನಾಟಕಗಳಲ್ಲಿ ನಟಿಸಿ, ೧೫ ಹಾಸ್ಯ ನಟರನ್ನು ಕೂಡಿಸಿ ಹೊನ್ನವಳ್ಳಿ ಮಿತ್ರಮಂಡಳಿ ಎಂಬ ತಂಡವನ್ನು ಕಟ್ಟಿದ್ದಾರೆ. ಸುಮಾರು ೪೦ ಚಿತ್ರಗಳಿಗೆ ಸಹ ನಿರ್ದೇಶಕರಾಗಿಯೂ ದುಡಿದಿರುವ ಕೃಷ್ಣ ಅಭಿನಯಿಸಿರುವ ಕೆಲವು ಪ್ರಮುಖ ಚಿತ್ರಗಳು 'ದಾರಿ ತಪ್ಪಿದ ಮಗ', 'ಬಡವರ ಬಂಧು', 'ಶ್ರುತಿ', 'ನಂಜುಂಡಿ ಕಲ್ಯಾಣ', 'ಗಜಪತಿ ಗರ್ವಭಂಗ', 'ಜೀವನ ಚೈತ್ರ', 'ದೇವತಾ ಮನುಷ್ಯ', 'ಸ್ವಸ್ತಿಕ್', 'ಗಣೇಶನ ಮದುವೆ', 'ವಸಂತ ಕಾವ್ಯ' ಮತ್ತು ಶಬ್ದವೇಧಿ'.

### ಕೃಷ್ಣಾಚಾರ್.ಕೆ

ಕಲಾನಿರ್ದೇಶಕರು. ಮೈಸೂರಿನಲ್ಲಿ ೧೯೪೮ರಲ್ಲಿ ಜನಿಸಿದರು. ಎಸ್.ಎಸ್.ಎಲ್.ಸಿ ವರೆಗೆ ವಿದ್ಯಾಭ್ಯಾಸ. ಪ್ರೀಮಿಯರ್ ಸ್ಟುಡಿಯೋದಲ್ಲಿ ಕಾರ್ಪೆಂಟರ್ ಆಗಿ ಕೆಲಸಕ್ಕೆ ಸೇರಿದ ಕೃಷ್ಣಾಚಾರ್ ಸಹಾಯಕ ಕಲಾನಿರ್ದೇಶಕರಾಗಿ ಸುಮಾರು



೨೦ ಚಿತ್ರಗಳಲ್ಲಿ ಕಾರ್ಯ ನಿರ್ವಹಿಸಿ ನಂತರ ಸ್ವತಂತ್ರ ಕಲಾನಿರ್ದೇಶಕರಾಗಿ ಸುಮಾರು ೭೦ ಚಿತ್ರಗಳಿಗೆ ದುಡಿದಿದ್ದಾರೆ. 'ರಾಣಿ ಮಹಾರಾಣಿ', 'ನಾನು ನನ್ನ ಹೆಂಡ್ತಿ', 'ಸ್ವಾತಿ', 'ಮುಂಗಾರಿನ ಮಿಂಚು', 'ಉಪೇಂದ್ರ' ಮೊದಲಾದ ಚಿತ್ರಗಳು ಇವರು ಕಲಾ ನಿರ್ದೇಶನ ಮಾಡಿದ ಮುಖ್ಯ ಚಿತ್ರಗಳು. ರವಿಚಂದ್ರನ್ ರೀತಿಯಲ್ಲಿ ಕಲಾ ನಿರ್ದೇಶಕನಿಗೆ ಸವಾಲಾಗುವಂಥ, ಅಪರೂಪದ ಸೆಟ್‌ಗಳನ್ನು ಹಾಕುವ ನಿರ್ಮಾಪಕರು ಬಹಳ ಕಡಿಮೆ ಎನ್ನುತ್ತಾರೆ.



## ಕೃಷ್ಣೇಗೌಡ

ಕನ್ನಡ ಚಿತ್ರರಂಗದ ಖ್ಯಾತ ಪೋಷಕ ನಟ. ಕೋಲಾರ ಜಿಲ್ಲೆಯ ಭೈರಸಂದ್ರದಲ್ಲಿ ೧೯೪೭ ರಲ್ಲಿ ಜನಿಸಿದ ಇವರು ಬಿ.ಎ. ಪದವಿಯನ್ನು ಪಡೆದು ಅಕೌಂಟೆಂಟ್ ಜನರಲ್ ಕಛೇರಿಯಲ್ಲಿ ಉದ್ಯೋಗದಲ್ಲಿದ್ದರು. ನೂರಾರು ನಾಟಕಗಳಲ್ಲಿ ಅಭಿನಯಿಸಿ ಅನುಭವವಿದ್ದ ಇವರು ೧೯೮೩ರಲ್ಲಿ ಸಿ.ಆರ್.ಸಿಂಹ ನಿರ್ದೇಶನದ 'ಸಿಂಹಾಸನ' ಚಿತ್ರದ ಸಣ್ಣ ಪಾತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವ ಇವರು 'ಚಕ್ರವ್ಯೂಹ', 'ನಾನು ನನ್ನ ಹೆಂಡತಿ', 'ಭುಜಂಗಯ್ಯನ ದಶಾವತಾರ', 'ಕರಿಮಲೆಯ ಕಗ್ಗತ್ತಲು', 'ನೋಡು ಬಾ ನಮ್ಮೂರ', 'ಚಿಕ್ಕ', 'ಕಲ್ಯಾಣಿ', 'ನಾಗರಿಕ' ಮೊದಲಾದ ಯಶಸ್ವೀ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಕರಿಮಲೆಯ ಕಗ್ಗತ್ತಲು' ಚಿತ್ರದಲ್ಲಿನ ಅಭಿನಯಕ್ಕಾಗಿ ೧೯೯೩-೯೪ನೇ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ಪೋಷಕ ನಟ ಪ್ರಶಸ್ತಿಯನ್ನು ಪಡೆದಿದ್ದಾರೆ.

## ಕೆಂಡಗಣ್ಣ ಶೆಟ್ಟಿ

ಹಿರಿಯ ಪ್ರದರ್ಶಕರಲ್ಲಿ ಒಬ್ಬರಾದ ಕೆಂಡಗಣ್ಣ ಶೆಟ್ಟಿ ಅವರು ಜನಿಸಿದ್ದು ಮೈಸೂರು ಜಿಲ್ಲೆಯ ಪಿರಿಯಾ ಪಟ್ಟಣ ತಾಲ್ಲೂಕಿನ ಅತ್ತಿಗೋಡು ಗ್ರಾಮದಲ್ಲಿ. ೧೯೬೦ರಲ್ಲಿ ಜಾತ್ರಾ ಕೇಂದ್ರಗಳಲ್ಲಿ ಸಂಚಾರಿ ಚಲನಚಿತ್ರ ಪ್ರದರ್ಶಕರಾಗಿ ಚಿತ್ರರಂಗ ಪ್ರವೇಶಿಸಿದರು. ಚಲನಚಿತ್ರ ವಿತರಕರಾಗಿ, ನಿರ್ಮಾಪಕರಾಗಿ, ಮೈಸೂರು ವಲಯ ಚಲನಚಿತ್ರ ವಿತರಕರ ಸಂಘ, ವಾಣಿಜ್ಯ



ಮಂಡಳಿಯ ಕೆಲಸ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು. ಚಿತ್ರರಂಗದಲ್ಲಿ 'ಎಜಿಕೆ' ಎಂದೇ ಪರಿಚಿತರು. ಚನ್ನರಾಯಪಟ್ಟಣದ ಲಕ್ಷ್ಮೀ ಚಿತ್ರಮಂದಿರದ ಹಾಗೂ ಸಕಲೇಶಪುರದ ಗಾಯತ್ರಿ ಚಿತ್ರಮಂದಿರದ ಪ್ರದರ್ಶಕರಾಗಿ ಸೇವೆ ಸಲ್ಲಿಸಿದ್ದಾರೆ.

## ಕೆಂಪರಾಜ್ .ಬಿ.ಎಸ್

ಭರವಸೆಯ ಸಂಕಲನಕಾರ. ಮಂಡ್ಯ ಜಿಲ್ಲೆಯ ಬಿದರಕೋಟೆಯವರು. ಶಾಲಾ ಕಾಲೇಜುಗಳ ನಾಟಕಗಳಲ್ಲಿ ಅಭಿನಯ. ಸಹಸಂಕಲನಕಾರರಾಗಿ 'ಸಂತ ಶಿಶುನಾಳ ಷರೀಫ' ಚಿತ್ರದಿಂದ ಚಿತ್ರರಂಗ ಪ್ರವೇಶ. 'ಮಧುರ ಮೈತ್ರಿ' ಸ್ವತಂತ್ರ ಸಂಕಲನಕಾರರಾಗಿ ದುಡಿದ ಪ್ರಥಮ ಚಿತ್ರ. 'ನಿಶ್ಚಿತಾರ್ಥ', 'ಕಾವ್ಯ', 'ರಂಗೋಲಿ', 'ನೋಡು ಬಾ ನಮ್ಮೂರ', 'ಅಂತರ್ಗಾಮಿ',



'ನೀ ಮುಡಿದ ಮಲ್ಲಿಗೆ', 'ಹೂ ಮಳೆ', 'ನಿಶ್ಯಬ್ದ' ಮೊದಲಾದ ಚಿತ್ರಗಳಿಗೆ ಸಂಕಲನ ಕಾರ್ಯ ನಿರ್ವಹಿಸಿದ್ದಾರೆ. 'ಅಮೃತ ವರ್ಷಿಣಿ' ಚಿತ್ರದ ಸಂಕಲನಕ್ಕಾಗಿ ೧೯೯೬-೯೭ನೇ ಸಾಲಿನ ಅತ್ಯುತ್ತಮ ಸಂಕಲನಕಾರ ಪ್ರಶಸ್ತಿಯನ್ನು ಪ್ರಥಮ ಬಾರಿಗೆ ಪಡೆದಿದ್ದಾರೆ.

## ಕೆಂಪರಾಜ ಅರಸು. ಡಿ (೧೯೧೮-೮೨)

ಚಲನಚಿತ್ರರಂಗಕ್ಕೆ ನೇರವಾಗಿ ನಾಯಕನಟರಾಗಿ ಬಂದ ಅರಸು ಮನೆತನದ ಯುವಕ. ಮೈಸೂರು ಹುಟ್ಟೂರು. ಅಲ್ಲಿಯೇ ವ್ಯಾಸಂಗ. ಸ್ಫುರದ್ರೂಪಿ. 'ಜೀವನ ನಾಟಕ' (೧೯೪೨) ಚಿತ್ರದ ಮೂಲಕ



ನಾಯಕನಟರಾದರು. 'ಕೃಷ್ಣಲೀಲಾ' ಚಿತ್ರದಲ್ಲಿ ಕಂಸನ ಪಾತ್ರ ದೊರೆಯಿತು. 'ಭಕ್ತ ರಾಮದಾಸ' (೧೯೪೮) ಚಿತ್ರವನ್ನು ಇವರೇ ನಿರ್ದೇಶಿಸಿದರು. ಕೆಂಪರಾಜ್ ಪ್ರೊಡಕ್ಷನ್ಸ್ ಮೂಲಕ ಜನಪ್ರಿಯ 'ರಾಜಾ ವಿಕ್ರಮ' (೧೯೫೧) ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು. ಇಂಗ್ಲಿಷ್ ಕವಿ ಡ್ಯೂಮಾ ಅವರ 'ಕೌಂಟ್ ಆಫ್ ಮಾಂಟೆಕ್ರಿಸ್ಟೋ' ಆಧರಿಸಿದ 'ಜಲದುರ್ಗ' ಹಾಗೂ 'ನಳದಮಯಂತಿ' ಇವರು ನಿರ್ಮಿಸಿದ ಚಿತ್ರಗಳು. ತಮಿಳು ಚಿತ್ರವೊಂದನ್ನು ಸಹ ನಿರ್ಮಿಸಿದರು. ಕರ್ನಾಟಕ ಚಲನಚಿತ್ರ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರಾಗಿದ್ದರು. 'ನಾನು' ಎಂಬ ಕಾದಂಬರಿ ಹಾಗೂ ಆತ್ಮಚರಿತ್ರೆ ಬರೆದರು. ಚಿತ್ರರಂಗದ ಹಲವಾರು ಸಮಸ್ಯೆಗಳನ್ನು



ಮುಂದಿಟ್ಟುಕೊಂಡು ಹೋರಾಟ ಮಾಡಿದರು. ಅರಸರು ೧೯೮೨ರ ಮೇ ೧೮ರಂದು ನಿಧನರಾದರು.

## ಕೇಶವ.ಎಂ.ಎಸ್

ಕನ್ನಡ ಚಲನಚಿತ್ರರಂಗದ ವರ್ಣಾಲಂಕಾರ ವಿಭಾಗದಲ್ಲಿ ಅಗ್ರಸ್ಥಾನದಲ್ಲಿ ನಿಲ್ಲುವ ಹೆಸರು ಮೇಕಪ್ ಕಲಾವಿದ ಸುಬ್ಬಣ್ಣ ಅವರದು. ಅವರ ಮಗನಾಗಿ ಅವರಂತೆಯೇ ಹೆಸರು ಸಂಪಾದಿಸಿರುವ ಮೇಕಪ್ ಕಲಾವಿದ ಎಂ.ಎಸ್.ಕೇಶವ. ತಂದೆಯ ಸಹಾಯಕರಾಗಿ ಹಲವಾರು ವರ್ಷಗಳು ದುಡಿದು ನಂತರ ಸ್ವತಂತ್ರವಾಗಿ ಮೇಕಪ್ ಕಲಾವಿದನಾಗಿ ಖ್ಯಾತರಾದವರು. ಮಧ್ಯಮ ವರ್ಗದ ಕುಟುಂಬದಲ್ಲಿ ೧೯೫೨ರ ಜುಲೈ ೩೦ರಂದು ಜನಿಸಿದರು. ೧೯೬೭ರಲ್ಲಿ 'ಲಗ್ನ ಪತ್ರಿಕೆ' ಚಿತ್ರದ ಮೂಲಕ ತಂದೆಯವರ ಸಹಾಯಕರಾಗಿ ಚಿತ್ರರಂಗ ಪ್ರವೇಶ. ನಂತರ ಸುಮಾರು ಚಿತ್ರಗಳಲ್ಲಿ ತಂದೆಯವರ ಸಹಾಯಕರಾಗಿ ದುಡಿಮೆ. 'ಕಸ್ತೂರಿ ನಿವಾಸ' ಚಿತ್ರದಿಂದ ಸ್ವತಂತ್ರ ಮೇಕಪ್ ಕಲಾವಿದರಾದರು. ೧೯೮೨ರಲ್ಲಿ 'ಅಂದದ ಅರಮನೆ' ಚಿತ್ರವನ್ನು ನಿರ್ಮಿಸುವುದರ ಮೂಲಕ ನಿರ್ಮಾಪಕರಾದರು. ಪ್ರಸ್ತುತ ಮೇಕಪ್‌ಮ್ಯಾನ್ ಚೆಲುವರಾಜ್ ಜೊತೆ ಸೇರಿ ಕರ್ನಾಟಕ ರಾಜ್ಯ ಚಲನಚಿತ್ರ ವರ್ಣಾಲಂಕಾರ ಮತ್ತು ಕೇಶಾಲಂಕಾರ ಕಲಾವಿದರ ಸಂಘವನ್ನು ಪ್ರಾರಂಭಿಸಿದ್ದಾರೆ. 'ಕಸ್ತೂರಿ ನಿವಾಸ', 'ಕುಲಗೌರವ', 'ಗಂಧದ ಗುಡಿ', 'ಸಿಪಾಯಿ ರಾಮು', 'ತಾಯಿನಾಡು', 'ಅಸಂಭವ', 'ದೈವಶಕ್ತಿ' ಮೊದಲಾದವು ಇವರ ಮೇಕಪ್ ಕೈಚಳಕಕ್ಕೆ ನಿದರ್ಶನವೆನ್ನಬಹುದಾದ ಚಿತ್ರಗಳು.

## ಕೇಶವಮೂರ್ತಿ.ಆರ್.ಜಿ

ನಲವತ್ತರ ದಶಕದಲ್ಲಿ ಚಲನಚಿತ್ರ ವಿತರಕ ಪ್ರತಿನಿಧಿಯಾಗಿ ವೃತ್ತಿಯನ್ನಾರಂಭಿಸಿದರು. ನಂತರ ಮೈಸೂರಿನ ಸಣ್ಣ ವಿತರಣಾ ಸಂಸ್ಥೆಯ ಮಾಲೀಕರಾದರು. ನಂತರ ಪ್ರದರ್ಶಕರಾದರು. ೧೯೪೫ರಲ್ಲಿ ರಾಜಕುಮಾರ್, ಲೀಲಾವತಿ ಅಭಿನಯದ, ರವೀ ನಿರ್ದೇಶನದ ಪ್ರಥಮ ಚಿತ್ರ 'ತೂಗುದೀಪ'ವನ್ನು ನಿರ್ಮಿಸಿದರು. ಬೆಂಗಳೂರಿನ ಎಲ್ಲಾ ಪ್ರಮುಖ ಸಂಸ್ಥೆಗಳಲ್ಲಿ ಚಲನಚಿತ್ರ ಪ್ರತಿನಿಧಿಯಾಗಿ ಅನುಭವ ಗಳಿಸಿದವರು. ಚಿತ್ರರಂಗದ ಮೂರು ಅಂಗಗಳಲ್ಲೂ ಸಮರ್ಥವಾಗಿ ಕಾರ್ಯ ನಿರ್ವಹಿಸಿರುವ ಹಿರಿಯ ಅನುಭವಿ.

## ಕೇಶವರಾವ್.ಬಿ.ಎಸ್

ಚಲನಚಿತ್ರ ಕಲಾನಿರ್ದೇಶಕ ಬಿ.ಎಸ್.ಕೇಶವರಾವ್ ಆಂಧ್ರಪ್ರದೇಶದ ವಿಜಯವಾಡದಲ್ಲಿ ಜನಿಸಿದರು. ಇಂಟರ್‌ಮೀಡಿಯಟ್‌ವರೆಗೆ ಓದಿದ



ಇವರು ಚಿತ್ರಕಲೆಯಲ್ಲಿ ಆಸಕ್ತರಾದರು. ೧೯೬೦ರಿಂದ ಖ್ಯಾತ ಕಲಾನಿರ್ದೇಶಕ ಹೆಚ್.ಶಾಂತಾರಾಂ ಅವರ ಹತ್ತಿರ ಸಹ ಕಲಾನಿರ್ದೇಶಕರಾಗಿ ದುಡಿದರು. ೧೯೬೯ರಲ್ಲಿ ಎಂ.ಆರ್.ವಿಠಲ್ ನಿರ್ದೇಶನದ 'ಎರಡು ಮುಖ' ಚಿತ್ರದ ಮೂಲಕ ಸ್ವತಂತ್ರ ಕಲಾ ನಿರ್ದೇಶಕರಾದರು. 'ಸ್ವಯಂವರ', 'ಬಂಗಾರದ ಮನುಷ್ಯ', 'ಅತ್ತೆಗೆ ತಕ್ಕ ಸೊಸೆ', 'ಚಕ್ರವ್ಯೂಹ', 'ರಾಮಾಚಾರಿ', 'ಭಕ್ತಸಿರಿಯಾಳ', 'ಹಾಸ್ಯರತ್ನ ರಾಮಕೃಷ್ಣ' ಮುಂತಾದ ೭೫೦ ಚಿತ್ರಗಳಿಗೆ ಕಲಾ ನಿರ್ದೇಶನ ಮಾಡಿದ್ದಾರೆ. ೧೯೯೧ರಲ್ಲಿ ನಿಧನರಾದರು.

ವೇಷ ಧರಿಸಿ ಹೆಂಗಸರ ಕಡೆ ಟಿಕೆಟ್ ಸಂಗ್ರಹಿಸುತ್ತಿದ್ದರು. ಮರಾಠಿ ಕಲಿತು ಸ್ತ್ರೀ ಪಾತ್ರಗಳನ್ನು ಮಾಡಲಾರಂಭಿಸಿದರು. 'ಭೂಕೈಲಾಸ' ಚಲನಚಿತ್ರದಲ್ಲಿ ಸ್ತ್ರೀ ಪಾತ್ರದಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ನಳದಮಯಂತಿ', 'ಪ್ರೇಮದ ಪುತ್ರಿ', 'ವಿಜಯನಗರದ ವೀರಪುತ್ರ' ಸೇರಿದಂತೆ ಸುಮಾರು ೧೨೦ ಚಿತ್ರಗಳಲ್ಲಿ ಅಭಿನಯಿಸಿದರು. ಹಾಸ್ಯನಟರಾಗಿಯೇ ಪ್ರಖ್ಯಾತರು. ಕನ್ನಡವಲ್ಲದೆ ಮರಾಠಿ, ಹಿಂದಿ, ತೆಲುಗು, ತಮಿಳು, ಮಲೆಯಾಳಂ ಚಿತ್ರಗಳಲ್ಲಿ ಅಭಿನಯಿಸಿದರು. ಮದರಾಸಿನ ಚಲನಚಿತ್ರ ಪ್ರೇಮಿಗಳ ಸಂಘದವರು ೧೯೫೭ರ ಉತ್ತಮ ಹಾಸ್ಯನಟ (ಚಿತ್ರ : ನಳದಮಯಂತಿ) ಪ್ರಶಸ್ತಿ ನೀಡಿ ಸನ್ಮಾನಿಸಿದ್ದಾರೆ. 'ಬಂಗಾರದ ಮನುಷ್ಯ' ಚಿತ್ರದಲ್ಲಿ ಅಭಿನಯಿಸಲು ಬೆಂಗಳೂರಿಗೆ ಬಂದಿದ್ದಾಗ ೧೯೭೩ರ ಫೆಬ್ರವರಿ ೨೭ರಂದು ನಿಧನರಾದರು.

## ಗಣೇಶ್.ಆರ್.ವಿ

ಮೈಸೂರಿನ ಪ್ರಭಾ ಟಾಕೀಸ್‌ನ



ವ್ಯವಸ್ಥಾಪಕರಾದ ಆರ್.ವಿ.ಗಣೇಶ್, ತಂದೆ ವಾಸುದೇವಮೂರ್ತಿ ಅವರಂತೆ ಚಿತ್ರೋದ್ಯಮದಲ್ಲಿ ಹೆಸರಾದವರು. ಮೈಸೂರಿನ ಪ್ರದರ್ಶಕರಲ್ಲಿ ಪ್ರಮುಖರೆನಿಸಿರುವ ಆರ್.ವಿ.ಗಣೇಶ್ ಶೈಕ್ಷಣಿಕ ಸಂಸ್ಥೆಗಳ ಸ್ಥಾಪಕರೂ ಆಗಿದ್ದಾರೆ. ಚಿತ್ರೋದ್ಯಮದ ಸಂಘಟನೆಗಳಲ್ಲಿ ಸಕ್ರಿಯರು.

## ಗಾಯತ್ರಿ

೭೦ರ ದಶಕದಲ್ಲಿ ನಾಯಕಿಯಾಗಿ ಬಂದವರು. ಮೂಲತಃ ಪಂಜಾಬಿನವರು. ಬಾಲ್ಯದಲ್ಲಿಯೇ ಚಿತ್ರರಂಗ ಪ್ರವೇಶ. 'ಸಫೇದ್ ಹಾಥಿ' ಚಿತ್ರದಲ್ಲಿ ಅಭಿನಯಿಸಿದ



ಗಾಯತ್ರಿ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ್ದು ೧೯೮೦ರಲ್ಲಿ 'ಆಟೋರಾಜ' ಚಿತ್ರದಿಂದ. ಅಸಾಧಾರಣ ಚೆಲುವೆಯಲ್ಲದಿದ್ದರೂ ಭಾವಾಭಿನಯದಿಂದ ಪ್ರೇಕ್ಷಕರನ್ನು ಗೆದ್ದ ನಟಿ. ಕನ್ನಡದ ಬಹುತೇಕ ನಾಯಕರೊಂದಿಗೆ ನಟಿಸಿದ ಗಾಯತ್ರಿ ಮತ್ತೊಬ್ಬ ಖ್ಯಾತ ನಟ ಅನಂತ್ ನಾಗ್‌ರನ್ನು ವಿವಾಹವಾಗಿ ಹೆಚ್ಚು ಕಡಿಮೆ ಚಿತ್ರರಂಗದಿಂದ ಹಿಂದೆ ಸರಿದು ಸಂಪೂರ್ಣವಾಗಿ ಗೃಹಿಣಿಯ ಪಾತ್ರ ನಿರ್ವಹಿಸುತ್ತಿದ್ದಾರೆ. ಶಂಕರ್‌ನಾಗ್, ರಾಜಕುಮಾರ್, ಅನಂತ್ ನಾಗ್ ಅವರೊಂದಿಗೆ ಆಕೆ ಅಭಿನಯಿಸಿದ ಹಲವು ಚಿತ್ರಗಳು ಯಶಸ್ಸನ್ನು ತಂದುಕೊಟ್ಟಿವೆ. 'ವಸಂತಗೀತ', 'ಶ್ವೇತಗುಲಾಬಿ', 'ಸುಖ ಸಂಸಾರಕ್ಕೆ ಹನ್ನೆರಡು ಸೂತ್ರಗಳು',

## ಗಾಯತ್ರಿ ಪ್ರಭಾಕರ್

ಕನ್ನಡ ಚಿತ್ರರಂಗದ ಅತ್ಯಂತ



ಚಟುವಟಿಕೆಯ ಕಂಠದಾನ ಕಲಾವಿದರಲ್ಲಿ ಒಬ್ಬರಾದ ಗಾಯತ್ರಿ ಪ್ರಭಾಕರ್ ಅವರು ಸಿದ್ಧಲಿಂಗಯ್ಯನವರು ನಿರ್ದೇಶಿಸಿದ 'ಬೆಳ್ಳಿಗರಿಯ ಬನದಲ್ಲಿ' (೧೯೬೦) ಚಿತ್ರದಿಂದ ಇದುವರೆಗ ಸುಮಾರು ೭೫೦ ಚಿತ್ರಗಳಲ್ಲಿ ಹೆಚ್ಚು ಕಡಿಮೆ ಎಲ್ಲಾ ಖ್ಯಾತ ನಟಿಯರಿಗೆ ಕಂಠದಾನ ಮಾಡಿದ್ದಾರೆ. ಕನ್ನಡೇತರ ನಟಿಯರಿಗಂತೂ ಅವರ ಭಾವಪೂರ್ಣ ಕಂಠದಾನವೇ ಜೀವಾಳ. ಗಾಯತ್ರಿ ಪೋಷಕ ನಟಿಯಾಗಿ ಹಲವು ಕನ್ನಡ ಚಿತ್ರಗಳಲ್ಲಿ ಸಮರ್ಥವಾಗಿ ನಟಿಸಿದ್ದಾರೆ. 'ಹೆಣ್ಣಿನ ಸೇಡು', 'ಗರುಡ ರೇಖೆ', 'ಸ್ವಾಭಿಮಾನ', 'ನಾನು ನನ್ನ ಹೆಂಡ್ತಿ', 'ಒಂದೇಗುರಿ', 'ಸಾವಿರ ಸುಳ್ಳು', 'ಯುಗ ಪುರುಷ', 'ಯಾರೆ ನೀ ಅಭಿಮಾನಿ', 'A K 47', 'ಜನುಮದಾತ' ಮುಖ್ಯವಾದ ಕೆಲವು ಚಿತ್ರಗಳು. ಅನೇಕ ಟೆಲಿವಿಷನ್ ಧಾರಾವಾಹಿಗಳಲ್ಲಿಯೂ ಆಕೆ ಜನಪ್ರಿಯ ಕಲಾವಿದೆ.

## ಗಿರಿಜಾ ಲೋಕೇಶ್

ಗಟವಾಣಿಯ ಪಾತ್ರಗಳಾಗಲಿ, ಸುಸಂಸ್ಕೃತ ಹೆಂಗಸಿನ ಪಾತ್ರಗಳಾಗಲಿ, ಹಾಸ್ಯ ಪಾತ್ರಗಳಾಗಲಿ ಎಲ್ಲದರಲ್ಲಿಯೂ ಲೀಲಾಜಾಲವಾಗಿ ಅಭಿನಯಿಸಿ ಚಲನಚಿತ್ರ ರಂಗ ಮತ್ತು ನಾಟಕರಂಗಗಳಲ್ಲಿ ಖ್ಯಾತಿ ಗಳಿಸಿರುವ ಗಿರಿಜಾ ಲೋಕೇಶ್ ವೃತ್ತಿ ರಂಗಭೂಮಿಯ ಕಲಾವಿದರ ಕುಟುಂಬದಲ್ಲಿ



ಜನಿಸಿದವರಾದ್ದರಿಂದ ಅಭಿನಯ ಕಲೆ ಅವರಿಗೆ ರಕ್ತಗತವಾಗಿದೆ. ಕರ್ನಾಟಕದ ಪ್ರಸಿದ್ಧ ಹವ್ಯಾಸಿ ನಾಟಕ ತಂಡ 'ನಟರಂಗ'ದ ಎಲ್ಲ ನಾಟಕಗಳಲ್ಲಿಯೂ ಅಭಿನಯಿಸುತ್ತಿದ್ದ ಗಿರಿಜಾ ಚಿತ್ರರಂಗವನ್ನು ಪ್ರವೇಶಿಸಿದ್ದು 'ಮಾಡಿ ಮಡಿದವರು' ಚಿತ್ರದ ಮೂಲಕ. ರಾಜ್ಯ ಪ್ರಶಸ್ತಿ ವಿಜೇತ 'ಕಾಕನ ಕೋಟೆ' ಮತ್ತು ಎಸ್.ಲಕ್ಷ್ಮೀನಾರಾಯಣ್ ರವರ ಹಸರಾಂತ ಚಿತ್ರ 'ಅಬಚೂರಿನ ಪೋಸ್ಟ್ ಆಫೀಸ್' ಗಳಲ್ಲಿ ಆಕೆಯೇ ನಾಯಕಿ. ತಾನೇ ಸೃಷ್ಟಿಸಿದ ದುರಂತದ ಸುಳಿಯಲ್ಲಿ ಸಿಕ್ಕಿ ನಲುಗಿದ ಗಯ್ಯಾಳಿ ಹೆಣ್ಣಿನ ಪಾತ್ರಕ್ಕೆ ಜೀವ ತುಂಬಿದ ಗಿರಿಜಾ 'ಭುಜಂಗಯ್ಯನ ದಶಾವತಾರ' ದಲ್ಲಿನ ತಮ್ಮ ವಿಶಿಷ್ಟ ಪಾತ್ರ ನಿರ್ವಹಣೆಗಾಗಿ ೧೯೮೦-೮೧ನೇ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಪಡೆದರು. ಈ ಚಿತ್ರವನ್ನು ನಿರ್ಮಿಸಿ ನಿರ್ದೇಶಿಸಿದ್ದು ಆಕೆಯ ಪತಿ ಖ್ಯಾತ ನಟ ಲೋಕೇಶ್. ಕನ್ನಡ ಚಿತ್ರರಂಗದಲ್ಲಿ ಗಿರಿಜಾ ಮತ್ತು ಲೋಕೇಶ್ ಆದರ್ಶ ದಂಪತಿಗಳು. ಅವರ ಮಗಳು ಪೂಜಾ ಮತ್ತು ಮಗ ಸೃಜನ್ ಕೂಡ ಪ್ರತಿಭಾವಂತ ಕಲಾವಿದರು. ಗಿರಿಜಾ ಕಿರುತೆರೆಯ ಅನೇಕ ಧಾರಾವಾಹಿಗಳಲ್ಲಿ ಅಭಿನಯಿಸಿ ಜನಪ್ರಿಯರಾಗಿದ್ದಾರೆ.

## ಗಿರೀಶ್ ಕಾರ್ನಾಡ್

ಕನ್ನಡ ಸಾಹಿತ್ಯ, ರಂಗಭೂಮಿ ಮತ್ತು ಚಲನಚಿತ್ರ ಕ್ಷೇತ್ರಗಳಲ್ಲಿ ದೊಡ್ಡ ಹೆಸರು ಗಿರೀಶ್ ಕಾರ್ನಾಡ್. ಮಹಾರಾಷ್ಟ್ರದ ಮಾಥೇರಾನ್‌ನಲ್ಲಿ ೧೯೩೮ರಲ್ಲಿ ಜನಿಸಿದ ಗಿರೀಶ್ ಕಾರ್ನಾಡ್ ಓದಿದ್ದು ಇಂಗ್ಲಿಷ್



ಮತ್ತು ಮರಾಠಿಗಳಲ್ಲಿ. ಆದರೆ ವ್ಯಾಪಕವಾಗಿ ಬರೆದಿದ್ದು ಕನ್ನಡದಲ್ಲಿ. ೧೯೫೮ರಲ್ಲಿ ಗಣಿತಶಾಸ್ತ್ರ ಮತ್ತು ಸಂಖ್ಯಾಶಾಸ್ತ್ರಗಳಲ್ಲಿ ಪದವೀಧರರಾದ ನಂತರ ಅವರು ಇಂಗ್ಲೆಂಡಿಗೆ ತೆರಳಿ ಅಲ್ಲಿನ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗವನ್ನು ಮುಗಿಸಿ ಪ್ರತಿಷ್ಠಿತ ರೋಡ್ಸ್ ಸ್ಕಾಲರ್‌ಶಿಪ್ ಕೂಡ ಪಡೆದರು. 'ಯಯಾತಿ', 'ತುಘಲಕ್', 'ಹಯವದನ', 'ಅಂಜುಮಲ್ಲಿಗೆ', 'ಹಿಟ್ಟಿನ ಹುಂಜ', 'ತಲೆದಂಡ' ಮತ್ತು 'ನಾಗಮಂಡಲ' ಮೊದಲಾದ ನಾಟಕಗಳು ರಾಜ್ಯ, ರಾಷ್ಟ್ರ, ಅಂತಾರಾಷ್ಟ್ರೀಯ ಖ್ಯಾತಿ ಪಡೆದವು. ನಂತರ ಕನ್ನಡದ ಹೊಸ ಅಲೆ ಚಿತ್ರ 'ಸಂಸ್ಕಾರ'ಕ್ಕೆ ಚಿತ್ರಕಥೆ ಬರೆದು ಅಭಿನಯಿಸಿದರು. ಬಿ.ವಿ.ಕಾರಂತರೊಂದಿಗೆ ನಿರ್ಮಾಪಕ ಜಿ.ವಿ.ಅಯ್ಯರ್‌ರವರಿಗಾಗಿ 'ವಂಶವೃಕ್ಷ' ಚಿತ್ರವನ್ನು ೧೯೭೧ರಲ್ಲಿ ನಿರ್ದೇಶಿಸಿದರು. ಈ ಚಿತ್ರದಲ್ಲಿ ಅವರಿಬ್ಬರೂ ಅಭಿನಯಿಸಿದರು. ನಂತರ ಮುಂಬೈಗೆ ತೆರಳಿ ಶ್ಯಾಮ್ ಬೆನಗಲ್‌ರವರ ಖ್ಯಾತ ಚಿತ್ರಗಳಾದ 'ನಿಶಾಂತ್', 'ಮಂಥನ್' ಮತ್ತು 'ಕಲಿಯುಗ್'ಗಳಲ್ಲಿ ಅಭಿನಯಿಸಿದರು. 'ಕಾಡು' ಅವರು ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ. ನಂತರ 'ಒಂದಾನೊಂದು ಕಾಲದಲ್ಲಿ'. ಈ ಎರಡೂ ಚಿತ್ರಗಳನ್ನು ನಿರ್ಮಿಸಿದವರು ಲಕ್ಷ್ಮೀಪತಿ ಮತ್ತು ನಾರಾಯಣ್. ಕಾರ್ನಾಡರು ಅನೇಕ ಹಿಂದಿ, ತೆಲುಗು ಮತ್ತು ತಮಿಳು ಚಿತ್ರಗಳಲ್ಲಿಯೂ ಪೋಷಕ ಪಾತ್ರಗಳಲ್ಲಿ ಅಭಿನಯಿಸಿದರು. 'ಒಂದಾನೊಂದು ಕಾಲದಲ್ಲಿ' ಚಿತ್ರದ ಮೂಲಕ ಪ್ರತಿಭಾವಂತ ನಟ ಶಂಕರ್ ನಾಗ್‌ರನ್ನು ಚಿತ್ರರಂಗಕ್ಕೆ ಪರಿಚಯಿಸಿದರು. ಗಿರೀಶ್ ಕಾರ್ನಾಡ್ ಅವರು 'ವಂಶವೃಕ್ಷ', 'ಸಂಸ್ಕಾರ', 'ಮೈಸೂರ ಮಲ್ಲಿಗೆ', 'ಆನಂದ ಭೈರವಿ', 'ಸಂತ ಶಿಶುನಾಳ ಷರೀಫ', 'ಗಾನಯೋಗಿ ಪಂಚಾಕ್ಷರ ಗವಾಯಿ', 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕಲಾತ್ಮಕ ಚಿತ್ರಗಳಲ್ಲದೆ 'ನೆನಪಿನ ದೋಣಿ', 'ನೀ ತಂದ ಕಾಣಿಕೆ', 'ಆನಂದ ಭೈರವಿ', 'ಪ್ರತ್ಯರ್ಥ', 'ಜನುಮದಾತ' ಮುಂತಾದ ಕಮರ್ಷಿಯಲ್ ಚಿತ್ರಗಳಲ್ಲೂ ಅಭಿನಯಿಸಿ ಸೈ ಎನಿಸಿಕೊಂಡಿದ್ದಾರೆ. 'ಸಂತ ಶಿಶುನಾಳ ಷರೀಫ'(೧೯೮೯-೯೦), 'ಗಾನಯೋಗಿ ಪಂಚಾಕ್ಷರ ಗವಾಯಿ'(೧೯೯೫-೯೬) ಚಿತ್ರಗಳಲ್ಲಿನ ಅಭಿನಯಕ್ಕಾಗಿ ಎರಡು ಬಾರಿ ರಾಜ್ಯ ಸರ್ಕಾರದ ಶ್ರೇಷ್ಠ ಪೋಷಕ ನಟ ಪ್ರಶಸ್ತಿಯನ್ನು ಪಡೆದಿದ್ದಾರೆ. ಇವರು ನಿರ್ದೇಶಿಸಿದ 'ವಂಶವೃಕ್ಷ', 'ಕಾಡು' ಚಿತ್ರಗಳು ರಾಜ್ಯ ಸರ್ಕಾರದ ಉತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದಿವೆ. ಕಾರ್ನಾಡ್-ಬಿ.ವಿ.ಕಾರಂತ್ ಜಂಟಿ ನಿರ್ದೇಶನದ 'ವಂಶವೃಕ್ಷ' (೧೯೭೧), 'ತಬ್ಬಲಿಯು ನೀನಾದೆ ಮಗನೆ'(೧೯೭೭), ಅವರೊಬ್ಬರೆ ನಿರ್ದೇಶಿಸಿದ 'ಕಾಡು'(೧೯೭೩), 'ಒಂದಾನೊಂದು ಕಾಲದಲ್ಲಿ' (೧೯೭೮), 'ಕಾನೂರು ಹೆಗ್ಗಡತಿ'(೧೯೯೯) ಚಿತ್ರಗಳು ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಪಡೆದಿವೆ. ಗಿರೀಶ್ ಕಾರ್ನಾಡ್ ಅವರಿಗೆ ನಾಟಕ, ಸಾಹಿತ್ಯಕ್ಕೆ ಸಲ್ಲಿಸಿರುವ ಸಮಗ್ರ ಸೇವೆಗಾಗಿ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ. ಭಾರತ ಸರ್ಕಾರದ ಪದ್ಮಭೂಷಣ ಪ್ರಶಸ್ತಿ ಲಭಿಸಿದೆ. ನಾಟಕ ಅಕಾಡೆಮಿ, ಹೋಮಿಬಾಬಾ, ಮತ್ತಿತರ ಪ್ರತಿಷ್ಠಿತ ಸಂಸ್ಥೆಗಳ ಫೆಲೋಷಿಪ್ ಪಡೆದಿದ್ದಾರೆ. ರಾಜ್ಯ ಸರ್ಕಾರದ ಗುಬ್ಬಿ ವೀರಣ್ಣ ಪ್ರಶಸ್ತಿ ಗೌರವ ಸಂದಿದೆ. ಕೆಲಕಾಲ ಪುಣೆಯ ಫಿಲಂ ಅಂಡ್ ಟಿ.ವಿ. ಸಂಸ್ಥೆಯ ಮುಖ್ಯಸ್ಥರಾಗಿದ್ದರು. ಗಿರೀಶ್ ಕಾರ್ನಾಡ್‌ರದು ಬಹುಮುಖ ಪ್ರತಿಭೆ.

## ಗಿರೀಶ್ ಕಾಸರವಳ್ಳಿ

೧೯೫೦ರಲ್ಲಿ ಕಾಸರವಳ್ಳಿಯಲ್ಲಿ ಜನಿಸಿದರು. ಚಿತ್ರರಂಗದಲ್ಲಿ ಅಂತಾರಾಷ್ಟ್ರೀಯ ಖ್ಯಾತಿಯನ್ನು ಗಳಿಸಿ ಕಲಾತ್ಮಕ ಮತ್ತು ಪ್ರಾಯೋಗಿಕ ಕನ್ನಡ ಚಿತ್ರಗಳ ಹಿರಿಮೆಯನ್ನು ದೇಶವಿದೇಶಗಳಲ್ಲಿ ಸಾರಿರುವ ಕೆಲವೇ ಕನ್ನಡ ನಿರ್ದೇಶಕರಲ್ಲಿ ಒಬ್ಬರು ಗಿರೀಶ್

ಕಾಸರವಳ್ಳಿ. ತಮ್ಮ ಚಿಕ್ಕವಯಸ್ಸಿನಲ್ಲಿಯೇ ಈ ಸಾಧನೆಯನ್ನು ಮಾಡಿದ ಹೆಗ್ಗಳಿಕೆ ಅವರದು. ಇಂದು ಭಾರತೀಯ ಚಿತ್ರರಂಗದ ಅತ್ಯಂತ ಪ್ರಮುಖ ನಿರ್ದೇಶಕರಲ್ಲಿ ಒಬ್ಬರಾಗಿ ಪ್ರಸಿದ್ಧಿ ಪಡೆದಿರುವ ಕಾಸರವಳ್ಳಿಯವರು ಇದುವರೆಗೆ ಹಲವು ಚಿತ್ರಗಳನ್ನು ನಿರ್ದೇಶಿಸಿದಾರೆ. ಒಂದೊಂದು ಚಿತ್ರವೂ ವಿಶೇಷ. ಶ್ರೇಷ್ಠ ರಾಜ್ಯ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಪ್ರಶಸ್ತಿಗಳನ್ನು ಅವರ ಎಲ್ಲ ಚಿತ್ರಗಳೂ ಪಡೆದುಕೊಂಡಿವೆ. ಗಿರೀಶ್ ಕಾಸರವಳ್ಳಿ ಚಿತ್ರ ಮಾಧ್ಯಮದ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲರು. ಇವರ ಪ್ರಥಮ ಚಿತ್ರ ೧೯೭೭ರಲ್ಲಿ



ಬಿಡುಗಡೆಯಾದ 'ಘಟಶ್ರಾದ್ಧ'. ಆ ಪ್ರಥಮ ಚಿತ್ರಕ್ಕೆ ರಾಷ್ಟ್ರಪತಿಗಳ ಸ್ವರ್ಣಕಮಲ ಪ್ರಶಸ್ತಿ ಬಂದು ಕಲಾತ್ಮಕ ಚಿತ್ರಗಳ ವಲಯದಲ್ಲಿ ತೀವ್ರ ಕುತೂಹಲವನ್ನುಂಟುಮಾಡಿತು. ಅಲ್ಲದೆ ಆ ಚಿತ್ರದ ಬಾಲ ಕಲಾವಿದ ಅಜಿತ್‌ಕುಮಾರ್‌ನಿಗೆ ಉತ್ತಮ ಬಾಲಕಲಾವಿದ-ರಜತ ಕಮಲ ಮತ್ತು ಬಿ.ವಿ.ಕಾರಂತರಿಗೆ ಉತ್ತಮ ಸಂಗೀತಕ್ಕಾಗಿ ರಜತ ಕಮಲ ಪ್ರಶಸ್ತಿಗಳೂ ರಾಷ್ಟ್ರಮಟ್ಟದಲ್ಲಿ ಸಂದವು. ೧೯೭೭-೭೮ನೇ ರಾಜ್ಯ ಸರ್ಕಾರದ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ, ಅತ್ಯುತ್ತಮ ಕಥಾ ಲೇಖಕ ಪ್ರಶಸ್ತಿ (ಡಾ.ಯು.ಆರ್.ಅನಂತಮೂರ್ತಿ), ಅತ್ಯುತ್ತಮ ಚಿತ್ರ ನಾಟಕ ಪ್ರಶಸ್ತಿ (ಗಿರೀಶ್ ಕಾಸರವಳ್ಳಿ) ಹಾಗೂ ಅತ್ಯುತ್ತಮ ಬಾಲನಟ ಪ್ರಶಸ್ತಿ (ಅಜಿತ್‌ಕುಮಾರ್)- ಒಟ್ಟು ನಾಲ್ಕು ಪ್ರಶಸ್ತಿಗಳನ್ನೂ 'ಘಟಶ್ರಾದ್ಧ' ಪಡೆಯಿತು. ನಂತರ ಅವರು ನಿರ್ದೇಶಿಸಿದ ಪ್ರತಿಯೊಂದು ಚಿತ್ರವೂ ಒಂದಲ್ಲ ಒಂದು ಕಾರಣದಿಂದ ಗಮನ ಸೆಳೆಯುತ್ತ ಬಂದಿದೆ. 'ಆಕ್ರಮಣ', 'ಮೂರು ದಾರಿಗಳು', 'ಮನೆ', 'ಬಣ್ಣದ ವೇಷ', 'ತಬರನ ಕಥೆ', 'ಕ್ರೌರ್ಯ', 'ತಾಯಿ ಸಾಹೇಬ' ಮುಂತಾದವು ಅವರ ನಿರ್ದೇಶನದ ಮಹತ್ವದ ಚಿತ್ರಗಳು. 'ಮೂರು ದಾರಿಗಳು' (೧೯೮೦-೮೧), 'ತಬರನ ಕತೆ' (೧೯೮೬-೮೭), 'ಕ್ರೌರ್ಯ' (೧೯೯೫-೯೬), 'ತಾಯಿ ಸಾಹೇಬ' (೧೯೯೭-೯೮) ಚಿತ್ರಗಳು ರಾಜ್ಯ ಸರ್ಕಾರದ ಉತ್ತಮ ಚಿತ್ರ ಪ್ರಶಸ್ತಿ ಪಡೆದವು. 'ಘಟಶ್ರಾದ್ಧ', 'ತಬರನ ಕತೆ', 'ತಾಯಿಸಾಹೇಬ' ಚಿತ್ರಗಳು ಮೂರು ಬಾರಿ ಕನ್ನಡಕ್ಕೆ ರಾಷ್ಟ್ರಪತಿಗಳ ಸ್ವರ್ಣಕಮಲ ಪ್ರಶಸ್ತಿ ತಂದವು. 'ಬಣ್ಣದ ವೇಷ', 'ಮನೆ', 'ಕ್ರೌರ್ಯ' ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಪಡೆದವು. ಗಿರೀಶ್ ಕಾಸರವಳ್ಳಿ ಅವರು ಚಲನಚಿತ್ರ ರಸಗ್ರಹಣ ಶಿಬಿರದ ಮುಖ್ಯಸ್ಥರಾಗಿ, ಸುಚಿತ್ರ ಫಿಲಂ ಸೊಸೈಟಿಯ ಅಧ್ಯಕ್ಷರಾಗಿ, ಹಲವಾರು ಚಲನಚಿತ್ರ ಪ್ರಶಸ್ತಿ ಸಮಿತಿಯ ಸದಸ್ಯರಾಗಿ, ಭಾರತೀಯ ಪನೋರಮಾ ಆಯ್ಕೆ ಮಂಡಳಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಆದರ್ಶ್ ಫಿಲಂ ಇನ್‌ಸ್ಟಿಟ್ಯೂಟಿನ ಪ್ರಾಂಶುಪಾಲರಾಗಿದ್ದರು. ಪುಣೆಯ ರಾಷ್ಟ್ರೀಯ ಚಲನಚಿತ್ರ ಮತ್ತು ಟೆಲಿವಿಷನ್ ಸಂಸ್ಥೆಯಲ್ಲಿ ಚಿತ್ರ ನಿರ್ದೇಶನದಲ್ಲಿ ಸಾಂಪ್ರದಾಯಿಕ ಶಿಕ್ಷಣ ಪಡೆದ ಕಾಸರವಳ್ಳಿಯವರು ಅನೇಕ ಉತ್ತಮ ಸಾಕ್ಷ್ಯ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಇನ್‌ಸ್ಟಿಟ್ಯೂಟ್‌ನಲ್ಲಿ ಸಿದ್ಧ ಮಾಡಿದ ಕಿರುಚಿತ್ರ 'ಅವಶೇಷ' ಕೂಡ ವಿಶೇಷ ಮನ್ನಣೆ ಪಡೆಯಿತು. ಅವರ ಪತ್ನಿ ವೈಶಾಲಿಯವರು ಚಲನಚಿತ್ರ ಮತ್ತು ಕಿರುತೆರೆಯ ನಟಿ. ಕಾಸರವಳ್ಳಿಯವರು ಈಚೆಗೆ ಕಿರುತೆರೆಯ ಬಗ್ಗೆಯೂ ಒಲವು ತೋರಿದ್ದಾರೆ. ಚಲಚ್ಚಿತ್ರಗಳ ಬಗ್ಗೆ ಗಂಭೀರವಾಗಿ ವಿಶ್ಲೇಷಣೆ ಇರುವ ಪುಸ್ತಕಗಳೂ ಪ್ರಕಟವಾಗಿವೆ.

## ಗೀತಪ್ರಿಯ

೧೯೬೦ರ ದಶಕದಲ್ಲಿ ಬೆಳಕಿಗೆ ಬಂದ ಪ್ರತಿಭಾವಂತ ಚಿತ್ರಸಾಹಿತಿ ಮತ್ತು ನಿರ್ದೇಶಕರಲ್ಲಿ ಗೀತಪ್ರಿಯ ಒಬ್ಬರು. ತಾಯಿ-ತಂದೆ ಇಟ್ಟ ಹೆಸರು ಲಕ್ಷ್ಮಣ್‌ರಾವ್ ಮೋಹಿತೆ. ಬಾಲ್ಯದಲ್ಲಿ ನಾಟ್ಯ ವಿದ್ಯೆಯನ್ನು ಕಲಿತರು. ಮೂಕಿ ಚಿತ್ರಗಳಿಂದ ಪ್ರೇರಿತರಾದರು. ನಾಟಕರಂಗದಲ್ಲಿಯೂ



ಅಭಿರುಚಿಯನ್ನು ಬೆಳೆಸಿಕೊಂಡು 'ಜನ್ಮಭೂಮಿ' ಮತ್ತು 'ಮದುವೆ ಮಾರ್ಕೆಟ್' ನಾಟಕಗಳನ್ನು ವೃತ್ತಿ ರಂಗಭೂಮಿಗೆ ಕೊಡುಗೆಯನ್ನಾಗಿ ಇತ್ತರು. ನೃತ್ಯ ನಿರ್ದೇಶಕ ಹೀರಾಲಾಲ್‌ರನ್ನು ಸೇರಿ ನೃತ್ಯಗಾರ, ನಟನಾಗುವ ಬಯಕೆಯಿಂದ ಮದರಾಸಿಗೆ ಹೋದ ಅವರು ತಮ್ಮ ಆಸೆ ಈಡೇರದಿದ್ದಾಗ ೧೯೫೫ರಲ್ಲಿ ಬಿ.ಆರ್.ಕೃಷ್ಣಮೂರ್ತಿಯವರು ತಯಾರಿಸಿ ನಿರ್ದೇಶಿಸಿದ 'ಶ್ರೀರಾಮಪೂಜಾ' ಚಿತ್ರಕ್ಕೆ ಗೀತೆಗಳನ್ನು ಬರೆದು ಚಿತ್ರಸಾಹಿತಿಯಾದರು. ಗೀತಪ್ರಿಯ ಎಂದು ಹೆಸರನ್ನು ಬದಲಾಯಿಸಿದರು. ಇತರ ಭಾಷಾ ಚಿತ್ರಗಳು ಕನ್ನಡಕ್ಕೆ ಹೇರಳವಾಗಿ ಡಬ್ ಆಗುತ್ತಿದ್ದ ಕಾಲದಲ್ಲಿ ಆ ತಂತ್ರದಲ್ಲಿ ನೈಪುಣ್ಯ ಪಡೆದು ಅನೇಕ ಕನ್ನಡ ಡಬ್ಬಿಂಗ್ ಚಿತ್ರಗಳಿಗೆ ಸಾಹಿತ್ಯ ಬರೆದು ಹೆಸರು ಮಾಡಿದರು. ಗೀತಪ್ರಿಯರು ಇದುವರೆಗೆ ಅನೇಕ ಚಿತ್ರಗಳಿಗೆ ಗೀತೆಗಳನ್ನು, ಸಂಭಾಷಣೆಗಳನ್ನೂ ಬರೆದಿದ್ದಾರೆ. ಅವರು ನಿರ್ದೇಶಿಸಿದ ಮೊದಲ ಚಿತ್ರ 'ಮಣ್ಣಿನ ಮಗ' (೧೯೬೮) ರಾಷ್ಟ್ರ ಹಾಗೂ ರಾಜ್ಯಮಟ್ಟಗಳಲ್ಲಿ ಪ್ರಶಸ್ತಿ ಪಡೆದುಕೊಂಡು ಶತದಿನೋತ್ಸವವನ್ನು ಆಚರಿಸಿ, ಗೀತಪ್ರಿಯರನ್ನು ಪ್ರಮುಖ ನಿರ್ದೇಶಕರ ಸಾಲಕ್ಕೇರಿಸಿತು. ಗೀತಪ್ರಿಯರು ತಮ್ಮ ಚಿತ್ರಗಳಲ್ಲಿ ಸಂಭಾಷಣೆಗಳಲ್ಲಿ ಆಡುಭಾಷೆಯನ್ನು ಧಾರಾಳವಾಗಿ ಬಳಸಿ ಪ್ರೇಕ್ಷಕರ ಮನಸ್ಸನ್ನು ಗೆದ್ದರು. ತಮ್ಮ ಎಲ್ಲ ಚಿತ್ರಗಳಲ್ಲೂ ಸದಭಿರುಚಿ ಮತ್ತು ಉತ್ತಮ ಮೌಲ್ಯಗಳನ್ನು ಕಾಪಾಡಿಕೊಂಡು ಬಂದರು. ಅವರು ಸುಮಾರು ೩೦ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅವುಗಳಲ್ಲಿ ಉಲ್ಲೇಖನೀಯವಾದವು 'ಬೆಳುವಲದ ಮಡಿಲಲ್ಲಿ' (೧೯೭೫), 'ಬೆಸುಗೆ' (೧೯೭೬), 'ಹೊಂಬಿಸಿಲು' (೧೯೭೮), 'ಯಾವ ಜನ್ಮದ ಮೈತ್ರಿ' (೧೯೭೨), 'ಪ್ರೇಮಾಯಣ' (೧೯೭೮), 'ಪುಟಾಣಿ ಏಜೆಂಟ್ಸ್ ೧೨೩' (೧೯೭೯), 'ಮೌನಗೀತೆ' (೧೯೮೬), 'ಮಾನಸವೀಣೆ' (೧೯೯೬). ರಾಜ್ಯ ಸರ್ಕಾರ ಅವರ ಚಲನಚಿತ್ರ ನಿರ್ದೇಶನದಲ್ಲಿನ ಪರಿಶ್ರಮಕ್ಕಾಗಿ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ವಿಜಯಾ ಫಿಲಂ ಇನ್‌ಸ್ಟಿಟ್ಯೂಟ್‌ನ ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿದ್ದಾರೆ.

## ಗೀತಾ

ಮೂಲತಃ ತೆಲುಗಿನವರಾದರೂ ೧೯೭೦ರಿಂದ ಹಲವು ವರ್ಷಗಳ ಕಾಲ ಬೆಂಗಳೂರಿನ ನಿವಾಸಿಯೇ ಆಗಿದ್ದ ಗೀತ ಪಂಚಭಾಷಾ ತಾರೆ. ಸುಮಾರು ೭೫ ಕನ್ನಡ ಚಿತ್ರಗಳಲ್ಲಿ ಅಭಿನಯಿಸಿ ಈ ಭಾಷೆಯಲ್ಲಿಯೂ ಪ್ರಮುಖ ತಾರೆಯಾಗಿ ಮೆರೆದವರು. ಕೆಲವು ಚಿತ್ರಗಳಲ್ಲಿ ಭಾವಪೂರ್ಣವಾದ ಅಭಿನಯವನ್ನು ನೀಡಿ ಅನೇಕ ಪ್ರಶಸ್ತಿಗಳನ್ನು ಸಂಪಾದಿಸಿಕೊಂಡ ಈಕೆ ಮಧ್ಯಮ ವರ್ಗದ ಪ್ರೇಕ್ಷಕರಿಗೆ ವಿಶೇಷವಾಗಿ ಪ್ರಿಯರಾದರು. ಖ್ಯಾತ ತಮಿಳು ನಿರ್ದೇಶಕ ಕೆ.ಬಾಲಚಂದರ್‌ರಂತಹ



ಉತ್ತಮ ಗುರುವಿನ ಮಾರ್ಗದರ್ಶನ ದೊರೆಯಿತು. 'ಕಾಳಿಂಗ' ಚಿತ್ರದ ಮೂಲಕ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ ಗೀತಾ 'ಎರಡು ರೇಖೆಗಳು' ಮತ್ತು 'ಧ್ರುವತಾರೆ' ಚಿತ್ರಗಳಿಂದ ವಿಶೇಷ ಗಮನ ಸೆಳೆದು ಕನ್ನಡ ಚಿತ್ರರಂಗದ ಎಲ್ಲಾ ಪ್ರಥಮ ಶ್ರೇಣಿಯ ನಟರೊಂದಿಗೂ ನಾಯಕಿಯಾಗಿ ಅಭಿನಯಿಸಿದರು. ರಾಜಕುಮಾರರೊಂದಿಗೆ ಈಕೆ ಅಭಿನಯಿಸಿದ ಕೆಲವು ಚಿತ್ರಗಳ ಯಶಸ್ಸಿಗೆ ಈಕೆಯ ಕಾಣಿಕೆಯೂ ಸಾಕಷ್ಟಿತ್ತು. ೧೯೮೬ - ೮೭ ನೇ ಸಾಲಿನಲ್ಲಿ 'ಅರುಣರಾಗ' ಚಿತ್ರದಲ್ಲಿ ಈಕೆಯ ಅಭಿನಯಕ್ಕಾಗಿ ರಾಜ್ಯಸರ್ಕಾರದಿಂದ ಅತ್ಯುತ್ತಮ ನಟಿ ಪ್ರಶಸ್ತಿ ಲಭ್ಯವಾಯಿತು. ಈಕೆಯ ಅಭಿನಯ ವಿಶೇಷ ಪರಿಣಾಮ ಬೀರಿದ ಇನ್ನೊಂದು ಚಿತ್ರ ಕೆ.ಎಸ್.ಎಲ್.ಸ್ವಾಮಿ (ರವೀ) ನಿರ್ದೇಶಿಸಿದ 'ಮಿಥಿಲೆಯ ಸೀತೆಯರು'.

## ಗೀತಾ (ಸಿಹಿಕಹಿ)

ಕಿರುತೆರ ಹಾಗೂ ಬೆಳ್ಳಿತೆರ ಎರಡರಲ್ಲೂ ಜನಪ್ರಿಯತೆ ಗಳಿಸಿರುವ ನಟಿ ಹಾಗೂ ಕಂಠದಾನ ಕಲಾವಿದೆ. ಬಾಲ್ಯದಿಂದಲೇ ರಂಗಭೂಮಿಯೊಂದಿಗೆ ಭರತನಾಟ್ಯ ಹಾಗೂ



ಜಾನಪದ ನೃತ್ಯಗಳಲ್ಲಿ ಪರಿಶ್ರಮ. ಸರಿಗಮ ವಿಜಿಯವರ ನಿರ್ದೇಶನದ 'ಸಂಸಾರದಲ್ಲಿ ಸರಿಗಮ' ನಾಟಕಕ್ಕೆ ಚಿತ್ರನಟಿ ಹಾಗೂ ಆಪ್ತಗೆಳತಿ ಭವ್ಯ ಅವರಿಂದ ಪರಿಚಯ ಹಾಗೂ ಪ್ರವೇಶ. ಪಲ್ಲವಿಶ್ರೀ ಎಂಬ ಹೆಸರಿನಿಂದ ಪರುಶುರಾಮನ್ ನಿರ್ದೇಶನದ 'ಪ್ರೇಮದ ನುಡಿ' ಚಿತ್ರಕ್ಕೆ ನಾಯಕಿಯಾಗಿ ಪ್ರವೇಶ. ನಂತರ 'ಅವನ ಕಣ್ಣು', 'ಗಗನ ಕುಸುಮ' ಚಿತ್ರಗಳಲ್ಲಿ ಅಭಿನಯ. ಆದರೆ ಈ ಚಿತ್ರಗಳು ತೆರೆ ಕಾಣಲಿಲ್ಲ. ಮುಂದೆ 'ಅಶಾಕಿರಣ' ಚಿತ್ರದ ಮೂಲಕ ಗಮನ ಸೆಳೆದ ಇವರು 'ಅಭಿಮಾನ' ಚಿತ್ರದಿಂದ 'ಗೀತಾ' ಆದರು. ನಂತರ ಕಿರುತೆರೆಯ 'ಸಿಹಿಕಹಿ' ಧಾರಾವಾಹಿಯಲ್ಲಿ ನಟ ಚಂದ್ರು ಅವರ ಜೋಡಿಯಾಗಿ ಭಾರಿ ಜನಪ್ರಿಯತೆ ಪಡೆದು ಗೀತಾ 'ಸಿಹಿಕಹಿ ಗೀತಾ' ಆದರು. ಕಿರುತೆರೆಯ ಜೋಡಿ ಚಂದ್ರು - ಗೀತಾ ನಿಜ ಜೀವನದಲ್ಲೂ ಜೋಡಿಯಾದರು. ಮುಂದೆ ಕಿರುತೆರೆಯ ಹಲವಾರು ಜನಪ್ರಿಯ ಧಾರಾವಾಹಿಗಳಲ್ಲಿ ಹಾಗೂ 'ಭಲೇ ಚತುರ', 'ವರಗಳ ಬೇಟೆ' ಮೊದಲಾದ ಚಿತ್ರಗಳಲ್ಲಿ ಅಭಿನಯ. ಅಭಿನಯದ ಜೊತೆ ೧೫೦ಕ್ಕೂ ಹೆಚ್ಚು ಚಿತ್ರಗಳಿಗೆ ಕಂಠದಾನ ಕಲಾವಿದೆಯಾಗಿ ದುಡಿದಿದ್ದಾರೆ.

## ಗುಗ್ಗು ಕಮೆಡಿಯನ್

ಮದರಾಸಿನಲ್ಲಿ ಕನ್ನಡ ಚಿತ್ರರಂಗ ಬಾಲ್ಯಾವಸ್ಥೆಯಲ್ಲಿದ್ದಾಗ ಅನೇಕ ಕನ್ನಡ ಕಲಾವಿದರಿಗೆ ಅಲ್ಲಿ ಆಶ್ರಯದಾತರಾದದ್ದು ಅಶ್ವತ್ಥನಾರಾಯಣಶೆಟ್ಟರು. 'ಕಮೆಡಿಯನ್ ಗುಗ್ಗು' ಹೆಸರಿನಿಂದ ಕನ್ನಡ ಚಿತ್ರಪ್ರೇಮಿಗಳಿಗೆ 'ನಟಶೇಖರ' ಚಿತ್ರದಿಂದ ಪರಿಚಿತರಾದರು.



ಅಷ್ಟೇನೂ ಅನುಕೂಲಸ್ಥರಲ್ಲದಿದ್ದರೂ 'ಗುಗ್ಗು' ಮದರಾಸಿನ ತ್ಯಾಗರಾಜನಗರದಲ್ಲಿದ್ದ ಅವರ ಸಣ್ಣ ಮನೆ 'ಗುಗ್ಗು ಮಹಲ್' ಅನ್ನು ಕನ್ನಡ ಕಲಾವಿದರಿಗೆ ಅನೌಪಚಾರಿಕವಾಗಿ ಅರ್ಪಿಸಿದರು. ಅವರಿಗೆಲ್ಲ ಈ 'ಮಹಲ್' ಮರುಭೂಮಿಯಲ್ಲಿನ ಓಯಸಿಸ್ ಇದ್ದಂತಿತ್ತು. 'ಗುಗ್ಗು' ನೋಡಲು ಸುಂದರನಲ್ಲ, ಕೇವಲ ಸಣ್ಣ ಪುಟ್ಟ ಪಾತ್ರಗಳಿಗೆ ಬಣ್ಣ ಹಚ್ಚಿಕೊಂಡು ಕಾಲ ತಳ್ಳಿದವರು. 'ಗುಗ್ಗು ಮಹಲ್' ಅವರ ಮಾನವೀಯತೆಗೆ ಪ್ರತೀಕವಾದದ್ದು. ಹಿಂದಿನ ಪ್ರಮುಖ ಕಲಾವಿದರೆಲ್ಲರೂ ಅವರ ಆತಿಥ್ಯವನ್ನು ಒಂದಲ್ಲ ಒಂದು ರೀತಿಯಲ್ಲಿ ಸವಿದಿದ್ದಾರೆ. ಸುಮಾರು ೨೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ ಇವರು ಜೂನ್ ೨೨, ೧೯೮೮ರಂದು ನಿಧನರಾದರು.

## ಗುಪ್ತ.ಕೆ.ವಿ

ಹಿರಿಯ ಚಿತ್ರ ವಿತರಕ ಹಾಗೂ ಚಿತ್ರರಂಗದ ಗಣ್ಯವ್ಯಕ್ತಿಗಳಲ್ಲಿ ಒಬ್ಬರಾದ ಕೆ.ವಿ.ಗುಪ್ತ ಬೆಂಗಳೂರಿನಲ್ಲಿ ೧೯೩೫ರಲ್ಲಿ ಜನಿಸಿದರು. ಬಿ.ಎಸ್ಸಿ. (ಟೆಕ್ಸ್‌ಟೈಲ್ಸ್)ನಲ್ಲಿ ವಿದ್ಯಾಭ್ಯಾಸ. ಗುಪ್ತ ಅವರ ಕುಟುಂಬದವರು



ಶಾಂತಾ ಪಿಕ್ಚರ್ಸ್ ವಿತರಣಾ ಸಂಸ್ಥೆಯ ಮಾಲೀಕತ್ವ ಹೊಂದಿದರು. ನಂತರ ವಿಜಯಾ ಟಾಕೀ ಡಿಸ್ಟ್ರಿಬ್ಯೂಟರ್ಸ್ ಸಂಸ್ಥೆಯೊಂದಿಗೆ ಸೇರಿ ಹಲವು ಚಿತ್ರಗಳ ವಿತರಣೆಯನ್ನು ಮಾಡಿದ್ದರು. ವಿದ್ಯಾಭ್ಯಾಸದ ನಂತರ ಗುಪ್ತ ಅವರು ವಿಜಯಾ ಟಾಕೀ ಡಿಸ್ಟ್ರಿಬ್ಯೂಟರ್ಸ್ ಸಂಸ್ಥೆಯನ್ನು ಸೇರಿ ಚಿತ್ರ ವಿತರಣೆಯ ಒಳಗು-ಹೊರಗುಗಳನ್ನು ತಿಳಿದುಕೊಂಡರು. ಹಿರಿಯ ಪತ್ರಿಕೋದ್ಯಮಿ, ರಾಜಕೀಯ ಧುರೀಣ, ವಿತರಕರಾದ ಬಿ.ಎನ್.ಗುಪ್ತ ಹಾಗೂ ವೆಂಕಟಸುಬ್ಬಯ್ಯ ಅವರಿಂದ ಚಿತ್ರ ವಿತರಣೆಯ ಹಲವು ವಿಚಾರಗಳನ್ನು ತಿಳಿದರು. ೧೯೫೮ರಲ್ಲಿ ನಾಗಿರೆಡ್ಡಿ ಅವರು ಸ್ಥಾಪಿಸಿದ ವಿಜಯ ಪ್ರೊಡಕ್ಷನ್ಸ್ ಚಿತ್ರ ವಿತರಣಾ ಸಂಸ್ಥೆಯನ್ನು ಸೇರಿದರು. ಈ ಸಂಸ್ಥೆಯಿಂದ ವಿತರಣೆಗೊಂಡ ಹಲವು ಚಿತ್ರಗಳು ಯಶಸ್ವಿಯಾದವು. ಕೆ.ವಿ.ಗುಪ್ತ ನಿರ್ಮಾಪಕರಾಗಿ ಹಲವು ಚಿತ್ರಗಳನ್ನು ನಿರ್ಮಿಸಿದರು. 'ಸತ್ಯ ಹರಿಶ್ಚಂದ್ರ', 'ಮದುವೆ ಮಾಡಿ ನೋಡು', 'ನನ್ನ ತಮ್ಮ' ಚಿತ್ರಗಳನ್ನು ವಿಜಯಾ ಪ್ರೊಡಕ್ಷನ್ಸ್ ಮತ್ತು ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್ಸ್‌ಗಾಗಿ ನಿರ್ಮಿಸಿದರು. ನಂದಿನಿ ಪ್ರೊಡಕ್ಷನ್ಸ್ ಚಿತ್ರ ನಿರ್ಮಾಣ ಸಂಸ್ಥೆಯನ್ನು ಸ್ಥಾಪಿಸಿ 'ಬೀಗರ ಪಂದ್ಯ' ಚಿತ್ರವನ್ನು ನಿರ್ಮಿಸಿದರು. ೧೯೭೭ರಲ್ಲಿ ಸ್ವಂತವಾಗಿ ಗುರುಜ್ಯೋತಿ ಕಂಬೈನ್ಸ್ ವಿತರಣಾ ಸಂಸ್ಥೆಯನ್ನು ಸ್ಥಾಪಿಸಿ ಹಲವು ಕನ್ನಡ ಚಿತ್ರಗಳನ್ನು ವಿತರಿಸಿದರು. 'ನಂದಾದೀಪ', 'ನಮ್ಮ ಮಕ್ಕಳು', 'ನಾಗರಹೊಳೆ', 'ಎರಡು ಕನಸು', 'ನಾ ನಿನ್ನ ಬಿಡಲಾರೆ', 'ಅನುಭವ', 'ಹೊಂಬಿಸಿಲು' ಮುಂತಾದ ಚಿತ್ರಗಳು ಅವರ ಸಂಸ್ಥೆಯು ವಿತರಿಸಿದ ಚಿತ್ರಗಳು. ೬೦ರ ದಶಕದಿಂದ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ಒಂದಲ್ಲ ಒಂದು ಹುದ್ದೆಯಲ್ಲಿದ್ದು ಸೇವೆ ಸಲ್ಲಿಸುತ್ತಿದ್ದಾರೆ. ಕಾರ್ಯಕಾರಿ ಸಮಿತಿಯ ಸದಸ್ಯ, ಗೌರವ ಕಾರ್ಯದರ್ಶಿ, ಉಪಾಧ್ಯಕ್ಷ ಹಾಗೂ ಅಧ್ಯಕ್ಷರಾಗಿ ದುಡಿದಿದ್ದಾರೆ. ವಿತರಕ ವಲಯದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಫಿಲಂ ಫೆಡರೇಷನ್ ಆಫ್ ಇಂಡಿಯಾದಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿದ್ದಾರೆ. ದಕ್ಷಿಣ ಭಾರತ ಚಲನಚಿತ್ರ ಮಂಡಳಿಯ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಹಲವು ಬಾರಿ ರಾಜ್ಯ ಪ್ರಶಸ್ತಿ ಸಲಹಾ ಮಂಡಳಿಯ ಸದಸ್ಯರಾಗಿದ್ದರು. ೧೯೯೭-೯೮ರಲ್ಲಿ ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ.

## ಗುರುಕಿರಣ್

ಕನ್ನಡದ ಯುವ ಸಂಗೀತ ನಿರ್ದೇಶಕ. ನಾಯಕನಾಗಲು ಅವಕಾಶಗಳನ್ನು ಅರಸಿ ಚಿತ್ರರಂಗಕ್ಕೆ ಬಂದ ವ್ಯಕ್ತಿ ಗುರುಕಿರಣ್. ಮೂಲತಃ ಮಂಗಳೂರಿನವರು. ಮೊದ ಮೊದಲು ಸಂಗೀತ ವಾದ್ಯ ಗೋಷ್ಠಿಗಳಲ್ಲಿ ಹಾಡುತ್ತಾ, ಕಾರ್ಯಕ್ರಮಗಳನ್ನು ನೀಡುತ್ತಿದ್ದವರು. ನಟ-ನಿರ್ದೇಶಕ



ಉಪೇಂದ್ರರ ಕಣ್ಣಿಗೆ ಬಿದ್ದಾಗ ಅವರು 'ಎ' ಚಿತ್ರದ ಸಂಗೀತ ನಿರ್ದೇಶಕರಾಗಿ ಅವಕಾಶ ನೀಡಿದರು. ಚಿತ್ರದ ಹಾಡುಗಳು, ಸಂಗೀತ ಯುವ ಜನತೆಯನ್ನು ಹುಚ್ಚೆಬ್ಬಿಸಿತು. ಚಿತ್ರದ ಬಹುತೇಕ ಹಾಡುಗಳು ವರ್ಷ ಪೂರಾ ಜನಗಳ ಬಾಯಲ್ಲಿ ಗುನುಗುಟ್ಟುವಂತಿತ್ತು. ನಂತರ 'ಉಪೇಂದ್ರ', 'ಮಜ್ನು' ಚಿತ್ರದ ಹಾಡುಗಳಿಂದ ತಮ್ಮ ಯಶಸ್ಸು ಕೇವಲ ಆಕಸ್ಮಿಕ ಅಲ್ಲ ಎಂಬುದನ್ನು ಸಾಬೀತು ಪಡಿಸಿದರು. ಮೊದಲಿನಿಂದಲೂ ಅಭಿನಯದಲ್ಲಿ ಆಸಕ್ತಿಯಿದ್ದುದರಿಂದ ಹಲವಾರು ಕಿರುತೆರೆಯ ಧಾರವಾಹಿಗಳಲ್ಲಿ ಅಭಿನಯಿಸುತ್ತಿದ್ದರು. ಕೋಡ್ಲು ರಾಮಕೃಷ್ಣರ 'ಸ್ವಲ್ಪ ಅಡ್ಜಸ್ಟ್ ಮಾಡ್ಕೊಳ್ಳಿ', ಮತ್ತು 'ಚೆನ್ನಪ್ಪ ಚೆನ್ನೇಗೌಡ' ಚಿತ್ರದಲ್ಲಿ ಮೂವರು ನಾಯಕರಲ್ಲಿ ಒಬ್ಬರಾಗಿ ನಟಿಸಿದ್ದಾರೆ.

## ಗುರುದತ್

ಚಿತ್ರಸಾಹಿತಿ ದಿವಂಗತ



ಚಿ.ಉದಯಶಂಕರ್‌ರ ಮಗ. 'ಆನಂದ್' ಚಿತ್ರದಿಂದ ಖಳನಾಯಕನಾಗಿ ಚಿತ್ರರಂಗಕ್ಕೆ ಪ್ರವೇಶ (೧೯೮೬). ನಂತರ 'ಸಂಯುಕ್ತ' 'ಇನ್ಸ್‌ಪೆಕ್ಟರ್ ವಿಕ್ರಂ' 'ಆನಂದ ಜ್ಯೋತಿ' ಚಿತ್ರಗಳಲ್ಲಿ ಪೋಷಕ ಪಾತ್ರಗಳು. ಅಬ್ಬಾಯಿನಾಯ್ಡು ಅವರ ಭೂಮಿತಾಯಾಣೆ' ಚಿತ್ರದಲ್ಲಿ ನಾಯಕನಾಗಿ ಅವಕಾಶ. ನಂತರ 'ಹಳ್ಳಿರಂಭೆ ಬೆಳ್ಳಿ ಬೊಂಬೆ' ಯಲ್ಲಿ ಮಾಲಾಶ್ರೀಯೊಂದಿಗೆ ನಾಯಕ. ಮತ್ತಷ್ಟು ಪೋಷಕ ಪಾತ್ರಗಳಲ್ಲಿ ಅಭಿನಯ. 'ಸಮರ' ಚಿತ್ರದಿಂದ ನಿರ್ದೇಶನಕ್ಕೂ ಪ್ರವೇಶ. ಪ್ರಸ್ತುತ ತಮಿಳು, ತೆಲುಗು ಚಿತ್ರಗಳಲ್ಲಿ ಖಳನಾಯಕನಾಗಿ ಅಭಿನಯ. 'ಶಬ್ದವೇಧಿ', 'ನಗರದಲ್ಲಿ ನಾಯಕರು', 'ಜೀವನ ಚೈತ್ರ' ಮೊದಲಾದವು ಅವರ ಯಶಸ್ವೀ ಚಿತ್ರಗಳು.

## ಗುರುದತ್ ಮುಸುರಿ

ನಟ, ನಿರ್ಮಾಪಕ ಗುರುದತ್ ಮುಸುರಿ ಹಾಸನ ಜಿಲ್ಲೆಯ ಸಕಲೇಶಪುರದಲ್ಲಿ ೧೯೬೮ರಲ್ಲಿ ಜನಿಸಿದರು. ಎಸ್.ಎಸ್.ಎಲ್.ಸಿ.ವರೆಗೆ ವಿದ್ಯಾಭ್ಯಾಸ. ತಂದೆ ಹಿರಿಯ ಹಾಸ್ಯ ಕಲಾವಿದ ಮುಸುರಿ



ಕೃಷ್ಣಮೂರ್ತಿ ಅವರ ಪ್ರಭಾವದಿಂದ ಬಾಲ್ಯದಲ್ಲಿಯೇ ಚಿತ್ರರಂಗದ ಸೆಳೆತಕ್ಕೆ ಸಿಲುಕಿದರು. ಸತ್ಯನಾರಾಯಣ ನಿರ್ದೇಶನದ 'ಸಹಧರ್ಮಿಣಿ' ಚಿತ್ರದಲ್ಲಿ ಬಾಲನಟನಾಗಿ ಪ್ರವೇಶ. ನಂತರ 'ನನ್ನ ಪ್ರಾಯಶ್ಚಿತ್ತ', 'ಭಾಗ್ಯವಂತರು', 'ಸಹೋದರರ ಸವಾಲ್' ಚಿತ್ರಗಳಲ್ಲಿ ಬಾಲನಟರಾಗಿ ಅಭಿನಯ. ತಂದೆಯ ಮೃತ್ಯುವಿನ ನಂತರ ಸೋದರ ಜಯಸಿಂಹ ಮುಸುರಿ ಅವರೊಡನೆ ಸೇರಿ 'ಭರತ್', 'ಸೆಂಟ್ರಲ್ ರೌಡಿ', 'ವಿಕ್ರಮ್', 'ರಾಜೀವಪ್ಪ' ಚಿತ್ರಗಳನ್ನು ನಿರ್ಮಿಸಿದರು. ರಾಜೀವಪ್ಪ ಚಿತ್ರದ ನಾಯಕರು. ತಮ್ಮ ತಂದೆ ಮುಸುರಿ ಕೃಷ್ಣಮೂರ್ತಿ ಅವರ ಅಭಿನಯದ ಹಲವು ಚಿತ್ರಗಳ ತುಣುಕುಗಳನ್ನು ಜೋಡಿಸಿ 'ನಟ ಚಾಣುಕ್ಯ ಮುಸುರಿ' ಎಂಬ ವ್ಯಕ್ತಿ ಚಿತ್ರವನ್ನು ನಿರ್ಮಿಸಿದರು. ಹಲವಾರು ಕಿರುತೆರೆಯ ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ.

## ಗೋಪಾಲ್.ಕೆ.ವಿ

೬೦-೭೦ರ ದಶಕದಲ್ಲಿ ಗೋಪಾಲ್-ಲಕ್ಷ್ಮಣ್ ಎಂಬ ಹೆಸರಿನಿಂದ ಜನಪ್ರಿಯಗೊಂಡ ಜೋಡಿಯಲ್ಲಿ ಒಬ್ಬರು. ಶ್ರೀನಿಧಿ ಪ್ರೊಡಕ್ಷನ್ಸ್ ಲಾಂಛನದಡಿಯಲ್ಲಿ



ಹಲವಾರು ಯಶಸ್ವೀ ಚಿತ್ರಗಳನ್ನು ನಿರ್ಮಿಸಿದರು. ಸ್ವಭಾವತಃ ನಿಷ್ಠುರವಾದಿಗಳಾದ ಗೋಪಾಲ್ ಕನ್ನಡ ಚಳವಳಿಯಲ್ಲೂ ಭಾಗವಹಿಸಿದರು. ಡಬ್ಬಿಂಗ್ ಚಿತ್ರಗಳನ್ನು ವಿರೋಧಿಸಿದರು. ಚಿತ್ರರಂಗದಲ್ಲಿ ಶಿಸ್ತು-ಸಂಯಮಗಳನ್ನು ಮೂಡಿಸಿದರು. ಚಿತ್ರಪ್ರೇಮಿಗಳ ಸಂಘವನ್ನು ಪ್ರಾರಂಭಿಸಿ ಕನ್ನಡ ಪರ ಕಾರ್ಯಕ್ರಮಗಳಿಗೆ ಚಾಲನೆ ಕೊಟ್ಟರು. ರಾಜಕುಮಾರ್ ಅವರ ಹಲವು ಚಿತ್ರಗಳ ನಿರ್ಮಾಣ ಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸಿದ್ದ ಗೋಪಾಲ್ ಗೆಳೆಯ ಲಕ್ಷ್ಮಣ್ ಅವರೊಂದಿಗೆ ಶ್ರೀನಿಧಿ ಲಾಂಛನದಡಿಯಲ್ಲಿ 'ಬಂಗಾರದ ಮನುಷ್ಯ', 'ಬೆಸುಗೆ', 'ಭಾಗ್ಯಜ್ಯೋತಿ', 'ಮಾಗಿಯ ಕನಸು' 'ಭಲೇಹುಚ್ಚ' ಮುಂತಾದ ಸದಭಿರುಚಿಯ ಚಿತ್ರಗಳನ್ನು ನಿರ್ಮಿಸಿದರು. ಇವರು ನಿರ್ಮಿಸಿದ 'ಬಂಗಾರದ ಮನುಷ್ಯ' ಚಿತ್ರಕ್ಕೆ ರಾಜ್ಯಸರ್ಕಾರದ ೧೯೭೧-೭೨ರ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಬಂದಿದೆ. ಭಾರತ್ ಟಾಕೀಸ್‌ನ ಮಾಲೀಕರಿಗಾಗಿ 'ಉಯ್ಯಾಲೆ' ಹಾಗೂ 'ದೇವರ ಮಕ್ಕಳು' ಚಿತ್ರಗಳ ನಿರ್ಮಾಣದಲ್ಲಿ ನೆರವಾದರು.

## ಗೋಪಿ ಕಾನಕಾನಹಳ್ಳಿ

ಗೆಳೆಯರ ಬಳಗದಲ್ಲಿ ಕ್ಯಾನ್‌ಕ್ಯಾನ್ ಗೋಪಿ ಎಂದೇ ಚಿರಪರಿಚಿತರಾಗಿದ್ದ ಕಾನಕಾನಹಳ್ಳಿ ಗೋಪಿನಾಥ್ ಅವರದು ಬಹುಮುಖ ಪ್ರತಿಭೆ. ರಂಗಭೂಮಿಯ ನಂಟು - ಚಿತ್ರರಂಗದ ಅಂಟು ಎರಡೂ ಇದ್ದ ಗೋಪಿಯವರು ಗಿರೀಶ್ ಕಾರ್ನಾಡ್‌ರ 'ಚಿತ್ರಗಳಿಗೆಲ್ಲ ಸಹನಿರ್ದೇಶಕ, ನಟ. ಆ್ಯಂಟಿಕ್ಸ್ - ಪುರಾತನ ವಸ್ತುಗಳ ಸಂಗ್ರಹದಲ್ಲಿಯೂ ಆಸಕ್ತಿ. ಚಿತ್ರಸಮಾಜಗಳಲ್ಲಿ ಚಿತ್ರೋತ್ಸವ ಏರ್ಪಡಿಸುವುದು, ಚಲನಚಿತ್ರ ಇತಿಹಾಸ



ವಸ್ತು ಪ್ರದರ್ಶನ ಮಾಡುವುದು ಹವ್ಯಾಸ. ಇವರಿಂದಾಗಿ ಬ್ರಿಟಿಷ್ ಫಿಲಂ ಇನ್‌ಸ್ಟಿಟ್ಯೂಟ್‌ಗೆ ಅತಿಥಿಯಾಗಿ ಇಂಗ್ಲೆಂಡಿಗೆ ಹೋಗಿ ಬರುತ್ತಿದ್ದರು. ಬಯೋಸ್ಕೋಪ್ ಪುಸ್ತಕ ಪ್ರಕಟಿಸಿದ್ದಾರೆ. ಗೋಪಿಯವರನ್ನು ಚಿತ್ರೋದ್ಯಮ ಚಲನಚಿತ್ರ ಇತಿಹಾಸ ಸಂಗ್ರಹಕಾರನೆಂದೇ ಗುರುತಿಸಿದೆ. ಹಲವು ಚಿತ್ರಗಳಲ್ಲಿ ಅಭಿನಯಿಸಿದರು. ಜನಪದ ನೃತ್ಯ, ಸಂಗೀತ, ಕೋಲಾಟ ಮುಂತಾದ ಪ್ರದರ್ಶನ ನೀಡುತ್ತಿದ್ದರು. ಗೋಪಿ ಈಗಿಲ್ಲವಾದರೂ ಅವರ ಒಡನಾಟ ಹೊಂದಿದವರ ನೆನಪಿನಿಂದ ಅವರೆಂದೂ ಮರೆಯಾಗದ ಛಾಪು ಒತ್ತಿದ್ದಾರೆ.

### ಗೋವಿಂದರಾಜ್. ಎಸ್.ಎ

ಹಿರಿಯ ನಟ ರಾಜಕುಮಾರ್ ಅವರ



ಅಳಿಯ. ಮೈಸೂರು ಜಿಲ್ಲೆಯ ಕೆ.ಆರ್.ನಗರದ ಸಾಲಿಗ್ರಾಮದವರು. ೧೯೩೪ರಲ್ಲಿ ಜನಿಸಿದ ಇವರು ನಿರ್ಮಾಣ ನಿರ್ವಾಹಕರಾಗಿ ಕೆಲಸ ಮಾಡುವುದರೊಂದಿಗೆ ಚಿತ್ರರಂಗ ಪ್ರವೇಶಿಸಿದರು. 'ಶ್ರೀನಿವಾಸ ಕಲ್ಯಾಣ', 'ತ್ರಿಮೂರ್ತಿ' ಮುಂತಾದ ಚಿತ್ರಗಳ ನಿರ್ಮಾಣ ನಿರ್ವಾಹಕರಾಗಿದ್ದರು. ೧೯೮೦ರಲ್ಲಿ ನಿರ್ಮಾಪಕರಾದರು. 'ವಸಂತ ಗೀತ' ಇವರ ನಿರ್ಮಾಣದ ಮೊದಲ ಚಿತ್ರ. 'ಧ್ರುವತಾರೆ', 'ಭಾಗ್ಯವಂತ', 'ಭಕ್ತ ಪ್ರಹ್ಲಾದ', 'ರಥ ಸಪ್ತಮಿ', 'ಸಂಯುಕ್ತ', 'ಆಕಸ್ಮಿಕ' ಮೊದಲಾದ ಜನಪ್ರಿಯ ಚಿತ್ರಗಳನ್ನು ನಿರ್ಮಿಸಿದರು. ಇವರು ನಿರ್ಮಿಸಿದ 'ಧ್ರುವತಾರೆ' ೧೯೮೫-೮೬, ಹಾಗೂ 'ಆಕಸ್ಮಿಕ' ೧೯೯೩-೯೪ನೇ ಸಾಲಿನ ರಾಜ್ಯಸರ್ಕಾರದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದಿವೆ. ಶ್ರೀಮತಿ ಪಾರ್ವತಮ್ಮ ರಾಜಕುಮಾರ್ ಅವರ ಸಹೋದರ. ರಾಜಕುಮಾರ್ ಅಪಹರಣವಾದಾಗ ಅವರೊಂದಿಗಿದ್ದವರು.

### ಗೋವಿಂದರಾವ್.ಜಿ.ಕೆ

ಸೇಂಟ್ ಜೋಸೆಫ್ ಕಾಲೇಜಿನಲ್ಲಿ



ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಜಿ.ಕೆ.ಗೋವಿಂದರಾವ್ ಹುಟ್ಟಿದ್ದು ೧೯೩೭ರಲ್ಲಿ. ಸಾಹಿತ್ಯ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದ ಇವರು ನಾಟಕಗಳ ರಚನೆ, ವಿಮರ್ಶೆ, ಅನುವಾದ ಹೀಗೆ ಹಲವು ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಒಳ್ಳೆಯ ಅಂಕಣಕಾರರು, ಉತ್ತಮ ವಾಗ್ಮಿಗಳು, ರಂಗಭೂಮಿ ಕಲಾವಿದರು. ಇವರು ಅಂಕುರ್ ನಿರ್ದೇಶನದ 'ಸಂಸ್ಕಾರ' ನಾಟಕದಲ್ಲಿ ನೀಡಿದ ಪರಿಣಾಮಕಾರಿ ಅಭಿನಯ ಚಿತ್ರರಂಗ ಪ್ರವೇಶಕ್ಕೆ ಕಾರಣವಾಯಿತು. ೧೯೭೬ರಲ್ಲಿ ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಕಥಾಸಂಗಮ' ಚಿತ್ರದ ಒಂದು ಭಾಗವಾದ 'ಹಂಗು' ಚಿತ್ರದ ಮೂಲಕ ಬೆಳ್ಳಿತೆರೆ ಪ್ರವೇಶಿಸಿದರು. 'ಗ್ರಹಣ', 'ಅರಿವು' ಮುಂತಾದ ಕಲಾತ್ಮಕ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಸಂಕೀರ್ಣ ವ್ಯಕ್ತಿತ್ವದ ಒರಟು ಛಾಯೆಯ ಪಾತ್ರಗಳಲ್ಲಿ ಲೀಲಾಜಾಲವಾಗಿ ಅಭಿನಯಿಸಿದ್ದಾರೆ. 'ಕಾಲೇಜುರಂಗ', 'ತುಳಸೀ ದಳ', 'ಡಾಕ್ಟರ್ ಕೃಷ್ಣ', 'ಭಾರತ್ ೨೦೦೦', 'ಕಾನೂರು ಹೆಗ್ಗಡತಿ' ಮುಂತಾದ ಜನಪ್ರಿಯ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅಭಿನಯದ ಜೊತೆಗೆ ಜನಪರ ಹೋರಾಟಗಳಲ್ಲಿ ಸದಾ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕನ್ನಡ ಪರ ಯಾವುದೇ ಹೋರಾಟಗಳಿರಲಿ, ಅನ್ಯಾಯದ ವಿರುದ್ಧದ ಹೋರಾಟವಿರಲಿ, ಚಲನಚಿತ್ರಗಳಲ್ಲಿ ಹಿಂಸೆ, ಕ್ರೌರ್ಯ ಮುಂತಾದವುಗಳ ವಿರುದ್ಧ ಹೋರಾಟವಿರಲಿ ಮುಂಚೂಣಿಯಲ್ಲಿ ಇರುತ್ತಾರೆ. ಸಂಜಯ್ ಖಾನ್ ನಿರ್ಮಿಸಿದ 'ಟಿಪ್ಪು ಸುಲ್ತಾನ್' ಹಿಂದಿ ಧಾರಾವಾಹಿಯ ಕನ್ನಡದ ಡಬ್ಬಿಂಗ್ ವಿರುದ್ಧ ಸಮರವನ್ನು ಸಾರಿದರು. ಭಾಷೆ, ನಾಡು-ನುಡಿಗಳ ಏಳಿಗೆಗಾಗಿ ಸದಾ ತುಡಿಯುವ ಇವರು ಸಾಮಾಜಿಕ ಕಳಕಳಿಯನ್ನು ಹೊಂದಿದ್ದಾರೆ. ತಾವೇ ಅಭಿನಯಿಸಿದ 'ಭಾರತ್ ೨೦೦೦' ಡಬ್ಬಿಂಗ್ ಚಿತ್ರದ ವಿರುದ್ಧವೂ ಹೋರಾಟವನ್ನು ಮಾಡಿದರು. ಷೇಕ್ಸ್‌ಪಿಯರ್ ಹಾಗೂ ಇನ್ನಿತರ ಇಂಗ್ಲೀಷ್ ಲೇಖಕರ ಕೃತಿಗಳ ಬಗ್ಗೆ ಆಳವಾಗಿ ಅಧ್ಯಯನ ಮಾಡಿದ್ದಾರೆ.

### ಗೋವಿಂದ ಸ್ವಾಮಿ.ಎ



ಚಿತ್ರರಂಗದ ಹಿರಿಯ ಧ್ವನಿಗ್ರಾಹಕರಲ್ಲಿ ಒಬ್ಬರು ಗೋವಿಂದಸ್ವಾಮಿ. ಕೊಯಮತ್ತೂರಿನ ಸಂಟ್ರಲ್ ಸ್ಟುಡಿಯೋಸ್‌ನಲ್ಲಿ ಮೊದಲು ಉದ್ಯೋಗ. ಚಾಮುಂಡೇಶ್ವರಿ ಸ್ಟುಡಿಯೋಸ್‌ನಲ್ಲಿ ಧ್ವನಿ ಗ್ರಾಹಕರಾಗಿ ಸೇವೆ. ನಂತರ ಮದರಾಸಿನ ನೆಪ್ಚ್ಯೂನ್ ಸ್ಟುಡಿಯೋಸ್‌ನಲ್ಲಿ ಹನ್ನೆರಡು ವರ್ಷ ಸೇವೆ ಸಲ್ಲಿಸಿದರು. 'ಸುಭದ್ರಾ ಕಲ್ಯಾಣ' ಮತ್ತು 'ಕಾಡು' ಚಿತ್ರಗಳ ಧ್ವನಿಗ್ರಹಣಕ್ಕಾಗಿ ಅತ್ಯುತ್ತಮ ಧ್ವನಿಗ್ರಾಹಕ ಪ್ರಶಸ್ತಿಯನ್ನು ಪಡೆದಿದ್ದಾರೆ.

### ಗೋವಿಂದು.ಸಾ.ರಾ.

ಅಖಿಲ ಕರ್ನಾಟಕ ರಾಜಕುಮಾರ್ ಅಭಿಮಾನಿಗಳ ಸಂಘದ ಅಧ್ಯಕ್ಷರಾಗಿ ರಾಜ್ಯಾದ್ಯಂತ ಹೆಸರು ಗಳಿಸಿರುವ



ಸಾ.ರಾ.ಗೋವಿಂದು ಅವರು ಇಂದು ಕನ್ನಡದ ಪ್ರಮುಖ ಚಲನಚಿತ್ರ ನಿರ್ಮಾಪಕರಲ್ಲಿ ಒಬ್ಬರು. ಅವರು ಮೆಕ್ಯಾನಿಕಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾವನ್ನು ಪಡೆದವರು. ವೃತ್ತಿಗಾಗಿ ಆರಿಸಿದ್ದು ಚಿತ್ರೋದ್ಯಮವನ್ನು. ನಿರ್ಮಾಣ ನಿರ್ವಾಹಕರಾಗಿ ಚಿತ್ರರಂಗ ಪ್ರವೇಶಿಸಿ ೬೦ ಚಿತ್ರಗಳಿಗೆ ಕೆಲಸ ಮಾಡಿದರು. ಅವರು ನಿರ್ಮಿಸಿದ ಮೊದಲ ಚಿತ್ರ 'ಏಳು ಸುತ್ತಿನ ಕೋಟೆ'. ಈ ಚಿತ್ರಕ್ಕೆ ರಾಜ್ಯ ಸರ್ಕಾರದ ಅತ್ಯುತ್ತಮ ಧ್ವನಿ ಗ್ರಾಹಕ ಪ್ರಶಸ್ತಿ ಸಿಕ್ಕಿತು. ನಂತರ ಅವರು ತಯಾರಿಸಿದ ಚಿತ್ರಗಳು 'ಬೆಳ್ಳಿಕಾಲುಂಗುರ' 'ಬೊಂಬಾಟ್ ಹುಡ್ಗ' 'ಭಂಢ ಅಲ್ಲ ಬಹದ್ದೂರ್' 'ವೀರಣ್ಣ' 'ಜಯದೇವ್' 'ರಂಗಣ್ಣ' 'ಜಾಣ' ಮತ್ತು 'ಚೋರ ಚಿತ್ತ ಚೋರ' ಮೊದಲಾದವು. ಕಿರುತೆರೆಗಾಗಿ 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಧಾರಾವಾಹಿಯನ್ನು ನಿರ್ಮಿಸಿದ್ದಾರೆ. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಉಪಾಧ್ಯಕ್ಷರು. ಕನ್ನಡ ಪರ ಹೋರಾಟಗಳ ಮುಂಚೂಣಿಯಲ್ಲಿರುವ ಸಾ.ರಾ.ಗೋವಿಂದು ಸದಾ ಕನ್ನಡ ಚಟುವಟಿಕೆಗಳಲ್ಲಿ ಮಗ್ನ.

### ಗೌಡ.ಕೆ.ಸಿ.ಎನ್

ಕನ್ನಡ ಚಲನಚಿತ್ರ ನಿರ್ಮಾಣ, ವಿತರಣೆ ಹಾಗೂ ಪ್ರದರ್ಶನ ಹೀಗೆ ಮೂರೂ ವಿಭಾಗಗಳಲ್ಲಿ ಪ್ರಮುಖರಾದ ಹಿರಿಯರು ಕೆ.ಸಿ.ಎನ್.ಗೌಡರು. ಕೆ.ಸಿ.ಎನ್ ಸಂಸ್ಥೆಯ ಸ್ಥಾಪಕರಾದ ಅವರ ಹುಟ್ಟೂರು ದೊಡ್ಡಬಳ್ಳಾಪುರ. ೧೯೨೭ರಲ್ಲಿ ಜನಿಸಿದರು. ಮೂಲತಃ ರೇಶಿಮೆ ಉದ್ದಿಮೆದಾರರಾದ ಅವರು ಬಣ್ಣದ ಲೋಕದ ಪರಿಪಾಟಿಗೂ ಇಳಿದು ಕನ್ನಡ ಚಿತ್ರರಸಿಕರು ಎಂದೆಂದಿಗೂ ಮರೆಯಲಾಗದಂಥ 'ಬಬ್ರುವಾಹನ', 'ಹುಲಿಯ ಹಾಲಿನ ಮೇವು' ಚಿತ್ರಗಳನ್ನು ರಾಜಕಮಲ್ ಆರ್ಟ್ಸ್ ಚಿತ್ರ ನಿರ್ಮಾಣ ಸಂಸ್ಥೆಯ ಹೆಸರಿನಲ್ಲಿ ನಿರ್ಮಿಸಿದ್ದಾರೆ. ಇದಕ್ಕ ಮೊದಲು ಸಾರ್ವಕಾಲಿಕ ದಾಖಲೆ ಹೊಂದಿರುವ 'ಬಂಗಾರದ ಮನುಷ್ಯ' ಚಿತ್ರಕ್ಕೆ



ಧನಸಹಾಯ ಮಾಡಿದರು. 'ಶರಪಂಜರ' ಹಾಗೂ 'ಭಲೇಜೋಡಿ' ಚಿತ್ರಗಳನ್ನು ನಿರ್ಮಿಸಿದ ಕೆ.ಸಿ.ಎನ್.ಗೌಡರು ಹಲವು ಚಿತ್ರಗಳನ್ನು ವಿತರಿಸಿದರು. ಕನ್ನಡ ಚಿತ್ರಗಳನ್ನು ಪ್ರದರ್ಶಿಸುವ 'ನವರಂಗ್', 'ಊರ್ವಶಿ' ಥಿಯೇಟರ್‌ಗಳು ಇವರು ಸ್ಥಾಪಿಸಿದ ಸಂಸ್ಥೆಯ ಕೊಡುಗೆಗಳು. ಇವರ ಪುತ್ರರಾದ ಕೆ.ಸಿ.ಎನ್.ಚಂದ್ರಶೇಖರ್ ಹಾಗೂ ಕೆ.ಸಿ.ಎನ್.ಮೋಹನ್ ಇಬ್ಬರೂ ಚಿತ್ರೋದ್ಯಮದಲ್ಲಿ ತೊಡಗಿಕೊಂಡವರು.

### ಗೌತಮ್‌ರಾಜು

ದಕ್ಷಿಣ ಭಾರತ ಚಿತ್ರರಂಗದ ಪರಿಣತ ಸಂಕಲನಕಾರ. ಮೂಲತಃ ಮದರಾಸಿನವರು. ಮಾತೃಭಾಷೆ ತೆಲುಗು. ಬಿ.ಎ.ಪದವಿಯನ್ನು ಅರ್ಧಕ್ಕೆ ನಿಲ್ಲಿಸಿ, 'ಚಟ್ಟಾನಿಕಿ ಕಳ್ಳು ಲೇವು' ತೆಲುಗು ಚಿತ್ರದಿಂದ ಚಲನಚಿತ್ರರಂಗ ಪ್ರವೇಶಿಸಿದರು. ಸರಿ ಸುಮಾರು ೨೫೦ಕ್ಕೂ ಹೆಚ್ಚು ಚಿತ್ರಗಳಿಗೆ ಸಂಕಲನಕಾರರಾಗಿ ದುಡಿದಿರುವ ಗೌತಮ ರಾಜು ಕನ್ನಡದಲ್ಲಿ 'ಆಸೆಯ ಬಲೆ', 'ಕೃಷ್ಣ ನೀ ಕುಣಿದಾಗ', 'ಡ್ಯಾನ್ಸ್ ರಾಜ ಡ್ಯಾನ್ಸ್' ಮೊದಲಾದ ಚಿತ್ರಗಳಿಗೆ ಸಂಕಲನ ಕಾರ್ಯ ಮಾಡಿದ್ದಾರೆ. ೧೯೮೮-೮೯ನೇ ಸಾಲಿನಲ್ಲಿ 'ಕೃಷ್ಣ ನೀ ಕುಣಿದಾಗ' ಚಿತ್ರದ ಸಂಕಲನಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದರು.

### ಗೌರಿಶಂಕರ್. ಬಿ.ಸಿ.

ಕನ್ನಡ ಚಿತ್ರರಂಗದ ಅತ್ಯಂತ ಪ್ರಯೋಗಶೀಲ, ಪ್ರತಿಭಾವಂತ ಛಾಯಾಗ್ರಾಹಕರಲ್ಲೊಬ್ಬರಾದ ಬಿ.ಸಿ.ಗೌರಿಶಂಕರ್ ಅತ್ಯಂತ ಹೆಚ್ಚು ಬಾರಿ



ರಾಜ್ಯ ಸರ್ಕಾರದ ಛಾಯಾಗ್ರಾಹಕ ಪ್ರಶಸ್ತಿ ಪಡೆದ ತಾಂತ್ರಿಕತಜ್ಞ. ವ್ಯಾಪಾರಿ ಹಾಗೂ ಕಲಾತ್ಮಕ ಎರಡೂ ವರ್ಗಗಳ ಚಿತ್ರಗಳಿಗೂ ಸಮಾನವಾಗಿ ಸ್ಪಂದಿಸುವ ಅವರು ಚಿತ್ರ ನಿರ್ದೇಶಕರೂ ಹೌದು. ೧೯೫೪ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ವಿದ್ಯಾಭ್ಯಾಸ ಮುಗಿಸಿದ ನಂತರ ಶ್ರೀ ಜಯಚಾಮರಾಜೇಂದ್ರ ಆಕ್ಯುಪೇಷನಲ್

ಇನ್ಸ್ಟಿಟ್ಯೂಟ್‌ನಲ್ಲಿ ಸಿನಿಮಾಟೋಗ್ರಫಿ ಕೋರ್ಸ್ ಮುಗಿಸಿದರು. ಕಂಠೀರವ ಸ್ಟುಡಿಯೋದಲ್ಲಿ ಎರಡು ವರ್ಷಗಳ ಕಾಲ ಸ್ಟುಡಿಯೋ ಅಪ್ರೆಂಟಿಸ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, 'ಚಂದಮಾರುತ' ಚಿತ್ರಕ್ಕೆ ಅವರು ಮಾಡುತ್ತಿದ್ದ ಕೆಲಸವನ್ನು ನೋಡಿ ಮೆಚ್ಚಿದ ಅಸೋಸಿಯೇಟ್ ಛಾಯಾಗ್ರಾಹಕ ಟಾಮ್‌ಕೋವನ್ ನಿರ್ದೇಶಕ ಪಟ್ಟಾಭಿರಾಮರೆಡ್ಡಿ ಅವರಿಗೆ ಶಿಫಾರಸು ಮಾಡಿದರು. 'ಶೃಂಗಾರಮಾಸ' ಚಿತ್ರದಿಂದ ಸ್ವತಂತ್ರ ಛಾಯಾಗ್ರಾಹಕರಾದ ಗೌರಿಶಂಕರ್ ಅಲ್ಲಿಂದ ಹಿಂದೆ ತಿರುಗಿ ನೋಡಿದ್ದೇ ಇಲ್ಲ ಎನ್ನಬಹುದು. ಅನೇಕ ಹೊಸ ಪೀಳಿಗೆಯ ಚಿತ್ರಗಳಾದ 'ಅನುರೂಪ', 'ಸಂವೇದ', 'ಅಪರಿಚಿತ', 'ಬಂಗಾರದಕೋ ಮಾಂಸದಕೋ', 'ಅರಿವು', 'ಮಿಂಚಿನ ಓಟ', 'ಗಾಳಿಮಾತು', 'ಅಂತರಾಳ', 'ಚಿತ್ರಲೇಖ' ಚಿತ್ರಗಳಲ್ಲದೆ ಕಮರ್ಷಿಯಲ್ ಚಿತ್ರಗಳಾದ 'ಹೊಸಬೆಳಕು', 'ಚಲಿಸುವ ಮೋಡಗಳು', 'ಬಂಧನ', 'ಆಲೆಮನೆ' ಮುಂತಾದ ಅನೇಕ ಚಿತ್ರ ಗಳಲ್ಲಿ ಅವರ ಕ್ಯಾಮರಾ ಕೈಚಳಕ ಕಾಣಸಿಗುತ್ತದೆ. 'ಸ್ಪಂದನ' (೧೯೭೭-೭೮), 'ಮಿಂಚಿನ ಓಟ' (೧೯೭೯-೮೦), 'ಅರಿವು' (೧೯೭೯-೮೦), 'ಧ್ರುವತಾರೆ' (೧೯೮೫-೮೬), 'ಮೈಸೂರ ಮಲ್ಲಿಗೆ' (೧೯೯೧-೯೨), 'ಓ' (೧೯೯೯-೨೦೦೦) ಚಿತ್ರಗಳ ಶ್ರೇಷ್ಠ ಛಾಯಾಗ್ರಹಣಕ್ಕಾಗಿ ರಾಜ್ಯಸರ್ಕಾರದ ಪ್ರಶಸ್ತಿಯನ್ನು ಆರುಬಾರಿ ಪಡೆದಿದ್ದಾರೆ. ಅವರು ನಿರ್ದೇಶಿಸಿದ ಮೂರು ಚಿತ್ರಗಳೂ ಪ್ರಯೋಗಾತ್ಮಕ ಚಿತ್ರಗಳು. 'ಕಂಡದ ಮಳೆ', 'ಏಳು ಸುತ್ತಿನ ಕೋಟೆ', 'ಆಟ ಬೊಂಬಾಟ' ಚಿತ್ರಗಳು ನಿರೂಪಣೆಯಲ್ಲಿ ಹೊಸತನವಿದ್ದರೂ ಗಲ್ಲಾಪೆಟ್ಟಿಗೆಯಲ್ಲಿ ಯಶಸ್ಸನ್ನು ಪಡೆಯದೇ ಹೋಯಿತು.

## ಗೌರಿಸುಂದರ್

'ಚಿತ್ರಶ್ರೀ' ಎಂಬ ಚಿತ್ರ ನಿರ್ಮಾಣ ಸಂಸ್ಥೆಯ ಸ್ಥಾಪಕರಾದ ಗೌರಿಸುಂದರ್



ವೃತ್ತಿಯಿಂದ ಪ್ರಕಾಶಕರು. 'ಸುಂದರ ಪ್ರಕಾಶನ'ದ ಮಾಲೀಕರಾಗಿ ಹಲವು ಪುಸ್ತಕಗಳ ಪ್ರಕಟಣೆಯನ್ನು ಮಾಡಿದ್ದಾರೆ. ಟೂರಿಸ್ಟ್ ಗೈಡ್ ಆಗಿದ್ದರು. ಪಂಚತಾರಾ ಹೋಟೆಲ್‌ಗಳಲ್ಲಿ ನಿರ್ವಾಹಕರಾಗಿ ದುಡಿದಿದ್ದಾರೆ. ಮೈಸೂರು ಅರಮನೆಯ ಪುರೋಹಿತರಾಗಿದ್ದ ಗೌರಿನರಸಿಂಹ ಶಾಸ್ತ್ರಿ ವಂಶಸ್ಥರಾದ ದರಿಂದ ಸುಂದರ್ ಅವರ ಹೆಸರಿನ ಜೊತೆ 'ಗೌರಿ' ಸೇರಿಕೊಂಡಿದೆ. ಹಿರಿಯ ನಿರ್ದೇಶಕ ಜಿ.ವಿ.ಅಯ್ಯರ್ ಅವರ ಸಹಾಯಕರಾಗಿ 'ಹಂಸಗೀತೆ' ಚಿತ್ರದಿಂದ ಚಿತ್ರರಂಗಕ್ಕೆ ಬಂದ ಗೌರಿಸುಂದರ್ ನಂತರದ ದಿನಗಳಲ್ಲಿ ಅಯ್ಯರ್ ಅವರ ಹಲವು ಚಿತ್ರಗಳಲ್ಲಿ ಸಹಾಯಕರಾಗಿ ಅನುಭವ ಗಳಿಸಿದರು. ೧೯೭೮ರಲ್ಲಿ ತೆರಕಂಡ 'ಸಂದರ್ಭ' ಚಿತ್ರವನ್ನು ನಿರ್ಮಿಸಿ ನಿರ್ದೇಶಿಸಿದರು. ಈ ಚಿತ್ರ ತನ್ನ ವಿಶಿಷ್ಟ ನಿರೂಪಣೆಯಿಂದ ವಿಮರ್ಶಕರ ಗಮನ ಸೆಳೆಯಿತು. ಈ ಚಿತ್ರದಿಂದ ಎಸ್.ಪಿ.ಬಾಲಸುಬ್ರಹ್ಮಣ್ಯಂ ಸಂಗೀತ ನಿರ್ದೇಶಕರಾದರು. ತಮಿಳಿನ ಹಿರಿಯ ತಾರೆ ಜೆಮಿನಿ ಗಣೇಶನ್ ಅಭಿನಯಿಸಿದ್ದರು. ನಂತರ 'ಚಿತ್ರಕೂಟ' ಎಂಬ ಚಿತ್ರವನ್ನು ನಿರ್ದೇಶಿಸಿದರು. ಅದರ ಚಿತ್ರ ಕಾರಣಾಂತರಗಳಿಂದ ತೆರಕಾಣಲಿಲ್ಲ. ಹಿಂದಿ ಚಿತ್ರರಂಗದ ಸಂಜೀವ್ ಕುಮಾರ್ ಅವರನ್ನು ಕರೆಸಿ ಚಿತ್ರದ ಮುಹೂರ್ತ ಮಾಡಿದರು. ಸಾಹಿತ್ಯ ಕ್ಷೇತ್ರದಲ್ಲಿ ಪರಿಶ್ರಮವುಳ್ಳ ಗೌರಿಸುಂದರ್ ವೀಡಿಯೋ ಚಿತ್ರೀಕರಣಗಳನ್ನು ನಿರ್ವಹಿಸಿದ್ದಾರೆ. ಇವರು ಖ್ಯಾತ ಪತ್ರಕರ್ತ, ನಟ ವಿ.ಎನ್.ಮೂರ್ತಿಯವರ ಅಳಿಯ.

## ಚಂದನ್‌ಮಲ್ ಬಾಫ್ನಾ

'ಚಂದನ್ ಫಿಲಮ್ಸ್' ಚಿತ್ರ ವಿತರಣಾ ಸಂಸ್ಥೆಯ ಮಾಲೀಕರಾದ ಚಂದನ್‌ಮಲ್ ಬಾಫ್ನಾ ರಾಜಸ್ಥಾನದ ಪೋಸಾಲಿಯಾದಲ್ಲಿ



ಜನಿಸಿದವರು. ವೃತ್ತಿಯಿಂದ ಬಟ್ಟೆ ವ್ಯಾಪಾರಿಗಳಾದ ಇವರು ಬೆಂಗಳೂರಿಗೆ ಬಂದು ಚಿತ್ರರಂಗಕ್ಕೆ ಕಾಲಿರಿಸಿ ೧೯೭೭ರಲ್ಲಿ ವಿಜಯ್ ಆರ್ಟ್ ಎಂಟರ್‌ಪ್ರೈಸಸ್ ಲಾಂಛನದಡಿಯಲ್ಲಿ ಸ್ನೇಹಿತರೊಂದಿಗೆ 'ಶ್ರೀಮಂತನ ಮಗಳು' ಚಿತ್ರ ನಿರ್ಮಿಸಿದರು. ೧೯೮೦ರಲ್ಲಿ ಚಂದನ್ ಫಿಲ್ಮ್ಸ್ ಚಿತ್ರ ವಿತರಣಾ ಸಂಸ್ಥೆಯನ್ನು ಸ್ಥಾಪಿಸಿ ಸುಮಾರು ೨೦ ಕನ್ನಡ ಚಿತ್ರಗಳನ್ನು ವಿತರಿಸಿದ್ದಾರೆ. 'ಕೆಂಪು ಹೋರಿ', 'ಪೋಲೀಸ್ ಸ್ಟೋರಿ', 'ಓ ಮಲ್ಲಿಗೆ', 'ಅಂತರ್ಗಾಮಿ', 'ಕನಸಲೂ ನೀನೆ ಮನಸಲೂ ನೀನೆ', 'ಭೂಮಿಗೀತ', 'ಪೂಜಾ' ಮುಂತಾದ ಜನಪ್ರಿಯ ಚಿತ್ರಗಳನ್ನು ವಿತರಿಸಿದ್ದಾರೆ. ಚಂದನ್‌ಮಲ್ ಬಾಫ್ನಾ ಅವರ ಮಕ್ಕಳಾದ ಸುರೇಶ್ ಬಾಫ್ನಾ, ಹಸಮುಖ್ ಬಾಫ್ನಾ ತಂದೆ ಸ್ಥಾಪಿಸಿದ ವಿತರಣಾ ಸಂಸ್ಥೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ.

## ಚಂದೂಲಾಲ್ ಜೈನ್ ಜೆ.

ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು ಕನ್ನಡ ಚಿತ್ರರಂಗಕ್ಕೆ ಕೆಲವು ಸ್ಮರಣೀಯ ಚಿತ್ರಗಳನ್ನು ಕಾಣಿಕೆಯಾಗಿತ್ತ ಹಿರಿಯ ನಿರ್ಮಾಪಕ ಚಂದುಲಾಲ್ ಜೈನ್. ಚಂದೂಲಾಲ್ ಕನ್ನಡ ಚಿತ್ರರಂಗದ ಅನೇಕ ಪ್ರತಿಷ್ಠಿತರ ಸಹಯೋಗದೊಂದಿಗೆ ಹಾಗೂ ಸ್ವಂತವಾಗಿ ಇದುವರೆಗೆ ೩೦ಕ್ಕೂ ಹೆಚ್ಚು ಚಿತ್ರಗಳನ್ನು ತಯಾರಿಸಿ ಯಶಸ್ಸು ಮತ್ತು ಅಪ ಯಶಸ್ಸುಗಳನ್ನು ಸಮಚಿತ್ತದಿಂದ ಸ್ವೀಕರಿಸಿದ್ದಾರೆ. ಅವುಗಳಲ್ಲಿ ಕನ್ನಡ ಚಿತ್ರರಂಗದ ಹೆಮ್ಮೆಯ ಚಿತ್ರಗಳಾದ



'ಬೂತಯ್ಯನ ಮಗ ಅಯ್ಯು', 'ತಬ್ಬಲಿಯು ನೀನಾದೆ ಮಗನೆ', 'ಭಕ್ತ ಸಿರಿಯಾಳ' 'ವೀರಪ್ಪನ್', 'ಗಂಗವ್ವ ಗಂಗಾಮಾಯಿ' ಹಾಗೂ ಕೇವಲ ೪೮ ಘಂಟೆಗಳಲ್ಲಿ ತಯಾರಾದ 'ಇದು ಸಾಧ್ಯ' ಚಿತ್ರಗಳು ಸೇರಿವೆ. ವ್ಯಾಪಾರಿ ವಲಯಗಳಲ್ಲಿ ಕೋಲಾಹಲವೆಬ್ಬಿಸಿದ 'ಕುಳ್ಳ ಏಜೆಂಟ್ ೦೦೦', 'ನಾರದ ವಿಜಯ', 'ತಾಯಿ ದೇವರು', 'ಕೌಬಾಯ್ ಕುಳ್ಳ', 'ಪ್ರಾಯ ಪ್ರಾಯ ಪ್ರಾಯ' ಮತ್ತು ಆರ್ಥಿಕವಾಗಿ ಸೋತರೂ ಪ್ರಶಸ್ತಿಗಳನ್ನು ಪಡೆದ 'ಹೇಮಾವತಿ' ಚಿತ್ರಗಳು ಕೂಡ ಅವರ ನಿರ್ಮಾಣಗಳೇ. ಚಂದೂಲಾಲ್ ಜೈನ್‌ರಿಗೆ ಕೆಲವು ಚಿತ್ರಗಳ ನಿರ್ಮಾಣಕ್ಕೆ ಕನ್ನಡ ಚಿತ್ರೋದ್ಯಮದ ಹಸರಾಂತ ನಿರ್ಮಾಪಕ ಎನ್.ವೀರಾಸ್ವಾಮಿ, ಖ್ಯಾತ ನಿರ್ದೇಶಕ ಸಿದಲಿಂಗಯ್ಯ ಮತ್ತು ಎಸ್.ಪಿ.ವರದರಾಜ್‌ರ ಸಹಯೋಗವಿತ್ತು. ಅವರೇ ಸ್ವಂತವಾಗಿ ಕೂಡ ಅನೇಕ ಚಿತ್ರಗಳನ್ನು ನಿರ್ಮಿಸಿದರು. ೧೯೭೧ರಲ್ಲಿ ತೆರಕಂಡ 'ತಾಯಿ ದೇವರು' ಅವರ ಮೊದಲನೆಯ ಚಿತ್ರ. ಜೈನ್ ರವರ ಅನೇಕ ಚಿತ್ರಗಳು ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿಗಳನ್ನು ಗಳಿಸಿವೆ. ಜೈನ್ ದಾವಣಗೆರೆ ನಿವಾಸಿ. ಕನ್ನಡ ಚಿತ್ರರಂಗಕ್ಕೆ ಅವರು ಸಲ್ಲಿಸಿರುವ ಸುದೀರ್ಘ ಸೇವೆಗಾಗಿ ೧೯೮೪ರಲ್ಲಿ ಕನ್ನಡ ವಾಕ್ಚಿತ್ರ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಅವರನ್ನು ಸನ್ಮಾನಿಸಲಾಯಿತು.

## ಚಂದ್ರಕಲಾ

ನಿರ್ಮಾಪಕ ನಿರ್ದೇಶಕ ಎಂ.ಎಸ್.ನಾಯಕ್ ಅವರ ಪುತ್ರಿ.



ಕಾನ್ವೆಂಟಿನಲ್ಲಿ ಓದಿ, ನೃತ್ಯಾಭ್ಯಾಸದಲ್ಲಿ ತರಬೇತಿ ಪಡೆದವರು. 'ರಾಮಾಂಜನೇಯ ಯುದ್ಧ' (೧೯೬೩) ಚಿತ್ರದ ಮೂಲಕ ಚಿತ್ರರಂಗಕ್ಕೆ ಬಂದರು. ಸುಮಾರು ೩೦ ಚಿತ್ರಗಳಲ್ಲಿ ನಟಿಸಿದರು. ಸಾಂಸಾರಿಕ ಕಥೆಗಳನ್ನು ಹೊಂದಿದ ಚಿತ್ರಗಳಲ್ಲಿ ವಿಶೇಷ ಜನಪ್ರಿಯತೆ ಗಳಿಸಿದರು. ಅವರು ಅಭಿನಯಿಸಿದ ಪ್ರಮುಖ ಚಿತ್ರಗಳು - 'ಜೇನುಗೂಡು', 'ಮನೆ ಬೆಳಕು', 'ಮಗ ಮೊಮ್ಮಗ', 'ಬಂದೇ ಬಳ್ಳಿಯ ಹೂಗಳು', 'ಪಾರ್ವತಿ ಕಲ್ಯಾಣ', 'ಬೀದಿ ಬಸವಣ್ಣ', 'ರೌಡಿ ರಂಗಣ್ಣ', 'ಶ್ರೀ ರಾಘವೇಂದ್ರ ವೈಭವ' 'ಒಂದೇ ರೂಪ ಎರಡು ಗುಣ' 'ಸುಳಿ' ಇತ್ಯಾದಿ. ಕೆಲವು ತಮಿಳು, ತೆಲುಗು ಚಿತ್ರಗಳಲ್ಲೂ ಅಭಿನಯಿಸಿದ್ದಾರೆ. ಅವರು ೧೯೯೯ರ ಜೂನ್ ೨೨ರಂದು ನಿಧನರಾದರು.

## ಚಂದ್ರಕಾಂತ್ ಕೊಡ್ವಾಡಿ

ಕಂಠದಾನ ಕಲಾವಿದ, ನಟ, ಬಹುಮುಖ ಪ್ರತಿಭೆಯ ಚಂದ್ರಕಾಂತ್ ಕೊಡ್ವಾಡಿ ಕುಂದಾಪುರದವರು. ಜನನ ೬-೭-೧೯೫೩ರಂದು. ೬ನೇ ತರಗತಿವರೆಗೆ ವ್ಯಾಸಂಗ. ಕಂಠದಾನ ಕಲಾವಿದರಾಗಿ



'ಪ್ರೇಮ ಸಾಕ್ಷಿ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ಸುಮಾರು ೮೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಕಂಠದಾನ ಮಾಡಿರುವ ಇವರು ಸುಮಾರು ೫೦ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಕಾಲ' ಎನ್ನುವ ತುಳು ಚಿತ್ರದಲ್ಲಿ ನಾಯಕರಾಗಿ ಅಭಿನಯಿಸಿದ್ದಾರೆ.

## ಚಂದ್ರಶೇಖರ್



ಬಾಲಕಲಾವಿದರಾಗಿ ಚಿತ್ರರಂಗ ಪ್ರವೇಶಿಸಿ 'ಪ್ರತಿನಾಯಕ'ನಾಗಿ ಕನ್ನಡ ಚಿತ್ರರಂಗದಲ್ಲಿ ಪ್ರಖ್ಯಾತರಾದ ನಟ. ಬೆಂಗಳೂರು ಹುಟ್ಟೂರು. ನ್ಯಾಷನಲ್ ಹೈಸ್ಕೂಲ್‌ನಲ್ಲಿ ವ್ಯಾಸಂಗ ಮಾಡುವಾಗಲೇ 'ನಮ್ಮ ಮಕ್ಕಳು' (೧೯೬೯) ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಎಡಕಲ್ಲು ಗುಡ್ಡದ ಮೇಲೆ' ನಾಯಕನಾಗಿ ಅಭಿನಯಿಸಿದ ಮೊದಲ ಚಿತ್ರ. 'ಕಸ್ತೂರಿ

ಪಂಜಾಬಿನಿಂದ ಬಂದು ಕೇರಳದಲ್ಲಿ ನೆಲೆಸಿ ಮಾಡೆಲಿಂಗ್ ವೃತ್ತಿಯಲ್ಲಿ ತೊಡಗಿದರು. ವಿ. ಮನೋಹರ್ ನಿರ್ದೇಶನದ 'ಓ ಮಲ್ಲಿಗೆ' ಚಿತ್ರದಿಂದ ೧೯೯೭ರಲ್ಲಿ ಚಿತ್ರರಂಗ ಪ್ರವೇಶಿಸಿದರು. 'ಜೋಡಿಹಕ್ಕಿ', 'ಅಂತರ್ಗಾಮಿ', 'ಮದುವೆ', 'ಹಳ್ಳಿ ಯಾದರೇನು ಶಿವ', 'ಸಿಂಹದ ಗುರಿ', 'ಭೂಮಿ' ಮುಂತಾದ ಚಿತ್ರಗಳಲ್ಲಿ ವೈವಿಧ್ಯಮಯ ಪಾತ್ರಗಳು ಸಿಕ್ಕಿದರಿಂದ ಚಾರುಲತಾ ಅವರ ಪ್ರತಿಭಾ ಪ್ರಕಾಶನಕ್ಕೆ ಅವಕಾಶವಾಯಿತು.

## ಚಿಕ್ಕಣ್ಣ.ಟಿ

೧೯೬೩ ರಿಂದಲೇ ಕೆಲವು ಉತ್ತಮ



ಅಭಿರುಚಿಯ ಚಿತ್ರಗಳಲ್ಲಿ ಸಹಾಯಕ ಮತ್ತು ಸಹ ನಿರ್ದೇಶಕರಾಗಿ ಕೆಲಸ ಮಾಡಿದ ಟಿ.ಚಿಕ್ಕಣ್ಣ, ರಾಜಕುಮಾರ್ ಕುಟುಂಬ ನಿರ್ಮಿಸಿದ ಅನೇಕ ಚಿತ್ರಗಳಲ್ಲಿ ಕೆಲಸ ಮಾಡಿದರು. ೧೯೯೨ರಲ್ಲಿ 'ಸಂಪನ್ನರು' ಮೂಲಕ ಸ್ವತಂತ್ರ ನಿರ್ದೇಶಕರಾದರು. ಅವರು ಇದುವರೆಗೆ ನಿರ್ದೇಶಿಸಿರುವ ಚಿತ್ರಗಳು 'ಚಿರಕನ್ನಿಕಾ', 'ಚಿನ್ನ ನೀ ನಗುತಿರು', 'ಮಾಂಗಲ್ಯ ಸಾಕ್ಷಿ', 'ಮಾರ್ತಾಂಡ' ಮತ್ತು 'ಜಗತ್ ಕಿಲಾಡಿ'.

## ಚಿಟ್ಟಿಬಾಬು.ಆರ್

ಖ್ಯಾತ ಛಾಯಾಗ್ರಾಹಕರಾದ ಚಿಟ್ಟಿಬಾಬು ಮದರಾಸಿನಲ್ಲಿ ಜನಿಸಿದರು. ಜೆಮಿನಿ ಸ್ಟುಡಿಯೋದಲ್ಲಿ ಪ್ರಿಂಟರ್ ಆಗ ಸೇವ



ಸಲ್ಲಿಸುತ್ತಿದ್ದ ಅವರು ೧೯೫೦-೫೨ರಲ್ಲಿ ರೇವತಿ ಸ್ಟುಡಿಯೋದಲ್ಲಿ ಸಹಾಯಕ ಛಾಯಾಗ್ರಾಹಕರಾಗಿ ಮುಂದುವರೆದು ಖ್ಯಾತ ನಿರ್ದೇಶಕ ಬಿ.ಎಸ್.ರಂಗಾ ಅವರಿಂದ ತೆಲುಗು ಚಿತ್ರವೊಂದರ ಛಾಯಾಗ್ರಾಹಕರಾಗಿ ನೇಮಕಗೊಂಡರು. 'ಲವ್ ಇನ್ ಬೆಂಗಳೂರು' ಚಿತ್ರದಿಂದ ಕನ್ನಡ ಚಿತ್ರರಂಗಕ್ಕೆ ಛಾಯಾಗ್ರಾಹಕರಾಗಿ ಪರಿಚಿತರಾದ ಇವರು 'ಚಕ್ರತೀರ್ಥ', 'ನಾಗರಹಾವು', 'ನಾ ನಿನ್ನ ಮರೆಯಲಾರೆ', 'ಪರೋಪಕಾರಿ', 'ಸಿಪಾಯಿ ರಾಮು', 'ಗಿರಿಕನ್ಯೆ', 'ಮಯೂರ', 'ಚಕ್ರವ್ಯೂಹ', 'ಬೆಳಗಿನ ಬಣ್ಣದಲ್ಲಿ' ಚಿತ್ರಗಳ ಛಾಯಾಗ್ರಹಣ ನಿರ್ದೇಶಕರಾಗಿ ಕೆಲಸ ಮಾಡಿದ್ದಾರೆ. 'ನಾಗರ ಹಾವು' ಚಿತ್ರದಲ್ಲಿ ಒಂದು ಹಾಡಿಗಾಗಿ ಇವರು ಅಳವಡಿಸಿದ ಸ್ಲೋಮೋಷನ್ ಎಫೆಕ್ಟ್, 'ನಾ ನಿನ್ನ ಮರೆಯಲಾರೆ' ಚಿತ್ರದ ಮೋಟಾರ್ ಸೈಕಲ್ ಚೇಸಿಂಗ್ ದೃಶ್ಯದ ಚಿತ್ರೀಕರಣ ಇವರಿಗೆ ವಿಶೇಷ ಹೆಸರು ತಂದುಕೊಟ್ಟಿತು. ಇವರ ಮಗ ಮಹೇಂದರ್ ಚಿಟ್ಟಿಬಾಬು ತಂದೆಯಂತೆಯೇ ಛಾಯಾಗ್ರಾಹಕರಾಗಿದ್ದಾರೆ.

## ಚಿತ್ರಾ.ಕೆ.ಎಸ್

ದಕ್ಷಿಣ ಭಾರತದ ಜನಪ್ರಿಯ ಹಿನ್ನೆಲೆ ಗಾಯಕಿ. ಕೇರಳದಲ್ಲಿ ಜನಿಸಿದ ಚಿತ್ರಾ ಸಂಗೀತ ವಿಭಾಗದಲ್ಲಿ ಎಂ.ಎ ಪದವಿ



ಪಡೆದು, ರಾಷ್ಟ್ರೀಯ ಪ್ರತಿಭಾನ್ವೇಷಣೆ ಯೋಜನೆಯಡಿ ಕರ್ನಾಟಕ ಸಂಗೀತ ತರಬೇತಿ ಪಡೆದವರು. ಮಲೆಯಾಳಂ ಚಿತ್ರಗಳ ಮೂಲಕ ಹಿನ್ನೆಲೆ ಗಾಯಕಿಯಾಗಿ ಚಿತ್ರರಂಗ ಪ್ರವೇಶಿಸಿದರು. 'ಸಿಂಧು ಭೈರವಿ' ಚಿತ್ರದಲ್ಲಿ ಗಾಯನಕ್ಕಾಗಿ ರಾಷ್ಟ್ರ ಪ್ರಶಸ್ತಿ ಪಡೆದ ಚಿತ್ರಾ ನಂತರ ಮತ್ತೆ ಮೂರು ಬಾರಿ ರಾಷ್ಟ್ರ ಪ್ರಶಸ್ತಿ ಪಡೆದಿದ್ದಾರೆ. ಕನ್ನಡದಲ್ಲಿ ನೂರಾರು ಹಾಡುಗಳನ್ನು ಹಾಡಿದ್ದಾರೆ. 'ಅಮೃತ ವರ್ಷಿಣಿ', 'ಹೃದಯಗೀತೆ', 'ನಮ್ಮೂರ ಮಂದಾರ ಹೂವೇ', 'ಸ್ವಾತಿ', 'ಕರ್ಪೂರದ ಗೊಂಬೆ' ಮೊದಲಾದವು ಅವರು ಹಾಡಿರುವ ಮುಖ್ಯ ಚಿತ್ರಗಳು. ೧೯೯೬-೯೭ನೇ ಸಾಲಿನಲ್ಲಿ 'ನಮ್ಮೂರ ಮಂದಾರ ಹೂವೇ' ಚಿತ್ರದಲ್ಲಿನ 'ಹೇಳೇ ಕೋಗಿಲೆ...' ಗಾಯನಕ್ಕಾಗಿ ರಾಜ್ಯ ಸರ್ಕಾರದ ಅತ್ಯುತ್ತಮ ಹಿನ್ನೆಲೆ ಗಾಯಕಿಯ ಪ್ರಶಸ್ತಿ ಪಡೆದರು.

## ಚಿದಂಬರ ಶೆಟ್ಟಿ

ಚಿತ್ರಾ ಕಂಬೈನ್ಸ್ ಮಾಲೀಕರು. ಹಲವು



ಯಶಸ್ವೀ ಚಿತ್ರಗಳ ನಿರ್ಮಾಪಕರು. ಮೂಲತಃ ವ್ಯಾಪಾರಿ. ಚಿದಂಬರ ಶೆಟ್ಟಿ ಸಾಹಸ ಪ್ರವೃತ್ತಿಯವರು. ಅದೇ ಅವರನ್ನು ಹಲವು ಚಿತ್ರಗಳ ನಿರ್ಮಾಣದತ್ತ ಸೆಳೆಯಿತು. ಚಿತ್ರಾ ಪ್ರೊಡಕ್ಷನ್ಸ್, ಚಿತ್ರಾ ಕ್ರಿಯೇಷನ್ಸ್ ಮುಂತಾದ ಲಾಂಛನಗಳಡಿಯಲ್ಲಿ ಹಲವು ಯಶಸ್ವಿ ಚಿತ್ರಗಳನ್ನು ತೆರೆಗಿತ್ತ ಚಿದಂಬರ ಶೆಟ್ಟಿ ಕರ್ನಾಟಕದ ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರನ್ನು ರಾಜಕೀಯ ರಂಗದಿಂದ ಚಿತ್ರರಂಗಕ್ಕೆ ಎಳೆ ತಂದರು. ರಾಮಕೃಷ್ಣ ಹೆಗಡೆ ಮುಖ್ಯ ಭೂಮಿಕೆಯಲ್ಲಿದ್ದ 'ಮರಣ ಮೃದಂಗ', 'ಪ್ರಜಾಶಕ್ತಿ' ಚಿತ್ರಗಳನ್ನು ತೆರೆಗಿತ್ತರು. 'ಮುತ್ತೈದೆ', 'ಗೋಲ್‌ಮಾಲ್ ರಾಧಾಕೃಷ್ಣ', 'ಶಿವ', 'ಶುಭಲಗ್ನ', 'ನಿರ್ಣಯ' ಇತ್ಯಾದಿ ಇವರ ನಿರ್ಮಾಣದ ಚಿತ್ರಗಳು. ಚಿತ್ರೋದ್ಯಮದ ಹಣಕಾಸು ವಹಿವಾಟಿನ ತಪ್ಪು ಲೆಕ್ಕಾಚಾರದಿಂದಾಗಿ ಅವರ ಕೊಲೆಯೇ ಆಗಿ ಹೋದದ್ದು ಕನ್ನಡ ಚಿತ್ರರಂಗದ ವಿಪರ್ಯಾಸಗಳಲ್ಲಿ ಒಂದು.

## ಚಿನ್ನಪ್ಪ.ಆರ್.ಈ

ಹಿರಿಯ ಸಂಕಲನಕಾರರಾದ ಆರ್.ಈ.ಚಿನ್ನಪ್ಪ ಮೈಸೂರಿನವರು. ೧೯೩೧ರಲ್ಲಿ ಜನಿಸಿದರು. ಎಂಟನೆ ತರಗತಿಯವರೆಗೆ ಶಿಕ್ಷಣ ಪಡೆದ ಇವರು ಚಿತ್ರರಂಗ ಪ್ರವೇಶಿಸಿದ್ದು ೧೯೪೭ರಲ್ಲಿ. ನವಜ್ಯೋತಿ ಸ್ಟುಡಿಯೋದಲ್ಲಿ ಎಸ್.ವಿ.ರಾಜು ಅವರ ಬಳಿ ಮೌಲ್ಡಿಂಗ್ ಬಾಯ್ ಕೆಲಸಕ್ಕೆ ಸೇರಿದರು. ೧೯೬೫ರಲ್ಲಿ ತೆರೆಕಂಡ 'ಪಾತಾಳ ಮೋಹಿನಿ' ಚಿತ್ರದ ಮೂಲಕ ಸ್ವತಂತ್ರ ಸಂಕಲನಕಾರರಾಗಿ ಬೆಳಕಿಗೆ ಬಂದ ಇವರು ನಂತರ 'ಬ್ಲಾಕ್‌ಮಾರ್ಕೆಟ್', 'ಮನೆ ಕಟ್ಟಿ ನೋಡು', 'ಮಹಡಿ ಮನೆ', 'ಆನಂದ ಕಂದ',



'ನಮ್ಮ ಊರು', 'ಬಾಳ ಪಂಜರ', 'ಯಾರಸಾಕ್ಷಿ', 'ತೂಗುವ ಕೃಷ್ಣ' ಮೊದಲಾದ ಚಿತ್ರಗಳಿಗೆ ಸಂಕಲನಕಾರರಾಗಿ ಕಾರ್ಯ ನಿರ್ವಹಿಸಿದ್ದಾರೆ. ಸಂಕಲನ ಕ್ಷೇತ್ರದಲ್ಲಿ ಇವರು ಸಲ್ಲಿಸಿದ ಅಮೂಲ್ಯ ಸೇವೆಗಾಗಿ ೧೯೯೪-೯೫ರ ನಿರ್ದೇಶಕರ ಸಂಘದ ವಿ.ವಿ.ಎಲ್.ಶಾಸ್ತ್ರೀ ಪ್ರಶಸ್ತಿ ಲಭಿಸಿದೆ.

## ಚಿನ್ನಿಲಾಲ್

ಐವತ್ತರ ದಶಕದ ಖ್ಯಾತ ನೃತ್ಯ ನಿರ್ದೇಶಕ. ಅನುವಂಶಿಕವಾಗಿ ಬಂದ ನೃತ್ಯಕಲೆ. ಖ್ಯಾತ ನೃತ್ಯ ಪಟುಗಳಾದ ಸೋಹನ್‌ಲಾಲ್ ಹಾಗೂ ಹೀರಾಲಾಲ್ ಅವರ ಸೋದರರಾದ ಚಿನ್ನಿಲಾಲ್ ನೃತ್ಯ ನಿರ್ದೇಶನ ಮಾತ್ರವಲ್ಲದೆ ಚಿತ್ರ ನಿರ್ಮಾಣ, ನಿರ್ದೇಶನವನ್ನೂ ಮಾಡಿದ್ದಾರೆ. ಸಂಪತ್ ಅವರೊಂದಿಗೆ ಸೇರಿ ಚಿನ್ನಿ ಸಂಪತ್ ಎಂಬ ಹೆಸರಿನಿಂದ ಭಾರತೀಯ ಚಿತ್ರರಂಗದ ಬಹುತೇಕ ಎಲ್ಲಾ ಭಾಷೆಗಳ ಚಿತ್ರಗಳಲ್ಲಿಯೂ



ನೃತ್ಯ ನಿರ್ದೇಶಕರಾಗಿದ್ದಾರೆ. 'ವೀರಕೇಸರಿ', 'ಸಿಪಾಯಿ ರಾಮು', 'ಸಹೋದರರ ಸವಾಲ್', 'ಒಂದೇ ರೂಪ ಎರಡು ಗುಣ', 'ಕುದುರೆ ಮುಖ', 'ಸ್ನೇಹಸೇತು' ಅವುಗಳಲ್ಲಿ ಕೆಲವು ಚಿತ್ರಗಳು ಮಾತ್ರ. ಇದೇ ಜೋಡಿ 'ಲವ್ ಇನ್ ಬೆಂಗಳೂರು', 'ಎಲ್ಲಾ ಹಣಕ್ಕಾಗಿ' ಚಿತ್ರಗಳನ್ನು ನಿರ್ಮಿಸಿ ನಿರ್ದೇಶಿಸಿತ್ತು. ಚಿನ್ನಿಲಾಲ್‌ರ ಬಳಿ ಸಹಾಯಕರಾಗಿದ್ದ ಹಲವರು ಇಂದು ಪ್ರಸಿದ್ಧ ನೃತ್ಯ ನಿರ್ದೇಶಕರಾಗಿದ್ದಾರೆ. ನೃತ್ಯ ನಿರ್ದೇಶಕಿ ದೇವಿ ಕೂಡ ಚಿನ್ನಿಲಾಲರ ಶಿಷ್ಯೆ. ಚಿನ್ನಿಲಾಲರು ೧೯೯೯ರ ಮೇ ೨೩ರಂದು ಮದರಾಸಿನಲ್ಲಿ ನಿಧನರಾದರು.

## ಚಿನ್ನೇಗೌಡ .ಎಸ್.ಎ

ಎಂ.ಎ ಪದವೀಧರ. ಕರ್ನಾಟಕ ಶಿಕ್ಷಣ



ಇಲಾಖೆಯಲ್ಲಿ ಅಧ್ಯಾಪಕರಾಗಿ ೧೬ ವರ್ಷಗಳ ಅನುಭವ. ಅಧ್ಯಾಪಕ ವೃತ್ತಿಯನ್ನು ತೊರೆದು ಚಿತ್ರರಂಗಕ್ಕೆ ಬಂದ ಗೌಡರು ಪಾರ್ವತಮ್ಮ ರಾಜಕುಮಾರ್ ಅವರ ಸೋದರ. ರಾಜಕುಮಾರ್ ಅವರ ಚಿತ್ರ ನಿರ್ಮಾಣ ಮತ್ತು ಹಂಚಿಕ ಸಂಸ್ಥೆಗಳನ್ನು ಕೆಲವು ವರ್ಷಗಳು ನಿರ್ವಹಿಸಿ ಚಿತ್ರೋದ್ಯಮದ ನಿಕಟ ಪರಿಚಯ ಪಡೆದರು. ಉದ್ಯಮದಲ್ಲಿ ಜನಪ್ರಿಯ ವ್ಯಕ್ತಿ. ಚಿತ್ರ ನಿರ್ಮಾಣದಲ್ಲಿಯೂ ಆಸಕ್ತಿ ಬೆಳೆಸಿಕೊಂಡು ಸುಮಾರು ೧೫ ಚಿತ್ರಗಳನ್ನು ನಿರ್ಮಿಸಿದರು. 'ಶ್ರೀನಿವಾಸ ಕಲ್ಯಾಣ', 'ಜ್ವಾಲಾಮುಖಿ', 'ಹೊಸಬೆಳಕು', 'ಹೃದಯ ಹಾಡಿತು', 'ಸಪ್ತಪದಿ', 'ಸಮ್ಮಿಲನ', 'ರೂಪಾಯಿ ರಾಜ', 'ಚಿಕ್ಕ' ಮೊದಲಾದವು ಹೆಸರಿಸಬಹುದಾದ ಕೆಲವು ಚಿತ್ರಗಳು. ಚಿನ್ನೇಗೌಡರು ರಾಜಕೀಯದಲ್ಲಿಯೂ ಆಸಕ್ತರು. ಅನೇಕ ಧಾರ್ಮಿಕ ಸಂಸ್ಥೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದಾರೆ. ಇವರ ಮಗ ವಿಜಯರಾಘವೇಂದ್ರ ಬಾಲನಟನಾಗಿ ಖ್ಯಾತರು.

## ಚೇತನ್ ರಾಮರಾವ್

ಮೈಸೂರು ಸ್ವಂತ ಸ್ಥಳ. ಶಾಲಾ



ದಿನಗಳಲ್ಲಿಯೇ ಕಲೆಯಲ್ಲಿ ಆಸಕ್ತಿ. 'ಕಲಾ ವಿಲಾಸಿ ನಾಟಕ ಸಭಾ' ಸ್ಥಾಪಿಸಿ ನಾಟಕಗಳ ಪ್ರದರ್ಶನ. ಜಿ.ವಿ.ಅಯ್ಯರ್ ಅವರ 'ಪೋಸ್ಟ್ ಮಾಸ್ಟರ್' (೧೯೬೪) ಮೂಲಕ ಚಿತ್ರರಂಗ ಪ್ರವೇಶಿಸಿದರು. ಈ ಚಿತ್ರದಲ್ಲಿ ಇವರದು ನಾಯಕ ಪಾತ್ರ. 'ಮಾರ್ಗದರ್ಶಿ' ಮೊದಲಾದ ಇತರ ನೂರಾರು ಚಿತ್ರಗಳಲ್ಲಿ ಪೋಷಕ ನಟನಾಗಿ ಅಭಿನಯಿಸಿದ್ದಾರೆ. ದಾಸರಿ ನಾರಾಯಣರಾವ್ ನಿರ್ದೇಶನದ 'ಸ್ವಪ್ನ'ದಲ್ಲಿ ಗಮನಾರ್ಹ ಪಾತ್ರ ಇತ್ತು. 'ಕಣ್ಣು ತೆರೆಸಿದ ಹೆಣ್ಣು' ಇವರ ನೂರನೆಯ ಚಿತ್ರ.

## ಚೌಡಯ್ಯ.ಟಿ (೧೮೯೫-೧೯೬೭)

ಪ್ರಖ್ಯಾತ ಪಿಟೀಲು ವಾದಕರು. ಮೈಸೂರು ಜಿಲ್ಲೆಯ ತಿರುಮಕೂಡಲಿನಲ್ಲಿ ಜನನ (ಜನವರಿ ೧, ೧೮೯೫). ತಂದೆ



ಅಗಸ್ತ್ಯಗೌಡರು ಸಂಗೀತಪ್ರಿಯರು. ೨೨ ವರ್ಷಗಳ ಕಾಲ ದಿನವೂ ೧೬ ಗಂಟೆ ಶ್ರಮವಹಿಸಿ ಸಂಗೀತಾಭ್ಯಾಸ ಮಾಡಿದರು. ಏಳು ತಂತಿಗಳನ್ನು ಬಳಸಿ ಪಿಟೀಲು ವಾದ್ಯವನ್ನು ಅಭಿವೃದ್ಧಿಪಡಿಸಿದರು. 'ವಾಣಿ' (೧೯೪೩) ಚಿತ್ರವನ್ನು ಪಾಲುದಾರಿಕೆಯಲ್ಲಿ ನಿರ್ಮಿಸಿ, ಸಂಗೀತ ನೀಡಿ, ಪ್ರಧಾನ ಪಾತ್ರದಲ್ಲಿ ಅಭಿನಯಿಸಿದರು. ತಮ್ಮ ಗುರುಗಳಾದ ಚೆಂಬೈ ವೈದ್ಯನಾಥ ಭಾಗವತರ್ ಅವರ ಸಂಗೀತ ಕಛೇರಿಯನ್ನು ಈ ಚಿತ್ರದಲ್ಲಿ ಅಳವಡಿಸಿದರು. ಭಾರತದಾದ್ಯಂತ ಖ್ಯಾತಿಗಳಿಸಿದ ಇವರು ಸರ್ಕಾರದಿಂದ ಹಲವು ಪ್ರಶಸ್ತಿಗಳನ್ನು ಪಡೆದುಕೊಂಡರು. ಕನ್ನಡ ಚಿತ್ರರಂಗದ ಖ್ಯಾತ ನಾಯಕನಟ-ರಾಜಕಾರಣಿ ಅಂಬರೀಷ್ ಚೌಡಯ್ಯನವರ ಮೊಮ್ಮಗ. ಚೌಡಯ್ಯನವರು ತಮ್ಮ ೭೨ನೆಯ ವಯಸ್ಸಿನಲ್ಲಿ (ಜನವರಿ ೧೯, ೧೯೬೭ರಂದು) ನಿಧನರಾದರು.

## ಛಾಯಾ.ಬಿ.ಆರ್

ಕರ್ನಾಟಕದ ಜನಪ್ರಿಯ ಗಾಯಕಿ ಛಾಯಾ ಡಿಪ್ಲೊಮಾ ಪದವೀಧರೆ. ಕರ್ನಾಟಕ ಸಂಗೀತದಲ್ಲಿ ಸೀನಿಯರ್ ಮಾಡಿರುವ ಈಕೆಗೆ ಬಾಲ್ಯದಿಂದಲೇ ಹಿನ್ನೆಲೆ ಗಾಯಕಿಯಾಗುವ ಕನಸು. ಈ ಕನಸು 'ಅಮೃತ ಘಳಿಗೆ' ಚಿತ್ರದಲ್ಲಿ ಹಾಡುವುದರೊಂದಿಗೆ ನನಸಾಯಿತು. 'ಅಮೃತಘಳಿಗೆ'ಯ ನಂತರ ಅನೇಕ ಚಿತ್ರಗಳಲ್ಲಿ ಭಾವಪೂರ್ಣವಾಗಿ ಹಾಡಿದ್ದಾರೆ. 'ಕಾಡಿನ ಬೆಂಕಿ', 'ರಶ್ಮಿ', 'ಹೃದಯ ಗೀತೆ',



'ದೇವತಾ ಮನುಷ್ಯ', 'ಜೀವನ ಚೈತ್ರ', 'ಪ್ರಳಯಾಂತಕ' ಮೊದಲಾದ ಯಶಸ್ವಿ ಚಿತ್ರಗಳಿಗೆ ಆಕೆಯ ಗಾಯನ ಮೆರುಗು ಕೊಟ್ಟಿದೆ. ೧೯೮೭-೮೮ನೇ ಸಾಲಿನಲ್ಲಿ 'ಕಾಡಿನ ಬೆಂಕಿ' ಚಿತ್ರದ ಗಾಯನಕ್ಕಾಗಿ, ೧೯೯೪-೯೫ನೇ ಸಾಲಿನಲ್ಲಿ 'ರಶ್ಮಿ' ಚಿತ್ರದ ಗಾಯನಕ್ಕಾಗಿ ಎರಡು ಬಾರಿ ರಾಜ್ಯಪ್ರಶಸ್ತಿ ಪಡೆದಿದ್ದಾರೆ. ಪತಿ ಪಾಣಿಯವರೊಂದಿಗೆ ಆರ್ಕೆಸ್ಟ್ರಾ ನಡೆಸುತ್ತಿರುವ ಛಾಯಾ ಸರ್ಕಾರಿ ನೌಕರಿಯಲ್ಲೂ ಇದ್ದರು.

## ಜಗನ್ನಾಥ್.ಕೆ.ಎಸ್

ಹೊಸಕೋಟೆ ಬಳಿಯ ಕೊರಟಿ ಇವರ ಜನ್ಮಸ್ಥಳ. ಕನ್ನಡದ ಜನಪ್ರಿಯ ಸಾಹಿತಿ ಕೊರಟಿ ಶ್ರೀನಿವಾಸರಾವ್ ಅವರ ಸಹೋದರರು. ಮೂಲತ: ಮುದ್ರಕ,ಪ್ರಕಾಶಕ. ಚಿತ್ರ ನಿರ್ಮಾಣಕ್ಕೆ ಇಳಿದರು. ಕರ್ನಾಟಕದ ಸ್ಟುಡಿಯೋದಲ್ಲಿ 'ಸೇಡಿನ ಕಿಡಿ' ಚಿತ್ರವನ್ನು ನಿರ್ಮಿಸಿದರು. ನಂತರ ಕಾದಂಬರಿ ಆಧಾರಿತ ಚಿತ್ರ 'ಮಿಸ್ ಲೀಲಾವತಿ', 'ಮುಯ್ಯಿ', 'ಮರ್ಯಾದೆ ಮಹಲು', 'ಹಂತಕನ ಸಂಚು' ಚಿತ್ರಗಳನ್ನು ನಿರ್ಮಿಸಿದರು. ಚಿತ್ರೋದ್ಯಮದೊಂದಿಗೆ ನಿಕಟ ಸಂಪರ್ಕ ಹೊಂದಿದ್ದು ಸಕ್ರಿಯವಾಗಿ ದುಡಿದರು. ದೆಹಲಿಯ ದೂರದರ್ಶನದಲ್ಲಿ ಕನ್ನಡ ಚಿತ್ರಗಳ ಪ್ರಸಾರಕ್ಕೆ ಒತ್ತಾಯ ಮಾಡಿ ಅ



ನಿಟ್ಟಿನಲ್ಲಿ ಯಶಸ್ವಿಯೂ ಆದರು. ಈ ಕಾರ್ಯಕ್ಕಾಗಿ ದೆಹಲಿ-ಬೆಂಗಳೂರು ಓಡಾಟ ನಡೆಸಿದ್ದ ಜಗನ್ನಾಥ್ ಅವರು ಸಂಚಾರ ಸಮಯದಲ್ಲಿ ರೈಲಿನಲ್ಲಿಯೇ ಹೃದಯಾಘಾತದಿಂದಾಗಿ ನಿಧನರಾದರು.

## ಜಗನ್ನಾಥರಾವ್ ವೇಮಗಲ್



ರಂಗಭೂಮಿ, ಕಿರುತೆರೆ ಮತ್ತು ಚಲನಚಿತ್ರರಂಗಗಳಲ್ಲಿ ಸಮಾನವಾದ ಆಸಕ್ತಿ ಹೊಂದಿದವರು. ಅತಿಮಾನುಷ ಕಥಾ ವಸ್ತುಗಳನ್ನು ತೆರೆಗೆ ತರುವುದರಲ್ಲಿ ಹೆಚ್ಚಿನ ಆಸ್ಥೆ. ನಿರ್ಮಾಪಕ - ನಿರ್ದೇಶಕ. ೨೫ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅನೇಕ ಉತ್ತಮ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಅವರು ೧೯೮೦ ರಲ್ಲಿ 'ಕಾಡಿಗೆ ಹೊದವರು' ಚಿತ್ರವನ್ನು ನಿರ್ದೇಶಿಸುವ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದರು. 'ತುಳಸೀದಳ' 'ಕಂಪನ' 'ಅವಳ ಚರಿತ್ರೆ' ಮತ್ತು 'ಗಾಯ' ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಬಿ.ಎ.ಪದವೀಧರರಾದ ಜಗನ್ನಾಥ್‌ರಾವ್ ಕಿರುತೆರೆ ಧಾರಾವಾಹಿಗಳ ನಿರ್ದೇಶನದಲ್ಲಿ ಹೆಚ್ಚು ನಿರತರು.

## ಜಗ್ಗೇಶ್



೮೦ರ ದಶಕದಲ್ಲಿ ನಾಯಕ ನಟರಾಗಿ ಬಂದರು. ಬೆಂಗಳೂರಿನ ಶ್ರೀರಾಮಪುರದ ಹುಡುಗ. ಬೆಳ್ಳಿತೆರೆಯಲ್ಲಿ ಭವಿಷ್ಯವನ್ನು ಅರಸುತ್ತ ಸಹನಟ, ಪೋಷಕ ನಟ, ಸಹ ಖಳನಾಯಕನಾಗಿ ಅಭಿನಯಿಸುತ್ತಲೇ ತಮ್ಮ ವಿಚಿತ್ರವಾದ ಮ್ಯಾನರಿಸಂಗಳಿಂದ ತಮ್ಮದೇ ಆದ ಪ್ರೇಕ್ಷಕ ವರ್ಗವನ್ನು ಸೃಷ್ಟಿಸಿಕೊಂಡರು. ಜಗ್ಗೇಶ್ ಅವರ ವೃತ್ತಿ ಜೀವನದಲ್ಲಿ ತಿರುವು ನೀಡಿದ ಪಾತ್ರಗಳು 'ರಾಣಿ ಮಹಾರಾಣಿ', 'ಸಿ.ಬಿ.ಐ. ಶಿವ', 'ರೆಡಿಮೇಡ್ ಗಂಡ', 'ಸೋಲಿಲ್ಲದ ಸರದಾರ'. ೧೯೯೨ರಲ್ಲಿ ಜಗ್ಗೇಶ್ 'ತರ್ಲೆ ನನ್ಮಗ' ಚಿತ್ರದಿಂದ ಪೂರ್ಣ ಪ್ರಮಾಣದ ನಾಯಕರಾಗಿ ಉಪೇಂದ್ರ ಅವರ ನಿರ್ದೇಶನದಲ್ಲಿ ನಟಿಸಿದರು. ಆದರೆ ರಾಜಕಿಶೋರ್ ನಿರ್ದೇಶನದ 'ಭಂಡ ನನ್ನ ಗಂಡ' ಚಿತ್ರ ಮೊದಲು ತೆರೆಕಂಡಿತು. ಇವರೆಡು ಚಿತ್ರಗಳೂ ಜಗ್ಗೇಶ್‌ರನ್ನು ವಿಭಿನ್ನ ಮ್ಯಾನರಿಸಂನ ನಾಯಕ ನಟನನ್ನಾಗಿಸಿದವು. ನಂತರ ತಮ್ಮದೇ ಆದ ಶೈಲಿಯಲ್ಲಿ ಹತ್ತು ಹಲವು ಚಿತ್ರಗಳನ್ನು ನೀಡಿದ ಜಗ್ಗೇಶ್ ತಮ್ಮ ಪ್ರತಿಯೊಂದು ಚಿತ್ರದಲ್ಲೂ ಕನ್ನಡ ನಾಡು, ನುಡಿಗಳ ಬಗ್ಗೆ ವಿಶೇಷ ಕಾಳಜಿ ತೋರುವ ಪ್ರಯತ್ನ ಮಾಡಿದ್ದಾರೆ. ತ್ರಿಪಾತ್ರದಲ್ಲಿ ಅಭಿನಯಿಸಿದ 'ಪ್ರೇಮ ಸಿಂಹಾಸನ', ಒಂಬತ್ತು ಪಾತ್ರಗಳಲ್ಲಿ ಅಭಿನಯಿಸಿದ 'ಈಶ್ವರ್', ''ಸರ್ವರ್ ಸೋಮಣ್ಣ', 'ಅಲ್ಲಿ ರಾಮಾಚಾರಿ ಇಲ್ಲಿ ಬ್ರಹ್ಮಚಾರಿ', 'ಸೂಪರ್ ನನ್ಮಗ' ಇವರ ಅಭಿನಯದ ಚಿತ್ರಗಳ ಸಾಲು ಸಾಲೇ ಇದೆ. ಜಗ್ಗೇಶ್ ರಾಜಕಾರಣ, ಸಮಾಜ ಸೇವೆಯಲ್ಲಿ ಆಸಕ್ತರು.

## ಜನಾರ್ದನ್.ಆರ್

ಸೃಜನಶೀಲ ಸಂಕಲನಕಾರ. ಎಸ್.ಎಸ್.ಎಲ್.ಸಿವರೆಗೆ ಓದಿರುವ ಜನಾರ್ದನ್ ಶಾಸ್ತ್ರೀಯವಾಗಿ ಸಂಕಲನ



ಕಲಿತವರಲ್ಲ. ಕೇವಲ ಅನುಭವದಿಂದಲೇ ಸಂಕಲನ ಕಲೆಯನ್ನು ಕರಗತ ಮಾಡಿಕೊಂಡವರು. 'ಅನುಭವ' ಚಿತ್ರದ ಸಂಕಲನದಲ್ಲಿ ಸಹಾಯಕರಾಗಿ ಚಿತ್ರರಂಗಕ್ಕೆ ಬಂದರು. 'ತರ್ಕ', 'ಅವಸ್ಥೆ', 'ಕೆಂಡದ ಮಳೆ', 'ಬೆಳದಿಂಗಳ ಬಾಲೆ' ಮೊದಲಾದ ಚಿತ್ರಗಳಿಗೆ ಸಹಾಯಕ ಸಂಕಲನಕಾರರಾಗಿ ದುಡಿದಿದ್ದಾರೆ. 'ಉತ್ಕರ್ಷ'ಚಿತ್ರದ ಮೂಲಕ ಸ್ವತಂತ್ರ ಸಂಕಲನಕಾರರಾದರು. 'ಶ್!' (೧೯೯೩-೯೪), 'ಲಾಕಪ್ ಡೆತ್' (೧೯೯೪-೯೫) ಚಿತ್ರಗಳಲ್ಲಿನ ಸಂಕಲನಕ್ಕಾಗಿ ರಾಜ್ಯ ಸರ್ಕಾರದ ಶ್ರೇಷ್ಠ ಸಂಕಲನಕಾರ ಪ್ರಶಸ್ತಿ ಪಡೆದಿದ್ದಾರೆ.

## ಜನಾರ್ದನ್ (ಬ್ಯಾಂಕ್)

ಈಚಿನ ವರ್ಷಗಳಲ್ಲಿ ಕನ್ನಡ ಚಿತ್ರರಂಗದಲ್ಲಿ ಪೋಷಕ ನಟನಾಗಿ ಜನಪ್ರಿಯವಾಗಿರುವ ಬ್ಯಾಂಕ್ ಜನಾರ್ದನ್ ಮೂಲತಃ ರಂಗಭೂಮಿಯ ನಟ. ಇದುವರೆವಿಗೂ ೩೦೦ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿರುವ ಇವರು ಅಭಿನಯಿಸಿರುವ ಚಿತ್ರಗಳ ಸಂಖ್ಯೆ ೩೩೫ನ್ನು ಮುಟ್ಟಿದೆ. ಜೋಸೈಮನ್ ನಿರ್ದೇಶನದ 'ಊರಿಗೆ ಉಪಕಾರಿ' ಮೂಲಕ ೧೯೮೨ರಲ್ಲಿಯೇ ಚಿತ್ರರಂಗವನ್ನು



ಪ್ರವೇಶಿಸಿದರು. ನಂತರ ಜನಪ್ರಿಯ ಹಾಸ್ಯ ನಟರಾಗಿ ಬೆಳೆದು ಪ್ರಮುಖ ಪಾತ್ರಗಳಲ್ಲಿ ಗಮನ ಸೆಳೆದರು. 'ಅಜಗಜಾಂತರ' 'ತರ್ಲೆ ನನ್ ಮಗ' 'ಸೂಪರ್ ನನ್ ಮಗ' 'ಕುರುಬನ ರಾಣಿ' 'ಸಿಪಾಯಿ' 'ಕೌರವ' 'ಕೊಡಗಿನ ಕಾವೇರಿ' 'ಸೂರಪ್ಪ' ಮುಂತಾದ ಚಿತ್ರಗಳಲ್ಲಿ ಗಮನಾರ್ಹ ಪಾತ್ರಗಳಿದ್ದವು. ಇವರು ಕಿರುತೆರೆಯಲ್ಲಿಯೂ ಜನಪ್ರಿಯರು.

## ಜನಾರ್ದನ ಶೆಟ್ಟಿ

೧೯೫೬ರಲ್ಲಿ ಜಗನ್ನಾಥ್ ಪ್ರೊಡಕ್ಷನ್ಸ್



ಲಾಂಛನದಲ್ಲಿ ಆರೂರು ಪಟ್ಟಾಭಿ ಅವರ ನಿರ್ದೇಶನದಲ್ಲಿ 'ಭಕ್ತ ವಿಜಯ' ಚಿತ್ರವನ್ನು ನಿರ್ಮಿಸಿದರು. ಬೆಂಗಳೂರಿನ ವರ್ತಕರು. ಈ ಚಿತ್ರದಲ್ಲಿ ರಾಜಕುಮಾರ್, ಪಂಢರೀಬಾಯಿ, ಮೈನಾವತಿ ಅಭಿನಯಿಸಿದರು.

## ಜಮುನಾ

ಬಳ್ಳಾರಿ ಜಿಲ್ಲೆಯ ಸಾಂಪ್ರದಾಯಿಕ ಕುಟುಂಬದಲ್ಲಿ ಹುಟ್ಟಿದರು. ಈಕೆಗೆ ಅಭಿನಯಾವಕಾಶ ದೊರೆತಿದ್ದು ತೆಲುಗಿನಲ್ಲಿ.



'ಆದರ್ಶ ಸತಿ', 'ಭೂಕೈಲಾಸ', 'ಸಾಕ್ಷಾತ್ಕಾರ', 'ಶ್ರೀ ರಾಘವೇಂದ್ರ ಕರುಣೆ' ಇವರು ಅಭಿನಯಿಸಿದ ಕೆಲವು ಕನ್ನಡ ಚಿತ್ರಗಳು. ರಾಘವೇಂದ್ರಸ್ವಾಮಿಗಳ ಭಕ್ತೆ. 'ಶ್ರೀ ರಾಘವೇಂದ್ರ ಕರುಣೆ' ಚಿತ್ರದ ಸಂಭಾವನೆಯನ್ನು ಮಠಕ್ಕೆ ಅರ್ಪಿಸಿದರು. ಪಂತುಲು ಅವರು ನಿರ್ಮಿಸಿದ 'ರತ್ನಗಿರಿ ರಹಸ್ಯ'ದಲ್ಲಿ ಈಕೆ ನೀಡಿದ ಅಭಿನಯ ಆ ಚಿತ್ರದ 'ಅಮರ ಮಧುರ ಪ್ರೇಮ, ಬಾ ಬೇಗ ಚಂದಮಾಮ.....' ಮಾದಕ, ಮೋಹಕ ಗೀತೆಯಷ್ಟೇ ಸ್ಮರಣೀಯ. ಚಿತ್ರರಂಗದಿಂದ ಸರಿದ ಮೇಲೆ ಜಮುನಾ ಆಂಧ್ರದ ಪ್ರಭಾವಿ ರಾಜಕಾರಣಿಯಾಗಿ ಬೆಳೆದರು. ರಾಜ್ಯ ಸಭೆ ಸದಸ್ಯೆಯಾಗಿ ಕೆಲಸ ಮಾಡಿದರು.

## ಜಯಂತಿ

ಜಯಂತಿ. ಹುಟ್ಟಿದ್ದು ಬಳ್ಳಾರಿಯಲ್ಲಿ. ಮಾತೃಭಾಷೆ ತೆಲುಗು. ಮೊದಲ ಹೆಸರು ಕಮಲ ಕುಮಾರಿ. ಒಂದೆರಡು ತೆಲುಗು



ಚಿತ್ರಗಳಲ್ಲಿ ಅಭಿನಯಿಸಿದ ಕಮಲಕುಮಾರಿ 'ಜಯಂತಿ' ಎಂಬ ಹೆಸರಿನಿಂದ ೧೯೬೩ರಲ್ಲಿ ವೈ.ಆರ್.ಸ್ವಾಮಿ ನಿರ್ದೇಶನದ 'ಜೇನುಗೂಡು' ಚಿತ್ರದ ಮೂವರು ನಾಯಕಿಯರಲ್ಲಿ ಒಬ್ಬರಾಗಿ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಪಂಢರೀಬಾಯಿ, ಅಶ್ವತ್, ಉದಯಕುಮಾರ್ ಮೊದಲಾದ ಅನುಭವಿಗಳ ಎದುರು ನಟಿಸಿ ಸೈ ಅನಿಸಿಕೊಂಡ ಜಯಂತಿ ಅವರ ಅದೃಷ್ಟದ ಬಾಗಿಲು ತೆರೆದದ್ದು ಮರುವರ್ಷ ತೆರೆಕಂಡ 'ಚಂದವಳ್ಳಿಯ ತೋಟ' ಚಿತ್ರ ರಾಷ್ಟ್ರಪತಿಗಳಿಂದ ಅರ್ಹತಾ ಪ್ರಶಸ್ತಿ ಪಡೆದಾಗ. ಸಾಹುಕಾರ್ ಜಾನಕಿ ಬೇಡವೆಂದು ನಿರಾಕರಿಸಿದ 'ಮಿಸ್ ಲೀಲಾವತಿ' ಚಿತ್ರದ ಲೀಲಾವತಿ ಪಾತ್ರ ಜಯಂತಿ ಪಾಲಾಯಿತು. ಇಲ್ಲಿಂದ ಮುಂದೆ ಜಯಂತಿ ಕನ್ನಡ ಚಿತ್ರರಂಗದ ಅಭಿಜಾತ ಕಲಾವಿದೆ ಎನಿಸಿಕೊಂಡರು. ಪಾತ್ರದ ಇತಿಮಿತಿ ಅರಿತು, ಪರಕಾಯ ಪ್ರವೇಶ ಮಾಡಿದಂತೆ ತನ್ಮಯರಾಗಿ ಅಭಿನಯಿಸುವುದರಲ್ಲಿ ಎತ್ತಿದ ಕೈ. 'ಚಕ್ರತೀರ್ಥ', 'ಎಡಕಲ್ಲು ಗುಡ್ಡದ ಮೇಲೆ', 'ಮಸಣದ ಹೂವು', 'ಕಲ್ಯಾಣಿ', 'ಶ್ರೀದೇವಿ', 'ಮನಸ್ಸಿನಂತೆ ಮಾಂಗಲ್ಯ', 'ತುಳಸಿ' ಮೊದಲಾದ ಚಿತ್ರಗಳ ವೈವಿಧ್ಯಮಯ ಪಾತ್ರಗಳಲ್ಲಿ ಸಹಜಾಭಿನಯ ನೀಡಿದ್ದಾರೆ. ಕಣ್ಣೀರು ಹರಿಸುವ ಗೃಹಿಣಿಯ ಪಾತ್ರವಾಗಲೀ, ಕೌಬಾಯ್ ಮಾದರಿಯ ಪಾತ್ರವಾಗಲಿ, ರತಿ ವರ್ಚಸ್ಸಿನ ಬೆಡಗಿಯ ಪಾತ್ರವಾಗಲೀ ಎಲ್ಲದರಲ್ಲೂ ಲೀಲಾಜಾಲವಾಗಿ ಅಭಿನಯಿಸಿದ್ದಾರೆ. 'ಬಹದ್ದೂರ್ ಗಂಡು', 'ಜೇಡರ ಬಲೆ', 'ಬೆಟ್ಟದ ಹುಲಿ', 'ಜಯವಿಜಯ', 'ದೇವರುಕೊಟ್ಟ ವರ', 'ಶ್ರೀಮಂತನ ಮಗಳು' ಮುಂತಾದವು ಜಯಂತಿ ಅಭಿನಯದ ಮುಖ್ಯ ಚಿತ್ರಗಳು. ತಮ್ಮ ಸೌಂದರ್ಯ, ಪ್ರತಿಭೆ ಎರಡರಿಂದ ಕನ್ನಡ ಜನತೆಯನ್ನು ಆಕರ್ಷಿಸಿದ ಇವರು 'ಎಡಕಲ್ಲು ಗುಡ್ಡದ ಮೇಲೆ'(೧೯೭೩-೭೪), 'ಮನಸ್ಸಿನಂತೆ ಮಾಂಗಲ್ಯ'(೧೯೭೬-೭೭), 'ಧರ್ಮ ದಾರಿ ತಪ್ಪಿತು'(೧೯೮೧-೮೨), 'ಮಸಣದ ಹೂವು'(೧೯೮೫-೮೬) ಚಿತ್ರಗಳಲ್ಲಿ ಅಭಿನಯಕ್ಕಾಗಿ ನಾಲ್ಕು ಬಾರಿ ರಾಜ್ಯ ಸರ್ಕಾರದ 'ಶ್ರೇಷ್ಠ ನಟಿ' ಪ್ರಶಸ್ತಿ ಪಡೆದರೆ 'ಆನಂದ್'(೧೯೮೬-೮೭), 'ಟುವ್ವಿ ಟುವ್ವಿ ಟುವ್ವಿ'(೧೯೯೮-೯೯) ಚಿತ್ರಗಳಲ್ಲಿನ ಅಭಿನಯಕ್ಕಾಗಿ ಎರಡು ಬಾರಿ ಶ್ರೇಷ್ಠ ಪೋಷಕ ನಟಿ ಪ್ರಶಸ್ತಿ ಪಡೆದಿದ್ದಾರೆ. ಇದಲ್ಲದೆ ಫಿಲಂಫೇರ್ ಹಾಗೂ ಇನ್ನಿತರೆ ಪ್ರಶಸ್ತಿಗಳನ್ನು ಪಡೆದಿರುವ ಜಯಂತಿಗೆ ಕಲಾರಸಿಕರು ಅಭಿಮಾನದಿಂದ 'ಅಭಿನಯ ಶಾರದೆ', 'ಕಲಾ ಕೋಗಿಲೆ' ಎಂಬ ಬಿರುದನ್ನಿತ್ತಿದ್ದಾರೆ. ರಾಜಕುಮಾರ್ ಅವರಿಗೆ ನಾಯಕಿಯಾಗಿ ಸುಮಾರು ೩೬ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಖಾಸಗಿ ಜೀವನದಲ್ಲಿ ಹಲವಾರು ಏಳು ಬೀಳುಗಳನ್ನು ಕಂಡರೂ ಚಿತ್ರ ಜೀವನದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರ. 'ವಿಜಯ್' ಚಿತ್ರವನ್ನು ನಿರ್ಮಿಸಿ ನಿರ್ದೇಶಿಸಿದರು. ನಂತರ 'ಏನ್ ಸ್ವಾಮಿ ಅಳಿಯಂದ್ರೆ' ಚಿತ್ರವನ್ನು ನಿರ್ಮಿಸಿದರು. ನಿರ್ಮಾಪಕಿ, ನಿರ್ದೇಶಕಿಯಾಗಿ ಯಶಸ್ಸು ಕಾಣದ ಜಯಂತಿ ರಾಮಕೃಷ್ಣ ಹೆಗಡೆ ನೇತೃತ್ವದ ಲೋಕಶಕ್ತಿ ಪಕ್ಷವನ್ನು ಸೇರಿ ಚಿಕ್ಕ ಬಳ್ಳಾಪುರ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಿದರು. ಜನತಾದಳ ಸಂಯುಕ್ತದ ರಾಜ್ಯ ಘಟಕದ ಉಪಾಧ್ಯಕ್ಷೆಯಾಗಿಯೂ ಕಾರ್ಯನಿರ್ವಹಿಸಿದ್ದಾರೆ.

## ಜಯಗೋಪಾಲ್.ಆರ್.ಎನ್

ಬೆಂಗಳೂರಿನ ಎಸ್.ಜೆ.ಪಾಲಿಟೆಕ್ನಿಕ್‌ನಲ್ಲಿ



ಧ್ವನಿಗ್ರಹಣ ತಂತ್ರಕಲೆಯನ್ನು ಓದಿ ಶಬ್ದಗ್ರಹಣ ಡಿಪ್ಲೊಮಾ ಪಡೆದು ಚಿತ್ರರಂಗಕ್ಕೆ ಬಂದವರು ಆರ್.ಎನ್.ಜಯಗೋಪಾಲ್. ನಂತರ ಖ್ಯಾತ ಸಂಭಾಷಣೆಕಾರರಾಗಿ, ಗೀತರಚನಕಾರರಾಗಿ ಕೀರ್ತಿಗಳಿಸಿದ ಇವರು ಆರ್.ನಾಗೇಂದ್ರರಾಯರ ಪುತ್ರರಲ್ಲೊಬ್ಬರು. ೧೯೫೭ರಲ್ಲಿ 'ಆರ್.ಎನ್.ಆರ್. ಪಿಕ್ಚರ್ಸ್' ತಯಾರಿಸಿದ 'ಪ್ರೇಮದ ಪುತ್ರಿ' ಚಿತ್ರಕ್ಕೆ ಸಂಭಾಷಣೆ ಮತ್ತು ಹಾಡುಗಳನ್ನು ರಚಿಸಿದ ಜಯಗೋಪಾಲ್ ಚಿತ್ರ ಸಾಹಿತ್ಯದಲ್ಲಿ ದೊಡ್ಡ ಹೆಸರು. ನೂರಾರು ಚಿತ್ರಗಳಿಗೆ ಸಂಭಾಷಣೆ, ಚಿತ್ರಕಥೆಗಳನ್ನು ಬರೆದಿರುವ ಜಯಗೋಪಾಲ್ ಎಂಟು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅವರ ನಿರ್ದೇಶನದ ಮುಖ್ಯ ಚಿತ್ರಗಳು - 'ಧೂಮಕೇತು' (೧೯೬೮), 'ಕೆಸರಿನ ಕಮಲ' (೧೯೭೩), 'ಅವಳ ಅಂತರಂಗ' (೧೯೮೪). ಇವರು ರಚಿಸಿದ ಚಿತ್ರಗೀತೆಗಳು ಒಂದು ಸಾವಿರಕ್ಕೂ ಹೆಚ್ಚು. ಕಿರುತೆರೆಯ ಧಾರಾವಾಹಿಗಳಲ್ಲಿ ಅಭಿನಯ, ನಿರ್ದೇಶನ ಕಾರ್ಯನಿರ್ವಹಿಸುತ್ತಿದ್ದಾರೆ. ಸ್ವತಃ ವಾಯೋಲಿನ್ ವಾದಕರು. ಬರಹಗಾರರ ಕೃತಿ ಸ್ವಾಮ್ಯಕ್ಕಾಗಿ ಹೋರಾಡಿದರು. ಆ ಕುರಿತ ಇತರ ಸಂಘಟನೆಯಲ್ಲಿನ ಇವರ ಶ್ರಮ ಗಮನಾರ್ಹ. ಇವರಿಗೆ ೧೯೬೮-೬೯ರಲ್ಲಿ 'ನಮ್ಮ ಮಕ್ಕಳು' ಮತ್ತು ೧೯೮೨-೮೩ರಲ್ಲಿ 'ಪಲ್ಲವಿ ಅನು ಪಲ್ಲವಿ' ಚಿತ್ರಗಳಿಗೆ ಅತ್ಯುತ್ತಮ ಸಂಭಾಷಣೆ ಕರ್ತೃ (ರಾಜ್ಯ ಪ್ರಶಸ್ತಿ) ಹಾಗೂ ೧೯೭೦ರ 'ನಗುವ ಹೂವು' ಅತ್ಯುತ್ತಮ ಕನ್ನಡ ಚಿತ್ರ (ರಾಷ್ಟ್ರ ಪ್ರಶಸ್ತಿ) ಪಡೆದಿದ್ದಾರೆ.

## ಜಯಪ್ರದ

ಕನ್ನಡ ಚಿತ್ರರಂಗಕ್ಕೆ ತೆಲುಗು ಚಿತ್ರರಂಗದ ಕೊಡುಗೆ. ಜಯಪ್ರದ, ರಾಜಕುಮಾರ್ ನಾಯಕತ್ವದ 'ಸನಾದಿ ಅಪ್ಪಣ್ಣ' ಚಿತ್ರದಿಂದ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಮುಂದೆ 'ಹುಲಿಯ ಹಾಲಿನ ಮೇವು' 'ಕವಿರತ್ನ ಕಾಳಿದಾಸ' 'ಶಬ್ದವೇಧಿ'



ಚಿತ್ರಗಳಲ್ಲಿ ಅಭಿನಯ. ಜಯಪ್ರದ ಅಭಿನಯಿಸಿದ ಕೆಲವು ಮುಖ್ಯ ಚಿತ್ರಗಳಲ್ಲಿ 'ಹಬ್ಬ' 'ಆತ್ಮಬಂಧನ' 'ಏಕಲವ್ಯ' 'ಹಿಮಪಾತ' ಇತ್ಯಾದಿ ಸೇರಿವೆ. ಜಯಪ್ರದ ರಾಜ್ಯ, ರಾಷ್ಟ್ರ ರಾಜಕಾರಣದಲ್ಲಿ ತೊಡಗಿಕೊಂಡರು. ಇವರ ಪತಿ ಶ್ರೀಕಾಂತ್ ನಹತ ಚಿತ್ರ ನಿರ್ಮಾಪಕರು.

## ಜಯಮ್ಮ.ಬಿ

ಖ್ಯಾತ ರಂಗಭೂಮಿ - ಚಲನಚಿತ್ರ ನಟಿ. ಗುಬ್ಬಿವೀರಣ್ಣನವರ ಪತ್ನಿ. ಬೆಂಗಳೂರಿನಲ್ಲಿ ಜನನ (೧೯೧೫) . ಒಂಬತ್ತನೆಯ ವಯಸ್ಸಿನಲ್ಲಿ ರಂಗಭೂಮಿ ಪ್ರವೇಶಿಸಿದರು.



೧೩ ನೇ ವಯಸ್ಸಿನಲ್ಲಿ ಗುಬ್ಬಿ ನಾಟಕ ಸಂಸ್ಥೆ ಸೇರಿದರು. 'ವೀರಸಿಂಹ ಚರಿತ್ರೆ' ಇವರು ಅಭಿನಯಿಸಿದ ಮೊದಲ ನಾಟಕ. ಉತ್ತಮ ಕಂಠ, ಸೌಂದರ್ಯ, ಅಭಿನಯದಿಂದ ಜನಪ್ರಿಯರಾದರು. ಗುಬ್ಬಿ ಕಂಪನಿಯ ನಾಟಕಗಳಲ್ಲಿ ನಾಯಕಿಯಾಗಿ ಅಭಿನಯಿಸಿದರು. ಗುಬ್ಬಿ ವೀರಣ್ಣನವರ 'ಹಿಸ್ ಲವ್ ಅಫೇರ್' ಮೂಕಿ ಚಿತ್ರದಲ್ಲಿ ನಾಯಕಿ ಪಾತ್ರ ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಸದಾರಮೆ' (೧೯೩೫) ಇವರು ಅಭಿನಯಿಸಿದ ಮೊದಲ ಮಾತನಾಡುವ ಚಿತ್ರ. ನಂತರ ಹಲವಾರು ಕನ್ನಡ, ತೆಲುಗು, ತಮಿಳು ಚಿತ್ರಗಳಲ್ಲಿ ಅಭಿನಯಿಸಿದರು. ಕನ್ನಡದಲ್ಲಿ ಸುಮಾರು ೧೦೦ ಚಿತ್ರಗಳಲ್ಲಿ ಪೋಷಕನಟಿಯಾಗಿ ಅಭಿನಯಿಸಿದ್ದಾರೆ. ಸಂಗೀತ ವಿದುಷಿಯೂ ಆದ ಇವರು ಹಲವಾರು ಸಂಗೀತ ಕಛೇರಿಗಳನ್ನು ನೀಡಿದ್ದಾರೆ. ಬಹಳ ವರ್ಷ ಕನ್ನಡ ಲೇಖಕಿಯರ ಸಂಘದ ಅಧ್ಯಕ್ಷರಾಗಿದ್ದರು. ಅಶಕ್ತ ಕಲಾವಿದರ

ಕಲ್ಯಾಣಕ್ಕೆ ಶ್ರಮಪಟ್ಟರು. ಆರು ವರ್ಷ ಕಾಲ ವಿಧಾನಪರಿಷತ್ ಸದಸ್ಯೆ ಆಗಿದರು. ರಾಜ್ಯ ನಾಟಕ ಅಕಾಡೆಮಿ ಪ್ರಶಸ್ತಿ (೧೯೬೯-೭೦), ರಾಜ್ಯೋತ್ಸವ ಪ್ರಶಸ್ತಿ (೧೯೮೬-೮೭) ಗಳೂ ಆಕೆಗೆ ಸಂದಿವೆ.

### ಜಯಮಾಲಾ

ರಾಜಕೀಯ ಶಾಸ್ತ್ರದಲ್ಲಿ ಎಂ.ಎ.ಪದವಿ ಪಡೆದಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯವರು. 'ಕಾಸ್‌ದಾಯೇ ಕಂಡನೆ' ಎಂಬ ತುಳು ಚಿತ್ರದ ಮೂಲಕ ಚಿತ್ರರಂಗ ಪ್ರವೇಶ. ಇದುವರೆವಿಗೂ ೭೫ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದಾರೆ. ರಾಜಕುಮಾರ್ ಅವರೊಂದಿಗೆ ಅನೇಕ ಜನಪ್ರಿಯ ಚಿತ್ರಗಳಲ್ಲಿ ನಾಯಕಿಯಾಗಿದ್ದವರು. ಅವರ ನಿಜವಾದ ಪ್ರತಿಭೆಯನ್ನು ಬೆಳಕಿಗೆ ತಂದ ಚಿತ್ರ ಆಕೆಯೇ ತಯಾರಿಸಿದ 'ತಾಯಿಸಾಹೇಬ'. ೧೯೯೭ರಲ್ಲಿ ತೆರೆಗೆ ಬಂದ ಈ ಚಿತ್ರವನ್ನು ನಿರ್ದೇಶಿಸಿದವರು ಗಿರೀಶ್ ಕಾಸರವಳ್ಳಿ. ಈ ಚಿತ್ರಕ್ಕೆ ಕೇಂದ್ರ ಸರ್ಕಾರದ ಸ್ವರ್ಣಕಮಲ ಪ್ರಶಸ್ತಿ ಸಿಗುವುದರೊಂದಿಗೆ ವೈಯಕ್ತಿಕವಾಗಿ ಜಯಮಾಲಾರವರಿಗೆ ಉತ್ತಮ ಅಭಿನಯಕ್ಕಾಗಿ ತೀರ್ಪುಗಾರರ ಮಂಡಳಿಯ ವಿಶೇಷ ಪ್ರಶಸ್ತಿಯೂ ಲಭ್ಯವಾಯಿತು. ಈ



ಚಿತ್ರ ೧೯೯೭ - ೯೮ನೇ ಸಾಲಿನ ರಾಜ್ಯಸರ್ಕಾರದ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದುಕೊಳ್ಳುವುದರ ಜೊತೆಗೆ ಇತರ ವಿಭಾಗಗಳಲ್ಲಿ ಐದು ಪ್ರಶಸ್ತಿಗಳನ್ನು ಗಳಿಸಿತು. ನಂತರ ಈ ಚಿತ್ರ ಕೆಲವು ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಭಾರತವನ್ನು ಪ್ರತಿನಿಧಿಸಿ ಕೆಲವು ದೇಶಗಳ ಟೆಲಿವಿಶನ್ ಜಾಲಗಳಿಗೂ ಮಾರಾಟವಾಯಿತು. ಇದು ಜಯಮಾಲಾ ನಿರ್ಮಿಸಿದ ನಾಲ್ಕನೆಯ ಚಿತ್ರ. ಆಕೆಯ ಮೊದಲ ಸ್ವಂತ ತಯಾರಿಕೆ ೧೯೮೭ ರಲ್ಲಿ ಬಿಡುಗಡೆಯಾದ 'ಅಗ್ನಿಪರೀಕ್ಷೆ'. ಅವರ ಅಭಿನಯದ ಹಲವಾರು ಚಿತ್ರಗಳಲ್ಲಿ ಹೊಸ ಅಲೆಯ ಚಿತ್ರಗಳಾದ 'ಸಂಗೀತಾ', 'ಗಂಗವ್ವ ಗಂಗಾಮಾಯಿ', 'ಖಂಡವಿದೆಕೋ ಮಾಂಸವಿದೆಕೋ' ಗಮನಾರ್ಹ. ಅಷ್ಟೇ ಉತ್ತಮವಾಗಿ ಹಲವು ವಾಣಿಜ್ಯ ಚಿತ್ರಗಳಲ್ಲಿಯೂ ಅಭಿನಯಿಸಿದರು. ಕನ್ನಡ ಚಿತ್ರೋದ್ಯಮದ ಎಲ್ಲಾ ಒಳಹೊರಗನ್ನು ನಿಕಟವಾಗಿ ಬಲ್ಲ ಜಯಮಾಲಾ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ಸಕ್ರಿಯವಾಗಿ ದುಡಿದವರು. ಆಕೆ ಆ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಮೊಟ್ಟಮೊದಲ ಮಹಿಳಾ ಸದಸ್ಯೆ. ನಂತರ ಖಜಾಂಚಿ ಮತ್ತು ಉಪಾಧ್ಯಕ್ಷೆಯಾಗಿಯೂ ಕೆಲಸ ಮಾಡಿದಾರೆ. ಸಮಾಜಸೇವೆಯಲ್ಲಿಯೂ ಆಸಕ್ತಿಯಿರುವ ಆಕೆ ಬೀದಿ ಮಹಿಳೆಯರಿಗೆ ಆಶ್ರಯ ನೀಡುತ್ತಿರುವ ಮತ್ತು ಅವರನ್ನು ಸಮಾಜದ ಮೂಲವಾಹಿನಿಗೆ ತರಲು ಪ್ರಯತ್ನಿಸುತ್ತಿರುವ ಮೈಸೂರಿನ ಶಕ್ತಿಧಾಮ ಸಂಸೆಯ ವ್ಯವಸ್ಥಾಪಕ ಟ್ರಸ್ಟಿ.

### ಜಯರಾಂ

ಆನಂದ ಪಿಕ್ಚರ್ಸ್ ಲಾಂಛನದಲ್ಲಿ ಕನ್ನಡ ಚಿತ್ರಗಳ ವಿತರಕರಾಗಿ ಮೂರು ದಶಕಗಳ



ಕಾಲ ಚಿತ್ರೋದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದಾರೆ. ಇವರು ಕೂಡ ದೂರವಾಣಿ ಇಲಾಖೆಯಲ್ಲಿದ್ದವರು. ಮೈಸೂರು ವಲಯ ವಿತರಕ ಸಂಘದ ಪ್ರಮುಖ ವ್ಯಕ್ತಿ.

### ಜಯರಾಂ. ಬಿ. ಉಡುಪಿ

ಕನ್ನಡ ಚಿತ್ರರಂಗದ ಅಸಾಮಾನ್ಯ ನೃತ್ಯ ನಿರ್ದೇಶಕ. ಕನ್ನಡದಲ್ಲಿ ಅವರೆಷ್ಟು ಚಿತ್ರಗಳಿಗ ನೃತ್ಯ ನಿರ್ದೇಶನ ನೀಡಿದಾರೆಂಬುದರ ಲೆಕ್ಕವಿಲ್ಲ. ದಿ.ಉದಯಕುಮಾರ್ ಅವರನ್ನು ಬೆಳಕಿಗೆ ತಂದ 'ಭಾಗ್ಯೋದಯ' ಉಡುಪಿ



ಜಯರಾಂ ಸ್ವತಂತ್ರ ನೃತ್ಯ ನಿರ್ದೇಶಕರಾಗಿ ದುಡಿದ ಪ್ರಥಮ ಚಿತ್ರ. ಆದರೆ ಅವರು ಚಿತ್ರರಂಗವನ್ನು ಪ್ರವೇಶಿಸಿದ್ದು ೧೯೪೫-೪೬ರ ಸುಮಾರಿಗೆ. ಜೆಮಿನಿ ಸಂಸ್ಥೆ ತಯಾರಿಸಿದ 'ಚಂದ್ರಲೇಖ' ಚಿತ್ರದ ಡ್ರಂ ನೃತ್ಯದ ಸನ್ನಿವೇಶದಲ್ಲಿ ಅವರು ಪಾಲ್ಗೊಂಡಿದ್ದರು. ಕನ್ನಡದಲ್ಲಿ ಮಾಧುರ್ಯಕ್ಕೆ ಪ್ರಾಧಾನ್ಯ ಇರುವುದರಿಂದ ಅದಕ್ಕೆ ತಕ್ಕಂತೆ ವೈವಿಧ್ಯಪೂರ್ಣ ನೃತ್ಯ ಸಂಯೋಜನೆ ಕಷ್ಟಕರವೆಂದು ಅವರ ಅಭಿಪ್ರಾಯ. ಉಡುಪಿ ಜಯರಾಂ ಕನ್ನಡದ ಎಲ್ಲ ನಟ-ನಟಿಯರೊಂದಿಗೆ ಕಾರ್ಯ ನಿರ್ವಹಿಸಿದ್ದಾರೆ. ಅವರ ಬಳಿ ಸಹಾಯಕಿಯಾಗಿ ಹಲವಾರು ವರ್ಷಗಳು ದುಡಿದ ದೇವಿ ಮುಂದೆ ಸ್ವತಂತ್ರ ನೃತ್ಯ ನಿರ್ದೇಶಕಿಯಾಗಿ ಕಾರ್ಯ ನಿರ್ವಹಿಸಿದರು. ಜಯರಾಂ ನೃತ್ಯ ನಿರ್ದೇಶಿಸಿದ ಚಿತ್ರಗಳಲ್ಲಿ 'ಬದುಕು ಬಂಗಾರವಾಯಿತು', 'ಕವಿರತ್ನ ಕಾಳಿದಾಸ', 'ಪ್ರೇಮದ ಕಾಣಿಕೆ', 'ಬಂಗಾರದ ಮನುಷ್ಯ', 'ಸನಾದಿ ಅಪ್ಪಣ್ಣ', 'ಗಿರಿಕನ್ಯೆ', 'ಸೊಸೆ ತಂದ ಸೌಭಾಗ್ಯ', 'ಮಲಯ ಮಾರುತ', 'ಮುತ್ತಿನ ಹಾರ' ಹೀಗೆ ಚಿತ್ರಗಳ ಭಾರಿ ಪಟ್ಟಿಯೇ ಇದೆ.

### ಜಯರಾಂ.ಕೆ.ವಿ



ಕಾದಂಬರಿ ಆಧಾರಿತ ಚಿತ್ರಗಳ ಯಶಸ್ವೀ ನಿರ್ದೇಶಕ ಎಂಬ ಹೆಗ್ಗಳಿಕೆಯುಳ್ಳ ಕೆ.ವಿ.ಜಯರಾಂ ಮೈಸೂರಿನವರು. ಚಿಕ್ಕ ವಯಸ್ಸಿನಿಂದಲೂ ಕಥೆ - ಕಾದಂಬರಿಗಳನ್ನು ಓದುವ ಹವ್ಯಾಸ . ತಮ್ಮ ಶಾಲಾ ಕಾಲೇಜು ದಿನಗಳಲ್ಲಿ ಚಿತ್ರೀಕರಣಗಳನ್ನು ವೀಕ್ಷಿಸಲು ಹೋಗುತ್ತಿದ್ದರು. ಚಲನಚಿತ್ರ ಕಲೆಯ ಬಗ್ಗೆ ಮಮತೆ ಹೆಚ್ಚಾಗಿ ಕಾಲೇಜು ತ್ಯಜಿಸಿ ಚಿತ್ರರಂಗಕ್ಕೆ ಧುಮುಕಿದರು. ಹೆಸರಾಂತ ಹಿರಿಯ ನಿರ್ದೇಶಕ ಎಂ.ಆರ್.ವಿಠಲ್‌ರ ಬಳಿ ಸಹಾಯಕ ನಿರ್ದೇಶಕರಾಗಿ ಕೆಲಸ ಮಾಡಿ ಸಾಹಿತ್ಯ - ಚಿತ್ರಕಥೆ ರಚನೆ , ಸಂಕಲನ-ಕಾರ್ಯಗಳಲ್ಲಿ ಮಗ್ನರಾಗಿ ಅನುಭವ ಸಂಪಾದಿಸಿಕೊಂಡರು. ೧೯೭೯ರಲ್ಲಿ ತೆರೆಕಂಡ ಸಾಹಿತಿ ಟಿ.ಕೆ. ರಾಮರಾಯರ ಕಾದಂಬರಿ ಆಧಾರಿತ 'ಮರಳು ಸರಪಣಿ' ಇವರ ನಿರ್ದೇಶನದ ಪ್ರಥಮ ಚಿತ್ರ. ಕಾದಂಬರಿಗಳನ್ನು ಆಧರಿಸಿ ಯಶಸ್ವೀ ಚಿತ್ರಗಳನ್ನು ನಿರ್ದೇಶಿಸಿದರು. ಸುಮಾರು ೨೫ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದಾರೆ. ಪ್ರಮುಖ ಚಿತ್ರಗಳು - 'ಬಾಡದ ಹೂ' (೧೯೮೨), 'ಚಿತ್ತಲೆ ಸೇಪೆ' (೧೯೮೨) 'ಇಬ್ಬನಿ ಕರಗಿತು' (೧೯೮೩), 'ಅರುಣರಾಗ' (೧೯೮೬). 'ವರ್ಣಚಕ್ರ' (೧೯೮೮), 'ಶರವೇಗದ ಸರದಾರ' (೧೯೮೯) ಮುಂತಾದವು. 'ಬಾಡದ ಹೂ' (೧೯೮೧-೮೨) ಮತ್ತು 'ಹೊಸನೀರು' (೧೯೮೫-೮೬) ಚಿತ್ರಗಳಿಗೆ ರಾಜ್ಯಪ್ರಶಸ್ತಿ ಪಡೆದಿರುತ್ತಾರೆ. ಇವರು ನಿರ್ಮಾಪಕ -ನಿರ್ದೇಶಕರಾಗಿ 'ಹೊಸರಾಗ' (೧೯೯೨), 'ರಂಜಿತ' (೧೯೯೩) ಚಿತ್ರಗಳನ್ನು ನೀಡಿದ್ದಾರೆ. ಕಡಿಮೆ ಬಂಡವಾಳದಲ್ಲಿ ಸದಭಿರುಚಿಯ ಯಶಸ್ವೀ ಚಿತ್ರಗಳನ್ನು ನೀಡಿದ ಹೆಗ್ಗಳಿಕೆ ಇವರಿಗೆ ಸಲ್ಲುತ್ತದೆ. ಪುಟ್ಟಣ್ಣ ಕಣಗಾಲ್ ಪ್ರಶಸ್ತಿ (೧೯೯೯-೨೦೦೦) ಇವರಿಗೆ ಸಂದಿದೆ.

### ಜಯರಾಂ.ಸಿ

ರಾಜಕುಮಾರ್ ಅವರ ಸಮೀಪದ ಬಂಧುಗಳಾದ ಜಯರಾಂ.ಸಿ ಮೊದಲಿನಿಂದಲೂ ಚಿತ್ರ ಸಂಬಂಧದ ವಿಷಯಗಳಲ್ಲಿ ಆಸಕ್ತರಾಗಿದ್ದು ಚಿತ್ರ ನಿರ್ಮಾಣದ ಎಲ್ಲಾ ವಿಭಾಗಗಳಲ್ಲಿ ದುಡಿದ



ಅನುಭವದಿಂದ ನಿರ್ಮಾಪಕರಾಗಿ 'ಅನುಪಮಾ' ಚಿತ್ರವನ್ನು ತೆರೆಗಿತ್ತರು. ನಂತರ 'ನಾ ನಿನ್ನ ಬಿಡಲಾರೆ', 'ರಾಮಾಪುರದ ರಾವಣ' ಮುಂತಾದ ಚಿತ್ರಗಳನ್ನು ನಿರ್ಮಿಸಿದರು. ಇವರ ಅಳಿಯ ಬಾಲರಾಜ್ ಚಿತ್ರನಟರು.

### ಜಯರಾಮರೆಡ್ಡಿ.ಎನ್.ಟಿ

ರೆಡ್ಡಿಯವರು ಒಂದು ರೀತಿ ಕನ್ನಡ ಚಿತ್ರರಂಗದಲ್ಲಿ ಎಲೆ ಮರೆಯ ಕಾಯಿ. 'ನಮ್ಮ ಊರ ದೇವರು' ಅವರ ಮೊದಲ ಚಿತ್ರ. 'ಹಾವಾದ ಹೂವು', 'ಚದುರಿದ



ಚಿತ್ರಗಳು' ಮತ್ತು 'ಆಸೆ' ಚಿತ್ರಗಳನ್ನು ನಿರ್ದೇಶಿಸಿದ್ದರೂ ಹೆಚ್ಚು ಪ್ರಕಾಶಕ್ಕೆ ಬಂದಿರಲಿಲ್ಲ. ಜೊತೆಗೆ ರಾಷ್ಟ್ರ ಪ್ರಶಸ್ತಿ ಪಡೆದ 'ದಂಗೆ ಎದ್ದ ಮಕ್ಕಳು' ಮತ್ತು ಇನ್ನೂ ಕೆಲವು ಚಿತ್ರಗಳಿಗೆ ರೆಡ್ಡಿಯವರು ಕಥೆ ಮತ್ತು ಚಿತ್ರಕಥೆ ಗಳನ್ನು ಬರೆದರು. ಜಯರಾಮರೆಡ್ಡಿಯವರು ಆರ್.ನಾಗೇಂದ್ರರಾಯರ ಗರಡಿಯಲ್ಲಿ ತಯಾರಾದವರು. ರಾಯರು ನಿರ್ದೇಶಿಸಿದ ಖ್ಯಾತ ಚಿತ್ರ 'ನಮ್ಮ ಮಕ್ಕಳು'ನಲ್ಲಿ ಅವರು ಸಹಾಯಕ ನಿರ್ದೇಶಕರು. ಇವರ ನಿರ್ದೇಶನದ 'ಯಾರು ಹೊಣೆ' ಚಿತ್ರಕ್ಕೆ ೧೯೮೮-೮೯ನೇ ಸಾಲಿನ ಅತ್ಯುತ್ತಮ ಚಿತ್ರ ಪ್ರಶಸ್ತಿ ಲಭಿಸಿದೆ. ಕಿರುತೆರೆಯ ಧಾರಾವಾಹಿಗಳ ನಿರ್ದೇಶನಗಳಲ್ಲಿ ತೊಡಗಿಕೊಂಡಿದ್ದಾರೆ.

### ಜಯಲಕ್ಷ್ಮಿ

ಪುಣೆಯ ಫಿಲಂ ಅಂಡ್ ಟೆಲಿವಿಷನ್ ಇನ್ಸ್‌ಟಿಟ್ಯೂಟ್‌ನಲ್ಲಿ ಪದವಿ ಪಡೆದು ಕನ್ನಡ ಚಿತ್ರರಂಗಕ್ಕೆ ಬಂದ ಕಲಾವಿದೆ ಜಯಲಕ್ಷ್ಮಿ. ಬಿ.ಎ.ಅರಸುಕುಮಾರ್ ನಿರ್ದೇಶಿಸಿದ 'ಬೀಸಿದ ಬಲೆ' ಈಕೆ ಅಭಿನಯಿಸಿದ ಮೊದಲ ಚಿತ್ರ. ಇವರು ಅಭಿನಯಿಸಿದ ಚಿತ್ರಗಳಲ್ಲಿ ಮುಖ್ಯವಾದವು. 'ಸೀತೆಯಲ್ಲ ಸಾವಿತ್ರಿ', 'ಸದಾನಂದ', 'ಮಹಾತ್ಯಾಗ', 'ಕಳ್ಳ ಕುಳ್ಳ', 'ಬೆಸುಗೆ'. 'ಬಯಲು ದಾರಿ', 'ದೇವರಕಣ್ಣು', 'ಅಳಿಯ



ದೇವರು', 'ಕೆಂಪು ಹೋರಿ', 'ಸುಂದರ ನಾನು ಸುಂದರಿ ನೀನು' ಇತ್ಯಾದಿ. 'ಬಯಲು ದಾರಿ' ಯಲ್ಲಿ ಈಕೆಯ ಅಭಿನಯಕ್ಕಾಗಿ ರಾಜ್ಯ ಸರ್ಕಾರದ - ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಲಭಿಸಿತು. ಒಂದು ತುಳು ಮತ್ತು ಎರಡು ಮಲಯಾಳಂ ಚಿತ್ರಗಳಲ್ಲಿಯೂ ಅಭಿನಯಿಸಿದ ಜಯಲಕ್ಷ್ಮಿ ಕೆಲವು ವರ್ಷಗಳ ಕಾಲ ಅಭಿನಯ ಕ್ಷೇತ್ರದಿಂದ ನಿರ್ಗಮಿಸಿ ಮತ್ತೆ ಕಿರುತೆರೆಯ ಧಾರಾವಾಹಿಗಳಲ್ಲಿ ಅಭಿನಯಿಸಲು ಪ್ರಾರಂಭಿಸಿದರು.

### ಜಯಲಲಿತಾ

ಎಪ್ಪತ್ತರ ದಶಕವಲ್ಲಿ ದಕ್ಷಿಣ ಭಾರತ



ಚಲನಚಿತ್ರರಂಗದಲ್ಲಿ ಹೆಸರಾದವರು. ತಾಯಿ ಸಂಧ್ಯಾ ಐವತ್ತರ ದಶಕದ ಕನ್ನಡ, ತಮಿಳು, ತೆಲುಗು ಚಿತ್ರರಂಗದ ನಾಯಕಿ. ಚಿಕ್ಕಮ್ಮ ವಿದ್ಯಾವತಿ ಕೂಡ ಚಿತ್ರಗಳಲ್ಲಿ ಅಭಿನಯಿಸುತ್ತಿದ್ದರು. ಜಯಲಲಿತಾ ಮದರಾಸಿನ ಕಾನ್ವೆಂಟಿನಲ್ಲಿ ಓದಿದರು. ಶಾಸ್ತ್ರೋಕ್ತವಾಗಿ ನೃತ್ಯ ಕಲಿಕೆ. ವಿ.ವಿ.ಗಿರಿಯವರ ಮಗ ನಿರ್ಮಿಸಿದ ಇಂಗ್ಲಿಷ್ ಸಾಕ್ಷ್ಯಚಿತ್ರ 'ಎಪಿಸಲ್'ನಲ್ಲಿ ಅಭಿನಯಿಸಲು ಒತ್ತಾಯ ಮಾಡಿ ಕರೆದೊಯ್ದರು. ಅದು ಚಿತ್ರರಂಗದ ಮೊದಲ ಮೆಟ್ಟಿಲಾಯಿತು. ಕನ್ನಡದಲ್ಲಿ ಮೊದಲು ನಟಿಸಿದ ಚಿತ್ರ 'ನನ್ನ ಕರ್ತವ್ಯ'. ಗುರು ಚೋಪ್ರ ನೃತ್ಯ ನಿರ್ದೇಶಕರೂ ಆಗಿದ್ದ ಭಾವನಾರಾಯಣ ಅವರ 'ಮಂಚಿರೋಜುಲು ವಸ್ತಾಯಿ' ಚಿತ್ರದಲ್ಲಿ ಒಂದು ನೃತ್ಯ ನಿರ್ವಹಿಸಿದರು. ನಂತರ ಆರ್.ನಾಗೇಂದ್ರ ರಾಯರ ಒತ್ತಾಯದಿಂದ ಎಸ್.ಕೆ.ಎ.ಚಾರಿ ನಿರ್ದೇಶನದ 'ಮನೆ ಅಳಿಯ' ಚಿತ್ರದಲ್ಲಿ ನಾಯಕಿಯಾಗುವ ಅವಕಾಶ. 'ಚಿನ್ನದ ಗೊಂಬೆ', 'ನನ್ನ ಕರ್ತವ್ಯ', 'ಬದುಕುವ ದಾರಿ', 'ಮಾವನ ಮಗಳು' ಕನ್ನಡ ಚಿತ್ರಗಳಲ್ಲಿ ಕಲ್ಯಾಣ್‌ಕುಮಾರ್‌ಗೆ ನಾಯಕಿಯಾಗಿ ಅಭಿನಯಿಸಿದರು. ಅನಂತರ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ತಮಿಳುನಾಡಿನ ಮುಖ್ಯಮಂತ್ರಿಯೂ ಆದರು. ಎ.ಐ.ಡಿ.ಎಂ.ಕೆ ಪಕ್ಷದ ನೇತಾರರು.

### ಜಯಶ್ರೀ ಅರವಿಂದ್

ಸಂಗೀತ ನಿರ್ದೇಶಕಿ ಜಯಶ್ರೀ ಅರವಿಂದ್ ಮೈಸೂರು



ವಿಶ್ವವಿದ್ಯಾಲಯದಿಂದ ಬಿ.ಎ.ಮ್ಯೂಸಿಕ್ ಪದವಿ, ಕನ್ನಡ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಜಾನಪದ ಸಾಹಿತ್ಯವನ್ನು ಐಚ್ಛಿಕವಾಗಿ ತೆಗೆದುಕೊಂಡು ೧೯೭೭-೭೮ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪು.ತಿ.ನ. ಅವರ ರಾಮಾಯಣ ಗೀತರೂಪಕಗಳ ಬಗೆಗೆ ಪ್ರೌಢ ಪ್ರಬಂಧ ಮಂಡಿಸಿ ಎಂ.ಫಿಲ್ ಪದವಿ ಪಡೆದ ಪ್ರಪ್ರಥಮ ಮಹಿಳೆ. 'ದಾರೆದ ಸೀರೆ', 'ಪೆಟ್ಟಾಯಿ ಪುಲಿ' ತುಳು ಚಿತ್ರಗಳಿಗೆ ಸಂಗೀತ ನೀಡಿದ್ದಾರೆ. 'ಕೆರಳಿದ ಕನ್ಯೆಯರು' ಚಿತ್ರಕ್ಕೆ ಸಂಗೀತ ನೀಡಿದರಾದರೂ ಚಿತ್ರ ಬಿಡುಗಡೆಯಾಗಲಿಲ್ಲ. ನಾಗಾಭರಣ ನಿರ್ದೇಶನದ 'ವಿಮೋಚನೆ' ಚಿತ್ರಕ್ಕೆ ಸಂಗೀತ ನಿರ್ದೇಶನ ಮಾಡಿದ್ದಾರೆ. ಸುಮಾರು ೨,೫೦೦ ಗೀತೆಗಳನ್ನು ರಚಿಸಿದ್ದಾರೆ. ಹಲವು ಧ್ವನಿಸುರುಳಿಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ಕಿರುತೆರೆಯ ಧಾರಾವಾಹಿಗಳಿಗೂ ಸಂಗೀತ ನಿರ್ದೇಶಿಸಿದ್ದಾರೆ.

### ಜಯಶ್ರೀ.ಎಂ

ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಚಿತ್ರರಂಗದಲ್ಲಿ ಸಾಧನೆ. ಹೊನ್ನಪ್ಪ ಭಾಗವತರ್ ಅವರ 'ಭಕ್ತ ಕುಂಬಾರ'ದ ಮೂಲಕ ಚಲನಚಿತ್ರರಂಗಕ್ಕೆ ಪ್ರವೇಶ ಪಡೆದ



ಇವರು 'ನಾಗ ಕನ್ನಿಕಾ' ಚಿತ್ರದ ಮೂಲಕ ನಾಯಕಿಯಾಗಿ ಅವಕಾಶ ಪಡೆದರು. ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಜಾನಪದ ಹೀಗೆ ಎಲ್ಲ ಬಗೆಯ ಚಿತ್ರಗಳಲ್ಲೂ ಪಾತ್ರ ವಹಿಸಿರುವ ಈಕೆ 'ಅಮರ ಭಾರತಿ' ಚಿತ್ರದಲ್ಲಿನ ಅಭಿನಯಕ್ಕಾಗಿ (೧೯೭೦-೭೧) ಶ್ರೇಷ್ಠ ಪೋಷಕ ನಟಿ ಪ್ರಶಸ್ತಿ ಪಡೆದಿದ್ದರು. 'ಜಗನ್ಮೋಹಿನಿ', 'ತಿಲೋತ್ತಮ', 'ಸೋದರಿ', 'ಶಿವಶರಣೆ ನಂಬಿಯಕ್ಕ', 'ಮುತ್ತೈದೆ ಭಾಗ್ಯ', 'ಮಿಸ್ ಲೀಲಾವತಿ', 'ಚಂದವಳ್ಳಿಯ ತೋಟ', 'ಮಾರ್ಗದರ್ಶಿ', 'ಜಗಜ್ಯೋತಿ ಬಸವೇಶ್ವರ', 'ಚಕ್ರತೀರ್ಥ', 'ನಾಗರಹಾವು' ಮೊದಲಾದವು ಇವರ ಅಭಿನಯದ ಮುಖ್ಯ ಚಿತ್ರಗಳು.

### ಜಯಶ್ರೀ.ಬಿ

ರಂಗಭೂಮಿಯಲ್ಲಿ ದೊಡ್ಡ ಹೆಸರು ಬಿ.ಜಯಶ್ರೀ. ರಾಷ್ಟ್ರೀಯ ರಂಗಶಾಲೆಯ ಪದವೀಧರೆ. ಆಕೆ ಚಲನಚಿತ್ರಗಳಲ್ಲಿ ಅಭಿನಯಿಸಿರುವುದು ಕಡಿಮೆ. ಆದರೆ ಅಭಿನಯಿಸಿದಾಗಲೆಲ್ಲಾ ದೊಡ್ಡ ಸುದ್ದಿ ಮಾಡಿದ್ದಾರೆ. 'ಕುರಿದೊಡ್ಡಿ ಕುರುಕ್ಷೇತ್ರ', 'ನಾಗಮಂಡಲ', 'ಕೌರವ', 'ಕೊಟ್ರೇಶಿ ಕನಸು' ಮೊದಲಾದ ಚಿತ್ರಗಳಲ್ಲಿ



ಅಭಿನಯಿಸಿದ್ದಾರೆ. ೧೯೯೬ - ೯೭ ರ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿಯನ್ನು 'ನಾಗಮಂಡಲ' ಚಿತ್ರದ ಕುರುಡವ್ವನ ಪಾತ್ರಾಭಿನಯಕ್ಕಾಗಿ ಪಡೆದರು. ಜಯಶ್ರೀ ಅವರು ಗುಬ್ಬಿ ವೀರಣ್ಣನವರ ಮೊಮ್ಮಗಳು. ಬಣ್ಣದ ಬದುಕು ರಕ್ತಗತವಾಗಿ ಬಂದಿದೆ. ನಾಡಿನಾದ್ಯಂತ ರಂಗಭೂಮಿಗೆ ಅವರು ಸಲ್ಲಿಸಿರುವ ಸೇವೆಗಾಗಿ ಅಸಂಖ್ಯಾತ ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಕಂಠದಾನ ಕಲಾವಿದೆಯಾಗಿ ರಾಜ್ ಸಂಸ್ಥೆಯ ಚಿತ್ರಗಳ ನಾಯಕಿಯರಿಗೆ ದನಿಕೊಟ್ಟವರು. ರಂಗಸಂಗೀತ ಪ್ರವೀಣೆ. ಚಿತ್ರರಂಗದಲ್ಲಿ ತಮ್ಮ ಕಂಠಸಿರಿಗೆ ಹೆಸರಾಗಿದ್ದಾರೆ. 'ಅದಿತ್ಯ' ಚಿತ್ರದ 'ರಂಭೆ ನೀ ವಯ್ಯಾರದ ರಂಭೆ ...', 'ಯಾರೇ ನೀನು ಚೆಲುವೆ' ಚಿತ್ರದ 'ಚಕ್ಕೋತ ಚಕ್ಕೋತ ...', 'ನಾಗಮಂಡಲ' ಚಿತ್ರದ 'ಗೆದಿಯಬೇಕು ಮಗಳೆ...' ಮುಂತಾದ ಚಿತ್ರಗಳ ಹಾಡುಗಳು ಅವರ ಕಂಠ ಸಿರಿಗೆ ವಿಶೇಷ ಮಾದರಿಗಳು. ಗಾಯನಕ್ಕಾಗಿ ಹಲವು ಪ್ರಶಸ್ತಿಗಳು ಸಂದಿವೆ.

### ಜಯಶ್ರೀ ದೇವಿ

ಹೈದರಾಬಾದಿನಿಂದ ಬೆಂಗಳೂರಿಗೆ ಬಂದು ಕನ್ನಡ ಚಿತ್ರಗಳನ್ನು ನಿರ್ಮಿಸಿದ ಸಾಹಸ ಪ್ರವೃತ್ತಿಯ ಮಹಿಳೆ. ಮೂಲತಃ



ಪತ್ರಕರ್ತೆಯಾದ ಜಯಶ್ರೀದೇವಿ ಕನ್ನಡ ಚಿತ್ರ ನಿರ್ಮಾಪಕರೇ ಚಿತ್ರ ನಿರ್ಮಾಣದಲ್ಲಿ ಆಸಕ್ತಿ ಕಳೆದುಕೊಳ್ಳುತ್ತಿರುವ ಸಂದರ್ಭದಲ್ಲಿ ಹಲವು ಅದ್ದೂರಿ ಕನ್ನಡ ಚಿತ್ರಗಳನ್ನು ನಿರ್ಮಿಸಿ ಸೈ ಎನಿಸಿಕೊಂಡವರು. ನ್ಯಾಯಾಂಗದ ಓರೆಕೋರೆಗಳನ್ನು ಪ್ರಶ್ನಿಸುವಂಥ ವಿಡಂಬನಾತ್ಮಕ ಚಿತ್ರ 'ಕೋಣ ಈದೈತೆ' ಚಿತ್ರ ನಿರ್ಮಿಸಿ ,ನಿರ್ದೇಶಿಸಿ ಸೆನ್ಸಾರ್ ತೊಂದರೆಗೆ ಸಿಲುಕಿಕೊಂಡರು. ಈ ಚಿತ್ರ ನ್ಯಾಯಾಲಯದ ಮೆಟ್ಟಿಲನ್ನು ಹತ್ತಿ ಸಾಕಷ್ಟು ಪ್ರಚಾರ ಪಡೆಯಿತು. ಅನಂತರ ಅಕೆಯೇ ನಿರ್ದೇಶಿಸಿದ 'ಭವಾನಿ' ೯೦ರ ಅಂತಾರಾಷ್ಟ್ರೀಯ ಚಿತ್ರೋತ್ಸವದ ನಿರ್ದೇಶಕಿಯರ ಚಿತ್ರಗಳ ವಿಭಾಗದಲ್ಲಿ ಪ್ರದರ್ಶಿತವಾಯಿತು. 'ನಮ್ಮೂರ ಮಂದಾರ ಹೂವೆ', ಅಮೃತ ವರ್ಷಿಣಿ', 'ಹಬ್ಬ' ಮುಂತಾದ ಜನಪ್ರಿಯ ಚಿತ್ರಗಳನ್ನು ನಿರ್ಮಿಸಿರುವ ಜಯಶ್ರೀದೇವಿ ಸಾಹಸೀ ಮಹಿಳೆ.

### ಜಯಸಿಂಹ ಮುಸುರಿ

ಕನ್ನಡ ಚಿತ್ರರಂಗದ ಜನಪ್ರಿಯ ಹಾಸ್ಯನಟರಲ್ಲೊಬ್ಬರಾಗಿದ್ದ ಮುಸುರಿ ಕೃಷ್ಣಮೂರ್ತಿಯವರ ಪುತ್ರ . ತಂದೆಯವರ ಹಾದಿಯನ್ನೇ ತುಳಿದು ಅಭಿನಯವನ್ನು ವೃತ್ತಿಯನ್ನಾಗಿ ಸ್ವೀಕರಿಸಿದವರು. ಇದುವರೆಗೆ ೪೦ ಚಿತ್ರಗಳಲ್ಲಿ ಅಭಿನಯಿಸುವುದರ ಜೊತೆಗೆ 'ನಂಬರ್ ಐದೂ ಎಕ್ಕ', 'ನಟ ಚಾಣಕ್ಯ ಮುಸರಿ', 'ಭರತ್, 'ಸೆಂಟ್ರಲ್ ರೌಡಿ', 'ವಿಕ್ರಮ್' ಮತ್ತು 'ರಾಜೀವಪ್ಪ' ಚಿತ್ರಗಳನ್ನು



ನಿರ್ಮಿಸಿದ್ದಾರೆ. 'ರಾಜೀವಪ್ಪ'ದ ನಿರ್ದೇಶಕರೂ ಅವರೇ. ಕಿರುತೆರೆಯಲ್ಲಿ 'ತುಂಗೆಯ ತೀರದಲ್ಲಿ' ಧಾರಾವಾಹಿಯನ್ನು ನಿರ್ದೇಶಿಸಿದ್ದಾರೆ. ಉಗ್ರನರಸಿಂಹ ನಿರ್ದೇಶಿಸಿದ 'ನನ್ನ ಪ್ರಾಯಶ್ಚಿತ್ತ' ಜಯಸಿಂಹ ಅಭಿನಯಿಸಿದ ಮೊದಲ ಚಿತ್ರ. 'ನಂಬರ್ ಐದೂ ಎಕ್ಕ', 'ಗಂಧರ್ವ ಗಿರಿ', 'ಸೆಂಟ್ರಲ್ ರೌಡಿ', 'ಹೂವು-ಹಣ್ಣು', 'ಭರತ್', 'ರಾಜೀವಪ್ಪ' ಮುಂತಾದ ಚಿತ್ರಗಳಲ್ಲಿ ಅವರ ಪೋಷಕ ಅಭಿನಯ ಗಮನ ಸೆಳೆಯಿತು. ಜಯಸಿಂಹರವರ ಸೋದರ ಗುರುದತ್ ಮುಸುರಿ ಕೂಡ ಅವರ ನಿರ್ಮಾಣ ಚಟುವಟಿಕೆಗಳಲ್ಲಿ ಪಾಲುದಾರರು ಮತ್ತು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

### ಜಯಾ.ಬಿ

ಹಾಸ್ಯಪಾತ್ರಗಳಲ್ಲಿ ಹಾಗೂ ನಾಯಕನ ಸಹೋದರಿ-ನಾಯಕಿಯ ಸಖಿ ಪಾತ್ರಗಳಲ್ಲಿ ಅಭಿನಯಿಸುತ್ತಲೇ ಜನಪ್ರಿಯರಾದ ನಟಿ. ೬೦ರ ದಶಕದಲ್ಲಿ ಚಿತ್ರರಂಗ ಪ್ರವೇಶಿಸಿದ ಜಯಾ, ನರಸಿಂಹರಾಜು ಅವರೊಂದಿಗೆ ಬಹಳಷ್ಟು ಚಿತ್ರಗಳಲ್ಲಿ ಹಾಸ್ಯನಟಿಯಾಗಿ



ಅಭಿನಯಿಸಿದರು. ಬಹುತೇಕ ಕನ್ನಡದ ಎಲ್ಲ ನಾಯಕ ನಟರ ಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. 'ಗಂಧದ ಗುಡಿ' ತಯಾರಾದ ಬಹು ವರ್ಷಗಳ ನಂತರ ಅದೇ ಚಿತ್ರದ ಎರಡನೆ ಭಾಗ ಸಿದ್ಧಗೊಂಡಾಗ ಮೊದಲ ಚಿತ್ರದಲ್ಲಿದ್ದ ಪಾತ್ರವನ್ನೇ ಎರಡನೇ ಚಿತ್ರದಲ್ಲಿಯೂ ಮಾಡಿದರು. ಕಿರುತೆರೆ ಕಲಾವಿದರಾಗಿಯೂ ಪ್ರಖ್ಯಾತರಾಗಿದ್ದಾರೆ.

### ಜವಹರ್.ಯು.ಎಸ್

ಕನ್ನಡ ಚಿತ್ರರಂಗವನ್ನು ಉತ್ತಮ ಚಿತ್ರಗಳನ್ನು ನಿರ್ಮಿಸುವುದರ ಮೂಲಕ ಶ್ರೀಮಂತಗೊಳಿಸಿದ ಉಪಾಧ್ಯಾಯ ಶ್ರೀನಿವಾಸ ಜವಹರ್ ಹುಟ್ಟಿದ್ದು ಉಡುಪಿಯ



ಪಣಿಯಾಡಿಯಲ್ಲಿ. ತಂದೆ ಬರೋಡಾ ಸರ್ಕಾರದಲ್ಲಿ ಕೆಲಸ ಮಾಡುತ್ತಿದವರು. ತಾಯಿ ಕರಾವಳಿ ಕತೆಗಾರ್ತಿ. ಅಣ್ಣ ವಾದಿರಾಜ್, ತಂಗಿ ಹರಿಣಿ. ಮದರಾಸಿನಲ್ಲಿ ವಾಸ್ತವ್ಯ ಬದಲಾದ ನಂತರ ಅಣ್ಣ ತಂಗಿಯರಿಬ್ಬರು ಚಿತ್ರರಂಗದಲ್ಲಿ ಖ್ಯಾತರಾಗಿ ಭಾರತಿ ಸಂಸ್ಥೆಯನ್ನು ಹುಟ್ಟುಹಾಕಿದಾಗ ಜವಹರ್ ನಿರ್ಮಾಣದ ಹೊರೆಹೊತ್ತರು. ಈ ಸಂಸ್ಥೆಯ ಪ್ರಥಮ ಕೊಡುಗೆ 'ನಂದಾದೀಪ'. ನಂತರ 'ನವಜೀವನ', 'ನಾಂದಿ', 'ಪ್ರೇಮಕ್ಕೂ ಪರ್ಮಿಟ್ಟೇ', 'ನಮ್ಮ ಮಕ್ಕಳು', 'ಸೀತಾ', 'ನಾ ಮೆಚ್ಚಿದ ಹುಡುಗ', 'ಸೀತೆಯಲ್ಲ ಸಾವಿತ್ರಿ', 'ನಮ್ಮಮ್ಮನ ಸೊಸೆ' ಮೊದಲಾದ ಚಿತ್ರಗಳನ್ನು ನಿರ್ಮಿಸಿ ಜನಮನ ಗೆದರು. 'ನಮ್ಮ ಮಕ್ಕಳು' ಚಿತ್ರ ರಾಜ್ಯಸರ್ಕಾರದ ೧೯೬೮-೬೯ನೇ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆಯಿತು.

### ಜಾನಕಿ.ಎಸ್

ಚಿತ್ರರಂಗದ ಹೆಸರಾಂತ ಹಿನ್ನೆಲೆ ಗಾಯಕಿ. ಮೂಲತಃ ತೆಲುಗಿನವರಾದ ಎಸ್.ಜಾನಕಿ ಚಿತ್ರರಂಗದಲ್ಲಿ ನಾಲ್ಕು ದಶಕಗಳನ್ನು ಕಳೆದಿರುವ ಹಿರಿಯ ಗಾಯಕಿ. ತಮ್ಮ ಈ ಸುದೀರ್ಘ ಅವಧಿಯಲ್ಲಿ ೧೪ ಭಾಷೆಗಳ ಚಿತ್ರಗಳಲ್ಲಿ ಅಸಂಖ್ಯ ಗೀತಗಳನ್ನು ಹಾಡಿದಾರೆ. ಸಂಗೀತ ನಿರ್ದೇಶಕಿ, ರಾಗ ಸಂಯೋಜಕಿ, ಕವಯತ್ರಿಯೂ ಆಗಿರುವ ಜಾನಕಿ 'ಶ್ರೀ ಕೃಷ್ಣ ಗಾರುಡಿ' ಚಿತ್ರದ 'ಭಲೇ ಭಲೇ ಗಾರುಡಿ...' ಹಾಡಿನ ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಕನ್ನಡದಲ್ಲಿ ಸಾವಿರಕ್ಕೂ ಹೆಚ್ಚು ಹಾಡುಗಳನ್ನು ಹಾಡಿರುವ ಜಾನಕಿ ಅವರಿಗೆ 'ನಾದಾಮೃತ ವರ್ಷಿಣಿ' ಎಂಬ ಬಿರುದು ನೀಡಲಾಗಿದೆ. 'ಬೆಳ್ಳಿ ಮೋಡ' ಚಿತ್ರದ 'ಮೂಡಲ ಮನೆಯಾ ಮುತ್ತಿನ ನೀರಿನ...', 'ಗೆಜ್ಜೆಪೂಜೆ'ಯ 'ಗಗನವು



ಎಲ್ಲೋ...', 'ಎರಡು ಕನಸು' ಚಿತ್ರದ 'ಇಂದು ಎನಗೆ ಗೋವಿಂದ...', 'ಪೂಜಿಸಲೆಂದೇ ಹೂಗಳ ತಂದೆ....', 'ಬಯಲು ದಾರಿ' ಚಿತ್ರದ 'ಬಾನಲ್ಲು ನೀನೆ...', 'ಸಂಧ್ಯಾರಾಗ'ದ 'ನಂಬಿದೆ ನಿನ್ನ ನಂಬಿದೆ...', 'ಉಪಾಸನೆ'ಯ 'ಭಾರತ ಭೂಷಿರ....' ಮೊದಲಾದ ಹಾಡುಗಳು ಮಾಧುರ್ಯಕ್ಕಾಗಿ ಜನಪ್ರಿಯವಾಗಿವೆ. 'ಚಳಿ ಚಳಿ ತಾಳೆನು....' ಹಾಡು ಮತ್ತೊಂದು ಬಗೆಯ ಜನಪ್ರಿಯತೆಯನ್ನು ತಂದು ಕೊಟ್ಟಿತು. ಹಾಡಿನ ಸನ್ನಿವೇಶ ಗ್ರಹಿಸಿ ಪಾತ್ರವಹಿಸುವ ಕಲಾವಿದರ ಧ್ವನಿಗೆ ಅನುಗುಣವಾಗಿ ಭಾವತುಂಬಿ ಹಾಡುವ ಜಾನಕಿ ಕನ್ನಡ ಚಿತ್ರರಂಗ ಕಂಡಂಥ ಅದ್ಭುತ ಗಾಯಕಿ. ಜಾನಕಿಗೆ ದಕ್ಷಿಣ ಭಾರತದ 'ಗಾನಕೋಗಿಲೆ' ಎಂಬ ಬಿರುದು ಬಂದಿದೆ.

### ಜಾನಕಿರಾಂ. ಕೆ

ಕನ್ನಡ ಚಿತ್ರರಂಗದ ಖ್ಯಾತ ಛಾಯಾಗ್ರಹಾಕ, ನಿರ್ಮಾಪಕ, ನಿರ್ದೇಶಕ. ೦೨-೦೬-೧೯೩೪ರಂದು ಆಂಧ್ರಪ್ರದೇಶದ



ನೆಲ್ಲೂರು ಜಿಲ್ಲೆಯ ಗೂಡೂರಿನಲ್ಲಿ ಕೊಳ್ಳರಾಮಯ್ಯ ಹಾಗೂ ಅಂಕಮ್ಮ ದಂಪತಿಗಳಿಗೆ ಜನಿಸಿದರು. ಇಂಟರ್‌ಮೀಡಿಯೆಟ್‌ವರೆಗೂ ಓದು. ೧೯೫೨ರಲ್ಲಿ ಮದರಾಸಿಗೆ ಪ್ರಯಾಣ. ರೋಹಿಣಿ ಸ್ಟುಡಿಯೋದಲ್ಲಿ ಛಾಯಾಗ್ರಹಣ ವಿಭಾಗದಲ್ಲಿ ಅಪ್ರೆಂಟಿಸ್ ಆಗಿ ಸೇರಿದರು. ತಮಿಳು ಚಿತ್ರವೊಂದರಲ್ಲಿ ಸಹಾಯಕ ಛಾಯಾಗ್ರಾಹಕರಾಗಿ ಚಿತ್ರರಂಗ ಪ್ರವೇಶ. ಜಿ.ವಿ.ಅಯ್ಯರ್ ನಿರ್ದೇಶನದ 'ಓಹಿಲೇಶ್ವರ' ಚಿತ್ರದ ಮೂಲಕ ಕನ್ನಡ ಚಿತ್ರರಂಗ ಪ್ರವೇಶ. 'ಸೋದರಿ', 'ಮಲ್ಲಮ್ಮನ ಕಥೆ', 'ನಳದಮಯಂತಿ' ಚಿತ್ರಗಳಲ್ಲಿ ದುಡಿಮೆ. 'ಸತಿಸಕ್ಕೂ' ಚಿತ್ರದಿಂದ ಆಪರೇಟಿವ್ ಕ್ಯಾಮರಾಮನ್ ಆಗಿ ಕೆಲಸ. ನಂತರ ೧೯೫೬ರಲ್ಲಿ 'ಭಕ್ತ ವಿಜಯ' ಚಿತ್ರದಿಂದ ಸ್ವತಂತ್ರ ಛಾಯಾಗ್ರಾಹಕನಾಗಿ ಕಾರ್ಯ ನಿರ್ವಹಣೆ. ನಂತರ 'ಶ್ರೀ ಶೈಲ ಮಹಾತ್ಮೆ', 'ಚಿರತಜೀವ', 'ಭಾಗ್ಯದ ಬಾಗಿಲು', 'ಗಾಂಧಿ ನಗರ', 'ಅನುರಾಧ', 'ಲಗ್ನಪತ್ರಿಕೆ' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ. 'ಪುಣ್ಯಪುರುಷ' ನಿರ್ದೇಶಕರಾಗಿ ದುಡಿದ ಪ್ರಥಮ ಚಿತ್ರ. 'ಕಾಸಿದ್ರೆ ಕೈಲಾಸ', 'ಮಾನವ ದಾನವ', 'ಅಂತಿಮ ಘಟ್ಟ', 'ಅಜ್ಞಾತವಾಸ', 'ಪೋಲಿ ಹುಡುಗ', 'ಈ ಬಂಧ ಅನುಬಂಧ' ಮೊದಲಾದ ಚಿತ್ರಗಳ ನಿರ್ದೇಶನ. ನಿರ್ಮಾಣ. ಬಂಗಳೂರಿನ ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಕೆಲಕಾಲ ಪ್ರಾಂಶುಪಾಲರಾಗಿದರು. ನಿರ್ಮಾಪಕ, ನಿರ್ದೇಶಕ ಸಂಘಗಳಲ್ಲಿ ಪದಾಧಿಕಾರಿಯಾಗಿದು ಕೆಲಸ ಮಾಡಿದಾರೆ.

### ಜಾನಕಿ 'ಸಾಹುಕಾರ್'

ಕನ್ನಡ, ತಮಿಳು, ತೆಲುಗು ಚಿತ್ರಗಳ ಪ್ರತಿಭಾವಂತ ಅಭಿನೇತ್ರಿ. ಮೂಲತಃ ಆಂಧ್ರದವರು, ಮನೆ ಮಾತು ಕನ್ನಡ. 'ಸಾಹುಕಾರು' ತೆಲುಗು ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ಜಾನಕಿಯವರ ಅಭಿನಯ ಮನೆಮಾತಾಯಿತು. ಅವರ ಹೆಸರಿಗೆ 'ಸಾಹುಕಾರ್' ಶಾಶ್ವತವಾಗಿ ಅಂಟಿಕೊಂಡಿತು. ೧೯೫೪ರಲ್ಲಿ ಮಾಡರನ್ ಥಿಯೇಟರ್ಸ್ ಅವರ 'ದೇವ ಕನ್ನಿಕಾ' ಚಿತ್ರದ ಮೂಲಕ ಕನ್ನಡ ಚಿತ್ರರಂಗಕ್ಕೆ ಪ್ರವೇಶ.



'ರತ್ನಗಿರಿ ರಹಸ್ಯ', 'ಸ್ಕೂಲ್ ಮಾಸ್ಟರ್', 'ಕನ್ಯಾರತ್ನ', 'ಗೌರಿ ' , 'ಸತಿಶಕ್ತಿ' ಚಿತ್ರಗಳ ಮೂಲಕ ಕನ್ನಡದಲ್ಲಿ ಒಳ್ಳೆಯ ಹೆಸರು. ಮೂರು ಭಾಷೆಗಳಲ್ಲಿ ಸುಮಾರು ೫೦೦ ಚಿತ್ರಗಳಲ್ಲಿ ಅಭಿನಯಿಸಿರುವ ಸಾಹುಕಾರ್ ಜಾನಕಿ ಇತ್ತೀಚೆಗೆ ಅಭಿನಯಿಸಿದ ಕನ್ನಡ ಚಿತ್ರ ರಾಜಕುಮಾರ್ ಸಂಸ್ಥೆಯ 'ಶಬವೇಧಿ'.

### ಜಾನಿಲಾಲ್

ಪ್ರಶಸ್ತಿ ವಿಜೇತ ಛಾಯಾಗ್ರಾಹಕ. ತಂದೆ ಎಸ್.ಎಸ್.ಲಾಲರೇ ಜಾನಿಲಾಲರ ಪ್ರಥಮ ಗುರು. ನಂತರ ಅಣ್ಣ ಕಬೀರ್‌ಲಾಲ್‌ರೊಂದಿಗೆ ದುಡಿಮೆ. ಸ್ವಂತ ಪರಿಶ್ರಮದಿಂದ ಮೇಲೆ ಬಂದ ಜಾನಿಲಾಲ್ ಸ್ವತಂತ್ರವಾಗಿ ಛಾಯಾಗ್ರಹಣ ನೀಡಿದ ಚಿತ್ರ



'ಕಂಕಣ ಭಾಗ್ಯ'. ಸರಿಸುಮಾರು ೧೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಛಾಯಾಗ್ರಹಣ ಮಾಡಿರುವ ಜಾನಿಲಾಲ್ ಕನ್ನಡದ ಎಲ್ಲಾ ಹೆಸರಾಂತ ನಿರ್ದೇಶಕರ ಕೈ ಕೆಳಗೆ ಕಾರ್ಯ ನಿರ್ವಹಿಸಿದ್ದಾರೆ. 'ಮುದಿನ ಮಾವ', 'ಮಾಲಾಶ್ರೀ ಮಾಮಾಶ್ರೀ', 'ಸಿಂಧೂರ ತಿಲಕ', 'ಟೈಂ ಬಾಂಬ್', 'ಚಿಕ್ಕಜಮಾನ್ರು' ಮೊದಲಾದ ಚಿತ್ರಗಳಿಗೆ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. ೧೯೯೨-೯೩ನೇ ಸಾಲಿನಲ್ಲಿ 'ಆತಂಕ' ಚಿತ್ರದ ಛಾಯಾಗ್ರಹಣ ಕೌಶಲ್ಯಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದರು.

### ಜೀವನ್‌ಕುಮಾರ್

ಮೈಸೂರಿನ ರಾಜಕಮಲ್ ಟಾಕೀಸ್‌ನ ಮಾಲೀಕರಾದ ನಾಗವರ್ಮರ ಮಗ. ತಂದೆಯ ಮರಣಾನಂತರ ರಾಜಕಮಲ್ ಟಾಕೀಸ್ ಅನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಕಾಲಕ್ಕ ತಕ್ಕಂತೆ ಅತ್ಯಾಧುನಿಕ ತಂತ್ರಜ್ಞಾನವನ್ನು ಅಳವಡಿಸಿದ್ದಾರೆ. ಮೈಸೂರಿನಲ್ಲೇ ಅತ್ಯಂತ ಹೆಚ್ಚು ಮನರಂಜನಾ ತೆರಿಗೆ ಸಂದಾಯ ಮಾಡಿದ ವ್ಯಕ್ತಿ.

### ಜೈಜಗದೀಶ್

ಕನ್ನಡ ನಾಡಿನ ಸುಂದರ ತಾಣವಾದ ಕೊಡಗಿನ ಸೋಮವಾರಪೇಟೆಯಲ್ಲಿ ಹುಟ್ಟಿಬೆಳೆದವರು. ಬಿ.ಎ.ಪಧವೀಧರರಾದ ಜೈಜಗದೀಶ್ ಪೈಲೆಟ್ ಆಗಬೇಕೆಂದು ಆಸೆಯಿಟ್ಟುಕೊಂಡಿದ ವರು. ಕೊನೆಗೆ ಆದದ್ದು ಚಲನಚಿತ್ರ ನಟ, ನಿರ್ಮಾಪಕ, ಖ್ಯಾತ ನಿರ್ದೇಶಕ ಪುಟ್ಟಣ್ಣ ಕಣಗಾಲ್ ನಿರ್ದೇಶನದ ಚಿತ್ರ 'ಫಲಿತಾಂಶ' ದಲ್ಲಿ ನಾಯಕ ನಟನಾಗಿ ಕನ್ನಡ ಚಿತ್ರರಂಗಕ್ಕೆ ಪ್ರವೇಶ. ಅನಂತರ ಕನ್ನಡ ಚಿತ್ರರಂಗದಲ್ಲಿ ಯಶಸ್ವೀ ಪೋಷಕ ನಟನಾಗಿ ಹೆಸರು ಗಳಿಸಿದ ಜೈಜಗದೀಶ್ ಸುಮಾರು ೧೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ



ಅಭಿನಯಿಸಿದಾರೆ. ಅವರ ಅಭಿನಯದ ಪ್ರಮುಖ ಚಿತ್ರಗಳು 'ಪಡುವಾರಳ್ಳಿ ಪಾಂಡವರು', 'ಬಂಧನ',

ಗಾಳಿ ಮಾತು', 'ಮರೆಯಲಾಗದ ಕತೆ', 'ಅಜಿತ್', 'ಮುಳ್ಳಿನ ಗುಲಾಬಿ', 'ಸ್ವರ್ಗದಲ್ಲಿ ಮದುವೆ', 'ಸ್ನೇಹಿತರ ಸವಾಲ್' ಇತ್ಯಾದಿ. ಯಶಸ್ವೀ ನಿರ್ಮಾಪಕರೂ ಆದ ವಿಜಿಗಲ್ ತಯಾರಿಸಿದ ಮುಖ್ಯ ಚಿತ್ರಗಳು 'ರಾಣಿ ಮಹಾರಾಣಿ', 'ಹೂವು ಹಣ್ಣು' 'ಭೂಮಿತಾಯಿಯ ಚೊಚ್ಚಲ ಮಗ' 'ಕಲ್ಯಾಣೋತ್ಸವ' 'ಓ ಪ್ರೇಮವೆ'. ಅವರು ನಿರ್ಮಿಸಿದ ಮುಂಗಾರಿನ ಮಿಂಚು ಉತ್ತಮ ಪ್ರಾದೇಶಿಕ ಕನ್ನಡ ಚಿತ್ರ (೧೯೯೭) ರಾಷ್ಟ್ರಪ್ರಶಸ್ತಿ ಹಾಗೂ ಕುರಿಗಳು ಸಾರ್ ಕುರಿಗಳು (೨೦೦೦-೨೦೦೧) ರಾಜ್ಯಪ್ರಶಸ್ತಿ ಪಡೆದಿವೆ.

### ಜೋ ಸೈಮನ್

ಕನ್ನಡ ಚಿತ್ರರಂಗದಲ್ಲಿ ಸೆಟ್‌ಬಾಯ್ ಕೆಲಸಕ್ಕೆ ಸೇರಿ ಹಂತ ಹಂತವಾಗಿ ಮೇಲೇರಿದ ಮಂಗಳೂರಿನ ತರುಣ ನಿರ್ದೇಶಕರಾಗಿ ಖ್ಯಾತರಾದವರು. ಕೆ.ಎಸ್.ಆರ್.ದಾಸ್ ಮೊದಲಾದ ಖ್ಯಾತ ನಿರ್ದೇಶಕರ ಬಳಿ ಸಹಾಯಕರಾಗಿ ದುಡಿದ ಇವರು ೧೯೭೭ರಲ್ಲಿ 'ಒಂದು ಪ್ರೇಮದ ಕಥೆ' ಚಿತ್ರದ ಮೂಲಕ ನಿರ್ದೇಶಕರಾದರು. ಹೆಚ್ಚಾಗಿ ಸಾಹಸ ಪ್ರಧಾನ ಚಿತ್ರಗಳನ್ನು ನಿರ್ದೇಶಿಸಿದ



ಜೋ ಸೈಮನ್ ಹಲವು ಯಶಸ್ವಿ ಚಿತ್ರಗಳನ್ನು ನೀಡಿದರು. 'ನನ್ನ ರೋಷ ನೂರು ವರುಷ', 'ಮಹಾ ಪ್ರಚಂಡರು', 'ಊರಿಗ ಉಪಕಾರಿ', 'ನ್ಯಾಯ ಗೆದ್ದಿತು', 'ಸಿಡಿದೆದ್ದ ಸಹೋದರ', 'ರಕ್ತ ತಿಲಕ', 'ಪ್ರೇಮಜಾಲ', 'ಹಾಂಕಾಂಗ್‌ನಲ್ಲಿ ಏಜೆಂಟ್ ಅಮರ್', 'ಸಾಹಸ ಸಿಂಹ' ಮುಂತಾದ ಚಿತ್ರಗಳನ್ನು ನಿರ್ದೇಶಿಸಿದರು. ವಿಷ್ಣುವರ್ಧನ್ ಅವರಿಗೆ 'ಸಾಹಸಸಿಂಹ' ಇಮೇಜ್ ಬಂದದ್ದು ಈ ಚಿತ್ರ ಹಾಗೂ ಅಂಥ ಸಾಹಸಮಯ ಚಿತ್ರಗಳಿಂದ. ಬಹುಕಾಲ ವಿಷ್ಣು - ಜೋ ಸೈಮನ್ ಜೋಡಿ ಜನಪ್ರಿಯವಾಗಿತ್ತು. ದೀರ್ಘ ಮೌನದ ನಂತರದ 'ರವಿವರ್ಮ' ಚಿತ್ರದಲ್ಲಿ ಇದೇ ಜೋಡಿ ಇತ್ತು. ಸುಮಾರು ೨೫ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಜೋ ಸೈಮನ್ ಚಿತ್ರ ನಿರ್ದೇಶನವಲ್ಲದೆ ಅಭಿನಯ, ಚಿತ್ರಕಥೆ-ಸಂಭಾಷಣೆಯ ರಚನೆಯಲ್ಲೂ ಶ್ರಮಿಸಿದ್ದಾರೆ. ಕಿರುತೆರೆಯಲ್ಲೂ ಜನಪ್ರಿಯರು. ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ ಸ್ಥಾಪನೆಯಾದಾಗಿನಿಂದ ಕಾರ್ಯಕಾರಿ ಸಮಿತಿಯ ಸಕ್ರಿಯ ಸದಸ್ಯರಾಗಿದ್ದಾರೆ.

### ಜ್ಯೋತಿ

ಪಕ್ಕಾ ಕನ್ನಡದ ಪ್ರತಿಭಾನ್ವಿತರಾದ ಜ್ಯೋತಿ ಓದಿದ್ದು ಬೆಂಗಳೂರಿನಲ್ಲಿ. ಬಿ.ಕಾಂ.ಪದವೀಧರೆ.ಬೆಂಗಳೂರಿನ



ಹೆಸರಾಂತ ಪ್ರಭಾತ್ ಕಲಾವಿದರ ನೃತ್ಯ-ನಾಟ್ಯಗಳಲ್ಲಿ ಎರಡು ವರ್ಷ ಪರಿಶ್ರಮ. ಪುಟ್ಟಣ್ಣ ಕಣಗಾಲ್ ರವರ 'ಅಮೃತ ಘಳಿಗೆ' ಚಿತ್ರದಿಂದ ಚಿತ್ರರಂಗಕ್ಕೆ ಪ್ರವೇಶ. ನಾಯಕನ ತಂಗಿಯಾಗಿ ಚಿತ್ರರಂಗಕ್ಕೆ ಬಂದ ಜ್ಯೋತಿ ತನ್ನ ಚಿಕ್ಕ ಆದರ ಪರಿಣಾಮಕಾರಿ ಪಾತ್ರದಿಂದ ಗಮನ ಸೆಳೆದು ಸಾಲು ಸಾಲು ಚಿತ್ರಗಳನ್ನು ತಮ್ಮ ಕಡೆಗೆ ಸೆಳೆದುಕೊಂಡರು. ನಾಯಕಿಯಾಗಿ ಅಭಿನಯಿಸಬೇಕೆನ್ನುವ ತುಡಿತವಿದ್ದ ಜ್ಯೋತಿಗೆ ಪೇಮುಗಲ್ ಜಗನ್ನಾಥ್‌ರವರ 'ದಡ ಸೇರಿದ ಮೇಲೆ' ಚಿತ್ರದಲ್ಲಿ ನಾಯಕಿ ಪಾತ್ರ ಲಭಿಸಿತ್ತಾದರೂ ಚಿತ್ರ ತೆರೆಕಾಣಲಿಲ್ಲ. ನಂತರದ ದಿನಗಳಲ್ಲಿ ನಾಯಕನ ತಂಗಿ, ನಾಯಕಿಯ ಅಕ್ಕ, ಹೀಗೆ ಪೋಷಕ ಪಾತ್ರಗಳತ್ತ ಹೊರಳಿ ಅಲ್ಲಿಗೆ ತಮ್ಮನ್ನು ಸೀಮಿತಗೊಳಿಸಿಕೊಂಡಿದ್ದಾರೆ. 'ತಾಯಿಯ ಆಸೆ' 'ಕರುಣಾಮಯಿ' 'ಏಪ್ರಿಲ್ ಫೂಲ್' 'ಗೋಪಿಕೃಷ್ಣ' ಮೊದಲಾದ ಚಿತ್ರಗಳಲ್ಲಿ ಅಭಿನಯ. ಕಿರುತೆರೆಗೂ ಪ್ರವೇಶ ಮಾಡಿ ಜನಪ್ರಿಯರಾದವರು.

### ಟೈಲರ್.ಕೆ.ಎನ್

ಕೇವಲ ಒಂದೆರಡು ಜಿಲ್ಲೆಗಳಲ್ಲಿ ಮಾತ್ರ



ಮಾರುಕಟ್ಟೆಯನ್ನು ಹೊಂದಿರುವ ತುಳು ಚಿತ್ರರಂಗದ ಆದ್ಯ ಪ್ರವರ್ತಕರಲ್ಲೊಬ್ಬರು, ನಟ - ಚಿತ್ರಸಾಹಿತಿ ಕೆ.ಎನ್.ಟೈಲರ್. ತುಳು ರಂಗಭೂಮಿಯಲ್ಲಿ ದೊಡ್ಡ ಹೆಸರು ಗಳಿಸಿ ಅನೇಕ ಪ್ರಶಸ್ತಿಗಳಿಗೂ ಪಾತ್ರವಾಗಿರುವ ಟೈಲರ್ ಇದುವರೆಗೆ ತಯಾರಾಗಿರುವ ೩೦ ತುಳು ಚಿತ್ರಗಳ ಪೈಕಿ ಹತ್ತು ಚಿತ್ರಗಳಲ್ಲಿ ತಾವೇ ಅಭಿನಯಿಸಿದ್ದಾರೆ. 'ದಾರೆದ ಬುಡೆದಿ', 'ಬಿಸತ್ತಿ ಬಾಬು', 'ಯಾನ್ ಸನ್ಯಾಸಿ ಆಪೆ', 'ಯೆರ್ ಮಲ್ತಿನ ತಪ್ಪು ?', 'ಭಾಗ್ಯವಂತೆದಿ' ಇವುಗಳಲ್ಲಿ ಮುಖ್ಯವಾದವು. ಅವುಗಳಲ್ಲಿ ಬಹುತೇಕ ಚಿತ್ರಗಳಿಗೆ ಟೈಲರ್ ತಾವೇ ಕಥೆ, ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ಬರೆದಿದ್ದೊಂದು ವಿಶೇಷ. ಅಸಂಖ್ಯಾತ ತುಳು ನಾಟಕಗಳಲ್ಲಿ ಅಭಿನಯಿಸಿ ನಿರ್ದೇಶಿಸಿದ ಟೈಲರ್ ಹತ್ತಾರು ಕನ್ನಡ ನಾಟಕಗಳ ನಟ, ನಿರ್ದೇಶಕರು ಕೂಡ. ರಂಗಭೂಮಿ, ಚಿತ್ರರಂಗಕ್ಕೆ ಹಲವು ಕಲಾವಿದರನ್ನು ಪರಿಚಯಿಸಿದ್ದಾರೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ತುಳು ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಅವರ 'ಬಿಸತ್ತಿ ಬಾಬು' ಮತ್ತು 'ಭಾಗ್ಯವಂತೆದಿ' ಚಿತ್ರಗಳಿಗೆ ರಾಜ್ಯ ಸರ್ಕಾರದ ಪ್ರಶಸ್ತಿಗಳೂ ಸಂದಿವೆ.

### ಡೇವಿಡ್.ಎಸ್.ಎಸ್



ನಟ, ಕಥಾ ಲೇಖಕ, ಸಂಭಾಷಣಕಾರ ಹಾಗೂ ನಿರ್ದೇಶಕ ಎಸ್.ಎಸ್.ಡೇವಿಡ್ ಮಂಗಳೂರಿನವರು. ೧೯೬೬ರಲ್ಲಿ ಜನನ. 'ಮಹಾಯುದ್ಧ' ಚಿತ್ರದಲ್ಲಿ ಅಭಿನಯಿಸುವುದರೊಂದಿಗೆ ಚಿತ್ರರಂಗ ಪ್ರವೇಶಿಸಿದ ಇವರು ಕಥಾಲೇಖಕ. ಚಿತ್ರಕಥಾ ಕರ್ತೃವಾಗಿ, ಸಂಭಾಷಣಕಾರರಾಗಿ ೩೦ಕ್ಕೂ ಹೆಚ್ಚು ಚಿತ್ರಗಳಿಗೆ ಕೆಲಸ ಮಾಡಿದ್ದಾರೆ. 'ಪೋಲೀಸ್ ಸ್ಟೋರಿ', 'ಆಯುಧ', 'ಹಾಯ್ ಬೆಂಗಳೂರು', 'ಮಹಾತ್ಮ', 'ಖಡ್ಗ', 'ಭಗವಾನ್ ದಾದಾ' ಚಿತ್ರಗಳಿಗೆ ಸಂಭಾಷಣೆ, 'ರೌಡಿ ಮತ್ತು ಎಂ.ಎಲ್.ಎ', 'ಸಾಹಸಿ', 'ಸೋಲಿಲ್ಲದ ಸರದಾರ', 'ಓಂ ನಮಃ ಶಿವಾಯ' ಚಿತ್ರಗಳಲ್ಲಿ ಅಭಿನಯಿಸಿದರು. 'ಜೈಹಿಂದ್' ಚಿತ್ರವನ್ನು ನಿರ್ದೇಶಿಸಿದ್ದಾರೆ.

### ತಾತಯ್ಯ .ಎಂ

ಹಿರಿಯ ಸಂಕಲನಕಾರ, ನಟರಾದ ಎಂ.ತಾತಯ್ಯ ೧೯೩೨ರಲ್ಲಿ ತುಮಕೂರಿನ



ಮೂಕನ ಹಳ್ಳಿಯಲ್ಲಿ ಜನಿಸಿದರು. ನಾಲ್ಕನೆಯ ತರಗತಿಯವರೆಗೆ ಓದಿದ ಇವರು ಗಂಗಾಧರ ರಾವ್, ಸುಬ್ಬರಾವ್ ನಾಟಕ ಕಂಪನಿ, ವಿಶ್ವೇಶ್ವರ ನಾಟಕ ಮಂಡಲಿಗಳ ನಾಟಕಗಳಲ್ಲಿ ಅಭಿನಯಿಸಿದರು. ಸುಬ್ಬಯ್ಯನಾಯ್ಡು ಅವರು 'ಹರಿಶ್ಚಂದ್ರ' ಚಿತ್ರದಲ್ಲಿ ಲೋಹಿತಾಶ್ವನ ಪಾತ್ರಕ್ಕೆ ಕರೆದೊಯ್ದರು. ನಂತರ ನವಜ್ಯೋತಿ ಅವರ 'ಕೃಷ್ಣಲೀಲಾ' ಚಿತ್ರದಲ್ಲಿ ಬಲರಾಮನ ಪಾತ್ರದಲ್ಲಿ ಅಭಿನಯಿಸಿದರು. ನಿರ್ದೇಶಕ, ಸಂಕಲನಕಾರ ಸಿ.ವಿ.ರಾಜು ಅವರ ಬಳಿ ಸಂಕಲನಕಾರರಾಗಿ ಕಲಿಕೆ ಆರಂಭಿಸಿದರು. ನಂತರ ಬಾಲ್.ಜಿ.ಯಾದವ್ ಅವರ ಸಹಾಯಕರಾಗಿ ಕೆಲವು ಚಿತ್ರಗಳಲ್ಲಿ ದುಡಿದರು. ನಂತರ ಆರೂರು ಪಟ್ಟಾಭಿ ಅವರ 'ಭಕ್ತ ವಿಜಯ'ದಲ್ಲಿ ಸ್ವತಂತ್ರ ಸಂಕಲನಕಾರರಾಗಿ ಕಾರ್ಯ ನಿರ್ವಹಿಸಿದ ಅವರು ಮುಂದೆ 'ಶುಕ್ರದೆಸೆ', 'ಧರ್ಮವಿಜಯ' ಮೊದಲಾದ ಚಿತ್ರಗಳಿಗೆ ಕೆಲಸ ಮಾಡಿದರು. ಯಾದವ್ ಅವರೊಂದಿಗೆ 'ಮಣ್ಣಿನ ಮಗ', 'ಶ್ರೀ ರಾಮಾಂಜನೇಯ ಯುದ್ಧ', 'ರಾಣಿ ಹೊನ್ನಮ್ಮ', 'ಮನ ಮೆಚ್ಚಿದ ಮಡದಿ' ಮೊದಲಾದ ಚಿತ್ರಗಳಲ್ಲಿ ಕಾರ್ಯ ನಿರ್ವಹಿಸಿದರು. ನಿರ್ದೇಶಕರ ಸಂಘ ಇವರ ಅನುಪಮ ಸೇವೆಗೆ ಕೃತಜ್ಞತೆಯಾಗಿ ಪ್ರಶಸ್ತಿ ನೀಡಿ ಗೌರವಿಸಿದೆ.

### ತಾರಾ

೧೯೮೫ರಲ್ಲಿ ನಿರ್ದೇಶಕ ಪೇಮುಗಲ್ ಜಗನ್ನಾಥರಾವ್‌ರವರ 'ತುಳಸೀ ದಳ'ದಿಂದ ಚಿತ್ರರಂಗ ಪ್ರವೇಶಿಸಿದ ಕಲಾವಿದೆ ತಾರಾ. ಮೊದ ಮೊದಲು ನಾಯಕನ ತಂಗಿ, ನಾಯಕಿಯ ತಂಗಿ ಹೀಗೆ ಪುಟ್ಟ ಪಾತ್ರಗಳಲ್ಲಿ ಅಭಿನಯಿಸುತ್ತಿದ್ದರು. ಕೆ.ಬಾಲಚಂದರ್



ರವರ 'ಸುಂದರ ಸ್ವಪ್ನಗಳು' ಚಿತ್ರದಲ್ಲಿ ಪ್ರಮುಖ ಪಾತ್ರವೊಂದರಲ್ಲಿ ಆಕೆಯ ಪ್ರತಿಭೆಯನ್ನು ಗುರುತಿಸಲು ಸಾಧ್ಯವಾಯಿತು. ರಾಜಕುಮಾರ್‌ರವರ ತಂಗಿಯಾಗಿ 'ಗುರಿ' ಚಿತ್ರದಲ್ಲಿ ಗಮನ ಸೆಳೆದ ತಾರಾ ಮೊದಲ ಬಾರಿಗೆ ನಾಯಕಿಯಾಗಿ 'ಮುಖವಾಡ' ಚಿತ್ರದಲ್ಲಿ ನಟಿಸಿದರು. ೧೯೮೯ರಲ್ಲಿ ವಿಷ್ಣುವರ್ಧನ್‌ಗೆ ನಾಯಕಿಯಾಗಿ 'ಡಾ|ಕೃಷ್ಣ'ದಲ್ಲಿ ಅಭಿನಯಿಸಿದರು. ಆದರೂ ಆಗೊಮ್ಮೆ ಈಗೊಮ್ಮೆ ನಾಯಕಿಯಾಗಿ ಅಭಿನಯಿಸಿದ ತಾರಾ 'ಕ್ರಮ' ಚಿತ್ರದ ಅಭಿನಯಕ್ಕಾಗಿ ೧೯೯೦-೯೧ನೇ ಸಾಲಿನ ಕರ್ನಾಟಕ ರಾಜ್ಯ ಸರ್ಕಾರದ 'ಶ್ರೇಷ್ಠನಟಿ' ಪ್ರಶಸ್ತಿ ಪಡೆದರು. 'ಕೋಟೆ', 'ಕರಿಮಲೆಯ ಕಗ್ಗತ್ತಲು', 'ಉಂಡೂ ಹೋದ ಕೊಂಡೂ ಹೋದ', 'ಕರಡೀಪುರ' ಮೊದಲಾದ ಪ್ರಶಸ್ತಿ ವಿಜೇತ ಚಿತ್ರಗಳಲ್ಲಿ ಅಭಿನಯಿಸಿದ ತಾರಾ 'ಮುಂಜಾನೆಯ ಮಂಜು' ಚಿತ್ರದಲ್ಲಿನ ಅಭಿನಯಕ್ಕಾಗಿ ೧೯೯೩-೯೪ರ ರಾಜ್ಯ ಸರ್ಕಾರದ 'ಶ್ರೇಷ್ಠ ಪೋಷಕ ನಟಿ' ಪ್ರಶಸ್ತಿಯನ್ನೂ ಪಡೆದರು. ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದ ತಾರಾ ಅವರ ಚಿತ್ರ ಜೀವನಕ್ಕೆ ತಿರುವು ಸಿಕ್ಕಿದ್ದು ಆಕೆ ಗಿರೀಶ್ ಕಾರ್ನಾಡ್‌ರ 'ಕಾನೂರು ಹೆಗ್ಗಡತಿ'

ಚಿತ್ರದ ಹೆಗ್ಗಡತಿ ಪಾತ್ರಕ್ಕೆ ಆಯ್ಕೆಯಾದಾಗ. ಆ ಚಿತ್ರದಲ್ಲಿನ ಶ್ರೇಷ್ಠ ಅಭಿನಯಕ್ಕಾಗಿ ಮತ್ತೊಮ್ಮೆ ರಾಜ್ಯ ಸರ್ಕಾರದ 'ಶ್ರೇಷ್ಠನಟಿ' ಪ್ರಶಸ್ತಿ ಪಡೆದ ತಾರಾ (೧೯೯೯ ೨೦೦೦) ನಂತರ ಪ್ರಶಸ್ತಿ ವಿಜೇತ ಚಿತ್ರಗಳಾದ 'ಮತದಾನ', 'ಮುನ್ನುಡಿ' ಚಿತ್ರಗಳ ನಾಯಕಿಯಾಗಿ ಅತ್ಯುತ್ತಮ ಅಭಿನಯ ನೀಡಿದರು. ಹದಿನೈದು ವರ್ಷಗಳ ಚಿತ್ರ ಜೀವನದಲ್ಲಿ ನಿಧಾನವಾಗಿಯೇ ತಾರಾಪಟ್ಟ ಪಡೆದುಕೊಂಡ ತಾರಾ ಕನ್ನಡ ಚಿತ್ರರಂಗದ ಒಬ್ಬ ಶ್ರೇಷ್ಠ ಅಭಿನೇತ್ರಿ.

### ತಾರಾ (ನೃತ್ಯ ನಿರ್ದೇಶಕಿ)

ದಕ್ಷಿಣ ಭಾರತ ಚಿತ್ರರಂಗದ ಹೆಸರಾಂತ ನೃತ್ಯ ನಿರ್ದೇಶಕಿ. ಚಿತ್ರರಂಗಕ್ಕೆ ಶ್ರೀ ಗುಬ್ಬಿ ವೀರಣ್ಣನವರ ಸಂಸ್ಥೆಯ ವಿಶಿಷ್ಟ ಕೊಡುಗೆ.



ಹುಟ್ಟೂರು ನೆಲ್ಲೂರು. ಪುಟಾಣಿ ಹುಡುಗಿಗೆ ನೃತ್ಯದಲ್ಲಿ ಇದ್ದ ಅದಮ್ಯ ಆಸೆಯನ್ನು ಗಮನಿಸಿ ಪೋಷಕರು ಬೆಂಗಳೂರಿಗೆ ಕರೆತಂದು ಪರಿಚಯಸ್ಥರ ನೆರವಿನಿಂದ ಗುಬ್ಬಿ ವೀರಣ್ಣನವರನ್ನು ಭೇಟಿಮಾಡಿ ಆ ಸಂಸ್ಥೆಯಲ್ಲಿ ಅವಕಾಶ ಸಿಗುವಂತೆ ಮಾಡಿದರು. ಹುಡುಗಿಯ ಆಸಕ್ತಿಯನ್ನರಿತ ಖ್ಯಾತ ನೃತ್ಯ ಪಟು ಶ್ರೀನಿವಾಸ ಕುಲಕರ್ಣಿಯವರಿಂದ ಶಾಸ್ತ್ರೀಯವಾಗಿ ನೃತ್ಯಾಭ್ಯಾಸ ಪ್ರಾರಂಭ. ಮುಂದೆ ಕೂಚಿಪೂಡಿ, ಕಥಕ್ ನೃತ್ಯಗಳಲ್ಲೂ ಪರಿಶ್ರಮ. ನೃತ್ಯ ತಂಡಗಳಲ್ಲಿ ಭಾಗಿಯಾಗಿ ಮೊಟ್ಟ ಮೊದಲ ಬಾರಿಗೆ 'ನಾಮುಮ್ ಒರು ಪೆಣ್' ತಮಿಳು ಚಿತ್ರದ ಮೂಲಕ ಚಿತ್ರರಂಗಕ್ಕೆ ಪ್ರವೇಶ. ಮುಂದೆ ಹೀರಾಲಾಲ್, ಉಡುಪಿ ಜಯರಾಂ. ಹಾಗೂ ತಂಗಪ್ಪನ್ ಮೊದಲಾದವರ ಸಹಾಯಕಿಯಾಗಿ ಕೆಲಸ ಮಾಡಿದರು. ಪಿ.ವಿ.ಪಿ ಸಂಸ್ಥೆಯ ಚಿತ್ರವೊಂದರಿಂದ ಸ್ವತಂತ್ರ ನೃತ್ಯ ನಿರ್ದೇಶಕಿಯಾಗಿ ಕಾರ್ಯ ನಿರ್ವಹಣೆ. ಕನ್ನಡ ಚಿತ್ರರಂಗಕ್ಕೆ ದ್ವಾರಕೀಶ್‌ರವರ 'ಮನೆ ಮನೆ ಕಥೆ' ಚಿತ್ರದಿಂದ ಪ್ರವೇಶ. ನಂತರ ರಾಜಕುಮಾರ್‌ರವರ 'ಚಲಿಸುವ ಮೋಡಗಳು', 'ಕಾಮನ ಬಿಲ್ಲು', 'ಅಪೂರ್ವ ಸಂಗಮ', 'ಬೆಟ್ಟದ ಹೂವು', 'ಧ್ರುವತಾರೆ' ಇವೇ ಮೊದಲಾದ ಯಶಸ್ವಿ ಚಿತ್ರಗಳ ನೃತ್ಯ ನಿರ್ದೇಶನ. ಕನ್ನಡವೇ ಅಲ್ಲದೆ ತಮಿಳು, ತೆಲುಗು, ಹಿಂದಿ ಹಾಗೂ ಮಲಯಾಳಂ ಚಿತ್ರಗಳಲ್ಲಿ ನೃತ್ಯ ನಿರ್ದೇಶಕಿಯಾಗಿ ಹೆಸರಾಗಿದ್ದಾರೆ.

### ತ್ಯಾಗರಾಜ ಅರಸ್

ರಂಗಭೂಮಿ ಹಿನ್ನೆಲೆಯಿಂದ ಚಿತ್ರರಂಗಕ್ಕೆ ಬಂದು ಹಾಸ್ಯ ನಟರಾಗಿ ಗುರುತಿಸಿಕೊಂಡಿರುವವರು ತ್ಯಾಗರಾಜ



ಅರಸ್. ತಂದೆ ತಿಮ್ಮರಾಜ ಅರಸು ಒಳ್ಳೆಯ ಸಂಗೀತಗಾರರು. ಯಕ್ಷಗಾನ, ಬಯಲಾಟಗಳಲ್ಲಿ ಪರಿಣತರು. ಶ್ರೀ ರಾಮ ಕೃಪಾ ಪೋಷಿತ ಮಂಡಳಿಯಲ್ಲಿ ಹಲವಾರು ನಾಟಕಗಳಲ್ಲಿ ಅಭಿನಯಿಸಿದ ತ್ಯಾಗರಾಜ ಅರಸ್. 'ಓಹಿಲೇಶ್ವರ' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ಸಿವಿಲ್ ಇಂಜಿನಿಯರ್ ಆಗಿ, ಪುಣೆಯ ಫಿಲಂ ಇನ್ಸ್ಟಿಟ್ಯೂಟ್‌ನಲ್ಲಿ ಅಭಿನಯದಲ್ಲಿ ಪದವಿ ಪಡೆದುಕೊಂಡು ಜಯಚಾಮರಾಜೇಂದ್ರ ಪಾಲಿಟೆಕ್ನಿಕ್‌ನಲ್ಲಿ ಅಧ್ಯಾಪಕರಾಗಿರುವ ಇವರು ಸುಮಾರು ಒಂಬತ್ತು ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಶಾಂತಲಾ', 'ಮಾನಸ ವೀಣೆ', 'ಎಮರು ಅಲೆಗಳು', 'ಶಂಖನಾದ', 'ಕಿರಾತಕ', 'ಶಿವ ಕೊಟ್ಟ ಸೌಭಾಗ್ಯ' ಮೊದಲಾದವು ಅವರ ಅಭಿನಯದ ಚಿತ್ರಗಳು.

### ತ್ರಿವೇಣಿ

ಎಂಬತ್ತರ ದಶಕದ ಅಂತ್ಯದಲ್ಲಿ ಚಿತ್ರರಂಗ ಪ್ರವೇಶಿಸಿದ ತ್ರಿವೇಣಿ ತಮ್ಮ ಸಹಜಾಭಿನಯದಿಂದ ಚಿತ್ರರಂಗದಲ್ಲಿ ಅವಕಾಶಗಳನ್ನು ಗಳಿಸಿದರು. ೧೯೮೭ರಲ್ಲಿ ನಟ ವಜ್ರಮುನಿ ನಿರ್ಮಾಣದ 'ಪ್ರಚಂಡ' ಚಿತ್ರದಿಂದ ತೆರೆಗೆ ಪರಿಚಿತರಾದ ತ್ರಿವೇಣಿ



ಪೋಷಕ ನಟಿ ಕಲಾವತಿ ಅವರ ಪುತ್ರಿ ಹಾಗೂ ರಂಗನಟಿ ಚಿಂದೋಡಿ ಲೀಲಾ ಅವರ ಸೋದರ ಸೊಸೆ. ಅಂಬರೀಷ್‌ಗೆ ನಾಯಕಿಯಾಗಿ ಅಭಿನಯಿಸಿದ ತ್ರಿವೇಣಿ 'ಗಿರಿಮಲ್ಲಿಗೆ', 'ಆಸ್ಫೋಟ', 'ಮೌನ ಹೋರಾಟ' ಚಿತ್ರಗಳ ವಿಭಿನ್ನ ಅಭಿನಯಕ್ಕಾಗಿ ವಿಮರ್ಶಕರ ಮೆಚ್ಚುಗೆ ಗಳಿಸಿದರು. 'ಜೀವನ ಚೈತ್ರ', 'ಪದ್ಮವ್ಯೂಹ', 'ಚಾಲೆಂಜ್' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಕಿರುತೆರೆಯ ಹಲವು ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ.

### ಥಾಕೂರ್.ಹೆಚ್. ದೇಸಾಯಿ

ಚಿತ್ರರಂಗದ ಅತ್ಯಂತ ಹಿರಿಯ ವಿತರಕರು. ಮತ್ತೊಬ್ಬ ಹಿರಿಯ ವಿತರಕರಾದ ಎ.ಎಂ.ಪಟೇಲ್ ಅವರ ಸಮಕಾಲೀನರು. ಇವರು ಗುಜರಾತಿ ಮೂಲದವರು. 'ಗುಡ್‌ವಿನ್ ಎಕ್ಸ್‌ಚೇಂಜ್' ಎನ್ನುವ ಹಂಚಿಕಾ ಸಂಸ್ಥೆಯನ್ನು ಸ್ಥಾಪಿಸಿದರು. ನಂತರ ಹಲವಾರು ಹಿಂದಿ ಚಿತ್ರಗಳ ವಿತರಣೆಯನ್ನು ಮಾಡಿದರು. ವ್ಯಾಪಾರದಲ್ಲಿ ಅತ್ಯಂತ ಶಿಸ್ತಿನ ವ್ಯಕ್ತಿ ಎನಿಸಿದರು. ಇವರ ಪುತ್ರ ಚಂದ್ರವದನ್ ಹೆಚ್.ದೇಸಾಯಿ ಈಗಲೂ ಚಿತ್ರರಂಗದೊಂದಿಗೆ



ನಿಕಟ ಸಂಬಂಧವನ್ನು ಹೊಂದಿದ್ದಾರೆ. ಗೀತಾಂಜಲಿ, ಕಿನೋ ಥಿಯೇಟರ್‌ಗಳನ್ನು ಪಾಲುಗಾರಿಕೆಯಲ್ಲಿ ನಡೆಸಿಕೊಂಡು ಹೋಗುತ್ತಿದ್ದಾರೆ.

### ಥಾಮಸ್ ಡಿ'ಸೋಜಾ

ಶಿವಮೊಗ್ಗದ ಅರಸಾಳು ಗ್ರಾಮದಲ್ಲಿ ೧೯೫೫ರಲ್ಲಿ ಜನಿಸಿದರು. ಬಿ.ಕಾಂ. ಪದವೀಧರರು. ಮಲೆನಾಡಿನಿಂದ ಬೆಂಗಳೂರಿಗೆ ಬಂದು ಚಿತ್ರರಂಗದ ಸೆಳೆತಕ್ಕೆ ಒಳಗಾಗಿ ಸಂಚಾರಿ ಚಿತ್ರಮಂದಿರಗಳ ಸಂಪರ್ಕ ಪಡೆದುಕೊಂಡರು. ಕಲಕಾಲ ಗೆಳೆಯರ ಸಹಭಾಗಿತ್ವದಲ್ಲಿ ಸಂಚಾರಿ ಚಿತ್ರಮಂದಿರ ನಡೆಸಿದರು. ನಂತರ ತಾವೇ ಸಂಚಾರಿ ಚಿತ್ರಮಂದಿರವನ್ನು ಸ್ಥಾಪಿಸಿದರು. ಸಂಚಾರಿ ಚಿತ್ರಮಂದಿರಗಳಿಗೆ ಇದ್ದ ತೊಂದರೆಯನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ನ್ಯೂನತೆಗಳನ್ನು ಸರಿಪಡಿಸುವ ನಿಟ್ಟಿನಲ್ಲಿ ಸಕ್ರಿಯವಾಗಿ ದುಡಿದರು. ಸಂಚಾರಿ ಚಿತ್ರಮಂದಿರಗಳನ್ನು ಅರೆಖಾಯಂ ಚಿತ್ರಮಂದಿರಗಳನ್ನಾಗಿ ಮಾಡುವ ಪ್ರಯತ್ನದಲ್ಲಿ ಇವರು ಪ್ರಮುಖ ಪಾತ್ರ ವಹಿಸಿದ್ದಾರೆ. ಚಿತ್ರಮಂದಿರಗಳಿಗೆ ಸಂಬಂಧಿಸಿದಂತೆ ಅನೇಕ ಕಾಯಿದೆ,



ತಿದ್ದುಪಡಿಗಳನ್ನು ಜಾರಿಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಸರ್ಕಾರದೊಂದಿಗೆ ನಿರಂತರ ಸಂಪರ್ಕ ಮಾಡುತ್ತ ಕಾರ್ಯ ಸಾಧಿಸಿದ ಸಾಹಸಿ. ಸಿನಿಮಾ ಆಪರೇಟರ್ ಆಗಲು ಬೇಕಾಗಿದ್ದ ವಿದ್ಯಾರ್ಹತೆಯನ್ನು ಸಡಿಲಿಸಲು ಬಹಳ ಶ್ರಮಿಸಿದರು. ಚಲನಚಿತ್ರ ವಾಣಿಜ್ಯ ಮಂಡಳಿಯ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾ ಬಂದವರು. ವಾಣಿಜ್ಯ ಮಂಡಳಿಯ ಸಮಿತಿ ಸದಸ್ಯರಾಗಿ, ಕಾರ್ಯದರ್ಶಿಗಳಾಗಿ ನಂತರ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

### ದತ್ತಾತ್ರೇಯ.ಹೆಚ್.ಜಿ

ಇಂದು ಕನ್ನಡ ಕಿರುತೆರೆಯಲ್ಲಿ ದೊಡ್ಡ ಹೆಸರಾದ ಹೆಚ್.ಜಿ.ದತ್ತಾತ್ರೇಯ (ದತ್ತಣ್ಣ) ಕನ್ನಡ ಚಿತ್ರರಂಗದಲ್ಲಿ ಮನೋಜ್ಞವಾಗಿ ಅಭಿನಯಿಸಿ ಖ್ಯಾತಿ ಪಡೆದಿದ್ದಾರೆ. ಈಚೆಗೆ ಅವರು 'ಮುನ್ನುಡಿ' ಚಿತ್ರದಲ್ಲಿ ನೀಡಿದ ಅಭಿನಯಕ್ಕಾಗಿ ಕೇಂದ್ರ ಸರ್ಕಾರದಿಂದ ರಾಷ್ಟ್ರೀಯ ಮಟ್ಟದಲ್ಲಿ ಅತ್ಯುತ್ತಮ ಪೋಷಕ ನಟ ಪ್ರಶಸ್ತಿಯನ್ನು ಪಡೆದುಕೊಂಡರು. ಈ ಚಿತ್ರ ಅವರ ಗುಣಾತ್ಮಕ ಅಭಿನಯಕ್ಕೆ ಒಂದು ನಿದರ್ಶನ. ಎಂ.ಇ ಪದವಿಯನ್ನು ಪಡೆದುಕೊಂಡಿರುವ ದತ್ತಣ್ಣ ಭಾರತೀಯ ವಿಮಾನ ಪಡೆಯಲ್ಲಿ ೨೨ ವರ್ಷಗಳ ಕಾಲ ವಿಂಗ್ ಕಮಾಂಡರ್ ಆಗಿ ಸೇವೆ ಸಲ್ಲಿಸಿ ಸ್ವಯಂ ನಿವೃತ್ತಿ ಪಡೆದವರು. ನಾಗಾಭರಣ ನಿರ್ದೇಶನದ 'ಆಸ್ಫೋಟ' ಚಿತ್ರದ ಒಂದು ಪರಿಣಾಮಕಾರಿ ಪಾತ್ರದ



ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಹರಕೆಯ ಕುರಿ', 'ಅಮೆರಿಕಾ ಅಮೆರಿಕಾ', 'ಹೂ ಮಳೆ', 'ಕೊಟ್ರೇಶಿ ಕನಸು', 'ಚಿನ್ನಾರಿ ಮುತ್ತ', 'ವಿಮೋಚನೆ' ಮೊದಲಾದವು ಅವರ ಅಭಿನಯದ ಉತ್ತಮ ಚಿತ್ರಗಳು. 'ಆಸ್ಫೋಟ' (೧೯೮೭-೮೮) ಚಿತ್ರದ ಅಭಿನಯಕ್ಕೆ 'ಶ್ರೇಷ್ಠ ಪೋಷಕ ನಟ' ಹಾಗೂ 'ಮುನ್ನುಡಿ' (೧೯೯೯-೨೦೦೦) ಚಿತ್ರದ ಅಭಿನಯಕ್ಕೆ ಶ್ರೇಷ್ಠ ನಟ ಎಂದು ಎರಡು ಬಾರಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ. 'ಮುನ್ನುಡಿ' ಚಿತ್ರದ ಅಭಿನಯಕ್ಕಾಗಿ ಶ್ರೇಷ್ಠ ಪೋಷಕ ನಟ ರಾಷ್ಟ್ರ ಪ್ರಶಸ್ತಿಯೂ ಲಭಿಸಿದೆ. ರಂಗಭೂಮಿ ಮತ್ತು ಚಿತ್ರರಂಗಗಳ ಇನ್ನೊಬ್ಬ ಜನಪ್ರಿಯ ನಟ ಹೆಚ್.ಜಿ. ಸೋಮಶೇಖರರಾಯರು ದತ್ತಣ್ಣನವರ ಅಣ್ಣಂದಿರು. ಸಾಂಸಾರಿಕ ಜವಾಬ್ದಾರಿಯಿಲ್ಲದ ಏಕಾಂಗಿಯಾಗಿ ದತ್ತಣ್ಣ ಕಲಾರಂಗದಲ್ಲಿಯೇ ತಲ್ಲೀನರಾದವರು.

### ದತ್ತುರಾಜ್.ಚಿ

ಖ್ಯಾತ ಚಿತ್ರಸಾಹಿತಿ ಚಿ.ಉದಯಶಂಕರ್‌ರವರ ಸೋದರರಾದ ದತ್ತುರಾಜ್ ಆಗಿನಿಂತಯೇ ಚಿತ್ರರಂಗದ ಬಗ್ಗೆ ಉತ್ಸಾಹ ಹೊಂದಿ ಯುವಕರಾಗಿದ್ದಾಗಲೇ ಚಿತ್ರರಂಗ ಪ್ರವೇಶಿಸಿದರು. ನಿರ್ದೇಶನದ ಕಡೆಗೆ ಒಲವು



ಹೊಂದಿದ ವತ್ಸರಾಜ್ ಕೆಲವೇ ಚಿತ್ರಗಳನ್ನು ನಿರ್ದೇಶಿಸಿದರೂ ಜನಪ್ರಿಯ ಹಾಗೂ ಸದಭಿರುಚಿಯ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ನಿರ್ದೇಶಕರಾಗಿ 'ರುದ್ರಿ' ಚಿತ್ರದ ಮೂಲಕ ಬೆಳಕಿಗೆ ಬಂದ ಅವರು ನಂತರ ಯಶಸ್ವಿ ಚಿತ್ರಗಳಾದ 'ಕರಳಿದ ಸಿಂಹ', 'ಕಾಮನಬಿಲ್ಲು', 'ಅದೇ ಕಣ್ಣು', 'ಶೃತಿ ಸೇರಿದಾಗ', 'ಮೃತ್ಯುಂಜಯ', 'ಅರಳಿದ ಹೂಗಳು', 'ಆನಂದ ಜ್ಯೋತಿ' ಮೊದಲಾದ ಚಿತ್ರಗಳನ್ನು ನಿರ್ದೇಶಿಸಿದರು. 'ವಿಜಯ ಚಿತ್ರ' ಚಲನಚಿತ್ರ ಮಾಸ ಪತ್ರಿಕೆಯ ಸಂಪಾದಕೀಯ ವಿಭಾಗದಲ್ಲಿ ದುಡಿದರು.

### ದಾಸ್.ಕೆ.ಎಸ್.ಆರ್

ಸಂಕಲನ ಹಾಗೂ ನಿರ್ದೇಶನ ಎರಡೂ ವಿಭಾಗಗಳಲ್ಲಿ ಶ್ರಮಿಸಿದ ಹಿರಿಯರು ಕೆ.ಎಸ್.ಆರ್.ದಾಸ್. ಸಾಹಸ ಚಿತ್ರಗಳ ನಿರ್ದೇಶಕ ಎಂದು ಹೆಚ್ಚಾಗಿ



ಗುರುತಿಸಲ್ಪಡುವ ಇವರು ಹುಟ್ಟಿದ್ದು ನೆಲ್ಲೂರು ಬಳಿ ಕುರಿಚೇಡು ಗ್ರಾಮದಲ್ಲಿ. ೧೯೫೪ರಲ್ಲಿ ಎಸ್.ಎಸ್.ಎಲ್.ಸಿ ಮುಗಿಸಿ ಚಿತ್ರಮಂದಿರವೊಂದರಲ್ಲಿ ಬುಕ್ಕಿಂಗ್ ಕ್ಲರ್ಕ್ ಆಗಿ ಕೆಲಸಕ್ಕೆ ಸೇರಿದ ಇವರು ೧೯೫೬ರಲ್ಲಿ ಮದರಾಸಿಗೆ ಹೋದರು. ಅಲ್ಲಿ ಛಾಯಾನಾರಾಯಣ ಅವರಲ್ಲಿ ಸಹಾಯಕರಾಗಿ ಕೆಲಸಕ್ಕೆ ಸೇರಿದರು. ೧೯೭೬ರಲ್ಲಿ ವೀನಸ್ ಮಹೀಜಾ ಪಿಕ್ಚರ್ಸ್ ಅವರ 'ಬಂಗಾರದ ಗುಡಿ' ಚಿತ್ರವನ್ನು ನಿರ್ದೇಶಿಸುವುದರೊಂದಿಗೆ ನಿರ್ದೇಶಕರಾಗಿ ಕನ್ನಡ ಚಿತ್ರರಂಗಕ್ಕೆ ಪರಿಚಿತರಾದರು. ಹೆಚ್ಚಾಗಿ ಸಾಹಸಮಯ ಚಿತ್ರಗಳತ್ತ ಒಲವು ತೋರಿದ ದಾಸ್ ಸಾಹಸಪ್ರಧಾನ ಚಿತ್ರಗಳನ್ನೇ ಹೆಚ್ಚಾಗಿ ನಿರ್ದೇಶಿಸಿದ್ದಾರೆ. 'ಕಳ್ಳ ಕುಳ್ಳ', ಇವರಿಗೆ ಹೆಸರು ತಂದ ಚಿತ್ರ. 'ಸಹೋದರರ ಸವಾಲ್', 'ಕಿಲಾಡಿಕಿಟ್ಟು', 'ಸ್ನೇಹಿತರ ಸವಾಲ್', 'ಕಾರ್ಮಿಕ ಕಳ್ಳನಲ್ಲ', 'ತಿರುಗುಬಾಣ', 'ಜ್ವಾಲೆ', 'ಒಂದಾಗಿ ಬಾಳು' ಮೊದಲಾದವು ಇವರು ನಿರ್ದೇಶಿಸಿದ ಕೆಲವು ಯಶಸ್ವಿ ಚಿತ್ರಗಳು. ಇವರೇ ಚಿತ್ರ ನಿರ್ಮಿಸಿ ತಮ್ಮ ಶಿಷ್ಯ ನಟ ಪ್ರಭಾಕರ್‌ರಿಂದ ನಿರ್ದೇಶನ ಮಾಡಿಸಿದ್ದೂ ಉಂಟು.

### ದ್ವಾರಕಾನಾಥ್.ಎ

೧೯೫೦ರಲ್ಲಿ ಚಿತ್ರರಂಗಕ್ಕೆ ಬಂದು ಚಿತ್ರವಿತರಣೆ, ನಿರ್ಮಾಣ ಎರಡರಲ್ಲೂ ತಮ್ಮ ಜಾಣ್ಮೆಯನ್ನು ತೋರಿದ್ದಾರೆ.



ರಾಜಕುಮಾರ್ ಅವರ ನಿಕಟವರ್ತಿಗಳು. ವಜ್ರೇಶ್ವರಿ ಕಂಬೈನ್ಸ್ ಸ್ಥಾಪನೆಯಲ್ಲಿ ಪ್ರಮುಖವಾಗಿ ಸಹಕರಿಸಿದವರು. 'ಸಂಪತ್ತಿಗೆ ಸವಾಲ್', 'ಗಿರಿಕನ್ಯೆ', 'ಮುತ್ತು ಒಂದು ಮುತ್ತು' ಚಿತ್ರಗಳನ್ನು ನಿರ್ಮಿಸಿದ್ದಾರೆ. ಎಮರಾಲ್ಡ್ ವಿತರಣಾ ಸಂಸ್ಥೆ, ಪದ್ಮಶ್ರೀ ಪಿಕ್ಚರ್ಸ್ ಎಂಬ ಚಿತ್ರ ವಿತರಣಾ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ.

### ದ್ವಾರಕಾನಾಥ್.ಟಿ (೧೯೦೮ -೭೬)

ಕನ್ನಡ ಚಲನಚಿತ್ರೋದ್ಯಮಕ್ಕೆ ಆಧಾರ ಶಿಲೆಗಳನ್ನು ಇಟ್ಟವರಲ್ಲಿ ಟಿ.ದ್ವಾರಕಾನಾಥ್ ಒಬ್ಬರು. ವರದಾಚಾರ್ಯರ ಬಂಧು ವರ್ಗಕ್ಕೆ ಸೇರಿದ ಟಿ.ದ್ವಾರಕಾನಾಥ್, ವರದಾಚಾರ್ಯರಿಗೆ ಸೂಕ್ತ ಸ್ಮಾರಕ ನಿರ್ಮಿಸುವ ಅವರ ಬಂಧುಗಳ, ಶಿಷ್ಯವೃಂದದವರ ಯೋಜನೆಯ ಅಂಗವಾಗಿ ನಿರ್ಮಿಸಲಾದ 'ಧ್ರುವಕುಮಾರ' ಚಿತ್ರದಲ್ಲಿ ನಾರದನ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸಿದರು. ಅವರ ಕಾರ್ಯಕ್ಷೇತ್ರ ಅಭಿನಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ನಿರ್ದೇಶಕ ಅಲ್ತೇಕರ್‌ರ ಸಹಾಯಕರಾಗಿ , ಖ್ಯಾತ ಸಂಕಲನಕಾರ ಜಿತೇನ್ ಬ್ಯಾನರ್ಜಿ ಅವರ ಸಹಾಯಕರಾಗಿ 'ಧ್ರುವಕುಮಾರ'ಕ್ಕಾಗಿ ದುಡಿದರು. ಚಲನಚಿತ್ರದಲ್ಲಿ ಆಸಕ್ತಿ ಮೂಡಿತು. 'ಧ್ರುವಕುಮಾರ' ಸಿದ್ಧವಾದ ನಂತರ ಮುಂಬೈನಲ್ಲಿ ಸಾಗರ್ ಸ್ಟುಡಿಯೋ ಸೇರಿ ತಾಂತ್ರಿಕ ವಿಭಾಗದಲ್ಲಿ ಪರಿಣತಿ



ಪಡೆದರು. ತಿಮ್ಮಯ್ಯನವರು ಬೆಂಗಳೂರಿನಲ್ಲಿ ಸ್ಟುಡಿಯೋ ಆರಂಭಿಸಿದಾಗ ಮದರಾಸಿನಲ್ಲಿ ತಮ್ಮ ಸ್ವಂತ ಸಿನಿಲ್ಯಾಬ್ ನಡೆಸುತ್ತಿದ್ದ ದ್ವಾರಕಾನಾಥ್ ಅವರನ್ನು ಬೆಂಗಳೂರಿಗೆ ಕರೆತಂದರು. ದ್ವಾರಕಾನಾಥ್ ಅವರು ಸ್ಟುಡಿಯೋ ಸ್ಥಾಪನೆಯಲ್ಲಿ ತಿಮ್ಮಯ್ಯನವರಿಗೆ ನೆರವಾದುದಲ್ಲದೆ, ಆ ಸಂಸ್ಥೆಯ 'ರಾಜಸೂಯ ಯಾಗ' ಚಿತ್ರವನ್ನು ನಿರ್ದೇಶಿಸಿದರು. ಸ್ಟುಡಿಯೋ ಮಾಲೀಕರಿಗೂ, ದ್ವಾರಕಾನಾಥ್ ಅವರಿಗೂ ಭಿನ್ನಾಭಿಪ್ರಾಯ ತಲೆದೋರಿ ಚಿತ್ರ ಪೂರ್ಣವಾಗುವ ಮೊದಲೇ ಅಲ್ಲಿಂದ ಹೊರಬಿದ್ದರು. ಅನಂತರ ತಮಿಳುನಾಡಿನಲ್ಲಿ ತಂತ್ರಜ್ಞರಾಗಿ ಹಾಗೂ ಚಿತ್ರ ನಿರ್ದೇಶಕರಾಗಿ ದುಡಿದರು. 'ದಾನಶೂರ ಕರ್ಣ' ಎಂಬ ಪೌರಾಣಿಕ ಹಾಗೂ ನಾಯಿಯೇ ಪ್ರಧಾನವಾಗಿರುವ 'ಲಕ್ಕಿ ಸ್ಟಾರ್' ತಮಿಳು ಚಿತ್ರಗಳನ್ನು ನಿರ್ದೇಶಿಸಿದರು. ಬೆಂಗಳೂರಿನ ಜಯಚಾಮ ರಾಜೇಂದ್ರ ವೃತ್ತಿ ಶಿಕ್ಷಣಾಲಯದ ಸೌಂಡ್ ಎಂಜಿನಿಯರಿಂಗ್ ವಿಭಾಗದಲ್ಲಿ ಬೋಧಕರಾಗಿ ದುಡಿಯುತ್ತಿದ್ದ ಅವರು ಆ ಸಂಸ್ಥೆಯ ಪ್ರಾಂಶುಪಾಲರಾಗಿ ನಿವೃತ್ತರಾದರು. ಚಲನಚಿತ್ರೋದ್ಯಮಕ್ಕೆ ಅಗತ್ಯವಾದ ಹಲವಾರು ತಂತ್ರಜ್ಞರನ್ನು ರೂಪಿಸಿದ ಕೀರ್ತಿ ಇವರದು. ತಮ್ಮ ಬಾಲ್ಯ ಮಿತ್ರರಾದ ಎ.ಸಿ.ನರಸಿಂಹಮೂರ್ತಿ ಅವರ ಜೊತೆಗೂಡಿ ಕನ್ನಡ ಚಿತ್ರ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರ ಜೊತೆಯಲ್ಲಿ 'ಆನಂದ ಕಂದ' ಎಂಬ ಚಿತ್ರವನ್ನು ನಿರ್ದೇಶಿಸಿದರು. ೧೯೭೬ರ ನವೆಂಬರ್ ೧೭ರಂದು ಕಲ್ಕತ್ತೆಯಲ್ಲಿ ತಮ್ಮ ಮಗನ ಮನೆಯಲ್ಲಿ ವಿಧಿವಶರಾದರು.

### ದ್ವಾರಕೀಶ್

ನಟ, ನಿರ್ಮಾಪಕ, ನಿರ್ದೇಶಕ, ಕಥೆಗಾರ - ಹೀಗೆ ಚಿತ್ರರಂಗದಲ್ಲಿ ಒಂದಲ್ಲ ಒಂದು ಚಟುವಟಿಕೆಯಿಂದ ದುಡಿಯುತ್ತಿರುವವರಲ್ಲಿ ದ್ವಾರಕೀಶ್ ಒಬ್ಬರು. ಮೈಸೂರಿನಲ್ಲಿ ಹೈಸ್ಕೂಲ್



ವಿದ್ಯಾಭ್ಯಾಸ ಮುಗಿಸಿದ ನಂತರ, ಆಟೋಮೊಬೈಲ್ ಡಿಪ್ಲೊಮಾ ಪಡೆದರು. ಶಾಲೆಯಲ್ಲಿ ಓದುತ್ತಿರುವಾಗಲೇ ನಾಟಕಗಳಲ್ಲಿ ಅಭಿನಯಿಸುವ ಹವ್ಯಾಸ ಬೆಳೆಸಿಕೊಂಡಿದ್ದರು. ಖ್ಯಾತ ಚಿತ್ರ ನಿರ್ದೇಶಕ ಹುಣಸೂರು ಕೃಷ್ಣಮೂರ್ತಿ ದ್ವಾರಕೀಶ್ ಅವರ ಸೋದರಮಾವ. ಅವರು ತಯಾರಿಸಿದ 'ವೀರಸಂಕಲ್ಪ' ಚಿತ್ರದ ಮೂಲಕ ದ್ವಾರಕೀಶ್ ಹಾಸ್ಯ ನಟರಾಗಿ ಬೆಳ್ಳಿತೆರೆ ಪ್ರವೇಶ ಮಾಡಿದರು. ಕನ್ನಡ ಚಿತ್ರರಂಗದಲ್ಲಿ ಹಾಸ್ಯನಟನೊಬ್ಬ ನಾಯಕನಷ್ಟೇ ಯಶಸ್ಸು ಪಡೆಯುವುದು ಸಾಧ್ಯ ಎಂದು ಸಾಧಿಸಿ ತೋರಿಸಿದವರಲ್ಲಿ ದ್ವಾರಕೀಶ್ ಒಬ್ಬರು. ಸುಮಾರು ೧೫೦ ಚಿತ್ರಗಳಲ್ಲಿ ಅಭಿನಯಿಸಿ ಜನರ ಮೆಚ್ಚುಗೆ ಗಳಿಸಿದ್ದಾರೆ. ನಟನೆಯ ಜೊತೆಗೆ ಚಿತ್ರ ನಿರ್ಮಾಣಕ್ಕೂ ಪ್ರಯತ್ನಿಸಿ 'ಮೇಯರ್ ಮುತ್ತಣ್ಣ' ಚಿತ್ರದಿಂದ ನಿರ್ಮಾಪಕರಾದರು. 'ಸಿಂಗಾಪುರದಲ್ಲಿ ರಾಜಾಕುಳ್ಳ' ಚಿತ್ರವನ್ನು ವಿದೇಶದಲ್ಲೇ ಹೆಚ್ಚು ಭಾಗ ಚಿತ್ರಿಸಿದ ಕೀರ್ತಿ ಇವರದು. ಇವರ 'ಆಫ್ರಿಕಾದಲ್ಲಿ ಶೀಲಾ' ಆಫ್ರಿಕಾದ ಕಾಡುಗಳಲ್ಲಿ ಚಿತ್ರಣಗೊಂಡಿತು. ಚಿತ್ರವನ್ನು ಶ್ರೀಮಂತವಾಗಿ ತೆಗೆಯುವ ಪರಿಪಾಠವನ್ನು ಪ್ರಾರಂಭಿಸಿದವರು ದ್ವಾರಕೀಶ್. ಅವರ ಎಲ್ಲ ಚಿತ್ರಗಳಲ್ಲೂ ಭವ್ಯತೆಯನ್ನು ಕಾಣಬಹುದು. ಅವರು ಚಿತ್ರ ಸಂಗೀತದಲ್ಲೂ ಖ್ಯಾತರಿಂದ ಹಾಡಿಸುವ, ವಿದೇಶದಲ್ಲಿ ಧ್ವನಿಮುದ್ರಣ ಮಾಡುವ ಸಾಹಸ ಮಾಡಿದ್ದಾರೆ. ಸಿದ್ಧಲಿಂಗಯ್ಯ, ಭಾರ್ಗವ ಮೊದಲಾದವರನ್ನು ಸ್ವತಂತ್ರ ನಿರ್ದೇಶನಕ್ಕೆ ಕರೆತಂದರು. ಇವರ ಪ್ರಮುಖ ಚಿತ್ರಗಳು 'ಕಳ್ಳ ಕುಳ್ಳ', 'ಮಗ ಮೊಮ್ಮಗ', 'ಕೌಬಾಯ್ ಕುಳ್ಳ', 'ಅದೃಷ್ಟವಂತ', 'ಪೆದ್ದ ಗೆದ್ದ', 'ನ್ಯಾಯ ಎಲ್ಲಿದೆ', 'ಗುರು ಶಿಷ್ಯರು', 'ಇಂದಿನ ರಾಮಾಯಣ'. ದ್ವಾರಕೀಶ್ ಅವರ ಪ್ರಥಮ ನಿರ್ದೇಶನದ ಚಿತ್ರ 'ನೀ ಬರೆದ ಕಾದಂಬರಿ' ಗಲ್ಲಾಪೆಟ್ಟಿಗೆಯಲ್ಲೂ ಯಶಸ್ಸು ಪಡೆಯಿತು. ದ್ವಾರಕೀಶ್ ತೆರೆಗೆ ತಂದ ಹೊಸ ಕಲಾವಿದರಲ್ಲಿ ಸುನಿಲ್, ಶ್ರುತಿ, ವಿನೋದ್‌ರಾಜ್, ಹರ್ಷವರ್ಧನ್ ಮತ್ತು ಇತರರು ಇದ್ದಾರೆ. ಅವರ ಇತ್ತೀಚಿನ ಚಿತ್ರಗಳಲ್ಲಿ ತಮ್ಮ ಮಕ್ಕಳನ್ನು ನಾಯಕನಟರಾಗಿ ರೂಪಿಸಿ ಚಿತ್ರ ನಿರ್ಮಿಸಿರುತ್ತಾರೆ. ಟಿ.ವಿ.ಧಾರಾವಾಹಿಯ ನಿರ್ಮಾಣ, ನಿರ್ದೇಶನದಲ್ಲಿಯೂ ಹೆಸರಾಗಿದ್ದಾರೆ.

### ದಿನೇಶ್ (೧೯೩೯-೧೯೯೦)

ಉಪನಾಯಕನಾಗಿ ಚಿತ್ರರಂಗಕ್ಕೆ ಬಂದು ಹಾಸ್ಯನಟರಾಗಿ, ಖಳನಾಯಕರಾಗಿ, ಬದಲಾದ ಕಲಾವಿದ. ಬೆಂಗಳೂರಿನಲ್ಲಿ ಜನನ. ಶಾಲಾ ನಾಟಕಗಳಲ್ಲಿ ಅಭಿನಯಿಸಿದ ಅನುಭವ. ಗುಬ್ಬಿ ನಾಟಕ ಸಂಸ್ಥೆ ಮೂಲಕ ರಂಗಭೂಮಿ ಪ್ರವೇಶ (೧೯೫೬). 'ನಾಂದಿ' (೧೯೬೪) ಚಿತ್ರದಲ್ಲಿ ಸಜ್ಜನ ಉಪಾಧ್ಯಾಯನಾಗಿ ಚಿತ್ರರಂಗಕ್ಕೆ ಬಂದರು. 'ಸಿ.ಐ.ಡಿ.ರಾಜಣ್ಣ' ಚಿತ್ರದ ಮೂಲಕ ಖಳನಟರಾಗಿ ಪರಿಚಿತರಾದರು. ಇವರ ಅಪರೂಪದ ಅಭಿನಯವನ್ನು 'ಋತುಗಾನ'



ಚಿತ್ರದಲ್ಲಿ ಕಾಣಬಹುದಿತ್ತು. 'ರೇಸ್' ಹಿಂದಿ ಚಿತ್ರ ಸೇರಿದಂತೆ ಸುಮಾರು ೩೨೫ ಚಿತ್ರಗಳಲ್ಲಿ ಅಭಿನಯಿಸಿದರು. ಕಿರುತೆರೆ ಧಾರಾವಾಹಿಗಳಲ್ಲಿಯೂ ನಟಿಸಿದರು. ಈ ಬಹುಮುಖ ಪ್ರತಿಭೆಯ ಜನಪ್ರಿಯ ನಟ ೫೭ನೆಯ ವಯಸ್ಸಿನಲ್ಲಿ ಹೃದಯಾಘಾತದಿಂದ ನಿಧನರಾದರು.

### ದಿನೇಶ್ ಬಾಬು

ಕನ್ನಡೇತರರಾದರೂ ಕನ್ನಡ

ಚಿತ್ರರಂಗದಲ್ಲಿ ಪ್ರಮುಖ ನಿರ್ದೇಶಕರಲ್ಲೊಬ್ಬರೆಂಬ ಸ್ಥಾನವನ್ನು ಪಡೆದುಕೊಂಡಿರುವ ಪ್ರತಿಭಾವಂತ. ಇದುವರೆಗೂ ೧೨ಕ್ಕೂ ಹೆಚ್ಚು ಕನ್ನಡ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪುಣೆ ಫಿಲ್ಮ್ ಇನ್ಸ್‌ಟಿಟ್ಯೂಟಿನ ಪದವೀಧರ. ಕೇರಳದವರಾದ ದಿನೇಶ್ ಬಾಬು ಮೂಲತಃ ಛಾಯಾಗ್ರಹಕರು. ಇದುವರೆಗೆ ೬೦ಕ್ಕೂ ಹೆಚ್ಚು ಚಿತ್ರಗಳಿಗೆ ಛಾಯಾಗ್ರಹಣ ನೀಡಿದ್ದಾರೆ. ಆದರೆ ಅವರು ನಿರ್ದೇಶಕರಾಗಿ ವಿಶೇಷ



ಗಮನ ಸೆಳೆದಿದ್ದು ಕನ್ನಡ ಚಿತ್ರರಂಗದಲ್ಲಿಯೇ. ಅವರು ನಿರ್ದೇಶಿಸಿದ ಪ್ರಥಮ ಕನ್ನಡ ಚಿತ್ರ 'ಸುಪ್ರಭಾತ' ತನ್ನ ತಾಜಾತನದಿಂದ ಜನಪ್ರಿಯತೆ ಪಡೆದು ವಿಮರ್ಶಕರಿಂದ ಕೂಡ ವ್ಯಾಪಕವಾಗಿ ಶ್ಲಾಘನೆ ಗಳಿಸಿತು. ಅದೇ ರೀತಿಯ ಪರಿಣಾಮ ಬೀರಿದ ಅವರ ನಿರ್ದೇಶನದ ಇನ್ನೊಂದು ಚಿತ್ರ 'ಅಮೃತ ವರ್ಷಿಣಿ'. ಈ ಚಿತ್ರ ೧೯೯೭-೯೮ರಲ್ಲಿ ಅವರಿಗೆ ಅತ್ಯುತ್ತಮ ಚಿತ್ರಕಥೆ ಪ್ರಶಸ್ತಿಯನ್ನು ತಂದುಕೊಟ್ಟಿತು. 'ಸುಪ್ರಭಾತ' ಅತ್ಯುತ್ತಮ ಛಾಯಾಗ್ರಹಣ ಪ್ರಶಸ್ತಿಯನ್ನು ಗಳಿಸಿತ್ತು. ಕೇವಲ ೪೮ ಘಂಟೆಗಳಲ್ಲಿ 'ಇದು ಸಾಧ್ಯ' ಚಿತ್ರವನ್ನು ಚಿತ್ರಿಸಿ ಹೊಸ ವಿಕ್ರಮವನ್ನು ಸಾಧಿಸಿದ ದಿನೇಶ್ ಬಾಬು ಅವರ ಇತರ ಪ್ರಮುಖ ಚಿತ್ರಗಳು 'ಇನ್ ಸ್ಪೆಕ್ಟರ್ ವಿಕ್ರಂ', 'ಹೆಂಡ್ತಿಗ್ಹೇಳ್ಬೇಡಿ', 'ಲಾಲಿ', ಮತ್ತು 'ನಾನೇನೂ ಮಾಡ್ಲಿಲ್ಲ'. ಇವು ಬಾಕ್ಸ್ ಆಫೀಸ್‌ನಲ್ಲಿ ಅಂಗೀಕೃತವಾಗಿರುವ ಬಹಳಷ್ಟು ಸೂತ್ರಗಳನ್ನು ಮುರಿದವು. ತಮ್ಮದೇ ಆದ ನಿರೂಪಣಾ ಶೈಲಿಯನ್ನು ರೂಢಿಸಿಕೊಂಡಿರುವ ಅವರು ತಮ್ಮ ಎಲ್ಲ ಚಿತ್ರಗಳಿಗೂ ತಾವೇ ಕಥೆ, ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ರಚಿಸುತ್ತಾರೆ. ವಿಷ್ಣುವರ್ಧನ್, ಅನಂತ್‌ನಾಗ್, ರಮೇಶ್ ಮತ್ತು ರಾಮಕೃಷ್ಣರಂತಹ ನಟರನ್ನು ವಿಭಿನ್ನ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಚಿತ್ರ ನಿರ್ಮಾಣಕ್ಕೂ ಕೈ ಹಾಕಿದವರು.

## ದೇವರಾಜ್

ಪ್ರತಿಭಾಶಾಲಿ ನಟ ದೇವರಾಜ್. ಅಂಬರೀಷ್, ಪ್ರಭಾಕರ್‌ರಂತೆ ಖಳನಾಯಕನಾಗಿ ಅಭಿನಯಿಸಿ ನಂತರ ನಾಯಕರಾದರು. ವಿಜ್ಞಾನದ ಪದವೀಧರರಾದ ದೇವರಾಜ್ ಬೆಂಗಳೂರಿನ ಹೆಚ್.ಎಂ.ಟಿ. ಕಾರ್ಖಾನೆಯಲ್ಲಿ ನೌಕರರಾಗಿದ್ದಾಗಿನಿಂದಲೇ ರಂಗಭೂಮಿಯ ಚಟುವಟಿಕೆಗಳಲ್ಲಿ ತೊಡಗಿದವರು. ದಿವಂಗತ ಟಿ.ಎಸ್.ನರಸಿಂಹನ್ ನಿರ್ಮಿಸಿ ನಿರ್ದೇಶಿಸಿದ 'ಇವರ ಪ್ರಾರಂಭಿಕ



ಅಭಿನಯದ 'ದಂಗೆ' ತೆರೆ ಕಾಣಲಿಲ್ಲ. ಕುತೂಹಲಭರಿತ ಚಿತ್ರ '೨೭ ಮಾವಳ್ಳಿ ಸರ್ಕಲ್'ನಿಂದ ಚಿತ್ರರಂಗದಲ್ಲಿ ಬೆಳಕಿಗೆ ಬಂದರು. ದೇವರಾಜ್ 'ರಾವಣ ರಾಜ್ಯ', 'ಕೆಂಡದ ಮಳೆ', 'ಆಗಂತುಕ' ಇತ್ಯಾದಿ ಚಿತ್ರಗಳಲ್ಲಿ ಅಭಿನಯಿಸಿ ನಕಾರಾತ್ಮಕ ಹಾಗೂ ಸಕಾರಾತ್ಮಕ ಪಾತ್ರಗಳೆರಡರಲ್ಲೂ ಜನಪ್ರಿಯರಾದರು. ಕಮರ್ಷಿಯಲ್ ಚಿತ್ರಗಳ ನಾಯಕರಾಗಿಯೂ ಯಶಸ್ವಿಯಾದ ದೇವರಾಜ್ 'ಗೋಲಿಬಾರ್', 'ಹತ್ಯಾಕಾಂಡ', 'ಹಬ್ಬ', 'ರಾಜಕೀಯ', 'ಲಾಕಪ್‌ಡೆತ್', 'ವೀರಪ್ಪನ್', 'ಗೋಲ್ಡ್‌ಮೆಡಲ್', 'ಪೊಲೀಸ್ ಫೈಲ್', 'ಚಿತ್ರಲೇಖ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಇವರು ಉತ್ತಮವಾಗಿ ಅಭಿನಯಿಸಿದ್ದ 'ಹುಲಿಯಾ', 'ಬಣ್ಣದ ಹೆಜ್ಜೆ' ಚಿತ್ರಗಳು ನಿರೀಕ್ಷಿತ ಯಶಸ್ಸು ಪಡೆಯದಿದ್ದರೂ ದೇವರಾಜ್ ಅವರ ಪಾತ್ರ ಪೋಷಣೆ ಬಹುವಾಗಿ ಪ್ರಶಂಸೆ ಪಡೆಯಿತು. ರಾಜಕಾರಣಿ ಮತ್ತು ಪೊಲೀಸರ ಪಾತ್ರಗಳಲ್ಲಿ ಚಿತ್ರಪ್ರೇಮಿಗಳು ಅವರನ್ನು ಬಹುವಾಗಿ ಮೆಚ್ಚಿಕೊಂಡರು. 'ಆಗಂತುಕ' (೧೯೮೬-೮೭) ಚಿತ್ರದಲ್ಲಿನ ಅಭಿನಯಕ್ಕಾಗಿ ಅತ್ಯುತ್ತಮ ಪೋಷಕ ನಟ ಹಾಗೂ 'ವೀರಪ್ಪನ್' (೧೯೯೧-೯೨) ಚಿತ್ರದಲ್ಲಿನ ಅಭಿನಯಕ್ಕಾಗಿ ಅತ್ಯುತ್ತಮ ನಟ ಪ್ರಶಸ್ತಿ ಪಡೆದಿದ್ದಾರೆ. ದೇವರಾಜ್‌ರವರ ಪತ್ನಿ ಚಂದ್ರಲೇಖಾ ಕೂಡ ಒಬ್ಬ ಚಲನಚಿತ್ರ ಕಲಾವಿದೆ.

## ದೇವಿ

ಖ್ಯಾತ ನೃತ್ಯ ನಿರ್ದೇಶಕ ಉಡುಪಿ ಜಯರಾಂ ಅವರ ಸಹಾಯಕಿ. ಎರಡು ದಶಕಗಳಿಗೂ ಮೀರಿ ಉಡುಪಿ ಜಯರಾಂ



ಅವರ ಶಿಷ್ಯೆಯಾಗಿ ಅಚಲ ನಿಷ್ಠೆ, ಶ್ರದ್ಧೆ, ಭಕ್ತಿಗಳ ಸಂಕೇತದಂತಿದ್ದವರು. ದೇವಿ ಮೂಲತಃ ಕೇರಳದವರು. ಒಂಬತ್ತನೆಯ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿದ ಆಕೆ ಹನ್ನೆರಡನೆಯ ವಯಸ್ಸಿಗೆ ಶಾಸ್ತ್ರೀಯ ನೃತ್ಯದಲ್ಲಿ ಖ್ಯಾತ ಗುರು ಪದ್ಮಾ ಸುಬ್ರಹ್ಮಣ್ಯಂ ಅವರ ಶಿಷ್ಯೆಯಾಗಿ ಅಭ್ಯಾಸ ಆರಂಭಿಸಿದರು. ನಂತರ ಭರತನಾಟ್ಯ, ಕೂಚುಪುಡಿ, ಕಥಕ್ಕಳಿ, ಮಣಿಪುರಿ ನೃತ್ಯಗಳಲ್ಲಿ ಪರಿಶ್ರಮ ಹೊಂದಿದವರು. ಚಿನ್ನಿಲಾಲ್ ಅವರೊಂದಿಗೆ ಕೆಲಸ ಮಾಡಿದ್ದರು. ಉಡುಪಿ ಜಯರಾಂ ಅವರ ಸಹಾಯಕಿಯಾಗಿ ಪ್ರಥಮವಾಗಿ ಕನ್ನಡದಲ್ಲಿ ಕೆಲಸ ಮಾಡಿದ ಚಿತ್ರ 'ಚದುರಂಗ'. ಸುಮಾರು ೫೦೦ ಚಿತ್ರಗಳಿಗೆ ಸಹ ನೃತ್ಯ ನಿರ್ದೇಶಕಿಯಾಗಿ ದುಡಿದರು. ಎಂದೂ ಸ್ವತಂತ್ರ ನೃತ್ಯ ನಿರ್ದೇಶಕಿಯಾಗಲು ಆಸೆ ಪಡಲಿಲ್ಲ. ಆಕೆಯ ಪ್ರಕಾರ ಅದೇ ಆಕೆ ಗುರುವಿಗೆ ನೀಡುವ ಗುರುದಕ್ಷಿಣೆ. ರಾಜಕುಮಾರ್ ಅಭಿನಯದ ೨೫ ಚಿತ್ರಗಳಿಗೆ ಸಹ ನೃತ್ಯ ನಿರ್ದೇಶನ ಮಾಡಿದ್ದಾರೆ ದೇವಿ.

## ದೇವಿ ಪ್ರಸಾದ್.ಆರ್

ಎಂಬತ್ತರ ದಶಕದ ಅಂತ್ಯದಲ್ಲಿ ಕನ್ನಡ ಚಿತ್ರರಂಗಕ್ಕೆ ಪರಿಚಿತರಾದ ಛಾಯಾಗ್ರಾಹಕರು. ತೆಲುಗು ಚಿತ್ರರಂಗದ ಹಿರಿಯ ನಿರ್ದೇಶಕರು, ನಿರ್ಮಾಪಕರು



ಆಗಿದ್ದ ಭಕ್ತ ಅವರ ಪುತ್ರರು ದೇವಿಪ್ರಸಾದ್. ಪ್ರಸಾದ್ ಸ್ಟುಡಿಯೋದಲ್ಲಿ ಕ್ಯಾಮರಾ ಅಸಿಸ್ಟೆಂಟ್ ಆಗಿ ಕೆಲಸಕ್ಕೆ ಸೇರಿದರು. ಖ್ಯಾತ ಛಾಯಾಗ್ರಾಹಕ ಪಿ.ಎಸ್.ಪ್ರಕಾಶ್ ಅವರ ಸಹಾಯಕರಾಗಿ ಕಾರ್ಯ ನಿರ್ವಹಿಸಿದ ಇವರು ದ್ವಾರಕೀಶ್ ಅವರಿಂದ ಕನ್ನಡ ಚಿತ್ರರಂಗ ಪ್ರವೇಶಿಸಿದರು. 'ಬ್ರಹ್ಮ ಗಂಟು' ಚಿತ್ರದಿಂದ ಕನ್ನಡ ಚಿತ್ರರಂಗಕ್ಕೆ ಪ್ರವೇಶ ಮಾಡಿದರು. 'ಡ್ಯಾನ್ಸ್ ರಾಜಾ ಡ್ಯಾನ್ಸ್', 'ನೀ ಬರೆದ ಕಾದಂಬರಿ', 'ಆಫ್ರಿಕಾದಲ್ಲಿ ಶೀಲಾ', 'ವಿಜಯ್', ನಂಜುಂಡೇಗೌಡ ನಿರ್ದೇಶನದ 'ನವತಾರೆ' ಮುಂತಾದ ಚಿತ್ರಗಳ ಛಾಯಾಗ್ರಾಹಕರು.

## ದೊಡ್ಡಣ್ಣ

ಕನ್ನಡ ಚಿತ್ರರಂಗ ಹಾಗೂ ರಂಗಭೂಮಿಗಳ ಪ್ರತಿಭಾವಂತ ನಟರಲ್ಲೊಬ್ಬರು ದೊಡ್ಡಣ್ಣ. ಕೆಲವೇ ವರ್ಷಗಳಲ್ಲಿ ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಭದ್ರಾವತಿಯ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕು



ಕಾರ್ಖಾನೆಯಲ್ಲಿ ಕಾರ್ಮಿಕರಾಗಿದ್ದ ದೊಡ್ಡಣ್ಣ ಅಭಿನಯಿಸಿದ ಮೊದಲ ಕನ್ನಡ ಚಿತ್ರ 'ಕೂಡಿ ಬಾಳಿದರೆ ಸ್ವರ್ಗ ಸುಖ'. ಖಳನಾಯಕ, ಹಾಸ್ಯ ನಟರಾಗಿ ವಿಶೇಷ ಗಮನ ಸೆಳೆದಿರುವ ಅವರು ಕೆಲವು ಗಂಭೀರ ಪಾತ್ರಗಳಲ್ಲಿಯೂ ಹೃದಯ ಮುಟ್ಟುವಂತೆ ಅಭಿನಯಿಸಿದ್ದಾರೆ. ಅವರದ್ದೇ ಆದ ಅಭಿನಯ ಶೈಲಿ ರೂಢಿಸಿಕೊಂಡವರು. 'ಬೆಳ್ಳಿ ಮೋಡಗಳು' ಚಿತ್ರದಲ್ಲಿನ ಅವರ ಭಾವಪೂರ್ಣ ಅಭಿನಯ ಉಲ್ಲೇಖನಾರ್ಹ. 'ಕಳ್ಳ ಮಳ್ಳ', 'ರಾಣಿ ಮಹಾರಾಣಿ', 'ಹಲೋ ಯಮ', 'ಸಿ.ಬಿ.ಐ.ಶಂಕರ್', 'ರಣಚಂಡಿ', 'ಪ್ರಜಾಶಕ್ತಿ' ಮುಂತಾದ ಯಶಸ್ವಿ ಚಿತ್ರಗಳಲ್ಲಿ ಅಭಿನಯಿಸಿದರು. ಸಿಂಗೀತಂ ಶ್ರೀನಿವಾಸರಾವ್ ನಿರ್ದೇಶನದ 'ಟುವ್ವಿ ಟುವ್ವಿ ಟುವ್ವಿ' ಚಿತ್ರದಲ್ಲಿನ ಅವರ ಅಭಿನಯಕ್ಕಾಗಿ ದೊಡ್ಡಣ್ಣನವರಿಗೆ ೧೯೮೮-೮೯ನೇ ಸಾಲಿನ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ಲಭ್ಯವಾಯಿತು.

## ದೊಡ್ಡರಂಗೇಗೌಡ

ಶಿಕ್ಷಣ, ಸಾಹಿತ್ಯ, ಚಲನಚಿತ್ರ, ಸುಗಮಸಂಗೀತ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಏಕಕಾಲದಲ್ಲಿ ತಮ್ಮ ಪ್ರತಿಭೆಯನ್ನು ತೋರಿಸಿದ ಸೃಜನಶೀಲ ವ್ಯಕ್ತಿ ಪ್ರೊ.ದೊಡ್ಡರಂಗೇಗೌಡ. ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನವರು. ಬೆಂಗಳೂರು ವಿಶ್ವವಿದ್ಯಾಲಯದಿಂದ ಎಂ.ಎ ಪದವಿ ಗಳಿಸಿಕೊಂಡು ಬೆಂಗಳೂರಿನ ಎಸ್.ಎಲ್.ಎನ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. ವಿದ್ಯಾರ್ಥಿ ದೆಸೆಯಿಂದಲೇ ಕಥೆ, ಕವಿತೆ, ವಿಮರ್ಶೆಗಳನ್ನು ಬರೆಯುತ್ತಾ ಬಂದ ಗೌಡರು ಇದುವರೆಗೆ



ನಾಲ್ಕು ನೂರಕ್ಕೂ ಹೆಚ್ಚು ಚಲನಚಿತ್ರ ಗೀತೆಗಳನ್ನು ಬರೆದಿದ್ದಾರೆ. ೧೯೭೭ರಲ್ಲಿ 'ಮಾಗಿಯ ಕನಸು' ಚಿತ್ರದ 'ಬಂದಿದೆ ಬದುಕಿನ ಬಂಗಾರದ ದಿನ...' ಹಾಡಿನ ರಚನೆಯ ಮೂಲಕ ಗೀತ ರಚನಕಾರರಾಗಿ ಚಿತ್ರರಂಗ ಪ್ರವೇಶ. 'ಪರಸಂಗದ ಗೆಂಡೆತಿಮ್ಮ', 'ಬಂಗಾರದ ಜಿಂಕೆ', 'ಪಡುವಾರಹಳ್ಳಿ ಪಾಂಡವರು', 'ಅನುಪಮ', 'ಆಲೆಮನೆ', 'ಅರುಣರಾಗ', 'ಜನುಮದ ಜೋಡಿ' ಮುಂತಾದ ಚಿತ್ರಗಳಿಗೆ ಗೀತೆಗಳನ್ನು ರಚಿಸಿದ್ದಾರೆ. ಗೆಂಡೆತಿಮ್ಮ ಚಿತ್ರದ 'ತೇರನೇರಿ ಅಂಬರದಾಗೆ...' ಜನಮನದಲ್ಲಿ ಶಾಶ್ವತವಾಗಿ ಉಳಿದಿದೆ. ಕರ್ನಾಟಕ ರಾಜ್ಯ ಸರ್ಕಾರದ ವತಿಯಿಂದ ೧೯೮೧-೮೨ರಲ್ಲಿ 'ಆಲೆಮನೆ' ಚಿತ್ರದ 'ನಮ್ಮೂರ ಮಂದಾರ ಹೂವೆ...' ಹಾಡಿಗೆ, ೧೯೯೦-೯೧ರಲ್ಲಿ 'ಗಣೇಶನ ಮದುವೆ' ಚಿತ್ರದ 'ಅನುರಾಗ ತುಂಬಿದಲ್ಲಿ...' ಹಾಡಿಗೆ, ೧೯೯೫-೯೬ರಲ್ಲಿ

ಕಾವ್ಯ' ಚಿತ್ರದ 'ವಂದನೆ ವಂದನೆ...' ಹಾಡಿಗೆ ಹಾಗೂ ೧೯೬೬-೬೭ರಲ್ಲಿ 'ಜನುಮದ ಜೋಡಿ' ಚಿತ್ರದ 'ಕೋಲುಮಂಡೆ ಜಂಗಮದೇವ...' ಹಾಡಿಗೆ. ಹೀಗೆ ಒಟ್ಟು ನಾಲ್ಕು ಬಾರಿ ಪ್ರಶಸ್ತಿ ಪಡೆದಿದ್ದಾರೆ.

## ದೊರೈರಾಜ್ ಬಿ. (೧೯೩೯ ೨೦೦೦)

ದೊರೆ ಭಗವಾನ್ ಖ್ಯಾತಿಯ ನಿರ್ದೇಶಕದ್ವಯರಲ್ಲಿ ಮೊದಲನೆಯವರು. ಮೈಸೂರಿನಲ್ಲಿ ಜನನ. ತಂದೆ ಬಿ.ಬಾಬೂ ನಾಯ್ಡು ಅರಮನೆಯ ಕಲಾಶಾಲೆಯಲ್ಲಿ ಪ್ರಸಿದ್ಧ ಕಲಾವಿದ. ಎಂಟನೇ ವಯಸ್ಸಿನಲ್ಲಿ ಪ್ರೇಮಾನಂದ ವಾದ್ಯ ತಂಡಕ್ಕೆ ಸೇರಿಕೊಂಡು ಸಿತಾರ್ ಹಾಗೂ ತಬಲ ವಾದ್ಯಗಳ ಅಭ್ಯಾಸ ಮಾಡಿದರು. ಚಿತ್ರ, ವ್ಯಂಗ್ಯಚಿತ್ರ ರಚಿಸುವುದರೊಂದಿಗೆ ಕಾಲ್ಚೆಂಡಿನ ಆಟದಲ್ಲೂ ನಿಷ್ಣಾತ. ಛಾಯಾಗ್ರಹಣದತ್ತಲೂ ಆಸಕ್ತಿ. 'ಕೃಷ್ಣಲೀಲಾ' ಚಿತ್ರದ ಛಾಯಾಗ್ರಾಹಕರ ಸಹಾಯಕರಾಗಿ ಸೇರ್ಪಡೆ. ಮಲೆಯಾಳಂನ ಪ್ರೇಮ್‌ನಜೀರ್ ಅಭಿನಯದ ಮೊದಲ ಚಿತ್ರ 'ಶಶಿಧರನ್' ದೊರೆರಾಜ್ ಛಾಯಾಗ್ರಹಣ ನೀಡಿದ ಮೊದಲ ಚಿತ್ರ. 'ಸೋದರಿ' ಚಿತ್ರಕ್ಕೆ ಛಾಯಾಗ್ರಹಣ ನೀಡುವ ಮೂಲಕ ಕನ್ನಡ ಚಿತ್ರರಂಗಕ್ಕೆ ಮರುಪ್ರವೇಶ. ಕನ್ನಡದ ಪ್ರಪ್ರಥಮ ಬಾಂಡ್ ಚಿತ್ರ 'ಜೇಡರ ಬಲೆ' (೧೯೬೮) ಭಗವಾನ್ ಅವರೊಂದಿಗೆ ಸೇರಿ

ನಿರ್ದೇಶಿಸಿದ ಮೊದಲ ಚಿತ್ರ. ಸುಮಾರು ೨೫ ಚಿತ್ರಗಳ ನಿರ್ದೇಶಕ. ಲಕ್ಷ್ಮಿ, ರೇಖಾ ಅವರನ್ನು ಚಿತ್ರಲೋಕಕ್ಕೆ ಪರಿಚಯಿಸಿದ ಖ್ಯಾತಿ ಇವರದು. ಸದಭಿರುಚಿಯ, ಕಾದಂಬರಿ ಆಧಾರಿತ ಚಿತ್ರಗಳನ್ನು ರೂಪಿಸಿದ ಹೆಗ್ಗಳಿಕೆ. ಅನುಪಮ್ ಮೂವೀಸ್ ಲಾಂಛನದಡಿ ಸ್ವಂತವಾಗಿ ಚಿತ್ರಗಳನ್ನು ತಯಾರಿಸಿದರು. ಹಲವಾರು ಚಿತ್ರಗಳಿಗೆ ಪ್ರಶಸ್ತಿ ಪಡೆದುಕೊಂಡ ಇವರಿಗೆ ಸರ್ಕಾರ ೧೯೯೫-೯೬ನೇ ಸಾಲಿನ ಪ್ರತಿಷ್ಠಿತ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ಭಗವಾನ್ ಅವರೊಂದಿಗೆ ಸೇರಿಸಿ ನೀಡಿತು. ೬೧ನೆಯ ವಯಸ್ಸಿನಲ್ಲಿ ನಿಧನರಾದರು.

## ದೊರೆಸ್ವಾಮಿ .ಎಸ್.ವಿ

ದೊರೆ ಎಂದೇ ಪರಿಚಿತರಾಗಿರುವ ತಂತ್ರಜ್ಞ. ೧೯೩೮ರಲ್ಲಿ ಜನನ. 'ಮಹಾತ್ಮಾ ಪಿಕ್ಚರ್ಸ್'ನ ಬಹುತೇಕ ಎಲ್ಲ ಚಿತ್ರಗಳಿಗೂ ಇವರ ನಿರ್ವಹಣೆ, ಸಹನಿರ್ದೇಶನ ಇರುತ್ತಿತ್ತು. ನವಜ್ಯೋತಿ ಸ್ಟುಡಿಯೋದ ಇತಿಹಾಸದ ಜೊತೆಗೇ ಹೆಣೆದುಕೊಂಡ ವೃತ್ತಿಜೀವನ. ಚಲನಚಿತ್ರಕ್ಕೆ ಸಂಬಂಧಿಸಿದ ಎಲ್ಲ ತಾಂತ್ರಿಕ ವಿಭಾಗದಲ್ಲಿ ಪರಿಣತಿ ಇದೆ.

ಟಿ.ಎಸ್.ಬಾಲಕೃಷ್ಣ ಅವರಿಗೆ 'ಡ್ಯೂಪ್' ಆಗಿ, ಕೆಲವು ಚಿತ್ರಗಳಲ್ಲಿ ಪಾತ್ರಧಾರಿಯಾಗಿ ಅಭಿನಯಿಸಿದ್ದಾರೆ. ವಿಠಲಾಚಾರ್ಯರು ಮದರಾಸಿಗೆ ತೆರಳಿದ ಮೇಲೆ ಅವರ ಚಿತ್ರಗಳಿಗೆ ಕೆಲಸ ಮಾಡುತ್ತಿದ್ದರು. ಎಂ.ಎಸ್.ಆಚಾರ್ಯ ಅವರೊಂದಿಗೆ ದೊರೆ ಅವರು ನಿರ್ದೇಶಿಸಿದ 'ಬಿಂದು ಬಿ.ಎ.' ಪೂರ್ತಿಯಾಗಿತ್ತು. ಆದರೆ ತೆರೆಕಾಣಲಿಲ್ಲ.

ಇವರ ನಿರ್ದೇಶನದ 'ಮಹಾಶಿಲ್ಪಿ' ೧೯೬೬ರಲ್ಲಿ ತೆರೆಗೆ ಬಂದಿದೆ. ಕಾದಂಬರಿಕಾರ ಚದುರಂಗರೊಂದಿಗೆ ಸಹನಿರ್ದೇಶಕರಾಗಿ ದುಡಿದಿದ್ದಾರೆ. ರಾಜ್ಯ ಸರ್ಕಾರಕ್ಕೆ ಸಾಕ್ಷ್ಯಚಿತ್ರಗಳನ್ನು ನಿರ್ಮಿಸಿಕೊಟ್ಟಿದ್ದಾರೆ.

## ಧನಂಜಯ.ಎನ್.ಎಸ್

ಖ್ಯಾತ ನಿರ್ದೇಶಕ ಎಸ್.ಆರ್.ಪುಟ್ಟಣ್ಣ ಕಣಗಾಲ್ ಅವರ ಶಿಷ್ಯ ಹಾಗೂ ಖ್ಯಾತ ತಾರೆ ಆರತಿ ಅವರ ಸಹೋದರ. ದತ್ತು ಅವರ ಹುಟ್ಟೂರು ಹಾಸನದ ಅರಗಲ್. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಬಿ.ಎ.ಪದವಿ ಪಡೆದ ಇವರು ಸೋದರಿ ಆರತಿಯವರ ಹಾದಿಯನ್ನೇ ಅನುಸರಿಸಿ ಪುಟ್ಟಣ್ಣ ಕಣಗಾಲ್ ಅವರ ಕೈ ಕೆಳಗೆ ಸಹ ನಿರ್ದೇಶಕರಾಗಿ

'ಕಪ್ಪು-ಬಿಳುಪು' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ನಂತರ 'ಸಾಕ್ಷಾತ್ಕಾರ', 'ಶರಪಂಜರ' ಮೊದಲಾದ ಹಲವು ಚಿತ್ರಗಳಿಗೆ ಸಹನಿರ್ದೇಶಕರಾಗಿ ದುಡಿದರು. ಇವರು 'ಸುಬ್ಬಿ ಸುಬ್ಬಕ್ಕ ಸುವ್ವಾಲಾಲಿ' ಚಿತ್ರದಿಂದ ಸ್ವತಂತ್ರ ನಿರ್ದೇಶಕರಾದರು. 'ಗಂಧರ್ವ ಗಿರಿ', 'ಸತಿ ಸಕ್ಕೂಬಾಯಿ', 'ಪ್ರಜಾಫಲ', 'ಬಳ್ಳಿನಾಗ' ಮುಂತಾದ ಯಶಸ್ವಿ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನ ಪ್ರಿನ್ಸಿಪಾಲರಾಗಿ ಕೆಲವು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು.

## ಧನರಾಜ್.ಪಿ

ಚಿತ್ರರಂಗದ ಕೆಳಹಂತದಲ್ಲಿ ದುಡಿದು ಮೇಲೇರಿ ನಿರ್ಮಾಪಕರಾದವರು. ಧನರಾಜ್ ಸಾಹಸಿಗ. ಚಿತ್ರಕ್ಕೆ ಅವಶ್ಯವೆಂದರೆ

ಧಾರಾಳವಾಗಿ ಹಣ ಖರ್ಚು ಮಾಡುವ, ಆ ನಿಟ್ಟಿನಲ್ಲಿ ಯಾವುದೇ ಹೊಂದಾಣಿಕೆಗೂ ಒಪ್ಪದ ಅವರು ಸ್ನೇಹಿತರೊಡನೆ ಸೇರಿ 'ಸುಂದರಕಾಂಡ' ಚಿತ್ರವನ್ನು ನಿರ್ಮಿಸಿದರು. 'ಶ್ರೀರಾಮಚಂದ್ರ', 'ಕುಂಕುಮ ಸೌಭಾಗ್ಯ', 'ಕರುಳಿನ ಕುಡಿ', 'ಮಕ್ಕಳ ಸಾಕ್ಷಿ', 'ಜೀವನದಿ' ಮೊದಲಾದ ಚಿತ್ರಗಳನ್ನು ಶ್ರೀ ಧನಲಕ್ಷ್ಮಿ ಕ್ರಿಯೇಷನ್ಸ್ ಲಾಂಛನದಲ್ಲಿ ನಿರ್ಮಿಸಿದ್ದಾರೆ.

## ಧೀರೇಂದ್ರ ಗೋಪಾಲ್ (೧೯೪೦-೨೦೦೦)

ಹಾಸನ ಜಿಲ್ಲೆಯ ಹೊಳೇನರಸೀಪುರದ ಜೋಡಿಗುಬ್ಬಿ ಗ್ರಾಮದಲ್ಲಿ ೧೯೪೦ರಲ್ಲಿ ಜನಿಸಿದ ಹೆಚ್.ಎನ್.ಗೋಪಾಲರಾವ್ ಸಿನಿಮಾ ಮಂದಿಗೆ ಧೀರೇಂದ್ರ ಗೋಪಾಲ್ ಆಗಿ ಪರಿಚಿತರು. ಕನ್ನಡ ಚಿತ್ರರಂಗದ ಖಳನಟ ಹಾಗೂ ಹಾಸ್ಯನಟ. ಚಿಕ್ಕಂದಿನಿಂದಲೇ ಏಕಪಾತ್ರಾಭಿನಯ, ಹಾಡು, ನಾಟಕ ಹೀಗೆ ಚಿತ್ರ ಮಾಧ್ಯಮಕ್ಕೆ ಪೂರಕವಾದ ಅಂಶಗಳಲ್ಲಿ ಆಸಕ್ತಿ. ಮನೆ ಬಿಟ್ಟು ಹಲವಾರು ಕಂಪನಿ ನಾಟಕಗಳಲ್ಲಿ ಪಾತ್ರ ವಹಿಸಿದ ಧೀರೇಂದ್ರ ಗೋಪಾಲ್ ಅವರ ಕಂಚಿನ ಕಂಠವೇ ಚಿತ್ರರಂಗಕ್ಕೆ ದಾರಿ ಮಾಡಿತು. ಸಿ.ವಿ.ಶಿವಶಂಕರ್ ರವರು ಚಿಕ್ಕ ಅವಕಾಶ ಕೊಟ್ಟರು. ನಿರ್ದೇಶಕ ಪುಟ್ಟಣ್ಣ ಕಣಗಾಲ್ ರ 'ನಾಗರ ಹಾವು' ಚಿತ್ರ ಗುರುತಿಸುವಂತೆ ಮಾಡಿತು. ಮುಂದೆ ಪುಟ್ಟಣ್ಣ ಕಣಗಾಲ್‌ರ 'ಪಡುವಾರಹಳ್ಳಿ ಪಾಂಡವರು' ಚಿತ್ರದಿಂದ ಜನಪ್ರಿಯರಾದರು. 'ರಂಗನಾಯಕಿ', 'ಅಮರನಾಥ್', 'ಸಿಂಹಜೋಡಿ', ಅತ್ತೆಗೆ ತಕ್ಕ ಸೊಸೆ', 'ರಾಜೇಶ್ವರಿ', 'ನಾಗ ಕಾಳ ಭೈರವ', 'ರೂಪಾಯಿ ರಾಜ', ಗಜಪತಿ

ಗರ್ವಭಂಗ', 'ಮುತ್ತಿನಂಥ ಅತ್ತಿಗೆ', 'ನಾನೊಬ್ಬ ಕಳ್ಳ' ಮೊದಲಾದ ಚಿತ್ರಗಳಲ್ಲಿ ಹಾಸ್ಯ, ಖಳ ಹಾಗೂ ಪೋಷಕ ನಟನಾಗಿ ಪ್ರೇಕ್ಷಕರನ್ನು ಸೆಳೆದ ಈ ಪ್ರತಿಭಾವಂತ, ಕ್ಯಾಸೆಟ್ ಪ್ರಪಂಚದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿದರು. ರಾಜಕಾರಣದಲ್ಲೂ ಸಕ್ರಿಯವಾಗಿ ಭಾಗವಹಿಸಿದರು. ಈ ಪ್ರತಿಭಾವಂತ ನಟ

ಅಸ್ವಸ್ಥತೆಯಿಂದಾಗಿ ೨೦೦೦ನೇ ಇಸವಿಯಲ್ಲಿ ನಿಧನರಾದರು.

## ನಂಜುಂಡ.ಕೆ

೧೯೯೮ರಲ್ಲಿ 'ಕನಸಲೂ ನೀನೆ ಮನಸಲೂ ನೀನೆ' ಚಿತ್ರದಿಂದ ಸ್ವತಂತ್ರ ನಿರ್ದೇಶಕರಾಗಿ ಗಮನ ಸೆಳೆದ ಕೆ.ನಂಜುಂಡ ಕನ್ನಡ ಚಿತ್ರರಂಗದ ಪರಿಣಾಮಕಾರಿ ಸಂಭಾಷಣಾ ಕರ್ತೃಗಳಲ್ಲಿ ಒಬ್ಬರು. 'ಸರ್ವರ್ ಸೋಮಣ್ಣ', 'ಪೊಲೀಸ್ ಪವರ್', 'ಓ ಮಲ್ಲಿಗೆ', 'ಮಾಂಗಲ್ಯಂ ತಂತುನಾನೇನ', 'ನಾನು ನನ್ನ ಹೆಂಡ್ತಿ' ಮುಂತಾದ ಜನಪ್ರಿಯ ಚಿತ್ರಗಳನ್ನೊಳಗೊಂಡು ಇದುವರೆಗೆ ೨೫ಕ್ಕೂ ಹೆಚ್ಚು ಕನ್ನಡ ಚಿತ್ರಗಳಿಗೆ ಸಂಭಾಷಣೆಗಳನ್ನು ಬರೆದಿದ್ದಾರೆ. ತಮಿಳು ಚಿತ್ರರಂಗದಲ್ಲೂ ಶ್ರಮಿಸಿದ್ದಾರೆ. ೧೯೯೦ರಲ್ಲಿ ಎಸ್.ವಿ.ರಾಜೇಂದ್ರಸಿಂಗ್ (ಬಾಬು) ನಿರ್ದೇಶನದ 'ಬಣ್ಣದ ಗೆಜ್ಜೆ' ಚಿತ್ರದ ಸಹಾಯಕ ನಿರ್ದೇಶಕರಾಗಿದ್ದ ನಂಜುಂಡ ಅವರು ನಂತರ ನಾಲ್ಕಾರು ಇತರ

ಚಿತ್ರಗಳಿಗೂ ಸಹಾಯಕ ನಿರ್ದೇಶಕರಾಗಿದ್ದರು. ಕಿರುತೆರೆಯಲ್ಲಿ ಕೂಡ ಕೆಲವು ಧಾರಾವಾಹಿಗಳನ್ನು ನಿರ್ದೇಶಿಸಿದ್ದಾರೆ.

## ನಂಜುಂಡಪ್ಪ.ವೈ

ರಾಜ್ಯ ಸರ್ಕಾರದ ೧೯೯೬-೯೭ರ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ 'ನಾಗರಿಕ'ವನ್ನು ನಿರ್ದೇಶಿಸಿದ ವೈ.ನಂಜುಂಡಪ್ಪನವರು ವಿಜ್ಞಾನ ಪದವೀಧರರು. ಆದರೆ ಚಲನಚಿತ್ರ ಮಾಧ್ಯಮದ ಮೂಲಕ ತಮ್ಮ ಅನಿಸಿಕೆ, ಆದರ್ಶಗಳನ್ನು ಅಭಿವ್ಯಕ್ತಿಗೊಳಿಸುವ ಅವರ ಹಂಬಲ ರಾಜಕಿಶೋರ್ ನಿರ್ದೇಶಿಸಿದ 'ತಾಯಿಯ ಆಸೆ' ಮೂಲಕ ಅವರನ್ನು ಚಿತ್ರರಂಗಕ್ಕೆ ಎಳೆಯಿತು. ಅವರು ಆ ಚಿತ್ರದ ಸಹಾಯಕ ನಿರ್ದೇಶಕರು. ನಂತರ 'ಅವತಾರ ಪುರುಷ' ಮುಂತಾದ ಕೆಲವು ಚಿತ್ರಗಳಿಗೆ ಸಹಾಯಕ ನಿರ್ದೇಶಕರಾಗಿ ದುಡಿದರು. ೧೯೮೩ರಲ್ಲಿ ಬಿಡುಗಡೆಯಾದ 'ಗೆಜ್ಜೆನಾದ' ಚಿತ್ರಕ್ಕೆ ಜಂಟಿ

ನಿರ್ದೇಶಕರಾದರು. ಅವರು ಸ್ವತಂತ್ರವಾಗಿ ನಿರ್ದೇಶಿಸಿದ ಪ್ರಥಮ ಚಿತ್ರ ೧೯೯೭ರಲ್ಲಿ ಬಿಡುಗಡೆಯಾದ 'ಕಳ್ಳ ಬಂದ ಕಳ್ಳ' ಈ ಚಿತ್ರಕ್ಕೆ ಅವರೇ ಕಥೆ, ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ಬರೆದರು. ಕಿರುತೆರೆಯಲ್ಲಿ ಕೂಡ ನಂಜುಂಡಪ್ಪನವರು ಸಕ್ರಿಯವಾಗಿ ತೊಡಗಿಕೊಂಡಿದ್ದಾರೆ.

## ನಂಜುಂಡಶೆಟ್ಟಿ ತಲ್ಲಂ

ವಣಿಕ ವರ್ಗದ ಹಿರಿಯರು, ವರ್ತಕರು, ಮುಂಬೈನ ಪ್ರಮುಖ ಬಟ್ಟೆ ಗಿರಣಿಯಾದ ಬಾಂಬೆ ಡೈಯಿಂಗ್‌ನ ಕರ್ನಾಟಕದ ಏಜಂಟ್ ಆದ ನಂಜುಂಡಶೆಟ್ಟಿ ಅವರು ಹತ್ತು ಹಲವು ಸಂಸ್ಥೆಗಳ ಒಡೆಯರೂ ಆಗಿದ್ದಾರೆ. ದಕ್ಷಿಣ ಭಾರತದಲ್ಲೇ ಪ್ರಪ್ರಥಮವೆಂದು ಗುರುತಿಸಲಾದ ಎಸ್ಕಲೇಟರ್ ಹೊಂದಿದ ಅಭಿನಯ ಚಿತ್ರಮಂದಿರದ ಮಾಲೀಕರು. ಸ್ಟೇಟ್ಸ್ ಥಿಯೇಟರ್‌ನ ಒಡೆಯರು. ವೈಶ್ಯ ಬ್ಯಾಂಕ್‌ನ ನಿರ್ದೇಶಕರೂ ಆಗಿ ಕಾರ್ಯ ನಿರ್ವಹಿಸಿರುತ್ತಾರೆ. 'ಅಲಂಕಾರ್



ಪ್ಲಾಜಾ' ಎಂಬ ಬೃಹತ್ ವ್ಯಾಪಾರ ಸಂಕೀರ್ಣದ ಮಾಲೀಕರು. 'ಕರ್ನಾಟಕ ವಾಣಿಜ್ಯ ಹಾಗೂ ಕೈಗಾರಿಕಾ ಮಹಾ ಮಂಡಳಿ'ಯ (ಎಫ್.ಕೆ.ಸಿ.ಸಿ.ಐ.) ಅಧ್ಯಕ್ಷರು ಆಗಿದ್ದರು. ಚಿತ್ರೋದ್ಯಮ ಹಾಗೂ ವಾಣಿಜ್ಯೋದ್ಯಮ ಎರಡರಲ್ಲಿಯೂ ಅನುಭವಿಗಳು.

## ನಂಜುಂಡಸ್ವಾಮಿ

ಕಲಾನಿರ್ದೇಶಕ. ಕನಕಪುರ ತಾಲ್ಲೂಕಿನ ಕಂಚನಹಳ್ಳಿಯವರು. ಬಡಗಿಯಾಗಿ ಕಂಠೀರವ ಸ್ಟುಡಿಯೋ ಪ್ರವೇಶ. ನಂತರ ೧೯೮೭ರಲ್ಲಿ ಸಹಾಯಕ ಕಲಾ ನಿರ್ದೇಶಕರಾಗಿ ಕಾರ್ಯ ನಿರ್ವಹಣೆ. ಮುಂದೆ 'ಅಸ್ಫೋಟ' ಚಿತ್ರದಿಂದ ಸ್ವತಂತ್ರ ಕಲಾ ನಿರ್ದೇಶಕ ಸ್ಥಾನ. ಸುಮಾರು ೪೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಕಲಾ ನಿರ್ದೇಶನ



ಮಾಡಿರುವ ಇವರು 'ಗಂಗವ್ವ ಗಂಗಮಾಯಿ' ಚಿತ್ರದ ಕಲಾ ನಿರ್ದೇಶನಕ್ಕಾಗಿ ೧೯೯೪-೯೫ರ ರಾಜ್ಯ ಸರ್ಕಾರದ ಅತ್ಯುತ್ತಮ ಕಲಾನಿರ್ದೇಶಕ ಪ್ರಶಸ್ತಿಯನ್ನು ಮತ್ತೊಬ್ಬ ಕಲಾ ನಿರ್ದೇಶಕ ರಮೇಶ್‌ದೇಸಾಯಿ ಅವರೊಂದಿಗೆ ಹಂಚಿಕೊಂಡಿದ್ದಾರೆ.

## ನಂಜುಂಡೇಗೌಡ. ಎಸ್.ಆರ್

ಆರ್.ಎನ್.ಜಯಗೋಪಾಲ್, ಕೆ.ಬಾಲಚಂದರ್, ಪಿ.ಲಂಕೇಶ್ ಮತ್ತು ಟಿ.ಎಸ್.ನಾಗಾಭರಣರೊಂದಿಗೆ ಸಹ ನಿರ್ದೇಶಕರಾಗಿ ದುಡಿದರು. 'ಸಂಕ್ರಾಂತಿ' ಚಿತ್ರದ ಮೂಲಕ ೧೯೯೭ರಲ್ಲಿ ಸ್ವತಂತ್ರ ನಿರ್ದೇಶಕರಾಗಿ ಪರಿಚಿತರಾದರು.



ಎಸ್.ಆರ್.ನಂಜುಂಡೇಗೌಡರು ಗ್ರಾಮೀಣ ಜೀವನದ ಸಮಸ್ಯೆ ಹಾಗೂ ಸಂಕೀರ್ಣತೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡವರು. ವಿದ್ಯಾರ್ಥಿ ದಸೆಯಿಂದಲೇ ಸಾಮಾಜಿಕ ಚಳವಳಿಗಳಲ್ಲಿ ತೊಡಗಿಕೊಂಡವರು ಕೂಡ. ಅವರ 'ಸಂಕ್ರಾಂತಿ' ಹಲವಾರು ಖಾಸಗಿ ಪ್ರಶಸ್ತಿಗಳನ್ನು ಪಡೆದುಕೊಂಡಿತು. ಗೌಡರು ನಂತರ 'ಅಮಾನುಷ', 'ನವತಾರೆ' ಮತ್ತು 'ಅಪೂರ್ವಜೋಡಿ', 'ವೀರಭದ್ರ' ಚಿತ್ರಗಳನ್ನು ನಿರ್ದೇಶಿಸಿದರು. ಇವರ ನಿರ್ದೇಶನದ 'ಚುಕ್ಕಿ ಚಂದ್ರಮ' ತಿರುವನಂತಪುರದ ಅಂತರರಾಷ್ಟ್ರೀಯ ಮಕ್ಕಳ ಚಿತ್ರೋತ್ಸವದಲ್ಲಿ ಭಾಗವಹಿಸಿತ್ತು. ಇವರ ನಿರ್ದೇಶನದ 'ನೋಡು ಬಾ ನಮ್ಮೂರ' ರಾಜ್ಯ ಸರ್ಕಾರದಿಂದ ೧೯೯೭-೯೮ರ ಸಾಲಿನ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿತು. ಕಿರುತೆರೆ ಹಾಗೂ ರಾಜ್ಯ ಸರ್ಕಾರದ ಅನೇಕ ಇಲಾಖೆಗಳಿಗಾಗಿ ಸಾಕ್ಷ್ಯ ಚಿತ್ರಗಳನ್ನು ನಿರ್ಮಿಸಿದ್ದಾರೆ. 'ಸುಪ್ರಭಾತ ಟೆಲಿವಿಷನ್' ಜಾಲದ ಉಪಾಧ್ಯಕ್ಷರಾಗಿ ಕೆಲಸ ನಿರ್ವಹಿಸಿದರು. ರೈತ ಸಂಘಟನೆ, ಬಂಡಾಯ ಸಂಘಟನೆಯಲ್ಲಿ ಇವರದು ಸಕ್ರಿಯ ಪಾತ್ರ. 'ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ'ದಲ್ಲಿ ಪದಾಧಿಕಾರಿಗಳಾಗಿ ಹಾಗೂ ಸಕ್ರಿಯ ಸದಸ್ಯರಾಗಿ ಭಾಗವಹಿಸಿರುತ್ತಾರೆ.

## ನಂದಕುಮಾರ್.ಜಿ

ಕನ್ನಡ ಚಿತ್ರಗಳ ನಿರ್ಮಾಣದಲ್ಲಿ ನಿರತರಾಗಿರುವವರೆಲ್ಲ ಚಿತ್ರೋದ್ಯಮದಲ್ಲಿಯೇ ತೊಡಗಿಕೊಂಡವರಲ್ಲ. ಇತರ ಉದ್ಯಮ, ವ್ಯಾಪಾರಗಳಲ್ಲಿ ತಾವು ಸಂಪಾದಿಸಿದ ಹಣವನ್ನು ಚಲನಚಿತ್ರ ತಯಾರಿಕಗಾಗಿ ಹೂಡಿದವರೂ ಅನೇಕರಿದ್ದಾರೆ. ಅಂತಹವರಲ್ಲೊಬ್ಬರು ಗ್ರಾನೈಟ್ ಮತ್ತು ರಿಯಲ್ ಎಸ್ಟೇಟ್ ವ್ಯವಹಾರದಲ್ಲಿ ಸಾಕಷ್ಟು ಹಣ ಗಳಿಸಿ ಕನ್ನಡ ಚಿತ್ರರಂಗಕ್ಕೆ ಕೆಲವು



ಉತ್ತಮ ಚಿತ್ರಗಳನ್ನು ಕೊಡುಗೆಯಾಗಿತ್ತ ಜಿ.ನಂದಕುಮಾರ್, 'ಚಿನ್ನಾರಿ ಮುತ್ತ' ಅವರು ಪಾಲುದಾರಿಕೆಯಲ್ಲಿ ನಿರ್ಮಿಸಿದ ಪ್ರಥಮ ಚಿತ್ರ. ಉಪೇಕ್ಷೆಗೊಳಗಾದ ಬಾಲಕನೊಬ್ಬ ಸೂಕ್ತ ತರಬೇತಿ, ಪ್ರೋತ್ಸಾಹದ ಮೂಲಕ ಉನ್ನತಿಗೇರುವ ಕಥಾವಸ್ತು ಹೊಂದಿದ ಈ ಚಿತ್ರ ರಾಷ್ಟ್ರ ಹಾಗೂ ರಾಜ್ಯ ಪ್ರಶಸ್ತಿಗಳಿಗೆ ಪಾತ್ರವಾಯಿತು. ಆನಂತರ ಅವರು ಸ್ವತಂತ್ರವಾಗಿ ನಿರ್ಮಿಸಿದ ಸೂಕ್ಷ್ಮ ಸಂವೇದನಾಯ ಚಿತ್ರ 'ಕೊಟ್ರೇಶಿ ಕನಸು' ದಲಿತ ಹುಡುಗರ ಶೈಕ್ಷಣಿಕ ಹಾಗೂ ಸಾಮಾಜಿಕ ಸಮಸ್ಯೆಗಳ ಮೇಲೆ ಪರಿಣಾಮಕಾರಿಯಾಗಿ ಬೆಳಕು ಚೆಲ್ಲಿ ರಾಷ್ಟ್ರ ಪ್ರಶಸ್ತಿಯನ್ನು ಗಳಿಸಿ ರಾಜ್ಯ ಮಟ್ಟದಲ್ಲಿಯೂ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರವೆಂಬ ಪುರಸ್ಕಾರಕ್ಕೆ ಪಾತ್ರವಾಯಿತು. ಅವರ ಮೂರನೆಯ ಚಿತ್ರ 'ಅಮೆರಿಕಾ ಅಮೆರಿಕಾ' ವಿಭಿನ್ನ ಕಥಾವಸ್ತುವನ್ನುಳ್ಳ ಚಿತ್ರ. ಬಾಕ್ಸ್ ಆಫೀಸ್‌ನಲ್ಲಿ ಭರ್ಜರಿ ಯಶಸ್ಸನ್ನು ಗಳಿಸಿದೇ ಅಲ್ಲದೆ ರಾಜ್ಯ ಸರ್ಕಾರದಿಂದ ೧೯೯೬-೯೭ರ ಸಾಲಿನ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿತು. ಅವರ ಮುಂದಿನ ತಯಾರಿಕೆ 'ಹ್ಯಾಟ್ಸ್ ಆಫ್ ಇಂಡಿಯಾ'ಕ್ಕೆ ಅವರು ನಿರ್ದೇಶನದಲ್ಲೂ ಭಾಗಿಯಾದರು. ವಿಶ್ವಪ್ರಿಯ ಕಂಬೈನ್ಸ್ ಇವರ ನಿರ್ಮಾಣ ಸಂಸ್ಥೆ.

## ನಂದಿನಿ

ನಿಜವಾದ ಹೆಸರು ಪ್ರೇಮ. ಖ್ಯಾತ ಉದ್ಯಮಿ ಚಲನಚಿತ್ರೋದ್ಯಮಿ ಎಂ.ಭಕ್ತವತ್ಸಲ ಅವರ ಪತ್ನಿ. ಬೆಂಗಳೂರಿನ ಮಹಾರಾಣಿ ಕಾಲೇಜಿನಿಂದ ಡಿಗ್ರಿ ಪಡೆದುಕೊಂಡ ಪ್ರೇಮಾ ಭಕ್ತವತ್ಸಲ ನಂದಿನಿ ಎಂಬ ಹೆಸರಿನಲ್ಲಿ ಗಿರೀಶ್ ಕಾರ್ನಾಡ್ ನಿರ್ದೇಶಿಸಿದ 'ಕಾಡು' ಚಿತ್ರದಲ್ಲಿ ನಾಯಕಿಯಾಗಿ ಅಭಿನಯಿಸಿದರು. ತಮ್ಮ ಮೊದಲ ಚಿತ್ರದಲ್ಲಿಯೇ ರಾಷ್ಟ್ರ ಮಟ್ಟದಲ್ಲಿ ಅತ್ಯುತ್ತಮ ನಟಿಗೆ ಪ್ರದಾನ ಮಾಡುವ ಊರ್ವಶಿ ಪ್ರಶಸ್ತಿಯನ್ನು ಗಳಿಸಿದರು. ಆದರೆ ನಂದಿನಿ ಆ ನಂತರ ಮತ್ತಾವ ಚಿತ್ರದಲ್ಲಿಯೂ ಅಭಿನಯಿಸಲಿಲ್ಲ. ಪ್ರದರ್ಶಕ ಕಲೆಗಳ



ಬೆಳವಣಿಗೆಯಲ್ಲಿ ತೀವ್ರ ಆಸಕ್ತಿ ಹೊಂದಿರುವ ಈಕೆ ಅಂತರರಾಷ್ಟ್ರೀಯ ಸಂಗೀತ ಅಕಾಡೆಮಿ ಸಂಸ್ಥೆಯ ಸ್ಥಾಪಕರಲ್ಲೊಬ್ಬರು.

## ನಜೀರ್

ಕನ್ನಡ ಚಿತ್ರರಂಗದ ಪ್ರಸಿದ್ಧ ಕಲಾನಿರ್ದೇಶಕ. ಉತ್ತರ ಕನ್ನಡದ ಸಿರ್ಸಿಯಲ್ಲಿ ಹುಟ್ಟಿದರು. ಬಾಲ್ಯದಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ. ಚಿತ್ರಕಲೆಯಲ್ಲಿ ಸರ್ಟಿಫಿಕೇಟ್ ಪಡೆದು ಮದರಾಸಿನ ಫಿಲಂ ಸೆಂಟರ್ ಸ್ಟುಡಿಯೋ ಸೇರಿದರು. ಸಿದ್ದಲಿಂಗಯ್ಯ, ಆರ್.ಲಕ್ಷ್ಮಣ್ ಅವರುಗಳ



ಪ್ರೋತ್ಸಾಹದಿಂದ 'ದೂರದ ಬೆಟ್ಟ' ಚಿತ್ರಕ್ಕೆ ಕಲಾ ನಿರ್ದೇಶಕರಾಗಿ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದರು. 'ಭೂತಯ್ಯನ ಮಗ ಅಯ್ಯು', 'ಬಂಗಾರದ ಪಂಜರ', 'ಜೀವನ ಚಕ್ರ', 'ಬಂಧನ', 'ರಣಧೀರ', 'ಹೇಮಾವತಿ', 'ಜೀವನಚೈತ್ರ' ಮೊದಲಾದ ಚಿತ್ರಗಳ ಕಲಾನಿರ್ದೇಶನ ಮಾಡಿದರು. 'ಸಿಪಾಯಿ' ಚಿತ್ರದ ಕಲಾ ನಿರ್ದೇಶನಕ್ಕಾಗಿ ನಜೀರ್, ರಾಜ್ಯ ಸರ್ಕಾರದ ೧೯೯೫-೯೬ನೇ ಸಾಲಿನ ಅತ್ಯುತ್ತಮ ಕಲಾ ನಿರ್ದೇಶಕ ಪ್ರಶಸ್ತಿಯನ್ನು ಮತ್ತೊಬ್ಬ ಕಲಾ ನಿರ್ದೇಶಕ 'ಇಸ್ಮಾಯಿಲ್' ಅವರೊಡನೆ ಹಂಚಿಕೊಂಡಿದ್ದಾರೆ.

## ನರಸಯ್ಯ.ಕೆ

ಪ್ರಶಸ್ತಿ ವಿಜೇತ ಸಂಕಲನಕಾರ. ಕಡಪ



ಜಿಲ್ಲೆಯ ವೀರಾರೆಡ್ಡಿಯವರ ಮಗ. ಉದ್ಯೋಗ ಅರಸಿ ಬೆಂಗಳೂರಿಗೆ ಬಂದು ಬಂಡಾರು ಗಿರಿಬಾಬು ಅವರ 'ಮನಸ್ಸಿನಂತೆ ಮಾಂಗಲ್ಯ' ಚಿತ್ರದಲ್ಲಿ ಪ್ರೊಡಕ್ಷನ್ ಸಹಾಯಕನಾಗಿ ಚಿತ್ರರಂಗ ಪ್ರವೇಶ. ನಂತರ ಆರ್. ರಾಜಾನಂದರೆಡ್ಡಿ ಅವರ ಕೈ ಕೆಳಗ ಸಂಕಲನಕಾರ್ಯದಲ್ಲಿ ತರಬೇತಿ. 'ನಂಬರ್ ಐದು ಎಕ್ಕ' ಚಿತ್ರದಿಂದ ಸ್ವತಂತ್ರ ಸಂಕಲನಕಾರರಾಗಿ ಕಾರ್ಯ ನಿರ್ವಹಣೆ. ನಂತರ ಸುಮಾರು ೧೦೦ ಚಿತ್ರಗಳಿಗ ಸಂಕಲನಕಾರರಾಗಿ ಕಾರ್ಯನಿರ್ವಹಣೆ.

'ರಾಜೇಶ್ವರಿ', 'ರಾಜ ಮಹಾರಾಜ', 'ಕಿತ್ತೂರಿನ ಹುಲಿ', 'ಪೋಲೀಸನ ಹೆಂಡ್ತಿ', 'ಚಕ್ರವ್ಯೂಹ', 'ಆತಂಕ' ಮೊದಲಾದವು ಇವರ ಸಂಕಲನದ ಚಿತ್ರಗಳು. 'ಆತಂಕ' ಚಿತ್ರದಲ್ಲಿನ ಸಂಕಲನಕ್ಕಾಗಿ ೧೯೯೨-೯೩ರ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ.

### ನರಸಿಂಹನ್.ಟಿ.ಎನ್

ರಂಗಭೂಮಿ ಹಿನ್ನೆಲೆಯ ಟಿ.ಎನ್.ನರಸಿಂಹನ್ ಸಿನಿಮಾರಂಗಕ್ಕೂ ಬಂದು ಸೈ ಎನಿಸಿಕೊಂಡ ಪ್ರತಿಭಾವಂತ. ನಾಟಕಕಾರ, ಚಿತ್ರಸಾಹಿತಿ, ನಿರ್ದೇಶಕ ಹೀಗೆ ಬಹುಮುಖ ಪ್ರತಿಭೆಯ ನರಸಿಂಹನ್ ಇಂಜಿನಿಯರಿಂಗ್ ಪದವೀಧರರು. ಸಂಗೀತ ಪ್ರೇಮಿಯಾದ ಅವರು ರಂಗಭೂಮಿಯಲ್ಲಿ ಹಲವಾರು ಪ್ರಯೋಗಗಳನ್ನು ಮಾಡಿದ್ದಾರೆ. ೧೯೭೮ರಲ್ಲಿ ಕಟ್ಟೆ ರಾಮಚಂದ್ರ ಅವರ 'ಅರಿವು' ಚಿತ್ರಕ್ಕೆ ಚಿತ್ರನಾಟಕ ಬರೆಯುವುದರ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಮಿಂಚಿನ ಓಟ', 'ಗೀತಾ', 'ನೋಡಿ ಸ್ವಾಮಿ ನಾವಿರೋದು ಹೀಗೆ', 'ಜನ್ಮ ಜನ್ಮದ ಅನುಬಂಧ' ಮುಂತಾದ ಚಿತ್ರಗಳಿಗೆ ಸಂಭಾಷಣೆಯನ್ನು ಬರೆದರು. 'ತ್ರಿಶೂಲ', 'ದಂಗೆ', '೨೨ ಮಾವಳ್ಳಿ ಸರ್ಕಲ್'



'ಮೀನಾಕ್ಷಿ ಮನೆ ಮೇಷ್ಟ್ರು' ಕಥೆಗಳನ್ನು ಚಲನಚಿತ್ರ ಮಾಧ್ಯಮಕ್ಕೆ ಅಳವಡಿಸಿದರು. ಹಲವು ಚಿತ್ರಗಳ ಸಹನಿರ್ದೇಶನದ ಹೊಣೆಯನ್ನೂ ಹೊತ್ತರು. ರಾಜಕುಮಾರ್ ಅವರ ಚಿತ್ರಗಳ ನಿರ್ಮಾಣದಲ್ಲಿ ಕೆಲಕಾಲ ಸಕ್ರಿಯ ಪಾತ್ರವಹಿಸಿದ್ದರು. 'ಪರಶುರಾಮ' ಮೊದಲಾದ ಚಿತ್ರಗಳ ಹಿಂದೆ ನರಸಿಂಹನ್ ಪಾತ್ರ ಬಹಳ ಇತ್ತು. ಎಂ.ಎಸ್.ರಾಜಶೇಖರ್ ಅವರ ನಿರ್ಮಾಣ, ನಿರ್ದೇಶನದ ಚಿತ್ರಗಳಿಗೂ ನರಸಿಂಹನ್ ಸಾಹಿತ್ಯ ರಚನೆ, ಆಯ್ಕೆಗಳಿಗೆ ನೆರವಾದವರು. ಹತ್ತಾರು ಚಟುವಟಿಕೆ, ಕಿರುತೆರೆಯ ಕೆಲಸ ಹೀಗೆ ಸದಾ ಕಾರ್ಯಶೀಲರಾಗಿದ್ದ ಟಿ.ಎನ್.ನರಸಿಂಹನ್ ರಸ್ತೆ ಅಪಘಾತವೊಂದರಲ್ಲಿ ಮೃತರಾದರು.

### ನರಸಿಂಹನ್.ಟಿ.ಎಸ್

ತಮ್ಮ ಹಿಂದಿ ಮತ್ತು ಇಂಗ್ಲಿಷ್ ದೂರದರ್ಶನ ಧಾರಾವಾಹಿ 'ಮಾಲ್ಗುಡಿ ಡೇಸ್'ನಿಂದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದ ನಿರ್ಮಾತೃ ಟಿ.ಎಸ್.ನರಸಿಂಹನ್ ಕನ್ನಡ ಚಿತ್ರರಂಗಕ್ಕೆ ಕೆಲವು ಉತ್ತಮ ಅಭಿರುಚಿಯ ಚಿತ್ರಗಳನ್ನು ಕಾಣಿಕೆಯಾಗಿತ್ತವರು. ದೂರಸಂಪರ್ಕ ಇಲಾಖೆಯಲ್ಲಿ ಉನ್ನತ ಅಧಿಕಾರಿಯಾಗಿದ್ದವರು. ಕುಟುಂಬ



ನಡೆಸುತ್ತಿದ್ದ ಬಟ್ಟೆ ಸಗಟು ವ್ಯಾಪಾರವನ್ನು ನೋಡಿಕೊಳ್ಳಲು ಕೆಲಸಕ್ಕೆ ರಾಜೀನಾಮೆಯಿತ್ತು ಬಂದ ನರಸಿಂಹನ್ ಚಿತ್ರರಂಗದತ್ತ ಆಕರ್ಷಿತರಾಗಿ ವೇಶ್ಯಾ ಸಮಸ್ಯೆಯನ್ನು ಆಧರಿಸಿದ 'ಕೆಸರಿನ ಕಮಲ' ಚಿತ್ರವನ್ನು ಪ್ರಥಮವಾಗಿ ನಿರ್ಮಿಸಿದರು. ಈ ಚಿತ್ರ ತೆರೆಗೆ ಬಂದಿದ್ದು ೧೯೭೩ರಲ್ಲಿ. ನಂತರ ಇವರು ತಯಾರಿಸಿದ ಮಕ್ಕಳ ಚಿತ್ರ 'ದಂಗೆಯೆದ್ದ ಮಕ್ಕಳು' (೧೯೭೮) ಅತ್ಯುತ್ತಮ ಮಕ್ಕಳ ಚಿತ್ರವೆಂದು ರಾಷ್ಟ್ರಪ್ರಶಸ್ತಿ ಗಳಿಸುವುದರ ಜೊತೆಗೆ ಕೆಲವು ಅಂತರರಾಷ್ಟ್ರೀಯ ಮಕ್ಕಳ ಚಲನಚಿತ್ರೋತ್ಸವಗಳಲ್ಲಿಯೂ ಪ್ರಶಂಸೆ ಗಳಿಸಿತು. 'ಬಂಗಾರದ ಜಿಂಕೆ'(೧೯೮೦) ಮತ್ತು 'ಬ್ಯಾಂಕರ್ ಮಾರ್ಗಯ್ಯ' (೧೯೮೩) ಇವರು ತಯಾರಿಸಿದ ಇತರ ಚಿತ್ರಗಳು. 'ಬ್ಯಾಂಕರ್ ಮಾರ್ಗಯ್ಯ' ಆರ್.ಕೆ.ನಾರಾಯಣ್‌ರವರ ಪ್ರಸಿದ್ಧ ಕಾದಂಬರಿ 'ಫೈನಾನ್ಶಿಯಲ್ ಎಕ್ಸ್‌ಪರ್ಟ್' ಆಧರಿಸಿ ಟಿ.ಎಸ್.ನಾಗಾಭರಣ ನಿರ್ದೇಶಿಸಿದ ಚಿತ್ರ. ಅದು ರಾಷ್ಟ್ರಮಟ್ಟದಲ್ಲಿ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಗಳಿಸಿತು. ನಂತರ ಕಿರುತೆರೆಯಿಂದ ಆಕರ್ಷಿತರಾದ ನರಸಿಂಹನ್ ಸಿ.ವಿ.ಎಲ್ ಶಾಸ್ತ್ರಿಗಳ ನೆರವಿನೊಂದಿಗೆ 'ಮಾಲ್ಗುಡಿ ಡೇಸ್' ಮಾತ್ರವಲ್ಲದೆ ರಾಷ್ಟ್ರಮಟ್ಟದಲ್ಲಿ 'ತೆನಾಲಿ ರಾಮ' ಮತ್ತು 'ಸ್ಟೋನ್ ಬಾಯ್' ಧಾರಾವಾಹಿಗಳನ್ನೂ ನಿರ್ಮಿಸಿದರು. ನರಸಿಂಹನ್ ನಿರ್ಮಿಸಿದ ಮಕ್ಕಳ ಚಿತ್ರ 'ನಾವಿದ್ದೀವಿ ಎಚ್ಚರಿಕೆ' ೧೯೯೫-೯೬ರಲ್ಲಿ ರಾಜ್ಯ ಸರ್ಕಾರದಿಂದ ಅತ್ಯುತ್ತಮ ಮಕ್ಕಳ ಚಿತ್ರವೆಂದು ಪ್ರಶಸ್ತಿ ಪಡೆಯಿತು. ನರಸಿಂಹನ್‌ರವರು ಕೇಂದ್ರ ಮಕ್ಕಳ ಚಲನಚಿತ್ರ ಸಂಸ್ಥೆಯ ನಿರ್ದೇಶಕರಲ್ಲೊಬ್ಬರಾಗಿ ಬಹಳ ಕಾಲ ದುಡಿದರು. ಕೇಂದ್ರ ಸೆನ್ಸಾರ್ ಮಂಡಳಿ, ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮ ಮತ್ತು ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್ ಸಂಸ್ಥೆಗಳಲ್ಲಿ ಸದಸ್ಯರಾಗಿ,ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ಈಗಲೂ ಅನೇಕ ಅಂತರರಾಷ್ಟ್ರೀಯ ಟೆಲಿವಿಷನ್ ಜಾಲಗಳೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದಾರೆ. 'ಜ್ಯೋತಿ' ಸಂಕಲನ ಕೇಂದ್ರವನ್ನು ಸ್ಥಾಪಿಸಿ ಹಲವು ಚಿತ್ರಗಳ ಸಂಕಲನ ಕಾರ್ಯಕ್ಕೆ ನೆರವಾದ ಇವರು ಅಂತರರಾಷ್ಟ್ರೀಯ ಮಟ್ಟದಲ್ಲಿ ಕನ್ನಡ ಚಿತ್ರಗಳನ್ನು ಕೊಂಡೊಯ್ಯಲು ಮಾರುಕಟ್ಟೆಯನ್ನು ಸ್ಥಾಪಿಸಲು ಶ್ರಮಿಸಿದರು. ಮಕ್ಕಳ ಚಿತ್ರ ಸಮುಚ್ಚಯ ಸ್ಥಾಪನೆಗ ಸಾಕಷ್ಟು ಶ್ರಮಿಸಿದರು.

### ನರಸಿಂಹಮೂರ್ತಿ.ಎ.ಸಿ

ವಿದ್ಯಾರ್ಥಿದೆಸೆಯಿಂದಲೂ ಹವ್ಯಾಸಿ ರಂಗಭೂಮಿಯ ಬಗ್ಗೆ ಅತೀವ ಆಸಕ್ತಿ. ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್ (ಎ.ಡಿ.ಎ) ಜೊಂದಿಗೆ ಒಡನಾಟ. ಹಲವು ನಾಟಕಗಳಲ್ಲಿ ಹಾಗೂ ರಂಗಭೂಮಿಯ ಕಲಾವಿದರೊಂದಿಗ ಸಹಯೋಗ. ಹೀಗೆ ಕಲೆಯೊಂದಿಗ ಎ.ಸಿ.ನರಸಿಂಹಮೂರ್ತಿಯವರ ನಂಟು. ಕರ್ನಾಟಕದ ಅತ್ಯಧಿಕ ಪ್ರಸಾರದ ಪತ್ರಿಕೆಗಳೆನಿಸಿದ ಡೆಕ್ಕನ್ ಹೆರಾಲ್ಡ್ ಮತ್ತು ಪ್ರಜಾವಾಣಿ ಪತ್ರಿಕಗಳಲ್ಲಿನ ಜಾಹಿರಾತಿನ ಸ್ವಾಮ್ಯ ಪಡೆದು ವಿಜಯಾ ಪಬ್ಲಿಸಿಟೀಸ್ ಜಾಹಿರಾತು ಸಂಸ್ಥೆಯ ಸ್ಥಾಪನೆ. ೧೯೫೬ರಲ್ಲಿ ಪ್ರಕಾಶ್ ಪಿಕ್ಚರ್ಸ್ ಸಂಸ್ಥೆಯ ಎನ್.ಭಕ್ತವತ್ಸಲ ಅವರ ಜೊತೆಗೂಡಿ ಉದಯ ಪ್ರೊಡಕ್ಷನ್ಸ್ ಚಿತ್ರನಿರ್ಮಾಣ ಸಂಸ್ಥೆಯನ್ನು ಸ್ಥಾಪಿಸಿ 'ಭಾಗ್ಯೋದಯ' ಕನ್ನಡ ಚಿತ್ರದ ನಿರ್ಮಾಣ; ಬಿಡುಗಡೆ. ಉದಯಕುಮಾರ್ ಅವರನ್ನು ಪರಿಚಯಿಸಿದ ಹೆಗ್ಗಳಿಕೆ. ನಂತರ ಶೈಲಶ್ರೀ ಪ್ರೊಡಕ್ಷನ್ಸ್-ಚಿತ್ರನಿರ್ಮಾಣ ಸಂಸ್ಥೆಯನ್ನು ಸ್ವಂತವಾಗಿ ಪ್ರಾರಂಭಿಸಿ, ಕೃಷ್ಣಮೂರ್ತಿ ಪುರಾಣಿಕರ 'ಧರ್ಮದೇವತೆ' ಕಾದಂಬರಿಯನ್ನು 'ಕರುಣೆಯೇ ಕುಟುಂಬದ ಕಣ್ಣು' ಕನ್ನಡ ಚಿತ್ರವನ್ನಾಗಿಸುವ ಮೂಲಕ ೧೯೬೨ರಲ್ಲಿ ಕಾದಂಬರಿ ಆಧರಿಸಿದ ಚಿತ್ರಸೃಷ್ಟಿಗೆ ನಾಂದಿ ಹಾಡಿದರು. ತಮ್ಮ ಎ.ಡಿ.ಎ. ತಂಡದ ಗೆಳೆಯರಾದ ಚಲನಚಿತ್ರ ತಾಂತ್ರಿಕತಜ್ಞ ಟಿ.ದ್ವಾರಕಾನಾಥ್ ಅವರ



ಜೊತೆಗೂಡಿ ಕೃಷ್ಣೋದಯ ಚಿತ್ರನಿರ್ಮಾಣ ಸಂಸ್ಥೆಯನ್ನು ಆರಂಭಿಸಿದರು. ಎ.ಸಿ.ನರಸಿಂಹಮೂರ್ತಿ ಚಿತ್ರ ನಿರ್ಮಾಣದೊಂದಿಗೆ ನಿರ್ದೇಶನದಲ್ಲಿಯೂ ತೊಡಗಿ ಎಸ್.ಕೆ.ಭಗವಾನ್, ಟಿ.ದ್ವಾರಕಾನಾಥ್‌ರೊಂದಿಗ ಚಿತ್ರಗಳನ್ನು ನಿರ್ದೇಶಿಸಿದರು. 'ಸಂಧ್ಯಾರಾಗ' (೧೯೬೬-೬೭ರ ರಾಜ್ಯ ಸರ್ಕಾರದ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದಿದೆ), 'ರಾಜದುರ್ಗದ ರಹಸ್ಯ' (೧೯೬೭), 'ಆನಂದಕಂದ' (೧೯೬೮), 'ಕುಲವಧು' (೧೯೬೩), 'ಕಲಾವತಿ' (೧೯೬೪), 'ಕವಲೆರಡು ಕುಲವೊಂದು' (೧೯೬೫) - ಇವು ಎ.ಸಿ.ಎನ್. ಅವರ ಚಿತ್ರಗಳಲ್ಲಿ ಮುಖ್ಯವಾದವು.

### ನರಸಿಂಹರಾಜು.ಟಿ.ಆರ್ (೧೯೨೬-೭೯)

ಕನ್ನಡ ಚಿತ್ರರಂಗದಲ್ಲಿ ಸಹಜ ಹಾಸ್ಯದ ಛಾಪನ್ನು ಮೂಡಿಸಿದ ಕಲಾವಿದ. ತುಮಕೂರು ಜಿಲ್ಲೆ ತಿಪಟೂರಿನಲ್ಲಿ ಜನನ.



ತಂದೆ ರಾಮರಾಜು. ಸಿ.ಬಿ.ಮಲ್ಲಪ್ಪನವರ ಶ್ರೀ ಚಂದ್ರಮೌಳೇಶ್ವರ ನಾಟಕ ಮಂಡಲಿ ಮೂಲಕ ರಂಗಭೂಮಿ ಪ್ರವೇಶ. ಶಾಲೆಯ ಮೆಟ್ಟಿಲನ್ನೇ ಹತ್ತದೇ ಇವರು ಅನಂತರ ಅಕ್ಷರ ಕಲಿತವರು. ಸ್ವಂತ ನಾಟಕ ಸಂಸ್ಥೆ ಕಟ್ಟಿ, ನಂತರ ಹಲವಾರು ನಾಟಕ ಸಂಸ್ಥೆಗಳಲ್ಲಿ ಅಭಿನಯಿಸಿ ಕೊನೆಗ ಗುಬ್ಬಿ ಕಂಪನಿ ಸೇರಿದರು. ಗುಬ್ಬಿ ಸಂಸ್ಥೆ ತೆರೆಗ ತಂದ 'ಬೇಡರ ಕಣ್ಣಪ್ಪ' (೧೯೫೪) ಚಿತ್ರದ ಮೂಲಕ ಚಲನಚಿತ್ರರಂಗ ಪ್ರವೇಶಿಸಿದರು. ಕನ್ನಡ ಚಲನಚಿತ್ರಗಳಲ್ಲಿ ನಾಯಕನಷ್ಟೇಅಲ್ಲ ಹಾಸ್ಯನಟನೂ ಪ್ರಮುಖ ಎಂಬುದನ್ನು ಸಾಧಿಸಿ ತೋರಿಸಿದವರು. 'ನಕ್ಕರೆ ಅದೇ ಸ್ವರ್ಗ' ಅವರ ೧೦೦ನೆಯ ಚಿತ್ರ. 'ಬೆಂಗಳೂರು ಮೈಲ್', 'ಸ್ಕೂಲ್ ಮಾಸ್ಟರ್', 'ರತ್ನ ಮಂಜರಿ', 'ಸತ್ಯ ಹರಿಶ್ಚಂದ್ರ', 'ಹೇಮರೆಡ್ಡಿ ಮಲ್ಲಮ್ಮ', 'ರಣಧೀರ ಕಂಠೀರವ', 'ಮಾರ್ಗದರ್ಶಿ', 'ಶ್ರೀ ಕೃಷ್ಣದೇವರಾಯ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ರಾಜಕುಮಾರ್, ಬಾಲಕೃಷ್ಣ, ಜಿ.ವಿ.ಅಯ್ಯರ್ ಅವರೊಂದಿಗ 'ರಣಧೀರ ಕಂಠೀರವ' ಚಿತ್ರವನ್ನು ನಿರ್ಮಿಸಿದರು. 'ಪ್ರೊ|ಹುಚ್ಚೂರಾಯ' ಇವರು ನಿರ್ಮಿಸಿದ ಚಿತ್ರ. ನಾಯಕರಾಗಿ 'ಹೇಮರೆಡ್ಡಿ ಮಲ್ಲಮ್ಮ', 'ಬ್ಲಾಕ್ ಮಾರ್ಕೆಟ್', 'ಪ್ರೊ.ಹುಚ್ಚುರಾಯ', 'ನಕ್ಕರೆ ಅದೇ ಸ್ವರ್ಗ' ಚಿತ್ರದಲ್ಲಿ ಅಭಿನಯಿಸಿದ ನರಸಿಂಹರಾಜು ಸುಮಾರು ೧೭೦ ಚಿತ್ರಗಳಲ್ಲಿ ಅಭಿನಯಿಸಿದರು. ಆರೋಗ್ಯಕರ ಹಾಸ್ಯ ಸನ್ನಿವೇಶಗಳ ನೆನಪನ್ನು ನರಸಿಂಹರಾಜು ಕನ್ನಡಿಗರಿಗೆ ಬಿಟ್ಟು ಹೋಗಿದ್ದಾರೆ. ಕಲಾರಸಿಕರು ಮೆಚ್ಚಿ ಇವರಿಗೆ 'ಹಾಸ್ಯ ಚಕ್ರವರ್ತಿ' ಎಂಬ ಬಿರುದನ್ನು ನೀಡಿ ಗೌರವಿಸಿದ್ದಾರೆ. ಇವರ ಪುತ್ರಿ ಸುಧಾ ನರಸಿಂಹರಾಜು ಕಿರುತೆರೆ ಕಲಾವಿದೆ. ನರಸಿಂಹರಾಜು ತಮ್ಮ ೫೩ ನೆಯ ವಯಸ್ಸಿನಲ್ಲಿ ನಿಧನರಾದರು.

### ನರಸಿಂಹರಾಜು ಜೂನಿಯರ್

ಖ್ಯಾತ ಹಾಸ್ಯನಟ ನರಸಿಂಹರಾಜು ಅವರನ್ನೇ ಹೋಲುವ ದಂತಪಂಕ್ತಿಯನ್ನು ಹೊಂದಿರುವುದರಿಂದ ಜೂನಿಯರ್



ನರಸಿಂಹರಾಜು ಎಂಬ ಹೆಸರನ್ನೇ ಇಟ್ಟುಕೊಂಡ ಈ ಕಲಾವಿದ ೧೯೮೦ರಲ್ಲಿ ವೈ.ಆರ್.ಸ್ವಾಮಿ ನಿರ್ದೇಶಿಸಿದ 'ಪಕ್ಕಾ ಕಳ್ಳ' ಚಿತ್ರದಿಂದ ಚಿತ್ರರಂಗವನ್ನು ಪ್ರವೇಶಿಸಿ ಇದುವರೆಗೆ ೧೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಪೋಷಕ ನಟನಾಗಿ ಅಭಿನಯಿಸಿದ್ದಾರೆ. 'ಪ್ರೇಮ ಪಲ್ಲವಿ', 'ಹೊಸ ತೀರ್ಪು', 'ಪ್ರಾಯ ಪ್ರಾಯ ಪ್ರಾಯ', 'ಗೌರಿ ಕಲ್ಯಾಣ', 'ಅನುರಾಗ ಅರಳಿತು', 'ರಾಯರು ಬಂದರು ಮಾವನ ಮನೆಗೆ' ಮೊದಲಾದವು ಹೆಸರಿಸಬಹುದಾದ ಚಿತ್ರಗಳು. ಖ್ಯಾತ ನಟ-ನಿರ್ಮಾಪಕ-ನಿರ್ದೇಶಕ ದ್ವಾರಕೀಶ್‌ರವರ ಅತ್ಮೀಯರಾಗಿ ಅವರ ವೃತ್ತಿ ಚಟುವಟಿಕೆಗಳಲ್ಲಿ ಬಲಗೈಯಾಗಿರುವ ಜೂನಿಯರ್ ನರಸಿಂಹರಾಜು ಇದುವರೆಗೆ ೨೫ಕ್ಕೂ ಹೆಚ್ಚು ಚಿತ್ರಗಳಿಗೆ ನಿರ್ಮಾಣ ನಿರ್ವಾಹಕರಾಗಿಯೂ ದುಡಿದಿದ್ದಾರೆ. ಅವುಗಳಲ್ಲಿ ಕೆಲವು ತೆಲುಗು ಚಿತ್ರಗಳು. ಅವರು 'ಇಬ್ಬರು ಹೆಂಡಿರ ಮುದ್ದಿನ ಪೊಲೀಸ್', 'ಎದುರು ಮನೇಲಿ ಗಂಡ, ಪಕ್ಕದ್ಮನೇಲಿ ಹೆಂಡ್ತಿ' ಮತ್ತು 'ಸೂರಿ' ಚಿತ್ರಗಳ ಸಹನಿರ್ಮಾಪಕರು. ಕಿರುತೆರೆಯ ಕೆಲವು ಧಾರಾವಾಹಿಗಳಲ್ಲಿಯೂ ಅಭಿನಯಿಸಿದ್ದಾರೆ.

## ನರಹರಿಶಾಸ್ತ್ರಿ ಬೆಳ್ಳಾವೆ (೧೮೮೨-೧೯೬೧)

ತುಮಕೂರು ಜಿಲ್ಲೆಯ ಬೆಳ್ಳಾವೆ ಇವರ ಸ್ಥಳ. ಜನನ : ೨೧, ಸೆಪ್ಟೆಂಬರ್ ೧೮೮೨. ವೃತ್ತಿಯಲ್ಲಿ ಶಿಕ್ಷಕರು. ಸಂಸ್ಕೃತ ಪಂಡಿತರು. ನಾಟಕಕಾರರಾಗಿ ರಂಗಭೂಮಿಯಲ್ಲಿ ಹೆಸರಾದವರು. ಇವರ 'ರಾಜಭಕ್ತಿ' ಕಾವ್ಯಕ್ಕೆ ಮೈಸೂರಿನ ಅರಸರ ಮನ್ನಣೆ ದೊರೆತಿತ್ತು.



ಬಹುತೇಕ ಗುಬ್ಬಿ ಕಂಪೆನಿಯಲ್ಲಿ ನಾಟಕ ರಚಿಸಿ ಅಭಿನಯವಲ್ಲಿ ತರಬೇತಿ ನೀಡುತ್ತಿದ್ದರು. ಮೊದಲ ವಾಕ್ಚಿತ್ರ 'ಸುಲೋಚನಾ'ದಿಂದ ಅರಂಭಿಸಿ ಕನ್ನಡದ ಹಲವು ಚಿತ್ರಗಳಿಗೆ ಕಥೆ, ಚಿತ್ರಕಥೆ, ಸಂಭಾಷಣೆ, ಗೀತೆಗಳನ್ನು ರಚಿಸಿದ್ದಾರೆ. ಕನ್ನಡ ಚಿತ್ರ ಸಾಹಿತ್ಯ ಕ್ಷೇತ್ರದ ಪ್ರಥಮರು. 'ಸದಾರಮೆ', 'ಪುರಂದರದಾಸ', 'ಭಕ್ತ ಪ್ರಹ್ಲಾದ', 'ಸುಭದ್ರಾ', 'ಹೇಮರೆಡ್ಡಿ ಮಲ್ಲಮ್ಮ' ಚಿತ್ರಗಳಿಗೆ ಸಾಹಿತ್ಯ ನೀಡಿ, 'ಭಕ್ತ ಸುದಾಮ'ದಲ್ಲಿ ಸುದಾಮನಾಗಿ ಅಭಿನಯಿಸಿದ್ದರು. ಒಂದು ಕಥೆಯ ಸನ್ನಿವೇಶಗಳನ್ನು ಎರಡು, ಮೂರು ವಾಹಿನಿಗಳಲ್ಲಿ ಹರಿಯಗೊಟ್ಟು ಪರಾಕಾಷ್ಠೆಯ ಹೊತ್ತಿಗೆ ಎಲ್ಲವನ್ನೂ ಒಟ್ಟಾಗಿ ಒಂದು ಬಂಧಕ್ಕೆ ತರುವ ಅವರ ಸಂವಿಧಾನ ಚಲನಚಿತ್ರಕ್ಕೆ ಸೊಗಸಾಗಿ ಒಗ್ಗಿಕೊಳ್ಳುತ್ತಿತ್ತು. ಅವರ ಶಬ್ದ ಸಂಪತ್ತು ಗೀತೆಗಳನ್ನು ಕೆಲವು ಕ್ಷಣಗಳಲ್ಲಿ ರಚಿಸಿಕೊಡುವಷ್ಟು ಶಕ್ತವಾಗಿತ್ತು. ರಂಗಭೂಮಿಯ ಖ್ಯಾತ ಮಹಮ್ಮದ್ ಪೀರ್ ಅವರಿಗಾಗಿ ಒಂದೇ ರಾತ್ರಿಯಲ್ಲಿ 'ಭಕ್ತ ಮಾರ್ಕಂಡೇಯ' ನಾಟಕವನ್ನು ಬರೆದು ಮುಗಿಸಿದ ಶಾಸ್ತ್ರಿಗಳು ಪೀರ್ ಸಾಹೇಬರನ್ನು ನಿಬ್ಬೆರಗಾಗಿಸಿದ ನಿದರ್ಶನವೂ ಇದೆ. ಶಾಸ್ತ್ರಿಗಳು ತಮ್ಮ ೭೯ನೆಯ ವಯಸ್ಸಿನಲ್ಲಿ (೨೧ ಜೂನ್, ೧೯೬೧) ನಿಧನರಾದರು.

## ನರೇಂದ್ರಬಾಬು.ಎಂ (೧೯೨೬-೯೯)

ಅರ್ಥಪೂರ್ಣ ಗೀತೆಗಳ ಸೃಷ್ಟಿಕರ್ತ, ಚಲನಚಿತ್ರ ಸಂಭಾಷಣೆಕಾರ. ಮೈಸೂರು ಸ್ವಂತಸ್ಥಳ. ಮೈಸೂರಿನಲ್ಲಿಯೇ ವಿದ್ಯಾಭ್ಯಾಸ. ಮಹಾರಾಜ ಕಾಲೇಜಿನ ವಿದ್ಯಾರ್ಥಿ ದೆಸೆಯಲ್ಲಿ 'ಬಿಎಂಶ್ರೀ ಚಿನ್ನದ ಪದಕ' ಪಡೆದುಕೊಂಡ ಮೊದಲಿಗ. ಇಪ್ಪತ್ತೊಂದನೆ ವಯಸ್ಸಿನಲ್ಲಿ



'ಭಾರತಿ' (೧೯೪೯) ಚಿತ್ರಕ್ಕೆ ಸಾಹಿತ್ಯ ರಚಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ತಮ್ಮ ಮೊದಲ ಚಿತ್ರಕ್ಕಾಗಿ ಇವರು ರಚಿಸಿದ ಹಾಡುಗಳ ಸಂಖ್ಯೆ ಹದಿಮೂರು. ಡಿ.ಶಂಕರ್‌ಸಿಂಗ್, ಆರ್.ಎಂ.ವೀರಭದ್ರಯ್ಯನವರ ಕೆಲವು ಚಿತ್ರಗಳಿಗೆ ಸಾಹಿತ್ಯ ರಚಿಸಿದರು. ೧೯೬೫ರಲ್ಲಿ 'ಸರ್ವಜ್ಞ ಮೂರ್ತಿ' ಚಿತ್ರವನ್ನು ನಿರ್ಮಿಸಿದರು. 'ಸಂಧ್ಯಾರಾಗ', 'ಎಡಕಲ್ಲು ಗುಡ್ಡದ ಮೇಲೆ', 'ಪ್ರೊ.ಹುಚ್ಚೂರಾಯ', 'ಭಾಗ್ಯಜ್ಯೋತಿ' ಮುಂತಾದ ಸುಮಾರು ೮೮ ಚಿತ್ರಗಳಿಗೆ ಕಥೆ, ಸಂಭಾಷಣೆ ಬರೆದರು. ನೂರಕ್ಕೂ ಹೆಚ್ಚು ಗೀತೆಗಳನ್ನು ರಚಿಸಿದ್ದಾರೆ. ೧೨ ಕಾದಂಬರಿಗಳನ್ನು ಬರೆದಿರುವ ಇವರ ಮೊದಲ ಕಾದಂಬರಿ 'ನಾಲ್ಕನೆಯ ಮನೆ'. ಹಲವು ಚಿತ್ರಗಳಲ್ಲಿ ಅಭಿನಯಿಸಿರುವುದೂ ಉಂಟು. ತಮ್ಮ ೭೪ನೇ ವಯಸ್ಸಿನಲ್ಲಿ (೧೮ ಅಕ್ಟೋಬರ್ ೧೯೯೯) ನಿಧನರಾದರು.

## ನಾಗಣ್ಣ.ಕೆ.ಎಂ

ನಂದಿ ನಾಗಣ್ಣ ಎಂದು ಹೆಸರಾಗಿದ್ದ ಕೆ.ಎಂ.ನಾಗಣ್ಣ ನಂದಿ ಪಿಕ್ಚರ್ಸ್‌ನ ಸ್ಥಾಪಕರು. ಬೆಂಗಳೂರಿನ ಶಿವಾಜಿ ಟಾಕೀಸ್‌ನ ಮಾಲೀಕರು. ಅವರು ಚಿತ್ರ ನಿರ್ಮಾಣ ಹಾಗೂ ವಿತರಣಾ ಕ್ಷೇತ್ರಗಳಲ್ಲಿಯೂ ಗಣನೀಯ ಸೇವೆ ಸಲ್ಲಿಸಿದರು. ೧೯೫೮ರಲ್ಲಿ



ತೆರೆಗೆ ಬಂದ 'ಶ್ರೀ ಕೃಷ್ಣ ಗಾರುಡಿ', ೧೯೬೧ರಲ್ಲಿ ವೈ.ವಿ.ರಾವ್ ನಿರ್ದೇಶನದ 'ನಾಗಾರ್ಜುನ' ಮತ್ತು ೧೯೬೯ರಲ್ಲಿ 'ಬೃಂದಾವನ' ಚಿತ್ರಗಳನ್ನು ನಿರ್ಮಿಸಿ, ವಿತರಿಸಿದರು. ಬೆಂಗಳೂರು ಪುರಸಭೆಯ ಮಹಾಪೌರರಾಗಿ ಆಯ್ಕೆಗೊಂಡು ಜನಪರ ಕಾರ್ಯಗಳನ್ನು ಮಾಡಿದರು.

## ನಾಗಪ್ಪ (೧೯೩೭-೧೯೭೧)

ಕನ್ನಡ ಚಿತ್ರರಂಗದಲ್ಲಿ ಖಳನಟನಾಗಿ ಪ್ರಖ್ಯಾತರಾಗಿದ್ದರು.ನಂಜನಗೂಡು



ಹುಟ್ಟೂರು. ಸಾಮಾನ್ಯ ರೈತ ಕುಟುಂಬದಿಂದ ಬಂದವರು. ಹಳ್ಳಿಯ ನಾಟಕಗಳಲ್ಲಿ ಮಾತ್ರವಲ್ಲದೆ ಕೆಲವು ಕಂಪೆನಿ ನಾಟಕಗಳಲ್ಲಿಯೂ ಅಭಿನಯಿಸಿದ್ದರು. ವೈ.ಆರ್.ಸ್ವಾಮಿ ನಿರ್ದೇಶನದ 'ಕಠಾರಿವೀರ' (೧೯೬೬) ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಇಮ್ಮಡಿ ಪುಲಿಕೇಶಿ', 'ಬೀದಿ ಬಸವಣ್ಣ', 'ಅರುಣೋದಯ', 'ಭಲೇ ಬಸವ', 'ಬಾಳು ಬೆಳಗಿತು', 'ಪರೋಪಕಾರಿ', 'ದೇವರ ಮಕ್ಕಳು' ಮುಂತಾದ ೪೦ ಚಿತ್ರಗಳಲ್ಲಿ ಅಭಿನಯಿಸಿದರು. ನಟ ಶ್ರೀನಾಥ್ ಅವರೊಂದಿಗೆ ಕಾರಿನಲ್ಲಿ ಬರುತ್ತಿದ್ದಾಗ ಮಂಡ್ಯದ ಬಳಿ ಅಪಘಾತಕ್ಕೀಡಾಗಿ ೧೯೭೧ರ ಮಾರ್ಚ್‌ನಲ್ಲಿ ನಿಧನರಾದರು. ಚಿತ್ರರಂಗದಲ್ಲಿ ಕೇವಲ ಆರು ವರ್ಷ ಮಾತ್ರ ಅಭಿನಯಿಸಿದ ಇವರು ತಮ್ಮ ೩೪ನೆ ವಯಸ್ಸಿಗೇ ಇಲ್ಲವಾದರು.

## ನಾಗಭೂಷಣ ಕುಣಿಗಲ್



ಚಲನಚಿತ್ರ ಸಂಭಾಷಣಕಾರ, ಸಾಹಿತಿ, ನಿರ್ದೇಶಕ ಹಾಗೂ ನಟರಾದ ನಾಗಭೂಷಣ್ ಕುಣಿಗಲ್‌ನವರು. ೧೯೪೨ರಲ್ಲಿ ಜನನ. ಸಿನಿಮಾಟೋಗ್ರಫಿಯಲ್ಲಿ ಡಿಪ್ಲೊಮಾ ಪದವೀಧರರಾದ ಇವರು 'ನಾಂದಿ' ಚಿತ್ರದ ಸಹಾಯಕ ನಿರ್ದೇಶಕರಾಗಿ ಚಿತ್ರರಂಗ ಪ್ರವೇಶಿಸಿದರು. ನಂತರ ಸಹ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಇವರು ನಿರ್ದೇಶಿಸಿದ ಚಿತ್ರಗಳು 'ಆಶೀರ್ವಾದ', 'ಬಾಳುಜೇನು'. ಸಂಭಾಷಣೆಕಾರರಾಗಿ ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ದುಡಿದಿರುವ ಇವರು ಮೊದಲು ಸಂಭಾಷಣೆ ಬರೆದ ಚಿತ್ರ 'ಸಿಂಹಜೋಡಿ'. ಇದಲ್ಲದೆ ಸುಮಾರು ೧೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿಯೂ ಇದ್ದಾರೆ. ಪತ್ನಿ ಸರ್ವಮಂಗಳ ಲೇಖಕಿ, ನಟಿ ಹಾಗೂ ಪತಿಯ ಎಲ್ಲಾ ಕೆಲಸಗಳಲ್ಲೂ ಸಹಾಯ ಹಸ್ತ ನೀಡುವ ಮಹಿಳೆ. 'ಗೌರಿ ಗಣೇಶ' ಚಿತ್ರಕ್ಕೆ ೧೯೯೧-೯೨ ಹಾಗೂ 'ಯಾರಿಗೂ ಹೇಳ್ಬೇಡಿ' ಚಿತ್ರಕ್ಕೆ ೧೯೯೪-೯೫ನೇ ಸಾಲಿನ ರಾಜ್ಯಸರ್ಕಾರದ ಅತ್ಯುತ್ತಮ ಸಂಭಾಷಣಾ ಕರ್ತೃ ಪ್ರಶಸ್ತಿ ನಾಗಭೂಷಣ್ ಅವರಿಗೆ ಲಭಿಸಿದೆ.

## ನಾಗರಾಜ್ ಡಿಂಗ್ರಿ

ಎಂಬತ್ತರ ದಶಕದಲ್ಲಿ ಬೆಳ್ಳಿತೆರೆಗೆ ಹಾಸ್ಯನಟರಾಗಿ ಪರಿಚಿತರಾದ ನಾಗರಾಜ್, ಚಿತ್ರರಂಗದಲ್ಲಿ ಡಿಂಗ್ರಿ ನಾಗರಾಜ್ ಎಂದೇ ಪರಿಚಿತರು. ಗುಬ್ಬಿ ನಾಟಕ ಕಂಪೆನಿಯಲ್ಲಿ ಅಭಿನಯಿಸುತ್ತಿದ್ದ ನಾಗರಾಜ್ ಬೆಂಗಳೂರಿನ ಐ.ಟಿ.ಐ. ಕಾರ್ಖಾನೆಯಲ್ಲಿ ಉದ್ಯೋಗದಲ್ಲಿದ್ದವರು. ಮಾರುತಿ ಶಿವರಾಂ ಅವರ 'ಪರಸಂಗದ ಗೆಂಡೆತಿಮ್ಮ' ಚಿತ್ರದ ಮೂಲಕ ಬೆಳ್ಳಿತೆರೆ ಪ್ರವೇಶಿಸಿದ ಡಿಂಗ್ರಿ ನಾಗರಾಜ್ ಜನಪ್ರಿಯರಾದುದು ರೇಣುಕಾ ಶರ್ಮ ನಿರ್ದೇಶನದ 'ಅನುಪಮಾ' ಚಿತ್ರದ 'ಬರ್ತಾಳೆ ಕನಸಿನ ರಾಣಿ...' ಹಾಡಿನಿಂದ. ಹಾಸ್ಯನಟರಾಗಿ ಎಂದೂ ಹಾಸ್ಯದ



ಮಿತಿಯನ್ನು ದಾಟದ, ಸೀಮಿತ ಅವಕಾಶಗಳಲ್ಲೇ ಉತ್ತಮವಾದ ಹಾಸ್ಯ ಸೃಷ್ಟಿಗೆ ಕಾರಣರಾಗಿದ್ದಾರೆ. 'ಮನೆಯೇ ಮಂತ್ರಾಲಯ', 'ಉಂಡೂ ಹೋದ ಕೊಂಡೂ ಹೋದ', 'ರೂಪಾಯಿ ರಾಜ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕಂಠದಾನ ಕಲಾವಿದೆ ಸರ್ವಮಂಗಳಾ ಇವರ ಪತ್ನಿ.

## ನಾಗರಾಜ್.ಬಿ.ಎಲ್ (ನಾಗಣ್ಣ)

ಚಿತ್ರೋದ್ಯಮದಲ್ಲಿ ನಾಗಣ್ಣ ಎಂದೇ ಪರಿಚಿತರು. ಜನನ : ೨೧-೦೩-೧೯೫೯.



ಚಿತ್ರರಂಗದ ನೆರಳಿನಲ್ಲೇ ಬೆಳೆದವರು. ಚಿತ್ರರಂಗದ ಮೇಲಿನ ಸಹಜ ಆಸಕ್ತಿ ಅವರನ್ನು ಚಿತ್ರರಂಗಕ್ಕೆ ಎಳೆತಂದಿತು. ಚಿತ್ರರಂಗದ ಹಿರಿಯ ನಿರ್ಮಾಪಕ, ಕರ್ನಾಟಕ ಫಿಲಂ ಛೇಂಬರ್‌ನ ಮಾಜಿ ಅಧ್ಯಕ್ಷ, ಶ್ರೀ ನಿಧಿ ಪ್ರೊಡಕ್ಷನ್ಸ್ ಸಂಸ್ಥಾಪಕರಾದ ಆರ್.ಲಕ್ಷ್ಮಣ್ ಅವರ ಪುತ್ರ ನಾಗರಾಜ್ ವಿದ್ಯಾಭ್ಯಾಸ-ಪತ್ರಿಯಲ್ಲಿ ನ್ಯಾಯವಾದಿಯಾದರೂ ತಂದೆಯವರ ಜೊತೆನಲ್ಲಿ ಸಾಗಿ ಸಹನಿರ್ದೇಶಕರಾದರು. ಕೆ.ಎಸ್.ಎಲ್.ಸ್ವಾಮಿ, ಗೀತಪ್ರಿಯ ಹಾಗೂ ಚಂದ್ರಶೇಖರ ಕಂಬಾರರ ದಕ್ಷ ಮಾರ್ಗದರ್ಶನದಲ್ಲಿ ಪರಿಪಕ್ವವಾದ ಇವರು ೧೯೯೪ರಲ್ಲಿ 'ಸಾಮ್ರಾಟ್' ಚಿತ್ರ ನಿರ್ದೇಶಿಸುವುದರೊಂದಿಗೆ ನಿರ್ದೇಶಕರಾಗಿ ಪರಿಚಿತರಾದರು. ನಂತರ 'ಲೇಡಿ ಪೊಲೀಸ್', 'ಹಲೋ ಡ್ಯಾಡಿ', 'ಲೇಡಿ ಕಮಿಷನರ್', 'ಓ ಪ್ರೇಮವೇ', 'ಸೂರಪ್ಪ' ಚಿತ್ರಗಳನ್ನು ನಿರ್ದೇಶಿಸಿದರು. 'ಸಾಮ್ರಾಟ್' ಚಿತ್ರದ ನಿರ್ದೇಶನಕ್ಕಾಗಿ ದೇವಿಕಾರಾಣಿ ಮೆಮೋರಿಯಲ್ ಪ್ರಶಸ್ತಿ ಹಾಗೂ 'ಸೂರಪ್ಪ' ಚಿತ್ರದ ನಿರ್ದೇಶನಕ್ಕಾಗಿ ಮದ್ರಾಸ್ 'ಫಿಲ್ಮ್ ಫ್ಯಾನ್ಸ್ ಅಸೋಸಿಯೇಷನ್' ಪ್ರಶಸ್ತಿಗಳು ದೊರೆತಿವೆ.

### ನಾಗರಾಜರಾವ್.ಬಿ

ದಕ್ಷಿಣ ಭಾರತ ಚಿತ್ರರಂಗದ ಖ್ಯಾತ ಕಲಾನಿರ್ದೇಶಕ. ಮೂಲತಃ ತಮಿಳುನಾಡಿನವರು. ೧೯೨೫ರಲ್ಲಿ ಜನನ. ಮ್ಯಾಟೇ ಹಾಗೂ ಮಿನಿಯೇಚರ್ ಕೆಲಸದಲ್ಲಿ ದಕ್ಷರಾದ ನಾಗರಾಜರಾವ್ ಕಲಾ ನಿರ್ದೇಶಕರಾಗಿ ಮೊದಲು ಕಾರ್ಯ ನಿರ್ವಹಿಸಿದ ಚಿತ್ರ 'ಸಹಸ್ರ ಶಿರಚ್ಛೇದ ಅಪೂರ್ವ ಚಿಂತಾಮಣಿ' (೧೯೬೦). ಕನ್ನಡದಲ್ಲಿ ಮೊದಲ ಬಾರಿಗೆ ಕಲಾ ನಿರ್ದೇಶನ ಮಾಡಿದ ಚಿತ್ರ 'ಕಸ್ತೂರಿ ವಿಜಯ'. ವಿಠಲಾಚಾರ್ಯ, ರಾಜಕುಮಾರ್, ಅಮೃತಂ, ಹುಣಸೂರು ಕೃಷ್ಣಮೂರ್ತಿಯವರಿಂದ ಉತ್ತೇಜಿತರಾದ ನಾಗರಾಜರಾವ್ ಕಲಾನಿರ್ದೇಶನ ಮಾಡಿದ ಕೆಲವು ಅದ್ಭುರಿ ಚಿತ್ರಗಳಲ್ಲಿ 'ಕವಿರತ್ನ ಕಾಳಿದಾಸ', 'ಶ್ರೀ ರೇಣುಕಾದೇವಿ ಮಹಾತ್ಮೆ', 'ಎಡೆಯೂರು ಸಿದ್ಧಲಿಂಗೇಶ್ವರ', 'ಶಬರಿ



ಮಲೆ ಸ್ವಾಮಿ ಅಯ್ಯಪ್ಪ', 'ಭಕ್ತ ಸಿರಿಯಾಳ' ಸೇರಿವೆ. 'ಕೊಲ್ಲೂರು ಶ್ರೀ ಮೂಕಾಂಬಿಕೆ' ಚಿತ್ರದ ಅದ್ಭುತ ಕಲಾನಿರ್ದೇಶನಕ್ಕಾಗಿ ೧೯೭೩-೭೪ನೇ ಸಾಲಿನ ರಾಜ್ಯ ಪ್ರಶಸ್ತಿಯನ್ನು ಪಡೆದಿದ್ದಾರೆ.

### ನಾಗರಾಜ್ 'ಸಂದೇಶ್'

ಮೂಲತಃ ಹೋಟೇಲು ಉದ್ಯಮಿಯಾದ



ಸಂದೇಶ್‌ನಾಗರಾಜ್ ಮೈಸೂರಿನವರು. ಚಿತ್ರರಂಗದ ಮೇಲಿನ ವ್ಯಾಮೋಹದಿಂದ ಸಂದೇಶ್ ಕಂಬೈನ್ಸ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಸದಭಿರುಚಿಯ 'ಮಣ್ಣಿನ ದೋಣಿ' ಚಿತ್ರ ನಿರ್ಮಿಸಿ ಮೊದಲ ಪ್ರಯತ್ನದಲ್ಲೇ ಗೆದ್ದರು. ಹೆಚ್ಚಾಗಿ ಕಾದಂಬರಿ ಆಧಾರಿತ ಚಿತ್ರಗಳಿಗೆ ಮಹತ್ವ ನೀಡಿದ ಇವರು ಉತ್ತಮ ಎನ್ನುವಂಥ ಕೆಲವು ಚಿತ್ರಗಳನ್ನು ನಿರ್ಮಿಸಿದ್ದಾರೆ. ಬದಲಾಗುತ್ತಿರುವ ವ್ಯವಸ್ಥೆಗೆ ಹೊಂದಿಕೊಳ್ಳುವ ಸಲುವಾಗಿ ರೀಮೇಕ್ ಚಿತ್ರಗಳ ನಿರ್ಮಾಣಕ್ಕೂ ಮುಂದಾದರು. 'ಮುಂಜಾನೆಯ ಮಂಜು', 'ಮುಸುಕು', 'ಮೌನರಾಗ', 'ಹೃದಯ ಹೃದಯ', 'ಮೊಮ್ಮಗ', 'ಚಂದ್ರೋದಯ' ಮೊದಲಾದವು ಇವರು ನಿರ್ಮಿಸಿದ ಚಿತ್ರಗಳು. ಚಿತ್ರರಂಗದ ಜೊತೆಗೆ ರಾಜಕಾರಣದ ನಂಟನ್ನು ಹೊಂದಿರುವ ಸಂದೇಶ್ ನಾಗರಾಜ್ ಸಾಮಾಜಿಕ ಕಳಕಳಿಯುಳ್ಳ ವ್ಯಕ್ತಿ.

### ನಾಗಾಭರಣ.ಟಿ.ಎಸ್

ಕನ್ನಡ ಚಿತ್ರರಂಗದ ಪ್ರತಿಭಾವಂತ ನಿರ್ದೇಶಕರಲ್ಲಿ ಒಬ್ಬರು ನಾಗಾಭರಣ. ಕಲಾತ್ಮಕ ಹಾಗೂ ವ್ಯಾಪಾರಿ



ಚಿತ್ರಗಳೆರಡರಲ್ಲೂ ಕೆಲಸ ಮಾಡಿದ ಅನುಭವಿ. ನಾಗಾಭರಣ ಗ್ರಾಮೀಣ ಪರಿಸರದಿಂದ ಬಂದವರು. ಮೈಸೂರು ಜಿಲ್ಲೆಯವರು. ವಿಜ್ಞಾನ ಹಾಗೂ ಕಾನೂನು ಶಾಸ್ತ್ರಗಳಲ್ಲಿ ಪದವೀಧರರು. ಬಿ.ವಿ.ಕಾರಂತರ ಶಿಷ್ಯರು. ಬಿ.ವಿ.ಕಾರಂತರೊಂದಿಗೆ ರಂಗಭೂಮಿ, ಚಲನಚಿತ್ರಗಳಿಗೆ ನೇಪಥ್ಯದಲ್ಲಿ ಕೆಲಸ ಮಾಡಿದವರು. ಅನೇಕ ನಾಟಕಗಳನ್ನು ನಿರ್ದೇಶಿಸಿ, ಅಭಿನಯಿಸಿದ್ದಾರೆ. ಕಾರ್ನಾಡರ ಚಿತ್ರಗಳಿಗೆ ದುಡಿದಿದ್ದಾರೆ. 'ಒಂದಾನೊಂದು ಕಾಲದಲ್ಲಿ', 'ಆಕ್ಸಿಡೆಂಟ್', 'ಶಂಕರಾಚಾರ್ಯ', 'ವಿಮೋಚನೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಹಿಂದೂಸ್ತಾನಿ ಸಂಗೀತದಲ್ಲಿ ಪರಿಶ್ರಮವಿದೆ. ದೃಶ್ಯ ಮಾಧ್ಯಮದ ಸಂಕೀರ್ಣತೆಗಳ ವಿಶೇಷ ಅಧ್ಯಯನ ಮಾಡಿದ್ದಾರೆ. ನಿರ್ದೇಶಕರಾಗಿ ೧೯೭೮ರಲ್ಲಿ 'ಗ್ರಹಣ' ಚಿತ್ರದಿಂದ ಬೆಳಕಿಗೆ ಬಂದರು. ನಾಗಾಭರಣ ನಿರ್ದೇಶಿಸಿರುವ ೨೫ ಚಿತ್ರಗಳಲ್ಲಿ ೧೧ ಚಿತ್ರಗಳಿಗೆ ರಾಷ್ಟ್ರ ಮತ್ತು ರಾಜ್ಯ ಮಟ್ಟದ ಪ್ರಶಸ್ತಿಗಳು ಲಭಿಸಿವೆ. 'ಅನ್ವೇಷಣೆ', 'ಬ್ಯಾಂಕರ್ ಮಾರ್ಗಯ್ಯ', 'ಆಸ್ಫೋಟ', 'ಸಂತ ಶಿಶುನಾಳ ಷರೀಫ', 'ಮೈಸೂರ ಮಲ್ಲಿಗೆ', 'ನಾಗಮಂಡಲ', 'ಚಿನ್ನಾರಿ ಮುತ್ತ', 'ಆಕಸ್ಮಿಕ' ಚಿತ್ರಗಳು ಅವರು ನಿರ್ದೇಶಿಸಿರುವ ಪ್ರಶಸ್ತಿ ವಿಜೇತ ಚಿತ್ರಗಳು. 'ಜನುಮದ ಜೋಡಿ', 'ಬಂಗಾರದ ಜಿಂಕೆ', 'ಪ್ರಾಯ ಪ್ರಾಯ ಪ್ರಾಯ', 'ಆಹುತಿ', 'ಒಂಟಿಧ್ವನಿ' ಮೊದಲಾದ ಚಿತ್ರಗಳು ಗಳಿಕೆಯಲ್ಲಿ ಯಶಸ್ವಿಯಾದ ಕಮರ್ಷಿಯಲ್ ಚಿತ್ರಗಳು. ಸ್ತ್ರೀಪರ ಕಾಳಜಿ ಇರುವ 'ವಿಮೋಚನೆ' ಚಿತ್ರ ನಿರ್ದೇಶಿಸಿದರು. 'ಗ್ರಹಣ' (೧೯೭೮), 'ಸಂತ ಶಿಶುನಾಳ ಷರೀಫ' (೧೯೯೦) ಚಿತ್ರಗಳು ರಾಷ್ಟ್ರೀಯ ಐಕ್ಯತೆಗಾಗಿ ಇರುವ ರಾಷ್ಟ್ರ ಪ್ರಶಸ್ತಿ ಪಡೆದವು. 'ಬ್ಯಾಂಕರ್ ಮಾರ್ಗಯ್ಯ' (೧೯೮೩), 'ಚಿನ್ನಾರಿ ಮುತ್ತ' (೧೯೯೩), 'ಮೈಸೂರ ಮಲ್ಲಿಗೆ' (೧೯೯೧) ಚಿತ್ರಗಳು ಅತ್ಯುತ್ತಮ ಕನ್ನಡ ಚಿತ್ರಕ್ಕಾಗಿ ಇರುವ ರಾಷ್ಟ್ರಪ್ರಶಸ್ತಿಯನ್ನು ಪಡೆದಿವೆ. ಇದಲ್ಲದೆ 'ಗ್ರಹಣ', 'ಅನ್ವೇಷಣೆ', 'ಆಸ್ಫೋಟ', 'ಸಂತ ಶಿಶುನಾಳ ಷರೀಫ', 'ಮೈಸೂರ ಮಲ್ಲಿಗೆ', 'ಆಕಸ್ಮಿಕ', 'ನಾಗಮಂಡಲ' ಚಿತ್ರಗಳು ರಾಜ್ಯಸರ್ಕಾರದ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದಿವೆ. ಹಾಡು, ತತ್ವಪದಗಳ ಮುಖೇನ ಕವಿಯ ಬದುಕನ್ನು ಕಾಣುವ ಹೊಸ ಪರಂಪರೆಯನ್ನು 'ಸಂತ ಶಿಶುನಾಳ ಶರೀಫ', 'ಮೈಸೂರ ಮಲ್ಲಿಗೆ' ಮೂಲಕ ಚಿತ್ರರಂಗಕ್ಕೆ ತಂದವರು. ಅನೇಕ ರಂಗ ಕಲಾವಿದರನ್ನೂ ಚಿತ್ರ ರಂಗಕ್ಕೆ ತಂದರು. ನಿರ್ದೇಶಕರಾಗಿ ಅವರು ಚಿತ್ರರಂಗಕ್ಕೆ ಸಲ್ಲಿಸಿರುವ ಸೇವೆಯನ್ನು ಗಮನಿಸಿ ರಾಜ್ಯ ಸರ್ಕಾರ ೧೯೯೮-೯೯ನೇ ಸಾಲಿನ ಪ್ರತಿಷ್ಠಿತ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

### ನಾಗೇಂದ್ರ

ಕನ್ನಡ ಚಿತ್ರರಂಗದ ಪ್ರಚಾರಕರ್ತರಲ್ಲಿ ಒಬ್ಬರು. ೧೯೫೮ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಪಿ.ಯು.ಸಿ.ವರೆಗೆ ಶಿಕ್ಷಣ ಪಡೆದರು. 'ಬೆಳ್ಳಿನಾಗ' ಚಿತ್ರದ ಪ್ರಚಾರಕರ್ತರಾಗಿ ಪ್ರವೇಶಿಸಿದರು. ಸುಮಾರು ೩೦೦ಕ್ಕೂ ಹೆಚ್ಚು ಚಿತ್ರಗಳಿಗೆ ಪ್ರಚಾರಕರ್ತರಾಗಿ ದುಡಿದಿದ್ದಾರೆ. 'ಪುಷ್ಪಕ ವಿಮಾನ', 'ಸಂತ ಶಿಶುನಾಳ ಷರೀಫ', 'ಮೈಸೂರ ಮಲ್ಲಿಗೆ', 'ನಾಗಮಂಡಲ', 'ತಾಯಿ ಸಾಹೇಬ', 'ಕಾನೂರ ಹೆಗ್ಗಡತಿ', 'ವೀರಪ್ಪನಾಯ್ಕ', 'ನ್ಯೂ ಡೆಲ್ಲಿ',



'ಚಂದ್ರಮುಖಿ ಪ್ರಾಣಸಖಿ', 'ಸೂರಪ್ಪ' ಮುಂತಾದ ಯಶಸ್ವಿ ಚಿತ್ರಗಳಿಗೆ ಪ್ರಚಾರಕರ್ತರಾಗಿ ದುಡಿದಿದ್ದಾರೆ. 'ಕಾವೇರಿ ತೀರದಲ್ಲಿ' ಚಿತ್ರವನ್ನು ನಿರ್ಮಿಸಿದರು. ಹಿರಿಯ ಪತ್ರಕರ್ತ ಬಿ.ಕೆ.ಗುರುರಾಜ್ ಇವರ ತಂದೆ. ೮೦ರ ದಶಕದ ಅಂತ್ಯದಲ್ಲಿ ತೆರೆಗೆ ಪರಿಚಿತರಾದ ತಾರೆ ವಿಜಯರಂಜನಿ ಇವರ ಸೋದರಿ.

### ನಾಗೇಂದ್ರರಾವ್.ಆರ್ (೧೮೯೬-೧೯೭೭)

ಕನ್ನಡದ ಮೊದಲ ಚಲನಚಿತ್ರ 'ಸತಿ ಸುಲೋಚನಾ'ದ ಸಂಗೀತ ನಿರ್ದೇಶಕ ಹಾಗೂ ರಾವಣ ಪಾತ್ರಧಾರಿ ನಟ.



ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ರಟ್ಟೇಹಳ್ಳಿ ಜನ್ಮಸ್ಥಳ. ಪ್ರೌಢಶಾಲೆಯಲ್ಲಿದ್ದಾಗಲೇ ಶಿರಹಟ್ಟಿ ವೆಂಕೋಬರಾಯರ ನಾಟಕ ಸಂಸ್ಥೆಗೆ ಸೇರಿ ಸ್ತ್ರೀ ಪಾತ್ರಗಳನ್ನು ನಿರ್ವಹಿಸಿದರು. ವರದಾಚಾರ್ಯರ ಕಂಪೆನಿಯಲ್ಲಿ ಅಭಿನಯಿಸಿದರು. ತಮಿಳು ಭಾಷೆಯಲ್ಲಿ ಮಾತನಾಡುವ ಚಿತ್ರಗಳು ಬಂದಾಗ ಅಲ್ಲಿ ಪ್ರಮುಖ ಪಾತ್ರಗಳನ್ನು ನಿರ್ವಹಿಸಿದರು. ಸುಬ್ಬಯ್ಯನಾಯ್ಡು ಅವರೊಂದಿಗೆ ಸೇರಿ ಶ್ರೀ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿಯನ್ನು ರೂಪಿಸಿದರು. ಕನ್ನಡದ ಮೊದಲ ವಾಕ್ಚಿತ್ರ 'ಸತಿ ಸುಲೋಚನಾ'ದಲ್ಲಿ ಅಭಿನಯಿಸಿ, ಹಾಡಿದ್ದರು. ಆ ಚಿತ್ರದ ಸಂಗೀತ ನಿರ್ದೇಶಕರೂ ರಾಯರೇ. 'ವಸಂತಸೇನೆ' (೧೯೪೧) ಚಿತ್ರವನ್ನು ನಿರ್ಮಿಸಿ, ಸಾಹಿತ್ಯ ರಚಿಸಿದರು. 'ಸತ್ಯ ಹರಿಶ್ಚಂದ್ರ' (೧೯೪೩) ಚಿತ್ರವನ್ನು ನಿರ್ದೇಶಿಸಿದರು. ಆರೆನ್ನಾರ್ ಸಂಸ್ಥೆಯಡಿ 'ಜಾತಕ ಫಲ' (೧೯೫೩)ದಿಂದ ಆರಂಭಿಸಿ ಐದು ಉತ್ತಮ ಚಿತ್ರಗಳನ್ನು ನಿರ್ಮಿಸಿದರು. ಕನ್ನಡ, ತಮಿಳು, ತಲುಗು ಮತ್ತು ಹಿಂದಿ ಮುಂತಾದ ಭಾಷೆಗಳ ನೂರಾರು ಚಿತ್ರಗಳಲ್ಲಿ ಅಭಿನಯಿಸಿದರು. 'ಹಣ್ಣೆಲೆ ಚಿಗುರಿದಾಗ' ಚಿತ್ರಕ್ಕಾಗಿ ಸರ್ಕಾರದಿಂದ ಅತ್ಯುತ್ತಮ ನಟ ಪ್ರಶಸ್ತಿ ಪಡೆದರು. ಇವರ ನಿರ್ದೇಶನದ 'ಪ್ರೇಮದ ಪುತ್ರಿ' ಚಿತ್ರಕ್ಕೆ ರಾಷ್ಟ್ರಪತಿಗಳ ರಜತ ಪದಕ ದೊರೆಯಿತು. ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಕೇಂದ್ರದ ಪದ್ಮಶ್ರೀ ಪ್ರಶಸ್ತಿ ಭಾಜನರು. ಬೆಂಗಳೂರಿನ ಆದರ್ಶ ಚಲನಚಿತ್ರ ಶಿಕ್ಷಣ ಶಾಲೆಯ ಸ್ಥಾಪಕ ಪ್ರಾಂಶುಪಾಲರು. ಛಾಯಾಗ್ರಾಹಕ ಆರ್.ಎನ್.ಕೃಷ್ಣಪ್ರಸಾದ್, ಸಾಹಿತಿ ಆರ್.ಎನ್.ಜಯಗೋಪಾಲ್, ನಟ ಆರ್.ಎನ್.ಸುದರ್ಶನ್ ಇವರ ಮಕ್ಕಳು. 'ಇದು ನನ್ನ ಕಥೆ' ಇವರು ರಚಿಸಿದ ಆತ್ಮಚರಿತ್ರೆ. ರಾಯರು ಚಿತ್ರರಂಗದಲ್ಲಿ

ಮಾಡಿದ ಪ್ರಯೋಗಗಳು, ಸಾಧನೆಗಳು ಅನೇಕ, ಅನನ್ಯ. ೧೯೭೭ರ ಫೆಬ್ರುವರಿ ೯ರಂದು ನಿಧನರಾದರು.

## ನಾಗೇಶ್ (ಕಪಾಲಿ)

ಕಪಾಲಿ ನಾಗೇಶ್ ಎಂದೇ ಉದ್ಯಮದಲ್ಲಿ ಪರಿಚಿತರಾದ ಇವರು ಕಪಾಲಿ ಕಂಬೈನ್ಸ್



ಎಂಬ ಸಿನಿಮಾ ಹಂಚಿಕಾ ಸಂಸ್ಥೆಯನ್ನು ೧೯೬೯ರಲ್ಲಿ ಆರಂಭಿಸಿದರು. ಸುಮಾರು ೧೬೦ಕ್ಕೂ ಹೆಚ್ಚು ಕನ್ನಡ ಚಿತ್ರಗಳನ್ನು ವಿತರಿಸಿದ್ದಾರೆ. ಮೂರು ದಶಕಗಳಿಗೂ ಹೆಚ್ಚು ಕಾಲದಿಂದ ಚಿತ್ರರಂಗದಲ್ಲಿ ತಮ್ಮನ್ನು ತೊಡಗಿಸಿಕೊಂಡಿದಾರೆ.

## ನಾಗೇಶ್.ಕೆ

ಪ್ರಸಾಧನ ಹಾಗೂ ಕೇಶ ವಿನ್ಯಾಸ ಕಲಾವಿದ. ಎಸ್.ಎಸ್.ಎಲ್.ಸಿ ವರೆಗೆ ವಿದ್ಯಾಭ್ಯಾಸ. ಹಿರಿಯ ಪ್ರಸಾಧನ ಕಲಾವಿದ ವಿಠಲ್‌ಬಾಬು ಅವರ ಬಳಿ ಕಲಿಕೆ. ೧೯೯೮-೯೯ರಲ್ಲಿ 'ರಾತ್ರಿ-ಪಗಲ್' ತುಳು ಚಿತ್ರದ ಮೂಲಕ ಚಿತ್ರರಂಗ ಪ್ರವೇಶ.



'ಮುರಳಿ ಗಾನ ಅಮೃತಪಾನ', 'ಜೋಡಿ ಹಕ್ಕಿ', 'ದುರ್ಗಾಪೂಜೆ', 'ಓ ಮಲ್ಲಿಗೆ', 'ವೀರಪ್ಪನ್' ಮೊದಲಾದ ಚಿತ್ರಗಳಲ್ಲಿ ಪ್ರಸಾಧನ ಹಾಗೂ ಕೇಶಾಲಂಕಾರ ವಿಭಾಗದಲ್ಲಿ ಕಾರ್ಯ ನಿರ್ವಹಿಸಿರುವ ಇವರು ಮಲೆಯಾಳಂ, ಹಿಂದಿ, ತೆಲುಗು ಹಾಗೂ 'ಜಂಗಲ್‌ಬಾಯ್' ಎಂಬ ಇಂಗ್ಲಿಷ್ ಚಿತ್ರದಲ್ಲಿಯೂ ಕಾರ್ಯ ನಿರ್ವಹಿಸಿದ್ದಾರೆ.

## ನಾಗೇಶ್ ಕಶ್ಯಪ್

ರಂಗಭೂಮಿ ಹಿನ್ನೆಲೆಯಿಂದ ಬೆಳ್ಳಿತೆರೆಗೆ ಬಂದ ನಾಗೇಶ್ ಕಶ್ಯಪ್ ಮೂಲತಃ ಭಾರತ್ ಎಲೆಕ್ಟ್ರಾನಿಕ್ಸ್ ಲಿಮಿಟೆಡ್‌ನಲ್ಲಿ ಉದ್ಯೋಗಿ. ಪ್ರತಿಭಾವಂತ ನಟ. ಚಿಕ್ಕವಯಸ್ಸಿನಿಂದಲೂ ರಂಗ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದ ಅವರು ಸಿ.ಆರ್.ಸಿಂಹ ನಿರ್ದೇಶನದ 'ಸಿಂಹಾಸನ' ಚಿತ್ರದಿಂದ ೧೯೮೩ರಲ್ಲಿ ಬೆಳ್ಳಿತೆರೆ ಪ್ರವೇಶ ಮಾಡಿದರು.



ಚಿತ್ರರಂಗದಲ್ಲಿ ನಿಜವಾದ ಬ್ರೇಕ್ ನೀಡಿದ್ದು 'ಕಂತವ ಮಳೆ' ಚಿತ್ರ. 'ಅವಳ ಚರಿತ್ರೆ', 'ಒಂದು ಮುತ್ತಿನ ಕಥೆ', 'ಸಂಗೀತಾ', 'ಭವ್ಯ ಭಾರತ', 'ಭಗವಾನ್ ಶ್ರೀ ಸಾಯಿ ಬಾಬಾ' ಮೊದಲಾದವು ಅವರ ಅಭಿನಯದ ಕೆಲವು ಚಿತ್ರಗಳು. ಕಿರುತೆರೆಯಲ್ಲೂ ಅಭಿನಯ, ನಿರ್ದೇಶನದಲ್ಲಿ ತೊಡಗಿದವರು.

## ನಾಗೇಶ್‌ಬಾಬ.ಬಿ

ಆರ್.ನಾಗೇಂದ್ರರಾಯರ ಗರಡಿಯಲ್ಲಿ ಅನುಭವ ಪಡೆದು ೧೯೭೦ರಲ್ಲಿ ತಮ್ಮ ಸ್ವಂತ ತಯಾರಿಕೆ 'ಅನಿರೀಕ್ಷಿತ'ವನ್ನು ನಿರ್ದೇಶಿಸಿದ ಬಿ.ನಾಗೇಶ್ ಬಾಬರವರು ೧೯೭೮ರಲ್ಲಿ ವಿಷ್ಣುಕುಮಾರ್ ನಿರ್ಮಿಸಿ ನಿರ್ದೇಶಿಸಿದ 'ಕೋಟಿ ಚೆನ್ನಯ'ದ ಕಾರ್ಯನಿರ್ವಾಹಕ ನಿರ್ದೇಶಕರಾಗಿದ್ದವರು. ಚಿಕ್ಕಂದಿನಿಂದಲೇ ಕಥೆ, ಕವನ, ಪತ್ರಿಕಾ ಲೇಖನಗಳನ್ನು ಬರೆಯುತ್ತಿದ್ದ ಅವರು



'ತೂಗುದೀಪ' ಮತ್ತು 'ನನ್ನ ಕರ್ತವ್ಯ' ಚಿತ್ರಗಳಿಗೆ ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ರಚಿಸಿದರು. ೧೯೭೮ರಲ್ಲಿ 'ಪ್ರತಿಮಾ' ಚಿತ್ರವನ್ನು ಪಾಲುಗಾರಿಕೆಯಲ್ಲಿ ನಿರ್ಮಿಸಿದರು. ೧೯೬೪ರಿಂದಲೇ ಕನ್ನಡ ಚಿತ್ರೋದ್ಯಮದಲ್ಲಿ ಸ್ಥಿರ ಛಾಯಾಗ್ರಾಹಕರಾಗಿ ಬೇರೂರಿದ ಬಾಬ ೧೯೬೯ರಲ್ಲಿ ಪ್ರಗತಿ ಸ್ಟುಡಿಯೋ ಸ್ಥಾಪಿಸಿ ಸೋದರ ಅಶ್ವತ್ಥನಾರಾಯಣ ಅವರ ಜೊತೆಗೂಡಿ ೩೦೦ಕ್ಕೂ ಹೆಚ್ಚು ಚಿತ್ರಗಳಿಗೆ ಸ್ಥಿರ ಛಾಯಾಗ್ರಾಹಕರಾಗಿ ಕೆಲಸ ಮಾಡಿದಾರೆ. ಎಸ್.ಲಕ್ಷ್ಮೀನಾರಾಯಣ್ ನಿರ್ದೇಶಿಸಿದ ಅನೇಕ ಶೈಕ್ಷಣಿಕ ಮತ್ತು ಕಿರುಚಿತ್ರಗಳಿಗೆ ಸಹ ನಿರ್ದೇಶಕರಾಗಿದ್ದ ಅವರು ತಾವೇ ಸ್ವತಃ ಕೆಲವು ಸಾಕ್ಷ್ಯ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಮದರಾಸಿನಲ್ಲಿ ಕಬ್ಬಾ ಫಿಲಮ್‌ಗೆ ರೇಷನ್ ಇದ್ದಾಗ ಅಲ್ಲೇ ಕೆಲಸ ಮಾಡುತ್ತಿದ್ದ ಬಾಬ ಕನ್ನಡಿಗರ ಸಲುವಾಗಿ ಕೆಲಸ ಮಾಡಿದರು. ಆ ದಿನಗಳಲ್ಲಿ ಅವರ ನೆರವನ್ನು ಇಂದಿಗೂ ಚಿತ್ರೋದ್ಯಮ ನೆನೆಯುತ್ತದೆ.

## ನಾಗೇಶ್ವರ ರಾವ್. ಜಿ

ನಾಗೇಶ್ವರರಾವ್ ಕೇಶಾಲಂಕಾರ ಕ್ಷೇತ್ರದಲ್ಲಿ ಸಾಕಷ್ಟು ಹೆಸರು ಮಾಡಿದಾರೆ. ಒಂಬತ್ತನೆ ತರಗತಿವರೆಗೂ ವ್ಯಾಸಂಗ. ನಂತರ ಹಣಕಾಸಿನ ಅಡಚಣೆಯಿಂದ ವ್ಯಾಸಂಗ ನಿಲ್ಲಿಸಿ ಮದ್ರಾಸಿನಲ್ಲಿ ಅಣ್ಣ ಪ್ರಕಾಶ್‌ರಾವ್ ಅವರೊಂದಿಗೆ ಕೇಶವಿನ್ಯಾಸ ಹಾಗೂ ತಯಾರಿಕೆಯಲ್ಲಿ ತರಬೇತಿ ಪಡೆದರು. ಅಣ್ಣನೊಂದಿಗೆ ಸುಮಾರು ೫೦೦ ಚಿತ್ರಗಳಿಗ ಕೆಲಸ ಮಾಡಿದಾರೆ. 'ಶ್ರೀ ಕೊಲ್ಲೂರು



ಮೂಕಾಂಬಿಕೆ' ಚಿತ್ರ ಇವರ ಪ್ರತಿಭೆಗೆ ಕನ್ನಡಿ ಹಿಡಿಯಿತು. 'ಶ್ರೀ ಶಿರಡಿ ಸಾಯಿಬಾಬಾ', 'ರಣಧೀರ', 'ಜೀವನ ಚೈತ್ರ' ಮೊದಲಾದ ಚಿತ್ರಗಳಲ್ಲಿನ ಕೆಲಸ ಗಮನಾರ್ಹವೆನಿಸುವಂಥದ್ದು. 'ಮುತ್ತಿನಹಾರ' ಚಿತ್ರದ ನಂತರ ವಿಷ್ಣುವರ್ಧನ್ ಅವರಿಗೆ ಇವರು ತಯಾರಿಸಿದ ವಿಗ್‌ಗಳೇ ಇಷ್ಟವಾಗುತ್ತಿದ್ದವು. ಕಲಾವಿದರೆಲ್ಲ ತುಂಬ ಪ್ರೀತಿಸುವ ವ್ಯಕ್ತಿತ್ವ ಇವರದು.

## ನಾಯಕ್.ಎಂ.ಎಸ್

ಉದ್ಯಮಿ ನಾಯಕ್‌ರವರು ಚಿತ್ರರಂಗದಿಂದ ಆಕರ್ಷಿತರಾದರು. ಮೂಲತಃ ಮದ್ರಾಸಿನವರು. ಅಮೃತಕಲಾ ಪ್ರೊಡಕ್ಷನ್ಸ್ ಲಾಂಛನದಲ್ಲಿ ಇವರು ನಿರ್ಮಿಸಿದ ಪ್ರಥಮ ಚಿತ್ರ 'ಶ್ರೀ



ರಾಮಾಂಜನೇಯ ಯುದ್ಧ'. ಇವರೇ ನಿರ್ದೇಶಿಸಿದರು. ಚಿತ್ರ ಯಶಸ್ವಿಯಾಯಿತು. 'ಒಂದೇ ಬಳ್ಳಿಯ ಹೂಗಳು' (೧೯೬೭) ಮತ್ತು 'ಮನಶ್ಶಾಂತಿ' (೧೯೬೯) ನಾಯಕ್‌ರವರು ನಿರ್ದೇಶಿಸಿದ ಇತರ ಚಿತ್ರಗಳು. ನಾಯಕ್‌ರವರ ಮಗಳು ಚಂದ್ರಕಲಾ ಅನೇಕ ಕನ್ನಡ ಚಿತ್ರಗಳ ನಾಯಕಿಯಾಗಿ ಅಭಿನಯಿಸಿದರು.

## ನಾಯ್ಡು .ಡಿ.ಆರ್

ಸದಭಿರುಚಿಯ ಚಿತ್ರ ನಿರ್ಮಾಪಕರಲ್ಲೊಬ್ಬರು ಡಿ.ಆರ್.ನಾಯ್ಡು. ಬೇರೆ ಉದ್ಯಮಗಳನ್ನು ನಡೆಸುತ್ತಿದರು. ಆದರೆ ಕನ್ನಡ ಚಲನಚಿತ್ರರಂಗದಲ್ಲಿ ಒಳ್ಳೆಯ



ಸಾಧನೆಗಳನ್ನು ಮಾಡಬೇಕೆಂಬ ಬಯಕೆಯಿಂದ ಈ ಕ್ಷೇತ್ರಕ್ಕೂ ಬಂದರು. ಶ್ಯಾಂ ಪ್ರಸಾದ್ ಮೂವೀಸ್ ಲಾಂಛನದಲ್ಲಿ ಅವರು ನಿರ್ಮಿಸಿದ ಮೊದಲನೆಯ ಚಿತ್ರ 'ಭಕ್ತ ಕನಕದಾಸ' (೧೯೬೦). ವೈ.ಆರ್.ಸ್ವಾಮಿಯವರ ನಿರ್ದೇಶನ, ರಾಜಕುಮಾರ್ ಅವರ ಅಮೋಘ ಅಭಿನಯ, ವೆಂಕಟರಾಜುರವರ ಸ್ಮರಣೀಯ ಸಂಗೀತದ ಈ ಚಿತ್ರಕೆ ಕೇಂದ್ರ ಸರ್ಕಾರದ ಅರ್ಹತಾ ಪತ್ರವನ್ನೂ ಹೇರಳವಾದ ಜನಪ್ರಿಯತೆಯನ್ನೂ ತಂದುಕೊಟ್ಟಿತು. ಇದರಿಂದ ಸ್ಫೂರ್ತಿಗೊಂಡ ನಾಯ್ಡುರವರು ಕನ್ನಡ ಚಿತ್ರರಂಗದಲ್ಲೇ ನೆಲೆನಿಂತರು. ಅವರು ನಿರ್ಮಿಸಿದ ಚಿತ್ರಗಳು 'ಸ್ವರ್ಣಗೌರಿ' (೧೯೬೨), 'ಜೀವನ ತರಂಗ' (೧೯೬೩), 'ನವಕೋಟಿ ನಾರಾಯಣ' (೧೯೬೪), 'ಸಿ.ಐ.ಡಿ. ೭೨' (೧೯೭೩) ಮತ್ತು 'ನಂದಗೋಕುಲ' (೧೯೭೨). ಇವರು ಕನ್ನಡ ಚಲನಚಿತ್ರ ಪತ್ರಕರ್ತರೊಡನೆ ಆತ್ಮೀಯ ಮೈತ್ರಿಯನ್ನು ಹೊಂದಿದ್ದರು.

## ನಾರಾಯಣ್.ಎಸ್

ಸಹಾಯಕ ನಿರ್ದೇಶಕರಾಗಿ ಚಿತ್ರರಂಗ ಪ್ರವೇಶ. ನಿರ್ದೇಶಕರಾಗಿ ಬಡ್ತಿ ಪಡೆದು ಯಶಸ್ಸನ್ನು ಗಳಿಸಿ ನಂತರ ನಾಯಕರಾಗಿಯೂ ಹೆಸರು ಮಾಡಿದವರು ಎಸ್.ನಾರಾಯಣ್. ಚಿತ್ರರಂಗ ಪ್ರವೇಶಿಸಿದ್ದು ೧೯೮೫ರಲ್ಲಿ. ಭಾರ್ಗವ, ಎ.ಟಿ.ರಘು, ರಾಜಕಿಶೋರ್ ಅವರ ಬಳಿ ಅನುಭವ ಗಳಿಸಿದರು. ನಂತರ ಸ್ವತಂತ್ರ ನಿರ್ದೇಶಕನಾಗಿ 'ಚೈತ್ರದ ಪ್ರೇಮಾಂಜಲಿ' ಮೂಲಕ ೧೯೯೨ರಲ್ಲಿ ಬೆಳಕಿಗೆ ಬಂದರು. ಅಪೂರ್ವ ಯಶಸ್ಸು ಗಳಿಸಿದ ಆ ಚಿತ್ರ ನಾರಾಯಣ್ ಅವರಿಗೆ ಹಲವು ಅವಕಾಶಗಳನ್ನು ತಂದಿತು. ಹಲವು ಚಿತ್ರಗಳಿಗೆ ಚಿತ್ರಕತೆ, ಸಂಭಾಷಣೆ, ಗೀತೆಗಳನ್ನು ರಚಿಸಿದ್ದಾರೆ. 'ಗುಲಾಬಿ', 'ತವರಿನ ತೊಟ್ಟಿಲು', 'ನಿಘಾತ', 'ಮಹಾಭಾರತ' ಮೊದಲಾದವು ಅವರ ನಿರ್ದೇಶನವಿದ್ದ ಚಿತ್ರಗಳು. 'ಭಾಮ ಸತ್ಯ ಭಾಮ' ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿ,



ನಾಯಕನಾಗಿ ಅಭಿನಯಿಸಿದರು. ಚಿತ್ರದ ಯಶಸ್ಸು ಅವರನ್ನು ನಾಯಕರನ್ನಾಗಿ ಚಿತ್ರರಂಗದಲ್ಲಿ ಗುರುತಿಸುವಂತೆ ಮಾಡಿತು. ನಂತರ ಅವರು ಅಭಿನಯಿಸಿ ಸ್ವತಃ ನಿರ್ದೇಶಿಸಿದ 'ನನ್ನವಳು ನನ್ನವಳು', 'ಅಂಜಲಿ ಗೀತಾಂಜಲಿ' ಚಿತ್ರಗಳು ಅವರನ್ನು ನಾಯಕ ಸ್ಥಾನದಲ್ಲಿ ಸ್ಥಿರಗೊಳಿಸಿತು. ರಾಜೇಂದ್ರಸಿಂಗ್ ಬಾಬು ನಿರ್ದೇಶನದ 'ಕುರಿಗಳು ಸಾರ್ ಕುರಿಗಳು' ಅವರ ಅಭಿನಯದ ಮತ್ತೊಂದು ಜನಪ್ರಿಯ ಚಿತ್ರ. ನಾರಾಯಣ್ ನಿರ್ದೇಶನದ, ರಾಜಕುಮಾರ್ ಅಭಿನಯದ 'ಶಬ್ದವೇಧಿ', 'ವಿಷ್ಣುವರ್ಧನ್ ಅಭಿನಯದ 'ವೀರಪ್ಪನಾಯಕ', 'ಸೂರ್ಯವಂಶ', ಶಿವರಾಜ್‌ಕುಮಾರ್ ಜೊತೆಯಾಗಿ ಅಭಿನಯಿಸಿದ 'ಗಲಾಟೆ ಅಳಿಯಂದ್ರು' ನಾರಾಯಣ್‌ಗೆ ಹೆಸರು ತಂದ ಚಿತ್ರಗಳು.

## ನಾರಾಯಣ್ ನಜರೆ

ವಸ್ತ್ರವಿನ್ಯಾಸಗಾರ. ನಾರಾಯಣರಾವ್



ಹುಟ್ಟಿದ್ದು ತುಮಕೂರಿನಲ್ಲಿ. ನಾಲ್ಕನೇ ತರಗತಿಯವರೆಗೂ ಓದಿದ ಇವರು ನಂತರ ಜೀವನೋಪಾಯಕ್ಕಾಗಿ ಬೆಂಗಳೂರಿಗೆ ಬಂದರು. ಬೆಂಗಳೂರಿನಲ್ಲಿ ನಜರೆ ಟೈಲರ್ಸ್ ಎಂಬ ಚಿಕ್ಕದೊಂದು ಅಂಗಡಿಯನ್ನು ಪ್ರಾರಂಭಿಸಿದರು. ನಂತರ ನಜರೆ ಟೆಕ್ಸ್‌ಟೈಲ್ಸ್ ಎಂದು ಪರಿವರ್ತನೆಗೊಂಡಿತು. ಗಾಂಧಿನಗರದ ಚಿತ್ರರಂಗದ ಮಂದಿಯ ಪರಿಚಯವಾಯಿತು. ರಾಜಕುಮಾರ್ ಅವರ ನಾಯಕತ್ವದ 'ಭಾಗ್ಯದ ಬಾಗಿಲು' ಚಿತ್ರದಲ್ಲಿ ಕಾಸ್ಟ್ಯೂಮ್ ಡಿಸೈನರ್ ಆಗಿ ಚಿತ್ರರಂಗ ಪ್ರವೇಶಿಸಿದರು. 'ಗಂಧದ ಗುಡಿ', 'ಎರಡು ಕನಸು', 'ನಾಗರ ಹಾವು', 'ಬೆಸುಗೆ', 'ಮಾನಸಸರೋವರ' ಮೊದಲಾದವು ಇವರು ವಸ್ತ್ರವಿನ್ಯಾಸಕಾರರಾಗಿ ಕಾರ್ಯ ನಿರ್ವಹಿಸಿದ ಮುಖ್ಯ ಚಿತ್ರಗಳಲ್ಲಿ ಕೆಲವು. ನಿರ್ಮಾಪಕರಾಗಿ ೧೯೭೮ರಲ್ಲಿ 'ಅಮರನಾಥ್' ಚಿತ್ರವನ್ನು ನಿರ್ಮಿಸಿ ಅಂಬರೀಷ್ ಅವರನ್ನು ನಾಯಕನನ್ನಾಗಿ ಮಾಡಿದರು. ನಂತರದ ದಿನಗಳಲ್ಲಿ ಹಂಚಿಕೆದಾರರಾಗಿ 'ಚಕ್ರವರ್ತಿ', 'ಕಾಳಿಂಗಸರ್ಪ' ಮುಂತಾದ ಚಿತ್ರಗಳನ್ನು ವಿತರಣೆ ಮಾಡಿದ್ದಾರೆ.

## ನಾರಾಯಣ ರೆಡ್ಡಿ.ಪಿ

'ನವಯುಗ ಪಿಕ್ಚರ್ಸ್' ಕನ್ನಡದ ಶ್ರೇಷ್ಠ ಚಿತ್ರಗಳನ್ನು ತೆರೆಗೆ ತಂದ ಹೆಗ್ಗಳಿಕೆಯಿರುವ ವಿತರಣಾ ಸಂಸ್ಥೆ. ೧೯೭೨ರಲ್ಲಿ ಪ್ರಾರಂಭವಾಯಿತು. ನಾರಾಯಣರೆಡ್ಡಿಯವರೊಂದಿಗೆ



ಮ್ಯಾನೇಜಿಂಗ್ ಪಾರ್ಟ್‌ನರ್ ಆಗಿ ಸಿ.ಎನ್.ಚಾರ್ ಅವರು ಇದ್ದರು. ಸುಮಾರು ಇನ್ನೂರಕ್ಕೂ ಹೆಚ್ಚು ಚಿತ್ರಗಳನ್ನು ವಿತರಿಸಿದ್ದಾರೆ. ತೆಲುಗು, ತಮಿಳು, ಹಿಂದಿ ಚಿತ್ರಗಳಲ್ಲದೆ ಪ್ರಶಸ್ತಿ ವಿಜೇತ ಕನ್ನಡ ಚಿತ್ರಗಳೆಲ್ಲವು ಈ ಸಂಸ್ಥೆಯಿಂದ ತೆರೆಗೆ ಬರಲು ಸಾಧ್ಯವಾಯಿತು. ಸಂಸ್ಥೆಯು ಪ್ರಾರಂಭವಾದಾಗ ವಿತರಿಸಿದ ಮೊದಲ ಚಿತ್ರ 'ಶ್ರೀ ಚಾಮುಂಡೇಶ್ವರಿ ಮಹಿಮೆ'. ಕನ್ನಡದ ಪ್ರತಿಷ್ಠಿತ ಚಿತ್ರಗಳಾದ 'ಹಂಸಗೀತೆ', 'ಕಂಕಣ', 'ಚೋಮನ ದುಡಿ', 'ಭಾಗ್ಯಜ್ಯೋತಿ', 'ಫಲಿತಾಂಶ' ಮುಖ್ಯವಾಗಿ ಹೆಸರಿಸಬಹುದಾದ ಚಿತ್ರಗಳು. ನಷ್ಟವನ್ನು ಲೆಕ್ಕಿಸದೆ ಉತ್ತಮ ಅಭಿರುಚಿಯ ಚಿತ್ರಗಳನ್ನು ವಿತರಿಸಿದರು. ೧೯೭೩ರಲ್ಲಿ ಪಾಲುದಾರಿಕೆ ಹೋಗಿ ನಾರಾಯಣರೆಡ್ಡಿಯವರೊಬ್ಬರೇ ನಿರ್ವಹಿಸಬೇಕಾಯಿತು. 'ನವಯುಗ ಪಿಕ್ಚರ್ಸ್' ಹೆಸರಿನಲ್ಲೇ ಸಂಸ್ಥೆಯನ್ನು ನಡೆಸಿಕೊಂಡು ಬಂದರು. ಜೊತೆಯಲ್ಲಿಯೇ 'ಯುನೈಟೆಡ್ ಆ್ಯಡ್ಸ್' ಪತ್ರಿಕಾ ಜಾಹಿರಾತು ಸಂಸ್ಥೆ ನಡೆಸಿಕೊಂಡು ಬಂದಿರುವ ಇವರು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ಕಾರ್ಯದರ್ಶಿಗಳಾಗಿ ವಲಯ ಸಮಿತಿ ಸದಸ್ಯರಾಗಿ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಕೆಲಸ ಮಾಡಿದ ಜನಪ್ರಿಯ ವ್ಯಕ್ತಿ.

## ನಿವೇದಿತಾ ಜೈನ್

ಮಾಡೆಲಿಂಗ್‌ನಿಂದ ಚಿತ್ರರಂಗಕ್ಕೆ ಬಂದ ಬೆಂಗಳೂರಿನ ಹುಡುಗಿ. ೧೯೯೭ರಲ್ಲಿ ಶಿವಮಣಿ ನಿರ್ದೇಶನದ ಶಿವರಾಜಕುಮಾರ್ ನಾಯಕತ್ವದ 'ಶಿವಸೈನ್ಯ' ಚಿತ್ರದಿಂದ



ಚಿತ್ರರಂಗಕ್ಕೆ ಬಂದ ನಿವೇದಿತಾ ಸಾಕಷ್ಟು ಅವಕಾಶಗಳನ್ನು ಪಡೆದರು. 'ಶಿವರಂಜನಿ', 'ಸೂತ್ರಧಾರ', 'ಪ್ರೇಮ ರಾಗ ಹಾಡು ಗೆಳತಿ', 'ಬಾಳಿನ ದಾರಿ', 'ಬಾಳಿದ ಮನೆ', 'ಅಮೃತ ವರ್ಷಿಣಿ', 'ನೀ ಮುಡಿದಾ ಮಲ್ಲಿಗೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಚಿತ್ರರಂಗದಲ್ಲಿ ಸಾಕಷ್ಟು ಅವಕಾಶಗಳನ್ನು ಗಳಿಸುತ್ತಿದ್ದ ಸಮಯದಲ್ಲಿಯೇ ದುರಂತವೊಂದರಲ್ಲಿ ೧೯೯೮ರಲ್ಲಿ ಸಾವನ್ನಪ್ಪಿದರು.

## ಪಂಚಾಕ್ಷರಪ್ಪ.ಹೆಚ್

ಹಿರಿಯ ಹಂಚಿಕೆದಾರರು ಹಾಗೂ ಪ್ರದರ್ಶಕರು ಆದ ಹೆಚ್.ಪಂಚಾಕ್ಷರಪ್ಪ ಶಿವಮೊಗ್ಗದವರು. ೧೯೬೫ರಿಂದ ಚಲನಚಿತ್ರ



ಪ್ರದರ್ಶಕರಾಗಿ, ೧೯೭೬ರಿಂದ ಸ್ವಾಮಿತಿಯಲ್ಲಿ ಸಂಗಂ ಚಿತ್ರಮಂದಿರದ ಮಾಲೀಕರಾಗಿ ಮತ್ತು ೧೯೮೩ರಿಂದ ಶಿವಮೊಗ್ಗದ ಶ್ರೀ ವಿನಾಯಕ ಫಿಲಮ್ಸ್‌ನ ಮಾಲೀಕರಾಗಿ, ಚಲನಚಿತ್ರ ಹಂಚಿಕೆದಾರರಾಗಿ ಸತತವಾಗಿ ೪೦ ವರ್ಷಗಳಿಂದ ತಮ್ಮನ್ನು ಚಿತ್ರೋದ್ಯಮದಲ್ಲಿ ತೊಡಗಿಸಿಕೊಂಡಿದ್ದಾರೆ.

## ಪಂಢರಿಬಾಯಿ.ಎಂ

ನಾಯಕಿಯಾಗಿ-ಪೋಷಕನಟಿಯಾಗಿ ಚಿರಪರಿಚಿತ ಕಲಾವಿದೆ. ಉತ್ತರಕನ್ನಡ ಜಿಲ್ಲೆಯ ಭಟ್ಕಳ ಹುಟ್ಟೂರು. ಜನನ : ೧೯೨೮. ತಂದೆ ರಂಗರಾವ್ ಕೀರ್ತನಕಾರರು. ಸಹೋದರ ವಿಮಲಾನಂದದಾಸ್ ಸಹ ಕೀರ್ತನಕಾರ



ಹಾಗೂ ರಂಗಭೂಮಿ ನಟ. ದಾಸರು ಕಟ್ಟಿದ 'ಆದರ್ಶ ನಾಟಕ ಸಭಾ'ದಲ್ಲಿ ಒಮ್ಮೆ ನಾಯಕಿ ಗೈರು ಹಾಜರಾದಾಗ ಪಂಢರಿಬಾಯಿ ಆ ಪಾತ್ರ ಮಾಡಬೇಕಾಗಿ ಬಂದು ರಂಗಭೂಮಿ ಪ್ರವೇಶ. ಪಿಟೀಲು ಚೌಡಯ್ಯನವರು ನಿರ್ಮಿಸಿದ 'ವಾಣಿ' (೧೯೪೩) ಚಿತ್ರದಲ್ಲಿ ಪಾತ್ರವೊಂದನ್ನು ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಗುಣಸಾಗರಿ' (೧೯೫೩) ಯಲ್ಲಿ ಹೊನ್ನಪ್ಪ ಭಾಗವತರ್ ಎದುರು ನಾಯಕಿಯಾಗಿ ಅಭಿನಯಿಸಿದರು. 'ಬೇಡರ ಕಣ್ಣಪ್ಪ'ದಲ್ಲಿ ರಾಜಕುಮಾರ್ ಅವರ ಮೊದಲ ನಾಯಕಿಯೂ ಕೂಡ. ಪಾಂಡುರಂಗನ ಅನನ್ಯ ಭಕ್ತೆ. ಪಾಂಡುರಂಗ ಪ್ರೊಡಕ್ಷನ್ಸ್ ಲಾಂಛನದಲ್ಲಿ 'ಸಂತ ಸಖು', 'ರಾಯರ ಸೊಸೆ', 'ಅನುರಾಧ' ಚಿತ್ರಗಳನ್ನು ನಿರ್ಮಿಸಿದರು. ತೆಲುಗು, ತಮಿಳು, ಕನ್ನಡದಲ್ಲಿ ನಾಯಕಿಯಾಗಿ, ಪೋಷಕನಟಿಯಾಗಿ ಸುಮಾರು ೫೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಲ್ಲದೆ ಕಿರುತೆರೆಯಲ್ಲಿಯೂ ಅಭಿನಯಿಸಿದ್ದಾರೆ. 'ಶ್ರೀಕೃಷ್ಣ ಚೈತನ್ಯ ನಾಟಕಸಭಾ' ಸಂಸ್ಥೆಯ ಮೂಲಕ ರಾಜ್ಯದಾದ್ಯಂತ ಪ್ರವಾಸ ಮಾಡಿ ನಾಟಕಗಳನ್ನು ಪ್ರದರ್ಶಿಸಿದ್ದಾರೆ. 'ಬೆಳ್ಳಿಮೋಡ', 'ನಮ್ಮ ಮಕ್ಕಳು' ಚಿತ್ರಗಳಲ್ಲಿ ಅಭಿನಯಿಸಿ 'ಅತ್ಯುತ್ತಮ ಪೋಷಕ ನಟಿ' ಪ್ರಶಸ್ತಿ ಪಡೆದಿದ್ದಾರೆ. ರಾಜ್ಯ ಪ್ರಶಸ್ತಿಯೂ ಸಂದಿದೆ. ರಾಜ್ಯ ಸರ್ಕಾರ ಒಂದು ಲಕ್ಷ ರೂ. ಮೌಲ್ಯದ ಡಾ||ರಾಜಕುಮಾರ್ ಪ್ರಶಸ್ತಿ ನೀಡಿ ಗೌರವಿಸಿದೆ. ನೂರಾರು ಭಕ್ತಿಗೀತೆಗಳನ್ನು ರಚಿಸಿದ್ದಾರೆ. ೧೯೯೪ರ ಡಿಸೆಂಬರ್ ೧೩ರಂದು ಮದರಾಸಿನಿಂದ ಬೆಂಗಳೂರಿಗೆ ಬರುವಾಗ ಅಪಘಾತಕ್ಕೀಡಾಗಿ ತಮ್ಮ ಎಡಗೈಯನ್ನು ಕಳೆದುಕೊಂಡರು. ನಂತರ ಚೇತರಿಸಿಕೊಂಡು ಕಿರುತೆರೆಯಲ್ಲಿ ಅಭಿನಯಿಸತೊಡಗಿದರು.

## ಪಂತುಲು.ಬಿ.ಆರ್ (೧೯೧೧-೭೪)

ನಟ, ನಿರ್ದೇಶಕ, ನಿರ್ಮಾಪಕ,



ರಂಗಭೂಮಿ ನಟ. ಕೋಲಾರ ಜಿಲ್ಲೆಯ ಬಂಗಾರಪೇಟೆ ಸಮೀಪದ ಬುಡಗೂರಿನಲ್ಲಿ ಜನನ (ಜುಲೈ ೨೬, ೧೯೧೧). ಬುಡಗೂರು ರಾಮಕೃಷ್ಣ ವೃತ್ತಿಯಲ್ಲಿ ಶಿಕ್ಷಕರಾಗಿ 'ಪಂತುಲು' ಆದರು. ಪೀರ್ ಸಾಹೇಬರ ಚಂದ್ರಕಲಾ ನಾಟಕ ಮಂಡಳಿ ಮೂಲಕ ರಂಗಭೂಮಿ ಪ್ರವೇಶಿಸಿದರು. ಗುಬ್ಬಿ ನಾಟಕ ಮಂಡಲಿಯಲ್ಲಿ ಕೆಲಕಾಲ ಇದ್ದು, ತಾವೇ ಕಲಾಸೇವಾ ನಾಟಕ ಮಂಡಳಿ ರೂಪಿಸಿದರು. 'ಸಂಸಾರನೌಕ' (೧೯೩೬) ಚಿತ್ರದ ಮೂಲಕ ಕನ್ನಡ ಚಿತ್ರರಂಗ ಪ್ರವೇಶ. ಪದ್ಮಿನಿ ಪಿಕ್ಚರ್ಸ್ ಸಂಸ್ಥೆಯಡಿ 'ಶಿವಶರಣೆ ನಂಬೆಕ್ಕ' (೧೯೫೫) ಚಿತ್ರ ನಿರ್ಮಿಸಿದರು. ಪದ್ಮಿನಿ ಪಿಕ್ಚರ್ಸ್ ಲಾಂಛನದಲ್ಲಿನ ಹಲವು ಚಿತ್ರಗಳನ್ನು ಪಂತುಲು ಅವರೇ ನಿರ್ದೇಶಿಸಿದರು. 'ರತ್ನಗಿರಿ ರಹಸ್ಯ', 'ಸ್ಕೂಲ್ ಮಾಸ್ಟರ್', 'ಕಿತ್ತೂರು ಚೆನ್ನಮ್ಮ', 'ಶ್ರೀಕೃಷ್ಣದೇವರಾಯ' ಮುಂತಾದವು ಯಶಸ್ವೀ ಚಿತ್ರಗಳು. ಇವರ ಚಿತ್ರಗಳು ರಾಷ್ಟ್ರ ಹಾಗೂ ರಾಜ್ಯ ಮಟ್ಟದ ಪ್ರಶಸ್ತಿಗೆ ಪಾತ್ರವಾದವು. ಕಲ್ಪನಾ ಮೊದಲಾದ ಅನೇಕ ಪ್ರತಿಭೆಗಳನ್ನು ಚಿತ್ರರಂಗಕ್ಕೆ ತಂದರು. ಕನ್ನಡದಲ್ಲಿ ಶ್ರೀಮಂತ ಚಿತ್ರಗಳ ನಿರ್ಮಾಣದ ಪರಂಪರೆಯನ್ನು ಪ್ರಾರಂಭಿಸಿದ್ದು ಅವರೇ. 'ಶ್ರೀಕೃಷ್ಣದೇವರಾಯ' ಚಿತ್ರದಲ್ಲಿ ತಿಮ್ಮರಸು ಪಾತ್ರದಲ್ಲಿ ನೀಡಿದ ಅಮೋಘ ಅಭಿನಯ ಕ್ಕಾಗಿ ರಾಜ್ಯ ಸರ್ಕಾರ ಅತ್ಯುತ್ತಮ ನಟ ಪ್ರಶಸ್ತಿ ನೀಡಿದ್ದನ್ನು ವಿನೀತವಾಗಿ

ತಿರಸ್ಕರಿಸಿದ ಪಂತುಲು ಈ ಪ್ರಶಸ್ತಿ ರಾಜಕುಮಾರ್ ಅವರಿಗೆ ಸಲ್ಲಬೇಕಾಗಿತ್ತು ಎಂದರು. ಅವರು ನಿರ್ದೇಶಿಸಿದ 'ಸ್ಕೂಲ್‌ಮಾಸ್ಟರ್' (೧೯೫೪), 'ಕಿತ್ತೂರು ಚೆನ್ನಮ್ಮ' (೧೯೬೧) ಚಿತ್ರಗಳು ರಾಷ್ಟ್ರಪತಿಗಳ ಅರ್ಹತಾ ಪ್ರಶಸ್ತಿ ಪಡೆದವು. ಪಂತುಲು ಅವರು ಕನ್ನಡ ಚಿತ್ರರಂಗಕ್ಕೇ ಸೀಮಿತವಾಗದೆ ತಮಿಳು ಚಿತ್ರರಂಗದಲ್ಲಿಯೂ ಯಶಸ್ವಿಯಾದವರು. ಅವರ ತಮಿಳು ಚಿತ್ರಗಳಾದ 'ವೀರಪಾಂಡ್ಯ ಕಟ್ಟ ಬೊಮ್ಮನ್' ಮತ್ತು 'ಕಪಲೋಟ್ಟಿಯ ತಮಿಳನ್' ಭಾರತೀಯ ಚಿತ್ರರಂಗದ ಇತಿಹಾಸಕ್ಕೆ ಒಂದು ಕೊಡುಗೆಯಾಗಿದೆ. ಕರಾರುವಾಕ್ಕಾದ ಹಣಕಾಸಿನ ವ್ಯವಹಾರ ಮತ್ತು ಶಿಸ್ತುಗಳನ್ನು ಕೊನೆಯವರೆಗೂ ಉಳಿಸಿಕೊಂಡು ಬಂದ ಮಹಾನ್ ವ್ಯಕ್ತಿ ಬಿ.ಆರ್.ಪಂತುಲು. ಅವರ ಸಹಾಯಕರಾಗಿದ್ದ ಪುಟ್ಟಣ್ಣ ಕಣಗಾಲ್ ಮುಂದೆ ಕನ್ನಡ ಚಿತ್ರರಂಗದ ಶ್ರೇಷ್ಠ ನಿರ್ದೇಶಕರಾದರು. ಕೊನೆ ಕೊನೆಯಲ್ಲಿ ಅವರ ಕೆಲವು ಚಲನಚಿತ್ರಗಳು ಸೋಲು ಕಂಡು ಅವರು ಆರ್ಥಿಕವಾಗಿ ಬಳಲಿದರು. 'ಕಾಲೇಜುರಂಗ' ಸಿದ್ಧತೆಯಲ್ಲಿದ್ದಾಗ ೬೩ನೆಯ ವಯಸ್ಸಿನಲ್ಲಿ (ಅಕ್ಟೋಬರ್ ೮, ೧೯೭೪) ನಿಧನರಾದರು.

## ಪಟ್ಟಾಭಿ ಆರೂರು

ದಕ್ಷಿಣ ಕನ್ನಡದವರಾದ ಆರೂರು ಪಟ್ಟಾಭಿಯವರು 'ಮಹಾತ್ಮ ಪಿಕ್ಚರ್ಸ್' ಸಂಸ್ಥೆಯಲ್ಲಿ ಸಹಾಯಕ ನಿರ್ದೇಶನ ಹಾಗೂ ಸಂಕಲನ ವೃತ್ತಿಗಳಲ್ಲಿ ತೊಡಗಿ ಅನುಭವ ಪಡೆದವರು. ಕೆಲವು ಚಿತ್ರಗಳಲ್ಲಿ ಸಣ್ಣಪುಟ್ಟ



ಪಾತ್ರಗಳಲ್ಲಿ ಅಭಿನಯಿಸಿದರು. ನಂತರ ಮಲೆಯಾಳಂನ ಸಾಂಸಾರಿಕ ಚಿತ್ರಗಳನ್ನು ಕನ್ನಡದಲ್ಲಿ ಡಬ್ಬಿಂಗ್ ಮಾಡುವ ಕಾಯಕ ಹಿಡಿದರು. ಜಗನ್ನಾಥ ಪ್ರೊಡಕ್ಷನ್‌ರವರು ೧೯೫೬ರಲ್ಲಿ ತಯಾರಿಸಿದ 'ಭಕ್ತ ವಿಜಯ' ಅವರ ಮೊದಲ ನಿರ್ದೇಶನದ ಕನ್ನಡ ಚಿತ್ರ. ಈ ಚಿತ್ರ ರಾಷ್ಟ್ರೀಯ ಅರ್ಹತಾ ಪತ್ರ ಪಡೆಯಿತು. ತುಳು ಚಿತ್ರರಂಗದಲ್ಲೂ ಪಟ್ಟಾಭಿಯವರು ಅನೇಕ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅತಿ ಹೆಚ್ಚು ತುಳು ಭಾಷಾ ಚಿತ್ರಗಳ ನಿರ್ದೇಶಕರೂ ಪಟ್ಟಾಭಿಯವರೇ. ಕನ್ನಡದಲ್ಲಿ ೧೪ ಚಿತ್ರಗಳನ್ನು ನಿರ್ದೇಶಿಸಿದ ಪಟ್ಟಾಭಿಯವರ ಕೊನೆಯ ಚಿತ್ರ 'ನಾದಸುರಭಿ' (೧೯೮೬). ಈ ಚಿತ್ರದ ಮೂಲಕ ಯುವನಟ ಸುನಿಲ್‌ರನ್ನು ಚಿತ್ರರಂಗಕ್ಕೆ ಪರಿಚಯಿಸಿದರು. 'ಶುಕ್ರದೆಸೆ' (೧೯೫೭), 'ಸರ್ವಜ್ಞಮೂರ್ತಿ' (೧೯೬೫) ಮತ್ತು ರಾಜಕುಮಾರ್ ಅಭಿನಯದ ಚಿತ್ರಗಳ ತುಣುಕುಗಳ ಸಂಕಲನ 'ನಟಸಾರ್ವಭೌಮ' (೧೯೬೮) ಪಟ್ಟಾಭಿಯವರ ಪ್ರಮುಖ ಚಿತ್ರಗಳು.

## ಪಟ್ಟಾಭಿರಾಮ ರೆಡ್ಡಿ

ಹುಟ್ಟಿದ್ದು ಆಂಧ್ರಪ್ರದೇಶದ ನೆಲ್ಲೂರು (೧೯೧೯). ಕಲ್ಕತ್ತ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಅಧ್ಯಯನ. ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಗಣಿತಶಾಸ್ತ್ರದ ಅಭ್ಯಾಸ. 'ಮದರಾಸ್ ಪ್ಲೇಯರ್ಸ್ ಅಮೆಚೂರ್ ಥಿಯೇಟರ್ಸ್' ಸಂಸ್ಥೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಹಲವಾರು ನಾಟಕಗಳನ್ನು



ನಿರ್ಮಿಸಿ, ನಿರ್ದೇಶಿಸಿದರು. ರೆಡ್ಡಿಯವರು ೧೯೭೦ರಲ್ಲಿ ರಾಮಮನೋಹರ ಚಿತ್ರ ಲಾಂಛನದಲ್ಲಿ ಯು.ಆರ್.ಅನಂತಮೂರ್ತಿಯವರ ಕಾದಂಬರಿ 'ಸಂಸ್ಕಾರ'ವನ್ನು ಚಿತ್ರರೂಪಕ್ಕಿಳಿಸಿ ಕನ್ನಡದಲ್ಲಿ ಹೊಸ ಅಲೆಯ ಆಂದೋಲನವನ್ನೇ ಪ್ರಾರಂಭಿಸಿದರು. ಅನೇಕ ತೊಂದರೆಗಳನ್ನು, ಕಷ್ಟಗಳನ್ನು ಎದುರಿಸಬೇಕಾಗಿ ಬಂದ ಈ ಚಿತ್ರಕ್ಕೆ ರಾಷ್ಟ್ರಪತಿಗಳ ಚಿನ್ನದ ಪದಕ ದೊರೆಯಿತು. ಅನೇಕ ಅಂತಾರಾಷ್ಟ್ರೀಯ ಪ್ರಶಸ್ತಿಗಳು ಲಭ್ಯವಾದವು. ಚಿತ್ರ ಹತ್ತಾರು ಅಂತಾರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಭಾರತವನ್ನು ಪ್ರತಿನಿಧಿಸಿತು. ಈ ಚಿತ್ರದ ಮೂಲಕ ಗಿರೀಶ್ ಕಾರ್ನಾಡ್ ನಟರಾಗಿ ಚಿತ್ರರಂಗಕ್ಕೆ ಕಾಲಿಟ್ಟರು. ರೆಡ್ಡಿಯವರ ಮುಂದಿನ ಚಿತ್ರಗಳು 'ಚಂಡಮಾರುತ' (೧೯೭೭), 'ಶೃಂಗಾರಮಾಸ' (೧೯೮೪) ಮತ್ತು 'ದೇವರ ಕಾಡು' (೧೯೯೩). 'ಚಂಡಮಾರುತ' ತುರ್ತು ಪರಿಸ್ಥಿತಿಯ ವಿರುದ್ಧ ಧ್ವನಿಯೆತ್ತಿದ ಚಿತ್ರ. 'ಸಂಸ್ಕಾರ'ದಂತೆಯೇ ಸೆನ್ಸಾರ್ ಸಮಸ್ಯೆಗಳಿಗೆ ಸಿಕ್ಕಿಕೊಂಡಿತು. 'ಶೃಂಗಾರಮಾಸ' ಎರಡೇ ಪಾತ್ರಗಳ ಸುತ್ತ ಹೆಣೆಯಲಾದ ಪ್ರಯೋಗಾತ್ಮಕ ಚಿತ್ರ. 'ದೇವರ ಕಾಡು' ಪರಿಸರ ಸಮಸ್ಯೆಯನ್ನು ವಿಶ್ಲೇಷಿಸಿದ ಚಿತ್ರ. ೮೩ ವರ್ಷ ವಯಸ್ಸಿನ ರೆಡ್ಡಿಯವರು ಚಿತ್ರರಂಗದಿಂದ ವಿಶ್ರಾಂತರು.

## ಪಟೇಲ್.ಎ.ಎಂ (ಡಾ।)

'ಸೆಲೆಕ್ಟ್ ಪಿಕ್ಚರ್ಸ್ ಸರ್ಕ್ಯೂಟ್'ನ ಸ್ಥಾಪಕರು. ಬೆಂಗಳೂರಿನ ಅತಿ ಹಳೆಯ



ತಲೆಮಾರಿನ ವಿತರಕರು ಹಾಗೂ ಪ್ರದರ್ಶಕರು. ಗುಜರಾತಿ ಮೂಲದ ಇವರು ಬೆಂಗಳೂರಿನಲ್ಲಿ ಗುಜರಾತಿ ಚಿತ್ರಸಂಸ್ಥೆಗಳ ಸ್ಥಾಪನೆಗೆ ಕಾರಣಕರ್ತರು. ದಕ್ಷಿಣ ಭಾರತದಲ್ಲೇ ಅತಿ ದೊಡ್ಡ ವಿತರಣಾ ಸಂಸ್ಥೆ ಇವರದಾಗಿತ್ತು. ಐವತ್ತಕ್ಕೂ ಹೆಚ್ಚು ಚಿತ್ರಮಂದಿರಗಳನ್ನು ಸ್ಥಾಪನೆ ಮಾಡಿದರು. ಬೆಂಗಳೂರಿನಲ್ಲಿ ಸೆಲೆಕ್ಟ್, ಸಾಗರ್, ಪ್ರಭಾತ್ ಚಿತ್ರಮಂದಿರಗಳನ್ನು ನಡೆಸಿದವರು.

## ಪದಕಿ

ಮೈಸೂರಿನಲ್ಲಿ ಉತ್ತಮ ಚಲನಚಿತ್ರ ಮಂದಿರವೆಂಬ ಹೆಗ್ಗಳಿಕೆಯ 'ಶಾಂತಲಾ'ದ ಮಾಲೀಕರು. ಹಲವು ಯಶಸ್ವಿ ಕನ್ನಡ



ಚಿತ್ರಗಳನ್ನು ಪ್ರದರ್ಶಿಸಿದ್ದಾರೆ. ಮೈಸೂರು ವಲಯ ಪ್ರದರ್ಶಕ ಸಂಘದ ಪ್ರಮುಖ ರೂವಾರಿಗಳಲ್ಲೊಬ್ಬರು.

## ಪದ್ಮಪ್ರಿಯ

ಕನ್ನಡ ಚಿತ್ರರಂಗದಲ್ಲಿ ೭೦ರ ದಶಕದಲ್ಲಿ ಬಂದ ನಾಯಕಿ. ಮೈಸೂರು ಜಿಲ್ಲೆಯ ಟಿ.ನರಸೀಪುರದ ಭಾರಿ ಜಮೀನ್ದಾರ ಹುಂಡಿಸಾಹುಕಾರ್ ಕೃಷ್ಣಮಾಚಾರ್ಯರ



ಮರಿಮಗಳಾದ ಪದ್ಮಪ್ರಿಯ ಕನ್ನಡ ಚಿತ್ರರಂಗ ಪ್ರವೇಶಿಸಿದ್ದು 'ಬಂಗಾರದ ಗುಡಿ' ಚಿತ್ರದ ಮೂಲಕ. ನಂತರ 'ಲಕ್ಷ್ಮೀ ನಿವಾಸ', 'ಪ್ರೀತಿ ಮಾಡು ತಮಾಷೆ ನೋಡು', 'ನನ್ನ ರೋಷ ನೂರು ವರುಷ', 'ಊರಿಗ ಉಪಕಾರಿ', 'ಪಟ್ಟಣ್ಣಕ್ಕೆ ಬಂದ ಪತ್ನಿಯರು', 'ತಾಯಿಗೆ ತಕ್ಕ ಮಗ', 'ಶಂಕರ್ ಗುರು', 'ಬಾಡದ ಹೂ', 'ನಾರದ ವಿಜಯ' ಮೊದಲಾದ ಯಶಸ್ವಿ ಚಿತ್ರಗಳಲ್ಲಿ ಕನ್ನಡದ ಹೆಸರಾಂತ ನಾಯಕರೊಂದಿಗೆ ಅಭಿನಯ. ಪದ್ಮಪ್ರಿಯ ೧೯೮೩ರವರೆಗೆ ಕನ್ನಡ ತೆರೆಯ ಗ್ಲಾಮರ್ ಕನ್ಯೆಯಾಗಿದ್ದರು. ವಿವಾಹದ ನಂತರ ನಾಲ್ಕು ವರ್ಷ ಅಜ್ಞಾತವಾಸದಲ್ಲಿದ್ದು ಚಿತ್ರರಂಗ ಮರು ಪ್ರವೇಶ ಮಾಡಿದ್ದು 'ನಂಜುಂಡೇಶ್ವರ ಮಹಿಮೆ' ಚಿತ್ರದಲ್ಲಿ. ಅದೇ ಕೊನೆಯ ಚಿತ್ರವೂ ಹೌದು. ಪ್ರೇಕ್ಷಕರನ್ನು ರಂಜಿಸಿದ ಪದ್ಮಪ್ರಿಯ ಹೃದಯಾಘಾತದಿಂದ ನಿಧನರಾದರು.

## ಪದ್ಮಾ ಕುಮಟಾ

ಕನ್ನಡ ಚಿತ್ರರಂಗದ ಪೋಷಕ ನಟಿ. ಉತ್ತರ ಕನ್ನಡ ಜಿಲ್ಲೆಯ ಕುಮಟಾದವರು.



ಹಿಡಿದು ಬೆಳೆದದ್ದು ಶಿವಮೊಗ್ಗದಲ್ಲಿ. ತಂದೆ ಎಸ್.ಎಸ್.ಕುಮಟಾ ಹಿರಿಯ ಸಮಾಜವಾದಿ ಧುರೀಣ. ತಂದೆಯಿಂದ ಸಾಹಿತ್ಯ, ನಾಟಕದ ಗೀಳು ಹಚ್ಚಿಕೊಂಡ ಪದ್ಮಾ ಕುಮಟಾ ಬಿ.ವಿ.ಕಾರಂತ್ ನಿರ್ದೇಶನದ 'ಚೋಮನ ದುಡಿ' ಚಿತ್ರಕ್ಕೆ ಆಯ್ಕೆಯಾಗಿದ್ದು ಆಕಸ್ಮಿಕವಾಗಿ. ಆ ಚಿತ್ರದ ಮನೋಜ್ಞ ಅಭಿನಯಕ್ಕಾಗಿ ರಾಜ್ಯ ಸರ್ಕಾರದಿಂದ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿಯನ್ನು ಪಡೆದರು. (೧೯೭೫-೭೬). ನಂತರ ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಫಲಿತಾಂಶ', 'ಬಯಲುದಾರಿ' ಚಿತ್ರಗಳಲ್ಲಿ ಅಭಿನಯ. ನಂತರ ಬ್ಯಾಂಕೊಂದರಲ್ಲಿ ಉದ್ಯೋಗ. ೧೯೭೭ರಲ್ಲಿ ವಿವಾಹ. ವಿವಾಹದ ನಂತರ ಆಯ್ದ ಪಾತ್ರಗಳಲ್ಲಿ ಅಭಿನಯ. ಪೋಷಕ ನಟಿಯಾಗಿ ಮುಂದುವರಿಕೆ. ಸುಮಾರು ೪೫ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ ಪದ್ಮಾ 'ಅರಿವು' ನಂತಹ ಪ್ರಯೋಗಾತ್ಮಕ ಚಿತ್ರವನ್ನು ನಿರ್ಮಿಸುವ ಸಾಹಸ ಮಾಡಿದರು. ಪ್ರಸ್ತುತ ಕಿರುತೆರೆಗೆ ಪ್ರವೇಶ. 'ಇತಿಹಾಸ', 'ಕಾವ್ಯಾಂಜಲಿ' ಮೆಗಾ ಧಾರಾವಾಹಿಗಳಲ್ಲಿ ಅಭಿನಯ.

## ಪದ್ಮಾದೇವಿ.ಎಸ್.ಕೆ

ರಂಗಭೂಮಿ ಹಾಗೂ ಚಲನಚಿತ್ರ ಕಲಾವಿದೆ. ಬೆಂಗಳೂರು ಹುಟ್ಟೂರು. ಬಳ್ಳಾರಿ



ರಾಘವಾಚಾರ್ಯರ ಮೂಲಕ ರಂಗಭೂಮಿ ಪ್ರವೇಶಿಸಿದರು. ವಿದ್ಯಾವಂತೆ, ಗಾಯಕಿಯೂ ಹೌದು. ಹೆಚ್.ಎಲ್.ಎನ್.ಸಿಂಹ ಅವರ ನಾಟಕ ಕಂಪೆನಿಯಲ್ಲಿ ಅಭಿನಯಿಸಿದರು. ಸ್ವಂತ ನಾಟಕ ಸಂಸ್ಥೆಯನ್ನು ಕಟ್ಟಿದರು. 'ಭಕ್ತಧ್ರುವ' (೧೯೩೪) ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಸಂಸಾರನೌಕ' (೧೯೩೬) ಹೆಸರು ತಂದು ಕೊಟ್ಟ ಚಿತ್ರ. ಈ

ಚಿತ್ರದಲ್ಲಿ ನಾಲ್ಕು ಹಾಡುಗಳನ್ನು ಹಾಡಿದರು ಒಂದು ಹಾಡನ್ನು ಸ್ವತಃ ಇವರೇ ವೀಣೆ ನುಡಿಸಿಕೊಂಡು ಹಾಡಿದರು. 'ವಸಂತಸೇನ', 'ಭಕ್ತ ಸುಧಾಮ', 'ಜಾತಕ ಫಲ' ಚಿತ್ರಗಳಲ್ಲಿಯೂ ನಟಿಸಿದರು. 'ಭಕ್ತಸುಧಾಮ'ದಲ್ಲಿ ಮಧುಗಿರಿ ಮೀನಾಕ್ಷಿ ಎಂದು ಹೆಸರು ಬದಲಾಯಿಸಿಕೊಂಡರು. ಎರಡು ತೆಲುಗು ಚಿತ್ರಗಳಲ್ಲಿಯೂ ಅಭಿನಯಿಸಿದರು. ರಂಗಭೂಮಿಯಲ್ಲೇ ತೊಡಗಿಕೊಂಡು ಬಹಳ ಕಾಲ ಚಲನಚಿತ್ರದ ಅಭಿನಯ ನಿಲ್ಲಿಸಿದರು. 'ಮುಕ್ತಿ', 'ಅಮರ ಮಧುರ ಪ್ರೇಮ', 'ಸಂಕ್ರಾಂತಿ' ಚಿತ್ರಗಳಲ್ಲಿ ಅಭಿನಯಿಸಿದರು. ಗಿರೀಶ್ ಕಾಸರವಳ್ಳಿ ನಿರ್ದೇಶನದ 'ಕ್ರೌರ್ಯ' ಚಿತ್ರದ ರೇಣುಕಮ್ಮ ಮುರಗೊಡು ಅವರ ಪಾತ್ರಕ್ಕೆ ಕಂಠದಾನ ಮಾಡಿದರು. ಮಗ ನಂದಕಿಶೋರ್ ನಿರ್ದೇಶಿಸಿದ 'ಕಿರಣ' ಟೆಲಿ ಫಿಲಂನಲ್ಲಿ ಅಜ್ಜಿ ಪಾತ್ರ ಮಾಡಿದರು. ಆಕಾಶವಾಣಿಯಲ್ಲಿ ಅನೇಕ ವರ್ಷಗಳು ಕೆಲಸ ಮಾಡಿದ ಪದ್ಮಾದೇವಿಯವರು ಆ ಮಾಧ್ಯಮದಲ್ಲಿಯೂ ಹೆಸರು ಮಾಡಿದರು.

### ಪದ್ಮಾವಾಸಂತಿ



ಇದುವರೆಗೆ ೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಮತ್ತು ಹಲವಾರು ಕಿರುತೆರೆಯ ಧಾರಾವಾಹಿಗಳಲ್ಲಿ ಅಭಿನಯಿಸಿ ಪ್ರೇಕ್ಷಕರ ಮೆಚ್ಚುಗೆ ಪಡೆದಿರುವ ಪದ್ಮಾವಾಸಂತಿ ಹೆಚ್ಚಳವೆಂದರೆ ತಾವು ಅಭಿನಯಿಸಿದ ಮೊದಲನೆಯ ಚಿತ್ರದಲ್ಲಿಯೇ ರಾಜ್ಯ ಸರ್ಕಾರದಿಂದ ಅತ್ಯುತ್ತಮ ನಟಿ ಪ್ರಶಸ್ತಿ ಗಳಿಸಿಕೊಂಡಿದ್ದು, ಆ ಚಿತ್ರ ಪುಟ್ಟಣ್ಣ ಕಣಗಾಲ್ ನಿರ್ದೇಶಿಸಿದ 'ಮಾನಸ ಸರೋವರ'. ಅದೇ ಈಕೆಯ ಪ್ರಥಮ ಚಿತ್ರ ಕೂಡಾ. ಪದ್ಮಾ ಬಿ.ಎ.ಪದವೀಧರೆ ಹಾಗೂ ಭರತನಾಟ್ಯ ಕಲಾವಿದೆ. ಈಕೆ ಕಾಲೇಜು ವಿದ್ಯಾರ್ಥಿನಿಯಾಗಿದ್ದಾಗಿನಿಂದಲೇ ಅನೇಕ ಭರತನಾಟ್ಯ ಕಾರ್ಯಕ್ರಮಗಳನ್ನು ನೀಡಿದವರು. ಪುಟ್ಟಣ್ಣನವರು ಈಕೆಯ ಪ್ರತಿಭೆಯನ್ನು ಮೆಚ್ಚಿ 'ಧರಣಿ ಮಂಡಲ ಮಧ್ಯದೊಳಗೆ' ಮತ್ತು 'ಅಮೃತ ಘಳಿಗೆ' ಚಿತ್ರಗಳಲ್ಲಿಯೂ ಉತ್ತಮ ಪಾತ್ರಗಳನ್ನು ನೀಡಿದರು. ತೆಲುಗು, ತಮಿಳು, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳನ್ನು ಚೆನ್ನಾಗಿ ಬಲ್ಲ ಈಕೆ ಗಂಭೀರವಾದ ಅಭಿನಯಕ್ಕೆ ಹೆಸರಾದವರು. ಕಿರುತೆರೆಯಲ್ಲೂ ಜನಪ್ರಿಯರಾಗಿದ್ದಾರೆ.

### ಪವಿತ್ರ ಲೋಕೇಶ್

ಕನ್ನಡ ಚಿತ್ರರಂಗದಲ್ಲಿ ಸುದೀರ್ಘ ಕಾಲ ಜನಪ್ರಿಯ ನಟರಾಗಿ ಮೆರೆದು ಕೊನೆಗೆ



ಮರಂತದಲ್ಲಿ ತಮ್ಮ ಜೀವನವನ್ನು ಅಂತ್ಯಗೊಳಿಸಿಕೊಂಡ ಮೈಸೂರು ಲೋಕೇಶ್‌ರವರ ಪುತ್ರಿ ಪವಿತ್ರಾ ಲೋಕೇಶ್ ಉತ್ತಮ ನಟಿ. ಹೆಚ್ಚಿನ ಅವಕಾಶಗಳಿಂದ ವಂಚಿತರಾದ ಆಕೆ ೧೯೯೪ರಲ್ಲಿ ಎಸ್.ಟಿ.ಜಯರಾಮ ರೆಡ್ಡಿ ನಿರ್ದೇಶನದ 'ಮಿ.ಅಭಿಷೇಕ್' ಚಿತ್ರದಿಂದ ಚಿತ್ರೋದ್ಯಮವನ್ನು ಪ್ರವೇಶಿಸಿ ಹಲವು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವು 'ಜನುಮದ ಜೋಡಿ', 'ತವರಿನ ತೇರು', 'ಮಾವನ ಮಗಳು', 'ಉಲ್ಟಾ ಪಲ್ಟಾ', 'ಹೆಂಡ್ತಿಗ್ಹೇಳ್ತೀನಿ', 'ಕುರುಬನ ರಾಣಿ'. 'ಹಬ್ಬ', 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕು' ಮತ್ತು 'ಯಜಮಾನ'. ಅನೇಕ ಕಿರುತೆರೆಯ ಧಾರಾವಾಹಿಗಳಲ್ಲಿಯೂ ಮುಖ್ಯ ಪಾತ್ರಗಳಲ್ಲಿ ಅಭಿನಯಿಸಿರುವ ಪವಿತ್ರ ಬಿ.ಕಾಂ.ಪದವೀಧರೆ. ಮೈಸೂರಿನಲ್ಲಿಯೇ ನೆಲೆಸಿ ಅಲ್ಲಿಯ ಕೀರ್ತಿ ಫಿಲಂ ಇನ್‌ಸ್ಟಿಟ್ಯೂಟ್‌ನ ಪ್ರಾಂಶುಪಾಲರಾಗಿಯೂ ಕೆಲಸ ಮಾಡುತ್ತಿದ್ದಾರೆ. ಆಕೆ ನೃತ್ಯ ಕಲಾವಿದೆಯೂ ಹೌದು.

### ಪ್ರಕಾಶ್.ಪಿ.ಎಸ್

ಪ್ರಶಸ್ತಿ ವಿಜೇತ ಛಾಯಾಗ್ರಾಹಕ.



ವೃತ್ತಿಯಾಗಿ ಛಾಯಾಗ್ರಹಣವನ್ನು ಆಯ್ಕೆ ಮಾಡಿಕೊಂಡು ಅದರಲ್ಲಿ ಯಶಸ್ಸನ್ನು ಸಾಧಿಸಿದರು. ಪ್ರಥಮ ಚಿತ್ರ 'ಅತ್ತೆಗೊಂದು ಕಾಲ ಸೊಸೆಗೊಂದು ಕಾಲ'. ನಂತರ 'ನಾಗರಹೊಳೆ', 'ಕಾಳಿಂಗ ಸರ್ಪ', 'ಗರುಡ ರೇಖೆ', 'ವಿಘ್ನೇಶ್ವರನ ವಾಹನ' ಮೊದಲಾದ ಚಿತ್ರಗಳ ಛಾಯಾಗ್ರಹಣ ಮಾಡಿದ್ದಾರೆ. 'ಗರುಡರೇಖೆ' ಚಿತ್ರವನ್ನು ನಿರ್ದೇಶಿಸುವ ಮೂಲಕ ನಿರ್ದೇಶಕರಾಗಿಯೂ ಬೆಳಕಿಗೆ ಬಂದ ಇವರು ನಂತರ 'ಪ್ರಚಂಡ ಕುಳ್ಳ', 'ವಿಘ್ನೇಶ್ವರನ ವಾಹನ', 'ಮಳೆ ಬಂತು ಮಳೆ', 'ಪ್ರಳಯ ರುದ್ರ' ಚಿತ್ರಗಳನ್ನು ನಿರ್ದೇಶಿಸಿದರು. ೧೯೮೧-೮೨ನೇ ಸಾಲಿಗಾಗಿ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿಯನ್ನು 'ನಾಗರಹೊಳೆ' ಚಿತ್ರದ ವರ್ಣ ಛಾಯಾಗ್ರಹಣಕ್ಕಾಗಿ ಪಡೆದಿದ್ದಾರೆ. ಹಿಂದಿ ಚಿತ್ರರಂಗದಲ್ಲಿಯೂ ಕೆಲಸ ಮಾಡಿದರು.

### ಪ್ರಕಾಶ್‌ಬಾಬು.ಎನ್.ಕೆ

ಬೆಂಗಳೂರಿನ ಜನಪ್ರಿಯ ಚಿತ್ರಮಂದಿರ ಸ್ವಾಗತ್‌ನ ಮಾಲೀಕರಾದ ಎನ್.ಎ.ಕೃಷ್ಣಾರೆಡ್ಡಿಯವರ ಪುತ್ರ ಎನ್.ಕೆ.ಪ್ರಕಾಶ್‌ಬಾಬು ಅವರು



ವಿತರಕರಾಗಿ ಚಿತ್ರೋದ್ಯಮಕ್ಕೆ ಬಂದವರು. ಇದುವರೆಗೆ ೧೧ ಚಿತ್ರಗಳನ್ನು ವಿತರಿಸಿರುವ ಅವರಿಗೆ ಉತ್ತಮ ಚಿತ್ರಗಳನ್ನು ನಿರ್ಮಿಸುವ ಹಂಬಲ. ಅವರು ತಯಾರಿಸಿದ ಮೊದಲ ಚಿತ್ರ 'ಚಂದ್ರಮುಖಿ ಪ್ರಾಣಸಖಿ' ತನ್ನ ತಾಜಾತನದಿಂದ ಸದಭಿರುಚಿಯ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾಗಿ ನಿರ್ದೇಶಕ ಸೀತಾರಾಮ ಕಾರಂತರನ್ನು ಕನ್ನಡ ತೆರೆಗೆ ಪರಿಚಯ ಮಾಡಿಕೊಟ್ಟಿತು. 'ಶ್ರೀರಸ್ತು ಶುಭಮಸ್ತು' ಬಾಬುರವರು ನಿರ್ಮಿಸಿದ ಎರಡನೆಯ ಚಿತ್ರ. ಕನ್ನಡ ಚಿತ್ರೋದ್ಯಮದಲ್ಲಿ ಪ್ರಕಾಶ್ ಬಾಬು ಅವರು ನಿರ್ಮಾಪಕರಾಗಿ. ವಿತರಕರಾಗಿ ಹಾಗೂ ಪ್ರದರ್ಶಕರಾಗಿಯೂ ಪರಿಚಿತರು.

### ಪ್ರಕಾಶ್ ರೈ

ರಂಗಭೂಮಿಯ ಹಿನ್ನೆಲೆಯಿಂದ ಚಿತ್ರರಂಗಕ್ಕೆ ಬಂದ ದಕ್ಷಿಣ ಕನ್ನಡ ಮೂಲದ ಪ್ರಕಾಶ್ ರೈಯನ್ನು ರಾಜೇಂದ್ರಸಿಂಗ್ ಬಾಬು 'ಮುತ್ತಿನ ಹಾರ' ಚಿತ್ರದ ಮೂಲಕ ಪರಿಚಯಿಸಿದರು. ನಿರ್ದೇಶಕ ರವೀ ಅವರ 'ಮಿಥಿಲೆಯ ಸೀತೆಯರು' ಚಿತ್ರದಲ್ಲಿ ಬಂದ



ಪ್ರುಟಾಣಿ ಪಾತ್ರ ಉದ್ಯಮದ ಗಮನ ಸೆಳೆಯಿತು. ಮತ್ತೆ ರವೀ ನಿರ್ದೇಶನದ ಪ್ರಶಸ್ತಿ ವಿಜೇತ 'ಹರಕೆಯ ಕುರಿ' ಚಿತ್ರದ ಮೂಲಕ ನಾಯಕರಾದರು. ಇನ್ಸ್‌ಪೆಕ್ಟರ್ ಪಾತ್ರಗಳು ಅವರನ್ನರಸಿ ಬಂದವು. ಮಣಿರತ್ನಂ, ಕೆ.ಬಾಲಚಂದರ್ ತಮಿಳು ಚಿತ್ರಗಳಿಗೆ ಆಹ್ವಾನಿಸಿದರು. ನಂತರ ನಾಗಾಭರಣರ 'ನಾಗಮಂಡಲ'ದ ಪಾತ್ರ ಸಾಕಷ್ಟು ಜನಮನ್ನಣೆ ಪಡೆಯಿತು. 'ಕನಸಲು ನೀನೆ ಮನಸಲು ನೀನೆ', 'ವೈಶಾಖದ ದಿನಗಳು', 'ಯಾರೆ ನೀನು ಚೆಲುವೆ' ಮೊದಲಾದವು ಮುಖ್ಯ ಚಿತ್ರಗಳು. ತಮಿಳು, ತೆಲುಗು ಚಿತ್ರರಂಗಗಳಲ್ಲಿ ಪ್ರಕಾಶ್ ರಾಜ್ ಎಂಬ ಹೆಸರಿನಲ್ಲಿ ಭಾರಿ ಬೇಡಿಕೆಯಲ್ಲಿರುವ ನಾಯಕ ನಟರಾಗಿದ್ದಾರೆ.

### ಪ್ರಣಯಮೂರ್ತಿ

ಕಲೆಯೇ ಬದುಕಿನ ಮುಖ್ಯ ಅಂಗವೆಂದು ಭಾವಿಸಿ ವಿದ್ಯಾಭ್ಯಾಸವನ್ನು ಲೆಕ್ಕಿಸದೆ ಚಿತ್ರರಂಗಕ್ಕೆ ಬಂದ ಕಲಾವಿದ ಪ್ರಣಯ ಮೂರ್ತಿ. ಪುಟ್ಟಣ್ಣ ಕಣಗಾಲ್‌ರ



'ನಾಗರಹಾವು' ಚಿತ್ರದ ಪುಟ್ಟ ಪಾತ್ರದಿಂದ ತೆರೆಗೆ ಬಂದ ಈ ನಟ ಈವರೆಗೆ ಸರಿಸುಮಾರು ೧೦೮ ಚಿತ್ರಗಳಲ್ಲಿ ಬಂದು ಹೋಗುವ ಪಾತ್ರ ಮಾಡಿದ್ದಾರೆ. ಕನ್ನಡದ 'ಕೋಕಿಲಾ' ಹಾಗೂ ತಮಿಳು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅವರು ಪಂಚತಾರಾ ಹೋಟೇಲ್ ಅಶೋಕಾದಲ್ಲಿ ನೌಕರರು. ಚಲನಚಿತ್ರ ಮಾಹಿತಿ ಸಂಗ್ರಾಹಕರೂ ಹೌದು.

### ಪ್ರತಿಮಾದೇವಿ

ನಿರ್ಮಾಪಕ ಡಿ.ಶಂಕರ್‌ಸಿಂಗ್ ಅವರ ತಾರಾಪತ್ನಿ. ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಹುಟ್ಟೂರು. ೧೯೩೩ರಲ್ಲಿ ಜನನ. ತಂದೆ



ಉಪೇಂದ್ರ ಶೆಣೈ ಇರಿಸಿದ ಹೆಸರು ಮೋಹಿನಿ. ನಾಟಕ ಮಂಡಳಿಯಲ್ಲಿ ಅಭಿನಯಿಸುವ ಮೂಲಕ ರಂಗಭೂಮಿ ಪ್ರವೇಶಿಸಿ 'ಪ್ರತಿಮಾ' ಆದರು. 'ಕೃಷ್ಣಲೀಲಾ' ಚಲನಚಿತ್ರದಲ್ಲಿ ಅಭಿನಯಿಸುವ ಅವಕಾಶ ದೊರೆಯಿತು. ಬಿಂದು ಬಿ.ಎ. ಚಿತ್ರದಲ್ಲಿ ನಾಯಕಿಯಾದರು. ಚಿತ್ರ ತೆರೆಕಾಣಲಿಲ್ಲ. ಅನಂತರ ಶಂಕರ್‌ಸಿಂಗ್‌ರ ಕೈ ಹಿಡಿದರು. ಶಂಕರ್‌ಸಿಂಗ್ ನಿರ್ದೇಶನದ ಮೊದಲ ಚಿತ್ರ 'ಜಗನ್ಮೋಹಿನಿ'ಯಲ್ಲಿ (೧೯೫೧) ಇವರು ನಾಯಕಿ. ಸಿಂಗ್‌ರ ಬಹುತೇಕ ಚಿತ್ರಗಳಲ್ಲಿ ಇವರದೇ ಪ್ರಮುಖ ಪಾತ್ರ. ಸುಮಾರು ೬೦ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಭಕ್ತ ಚೇತ' ಚಿತ್ರದಲ್ಲಿ ರಾಜಕುಮಾರ್ ಅವರ ಎದುರು

ನಾಯಕಿ. ಆಕೆಯ ಹೆಸರಿನಲ್ಲಿ ಚಿತ್ರ ನಿರ್ಮಾಣವೂ ಆಗಿದೆ. ಪುಟ್ಟಣ್ಣನವರ ಚಿತ್ರಗಳಲ್ಲಿ ಅಭಿನಯಿಸಿದರು. ೨೦೦೦ದಲ್ಲಿ ಕೂಡಾ ಚಿತ್ರದಲ್ಲಿ ಕಾಣಿಸಿಕೊಂಡರು. ಪುತ್ರ ರಾಜೇಂದ್ರಸಿಂಗ್ ಬಾಬು ಖ್ಯಾತ ನಿರ್ದೇಶಕರು. ಪುತ್ರಿ ವಿಜಯಲಕ್ಷ್ಮಿ ಸಿಂಗ್ ನಟಿ-ನಿರ್ಮಾಪಕಿ.

### ಪ್ರಭಾಕರ್ (ಟೈಗರ್)

ಬೆಂಗಳೂರು ಸ್ವಂತ ಸ್ಥಳ. ಹದಿಹರೆಯದಲ್ಲಿ ಬಾಕ್ಸರ್ ಆಗುವ ಕನಸು ಕಂಡರು. ತರಬೇತಿ ಪಡೆದರು. 'ಭರತ್ ಕುಮಾರ್' ಸ್ಪರ್ಧೆಗೆ ಹೋಗುವ



ಹಂಬಲವಿತ್ತು. ಎಂ.ಪಿ.ಶಂಕರ್ ಅವರ 'ಕಾಡಿನ ರಹಸ್ಯ' (೧೯೬೯) ಅಭಿನಯಿಸಿದ ಮೊದಲ ಚಿತ್ರ. ಫೈಟರ್ ಆಗಿ ಚಿತ್ರರಂಗಕ್ಕೆ ಅಡಿಯಿರಿಸಿ ಫೈಟರ್ ಆಗಿಯೇ ಬಡ್ತಿ ಪಡೆಯುತ್ತಾ ಹೋದರು. 'ಪ್ರೇಮ ಮತ್ಸರ' (೧೯೮೨) ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ನಟಿಸಿದ ಪ್ರಥಮ ಚಿತ್ರ. 'ಖದೀಮ ಕಳ್ಳರು' ಇಬ್ಬರು ನಾಯಕರ ಚಿತ್ರ. ಅದರಲ್ಲಿ ಇವರೂ ಒಬ್ಬ ನಾಯಕ. 'ಮುತ್ತೈದೆ ಭಾಗ್ಯ' (೧೯೮೩) ಸಂಪೂರ್ಣ ನಾಯಕ ನಟರಾದ ಚಿತ್ರ. ಸುಮಾರು ೩೦ ಚಿತ್ರಗಳಲ್ಲಿ ನಾಯಕ ನಟರಾಗಿ ಅಭಿನಯ. ತೆಲುಗು, ತಮಿಳು, ಮಲೆಯಾಳಂ, ಹಿಂದಿ ಚಿತ್ರಗಳಲ್ಲಿ ಸಹ ಅಭಿನಯಿಸಿರುವ ಪ್ರಭಾಕರ್ ಆ ಚಿತ್ರಗಳಲ್ಲಿ ಖಳನಟರಾಗಿಯೇ ಖ್ಯಾತರು. ತಾರೆ ಜಯಮಾಲರೊಂದಿಗೆ ಕೂಡಿ 'ಅಗ್ನಿ ಪರೀಕ್ಷೆ', 'ಮಹೇಂದ್ರವರ್ಮ', 'ಮಹೇಶ್ ಕುಮಾರ್' ಚಿತ್ರಗಳನ್ನು ನಿರ್ಮಿಸಿದರು. 'ಶಕ್ತಿ', 'ಬಾಂಬೆ ದಾದಾ', 'ಕಲಿಯುಗಭೀಮ', 'ಯಮಕಿಂಕರ' ಚಿತ್ರಗಳನ್ನು ನಿರ್ದೇಶಿಸಿದರು. ಹಲವು ಚಿತ್ರಗಳ ಸಾಹಸ ನಿರ್ದೇಶಕರೂ ಆಗಿದ್ದ ಅವರು ತೆಲುಗು, ತಮಿಳು ಸೇರಿದಂತೆ ೪೦೦ ಚಿತ್ರಗಳಲ್ಲಿ ಅಭಿನಯಿಸಿದರು. 'ಗುಡ್ ಬ್ಯಾಡ್ ಅಗ್ಲಿ' ಕೊನೆಯ ಚಿತ್ರ. ಈ ಚಿತ್ರದ ನಿರ್ಮಾಪಕ, ನಿರ್ದೇಶಕ, ಸಂಗೀತ, ಛಾಯಾಗ್ರಹಣ, ಸಂಭಾಷಣೆ, ಗೀತರಚನೆಯನ್ನು ಅವರೇ ಮಾಡಿದ್ದರು. ಕೆಲಕಾಲದ ಅಸ್ವಸ್ಥತೆಯ ಕಾರಣ ಅಕಾಲ ಮರಣವನ್ನಪ್ಪಿದರು.

### ಪ್ರಭಾಕರ್.ಕೆ

ಸಹಾಯಕ ನಿರ್ದೇಶಕರಾಗಿ ಕೆ.ಎಸ್.ಎಲ್.ಸ್ವಾಮಿ ಹಾಗೂ ಇನ್ನಿತರ ನಿರ್ದೇಶಕರ ಬಳಿ ಕಾರ್ಯ ನಿರ್ವಹಿಸಿದರು. ನಂತರ 'ವಿಜಯ್ ಫಿಲಂಸ್' ಎನ್ನುವ ಚಿತ್ರ ನಿರ್ಮಾಣ ಸಂಸ್ಥೆಯನ್ನು ಸ್ಥಾಪಿಸಿದರು. ಸಂಕಲನಕಾರ ಎಸ್.ಉಮೇಶ್ ಅವರೊಡನೆ



'ಅವಳೇ ನನ್ನ ಹೆಂಡ್ತಿ' ಚಿತ್ರವನ್ನು ನಿರ್ದೇಶಿಸಿ, ನಿರ್ಮಿಸಿದರು. ನಂತರ 'ಅವನೇ ನನ್ನ ಗಂಡ', 'ಸೋಲಿಲ್ಲದ ಸರದಾರ', 'ತುಂಬಿದ ಮನೆ' ಮುಂತಾದ ಚಿತ್ರಗಳನ್ನು ನಿರ್ಮಿಸಿದಾರೆ.

### ಪ್ರಭಾಕರ ರೆಡ್ಡಿ ಹೆಚ್. ಆರ್.

ಚಿತ್ರದುರ್ಗ ಜಿಲ್ಲೆಯಿಂದ ಚಿತ್ರರಂಗಕ್ಕೆ ಸಣ್ಣ ವಿತರಕರಾಗಿ ಪರಿಚಿತರಾದ ಪ್ರಭಾಕರ ರೆಡ್ಡಿ ಕಡಿಮೆ ಅವಧಿಯಲ್ಲಿ ಚಿತ್ರೋದ್ಯಮದ ಒಳ ಹೊರಗುಗಳನ್ನು ಕರತಲಾಮಲಕ ಮಾಡಿಕೊಂಡರು. 'ಜಯಲಕ್ಷ್ಮಿ ಫಿಲಂಸ್' ಚಿತ್ರ ವಿತರಣಾ ಸಂಸ್ಥೆಯನ್ನು ನಿರ್ಮಿಸಿದರು. 'ಸುಖ ಸಂಸಾರಕ್ಕೆ ೧೨ ಸೂತ್ರಗಳು', 'ಪಾಯಿಂಟ್ ಪರಿಮಳ' ಚಿತ್ರಗಳನ್ನು ನಿರ್ಮಿಸಿದರು. ಸಂಘ ಸಂಸ್ಥೆಗಳೊಂದಿಗೆ ಸಂಬಂಧ ಬೆಳೆಸಿಕೊಂಡು ವಾಣಿಜ್ಯ ಮಂಡಳಿಯ ಕಾರ್ಯಕಾರಿ ಸಮಿತಿ ಸದಸ್ಯರಾಗಿ, ನಂತರ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ದ್ವಾರಕೀಶ್,



ಮಾಂತ್ರೆ ಅವರೊಡಗೂಡಿ ವಿತರಣೆ, ನಿರ್ಮಾಣ ಮೊದಲಾದ ವಿಭಾಗಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಚಿತ್ರೋದ್ಯಮಕ್ಕೆ ಸಂಬಂಧಿಸಿದಂತೆ ಉದ್ಭವಿಸುವ ಯಾವುದೊಂದು ಸಮಸ್ಯೆಗಳಿಗೂ ಸ್ಪಂದಿಸುತ್ತಿದ್ದರು. ಸ್ನೇಹಿತರೊಂದಿಗೆ ವಿತರಣಾ ಸಂಸ್ಥೆ ಪ್ರಾರಂಭಿಸಿ ಪಿ.ಲಂಕೇಶರ ಚಿತ್ರಗಳನ್ನು ವಿತರಿಸಿದ್ದರು. ರೆಡ್ಡಿಯವರು ಅಕಾಲ ಮರಣಕ್ಕೆ ತುತ್ತಾದರು. ಇವರ ಸಹೋದರ ಮಧುಸೂದನ ರೆಡ್ಡಿ ಚಿತ್ರೋದ್ಯಮದಲ್ಲಿ ಸಕ್ರಿಯರಾಗಿದ್ದಾರೆ.

### ಪ್ರಭಾಕರಶಾಸ್ತ್ರಿ ಕಣಗಾಲ್ (೧೯೨೨-೮೯)

ಕನ್ನಡ ಚಲನಚಿತ್ರರಂಗದ ಖ್ಯಾತ ಸಾಹಿತಿ. ಮೈಸೂರು ಜಿಲ್ಲೆ ಪಿರಿಯಾಪಟ್ಟಣ ತಾಲ್ಲೂಕು ಕಣಗಾಲು ಸಮೀಪದ ರಾಜನ ಬಿಲುಗುಲಿಯಲ್ಲಿ ಜನನ (ನವೆಂಬರ್ ೧೧, ೧೯೨೨). ಸಂಪ್ರದಾಯಸ್ಥ ಕುಟುಂಬದಲ್ಲಿ ಬೆಳೆದ ಇವರು ಆರನೆಯ ವಯಸ್ಸಿನಲ್ಲೇ ತಾತನ ತೊಡೆಯೇರಿ ಪ್ರಕಾಂಡ ಅಮರ ಕಲಿತರು. ಮನೆಯ ಬಡತನದಿಂದಾಗಿ ಏಳನೆಯ ವಯಸ್ಸಿನಲ್ಲಿ ಸಿ.ಬಿ.ಮಲ್ಲಪ್ಪನವರ ನಾಟಕ ಕಂಪನಿಗೆ ರಾಮನಾಥಪುರದ ಕ್ಯಾಂಪಿನಲ್ಲಿ ಸೇರಿಕೊಂಡರು. ಲಕ್ಷ್ಮೀಸ್ವಾಮಿ ಕಂಪೆನಿಯಲ್ಲಿಯೂ ಬಾಲನಟರಾಗಿ ಅಭಿನಯಿಸಿದರು. ಹನ್ನೊಂದನೆಯ ವಯಸ್ಸಿನಲ್ಲಿ ರಾಜಾಸ್ಯಾಂಡೋ ಬಳಿ ಸಂಕಲನ ಸಹಾಯಕರಾಗಿ ಸೇರಿಕೊಂಡರು. ಡಿ.ಶಂಕರ್‌ಸಿಂಗ್ ನಿರ್ಮಿಸಿದ 'ಕೃಷ್ಣಲೀಲಾ' (೧೯೪೭) ಚಿತ್ರಕ್ಕಾಗಿ ಮೊದಲ ಬಾರಿಗೆ ಹಾಡು ರಚಿಸಿದರು. 'ಭಾಗ್ಯೋದಯ' (೧೯೫೬)ದ ಕಥೆ, ಚಿತ್ರಕಥೆ, ಸಂಭಾಷಣೆ,



ಗೀತೆಗಳನ್ನು ರಚಿಸಿ ಪೂರ್ಣಪ್ರಮಾಣದ ಚಿತ್ರಸಾಹಿತಿಯಾದರು. ಹತ್ತಾರು ಪೌರಾಣಿಕ ನಾಟಕಗಳನ್ನು ರಚಿಸಿದರು. ಚಲನಚಿತ್ರಗಳಲ್ಲಿಯೂ ಒಳ್ಳೆಯ ಅವಕಾಶ ದೊರೆಯಿತು. ಬಿ.ಆರ್.ಪಂತುಲು ತಮ್ಮ ಸಂಸ್ಥೆಗೆ ಖಾಯಂ ಬರಹಗಾರರನ್ನಾಗಿ ನೇಮಿಸಿಕೊಂಡರು. 'ಸತಿಶಕ್ತಿ', 'ಭಲೇ ಭಟ್ಟ' ಮತ್ತು 'ಸುಭದ್ರಾ ಕಲ್ಯಾಣ' ಮೂರು ಚಿತ್ರಗಳನ್ನು ನಿರ್ದೇಶಿಸಿದರು. ಅವರ ಸ್ವಂತ ಚಿತ್ರ 'ಸತಿಶಕ್ತಿ' ರಾಜಕುಮಾರ್‌ರವರ ಶ್ರೇಷ್ಠ ದ್ವಿಪಾತ್ರಾಭಿನಯ ಹಾಗೂ ಸಾಹಿತ್ಯಿಕ ಮೌಲ್ಯಗಳಿಂದಾಗಿ ಯಶಸ್ವಿಯಾಯಿತು. ಐವತ್ತಕ್ಕೂ ಹೆಚ್ಚು ಚಿತ್ರಗಳಿಗೆ ಸಾಹಿತ್ಯ ರಚಿಸಿ ಸುಮಾರು ೩೦೦ಕ್ಕೂ ಹೆಚ್ಚು ಗೀತೆಗಳನ್ನು ಬರೆದರು. 'ರಾಧಾಮಾಧವ ವಿನೋದಹಾಸ...' ಮುಂತಾದ ಮಧುರ ಗೀತೆಗಳ ರಚನೆಕಾರರು. ಸಹೋದರ ಪುಟ್ಟಣ್ಣನವರ ಚಿತ್ರದಲ್ಲಿ ಗೌರವ ನಟರಾಗಿ ಅಭಿನಯಿಸಿದರು. ತಮ್ಮ ೬೭ನೆಯ ವಯಸ್ಸಿನಲ್ಲಿ (೧೯೮೯) ನಿಧನರಾದರು. ಇವರ ಮಗ ಪುರುಷೋತ್ತಮ ಕಣಗಾಲ್ ಬ್ಯಾಂಕ್ ಉದ್ಯೋಗಿ. ಕೆಲವು ಚಿತ್ರಗಳಿಗೆ ಸಾಹಿತ್ಯ ಒದಗಿಸಿದ್ದಾರೆ.

### ಪ್ರಮಿಳಾ ಜೋಷಾಯ್

ನಾಯಕಿಯಾಗಿ ಚಿತ್ರರಂಗ ಪ್ರವೇಶಿಸಿ ದ್ವಿತೀಯ ನಾಯಕಿಯಾಗಿ ಪೋಷಕ



ಪಾತ್ರಗಳಲ್ಲೂ ನಟಿಸಿದರು. ೧೯೭೭ರಲ್ಲಿ 'ಹರಕೆ' ಚಿತ್ರದ ಮೂಲಕ ನಾಯಕಿಯಾಗಿ ಚಿತ್ರರಂಗಕ್ಕೆ ಪ್ರವೇಶ ಮಾಡಿದರು. ೧೯೭೮ರಲ್ಲಿ ದ್ವಾರಕೀಶ್‌ರವರ 'ಪ್ರೀತಿ ಮಾಡು ತಮಾಷೆ ನೋಡು' ಚಿತ್ರದಲ್ಲಿ ಉತ್ತಮ ಪಾತ್ರವಿತ್ತು. ಚಂದ್ರಶೇಖರ ಕಂಬಾರರ 'ಸಂಗೀತಾ' ಚಿತ್ರದಲ್ಲಿನ ಪರಿಣಾಮಕಾರಿ ಪಾತ್ರಕ್ಕಾಗಿ 'ಅತ್ಯುತ್ತಮ ಪೋಷಕ ನಟಿ' ರಾಜ್ಯಪ್ರಶಸ್ತಿಯನ್ನು ಪಡೆದಿದ್ದಾರೆ. ಬರಗೂರು ರಾಮಚಂದ್ರಪ್ಪನವರ 'ಬೆಂಕಿ', 'ಸೂರ್ಯ', 'ಕೋಟೆ' ಹಾಗೂ 'ಹಗಲುವೇಷ' ಚಿತ್ರಗಳಲ್ಲಿ ಪರಿಣಾಮಕಾರಿಯಾದ ಪಾತ್ರಗಳಲ್ಲಿ ಅಭಿನಯ. ಬಹುತೇಕ ಕನ್ನಡದ ಎಲ್ಲ ನಾಯಕರೊಂದಿಗೆ ಆಗೊಮ್ಮೆ ಈಗೊಮ್ಮೆ ಉಪನಾಯಕಿಯಾಗಿ ಅಭಿನಯಿಸಿರುವ ಪ್ರಮಿಳಾ, ಭುವನೇಶ್ವರಿ ಆರ್ಟ್ಸ್ ಫಿಲಂಸ್ ಸಂಸ್ಥೆಯ ಚಿತ್ರಗಳು ಹಾಗೂ ಅಬ್ಬಾಯಿ ನಾಯ್ಡು ಅವರ ಬಹುತೇಕ ಚಿತ್ರಗಳಲ್ಲಿ ನಟಿಸಿದರು. ಹೆಸರಾಂತ ಪೋಷಕ ನಟ ಹಾಗೂ ರಂಗಭೂಮಿಯ ನಂಟಿನ ಸುಂದರ್‌ರಾಜ್ ಅವರನ್ನು ವರಿಸಿದರು. ಪ್ರಮಿಳಾ 'ಗುಣನೋಡಿ ಹೆಣ್ಣುಕೊಡು', 'ಸ್ನೇಹದ ಸಂಕೋಲೆ', 'ತಾಯಿಯ ನುಡಿ', 'ತಾಯಿಯ ಆಸೆ' ಮುಂತಾದ ಯಶಸ್ವೀ ಚಿತ್ರಗಳಲ್ಲಿ ಅಭಿನಯಿಸಿದ್ದಲ್ಲದೆ, 'ದಾರದ ಸೀರೆ' ಎಂಬ ತುಳು ಚಿತ್ರ, ತೆಲುಗಿನ 'ಕೋಟೀಶ್ವರುಡು', 'ಕಚದೇವಯಾನಿ' ಹಾಗೂ ತಮಿಳಿನ ಸೂಪರ್‌ಹಿಟ್ ಚಿತ್ರ 'ವೈದೇಹಿ ಕಾತ್ತಿರುಂದಾಳ್' ಗಳಲ್ಲಿ ನಟಿಸಿದ್ದಾರೆ.

### ಪ್ರಸಾದ್ (ಚಿತ್ರಶ್ರೀ)

ಹಿರಿಯ ಚಿತ್ರ ವಿತರಕರಾದ ಕೆ.ಎಸ್.ಪ್ರಸಾದ್, ಬಿ.ವಿ.ಶ್ರೀನಿವಾಸ್ ಅವರು ಸೇರಿ ಚಿತ್ರಶ್ರೀ ಪಿಕ್ಚರ್ಸ್ ಎಂಬ ಚಿತ್ರ ವಿತರಣ ಸಂಸ್ಥೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು (೧೯೬೪). ಈ ಸಂಸ್ಥೆಯ



ಮತ್ತೊಬ್ಬ ಪಾಲುದಾರರು ಎ.ಎಸ್.ಭಕ್ತವತ್ಸಲ ಅವರೊಂದಿಗೆ 'ಪೂಜಾಫಲಂ' ಎಂಬ ತೆಲುಗು ಚಿತ್ರವನ್ನು ವಿತರಣೆ ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ೧೯೬೫ರಿಂದ ೧೯೭೦ರವರೆಗೆ ಎ.ವಿ.ಎಂ ಪ್ರೊಡಕ್ಷನ್ಸ್‌ನ ಬಹುತೇಕ ಚಿತ್ರಗಳನ್ನು ವಿಶಾಲ ಕರ್ನಾಟಕಕ್ಕೆ ವಿತರಣೆ ಮಾಡಿದ್ದಾರೆ. ಚಿತ್ರಶ್ರೀ ಪಿಕ್ಚರ್ಸ್ ವಿತರಿಸಿದ ಮೊದಲ ಚಿತ್ರ 'ಶಿವಗಂಗೆ ಮಹಾತ್ಮೆ'. ನಂತರ 'ಬಂಗಾರದ ಹೂವು', 'ಭಾಗ್ಯದ ಬಾಗಿಲು'. ನಂತರ ಪ್ರಸಾದ್ ತಮ್ಮದೇ ಸ್ವಂತ ನಿರ್ಮಾಣ ಸಂಸ್ಥೆ 'ಚಿತ್ರಶ್ರೀ ಇಂಟರ್‌ನ್ಯಾಷನಲ್' ಸ್ಥಾಪಿಸಿದರು. ಈ

ಸಂಸ್ಥೆಯಿಂದ ಹೊರ ಬಂದ ಮೊದಲ ಚಿತ್ರ 'ಎರಡು ಮುಖ' ನಂತರ 'ಬಾಳು ಬೆಳಗಿತು' ಇದಾದ ನಂತರ ಚಿತ್ರ ಹಂಚಿಕೆ ಹಾಗೂ ನಿರ್ಮಾಣವನ್ನು ತೊರೆದು ಪ್ರದರ್ಶಕರಾಗಿ ಗುರುತಿಸಿಕೊಂಡರು. ಶಿವಮೊಗ್ಗ, ಭದ್ರಾವತಿ, ಚನ್ನರಾಯಪಟ್ಟಣ ಮುಂತಾದ ಕಡೆಗಳಲ್ಲಿ ಸಿನಿಮಾ ಗೃಹಗಳನ್ನು ಗುತ್ತಿಗೆ ಆಧಾರದಲ್ಲಿ ನಡೆಸಿಕೊಂಡು ಬಂದರು. ೧೯೯೩ರಲ್ಲಿ ಅಮೆರಿಕಾಗೆ ತೆರಳಿ ಅಲ್ಲಿಯೇ ನೆಲೆಸಿದ್ದಾರೆ. ಅಮೆರಿಕೆಯ ಥಿಯೇಟರ್‌ಗಳಲ್ಲಿ ಕನ್ನಡ ಚಲನಚಿತ್ರಗಳನ್ನು ಪ್ರದರ್ಶಿಸಿ ಕನ್ನಡದ ಕಂಪನ್ನು ಬೀರಿದ್ದಾರೆ. 'ರಸಿಕ', 'ನಮ್ಮೂರ ಮಂದಾರ ಹೂವೆ', 'ಅಮೃತ ವರ್ಷಿಣಿ' ಮುಂತಾದ ಯಶಸ್ವೀ ಚಿತ್ರಗಳನ್ನು 'ಚಿರಾಗ್ ಎಂಟರ್‌ಟೈನರ್ಸ್' ಎಂಬ ಸಂಸ್ಥೆಯ ಮೂಲಕ ಪ್ರದರ್ಶಿಸಿದ್ದಾರೆ. ಸುಮಾರು ೩೦ಕ್ಕೂ ಹೆಚ್ಚು ಚಿತ್ರಗಳನ್ನು ಪ್ರದರ್ಶಿಸಿ ಕನ್ನಡ ಚಿತ್ರಗಳು ಅಂತರರಾಷ್ಟ್ರೀಯ ಮಾರುಕಟ್ಟೆಯನ್ನು ಪ್ರವೇಶಿಸಿಲು ಸಹಕರಿಸಿದ್ದಾರೆ.

### ಪ್ರಸಾದ್.ವಿ.ಆರ್.ಕೆ

ಕನ್ನಡ ಚಿತ್ರರಂಗದ ಹೊಸ ಅಲೆಯ ಚಿತ್ರಗಳ ಸಂಕಲನಕಾರ - ನಿರ್ದೇಶಕ. ಮೈಸೂರಿನಲ್ಲಿ ಜನನ, ವಿದ್ಯಾಭ್ಯಾಸ. ಹಿರಿಯ ನಿರ್ದೇಶಕ ಜಿ.ವಿ.ಅಯ್ಯರ್ ಅವರ ಎಲ್ಲ ಚಿತ್ರಗಳಿಗೂ ತಂತ್ರಜ್ಞನಾಗಿ ಬಹಳಷ್ಟು



ದುಡಿದರು. 'ಯಂಗ್ ಸಿನಿಮಾ' ನಿರ್ಮಾಣ ಸಂಸ್ಥೆಯ ಸೂತ್ರಧಾರ. 'ಹಂಸಗೀತೆ', 'ವಂಶವೃಕ್ಷ' ಮೊದಲಾದ ಚಿತ್ರಗಳಲ್ಲಿ ಸಹ ನಿರ್ದೇಶನ, ಸಂಕಲನ ನಿರ್ವಹಿಸಿದರು. ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ. 'ಋಷ್ಯಶೃಂಗ'. ಈ ಚಿತ್ರಕ್ಕಾಗಿ ಎರಡು ರಾಷ್ಟ್ರೀಯ ಪ್ರಶಸ್ತಿಗಳನ್ನು, ಕರ್ನಾಟಕ ರಾಜ್ಯ ಸರ್ಕಾರದ ದ್ವಿತೀಯ ಅತ್ಯುತ್ತಮ ಚಿತ್ರಪ್ರಶಸ್ತಿಯನ್ನು ಪಡೆದರು. ನಂತರ 'ಪ್ರೇಮ ಕಾಮ' ಚಿತ್ರ ನಿರ್ದೇಶಿಸಿದರು. ಹಲವಾರು ವಾರ್ತಾಚಿತ್ರಗಳನ್ನೂ ನಿರ್ದೇಶಿಸಿದ್ದಾರೆ. ಚಿಕ್ಕ ಪ್ರಾಯದಲ್ಲೇ ನಿಧನರಾದರು.

### ಪಾಂಡುರಂಗನ್. ಎಸ್

ಭಾರತೀಯ ಚಿತ್ರರಂಗದ ಹಲವಾರು ಭಾಷೆಗಳಲ್ಲಿನ ಚಿತ್ರಗಳಿಗೆ ಛಾಯಾಗ್ರಹಣ ತಜ್ಞರಾಗಿ ದುಡಿದಿರುವವರು ಎಸ್.ಪಾಂಡುರಂಗನ್. ಚಿತ್ರರಂಗದವರಿಗೆ 'ಪಾಂಡು' ಆಗಿರುವ ಅವರು ತಂಜಾವೂರು ಜಿಲ್ಲೆಯವರು. ಎಸ್.ಎಸ್.ಎಲ್.ಸಿ ನಂತರ ಪಾಸ್‌ ತಾಂತ್ರಿಕ ತರಬೇತಿ ಶಾಲೆಯಲ್ಲಿ ರೇಡಿಯೋ ಇಂಜಿನಿಯರಿಂಗ್ ವಿಭಾಗದಲ್ಲಿ ಡಿಪ್ಲೊಮಾ ಪಡೆದ ಮೇಲೆ ಮದ್ರಾಸಿಗೆ



ಪ್ರಯಾಣ. ಅಂದಿನ ದಿನಗಳ ಖ್ಯಾತ ಸಂಗೀತ ನಿರ್ದೇಶಕ ಟಿ.ಆರ್.ಪಾಪಾರವರ ಸಹಾಯದಿಂದ ಖ್ಯಾತ ಛಾಯಾಗ್ರಹಣ ತಜ್ಞ ಇ.ಐ.ಜೀವಾರ ಪರಿಚಯ. ಅವರ ಬಳಿಯಲ್ಲಿ ಅಪ್ರೆಂಟಿಸ್ ಆಗಿ ನೇಮಕ. ನಾಲ್ಕು ವರ್ಷಗಳ ಕಾಲ ಜೀವಾರವರ ಗರಡಿಯಲ್ಲಿ ಪಳಗಿದ ಮೇಲೆ ಗೋಲ್ಡನ್ ಸ್ಟುಡಿಯೋ ಸೇರಿ, ಅಲ್ಲಿ ಹಿಂದಿನ ದಿನಗಳ ರಾಷ್ಟ್ರ ಹಾಗೂ ರಾಜ್ಯಪ್ರಶಸ್ತಿ ವಿಜೇತ ಛಾಯಾಗ್ರಹಣ ತಜ್ಞ ಎಸ್.ಪಿ.ರಾಮನಾಥನ್‌ರವರ ಸಹಾಯಕರಾಗಿ ಕಾರ್ಯನಿರ್ವಹಿಸಿ ತಾಂತ್ರಿಕ ಕೌಶಲ್ಯವನ್ನು ಸಂಪಾದಿಸಿಕೊಂಡರು. ಚಿತ್ರೋದ್ಯಮಿ, ನಿರ್ಮಾಪಕ, ನಿರ್ದೇಶಕರಾದ ಎಲ್.ವಿ.ಪ್ರಸಾದ್‌ರ ಆಧುನಿಕ ತಂತ್ರಜ್ಞಾನಭರಿತ ಪ್ರಸಾದ್ ಸ್ಟುಡಿಯೋದಲ್ಲಿ ಮತ್ತೆ ರಾಮನಾಥನ್‌ರ ಸಹಾಯಕರಾಗಿ ಕಾರ್ಯ ನಿರ್ವಹಣೆ. ಹದಿನೈದು ವರ್ಷಗಳ ಸುದೀರ್ಘ ಸೇವೆಯ ನಂತರ, ಪ್ರಸಾದ್ ಸ್ಟುಡಿಯೋ ಪುನರ್ಧ್ವನಿಮುದ್ರಣ ಕೇಂದ್ರಕ್ಕೆ ಮುಖ್ಯಸ್ಥರಾದರು. ಸ್ವತಂತ್ರವಾಗಿ ಧ್ವನಿಮುದ್ರಣ ಹಾಗೂ ಪುನರ್ಧ್ವನಿಮುದ್ರಣ ಮಾಡಿದ ಮೊದಲ ಚಿತ್ರ 'ಹೊಸಬೆಳಕು'. ನಂತರ ಹಲವು ಭಾಷೆಗಳ ಎರಡು ಸಾವಿರಕ್ಕೂ ಮೀರಿ ಚಿತ್ರಗಳಿಗೆ ಗೀತೆಗಳ ಧ್ವನಿಮುದ್ರಣ ಮಾಡಿದ್ದಾರೆ. ಕರ್ನಾಟಕ ರಾಜ್ಯ ಸರ್ಕಾರದಿಂದ 'ಚಲಿಸುವ ಮೋಡಗಳು (೧೯೮೨-೮೩)', 'ಭಕ್ತ ಪ್ರಹ್ಲಾದ (೧೯೮೩-೮೪)' ಚಿತ್ರಗಳಿಗೆ ಅತ್ಯುತ್ತಮ ಛಾಯಾಗ್ರಹಣ ತಜ್ಞ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

### ಪಾಟೀಲ್.ಬಿ.ಸಿ

ಪೊಲೀಸ್ ಅಧಿಕಾರಿ ಬಸವನಗೌಡ ಚನ್ನಬಸವನಗೌಡ ಪಾಟೀಲ್ ಸುನೀಲ್ ಕುಮಾರ್ ದೇಸಾಯಿ ನಿರ್ದೇಶನದ



ಜನಪ್ರಿಯ ಚಿತ್ರ 'ಸಂಘರ್ಷ'ದಿಂದ ಬೆಳಕಿಗೆ ಬಂದರು. ಈಗಾಗಲೇ ೨೦ ಚಿತ್ರಗಳಲ್ಲಿ ಅಭಿನಯಿಸಿ ಕೆಲವು ಚಿತ್ರಗಳನ್ನು ನಿರ್ಮಿಸಿಯೂ ಇದ್ದಾರೆ. ಪೊಲೀಸ್ ಹುದ್ದೆಗೆ ಸೇರುವುದಕ್ಕಿಂತ ಮುಂಚೆ ರಂಗಭೂಮಿಯಲ್ಲಿ ಕೆಲವು ವರ್ಷಗಳ ಕಾಲ ತೊಡಗಿದ್ದ ಪಾಟೀಲರು 'ನಿಷ್ಕರ್ಷ', 'ಬೆಳದಿಂಗಳ ಬಾಲೆ', 'ಪೂರ್ಣ ಸತ್ಯ', 'ನಿರ್ಬಂಧ', 'ಕಿಲಾಡಿಗಳು', 'ತವರಿನ ತೇರು', 'ಎಲ್ಲರಂತಲ್ಲ ನನ್ನ ಗಂಡ' ಚಿತ್ರಗಳಲ್ಲಿ ಅಭಿನಯಿಸಿದರೂ ಕೆಲವು ಪಾತ್ರಗಳು ನಕಾರಾತ್ಮಕವಾಗಿದ್ದವು. ಅವರಿಗೆ ತಾರಾಪಟ್ಟವನ್ನು ತಂದು ಕೊಟ್ಟ ಚಿತ್ರ ಅವರೇ ನಿರ್ಮಿಸಿದ 'ಕೌರವ'. ನಂತರ 'ಹ್ಯಾಟ್ಸ್ ಆಫ್ ಇಂಡಿಯಾ', 'ಪ್ರೇಮಾಚಾರಿ', 'ಚನ್ನಪ್ಪ ಚನ್ನೇಗೌಡ', 'ದಳವಾಯಿ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಅವರು ತಯಾರಿಸಿದ ಇತ್ತೀಚಿನ ಚಿತ್ರ 'ಶಾಪ'ವನ್ನು ಹಾಲಿವುಡ್‌ನಲ್ಲಿ ತರಬೇತಿ ಪಡೆದುಕೊಂಡ ಅವರ ಸೋದರ ಅಶೋಕ್ ಪಾಟೀಲ್ ನಿರ್ದೇಶಿಸಿದರು. ಪೊಲೀಸ್ ವೃತ್ತಿಯಲ್ಲಿದ್ದೂ ಪಾಟೀಲರು ಚಿತ್ರರಂಗದಲ್ಲಿಯೇ ನಟ, ನಿರ್ಮಾಪಕ, ನಿರ್ದೇಶಕರಾಗಿ ಉಳಿಯಲು ನಿರ್ಧರಿಸಿದರು. ಅವರೇ ನಿರ್ದೇಶಿಸಿದ ಪ್ರಥಮ ಚಿತ್ರ 'ಲಂಕೇಶ'. ಅನಂತರ ಅವರು ಸರ್ಕಾರಿ ಉದ್ಯೋಗ ಬಿಟ್ಟು ಪೂರ್ಣಾವಧಿಯ ಚಿತ್ರ ನಿರ್ಮಾಣ, ನಿರ್ದೇಶನದಲ್ಲಿ ತೊಡಗಿಕೊಂಡರು.

### ಪಾರ್ಶ್ವನಾಥ್ ಎಸ್. ಎನ್.

ಚಿಕ್ಕಮಗಳೂರಿನ ಪ್ರಮುಖ ಚಿತ್ರ ಪ್ರದರ್ಶಕರಾದ ನಾಗರಾಜ ಶೆಟ್ಟರ ಪುತ್ರರು. ಶ್ರೀಧರ್ ಕೃಪಾ ಕಂಬೈನ್ಸ್ ಎನ್ನುವ ವಿತರಣಾ ಸಂಸ್ಥೆಯನ್ನು ಮೈಸೂರಿನಲ್ಲಿ ಪ್ರಾರಂಭಿಸಿ



ಹಲವು ಚಿತ್ರಗಳನ್ನು ನಿರ್ಮಾಣ ಮಾಡಿದರು. ಮಿತ್ರರೊಂದಿಗೆ 'ನಾಗರಹೊಳೆ' ಚಿತ್ರ ನಿರ್ಮಿಸಿದರು. 'ಪರಾಜಿತ', ಭಾರ್ಗವ ನಿರ್ದೇಶನದ 'ಮೂರು ಜನ್ಮ' ಇವರು ನಿರ್ಮಿಸಿದ ಇತರ ಚಿತ್ರಗಳು. ಪಾರ್ಶ್ವನಾಥ್ ಹತ್ತಾರು ರೀತಿಯಲ್ಲಿ ಕಾರ್ಯನಿರತರು.

### ಪಾಪಮ್ಮ

ಬಾಲ್ಯದಲ್ಲಿಯೇ, ಅಂದರೆ ೫-೬ ವರ್ಷದವರಾಗಿದ್ದಾಗಲೇ ರಂಗಭೂಮಿ ಸೇರಿದ ಕಲಾವಿದೆ ಪಾಪಮ್ಮನವರ ಮೊದಲ ಚಿತ್ರ 'ಭಾರತಿ'. ಕಳೆದ ಐದು



ದಶಕಗಳಿಂದಲೂ ಚಿತ್ರರಂಗದಲ್ಲಿ ಸೇವೆ ಸಲ್ಲಿಸುತ್ತಿದ್ದವರು. ಇವರು ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದರು. ಅವರು ನಟಿಸಿರುವ ಪ್ರಮುಖ ಚಿತ್ರಗಳು 'ಸತಿ ಶಕ್ತಿ', 'ಬಭ್ರುವಾಹನ', 'ಮುರಿಯದ ಮನೆ', 'ನಮ್ಮ ಸಂಸಾರ', 'ತಾಯಿ ಕರುಳು', 'ತಾಯಿ ದೇವರು', 'ಮಣ್ಣಿನ ಮಗ' ಮತ್ತು 'ಹಣ್ಣೆಲೆ ಚಿಗುರಿದಾಗ'. ಪಾಪಮ್ಮ ೨೦೦೦ರಲ್ಲಿ ನಿಧನರಾದರು.

### ಪಾಲ್.ಎಸ್.ಎನ್

ಪಶ್ಚಿಮ ಬಂಗಾಳದಿಂದ ಬೆಂಗಳೂರಿಗೆ ಬಂದು, ಉದ್ಯಮಿಯಾಗಿ, ಈಶ್ವರಿ ಪ್ರೊಡಕ್ಷನ್ಸ್‌ ಒಡೆಯ ವೀರಾಸ್ವಾಮಿಯವರ



ಸಹಕಾರದಿಂದ ಚಿತ್ರರಂಗವನ್ನು ಪ್ರವೇಶಿಸಿದರು. 'ಬೆಟ್ಟದ ಹುಲಿ' (೧೯೬೫) ಚಿತ್ರವನ್ನು ಭಗವತಿ ಪ್ರೊಡಕ್ಷನ್ಸ್ ಸಂಸ್ಥೆಯ ಮೂಲಕ ಚಿತ್ರಿಸಿ ನಿರ್ಮಾಪಕರಾದರು. ಅಂದಿನ ದಿನಗಳಲ್ಲಿ ಬಹಳ ಶಿಸ್ತು, ಕಟ್ಟುನಿಟ್ಟಾಗಿ ಚಿತ್ರ ನಿರ್ಮಿಸುತ್ತಿದ್ದವರಲ್ಲಿ ಪಾಲ್ ಹೆಸರುವಾಸಿಯಾದವರು. 'ಧೂಮಕೇತು' (೧೯೬೮) ಚಿತ್ರ ನಿರ್ಮಿಸಿ ಚಿತ್ರ ಬರಹಗಾರ ಆರ್.ಎನ್.ಜಯಗೋಪಾಲ್ ಅವರನ್ನು ನಿರ್ದೇಶನದ ಕ್ಷೇತ್ರಕ್ಕೂ ತಂದರು. ಪಾಲ್ ಅವರು ನಿರ್ಮಿಸಿರುವ ತ.ರಾ.ಸು. ಕಾದಂಬರಿ ಆಧಾರಿತ 'ಚಕ್ರತೀರ್ಥ' (೧೯೬೭) ಚಿತ್ರಕ್ಕೆ ರಾಷ್ಟ್ರಮಟ್ಟದಲ್ಲಿ ರಜತ ಪದಕ ಲಭಿಸಿತು. ವೈ.ಆರ್.ಸ್ವಾಮಿ ನಿರ್ದೇಶನದ 'ದೇವರ ಕಣ್ಣು' (೧೯೭೫) ಮತ್ತು 'ಕುದುರೆ ಮುಖ' (೧೯೭೮) ಚಿತ್ರಗಳನ್ನು ನಿರ್ಮಿಸಿದವರೂ ಪಾಲ್ ಅವರೇ.

### ಪಾಲ್ ಎಸ್.ಚಂದಾನಿ

ಬೆಂಗಳೂರಿನ ಪ್ರಮುಖ ಹಿಂದಿ ಮತ್ತು ಕನ್ನಡ ಚಿತ್ರಗಳ ವಿತರಕರು ಹಾಗೂ



ಪ್ರದರ್ಶಕರು ಆದ ಪಾಲ್ ಎಸ್.ಚಂದಾನಿ ಅಭಿನಯ, ತ್ರಿವೇಣಿ ಹಾಗೂ ಸಂತೋಷ್ ಚಿತ್ರಮಂದಿರಗಳ ಗುತ್ತಿಗೆದಾರರು. ಮುಂಚಿನ ಭಾರಿ ಚಿತ್ರ ನಿರ್ಮಾಪಕರ

ಚಿತ್ರಗಳನ್ನು ವಿತರಣೆ ಮಾಡಿದ ಕೀರ್ತಿ ಇವರದು. ಬಹಳಷ್ಟು ಚಿತ್ರಗಳಿಗೆ ಬಂಡವಾಳಗಾರರು, ವಿತರಕರು ಆಗಿದ್ದಾರೆ. ಕನ್ನಡ ಚಿತ್ರಗಳ ಬೆಳವಣಿಗೆಗೆ ಬಹಳಷ್ಟು ಸಹಕಾರಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ವಿಜಯಲಕ್ಷ್ಮಿ ಸಿಂಗ್, ಎಂ.ರಾಮನ್ ಮೊದಲಾದ ನಿರ್ಮಾಪಕರ ಬೆನ್ನಿಗಿದ್ದು ಉತ್ತಮ ಚಿತ್ರ ನಿರ್ಮಿಸಲು ನೆರವಾದರು. ಶಂಕರ್‌ನಾಗ್ ಅವರ ಆಪ್ತ ಮಿತ್ರರು. ಆತನ ಎಲ್ಲ ಚಟುವಟಿಕೆಯ ಹಿಂದೆ ವಾಲ್ ಇರುತ್ತಿದರು.

## ಪಾರ್ವತಮ್ಮ ರಾಜಕುಮಾರ್

ನಟ ರಾಜಕುಮಾರ್‌ರವರ ಪತ್ನಿ ಪಾರ್ವತಮ್ಮ. ತಮ್ಮದೇ ಆದ ಪ್ರತಿಭೆ ಮತ್ತು ಸಾಮರ್ಥ್ಯಗಳಿಂದ ಕನ್ನಡ ಚಿತ್ರರಂಗದ ಪ್ರಮುಖ ನಿರ್ಮಾಪಕರಾಗಿ ನೆಲೆಯೂರಿದ್ದಾರೆ. ೧೯೩೯ರಲ್ಲಿ ಮೈಸೂರಿನ ಸಾಲಿಗ್ರಾಮದಲ್ಲಿ ಜನಿಸಿದ ಪಾರ್ವತಮ್ಮ ಓದಿದ್ದು ಎಸ್.ಎಸ್.ಎಲ್.ಸಿ ವರೆಗೆ. ಈ



ರಂಗಕ್ಕೆ ಸದಭಿರುಚಿಯ ಅನೇಕ ಚಿತ್ರಗಳನ್ನು ಸಾಲುಸಾಲಾಗಿ ನೀಡಿ ಹಣ, ಜನಮನ್ನಣೆ ಗಳಿಸುವುದರ ಜೊತೆಗೆ ಚಿತ್ರನಿರ್ಮಾಣಕ್ಕೆ ಆಕೆ ತಂದುಕೊಟ್ಟಿರುವ ಅನುಕರಣೀಯವಾದ ವೃತ್ತಿಪರತೆ ಆಕೆಯನ್ನೊಬ್ಬ ವಿಶಿಷ್ಟ ವ್ಯಕ್ತಿಯನ್ನಾಗಿಸಿದೆ. ಅವರಿಂದ ನೂರಾರು ಕಲಾವಿದರು, ತಂತ್ರಜ್ಞರು ಮತ್ತು ಉದ್ಯಮಿಗಳು ಬೆಳಕಿಗೆ ಬಂದಿದ್ದಾರೆ. ರಾಜ್ಯದಾದ್ಯಂತ ಅನೇಕ ಚಿತ್ರಮಂದಿರಗಳನ್ನು ನಡೆಸಿರುವುದರ ಜೊತೆಗೆ ಪಾರ್ವತಮ್ಮನವರು ಕನ್ನಡದ ಪ್ರಮುಖ ವಿತರಕರೂ ಆಗಿದ್ದಾರೆ. ಅನೇಕ ಸಂಘಟನೆಗಳಿಗೆ ಸ್ಫೂರ್ತಿದಾಯಕರಾಗಿರುವ ಅವರು ಬೀದಿಪಾಲಾದ ಹೆಂಗೆಳೆಯರಿಗೆ ಪುನರ್ವಸತಿ, ಸ್ವಾವಲಂಬನೆಯತ್ತ ದಾರಿ ತೋರುವ ಮೈಸೂರಿನ ಶಕ್ತಿಧಾಮ ಸಂಸ್ಥೆಯ ಅಧ್ಯಕ್ಷೆಯಾಗಿ ಗಮನೀಯವಾದ ಸಮಾಜ ಸೇವೆಯನ್ನು ಮಾಡಿದ್ದಾರೆ. ವಿಶಿಷ್ಟ ವ್ಯಕ್ತಿತ್ವದ ಪಾರ್ವತಮ್ಮನವರು ಇತ್ತೀಚೆಗೆ ಕಿರುತೆರೆಯ ಕಡೆಗೂ ಗಮನ ಹರಿಸಿದ್ದಾರೆ. ಚಿತ್ರರಂಗದಲ್ಲಿ ಕೇವಲ ವ್ಯಕ್ತಿಯಾಗಿ ಉಳಿಯದೇ ಶಕ್ತಿಯಾಗಿಯೂ ವಿಸ್ಮಯಕರವೆನಿಸುವ ರೀತಿಯಲ್ಲಿ ಬೆಳೆದು ಬಂದಿದ್ದಾರೆ. ಸುಮಾರು ಸಂಖ್ಯೆಯಲ್ಲಿರುವ ತಮ್ಮ ನಿರ್ಮಾಣ ಸಂಸ್ಥೆಗಳ ವಹಿವಾಟನ್ನು ನಿರ್ವಹಿಸುತ್ತಿದ್ದಾರೆ.

## ಪುಟ್ಟಣ್ಣ ಕಣಗಾಲ್.ಎಸ್.ಆರ್

ನಿರ್ದೇಶಕ ಪುಟ್ಟಣ್ಣ ಕಣಗಾಲ್ ಜನಿಸಿದ್ದು ಮೈಸೂರು ಜಿಲ್ಲೆಯ ಕಣಗಾಲ್‌ನಲ್ಲಿ. ಮೊದಲು ಕಂಪನಿಯಲ್ಲಿ ಕೆಲಸ, ನಟನಾಗಿ ಕೂಡ ಅನುಭವ.



ಚಿತ್ರರಂಗಕ್ಕೆ ಪ್ರವೇಶಿಸುವ ಮುನ್ನ ಹಲವಾರು ಕಡೆ ವಿಭಿನ್ನ ರೀತಿಯ ಕೆಲಸಗಳಲ್ಲಿ ಮಗ್ನ. ಕಾರ್ ಡ್ರೈವರ್, ಗ್ಯಾರೇಜ್ ಕ್ಲೀನರ್, ಫೋಟೊಗ್ರಾಫರ್ ಇತ್ಯಾದಿ. ೧೯೫೬ರಲ್ಲಿ ಬಿ.ಆರ್.ಪಂತುಲು ಅವರ ಪದ್ಮಿನಿ ಪಿಕ್ಚರ್ಸ್‌ನ 'ರತ್ನಗಿರಿ ರಹಸ್ಯ' ಚಿತ್ರಕ್ಕೆ ಸಹಾಯಕ ನಿರ್ದೇಶಕ. ಆ ಸಂಸ್ಥೆಯಲ್ಲಿ ಪುಟ್ಟಣ್ಣ ಚಿತ್ರನಿರ್ದೇಶನ ಮತ್ತು ನಿರ್ಮಾಣದ ಎಲ್ಲ ಕೌಶಲ್ಯಗಳನ್ನೂ ಕಲಿತರು. ಪರಿಪೂರ್ಣ ನಿರ್ದೇಶಕರಾಗಿ ಹೊರಬಂದರು. ಪುಟ್ಟಣ್ಣ ತಮ್ಮ ನಿರ್ದೇಶನದ ಮೊದಲ ಕನ್ನಡ ಚಿತ್ರಕ್ಕ ಆರಿಸಿಕೊಂಡಿದ್ದು ತ್ರಿವೇಣಿಯವರ ಕಾದಂಬರಿ 'ಬೆಳ್ಳಿ ಮೋಡ' (೧೯೬೭). ಕನ್ನಡದ ಅನೇಕ ಕಾದಂಬರಿಗಳನ್ನು ಚಿತ್ರಗಳಿಗೆ ಸಮರ್ಥವಾಗಿ ಅಳವಡಿಸಿದವರು ಪುಟ್ಟಣ್ಣ. ಅವರ ನಿರ್ದೇಶನದ ಪ್ರಮುಖ ಚಿತ್ರಗಳು 'ಗೆಜ್ಜೆಪೂಜೆ', 'ಶರಪಂಜರ', 'ನಾಗರಹಾವು', 'ಎಡಕಲ್ಲು ಗುಡ್ಡದ ಮೇಲೆ', 'ಶುಭಮಂಗಳ', 'ಉಪಾಸನೆ', 'ಮಾನಸ ಸರೋವರ' ಮತ್ತು 'ರಂಗನಾಯಕಿ'. ಅವರು ೩೩ ಕನ್ನಡ ಚಿತ್ರಗಳನ್ನು ನಿರ್ದೇಶಿಸಿದರು. ಪುಟ್ಟಣ್ಣ ಅವರ 'ಕಥಾಸಂಗಮ' ಕನ್ನಡದ ಮೂರು ಸಣ್ಣ ಕಥೆಗಳ ಆಧಾರದ ಮೇಲೆ ತಯಾರಾದ ಹೊಸ ಪ್ರಯೋಗ. ವಿಷ್ಣುವರ್ಧನ್, ಅಂಬರೀಷ್, ಕಲ್ಪನ, ಆರತಿ, ರಾಮಕೃಷ್ಣ, ಜೈಜಗದೀಶ್, ಪದ್ಮಾವಾಸಂತಿ, ಶ್ರೀಧರ್ ಇವರೆಲ್ಲರೂ ಪುಟ್ಟಣ್ಣನವರು ಪರಿಚಯಿಸಿದ ಪ್ರತಿಭಾವಂತ ಕಲಾವಿದರು. 'ಗೆಜ್ಜೆ ಪೂಜೆ' (೧೯೬೯) ಚಿತ್ರದ ನಿರ್ದೇಶನ, ಚಿತ್ರಕತೆಗಾಗಿ ರಾಷ್ಟ್ರಪ್ರಶಸ್ತಿ ಪಡೆದರು. 'ಶರಪಂಜರ' (೧೯೭೧) ಅತ್ಯುತ್ತಮ ಪ್ರಾದೇಶಿಕ ಭಾಷಾ ಚಲನಚಿತ್ರವೆಂಬ ರಾಷ್ಟ್ರ ಪ್ರಶಸ್ತಿ ಪಡೆಯಿತು. 'ಬೆಳ್ಳಿ ಮೋಡ' (೧೯೬೭-೬೮), 'ಗೆಜ್ಜೆ ಪೂಜೆ' (೧೯೬೯-೭೦), 'ಶರಪಂಜರ' (೧೯೭೦-೭೧), 'ನಾಗರಹಾವು' (೧೯೭೨-೭೩), 'ಉಪಾಸನೆ' (೧೯೭೪-೭೫), 'ಕಥಾಸಂಗಮ' (೧೯೭೫-೭೬), 'ರಂಗನಾಯಕಿ' (೧೯೮೦-೮೧) ಚಿತ್ರಗಳು ರಾಜ್ಯ ಸರ್ಕಾರದ ಉತ್ತಮ ಚಿತ್ರ ಪ್ರಶಸ್ತಿ ಪಡೆದಿವೆ. ನಿರ್ದೇಶಕರನ್ನೇ ಚಿತ್ರದ ತಾರೆಯನ್ನಾಗಿ ಪರಿವರ್ತಿಸಿದ ಕೀರ್ತಿ ಪುಟ್ಟಣ್ಣನವರಿಗೆ ಸಲ್ಲಬೇಕು. ತಮಿಳು, ತೆಲುಗು, ಮಲೆಯಾಳಂ, ಹಿಂದಿ ಚಿತ್ರಗಳನ್ನೂ ನಿರ್ದೇಶಿಸಿದ್ದಾರೆ. ದೆಹಲಿಯ ಚಿತ್ರೋತ್ಸವದಲ್ಲಿ ಪುಟ್ಟಣ್ಣನವರ ಚಿತ್ರಗಳ ಉತ್ಸವ ನಡೆಯಿತು. ಪುಟ್ಟಣ್ಣನವರು ರಷ್ಯಾ ಪ್ರವಾಸ ಮಾಡಿದರು. ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘದ ಸ್ಥಾಪಕ ಅಧ್ಯಕ್ಷರು. ಚಿತ್ರೋದ್ಯಮಕ್ಕೆ ಅವರು ಸಲ್ಲಿಸಿದ ಸೇವೆಯನ್ನು ಗೌರವಿಸಿ, ರಾಜ್ಯ ಸರ್ಕಾರ ಅವರ ಹೆಸರಿನಲ್ಲಿ ಶ್ರೇಷ್ಠ ನಿರ್ದೇಶಕರಿಗಾಗಿ ಒಂದು ಲಕ್ಷ ರೂಪಾಯಿ ಮೌಲ್ಯದ ವಾರ್ಷಿಕ ಪ್ರಶಸ್ತಿಯನ್ನು ಸ್ಥಾಪಿಸಿತು. ಜೊತೆಗೆ ಬೆಂಗಳೂರಿನ ಜಯನಗರದ ಪೂರ್ಣಿಮಾ ಚಿತ್ರಮಂದಿರಕ್ಕೆ ಅವರ ಹೆಸರನ್ನೇ ನೀಡಿತು. ಪುಟ್ಟಣ್ಣ ತಮ್ಮ ೫೨ನೆಯ ವಯಸ್ಸಿನಲ್ಲಿ ೧೯೮೫ರ ಜೂನ್ ೫ರಂದು ನಿಧನರಾದರು.

## ಪುರುಷೋತ್ತಮ್ ವಾಲ್ಕೆ

ಪ್ರಶಸ್ತಿ ವಿಜೇತ ಛಾಯಾಗ್ರಾಹಕ. ಪೂರ್ಣ ಹೆಸರು ಬಾಬುಲ್‌ನಾಥ್ ಪುರುಷೋತ್ತಮ್ ವಾಲ್ಕೆ. ಮೂಲತಃ ತಮಿಳುನಾಡಿನವರಾದ ಇವರು ಛಾಯಾಗ್ರಹಕ ವೃತ್ತಿಯನ್ನು ಪ್ರಾರಂಭಿಸಿದ್ದು ೧೯೪೭ರಲ್ಲಿ. ಮಧುರೆಯ ಚಿತ್ರಕಲಾ



ಸ್ಟುಡಿಯೋದಲ್ಲಿ ಎರಡು ವರ್ಷಗಳ ತರಬೇತಿ. ನಂತರ ಮದ್ರಾಸಿನ ಫಿಲ್ಮ್ ಸ್ಟುಡಿಯೋದಲ್ಲಿ ಉದ್ಯೋಗ. 'ಮಾಡಿದ್ದುಣ್ಣೋ ಮಹರಾಯ' ಚಿತ್ರದಿಂದ ಕನ್ನಡ ಚಿತ್ರರಂಗ ಪ್ರವೇಶ. 'ಭೂಲೋಕದಲ್ಲಿ ಯಮರಾಜ', 'ಸ್ನೇಹದ ಕಡಲಲ್ಲಿ', 'ಭೂಮಿಗೆ ಬಂದ ಭಗವಂತ'. 'ಮಲಯ ಮಾರುತ', 'ಮಾಗಿಯ ಕನಸು' ಮೊದಲಾದ ಚಿತ್ರಗಳಲ್ಲಿ ಛಾಯಾಗ್ರಹಣ ನಿರ್ವಹಣೆ. ೧೯೭೭-೭೮ನೇ ಸಾಲಿಗೆ ರಾಜ್ಯ ಸರ್ಕಾರದ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿಯನ್ನು 'ಮಾಗಿಯ ಕನಸು' ಚಿತ್ರಕ್ಕಾಗಿ ಪಡೆದಿದ್ದಾರೆ.

## ಪೂಜಾ ಲೋಕೇಶ್

ಕಲಾವಿದರಲ್ಲಿ ಕಲೆ ವಂಶಪಾರಂಪರ್ಯವಾಗಿ ಹರಿಯುತ್ತದೆ ಎಂಬುದನ್ನು ಸಾದರಗೊಳಿಸಿರುವ ಸಮರ್ಥ ನಟಿ ಪೂಜಾ ಲೋಕೇಶ್. ಆಕೆ ರಂಗಭೂಮಿ ಮತ್ತು ಚಿತ್ರರಂಗಗಳ ಹಿರಿಯರಾದ ಸುಬ್ಬಯ್ಯನಾಯ್ಡುರವರ ಮೊಮ್ಮಗಳು,



ತಾರಾಜ್ಯೋತಿ ಲೋಕೇಶ್ ಮತ್ತು ಗಿರಿಜಾರವರ ಮಗಳು. ಪೂಜಾ ಚಿಕ್ಕಂದಿನಿಂದಲೇ ಅಭಿನಯಕ್ಕಿಳಿದವರು. ಶಾಸ್ತ್ರೋಕ್ತವಾಗಿ ಭರತನಾಟ್ಯ ಅಭ್ಯಾಸ ಮಾಡಿದವರು. ಮೊದಲು ಚಲನಚಿತ್ರ ಕ್ಯಾಮೆರಾ ಎದುರಿಸಿದ್ದು ಹಾಲೆಂಡ್ ಚಿತ್ರವೊಂದಕ್ಕೆ. ಆ ಚಿತ್ರದಿಂದಲೇ ಚಿತ್ರರಂಗದ ಮೆಟ್ಟಿಲನ್ನೂ ಹತ್ತಿದರು. 'ಪೂಜಾ', 'ನಿಶ್ಚಿತಾರ್ಥ', 'ಹುಲಿಯಾ', 'ಯುದ್ಧ', 'ಬದುಕು ಜಟಕಾ ಬಂಡಿ', 'ಉಲ್ಟಾ ಪಲ್ಟಾ' ಮತ್ತು ಇನ್ನೂ ಕೆಲವು ಚಿತ್ರಗಳಲ್ಲಿ ಮೈ ಚಳಿ ಬಿಟ್ಟು ಅಭಿನಯಿಸಿದರು. 'ಹುಲಿಯಾ'ದಲ್ಲಿ ಆಕೆ ಆದರ್ಶ ಪತ್ರಕರ್ತೆಯ ಪಾತ್ರದಲ್ಲಿ ನೀಡಿದ ಅಭಿನಯಕ್ಕಾಗಿ ಆಕೆಗೆ ರಾಜ್ಯ ಸರ್ಕಾರದಿಂದ ೧೯೯೫-೯೬ರ ಸಾಲಿನ ಅತ್ಯುತ್ತಮ ಪೋಷಕನಟಿ ಪ್ರಶಸ್ತಿ ಸಿಕ್ಕಿತು. ವಿವಾಹವಾದ ನಂತರವೂ ಪೂಜಾ ಕಿರುತೆರೆ ಮತ್ತು ಚಿತ್ರಗಳಲ್ಲಿ ಅಭಿನಯಿಸುತ್ತಿದ್ದಾರೆ.

## ಪ್ರೇಮಾ

ಕನ್ನಡೇತರ ಬೆಡಗಿಯರೇ ನಮ್ಮ ನಿರ್ಮಾಪಕರಿಗೆ ಹೆಚ್ಚು ಪ್ರಿಯವಾಗುತ್ತಿರುವ ವಿಚಿತ್ರ ಸನ್ನಿವೇಶದಲ್ಲಿ ಕನ್ನಡಿತಿಯಾಗಿ ತನ್ನ ವಿಶಿಷ್ಟ ಸ್ಥಾನವನ್ನು ಬಿಟ್ಟುಕೊಡದೆ ಚಿತ್ರದಿಂದ ಚಿತ್ರಕ್ಕ ಹೆಚ್ಚು ಪ್ರಿಯವ ನಟಿಯಾಗುತ್ತಿರುವ ಪ್ರೇಮಾ ಕೊಡಗಿನ ಬೆಡಗಿ. ಅನೇಕ ಕನ್ನಡ ಚಿತ್ರಗಳಲ್ಲಿ ತಮ್ಮ ಬೆಡಗು ಮತ್ತು ಪ್ರತಿಭೆಗಳನ್ನು ಪ್ರದರ್ಶಿಸಿರುವ ಆಕೆ ತೆಲುಗು ಚಿತ್ರರಂಗದಲ್ಲಿ ಕೂಡ ಹೆಸರು ಮಾಡಿದ್ದಾರೆ. ರಾಜ್ಯಪ್ರಶಸ್ತಿ ವಿಜೇತ 'ಬೆಳ್ಳಿ ಬೆಳಕು'




ಚಿತ್ರದಲ್ಲಿ ಬಾಲನಟಿಯಾಗಿ ಬೆಳಕಿಗೆ ಬಂದರು. ಪ್ರೇಮಾ ನಾಯಕಿಯಾಗಿ ಅಭಿನಯಿಸಿದ ಮೊದಲ ಚಿತ್ರ 'ಸವ್ಯಸಾಚಿ'. ಈ ಚಿತ್ರದಿಂದ ರಾಜಕುಮಾರ್ ಕುಟುಂಬಕ್ಕೆ ನಿಕಟವಾಗಿ ಪರಿಚಯವಾದರು. ಆಕೆ ಶಿವರಾಜ್‌ಕುಮಾರ್‌ರವರು ನಾಯಕಿಯಾಗಿ ಅಭಿನಯಿಸಿದ ಚಿತ್ರ 'ಓಂ' ಆಕೆ ಎಂತಹ ಪ್ರತಿಭಾವಂತ ಅಭಿನೇತ್ರಿಯೆಂಬುದನ್ನು ತೋರಿಸಿಕೊಟ್ಟಿತು. ಆ ಚಿತ್ರದ ಅಭಿನಯಕ್ಕಾಗಿ ಆಕೆಗೆ ೧೯೯೫-೯೬ರ ಸಾಲಿನ ಅತ್ಯುತ್ತಮ ನಟಿ ಪ್ರಶಸ್ತಿಯೂ ರಾಜ್ಯ ಸರ್ಕಾರದಿಂದ ಲಭ್ಯವಾಯಿತು. 'ನಮ್ಮೂರ ಮಂದಾರ ಹೂವೆ', 'ಕೌರವ', 'ಚಂದ್ರಮುಖಿ ಪ್ರಾಣಸಖಿ' ಮತ್ತು 'ಯಜಮಾನ' ವಿಶಿಷ್ಟ ಅಭಿನಯಕ್ಕೆ ಅವಕಾಶ ಮಾಡಿಕೊಟ್ಟ ಇತರ ಪ್ರಮುಖ ಚಿತ್ರಗಳು.

## ಪ್ರೇಮಾ ಕಾರಂತ್

ಪ್ರೇಮಾ ಕಾರಂತರು ಕನ್ನಡ ಚಿತ್ರರಂಗದ ನಿರ್ದೇಶಕಿಯಾಗಿ ಬಂದ ಗಮನಾರ್ಹ ಮಹಿಳೆ. ಅವರು ನಿರ್ದೇಶಿಸಿದ ಮೊದಲ ಚಿತ್ರ 'ಫಣಿಯಮ್ಮ'. ಆ ಚಿತ್ರದಲ್ಲಿಯೇ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟಗಳಲ್ಲಿ ಚಲನಚಿತ್ರ ಕಲೆ ಮತ್ತು



ಮಾಧ್ಯಮಗಳ ಪರಿಣತರ ಗಮನ ಸೆಳೆದರು. 'ಫಣಿಯಮ್ಮ' 'ಮ್ಯಾನ್‌ಹೀಂ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ'ದಲ್ಲಿ ಮೂರು ಪ್ರಶಸ್ತಿಗಳನ್ನು ಪಡೆದುಕೊಂಡಿತು. ಬಾಬು ಕೋಡಿ ಮೂವೀಸ್ ಲಾಂಛನದಲ್ಲಿ ಅವರೇ ನಿರ್ಮಿಸಿದ ಈ ಚಿತ್ರಕ್ಕೆ ೧೯೮೨-೮೩ನೇ ಸಾಲಿನಲ್ಲಿ ರಾಜ್ಯ ಸರ್ಕಾರದಿಂದ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಲಭ್ಯವಾಯಿತು. ೧೯೮೩ನೇ ಸಾಲಿನ ಅತ್ಯುತ್ತಮ ಚಿತ್ರ ರಾಷ್ಟ್ರ ಪ್ರಶಸ್ತಿಯನ್ನು ಪಡೆಯಿತು. ನಂತರ ಅವರು ಕನ್ನಡದಲ್ಲಿ 'ನಕ್ಕಳಾ ರಾಜಕುಮಾರಿ' ಮತ್ತು ಹಿಂದಿಯಲ್ಲಿ 'ಬಂದ್ ಝರೋಕೆ' ಚಿತ್ರಗಳನ್ನು ನಿರ್ದೇಶಿಸಿದರು. ಅವರು ನಿರ್ದೇಶಿಸಿರುವ ಸಾಕ್ಷ್ಯ ಚಿತ್ರಗಳು ಅನೇಕ. ಹವ್ಯಾಸಿ ರಂಗಭೂಮಿಯಲ್ಲಿ ಅನೇಕ ವರ್ಷಗಳಿಂದ ಸಕ್ರಿಯವಾಗಿ ಕೆಲಸ ಮಾಡುತ್ತಲಿದ್ದು ದೆಹಲಿ, ಭೂಪಾಲ್, ಬೆಂಗಳೂರು ಮೊದಲಾದ ನಗರಗಳಲ್ಲಿ ನಾಟಕ ಶಿಬಿರಗಳನ್ನು ನಡೆಸಿರುವ ಅವರು, ಜಿ.ವಿ.ಅಯ್ಯರ್‌ರವರ 'ಹಂಸಗೀತೆ' ಚಿತ್ರದಲ್ಲಿ ಅಭಿನಯಿಸುವ ಹಾಗೂ ಅದಕ್ಕೆ ವಸ್ತ್ರವಿನ್ಯಾಸ ಮಾಡುವ ಮೂಲಕ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದರು. 'ಸಿಂಹಾಸನ', 'ತಬ್ಬಲಿಯು ನೀನಾದೆ ಮಗನೆ', 'ಅಮರ ಮಧುರ ಪ್ರೇಮ', 'ಒಂದು ಪ್ರೇಮದ ಕಥೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಲ್ಲದೆ, ವಸ್ತ್ರವಿನ್ಯಾಸಕಾರರಾಗಿಯೂ ಭಾಗವಹಿಸಿದ್ದಾರೆ. ಹಿಂದಿ ಮತ್ತು ಇಂಗ್ಲಿಷ್‌ಗಳಿಂದ ಅನೇಕ ನಾಟಕ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ೧೨೦ಕ್ಕೂ ಹೆಚ್ಚು ನಾಟಕಗಳಿಗೆ ವಸ್ತ್ರವಿನ್ಯಾಸ ಮಾಡಿದ ವಿಕ್ರಮ ಅವರದು. ಅವರು ೧೨ ವರ್ಷಗಳ ಕಾಲ ಅಧ್ಯಾಪಕಿಯಾಗಿದ್ದವರು. ಬನಾರಸ್ ಹಿಂದು ವಿಶ್ವವಿದ್ಯಾಲಯದಲ್ಲಿ ಓದಿದ ಆಕೆ ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಿಂದ ಡಿಪ್ಲೊಮ ಪಡೆದುಕೊಂಡಿದ್ದಾರೆ. ವಿದೇಶಗಳಲ್ಲಿ ವ್ಯಾಪಕವಾಗಿ ಪ್ರವಾಸ ಮಾಡಿ ಬಂದಿದ್ದಾರೆ. ಖ್ಯಾತ ರಂಗತಜ್ಞ ಬಿ.ವಿ.ಕಾರಂತರ ಕೈ ಹಿಡಿದು ಅವರ ಚಿತ್ರರಂಗದ ಕಾರ್ಯಗಳಲ್ಲೂ ನೆರವಾಗಿದ್ದಾರೆ.

## ಬಂಗಾರೇಶ್ ಚಿಂದೋಡಿ

ಚಿಂದೋಡಿ ವೀರಪ್ಪನವರು ಸ್ಥಾಪಿಸಿ ಚಿಂದೋಡಿ ಲೀಲಾರವರು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿರುವ ಕೆ.ಬಿ.ಆರ್.ಡ್ರಾಮಾ ಕಂಪನಿ ಕನ್ನಡ ವೃತ್ತಿ ರಂಗಭೂಮಿಯಲ್ಲಿ ಒಂದು ಮೈಲಿಗಲ್ಲು. ಆ ಸಂಸ್ಥೆಯ ಆಧಾರಸ್ತಂಭಗಳಲ್ಲೊಬ್ಬರಾದ ಚಿಂದೋಡಿ ಬಂಗಾರೇಶ್ ತಮ್ಮ ಸೋದರಿ ಚಿಂದೋಡಿ ಲೀಲಾರಂತೆಯೇ ಕನ್ನಡ ಚಿತ್ರರಂಗದೊಂದಿಗೂ ನಂಟು ಬೆಳೆಸಿಕೊಂಡವರು. ಬಂಗಾರೇಶ್ ಎಂಟು ವರ್ಷದ ಬಾಲಕರಾಗಿದ್ದಾಗಲೇ ನಾಟಕರಂಗ ಪ್ರವೇಶ ಮಾಡಿದರು. ನಂತರ ಚಿತ್ರನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ (ರವೀ) ಅವರಬಳಿ ಸಹಾಯಕ ನಿರ್ದೇಶಕರಾಗಿ ಚಲನಚಿತ್ರರಂಗಕ್ಕೂ ಬಂದರು. ಹುಣಸೂರು ಕೃಷ್ಣಮೂರ್ತಿಗಳ ಗರಡಿಯಲ್ಲಿಯೂ ಪಳಗಿದರು. ಅವರು ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ 'ರತ್ನನ ಮಕ್ಕಳು' ೧೯೮೧ರಲ್ಲಿ ಬಿಡುಗಡೆಯಾಯಿತು.



ತಮ್ಮ ಮುಂದಿನ ಚಿತ್ರಕ್ಕಾಗಿ ೧೪ ವರ್ಷಗಳು ಕಾದ ಅವರು ೧೯೯೫ ರಲ್ಲಿ ಸೋದರಿ ಚಿಂದೋಡಿ ಲೀಲಾ ಅವರಿಗಾಗಿ ನಿರ್ದೇಶಿಸಿದ್ದು 'ಗಾನಯೋಗಿ ಪಂಚಾಕ್ಷರ ಗವಾಯಿ'. ಆ ವರ್ಷದ ಅತ್ಯುತ್ತಮ ಚಿತ್ರವೆಂದು ರಾಜ್ಯಸರ್ಕಾರದಿಂದ ಪ್ರಶಸ್ತಿ ಗಳಿಸಿತು. ಈ ಚಿತ್ರದಲ್ಲಿನ ಹಿನ್ನೆಲೆ ಗಾಯನಕ್ಕಾಗಿ ಎಸ್.ಪಿ.ಬಾಲಸುಬ್ರಹ್ಮಣ್ಯಂ ಹಾಗೂ ಸಂಗೀತ ನಿರ್ದೇಶನಕ್ಕಾಗಿ ಹಂಸಲೇಖ ರಾಷ್ಟ್ರ ಪ್ರಶಸ್ತಿಗಳನ್ನು ಪಡೆದರು.

## ಬಲರಾಂ.ಜೆ

'ಪಟ್ಟಣಕ್ಕೆ ಬಂದ ಪುಟ್ಟ' ಚಿತ್ರ ಬಿಡುಗಡೆಯಾಗುವ ಮುನ್ನ ನಿರ್ದೇಶಕ ಜೆ.ಬಲರಾಮ್ ಕನ್ನಡ ಚಿತ್ರರಂಗಕ್ಕೆ ಹೆಚ್ಚು



ಪರಿಚಿತರಾಗಿರಲಿಲ್ಲ. ಅದೇ ಅವರು ನಿರ್ದೇಶಿಸಿದ ಪ್ರಥಮ ಚಿತ್ರ .ಆದರೆ ಆ ವೇಳೆಗೆ ಅವರು ಖ್ಯಾತ ನಿರ್ದೇಶಕರಾದ ದೊರೆ-ಭಗವಾನ್, ರೇಣುಕಾ ಶರ್ಮ ಮತ್ತು ಎ.ಟಿ.ರಘುರವರ ಬಳಿ ಸಹ ನಿರ್ದೇಶಕರಾಗಿ ದುಡಿದಿದ್ದರು. ನಂತರ ಅವರು ನಿರ್ದೇಶಿಸಿದ ಚಿತ್ರಗಳು 'ಅಣ್ಣ ಅಂದ್ರೆ ನಮ್ಮಣ್ಣ' ಮತ್ತು 'ಮಹಾತಾಯಿ'. ಅವರು ಸಾಕ್ಷ್ಯ ಮತ್ತು ಶೈಕ್ಷಣಿಕ ಚಿತ್ರಗಳ ನಿರ್ದೇಶಕರೂ ಹೌದು. ಬಲರಾಂ ನಿರ್ದೇಶಿಸಿದ ಕನ್ನಡ ಕಿರು ಚಿತ್ರ 'ಸಾಲುಮರದ ತಿಮ್ಮಕ್ಕ ಮತ್ತು ೨೪೮ ಮಕ್ಕಳು' ಭಾರತೀಯ ಅಂತರರಾಷ್ಟ್ರೀಯ ಚಲನಚಿತ್ರೋತ್ಸವವೊಂದರ ಭಾರತೀಯ ಪನೋರಮ ವಿಭಾಗಕ್ಕೆ ಆಯ್ಕೆಯಾಗಿ, ಅದೇ ಕಾರಣದಿಂದ ರಾಜ್ಯಸರ್ಕಾರದ ವಿಶೇಷ ಬಹುಮಾನವನ್ನು ಪಡೆಯಿತು.

## ಬಸಂತಕುಮಾರ್ ಪಾಟೀಲ್

ಚಲನಚಿತ್ರ ನಿರ್ಮಾಪಕ, ನಟ, ಫೈನಾನ್ಶಿಯರ್ ಹಾಗೂ ಹೊರಾಂಗಣ ಚಿತ್ರೀಕರಣ ಘಟಕದ ಮಾಲೀಕ. ಹೀಗೆ ಬಹುಮುಖವಾಗಿ ಉದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಮಂತ ಉದ್ಯಮಿ ಬಸಂತಕುಮಾರ್ ಪಾಟೀಲ್ ೧೯೪೮ನೇ ಸೆಪ್ಟೆಂಬರ್ ೨೮ರಂದು ಬಿಜಾಪುರದಲ್ಲಿ ಜನಿಸಿದರು. ಅಲ್ಲಿಯೇ ವ್ಯಾಸಂಗ ನಡೆಸಿ ಮೆಕ್ಯಾನಿಕಲ್ ಇಂಜಿನಿಯರ್ ಆಗಿ, ರಾಜ್ಯಾದ್ಯಂತ ಹಾಗೂ ಗೋವಾದಲ್ಲಿ ಹದಿನೈದಕ್ಕೂ ಹೆಚ್ಚು ಉದ್ದಿಮೆಗಳು ರೂಪುಗೊಳ್ಳಲು ಕಾರಣರಾದರು. ಆದರೂ ಚಿತ್ರರಂಗದ ಸೆಳೆತ ಅವರನ್ನು ಬಿಡಲಿಲ್ಲ. ೧೯೭೪ರಲ್ಲಿ 'ಮಹಾತ್ಯಾಗ' (ನಿರ್ದೇಶನ : ಮಾರುತಿ ಶಿವರಾಂ) ಚಿತ್ರದಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗವನ್ನು ಪ್ರವೇಶಿಸಿ, ಆ ಚಿತ್ರದ ನಿರ್ಮಾಪಕರೂ ಆದರು. ನಂತರ ಬಿ.ಪಿ.ಫಿಲಂಸ್ ಚಿತ್ರ ನಿರ್ಮಾಣ ಸಂಸ್ಥೆಯನ್ನು ಆರಂಭಿಸಿ, ವಿಜಯಾಸತ್ಯಂ ನಿರ್ದೇಶನದಲ್ಲಿ 'ಮಾಂಗಲ್ಯ



ಭಾಗ್ಯ' (೧೯೭೬), ಗೀತಪ್ರಿಯ ನಿರ್ದೇಶನದಲ್ಲಿ 'ಅನುರಾಗ ಬಂಧನ' (೧೯೭೮), ವಿ.ಸೋಮಶೇಖರ್ ನಿರ್ದೇಶನದಲ್ಲಿ 'ಅಪರಾಧಿ ನಾನಲ್ಲ' (೧೯೮೬) ಚಿತ್ರಗಳನ್ನು ನಿರ್ಮಿಸಿ, ಅವುಗಳಲ್ಲಿ ಅಭಿನಯಿಸಿದರು. ಈ ಮಧ್ಯೆ ಚಲನಚಿತ್ರ ಹಂಚಿಕೆ ಮತ್ತು ಫೈನಾನ್ಸ್ ಕ್ಷೇತ್ರಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡರು. ಹೊರಾಂಗಣ ಚಿತ್ರೀಕರಣಕ್ಕೆ ಹೊರಗಿನಿಂದ ಘಟಕಗಳನ್ನು ಕರೆಸಿಕೊಳ್ಳುತ್ತಿದ್ದ ಕಾಲದಲ್ಲಿ ಕನ್ನಡದವರದೇ ಆದ ಪ್ರಥಮ ಹೊರಾಂಗಣ ಚಿತ್ರೀಕರಣ ಘಟಕವನ್ನು ಆರಂಭಿಸಿದರು. ಹಲವಾರು ಕನ್ನಡ ಚಿತ್ರಗಳಿಗೆ ಆರ್ಥಿಕ ಬಂಡವಾಳ ನೀಡಿ ಅವು ತೆರೆಕಾಣಲು ಕಾರಣರಾದರು. 'ಕನ್ನಡ ಚಲನಚಿತ್ರ ನಿರ್ಮಾಪಕ ಸಂಘ'ದ ಖಜಾಂಚಿಯಾಗಿ ಕೆಲವರ್ಷಕಾಲ ಸೇವೆ ಸಲ್ಲಿಸಿದ ಪಾಟೀಲರು ಹೊಸ ಮನ್ವಂತರದಲ್ಲಿ ಅಧ್ಯಕ್ಷರಾಗಿ ಸಂಘದ ಚುಕ್ಕಾಣಿ ಹಿಡಿದಿದ್ದಾರೆ.

## ಬಸವರಾಜ್ ಅರಸ್.ಜಿ

ಭರವಸೆಯ ಕ್ರಿಯಾಶೀಲ ಸಂಕಲನಕಾರರಲ್ಲಿ ಒಬ್ಬರು. ಮೈಸೂರಿನಲ್ಲಿ ಜನನ. ಸಿವಿಲ್ ಡ್ರಾಫ್ಟ್‌ಮೆನ್ ಕೋರ್ಸ್‌ನಲ್ಲಿ ಪದವಿ. ವೃತ್ತಿಯಾಗಿ ಸಂಕಲನವನ್ನು



ಆಯ್ದುಕೊಂಡ ಮೇಲೆ ಮಣಿರತ್ನಂ, ಟಿ.ಎಸ್.ನಾಗಾಭರಣ, ರಾಜೇಂದ್ರಸಿಂಗ್‌ಬಾಬು, ದಿನೇಶ್‌ಬಾಬು, ಗಿರೀಶ್ ಕಾರ್ನಾಡ್ ಅವರಂಥ ದಿಗ್ದರ್ಶಕರ ಚಿತ್ರಗಳಲ್ಲಿ ಸಹ ಸಂಕಲನಕಾರರಾಗಿ ದುಡಿದು 'ಭೂಬಾಣ' ಚಿತ್ರದ ಮೂಲಕ ಸ್ವತಂತ್ರ ಸಂಕಲನಕಾರರಾದರು. 'ಗಣೇಶ ಐ ಲವ್ ಯೂ', 'ಅಮ್ಮಾವ್ರ ಗಂಡ', 'ಮಾತಿನ ಮಲ್ಲ', 'ಅಮೆರಿಕಾ ಅಮೆರಿಕಾ', 'ದೋಣಿ ಸಾಗಲಿ', 'ನಂ.೧' ಹಾಗೂ 'ಚೈತ್ರದ ಚಿಗುರು' ಚಿತ್ರಗಳಿಗೆ ಸಂಕಲನಕಾರ್ಯ ನಿರ್ವಹಿಸಿದ್ದಾರೆ. ೧೯೯೮-೯೯ನೇ ಸಾಲಿನ 'ದೋಣಿಸಾಗಲಿ' ಚಿತ್ರದ ಸಂಕಲನಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

## ಬಸವರಾಜ್.ಬಿ.ಎಸ್

ಚಲನಚಿತ್ರರಂಗದ ಛಾಯಾಗ್ರಾಹಕ. ತಿಪಟೂರಿನಲ್ಲಿ ೧೯೪೧ರಲ್ಲಿ ಜನನ. ಬಿ.ಎಸ್‌ಸಿ ಪದವಿ ನಂತರ ಛಾಯಾಗ್ರಹಣದಲ್ಲಿ ಡಿಪ್ಲೊಮಾ ಪದವಿ. ೧೯೬೫ರಲ್ಲಿ ಚಿತ್ರರಂಗ ಪ್ರವೇಶ. ಖ್ಯಾತ ಛಾಯಾಗ್ರಾಹಕರಾದ ವಿ.ಕೆ.ಮೂರ್ತಿ ಹಾಗು ರಾಜೇಂದ್ರ ಮಲ್ಹೋಸ್ ಅವರ ಬಳಿ ಸಹಾಯಕರಾಗಿ ದುಡಿದರು. ನಂತರ ಮತ್ತೊಬ್ಬ ಖ್ಯಾತ ಛಾಯಾಗ್ರಾಹಕ ಡಿ.ವಿ.ರಾಜಾರಾಂ ಅವರ ಬಳಿ ಆರು ವರ್ಷಗಳ ಕಾಲ ಸಹಾಯಕರಾಗಿದ್ದರು. ೧೯೭೮ರಲ್ಲಿ ಒರಿಯಾ ಚಿತ್ರ 'ಹೀರಾ ಮೋತಿ ಔರ್ ಮಾಣಿಕ್ಯ' ಚಿತ್ರದಲ್ಲಿ ಸ್ವತಂತ್ರ



ಛಾಯಾಗ್ರಾಹಕರಾದರು. 'ಅಂದದ ಅರಮನೆ' ಚಿತ್ರದಿಂದ ಕನ್ನಡ ಚಿತ್ರರಂಗ ಪ್ರವೇಶ. 'ಅಮೃತ ಘಳಿಗೆ', 'ಮಾನಸ ಸರೋವರ', 'ರಾವಣ ರಾಜ್ಯ', 'ನೆನೆಪಿನ ದೋಣಿ', 'ಉದ್ಭವ', 'ಬಾ ನನ್ನ ಪ್ರೀತಿಸು', 'ಕಾವ್ಯ', 'ನೀ ಮುಡಿದಾ ಮಲ್ಲಿಗೆ', 'ಅಣ್ಣಾವ್ರ ಮಕ್ಕಳು' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದಾರೆ. ೧೯೮೩-೮೪ರಲ್ಲಿ 'ಅಮೃತ ಘಳಿಗೆ' ಚಿತ್ರದ ಛಾಯಾಗ್ರಹಣಕ್ಕಾಗಿ ರಾಜ್ಯ ಸರ್ಕಾರದ ಶ್ರೇಷ್ಠ ಛಾಯಾಗ್ರಾಹಕ ಪ್ರಶಸ್ತಿಯನ್ನು ರಾಜ್ಯ ಸರ್ಕಾರದಿಂದ ಪಡೆದಿದ್ದಾರೆ.

## ಬಸವರಾಜು.ಸಿ.ಆರ್

ಗುಬ್ಬಿ ಕರ್ನಾಟಕ ಫಿಲಂಸ್ ಮತ್ತು



ಎ.ವಿ.ಎಂ ಸಂಸ್ಥೆಗಳು ಕನ್ನಡ ಚಿತ್ರಗಳ ನಿರ್ಮಾಣಕ್ಕೆ ತೊಡಗಿದಾಗ ಗುಬ್ಬಿ ವೀರಣ್ಣನವರು ತಮ್ಮ ಚಿತ್ರಗಳ ವಿತರಣೆಗಾಗಿ ರೂಪಿಸಿದ ಲಿಮಿಟೆಡ್ ಸಂಸ್ಥೆ ಕರ್ನಾಟಕ ಫಿಲಂಸ್. ಈ ಸಂಸ್ಥೆಯ ಚುಕ್ಕಾಣಿ ಹಿಡಿದು ಅನೇಕ ವರ್ಷಗಳ ಕಾಲ ಅತ್ಯಂತ ಯಶಸ್ವಿಯಾಗಿ, ಲಾಭದಾಯಕವಾಗಿ ನಡೆಯುವಂತೆ ಬೆಳಸಿದ ಪ್ರಮುಖರಲ್ಲಿ ಒಬ್ಬರು ಸಿ.ಆರ್.ಬಸವರಾಜು. ಚಿತ್ರದುರ್ಗದವರಾದ ಅವರು ರಾಜಕಾರಣದಲ್ಲೂ ಆಸಕ್ತಿ ಹೊಂದಿದ್ದರು. ಇವರು ಚಲನಚಿತ್ರ ಹಂಚಿಕೆ, ನಿರ್ಮಾಣ ಎರಡರಲ್ಲೂ ಪರಿಶ್ರಮ ಹೊಂದಿದವರು. ಗುಬ್ಬಿ ಫಿಲಮ್ಸ್ ಹಾಗೂ ಗುಬ್ಬಿ, ಕರ್ನಾಟಕ ಫಿಲಂಸ್ ಲಾಂಛನದಡಿಯಲ್ಲಿ 'ಜೀವನ ನಾಟಕ', 'ಹೇಮರೆಡ್ಡಿ ಮಲ್ಲಮ್ಮ', 'ಗುಣಸಾಗರಿ', 'ಬೇಡರ ಕಣ್ಣಪ್ಪ', 'ಸದಾರಮೆ', 'ಭೂಕೈಲಾಸ', 'ಆದರ್ಶಸತಿ' ಮೊದಲಾದ ಚಿತ್ರಗಳ ನಿರ್ಮಾಣದಲ್ಲಿ ಸಹಭಾಗಿಯಾಗಿದ್ದರು. ಮೂಲತಃ ಬಸವರಾಜು ಗಾಂಧಿವಾದಿಗಳು.

## ಬಸವರಾಜ ಕೆಸ್ತೂರ್

ಹುಟ್ಟಿದ್ದು ೧೯೪೪ರ ಮೇ ೨೮ರಂದು ಚಾಮರಾಜನಗರ ಜಿಲ್ಲೆಯ ಕೆಸ್ತೂರಿನ ರೈತ ಕುಟುಂಬದಲ್ಲಿ. ವಿದ್ಯಾರ್ಥಿಯಾಗಿರುವಾಗಲೇ ಬರಹಗಾರನಾಗಬೇಕೆಂಬ ಹುಚ್ಚು, ಕನ್ನಡ ಸಾಹಿತ್ಯವನ್ನು ಆಳವಾಗಿ ಅರಿತುಕೊಳ್ಳುವ ಆಕಾಂಕ್ಷೆ. ಕೆಲವು ಸ್ನೇಹಿತರೊಡಗೂಡಿ ಪುರೋಗಾಮಿ ಸಾಹಿತ್ಯ ಸಂಘ ಸ್ಥಾಪಿಸಿ ಕೆಲವು ಪುಸ್ತಕಗಳನ್ನು ಪ್ರಕಟಿಸಿದರು. ೧೯೬೪ರಲ್ಲಿ 'ಬಾಳ ಭುವಿಯ ಮಡಿಲಲ್ಲಿ' ಕಾದಂಬರಿ ಬರೆದರು. ಕಾಲೇಜಿನಲ್ಲಿ ಓದುತ್ತಿರುವಾಗಲೇ ಖುಲ್ಲಾಳ್ ಪಾರಿತೋಷಕ ನಾಟಕಗಳಲ್ಲಿ ನಟಿಸಿ ಪ್ರಶಸ್ತಿ ಪಡೆದುಕೊಂಡರು. ಅನಂತರ ಚಲನಚಿತ್ರದಲ್ಲಿ ನಟನಾಗಲು ಮದ್ರಾಸಿಗೆ ಪ್ರಯಾಣ ಬೆಳೆಸಿದರು. ಸ್ನೇಹಿತ



ಸತ್ಯಮೂರ್ತಿಯವರ ಸಹಾಯದಿಂದ ನಿರ್ದೇಶಕ ಗೀತಪ್ರಿಯ ಅವರ ಪರಿಚಯವಾಯಿತು. ಅಭಿನಯದ ಬದಲು ನಿರ್ದೇಶನ ಕಲಿ ಎಂದು ಅವರು ಹೇಳಿದರು. ಗೀತಪ್ರಿಯರವರ ಬಳಿಯೇ ಸಹಾಯಕ ನಿರ್ದೇಶಕನಾಗಿ ಕೆಲಸ ಕಲಿಯಲು ಪ್ರಾರಂಭಿಸಿ, ೧೯೬೮ರಲ್ಲಿ ಅವರ 'ಮಣ್ಣಿನ ಮಗ' ಚಿತ್ರಕ್ಕೆ ಸಹಾಯಕರಾದರು. ೧೯೬೯-೭೦ ರಲ್ಲಿ ನಾಗೇಶ್‌ಬಾಬ ಅವರ 'ಅನಿರೀಕ್ಷಿತ' ಚಿತ್ರಕ್ಕೆ ಸಹಾಯಕ ನಿರ್ದೇಶಕರಾದರು. ೧೯೭೧ ರಲ್ಲಿ 'ಹೆಣ್ಣು ಹೊನ್ನು ಮಣ್ಣು' ಚಿತ್ರಕ್ಕೆ ಜಂಟಿ ನಿರ್ದೇಶಕರಾದರು. ಕೆಸ್ತೂರರು ಸುಮಾರು ೧೧ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. 'ನಂಜುಂಡ ನಕ್ಕಾಗ', 'ಸಂಘರ್ಷ', 'ಕರಿನಾಗ', 'ಸ್ವಾಮೀಜಿ', 'ಯೌವನದಾ ಹೊಳೆಯಲ್ಲಿ', 'ಬಾಲಕ ಅಂಬೇಡ್ಕರ್' ಪ್ರಮುಖ ಚಿತ್ರಗಳು. 'ಸುಂದರ ಹೂವುಗಳು' ಚಿತ್ರ ಸೆನ್ಸಾರ್ ಕತ್ತರಿಗೆ ಸಿಕ್ಕಿ ತೆರೆಕಾಣಲಿಲ್ಲ.

## ಬಸವರಾಜ ಗುಡಿಗೇರಿ

ಉತ್ತರ ಕರ್ನಾಟಕದವರಾದ ಬಸವರಾಜ್ ಗುಡಿಗೇರಿ ಸ್ವಯಂ ನಾಟಕಕಾರರು. ಮೂರ್‍ನಾಲ್ಕು ನಾಟಕ ಕಂಪೆನಿಯನ್ನು ಸ್ಥಾಪಿಸಿ ನಾಟಕ ಕಲೆಯನ್ನು



ಜೊತೆಗೆ ವೃತ್ತಿ ನಾಟಕ ಸಂಸ್ಥೆಯನ್ನು ಜೀವಂತವಾಗಿ ಉಳಿಸಿಕೊಂಡು ಬಂದಿದ್ದಾರೆ. ನಾಟಕದ ಗೀಳು ಇವರನ್ನು ಚಿತ್ರರಂಗಕ್ಕೂ ಎಳೆತಂದಿತು. 'ವೀರಸಿಂಧೂರ ಲಕ್ಷ್ಮಣ' ಎಂಬ ಸ್ವಾತಂತ್ರ್ಯ ವೀರನ ಜೀವನವನ್ನು ಕುರಿತ ಚಿತ್ರವನ್ನು ನಿರ್ಮಿಸುವಂತೆ ಮಾಡಿತು. ಇದರೊಂದಿಗೆ ಆಗೊಮ್ಮೆ ಈಗೊಮ್ಮೆ ಉತ್ತರ ಕರ್ನಾಟಕದ ಸೊಗಡಿನ ಸಂಭಾಷಣೆ ಇರುವಂಥ ಚಿತ್ರಗಳಲ್ಲಿ ಅಭಿನಯಿಸಿದಾರೆ. ಅವರ ಅಭಿನಯದ 'ರೈತನ ಮಕ್ಕಳು', 'ಸಂಗ್ಯಾಬಾಳ್ಯಾ', 'ಗಾನಯೋಗಿ ಪಂಚಾಕ್ಷರ ಗವಾಯಿ' ಮುಂತಾದವು ಹೆಸರಿಸುವಂಥ ಚಿತ್ರಗಳು.

## ಬಸವರಾಜಯ್ಯ.ಎಂ.ಎನ್

ಕನ್ನಡ ಚಿತ್ರರಂಗದ ಅವಿಭಾಜ್ಯ ಅಂಗವಾಗಿ ಕಾರ್ಯನಿರ್ವಹಿಸಿದ ಪ್ರೀಮಿಯರ್ ಸ್ಟುಡಿಯೋದ ಮಾಲೀಕರು. ವಿಮಾ ಕಂಪೆನಿಯೊಂದರ ಉದ್ಯಮಿಯಾಗಿದ್ದ ಬಸವರಾಜಯ್ಯ ಕನ್ನಡ ಚಿತ್ರರಂಗ ಕನ್ನಡ ನಾಡಿನಲ್ಲಿ ಅಭಿವೃದ್ಧಿ ಹೊಂದಲೆಂಬ ಸದುದ್ದೇಶದಿಂದ ಮೈಸೂರಿನಲ್ಲಿ ೧೯೫೪ರಲ್ಲಿ ಅರಮನೆಗೆ ಸೇರಿದ ಚಿತ್ತರಂಜನ್ ಮಹಲ್‌ನಲ್ಲಿ ಸ್ಟುಡಿಯೋ ಸ್ಥಾಪನೆ ಮಾಡಿದರು. ಕನ್ನಡದ



ನಿರ್ಮಾಪಕರಿಗೆ ಬೆಂಬಲವಾಗಿ ನಿಂತು ತಮ್ಮ ತನು, ಮನ, ಧನಗಳನ್ನು ವ್ಯಯಿಸಿ ಸ್ಟುಡಿಯೋ ಬೆಳಸಿದರು. ನಿರ್ಮಾಪಕರಿಗೆ ಬೇಕಾದ ಎಲ್ಲಾ ರೀತಿಯ ಆಧುನಿಕ ವ್ಯವಸ್ಥೆಯನ್ನು ಅಳವಡಿಸಿದರು. ಕನ್ನಡ ಚಿತ್ರಗಳಿಗೆ ಸಹಾಯಧನ ನೀಡಬೇಕೆಂದು ಸರ್ಕಾರದ ಜತೆ ಮಾತುಕತೆ ನಡೆಸಿ ಅದರ ಅವಶ್ಯಕತೆಯನ್ನು ಎತ್ತಿಹಿಡಿದರು. ಹಳ ಫ್ಲೋರ್‌ಗಳ ಜತೆಗೆ ಹೊರಾಂಗಣ ಘಟಕವನ್ನು ತೆರೆದರು. ಸ್ಟುಡಿಯೋದಲ್ಲಿ ಚಿತ್ರೀಕರಣಗೊಂಡ ಮೊದಲ ಚಿತ್ರ 'ಸ್ತ್ರೀರತ್ನ'. ನಂತರ ಸುಮಾರು ವಿವಿಧ ಭಾಷೆಗಳ ೯೦೦ ಚಿತ್ರಗಳು ಇವರ ಸ್ಟುಡಿಯೋದಲ್ಲಿ ಚಿತ್ರೀಕರಣಗೊಂಡಿವೆ. ಫ್ಲೋರ್‌ಗಳಲ್ಲಿ ತಮ್ಮ ಸ್ವಂತ ಹಣದಿಂದ ಸೆಟ್‌ಗಳನ್ನು ನಿರ್ಮಿಸಿ ನಿರ್ಮಾಪಕರುಗಳಿಗೆ ಕಡಿಮೆ ಖರ್ಚಿನಲ್ಲಿ ಒದಗಿಸಿದ್ದಾರೆ. ಹಿಂದೆ ಕಪ್ಪು-ಬಿಳುಪು ಚಿತ್ರಗಳೇ ತಯಾರಾಗುತ್ತಿದ್ದು, ಕಚ್ಚಾ ಫಿಲಂ ಸಿಗುವುದು ಕಷ್ಟವಾದಾಗಲೆಲ್ಲ ತಾವೇ ಕಚ್ಚಾ ಫಿಲಂ ಒದಗಿಸಿ ನಿರ್ಮಾತೃಗಳಿಗೆ ನೆರವಾಗಿದ್ದಾರೆ. ಅಲ್ಪಸ್ವಲ್ಪ ಹಣ ಕೈಲಿಟ್ಟುಕೊಂಡು ಚಿತ್ರ ಮಾಡಲು ಬಂದವರನ್ನು ಬುದ್ಧಿ ಹೇಳಿ ಕಳುಹಿಸಿದ್ದಾರೆ. ಕನ್ನಡ ಚಿತ್ರರಂಗಕ್ಕೆ ಇವರು ಸಲ್ಲಿಸಿದ ಸೇವೆಗಾಗಿ ಕರ್ನಾಟಕ ಸರ್ಕಾರ ೧೯೯೬-೯೭ನೇ ಸಾಲಿನ ಡಾ.ರಾಜಕುಮಾರ್ ಪ್ರಶಸ್ತಿ ನೀಡಿ ಗೌರವಿಸಿದೆ.

## ಬಾಬು.ಎ.ಆರ್

ತೊಂಬತ್ತರ ದಶಕದ ಆರಂಭದಲ್ಲಿ ಮಹಮದ್ ಗೌಸ್ ಎಂಬ ಹೆಸರಿನಿಂದ ನಿರ್ದೇಶಕರಾಗಿ ಚಿತ್ರರಂಗಕ್ಕೆ



ಪರಿಚಿತರಾದರು. ೧೯೯೧ರಲ್ಲಿ ತೆರೆಕಂಡ 'ಹತ್ಯಾಕಾಂಡ' ಚಿತ್ರವನ್ನು ವಿಭಿನ್ನವಾಗಿ ನಿರ್ದೇಶಿಸಿದ ಇವರು ನಂತರ 'ಭವ್ಯ ಭಾರತ', 'ಹಲೋ ಯಮ' ಚಿತ್ರಗಳನ್ನು ನಿರ್ದೇಶಿಸಿದರು. ಉತ್ತಮ ಚಿತ್ರಗಳನ್ನು ನೀಡುವ ಪ್ರಾಮಾಣಿಕ ಪ್ರಯತ್ನದಲ್ಲಿ ಯಶಸ್ಸು ಕಾಣಲಿಲ್ಲ. ನಂತರ ಎ.ಆರ್.ಬಾಬು ಎಂದು ಹೆಸರನ್ನು ಬದಲಾಯಿಸಿಕೊಂಡರು. 'ಚೋರ್ ಗುರು ಚಂಡಾಳ್ ಶಿಷ್ಯ', 'ಕೂಲಿರಾಜ', 'ಖಳನಾಯಕ', 'ಜೀಬೂಂಬಾ' ಮುಂತಾದ ಚಿತ್ರಗಳನ್ನು ನಿರ್ದೇಶಿಸಿದಾರೆ. ಹಲವು ಚಿತ್ರಗಳಿಗೆ ನೇಪಥ್ಯದಲ್ಲಿ ನಿಂತು ದುಡಿದಿದ್ದಾರೆ. ಉತ್ತಮ ಚಿತ್ರಕಥೆ, ಸಂಭಾಷಣಾ ಲೇಖಕರಾಗಿ ಹೆಸರಾದವರು.

## ಬಾಲ್.ಜಿ.ಯಾದವ್

ಹಿರಿಯ ಸಂಕಲನಕಾರ. ಎಸ್.ಎಸ್.ಎಲ್.ಸಿ.ವರೆಗೆ ವಿದ್ಯಾಭ್ಯಾಸ. ೧೯೪೩-೪೬ವರೆಗೂ ಬಾಂಬೆ ಲ್ಯಾಬೊರೇಟರಿನಲ್ಲಿ ಪ್ರೊಸೆಸಿಂಗ್, ಡೆವಲಪಿಂಗ್, ಪ್ರಿಂಟಿಂಗ್‌ನಲ್ಲಿ ತರಬೇತಿ. ಹೋಮಿ ವಾಡಿಯಾ ಮಾರ್ಗದರ್ಶನದಲ್ಲಿ ವಾಡಿಯಾ ಮೂವಿಟೋನ್‌ನಲ್ಲಿ ಸಂಕಲನದಲ್ಲಿ ತರಬೇತಿ. ಅನಂತರ



ಮೈಸೂರಿಗೆ ಆಗಮನ. ನವಜ್ಯೋತಿ ಸ್ಟುಡಿಯೋವಿನಲ್ಲಿ (೧೯೪೬-೫೦) ಎಲ್ಲಾ ವಿಭಾಗದಲ್ಲೂ ಕಾರ್ಯ ನಿರ್ವಹಣೆ. ಹಿರಿಯ ಸಂಕಲನಕಾರ ಸಿ.ವಿ.ರಾಜು ಮಾರ್ಗದರ್ಶನ. ೧೯೫೦ರಲ್ಲಿ ಹೆಚ್.ಎಮ್. ರೆಡ್ಡಿಯವರ ಸ್ಟಾರ್ ಕಂಬೈನ್ಸ್‌ನಲ್ಲಿ ಕೆಲಸ. ಕೆಂಪರಾಜರ 'ರಾಜಾ ವಿಕ್ರಮ', ಅರುಣಾ ಫಿಲಂಸ್, ಫಿಲಂಸೆಂಟರ್ ಅವರ ಚಿತ್ರಗಳು ಹಾಗೂ ಹಿಂದಿ ಚಿತ್ರಗಳಿಗೆ ಸಂಕಲನಕಾರರಾಗಿ ಕಾರ್ಯನಿರ್ವಹಣೆ. 'ಕೃಷ್ಣಲೀಲಾ' ಚಿತ್ರದ ಸಹ ನಿರ್ದೇಶಕರು ಹಾಗೂ ಸಂಕಲನಕಾರರು. ೧೯೬೪ರ ನಂತರ ಸ್ವತಂತ್ರವಾಗಿ ಸಂಕಲನಕಾರರಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೭೩-೭೪ನೇ ಸಾಲಿಗೆ 'ಗಂಧದ ಗುಡಿ', ೧೯೭೬-೭೭ನೇ ಸಾಲಿಗೆ 'ಕಾಕನಕೋಟೆ' ಚಿತ್ರಗಳ ಸಂಕಲನಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದರು.

## ಬಾಲಕೃಷ್ಣ.ಎ

ಬಿ.ವಿ.ಕಾರಂತರ ಹಿಂದಿ ಮಕ್ಕಳ ಚಿತ್ರ 'ಚೋರ್ ಚೋರ್ ಚುಪ್ ಜಾ' ಮತ್ತು ಪಿ.ಲಂಕೇಶ್‌ರವರ 'ಪಲ್ಲವಿ' ಚಿತ್ರಗಳಲ್ಲಿ ಸಹಾಯಕ ನಿರ್ದೇಶಕರಾಗಿ ಕೆಲಸ ಮಾಡಿ, ಸ್ವಲ್ಪಕಾಲ ಪತ್ರಿಕೋದ್ಯಮದಲ್ಲಿ ಒಲವು ತೋರಿ 'ಸುಧಾ' ವಾರಪತ್ರಿಕೆಯಲ್ಲಿ ಉಪ ಸಂಪಾದಕರಾಗಿ ದುಡಿದ ಎ.ಬಾಲಕೃಷ್ಣ ಮತ್ತೆ ಚಿತ್ರರಂಗಕ್ಕೆ ಹಿಂತಿರುಗಿ ಕಾಶೀನಾಥ್ ರವರ ಗರಡಿಯನ್ನು ಹೊಕ್ಕರು. ಕಾಶೀನಾಥ್ ನಿರ್ಮಿಸಿ ನಿರ್ದೇಶಿಸಿದ 'ಅನುಭವ'ದಲ್ಲಿ ಸಹನಿರ್ದೇಶಕರಾಗಿ ದುಡಿದು 'ಆಗಂತುಕ' ಚಿತ್ರಕ್ಕೆ ಕಥೆ, ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ಬರೆದರು. ಪತ್ರಕರ್ತ

ಎಂ.ರಾಮನ್ ನಿರ್ಮಿಸಿದ ಹಾಸ್ಯಪ್ರಧಾನ 'ಎಮರು ಮನೆ ಮೀನಾ' ಬಾಲಕೃಷ್ಣ ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ. ಬಾಲಕೃಷ್ಣ ೧೯೮೮ರಲ್ಲಿ 'ಅಂತರ್ಯಾಮಿ' ಚಿತ್ರವನ್ನು ನಿರ್ದೇಶಿಸಿ ವಿಮರ್ಶಕರ ಮೆಚ್ಚುಗೆ ಪಡೆದರು. ಕಿರುತೆರೆಯಲ್ಲಿಯೂ ತೊಡಗಿಕೊಂಡಿದಾರೆ.

## ಬಾಲಕೃಷ್ಣ.ಟಿ.ಎನ್

ಕೋಟ್ಯಂತರ ಕನ್ನಡಿಗರ ಭಾವನೆಗಳಿಗೆ ಸ್ಪಂದಿಸಿದ ಅಪರೂಪದ ಕಲಾವಿದ. ಹಾಸನ ಜಿಲ್ಲೆಯ ಅರಸೀಕೆರೆಯಲ್ಲಿ ಜನನ. ಹುಟ್ಟಿದ ದಿನ, ತಂದೆ-ತಾಯಿಯರ ಬಗ್ಗೆ ಅವರಿಗೇ ಏನೂ ಗೊತ್ತಿಲ್ಲ. ಸೈನ್‌ಬೋರ್ಡ್ ಬರೆಯುವ ಮೂಲಕ ಜೀವನ ಆರಂಭಿಸಿದ ಇವರು ಗೆಳೆಯರೊಂದಿಗ ಅರಸೀಕೆರೆಯಲ್ಲಿ 'ಕೃಷ್ಣಲೀಲ' ನಾಟಕ ಪ್ರದರ್ಶಿಸಿದರು. ಹಾರ್ಮೋನಿಯಂ ಮಾಸ್ತರು ಗಿರಿಗೌಡ ಪಾಟೀಲರ ನಾಟಕ ಸಂಸ್ಥೆಯಲ್ಲಿಸೇರಿ ಸಣ್ಣ ಪುಟ್ಟ ಪಾತ್ರಗಳನ್ನು ಮಾಡಿದರು. ಗುಬ್ಬಿ ಚಾಮಾ ಕಂಪನಿಯಾದ ಶ್ರೀ ಗೌರಿಶಂಕರ ನಾಟಕ ಮಂಡಲಿಗೆ ಗೇಟ್‌ಕೀಪರ್ ಆಗಿ ಸೇರಿದರು. ಒಮ್ಮೆ ಸಿಕ್ಕ ಅವಕಾಶ ಬಳಸಿಕೊಂಡು ನಟರಾದರು. ಹಲವಾರು ನಾಟಕ ಕಂಪನಿಗಳ ನಂತರ ಗುಬ್ಬಿ ಕಂಪನಿ ಸೇರಿದರು. ಅನೇಕ ನಾಟಕಗಳನ್ನು ರಚಿಸಿದರು. 'ರಾಧಾರಮಣ' (೧೯೪೩)



ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಪಂಚರತ್ನ', 'ಭಕ್ತ ಮಲ್ಲಿಕಾರ್ಜುನ' ಚಿತ್ರಗಳಿಗೆ ಕಥೆ, ಸಂಭಾಷಣೆ, ಹಾಡುಗಳನ್ನು ರಚಿಸಿದರು. ಹಲವಾರು ಚಿತ್ರಗಳಿಗೆ ಹಾಸ್ಯ ಜೋಡಣೆಯ ಭಾಗಗಳನ್ನು ರಚಿಸಿದರು. ಕನ್ನಡ ಕಲಾವಿದರ ಸಂಘದ ನಾಲ್ವರಲ್ಲಿ ಒಬ್ಬರಾಗಿ, 'ರಣಧೀರ ಕಂಠೀರವ' ಚಿತ್ರವನ್ನು ನಿರ್ಮಿಸಿದರು. 'ಇಮ್ಮಡಿ ಪುಲಿಕೇಶಿ' (೧೯೬೭) ಬಾಲಣ್ಣನವರ ನೂರನೆಯ ಚಿತ್ರ. 'ಬಂಗಾರದ ಮನುಷ್ಯ' ಚಿತ್ರದ ರಾಚೂಟಪ್ಪನ ಪಾತ್ರಕ್ಕಾಗಿ ಸರ್ಕಾರ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ನೀಡಿತು. 'ಕಲಿತರೂ ಹೆಣ್ಣೆ' (೧೯೬೩) ಸ್ವಂತ ನಿರ್ಮಾಣದ ಚಿತ್ರ. ಇವರ ಮತ್ತೊಂದು ಮಹತ್ತರ ಸಾಧನೆಯೆಂದರೆ ಅಭಿಮಾನ್ ಸ್ಟುಡಿಯೋ (೧೯೬೩) ಸ್ಥಾಪನೆ. ಜನತೆಯಿಂದ ನೂರು ರೂ.ನಂತೆ ಹಣ ಸಂಗ್ರಹಿಸಿ ಈ ಸ್ಟುಡಿಯೋ ಕಟ್ಟಿದರು. ಬಾಲಣ್ಣನವರು ಅಭಿನಯಿಸದ ಪಾತ್ರವೇ ಇಲ್ಲ. ಅವರ ಮತ್ತು ನರಸಿಂಹರಾಜುರವರ ಜೋಡಿಯಂತೂ ಅವಿಸ್ಮರಣೀಯ. ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಶಂಕರಗೌಡ ಸ್ಮಾರಕ ರಂಗಭೂಮಿ ಪ್ರಶಸ್ತಿ, ರಾಜ್ಯ ಸರ್ಕಾರದ 'ಪುಟ್ಟಣ್ಣ ಕಣಗಾಲ್ ಪ್ರಶಸ್ತಿ'ಗಳಿಗ ಭಾಜನರಾದರು.

'ಯಮಕಿಂಕರ' ಇವರ ಕೊನೆಯ ಚಿತ್ರ. ಅವರದೇ ಜಮೀನು ಕೃತಿಯನ್ನು ಹೇಳುವ 'ಕಲಾಭಿಮಾನಿ'ಯಲ್ಲಿ ಅವರೇ ಅಭಿನಯಿಸಿದರು. ಇದು ಅವರ ೫೧೨ನೆಯ ಚಿತ್ರ. ರಂಗಭೂಮಿ ಹಾಗೂ ಚಲನಚಿತ್ರ ಕ್ಷೇತ್ರಗಳಿಗ ಅಪಾರ ಕೊಡುಗೆ ನೀಡಿದ ಇವರು ೧೯೯೫ರ ಜುಲೈ ೧೯ರಂದು ನಿಧನರಾದರು.

## ಬಾಲರಾಜ್



ಕನ್ನಡ ಚಿತ್ರರಂಗಕ್ಕೆ ಹಾಸ್ಯನಟರಾಗಿ ಪರಿಚಿತರಾಗಿ ನಂತರ ನಾಯಕಪಟ್ಟಕ್ಕೆ ಏರಿದ ನಟ. ಚಿತ್ರರಂಗಕ್ಕೆ 'ಸಂಯುಕ್ತ' ಚಿತ್ರದಿಂದ ನಟರಾಗಿ ೧೯೮೮ರಲ್ಲಿ ಪ್ರವೇಶ. ನಂತರ ಅನೇಕ ಚಿತ್ರಗಳಲ್ಲಿ ಹಾಸ್ಯ ಪಾತ್ರಗಳು ಇವರ ಪಾಲಿಗೆ. 'ಶಿವ ಮೆಚ್ಚಿದ ಕಣ್ಣಪ್ಪ', 'ಮನ ಮಿಡಿಯಿತು', 'ನಂಜುಡಿ ಕಲ್ಯಾಣ' ಮತ್ತಿತರ ಕೆಲವು ಚಿತ್ರಗಳಲ್ಲಿ ಹಾಸ್ಯಪಾತ್ರಗಳು. ನಾಯಕರಾಗಿ ನಟಿಸಿದ ಚಿತ್ರಗಳು 'ನಂಬಿದರೆ ನಂಬಿ ಬಿಟ್ಟರೆ ಬಿಡಿ', 'ಸಿಡುಕ ಬೇಡ ಸಿಂಗಾರಿ', 'ಬಂಗಾರದಂಥ ಮಗ', 'ರುದ್ರ ತಾಂಡವ' ಮೊದಲಾದವು. ಕಿರುತೆರೆಯಲ್ಲೂ ಸಕ್ರಿಯರು. ಬಾಲರಾಜ್, ರಾಜಕುಮಾರ್ ಅವರ ಸಹೋದರಿ ಕಲಾವಿದೆ ಶಾರದಮ್ಮನವರ ಮಗ.

## ಬಾಲಸುಬ್ರಹ್ಮಣ್ಯಂ .ಎಸ್.ಪಿ

ಹಿನ್ನೆಲೆ ಗಾಯನ ಕ್ಷೇತ್ರದಲ್ಲಿ ಎಸ್.ಪಿ.ಬಾಲಸುಬ್ರಹ್ಮಣ್ಯಂ ಅವರದು ದೊಡ್ಡ ಹೆಸರು. ದಕ್ಷಿಣದ ಎಲ್ಲಾ ಭಾಷೆಗಳ ಚಿತ್ರಗಳು ಮತ್ತು ಇನ್ನಿತರ ಭಾರತೀಯ ಭಾಷೆಗಳಲ್ಲೂ ಹಾಡಿದ್ದಾರೆ. ಚಿತ್ರರಸಿಕರ ಪಾಲಿಗೆ ಅವರು ಎಸ್ಪಿ ಅಥವಾ ಬಾಲು ಎಂದೇ ಪರಿಚಿತ. ಆಂಧ್ರದ ನೆಲ್ಲೂರಿನಲ್ಲಿ ಓದುತ್ತಿರುವಾಗಲೇ ಹಾಡಿನ ಗೀಳು ಹಚ್ಚಿಕೊಂಡ ಬಾಲು ಶಾಲಾಕಾಲೇಜುಗಳ ಸಭೆ ಸಮಾರಂಭಗಳ ಆರ್ಕೆಸ್ಟ್ರಾಗಳಲ್ಲಿ ಹಾಡಿ ಜನಪ್ರಿಯ. ಎಂಜಿನಿಯರಿಂಗ್ ಪದವಿ ಪಡೆದರೂ ಸಂಗೀತ ಕ್ಷೇತ್ರದ ಕಡೆಗೇ ಅವರ ಒಲವು. 'ನಕ್ಕರ ಅದೇ ಸ್ವರ್ಗ' ಚಿತ್ರದ



'ನಗಬೇಕು ನಗಬೇಕು...' ಹಾಡಿನ ಮೂಲಕ ಕನ್ನಡ ಚಿತ್ರರಂಗ ಪ್ರವೇಶ ಮಾಡಿದ ಎಸ್.ಪಿ.ಬಾಲಸುಬ್ರಹ್ಮಣ್ಯಂ ವಿವಿಧ ಭಾಷೆಗಳಲ್ಲಿ ಸುಮಾರು ೪೦ ಸಾವಿರಕ್ಕೂ ಹೆಚ್ಚು ಹಾಡುಗಳನ್ನು ಹಾಡಿದ್ದಾರೆ. ೬೦ಕ್ಕೂ ಹೆಚ್ಚು ಚಿತ್ರಗಳಿಗೆ ಸಂಗೀತ ನಿರ್ದೇಶಿಸಿರುವ ಬಾಲಸುಬ್ರಹ್ಮಣ್ಯಂ ಅವರದು ಅಭಿನಯದಲ್ಲೂ ಎತ್ತಿದ ಕೈ. ಹಲವಾರು ರಾಷ್ಟ್ರೀಯ, ಅಂತರ ರಾಷ್ಟ್ರೀಯ ಗೌರವ ಪುರಸ್ಕಾರಗಳಿಗೆ ಪಾತ್ರರಾಗಿರುವ ಎಸ್.ಪಿ. 'ಪರಸಂಗದ ಗೆಂಡೆತಿಮ್ಮ' ಚಿತ್ರದ 'ನೋಟಿದಾಗೆ ನಗೆಯ ಮೀಟಿ...', 'ಬೆಂಕಿಯ ಬಲೆ' ಚಿತ್ರದ 'ಬಿಸಿಲಾದರೇನು ಮಳೆಯಾದರೇನು...', 'ಬಂಧನ' ಚಿತ್ರದ 'ನೂರೊಂದು ನೆನಪು ಎದೆಯಾಳದಿಂದ...', 'ದೇವರಗುಡಿ' ಚಿತ್ರದ 'ಮಾಮರವೆಲ್ಲೊ ಕೋಗಿಲೆಯಲ್ಲೊ...', 'ಶುಭ ಮಂಗಳ' ಚಿತ್ರದ 'ಸ್ನೇಹದ ಕಡಲಲ್ಲಿ...', 'ಹೊಂಬಿಸಿಲು' ಚಿತ್ರದ 'ನೀರ ಬಿಟ್ಟು ನೆಲದ ಮೇಲೆ...' ಗೀತೆಗಳಿಂದ ರಸಿಕರ ಮನವನ್ನು ತಣಿಸಿದ್ದಾರೆ. ಮೂರು ಪೀಳಿಗೆಯ ನಾಯಕರಿಗೆ ಧ್ವನಿ ನೀಡಿರುವ ಎಸ್.ಪಿ ಯಾವುದೇ ಸ್ವರದಲ್ಲಿಯಾದರೂ ಹಾಡಬಲ್ಲ ಅನುಪಮ ಗಾಯಕ. ಯಾವ ನಟನಿಗೆ ಹಾಡಿದರೂ ಹೊರಗಿನದು ಅನ್ನಿಸದ ಹಾಗೆ ತುಂಬಿಕೊಳ್ಳುವ ಗಾಯನ ಅವರದು. 'ಬಾಳೊಂದು ಚದುರಂಗ', 'ಮುದ್ದಿನ ಮಾವ', 'ಕಲ್ಯಾಣೋತ್ಸವ', 'ಮಾಂಗಲ್ಯಂ ತಂತುನಾನೇನಾ', 'ಭಾರತ್ ೨೦೦೦' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಓ ಮಲ್ಲಿಗೆ' ಚಿತ್ರದಲ್ಲಿನ 'ಮುದ್ದಾದ ಬಲೆ ಹಣ್ಣೆ...' ಹಿನ್ನೆಲೆ ಗಾಯನಕ್ಕಾಗಿ ೧೯೯೭-೯೮ನೇ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ಹಿನ್ನೆಲೆ ಗಾಯಕ ಪ್ರಶಸ್ತಿಯನ್ನು ಪಡೆದಿದ್ದಾರೆ. 'ಗಾನಯೋಗಿ ಪಂಚಾಕ್ಷರ ಗವಾಯಿ' ಕನ್ನಡ ಚಿತ್ರದಲ್ಲಿನ ಗಾಯನಕ್ಕಾಗಿ ರಾಷ್ಟ್ರಮಟ್ಟದ ಅತ್ಯುತ್ತಮ ಹಿನ್ನೆಲೆ ಗಾಯಕ ಪ್ರಶಸ್ತಿಯನ್ನು ಪಡೆದಿದ್ದಾರೆ.

## ಬಾಲಾಜಿಸಿಂಗ್.ಎಂ.ಕೆ

'ಮಕ್ಕಳ ಚಿತ್ರಗಳ ರಾಜ' ಎಂದೇ ಹೆಸರಾದ ನಿರ್ಮಾಪಕರು



ಎಂ.ಕೆ.ಬಾಲಾಜಿಸಿಂಗ್. ಮಕ್ಕಳಿಗಾಗಿ ಯಾರೂ ಚಿತ್ರ ನಿರ್ಮಿಸಲು ಮುಂದೆ ಬರದಂಥ ಕಾಲದಲ್ಲಿ ಧೈರ್ಯಮಾಡಿ ಮಕ್ಕಳ ಚಿತ್ರ ಮಾಡಿದ ಸಾಹಸಿ. ಚಿಕ್ಕಮಗಳೂರಿನ ರಜಪೂತರ ವಂಶದಲ್ಲಿ ಜನಿಸಿದ ಇವರು ಕಾಫಿ ತೋಟವೊಂದರ ಮಾಲೀಕರು. ಮಕ್ಕಳ ಮೇಲಿನ ಮಮತೆಯೇ ಮಕ್ಕಳ ಚಿತ್ರಗಳ ನಿರ್ಮಾಣಕ್ಕೆ ಪ್ರೇರಣೆ.

ಆರ್.ಎಫ್.ಮಾಣಿಕ್‌ಚಂದ್, ಎಸ್.ಎನ್.ಪಾರ್ಥನಾಥ್ ಅವರಂಥ ಮಿತ್ರರನ್ನು ಹುರಿದುಂಬಿಸಿ 'ನಾಗರಹೊಳೆ' ಚಿತ್ರವನ್ನು ನಿರ್ಮಿಸಿ ಸೈ ಎನಿಸಿಕೊಂಡರು. ಎಸ್.ವಿ.ರಾಜೇಂದ್ರಸಿಂಗ್‌ಬಾಬು ಅವರನ್ನು ಸ್ವತಂತ್ರ ನಿರ್ದೇಶಕರಾಗಿಸಿದ ಕೀರ್ತಿ ಬಾಲಜಿಸಿಂಗ್‌ಗೇ ಸಲ್ಲುತ್ತದೆ. 'ಪ್ರಚಂಡ ಪುಟಾಣಿಗಳು', 'ಪುಟಾಣಿ ಏಜೆಂಟ್ ೧, ೨, ೩' ಮೊದಲಾದ ಯಶಸ್ವಿ ಚಿತ್ರಗಳನ್ನು ನಿರ್ಮಿಸಿದರು. ಗುರುಜ್ಯೋತಿ ಕಂಬೈನ್ಸ್ ಎಂಬ ವಿತರಣಾ ಸಂಸ್ಥೆಯನ್ನು ಸ್ಥಾಪಿಸಿದರು. ನಂತರ 'ಪ್ರೀತಿಸಿ ನೋಡು', 'ನ್ಯಾಯ ಗೆದ್ದಿತು', 'ಪ್ರೇಮಯುದ್ಧ', 'ತ್ರಿಶೂಲ', 'ಕಾನೂನಿಗೆ ಸವಾಲ್' ಮುಂತಾದ ಚಿತ್ರಗಳನ್ನು ನಿರ್ಮಿಸಿದರು. ಚಿತ್ರಗಳ ಸೋಲು, ಸಾಲದ ಹೊರೆ ಮುಂತಾದ ಸಂಕಷ್ಟಗಳನ್ನು ಕಂಡ ಅವರಿಗೆ ಸಕಾಲಿಕ ನೆರವು ಸಿಗಲಿಲ್ಲ. ಉತ್ಸಾಹ ಕುಗ್ಗಿತು. ಅಕಾಲ ಮರಣಕ್ಕೆ ತುತ್ತಾದರು.

## ಬಾಲು.ಕೆ

ಖ್ಯಾತ ಸಂಕಲನಕಾರ. ಮೆಟ್ರಿಕ್‌ವರೆಗೆ ವಿದ್ಯಾಭ್ಯಾಸ. ತೆಲುಗು ಚಿತ್ರಗಳಲ್ಲಿ ಸಂಕಲನಕಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಬಾಲು ಈವರೆಗೆ ಸರಿಸುಮಾರು ೫೦೦ಕ್ಕೂ ಹೆಚ್ಚು ಚಿತ್ರಗಳಿಗೆ ಸಂಕಲನಕಾರರಾಗಿ ದುಡಿದಿದ್ದಾರೆ. ಕನ್ನಡದಲ್ಲಿ 'ಸಿಂಹದ ಮರಿ ಸೈನ್ಯ', 'ಕಲಾವಿದ', 'ಸಿಪಾಯಿ', 'ಅಣ್ಣಯ್ಯ', 'ಪುಟ್ನಂಜ' ಮೊದಲಾದ ಚಿತ್ರಗಳಿಗೆ ಸಂಕಲನಕಾರರಾಗಿ ಕಾರ್ಯ ನಿರ್ವಹಿಸಿರುವ ಇವರಿಗೆ ೧೯೮೩-೮೪ನೇ ಸಾಲಿನಲ್ಲಿ 'ಸಿಂಹದಮರಿ ಸೈನ್ಯ' ಚಿತ್ರ ಹಾಗೂ ೧೯೯೫-೯೬ನೇ ಸಾಲಿನಲ್ಲಿ 'ಸಿಪಾಯಿ' ಚಿತ್ರದ ಸಂಕಲನಕ್ಕಾಗಿ ರಾಜ್ಯಸರ್ಕಾರದ ಅತ್ಯುತ್ತಮ ಸಂಕಲನಕಾರ ಪ್ರಶಸ್ತಿ ಲಭಿಸಿದೆ.

## ಭಕ್ತವತ್ಸಲಂ.ಪಿ

ಹಿರಿಯ ಅನುಭವಿ ಸಂಕಲನಕಾರ ಭಕ್ತವತ್ಸಲಂ ಜನಿಸಿದು ಮದ್ರಾಸಿನಲ್ಲಿ. ಎಸ್.ಎಸ್.ಎಲ್.ಸಿ.ವರೆಗೆ ವಿದ್ಯಾಭ್ಯಾಸ. ನಂತರ ಎಲ್.ಎಸ್.ರಾಮಚಂದ್ರನ್ ಅವರ ಬಳಿ ಸಂಕಲನದ ತರಬೇತಿ. ಸುಮಾರು ನಾಲ್ಕು ದಶಕಗಳ ಕಾಲ ಸಂಕಲನಕಾರರಾಗಿ ದುಡಿದಿರುವ ಭಕ್ತವತ್ಸಲಂ 'ಕುಲಗೌರವ' (೧೯೭೦-೭೧), 'ಬಂಗಾರದ ಮನುಷ್ಯ' (೧೯೭೧-೭೨), 'ಪ್ರೇಮದ ಕಾಣಿಕೆ' (೧೯೭೫-೭೬), 'ಶಂಕರ್ ಗುರು' (೧೯೭೬-೭೮), 'ಒಂದಾನೊಂದು ಕಾಲದಲ್ಲಿ' (೧೯೭೮-೭೯), 'ಮಿಂಚಿನ ಓಟ' (೧೯೭೯-೮೦), 'ಹಾಲು ಜೇನು' (೧೯೮೨-೮೩) ಚಿತ್ರಗಳಿಗಾಗಿ ಏಳು ಬಾರಿ



ಕರ್ನಾಟಕ ರಾಜ್ಯ ಸರ್ಕಾರದಿಂದ ಶ್ರೇಷ್ಠ ಸಂಕಲನಕಾರರಾಗಿ ಪ್ರಶಸ್ತಿ ಪಡೆದಿದ್ದಾರೆ.

## ಭಕ್ತವತ್ಸಲ.ಎಂ

ಹಿಂದುಸ್ತಾನ್ ಮೆಷಿನ್ ಟೂಲ್ಸ್ ನಂತಹ ಬೃಹತ್ ಸರ್ಕಾರಿ ಕ್ಷೇತ್ರದ ಉದ್ಯಮದಲ್ಲಿ ಉನ್ನತ ಅಧಿಕಾರಿಯಾಗಿದ್ದು ಅಲ್ಲಿಂದ ಸ್ವಯಂ ಪ್ರೇರಣೆಯಿಂದ ನಿವೃತ್ತಿ ಪಡೆದು ಕುಟುಂಬದ ಉದ್ಯಮಗಳಾದ ಅಬ್ಕಾರಿ ಮತ್ತು ಚಲನಚಿತ್ರ ಪ್ರದರ್ಶನ ಮತ್ತು ಹಂಚಿಕೆಗಳಲ್ಲಿ ತೊಡಗಿಕೊಂಡ ಎಂ.ಭಕ್ತವತ್ಸಲ ಹಲವು ವರ್ಷಗಳ ಸುದೀರ್ಘ ಕಾಲ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದರು. ಆ ಸಂಸ್ಥೆಯ ಸ್ವರೂಪವನ್ನು ಸಂಪೂರ್ಣವಾಗಿ ಬದಲಾಯಿಸಿ ಸುಸ್ಥಿತಿಗೆ ತಂದವರು. ಎಂ.ಭಕ್ತವತ್ಸಲ ಚಿತ್ರ ನಿರ್ಮಾಪಕರೂ ಕೂಡ. ೧೯೭೧ ರಲ್ಲಿ 'ಸಂಪೂರ್ಣ ರಾಮಾಯಣ' ತೆಲುಗು ಚಿತ್ರವನ್ನು ಬಾಪು ರವರ ನಿರ್ದೇಶನದಲ್ಲಿ ಜಂಟಿಯಾಗಿ ನಿರ್ಮಿಸಿ, ಆ ಚಿತ್ರವನ್ನು ದೇಶದ ಎಲ್ಲಾ ಪ್ರಮುಖ ಭಾಷೆಗಳಿಗೂ ಡಬ್ ಮಾಡಿದರು. ಅವರು ಸ್ವತಂತ್ರವಾಗಿ ನಿರ್ಮಿಸಿದ ಕನ್ನಡ ಚಿತ್ರ 'ಕನ್ನೇಶ್ವರ ರಾಮ'. ಎಂ.ಎಸ್.ಸತ್ಯು ನಿರ್ದೇಶಿಸಿದ ಈ ಚಿತ್ರ ಹಿಂದಿಯಲ್ಲಿಯೂ ತಯಾರಾಯಿತು. ಕನ್ನಡದ ಒಳ್ಳೆಯ ಚಿತ್ರಗಳನ್ನು ವಿತರಿಸಿದ್ದೂ ಉಂಟು.



ಭಕ್ತವತ್ಸಲ ಅವರು ಫಿಲಂ ಫೆಡರೇಷನ್ ಆಫ್ ಇಂಡಿಯಾ ಮತ್ತು ದಕ್ಷಿಣ ಭಾರತ ಚಲನ ಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರೂ ಆಗಿದ್ದರು. ಕೇಂದ್ರ ಚಲನ ಚಿತ್ರ ಪ್ರಮಾಣೀಕರಣ ಮಂಡಳಿ, ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ಮಂಡಳಿ ಮುಂತಾದ ರಾಷ್ಟ್ರ ಮಟ್ಟದ ಮಂಡಳಿಗಳಲ್ಲಿಯೂ ಸಕ್ರಿಯ ಸದಸ್ಯರಾಗಿದ್ದರು. ಭಕ್ತವತ್ಸಲ ರಾಜ್ಯ ಮಟ್ಟದಲ್ಲಿಯೂ ಅನೇಕ ಪ್ರಾತಿನಿಧಿಕ ಸಮಿತಿ ಹಾಗೂ ಮಂಡಳಿಗಳಲ್ಲಿ ಯಶಸ್ವಿಯಾಗಿ ದುಡಿದಿದ್ದಾರೆ. ಪತ್ರಿಕೆಗಳ ಅಂಕಣ ಬರಹ, ಸಂಚಾರ, ಪರ್ವತಾರೋಹಣ ಮೊದಲ್ಗೊಂಡು ಹತ್ತಾರು ಹವ್ಯಾಸಗಳಿವೆ. 'ಚಂಡಮಾರುತ' ಚಿತ್ರದಲ್ಲಿ ಅಭಿನಯಿಸಿದ್ದೂ ಉಂಟು. ಗ್ರಂಥ ಸಂಗ್ರಹ, ಹಳೆಯ ಚಿತ್ರಗಳ ಧ್ವನಿಮುದ್ರಿಕೆಗಳ ಸಂಗ್ರಹ, ಅಧ್ಯಯನ, ಬರಹ ಇವರ ಪ್ರೀತಿಯ ಸಂಗತಿಗಳು.

## ಭಗವಾನ್.ಎಸ್.ಕೆ

ಕನ್ನಡದಲ್ಲಿ ಬಾಂಡ್ ಶೈಲಿಯ ಚಿತ್ರಗಳ ಪ್ರವರ್ತಕರಾದ ದೊರೆ-ಭಗವಾನ್ ಜೋಡಿಯ ಎಸ್.ಕೆ.ಭಗವಾನ್ ಹುಟ್ಟಿದ್ದು ೧೯೩೩ ಜುಲೈ ೫ರಂದು. ೧೯೫೯-೬೦ನೆಯ ಸಾಲಿನ ಪ್ರತಿಷ್ಠಿತ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ದೊರೆಯವರೊಂದಿಗೇ ಹಂಚಿಕೊಂಡಿದ್ದಾರೆ. ಈ ಜೋಡಿ ನಿರ್ದೇಶಿಸಿದ 'ಮುನಿಯನ ಮಾದರಿ' ಮತ್ತು 'ಜೀವನ ಚೈತ್ರ' ಚಿತ್ರಗಳು ರಾಜ್ಯ ಪ್ರಶಸ್ತಿ ಗಳಿಸಿವೆ. ಬಹುಮುಖ ಪ್ರತಿಭೆಯ ಭಗವಾನ್ ಕಾಲೇಜಿನಲ್ಲಿ ಓದುತ್ತಿದ್ದಾಗ ನಾಟಕಗಳಲ್ಲಿ ಸ್ತ್ರೀ ಪಾತ್ರ ನಿರ್ವಹಿಸುತ್ತಿದ್ದ ಸ್ಫುರದ್ರೂಪಿ. ಹಿರಣ್ಣಯ್ಯ ಮಿತ್ರ ಮಂಡಳಿ, ಕರ್ನಾಟಕ ನಾಟಕ ಮಂಡಳಿಯ ನಾಟಕಗಳಲ್ಲೂ ಸ್ತ್ರೀ ಪಾತ್ರಗಳನ್ನು ನಿರ್ವಹಿಸುತ್ತಿದ್ದ ಭಗವಾನ್ ಸಿನಿಮಾದ ರೆಪ್ರೆಸೆಂಟೇಟೀವ್ ಆಗಿ



ಚಿತ್ರರಂಗಕ್ಕೆ ಬಂದರು. ೧೯೫೬ರಲ್ಲಿ 'ಭಾಗ್ಯೋದಯ' ಚಿತ್ರದ ಸಾಹಿತ್ಯ ರಚನೆಯಲ್ಲಿ ಕಣಗಾಲ್ ಪ್ರಭಾಕರಶಾಸ್ತ್ರಿಯವರಿಗೆ ಸಹಾಯಕರಾಗಿ ದುಡಿದರು. 'ಜಗಜ್ಯೋತಿ ಬಸವೇಶ್ವರ' ಚಿತ್ರದ ಚಿತ್ರೀಕರಣ ಸಮಯದಲ್ಲಿ ಛಾಯಾಗ್ರಾಹಕ ದೊರೈರಾಜ್ ಅವರ ಪರಿಚಯ ಸ್ನೇಹವಾಗಿ ಮಾರ್ಪಟ್ಟು ಅವರೊಂದಿಗೆ ಅನೇಕ ಚಿತ್ರಗಳಿಗೆ ಸಹ-ನಿರ್ದೇಶಕರಾಗಿ ಕೆಲಸ ಮಾಡಿದರು. ೧೯೬೬ರಲ್ಲಿ ನಿರ್ಮಾಪಕ ಎ.ಸಿ.ನರಸಿಂಹಮೂರ್ತಿ ಅವರೊಂದಿಗೆ 'ಸಂಧ್ಯಾರಾಗ' ಚಿತ್ರವನ್ನು ಜಂಟಿಯಾಗಿ ನಿರ್ದೇಶಿಸಿದರು. 'ಜೇದರ ಬಲೆ' ಚಿತ್ರದೊಂದಿಗೆ ದೊರೆ-ಭಗವಾನ್ ಜೋಡಿ ಸ್ವತಂತ್ರ ನಿರ್ದೇಶಕ-ನಿರ್ಮಾಪಕರಾದರು. ಜಂಟಿಯಾಗಿ ೨೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಇವೆಲ್ಲ ಸದಭಿರುಚಿಯ ಸಾಮಾಜಿಕ ಚಿತ್ರಗಳು. ಈ ಪೈಕಿ ರಾಜಕುಮಾರ್ ಅವರ ಚಿತ್ರಗಳದ್ದೇ ಸಿಂಹಪಾಲು. ಕಾದಂಬರಿ ಆಧರಿತ ಚಿತ್ರಗಳನ್ನು, ಬಾಂಡ್ ಶೈಲಿಯ ಚಿತ್ರಗಳನ್ನು ತೆರೆಗಿತ್ತು ಅದನ್ನೊಂದು ಪರಂಪರೆಯಾಗಿಸಿದ ಭಗವಾನ್ ಹೋಟೇಲ್ ಉದ್ಯಮ ಇತ್ಯಾದಿಗಳಲ್ಲೂ ತೊಡಗಿದ್ದಾರೆ. ಆದರ್ಶ ಚಲನಚಿತ್ರ ಶಿಕ್ಷಣ ಸಂಸ್ಥೆಯ ಪ್ರಾಂಶುಪಾಲರು.

## ಭಟ್.ಎಸ್.ಆರ್

ಕನ್ನಡ ಚಿತ್ರರಂಗದ ಛಾಯಾಗ್ರಾಹಕ. ಸಿರಸಿಯ ದೇವರ ಕೊಪ್ಪದಲ್ಲಿ ಜನಿಸಿದ ಇವರ ಮಾತೃಭಾಷೆ ಕನ್ನಡ. ಬಿ.ಎಸ್‌ಸಿ ಪದವಿಯ ನಂತರ, ಪುಣೆಯ ಫಿಲಂ ಇನ್ಸ್‌ಟಿಟ್ಯೂಟ್‌ನಲ್ಲಿ ಡಿಪ್ಲೊಮಾ. ಸುಪ್ರಸಿದ್ಧ ಛಾಯಾಗ್ರಾಹಕ ಎಸ್.ರಾಮಚಂದ್ರ ಅವರ ಬಳಿ ಸಹಾಯಕ ಛಾಯಾಗ್ರಾಹಕರಾಗಿ ದುಡಿಮೆ. 'ಎಲ್ಲಿಂದಲೋ ಬಂದವರು', 'ಕಾಡಿಗೆ ಹೋದವರು', 'ಮೂರು ದಾರಿಗಳು', 'ಸೂರ್ಯ' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ. ೧೯೮೦-೮೧ನೇ



ಸಾಲಿನಲ್ಲಿ 'ಮೂರು ದಾರಿಗಳು'. ೧೯೮೬-೮೭ನೇ ಸಾಲಿನಲ್ಲಿ 'ಸೂರ್ಯ' ಚಿತ್ರದ ಛಾಯಾಗ್ರಹಣಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದ್ದಾರೆ.

## ಭವ್ಯ

೮೦ರ ದಶಕದ ಕನ್ನಡ ಚಿತ್ರರಂಗದಲ್ಲಿ ಬೆಳಗಿದ ನಾಯಕಿ. ಬೆಂಗಳೂರಿನಲ್ಲಿ ಹುಟ್ಟಿ ಬೆಳೆದ ಭಾರತಿ ಚಿತ್ರರಂಗಕ್ಕೆ ಭವ್ಯ ಆಗಿ ೧೯೮೨ರಲ್ಲಿ 'ಡಾಕ್ಟರ್ ದೇವೋಭವ' ಚಿತ್ರದಿಂದ ಚಿತ್ರರಂಗಕ್ಕೆ ಪ್ರವೇಶ ಮಾಡಿದರಾದರೂ ಚಿತ್ರ ತೆರೆ ಕಾಣಲಿಲ್ಲ. ನಂತರ 'ಧನವಂತ' ಚಿತ್ರದಲ್ಲಿ ನಾಯಕಿಯಾದರೂ ಅದು ಕೂಡ ತೆರೆ ಕಾಣಲಿಲ್ಲ. ಅದಾದ ನಂತರ ವಿಷ್ಣುವರ್ಧನ್ ಅವರ ತಂಗಿಯಾಗಿ 'ಕಲ್ಲು ವೀಣೆ ನುಡಿಯಿತು' ಚಿತ್ರದಲ್ಲಿ ಅಭಿನಯ. ಮಣಿಮುರುಗನ್ ನಿರ್ದೇಶನದ 'ಸ್ವರ್ಗದಲ್ಲಿ ಮದುವೆ' ಚಿತ್ರದಲ್ಲಿ ಸತ್ವಶಾಲಿ ಪಾತ್ರದಲ್ಲಿ ನಾಯಕಿಯಾಗಿ ಅಭಿನಯಿಸಿದರೂ ೧೯೮೩ರಲ್ಲಿ ತೆರೆಕಂಡ ಸಿದ್ದಲಿಂಗಯ್ಯ ನಿರ್ದೇಶನದ 'ಪ್ರೇಮಪರ್ವ' ಚಿತ್ರದಿಂದ ಯಶಸ್ವಿ ನಾಯಕಿಯಾದರು. ಈ ಚಿತ್ರ ಭವ್ಯ



ಚಿತ್ರರಂಗದಲ್ಲಿ ಭದ್ರವಾಗಿ ನೆಲೆಗೊಳ್ಳಲು ಸಹಕರಿಸಿತು. ನಂತರದ ದಿನಗಳಲ್ಲಿ ಸಾಲು ಸಾಲು ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯಿಸಿದರು. ೧೯೮೩ ರಿಂದ ೯೦ರವರೆಗೂ ಸುಮಾರು ೭೦ ಚಿತ್ರಗಳಲ್ಲಿ ಅಭಿನಯಿಸಿದರು. 'ನೀ ಬರೆದ ಕಾದಂಬರಿ', 'ಕರುಣಾಮಯಿ'. 'ಹಳ್ಳಿಯ ಸುರಾಸುರರು', 'ತವರು ಮನೆ', 'ಸಾಂಗ್ಲಿಯಾನ', 'ಪ್ರೇಮ ಗಂಗೆ', 'ಸಂಗ್ರಾಮ', 'ಪ್ರಳಯಾಂತಕ', 'ನಾ ನಿನ್ನ ಪ್ರೀತಿಸುವೆ', 'ದೈವಶಕ್ತಿ', 'ಮುತ್ತೈದೆ', ಪ್ರೇಮ ಪರೀಕ್ಷೆ', 'ಜನನಾಯಕ', 'ರಾವಣ ರಾಜ್ಯ' ಭವ್ಯ ಅಭಿನಯದ ಕೆಲವು ಯಶಸ್ವಿ ಚಿತ್ರಗಳು. ಇದಲ್ಲದೆ 'ಕೃಷ್ಣ ನೀ ಬೇಗನೆ ಬಾರೋ', 'ಹೊಸ ಬಾಳು', 'ಹೃದಯ ಹಾಡಿತು', 'ತಾಯಿ', 'ನಿಲುಕದ ನಕ್ಷತ್ರ' ಚಿತ್ರಗಳಲ್ಲಿನ ಭವ್ಯ ಅಭಿನಯ ಆಕೆ ಒಳ್ಳೆಯ ಕಲಾವಿದೆ ಎಂಬುದನ್ನು ನಿರೂಪಿಸಿತು. ವಿಷ್ಣುವರ್ಧನ್-ಭವ್ಯ ಹಾಗೂ ಶಂಕರ್‌ನಾಗ್-ಭವ್ಯ ಕನ್ನಡ ಚಿತ್ರರಂಗ ಕಂಡ ಎರಡು ಯಶಸ್ವಿ ಜೋಡಿ. ವಿವಾಹದ ನಂತರ ಕೆಲ ಸಮಯ ಚಿತ್ರರಂಗದಿಂದ ದೂರ ಸರಿದಿದ್ದ ಭವ್ಯ ೨೦೦೦ನೇ ವರ್ಷದಿಂದ ಮತ್ತೆ ಕಿರುತೆರೆಯನ್ನು ಪ್ರವೇಶಿಸಿದರು. ನಾಗತಿಹಳ್ಳಿ ಚಂದ್ರಶೇಖರ್ ನಿರ್ದೇಶನದ 'ನನ್ನ ಪ್ರೀತಿಯ ಹುಡುಗಿ' ಚಿತ್ರದಿಂದ ಚಿತ್ರರಂಗವನ್ನು ಪೋಷಕ ನಟಿಯಾಗಿ ಪುನಃ ಪ್ರವೇಶಿಸಿದರು.

## ಭವಾನಿ

ಕಲಾವಿದೆ ಋಷ್ಯೇಂದ್ರಮಣಿ ಅವರ ಮೊಮ್ಮಗಳು. ಮಾತೃಭಾಷೆ ತೆಲುಗು, ಹುಟ್ಟಿ ಬೆಳೆದದ್ದು ಮದರಾಸಿನಲ್ಲಿ. ಕೂಚುಪುಡಿ



ಮತ್ತು ಭರತನಾಟ್ಯದಲ್ಲಿ ಶಿಕ್ಷಣ. 'ಬೂತಯ್ಯನ ಮಗ ಅಯ್ಯು' ಚಿತ್ರದ ಮೂಲಕ ಚಿತ್ರರಂಗ ಪ್ರವೇಶ. 'ಕಳ್ಳ ಕುಳ್ಳ', 'ನಾಗಕನ್ಯೆ', 'ಕೂಡಿ ಬಾಳೋಣ', 'ವಂಶ ಜ್ಯೋತಿ', 'ಶನಿಪ್ರಭಾವ', 'ಸುಮಂಗಲಿ' ಇತ್ಯಾದಿ ಭವಾನಿ ಅಭಿನಯದ ಕೆಲವು ಮುಖ್ಯ ಚಿತ್ರಗಳು. ೭೦ರ ದಶಕದಲ್ಲಿ ವಿಷ್ಣುವರ್ಧನ್-ಭವಾನಿ ಕನ್ನಡ ಚಿತ್ರರಂಗ ಕಂಡ ಯಶಸ್ವಿ ಜೋಡಿಗಳಲ್ಲಿ ಒಂದು.

## ಭಾರ್ಗವ.ಹೆಚ್.ಆರ್

ನಿರ್ದೇಶಕ ಹೆಚ್.ಆರ್.ಭಾರ್ಗವ ಅವರು ಚಿತ್ರರಂಗದಲ್ಲಿ ಭಾರ್ಗವ ಎಂದೇ ಪರಿಚಿತರು. ಹಿರಿಯ ಹುಣಸೂರು ಕೃಷ್ಣಮೂರ್ತಿಗಳ ಸೋದರಳಿಯ, ನಟ-ನಿರ್ದೇಶಕ ದ್ವಾರಕೀಶ್ ಅವರ ಭಾವಮೈದ. ಹುಣಸೂರರೇ ಭಾರ್ಗವರನ್ನು ಚಿತ್ರರಂಗಕ್ಕೆ ಪರಿಚಯಿಸಿದರು. ಬಹಳಷ್ಟು ಚಿತ್ರಗಳಲ್ಲಿ ಸಹಾಯಕ-ಸಹನಿರ್ದೇಶಕರಾಗಿ ಕೆಲಸ ಮಾಡಿದರು. ದ್ವಾರಕೀಶ್ ನಿರ್ಮಿಸಿದ 'ಭಾಗ್ಯವಂತರು' ಇವರು ಸ್ವತಂತ್ರವಾಗಿ ನಿರ್ದೇಶಿಸಿದ ಪ್ರಥಮ ಚಿತ್ರ. ಆ ಚಿತ್ರ ಭಾರ್ಗವರನ್ನು ಯಶಸ್ವೀ ನಿರ್ದೇಶಕರನ್ನಾಗಿ ರೂಪಿಸುವಲ್ಲಿ ಪ್ರಮುಖ



ಪಾತ್ರ ವಹಿಸಿತು. ಛಾಯಾಗ್ರಾಹಕ ಡಿ.ವಿ.ರಾಜಾರಾಂ ಅವರ ಸಹಯೋಗದಲ್ಲಿ 'ಕಲಾಕೃತಿ' ಚಿತ್ರ ನಿರ್ಮಾಣ ಸಂಸ್ಥೆಯನ್ನು ಪ್ರಾರಂಭಿಸಿ ಹಲವು ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದರು. 'ಪ್ರೀತಿವಾತ್ಸಲ್ಯ', 'ಜೀವನ ಚಕ್ರ', 'ಜನನಾಯಕ', 'ಗಂಡನಿಗೆ ತಕ್ಕ ಹೆಂಡತಿ' ಹಲವು ಜನಪ್ರಿಯ ಚಿತ್ರಗಳು ಈ ಸಂಸ್ಥೆಯ ಕೊಡುಗೆಗಳು. ವಿಷ್ಣುವರ್ಧನ್ ಅವರ ಪ್ರಿಯ ಗೆಳೆಯ, ಅವರ ಚಿತ್ರಗಳ ನಿರ್ದೇಶಕರೂ ಆಗಿದ್ದರು. ಇದಲ್ಲದೇ ಬೇರೆ ಸಂಸ್ಥೆಗಳಿಗಾಗಿ ನಿರ್ದೇಶಿಸಿದ 'ಕೃಷ್ಣಾ ನೀ ಬೇಗನೇ ಬಾರೋ', 'ಕರುಣಾಮಯಿ', 'ಸಪ್ತಪದಿ' ಮೊದಲಾದವು ಇವರ ಯಶಸ್ವಿ ಚಿತ್ರಗಳು. ಕಿರುತೆರೆಯಲ್ಲಿಯೂ ಭಾರ್ಗವ ಸಾಕಷ್ಟು ಹೆಸರಾಗಿದ್ದಾರೆ.

### ಭಾರತಿ

ಕನ್ನಡ ಮಾತ್ರವೇ ಅಲ್ಲದೆ ದಕ್ಷಿಣ-ಉತ್ತರ ಭಾರತದಲ್ಲೂ ಪ್ರಖ್ಯಾತಿ ಪಡೆದ ನಟಿ. ಪೂರ್ವಜರು ಮಹಾರಾಷ್ಟ್ರದವರು. ಪೋಷಕರು ಬೆಂಗಳೂರಿನಲ್ಲಿ ನೆಲೆಸಿದ್ದರು. ಸ್ವಾತಂತ್ರ್ಯ ದಿನದಂದು ಹುಟ್ಟಿದರಿಂದ 'ಭಾರತಿ' ಎಂಬ ಹೆಸರು ಇಟ್ಟರು. ಬಾಲಕಿಯಾಗಿದ್ದಾಗಲೇ ಹಾಡುವುದರಲ್ಲಿ ಆಸಕ್ತಿ. ವೀಣೆ ನುಡಿಸುವುದರಲ್ಲಿ ಪರಿಣತೆ. ಬಿ.ಆರ್.ಪಂತುಲು ಅವರು ತಮ್ಮ 'ದುಡ್ಡೇ ದೊಡ್ಡಪ್ಪ' (೧೯೬೬) ಚಿತ್ರದಲ್ಲಿ ಅವಕಾಶ ನೀಡಿದರು. ಅದೇ ವರ್ಷದಲ್ಲಿ ತೆರೆಕಂಡ 'ಲವ್ ಇನ್ ಬೆಂಗಳೂರು' ಪೂರ್ಣ ಪ್ರಮಾಣದ ನಾಯಕಿಯಾಗಿ ಅಭಿನಯಿಸಿದ



ಚಿತ್ರ. ಕಲ್ಯಾಣ್‌ಕುಮಾರ್ ಈ ಚಿತ್ರದ ನಾಯಕ. ರಾಜಕುಮಾರ್ ಅವರೊಂದಿಗೆ ಅಭಿನಯಿಸಿದ ಮೊದಲ ಚಿತ್ರ 'ಮಧುಮಾಲತಿ'. ೨೭ ಚಿತ್ರಗಳಲ್ಲಿ ರಾಜಕುಮಾರ್ ಜೋಡಿ ನಾಯಕಿಯಾಗಿ ನಟಿಸಿದರು. 'ಮೂರರ ಬೆಟ್ಟ' ಈ ಇಬ್ಬರು ಒಟ್ಟಾಗಿ ಅಭಿನಯಿಸಿದ ಕೊನೆಯ ಚಿತ್ರ. 'ಶ್ರೀಕೃಷ್ಣದೇವರಾಯ' ಚಿತ್ರದ ಅಭಿನಯಕ್ಕಾಗಿ ರಾಜ್ಯ ಸರ್ಕಾರದಿಂದ 'ಅತ್ಯುತ್ತಮ ನಟಿ' ಪ್ರಶಸ್ತಿಗೆ ಭಾಜನರಾದರು. ೧೯೭೫ರಲ್ಲಿ ನಟ ವಿಷ್ಣುವರ್ಧನ್ ಅವರ ಕೈ ಹಿಡಿದರು. ಅನಂತರವೂ ಅಬ್ಬಯ್ಯನಾಯ್ಡು ಅವರ ಚಿತ್ರದಲ್ಲಿ ಸಾಹಸಿ ನಾಯಕಿಯಾಗಿ, ಪುಟ್ಟಣ್ಣನವರ 'ಋಣಮುಕ್ತಳು' ನಲ್ಲಿ ಸ್ತ್ರೀತ್ವದ ವಿಶಿಷ್ಟ ಪ್ರತೀಕವಾಗಿ ಅಭಿನಯಿಸಿದರು. ಪುಟ್ಟದಾದರೂ ಪ್ರಮುಖ ಪಾತ್ರಗಳಲ್ಲಿ. ಅಲ್ಲದೆ ಕಿರುತೆರೆಯಲ್ಲೂ ಅಭಿನಯಿಸಿದರು. 'ಭಾಗ್ಯಜ್ಯೋತಿ' ಇವರ ೧೦೦ನೆಯ ಚಿತ್ರ. ಕನ್ನಡ ಹಾಗೂ ಇತರ ಭಾಷೆಗಳ ೩೦೦ ಚಿತ್ರದಲ್ಲಿ ಇವರು ಅಭಿನಯಿಸಿದ್ದಾರೆ. ತಮಿಳು ಚಿತ್ರಕ್ಕಾಗಿ ಸೌಂದರರಾಜನ್ ಅವರೊಂದಿಗೆ ಹಾಡೊಂದನ್ನು ಹಾಡಿದ್ದಾರೆ. ಕರ್ನಾಟಕ ಕರಕುಶಲ ಅಭಿವೃದ್ಧಿ ನಿಗಮದ ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಕೆಲವು ಚಿತ್ರಗಳಿಗೆ ಸಹನಿರ್ದೇಶಕಿಯಾಗಿಯೂ ಕೆಲಸ ಮಾಡಿದ್ದಾರೆ.

### ಭಾವನಾ

ಕನ್ನಡ ಚಿತ್ರರಂಗ ೨೧ನೇ ಶತಮಾನಕ್ಕೆ ಕಾಲಿಡುವ ಹೊತ್ತಿಗೆ ಪ್ರವೇಶಿಸಿದ ಹೊಸ ನಟಿಯರಲ್ಲಿ ಭಾವನಾ ಪ್ರತಿಭಾವಂತೆ. ಪ್ರತಿ



ಚಿತ್ರದಲ್ಲಿಯೂ ತಮ್ಮ ವಿಶಿಷ್ಟ ಶೈಲಿ ಮತ್ತು 'ಇನ್ವಾಲ್‌ಮೆಂಟ್'ಗಳಿಂದ ಪ್ರಬುದ್ಧ ಪ್ರೇಕ್ಷಕರ ಗಮನ ಸೆಳೆದಿದ್ದಾರೆ. 'ನೀ ಮುಡಿದಾ ಮಲ್ಲಿಗೆ' ಚಿತ್ರದಲ್ಲಿ ನೀಡಿದ ಪ್ರತಿಭಾಪೂರ್ಣ ಅಭಿನಯಕ್ಕಾಗಿ ೧೯೯೭-೯೮ರ ಸಾಲಿನ ರಾಜ್ಯಸರ್ಕಾರದ ಅತ್ಯುತ್ತಮ ಪೋಷಕನಟಿ ಪ್ರಶಸ್ತಿಯನ್ನು ಪಡೆದುಕೊಂಡಿದ್ದಾರೆ. ಭಾವನಾ ಬಿ.ಎ.ಪದವೀಧರೆ. ಭರತ ನಾಟ್ಯದಲ್ಲಿ ಪರಿಶ್ರಮ ಪಡೆದ ಕಲಾವಿದೆ. ನರ್ತಕಿಗೆ ಅನುಗುಣವಾದ ಮೈಕಟ್ಟನ್ನು ಪಡೆದಿರುವ ಆಕೆ ಚಿತ್ರರಂಗವನ್ನು ಪ್ರವೇಶಿಸಿದ್ದು 'ಮಾರಿಬಲೆ' ತುಳು ಚಿತ್ರದಿಂದ. ಆದರೆ 'ನೀ ಮುಡಿದಾ ಮಲ್ಲಿಗೆ' ಆಕೆಯ ಅಭಿನಯ ಪ್ರತಿಭೆಯನ್ನು ಎತ್ತಿ ತೋರಿಸಿತು. ಕೆ.ವಿ.ರಾಜು ನಿರ್ದೇಶನದ 'ನಂ ೧'ನಲ್ಲಿ ಆಕೆ ನಿರ್ವಹಿಸಿದ ಕಠಿಣ ಹೃದಯಿ ಪೊಲೀಸ್ ಇನ್ಸ್‌ಪೆಕ್ಟರ್ ಪಾತ್ರ ಆಕೆಯ ಪ್ರತಿಭೆಯ ಇನ್ನೊಂದು ಮಗ್ಗುಲನ್ನು ಪ್ರದರ್ಶಿಸಿತು. 'ಚಂದ್ರಮುಖಿ ಪ್ರಾಣಸಖಿ'ಯಲ್ಲಿ ಆಕೆ ಮತ್ತೊಮ್ಮೆ ತಾವು ಎಷ್ಟು ಸಮರ್ಥ ನಟಿ ಎಂಬುದನ್ನು ಪ್ರದರ್ಶಿಸಿದರು. ಕವಿತಾ ಲಂಕೇಶ್ ನಿರ್ದೇಶಿಸಿದ ಪ್ರಥಮ ಚಿತ್ರ 'ದೇವೀರಿ'ಆಕೆ ಅಭಿನಯಿಸಿದ ಇನ್ನೊಂದು ಉತ್ತಮ ಚಿತ್ರ. ಭಾವನಾ ಸಾಮಾಜಿಕ ಸಮಸ್ಯೆಗಳಿಗೂ ರಚನಾತ್ಮಕವಾಗಿ ಸ್ಪಂದಿಸುವ ಪ್ರಜ್ಞಾವಂತೆ.

### ಭಾವನಾರಾಯಣ. ಎಸ್.

ಹಿರಿಯ ತೆಲುಗು ಚಿತ್ರ ನಿರ್ಮಾಪಕರು. ಗೌರಿ ಫಿಲಂಸ್ ಸಂಸ್ಥೆಯನ್ನು ಸ್ಥಾಪಿಸಿ ಹಲವಾರು ಕನ್ನಡ ಚಿತ್ರಗಳನ್ನು ತಯಾರಿಸಿದರು. 'ಆಶಾ ಸುಂದರಿ', 'ಬೆಂಗಳೂರು ಮೈಲ್', 'ಸಿಂಹಸ್ವಪ್ನ', 'ಜಗ ಮೆಚ್ಚಿದ ಮಗ', 'ಗಾಂಧಿನಗರ' ಮೊದಲಾದ ಚಿತ್ರಗಳನ್ನು ನಿರ್ಮಿಸಿದರು. ಇವರು ಚಿತ್ರಕಥಾ ಲೇಖಕರೂ ಕೂಡ. ಹೊಸಬರಿಗೆ ಸಾಕಷ್ಟು ಪ್ರೋತ್ಸಾಹ ನೀಡಿದರು. ಇವರಿಂದ ಬೆಳಕಿಗೆ ಬಂದ ನಿರ್ಮಾಪಕ ವೈ.ವಿ.ರಾವ್.



ಸಂಕಲನಕಾರ ಹಾಗೂ ನಿರ್ದೇಶಕ ಕೆ.ಎಸ್.ಆರ್.ದಾಸ್ ಚಿತ್ರ ನಿರ್ಮಾಣದ ವಿವಿಧ ಹಂತಗಳಲ್ಲಿ ಕೆಲಸಮಾಡಿ ಅನುಭವ ಗಳಿಸಿದರು. ಶಿಸ್ತು ಬದ್ಧ ಚಿತ್ರ ನಿರ್ಮಾಣಕ್ಕೆ ಇವರು ಹೆಸರುವಾಸಿ.

### ಭಾಸ್ಕರ್ ಜಿ.ಎಸ್

ಪ್ರಶಸ್ತಿ ವಿಜೇತ ಛಾಯಾಗ್ರಾಹಕ. ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಬಿ.ಎಸ್‌ಸಿ., ಪದವೀಧರ. ನಂತರ ಪುಣೆಯ ಚಲನಚಿತ್ರ ಮತ್ತು ದೂರದರ್ಶನ ತರಬೇತಿ ಸಂಸ್ಥೆಯಲ್ಲಿ ಛಾಯಾಗ್ರಹಣದಲ್ಲಿ ಡಿಪ್ಲೊಮಾ. ನಂತರ ಗಿರೀಶ್ ಕಾಸರವಳ್ಳಿಯವರ ಬಳಿ ಸಹ ನಿರ್ದೇಶಕರಾಗಿ ದುಡಿಮೆ. ಸ್ವತಂತ್ರ ಛಾಯಾಗ್ರಾಹಕರಾಗಿ 'ಬಣ್ಣದ ವೇಷ'ದಿಂದ ಕಾರ್ಯ ನಿರ್ವಹಣೆ. ನಂತರ 'ಕುಬಿ ಮತ್ತು ಇಯಾಲ', 'ನಾಗಮಂಡಲ', ಹಿಂದಿ ಚಿತ್ರಗಳಾದ 'ದಿಶಾ', 'ಪಹೀಹಾ' ಹಾಗೂ



ಮಲೆಯಾಳಂನ 'ಶ್ರಾದ್ಧಂ' ಚಿತ್ರಗಳಲ್ಲಿ ಛಾಯಾಗ್ರಹಣ ನಿರ್ವಹಣೆ. 'ನಾಗಮಂಡಲ' ಚಿತ್ರದ ಛಾಯಾಗ್ರಹಣಕ್ಕಾಗಿ ೧೯೯೬-೯೭ನೇ ಸಾಲಿನ ರಾಜ್ಯಪ್ರಶಸ್ತಿಯನ್ನು ಪಡೆದಿದ್ದಾರೆ. ನಾಗಾಭರಣ ನಿರ್ದೇಶನದ 'ನೀಲಾ' ಚಿತ್ರದ ಛಾಯಾಗ್ರಾಹಕರು.

### ಭಾಸ್ಕರ್ ನಾಯ್ಡು .ಬಿ

ಹಿರಿಯ ವಿತರಕರು, ನಿರ್ಮಾಪಕರು. ಗುಜರಾತಿ ಸ್ನೇಹಿತರೊಡನೆ ಸೇರಿ 'ಭಾಸ್ಕರ್



ಪಿಕ್ಚರ್ಸ್' ಎಂಬ ವಿತರಣಾ ಸಂಸ್ಥೆಯನ್ನು ಸ್ಥಾಪಿಸಿದರು. ನಂತರ ಹಲವು ಚಿತ್ರಗಳನ್ನು ವಿತರಿಸಿದರು. ಕೆಲವು ತಮಿಳು ಚಿತ್ರಗಳನ್ನು ನಿರ್ಮಿಸಿದ್ದಾರೆ. ಗಾಂಧೀನಗರದ ಪ್ರಮುಖ ವ್ಯಕ್ತಿಯೆನಿಸಿದ್ದಾರೆ. ಅವರ ಹೆಸರನ್ನು ಒಂದು ರಸ್ತೆಗೆ ಇಡಲಾಗಿದೆ.

### ಭೀಮರಾವ್.ಗೊ.ರಾ

ಕನ್ನಡ ಚಿತ್ರರಂಗದ ಪೋಷಕ ನಟ. ಮಧುಗಿರಿ ಸಮೀಪದ ಗೊಲ್ಲಹಳ್ಳಿಯಲ್ಲಿ ಜನಿಸಿದ ಭೀಮರಾವ್ ಬಾಲ್ಯದಲ್ಲಿ



'ಹರಿಶ್ಚಂದ್ರ' ನಾಟಕದ ಲೋಹಿತಾಶ್ವನಾಗಿ ಅಭಿನಯಿಸಿದ್ದರು. ಐ.ಟಿ.ಐನಲ್ಲಿ ಕೆಲಸ. ತಾವೇ ಸ್ವತಃ ಒಂದು ರಂಗ ತಂಡವನ್ನು ಕಟ್ಟಿ, ನಾಟಕ ನಿರ್ದೇಶಿಸಿ, ನಟಿಸಿದರು. 'ರಕ್ತಾಕ್ಷಿ', 'ನಿರ್ದೋಷಿ', 'ಬೆಂಗಳೂರು ಕೆಂಪೇಗೌಡ' ಮೊದಲಾದ ನಾಟಕಗಳಲ್ಲಿ ಅಭಿನಯ. ರಂಗಭೂಮಿಯಲ್ಲಿ ೨೫ ವರ್ಷಗಳ ಅನುಭವವಿದ್ದ ಭೀಮರಾವ್ ಗೀತಪ್ರಿಯ ನಿರ್ದೇಶನದ 'ಭೂಪತಿರಂಗ' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ನಂತರ 'ಪಾಪ-ಪುಣ್ಯ' , 'ದೇವರ ಮಕ್ಕಳು' ಮೊದಲಾದ ಚಿತ್ರಗಳಲ್ಲಿ ಉತ್ತಮ ಅವಕಾಶಗಳಿದ್ದವು. ಬಹುತೇಕ ಕನ್ನಡ ಚಿತ್ರಗಳಲ್ಲಿ ಪೋಷಕ ಪಾತ್ರಗಳಲ್ಲಿ ನಟಿಸಿದರು. ಒಬ್ಬ ಮಗ ಜಿ.ರಾಮಮೂರ್ತಿ ಕನ್ನಡ ಚಿತ್ರ ನಿರ್ದೇಶಕ. ಭೀಮರಾವ್ ತಮ್ಮದೇ ಸಂಸ್ಥೆಯನ್ನು ಸ್ಥಾಪಿಸಿಕೊಂಡು ಚಿತ್ರ ನಿರ್ಮಾಣದಲ್ಲಿಯೂ ತೊಡಗಿಕೊಂಡವರು. ಇತ್ತೀಚೆಗೆ ಅನಾರೋಗ್ಯದಿಂದಾಗಿ ಚಿತ್ರಜಗತ್ತಿನಿಂದ ದೂರ ಉಳಿಯುವಂತಾಗಿದೆ.

### ಮಂಜು.ಕೆ

೧೯೮೬ರಲ್ಲಿ ಅನಂತ್‌ನಾಗ್ ಅಭಿನಯಿಸಿದ



'ಅನುರಾಗ ಸ್ಪಂದನ' ಚಿತ್ರವನ್ನು ನಿರ್ಮಿಸಲಾರಂಭಿಸಿ ಚಿತ್ರರಂಗವನ್ನು ಪ್ರವೇಶಿಸಿದ ಕೆ. ಮಂಜು ಸಕ್ರಿಯವಾಗಿ ಚಿತ್ರ

ನಿರ್ಮಾಣದಲ್ಲಿ ತೊಡಗಿಕೊಂಡವರು. ಈಗಾಗಲೇ 'ಜಾಕಿ ಚಾನ್', 'ಯಮಲೋಕದಲ್ಲಿ ವೀರಪ್ಪನ್' 'ಅಂಡರ್‌ವರ್ಲ್ಡ್', 'ರಾಷ್ಟ್ರಗೀತೆ' ಚಿತ್ರಗಳನ್ನು ತಯಾರಿಸಿದಾರೆ. 'ಅನುರಾಗ ಸ್ಪಂದನ' ಮಾತ್ರ ಇದುವರೆಗೆ ಬಿಡುಗಡೆಯಾಗಿಲ್ಲ.

## ಮಂಜುನಾಥ್.ಆರ್

ಛಾಯಾಗ್ರಾಹಕ. ಬೆಂಗಳೂರು ಇವರ ಹುಟ್ಟೂರು. ಸಿನಿಮಾ ಛಾಯಾಗ್ರಹಣ ತಂತ್ರಜ್ಞಾನದಲ್ಲಿ ಬೆಂಗಳೂರಿನ ಎಸ್.ಜೆ.ಪಿ. ತಾಂತ್ರಿಕ ವಿದ್ಯಾಲಯದಲ್ಲಿ ಡಿಪ್ಲೊಮಾ ಪದವಿ ಪಡೆದಿದ್ದಾರೆ. ಪ್ರಖ್ಯಾತ ಛಾಯಾಗ್ರಾಹಕ



ಡಿ.ವಿ.ರಾಜಾರಾಂ ಅವರ ಗರಡಿಯಲ್ಲಿ ಪಳಗಿದ ಇವರು ೧೯೮೮ರಲ್ಲಿ ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ ನಿರ್ದೇಶನದ 'ಮಿಥಿಲೆಯ ಸೀತೆಯರು' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ಸುಮಾರು ೪೦ಕ್ಕೂ ಹೆಚ್ಚು ಚಿತ್ರಗಳಿಗೆ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. 'ಪಂಚಮವೇದ', 'ಜಂಬೂಸವಾರಿ', 'ಹರಕೆಯ ಕುರಿ', 'ಗಣೇಶನ ಮದುವೆ', 'ಗಣೇಶನ ಗಲಾಟೆ', 'ಗೌರಿ ಗಣೇಶ', 'ಗಣೇಶ ಸುಬ್ರಹ್ಮಣ್ಯ' ಮೊದಲಾದ ಚಿತ್ರಗಳಲ್ಲಿ ಛಾಯಾಗ್ರಹಣ ಕೌಶಲ್ಯವನ್ನು ತೋರಿದಾರೆ. ದಶಮಿ ಲಾಂಛನದಲ್ಲಿ ತೆರೆಯ ಹಿಂದಿನ ತಂತ್ರಜ್ಞರು ಹತ್ತು ಮಂದಿ ಚಿತ್ರ ನಿರ್ಮಾಣವನ್ನೂ ಮಾಡಿದ ಅನುಭವ ಅವರದು. ೧೯೯೪-೯೫ನೇ ಸಾಲಿನಲ್ಲಿ 'ಅರಗಿಣಿ' ಚಿತ್ರದ ಛಾಯಾಗ್ರಹಣಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದ್ದಾರೆ.

## ಮಂಜುನಾಥ್

೧೯೮೭ರಲ್ಲಿ ಪುಟ್ಟಣ್ಣ ಕಣಗಾಲ್‌ರೊಂದಿಗೆ ಸಹಾಯಕ ನಿರ್ದೇಶಕರಾಗಿ ವೃತ್ತಿಜೀವನದ ಆರಂಭ. ಪುಟ್ಟಣ್ಣನವರ ನಿಧನದ ನಂತರ 'ಶಿವ ಕೊಟ್ಟ ಸೌಭಾಗ್ಯ', 'ಮಾರುತಿ ಮಹಿಮೆ', 'ಪ್ರೊಫೆಸರ್', 'ಕೊಡಗಿನ ಕಾವೇರಿ' ಮುಂತಾದ ಚಿತ್ರಗಳಿಗೆ ಸಹನಿರ್ದೇಶಕನಾಗಿ ದುಡಿಮೆ. ವಿ.ರವಿಚಂದ್ರನ್‌ರವರ ಗರಡಿಯನ್ನು ಸೇರಿ 'ಪ್ರೇಮ ಲೋಕ', 'ರಣಧೀರ', 'ರಾಮಾಚಾರಿ', 'ಶಾಂತಿ-ಕ್ರಾಂತಿ', 'ಸಿಪಾಯಿ' ಮುಂತಾದ ಚಿತ್ರಗಳಿಗೆ ಸಹ ನಿರ್ದೇಶಕರಾದರು. ಮಂಜುನಾಥ್ ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ 'ಹಳ್ಳಿ ಮೇಷ್ಟ್ರು'. ರವಿಚಂದ್ರನ್ ನಿರ್ಮಿಸಿದ ಈ ಚಿತ್ರ ಶತದಿನ ಪ್ರದರ್ಶನ ಕಂಡಿತು. ಮಂಜು ಇದೀಗ 'ಗೀತಾಂಜಲಿ', 'ಕಾಲೇಜು ಮೇಷ್ಟ್ರು' ಮತ್ತು 'ನೂರೊಂದು ನೆನಪು' ಚಿತ್ರಗಳ ನಿರ್ದೇಶನದ ಹೊಣೆ ಹೊತ್ತಿದಾರೆ.

## ಮಂಜು ಥ್ರಿಲ್ಲರ್

ಕನ್ನಡ ಚಿತ್ರರಂಗದ ಸಾಹಸ ನಿರ್ದೇಶಕ-ನಿರ್ದೇಶಕ-ನಿರ್ಮಾಪಕ. ಮಂಜುನಾಥ ನಿಜ ನಾಮಧೇಯ. ೮-೩-೧೯೬೫ರಂದು ಬೆಂಗಳೂರು ಜಿಲ್ಲೆಯ ಮೈಲಸಂದ್ರದಲ್ಲಿ ಹುಟ್ಟಿದ ಮಂಜು ಓದಿದು ಪಿಯುಸಿವರೆಗೆ. ಬಾಲ್ಯದಿಂದಲೇ ಸಾಹಸ ಪ್ರವೃತ್ತಿ ಹೊಂದಿದ್ದ ಮಂಜು ಅವರು ೧೯೮೪ರಲ್ಲಿ ಅಖಿಲ ಕರ್ನಾಟಕ ಸಾಹಸ ಕಲಾವಿದರ ಮತ್ತುಸಾಹಸ ನಿರ್ದೇಶಕರ ಸಂಘದ ಆಶ್ರಯದಲ್ಲಿ ಸಾಹಸ ವಿದ್ಯೆಯನ್ನು ಕಲಿತರು. ಹಿರಿಯ ಸಾಹಸ ನಿರ್ದೇಶಕರುಗಳೆನಿಸಿದ ಹಾಸನ ರಘು, ಸುರೇಶ್, ರುದ್ರೇಶ್ ಹಾಗೂ ಗೋವಿಂದ್ ಇವರುಗಳ ಗರಡಿಯಲ್ಲಿ ಪಳಗಿ ಪರಿಣಿತರಾಗಿ 'ನ್ಯಾಯದ ಕಣ್ಣು' ಚಿತ್ರದ ಮೂಲಕ ಸಾಹಸ ಕಲಾವಿದರಾಗಿ ಚಿತ್ರರಂಗ ಪ್ರವೇಶ ಮಾಡಿದರು. ಸಾಹಸ ಕಲಾವಿದನಾಗಿ ೧೫೬ಕ್ಕೂ ಹೆಚ್ಚು ಚಿತ್ರಗಳಲ್ಲಿ ಕೆಲಸ ಮಾಡಿದರು. ಸಾಹಸ ನಿರ್ದೇಶನ ಮಾಡಿದ ಮೊದಲ ಚಿತ್ರ 'ನರಸಿಂಹ'. ಸುಮಾರು ೧೮೫ ಚಿತ್ರಗಳಲ್ಲಿ ಸಾಹಸ ನಿರ್ದೇಶಕರಾಗಿ ಕಾರ್ಯನಿರ್ವಹಣೆ. 'ಲಾಕಪ್‌ಡೆತ್', 'ಶ್!' ಚಿತ್ರಗಳಲ್ಲಿನ ಸಾಹಸ ನಿರ್ದೇಶನಕ್ಕಾಗಿ ಭಾರೀ



ಜನಪ್ರಿಯತೆ ಲಾಭ. ೧೯೯೬ರಲ್ಲಿ 'ಪೊಲೀಸ್ ಸ್ಟೋರಿ' ಕನ್ನಡ ಚಿತ್ರದ ಮೂಲಕ ನಿರ್ದೇಶಕರಾದರು. ಈ ಚಿತ್ರದ ಯಶಸ್ಸಿನಿಂದಾಗಿ ಥ್ರಿಲ್ಲರ್ ಮಂಜು ಸ್ಟಾರ್ ಡೈರೆಕ್ಟರ್ ಎನಿಸಿಕೊಂಡರು. 'ರಫ್ ಅಂಡ್ ಟಫ್', 'ಅಮರ್ ಅಕ್ಬರ್ ಅಂತೋಣಿ', 'ಥ್ರಿಲ್ಲರ್ ಕಿಲ್ಲರ್', 'ನಕ್ಸಲೈಟ್', 'ಆಂಧ್ರ ಹೆಂಡ್ತಿ', 'ಮಾಫಿಯಾ', 'ಟಿಕೆಟ್ ಟಿಕೆಟ್ಸ್', 'ಸುಪಾರಿ', 'ಪೊಲೀಸ್ ಆಫೀಸರ್ಸ್' ಮೊದಲಾದ ಅವರ ಅಭಿನಯದ ಕೆಲವು ಚಿತ್ರಗಳು. ಅವರ ಸಾಹಸ ಪ್ರಿಯತೆಗೆ ಸ್ಫೂರ್ತಿ ಜಾಕಿಚಾನ್. ಮುಂದೆ ಅವರೇ ಮುಖ್ಯ ಪಾತ್ರದಲ್ಲಿ ನಟಿಸಿ ನಿರ್ದೇಶಿಸಿದ ಚಿತ್ರವೂ 'ಜಾಕಿಚಾನ್'.

## ಮಂಜುಳಾ (೧೯೫೧-೮೬)

ಚಿತ್ರಗಳಿಗೆ ಜೀವಕಳೆ ತುಂಬಿ ಅಭಿನಯಿಸುತ್ತಿದ್ದ ನಾಯಕಿ ನಟಿ. ತುಮಕೂರು ಜಿಲ್ಲೆಯ ಕೋನಹಳ್ಳಿ ಹುಟ್ಟೂರು (ಜನನ:೧೯೫೧). ತಂದೆ ಶಿವಣ್ಣ ಪೊಲೀಸ್ ಸಬ್ ಇನ್ಸ್‌ಪೆಕ್ಟರ್. ಬಾಲ್ಯದಲ್ಲೇ ನಾಟ್ಯಾಭ್ಯಾಸ ಮಾಡಿ ಪ್ರಭಾತ್ ಕಲಾವಿದರ ಸಂಸ್ಥೆ ಸೇರಿದರು. ಸಿ.ವಿ.ಶಿವಶಂಕರ್ ತಮ್ಮ 'ಮನೆ ಕಟ್ಟಿ ನೋಡು' ಚಿತ್ರದಲ್ಲಿ ಬಾಲನಟಿಯಾಗಿ ಅಭಿನಯಿಸುವ ಅವಕಾಶ



ನೀಡಿದರು. 'ಯಾರ ಸಾಕ್ಷಿ' ಚಿತ್ರದಲ್ಲಿ ನಾಯಕಿಯಾಗಿ ಅಭಿನಯಿಸಿದರು. 'ಎರಡು ಕನಸು' ಮೂಲಕ ಜನಪ್ರಿಯಗೊಂಡ ಇವರು 'ಸಂಪತ್ತಿಗೆ ಸವಾಲ್' ಚಿತ್ರದಲ್ಲಿ ಗಯ್ಯಾಳಿಯಾಗಿ ಅಭಿನಯಿಸಿ ಚಿತ್ರರಂಗದಲ್ಲಿ ಭದ್ರಗೊಂಡರು. ರಾಜಕುಮಾರ್ ಅವರೊಂದಿಗೆ ಹಲವಾರು ಚಿತ್ರಗಳಲ್ಲಿ ನಟಿಸಿ, ಶ್ರೀನಾಥ್ ಅವರೊಂದಿಗೆ ಜನಪ್ರಿಯ ಜೋಡಿಯಾದರು. ಇವರ ಅಭಿನಯದ ಯಶಸ್ವೀ ಚಿತ್ರಗಳ ಬಹುದೊಡ್ಡ ಪಟ್ಟಿಯೇ ಇದೆ. ವೈವಿಧ್ಯಮಯ ಪಾತ್ರಗಳು ಆಕೆಗೆ ದೊರೆತವು. 'ಸೀತಾರಾಮು' ಮಂಜುಳಾರ ನೆನಪನ್ನು ಹಸಿರಾಗಿಸಿದ ಚಿತ್ರ. ಚಲನಚಿತ್ರ ನಿರ್ದೇಶಕ ಅಮೃತಂ ಅವರ ಕೈ ಹಿಡಿದು ಗೃಹಿಣಿಯಾಗಿ ಜೀವನ ನಡೆಸಿದರು. ಬೆಂಕಿ ಆಕಸ್ಮಿಕಕ್ಕೀಡಾಗಿ ತಮ್ಮ ೩೫ನೇ ವಯಸ್ಸಿನಲ್ಲಿ (ಸೆಪ್ಟೆಂಬರ್ ೧೨, ೧೯೮೬) ನಿಧನರಾದರು.

## ಮಂಜುಳಾ ಗುರುರಾಜ್

ಕನ್ನಡ ಚಿತ್ರರಂಗದ ಹೆಸರಾಂತ ಗಾಯಕಿ. ಮಂಜುಳಾ ಅವರು ಹುಟ್ಟಿದ್ದು ಮೈಸೂರಿನಲ್ಲಿ. ವ್ಯಾಸಂಗ ಬೆಂಗಳೂರಿನಲ್ಲಿ. ಮಹಾರಾಣಿ ಕಾಲೇಜಿನಲ್ಲಿ ಬಿ.ಎಸ್‌ಸಿ ಪದವಿ. ತಂದೆ ರಾಮಣ್ಣ ಆಯುರ್ವೇದ ವೈದ್ಯರು. ತಾಯಿ ಸೀತಾಲಕ್ಷ್ಮಿ ಒಳ್ಳೆ ಗಾಯಕಿ. ನಾಲ್ಕನೆ ವಯಸ್ಸಿಗೆ ಮಂಜುಳಾರಿಂದ ಆಕಾಶವಾಣಿಯ 'ಬಾಲಜಗತ್ತು' ಕಾರ್ಯಕ್ರಮದಲ್ಲಿ ಗಾಯನ. ಏಳನೆಯ



ವಯಸ್ಸಿಗೆ 'ಆರ್ಕೆಸ್ಟ್ರಾ'ದಲ್ಲಿ ಹಾಡಲು ಪ್ರಾರಂಭ. ಕರ್ನಾಟಕ ಸಂಗೀತ ಹಾಗೂ ಹಿಂದೂಸ್ತಾನಿ ಸಂಗೀತದಲ್ಲಿ ಸಾಧನೆ. ೧೯೭೭ರಲ್ಲಿ 'ಗುರು ಸೌಂಡ್ ಆಫ್ ಮ್ಯೂಸಿಕ್' ತಂಡದ ಸ್ಥಾಪನೆ. ಅಲ್ಲಿ ಗುರುರಾಜ್ ಅವರಿಂದ ಮಂಜುಳಾರಿಗೆ ಹಾಡಲು ಆಹ್ವಾನ. ೧೯೭೯ರಲ್ಲಿ ಗುರುರಾಜ್‌ರೊಂದಿಗೆ ವಿವಾಹ. ನಿರ್ದೇಶಕ ಜೋ ಸೈಮನ್‌ರಿಂದ ೧೯೮೪ರಲ್ಲಿ 'ರೌಡಿರಾಜ' ಚಿತ್ರದಲ್ಲಿ ಗಾಯಕಿಯಾಗಿ ಚಿತ್ರರಂಗಕ್ಕೆ ಪಾದಾರ್ಪಣೆ. ೧೯೮೪ ರಿಂದ ೧೯೮೮ರ ವರೆಗೂ ಅವಕಾಶಗಳನ್ನು ಅರಸುತ್ತ ಮದ್ರಾಸಿಗೆ ವಲಸೆ. ಅಲ್ಲಿ ಸುಮಾರು ಹದಿನೈದು ತಮಿಳು, ಇಪ್ಪತ್ತಕ್ಕೂ ಹೆಚ್ಚು ತೆಲುಗು ಚಿತ್ರಗಳಲ್ಲಿ ಹಿನ್ನೆಲೆ ಗಾಯಕಿಯಾಗಿ ಅವಕಾಶ. ೧೯೮೬ರಲ್ಲಿ 'ಮಿಸ್ಟರ್‌ರಾಜ' ಚಿತ್ರದ ಆ ವರ್ಷದ ಯಶಸ್ವಿ ಹಾಡು 'ದಮ್ಮರೆ ದಮ್ಮಮ್ಮಾ ಡಿಸ್ಕೊ ರುಕ್ಕಮ್ಮ....' ನಿಂದ ಕನ್ನಡ ಚಿತ್ರರಂಗಕ್ಕೆ ಪುನರಾಗಮನ. ಎಂ.ಎಸ್.ರಾಜಶೇಖರ್ ನಿರ್ದೇಶನದ 'ನಂಜುಂಡಿ ಕಲ್ಯಾಣ'ದ ಗುಂಡಿನ ಹಾಡಿನಿಂದ ಕರ್ನಾಟಕದ ಮನೆ ಮಾತಾದರು. 'ನೀ ಬರೆದ ಕಾದಂಬರಿ', 'ಪ್ರಳಯಾಂತಕ', 'ರಣರಂಗ', 'ಗಜಪತಿ ಗರ್ವಭಂಗ', 'ದೇವತಾ ಮನುಷ್ಯ', 'ಹೃದಯ ಹಾಡಿತು' ಮೊದಲಾದ ಯಶಸ್ವಿ ಕನ್ನಡ ಚಿತ್ರಗಳಲ್ಲಿ ಗಾಯನ. ಪ್ರಸ್ತುತ ಬೆಂಗಳೂರಿನ ಬಸವನಗುಡಿಯಲ್ಲಿ 'ಸಾಧನ ಸಂಗೀತ ಶಾಲೆ'ಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ೧೯೯೩-೯೪ನೇ ಸಾಲಿನಲ್ಲಿ 'ಚಿನ್ನಾರಿ ಮುತ್ತ' ಚಿತ್ರದ ಹಾಡಿಗಾಗಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ. ೧೯೯೫-೯೬ನೇ ಸಾಲಿನಲ್ಲಿ 'ಬೆಳದಿಂಗಳ ಬಾಲೆ'ಯ ಅಗೋಚರ ನಾಯಕಿಗೆ ಧ್ವನಿ ನೀಡಿ ಪ್ರೇಕ್ಷಕರನ್ನು ಮೋಡಿ ಮಾಡಿದ್ದಕ್ಕಾಗಿ ರಾಜ್ಯ ಸರ್ಕಾರದ ವಿಶೇಷ ಪ್ರಶಸ್ತಿ ದೊರೆತಿದೆ.

## ಮಣಿಮುರುಗನ್

ಕನ್ನಡ ಚಿತ್ರ ನಿರ್ದೇಶಕರು. ಮದರಾಸಿನಲ್ಲಿ ಹುಟ್ಟಿ ಬೆಳೆದವರು. ಸಂಪ್ರದಾಯಸ್ಥ



ಕುಟುಂಬದವರು. ತಂದೆ ಬ್ಯಾಂಕಿನಲ್ಲಿ ಉದ್ಯೋಗಿ. ಬ್ಯಾಂಕಿನಲ್ಲಿ ಉದ್ಯೋಗ ಸಿಗುವಂತಿದ್ದರೂ ತಿರಸ್ಕರಿಸಿ ಸ್ಟಿಲ್ ಫೋಟೋಗ್ರಫಿಯತ್ತ ಗಮನ ಹರಿಸಿದರು. ಅಡೆಯಾರ್‌ನ ಫಿಲ್ಮ್ ಸಿನಿಮಾಟೋಗ್ರಫಿ ಕೋರ್ಸ್ ಮುಗಿಸಿ ಇನ್ಸ್ಟಿಟ್ಯೂಟ್‌ನಲ್ಲಿ ಕ್ಯಾಮರಾಮನ್ ಆದರು. ಕನ್ನಡಿಗರಾದ ಪ್ರಸಿದ್ಧ ಛಾಯಾಗ್ರಹಕ, ನಿರ್ದೇಶಕ ಡಬ್ಲ್ಯು. ಎಸ್.ಸುಬ್ಬರಾವ್ ಅವರ ಬಳಿ ಸಹಾಯಕರಾಗಿ ಕೆಲಸ ಮಾಡಿದರು. ಕನ್ನಡ ಚಿತ್ರರಂಗಕ್ಕೆ 'ಸಿಂಹಸ್ವಪ್ನ' ಚಿತ್ರದಿಂದ ಪ್ರವೇಶ. ಅನಂತರ ಕೆ.ಎಸ್.ಎಲ್.ಸ್ವಾಮಿ ಅವರ ಸಹಾಯಕರಾಗಿ 'ಅರಿಶಿನ ಕುಂಕುಮ' ಚಿತ್ರದಿಂದ ಪ್ರಾರಂಭಿಸಿ 'ಬನಶಂಕರಿ' ವರೆಗೆ ೧೬ ಚಿತ್ರಗಳಿಗೆ ಕೆಲಸ ಮಾಡಿದರು. 'ಹಾವಿನ ಹೆಜ್ಜೆ' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. 'ಅಮರ್‌ನಾಥ್', 'ಅರ್ಚನಾ', 'ಗಣೇಶನ ಮಹಿಮೆ', 'ಕಣ್ಣು ತೆರೆಸಿದ ಹೆಣ್ಣು' ಸಾಲು ಸಾಲು ಯಶಸ್ವೀ ಚಿತ್ರಗಳನ್ನು ನಿರ್ದೇಶಿಸಿದರು. ಇದಕ್ಕಿದ್ದಂತೆ ಚಿತ್ರರಂಗದ ಬಗ್ಗೆ ನಿರಾಸಕ್ತಿ ತಾಳಿ ಚಿತ್ರರಂಗಕ್ಕೆ ವಿದಾಯ ಹೇಳಿ ವ್ಯಾಪಾರ ಕ್ಷೇತ್ರಕ್ಕೆ ತೆರಳಿದರು.

## ಮಧು ಬಂಗಾರಪ್ಪ

ಮಾಜಿ ಮುಖ್ಯಮಂತ್ರಿ ಎಸ್.ಬಂಗಾರಪ್ಪ ಅವರ ಹಿರಿಯ ಪುತ್ರರಾದ ಮಧುಬಂಗಾರಪ್ಪ ಶ್ರೀ ರೇಣುಕಾಂಬಾ ಕಂಬೈನ್ಸ್ ಲಾಂಛನದ ಕಾರ್ಯ ನಿರ್ವಹಣೆಯ ಪ್ರಮುಖ ರೂವಾರಿ. ಆ ಸಂಸ್ಥೆ ನಿರ್ಮಿಸಿದ 'ಶರವೇಗದ ಸರದಾರ','ಅಶ್ವಮೇಧ','ಬೆಳ್ಳಿಯಪ್ಪ ಬಂಗಾರಪ್ಪ' ಚಿತ್ರಗಳ ನಿರ್ಮಾಣದಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಅತ್ಯಾಧುನಿಕ ತಂತ್ರಜ್ಞಾನ ಅಳವಡಿಸಿರುವ ಆಕಾಶ್



ಆಡಿಯೋ ಸಂಸ್ಥೆಯನ್ನು ಸ್ಥಾಪಿಸಿ ಧ್ವನಿ ಸುರುಳಿ ಮಾರುಕಟ್ಟೆಯಲ್ಲಿ ತನ್ನದೇ ಆದ ಒಂದು ಸ್ಥಾನವನ್ನು ಕಾಯ್ದುಕೊಂಡು ಬರುವಂತೆ ಮಾಡಿದರು. ಚಿತ್ರಗೀತೆಗಳ ಧ್ವನಿ ಸುರುಳಿಗಳಿಗೆ ನಿಜವಾದ ಬೆಲೆ ಕಟ್ಟಿ ಕೋಟಿಗಳನ್ನು ಕಾಣುವಂತೆ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಜೊತೆಗೆ 'ರೇಣುಕಾಂಬಾ ಎಡಿಟಿಂಗ್ ಸೆಂಟರ್', 'ರೇಣುಕಾಂಬ ಔಟ್‌ಡೋರ್ ಯೂನಿಟ್' ಘಟಕಗಳನ್ನು ಸ್ಥಾಪಿಸಿ ಕನ್ನಡ ಚಿತ್ರರಂಗಕ್ಕೆ ಸೇವೆ ಸಲ್ಲಿಸುವಲ್ಲಿ ಮಧು ಬಂಗಾರಪ್ಪ ಪ್ರಮುಖ ಪಾತ್ರವನ್ನು ವಹಿಸಿದಾರೆ.

## ಮಧುಸೂದನ್.ಆರ್

ಕನ್ನಡದ ಹೆಸರಾಂತ ಛಾಯಾಗ್ರಾಹಕರು. ಟ್ರಿಕ್ ಷಾಟ್ಸ್ ಹಾಗೂ ಮಾಸ್ಕ್ ಶಾಟ್‌ಗಳ ಚಿತ್ರೀಕರಣದಲ್ಲಿ ಮಧುಸೂದನ್ ಅವರು ದಕ್ಷಿಣ ಭಾರತದಲ್ಲೇ ಹೆಸರು ವಾಸಿ. ನಿರ್ದೇಶಕ ವೈ.ಆರ್.ಸ್ವಾಮಿ ಅವರ ಸೋದರರಾದ ಆರ್.ಮಧುಸೂದನ್ ಚಿತ್ರರಂಗ ಪ್ರವೇಶಿಸಿದ್ದು ಹಾಸ್ಯನಟರಾಗಿ,



ಅದರ ಬೆಳಗಿದ್ದು ಛಾಯಾಗ್ರಾಹಕರಾಗಿ. ಸೋದರ ವೈ.ಆರ್.ಸ್ವಾಮಿ ನಿರ್ದೇಶನದ 'ಭಕ್ತ ಕನಕದಾಸ' (೧೯೬೦) ಚಿತ್ರದೊಂದಿಗೆ ಅವರು ಛಾಯಾಗ್ರಾಹಕರಾದರು. ಮೊದಲ ಚಿತ್ರದಲ್ಲಿಯೇ ಅವರು ಟ್ರಿಕ್ ಛಾಯಾಗ್ರಹಣ ತಂತ್ರವನ್ನು ಬಳಸಿದರು. ಅವರ ಕಾರ್ಯ ಕುಶಲತೆಯನ್ನು ಕಂಡ ಹುಣಸೂರು ಕೃಷ್ಣಮೂರ್ತಿ ತಮ್ಮ 'ರತ್ನ ಮಂಜರಿ' ಚಿತ್ರದಲ್ಲಿ ಅವಕಾಶ ನೀಡಿದರು. 'ಸ್ವರ್ಣಗೌರಿ' ಚಿತ್ರ ಇವರಲ್ಲಿದ್ದ ಪ್ರತಿಭೆಯನ್ನು ಸಂಪೂರ್ಣವಾಗಿ ಹೊರಗೆಡಹಿತು. 'ಶಂಕರ್ ಗುರು' ಚಿತ್ರ ಇವರ ಮಾಸ್ಕ್ ಶಾಟ್ ಕಾರ್ಯತಂತ್ರಕ್ಕೆ ಕನ್ನಡಿ ಹಿಡಿದ ಚಿತ್ರ. 'ಹಾವಿನ ಹೆಡೆ', 'ಅದೇ ಕಣ್ಣು', 'ಪ್ರೇಮಲೋಕ', 'ರಣಧೀರ', 'ಶಾಂತಿ ಕ್ರಾಂತಿ', 'ನೀ ನನ್ನ ಗೆಲ್ಲಲಾರೆ' ಮೊದಲಾದವು ಇವರ ಛಾಯಾಗ್ರಹಣವಿದ್ದ ಇತರ ಚಿತ್ರಗಳು.

## ಮನ್‌ದೀಪ್‌ರಾಯ್

ಶಂಕರ್‌ನಾಗ್-ಅನಂತ್‌ನಾಗ್ ಗರಡಿಗೆ ಸೇರಿದ ಇನ್ನೊಬ್ಬ ಹಾಸ್ಯನಟ ಮನ್‌ದೀಪ್‌ರಾಯ್ ಮೂಲತಃ



ಮುಂಬೈನವರು. ಅಲ್ಲಿ ಹವ್ಯಾಸಿ ರಂಗಭೂಮಿ ಕಲಾವಿದರಾಗಿ ತಮ್ಮ ೧೬ನೆಯ ವಯಸ್ಸಿನಿಂದಲೇ ಅಭಿನಯಿಸುತ್ತಿದ್ದ ಅವರು ನಂತರ ವೃತ್ತಿಪರ ಕಲಾವಿದರಾಗಿ ಅನೇಕ ಮರಾಠಿ, ಇಂಗ್ಲಿಷ್, ಹಿಂದಿ, ಗುಜರಾತಿ ಮತ್ತು ಕನ್ನಡ ನಾಟಕಗಳಲ್ಲಿ ಅಭಿನಯಿಸುವುದರೊಂದಿಗೆ ರಂಗಕರ್ಮಿಯೂ ಆಗಿದ್ದರು. ಆಗ ನಾಗ್ ಸಹೋದರರ ಕಣ್ಣಿಗೆ ಬಿದ್ದರು. ಅವರಂತೆಯೇ ಮುಂಬೈನಿಂದ ಬೆಂಗಳೂರಿಗೆ ಬಂದ ಮನ್‌ದೀಪ್, ಶಂಕರ್ ನಿರ್ದೇಶಿಸಿದ 'ಮಿಂಚಿನ ಓಟ'ದಿಂದ ಚಿತ್ರರಂಗವನ್ನು ಪ್ರವೇಶಿಸಿದರು. 'ಗೀತಾ', 'ಜನ್ಮ', 'ಪುಷ್ಪಕ ವಿಮಾನ', 'ಕ್ಷೀರಸಾಗರ', 'ಮಕ್ಕಳಿರಲವ್ವ ಮನೆ ತುಂಬ', 'ಬೆಳ್ಳಿಯಪ್ಪ ಬಂಗಾರಪ್ಪ', 'ಕುರುಬನ ರಾಣಿ' ಅವರು ಅಭಿನಯಿಸಿದ ಕೆಲವು ಪ್ರಮುಖ ಚಿತ್ರಗಳು. ೨೦೦ ಕ್ಕೂ ಹೆಚ್ಚು ಚಿತ್ರಗಳಲ್ಲಿ ಮತ್ತು ಕಿರುತೆರೆಯ ಧಾರಾವಾಹಿಗಳಲ್ಲಿ ನಟಿಸಿದ್ದಾರೆ.

## ಮನೋಹರ್

ಕನ್ನಡ ಚಿತ್ರರಂಗದ ಛಾಯಾಗ್ರಾಹಕರು. ಬೆಂಗಳೂರಿನಲ್ಲಿ ೧-೬-೧೯೬೦ರಂದು ಹುಟ್ಟಿದ ಇವರು ಓದಿದ್ದು ಪಿ.ಯು.ಸಿ.ವರೆಗೆ. ೧೯೭೬ರಲ್ಲಿ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಕ್ಯಾಮರಾ ಅಸಿಸ್ಟೆಂಟ್ ಆಗಿ ನೇಮಕ. ಸುಮಾರು ೫೦ಕ್ಕೂ ಹೆಚ್ಚು ಚಿತ್ರಗಳಿಗೆ ಛಾಯಾಗ್ರಾಹಕರಾಗಿ ಸೇವೆ ಸಲ್ಲಿಸಿದಾರೆ. 'ನಿಗೂಢ ರಹಸ್ಯ', 'ಭಂಡ ನನ್ನ ಗಂಡ', 'ಸೂಪರ್ ನನ್ಮಗ', 'ಕಿಲಾಡಿಗಂಡು', 'ಸರ್ವರ್ ಸೋಮಣ್ಣ', 'ಅರಿಶಿನ ಕುಂಕುಮ', 'ಗೂಂಡಾ ಪೊಲೀಸ್', 'ಪೊಲೀಸ್ ಫೈಲ್' ಮೊದಲಾದವು ಇವರು ಛಾಯಾಗ್ರಹಣ ನೀಡಿದ ಮುಖ್ಯ ಚಿತ್ರಗಳು.

## ಮನೋಹರ್.ಎಸ್

ಸಂಕಲನಕಾರ. ಖ್ಯಾತ ಸಂಕಲನ ತಜ್ಞ ಪಿ.ಭಕ್ತವತ್ಸಲಂ ಅವರ ಗರಡಿಯಲ್ಲಿ ಪಳಗಿದರು. ಚಿತ್ರರಂಗ ಪ್ರವೇಶಿಸಿದ್ದು 'ಶ್ರೀನಿವಾಸ ಕಲ್ಯಾಣ' ಚಿತ್ರದಿಂದ. ಆ ಚಿತ್ರದಲ್ಲಿ ಸಹಾಯಕರಾಗಿದ್ದ ಅವರ ಕೈಚಳಕ ನೋಡಿ ಕೆ.ವಿ.ಜಯರಾಂ ತಮ್ಮ ನಿರ್ದೇಶನದ 'ಬೆತ್ತಲೆ ಸೇವೆ' ಚಿತ್ರದಲ್ಲಿ ಸ್ವತಂತ್ರ ಸಂಕಲನಕಾರರನ್ನಾಗಿ ಮಾಡಿದರು. 'ಪ್ರೇಮಸಾಕ್ಷಿ', 'ಗಿರಿಬಾಲೆ', 'ರಾಮಾಪುರದ ರಾವಣ', 'ಹೆಂಡ್ತಿ ಬೇಕು ಹೆಂಡ್ತಿ' ಮುಂತಾದ ಚಿತ್ರಗಳು ಇವರು ಸಂಕಲನ ಮಾಡಿದ ಚಿತ್ರಗಳು.

## ಮನೋಹರ್.ವಿ.

ಕನ್ನಡ ಚಿತ್ರರಂಗದ ಛಾಯಾಗ್ರಾಹಕರು. ಹೆಚ್.ಎಂ.ರೆಡ್ಡಿಯವರ ಕುಟುಂಬದಿಂದ ಬಂದವರು. ವೈ.ಆರ್.ಸ್ವಾಮಿ, ಆರ್.ಮಧುಸೂದನ್ ಅವರ ಸಂಬಂಧಿಕರು.



'ಕಲ್ಯಾಣಿ', 'ಯಾವ ಜನ್ಮದ ಮೈತ್ರಿ', 'ಜೀವನ ಜೋಕಾಲಿ' ಮುಂತಾದ ಚಿತ್ರಗಳಲ್ಲಿನ ಛಾಯಾಗ್ರಹಣ ಅವರಿಗೆ ಹೆಸರು ತಂದಿತು. ಕಪ್ಪು-ಬಿಳುಪು ಛಾಯಾಗ್ರಹಣದಲ್ಲಿ ಉತ್ತಮ ಪರಿಣತಿ ಇದ್ದವರು.

## ಮನೋಹರ್.ವಿ

ಹಂಸಲೇಖಾ ಅವರ ಗರಡಿಯಲ್ಲಿ ಪಳಗಿ ಸಾಹಿತ್ಯ ಹಾಗೂ ಸಂಗೀತಗಳೆರಡರಲ್ಲೂ ಪರಿಶ್ರಮ ಹೊಂದಿರುವ ಪ್ರತಿಭಾವಂತ ಹಾಗೂ ಸಮರ್ಥ ಸಂಗೀತ ನಿರ್ದೇಶಕರು. ಚಿತ್ರಸಾಹಿತಿಯಾಗಿ 'ಏಳು ಸುತ್ತಿನ ಕೋಟೆ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ಅವರ ಅದೇ ಚಿತ್ರದ 'ನಂತಸ ಅರಳುವ ಸಮಯ...' ಹಾಡಿಗೆ ರಾಜ್ಯ ಸರ್ಕಾರದ ಪ್ರಶಸ್ತಿ ಬಂದಿದೆ. ಕಾಶೀನಾಥ್ ಅವರ 'ಅನುಭವ' ಚಿತ್ರದ 'ಹೋದೆಯ ದೂರ ಓ ಜೊತೆಗಾರ....' ಹಾಡು ಹೆಸರನ್ನು ತಂದು ಕೊಟ್ಟಿತು. ನಂತರ ನಿರ್ದೇಶಕ ಉಪೇಂದ್ರ ತಮ್ಮ 'ತರ್ಲೆ ನನ್ಮಗ' ಚಿತ್ರದ ಸಂಗೀತ ನಿರ್ದೇಶನದ ಹೊಣೆಯನ್ನು ಮನೋಹರ್ ಅವರಿಗೆ ವಹಿಸಿದರು. 'ಜನುಮದ ಜೋಡಿ'



ಚಿತ್ರದಲ್ಲಿ ಮನೋಹರ್ ಸಂಗೀತ ಸಂಯೋಜಿಸಿದ 'ಕೋಲು ಮಂಡೆ ಜಂಗಮದೇವ...' ಮತ್ತು ಇತರೆ ಹಾಡುಗಳು ಇಡೀ ಕರ್ನಾಟಕದಲ್ಲಿ ಜನಪ್ರಿಯಗೊಂಡು ಅವರಿಗೆ ಸಾಲು ಸಾಲು ಅವಕಾಶಗಳನ್ನು ನೀಡಿತು. 'ಗೆಜ್ಜೆನಾದ', 'ಓ ಮಲ್ಲಿಗೆ', 'ಜೋಡಿ ಹಕ್ಕಿ' ಮೊದಲಾದ ಚಿತ್ರಗಳು ಇವರ ಸಂಗೀತ ನಿರ್ದೇಶನವನ್ನು ಪಡೆದಿದ್ದವು. 'ಜನುಮದ ಜೋಡಿ' ಚಿತ್ರಕ್ಕಾಗಿ (೧೯೯೬-೯೭), 'ಜೋಡಿ ಹಕ್ಕಿ' ಚಿತ್ರಕ್ಕಾಗಿ (೧೯೯೭-೯೮)ರಲ್ಲಿ ಶ್ರೇಷ್ಠ ಸಂಗೀತ ನಿರ್ದೇಶಕರೆಂದು ರಾಜ್ಯಸರ್ಕಾರದ ಪ್ರಶಸ್ತಿಯನ್ನು ಪಡೆದಿದಾರೆ. ಪತ್ರಕರ್ತರಾಗಿ ಚಿತ್ರರಂಗಕ್ಕೆ ನಿಕಟರಾದ ವಿ.ಮನೋಹರ್ ಚಲನಚಿತ್ರ ನಿರ್ದೇಶನವನ್ನೂ ಮಾಡಿದರು. ಹೊಸ ಪ್ರತಿಭೆಗಳ ಉದಯಕ್ಕೆ ಕಾರಣರಾದರು. 'ಓ ಮಲ್ಲಿಗೆ', 'ಇಂದ್ರಧನುಷ್' ಅವರು ನಿರ್ದೇಶಿಸಿದ ಚಿತ್ರಗಳು.

## ಮನೋಹರ್ ನಾಯ್ಡು. ಜಿ.

ಆರಂಭದಲ್ಲಿ ಕನ್ನಡ ಚಿತ್ರಗೀತೆಗಳ ಧ್ವನಿಸುರುಳಿಗಳನ್ನು ಮದರಾಸಿನ ಸಂಗೀತ ಸಂಸ್ಥೆಯವರು ಕೊಂಡುಕೊಳ್ಳುತ್ತಿದ್ದರು. ಮನೋಹರ್ ನಾಯ್ಡು ಬೆಂಗಳೂರಿನಲ್ಲಿ ಲಹರಿ ರೆಕಾರ್ಡಿಂಗ್ ಸಂಸ್ಥೆಯನ್ನು ಆರಂಭಿಸಿದರು. 'ಪ್ರೇಮಲೋಕ' ಕ್ಯಾಸೆಟ್ ಹಕ್ಕನ್ನು ಹೆಚ್ಚು ಮೊತ್ತಕ್ಕೆ ಪಡೆದು ದಾಖಲೆಮಾಡಿದರು. ಈ ಮೂಲಕ ಕ್ಯಾಸೆಟ್ ಪ್ರಪಂಚದಲ್ಲಿ ವಿನೂತನ ದಾಖಲೆ ಸ್ಥಾಪಿಸಿ ಕನ್ನಡ ಮಾರುಕಟ್ಟೆಯನ್ನು ವಿಸ್ತೃತಗೊಳಿಸಿದರು. ಅನೇಕ ಚಿತ್ರಗಳ ಚಿತ್ರಕಥೆ,



ಹಾಡುಗಳ ಧ್ವನಿಸುರುಳಿಗಳನ್ನು ಬಿಡುಗಡೆ ಮಾಡಿದ ಕೀರ್ತಿ ಅವರದು. ನಿರ್ಮಾಪಕರಾಗಿ 'ಗಣೇಶನ ಗಲಾಟೆ' 'ಮಹಾಕ್ಷತ್ರಿಯ' ಚಿತ್ರಗಳನ್ನು ನಿರ್ಮಿಸಿದರು. ಲಹರಿ ರೆಕಾರ್ಡಿಂಗ್ ಸ್ಟುಡಿಯೋದಲ್ಲಿ ಅತ್ಯಾಧುನಿಕ ಸಲಕರಣೆಗಳನ್ನು ಅಳವಡಿಸಿದಾರೆ. ಧ್ವನಿಸುರುಳಿಗಳನ್ನು ಕೇವಲ ಇಪ್ಪತ್ತು ರೂಪಾಯಿಗೆ ಮಾರಾಟ ಮಾಡಿ ಕ್ಯಾಸೆಟ್ ಪ್ರಪಂಚದಲ್ಲಿ ಹೊಸ ಕ್ರಾಂತಿ ಮಾಡಿದಾರೆ. ಇವರ ಸಹೋದರರಾದ ವೇಲು ಮತ್ತು ತುಳಸಿರಾಮ್ ಇವರ ಕಂಪೆನಿಯ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದಾರೆ.

## ಮಮತಾ ರಾವ್

ಕನ್ನಡಿತಿಯಾದರೂ ವ್ಯಾಸಂಗ ಮಾಡಿದ್ದು ಮುಂಬೈನಲ್ಲಿ. ಆಕಸ್ಮಿಕವಾಗಿ ಬೆಂಗಳೂರಿಗೆ ಬಂದಾಗ ನಾಗಾಭರಣ ಅವರ 'ಪ್ರಾಯ ಪ್ರಾಯ ಪ್ರಾಯ' (೧೯೮೨) ಚಿತ್ರದಲ್ಲಿ



ಅಭಿನಯಿಸುವ ಅವಕಾಶ ಕಲ್ಪಿತವಾಗಿ ಚಿತ್ರರಂಗಕ್ಕೆ ಬಂದರು. ಮೊದಲನೇ ಚಿತ್ರದಲ್ಲಿ ಅಭಿನಯಕ್ಕಾಗಿ ರಾಜ್ಯ ಸರ್ಕಾರದಿಂದ ಆ ವರ್ಷದ ಅತ್ಯುತ್ತಮ ಪೋಷಕನಟಿ ಪ್ರಶಸ್ತಿಗೆ ಪಾತ್ರರಾದರು. 'ಹೊಸಬೆಳಕು' ಎರಡನೆ ಚಿತ್ರ. ರಾಜಕುಮಾರ್ ಎದುರು ಅಭಿನಯಿಸಿದರು. ನಂತರ ಕಿರುತೆರಯಲ್ಲೂ ಸಾಕಷ್ಟು ಹೆಸರಾದರು. 'ಕಾಡಿನ ಬೆಂಕಿ' ಅವರ ಅಭಿನಯದ ಮತ್ತೊಂದು ಚಿತ್ರ.

### ಮರಿರಾವ್.ಎಂ.ಜಿ (೧೮೯೮-೧೯೮೦)

ಮೈಸೂರು ಹುಟ್ಟೂರು. ಐದನೆ ವಯಸ್ಸಿನಲ್ಲಿ ವರದಾಚಾರ್ಯರ ನಾಟಕ ಕಂಪನಿಗೆ ಸೇರಿಕೊಂಡು ಬಾಲನಟರಾದರು. 'ಭಕ್ತಧ್ರುವ', 'ಭಕ್ತ ಪ್ರಹ್ಲಾದ' ಮುಂತಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ನಿರ್ವಹಿಸಿದರು. ಈ ಬಾಲಕನ ಪ್ರತಿಭೆ ಕಂಡು ಮೈಸೂರು ವಾಸುದೇವಾಚಾರ್ಯರು ಚಿನ್ನದ ಕಾಪು ತೊಡಿಸಿ ಅಭಿನಂದಿಸಿದರು.



ವರದಾಚಾರ್ಯರ ಕಂಪನಿಯಲ್ಲೇ ಹಾಸ್ಯನಟರಾಗಿ ಪ್ರಖ್ಯಾತರಾದರು. ಜಿ.ನಾಗೇಶರಾಯರೊಂದಿಗೆ ಸ್ವಂತ ನಾಟಕ ಸಂಸ್ಥೆ ಕಟ್ಟಿದರು. ಟಿ.ಪಿ.ಕೈಲಾಸಂರೊಂದಿಗೆ ನಿಕಟ ಸಂಪರ್ಕ ಹೊಂದಿದ್ದ ಇವರು ಸಾಮಾಜಿಕ ಪಾತ್ರಗಳಲ್ಲಿ ಸಹ ಅಭಿನಯಿಸಿದರು. ಕನ್ನಡದಲ್ಲಿ ಮೊದಲು ಚಿತ್ರೀಕರಣ ಆರಂಭಿಸಿದ, ಮಾತನಾಡಿದ ಚಿತ್ರ 'ಭಕ್ತಧ್ರುವ' (೧೯೩೪) ಚಿತ್ರದಲ್ಲಿ ಕಪಿಂಜಲನ ಪಾತ್ರ ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ಸುಮಾರು ೪೫ ಚಲನಚಿತ್ರಗಳಲ್ಲಿ ಪಾತ್ರ ನಿರ್ವಹಿಸಿದರು. ೧೯೬೪ರವರೆಗೆ ಆಕಾಶವಾಣಿಯ ನಿಲಯದ ಕಲಾವಿದರಾಗಿದರು. ಕೊಲಂಬಿಯಾ ಸಂಸ್ಥೆಗಾಗಿ ಇವರು ಹಾಡಿದ 'ನಾನೊಂದು ಮದುವೆಯ ಮಾಡಿಕೊಂಡ...' ಅತ್ಯಂತ ಪ್ರಖ್ಯಾತವಾಗಿದ ಹಾಡಾಗಿತ್ತು. ಮೈಸೂರು ಸಂಗೀತ ನಾಟಕ ಅಕಾಡಮಿ ೧೯೬೮ರಲ್ಲಿ ಸನ್ಮಾನಿಸಿತು. ೧೯೮೧ರಲ್ಲಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಇವರನ್ನು ಸತ್ಕರಿಸಿತು. ೧೯೮೩ರಲ್ಲಿ ನಡೆದ ೧೪ನೇ ಸಂಗೀತ ಸಮ್ಮೇಳನದಲ್ಲಿ ಬೆಂಗಳೂರು ಗಾಯನ ಸಮಾಜ ಇವರನ್ನು ಗೌರವಿಸಿತು. ೮೦ರ ದಶಕದಲ್ಲಿ ಮರಿರಾಯರು ನಿಧನರಾದರು.

### ಮಲ್ಲಿಕ್.ಕೆ

ಕನ್ನಡ ಚಿತ್ರರಂಗದ ಹಿರಿಯ ಛಾಯಾಗ್ರಾಹಕ. ಬೆಂಗಳೂರಿನಲ್ಲಿ ಜನನ. ಸಿನಿಮಾಟೋಗ್ರಫಿಯಲ್ಲಿ ಡಿಪ್ಲೊಮಾ ಪಡೆದು ೧೯೮೦ರ ವರೆಗೆ ವಿ.ಕೆ.ಮೂರ್ತಿ ಅವರ ಬಳಿ ಸಹಾಯಕರಾಗಿ, ಜಂಟಿ ಛಾಯಾಗ್ರಾಹಕರಾಗಿ ಕೆಲಸ ಮಾಡಿದರು. 'ಅನುರಕ್ತೆ' ಚಿತ್ರದ ಮೂಲಕ ಸ್ವತಂತ್ರ ಛಾಯಾಗ್ರಾಹಕರಾದರು.



ಸುಮಾರು ಐಂವತ್ತು ಹೆಚ್ಚು ಚಿತ್ರಗಳಿಗೆ ಛಾಯಾಗ್ರಹಣ ಮಾಡಿರುವ ಮಲ್ಲಿಕ್ ಕನ್ನಡ 'ರಾಜೇಶ್ವರಿ', 'ಯಾರು ಹೊಣೆ?' ಹಾಗೂ 'ಮಂದಾರ ಪೂ' ಎಂಬ ಕೊಡವ ಭಾಷೆಯ ಚಿತ್ರಗಳಿಗೆ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. ಕನ್ನಡದ ಪ್ರಥಮ ಸಿನಿಮಾಸ್ಕೋಪ್ ವರ್ಣಚಿತ್ರ 'ಸೊಸೆ ತಂದ ಸೌಭಾಗ್ಯ'ಕ್ಕೂ ಇವರ ಛಾಯಾಗ್ರಹಣದ ನೆರವಿತ್ತು.

### ಮಲ್ಲೇಶ್ ಬಿ.

ಎಂಬತ್ತರ ಅಂತ್ಯದಲ್ಲಿ ಚಿತ್ರರಂಗದಲ್ಲಿ ಖ್ಯಾತರಾದ ನಿರ್ದೇಶಕ ಬಿ. ಮಲ್ಲೇಶ್. ಎಂಜಿನಿಯರಿಂಗ್ ಪದವೀಧರ. ಕಲಾವಂತರ ಮನೆಯಲ್ಲಿ ಜನಿಸಿದವರು. ಇವರ ತಂದೆ ಬಸವಯ್ಯ ಗುಬ್ಬಿ ಕಂಪನಿಯಲ್ಲಿ ಹಾಸ್ಯ ಪಾತ್ರಗಳಲ್ಲಿ ಅಭಿನಯಿಸುತ್ತಿದ್ದರು. ಸೋದರಿ ಜಯಾ ನಾಟಕ, ಸಿನಿಮಾ ಎರಡರಲ್ಲೂ ಹಾಸ್ಯ ಪಾತ್ರಗಳಲ್ಲಿ ಸೈ ಎನಿಸಿಕೊಂಡವರು. ರಾಜಕುಮಾರ್ ಅವರ ಹಲವು ಚಿತ್ರಗಳ ಸಹ ನಿರ್ದೇಶಕರಾಗಿ, ಖ್ಯಾತ ನಿರ್ದೇಶಕರಾದ ಸೋಮಶೇಖರ್, ವಿಜಯ್, ಸಿ.ವಿ.



ರಾಜೇಂದ್ರನ್ ಮೊದಲಾದವರ ಬಳಿ ಅನುಭವ ಗಳಿಸಿದರು. 'ನನ್ನ ದೇವರು', 'ಪ್ರೇಮಸಾಕ್ಷಿ', 'ಗಾಯತ್ರಿ ಮದುವೆ', 'ಒಲವು ಮೂಡಿದಾಗ', 'ಗಿರಿಬಾಲೆ', 'ಪ್ರೇಮ ಕಾದಂಬರಿ' ಮುಂತಾದ ಜನಪ್ರಿಯ ಚಿತ್ರಗಳನ್ನು ನಿರ್ದೇಶಿಸಿರುತ್ತಾರೆ.

### ಮಹದೇವಪ್ಪ (ಭಟ್ಟಿ)

ಮೈಸೂರು ಹುಟ್ಟೂರು. ಬಾಲನಟರಾಗಿ ರಂಗಭೂಮಿ ಪ್ರವೇಶಿಸಿದರು. 'ರಾಜಾವಿಕ್ರಮ' ನಾಟಕದ ಭಟ್ಟಿ ಪಾತ್ರದಿಂದಾಗಿ ಹೆಸರಿನೊಂದಿಗೆ 'ಭಟ್ಟಿ'



ಸೇರಿತು. ಹಲವಾರು ಪ್ರಮುಖ ರಂಗಸಂಸ್ಥೆಗಳಲ್ಲಿ ನಟರಾಗಿ ಕಾರ್ಯ ನಿರ್ವಹಿಸಿದರು. 'ಭಲೇ ರಾಜ' (೧೯೬೯) ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದರು. 'ಗಂಧದ ಗುಡಿ', 'ಬಂಗಾರದ ಮನುಷ್ಯ' ಸೇರಿದಂತೆ ೧೨೦ ಚಿತ್ರಗಳಲ್ಲಿ ಪೋಷಕ ನಟರಾಗಿ ಅಭಿನಯಿಸಿದ್ದಾರೆ.

### ಮಹಾಬಲರಾವ್.ಯು (೧೯೦೩-೭೯)

ಉಡುಪಿ ಮಹಾಬಲರಾವ್ ರಂಗಭೂಮಿ-ಲಲಿತ ಕಲೆಗಳಿಂದ ಆಕರ್ಷಿತರಾಗಿ ಶ್ರೀಮಂತಿಕೆಯ ಮನೆಯನ್ನು ತೊರೆದು ಬೆಂಗಳೂರಿಗೆ ಬಂದಾಗ ಹನ್ನೆರಡು ವರುಷ. ತಂದೆ ಅನಂತಯ್ಯ ಕಾರಂತ ಡಾ।ಶಿವರಾಮಕಾರಂತರ ಜ್ಞಾತಿ. ಹೋಟೇಲಿನಲ್ಲಿ ದುಡಿಯುತ್ತಿದ್ದ ಬಾಲಕನ ಮನದಾಶೆಯನ್ನು ಅರಿತು ರಂಗಭೂಮಿಯತ್ತ ಕೈ ಹಿಡಿದು ನಡೆಸಿದವರು ಗುಬ್ಬಿ ವೀರಣ್ಣ, ನಾಗೇಶರಾಯರು, ಗಂಗಾಧರರಾಯರು. ಚಂದಣ್ಣನ ಕಂಪನಿಯ ಬಾಲನಟಿ. ಸ್ತ್ರೀ ಪಾತ್ರಗಳೂ ಸೇರಿದಂತೆ ಹಲವು ವೈವಿಧ್ಯಮಯ ಪಾತ್ರಗಳ ನಿರ್ವಹಣೆ. ಗುಬ್ಬಿ ವೀರಣ್ಣನವರ ಗುಬ್ಬಿ ಚನ್ನಬಸವೇಶ್ವರ ಕಂಪನಿಯ 'ಚಲ್ತಿ ದುನಿಯಾ' ನಾಟಕದಲ್ಲಿನ ವಿದೂಷಕನ ಪಾತ್ರ ಚಿರಸ್ಮರಣೀಯ. ಗುಬ್ಬಿ ಕಂಪನಿಯ 'ಜೀವನ ನಾಟಕ' (೧೯೪೨)ದಿಂದ ಚಿತ್ರರಂಗ ಪ್ರವೇಶ. 'ಕೃಷ್ಣಲೀಲಾ', 'ನಾಗಕನ್ನಿಕಾ', 'ಗಂಧರ್ವಕನ್ಯೆ', 'ಆಷಾಢಭೂತಿ', 'ಪಾತಾಳ ಮೋಹಿನಿ', 'ಮುಟ್ಟಿದ್ದೆಲ್ಲ ಚಿನ್ನ', 'ಪ್ರೇಮಕ್ಕೂ ಪರ್ಮಿಟ್ಟೆ' ಇವೇ ಮೊದಲಾದ ಅನೇಕ ಚಿತ್ರಗಳಲ್ಲಿ ಅಭಿನಯಿಸಿದರು. ಶತದಿನೋತ್ಸವ ಆಚರಿಸಿದ ಮಹಾತ್ಮರವರ 'ಜಗನ್ಮೋಹಿನಿ'



ಚಿತ್ರದಲ್ಲಿ 'ನಾಣಿ'ಯೆಂಬ ಹಾಸ್ಯಪಾತ್ರ ಆ ದಿನಗಳಲ್ಲಿ ಕನ್ನಡ ರಸಿಕರ ಮನಸೂರೆಗೊಂಡಿತ್ತು. ದಾವಣಗೆರೆಯಲ್ಲಿ ಅವರಿಗೆ ಮಾಡಿದ ಸನ್ಮಾನ ಸಮಾರಂಭ ವಿಶಿಷ್ಟವಾದುದು. ಆತ ದೇವಿ ಉಪಾಸಕ, ಆಶುಕವಿ, ಜ್ಯೋತಿಷಿ. ಚಿತ್ರರಂಗದಲ್ಲಿ ಅವರಿಗೆ ಅಪಾರ ಬೇಡಿಕೆ ಇದ್ದರೂ ಅವರ ಮೊದಲ ಒಲವು ರಂಗಭೂಮಿ. ಕನ್ನಡದ 'ದೇವಕನ್ನಿಕಾ', 'ಮಂಗಳಗೌರಿ'ಯ ತಮಿಳು ಅವತರಣಿಕೆಗೆ ಪಾತ್ರ ವಹಿಸಲು ಕರೆ ಬಂದಾಗ, ತಮಿಳು ಕಲಾವಿದರಿಗೆ ಕೊಡುವಷ್ಟೇ ಸಂಭಾವನೆ ಕೊಡಬೇಕೆಂದು ಹೇಳಿ, ಭಾಷಾ ಕಲಾವಿದರಿಗೆ ಸಂಭಾವನೆಯಲ್ಲಿ ಇರುವ ತಾರತಮ್ಯ ಪ್ರತಿಭಟಿಸಿ, ಪಾತ್ರ ವಹಿಸಲು ನಿರಾಕರಿಸಿದ್ದರು. ಬಹುಕಾಲ ಚಿತ್ರರಂಗದಲ್ಲಿ ಸೇವೆ ಸಲ್ಲಿಸಿ ೧೯೭೯ರಲ್ಲಿ ನಿಧನರಾದರು.

### ಮಹಾಲಕ್ಷ್ಮೀ

ತಮಿಳು ಚಿತ್ರರಂಗದ ಖ್ಯಾತ ತಾರಾಜೋಡಿ ಎ.ವಿ.ಎಂ.ರಾಜನ್ ಹಾಗೂ ಪುಷ್ಪಲತ ಅವರ ಮಗಳು. ಕನ್ನಡ ಚಿತ್ರರಂಗಕ್ಕೆ ೧೯೮೩ರಲ್ಲಿ ತೆರೆಕಂಡ 'ಆನಂದ ಭೈರವಿ' ಚಿತ್ರದಲ್ಲಿನ ಪುಟ್ಟ ಆದರೆ ಪರಿಣಾಮಕಾರಿ ಪಾತ್ರದಿಂದ ಪರಿಚಿತರಾದ ಮಹಾಲಕ್ಷ್ಮಿ. ಪೂರ್ಣಪ್ರಮಾಣದ ನಾಯಕಿಯಾದದ್ದು



೧೯೮೪ರಲ್ಲಿ ತೆರೆಕಂಡ 'ಅಪರಾಜಿ' ಚಿತ್ರದಿಂದ. ನಾಯಕಿ ಪ್ರಧಾನ ಪಾತ್ರಗಳಲ್ಲಿ ಹೆಚ್ಚಾಗಿ ಅಭಿನಯಿಸಿದ ಮಹಾಲಕ್ಷ್ಮಿ ಗ್ಲಾಮರಸ್ ಪಾತ್ರಗಳಲ್ಲೂ ಮಿಂಚಿದರು. ಅಪಘಾತವೊಂದರಲ್ಲಿ ಪವಾಡ ಸದೃಶ ರೀತಿಯಲ್ಲಿ ಬದುಕುಳಿದ ಮಹಾಲಕ್ಷ್ಮಿ ಅನಂತ್‌ನಾಗ್, ಅಂಬರೀಷ್, ರವಿಚಂದ್ರನ್ ಮೊದಲಾದ ನಾಯಕನಟರ ಜೊತೆ ನಾಯಕಿಯಾಗಿ ನಟಿಸಿದರು. 'ಸ್ವಾಭಿಮಾನ', 'ಹೆಂಡ್ತಿಗ್ಹೇಳ್ಬೇಡಿ', 'ಮನೇಲಿ ಇಲಿ ಬೀದೀಲಿ ಹುಲಿ', 'ಇನ್ಸ್ಪೆಕ್ಟರ್' 'ಇಷ್ಟೆಂಥಾ ಹೆಂಡ್ತಿ', 'ಜಾಕಿ', 'ಪ್ರಜಾಪ್ರಭುತ್ವ', 'ನವಭಾರತ' ಮುಂತಾದ ಜನಪ್ರಿಯ ಚಿತ್ರಗಳಲ್ಲಿ ಅಭಿನಯಿಸಿದರು.

### ಮಹೇಂದರ್

ಕನ್ನಡ ಚಿತ್ರರಂಗದ ಖ್ಯಾತ ಶಬ್ದಗ್ರಾಹಕ. ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಶಬ್ದಗ್ರಾಹಕ ವೃತ್ತಿಯನ್ನು ಆರಂಭಿಸಿದರು. ಶಬ್ದ ತಂತ್ರಜ್ಞರಾದ ವಿ. ಗೋವಿಂದಸ್ವಾಮಿ, ಶಿವರಾಜ್, ಕೋದಂಡಪಾಣಿ ಮುಂತಾದವರೊಂದಿಗೆ ಕೆಲಸಮಾಡಿದ ಅನುಭವವಿದೆ. 'ಕಾಮನ ಬಿಲ್ಲು', 'ಚಲಿಸುವ ಮೋಡಗಳು' ಚಿತ್ರಗಳಿಗೆ ಸಹಾಯಕ ಶಬ್ದಗ್ರಾಹಕರಾಗಿದರು. 'ಹಳ್ಳಿ ಸುತ್ತಿನ



ಕೋಟೆ', 'ತಬರನ ಕಥೆ', 'ನಂಜುಂಡಿ ಕಲ್ಯಾಣ', 'ಮನೆ', 'ಹೃದಯ ಹಾಡಿತು', 'ಹೃದಯ ಗೀತೆ', 'ಜೀವನಚೈತ್ರ', 'ಗೋಲಿಬಾರ್' ಮೊದಲಾದ ಚಿತ್ರಗಳಿಗೆ ಸಹ ಛಾಯಾಗ್ರಾಹಕರಾಗಿ ಕೆಲಸ ಮಾಡಿದರು. 'ಅಣ್ಣಾಜಿ', 'ಗಡಿಬಿಡಿ ಅಳಿಯ', 'ಓಂ', 'ತುಂಬಿದ ಮನೆ', 'ಶ್ರೀಮತಿ ಕಲ್ಯಾಣ' ಮುಂತಾದ ಚಿತ್ರಗಳಿಗೆ ಸ್ವತಂತ್ರ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. ಡಿಜಿಟಲ್ ರೆಕಾರ್ಡಿಂಗ್, ಡಿಜಿಟಲ್ ಎಫೆಕ್ಟ್ ಮೊದಲಾದ ತಂತ್ರಜ್ಞಾನದಲ್ಲಿ ಪರಿಣತರಾದ ಮಹೇಂದರ್‌ಗೆ 'ಸಿಪಾಯಿ' ಚಿತ್ರದ ಛಾಯಾಗ್ರಹಣಕ್ಕಾಗಿ ೧೯೯೫-೯೬ನೇ ಸಾಲಿನ ರಾಜ್ಯಸರ್ಕಾರದ ಪ್ರಶಸ್ತಿ ಲಭಿಸಿದೆ. ೧೯೯೬-೯೭ನೇ ಸಾಲಿನ ಅತ್ಯುತ್ತಮ ಛಾಯಾಗ್ರಾಹಕರೆಂದು 'ಅಮೃತ ವರ್ಷಿಣಿ' ಚಿತ್ರಕ್ಕಾಗಿ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ. ೧೯೯೮-೯೯ನೇ ಸಾಲಿನ ಅತ್ಯುತ್ತಮ ಛಾಯಾಗ್ರಾಹಕರೆಂದು 'ಸ್ವಸ್ತಿಕ್' ಚಿತ್ರಕ್ಕೆ ರಾಜ್ಯಪ್ರಶಸ್ತಿ ಪಡೆದಿದ್ದಾರೆ.

### ಮಹೇಂದರ್.ಎಸ್

೯೦ರ ದಶಕದಲ್ಲಿ ಬೆಳ್ಳಿ ತೆರೆಗೆ ನಿರ್ದೇಶಕರಾಗಿ ಪರಿಚಿತರಾದ ಎಸ್.ಮಹೇಂದರ್ ೧೯೬೫ರಲ್ಲಿ ಜನಿಸಿದವರು. ಕೊಳ್ಳೇಗಾಲದ ಬಂಡಳ್ಳಿ ಇವರು ಹುಟ್ಟಿದ ಊರು. ರೈತಾಪಿ ಕುಟುಂಬಕ್ಕೆ ಸೇರಿದವರು. ವಿದ್ಯಾಭ್ಯಾಸದ ನಂತರ



ಚಿತ್ರರಂಗದ ಮೇಲಿನ ವ್ಯಾಮೋಹದಿಂದ ಬೆಂಗಳೂರಿಗೆ ಬಂದವರು. ೧೯೯೨ರಲ್ಲಿ ತೆರೆಕಂಡ 'ಪ್ರಣಯದ ಪಕ್ಷಿಗಳು' ಚಿತ್ರವನ್ನು ನಿರ್ದೇಶಿಸುವುದರೊಂದಿಗೆ ಬೆಳ್ಳಿ ತೆರೆಗೆ ಪ್ರವೇಶ ಪಡೆದರು. ತಮಿಳು ಚಿತ್ರರಂಗದ ಖ್ಯಾತ ನಿರ್ದೇಶಕ ಭಾಗ್ಯರಾಜ್ ಅವರಿಂದ ಸ್ಫೂರ್ತಿ ಪಡೆದ ಇವರು ಕೆಲವೊಂದು ಜನಪ್ರಿಯ ಚಿತ್ರಗಳನ್ನು ನಿರ್ದೇಶಿಸಿದರು. 'ಶೃಂಗಾರಕಾವ್ಯ', 'ಹೆತ್ತವರು', 'ಸ್ತ್ರೀ', 'ಗಂಗಾ ಯಮುನಾ', 'ಕೊಡಗಿನ ಕಾವೇರಿ', 'ಮೇಘ ಬಂತು ಮೇಘ', 'ಸೂಪರ್ ಸುಪ್ರಿ ಲಾಲಿ', 'ಚಂದ್ರೋದಯ', 'ಪ್ರೇಮಾಚಾರಿ' ಮುಂತಾದವು ಇವರ ನಿರ್ದೇಶನದ ಚಿತ್ರಗಳು. ಕನ್ನಡ ಚಿತ್ರರಂಗದ ಖ್ಯಾತ ನಟಿ ಶ್ರುತಿ ಅವರನ್ನು ವಿವಾಹವಾಗಿದ್ದಾರೆ.

### ಮಾಣಿಕ್‌ಚಂದ್.ಆರ್.ಎಫ್

ಚಿಕ್ಕಮಗಳೂರಿನವರು. ಬಟ್ಟೆ ವ್ಯಾಪಾರಿಗಳು. ಹುಟ್ಟಿದ್ದು ೧೯೫೨ ನವೆಂಬರ್ ೧೧ರಂದು. ಒಂಬತ್ತನೇ ವಯಸ್ಸಿಗೇ ತಂದೆಯವರ ಜೊತೆ ವ್ಯಾಪಾರದಲ್ಲಿ ತೊಡಗಿದರು. ತುರ್ತು ಪರಿಸ್ಥಿತಿ ದಿನಗಳಲ್ಲಿ ಬ್ಯಾಂಕಿಂಗ್ ವ್ಯವಹಾರದಲ್ಲಿ ತೊಡಕು ಉಂಟಾಗಿದ್ದರಿಂದ ಅವರು ಪ್ರಾರಂಭಿಸಿದ ಸಾಲ ವ್ಯವಹಾರವು ನಿಂತಿತು. ಇದೇ ವೇಳೆಗೆ 'ಬೆಳ್ಳಿ ಮೋಡ' ಚಿತ್ರಿಸಲು ಬಂದ ಪುಟ್ಟಣ್ಣನವರ ಪರಿಚಯ



ಚಿತ್ರೀಕರಣಕ್ಕೆ ಬಂದ ಡಿ.ಶಂಕರ್‌ಸಿಂಗ್ ತಂಡದೊಂದಿಗೆ ಬೆಳೆದ ಸ್ನೇಹದಿಂದ ಮಾಣಿಕ್‌ಚಂದ್‌ರ ಆಸಕ್ತಿ ಚಿತ್ರರಂಗದತ್ತ ಹರಿಯಿತು. ಹೆಚ್.ವಿ.ಸುಬ್ಬರಾವ್-ಎಸ್.ವಿ.ರಾಜೇಂದ್ರಸಿಂಗ್‌ಬಾಬು ಹೇಳಿದ ಕಥೆ ಇಷ್ಟವಾಯಿತು. ಚಿತ್ರನಿರ್ಮಾಣ ಪ್ರವೇಶಿಸಿದರು. ಇವರ ಜೊತೆಗೆ ಬಾಲಾಜಿಸಿಂಗ್ ಇದ್ದರು. ನಾಗರಹೊಳೆ' ಚಿತ್ರ ಹೊಸ ನಿರ್ಮಾಪಕರು, ನಿರ್ದೇಶಕರು ಉತ್ಸಾಹದ ಫಲವಾಗಿ ಅದ್ದೂರಿಯಾಗಿ ತಯಾರಾಯಿತು. ಪ್ರದರ್ಶಕ ವಲಯದ ಮಿತ್ರರಾದ ಪಾರ್ಥಸಾರಥಿ ಮೊದಲಾದವರು ಅನಂತರ ಸೇರ್ಪಡೆಯಾದರು. ಆ ಕಾಲಕ್ಕೆ ಅತ್ಯಾಧಿಕ ವೆಚ್ಚದ ಚಿತ್ರ ಬಿಡುಗಡೆಗೆ ತೊಂದರೆಯಾದಾಗ ಆಗಷ್ಟೇ 'ಗುರುಜ್ಯೋತಿ ಕಂಬೈನ್ಸ್' ಪ್ರಾರಂಭಿಸಿದ ಕೆ.ವಿ.ಗುಪ್ತ ತಮ್ಮ ಸಂಸ್ಥೆಯ ಮೊದಲ ಚಿತ್ರವಾಗಿ 'ನಾಗರಹೊಳೆ'ಯನ್ನು ತೆಗೆದುಕೊಂಡರು. 'ನಾಗರಹೊಳೆ' ಅದ್ಭುತ ಯಶಸ್ಸು ಕಂಡಿತು. ಮಾಣಿಕ್‌ಚಂದ್ ಚಿತ್ರನಿರ್ಮಾಣ ಮುಂದುವರಿಸಿ ಸಜ್ಜನ, ಶಿಸ್ತಿನ ಮನುಷ್ಯ ಎಂದು ಹೆಸರಾದರು. 'ಮಳೆ ಬಂತು ಮಳೆ', 'ಏಟು ಎದುರೇಟು', 'ಆಶಾ', 'ದಾದಾ' ಮೊದಲಾದ ಒಂದಕ್ಕಿಂತ ಒಂದು ವಿಭಿನ್ನ ಎನಿಸುವಂಥ ಹತ್ತಾರು ಚಿತ್ರಗಳನ್ನು ತೆರೆಗಿತ್ತರು. ವಿಷ್ಣು ಪ್ರಿಯ ಕಂಬೈನ್ಸ್ ಪ್ರಾರಂಭಿಸಿ ವಿಷ್ಣುವರ್ಧನ್ ಅವರೊಂದಿಗೆ ಚಿತ್ರ ನಿರ್ಮಾಣ, ವಿತರಣೆಯಲ್ಲೂ ತೊಡಗಿದರು. ಸ್ವತಂತ್ರವಾಗಿ ಶಕ್ತಿ ಸಂಸ್ಥೆಯನ್ನು ಪ್ರಾರಂಭಿಸಿ ಚಿತ್ರಗಳನ್ನು ವಿತರಿಸಿದರು. ಮಾಣಿಕ್‌ಚಂದ್ ಚಲನಚಿತ್ರ ವಾಣಿಜ್ಯ ಮಂಡಳಿ, ನಿರ್ಮಾಪಕರ ಸಂಘಗಳಲ್ಲಿ ಸದಸ್ಯರಾಗಿ ಶ್ರಮಿಸಿದ್ದಾರೆ. ವಾಣಿಜ್ಯ ಮಂಡಳಿಯ ಸಂಧಾನ ಸಮಿತಿಯಲ್ಲಿದ್ದು ಗುಣಾತ್ಮಕ ತೀರ್ಮಾನಗಳಿಗೆ ಕಾರಣರಾಗಿದ್ದಾರೆ. ಚಲನಚಿತ್ರೋದ್ಯಮ ಸಹಕಾರ ಸಂಘದ ನಿರ್ದೇಶಕರಲ್ಲೊಬ್ಬರು. ಉದ್ಯಮದ ಗೌರವಸ್ಥಿತ ನಿರ್ಮಾಪಕರಾಗಿ ಬಹುಜನರಿಗೆ ಬೇಕಾದವರು ಮಾಣಿಕ್‌ಚಂದ್.

### ಮಾದಪ್ಪ. ಎಂ.ಜಿ

ಕಂಠದಾನ ಕಲಾವಿದರಾದ ಮಾದಪ್ಪ ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನ ಬಿಸ್ತುವಳ್ಳಿಯಲ್ಲಿ ಜನಿಸಿದರು (೨೨-೦೫-೧೯೫೭). ಎಸ್.ಎಸ್.ಎಲ್.ಸಿ ವರೆಗೆ ವಿದ್ಯಾಭ್ಯಾಸ. ಈರಂಕಿ ಶರ್ಮ ಅವರ ನಿರ್ದೇಶನದ 'ದೇವತೆ' ಚಿತ್ರದ ಮೂಲಕ ಕಂಠದಾನ ಕಲಾವಿದರಾಗಿ ಪರಿಚಿತರಾದರು. ಸರಿಸುಮಾರು ೫೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಕಂಠದಾನ ಕಲಾವಿದರಾಗಿ ಕಾರ್ಯ ನಿರ್ವಹಿಸಿದ್ದಾರೆ. 'ಜ್ವಾಲಾಮುಖಿ', 'ಮಸಣದ ಹೂವು', 'ರಥಸಪ್ತಮಿ', 'ತಬರನ ಕಥೆ', 'ಓಂ', 'ಎ' ಇತ್ಯಾದಿ ಚಿತ್ರಗಳು ಪ್ರಮುಖವಾದವುಗಳು.

### ಮಾಧವನ್.ಪಿ.ವಿ

ಕನ್ನಡ ಚಿತ್ರಂಗದ ಪ್ರಸಾಧನ ಕಲಾವಿದರು. ಚೆನ್ನೈನಲ್ಲಿ ಎಸ್.ಎಸ್.ಎಲ್.ಸಿ ವರೆಗೂ ವಿದ್ಯಾಭ್ಯಾಸ. ಪ್ರಸಾಧನ ಕಲಾವಿದರಾಗಿ ೧೯೬೦ರಲ್ಲಿ ಚಿತ್ರರಂಗ ಪ್ರವೇಶ. ೧೯೭೦ರಲ್ಲಿ 'ಮೊದಲ ರಾತ್ರಿ' ಚಿತ್ರಕ್ಕಾಗಿ ಪ್ರಸಾಧನ ಕಲಾವಿದರಾಗಿ ಮೈಸೂರಿಗೆ ವಲಸೆ ಬಂದು ಈ ವರೆಗೂ ಸರಿ ಸುಮಾರು



ನೂರಕ್ಕೂ ಹೆಚ್ಚು ಚಿತ್ರಗಳಿಗೆ ಕೆಲಸ ಮಾಡಿದ್ದಾರೆ. ೧೯೭೨ರಲ್ಲಿ 'ಗೃಹಪ್ರವೇಶ' ಚಿತ್ರದಿಂದ ದೇವರಾಜ್ ಅವರ ಆಪ್ತ ಪ್ರಸಾಧನ ಕಲಾವಿದರಾಗಿದ್ದಾರೆ. ೧೯೯೯ರಲ್ಲಿ 'ಹಬ್ಬ' ಚಿತ್ರದಿಂದ ವಿಷ್ಣುವರ್ಧನ್ ಅವರಿಗೆ ಆಪ್ತ ಪ್ರಸಾಧನ ಕಲಾವಿದರಾದರು. 'ಕೆಸರಿನ ಕಮಲ', 'ಬಿಳೀ ಹೆಂಡ್ತಿ', 'ಸಿಂಗಾಪುರ್‌ನಲ್ಲಿ ರಾಜಾಕುಳ್ಳ', 'ಶುಭ ಮಿಲನ', 'ಸೂರ್ಯವಂಶ', 'ಹಬ್ಬ', 'ಸೂರಪ್ಪ', 'ಯಜಮಾನ' ಮೊದಲಾದವು ಇವರ ಪ್ರಸಾಧನಹೊಂದಿದ ಹೆಸರಿಸಬಹುದಾದ ಕೆಲವು ಚಿತ್ರಗಳು.

### ಮಾಧವರಾವ್.ಎಂ.ಎಸ್ (ತಮಾಷ್) (೧೯೦೭ ೮೬)

ರಂಗಭೂಮಿ-ಚಲನಚಿತ್ರ ನಟ. ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯಲ್ಲಿ ಜನನ (ಜೂನ್ ೨೧, ೧೯೦೭). ಶ್ರೀ ಚಾಮುಂಡೇಶ್ವರಿ



ನಾಟಕಸಭಾ ಮೂಲಕ ರಂಗಭೂಮಿ ಪ್ರವೇಶ. ಮಹಮದ್ ಪೀರ್ ಅವರ ಚಂದ್ರಕಲಾ ಮಂಡಲಿ, ಗುಬ್ಬಿವೀರಣ್ಣನವರ ನಾಟಕ ಕಂಪನಿಗಳಲ್ಲಿ ಅಭಿನಯಿಸಿದರು. ಸರ್ವೋದಯ ನಾಟಕ ಮಂಡಲಿ ಎಂಬ ಸ್ವಂತ ಸಂಸ್ಥೆಯನ್ನು ಹುಟ್ಟುಹಾಕಿದರು. 'ಸಂಸಾರನೌಕ' (೧೯೩೬) ಚಿತ್ರದಲ್ಲಿ ಮಾಧು ಪಾತ್ರ ಮಾಡುವ ಮೂಲಕ ಚಿತ್ರರಂಗಕ್ಕೆ ಬಂದರು. 'ವಸಂತಸೇನೆ', 'ಭಾರತಿ', 'ದಲ್ಲಾಳಿ', 'ಸೌಭಾಗ್ಯಲಕ್ಷ್ಮಿ', 'ಮುಟ್ಟಿದ್ದೆಲ್ಲ ಚಿನ್ನ' ಇವರ ಅಭಿನಯದ ಚಿತ್ರಗಳು. ಕೆಲವು ತೆಲುಗು ಚಿತ್ರಗಳಲ್ಲಿ ಸಹ ಅಭಿನಯಿಸಿದರು. ೧೯೪೭ರಲ್ಲಿ 'ತಮಾಷ್' ಎಂಬ ಪತ್ರಿಕೆಯನ್ನು ಆರಂಭಿಸಿ ರಂಗಭೂಮಿ ಚಟುವಟಿಕೆಗಳಿಗೆ ಮೀಸಲಿರಿಸಿದರು. ಐದಾಣೆ ಬೆಲೆಯ ಈ ಪತ್ರಿಕೆ ಒಂಬತ್ತು ವರ್ಷ ಪ್ರಕಟವಾಯಿತು. ಇವರಿಗೆ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (೧೯೭೨-೭೩) ಸಂದಿದೆ. ಮೈಸೂರಿನಲ್ಲಿ ನೆಲೆಸಿದ್ದ ಇವರು ೭೯ನೆಯ ವಯಸ್ಸಿನಲ್ಲಿ (ಏಪ್ರಿಲ್ ೧೯೮೬) ನಿಧನರಾದರು.

### ಮಾಧವರಾವ್.ಎಂ. (ಧಿಕ್ಕಿ)

ಹೆಸರಾಂತ ರಂಗಭೂಮಿ ಹಾಗೂ ಚಲನಚಿತ್ರ



ಕಲಾವಿದರು. ಮೈಸೂರಿನಲ್ಲಿ ಜನನ (ಜನವರಿ ೧೫, ೧೯೧೯). ತಂದೆ ಮಲ್ಹಾರಿರಾಯರು ಜಿಲ್ಲಾಧಿಕಾರಿಗಳಾಗಿದ್ದವರು. ಎಳಸೇ ವಯಸ್ಸಿಗೇ ರಂಗಭೂಮಿಯತ್ತ ಆಕರ್ಷಿತರಾದರು. ವರದಾಚಾರ್ಯರ ನಾಟಕ ಕಂಪನಿಗೆ ಸೇರಿ ಬಾಲ ಪಾತ್ರಗಳನ್ನು ಮಾಡಿದರು. ಹಲವಾರು ಹೆಸರಾಂತ ನಾಟಕ ಸಂಸ್ಥೆಗಳಲ್ಲಿ ಅಭಿನಯಿಸಿ ಸ್ವಂತ ನಾಟಕ ಸಂಸ್ಥೆಯನ್ನು ಕಟ್ಟಿದರು. ಎಚ್.ಎಲ್.ಎನ್.ಸಿಂಹ ಅವರ 'ಸಂಸಾರನೌಕ' ಚಿತ್ರದಲ್ಲಿ ಮಾಧವರಾಯರು ಧಿಕ್ಕಿ ಪಾತ್ರ ಮಾಡಿದರು. ಹೆಸರಿನೊಂದಿಗೆ ಧಿಕ್ಕಿ ಸೇರಿಕೊಂಡಿತು. ಈ ಚಿತ್ರಕ್ಕೆ ಇವರೇ

ಸಂಗೀತವನ್ನು ನಿರ್ದೇಶಿಸಿದರು. ಹಲವಾರು ಚಲನಚಿತ್ರಗಳಲ್ಲಿ ಖಳನಟರಾಗಿ ಅಭಿನಯಿಸಿದರು. 'ಮೊದಲ ತೇದಿ' ಚಿತ್ರದಲ್ಲಿನ 'ತೇದಿ ಒಂದರಿಂದ ಇಪ್ಪತ್ತರವರೆಗೆ ....' ಗೀತೆಯನ್ನು ಇವರೇ ಹಾಡಿದ್ದಾರೆ. ೧೯೮೦ರಲ್ಲಿ 'ಸದಾರಮೆ' ನಾಟಕ ಪ್ರದರ್ಶನ ನಡೆಯುತ್ತಿದ್ದಾಗ ಕಾಲು ನಿಷ್ಕ್ರಿಯಗೊಂಡಿತು. ನಿಧನರಾಗುವವರೆಗೆ ಹಾಸಿಗೆ ಬಿಟ್ಟು ಏಳಲಾಗಲಿಲ್ಲ.

## ಮಾಧವಿ

ತೆಲುಗು ಚಿತ್ರರಂಗದಿಂದ ಬಂದ ನಟಿ. ಕನ್ನಡ ಚಿತ್ರರಂಗಕ್ಕೆ ೧೯೮೧ರಲ್ಲಿ ರೇಣುಕಾಶರ್ಮ ನಿರ್ದೇಶನದ 'ಅನುಪಮಾ' ಚಿತ್ರದ ಮೂಲಕ ಪ್ರವೇಶಿಸಿದ ಮಾಧವಿ 'ಗರುಡ ರೇಖೆ', 'ಜ್ವಾಲೆ', 'ಒಂದೇ ಗುರಿ', 'ಚಾಣಕ್ಯ', 'ಅಮರ ಜ್ಯೋತಿ', 'ಶ್ರುತಿ ಸೇರಿದಾಗ', 'ಅನುರಾಗ ಅರಳಿತು', 'ಹಾಲು ಜೇನು', 'ಭಾಗ್ಯದಲಕ್ಷ್ಮಿ ಬಾರಮ್ಮ', 'ಒಡ ಹುಟ್ಟಿದವರು', 'ಆಕಸ್ಮಿಕ', 'ಜೀವನ ಚೈತ್ರ'



ಮೊದಲಾದ ಅನೇಕ ಚಿತ್ರಗಳಲ್ಲಿ ಅಭಿನಯಿಸಿದರು. ಮೂಲತಃ ನೃತ್ಯ ಕಲಾವಿದೆಯಾಗಿರುವ ಮಾಧವಿ 'ಮಲಯ ಮಾರುತ'ದಂತಹ ಸಂಗೀತ-ನೃತ್ಯ ಪ್ರಧಾನ ಚಿತ್ರದಲ್ಲಿ ನಾಯಕಿಯಲ್ಲೊಬ್ಬರಾಗಿ ನರ್ತಿಸಿ, ಅಭಿನಯಿಸಿದರು. 'ಮಲಯ ಮಾರುತ' ಚಿತ್ರದಲ್ಲಿ ಮಾಧವಿ ಪ್ರಥಮ ಬಾರಿಗೆ ತಮ್ಮ ಪಾತ್ರಕ್ಕೆ ತಾವೇ ಕಂಠದಾನ ಮಾಡಿದರು. ವಿವಾಹಾನಂತರ ಚಿತ್ರರಂಗದಿಂದ ದೂರವಾದರು.

## ಮಾನು

ಸಂಘಟಕ, ನಾಟಕಕಾರ, ಸಾಹಿತಿ, ಶಿಕ್ಷಕ. ಬಹುಮುಖ ಪ್ರತಿಭೆಯ ನಟ ಗುತ್ತಿಗೇರಿ ಮಾನಪ್ಪ. 'ಸತ್ತವರ ನೆರಳು' ನಾಟಕದಲ್ಲಿ ಅಭಿನಯಿಸುತ್ತಿದ್ದಾಗ ಆಕಸ್ಮಿಕವಾಗಿ ಚಿತ್ರರಂಗ ಪ್ರವೇಶಿಸಿ 'ಮಾನು' ಎಂದು ಪರಿಚಿತರಾದರು. ೧೯೭೭ರಲ್ಲಿ ತೆರೆಕಂಡ 'ಮನಸ್ಸಿನಂತೆ ಮಾಂಗಲ್ಯ' ಅವರ ಅಭಿನಯದ ಮೊದಲ ಚಿತ್ರ. ಶಿವಮೊಗ್ಗ



ಜಿಲ್ಲೆಯ ತೀರ್ಥಹಳ್ಳಿಯ ಗುತ್ತಿಗೇರಿ ಇವರ ಜನ್ಮಸ್ಥಳ. ಶಾಂತವೇರಿ ಗೋಪಾಲಗೌಡರ ಪ್ರಭಾವಕ್ಕೆ ಒಳಗಾಗಿ ಸಾಮಾಜಿಕ ಕಳಕಳಿ ಹೊಂದಿದ ಮಾನು ವೈದ್ಯರಾಗಬೇಕೆಂಬ ಆಸೆ ಇವರೂ ಕಾರಣಾಂತರಗಳಿಂದ ಎಂ.ಎ.ಪದವಿಯನ್ನು ಮೈಸೂರು ವಿಶ್ವವಿದ್ಯಾಲಯದಿಂದ ಪಡೆದರು. ಕಲೆಯ ಬಗ್ಗೆ ಒಲವು ಹೊಂದಿದ್ದ ಅವರು ಬಿ.ವಿ.ಕಾರಂತರ 'ಸತ್ತವರ ನೆರಳು' ನಾಟಕದ ಅಭಿನಯದಿಂದ ಹೆಚ್ಚಿನವರ ಗಮನ ಸೆಳೆದರು. ಕಾಲೇಜು ಅಧ್ಯಾಪಕ, ಪ್ರಾಂಶುಪಾಲರಾಗಿದ್ದ ಮಾನಪ್ಪ ಅಧ್ಯಾಪಕರ ಸಂಘದ ಮುಖ್ಯಸ್ಥರಾಗಿ ಅಧ್ಯಾಪಕರ ಹಿತಾಸಕ್ತಿಗಾಗಿ ಬಹಳಷ್ಟು ಹೋರಾಟವನ್ನೇ ಮಾಡಿದ್ದರು. ತಮ್ಮ ಪಿ.ಹೆಚ್‌ಡಿ ಪ್ರಬಂಧಕ್ಕೆ ಕುವೆಂಪು ಅವರ ಕೃತಿಗಳನ್ನು ವಿಶೇಷವಾಗಿ ಆಯ್ದು ಹಿನ್ನೆಲೆಯಲ್ಲಿ ದೂರದರ್ಶನಕ್ಕಾಗಿ 'ಮಲೆನಾಡಿನ ಚಿತ್ರಗಳು' ನಿರ್ದೇಶಿಸಿದರು. ನಂತರ ಪ್ರಶಸ್ತಿ ವಿಜೇತ ಚಿತ್ರಗಳಾದ 'ತಬ್ಬಲಿಯು ನೀನಾದೆ ಮಗನೆ', 'ಒಂದು ಪ್ರೇಮದ ಕಥೆ', 'ಪರಸಂಗದ ಗೆಂಡೆತಿಮ್ಮ', 'ಋಷ್ಯಶೃಂಗ', 'ಕಾಡು ಕುದುರೆ', 'ಅರಿವು', 'ಸಂಗೀತಾ', 'ಬೆರಳ್‌ಗೆ ಕೊರಳ್' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. 'ಕರಡೀಪುರ' ಇವರ ಅಭಿನಯದ ಕೊನೆಯ ಚಿತ್ರ. ರಾಜಕೀಯದಲ್ಲೂ ಆಸಕ್ತಿ. ಪ್ರಚಾರ ಭಾಷಣಕ್ಕೆ ತೆರಳಿದಾಗ ಅಪಘಾತದಲ್ಲಿ ನಿಧನರಾದರು.

## ಮಾರುತಿ. ಎಚ್.ಎನ್.

ಕನ್ನಡ ಚಿತ್ರರಂಗದಲ್ಲಿ ಬಹಳ ವರ್ಷಗಳಿಂದ ಪ್ರಮುಖ ನಿರ್ಮಾಪಕ ಹಾಗೂ ವಿತರಕರಲ್ಲೊಬ್ಬರೆನಿಸಿರುವವರು ಎಚ್.ಎನ್.ಮಾರುತಿ. ಮೊದಮೊದಲು



ಅವರ ಅಣ್ಣ ಎಚ್.ಎನ್. ಮುದ್ದುಕೃಷ್ಣರವರೊಂದಿಗೆ ವ್ಯವಹಾರ ಮಾಡುತ್ತಿದ್ದು ಕನ್ನಡ ಚಿತ್ರರಂಗಕ್ಕೆ ಕೆಲವು ಅತ್ಯುತ್ತಮ ಚಿತ್ರಗಳನ್ನು ಕೊಡುಗೆಯಾಗಿತ್ತ ಮಾರುತಿ, ಮುದ್ದುಕೃಷ್ಣರವರ ಮಗ ಮಧುಸೂದನಗೌಡರ ಸಹಭಾಗಿತ್ವದಲ್ಲೂ ಚಿತ್ರಗಳನ್ನು ನಿರ್ಮಿಸಿದ್ದಾರೆ. ೧೯೪೬ರಲ್ಲಿ ದೊಡ್ಡ ಬಳ್ಳಾಪುರದಲ್ಲಿ ಜನಿಸಿದ ಮಾರುತಿ ಅವರು ಓದಿದ್ದು ಎಸ್.ಎಸ್.ಎಲ್.ಸಿ. ಸಾಹಿತ್ಯದಲ್ಲಿ ತೀವ್ರ ಆಸಕ್ತಿಯಿರುವ ಮಾರುತಿಯವರು ಇದುವರೆಗೆ ನಿರ್ಮಿಸಿರುವ ಹಾಗೂ ವಿತರಿಸಿರುವ ಸ್ಮರಣೀಯ ಚಿತ್ರಗಳು ಅನೇಕ. ಅವರ ಮತ್ತು ಅಣ್ಣ ಮುದ್ದುಕೃಷ್ಣ ಪಾಲುಗಾರರಾಗಿದ್ದ ಪಾರಿಜಾತ ಸಂಸ್ಥೆ ವಿತರಣೆಗೆ ತೆಗೆದುಕೊಂಡ ಚಿತ್ರಗಳು 'ಬೆಳ್ಳಿ ಮೋಡ', 'ಮೇಯರ್ ಮುತ್ತಣ್ಣ', 'ಕರುಳಿನ ಕರೆ', 'ಕಪ್ಪು ಬಿಳುಪು', 'ಗೆಜ್ಜೆ ಪೂಜೆ', 'ಸಾಕ್ಷಾತ್ಕಾರ', 'ಉಪಾಸನೆ' ಇತ್ಯಾದಿ. ಅವರ ನಿರ್ಮಾಣ ಸಂಸ್ಥೆ ಎಂ.ಜಿ.ಎಂ ಪ್ರೊಡಕ್ಷನ್ಸ್ ಅರ್ಪಿಸಿದ ಚಿತ್ರಗಳು 'ಹೃದಯ ಸಂಗಮ', 'ಬಿಳಿ ಹೆಂಡ್ತಿ', 'ಧನಲಕ್ಷ್ಮಿ' ಇತ್ಯಾದಿ. ಕನ್ನಡ ಚಿತ್ರರಂಗದ ಮೊಟ್ಟಮೊದಲ ರಾಜಕೀಯ ಚಿತ್ರವಾಗಿ ಇತಿಹಾಸ ಸೃಷ್ಟಿಸಿದ 'ಅಂತ' ಕೂಡ ಅವರ ತಯಾರಿಕೆಯೇ, ನಂತರ 'ಅಜಿತ್' ನಿರ್ಮಿಸಿದರು. ಮಾರುತಿ ಮತ್ತು ಮಧುಸೂದನ ಗೌಡರು ಅಂಜನಾ ಆರ್ಟ್ಸ್ ಲಾಂಛನದಲ್ಲಿ ನಿರ್ಮಿಸಿದ ಚೊಚ್ಚಲ ಚಿತ್ರ 'ದೋಣಿ ಸಾಗಲಿ' ರಾಜ್ಯ ಸರ್ಕಾರದಿಂದ ೧೯೮೫-೮೬ನೇ ಸಾಲಿನ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿತು. ಮಾರುತಿಯವರು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ಕಾರ್ಯದರ್ಶಿಗಳಾಗಿ ದುಡಿದಿದ್ದಾರೆ. ಉದ್ಯಮದ ವ್ಯವಹಾರಗಳಲ್ಲಿ ತೀವ್ರ ಆಸಕ್ತಿ ತಾಳುವ ಅವರು ಫಿಲಂ ಫೆಡರೇಷನ್ ಆಫ್ ಇಂಡಿಯ ಸಂಸ್ಥೆಯಲ್ಲಿಯೂ ಪದಾಧಿಕಾರಿಗಳಾಗಿದ್ದರು. ಕಿರುತೆರೆಗಾಗಿ ಧಾರಾವಾಹಿಗಳನ್ನು ನಿರ್ಮಿಸಿದ್ದಾರೆ.

## ಮಾರುತಿರಾವ್.ಎಸ್

ಪ್ರಸಿದ್ಧ ಛಾಯಾಗ್ರಾಹಕ. ತಮಿಳುನಾಡಿನ ತಂಜಾವೂರಿನಲ್ಲಿ ಜನನ. ಮಾತೃಭಾಷೆ ಮರಾಠಿ. ಮೆಟ್ರಿಕ್ಯುಲೇಷನ್ ಮುಗಿಸಿ ೧೯೪೦ರಲ್ಲಿ ಸಹಾಯಕ ಕ್ಯಾಮರಾಮೆನ್ ಆಗಿ ಚಲನಚಿತ್ರರಂಗ ಪ್ರವೇಶ. ಕನ್ನಡ,



ತಮಿಳು, ಹಿಂದಿ ಮುಂತಾದ ಭಾಷೆಗಳ ನೂರಕ್ಕೂ ಹೆಚ್ಚು ಚಿತ್ರಗಳಿಗೆ ಛಾಯಾಗ್ರಹಣ. ಕನ್ನಡ ಚಿತ್ರರಂಗಕ್ಕೆ ಆರ್.ನಾಗೇಂದ್ರರಾಯರ 'ಮಹಾತ್ಮ ಕಬೀರ್' ಚಿತ್ರದ ಮೂಲಕ ಪ್ರವೇಶ. 'ಮಸಣದ ಹೂ' ಚಿತ್ರದ ಛಾಯಾಗ್ರಹಣಕ್ಕೆ ೧೯೮೪-೮೫ನೇ ಸಾಲಿನ ರಾಜ್ಯ ಸರ್ಕಾರದ ಪ್ರಶಸ್ತಿ ಬಂದಿದೆ.

## ಮಾಲಾಶ್ರೀ

ಹಲವು ತೆಲುಗು ಚಿತ್ರಗಳಲ್ಲಿ ಬಾಲನಟಿಯಾಗಿ, ಪೋಷಕನಟಿಯಾಗಿ ಅಭಿನಯಿಸುತ್ತಿದ್ದ ಶ್ರೀದುರ್ಗಾ ನಿರ್ಮಾಪಕಿ ಪಾರ್ವತಮ್ಮ ರಾಜಕುಮಾರ್ ಅವರ ದೃಷ್ಟಿಗೆ ಬಿದ್ದು 'ಮಾಲಾಶ್ರೀ' ಎಂಬ ಹೆಸರಿನಿಂದ ೧೯೮೯ರಲ್ಲಿ ಬಿಡುಗಡೆಯಾದ 'ನಂಜುಂಡಿ ಕಲ್ಯಾಣ' ಚಿತ್ರದಲ್ಲಿ ಪ್ರಥಮ ಬಾರಿಗೆ ನಾಯಕಿಯಾಗಿ ಅಭಿನಯಿಸಿದರು. ಇಡೀ ಕನ್ನಡ ಚಲನಚಿತ್ರ ಪ್ರೇಮಿಗಳ ಸಮುದಾಯವನ್ನೇ ಹುಚ್ಚೆಬ್ಬಿಸಿದ ಮಾಲಾಶ್ರೀ ಸ್ವಲ್ಪ ಕಾಲದಲ್ಲಿಯೇ 'ಸೂಪರ್‌ಸ್ಟಾರ್' ಆಗಿ



ಬೆಳೆದರು. ಸುಮಾರು ಒಂದು ದಶಕದ ಕಾಲ ಅದೇ ಸ್ಥಾನದಲ್ಲಿ ಮೆರೆದ ಬಹುಮುಖ ಪ್ರತಿಭೆಯ ಕಲಾವಿದೆ. ಮೊದಮೊದಲು ಹೆಂಗಳೆಯರಿಗೆ ಪ್ರಿಯವಾದ ಪಾತ್ರಗಳಲ್ಲಿ ರೋಚಕವಾಗಿ ಅಭಿನಯಿಸಿ ಪ್ರಚಂಡವಾದ ಜನಾನುರಾಗವನ್ನು ಗಳಿಸಿಕೊಂಡ ಮಾಲಾಶ್ರೀ ನಂತರ ಸಾಹಸ ಪ್ರಧಾನ ಚಿತ್ರಗಳಲ್ಲಿಯೂ ಅಷ್ಟೇ ಯಶಸ್ವಿಯೆನಿಸಿಕೊಂಡಿದ್ದು ಒಂದು ವಿಶೇಷ. ಈಕೆ ಈಗಾಗಲೇ ಸುಮಾರು ೪೦ ಚಿತ್ರಗಳಲ್ಲಿ ಅಭಿನಯಿಸಿ ಒಂದು ರೀತಿಯ ವಿಕ್ರಮವನ್ನು ಸಾಧಿಸಿದ್ದಾರೆ. 'ಗಜಪತಿ ಗರ್ವಭಂಗ', 'ರಾಣಿ ಮಹಾರಾಣಿ', 'ಪೊಲೀಸ್‌ನ ಹೆಂಡ್ತಿ', 'ಹೃದಯ ಹಾಡಿತು', 'ಎಸ್.ಪಿ.ಭಾರ್ಗವಿ', 'ಬೆಳ್ಳಿ ಮೋಡಗಳು', 'ಬೆಳ್ಳಿ ಕಾಲುಂಗುರ', 'ತವರು ಮನೆ ಉಡುಗೊರೆ', 'ಲೇಡಿ ಪೊಲೀಸ್', 'ಲೇಡಿ ಕಮಿಷನರ್' ಮತ್ತು 'ಚಾಮುಂಡಿ' ಮಾಲಾಶ್ರೀ ಅಭಿನಯಿಸಿದ ಇತರ ಪ್ರಮುಖ ಚಿತ್ರಗಳು. 'ಹಲೋ ಸಿಸ್ಟರ್' ಚಿತ್ರದಲ್ಲಿ ಏಳು ವಿವಿಧ ಪಾತ್ರಗಳಲ್ಲಿ ಅಭಿನಯಿಸಿದ ಹೆಗ್ಗಳಿಕೆ ಇವರದ್ದು. ನಿರ್ಮಾಪಕ ರಾಮು ಅವರ ಮಡದಿ. ನಿರ್ಮಾಣ ವ್ಯವಹಾರಗಳಲ್ಲಿ ಆಸಕ್ತಿ ವಹಿಸಿ ದುಡಿಯುತ್ತಾರೆ.

## ಮುತ್ತುರಾಜ್.ಎಂ

ಕನ್ನಡ ಚಿತ್ರರಂಗದ ಪರಿಚಿತ ಛಾಯಾಗ್ರಾಹಕ. ಎಸ್.ಎಸ್.ಎಲ್.ಸಿ ವರೆಗೆ ಓದು. ಬಾಲ್ಯದಿಂದಲೇ ಛಾಯಾಗ್ರಹಣದ ಬಗ್ಗೆ ವಿಶೇಷ ಆಸಕ್ತಿ ತಳೆದಿದ್ದ ಮುತ್ತುರಾಜ್ ಚಾಮುಂಡೇಶ್ವರಿ ಸ್ಟುಡಿಯೋ ದಲ್ಲಿ ಸಹ ಛಾಯಾಗ್ರಾಹಕರಾಗಿ ಎಂಟು ವರ್ಷಗಳ ಕಾಲ ಸೇವೆ. ನಂತರ ಖ್ಯಾತ ಛಾಯಾಗ್ರಾಹಕ ಎಚ್.ಎಮ್.ಕೆ.ಮೂರ್ತಿ ಅವರ ಬಳಿ ಐದು ವರ್ಷಗಳ ಕಾಲ ಸಹಾಯಕರಾಗಿ ಪಳಗಿದರು. ನಂತರ ಮಾಪಾಕ್ಷಿ ಅವರ ಬಳಿ ದುಡಿಮೆ. ಸ್ವತಂತ್ರ ಛಾಯಾಗ್ರಾಹಕರಾಗಿ 'ಪ್ರಣಯದ ಪಕ್ಷಿಗಳು' ಚಿತ್ರದಿಂದ ಪರಿಚಿತರಾದ ಇವರ ಕೆಲವು ಚಿತ್ರಗಳು 'ಹೊಸರಾಗ', 'ಮೇಘ ಮಂದಾರ', 'ಮಿಸ್ಟರ್ ವಿನೋದ್', 'ಸಾಂಗ್ಲಿಯಾನಾ-III', 'ಚೋರ ಗುರು ಚಂಡಾಳ ಶಿಷ್ಯ', 'ಸಂಕಟ ಬಂದಾಗ ವೆಂಕಟರಮಣ', 'ಓಹೋ', ಕೊಂಕಣಿ ಚಿತ್ರ 'ಜೀವನಾಂಚೋ ಖೇಳ್' ಮತ್ತು ಕೊಡವ ಚಿತ್ರ 'ಬಾಳ್ ಪೊಳಂದತ್'.

## ಮುದ್ದುರಾಜ್. ಜಿ.ಕೆ

ಜಿ.ಕೆ.ಮುದ್ದುರಾಜ್ ಚಿತ್ರರಂಗದ ಅನೇಕ ವಿಭಾಗಗಳಲ್ಲಿ ಕೆಲಸ ಮಾಡಿ ೧೯೮೦ರಲ್ಲಿ ಎಸ್.ವಿ.ರಾಜೇಂದ್ರಸಿಂಗ್(ಬಾಬು) ನಿರ್ದೇಶಿಸಿದ 'ಸಿಂಹದ ಮರಿ ಸೈನ್ಯ' ಚಿತ್ರಕ್ಕೆ ಸಹ ನಿರ್ದೇಶಕರಾದರು. ಅನೇಕ ಚಿತ್ರಗಳಿಗೆ



ಸಹಾಯಕ ಮತ್ತು ಸಹ ನಿರ್ದೇಶಕರಾಗಿ ದುಡಿದ ಅವರು ಸ್ವತಂತ್ರವಾಗಿ ನಿರ್ದೇಶಿಸಿದ ಪ್ರಥಮ ಚಿತ್ರ 'ಜಯಭೇರಿ' ೧೯೮೫ರಲ್ಲಿ ತೆರೆಕಂಡಿತು. 'ಪೊಲೀಸ್ ಬೆಲ್ಟ್', 'ಪೊಲೀಸ್ ಫೈಲ್', 'ಸೂಪರ್ ನನ್ಮಗ', 'ಗುಂಡನ ಮದುವೆ', 'ಬಾಳಿದ ಮನೆ', ' ತವರಿನ ತೇರು', ' ಲೇಡಿ ಟೈಗರ್', ' ಬ್ರಹ್ಮ-ವಿಷ್ಣು' ಇವರ ನಿರ್ದೇಶನದ ಕೆಲವು ಚಿತ್ರಗಳು. ಇವರು ಕೆ.ವಿ.ಜಯರಾಂ, ವಿ.ಸೋಮಶೇಖರ್‌ರಂತಹ ವಿಭಿನ್ನ ಅಭಿರುಚಿಗಳ ನಿರ್ದೇಶಕರೊಂದಿಗೆ ಕೆಲಸ ಮಾಡಿದ್ದರಿಂದ ಗಂಭೀರ ಮತ್ತು ಸಾಹಸಪ್ರಧಾನ ಚಿತ್ರಗಳ ನಿರ್ದೇಶನವನ್ನು ಸಮನಾಗಿ ಇಷ್ಟ ಪಡುತ್ತಾರೆ.

## ಮುರಳಿ

ಎಂಬತ್ತರ ದಶಕದಲ್ಲಿ ಕನ್ನಡ ಚಿತ್ರರಂಗ ಪ್ರವೇಶಿಸಿದ ನಾಯಕ. ಖ್ಯಾತ ನಿರ್ದೇಶಕ ಸಿದ್ದಲಿಂಗಯ್ಯ ಅವರ ಪುತ್ರ. ೧೯೮೩ರಲ್ಲಿ ಸಿದ್ದಲಿಂಗಯ್ಯ ನಿರ್ದೇಶನದ 'ಪ್ರೇಮಪರ್ವ' ಚಿತ್ರದ ನಾಯಕನಾಗಿ ಚಿತ್ರರಂಗ ಪ್ರವೇಶ. ಚಿತ್ರದ ಯಶಸ್ಸು ಮುರಳಿಯವರಿಗೆ ಕನ್ನಡ



ಚಿತ್ರರಂಗದಲ್ಲಿ ಹೆಚ್ಚು ಅವಕಾಶಗಳನ್ನು ತಂದು ಕೊಡುವಲ್ಲಿ ಸಫಲವಾಗಲಿಲ್ಲ. ಮುಂದೆ 'ಪ್ರೇಮಗಂಗೆ', 'ಸಂಭವಾಮಿ ಯುಗೇ ಯುಗೇ', 'ಅಜೇಯ', 'ಪದ್ಮವ್ಯೂಹ', 'ತಾಯಿ ಕೊಟ್ಟ ತಾಳಿ', 'ಅಜಯ್ ವಿಜಯ್', 'ಬಿಳೀ ಗುಲಾಬಿ' ಮೊದಲಾದ ಚಿತ್ರಗಳಲ್ಲಿ ಅಭಿನಯ. ತಮಿಳು ಚಿತ್ರರಂಗಕ್ಕೆ ಪ್ರವೇಶ. ಅಲ್ಲಿ ಬಹು ಬೇಡಿಕೆಯ ನಟ ಎನಿಸಿದ್ದಾರೆ.

## ಮುರಳಿ.ಕೆ.ಎಸ್

ಹೊಸಪೀಳಿಗೆಯ ಪ್ರತಿಭಾವಂತ ಛಾಯಾಗ್ರಾಹಕ. ನಾಟಕರಂಗದಿಂದ ಬಂದವರು. ಖ್ಯಾತ ರಂಗ ನಿರ್ದೇಶಕಿ ಬಿ.ಜಯಶ್ರೀ ಅವರ ಸ್ಪಂದನ ತಂಡದಲ್ಲಿ ನಟನಾಗಿ ನಾಲ್ಕು ವರ್ಷ ಅಭಿನಯ. ಬೆಂಗಳೂರಿನ ಎಸ್.ಜೆ ಪಾಲಿಟೆಕ್ನಿಕ್ ಸಂಸ್ಥೆಯಿಂದ ಛಾಯಾಗ್ರಹಣ ಡಿಪ್ಲೊಮಾ ಪಡೆದಿರುವ ಅವರು 'ಪ್ರಿ ಮಲ್ಲಿಗೆ', 'ಜೋಡಿ ಹಕ್ಕಿ', 'ಲಾಲಿ', 'ಯಾರೇ ನೀನು ಚೆಲುವೆ', 'ಮಾಂಗಲ್ಯಂ ತಂತುನಾನೇನಾ', 'ಉಲ್ಟಾ ಪಲ್ಟಾ', 'ಮುಂಗಾರಿನ ಮಿಂಚು' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದಾರೆ. 'ಪ' ಚಿತ್ರದ ಛಾಯಾಗ್ರಹಣಕ್ಕಾಗಿ 'ಅತ್ಯುತ್ತಮ ಛಾಯಾಗ್ರಾಹಕ' ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ.

## ಮೂರ್ತಿ ಎಂ.ಎಸ್.ಎಲ್.

ನಟ, ನಿರ್ಮಾಪಕ ಹಾಗೂ ಶಿಕ್ಷಣತಜ್ಞ ಎಂ. ಎಸ್. ಎಲ್. ಮೂರ್ತಿ ಬೆಂಗಳೂರಿನಲ್ಲಿ ೧೯೩೬ರಲ್ಲಿ ಜನಿಸಿದರು. ಮೆಕ್ಯಾನಿಕಲ್



ಎಂಜಿನಿಯರಿಂಗ್‌ನಲ್ಲಿ ಪದವಿ ಪಡೆದರು. ಸುಮಾರು ನಾಲ್ಕು ದಶಕಗಳ ಕಾಲ ಕರ್ನಾಟಕ ಸರ್ಕಾರದ ವಿವಿಧ ವಿಭಾಗದಲ್ಲಿ ಸೇವೆ ಸಲ್ಲಿಸಿದ್ದಾರೆ. ಸರ್ಕಾರಿ ಸೇವೆಯಲ್ಲಿದ್ದುಕೊಂಡೇ ಚಿತ್ರರಂಗದಲ್ಲೂ ಸಕ್ರಿಯವಾಗಿ ತೊಡಗಿಕೊಂಡರು. ೧೯೬೩ರಲ್ಲಿ ಚಿತ್ರರಂಗ ಪ್ರವೇಶಿಸಿ ಸರಿಸುಮಾರು ೧೮೦ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ೧೯೭೭ರಲ್ಲಿ 'ನಾಗರೀಕ' ಚಿತ್ರವನ್ನು ನಿರ್ಮಾಣ ಮಾಡಿದ್ದಾರೆ. ಈ ಚಿತ್ರ ೧೯೭೭ ನೇ ಸಾಲಿಗೆ ರಾಜ್ಯಸರ್ಕಾರದ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದಿದೆ. ಚಿತ್ರ ನಿರ್ಮಾಣದ ವಿವಿಧ ಹಂತಗಳಲ್ಲಿ ದುಡಿದಿದ್ದಾರೆ.

## ಮೂರ್ತಿ.ಎ.ಎಸ್

ಕನ್ನಡದ ಜನಪ್ರಿಯ ನಾಟಕಕಾರ-ನಟ. ಆಕಾಶವಾಣಿಯಲ್ಲಿ ಎ.ಎಸ್. ಮೂರ್ತಿಯವರ ಧ್ವನಿ, ಅವರು ಕಾರ್ಯಕ್ರಮ ನಿರ್ವಹಣೆಗೆ ಆಯ್ದುಕೊಳ್ಳುತ್ತಿದ್ದ ವಸ್ತು ಇವು ಕರ್ನಾಟಕದ ಜನರ ಮನಸ್ಸನ್ನು ಸೂರೆಗೊಂಡಿದ್ದವು. ಎರಡು ದಶಕಕ್ಕಿಂತಲೂ ಹೆಚ್ಚು ಕಾಲ 'ಈರಣ್ಣ', 'ಮಿಃವಿಕ್ಸ್', 'ಶುದ್ಧ ಶುಂಠಿ'ಯಾಗಿ ಆಕಾಶವಾಣಿಯಲ್ಲಿ ಜನಸಾಮಾನ್ಯರನ್ನು ರಂಜಿಸಿದ ಎ.ಎಸ್.ಮೂರ್ತಿ 'ಒಂದು ಮಾತು' ಕಾರ್ಯಕ್ರಮದಿಂದ ಅತ್ಯಂತ ಜನಪ್ರಿಯರಾದರು. ಹಲವಾರು ಚಿತ್ರಗಳಿಗೆ ಸಂಭಾಷಣೆಯನ್ನೂ ಬರೆದಿದ್ದಾರೆ.



ಬೀದಿನಾಟಕ, ಬೊಂಬೆಯಾಟ, ರಂಗಭೂಮಿ ಹೀಗೆ ಎಲ್ಲಾ ಪ್ರಕಾರಗಳಲ್ಲೂ ಪಳಗಿದ ಕೈ. ಹಿರಿಯ ಪತ್ರಕರ್ತರು. 'ಚಕ್ರವ್ಯೂಹ', 'ಡ್ರೈವರ್ ಹನುಮಂತು', 'ಉತ್ತರ ಧ್ರುವ', 'ಎದುರು ಮನೆ ಮೀನಾ', 'ಗಂಡು ಗೂಳಿಗಳು', 'ಸುಭದ್ರಾ ಕಲ್ಯಾಣ', 'ಝಿಡ್' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕಿರುತೆರೆಯ ಧಾರಾವಾಹಿಗಳಲ್ಲಿಯೂ ಮೂರ್ತಿಯವರು ಚಿರಪರಿಚಿತರು.

## ಮೂರ್ತಿ. ಎಚ್.ಎಂ.ಕೆ

ಬೆಂಗಳೂರಿನ ಎಸ್.ಜೆ.ಪಾಲಿಟೆಕ್ನಿಕ್‌ನಿಂದ ಛಾಯಾಗ್ರಹಣ ವಿಭಾಗದಲ್ಲಿ ಡಿಪ್ಲೊಮಾ ಪಡೆದುಕೊಂಡು ಮುಂಬೈಗೆ ತೆರಳಿ ಚಿತ್ರರಂಗದ ಪ್ರತಿಷ್ಠಿತ ನಿರ್ಮಾತೃ ಮತ್ತು ತಂತ್ರಜ್ಞರಾಗಿದ್ದ ನಂದಲಾಲ್. ಜಸವಂತ್‌ಲಾಲ್, ನಿತಿನ್ ಬೋಸ್, ಪಾಲಿ ಮಿಸ್ತ್ರಿ, ದ್ರೋಣಾಚಾರ್ಯ, ಜಾಲ್ ಮಿಸ್ತ್ರಿ ಅವರಿಂದ ತರಬೇತಿ ಪಡೆದರು. ಎಚ್.ಎಂ.ಕೆ ಮೂರ್ತಿ ೧೯೬೧ರಲ್ಲಿ ಭಾರತ ಸರ್ಕಾರದ ಫಿಲಂ ಡಿವಿಷನ್‌ನಲ್ಲಿ ಛಾಯಾಗ್ರಾಹಕರಾಗಿ ಸೇರಿಕೊಂಡರು. ಆ ವೇಳೆಗೆ ಅವರು 'ಮೊಗಲ್-ಎ-ಆಜಂ', 'ಗಂಗಾ-ಜಮುನ', 'ಹಮ್ ದೋನೋ', 'ಅಮರ್ ದೀಪ್' ಮುಂತಾದ ಚಿತ್ರಗಳಿಗೆ ಸಹಾಯಕ ಛಾಯಾಗ್ರಾಹಕರಾಗಿ ದುಡಿದಿದ್ದರು.



೧೯೬೪ರಲ್ಲಿ ಫಿಲಂ ಡಿವಿಷನ್‌ಗೆ ರಾಜೀನಾಮೆ ಸಲ್ಲಿಸಿ ಸ್ವಂತ ಊರು ಹೊಸಕೋಟೆಗೆ ವಾಪಸಾದರು. ದೂರದರ್ಶನಕ್ಕೆ ಕರ್ನಾಟಕದಲ್ಲಿ ಛಾಯಾಗ್ರಾಹಕರಾಗಿ ಕೆಲಸ ಮಾಡಿದರು. ೧೯೬೬ರಲ್ಲಿ ಎಂ.ವಿ.ಕೃಷ್ಣಸ್ವಾಮಿ ನಿರ್ದೇಶಿಸಿದ 'ಸುಬ್ಬಾಶಾಸ್ತ್ರಿ' ಚಿತ್ರಕ್ಕೆ ಛಾಯಾಗ್ರಹಣ ಮಾಡಿ, ದಯಾನಂದ್ ಸಾಗರ್‌ರವರ 'ಪೂರ್ಣಿಮ' ಮತ್ತು ಕೃಷ್ಣಸ್ವಾಮಿಯವರ ಮುಂದಿನ ಚಿತ್ರ 'ಪಾಪ ಪುಣ್ಯ'ದಲ್ಲಿಯೂ ಅದೇ ಜವಾಬಾರಿಯನ್ನು ನಿರ್ವಹಿಸಿದರು. ನಂತರ ಅನೇಕ ಸಾಕ್ಷ್ಯಚಿತ್ರಗಳನ್ನು ನಿರ್ದೇಶಿಸಿದರು. ಮೂರ್ತಿಯವರು ಸ್ವಂತವಾಗಿ ನಿರ್ಮಿಸಿದ ಮೊದಲ ಚಿತ್ರ 'ದೊಂಬರ ಕೃಷ್ಣ' (೧೯೭೪). ೧೯೮೧ರಲ್ಲಿ 'ರಾಜೇಶ್ವರಿ' ಮತ್ತು ೧೯೮೫ರಲ್ಲಿ 'ರಾಜಾ ಮಹಾರಾಜ' ಚಿತ್ರಗಳನ್ನು ನಿರ್ಮಿಸಿ ನಿರ್ದೇಶಿಸಿದರು. ಅದಾದ ನಂತರ ಸಂಪೂರ್ಣವಾಗಿ ಕಿರುತೆರೆಯಲ್ಲಿ ತೊಡಗಿಕೊಂಡು ತಮ್ಮದೇ ಆದ ಸುಸಜ್ಜಿತ ವಿಡಿಯೋ ಸ್ಟುಡಿಯೋವನ್ನೂ ನಡೆಸುತ್ತಿದ್ದಾರ. ಅನೇಕ ದೂರದರ್ಶನ ಧಾರಾವಾಹಿಗಳನ್ನು ನಿರ್ಮಿಸಿ ನಿರ್ದೇಶಿಸಿದ್ದಾರೆ. ಮೂರ್ತಿಯವರು ಕೆಲವು ಕಾಲ ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

## ಮೈನಾವತಿ.ಎಂ

ಕನ್ನಡ ಚಲನಚಿತ್ರರಂಗದ ಹಿರಿಯ ಕಲಾವಿದೆ. ಭಟ್ಕಳದಲ್ಲಿ ಜನನ. ತಂದೆ ರಂಗರಾಯರು ಪ್ರಸಿದ್ಧ ಕೀರ್ತನಕಾರರು. ಅಕ್ಕ ಪಂಢರಿಬಾಯಿ ರಂಗಭೂಮಿ ಮತ್ತು



ಚಲನಚಿತ್ರ ಕಲಾವಿದೆ. ಮೈನಾವತಿ ತಮ್ಮ ೧೮ನೆಯ ವಯಸ್ಸಿನಲ್ಲಿ 'ಕಣ್ಮಣಿ' ತಮಿಳು ಚಿತ್ರದಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ರಾಜಕುಮಾರ್ ಅಭಿನಯದ 'ಭಕ್ತ ವಿಜಯ' (೧೯೫೬) ಮೈನಾವತಿ ಅವರು ಅಭಿನಯಿಸಿದ ಕನ್ನಡದ ಮೊದಲ ಚಿತ್ರ. 'ಹರಿಭಕ್ತ', 'ಮುತ್ತೈದೆ ಭಾಗ್ಯ', 'ಬೆಟ್ಟದ ಕಳ್ಳ', 'ಅಬ್ಬಾ ಆ ಹುಡುಗಿ', 'ತೇಜಸ್ವಿನಿ', 'ಸರ್ವಜ್ಞಮೂರ್ತಿ' ಮುಂತಾದ ಚಿತ್ರಗಳಲ್ಲಿ ಪ್ರಮುಖ ಪಾತ್ರಗಳನ್ನು ನಿರ್ವಹಿಸಿದರು. ಬಜಾರಿ, ಗಟವಾಣಿ, ಹೆಂಗಸರ ಹೃದಯಗಳನ್ನು ತಟ್ಟುವ ಗಂಭೀರ ಪಾತ್ರಗಳೂ ಇವರ ಪಾಲಿಗೆ ಬಂದವು. ಒಳ್ಳೆಯ ನೃತ್ಯಗಾರ್ತಿ. ತಮಿಳಿನಲ್ಲಿ ಹೆಚ್ಚಾಗಿ ಅಭಿನಯಿಸಿದರು. ಶಿವಾಜಿ ಗಣೇಶನ್ ಸೇರಿದಂತೆ ಪ್ರಮುಖ ನಾಯಕರ ಜೋಡಿಯಾಗಿದ್ದಾರೆ. ಹಲವಾರು ಕಿರುತೆರೆ ಧಾರಾವಾಹಿಗಳಲ್ಲೂ ಪ್ರಮುಖ ಪಾತ್ರಗಳನ್ನು ಮಾಡಿದ್ದಾರೆ. ಅವರ ಪುತ್ರರಾದ ಶ್ಯಾಮಸುಂದರ್ ಮತ್ತು ಗುರುದತ್ ಟೆಲಿವಿಷನ್ ಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿದ ನಿರ್ಮಾಪಕ ನಿರ್ದೇಶಕರು.

## ಮೋಹನ್.ಕೆ.ಸಿ.ಎನ್

ಹಿರಿಯ ಚಿತ್ರೋದ್ಯಮಿ ಕೆ.ಸಿ.ಎನ್.ಗೌಡ ಅವರ ಕಿರಿಯ ಪುತ್ರ. ಕೆ.ಸಿ.ಎನ್. ಚಿತ್ರ ವಿತರಣಾ ಸಂಸ್ಥೆಯ ಬೆನ್ನೆಲುಬಾಗಿರುವ ಮೋಹನ್ ಚಿತ್ರ ನಿರ್ಮಾಣಕ್ಕೆ ಇಳಿಯದೆ ನೇರವಾಗಿ ವಿತರಕರಾಗಲು ಬಯಸಿ ಚಿತ್ರರಂಗಕ್ಕೆ ಬಂದವರು. ಪದವೀಧರರಾದ ಇವರು ಕಡಿಮೆ ಅವಧಿಯಲ್ಲಿಯೇ ದಕ್ಷ



ನಿರ್ಮಾಪಕ ಎಂಬ ಶಹಬಾಸ್‌ಗಿರಿ ಪಡೆದವರು. ವಿತರಣೆಯ ಜೊತೆಗೆ ತಮ್ಮದೇ ಆದ ಪ್ರಗತಿ ಎಂಟರ್ ಪ್ರೈಸಸ್ ಸ್ಥಾಪಿಸಿ 'ಇಂದಿನ ಭಾರತ', 'ಧರ್ಮಯುದ್ಧ'. 'ಭಕ್ತ ಜ್ಞಾನದೇವ' ಮೊದಲಾದ ಚಿತ್ರಗಳನ್ನು ನಿರ್ಮಿಸಿದ್ದಾರೆ. ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳ ವಿತರಣೆಯ ಹೆಗ್ಗಳಿಕೆಯನ್ನು ಹೊಂದಿರುವ ಪ್ರತಿಷ್ಠಿತ ಸಂಸ್ಥೆಯನ್ನು ಸಮರ್ಥವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

## ಮೋಹನ್ ಕೋಕಿಲಾ

ಮೋಹನ್ ದಕ್ಷಿಣ ಕನ್ನಡದ ಪ್ರತಿಭಾವಂತ. ವಿದ್ಯಾರ್ಥಿ ದೆಸೆಯಿಂದಲೂ ಅಭಿನಯದ ಬಗ್ಗೆ ಆಸಕ್ತಿ. ಹವ್ಯಾಸಿ ರಂಗ ಕಲಾವಿದರ ಗೆಳೆತನದಿಂದಾಗಿ ಬಿ.ವಿ. ಕಾರಂತರ 'ಬೆನಕ' ತಂಡದಲ್ಲಿ ಒಬ್ಬರಾದರು. ಚಿತ್ರರಂಗ ರಂಗಭೂಮಿಗಳೆರಡರ ನಂಟನ್ನು ಅಂಟಿಸಿಕೊಂಡಿದ್ದ ಜಿ.ವಿ.ಶಿವಾನಂದ್



ಅದರಿಂದ ಪ್ರೋತ್ಸಾಹ. ಇದರಿಂದಾಗಿ ಬೆನಕತಂಡದ ಕಲಾವಿದ ನಿರ್ಮಾಪಕ-ನಿರ್ದೇಶಕ-ಛಾಯಾಗ್ರಾಹಕ ಬಾಲು ಮಹೇಂದ್ರ ಕಣ್ಣಿಗ ಬೀಳುವಂತಾಯಿತು. ಕಮಲಹಾಸನ್ ಜೊತೆಯಲ್ಲಿ ಅವರನ್ನೇ ಹೋಲುವಂತಿದ್ದ ಮೋಹನ್ 'ಕೋಕಿಲಾ'ದಲ್ಲಿ ಜನಮನ್ನಣೆ ಪಡೆದವರಾದರೂ ಕನ್ನಡ ಚಿತ್ರರಂಗದಲ್ಲಿ ಅವಕಾಶಗಳು ಅವರನ್ನು ಹುಡುಕಿಕೊಂಡು ಬರದೇ ಇದ್ದಾಗ ಮಲೆಯಾಳಂ ಚಿತ್ರರಂಗ ಕೈಬೀಸಿ ಕರೆಯಿತು. ಮಲೆಯಾಳಂ ಚಿತ್ರರಂಗದಲ್ಲಿ ಹೆಸರಾಗುತ್ತಿದ್ದಂತೆಯೇ ಮೋಹನ್ ತಮಿಳು ಹಾಗೂ ತೆಲುಗು ಚಿತ್ರಗಳಿಗೂ ಜಿಗಿದು, ಅಲ್ಲಿ ನಾಯಕ ನಟರಾಗಿ ಅನೇಕ ಚಿತ್ರಗಳಲ್ಲಿ ಅಭಿನಯಿಸಿ ಖ್ಯಾತರಾದರು. ಈ ಮಧ್ಯೆ ಕನ್ನಡ ಚಿತ್ರರಂಗದ ಕಡೆಗೆ ಪಿ ಗೊಟ್ಟು ಮರುಪ್ರವೇಶ ಮಾಡಿ ಹಲವುಚಿತ್ರಗಳಲ್ಲಿ ನಟಿಸಿದರು. ಆದರೂ ಕನ್ನಡದಲ್ಲಿ ನಿರೀಕ್ಷಿತ ಪ್ರೋತ್ಸಾಹ ಸಿಗಲಿಲ್ಲ. ಮರಳಿ ತಮಿಳು ಚಿತ್ರಗಳತ್ತ ಸಾಗಿದರು. ಮೋಹನ್ ೧೯೭೭ರಲ್ಲಿ ತೆರೆಕಂಡ ಬಾಲುಮಹೇಂದ್ರ ನಿರ್ದೇಶನದ 'ಕೋಕಿಲಾ' ಚಿತ್ರದ ಮೂಲಕ ಬೆಳ್ಳಿ ತೆರೆ ಪ್ರವೇಶಿಸಿದರು. ನಂತರ 'ಗಾಳಿಮಾತು', 'ಮುನಿಯನ ಮಾದರಿ', 'ಹಾವಾದ ಹೂ', 'ಸಾಕಿದ ಸರ್ಪ', 'ನಮ್ಮಮ್ಮನ ಸೊಸೆ', 'ಹೆಣ್ಣಿನ ಸೇಡು', 'ಅಪರಿಚಿತ' ಮೊದಲಾದ ಯಶಸ್ವಿ ಚಿತ್ರಗಳಲ್ಲಿ ಅಭಿನಯಿಸಿದರು. ತಮಿಳು ಚಿತ್ರರಂಗದಲ್ಲಿ ನಾಯಕನಟರಾಗಿ ಅನೇಕ ಚಿತ್ರಗಳಲ್ಲಿ ಅಭಿನಯಿಸಿ ಹೆಸರಾದರು.

## ಮೋಹನ ಸುಂದರಂ.ಡಿ

ಎಪ್ಪತ್ತರ ದಶಕದ ಅತ್ಯುತ್ತಮ ಧ್ವನಿಗ್ರಾಹಕ. ಮದರಾಸಿನಲ್ಲಿ ಜನನ. ತಂದೆ ಧನಕೋಟಿ, ತಾಯಿ ಸೌಭಾಗ್ಯಮ್ಮ. ವಾಹಿನಿ ಸ್ಟುಡಿಯೋದ ಮುಖ್ಯ ಧ್ವನಿ ತಾಂತ್ರಿಕ ಎ.ಕೃಷ್ಣ ಇವರ ಗುರು. ಕನ್ನಡ ಚಿತ್ರ 'ಹರಿಭಕ್ತ'ದ ಮೂಲಕ



ಸ್ವತಂತ್ರ ಧ್ವನಿಗ್ರಾಹಕರಾಗಿ ಚಿತ್ರರಂಗ ಪ್ರವೇಶ. ಸುಮಾರು ೫೦೦ಕ್ಕೂ ಹೆಚ್ಚು ಕನ್ನಡ ಚಿತ್ರಗಳಿಗೆ ರೆಕಾರ್ಡಿಂಗ್ ಮತ್ತು ರಿ-ರೆಕಾರ್ಡಿಂಗ್ ಕಾರ್ಯ ನಿರ್ವಹಿಸಿದ್ದಾರೆ. 'ಸಂಕಲ್ಪ' ಚಿತ್ರದ ಶಬ್ದಗ್ರಹಣಕ್ಕಾಗಿ ೧೯೭೨-೭೩ರಲ್ಲಿ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದ್ದಾರೆ.

## ಯೋಗಾನರಸಿಂಹಮೂರ್ತಿ.ಹೆಚ್.ಕೆ

ಕನ್ನಡ ರಂಗಭೂಮಿಯ 'ಆಲ್‌ರೌಂಡರ್' ಕಲಾಪಟು. 'ಯೋಗಣ್ಣ' ಎಂದೇ ಖ್ಯಾತರು. ಎಚ್.ಕೆ.ಯೋಗಾನರಸಿಂಹಮೂರ್ತಿ ಅವರು ನಟ, ಗಾಯಕ, ಹಾರ್ಮೋನಿಯಂ ಮಾಸ್ಟರ್, ಸಂಗೀತ ನಿರ್ದೇಶಕ, ಕವಿ, ನಾಟಕಕಾರ



ಮತ್ತು ಮಂಡಳಿ ಒಡೆಯರು. ಹೀಗೆ ಬಹುಮುಖಿ. ಕಲಾವಿದರ ಪರಂಪರೆಯಿಂದ ಬಂದವರು. ತಂದೆ ಕೃಷ್ಣಶಾಸ್ತ್ರಿಗಳು ಪುರಾಣಗಳ ಪ್ರಸಿದ್ಧ ವ್ಯಾಖ್ಯಾನಕಾರರು. ಚಿಕ್ಕಪ್ಪಂದಿರುಗಳಾದ ಎಚ್.ರಾಮಚಂದ್ರಶಾಸ್ತ್ರಿ, ಎಚ್.ಕೃಷ್ಣಶಾಸ್ತ್ರಿಗಳು ಕೂಡ ರಂಗಭೂಮಿ, ಚಿತ್ರರಂಗದ ಹಿರಿಯ ನಟರು. ಹಳೇಬೀಡಿನಲ್ಲಿ ಜನಿಸಿದ ಇವರ ವಿದ್ಯಾಭ್ಯಾಸವೆಲ್ಲ ಹಳೇಬೀಡು ಹಾಗೂ ಬಿಂಡಿಗನವಿಲೆಯಲ್ಲಿ ನಡೆಯಿತು. ಸಂಗೀತ ವಿದ್ವಾನ್ ಚನ್ನಕೇಶವಯ್ಯನವರಿಂದ ಉನ್ನತ ಶಿಕ್ಷಣ ಪಡೆದ ಅವರು ಚಾಮರಾಜನಗರದ 'ಮಂಜುನಾಥೇಶ್ವರ ನಾಟಕ ಮಂಡಳಿ'ಯ ಮೂಲಕ ರಂಗ ಪ್ರವೇಶಿಸಿ ಮಾಡಿದರು. ನಂತರ ರಾಮಶೆಟ್ಟಿ ಅವರ 'ಶ್ರೀ ಕರ್ನಾಟಕ ನಾಟಕ ಸಭಾ' ಸೇರಿ ಹಲವು ನಾಟಕಗಳಲ್ಲಿ ಅಭಿನಯಿಸಿದರು. ಮಾಸ್ಟರ್ ಹಿರಣ್ಣಯ್ಯನವರು ಮತ್ತು ಮುನಿರಂಗಪ್ಪನವರು ಸ್ಥಾಪಿಸಿದ 'ಹಿರಣ್ಣಯ್ಯ ಮಿತ್ರಮಂಡಳಿ'ಯ ನಾಟಕಗಳ ರಚನೆ-ಸಂಗೀತಗಳಲ್ಲಿ ಇವರ ಕೈವಾಡವಿದ್ದಿತು. ಲೇಖನಿ ಹಿಡಿದರೆ ಸಾಕು, ಮಾತು ಮುತ್ತುಗಳಂತೆ ಸೃಷ್ಟಿಯಾಗುತ್ತಿತ್ತು. ಖ್ಯಾತ ನಿರ್ದೇಶಕ ಪುಟ್ಟಣ್ಣ ಕಣಗಾಲ್ ಅವರು ತಮ್ಮ 'ಶುಭಮಂಗಳ' ಚಿತ್ರಕ್ಕೆ ಸಂಭಾಷಣೆ ಬರೆಯಲು ಇವರನ್ನು ಆಹ್ವಾನಿಸಿದರು. ನಂತರ 'ಕಥಾಸಂಗಮ', 'ಫಲಿತಾಂಶ', 'ಶನಿಪ್ರಭಾವ', 'ರಂಗನಾಯಕಿ' ಮುಂತಾದ ಚಿತ್ರಗಳಿಗ ಸಂಭಾಷಣೆ ರಚಿಸಿದ್ದಾರೆ. 'ಪಡುವಾರಳ್ಳಿ ಪಾಂಡವರು' ಇವರದೇ ಕಲ್ಪನೆಯ ಮೇಲೆ ನಿದವಾದ ಚಿತ್ರ. ಕಲವು ಚಿತ್ರಗಳಿಗೆ ಸಂಗೀತ ನೀಡಿದ್ದಾರೆ. 'ಹಾವು ಏಣಿ ಆಟ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದೂ ಉಂಟು. ಮುಖ್ಯವಾಗಿ ಇತಿಹಾಸ, ಕಾಮಪ್ರೇಮ, ನಾಳಗಳನ್ನು ಮಾಡುವವರು' ಚಿತ್ರಗಳಲ್ಲಿನ ಸಂಗೀತದಲ್ಲಿ ವಿಶೇಷ ಪ್ರಯೋಗ ಮಾಡಲಾಗಿತ್ತು.

## ರಂಗನಾಥನ್ ಮಾವಿನಕೆರೆ

ಖ್ಯಾತ ಲೇಖಕ ಮಾವಿನಕೆರ ರಂಗನಾಥನ್



ರಾಜ್ಯ ಸಾಹಿತ್ಯ ಅಕಾಡೆಮಿ ಮತ್ತು ಕೇಂದ್ರ ಸರ್ಕಾರದ ಪ್ರಶಸ್ತಿಗಳನ್ನು ಗಳಿಸಿದವರು. ಮೂರು ದಶಕಗಳಿಂದ ಬರವಣಿಗೆ ಹಾಗೂ ಪ್ರಕಾಶನದಲ್ಲಿ ತೊಡಗಿಸಿಕೊಂಡವರು. ಅವರು ಇದುವರೆಗ ೨೫೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಚಲನಚಿತ್ರವನ್ನು ಕೂಡ ಒಂದು ಪ್ರಭಾವಶಾಲಿ ಅಭಿವ್ಯಕ್ತಿ ಮಾಧ್ಯಮವಾಗಿ ಪರಿಗಣಿಸುವ ರಂಗನಾಥನ್ ಕನ್ನಡದಲ್ಲಿ 'ಸಂಘರ್ಷ' ಮತ್ತು 'ಮಿಥುನ' ಎಂಬ ಎರಡು ಗಂಭೀರ ಚಿತ್ರಗಳನ್ನು ನಿರ್ಮಿಸಿದ್ದಾರೆ. 'ಮಿಥುನ' ದ ನಿರ್ದೇಶಕರೂ ಅವರೇ. ಗೋಕಾಕ್ ಚಳವಳಿಯಲ್ಲಿ ಚಿತ್ರೋದ್ಯಮ - ಸಾಹಿತ್ಯದ ನಡುವಿನ ಕೊಂಡಿಯಾಗಿ ಸಕ್ರಿಯ ಪಾತ್ರವಹಿಸಿದರು. ರಾಜಕುಮಾರ್ ಅವರಿಗೆ 'ಪದ್ಮಭೂಷಣ' ಬಂದ ಸಂದರ್ಭದಲ್ಲಿ ವಾಣಿಜ್ಯ ಮಂಡಳಿ ಏರ್ಪಡಿಸಿದ ಸಮಾರಂಭದಲ್ಲಿ ರಾಜಕುಮಾರ್ ಅವರ ಬಗ್ಗೆ ಉತ್ತಮ ಲೇಖನಗಳನ್ನು ಬರೆಸಿ, ಪ್ರಕಟಿಸಿದ 'ನಟಸಾರ್ವಭೌಮ' ಸಂಕಲನದ ಸಂಪಾದಕರು ಮಾವಿನಕೆರೆ ರಂಗನಾಥನ್.

## ರಂಗರಾವ್. ಎಂ.

'ವೀಣೆ ರಂಗರಾವ್' ಎಂದೇ ಹೆಸರಾದ ಎಂ.ರಂಗರಾವ್ ಮೂಲತಃ ತೆಲುಗಿನವರು. ತಾಯಿ ರಂಗಮ್ಮನಿಂದಲೇ ವೀಣಾವಾದನ ತರಬೇತಿ. ತೆಲುಗು ಚಿತ್ರ 'ತ್ಯಾಗಯ್ಯ'



ಚಿತ್ರದಲ್ಲಿ ವೀಣಾವಾದನದ ಮೊದಲ ಅವಕಾಶ. ಖ್ಯಾತ ಸಂಗೀತ ನಿರ್ದೇಶಕ ಆದಿನಾರಾಯಣ ಅವರ ಬಳಿ ಸಹಾಯಕ ಸಂಗೀತ ನಿರ್ದೇಶಕರಾಗಿ ದುಡಿದ ಇವರು ಮೊದಲ ಬಾರಿಗೆ 'ಕಾವೇರಿ' ಚಿತ್ರದಲ್ಲಿ ಸ್ವತಂತ್ರವಾಗಿ ಸಂಗೀತ ನಿರ್ದೇಶಿಸಿದರು. ಗಾಯಕ ಎಸ್.ಪಿ.ಬಾಲಸುಬ್ರಹ್ಮಣ್ಯಂ ಅವರನ್ನು ಕನ್ನಡಕ್ಕೆ ಪರಿಚಯಿಸಿದ ಕೀರ್ತಿ ಇವರದು. 'ನಕ್ಕರೆ ಅದೇ ಸ್ವರ್ಗ', 'ಮನಸ್ಸಿದ್ದರೆ ಮಾರ್ಗ', 'ಗೃಹಲಕ್ಷ್ಮಿ', 'ಬಂಧನ', 'ರಂಗನಾಯಕಿ', 'ವಸಂತಗೀತ', 'ಕವಿರತ್ನ ಕಾಳಿದಾಸ', 'ಕರುಳಿನ ಕರೆ', 'ಎಡಕಲ್ಲು ಗುಡ್ಡದ ಮೇಲೆ' ಮೊದಲಾದ ಸಂಗೀತಮಯ ಚಿತ್ರಗಳಿಗೆ ಸಂಗೀತ ನಿರ್ದೇಶಕರಾಗಿ ದುಡಿದಿರುವ ಇವರಿಗೆ ೧೯೬೮-೬೯ರ ಸಾಲಿಗೆ 'ಹಣ್ಣೆಲೆ ಚಿಗುರಿದಾಗ', ೧೯೮೧-೮೨ರಲ್ಲಿ 'ಹೊಸ ಬೆಳಕು', ೧೯೮೪-೮೫ರಲ್ಲಿ 'ಬಂಧನ' ಚಿತ್ರಗಳ ಸಂಗೀತ ನಿರ್ದೇಶನಕ್ಕೆ ಮೂರು ಬಾರಿ ಕರ್ನಾಟಕ ರಾಜ್ಯ ಸರ್ಕಾರದ ಅತ್ಯುತ್ತಮ ಸಂಗೀತ ನಿರ್ದೇಶಕ ಪ್ರಶಸ್ತಿ ಸಂದಿದೆ. ಅವರು ಸಂಯೋಜಿಸಿದ ಬಹುಪಾಲು ಹಾಡುಗಳು ತಮ್ಮ ಮಾಧುರ್ಯದಿಂದ ಉತ್ತಮ ಅಭಿರುಚಿಯ ಪ್ರೇಕ್ಷಕರಿಗೆ ಪ್ರಿಯವಾದವು.

## ರಂಗಾ (ನಟ)

ಬಾಲನಟನಾಗಿ ಚಿತ್ರರಂಗ ಪ್ರವೇಶಿಸಿದ ರಂಗಾ ಹಲವಾರು ಚಿತ್ರಗಳಲ್ಲಿ



ಹಾಸ್ಯನಟ-ಪೋಷಕನಟರಾಗಿ ಮಿಂಚಿದವರು. 'ಎಡಕಲ್ಲು ಗುಡ್ಡದ ಮೇಲೆ' ಚಿತ್ರದಲ್ಲಿ ಮನೋಜ್ಞ ಅಭಿನಯ ನೀಡುವ ಮೂಲಕ ಜನಪ್ರಿಯರಾದರು. ರಾಜಕುಮಾರ್ ಅಭಿನಯದ ಹಲವಾರು ಚಿತ್ರಗಳಲ್ಲಿ ರಂಗ ಅಭಿನಯಿಸಿದರು. ಕಲಾ ಜೀವನದಲ್ಲಿ ಗುರುತಿಸಿಕೊಂಡ ತರುಣದಲ್ಲೇ ಬೆಂಗಳೂರು ಕೆಂಗಲ್ ಹನುಮಂತಯ್ಯ ರಸ್ತೆಯಲ್ಲಿ ಸ್ಕೂಟರ್ ಅಪಘಾತಕ್ಕೀಡಾಗಿ (೧೯೭೩) ಸ್ಥಳದಲ್ಲಿಯೇ ನಿಧನರಾದರು.

## ರಂಗಾ.ಟಿ.ಎಸ್

ನಟ, ಗಾಯಕ, ನಿರ್ದೇಶಕ ಮತ್ತು ಚಿತ್ರ ಸಾಹಿತಿ ಟಿ.ಎಸ್.ರಂಗಾ. ಬೆಂಗಳೂರಿನವರು.



ರಾಜಕಾರಣದಲ್ಲಿ, ಸಮಾಜಸೇವೆಯಲ್ಲಿ ದೊಡ್ಡ ಹೆಸರಾದ ಟಿ.ಆರ್.ಶಾಮಣ್ಣನವರ ಮಗ ಟಿ.ಎಸ್.ರಂಗಾ. ರಂಗಭೂಮಿಯಲ್ಲಿ ಅಪಾರ ಒಲವು. ಬಿ.ವಿ.ಕಾರಂತರ ಶಿಷ್ಯನಾಗಿ, ರಂಗನಟನಾಗಿ ನೇಪಥ್ಯದ ಕೆಲಸದಲ್ಲಿ ಕೂಡಾ ಹೆಸರಾದವರು ರಂಗಾ. ನಾಗಾಭರಣ ನಿರ್ದೇಶಿಸಿದ 'ಗ್ರಹಣ' ಚಿತ್ರದಿಂದ ಚಿತ್ರರಂಗಕ್ಕೆ ಚಿತ್ರಕಥಾ ಲೇಖಕರಾಗಿ ಪ್ರವೇಶಿಸಿದರು. ಚಿತ್ರಕಥೆಗೆ ರಾಜ್ಯ ಪ್ರಶಸ್ತಿಯೂ ಬಂತು. ಕಾರಂತ ಕಾರ್ನಾಡರೊಂದಿಗೆ ಚಿತ್ರಗಳಿಗೂ ಕೆಲಸ ಮಾಡಿದ್ದರು. ಜಿ.ವಿ.ಅಯ್ಯರ್ ಅವರ ಚಿತ್ರಗಳಲ್ಲಿ ಅಭಿನಯಿಸಿದರು. ಲಂಕೇಶರ 'ಪಲ್ಲವಿ' ಚಿತ್ರದಲ್ಲಿ ಲಂಕೇಶರು ಅಭಿನಯಿಸಿದರೆ ಅವರಿಗೆ ಕಂಠದಾನ ಮಾಡಿದವರು ರಂಗಾ. ಮುಂದೆ 'ಗೀಜಗನ ಗೂಡು', 'ಸಾವಿತ್ರಿ' ಚಿತ್ರಗಳನ್ನು ನಿರ್ದೇಶಿಸಿದರು. 'ಸಾವಿತ್ರಿ' ಚಿತ್ರ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ತಾಷ್ಕೆಂಟ್ ಹಾಗೂ ಹಾಂಕಾಂಗ್‌ನಲ್ಲಿ ಪ್ರದರ್ಶಿತವಾಯಿತು. ಇವರು ಹಿಂದಿಯಲ್ಲಿ ನಿರ್ದೇಶಿಸಿದ 'ಗಿದ್' ಚಿತ್ರ ಬಹಳಷ್ಟು ಸುದ್ದಿ ಮಾಡಿತು. ರಾಷ್ಟ್ರ, ರಾಜ್ಯ ಪ್ರಶಸ್ತಿ ಸಲಹಾ ಸಮಿತಿಗಳಲ್ಲಿ, ಎನ್.ಎಫ್.ಡಿ.ಸಿ.ಯ ಚಿತ್ರ ಸಾಹಿತ್ಯ ಸಮಿತಿ ಮೊದಲಾದ ಹಲವು ಸಮಿತಿಗಳಲ್ಲಿ ಸದಸ್ಯರು. ಹಲವಾರು ಸಾಕ್ಷ್ಯ ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದ್ದಾರೆ.

## ರಂಗಾ.ಬಿ.ಎಸ್

ಕನ್ನಡ ಚಿತ್ರರಂಗ ಕಂಡ ಅತ್ಯದ್ಭುತ ವ್ಯಕ್ತಿ ಬಿ.ಎಸ್.ರಂಗಾ. ಛಾಯಾಗ್ರಹಣ, ನಿರ್ದೇಶನ,



ನಿರ್ಮಾಣ ಹೀಗೆ ಮೂರು ವಿಭಾಗಗಳಲ್ಲಿ ಅದ್ವಿತೀಯರೆನಿಸಿದ ರಂಗಾ ಕನ್ನಡ ಚಿತ್ರೋದ್ಯಮಕ್ಕೆ ಸಲ್ಲಿಸಿರುವ ಸೇವೆ ಬಹಳಷ್ಟು. ಚಿತ್ರ ನಿರ್ಮಾಣ ಕಷ್ಟವೆನ್ನಿಸುವ ಕಳೆ ನಿಯಿದ ಕಾಲದಲ್ಲಿ ಪೌರಾಣಿಕ ಚಿತ್ರಗಳನ್ನು ನಿರ್ಮಿಸಿ, ಸ್ಟುಡಿಯೋ ಸ್ಥಾಪಿಸಿ ಕನ್ನಡ ಚಿತ್ರೋದ್ಯಮಕ್ಕೆ ಆತ್ಮ ವಿಶ್ವಾಸವನ್ನು ತುಂಬಿ ಗೌರವವನ್ನು ಹೆಚ್ಚಿಸಿದ ಕೀರ್ತಿ ರಂಗಾ ಅವರದು. ೧೯೩೭ರಲ್ಲಿ ಕಾಲೇಜು ತೊರೆದು ತಂದೆಯವರ ಮುದ್ರಣ ಕಾರ್ಯದಲ್ಲಿ ಸಹಾಯಕರಾಗಿ ವೃತ್ತಿ ಜೀವನ ಆರಂಭಿಸಿದರು. ತಂದೆ ಬಿ.ಶ್ರೀನಿವಾಸ ಅಯ್ಯಂಗಾರ್ ಹುಟ್ಟು ಹಾಕಿದ ಬೆಂಗಳೂರಿನ ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್‌ನ ಒಡನಾಟದಿಂದ ಹಲವಾರು ಸಾಹಿತಿಗಳ, ರಂಗಪಟುಗಳ ಪರಿಚಯವಾಯಿತು. ಅದು ರಂಗಾ ಅವರಲ್ಲಿ ಸಾಹಿತ್ಯ-ಕಲೆಗಳ ಬಗ್ಗೆ ಅಭಿರುಚಿಯನ್ನು ಮೂಡಿಸಿತು. ಇದೇ ವೇಳೆಗೆ ಛಾಯಾಗ್ರಹಣದಲ್ಲೂ ಆಸಕ್ತಿ ಮೂಡಿ ಹವ್ಯಾಸಿ ಛಾಯಾಗ್ರಾಹಕರಾಗಿ ಕಾರ್ಯ ನಿರ್ವಹಿಸಲು ಆರಂಭಿಸಿದರು. ಚಲನಚಿತ್ರ ಛಾಯಾಗ್ರಾಹಕರಾಗಬೇಕೆಂಬ ಉದ್ದೇಶದಿಂದ ಮುಂಬೈಗೆ ತೆರಳಿ ಅಲ್ಲಿ ಭಾರತದ ಪ್ರಪ್ರಥಮ ಆಟೋಮ್ಯಾಟಿಕ್ ಪ್ರೋಸೆಸಿಂಗ್ ಲ್ಯಾಬೊರೇಟರಿಯ ಸ್ಥಾಪಕರಾದ ಕೃಷ್ಣಗೋಪಾಲ್ ಅವರ ಸಹಾಯಕರಾಗಿ ಕೆಲಸಕ್ಕೆ ಸೇರಿದರು. ರಂಗಾ ಸ್ವತಂತ್ರ ಛಾಯಾಗ್ರಾಹಕರಾಗಿ ದುಡಿದ ಮೊದಲ ಚಿತ್ರ 'ಭಕ್ತ ನಾರದರ್' ಎಂಬ ತಮಿಳು ಚಿತ್ರ. ನಂತರ ಅವರು ವಿಕ್ರಂ ಪ್ರೊಡಕ್ಷನ್ಸ್ ಸಂಸ್ಥೆಯನ್ನು ಸ್ಥಾಪಿಸಿದರು. ೧೯೫೦ರಲ್ಲಿ ಬೆಂಗಳೂರಿನಲ್ಲಿ 'ವಿಕ್ರಂ ಸ್ಟುಡಿಯೋಸ್ ಅಂಡ್ ಲ್ಯಾಬ್' ಸ್ಥಾಪಿಸಿದರು. ಮದರಾಸಿನಲ್ಲಿ ೧೯೫೫ರಲ್ಲಿ ಸುಸಜ್ಜಿತವಾದ ಸ್ಟುಡಿಯೋ ಸ್ಥಾಪಿಸಿ ಅಲ್ಲಿ ಮೊದಲು ನಿರ್ಮಿಸಿ ನಿರ್ದೇಶಿಸಿದ ಚಿತ್ರ 'ಭಕ್ತ ಮಾರ್ಕಂಡೇಯ'. ನಂತರ 'ಮಹಿಷಾಸುರ ಮರ್ಧಿನಿ', 'ಅಮರ ಶಿಲ್ಪಿ ಜಕಣಾಚಾರಿ' ಕನ್ನಡದಲ್ಲಿ ಸಂಪೂರ್ಣ ವರ್ಣ ಚಿತ್ರವಾಗಿ ಮೂಡಿ ಬಂದು ಇತಿಹಾಸವಾದದ್ದು ರಂಗಾ ಅವರ ಸಾಹಸದಿಂದ. 'ಮಹಾಸತಿ ಅನುಸೂಯ', 'ಪಾರ್ವತಿ ಕಲ್ಯಾಣ' ಮುಂತಾದ ಅದ್ದೂರಿ ಪೌರಾಣಿಕ ಚಿತ್ರಗಳನ್ನು ನಿರ್ಮಿಸಿ ನಿರ್ದೇಶಿಸಿದರು. ಇವರ ನಿರ್ದೇಶನದ 'ಹಾಸ್ಯರತ್ನ ರಾಮಕೃಷ್ಣ' ಕೂಡ ಹಲವು ವಿಶೇಷಗಳಿಂದ ಕೂಡಿತ್ತು. ಅನೇಕ ಸಾಮಾಜಿಕ ಚಿತ್ರಗಳನ್ನು ಅಷ್ಟೇ ಚೆನ್ನಾಗಿ ನಿರ್ಮಿಸಿದ್ದಾರೆ. ಇವರು ಚಿತ್ರರಂಗಕ್ಕೆ ಸಲ್ಲಿಸಿದ ಗಣನೀಯ ಸೇವೆಗಾಗಿ ಕರ್ನಾಟಕ ಸರ್ಕಾರವು ೧೯೮೯-೯೦ನೇ ಸಾಲಿನ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಅವರ ಮಗ ವಸಂತ್ ಬೆಂಗಳೂರಿನಲ್ಲಿ 'ವಸಂತ್ ಕಲರ್ ಲ್ಯಾಬ್' ಸಂಸ್ಕರಣಾಗಾರ ನಡೆಸುತ್ತಿದ್ದಾರೆ. ರಂಗಾ ಕಿರುತೆರೆ ಧಾರಾವಾಹಿ ನಿರ್ಮಿಸಿ, ನಿರ್ದೇಶನದಲ್ಲೂ ಹೆಸರಾಗಿದ್ದಾರೆ.

## ರಂಗಾ ಪೇಕೇಟಿ

ದಕ್ಷಿಣ ಭಾರತದ ನಟ, ನಿರ್ದೇಶಕ ಪೇಕೇಟಿ ಶಿವರಾಂರವರ ಪುತ್ರರಾದ ಕಲಾ ನಿರ್ದೇಶಕ ರಂಗಾ ಬಿ.ಕಾಂ.ಪದವೀಧರ. ಚಿತ್ರಕಲೆಯಲ್ಲಿ ತರಬೇತಿ, ನಂತರ ಕಲಾ ನಿರ್ದೇಶಕರಾಗಿ ಕಾರ್ಯ ನಿರ್ವಹಣೆ. 'ಶಂಕರ್‌ಗುರು' ಚಿತ್ರದ ಕಲಾ ನಿರ್ದೇಶಕರಾಗಿ ಕನ್ನಡ ಚಿತ್ರರಂಗ



ಪ್ರವೇಶ. ಹೆಸರಾಂತ ಕಲಾ ನಿರ್ದೇಶಕರುಗಳಾದ ಚಲಂ ಹಾಗೂ ನಾಗರಾಜರಾವ್ ಬಳಿ ದುಡಿದ ಅನುಭವ. 'ಹುಲಿಯ ಹಾಲಿನ ಮೇವು', 'ಹಾಲು ಜೇನು', 'ಚಲಿಸುವ ಮೋಡಗಳು', 'ಕೆರಳಿದ ಸಿಂಹ', 'ಭಾಗ್ಯವಂತ', 'ತಾಯಿಗೆ ತಕ್ಕ ಮಗ', 'ಸನಾದಿ ಅಪ್ಪಣ್ಣ' ಮುಂತಾದ ಅನೇಕ ಚಿತ್ರಗಳಿಗೆ ಅವರ ಕಲಾ ನಿರ್ದೇಶನವಿದೆ.

## ರಘು.ಎ.ಟಿ

೧೯೪೭ರಲ್ಲಿ ಜನಿಸಿದ ಎ.ಟಿ.ರಘು ಹಿರಿಯ ನಿರ್ಮಾಪಕ ನಿರ್ದೇಶಕ ಬಿ.ವಿಠಲಚಾರ್ಯ ಅವರ ಶಿಷ್ಯರಾಗಿ ತಮ್ಮ ಚಿತ್ರರಂಗದ ಜೀವನವನ್ನು ಆರಂಭಿಸಿದರು. ೧೯೬೫ರಲ್ಲಿ



ತಮಿಳು ಚಿತ್ರರಂಗದಲ್ಲೂ ತಂತ್ರಜ್ಞನಾಗಿ ದುಡಿದು ಅನುಭವ ಪಡೆದುಕೊಂಡರು. ೧೯೭೯-೮೦ರಲ್ಲಿ ಹಿರಿಯ ನಿರ್ದೇಶಕರಾದ ವೈ.ಆರ್.ಸ್ವಾಮಿ ಬಳಿ ಸಹಾಯಕ ನಿರ್ದೇಶಕರಾಗಿ ಕೆಲಸಮಾಡಿದರು. ೧೯೮೦ರಲ್ಲಿ 'ನ್ಯಾಯ ನೀತಿ ಧರ್ಮ' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. ಸುಮಾರು ೩೦ ಚಿತ್ರಗಳನ್ನು ನಿರ್ದೇಶಿಸಿರುವ ರಘು ಅವರ ಇತರ ಪ್ರಮುಖ ಚಿತ್ರಗಳು 'ಶಂಕರ್ ಸುಂದರ್' (೧೯೮೨), 'ಅವಳ ನೆರಳು' (೧೯೮೩), 'ಧರ್ಮಯುದ್ಧ' (೧೯೮೩), 'ಕಾಡಿನ ರಾಜ' (೧೯೮೫), 'ಅಂತಿಮ ತೀರ್ಪು' (೧೯೮೭) 'ಪದ್ಮವ್ಯೂಹ' (೧೯೮೯). ನಂತರ ಎ.ಟಿ.ಆರ್ ಸಂಸ್ಥೆಯನ್ನು ಸ್ಥಾಪಿಸಿ 'ಮೈಸೂರು ಜಾಣ' (೧೯೯೨), 'ಮಂಡ್ಯದ ಗಂಡು' (೧೯೯೪) ಚಿತ್ರಗಳನ್ನು ನಿರ್ಮಿಸಿ-ನಿರ್ದೇಶಿಸಿದರು. ಶಿವಮಣಿ ನಿರ್ದೇಶನದಲ್ಲಿ 'ಶಿವಸೈನ್ಯ' ಚಿತ್ರದ ವಿಶಿಷ್ಟ ಪಾತ್ರವೊಂದರಲ್ಲಿ ಅಭಿನಯಿಸಿದರು. ಕಿರುತೆರೆಯಲ್ಲೂ ದುಡಿದಿದ್ದಾರೆ.

## ರಘು ತಿಪಟೂರು

ರಘು ಅವರು ಹುಟ್ಟಿ ಬೆಳೆದದ್ದು ತಿಪಟೂರಿನಲ್ಲಿ. ಬೆಂಗಳೂರಿನಲ್ಲಿ ಕಾಲೇಜು ವಿದ್ಯಾಭ್ಯಾಸ ಪಡೆದರು. ಸಣ್ಣ ವಯಸ್ಸಿನಿಂದಲೂ ನಾಟಕಗಳ ಬಗ್ಗೆ ಹುಚ್ಚು. ಅನೇಕ ಶಾಲಾ-ಕಾಲೇಜುಗಳ ನಾಟಕಗಳಲ್ಲಿ ಅಭಿನಯಿಸಿ ಪ್ರಶಂಸೆ ಪಡೆದರು. ಸ್ಥಿರ ಛಾಯಾಗ್ರಾಹಕ ವೃಷಭೇಂದ್ರಯ್ಯ ಅವರ ಸಹಾಯದಿಂದ 'ನಾಗಪೂಜಾ' ಚಿತ್ರಕ್ಕೆ ಸಹಾಯಕ ನಿರ್ದೇಶಕರಾದರು. ಹಲವಾರು ಚಿತ್ರಗಳಿಗೆ ಸಹಾಯಕ-ಸಹ ನಿರ್ದೇಶಕರಾಗಿ ಕೆಲಸಮಾಡಿ ಅನುಭವ ಪಡೆದರು. ೧೯೭೩ರಲ್ಲಿ 'ಊರ್ವಶಿ' ಚಿತ್ರಕ್ಕೆ ಸಹ ನಿರ್ಮಾಪಕರಾಗಿ ಸ್ವತಂತ್ರ ನಿರ್ದೇಶಕರಾದರು. ಸುಮಾರು ೧೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ೧೯೮೧ರಲ್ಲಿ ನಿರ್ದೇಶಿಸಿದ 'ನಾಗ ಕಾಳ



ಭೈರವ' ಮತ್ತು ೧೯೮೩ರಲ್ಲಿ ತೆರೆಕಂಡ 'ಕಲ್ಲು ವೀಣೆ ನುಡಿಯಿತು' ಚಿತ್ರಗಳು ಹೆಸರು ತಂದುಕೊಟ್ಟವು. ಇತರ ಪ್ರಮುಖ ಚಿತ್ರಗಳು 'ಸ್ವರ್ಣಮಹಲ್ ರಹಸ್ಯ', 'ಆಕ್ರೋಶ', 'ಬೆಂಕಿ ಬಿರುಗಾಳಿ', 'ಹಳ್ಳಿಯ ಸುರಾಸುರರು'. ಕರ್ನಾಟಕ ಚಲನಚಿತ್ರ ನಿರ್ದೇಶಕ ಸಂಘದಲ್ಲಿ ಕಾರ್ಯದರ್ಶಿಯಾಗಿ ದುಡಿಯುತ್ತಿದ್ದಾರೆ. ಕಿರುತೆರೆಗಾಗಿ ಧಾರವಾಹಿಗಳನ್ನು ನಿರ್ಮಿಸಿ ನಿರ್ದೇಶಿಸುತ್ತಿದ್ದಾರೆ.

## ರಘುವೀರ್

ಕನ್ನಡದ ನಾಯಕ ನಟ. ಎ.ಟಿ.ರಘು ನಿರ್ದೇಶನದ 'ಅಜಯ್-ವಿಜಯ್' ಚಿತ್ರದಿಂದ ೧೯೯೦ರಲ್ಲಿ ಚಿತ್ರರಂಗ ಪ್ರವೇಶ. ೧೯೯೨ರಲ್ಲಿ ಮತ್ತೆ ಎಸ್.ನಾರಾಯಣ್ ನಿರ್ದೇಶನದ 'ಚೈತ್ರದ ಪ್ರೇಮಾಂಜಲಿ' ಚಿತ್ರದ ಮೂಲಕ ನಾಯಕನಾಗಿ ಪುನರ್



ಪ್ರವೇಶ. ಚಿತ್ರದ ಯಶಸ್ಸಿನಿಂದಾಗಿ ಮುಂದೆ ಅನೇಕ ಚಿತ್ರಗಳಲ್ಲಿ ಅಭಿನಯಿಸಲು ಅವಕಾಶ. 'ಶೃಂಗಾರ ಕಾವ್ಯ', 'ಮೌನ ಹೋರಾಟ', 'ಮುಗಿಲ ಚುಂಬನ', 'ಮೌನ ಸಂಗ್ರಾಮ', 'ತುಂಗಭದ್ರ', 'ಕಾವೇರಿ ತೀರದಲ್ಲಿ', 'ನವಿಲೂರ ನೈದಿಲೆ' ಮೊದಲಾದವು ಮುಖ್ಯ ಚಿತ್ರಗಳು.

## ರಘು ಹಾಸನ

'ಹಾಸನ್ ರಘು' ಎಂದೇ ಖ್ಯಾತರಾದ ಕೆ.ಎಚ್.ರಘು ಚಿತ್ರರಂಗದ ಚಿರಪರಿಚಿತ

ಸ್ಟಂಟ್ ಕಲಾವಿದ ಹಾಗೂ ಸಾಹಸ ನಿರ್ದೇಶಕ. ಹಾಸನದಲ್ಲಿ ಜನಿಸಿದ ಇವರು 'ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಸ್ಪೋರ್ಟ್ಸ್'ನಲ್ಲಿ ಜಿಮ್ನ್ಯಾಸ್ಟಿಕ್ಸ್ ಎನ್.ಐ.ಎಸ್ ಪದವಿ ಪಡೆದಿದಾರೆ. ಸ್ಟಂಟ್ ಮಾಸ್ಟರ್ ಮುನಿರತ್ನಂ ಬಳಿ ತರಬೇತಿ ಪಡೆದ ಇವರು ಭಾರತೀಯ ಸೇನಾ ಪಡೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಸುಮಾರು ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಸ್ಟಂಟ್ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿರುವ ಇವರು ೧೯೮೪-೮೫ನೇ ಸಾಲಿನಲ್ಲಿ 'ಆ್ಯಕ್ಸಿಡೆಂಟ್' ಚಿತ್ರದಲ್ಲಿ ಸ್ಟಂಟ್ ನಿರ್ದೇಶನಕ್ಕಾಗಿ ರಾಜ್ಯ ಸರ್ಕಾರದಿಂದ ವಿಶೇಷ ಪ್ರಶಸ್ತಿ ಪಡೆದಿದ್ದಾರೆ. ರಾಷ್ಟ್ರೀಯ ನಾಟಕ ಶಾಲೆಯಲ್ಲಿ ಸಾಹಸ ಶಿಕ್ಷಕರು. ಬೆಂಗಳೂರಲ್ಲೂ ಸ್ಟಂಟ್ ಶಾಲೆ ನಡೆಸುತ್ತಿದಾರೆ. ಸಾಹಸ ಕಲಾವಿದರ ಸಂಘಟನೆಯ ಹಿಂದಿನ ಶಕ್ತಿ. ಎರಡು ಅವಧಿಗೆ ಅಧ್ಯಕ್ಷರು, ಕಾರ್ಯ ಸಮಿತಿ ಸದಸ್ಯರು ಆಗಿದ್ದರು.

## ರಜನಿಕಾಂತ್

ಮಾತೃಭಾಷೆ ಮರಾಠಿ. ಹುಟ್ಟಿ ಬೆಳೆದಿದ್ದು ಬೆಂಗಳೂರಿನಲ್ಲಿ (ಜನನ : ೧೯೫೦). ಬಿ.ಟಿ.ಎಸ್ ಬಸ್ಸಿನ ಕಂಡಕ್ಟರ್ ಆಗಿ ವೃತ್ತಿ ಜೀವನ ಆರಂಭ. ಹವ್ಯಾಸಿ ನಾಟಕಗಳಲ್ಲಿ ಪಾತ್ರ ಮಾಡುತ್ತಿದ್ದ ಇವರ ಹೆಸರು



ಶಿವಾಜಿರಾವ್. ಮದ್ರಾಸಿನ ಫಿಲಂ ಇನ್ಸ್‌ಟಿಟ್ಯೂಟ್‌ನಲ್ಲಿ ಅಭಿನಯ ತರಬೇತಿ ಪಡೆದು ಬಂದರು. ಪುಟ್ಟಣ್ಣ ಕಣಗಾಲ್ ತಮ್ಮ 'ಕಥಾ ಸಂಗಮ'ದ ಮುಕ್ತಾಯ (೧೯೭೬) ಚಿತ್ರದಲ್ಲಿ ಅವಕಾಶ ನೀಡಿದರು. ನಂತರ ನಾಲ್ಕಾರು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರು. ಜನಪ್ರಿಯ ನಟರಾಗಿ ರೂಪುಗೊಂಡಿದ್ದು ತಮಿಳಿನಲ್ಲಿ. ಬಾಲಚಂದರ್ ಇವರ ಪ್ರತಿಭೆಯನ್ನು ಗುರುತಿಸಿದರು. ದಕ್ಷಿಣ ಭಾರತದ ಎಲ್ಲಾ ದಾಖಲೆಗಳನ್ನು ಮುರಿದ ಈ ನಟ ಹಾಲಿವುಡ್ ಚಿತ್ರದಲ್ಲಿಯೂ ಅಭಿನಯಿಸಿದ್ದಾರೆ. ಕನ್ನಡದವರೇ ಆದ ಜಯಲಲಿತಾರಂತೆ, ರಜನಿಕಾಂತ್ ಕೂಡ ತಮಿಳುನಾಡಿನ ರಾಜಕೀಯ ಮತ್ತು ಸಾರ್ವಜನಿಕ ಜೀವನದ ಒಂದು ಅವಿಭಾಜ್ಯ ಅಂಗವೆನಿಸಿದ್ದಾರೆ. ತಮ್ಮ ಅಭಿನಯದ ಚಿತ್ರಗಳ ಗಳಿಕೆಯನ್ನು ಹಳೆಯ ಮಿತ್ರರು, ತಮ್ಮನ್ನು ಆದರಿಸಿದವರುಗಳಿಗೆ ಕೊಡುವ ಪರಿಪಾಠ ಉಂಟು.

## ರತ್ನಂ ಜ್ಯೂಡೋ

ಹಿರಿಯ ಸಾಹಸ ನಿರ್ದೇಶಕರು. ಚಿತ್ರರಂಗದಲ್ಲಿ ನಾಲ್ಕು ದಶಕಗಳಿಗೂ ಹೆಚ್ಚು



ಕಾಲ ಸೇವೆ ಸಲ್ಲಿಸಿರುವ ರತ್ನಂ 'ಜ್ಯೂಡೋ' ಪರಿಣಿತರು. ಭಾರತೀಯ ಚಿತ್ರರಂಗದ ಹಲವು ಭಾಷೆಗಳಲ್ಲಿ ಸುಮಾರು ಸಾವಿರಕ್ಕೂ ಹೆಚ್ಚಿನ ಚಿತ್ರಗಳಲ್ಲಿ ಸಾಹಸ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದಾರೆ. ರಾಜಕುಮಾರ್ ಅಭಿನಯದ ಬಾಂಡ್ ಚಿತ್ರ 'ಆಪರೇಷನ್ ಜಾಕ್‌ಪಾಟ್‌ನಲ್ಲಿ ಸಿಐಡಿ ೯೯೯'ನಲ್ಲಿನ ಸಾಹಸ ನಿರ್ದೇಶನ ಅವರಿಗೆ ವಿಶೇಷ ಹೆಸರು ತಂದಿತು. 'ಗಂಡುಮಗ', 'ನ್ಯಾಯ ಗೆದ್ದಿತು', 'ಯಾರಿವನು ?'. 'ಸತ್ಕಾರ', 'ಜನನಾಯಕ', 'ಮಹಾಕ್ಷತ್ರಿಯ', 'ತೇಜ', 'ಅಪೂರ್ವ ಜೋಡಿ', 'ರವಿವರ್ಮ', 'ಮೈಸೂರು ಜಾಣ', 'ಚಿನ್ನ', 'ಸಂಘರ್ಷ' ಚಿತ್ರಗಳು ಇವರು ಸಾಹಸ ನಿರ್ದೇಶನ ಮಾಡಿದ ಚಿತ್ರಗಳು.

## ರತ್ನ.ಆರ್

ಅರುವತ್ತರ ದಶಕದಲ್ಲಿ ಬೆಳಕಿಗೆ ಬಂದ ಸಂಗೀತ ನಿರ್ದೇಶಕ. ಮದ್ರಾಸಿನಲ್ಲಿ ಜನಿಸಿದರು (೧೦-೦೫-೧೯೨೫). ತಂದೆ ಹಿರಣ್ಯನ್, ತಾಯಿ ವೇಲು. ಖ್ಯಾತ ಸಂಗೀತ ವಿದ್ವಾಂಸರಾದ ಆಲತ್ತೂರು ವೆಂಕಟೇಶ್ ಅಯ್ಯರ್ ಮತ್ತು ಮೈಸೂರು ಆಸ್ಥಾನ ವಿದ್ವಾಂಸರಾಗಿದ್ದ ಟೈಗರ್ ವರದಾಚಾರ್ ಅವರ ಬಳಿ ಸಂಗೀತ ಅಭ್ಯಾಸ ಮಾಡಿದರು. ನಿರ್ದೇಶಕ ಸಿ.ವಿ. ಶಿವಶಂಕರ್ ಅವರ 'ಮನೆ ಕಟ್ಟಿ ನೋಡು' ಚಿತ್ರದ ಸಂಗೀತ ನಿರ್ದೇಶಕರಾಗಿ ಚಿತ್ರರಂಗ ಪ್ರವೇಶಿಸಿದರು. ನಂತರ ಸುಮಾರು ೫೦ಕ್ಕೂ ಹೆಚ್ಚು ಕನ್ನಡ



ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದರು. 'ಪದವೀಧರ', 'ನಮ್ಮ ಊರು'. 'ಕಪ್ಪು ಬಿಳುಪು', 'ಭಲೇ ಜೋಡಿ', 'ವಾಲ್ಮೀಕಿ', 'ಮಹಾತಪಸ್ವಿ', 'ಐದು ಬೆರಳು' ಮೊದಲಾದವು ಹೆಸರಿಸಬಹುದಾದ ಚಿತ್ರಗಳು. 'ಅಮ್ಮಾ ನಿನ್ನ ತೋಳಿನಲ್ಲಿ....'. 'ಜಲಲ ಜಲಲ ಜಲಧಾರೆ....', 'ಹೋಗದಿರಿ ಸೋದರರೆ....', 'ನೋಡಬನ್ನಿ ನೋಡಬನ್ನಿ....', 'ಭಕ್ತನಾದೊಡೆ ಭಯ ಭಕ್ತಿ....' ಮೊದಲಾದವು ಇವರ ಸಂಗೀತ ಸಂಯೋಜನೆಯಲ್ಲಿನ ಜನಪ್ರಿಯ ಗೀತೆಗಳು.

## ರತ್ನಾಕರ್.ಕೆ.ಎನ್

ಅನೇಕ ವರ್ಷಗಳಿಂದ ಕನ್ನಡ ಚಿತ್ರರಂಗದ ಹಾಸ್ಯನಟನಾಗಿ ಅಭಿನಯಿಸುತ್ತಿರುವ ರತ್ನಾಕರ್ ಮೂಲತಃ ವೃತ್ತಿರಂಗಭೂಮಿಯ ಪ್ರತಿಭೆ. ಸೋರಟ್ ಅಶ್ವತ್ ಅವರಿಗಾಗಿ ರತ್ನಾಕರ್ 'ಭಾಂದವ್ಯ' (೧೯೭೨) ಮತ್ತು 'ಶನಿ ಪ್ರಭಾವ' (೧೯೭೭) ಚಿತ್ರಗಳನ್ನು ಛಾಯಾಗ್ರಾಹಕ ಮಧು ಅವರೊಂದಿಗೆ ಸಂಯುಕ್ತವಾಗಿ ನಿರ್ದೇಶಿಸಿದರು. ಕು.ರ.ಸೀ. ಹಾಗೂ ಸೋರಟ್ ಅಶ್ವತ್ ಅವರೊಂದಿಗೆ ಸಾಹಿತ್ಯ ರಚನೆಯಲ್ಲಿ ಸಹಾಯಕರಾಗಿ ಕೆಲಸ



ಮಾಡಿದ್ದಾರೆ. ಅನೇಕ ಚಿತ್ರಗಳಿಗೆ ಸಹಾಯಕ ನಿರ್ದೇಶಕರಾಗಿಯೂ ಶ್ರಮಿಸಿರುವ ರತ್ನಾಕರ್ ಕನ್ನಡ ಚಿತ್ರಗಳಲ್ಲಿ ಹಾಸ್ಯ ಪಾತ್ರಗಳ ಪ್ರಾಧಾನ್ಯ ಕಡಿಮೆಯಾಗುತ್ತ ಬಂದಂತೆ ಅಭಿನಯದ ಅವಕಾಶಗಳಿಂದ ವಂಚಿತರಾಗಿ ಈಗ ದೊರೆಯುತ್ತಿರುವ ಸಣ್ಣ ಪುಟ್ಟ ಪಾತ್ರಗಳಲ್ಲಿ ಅಭಿನಯಿಸುತ್ತಲೇ ಚಿತ್ರರಂಗದಲ್ಲಿ ಉಳಿದಿದ್ದಾರೆ. ವಿಶಿಷ್ಟ ಸ್ವರವೇ ಅವರ ಆಸ್ತಿ.

## ರಮಾ.ಆರ್. ಟಿ.

ಶಾಲಾ ನಾಟಕವೊಂದನ್ನು ನೋಡಲು ಹೋಗಿ ತಾವೇ ಹಾಸ್ಯಪಾತ್ರ ಮಾಡಬೇಕಾಗಿ ಬಂದು, ಮುಂದೆ ಚಲನಚಿತ್ರದಲ್ಲಿ ಹಾಸ್ಯನಟಿಯಾಗಿಯೂ ಪ್ರಖ್ಯಾತರಾದವರು. ಆರ್.ಟಿ.ರಮಾ, ಎಸ್.ಕೆ.ಎ.ಚಾರಿ ನಿರ್ದೇಶನದ 'ಗೌರಿ' (೧೯೬೩) ಚಿತ್ರದ ಚಿಕ್ಕ ಪಾತ್ರವೊಂದರ ಮೂಲಕ ಚಿತ್ರರಂಗ ಪ್ರವೇಶ. 'ಮನ ಮೆಚ್ಚಿದ ಮಡದಿ' ಮುಂದಿನ ಚಿತ್ರ. 'ನನ್ನ ಕರ್ತವ್ಯ' ದಲ್ಲಿ ಬೆಂಗಳೂರು ನಾಗೇಶ್ ಎದುರು ಹಾಸ್ಯ ನಟಿಯಾಗಿ ಅಭಿನಯಿಸಿದರು. ಕನ್ನಡ ಚಿತ್ರರಂಗದಲ್ಲಿ ಇವರಿಗೆ ಹಾಸ್ಯ ಪಾತ್ರ ಖಾಯಂ ಆಗಿ ಉಳಿದುಕೊಂಡಿತು. ನರಸಿಂಹರಾಜು, ಬಾಲಕೃಷ್ಣರ ಜೋಡಿಯಾಗಿ ಹಲವಾರು ಚಿತ್ರಗಳಲ್ಲಿ ಅಭಿನಯಿಸಿದರು. ಪುಟ್ಟಣ್ಣನವರ ಚಿತ್ರದಲ್ಲಿ ರೂಪಿಸಿದ ಪಾತ್ರವೊಂದರಿಂದಾಗಿ ಇನ್ನೂ 'ಗುಡ್‌ಮಾರ್ನಿಂಗ್ ರಮಾ' ಎಂತಲೇ



ಗುರುತಿಸಲಾಗುತ್ತದೆ. ಸುಮಾರು ೬೦ ಚಿತ್ರಗಳಲ್ಲಿ ಅಭಿನಯಿಸಿರುವ ರಮಾ ಕಿರುತೆರೆ ಕಲಾವಿದರೂ ಹೌದು. ರಾಷ್ಟ್ರೀಯ ನಾಟಕ ಶಾಲೆಯಲ್ಲಿ ಮೂರು ವರ್ಷ ಅಭ್ಯಾಸ ಮಾಡಿ ಪದವಿ ಪಡೆದರು. ಬೆಂಗಳೂರು ವಿಶ್ವವಿದ್ಯಾಲಯದ ನಾಟಕ ವಿಭಾಗದಲ್ಲಿ ನಾಟಕದ ಶಿಕ್ಷಕಿಯಾಗಿಯೂ ಕಾರ್ಯ ನಿರ್ವಹಿಸಿದರು.

## ರಮಾದೇವಿ.ಬಿ

ಅತ್ತೆಯ ಪಾತ್ರಗಳಿಂದ ಹೆಸರಾದ ರಮಾದೇವಿ ಬೆಂಗಳೂರು ಜಿಲ್ಲೆಯ ಅಮರಾಪುರದಲ್ಲಿ ಜನಿಸಿದರೂ ಬಳ್ಳಾರಿ ರಮಾದೇವಿ ಎಂದೇ ಪ್ರಖ್ಯಾತರು. ಇವರ ತಾಯಿಯ ತವರು ಮನೆ ಬಳ್ಳಾರಿ. ಆದ್ದರಿಂದ ಅಲ್ಲಿಯೇ ಬಾಲ್ಯದ ವಿದ್ಯಾಭ್ಯಾಸ. ರಂಗಕಲಾವಿದ ದುರ್ಗಾರಾವ್ ಅವರನ್ನು ವಿವಾಹವಾದ ನಂತರ ಪತಿಯೊಂದಿಗೆ ನಾಟಕಗಳಲ್ಲಿ ಅಭಿನಯಿಸಲಾರಂಭಿಸಿದರು. 'ಗುಣಸಾಗರಿ' (೧೯೫೩) ಚಿತ್ರದಲ್ಲಿ ಚಿಕ್ಕ ಪಾತ್ರ ಮಾಡುವ ಮೂಲಕ ಚಿತ್ರರಂಗ ಪ್ರವೇಶ. 'ಕನ್ಯಾದಾನ'ದಲ್ಲಿ ಒಳ್ಳೆಯ ತಿರುವು ದೊರೆಯಿತು. ೧೫೦ಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲೇ ಅಲ್ಲದೆ ಸುಮಾರು ೧೦೦ ತೆಲುಗು ಚಿತ್ರಗಳಲ್ಲಿಯೂ ಅಭಿನಯಿಸಿದರು.



ನರಸಿಂಹರಾಜು ಜೋಡಿಯಾಗಿ ಹಲವಾರು ಚಿತ್ರಗಳಲ್ಲಿ ನಟಿಸಿದರು. ಮೊಮ್ಮಗಳು ಸಾಧನಾ ಕೂಡ ಚಿತ್ರನಟಿ.

## ರಮೇಶ್.ಎಸ್

ರಾಜಕಾರಣಿ. ಚಿತ್ರರಂಗದಲ್ಲಿ ಅವರ ಹಲವು ಮಂದಿ ಅನುಯಾಯಿಗಳು ಇದ್ದುದರಿಂದ, ಅವರನ್ನು ಚಿತ್ರೋದ್ಯಮಕ್ಕೆ



ಎಳೆತಂದಿತು. ಇವರು ಕನ್ನಡ ಹಾಗೂ ತಮಿಳು ಚಿತ್ರಗಳನ್ನು ನಿರ್ಮಿಸಿದರಲ್ಲದೆ ವಿತರಣೆಯನ್ನೂ ಮಾಡಿದರು. ವಾಣಿಜ್ಯ ಮಂಡಳಿಯ ಅಧ್ಯಕ್ಷರೂ ಆದರು. ಚಿತ್ರರಂಗದ ನಂಟು 'ರವಿವರ್ಮ' ಹಾಗೂ 'ಚೆಲುವ' ಚಿತ್ರಗಳನ್ನು ನಿರ್ಮಿಸುವಂತೆ ಮಾಡಿತು. ರಾಜ್ಯದ ವಾರ್ತಾ ಇಲಾಖೆಯ ಸಚಿವರಾಗಿದ್ದಾಗ ಬಂಗಾರಪ್ಪನವರ

ನೇತೃತ್ವದಲ್ಲಿ ಅಂತರರಾಷ್ಟ್ರೀಯ ಚಲನಚಿತ್ರೋತ್ಸವವನ್ನು ಕಾವೇರಿ ವಿವಾದದ ಗಲಾಟೆ, ರೈತರ ವಿರೋಧ ಪ್ರತಿಭಟನೆಗಳ ನಡುವೆ ಯಶಸ್ವಿಯಾಗಿ ನಡೆಸಿದ ಕೀರ್ತಿ ಇವರದು. ನೇರ ನುಡಿ, ಸಾಹಸ ಪ್ರವೃತ್ತಿಗೆ ಹೆಸರಾಗಿದ್ದಾರೆ.

### ರಮೇಶ್



ಅರುವತ್ತರ ದಶಕದಲ್ಲಿ ಕನ್ನಡ ಚಿತ್ರರಂಗ ಪ್ರವೇಶಿಸಿದ ರಮೇಶ್ ಮುಂಚೆ ಆಯಿಲ್ ಕಂಪೆನಿಯೊಂದರಲ್ಲಿ ಅಧಿಕಾರಿ. ಇವರು ೧೯೬೫ರಲ್ಲಿ ಟಿ.ವಿ.ಸಿಂಗ್ ಠಾಕೂರ್ ನಿರ್ದೇಶನದ 'ಕವಲೆರಡು ಕುಲವೊಂದು' ಚಿತ್ರದ ಮೂಲಕ ಚಿತ್ರ ರಂಗ ಪ್ರವೇಶಿಸಿದರು. 'ಮಿಸ್ ಲೀಲಾವತಿ', 'ಬದುಕುವ ದಾರಿ', 'ಹೂ ಬಿಸಿಲು', 'ಅದೇ ಹೃದಯ ಅದೇ ಮಮತೆ', 'ಗೃಹಲಕ್ಷ್ಮಿ', 'ಲಕ್ಷ್ಮಿ ಸರಸ್ವತಿ' 'ಆರು ಮೂರು ಒಂಬತ್ತು', 'ಸೀತಾ', 'ಅಳಿಯ ಗೆಳೆಯ', ತಂದೆ ಮಕ್ಕಳು ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ಅವಕಾಶಗಳು ಇರುವಾಗಲೇ ಆಕಸ್ಮಿಕ ಒಂದರಲ್ಲಿ ನಿಧನರಾದರು.

### ರಮೇಶ್ ಅರವಿಂದ್



ಸೂಕ್ಷ್ಮ ಸಂವೇದನೆಯ ನಟನಾಗಿ ಕನ್ನಡ ಚಿತ್ರರಂಗದಲ್ಲಿ ವಿಶೇಷವಾದ ಸ್ಥಾನವನ್ನು ಗಳಿಸಿಕೊಂಡಿರುವ ರಮೇಶ್ ಅರವಿಂದ್ ಕನ್ನಡ ಮತ್ತು ತಮಿಳು ಚಿತ್ರರಂಗಗಳೆರಡರಲ್ಲೂ ಜನಪ್ರಿಯ. ಮಧ್ಯಮ ವರ್ಗದ ಮತ್ತು ಉತ್ತಮ ಅಭಿರುಚಿಯ ಪ್ರೇಕ್ಷಕರ ಅಚ್ಚುಮೆಚ್ಚಿನ ನಟರಾಗಿ ಜನಪ್ರಿಯತೆ ಮತ್ತು ಪ್ರಶಸ್ತಿಗಳೆರಡನ್ನು ಗಳಿಸಿಕೊಂಡಿದ್ದಾರೆ. ತಮ್ಮ ಮೊದಲ ಚಿತ್ರ 'ಸುಂದರ ಸ್ವಪ್ನಗಳು' ಮೂಲಕ ಕನ್ನಡ ಪ್ರೇಕ್ಷಕರ ಗಮನ ಸೆಳೆದ ರಮೇಶ್ ಅನಂತರ ತಮಿಳು ಚಿತ್ರರಂಗದಲ್ಲಿಯೂ ಹೆಸರು ಗಳಿಸಿದರು. ಕ್ರಮೇಣ 'ಪಂಚಮವೇದ', 'ಅರಗಿಣಿ' ಮತ್ತು 'ಮಧುಮಾಸ' ಚಿತ್ರಗಳಲ್ಲಿ ಭಾವನಾಪ್ರಧಾನ ಪಾತ್ರಗಳಲ್ಲಿ ಅಭಿನಯಿಸಿ ತಮ್ಮದೇ ಆದ ಪ್ರೇಕ್ಷಕವೃಂದವನ್ನು ಬೆಳೆಸಿಕೊಂಡರು. 'ಅನುರಾಗ ಸಂಗಮ' ಚಿತ್ರ ಮತ್ತೆ ಕನ್ನಡ ಚಿತ್ರರಂಗದಲ್ಲಿ ರಮೇಶ್‌ಗೆ ಸ್ಥಾನ ತಂದುಕೊಟ್ಟಿತು. ಇವರು ಅಭಿನಯಿಸಿದ 'ಕರ್ಪೂರದ ಗೊಂಬೆ', 'ನಮ್ಮೂರ ಮಂದಾರ ಹೂವೆ', 'ಅಮೆರಿಕಾ ಅಮೆರಿಕಾ', 'ಅಮೃತ ವರ್ಷಿಣಿ', 'ಓ ಮಲ್ಲಿಗೆ', 'ಉಲ್ಟಾ ಪಲ್ಟಾ', 'ಮುಂಗಾರಿನ ಮಿಂಚು' ಮುಂತಾದ ಯಶಸ್ವಿ ಚಿತ್ರಗಳ ಸಾಲು ಸಾಲೇ ಬಂದವು. 'ಭೂಮಿ ತಾಯಿಯ ಚೊಚ್ಚಲ ಮಗ' ಚಿತ್ರದಲ್ಲಿನ ಅವರ ಅಭಿನಯ ಕೂಡ ಅತ್ಯಂತ ರೋಚಕವಾಗಿತ್ತು. ಅನೇಕ ಪ್ರಶಸ್ತಿಗಳನ್ನು ಗಳಿಸಿರುವ ರಮೇಶ್‌ರಿಗೆ 'ಅಮೆರಿಕಾ ಅಮೆರಿಕಾ'ದಲ್ಲಿನ ಅವರ ಅಭಿನಯಕ್ಕಾಗಿ ೧೯೯೬-೯೭ರ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ನಟ ಪ್ರಶಸ್ತಿ ಲಭ್ಯವಾಯಿತು.

### ರಮೇಶ್‌ಚಂದ್ರ

ಕನ್ನಡ ಚಿತ್ರರಂಗದ ಭರವಸೆಯ ಗಾಯಕ.



ಕಾಸರಗೋಡಿನಲ್ಲಿ ಜನನ. ವೃತ್ತಿಯಿಂದ ಹಾಡುಗಾರರು. ಶಾಸ್ತ್ರೀಯ ಸಂಗೀತ ಹಾಗೂ ಸುಗಮ ಸಂಗೀತ ಪ್ರಕಾರಗಳಲ್ಲಿ ತರಬೇತಿ ಪಡೆದಿದ್ದಾರೆ. ಇವರು ಸುಮಾರು ೫೦೦ಕ್ಕೂ ಹೆಚ್ಚು ಚಿತ್ರಗೀತೆಗಳನ್ನು ಹಾಡಿದ್ದಾರೆ. 'ಅನುರಾಗ ಸಂಗಮ' ಚಿತ್ರದ 'ಓ ಮಲ್ಲಿಗೆ...' ಹಾಡಿನಿಂದ ಜನಪ್ರಿಯರಾದ ಇವರು 'ಇಂದ್ರ ಧನುಷ್', 'ಟುವ್ವಿ ಟುವ್ವಿ', 'ಮುನ್ನುಡಿ', 'ಚಂದ್ರೋದಯ' ಮೊದಲಾದ ಚಿತ್ರಗಳಲ್ಲಿ ಹಾಡಿದ್ದಾರೆ. ೧೯೯೫-೯೬ನೇ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ಹಿನ್ನೆಲೆ ಗಾಯಕ ಪ್ರಶಸ್ತಿಯನ್ನು 'ಅನುರಾಗ ಸಂಗಮ' ಚಿತ್ರದ 'ಓ ಮಲ್ಲಿಗೆ....' ಹಾಡಿಗೆ ಪಡೆದಿದ್ದಾರೆ. 'ಮುನ್ನುಡಿ' ಚಿತ್ರದ ಗಾಯನಕ್ಕೂ ರಾಜ್ಯ ಸರ್ಕಾರದ ಪ್ರಶಸ್ತಿ ಬಂದಿದೆ.

### ರಮೇಶ್ ದೇಸಾಯಿ



ಪ್ರಶಸ್ತಿ ವಿಜೇತ ಯುವ ಕಲಾ ನಿರ್ದೇಶಕ. ಹುಬ್ಬಳ್ಳಿ ಮೂಲದವರು. ಬಿ.ಕಾಂ ಹಾಗೂ ಸಿವಿಲ್ ಎಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾ ಪದವಿ. ಹೆಗ್ಗೋಡಿನ ನೀನಾಸಂ ಮತ್ತು ರಾಷ್ಟ್ರೀಯ ನಾಟಕ ಶಾಲೆಯ ರಂಗ ಶಿಬಿರಗಳಲ್ಲಿ ಭಾಗವಹಿಸಿದ ಅನುಭವ. 'ಗಂಗವ್ವ ಗಂಗಾಮಾಯಿ' ಚಿತ್ರದ ಮೂಲಕ ಕಲಾ ನಿರ್ದೇಶಕರಾಗಿ ಪ್ರವೇಶ. 'ವಿಜಯ ಕಂಕಣ', 'ಝಾಡಿರೋ ಪಂಖೇರೋ' (ಲಂಬಾಣಿ), 'ಟೈಂ ಬಾಂಬ್', 'ಇಂಡಿಯನ್', 'ಹೊಂಗಿರಣ', 'ಹಲೋ ಡ್ಯಾಡಿ', 'ಪುಟ್ಮಲ್ಲಿ', 'ಶಿವಸೈನ್ಯ', 'ತಾಯಿ ಸಾಹೇಬ' ಮೊದಲಾದ ಚಿತ್ರಗಳಲ್ಲಿ ಕಾರ್ಯ ನಿರ್ವಹಣೆ. ೧೯೯೪-೯೫ರಲ್ಲಿ 'ಗಂಗವ್ವ ಗಂಗಾಮಾಯಿ' ಚಿತ್ರ ಹಾಗೂ ೧೯೯೭-೯೮ರಲ್ಲಿ 'ತಾಯಿ ಸಾಹೇಬ' ಚಿತ್ರದ ಕಲಾ ನಿರ್ದೇಶನಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಗಳು ಬಂದಿವೆ.

### ರಮೇಶ್‌ಭಟ್

ಚಲನಚಿತ್ರ ಹಾಗೂ ಕಿರುತೆರೆಯ ಪ್ರಸಿದ್ಧ ಕಲಾವಿದ. ಹವ್ಯಾಸಿ ರಂಗಭೂಮಿಯಲ್ಲಿ ಅಭಿನಯಿಸುವ ಮೂಲಕ ಕಲಾರಂಗ ಪ್ರವೇಶಿಸಿದ ರಮೇಶ್‌ಭಟ್, ನಟ



ಶಂಕರ್‌ನಾಗ್ ಅವರ ಆತ್ಮೀಯರಾಗಿದರು. ಶಂಕರ್‌ನಾಗ್ ನಿರ್ದೇಶನದ 'ಮಿಂಚಿನ ಓಟ' ಸೇರಿದಂತೆ ಹಲವಾರು ಚಿತ್ರಗಳಲ್ಲಿ ಅತ್ಯುತ್ತಮ ಅವಕಾಶಗಳು ದೊರೆತವು. 'ಕಾಡು' (೧೯೭೪) ಚಿತ್ರದ ಮೂಲಕ ಚಿತ್ರರಂಗಕ್ಕೆ ಬಂದ ಇವರು ಚಲನಚಿತ್ರದಲ್ಲಿ ಗುರುತಿಸಿಕೊಂಡಿದ್ದು 'ಅಬಚೂರಿನ ಪೋಸ್ಟಾಫೀಸ್' ಚಿತ್ರದಲ್ಲಿ. 'ಪರಮೇಶಿ ಪ್ರೇಮ ಪ್ರಸಂಗ' ರಮೇಶ್‌ಭಟ್ ನಿರ್ದೇಶನದ ಚಿತ್ರ. 'ನಿಷ್ಕರ್ಷ' ಚಿತ್ರದಲ್ಲಿ ವಿಶೇಷ ಗಮನ ಸೆಳೆದ ರಮೇಶ್‌ಭಟ್ ಇನ್ನೂ ಅನೇಕ ಚಿತ್ರಗಳಲ್ಲಿ ಗಮನೀಯ ಅಭಿನಯ ನೀಡಿದಾರೆ. ದೂರದರ್ಶನ ಧಾರಾವಾಹಿಯಲ್ಲಿಯೂ ಜನಪ್ರಿಯತೆ ಗಳಿಸಿದಾರೆ.

### ರಮೇಶ್ ಮಂಡ್ಯ

ಕನ್ನಡ ಚಿತ್ರರಂಗದಲ್ಲಿ ಈಚಿನ ವರ್ಷಗಳಲ್ಲಿ ಹೆಚ್ಚು ಗಮನ ಸೆಳೆಯುತ್ತಿರುವ ಪೋಷಕ



ನಟ ಮಂಡ್ಯ ರಮೇಶ್. ಚಲನಚಿತ್ರ ಮಾಧ್ಯಮಕ್ಕೆ ಕನ್ನಡ ರಂಗಭೂಮಿಯ ಇನ್ನೊಂದು ಪ್ರಮುಖ ಕೊಡುಗೆ. ಗಿರೀಶ್ ಕಾರ್ನಾಡ್ ರಚಿಸಿದ 'ನಾಗಮಂಡಲ' ನಾಟಕದಲ್ಲಿ ಅವರು ಯಶಸ್ವಿಯಾಗಿ ಅಭಿನಯಿಸುತ್ತಿದ್ದ ಪಾತ್ರವನ್ನೇ ನಾಗಾಭರಣ ನಿರ್ದೇಶಿಸಿದ ಆ ನಾಟಕದ ಚಲನಚಿತ್ರ ಅವತರಣಿಕೆಯಲ್ಲಿಯೂ ಪರಿಣಾಮಕಾರಿಯಾಗಿ ಅಭಿನಯಿಸಿ ರಾಜ್ಯ ಸರ್ಕಾರದ ೧೯೯೬-೯೭ರ ಅತ್ಯುತ್ತಮ ಪೋಷಕ ನಟ ಪ್ರಶಸ್ತಿಯನ್ನು ಪಡೆದುಕೊಂಡರು. ಅವರ ಮೊದಲ ಚಿತ್ರ ನಾಗಾಭರಣರವರ ನಿರ್ದೇಶನದ 'ಜನುಮದ ಜೋಡಿ'. ಹಾಸ್ಯಪಾತ್ರಗಳಲ್ಲಿ ಮಾತ್ರವಲ್ಲದೆ ಗಂಭೀರವಾದ ಪೋಷಕ ಪಾತ್ರಗಳಲ್ಲಿಯೂ ರಮೇಶ್ ತಮ್ಮ ಪ್ರತಿಭೆಯನ್ನು ತೋರಿದ್ದಾರೆ. ನಾಗಾಭರಣ ನಿರ್ದೇಶಿಸಿದ 'ವಿಮೋಚನೆ' ಚಿತ್ರದಲ್ಲಿ ಪ್ರಮುಖ ಪಾತ್ರದಲ್ಲಿ ಗಮನ ಸೆಳೆದ ರಮೇಶ್ 'ಹೂ ಮಳೆ', 'ಹೃದಯಾಂಜಲಿ' ಮುಂತಾದ ಚಿತ್ರಗಳಲ್ಲಿಯೂ ಅಭಿನಯಿಸಿ ತಮ್ಮದೇ ಆದ ಶೈಲಿಯೊಂದನ್ನು ರೂಪಿಸಿಕೊಂಡಿದ್ದಾರೆ. ಬಿ.ವಿ.ಕಾರಂತರ ನೇತೃತ್ವದ ರಂಗಾಯಣದಲ್ಲಿ ನಟರಾಗಿ ಹೆಸರು ಗಳಿಸಿದ ರಮೇಶ್ ಹೆಸರೇ ಸೂಚಿಸುವಂತೆ ಮಂಡ್ಯದವರು. ಅಮೆರಿಕಾ, ಜರ್ಮನಿ, ಆಸ್ಟ್ರಿಯಾ, ಹಂಗೇರಿ ಮುಂತಾದ ವಿದೇಶಗಳಲ್ಲಿ ಪ್ರವಾಸ ಮಾಡಿ ಅಲ್ಲಿಯ ರಂಗಭೂಮಿಯ ಬಗ್ಗೆಯೂ ವಿಶೇಷವಾದ ಅಧ್ಯಯನ ಮಾಡಿದ್ದಾರೆ. ರಂಗಭೂಮಿಯಲ್ಲಿ ಅವರಿಗೆ ಅನೇಕ ಪ್ರಶಸ್ತಿಗಳು ಲಭ್ಯವಾಗಿದೆ.

### ರಮೇಶ್ ರಾವ್

ಕನ್ನಡ ಚಿತ್ರರಂಗದ ಉದಯೋನ್ಮುಖ ಗೀತ



ರಚನಕಾರ, ಸಂಭಾಷಣಕಾರ. ದಕ್ಷಿಣ ಕನ್ನಡದ ಪುತ್ತೂರು ಹುಟ್ಟೂರು. ಪದವೀಧರ. ಬಿ.ರಾಮಮೂರ್ತಿ ನಿರ್ದೇಶನದ 'ಲವ್ ಟ್ರೈನಿಂಗ್' ಚಿತ್ರ ಕ್ಕೆ ಗೀತೆ ರಚಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ರಮೇಶ್‌ರಾವ್ ಸಂಭಾಷಣೆ ರಚಿಸುವುದರ ಜೊತೆ ಸಹ ನಿರ್ದೇಶನ ಮಾಡಿ, ಅಭಿನಯಿಸಿಯೂ ಇದ್ದಾರೆ. 'ಇಂದ್ರ ಧನುಷ್' ಚಿತ್ರದ ಕಥೆ ಹಾಗೂ 'ಭವಾನಿ', 'ಗಾಜನೂರು ಗಂಡು', 'ನೀ ಮುಡಿದ ಮಲ್ಲಿಗೆ', 'ಶಿವ' ಮೊದಲಾದ ೨೦ಕ್ಕೂ ಹೆಚ್ಚು ಚಿತ್ರಗಳಿಗೆ ಗೀತೆಯನ್ನು ರಚಿಸಿದ್ದಾರೆ. 'ಓ ಮಲ್ಲಿಗೆ', 'ಇಂದ್ರ ಧನುಷ್' ಮೊದಲಾದ ಚಿತ್ರಗಳಿಗೆ ಸಂಭಾಷಣೆ ಬರೆದಿದ್ದಾರೆ. 'ಮರಣ ಮೃದಂಗ', 'ಓ ಮಲ್ಲಿಗೆ', 'ತುತ್ತಾ ಮುತ್ತಾ', 'ಎಕೆ 47' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

## ರವಿಚಂದ್ರನ್.ವಿ

ಹಿರಿಯ ಚಿತ್ರ ನಿರ್ಮಾಪಕ-ವಿತರಕ ಎನ್.ವೀರಾಸ್ವಾಮಿಯವರ ಪುತ್ರ. ಬೆಂಗಳೂರಿನ ಎಂ.ಇ.ಎಸ್ ಕಾಲೇಜಿನ ವಿದ್ಯಾರ್ಥಿ. ಕಾಲೇಜು ವಿದ್ಯಾಭ್ಯಾಸದ ನಂತರ ತಂದೆ ಸ್ಥಾಪಿಸಿದ್ದ ಈಶ್ವರಿ ಪ್ರೊಡಕ್ಷನ್ಸ್, ಈಶ್ವರಿ ಪಿಕ್ಚರ್ಸ್ ಮುಂತಾದ ಸಂಸ್ಥೆಗಳತ್ತ ಗಮನ ಹರಿಸಿದರು. ನಿರ್ಮಾಣ, ನಿರ್ವಹಣೆಗಳತ್ತ ಗಮನ ಹರಿಸುತ್ತ ಇದ್ದ ಯುವಕ 'ಖದೀಮ ಕಳ್ಳರು' ಚಿತ್ರದ ಒಂದು ಪುಟ್ಟಪಾತ್ರದಿಂದ ತೆರೆಗೆ ಬಂದರು. ತಂದೆ ನಿರ್ಮಿಸಿದ 'ಚಕ್ರವ್ಯೂಹ' ಚಿತ್ರದಲ್ಲಿ ಪುಟ್ಟ ಖಳನ ಪಾತ್ರ ನಿರ್ವಹಿಸಿದರು. ನಂತರ 'ನಾನು ನನ್ನ ಹೆಂಡ್ತಿ' ಚಿತ್ರದಿಂದ ನಾಯಕನಾಗಿ ಪರಿಚಿತರಾದರು. ಅಲ್ಲಿಂದ ನಾಯಕರಾಗಿ ಮುಂದುವರಿದರು. ಮೊದಲಿನಿಂದಲೂ ಕನಸುಗಳನ್ನು ಬೆನ್ನಿಗೆ ಕಟ್ಟಿಕೊಂಡೇ ಇದ್ದ ರವಿಚಂದ್ರನ್ ತಮ್ಮ ಪ್ರತೀ ಚಿತ್ರದಲ್ಲೂ ಹೊಸತನ ತರಲು ಪ್ರಯತ್ನಿಸಿದರು. ಕನ್ನಡದ ಮಟ್ಟಿಗೆ ಮೊದಲ ಪ್ರಯತ್ನವೆನ್ನುವ 'ಪ್ರೇಮಲೋಕ'ವನ್ನು ಅದ್ದೂರಿಯಾಗಿ ನಿರ್ಮಿಸಿ, ನಿರ್ದೇಶಿಸಿದರು. ಚಿತ್ರಸಾಹಿತಿ ಹಂಸಲೇಖ ನೆರವಿನಿಂದ ನವೀನ ರೀತಿಯ ಹಾಡುಗಳನ್ನು ಜೊತೆಗೆ ದೃಶ್ಯ ವೈಭವವನ್ನು



ನೀಡಿದರು. ತಾಂತ್ರಿಕತೆಗೆ ಹೆಚ್ಚು ಒತ್ತುಕೊಟ್ಟರು. 'ಪ್ರೇಮಲೋಕ' ಇತಿಹಾಸವಾಯಿತು. ಗಳಿಕೆಯ ದೃಷ್ಟಿಯಿಂದ ಬಹಳ ಯಶಸ್ವಿಯಾದ 'ರಣಧೀರ', 'ಪುಟ್ನಂಜ', 'ರಾಮಾಚಾರಿ', 'ಹಳ್ಳಿ ಮೇಷ್ಟ್ರು', 'ಅಣ್ಣಯ್ಯ' ಮೊದಲಾದ ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದರು. ಅದ್ದೂರಿಯಾಗಿ ನಿರ್ಮಿಸಿದ 'ಶಾಂತಿಕ್ರಾಂತಿ', 'ಕಿಂದರಜೋಗಿ', 'ಸಿಪಾಯಿ', 'ಕಲಾವಿದ' ಸೋತಾಗ ಧೃತಿಗೆಡದೆ ಚಿತ್ರ ನಿರ್ಮಾಣ ಮುಂದುವರಿಸಿದರು. ಹೊರಗಿನ ನಿರ್ಮಾಪಕರ ಚಿತ್ರಗಳಲ್ಲೂ ಅಭಿನಯಿಸಿದರು. 'ಅಂಜದ ಗಂಡು', 'ಯುಗಪುರುಷ', 'ಯುದ್ಧಕಾಂಡ', 'ಯಾರೇ ನೀನು ಚೆಲುವೆ', 'ಸಂಗ್ರಾಮ' ಮೊದಲಾದವು ಅವರು ಅಭಿನಯಿಸಿದ ಕೆಲವು ಜನಪ್ರಿಯ ಚಿತ್ರಗಳು. ಕನ್ನಡ ಚಿತ್ರರಂಗವನ್ನು ರಾಷ್ಟ್ರಮಟ್ಟದಲ್ಲಿ ಅದರ ತಾಂತ್ರಿಕತೆ, ಅದ್ದೂರಿತನದಿಂದ ಗುರುತಿಸುವಂತೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದರು. ಸೀಮಿತವಾಗಿದ್ದ ಕನ್ನಡ ಚಿತ್ರ ಮಾರುಕಟ್ಟೆಯನ್ನು ವಿಸ್ತರಗೊಳಿಸಿದರು. ಕ್ಯಾಸೆಟ್ ಪ್ರಪಂಚದಲ್ಲಿ ಹೊಸ ಕ್ರಾಂತಿ ಉಂಟು ಮಾಡಿದರು. ಒಂದು ಚಿತ್ರದ ಗಳಿಕೆ, ಖರ್ಚು - ವೆಚ್ಚ ಮೊದಲಾದ ಗೋಪ್ಯವಾಗಿಡುತ್ತಿದ್ದ ವಿಷಯವನ್ನು ಬಹಿರಂಗ ಪಡಿಸಿ ಮೊದಲ ಬಾರಿಗೆ ಸಾಮಾನ್ಯರಿಗೂ ಚಿತ್ರದ ಆಗು ಹೋಗುಗಳ ಪರಿಚಯ ಮಾಡಿಕೊಟ್ಟ ಎದೆಗಾರಿಕೆ ಇವರದು. ನಿರ್ಮಾಪಕನಾಗಿ ಹಲವು ಕಲಾವಿದರನ್ನು ಪರಿಚಯಿಸಿದರು. ಜೂಹಿ ಚಾವ್ಲಾ, ಖುಷ್ಬೂ ಮೊದಲಾದ ತಾರೆಯರನ್ನು ಕನ್ನಡಕ್ಕೆ ಕರೆತಂದು ಅವರ ಚಿತ್ರಜೀವನದಲ್ಲಿ ಮಹತ್ತರವಾದ ತಿರುವನ್ನು ತಂದರು. ಯುವ ಜನತೆಗೆ ಪ್ರಿಯವಾಗುವಂಥ ವಿಷಯಗಳನ್ನು ದೃಶ್ಯಮಾಧ್ಯಮಕ್ಕೆ ಅಳವಡಿಸಿ ಯಶಸ್ವಿಯಾದರು. ತಮ್ಮದೇ ಆದ ಡಿ.ಟಿ.ಎಸ್ ಧ್ವನಿಮುದ್ರಣ ಕೇಂದ್ರವನ್ನು ಸ್ಥಾಪಿಸಿದರು. ಈಶ್ವರಿ ಪ್ರೊಡಕ್ಷನ್ಸ್ ಲಾಂಛನದಲ್ಲಿ ಅವರು ನಿರ್ಮಿಸಿದ 'ಶಾಂತಿ ಕ್ರಾಂತಿ' ೧೯೯೦-೯೧ನೇ ಸಾಲಿನ ರಾಜ್ಯಸರ್ಕಾರದ ವಿಶೇಷ ತಂತ್ರಜ್ಞಾನ ಪ್ರಶಸ್ತಿ ಪಡೆಯಿತು.

## ರವಿಶಂಕರ್ ಬಿ.



ಕನ್ನಡ ಚಿತ್ರರಂಗದ ಖ್ಯಾತ ಚಿತ್ರಸಾಹಿತಿ ಬಿ.ಉದಯಶಂಕರ್‌ರವರ ಕಿರಿಯ ಪುತ್ರ. ಹಾಸ್ಯನಟನಾಗಿ 'ಆನಂದ್' (೧೯೮೬) ಚಿತ್ರದಿಂದ ಚಿತ್ರರಂಗಕ್ಕೆ ಪ್ರವೇಶ. ಬಹುತೇಕ ರಾಜಕುಮಾರ್ ಅವರ ಸಂಸ್ಥೆಯ ಚಿತ್ರಗಳಲ್ಲಿ ಅಭಿನಯಿಸಿದರು. 'ರಥಸಪ್ತಮಿ', 'ಭೂಮಿ ತಾಯಾಣೆ', 'ಕರುಣಾಮಯಿ', 'ನಂಜುಂಡಿ ಕಲ್ಯಾಣ', 'ಡ್ಯಾನ್ಸ್ ರಾಜಾ ಡ್ಯಾನ್ಸ್' ಮೊದಲಾದವು ಮುಖ್ಯ ಚಿತ್ರಗಳು. ರಸ್ತೆ ಅಪಘಾತದಲ್ಲಿ ಸಾವನ್ನಪ್ಪಿದರು.

## ರವಿ ಶ್ರೀವತ್ಸ

ಸಂಭಾಷಣೆಕಾರ ಮತ್ತು ಸಹ ನಿರ್ದೇಶಕ. ಬೆಂಗಳೂರಿನಲ್ಲಿ ಜನಿಸಿದ ರವಿಶ್ರೀವತ್ಸ



ಬಿ.ಕಾಂ.ಪದವೀಧರ. ೧೯೯೫ರಲ್ಲಿ ನಾಗಣ್ಣ ನಿರ್ದೇಶನದ 'ಲೇಡಿ ಪೊಲೀಸ್' ಚಿತ್ರದ ಸಂಭಾಷಣಾಕಾರನಾಗಿ ಚಿತ್ರರಂಗ ಪ್ರವೇಶಿಸಿದರು. ಸುಮಾರು ೨೫ಕ್ಕೂ ಹೆಚ್ಚು ಚಿತ್ರಗಳಿಗೆ ಸಂಭಾಷಣೆ ಒದಗಿಸಿದ್ದಾರೆ. 'ಲೇಡಿ ಪೊಲೀಸ್', 'ಪುಟ್ಮಲ್ಲಿ', 'ಅಗ್ನಿ ಐ.ಪಿ.ಎಸ್', 'ಧೈರ್ಯ', 'ಲೇಡಿ ಕಮೀಷನರ್', 'ಜಾಕಿಚಾನ್', 'ಯಜಮಾನ', 'ಕಿಲ್ಲರ್', 'ಸಿಂಹದ ಗುರಿ' ಮುಂತಾದವುಗಳಲ್ಲಿ ಸಂಭಾಷಣಾಕಾರರಾಗಿ ಕೆಲಸ ಮಾಡಿದಾರೆ. ಟೈಗರ್ ಪ್ರಭಾಕರ್ ಅವರ ಆಪ್ತರು. ಅವರ 'ಮೇಜರ್' ಚಿತ್ರಕ್ಕೆ ಸಾಹಿತ್ಯ ನಿರ್ವಹಿಸಿದರು. ಇವರ ತಂದೆ ಶ್ರೀವತ್ಸ ರಂಗನಾಥರೂ ಒಳ್ಳೆಯ ಬರಹಗಾರರು. ಒಂದೆರಡು ಚಿತ್ರಗಳನ್ನು ನಿರ್ದೇಶಿಸಿಯೂ ಇದ್ದರು. ರವಿ ಶ್ರೀವತ್ಸ 'ದಂಡನಾಯಕ', 'ಅಂಡರ್‌ವರ್ಲ್ಡ್', 'ಒನ್ ಮ್ಯಾನ್ ಆರ್ಮಿ', 'ದುರ್ಗದ ಹುಲಿ' ಚಿತ್ರದ ಸಹ ನಿರ್ದೇಶನವನ್ನೂ ಮಾಡಿದಾರೆ. ಜನಪ್ರಿಯ ಚಿತ್ರ 'ಯಜಮಾನ'ಕ್ಕೆ ಇವರದೇ ಸಂಭಾಷಣೆಯಿತ್ತು. ಪುನರ್ನಿರ್ಮಿತ ಚಿತ್ರವಾದರೂ ಕನ್ನಡದ ಜಾಯಮಾನಕ್ಕೆ ಒಗ್ಗುವಂತೆ ಮಾತುಗಳನ್ನು ಹೊಂದಿಸಿದ ರವಿಶ್ರೀವತ್ಸರ ಜಾಣತನ ಎಲ್ಲರಿಗೂ ಮೆಚ್ಚಾಯಿತು. ವಿಷ್ಣುವರ್ಧನ್ ತಮ್ಮ ಅಭಿನಯದ ಚಿತ್ರಗಳಿಗೆ ಇವರನ್ನೇ ಸಾಹಿತ್ಯ ರಚನೆಗೆ ಆಹ್ವಾನಿಸಲು ಸೂಚಿಸುವಷ್ಟು ಮುಖ್ಯರಾದರು.

## ರವೀಂದ್ರನಾಥ್

ನಿರ್ದೇಶಕ ರವೀಂದ್ರನಾಥ್ ಮೂಲತಃ ಶಿವಮೊಗ್ಗದವರು. ಬಿ.ಎಸ್‌ಸಿ ಪದವೀಧರ.



ಮದ್ರಾಸಿನ ಫಿಲಂ ಇನ್‌ಸ್ಟಿಟ್ಯೂಟಿನಲ್ಲಿ ಕಲಿಕೆ. 'ಗಂಡ ಹೆಂಡತಿ', 'ತಪ್ಪಿದ ತಾಳ', 'ಐ ಲವ್ ಯೂ', 'ಭಕ್ತ ಸಿರಿಯಾಳ' ಚಿತ್ರಗಳಿಗೆ ಸಹ ನಿರ್ದೇಶಕರಾಗಿ ಕಾರ್ಯನಿರ್ವಹಣೆ. ೧೯೮೪ರಲ್ಲಿ ಬಿಡುಗಡೆಯಾದ 'ಅಪರಂಜಿ' ಇವರ ಪ್ರಥಮ ನಿರ್ದೇಶನದ ಚಿತ್ರ. ಸುಮಾರು ೯ ಚಿತ್ರಗಳನ್ನು ನಿರ್ದೇಶಿಸಿರುತ್ತಾರೆ. ಪ್ರಮುಖ ಚಿತ್ರಗಳು 'ಲಂಚ ಲಂಚ ಲಂಚ', 'ತಾಯಿ ಕೊಟ್ಟ ತಾಳಿ', 'ನಮ್ಮೂರ ಹುಡ್ಗ'. ಇವರು ನಿರ್ದೇಶಿಸಿದ 'ವೀರಪ್ಪನ್' ಚಿತ್ರಕ್ಕೆ ೧೯೯೧-೯೨ರ ರಾಜ್ಯ ಸರ್ಕಾರದ ಪ್ರಶಸ್ತಿ ಲಭಿಸಿದೆ.

## ರಾಂ ಶೆಟ್ಟಿ



ಹಿಂದಿ ಚಿತ್ರರಂಗದ ಖ್ಯಾತ ಸಾಹಸ ಸಂಯೋಜಕ ರಾಂ ಶೆಟ್ಟಿ ದಕ್ಷಿಣ ಕನ್ನಡ ಜಿಲ್ಲೆಯವರು. ಕನ್ನಡ, ಹಿಂದಿ, ಒರಿಯಾ ಭಾಷೆಯ ಸುಮಾರು ೪೦೦ಕ್ಕೂ ಹೆಚ್ಚು ಚಿತ್ರಗಳಿಗೆ ಸಾಹಸ ಸಂಯೋಜಕರಾಗಿ ದುಡಿದವರು. ಆನಂದ ಫಿಲ್ಮ್ ಕಂಬೈನ್ಸ್ ಎಂಬ ನಿರ್ಮಾಣ ಸಂಸ್ಥೆಯನ್ನು ಕಟ್ಟಿ 'ಬದ್ಕೆರೆ ಬುಡ್ಲೆ' ಎಂಬ ತುಳು ಚಿತ್ರವನ್ನು ನಿರ್ಮಿಸಿದರು. ಕನ್ನಡ ಚಿತ್ರಗಳಿಗೂ ಸಾಹಸ ಸಂಯೋಜಿಸಿದ್ದಾರೆ. 'ಎ.ಕೆ. 47' ಅವುಗಳಲ್ಲಿ ಮುಖ್ಯವಾದುದು.

## ರಾಘವೇಂದ್ರ ರಾಜಕುಮಾರ್

ಕನ್ನಡ ಚಿತ್ರರಂಗದ ಹಿರಿಯ ನಟ ರಾಜಕುಮಾರ್ ಅವರ ದ್ವಿತೀಯ ಪುತ್ರ. ರಕ್ತಗತವಾಗಿ ಬಂದ ಕಲೆ ಸಿನಿಮಾ ರಂಗಕ್ಕೆ ಎಳೆದು ತಂದಿತು. ಮದ್ರಾಸಿನಲ್ಲಿ



೧೯೬೫ರಲ್ಲಿ ಜನಿಸಿದ ರಾಘವೇಂದ್ರ ರಾಜಕುಮಾರ್ ಪಿ.ಯು.ಸಿ. ಮುಗಿಸಿ, ವೈದ್ಯಕೀಯ ಕಾಲೇಜಿಗೆ ಹೋಗಿ ವ್ಯಾಸಂಗ ಅರ್ಧಕ್ಕೇ ನಿಲ್ಲಿಸಿದರು. ಗಾಯನ ಕಲೆಯಲ್ಲಿ ಆಸಕ್ತಿ ಇದ್ದುದರಿಂದ ಚಲನಚಿತ್ರಕ್ಕೆ ಬರುವ ಮೊದಲು ಆದರ್ಶ ಫಿಲಂ ಇನ್ಸ್‌ಸ್ಟಿಟ್ಯೂಟ್‌ನಲ್ಲಿ ಗಾಯನ, ಅಭಿನಯ ಕಲಿತರು. ನಾಯಕನಾಗಿ 'ಚಿರಂಜೀವಿ ಸುಧಾಕರ್' ಚಿತ್ರದಿಂದ ೧೯೮೮ರಲ್ಲಿ ತೆರೆಗೆ ಪರಿಚಿತರಾದರು. ಚಿತ್ರ ನಿರೀಕ್ಷಿತ ಯಶಸ್ಸು ಗಳಿಸಲಿಲ್ಲ. ಮರುವರ್ಷ ತೆರೆಗೆ ಬಂದ 'ನಂಜುಂಡಿ ಕಲ್ಯಾಣ' ಅದ್ಭುತ ಯಶಸ್ಸು ಗಳಿಸಿತು. ಕನ್ನಡ ಚಿತ್ರರಂಗಕ್ಕೆ ಮತ್ತೊಬ್ಬ ನಾಯಕನನ್ನು ನೀಡಿತು. 'ಗಜಪತಿ ಗರ್ವಭಂಗ', 'ಅನುಕೂಲಕ್ಕೊಬ್ಬ ಗಂಡ', 'ಕಲ್ಯಾಣ ಮಂಟಪ', 'ಗೆಲುವಿನ ಸರದಾರ' ಮೊದಲಾದವು ಅವರ ಅಭಿನಯದ ಕೆಲವು ಚಿತ್ರಗಳು.

## ರಾಘವೇಂದ್ರರಾವ್



'ರಘು' ಎಂದೇ ಪರಿಚಿತರಾದ ಇವರು ಮೈಸೂರಿನವರು. ಹಿರಿಯ ಚಿತ್ರ ವಿತರಕರು. ಹಿಂದೆ ದೂರವಾಣಿ ಇಲಾಖೆಯಲ್ಲಿ ಇದ್ದುಕೊಂಡೇ ಚಿತ್ರರಂಗ ಪ್ರವೇಶಿಸಿದರು. ನಾಲ್ಕು ದಶಕಗಳ ಕಾಲ ಪ್ರಮುಖ ಚಿತ್ರಗಳನ್ನು ವಿತರಿಸಿದರು.

ತ್ರಿಮೂರ್ತಿ ಕಂಬೈನ್ಸ್ ಲಾಂಛನದಲ್ಲಿ ಇತರ ಪಾಲುದಾರರಾದ ವೇದನಾರಾಯಣ, ಶಿವಣ್ಣ ಅವರೊಂದಿಗೆ ಸಂಸ್ಥೆಯನ್ನು ನಡೆಸಿಕೊಂಡು ಬಂದರು. ನಂತರ ತಾವೊಬ್ಬರೆ ಸಂಸ್ಥೆಯ ಜವಾಬ್ದಾರಿಯನ್ನು ವಹಿಸಿಕೊಂಡು ನಡೆಸುತ್ತಾ ಬಂದಿದ್ದರು.

**ರಾಜಕುಮಾರ್**

ಕನ್ನಡ ಚಿತ್ರರಂಗ ಎಂದಾಗ ಮೊದಲು ನೆನಪಾಗುವ ಹೆಸರು ರಾಜಕುಮಾರ್. ಕನ್ನಡ ಚಿತ್ರರಂಗ ಕಂಡ ಅದ್ಭುತ ನಟ. ಕನ್ನಡ ಚಿತ್ರೋದ್ಯಮದ ಅವಿಭಾಜ್ಯ ಅಂಗವೆನಿಸಿರುವ ರಾಜಕುಮಾರ್ ರಂಗಭೂಮಿಯ ಕೊಡುಗೆ. ಸಿಂಗಾನಲ್ಲೂರು ಪುಟ್ಟಸ್ವಾಮಯ್ಯ ವೃತ್ತಿರಂಗಭೂಮಿಯ ನಟರು. ಗುಬ್ಬಿ ನಾಟಕ



ಕಂಪೆನಿಯ ನಾಟಕಗಳಲ್ಲಿ ಕಂಸ, ರಾವಣ, ಹಿರಣ್ಯಕಶಿಪು ಮುಂತಾದ ಪಾತ್ರಗಳಿಂದ ಜನಮನ ಸೂರೆಗೊಂಡಿದ್ದರು. ಅವರ ಹಿರಿಯ ಮಗನಾಗಿ ಮುತ್ತುರಾಜನೆಂಬ ಹೆಸರಿನಿಂದ ಏಪ್ರಿಲ್ ೨೪ರಂದು ೧೯೨೯ರಲ್ಲಿ ಜನಿಸಿದರು ರಾಜಕುಮಾರ್. ನಾಲ್ಕು ಮಕ್ಕಳಲ್ಲಿ ಮೊದಲನೆಯ ಮಗುವಾಗಿ ಹುಟ್ಟಿದ ಮುತ್ತುರಾಜ ಓದಿದ್ದು ಮೂರನೇ ತರಗತಿವರೆಗೆ. ಓದನ್ನು ಬಿಟ್ಟು ಗುಬ್ಬಿ ನಾಟಕ ಕಂಪೆನಿಯಲ್ಲಿ ಅಪ್ಪನೊಂದಿಗೆ ಸೇರಿದ ಮುತ್ತುರಾಜ ನಾಟಕಕ್ಕೆ ಅಗತ್ಯವಾದ ಸಂಗೀತವನ್ನು ಶಾಸ್ತ್ರೋಕ್ತವಾಗಿ ಕಲಿಯಲು ಆರಂಭಿಸಿದರು. ಸುಮಾರು ೨೫ ವರ್ಷಗಳ ಕಾಲ ರಂಗಭೂಮಿಯಲ್ಲಿ ಪ್ರಮುಖ ರಂಗನಟನಾಗಿ ಅನುಭವ ಗಳಿಸಿದರು. ಎ.ವಿ.ಎಂ ಹಾಗೂ ಕರ್ನಾಟಕ ಫಿಲಂಸ್‌ನ ಜಂಟಿ ತಯಾರಿಕೆಯಾದ 'ಬೇಡರ ಕಣ್ಣಪ್ಪ' ಚಿತ್ರದ ಮೂಲಕ ೧೯೫೪ರಲ್ಲಿ ನಾಯಕ ನಟರಾಗಿ ಚಿತ್ರರಂಗ ಪ್ರವೇಶಿಸಿದರು. ಇದೇ ಚಿತ್ರದಿಂದ 'ಮುತ್ತುರಾಜ' ರಾಜಕುಮಾರ್ ಆಗಿ ಪರಿಚಿತರಾದರು. ಅಲ್ಲಿಂದ ಮುಂದೆ ಐದು ದಶಕಗಳನ್ನು ಕಂಡ ಕೆಲವೇ ನಟರಲ್ಲಿ ದಾಖಲೆಗಳನ್ನು ನಿರ್ಮಿಸುತ್ತ ಬಂದಿರುವ ರಾಜಕುಮಾರ್ ಚಿತ್ರರಂಗದಲ್ಲಿ ಐದು ದಶಕಗಳನ್ನು ಕಂಡ ಕೆಲವೇ ನಟರಲ್ಲಿ ಒಬ್ಬರು. ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಸಾಹಸಮಯ, ಭಕ್ತಿ ಪ್ರಧಾನ ಹೀಗೆ ಎಲ್ಲಾ ಬಗೆಯ ಚಿತ್ರಗಳಲ್ಲಿ ಅಭಿನಯಿಸಿ ಸೈ ಅನಿಸಿಕೊಂಡಿದ್ದಾರೆ. 'ಶ್ರೀ ರಾಮಾಂಜನೇಯ ಯುದ್ಧ'ದಲ್ಲಿ ರಾಮನಾಗಿ, 'ಶ್ರೀ ಕೃಷ್ಣ ರುಕ್ಮಿಣಿ ಸತ್ಯಭಾಮ'ದ ಕೃಷ್ಣನಾಗಿ, 'ಶ್ರೀ ಕೃಷ್ಣದೇವರಾಯ'ದ ಕೃಷ್ಣದೇವರಾಯನಾಗಿ, 'ಇಮ್ಮಡಿ ಪುಲಿಕೇಶಿ' ಚಿತ್ರದ ಪುಲಿಕೇಶಿಯಾಗಿ ಗಮನ ಸೆಳೆದರೆ, 'ಬಂಗಾರದ ಮನುಷ್ಯ'ದ ರಾಜೀವನಾಗಿ, 'ಭಕ್ತ ಕನಕದಾಸ'ದ ಕನಕದಾಸನಾಗಿ, 'ಮಂತ್ರಾಲಯ ಮಹಾತ್ಮೆಯ' ರಾಘವೇಂದ್ರ ಸ್ವಾಮಿಗಳಾಗಿ, 'ನಾನೊಬ್ಬ ಕಳ್ಳ'ದ ಕಳ್ಳನಾಗಿ ಬಗೆ ಬಗೆಯ ಪಾತ್ರವಲ್ಲಿ ರಂಜಿಸಿದ ರಾಜಕುಮಾರ್ ೨೦೫ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಐದು ದಶಕಗಳ ಕಾಲ ನಾಯಕರಾಗಿ ಮೆರೆದ ರಾಜಕುಮಾರ್ ದಾಖಲಿಸಿದ ದಾಖಲೆಗಳಿಗೆ ಲೆಕ್ಕವೇ ಇಲ್ಲ. 'ಭಾಗ್ಯವಂತರು', 'ಮಯೂರ', 'ನ್ಯಾಯವೇ ದೇವರು'. 'ಭಕ್ತ ಕುಂಬಾರ', 'ಸನಾದಿ ಅಪ್ಪಣ್ಣ', 'ಕವಿರತ್ನ ಕಾಳಿದಾಸ' ಮುಂತಾದವು ಅವರ ಅಭಿನಯದ ಯಶಸ್ವಿ ಚಿತ್ರಗಳು. 'ಬಂಗಾರದ ಹೂವು' (೧೯೬೭-೬೮), 'ಕುಲಗೌರವ' (೧೯೭೦ ೭೧), 'ಭಕ್ತ ಕುಂಬಾರ' (೧೯೭೪-೭೫), 'ಬಬ್ರುವಾಹನ' (೧೯೭೭-೭೮), 'ಹೊಸಬೆಳಕು' (೧೯೮೧-೮೨), 'ಹಾಲುಜೇನು' (೧೯೮೨-೮೩), 'ದೇವತಾ ಮನುಷ್ಯ' (೧೯೮೮-೮೯), 'ಜೀವನ ಚೈತ್ರ' (೧೯೯೨-೯೩), 'ಒಡ ಹುಟ್ಟಿದವರು' (೧೯೯೩ ೯೪) ಚಿತ್ರಗಳಲ್ಲಿನ ಅಭಿನಯಕ್ಕಾಗಿ ಒಂಬತ್ತು ಬಾರಿ ರಾಜ್ಯ ಸರ್ಕಾರದ ಶ್ರೇಷ್ಠ ನಟ ಪ್ರಶಸ್ತಿಯನ್ನು ಪಡೆದಿದ್ದಾರೆ. 'ಜೀವನ ಚೈತ್ರ' ಚಿತ್ರದಲ್ಲಿನ ಗಾಯನಕ್ಕಾಗಿ ಶ್ರೇಷ್ಠ ಗಾಯಕ ರಾಷ್ಟ್ರ ಪ್ರಶಸ್ತಿಯನ್ನು ೧೯೯೨ರಲ್ಲಿ ಪಡೆದಿದ್ದಾರೆ. ೧೯೯೩-೯೪ರಲ್ಲಿ 'ಆಕಸ್ಮಿಕ' ಚಿತ್ರದಲ್ಲಿನ ಗಾಯನಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಯೂ ಲಭಿಸಿದೆ. ಅಭಿನಯ ಕ್ಷೇತ್ರದಲ್ಲಿನ ಸಾಧನೆಗಾಗಿ ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಪದವಿ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಅತ್ಯಂತ ಹಿರಿಯ ಪ್ರಶಸ್ತಿಯಾದ 'ನಾಡೋಜ', ಭಾರತ ಸರ್ಕಾರದ 'ಪದ್ಮಭೂಷಣ', 'ದಾದಾ ಸಾಹೇಬ್ ಫಾಲ್ಕೆ', ಕರ್ನಾಟಕದ ಸರ್ಕಾರದ 'ಕರ್ನಾಟಕ ರತ್ನ', 'ಗುಬ್ಬಿ ವೀರಣ್ಣ' ಪ್ರಶಸ್ತಿಗಳು ಮತ್ತು ಅಮೆರಿಕದ 'ಕೆಂಟಕಿ ಕರ್ನಲ್' ಪ್ರಶಸ್ತಿಗಳನ್ನು ಪಡೆದಿದ್ದಾರೆ. ಇವೆಲ್ಲದರ ಜೊತೆಗೆ ಕಲಾ ರಸಿಕರು, ವಿವಿಧ ಸಂಘ ಸಂಸ್ಥೆಗಳಿಂದ ದೊರೆತಿರುವ 'ನಟಸಾರ್ವಭೌಮ', 'ಗಾನ ಕೋಗಿಲೆ', 'ರಸಿಕರ ರಾಜ', 'ವರನಟ', 'ಗಾನ ಗಂಧರ್ವ', 'ನಟ ರತ್ನಾಕರ' ಹೀಗೆ ಅಸಂಖ್ಯ ಬಿರುದುಗಳಿವೆ. ಕನ್ನಡವನ್ನು ಬಿಟ್ಟು ಬೇರೆ ಯಾವುದೇ ಭಾಷೆಗಳ ಚಿತ್ರಗಳಲ್ಲಿ ಅಭಿನಯಿಸದೆ ಇರುವುದು ಅವರ ಕನ್ನಡ ಅಭಿಮಾನಕ್ಕೆ ನಿದರ್ಶನವಾಗಿದೆ. ತಮ್ಮ ಅಭಿನಯದ ಯಶಸ್ಸಿನ ಮೇಲೆ ಎಂದೂ ರಾಜಕೀಯಕ್ಕೆ ಇಳಿಯದೆ ಸಂಪೂರ್ಣವಾಗಿ ಕಲಾಸೇವೆಗೆ ನಿಂತರು. ಇವರ ಕಲಾಸೇವೆಯ ಗೌರವ ಸೂಚಕವಾಗಿ ಕರ್ನಾಟಕ ಸರ್ಕಾರ ಪ್ರತೀ ವರ್ಷವು ಚಿತ್ರರಂಗಕ್ಕೆ ಅನುಪಮ ಸೇವೆ ಸಲ್ಲಿಸಿರುವ ವ್ಯಕ್ತಿಗಳಿಗೆ 'ಡಾ|ರಾಜಕುಮಾರ್ ಪ್ರಶಸ್ತಿ' ನೀಡುತ್ತಾ ಬಂದಿದೆ. ಇವರ ಮಕ್ಕಳಾದ ಶಿವರಾಜಕುಮಾರ್, ರಾಘವೇಂದ್ರರಾಜಕುಮಾರ್, ಪುನೀತ್ ರಾಜಕುಮಾರ್ ಕೂಡ ತಂದೆಯಂತೆಯೇ ಕಲಾಸೇವೆಗೆ ನಿಂತಿದ್ದಾರೆ. ಕಲಾಸೇವೆಗೆ ಮುಡಿಪಾದ ರಾಜಕುಮಾರ್ ಅವರನ್ನು ದಂತಚೋರ ವೀರಪ್ಪನ್ ೨೦೦೦ನೇ ವರ್ಷದಲ್ಲಿ ಅಪಹರಿಸಿ ಮೂರು ತಿಂಗಳ ಕಾಲ ತನ್ನ ವಶದಲ್ಲಿರಿಸಿಕೊಂಡು ತನ್ನ ಕಾರ್ಯಸಾಧನೆಗೆ ಪ್ರಯತ್ನಿಸಿದ. ಕಡೆಗೆ ಸರ್ಕಾರದ, ಕಲಾಪ್ರೇಮಿಗಳ ಸ್ವತಃ ರಾಜಕುಮಾರ್ ಅವರ ಸಹನೆಯ ಫಲವಾಗಿ ರಾಜಕುಮಾರ್ ಬಿಡುಗಡೆ ಹೊಂದಿ ಮರಳಿ ಬಂದರು.

**ರಾಜನ್.ಆರ್**

ದಕ್ಷಿಣ ಭಾರತ ಚಿತ್ರರಂಗದ ಹಿರಿಯ



ಸಂಕಲನಕಾರರು. ತಮಿಳುನಾಡಿನ ಪಳನಿಯಲ್ಲಿ ಜನನ. ಮಾತೃಭಾಷೆ ತಮಿಳು. ಕನ್ನಡದ ಪ್ರಥಮ ಚಿತ್ರದ ನಿರ್ದೇಶಕ ವೈ.ವಿ.ರಾವ್ ಅವರ ಗರಡಿಯಲ್ಲಿ ಸಂಕಲನ ಕಾರ್ಯವನ್ನು ಕಲಿತ ರಾಜನ್ ತಮಿಳು, ತೆಲುಗು, ಕನ್ನಡ ಮೊದಲಾದ ಹಲವು ಭಾಷಾ ಚಿತ್ರಗಳಿಗೆ ಸಂಕಲನ ಮಾಡಿದ್ದಾರೆ. 'ದೇವರ ಗೆದ್ದ ಮಾನವ' ಚಿತ್ರದಿಂದ ಕನ್ನಡ ಚಿತ್ರರಂಗ ಪ್ರವೇಶಿಸಿದ ರಾಜನ್ 'ಪ್ರೇಮಪರ್ವ', 'ಅಜೇಯ', 'ಸಂಭವಾಮಿ ಯುಗೇ ಯುಗೇ' ಮೊದಲಾದ ಚಿತ್ರಗಳಿಗೆ ಸಂಕಲನಕಾರರು. 'ಅಜೇಯ' ಚಿತ್ರದ ಸಂಕಲನಕ್ಕಾಗಿ ೧೯೮೫-೮೬ರ ಸಾಲಿನ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದ್ದಾರೆ.

**ರಾಜನ್.ಎನ್.ಸಿ**

ಎನ್.ಸಿ.ರಾಜನ್ ಹಿರಿಯ ತಂತ್ರಜ್ಞರು. ೫೦-೬೦ರ ದಶಕಗಳಲ್ಲಿ ಸಂಕಲನಕಾರರಾಗಿದ್ದು ಕನ್ನಡ ಚಿತ್ರರಂಗದಲ್ಲಿ ಜನಪ್ರಿಯರಾದರು. ಮನೆಮಾತು ತಮಿಳು ಅದರೂ ಕನ್ನಡ ಕಲಿತು ಕನ್ನಡ ಚಿತ್ರಗಳಲ್ಲಿ ಕೆಲಸ ಮಾಡಿದವರು. ಕನ್ನಡ ನಟರಾದ ರಾಜಕುಮಾರ್, ಜಿ.ವಿ.ಅಯ್ಯರ್, ಟಿ.ಎನ್.ಬಾಲಕೃಷ್ಣ ಮತ್ತು ಟಿ.ಆರ್.ನರಸಿಂಹರಾಜು ಅವರು ಕನ್ನಡ ಚಲನಚಿತ್ರ ಕಲಾವಿದರ ಸಂಘವನ್ನು ಕಟ್ಟಿಕೊಂಡು, ಅ ಮೂಲಕ ತಯಾರಿಸಿದ 'ರಣಧೀರ ಕಂಠೀರವ' ಚಿತ್ರವನ್ನು ನಿರ್ದೇಶಿಸಿದರು. ನಂತರ ಕನ್ನಡದ ಇನ್ನೊಂದು ಐತಿಹಾಸಿಕ ಚಿತ್ರ 'ಇಮ್ಮಡಿ ಪುಲಿಕೇಶಿ'ಯನ್ನು ನಿರ್ದೇಶಿಸಿದರು. 'ಕಲಿತರೂ ಹೆಣ್ಣೇ', 'ತುಂಬಿದ ಕೊಡ', 'ಚದುರಂಗ' ಅವರ ನಿರ್ದೇಶನದ ಇತರ ಚಿತ್ರಗಳಲ್ಲಿ ಕೆಲವು.

**ರಾಜನ್.ಎಸ್.ಆರ್**

ಚಲನಚಿತ್ರ ನಾಯಕನಟನಾಗುವ ಹಂಬಲ ಹೊತ್ತು ಮದ್ರಾಸಿನಲ್ಲಿ ಅಲೆದಾಟ, ಕಡೆಗೆ ದಕ್ಕಿದ್ದು ಖಳನ ಪಾತ್ರಗಳು. ದಕ್ಕಿದ್ದನ್ನು ನಿರ್ವಹಿಸುತ್ತಾ ನಾಯಕನಾಗುವ ಕನಸು ಕಾಣುತ್ತಿದ್ದ ಎಸ್.ಆರ್.ರಾಜನ್ (ಸೀತಾರಾಮರಾಜು) ಬೆಂಗಳೂರಿನವರು.



ಬೆಂಗಳೂರಿನಲ್ಲಿ ಅವರ ಮಾವ ಬೇಕರಿ ಉದ್ಯಮದಲ್ಲಿ ಹೆಸರಾದವರು. ಅಳಿಯನಿಗೂ ಬೇಕರಿ ಇಟ್ಟುಕೊಟ್ಟಿದ್ದರು. ಮದರಾಸಿನಲ್ಲಿ ಖಳನ, ಇತರೆ ಪೋಷಕ ಪಾತ್ರಗಳಲ್ಲಿ ಅಭಿನಯಿಸುತ್ತಲೇ ಛಾಯಾಗ್ರಹಣ ಹಾಗೂ ನಿರ್ದೇಶನಗಳ ಅಧ್ಯಯನ. ಅಭಿನಯಿಸಲು ಅವಕಾಶ ಬೇಡುವುದಕ್ಕಿಂತ ತಾವೇ ಚಿತ್ರ ನಿರ್ಮಿಸಿ, ನಿರ್ದೇಶಿಸಿ, ನಟಿಸುವ ಯೋಚನೆ ಮಾಡಿದ್ದೇ ತಡ 'ವೀರ ವಿಕ್ರಮ' ತಯಾರಿಕೆ ಆರಂಭಿಸಿದರು. ೧೯೬೫ರಲ್ಲಿ ತೆರೆಕಂಡ ಈ ಚಿತ್ರದ ನಿರ್ಮಾಪಕ-ನಿರ್ದೇಶಕ-ನಾಯಕನಟ ರಾಜನ್. ನಂತರ ೧೯೭೧ರಲ್ಲಿ ತೆರೆಗಿತ್ತ 'ಐದು ಬೆರಳು' ಚಿತ್ರಕ್ಕಾಗಿ ದಕ್ಷಿಣ ಕನ್ನಡದಲ್ಲಿ ಚಿತ್ರೀಕರಣ ನಡೆಸಿದಾಗ ತುಳುವರ ಸಂಪರ್ಕ. ರಾಜನ್‌ರಿಂದ ಪ್ರಪ್ರಥಮ ತುಳು ಭಾಷಾ ಚಿತ್ರ 'ಎನ್ನತಂಗಡಿ' ಸೃಷ್ಟಿ. ನಂತರದಲ್ಲಿ ಕೊಡವ ಭಾಷೆಯಲ್ಲಿನ ಪ್ರಪ್ರಥಮ ಚಿತ್ರ 'ನಾಡಮಣ್ಣ್ ನಾಡಕೂಳು' ನಿರ್ಮಾಣ-ನಿರ್ದೇಶನ. ಮತ್ತೆ ಕನ್ನಡದಲ್ಲಿ 'ಹನಿಮೂನ್' ಮತ್ತಿತರ ಚಿತ್ರಗಳ ನಿರ್ಮಾಣ-ನಿರ್ದೇಶನ. ರಾಜನ್ ನಿರ್ದೇಶಿಸಿದ ಇನ್ನೊಂದು ಕೊಡವ ಚಿತ್ರ 'ಮಂದಾರ ಪೂ' ರಾಷ್ಟ್ರಪ್ರಶಸ್ತಿಗೆ ಪಾತ್ರ. ಅರಿಶಿನ ಕಾಮಾಲೆಗೀಡಾದ ರಾಜನ್ ಇತ್ತೀಚೆಗೆ ನಿಧನರಾದರು.

**ರಾಜನ್-ನಾಗೇಂದ್ರ**



ಕನ್ನಡ ಚಿತ್ರರಂಗದ ಯಶಸ್ವಿ ಸಂಗೀತ ನಿರ್ದೇಶಕರ ಜೋಡಿ. ಸಹೋದರರಾದ ಇವರು ಮೈಸೂರಿನಲ್ಲಿ ಸಂಗೀತ ವಿದ್ವಾಂಸರಾಗಿದ್ದ ಬಿ.ರಾಜಪ್ಪನವರ ಪುತ್ರರು. ರಾಜನ್ ಅವರು ನಾಗೇಂದ್ರ ಅವರಿಗಿಂತ ಒಂದು ವರ್ಷ ಹಿರಿಯರು. ರಾಜನ್ ಉತ್ತಮ ಪಿಟೀಲು ವಾದಕರಾದರೆ, ತಮ್ಮ ನಾಗೇಂದ್ರ ಅವರಿಗೆ ತಂದೆಯವರದೇ ಶಾರೀರ. ಸಂಗೀತದಲ್ಲಿ ಪರಿಶ್ರಮವಿದ್ದ ಈ ಜೋಡಿ ಬೆಂಗಳೂರಿನ 'ಜಯಮಾರುತಿ ಸಂಗೀತ ವಾದ್ಯವೃಂದ' ದಲ್ಲಿ ಸೇರಿ ಶಾಸ್ತ್ರೀಯ ಸಂಗೀತದ ಕಛೇರಿಗಳನ್ನು ನೀಡಿದರು. ರಾಜನ್ ಅವರು ಆಗಿನ ಕಾಲದಲ್ಲಿ

ಖ್ಯಾತಿವೆತ್ತ ಸಂಗೀತ ನಿರ್ದೇಶಕರಾಗಿದ್ದ ಎಚ್.ಆರ್.ಪದ್ಮನಾಭ ಶಾಸ್ತ್ರೀಯವರ ಬಳಿ ಸಹಾಯಕರಾಗಿ ದುಡಿಯುತ್ತ ಅವರಿಂದ ಧ್ವನಿಮುದ್ರಣ ತಂತ್ರವನ್ನು ಕಲಿತರು. ಇದೇ ವೇಳೆಗೆ 'ಶ್ರೀನಿವಾಸ ಕಲ್ಯಾಣ' ಚಿತ್ರದಲ್ಲಿ ಪಿ.ಶಾಮಣ್ಣ ಅವರ ಸಂಗೀತ ನಿರ್ದೇಶನದಲ್ಲಿ ನಾಗೇಂದ್ರ ಎರಡು ಗೀತೆಗಳನ್ನು ಹಾಡಿ ಹಿನ್ನೆಲೆ ಗಾಯಕರಾಗಿ ಚಿತ್ರರಂಗ ಪ್ರವೇಶಿಸಿದರು. ೧೯೫೨ರಲ್ಲಿ ಮಹಾತ್ಮ ಪಿಕ್ಚರ್ಸ್ ಅವರ 'ಸೌಭಾಗ್ಯ ಲಕ್ಷ್ಮಿ' ಚಿತ್ರಕ್ಕೆ ಸಂಗೀತ ನಿರ್ದೇಶನ ನೀಡುವ ಮೂಲಕ ಇಬ್ಬರೂ ಚಿತ್ರರಂಗ ಪ್ರವೇಶ ಮಾಡಿದರು. ಸರಿಸುಮಾರು ೩೦೦ಕ್ಕೂ ಹೆಚ್ಚು ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. 'ಗಿಲಿ ಗಿಲಿ ಗಿಲಕ್...' (ರತ್ನ ಮಂಜರಿ), 'ಹಾಡು ಬಾ ಕೋಗಿಲೆ...' (ವೀರ ಸಂಕಲ್ಪ), 'ಎಂದೆಂದೂ ನಿನ್ನನು ಮರೆತು...' (ಎರಡು ಕನಸು), 'ಇಂದು ಎನಗೆ ಗೋವಿಂದ...' (ಮಂತ್ರಾಲಯ ಮಹಾತ್ಮೆ) ಮೊದಲಾದ ಗೀತೆಗಳಿಗೆ ಸುಮಧುರ ಸಂಗೀತ ಸಂಯೋಜಿಸಿದರು. 'ಚಲಿಸುವ ಮೋಡಗಳು', 'ಗಾಳಿ ಮಾತು', 'ಬಯಲು ದಾರಿ', 'ಪರಸಂಗದ ಗೆಂಡತಿಮ್ಮ', 'ದೇವರ ದುಡ್ಡು', 'ರತ್ನಗಿರಿಯ ರಹಸ್ಯ' ಮೊದಲಾದವು ಇವರ ಕೆಲವು ಯಶಸ್ವೀ ಚಿತ್ರಗಳು. ಈ ಜೋಡಿಯ ಸಂಗೀತ ನಿರ್ದೇಶನವಿದ್ದ 'ಎರಡು ಕನಸು' (೧೯೭೩-೭೪), 'ಪರಸಂಗದ ಗೆಂಡೆತಿಮ್ಮ' (೧೯೭೮-೭೯) ಚಿತ್ರಗಳಿಗೆ ರಾಜ್ಯಸರ್ಕಾರದ ಅತ್ಯುತ್ತಮ ಸಂಗೀತ ನಿರ್ದೇಶಕರ ಪ್ರಶಸ್ತಿ ಬಂದಿದೆ. ಜೋಡಿಯಲ್ಲಿ ಕಿರಿಯರಾದ ನಾಗೇಂದ್ರ ಅವರು ಸುದೀರ್ಘ ಕಾಲದ ಅನಾರೋಗ್ಯದಿಂದ ೨೦೦೧ ರಲ್ಲಿ ವಿಧಿವಶರಾದರು.

### ರಾಜಪ್ಪನ್.ಎಂ.ಎಸ್



ಐವತ್ತು-ಅರವತ್ತರ ದಶಕದ ಹೆಸರಾಂತ ಛಾಯಾಗ್ರಾಹಕ ರಾಜಪ್ಪನ್. ಕೇರಳದ ಕೊಚ್ಚಿಯ ಬಳಿಯ ರೈತಾಪಿ ಕುಟುಂಬವೊಂದರಲ್ಲಿ ಜನಿಸಿದರು. ಕಾಲೇಜು ಶಿಕ್ಷಣ ಮುಗಿಸಿ, ನಿರ್ದೇಶಕ ರಾಮು ಕಾರಿಯತ್ ಅವರ ಪ್ರೋತ್ಸಾಹದ ಮೇರೆಗೆ ೧೯೫೫ರಲ್ಲಿ ಮೈಸೂರಿಗೆ ಬಂದು ಪ್ರೀಮಿಯರ್ ಸ್ಟುಡಿಯೋದಲ್ಲಿ ಖ್ಯಾತ ಛಾಯಾಗ್ರಾಹಕ ಡಿ.ಎಸ್.ಕೋಟ್ನೀಸ್ ಅವರಿಗೆ ಸಹಾಯಕರಾಗಿ ದುಡಿದರು. ೧೯೫೫ರಲ್ಲಿ 'ಶಿವಶರಣೆ ನಂಬಿಯಕ್ಕ' ಚಿತ್ರದಲ್ಲಿ ನಿರ್ದೇಶಕ ಟಿ.ಶಂಕರ್‌ಸಿಂಗ್‌ಗೆ ಸಹ ಛಾಯಾಗ್ರಾಹಕರಾಗಿ ಚಿತ್ರರಂಗ ಪ್ರವೇಶ. ಹಿರಿಯ ಚಿತ್ರ ನಿರ್ದೇಶಕರಾದ ಸಿ.ವಿ.ಶಿವಶಂಕರ್ ಅವರ ಬಹುತೇಕ ಚಿತ್ರಗಳಲ್ಲಿ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳಿಗೆ ಛಾಯಾಗ್ರಾಹಕರು. 'ಮಧುರ ಮಿಲನ', 'ಪದವೀಧರ', 'ನಮ್ಮ ಊರು', 'ಮಹಡಿ ಮನೆ', 'ಮಹಾ ತಪಸ್ವಿ' ಮೊದಲಾದವು ಕೆಲವು ಮುಖ್ಯ ಚಿತ್ರಗಳು. ಕೆಲಕಾಲ ಚಲನಚಿತ್ರ ಪತ್ರಿಕೋದ್ಯಮಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಕರ್ನಾಟಕದಲ್ಲಿಯೇ ಪ್ರಪ್ರಥಮವಾಗಿ ಪ್ರಚಾರ ಚಿತ್ರಗಳ ಕಂಪೆನಿ ಸ್ಥಾಪಿಸಿದ ಕೀರ್ತಿ ಇವರದು. ಹಲವಾರು ಸಾಕ್ಷ್ಯ ಚಿತ್ರಗಳನ್ನು ತಯಾರಿಸಿದ್ದಾರೆ.

### ರಾಜಮ್ಮ.ಎಂ.ವಿ (೧೯೨೩-೨೦೦೦)



ಕನ್ನಡದ ಮೊದಲ ಸಾಮಾಜಿಕ ಚಿತ್ರ 'ಸಂಸಾರನೌಕೆ' (೧೯೩೬)ದ ನಾಯಕಿ. ಬೆಂಗಳೂರು ಜಿಲ್ಲೆಯ ಆಗೊಂಡನಹಳ್ಳಿ ಸ್ವಂತ ಸ್ಥಳ. ಬೆಂಗಳೂರಿನಲ್ಲಿ ವಿದ್ಯಾಭ್ಯಾಸ. ಪೀರ್ ಸಾಹೇಬರ ಚಂದ್ರಕಲಾ ನಾಟಕ ಮಂಡಲಿ ಮೂಲಕ ರಂಗಭೂಮಿ ಪ್ರವೇಶ. ೧೯೪೩ರಲ್ಲಿ 'ರಾಧಾರಮಣ' ಚಿತ್ರ ನಿರ್ಮಿಸುವ ಮೂಲಕ ಕನ್ನಡದ ಮೊದಲ ನಿರ್ಮಾಪಕಿ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಜಿ.ವಿ.ಅಯ್ಯರ್ ಹಾಗೂ ಬಾಲಕೃಷ್ಣ ಅವರು ಈ ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ಪಂತುಲು ಅವರ ಪದ್ಮಿನಿ ಪಿಕ್ಚರ್ಸ್ ನಿರ್ಮಿಸಿದ ಚಿತ್ರಗಳಲ್ಲಿ ಗಮನಾರ್ಹ ಪಾತ್ರಗಳನ್ನು ಮಾಡಿದರು. ದೀರ್ಘ ಕಾಲ ಪಂತುಲುರವರ ಒಡನಾಡಿಯಾಗಿದ್ದರು. 'ಮಕ್ಕಳ ರಾಜ್ಯ' ಇವರ ನಿರ್ಮಾಣದ ಇನ್ನೊಂದು ಚಿತ್ರ. ನಾಯಕಿಯಾಗಿ, ಪೋಷಕ ನಟಿಯಾಗಿ ಜನಪ್ರಿಯ ಕನ್ನಡ, ತಮಿಳು, ತೆಲುಗು ಹಾಗೂ ಹಿಂದಿ ಭಾಷೆಯ ಚಿತ್ರಗಳಲ್ಲಿ ಅಭಿನಯಿಸಿದರು. ಕೊನೆಯ ದಿನಗಳಲ್ಲಿ ಚೆನ್ನೈನಲ್ಲಿ ನೆಲೆಸಿದ ಇವರನ್ನು ೧೯೯೭-೯೮ರಲ್ಲಿ ರಾಜ್ಯ ಸರ್ಕಾರ ಪ್ರತಿಷ್ಠಿತ ಡಾ|ರಾಜಕುಮಾರ್ ಪ್ರಶಸ್ತಿಯಿಂದ ಪುರಸ್ಕರಿಸಿತು. ಈ ಪ್ರಶಸ್ತಿಯನ್ನು ಸ್ವೀಕರಿಸಿದ ಕೆಲವೇ ದಿನಗಳಲ್ಲಿ ಆಕೆ ನಿಧನರಾದರು.

### ರಾಜಶ್ರೀ

ಆಂಧ್ರಪ್ರದೇಶದ ವಿಶಾಖಪಟ್ಟಣ ಹುಟ್ಟೂರು. ತಂದೆಗೆ ಈಕೆಯನ್ನು ವೈದ್ಯರಾಗಿಸುವ ಆಸೆ. ನಾಟ್ಯಾಚಾರ್ಯ ದಂಡಾಯುಧಪಾಣಿ ಅವರ ಬಳಿ ನೃತ್ಯ ಕಲಿತರು. ಎ.ವಿ.ಎಂ. ಸಂಸ್ಥೆಯ ತ್ರಿಭಾಷಾ ಚಿತ್ರ 'ಆದರ್ಶಸತಿ' (೧೯೫೫) ಚಿತ್ರದಲ್ಲಿ ಬಾಲನಟಿಯಾಗಿ ಚಿತ್ರರಂಗ ಪ್ರವೇಶಿಸಿದರು. 'ಆಶಾಸುಂದರಿ' (೧೯೬೦) ಚಿತ್ರದಲ್ಲಿ ಗಮನಾರ್ಹ ಪಾತ್ರ ಮಾಡಿದರು. ಕನ್ನಡ ಕಲಿತು ತಮ್ಮ ಸಂಭಾಷಣೆಯನ್ನು ತಾವೇ ಹೇಳುತ್ತಿದ್ದರು. 'ದಶಾವತಾರ', 'ಕಣ್ತೆರೆದು ನೋಡು', 'ಕರುಣೆಯೇ ಕುಟುಂಬದ ಕಣ್ಣು', 'ಸ್ವರ್ಣಗೌರಿ',



'ಚಂದ್ರಕುಮಾರ', 'ಸಂತ ತುಕಾರಾಂ', 'ಶಿವರಾತ್ರಿ ಮಹಾತ್ಮೆ', 'ಶಿವಗಂಗ ಮಹಾತ್ಮೆ', 'ಮೋಹಿನಿ ಭಸ್ಮಾಸುರ', 'ಊರ್ವಶಿ' ಮುಂತಾದವು ರಾಜಶ್ರೀ ಅಭಿನಯದ ಪ್ರಮುಖ ಚಿತ್ರಗಳು.

### ರಾಜಶೇಖರ್.ಎಂ.ಕೆ

ಶಿವಶಕ್ತಿ ಸಿನಿ ಕಂಬೈನ್ಸ್‌ನ ಪಾಲುದಾರರಾದ ಎಂ.ಕೆ.ರಾಜಶೇಖರ್ ಮೂಲತಃ ಮಾಂಬಳ್ಳಿಯವರು. ಅಬಕಾರಿ ಕಂಟ್ರಾಕ್ಟರ್ ಆದ ಇವರು ಚಿತ್ರರಂಗ ಪ್ರವೇಶಿಸಿ ಬೆಂಗಳೂರು, ಮೈಸೂರು ಎರಡು ವಲಯದ ವಿತರಕರು ಆಗಿದ್ದಾರೆ. ಮೈಸೂರು ವಲಯದ ವಿತರಕ ಸಂಘದ ಅಧ್ಯಕ್ಷರೂ ಆಗಿದ್ದರು.

### ರಾಜಶೇಖರ್.ಎಂ.ಎಸ್

ಕನ್ನಡ ಚಿತ್ರರಂಗದ ನಿರ್ದೇಶಕ. ಖ್ಯಾತ ಮೇಕಪ್ ಕಲಾವಿದ-ನಟ. ಎಂ.ಎಸ್. ಸುಬ್ಬಣ್ಣ ಅವರ ಪುತ್ರರಾದ ಎಂ.ಎಸ್.ರಾಜಶೇಖರ್, ರಾಜಕುಮಾರ್‌ರವರ ತಂಡದಲ್ಲಿ ಹಲವಾರು ವರ್ಷಗಳಿಂದ ಚಿತ್ರ ತಯಾರಿಕೆಯ ಒಂದಲ್ಲ ಒಂದು ಹಂತದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಸಹಾಯಕ ನಿರ್ದೇಶಕ ಸ್ಥಾನಕ್ಕೆ ಏರಿದವರು. ರಾಜಕುಮಾರ್ ಅವರ ಬಹುತೇಕ ಚಿತ್ರಗಳಿಗೆ ಮೇಕಪ್‌ಮ್ಯಾನ್ ಆಗಿ



ದುಡಿಯುತ್ತಿದ್ದ ಸಂದರ್ಭದಲ್ಲಿ ಸುಬ್ಬಣ್ಣ ತಮ್ಮ ಮಗ ರಾಜಶೇಖರ್‌ರವರನ್ನು ರಾಜಕುಮಾರ್ ಅವರ ತಂಡಕ್ಕೆ ಒಪ್ಪಿಸಿದರು. ಸುಮಾರು ಹದಿನೇಳು ವರ್ಷಗಳ ಸುದೀರ್ಘ ಪರಿಣತಿಯ ನಂತರ ರಾಜ್‌ರವರ ಪ್ರೋತ್ಸಾಹದಿಂದ 'ಧ್ರುವತಾರೆ' ಚಿತ್ರ ನಿರ್ದೇಶಿಸಿದರು. ಅನಂತರ ಸತತವಾಗಿ 'ಅನುರಾಗ ಅರಳಿತು', 'ರಥಸಪ್ತಮಿ', 'ಮನ ಮೆಚ್ಚಿದ ಹುಡುಗಿ' ಯಂತಹ ಸದಭಿರುಚಿಯ ಚಿತ್ರಗಳನ್ನು ನಿರ್ದೇಶಿಸಿದರು. ಇವರ ನಿರ್ದೇಶನದ 'ನಂಜುಂಡಿ ಕಲ್ಯಾಣ' ಅಪಾರ ಯಶಸ್ಸು ಕಂಡ ಚಿತ್ರ. 'ಹೃದಯ ಹಾಡಿತು' ಮತ್ತೊಂದು ಯಶಸ್ವೀ ಚಿತ್ರ. ರಾಜಶೇಖರ್ ಅವರಿಗೆ ಕಾದಂಬರಿಯನ್ನು ಆಧರಿಸಿ ಚಿತ್ರ ನಿರ್ದೇಶಿಸುವಲ್ಲಿ ಹೆಚ್ಚು ಒಲವು. ಇವರು ನಿರ್ದೇಶಿಸಿದ ಇನ್ನಿತರ ಯಶಸ್ವಿ ಚಿತ್ರಗಳು 'ಕಲ್ಯಾಣ ರೇಖೆ', 'ಮಣ್ಣಿನ ದೋಣಿ', 'ಗಂಡು ಸಿಡಿಗುಂಡು'. ಇವರ ನಿರ್ದೇಶನದ ಪ್ರಥಮ ಚಿತ್ರ 'ಧ್ರುವತಾರೆ' ೧೯೮೫-೮೬ನೇ ಸಾಲಿಗೆ ರಾಜ್ಯಸರ್ಕಾರದ ದ್ವಿತೀಯ ಉತ್ತಮ ಚಿತ್ರ ಪ್ರಶಸ್ತಿ ಪಡೆಯಿತು.

### ರಾಜಶೇಖರ್.ಹ.ಸೂ

ಯುವ ನಿರ್ದೇಶಕ ಹ.ಸೂ.ರಾಜಶೇಖರ್



ಇದುವರೆಗೆ ೧೨ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಚಿತ್ರಕಥಾ ಲೇಖಕರೂ ಹೌದು. ೧೯೯೪-೯೫ನೇ ಸಾಲಿನಲ್ಲಿ 'ಕರ್ಫ್ಯೂ' ಚಿತ್ರಕ್ಕೆ ಅವರು ಬರೆದ ಚಿತ್ರಕಥೆ ನಾಟಕಕ್ಕಾಗಿ ಅವರಿಗೆ ರಾಜ್ಯಸರ್ಕಾರದ ಪ್ರಶಸ್ತಿ ಲಭ್ಯವಾಯಿತು. ಗ್ರಾಮೀಣ ಹಿನ್ನೆಲೆಯಿಂದ ಬಂದ ರಾಜಶೇಖರ್ ಕೇವಲ ಪಿ.ಯು.ಸಿಯವರೆಗೆ ಓದಿ ನಂತರ ಚಿಕ್ಕ ವಯಸ್ಸಿನಿಂದಲೇ ರಂಗಭೂಮಿ ಮತ್ತು ಚಿತ್ರರಂಗಗಳತ್ತ ತಿರುಗಿದರು. ನಾಟಕಗಳನ್ನು ನಿರ್ದೇಶಿಸಿ, ಅಭಿನಯಿಸಿದರು. ಹಲವು ಚಿತ್ರಗಳಿಗೆ ಸಹ ನಿರ್ದೇಶಕರಾಗಿ ಮತ್ತು ನಾಲ್ಕು ಚಿತ್ರಗಳಿಗೆ ಸಂಕಲನ ಸಹಾಯಕರಾಗಿಯೂ ದುಡಿದಿದ್ದಾರೆ. ಅವರು ೧೯೯೨ರಲ್ಲಿ 'ಗಂಧರ್ವ' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. 'ಶಿವರಂಜಿನಿ', 'ರಫ್ ಅಂಡ್ ಟಫ್', 'ಬಣ್ಣದ ಹೆಜ್ಜೆ' ಮತ್ತು 'ಪಾಪಿಗಳ ಲೋಕದಲ್ಲಿ' ಅವರ ನಿರ್ದೇಶನದ ಪ್ರಮುಖ ಚಿತ್ರಗಳು.

### ರಾಜಾನಂದ್

ರಂಗಭೂಮಿ ಹಾಗೂ ಚಲನಚಿತ್ರ ನಟ, ನಾಟಕಕಾರ. ಮೈಸೂರು ಸ್ವಂತ ಸ್ಥಳ (ಜನನ : ಡಿಸೆಂಬರ್ ೩, ೧೯೨೭). ೧೮ನೇ ವಯಸ್ಸಿನಲ್ಲಿ ರಂಗಭೂಮಿ ಪ್ರವೇಶಿಸಿದರು. ರಾಜಾನಂದ್ ರಂಗವೈಭವ ನಾಟಕ ಸಂಸ್ಥೆ



ಕಟ್ಟಿದವರು (೧೯೬೫). 'ಧನ ಪಿಶಾಚಿ' (೧೯೬೭) ಇವರ ಅಭಿನಯದ ಮೊದಲ ಚಿತ್ರ. 'ರಂಗನಾಯಕಿ' ಚಿತ್ರದಲ್ಲಿ ರಂಗಭೂಮಿ ನಟನ ಪಾತ್ರದಲ್ಲಿ ಉತ್ತಮ ಅಭಿನಯ ನೀಡಿದರು. ೨೦೦ಕ್ಕೂ ಹೆಚ್ಚು ಚಲನಚಿತ್ರಗಳಲ್ಲಿ ಅಭಿನಯಿಸಿರುವ ಇವರು ೨೩೨ ನಾಟಕಗಳನ್ನು ರಚಿಸಿದ್ದಾರೆ. ೩,೦೦೦ ಕವನ, ೯,೦೦೦ ವಚನಗಳನ್ನು ರಚಿಸಿದ್ದಾರೆ. ೧೯೯೨ರಲ್ಲಿ ರಾಜ್ಯ ಪ್ರಶಸ್ತಿಯ ಗೌರವಕ್ಕೆ ಪಾತ್ರರಾದರು. ಪೋಷಕ ಪಾತ್ರಗಳು ಎಷ್ಟು ಅರ್ಥಪೂರ್ಣವಾಗುವುದು ಸಾಧ್ಯ ಎಂದು ತೋರಿಸಿ ಕೊಟ್ಟವರು.

### ರಾಜಾರಾಂ.ಆರ್.ಎಸ್

ರಂಗಭೂಮಿ, ಚಲನಚಿತ್ರ ಮತ್ತು ಕಿರುತೆರೆಯ ನಟರು. ೧೯೩೮ರಲ್ಲಿ ಜನನ. ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ೩೭ ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದವರು. ಬಾಲ್ಯದಿಂದಲೇ ನಾಟಕದಲ್ಲಿ ಆಸಕ್ತರಾದರು. ೧೯೬೨ರಿಂದ ನಟರಂಗ ಹಾಗೂ ೧೯೮೩ರಿಂದ ವೇದಿಕ ಇವುಗಳ ರಂಗಮಾಲಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಹಲವಾರು ನಾಟಕಗಳಲ್ಲಿ ಅಭಿನಯಿಸಿದ ನಂತರ ೧೯೭೦ರಲ್ಲಿ 'ಪಾಪ ಪುಣ್ಯ' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ನಂತರ 'ಭಲೇ ಹುಚ್ಚ', 'ಕಾಕನ ಕೋಟೆ', 'ಕೋಕಿಲಾ', 'ಅರಿವು' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ನಿರ್ದೇಶಕ ಸಿದ್ದಲಿಂಗಯ್ಯ ಅವರ ಬಹುತೇಕ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಕೂಡಿ ಬಾಳಿದರೆ ಸ್ವರ್ಗ ಸುಖ', 'ಪ್ರೇಮ ಪರ್ವ', 'ಅಜೇಯ', 'ಭೂತಾಯಿ ಮಕ್ಕಳು', 'ಪ್ರೇಮ ಪ್ರೇಮ ಪ್ರೇಮ', 'ಸಂಗ್ರಾಮ', 'ಹಳ್ಳಿ ಮೇಷ್ಟ್ರು', 'ಶಾಂತಿ ಕ್ರಾಂತಿ', 'ಸಿಂಹಾಸನ', 'ಭುಜಂಗಯ್ಯನ ದಶಾವತಾರ', 'ಸ್ವಸ್ತಿಕ್' ಮೊದಲಾದವು ಇವರ ಅಭಿನಯದ ಕೆಲವು ಚಿತ್ರಗಳು. ತಾವು ಸರ್ಕಾರಿ ಸೇವೆಯಲ್ಲಿದ್ದಾಗ ಕನ್ನಡ ಚಿತ್ರೋದ್ಯಮಕ್ಕೆ ಸಾಕಷ್ಟು ಸಹಕಾರಿಯಾಗಿ ಶ್ರಮಿಸಿದವರು. ಚಿತ್ರರಂಗದ ಅಗತ್ಯ ಸೇವೆಗಳಿಗೆ ಸದಾ ತಮ್ಮನ್ನು ತೊಡಗಿಸಿಕೊಳ್ಳುವ ಕಾರ್ಯಶೀಲರು. ದೂರದರ್ಶನದ ಹಲವು ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ.

### ರಾಜಾರಾಂ.ಡಿ.ವಿ

ಕನ್ನಡದ ಪ್ರಥಮ ಶ್ರೇಣಿಯ ಛಾಯಾಗ್ರಾಹಕ. ಚಿಕ್ಕಂದಿನಿಂದಲೇ ಛಾಯಾಗ್ರಹಣದಲ್ಲಿ ಆಸಕ್ತಿ. ಮದರಾಸಿನ ವಾಹಿನಿ ಸ್ಟುಡಿಯೋದಲ್ಲಿ ಹತ್ತು ವರ್ಷಗಳ ಕಾಲ ಕ್ಯಾಮರಾ ವಿಭಾಗದ ಸಹಾಯಕರಾಗಿ ಕೆಲಸ. ೧೯೬೩ರಲ್ಲಿ 'ಸಂತ ತುಕಾರಾಂ' ಚಿತ್ರದ ಮೂಲಕ ಸ್ವತಂತ್ರ ಛಾಯಾಗ್ರಾಹಕರಾದರು. ಸುಮಾರು ೧೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಛಾಯಾಗ್ರಹಣ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ರಾಜಾರಾಂ ಛಾಯಾಗ್ರಹಣ ನೀಡಿದ ಚಿತ್ರಗಳು 'ಶರಪಂಜರ', 'ಗಂಧದ ಗುಡಿ', 'ಬಂಗಾರದ ಮನುಷ್ಯ', 'ಮಿಸ್ ಲೀಲಾವತಿ', 'ಬಂಧನ', 'ಮುತ್ತಿನ ಹಾರ' ಹೀಗೆ ಸಾಲು ಸಾಲಾಗಿವೆ. ತಮ್ಮ ವಿಶಿಷ್ಟ ಶೈಲಿಯ ಛಾಯಾಗ್ರಹಣದಿಂದ ವಿಮರ್ಶಕರ ಮನ ಗೆದ್ದಿರುವ ರಾಜಾರಾಂ ೧೯೭೧-೭೨ರಲ್ಲಿ 'ಬಂಗಾರದ ಮನುಷ್ಯ', ೧೯೯೦-೯೧ರಲ್ಲಿ 'ಮುತ್ತಿನ ಹಾರ', ೧೯೯೮-೯೯ರಲ್ಲಿ 'ದೋಣಿ ಸಾಗಲಿ' ಚಿತ್ರಗಳ ಛಾಯಾಗ್ರಹಣಕ್ಕಾಗಿ ಮೂರು ಬಾರಿ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ. ನಿರ್ದೇಶಕ ಭಾರ್ಗವ ಅವರೊಡಗೂಡಿ ಕಲಾಕೃತಿ ಸಂಸ್ಥೆ ಪ್ರಾರಂಭಿಸಿ 'ಹೃದಯ ಗೀತೆ', 'ಜೀವನ ಚಕ್ರ', 'ಕರುಣಾಮಯಿ', 'ಜನನಾಯಕ', 'ಗಂಡನಿಗೆ ತಕ್ಕ ಹೆಂಡತಿ' ಮೊದಲಾದ ಚಿತ್ರಗಳನ್ನು ನಿರ್ಮಿಸಿದ್ದಾರೆ.

### ರಾಜಾಶಂಕರ್

ಎಪ್ಪತ್ತರ ದಶಕದಲ್ಲಿ ಕನ್ನಡ ಚಿತ್ರಗಳ ನಾಯಕನಟರು. ನಿರ್ದೇಶಕ ಹೆಚ್.ಎಲ್.ಎನ್.ಸಿಂಹ ಅವರ ಶೋಧ. ೧೯೫೯ರಲ್ಲಿ ತೆರೆಕಂಡ 'ಅಬ್ಬಾ ಆ ಹುಡುಗಿ' ಚಿತ್ರದಲ್ಲಿ ನಾಯಕ ಪಾತ್ರಕ್ಕೆ ಆಯ್ಕೆಯಾದ ಮಧುಗಿರಿಯ ಶಾಲಾ ಶಿಕ್ಷಕರ ಮಗ ಶಂಕರ. ಸಿಂಹರಿಂದ ರಾಜಾಶಂಕರ್ ಆದರು. ರಾಜ್ಯ ಸರ್ಕಾರದ ಸಹಾಯಧನ ಘೋಷಣೆಯ ನಂತರದಲ್ಲಿ ಮೈಸೂರಿನಲ್ಲಿ ತಯಾರಿಕೆಯಾರಂಭವಾದ ಮೊದಲ ಚಿತ್ರದ 'ಅನುರಾಧಾ'ದ (೧೯೬೭) ನಾಯಕನಟ. ಬೆಂಗಳೂರಿನ ಓಂಕಾರ್ ಸ್ಟುಡಿಯೋದಲ್ಲಿ ಸಂಪೂರ್ಣವಾಗಿ ತಯಾರಾದ ಮೊದಲ ಚಿತ್ರ 'ಜಾಣರ ಜಾಣ' ಚಿತ್ರದಲ್ಲಿ ವಾಣಿಶ್ರೀಯೊಂದಿಗೆ ನಾಯಕ. ಇಂಟರ್ ಮೀಡಿಯೆಟ್‌ವರೆಗೆ ಓದು. ತಂದೆ ಸರ್ಕಾರಿ ನೌಕರಿಗೆ ರಾಜೀನಾಮೆ ನೀಡಿ ಮೈಸೂರಿನ ನವಜ್ಯೋತಿ ಸ್ಟುಡಿಯೋದಲ್ಲಿ ಕೆಲಸ ಮಾಡುತ್ತಾ ಚಿತ್ರಗಳಲ್ಲಿ ಅಭಿನಯಿಸುತ್ತಿದ್ದರು. ನಂತರ ಮೈಸೂರಿನ ಚಿತ್ರಮಂದಿರವೊಂದರಲ್ಲಿ ಮ್ಯಾನೇಜರ್ ಆದರು. ರಾಜಾಶಂಕರ್‌ರ ಚಲನಚಿತ್ರ ಬದುಕಿಗೆ ಇದೇ ನಾಂದಿಯಾಯಿತೇನೋ. 'ಅಮರಜೀವಿ' (೧೯೬೫) ನಂತರ ಸಾಲು ಸಾಲು ಅವಕಾಶ. ನಾಯಕ, ಉಪನಾಯಕ, ಚಾರಿತ್ರಿಕ ಪಾತ್ರಗಳು. 'ಬೇವು ಬೆಲ್ಲ', 'ಮಂಗಳ ಮುಹೂರ್ತ', 'ಚಂದವಳ್ಳಿಯ ತೋಟ', 'ಮನಸ್ಸಿದ್ದರೆ ಮಾರ್ಗ', 'ಗೌರಿಗಂಡ', 'ರೌಡಿ ರಂಗಣ್ಣ', 'ವಾಗ್ದಾನ', 'ಕಸ್ತೂರಿ ನಿವಾಸ', 'ಧರ್ಮಪತ್ನಿ', 'ಭಕ್ತ ಕುಂಬಾರ' ಮೊದಲಾದವು ಇವರ ಅಭಿನಯದ ವಿವಿಧ ಮಜಲುಗಳನ್ನು ಪರಿಚಯಿಸುವ ಚಿತ್ರಗಳು. ರಾಜಕುಮಾರ್ ಅಭಿನಯಿಸಿದ 'ರಾಜ ನನ್ ರಾಜ' ಚಿತ್ರವನ್ನು ವಿ.ಎಲ್.ಆಚಾರ್ಯ ಅವರೊಂದಿಗೆ ನಿರ್ಮಿಸಿದರು. ಇತ್ತೀಚೆಗೆ ನಿಧನರಾದರು.

### ರಾಜೀವ್

ತಮಿಳು ಚಿತ್ರರಂಗದಿಂದ ಕನ್ನಡ ಚಿತ್ರರಂಗ ಪ್ರವೇಶಿಸಿದ ನಟ. ಕೆ.ಬಾಲಚಂದರ್ ನಿರ್ದೇಶನದ 'ಬೆಂಕಿಯಲ್ಲಿ ಅರಳಿದ ಹೂವು' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದ ರಾಜೀವ್ 'ಸಮರ್ಪಣೆ', 'ಲಕ್ಷ್ಮೀ ಕಟಾಕ್ಷ', 'ಸೇಡಿನ ಹಕ್ಕಿ', 'ಅಪರಂಜಿ', 'ಆ ಒಂದು ರಾತ್ರಿಯಲ್ಲಿ' ಮೊದಲಾದ ಚಿತ್ರಗಳಲ್ಲಿ ನಾಯಕನಾಗಿ ಅಭಿನಯಿಸಿದರು. ಮುಂದಿನ ದಿನಗಳಲ್ಲಿ ಸೂಕ್ತ ಅವಕಾಶವಿಲ್ಲದೇ ಖಳನಟ, ಪೋಷಕನಟರಾಗಿ ಮುಂದುವರೆದರು. ರಾಜೀವ್ ಖಳನಾಗಿ ಉತ್ತಮ ಅಭಿನಯ ನೀಡಿದ ಚಿತ್ರಗಳು 'ನಮ್ಮೂರ ಹುಡುಗ', 'ಜನುಮದ ಜೋಡಿ' ಇತ್ಯಾದಿ.

### ರಾಜೀವ ತಾರಾನಾಥ್

ಸಂಗೀತ ಸಾಹಿತ್ಯ ಎರಡು ಸೃಜನಶೀಲ ಕ್ಷೇತ್ರಗಳಲ್ಲಿ ಸಮಾನ ಪರಿಣತಿಯನ್ನು ಸಾಧಿಸಿರುವ ವ್ಯಕ್ತಿ ಡಾ. ರಾಜೀವ ತಾರಾನಾಥ್. ಕನ್ನಡ ಮಾತೃಭಾಷೆ. ತಂದೆ ಖ್ಯಾತ ವೈದ್ಯ ಮತ್ತು ಸಂಗೀತಜ್ಞ ಪಂಡಿತ ತಾರಾನಾಥ್. ಅಂತರರಾಷ್ಟ್ರೀಯ ಖ್ಯಾತಿಯ ಉಸ್ತಾದ್ ಅಲಿ ಅಕ್ಬರ್ ಖಾನ್ ಹಾಗೂ ಶಂಕರ ಜೋಶಿ ದೇವಗಿರಿಯವರಲ್ಲಿ ಸಂಗೀತ ಕಲಿಕೆ. ಇಂಗ್ಲೀಷ್ ಸಾಹಿತ್ಯದಲ್ಲಿ ಎಂ. ಎ ಹಾಗೂ ಪಿಎಚ್.ಡಿ ಪದವಿ. 'ಸಂಸ್ಕಾರ' ಚಿತ್ರಕ್ಕೆ ಸಂಗೀತ ನಿರ್ದೇಶಕರಾಗಿ ಚಿತ್ರರಂಗ ಪ್ರವೇಶ. 'ಪಲ್ಲವಿ' 'ಶೃಂಗಾರಮಾಸ' ಮೊದಲಾದ ೨೦ಕ್ಕೂ ಹೆಚ್ಚು ಕನ್ನಡ, ಮಲೆಯಾಳಿ ಕಲಾತ್ಮಕ ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ೧೯೭೬-೭೭ರಲ್ಲಿ 'ಪಲ್ಲವಿ' ೧೯೮೩-೮೪ರಲ್ಲಿ 'ಶೃಂಗಾರಮಾಸ'ಕ್ಕಾಗಿ ಎರಡು ಬಾರಿ ರಾಜ್ಯಸರ್ಕಾರದ ಅತ್ಯುತ್ತಮ ಪ್ರಶಸ್ತಿ ಪಡೆದಿದ್ದಾರೆ. ಖ್ಯಾತ ಸರೋದ್ ಪಟುವಾಗಿರುವ ರಾಜೀವ್ ವಿಶ್ವದಾದ್ಯಂತ ಸಂಗೀತ ಕಛೇರಿಗಳನ್ನು ನಡೆಸಿ ಭಾರತೀಯ ಶಾಸ್ತ್ರೀಯ ಸಂಗೀತವನ್ನು ದೇಶ ವಿದೇಶಗಳಲ್ಲಿ ಸಂಗೀತ ಪ್ರಿಯರಿಗೆ ಪರಿಚಯ ಮಾಡಿಕೊಡುತ್ತಿರುವುದರೊಂದಿಗೆ ಅಮೇರಿಕಾದ ವಿಶ್ವವಿದ್ಯಾಲಯವೊಂದರಲ್ಲಿ ಭಾರತೀಯ ಶಾಸ್ತ್ರೀಯ ಸಂಗೀತದ ಪ್ರಾಧ್ಯಾಪಕರೂ ಆಗಿದ್ದಾರೆ.

### ರಾಜು.ಎ.ಆರ್

ಚಲನಚಿತ್ರ ವಿತರಣ ಕ್ಷೇತ್ರದಲ್ಲಿ ಪ್ರಮುಖರು. ಅಜಂತಾ ಮೂವೀಸ್ - ಅವರ ವಿತರಣ ಸಂಸ್ಥೆ. ೧೯೩೮ರಲ್ಲಿ ಚಿತ್ತೂರು ಜಿಲ್ಲೆಯ ಪೀಲೇರ್‌ನಲ್ಲಿ ಜನನ. ಎಸ್.ಎಸ್.ಎಲ್.ಸಿ.ವರೆಗೆ ವ್ಯಾಸಂಗ. ಹಿರಿಯ ಪತ್ರಕರ್ತ-ಚಿತ್ರ ವಿತರಕ ಬಿ.ಎನ್.ಗುಪ್ತ ಅವರ ವಿಜಯ ಟಾಕಿ ಡಿಸ್ಟ್ರಿಬ್ಯೂಟರ್ಸ್ ಸಂಸ್ಥೆಯಲ್ಲಿ ಪ್ರತಿನಿಧಿಯಾಗಿ ಚಿತ್ರರಂಗ ಪ್ರವೇಶ. ೧೯೫೮ರಲ್ಲಿ ಬಾಲಾಜಿ ಪಿಕ್ಚರ್ಸ್ ವಿತರಣ ಸಂಸ್ಥೆಯನ್ನಾರಂಭಿಸಿ ಕನ್ನಡೇತರ ಭಾಷಾ ಚಿತ್ರಗಳ ವಿತರಣೆ. ೧೯೬೪ರಲ್ಲಿ ಅಜಂತಾ ಮೂವೀಸ್ ಆರಂಭಿಸಿ ನಾಲ್ಕು ನೂರಕ್ಕೂ ಹೆಚ್ಚು ಚಿತ್ರಗಳ ವಿತರಣೆ. ೧೯೭೭ರಲ್ಲಿ ಅಜಂತಾ ಕಂಬೈನ್ಸ್ ಲಾಂಛನದಲ್ಲಿ ಕೆ.ಎಸ್.ಆರ್.ದಾಸ್ ನಿರ್ದೇಶನದಲ್ಲಿ 'ಸಹೋದರರ ಸವಾಲ್' ಕನ್ನಡ ಚಿತ್ರದ ನಿರ್ಮಾಣ. ಇದುವರೆಗೆ ೨೭ ಚಿತ್ರಗಳ ನಿರ್ಮಾಣ. ಕನ್ನಡದ್ದೇ ಅಧಿಕ. 'ಸಿಂಹ ಘರ್ಜನೆ', 'ಸತಿ ಸಕ್ಕೂಬಾಯಿ', 'ಸಿಂಹಜೋಡಿ', 'ಮುತ್ತಿನಂಥ ಅತ್ತಿಗೆ', 'ಬೆಳ್ಳಿನಾಗ', 'ವಿಜಯ್ ವಿಕ್ರಮ್', 'ಊರಿಗೆ ಉಪಕಾರಿ', 'ತಾಯಿ ಕರುಳು', 'ಮನೆಗೆ ಬಂದ ಮಹಾಲಕ್ಷ್ಮಿ', 'ಮಾಂಗಲ್ಯ' 'ವಜ್ರದ ಜಲಪಾತ', 'ಪೂಜಾಫಲ', 'ಸಿಂಹಾಸನ', 'ಸ್ನೇಹಿತರ ಸವಾಲ್', 'ಕಿಲಾಡಿ ಅಳಿಯ', 'ಭದ್ರಕಾಳಿ', 'ಸಾಹಸವೀರ', 'ಅಸಾಧ್ಯ ಅಳಿಯ', 'ಬಂಗಾರದಂಥ ಮಗ' ಇವರ ನಿರ್ಮಾಣದ ಕನ್ನಡ ಚಿತ್ರಗಳು. ತೆಲುಗು ಚಿತ್ರೋದ್ಯಮದಲ್ಲಿಯೂ ಪ್ರಭಾವ ಹೊಂದಿದ

ಎ.ಆರ್.ರಾಜು ಅವರು ಬಿ.ರಾಮಾನಾಯ್ಡುರಂತಹ ತೆಲುಗಿನ ಪ್ರತಿಷ್ಠಿತ ನಿರ್ಮಾಪಕರನ್ನು ಕನ್ನಡಕ್ಕೆ ಕರೆತಂದವರು. ಇವರ ತಮ್ಮ ಎ.ರಾಧಾಕೃಷ್ಣರಾಜು ಅಣ್ಣನೊಂದಿಗೆ ಚಿತ್ರ ವಿತರಣೆ-ನಿರ್ಮಾಣ ಕ್ಷೇತ್ರಗಳಲ್ಲಿ ಭುಜಬಲವಾಗಿ ದುಡಿದವರು. ಎ.ಆರ್.ರಾಜು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿದ್ದರಲ್ಲದೆ, ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಗೂ ಅಧ್ಯಕ್ಷರಾಗಿದ್ದರು. ತಮ್ಮ ನಿರ್ಮಾಣದ ೧೪ ಚಿತ್ರಗಳಲ್ಲಿ ಆರ್ವೋ ನೆಗೆಟಿವ್ ಬಳಸಿದಕ್ಕಾಗಿ ಆ ಸಂಸ್ಥೆಯಿಂದ ನೆದರ್‌ಲ್ಯಾಂಡ್, ಫ್ರಾನ್ಸ್, ಯು.ಕೆ. ಮತ್ತು ಜರ್ಮನಿ ಪರ್ಯಟನೆಗೆ ಪ್ರಾಯೋಜಕತ್ವ ಪಡೆದು ವಿದೇಶ ಯಾತ್ರೆಗೈದವರು. ಚಿತ್ರೋದ್ಯಮದ ಹಲವು ಸಂಘಟನೆಗಳಲ್ಲದೆ ಸಾಮಾಜಿಕ ಕ್ಷೇತ್ರದ ಸಂಘ-ಸಂಸ್ಥೆಗಳಲ್ಲಿಯೂ ರಾಜು ಭಾಗವಹಿಸಿದಾರೆ.

## ರಾಜು.ಕೆ.ವಿ

ಕನ್ನಡ ಚಿತ್ರರಂಗದ ಪ್ರಮುಖ ನಿರ್ದೇಶಕರು ಹಾಗೂ ಚಲನಚಿತ್ರ ಸಾಹಿತಿಗಳಲ್ಲಿ ಒಬ್ಬರಾದವರು ಕೆ.ವಿ.ರಾಜು. ಚಲನಚಿತ್ರ ಮಾಧ್ಯಮವನ್ನು ಸಾಮಾಜಿಕ ಪರಿವರ್ತನೆಗಾಗಿ ಬಳಸಿಕೊಳ್ಳುವ ತುಡಿತವವರು. ಚಲನಚಿತ್ರಗಳ ಮೂಲಕ ಸಮಾಜದ ನಾನಾ



ಹುಳುಕುಗಳ ವಿರುದ್ಧ, ಅನ್ಯಾಯ ಹಾಗೂ ಅಸಮತೆಗಳ ವಿರುದ್ಧ ಪರಿಣಾಮಕಾರಿ ರೀತಿಯಲ್ಲಿ ತಮ್ಮ ಆಕ್ರೋಶವನ್ನು ತೋಡಿಕೊಂಡವರು. ಅವರ ಚಿತ್ರಗಳ ಹೆಚ್ಚುಗಾರಿಕೆಯೆಂದರೆ ತಾಂತ್ರಿಕ ಶ್ರೀಮಂತಿಕೆ ಮತ್ತು ಪದ ವೈಭವ. ವಿಪರ್ಯಾಸವೆಂದರೆ ಅವರು ನಿರ್ದೇಶಿಸಿದ ಮೊದಲ ಚಿತ್ರ ಶಂಕರ್‌ನಾಗ್ ಮತ್ತು ಅನಂತ್‌ನಾಗ್‌ರವರ ನಿರ್ಮಾಣದ 'ಕೂಗು' ತೆರೆ ಕಾಣಲೇ ಇಲ್ಲ. ನಂತರ ಅವರು ನಿರ್ದೇಶಿಸಿದ ಚಿತ್ರಗಳು 'ಬಂಧಮುಕ್ತ', 'ಸಂಗ್ರಾಮ', 'ಅಭಿಜಿತ್', 'ಯುದ್ಧಕಾಂಡ', 'ಇಂದ್ರಜಿತ್', 'ನವಭಾರತ', 'ಕದನ', 'ಸುಂದರ ಕಾಂಡ', 'ಬೆಳ್ಳಿ ಮೋಡಗಳು', 'ಬೆಳ್ಳಿ ಕಾಲುಂಗುರ', 'ಓ ಗಂಡಸರೇ ನೀವೆಷ್ಟು ಒಳ್ಳೆಯವರು', 'ಯುದ್ಧ', 'ಹುಲಿಯಾ', 'ನಂ.೧' ಇತ್ಯಾದಿ. ರಾಜುರವರು ಹಿಂದಿಯಲ್ಲಿ ನಿರ್ದೇಶಿಸಿದ ಚಿತ್ರಗಳು 'ಇಂದ್ರಜಿತ್' (ನಾಯಕ: ಅಮಿತಾಬ್ ಬಚ್ಚನ್) ಮತ್ತು 'ಉಧಾರ್ ಕ ಜಿಂದಗಿ' (ನಾಯಕ: ಜಿತೇಂದ್ರ). ಸಶಕ್ತ ಲೇಖಕರಾದ ರಾಜು ಇಂಕಷ್ಟು ಹೆಚ್ಚು ಕನ್ನಡ ಚಿತ್ರಗಳಿಗೆ ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವು 'ಹೊಸ ನೀರು', 'ಸಂಕ್ರಾಂತಿ', 'ಸಾಂಗ್ಲಿಯಾನ', 'ಸಿ.ಬಿ.ಐ.ಶಂಕರ್', 'ಬ್ರಹ್ಮಾಸ್ತ್ರ' ಮತ್ತು 'ಪೊಲೀಸ್ ಪವರ್'. ರಾಜ್ಯಪ್ರಶಸ್ತಿ ವಿಜೇತ ಚಿತ್ರಗಳಾದ 'ಬಾಡದ ಹೂ' ಮತ್ತು 'ಹೊಸ ನೀರು' ಮೊದಲುಗೊಂಡು 'ಮರಳು ಸರಪಣಿ', 'ಚಿತ್ತಲೆ ಸೇವೆ', 'ಮುದುಡಿದ ತಾವರೆ ಅರಳಿತು', 'ಇಬ್ಬನಿ ಕರಗಿತು', 'ಶ್ವೇತ ಗುಲಾಬಿ' ಚಿತ್ರಗಳಲ್ಲಿ ಅವರ ಸೋದರ, ಖ್ಯಾತ ನಿರ್ದೇಶಕ ಕೆ.ವಿ.ಜಯರಾಂರೊಂದಿಗೆ ರಾಜು ಸಾಹಿತ್ಯ, ಸಹನಿರ್ದೇಶನ ಕ್ಷೇತ್ರಗಳಲ್ಲಿ ದುಡಿದರು. ಎಂ.ಆರ್.ವಿಠಲ್ ಮತ್ತು ಎಂ.ಪಿ.ತಿರುಮುಗಂರಂತಹ ಹಿರಿಯ ನಿರ್ದೇಶಕರೊಂದಿಗೆ ಕೂಡ ಅವರು ಸಹ ನಿರ್ದೇಶಕರಾಗಿ ಕೆಲಸ ನಿರ್ವಹಿಸಿದವರು. ಕೆ.ವಿ.ರಾಜು ಉತ್ತಮ ಸಂಕಲನಕಾರರು.

## ರಾಜು.ಸಿ.ಡಿ



ಪ್ರಸಿದ್ಧ ಛಾಯಾಗ್ರಾಹಕರಲ್ಲಿ ಒಬ್ಬರು. ವಿಜಯವಾಡದಲ್ಲಿ ಜನನ (೧೭-೭-೧೯೫೭). ಬಿ.ಎ.ಪದವಿ. 'ಮಾನಸ ಸರೋವರ' ಚಿತ್ರದಿಂದ ಆಪರೇಟಿವ್ ಕ್ಯಾಮರಾಮನ್ ಆಗಿ ಚಿತ್ರರಂಗ ಪ್ರವೇಶ. ಸಾಕಷ್ಟು ಚಿತ್ರಗಳಲ್ಲಿ ಸಹ ಛಾಯಾಗ್ರಾಹಕರಾಗಿ ದುಡಿದಿರುವ ಇವರು 'ಚಮತ್ಕಾರ' ಚಿತ್ರದಿಂದ ಸ್ವತಂತ್ರ ಛಾಯಾಗ್ರಾಹಕರಾದರು. 'ತಾಳಿ ಪೂಜೆ', 'ಕಿಲ್ಲರ್ ಡೈರಿ', 'ಪ್ರೇಮಿ', 'ಪ್ರತಿಧ್ವನಿ', 'ನಂ.೧', 'ದುರ್ಗದ ಹುಲಿ', 'ಬಿದ್ದ' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದಾರೆ.

## ರಾಜು.ಸಿ.ವಿ

ಕನ್ನಡ ಚಿತ್ರರಂಗದ ಮೊದಲ ಪೀಳಿಗೆಯ ಪ್ರಮುಖರಲ್ಲಿ ಸಿ.ವಿ.ರಾಜು ಒಬ್ಬರು. ಶ್ರೇಷ್ಠ



ಸಂಕಲನಕಾರರು, ನಿರ್ದೇಶಕರು. ಎಲ್ಲರಿಂದಲೂ ವಿಶ್ವಾಸದಿಂದ 'ಗಜದ ರಾಜು' ಎಂದೇ ಕರೆಸಿಕೊಂಡವರು. ನವಜ್ಯೋತಿ ಸ್ಟುಡಿಯೋದಲ್ಲಿ ತಯಾರಾದ 'ಕೃಷ್ಣಲೀಲ' ಅವರ ಪ್ರಥಮ ನಿರ್ದೇಶನದ ಚಿತ್ರ. ಈ ಸ್ಟುಡಿಯೋ ಬೆಳವಣಿಗೆಯಲ್ಲಿ ರಾಜು ಅವರು ಮಹತ್ತರ ಪಾತ್ರ ವಹಿಸಿದ್ದರು. ರಾಜುರವರ 'ನಟಶೇಖರ'ದ ಮೂಲಕ ನಾಯಕನಟ ಕಲ್ಯಾಣ್‌ಕುಮಾರ್ ಹವ್ಯಾಸಿ ರಂಗಭೂಮಿಯಿಂದ ಚಿತ್ರರಂಗವನ್ನು ಪ್ರವೇಶಿಸಿದರು. 'ಭಕ್ತ ಮಲ್ಲಿಕಾರ್ಜುನ', 'ದೇವಸುಂದರಿ', 'ಶ್ರೀ ಪುರಂದರದಾಸರು' ಮತ್ತು 'ದೇವದಾಸಿ' - ಇವು ರಾಜು ಅವರು ನಿರ್ದೇಶಿಸಿದ ಇತರ ಕನ್ನಡ ಚಿತ್ರಗಳು.

## ರಾಜು.ಹೆಚ್.ಜಿ



ಎಪ್ಪತ್ತರ ದಶಕದಲ್ಲಿ ಹೆಸರು ಮಾಡಿದ ಛಾಯಾಗ್ರಾಹಕರು. ೧೯೨೮ರಲ್ಲಿ ಜನಿಸಿದರು. ಛಾಯಾಗ್ರಹಣ ವಿಭಾಗದಲ್ಲಿ ಡಿಪ್ಲೊಮಾ ಪಡೆದು ಸಹಾಯಕ ಛಾಯಾಗ್ರಾಹಕನಾಗಿ ಚಿತ್ರರಂಗ ಪ್ರವೇಶ. ಅನೇಕ ಹಿಂದಿ ಚಿತ್ರಗಳಿಗೆ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. ಕನ್ನಡದ 'ನನ್ನ ರೋಷ ನೂರು ವರುಷ', 'ಮಹಾಪ್ರಚಂಡರು', 'ಸಿಂಹ ಜೋಡಿ', 'ಗಣೇಶನ ಮಹಿಮೆ', 'ಸಾಹಸಸಿಂಹ', 'ಉರಿಗೆ ಉಪಕಾರಿ', 'ದೇವರೆಲ್ಲಿದ್ದಾನೆ', 'ಈ ಜೀವ ನಿನಗಾಗಿ', 'ಜೇಡಿ', 'ರಣರಂಗ', 'ಅರ್ಜುನ್', 'ಚಿತ್ರಲೇಖ' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದಾರೆ. ಸದಾ ಚುರುಕಾಗಿ ಕೆಲಸ ಮಾಡುವ ಇವರ ಗುಣ ಆಕರ್ಷಣೀಯ.

## ರಾಜೇಂದ್ರ ಬಾಬು.ಕೆ



ಕಂಠದಾನ ಕಲಾವಿದ, ರಂಗಭೂಮಿ ನಟ, ಸಾಹಿತಿ ಹೀಗೆ ಬಹುಮುಖ ಪ್ರತಿಭೆಯ ರಾಜೇಂದ್ರ ಬಾಬು.ಕೆ ಮೈಸೂರಿನವರು. ೨೭-೯-೧೯೫೩ ರಂದು ಜನನ. ಎಸ್.ಎಸ್.ಎಲ್.ಸಿ.ವರೆಗೆ ಓದಿರುವ ಇವರು ತೆಕ್ಕಟ್ಟೆ ನಾಗರಾಜ್ ಅವರ 'ಬಿಸಿಲು ಕುದುರೆ' ಚಿತ್ರದಿಂದ ಕಂಠದಾನ ಕಲಾವಿದರಾಗಿ ಚಿತ್ರರಂಗ ಪ್ರವೇಶಿಸಿದರು. 'ಅಮೆರಿಕಾ ಅಮೆರಿಕಾ', 'ತಬರನ ಕತೆ', 'ಮಿ. ಕೋಕಿಲಾ', 'ಹೃದಯ ಹಾಡಿತು' ಚಿತ್ರಗಳು ಇವರು ಕಂಠದಾನ ಮಾಡಿದ ಕೆಲವು ಚಿತ್ರಗಳು. ರಂಗಭೂಮಿ ನಟನಾಗಿ ಮೂರು ದಶಕಗಳ ಕಾಲ ದುಡಿದಿರುವ ಇವರು ನೂರಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ.

## ರಾಜೇಂದ್ರ ಬಾಬು.ಡಿ

ಕನ್ನಡ ಚಿತ್ರರಂಗದ ಯಶಸ್ವೀ ನಿರ್ದೇಶಕರಲ್ಲಿ ಡಿ.ರಾಜೇಂದ್ರಬಾಬು ಒಬ್ಬರು. ಚಿಕ್ಕಬಳ್ಳಾಪುರದ ನಿವಾಸಿ. ಮೊದಲಿನಿಂದಲೂ ರಂಗಭೂಮಿಯಲ್ಲಿ ಒಲವು. ಕಾಲೇಜು ವಿದ್ಯಾಭ್ಯಾಸ ಮುಗಿಸಿ, ನಟನಾಗಬೇಕೆಂಬ ಹೆಬ್ಬಯಕೆಯಿಂದ ಆದರ್ಶ ಫಿಲಂ ಇನ್ಸ್‌ಸ್ಟಿಟ್ಯೂಟ್‌ನಲ್ಲಿ ಅಭಿನಯ ಶಿಕ್ಷಣ



ಪಡೆದರು. 'ಕುರುಬರ ಲಕ್ಕ' ಚಿತ್ರದಲ್ಲಿ ಪ್ರಮುಖ ಪಾತ್ರ ನಿರ್ವಹಿಸಿ ಬೆಳ್ಳಿ ತೆರೆಗೆ ಕಾಲಿಟ್ಟರು. ಅನಂತರ ಸಹಾಯಕ ನಿರ್ದೇಶಕರಾಗಿ ಕೆಲವಾರು ಚಿತ್ರಗಳಲ್ಲಿ ದುಡಿದು, ಅನುಭವ ಪಡೆದುಕೊಂಡರು. ಎಸ್.ವಿ.ರಾಜೇಂದ್ರಸಿಂಗ್ (ಬಾಬು) ಅವರಲ್ಲಿ ಸಹಾಯಕರಾಗಿದ್ದು, ಅವರ ನಿರ್ದೇಶನದಲ್ಲಿನ 'ಕಾಳಿಂಗ ಸರ್ಪ' ಚಿತ್ರವನ್ನು ಪೂರ್ಣಗೊಳಿಸಿಕೊಟ್ಟರು. ೧೯೮೪ರಲ್ಲಿ 'ಜಿದ್ದು' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. ಸುಮಾರು ೩೦ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪ್ರಮುಖ ಚಿತ್ರಗಳು 'ಅಸಂಭವ', 'ನಾನು ನನ್ನ ಹೆಂಡ್ತಿ', 'ಒಲವಿನ ಉಡುಗೊರೆ', 'ರಾಮಾಚಾರಿ', 'ಹಾಲುಂಡ ತವರು', 'ಜೋಡಿ ಹಕ್ಕಿ', 'ಕುರುಬನ ರಾಣಿ', 'ಯಾರೇ ನೀನು ಚೆಲುವೆ', 'ಹಬ್ಬ'. 'ಜೋಡಿ ಹಕ್ಕಿ' ಚಿತ್ರದ ಚಿತ್ರಕಥೆಗಾಗಿ ೧೯೯೭-೯೮ನೇ ಸಾಲಿನ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ.

## ರಾಜೇಂದ್ರ ಸಿ.ಮಾಪಾಕ್ಷಿ



ಪ್ರತಿಭಾವಂತ ಛಾಯಾಗ್ರಾಹಕ. ಬೆಂಗಳೂರಿನ ಎಸ್.ಜೆ.ಪಾಲಿಟೆಕ್ನಿಕ್‌ನಲ್ಲಿ ಸಿನಿಮಾಟೋಗ್ರಫಿ ಡಿಪ್ಲೊಮಾ ಪಡೆದ ಮಾಪಾಕ್ಷಿ 'ಮುಕ್ತಿ' ಚಿತ್ರದಲ್ಲಿ ಮೀನಾಕ್ಷಿ ಸುಂದರಂ ಅವರ ಸಹಾಯಕನಾಗಿ ಚಿತ್ರರಂಗ ಪ್ರವೇಶಿಸಿ, 'ಯಾವ ಜನ್ಮದ ಮೈತ್ರಿ', 'ಭಲೇ ಹುಚ್ಚ',

'ಸ್ವಯಂವರ', 'ಕಂಕಣ' ಮೊದಲಾದ ಚಿತ್ರಗಳಿಗೆ ಸಹಾಯಕ ಛಾಯಾಗ್ರಾಹಕರಾಗಿ ಕಾರ್ಯ ನಿರ್ವಹಿಸಿದರು. ಟಿ.ವಿ.ರಾಜಾರಾಂ ಅವರ ಮಾರ್ಗದರ್ಶನದಲ್ಲಿ ಬೆಳೆದ ಇವರನ್ನು ನಿರ್ದೇಶಕ ಗೀತಪ್ರಿಯ ಸ್ವತಂತ್ರ ಛಾಯಾಗ್ರಾಹಕರಾಗಿ ಬೆಳಕಿಗೆ ತಂದರು. 'ಶುಭ ಮುಹೂರ್ತ' ಸ್ವತಂತ್ರ ಛಾಯಾಗ್ರಾಹಕರಾಗಿ ದುಡಿದ ಪ್ರಥಮ ಚಿತ್ರ. 'ಹೂಸದಾಳು', 'ಜೀವನ ಸಂಗ್ರಾಮ', 'ಪ್ರೇಮ ತಪಸ್ಸು', 'ಅರುಣರಾಗ', 'ಒಲವಿನ ಆಸರೆ', 'ಶರವೇಗದ ಸರದಾರ' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದಾರೆ.

## ರಾಜೇಂದ್ರಸಿಂಗ್ ಬಾಬು.ಎಸ್.ವಿ

ಕನ್ನಡ ಚಿತ್ರರಂಗದ ಖ್ಯಾತ ನಿರ್ದೇಶಕ 'ಬಾಬು' ಎಂದೇ ಜನಪ್ರಿಯರಾಗಿರುವ ರಾಜೇಂದ್ರ ಸಿಂಗ್ ಹುಟ್ಟಿದ್ದು ಮೈಸೂರಿನಲ್ಲಿ. ಇವರ ತಂದೆ ಕನ್ನಡ ಚಿತ್ರರಂಗದ ಪಿತಾಮಹರಲ್ಲೊಬ್ಬರೂ, ಸ್ವಾತಂತ್ರ ಹೋರಾಟಗಾರರೂ ಆದ ಡಿ.ಶಂಕರ್‌ಸಿಂಗ್. ತಾಯಿ ಚಲನಚಿತ್ರ ಕಲಾವಿದೆ ಪ್ರತಿಮಾದೇವಿ. ಮೈಸೂರು ವಿಶ್ವವಿದ್ಯಾನಿಲಯದ ಬಿ.ಎ.ಪದವಿಧರ ಬಾಬು ಅವರು ಹುಟ್ಟಿನಿಂದಲೇ ತಮ್ಮ ಕಲಾ ಪ್ರತಿಭೆಯನ್ನು ಬೆಳೆಸಿಕೊಂಡು ಬಂದವರು. ಕಲಾವಿದರ ನಂಟು, ಚಿತ್ರ ತಂಡದವರ ಒಡನಾಟಗಳಿಂದಾಗಿ ಚಿತ್ರರಂಗದ ಪ್ರತಿಯೊಂದು ವಿಭಾಗದ ಒಳ ಹೊಕ್ಕು ಚಿತ್ರ ನಿರ್ಮಾಣ, ನಿರ್ದೇಶನಗಳ ಸೂಕ್ಷ್ಮತೆಯನ್ನು ಅರಿತುಕೊಂಡವರು. ಇವರ ಪ್ರಥಮ ನಿರ್ದೇಶನದ ಚಿತ್ರ 'ನಾಗಕನ್ಯೆ' (೧೯೭೫). ೧೯೭೭ರಲ್ಲಿ 'ನಾಗರ ಹೊಳೆ' ಚಿತ್ರದ ಮೂಲಕ ಯಶಸ್ವಿ ಚಿತ್ರ ನಿರ್ದೇಶಕರಾದರು. ಇದು ಕನ್ನಡದ ಚಿತ್ರರಂಗದಲ್ಲೊಂದು ಮೈಲಿಗಲ್ಲು. ೧೯೮೧ರಲ್ಲಿ ರಾಜಕೀಯ ಹಿನ್ನೆಲೆಯುಳ್ಳ 'ಅಂತ' ಚಿತ್ರವನ್ನು ನಿರ್ದೇಶಿಸಿ ಕನ್ನಡ ಚಿತ್ರರಂಗದಲ್ಲಿ ರಾಜಕೀಯ ಚಿತ್ರಗಳ ಪರಂಪರೆಗೆ ನಾಂದಿ ಹಾಡಿದರು. ಬಾಬು ಅವರ ಚಿತ್ರರಂಗದ ಮಹತ್ಸಾಧನೆ ಅವರೇ



ನಿರ್ಮಿಸಿ-ನಿರ್ದೇಶಿಸಿದ ೭೦.ಎಂ.ಎಂ ಚಿತ್ರ 'ಮುತ್ತಿನ ಹಾರ'. ಕರ್ನಾಟಕದ ಕಾಫಿ ತೋಟಗಳು, ರಾಜಾಸ್ಥಾನದ ಮರಳುಗಾಡುಗಳು, ಕಾಶ್ಮೀರದ ಸುಂದರ ಪರ್ವತಶ್ರೇಣಿಗಳು. ಇಂಥ ಹಲವಡೆ ಈ ಚಿತ್ರಕ್ಕಾಗಿ ಅನೇಕ ದೃಶ್ಯಗಳನ್ನು ವೈಭವವಾಗಿ ಚಿತ್ರಿಸಿದ ಕೀರ್ತಿ ಬಾಬುರವರದು. ಬಾಬು ಇದುವರೆಗೆ ೫೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವು 'ಬಂಧನ', 'ಕಿಲಾಡಿ ಜೋಡಿ', 'ಬಣ್ಣದ ಗೆಜ್ಜೆ', 'ಮುಂಗಾರಿನ ಮಿಂಚು', 'ಭೂಮಿ ತಾಯಿ ಚೊಚ್ಚಲ ಮಗ'. ಸಂಗೀತ ತಂತ್ರಜ್ಞ. ಸಿರಾಂಪಸ್ ಮತ್ತು ದರ ಸಂಯೋಜನೆಗಳಲ್ಲಿ ಅನೇಕ ಪ್ರಯೋಗಗಳನ್ನು ಮಾಡಿರುವವರು. ಬಾಬು 'ಬಂಧನ' ಮತ್ತು 'ಮುತ್ತಿನ ಹಾರ' ಚಿತ್ರಗಳಿಗೆ ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಕನ್ನಡ ಚಿತ್ರರಂಗಕ್ಕೆ ಸಲ್ಲಿಸಿರುವ ಸಮಗ್ರ ಸೇವೆಯನ್ನು ಗಮನಿಸಿ ರಾಜ್ಯ ಸರ್ಕಾರದ ಪ್ರತಿಷ್ಠಿತ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ಇವರಿಗೆ ಸಂದಿದೆ. ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘದ ಅಧ್ಯಕ್ಷರೂ ಆಗಿದ್ದಾರೆ. ಅವರ ಮಗ ಹಾಗೂ ಜೆ.ಜಗದೀಶ್ ಜಂಟಿಯಾಗಿ ನಿರ್ಮಿಸಿದ ಚಿತ್ರಗಳಲ್ಲಿ 'ಹೂವು ಹಣ್ಣು', 'ಕುರಿಗಳು ಸಾರ್ ಕುರಿಗಳು' ಮೊದಲಾದವು ಸುದ್ದಿ ಮಾಡಿದವು. 'ಕುರಿಗಳು ಸಾರ್ ಕುರಿಗಳು' ಚಿತ್ರಕ್ಕೆ ರಾಜ್ಯ ಪ್ರಶಸ್ತಿಯೂ ಬಂದಿದೆ.

## ರಾಜೇಶ್

ಕನ್ನಡ ಚಿತ್ರಲೋಕದ ಹಿರಿಯ ನಟರು. ಹುಟ್ಟೂರು ಬೆಂಗಳೂರು. ತಂದೆ ಎಲ್ಲಪ್ಪ ಕುಸ್ತಿ ಪಟು. ವಿದ್ಯಾಸಾಗರ್ ಹೆಸರಿನಿಂದ ಕಥೆ, ನಾಟಕ ಬರೆಯುತ್ತಿದ್ದರು. ಶಾಲೆಯ ದಿನಗಳಲ್ಲಿಯೇ ಮನೆಯವರ ಪ್ರತಿಭಟನೆ ನಡುವೆ 'ಸುದರ್ಶನ ನಾಟಕ ಕಂಪೆನಿ'ಯಲ್ಲಿ ಶ್ರೀರಾಮನ ಪಾತ್ರ ಮಾಡುವ ಮೂಲಕ ರಂಗಭೂಮಿ ಪ್ರವೇಶಿಸಿದರು. ಆ ನಾಟಕ



ಸಂಸ್ಥೆಗಾಗಿ ತಾವೇ ನಾಟಕಗಳನ್ನು ರಚಿಸಿಕೊಟ್ಟರು. ಶಕ್ತಿ ನಾಟಕ ಮಂಡಲಿ ಎಂಬ ಸ್ವಂತ ಸಂಸ್ಥೆ ಹುಟ್ಟುಹಾಕಿದರು. ವಿಮಾ ಇಲಾಖೆಯ ಉದ್ಯೋಗಿಯೂ ಆದರು. 'ವೀರಸಂಕಲ್ಪ' (೧೯೬೪) ಚಿತ್ರದಲ್ಲಿ ಮಾಚೀರಾಯನ ಪಾತ್ರ ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ನಂತರ ಹಲವು ಸಣ್ಣ ಪುಟ್ಟ ಗಮನಾರ್ಹ ಪಾತ್ರಗಳು ದೊರೆತವು. ಸಿ.ವಿ.ಶಿವಶಂಕರ್ ನಿರ್ದೇಶನದ 'ನಮ್ಮ ಊರು' (೧೯೬೮) ಚಿತ್ರದ ಮೂಲಕ ನಾಯಕನಟರಾದರು. 'ರಾಜೇಶ್' ಎಂದು ಹೆಸರಾದರು. ನಂತರ ಹತ್ತಾರು ಚಿತ್ರಗಳಲ್ಲಿ ನಾಯಕ ನಟರಾಗಿ, ಅನಂತರ ಪೋಷಕ ನಟರಾಗಿ ಅಭಿನಯಿಸಿದರು. ಇವರ ಪುತ್ರಿ ಆಶಾರಾಣಿ 'ರಥಸಪ್ತಮಿ' ಚಿತ್ರದ ನಾಯಕಿ.

## ರಾಜೇಶ್ ಕೃಷ್ಣನ್

ಕನ್ನಡ ಚಿತ್ರರಂಗದ ಹೊಸ ಪೀಳಿಗೆಯ



ಗಾಯಕ. ತಾಯಿ ಮೀರಾಕೃಷ್ಣ ಅವರಿಂದ ಶಾಸ್ತ್ರೀಯವಾಗಿ ಸಂಗೀತ ಕಲಿತರು. ಒಂಭತ್ತು ವರ್ಷದವರಿದ್ದಾಗ 'ಬೃಂದಾವನ ಆರ್ಕೆಸ್ಟ್ರಾ' ವಾದ್ಯಗೋಷ್ಠಿಯನ್ನು ಸೇರಿದರು. ಫಣಿ ರಾಮಚಂದ್ರ ಅವರ 'ಗೌರಿಗಣೇಶ' ಚಿತ್ರದ ಹಿನ್ನೆಲೆ ಗಾಯಕನಾಗಿ ಚಿತ್ರರಂಗ ಪ್ರವೇಶಿಸಿದರು. ಚಿತ್ರದ ಹಿನ್ನೆಲೆ ಗಾಯನದ ಜೊತೆಗೆ ಕಂಠದಾನವನ್ನೂ ಮಾಡಿದ್ದಾರೆ. ರಾಜೇಶ್ ಕೃಷ್ಣನ್ 'ಬೇವು ಬೆಲ್ಲ', 'ಭಗವಾನ್ ಶ್ರೀ ಸತ್ಯಸಾಯಿಬಾಬಾ', 'ತವರಿನ ತೊಟ್ಟಿಲು', 'ಜನುಮದ ಜೋಡಿ', 'ಎ'. 'ಸೂರ್ಯವಂಶ', 'ಯಜಮಾನ' ಮುಂತಾದ ಚಿತ್ರಗಳಿಗೆ ಹಿನ್ನೆಲೆ ಗಾಯಕರು. 'ಅಮೇರಿಕಾ ಅಮೇರಿಕಾ' ಚಿತ್ರದ ಗಾಯನಕ್ಕಾಗಿ ಕನ್ನಡ ಚಿತ್ರ ರಸಿಕರ ಪ್ರಶಸ್ತಿಯನ್ನು, 'ಬಣ್ಣದ ಹೆಜ್ಜೆ' ಚಿತ್ರದ ಗಾಯನಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದ್ದಾರೆ.

## ರಾಜೇಶ್ ರಾಮನಾಥನ್



ಸಂಗೀತ ನಿರ್ದೇಶಕರಾದ ರಾಜೇಶ್ ರಾಮನಾಥ್ ಬೆಂಗಳೂರಿನವರು. ಶಬ್ದ ತಂತ್ರಜ್ಞಾನದಲ್ಲಿ ಪದವೀಧರರಾದ ಇವರು ಕನ್ನಡ ಚಿತ್ರರಂಗಕ್ಕೆ ಸಂಗೀತ ನಿರ್ದೇಶಕರಾಗಿ 'ಶುಭಲಗ್ನ' ಚಿತ್ರದ ಮೂಲಕ ೧೯೮೫ರಲ್ಲಿ ಚಿತ್ರರಂಗ ಪ್ರವೇಶಿಸಿದರು. 'ಲೇಡಿ ಪೋಲೀಸ್', 'ವಸಂತಕಾವ್ಯ', 'ಅಣ್ಣಾವ್ರ ಮಕ್ಕಳು', 'ದುರ್ಗಾಶಕ್ತಿ', 'ಭಾಮ ಸತ್ಯಭಾಮ' 'ವೀರಪ್ಪನಾಯ್ಕ' 'ಯಜಮಾನ' ಮುಂತಾದ ಚಿತ್ರಗಳಿಗೆ ಸಂಗೀತ ಸಂಯೋಜನೆ ಮಾಡಿದ್ದಾರೆ.

## ರಾಧಾ ಬಿ.ವಿ



ಕನ್ನಡ ಚಿತ್ರರಂಗದಲ್ಲಿ ಮೂರು ದಶಕಗಳಿಂದ ಏಕಸಮನಾಗಿ ಜನಪ್ರಿಯತೆಯನ್ನು ಉಳಿಸಿಕೊಂಡು ಬಂದಿರುವ ಬಿ.ವಿ.ರಾಧಾ ಅವರು ಬಾಲನಟಿಯಾಗಿ ಚಿತ್ರರಂಗಕ್ಕೆ ಬಂದವರು. ನಾಟ್ಯಪ್ರವೀಣೆ. ಆಕೆ ಅಭಿನಯಿಸಿರುವ ಪಾತ್ರಗಳು ವೈವಿಧ್ಯಮಯ. ಇದುವರೆಗೂ ಹೆಚ್ಚು ಕಡಿಮೆ ೧೫೦ ಚಿತ್ರಗಳಲ್ಲಿ ಅಭಿನಯಿಸಿದಾರೆ. 'ನವಕೋಟಿ ನಾರಾಯಣ'ದಿಂದಾರಂಭಿಸಿ ಹಲವಾರು ಚಿತ್ರಗಳಲ್ಲಿ ತಂಗಿ, ಅಕ್ಕ, ಅತ್ತಿಗ, ನರ್ತಕಿ ಎಲ್ಲವೂ ಆದರು. ಬಿ.ವಿ.ರಾಧಾರವರು ನಾಯಕಿಯಾಗಿ, ಎರಡನೆಯ ನಾಯಕಿಯಾಗಿ, ಪೋಷಕ ನಟಿಯಾಗಿ ಶೋಭಿಸಿ ಅಭಿನಯವನ್ನು ಗಂಭೀರವಾದ ಕಲೆಯನ್ನಾಗಿ ಬೆಳೆಸಿಕೊಂಡು ಬಂದವರು. 'ದೇವರು ಕೊಟ್ಟ ತಂಗಿ', 'ಬೆಂಗಳೂರು ಮೈಲ್', 'ಅನಿರೀಕ್ಷಿತ', 'ಯಾವ ಜನ್ಮದ ಮೈತ್ರಿ', 'ಭಲೇ ಅದೃಷ್ಟವೋ ಅದೃಷ್ಟ' ಅಂತಹ ಚಿತ್ರಗಳಲ್ಲಿ ವಿಶೇಷ ಗಮನ ಸೆಳೆದ ಅವರು 'ಮಿಥಿಲೆಯ ಸೀತೆಯರು' ಚಿತ್ರದಲ್ಲಿ ಕ್ಲಿಷ್ಟ ಪಾತ್ರವೊಂದರ ಹೃದಯಂಗಮ ನಿರೂಪಣೆಯಿಂದ ಅಸಂಖ್ಯಾತ ಹೃದಯಗಳನ್ನು ಗೆದ್ದುಕೊಂಡರು. ರಾಧಾರವರು ಸಮರ್ಥ ಚಿತ್ರ ನಿರ್ಮಾಪಕಿ. ರಾಧಾರವಿ ಚಿತ್ರ ಲಾಂಛನದಡಿ ಚಿತ್ರಗಳನ್ನು ನಿರ್ಮಿಸಿ ಅವರ ಪತಿ ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ (ರವೀ)ಯವರಿಗೆ ನೆರವಾಗಿದ್ದಾರೆ. ರವೀಯವರು ನಿರ್ಮಿಸಿ, ನಿರ್ದೇಶಿಸಿ ರಾಧಾರವರು ಕಾರ್ಯನಿರ್ವಾಹಕ ನಿರ್ಮಾಪಕರಾಗಿದ್ದ 'ಹರಕೆಯ ಕುರಿ' ಚಿತ್ರಕ್ಕೆ ರಾಜ್ಯ ಸರ್ಕಾರದಿಂದ ೧೯೯೧-೯೨ನೇ ಸಾಲಿನ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಲಭ್ಯವಾಯಿತು. ರಾಧಾ ಕಿರುತೆರೆಯಲ್ಲಿ ಬಿಡುವಿಲ್ಲದ ಕಲಾವಿದೆ.

## ರಾಮ್‌ಕುಮಾರ್

ಕನ್ನಡದ ಯುವ ನಾಯಕ ನಟ.



ನಟ-ನಿರ್ಮಾಪಕ ಶೃಂಗಾರ್ ನಾಗರಾಜ್‌ರ ಪುತ್ರ. ಹೊಸ ನಾಯಕರಿಗೆ ಕೊರತೆಯಿದ್ದ ಸಮಯದಲ್ಲಿ ರಾಜೇಂದ್ರ ಸಿಂಗ್ ಬಾಬು ನಿರ್ದೇಶನದ 'ಮುತ್ತಿನ ಹಾರ'ದ ಮೂಲಕ ಬಣ್ಣದ ಲೋಕ ಪ್ರವೇಶಿಸಿದರು. ನಾಯಕನಾಗಿ ಯಶಸ್ಸಿನ ರುಚಿ ಕಂಡದ್ದು 'ಗೆಜ್ಜೆನಾದ' ಚಿತ್ರದ ಮೂಲಕ. ನಂತರ 'ಗುಲಾಬಿ', 'ಜೇನಿನ ಹೊಳೆ', 'ನಂಬರ್ ಒನ್', 'ಸ್ನೇಹ ಲೋಕ', 'ಹಬ್ಬ'. 'ಸರೋವರ', 'ಕಾವ್ಯ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದಾರೆ.

## ರಾಮಕೃಷ್ಣ

ಪ್ರತಿಭೆ, ರೂಪ ಇದ್ದರೂ



ನಾಯಕನಟನಾಗದೇ ಉಪನಾಯಕ ಹಾಗೂ ಪೋಷಕ ನಟನಾಗಿಯೇ ಉಳಿದ; 'ಟಾಂ ಬಾಯ್' ಇಮೇಜು ಪಡೆದ ಕಲಾವಿದ ರಾಮಕೃಷ್ಣ. ಸಿರಸಿ ತಾಲ್ಲೂಕು ನೀರನಹಳ್ಳಿಯ ಈತ ಸಿರಸಿಯ ಎಂ.ಇ.ಎಸ್ ಕಾಲೇಜಿನ ಬಿ.ಎ.ಪದವೀಧರ. ಗುಬ್ಬಿ ನಾಟಕ ಕಂಪೆನಿಯಲ್ಲಿ ಮೂರು ವರ್ಷಗಳ ಕಾಲ ದುಡಿಮೆ. 'ಬಬ್ರುವಾಹನ' ಚಿತ್ರದ ಕೃಷ್ಣನಾಗಿ ಚಿತ್ರರಂಗ ಪ್ರವೇಶಿಸಿದರು. ಪುಟ್ಟಣ್ಣ ಕಣಗಾಲ್‌ರ ಚಿತ್ರಗಳಲ್ಲಿ ಖಾಯಂ ನಟನಾಗಿದ್ದ ರಾಮಕೃಷ್ಣ 'ಪಡುವಾರಳ್ಳಿ ಪಾಂಡವರು','ರಂಗನಾಯಕಿ','ಮಾನಸ ಸರೋವರ'.' ಅಮೃತ ಘಳಿಗೆ',' ಋಣ ಮುಕ್ತಳು',' ಧರಣಿ ಮಂಡಲ ಮಧ್ಯದೊಳಗೆ' ಚಿತ್ರಗಳಲ್ಲಿ ಅಭಿನಯಿಸಿದರು. 'ಸಂಗ್ಯಾಬಾಳ್ಯಾ','ಒಲವಿನ ಉಡುಗೊರೆ' ಮತ್ತಿತರ ಚಿತ್ರಗಳಲ್ಲಿ ಇರುವ ಅವಕಾಶದಲ್ಲೇ ಗಮನ ಸೆಳೆದರು. ದಿನೇಶ್ ಬಾಬು ನಿರ್ದೇಶನದ 'ಅಮೃತವರ್ಷಿಣಿ', 'ಲಾಲಿ' ಮೊದಲಾದ ಚಿತ್ರಗಳಲ್ಲಿ ವಿಶಿಷ್ಟ ಅಭಿನಯ ನೀಡಿದ್ದಾರೆ. ಯಕ್ಷಗಾನ ಕಲೆಯನ್ನೂ ಬಲ್ಲರು. ರಾಮಕೃಷ್ಣ 'ರಂಗನಾಯಕಿ' ಚಿತ್ರದ ಅಭಿನಯಕ್ಕಾಗಿ ಅತ್ಯುತ್ತಮ ಪೋಷಕನಟ ಪ್ರಶಸ್ತಿಯನ್ನು ಪಡೆದಿದ್ದಾರೆ. ಕಿರುತೆರೆಯಲ್ಲೂ ನಟಿಸುತ್ತಿದ್ದಾರೆ.

## ರಾಮಕೃಷ್ಣ.ಎನ್.ಕೆ



ಪ್ರಸಾಧನ ಕಲಾವಿದ ಮತ್ತು ನಟ. ಬೆಂಗಳೂರಿನಲ್ಲಿ ೧೧-೧೦-೧೯೫೧ ರಲ್ಲಿ ಜನಿಸಿದರು. ಬೆಂಗಳೂರು ವಿಶ್ವ ವಿದ್ಯಾನಿಲಯದಿಂದ ವಿಜ್ಞಾನ ಪದವೀಧರರಾದ ಎನ್.ಕೆ.ರಾಮಕೃಷ್ಣ ಸುಮಾರು ಮೂರು ದಶಕಗಳ ಕಾಲ ಪ್ರಸಾಧನ ಕಲಾವಿದರಾಗಿ ಸಿನಿಮಾ ಹಾಗೂ ರಂಗಭೂಮಿಗಳೆರಡರಲ್ಲೂ ದುಡಿದಿದ್ದಾರೆ. ಸಂಗೀತ ನಾಟಕ ಅಕಾಡೆಮಿಯಲ್ಲಿ ಬಿ.ವಿ.ಕಾರಂತರ ಮಾರ್ಗದರ್ಶನದಲ್ಲಿ ಪ್ರಸಾಧನ ಕಲಾವಿದ ಬಿ.ಎನ್.ನಾರಾಯಣ ಅವರ ಬಳಿ ಪ್ರಸಾಧನ ವಿಭಾಗದ ಸಾಕಷ್ಟು ವಿಷಯಗಳನ್ನು ಕಲಿತರು. ರಂಗಭೂಮಿಯಲ್ಲಿ ಇವರ ಕಾರ್ಯ ವೈಖರಿಯಿಂದ ಆಕರ್ಷಿತರಾದ ಮಂದಿ ಚಲನಚಿತ್ರ ರಂಗಕ್ಕೆ ಕರೆತಂದರು. 'ಚೋಮನ ದುಡಿ'.'ಗ್ರಹಣ','ಘಟಶ್ರಾದ್ಧ', 'ಋಷ್ಯಶೃಂಗ','ತಬ್ಬಲಿಯು ನೀನಾದೆ ಮಗನೆ','ಗೀಜಗನ ಗೂಡು','ಸಾವಿತ್ರಿ', 'ಅಮೆರಿಕಾ ಅಮೆರಿಕಾ'.'ಉದ್ಭವ' ಮೊದಲಾದ ಪ್ರಶಸ್ತಿ ವಿಜೇತ ಚಿತ್ರಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಕೆಲಕಾಲ ಕಮಲಹಾಸನ್ ಅವರ ಮೇಕಪ್‌ಮ್ಯಾನ್ ಆಗಿದ್ದರು. ಕನ್ನಡದ ಜಯಮಾಲಾ. ಅನಂತರ ಅಂಬರೀಷ್ ಅವರಿಗೆ ಮೇಕಪ್‌ಮ್ಯಾನ್ ಆಗಿ ಶ್ರಮಿಸಿದರು. ಇವರ ಶಿಷ್ಯರೆಲ್ಲ ಉದ್ಯಮದಲ್ಲಿ ಸೃಜನಶೀಲರಾಗಿ ತೊಡಗಿಕೊಂಡಿದ್ದಾರೆ.

## ರಾಮಕೃಷ್ಣ ಕೋಡ್ಲು



ಕನ್ನಡ ಚಲನಚಿತ್ರ ನಿರ್ದೇಶಕರ ಪೈಕಿ ಕೋಡ್ಲು ರಾಮಕೃಷ್ಣ ಗಮನಾರ್ಹರು. ಕಾನೂನು ಪದವೀಧರರಾದ ರಾಮಕೃಷ್ಣ ಗ್ರಾಮೀಣ ಪರಿಸರದಿಂದ ಬಂದವರು. ಆದರೂ ಅವರು ನಗರ ಜೀವನದ ಹಾಗೂ ಮಧ್ಯಮ ವರ್ಗದ ಕುಟುಂಬಗಳ ಸಂಕೀರ್ಣತೆಗಳನ್ನು ತಮ್ಮ ಚಿತ್ರಗಳಲ್ಲಿ ತಮ್ಮದೇ ಆದ ಶೈಲಿಯಲ್ಲಿ ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಮಲೆನಾಡಿನವರಾದ ರಾಮಕೃಷ್ಣರವರಿಗೆ ಹವ್ಯಾಸಿ ರಂಗಭೂಮಿಯ ಹಿನ್ನೆಲೆಯೂ ಇದೆ. ಗೀತಪ್ರಿಯ, ನಾಗಾಭರಣರಂತಹ ನಿರ್ದೇಶಕರೊಂದಿಗೆ ಸುಮಾರು ೧೫ ಚಿತ್ರಗಳಲ್ಲಿ ಸಹಾಯಕ ನಿರ್ದೇಶಕರಾಗಿ ದುಡಿದ ಅವರು ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ 'ಬಿಸಿಲು ಬೆಳದಿಂಗಳು' (೧೯೮೯). ನಂತರ ಅವರು ಅನೇಕ ವಿಭಿನ್ನ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪ್ರಶಸ್ತಿ ವಿಜೇತ 'ಉದ್ಭವ' ಮತ್ತು 'ಯಾರಿಗೂ ಹೇಳ್ಬೇಡಿ'. 'ಮುರಳೀಗಾನ ಅಮೃತ ಪಾನ', 'ಕಾದಂಬರಿ'.'ನಿಲುಕದ ನಕ್ಷತ್ರ','ಕಾವ್ಯ', 'ನೀ ಮುಡಿದ ಮಲ್ಲಿಗೆ' ಅವರು ನಿರ್ದೇಶಿಸಿದ ಇತರ ಪ್ರಮುಖ ಚಿತ್ರಗಳು. ತುಳು ಭಾಷೆಯಲ್ಲಿ 'ರಾತ್ರಿ ಪಗಲ್' ಚಿತ್ರವನ್ನೂ ನಿರ್ದೇಶಿಸಿದ್ದಾರೆ. ಅನೇಕ ಸಾಕ್ಷ್ಯ ಚಿತ್ರಗಳನ್ನು ನಿರ್ದೇಶಿಸಿರುವ ರಾಮಕೃಷ್ಣ ಕಿರುತೆರೆಯಲ್ಲಿಯೂ ಸಾಕಷ್ಟು ಕೆಲಸ ಮಾಡಿದ್ದಾರೆ. ಅವರ ಎಲ್ಲ ಚಿತ್ರಗಳಲ್ಲಿಯೂ ಎದ್ದು ಕಾಣುವ ಅಂಶಗಳು ಸರಳತೆ, ವಾಸ್ತವತೆ ಮತ್ತು ಉತ್ತಮ ಅಭಿರುಚಿ. 'ಯಾರಿಗೂ ಹೇಳ್ಬೇಡಿ' (೧೯೯೪-೯೫) ಚಿತ್ರ ತೃತೀಯ ಅತ್ಯುತ್ತಮ ಚಿತ್ರ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆಯಿತು.

## ರಾಮಗೋಪಾಲ್



೮೦ರ ದಶಕದ ನಾಯಕನಟ. ಮೂಲ ಹೆಸರು ಕೋದಂಡರಾಮ್. ಹುಟ್ಟೂರು ಶಿವಮೊಗ್ಗ. ತಾಯಿ ಕಲಾವಿದೆ. ಹಾಗಾಗಿ ಬಾಲಕನಾಗಿರುವಾಗಲೇ ಕಲಾಭಿರುಚಿ. ಸೈಕಲ್‌ಷಾಪ್, ಮೆಡಿಕಲ್ ಸ್ಟೋರ್ಸ್, ಕಟ್ಟಡ ನಿರ್ಮಾಣದಲ್ಲಿ ಮಣ್ಣು-ಇಟ್ಟಿಗೆ ಹೊರುವುದು, ಕಿರಾಣಿ ಅಂಗಡಿ ವ್ಯಾಪಾರ ಹೀಗೆ ಹತ್ತಾರು ಹೊಟ್ಟೆಪಾಡಿನ ದಾರಿ ಹಿಡಿದು, ಹವ್ಯಾಸಿ ರಂಗಭೂಮಿ ಪ್ರವೇಶಿಸಿದರು.ಆಕಾಶವಾಣಿ ನಾಟಕಗಳಲ್ಲಿ ಅಭಿನಯ. ಕೆ.ಎಮ್.ಶಂಕರಪ್ಪ ನಿರ್ದೇಶನದ 'ಮಾಡಿಮಡಿದವರು' ಚಿತ್ರದ ಮೂಲಕ ಚಲನಚಿತ್ರರಂಗಕ್ಕೆ ಪ್ರವೇಶ. ನಂತರದ ದಿನಗಳಲ್ಲಿ ಅವಕಾಶಗಳ ಸುರಿಮಳೆ. 'ಬೀಸಿದ ಬಲೆ', 'ಗ್ರಹಣ', 'ಮನೆ ಬೆಳಗಿದ ಸೊಸೆ', 'ಎರಡು ಕನಸು', 'ಅಣ್ಣ ಅತ್ತಿಗೆ', 'ಮಾದೇಶ್ವರ ಪೂಜಾಫಲ', 'ಮನೆಬೆಳಕು', 'ಕಸ್ತೂರಿ ವಿಜಯ', 'ಮಾಂಗಲ್ಯ ಭಾಗ್ಯ', 'ಆಶೀರ್ವಾದ', 'ಪುನರ್ಮಿಲನ' ಮೊದಲಾದ ಚಿತ್ರಗಳಲ್ಲಿ ಅಭಿನಯ. ಚಿತ್ರೀಕರಣದ ಸಂದರ್ಭವೊಂದರಲ್ಲಿ ಅಪಘಾತಕ್ಕೊಳಗಾದರು. ನಂತರದ ದಿನಗಳಲ್ಲಿ ಅನಾರೋಗ್ಯದ ಕಾರಣದಿಂದಾಗಿ ಅಕಾಲ ಮರಣಕ್ಕೀಡಾದರು.

## ರಾಮಚಂದ್ರ.ಎಸ್



ಅತ್ಯುತ್ತಮ ಛಾಯಾಗ್ರಾಹಕರಲ್ಲಿ ಒಬ್ಬರು. ಪುಣೆಯ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆಯಲ್ಲಿ ಛಾಯಾಗ್ರಾಹಕರಾಗಿ ತರಬೇತಿ ಪಡೆದ ಇವರು ಹಲವಾರು ಕಲಾತ್ಮಕ ಚಿತ್ರಗಳ ಮೌಲ್ಯವನ್ನು ಹೆಚ್ಚಿಸಿದ್ದಾರೆ. ಸುಮಾರು ೮೦ಕ್ಕೂ ಹೆಚ್ಚಿನ ಚಿತ್ರಗಳಿಗೆ ಛಾಯಾಗ್ರಹಣ ಮಾಡಿರುವ ರಾಮಚಂದ್ರ 'ವಂಶವೃಕ್ಷ' ಚಿತ್ರದಿಂದ ಸಹಛಾಯಾಗ್ರಾಹಕರಾಗಿ ಚಿತ್ರರಂಗ ಪ್ರವೇಶಿಸಿದರು. 'ಗ್ರಹಣ', 'ಸಂಕಲ್ಪ', 'ಕಂಕಣ', 'ಚೋಮನ ದುಡಿ', 'ಋಷ್ಯಶೃಂಗ', 'ಮನೆ' ಮೊದಲಾದ ಪ್ರಶಸ್ತಿ ವಿಜೇತ ಚಿತ್ರಗಳಲ್ಲಿ ಛಾಯಾಗ್ರಾಹಕರಾಗಿ ದುಡಿದಿದ್ದಾರೆ. 'ಹೊಂಬಿಸಿಲು', 'ಚಿತ್ರಲೇಖ', 'ನ್ಯಾಯಗೆದ್ದಿತು', 'ಬ್ಯಾಂಕರ್ ಮಾರ್ಗಯ್ಯ', 'ಗಂಧರ್ವಗಿರಿ', 'ಮುದುಡಿದ ತಾವರೆ ಅರಳಿತು', 'ಒಲವೇ ಬದುಕು' ಮುಂತಾದವು ಇವರು ಛಾಯಾಗ್ರಹಣ ಮಾಡಿದ ವಾಣಿಜ್ಯ ಚಿತ್ರಗಳು. 'ಸಂಕಲ್ಪ' ಚಿತ್ರಕ್ಕಾಗಿ ೧೯೭೨-೭೩ರಲ್ಲಿ, 'ಕಂಕಣ' ಚಿತ್ರಕ್ಕಾಗಿ ೧೯೭೪-೭೫ರಲ್ಲಿ, 'ಋಷ್ಯಶೃಂಗ' ಚಿತ್ರಕ್ಕಾಗಿ ೧೯೭೬ ೭೭ರಲ್ಲಿ, 'ಗ್ರಹಣ' ಚಿತ್ರಕ್ಕಾಗಿ ೧೯೭೮ ೭೯ರಲ್ಲಿ ಹಾಗೂ 'ಮನೆ' ಚಿತ್ರ ಕ್ಕಾಗಿ ೧೯೮೯-೯೦ರಲ್ಲಿ, ಐದು ಬಾರಿ ಕರ್ನಾಟಕ ರಾಜ್ಯಸರ್ಕಾರದ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿ ಪಡೆದಿದ್ದಾರೆ. 'ಋಷ್ಯಶೃಂಗ' ಚಿತ್ರದ ವರ್ಣ ಛಾಯಾಗ್ರಹಣಕ್ಕೆ ೧೯೭೭ರಲ್ಲಿ ರಾಷ್ಟ್ರಪ್ರಶಸ್ತಿಯನ್ನೂ ಪಡೆದಿದ್ದಾರೆ.

## ರಾಮಚಂದ್ರ ಕಟ್ಟೆ



ಹವ್ಯಾಸಿ ರಂಗಭೂಮಿಯಲ್ಲಿ ಹೆಸರಾದ ಕಟ್ಟೆ ರಾಮಚಂದ್ರ ವಿಭಿನ್ನ ರೀತಿಯ ಚಿತ್ರಗಳ ಸೃಷ್ಟಿಯ ಹುಮ್ಮಸ್ಸಿನಲ್ಲಿ ಚಿತ್ರರಂಗವನ್ನು ಪ್ರವೇಶಿಸಿದವರು. ಟಿ.ಎನ್.ನರಸಿಂಹನ್ ಅವರ ಆತ್ಮೀಯರಾಗಿದ್ದ ಕಟ್ಟೆ ರಾಮಚಂದ್ರ ನಟಿ ಪದ್ಮಾಕುಮಟಾ ಅವರು ಎಫ್.ಎಫ್.ಸಿ. ಸಹಕಾರದೊಂದಿಗೆ ೧೯೭೯ರಲ್ಲಿ ನಿರ್ಮಿಸಿದ ಚಿತ್ರ 'ಅರಿವು' ಮೂಲಕ ನಿರ್ದೇಶಕರಾಗಿ ತೆರೆಗೆ ಪರಿಚಿತರಾದರು. 'ಗ್ರಹಣ' ಚಿತ್ರದಲ್ಲಿ ಅಭಿನಯಿಸಿರುವ ಕಟ್ಟೆರಾಮಚಂದ್ರ ಹಲವು ಹೊಸ ಅಲೆಯ ಚಿತ್ರಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ದುಡಿದವರು. ಬಹಳ ದಿನಗಳ ನಂತರ ೧೯೯೩ರಲ್ಲಿ 'ವೈಶಾಖದ ದಿನಗಳು' ಚಿತ್ರವನ್ನು ನಿರ್ದೇಶಿಸಿದರು. 'ಅರಿವು' ಚಿತ್ರದ ನಿರ್ದೇಶನಕ್ಕಾಗಿ ೧೯೭೯-೮೦ರ ಸಾಲಿಗೆ 'ಶ್ರೇಷ್ಠ ನಿರ್ದೇಶಕ' ರಾಜ್ಯಪ್ರಶಸ್ತಿಯನ್ನು ಪಡೆದರು. 'ಅರಿವು' ಚಿತ್ರ ಆ ವರ್ಷದ ಅತ್ಯುತ್ತಮ ಪ್ರಾದೇಶಿಕ ಭಾಷಾ ಚಿತ್ರವೆಂದು ರಾಷ್ಟ್ರಪ್ರಶಸ್ತಿಯನ್ನು ಪಡೆಯಿತು.

## ರಾಮಚಂದ್ರ ಫಣಿ

ಹಾಸ್ಯ ಪ್ರಧಾನ ಚಿತ್ರಗಳ ನಿರ್ದೇಶಕ. ಸಹಾಯಕ ನಿರ್ದೇಶಕರಾಗಿ ೧೯೭೭ರಲ್ಲಿ ಚಿತ್ರರಂಗ ಪ್ರವೇಶಿಸಿದ ಇವರು ಭಾರ್ಗವ, ವೈ.ಆರ್.ಸ್ವಾಮಿ ಮತ್ತು ಪಿ.ಎನ್.



ಶ್ರೀನಿವಾಸ್ ಮತ್ತಿತರರ ಬಳಿ ಸಹ ನಿರ್ದೇಶಕರಾಗಿ ಸುಮಾರು ೮೦ಕ್ಕೂ ಹೆಚ್ಚು ಚಿತ್ರಗಳಿಗೆ ಕೆಲಸ ಮಾಡಿದವರು. ಡಾ। ಕೃಷ್ಣ (೧೯೮೯) ಚಿತ್ರವನ್ನು ನಿರ್ದೇಶಿಸುವ ಮೂಲಕ ಸ್ವತಂತ್ರ ನಿರ್ದೇಶಕರಾದ ಇವರು ಸುಮಾರು ೧೫ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. 'ಗಣೇಶ ಸುಬ್ರಮಣ್ಯ',

ನಾನೆಂದೂ ನಿಮ್ಮವನೇ', 'ಒಂದು ಸಿನಿಮಾ ಕಥೆ', 'ಗಣೇಶನ ಮದುವೆ', 'ಗಣೇಶ ಐ ಲವ್ ಯು', 'ಘೂಬಾಣ' 'ಅದ್ಭುತ ಗಂಡ' ಹಾಗೂ ಇತರ ಚಿತ್ರಗಳನ್ನು ನಿರ್ಮಾಣ ಮಾಡಿದ್ದಾರೆ. ಹಲವಾರು ಚಿತ್ರಗಳಿಗೆ ಕಥೆ, ಚಿತ್ರಕಥೆ ರಚಿಸಿದ್ದಾರೆ. ತೆರೆಯ ಹಿಂದಿನ ೧೦ ಮಂದಿ ತಂತ್ರಜ್ಞರ ಪಾಲುದಾರಿಕೆಯಲ್ಲಿ ವಿಶಿಷ್ಟ ಲಾಂಛನದಲ್ಲಿ 'ಒಂದು ಸಿನಿಮಾ ಕಥೆ' ಚಿತ್ರವನ್ನು ಸೃಷ್ಟಿಸಿದರು. ಕಿರುತೆರೆಯಲ್ಲೂ ಇವರು ಜನಪ್ರಿಯರು.

## ರಾಮಚಂದ್ರ.ಹೆಚ್.ಎಂ



ಕನ್ನಡ ಚಿತ್ರರಂಗದ ಪ್ರತಿಭಾವಂತ ಯುವ ಛಾಯಾಗ್ರಾಹಕ. ಸಾಗರ ತಾಲ್ಲೂಕಿನ ತುಮರಿ ಗ್ರಾಮದವರು. ಪತ್ರಿಕೋದ್ಯಮದಲ್ಲಿ ಎಂ.ಎ ಪದವಿ, ಫೋಟೋ ಜರ್ನಲಿಸಂನಿಂದಾಗಿ ಛಾಯಾಗ್ರಹಣದ ಬಗ್ಗೆ ಆಸಕ್ತಿ. ನಂತರ ಪುಣೆಯ ರಾಷ್ಟ್ರೀಯ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆಯಲ್ಲಿ ಸಿನಿಮಾಟೋಗ್ರಫಿಯಲ್ಲಿ ಡಿಪ್ಲೊಮಾ ಪದವಿ. ಅನೇಕ ಹಿಂದಿ ಚಲನಚಿತ್ರಗಳಿಗೆ ಸಹಾಯಕ ಛಾಯಾಗ್ರಾಹಕರಾಗಿ ದುಡಿದಿರುವ ರಾಮಚಂದ್ರ 'ನಾಗಮಂಡಲ' ಚಿತ್ರಕ್ಕೆ ಭಾಸ್ಕರ್ ಅವರಿಗೆ ಸಹಾಯಕರಾದರು. ಸ್ವತಂತ್ರವಾಗಿ ಛಾಯಾಗ್ರಹಣ ನೀಡಿದ ಕಥಾ ಚಿತ್ರ 'ತಾಯಿ ಸಾಹೇಬ'. ೧೯೯೭-೯೮ನೇ ಸಾಲಿನ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿಯನ್ನು ಅದೇ ಚಿತ್ರಕ್ಕಾಗಿ ರಾಜ್ಯ ಸರ್ಕಾರದಿಂದ ಪಡೆದಿದ್ದಾರೆ. ನಟಿ ನಿರ್ಮಾಪಕಿ ಜಯಮಾಲಾರನ್ನು ವಿವಾಹವಾಗಿದ್ದಾರೆ.

## ಡಾ। ರಾಮಚಂದ್ರಪ್ಪ



ಪ್ರಮುಖ ಅಬ್ಕಾರಿ ಕಂಟ್ರಾಕ್ಟರ್‌ದಾರರಾದ ದಾಸಪ್ಪ ಅವರ ಸೋದರರು. ಮೆಕ್ಯಾನಿಕಲ್ ಇಂಜಿನಿಯರಿಂಗ್ ಪದವಿ ನಂತರ ಎಂ.ಬಿ.ಬಿ.ಎಸ್. ಪದವಿ ಪಡೆದರು. ಈ ಎರಡು ಪದವಿಗಳ ಅಪೂರ್ವ ಸಂಗಮದಿಂದ ಡಾ। ರಾಮಚಂದ್ರಪ್ಪ ಕಕ್ಷೇತ್ರದಲ್ಲಿಯೂ ಆಸಕ್ತಿ ಹೊಂದಿದರು. ಸೋದರರೊಡಗೂಡಿ ಕಪಾಲಿ, ಮೆಜೆಸ್ಟಿಕ್, ಆದರ್ಶ, ಕನಕಪುರದಲ್ಲಿ ವಾಣಿ ಚಿತ್ರಮಂದಿರವನ್ನು ಸ್ವಂತಕ್ಕೆ ತೆಗೆದುಕೊಂಡು ಪ್ರದರ್ಶಕರಾಗಿ ಬೆಳಕಿಗೆ ಬಂದರು. ವಿನಾಯಕ, ರಂಗನಾಥ ಎಂಬ ಎರಡು ಚಿತ್ರಮಂದಿರಗಳನ್ನು ನಿರ್ಮಿಸಿದರು. ಸುಸಂಸ್ಕೃತ ಪರಿಸರದಿಂದ ಬಂದವರು ನಯ-ವಿನಯಗಳಿಗೆ ಹೆಸರಾದ ವ್ಯಕ್ತಿ.

## ರಾಮಚಂದ್ರಪ್ಪ ಬರಗೂರು

ಬರಗೂರು ರಾಮಚಂದ್ರಪ್ಪನವರು ಕನ್ನಡದಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯ ಮುಂಚೂಣಿಯಲ್ಲಿದವರು. ಸಾಮಾಜಿಕ ಕಾಳಜಿಯ ಕೆಲವು ಚಿತ್ರಗಳನ್ನು ನಿರ್ದೇಶಿಸಿ ತಮ್ಮದೇ ಆದ ಜಾಡನ್ನು ಸ್ಥಾಪಿಸಿದ್ದಾರೆ. ಆರ್ಥಿಕ ಯಶಸ್ಸು, ಅಪಯಶಸ್ಸುಗಳಿಗೆ ಸಮಚಿತ್ತದಿಂದ ಸ್ಪಂದಿಸಿ ಚಲನಚಿತ್ರ ಮಾಧ್ಯಮವನ್ನು ಸಾಮಾಜಿಕ ಬದಲಾವಣೆಗ ಪರಿಣಾಮಕಾರಿ ಅಸ್ತ್ರವನ್ನಾಗಿ ಬಳಸಿಕೊಂಡು ಬಂದಿದ್ದಾರೆ. ಅದರಲ್ಲಿಯೂ ಗ್ರಾಮೀಣ ಜೀವನದಲ್ಲಿನ ತೀವ್ರ ಸಾಮಾಜಿಕ ಅಸಮಾನತೆಗಳು ಹಾಗೂ ರಾಜಕೀಯ ಒಳತೋಟಿಗಳು ಅವರ ಚಿತ್ರಗಳಿಗೆ ಎಂದಿಗೂ ಗ್ರಾಸವನ್ನು ಒದಗಿಸಿವೆ. ಅವರ ಮೊದಲ ಚಿತ್ರ 'ಒಂದು ಊರಿನ ಕಥೆ'ಯಲ್ಲಿಯೇ ಗ್ರಾಮೀಣ



ಹಾಗೂ ಜಾತೀಯ ಅಸಮತೆಯ ಬಗೆಗೆ ತೀಕ್ಷ್ಣವಾದ ದೃಷ್ಟಿ ಬೀರಿದ ರಾಮಚಂದ್ರಪ್ಪನವರು 'ಬೆಂಕಿ', 'ಸೂರ್ಯ', 'ಕೋಟೆ', 'ಕರಡೀಪುರ' ಹಾಗೂ 'ಹಗಲು ವೇಷ' ಚಿತ್ರಗಳನ್ನೂ ನಿರ್ದೇಶಿಸಿದ್ದಾರೆ. 'ಕೋಟೆ' ಸಂಭಾಷಣೆಗಳೇ ಇಲ್ಲದೆ ಕೇವಲ ಹಾಡುಗಳಿಂದ ಕಥೆಯನ್ನು ಹೇಳಿಕೊಂಡು ಹೋಗುವ ವಿಶಿಷ್ಟ ಚಿತ್ರ. 'ಒಂದು ಊರಿನ ಕಥೆ', 'ಬೆಂಕಿ' ಮತ್ತು 'ಸೂರ್ಯ' ಚಿತ್ರಗಳಿಗೆ ರಾಜ್ಯ ಸರ್ಕಾರದ ಪ್ರಶಸ್ತಿಗಳು ಸಂದಿವೆ. 'ಸೂರ್ಯ' ಮಾಸ್ಕೋ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಮತ್ತು 'ಕರಡೀಪುರ' ಲೀಡ್ಸ್ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಭಾರತವನ್ನು ಪ್ರತಿನಿಧಿಸಿದ ಚಿತ್ರಗಳು. ಗ್ರಾಮೀಣ ಜೀವನದ ವರ್ಗ ಸಂಘರ್ಷಗಳನ್ನು ಜನಪ್ರಿಯ ಶೈಲಿಯಲ್ಲಿ ನಿರೂಪಿಸಿದ ರಾಮಚಂದ್ರಪ್ಪನವರು 'ಜನುಮದ ಜೋಡಿ' ಚಿತ್ರಕ್ಕೆ ಸಂಭಾಷಣೆ ಬರೆದಾಗ ಅವರ ಒಳನೋಟಗಳು, ಪ್ರತಿಭೆಯ ಹರಹು ಜನಸಾಮಾನ್ಯರನ್ನು ತಲುಪಿತು. ಚಿತ್ರೋದ್ಯಮ ಕೂಡ ಗಮನ ಹರಿಸಿತು. ರಾಜ್ಯಸರ್ಕಾರದಿಂದ ೧೯೯೬-೯೭ನೇ ಸಾಲಿನ ಅತ್ಯುತ್ತಮ ಸಂಭಾಷಣಾ ಕರ್ತೃ ಪ್ರಶಸ್ತಿ ಲಭಿಸಿತು. ಕನ್ನಡ ನಾಡಿನ ಪ್ರಮುಖ ಲೇಖಕ ಹಾಗೂ ವಿಮರ್ಶಕರಲ್ಲಿ ಒಬ್ಬರಾದ ರಾಮಚಂದ್ರಪ್ಪನವರು ಸಾಹಿತ್ಯ ಅಕಾಡಮಿಯ ಅಧ್ಯಕ್ಷರಾಗಿದ್ದರು. ಚಲನಚಿತ್ರ ಪ್ರಶಸ್ತಿಗಳೇ ಅಲ್ಲದೆ ಬರಗೂರರಿಗೆ ಸಾಹಿತ್ಯ ಪ್ರಶಸ್ತಿಗಳೂ ಸಂದಿವೆ. ರಾಜ್ಯ ಸರ್ಕಾರದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು.

## ರಾಮಚಂದ್ರಶಾಸ್ತ್ರಿ.ಎಚ್ (೧೯೦೫ - ೭೬)

ಮಂಡ್ಯ ಜಿಲ್ಲೆಯ ಮೇಲುಕೋಟೆ ಸಮೀಪದ



ಹಳೇಬೀಡಿನಲ್ಲಿ ೧೯೦೫ರ ನವೆಂಬರ್ ೨೦ರಂದು ಜನಿಸಿದ ಎಚ್.ರಾಮಚಂದ್ರಶಾಸ್ತ್ರಿ ಶಾಲೆಯಲ್ಲಿ ಕಲಿಯುತ್ತಿದ್ದಾಗಲೇ 'ಕವಿರತ್ನ ಕಾಳಿದಾಸ' ನಾಟಕವನ್ನು ಪ್ರದರ್ಶಿಸಿ, ಅಭಿನಯಿಸಿ ಕನ್ನಡ ರಂಗಭೂಮಿಯ ಪಿತಾಮಹ ಎ.ವಿ.ವರದಾಚಾರ್ಯರ ಆಶೀರ್ವಾದ ಪಡೆದು ಮುಂದೆ ಹಲವಾರು ವೃತ್ತಿ ನಾಟಕ ಸಂಸ್ಥೆಗಳಲ್ಲಿ ದುಡಿದರು. ೧೯೩೦ರ ದಶಕದಲ್ಲಿ ಒಂದೆರಡು ತಮಿಳು ಚಿತ್ರಗಳಲ್ಲಿ ಅಭಿನಯಿಸಿದ ಶಾಸ್ತ್ರಿಗಳು ೧೯೪೧ರಲ್ಲಿ ಗುಬ್ಬಿ ವೀರಣ್ಣನವರು ತಯಾರಿಸಿದ 'ಸುಭದ್ರಾ' ಚಿತ್ರದಲ್ಲಿ ಧರ್ಮರಾಯನ ಪಾತ್ರವಹಿಸುವ ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಮತ್ತೆ ಕೆಲವು ತಮಿಳು, ತೆಲುಗು ಚಿತ್ರಗಳಲ್ಲಿ ಅಭಿನಯಿಸಿದ ನಂತರ ಮತ್ತೆ ರಂಗಭೂಮಿಗೆ ಹಿಂದಿರುಗಿ ಎಚ್.ಎಲ್.ಎನ್.ಸಿಂಹ ಅವರ 'ಸಿಂಹಾಸ್ ಸೆಲೆಕ್ಟ್ ಆರ್ಟಿಸ್ಟ್' ತಂಡದಲ್ಲಿ ಕೆಲಸ, ಅನಂತರ ಸ್ವಂತ ನಾಟಕ ಸಂಸ್ಥೆ ಸ್ಥಾಪನೆ, ಮತ್ತೆ ಚಿತ್ರರಂಗ. 'ಬೇಡರ ಕಣ್ಣಪ್ಪ' ಮತ್ತು 'ನಟಶೇಖರ' ಚಿತ್ರಗಳಲ್ಲಿ ಅಭಿನಯಿಸಿದ ನಂತರ ಚಿತ್ರರಂಗದಲ್ಲೇ ನೆಲಸಿ ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದರು. ೧೯೬೮-೬೯ರಲ್ಲಿ ರಾಜ್ಯ ನಾಟಕ ಅಕಾಡಮಿ ಪ್ರಶಸ್ತಿ ಪಡೆದರು. ೧೯೭೬ರ ಡಿಸೆಂಬರ್ ೧೨ರಂದು ಶಾಸ್ತ್ರಿಗಳು ನಿಧನರಾದರು.

## ರಾಮದಾಸ್‌ನಾಯ್ಡು.ಪಿ.ಆರ್

ಸದಾ ಒಂದಲ್ಲ ಒಂದು ವಿಧದಲ್ಲಿ



ಚಿತ್ರರಂಗದಲ್ಲಿ ಸಕ್ರಿಯವಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿರುವವರು ಪಿ.ಆರ್.ರಾಮದಾಸನಾಯ್ಡು. ನಿರ್ಮಾಣ ನಿರ್ವಾಹಕರಾಗಿ, ಸಂಘಟಕರಾಗಿ, ಹಲವು ಚಿತ್ರಗಳ ಹಿಂದಿನ ಪ್ರೇರಕ ಶಕ್ತಿಯಾಗಿ ದುಡಿದ ಇವರು ೧೯೮೨ರಲ್ಲಿ 'ಅಮರ ಮಧುರ ಪ್ರೇಮ' ವಿಶೇಷವಾದ ಕಥಾ ವಸ್ತುವಿಧ ಚಿತ್ರವನ್ನು ನಿರ್ಮಿಸಿ ನಿರ್ದೇಶಿಸಿದರು. ಸುರೇಶ್‌ಹೆಬ್ಳೀಕರ್-ಶೋಭಾ ತಾರಾಗಣವಿದ ಈ ಚಿತ್ರ ತನ್ನ ವಿಶಿಷ್ಟ ನಿರೂಪಣೆಯಿಂದ ಗಮನ ಸೆಳೆಯಿತು. ಕಾಶೀನಾಥ್ ನಿರ್ದೇಶನದ 'ಅಪರೂಪದ ಅತಿಥಿಗಳು' ಚಿತ್ರ ನಿರ್ಮಾಣಕ್ಕೆ ಇವರೇ ಪ್ರೇರಣೆ. ಚಿತ್ರೀಕರಣಕ್ಕೆ ಸಹಕಾರಿಯಾಗಲೆಂಬ ಉದ್ದೇಶದಿಂದ ತಮ್ಮದೇ ಆದ ಸುಸಜ್ಜಿತ ಹೊರಾಂಗಣ ಚಿತ್ರೀಕರಣ ಘಟಕವನ್ನು ಸ್ಥಾಪಿಸಿದರು. ಕಿರುತೆರೆಯಲ್ಲೂ ಸಾಕಷ್ಟು ಹೆಸರಾಗಿದ್ದಾರೆ. ಫಿಲಂ ಡಿವಿಷನ್‌ನವರಿಗಾಗಿ ಚಿತ್ರಗಳನ್ನು ನಿರ್ಮಿಸಿದ್ದಾರೆ. ಯೋಗಾನರಸಿಂಹ ನಿರ್ದೇಶನದಲ್ಲಿ ಚಿತ್ರ ನಿದ ಮಾಡಿದರು. ಕಾರಣಾಂತರದಿಂದ ತೆರೆಗೆ ತರಲಾಗಲಿಲ್ಲ. ೨೦೦೦ನೇ ವರ್ಷದಲ್ಲಿ ಇವರ ನಿರ್ದೇಶನದ 'ಮುಸ್ಸಂಜೆ' ತುಂಬ ಸುದ್ದಿ ಮಾಡಿತು. ಭಾರತೀಯ ಪನೋರಮಾ ವಿಭಾಗಕ್ಕೆ ಆಯ್ಕೆಯಾಯಿತು. ರಾಮದಾಸನಾಯ್ಡು ತಂತ್ರಜ್ಞ ಹಾಗೂ ಮಾಧ್ಯಮವನ್ನು ಗಂಭೀರವಾಗಿ ತಗದುಕೊಂಡ ವ್ಯಕ್ತಿ.

## ರಾಮನ್ ವಿ.ಟಿ.

೧೯೩೭ರಲ್ಲಿ ಬೆಂಗಳೂರಿನಲ್ಲಿ ಮೈಸೂರು ಸೌಂಡ್ ಸ್ಟುಡಿಯೋ ಸ್ಥಾಪಿಸಿ 'ರಾಜಸೂಯ ಯಾಗ' ನಿರ್ಮಿಸಿದ ತಿಮ್ಮಯ್ಯನವರ ಪುತ್ರ. ಮೈಸೂರಿನ ಅತ್ಯಂತ ಹಳೆಯ ಚಿತ್ರಮಂದಿರವಾದ ಚಲನಚಿತ್ರ ಮಂದಿರ 'ಅಪೇರಾ ಟಾಕೀಸ್' ನ ಮಾಲೀಕರು. ೫೦-೬೦ರ ದಶಕದಲ್ಲಿ ಕನ್ನಡ ಚಿತ್ರಗಳನ್ನು ಪ್ರದರ್ಶಿಸಿದರು. ಇವರ ನಂತರ ಇವರ ಪುತ್ರರು ಈ ವ್ಯವಹಾರವನ್ನು ನಡೆಸಿಕೊಂಡು ಬರುತ್ತಿದ್ದಾರೆ.

## ರಾಮನಾಥನ್. ಎಸ್



'ರಾಶಿ ಸಹೋದರರು' ಎಂದು ಖ್ಯಾತರಾದ ರಾಮನಾಥ್ - ಶಿವರಾಂ ಜೋಡಿಯಲ್ಲಿ ಮೊದಲನೆಯವರಾದ ರಾಮನಾಥನ್ ನಿರ್ಮಾಪಕ ಹಾಗೂ ನಿರ್ದೇಶಕರಾಗಿ ಖ್ಯಾತರು. ಚಿತ್ರಸಾಹಿತಿ, ನಿರ್ದೇಶಕ ಕು.ರ.ಸೀ ಅವರ ಬಳಿ ಕೆಲಸ ಮಾಡಿದರು. 'ಮಹಾಕವಿ ಕಾಳಿದಾಸ' ಚಿತ್ರದ ಸಹ ನಿರ್ದೇಶಕನ ಅವಕಾಶ ಸಿಕ್ಕಿತು. ೧೯೬೫ರಲ್ಲಿ 'ವಿವಿಧ ಭಾರತಿ' ಲಾಂಛನದಡಿಯಲ್ಲಿ 'ಚಿರತ ಜೀವ' ಚಿತ್ರವನ್ನು ನಿರ್ಮಿಸಿದರು. ನಂತರ

೧೯೭೨ರಲ್ಲಿ ರಾಮನಾಥ್ - ಶಿವರಾಂ ಇಬ್ಬರೂ ಸೇರಿ 'ಹೃದಯ ಸಂಗಮ' ಚಿತ್ರವನ್ನು ನಿರ್ದೇಶಿಸಿದರು. ನಂತರ 'ರಾಶಿ ಬ್ರದರ್ಸ್' ಎನ್ನುವ ನಿರ್ಮಾಣ ಸಂಸ್ಥೆಯನ್ನು ಸ್ಥಾಪಿಸಿ 'ನಾನೊಬ್ಬ ಕಳ್ಳ', 'ಡ್ರೈವರ್ ಹನುಮಂತು' ಚಿತ್ರಗಳನ್ನು ನಿರ್ಮಿಸಿದರು. 'ಹೃದಯ ಸಂಗಮ' ೧೯೭೨-೭೩ನೇ ಸಾಲಿನ ರಾಜ್ಯ ಸರ್ಕಾರದ ನಾಲ್ಕನೆಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆಯಿತು. ಹಿಂದಿ ಚಿತ್ರರಂಗದಲ್ಲೂ ಅಮಿತಾಬ್ ಬಚ್ಚನ್ ಅವರ ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿರುವ ರಾಮನಾಥನ್ ಅವರು ಪ್ರಾರಂಭದ ಪ್ರಯತ್ನ 'ಬಾಂಬೆ ಟು ಗೋವಾ'ದಲ್ಲೇ ಸಾಕಷ್ಟು ಹೆಸರು ಮಾಡಿದರು.

### ರಾಮನಾಥನ್ .ಎಸ್.ಪಿ

ದಕ್ಷಿಣ ಭಾರತದ ಸುಪ್ರಸಿದ್ಧ ಛಾಯಾಗ್ರಾಹಕ. ಹುಟ್ಟಿದ್ದು ತಮಿಳು ನಾಡಿನಲ್ಲಿ . ೧೯೪೦ರಲ್ಲಿ ಎ.ವಿ.ಎಂ ಸ್ಟುಡಿಯೋದಲ್ಲಿ ಛಾಯಾಗ್ರಹಣ



ಸಹಾಯಕರಾಗಿ ಸೇರಿದ ಅವರು ತರಬೇತಿ ಪಡೆದು ೧೯೬೪ರಲ್ಲಿ ಗೋಲ್ಡನ್ ಸ್ಟುಡಿಯೋ ಸೇರಿದರು. ಇದುವರೆಗೂ ಸುಮಾರು ಸಾವಿರಕ್ಕೂ ಮಿಕ್ಕಿ ಚಿತ್ರಗಳಿಗೆ ಛಾಯಾಗ್ರಹಣ ಮಾಡಿದ್ದಾರೆ. ೧೯೭೪-೭೫ರಲ್ಲಿ 'ಉಪಾಸನೆ', ೧೯೭೬-೭೭ರಲ್ಲಿ 'ಬಬ್ರುವಾಹನ', ೧೯೭೮-೭೯ರಲ್ಲಿ 'ಒಂದಾನೊಂದು ಕಾಲದಲ್ಲಿ', ೧೯೭೯-೮೦ರಲ್ಲಿ 'ಮಿಂಚಿನ ಓಟ' ಹಾಗೂ ೧೯೮೯-೯೦ರಲ್ಲಿ 'ಮನೆ' ಚಿತ್ರದ ಛಾಯಾಗ್ರಹಣಕ್ಕೆ ಒಟ್ಟು ಐದು ಬಾರಿ ಕರ್ನಾಟಕ ರಾಜ್ಯ ಸರ್ಕಾರದ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿಯನ್ನು ಗಳಿಸಿದ್ದಾರೆ.

### ರಾಮಮೂರ್ತಿ.ಆರ್

ಮದ್ರಾಸಿನಲ್ಲಿ ತಮಿಳು ಚಿತ್ರರಂಗದ ಸಂಕಲನಕಾರ ಹಾಗೂ ನಿರ್ದೇಶಕರಾಗಿ ಸಾಕಷ್ಟು ಅನುಭವವಿದ್ದವರು ಆರ್.ರಾಮಮೂರ್ತಿ. ಶ್ರೀರಾಮ ಎಂಟರ್‌ಪ್ರೈಸಸ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಹಲವು ಚಿತ್ರಗಳನ್ನು ನಿರ್ಮಿಸಿದರು. 'ಚೂರಿ ಚಿಕ್ಕಣ್ಣ', 'ಕ್ರಾಂತಿ ವೀರ', 'ರೌಡಿ ರಂಗಣ್ಣ', 'ದೇವರು ಕೊಟ್ಟ ವರ', 'ದೇವರ



ಗುಡಿ', 'ಭಲೇ ಭಾಸ್ಕರ್', 'ಪ್ರೇಮಾನುಬಂಧ' ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದರು.

### ರಾಮಮೂರ್ತಿ.ಬಿ

ಪೋಷಕ ನಟ ಗೊ.ರಾ.ಭೀಮರಾವ್ ಅವರ ಪುತ್ರ. ಚಿತ್ರ ನಿರ್ದೇಶಕರಾದ ಬಿ.ರಾಮಮೂರ್ತಿ, ರಾಜಕುಮಾರ್ ಅವರ ನಿರ್ಮಾಣ ಸಂಸ್ಥೆಯಲ್ಲಿ



ಎಂ.ಎಸ್.ರಾಜಶೇಖರ್, ದೊರೈ-ಭಗವಾನ್, ಭಾರ್ಗವ ಮೊದಲಾದ ನಿರ್ದೇಶಕರ ಬಳಿ ಸಹನಿರ್ದೇಶಕರಾದರು. ಬಿ.ರಾಮಮೂರ್ತಿ ೧೯೯೦ರಲ್ಲಿ ತೆರೆಕಂಡ 'ರುದ್ರತಾಂಡವ' ಚಿತ್ರದ ನಿರ್ದೇಶಕರಾಗಿ ಬೆಳಕಿಗೆ ಬಂದರು. 'ಅಶೋಕ ಚಕ್ರ', 'ಸಿ.ಬಿ.ಐ.ಶಿವ'. 'ರೋಲ್‌ಕಾಲ್‌ರಾಮಕೃಷ್ಣ'. 'ಶ್ವೇತಾಗ್ನಿ', 'ವಜ್ರಾಯುಧ', 'ಲವ್‌ಟ್ರೈನಿಂಗ್', 'ಮನಮೆಚ್ಚಿದ ಸೊಸೆ'. 'ಲೂಟಿಗ್ಯಾಂಗ್', 'ಆಟಹುಡುಗಾಟ' ಮೊದಲಾದವು ಹೆಸರಿಸಬಹುದಾದ ಇವರ ಕೆಲವು ಚಿತ್ರಗಳು.

### ರಾಮಯ್ಯ ಕೋಟಿಗಾನಹಳ್ಳಿ

ಕೋಲಾರ ಜಿಲ್ಲೆಯ ಕೋಟಿಗಾನಹಳ್ಳಿಯಲ್ಲಿ ಜನಿಸಿದ ರಾಮಯ್ಯ, ಬ್ಯಾಂಕ್ ಉದ್ಯೋಗಿಯಾಗಿ ನೌಕರಿಗೆ ಸೇರಿದರು. ನಂತರ ಪತ್ರಿಕಾ ರಂಗಕ್ಕೆ ಬಂದು 'ಲಂಕೇಶ್



ಪತ್ರಿಕೆ', 'ಮುಂಗಾರು', 'ಸುದಿ ಸಂಗಾತಿ' ಮೊದಲಾದ ಪತ್ರಿಕೆಗಳಲ್ಲಿ ದಶಕಕ್ಕೂ ಹೆಚ್ಚು ಕಾಲ ದುಡಿದರು. ಗೀತರಚನೆಕಾರರಾಗಿ ೫೦ಕ್ಕೂ ಹೆಚ್ಚು ಗೀತೆಗಳನ್ನು ರಚಿಸಿದ್ದಾರೆ. 'ಮುಂಜಾನೆಯ ಮಂಜು', 'ಮುಸುಕು', 'ರಂಗೋಲಿ', 'ಗೆಜ್ಜೆನಾದ', 'ಶ್ರೀಗಂಧ', ಮುಂತಾದ ಚಿತ್ರಗಳಿಗೆ ಸಂಭಾಷಣೆಯನ್ನು ರಚಿಸಿದ್ದಾರೆ. ೧೯೯೩-೯೪ನೇ ಸಾಲಿಗೆ 'ಗೆಜ್ಜೆನಾದ' ಚಿತ್ರದಲ್ಲಿನ ಸಂಭಾಷಣೆಗಾಗಿ ಅತ್ಯುತ್ತಮ ಸಂಭಾಷಣಾ ಕರ್ತೃ ಪ್ರಶಸ್ತಿ ಗಳಿಸಿದ್ದಾರೆ.

### ರಾಮಯ್ಯ.ಜಿ.ಆರ್

ನವಜ್ಯೋತಿ ಸ್ಟುಡಿಯೋ ಮಾಲೀಕರು. ೪೦ರ ದಶಕದಲ್ಲಿ ಚಿತ್ರೋದ್ಯಮದ ಬೆಳವಣಿಗೆಗೆ ಅಪಾರವಾಗಿ ಶ್ರಮಿಸಿದ ಜಿ.ಆರ್.ರಾಮಯ್ಯ,



ಮೈಸೂರಿನವರು. ಪ್ರಸಿದ್ಧ ವಾಣಿಜ್ಯೋದ್ಯಮಿಯಾದ ಅವರು ಮೈಸೂರಿನಲ್ಲಿ ಹಲವು ಬಸ್ ಸರ್ವೀಸ್‌ಗಳ ಒಡೆಯರಾಗಿದ್ದರು. ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರಿಂಗ್ ಮತ್ತು ಶಾರದಾ ವಿಲಾಸ ವಿದ್ಯಾಸಂಸ್ಥೆಗಳ ಆಡಳಿತ ಮಂಡಳಿಯಲ್ಲಿ ಸೇವೆ ಸಲ್ಲಿಸಿದ್ದ ಇವರು ಗೆಳೆಯರ ಒತ್ತಾಯಕ್ಕೆ ಮಣಿದು ಚಿತ್ರರಂಗಕ್ಕೆ ಬಂದವರು. ೧೯೪೩ರಲ್ಲಿ ಗೆಳೆಯರೊಂದಿಗೆ ಸೇರಿ 'ವಾಣಿ' ಚಿತ್ರವನ್ನು ತಯಾರಿಸಿದರು. ಮದ್ರಾಸಿನ ಪ್ರಾಗ್ಜ್ಯೋತಿ ಸ್ಟುಡಿಯೋ ಮುಚ್ಚಿದಾಗ ಅಲ್ಲಿಂದ ಸಲಕರಣೆಗಳನ್ನು ಕೊಂಡು ತಂದು ಸಿ.ವಿ.ರಾಜು ಅವರ ಸಲಹೆಯ ಮೇರೆಗೆ ಮೈಸೂರಿನ ಸರಸ್ವತಿಪುರಂನ ದಳವಾಯಿ ತೋಟದಲ್ಲಿ ನವಜ್ಯೋತಿ ಸ್ಟುಡಿಯೋ ಸ್ಥಾಪಿಸಿದರು. (೧೯೪೫). ತಾವು ನಿರ್ಮಿಸಲು ಆರಂಭಿಸಿದ್ದ 'ಕೃಷ್ಣಲೀಲಾ' ಚಿತ್ರವನ್ನು ಮಹಾತ್ಮಾ ಸಂಸ್ಥೆಗೆ ಬಿಟ್ಟುಕೊಟ್ಟರು. ಇವರ ಸ್ಟುಡಿಯೋದಲ್ಲಿ ಹಲವು ಚಿತ್ರಗಳು ನಿರ್ಮಾಣಗೊಂಡವು. ಆರ್ಥಿಕವಾಗಿ ಹಿನ್ನಡೆ ಕಂಡು ೧೯೬೩ರಲ್ಲಿ ಸ್ಟುಡಿಯೋ ಮುಚ್ಚಿದರು. ೧೯೮೪ರಲ್ಲಿ ಮೈಸೂರಿನ ಪ್ರಭಾ ಚಿತ್ರಮಂದಿರವನ್ನು ಸ್ಥಾಪಿಸಿದರು.

### ರಾಮು

ಕನ್ನಡ ಚಿತ್ರಗಳ ಮಾರುಕಟ್ಟೆಯ ವಿಸ್ತಾರದ ಕಲ್ಪನೆ ಕನ್ನಡ ಚಿತ್ರೋದ್ಯಮಿಗಳಿಗೇ ಇಲ್ಲದಿದ್ದ ಕಾಲದಲ್ಲಿ ಅಪಾರವಾದ ಹಣವನ್ನು ಖರ್ಚುಮಾಡಿ ಬೃಹತ್ ಪ್ರಮಾಣದ ಚಿತ್ರಗಳನ್ನು ನಿರ್ಮಿಸುವ ಜಾಡನ್ನು ಮೊದಲು ಪ್ರಾರಂಭಿಸಿದವರು ರವಿಚಂದ್ರನ್. ಅವರೆ ಅದನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಹೋಗಿ ಕನ್ನಡ ನಿರ್ಮಾಪಕರಲ್ಲಿ ಸಾಹಸಪ್ರಿಯತೆ ಬೆಳೆಯಲು ಬಹು ಮಟ್ಟಿಗೆ ಕಾರಣರಾದ ನಿರ್ಮಾಪಕರು ರಾಮು. ೧೯೯೧ರಲ್ಲಿ ಅವರು ಚಿತ್ರರಂಗವನ್ನು ಪ್ರವೇಶಿಸಿದ್ದು ಹಂಚಿಕೆದಾರರಾಗಿ. 'ಸಂತ ಶಿಶುನಾಳ ಷರೀಫ', 'ಚೈತ್ರದ ಪ್ರೇಮಾಂಜಲಿ', 'ಶ್!',



'ನಾಗಮಂಡಲ', 'ಬಾ ನಲ್ಲೆ ಮಧುಚಂದ್ರಕೆ' ಮತ್ತು 'ಕಾನೂರು ಹೆಗ್ಗಡತಿ'ಯಂತಹ ಪ್ರಮುಖ ಚಿತ್ರಗಳನ್ನು ವಿತರಣೆ ಮಾಡಿರುವ ರಾಮು ಅವರಿಗೆ ತಮ್ಮ ಸ್ವಂತ ಚಿತ್ರವನ್ನು ತಯಾರಿಸಬೇಕೆಂಬ ಹಂಬಲ ಉಂಟಾಗಿದ್ದು ೧೯೯೩ರಲ್ಲಿ. 'ಗೋಲಿಬಾರ್' ಅವರ ಮೊದಲ ಚಿತ್ರ. ತುಂಬಾ ಯಶಸ್ವಿಯಾಯಿತು. ಮುಂದಿನ ವರ್ಷ ಅವರು ತಯಾರಿಸಿದ 'ಲಾಕಪ್ ಡೆತ್' ಅದುವರೆಗೆ ಕನ್ನಡದಲ್ಲಿ ನಿರ್ಮಾಣವಾದ ಅತ್ಯಂತ ದುಬಾರಿ ಚಿತ್ರವೆಂಬ ಹಿರಿಮೆಗೆ ಪಾತ್ರವಾಗಿ ಭಾರಿ ಯಶಸ್ಸನ್ನು ಕಂಡಿತು. ಅತ್ಯುತ್ತಮ ಸಂಕಲನ ಮತ್ತು ಸಾಹಸ ನಿರ್ದೇಶನಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಗಳನ್ನು ಗಳಿಸಿಕೊಂಡಿತು. ನಂತರ ರಾಮು 'ಮುತ್ತಿನಂಥ ಹೆಂಡತಿ', 'ಹಲೋ ಸಿಸ್ಟರ್', 'ಸರ್ಕಲ್ ಇನ್ಸ್‌ಪೆಕ್ಟರ್', 'ಲೇಡಿ ಕಮಿಷನರ್', 'ಸಿಂಹದ ಮರಿ' ಯಂತಹ ಸಮೂಹರಂಜಕ ಚಿತ್ರಗಳನ್ನು ನಿರ್ಮಿಸಿದರು. ರಾಮುರವರು ಇಟ್ಟ ಇನ್ನೊಂದು ದಿಟ್ಟ ಹೆಜ್ಜೆ 'ಎಕೆ-47' ಚಿತ್ರದಲ್ಲಿ. ಕನ್ನಡ ಚಿತ್ರರಂಗದಲ್ಲಿ ಪ್ರಥಮ ಬಾರಿಗೆ ಡಿಟಿಎಸ್ ಧ್ವನಿ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಎಲ್ಲ ವರ್ಗದ ಪ್ರೇಕ್ಷಕರ ಅಭಿಮಾನವನ್ನು ಗಳಿಸಿಕೊಂಡ ಅದ್ಭುತ ಚಿತ್ರ ಇದು. ಕುಣಿಗಲ್ ಬಳಿಯ ಹಳ್ಳಿಯೊಂದರಿಂದ ಬಂದ ಈ ಸಾಹಸಿ ನಿರ್ಮಾಪಕನ ಇನ್ನೊಂದು ಬೃಹತ್ ಸಾಹಸ 'ಹಾಲಿವುಡ್'. ರಾಮು ಎಂಟರ್‌ಪ್ರೈಸಸ್ ಯಾವುದೇ ದೇಶವಾದರೂ, ಎಷ್ಟೇ ಶ್ರೀಮಂತ ಸೆಟ್‌ಗಳಾದರೂ, ಎಂಥದೇ ಅಪಾಯಕಾರಿ ಸಾಹಸ ದೃಶ್ಯಗಳಾದರೂ ಹಿಂದೆಗೆಯದೆ ಕೋಟಿಗಟ್ಟಲೆ ಹಣ ಸುರಿದು ಚಿತ್ರ ನಿರ್ಮಿಸುವ ಪರಂಪರೆಯುಳ್ಳ ಸಂಸ್ಥೆಯನ್ನಾಗಿ ಮಾಡಿದ್ದಾರೆ ರಾಮು.

### ರಾವ್.ಎನ್.ಎಸ್



ಕನ್ನಡ ಚಿತ್ರರಂಗದಲ್ಲಿ ಹಾಸ್ಯಾಭಿನಯದಲ್ಲಿ ಮುಸುರಿ ಕೃಷ್ಣಮೂರ್ತಿ ಮತ್ತು ಎನ್.ಎಸ್.ರಾವ್‌ರವರ ಜಾಡೇ ಬೇರೆ. 'ಕಿಲಕಿಲಾ'ರಾಯರಂತೂ ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ತಮ್ಮದೇ ಆದ ನಾಟಕೀಯ ಶೈಲಿಯಲ್ಲಿ ಲಕ್ಷಾಂತರ ಪ್ರೇಕ್ಷಕರನ್ನು ರಂಜಿಸಿ ಕರ್ನಾಟಕದಾದ್ಯಂತ ಮನೆ ಮಾತಾದವರು. ಅವರ ಮತ್ತು ಉಮಾಶ್ರೀಯವರ ಜೋಡಿಯ ಹಾಸ್ಯ ಕನ್ನಡ ಪ್ರೇಕ್ಷಕರಿಗೆ ತುಂಬ ಪ್ರಿಯವಾಯಿತು. ಮಾತೃಭಾಷೆ ಮರಾಠಿಯಾದರೂ ನರಸಿಂಗರಾಯರು (ನಂತರ ಅವರು ಎನ್.ಎಸ್.ರಾವ್ ಎಂಬ ಹೆಸರಿನಲ್ಲಿ ಖ್ಯಾತಿ ಗಳಿಸಿದರು) ಕನ್ನಡದಲ್ಲಿ ಹಾಸುಹೊಕ್ಕಾಗಿ ಬೆರೆತವರು. ಮೈಕೋ

ಹಾಗೂ ಕಿರ್ಲೋಸ್ಕರ್ ಕಾರ್ಖಾನೆಗಳಲ್ಲಿ ವೃತ್ತಿಯಲ್ಲಿದ್ದ ಅವರು ರಂಗಭೂಮಿಯಲ್ಲಿ ವಿಶೇಷ ಆಸಕ್ತಿಯನ್ನು ಬೆಳೆಸಿಕೊಂಡು ಹತ್ತಾರು ನಾಟಕಗಳನ್ನು ತಾವೇ ಬರೆದು, ನಿರ್ದೇಶಿಸಿ ಅಭಿನಯಿಸಿದರು. ಚಿತ್ರರಂಗದಲ್ಲಿ ಅವರು ಅಪಾರವಾದ ಜನಪ್ರಿಯತೆಯನ್ನು ಗಳಿಸಿದರು. ತಮ್ಮ ಹಾಸ್ಯ ಸನ್ನಿವೇಶಗಳಿಗೆ ತಾವೇ ಸಂಭಾಷಣೆಗಳನ್ನು ಬರೆದುಕೊಳ್ಳುವ ಜೊತೆಗೆ ಈ ಹಾಸ್ಯ ಸನ್ನಿವೇಶಗಳನ್ನು ತಾವೇ ಸೃಷ್ಟಿಸುತ್ತಿದ್ದರು. 'ಮಿಸ್ಟರ್ ರಾಜ', 'ಸ್ವಾಭಿಮಾನ', 'ಬೇಡಿ', 'ಬೇಟೆ', 'ಒಲವಿನ ಉಡುಗೊರೆ', 'ಎಲ್ಲಾ ಹೆಂಗಸರಿಂದ', 'ಮುಖವಾಡ', 'ಅಗ್ನಿ ಪರೀಕ್ಷೆ', 'ದಿಗ್ವಿಜಯ', 'ಸತ್ಯ ಪರೀಕ್ಷೆ', 'ತಾಯಿ ಕೊಟ್ಟ ತಾಳಿ' ಮೊದಲಾದವು ಅವರ ಅಭಿನಯದ ಕೆಲವು ಮುಖ್ಯ ಚಿತ್ರಗಳು. ಕನ್ನಡ ಚಿತ್ರರಂಗಕ್ಕೆ ಅವರ ಸೇವೆ ಒಂದೂವರೆ ದಶಕಗಳಿಗೂ ಹೆಚ್ಚು ಕಾಲವೇ ಸಂದಿತು. ಅಭಿನಯ ಅವರಿಗೆ ಲೀಲಾಜಾಲವಾದ ಕೆಲಸ. ಅವರದೇ ಆದ ವಿಶಿಷ್ಟ ಲಯಬದ್ಧ ಅಭಿನಯ, ಮಾತುಗಾರಿಕೆ, ಸ್ವರ ಬಳಕೆಯ ಶೈಲಿ ರೂಢಿಸಿಕೊಂಡಿದ್ದರು. ಅನಂತರ ಅನೇಕರು ಅವರನ್ನು ಅನುಕರಣೆ ಮಾಡುವಷ್ಟು ಪ್ರಭಾವ ಬೀರಿದರು. ಕನ್ನಡ ಚಿತ್ರರಂಗಕ್ಕೆ ಅವರು ಸಲ್ಲಿಸಿದ ದೀರ್ಘ ಸೇವೆಗಾಗಿ ರಾಜ್ಯ ಸರ್ಕಾರ ಇವರಿಗೆ ೧೯೮೬-೮೭ರಲ್ಲಿ ಮರಣೋತ್ತರ ವಿಶೇಷ ಪ್ರಶಸ್ತಿ ನೀಡಿತು. ಇಂದಿನ ಜನಪ್ರಿಯ ನಿರ್ದೇಶಕ ಓಂ ಪ್ರಕಾಶ್ ರಾವ್, ಎನ್.ಎಸ್.ರಾವ್ ಅವರ ಪುತ್ರರು.

### ರಾವ್.ಎನ್.ಜಿ

ಕನ್ನಡದ ಸುಪ್ರಸಿದ್ಧ ಛಾಯಾಗ್ರಾಹಕರಲ್ಲಿ ಒಬ್ಬರಾದ ನೆಲಮಂಗಲದ ಗುಂಡೂರಾಯರು, ಎನ್.ಜಿ.ರಾವ್ ಎಂದೇ ಖ್ಯಾತರು. ಬೆಂಗಳೂರಿನ ಮಲ್ಲೇಶ್ವರಂನಲ್ಲಿದ್ದ ರಾವ್ ಛಾಯಾಗ್ರಹಣ ತಂತ್ರಜ್ಞಾನದಲ್ಲಿ ಆಸಕ್ತಿ ಹೊಂದಿ ಖ್ಯಾತ ಛಾಯಾಗ್ರಾಹಕರಾದ ವಿ.ಎಸ್.ರಡ್ಡಿ ಅವರಲ್ಲಿ ಶಿಷ್ಯರಾಗಿ ಅನುಭವ



ಪಡೆದು ಮುಂಬೈಗೆ ತೆರಳಿ ಜಾಲಿ ಮಿಸ್ತ್ರಿ, ಪಾಲಿ ಮಿಸ್ತ್ರಿ, ಕನ್ನಡಿಗ ವಿ.ಕೆ.ಮೂರ್ತಿ ಅವರೊಂದಿಗೆ ಛಾಯಾಗ್ರಹಣ ತಂತ್ರದಲ್ಲಿ ಪರಿಣತಿ ಪಡೆದರು. 'ಈವನಿಂಗ್ ಇನ್ ಪ್ಯಾರಿಸ್' ಹಿಂದಿ ಚಿತ್ರದ ಸಹ ಛಾಯಾಗ್ರಾಹಕರಾಗಿ ರಾವ್ ಕೆಲಸ ಮಾಡಿದರು. ಪ್ಯಾರಿಸ್‌ನ ಐಫೆಲ್‌ಟವರ್‌ನಲ್ಲಿ ಚಿತ್ರೀಕರಣ ಮಾಡಿದ ಮೊದಲ ಕನ್ನಡಿಗರು ಇವರು. ೧೯೫೬ರಲ್ಲಿ ಮುಂಬೈನಿಂದ ಮದ್ರಾಸಿಗೆ ಬಂದು ಕಲ್ಯಾಣ ಸತ್ಯ ಅವರೊಡನೆ ಸೇರಿ 'ಭಾಗ್ಯಚಕ್ರ' ಚಿತ್ರವನ್ನು ನಿರ್ಮಿಸಿದರಲ್ಲದೆ ಛಾಯಾಗ್ರಾಹಕರಾಗಿಯೂ ಕನ್ನಡ ಚಿತ್ರರಂಗ ಪ್ರವೇಶಿಸಿದರು. 'ಬೆಸುಗೆ', 'ಶುಭಮಂಗಳ', 'ದೇವರು ಕೊಟ್ಟ ತಂಗಿ', 'ದೇವರ ದುಡ್ಡು' ಮೊದಲಾದವು ಇವರು ಛಾಯಾಗ್ರಹಣ ಮಾಡಿದ ಪ್ರಮುಖ ಚಿತ್ರಗಳು. ಸುಚಿತ್ರ ಫಿಲಂ ಸೊಸೈಟಿಗಾಗಿ 'ಕರಿಯ' ಎಂಬ ಕಿರುಚಿತ್ರದ ಛಾಯಾಗ್ರಹಣ ನಿರ್ದೇಶನ ಮಾಡಿದ್ದಾರೆ. ಎಸ್.ಲಕ್ಷ್ಮೀನಾರಾಯಣ್ ನಿರ್ದೇಶಿಸಿದ 'ಮುಯ್ಯಿ' ಚಿತ್ರದ ಛಾಯಾಗ್ರಾಹಕರು. ಬಸ್ಸಿನಲ್ಲಿ ಹೆಚ್ಚಿನಂಶ ಚಿತ್ರೀಕರಣವಾಗಬೇಕಿತ್ತು. ಆಗಿನ್ನೂ ಕೆಲವು ಅಗತ್ಯ ಸಲಕರಣೆಗಳು ಲಭ್ಯವಿರಲಿಲ್ಲವಾದರಿಂದ ಚಲಿಸುವ ಬಸ್ಸಿನಿಂದಾಗಿ ಕ್ಯಾಮರಾ ಶೇಕ್ ಆಗದಂತೆ ಕಾರ್ಯನಿರ್ವಹಿಸಲು 'ಸ್ಟೆಬಿಲೈಸರ್' ಅನ್ನು ತಾವೇ ಸಿದ್ಧಪಡಿಸಿದರು.

### ರಾವ್.ವೈ.ವಿ

ಕನ್ನಡದ ಮೊದಲ ಚಲನಚಿತ್ರ 'ಸತಿ



ಸುಲೋಚನಾ' (೧೯೩೪) ನಿರ್ದೇಶಿಸಿದರು. ಅದರಲ್ಲಿ ಪ್ರಮುಖ ಪಾತ್ರವೊಂದಾದ ಲಕ್ಷ್ಮಣನ ಪಾತ್ರ ನಿರ್ವಹಿಸಿದರು. ಯರ್‍ರಗುಡಿಪಾಟಿ ವರದ ರಾವ್ ಆಂಧ್ರದ ನಲ್ಲೂರು ಜಿಲ್ಲೆಯವರು. ಮದರಾಸಿನಲ್ಲಿ ವೈದ್ಯ ವಿದ್ಯಾರ್ಥಿಯಾಗಿದ್ದವರು, ಮುಂಬೈಗೆ ತೆರಳಿ ಅಲ್ಲಿ ಅರ್ದೇಶಿರ್ ಇರಾನಿ ಮೊದಲಾದವರು ನಿರ್ಮಿಸಿದ ಮೂಕಚಿತ್ರಗಳಲ್ಲಿ ಅಭಿನಯಿಸಿದರು. ಬೆಂಗಳೂರಿನಲ್ಲಿ ಗುಬ್ಬಿ ವೀರಣ್ಣನವರು ತಯಾರಿಸಿದ 'ಹರಿಮಾಯ' ಚಿತ್ರವನ್ನು ನಿರ್ದೇಶಿಸುವುದರ ಜೊತೆಗೆ ಪ್ರಧಾನ ಪಾತ್ರವನ್ನೂ ನಿರ್ವಹಿಸಿದರು. 'ಭಾಗ್ಯಚಕ್ರ' (೧೯೫೬), 'ನಾಗಾರ್ಜುನ' (೧೯೬೧) ಇವೆರಡು ಅವರು ಕನ್ನಡದಲ್ಲಿ ನಿರ್ದೇಶಿಸಿದ ಚಿತ್ರಗಳು. ಕನ್ನಡವಲ್ಲದೆ ತೆಲುಗು, ತಮಿಳು, ಮರಾಠಿ, ಕೊಂಕಣಿ ಸೇರಿದಂತೆ ಹಲವು ಭಾಷೆಗಳಲ್ಲಿ ಚಿತ್ರ ನಿರ್ದೇಶಿಸಿದ ಹಿರಿಮೆ ಇವರದು. ಕನ್ನಡ, ತೆಲುಗು, ತಮಿಳು, ಮಲೆಯಾಳಂ ಮತ್ತು ಹಿಂದಿ ಭಾಷೆಗಳಲ್ಲಿ ಖ್ಯಾತಿ ಗಳಿಸಿದ ಲಕ್ಷ್ಮಿ ಇವರ ಪುತ್ರಿ. ರಾಯರ ಮಡದಿ ರುಕ್ಮಿಣಿ ಕೂಡ 'ಸತಿ ಸುಲೋಚನಾ'ದಲ್ಲಿ ಪಾತ್ರವಹಿಸಿದರು.

### ರಿಚರ್ಡ್ ಕ್ಯಾಸ್ಟಲಿನೋ

ವೃತ್ತಿಯಲ್ಲಿ ವೈದ್ಯರಾದರೂ ಕನ್ನಡದ ಉಪಭಾಷೆಗಳಾದ ತುಳು ಮತ್ತು ಕೊಂಕಣಿಗಳಲ್ಲಿ ಸಾಕಷ್ಟು ದೊಡ್ಡ ಪ್ರಮಾಣದ ಚಿತ್ರಗಳನ್ನೇ ನಿರ್ಮಿಸಿ, ನಿರ್ದೇಶಿಸಿ ಪ್ರಯೋಗಶೀಲರೆನಿಸಿದವರು ಮಂಗಳೂರಿನ ಡಾ.ರಿಚರ್ಡ್ ಕ್ಯಾಸ್ಟಲಿನೋ. ಇವರು 'ಬಂಗಾರ್ ಪಟ್ಲೇರ್' ಎಂಬ ತುಳು ಚಿತ್ರವನ್ನು ನಿರ್ದೇಶಿಸುವುದರ ಮೂಲಕ



ಚಿತ್ರರಂಗ ಪ್ರವೇಶಿಸಿದರು. ಈ ಚಿತ್ರ ೧೯೯೨-೯೩ರ ಸಾಲಿನ ವಿಶೇಷ ಪ್ರಾಂತೀಯ ಭಾಷಾ ಚಲನಚಿತ್ರ ಎಂಬ ರಾಜ್ಯ ಪ್ರಶಸ್ತಿ ಪಡೆಯಿತು. ಅವರು ನಿರ್ಮಿಸಿ ನಿರ್ದೇಶಿಸಿದ ಕೊಂಕಣಿ ಚಿತ್ರ 'ಜೊಗ್ವಾಣ' ೧೯೯೬-೯೭ರ ಸಾಲಿನ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂದು ರಾಜ್ಯ ಸರ್ಕಾರದಿಂದ ವಿಶೇಷ ಪ್ರಶಸ್ತಿಗೆ ಪಾತ್ರವಾಯಿತು. ಡಾ.ಕ್ಯಾಸ್ಟಲಿನೋ ಇದುವರೆಗೆ 'ನ್ಯಾಯಗಾದ್ ಎನ್ ಬದಕ್', 'ಬಂಗಾರ್ ಪಟ್ಲೇರ್' ಮತ್ತು ಕೇವಲ ೨೪ ಗಂಟೆಗಳಲ್ಲಿ ಚಿತ್ರೀಕರಿಸಿದ 'ಸೆಪ್ಟೆಂಬರ್ ೮' ತುಳು ಚಿತ್ರಗಳನ್ನು ನಿರ್ಮಿಸುವುದರೊಂದಿಗೆ ತಾವೇ ಅವುಗಳನ್ನು ನಿರ್ದೇಶಿಸಿಯೂ ಇದ್ದಾರೆ. ಹೆಚ್ಚು ಮಾರುಕಟ್ಟೆಯಿಲ್ಲದ ಈ ಪ್ರಾದೇಶಿಕ ಭಾಷೆಗಳ ಚಿತ್ರಗಳಲ್ಲಿ ಹಣ ಹೂಡಿ ನಷ್ಟವನ್ನು ಅನುಭವಿಸಿದರೂ ತಮ್ಮ ಸಾಹಸವನ್ನು ಮುಂದುವರಿಸಿಕೊಂಡೇ ಬಂದಿದ್ದಾರೆ.

### ರಿಚರ್ಡ್ ಲೂಯಿಸ್

ಹವ್ಯಾಸಿ ರಂಗಭೂಮಿ ನಟ, ಸಂಘಟನೆಕಾರ, ಕಥಾಲೇಖಕ, ಸಂಭಾಷಣೆಕಾರ ಹೀಗೆ ಬಹುಮುಖ ಪ್ರತಿಭೆಯ ರಿಚರ್ಡ್ ಲೂಯಿಸ್ ಜನಿಸಿದ್ದು ಮಂಗಳೂರಿನಲ್ಲಿ. ಬೆಂಗಳೂರಿನಲ್ಲಿಯೇ ಬಹುತೇಕ ವಿದ್ಯಾಭ್ಯಾಸ. ಬಿ.ಕಾಂ, ಎಲ್.ಎಲ್.ಬಿ ಪದವೀಧರರಾದ ಅವರು ಎಲ್.ಎಲ್.ಬಿ ಓದುವಾಗ ಅವರ ಸಹಪಾಠಿಗಳಾಗಿದ್ದ ರಾಜೇಂದ್ರಬಾಬು.ಡಿ,



ಮುಖ್ಯಮಂತ್ರಿ ಚಂದ್ರು, ರಾಜಾರಾಂ ಅವರುಗಳ ಪ್ರೇರಣೆಯಿಂದ ಹವ್ಯಾಸಿ ರಂಗಭೂಮಿ ಪ್ರವೇಶಿಸಿದರು. ನಾಟ್ಯದರ್ಪಣ ಸಂಸ್ಥೆಯೊಂದಿಗೆ ಆರಂಭವಾದ ಕಲಾನಂಟು, ಬೀದಿ ನಾಟಕಗಳತ್ತ ಹೊರಳಿತು. ನಂತರ ವಿ.ಎಸ್.ಕೆ ಅವರಂಥ ವ್ಯಕ್ತಿಗಳ ಪ್ರೇರಣೆಯಿಂದ ಟಿ.ಎಸ್.ನರಸಿಂಹನ್ ಅಂಥ ಗೆಳೆಯರಿಂದ ಚಿತ್ರರಂಗಕ್ಕೂ ಪ್ರವೇಶ ಪಡೆಯುವಂತಾಯಿತು. ಪ್ರಾರಂಭದ ಚಿತ್ರ 'ಕುರುಬರ ಲಕ್ಕ' ಬಿಡುಗಡೆ ಕಂಡರೂ 'ಜಾಲ' ಮತ್ತು 'ತ್ರಿಶೂಲ' ತೆರೆಗೆ ಬರಲಿಲ್ಲ. ಅಭಿನಯ ಹಾಗೂ ಕಥಾಲೇಖಕ-ಸಂಭಾಷಣಕಾರರಾಗಿ ಹಲವು ಚಿತ್ರಗಳಿಗೆ ಕಾರ್ಯನಿರ್ವಹಿಸಿದ್ದಾರೆ. 'ಚಕ್ರವ್ಯೂಹ' ಸಾಹಿತ್ಯ ವಿಭಾಗದಲ್ಲಿ ಶ್ರಮಿಸಿದ್ದರು. 'ಕುರಿದೊಡ್ಡಿ ಕುರುಕ್ಷೇತ್ರ' ಚಿತ್ರಕ್ಕೆ ಸಹ ಸಂಭಾಷಣಕಾರರು. ಡಿ.ರಾಜೇಂದ್ರಬಾಬು, ಹ.ಸೂ.ರಾಜಶೇಖರ್ ಮೊದಲಾದವರ ಯಶಸ್ಸಿನ ಹಿಂದೆ ರಿಚರ್ಡ್ ಲೂಯಿಸ್ ಅವರ ಪಾತ್ರವಿದೆ. 'ಹಾಲುಂಡ ತವರು', 'ಧೀರ್ಘಸುಮಂಗಲಿ', 'ಮದರ್ ಇಂಡಿಯಾ', 'ತುತ್ತಾ ಮುತ್ತಾ', 'ನಿರ್ಬಂಧ', 'ಅಪ್ಪಾಜಿ', 'ಟುವ್ವಿ ಟುವ್ವಿ ಟುವ್ವಿ' ಚಿತ್ರಗಳ ಸಂಭಾಷಣೆಯನ್ನು ಬರೆದಿದ್ದಾರೆ. ಈ ಚಿತ್ರಗಳಲ್ಲಿ ಪಾತ್ರವನ್ನೂ ನಿರ್ವಹಿಸಿದರು. ತೆರೆ ಕಾಣದ 'ದಂಗೆ' ಚಿತ್ರಕ್ಕಾಗಿ, ಕೊಂಚ ಮಟ್ಟಿಗೆ 'ಮೀನಾಕ್ಷಿ ಮನೆ ಮೆಷ್ಟ್ರು' ಚಿತ್ರಕ್ಕೂ ಹಣ ಹೂಡಿದರು. ಚಿತ್ರಗಳು ತೆರೆಗೆ ಬರಲಿಲ್ಲ. ಬಂಡವಾಳ ಹೂಡಿದ್ದೂ ಉಂಟು. ಅಕೌಂಟೆಂಟ್ ಜನರಲ್‌ರವರ ಕಚೇರಿಯಲ್ಲಿ ಕೆಲಸ. ಸದಾ ಕನ್ನಡಪರ, ಕಾರ್ಮಿಕಪರ ಕಾರ್ಯಗಳಲ್ಲಿ ನಿರತರು.

### ರುದ್ರಮೂರ್ತಿ ಶಾಸ್ತ್ರಿ.ಸು

ಸಂಭಾಷಣ ಹಾಗೂ ಗೀತ ರಚನಕಾರ



ಸು.ರುದ್ರಮೂರ್ತಿ ಶಾಸ್ತ್ರಿ ರಾಮನಗರ ತಾಲ್ಲೂಕಿನ ಸುಗ್ಗನಹಳ್ಳಿಯವರು. ೧೯೪೮ರಲ್ಲಿ ಜನಿಸಿದರು. ಬೆಂಗಳೂರು ವಿಶ್ವವಿದ್ಯಾಲಯದ ಎಂ.ಎ.ಪದವೀಧರರಾದ ಇವರು 'ಸದಾನಂದ' ಚಿತ್ರಕ್ಕೆ ಗೀತೆಗಳನ್ನು ಬರೆಯುವುದರ ಮೂಲಕ ಚಿತ್ರರಂಗ ಪ್ರವೇಶಿಸಿದರು. ಕಾಲೇಜು ಪ್ರಾಧ್ಯಾಪಕರಾಗಿದ್ದವರು ಉದ್ಯೋಗಕ್ಕೆ ರಾಜೀನಾಮೆ ನೀಡಿದರು. ೮೦ಕ್ಕೂ ಹೆಚ್ಚು ಚಿತ್ರಗಳಿಗೆ ಗೀತೆಗಳನ್ನು, ಹತ್ತಕ್ಕೂ ಹೆಚ್ಚು ಚಿತ್ರಗಳಿಗೆ ಸಂಭಾಷಣೆಯನ್ನು ಬರೆದಿದ್ದಾರೆ. 'ಮಾತೃದೇವೋಭವ', 'ಏಳು ಸುತ್ತಿನ ಕೋಟೆ', 'ಹೃದಯ ಗೀತ', 'ಮಿಥಿಲೆಯ ಸೀತೆಯರು' ಚಿತ್ರಗಳಿಗೆ ಗೀತೆಗಳನ್ನು 'ಅನಂತರ', 'ಪನೂರಂದ್ರೆ', 'ಹೊಸ ಮನೆ ಅಳಿಯ' ಚಿತ್ರಗಳಿಗೆ ಸಂಭಾಷಣೆಯನ್ನು ಬರೆದಿದ್ದಾರೆ. ಇವಲ್ಲದೇ ಕವಿತೆಗಳು, ಕಾದಂಬರಿಗಳು, ಐತಿಹಾಸಿಕ ಕಾದಂಬರಿಗಳು. ಕಥಾಸಂಕಲನಗಳನ್ನು ತಂದಿದ್ದಾರೆ. ಕಿರುತೆರೆಯಲ್ಲಿ ತೊಡಗಿದ್ದಾರೆ.

### ರೂಪಾದೇವಿ

೫೦ರ ದಶಕದಲ್ಲಿ ಮಿಂಚಿದ ಪ್ರತಿಭಾವಂತೆ. ಹಿರಿಯ ತಾರೆ ಆದವಾನಿ ಲಕ್ಷ್ಮೀದೇವಿಯವರ ಪುತ್ರಿ. ಇತಿಹಾಸದಲ್ಲಿ ಎಂ.ಎ.ಪದವೀಧರೆ. ನಿರ್ದೇಶಕ. ಯು.ವಿಶ್ವೇಶ್ವರರಾವ್‌ರವರ 'ತೀರ್ಪು' ತೆಲುಗು ಚಿತ್ರದಿಂದ ಚಿತ್ರರಂಗಕ್ಕೆ



ಪ್ರವೇಶ ಪಡೆದರು. ಸಿ.ವಿ.ರಾಜೇಂದ್ರನ್ ನಿರ್ದೇಶನದ 'ಕಮಲ' ಚಿತ್ರದಿಂದ ಕನ್ನಡ ಚಿತ್ರರಂಗ ಪ್ರವೇಶಿಸಿದರು. ರೂಪಾದೇವಿ ರಾಜಕುಮಾರ್ ಅವರೊಡನೆ 'ಹಾಲುಜೇನು', 'ಸಮಯದ ಗೊಂಬೆ', 'ಯಾರಿವನು?' ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಮುಳ್ಳಿನ ಗುಲಾಬಿ', 'ಕೆಂಪು ಗುಲಾಬಿ', 'ಅವಳ ಅಂತರಂಗ', 'ಬಾಳನೌಕೆ', 'ನ್ಯಾಯ ಗೆದ್ದಿತು', 'ಮತ್ತೆ ವಸಂತ', 'ಮಹಾಪುರುಷ', 'ಗಂಡಂದ್ರೆ ಗಂಡು', 'ಆಹುತಿ', 'ಶಿವಕನ್ಯೆ' ಮೊದಲಾದವು ರೂಪಾ ಅಭಿನಯದ ಮುಖ್ಯ ಚಿತ್ರಗಳು. 'ಅವಳ ಅಂತರಂಗ' ಚಿತ್ರದಲ್ಲಿನ ಶ್ರೇಷ್ಠ ಅಭಿನಯಕ್ಕಾಗಿ ಕರ್ನಾಟಕ ಸರ್ಕಾರದ ರಾಜ್ಯ ಪ್ರಶಸ್ತಿಯನ್ನು ೧೯೮೪-೮೫ನೇ ಸಾಲಿಗೆ ಪಡೆದರು.

### ರೆಹಮಾನ್.ಆರ್.ಎ

೬೦ರ ದಶಕದಲ್ಲಿ ಬೆಳಕಿಗೆ ಬಂದ ನಿರ್ಮಾಪಕರು. ಮೂಲತಃ ದಾವಣಗೆರೆಯವರಾದ ರೆಹಮಾನ್ ತಮ್ಮ ಗೆಳೆಯರೊಡನೆ ಚಿತ್ರ ನಿರ್ಮಾಣಕ್ಕೆ



ಇಳಿದರು. 'ಫಣಿ', 'ಮಂಗಳಸೂತ್ರ', 'ಗಂಗಾ ಯಮುನಾ', 'ಲೇಡಿ ಟೈಗರ್', 'ದುರ್ಗದ ಹುಲಿ' ಮುಂತಾದ ಚಿತ್ರಗಳನ್ನು ನಿರ್ಮಿಸಿದರು. ಹೇಳಿಕೊಳ್ಳುವಂಥ ಯಶಸ್ಸನ್ನು ಪಡೆಯದಿದ್ದರೂ ಛಲ ಬಿಡದೆ ವಿಷ್ಣುವರ್ಧನ್ ನಾಯಕತ್ವದಲ್ಲಿ 'ಯಜಮಾನ' ಚಿತ್ರವನ್ನು ನಿರ್ಮಿಸಿ ಅದ್ಭುತ ಯಶಸ್ಸು ಪಡೆದರು. ಚಿತ್ರರಂಗದ ಹಲವಾರು ದಾಖಲೆಗಳನ್ನು ಮುರಿದು ಈ ಚಿತ್ರ ಅವರ ಸಾಹಸಕ್ಕೆ ಇಂಬು ಕೊಟ್ಟಿದೆ.

### ರೇಖಾದಾಸ್

ತೊಂಬತ್ತರ ದಶಕದಲ್ಲಿ ಕನ್ನಡ ಚಿತ್ರರಂಗಕ್ಕೆ ಹಾಸ್ಯನಟಿಯಾಗಿ ಪ್ರವೇಶಿಸಿದ ರೇಖಾದಾಸ್ ಮೂಲತಃ ನೇಪಾಳದವರು. ಇವರ ಬಾಲ್ಯವೆಲ್ಲ ಬೆಂಗಳೂರಿನಲ್ಲಿಯೇ ಕಳೆಯಿತು. ಚಿಕ್ಕ ಹುಡುಗಿ ರೇಖಾ ಚಿತ್ರರಂಗದಿಂದ ಆಕರ್ಷಿತರಾಗಿ ಈ ರಂಗಕ್ಕೆ ಬಂದದ್ದು ಆಕಸ್ಮಿಕವಾಗಿಯೇ. ತಮ್ಮ ವಿಶಿಷ್ಟ ನಗು, ಹಾವ-ಭಾವಗಳಿಂದ ಬಲು ಬೇಗನೆ ಹಾಸ್ಯ ಕಲಾವಿದೆಯಾಗಿ ರೂಪುಗೊಂಡ ರೇಖಾದಾಸ್, ಟೆನ್ನಿಸ್ ಕೃಷ್ಣ, ಮುಖ್ಯಮಂತ್ರಿ ಚಂದ್ರು, ಉಮೇಶ್, ಡಿಂಗ್ರಿ ನಾಗರಾಜ್ ಅವರೊಂದಿಗೆ ಹಾಸ್ಯ ಜೋಡಿಯಾಗಿ ರಂಜಿಸಿದಾರೆ. ೧೯೯೬ರಲ್ಲಿ ಶಿವರಾಜಕುಮಾರ್ ನಾಯಕರಾಗಿದ್ದ 'ಮೃತ್ಯುಂಜಯ' ಚಿತ್ರದಿಂದ ಬೆಳ್ಳಿತೆರೆಗೆ ಪರಿಚಿತರಾದರು. 'ಸಂಯುಕ್ತ', 'ಇಬ್ಬರು ಹೆಂಡಿರ ಮುದ್ದಿನ ಪೊಲೀಸ್', 'ಗಂಗಾ ಯಮುನಾ', 'ಎದುರು ಮನೇಲಿ ಗಂಡ ಪಕ್ಕದ್ಮನೇಲಿ ಹೆಂಡ್ತಿ', 'ಹೊಸ ಮನೆ ಅಳಿಯ', 'ಮಾವನ ಮಗಳು' ಮುಂತಾದ



ಚಿತ್ರಗಳು ಇವರು ಹಾಸ್ಯನಟಿಯಾಗಿ ಕಾರ್ಯ ನಿರ್ವಹಿಸಿದ ಚಿತ್ರಗಳು. ಚಿತ್ರರಂಗದಲ್ಲಿ ಹಾಸ್ಯಪಾತ್ರಗಳಲ್ಲಿ ಕಾಣಿಸಿಕೊಂಡ ಇವರು ಕಿರುತೆರೆಯಲ್ಲಿ ತೀರಾ ಗಂಭೀರವೆನಿಸುವ ಪಾತ್ರಗಳಲ್ಲಿ ಲೀಲಾಜಾಲವಾಗಿ ಅಭಿನಯಿಸಿರುತ್ತಾರೆ.

### ರೇಖಾರಾವ್

ರಂಗಭೂಮಿ ಹಿನ್ನೆಲೆಯಿಂದ ಚಲನಚಿತ್ರಕ್ಕೆ ಬಂದ ನಟಿ. ಮಾತೃಭಾಷೆ ಕನ್ನಡ. ಓದಿದ್ದು, ನೃತ್ಯಾಭ್ಯಾಸ ಎಲ್ಲವೂ ಮುಂಬೈನಲ್ಲಿ. ನಾಯಕನಟ ಅನಂತ್‌ನಾಗ್ ಶಿಫಾರಸ್ಸಿನ ಮೇಲೆ ಜಿ.ವಿ.ಅಯ್ಯರ್ ನಿರ್ದೇಶನದ 'ಹಂಸಗೀತ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶ. ಮತ್ತೆ ಮುಂಬಯಿಗೆ ವಾಪಸು. ನಾಲ್ಕೈದು ಹಿಂದಿ ಚಿತ್ರಗಳಲ್ಲಿ ಅಭಿನಯ. ಮತ್ತೆ ಕನ್ನಡಕ್ಕೆ ಬಂದು 'ಮದರ್', 'ಕುದುರೆ ಮೊಟ್ಟೆ', 'ಪ್ರೇಮ ಕಾಮ', 'ನಾ ನಿನ್ನ ಬಿಡೆನು', 'ಕಪ್ಪು ಕೊಳ', 'ಅತ್ತೆಗೆ ತಕ್ಕ ಸೊಸೆ', 'ಮಾನಸ ಸರೋವರ', 'ಧರಣಿ ಮಂಡಲ ಮಧ್ಯದೊಳಗೆ' ಮೊದಲಾದ ಚಿತ್ರಗಳಲ್ಲಿ



ಅಭಿನಯಿಸಿದರು. ರೇಖಾ ಅನೇಕ ಮರಾಠಿ, ಹಿಂದಿ ಕಿರುತೆರೆ ಧಾರಾವಾಹಿಗಳಲ್ಲಿ ಮತ್ತು ಹಿಂದಿ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

### ರೇಣುಕಮ್ಮ ಮುರುಗೋಡು

ರಂಗಭೂಮಿ ಹಿನ್ನೆಲೆಯ ರೇಣುಕಮ್ಮ ಮುರುಗೋಡು ತಮ್ಮ ಇಳಿವಯಸ್ಸಿನಲ್ಲಿ ಚಿತ್ರರಂಗವನ್ನು ಪ್ರವೇಶಿಸಿದರು. ಗಿರೀಶ್ ಕಾಸರವಳ್ಳಿ ನಿರ್ದೇಶನದ 'ಕ್ರೌರ್ಯ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ಈಕೆ ಎಲ್ಲರ ಗಮನ ಸೆಳೆದರು. ನಂತರ 'ನಮ್ಮೂರ ಮಂದಾರ ಹೂವೆ', 'ಹೂಮಳೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕಿರುತೆರೆಯಲ್ಲಿ 'ಪಾರ್ವತಿ' ಧಾರಾವಾಹಿಯ ಅಜ್ಜಿಯಾಗಿ ಕರ್ನಾಟಕದ ಮೂಲೆ ಮೂಲೆಗೂ ಪರಿಚಿತರಾಗಿರುವ ಪ್ರತಿಭಾವಂತೆ.

### ರೇಣುಕಾಶರ್ಮ

ಕನ್ನಡ ಚಿತ್ರರಂಗದ ಹೆಸರಾಂತ ನಿರ್ದೇಶಕರಲ್ಲಿ ರೇಣುಕಾಶರ್ಮ ಒಬ್ಬರು. ೧೯೭೦ರಲ್ಲಿ ತಯಾರಾದ 'ಸರ್ವಜ್ಞಮೂರ್ತಿ' ಚಿತ್ರಕ್ಕೆ ಸಹಾಯಕ ನಿರ್ದೇಶಕರಾಗಿ ತಮ್ಮ ಚಿತ್ರರಂಗದ ವೃತ್ತಿ ಜೀವನವನ್ನು ಆರಂಭಿಸಿದರು. ಆರೂರು ಪಟ್ಟಾಭಿ, ನಾಗೇಂದ್ರರಾವ್, ಹುಣಸೂರು ಕೃಷ್ಣಮೂರ್ತಿ ಮುಂತಾದ ಹಿರಿಯರ ಬಳಿ ಸಹಾಯಕ ನಿರ್ದೇಶಕರಾಗಿ ದುಡಿದು ಅನುಭವ ಗಳಿಸಿಕೊಂಡರು. ೧೯೮೧ರಲ್ಲಿ 'ಅನುಪಮಾ' ಚಿತ್ರದ ಮೂಲಕ ಸ್ವತಂತ್ರ ನಿರ್ದೇಶಕರಾದರು. ೧೯೮೩ರಲ್ಲಿ ರಾಜಕುಮಾರ್ ನಟಿಸಿದ 'ಕವಿರತ್ನ ಕಾಳಿದಾಸ' ಚಿತ್ರವನ್ನು ನಿರ್ದೇಶಿಸಿದರು. ಶರ್ಮರಿಗೆ ಈ ಚಿತ್ರ ಅವರ ಬದುಕಿನ



ಮೈಲಿಗಲ್ಲಾಯಿತು. ಸುಮಾರು ೩೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪ್ರಮುಖ ಚಿತ್ರಗಳು 'ಶಭಾಸ್ ವಿಕ್ರಂ', 'ನಮ್ಮೂರ ದೇವತೆ', 'ಭದ್ರಕಾಳಿ', 'ಅಂಜದ ಗಂಡು'. ೧೯೯೧ರಲ್ಲಿ ಇವರು ನಿರ್ದೇಶಿಸಿದ ಚಿತ್ರ 'ಶಬರಿ ಮಲೈ ಅಯ್ಯಪ್ಪ ಸ್ವಾಮಿ' ಚಿತ್ರ ಪನೋರಮ ವಿಭಾಗದಲ್ಲಿ ವಿಶೇಷವಾಗಿ ಆಯ್ಕೆಗೊಂಡು ಪ್ರದರ್ಶಿಸಲ್ಪಟ್ಟಿತು. ಈ ಚಿತ್ರ ಅತ್ಯಧಿಕ ಹಣ ಗಳಿಸಿದ ಚಿತ್ರ ಎಂಬ ಹೆಗ್ಗಳಿಕೆ ಪಡೆದು ಚಲನಚಿತ್ರ ನಿರ್ದೇಶಕರ ಸಂಘದಿಂದ ಪ್ರಶಸ್ತಿಗಳಿಸಿತು. ಅನ್ನಪೂರ್ಣ ಮೂವೀ ಮೇಕರ್ಸ್ ಸಂಸ್ಥೆ ಸ್ಥಾಪಿಸಿ ಶರ್ಮರು ನಿರ್ಮಾಪಕರಾಗಿ 'ಪ್ರೊಫೆಸರ್', 'ಕೊಲ್ಲೂರು ಮೂಕಾಂಬಿಕಾ' ಚಿತ್ರಗಳನ್ನು ನಿರ್ಮಿಸಿ ನಿರ್ದೇಶಿಸಿರುತ್ತಾರೆ. ಪ್ರಸ್ತುತ ಕಿರುತೆರೆಗಾಗಿ ಸಂತ ಶಿಶುನಾಳ ಷರೀಫ್‌ರ ಬದುಕು, ಜೀವನದ ಬಗ್ಗೆ ಸಂಚಿಕೆಗಳನ್ನು ನಿರ್ಮಿಸಿ-ನಿರ್ದೇಶಿಸಿದ್ದಾರೆ.

### ರೇವತಿ ಕಲ್ಯಾಣ್ ಕುಮಾರ್

ವಿಠಲಾಚಾರ್ಯರು ನಿರ್ಮಿಸಿದ 'ರಾಜಲಕ್ಷ್ಮಿ' ಚಿತ್ರದ ನಾಯಕಿಯಾಗಿ ಬಂದ ರೇವತಿ ಎಲ್ಲ ಬಗೆಯ ಪಾತ್ರಗಳನ್ನು ನಿರ್ವಹಿಸಿದ



ಪ್ರತಿಭಾವಂತೆ. ಈಕೆಯ ತಾಯಿ ಸರೋಜಮ್ಮ ಕೂಡ ರಂಗಭೂಮಿ ಕಲಾವಿದೆಯಾಗಿದ್ದರು. 'ಮನೆಗೆ ಬಂದ ಮಹಾಲಕ್ಷ್ಮಿ' ಚಿತ್ರವನ್ನು ತಾವೇ ನಿರ್ಮಿಸಿದರು. ಮುಂದೆ ಕಲ್ಯಾಣ್‌ಕುಮಾರ್ ಅವರನ್ನು ವಿವಾಹವಾದರು. ಪ್ರತಿಭಾವಂತ ನಟಿ, ಲೇಖಕಿ. ಆಕೆ ಬರೆದ ಕಥೆ, ಕಾದಂಬರಿಗಳು ಪ್ರಕಟವಾಗಿವೆ. ಮುಖ್ಯವಾಗಿ ಅವರು ತಮ್ಮ ಪತಿ ಕಲ್ಯಾಣ್‌ಕುಮಾರ್ ಅವರು ನಿರ್ಮಿಸಿ, ನಿರ್ದೇಶಿಸಿದ ಚಿತ್ರಗಳಿಗೆ ಕಥೆ-ಸಂಭಾಷಣೆ ರಚಿಸಿದರು. ತಮಿಳು ಚಿತ್ರಗಳಲ್ಲಿಯೂ ನಟಿಸಿ ಹೆಸರಾಗಿದ್ದರು. ರಂಗ ತಂಡವನ್ನು ಕಟ್ಟಿ ನಾಡಿನಾದ್ಯಂತ ಸಂಚರಿಸಿ ಅನೇಕ ನಾಟಕಗಳನ್ನು ಪ್ರದರ್ಶಿಸಿದರು. ಆಕೆಯೇ ನಾಟಕವನ್ನು ರಚಿಸಿ ಆಡಿದ್ದೂ ಉಂಟು. ರಂಗದ ಮೇಲೂ ಉತ್ತಮ ನಟಿಯೆಂದು ಖ್ಯಾತರು. ಇವರಿಗೆ ಕರ್ನಾಟಕ ರಾಜ್ಯ ನಾಟಕ ಅಕಾಡಮಿಯ ಪ್ರಶಸ್ತಿಯೂ ಸಂದಿದೆ. 'ಎಂದೂ ನಿನ್ನವನೆ', 'ಕಲ್ಲು ಸಕ್ಕರೆ', 'ಪ್ರವಾಸಿ ಮಂದಿರ' ಮೊದಲಾದ ಚಿತ್ರಗಳನ್ನು ಪತಿಯೊಂದಿಗೆ ನಿರ್ಮಿಸಿದ್ದರು.

### ರೇವತಿ (ಜೂನಿಯರ್)

'ಮನೆಗೆ ಬಂದ ಮಹಾಲಕ್ಷ್ಮಿ' (೧೯೫೮) ಚಿತ್ರದ ಮೂಲಕ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ ಜೂನಿಯರ್ ರೇವತಿ ತಮ್ಮ ಸಹಜಾಭಿನಯ ಪ್ರತಿಭೆಯಿಂದ ಹಲವು ವರ್ಷಗಳ ಕಾಲ ಕನ್ನಡ ಚಿತ್ರಗಳಲ್ಲಿ ಪೋಷಕ



ನಟಿಯಾಗಿ ಹೆಸರು ಮಾಡಿದ್ದರು. 'ಮನೆಗೆ ಬಂದ ಮಹಾಲಕ್ಷ್ಮಿ' ಚಿತ್ರದ ನಾಯಕಿ ಹಾಗೂ ನಿರ್ಮಾಪಕಿ ರೇವತಿ (ರೇವತಿ ಕಲ್ಯಾಣ್) ಇಬ್ಬರ ಹೆಸರೂ ಒಂದೇ ಆಗಿದ್ದುದರಿಂದ ಜೂನಿಯರ್ ರೇವತಿ ಎಂದು ನಾಮಕರಣ ಮಾಡಿದರು. 'ಮನ ಮೆಚ್ಚಿದ ಮಡದಿ', 'ಸಂಧ್ಯಾರಾಗ', 'ಜೀವನ ತರಂಗ' ಮುಂತಾದ ಚಿತ್ರಗಳಲ್ಲಿ ಜೂನಿಯರ್ ರೇವತಿ ಅವರ ಅಭಿನಯ, ಸಂಭಾಷಣೆಗಳ ದೋಷರಹಿತ ಉಚ್ಚಾರಣೆ ಚಿತ್ರರಸಿಕರಿಗ ತುಂಬ ಮೆಚ್ಚುಗೆಯಾಗಿತ್ತು.

### ಲಂಕೇಶ್.ಪಿ

ಕನ್ನಡ ಸಾಹಿತ್ಯದಲ್ಲಿನ ಪ್ರತಿಷ್ಠಿತ ಹೆಸರುಗಳಲ್ಲೊಂದು ಪಿ.ಲಂಕೇಶ್. ಸಣ್ಣ ಕಥೆ, ಕಾದಂಬರಿ, ನಾಟಕ, ಕಿರುಗವನ ಈ



ಎಲ್ಲ ಪ್ರಕಾರಗಳಲ್ಲಿಯೂ ಸಶಕ್ತವಾಗಿ ತೊಡಗಿಕೊಂಡು ತಮ್ಮದೇ ಆದ ತೀಕ್ಷ್ಣ ಶೈಲಿಯಿಂದ ಸಮಾಜದ ಆತ್ಮಸಾಕ್ಷಿಯನ್ನು ಕೆಣಕಿದ ಲಂಕೇಶ್ ವೃತ್ತಿಯಲ್ಲಿ ಕಾಲೇಜು ಅಧ್ಯಾಪಕರಾಗಿದ್ದರು. ಅವರು ಅಭಿನಯ ಕ್ಷೇತ್ರವನ್ನು ಪ್ರವೇಶಿಸಿದ್ದು ಕನ್ನಡದಲ್ಲಿನ ಹೊಸ ಅಲೆಯ ಪರಂಪರೆಗೆ ನಾಂದಿ ಹಾಡಿದ 'ಸಂಸ್ಕಾರ' ಚಿತ್ರದಿಂದ. ನಂತರ 'ಪಲ್ಲವಿ' ಚಿತ್ರದ ಮೂಲಕ ಲಂಕೇಶ್ ತಾವೇ ನಿರ್ಮಾಪಕ, ನಿರ್ದೇಶಕರೂ ಆದರು. ಅವರ ಕೃತಿಗಳು ಸಾಹಿತ್ಯ ಕ್ಷೇತ್ರದಲ್ಲಿ ಎಬ್ಬಿಸಿದ ಕುತೂಹಲವನ್ನೇ ಚಲನಚಿತ್ರ ಮಾಧ್ಯಮದಲ್ಲಿ 'ಪಲ್ಲವಿ' ಕೂಡ ಎಬ್ಬಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ಪ್ರಶಸ್ತಿಗಳನ್ನು ಪಡೆದುಕೊಂಡಿತು. 'ಅನುರೂಪ', 'ಖಂಡವಿದೆಕೋ ಮಾಂಸವಿದೆಕೋ', 'ಎಲ್ಲಿಂದಲೋ ಬಂದವರು' ಅವರು ನಿರ್ದೇಶಿಸಿದ ಇತರ ಚಿತ್ರಗಳು. 'ಅನುರೂಪ' ಮತ್ತು 'ಎಲ್ಲಿಂದಲೋ ಬಂದವರು' ಲಂಕೇಶ್ ನಿರ್ಮಾಣದ ಚಿತ್ರಗಳು. ಈ ಎರಡು ಚಿತ್ರಗಳಿಗೂ ರಾಜ್ಯ ಸರ್ಕಾರದ ಉತ್ತಮ ಸಂಭಾಷಣೆ ಪ್ರಶಸ್ತಿ ದೊರಯಿತು. ತಾವು ಸಂಪ್ರದಾಯದ ಬಗ್ಗೆ ತೋರಿದ ಅಸಹನೆಯನ್ನೇ ಲಂಕೇಶ್ ಪತ್ರಿಕೋದ್ಯಮದಲ್ಲಿಯೂ ತೋರಿ ಎರಡು ದಶಕಗಳಿಗೂ ಹೆಚ್ಚುಕಾಲದಿಂದ ಲಂಕೇಶ್ ಪತ್ರಿಕೆ ಸಾಪ್ತಾಹಿಕವನ್ನು ತಮ್ಮದೇ ಛಾಪಿನಲ್ಲಿ ನಡೆಸಿಕೊಂಡು ಬಂದವರು. ಸಾಹಿತ್ಯದ ಎಲ್ಲಾ ವಿಭಾಗದಲ್ಲೂ ಇವರ ಪರಿಶ್ರಮ ಉಂಟು. ಹಲವಾರು ಪುಸ್ತಕಗಳು ಕೂಡಾ ಪ್ರಕಟವಾಗಿವೆ. ಲಂಕೇಶ್‌ರವರು ೨೦೦೦ನೇ ಯ ಇಸವಿಯಲ್ಲಿ ನಿಧನರಾದರು.

### ಲತಾ ಬೆಂಗಳೂರು

ಅರುವತ್ತರ ದಶಕದಲ್ಲಿ ಖ್ಯಾತರಾದ ಹಿನ್ನೆಲೆ ಗಾಯಕಿ ಬೆಂಗಳೂರು ಲತಾ. ಬಾಲ್ಯದಿಂದಲೇ ಸಂಗೀತದಲ್ಲಿ ಅಭಿರುಚಿಯಿದ್ದ ಲತಾ ಅವರಿಗೆ



ತಾಯಿಯೇ ಮೊದಲ ಗುರು. ಮದರಾಸಿನಲ್ಲಿ ತಂದೆ ಕಂಟ್ರಾಕ್ಟ್ ವೃತ್ತಿ ನಡೆಸುತ್ತಿದರು. ಅಲ್ಲಿ ವಿಜಯಭಾಸ್ಕರ್ ಅವರ ಬಳಿ ಮೊದಲ ಆಡಿಷನ್ ಆಯಿತು. ಅದರೆ ಮೊದಲು ಹಾಡಿದ್ದು ಜಿ.ಕೆ.ವೆಂಕಟೇಶ್ ಸಂಗೀತ ನಿರ್ದೇಶನದ 'ಕಣ್ತೆರೆದು ನೋಡು' ಚಿತ್ರದ 'ಬಂಗಾರದೊಡವೆ ಬೇಕ ನೀರೆ...' ಹಾಡು. ನಂತರ ವಿಜಯಭಾಸ್ಕರ್ ಅವರ 'ನಾಂದಿ' ಚಿತ್ರದ 'ಚಂದ್ರಮುಖಿ ಪ್ರಾಣಸಖಿ...' ಹಾಡು. ಕನ್ನಡದ ಹಾಸ್ಯನಟ ಟೊಮೊಟೋ ಸೋಮು ಅವರನ್ನು ವಿವಾಹವಾದರು. ಲತಾ ಮಂಗೇಶ್ಕರ್ ಅವರ ಅಭಿಮಾನಿಯಾದ ಲತಾ, ಪತ್ರಕರ್ತ ಮಿತ್ರ ಶ್ರೀಕೃಪಾ (ತಾಯಿನಾಡು) ಅವರಿಂದ 'ಬೆಂಗಳೂರು ಲತಾ' ಎಂದು ಕರೆಸಿಕೊಂಡರು. ರಾಜಕುಮಾರ್ ಅವರೊಂದಿಗೆ ಹಾಡಿದ ಜ್ವಾಲಾಮುಖಿ ಚಿತ್ರದ 'ಏಕೊ ಏನೋ ಈ ನನ್ನ ಮನವು...' ಹಾಗೂ 'ಹೇಳುವುದು ಒಂದು ಮಾಡುವುದು ಇನ್ನೊಂದು...' ಹಾಡುಗಳು ಬಹಳ ಜನಪ್ರಿಯವಾದವು. ಸಾವಿರಕ್ಕೂ ಹೆಚ್ಚು ಗೀತೆಗಳನ್ನು ಹಾಡಿದ್ದ ಬೆಂಗಳೂರು ಲತಾ ೧೯೯೯ರಲ್ಲಿ ನಿಧನರಾದರು. 'ಬೇವು ಬೆಲ್ಲ', 'ಮಹಾತ್ಮಾ ಕಬೀರ್', 'ಮನ ಮೆಚ್ಚಿದ ಮಡದಿ', 'ಅದೇ ಕಣ್ಣು' ಮುಂತಾದ ಚಿತ್ರಗಳಲ್ಲಿ ಹಿನ್ನೆಲೆ ಗಾಯಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

### ಲಕ್ಷ್ಮಣ್.ಆರ್

'ಬಂಗಾರದ ಮನುಷ್ಯ' ಸೇರಿದಂತೆ ಹತ್ತಾರು ಚಿತ್ರಗಳನ್ನು ನಿರ್ಮಿಸಿದ ನಿರ್ಮಾಪಕ.



ಮೈಸೂರಿನಲ್ಲಿ ಜನನ (ಆಗಸ್ಟ್ ೨೮, ೧೯೨೮). ೧೭ನೆಯ ವಯಸ್ಸಿನಲ್ಲಿಯೇ ಚಲನಚಿತ್ರ ವಿತರಣೆ ಕೆಲಸ ಆರಂಭಿಸಿದರು. ಚಲನಚಿತ್ರಮಂದಿರಗಳನ್ನು ಬಾಡಿಗೆಗೆ ಪಡೆದು ಚಿತ್ರ ಪ್ರದರ್ಶನ ಮಾಡಿದರು. ೧೯೫೦ರಲ್ಲಿ ಬೆಂಗಳೂರಿನ ದಂಡುಪ್ರದೇಶದ ಅಶೋಕಾ ಚಿತ್ರಮಂದಿರದ ವ್ಯವಸ್ಥಾಪಕರಾಗಿ ಕೆಲಸ ಮಾಡಿಕೊಂಡು ಕನ್ನಡ ಚಿತ್ರಗಳನ್ನು ಪ್ರೋತ್ಸಾಹಿಸಿದರು. ಈಗಿನ ಸೇಂಟ್ ಜಾನ್ ಆಸ್ಪತ್ರೆ ಇರುವ ಸ್ಥಳದಲ್ಲಿ ಕರ್ನಾಟಕ ಸ್ಟುಡಿಯೋ ಆರಂಭಗೊಳ್ಳಲು ಕಾರಣರಾದರು. ಎವರೆಸ್ಟ್ ಚಿತ್ರಮಂದಿರದ ನಿರ್ವಾಹಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಅಲ್ಲಿಯೂ ಕನ್ನಡ ಚಿತ್ರಗಳನ್ನು ಪ್ರದರ್ಶಿಸಿದರು. ಕಾದಂಬರಿಕಾರ ಅ.ನ.ಕೃ. ಅವರ ಮಾರ್ಗದರ್ಶನ ಹಾಗೂ ರಾಜಕುಮಾರ್ ಅವರ ಉತ್ತೇಜನದೊಂದಿಗೆ ಕನ್ನಡ ಚಿತ್ರಗಳನ್ನು ಒಂದು ನೆಲೆಗೆ ತರುವ ಹೋರಾಟದ ಮುಂಚೂಣಿ ವಹಿಸಿದರು. ಭಾರತ್ ಚಿತ್ರಮಂದಿರದ ವ್ಯವಸ್ಥಾಪಕರಾಗಿ (೧೯೬೦) ಕನ್ನಡ ಚಿತ್ರಗಳಿಗೇ ಚಿತ್ರಮಂದಿರವನ್ನು ಸಂಪೂರ್ಣವಾಗಿ ಮೀಸಲು ಗೊಳಿಸಿದರು. ರಾಜಕುಮಾರ್ ಅವರ ನೂರು ಚಿತ್ರಗಳ ಸಾಧನೆ ಕುರಿತು 'ನಟಸಾರ್ವಭೌಮ' ನಿರ್ಮಿಸಿದರು. ಆಗ ರಾಜಕುಮಾರ್ ಅವರಿಗೆ ನಡೆದ ಅಮೋಘ ಸನ್ಮಾನದ ನೇತೃತ್ವ ವಹಿಸಿದರು. 'ಉಯ್ಯಾಲೆ' (೧೯೬೯) ಇವರು ರೂಪಿಸಿದ ಮೊದಲ ಚಲನಚಿತ್ರ. ನಂತರದ್ದು 'ದೇವರ ಮಕ್ಕಳು'. ಕಲವು ಚಿತ್ರಗಳ ನಂತರ ಗೆಳೆಯ ಗೋಪಾಲ್‌ರೊಂದಿಗೆ 'ಬಂಗಾರದ ಮನುಷ್ಯ' (೧೯೭೨) ನಿರ್ಮಿಸಿದರು. ಇದು ಕನ್ನಡ ಚಿತ್ರರಂಗದಲ್ಲಿ ದಾಖಲೆ ಮಾಡಿದ ಚಿತ್ರ. ಸುಮಾರು ೧೨ ಚಿತ್ರಗಳನ್ನು ಗೋಪಾಲ್ ಅವರೊಡಗೂಡಿ ನಿರ್ಮಿಸಿದರು. 'ಚಿತ್ರಲೇಖ' (೧೯೭೩) ಚಲನಚಿತ್ರ ಪತ್ರಿಕ ನಡೆಸಿದರು. ಡಬ್ಬಿಂಗ್ ಚಿತ್ರಗಳ ವಿರುದ್ಧ ಹೋರಾಟ ಮಾಡಿದರು. ಇಂಗ್ಲೆಂಡ್, ಈಜಿಪ್ಟ್ ಮುಂತಾದ ಹೊರರಾಷ್ಟ್ರಗಳಲ್ಲಿ ನಡೆದ ಚಿತ್ರೋತ್ಸವಗಳಲ್ಲಿ ಪಾಲ್ಗೊಂಡರು. ದಕ್ಷಿಣ ಭಾರತ ಹಾಗೂ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಗಳ ಅಧ್ಯಕ್ಷರಾಗಿ, ರಾಜ್ಯ ಹಾಗೂ ಕೇಂದ್ರ ಸರ್ಕಾರದ ಚಲನಚಿತ್ರ ಪ್ರಶಸ್ತಿ ಸಲಹಾ ಸಮಿತಿ, ಪನೋರಮಾ ಆಯ್ಕೆ ಸಮಿತಿಗಳಲ್ಲಿ ಕೆಲಸ ಮಾಡಿದ್ದಾರೆ. ಗುಣಮಟ್ಟ ಆಧಾರದ ಮೇಲೆ ರಾಜ್ಯ ಸರ್ಕಾರ ನೀಡುವ ಸಹಾಯಧನ ಸಲಹಾ ಸಮಿತಿಯಲ್ಲೂ ಸದಸ್ಯರು. ಕನ್ನಡ ಚಿತ್ರರಂಗದ ಹಿತ ಸಾಧನೆ ಕಾರ್ಯದಲ್ಲಿ ಇವರು ಮೊದಲಿಗರಾಗಿದ್ದಾರೆ. ೧೯೯೭ರಲ್ಲಿ ಇವರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ರಾಜ್ಯ ಸರ್ಕಾರ ೧೯೯೫-೯೬ರರ ಸಾಲಿನಲ್ಲಿ ಡಾಕ್ಟರ್ ರಾಜಕುಮಾರ್ ಪ್ರಶಸ್ತಿ ನೀಡಿ ಗೌರವಿಸಿದೆ.

### ಲಕ್ಷ್ಮಣ್.ಪಿ.ಜಿ

ಹಿರಿಯ ಧ್ವನಿಗ್ರಾಹಕ. ೧೯೫೧ರಲ್ಲಿ ಮದರಾಸಿನ ನ್ಯೂಟೋನ್ ಸ್ಟುಡಿಯೋದಲ್ಲಿ ಧ್ವನಿಗ್ರಹಣದಲ್ಲಿ ಪ್ರಸಿದ್ಧ ಧ್ವನಿಗ್ರಾಹಕ ಶ್ರೀ ಲೋಗನಾಥನ್ ಅವರಿಂದ ತರಬೇತಿ. ನಂತರ ೧೯೫೮ರಲ್ಲಿ ದಕ್ಷಿಣ ಭಾರತದ ಖ್ಯಾತ ಶಬ್ದಗ್ರಾಹಕರಾದ ಟಿ.ಎಸ್.ರಂಗಸ್ವಾಮಿ



ಅವರ ಸಹಾಯಕರಾಗಿ ಗೋಲ್ಡನ್ ಸ್ಟುಡಿಯೋಕ್ಕೆ ಪ್ರವೇಶ. ೧೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಧ್ವನಿಗ್ರಹಣದ ಕಾರ್ಯ ನಿರ್ವಹಣೆ. ೧೯೭೮-೭೯ರಲ್ಲಿ 'ಮಾರ್ಗದರ್ಶಿ' ಹಾಗೂ ೧೯೭೯-೮೦ರಲ್ಲಿ 'ಕರುಳಿನ ಕರೆ' ಚಿತ್ರಗಳಲ್ಲಿನ ಶಬ್ದಗ್ರಹಣಕ್ಕಾಗಿ 'ಅತ್ಯುತ್ತಮ ಧ್ವನಿಗ್ರಾಹಕ' ಪ್ರಶಸ್ತಿಯನ್ನು ಪಡೆದಿದ್ದಾರೆ. ಸುಜಾತ ಹೊರಾಂಗಣ ಚಿತ್ರೀಕರಣ ತಂಡದಲ್ಲಿಯೂ ದುಡಿದವರು.

### ಲಕ್ಷ್ಮಣ್ ರಾವ್ ಎಸ್. ಎಂ.

ಬೆಂಗಳೂರಿನ ಪ್ರಮುಖ ವರ್ತಕರು. ಕೊಡುಗೈ ದಾನಿಗಳಾದ ಸಜ್ಜನ್ ರಾವ್ ಅವರ ಮೊಮ್ಮಕ್ಕಳಲ್ಲಿ ಒಬ್ಬರಾದ ಲಕ್ಷ್ಮಣ್



ರಾವ್ ಎಸ್.ಎಂ., ಕನ್ನಡ ಚಿತ್ರರಂಗದಲ್ಲಿ ಅತ್ಯಂತ ಹೆಸರು ಗಳಿಸಿರುವ ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್‌ನ ಸಹಭಾಗಿಗಳಲ್ಲಿ ಒಬ್ಬರು. ಈ ಸಂಸ್ಥೆ ಅತ್ಯಂತ ಪ್ರಭಾವಿ ವಿತರಣಾ ಸಂಸ್ಥೆಯಾಗಿತ್ತು. ಎಲ್ಲಕ್ಕೂ ಮಿಗಿಲಾಗಿ ಸಂಚಾರಿ ಚಿತ್ರಮಂದಿರಗಳಿಗೆ ಈ ವಿತರಣಾ ಸಂಸ್ಥೆ ಬಹಳ ಸಹಕಾರಿಯಾಗಿತ್ತು.

### ಲಕ್ಷ್ಮಿ

ದಕ್ಷಿಣ ಭಾರತದ ಖ್ಯಾತ ನಟಿ. ಕನ್ನಡದ ಮೊದಲ ಚಿತ್ರದ ನಿರ್ದೇಶಕ ವೈ.ವಿ.ರಾವ್ ಅವರ ಪುತ್ರಿ. ಮನೆ ಭಾಷೆ ತೆಲುಗು. ತಮಿಳು ಚಿತ್ರದ ಮೂಲಕ ಚಿತ್ರರಂಗ ಪ್ರವೇಶ.



ಮಲೆಯಾಳಂನ 'ಚಟ್ಟಕ್ಕಾರಿ' ಹಾಗೂ ಹಿಂದಿಯ 'ಜೂಲಿ' ಚಿತ್ರದ ಮೂಲಕ ಹೆಸರುವಾಸಿಯಾದರು. 'ಗೋವಾದಲ್ಲಿ ಸಿ.ಐ.ಡಿ. ೯೯೯' (೧೯೬೮) ಮೂಲಕ ಕನ್ನಡ ಚಿತ್ರರಂಗ ಪ್ರವೇಶ. 'ನಾ ನಿನ್ನ ಮರೆಯಲಾರೆ' ಚಿತ್ರದಲ್ಲಿ ರಾಜಕುಮಾರ್ ಅವರೊಂದಿಗೆ ಅಭಿನಯಿಸಿ ಕನ್ನಡದ ಜನಪ್ರಿಯ ನಟಿಯಾದರು. ಅನಂತ್‌ನಾಗ್ ಅವರೊಂದಿಗೆ ಹಲವಾರು ಚಿತ್ರಗಳಲ್ಲಿ ಅಭಿನಯಿಸಿ ಪ್ರೇಕ್ಷಕರ ಮನಸೆಳೆದರು. 'ಮಕ್ಕಳ ಸೈನ್ಯ' (೧೯೮೦) ನಿರ್ದೇಶಿಸಿದರು. 'ಹೊಸ ಕಾವ್ಯ' (೧೯೮೯) ನಿರ್ಮಿಸಿದರು. ಈ ಚಿತ್ರದಲ್ಲಿ ಇವರ ಪುತ್ರಿ ಐಶ್ವರ್ಯ ನಾಯಕಿ. ಭಾರತದ ವಿವಿಧ ಭಾಷೆಗಳ ಸುಮಾರು ೪೦೦ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಸಿಲನೇರಂಗಳಿಲ್ ಸಿಲಮನಿದರ್' ತಮಿಳು ಚಿತ್ರದಲ್ಲಿ ಅಭಿನಯಿಸಿ ರಾಷ್ಟ್ರಪ್ರಶಸ್ತಿ ಪಡೆದುಕೊಂಡರು. ವಸ್ತ್ರವಿನ್ಯಾಸ, ಪ್ರಸಾಧನ ಕಲೆಗಳಲ್ಲಿ ಪರಿಣತರು. 'ಹೂವು ಹಣ್ಣು' ಚಿತ್ರದ ಅಭಿನಯಕ್ಕಾಗಿ ರಾಜ್ಯ ಸರ್ಕಾರ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ನೀಡಿ ಗೌರವಿಸಿದೆ. ಹಲವಾರು ಪ್ರಶಸ್ತಿ,

ಬಿರುದುಗಳನ್ನು ಪಡೆದಿದ್ದಾರೆ. ಭಾರತೀಯ ಜನತಾ ಪಕ್ಷಕ್ಕೆ ಸೇರಿದ್ದೂ ಉಂಟು.

### ಲಕ್ಷ್ಮೀದೇವಿ ಆದವಾನಿ

ಅರುವತ್ತು-ಎಪ್ಪತ್ತರ ದಶಕಗಳ ಖ್ಯಾತ ಪೋಷಕ ನಟಿ. ತವರೂರು ಆಲೂರು. ಬೆಳೆದದ್ದು ಆದವಾನಿ. ಆದರಿಂದಾಗಿ ಆದವಾನಿ ಹೆಸರಿನ ಜೊತೆಗೇ ಅಂಟಿಕೊಂಡು ಬಂತು. ಎಳೆಯ ವಯಸ್ಸಿಗೇ ನಾಟಕರಂಗಕ್ಕೆ ಪ್ರವೇಶ ಮಾಡಿದ ಈಕೆ ನಂತರ ಚಿತ್ರರಂಗಕ್ಕೂ ಪ್ರವೇಶ ಪಡೆದರು. ಶಾಸ್ತ್ರೀಯ ಸಂಗೀತ ಹಾಗೂ ನೃತ್ಯಗಳೆರಡರಲ್ಲೂ ಅನುಭವವಿದ್ದ ಲಕ್ಷ್ಮೀದೇವಿ ಕಟೀಲು ಕಂಪೆನಿ, ಗುಬ್ಬಿ ಕಂಪೆನಿಯಲ್ಲಿ ಅಭಿನಯಿಸಿ ಅನುಭವ ಗಳಿಸಿದರು. 'ಹರಿಶ್ಚಂದ್ರ' ನಾಟಕದಲ್ಲಿ 'ಚಂದ್ರಮತಿ' ಪಾತ್ರದಲ್ಲಿ ಈಕೆಯ ಅಭಿನಯ ನೋಡಿದ ಅಯ್ಯರ್ ಈಕೆ ಚಿತ್ರರಂಗದಲ್ಲಿ



ಬೆಳಗಬಲ್ಲ ನಟಿಯಾಗುತ್ತಾಳೆಂದು ಭವಿಷ್ಯ ನುಡಿದಿದ್ದರು. ೧೯೫೭ ರಲ್ಲಿ ಬಿಡುಗಡೆಯಾದ 'ಭಕ್ತ ವಿಜಯ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶ ಮಾಡಿದರು. ನಂತರ 'ಶುಕ್ರ ದೆಸೆ' ಚಿತ್ರದ ನಾಯಕಿಯಾಗಿ ಅವಕಾಶ ಪಡೆದರು. ನಂತರ 'ಮನೆ ತುಂಬಿದ ಹೆಣ್ಣು', 'ಮಂಗಳ ಸೂತ್ರ', 'ದಶಾವತಾರ', 'ಕಲಿತರೂ ಹೆಣ್ಣೇ', 'ಶ್ರೀ ರಾಮಾಂಜನೇಯ ಯುದ್ಧ', 'ವೀರ ಸಂಕಲ್ಪ' ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯಿಸಿದರು. 'ತೇಜಸ್ವಿನಿ', 'ಚಂದವಳ್ಳಿಯ ತೋಟ', 'ಕರುಣೆಯೇ ಕುಟುಂಬದ ಕಣ್ಣು' ಚಿತ್ರಗಳಲ್ಲಿ ಉಪನಾಯಕಿಯಾಗಿ ಅಭಿನಯಿಸಿದರು. ನಂತರ ತಾಯಿ-ಅತ್ತೆ-ಅತ್ತಿಗೆ ಮೊದಲಾದ ವೈವಿಧ್ಯಮಯ ಪೋಷಕ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. 'ಗಂಧದ ಗುಡಿ' ಚಿತ್ರದಲ್ಲಿನ ಮಮತಾಮಯಿ ತಾಯಿಯ ಪಾತ್ರಾಭಿನಯಕ್ಕಾಗಿ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿಯನ್ನು ಪಡೆದಿದ್ದಾರೆ. (೧೯೭೩-೭೪). ಇವರ ಮಗಳಾದ ರೂಪಾದೇವಿ ಕನ್ನಡ ಚಿತ್ರರಂಗದ ನಾಯಕಿಯಾಗಿ ಹಲವು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

### ಲಕ್ಷ್ಮೀದೇವಿ.ಎಂ.ಎನ್ (೧೯೩೮)

ರಂಗಭೂಮಿ ಹಾಗೂ ಚಲನಚಿತ್ರ ನಟಿ. ಕೋಲಾರ ಜಿಲ್ಲೆಯ ಚಿಂತಾಮಣಿಯಲ್ಲಿ ಜನಿಸಿದರು. ಮದನಪಲ್ಲಿಯಲ್ಲಿ ಬಾಲ್ಯ ಕಳೆದು ಬೆಂಗಳೂರಿನಲ್ಲಿ ನೃತ್ಯಾಭ್ಯಾಸ ಮಾಡಿದರು. 'ಜಿಂದು ಬಿ.ಎ.' ಚಿತ್ರದ ಮೂಲಕ ಹಿನ್ನೆಲೆ ಗಾಯಕಿಯಾಗಿ ಚಿತ್ರರಂಗ ಪ್ರವೇಶಿಸಿದರು. ಈ ಚಿತ್ರ ಬಿಡುಗಡೆಯಾಗಲಿಲ್ಲವಾದರೂ ಹಾಡುಗಳ ಧ್ವನಿಮುದ್ರಿಕೆ ಮಾರುಕಟ್ಟೆಗೆ ಬಂದು



ಜನಪ್ರಿಯಗೊಂಡಿತು. ಮೈಸೂರಿನಲ್ಲಿ ಹಲವಾರು ನೃತ್ಯ ಪ್ರದರ್ಶನಗಳನ್ನು ನೀಡಿದರು. 'ಶ್ರೀನಿವಾಸ ಕಲ್ಯಾಣ' (೧೯೫೨)ದಲ್ಲಿ ಚಿಕ್ಕ ಪಾತ್ರ ನಿರ್ವಹಿಸಿದರು. ಈ ಮುನ್ನ ಗುಬ್ಬಿ ಕಂಪೆನಿಯಲ್ಲಿ ಕೆಲಸ ಮಾಡಿದರು. 'ದಲ್ಲಾಳಿ', 'ಮಂಗಳಗೌರಿ', 'ಸೌಭಾಗ್ಯ ಲಕ್ಷ್ಮಿ' ಮುಂತಾದ ಚಿತ್ರಗಳು ಇವರ ಅಭಿನಯಕ್ಕೆ ಹೊಸ ಆಯಾಮಗಳನ್ನು ತಂದುಕೊಟ್ಟವು. ನರಸಿಂಹರಾಜು, ಬಾಲಕೃಷ್ಣ ಇವರ ಜೋಡಿಯಾಗಿ ಹಲವಾರು ಚಿತ್ರಗಳಲ್ಲಿ ಹಾಸ್ಯ ಪಾತ್ರಗಳನ್ನು ನಿರ್ವಹಿಸಿದರು. ಗಯ್ಯಾಳಿ ಅತ್ತೆಯಾಗಿಯೂ ಇವರು ಪ್ರಖ್ಯಾತರು. ಕಿರುತೆರೆಯೊಂದಿಗೂ ಇವರ ನಂಟಿದೆ.

### ಲಕ್ಷ್ಮೀನಾರಾಯಣ್.ಎನ್

ಕನ್ನಡ ಚಿತ್ರ ನಿರ್ದೇಶನದಲ್ಲಿ ಹೊಸತನವನ್ನು ತಂದು, ಅಂತಾರಾಷ್ಟ್ರೀಯ ಮಟ್ಟಕ್ಕೆ ಕನ್ನಡ ಚಿತ್ರಗಳನ್ನ ಕೊಂಡೊಯ್ದ ನಿರ್ದೇಶಕ.



ಹುಟ್ಟೂರು ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ. ಬಾಲ್ಯದಲ್ಲಿಯೇ ಕಲೆಯ ಬಗ್ಗೆ ಆಸಕ್ತಿ. ಛಾಯಾಗ್ರಹಣ ಅಭ್ಯಾಸ. ಚಲನಚಿತ್ರಗಳ ಅಧ್ಯಯನ. ಸೋದರಮಾವ ಬಿ.ಆರ್.ಕೃಷ್ಣಮೂರ್ತಿಗಳು ನಿರ್ದೇಶಿಸಿದ 'ಶ್ರೀ ರಾಮ ಪೂಜಾ' ಚಿತ್ರಕ್ಕೆ ಸಹಾಯಕ ನಿರ್ದೇಶಕರಾಗುವ ಮೂಲಕ ಕನ್ನಡ ಚಿತ್ರರಂಗ ಪ್ರವೇಶ. ನಂತರ ಆರ್.ನಾಗೇಂದ್ರರಾಯರ ಬಳಿ ಸಹಾಯಕರಾಗಿ ಸೇರಿಕೊಂಡು ಚಿತ್ರ ನಿರ್ದೇಶನದಲ್ಲಿ ಅನುಭವ ಪಡೆದುಕೊಂಡರು. ಬ್ರಿಟಿಷ್ ಫಿಲಂ ಇನ್‌ಸ್ಟಿಟ್ಯೂಟ್ ನೆರವಿನಿಂದ ತಯಾರಿಸಲಾದ ಮೊದಲ ಚಿತ್ರವೆಂಬ ಹೆಗ್ಗಳಿಕೆ ಪಾತ್ರವಾದ 'ಪ್ಲೆಸ್' ಎಂಬ ಮಾತಿಲ್ಲದ ಕಿರುಚಿತ್ರವನ್ನು ನಿರ್ದೇಶಿಸಿದರು. ಈ ಚಿತ್ರ ೧೯೬೨ರಲ್ಲಿ ಸ್ಯಾನ್‌ಫ್ರಾನಿಸ್ಕೊದಲ್ಲಿ ಪ್ರದರ್ಶನ ಕಂಡಿತು. 'ನಾಂದಿ' ಎನ್.ಲಕ್ಷ್ಮೀನಾರಾಯಣ್ ನಿರ್ದೇಶನದ ಮೊದಲ ಚಿತ್ರ. ಕಿವುಡ-ಮೂಗರ ಸಮಸ್ಯೆ ಆಧರಿಸಿ ನಿರ್ಮಾಣಗೊಂಡ ಈ ಚಿತ್ರ ಲಂಡನ್‌ನಲ್ಲಿ ನಡೆದ ಕಾಮನ್‌ವೆಲ್ತ್ ಚಲನಚಿತ್ರೋತ್ಸವದಲ್ಲಿ ಪ್ರದರ್ಶನಗೊಂಡಿತು. ಇವರ ಎರಡನೆಯ ಚಿತ್ರ 'ಉಯ್ಯಾಲೆ' ಫ್ರಾಂಕ್‌ಫರ್ಟ್‌ನಲ್ಲಿನ ಏಷ್ಯನ್ ಚಿತ್ರೋತ್ಸವ ಹಾಗೂ ರಷ್ಯಾದಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಪ್ರದರ್ಶನಗೊಂಡಿತು. ನಂತರದ 'ಮುಕ್ತಿ' ವೆನಿಸ್ ಚಿತ್ರೋತ್ಸವದಲ್ಲಿ ಪ್ರದರ್ಶನಗೊಂಡಿತು. 'ಅಬಚೂರಿನ ಪೋಸ್ಟಾಫೀಸು' ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಪ್ರಶಸ್ತಿಗಳನ್ನು ಪಡೆದುಕೊಂಡಿತು. 'ಬೆಟ್ಟದ ಹೂವು' ರಾಷ್ಟ್ರಪತಿಯವರಿಂದ ರಜತ ಪದಕ ಪಡೆದುಕೊಂಡಿತಲ್ಲದೆ ಮಾಸ್ಕೋ, ಬಲ್ಗೇರಿಯಾ, ಮಾರಿಷಸ್ ಹಾಗೂ ಫ್ರಾನ್ಸ್ ದೇಶಗಳಲ್ಲಿ ಪ್ರದರ್ಶನಗೊಂಡವು. ವಿಶ್ವದ ಹಲವಾರು ರಾಷ್ಟ್ರಗಳನ್ನು ಸುತ್ತಿ ಬಂದು 'ನಿರ್ದೇಶಕನ ವಿದೇಶ ಯಾತ್ರೆ' ಎಂಬ ಪುಸ್ತಕ ಬರೆದರು. ಲಕ್ಷ್ಮೀ ನಾರಾಯಣ್‌ರವರು ಚಿತ್ರ ಚರಿತ್ರೆಯನ್ನು ಬಹಳ ಆಳವಾಗಿ ಅಭ್ಯಾಸ ಮಾಡಿದ್ದರು. 'ಸಿನಿಮಾ' ಬಗ್ಗೆ ತಾಂತ್ರಿಕವಾಗಿ ಕರ್ನಾಟಕದಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಉಪನ್ಯಾಸ ಮಾಡಿದ ನಿರ್ದೇಶಕರಲ್ಲಿ ಅವರು ಪ್ರಥಮರು. ಕರ್ನಾಟಕದಲ್ಲಿ ಫಿಲಂ ಸೊಸೈಟಿ ಆಂದೋಲನಕ್ಕೆ ತಮ್ಮ ಪ್ರಭಾವವನ್ನು ಬೀರಿದ ಲಕ್ಷ್ಮೀನಾರಾಯಣ್ ಕನ್ನಡ ಚಿತ್ರೋದ್ಯಮದ ಬೆಳವಣಿಗೆಯಲ್ಲಿಯೂ ಅತೀವ ಆಸಕ್ತಿಯನ್ನು ಹೊಂದಿದ್ದರು. ೧೯೯೧ರ ಫೆಬ್ರವರಿ ೧೭ರಂದು ಲಕ್ಷ್ಮೀನಾರಾಯಣ್ ವಿಧಿವಶರಾದರು.

### ಲಕ್ಷ್ಮೀನಾರಾಯಣ ಗೋಡೆ

ಹವ್ಯಾಸಿ ರಂಗಭೂಮಿಯಿಂದ ಚಿತ್ರರಂಗ ಪ್ರವೇಶಿಸಿದ ಲಕ್ಷ್ಮೀನಾರಾಯಣ್ ಷೇಕ್ಸ್‌ಪಿಯರ್‌ನ 'ಮಿಡ್ ಸಮ್ಮರ್ ನೈಟ್ ಡ್ರೀಮ್ಸ್' ನಾಟಕದ ಕನ್ನಡ ಅವತರಣಿಕೆಯ ನಾಟಕದಲ್ಲಿ 'ಗೋಡೆ'ಯ ಪಾತ್ರ ವಹಿಸಿದ್ದರು. ಆ ಪಾತ್ರದ ಜನಪ್ರಿಯತೆ ಅವರ ಹೆಸರಿನ ಮುಂದೆ ಸೇರಿಕೊಂಡು 'ಗೋಡೆ ಲಕ್ಷ್ಮೀನಾರಾಯಣ' ಎಂದೇ ಪರಿಚಿತರಾದರು. ಹಾಸ್ಯನಟರಾಗಿ ಕೆಲವು ಉತ್ತಮ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.



'ಗುರು ಶಿಷ್ಯರು', 'ಮಲಯ ಮಾರುತ', 'ದಂಗೆಯೆದ್ದ ಮಕ್ಕಳು' ಮುಂತಾದವು ಅವರ ಅಭಿನಯದ ಕೆಲವು ಚಿತ್ರಗಳು. ಪುಟ್ಟಣ್ಣ ರವರ ಕಾಲೇಜು ರಂಗ ಚಿತ್ರದಿಂದ ಪ್ರವೇಶ ಪಡೆದರು. ಹೋಟೇಲ್ ಉದ್ಯಮಿಯಾದ್ದರಿಂದ ಚಿತ್ರಾಭಿನಯವನ್ನೇ ವೃತ್ತಿ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ.

### ಲಕ್ಷ್ಮೀಪತಿ.ಜಿ.ಎನ್ - ನಾರಾಯಣ್.ಕೆ.ಎನ್

ಇವರಿಬ್ಬರೂ ಪ್ರಸಿದ್ಧ ವಾಣಿಜ್ಯೋದ್ಯಮಿಗಳು.



ಇಬ್ಬರದೂ ಸದಭಿರುಚಿ. ಎಲ್.ಎನ್.ಕಂಬೈನ್ಸ್ ಲಾಂಛನದಲ್ಲಿ ಇವರು ನಿರ್ಮಿಸಿದ ಚಿತ್ರಗಳೂ ಸದಭಿರುಚಿಯವು. ೧೯೭೩ರಲ್ಲಿ 'ಕಾಡು', ೧೯೭೮ರಲ್ಲಿ 'ಚಿತೆಗೂ ಚಿಂತೆ', ೧೯೭೮ರಲ್ಲಿಯೇ 'ಒಂದಾನೊಂದು ಕಾಲದಲ್ಲಿ' ಚಿತ್ರಗಳನ್ನು ಎಲ್.ಎನ್.ಕಂಬೈನ್ಸ್ ಮೂಲಕ ನಿರ್ಮಿಸಿ ತೆರೆಗಿತ್ತರು. 'ಒಂದಾನೊಂದು ಕಾಲದಲ್ಲಿ' ಚಿತ್ರದ ಮೂಲಕ ಶಂಕರ್‌ನಾಗ್‌ರನ್ನು ಬೆಳ್ಳಿತೆರೆಗೆ ತಂದರಲ್ಲದೆ, ಕಂಚಿನ ಕಂಠದ ಸುಂದರಕೃಷ್ಣ ಅರಸ್ ಅವರ ಪ್ರತಿಭೆಯ ದರ್ಶನ ಮಾಡಿಸಿದರು. 'ಕಾಡು' ಚಿತ್ರ ರಾಷ್ಟ್ರೀಯ ಪ್ರಶಸ್ತಿಗಳಲ್ಲಿ ಎರಡನೇ ಉತ್ತಮ ಕಥಾಚಿತ್ರ, ಶ್ರೇಷ್ಠ ನಟಿ (ನಂದಿನಿ) ಹಾಗೂ ಉತ್ತಮ ಬಾಲನಟ (ಮಾ|ಜಿ.ಎಸ್.ನಟರಾಜ್) - ಮೂರು ಪ್ರಶಸ್ತಿಗಳನ್ನು ೧೯೭೪ರ ಸಾಲಿಗೆ ಪಡೆಯಿತು. 'ಒಂದಾನೊಂದು ಕಾಲದಲ್ಲಿ' - ೧೯೭೯ರಲ್ಲಿ ರಜತಕಮಲ, ನಗದು ಬಹುಮಾನವನ್ನು ರಾಷ್ಟ್ರೀಯ ಪ್ರಶಸ್ತಿ ಮಾಲಿಕೆಯಲ್ಲಿ ಪಡೆಯಿತು. 'ಕಾಡು' ಚಿತ್ರವು ರಾಜ್ಯ ಸರ್ಕಾರದಿಂದ ೧೯೭೩-೭೪ರ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರ, ಅತ್ಯುತ್ತಮ ನಟಿ (ನಂದಿನಿ), ಅತ್ಯುತ್ತಮ ಕಥಾಲೇಖಕ (ಶ್ರೀಕೃಷ್ಣ ಆಲನಹಳ್ಳಿ), ಅತ್ಯುತ್ತಮ ಧ್ವನಿಗ್ರಹಣ (ಎಂ.ಗೋವಿಂದಸ್ವಾಮಿ) ಹಾಗೂ ಅತ್ಯುತ್ತಮ ಬಾಲನಟ (ಮಾ|ಜಿ.ಎಸ್.ನಟರಾಜ್) - ಐದು ಪ್ರಶಸ್ತಿಗಳಿಗೆ ಪಾತ್ರವಾಯಿತು. ೧೯೭೮-೭೯ರ ಸಾಲಿನ ರಾಜ್ಯ ಸರ್ಕಾರದ ಚಲನಚಿತ್ರ ಪ್ರಶಸ್ತಿಗಳಲ್ಲಿ 'ಒಂದಾನೊಂದು ಕಾಲದಲ್ಲಿ' ಅತ್ಯುತ್ತಮ ಪೋಷಕನಟ (ಸುಂದರಕೃಷ್ಣ ಅರಸ್), ಅತ್ಯುತ್ತಮ ಧ್ವನಿಗ್ರಹಣ (ಎಸ್.ಪಿ.ರಾಮನಾಥನ್) ಹಾಗೂ ಅತ್ಯುತ್ತಮ ಸಂಕಲನ (ಪಿ.ಭಕ್ತವತ್ಸಲಂ) - ಮೂರು ಪ್ರಶಸ್ತಿಯನ್ನು ತನ್ನದಾಗಿಸಿಕೊಂಡಿತು. 'ಚಿತೆಗೂ ಚಿಂತೆ' ಚಿತ್ರಕ್ಕೆ ೧೯೭೮-೭೯ರ ಸಾಲಿನ ರಾಜ್ಯ ಸರ್ಕಾರದ, ತೀರ್ಪುಗಾರರ ವಿಶೇಷ ಪ್ರಶಸ್ತಿ ದೊರೆತಿದೆ. ಇದಲ್ಲದೆ ಈ ಜೋಡಿ ಭಾರತ್ ಎಂಟರ್‌ಪ್ರೈಸಸ್ ಅವರ 'ಉಯ್ಯಾಲೆ' ಹಾಗೂ 'ದೇವರ ಮಕ್ಕಳು' ಚಿತ್ರಗಳ

ನಿರ್ಮಾಣದಲ್ಲಿಯೂ ಪಾಲು ಹೊಂದಿತ್ತು. ಈ ಜೋಡಿ ಚಿತ್ರೋದ್ಯಮದಲ್ಲಿ ಎಷ್ಟು ಕ್ರಿಯಾಶೀಲವಾಗಿತ್ತೋ ಅಷ್ಟೇ ಬೇಗ ತಟಸ್ಥವಾಯಿತು. ಲಕ್ಷ್ಮೀಪತಿಯವರು ಬೇರೆ ವ್ಯವಹಾರದತ್ತ ಗಮನ ಹರಿಸಿದರು. ನಾರಾಯಣ್ ಅವರು ೨೦೦೦ನೇ ಇಸವಿಯಲ್ಲಿ ನಿಧನರಾದರು.

## ಲಕ್ಷ್ಮೀಬಾಯಿ (೧೯೧೮-೭೫)

ಚಲನಚಿತ್ರಗಳಲ್ಲಿ ಪಾತ್ರವಹಿಸಿರುವ ಹಿಂದಿನ



ಬಹಳಷ್ಟು ಕಲಾವಿದರು ರಂಗಭೂಮಿಯಿಂದ ಚಿತ್ರರಂಗಕ್ಕೆ ಬಂದವರು. ಆದರೆ ಲಕ್ಷ್ಮೀಬಾಯಿ ಅವರು ಚಿತ್ರರಂಗದಿಂದ ರಂಗಭೂಮಿಯತ್ತ ಹೋದವರು. ಹರಿಭಾಯಿ ಆರ್.ದೇಸಾಯಿ ಅವರ ಸೂರ್ಯ ಫಿಲಂ ಕಂಪೆನಿಯು ೧೯೩೯ರಲ್ಲಿ ತಯಾರಿಸಿದ 'ರಾಜ ಹೃದಯ' ಮೂಲಕ ಚಿತ್ರರಂಗ ಪ್ರವೇಶ. 'ಸೂರ್ಯ ಸ್ಟಾರ್' ಆಗಿ, ಸೂರ್ಯ ಫಿಲಂ ಕಂಪೆನಿಯ ೧೫ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕನ್ನಡದ ಮೊದಲ ವಾಕ್ಚಿತ್ರ 'ಸತಿ ಸುಲೋಚನಾ'ದಲ್ಲಿ ಮಂಡೋದರಿಯಾಗಿ ಅಭಿನಯಿಸಿದ ಹೆಗ್ಗಳಿಕೆ. ಸುಬ್ಬಯ್ಯನಾಯ್ಡು ಅವರ ತಾರಾಪತ್ನಿ. ಅವರು ನಿರ್ಮಿಸಿದ ಎಲ್ಲ ಚಿತ್ರಗಳಲ್ಲೂ ಅಭಿನಯಿಸಿದ್ದಾರೆ. 'ವಸಂತಸೇನಾ', 'ಹರಿಶ್ಚಂದ್ರ' ಮತ್ತು 'ಮಹಾತ್ಮ ಕಬೀರ್' ಈಕೆ ಅಭಿನಯಿಸಿದ ಮುಖ್ಯ ಚಿತ್ರಗಳು. ಸುಬ್ಬಯ್ಯನಾಯ್ಡು ಅವರ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿಯ ಎಲ್ಲ ನಾಟಕಗಳಲ್ಲೂ ಇವರು ನಾಯಕಿಯ ಪಾತ್ರ ನಿರ್ವಹಿಸಿದರು. ಇವರ ಸೋದರಿ ಕಮಲಾಬಾಯಿ ಕೂಡ ರಂಗ ಭೂಮಿ ಹಾಗೂ ಚಲನಚಿತ್ರ ಕಲಾವಿದೆ.

## ಲಿಂಗಪ್ಪ.ಟಿ.ಜಿ

ಹೆಸರಾಂತ ಸಂಗೀತ ನಿರ್ದೇಶಕ. ೧೯೫೫ರಲ್ಲಿ ಪದ್ಮಿನಿ ಪಿಕ್ಚರ್ಸ್‌ರವರ 'ಮೊದಲ ತೇದಿ' ಚಿತ್ರದಿಂದ ಸಂಗೀತ ನಿರ್ದೇಶಕರಾಗಿ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಬಹುತೇಕ ಬಿ.ಆರ್.ಪಂತಲು ಅವರ ಚಿತ್ರಗಳಿಗೆ ಸಂಗೀತ ನಿರ್ದೇಶಕರಾಗಿ ಕೆಲಸ ಮಾಡಿದ್ದಾರೆ. ಇವರು



ಸಂಗೀತ ಒದಗಿಸಿದ 'ರತ್ನಗಿರಿ ರಹಸ್ಯ' ಚಿತ್ರದ 'ಅನುರಾಗದಾ ಅಮರಾವತೀ...', 'ಅಮರ ಮಧುರ ಪ್ರೇಮ...', 'ಸ್ಕೂಲ್ ಮಾಸ್ಟರ್' ಚಿತ್ರದ 'ಭಾಮೆಯ ನೋಡಲು ತಾ ಬಂದ...' ಸ್ವತಃ ಅವರೇ ಹಾಡಿದ 'ಸ್ವಾಮಿ ದೇವನೆ ಲೋಕ ಪಾಲನ...', 'ಸತಿಶಕ್ತಿ' ಚಿತ್ರದ 'ಪವಡಿಸು ಫಾಲಾಕ್ಷ...', 'ಕೃಷ್ಣದೇವರಾಯ' ಚಿತ್ರದ 'ಬಹುಜನ್ಮದಾ ಪೂಜಾಫಲ...' ಮೊದಲಾದ ಅನೇಕ ಹಾಡುಗಳು ಇಂದಿಗೂ ಜನ ನೆನಪಿನಲ್ಲಿ ಇದ್ದಾರೆ. ಹಾಡುತ್ತಾರೆ. ಹಸಿರಾಗಿದೆ. ಶಾಸ್ತ್ರೀಯ ಸಂಗೀತ ಆಧಾರಿತ ರಾಗ ಸಂಯೋಜನೆಯಲ್ಲಿ ಸಿದಹಸ್ತರು ಲಿಂಗಪ್ಪನವರು 'ಬಬ್ರುವಾಹನ' ಚಿತ್ರದ ಅರ್ಜುನ ಬಬ್ರುವಾಹನ ಸಂಭಾಷಣಾ ಶೈಲಿಯ 'ಯಾರು ತಿಳಿಯರು ನಿನ್ನ ಭುಜ ಬಲದ ಪರಾಕ್ರಮ...' ಎಂಬ ಹಾಡು ಸುಪ್ರಸಿದ್ಧವಾಗಿದೆ. 'ಶ್ರೀ ಕೃಷ್ಣದೇವರಾಯ', 'ಚಕ್ರತೀರ್ಥ', 'ಬೆಟ್ಟದ ಹುಲಿ'. 'ಬಬ್ರುವಾಹನ', 'ಸತಿಶಕ್ತಿ', 'ಭಕ್ತ ಪ್ರಹ್ಲಾದ' ಮೊದಲಾದ ಚಿತ್ರಗಳಿಗೆ ಸಂಗೀತ ನೀಡಿದರು. ೧೯೬೯-೭೦ರಲ್ಲಿ 'ಶ್ರೀ ಕೃಷ್ಣದೇವರಾಯ' ಚಿತ್ರದ ಸಂಗೀತ ನಿರ್ದೇಶನಕ್ಕೆ ಪ್ರಶಸ್ತಿ ದೊರಯಿತು. ಸಂಗೀತ ಪ್ರಧಾನ ಚಿತ್ರ 'ಹಂಸಗೀತೆ'ಗೂ ಲಿಂಗಪ್ಪನವರಿಗೇ ಅಧಿಕ ಅವಕಾಶವಿತ್ತು. ಯಾವುದೋ ಕಾರಣದಿಂದ ಆ ಹೆಗ್ಗಳಿಕೆ ಅವರ ಕೈ ಜಾರಿತು.

## ಲಿಂಗರಾಜ್.ಎಂ.ಜಿ



ಚಲನಚಿತ್ರ ಪತ್ರಿಕಾ ಪ್ರಚಾರಕರ್ತರು. ಬಿಸ್ನವಳ್ಳಿಯಲ್ಲಿ ೧೯೫೯ರಲ್ಲಿ ಜನಿಸಿದರು. ಪಿ.ಯು.ಸಿ ವರೆಗೆ ಶಿಕ್ಷಣ. ಆದರ್ಶ ಫಿಲಂ ಇನ್ಸಿಟ್ಯೂಟ್‌ನ 'ಹೊಸ ದಿಗಂತ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ಚಿತ್ರ ತೆರೆ ಕಾಣಲಿಲ್ಲ. ಮೊದಲು ತೆರೆಕಂಡ ಚಿತ್ರ 'ಸಾಂಗ್ಲಿಯಾನ'. ಚಲನಚಿತ್ರ, ದೂರದರ್ಶನ ಮುಂತಾಗಿ ಎರಡು ಮಾಧ್ಯಮಗಳಲ್ಲಿ ಸಕ್ರಿಯವಾಗಿ ಕಾರ್ಯ ನಿರ್ವಹಿಸಿದ್ದಾರೆ. ಕನ್ನಡ, ತುಳು, ಕೊಂಕಣಿ ಚಿತ್ರಗಳ ಪ್ರಚಾರಕರ್ತರಾಗಿ ಸೇವೆ ಸಲ್ಲಿಸಿದ್ದಾರೆ.

## ಲೀಲಾ ಚಿಂದೋಡಿ

ರಂಗಭೂಮಿ ಹಾಗೂ ಚಲನಚಿತ್ರ ನಟಿ-ನಿರ್ಮಾಪಕಿ. ಜನನ ೧೯೪೩. ದಾವಣಗೆರೆಯಲ್ಲಿ ೧೯೩೦ರಲ್ಲಿ ಆರಂಭಗೊಂಡ ಕರಿಬಸವರಾಜ ನಾಟಕ ಕಂಪನಿಯ ಮಾಲೀಕ ಚಿಂದೋಡಿ ವೀರಪ್ಪನವರ ಪುತ್ರಿ ಚಿಂದೋಡಿ ಲೀಲಾ. ೭೦ ವರ್ಷಗಳಿಂದಲೂ ಈ ನಾಟಕ ಕಂಪನಿ ನಿರಂತರವಾಗಿ ನಡೆದು ಬಂದಿರುವುದು ಒಂದು ಹೆಗ್ಗಳಿಕೆ. ಚಿಕ್ಕ ವಯಸ್ಸಿನಿಂದಲೇ ನಾಟಕಗಳಲ್ಲಿ ಪಾತ್ರ ಮಾಡಲು ಆರಂಭಿಸಿದರು. ಚಲನಚಿತ್ರ ನಟಿಯಾಗಿ ಪ್ರವೇಶ ಮಾಡಿದ್ದು 'ಕಿತ್ತೂರು ಚೆನ್ನಮ್ಮ' (೧೯೬೧) ಚಿತ್ರದ ಒಂದು ಚಿಕ್ಕ ಪಾತ್ರದ ಮೂಲಕ. 'ಗಾಳಿ ಗೋಪುರ'ದಲ್ಲಿ ಕಲ್ಯಾಣ್‌ಕುಮಾರ್ ಎದುರು ನಾಯಕಿಯ ಅವಕಾಶ ದೊರೆಯಿತು. ನಂತರ ಹಲವಾರು ಚಿತ್ರಗಳಲ್ಲಿ ಅಭಿನಯಿಸಿದರು. 'ಶ್ರೀಕೃಷ್ಣದೇವರಾಯ', 'ಶರಪಂಜರ' ಮುಂತಾದ ಚಿತ್ರಗಳಲ್ಲಿ ಉತ್ತಮ ಪಾತ್ರಗಳು ದೊರೆತವು. ನಾಟಕ ಸಂಸ್ಥೆಯತ್ತ ಹೆಚ್ಚು



ಆಸಕ್ತಿ ಇದ್ದುದರಿಂದ ಚಲನಚಿತ್ರಗಳಲ್ಲಿ ಬಂದ ಅವಕಾಶಗಳನ್ನು ನಿರಾಕರಿಸಿದರು. 'ಗಾನಯೋಗಿ ಪಂಚಾಕ್ಷರ ಗವಾಯಿ'ಯಂತಹ ಸದಭಿರುಚಿಯ ಚಲನಚಿತ್ರದ ನಿರ್ಮಾಪಕಿ. ಅದೊಂದೇ ಚಿತ್ರ ಆಕೆಗೆ ರಾಷ್ಟ್ರಮಟ್ಟದ ಮನ್ನಣೆ ತಂದುಕೊಟ್ಟಿತು.

## ಲೀಲಾವತಿ ಎಂ.

ನಾಯಕಿಯಾಗಿ, ಪೋಷಕ ನಟಿಯಾಗಿ ಕನ್ನಡ ಚಿತ್ರರಂಗದಲ್ಲಿ ಪ್ರಖ್ಯಾತರಾದ ಅಭಿನೇತ್ರಿ. ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಸ್ವಂತ ಸ್ಥಳ. ಹೆಸರು ಲೀಲಾಕಿರಣ್. ೧೯೪೯ರಲ್ಲಿ 'ನಾಗಕನ್ನಿಕಾ' ಚಿತ್ರದಲ್ಲಿ ಸಖಿಯ ಪಾತ್ರದ ಮೂಲಕ ಚಿತ್ರರಂಗ ಪ್ರವೇಶ. ೧೯೫೮ರಲ್ಲಿ 'ಮಾಂಗಲ್ಯಯೋಗ' ನಾಯಕಿಯಾಗಿ ಅಭಿನಯಿಸಿದ ಮೊದಲ ಚಿತ್ರ. ರಂಗಭೂಮಿಯಲ್ಲಿ ಅವಕಾಶ. ಸುಬ್ಬಯ್ಯ ನಾಯ್ಡು ಅವರ ಸಂಸ್ಥೆಯಲ್ಲಿ ಕಲಾವಿದೆ. ಅವರ ಪ್ರಹ್ಲಾದ ಚಿತ್ರದಲ್ಲಿ ಕಯಾದುವಿನ ಸಖಿಯಾಗಿ ನಟಿಸಿದರು. 'ರಣಧೀರ



ಕಂಠೀರವ' ರಾಜಕುಮಾರ್ ಅವರೊಂದಿಗೆ ಅಭಿನಯಿಸಿದ ಪ್ರಥಮ ಚಿತ್ರ. 'ರಾಣಿ ಹೊನ್ನಮ್ಮ' ನಂತರ ರಾಜಕುಮಾರ್ ಅವರೊಂದಿಗೆ ಜನಪ್ರಿಯ ಜೋಡಿಯಾದರು. ೭೦ರ ದಶಕದ ನಂತರ ಪೋಷಕ ಪಾತ್ರಗಳಲ್ಲಿಯೂ ಲೀಲಾವತಿ ಜನಪ್ರಿಯತೆ ಗಳಿಸಿದರು. 'ಗೆಜ್ಜೆಪೂಜೆ', 'ಸಿಪಾಯಿ ರಾಮು' ಮತ್ತು 'ಡಾಕ್ಟರ್ ಕೃಷ್ಣ' ಈ ಮೂರು ಚಿತ್ರಗಳಲ್ಲಿನ ಅಭಿನಯಕ್ಕಾಗಿ ಸರ್ಕಾರ ಮೂರು ಬಾರಿ ಪೋಷಕ ನಟಿ ಪ್ರಶಸ್ತಿ ನೀಡಿತು. ಸುಮಾರು ೬೦೦ ಚಿತ್ರಗಳಲ್ಲಿ ಅಭಿನಯಿಸಿರುವ ಖ್ಯಾತಿ ಇವರದು. ಇವರ ಪುತ್ರ ವಿನೋದ್‌ರಾಜ್ 'ಡ್ಯಾನ್ಸ್ ರಾಜ ಡ್ಯಾನ್ಸ್' ಮೂಲಕ ನಾಯಕನಟರಾಗಿ ಬಂದರು. ಲೀಲಾವತಿ 'ಕಾಲೇಜ್ ಹೀರೋ' ಚಿತ್ರದ ನಿರ್ಮಾಪಕಿಯೂ ಹೌದು. ೧೯೯೯-೨೦೦೦ನೇ ಸಾಲಿನ ಡಾ.ರಾಜಕುಮಾರ್ ಪ್ರಶಸ್ತಿ ನೀಡಿ ರಾಜ್ಯ ಸರ್ಕಾರ ಗೌರವಿಸಿದೆ.

## ಲೋಕನಾಥ್. ಸಿ.ಹೆಚ್.

ರಂಗಭೂಮಿ ಹಾಗೂ ಚಲನಚಿತ್ರ ಕಲಾವಿದ. ಬೆಂಗಳೂರು ವಾಸ ಸ್ಥಳ. ಜನನ ಆಗಸ್ಟ್ ೧೪, ೧೯೨೭. ವೃತ್ತಿಯಲ್ಲಿ ವ್ಯಾಪಾರಸ್ಥರು. ೧೯೪೪ರಲ್ಲಿ ರಂಗ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ಕೆ.ವಿ.ಅಯ್ಯರ್ ರೂಪಿಸಿದ ರವಿ ಕಲಾವಿದರು ತಂಡದಲ್ಲಿ ಅಭಿನಯಿಸುವ ಮೂಲಕ ರಂಗಭೂಮಿಯನ್ನು ಪ್ರವೇಶಿಸಿ ಹವ್ಯಾಸಿ ನಾಟಕ ತಂಡಗಳ ಜೊತೆಗೂಡಿದರು. 'ಗೆಲಿಲಿಯೋ' ಪಾತ್ರದಲ್ಲಿ ಚಿರಸ್ಮರಣೀಯ ಅಭಿನಯ ನೀಡಿದರು. ೧೯೭೦ರಲ್ಲಿ 'ಗೆಜ್ಜೆಪೂಜೆ' ಅವರು ಅಭಿನಯಿಸಿದ ಮೊದಲ ಚಿತ್ರ. 'ಬೂತಯ್ಯನ ಮಗ ಅಯ್ಯು' ಇವರಿಗೆ ಹೆಸರು ತಂದುಕೊಟ್ಟ ಚಿತ್ರ. ಸುಮಾರು ೬೫೦ ಚಿತ್ರಗಳಲ್ಲಿ ಅಭಿನಯಿಸಿದ ಇವರು ಪೋಷಕನಟರಾಗಿ ನೀಡಿರುವ ವಿಭಿನ್ನ ಅಭಿನಯದಿಂದ ಪ್ರಖ್ಯಾತರು.



ಚಿತ್ರರಂಗದಲ್ಲಿನ ಎಲ್ಲರೂ ಅವರನ್ನು ವಿಶ್ವಾಸದಿಂದ ಕರೆಯುವುದು 'ಅಂಕಲ್' ಎಂದು. ಕಿರುತೆರೆಯಲ್ಲಿಯೂ ಜನಪ್ರಿಯರಾಗಿದ್ದಾರೆ.

## ಲೋಕೇಶ್

ರಂಗಭೂಮಿ ಮತ್ತು ಚಲನಚಿತ್ರರಂಗಗಳಲ್ಲಿ ಸಮಾನವಾಗಿ ಹೆಸರು ಗಳಿಸಿದ ಪ್ರತಿಭಾವಂತ ಕಲಾವಿದ. ಕನ್ನಡದ ಮೊದಲ ವಾಕ್ಚಿತ್ರ 'ಸತಿ ಸುಲೋಚನಾ'ದ ನಾಯಕ, ಕನ್ನಡ ರಂಗಭೂಮಿಯ ಅಧ್ವರ್ಯು ಎಂ.ವಿ.ಸುಬ್ಬಯ್ಯನಾಯ್ಡುರವರ ಪುತ್ರ. ಮೇ ೧೪, ೧೯೪೭ರಂದು ಬೆಂಗಳೂರಿನಲ್ಲಿ ಜನನ. ಸಿನಿಮಾಟೊಗ್ರಫಿಯಲ್ಲಿ ಅಭ್ಯಾಸ. ೧೯೫೮ರಲ್ಲಿ 'ಭಕ್ತಪ್ರಹ್ಲಾದ'ದಲ್ಲಿ ಬಾಲನಟನಾಗಿ ಚಿತ್ರರಂಗವನ್ನು ಪ್ರವೇಶಿಸಿದರು. ಹವ್ಯಾಸಿ ರಂಗಭೂಮಿ ಕಲಾವಿದರಾಗಿ ಪ್ರಖ್ಯಾತರಾದರು. ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆಯ ಸಂಗೀತ ಮತ್ತು ನಾಟಕ ವಿಭಾಗದಲ್ಲಿ ಅನೇಕ ವರ್ಷಗಳ ಕಾಲ ವೃತ್ತಿಯಲ್ಲಿದ್ದರು. ನಂತರ 'ಕಾಕನಕೋಟೆ'ಯ ಮೂಲಕ



ಪೂರ್ಣಪ್ರಮಾಣದ ನಟನಾಗಿ ಚಿತ್ರರಂಗಕ್ಕೆ ಮರಳಿದರು. 'ಭೂತಯ್ಯನ ಮಗ ಅಯ್ಯು' ಇವರ ಪ್ರತಿಭೆಯನ್ನು ಸರಿಯಾಗಿ ಗುರುತಿಸಿದ ಚಿತ್ರ. 'ದೇವರ ಕಣ್ಣು', 'ಎಲ್ಲಿಂದಲೋ ಬಂದವರು', 'ಪರಸಂಗದ ಗೆಂಡೆತಿಮ್ಮ', 'ಮುಯ್ಯಿ' ಮುಂತಾದ ಚಿತ್ರಗಳಲ್ಲಿ ನಾಯಕರಾಗಿ ಗಮನಾರ್ಹವಾಗಿ ಅಭಿನಯಿಸಿದರು. 'ಬ್ಯಾಂಕರ್ ಮಾರ್ಗಯ್ಯ' ಸಹ ಅವರ ಕಲಾವಂತಿಕೆಯನ್ನು ಸಾರಿದ ಇನ್ನೊಂದು ಚಿತ್ರ. 'ಭುಜಂಗಯ್ಯನ ದಶಾವತಾರ'ವನ್ನು ತಾವೇ ನಿರ್ಮಿಸಿ, ನಿರ್ದೇಶಿಸಿದರು. 'ಭೂತಯ್ಯನ ಮಗ ಅಯ್ಯು', 'ಪರಸಂಗದ ಗೆಂಡೆತಿಮ್ಮ' ಹಾಗೂ 'ಬ್ಯಾಂಕರ್ ಮಾರ್ಗಯ್ಯ' ಚಿತ್ರಗಳಲ್ಲಿನ ಅಭಿನಯಕ್ಕಾಗಿ ಮೂರು ಬಾರಿ ರಾಜ್ಯ ಸರ್ಕಾರದಿಂದ ಅತ್ಯುತ್ತಮ ನಟ ಪ್ರಶಸ್ತಿಯ ಗೌರವಕ್ಕೆ ಪಾತ್ರರಾದರು. ಕನ್ನಡ ಪರ ಚಳುವಳಿಗಳಲ್ಲಿ ಇವರದು ಎಂದೂ ಸಕ್ರಿಯ ಪಾತ್ರ. ಉಳಿದಂತೆ ತಟಸ್ಥರು. ಪತ್ನಿ ಗಿರಿಜಾ ಲೋಕೇಶ್ ಕನ್ನಡ ಚಿತ್ರರಂಗದ ಹಾಗೂ ಕಿರುತೆರೆಗಳಲ್ಲಿ ಹೆಸರಾಂತ ನಟಿ. ಮಗಳು ಪೂಜಾ ಲೋಕೇಶ್ ಮತ್ತು ಮಗ ಸೃಜನ್ ಲೋಕೇಶ್ ಕೂಡ ಜನಪ್ರಿಯ ಕಿರುತೆರೆ ಕಲಾವಿದರು. ಪೂಜಾ ಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. ಲೋಕೇಶ್ ಕಿರುತೆರೆ ಧಾರಾವಾಹಿಗಳನ್ನೂ ನಿರ್ದೇಶಿಸಿದ್ದಾರೆ.

### ಲೋಕೇಶ್ ಮೈಸೂರು

ಎರಡು ದಶಕಗಳ ಕಾಲ ಹತ್ತಾರು ಕನ್ನಡ ಚಿತ್ರಗಳಲ್ಲಿ ತಮ್ಮ ಬಹುಮುಖ ಪ್ರತಿಭೆಯಿಂದ ಹಾಸ್ಯ ಪಾತ್ರಗಳಲ್ಲಿ ಮೆರೆದ ಮೈಸೂರು ಲೋಕೇಶ್ ಅಪ್ಪಿದ ಅಸ್ವಾಭಾವಿಕ ಸಾವು ಕನ್ನಡ ಚಿತ್ರರಂಗದ ಅನಿರೀಕ್ಷಿತ



ದುರಂತಗಳಲ್ಲೊಂದು. ಚಿತ್ರರಂಗಕ್ಕೆ ವಿದಾಯ ಹೇಳಿದಾಗ ಭಾರಿ ಜನಪ್ರಿಯತೆಯನ್ನು ಉಳಿಸಿಕೊಂಡೇ ಇದ್ದರು. ಮೈಸೂರಿನಲ್ಲಿ ಜನಿಸಿದ ನಟ ಲೋಕೇಶ್ ಮೈಸೂರು ಲೋಕೇಶ್ ಎಂದೇ ಹೆಸರು ಪಡೆದರು. ಕನ್ನಡ ಚಿತ್ರರಂಗದಲ್ಲಿ ಅದೇ ಹೆಸರಿನ ಹಿರಿಯ ನಟರೊಬ್ಬರು ಇದ್ದುದರಿಂದ ಅವರಿಗೆ ಈ ಹೆಸರು ಬರುವುದು ಒಂದು ರೀತಿಯಲ್ಲಿ ಅನಿವಾರ್ಯವೇ ಆಯಿತು. 'ಮಕ್ಕಳ ಭಾಗ್ಯ'ದಿಂದ ಚಿತ್ರರಂಗವನ್ನು ಪ್ರವೇಶಿಸಿದ ಲೋಕೇಶ್ ೧೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿ ಬಗೆಬಗೆಯ ವಿಷ್ಟೋ ಪಾತ್ರಗಳನ್ನು ಜೀವಂತಗೊಳಿಸಿದರು. 'ಚಂದನದ ಗೊಂಬೆ', 'ಟೊಂಕಿಯ ಬಲೆ', 'ಪ್ರೇಮದಂಗೆ', 'ಸಾಂಗ್ಲಿಯಾನ', 'ನರಸಿಂಹ', 'ದೇವ', 'ಯಾರು ಹೊಣೆ', 'ನಂಜುಂಡಿ ಕಲ್ಯಾಣ' ಮತ್ತು ಬೆಳಗಿನ ಪ್ರದರ್ಶನಗಳಲ್ಲಿಯೇ ಒಂದು ವರ್ಷಕ್ಕೂ ಹೆಚ್ಚು ಪ್ರದರ್ಶಿತವಾದ 'ಅವಳ ಅಂತರಂಗ' ಮೈಸೂರು ಲೋಕೇಶ್‌ರಿಗೆ ವಿಶೇಷವಾಗಿ ಹೆಸರು ತಂದುಕೊಟ್ಟ ಚಿತ್ರಗಳು. 'ಪ್ರಜೆಗಳು ಪ್ರಭುಗಳು' ಚಿತ್ರದಲ್ಲಿನ ಅವರ ಪರಿಣಾಮಕಾರಿ ಅಭಿನಯಕ್ಕಾಗಿ ಅವರಿಗೆ ೧೯೭೯-೮೦ನೇ ಸಾಲಿನ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ಸಿಕ್ಕಿತು.

### ಲೋಹಿತಾಶ್ವ

ವೃತ್ತಿಯಲ್ಲಿ ಕಾಲೇಜು ಅಧ್ಯಾಪಕ. ಕನ್ನಡ ಚಿತ್ರರಂಗದ ಪೋಷಕ ನಟ. ರಂಗಭೂಮಿ ಹಿನ್ನೆಲೆಯಿಂದ ಬಂದ ಲೋಕನಾಥ್ ೧೯೭೮ರಲ್ಲಿ ಬರಗೂರು ರಾಮಚಂದ್ರಪ್ಪನವರ 'ಒಂದು ಊರಿನ ಕಥೆ' ಚಿತ್ರದಿಂದ ಚಿತ್ರರಂಗಕ್ಕೆ ಬಂದ ಲೋಹಿತಾಶ್ವ



'ಧರ್ಮ ದಾರಿ ತಪ್ಪಿತು' ಚಿತ್ರದ ಮೂಲಕ ಚಿತ್ರಕಥೆಯ ವಿಭಾಗಕ್ಕೂ ಕಾಲಿರಿಸಿದರು. ತಮ್ಮ ಕಂಚಿನ ಕಂಠದಿಂದ ಹೆಸರಾಗಿರುವ ಲೋಹಿತಾಶ್ವ 'ಮಾರ್ಜಾಲ', 'ಗಜೇಂದ್ರ', 'ಹೊಸನೀರು', 'ಗುರುವೇ ದೈವ', 'ಸತ್ಕಾರ', 'ಮುಖವಾಡ', 'ಸಾಂಗ್ಲಿಯಾನ' ಮೊದಲಾದ ಚಿತ್ರಗಳಲ್ಲಿ ನಟಿಸಿದ್ದಾರೆ. ಚಿತ್ರರಂಗದ ಜೊತೆಗೆ ರಂಗಭೂಮಿಯ ಜೊತೆಗೂ ತಮ್ಮನ್ನು ಬೆಸೆದುಕೊಂಡಿರುವ ಲೋಹಿತಾಶ್ವ 'ಕತ್ತಲೆ ದಾರಿ ದೂರ', 'ಹುಲಿಯ ನೆರಳು', 'ನಂ.೨೨ ಮಾವಳ್ಳಿ ಸರ್ಕಲ್' ಮೊದಲಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಕನ್ನಡ ಚಿತ್ರರಂಗದಲ್ಲಿ ವಿಶಿಷ್ಟ ರೀತಿಯ ಪೋಷಕನಟನಾಗಿ. ಮುಖ್ಯವಾಗಿ ರಾಜಕಾರಣಿ, ಮಂತ್ರಿಯ ಪಾತ್ರಗಳಿಗೆ ಒಂದು ಮಾದರಿಯನ್ನೇ ಕಲ್ಪಿಸಿದರು ಲೋಹಿತಾಶ್ವ.

### ವಂದನಾ

ಕೆಲವೇ ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರೂ ಸಾಕಷ್ಟು ಸುದ್ದಿ ಮಾಡಿದ ತಾರೆ ವಂದನಾ. ಮೊದಲ ಹೆಸರು ವಿಜಯಲಕ್ಷ್ಮಿ. ೧೯೬೧ರಲ್ಲಿ ತೆರೆಗೆ ಬಂದ 'ಕಣ್ತೆರೆದು ನೋಡು' ಚಿತ್ರದಲ್ಲಿ ಅಭಿನಯಿಸಿದರು. ಅಲ್ಲಿಂದಾಚೆಗೆ



೧೯೬೮ರವರೆಗೆ ಪ್ರತಿ ವರ್ಷ ಒಂದು, ಎರಡು ಚಿತ್ರಗಳಲ್ಲಿ ವಂದನಾ ಇದ್ದರು. ಚೆಲುವೆ, ಮುಖ್ಯವಾಗಿ ಆಕೆಯ ವಿಶಾಲವಾದ ಕಣ್ಣುಗಳು ಪ್ರಧಾನ ಆಕರ್ಷಣೆಯಾಗಿದ್ದವು. ಜಿ.ವಿ.ಅಯ್ಯರ್ ಅವರು ಆಕೆಗಾಗಿಯೇ ನಿರ್ದೇಶಿಸಿದ ಚಿತ್ರ 'ಬಂಗಾರಿ'ಯಲ್ಲಿ ಅಪರೂಪದ ಅಭಿನಯ ನೀಡಿದರು. 'ಮೈಸೂರು ಟಾಂಗಾ', 'ತಾಯಿ ಕರುಳು', 'ಲಾಯರ್ ಮಗಳು', 'ಪೋಸ್ಟ್ ಮಾಸ್ಟರ್', 'ಮಂಕುದಿಣ್ಣೆ', 'ಲವ್ ಇನ್ ಬೆಂಗಳೂರ್', 'ಬೀದಿ ಬಸವಣ್ಣ' ಮೊದಲಾದವು ವಂದನಾ ಅಭಿನಯಿಸಿದ ಮುಖ್ಯ ಚಿತ್ರಗಳು. ಈಕೆ ಮಿತ್ರರ ಜೊತೆ ಸೇರಿ 'ಮೈಸೂರು ಟಾಂಗ' ಚಿತ್ರವನ್ನು ನಿರ್ಮಿಸಿದರು. ೧೯೭೦ರ ಹೊತ್ತಿಗೆ ಸುಮಾರು ೨೦ ಚಿತ್ರಗಳಲ್ಲಿ ವಂದನಾ ಅಭಿನಯಿಸಿದ್ದರು. ಅನಂತರ ಹೊಟೇಲ್ ಉದ್ಯಮಿಯನ್ನು ವಿವಾಹವಾದರು.

### ವರ್ಗೀಸ್.ಎಂ

ಗುಲ್ಬರ್ಗದ ಪ್ರಮುಖ ಪ್ರದರ್ಶಕ ಎಂ.ವರ್ಗೀಸ್ ಮೂಲತಃ ಕೇರಳದವರು. ಆದರೆ ಅವರ ಬದುಕಿ ಮಗಳಿರುವುದೆಲ್ಲ ಗುಲ್ಬರ್ಗದಲ್ಲಿಯೇ. ಕನ್ನಡ ಚಿತ್ರೋದ್ಯಮದಲ್ಲಿ ಅವರು ಆಸಕ್ತಿ ಬೆಳೆಸಿಕೊಳ್ಳಲು ಕರ್ನಾಟಕದಲ್ಲಿ ಅವರು ಸುದೀರ್ಘವಾಗಿ ಜೀವನ ನಡೆಸಿದ್ದು ಕೂಡ ಕಾರಣವಾಯಿತು. ೧೯೭೫ರಲ್ಲಿ ಅವರ ಸ್ನೇಹಿತರು ಅವರನ್ನು 'ಪರಿವರ್ತನೆ' ಚಿತ್ರವನ್ನು ನಿರ್ಮಿಸಲು ಪ್ರೇರೇಪಿಸಿದರು. ಅಲ್ಲಿಂದ ಇಲ್ಲಿಯವರೆಗೆ ಅವರು 'ಆಸ್ಫೋಟ', 'ಮಾನಸ ಸರೋವರ', 'ಧರಣಿ ಮಂಡಲ ಮಧ್ಯದೊಳಗೆ', 'ನೆನಪಿನ ದೋಣಿ' ಮುಂತಾದ ಉತ್ತಮ ಅಭಿರುಚಿಯ ಚಿತ್ರಗಳನ್ನು ತಯಾರಿಸಿ ಅವುಗಳಲ್ಲಿ ಬಹುತೇಕ ಚಿತ್ರಗಳಲ್ಲಿ ಕೈ ಸುಟ್ಟುಕೊಂಡರೂ ಇತ್ತೀಚೆಗಷ್ಟೇ ಚಿತ್ರ ನಿರ್ಮಾಣಕ್ಕೆ ವಿದಾಯ



ಹೇಳುವ ತೀರ್ಮಾನವನ್ನು ತೆಗೆದುಕೊಂಡರು. ೧೯೮೭-೮೮ನೇ ಸಾಲಿನಲ್ಲಿ ಅವರು ನಿರ್ಮಿಸಿದ ಚಿತ್ರ 'ಆಸ್ಫೋಟ' ರಾಜ್ಯ ಸರ್ಕಾರದಿಂದ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿತು. ಆ ಚಿತ್ರದ ನಿರ್ಮಾಣವೇ ತಮ್ಮ ಜೀವನದ ಅತ್ಯಂತ ಸುಂದರವಾದ ಅನುಭವಗಳಲ್ಲಿ ಒಂದೆಂದು ವರ್ಗೀಸ್ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ.

### ವಜ್ರಮುನಿ

ಕನ್ನಡ ಚಿತ್ರರಂಗದ ಪ್ರಮುಖ ಖಳನಾಯಕರಲ್ಲಿ ವಜ್ರಮುನಿ ಒಬ್ಬರು. ಚಿಕ್ಕಂದಿನಿಂದಲೂ ತುಂಟ ಹುಡುಗನಾಗಿಯೇ ಬೆಳೆದು ಕಾಲೇಜು ಮೆಟ್ಟಿಲನ್ನು ಹತ್ತಿದರೂ ಅಲ್ಲಿ ಮುಂದುವರಿಯಲಾಗದೆ ನಾಟಕರಂಗಕ್ಕೆ ಧುಮುಕಿದರು. ಹಲವು ನೂರು ಪ್ರಯೋಗಗಳನ್ನು ಕಂಡ 'ಪ್ರಚಂಡ ರಾವಣ' ನಾಟಕದಲ್ಲಿ ಇವರು ರೋಚಕವಾಗಿ ಅಭಿನಯಿಸಿದ ರಾವಣನ ಪಾತ್ರ ಅವರಿಗೆ ವಿಶೇಷ ಜನಪ್ರಿಯತೆಯನ್ನು ತಂದುಕೊಟ್ಟಿತು. ವಜ್ರಮುನಿಯವರು ಸಿನಿಮಾಟೊಗ್ರಫಿ ಡಿಪ್ಲೊಮಾ ಪಡೆದು ಚಿತ್ರರಂಗವನ್ನು ಸೇರಲು ಸನ್ನದ್ಧರಾದರು. ೧೯೬೭ರಲ್ಲಿ ಪುಟ್ಟಣ್ಣನವರ 'ಸಾವಿರ ಮೆಟ್ಟಿಲು' (ಬಿಡುಗಡೆಯಾಗದ ಚಿತ್ರ) ಚಿತ್ರದ



ಮೂಲಕ ನಟನಾಗಿ ಚಿತ್ರರಂಗವನ್ನು ಪ್ರವೇಶಿಸಿದರು. ಪುಟ್ಟಣ್ಣನವರೇ ನಿರ್ದೇಶಿಸಿದ 'ಮಲ್ಲಮ್ಮನ ಪವಾಡ' ಇವರು ಅಭಿನಯಿಸಿ ಬಿಡುಗಡೆಯಾದ ಮೊದಲ ಚಿತ್ರ. ತಮ್ಮ ಈ ಮೊದಲನೆಯ ಚಿತ್ರದಲ್ಲಿಯೇ ಇವರು ಪ್ರೇಕ್ಷಕರ ಮತ್ತು ವಿಮರ್ಶಕರ ವಿಶೇಷ ಗಮನ ಸೆಳೆದರು. 'ಸಂಪತ್ತಿಗೆ ಸವಾಲ್' ಚಿತ್ರದಲ್ಲಿನ ಅವರ ಅಭಿನಯ ಚಿತ್ರಪ್ರೇಮಿಗಳಿಗೆ ಖುಷಿ ತಂದುಕೊಟ್ಟಿತು. ಸುಮಾರು ೩೦೦ ಚಿತ್ರಗಳಲ್ಲಿ ಖಳನಾಯಕನ ಪಾತ್ರವನ್ನು ನಟಿಸಿದ ಕೀರ್ತಿ ಇವರದು. ಇವರು ರೂಢಿಸಿಕೊಂಡಿರುವ ಅಭಿನಯದ ಶೈಲಿ ಅನುಕರಣೆಗೆ ಕಷ್ಟ. 'ಗೆಜ್ಜೆಪೂಜೆ', 'ನಾಗರಹಾವು', 'ಉಪಾಸನೆ', 'ಮಯೂರ', 'ಬಹದ್ದೂರ್ ಗಂಡು', 'ಭರ್ಜರಿ ಬೇಟೆ', 'ಪ್ರೇಮದ ಕಾಣಿಕೆ', 'ಶಂಕರ್ ಗುರು', 'ಬಂಗಾರದ ಮನುಷ್ಯ', 'ಗಿರಿಕನ್ಯೆ', 'ಆಕಸ್ಮಿಕ', 'ಭಕ್ತ ಕುಂಬಾರ' ಮತ್ತು ಇವರಿಗೆ ರಾಜ್ಯ ಪ್ರಶಸ್ತಿ ತಂದುಕೊಟ್ಟ 'ಚಿತ್ರಲೇಖ ಸೇವೆ' ಇವರು ಅಭಿನಯಿಸಿದ ಇತರ ಪ್ರಮುಖ ಚಿತ್ರಗಳು. ವಜ್ರಮುನಿಯವರು 'ತಾಯಿಗಿಂತ ದೇವರಿಲ್ಲ', 'ಬ್ರಹ್ಮಾಸ್ತ್ರ', 'ಗಂಡಭೇರುಂಡ' ಮೊದಲಾದ ಚಿತ್ರಗಳನ್ನು ನಿರ್ಮಿಸಿದ್ದಾರೆ. ರಾಜಕೀಯ ಕುಟುಂಬವೊಂದರಲ್ಲಿ ಜನಿಸಿದ ವಜ್ರಮುನಿಯವರಿಗೆ ಆ ಕ್ಷೇತ್ರದ ನಂಟು ಕೂಡ ಸ್ವಲ್ಪಮಟ್ಟಿಗಿದೆ. ಕೆಲವಾರು ಸಂಸ್ಥೆಗಳಲ್ಲಿ, ಸಹಕಾರಿ ಸಂಘಗಳಲ್ಲಿ

ಸಕ್ರಿಯವಾಗಿ ದುಡಿದು ಸಮಾಜ ಸೇವೆಯಲ್ಲಿ ತೊಡಗಿದ್ದಾರೆ. ಅಭಿಮಾನಿಗಳು ಇವರಿಗೆ 'ನಟಭೈರವ' ಬಿರುದು ನೀಡಿ ಗೌರವಿಸಿದರು. 'ಚಿತ್ತಲೆ ಸೇವೆ' ಚಿತ್ರದ ಅಭಿನಯಕ್ಕಾಗಿ ರಾಜ್ಯ ಸರ್ಕಾರದ 'ಅತ್ಯುತ್ತಮ ಪೋಷಕ ನಟ ಪ್ರಶಸ್ತಿ' ಪಡೆದರು. ತಾವೇ ತೊಂದರೆಯಲ್ಲಿದ್ದರೂ ಇನ್ನೊಬ್ಬರ ತೊಂದರೆಗೆ-ನೋವಿಗೆ ಕರಗುವ ಮೃದುಹೃದಯಿ. ತೆರೆಯ ಮೇಲೆ ಮಾತ್ರ ಕಠಿಣ ಹೃದಯಿ.

### ವತ್ಸಲನ್.ಎನ್.ಬಿ

೫೦-೬೦ರ ದಶಕದಲ್ಲಿ ಚಿತ್ರರಂಗಕ್ಕೆ ಬಂದ ಎನ್.ಬಿ.ವತ್ಸಲನ್ ಎನ್.ವಿ.ಗೋಪಾಲ ಶೆಟ್ಟಿ ಅವರ ಪುತ್ರರು. ಚಿತ್ರರಂಗದ ಬೆಳವಣಿಗೆಗಾಗಿ



ತಂದೆಯಂತೆಯೇ ಪ್ರಯತ್ನಿಸಿದ ವ್ಯಕ್ತಿ. ಇವರ ತಮ್ಮ ಎನ್.ರಾಮಚಂದ್ರ ಕೂಡ ಅಣ್ಣನೊಂದಿಗೆ ಚಿತ್ರೋದ್ಯಮದಲ್ಲಿ ದುಡಿದವರು. ಉದಯ ಪ್ರೊಡಕ್ಷನ್ಸ್ ಲಾಂಛನದಡಿಯಲ್ಲಿ ವಿ.ಸಿ.ನರಸಿಂಹಮೂರ್ತಿ ಅವರೊಡನೆ 'ಭಾಗ್ಯೋದಯ' ಚಿತ್ರ ನಿರ್ಮಿಸಿದರು. ಕು.ರ.ಸೀ ನಿರ್ದೇಶನದಲ್ಲಿ 'ಮನ ಮೆಚ್ಚಿದ ಮಡದಿ' ಚಿತ್ರ ನಿರ್ಮಿಸಿದರು. ಇವರ ತಂದೆ ಗೋಪಾಲ ಶೆಟ್ಟಿ ಅವರು ಪ್ರಕಾಶ್ ಪಿಕ್ಚರ್ಸ್ ಎಂಬ ಹಂಚಿಕಾ ಸಂಸ್ಥೆಯನ್ನು ಸ್ಥಾಪಿಸಿ ಹಲವು ಕನ್ನಡ ಚಿತ್ರಗಳಿಗೆ ಬಂಡವಾಳ ಒದಗಿಸಿ ಅವುಗಳ ಪ್ರದರ್ಶನಕ್ಕೆ ಸಹಕರಿಸಿದ್ದವರು. ಚಿತ್ರೋದ್ಯಮ ನಷ್ಟದ ಬಾಬು ಎನಿಸಿದಾಗ ಬಟ್ಟೆ ಅಂಗಡಿ ತೆರೆದು ಕುಳಿತರು ಈ ಸೋದರರು. ಈಗ ಎನ್.ಭಕ್ತವತ್ಸಲರಿಲ್ಲ.

### ವನಿತಾ ವಾಸು

ಕನ್ನಡ ಚಿತ್ರಗಳ ಗ್ಲಾಮರ್ ಕಲಾವಿದೆ. ಸಂಪ್ರದಾಯಸ್ಥರಿಂದ ಮೂಗು ಮುರಿಸಿಕೊಂಡರೂ ಧೈರ್ಯವಾಗಿ ಮುಂದೆ ನುಗ್ಗಿದ ವನಿತಾ ವಾಸು ಕನ್ನಡ ನಟಿಯರೂ



ಮೈ ಚಳಿ ಬಿಟ್ಟು ಅಭಿನಯಿಸಲು ಸಿದ್ಧವೆಂದು ಸವಾಲು ಹಾಕಿದ ಕೆಲವೇ ಕಲಾವಿದೆಯರಲ್ಲಿ ಒಬ್ಬರು. ಅವರು ನಟ ನಿರ್ಮಾಪಕ-ನಿರ್ದೇಶಕ ಸುರೇಶ್ ಹೆಬ್ಳೀಕರ್ ಅವರ ಶೋಧ. ಮಲ್ಲೇಶ್ವರದ ಎಂ.ಇ.ಎಸ್. ಕಾಲೇಜಿನಲ್ಲಿ ಓದುತ್ತಿದ್ದವರು. ಈಕೆಯ ಮೊದಲ ಚಿತ್ರ ಹೆಬ್ಳೀಕರ್‌ರವರ 'ಆಗುಂತಕ'. ಈ ಚಿತ್ರ ಬಿಡುಗಡೆಯಾಗಿದ್ದು ೧೯೮೭ರಲ್ಲಿ. ಅನಂತರ ವನಿತಾ ೫೫ ಚಿತ್ರಗಳಲ್ಲಿ ಅಭಿನಯಿಸಿ ಸ್ವಲ್ಪ ಕಾಲ ಅಜ್ಞಾತವಾಸದಲ್ಲಿದ್ದು, ಮತ್ತೆ ಕಿರುತೆರೆಯ ಮೂಲಕ ಅಭಿನಯರಂಗಕ್ಕೆ ಹಿಂದಿರುಗಿ, ಪುನಃ ಚಿತ್ರಗಳಲ್ಲಿ ನಟಿಸಲು ಆರಂಭಿಸಿದರು. 'ಕಾಡಿನ ಜೇಂಕಿ','ತರ್ಕ',' ಗೋಲ್‌ಮಾಲ್ ರಾಧಾಕೃಷ್ಣ','ವೈಶಾಖದ ದಿನಗಳು', 'ಮಣ್ಣಿನ ದೋಣಿ','ಆವನೇ ನನ್ನ ಗಂಡ', 'ಉತ್ಕರ್ಷ','ನಾಗಮಂಡಲ' ಮುಂತಾದವು ವನಿತಾ ಅಭಿನಯಿಸಿರುವ ಪ್ರಮುಖ ಚಿತ್ರಗಳು. 'ನೀತಿ ಚಕ್ರ', 'ಇತಿಹಾಸ' ಮತ್ತು 'ಪುನರ್ಜನ್ಮ' ಈಕೆಯನ್ನು ಮತ್ತೆ ಅಭಿನಯ ಕ್ಷೇತ್ರಕ್ಕೆ ವಾಪಸು ತಂದ ಜನಪ್ರಿಯ ಕಿರುತೆರೆ ಧಾರಾವಾಹಿಗಳು.

### ವರದರಾಜ್.ಎಸ್.ಪಿ

ಹಿರಿಯನಟ ರಾಜಕುಮಾರ್ ಅವರ ಕಿರಿಯ ಸಹೋದರ. ೧೯೩೫ರಲ್ಲಿ ಸಿಂಗಾನಲ್ಲೂರಿನಲ್ಲಿ ಜನಿಸಿದರು. ಗೆಳೆಯರ ಬಳಗದಲ್ಲಿ ಇವರು ವರದಪ್ಪ ಎಂದೇ ಹೆಸರು. ಮೊದಲಿನಿಂದಲೂ ಅಣ್ಣನ ನೆರಳಿನಂತೆ ಇರುವ ವರದರಾಜ್ ಗುಬ್ಬಿ ಕಂಪನಿಯಲ್ಲಿ ತಂದೆ ಹಾಗೂ ಅಣ್ಣನೊಂದಿಗೆ ಕೆಲಸ ಮಾಡಿಕೊಂಡಿದ್ದವರು. 'ಮಹಾತ್ಮ ಪಿಕ್ಚರ್ಸ್' ಅವರ 'ಕೃಷ್ಣಲೀಲಾ' ಚಿತ್ರದಲ್ಲಿ ಮಕರಂದನ ಪಾತ್ರದಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ನಂತರ



'ಸತಿಶಕ್ತಿ','ಸರ್ವಜ್ಞಮೂರ್ತಿ' ಚಿತ್ರಗಳಲ್ಲಿ ಅಭಿನಯಿಸಿದ್ದನ್ನು ಬಿಟ್ಟರೆ ಉಳಿದೆಲ್ಲ ಸಮಯ ರಾಜಕುಮಾರ್ ಅಭಿನಯದ ಚಿತ್ರಗಳ ನಿರ್ಮಾಣ ಕಾರ್ಯದಲ್ಲಿ ಸಕ್ರಿಯವಾಗಿ ತೆರಮರೆಯಲ್ಲಿ ಶ್ರಮಿಸಿರುವ ವ್ಯಕ್ತಿ. ನೇಪಥ್ಯದಲ್ಲಿ ನಿಂತು ಕೆಲಸ ಮಾಡುವ ಇವರು ರಾಜಕುಮಾರ್ ಅಭಿನಯದ ಅನೇಕ ಉತ್ತಮ ಚಿತ್ರಗಳ ಕಥೆಯ ಆಯ್ಕೆಯಿಂದ ನಿರ್ಮಾಣದ ಕಡೆಯ ಹಂತದವರೆಗೂ ಅವಿರತವಾಗಿ ದುಡಿದಿದ್ದಾರೆ. ಮಿತ್ರರೊಡಗೂಡಿ 'ಬೂತಯ್ಯನ ಮಗ ಅಯ್ಯು','ಹೇಮಾವತಿ' ಚಿತ್ರವನ್ನು ನಿರ್ಮಿಸಿದರು. ಇವರಿಗೆ ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘದ ಪ್ರತಿಷ್ಠಿತ 'ಕಾಸ್‌ಫಿಡ' ಪ್ರಶಸ್ತಿ ಲಭಿಸಿದೆ. ೨೦೦೦ನೇ ವರ್ಷದಲ್ಲಿ ರಾಜ್ಯ ಸರ್ಕಾರದ ಪ್ರಶಸ್ತಿ ಸಮಿತಿಯು ತೆರಮರೆಯ ಸಾಧಕರೆಂದು ಗುರುತಿಸಿ ಗೌರವಿಸುವ ಹೊಸ ಪರಂಪರೆಗೆ ಮೊದಲಿಗರಾಗಿ ವರದರಾಜ್‌ರನ್ನೇ ಆಯ್ಕೆ ಮಾಡಿದೆ.

### ವಸಂತ ಮೊಕಾಶಿ

ಕನ್ನಡದ ಪ್ರಖ್ಯಾತ ಸಾಹಿತಿ ಮತ್ತು ಚಿಂತಕ ಶಂಕರ ಮೊಕಾಶಿ ಪುಣೇಕರ ಅವರ ಪುತ್ರ ವಸಂತ ಮೊಕಾಶಿ ಇದುವರೆಗೆ ನಿರ್ದೇಶಿಸಿರುವುದು ಒಂದೇ ಕನ್ನಡ ಚಿತ್ರ - 'ಗಂಗವ್ವ ಗಂಗಾಮಾಯಿ'. ಆದರೆ ಈ ಒಂದು ಚಿತ್ರದಿಂದಲೇ ಅವರು ಕನ್ನಡ ಚಿತ್ರರಂಗದ ಸೂಕ್ಷ್ಮ ಸಂವೇದನೆಯುಳ್ಳ ನಿರ್ದೇಶಕರಲ್ಲಿ ಒಬ್ಬರೆಂಬ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಈ ಚಿತ್ರ ಇದುವರೆಗೆ ಸಾರ್ವಜನಿಕ ಪ್ರದರ್ಶನ ಕಂಡಿಲ್ಲ. ವಸಂತ್, ಶಂಕರ್‌ನಾಗ್



ನಿರ್ದೇಶನದ 'ಆ್ಯಕ್ಸಿಡೆಂಟ್' ಚಿತ್ರದ ಚಿತ್ರಕಥಾ ಲೇಖಕರು. ಆ ಚಿತ್ರಕ್ಕಾಗಿ ಅವರು ರಾಜ್ಯ ಸರ್ಕಾರದಿಂದ ೧೯೮೪-೮೫ನೇ ಸಾಲಿನ ಅತ್ಯುತ್ತಮ ಚಿತ್ರಕಥೆ ಲೇಖಕ ಪ್ರಶಸ್ತಿ ಪಡೆದುಕೊಂಡರು. ನಂತರ ಅನೇಕ ಕಿರುಚಿತ್ರಗಳನ್ನು ನಿರ್ಮಿಸಿದರು. ಮೊಕಾಶಿಯವರು ಮಣಿ ಕೌಲ್ ಮತ್ತು ಕಮಲ್ ಸ್ವರೂಪ್‌ರಂತಹ ಖ್ಯಾತ ನಿರ್ದೇಶಕರೊಂದಿಗೆ ಹತ್ತು ವರ್ಷಗಳ ಕಾಲ ಸಹಾಯಕರಾಗಿ ದುಡಿದಿದ್ದಾರೆ. ಚಲನಚಿತ್ರ ಮಾಧ್ಯಮದ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ಪರಿಣತಿಯನ್ನು ಗಳಿಸಿಕೊಂಡಿದ್ದಾರೆ. ಇವರ ನಿರ್ದೇಶನದ 'ಗಂಗವ್ವ ಗಂಗಾಮಾಯಿ' ಚಿತ್ರವು ಕರ್ನಾಟಕ ರಾಜ್ಯ ಸರ್ಕಾರದ ೧೯೯೪-೯೫ನೇ ಸಾಲಿನ ಚಲನಚಿತ್ರ ಪ್ರಶಸ್ತಿಗಳಲ್ಲಿ ಪ್ರಥಮ ಅತ್ಯುತ್ತಮ ಚಿತ್ರ, ಅತ್ಯುತ್ತಮ ನಟ (ಅನಂತ್‌ನಾಗ್), ಅತ್ಯುತ್ತಮ ಕಥೆ (ಡಾ।ಶಂಕರ ಮೊಕಾಶಿ ಪುಣೇಕರ), ಅತ್ಯುತ್ತಮ ಕಲಾನಿರ್ದೇಶನ (ರಮೇಶ್ ದೇಸಾಯಿ - ನಂಜುಂಡಸ್ವಾಮಿ) ಪ್ರಶಸ್ತಿಗಳನ್ನು ಗಳಿಸಿದೆ.

### ವಾಣಿ ಜಯರಾಂ

ಕನ್ನಡದಲ್ಲಿ ಧ್ವನಿ ನೀಡಿದ ಪರಭಾಷಾ ಗಾಯಕಿಯರಲ್ಲಿ ಒಬ್ಬರು. ವಾಣಿ ಜಯರಾಂ ಎಂದ ಕೂಡಲೇ ನೆನಪಾಗುವುದು ಗುಡ್ಡಿ ಚಿತ್ರದ 'ಬೋಲೋರೇ ಪಪೀ ಹರಾ...'. ಈ ಹಾಡಿನಿಂದ ಭಾರತದಾದ್ಯಂತ ಜನಪ್ರಿಯಗೊಂಡ ಪ್ರತಿಭಾವಂತ ಗಾಯಕಿ. ಎಸ್.ಜಾನಕಿ, ಪಿ.ಸುಶೀಲ ಹಾಗೂ ಪಿ.ಲೀಲಾ ಇವರುಗಳ ಸಾಲಿಗೆ ಸೇರುವ ವಾಣಿ ಜಯರಾಂ ಬಾಲ್ಯದಿಂದಲೇ ಶಾಸ್ತ್ರೀಯವಾಗಿ ಸಂಗೀತವನ್ನು ಕಲಿತವರು. ಇವರನ್ನ ಕನ್ನಡ ಚಿತ್ರರಂಗಕ್ಕೆ ವಿಜಯ ಭಾಸ್ಕರ್ ತಮ್ಮ



ಸಂಗೀತ ನಿರ್ದೇಶನದ ' ಭಲಗಾರ ' ಚಿತ್ರದ 'ಮೂಡಣದ ರವೀ ಮೂಡಿದ ಮಮತೆಯಲಿ....' ಹಾಡನ್ನು ಹಾಡಿಸುವ ಮೂಲಕ ಗಾಯಕಿಯಾಗಿ ಪರಿಚಯಿಸಿದರು. ನಂತರ 'ಮನೆ ಬೆಳಗಿದ ಸೊಸೆ','ಕೆಸರಿನ ಕಮಲ','ಎರಡು ಕನಸು','ಉಪಾಸನೆ', 'ಎಡಕಲ್ಲು ಗುಡ್ಡದ ಮೇಲೆ' ಹೀಗೆ ಹಲವಾರು ಚಿತ್ರಗಳಲ್ಲಿ ಹಿನ್ನೆಲೆ ಗಾಯಕಿಯಾಗಿ ಹಾಡಿದ್ದಾರೆ. ಸುಮಾರು ೪೦೦೦ಕ್ಕೂ ಹೆಚ್ಚು ಹಾಡುಗಳನ್ನು ಹಾಡಿರುವ ವಾಣಿ ಜಯರಾಂ ಕನ್ನಡಕ್ಕೆ ಕೊಟ್ಟ ಮೊದಲನೆಯದೆನ್ನಬಹುದಾದ ಆಂಗ್ಲ ಮಿಶ್ರಿತ ಕನ್ನಡ ಹಾಡನ್ನು ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಜೀ ಹೆಂಡ್ತಿ' ಚಿತ್ರಕ್ಕಾಗಿ 'ಹ್ಯಾಪಿಯೆಸ್ಟ್ ಮೊಮೆಂಟ್ ಎವೆರಿ ಇವೆಂಟ್...' ಹಾಡಿದರು. ಅದು ಬಹಳ ಜನಪ್ರಿಯಗೊಂಡಿತು. ಹಾಡಿನ ರಾಗ-ಧಾಟಿ ಶಾಸ್ತ್ರೀಯವಾಗಿರಲಿ, ಲಘುವಾಗಿರಲಿ ಸ್ಪಷ್ಟವಾಗಿ ಹಾಡುವ ವಾಣಿ ಜಯರಾಂ ೧೯೭೧ರಲ್ಲಿ ಪ್ರತಿಷ್ಠೆಯ 'ಮಿಯಾ ತಾನ್‌ಸೇನ್' ಪ್ರಶಸ್ತಿಯನ್ನು ತಮ್ಮದಾಗಿಸಿಕೊಂಡಿದ್ದಾರೆ.

### ವಾದಿರಾಜ್.ಯು.ಎಸ್

ಸದಭಿರುಚಿಯ ಕನ್ನಡ ಚಿತ್ರಗಳನ್ನು ತಯಾರಿಸುವ ಮಹದಾಸೆಯಿಂದ ತಮ್ಮ ಸೋದರ ಜವಹರ್ ಅವರ ಜತೆಗೂಡಿ 'ಭಾರತಿ ಚಿತ್ರ' ಸಂಸ್ಥೆಯನ್ನು ಸ್ಥಾಪಿಸಿ 'ನಂದಾದೀಪ','ನವಜೀವನ', 'ನಾಂದಿ'ಯಂಥ ಶ್ರೇಷ್ಠ ಚಿತ್ರಗಳನ್ನು ತಯಾರಿಸಿದವರು ನಟ, ನಿರ್ಮಾಪಕ ಹಾಗೂ



ನಿರ್ದೇಶಕ ಯು.ಎಸ್.ವಾದಿರಾಜ್. ಕನ್ನಡ ಚಿತ್ರರಂಗಕ್ಕೆ ಅವರು ನೀಡಿದ ಗಣನೀಯ ಕೊಡುಗೆಗಾಗಿ ೧೯೯೮-೯೯ರ ಸಾಲಿನ ಡಾ।ರಾಜಕುಮಾರ್ ಪ್ರಶಸ್ತಿಯನ್ನು ಕರ್ನಾಟಕ ಸರ್ಕಾರದಿಂದ ಪಡೆದುಕೊಂಡರು. ೧೯೨೭ರ ಜನವರಿ ೩ರಂದು ಉಡುಪಿ ಸಮೀಪ ಫಣಿಯಾಡಿಯಲ್ಲಿ ಜನಿಸಿದರು. ತಂದೆ

ಶ್ರೀನಿವಾಸ ಫಣಿಯಾಡಿ ಸ್ವಾತಂತ್ರ್ಯ ಹೋರಾಟಗಾರರು, ಪತ್ರಕರ್ತರು. ಹಿಂದೀ ರಾಷ್ಟ್ರ ಭಾಷಾ ಪದವಿ ಗಳಿಸಿದ ವಾದಿರಾಜ್ ಸ್ವಲ್ಪ ಕಾಲ ಮದರಾಸು ಹಿಂದಿ ಪ್ರಚಾರ ಸಭಾದಲ್ಲಿ ಉದ್ಯೋಗಿಯಾಗಿದ್ದರು. ತಮಿಳು ಹವ್ಯಾಸಿ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. 'ವೈರಮಾಲೆ' ಮುಂತಾದ ಕೆಲವು ತಮಿಳು ಚಿತ್ರಗಳಲ್ಲಿ ಅಭಿನಯಿಸಿದರು. ತಾವೇ ಸ್ವತಃ 'ನಂದಾದೀಪ' ಚಿತ್ರದ ಕಥೆಯನ್ನು ಬರೆದು ಎಂ.ಆರ್.ವಿಠಲ್ ಅವರ ನಿರ್ದೇಶನದಲ್ಲಿ ತಯಾರಿಸಿದರು. ಚಿತ್ರ ರಾಷ್ಟ್ರ ಪ್ರಶಸ್ತಿ ಗಳಿಸಿತು. ಮುಂದೆ ಗುಜರಾತಿ ಭಾಷೆಯಲ್ಲಿ ರೀಮೇಕ್ ಆಯಿತು. 'ನಾಂದಿ', 'ಪ್ರೇಮಕ್ಕೂ ಪರ್ಮಿಟ್ಟೆ', 'ನಮ್ಮ ಮಕ್ಕಳು', 'ನಾ ಮೆಚ್ಚಿದ ಹುಡುಗ', 'ಸೀತಾ', 'ನಮ್ಮ ಮ್ಮನ ಸೊಸೆ' ಮುಂತಾದ ಚಿತ್ರಗಳನ್ನು ತಯಾರಿಸಿದ ವಾದಿರಾಜ್ 'ಸೀತಾ' ಚಿತ್ರವನ್ನು ತಾವೇ ನಿರ್ದೇಶಿಸಿದರು. ಇವರು ನಿರ್ದೇಶಿಸಿದ 'ದಂಗೆ ಎದ್ದ ಮಕ್ಕಳು' ಚಿತ್ರಕ್ಕೆ ರಾಷ್ಟ್ರ ಪ್ರಶಸ್ತಿ ದೊರೆಯಿತು. 'ಕಾಕನಕೋಟೆ' ಚಿತ್ರದ ನಿರ್ಮಾಣದಲ್ಲಿ ಪಾಲ್ಗೊಂಡ ವಾದಿರಾಜ್ ಇತ್ತೀಚೆಗೆ ನಿರ್ದೇಶಿಸಿದ ಮಕ್ಕಳ ಚಿತ್ರ 'ಇನ್ನೊಂದು ಮುಖ'. ವಾದಿರಾಜ್ ೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಹಾಸ್ಯಪಾತ್ರಗಳಲ್ಲಿ ಅಭಿನಯಿಸಿದ್ದಾರೆ.

### ವಾಸನ್.ಎ.ವಿ.ಎಸ್

ದಕ್ಷಿಣ ಭಾರತದ ಹಳೆಯ ಚಿತ್ರ



ವಿತರಣಾ ಸಂಸ್ಥೆಯಲ್ಲಿ ಒಂದಾದ 'ಈಸ್ಟಿಂಡಿಯಾ ಫಿಲ್ಮ್ ಕಂಪೆನಿ'ಯಲ್ಲಿ ನೌಕರಿಯಲ್ಲಿದ್ದವರು. ನಂತರ ನೌಕರಿಯನ್ನು ತೊರೆದು ಕೆಲವು ಮಿತ್ರರೊಡನೆ ಕೆಲವೊಂದು ಚಿತ್ರ ವಿತರಣಾ ಸಂಸ್ಥೆಯನ್ನು ಸ್ಥಾಪಿಸಿದರು. ಹಳೆಯ ಕನ್ನಡ ಚಿತ್ರಗಳಿಗೆ ಮರುಹುಟ್ಟು ನೀಡಿದರು. 'ಸಪ್ತಗಿರಿ ಫಿಲಂಸ್' ಲಾಂಛನದಡಿ ಬಹಳಷ್ಟು ಕನ್ನಡ ಚಿತ್ರಗಳು ಬಿಡುಗಡೆಯಾದವು. 'ಶಾಂತಿ ನಿವಾಸ' ಚಿತ್ರವನ್ನು ನಿರ್ಮಿಸಿದ್ದಾರೆ.

### ವಾಸು



ಮೈಸೂರು ಅರಮನೆಯ ಕಾಂಟ್ರಾಕ್ಟ್‌ದಾರರಾದ ಮುನಿವೆಂಕಟಪ್ಪನವರ ಮನೆತನದವರು. ಮೈಸೂರಿನ ಉಡ್‌ಲ್ಯಾಂಡ್ಸ್ ಟಾಕೀಸ್‌ನ ಉಸ್ತುವಾರಿ ವಹಿಸಿಕೊಂಡರು. ಚಿತ್ರಮಂದಿರವನ್ನು ಕಾಲಕ್ಕೆ ಅನುಗುಣವಾಗಿ ಆಧುನೀಕರಿಸಿ ಹಲವಾರು ಕನ್ನಡ ಚಿತ್ರಗಳನ್ನು ಪ್ರದರ್ಶಿಸಿದ್ದಾರೆ. ಇವರು ಚಿತ್ರ ವಿತರಕರೂ ಆಗಿದ್ದಾರೆ.

### ವಾಸು ವಿಕ್ಟರಿ

ಈಚಿನ ದಿನಗಳಲ್ಲಿ ಹೆಚ್ಚಾಗಿ ಕೇಳಿಬರುತ್ತಿರುವ



ಹೆಸರು ನಿರ್ದೇಶಕ ವಿಕ್ಟರಿ ವಾಸು ಅವರದು. ಬೆಂಗಳೂರಿನವರೇ ಆದ ಇವರು ಬಿ.ಎಸ್‌ಸಿ ಪದವೀಧರರು. ಉಮೇಶ್-ಪ್ರಭಾಕರ್ ನಿರ್ದೇಶನದ 'ಅವಳೇ ನನ್ನ ಹೆಂಡ್ತಿ'ಯಲ್ಲಿ ಸಹಾಯಕ ನಿರ್ದೇಶಕರಾಗಿ ಚಿತ್ರರಂಗವನ್ನು ಪ್ರವೇಶಿಸಿದ ಇವರು ಇದುವರೆಗೆ ೪೫ ಚಿತ್ರಗಳಿಗೆ ಸಹಾಯಕ ಮತ್ತು ಸಹನಿರ್ದೇಶಕರಾಗಿ ಕೆಲಸ ಮಾಡಿದ್ದಾರೆ. ಅವುಗಳಲ್ಲಿ ಹೆಚ್ಚು ಸಾಹಸಪ್ರಧಾನ ಚಿತ್ರಗಳು. ಇವರೇ ಸ್ವಂತವಾಗಿ ನಿರ್ದೇಶಿಸಿದ ಪ್ರಥಮ ಚಿತ್ರ 'ಸೆಂಟ್ರಲ್ ರೌಡಿ'. ನಂತರ ನಿರ್ದೇಶಿಸಿದ ಚಿತ್ರಗಳು 'ಗೂಂಡಾ ಪೊಲೀಸ್', 'ಪುಟ್ಮಲ್ಲಿ', 'ರಕ್ಷಕ' ಮತ್ತು 'ಪಟೇಲ'.

### ವಾಸುದೇವ ಗಿರಿಮಾಜಿ

ರಂಗಭೂಮಿ-ಚಲನಚಿತ್ರ ಕಲಾವಿದ ಹಾಗೂ



ನಿರ್ದೇಶಕ. ಮೈಸೂರಿನಲ್ಲಿ ಜನನ (೧೯ನೇ ಮಾರ್ಚ್ ೧೯೧೨). ಬಾಲನಟರಾಗಿ ರಂಗಪ್ರವೇಶ ಮಾಡಿದರು. ತಾರುಣ್ಯದಲ್ಲಿ 'ರಾಮಚಂದ್ರಬಾಬು' ಕಾದಂಬರಿ ಬರೆದು ಖ್ಯಾತರಾದರು. ಪೀರ್ ಸಾಹೇಬರ ನಾಟಕ ಮಂಡಲಿ ಸೇರಿದರು. ೧೯೪೧ರಲ್ಲಿ ಗುಬ್ಬಿವೀರಣ್ಣನವರ 'ಸುಭದ್ರಾ' ಚಿತ್ರದಲ್ಲಿ ಕೃಷ್ಣನ ಪಾತ್ರ ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ಬಂಗಾಳಿ ಚಿತ್ರಗಳ ಖ್ಯಾತ ನಿರ್ದೇಶಕ ದೇಬಕಿಕುಮಾರ್ ಬೋಸ್ ಬಳಿ ಸಹಾಯಕರಾಗಿ ಕೆಲಸ ಮಾಡಿದರಲ್ಲದೆ ಅಲ್ಲಿನ ಚಿತ್ರಗಳಲ್ಲಿ ಪಾತ್ರ ಮಾಡಿದರು. 'ಇರಾನ್ ಕಿ ಏಕ್ ರಾತ್' ಹಿಂದಿ ಚಿತ್ರ ನಿರ್ದೇಶಿಸುವ ಮೂಲಕ ಸ್ವತಂತ್ರ ನಿರ್ದೇಶಕರಾದರು. ಸಿಂಗಪುರಕ್ಕೆ ತೆರಳಿ ಅಲ್ಲಿ ಎರಡು ಚಿತ್ರಗಳನ್ನು ನಿರ್ದೇಶಿಸಿದರು. ಕನ್ನಡ ಸೇವೆ ಮಾಡ ಬಯಸಿ ತಾಯ್ನಾಡಿಗೆ ಮರಳಿದ ಇವರು 'ವಿಚಿತ್ರ ಪ್ರಪಂಚ' (೧೯೫೫)ದಲ್ಲಿ ಅಭಿನಯಿಸಿದರು. ಕನ್ನಡ ಚಿತ್ರರಂಗದಲ್ಲಿ ನಿರ್ದೇಶಕನ ಸ್ಥಾನ ಸಿಗದೆ ಹೋದರೂ ೩೦ ಚಿತ್ರಗಳಿಗೆ ಸಹ ನಿರ್ದೇಶಕರಾಗಿ ಕೆಲಸ ಮಾಡಿದರು. ೭೫ ಚಿತ್ರಗಳಿಗೆ ಚಿತ್ರಕಥೆ, ಸಂಭಾಷಣೆ ರಚಿಸಿದರು. ಸುಮಾರು ೬೦ ಚಿತ್ರಗಳಲ್ಲಿ ಅಭಿನಯಿಸಿದರು. ಬಾಲಕೃಷ್ಣ ಅವರ ಅಭಿಮಾನ್ ಸ್ಟುಡಿಯೋದ ನಿರ್ವಹಣಕಾರರಾಗಿ ಕೆಲಸ ಮಾಡಿದರು. ಇಳಿವಯಸ್ಸಿನಲ್ಲಿ ರಾಜೇಂದ್ರಸಿಂಗ್‌ಬಾಬು ಅವರ ಚಿತ್ರದಲ್ಲಿ ಖಳನಾಗಿ ಅಭಿನಯಿಸಿ ಬತ್ತದ ಪ್ರತಿಭೆ ಎಂದು ಸಾಬೀತು ಮಾಡಿದರು. ಕನ್ನಡ ಚಲನಚಿತ್ರ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಇವರನ್ನು ಸನ್ಮಾನಿಸಲಾಯಿತು.

### ವಾಸುದೇವಮೂರ್ತಿ.ಆರ್

ಮೈಸೂರಿನ ಪ್ರಮುಖ ವರ್ತಕರಾದ ರೆಟ್ಟೆಹಳ್ಳಿ ರಾಮಪ್ಪ ಅವರ ಪುತ್ರ. ಮೈಸೂರಿನ 'ಪ್ರಭಾ' ಟಾಕೀಸ್‌ಅನ್ನು ನಿರ್ಮಿಸಿದರು. ಸುಸಜ್ಜಿತವಾದ ಚಿತ್ರಮಂದಿರ ನಿರ್ಮಿಸಿದ ಇವರು ಅವರ ಸುಚಿತ್ರಕ್ಕೆ ಬಹಳ ಪ್ರಾಮುಖ್ಯತೆಯನ್ನು ನೀಡಿದರು. ಇವರ ನಂತರ ಇವರ ಪುತ್ರ ಗಣೇಶ್ ಚಿತ್ರಮಂದಿರವನ್ನು ಸುಸಜ್ಜಿತವಾದ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ. ಮಹಾಜನ್ ಎಜುಕೇಷನ್ ಸೊಸೈಟಿ ಎಂಬ ಶೈಕ್ಷಣಿಕ ಸಂಸ್ಥೆಯ ಪ್ರಮುಖ ದಾನಿಗಳಲ್ಲಿ ಒಬ್ಬರಾಗಿರುವ ಇವರು ಮೈಸೂರಿನ ರೋಟರಿ ಕ್ಲಬ್ ಸದಸ್ಯರಾಗಿದ್ದಾರೆ.

### ವಾಸುದೇವರಾವ್.ಎಂ.ವಿ

ರಂಗಭೂಮಿ-ಚಲನಚಿತ್ರ ಕಲಾವಿದ. ಮೂಡಬಿದರೆ ವೆಂಕಟರಾವ್ ವಾಸುದೇವರಾವ್ ಬಾಲನಟರಾಗಿ ರಂಗಭೂಮಿ ಪ್ರವೇಶಿಸಿದರು. ಹಲವು ಕಂಪನಿಗಳ ನಂತರ ಗುಬ್ಬಿ ನಾಟಕ ಕಂಪೆನಿ ಸೇರಿದರು. 'ಜೇಬಿ' ಎಂದೇ ಎಲ್ಲರೂ ಗುರುತಿಸುತ್ತಾರೆ. ೧೯೭೫ರಲ್ಲಿ 'ಚೋಮನದುಡಿ' ಮೂಲಕ ಚಿತ್ರರಂಗ ಪ್ರವೇಶಿಸಿದರು. ಮೊದಲ ಚಿತ್ರದಲ್ಲಿ ಅಭಿನಯಿಸಿ ರಾಜ್ಯಸರ್ಕಾರದಿಂದ ಅತ್ಯುತ್ತಮ ನಟ ಪ್ರಶಸ್ತಿ ಪಡೆದುಕೊಂಡರು. ಕೇಂದ್ರ



ಸರ್ಕಾರ ಸಹ ಈ ಚಿತ್ರದಲ್ಲಿನ ಅವರ ಅಭಿನಯಕ್ಕೆ 'ರಜತಕಮಲ' ಪ್ರಶಸ್ತಿ ನೀಡಿತು. ಖ್ಯಾತ ನಿರ್ದೇಶಕ ಶ್ಯಾಂ ಬೆನಗಲ್ ಅವರು 'ಕೊಂಡೂರಾ' ತೆಲುಗು ಚಿತ್ರಕ್ಕೆ ಆಹ್ವಾನಿಸಿದರು. ಅಪರೂಪವಾದರೂ ಉತ್ತಮ ಪಾತ್ರಗಳು ಸಿಕ್ಕಿವೆ ಎಂಬುದು ಮುಖ್ಯ. 'ಮೈತ್ರಿ', 'ದಂಗೆಯೆದ್ದ ಮಕ್ಕಳು', 'ಮುತ್ತು ಒಂದು ಮುತ್ತು', 'ಕಳಸಾಪುರದ ಹುಡುಗರು', 'ಡೊಂಬರ ಕೃಷ್ಣ', 'ದೊರೆ' ಮೊದಲಾದವು ಇವರು ಅಭಿನಯಿಸಿದ ಚಿತ್ರಗಳು. ಕಿರುತೆರೆಯ ಹಲವು ಧಾರಾವಾಹಿಗಳಲ್ಲಿಯೂ ಅಭಿನಯಿಸಿದ್ದಾರೆ.

### ವ್ಯಾಸರಾವ್.ಎಂ.ಎನ್

ಎರಡು ದಶಕಗಳಿಗೂ ಹೆಚ್ಚು ಕಾಲದಿಂದ ಚಿತ್ರ ಸಾಹಿತಿಯಾಗಿ ಜನಪ್ರಿಯರಾಗಿರುವ ಎಂ.ಎನ್.ವ್ಯಾಸರಾವ್ ವೃತ್ತಿಯಿಂದ ಬ್ಯಾಂಕ್ ಉದ್ಯೋಗಿ. ನಿರ್ದೇಶಕ ಪುಟ್ಟಣ್ಣ ಕಣಗಾಲ್ ಅವರ 'ಶುಭಮಂಗಳ' ಚಿತ್ರಕ್ಕೆ ಹಾಡುಗಳನ್ನು ಬರೆಯುವುದರ ಮೂಲಕ ೧೯೭೫ರಲ್ಲಿ ಚಿತ್ರರಂಗ ಪ್ರವೇಶಿಸಿದರು. 'ನಾಕೊಂದ್ಲ



ನಾಕು, ನಾಕೆರಡ್ಲ ಎಂಟು....', 'ಸೂರ್ಯಂಗೂ ಚಂದ್ರಂಗೂ ಬಂದಾರೆ ಮುನಿಸು....' ಹಾಡುಗಳು ಬಹಳ ಮೆಚ್ಚುಗೆ ಪಡೆದವು. 'ರಂಗನಾಯಕಿ', 'ಮಾನಸ ಸರೋವರ', 'ಮಾಗಿಯ ಕನಸು', 'ದೀಪ', 'ಕಾಡಿನಬೆಂಕಿ', 'ಗಂಧರ್ವಗಿರಿ', 'ಬಾಳೊಂದು ಭಾವಗೀತೆ', 'ಪರಮೇಶಿ ಪ್ರೇಮ ಪ್ರಸಂಗ' ಚಿತ್ರಗಳಿಗೆ ಸಾಹಿತ್ಯ ರಚನೆ ಮಾಡಿದ್ದಾರೆ. 'ಮಂದಾರ ಪುಷ್ಪವು ನೀನು....', 'ಹಾಡು, ಹಾಡು ಹಳೆಯದಾದರೇನು....', 'ಋತುಮಾನ ಸಂಪುಟದಿ....', 'ಉಪ್ಪಿಲ್ಲ ಮೆಣಸಿಲ್ಲ....' ಮೊದಲಾದ ಹಾಡುಗಳು ಅವರಿಗೆ ಬಹಳ ಜನಪ್ರಿಯತೆಯನ್ನು ತಂದುಕೊಟ್ಟಿವೆ. ಕೆಲವು ಚಿತ್ರಗಳಿಗೆ ಚಿತ್ರಕಥೆ, ಸಂಭಾಷಣೆಯ ನೆರವನ್ನು ನೀಡಿದ್ದಾರೆ. ಕಿರುತೆರೆಗೂ ಸಾಹಿತ್ಯ ನೀಡಿದ್ದಾರೆ.

### ವಿಕ್ಟರ್ ಯಾದವ್

ಕನ್ನಡ ಚಿತ್ರರಂಗದ ಅತ್ಯಂತ ಜನಪ್ರಿಯ ಸಂಕಲನಕಾರರಲ್ಲಿ ಒಬ್ಬರಾದ ವಿಕ್ಟರ್ ಯಾದವ್ ಹಿರಿಯ ಸಂಕಲನಕಾರರಾದ ಬಾಲ್ ಜಿ.ಯಾದವ್ ಅವರ ಬಳಿ ಸಹಾಯಕರಾಗಿ ಹಲವು ವರ್ಷಗಳ ಕಾಲ ಅನುಭವ ಗಳಿಸಿದವರು. ವಿಕ್ಟರ್ ತಮ್ಮ ಗುರುಗಳ ನೆನಪಿಗಾಗಿ ತಮ್ಮ ಹೆಸರಿನ ಜೊತೆಗೆ ಯಾದವ್ ಸೇರಿಸಿಕೊಂಡು ವಿಕ್ಟರ್ ಯಾದವ್ ಎಂದೇ ಖ್ಯಾತರಾದರು. ೧೯೫೪ರಿಂದ ಫಿಲಂ ಸೆಂಟರ್ ಸ್ಟುಡಿಯೋದಲ್ಲಿ ಅಪ್ರೆಂಟಿಸ್ ಆಗಿ ದುಡಿದ



ವಿಕ್ಟರ್, ಬಾಲ್ ಜಿ.ಯಾದವ್ ಅವರಿಗೆ ಬಹುತೇಕ ಚಿತ್ರಗಳಲ್ಲಿ ಸಹಾಯಕರಾಗಿದ್ದರು. ಬಾಲ್ ಜಿ.ಯಾದವ್ ನಿಧನದ ನಂತರ 'ಕಿಟ್ಟು ಪುಟ್ಟು' ಚಿತ್ರದ ಸ್ವತಂತ್ರ ಸಂಕಲನಕಾರರಾಗಿ ೧೯೭೭ರಲ್ಲಿ ಕನ್ನಡ ಚಿತ್ರರಂಗಕ್ಕೆ ಪರಿಚಿತರಾದರು. 'ಏನೇ ಬರಲಿ ಪ್ರೀತಿ ಇರಲಿ', 'ಹದ್ದಿನ ಕಣ್ಣು', 'ದಂಗೆ ಎದ್ದ ಮಕ್ಕಳು', 'ಕುಳ್ಳ ಕುಳ್ಳಿ', 'ರಾಮ ಲಕ್ಷ್ಮಣ', 'ಹಂತಕನ ಸಂಚು', 'ಮಂಕುತಿಮ್ಮ', 'ಶಿಕಾರಿ', 'ಜೋಡಿ ಜೀವ', 'ಜಿಮ್ಮಿಗಲ್ಲು', 'ಪ್ರೀತಿ ಮಾಡು ತಮಾಷೆ ನೋಡು' ಮುಂತಾದ ಜನಪ್ರಿಯ ಚಿತ್ರಗಳ ಸಂಕಲನಕಾರರಾಗಿ ಕಾರ್ಯ ನಿರ್ವಹಿಸಿದ್ದಾರೆ.

## ವಿಜಯ್ (ವಿಜಯರೆಡ್ಡಿ)

ಅಧಿಕ ಸಂಖ್ಯೆಯ ಕನ್ನಡ ಚಿತ್ರಗಳನ್ನು ನಿರ್ದೇಶಿಸಿದವರಲ್ಲಿ ವಿಜಯರೆಡ್ಡಿ (ವಿಜಯ್) ಒಬ್ಬರು. ಜುಲೈ ೧೫, ೧೯೩೬ರಲ್ಲಿ ಆಂಧ್ರಪ್ರದೇಶದ ಕಾಡೇಪಲ್ಲಿ ಗುಡೆಮ್ (ಪಶ್ಚಿಮ ಗೋದಾವರಿ ಜಿಲ್ಲೆ)ನಲ್ಲಿ



ರೈತ ಕುಟುಂಬದಲ್ಲಿ ಜನಿಸಿದರು. ಚಿಕ್ಕ ವಯಸ್ಸಿನಿಂದಲೂ ಶಾಲೆಯಲ್ಲಿ, ಮನೆಯಲ್ಲಿ ಅವರಿವರನ್ನು ಅಣಕಿಸಿಕೊಂಡು, ಹಾಸ್ಯ ಮಾಡಿಕೊಂಡು, ವಿವಿಧ ಪಾತ್ರಗಳನ್ನು ಅಭಿನಯಿಸಿಕೊಂಡು ಸುತ್ತಲಿನವರನ್ನು ರಂಜಿಸುವ ಹವ್ಯಾಸ. ಚಿತ್ರರಂಗದ ವ್ಯಾಮೋಹದಿಂದ ೧೯೫೫ರಲ್ಲಿ ಮದರಾಸಿಗೆ ಹೋಗಿ ಅಲ್ಲಿ ಖ್ಯಾತ ನಿರ್ಮಾಪಕ-ನಿರ್ದೇಶಕ ವಿಠಲಾಚಾರ್ಯರವರ ತೆಲುಗು, ಕನ್ನಡ ಚಿತ್ರಗಳಿಗೆ ಸಹಾಯಕ ನಿರ್ದೇಶಕರಾಗಿ ದುಡಿಮೆ. ಚಿತ್ರರಂಗದ ವಿವಿಧ ಭಾಗಗಳಲ್ಲಿ ಕೆಲಸ ಮಾಡಿ ಈ ಮಾಧ್ಯಮ ಮತ್ತು ಅದರ ತಾಂತ್ರಿಕತೆಯ ಬಗ್ಗೆ ಜ್ಞಾನ ಪಡೆದರು. ೧೯೭೦ರಲ್ಲಿ 'ರಂಗಮಹಲ್ ರಹಸ್ಯ' ಚಿತ್ರದ ಮೂಲಕ ವಿಜಯ್ ಸ್ವತಂತ್ರ ನಿರ್ದೇಶಕರಾದರು. ಮುಂದೆ ಇವರು ನಿರ್ದೇಶಿಸಿದ ಅನೇಕ ಚಿತ್ರಗಳು ಆರ್ಥಿಕವಾಗಿ ಯಶಸ್ವಿಯಾದವು. ಜೊತೆಗೆ ಒಳ್ಳೆಯ ಹೆಸರನ್ನೂ ಗಳಿಸಿದವು. ಅವರ ಅನೇಕ ಚಿತ್ರಗಳಲ್ಲಿ ರಾಜಕುಮಾರ್‌ರವರೇ ನಾಯಕರು. ಆ ಚಿತ್ರಗಳಂತೂ ವಿಶೇಷ ಜನಮನ್ನಣೆ ಪಡೆದವು. ವಿಜಯ್ ಅವರು ೩೭ ಕನ್ನಡ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅವುಗಳಲ್ಲಿ ಪ್ರಮುಖವೆನಿಸಿದವು : 'ಗಂಧದ ಗುಡಿ' (೧೯೭೩), 'ಮಯೂರ' (೧೯೭೫), 'ನಾ ನಿನ್ನ ಮರೆಯಲಾರೆ' (೧೯೭೬), 'ಸನಾದಿ ಅಪ್ಪಣ್ಣ' (೧೯೭೭) ಮತ್ತು 'ಶಿವ ಮೆಚ್ಚಿದ ಕಣ್ಣಪ್ಪ' (೧೯೮೮). ಪ್ರಸ್ತುತ ವಿಜಯ್ ಅವರ ಮಗ ನಿರ್ಮಾಪಕರಾಗಿ ಚಿತ್ರರಂಗದ ನಂಟನ್ನು ಮುಂದುವರಿಸಿದ್ದಾರೆ. ವಿಜಯ್-ವಿ.ಸೋಮಶೇಖರ್ ಜೊತೆಗೂಡಿ ಚಿತ್ರ ನಿರ್ಮಿಸಿ, ನಿರ್ದೇಶಿಸಿದ್ದೂ ಉಂಟು.

## ವಿಜಯ್ (ಸಾಹಸ)

ಸಾಹಸ ಸಂಯೋಜಕರಾದ ವಿಜಯ್ ಸಾಹಸ ನಿರ್ದೇಶಕರಾದ ಸ್ವಾಮಿನಾಥನ್ ಅವರ ಪುತ್ರ. ಸಾಹಸ ನಿರ್ದೇಶಕ ಶ್ಯಾಮ ಸುಂದರ



ಶೆಟ್ಟಿ ಅವರ ಸಹಾಯಕರಾಗಿ ಕಾರ್ಯನಿರ್ವಹಿಸಿದ ವಿಜಯ್ ಸಾಹಸ ನಿರ್ದೇಶಕರ ಸಹಾಯಕರಾಗಿ 'ಹಾವಿನ ಹೆಜ್ಜೆ' ಚಿತ್ರದಲ್ಲಿ ಕಾರ್ಯ ನಿರ್ವಹಿಸುವ ಮೂಲಕ ಕನ್ನಡ ಚಿತ್ರರಂಗವನ್ನು ಪ್ರವೇಶ ಮಾಡಿದರು. ಸಿ.ವಿ. ರಾಜೇಂದ್ರನ್ ನಿರ್ದೇಶನದ 'ಅಳಿಯ ದೇವರು' ಚಿತ್ರದ ಮೂಲಕ ಸ್ವತಂತ್ರ ಸಾಹಸ ನಿರ್ದೇಶಕರಾದರು. 'ಭೂಲೋಕದಲ್ಲಿ ಯಮರಾಜ', 'ಜನ್ಮ ಜನ್ಮದಾ ಅನುಬಂಧ', 'ಖದೀಮ ಕಳ್ಳರು', 'ಉಷಾ ಸ್ವಯಂವರ', 'ಸಾಹಸಸಿಂಹ', ಮುಂತಾದ ಚಿತ್ರಗಳಲ್ಲಿ ಯಶಸ್ವಿಯಾಗಿ ಸಾಹಸ ನಿರ್ದೇಶನ ಮಾಡಿದರು. ವಿಷ್ಣುವರ್ಧನ್, ಜೋಸೈಮನ್, ವಿಜಯ್ ಸಂಗಮವೆಂದರೆ ಯಶಸ್ಸು ಎಂಬಷ್ಟು ಖ್ಯಾತಿಯಿತ್ತು. ವಿಜಯ್ ಸರೋವರ್ ಸಂಜೀವ್ ಅವರಿಗಾಗಿ 'ಪವಿತ್ರಪಾಪಿ' ಚಿತ್ರ ನಿರ್ದೇಶಿಸಿದರು. ನಂತರ ಮದರಾಸಿಗೆ ಹಿಂತಿರುಗಿ ಸಾಹಸ ಕಲಾವಿದರ ಸಂಘಟನೆಯಲ್ಲಿ ವಿಶೇಷ ಪಾತ್ರ ವಹಿಸಿದರು.

## ವಿಜಯಕಾಶಿ

ರಂಗಭೂಮಿ ಹಾಗೂ ಚಲನಚಿತ್ರ ನಟ.



ಶಾಲಾ ಕಾಲೇಜು ದಿನಗಳಲ್ಲಿ ನಾಟಕಗಳ ಬಗ್ಗೆ ಆಸಕ್ತಿ ಹೊಂದಿದ್ದ ಇವರು ಶಿವಮೊಗ್ಗೆಯ ಸಾಗರದವರು. ಹೆಗ್ಗೋಡಿನ ನೀನಾಸಂ, ಶಿವಮೊಗ್ಗೆಯ ಹವ್ಯಾಸಿ ನಾಟಕ ತಂಡಗಳ ಸಂಪರ್ಕಗಳಿಂದ ಚಲನಚಿತ್ರರಂಗ ಪ್ರವೇಶ. ಗಿರೀಶ್ ಕಾಸರವಳ್ಳಿ ನಿರ್ದೇಶನದ 'ಆಕ್ರಮಣ' ಚಿತ್ರದ ನಾಯಕನಾಗಿ ಚಿತ್ರರಂಗ ಪ್ರವೇಶಿಸಿದ ವಿಜಯಕಾಶಿ ನಂತರ 'ಹೊಸಬಾಳು', 'ಎಲ್ಲಾ ಹೆಂಗಸರಿಂದ', 'ಶ್ರೀ ಸತ್ಯನಾರಾಯಣ ಪೂಜಾಫಲ', 'ಪರಾಜಿತ', 'ಸುಪ್ರಭಾತ', 'ಪ್ರೇಮಪರ್ವ', 'ಪ್ರೇಮಗಂಗೆ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ಇವರ ಅಭಿನಯದ 'ಮಾರ್ಜಾಲ', 'ಜಗ್ಗು', 'ಸಂಗ್ಯಾ - ಬಾಳ್ಯ' ಗಮನ ಸೆಳೆವಂಥ ಚಿತ್ರಗಳು. ಕೆಲಕಾಲ ಖಳನಟನಾಗಿಯೂ ಗಮನ ಸೆಳೆದರು. ರಂಗಭೂಮಿ, ಕಿರುತೆರೆಗಳಲ್ಲಿ ಇವರ ಪ್ರತಿಭೆ ಹೆಚ್ಚು ಎದ್ದು ಕಂಡಿದೆ. ನೃತ್ಯಪಟು ವೈಜಯಂತಿ ಅವರನ್ನು ವಿವಾಹವಾಗಿರುವ ವಿಜಯಕಾಶಿ ಸಾಮಾಜಿಕ ಕಳಕಳಿಯುಳ್ಳ ನಟ.

## ವಿಜಯನಾರಸಿಂಹ

ಹಿರಿಯ ಚಿತ್ರಸಾಹಿತಿ. ಮಂಡ್ಯ ಜಿಲ್ಲೆಯ ಮೇಲುಕೋಟೆ ಬಳಿ ಇರುವ ಹಳೇ ಬೀಡಿನಲ್ಲಿ ಜನನ. ವಿಜಯನಾರಸಿಂಹರಿಗೆ ಕವಿ -ಸಾಹಿತಿಗಳ ಸಂಪರ್ಕ-ಸಹವಾಸ. ಹಿರಿಯ ಕವಿಗಳಾದ ಪುತಿನ, ಗೋಪಾಲಕೃಷ್ಣ ಅಡಿಗ ಅವರ ನಿಕಟವರ್ತಿಯಾಗಿ ಸಾಹಿತ್ಯಾನುಭವ ಪಡೆದರು. ನಾಟಕದ ಗೀಳು ಸ್ವಂತ ನಾಟಕ ಕಂಪನಿಯನ್ನು ಸ್ಥಾಪಿಸುವಂತೆ ಮಾಡಿತು. ಪುಟ್ಟಣ್ಣ ಕಣಗಾಲ್, ಪ್ರಭಾಕರ



ಶಾಸ್ತ್ರಿ, ಯೋಗಾನರಸಿಂಹ ಅವರೊಂದಿಗಿನ ಒಡನಾಟ ಚಿತ್ರರಂಗಕ್ಕೆ ಎಳೆತಂದಿತು. ಸೋದರ ರಾಮಚಂದ್ರಶಾಸ್ತ್ರಿ ಅವರ ಕರೆಯ ಮೇರೆಗೆ ಹಾಗೂ ನಿರ್ದೇಶಕ ಜಿ.ವಿ.ಅಯ್ಯರ್ ಅವರ ಒತ್ತಾಯದ ಮೇರೆಗೆ 'ಓಹಿಲೇಶ್ವರ' ಚಿತ್ರಕ್ಕೆ 'ಈ ದೇಹದಿಂದ ದೂರನಾದೆ ಏಕೆ ಆತ್ಮನೇ...' ಎಂಬ ಗೀತೆ ಬರೆಯುವುದರೊಂದಿಗೆ ಚಿತ್ರಸಾಹಿತಿಯಾಗಿ ಚಿತ್ರರಂಗ ಪ್ರವೇಶಿಸಿದರು. ಮೊದಲ ಗೀತೆಯೇ ಅತ್ಯಂತ ಜನಪ್ರಿಯ. 'ಕನ್ಯಾರತ್ನ', 'ಮೋಹಿನಿ ಭಸ್ಮಾಸುರ' ಚಿತ್ರಗಳಿಗೆ ಹಾಡುಗಳನ್ನು ಜೊತೆಗೆ ಸಂಭಾಷಣೆಗಳನ್ನು ಬರೆದರು. ಇವರ ರಚನೆಯ ಗೀತೆಗಳಿದ್ದ 'ಬೆಸುಗೆ', 'ಭಾಗ್ಯಜ್ಯೋತಿ', 'ಶುಭಮಂಗಳ', 'ಮಿಸ್ ಲೀಲಾವತಿ', 'ಕಾವೇರಿ', 'ಪ್ರೇಮದ ಕಾಣಿಕೆ', 'ಉಪಾಸನೆ', 'ಧರ್ಮಸೆರೆ', 'ಗೆಜ್ಜೆಪೂಜೆ', 'ಬಂಗಾರದ ಮನುಷ್ಯ', 'ದೂರದ ಬೆಟ್ಟ', 'ಗಂಧರ್ವ ಗಿರಿ' ಮೊದಲಾದ ಚಿತ್ರಗಳು ಹೆಸರಿಸುವಂಥವು. 'ಭಾರತ ಭೂಶಿರ....', 'ಪ್ರೀತಿಯೇ ಆ ದ್ಯಾವ್ರು ತಂದ....', 'ನಾ ಬಿಡಲಾರೆ ಎಂದೂ ನಿನ್ನ....' ಮೊದಲಾದ ಹಾಡುಗಳು ಬಹಳ ಜನಪ್ರಿಯವಾಗಿವೆ. ಪುಟ್ಟಣ್ಣ ಕಣಗಾಲರ ಆಪ್ತಮಿತ್ರ. ಅವರ ಬಗ್ಗೆ ಒಂದು ಪುಸ್ತಕವನ್ನು ಬರೆದಿದ್ದಾರೆ. ೨೦೦೧ರಲ್ಲಿ ವಿಧಿವಶರಾದರು.

## ವಿಜಯಭಾಸ್ಕರ್

ಬೆಂಗಳೂರಿನ ಮಲ್ಲೇಶ್ವರದಲ್ಲಿ ೧೯೩೧ರಲ್ಲಿ ಜನಿಸಿದ ವಿಜಯಭಾಸ್ಕರ್ ಓದಿದ್ದು ಮೆಕಾನಿಕಲ್ ಇಂಜಿನಿಯರಿಂಗ್; ಆದದ್ದು ಸಂಗೀತ ನಿರ್ದೇಶಕ. ಚಿಕ್ಕಂದಿನಿಂದಲೇ



ಸಂಗೀತದಲ್ಲಿ ಆಸಕ್ತಿ. ಮುಂಬೈಗೆ ತೆರಳಿ, ಭಾರತೀಯ ಚಿತ್ರರಂಗದ ಸುಪ್ರಸಿದ್ಧ ಸಂಗೀತ ನಿರ್ದೇಶಕ ನೌಷಾದ್‌ರ ಬಳಿ ಅವರ ಸಹಾಯಕರಾಗಿ ಸಂಗೀತದಲ್ಲಿ ಪರಿಣತಿಗಳಿಸಿದರು. ಅದೇ ಸಮಯದಲ್ಲಿ ಹಿಂದೂಸ್ತಾನಿ ಹಾಗೂ ಕರ್ನಾಟಕ ಶಾಸ್ತ್ರೀಯ ಸಂಗೀತಗಳೆರಡರಲ್ಲಿಯೂ ಪರಿಣತರಾಗಿದ್ದ ಮಾಧವಲಾಲ್ ಮಾಸ್ಟರ್ ಅವರಲ್ಲಿ ವಿಶೇಷ ಸಂಗೀತ ಜ್ಞಾನವನ್ನು ಪಡೆದರು. ೧೯೫೫ರಲ್ಲಿ ವಿಜಯಭಾಸ್ಕರ್ ಅವರು ಬಿ.ಆರ್.ಕೃಷ್ಣಮೂರ್ತಿಯವರ ನಿರ್ದೇಶನದ 'ಶ್ರೀರಾಮಪೂಜಾ' ಕನ್ನಡ ಚಿತ್ರಕ್ಕೆ ಸಂಗೀತ ಸಂಯೋಜಿಸುವ ಮೂಲಕ ಸ್ವತಂತ್ರ ಸಂಗೀತ ನಿರ್ದೇಶಕರಾದರು. ಮುಂಬೈನಲ್ಲಿ ಗೆಳೆಯರಾಗಿದ್ದ ಕನ್ನಡಿಗ ಛಾಯಾಗ್ರಾಹಕ ಎನ್.ಜಿ.ರಾವ್ ಅವರು ೧೯೫೬ರಲ್ಲಿ ತಯಾರಿಸಿದ 'ಭಾಗ್ಯಚಕ್ರ' ಕನ್ನಡ ಚಿತ್ರಕ್ಕೆ ಕಥೆಯನ್ನು ಒದಗಿಸಿ, ಆ ಚಿತ್ರದ ಸಂಗೀತ ನಿರ್ದೇಶನವನ್ನೂ ಮಾಡಿದರು. ಕನ್ನಡದಲ್ಲಿ ಮಾತ್ರವಲ್ಲದೆ ನೆರೆಯ ತಮಿಳು, ತೆಲುಗು, ಮಲೆಯಾಳಂ ಭಾಷೆಗಳ ಚಿತ್ರಗಳಿಗೂ ಸಂಗೀತ ನೀಡಿ ಪ್ರಶಸ್ತಿ ಪಡೆದು, ಜನಪ್ರಿಯರಾದರು. ಇವರು ಸಂಗೀತ ಸಂಯೋಜಿಸಿದ ಅನೇಕ ಗೀತೆಗಳು ಸಾರ್ವಕಾಲಿಕ ಜನಪ್ರಿಯತೆಗಳಿಸಿವೆ. 'ನಾಂದಿ', 'ಬೆಳ್ಳಿ ಮೋಡ', 'ಉಯ್ಯಾಲೆ', 'ಗೆಜ್ಜೆಪೂಜೆ', 'ಮುಕ್ತಿ', 'ಶರಪಂಜರ', 'ನಾಗರಹಾವು', 'ಕಲ್ಯಾಣಿ', 'ಕಥಾಸಂಗಮ', 'ಗ್ರಹಣ', 'ಬ್ಯಾಂಕರ್ ಮಾರ್ಗಯ್ಯ', 'ಮಲಯ ಮಾರುತ', 'ಗಂಗವ್ವ ಗಂಗಾಮಾಯಿ' ಚಿತ್ರಗಳು ಒಂದಲ್ಲ ಒಂದು ಪ್ರಶಸ್ತಿ ಪಡೆದ ಇವರ ಸಂಗೀತ ನಿರ್ದೇಶನದ ಚಿತ್ರಗಳು. ಕಲಾತ್ಮಕ ಹಾಗೂ ವಾಣಿಜ್ಯ ಚಿತ್ರಗಳೆರಡರಲ್ಲಿಯೂ ಏಕ ರೀತಿಯ ಅಭಿರುಚಿಯುಳ್ಳ ವಿಜಯಭಾಸ್ಕರ್, ವಾಣಿ ಜಯರಾಂ ಅವರನ್ನು ಕನ್ನಡ ತೆರೆಗೆ ಪರಿಚಯಿಸಿದರು. ಕನ್ನಡದ ಸಿರಿಕಂಠಗಳಾದ ಬೆಂಗಳೂರು ಲತಾ, ಬಿ.ಕೆ.ಸುಮಿತ್ರಾರಂತಹ

ಕಿರಿಯರನ್ನು ಪ್ರೋತ್ಸಾಹಿಸಿದ್ದಾರೆ. ಬಿ.ಆರ್.ಛಾಯಾ ಚಿತ್ರರಂಗಕ್ಕೆ ಬಂದದ್ದು ಇವರಿಂದ. ಹಾಗೆಯೇ ಹೊಸ ಗೀತರಚನಕಾರರನ್ನೂ ಪ್ರೋತ್ಸಾಹಿಸಿದಾರೆ. 'ಮಣ್ಣಿನ ಮಗ', 'ಸೀತಾ', 'ಭಲೇ ಅದೃಷ್ಟವೋ ಅದೃಷ್ಟ', 'ನಂದಗೋಕುಲ', 'ಉಪಾಸನೆ', 'ಬಿಳಿ ಹೆಂಡ್ತಿ', 'ಹಂತಕನ ಸಂಚು', 'ಪ್ರೀತಿಸಿ ನೋಡು', 'ಜಿಮ್ಮಿಗಲ್ಲು', 'ಮಾನಸ ಸರೋವರ', 'ಕಾಡಿನ ಬೆಂಕಿ', 'ಮಿಥಿಲೆಯ ಸೀತೆಯರು' ಹೀಗೆ ಹಲವು ಚಿತ್ರಗಳಲ್ಲಿನ ಗೀತೆಗಳಿಗೆ ಸುಮಧುರ ರಾಗ ಲೇಪನ ಮಾಡಿ ಮತ್ತೆ ಮತ್ತೆ ಕೇಳುವಂತಾಗಿಸಿದ್ದಾರೆ. 'ತುಟಿಯ ಮೇಲೆ ತುಂಟ ಕಿರುನಗೆ...', 'ದೋಣಿಯೊಳಗೆ ನೀನು...', 'ಹೆಜ್ಜೆ ಹೆಜ್ಜೆಗೂ ಹೊಸ್ನೇ ಸುರಿಯಲಿ...', 'ಕರ್ಪೂರದ ಗೊಂಬೆ ನಾನು...', 'ಭಾರತ ಭೂಶಿರ ಮಂದಿರ ಸುಂದರಿ...', 'ಹಾಡು.. ಹಾಡು .. ಹಾಡು ಹಳೆಯದಾದರೇನು...', 'ತುತ್ತು ಅನ್ನ ತಿನ್ನೋಕೆ...', 'ಋತುಮಾನ ಸಂಪುಟದಿ...', 'ಈ ಸಂಜೆ ನಮ್ಮ ಭಾವನು...' ಇಂತಹ ನೂರಾರು ಮೆಲುಕು ಹಾಕುವಂಥ ಗೀತೆಗಳಿಗೆ ಮಾಧುರ್ಯದ ಸಿರಿ ತುಂಬಿದವರು ವಿಜಯಭಾಸ್ಕರ್. ಎರಡು ಬಾರಿ ರಾಷ್ಟ್ರದ ಅತಿ ಪ್ರತಿಷ್ಠಿತ 'ಸುರ್ ಸಿಂಗಾರ್' ಪ್ರಶಸ್ತಿಯನ್ನು 'ಮಲಯ ಮಾರುತ' ಮತ್ತು 'ಮುರಳೀಗಾನ ಅಮೃತ ಪಾನ' ಚಿತ್ರಗಳ ಶ್ರೇಷ್ಠ ಸಂಗೀತಕ್ಕಾಗಿ ಪಡೆದಿದ್ದಾರೆ. 'ಸುರ್ ಸಿಂಗಾರ್' ಪ್ರಶಸ್ತಿಯನ್ನು ಎರಡು ಬಾರಿ ಪಡೆದ ಪ್ರಥಮ ದಕ್ಷಿಣಾತ್ಯ ಸಂಗೀತ ನಿರ್ದೇಶಕರು. 'ಬೆಳ್ಳಿ ಮೋಡ' (೧೯೬೭-೬೮), 'ಯಾವ ಜನ್ಮದ ಮೈತ್ರಿ' (೧೯೭೧-೭೨), 'ಸಂಕಲ್ಪ' (೧೯೭೨-೭೩), 'ಧರಣಿ ಮಂಡಲ ಮಧ್ಯದೊಳಗೆ' (೧೯೮೩-೮೪), 'ಮುರಳೀಗಾನ ಅಮೃತ ಪಾನ' (೧೯೮೯-೯೦), 'ಪತಿತ ಪಾವನಿ' (೧೯೯೧-೯೨) ಚಿತ್ರಗಳಲ್ಲಿನ ಅತ್ಯುತ್ತಮ ಸಂಗೀತ ನಿರ್ದೇಶನಕ್ಕಾಗಿ ಆರು ಬಾರಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದ ವಿಜಯಭಾಸ್ಕರ್ ಅವರಿಗೆ 'ಮಲಯ ಮಾರುತ' ಚಿತ್ರದಲ್ಲಿನ ಸಂಗೀತಕ್ಕಾಗಿ ದೊರೆಯಬೇಕಾಗಿದ್ದ ಪ್ರಶಸ್ತಿಯು ಪ್ರಶಸ್ತಿ ನಿಯಮಾವಳಿಯಿಂದಾಗಿ ತಪ್ಪಿಹೋಯಿತು. 'ಸಂಗೀತ ಸಾಮ್ರಾಟ್', 'ಸಂಗೀತ ಕಲಾನಿಧಿ', 'ಸಂಗೀತ ಬ್ರಹ್ಮ' ಮುಂತಾದ ಹಲವು ಬಿರುದುಗಳಿಗೆ ಪಾತ್ರರು. ಚಲನಚಿತ್ರದ ಕಥೆಗನುಗುಣವಾದ ಹಿನ್ನೆಲೆ ಸಂಗೀತ ರೂಪಿಸುವಲ್ಲಿ ಸಿದ್ಧ ಹಸ್ತರಾದ ಕೆಲವೇ ಮಂದಿಯಲ್ಲಿ ಒಬ್ಬರು. ಕೇರಳದ ಅಡೂರು ಗೋಪಾಲಕೃಷ್ಣನ್ ಅವರ ಚಿತ್ರಗಳಿಗೂ ಸಂಗೀತ ನೀಡಿದ್ದಾರೆ. ಅಲ್ಲಿಯ ವಿಮರ್ಶಕರ ಪ್ರಶಸ್ತಿಯೂ ಲಭಿಸಿದೆ. ಪ್ರತಿಷ್ಠಿತ ಡಾ।ರಾಜಕುಮಾರ್ ಪ್ರಶಸ್ತಿ ಲಭಿಸಿದೆ.

### ವಿಜಯ ರಂಜಿನಿ
ಎಂಭತ್ತರ ದಶಕದಲ್ಲಿ ಬೆಳ್ಳಿತೆರೆಗೆ ಪರಿಚಿತರಾದ ನಟಿ ವಿಜಯ ರಂಜಿನಿ. ಸುಸಂಸ್ಕೃತ ಮನೆತನದಿಂದ ಬಂದ ಈಕೆ ಬಾಲ ನಟಿಯಾಗಿ ಚಿತ್ರರಂಗ ಪ್ರವೇಶಿಸಿದರು. ಶಾಸ್ತ್ರೀಯವಾಗಿ ನೃತ್ಯಕಲೆಯನ್ನು ಅಭ್ಯಾಸ ಮಾಡಿದವರು. ನಿರ್ದೇಶಕ ಸಿದಲಿಂಗಯ್ಯ ಅವರ 'ಪರಾಜಿತ' ಚಿತ್ರದಿಂದ ಬೆಳಕಿಗೆ ಬಂದ ವಿಜಯರಂಜಿನಿ ಗಮನ ಸೆಳೆದದ್ದು ರಾಜಕುಮಾರ್ ಅವರ ನಾಯಕಿಯಾಗಿ ಅಭಿನಯಿಸಿದ 'ಅದೇ ಕಣ್ಣು', ಚಿತ್ರದಿಂದ. 'ರೌಡಿರಾಜ', 'ಒಂದೇ ಗೂಡಿನ ಹಕ್ಕಿಗಳು', 'ಮುತ್ತಿನಂಥ ಮನುಷ್ಯ', 'ಲಂಚ ಲಂಚ ಲಂಚ', 'ಬ್ಯಾಂಕರ್ ಮಾರ್ಗಯ್ಯ', 'ಯಾರುಹೊಣೆ', ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಈಕೆ ಹಿರಿಯ ಪತ್ರಕರ್ತರಾದ ಬಿ.ಕೆ.ಗುರುರಾಜ್ ಅವರ ಪುತ್ರಿ.

### ವಿಜಯಲಕ್ಷ್ಮಿ
ಕನ್ನಡ ಚಿತ್ರರಂಗದಲ್ಲಿ ಹೊಸ ಪೀಳಿಗೆಯ ನಟಿಯರ ಪೈಕಿ ವಿಶೇಷವಾಗಿ ಗಮನ ಸೆಳೆದವರು ವಿಜಯಲಕ್ಷ್ಮಿ. ಟಿ.ಎಸ್.ನಾಗಾಭರಣ ನಿರ್ದೇಶನದ 'ನಾಗಮಂಡಲ' ಚಿತ್ರದ ಮೂಲಕ ಕನ್ನಡ ಪ್ರೇಕ್ಷಕರಿಗೆ ಪರಿಚಿತರು. ಈ ಚಿತ್ರ ದೆಹಲಿ ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದ ಪನೋರಮಾ ವಿಭಾಗದಲ್ಲಿಯೂ ಪ್ರದರ್ಶಿತವಾಯಿತು. ಹಿಂದಿ, ತೆಲುಗು, ತಮಿಳು ಮತ್ತು ಇಂಗ್ಲಿಷ್ ಭಾಷೆಗಳನ್ನೂ ಚೆನ್ನಾಗಿ ಬಲ್ಲ ವಿಜಯಲಕ್ಷ್ಮಿ ಭರತನಾಟ್ಯ ಕಲಾವಿದೆಯೂ ಹೌದು. 'ಜೋಡಿ ಹಕ್ಕಿ', 'ನಂ.೧', 'ಸ್ವಸ್ತಿಕ್', 'ಭೂಮಿ ತಾಯಿಯ ಚೊಚ್ಚಲ ಮಗ', 'ಹಬ್ಬ', 'ಸೂರ್ಯವಂಶ', 'ಅರುಣೋದಯ', 'ದುರ್ಗದ ಹುಲಿ', 'ನಕ್ಸಲೈಟ್' ಮುಂತಾದ ಅನೇಕ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಪ್ರತಿಭಾವಂತ ನಟಿ. ಗಂಭೀರ ಮತ್ತು ಲಘು ಪಾತ್ರಗಳಿಗೆ ಸಮಾನವಾಗಿ ಸಲ್ಲುವ ಉತ್ತಮ ಅಭಿನೇತ್ರಿ.

### ವಿಜಯಲಕ್ಷ್ಮಿ ಸಿಂಗ್
ಕನ್ನಡ ಚಿತ್ರರಂಗದ ಹಿರಿಯ ನಿರ್ಮಾಪಕ-ನಿರ್ದೇಶಕ ಡಿ.ಶಂಕರ್ ಸಿಂಗ್ ಮತ್ತು ನಟಿ ಪ್ರತಿಮಾದೇವಿಯವರ ಮಗಳು. ಜನಪ್ರಿಯ ನಟ ಜೈಜಗದೀಶ್‌ರವರ ಪತ್ನಿ. ವಿಜಯಲಕ್ಷ್ಮಿ ಹತ್ತಿರದವರಿಗೆಲ್ಲ 'ಮುನ್ನಿ'. ಆಕೆ ಮೊದಮೊದಲು ಕೆಲವು ಚಿತ್ರಗಳಲ್ಲಿ ಅಭಿನಯಿಸಿದರೂ ಆಕೆಯ ಒಲವು ನಿರ್ಮಾಣದತ್ತ ತಿರುಗಿತು. ಜೈ ಜಗದೀಶ್ ಮತ್ತು ಆಕೆ ಸೇರಿ ವೈಭವಲಕ್ಷ್ಮೀ ಪ್ರೊಡಕ್ಷನ್ಸ್ ಸಂಸ್ಥೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆ ಇದುವರೆಗೆ ಹತ್ತಕ್ಕೂ ಹೆಚ್ಚು ಚಿತ್ರಗಳನ್ನು ತಯಾರಿಸಿದೆ. ಅವುಗಳಲ್ಲಿ ಕೆಲವು ಪ್ರಶಸ್ತಿ ವಿಜೇತ ಚಿತ್ರಗಳು. 'ಹೂವು ಹಣ್ಣು', 'ಮುಂಗಾರಿನ ಮಿಂಚು', 'ಭೂಮಿ ತಾಯಿಯ ಚೊಚ್ಚಲ ಮಗ' ಚಿತ್ರಗಳು ಪ್ರಬುದ್ಧ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾದರೆ 'ರಾಣಿ ಮಹಾರಾಣಿ' ಮತ್ತು 'ಕಳ್ಳ ಮಳ್ಳ' ಜನಸಾಮಾನ್ಯರನ್ನು ರಂಜಿಸಿದ ಚಿತ್ರಗಳು. 'ಭೂಮಿ ತಾಯಿಯ ಚೊಚ್ಚಲ ಮಗ' ರಾಜ್ಯ ಸರ್ಕಾರದಿಂದ ೧೯೯೮-೯೯ನೇ ಸಾಲಿನಲ್ಲಿ ವಿಶೇಷ ಸಾಮಾಜಿಕ ಪರಿಣಾಮ ಬೀರುವ ಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿತು. ವಿಜಯಲಕ್ಷ್ಮಿ ಸಿಂಗ್ ಪರಿಣತ ವಸ್ತ್ರವಿನ್ಯಾಸಕಿಯಾಗಿಯೂ ಸಾಕಷ್ಟು ಗಮನಾರ್ಹ ಕೆಲಸ ಮಾಡಿದ್ದಾರೆ.

### ವಿಜಯಾ ಸತ್ಯಂ
ಮದರಾಸಿನ ವಿಜಯ ವಾಹಿನಿ ಸ್ಟುಡಿಯೋದಲ್ಲಿ ತೆರೆ ಮರೆಯ ತಾಂತ್ರಿಕರಾಗಿದ್ದ ಸತ್ಯಂ ಕನ್ನಡದ ಪ್ರಮುಖ ನಿರ್ದೇಶಕರ ಬಳಿ ಸಹಾಯಕರಾಗಿ ಕಾರ್ಯ ನಿರ್ವಹಿಸಿ ೧೯೬೮ರಲ್ಲಿ 'ಗೃಹಲಕ್ಷ್ಮಿ' ಚಿತ್ರವನ್ನು ನಿರ್ದೇಶಿಸುವ ಮೂಲಕ ನಿರ್ದೇಶಕರಾದರು. 'ಸುಖ ಸಂಸಾರ', 'ಉತ್ತರ ದಕ್ಷಿಣ', 'ಭಲೇ ರಾಣಿ', 'ಮಾಂಗಲ್ಯಭಾಗ್ಯ' ಮೊದಲಾದ ಚಿತ್ರಗಳು ಇವರು ನಿರ್ದೇಶಿಸಿದ ಕೆಲವು ಉತ್ತಮ ಚಿತ್ರಗಳು. ಈಗ ಅವರಿಲ್ಲ, ಇವರ ಮಗ ಪ್ರಸಾದ್ ಚಲನಚಿತ್ರ ನಿರ್ದೇಶಕರು.

### ವಿಜಿ ಸರಿಗಮ
ನಿರ್ದೇಶಕ, ನಟ, ನಾಟಕಕಾರ. ರಂಗವಿನ್ಯಾಸಕಾರ- ಹೀಗೆ ಬಹುಮುಖ ಪ್ರತಿಭೆಯ ವ್ಯಕ್ತಿ. ವಿಜಯಕುಮಾರ್ ಬೆಂಗಳೂರಿನ ನೂತನ ಸರ್ಕಾರಿ ವಿದ್ಯುತ್ ಕಾರ್ಖಾನೆಯಲ್ಲಿ (ಎನ್.ಜಿ.ಇ.ಎಫ್) ಉದ್ಯೋಗಿ. ಹವ್ಯಾಸಿ ರಂಗಭೂಮಿಯ ವಿಜಯಕುಮಾರ್ 'ಸಂಸಾರದಲ್ಲಿ ಸರಿಗಮ' ನಾಟಕದ ಅಭೂತಪೂರ್ವ ಯಶಸ್ಸಿನಿಂದ 'ಸರಿಗಮ ವಿಜಿ'ಯಾದರು. ನಿರ್ದೇಶಕ ಗೀತಪ್ರಿಯರ 'ಬೆಳುವಲದ ಮಡಿಲಲ್ಲಿ' ಚಿತ್ರದಿಂದ ಸಹ ನಿರ್ದೇಶಕ ಹಾಗೂ ನಟನಾಗಿ ಬೆಳ್ಳಿತೆರೆಗೆ ಪ್ರವೇಶ. ಅದೇ ಕ್ಷೇತ್ರದಲ್ಲಿ ಸಾಲು ಸಾಲು ಅವಕಾಶ. 'ಮಾಯಾ ಮನುಷ್ಯ', 'ಚಂಡ ಮಾರುತ', 'ಹರಕೆ', 'ಕಪ್ಪುಕೊಳ', 'ತಾಯಿನಾಡು', 'ಶುಭ ಮಹೂರ್ತ', 'ತಾಳಿಯ ಭಾಗ್ಯ', 'ದೇವರೆಲ್ಲಿದ್ದಾನೆ' ಮೊದಲಾದವು ಇವರ ಅಭಿನಯದ ಹೆಸರಿಸಬಹುದಾದ ಚಿತ್ರಗಳು. ವಿಜಿ ಅವರು ಚಿತ್ರ ಸಾಹಿತ್ಯಕ್ಕೂ ಸಾಕಷ್ಟು ದುಡಿದಿದ್ದಾರೆ. ಟೈಗರ್ ಪ್ರಭಾಕರ್ ಅವರ ಚಿತ್ರಗಳಿಗೆ ಸಾಹಿತ್ಯ, ಸಹ ನಿರ್ದೇಶನ, ಅಭಿನಯ ಹೀಗೆ ಎಲ್ಲಾ ವಿಧದಲ್ಲೂ ನೆರವಾಗುತ್ತ ಆಪ್ತವಲಯದಲ್ಲಿದ್ದರು. ಕಿರುತೆರೆಗೆ ಕಾಲಿರಿಸಿ ಅಲ್ಲಿಯೂ ಹಲವಾರು ಧಾರಾವಾಹಿಗಳನ್ನು ನಿರ್ದೇಶಿಸಿ ನಟಿಸಿರುವ ಸರಿಗಮ ವಿಜಿಯವರ ನಿರ್ದೇಶನದ ಧಾರಾವಾಹಿ 'ಸಮಾಗಮ' ಜನಪ್ರಿಯವಾಯಿತು.

### ವಿಠಲ್.ಎಂ.ಆರ್ (೧೯೦೮-೯೪)
ಸದಭಿರುಚಿಯ ಚಿತ್ರಗಳ ನಿರ್ದೇಶಕ. ಮೈಸೂರು ರಾಘವೇಂದ್ರರಾವ್ ವಿಠಲ್ ಮೈಸೂರಿನಲ್ಲಿ ಜನಿಸಿದರು (ಆಗಸ್ಟ್ ೧೯, ೧೯೦೮). ಮೈಸೂರು, ಮದರಾಸಿನಲ್ಲಿ ವ್ಯಾಸಂಗ. ಆಟೋಮೊಬೈಲ್ ಎಂಜಿನಿಯರ್ ಪದವೀಧರ. ಕೊಲ್ಲಾಪುರದಲ್ಲಿ ಸ್ವಂತ ಕಾಲೇಜು ಆರಂಭ (೧೯೨೮). ಧ್ವನಿಗ್ರಹಣದ ಬಗ್ಗೆ ಅಧ್ಯಯನ. ದಾದಾಸಾಹೇಬ್ ಫಾಲ್ಕೆ ಅವರ ಬಳಿ ಹೋಗಿ ಚಲನಚಿತ್ರಗಳ ಬಗ್ಗೆ ಅರಿವು ಮೂಡಿಸಿಕೊಂಡರು. ಲಾಹೋರ್‌ಗೆ ತೆರಳಿ ಶಬ್ದಗ್ರಹಣ ವೃತ್ತಿ ಕೈಗೊಂಡು ನಂತರ ಹಿಂದಿ ಚಿತ್ರವನ್ನು ನಿರ್ದೇಶಿಸಿದರು. ೧೯೩೯ರಲ್ಲಿ ಮದರಾಸಿಗೆ ತೆರಳಿ ಸರ್ಕಾರಕ್ಕಾಗಿ ಹಲವಾರು ಸಾಕ್ಷ್ಯಚಿತ್ರಗಳನ್ನು

ತಯಾರಿಸಿದರು. ೧೯೪೯ರಲ್ಲಿ ಫ್ರಾನ್ಸ್ ಹಾಗೂ ಇಂಗ್ಲೆಂಡ್ ದೇಶಗಳಿಗೆ ತೆರಳಿ ಚಿತ್ರರಂಗದ ಬಗ್ಗೆ ಮತ್ತಷ್ಟು ಅನುಭವ ಗಳಿಸಿದರು. ಹಲವಾರು ಮಲೆಯಾಳಂ, ತಮಿಳು ಚಿತ್ರಗಳ ನಂತರ ೧೯೬೩ರಲ್ಲಿ ನಿರ್ದೇಶಿಸಿದ ಮೊದಲ ಕನ್ನಡ ಚಿತ್ರ 'ನಂದಾದೀಪ'. ಪಾಶ್ಚಾತ್ಯರ ಚಿತ್ರ ನಿರ್ಮಾಣ ರೀತಿ ನೀತಿಗಳನ್ನು ಅಳವಡಿಸಿಕೊಂಡು ಸಂಪೂರ್ಣವಾದ ಚಿತ್ರಕಥೆಯನ್ನು ರಚಿಸಿಕೊಂಡು ಅದಕ್ಕೆ ಅನುಸಾರವಾಗಿ ಶಿಸ್ತಿನಿಂದ ಚಿತ್ರಗಳನ್ನು ನಿರ್ದೇಶಿಸುವುದು ಇವರ ಪದ್ಧತಿ. ಅವರು 'ದಿ ಆರ್ಟ್ ಆಫ್ ಡೈರೆಕ್ಷನ್' ಎಂಬ ಪುಸ್ತಕವನ್ನು ಬರೆದರು. ಇವರ ಕೆಲವು ಚಿತ್ರಗಳು ರಾಜ್ಯ, ರಾಷ್ಟ್ರ ಪ್ರಶಸ್ತಿಗೆ ಪಾತ್ರವಾಗಿವೆ. ಎಸ್.ಪಿ.ಬಾಲಸುಬ್ರಹ್ಮಣ್ಯಂ ಅವರನ್ನು ಕನ್ನಡದಲ್ಲಿ ('ನಕ್ಕರೆ ಅದೇ ಸ್ವರ್ಗ') ಮೊದಲ ಬಾರಿಗೆ ಹಾಡಿಸಿದರು. ರಾಜ್ಯ ಸರ್ಕಾರವು ಪ್ರತಿಷ್ಠಿತ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ (೧೯೯೧-೯೨) ನೀಡಿ ಗೌರವಿಸಿದೆ. ಇವರ ನಿರ್ದೇಶನದಲ್ಲಿನ 'ನಕ್ಕರೆ ಅದೇ ಸ್ವರ್ಗ' ೧೯೬೬-೬೭ರ ದ್ವಿತೀಯ ಅತ್ಯುತ್ತಮ ಚಿತ್ರ ಮತ್ತು 'ಹಣ್ಣೆಲೆ ಚಿಗುರಿದಾಗ' ೧೯೬೮-೬೯ರ ಪ್ರಥಮ ಅತ್ಯುತ್ತಮ ಚಿತ್ರವಾಗಿ ರಾಜ್ಯ ಸರ್ಕಾರದ ಪ್ರಶಸ್ತಿಗಳನ್ನು ಪಡೆದಿವೆ. ಇವರ ಶ್ರೀಮತಿಯವರೂ ಪದವೀಧರೆ. ವಸ್ತ್ರವಿನ್ಯಾಸದ ಕಾರ್ಯಗಳಲ್ಲಿ ಪತಿಗೆ ನೆರವಾದವರು. ಜೀವನ ಸಂಧ್ಯಾಕಾಲದಲ್ಲಿ ಬರೋಡಾದಲ್ಲಿ ಅವರ ಮಗಳ ಮನೆಯಲ್ಲಿ ನೆಲೆಸಿದ್ದು ಅಲ್ಲಿಯೇ ೧೯೯೪ರಲ್ಲಿ ನಿಧನರಾದರು.

## ವಿಠಲ್‌ಕುಮಾರ್

ಬೆಂಗಳೂರಿನವರಾದ ವಿಠಲ್‌ಕುಮಾರ್ ಮೂಲತಃ ಟೆಕ್ಸ್‌ಟೈಲ್ ಉದ್ಯಮದಾರರು.



ಟೆಕ್ಸ್‌ಟೈಲ್ ರಂಗದಿಂದ ಚಿತ್ರರಂಗಕ್ಕೆ ಬಂದವರು. ನಟರಾಗುವ ಬಯಕೆಯಿಂದ ಸಣ್ಣಪುಟ್ಟ ಪಾತ್ರ ನಿರ್ವಹಿಸಿದರು. ನಿರ್ಮಾಪಕರಾಗಿ ತಮ್ಮದೇ ಆದ ವಿಠ್ಠಲ್ ಮೂವೀಸ್ ಲಾಂಛನದಡಿಯಲ್ಲಿ 'ಮಕ್ಕಳ ಭಾಗ್ಯ', 'ವಸಂತಲಕ್ಷ್ಮಿ', 'ಕುಂಕುಮ ಭಾಗ್ಯ' ಚಿತ್ರಗಳನ್ನು ನಿರ್ಮಿಸಿದರು.

## ವಿಠಲಾಚಾರ್ಯ.ಬಿ

ಬಿ.ವಿಠಲಾಚಾರ್ಯರು ಉಡುಪಿಯಲ್ಲಿ ೧೯೦೦ರಲ್ಲಿ ಜನಿಸಿದರು. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದರು. ಅರಸೀಕೆರೆಯಲ್ಲಿ ಇತರ ಮಿತ್ರರೊಡನೆ ಟೂರಿಂಗ್ ಟಾಕೀಸ್ ನಡೆಸುತ್ತಿದ್ದರು. ಹೋಟೆಲ್ ವ್ಯಾಪಾರದಲ್ಲಿಯೂ ನಿಸ್ಸೀಮರು.



ಒಮ್ಮೆ ನಿರ್ದೇಶಕ ಸಿ.ವಿ.ರಾಜು ಅವರ ಭೇಟಿಯಾಯಿತು. ಆಗ ಅವರು 'ಕೃಷ್ಣಲೀಲ' ಚಿತ್ರವನ್ನು ನಿರ್ದೇಶಿಸುತ್ತಿದ್ದರು. ವಿಠಲಾಚಾರ್ಯರನ್ನು ಚಿತ್ರರಂಗಕ್ಕೆ ಕರೆತಂದರು. ವಿಠಲಾಚಾರ್ಯರು ನಂತರ ಶಂಕರ್‌ಸಿಂಗ್, ವಿಶ್ವನಾಥಶೆಟ್ಟಿ ಹಾಗೂ ಇತರ ಮಿತ್ರರೊಂದಿಗೆ 'ಮಹಾತ್ಮ ಪಿಕ್ಚರ್ಸ್' ಸಂಸ್ಥೆಯನ್ನು ಸ್ಥಾಪಿಸಿ ಕನ್ನಡ ಚಿತ್ರಗಳ ತಯಾರಿಕೆಯನ್ನು ಪ್ರಾರಂಭಿಸಿದರು. ಹಂತ ಹಂತವಾಗಿ ಚಿತ್ರ ತಯಾರಿಕೆಯ ವಿವಿಧ ರೂಪರೇಷೆಗಳನ್ನು ಅರಿತುಕೊಂಡರು. ಇವರಿಗೆ ಮೊದಲಿನಿಂದಲೂ ಜಾನಪದ, ಪೌರಾಣಿಕ ಕಥೆಗಳ ಬಗ್ಗೆ ವಿಶೇಷವಾದ ಒಲವು. ಹೀಗಾಗಿ ಕನ್ನಡ ಚಿತ್ರರಂಗಕ್ಕೆ ಅನೇಕ ಜಾನಪದ ಚಿತ್ರಗಳನ್ನು ಕೊಡುಗೆಯಾಗಿತ್ತರು. 'ನಾಗಕನ್ನಿಕಾ' ಮೊದಲ ಕನ್ನಡ ಜಾನಪದ ಚಿತ್ರವಾಯಿತು. ವಿಠಲಾಚಾರ್ಯರು ಎಂಟು ಚಿತ್ರಗಳನ್ನು ನಿರ್ದೇಶಿಸಿದರು. ಆಚಾರ್ಯರು ಮೈಸೂರಿನಿಂದ ಮದರಾಸಿಗೆ ವಲಸೆ ಹೋಗಿ ತೆಲುಗು ಭಾಷೆಯಲ್ಲಿ ತಮ್ಮದೇ ಆದ ರೀತಿಯಲ್ಲಿ ಅನೇಕ ವಿಶಿಷ್ಟ ಜಾನಪದ ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದರು. ಅವರ ಸಹಾಯಕರಾಗಿದ್ದ ವಿಜಯರೆಡ್ಡಿ ಮತ್ತು ಸಿದ್ದಲಿಂಗಯ್ಯನವರು ಮುಂದೆ ಕನ್ನಡ ಚಿತ್ರರಂಗದಲ್ಲಿ ಪ್ರಮುಖ ಚಿತ್ರ ನಿರ್ದೇಶಕರೆಂದು ಹೆಸರು ಗಳಿಸಿದರು. ವ್ಯವಹಾರದಲ್ಲಿ ಖಡಾಖಂಡಿತರಾಗಿದ್ದ ಅವರಿಗೆ ಚಿತ್ರರಂಗದ ಆರ್ಥಿಕ ಕ್ಷೇತ್ರದಲ್ಲಿ ಒಳ್ಳೆಯ ಹೆಸರು. ಕಡಿಮೆ ವೆಚ್ಚದಲ್ಲಿ ಒಳ್ಳೆಯ ಚಿತ್ರ ಮಾಡುವ ಹಂಬಲ ಅವರದು. ಮದರಾಸಿನಲ್ಲೇ ನಿಧನರಾದರು.

## ವಿನಯಾ ಪ್ರಸಾದ್

ಭಾವಪೂರ್ಣ ಅಭಿನೇತ್ರಿ ವಿನಯಾಪ್ರಸಾದ್ ಉತ್ತಮ ಅಭಿರುಚಿ, ಮನೋಭಾವ ಮತ್ತು ಮೌಲ್ಯಗಳನ್ನು ಪ್ರತಿನಿಧಿಸುವ ಕಲಾವಿದೆ. ಚಲನಚಿತ್ರ ಅಭಿನಯವೆಂದರೆ ಕೇವಲ ಬಿಡಿಗಲ್ಲ, ಅದೊಂದು ನಿಷ್ಠೆ ಎಂದು



ನಂಬಿದವರು. ಉಡುಪಿಯ ಹುಡುಗಿಯಾದ ವಿನಯಾ ಬಿ.ಕಾಂ.ಪದವೀಧರೆ. ಬಾಲ್ಯದಿಂದಲೇ ನಾಟಕ, ಸಾಹಿತ್ಯರಂಗಗಳಲ್ಲಿ ವಿಶೇಷವಾದ ಒಲವು. ರಂಗಭೂಮಿ, ಆಕಾಶವಾಣಿ ಮತ್ತು ದೂರದರ್ಶನ ಸರಣಿಗಳಲ್ಲಿ ನಟಿಸುತ್ತಿದ್ದ ವಿನಯಾ ಜಿ.ವಿ.ಅಯ್ಯರ್‌ರವರ 'ಮಧ್ವಾಚಾರ್ಯ' ಚಿತ್ರದ ಸಣ್ಣ ಪಾತ್ರವೊಂದರ ಮೂಲಕ ಚಿತ್ರರಂಗಕ್ಕೆ ಬಂದರು. ಸಂಕಲನಕಾರ, ನಿರ್ದೇಶಕ ವಿ.ಆರ್.ಕೆ.ಪ್ರಸಾದ್‌ರ ಪರಿಚಯವಾಗಿ ಬಾಳ ಸಂಗಾತಿಯಾದರು. ವಿನಯಾ ಪೂರ್ಣಪ್ರಮಾಣದ ನಟಿಯಾಗಿ ಬೆಳಕಿಗೆ ಬಂದಿದ್ದು ಫಣಿ ರಾಮಚಂದ್ರ ನಿರ್ದೇಶನದ 'ಗಣೇಶನ ಮದುವೆ' ಚಿತ್ರದಿಂದ. ಅನಂತರ ಅನೇಕ ಚಿತ್ರಗಳಲ್ಲಿ ಅನಂತ್‌ನಾಗ್‌ರೊಂದಿಗೆ ಜನಪ್ರಿಯ ಜೋಡಿಯೆನಿಸಿದರು. ಹೆಚ್ಚು ಕಡಿಮೆ ಎಲ್ಲ ನಾಯಕನಟರೊಂದಿಗೂ ಅಭಿನಯಿಸಿದರು. 'ಗೌರಿ ಗಣೇಶ', 'ತುಂಬಿದ ಮನೆ', 'ಆತಂಕ', 'ನೀನು ನಕ್ಕರೆ ಹಾಲು ಸಕ್ಕರೆ', 'ಬಾಳಿದ ಮನೆ', 'ಮೈಸೂರ ಜಾಣ', 'ಅಗ್ನಿ ಪಂಜರ', 'ಮಹಾಶಕ್ತಿ ಮಹಾಮಾಯೆ' ಮೊದಲಾದವು ಇವರು ಅಭಿನಯಿಸಿದ ಚಿತ್ರಗಳು. ವಿನಯಾ ಮಲೆಯಾಳಂ ಚಿತ್ರರಂಗದಲ್ಲಿ ಕೂಡ ಭಾರಿ ಬೇಡಿಕೆಯ ನಟಿ. ಅನೇಕ ಕಲಾತ್ಮಕ ಚಿತ್ರಗಳಲ್ಲಿ ಅಲ್ಲಿಯ ಸೂಪರ್‌ಸ್ಟಾರ್‌ಗಳಾದ ಮಮ್ಮೂಟಿ ಮತ್ತು ಮೋಹನ್‌ಲಾಲ್‌ರೊಂದಿಗೂ ಅಭಿನಯಿಸಿದರು. ಇವರು ಅಭಿನಯಿಸಿದ ದೈನಿಕ ಟಿ.ವಿ.ಧಾರಾವಾಹಿ 'ಸ್ತ್ರೀ' ಮಲಯಾಳಂನಲ್ಲಿ ಅದ್ಭುತ ಜನಪ್ರಿಯತೆ ಗಳಿಸಿತು. ವಿನಯಾ ಉತ್ತಮ ಗಾಯಕಿ ಮತ್ತು ಸ್ವಾರಸ್ಯಕರ ಮಾತುಗಾತಿ. ರಾಜ್ಯ ಸರ್ಕಾರದಿಂದ ಆಕೆಗೆ 'ಆತಂಕ' ಚಿತ್ರದಲ್ಲಿನ ಅಭಿನಯಕ್ಕಾಗಿ ೧೯೯೨-೯೩ನೇ ಸಾಲಿನ ಅತ್ಯುತ್ತಮ ನಟಿ ಪ್ರಶಸ್ತಿ. ಈಕೆ ಕಿರುತೆರೆಯಲ್ಲಿ ಹೆಚ್ಚಿನ ಗಮನ ಹರಿಸಿದರು.

## ವಿನೋದ್ ಆಳ್ವಾ

ಮೂಲತಃ ಮಂಗಳೂರಿನವರಾದ ವಿನೋದ್ ಆಳ್ವಾ ಮುಂಬೈಯಲ್ಲಿ ರೂಪದರ್ಶಿಯಾಗಿ ಕೆಲಸ ಮಾಡುತ್ತಿದ್ದರು. ನಿರ್ಮಾಪಕ



ಎ. ಎಲ್. ಅಬ್ಬಾಯಿ ನಾಯ್ಡು ಅವರ 'ನಮ್ಮ ಊರ ದೇವತೆ' ಚಿತ್ರದ ಮೂಲಕ ನಾಯಕನಾಗಿ ೧೯೮೬ ರಲ್ಲಿ ಚಿತ್ರರಂಗ ಪ್ರವೇಶಿಸಿದರು. ತದನಂತರ ಅಬ್ಬಾಯಿ ಅವರ ನಿರ್ಮಾಣದ 'ತವರುಮನೆ', 'ತಾಯಿಯ ಆಸೆ', 'ಭೂಮಿ ತಾಯಾಣೆ', 'ತಾಳಿಗಾಗಿ', 'ತಾಳಿಯ ಆಣೆ', ಮೊದಲಾದ ಅನೇಕ ಚಿತ್ರಗಳಲ್ಲಿ ಅಭಿನಯಿಸಿದರು. ನಂತರ ತೆಲುಗು ಚಿತ್ರರಂಗದಲ್ಲಿ ವಿನೋದ್ ಕುಮಾರ್ ಎಂಬ ಹೆಸರಿನಿಂದ ಪ್ರತಿಷ್ಠಿತ ಬ್ಯಾನರ್‌ಗಳ ಚಿತ್ರಗಳಲ್ಲಿ ಅಭಿನಯಿಸಿ ಮರಳಿ ಕನ್ನಡ ಚಿತ್ರರಂಗದಲ್ಲಿ 'ಮಾಧುರಿ', 'ಸಾಹಸ ವೀರ', 'ಕಾಡಿನ ವೀರ', ಚಿತ್ರಗಳಲ್ಲಿ ಅಭಿನಯಿಸಿದರು.

## ವಿನೋದ್‌ರಾಜ್

ಕನ್ನಡ ಚಿತ್ರರಂಗದ ಪ್ರಸಿದ್ಧ ಅಭಿನೇತ್ರಿ ಲೀಲಾವತಿಯವರ ಪುತ್ರ ವಿನೋದ್‌ರಾಜ್. 'ಡ್ಯಾನ್ಸ್ ರಾಜ ಡ್ಯಾನ್ಸ್' (೧೯೮೭) ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ತಮ್ಮದೇ ಎಸ್ಟೇಟ್‌ನಲ್ಲಿ ಫಾರಂ ಹೌಸಿನಲ್ಲಿ ಬ್ರೇಕ್‌ಡ್ಯಾನ್ಸ್ ಮಾಡಿಕೊಂಡು ಇರುತ್ತಿದ್ದ ಈ ಯುವಕನನ್ನು ನೃತ್ಯಗಾರನನ್ನಾಗಿಯೇ ಚಿತ್ರರಂಗಕ್ಕೆ ತಂದವರು ದ್ವಾರಕೀಶ್. ತಮ್ಮ



ತಾಯಿ ನಿರ್ಮಿಸಿದ 'ಕಾಲೇಜ್‌ಹೀರೋ', 'ಕೃಷ್ಣ ನೀ ಕುಣಿದಾಗ', 'ನನಗೂ ಹೆಂಡ್ತಿ ಬೇಕು', 'ನಾಯಕ', 'ರಾಜಣ್ಣ', 'ಕ್ಯಾಪ್ಟನ್', 'ನಂಜುಂಡ', 'ಸ್ನೇಹಲೋಕ' ಮುಂತಾದ ಸುಮಾರು ೨೫ ಚಿತ್ರಗಳಲ್ಲಿ ವಿನೋದ್‌ರಾಜ್ ಅಭಿನಯಿಸಿದ್ದಾರೆ. ಸೊಗಸಾಗಿ ಹಾಡಿ, ನರ್ತಿಸಬಲ್ಲರು. ತೋಟಗಾರಿಕೆ ಪ್ರೀತಿಯ ಹವ್ಯಾಸ.

## ವಿಶ್ವನಾಥ್.ಪಿ.ಎಚ್

ಸಾಹಿತ್ಯ ರಚನೆ, ಹವ್ಯಾಸಿ ರಂಗಭೂಮಿಯಲ್ಲಿ ಅಭಿನಯ ಮತ್ತು ಪುಟ್ಟಣ್ಣ ಕಣಗಾಲ್ ಹಾಗೂ ದ್ವಾರಕೀಶ್‌ರಂತಹ ಹಿರಿಯ, ಸೃಜನಶೀಲ ನಿರ್ದೇಶಕರೊಂದಿಗೆ ಕಲಿತ ನಿರ್ದೇಶನ ಕಲೆಗಳನ್ನು ಹಿನ್ನೆಲೆಯಾಗಿ ಹೊಂದಿದ ಪಿ.ಎಚ್.ವಿಶ್ವನಾಥ್ ಯುವ ಪೀಳಿಗೆಯ ಕನ್ನಡ ನಿರ್ದೇಶಕರ ಪೈಕಿ ಪ್ರಮುಖರು. ಅವರು ನಿರ್ದೇಶಿಸಿದ ಚಿತ್ರಗಳಲ್ಲಿ ಕೆಲವು ಅವರ ಸಾಮಾಜಿಕ ಕಾಳಜಿ ಮತ್ತು ಸದಭಿರುಚಿಗಳನ್ನು ಕಾಪಾಡಿಕೊಂಡು ಬಂದಿವೆ. ವಿಶ್ವನಾಥ್‌ರವರು ಚಿತ್ರರಂಗವನ್ನು ಪ್ರವೇಶಿಸಿದ್ದು 'ಕಾಲೇಜುರಂಗ' ಚಿತ್ರದಲ್ಲಿ



ಪುಟ್ಟಣ್ಣ ಕಣಗಾಲ್‌ರಿಗೆ ಸಹಾಯಕ ನಿರ್ದೇಶಕರಾಗಿ. ನಂತರ ಇವರು

ದ್ವಾರಕೀಶ್‌ರೊಂದಿಗೆ ಅನೇಕ ಚಿತ್ರಗಳಲ್ಲಿ ದುಡಿದರು. ಇವರು ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ 'ಪಂಚಮವೇದ' (೧೯೯೦). ತನ್ನ ತಾಜಾತನ ಹಾಗೂ ಅಚ್ಚುಕಟ್ಟಿನ ನಿರೂಪಣೆಗಳಿಂದಾಗಿ ವಿಮರ್ಶಕರ ಹಾಗೂ ಉತ್ತಮ ಅಭಿರುಚಿಯ ಪ್ರೇಕ್ಷಕರ ಗಮನ ಸೆಳೆಯಿತು. ಈ ಚಿತ್ರ ಮೂರು ರಾಜ್ಯ ಪ್ರಶಸ್ತಿಗಳನ್ನೂ ಗಳಿಸಿಕೊಂಡಿತು. ಈ ಚಿತ್ರದ ನಿರ್ದೇಶನಕ್ಕಾಗಿ ಇವರಿಗೆ ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘ ಹಾಗೂ ದಕ್ಷಿಣ ಭಾರತ ಚಲನಚಿತ್ರ ಅಭಿಮಾನಿಗಳ ಸಂಘಗಳ ಪ್ರಶಸ್ತಿಗಳೂ ದೊರೆತವು. ೧೯೯೪-೯೫ರಲ್ಲಿ ಇವರು ತಮ್ಮ 'ಅರಗಿಣಿ' ಚಿತ್ರಕ್ಕಾಗಿ ವರ್ಷದ ದ್ವಿತೀಯ ಅತ್ಯುತ್ತಮ ಚಿತ್ರದ ನಿರ್ದೇಶಕನಾಗಿ ಪ್ರಶಸ್ತಿಯನ್ನು ಪಡೆದರು. 'ಅಂಡಮಾನ್' ಇವರು ನಿರ್ದೇಶಿಸಿದ ಮತ್ತೊಂದು ಪ್ರಶಸ್ತಿ ವಿಜೇತ ಚಿತ್ರ. 'ಮುಂಜಾನೆಯ ಮಂಜು', 'ಮುಸುಕು', 'ಅತಿಮಧುರ ಅನುರಾಗ' ಹಾಗೂ ತಮಿಳು ಭಾಷೆಯ 'ನದಿಯೋರ ಗೀತಂಗಳ್' ಇವರು ನಿರ್ದೇಶಿಸಿದ ಇತರ ಪ್ರಮುಖ ಚಿತ್ರಗಳು. ವಿಶ್ವನಾಥ್ ಕಿರುತೆರೆಯಲ್ಲಿಯೂ ಸಕ್ರಿಯವಾಗಿದ್ದಾರೆ.

### ವಿಶ್ವನಾಥ್.ಸಿ.ಡಿ

ದಕ್ಷಿಣ ಭಾರತದ ಹೆಸರಾದ ಧ್ವನಿಗ್ರಾಹಕ. ಮೂಲತಃ ತಮಿಳುನಾಡಿಗೆ ಸೇರಿದವರು. ದಕ್ಷಿಣ ಭಾರತದ ಖ್ಯಾತ ಎ.ವಿ.ಎಂ.ಸ್ಟುಡಿಯೋದಲ್ಲಿ ಧ್ವನಿಗ್ರಹಣ



ವಿಭಾಗಕ್ಕೆ ತಂತ್ರಜ್ಞರಾಗಿ ಸೇರಿದರು. ೧೯೫೭ರಲ್ಲಿ ಮುಂಬಯಿಯಲ್ಲಿ ತರಬೇತಿ ಪಡೆದು ಮದ್ರಾಸಿಗೆ ಬಂದು ಮೆಜೆಸ್ಟಿಕ್ ಹಾಗೂ ಅರುಣಾಚಲಂ ಸ್ಟುಡಿಯೋಗಳಲ್ಲಿ ಕಾರ್ಯ ನಿರ್ವಹಿಸಿದರು. ಸರಿಸುಮಾರು ೫೦೦ಕ್ಕೂ ಹೆಚ್ಚು ಕನ್ನಡ, ತಮಿಳು, ಹಿಂದಿ, ತೆಲುಗು ಮತ್ತು ಮಲೆಯಾಳಂ ಚಿತ್ರಗಳಿಗೆ ಧ್ವನಿಗ್ರಹಣ ಕಾರ್ಯನಿರ್ವಹಿಸಿದ್ದಾರೆ. ೧೯೮೫-೮೬ನೇ ಸಾಲಿನಲ್ಲಿ 'ಮಸಣದ ಹೂವು' ಚಿತ್ರ ಹಾಗೂ ೧೯೮೬-೮೭ನೇ ಸಾಲಿನಲ್ಲಿ 'ಮಲಯ ಮಾರುತ' ಚಿತ್ರಗಳಲ್ಲಿನ ಧ್ವನಿಗ್ರಹಣಕ್ಕಾಗಿ ಅತ್ಯುತ್ತಮ ಧ್ವನಿಗ್ರಾಹಕ ಪ್ರಶಸ್ತಿಯನ್ನು ಪಡೆದಿದ್ದಾರೆ.

### ವಿಶ್ವನಾಥಶೆಟ್ಟಿ.ಜಿ.ಎನ್.

ಕನ್ನಡ ಚಿತ್ರರಂಗಕ್ಕೆ ಮಹಾತ್ಮ ಪಿಕ್ಚರ್ಸ್ ಸಂಸ್ಥೆಯ ಸೇವೆ ಅಪರಿಮಿತ. ಶಂಕರ್‌ಸಿಂಗ್ ಮತ್ತು ಬಿ.ವಿಠಲಾಚಾರ್ಯರನ್ನು ಬಿಟ್ಟರೆ ಆ ಸಂಸ್ಥೆಯ ಮತ್ತೊಬ್ಬ ಪ್ರಮುಖರು ಜಿ.ಎನ್.ವಿಶ್ವನಾಥಶೆಟ್ಟರು. ವ್ಯಾಪಾರಿಯಾಗಿದ್ದ ಶೆಟ್ಟರಿಗೆ ನಾಟಕದ



ಖಯಾಲಿಯಿತ್ತು. ಶಂಕರ್‌ಸಿಂಗ್ ಮತ್ತು ವಿಠಲಾಚಾರ್ಯರ ಪರಿಚಯವಾಯಿತು. ಮೂವರೂ ಸ್ವಾತಂತ್ರ್ಯ ಚಳವಳಿಗೆ ಧುಮುಕಿ ಜೈಲುವಾಸವನ್ನು ಅನುಭವಿಸಿದವರು. ನಂತರ ಮಹಾತ್ಮ ಮತ್ತು ಜವಹರ್ ಟೂರಿಂಗ್ ಟಾಕೀಸ್‌ಗಳನ್ನು ನಡೆಸಿದರು. ಈ ಗೆಳೆಯರನ್ನು ಚಿತ್ರ ನಿರ್ಮಾಣಕ್ಕೆ ಪ್ರೇರೇಪಿಸಿದವರು ಸಿ.ವಿ.ರಾಜುರವರು. ಹೀಗಾಗಿ ಮಹಾತ್ಮ ಪಿಕ್ಚರ್ಸ್ ಸಂಸ್ಥೆ ಉದಯವಾಯಿತು. ಸಂಸ್ಥೆಗೆ ಎಂಟು ಜನ ಪಾಲುದಾರರು. ಸಂಸ್ಥೆಯ ಮೊದಲ ಚಿತ್ರ 'ಕೃಷ್ಣಲೀಲ'. ತುಂಬ ಕಠಿಣ ಪರಿಸ್ಥಿತಿಯಲ್ಲಿ ನಿರ್ಮಾಣವಾದ ಚಿತ್ರ. ವಿಶ್ವನಾಥಶೆಟ್ಟರು ವಿಶ್ವಕಲಾ ಚಿತ್ರ ಸಂಸ್ಥೆಯನ್ನು ಸ್ಥಾಪಿಸಿ ನಿರ್ದೇಶಕ ಸಿಂಗ್‌ಠಾಕೂರ್‌ರವರ ಸಹಯೋಗದೊಂದಿಗೆ ಕನ್ನಡ ಚಿತ್ರೋದ್ಯಮವನ್ನು ಬೆಳೆಸಲು ಶ್ರಮ ವಹಿಸಿದರು. ಮದರಾಸಿನ ತ್ಯಾಗರಾಜನಗರದಲ್ಲಿದ್ದ ಇವರ ಸಂಸ್ಥೆ ಒಂದು ಛತ್ರದಂತೆ ಅಂದಿನ ಕನ್ನಡ ಕಲಾವಿದರಿಗೆ ಮತ್ತು ತಂತ್ರಜ್ಞರಿಗೆ ಆಶ್ರಯತಾಣವಾಗಿತ್ತು. ವಿಶ್ವಕಲಾ ಚಿತ್ರ ತಯಾರಿಸಿದ 'ಸೋದರಿ', 'ಓಹಿಲೇಶ್ವರ' ಮತ್ತು 'ಹರಿಭಕ್ತ', ಶಶಿಕಲಾ ಚಿತ್ರ ಲಾಂಛನದಲ್ಲಿ ನಿರ್ಮಿಸಿದ 'ಜಗಜ್ಯೋತಿ ಬಸವೇಶ್ವರ' ಚಿತ್ರಗಳಿಂದ ರಾಜಕುಮಾರ್, ಜಿ.ಕೆ.ವೆಂಕಟೇಶ್, ಜಿ.ವಿ.ಅಯ್ಯರ್, ಭಗವಾನ್ ಮತ್ತು ಇನ್ನೂ ಅನೇಕರು ಎತ್ತರಕ್ಕೆ ಬೆಳೆದರು. ಆದರೆ ನಿರ್ಮಾಪಕ ವಿಶ್ವನಾಥಶೆಟ್ಟರು ಮಾತ್ರ ಆರ್ಥಿಕವಾಗಿ ಸೋತರು. ಆದರೂ ತಮ್ಮ ಪ್ರಯತ್ನವನ್ನು ಬಿಡದೆ ಕಾವೇರಿ ಫಿಲಂಸ್ ಲಿಮಿಟೆಡ್ ಸಂಸ್ಥೆಯನ್ನು ಸ್ಥಾಪಿಸಿ ಜನರಿಂದ ಷೇರುಗಳನ್ನು ಕೂಡಿಸಿ 'ಭಾಗೀರಥಿ' ಚಿತ್ರವನ್ನು ತಯಾರಿಸಿದರು. ಆ ಚಿತ್ರವೂ ಸೋತಿದ್ದರಿಂದ ಮುಂದಿನ ದಶಕದಲ್ಲಿ ಕನ್ನಡ ಚಿತ್ರರಂಗ ಪ್ರವರ್ಧಮಾನಕ್ಕೆ ಬಂದರೂ ಶೆಟ್ಟರಿಂದ ಮಾತ್ರ ಚಿತ್ರ ಮಾಡಲು ಸಾಧ್ಯವಾಗಲಿಲ್ಲ. ಇವರ ಸಾಹಸಗಳು, ಹೋರಾಟಗಳು, ಕನಸುಗಳು ಕನ್ನಡ ಚಲನಚಿತ್ರ ಚರಿತ್ರೆಯಲ್ಲಿ ಹುದುಗಿ ಹೋದವು. ಇವರು ಬಿಟ್ಟು ಹೋದ ಒಂದೇ ಬಳುವಳಿ ಇವರ ಸಾಹಸ, ಛಲ ಮತ್ತು ನಿಷ್ಠೆ.

### ವಿಶ್ವವಿಜೇತ

ಕನ್ನಡ ಚಿತ್ರರಂಗದ ಪ್ರಖ್ಯಾತ ಕುಮಾರತ್ರಯರಲ್ಲಿ ಒಬ್ಬರಾಗಿದ್ದ ಉದಯಕುಮಾರ್‌ರವರ ಪುತ್ರ. ರಕ್ತಗತವಾಗಿ ಬಂದ ಕಲೆ. ೧೯೮೫ರಲ್ಲಿ ತೆರೆಕಂಡ 'ತಾಯಿತಂದೆ' ಚಿತ್ರದಿಂದ ಬೆಳ್ಳಿತೆರೆಗೆ ಬಂದ ವಿಶ್ವವಿಜೇತ ಐದುನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಖಳನಟರಾಗಿ ಅಭಿನಯಿಸಿದರು. 'ಅಗ್ನಿಪರ್ವ', 'ಕೃಷ್ಣ ನೀ ಬೇಗನೆ ಬಾರೋ', 'ಸತ್ಯ ಪರೀಕ್ಷೆ', 'ಕಿಲಾಡಿ ತಾತ', 'ಬಂಧಮುಕ್ತ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದರು. 'ಉದಯ ಕಲಾನಿಕೇತನ' ಸಂಸ್ಥೆ ಸ್ಥಾಪಿಸಿ ನಡೆಸಿಕೊಂಡು ಬಂದರು. 'ವಿಶ್ವಪ್ರಿಯಾ' ಲಾಂಛನದ ಹಲವಾರು ಚಿತ್ರಗಳನ್ನು ನಿರ್ಮಿಸಿದ್ದ ಇವರು ಅಪಘಾತವೊಂದರಲ್ಲಿ ಸಾವನ್ನಪ್ಪಿದರು.

### ವಿಶುಕುಮಾರ್

ಸ್ವತಃ ಕಥೆ, ಕಾದಂಬರಿಕಾರ ವಿಶುಕುಮಾರ್ ತುಳುನಾಡಿನ ಜಾನಪದ ವೀರರುಗಳಾದ ಕೋಟಿ-ಚೆನ್ನಯರ ಕಥೆಯನ್ನು ತುಳುವಿನಲ್ಲಿ ನಿರ್ದೇಶಿಸುವ ಮೂಲಕ ನಿರ್ದೇಶಕರಾದರು. ಇವರು ನಿರ್ದೇಶಿಸಿ ತಯಾರಿಸಿದ ಕನ್ನಡ ಚಿತ್ರಗಳೆಂದರೆ 'ಕರಾವಳಿ' (೧೯೭೭), 'ಅಖಂಡ ಬ್ರಹ್ಮಚಾರಿಗಳು' (೧೯೮೦) ಮತ್ತು ರಂಗ ಕಲಾವಿದೆ ನಂದಿತಾಬೋಸ್ ಮತ್ತು ರೇಖಾರಾವ್ ಅಭಿನಯಿಸಿದ 'ಮದರ್' (೧೯೮೦) ಕಥೆ-ಚಿತ್ರಕಥೆ-ನಿರ್ದೇಶನದ ಜೊತೆಗೆ ನಾಯಕ ನಟನಾಗಿಯೂ ತಮ್ಮ ಚಿತ್ರಗಳಲ್ಲಿ ಅಭಿನಯಿಸಿದ ವಿಶುಕುಮಾರ್ 'ಪ್ರಜೆಗಳು ಮತ್ತು ಪ್ರಭುಗಳು' ರಾಜಕೀಯ ಚಿತ್ರ ತಯಾರಿಸುತ್ತಿದ್ದಾಗ ಹಠಾತ್ತನೆ ನಿಧನರಾದರು. ಅನಂತರ ಆ ಚಿತ್ರವನ್ನು ಭೀಮಾ ನಾಗರಾಜ್ ಮತ್ತು ವಿಜಯಲಕ್ಷ್ಮಿ ವಿಶುಕುಮಾರ್ ಸಂಯುಕ್ತವಾಗಿ



ನಿರ್ದೇಶಿಸಿದರು. ಪತ್ರಕರ್ತರೂ ಆಗಿದ್ದ ವಿಶುಕುಮಾರ್ ಕೆಲವು ಕಾಲ 'ಸಂಜೆವಾಣಿ' ಪತ್ರಿಕೆಯ ಸಂಪಾದಕರಾಗಿದ್ದರು. ರಾಜ್ಯ ಗೋಡಂಬಿ ನಿಗಮದ ಅಧ್ಯಕ್ಷರು ಕೂಡ ಆಗಿದ್ದರು. ಇವರು ನಿರ್ದೇಶಿಸಿದ 'ಕೋಟಿ ಚೆನ್ನಯ' ೧೯೭೩-೭೪ನೇ ಸಾಲಿನ ರಾಜ್ಯ ಸರ್ಕಾರದ ನಾಲ್ಕನೇ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆಯಿತು.

### ವಿಷ್ಣುವರ್ಧನ್ (ಸಂಪತ್‌ಕುಮಾರ್)

ಮೂರು ದಶಕಗಳ ಕಾಲ ಕನ್ನಡ ಚಿತ್ರರಂಗದಲ್ಲಿ ಗಟ್ಟಿಯಾಗಿ ತಳವೂರಿ ಅನೇಕ ರೀತಿಯ ಪಾತ್ರಗಳಲ್ಲಿ ಸ್ಮರಣೀಯ ಅಭಿನಯವನ್ನು ನೀಡಿರುವ ಪ್ರತಿಭಾವಂತ ನಟ ವಿಷ್ಣುವರ್ಧನ್. ಬಾಲನಟನಾಗಿ ಚಿತ್ರದಲ್ಲಿ ಕಾಣಿಸಿ ಕೊಂಡಿದ್ದುಂಟು. ೧೯೭೨ರಲ್ಲಿ ಬಿಡುಗಡೆಯಾದ ಜಿ.ವಿ.ಅಯ್ಯರ್ ನಿರ್ಮಿಸಿದ 'ವಂಶವೃಕ್ಷ'ದಲ್ಲಿ ಸಣ್ಣ ಪಾತ್ರವೊಂದರಲ್ಲಿ ಕುಮಾರ್ ಎಂಬ ಹೆಸರಿನಲ್ಲಿ ಕಾಣಿಸಿಕೊಂಡರು. ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ನಾಗರಹಾವು' ಚಿತ್ರದಲ್ಲಿ ನಾಯಕನಾಗಿ ಅಭಿನಯಿಸಿದರು.



ವಿಷ್ಣುವರ್ಧನ್ ಎಂದು ಪುಟ್ಟಣ್ಣನವರು ಮರುನಾಮಕರಣ ಮಾಡಿದರು. 'ನಾಗರಹಾವು' ವಿಷ್ಣುರವರಿಗೆ ನಾಯಕ ನಟನಾಗಿ ಅಪಾರವಾದ ಮನ್ನಣೆಯನ್ನು ಗಳಿಸಿಕೊಟ್ಟಿತು. ನಂತರ ಇವರು ಕನ್ನಡದಲ್ಲಿ ಪ್ರಥಮ ಶ್ರೇಣಿಯ ನಟರೆನಿಸಿ ಶೀಘ್ರದಲ್ಲಿಯೇ ತಾರಾಪಟ್ಟಕ್ಕೇರಿದರು. ಚಿತ್ರದಿಂದ ಚಿತ್ರಕ್ಕೆ ತಮ್ಮ ಜನಪ್ರಿಯತೆಯನ್ನು ವೃದ್ಧಿಸಿಕೊಂಡರು. ಇದುವರೆಗೆ ೧೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವ ಅವರು ತಮ್ಮ ಕೆಲವು ಚಿತ್ರಗಳಲ್ಲಿ ಹಾಡಿಯೂ ಇದ್ದಾರೆ. ಕೆಲವು ಹಾಸ್ಯಪ್ರಧಾನ ಪಾತ್ರಗಳಲ್ಲಿಯೂ ಮಿಂಚಿದ್ದಾರೆ. ಸಾಹಸಪ್ರಧಾನ ಚಿತ್ರಗಳಲ್ಲಿ ಎಷ್ಟು ಸಲೀಸಾಗಿ ಅಭಿನಯಿಸಿದ್ದಾರೆಯೋ ಭಾವಪ್ರಧಾನ ಚಿತ್ರಗಳಲ್ಲಿಯೂ ಅಷ್ಟೇ ಪರಿಣಾಮಕಾರಿಯಾಗಿ ಅಭಿನಯಿಸಿರುವ ವಿಷ್ಣುವರ್ಧನ್ ಅವರ ಅಭಿನಯದ ಚಿತ್ರಗಳಲ್ಲಿ 'ಮಲಯ ಮಾರುತ', 'ಬಂಧನ', 'ಸುಪ್ರಭಾತ', 'ಮುತ್ತಿನಹಾರ', 'ಕಳ್ಳ-ಕುಳ್ಳ', 'ಬೂತಯ್ಯನ ಮಗ ಅಯ್ಯು', 'ಹೊಂಬಿಸಿಲು', 'ಸಾಹಸ ಸಿಂಹ', 'ಕರ್ಣ', 'ಲಯನ್ ಜಗಪತಿರಾವ್', 'ವೀರಪ್ಪನಾಯಕ' ಇತ್ತೀಚೆಗೆ ಬಿಡುಗಡೆಯಾದ 'ಯಜಮಾನ' ಇತ್ಯಾದಿ ಮುಖ್ಯವಾದವು. ತಂದೆ ಹೆಚ್.ಎಲ್.ನಾರಾಯಣರಾಯರು ಕನ್ನಡ ಚಿತ್ರರಂಗದ ಪ್ರಾರಂಭಿಕ ದಿನಗಳಲ್ಲಿ ಕೆಲವು ಚಿತ್ರಗಳಿಗೆ ಕಥೆ, ಸಂಭಾಷಣೆಗಳನ್ನು ಒದಗಿಸಿಕೊಟ್ಟವರು. ತಾಯಿ ಆಕಾಶವಾಣಿ ಕಲಾವಿದೆ. ವಿಷ್ಣುವರ್ಧನ್ ಬೆಂಗಳೂರಿನ ನ್ಯಾಷನಲ್ ಹೈಸ್ಕೂಲಿನಲ್ಲಿ ಶಿಕ್ಷಣ ಪಡೆದವರು. ನಂತರ ಅಭಿನಯ ಕ್ಷೇತ್ರಕ್ಕೆ ಧುಮುಕಿದರು. ಖ್ಯಾತ ತಾರೆ ಭಾರತಿಯವರು ವಿಷ್ಣುವರ್ಧನ್‌ರವರ ಪತ್ನಿ. ವಿಷ್ಣುರವರು ನಿರ್ಮಾಪಕ, ವಿತರಕರಾಗಿ ಕೂಡ ತಮ್ಮ ಅದೃಷ್ಟ ಪರೀಕ್ಷೆ ಮಾಡಿದ್ದುಂಟು. ಎರಡು ಹಿಂದಿ ಚಿತ್ರಗಳನ್ನು ನಿರ್ಮಿಸಿದ್ದಾರೆ. ಅವರು ಅಭಿನಯಿಸಿದ ಇತ್ತೀಚಿನ ಚಿತ್ರ 'ಯಜಮಾನ' ಗಳಿಕೆಯಲ್ಲಿ ಹಿಂದಿನ ಎಲ್ಲ ದಾಖಲೆಗಳನ್ನೂ ಮುರಿದಿದೆ. ವೃತ್ತಿ ಜೀವನದಲ್ಲಿ ಅನೇಕ ಸವಾಲುಗಳನ್ನು ಪಾತ್ರ, ಅಭಿನಯ, ಪೈಪೋಟಿಗಳನ್ನೂ ಎದುರಿಸಿದ್ದಾರೆ. ಕೆಲವು ಚಿತ್ರಗಳಿಗೆ ಹಾಡಿದ್ದಾರೆ. ಕ್ರಿಕೆಟ್ ಪ್ರೇಮಿ. ಮಿತ ಭಾಷಿ. 'ನಾಗರಹಾವು' (೧೯೭೨-೭೩), 'ಹೊಂಬಿಸಿಲು' (೧೯೭೭-೭೮), 'ಬಂಧನ' (೧೯೮೪-೮೫), 'ಲಯನ್ ಜಗಪತಿರಾವ್' (೧೯೯೦-೯೧), 'ಲಾಲಿ' (೧೯೯೭-೯೮) ಚಿತ್ರಗಳಲ್ಲಿನ ಅಭಿನಯಕ್ಕಾಗಿ ಐದು ಬಾರಿ ರಾಜ್ಯ ಸರ್ಕಾರದ ಅತ್ಯುತ್ತಮ ನಟ ಪ್ರಶಸ್ತಿ ಪಡೆದಿದ್ದಾರೆ. 'ವೀರಪ್ಪನಾಯಕ'

ಚಿತ್ರದ ಅಭಿನಯಕ್ಕಾಗಿ ನಟ ರಮೇಶ್ ಅವರೊಂದಿಗೆ ರಾಜ್ಯ ಪ್ರಶಸ್ತಿ ಹಂಚಿಕೊಂಡರು.

### ವೀರ್ ಎಂ.ಸಿ.

ಚನ್ನ ವೀರಪ್ಪ ಎಂಬ ಹೆಸರಿನ ಇವರು ಎಂ.ಸಿ. ವೀರ್ ಎಂಬ ಹೆಸರಿನಿಂದ ಚಿತ್ರ ರಂಗದಲ್ಲಿ ಪರಿಚಿತರು. ನವಜ್ಯೋತಿ ಸ್ಟುಡಿಯೋದಲ್ಲಿ ನೃತ್ಯ ನಿರ್ದೇಶಕರಾಗಿ ಹಲವಾರು ಚಿತ್ರಗಳಿಗೆ ನೃತ್ಯ ಸಂಯೋಜನೆ ಮಾಡಿದ್ದಾರೆ. ೧೯೪೭ರಲ್ಲಿ ತೆರೆಕಂಡ



'ಮಹಾನಂದ' ಚಿತ್ರದ ನೃತ್ಯ ನಿರ್ದೇಶನ ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ನಂತರ 'ಭಕ್ತ ರಾಮದಾಸ', 'ಭಾರತಿ','ಜಗನ್ಮೋಹಿನಿ', 'ಶ್ರೀ ಶ್ರೀನಿವಾಸ ಕಲ್ಯಾಣ ', 'ದಳ್ಳಾಳಿ', ಇವರು ನೃತ್ಯ ನಿರ್ದೇಶನ ನೀಡಿದ ಇತರ ಚಿತ್ರಗಳು. ವೀರ್ ವಿ

### ವೀರಣ್ಣ .ಜಿ.ಹೆಚ್ (ಗುಬ್ಬಿ) (೧೮೯೧-೭೨)

ಕನ್ನಡ ರಂಗಭೂಮಿಯ ಗುರುಕುಲದ ಆಚಾರ್ಯ. ತುಮಕೂರು ಜಿಲ್ಲೆಯ ಗುಬ್ಬಿಯಲ್ಲಿ ೧೮೯೧ರಲ್ಲಿ ಜನನ. ಆರನೆ ವಯಸ್ಸಿನಲ್ಲೇ ಗುಬ್ಬಿ ಚನ್ನಬಸವೇಶ್ವರ ಕೃಪಾಪೋಷಿತ ನಾಟಕ ಕಂಪೆನಿ ಸೇರಿದರು.



ಈ ಸಂಸ್ಥೆ ೧೮೮೪ರಲ್ಲಿ ಚಂದ್ರಣ್ಣ ಹಾಗೂ ಇತರರಿಂದ ರೂಪುಗೊಂಡಿತ್ತು. ಸಣ್ಣ ಪುಟ್ಟ ಪಾತ್ರಗಳನ್ನು ನಿರ್ವಹಿಸಿಕೊಂಡು ಬಂದರು. ೧೯೧೭ರವರೆಗೆ ವೀರಣ್ಣನವರು ಪ್ರಮುಖ ನಟರಷ್ಟೇ ಅಲ್ಲದೆ ಕಂಪೆನಿಯ ಆಧಾರಸ್ತಂಭವೂ ಆದರು. ೧೯೧೯ರಲ್ಲಿ ಸಂಸ್ಥೆಯ ಒಡೆಯರೂ ಆದರು. ಮಾತನಾಡುವ ಚಿತ್ರಗಳಿಗೂ ಮುನ್ನ ೧೯೨೯ ೩೦ರಲ್ಲಿ 'ಹಿಸ್ ಲವ್ ಅಫೇರ್', 'ಹರಿಮಾಯ','ಸಾಂಗ್ ಆಫ್ ಲೈಫ್' ಮೂಕಿಚಿತ್ರಗಳನ್ನು ತಯಾರಿಸಿದರು. 'ಸದಾರಮೆ' (೧೯೩೫) ವೀರಣ್ಣನವರು ನಿರ್ಮಿಸಿದ ಮೊದಲ ಟಾಕಿ ಚಿತ್ರ. ಈ ಚಿತ್ರದಲ್ಲಿ ಇವರು ಕಳ್ಳನ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸಿದರು. 'ಸುಭದ್ರ', 'ಜೀವನನಾಟಕ','ಹೇಮರೆಡ್ಡಿ ಮಲ್ಲಮ್ಮ', 'ಗುಣಸಾಗರಿ','ಬೇಡರ ಕಣ್ಣಪ್ಪ' ಮುಂತಾದವು ಇವರ ನಿರ್ಮಾಣದ ಇತರ ಚಿತ್ರಗಳು. ಮಹಾರಾಜರಿಂದ 'ನಟ ರತ್ನಾಕರ' ಬಿರುದು ಪಡೆದುಕೊಂಡು ಕೈಗೆ 'ಗಂಡಭೇರುಂಡ' ಕಪ್ಪವನ್ನು ತೊಡಿಸಿಕೊಂಡರು. ೧೯೭೨ರಲ್ಲಿ ಕೇಂದ್ರ ಸರ್ಕಾರದಿಂದ 'ಪದ್ಮಶ್ರೀ' ಪ್ರಶಸ್ತಿಗೆ ಭಾಜನರಾದರು. ೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾಲಯ ಗೌರವ 'ಡಾಕ್ಟರೇಟ್' ನೀಡಿತು. ಜನಪ್ರಿಯರಾಗಿದ್ದ ಪತ್ನಿ ಬಿ.ಜಯಮ್ಮ, ಮಗ ಜಿ.ವಿ.ಶಿವಾನಂದ, ಮೊಮ್ಮಗಳು ಬಿ.ಜಯಶ್ರೀ ಸೇರಿದಂತೆ ಇವರ ಕುಟುಂಬದ ಎಲ್ಲರೂ ಕಲಾವಿದರು. ಜೀವನ ಸಂಧ್ಯಾ ಸಮಯದಲ್ಲಿ ಚಿತ್ರರಂಗದ ಉಚ್ಛ್ರಾಯಸ್ಥಿತಿಗೆ ದುಡಿದರು. ಈ ಮಹಾನ್ ವ್ಯಕ್ತಿ ತಮ್ಮ ೮೨ನೆಯ ವಯಸ್ಸಿನಲ್ಲಿ (ಅಕ್ಟೋಬರ್ ೧೮, ೧೯೭೨) ನಿಧನರಾದರು. ರಾಜಕುಮಾರ್ ಸೇರಿದಂತೆ ಅನೇಕ ಕಲಾವಿದರು, ತಂತ್ರಜ್ಞರು ಗುಬ್ಬಿ ಸಂಸ್ಥೆಯಿಂದ ಬಂದು ಚಿತ್ರರಂಗದಲ್ಲಿ ಹೆಸರು ಮಾಡಿದರು. ಚಿತ್ರ ತಯಾರಿಕೆಯ ಜೊತೆಯಲ್ಲಿ ೧೯೪೨ರಲ್ಲಿ ವೀರಣ್ಣನವರು ಕರ್ನಾಟಕ ಫಿಲಂಸ್ ಹೆಸರಿನಲ್ಲಿ ಚಿತ್ರ ವಿತರಣಾ ಸಂಸ್ಥೆಯನ್ನು ಸ್ಥಾಪಿಸಿದರು. ಚಿತ್ರ ಪ್ರದರ್ಶಕರಾರಾಗಿಯೂ ಸಹ ವೀರಣ್ಣನವರು ತಮ್ಮ ಸಾಹಸ ಪ್ರವೃತ್ತಿಯನ್ನು ತೋರಿದರು. ಬೆಂಗಳೂರು, ತುಮಕೂರು ಹಾಗೂ ತಿಪಟೂರುಗಳಲ್ಲಿ ಚಿತ್ರಮಂದಿರಗಳನ್ನು ಕಟ್ಟಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ದಾರಿ ಮಾಡಿಕೊಟ್ಟ ಸಾಹಸಿಗರಾದರು. ೧೯೬೬ರಲ್ಲಿ ತಮ್ಮ ವಿತರಕರೊಡಗೂಡಿ ಬೆಂಗಳೂರಿನಲ್ಲಿ ಕನ್ನಡ ಚಿತ್ರಗಳ ತಯಾರಿಕೆಗೆ ಬೆಂಬಲವಾಗಿ ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್ ಸ್ಥಾಪಿಸಿ, ಸ್ಥಾಪಕ ನಿರ್ದೇಶಕರಾಗಿ ದುಡಿದರು. ಗುಬ್ಬಿ ವೀರಣ್ಣನವರು ನಾಮಕರಣಗೊಂಡ ವಿಧಾನಪರಿಷತ್ ಸದಸ್ಯರು. ವೀರಣ್ಣನವರು ನಟರಾಗಿ, ಆಯೋಜಕರಾಗಿ, ನಾಟಕ ಕಂಪನಿಯ ಒಡೆಯರಾಗಿ, ಚಲನಚಿತ್ರ ನಿರ್ಮಾಪಕ-ವಿತರಕ-ಪ್ರದರ್ಶಕ-ಸ್ಟುಡಿಯೋ ಸ್ಥಾಪಕರಾಗಿ - ಹೀಗೆ ತಮ್ಮ ಬಹುಮುಖ ಪ್ರತಿಭೆಯಿಂದ ಕನ್ನಡ ಚಿತ್ರರಂಗಕ್ಕೆ ಭದ್ರ ಬುನಾದಿ ಹಾಕಿಕೊಟ್ಟರು. ಮೈಸೂರು ವಿಶ್ವವಿದ್ಯಾಲಯದ ಲಲಿತಾಕಲಾ ಕಾಲೇಜಿನಲ್ಲಿ ಗುಬ್ಬಿ ವೀರಣ್ಣ ಪೀಠವನ್ನು ಪ್ರಾರಂಭಿಸಲಾಯಿತು. ರಾಜ್ಯ ಸರ್ಕಾರವು ಇವರ ಹೆಸರಿನಲ್ಲಿ 'ಗುಬ್ಬಿ ವೀರಣ್ಣ ಪ್ರಶಸ್ತಿ'ಯನ್ನು ಸ್ಥಾಪಿಸಿತು. ಮೊದಲ ಪ್ರಶಸ್ತಿ ರಾಜಕುಮಾರ್ ಪಡೆದರು. ಈಗ ಅದು ರಂಗಭೂಮಿಗೆ ಮಾತ್ರ ಮೀಸಲಾಗಿದೆ. ಬೆಂಗಳೂರು ಮಹಾನಗರ ಪಾಲಿಕೆಯು ಗಾಂಧಿನಗರದ ಎರಡನೆಯ ಅಡ್ಡರಸ್ತೆಯಲ್ಲಿ, ಹಿಂದೆ ಗುಬ್ಬಿ ವೀರಣ್ಣನವರ ರಂಗಮಂದಿರವಿದ್ದ ಸ್ಥಳದಲ್ಲಿಯೇ ನೂತನವಾಗಿ 'ಗುಬ್ಬಿ ವೀರಣ್ಣ ರಂಗಮಂದಿರ'ವನ್ನು ನಿರ್ಮಿಸಿದರು. ವೃತ್ತಿ ರಂಗಭೂಮಿಯವರು ತಮ್ಮ ನಾಟಕಗಳನ್ನು ಪ್ರದರ್ಶಿಸಲು ಅನುಕೂಲ ಮಾಡಿಕೊಟ್ಟಿದೆ. ಗುಬ್ಬಿ ವೀರಣ್ಣನವರ ಹೆಸರನ್ನು ಶಾಶ್ವತಗೊಳಿಸಿದೆ.

### ವೀರಭದ್ರಯ್ಯ.ಆರ್. ಎಂ (೧೯೦೯-೮೬)

ಕನ್ನಡ ಚಲನಚಿತ್ರ ನಿರ್ದೇಶಕ. ಮೈಸೂರು ಸ್ವಂತ ಸ್ಥಳ . ಬಾಲ್ಯದಿಂದಲೇ ರೇಖಾಚಿತ್ರಗಳ ರಚನೆಯಲ್ಲಿ ಆಸಕ್ತಿ. ವಿದ್ಯಾ ಗುರುಗಳ ಉತ್ತೇಜನ. ಶಿಲ್ಪಿ ಸಿದ್ಧಲಿಂಗಸ್ವಾಮಿಗಳ ಸೋದರರಾದ ಪ್ರಖ್ಯಾತ ತೈಲಚಿತ್ರಕಾರರಾದ ಅಪ್ಪಾಜಪ್ಪನವರ ಬಳಿ ಸಾಂಪ್ರದಾಯಿಕ ವರ್ಣಚಿತ್ರಗಳ ರಚನೆಯಲ್ಲಿ ಸಿದ್ಧಿ ಪಡೆದರು. ಅನಂತರ ಬೃಹದಾಕಾರದ ಚಿತ್ರಗಳನ್ನು ರಚಿಸುವತ್ತ ಅವರ ಒಲವು. ನಿರ್ದೇಶಕ ದೊರೆ ಅವರ ಸೋದರ ಹಾಗೂ ನಾಟಕ ಪರದೆಗಳ ರಚನೆಯಲ್ಲಿ ನಿಷ್ಣಾತರಾದ ಬಾಬುನಾಯ್ಡು ಅವರ ಬಳಿ ಮೂರು ವರ್ಷ ಮಾರ್ಗದರ್ಶನ ಪಡೆದು, ನಾಟಕದ ಪರದೆ ಸೀನರಿಗಳನ್ನು ರಚಿಸುವುದರಲ್ಲಿ ಪ್ರವೀಣರಾದರು. ಉತ್ತಮ ಕನ್ನಡ ಚಿತ್ರಗಳನ್ನು ನಿರ್ಮಿಸುವ ಆಕಾಂಕ್ಷೆ. ಅದಕ್ಕಾಗಿ ಚಲನಚಿತ್ರಗಳ ನಿರ್ಮಾಣಕ್ಕೆ ಸಂಬಂಧಪಟ್ಟ ಗ್ರಂಥಗಳ ಅಧ್ಯಯನ. ಮೈಸೂರಿನ



ಚಿತ್ರಮಂದಿರವೊಂದರಲ್ಲಿ ಕೆಲಸ ಮಾಡುತ್ತಿದ್ದ ಅವರಿಗೆ ಚಲನಚಿತ್ರಗಳನ್ನು ನೋಡುವ ಮುಕ್ತ ಅವಕಾಶ ದೊರೆತದ್ದು ಅವರ ಈ ಕನಸು ಸಾಕಾರಗೊಳ್ಳಲು ನೆರವಾಯಿತು. 'ಭಾರತಿ' (೧೯೪೯), 'ತಿಲೋತ್ತಮೆ' (೧೯೫೧), 'ಅಪರಾಜಿತೆ' (೧೯೭೦) ಅವರು ನಿರ್ದೇಶಿಸಿದ ಮೂರು ಚಿತ್ರಗಳು. ಮೈಸೂರಿನ ನವಜ್ಯೋತಿ ಮತ್ತು ಪ್ರೀಮಿಯರ್ ಸ್ಟುಡಿಯೋಗಳಲ್ಲಿ ನಿರ್ಮಾಣಗೊಂಡ ಪ್ರಮುಖ ಚಿತ್ರಗಳಿಗೆ ಕಲಾನಿರ್ದೇಶಕರಾಗಿ ಅವರು ಕನ್ನಡ ಚಿತ್ರರಂಗಕ್ಕೆ ಸೇವೆ ಸಲ್ಲಿಸಿದ್ದಾರೆ. ವಿ.ಶಾಂತಾರಾಮರ 'ಝನಕ್ ಝನಕ್ ಪಾಯಲ್ ಬಾಜೆ...' ಚಿತ್ರಕ್ಕೂ ಸಹ ಕಲಾನಿರ್ದೇಶಕರಾಗಿ ಕೆಲಸ ಮಾಡಿದರು. ನಂತರ ಚಿತ್ರ ನಿರ್ದೇಶನದ ಗೀಳು ಬಿಟ್ಟು ಮೈಸೂರಿನ ಪದ್ಮ ಚಿತ್ರಮಂದಿರದ ಮ್ಯಾನೇಜರ್ ಆಗಿ ಕೆಲಸ ಮಾಡಿದರು. 'ಅಪ್ಪಾಜಿ' ಎಂದೇ ಎಲ್ಲರಿಂದಲೂ ಕರೆಸಿಕೊಳ್ಳುತ್ತಿದ್ದ ವೀರಭದ್ರಯ್ಯನವರು ತಮ್ಮ ೭೬ನೆಯ ವಯಸ್ಸಿನಲ್ಲಿ (ಜೂನ್ ೧೪, ೧೯೮೬ರಂದು) ನಿಧನರಾದರು.

### ವೀರಾಸ್ವಾಮಿ.ಎನ್

ಸ್ವಯಂ ಪರಿಶ್ರಮದಿಂದ ಮೇಲೆ ಬಂದು ಚಿತ್ರರಂಗದಲ್ಲಿ ಉನ್ನತವಾದ ಸ್ಥಾನವನ್ನು ಅಲಂಕರಿಸಿದವರು. ನಿರ್ಮಾಪಕ, ವಿತರಕ, ಪ್ರದರ್ಶಕರಾದ ಎನ್.ವೀರಾಸ್ವಾಮಿ ಅವರು ಚಿತ್ರರಂಗವನ್ನು ಒಬ್ಬ ಸಾಮಾನ್ಯ ಕೆಲಸಗಾರರಾಗಿ ಸೇರಿದರು. ಅವರು ಡ್ರೀಮ್‌ಲ್ಯಾಂಡ್ ಎನ್ನುವ ಚಿತ್ರ ಹಂಚಿಕಾ



ಸಂಸ್ಥೆಯನ್ನು ಸೇರಿ ಅಲ್ಲಿ ಹಲವು ವರ್ಷಗಳು ಕಾರ್ಯನಿರ್ವಹಿಸಿದರು. ಆ ಸಂಸ್ಥೆಯ ಮಾಲೀಕರು ಸಂಸ್ಥೆಯನ್ನು ಮುಚ್ಚುವ ಹಂತದಲ್ಲಿದ್ದಾಗ ಅದರ ಉಸ್ತುವಾರಿಯನ್ನು ವೀರಾಸ್ವಾಮಿಯವರಿಗೆ ವಹಿಸಿಕೊಟ್ಟರು. ನಂತರ ಆ ಹಂಚಿಕಾ ಸಂಸ್ಥೆಗೆ 'ಈಶ್ವರಿ ಪಿಕ್ಚರ್ಸ್' ಹೆಸರಿಟ್ಟು ಚಿತ್ರಗಳ ಹಂಚಿಕೆಯನ್ನು ಆರಂಭಿಸಿದರು. ಅದೇ ವೇಳೆಗೆ 'ಶ್ರೀ ಈಶ್ವರಿ ಪ್ರೊಡಕ್ಷನ್ಸ್' ಚಿತ್ರ ನಿರ್ಮಾಣ ಸಂಸ್ಥೆಯನ್ನು ಹುಟ್ಟು ಹಾಕಿದರು. ೧೯೭೧ರಲ್ಲಿ 'ಕುಲಗೌರವ' ಚಿತ್ರವನ್ನು ನಿರ್ಮಿಸಿದರು. ನಂತರ 'ನಾಗರಹಾವು', 'ನಾ ನಿನ್ನ ಮರೆಯಲಾರೆ', 'ನಾರಿ ಸ್ವರ್ಗಕ್ಕೆ ದಾರಿ' ಮುಂತಾದ ಜನಪ್ರಿಯ ಚಿತ್ರಗಳನ್ನು ನಿರ್ಮಿಸಿದರು. ಸಿದ್ಧಲಿಂಗಯ್ಯ, ಚಂದೂಲಾಲ್‌ಜೈನ್, ವರದರಾಜ್ ಅವರೊಂದಿಗೆ 'ಬೂತಯ್ಯನ ಮಗ ಅಯ್ಯು' ಮತ್ತು 'ಹೇಮಾವತಿ' ಚಿತ್ರವನ್ನು ನಿರ್ಮಿಸಿದರು. ಮಗ ರವಿಚಂದ್ರನ್ ಬೆಳೆದು ಚಿತ್ರರಂಗಕ್ಕೆ ಬಂದ ಮೇಲೆ 'ಚಕ್ರವ್ಯೂಹ', 'ಪ್ರೇಮಲೋಕ', 'ರಣಧೀರ', 'ಶಾಂತಿಕ್ರಾಂತಿ' ಮುಂತಾದ ಅದ್ದೂರಿ ಚಿತ್ರಗಳನ್ನು ನಿರ್ಮಿಸಿದರು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿ ೧೯೮೯-೯೦ರಲ್ಲಿ ಕಾರ್ಯ ನಿರ್ವಹಿಸಿದರು. ಇವರ ಅವಧಿಯಲ್ಲಿ ಅನೇಕ ಕೆಲಸಗಳಾಗಿವೆ. ಮುಖ್ಯವಾಗಿ ವಾಣಿಜ್ಯ ಮಂಡಳಿಯ ಕಟ್ಟಡದ ಕಾಮಗಾರಿಗೆ ಸಂಬಂಧಿಸಿದ ಪುನರ್‌ವ್ಯವಸ್ಥೆಯಾಗಿದೆ. ಇವರು ನಿರ್ಮಿಸಿದ 'ಕುಲಗೌರವ' ೧೯೭೦-೭೧ರ ತೃತೀಯ ಅತ್ಯುತ್ತಮ ಚಿತ್ರ ಮತ್ತು 'ನಾಗರಹಾವು' ೧೯೭೨-೭೩ನೇ ಸಾಲಿನ ದ್ವಿತೀಯ ಉತ್ತಮ ಚಿತ್ರಗಳಾಗಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿವೆ. ಚಿತ್ರರಂಗದ ಹಿರಿಯಣ್ಣನಂತೆ ಇದ್ದರು. ತೀವ್ರ ಅನಾರೋಗ್ಯದಿಂದ ನಿಧನರಾದರು.

### ವೆಂಕಟಪ್ಪ.ಎಂ.ವಿ

ಹಿರಿಯ ಪ್ರದರ್ಶಕರಲ್ಲಿ ಒಬ್ಬರಾದ ವೆಂಕಟಪ್ಪ ಮಳವಳ್ಳಿಯವರು. ಅಬಕಾರಿ ಮತ್ತು ಉದಯರಂಗ ಸಾರಿಗೆ ಸಂಸ್ಥೆಯ ಮಾಲೀಕರಾದ ಇವರು ೧೯೩೫ರಲ್ಲಿ



ಮಳವಳ್ಳಿಯಲ್ಲಿ ಶ್ರೀ ಮಹಾವೀರ್ ಚಿತ್ರಮಂದಿರವನ್ನು ಪ್ರಾರಂಭಿಸಿದರು. ನಂತರ ಶ್ರೀ ಮಹಾಲಕ್ಷ್ಮಿ ಟಾಕೀಸ್ ಕಟ್ಟಿಸಿದರು. ಮೈಸೂರು ವಲಯದಲ್ಲಿಯೇ ಅತ್ಯಂತ ಸುಸಜ್ಜಿತ ಚಿತ್ರಮಂದಿರವೆಂಬ ಹೆಗ್ಗಳಿಕೆ ಈ ಚಿತ್ರಮಂದಿರಗಳಿಗಿದೆ. ೧೯೭೨ರಿಂದ ೭೮ರವರೆಗೆ ರಾಜ್ಯ ವಿಧಾನಪರಿಷತ್ತಿನ ಸದಸ್ಯರಾಗಿದ್ದರು. ತಮ್ಮ ಇಳಿವಯಸ್ಸಿನಲ್ಲಿಯೂ ಅತ್ಯಂತ ಸಮರ್ಪಕವಾಗಿ ಚಿತ್ರಮಂದಿರವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದರು. ಧಾರ್ಮಿಕ ಹಾಗೂ ಸಾಮಾಜಿಕ ಸೇವೆಗಳಲ್ಲಿ ಆಸಕ್ತರು.

### ವೆಂಕಟೇಶ್.ಜಿ

ಹಿರಿಯ ಪ್ರಸಾಧನ ಕಲಾವಿದರಾದ ಜಿ.ವೆಂಕಟೇಶ್ ಹುಟ್ಟಿದ್ದು ೧೦-೦೬-೧೯೫೧ರಲ್ಲಿ. ಎಸ್.ಎಸ್.ಎಲ್.ಸಿ.ವರೆಗೆ ಓದು. ೧೯೬೭ರಲ್ಲಿ ಮದರಾಸಿಗೆ ಹೋಗಿ ವರ್ಣಾಲಂಕಾರ ಕ್ಷೇತ್ರದಲ್ಲಿ ಹಿರಿಯಾದ ವೀರರಾಜು, ಮಾಧವಯ್ಯ ಅವರುಗಳಿಂದ ಮಾರ್ಗದರ್ಶನ ಪಡೆದರು. ಪ್ರಸಾಧನ ಕ್ಷೇತ್ರದಲ್ಲಿ ಸಹಾಯಕರಾಗಿ 'ಭಾಗ್ಯ ದೇವತೆ' ಚಿತ್ರದಿಂದ 'ಗೃಹಿಣಿ' ಚಿತ್ರದವರೆಗೆ ಸುಮಾರು ೬೭ ಚಿತ್ರಗಳಲ್ಲಿ ಕಾರ್ಯ ನಿರ್ವಹಿಸಿದರು. 'ಮಹದೇಶ್ವರ ಪೂಜಾಫಲ' ಚಿತ್ರದಿಂದ ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲು ಆರಂಭಿಸಿ ಸುಮಾರು ೧೨೫ಕ್ಕೂ ಹೆಚ್ಚು ಚಿತ್ರಗಳಲ್ಲಿ ದುಡಿಸಿದ್ದಾರೆ. 'ಶನಿ ಪ್ರಭಾವ', 'ಪಿತಾಮಹ', 'ಬಂಧನ', 'ಮುತ್ತಿನ ಹಾರ', 'A.K. 47' ಕೆಲವು ವಿಶೇಷ ಎಂದು ಹೆಸರಿಸಬಹುದಾದ ಚಿತ್ರಗಳು.

### ವೆಂಕಟೇಶ್. ಜಿ.ಕೆ (೧೯೨೭-೯೩)

ಕನ್ನಡದ ಹಿರಿಯ ಸಂಗೀತ ನಿರ್ದೇಶಕ. ಬೆಂಗಳೂರು ಹುಟ್ಟೂರು. ಸೋದರನ ಬಳಿ ಸಂಗೀತಾಭ್ಯಾಸ. ಖ್ಯಾತ ಸಂಗೀತ ನಿರ್ದೇಶಕರಾದ ಎಸ್.ವೆಂಕಟರಾಮನ್ ಮತ್ತು ವಿಶ್ವನಾಥನ್-ರಾಮಮೂರ್ತಿ ಅವರ ಬಳಿ ಸಹಾಯಕರಾಗಿದ್ದರು. ಸಂಗೀತ ನಿರ್ದೇಶಕ ಪದ್ಮನಾಭ ಶಾಸ್ತ್ರಿ ಅವರೊಂದಿಗೆ ಜಂಟಿಯಾಗಿ ಟಿ.ವಿ.ಸಿಂಗ್‌ಠಾಕೂರ್ ಅವರ 'ಸೋದರಿ' ಚಿತ್ರಕ್ಕೆ ಸಂಗೀತ ನಿರ್ದೇಶನ ಮಾಡುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ಉತ್ತಮ ಸಂಗೀತ ನಿರ್ದೇಶಕರು. ಜೊತೆಗೆ ಉತ್ತಮ ಗಾಯಕರು. ರಾಜಕುಮಾರ್ ಅಭಿನಯದ ಬಹುತೇಕ ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದರು. ಇವರ ಸಂಗೀತ ನಿರ್ದೇಶನದಡಿಯಲ್ಲಿ ರೂಪಿತಗೊಂಡ 'ಯಾವ ಜನ್ಮದ ಮೈತ್ರಿ...', 'ಇವಳು ಯಾರು ಬಲ್ಲೆಯೇನು...', 'ರವಿವರ್ಮನಾ ಕುಂಚದಾ...', 'ಆಡಿಸಿನೋಡು ಬೀಳಿಸಿನೋಡು...', 'ಬಾಳ ಬಂಗಾರ ನೀನು...' ಮುಂತಾದವು ಸಾರ್ವಕಾಲಿಕ ಜನಪ್ರಿಯ ಗೀತೆಗಳು. ಚಲನಚಿತ್ರರಂಗದಲ್ಲಿ ೫೦ ವರ್ಷಗಳ ಅನುಭವವಿದ್ದ ವೆಂಕಟೇಶ್ 'ತುಂಬಿದ ಕೊಡ' ಚಿತ್ರ ನಿರ್ಮಿಸಿದರು. 'ಭಕ್ತ ಕುಂಬಾರ', 'ಹೊಸನೀರು', 'ಸಂಪತ್ತಿಗೆ ಸವಾಲ್', 'ಜೀವನ ಚೈತ್ರ', 'ಬೂತಯ್ಯನ ಮಗ ಅಯ್ಯು' ಮೊದಲಾದ ಚಿತ್ರಗಳು ಇವರ ಸಂಗೀತ ನಿರ್ದೇಶನದ ಚಿತ್ರಗಳು.



೧೯೭೪-೭೫ರಲ್ಲಿ 'ಭಕ್ತ ಕುಂಬಾರ' ಚಿತ್ರ, ೧೯೮೫-೮೬ರಲ್ಲಿ 'ಹೊಸ ನೀರು' ಚಿತ್ರಗಳ ಸಂಗೀತ ನಿರ್ದೇಶನಕ್ಕಾಗಿ ಎರಡು ಬಾರಿ ರಾಜ್ಯಪ್ರಶಸ್ತಿಯನ್ನು ಪಡೆದಿದ್ದಾರೆ. ರಾಜಕುಮಾರ್ ಅವರನ್ನು 'ಸಂಪತ್ತಿಗೆ ಸವಾಲ್' ಚಿತ್ರದ ಮೂಲಕ ಗಾಯಕರಾಗಿ ಪರಿಚಯಿಸಿದರು. ದಕ್ಷಿಣದ ಪ್ರತಿಭಾವಂತ ಸಂಗೀತ ನಿರ್ದೇಶಕ ಇಳಯರಾಜರಿಗೆ ಗುರು. ಕಡೆ ತನಕ ಇಳಯರಾಜರ ಬಳಿಯೇ ಇದ್ದು ಆತನಿಗೆ ಸಹಕರಿಸಿದರು ಜಿ.ಕೆ.ವೆಂಕಟೇಶ್.

### ವೆಂಕಟೇಶ್.ಬಿ.ಎಂ

ಹವ್ಯಾಸಿ ರಂಗಭೂಮಿಯಿಂದ ಚಿತ್ರರಂಗಕ್ಕೆ ಬಂದ ಕಲಾವಿದ ಬಿ.ಎಂ.ವೆಂಕಟೇಶ್. ಹುಣಸೂರು ಕೃಷ್ಣಮೂರ್ತಿಗಳು ನಿರ್ಮಿಸಿ, ನಿರ್ದೇಶಿಸಿದ 'ವೀರಸಂಕಲ್ಪ' ಇವರ ಅಭಿನಯದ ಮೊದಲ ಚಿತ್ರ. 'ಪೋಸ್ಟ್ ಮಾಸ್ಟರ್', 'ಪಾತಾಳ ಮೋಹಿನಿ', 'ಅಡ್ಡದಾರಿ', 'ನಾಡಿನ ಭಾಗ್ಯ', 'ಜ್ವಾಲಾಮೋಹಿನಿ', 'ಮಮತೆಯ ಬಂಧನ', 'ಮಲ್ಲಿಗೆ ಸಂಪಿಗೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ೧೯೭೧ರಲ್ಲಿ 'ನ್ಯಾಯವೇ



ದೇವರು' ಚಿತ್ರವನ್ನು ನಿರ್ಮಿಸಿ ನಿರ್ಮಾಪಕರಾಗಿ ಕೂಡ ಹೆಸರು ಗಳಿಸಿದರು. ಕೆಲವು ಚಿತ್ರಗಳನ್ನು ಮಹಾರಾಜಾ ಮೂವೀಸ್, ಮಮತಾ ಮೂವೀಸ್ ಲಾಂಛನಗಳಲ್ಲಿ ತಯಾರಿಸಿದರು. ಅವರು ಸಹನಿರ್ಮಾಪಕರಾಗಿ ತಯಾರಿಸಿದ ಎಸ್.ಎಲ್.ಭೈರಪ್ಪನವರ ಕಾದಂಬರಿ ಆಧಾರಿತ 'ತಬ್ಬಲಿಯು ನೀನಾದೆ ಮಗನೆ' ಕೇಂದ್ರ ಸರ್ಕಾರದ ಪ್ರಶಸ್ತಿ ಮತ್ತು ಇನ್ನೂ ಅನೇಕ ಪ್ರಶಸ್ತಿಗಳನ್ನು ಪಡೆದುಕೊಂಡಿತು. ಬಿ.ಎಂ.ವೆಂಕಟೇಶ್ ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘದ ಅಧ್ಯಕ್ಷರೂ ಆಗಿದ್ದರು.

### ವೆಂಕಟೇಶ್ ರಾಕ್‌ಲೈನ್

ಇಂದು ಕನ್ನಡ ಚಿತ್ರೋದ್ಯಮದ ಮುಂಚೂಣಿಯಲ್ಲಿರುವ ಹೊಸ ಪೀಳಿಗೆಯ ನಿರ್ಮಾಪಕರಲ್ಲಿ ಪ್ರಮುಖರು 'ಧೀರ' ರಾಕ್‌ಲೈನ್ ವೆಂಕಟೇಶ್. ವಿವಿಧ ಉದ್ದಿಮೆಗಳಲ್ಲಿ ತೊಡಗಿಕೊಂಡವರು. ವೆಂಕಟೇಶ್ ಅತ್ಯಂತ ವೇಗದ ಕೆಲಸಗಾರ. ಸುಮಾರು ೨೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಅನೇಕವು ಕನ್ನಡ ಚಿತ್ರರಂಗ ಕಂಡ ಅತ್ಯಂತ ಶ್ರೀಮಂತ ಚಿತ್ರಗಳು. ಇನ್ನು ಕೆಲವು ಹೃದಯಸ್ಪರ್ಶಿ ಚಿತ್ರಗಳು. ಸೋಲು ಗೆಲುವುಗಳೆರಡನ್ನೂ ಸಮನಾಗಿ ಅನುಭವಿಸಿರುವ ಅವರು ಧೃತಿಗೆಡದೆ ಅನ್ವರ್ಥಕವಾಗುವಂತೆ 'ಧೀರ' ಎಂಬ ಗುಣವಾಚಕವನ್ನು ಸೇರಿಸಿಕೊಂಡಿದ್ದಾರೆ. ವೆಂಕಟೇಶ್ ಇದುವರೆಗೆ ನಿರ್ಮಿಸಿರುವ ಚಿತ್ರಗಳಲ್ಲಿ ಪ್ರಮುಖವಾದವು 'ಬೆಳ್ಳಿ ಮೋಡಗಳು', 'ಮಿಡಿದ ಹೃದಯಗಳು', 'ರಸಿಕ', 'ಹಿಮಪಾತ', 'ಲಾಲಿ', 'ಯಾರೇ ನೀನು



ಚೆಲುವೆ', 'ಪ್ರೀತ್ಸೆ'. 'ದಿಗ್ಗಜರು' ಮತ್ತು 'ಉಸಿರೇ'. 'ಲಾಲಿ' ಚಿತ್ರಕ್ಕೆ ರಾಜ್ಯ ಸರ್ಕಾರದಿಂದ ೧೯೯೭-೯೮ನೇ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಬಂತು. ಡಿ.ಫಾರ್ಮ ಓದಿದ ವೆಂಕಟೇಶ್ ಚಿತ್ರರಂಗವನ್ನು ಪ್ರವೇಶಿಸಿದ್ದು ನಟರಾಗಿ. ಅವರು ಅಭಿನಯಿಸಿದ ಮೊದಲ ಚಿತ್ರ 'ಪ್ರೇಮಜಾಲ'. ನಂತರ 'ಸಾಂಗ್ಲಿಯಾನ-೧', 'ಸಾಂಗ್ಲಿಯಾನ-೨', 'ಸಿ.ಬಿ.ಐ.ಶಂಕರ್', 'ಹಾಂಗ್‌ಕಾಂಗ್‌ನಲ್ಲಿ ಏಜೆಂಟ್ ಅಮರ್', ಅಗ್ನಿ.ಐ.ಪಿ.ಎಸ್'. 'ಪೊಲೀಸ್ ಸ್ಟೋರಿ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಆದರೆ ಚಿತ್ರ ನಿರ್ಮಾಣದತ್ತ ಅವರ ಮನಸ್ಸು ಹೆಚ್ಚು ಒಲಿಯಿತು. ವಿದ್ಯಾಸಂಸ್ಥೆಗಳನ್ನು ತೆರೆದಿದ್ದಾರೆ. ಅವುಗಳ ಮೂಲಕ ಸಮಾಜಕ್ಕೆ ಸೇವೆ ಸಲ್ಲಿಸಬೇಕೆಂಬ ಗುರಿಯನ್ನು ವೆಂಕಟೇಶ್ ಹೊತ್ತಿದ್ದಾರೆ. ಕಿರುತೆರೆಯಲ್ಲೂ ಕೆಲಸ ಮಾಡಿದ್ದಾರೆ.

### ವೇದನಾರಾಯಣ್

ವೃತ್ತಿಯಲ್ಲಿ ಆಡಿಟರ್. ಸ್ನೇಹಿತರಾದ ರಾಘವೇಂದ್ರರಾವ್, ಶಿವಣ್ಣ ಅವರೊಡಗೂಡಿ 'ತ್ರಿಮೂರ್ತಿ ಕಂಬೈನ್ಸ್' ಎಂಬ ವಿತರಣಾ ಸಂಸ್ಥೆಯನ್ನು ಸ್ಥಾಪಿಸಿದರು. ಸಂಘಶಕ್ತಿಯಲ್ಲಿ ನಂಬಿಕೆಯಿದ್ದವರು. ಇವರ ಪ್ರಯತ್ನದ ಪರಿಣಾಮವಾಗಿ ಮೈಸೂರಿನಲ್ಲಿ ಮೈಸೂರು ವಲಯ ಚಿತ್ರ ವಿತರಣಾ ಸಂಘ ಸ್ಥಾಪನೆಯಾಯಿತು. ಆ ಸಂಘದ ಅಧ್ಯಕ್ಷರಾಗಿ ಬಹಳ ಉತ್ತಮ ಸೇವೆಯನ್ನು ಸಲ್ಲಿಸಿದ್ದಾರೆ. ಅಧ್ಯಕ್ಷರಾಗಿ ಇತರರಿಗೆ ಮಾದರಿಯಾಗುವಂತೆ ಕಾರ್ಯ ನಿರ್ವಹಿಸಿದ್ದಾರೆ.

### ವೇಣು.ಬಿ.ಎಲ್

ಪ್ರಶಸ್ತಿ ವಿಜೇತ ಚಿತ್ರಕಥಾ ಲೇಖಕರು. ಸಂಭಾಷಣೆಕಾರ ಹಾಗೂ ಕಾದಂಬರಿಕಾರರಾದ ಬಿ.ಎಲ್.ವೇಣು ಚಿತ್ರದುರ್ಗದವರು. ಸುಮಾರು ೨೫



ಕಾದಂಬರಿಗಳು, ೫ ಕಥಾ ಸಂಕಲನಗಳು, ೪ ನಾಟಕಗಳನ್ನು ರಚಿಸಿರುವ ವೇಣು ಸಂಭಾಷಣೆ ರಚಿಸಿದ ಮೊದಲ ಚಿತ್ರ 'ದೊಡ್ಡಮನೆ ಎಸ್ಟೇಟ್'. 'ಪರಾಜಿತ', 'ಪ್ರೇಮಪರ್ವ', 'ಅಜೇಯ', 'ಪ್ರೀತಿ ವಾತ್ಸಲ್ಯ', 'ಪ್ರೇಮಜಾಲ', 'ಚಿತ್ತಲೆ ಸೇವೆ', 'ರಾಮರಾಜ್ಯದಲ್ಲಿ ರಾಕ್ಷಸರು' ಚಿತ್ರಗಳು ವೇಣು ಅವರ ಅದೇ ಹೆಸರಿನ ಕಾದಂಬರಿಗಳನ್ನು ಆಧರಿಸಿ ತೆರಗೆ ಬಂದ ಚಿತ್ರಗಳು. 'ರಾಜ ಮಹಾರಾಜ', 'ನನ್ನವರು', 'ಒಲವಿನ ಉಡುಗೊರೆ', 'ಮೂರುಜನ್ಮ' ಚಿತ್ರಗಳ ಚಿತ್ರಕಥೆಗಳನ್ನು ರಚಿಸಿದ್ದಾರೆ. 'ಅಪರಂಜಿ', 'ಜನನಾಯಕ', 'ದೇವ', 'ಅಜೇಯ', 'ಮಾಧುರಿ', 'ಸೇಡಿನ ಹಕ್ಕಿ', 'ಅಮೃತ ಘಳಿಗೆ', 'ವೀರಪ್ಪನಾಯಕ', 'ರಾಜಕೀಯ', 'ಮಕ್ಕಳ ಸಾಕ್ಷಿ' ಚಿತ್ರಗಳಿಗೆ ಸಂಭಾಷಣೆ ರಚಿಸಿದ್ದಾರೆ. 'ಅಪರಂಜಿ' ಚಿತ್ರದ ಸಂಭಾಷಣೆಗಾಗಿ ೧೯೮೩-೮೪ರ ರಾಜ್ಯ ಸರ್ಕಾರದ ಅತ್ಯುತ್ತಮ ಸಂಭಾಷಣ ಕರ್ತೃ ಪ್ರಶಸ್ತಿ ಪಡೆದಿದ್ದಾರೆ.

### ವೇಣುಗೋಪಾಲ್.ಟಿ.ಪಿ

ಚಿತ್ರಗಳನ್ನು ಹೆಚ್ಚಾಗಿ ನಿರ್ಮಿಸದಿದ್ದರೂ ಚಿತ್ರ ನಿರ್ಮಾಣದ ವಿವಿಧ ಹಂತಗಳಲ್ಲಿ ಸಕ್ರಿಯವಾಗಿ ದುಡಿದ ಅನುಭವದೊಂದಿಗೆ ಟಿ.ಪಿ.ವೇಣುಗೋಪಾಲ್ ದೊರೆ-ಭಗವಾನ್‌ರೊಂದಿಗೆ 'ಮಂತ್ರಾಲಯ ಮಹಾತ್ಮೆ' ಚಿತ್ರವನ್ನು ರಾಜಕುಮಾರ್ ಅವರ ನಾಯಕತ್ವದಲ್ಲಿ ನಿರ್ಮಿಸಿದರು. ನಂತರ 'ಬಿಡುಗಡೆ' ಹಾಗೂ 'ಮಯೂರ' ಚಿತ್ರಗಳನ್ನು

ಅದ್ದೂರಿಯಾಗಿ ನಿರ್ಮಿಸಿದವರು. ಕೆಲವರು ಏನು ಇಲ್ಲ, ಆದರೆ ಎಲ್ಲ ಆಗಿರುತ್ತಾರೆ. ಅಂಥವರಲ್ಲೊಬ್ಬರು ವೇಣುಗೋಪಾಲ್.

### ವೈದ್ಯ .ಎಸ್.ಎಸ್
### (೧೯೨೬-೨೦೦೦)



ಬೆಂಗಳೂರಿನ ಕಪಾಲಿ, ಬ್ಲೂಮೂನ್, ಬ್ಲೂಡೈಮಂಡ್, ವಿನಾಯಕ ಚಿತ್ರಮಂದಿರಗಳಲ್ಲಿ ಕೆಲವು ವರ್ಷ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸಿದ ವೈದ್ಯ ಅವರು ನಾಡಿನ ಸುಪ್ರಸಿದ್ಧ ಕನ್ನಡ ದಿನಪತ್ರಿಕೆ, ವಾರಪತ್ರಿಕೆಗಳ ಪ್ರಚಾರ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ವೈದ್ಯ ಅವರು ೧೯೫೫ರಲ್ಲಿ ನಿರ್ದೇಶಕ ಬಾಳಗಜಬರ್ ಅವರೊಂದಿಗೆ ಪಾಲುದಾರರಾಗಿ 'ವಿಚಿತ್ರ ಪ್ರಪಂಚ' ಚಿತ್ರವನ್ನು ತೆರೆಗೆ ತಂದರು. ಆ ಕಾಲದಲ್ಲಿ ದ.ರಾ.ಬೇಂದ್ರೆಯವರಿಂದ ಸಾಹಿತ್ಯ, ಗೀತ ರಚನೆ ಮಾಡಿಸಿದ ಸಾಹಸಿ. 'ಜಗಜ್ಯೋತಿ ಬಸವೇಶ್ವರ' ಚಿತ್ರ ನಿರ್ಮಿಸುವ ಸಾಹಸ ಅರ್ಧಾಂತಿಕವಾಯಿತು. ಎಚ್.ಎಲ್.ಎನ್.ಸಿಂಹ ಅವರು ನಿರ್ದೇಶಿಸಬೇಕಾಗಿದ್ದ ಅವರ ಮಹತ್ವಾಕಾಂಕ್ಷೆಯ ಚಿತ್ರ 'ಹೆಳವನಕಟ್ಟೆ ಗಿರಿಯಮ್ಮ' ಕೂಡಾ ಪೂರ್ಣಗೊಳ್ಳಲಿಲ್ಲ. ಜಾಹಿರಾತು ಪತ್ರಿಕೆ, ಹೋಟೇಲ್ ಉದ್ಯಮದ ಬಗ್ಗೆ ಪತ್ರಿಕೆ ಹೊರ ತರುವ ಮಹಾತ್ವಾಕಾಂಕ್ಷೆ. ಸದಾ ಸಮಾಜಸೇವೆಯಲ್ಲಿ ನಿರತರು. ಸದಾ ಶಿಸ್ತುಗಾರರಾಗಿರುತ್ತಿದ್ದ ಅವರು ೨೦೦೦ರಲ್ಲಿ ನಿಧನರಾದರು.

### ವೈದ್ಯನಾಥನ್.ಎಲ್

ಖ್ಯಾತ ಸಂಗೀತ ನಿರ್ದೇಶಕರು. ಬಾಲ್ಯದಿಂದಲೇ ಸಂಗೀತದಲ್ಲಿ ವಿಶೇಷ ಜ್ಞಾನ ಹೊಂದಿದವರು. ಹೆಸರಾಂತ ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ಅವರ ಬಳಿ ಸಹಾಯಕರಾಗಿ ಹಲವಾರು ಚಿತ್ರಗಳಿಗೆ ದುಡಿದಿದ್ದಾರೆ. ಸಂಗೀತ ಸಂಯೋಜಕರಾಗಿಯು, ಹಲವಾರು ವಾದ್ಯಗಳ ಪರಿಚಯ



ಮಾಡಿಕೊಂಡರು. ೧೯೭೭ರಲ್ಲಿ ಬಿಡುಗಡೆಯಾದ ಸಿದ್ಧಲಿಂಗಯ್ಯ ನಿರ್ದೇಶನದ ಸಾಮಾಜಿಕ ಕಳಕಳಿಯನ್ನು ಹೊಂದಿದ್ದಂಥ ಚಿತ್ರ 'ಹೇಮಾವತಿ' ಮೂಲಕ ಚಿತ್ರರಂಗಕ್ಕೆ ಸ್ವತಂತ್ರ ಸಂಗೀತ ನಿರ್ದೇಶಕರಾಗಿ ಪರಿಚಿತರಾದರು. ನಂತರದ ದಿನಗಳಲ್ಲಿ ಸಿ.ಅಶ್ವತ್ಥ್ ಅವರೊಡನೆ ಸೇರಿ ಅಶ್ವತ್ಥ್-ವೈದಿ ನಾಮಾಂಕಿತರಾಗಿ 'ಏನೇ ಬರಲಿ ಪ್ರೀತಿ ಇರಲಿ', 'ಕಾಡಿಗೆ ಹೋದವರು', 'ಅನುರಕ್ತೆ', 'ಅನುಪಮಾ' ಮುಂತಾದ ಚಿತ್ರಗಳಿಗೆ ಸಂಗೀತ ನಿರ್ದೇಶನ ನೀಡಿದರು. ಪುನಃ ಸ್ವತಂತ್ರವಾಗಿ ನಿರ್ವಹಿಸತೊಡಗಿದರು. ೧೯೮೭-೮೮ರಲ್ಲಿ 'ಪುಷ್ಪಕ ವಿಮಾನ' ಚಿತ್ರದ ಸಂಗೀತ ನಿರ್ದೇಶನಕ್ಕಾಗಿ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದ್ದಾರೆ. ೧೯೮೩-೮೪ರಲ್ಲಿ 'ತಬರನ ಕಥೆ' ಚಿತ್ರದ ಸಂಗೀತಕ್ಕಾಗಿ ರಾಷ್ಟ್ರಪತಿಯವರ ಸ್ವರ್ಣ ಕಮಲ ಪ್ರಶಸ್ತಿ ಗಳಿಸಿದ್ದಾರೆ. ಶಂಕರ್‌ನಾಗ್ ನಿರ್ದೇಶನದ 'ಮಾಲ್ಗುಡಿ ಡೇಸ್' ಮೊದಲಾದ ಧಾರಾವಾಹಿಗಳಿಗೆ ಇವರು ಕೊಟ್ಟ ಶೀರ್ಷಿಕಾ ಗೀತ ಸಂಗೀತ ವಿಶಿಷ್ಟ ರೀತಿಯದಾಗಿತ್ತು, ಜನಪ್ರಿಯವಾಯಿತು.

### ವೈಶಾಲಿ ಕಾಸರವಳ್ಳಿ

ಪ್ರತಿಭಾವಂತ ನಟಿ. ವಸ್ತ್ರ ವಿನ್ಯಾಸಗಾರ್ತಿ ವೈಶಾಲಿ ಕಾಸರವಳ್ಳಿ ಪ್ರತಿಭಾವಂತ ನಿರ್ದೇಶಕ ಗಿರೀಶ್ ಕಾಸರವಳ್ಳಿಯವರ



ಪತ್ನಿ. ಸೃಜನಾತ್ಮಕ ವಾತಾವರಣದಲ್ಲಿ ಬೆಳೆದ ವೈಶಾಲಿ ಗುಲ್ಬರ್ಗದಲ್ಲಿ ಹುಟ್ಟಿದವರು. ಖ್ಯಾತ ವೈದ್ಯ, ಚಿತ್ರ ನಿರ್ಮಾಪಕ-ನಿರ್ದೇಶಕ ಡಾ।ಬಿಟಿಗೋಪಿಯವರ ಮಗಳು. 'ಯಾವ ಜನ್ಮದ ಮೈತ್ರಿ'ಯಲ್ಲಿ ನರಸಿಂಹರಾಜು ಜೋಡಿಯಾಗಿ ಚಿತ್ರರಂಗ ಪ್ರವೇಶಿಸಿದ ವೈಶಾಲಿ ಹಲವು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಪ್ರೊ.ಹುಚ್ಚೂರಾಯ' ನಂತರದ ಚಿತ್ರ. 'ಆಕ್ರಮಣ' ಚಿತ್ರದ ಸಂಕೀರ್ಣವಾದ ಪಾತ್ರ ಪೋಷಣೆಗಾಗಿ ೧೯೭೯-೮೦ರ ರಾಜ್ಯಪ್ರಶಸ್ತಿ ಪಡೆದರು. 'ಹೊಂಬಿಸಿಲು', 'ಪುನರ್ಮಿಲನ', 'ಕಿಟ್ಟು ಪುಟ್ಟು', 'ಫಲಿತಾಂಶ' ಮೊದಲಾದ ಚಿತ್ರಗಳಲ್ಲಿ ಉಪನಾಯಕಿಯಾಗಿ ಅಭಿನಯಿಸಿದರು. ನಂತರದ ದಿನಗಳಲ್ಲಿ ಪೋಷಕ ನಟಿಯಾಗಿ ಗಮನ ಸೆಳೆದರು. ವೈಶಾಲಿ ಹಿಂದಿ, ಮರಾಠಿ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ. ವಸ್ತ್ರವಿನ್ಯಾಸಕ್ಕಾಗಿ ೧೯೯೮-೯೯ನೇ ಸಾಲಿನ ರಾಷ್ಟ್ರಪ್ರಶಸ್ತಿಯನ್ನು 'ತಾಯಿ ಸಾಹೇಬ' ಚಿತ್ರಕ್ಕಾಗಿ ಪಡೆದಿದ್ದಾರೆ. ಮೂಲತಃ ರಂಗನಟಿಯಾಗಿ ಬಿ.ವಿ.ಕಾರಂತರ ಗರಡಿಯಲ್ಲಿ ಬಂದವರು. ನಾಟಕಗಳಲ್ಲಿ ಅಭಿನಯ, ನಾಟಕ ನಿರ್ದೇಶನ, ಕಿರುತೆರೆಯಲ್ಲಿ ಅಭಿನಯ, ನಿರ್ದೇಶನ ಹೀಗೆ ಹತ್ತಾರು ದಿಕ್ಕಿನಲ್ಲಿ ಸೃಜನಶೀಲತೆಗೆ ಆದ್ಯತೆ ಕೊಟ್ಟು ದುಡಿಯುತ್ತಾರೆ.

### ಶಂಕರ್.ಎಂ.ಪಿ

ಕನ್ನಡ ಚಿತ್ರರಂಗದ ಜನಪ್ರಿಯ ಖಳನಟ ಹಾಗೂ ಪೋಷಕನಟ ಎಂ.ಪಿ.ಶಂಕರ್.



ಜನಪ್ರಿಯ ಚಿತ್ರ ನಿರ್ಮಾಪಕರು ಮತ್ತು ನಿರ್ದೇಶಕರೂ ಕೂಡ. ಮೈಸೂರಿನಲ್ಲಿ ರೈಲ್ವೆ ವರ್ಕ್‌ಷಾಪಿನಲ್ಲಿ ಉದ್ಯೋಗಿಯಾಗಿದ್ದವರು. ಅರಣ್ಯ ಹಾಗೂ ವನ್ಯಜೀವಿ ಹಿತ ಸಂರಕ್ಷಣೆ ಕುರಿತಂತೆ ಪ್ರಾಮಾಣಿಕ ಕಾಳಜಿ ಹೊಂದಿದವರು. ಕನ್ನಡ ಚಿತ್ರರಂಗದ ಹಿರಿಯ ನಿರ್ಮಾಪಕ ಸಾಹಿತಿ ಹುಣಸೂರು ಕೃಷ್ಣಮೂರ್ತಿಯವರು ಎಂ.ಪಿ.ಶಂಕರ್ ಅವರನ್ನು ಚಿತ್ರರಂಗಕ್ಕೆ ಪರಿಚಯಿಸಿದರು. ೧೯೬೨ರಲ್ಲಿ ಹುಣಸೂರರ ನಿರ್ದೇಶನದ 'ರತ್ನಮಂಜರಿ' ಇವರು ಅಭಿನಯಿಸಿದ ಮೊದಲ ಚಿತ್ರ. ೧೯೬೫ರಲ್ಲಿ ಬಿಡುಗಡೆಯಾದ 'ಸತ್ಯ ಹರಿಶ್ಚಂದ್ರ' ಚಿತ್ರದಲ್ಲಿನ ವೀರಬಾಹುವಿನ ಪಾತ್ರದಲ್ಲಿ ಎಂ.ಪಿ.ಶಂಕರ್ ನೀಡಿದ ಅಭಿನಯ - 'ಕುಲದಲ್ಲಿ ಕೀಳ್ಯಾವುದೋ...' ಹಾಡಿಗೆ ನೀಡಿದ ನಟನೆ - ಚಿರಕಾಲ ನೆನಪಿನಲ್ಲಿ ಉಳಿಯುವಂತಹುದು. ೧೯೭೪ರಲ್ಲಿ ತೆರಗೆ ಬಂದ 'ಬೂತಯ್ಯನ ಮಗ ಅಯ್ಯು' ಇವರ ಅಭಿನಯ ವಿಶಿಷ್ಟತೆಯನ್ನು ತೋರಿದ ಮತ್ತೊಂದು ಚಿತ್ರ. ಭರಣಿ ಚಿತ್ರ ಅವರ ನಿರ್ಮಾಣ ಸಂಸ್ಥೆಯ ಹೆಸರು. 'ಕಾಡಿನ ರಹಸ್ಯ', 'ಗಂಧದ ಗುಡಿ' ಹೀಗೆ ಆ ಲಾಂಛನದಲ್ಲಿ ಹದಿನಾರು ಚಿತ್ರಗಳನ್ನು ನಿರ್ಮಿಸಿದ್ದಾರೆ. ಇವರ ನಿರ್ಮಾಣದ ಒಂದೊಂದು ಚಿತ್ರವೂ ಒಂದೊಂದು ಬಗೆಯಲ್ಲಿ ವೈಶಿಷ್ಟ್ಯಪೂರ್ಣ. ಇವರ ಕಾಡಿನ ಪ್ರೇಮ, ವನ್ಯಜೀವಿಗಳ ಬಗೆಗಿನ ಚಿಂತನೆ ಇವರ ಚಿತ್ರಗಳಲ್ಲಿ ಒಡಮೂಡಿರುತ್ತಿದ್ದವು. ಜೊತೆಗೆ ಶ್ರೀಮಂತವೂ, ಸದಭಿರುಚಿಯವೂ ಆಗಿದ್ದವು. ಇವರದು ಖಳನಟನ ಪಾತ್ರದಲ್ಲಿ ದೊಡ್ಡ ಹೆಸರು; ಪೋಷಕ ಪಾತ್ರಗಳಲ್ಲಿಯೂ ಅಷ್ಟೇ ಸಮರ್ಥರು. 'ನಾಗರಹಾವು', 'ಗಂಧದಗುಡಿ', 'ಕಾಡಿನ ರಹಸ್ಯ', 'ವೀರಸಂಕಲ್ಪ', 'ರತ್ನಮಂಜರಿ', 'ಮೇಯರ್ ಮುತ್ತಣ್ಣ'. 'ಮೃಗಾಲಯ', 'ಭೂಲೋಕದಲ್ಲಿ ಯಮರಾಜ', 'ಬಂಗಾರದ ಮನುಷ್ಯ', 'ದೂರದ ಬೆಟ್ಟ', 'ದೇವರ ಮಕ್ಕಳು', 'ಬೂತಯ್ಯನ ಮಗ ಅಯ್ಯು', 'ಗಿಡ್ಡು ದಾದ', 'ಗೌರಿ ಕಲ್ಯಾಣ' ಇವರಿಗೆ ಅಪಾರ ಜನಪ್ರಿಯತೆಯನ್ನು ತಂದುಕೊಟ್ಟ ಚಿತ್ರಗಳು. ದ್ವಾರಕೀಶ್ ನಿರ್ದೇಶನದ 'ಗೌರಿ ಕಲ್ಯಾಣ' ಚಿತ್ರದಲ್ಲಿನ ಪಾತ್ರ ಕೂಡ ಬಹುಕಾಲ ನೆನಪಿನಲ್ಲಿ ಉಳಿಯುವಂಥಹುದು. 'ಕಳ್ಳರ ಕಳ್ಳ' ಚಿತ್ರವನ್ನು ನಿರ್ಮಿಸಿದ ಎಂ.ಪಿ.ಶಂಕರ್ ಆ ಚಿತ್ರವನ್ನು ನಿರ್ದೇಶಿಸಿದರು. ಇವರ ಗಂಭೀರ ಪಾತ್ರಗಳಲ್ಲಿನ ಮಾನವೀಯ ಮೌಲ್ಯಗಳು ಪ್ರೇಕ್ಷಕರ ಹೃದಯವನ್ನು ಕಲಕಿವೆ. ಭೀಮಕಾಯದ ಮೃದುಹೃದಯಿ ಶಂಕರ್ ಈಚೆಗೆ ಕಿರುತೆರೆಯ ಧಾರಾವಾಹಿಗಳಲ್ಲಿಯೂ ಅಭಿನಯಿಸುತ್ತಿದ್ದಾರೆ.

### ಶಂಕರ್.ಎನ್.ಎಸ್

ಶಿವಮೊಗ್ಗ ಜಿಲ್ಲೆಯವರಾದ ಶಂಕರ್ 'ಸಿಟಿ ಟೈಂಸ್' ಮೂಲಕ ಪತ್ರಿಕೋದ್ಯಮ ಕ್ಷೇತ್ರಕ್ಕೆ ಬಂದು 'ಪ್ರಜಾವಾಣಿ', 'ಮುಂಗಾರು', 'ಸುದಿ ಸಂಗಾತಿ', 'ಲಂಕೇಶ್ ಪತ್ರಿಕೆ'ಗಳಲ್ಲಿ ತಾವು ಬರೆದ ವಿಶ್ಲೇಷಣಾತ್ಮಕ ವರದಿ, ವಿಮರ್ಶೆ ಮತ್ತು ಅಂಕಣದಿಂದ ಓದುಗರ ಗಮನ ಸೆಳೆದರು. ಚಲನಚಿತ್ರ ಜನಸಾಮಾನ್ಯರಿಗೆ ಕಬ್ಬಿಣದ ಕಡಲೆಯಾಗಬಾರದು. ಆದರೆ ಕೇವಲ ಕೀಳುಮಟ್ಟದ ಮನರಂಜನಾ ಸಾಧನವೂ ಆಗಬಾರದು, ಅದೊಂದು ಜನಸಮೂಹ ಕಲೆಯಾಗಿ ಬೆಳೆಯಬೇಕೆಂಬ ಧ್ಯೇಯವನ್ನಿರಿಸಿಕೊಂಡ ಪತ್ರಕರ್ತ. ಕಿರುತೆರೆಯ ನಿರ್ಮಾಪಕ-ನಿರ್ದೇಶಕ ಎನ್.ಎಸ್.ಶಂಕರ್ ತಮ್ಮ ಮೊದಲ ಚಿತ್ರ



'ಉಲ್ಟಾ ಪಲ್ಟಾ'ದಲ್ಲಿಯೇ ಈ ಆದರ್ಶವನ್ನು ಪಾಲಿಸಿದರು. 'ಉಲ್ಟಾ ಪಲ್ಟಾ' ಷೇಕ್ಸ್‌ಪಿಯರ್ಸ್ 'ದಿ ಕಾಮಿಡಿ ಆಫ್ ಎರರ್ಸ್'ನ ಪ್ರೇರಣೆಯಿಂದ ನಿರ್ಮಿಸಲಾದ ಚಿತ್ರ. ಇದು ೧೯೯೭ರಲ್ಲಿ ರಾಜ್ಯದಾದ್ಯಂತ ಪ್ರದರ್ಶಿತವಾಗಿ ಜನಮನ್ನಣೆ ಪಡೆಯಿತು. ಆ ಚಿತ್ರದ ಸಂಭಾಷಣೆಗಾಗಿ ಶಂಕರ್ ಅವರು ೧೯೯೭-೯೮ರ ರಾಜ್ಯ ಸರ್ಕಾರದ ಅತ್ಯುತ್ತಮ ಸಂಭಾಷಣೆ ಕರ್ತೃ ಪ್ರಶಸ್ತಿ ಪಡೆದಿದ್ದಾರೆ.

### ಶಂಕರ್ ಅಶ್ವತ್ಥ್

ಕನ್ನಡ ಚಿತ್ರರಂಗದ ಪ್ರಸಿದ್ಧ ನಟ ಕೆ.ಎಸ್.ಅಶ್ವತ್ಥ್ ಪುತ್ರ ಶಂಕರ್ ಉತ್ತಮ ನಟ. ನಿರ್ದೇಶಕ ರಾಜೇಂದ್ರಸಿಂಗ್‌ಬಾಬು ಅವರ 'ಹೂವು ಹಣ್ಣು' ಚಿತ್ರದಿಂದ ಬೆಳ್ಳಿ



ತೆರೆಗೆ ಶಂಕರ್ ಅಶ್ವತ್ಥ್ ಆಗಿ ಪ್ರವೇಶ. ಮೊದಲ ಚಿತ್ರದಲ್ಲೇ ವಿಮರ್ಶಕರ ಪ್ರೇಕ್ಷಕರ ಮೆಚ್ಚುಗೆ ಪಡೆದವರು. 'ಮಹಾಕ್ಷತ್ರಿಯ', 'ಅಣ್ಣಾವ್ರ ಮಕ್ಕಳು', 'ಸಿಂಹಾದ್ರಿ', 'ಕ್ರೈಂ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. 'ಮನೆತನ' ಧಾರಾವಾಹಿಯಿಂದ ಕಿರುತೆರೆ ಪ್ರವೇಶಿಸಿದರು.

### ಶಂಕರ್‌ನಾಗ್

ಕನ್ನಡ ಚಿತ್ರರಂಗ ಕಂಡ ಒಬ್ಬ ಅಸಾಧಾರಣ



ವ್ಯಕ್ತಿ ಶಂಕರ್‌ನಾಗ್. ಕನಸುಗಾರ, ಚೈತನ್ಯದ ಚಿಲುಮೆ, ನಟ, ನಿರ್ಮಾಪಕ, ನಿರ್ದೇಶಕ, ಉದ್ಯಮಿ, ರಾಜಕಾರಣಿ ಎಲ್ಲವೂ ಆಗಿದ್ದ ಶಂಕರ್‌ನನ್ನು ವಿಧಿ ಭೀಕರ ರಸ್ತೆ ಅಪಘಾತವೊಂದರಲ್ಲಿ ಬಲಿ ತೆಗೆದುಕೊಂಡಿತು. ಅಣ್ಣ ಅನಂತ್‌ನಾಗ್‌ರಂತೆ ಮೊದಮೊದಲು ಸಣ್ಣ ಊರಿನ ಪರಿಸರದಲ್ಲಿ ಬೆಳೆದು ಉದ್ಯೋಗಾರ್ಥಿಯಾಗಿ ಮುಂಬೈ ಸೇರಿದ ಶಂಕರ್ ಮರಾಠಿ ಹವ್ಯಾಸಿ ರಂಗಭೂಮಿಯೊಂದಿಗೆ ನಂಟು ಬೆಳೆಸಿಕೊಂಡರು. ಅಣ್ಣನಂತೆಯೇ ಬ್ಯಾಂಕ್ ನೌಕರರಾದರು. ಸಂಗೀತದಲ್ಲಿ ಅಭಿರುಚಿ ಇತ್ತು. ತಬಲ, ಕೊಳಲು, ಹಾರ್ಮೋನಿಯಂ ಮುಂತಾದ ವಾದ್ಯಗಳನ್ನು ನುಡಿಸುವುದನ್ನು ಕಲಿತರು. ಅಭಿನಯಿಸಿದ ಮೊದಲ ಚಿತ್ರ ಗಿರೀಶ್‌ಕಾರ್ನಾಡ್ ನಿರ್ದೇಶಿಸಿದ 'ಒಂದಾನೊಂದು ಕಾಲದಲ್ಲಿ'. ಈ ಚಿತ್ರದ ಅಭಿನಯಕ್ಕಾಗಿ ಸ್ಪರ್ಧಾತ್ಮಕ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಅವರಿಗೆ ಅತ್ಯುತ್ತಮ ನಟ ಪ್ರಶಸ್ತಿ ಲಭ್ಯವಾಯಿತು. ವ್ಯಾಪಾರಿ ಮತ್ತು ಕಲಾತ್ಮಕ ಚಿತ್ರಗಳೆರಡರಲ್ಲಿಯೂ ಸಮಾನವಾದ ಪ್ರತಿಭೆಯನ್ನು ತೋರಿದ್ದು ಶಂಕರ್‌ರವರ ಅಪರೂಪದ ಸಾಧನೆ. ಅವರು ಅಭಿನಯಿಸಿದ ಪ್ರಥಮ ವ್ಯಾಪಾರಿ ಚಿತ್ರ 'ಸೀತಾರಾಮು' ಅವರನ್ನು 'ಆ್ಯಕ್ಷನ್' ನಾಯಕನಟನ ಸ್ಥಾನಕ್ಕೇರಿಸಿತು. ನಾಯಕನಾಗಿ ಶಂಕರ್‌ನಾಗ್ 'ಚಂಡಿಚಾಮುಂಡಿ', 'ನ್ಯಾಯ ಗೆದ್ದಿತು', 'ರಕ್ತ ತಿಲಕ', 'ಗೀತಾ', 'ಗೆದ್ದ ಮಗ', 'ಸಾಂಗ್ಲಿಯಾನ', 'ಸಾಂಗ್ಲಿಯಾನ ಭಾಗ II', 'ಸಿ.ಬಿ.ಐ.ಶಂಕರ್', 'ಪ್ರೀತಿ ಮಾಡು ತಮಾಷೆ ನೋಡು', 'ಆಟೋರಾಜ', 'ಆರದ ಗಾಯ' ಮುಂತಾದ ಜನಪ್ರಿಯ ಚಿತ್ರಗಳಲ್ಲಿ ಅಭಿನಯಿಸಿದರು. ಸುಮಾರು ೯೦ ಚಿತ್ರಗಳಲ್ಲಿ ಅಭಿನಯಿಸಿದರು. 'ಮಿಂಚಿನ ಓಟ' ಇವರು ನಿರ್ದೇಶಿಸಿದ ಪ್ರಥಮ ಚಿತ್ರ. 'ನೋಡಿ ಸ್ವಾಮಿ ನಾವಿರೋದು ಹೀಗೆ', 'ಆ್ಯಕ್ಸಿಡೆಂಟ್', 'ಜನ್ಮ ಜನ್ಮದ ಅನುಬಂಧ', 'ಹೊಸ ತೀರ್ಪು', 'ಗೀತಾ', 'ಒಂದು ಮುತ್ತಿನ ಕಥೆ' ಶಂಕರ್‌ನಾಗ್ ನಿರ್ದೇಶಿಸಿದ ಇತರ ಚಿತ್ರಗಳು. ಟಿ.ಎಸ್.ನರಸಿಂಹನ್ ನಿರ್ಮಿಸಿ, ಶಂಕರ್ ನಿರ್ದೇಶಿಸಿದ ವಿಶ್ವವಿಖ್ಯಾತ ಕಿರುತೆರೆ ಸರಣಿ 'ಮಾಲ್ಗುಡಿ ಡೇಸ್' ಒಂದು ಮಹತ್ತರ ಸಾಧನೆ. ಕನ್ನಡ ಚಿತ್ರೋದ್ಯಮಕ್ಕೆ ಮೊಟ್ಟಮೊದಲ ಬಾರಿಗೆ ಕಂಪ್ಯೂಟರ್ ಚಾಲಿತ ಶಬ್ದಗ್ರಹಣ ತಂತ್ರಜ್ಞಾನವನ್ನು ಕೊಡುಗೆಯಾಗಿತ್ತ ಸಂಕೇತ್ ಸ್ಟುಡಿಯೋ ಶಂಕರ್‌ರವರ ಇನ್ನೊಂದು ಕೊಡುಗೆ. ಅವರ ಮತ್ತೊಂದು ಕೊಡುಗೆ - ಅವರು ನಗರದ ಹೊರವಲಯದಲ್ಲಿ ವೈಶಿಷ್ಟ್ಯಪೂರ್ಣವಾಗಿ ಸ್ಥಾಪಿಸಿದ ಕಂಟ್ರಿ ಕ್ಲಬ್. ಶಂಕರ್‌ನಾಗ್ ನಿರ್ದೇಶಿಸಿದ 'ಮಿಂಚಿನ ಓಟ' (೧೯೭೮-೮೦), 'ನೋಡಿ ಸ್ವಾಮಿ ನಾವಿರೋದು ಹೀಗೆ' (೧೯೮೩-೮೪) ಎರಡು ಬಾರಿ ಕ್ರಮವಾಗಿ ದ್ವಿತೀಯ ಹಾಗೂ ತೃತೀಯ ಅತ್ಯುತ್ತಮ ಚಿತ್ರವೆಂದು ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದರೆ, 'ಆ್ಯಕ್ಸಿಡೆಂಟ್' (೧೯೮೪-೮೫) ಪ್ರಥಮ ಅತ್ಯುತ್ತಮ ಚಿತ್ರ ಎಂದು ರಾಜ್ಯ ಸರ್ಕಾರದ ಪ್ರಶಸ್ತಿ ಹಾಗೂ ಚಿತ್ರವು ಪಾನನಿಷೇಧದ ಬಗೆಗಿನ ಉತ್ತಮ ಚಿತ್ರವೆಂದು ಪರಿಗಣಿತವಾಗಿ ರಜತಕಮಲ ಮತ್ತು ನಗದು ಬಹುಮಾನವನ್ನು ರಾಷ್ಟ್ರ ಪ್ರಶಸ್ತಿಯಾಗಿ ಪಡೆದಿದೆ. ಅತ್ಯುತ್ತಮ ಚಿತ್ರನಾಟಕ ಕರ್ತೃವೆಂದು ೧೯೭೮-೮೦ನೇ ಸಾಲಿಗೆ 'ಮಿಂಚಿನ ಓಟ' ಚಿತ್ರಕ್ಕಾಗಿ ರಾಜ್ಯಪ್ರಶಸ್ತಿಯನ್ನು ಮರಿಯಂ ಚೆಟ್‌ಪುರವಾಲರೊಂದಿಗೆ ಹಂಚಿಕೊಂಡರು.

### ಶಂಕರ್‌ಸಿಂಗ್.ಡಿ

ಸ್ವಾತಂತ್ರ್ಯ ಹೋರಾಟಗಾರರಾಗಿ, ಬ್ರೂಕ್‌ಬಾಂಡ್ ಟೀ ಏಜೆಂಟರಾಗಿ, ಚಿತ್ರ ಪ್ರದರ್ಶಕರಾಗಿ, ಚಿತ್ರ ನಿರ್ಮಾಪಕ, ನಿರ್ದೇಶಕರಾಗಿ ವೈವಿಧ್ಯಮಯ ಬದುಕನ್ನು ನಡೆಸಿದ ವ್ಯಕ್ತಿ ಡಿ.ಶಂಕರ್‌ಸಿಂಗ್. ಕನ್ನಡ ಚಿತ್ರರಂಗದ ಆಧಾರಸ್ತಂಭಗಳಲ್ಲಿ ಅವರೊಬ್ಬರು. ಮಹಾತ್ಮ ಟೂರಿಂಗ್ ಟಾಕೀಸ್ ಹಾಗೂ ಜವಹರ್ ಟೂರಿಂಗ್ ಟಾಕೀಸ್‌ಗಳನ್ನು ಪ್ರಾರಂಭಿಸಿದ ಇವರು ಸ್ನೇಹಿತರಾದ ಬಿ.ವಿಠಲಾಚಾರ್ಯ, ಜಿ.ಎನ್.ವಿಶ್ವನಾಥಶೆಟ್ಟಿ ಮತ್ತಿತರರ ಜೊತೆಗೂಡಿ ಮಹಾತ್ಮ ಪಿಕ್ಚರ್ಸ್ ಚಿತ್ರ



ನಿರ್ಮಾಣ ಸಂಸ್ಥೆಯನ್ನು ಸ್ಥಾಪಿಸಿದರು. 'ಕೃಷ್ಣ ಲೀಲ' (೧೯೪೭) ಈ ಸಂಸ್ಥೆಯ ಮೊದಲ ಚಿತ್ರ. ಮೈಸೂರಿನ ನವಜ್ಯೋತಿ ಸ್ಟುಡಿಯೋಸ್‌ನಲ್ಲಿ ನಿರ್ಮಾಣವಾದ ಪ್ರಥಮ ಚಿತ್ರವೂ ಹೌದು. ಕರ್ನಾಟಕ ಚಿತ್ರೋದ್ಯಮದಲ್ಲಿ ಶಂಕರ್‌ಸಿಂಗ್‌ರದ್ದು ದೊಡ್ಡ ಹೆಸರು. ಮಹಾತ್ಮ ಪಿಕ್ಚರ್ಸ್ ಅಂಕಿತದಲ್ಲಿ ಸಾಲು ಸಾಲು ಚಿತ್ರಗಳನ್ನು ನಿರ್ಮಿಸಿದರು. ಅವರು ತಯಾರಿಸಿದ 'ನಾಗಕನ್ನಿಕಾ' ಕನ್ನಡದ ಪ್ರಥಮ ಜಾನಪದ ಚಿತ್ರ; 'ಜಗನ್ಮೋಹಿನಿ' ರಜತೋತ್ಸವವನ್ನು ಆಚರಿಸಿದ ಪ್ರಥಮ ಕನ್ನಡ ಚಿತ್ರವಾಯಿತು. ಸ್ಥಳೀಯ ಪ್ರತಿಭೆಗಳ ಬಗ್ಗೆ ಶಂಕರ್‌ಸಿಂಗ್‌ರಿಗೆ ಹೆಚ್ಚಿನ ಆಸಕ್ತಿಯಿತ್ತು. ಅನೇಕ ಪ್ರತಿಭಾವಂತರು ಅವರಿಂದ ಬೆಳಕಿಗೆ ಬಂದವರು. ಅವರ ಮಿತ್ರರೂ, ಪಾಲುದಾರರೂ ಆಗಿದ್ದ ವಿಠಲಾಚಾರ್ಯರು ಮದರಾಸಿಗೆ ವಲಸೆ ಹೋದರೂ ತಾವು ಮೈಸೂರಿನಲ್ಲಿಯೇ ಇದ್ದು ಕನ್ನಡ ಚಿತ್ರಗಳನ್ನು ಸತತವಾಗಿ ತಯಾರಿಸಿದ ಹೆಗ್ಗಳಿಕೆ ಶಂಕರ್‌ಸಿಂಗ್‌ರಿಗೆ ಸಲ್ಲುತ್ತದೆ. ಪ್ರೀಮಿಯರ್ ಸ್ಟುಡಿಯೋವಿನ ಮಾಲೀಕ ಬಸವರಾಜಯ್ಯನವರ ಸಹಯೋಗದಲ್ಲಿ ಕನ್ನಡ ನಾಡಿನಲ್ಲಿಯೇ ಕನ್ನಡ ಚಿತ್ರರಂಗ ಬೇರೂರಲು ಸಕ್ರಿಯ ಯೋಜನೆಗಳನ್ನು ಹಾಕಿಕೊಳ್ಳಬೇಕೆಂದು ಸಿಂಗ್‌ರವರು ರಾಜ್ಯ ಸರ್ಕಾರದ ಮೇಲೆ ಒತ್ತಾಯ ತಂದರು. ಅನೇಕ ಚಿತ್ರಗಳನ್ನು ನಿರ್ದೇಶಿಸಿದ ಅವರು ಚಿತ್ರೀಕರಣಕ್ಕೆ ರಾಜ್ಯದಲ್ಲಿ ಹೊಸ ಹೊಸ ತಾಣಗಳನ್ನು ಹುಡುಕುವ ಪರಿಪಾಠ ಹಾಕಿಕೊಟ್ಟರು. ಅವರ ತಾರಾಪತ್ನಿ ಪ್ರತಿಮಾದೇವಿ ಆ ದಿನಗಳ ಖ್ಯಾತ ಕಲಾವಿದೆ. ಅವರ ಪುತ್ರ ಎಸ್.ವಿ.ರಾಜೇಂದ್ರಸಿಂಗ್ ಬಾಬು ಕನ್ನಡ ಚಿತ್ರರಂಗದ ಪ್ರತಿಭಾವಂತ ನಿರ್ದೇಶಕರು, ಪುತ್ರಿ ವಿಜಯಲಕ್ಷ್ಮಿಸಿಂಗ್ ಸಕ್ರಿಯ ನಿರ್ಮಾಪಕಿ. ಸಂಗ್ರಾಮ್‌ಸಿಂಗ್, ನಾಗರಾಜಸಿಂಗ್ ಮೊದಲಾಗಿ ಎಲ್ಲರೂ ಒಂದೊಂದು ರೀತಿಯಲ್ಲಿ ಚಿತ್ರರಂಗದಲ್ಲಿ ತೊಡಗಿದ್ದವರೇ. ಕನ್ನಡ ಚಿತ್ರರಂಗಕ್ಕೆ ಸುಮಾರು ೫೦ಕ್ಕೂ ಹೆಚ್ಚು ಚಿತ್ರಗಳನ್ನು ಕೊಡುಗೆಯಾಗಿತ್ತ ಹೆಗ್ಗಳಿಕೆ ಮಹಾತ್ಮ ಪಿಕ್ಚರ್ಸ್‌ಗೆ ಸಲ್ಲುತ್ತದೆ.

### ಶಂಕರಪ್ಪ.ಕೆ.ಎಂ

ಕಾಲೇಜು ವ್ಯಾಸಂಗ ಮುಗಿಸಿದ ಮೇಲೆ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ನಿರ್ದೇಶನ ವಿಭಾಗದಲ್ಲಿ ಪದವಿ ಪಡೆದರು. ಅಲ್ಲಿ ತಮ್ಮ ಕಲಿಕೆಯ ಕಾಲದಲ್ಲಿ ಶಂಕರಪ್ಪ ನಿರ್ಮಿಸಿ ನಿರ್ದೇಶಿಸಿದ ಕಿರುಚಿತ್ರ



'ನಲ್ಲಿಯಲ್ಲಿ ನೀರು ಬಂತು' ಅವರಿಗೆ ಹೆಸರು ತಂದು ಕೊಟ್ಟಿತು. ೧೯೭೪ರಲ್ಲಿ ಬಸವರಾಜ ಕಟ್ಟೀಮನಿಯವರ ಸ್ವಾತಂತ್ರ್ಯ ಹೋರಾಟಗಾರರ ಬದುಕನ್ನು ಚಿತ್ರಿಸಿದ ಕಾದಂಬರಿ ಆಧರಿಸಿ 'ಮಾಡಿ ಮಡಿದವರು' ಚಿತ್ರವನ್ನು ಶಂಕರಪ್ಪ ನಿರ್ದೇಶಿಸಿದರು. ಈ ಚಿತ್ರಕ್ಕೆ ರಾಜ್ಯ ಸರ್ಕಾರದ ೧೯೭೩-೭೪ರ ಅತ್ಯುತ್ತಮ ದ್ವಿತೀಯ ಚಿತ್ರ ಪ್ರಶಸ್ತಿ ಬಂದಿದೆ. ಅನಂತರ ಶಂಕರಪ್ಪ ರಾಜ್ಯಸರ್ಕಾರದ ವಿವಿಧ ಇಲಾಖೆಗಳಿಗೆ ಸಾಕ್ಷ್ಯ ಚಿತ್ರಗಳನ್ನು ನಿರ್ಮಿಸಿ ಕೊಟ್ಟಿದ್ದಾರೆ. 'ಚಲನ' ಚಿತ್ರಸಮಾಜ ಪ್ರಾರಂಭಿಸಿದರು. ಹಲವಾರು ಸಾಕ್ಷ್ಯ ಚಿತ್ರಗಳನ್ನು ನೀಡಿದ್ದಾರೆ. ರಾಜ್ಯ ಚಲನಚಿತ್ರ ಭಂಡಾರದ ಸಲಹಾ ಸಮಿತಿ, ರಾಜ್ಯ ಚಲನಚಿತ್ರ ಪ್ರಶಸ್ತಿ ಸಮಿತಿಗಳಿಗೆ ಸದಸ್ಯರಾಗಿದ್ದರು. ಜಯಪ್ರಕಾಶ್ ನಾರಾಯಣ್ ತತ್ವಗಳಿಗೆ ಬದ್ಧರು. ಅಧ್ಯಯನ, ಮನನಗಳಲ್ಲಿ ಆಸಕ್ತಿ.

### ಶಕ್ತಿಪ್ರಸಾದ್

ಹವ್ಯಾಸಿ ರಂಗಭೂಮಿಯಿಂದ ಚಿತ್ರರಂಗಕ್ಕೆ ಬಂದವರು. ಬೆಂಗಳೂರು ಸ್ವಂತಸ್ಥಳ. ವೃತ್ತಿಯ ಆರಂಭ ವ್ಯಾಯಾಮ ಶಿಕ್ಷಕರಾಗಿ.



ಅಂದಿನ ಹೆಸರು ಜೆ.ಸಿ.ರಾಮಸ್ವಾಮಿ. ಅರಸುಕುಮಾರ್ ಮಿತ್ರರು ಅಭಿನಯಿಸುತ್ತಿದ್ದ ನಾಟಕಗಳ ಮೂಲಕ ಪ್ರಖ್ಯಾತರಾಗಿದ್ದರು. 'ಕರಗಶಕ್ತಿ' ಇವರು ಅಭಿನಯಿಸಿದ ಮೊದಲ ಚಿತ್ರವಾದರೂ ಅದು ತೆರೆಕಾಣಲಿಲ್ಲ. ಸುಮಾರು ೧೬೦ ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಖಳನಾಯಕನ ಪಾತ್ರಗಳಲ್ಲಿ, ಸಹಾನುಭೂತಿ ಮೂಡಿಸುವಂಥ ಅನೇಕ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. 'ನಾಗರಹಾವು', 'ಭಲೇ ಹುಚ್ಚ', 'ಕೆರಳಿದ ಸಿಂಹ', 'ಮಲಿಯ ಹಾಲಿನ ಮೇವು', 'ಪವಿತ್ರಪಾಪಿ', 'ಹಾವು ಏಣಿ ಆಟ' ಮೊದಲಾದ ಚಿತ್ರಗಳಲ್ಲಿ ಗಮನಾರ್ಹ ಪಾತ್ರಗಳಿದ್ದವು. ಕೆಲ ಕಾಲ ಚಿತ್ರ ಹಂಚಿಕೆಯ ಉದ್ಯೋಗ ಮಾಡಿದರು. ದಕ್ಷಿಣದ ಖ್ಯಾತ ನಟ ಅರ್ಜುನಸರ್ಜಾ, ನಿರ್ದೇಶಕ ಕಿಶೋರ್ ಸರ್ಜಾ ಇವರ ಮಕ್ಕಳು.

### ಶನಿ ಮಹದೇವಪ್ಪ

ಹಿರಿಯ ಪೋಷಕ ನಟರು. ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕು ಬೆಳಕವಾಡಿಯಲ್ಲಿ ಜನನ. ಸುಮಾರು ನಾಲ್ಕು ದಶಕಗಳಿಗೂ ಮೀರಿ ನಾಟಕ ಕಂಪೆನಿಗಳು ಹಾಗೂ ಚಿತ್ರರಂಗದಲ್ಲಿ ದುಡಿದ ಅನುಭವವಿರುವ ಇವರು 'ಧರ್ಮಸ್ಥಳ ಮಹಾತ್ಮೆ' ಚಿತ್ರದಿಂದ



ಚಿತ್ರರಂಗ ಪ್ರವೇಶಿಸಿದರು. 'ರಾಜಾವಿಕ್ರಮ' ನಾಟಕದಲ್ಲಿ ಸತತವಾಗಿ ಶನಿದೇವರ ಪಾತ್ರವನ್ನು ವಹಿಸಿ 'ಶನಿಮಹದೇವಪ್ಪ'

ಎಂದು ಹೆಸರಾದರು. ಸರಿಸುಮಾರು ೩೫೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಪೋಷಕ ಪಾತ್ರಗಳನ್ನು ನಿರ್ವಹಿಸಿದಾರೆ. 'ಅದೇಕಣ್ಣು', 'ನನ್ನ ಶಪಥ', 'ದೇವತಾ ಮನುಷ್ಯ', 'ಭಕ್ತ ಕುಂಬಾರ', 'ಭಕ್ತ ಪ್ರಹ್ಲಾದ', 'ಬಡವರ ಬಂಧು' ಮೊದಲಾದವು ಇವರ ಅಭಿನಯದ ಚಿತ್ರಗಳು. ಕೆಲವು ಕಾಲ ಶಿವಪ್ರಕಾಶ್ ಎಂದು ಹೆಸರು ಬದಲಾಯಿಸಿಕೊಂಡಿದ್ದರು. ಆದರೂ ಮೂಲ ನಾಮವೇ ಚಾಲ್ತಿಯಲ್ಲಿದೆ.

## ಶಶಿಕಲಾ

ಕನ್ನಡ ಚಿತ್ರರಂಗ ಕಂಡ ಪ್ರತಿಭಾವಂತ ನಟಿ. ಕೆ.ವಿ.ಜಯರಾಂ ನಿರ್ದೇಶನದ 'ಹೊಸ ನೀರು' ಚಿತ್ರದ ಅಭಿನಯಕ್ಕಾಗಿ ರಾಜ್ಯ ಸರ್ಕಾರದಿಂದ ೧೯೮೫-೮೬ನೇ ಸಾಲಿನ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿಯನ್ನು ಪಡೆದರು. ಅನೇಕ ಖಾಸಗಿ ಪ್ರಶಸ್ತಿಗಳೂ ಆಕೆಗೆ ಲಭ್ಯವಾಗಿದವು.
ನಾಟಕರಂಗದಲ್ಲಿಯಂತೂ ಆಕೆಗ ಸಂದ ಪ್ರಶಸ್ತಿಗಳು, ಪುರಸ್ಕಾರಗಳು ಅನೇಕ.



ಕೊಡಗಿನ ವಿರಾಜಪೇಟೆಯಲ್ಲಿ ಜನಿಸಿ ತಮ್ಮ ಶಾಲಾದಿನಗಳಿಂದಲೇ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ ಶಶಿಕಲಾ ಚಿತ್ರರಂಗಕ್ಕೆ ಪ್ರವೇಶಿಸಿದ್ದು 'ಮಯೂರ' ಚಿತ್ರದ ಮೂಲಕ. 'ಸದಾನಂದ', 'ಬೆಂಕಿಯಲ್ಲಿ ಅರಳಿದ ಹೂವು', 'ಸುಖ ಸಂಸಾರಕ್ಕೆ ೧೨ ಸೂತ್ರಗಳು' ಇತ್ಯಾದಿ ಚಿತ್ರಗಳಲ್ಲಿ ಪರಿಣಾಮಕಾರಿಯಾಗಿ ಅಭಿನಯಿಸಿದ ಈಕೆ ೬೦ ಕನ್ನಡ ಚಿತ್ರಗಳಲ್ಲಿ, ಎರಡು ತಮಿಳು, ಎರಡು ತೆಲುಗು, ಒಂದು ಹಿಂದಿ ಮತ್ತು ಒಂದು ಕೊಡವ ಚಿತ್ರಗಳಲ್ಲಿ ಅಭಿನಯಿಸಿದರು. ಅದೇ ಸಮಯದಲ್ಲಿ ಅನೇಕ ವೃತ್ತಿ ನಾಟಕಗಳಲ್ಲಿ ನಟಿಸಿ ಉತ್ತರ ಕರ್ನಾಟಕದಲ್ಲಿ ಮನೆ ಮಾತೇ ಆದರು. ತಾವೇ ಒಂದು ಸ್ವತಂತ್ರ ನಾಟಕ ತಂಡವನ್ನು ಪ್ರಾರಂಭಿಸಿ ಬಹಳ ನೋವುಂಡರು. ೧೯೮೮ರಲ್ಲಿ ಅಗ್ನಿ ಆಕಸ್ಮಿಕದಲ್ಲಿ ಸಾವನ್ನಪ್ಪಿದರು. ಜೀವನದಲ್ಲಿ ಮಹತ್ತರವಾದುದನ್ನು ಸಾಧಿಸಬೇಕೆಂಬ ಛಲ ಹೊತ್ತಿದ ಶಶಿಕಲಾ ಕಂಠದಾನ ಪ್ರವೀಣೆಯೂ ಆಗಿದ್ದರು. ಈ ಬಹುಮುಖ ಪ್ರತಿಭೆಯ ಕಲಾವಿದೆ ಕಂಡ ಕೊನೆ ಆಕೆಯ ದಿಟ್ಟ ವ್ಯಕ್ತಿತ್ವಕ್ಕೆ ತೀರಾ ಹೊರತಾಗಿತ್ತು.

## ಶಶಿಕುಮಾರ್

ಸಹನಟನಾಗಿ ಚಿತ್ರರಂಗ ಪ್ರವೇಶಿಸಿದ ಶಶಿಕುಮಾರ್ 'ಯುದ್ಧಕಾಂಡ' ಚಿತ್ರದಿಂದ ತೆರೆಗೆ ಪರಿಚಿತರಾದರು. ಆರಂಭದ ದಿನಗಳಲ್ಲಿ ಚಿಕ್ಕ ಪಾತ್ರಗಳಿಗೆ ಮೀಸಲಾಗಿದ



ಶಶಿಕುಮಾರ್ ತಮ್ಮ ಚುರುಕು ಅಭಿನಯದಿಂದ, ಆಕರ್ಷಕ ನಿಲುವಿನಿಂದ, ಚೆನ್ನಾಗಿ ನರ್ತಿಸುತ್ತಿದ ಚೆಲುವನೂ ಆಗಿದರಿಂದ ಬೇಗ ನಾಯಕನಾಗಿ ಬಡ್ತಿ ಪಡೆದರು. ನಾಯಕನಾಗಿ ಅಭಿನಯಿಸಿದ 'ಪೊಲೀಸ್‌ನ ಹೆಂಡ್ತಿ' ಯಶಸ್ವಿಯಾಯಿತು. ಮಾಲಾಶ್ರೀ ಅವರೊಂದಿಗೆ ಸಾಲುಸಾಲು ಚಿತ್ರಗಳಲ್ಲಿ ನಾಯಕರಾಗಿ ಅಭಿನಯಿಸಿದರು. 'ಇಬ್ಬರು ಹೆಂಡಿರ ಮುದ್ದಿನ ಪೊಲೀಸ್', 'ಆತ್ಮಬಂಧನ', 'ಗಣೇಶನ ಗಲಾಟೆ', 'ಕುಂತೀಪುತ್ರ', 'ಬಾರೇ ನನ್ನ ಮುದ್ದಿನ ರಾಣಿ', 'ಭೂತಾಯಿ ಮಕ್ಕಳು', 'ಐ.ಪಿ.ಎಸ್.ಕೆಂಪಯ್ಯ', 'ಗಂಧರ್ವ', 'ಶೃಂಗಾರರಾಜ', 'ಸ್ವಾತಿ', 'ಭವಾನಿ', 'ಬಾರೋ ನನ್ನ ಮುದ್ದಿನ ಕೃಷ್ಣ', 'ಹಬ್ಬ', 'ಸ್ನೇಹಲೋಕ', 'ಯಾರಿಗೆ ಸಾಲುತ್ತೆ ಸಂಬಳ', 'ಯಜಮಾನ' ಮೊದಲಾದವು ಇವರ ಅಭಿನಯದ ಯಶಸ್ವಿ ಚಿತ್ರಗಳು. ಚಿತ್ರದುರ್ಗ ಜಿಲ್ಲೆಯಿಂದ ಲೋಕಸಭೆಗೆ ಆಯ್ಕೆಯಾದ ಶಶಿಕುಮಾರ್ ರಾಜಕೀಯ ರಂಗದಲ್ಲೂ ತಮ್ಮ ಪ್ರಭಾವ ಬೀರಿದಾರೆ.

## ಶಶಿಕುಮಾರ್.ಟಿ

ಹಿರಿಯ ಸಂಕಲನಕಾರ. ಕೇರಳದಲ್ಲಿ ಹುಟ್ಟಿ



ಚೆನ್ನೈನ ಪ್ರಖ್ಯಾತ ಜೆಮಿನಿ ಸ್ಟುಡಿಯೋ ಸಂಸ್ಥೆಯಲ್ಲಿ ಸಂಕಲನಕಾರರಾಗಿ ತರಬೇತಿ ಪಡೆದರು. 'ನಾಗ ಕಾಳ ಭೈರವ' ಅವರ ಸಂಕಲನದ ಮೊದಲ ಕನ್ನಡ ಚಿತ್ರ. ಅಲ್ಲಿಂದ ಈವರೆಗೂ ಸರಿಸುಮಾರು ೫೦ ಕನ್ನಡ ಚಿತ್ರಗಳಿಗೆ ಸಂಕಲನಕಾರರಾಗಿ ಕಾರ್ಯ ನಿರ್ವಹಿಸಿದಾರೆ. 'ಓಂ', 'ಸಾಗರ ದೀಪ', 'ಜನುಮದ ಜೋಡಿ', 'ಜೋಡಿ ಹಕ್ಕಿ', 'ಜನುಮದಾತ' ಇವರು ಸಂಕಲಿಸಿದ ಚಿತ್ರಗಳು. ೧೯೯೭-೯೮ನೇ ಸಾಲಿನ 'ಎ' ಚಿತ್ರದ ಸಂಕಲನಕ್ಕಾಗಿ ರಾಜ್ಯ ಸರ್ಕಾರದ ಶ್ರೇಷ್ಠ ಸಂಕಲನಕಾರ ಪ್ರಶಸ್ತಿ ಪಡೆದಿದಾರೆ.

## ಶಶಿಧರ ಹಡಪ

ಪ್ರಶಸ್ತಿ ವಿಜೇತ ಕಲಾ ನಿರ್ದೇಶಕರು. ಮಂಗಳೂರಿನಲ್ಲಿ ಜನನ (೦೭-೦೯-೧೯೫೫). ಚಲನಚಿತ್ರ ಕಲಾನಿರ್ದೇಶನ, ರಂಗಭೂಮಿ, ದೂರದರ್ಶನ ಧಾರಾವಾಹಿ, ವಾಣಿಜ್ಯ ಪ್ರಕಟಣೆಗಳು, ರಂಗಸಜ್ಜಿಕೆ ಮೊದಲಾದವುಗಳ ನಿರ್ಮಾಣ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶಶಿಧರ ಅಡಪ ರಂಗಭೂಮಿಯ ನಿಷ್ಣಾತರೆನಿಸಿದ ಪ್ರಸನ್ನ, ಬಿ.ವಿ.ಕಾರಂತ್, ಶಂಕರ್‌ನಾಗ್, ಆರ್.ನಾಗೇಶ್, ಸಿ.ಆರ್.ಸಿಂಹ, ಎಂ.ಎಸ್.ಸತ್ಯು ಮೊದಲಾದವರ ಬಳಿ ಕಾರ್ಯನಿರ್ವಹಿಸಿದ ಅನುಭವಿ. 'ನಾಗಮಂಡಲ', 'ಕಾನೂರು ಹೆಗ್ಗಡತಿ', 'ಚಿನ್ನಾರಿ ಮುತ್ತ', 'ಚುಕ್ಕಿ ಚಂದ್ರಮ', 'ಕೊಟ್ರೇಶಿ ಕನಸು', 'ದೇವೀರಿ' ಮೊದಲಾದ ಪ್ರಶಸ್ತಿ ವಿಜೇತ ಚಿತ್ರಗಳಲ್ಲಿ ಕಲಾ ನಿರ್ದೇಶನ



ಮಾಡಿದಾರೆ. ಇವಲ್ಲದೆ ಟಿ.ಎಸ್.ನಾಗಾಭರಣರ 'ಸ್ಟೋನ್‌ಬಾಯ್' ಧಾರಾವಾಹಿಗೆ ಕಲಾ ನಿರ್ದೇಶಕರು. ಎರಡು ಫ್ರೆಂಚ್ ಚಲನಚಿತ್ರಗಳು, ಎರಡು ಹಿಂದಿ ಚಿತ್ರಗಳಿಗೆ ಕಲಾ ನಿರ್ದೇಶನ ಮಾಡಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಯಿಂದ ಪುರಸ್ಕೃತಗೊಂಡಿರುವ ಇವರು 'ನಾಗಮಂಡಲ' ಚಿತ್ರ ಹಾಗೂ 'ಕಾನೂರು ಹೆಗ್ಗಡಿತಿ' ಚಿತ್ರದ ಕಲಾ ನಿರ್ದೇಶನಕ್ಕಾಗಿ ೧೯೯೬-೯೭ ಹಾಗೂ ೧೯೯೯-೨೦೦೦ ವರ್ಷದಲ್ಲಿ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದಾರೆ.

## ಶಾಂತಮ್ಮ

ಕನ್ನಡ ಚಿತ್ರರಂಗದ ಹಿರಿಯ ಕಲಾವಿದರಲ್ಲೊಬ್ಬರು ಶಾಂತಮ್ಮ. ರಂಗಭೂಮಿ ಹಾಗೂ ಚಿತ್ರರಂಗದ ಕಲಾವಿದೆ. ಬಿ.ಜಯಮ್ಮನವರ ಸೋದರರಾದ ಅನಿಲ್ ಕುಮಾರ್ ಅವರ ಪತ್ನಿ. ೭೫ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ಲಾರಿ ಡ್ರೈವರ್', 'ಲವ್ ಮಾಡಿ ನೋಡು', 'ರಾಣಿ ಮಹಾರಾಣಿ', 'ಅಣ್ಣಯ್ಯ', 'ಮನೆದೇವ್ರು', 'ಜೈಲರ್ ಜಗನ್ನಾಥ್', 'ಬೇಡ ಕೃಷ್ಣ ರಂಗಿನಾಟ', 'ಶುಭಲಗ್ನ', 'ಸೌಭಾಗ್ಯ ದೇವತೆ' ಇವು ಅವರ ಅಭಿನಯದ ಕೆಲವು ಚಿತ್ರಗಳು. 'ಚಿನ್ನಾರಿ ಮುತ್ತ', 'ಕಂಡದ ಮಳೆ'



ಚಿತ್ರಗಳಲ್ಲಿ ಒಂದಕ್ಕಿಂತ ಮತ್ತೊಂದು ಭಿನ್ನ ಎನ್ನುವಂಥ ಪಾತ್ರಗಳಿದ್ದವು. ಹಲವು ಕಿರುತೆರೆಯ ಧಾರಾವಾಹಿಗಳಲ್ಲಿಯೂ ಅಭಿನಯಿಸಿ ಅನೇಕ ಅಭಿಮಾನಿಗಳನ್ನು ಹೊಂದಿದ್ದಾರೆ. ಶಾಂತಮ್ಮನವರ ಹಿರಿಯ ಮಗಳು ಸುಮಾ ಬಾಲ ಕಲಾವಿದೆಯಾಗಿ ಚಿತ್ರರಂಗ ಪ್ರವೇಶಿಸಿ, ನಂತರ ಕೆಲವು ಚಿತ್ರಗಳಲ್ಲಿ ಪ್ರಮುಖ ಪಾತ್ರಗಳಲ್ಲಿಯೂ ಅಭಿನಯಿಸಿದರು. ಇನ್ನೊಬ್ಬ ಮಗಳು ಸುನಂದಾ ಸಹ ಚಲನಚಿತ್ರಗಳಲ್ಲಿ ಅಭಿನಯಿಸಿದಾರೆ.

## ಶಾಂತಾರಾಮ್

ನಿರ್ದೇಶಕರು. ಭದ್ರಾವತಿಯ ಕಬ್ಬಿಣ ಮತ್ತು ಉಕ್ಕು ತಯಾರಿ ಕಾರ್ಖಾನೆಯಲ್ಲಿ ಒಳ್ಳೆಯ ಹುದ್ದೆಯಲ್ಲಿದ್ದವರು. ಎಳೆಯವರಿದ್ದಾಗಲೇ ಚಿತ್ರರಂಗದ ಕಡೆಗೆ ಆಕರ್ಷಿತರಾದರು. ಶಾಲಾ ಕಾಲೇಜು ದಿನಗಳ ನಾಟಕದ ಗೀಳು ಚಿತ್ರರಂಗಕ್ಕೆ ಎಳೆತಂದಿತು. ಟಿ. ಎಸ್. ರಂಗಾ ನಿರ್ದೇಶನದ 'ಸಾವಿತ್ರಿ' ಚಿತ್ರದಲ್ಲಿ ಒಂದು ಪಾತ್ರವನ್ನು ನಿರ್ವಹಿಸಿದರು. ಸಹ ನಿರ್ದೇಶಕರಾಗಿ ಹಲವು ಚಿತ್ರಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ನಿರ್ದೇಶಕ ರಾಜೇಂದ್ರ ಸಿಂಗ್ ಬಾಬುಅವರ ಹಲವು ಚಿತ್ರಗಳ ಚಿತ್ರಕಥೆ ಮಾಡಿರುವ ಇವರು ಕೆಲವು ಚಿತ್ರಗಳಲ್ಲಿಯೂ ಕಿರುತೆರೆಯಲ್ಲಿಯೂ ನಟಿಸಿದ್ದಾರೆ. ನಿರ್ದೇಶಕರಾಗಿ 'ಪ್ರೇಮ



ತಪಸ್ವಿ', 'ಪ್ರೇಮಭಿಕ್ಷೆ', 'ಮರಳಿಗೂಡಿಗೆ', 'ಬಾಳನೌಕ', 'ಈ ಜೀವನ ಸಮರದಲ್ಲಿ', ಚಿತ್ರಗಳನ್ನು ನಿರ್ದೇಶಿಸಿದರು. 'ಪ್ರೇಮಭಿಕ್ಷೆ', 'ಈ ಜೀವನ ಸಮರದಲ್ಲಿ' ಚಿತ್ರಗಳು ಕಾರಣಾಂತರದಿಂದ ಬಿಡುಗಡೆಯಾಗಲಿಲ್ಲ. 'ಮರಳಿ ಗೂಡಿಗೆ' ಚಿತ್ರ ೧೯೮೪-೮೫ರ ತೃತೀಯ ಅತ್ಯುತ್ತಮ ಚಿತ್ರ ರಾಜ್ಯಪ್ರಶಸ್ತಿಯನ್ನು ಪಡೆದಿದೆ. ಇವರು ಹಲವು ಚಿತ್ರಗಳ ಚಿತ್ರಕತೆಯಲ್ಲಿಯೂ ನೆರವಾಗಿದ್ದಾರೆ.

## ಶಾಂತೇಶ್ ಪಾಟೀಲ್

ವೃತ್ತಿಯಲ್ಲಿ ಸರ್ಕಾರಿ ಅಧಿಕಾರಿ, ಆದರೆ ಪ್ರವೃತ್ತಿಯಲ್ಲಿ ಕಲಾರಾಧಕರಾದ ಶಾಂತೇಶ ಪಾಟೀಲರ ಜೀವನವೇ ವರ್ಣಮಯ. ಮುಂಬಯಿ ಕರ್ನಾಟಕ ಪ್ರದೇಶದ ಬಿಜಾಪುರ ಜಿಲ್ಲೆಯವರಾದ ಪಾಟೀಲರು ಐ.ಎ.ಎಸ್. ಅಥವಾ ಐ.ಪಿ.ಎಸ್. ಪದವೀಧರರಲ್ಲದಿದರೂ ಸರ್ಕಾರದಲ್ಲಿ ಆ ದರ್ಜೆಯ ಅಧಿಕಾರಿಗಳು ನಿರ್ವಹಿಸುವ ಸ್ಥಾನಗಳನ್ನೇ ಹೊಂದಿದ್ದು ಅವರ ಒಂದು ವಿಶಿಷ್ಟ ಸಾಧನೆ. ಭೌತಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದರೂ ಅವರು ಪರಿಣತಿ ಪಡೆದಿದು ಚಲನಚಿತ್ರರಂಗದಲ್ಲಿ.



ಭಾರತದಲ್ಲಿ ಅತ್ಯಂತ ಹಳೆಯ ಧ್ವನಿಗ್ರಾಹಕರಲ್ಲಿ ಅವರೊಬ್ಬರು. ಧ್ವನಿಗ್ರಹಣ ಕ್ಷೇತ್ರದಿಂದ ಮುಂದುವರಿದು ಅನೇಕ ಸಾಕ್ಷ್ಯಚಿತ್ರಗಳನ್ನು ಮಕ್ಕಳ ಚಿತ್ರಗಳನ್ನು , ನ್ಯೂಸ್ ರೀಲ್‌ಗಳನ್ನು ನಿರ್ಮಿಸಿ ನಿರ್ದೇಶಿಸಿದ ಪಾಟೀಲರು ಕೆಲವು ರೂಪಕ ಚಿತ್ರಗಳನ್ನು ನಿರ್ದೇಶಿಸಿ ಅವುಗಳ ನಿರ್ಮಾಪಕರೂ ಆದರು. ಅವುಗಳಲ್ಲಿ ಅತ್ಯಂತ ಪ್ರಮುಖವಾದ ಚಿತ್ರವೆಂದರೆ ೧೯೪೭ರಲ್ಲಿ ತೆರೆಗೆ ಬಂದ ಪಂಪಾ ಪಿಕ್ಚರ್ಸ್‌ನವರ 'ಚಂದ್ರಹಾಸ'. ಮುಂಬಯಿ ಕರ್ನಾಟಕದಲ್ಲಿ ತಯಾರಾದ ಪ್ರಥಮ ಚಿತ್ರವೆಂಬ ಹೆಗ್ಗಳಿಕೆ 'ಚಂದ್ರಹಾಸ'ದ್ದು. ಖ್ಯಾತ ಗಾಯಕಿ ಹಾಗೂ ನಟಿ ಅಮೀರ್ ಬಾಯಿ ಕರ್ನಾಟಕಿಯವರು ಆ ಚಿತ್ರದ ನಾಯಕಿ. ಕನ್ನಡದ ೧೭ನೇ ಟಾಕ್ ಚಿತ್ರ ಅದು. ಆದರೆ ಈ ಚಿತ್ರದ ನಂತರ ಪಾಟೀಲರು ಮತ್ತೆ ಚಿತ್ರ ನಿರ್ಮಾಣ ಅಥವಾ ನಿರ್ದೇಶನಕ್ಕೆ ಕೈ ಹಾಕಲಿಲ್ಲ. ಆದರೆ ೧೯೪೮ರಲ್ಲಿ ಕನ್ನಡದ ಮೊಟ್ಟಮೊದಲ ಸಾಕ್ಷ್ಯ ಚಿತ್ರ ಮತ್ತು ನ್ಯೂಸ್ ರೀಲ್‌ಗಳನ್ನು ನಿರ್ಮಿಸಿದ ಕೀರ್ತಿ ಅವರದ್ದಾಯಿತು. ಅಖಿಲ ಭಾರತ ಚಲನಚಿತ್ರ ತಂತ್ರಜ್ಞರ ಸಂಘದ ಕಾರ್ಯದರ್ಶಿಯಾಗಿ ಆರು ವರ್ಷಗಳು ಕಾರ್ಯ ನಿರ್ವಹಿಸಿದ ಪಾಟೀಲರು ಮುಂಬಯಿನ ಶ್ರೀ ಸೌಂಡ್ ಸ್ಟುಡಿಯೋದಲ್ಲಿ ಧ್ವನಿ ಗ್ರಾಹಕರಾಗಿದ್ದು ನಂತರ ಅಂದಿನ ಮುಂಬೈ ಸರಕಾರದ ಚಲನಚಿತ್ರಾಧಿಕಾರಿಯಾಗಿ ನೇಮಕಗೊಂಡರು ನಂತರ ಕೇಂದ್ರಸರ್ಕಾರದಲ್ಲಿ ಚಲನಚಿತ್ರಕ್ಕೆ ಸಂಬಂಧಿಸಿದ ಅನೇಕ ಹುದ್ದೆಗಳಲ್ಲಿ ಕೆಲಸ ಮಾಡಿ ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಾಗಿ ಸೇರಿದರು. ರಾಜ್ಯ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮದ ನಿರ್ವಾಹಕ ನಿರ್ದೇಶಕರೂ ಆದರು. ಮತ್ತೆ ಮುಂಬೈ ಸೇರಿ ರಾಷ್ಟ್ರೀಯ ಮಕ್ಕಳ ಚಲನಚಿತ್ರ ಸಂಸ್ಥೆಯಲ್ಲಿ ವಿಶೇಷಾಧಿಕಾರಿಯಾಗಿ ನೇಮಕಗೊಂಡರು. ತಾವಿದ್ದ ಹುದ್ದೆಗಳಲ್ಲೆಲ್ಲಾ ಕನ್ನಡದ ಕೆಲಸವನ್ನು ನಿಷ್ಠೆಯಿಂದ ಮಾಡಿದರು. ಅನೇಕ ಕನ್ನಡ ಪರ ಸಂಘಟನೆಗಳಲ್ಲಿ ಸಕ್ರಿಯವಾಗಿ ದುಡಿದರು. ಈಗ ವಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ತಮ್ಮ ಹುಟ್ಟುಗ್ರಾಮ ಬೀರೇ ಬೇವನೂರಿನಲ್ಲಿ ವಿಶ್ರಾಂತಿ ಜೀವನ ನಡೆಸುತ್ತಿದ್ದಾರೆ.

## ಶಾಮಣ್ಣ.ಪಿ

ಕನ್ನಡ ಚಿತ್ರರಂಗದ ಅತ್ಯಂತ ಹಿರಿಯ ಸಂಗೀತ ನಿರ್ದೇಶಕ. ಮೈಸೂರಿನಲ್ಲಿ ಜನನ (೨೬-೧೧-೧೯೧೭). ಸಂಗೀತದ ವಂಶ. ಪಿಟೀಲು ವಿದ್ವಾಂಸರಾದ ಟಿ.ಚೌಡಯ್ಯನವರ 'ವಾಣಿ' ಚಿತ್ರದಲ್ಲಿ ಶಾಮಣ್ಣನವರು ವಾಯ್ಲಿನ್ ನುಡಿಸಿದ್ದಾರೆ. ತಂದೆ ರಾಮಸ್ವಾಮಿ ಖ್ಯಾತ ಪಿಟೀಲು ವಿದ್ವಾಂಸರು. ತಂದೆಯೆ ಗುರು. ಓದಿದ್ದು ಎಲ್.ಎಸ್‌ವರಗೆ. ಚಿತ್ರರಂಗಕ್ಕೆ ಸಂಗೀತ ನಿರ್ದೇಶಕರಾಗಿ ೧೯೫೧ರಲ್ಲಿ 'ಜಗನ್ಮೋಹಿನಿ' ಚಿತ್ರದ ಮೂಲಕ ಪ್ರವೇಶ. ಶಂಕರ್‌ಸಿಂಗ್ ಆ ಚಿತ್ರದ ನಿರ್ದೇಶಕರು. 'ಭಕ್ತ ವಿಜಯ', 'ತಿಲೋತ್ತಮೆ', 'ದಲ್ಲಾಳಿ', 'ಗಂಧರ್ವ ಕನ್ಯೆ', 'ಮುಟ್ಟಿದ್ದೆಲ್ಲ ಚಿನ್ನ', 'ಮಾಡಿದ್ದುಣ್ಣೋ ಮಹರಾಯ', 'ಆಷಾಢಭೂತಿ', 'ಶಿವಶರಣೆ ನಂಬಿಯಕ್ಕ', 'ಬ್ಲಾಕ್ ಮಾರ್ಕೆಟ್', 'ವರದಕ್ಷಿಣೆ', 'ಶಿವಲಿಂಗ ಸಾಕ್ಷಿ', 'ಮಂಗಳ ಸೂತ್ರ' ಹೀಗೆ ಸುಮಾರು ಹದಿನೇಳು ಕನ್ನಡ ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದರು. ರಾಷ್ಟ್ರಪತಿಗಳ ಅರ್ಹತಾ ಪತ್ರ ಪ್ರಶಸ್ತಿ ಪಡೆದ 'ಭಕ್ತ ವಿಜಯ' ಚಿತ್ರಕ್ಕೆ ಶ್ಯಾಮಣ್ಣನವರೇ



ಸಂಗೀತ ನಿರ್ದೇಶಕರು. ಹಿರಿಯ ಸಂಗೀತ ನಿರ್ದೇಶಕ ನೌಷಾದ್‌ರವರು 'ಸಂಗೀತ ಬ್ರಹ್ಮ' ಎಂಬ ಬಿರುದು ನೀಡಿ ಗೌರವಿಸಿದ್ದಾರೆ. ಇವರ ಬಳಿ ಸಹಾಯಕರಾಗಿ ಕಾರ್ಯ ನಿರ್ವಹಿಸಿದ ನಾಗೇಂದ್ರ, ಗುಣಸಿಂಗ್ ಹೆಸರಾದ ಸಂಗೀತ ನಿರ್ದೇಶಕರೆನಿಸಿದರು. ಸಿನಿಮಾ ತಂತ್ರಜ್ಞಾನ ಅಷ್ಟೇನೂ ಮುಂದುವರೆಯದ ದಿನಗಳಲ್ಲಿ ಸಿನಿಮಾ ಸಂಗೀತದ ಪರಿಕಲ್ಪನೆಯಲ್ಲಿ ತಮ್ಮತನವನ್ನು ಮೂಡಿಸುವುದರಲ್ಲಿ ಸಾಕಷ್ಟು ಶ್ರಮವಹಿಸಿದರು. ಅವರ ಹೆಚ್ಚಿನ ಚಿತ್ರಗಳಲ್ಲಿ ಹಿಂದಿ ಚಿತ್ರಗಳ ಸಂಗೀತದ ಛಾಯೆ ಕಂಡು ಬಂದರೂ ಅದೆಲ್ಲವೂ ನಿರ್ಮಾಪಕರ ಅಭಿರುಚಿಯಂತೆ ಇರುತ್ತಿತ್ತು. ನಂತರದ ದಿನಗಳಲ್ಲಿ ಶಾಮಣ್ಣ ಹೊಂದಾಣಿಕೆಗೆ ಒಪ್ಪದೇ ಚಿತ್ರರಂಗದಿಂದ ದೂರ ಉಳಿದರು.

## ಶಾರದ.ಎಲ್.ವಿ

'ವಂಶವೃಕ್ಷ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ಎಲ್.ವಿ.ಶಾರದ ತಮ್ಮ ಮೊದಲನೆಯ ಚಿತ್ರಕ್ಕೇ ರಾಜ್ಯ ಸರ್ಕಾರದ ಶ್ರೇಷ್ಠನಟಿ ಪ್ರಶಸ್ತಿ ಪಡೆದರು. 'ಫಣಿಯಮ್ಮ' ಚಿತ್ರದಲ್ಲಿನ ಅಭಿನಯ ಮನೆಮಾತಾಯಿತು. 'ಬೂತಯ್ಯನ ಮಗ ಅಯ್ಯು' ಅವರ ಅಭಿನಯದ ಮತ್ತೊಂದು ಚಿತ್ರ. 'ವಾತ್ಸಲ್ಯ ಪಥ' ಚಿತ್ರದ ಅಭಿನಯಕ್ಕಾಗಿ ಶ್ರೇಷ್ಠ ಪೋಷಕ ನಟಿ ರಾಜ್ಯ ಪ್ರಶಸ್ತಿ. 'ಆದಿಶಂಕರಚಾರ್ಯ', 'ಮಧ್ವಾಚಾರ್ಯ', 'ನಕ್ಕಳಾ ರಾಜಕುಮಾರಿ' ಅವರ ಅಭಿನಯದ ಇತರ ಚಿತ್ರಗಳು. ತಮ್ಮ ಅಭಿನಯವನ್ನು ಕಲಾತ್ಮಕ ಚಿತ್ರಗಳಿಗೇ ಸೀಮಿತಗೊಳಿಸಿಕೊಂಡಿದ್ದ ಶಾರದಾ ಅಭಿನಯಿಸಿದ ಚಿತ್ರಗಳ ಸಂಖ್ಯೆ



ಬೆರಳೆಣಿಕೆಯಷ್ಟು. 'ಒಂದು ಪ್ರೇಮದ ಕಥೆ' ಮೊದಲಾದ ಕೆಲವು ಚಿತ್ರಗಳಲ್ಲಿ ಅಭಿನಯಿಸಿದ್ದರು. ಕೆಲವು ಸಾಕ್ಷ್ಯ ಚಿತ್ರಗಳನ್ನು ದೂರದರ್ಶನಕ್ಕಾಗಿ ತಯಾರಿಸಿದಾರೆ. ರಾಜಕಾರಣದಲ್ಲಿ ಹಿರಿಯರಾಗಿದ ಎಲ್.ಎಸ್.ವೆಂಕಾಜಿ ರಾಯರ ಪುತ್ರಿ ಶಾರದಾ.

## ಶಾಸ್ತ್ರಿ.ಎಲ್.ಎನ್

ಇಂಜಿನಿಯರಿಂಗ್ ಪದವೀಧರರಾದರೂ ಸಂಗೀತದಲ್ಲಿ ಪರಿಶ್ರಮ ಹೊಂದಿ ಚಲನಚಿತ್ರ ಹಿನ್ನೆಲೆ ಗಾಯನವನ್ನು ಗಂಭೀರವಾಗಿ ತೆಗೆದುಕೊಂಡವರು. ಹಂಸಲೇಖ ಅವರ ಬಳಿ ಟ್ರ್ಯಾಕ್ ಸಿಂಗರ್‌ಆಗಿದ್ದು ಗಾಯಕನಾಗಿ ಭಕ್ತಿಬಡ್ತಿ ಪಡೆದರು. ಸರಿಸುಮಾರು ೨೦೦ಕ್ಕೂ ಹೆಚ್ಚಿನ ಹಾಡುಗಳನ್ನು ಹಾಡಿರುವ ಶಾಸ್ತ್ರಿ ಸಂಗೀತ ನಿರ್ದೇಶನ ಕ್ಷೇತ್ರಕ್ಕೂ ಕಾಲಿರಿಸಿದ್ದಾರೆ. 'ಜನುಮದ ಜೋಡಿ' ಚಿತ್ರ ಶಾಸ್ತ್ರಿ ಪಾಲಿಗೆ ಭಾಗ್ಯದ ಬಾಗಿಲನ್ನೇ ತೆರಯಿತು. 'ಜನುಮದ ಜೋಡಿ'ಯ 'ಕೋಲು ಮಂಡೆ ಜಂಗಮ ದೇವ...'



ಹಾಡಿನಿಂದ ಕರ್ನಾಟಕದಾದ್ಯಂತ ಸುಪರಿಚಿತರಾಗಿರುವ ಶಾಸ್ತ್ರಿ ಅದೇ ಹಾಡಿಗಾಗಿ ೧೯೯೬-೯೭ನೇ ಸಾಲಿನ ಅತ್ಯುತ್ತಮ ಗಾಯಕ ಪ್ರಶಸ್ತಿಯನ್ನು ಪಡೆದಿದ್ದಾರೆ. ಗಾಯಕನಿಂದ ಸಂಗೀತ ನಿರ್ದೇಶನಕ್ಕೆ ಕಾಲಿರಿಸಿ 'ಕನಸಲೂ ನೀನೆ ಮನಸಲೂ ನೀನೆ' ಕನ್ನಡ ಚಿತ್ರಕ್ಕೆ ಹಾಗೂ 'ಪ್ರೇರಣಂ' ತೆಲುಗು ಚಿತ್ರ ಕ್ಕೆ ಸಂಗೀತ ನೀಡಿದಾರೆ. ರವಿಚಂದ್ರನ್ ಅವರ 'ಹೃದಯದಿಂದ..' ಪ್ರಾರಂಭವಾದ ಮೇಲೆ ಅಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು.

## ಶಾಸ್ತ್ರಿ.ಸಿ.ವಿ.ಎಲ್

ಇಂದಿನ ರಾಮನಗರ (ಹಿಂದಿನ ಕ್ಲೋಸ್‌ಪೇಟೆ) ದಿಂದ ಬೆಂಗಳೂರಿಗೆ ಬಂದು ಶಿಕ್ಷಣ ಪೂರೈಸಿದ ನಂತರ ಹಲವಾರು ಉದ್ಯೋಗಗಳನ್ನು ಕೈಗೊಂಡು ೬೦-೭೦ರ ದಶಕಗಳಲ್ಲಿ ಲ್ಯಾಂಡ್ ಡೆವಲಪರ್ ಆಗಿ ಹೆಸರಾದ ಸಿ.ವಿ.ಎಲ್.ಶಾಸ್ತ್ರಿ ೧೯೫೭ರ ಸುಮಾರಿನಲ್ಲಿ ಮಿತ್ರರೊಡನೆ ಸೇರಿ ಕನ್ನಡ ಚಿತ್ರ ನಿರ್ಮಾಣದ ಪ್ರಯತ್ನ ಮಾಡಿದರು. ೭೦ರ ದಶಕದಲ್ಲಿ ಡಿ.ಎಸ್.ನರಸಿಂಗರಾವ್, ಡಿ.ಟಿ.ಎಸ್.ರಾವ್, ವೈ.ಆರ್.ಅಶ್ವತ್ಥ ನಾರಾಯಣರಾವ್ ಇವರ ಪಾಲುದಾರಿಕೆ ಶಾಸ್ತ್ರಿ ಅಸೋಸಿಯೇಟ್ಸ್ ಲಾಂಛನದಲ್ಲಿ 'ಕಳ್ಳ-ಕುಳ್ಳ' ಚಿತ್ರವನ್ನು ನಿರ್ಮಿಸಿದರು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಕಾರ್ಯಕಾರಿ ಸಮಿತಿಯ ಸದಸ್ಯ, ಖಜಾಂಚಿ. ಕಾರ್ಯದರ್ಶಿಗಳಾಗಿ ದುಡಿದ ಅವರು ೧೯೮೯-೧೯೯೨ರ ವರೆಗೂ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ೧೯೯೨ರ ಅಂತರ ರಾಷ್ಟ್ರೀಯ ಚಲನಚಿತ್ರೋತ್ಸವ ಬೆಂಗಳೂರಿನಲ್ಲಿ ಏರ್ಪಟ್ಟಾಗ ಕಾವೇರಿ ವಿವಾದ ಭುಗಿಲೆದ್ದು ಚಿತ್ರೋತ್ಸವ ರದ್ದಾಗುವ ಸಂದರ್ಭದಲ್ಲಿ ಶಾಸ್ತ್ರಿಗಳು ಮುಂಚೂಣಿಯಲ್ಲಿ ನಿಂತು ಉತ್ಸವ ನಡೆಯುವಂತೆ ಮಾಡಿದರು. ಸಹಾಯ ಧನ



ನೀಡಿಕೆ ವಿಳಂಬವಾಗಿ ಬೃಹತ್ ಮೊತ್ತದ ಬಾಕಿ ಇದ್ದಾಗ ನಿರ್ಮಾಪಕರ ಸಂಕಷ್ಟವನ್ನು ಅರಿತು ಸರ್ಕಾರದೊಂದಿಗೆ ಮಾತುಕತೆ ನಡೆಸಿ ಕಂತು ಕಂತಾಗಿ ನಿರ್ಮಾಪಕರ ಸಹಾಯಧನವನ್ನು ಪಾವತಿಯಾಗುವಂತೆ ಮಾಡಿ ನಿರ್ಮಾಪಕರನ್ನು ಸಂಕಷ್ಟದಿಂದ ಪಾರು ಮಾಡಿದರು. ನಿರ್ಮಾಪಕರ ಸಂಘದ ಅಧ್ಯಕ್ಷರಾಗಿ ರಾಜಕುಮಾರ್ ನೇತೃತ್ವದಲ್ಲಿ ನಿರ್ಮಾಪಕರ ಕುಂದುಕೊರತೆಗಳ ನಿವಾರಣೆಗಾಗಿ ಬೃಹತ್ ಮೆರವಣಿಗ, ಪ್ರತಿಭಟನೆ, ನಿರಶನ ಮೊದಲಾದವನ್ನು ಮಾಡಿ ನಿರ್ಮಾಪಕರ ಪರವಾಗಿ ಪ್ರಗತಿ ಪರ ಕಾರ್ಯಗಳನ್ನು ನಿರ್ವಹಿಸಿದರು. ಶಾಸ್ತ್ರಿ ಅಸೋಸಿಯೇಟ್ಸ್, ಶಾಸ್ತ್ರಿ ಸಿನಿ ಆರ್ಟ್ಸ್ ಪ್ರೊಡಕ್ಷನ್ಸ್, ಶಾಸ್ತ್ರಿ ಮೂವೀಸ್, ಎಸ್.ಎಸ್.ಪ್ರೊಡಕ್ಷನ್‌ಗಳ ಸ್ಥಾಪಕರಾದ ಇವರು 'ಪಕ್ಕಾ ಕಳ್ಳ', 'ಹೆಣ್ಣು ಹುಲಿ', 'ಆಸೆಯ ಬಲೆ', 'ಮಲಯ ಮಾರುತ', 'ಆತಂಕ' ಮೊದಲಾದ ಚಿತ್ರಗಳನ್ನು ನಿರ್ಮಿಸಿದ್ದಾರೆ. ಕೆ.ಬಾಲಚಂದರ್ ಮೊದಲಾದ ಉತ್ತಮ ನಿರ್ದೇಶಕರ ಚಿತ್ರಗಳನ್ನು ವಿತರಿಸಿದ್ದಾರೆ. ಕೊಡುಗೈ ದಾನಿಯಾದ ಇವರು ಪ್ರೀಮಿಯರ್ ದುರಂತದ ಸಂದರ್ಭದಲ್ಲಿ ಸಂಕಷ್ಟದಲ್ಲಿರುವವರಿಗೆ ಉದಾರವಾಗಿ ಧನಸಹಾಯ ಮಾಡಿದರು. ಸಂಗೀತದಲ್ಲಿ ಹಾಗೂ ನೃತ್ಯದಲ್ಲಿ ಅಪಾರ ಒಲವಿದ್ದ ಅವರು ಮಹತ್ವಾಕಾಂಕ್ಷೆಯಿಂದ ನಿರ್ಮಿಸಿದ 'ಮಲಯ ಮಾರುತ' ಅದ್ದೂರಿ ವೆಚ್ಚದಲ್ಲಿ ತಯಾರಾಯಿತು. ಅವರು ನಿರ್ಮಿಸಿದ 'ಆತಂಕ' ಚಿತ್ರ ೧೯೯೨-೯೩ರಲ್ಲಿ ದ್ವಿತೀಯ ಉತ್ತಮ ಚಿತ್ರ ರಾಜ್ಯ ಪ್ರಶಸ್ತಿಯನ್ನು ಪಡೆಯಿತಲ್ಲದೆ ಉತ್ತಮ ನಟ, ಕಥೆ, ಚಿತ್ರಕತೆ, ಛಾಯಾಗ್ರಹಣ, ಸಂಕಲನ ಹೀಗೆ ಒಟ್ಟು ಆರು ಪ್ರಶಸ್ತಿಯನ್ನು ಪಡೆಯಿತು.

ಅಖಿಲ ಕರ್ನಾಟಕ ಡಾ| ರಾಜಕುಮಾರ್ ಅಭಿಮಾನಿ ಸಂಘದ ಸ್ಥಾಪನೆಗ ಕಾರಣಕಾಗಿ, ಅದರ ಗೌರವಾಧ್ಯಕ್ಷರಾಗಿ ಮಡಿದರು. ಶಾಸ್ತ್ರಿಗಳು ಸಮಾಜ ಕಾರ್ಯದಲ್ಲಿ ನಿರತರು. ಅನೇಕ ಸಂಘ ಸಂಸ್ಥೆಗಳಲ್ಲಿ ಅಧ್ಯಕ್ಷರು ಹಾಗೂ ಗೌರವಾಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ.

### ಶ್ಯಾಂ ಸುಂದರ್

ಬಾಲನಟನಾಗಿ ಚಿತ್ರರಂಗ ಪ್ರವೇಶಿಸಿ. ನಂತರ ಪೋಷಕ ನಟರಾಗಿ ಬೆಳಕಿಗೆ ಬಂದವರು ಶ್ಯಾಂ ಸುಂದರ್. ಹಿರಿಯ ತಾರೆ ಮೈನಾವತಿ ಅವರ ಪುತ್ರ. ಹುಟ್ಟಿದ್ದು ೧೯೬೩ರಲ್ಲಿ ಮದ್ರಾಸಿನಲ್ಲಿ. ಬಿ.ಕಾಂ. ಪದವೀಧರರು. 'ಅನುರಾಧಾ' ಚಿತ್ರದಲ್ಲಿ



ಬಾಲನಟನಾಗಿ ಪ್ರವೇಶ. ನಂತರ ೧೯೮೪ರಲ್ಲಿ ತೆರೆಕಂಡ 'ಅವಳ ಅಂತರಂಗ' ಚಿತ್ರದಲ್ಲಿ ಪರಿಣಾಮಕಾರಿ ಪಾತ್ರದಿಂದ ಪೋಷಕನಟರಾಗಿ ಪರಿಚಿತರಾದರು. 'ತಾಯಿ ತಂದೆ', 'ಅನುಕೂಲಕ್ಕೊಬ್ಬ ಗಂಡ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದಾರೆ. ೧೯೮೪-೮೫ರ ಸಾಲಿನ ಶ್ರೇಷ್ಠ ಪೋಷಕ ನಟ ಪ್ರಶಸ್ತಿಯನ್ನು 'ಅವಳ ಅಂತರಂಗ' ಚಿತ್ರಕ್ಕಾಗಿ ಪಡೆದಿದ್ದಾರೆ. 'ಯಂತ್ರ ಮೀಡಿಯಾ ಪ್ರೈ. ಲಿ.,' ಎಂಬ ನಿರ್ಮಾಣ ಸಂಸ್ಥೆಯನ್ನು ಸ್ಥಾಪಿಸಿ ೫೦ಕ್ಕೂ ಹೆಚ್ಚು ಧಾರಾವಾಹಿಗಳನ್ನು ವಿವಿಧ ಭಾಷೆಯಲ್ಲಿ ನಿರ್ಮಿಸಿದ್ದಾರೆ. ಇವರ ಸೋದರ ಗುರುದತ್ ಕೂಡ ಶ್ಯಾಂ ಸುಂದರ್ ಜೊತೆ ಸಕ್ರಿಯವಾಗಿ ಸಂಕಲನ, ಅಭಿನಯ, ನಿರ್ಮಾಣ, ನಿರ್ದೇಶನಗಳಲ್ಲಿ ಭಾಗಿಯಾಗಿರುತ್ತಾರೆ.

### ಶ್ಯಾಂಸುಂದರ್‌ಶೆಟ್ಟಿ

ಖ್ಯಾತ ಸಾಹಸ ನಿರ್ದೇಶಕ. ಮೂಲತಃ ದಕ್ಷಿಣ ಕನ್ನಡದ 'ಬಂಟ' ಮನೆತನಕ್ಕೆ ಸೇರಿದವರು. ಇವರ ಹುಟ್ಟೂರು ದೇರಳಕಟ್ಟೆಯ ಮಾಗಣತ್ತಡಿಗುತ್ತಿ. ಮಂಗಳೂರಿನ ಕೆನರಾ



ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ ತನಕ ವಿದ್ಯಾಭ್ಯಾಸ ಮಾಡಿದ ಇವರು ಉತ್ತಮ ಆಟಗಾರರು. ವಿದ್ಯಾರ್ಥಿ ದೆಸೆಯಲ್ಲಿ ಕತ್ತಿವರಸೆ, ಕುದುರೆ ಸವಾರಿ, ಈಜು ಮುಂತಾದ ವಿದ್ಯೆಗಳಲ್ಲಿ ಪರಿಣತಿ ಹೊಂದಿದ್ದ ಇವರು ಪ್ರಾರಂಭದಲ್ಲಿ ಸ್ಟಂಟ್ 'ಡ್ಯೂಪ್' ಆಗಿ ಕೆಲಸ ಮಾಡಿದರು. ತಮಿಳು ಚಿತ್ರವೊಂದರಲ್ಲಿ ನಾಯಕನಾಗಿ ಅಭಿನಯಿಸಿದರು. 'ಚಂದ್ರಲೇಖ' ಚಿತ್ರದಲ್ಲಿ ಸಾಹಸ ನಿರ್ದೇಶನ ಮಾಡುವುದರೊಂದಿಗೆ ಸಾಹಸ ನಿರ್ದೇಶಕಕರಾದರು. ಕನ್ನಡದಲ್ಲಿ 'ರಣಧೀರ ಕಂಠೀರವ', 'ಬಡವರ ಬಂಧು', 'ನಾಗರಹಾವು', 'ಕಿತ್ತೂರು ಚೆನ್ನಮ್ಮ', 'ವಿಜಯನಗರದ ವೀರಪುತ್ರ', 'ಕಿಲಾಡಿ ಜೋಡಿ' ಚಿತ್ರಗಳಿಗೆ ಸಾಹಸ ನಿರ್ದೇಶನ ಮಾಡಿದ ಇವರು ಸಾಹಸ ನಿರ್ದೇಶನ ಮಾಡಿದ ಕಡೆಯ ಕನ್ನಡ ಚಿತ್ರ 'ಬಂಗಾರದ ಜಿಂಕೆ'. ಇವರ ಸಹಾಯಕರಾಗಿ ದುಡಿದ ಸಾಹಸ ನಿರ್ದೇಶಕರಾದ ಸಾಹುಲ್, ವಿಜಯ್ ಮೊದಲಾದವರು ನಂತರದ ದಿನಗಳಲ್ಲಿ ಸ್ವತಂತ್ರ ಸಾಹಸ ನಿರ್ದೇಶಕರಾದರು.

### ಶ್ಯಾಮಲಾ

ಬಿ.ಎ.ಪದವೀಧರೆ. ಚಿತ್ರರಂಗಕ್ಕೆ ಬಹಳ ಆಸೆಯಿಂದ ಬಂದು ನಿರೀಕ್ಷಿತ ಯಶಸ್ಸು ಗಳಿಸದೇ ಪೋಷಕ ನಟಿ ಹಾಗೂ ಕಂಠದಾನ ಕಲಾವಿದೆಯಾಗಿ ಬೆಳಕಿಗ ಬಂದ ಕಲಾವಿದೆ. ಪ್ರಾರಂಭದ ದಿನಗಳಲ್ಲಿ ಬಂದು ಹೋಗುವ ಪಾತ್ರಗಳಲ್ಲಿ ಹೆಚ್ಚಾಗಿ ಕಾಣಿಸಿಕೊಂಡ ಶ್ಯಾಮಲಾ ಖ್ಯಾತ ನಿರ್ದೇಶಕ ಸಿದ್ದಲಿಂಗಯ್ಯ ಅವರ ನಿರ್ದೇಶನದ ಬಹುತೇಕ ಚಿತ್ರಗಳಲ್ಲಿ ಪೋಷಕ ನಟಿಯಾಗಿ ಅಭಿನಯಿಸಿದ್ದಾರೆ. ಪ್ರತಿಭಾವಂತೆಯಾದರೂ ಅವಕಾಶಗಳಿಲ್ಲದೆ ಕಿರುತೆರೆಗೆ ಪ್ರವೇಶ ಪಡೆದು ಅಲ್ಲಿ ಯಶಸ್ವಿಯಾದರು. ಕಂಠದಾನ ಕಲಾವಿದೆಯಾಗಿ ಬಹುತೇಕ ಪರಭಾಷಾ ನಾಯಕಿಯರಿಗೆ ಧ್ವನಿ ನೀಡಿರುವ ಶ್ಯಾಮಲಾ ಒಳ್ಳೆಯ ಕಂಠದಾನ ಕಲಾವಿದೆ. 'ಮುಳ್ಳಿನ



ಗುಲಾಬಿ', 'ಪ್ರೇಮಗಂಗ', 'ಸಂಭವಾಮಿ ಯುಗೇ ಯುಗೇ', 'ಹೆಂಡ್ತಿ ಬೇಕು ಹೆಂಡ್ತಿ', 'ಭೂತಾಯಿ ಮಕ್ಕಳು' ಮುಂತಾದವು ಅವರ ಅಭಿನಯದ ಚಿತ್ರಗಳು.

### ಶ್ಯಾಮ ಸುಂದರ ಕುಲಕರ್ಣಿ

ದೈನಿಕ ಪತ್ರಿಕೆ 'ಸಂಯುಕ್ತ ಕರ್ನಾಟಕ'ದಲ್ಲಿ ಪತ್ರಕರ್ತರಾಗಿದ ಶ್ಯಾಮ ಸುಂದರ ಕುಲಕರ್ಣಿ ಸಹೋದ್ಯೋಗಿ ಬಿ.ಕೆ.ಗುರುರಾಜ್ ಅವರ ಪ್ರೇರಣೆಯಿಂದ 'ಛಲಗಾರ' ಚಿತ್ರಕ್ಕೆ 'ಮೂಡಣದಾರವಿ ಮೂಡಲು ಮಮತೆಯಲಿ....' ಹಾಡನ್ನು ಬರೆಯುವುದರೊಂದಿಗೆ ಚಿತ್ರರಂಗ ಪ್ರವೇಶಿಸಿದರು. 'ತೀರದ ಬಯಕೆ' ಚಿತ್ರದ 'ಕಾಣುತಿರುವೆ ಪ್ರಣಯದಾಟವ ಮಲೆನಾಡಿನ....', 'ಬೆಸುಗ' ಚಿತ್ರದ 'ಯಾವ ಹೂವು ಯಾರ ಮುಡಿಗೋ....', 'ಒಲವಿನ ಉಡುಗೊರೆ' ಚಿತ್ರದ 'ಒಲವಿನ ಉಡುಗೊರೆ ಕೊಡಲೇನು....', 'ಅಜೇಯ' ಚಿತ್ರದ 'ಹೀರೋ ಹೀರೋ ಹೀರೋ ನಾನೇ....', 'ಸುತ್ತ ಮುತ್ತಲು ಸಂಜೆಗತ್ತಲು ...' ಮುಂತಾದವು ಅವರ ಲೇಖನಿಯಿಂದ ಹೊರಹೊಮ್ಮಿದ ಗೀತೆಗಳು. ಅಪಾರ ಜನಪ್ರಿಯತೆ ಗಳಿಸಿದವು. 'ಹೊಸರಾಗ', 'ಗಣೇಶ ಸುಬ್ರಹ್ಮಣ್ಯ', 'ಒಂದು ಸಿನಿಮಾ ಕಥೆ' ಮುಂತಾದ ಚಿತ್ರಗಳಿಗೆ ಕಥೆಯನ್ನು ಬರೆದಿದ್ದಾರೆ. ಕಿರುತೆರೆಗೂ ಸಾಹಿತ್ಯ ಒದಗಿಸುತ್ತಾರೆ. ಕನ್ನಡ ಚಲನಚಿತ್ರ



ಪತ್ರಕರ್ತರು, ಚಲನಚಿತ್ರ ಇತಿಹಾಸದಲ್ಲಿ ಆಸಕ್ತರು. ಹಲವು ಪತ್ರಿಕೆಗಳ ಅಂಕಣಕಾರ.

### ಶಿಲ್ಪ



ಹೊರ ರಾಜ್ಯದಿಂದ ಬಂದು ಕನ್ನಡ ಚಿತ್ರರಂಗದಲ್ಲಿ ಹೆಸರು ಮಾಡಿರುವ ಪ್ರತಿಭಾವಂತ ಕಲಾವಿದೆ ಶಿಲ್ಪ. ಕೇರಳದಲ್ಲಿ ಆಕೆಯ ಮುದ್ದು ಹೆಸರು 'ಚಿಪ್ಪಿ'. ಕನ್ನಡ ಚಿತ್ರರಂಗದ ಮೈಲಿಗಲ್ಲುಗಳಲ್ಲೊಂದಾದ 'ಜನುಮದ ಜೋಡಿ' ಆಕೆಯ ಮೊದಲ ಕನ್ನಡ ಚಿತ್ರ. ಈ ಒಂದೇ ಚಿತ್ರದಿಂದ ಆಕೆಯ ಜನಪ್ರಿಯತೆ ಎತ್ತರಕ್ಕೇರಿತು. ಜೊತೆಗೆ ಆಕೆಗೆ ರಾಜ್ಯ ಸರ್ಕಾರದ ೧೯೯೬-೯೭ನೇ ಸಾಲಿನ ಅತ್ಯುತ್ತಮ ನಟಿ ಪ್ರಶಸ್ತಿಯನ್ನು ತಂದುಕೊಟ್ಟಿತು. ಈ ರೀತಿ ಮೊದಲ ಚಿತ್ರದಲ್ಲಿಯೇ ಒಬ್ಬ ಕಲಾವಿದೆ ಇಷ್ಟೊಂದು ಜನಾನುರಾಗ ಗಳಿಸಿದ ನಿದರ್ಶನಗಳು ವಿರಳ. 'ಅಂಡರ್‌ಪ್ಲೇ' ತಂತ್ರವನ್ನು ಅತ್ಯಂತ ಯಶಸ್ವಿಯಾಗಿ ರೂಢಿಸಿಕೊಂಡಿರುವ ಶಿಲ್ಪ 'ಮುಂಗಾರಿನ ಮಿಂಚು', 'ಮೇಘ ಬಂತು ಮೇಘ', 'ಭೂಮಿ ತಾಯಿಯ ಚೊಚ್ಚಲ ಮಗ', 'ಅರುಣೋದಯ' ಚಿತ್ರಗಳಿಂದಲೂ ತಮ್ಮ ಜನಪ್ರಿಯತೆಯನ್ನು ಗಮನೀಯವಾಗಿ ವೃದ್ಧಿಸಿಕೊಂಡಿದ್ದಾರೆ.

### ಶಿವಕುಮಾರ್

ಕನ್ನಡ ಚಿತ್ರರಂಗದ ಪೋಷಕ ನಟ,



ಖಳನಟರಾದ ಶಿವಕುಮಾರ್ ಚಿತ್ರದುರ್ಗದವರು. ಮೈಸೂರಿನ ಮಾನಸ ಗಂಗೋತ್ರಿಯಲ್ಲಿ ರಾಜ್ಯಶಾಸ್ತ್ರದಲ್ಲಿ ಎಂ.ಎ.ಪದವಿಯನ್ನು ಪಡೆದ ಶಿವಕುಮಾರ್ ಸಿನಿಮಾದ ಗೀಳಿನಿಂದ ಚಿತ್ರ ನಿರ್ಮಾಪಕ, ನಿರ್ದೇಶಕರ ಬಳಿ ಅವಕಾಶಗಳಿಗಾಗಿ ಅಲೆದರು. ಪುಟ್ಟಣ್ಣ ಕಣಗಾಲ್ ಅವರ ಕಡೆಯ ಚಿತ್ರ 'ಮಸಣದ ಹೂವು' ಚಿತ್ರದಲ್ಲಿ ತುಂಬ ಒಳ್ಳೆಯ ಪಾತ್ರವಿತ್ತು. ಈ ಮೊದಲು 'ಚಕ್ರವ್ಯೂಹ', 'ಬಂಧಿ', 'ಅನುಭವ', 'ಮಳೆ ಬಂತು ಮಳೆ', 'ಗಜೇಂದ್ರ', 'ಆನಂದ ಸಾಗರ' ಚಿತ್ರಗಳಲ್ಲಿ ಅಭಿನಯಿಸಿದರು. 'ಎದುರು ಮನೆ ಮೀನಾ' ಚಿತ್ರದಲ್ಲಿ ನಾಯಕರಾಗಿ ಅಭಿನಯಿಸಿದ ಶಿವಕುಮಾರ್ ನಂತರದ ದಿನಗಳಲ್ಲಿ ಬಹುತೇಕ ಬಂದು ಹೋಗುವ ಪಾತ್ರಗಳಲ್ಲಿ ಕಾಣಿಸಿಕೊಂಡರು. ಸಾ.ರಾ.ಗೋವಿಂದು ಅವರು ನಿರ್ಮಿಸಿದ 'ಬೆಳ್ಳಿ ಕಾಲುಂಗುರ'ದಲ್ಲಿ ಶಿವಕುಮಾರ್‌ಗೆ ಉತ್ತಮ ಪಾತ್ರವಿತ್ತು.

### ಶಿವಮಣಿ

೯೦ರ ದಶಕದಲ್ಲಿ ತೆರೆಗೆ ನಿರ್ದೇಶಕರಾಗಿ



ಪರಿಚಿತರಾದ ಶಿವಮಣಿ ಹೆಚ್ಚಾಗಿ ರಾಜಕೀಯ ಹಿನ್ನೆಲೆಯ ಚಿತ್ರಗಳನ್ನು ನಿರ್ದೇಶಿಸಿದರು. ೧೯೯೩ರಲ್ಲಿ ತೆರೆಕಂಡ ಯಶಸ್ವಿ ಚಿತ್ರ 'ರಾಜಕೀಯ'. ಇವರು ನಿರ್ದೇಶಿಸಿದ ಮೊದಲ ಚಿತ್ರ. ನಂತರ 'ಗೋಲಿಬಾರ್' ಚಿತ್ರವನ್ನು ನಿರ್ದೇಶಿಸಿದ ಇವರು 'ಶಿವಸೈನ್ಯ', 'ದೊರೆ', 'ಮದರ್ ಇಂಡಿಯಾ', 'ಮಿನುಗು ತಾರೆ', 'ಅಗ್ನಿ ಸಾಕ್ಷಿ' ಮುಂತಾದ ಚಿತ್ರಗಳನ್ನು ನಿರ್ದೇಶಿಸಿದಾರೆ. ಇವರ ಪತ್ನಿ ತುಳಸಿ ಕೆಲವು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

### ಶಿವಯ್ಯ.ವೈ

ಕನ್ನಡ ಚಿತ್ರರಂಗದ ಹಿರಿಯ ಸಾಹಸ ನಿರ್ದೇಶಕ ಕಂ ಸ್ಟಂಟ್ ಮಾಸ್ಟರ್ ವೈ.ಶಿವಯ್ಯ. ಕನ್ನಡಿಗರಾದ ಶಿವಯ್ಯ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನವರು. ಎಲೆಕೊಪ್ಪ ಇವರ ಹುಟ್ಟೂರು. ಉಪಾಧ್ಯಾಯ



ವೃತ್ತಿ. ಮಕ್ಕಳಂತೆ ಬಂಡೆಯಿಂದ ಬಂಡೆಗೆ ಹಾರುವುದನ್ನು ಕಂಡ ಸ್ನೇಹಿತರು ಶಿಕ್ಷಕ ವೃತ್ತಿಗಿಂತ ಸಿನಿಮಾಕ್ಕೆ ಲಾಯಕ್ಕು ಎನ್ನುತ್ತಿದ್ದರಂತೆ. 'ಚಂದ್ರಲೇಖಾ' ಸಿನಿಮಾದಿಂದ ಪ್ರಭಾವಿತರಾದ ಇವರು ಮದರಾಸಿಗೆ ಹೋಗಿ ಸ್ವಾಮಿನಾಥನ್ ಬಳಿ ಸ್ಟಂಟ್ ತರಬೇತಿ ಪಡೆದು, ಸ್ಟಂಟ್ ಸೋಮು ಅವರಿಂದ ವೃತ್ತಿಯ ವಿದ್ಯೆಯನ್ನೆಲ್ಲ ಕಲಿತರು. ಬಿ.ವಿಠಲಾಚಾರ್ಯ ಅವರ 'ಮನೆ ತುಂಬಿದ ಹೆಣ್ಣು' ಚಿತ್ರ ಇವರು ಸ್ಟಂಟ್ ನಿರ್ದೇಶನ ಮಾಡಿದ ಪ್ರಥಮ ಚಿತ್ರ. ಫೆನ್ಸಿಂಗ್‌ನಲ್ಲಿ ಪರಿಣತ ಎನಿಸಿದ್ದ ಇವರ ಪ್ರತಿಭೆ ಮೊದಲ ಬಾರಿ ಮಿಂಚಿದ್ದು ವೈ.ಆರ್.ಸ್ವಾಮಿ ನಿರ್ದೇಶನದ 'ಕಠಾರಿವೀರ' ಚಿತ್ರದಲ್ಲಿ. 'ಬಂಗಾರದ ಹೂವು', 'ಬಹದ್ದೂರು ಗಂಡು', 'ಸನಾದಿ ಅಪ್ಪಣ್ಣ', 'ನಾ ನಿನ್ನ ಮರೆಯಲಾರೆ', 'ಶಂಕರ್‌ಗುರು' ಮೊದಲಾದ ಚಿತ್ರಗಳು ಇವರ ಪ್ರಮುಖ ಚಿತ್ರಗಳು. ಡಾ||ರಾಜ್ ಅವರ ೮೫ ಚಿತ್ರಗಳಿಗೆ ಸಾಹಸ ನಿರ್ದೇಶನ ಮಾಡಿರುವ ಶಿವಯ್ಯ ಸುಮಾರು ೩೦೦ಕ್ಕೂ ಹೆಚ್ಚು ಚಿತ್ರಗಳಿಗೆ ಸಾಹಸ ಸನ್ನಿವೇಶಗಳನ್ನು ಸಂಯೋಜಿಸಿದ್ದಾರೆ.

## ಶಿವರಾಂ.ಎಸ್

ರಂಗಭೂಮಿ ಹಿನ್ನೆಲೆ ಇರುವ ಶಿವರಾಂರವರು ಸಹನಿರ್ದೇಶಕರಾಗಿ ೧೯೫೮ರಲ್ಲಿ ಚಿತ್ರರಂಗಕ್ಕೆ ಬಂದವರು.



೧೯೬೫ರಲ್ಲಿ ತಯಾರಾದ 'ಬೆರೆತ ಜೀವ' ಚಿತ್ರದಿಂದ ನಟರಾಗಿ, ಸಹ ನಿರ್ಮಾಪಕರಾಗಿ ಹೆಸರಾದರು. ಈವರೆಗೆ ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಇವರಿಗೆ ಅಪಾರ ಜನಪ್ರಿಯತೆಯನ್ನು ತಂದುಕೊಟ್ಟ ಪಾತ್ರ 'ಶರಪಂಜರ' ಚಿತ್ರದ ಅಡಿಗೆ ಭಟ್ಟನದು. 'ಚಿಕ್ಕನ ಕಣ್ಣು' ಇವರ ನೂರನೆಯ ಚಿತ್ರ, 'ಮಣಿಕಂಠನ ಮಹಿಮೆ' ೨೦೦ನೆಯದು. ಶಿವರಾಂ ನಟಿಸಿರುವ ಪ್ರಮುಖ ಚಿತ್ರಗಳು - 'ಶುಭಮಂಗಳ', 'ದೇವರಗುಡಿ', 'ಶ್ರಾವಣ ಬಂತು', 'ಗುರು ಶಿಷ್ಯರು', 'ನಾಗರಹೊಳೆ', 'ಒಂದು ಮುತ್ತಿನ ಕಥೆ', 'ಮಲಯ ಮಾರುತ', 'ಬೆಳದಿಂಗಳ ಬಾಲೆ', 'ತಾಯಿ ಸಾಹೇಬ' ಮತ್ತು ಇನ್ನೂ ಅನೇಕ. ಶಿವರಾಂ ತಮ್ಮ ಸಹೋದರ ಎಸ್.ರಾಮನಾಥನ್ ಜತೆ ಸೇರಿ 'ರಾ.ಶಿ. ಸಹೋದರರು' ಚಿತ್ರ ಸಂಸ್ಥೆಯಡಿ ಹಲವು ಚಿತ್ರಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವು 'ನಾನೊಬ್ಬ ಕಳ್ಳ', 'ಗೆಜ್ಜೆಪೂಜೆ', 'ಉಪಾಸನೆ', 'ಹೃದಯಸಂಗಮ' ಮತ್ತು 'ಡ್ರೈವರ್ ಹನುಮಂತು'. ಸಹೋದರ ರಾಮನಾಥನ್ ಜತೆ ನಿರ್ಮಿಸಿ, ನಿರ್ದೇಶಿಸಿದ 'ಹೃದಯ ಸಂಗಮ' ಚಿತ್ರ ೧೯೭೨-೭೩ನೇ ಸಾಲಿನ ನಾಲ್ಕನೇ ಅತ್ಯುತ್ತಮ ಚಿತ್ರವಾಗಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆಯಿತು. ತಾರೆ ಜಯಮಾಲಾ ನಿರ್ಮಿಸಿದ 'ತಾಯಿ ಸಾಹೇಬ' ಚಿತ್ರದಲ್ಲಿನ ಗಂಭೀರ ಅಭಿನಯಕ್ಕಾಗಿ ೧೯೯೭-೯೮ನೇ ಸಾಲಿಗೆ ಅತ್ಯುತ್ತಮ ಪೋಷಕ ನಟ ರಾಜ್ಯ ಸರ್ಕಾರದ ಪ್ರಶಸ್ತಿ ದೊರೆತಿದೆ. ಶಿವರಾಂ ಕನ್ನಡ ಚಲನಚಿತ್ರ ಕಲಾವಿದರ ಸಂಘದ ಸಂಸ್ಥಾಪಕ ಕಾರ್ಯದರ್ಶಿಯಾಗಿ ಅನೇಕ ವರ್ಷಗಳ ಕಾಲ ದುಡಿದಿದ್ದಾರೆ. ಅಲ್ಲದೆ ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘದಲ್ಲಿಯೂ ದುಡಿದಿದ್ದಾರೆ. ಕನ್ನಡ ಚಿತ್ರರಂಗದಲ್ಲಿ ಎಲ್ಲರಿಗೂ ಪ್ರಿಯರಾದ ಇವರು ಉದ್ಯಮಕ್ಕೆ 'ಶಿವರಾಮಣ್ಣ'. ಅಧ್ಯಯನಶೀಲರಾದ ಶಿವರಾಂ ಅವರು ತಮ್ಮ ನಿವಾಸದಲ್ಲಿ ಹಲವಾರು ಬಗೆಯ ಪುಸ್ತಕಗಳ ಬೃಹತ್ ಗ್ರಂಥಾಲಯವನ್ನೇ ಹೊಂದಿದ್ದಾರೆ. ಕಿರುತೆರೆ ಧಾರಾವಾಹಿಗಳಲ್ಲೂ ಪ್ರಮುಖವಾಗಿ ನಟಿಸುತ್ತಿದ್ದಾರೆ.

## ಶಿವರಾಂ ಕೋಡಳ್ಳಿ

ಕೆಲವು ಕಾಲ ಕನ್ನಡ ಚಿತ್ರರಂಗದಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಮೂರು ಪ್ರಶಸ್ತಿ ವಿಜೇತ ಚಿತ್ರಗಳ ಕಲಾತ್ಮಕ ಯಶಸ್ಸಿನಲ್ಲಿ ಭಾಗವಹಿಸಿದರು. ಚಿತ್ರರಂಗದಿಂದಲೇ ನಿರ್ಗಮಿಸಿದ ಕೋಡಳ್ಳಿ ಶಿವರಾಂ ಆದರ್ಶವಾದಿಯಾಗಿದ್ದವರು. ೧೯೮೮-೮೯ನೇ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರವೆಂದು ರಾಜ್ಯ ಸರ್ಕಾರದಿಂದ ಪ್ರಶಸ್ತಿ ಪಡೆದ 'ಬೆಳ್ಳಿ ಬೆಳಕು' ಚಿತ್ರದ ನಿರ್ಮಾಪಕ-ನಿರ್ದೇಶಕರು ಇವರು. ಹಾಲು ಸಹಕಾರಿ ಸಂಘದ ಕಥಾ ಕೇಂದ್ರದ ಮೂಲಕ ಅವರು ಹಳ್ಳಿಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂಕೀರ್ಣತೆಗಳನ್ನು ವಿಶ್ಲೇಷಿಸಿದರು. ಅದೇ ಚಿತ್ರಕ್ಕೆ ಅತ್ಯುತ್ತಮ ಸಂಭಾಷಣಾ ಕರ್ತೃ ಪ್ರಶಸ್ತಿಯನ್ನು ಪಡೆದುಕೊಂಡರು. ರಾಜ್ಯ ಪ್ರಶಸ್ತಿ ವಿಜೇತ 'ಅನ್ವೇಷಣೆ'ಯಲ್ಲಿ ಪಾತ್ರವಹಿಸಿದ ಶಿವರಾಂ



ಮತ್ತೊಂದು ಪ್ರಶಸ್ತಿ ವಿಜೇತ ಚಿತ್ರ, ಖ್ಯಾತ ನಿರ್ದೇಶಕ ಟಿ.ಎಸ್.ನಾಗಾಭರಣರವರ ಪ್ರಥಮ ಚಿತ್ರ 'ಗ್ರಹಣ'ದ ಚಿತ್ರಕಥೆಯನ್ನು ಬರೆಯುವುದರೊಂದಿಗೆ ಅವರ ಕಲಾ ನಿರ್ದೇಶನ, ನಿರ್ಮಾಣದಲ್ಲೂ ಭಾಗಿ. 'ಗ್ರಹಣ' ರಾಷ್ಟ್ರ ಮತ್ತು ರಾಜ್ಯ ಪ್ರಶಸ್ತಿಗಳೆರಡನ್ನೂ ಗಳಿಸಿಕೊಂಡಿತು.

## ಶಿವರಾಂ ಪೇಕೇಟಿ



'ಚಕ್ರತೀರ್ಥ' (೧೯೬೭) ಚಿತ್ರದ ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಮೂಲತಃ ತೆಲುಗಿನವರು. ಪತ್ರಕರ್ತರಾಗಿ ಇವರು ತಮ್ಮ ವೃತ್ತಿಯನ್ನು ಆರಂಭಿಸಿದರು. ಕೆಲಕಾಲ ಚಿತ್ರಗಳ ಪ್ರಚಾರಕರ್ತರಾಗಿದ್ದರು. ಹಲವು ಚಿತ್ರಗಳಿಗೆ ನಿರ್ಮಾಣ ವ್ಯವಸ್ಥಾಪಕರೂ ಆಗಿದ್ದರು. ಎಚ್.ಎಂ.ವಿ.ಸಂಸ್ಥೆಯಲ್ಲಿಯೂ ಕೆಲಸ ಮಾಡಿದರು. ಕೆಲವು ಚಿತ್ರಗಳಲ್ಲಿ ಅಭಿನಯಿಸಿದರು. ನಿರ್ಮಾಪಕ ಪಾಲ್ ಅವರ ಸ್ನೇಹವೇ ಪೇಕೇಟಿ ಕನ್ನಡ ಚಿತ್ರರಂಗಕ್ಕೆ ಬರಲು ಕಾರಣವಾಯಿತು. 'ಕುಲಗೌರವ', 'ಪುನರ್ಜನ್ಮ', 'ಮಾತು ತಪ್ಪದ ಮಗ' ಮುಂತಾದ ಚಿತ್ರಗಳನ್ನು ನಿರ್ದೇಶಿಸಿದರು. ರಾಜಕೀಯ ಕ್ಷೇತ್ರದಲ್ಲಿಯೂ ಅವರಿಗೆ ಆಸಕ್ತಿ ಇತ್ತು.

## ಶಿವರಾಂ ಮಾರುತಿ

ಕಲಾತ್ಮಕ ಚಿತ್ರಗಳನ್ನು ನಿರ್ಮಿಸಬೇಕೆಂದೇ 'ಮೆಸರ್ಸ್ ಕಲಾಕ್ಷೇತ್ರ' ಎಂಬ ಚಿತ್ರಸಂಸ್ಥೆಯನ್ನು ರೂಪಿಸಿದ ಮಾರುತಿ ಶಿವರಾಂ ಮೈಸೂರಿನವರು. ರೇಡಿಯೋ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾ ಪದವಿ ಪಡೆದ ಇವರು



'ಮಹಾತ್ಯಾಗ' ಚಿತ್ರ ನಿರ್ದೇಶಿಸುವುದರ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಪರಸಂಗದ ಗಂಡೆತಿಮ್ಮ', 'ಅನುರಕ್ತೆ' ಮೊದಲಾದ ಸದಭಿರುಚಿಯ ಚಿತ್ರಗಳನ್ನು ನಿರ್ದೇಶಿಸಿದರು. ರಾಣಿ ಪದ್ಮಿನಿ, ಗೌತಮ್ ಮುಂತಾದ ಯುವ ಕಲಾವಿದರನ್ನು ತೆರೆಗೆ ಪರಿಚಯಿಸಿದರು.

## ಶಿವರಾಮು.ಕೆ

ಐ.ಎ.ಎಸ್. ಪರೀಕ್ಷೆಯನ್ನು ಕನ್ನಡದಲ್ಲಿಯೇ ಬರೆದು ತೇರ್ಗಡೆ ಹೊಂದಿ, ಐ.ಎ.ಎಸ್



ಅಧಿಕಾರಿಯಾಗಿ ಸರ್ಕಾರಿ ಸೇವೆಯೊಂದಿಗೆ ಕಲಾಸೇವೆಗೆ ಬಂದವರು. ೧೯೯೩ರಲ್ಲಿ ಅವರೇ ನಿರ್ಮಿಸಿ ನಾಗತಿಹಳ್ಳಿ ಚಂದ್ರಶೇಖರ್ ನಿರ್ದೇಶಿಸಿದ 'ಬಾ ನಲ್ಲೆ ಮಧುಚಂದ್ರಕೆ' ಚಿತ್ರದಿಂದ ನಾಯಕ ನಟರಾಗಿ ಬೆಳ್ಳಿತೆರೆ ಪ್ರವೇಶ. ಮುಂದೆ ನಾಯಕರಾಗಿ 'ವಸಂತ ಕಾವ್ಯ', 'ಮೂಡಲ ಸೀಮೆಯಲಿ', 'ಪ್ರತಿಭಟನೆ', 'ಯಾರಿಗೆ ಬೇಡ ದುಡ್ಡು' ಮೊದಲಾದ ಚಿತ್ರಗಳಲ್ಲಿ ನಾಯಕರಾಗಿ ಅಭಿನಯಿಸಿದರು. ಜಿಲ್ಲಾಧಿಕಾರಿಯ ಜವಾಬ್ದಾರಿಯುತ ಉದ್ಯೋಗ ಹಾಗೂ ಚಲನಚಿತ್ರಗಳಲ್ಲಿನ ಅಭಿನಯ ಎರಡನ್ನೂ ತೂಗಿಸಿಕೊಂಡು ಹೋಗುತ್ತಿದ್ದಾರೆ.

## ಶಿವರಾಜಕುಮಾರ್

ಕನ್ನಡದ ಹಿರಿಯ ನಟ ರಾಜಕುಮಾರ್



ಅವರ ಹಿರಿಯ ಪುತ್ರ. ಮದರಾಸಿನಲ್ಲಿ ೧೯೬೨ರಲ್ಲಿ ಜನನ. ಬಿ.ಎಸ್‌ಸಿ., ಪದವೀಧರ. ಮೂಲ ಹೆಸರು ಶಿವಣ್ಣ. ಚಿತ್ರರಂಗದಲ್ಲಿ ಶಿವರಾಜಕುಮಾರ್ ಎಂಬ ಹೆಸರಿನಿಂದ ಪರಿಚಯವಾದರು. ೧೯೮೬ರಲ್ಲಿ ತೆರೆಕಂಡು ಪ್ರಚಂಡ ಜನಪ್ರಿಯತೆ ಗಳಿಸಿದ ತಮ್ಮ ತಾಯಿ ಪಾರ್ವತಮ್ಮ ರಾಜಕುಮಾರ್‌ರವರೇ ನಿರ್ಮಿಸಿದ 'ಆನಂದ್' ಚಿತ್ರದಲ್ಲಿ ಪ್ರಥಮ ಬಾರಿಗೆ ಅಭಿನಯಿಸಿದರು. ನಂತರ ಅಭಿನಯಿಸಿದ 'ರಥಸಪ್ತಮಿ' ಮತ್ತು 'ಮನ ಮೆಚ್ಚಿದ ಹುಡುಗಿ' ಚಿತ್ರಗಳೂ ಅದೇ ರೀತಿ ಕ್ರಮವಾಗಿ ಜಯಭೇರಿ ಬಾರಿಸಿದಾಗ 'ಹ್ಯಾಟ್ರಿಕ್ ಹೀರೋ' ಎಂದೇ ಪ್ರಸಿದ್ಧಿ ಪಡೆದ ಶಿವರಾಜ್‌ಕುಮಾರ್ ಕನ್ನಡ ಚಿತ್ರರಂಗದ ಈಚಿನ ದಶಕಗಳ ಪ್ರಥಮ ಶ್ರೇಣಿಯ ನಟರಲ್ಲೊಬ್ಬರು. ಈ ಮೂರು ಚಿತ್ರಗಳೇ ಅಲ್ಲದೆ ಶಿವರಾಜ್‌ಕುಮಾರ್ ಇನ್ನೂ ಕೆಲವು ಚಿತ್ರಗಳಲ್ಲಿ ಶ್ರೇಷ್ಠ ಅಭಿನಯ ನೀಡಿದ್ದಾರೆ. ಬಗೆಬಗೆಯ ಪಾತ್ರಗಳನ್ನು ನಿರ್ವಹಿಸಿ

ಪ್ರತಿಭೆಯನ್ನು ಪ್ರದರ್ಶಿಸಿದ್ದಾರೆ. ಉಪೇಂದ್ರ ನಿರ್ದೇಶನದ 'ಓಂ', ಟಿ.ಎಸ್.ನಾಗಾಭರಣ ನಿರ್ದೇಶಿಸಿದ 'ಜನುಮದ ಜೋಡಿ', ರಾಮು ನಿರ್ಮಾಣದ 'ಎ.ಕೆ.47', ದಿನೇಶ್‌ಬಾಬು ನಿರ್ದೇಶಿಸಿದ 'ಇನ್‌ಸ್ಪೆಕ್ಟರ್ ವಿಕ್ರಂ', ಸುನಿಲ್ ಕುಮಾರ್ ದೇಸಾಯಿ ನಿರ್ದೇಶಿಸಿದ 'ನಮ್ಮೂರ ಮಂದಾರ ಹೂವೆ', ಶಿವಮಣಿ ನಿರ್ದೇಶನದ 'ಶಿವಸೈನ್ಯ' ಮತ್ತು 'ದೊರೆ' ಅವುಗಳಲ್ಲಿ ಮಾತ್ರ. ಭಾವಪೂರ್ಣ ಪಾತ್ರಗಳಾಗಲಿ, ಹಾಸ್ಯ ಪ್ರಧಾನ ಪಾತ್ರಗಳಾಗಲಿ ಶಿವರಾಜ್‌ರಿಗೆ ಅಚ್ಚುಮೆಚ್ಚು. 'ಆಸೆಗೊಬ್ಬ ಮೀಸೆಗೊಬ್ಬ' ಚಿತ್ರದಲ್ಲಿ ಅವರು ನೀಡಿದ ಹಾಸ್ಯಾಭಿನಯ ಜನ ಮೆಚ್ಚುವಂತಿತ್ತು. 'ಓಂ' ಚಿತ್ರದ ಪಾತ್ರಕ್ಕಾಗಿ ಅವರಿಗೆ ರಾಜ್ಯ ಸರ್ಕಾರದಿಂದ ೧೯೯೫-೯೬ನೇ ಸಾಲಿನ ಅತ್ಯುತ್ತಮ ನಟ ಪ್ರಶಸ್ತಿ ಲಭ್ಯವಾಯಿತು. ಸುಮಾರು ೬೦ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಮದರಾಸಿನ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಅಭ್ಯಾಸಮಾಡಿ, ನಾಟ್ಯಕಲೆಯನ್ನೂ ಕಲಿತಿರುವ ಶಿವರಾಜ್‌ಕುಮಾರ್ ಸ್ನೇಹಜೀವಿ. ಇವರ ಮಗಳು ನಿವೇದಿತಾ 'ಅಂಡಮಾನ್' ಚಿತ್ರದಲ್ಲಿ ಬಾಲನಟಿಯಾಗಿ ತಂದೆಯ ಜೊತೆ ನಟಿಸಿದ್ದರು.

### ಶಿವರುದ್ರಯ್ಯ.ಕೆ



ಕ್ರೀಡೆ, ನಾಟಕ, ದೂರದರ್ಶನ, ಸಿರ ಛಾಯಾಗ್ರಹಣ, ಸಿನಿಮಾ ನಿರ್ದೇಶನ ಹೀಗೆ ಹಲವಾರು ಸೃಜನಾತ್ಮಕ ಕ್ಷೇತ್ರಗಳಲ್ಲಿ ತೊಡಗಿಕೊಂಡವರು ಕೆ.ಶಿವರುದ್ರಯ್ಯ. ಚನ್ನಪಟ್ಟಣದಲ್ಲಿ ಜನನ. ಬಿ.ಎ. ಪದವೀಧರರು. ರಂಗ ಚಟುವಟಿಕೆಗಳಲ್ಲಿ ಆಸಕ್ತರಾದ ಇವರು ಭಾರತೀಯ ಆಹಾರ ನಿಗಮದಲ್ಲಿ ೧೦ ವರ್ಷಗಳ ಸೇವೆ ಸಲ್ಲಿಸಿ, ಎರಡು ದಶಕಗಳಿಂದ ವಾರ್ತಾ ಇಲಾಖೆಯಲ್ಲಿ ಕಲಾವಿದರಾಗಿ ಕಾರ್ಯ ನಿರ್ವಹಿಸಿದ್ದಾರೆ. ಎರಡು ದಶಕಗಳಿಗೂ ಮೀರಿ ನಟರಾಗಿ, ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿರುವ ಇವರು ನಿರ್ದೇಶಿಸಿದ 'ಚೈತ್ರದ ಚಿಗುರು' ೧೯೯೧-೯೨ನೇ ಸಾಲಿನ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದಿದೆ.

### ಶಿವಶಂಕರ್ .ಸಿ.ವಿ

ಬಾಲನಟನಾಗಿ ರಂಗಪ್ರವೇಶ. ನಂತರ ಮದರಾಸಿಗೆ ತೆರಳಿ ಚಿತ್ರರಂಗದಲ್ಲಿ ಅಭಿನಯಕ್ಕೆ ಅವಕಾಶ ಪಡೆದುಕೊಂಡು ಹಲವಾರು ಕನ್ನಡ ಚಿತ್ರಗಳಲ್ಲಿ ಪಾತ್ರವಹಿಸಿದ ಅನುಭವ. ಜೊತೆಗೆ ಸಾಹಿತ್ಯ ರಚನೆ ಕೂಡ. 'ಮನೆ ಕಟ್ಟಿ ನೋಡು' ಚಿತ್ರದ ಮೂಲಕ



ಇವರು ನಿರ್ಮಾಪಕ-ನಿರ್ದೇಶಕರಾದರು. ಈ ಚಿತ್ರದಲ್ಲಿ ಬೆಂಗಳೂರಿನ ಬಗ್ಗೆ ಇವರು ಬರೆದಿರುವ 'ಬೆಳೆದಿದೆ ನೋಡಾ ಬೆಂಗಳೂರು ನಗರಾ...' ಹಾಡು ಈಗಲೂ ಪ್ರಸಿದ್ಧಿಯಾಗಿದೆ. ಶಿವಶಂಕರ್ ೧೦ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪ್ರಮುಖ ಚಿತ್ರಗಳು 'ಪದವೀಧರ' (೧೯೬೬) 'ಹೊಯ್ಸಳ' 'ನಮ್ಮ ಊರು' (೧೯೬೮), 'ಮನೆ ಕಟ್ಟಿ ನೋಡು'. ಕನ್ನಡ ನಾಡಿನ ಸುಂದರ ತಾಣಗಳು, ನಾಡು-ನುಡಿಗಳ ಬಗ್ಗೆ ಅವರಿಗೆ ಅಪಾರ ಕಾಳಜಿ. ಅಬ್ಬಾಯಿನಾಯ್ಡು ಅವರ ಚಿತ್ರಗಳಿಗೆ ಅಂಥ ನಾಡಪ್ರೇಮ ಗೀತೆಗಳನ್ನು ಶಿವಶಂಕರ್ ಬರೆದರು. ೧೯೯೪ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪಡೆದರು. ಹಲವಾರು ಕನ್ನಡ ಸಂಘ ಸಂಸ್ಥೆಗಳು ಅವರ ಕನ್ನಡ ಅಭಿಮಾನವನ್ನು ಗುರುತಿಸಿ ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ. ನಟ ವಿದ್ಯಾಸಾಗರ್ ಅವರನ್ನು 'ನಮ್ಮ ಊರು' ಚಿತ್ರದ ನಾಯಕನಟನನ್ನಾಗಿಸಿ ರಾಜೇಶ್ ಎಂದು ಮರುನಾಮಕರಣ ಮಾಡಿದವರು. ಇವರ ನಿರ್ದೇಶನದ ಕೆಲವು ಚಿತ್ರಗಳು ತೆರೆಗೆ ಬರಲಿಲ್ಲ. ಚಿತ್ರೋದ್ಯಮದ ಹಿರಿಯರ ಬಳಿ ಕೆಲಸ ಮಾಡಿದ್ದಾರೆ. ಚಿತ್ರಗಳಲ್ಲೂ ಅಭಿನಯಿಸಿದ್ದಾರೆ.

### ಶೆಟ್ಟಿ ಪಿ.ವಿ.ಎಲ್.



ಕುಲಕಸುಬು ರೇಷ್ಮೆ ವ್ಯಾಪಾರವಾದರೂ ಶೆಟ್ಟರು ಮುದ್ರಣಾಲಯದ ಮಾಲೀಕರು. ವೈಶ್ಯಬ್ಯಾಂಕಿನಲ್ಲಿ ಉದ್ಯೋಗ ಮಾಡಿದರು. ಸುಪ್ರಸಿದ್ಧ ಸಂಸೆ ಶಾಂತಾ ಪಿಕ್ಚರ್ಸ್ ಪಾಲುದಾರರಾಗಿದ್ದ ಕೆ.ಎಲ್.ಶಾಮಣ್ಣ ಮತ್ತು ಕೆ.ವೆಂಕಟಸುಬ್ಬಯ್ಯ ಶೆಟ್ಟರು ವೈಶ್ಯ ಬ್ಯಾಂಕಿನಲ್ಲಿ ನಿರ್ದೇಶಕ ಮಂಡಳಿಯಲ್ಲಿದ್ದರು. ಅವರ ಪ್ರೇರಣೆಯಿಂದಾಗಿ ೧೯೪೭ರಲ್ಲಿ ಮಹಾತ್ಮ ಪಿಕ್ಚರ್ಸ್‌ನ 'ಕೃಷ್ಣಲೀಲಾ' ಚಿತ್ರದ ರೆಪ್ರಸೆಂಟೇಟೀವ್ ಕೆಲಸ ಕೈಗೊಂಡರು. ಆ ದಿನಗಳಲ್ಲಿ ಸಂಚಾರಿ ಚಿತ್ರಮಂದಿರಗಳಲ್ಲಿ ಎರಡೇ ಪ್ರದರ್ಶನವಿರುತ್ತಿತ್ತು. ಚಿತ್ರ ಪ್ರತಿನಿಧಿಯಾಗಿ ಹೋದಲ್ಲೆಲ್ಲ ಮಾಲೀಕರು, ಮ್ಯಾನೇಜರ್, ಆಪರೇಟರ್‌ಗಳು ತುಂಬ ವಿಶ್ವಾಸದಿಂದ ನೋಡಿಕೊಂಡರು. ಆ ಅನುಭವದ ಫಲವಾಗಿ ೧೯೫೦-೫೧ರಲ್ಲಿ ಬಿ.ಎನ್.ಗುಪ್ತ ಅವರ ಹೆಸರಾಂತ ಸಂಸ್ಥೆ ವಿಜಯ ಟಾಕಿ ಡಿಸ್ಟ್ರಿಬ್ಯೂಟರ್ಸ್‌ನಲ್ಲಿ ಬುಕಿಂಗ್ ವಿಭಾಗದಲ್ಲಿ ಮುಖ್ಯಸ್ಥರಾಗಿ ಕೆಲಕಾಲ ಶ್ರಮಿಸಿದರು. ಈ ಹಂತದಲ್ಲಿ ತನಗೆ ಮಾರ್ಗದರ್ಶನ ಮಾಡಿದ ಕೆ.ವಿ.ಗುಪ್ತ, ಬಿ.ಎನ್.ನಾಗರಾಜ್ ಅವರಿಂದಾಗಿ ವೃತ್ತಿಯಲ್ಲಿ ಪ್ರವರ್ಧ ಮಾನಕ್ಕೆ ಬಂದುದನ್ನು ನೆನೆಯುತ್ತಾರೆ. ಶ್ರೀಕೃಪಾ ಪಿಕ್ಚರ್ಸ್ ಸಂಸ್ಥೆಯಲ್ಲಿ ಮ್ಯಾನೇಜರ್ ಆಗಿ ಕೆಲಸ ಮಾಡಿದಾಗಲೇ ಚಿತ್ರಗಳ ಪೂರ್ವಭಾವಿ (ಪ್ರೀವ್ಯೂ) ಪ್ರದರ್ಶನದ ಪದ್ಧತಿ ಪ್ರಾರಂಭಿಸಿದರು. ೧೯೬೮ರಲ್ಲಿ 'ರವಿ ಎಂಟರ್ ಪ್ರೈಸಸ್' ಸಂಸ್ಥೆಯಲ್ಲಿ ಕೆಲಸ ಮಾಡುವಾಗ ಭರಿಸಲಾರದ ನಷ್ಟ ಅನುಭವಿಸಿದರು. ಆ ಹೊತ್ತಿನಲ್ಲಿ ಪಂಢರಿ ಬಾಯಿಯವರು 'ಅನುರಾಧ' ಚಿತ್ರವನ್ನು ವಿತರಣೆಗೆ ಕೊಟ್ಟರು. ಆ ಚಿತ್ರಕ್ಕೆ ಶೇಕಡಾ ನೂರು ತೆರಿಗೆ ವಿನಾಯಿತಿ ಇದ್ದುದರಿಂದ ಮತ್ತೆ ಚೈತನ್ಯ ತುಂಬಿ ಕೊಂಡರು. ಹೆಚ್.ಎನ್.ರೆಡ್ಡಿ ಅವರ 'ಕಾವೇರಿ' ಚಿತ್ರವನ್ನು ವಿತರಿಸಿ ಪ್ರೇಕ್ಷಕರಿಗೆ ಅರಿಸಿನ ಕುಂಕುಮ ಕೊಡುವ ಮೂಲಕ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳವರಿಗೆ ಉಚಿತ ಪ್ರವೇಶಾವಕಾಶ ಒದಗಿಸುವ ಮೂಲಕ ಹೊಸ ರೀತಿಯಲ್ಲಿ ಜನಾಕರ್ಷಣೆ ಉಂಟು ಮಾಡಿದರು. ಹಿರಿಯ ವಿತರಕರಾದ ಶೆಟ್ಟರು ಉದ್ಯಮದಲ್ಲಿ ಬಹು ಗೌರವಾನ್ವಿತರು.

### ಶ್ರೀಕಾಂತ್.ಎಸ್.ವಿ

ಕನ್ನಡ ಚಿತ್ರರಂಗದ ಪ್ರತಿಭಾಶಾಲಿ ಛಾಯಾಗ್ರಾಹಕ. ಹುಟ್ಟೂರು ಮದ್ದೂರು. ತಂದೆ ಎಸ್.ವೆಂಕಟಸುಬ್ಬ ಅಯ್ಯರ್. ಬೆಂಗಳೂರಿನ ಸೈಂಟ್ ಜೋಸೆಫ್ ಕಾಲೇಜಿನಿಂದ ಬಿ.ಎಸ್‌ಸಿ., ಪದವಿ ಪಡೆದು ೧೯೫೬ರಲ್ಲಿ ಗೋಲ್ಡನ್ ಸ್ಟುಡಿಯೋ ಪ್ರವೇಶಿಸಿದರು. ಸ್ವತಂತ್ರ ಛಾಯಾಗ್ರಾಹಕರಾಗಿ 'ಜೀವನ ತರಂಗ' ಚಿತ್ರದಿಂದ ಪ್ರವೇಶ. 'ಮಾರ್ಗದರ್ಶಿ', 'ಗೆಜ್ಜೆಪೂಜೆ', 'ಉಪಾಸನೆ' ಮೊದಲಾದ ಖ್ಯಾತ ಚಿತ್ರಗಳಲ್ಲಿ ಛಾಯಾಗ್ರಾಹಕರಾಗಿ ದುಡಿದ ಇವರಿಗೆ ೧೯೬೮-೬೯ರಲ್ಲಿ 'ಮಾರ್ಗದರ್ಶಿ', ೧೯೬೯-೭೦ರಲ್ಲಿ 'ಗೆಜ್ಜೆಪೂಜೆ' ಹಾಗೂ ೧೯೭೪-೭೫ರಲ್ಲಿ 'ಉಪಾಸನೆ' ಚಿತ್ರಗಳ ಛಾಯಾಗ್ರಹಣಕ್ಕಾಗಿ ಮೂರು ಬಾರಿ ರಾಜ್ಯ ಸರ್ಕಾರದ ಪ್ರಶಸ್ತಿ ಲಭ್ಯವಾಗಿದೆ. ಟ್ರಿಕ್ ಫೊಟೋಗ್ರಫಿಯಲ್ಲಿ ಶ್ರೀಕಾಂತ್ ನಿಪುಣರು.



### ಶ್ರೀಕಾಂತ್ ನಹತಾ

ಉತ್ತರದವರಾದ ಸುಂದರ್‌ಲಾಲ್ ನಹತಾ ಶ್ರೀಕಾಂತ್ ಅಂಡ್ ಶ್ರೀಕಾಂತ್ ಎಂಟರ್‌ಪ್ರೈಸಸ್ ಚಿತ್ರ ನಿರ್ಮಾಣ



ಸಂಸ್ಥೆಯನ್ನು ಸ್ಥಾಪಿಸಿದರು. ಇದೇ ಹೆಸರಿನ ಚಿತ್ರ ವಿತರಣಾ ಸಂಸ್ಥೆಯನ್ನೂ ಆರಂಭಿಸಿದರು. ಇವರ ಪುತ್ರರಾದ ಶ್ರೀಕಾಂತ್ ನಹತಾ ಹೆಸರಿನಲ್ಲಿ ಸ್ಥಾಪಿಸಿದ ಈ ಸಂಸ್ಥೆಯಿಂದ ನಿರ್ಮಾಣಗೊಂಡ 'ಪ್ರೇಮಮಯಿ', 'ಮನಸ್ಸಿದ್ದರೆ ಮಾರ್ಗ', 'ಹಣ್ಣೆಲೆ ಚಿಗುರಿದಾಗ', 'ಮಾರ್ಗದರ್ಶಿ', 'ಕರುಳಿನ ಕರೆ', 'ನಮ್ಮ ಸಂಸಾರ', 'ಎಡಕಲ್ಲು ಗುಡ್ಡದ ಮೇಲೆ', 'ಬಹದ್ದೂರ್ ಗಂಡು' ಮೊದಲಾದವು ಯಶಸ್ವಿ ಹಾಗೂ ಜನಪ್ರಿಯ ಚಿತ್ರಗಳು. ಶ್ರೀಕಾಂತ್ ನಹತಾ ತಾವೇ ನಿರ್ಮಿಸಿದ, ನಿರ್ದೇಶಿಸಿದ ಚಿತ್ರಗಳು 'ಏಕಲವ್ಯ', 'ಪ್ರೇಮಗೀತೆ', 'ಆತ್ಮಬಂಧನ', 'ಗುರು' ಮೊದಲಾದವು. ತಾರೆ ಜಯಪ್ರದಾ ಇವರನ್ನು ವಿವಾಹವಾಗಿದ್ದಾರೆ.

### ಶ್ರೀಧರ್

ಇಂಜಿನಿಯರಿಂಗ್ ಪದವೀಧರ. ನೃತ್ಯದಲ್ಲಿ



ಅಪಾರ ಪರಿಶ್ರಮ ಹೊಂದಿದವರು. ಚಿತ್ರರಂಗಕ್ಕೆ ಅವರು ಪ್ರವೇಶಿಸಿದ್ದು ಕೇವಲ ಆಕಸ್ಮಿಕವೆನ್ನಬಹುದು. ಪುಟ್ಟಣ್ಣ ಕಣಗಾಲ್ ಅವರ 'ಅಮೃತ ಘಳಿಗೆ' ಚಿತ್ರದಲ್ಲಿ ಆದರ್ಶವಾದಿ ಯುವಕನ ಪಾತ್ರದಿಂದ ಚಿತ್ರರಂಗ ಪ್ರವೇಶಿಸಿದರು. ಅವಕಾಶ ದೊರೆತಾಗಲೆಲ್ಲ ಶ್ರೇಷ್ಠ ಅಭಿನಯ ನೀಡಿದ್ದಾರೆ. ಕೆ.ಬಾಲಚಂದರ್ ಅವರ ಹಲವು ತಮಿಳು ಚಿತ್ರಗಳಲ್ಲಿ ಅಭಿನಯಿಸಿದರು. 'ಸುಂದರ ಸ್ವಪ್ನಗಳು', 'ಮೌನಗೀತೆ', 'ಮಾನಸ ವೀಣೆ', 'ಪ್ರೀತಿವಾತ್ಸಲ್ಯ', 'ತವರು ಮನೆ ಉಡುಗೊರೆ', 'ಮಾಂಗಲ್ಯ' ಮುಂತಾದ ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದ ಶ್ರೀಧರ್ ಅವರ ವೃತ್ತಿ ಜೀವನದಲ್ಲಿ ಮೈಲಿಗಲ್ಲುಗಳು ಎನ್ನಬಹುದಾದ ಚಿತ್ರಗಳು 'ಆಸ್ಫೋಟ', 'ಬಣ್ಣದ ವೇಷ', 'ಸಂತ ಶಿಶುನಾಳ ಷರೀಫ' ಹಾಗೂ ಸಂಪೂರ್ಣ ಕಮರ್ಷಿಯಲ್

ಎನ್ನಬಹುದಾದ 'ಬೊಂಬಾಟ್ ಹೆಂಡ್ತಿ'. ಇವರ ಪ್ರತಿಭೆಯನ್ನು ಗಮನಿಸಿದ ಮಲೆಯಾಳ ಚಿತ್ರರಂಗ ಉತ್ತಮ ಅವಕಾಶಗಳನ್ನು ನೀಡಿತು. ಗಿರೀಶ್ ಕಾಸರವಳ್ಳಿ ನಿರ್ದೇಶನದ 'ಬಣ್ಣದ ವೇಷ' ಚಿತ್ರದ ಯಕ್ಷಗಾನ ಕಲಾವಿದನ ಬದುಕಿನ ವಿವರಗಳಿಗೆ ನೃತ್ಯ, ಸಹಜಾಭಿನಯದ ವಿಶೇಷ ತುಂಬಿದರು. ನಾಗಾಭರಣ ನಿರ್ದೇಶನದ 'ಸಂತ ಶಿಶು ನಾಳ ಷರೀಫ' ಚಿತ್ರದಲ್ಲಿನ ಶ್ರೇಷ್ಠ ಅಭಿನಯಕ್ಕಾಗಿ ಶ್ರೀಧರ್ ೧೯೮೯-೯೦ನೇ ಸಾಲಿನ ಶ್ರೇಷ್ಠ ನಟ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ. ಶ್ರೀಧರ್ ಭರತನಾಟ್ಯ ಕಲಾವಿದರಾದ್ದರಿಂದ ಪತ್ನಿ ಅನುರಾಧರೊಂದಿಗೆ ಅನೇಕ ಹೊಸ ನೃತ್ಯ ಪ್ರಯೋಗಗಳನ್ನು ಮಾಡಿದ್ದಾರೆ. ಇವರು 'ಚಿನ್ನಾರಿ ಮುತ್ತ' ಚಿತ್ರದ 'ಮಾರಿಷಾ...' ಪ್ರಕೃತಿ ಗೀತೆಗೆ ನೀಡಿದ ಕೋರಿಯಾಗ್ರಫಿ ಅಪರೂಪವೆನಿಸುವಂತಿತ್ತು. ಶ್ರೀಧರ್ ವಸ್ತ್ರ, ಪಾತ್ರ, ತಾಂತ್ರಿಕ ವಿಚಾರಗಳು ಎಲ್ಲದರ ಬಗ್ಗೆ ವಿಶ್ಲೇಷಣಾತ್ಮಕವಾಗಿ ಮಾತನಾಡಬಲ್ಲ ಸೂಕ್ಷ್ಮಜ್ಞ. ತೆಲುಗು ಹಾಗೂ ಕನ್ನಡ ಕಿರುತೆರೆ ಧಾರಾವಾಹಿಗಳಲ್ಲೂ ನಟಿಸುತ್ತಿದ್ದು ಜನಪ್ರಿಯರಾಗಿದ್ದಾರೆ.

### ಶ್ರೀನಾಥ್

ತಂದೆ-ತಾಯಿಗಳು ಇಟ್ಟ ಹೆಸರು ನಾರಾಯಣಸ್ವಾಮಿ. ಚಿಕ್ಕಂದಿನಿಂದಲೂ



ಹವ್ಯಾಸಿ ರಂಗಭೂಮಿಯ ನಂಟು, ಅಭಿನಯದಲ್ಲಿ ವಿಶೇಷ ಆಸಕ್ತಿ. ಜೊತೆಯಲ್ಲಿಯೇ ಬೆಂಗಳೂರಿನ ಆಕ್ಯುಪೇಷನಲ್ ಇನ್‌ಸ್ಟಿಟ್ಯೂಟ್‌ನಲ್ಲಿ ಛಾಯಾಗ್ರಹಣ ವಿಭಾಗದಲ್ಲಿ ಶಿಕ್ಷಣ. ಇದು ನಟ ಶ್ರೀನಾಥ್‌ರವರ ಹಿನ್ನೆಲೆ. ಅವರು ಚಿತ್ರರಂಗ ಪ್ರವೇಶಿಸಿದ್ದು ಬಾಬಾ ಮೂವೀಸ್‌ರವರ 'ಲಗ್ನ ಪತ್ರಿಕೆ' ಚಿತ್ರದಿಂದ. ಆ ಚಿತ್ರದ ನಿರ್ದೇಶಕರು ರವೀ. ಪೂರ್ಣ ಪ್ರಮಾಣದ ನಾಯಕ ನಟರಾದದ್ದು ಎಸ್.ಕೆ.ಎ.ಚಾರಿ ನಿರ್ದೇಶನದ 'ಮಧುರ ಮಿಲನ'ದಲ್ಲಿ (೧೯೬೯). ಆ ಚಿತ್ರದಿಂದ ನಾರಾಯಣಸ್ವಾಮಿ ಶ್ರೀನಾಥ್ ಎಂಬ ಹೆಸರು ಪಡೆದರು. ಅವರ ಎರಡನೆಯ ಚಿತ್ರ ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ ಆಧಾರಿತ ಚಿತ್ರ 'ಅನಿರೀಕ್ಷಿತ'. ಈ ಚಿತ್ರದಲ್ಲಿ ಸತ್ವಯುತ ನಾಯಕನಾಗಿ ಗಮನ ಸೆಳೆದರು. ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿ 'ಪ್ರಣಯರಾಜ' ಎಂದು ಅಭಿಮಾನಿಗಳಿಂದ ಬಿರುದು ಪಡೆದರು. ಲವಲವಿಕೆಯ ನಟಿ ಮಂಜುಳಾರೊಂದಿಗೆ ಅನೇಕ ಚಿತ್ರಗಳಲ್ಲಿ ಅಭಿನಯಿಸಿ ಕನ್ನಡ ಚಿತ್ರರಂಗದ ಅತ್ಯಂತ ಜನಪ್ರಿಯ ತಾರಾಜೋಡಿಗಳಲ್ಲಿ ಒಂದೆನಿಸಿದರು. 'ಬೆಸುಗೆ', 'ಶುಭಮಂಗಳ', 'ಮಾನಸ ಸರೋವರ', 'ಯಾರಿವನು', 'ಗರುಡ ರೇಖೆ', 'ಶ್ರೀ ರಾಘವೇಂದ್ರ ವೈಭವ', 'ಬಂಗಾರದ ಮನುಷ್ಯ' ಶ್ರೀನಾಥ್ ಅಭಿನಯಿಸಿದ ಪ್ರಮುಖ ಚಿತ್ರಗಳು. ಹೊಸ ಪೀಳಿಗೆಯ ಆಗಮನವಾಗುತ್ತಿದಂತೆ ನಾಯಕನ ಪಾತ್ರದಿಂದ ದೂರವಾಗಿ, ವಯಸ್ಸಿಗೆ ಒಪ್ಪುವಂತಹ, ಆದರೆ ಗಂಭೀರವಾದ ಪಾತ್ರಗಳನ್ನು ಆಯ್ಕೆ ಮಾಡಿಕೊಂಡು ಪೋಷಕನಟರಾಗಿ, ಖಳನಟರಾಗಿ ನಟಿಸಿದ್ದಾರೆ. ಖಳ ಛಾಯೆ ಇದ್ದ 'ಯಾರಿವನು' ಪರೋಪಕಾರಿಯಾಗಿ ಪ್ರಾಣಸ್ನೇಹಿತನಾಗಿ 'ಶ್ರಾವಣಬಂತು', ಮನಕರಗಿಸುವ ತಂದೆಯಾಗಿ 'ಬಿಡ್ತಿ ಬಂಗಾರಮ್ಮ', 'ಗಂಡ ಮನೆ ಮಕ್ಕಳು'. ಹೀಗೆ ಇಮೇಜ್‌ಗೆ ಕಾಯದೆ ಪಾತ್ರಗಳನ್ನು ಆಯ್ಕೆ ಮಾಡಿ ಯಶಸ್ವಿಯಾದರು. ಬಹಳ ಹಿಂದೆಯೇ 'ಶಿಕಾರಿ' ಚಿತ್ರವನ್ನು ನಿರ್ಮಿಸಿದ್ದೂ ಉಂಟು. ನಂತರ ಸೋದರ ಸಿ.ಆರ್.ಸಿಂಹ, ಗೆಳೆಯ ಎಂ.ಎಸ್.ಕಾರಂತ್‌ರೊಂದಿಗೆ ಸೇರಿ 'ಬಾಳೊಂದು ಭಾವಗೀತೆ' ನಿರ್ಮಿಸಿದರು. ಪುಟ್ಟಣ್ಣ ಕಣಗಾಲ್ ನಿರುತ್ಸಾಹಿಯಾಗಿ ಕೈಚೆಲ್ಲಿ ಕೂತ ಒಂದು ಘಟ್ಟದಲ್ಲಿ ಶ್ರೀನಾಥ್ ಚಿತ್ರ ನಿರ್ಮಾಣದ ವ್ಯವಸ್ಥೆ ಮಾಡುವ ಮೂಲಕ ಪುಟ್ಟಣ್ಣ ಅವರನ್ನು ಮತ್ತೆ ಚೈತನ್ಯಶೀಲರನ್ನಾಗಿ ಮಾಡಿದರು. 'ಶ್ರೀ ರಾಘವೇಂದ್ರ ವೈಭವ' ಚಿತ್ರದಲ್ಲಿನ ಮನೋಜ್ಞ ಅಭಿನಯಕ್ಕಾಗಿ ೧೯೮೦-೮೧ನೇ ಸಾಲಿನ ಶ್ರೇಷ್ಠ ನಟ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದರು. 'ಮಾನಸ ಸರೋವರ'ದ ಮನೋವ್ಯೈಪ್ಯನೇ ನಂತರ ಮನೋರೋಗಿಯಾಗುವ ಪಾತ್ರಕ್ಕೆ ಅವರು ನೀಡಿದ ಸ್ಮರಣೀಯ ಅಭಿನಯ ಪ್ರಶಂಸೆಗೆ ಪಾತ್ರವಾಯಿತು. ಉದಯ ಟಿ.ವಿ ಕನ್ನಡ ವಾಹಿನಿಯ ಉಪಾಧ್ಯಕ್ಷರಾಗಿ ಕೆಲಸ ನಿರ್ವಹಿಸಿದ್ದಾರೆ. ಕರ್ನಾಟಕ ಸಹಕಾರಿ ಮಹಾ ಮಂಡಳದ ಚಲನಚಿತ್ರ ವಿಭಾಗದ ಅಧ್ಯಕ್ಷರಾಗಿದ್ದರು.

### ಶ್ರೀನಿವಾಸ್ ತೂಗುದೀಪ

ಕನ್ನಡದ ಅತ್ಯುತ್ತಮ ಕಲಾವಿದರಲ್ಲೊಬ್ಬರು. ಹವ್ಯಾಸಿ ನಾಟಕ ತಂಡಗಳನ್ನು ಕಟ್ಟಿಕೊಂಡು



ನಾಟಕಗಳನ್ನು ಪ್ರದರ್ಶಿಸುತ್ತಿದ್ದ ಇವರನ್ನು ನಾಟಕವೊಂದರಲ್ಲಿ ಕಂಡ ಕೆ.ಎಸ್.ಎಲ್.ಸ್ವಾಮಿಯವರು (ರವೀ) ತಮ್ಮ 'ತೂಗುದೀಪ' (೧೯೬೬) ಚಿತ್ರದ ಮೂಲಕ ಚಿತ್ರರಂಗಕ್ಕೆ ಕರೆತಂದರು. ಅ ಹೊತ್ತಿಗಾಗಲೇ ಸಿ.ವಿ.ಶಿವ ಶಂಕರ್ ಚಿತ್ರದಲ್ಲಿ ಅಭಿನಯಿಸಿದ್ದರು. ಮುಂದೆ ತೂಗುದೀಪ ಶ್ರೀನಿವಾಸ್ ಎಂದೇ ಪ್ರಖ್ಯಾತರಾದರು. ೬೦-೭೦ರ ದಶಕದಲ್ಲಿ ಇವರು ಚಲನಚಿತ್ರಗಳಲ್ಲಿ ಅನಿವಾರ್ಯ ಖಳನಟರಾದರು. ಇವರಿಲ್ಲದ ಚಿತ್ರಗಳೇ ಕಡಿಮೆ. 'ಸಿಪಾಯಿ ರಾಮು' ಚಿತ್ರದಲ್ಲಿ ಮಂಗಲ್‌ಸಿಂಗ್ ಪಾತ್ರಕ್ಕೆ ಜೀವಂತಿಕೆ ತಂದುಕೊಟ್ಟರು. ಜನಮನ್ನಣೆಯ ಈ ನಟ ಚಲನಚಿತ್ರಗಳಲ್ಲಿ ಖಳನಟರಾದರೂ ನಿಜಜೀವನದಲ್ಲಿ ಸರಳ ಸಜ್ಜನಿಕೆಯ ವ್ಯಕ್ತಿಯಾಗಿದ್ದರು. ರಾಜಕುಮಾರ್ ಅವರ ಬಹಳಷ್ಟು ಚಿತ್ರಗಳಲ್ಲಿ ಖಳನಟರಾಗಿ ಅಭಿನಯಿಸಿದರು. 'ರಾಮಾಪುರದ ರಾವಣ', 'ಧ್ರುವತಾರೆ', 'ಆದೇಕಣ್ಣು', 'ಬೆಂಕಿಯ ಬಲೆ', 'ಶ್ರಾವಣ ಬಂತು'. ಚಿತ್ರಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಅಭಿನಯಿಸಿದರು. ಸುಮಾರು ೨೫೦ ಚಿತ್ರಗಳಲ್ಲಿ ಅಭಿನಯಿಸಿದ್ದ ಇವರು ೧೯೯೫ರ ಅಕ್ಟೋಬರ್ ೧೪ರಂದು ಮೂತ್ರಪಿಂಡ ರೋಗದಿಂದ ನಿಧನರಾದರು. ಇವರ ಮಗ ದರ್ಶನ್ ತಂದೆಯ ಹಾದಿಯಲ್ಲಿಯೇ ಕಲಾವಿದನಾಗುವ ನಿಟ್ಟಿನಲ್ಲಿ ನಡೆದಿದ್ದಾರೆ.

### ಶ್ರೀನಿವಾಸ್.ಪಿ.ಎನ್



ಶ್ರೀನಿವಾಸ್ ಹುಟ್ಟಿದ್ದು ಬೆಂಗಳೂರಿನಲ್ಲಿ, ಅವರ ನೆಲೆಸಿರುವುದು ಅಮೆರಿಕಾದಲ್ಲಿ. ಪ್ರವೃತ್ತಿಯಿಂದ ನಟ, ನಿರ್ದೇಶಕ. ರಂಗಭೂಮಿಯಲ್ಲಿ ಅಪಾರ ಆಸಕ್ತಿ ಹೊಂದಿದ್ದ ಇವರಿಗೆ ಮೊದಲು ಸ್ಫೂರ್ತಿ ದೊರೆತಿದ್ದು ಸುಪ್ರಸಿದ್ಧ ಸಾಹಿತಿ ಜಿ.ಪಿ.ರಾಜರತ್ನಂ ಅವರಿಂದ. ಇವರು ಕಾಲೇಜು ವಿದ್ಯಾರ್ಥಿಯಾಗಿದ್ದಾಲೇ ರಂಗಭೂಮಿಯಲ್ಲಿನ ಅಭಿನಯ ಹಾಗೂ ನಿರ್ದೇಶನಗಳಿಗಾಗಿ ಅನೇಕ ಪುರಸ್ಕಾರಗಳನ್ನು ಪಡೆದರು. ಇವರು ನಿರ್ದೇಶಿಸಿದ ಮೊದಲ ಚಿತ್ರ 'ಸ್ಪಂದನ' ಒಂದರ್ಥದಲ್ಲಿ ಸಹಕಾರಿ ಚಿತ್ರ. ನಿರ್ಮಾಪಕ-ನಟ ಪಿ.ಕೃಷ್ಣರಾಜ್‌ರವರ ನೇತೃತ್ವದಲ್ಲಿ ಕೆಲವು ಗೆಳೆಯರು ಸೇರಿ ತಮ್ಮ ಜೇಬುಗಳಿಂದ ದುಡ್ಡು ಹಾಕಿ ತಯಾರಿಸಿದ ಚಿತ್ರ. ೧೯೭೮-೭೯ನೇ ಸಾಲಿನಲ್ಲಿ ಈ ಚಿತ್ರ ರಾಜ್ಯ ಸರ್ಕಾರದಿಂದ ಐದು ಪ್ರಶಸ್ತಿಗಳನ್ನು ಪಡೆಯಿತು. ನಿರ್ಮಾಪಕ ಕೃಷ್ಣರಾಜ್‌ರೊಂದಿಗೆ ನಿರ್ದೇಶಕ ಶ್ರೀನಿವಾಸ್ ಕೂಡ ಈ ಚಿತ್ರದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಈ ಚಿತ್ರ ಉತ್ತಮ ಅಭಿರುಚಿಯ ಪ್ರೇಕ್ಷಕರ ಗಮನ ಸೆಳೆದು ಆರ್ಥಿಕವಾಗಿಯೂ ಯಶಸ್ವಿಯಾಯಿತು. ೧೯೮೫ ೮೬ನೇ ಸಾಲಿನಲ್ಲಿ ಶ್ರೀನಿವಾಸ್ ನಿರ್ದೇಶಿಸಿದ 'ಅಭಿಮಾನ' ರಾಜ್ಯ ಸರ್ಕಾರದ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಗೆ ಪಾತ್ರವಾಯಿತು. ಅವರ ನಿರ್ದೇಶನದಲ್ಲಿ ತೆರೆ ಕಂಡ ಇನ್ನೊಂದು ಚಿತ್ರ 'ಪನೀ ಬರಲಿ ಪ್ರೀತಿ ಇರಲಿ'. ಗಣಿತಶಾಸ್ತ್ರದಲ್ಲಿ ಪ್ರಥಮ ರ್‍ಯಾಂಕ್‌ಗಳಿಸಿದ ಶ್ರೀನಿವಾಸ್ ಭಾರತದ ಪ್ರಥಮ ಉಪಗ್ರಹ 'ಆರ್ಯಭಟ'ದ ಉಡಾವಣೆಯ ವಿಜ್ಞಾನಿಗಳ ತಂಡದ ಸದಸ್ಯರಲ್ಲೊಬ್ಬರು. ವಿಜ್ಞಾನ ಕ್ಷೇತ್ರದಲ್ಲಿ ಸಲ್ಲಿಸಿದ ಗಮನಾರ್ಹ ಸೇವೆಗಾಗಿ ಭಾರತ ಸರ್ಕಾರದ ಪುರಸ್ಕಾರಕ್ಕೂ ಪಾತ್ರರಾದರು. ಶ್ರೀನಿವಾಸ್ ಕೆಲವು ಸಾಹಿತ್ಯ ಕೃತಿಗಳನ್ನೂ ಪ್ರಕಟಿಸಿದ್ದಾರೆ.

### ಶ್ರೀನಿವಾಸ್.ಪಿ.ಬಿ



ಅರುವತ್ತು ಮತ್ತು ಎಪ್ಪತ್ತರ ದಶಕಗಳಲ್ಲಿ ಕನ್ನಡ ಚಿತ್ರರಂಗದ ಅದ್ವಿತೀಯ ಗಾಯಕರಾಗಿ ಮೆರೆದವರು. ಮದರಾಸಿನ ಜೆಮಿನಿ ಸ್ಟುಡಿಯೋದಲ್ಲಿ ಸಂಗೀತ ವಿಭಾಗದಲ್ಲಿ ಕೆಲಸ ಮಾಡಿಕೊಂಡಿದ್ದ ಇವರನ್ನು ಆರ್.ನಾಗೇಂದ್ರರಾಯರು ತಮ್ಮ 'ಜಾತಕಫಲ' ಚಿತ್ರದಿಂದ ಹಿನ್ನೆಲೆ ಗಾಯಕರನ್ನಾಗಿ ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದರು. ಅಪಾರವಾದ ಸಂಗೀತ ಜ್ಞಾನ, ಉತ್ತಮ ಕಂಠಸಿರಿ, ಸ್ಪಷ್ಟ ಉಚ್ಚಾರ ಹಾಗೂ ಎಲ್ಲ ರಾಗಗಳ ಅರಿವು ಇವರನ್ನು ಎರಡು ದಶಕಗಳ ಕಾಲ ಕನ್ನಡ ಚಿತ್ರರಂಗದಲ್ಲಿ ಅತ್ಯಂತ ಜನಪ್ರಿಯ ಗಾಯಕರನ್ನಾಗಿ ಮಾಡಿತು. ಪಿ.ಬಿ.ಶ್ರೀನಿವಾಸ್ ಅವರ ಕಂಠ ಸಿರಿ ರಾಜಕುಮಾರ್ ಅವರಿಗೆ ಹೇಳಿ ಮಾಡಿಸಿದಂತಿತ್ತು. ಉತ್ತಮ ಸ್ವರ ಸಂಯೋಜಕರು ಮಾತ್ರವಲ್ಲದೆ ಉತ್ತಮ ಸಾಹಿತ್ಯ ರಚನೆಗಾರರು ಕೂಡ. ಸಂಸ್ಕೃತದಲ್ಲಿ ಕೂಡಾ ಗೀತನಾಟಕಗಳನ್ನು ರಚಿಸಿದ್ದಾರೆ. ಶಾಸ್ತ್ರೀಯ ಸಂಗೀತವನ್ನು ಪಿ.ಬಿ.ಶ್ರೀನಿವಾಸ್ ಅಭ್ಯಾಸ ಮಾಡಿಲ್ಲವಾದರೂ ನುರಿತ ಶಾಸ್ತ್ರೀಯ ಸಂಗೀತಗಾರರಂತೆಯೇ ಅತ್ಯುತ್ತಮವಾದ ಸ್ವರಗಳ ಪರಿಳಿತದೊಡನೆ ಭಾವಪೂರ್ಣವಾಗಿ ಹಾಡುವುದು ಇವರ ವೈಶಿಷ್ಟ್ಯ. ಕನ್ನಡ ಭಾಷೆಯಲ್ಲಿ ಮಾತ್ರವಲ್ಲದೆ ತಮಿಳು, ತೆಲುಗು, ಮಲೆಯಾಳಿ, ಹಿಂದಿ ಮುಂತಾದ ಭಾಷೆಗಳಲ್ಲಿ ಹಾಡುಗಳನ್ನು ಹಾಡಿದ್ದಾರೆ. 'ಸಂಪತ್ತಿಗೆ ಸವಾಲ್' ಚಿತ್ರದವರೆಗೂ ರಾಜಕುಮಾರ್ ಅವರಿಗೆ ಕಂಠ ನೀಡುತ್ತಿದ್ದರು. 'ಭಕ್ತ ಕನಕದಾಸ' ಚಿತ್ರದ 'ಬಾಗಿಲನು ತೆರೆದು...', 'ಕಸ್ತೂರಿ ನಿವಾಸ' ಚಿತ್ರದ 'ಆಡಿಸಿ ನೋಡು ಬೀಳಿಸಿ ನೋಡು...', 'ಸಾಕ್ಷಾತ್ಕಾರ' ಚಿತ್ರದ 'ಒಲವೆ ಜೀವನ ಸಾಕ್ಷಾತ್ಕಾರ...', 'ಎರಡು ಕನಸು' ಚಿತ್ರದ 'ಎಂದೆಂದೂ ನಿನ್ನನು ಮರೆತು...', 'ಭಕ್ತ ಕುಂಬಾರ' ಚಿತ್ರದ 'ಮಾನವಾ ಮೂಳೆ ಮಾಂಸದ...', 'ನ್ಯಾಯವೇ ದೇವರು' ಚಿತ್ರದ 'ಆಕಾಶವೇ ಬೀಳಲಿ ಮೇಲೆ...' ಮೊದಲಾದ ಗೀತೆಗಳಿಂದ ಪಿ.ಬಿ.ಶ್ರೀನಿವಾಸ್ ಜನಮನ

ಗೆದ ಗಾಯಕರೆನಿಸಿದರು. 'ಭಾಗ್ಯಜ್ಯೋತಿ' ಚಿತ್ರದಲ್ಲಿ ಸಂಸ್ಕೃತ ಗೀತೆಯೊಂದನ್ನು ತಾವೇ ರಚಿಸಿ ಹಾಡಿದರು. ಅಮೆರಿಕಾದ ಅರಿಜೋನಾ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿಗಳನ್ನು ಪಡೆದ ಶ್ರೀನಿವಾಸರದು ತುಂಬಾ ಆಕರ್ಷಕ ವ್ಯಕ್ತಿತ್ವ.

### ಶ್ರೀನಿವಾಸನ್.ಎಂ.ಕೆ



ಸುಪ್ರಸಿದ್ಧ ಛಾಯಾಗ್ರಾಹಕ ವಿ.ಎಸ್.ರಾಘವನ್ ಅವರ ಬಳಿ ೧೯೫೫ರಲ್ಲಿ ಸಹಾಯಕ ಛಾಯಾಗ್ರಾಹಕರಾಗಿ ಸೇರಿ ಮೂವತ್ತಾರು ವರ್ಷಗಳ ಕಾಲ ಛಾಯಾಗ್ರಾಹಕರಾಗಿ ದುಡಿದ ಎಂ.ಕೆ.ಶ್ರೀನಿವಾಸನ್ ತಿರುವನಂತಪುರದ ಮೇರಿಲ್ಯಾಂಡ್, ಜಯಂತಿ, ಚಾಮುಂಡೇಶ್ವರಿ ಹಾಗೂ ಸ್ಟುಡಿಯೋ ಮದರಾಸಿನ ಪ್ರಸಾದ್ ಸ್ಟುಡಿಯೋಗಳಲ್ಲಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದವರು. ಸರಿಸುಮಾರು ೧೦೦ಕ್ಕೂ ಹೆಚ್ಚು ಚಿತ್ರಗಳಿಗೆ ಛಾಯಾ ಗ್ರಾಹಕರಾಗಿ ಕೆಲಸ ಮಾಡಿದ್ದಾರೆ. ೧೯೮೭-೮೮ನೇ ಸಾಲಿನಲ್ಲಿ 'ಏಳು ಸುತ್ತಿನ ಕೋಟೆ' ಚಿತ್ರಕ್ಕಾಗಿ ಅತ್ಯುತ್ತಮ ಛಾಯಾಗ್ರಾಹಕ ಪ್ರಶಸ್ತಿಯನ್ನು ಪಡೆದುಕೊಂಡರು.

### ಶ್ರೀನಿವಾಸ ಮೂರ್ತಿ.ಜೆ.ಕೆ

ಶ್ರೀನಿವಾಸಮೂರ್ತಿ, ಕನ್ನಡ ಚಿತ್ರರಂಗದಲ್ಲಿ ಪ್ರಬುದ್ಧ ನಟನೆಗೆ ಹೆಸರಾದವರು. ಕರ್ನಾಟಕ



ಸರ್ಕಾರದ ಸರ್ವೆ ಇಲಾಖೆಯಲ್ಲಿ ಉದ್ಯೋಗ ಮಾಡುತ್ತಿದ್ದರು. ರಂಗಭೂಮಿ ಹಿನ್ನೆಲೆಯಿಂದ ಬಂದು, ೧೯೭೭ರಲ್ಲಿ ತೆರೆಕಂಡ ಸಿದ್ಧಲಿಂಗಯ್ಯನವರ ನಿರ್ದೇಶನದ 'ಹೇಮಾವತಿ' ಚಿತ್ರದ ಮೂಲಕ ಸಿನಿಮಾರಂಗವನ್ನು ಪ್ರವೇಶಿಸಿದರು. ಹಂತ ಹಂತವಾಗಿ ತನ್ನ ನಟನಾ ಸಾಮರ್ಥ್ಯದಿಂದ ಚಿತ್ರಗಳಲ್ಲಿ ಒಳ್ಳೆಯ ಅಭಿನಯ ನೀಡಿ ಹೆಸರನ್ನು ಪಡೆದುಕೊಂಡರು. ಇವರ ಪ್ರಮುಖ ಚಿತ್ರಗಳು 'ಕವಿರತ್ನ ಕಾಳಿದಾಸ', 'ಬಿಳಿಗಿರಿಯ ಬನದಲ್ಲಿ', 'ವಸಂತಗೀತ', 'ಜೋಡಿ ಜೀವ', 'ಹೊಸ ಬೆಳಕು', 'ಬಾಳನೌಕೆ', 'ಹಾಲುಂಡ ತವರು'. ಇವರು 'ನಾರಿ ಸ್ವರ್ಗಕ್ಕೆ ದಾರಿ' ಚಿತ್ರದಲ್ಲಿನ ಪಾತ್ರಕ್ಕೆ ೧೯೮೧-೮೨ರ ರಾಜ್ಯ ಸರ್ಕಾರದ ಅತ್ಯುತ್ತಮ ಪೋಷಕನಟ ಪ್ರಶಸ್ತಿ ಲಭಿಸಿತು. ನಿರ್ಮಾಣ ಹಾಗೂ ನಿರ್ದೇಶನದಲ್ಲೂ ಇವರು ಹೆಸರು ಪಡೆದಿದ್ದಾರೆ. ಕಿರುತೆರೆಯಲ್ಲಿ ಕ್ರಾಂತಿಯೋಗಿ ಬಸವಣ್ಣನವರ ಜೀವನವನ್ನು 'ಅಣ್ಣ ಬಸವಣ್ಣ' ಎಂಬ ಹೆಸರಿನಲ್ಲಿ ಧಾರಾವಾಹಿಯಾಗಿ ನಿರ್ಮಿಸಿ, ನಿರ್ದೇಶಿಸಿದರು.

### ಶ್ರೀನಿವಾಸರಾವ್ ಸಿಂಗೀತಂ

ಹುಟ್ಟಿನಿಂದ ಕನ್ನಡಿಗರಾದರೂ ತೆಲುಗು ಚಿತ್ರರಂಗದಲ್ಲಿ ಅನೇಕ ಉತ್ತಮ ಅಭಿರುಚಿಯ ಚಿತ್ರಗಳನ್ನು ನಿರ್ದೇಶಿಸಿ ನಂತರ ತಮಿಳು ಚಿತ್ರರಂಗಕ್ಕೂ ಲಗ್ಗೆ ಹಾಕಿ



ಖ್ಯಾತ ನಟ ಕಮಲಹಾಸನ್‌ರವರ ಸಹಯೋಗದಲ್ಲಿ ಕೆಲವು ವಿಶಿಷ್ಟ ಚಿತ್ರಗಳನ್ನು ತೆರೆಗಿತ್ತ ಸಿಂಗೀತಂ ಶ್ರೀನಿವಾಸರಾಯರ ಕೊಡುಗೆ ಕನ್ನಡ ಚಿತ್ರರಂಗಕ್ಕೂ ಸಾಕಷ್ಟಿದೆ. ಅಂತರರಾಷ್ಟ್ರೀಯ ಖ್ಯಾತಿ ಪಡೆದ ಚಿತ್ರ 'ಸಂಸ್ಕಾರ'ದ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಕನ್ನಡ ಚಿತ್ರರಂಗಕ್ಕೆ ಕಾಲಿಟ್ಟರು. ನಿರ್ದೇಶನದ ಜೊತೆಗೆ ಚಿತ್ರಕತೆ, ಸಂಭಾಷಣೆಗಳಲ್ಲೂ ಸಾಕಷ್ಟು ಪರಿಶ್ರಮವಿರುವ ಸಿಂಗೀತಂ ಶ್ರೀನಿವಾಸರಾವ್ ಹಲವು ಯಶಸ್ವಿ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಹೆಚ್ಚಾಗಿ ರಾಜಕುಮಾರ್ ಅವರ ಸಂಸ್ಥೆಗಳ ಚಿತ್ರವನ್ನು ನಿರ್ದೇಶಿಸಿರುವ ಅವರು 'ಹಾಲು ಜೇನು', 'ಭಾಗ್ಯದ ಲಕ್ಷ್ಮೀ ಬಾರಮ್ಮ'. 'ಆನಂದ್', 'ಚಿರಂಜೀವಿ ಸುಧಾಕರ್' ಮುಂತಾದ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಕುಮಾರ್ ಬಂಗಾರಪ್ಪ ಅಭಿನಯದ ಚಿತ್ರಗಳನ್ನು ನಿರ್ದೇಶಿಸಿ ಒಂಬತ್ತು ವಿಭಿನ್ನ ಪಾತ್ರಗಳಲ್ಲಿ ಕುಮಾರ್ ಬಂಗಾರಪ್ಪ ಅಭಿನಯಿಸಲು ಸಿಂಗೀತಂ ಅವರೇ ಪ್ರೇರಣೆಯಾದರು. ಹಾಸ್ಯದ ಜಾಡಿನಲ್ಲಿ ಗಂಭೀರವಾದ ವಿಚಾರ ತರುವ ಪ್ರಯತ್ನ. ಸಂಗೀತ ನಿರ್ದೇಶಕರಾಗಿಯೂ ಅವರು ಹೆಸರಾಗಿದ್ದಾರೆ. ಕನ್ನಡ ಚಿತ್ರಗಳಿಗೂ ಸಂಗೀತ ನೀಡಿದ್ದಾರೆ. ಕನ್ನಡ ನಾಡಿನಲ್ಲಿಯೇ ತಯಾರಾಗಿ ಇಡೀ ದೇಶದಲ್ಲಿ ಒಂದು ಹೊಸ ವಿಕ್ರಮ ಸಾಧಿಸಿದ ಮಾತುಗಳೇ ಇಲ್ಲದ ಚಿತ್ರ 'ಪುಷ್ಪಕ ವಿಮಾನ'ವನ್ನು ನಿರ್ದೇಶಿಸಿದರು. ಇವರು ನಿರ್ದೇಶಿಸಿದ 'ಹಾಲುಜೇನು' ೧೯೮೨-೮೩ನೇ ಸಾಲಿನ ಪ್ರಥಮ ಅತ್ಯುತ್ತಮ ಚಿತ್ರ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆಯಿತು. 'ಭಾಗ್ಯದ ಲಕ್ಷ್ಮೀ ಬಾರಮ್ಮ' ಚಿತ್ರದ ಚಿತ್ರಕತೆಗಾಗಿ ೧೯೮೫-೮೬ನೇ ಸಾಲಿಗೆ ಅತ್ಯುತ್ತಮ ಚಿತ್ರನಾಟಕ ಕರ್ತೃ ರಾಜ್ಯ ಸರ್ಕಾರದ ಪ್ರಶಸ್ತಿ ಹಾಗೂ 'ಆನಂದ್' ಚಿತ್ರದ ಚಿತ್ರಕತೆಗಾಗಿ ೧೯೮೬-೮೭ನೇ ಸಾಲಿನ ಅತ್ಯುತ್ತಮ ಚಿತ್ರ ನಾಟಕ ಕರ್ತೃ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದರು. ವಿಭಿನ್ನ ಶೈಲಿಯ ಕಥೆ ಹಾಗೂ ನಿರ್ದೇಶನಕ್ಕಾಗಿ ರಾಜ್ಯ ಸರ್ಕಾರದಿಂದ ೧೯೮೭-೮೮ನೇ ಸಾಲಿನಲ್ಲಿ ವಿಶೇಷ ಪ್ರಶಸ್ತಿಯನ್ನು 'ಪುಷ್ಪಕ ವಿಮಾನ' ಚಿತ್ರಕ್ಕಾಗಿ ಪಡೆದರು. ಈ ಚಿತ್ರ ಭಾರತೀಯ ಚಿತ್ರರಂಗದ ಅತ್ಯಂತ ಯಶಸ್ವಿ ಪ್ರಯೋಗಗಳಲ್ಲಿ ಒಂದು. ತಮಿಳಿನಲ್ಲಿ ಕಮಲಹಾಸನ್‌ರನ್ನು ಕುಳ್ಳನಾಗಿ ಪ್ರಯೋಗ ಮಾಡಿದ ಅವರು ಆ ರಹಸ್ಯವನ್ನು ಕಾಯ್ದುಕೊಟ್ಟಿದಾರೆ.

### ಶ್ರೀರಾಮುಲು ನಾಯಿಡು

ಹಿರಿಯ ನಿರ್ಮಾಪಕ, ನಿರ್ದೇಶಕ, ಸ್ಟುಡಿಯೋ ಮಾಲಿಕ. ತಮಿಳುನಾಡಿನವರಾದ ಇವರು ಕೊಯಮತ್ತೂರಿನ ಪಕ್ಷಿರಾಜ ಸ್ಟುಡಿಯೋ ಮಾಲೀಕರು ಮತ್ತು ಅನೇಕ ತಮಿಳು-ಹಿಂದಿ ಚಿತ್ರಗಳನ್ನು ನಿರ್ಮಿಸಿದವರು. ಇವರು ನಿರ್ಮಿಸಿ, ನಿರ್ದೇಶಿಸಿದ ತಮಿಳು ಚಿತ್ರಗಳಲ್ಲಿ 'ಜಗದಲ ಪ್ರತಾಪನ್', 'ಶಿವಕವಿ', 'ಆರ್ಯಮಾಲ', 'ಮಲೈಕಳ್ಳನ್', 'ಮರಗತಂ' ಮೊದಲಾದವು ಯಶಸ್ವೀ ಚಿತ್ರಗಳಾಗಿದವು. 'ಮಲೈಕಳ್ಳನ್' ಚಿತ್ರವನ್ನು ತಮಿಳಿನಲ್ಲಷ್ಟೇ ಅಲ್ಲದೆ ಕನ್ನಡ, ತೆಲುಗು ಹಾಗೂ ಹಿಂದಿ ಭಾಷೆಗಳಲ್ಲಿ



ಪುನರ್ನಿರ್ಮಿಸಿದರು. ಇದು ಆ ಕಾಲದ ಅತ್ಯಂತ ಯಶಸ್ವಿ ಚಿತ್ರವೆನಿಸಿತು. ಅನಿವಾರ್ಯ ಕಾರಣಗಳಿಂದ ಕೊಯಮತ್ತೂರಿನ ಪಕ್ಷಿರಾಜ ಸ್ಟುಡಿಯೋವನ್ನು ಮುಚ್ಚಬೇಕಾಗಿ ಬಂದಾಗ ಬೆಂಗಳೂರಿಗೆ ಬಂದರು. ಬೆಂಗಳೂರಿನಲ್ಲಿ ಚಾಮುಂಡೇಶ್ವರಿ ಸ್ಟುಡಿಯೋದಂಥ ಸುಸಜ್ಜಿತ ಸ್ಟುಡಿಯೋ ಸ್ಥಾಪಿಸಿ 'ಸುಭದ್ರಾ ಕಲ್ಯಾಣ' ಚಿತ್ರವನ್ನು ನಿರ್ಮಿಸಿದರು. ಇವರು ವ್ಯವಹಾರದಲ್ಲಿ ಖಡಾಖಡಿ-ಕಟ್ಟುನಿಟ್ಟು, ಶಿಸ್ತು. ಸ್ಟುಡಿಯೋ ನಿರ್ಮಾಣ ಸಮಯದಲ್ಲಿ ಪ್ರತಿ ಹಂತದಲ್ಲಿಯೂ ತಾವೇ ನಿಂತು ಮೇಲ್ವಿಚಾರಣೆ ಉಸ್ತುವಾರಿ ಮಾಡಿದ್ದರಿಂದ ಚಾಮುಂಡೇಶ್ವರಿ ಸುಸಜ್ಜಿತವಾಗಿ ರೂಪುಗೊಳ್ಳಲು ಸಾಧ್ಯವಾಯಿತು. ತಾ.೩-೮-೧೯೭೬ರಂದು ನಿಧನರಾದರು. ಇವರ ಸೋದರಳಿಯ ಕುಪ್ಪಸ್ವಾಮಿ ನಾಯ್ಡು ಅವರು ಸ್ಟುಡಿಯೋ ಜವಾಬ್ದಾರಿ ಹೊತ್ತು ಅತ್ಯಾಧುನಿಕಗೊಳಿಸಿದ್ದಾರೆ.

### ಶ್ರೀಲಲಿತಾ

ಎಪ್ಪತ್ತರ ದಶಕದಲ್ಲಿ ಕನ್ನಡ ಚಿತ್ರರಂಗ ಪ್ರವೇಶಿಸಿದ ಕಲಾವಿದೆ. ಮೊದಲ ಚಿತ್ರ 'ಚಕ್ರತೀರ್ಥ'ದಲ್ಲಿ ಹಾಸ್ಯಪಾತ್ರ. ನಂತರ 'ಪ್ರೇಮಕ್ಕೂ ಪರ್ಮಿಟ್ಟೆ'. 'ನಾಡಿನ ಭಾಗ್ಯ', 'ಕಾಣದ ಕೈ', 'ಬಾಳುವೆ ನಿನಗಾಗಿ' ಮೊದಲಾದ ಚಿತ್ರಗಳಲ್ಲಿ ನಾಯಕಿಯಾಗಿ



ಅಭಿನಯ. 'ಬಯಸದೆ ಬಂದ ಭಾಗ್ಯ', 'ಪುನರ್ಮಿಲನ', 'ಮರೆಯದ ದೀಪಾವಳಿ' ಮೊದಲಾದ ಚಿತ್ರಗಳಲ್ಲಿ ಉಪನಾಯಕಿಯಾಗಿ ಅಭಿನಯ. 'ಪಡುವಾರಹಳ್ಳಿ ಪಾಂಡವರು', 'ಸಂಘರ್ಷ', 'ಸುಬ್ಬಿ ಸುಬ್ಬಕ್ಕ ಸುಪ್ಪಲಾಲಿ', 'ದೊಡ್ಡ ಮನೆ ಎಸ್ಟೇಟ್' ಶ್ರೀಲಲಿತಾ ಅಭಿನಯದ ಪ್ರಮುಖ ಚಿತ್ರಗಳು. 'ಶಬರಿ ಮಲೈ ಅಯ್ಯಪ್ಪ ಸ್ವಾಮಿ', 'ಗೋಲ್‌ಮಾಲ್ ರಾಧಾಕೃಷ್ಣ', 'ಹೆಂಡ್ತೀರೆ ಹುಷಾರ್' ಶ್ರೀಲಲಿತಾ ಅವರಿಗೆ ವಿಶಿಷ್ಟ ಪಾತ್ರಗಳನ್ನು ಒದಗಿಸಿದ ಚಿತ್ರಗಳು. ನಂತರ ಕಿರುತೆರೆಯನ್ನೂ ಪ್ರವೇಶಿಸಿ ಜನಪ್ರಿಯ ಕಲಾವಿದೆ.

### ಶ್ರೀಹರಿ ಖೋಡೆ

ಕರ್ನಾಟಕದಲ್ಲಿ ಅಬ್ಕಾರಿ ಕ್ಷೇತ್ರದಲ್ಲಿ ಖ್ಯಾತರಾಗಿರುವ ಶ್ರೀಹರಿ ಖೋಡೆಯವರು ಕೇವಲ ವಾಣಿಜ್ಯೋದ್ಯಮಿಯಲ್ಲ, ಸಂಗೀತಕಾರ, ಕವಿ ಮತ್ತು ಸಮಾಜ ಸೇವಕ. ವೃತ್ತಿ ವ್ಯಾಪಾರವಾದರೂ ಪ್ರವೃತ್ತಿ ಸೃಜನಶೀಲತೆ. ಕಾವ್ಯ ರಚನೆ ಅವರ ಹವ್ಯಾಸ.



ಪ್ರಭಾವಶಾಲಿ ಸಮೂಹ ಮಾಧ್ಯಮವಾದ ಚಲನಚಿತ್ರವನ್ನು ಸಮಾಜದ ಹಾಗೂ ಜನತೆಯ ಉತ್ಕರ್ಷಕ್ಕೆ ಬಳಸಬೇಕೆನ್ನುವುದು ಅವರ ಆದರ್ಶಗಳಲ್ಲೊಂದು. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಮೂರು ಶ್ರೇಷ್ಠ ಚಿತ್ರಗಳನ್ನು ನಿರ್ಮಿಸಿದ್ದಾರೆ. 'ಸಂತ ಶಿಶುನಾಳ ಷರೀಫ', 'ಮೈಸೂರ ಮಲ್ಲಿಗೆ' ಮತ್ತು 'ನಾಗಮಂಡಲ' ಈ ಮೂರು ಚಿತ್ರಗಳೂ ರಾಜ್ಯ ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳಿಂದ ಅನೇಕ ಪ್ರಶಸ್ತಿಗಳನ್ನು ಪಡೆದುಕೊಂಡಿರುವುದಲ್ಲದೆ ಅಪಾರ ಜನಪ್ರಿಯತೆಯನ್ನೂ ಗಳಿಸಿವೆ. ಉತ್ತಮ ಅಭಿರುಚಿ ಮತ್ತು ಆರ್ಥಿಕ ಯಶಸ್ಸು ವಿರುದ್ಧ ಆಸಕ್ತಿಗಳೆಂಬ ಚಿತ್ರೋದ್ಯಮದ ಬಹುಕಾಲದ ನಂಬಿಕೆಯನ್ನು ಈ ಚಿತ್ರಗಳು ಸುಳ್ಳಾಗಿಸಿವೆ. 'ಸಂತ ಶಿಶುನಾಳ ಷರೀಫ' ೧೯೮೯ರ ರಾಷ್ಟ್ರೀಯ ಐಕ್ಯತೆಗಾಗಿ ಇರುವ ರಾಷ್ಟ್ರ ಪ್ರಶಸ್ತಿ ಹಾಗೂ ರಾಜ್ಯ ಸರ್ಕಾರದ ೧೯೮೯-೯೦ರ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಗಳನ್ನು ಪಡೆದರೆ, 'ಮೈಸೂರ ಮಲ್ಲಿಗೆ' ೧೯೯೧ರ ಅತ್ಯುತ್ತಮ ಕನ್ನಡ ಚಿತ್ರಕ್ಕಾಗಿ

ರಾಷ್ಟ್ರ ಪ್ರಶಸ್ತಿ ಮತ್ತು ರಾಜ್ಯ ಸರ್ಕಾರದ ೧೯೯೧-೯೨ನೇ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಗಳನ್ನು ಪಡೆಯಿತು. 'ನಾಗಮಂಡಲ' ಚಿತ್ರವು ರಾಜ್ಯ ಸರ್ಕಾರದ ೧೯೯೬-೯೭ರ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದಿದೆ.

### ಶುಭಾ

ಎಪ್ಪತ್ತರ ದಶಕದಲ್ಲಿ ಕನ್ನಡಕ್ಕೆ ವಲಸೆ ಬಂದ ತೆಲುಗು ಮೂಲದ ನಟಿ. ತಂದೆ ಕಲಾವಿದ-ನಿರ್ದೇಶಕ ವೇದಾಂತಂ ರಾಘವಯ್ಯ. ತಾಯಿ ತಾರೆ ಸೂರ್ಯಪ್ರಭಾ. ಹಿಂದಿ ಚಿತ್ರರಂಗದ ಖ್ಯಾತ ತಾರೆ ರೇಖಾಗೆ ಸೋದರ ಸಂಬಂಧಿ. ವೀರಾಸ್ವಾಮಿ ಶೋಧವಾದ ಶುಭಾ, ಪುಟ್ಟಣ್ಣ ಕಣಗಾಲ್



ನಿರ್ದೇಶನದ ತ.ರಾ.ಸು ಕಾದಂಬರಿ ಆಧಾರಿತ 'ನಾಗರಹಾವು' ಚಿತ್ರದ ಮಾರ್ಗರೇಟ್ ಪಾತ್ರದಿಂದ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದರು. ಮುಂದೆ 'ಫಲಿತಾಂಶ', 'ಮಾಗಿಯ ಕನಸು', 'ಭಾಗ್ಯಜ್ಯೋತಿ', 'ಸಹಧರ್ಮಿಣಿ', 'ಬಿಸಿಲು ನೆರಳು', 'ಕಾಡ್ಗಿಚ್ಚು', 'ಮುಗ್ಧಮಾನವ' ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯ. 'ನಾಗರಹಾವು' (೧೯೭೨-೭೩) ಚಿತ್ರಗಳ ಅಭಿನಯಕ್ಕಾಗಿ ಶ್ರೇಷ್ಠ ಪೋಷಕ ನಟಿ ಪ್ರಶಸ್ತಿ ಗಳಿಸಿದರು.

### ಶ್ರುತಿ

ರಂಗಭೂಮಿ ಕಲಾವಿದ ಕೃಷ್ಣ ಅವರ ಪುತ್ರಿ. ೯೦ರ ದಶಕದಲ್ಲಿ ಅತ್ಯಂತ ಜನಪ್ರಿಯತೆ ಪಡೆದ ನಾಯಕಿ. ನಿಜನಾಮಧೇಯ ಗಿರಿಜಾ. ಶಿವರಾಜಕುಮಾರ್ ತಂಗಿಯಾಗಿ 'ಆಸೆಗೊಬ್ಬ ಮೀಸೆಗೊಬ್ಬ' ಚಿತ್ರದಿಂದ ಚಿತ್ರರಂಗ ಪ್ರವೇಶ. ನಂತರ ನಟ ಶ್ರೀನಿವಾಸ ಮೂರ್ತಿ ನಿರ್ಮಿಸಿದ 'ನಂಬಿದ್ರೆ ನಂಬಿ ಬಿಟ್ರೆ ಬಿಡಿ' ಚಿತ್ರದಲ್ಲಿ ಪ್ರಿಯದರ್ಶಿನಿ ಎಂಬ ಹೆಸರಿನಿಂದ



ನಾಯಕಿಯಾಗಿ ಅಭಿನಯ. 'ಪ್ರಚಂಡ ಪ್ರಚಂಡ'ದಲ್ಲಿ ರಮೇಶ್‌ಗೆ ಎದುರಾಗಿ ಪುಟ್ಟ ಪಾತ್ರ. ನಿಜವಾಗಿ ಅದೃಷ್ಟದ ಬಾಗಿಲು ತೆರೆದದ್ದು ದ್ವಾರಕೀಶ್ ನಿರ್ದೇಶನದ 'ಶ್ರುತಿ' ಚಿತ್ರದಿಂದ. ಹೋಲಿಕೆ, ಅನುಕರಣೆ ಅನ್ನಿಸದ ಹಾಗೆ ಸ್ವತಂತ್ರ ಶೈಲಿ ರೂಢಿಸಿಕೊಂಡು ತನ್ನದೇ ಆದ ಪ್ರೇಕ್ಷಕ ವರ್ಗವನ್ನು ಸೃಷ್ಟಿಸಿಕೊಂಡು ಜನಮನ ಗೆದ್ದ ನಟಿ ಶ್ರುತಿ, 'ರಂಜಿತ', 'ರಶ್ಮಿ', 'ಆಘಾತ', 'ಚಿತ್ರಲೇಖ', 'ಹೆತ್ತಕರಳು', 'ತಾಯಿ ಕೊಟ್ಟ ಸೀರೆ', 'ತಾಯಿ ಇಲ್ಲದ ತವರು', 'ಕರ್ಪೂರದ ಗೊಂಬೆ' ಮುಂತಾದ ಚಿತ್ರಗಳು ಶ್ರುತಿಯನ್ನು ಮಧ್ಯಮ ವರ್ಗದ ಆದರ್ಶ ನಾಯಕಿಯನ್ನಾಗಿ ರೂಪಿಸಿದವು. ಈ ಮಧ್ಯೆ ಕಣ್ಣೀರು ಸುರಿಸುವ ಇಮೇಜ್‌ನಿಂದ ಹೊರಬಂದು 'ಮೋಜುಗಾರ ಸೊಗಸುಗಾರ', 'ಎದುರು ಮನೇಲಿ ಗಂಡ ಪಕ್ಕದ್ಮನೇಲಿ ಹೆಂಡ್ತಿ', 'ನಮ್ಮೂರ ಹುಡ್ಗ', 'ಭಾಮ ಸತ್ಯಭಾಮ', 'ಸ್ತ್ರೀ', 'ರೂಪಾಯಿ ರಾಜ', 'ಗೆಲುವಿನ ಸರದಾರ' ಮುಂತಾದ ಚಿತ್ರಗಳಲ್ಲಿ ಪ್ರೌಢ ಅಭಿನಯ ನೀಡಿದರು. ಯುವ ನಿರ್ದೇಶಕ ಎಸ್.ಮಹೇಂದರ್ ಅವರನ್ನು ವಿವಾಹವಾದರು. ಕನ್ನಡದ ಬಹುತೇಕ ಎಲ್ಲಾ ನಾಯಕರೊಂದಿಗೆ ಅಭಿನಯಿಸಿದ್ದಾರೆ. ಕೆಲದಿನಗಳ ವಿಶ್ರಾಂತಿಯ ನಂತರ ವಿಷ್ಣುವರ್ಧನ್ ಅವರೊಂದಿಗೆ 'ಸೂರಪ್ಪ' ಹಾಗೂ 'ವೀರಪ್ಪನಾಯ್ಕ' ಚಿತ್ರಗಳಲ್ಲಿ ವಿಭಿನ್ನ ರೀತಿಯ ಅಭಿನಯ ನೀಡುವ ಮೂಲಕ ಮರು ಪ್ರವೇಶ ಪಡೆದರು. 'ಆಘಾತ' ಚಿತ್ರದಲ್ಲಿನ ಪರಿಣಾಮಕಾರಿ ಅಭಿನಯಕ್ಕೆ ೧೯೯೪-೯೫ನೇ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ನಟಿ ಪ್ರಶಸ್ತಿ ಪಡೆದಿದ್ದಾರೆ.

### ಶೇಷಗಿರಿರಾವ್ .ಎ.ವಿ

ಹಳೆಯ ತಲೆಮಾರಿನ ಜನಪ್ರಿಯ ನಿರ್ದೇಶಕರಾಗಿರುವ ತೆಲುಗಿನ ಎ.ವಿ.ಶೇಷಗಿರಿರಾವ್ 'ಬೆಟ್ಟದ ಹುಲಿ' (೧೯೬೫) ಚಿತ್ರದ ಮೂಲಕ ಕನ್ನಡ ಚಿತ್ರ ನಿರ್ದೇಶನ ಕ್ಷೇತ್ರ ಪ್ರವೇಶಿಸಿದರು. ಪ್ರಪ್ರಥಮ ಕನ್ನಡ ಸಿನಿಮಾಸ್ಕೋಪ್ ಚಿತ್ರ 'ಸೊಸೆ ತಂದ ಸೌಭಾಗ್ಯ' (೧೯೭೭) ನಿರ್ದೇಶಿಸಿದ ಹೆಗ್ಗಳಿಕೆ ಇವರದು. ಸುಮಾರು ೨೭ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. 'ಬಹದ್ದೂರು ಗಂಡು', 'ಹೂವು ಮುಳ್ಳು', 'ಸಂಪತ್ತಿಗೆ ಸವಾಲ್', 'ರಾಜ ನನ್ನ ರಾಜ', 'ನಾನಿರುವುದೆ ನಿನಗಾಗಿ', 'ಪಟ್ಟಣಕ್ಕೆ ಬಂದ ಪತ್ನಿಯರು', 'ಬಹದ್ದೂರ್ ಹೆಣ್ಣು'



ಮುಂತಾದವು ಇವರು ನಿರ್ದೇಶಿಸಿದ ಜನಪ್ರಿಯ ಚಿತ್ರಗಳು.

### ಶೇಷಾದ್ರಿ.ಪಿ

ಭರವಸೆಯ ಯುವ ನಿರ್ದೇಶಕ. ಕನ್ನಡ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವೀಧರ ಹಾಗೂ ಪತ್ರಿಕೋದ್ಯಮದಲ್ಲಿ ಡಿಪ್ಲೊಮಾ ಪಡೆದಿರುವ ಪಿ.ಶೇಷಾದ್ರಿ ಪತ್ರಕರ್ತರಾಗಿ ಕನ್ನಡ ವಾರಪತ್ರಿಕೆಯೊಂದರಲ್ಲಿ ವೃತ್ತಿ ಆರಂಭಿಸಿದರು. ೧೯೯೦ರಲ್ಲಿ ಚಿತ್ರಕತೆ ಹಾಗೂ ಸಂಭಾಷಣಾಕಾರರಾಗಿ ಚಿತ್ರರಂಗ ಪ್ರವೇಶಿಸಿದರು. ಟಿ.ಎಸ್.ನಾಗಾಭರಣ ಅವರ ಬಳಿ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದರು. ಕರ್ನಾಟಕ ಚಲನಚಿತ್ರ ನಿರ್ದೇಶಕ ಸಂಘದಿಂದ ೧೯೯೩ರಲ್ಲಿ 'ಚಿನ್ನಾರಿ ಮುತ್ತ' ಚಿತ್ರದಲ್ಲಿನ ಸಹನಿರ್ದೇಶನಕ್ಕೆ ಅತ್ಯುತ್ತಮ ಸಹಾಯಕ ನಿರ್ದೇಶಕ ಪ್ರಶಸ್ತಿಯನ್ನು ಪಡೆದಿದ್ದರು. ೧೯೯೫ರಲ್ಲಿ ಕಿರುತೆರೆಯಲ್ಲಿ ಕೆಲವು ಧಾರಾವಾಹಿಗಳನ್ನು ನಿರ್ದೇಶಿಸುವ ಮೂಲಕ, ಸ್ವತಂತ್ರ ನಿರ್ದೇಶಕರಾದರು. ಕೆಲವು ಸಾಕ್ಷ್ಯ ಚಿತ್ರಗಳನ್ನು ಹಾಗೂ ಟೆಲಿ ಚಿತ್ರಗಳನ್ನೂ



ನಿರ್ದೇಶಿಸಿದವರು. ಕಿರುತೆರೆಯಲ್ಲಿ ಜನಪ್ರಿಯತೆ ಗಳಿಸಿದ 'ಮಾಯಾಮೃಗ'ದ ಯಶಸ್ಸಿನ ರೂವಾರಿಗಳಲ್ಲಿ ಒಬ್ಬರು. ಕತೆಗಾರ ಬೊಳುವಾರು ಮಹ್ಮದ್ ಕುಂಞಿ ಅವರ 'ಮುತ್ತುಚೇರ' ಕಥೆಯನ್ನು ಆಧರಿಸಿ ದಿಗ್ದರ್ಶಿಸಿದ ಚಿತ್ರ 'ಮುನ್ನುಡಿ'. ಮೊದಲ ಚಿತ್ರವೇ ಶೇಷಾದ್ರಿ ಅವರಿಗೆ ಹಲವಾರು ಪ್ರಶಸ್ತಿಗಳನ್ನು ತಂದಿತಲ್ಲದೇ, ಭರವಸೆಯ ನಿರ್ದೇಶಕರನ್ನಾಗಿ ಮಾಡಿದೆ. 'ಮುನ್ನುಡಿ' ಚಿತ್ರ ೨೦೦೦ನೇ ಸಾಲಿಗೆ ಅತ್ಯುತ್ತಮ ಸಾಮಾಜಿಕ ಕಳಕಳಿಯನ್ನು ಹೊಂದಿರುವ ಚಿತ್ರವೆಂದು ರಾಷ್ಟ್ರ ಪ್ರಶಸ್ತಿಗೆ ಪಾತ್ರವಾಗಿದೆ. ಕೇರಳದ ಅರವಿಂದನ್ ಪ್ರಶಸ್ತಿ ಪಡೆದಿದೆ.

### ಶ್ವೇತ

ಕನ್ನಡ ಚಿತ್ರರಂಗಕ್ಕೆ ತಮಿಳಿನಿಂದ ಆಮದಾದ ನಟಿ. ತಮಿಳಿನ ವಿನೋದಿನಿ, ೧೯೯೨ರಲ್ಲಿ ಎಸ್.ನಾರಾಯಣ್ ನಿರ್ದೇಶನದ 'ಚೈತ್ರದ ಪ್ರೇಮಾಂಜಲಿ' ಚಿತ್ರದ ಮೂಲಕ 'ಶ್ವೇತಾ' ಎಂಬ ಹೆಸರಿನಿಂದ ಕನ್ನಡಿಗರಿಗೆ ಪರಿಚಯವಾದರು. ಚಿತ್ರದ ಅಭೂತಪೂರ್ವ ಯಶಸ್ಸು ಅವರಿಗೆ ಅನೇಕ ಕನ್ನಡ ಚಿತ್ರಗಳನ್ನು ನೀಡಿತು. 'ಗೆಜ್ಜೆನಾದ', 'ಲಕ್ಷ್ಮಿ ಮಹಾಲಕ್ಷ್ಮಿ', 'ಮುದ್ದಿನ ಅಳಿಯ', 'ಕರ್ಪೂರದ ಗೊಂಬೆ', 'ಮಿನುಗುತಾರೆ', 'ಅಗ್ನಿಸಾಕ್ಷಿ' ಮೊದಲಾದವು



ಶ್ವೇತಾ ಅಭಿನಯದ ಚಿತ್ರಗಳು. ಈಕೆಗೆ ತೆಲುಗು, ತಮಿಳಿನಲ್ಲೂ ಕಿರುತೆರೆಯಲ್ಲೂ ಅಧಿಕ ಬೇಡಿಕೆಯಿದೆ.

### ಶೈಲಶ್ರೀ

ಶೈಲಶ್ರೀ ಪ್ರೊಡಕ್ಷನ್ಸ್ ಅವರ 'ಸಂಧ್ಯಾರಾಗ' ಚಿತ್ರದ ಮೂಲಕ ಕನ್ನಡ ಚಿತ್ರರಂಗಕ್ಕೆ ಕಾಲಿಟ್ಟ ಶೈಲಶ್ರೀ ಇಂಡಿಯನ್ ಏರ್‌ಲೈನ್ಸ್‌ನಲ್ಲಿ ಗಗನ ಸಖಿಯಾಗಿದ್ದರು. 'ಕಾಡಿನ ರಹಸ್ಯ', 'ಮನಸ್ಸಿದ್ದರೆ ಮಾರ್ಗ', 'ಬಂಗಾರದ ಹೂವು', 'ವಾಗ್ದಾನ' ಮುಂತಾದ ಅನೇಕ ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರು. ನಾಯಕನಟ ಆರ್.ಎನ್.ಸುದರ್ಶನ್ ತಯಾರಿಸಿದ 'ನಗುವ ಹೂವು' (೧೯೭೧) ಚಿತ್ರದ ನಾಯಕಿಯಾಗಿ ಅತ್ಯುತ್ತಮ ಅಭಿನಯ ನೀಡಿ ಗಮನ ಸೆಳೆದರು. 'ಬಂಗಾರದ ಪಂಜರ' (೧೯೭೪) ಚಿತ್ರದಲ್ಲಿ ಅಭಿನಯಿಸುತ್ತಿದ್ದಾಗ ಸುದರ್ಶನ್ ಅವರನ್ನು ವಿವಾಹವಾದರು. ಕಲವು ಕಾಲ ಉತ್ತರ ಕರ್ನಾಟಕದ ನಾಟಕಗಳಲ್ಲಿ ಶೈಲಶ್ರೀ-ಸುದರ್ಶನ್ ಇಬ್ಬರೂ ಅಭಿನಯಿಸಿದರು. ಭರತನಾಟ್ಯ ಕಲಾವಿದೆಯೂ ಆಗಿರುವ ಶೈಲಶ್ರೀ



ಮದರಾಸಿನಲ್ಲಿ ನೃತ್ಯಶಾಲೆಯೊಂದನ್ನು ನಡೆಸುತ್ತಿದ್ದು, ಕಿರುತೆರೆ ಧಾರಾವಾಹಿಗಳಲ್ಲಿ ಅಭಿನಯಿಸುವುದುಂಟು.

### ಶೈಲೇಂದ್ರಬಾಬು

ಚಿತ್ರ ನಿರ್ಮಾಪಕ. ಸುಮಂತ್ ಇನ್‌ವೆಸ್ಟ್‌ಮೆಂಟ್ ಹಾಗೂ ಶೃತಿ ಎಂಟರ್‌ಪ್ರೈಸಸ್ ಎಂಬ ಎರಡು ಚಿತ್ರ ನಿರ್ಮಾಣ ಸಂಸ್ಥೆಗಳನ್ನು ಸ್ಥಾಪಿಸಿ ಐದು ಕನ್ನಡ ಚಿತ್ರಗಳನ್ನು ನಿರ್ಮಿಸಿದ್ದಾರೆ. ಪ್ರಥಮವಾಗಿ ಶಂಕರ್‌ನಾಗ್ ಅಭಿನಯದ 'ಹೊಸಜೀವನ' ಚಿತ್ರವನ್ನು ನಿರ್ಮಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದ ಶೈಲೇಂದ್ರಬಾಬು ನಂತರ 'ಶ್ವೇತಾಗ್ನಿ', 'ಸ್ವಾತಿ', 'ರಂಗೋಲಿ', 'ಇಂದ್ರಧನುಷ್'



ಚಿತ್ರಗಳನ್ನು ನಿರ್ಮಿಸಿದ್ದಾರೆ. ಚಿತ್ರ ನಿರ್ಮಾಣದ ಜೊತೆಗೆ ಹಲವು ಕನ್ನಡ ಚಿತ್ರಗಳಿಗೆ ಹಣಕಾಸಿನ ಸಹಾಯವನ್ನು ಮಾಡಿರುವ ಶೈಲೇಂದ್ರಬಾಬು ಹಲವು ಜನಪ್ರಿಯ ಚಿತ್ರಗಳ ಗೆಲುವಿನ ರೂವಾರಿಯಾಗಿದ್ದಾರೆ.

### ಶೋಭರಾಜ್

ಚಿತ್ರರಂಗಕ್ಕೆ ಖಳನಟನಾಗಿ ಪರಿಚಿತಗೊಂಡು ಜನಪ್ರಿಯರಾದ ನಟ.



'ಚಿತ್ರದ ಪ್ರೇಮಾಂಜಲಿ', ಚಿತ್ರದಿಂದ ಕನ್ನಡ ಚಿತ್ರರಂಗ ಪ್ರವೇಶ. 'ಸಮರ', 'ಲಾಕಪ್ ಡೆತ್', 'ಅಗ್ನಿ ಐ.ಪಿ.ಎಸ್.', 'ದುರ್ಗದ ಹುಲಿ', 'ಅಂಡರ್ ವರ್ಲ್ಡ್', ಮೊದಲಾದವು ಇವರ ಅಭಿನಯದ ಕೆಲವು ಜನಪ್ರಿಯ ಚಿತ್ರಗಳು.

## ಶೋಭಾ ರಾಘವೇಂದ್ರ

ಟಿ.ಎಸ್.ರಂಗಾ ನಿರ್ದೇಶನದ 'ಗೀಜಗನ ಗೂಡು' ಚಿತ್ರದಿಂದ ಬೆಳ್ಳಿತೆರೆಗೆ ಪರಿಚಯವಾದ ನಟಿ. ಶೋಭಾ ರಾಘವೇಂದ್ರ ಹಲವಾರು ನಾಟಕಗಳಲ್ಲೂ ಅಭಿನಯಿಸಿರುವ ಕಲಾವಿದೆ. ಸಣ್ಣ ಪಾತ್ರಗಳನ್ನು ಮಾಡುತ್ತಿದ್ದ ಶೋಭಾ ರಾಘವೇಂದ್ರ ಕೆ.ವಿ.ಜಯರಾಂ ನಿರ್ದೇಶನದ ರಾಷ್ಟ್ರ ಹಾಗು ರಾಜ್ಯಪ್ರಶಸ್ತಿ ವಿಜೇತ ಚಿತ್ರ 'ರಂಜಿತ'ದ ಮೂಲಕ ಗಮನಾರ್ಹ ಅತ್ತೆಯಾಗಿ ಗಮನ ಸೆಳೆದರು. ನಂತರ ಇದೇ



ಮಾದರಿಯ ಹಲವು ಪಾತ್ರಗಳು ಇವರನ್ನು ಅರಸಿ ಬಂದವು. 'ರಶ್ಮಿ', 'ಊರ್ವಶಿ ಕಲ್ಯಾಣ', 'ಜನುಮದ ಜೋಡಿ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ ಶೋಭಾ ರಾಘವೇಂದ್ರ ದೂರದರ್ಶನದ ಹಲವು ಧಾರಾವಾಹಿಗಳಲ್ಲಿಯೂ ಅಭಿನಯಿಸಿದಾರೆ.

## ಷರೀಫ್.ಯು.ಎಂ.ಎನ್

ಕನ್ನಡ ಚಿತ್ರರಂಗದ ಖ್ಯಾತ ಛಾಯಾಗ್ರಾಹಕ. ಪುಣೆಯ ಫಿಲಂ ಮತ್ತು ಟೆಲಿವಿಷನ್ ಸಂಸ್ಥೆಯಲ್ಲಿ ಡಿಪ್ಲೊಮಾ ಪದವಿ ಪಡೆದ ಷರೀಫ್ ಛಾಯಾಗ್ರಹಣ ಮಾಡಿದ ಮೊದಲ



ಚಿತ್ರ 'ಪ್ರತಿಪಕ್ಷ'. ನಂತರ 'ಮಾಡಿ ಮಡಿದವರು', 'ಜಾಗೃತಿ', 'ಬೀಸಿದ ಬಲೆ', 'ಪ್ರೇಮಾಯಣ' ಮೊದಲಾದ ಚಿತ್ರಗಳಿಗೆ ಛಾಯಾಗ್ರಹಣ ನೀಡಿದರು. 'ಮಾಡಿ ಮಡಿದವರು' ಚಿತ್ರದ ಅತ್ಯುತ್ತಮ ಛಾಯಾಗ್ರಹಣಕ್ಕೆ ೧೯೭೩-೭೪ರ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದರು. ಕಿರುತೆರೆಯಲ್ಲೂ ಛಾಯಾಗ್ರಹಣ ಮಾಡಿದರು. ಇವರದು ಅಕಾಲ ಮರಣ

## ಸಂಜಯ ದೇಸಾಯಿ

ಹಿರಿಯ ಚಿತ್ರ ವಿತರಕ, ಪ್ರದರ್ಶಕರಾದ ಮಧುಸೂಧನ್ ಪಟೇಲ್ ಅವರ ಪುತ್ರ. ಅವರ ನಂತರ ಚಿತ್ರ ವಿತರಣೆ, ಪ್ರದರ್ಶನ,



ನಿರ್ಮಾಣ ವಿಭಾಗಗಳಲ್ಲೂ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಚಿತ್ರಮಂದಿರಗಳನ್ನು ಗುತ್ತಿಗೆಗೆ ಪಡೆದು ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಮಹತ್ವವಾದ ಪಾತ್ರವನ್ನು ವಹಿಸಿದಾರೆ. ಬೆಂಗಳೂರಿನ ನಂದಾ, ನಳಂದ, ವೀರೇಶ ದಾವಣಗೆರೆಯ ಪುಷ್ಪಾಂಜಲಿ ಚಿತ್ರಮಂದಿರಗಳನ್ನು ಇವರು ಗುತ್ತಿಗೆಗೆ ಪಡೆದು ಅದರ ನಿರ್ವಹಣೆ ಮಾಡಿದ್ದಾರೆ. ಒಳ್ಳೆಯ ಕ್ರಿಕೆಟ್ ಪಟು.

## ಸಂಧ್ಯಾ

ಸಂಧ್ಯಾ ಮೈಸೂರು ಸರಕಾರದ ವಾರ್ತಾ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದವರು.



ಕಂಪರಾಜ ಅರಸು ಅವರ 'ಜಲದುರ್ಗ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶ. ಮೈಸೂರು ಪ್ರೀಮಿಯರ್ ಸ್ಟುಡಿಯೋವಿನಲ್ಲಿ ಅದರ ಮಾಲೀಕರಾದ ಬಸವರಾಜಯ್ಯ ಅವರು ನಿರ್ಮಿಸಿದ ಮೊದಲ ಚಿತ್ರ 'ಸ್ತ್ರೀರತ್ನ'ದ ನಾಯಕಿ ಆಗಿದ್ದರು. 'ನಟಶೇಖರ', 'ಶ್ರೀರಾಮ ಪೂಜಾ', 'ಪ್ರೇಮದ ಪುತ್ರಿ', 'ಜಗಜ್ಯೋತಿ ಬಸವೇಶ್ವರ', 'ಚಂದವಳ್ಳಿಯ ತೋಟ', 'ಮಹಿಷಾಸುರ ಮರ್ದಿನಿ', 'ರಣಧೀರ ಕಂಠೀರವ', 'ಶ್ರೀಶೈಲ ಮಹಾತ್ಮೆ', 'ವಿಜಯನಗರದ ವೀರಪುತ್ರ' ಇವು ಸಂಧ್ಯಾ ಅವರ ಕೆಲವು ಮುಖ್ಯ ಚಿತ್ರಗಳು. ಮೈಸೂರಿನಲ್ಲಿ ಹುಟ್ಟಿದ, ತಮಿಳುನಾಡಿನ ಖ್ಯಾತ ನಟ ಹಾಗೂ ರಾಜಕಾರಣಿ ಎಂ.ಜಿ.ಆರ್. ಅವರ ಕೃಪಾಶ್ರಯದಲ್ಲಿ ಪ್ರಮುಖ ತಾರೆಯಾಗಿ, ರಾಜಕಾರಣಿಯಾಗಿ ರೂಪುಗೊಂಡು, ತಮಿಳುನಾಡಿನ ಮುಖ್ಯಮಂತ್ರಿಯೂ ಆದ ರಾಷ್ಟ್ರದ ರಾಜಕಾರಣದಲ್ಲಿ ಸುದ್ದಿಯಾದ ಜಯಲಲಿತಾ ಸಂಧ್ಯಾ ಅವರ ಮಗಳು. ಗಗನ ಸಖಿಯಾಗಿದ್ದು, ಸಂಧ್ಯಾರೊಂದಿಗೆ 'ನಟಶೇಖರ' ಚಿತ್ರದಲ್ಲಿ ನಟಿಸಿದ ವಿದ್ಯಾವತಿಯವರು ಸಂಧ್ಯಾರ ಸಹೋದರಿ.

## ಸಂಪತ್

ಮೈಸೂರಿನಲ್ಲಿ ಮುದ್ರಕರಾಗಿದ್ದುಕೊಂಡು ರಂಗಭೂಮಿ ಚಟುವಟಿಕೆಗಳಿಗೆ ಒತ್ತಾಸೆಯಾಗಿ ನಿಲ್ಲುತ್ತಿದ್ದರು. ಸ್ವತಃ ಹವ್ಯಾಸಿ ರಂಗಭೂಮಿಯ ನಟರು. ಎಂ.ಎಸ್.ಚೆಲುವಯ್ಯಂಗಾರ್, 'ಸಂಪತ್' ಎಂದೇ ಗೆಳೆಯರ ಸಮೂಹದಲ್ಲಿ ಪರಿಚಿತರಾಗಿದ್ದರು. ಇಂಗ್ಲಿಷ್ ಭಾಷೆಯ ಮೇಲೆ ಪ್ರಭುತ್ವವಿದ್ದ ಇವರ ಬಗ್ಗೆ ಆರ್.ಕೆ.ನಾರಾಯಣ್ ಅವರಿಗೆ ಅತ್ಯಂತ ವಿಶ್ವಾಸ. ಅವರು ತಮ್ಮ 'ಮಿ.ಸಂಪತ್' ಎಂಬ ಕಥೆಯನ್ನು 'ಟು ದಿ ಒರಿಜಿನಲ್ ಸಂಪತ್' ಎಂದು ಸಂಪತ್‌ಗೆ ಅರ್ಪಿಸಿದರು.



ಸಂಪತ್ 'ಭಾರತಿ' (೧೯೪೯) ಚಿತ್ರದ ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಈ ಚಿತ್ರದಲ್ಲಿ ಇವರೇ ನಾಯಕ. ನಂತರ ಪೋಷಕ ಪಾತ್ರಗಳಿಗೆ ಜೀವ ತುಂಬಿದರು. ಸುಮಾರು ೧೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದರು. 'ಬಬ್ರುವಾಹನ', 'ಮಯೂರ', 'ಧನಪಿಶಾಚಿ', 'ಬಡವರ ಬಂಧು', 'ಗಿರಿಕನ್ಯೆ', 'ಸ್ವಯಂವರ', 'ಶಂಕರ್‌ಗುರು', 'ಸಿರಿತನಕ್ಕೆ ಸವಾಲ್', 'ಮರೆಯದ ದೀಪಾವಳಿ' ಮುಂತಾದವು ಅವರ ಸ್ಮರಣೀಯ ಅಭಿನಯದ ಚಿತ್ರಗಳು. ೧೯೭೩ರಲ್ಲಿ ನಿಧನರಾದರು.

## ಸಂಪತ್.ಆರ್

ಚಿನ್ನಿ ಸಂಪತ್ ಜೋಡಿ ಎಂದೇ ಹೆಸರುವಾಸಿಯಾದ ನೃತ್ಯ ನಿರ್ದೇಶಕರಲ್ಲಿ ಒಬ್ಬರಾದ ಆರ್.ಸಂಪತ್ ಬಾಲ್ಯದಿಂದಲೇ ನೃತ್ಯದಲ್ಲಿ ವಿಶೇಷ ಅಭಿರುಚಿ ಉಳ್ಳವರು. ನೃತ್ಯ ನಿರ್ದೇಶಕರಾದ ಚಿನ್ನಿಲಾಲ್‌ರೊಂದಿಗೆ ಸೇರಿ ಹಲವು ಚಿತ್ರಗಳಲ್ಲಿ ನೃತ್ಯ ನಿರ್ದೇಶನ ಮಾಡಿದರು. 'ವೀರಕೇಸರಿ', 'ಸಿಪಾಯಿ ರಾಮು', 'ಸಹೋದರರ ಸವಾಲ್', 'ಕುದುರೆ ಮುಖ', 'ಒಂದೇ ರೂಪ ಎರಡು ಗುಣ', 'ಮುಯ್ಯಿಗೆ ಮುಯ್ಯಿ' ಚಿತ್ರಗಳು ಹೆಸರಿಸುವಂಥ ಚಿತ್ರಗಳು. ಚಿನ್ನಿಲಾಲ್ ಅವರೊಂದಿಗೆ ಸೇರಿ 'ವಿಲ್ಲಾ ಹಣಕ್ಕಾಗಿ', 'ಲವ್ ಇನ್ ಬೆಂಗಳೂರು' ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದರು.

## ಸತ್ಯಂ

ಕನ್ನಡ ಚಿತ್ರರಂಗದ ಹೆಸರಾದ ಸಂಗೀತ ನಿರ್ದೇಶಕ. ಮೂಲತಃ ಆಂಧ್ರದವರಾದ .



ಸತ್ಯಂ ಹತ್ತು ವರ್ಷದವರಿದ್ದಾಗಲೇ ಮನೆ ಬಿಟ್ಟು ಕಾಕಿನಾಡದಲ್ಲಿ ಯಂಗ್‌ಮನ್ ಹ್ಯಾಪೀ ಕ್ಲಬ್ ಸೇರಿದರು. ಟಿ.ವಿ.ರಾಜು ಅವರ ಬಳಿ ಸಹಾಯಕರಾಗಿ ಕೆಲಸ ಮಾಡುತ್ತಿದ್ದಾಗಲೇ ಎಂ.ಎಸ್.ನಾಯಕ್ ಅವರ ಪರಿಚಯವಾಗಿ ಮುಂದೆ ಅವರ ನಿರ್ಮಾಣದ 'ಶ್ರೀ ರಾಮಾಂಜನೇಯ ಯುದ್ಧ' ಚಿತ್ರದ ಸಂಗೀತ ನಿರ್ದೇಶಕರಾದರು. ನಂತರ ಸಾಲು ಸಾಲು ಚಿತ್ರಗಳಿಗೆ ಸಂಗೀತ ನಿರ್ದೇಶನ. 'ಒಂದೇ ಬಳ್ಳಿಯ ಹೂಗಳು' ಚಿತ್ರ ಕ್ಕೆ ಮಹಮದ್ ರಫಿ ಅವರಿಂದ ಒಂದು ಹಾಡನ್ನು ಹಾಡಿಸಿದರು.('ನೀ ನೆಲ್ಲಿ ನಡೆವೆ ದೂರ...'). ಅದೇ ಚಿತ್ರದ 'ಅಣ್ಣಾ ನಿನ್ನಾ...', 'ಸರ್ವಮಂಗಳ' ಚಿತ್ರದ 'ಉಂಡಾಡಬಹುದೂ ಓಡಿ ಬಾ ಎನ್ನಪ್ಪಾ...', 'ಗಾಂಧಿನಗರ' ಚಿತ್ರದ 'ನೀ ಮುಡಿದಾ ಮಲ್ಲಿಗೆ...', 'ಕೆರಳಿದ ಸಿಂಹ' ಚಿತ್ರದ 'ಅಮ್ಮಾ ನೀನು ...' ಮೊದಲಾದವು ಸತ್ಯಂ ಅವರ ರಾಗಮಾಧುರ್ಯಕ್ಕೆ ನಿದರ್ಶನಗಳು. ಸುಮಾರು ೧೫೦ಕಕ್ಕೂ ಹೆಚ್ಚು ಕನ್ನಡ ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದ್ದ ಸತ್ಯಂ ತಮ್ಮ ಮಧ್ಯ ವಯಸ್ಸಿನಲ್ಲಿಯೇ ನಿಧನರಾದರು. ಹತ್ತಾರು ತೆಲುಗು ಚಿತ್ರಗಳಿಗೂ ಸಂಗೀತ ನಿರ್ದೇಶಕರಾಗಿದ್ದರು.

## ಸತ್ಯ.ಎಂ.ಎಸ್

ವೃತ್ತಿರಂಗಭೂಮಿಯಲ್ಲಿ ತನ್ನ ಐದನೆಯ ವಯಸ್ಸಿನಲ್ಲೇ ಅಭಿನಯವನ್ನು



ಪ್ರಾರಂಭಿಸಿದವರು ಸತ್ಯ. ಪ್ರಸಿದ್ಧ ವೃತ್ತಿನಾಟಕ ಸಂಸ್ಥೆಗಳಲ್ಲಿ ಮೂವತ್ತು ವರ್ಷಕ್ಕೂ ಹೆಚ್ಚು

ಕಾಲ ಅಭಿನಯಿಸಿದರು. ಸೊಗಸಾಗಿ ಹಾಡಬಲ್ಲವರಾಗಿದ್ದರು. ಮಾ।ಹಿರಣ್ಣಯ್ಯನವರ 'ಭ್ರಷ್ಟಾಚಾರ' ನಾಟಕದಲ್ಲಿ ಕಾನ್‌ಸ್ಟೇಬಲ್ ಕಸ್ತೂರಿ ಪಾತ್ರದಲ್ಲಿ ಸತ್ಯ ಅತ್ಯಂತ ಜನಪ್ರಿಯರಾಗಿದ್ದರು. ಎ.ಎಂ.ಸಮೀಉಲ್ಲಾ ಇವರ 'ಸ್ವರ್ಣಭೂಮಿ' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. (ಅ ಮೊದಲೇ ಒಂದು ತೆರಗೆ ಬರದ ಚಿತ್ರದಲ್ಲಿ ಅಭಿನಯಿಸಿದರು). ಮುಂದೆ ಹಾಸ್ಯನಟನಾಗಿ ಜನಪ್ರಿಯರಾದರು. 'ಸದಾನಂದ' ಇವರ ೫೭ನೆಯ ಚಿತ್ರವಾಗಿತ್ತು. 'ಭಲೇ ಹುಚ್ಚ', 'ಪ್ರೀತಿ ಮಾಡು ತಮಾಷೆ ನೋಡು', 'ಪ್ರೇಮಜ್ವಾಲೆ', 'ಲಕ್ಷ್ಮೀ ಪ್ರಸನ್ನ', 'ಬಂಗಾರದ ಮನೆ' ಮೊದಲಾದವು ಇವರ ಅಭಿನಯದ ಮುಖ್ಯ ಚಿತ್ರಗಳು. ೧೯೭೯ನೇ ಜುಲೈ ತಿಂಗಳಲ್ಲಿ ಎಂ.ಎಸ್.ಸತ್ಯ ತೀವ್ರವಾದ ಅಸ್ವಸ್ಥತೆಯಿಂದ ಕಾಲವಾದರು. ಇವರ ಮಗ ಶಿವಸತ್ಯ ಕಿರುತೆರೆಯಲ್ಲಿ ಸಂಗೀತ ನಿರ್ದೇಶಕರಾಗಿ ಹೆಸರಾಗಿದ್ದಾರೆ. ಇವರ ಸಹೋದರ ಎಂ.ಎಸ್.ಉಮೇಶ್ ಜನಪ್ರಿಯ ಕಲಾವಿದರು.

## ಸತ್ಯಜಿತ್

ಕನ್ನಡದಲ್ಲಿ ಚಿತ್ರರಂಗದ ಪ್ರಮುಖ ಖಳನಟರಲ್ಲಿ ಒಬ್ಬರು. ಶಾಲಾ ಕಾಲೇಜಿನ ದಿನಗಳಲ್ಲಿ ನಾಟಕದಲ್ಲಿ ಪಾತ್ರವಹಿಸುತ್ತಾ ಅಭಿನಯದ ಗೀಳು ಹಚ್ಚಿಕೊಂಡ ಸತ್ಯಜಿತ್, ಮೊದಲು ಚಿತ್ರರಂಗಕ್ಕೆ ಪ್ರವೇಶ ಪಡೆದದ್ದು ಹಿಂದಿ ಚಿತ್ರ 'ಈಶ್ವರ್ ಅಲ್ಲಾ ತೇರೆನಾಮ್' ಮೂಲಕ. ಕೆ.ವಿ. ಜಯರಾಮ್ ಅವರ ನಿರ್ದೇಶನದ 'ವರ್ಣಚಕ್ರ' ಚಿತ್ರದ ಮೂಲಕ ಖಳನಟನಾಗಿ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದರು. ನಂತರ ಹಲವು ಚಿತ್ರಗಳಲ್ಲಿ ಖಳನಟರಾಗಿ ಅವಕಾಶ ಪಡೆದರು. 'ಅಂತಿಮ ತೀರ್ಪು', 'ನ್ಯಾಯಕ್ಕಾಗಿ ನಾನು', 'ಶುಭಮಿಲನ'. 'ನ್ಯಾಯಕ್ಕೆ ಶಿಕ್ಷೆ', 'ಜನನಾಯಕ', 'ಧರ್ಮಪತ್ನಿ', 'ಮೌನ ಹೋರಾಟ', 'ಅಣ್ಣಯ್ಯ', 'ಹಂತಕ', 'ಪ್ರಜಾಶಕ್ತಿ', 'ಕಿಲಾಡಿಗಳು', 'ರೇಂಜರ್',



'ಗಂಡೆದೆ ಭೈರ', ಮುಂತಾದ ೧೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

## ಸತ್ಯನಾರಾಯಣ.ಕೆ.ಎಸ್

ಚಿತ್ರರಂಗದಲ್ಲಿ ಸಾಹಿತಿಯಾಗಿ, ನಿರ್ಮಾಪಕನಾಗಿ, ನಿರ್ದೇಶಕರಾಗಿ ಪರಿಚಿತರಾದ ಸತ್ಯನಾರಾಯಣ ಅವರು ಜಯಲಲಿತ ಅವರನ್ನು ತಮ್ಮ ನಿರ್ಮಾಣದ 'ನನ್ನ ಕರ್ತವ್ಯ' ಚಿತ್ರದ ಮೂಲಕ ೧೯೬೫ರಲ್ಲಿ ಬೆಳ್ಳಿತೆರೆಗೆ ಪರಿಚಯಿಸಿದವರು. ೧೯೭೩ರಲ್ಲಿ 'ಸಹಧರ್ಮಿಣಿ' ಚಿತ್ರಕ್ಕೆ ಸಾಹಿತ್ಯ, ಸಂಭಾಷಣೆ ರಚಿಸಿದರು. ನಂತರ 'ಗೃಹಿಣಿ', 'ನಾನೂ ಬಾಳಬೇಕು', 'ಅಪೂರ್ವ ಕನಸು', 'ಮಿಂಚಿನ ಬೆಳಕಲ್ಲಿ' ಮೊದಲಾದ ಚಿತ್ರಗಳಿಗೆ ಸಂಭಾಷಣೆ, ಸಾಹಿತ್ಯ ಒದಗಿಸಿದರು. 'ಮಿಂಚಿನ ಬೆಳಕಲ್ಲಿ' ಚಿತ್ರವನ್ನು ನಿರ್ದೇಶಿಸಿದರು. ಇವರ ಪುತ್ರಿ



ಸೌಂದರ್ಯ ತೆಲುಗು, ತಮಿಳು ಹಾಗೂ ಕನ್ನಡ ಚಿತ್ರಗಳಲ್ಲಿ ನಟಿಸಿ ಹೆಸರು ಮಾಡಿರುವ ನಾಯಕಿ.

## ಸತ್ಯಭಾಮ ಆರೂರ್

ಹಾಸ್ಯ ಹಾಗೂ ಗಯ್ಯಾಳಿ ಪಾತ್ರಗಳಲ್ಲಿ ಲೀಲಾಜಾಲವಾಗಿ ಅಭಿನಯಿಸುವ ಪೋಷಕ ನಟಿ. ರಂಗಭೂಮಿ ನಂಟಿನ ಅವರ ತಂದೆ ರಘುರಾಮಯ್ಯ ವರದಾಚಾರ್ಯರ ಕಂಪೆನಿ, ಪೀರ್ ಸಾಹೇಬರ ಕಂಪನಿಗಳಲ್ಲಿ



ನಟರಾಗಿದ್ದರು. ಹೆಸರಾಂತ ಗಾಯಕ, ಸಂಗೀತ ನಿರ್ದೇಶಕ ಪಿ.ಕಾಳಿಂಗರಾಯರು ಇವರ ತಾತ. ತಂದೆಯವರ ಜೊತೆ ಹಲಗೇರಿ ಜಟ್ಟಿಪ್ಪನವರ ಕಂಪನಿ. ಪಣಗಿ ಬಾಳಪ್ಪನವರ ಕಂಪನಿ, ಸರ್ವಮಂಗಳ ನಾಟಕ ಕಂಪನಿ, ಗುಡಿಗೇರಿ ಬಸವರಾಜ್‌ರವರ ಕಂಪನಿಗಳಲ್ಲಿ ಪಾತ್ರವಹಿಸುತ್ತಿದ್ದರು. ಈ ನಾಟಕಗಳಲ್ಲಿ ಸತ್ಯಭಾಮ ಅವರ ನಟನೆಯನ್ನು ಕಂಡ ಸಿದ್ಧಲಿಂಗಯ್ಯ ತಮ್ಮ 'ಹೇಮಾವತಿ' ಚಿತ್ರದಲ್ಲಿ ಪಾತ್ರ ನೀಡಿದರು. ನಂತರ 'ಧರ್ಮಸೆರೆ', 'ಗಂಧರ್ವಗಿರಿ', 'ಚಿಕ್ಕನ ಕಣ್ಣು', 'ಲೇಡೀಸ್‌ಹಾಸ್ಟೆಲ್'. 'ಯಾರಿಗೂ ಹೇಳ್ಬೇಡಿ', 'ಗಂಡ ಮನೆ ಮಕ್ಕಳು' ಮೊದಲಾದ ಅನೇಕ ಯಶಸ್ವಿ ಚಿತ್ರಗಳಲ್ಲಿ ಗಯ್ಯಾಳಿ, ಹಾಸ್ಯ ಮೊದಲಾದ ಪಾತ್ರಗಳಲ್ಲಿ ಜನರನ್ನು ರಂಜಿಸಿದ್ದಾರೆ.

## ಸತೀಶ್

ಎಂಬತ್ತರ ದಶಕದಲ್ಲಿ ಬೆಳಕಿಗೆ ಬಂದ ಪೋಷಕ ನಟ ಸತೀಶ್. ದಕ್ಷಿಣ ಭಾರತದ ಫಿಲ್ಮ್ ಛೇಂಬರ್ಸ್‌ನಲ್ಲಿ ತರಬೇತಿ ಕೇಂದ್ರದಲ್ಲಿ



ಅಭಿನಯ ಶಿಕ್ಷಣ ಪಡೆದರು. ರಾಜಕುಮಾರ್ ಅಭಿನಯದ 'ಒಲವು ಗೆಲುವು' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಕರಳಿದ ಸಿಂಹ', 'ಇಂದಿನ ರಾಮಾಯಣ', 'ಮದುವೆ ಮಾಡು ತಮಾಷೆ ನೋಡು'. 'ಭಕ್ತ ಪ್ರಹ್ಲಾದ', 'ಕವಿರತ್ನ ಕಾಳಿದಾಸ', 'ರೆಸ್ತೆರಾಜ', 'ಅದೇಕಣ್ಣು', ಮುಂತಾದ ಜನಪ್ರಿಯ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

## ಸತ್ಯು. ಎಂ. ಎಸ್.

ಮಾಮೂಲಿ ಚಿತ್ರಕತೆಗಳ ಚೌಕಟ್ಟಿನಿಂದ ಹೊರ ನಿಂತು, ತಾತ್ವಿಕ ನೆಲೆಗಟ್ಟನ್ನು



ಹೊಂದಿರುವ ವಸ್ತುನಿಷ್ಠ ನಿರೂಪಣೆಗೆ ಹೆಸರಾದವರು ಎಂ.ಎಸ್.ಸತ್ಯು. ಮೈಸೂರಿನಲ್ಲಿ ಜನಿಸಿದ ಇವರು ಸುಮಾರು ನಾಲ್ಕು ದಶಕಗಳಿಗೂ ಮೀರಿ ರಂಗಭೂಮಿಯಲ್ಲಿ, ಸಿನಿಮಾ ಕ್ಷೇತ್ರದಲ್ಲಿ ಸಕ್ರಿಯವಾಗಿ ದುಡಿದು ಅನುಭವ ಪಡೆದಿದ್ದು, 'ಗರಂ ಹವಾ', 'ಹಕೀಕತ್' ಮೊದಲಾದ ಹಿಂದಿ ಚಿತ್ರಗಳ ನಿರ್ದೇಶಕರಾಗಿ ದುಡಿದಿದ್ದಾರೆ. ಕನ್ನಡದಲ್ಲಿ 'ಕನ್ನೇಶ್ವರ ರಾಮ', 'ಬರ'. 'ಚಿತೆಗೂ ಚಿಂತೆ', 'ಗಳಿಗೆ' ಮೊದಲಾದ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. 'ಬರ' ಚಿತ್ರದ ನಿರ್ದೇಶನಕ್ಕಾಗಿ ೧೯೮೧-೮೨ನೇ ಸಾಲಿನ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದಿದ್ದಾರೆ. 'ಕಾಕನಕೋಟೆ' ಚಿತ್ರದ ಕಲಾನಿರ್ದೇಶಕರಾಗಿ ದುಡಿದಿದ್ದಾರೆ. ಅಂತರ ರಾಷ್ಟ್ರೀಯ ಮಟ್ಟದಲ್ಲಿ ಖ್ಯಾತರಾದ ಎಂ.ಎಸ್.ಸತ್ಯು ಅತ್ಯಾಧುನಿಕ ಯಂತ್ರಗಳನ್ನು ಅಳವಡಿಸಿರುವ ಸಂಕಲನ ಕೇಂದ್ರ 'ಸಿನಿಮಾ ಇತ್ಯಾದಿ'ಯ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ. 'ಮಾಸ್ತಿ ವೆಂಕಟೇಶ ಅಯ್ಯಂಗಾರ್'. 'ಗುಬ್ಬಿ ವೀರಣ್ಣ' ಅವರ ಬಗ್ಗೆ ಸಾಕ್ಷ್ಯ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ರಂಗಭೂಮಿಗೆ ಸಂಬಂಧಿಸಿದ ಅನೇಕ ಪ್ರಶಸ್ತಿಗಳನ್ನು ಪಡೆದಿರುವ ಸತ್ಯು ಅವರು 'ಇಪ್ಟಾ' ಸಂಸ್ಥೆಯ ಹಿರಿಯ ಸದಸ್ಯ. ರಾಜ್ಯ, ರಾಷ್ಟ್ರ, ಅಂತರ ರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಸಲಹಾ ಸಮಿತಿ ಇತ್ಯಾದಿಗಳಲ್ಲಿ ಸದಸ್ಯರಾಗಿದರು. ಹಲವು ಪ್ರಶಸ್ತಿಗಳಿಗೆ ಪಾತ್ರರು.

## ಸದಾನಂದ ಸುವರ್ಣ

ಅನೇಕ ವರ್ಷಗಳಿಂದ ದೂರದ ಮುಂಬಯಿಯಲ್ಲಿಯೇ ನೆಲೆಸಿರುವುದರಿಂದ ಮಾತ್ರವಲ್ಲದೆ ಅವರ ಸಂಕೋಚ ಪ್ರವೃತ್ತಿಯಿಂದ ಕೂಡ ಕನ್ನಡ ಚಿತ್ರಪ್ರೇಮಿಗಳಿಗೆ ಅಷ್ಟೇನು ಪರಿಚಯವಿಲ್ಲದ ನಿಷ್ಠಾವಂತ ನಿರ್ಮಾತೃ-ನಿರ್ದೇಶಕ ಸದಾನಂದ ಸುವರ್ಣ. ಮುಂಬಯಿ ರಂಗಭೂಮಿಯಲ್ಲಿ ನಾಲ್ಕು ದಶಕಗಳಿಂದ ತೊಡಗಿಕೊಂಡಿರುವ ಸುವರ್ಣ ಅವರದು



ಬಹುಮುಖ ಪ್ರತಿಭೆ. ನಾಟ್ಯ ಅಕಾಡೆಮಿಯ ರಂಗನಿರ್ದೇಶನದ ಡಿಪ್ಲೊಮಾ ಪಡೆದಿರುವ ಅವರು ನಾಟಕ ರಚನಕಾರರು, ನಟರು ಹಾಗೂ ನಿರ್ದೇಶಕರು. ರಂಗಭೂಮಿಯಿಂದ ಎಪ್ಪತ್ತರ ದಶಕದಲ್ಲಿ ಚಿತ್ರರಂಗಕ್ಕೆ ಬಂದ ಸುವರ್ಣ ಅವರು ಗಿರೀಶ್ ಕಾಸರವಳ್ಳಿ ನಿರ್ದೇಶನದ ಪ್ರಥಮ ಚಿತ್ರ 'ಘಟಶ್ರಾದ್ಧ'ವನ್ನು ನಿರ್ಮಿಸಿದರು. ಇದು ಕನ್ನಡ ಚಿತ್ರರಂಗದ ಮೈಲಿಗಲ್ಲುಗಳಲ್ಲೊಂದಾಗಿ ೧೯೭೭-೭೮ನೇ ಸಾಲಿನ ರಾಜ್ಯ, ರಾಷ್ಟ್ರೀಯ, ಅಂತರರಾಷ್ಟ್ರೀಯ ಪ್ರಶಸ್ತಿಗಳನ್ನು ಗಳಿಸಿತು. ನಂತರ ಸುವರ್ಣರವರು ಕಾಸರವಳ್ಳಿಯವರೇ ನಿರ್ದೇಶಿಸಿದ ರಾಜ್ಯ ಸರ್ಕಾರದ ೧೯೮೬-೮೭ರ ಪ್ರಥಮ ಅತ್ಯುತ್ತಮ ಚಿತ್ರ ಪ್ರಶಸ್ತಿ ಪಡೆದ 'ತಬರನ ಕಥೆ'ಗೆ ಕಾರ್ಯನಿರ್ವಾಹಕ ನಿರ್ದೇಶಕರಾದರು. ಸುವರ್ಣರವರೇ ಸ್ವಂತವಾಗಿ ನಿರ್ದೇಶಿಸಿದ ಮೊದಲ ಚಿತ್ರ 'ಕುಬಿ ಮತ್ತು ಇಯಾಲ'ಕ್ಕೆ ಕಾಸರವಳ್ಳಿಯವರ ಚಿತ್ರಕಥೆಯಿತ್ತು. ಪೂರ್ಣಚಂದ್ರ ತೇಜಸ್ವಿಯವರ ಕಥೆಯೊಂದನ್ನು ಆಧರಿಸಿ ನಿರ್ಮಾಣವಾದ ಈ ಚಿತ್ರ ರಾಜ್ಯ ಸರ್ಕಾರದಿಂದ ೧೯೮೯-೯೦ನೇ ಸಾಲಿನ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿತು. ಸುವರ್ಣರವರು ಈ ಚಿತ್ರದ ವಸ್ತು ನಿರೂಪಣೆಯಲ್ಲಿ ಅಸಾಧಾರಣ ಸರಳತೆಯನ್ನು ಮತ್ತು ಹಿಡಿತವನ್ನು ತೋರಿದರು. ಈ ಚಿತ್ರ ಕಲ್ಕತ್ತದಲ್ಲಿ ನಡೆದ ಅಂತರ ರಾಷ್ಟ್ರೀಯ ಚಿತ್ರೋತ್ಸವದ ಪನೋರಮ ವಿಭಾಗಕ್ಕೆ ಆಯ್ಕೆಯಾಯಿತು. ಸುವರ್ಣರವರು ದೂರದರ್ಶನಕ್ಕಾಗಿಯೂ ಕೆಲವು ಧಾರಾವಾಹಿಗಳನ್ನು ನಿರ್ಮಿಸಿದ್ದಾರೆ.

## ಸದಾಶಿವ ಬ್ರಹ್ಮಾವರ

ದಕ್ಷಿಣ ಕನ್ನಡ ಜಿಲ್ಲೆಯ ಬ್ರಹ್ಮಾವರದಲ್ಲಿ ಜನನ. ಹುಲಿಮನೆ ಸೀತಾರಾಮಶಾಸ್ತ್ರಿಗಳ 'ಜಯ ಕರ್ನಾಟಕ ನಾಟಕ ಸಂಘ'ದ ಮೂಲಕ ಬಾಲನಟನಾಗಿ ಪ್ರವೇಶ. 'ಕರಾವಳಿ' ಮೂಲಕ ಚಿತ್ರರಂಗ ಪ್ರವೇಶ.



'ಜ್ವಾಲಾಮುಖಿ', ಧ್ರುವತಾರೆ', 'ದೇವತೆ', 'ಪ್ರೇಮಪರ್ವ', 'ಆವೇಶ', 'ಶ್ರುತಿ ಸೇರಿದಾಗ', 'ಹೃದಯ ಪಲ್ಲವಿ' ಸೇರಿದಂತೆ ಸುಮಾರು ೪೦ ಕ್ಕೂ ಹೆಚ್ಚು ಚಿತ್ರಗಳಲ್ಲಿ ಪೋಷಕಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ಗಂಭೀರ ಪಾತ್ರಗಳಲ್ಲಿ ವಿಶೇಷವಾಗಿ ಹೆಸರಾದರು. ಸದಾ ವಿನೀತಭಾವದ ಈ ಕಲಾವಿದ 'ಬೂದಿ ಮುಚ್ಚಿದ ಕೆಂಡ' ಚಿತ್ರದಲ್ಲಿ ನಯವಂಚಕ ಖಳನಾಗಿಯೂ ನಟಿಸಿದರು. ಪೋಷಕ ಪಾತ್ರಗಳಲ್ಲಿ ಸರಳ-ಸಹಜ ಅಭಿನಯ ನೀಡಿ ಆಕರ್ಷಿಸಿದರು.

### ಸದಾಶಿವ ಸಾಲಿಯಾನ್

ತುಳು ಚಿತ್ರರಂಗದ ಪ್ರಮುಖ ನಾಯಕ ನಟ ಹಾಗೂ ಕನ್ನಡ ಚಿತ್ರಗಳ ಖಳನಾಯಕ. ಹುಟ್ಟಿ ಬೆಳೆದದ್ದು ಮುಂಬಯಿ. ಬಿ.ಎ.ಪದವೀಧರ. ತಂದೆ ಪದ್ಮನಾಭ ಸಾಲಿಯಾನ್ ನಾಟಕ ಕಲಾವಿದ. ಬಾಲ್ಯದಲ್ಲಿಯೇ ನಾಟಕ ರಂಗದ ಬಗ್ಗೆ ಅಭಿರುಚಿ. ೧೯೬೯ರಲ್ಲಿ ಕೆ.ಎಸ್.ಟೈಲರ್‌ರವರ 'ಭಾಗ್ಯವಂತೆದಿ'



ತುಳು ಚಿತ್ರದಿಂದ ಚಿತ್ರರಂಗಕ್ಕೆ ಪ್ರವೇಶ. ಮುಂದೆ 'ದಾರದ ಸೀರೆ', 'ಬದ್ಕೆರೆ ಬುಡ್ಲೆ', 'ಪೆಟ್ಟಾಯಿ ಪುಲಿ', 'ಸತ್ಯ ಓಲುಂಡು' ಮೊದಲಾದ ತುಳು ಚಿತ್ರಗಳಲ್ಲಿ ಅಭಿನಯ. ಜಾನಕೀರಾಂ ನಿರ್ದೇಶನದ 'ಅಜ್ಞಾತವಾಸ'ದಿಂದ ಕನ್ನಡ ಚಿತ್ರರಂಗ ಪ್ರವೇಶ. ಖಳನಾಯಕನಾಗಿ ಅವಕಾಶ. 'ಪುಗ್ಸಟ್ಟೆ ಗಂಡ ಹೊಟ್ಟೆ ತುಂಬಾ ಉಂಡ', 'ಭವ್ಯ ಭಾರತ', 'ಸಂಸಾರದ ಗುಟ್ಟು', 'ಇವ್ಳೆಂಥಾ ಹೆಂಡ್ತಿ', 'ಅನಾಥ ರಕ್ಷಕ' ಮೊದಲಾದ ಚಿತ್ರಗಳಲ್ಲಿ ಅಭಿನಯ. ಸ್ವಂತವಾಗಿ 'ಸ್ಟಂಟ್ ಮಾಸ್ಟರ್' ಚಿತ್ರವನ್ನು ತಯಾರಿಸಿದರು.

### ಸಮೀವುಲ್ಲಾ .ಎ.ಎಂ

ಸಮೀವುಲ್ಲಾ ಮೂಲತಃ ಪೆಟ್ರೋಲ್ ಬಂಕ್ ಮಾಲೀಕರು. ಆದರೆ ಕಲಾರಂಗದಲ್ಲಿ ಅಪಾರ ಆಸಕ್ತಿ. ಹಲವರು ಗೆಳೆಯರ ಒತ್ತಾಸೆಯ ಮೇಲೆ ಬಾವಾ ಮೂವೀಸ್ ಚಿತ್ರ ಹಂಚಿಕಾ ಸಂಸ್ಥೆಯನ್ನು ಪ್ರಾರಂಭಿಸಿ ಚಿತ್ರರಂಗದ ನಂಟನ್ನು ಬೆಳೆಸಿಕೊಂಡರು. ೧೯೬೭ರಲ್ಲಿ 'ಲಗ್ನಪತ್ರಿಕೆ' ಮೂಲಕ ನಿರ್ಮಾಪಕರಾದರು. ೧೯೬೯ರಲ್ಲಿ 'ಸುವರ್ಣಭೂಮಿ' ಚಿತ್ರದಿಂದ ನಿರ್ದೇಶಕರೂ ಆಗಿ ಸೈ ಎನಿಸಿಕೊಂಡರು. ಸಮೀವುಲ್ಲಾರವರು ಸುಮಾರು ಮೂವತ್ತು ಚಿತ್ರಗಳನ್ನು ನಿರ್ಮಿಸಿ, ಏಳು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಇವರ ಇತರ ಪ್ರಮುಖ ಚಿತ್ರಗಳು 'ಠಕ್ಕ ಬಿಟ್ರೆ ಸಿಕ್ಕ' (೧೯೭೦), 'ಒಂದೇ ರೂಪ ಎರಡು ಗುಣ' (೧೯೭೫) ಮತ್ತು 'ಚಿನ್ನ ನಿನ್ನ ಮುದ್ದಾಡುವೆ' (೧೯೭೭).



ಹಿಂದಿ ಚಿತ್ರರಂಗದ ಸಲೀಲ್ ಚೌಧರಿ ಮತ್ತು ರಾಮಲಾಲ್ ಸೆಹ್ರಾರನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯ ಮಾಡಿಸಿಕೊಟ್ಟವರು ಸಮೀವುಲ್ಲಾ. ಅವರು ನಿರ್ಮಿಸಿ ನಿರ್ದೇಶಿಸಿದ 'ಸಂಶಯಫಲ' ಚಿತ್ರದ ಸಂಗೀತ ನಿರ್ದೇಶನಕ್ಕಾಗಿ ಸಲೀಲ್ ಚೌಧರಿಯವರಿಗೆ ೧೯೭೦-೭೧ರ ಕರ್ನಾಟಕ ರಾಜ್ಯ ಸರ್ಕಾರದ ಪ್ರಶಸ್ತಿ ಲಭಿಸಿತು.

### ಸರಿತಾ

೮೦ರ ದಶಕದಲ್ಲಿ ಅನೇಕ ಕನ್ನಡ ಚಿತ್ರಗಳಲ್ಲಿ ಅಭಿನಯಿಸಿ ಕನ್ನಡಿಗರಿಗೂ ಪ್ರಿಯವಾದ ಕಲಾವಿದೆ ಸರಿತಾ ದಕ್ಷಿಣ ಭಾರತ ಚಿತ್ರರಂಗದ ಅಪರೂಪದ ಪ್ರತಿಭೆಗಳಲ್ಲೊಬ್ಬರು. ಆಕೆಯ ಹೆಚ್ಚುಗಾರಿಕೆಯೆಂದರೆ ಕನ್ನಡ ಭಾಷೆಯನ್ನು ನಿರರ್ಗಳವಾಗಿ ಕಲಿತಿದ್ದು. ಮೂಲತಃ ತೆಲುಗಿನವರಾದ ಅವರ ವಿಶಿಷ್ಟ ಪ್ರತಿಭೆ ಮೊದಲು ಚಿತ್ರಪ್ರೇಮಿಗಳಿಗೆ



ಪರಿಚಯವಾಗಿದ್ದು ಕೆ.ಬಾಲಚಂದರ್‌ರವರ 'ಮರೋ ಚರಿತ್ರ'ದಲ್ಲಿ. ಯಾವುದೇ ರೀತಿಯ ಪಾತ್ರವಾದರೂ ಅದಕ್ಕೆ ಜೀವಕಳೆ ತುಂಬುವ ಶಕ್ತಿ ಸರಿತಾ. ಸರಿತಾ ಮೊದಲು ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದ್ದು ರಾಜಕುಮಾರ್ ಅಭಿನಯದ 'ಕೆರಳಿದ ಸಿಂಹ' ಚಿತ್ರದಲ್ಲಿ. ನಂತರ ಆ ಜೋಡಿ 'ಚಲಿಸುವ ಮೋಡಗಳು', 'ಹೊಸ ಬೆಳಕು', 'ಕಾಮನಬಿಲ್ಲು' ನಂತಹ ಉತ್ತಮ ಚಿತ್ರಗಳಿಗೆ ಕಾರಣವಾಯಿತು. ಕಂಠದಾನ ಕಲಾವಿದೆಯೂ ಆಗಿ ಗಮನ ಸೆಳೆದರು. 'ಮಲಯ ಮಾರುತ', 'ಎರಡು ರೇಖೆಗಳು', 'ಮುಗಿಲ ಮಲ್ಲಿಗೆ', 'ಮೌನಗೀತೆ' ಮತ್ತು 'ಸಂಕ್ರಾಂತಿ' ಸರಿತಾರಿಗೆ ಭಾರಿ ಹೆಸರು ಗಳಿಸಿಕೊಟ್ಟ ಇತರ ಚಿತ್ರಗಳು. 'ಸಂಕ್ರಾಂತಿ'ಯಲ್ಲಿ ಆಕೆ ಬಸ್ನೇರಿ ಪಾತ್ರದಲ್ಲಿ ನೀಡಿದ ಅಭಿನಯಕ್ಕಾಗಿ ಆಕೆಗೆ ೧೯೮೮-೮೯ನೇ ಸಾಲಿನ ಅತ್ಯುತ್ತಮ ನಟಿ ರಾಜ್ಯ ಸರ್ಕಾರದ ಪ್ರಶಸ್ತಿ ಲಭ್ಯವಾಯಿತು. 'ಭಕ್ತ ಪ್ರಹ್ಲಾದ' ಚಿತ್ರದ ಕಯಾಧುವಾಗಿ ಆಕೆ ಗಮನ ಸೆಳೆದರು.

### ಸರೋಜಾ.ಎಚ್.ಪಿ

ಐವತ್ತರ ದಶಕದ ಪೋಷಕ ನಟಿಯರಲ್ಲಿ ಪ್ರಮುಖರಾದವರು. ಕಲಾರಾಧಕರ ವಂಶದಿಂದ ಬಂದವರು. ತಂದೆ ಸಿ.ಬಿ.ಪಿ.ಚಾಂದ್‌ರಿಗೆ ವ್ಯಾಪಾರವೇ ವೃತ್ತಿ, ಆದರೆ ಕಲಾ ಪೋಷಕರು. ಸರೋಜಾ ಗುಬ್ಬಿ ನಾಟಕ ಮಂಡಳಿಯಲ್ಲಿ ತರಬೇತಿ ಪಡೆದರು. ಬಾಲಕೃಷ್ಣ ಅವರ ನೆರವು ಪಡೆದು ರಂಗಪ್ರವೇಶ ಮಾಡಿದರು. ಗುಬ್ಬಿ ಕಂಪನಿಯ



ಬಹುತೇಕ ಪೌರಾಣಿಕ ನಾಟಕಗಳಲ್ಲಿ ಅಭಿನಯ. ಕೃಷ್ಣಲೀಲೆಯ ಕೃಷ್ಣನಾಗಿ ಅಪಾರ ಜನಪ್ರಿಯತೆ. ಬಾಲಕೃಷ್ಣ ಅವರೇ ನಿಂತು ದಿನಕ್ಕೊಂದು ಗಂಟೆ ಅಭಿನಯ ಹೇಳಿಕೊಡುತ್ತಿದ್ದರು. 'ಭಾರತಿ' ಚಿತ್ರದಿಂದ ಚಿತ್ರರಂಗ ಪ್ರವೇಶ. 'ದೈವಲೀಲೆ', 'ಅಮರ ಶಿಲ್ಪಿ ಜಕಣಾಚಾರಿ', 'ಶಿವಗಂಗೆ ಮಹಾತ್ಮೆ', 'ಸತಿ ನರ್ಮದಾ', 'ನಾದಿನಿ', 'ಸರ್ವಜ್ಞ ಮೂರ್ತಿ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ರಂಗಭೂಮಿಯಷ್ಟು ಜನಪ್ರಿಯತೆ ಸಿನಿಮಾದಲ್ಲಿ ಸಿಗಲಿಲ್ಲ ಎನ್ನಬಹುದಾಗಿದೆ. ಇವರ ಹಿರಿಯ ಸಹೋದರಿ ರಾಜಕುಮಾರಿ ಚಲನಚಿತ್ರ ಕಲಾವಿದೆ. ಕಿರಿಯ ಸಹೋದರಿ ಗೀತಾ ಗಾಯಕಿ, ನಟಿ ಮತ್ತು ಸಂಗೀತ ನಿರ್ದೇಶಕ ಉಪೇಂದ್ರಕುಮಾರ್‌ರ ಪತ್ನಿ.

### ಸರೋಜಾದೇವಿ .ಬಿ

ದಕ್ಷಿಣ ಭಾರತದ ಬಹುತೇಕ ನಾಯಕರ ಜೊತೆ ನಟಿಸಿರುವ ಕಲಾವಿದೆ. ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕು ದಶಾವಾರ ಗ್ರಾಮದಲ್ಲಿ ಜನನ. ಬೆಂಗಳೂರಿನಲ್ಲಿ ಬಾಲ್ಯದ ವಿದ್ಯಾಭ್ಯಾಸ. ಸಂಗೀತ, ನೃತ್ಯಗಳತ್ತ ಅಪಾರ ಒಲವು. ಹೊನ್ನಪ್ಪ ಭಾಗವತರ್ ಇವರನ್ನು ಕಂಡು 'ಮಹಾಕವಿ ಕಾಳಿದಾಸ' (೧೯೫೫) ಚಿತ್ರದಲ್ಲಿ ನಾಯಕಿಯಾಗುವ ಅವಕಾಶ ನೀಡಿದರು. ಈ ಮೊದಲು 'ಶ್ರೀರಾಮ



ಪೂಜಾ' ಚಿತ್ರದಲ್ಲಿ ಸಣ್ಣ ಪಾತ್ರವೊಂದನ್ನು ನಿರ್ವಹಿಸಿದ್ದರು. 'ಮಹಾಕವಿ ಕಾಳಿದಾಸ'ದಲ್ಲಿನ ಅಭಿನಯ ನಾಯಕಿಯಾಗಿ ನೆಲೆ ನಿಲ್ಲಿಸಿತು. ನಂತರದ 'ಅಣ್ಣ ತಂಗಿ' ಚಿತ್ರದಲ್ಲಿ ಇವರ ಮಾತುಗಾರಿಕೆ, ಅಭಿನಯ ಜನರ ಮನಸ್ಸಿನಲ್ಲಿ ನಿಂತು ಹೋಯಿತು. ಕನ್ನಡವೇ ಅಲ್ಲದೆ ತೆಲುಗು, ಹಿಂದಿ, ತಮಿಳು ಭಾಷೆಗಳಲ್ಲೂ ನಾಯಕಿ ನಟಿಯಾದರು. ಕನ್ನಡದಲ್ಲಿ ರಾಜಕುಮಾರ್, ಕಲ್ಯಾಣ್‌ಕುಮಾರ್, ಉದಯಕುಮಾರ್, ತಮಿಳಿನಲ್ಲಿ ಎಂ.ಜಿ.ರಾಮಚಂದ್ರನ್, ಶಿವಾಜಿಗಣೇಶನ್, ಜೆಮಿನಿ ಗಣೇಶನ್, ತೆಲುಗಿನಲ್ಲಿ ಎ.ನಾಗೇಶ್ವರರಾವ್, ಎನ್.ಟಿ.ರಾಮರಾವ್ ಮುಂತಾದ ನಾಯಕರೊಂದಿಗೆ ನಾಯಕಿಯಾಗಿ ಅಭಿನಯಿಸಿರುವ ಹೆಗ್ಗಳಿಕೆ ಇವರದು. ದಿಲೀಪ್ ಕುಮಾರ್, ರಾಜೇಂದ್ರಕುಮಾರ್, ಶಮ್ಮಿ ಕಪೂರ್, ಸುನಿಲ್ ದತ್ ಮುಂತಾದ ನಟರ ಜೊತೆಗೆ ಅಭಿನಯಿಸಿದರು. ೫೦ಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲಿ ನಟಿಸಿರುವ ಇವರು 'ಕಿತ್ತೂರು ಚೆನ್ನಮ್ಮ' ಚಿತ್ರದಲ್ಲಿ ನೀಡಿದ ಅಭಿನಯ ಎಂದೂ ಮರೆಯಲಾಗದಂಥದ್ದು. ಕನ್ನಡದ ಮೊದಲ ವರ್ಣ ಚಿತ್ರ 'ಅಮರ ಶಿಲ್ಪಿ ಜಕಣಾಚಾರಿ'ಯ ನಾಯಕಿಯೂ ಹೌದು. ೧೯೬೭ರಲ್ಲಿ ಶ್ರೀಹರ್ಷ ಅವರನ್ನು ಕೈಹಿಡಿದು ಗೃಹಿಣಿಯಾದರು. 'ಭಾಗ್ಯವಂತರು', 'ಸಹಧರ್ಮಿಣಿ', 'ನ್ಯಾಯವೇ ದೇವರು', 'ಶ್ರೀನಿವಾಸಕಲ್ಯಾಣ', 'ಬಬ್ರುವಾಹನ' ಮುಂತಾದ ಚಿತ್ರಗಳಲ್ಲಿ ಸಹಜಾಭಿನಯ ನೀಡಿದರು. ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಕಥಾಸಂಗಮ' ಚಿತ್ರದ 'ಅತಿಥಿ'ಯಲ್ಲಿನ ಹಾಸ್ಟೆಲ್ ವಾರ್ಡನ್ ಪಾತ್ರದಲ್ಲಿ ಹಾಗೂ 'ಲಕ್ಷ್ಮೀ ಸರಸ್ವತಿ' ಚಿತ್ರದಲ್ಲಿನ ದ್ವಿಪಾತ್ರಾಭಿನಯ ಆಕೆಯ ಅಭಿನಯದ ವಿಭಿನ್ನ ಮಜಲುಗಳು. ಉಮಾಕಾಂತ್ ನಿರ್ದೇಶನದ 'ಅನುರಾಗ ಸಂಗಮ', ರಾಕ್‌ಲೈನ್ ವೆಂಕಟೇಶ್ ನಿರ್ಮಿಸಿದ 'ಅಗ್ನಿ ಐ.ಪಿ.ಎಸ್' ಚಿತ್ರಗಳಲ್ಲಿ ಅಭಿನಯಿಸಿದರು. ಕರ್ನಾಟಕ ಚಲನಚಿತ್ರೋದ್ಯಮ ಅಭಿವೃದ್ಧಿ ನಿಗಮ ಹಾಗೂ ಕಂಠೀರವ ಸ್ಟುಡಿಯೋ ಅಧ್ಯಕ್ಷರಾಗಿದ್ದರು. ರಾಜ್ಯ ಹಾಗೂ ರಾಷ್ಟ್ರ ಚಲನಚಿತ್ರ ಪ್ರಶಸ್ತಿ ಸಲಹಾ ಸಮಿತಿಗಳಲ್ಲಿ ಕೆಲಸ ಮಾಡಿದರು. ಪನೋರಮಾ ಆಯ್ಕೆ ಸಮಿತಿಯ ಸದಸ್ಯರಾದರು. ಕೇಂದ್ರ ಸೆನ್ಸಾರ್ ಮಂಡಲಿ ಸದಸ್ಯರು. 'ಪದ್ಮಶ್ರೀ' (೧೯೬೯), 'ಪದ್ಮಭೂಷಣ' (೧೯೯೧) ಪ್ರಶಸ್ತಿ ಸಂದಿದೆ. ನೂರಾರು ಬಿರುದು ಬಾವಲಿಗಳು, ಸನ್ಮಾನಗಳು ಬಂದಿವೆ. ವಿದ್ಯಾ ಇಲಾಖೆಗೆ ಸಾಹಿತ್ಯ ಸಂಸ್ಕೃತಿಗೆ ಇವರ ಧಾರಾಳವಾದ ಕೊಡುಗೆಯುಂಟು. ದಕ್ಷಿಣ ಭಾರತದಲ್ಲೇ ಜನಪ್ರಿಯ ನಾಯಕಿಯಾಗಿ ಬೆಳಗಿದ ಕನ್ನಡ ಕಲಾವಿದೆ ಇವರು.

### ಸರೋಜಿನಿ.ಸಿ.ಎಸ್

ಅರುವತ್ತರ ದಶಕದ ಹಿನ್ನೆಲೆ ಗಾಯಕಿ. ೧೯೬೫ರಲ್ಲಿ ಬಿಡುಗಡೆಯಾದ 'ಮಹಾಕವಿ ಕಾಳಿದಾಸ' ಚಿತ್ರದ ಮೂಲಕ ಹಿನ್ನೆಲೆ ಗಾಯಕಿಯಾಗಿ ಚಿತ್ರರಂಗ ಪ್ರವೇಶ. ಮೂಲತಃ ಮೈಸೂರಿನವರು, ನಿರ್ದೇಶಕ ಆರೂರು ಪಟ್ಟಾಭಿ ಅವರನ್ನು ವಿವಾಹವಾಗಿ ಹಿನ್ನೆಲೆ ಗಾಯಕಿಯಾಗುವ ಸಲುವಾಗಿ ಮದರಾಸಿಗೆ ಹೋಗಿ ನೆಲೆಸಿದರು.



ಶಂಕರ್‌ಸಿಂಗ್ ಅವರ 'ಶಿವಶರಣೆ ನಂಬಿಯಕ್ಕ' ಚಿತ್ರದಿಂದ ಆರಂಭಿಸಿ ಮಹಾತ್ಮ ಪಿಕ್ಚರ್ಸ್‌ನ ನಾಲ್ಕೈದು ಚಿತ್ರಗಳಿಗೆ ಹಾಡಿದರು. 'ಶ್ರೀ ಶೈಲ ಮಹಾತ್ಮೆ', 'ಸರ್ವಜ್ಞ ಮೂರ್ತಿ', 'ಮಂತ್ರಾಲಯ ಮಹಾತ್ಮೆ' ಮುಂತಾದವು ಹೆಸರಿಸಬಹುದಾದ ಚಿತ್ರಗಳು. 'ಕರಿಯಣಿ ಕಟ್ಟಿಂದಿ ಕಂಡನೆ' ಎಂಬ ತುಳು ಚಿತ್ರಕ್ಕೆ ಸಂಗೀತ ನಿರ್ದೇಶನವನ್ನೂ ಮಾಡಿದರು. ಇವರು ಹಾಡಿದ ಜನಪದ ಗೀತೆಗಳು ಎಚ್.ಎಂ.ವಿ ರಿಕಾರ್ಡ್‌ಗಳ ಮೂಲಕ ಬಹಳ ಜನಪ್ರಿಯವಾಗಿವೆ.

### ಸರ್ವಮಂಗಳ

ರಂಗನಟ ಮಲ್ಲಿಕಾರ್ಜುನಪ್ಪನವರ ಮಗಳು. ಕನ್ನಡ ಚಿತ್ರರಂಗದ ಖ್ಯಾತ ಕಂಠದಾನ ಕಲಾವಿದೆ. ನಟಿ ಹಾಗೂ ವೃತ್ತಿ ರಂಗಭೂಮಿ ಕಲಾವಿದೆ. ಉತ್ತಮ ಗಾಯಕಿ. ಬಾಲ ನಟಿಯಾಗಿ 'ಪ್ರತಿಮಾ', 'ನಮ್ಮ ಮಕ್ಕಳು' ಮೊದಲಾದ ಚಿತ್ರಗಳಲ್ಲಿ ಅಭಿನಯ. ಚಿಕ್ಕವಯಸ್ಸಿನಲ್ಲೇ ಡಬ್ಬಿಂಗ್ ನೋಡುವ ಅವಕಾಶ ದೊರೆತು, ಕಂಠದಾನ ಕಲೆಯ ಮೇಲೆ ಆಸಕ್ತಿ ಬೆಳೆದು ಕಂಠದಾನ



ಕಲಾವಿದೆಯಾಗಿ ಜನಪ್ರಿಯರಾದರು. ಪರಭಾಷಾ ನಟಿಯರ ಆದರದಿಂದ ಕೈ ತುಂಬಾ ಕೆಲಸ ಪಡೆದ ಸರ್ವಮಂಗಳಾ 'ಇಂದ್ರಜಿತ್' ಚಿತ್ರದ ಮೂಲಕ ಭಾರತೀಯ ಚಿತ್ರರಂಗದ ಕಂಠದಾನ ವಿಭಾಗದಲ್ಲಿ ಸಾರ್ವಕಾಲಿಕ ದಾಖಲೆ ಮಾಡಿದ್ದಾರೆ. ಒಂದೇ ಚಿತ್ರದಲ್ಲಿ ನಾಲ್ಕು ಪಾತ್ರಗಳಿಗೆ ಕಂಠದಾನ ಮಾಡಿದ್ದರು. ಬಹುತೇಕ ನಾಯಕಿಯರ ಪಾತ್ರಗಳಿಗೆ ಈಕೆಯ ಭಾವಪೂರ್ಣ ಮಾತುಗಳೇ ಅಭಿನಯದ ಜೀವದಾನ ಮಾಡಿವೆ. ನಟನೆಗೂ ಹೊರಳಿ 'ಇದು ಸಾಧ್ಯ', 'ಗಂಡು ಗೂಳಿಗಳು', 'ಉತ್ತರ ಭೂಪ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ಹಾಸ್ಯನಟ ಡಿಂಗ್ರಿನಾಗರಾಜ್ ಅವರೊಡನೆ ವಿವಾಹ. ಯಶಸ್ಸಿನ ಉತ್ತುಂಗದಲ್ಲಿದ್ದಾಗಲೇ ವಿವಾದದ ಸುಳಿಗೆ ಸಿಲುಕಿದರು. ಜನಪ್ರಿಯ ಕಲಾವಿದೆಯರನೇಕರಿಗೆ ಕಂಠ ನೀಡಿ ಜೀವ ಕೊಡುತ್ತಿದ್ದ ಕಲಾವಿದೆ, ದುರಂತದಲ್ಲಿ ಮರಣಿಸಿದರು.

### ಸಾಂಬಶಿವಯ್ಯ

ಬಹುಕಾಲದಿಂದ ಸಂಚಾರಿ ಚಿತ್ರಮಂದಿರ ನಡೆಸಿಕೊಂಡು ಬಂದವರು ಸಾಂಬಶಿವಯ್ಯ. ಇವರ ಮಕ್ಕಳು ಈಗಲೂ 'ರವಿ ಟೂರಿಂಗ್ ಟಾಕೀಸ್' ಹೆಸರಿನಲ್ಲಿ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಸಾಂಬಶಿವಯ್ಯನವರಿಗೆ ಅವರ ಚಿಕ್ಕಪ್ಪ ನರಸಿಂಗರಾಯರು ನಡೆಸುತ್ತಿದ್ದ ಸತ್ಯನಾರಾಯಣ ಟೂರಿಂಗ್ ಟಾಕೀಸ್ ಈ ವೃತ್ತಿಗೆ ಬರಲು ಪ್ರೇರಣೆ. ಸಾಂಬಶಿವಯ್ಯನವರು ಸಂಚಾರಿ ಚಿತ್ರಮಂದಿರಗಳ ಸಲುವಾಗಿ ಪ್ರಬಲವಾದ ಹೋರಾಟ ನಡೆಸಿದ ವ್ಯಕ್ತಿ. ಚಿರಕಾಲ ಆ ಕ್ಷೇತ್ರದ ಜನ ಅವರಿಗೆ ಕೃತಜ್ಞರಾಗಿರಬೇಕು.



ಪ್ರಾರಂಭದಲ್ಲಿ ಸಂಚಾರಿ ಚಿತ್ರಮಂದಿರಗಳಿಗೆ ಕೇವಲ ಮೂರು ತಿಂಗಳಿಗೆ ಲೈಸೆನ್ಸ್ ಇರುತ್ತಿತ್ತು. ಇದನ್ನು ಹೆಚ್ಚಿಸಲು ಸಾಂಬಶಿವಯ್ಯನವರು ಕೋರ್ಟ್ ಮೆಟ್ಟಿಲು ಹತ್ತಿದರು. ಒಂದು, ಎರಡು, ಮೂರುವರ್ಷಗಳವರೆಗೆ ಲೈಸೆನ್ಸ್ ವಿಸ್ತರಿಸಲು ಸಾಂಬಶಿವಯ್ಯನವರ ಹೋರಾಟವೇ ಕಾರಣ. ಈಗ ಟೆಂಟ್‌ಗಳಿದ್ದ ಸ್ಥಳದಲ್ಲೇ ಆರೆಖಾಯಂ ಚಿತ್ರಮಂದಿರಗಳು ಬಂದಿವೆಯೆಂದರೆ ಅದು ಸಾಂಬಶಿವಯ್ಯನವರು ಸುಪ್ರೀಂಕೋರ್ಟ್‌ವರೆಗೆ ಎಡೆಬಿಡದೆ ಅಲೆದಾಡಿದ್ದರ ಫಲ. ಸರ್ಕಾರ ಈ ಕ್ಷೇತ್ರದತ್ತ ಗಮನ ಹರಿಸಿ ನೀತಿ, ನಿಯಮಾವಳಿ ರೂಪಿಸುವಷ್ಟು ಗಮನ ಸೆಳೆದರು ಸಾಂಬಶಿವಯ್ಯ. ಉದ್ಯಮ ಅವರಿಗೆ ಋಣಿಯಾಗಿದೆ.

### ಸಾಧು ಕೋಕಿಲ

ತೊಂಬತ್ತರ ದಶಕದಲ್ಲಿ ತೆರೆಗೆ ಪರಿಚಿತರಾದ ಸಂಗೀತ ನಿರ್ದೇಶಕ ಹಾಗೂ ಹಾಸ್ಯನಟರಾದ ಸಾಧುಕೋಕಿಲ ಹುಟ್ಟಿದ್ದು ೧೯೬೬ರಲ್ಲಿ ಬೆಂಗಳೂರಿನಲ್ಲಿ. ಮೂಲ ಹೆಸರು ಸಹಾಯಶೀಲನ್. ಎಸ್.ಎಸ್.ಎಲ್.ಸಿ.ವರೆಗಿನ ವಿದ್ಯಾಭ್ಯಾಸ. ಬಾಲ್ಯದಿಂದಲೂ ಸಂಗೀತದ ಕಡೆಗೆ ಒಲವಿದ್ದ ಸಹಾಯಶೀಲನ್ ತಾವೇ ಕೀಬೋರ್ಡ್ ಬಳಸುವುದನ್ನು ಕಲಿತರು. ನಂತರ ಹೆಚ್ಚಿನ ಜ್ಞಾನಕ್ಕಾಗಿ ಜೇಮ್ಸ್ ಎಂಬುವರ ಬಳಿ ಕೆಲವು ವರ್ಷಗಳ ಕಾಲ ಸಂಗೀತಾಭ್ಯಾಸ ಮಾಡಿದರು. ನಿರ್ದೇಶಕ, ನಟ ಉಪೇಂದ್ರ ನಿರ್ದೇಶನದ 'ಶ್!' ಚಿತ್ರದ ಮೂಲಕ ೧೯೯೩ರಲ್ಲಿ ಚಿತ್ರರಂಗಕ್ಕೆ ಸಂಗೀತ ನಿರ್ದೇಶಕನಾಗಿ ಪರಿಚಿತರಾದರು. ಸಂಗೀತ ನಿರ್ದೇಶನದ ಜೊತೆ ಜೊತೆಗೆ ಹಾಸ್ಯನಟರಾಗಿಯೂ ಚಿತ್ರರಂಗ ಪ್ರವೇಶಿಸಿದರು. ಸಂಗೀತದಲ್ಲಿ ಹೊಸ ಹೊಸ ಪ್ರಯೋಗಗಳಿಂದ ಗಮನ ಸೆಳೆದರೆ, ನಟನೆಯಲ್ಲಿ ತಮ್ಮದೇ ಆದ ವಿಚಿತ್ರ ಮ್ಯಾನರಿಸಂಗಳಿಂದ ಜನಪ್ರಿಯರಾದರು. ರಾಷ್ಟ್ರ ಪ್ರಶಸ್ತಿ ಪಡೆದ ಕೊಡವ ಭಾಷೆಯ 'ಮಂದಾರ ಪೂ' ಚಿತ್ರಕ್ಕೂ ಇವರ ಸಂಗೀತ ನಿರ್ದೇಶನವಿತ್ತು. ಗೀತರಚನೆಗಾಗಿ ದೊಡ್ಡರಂಗೇಗೌಡರಿಗೆ ರಾಜ್ಯ ಪ್ರಶಸ್ತಿ ತಂದಿತ್ತ 'ಕಾವ್ಯ' ಚಿತ್ರದ ಸಂಗೀತ ನಿರ್ದೇಶನ ಕೂಡ ಇವರದೇ. 'ಕರ್ಫ್ಯೂ', 'ಗಂಡುಗಲಿ', 'ಹುಲಿಯಾ', 'ಧಣಿ', 'ಸಿದ್ದಾರ್ಥ', 'ಸವ್ಯಸಾಚಿ', 'ನಂಬರ್ ಒನ್' ಮುಂತಾದ ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ಇವರು ನಾಯಕರಾಗಿ ಅಭಿನಯಿಸಿದ ಚಿತ್ರಗಳು 'ತರೀಕೆರೆ ಏರಿ ಮೇಲೆ', 'ಜೇಬೂಂಬಾ', 'ಅವಳೇ ನನ್ನ ಹುಡುಗಿ' ಮುಂತಾದವು. ಹಾಸ್ಯನಟರಾಗಿ 'ಹಲೋ ಯಮ', 'ಶ್!', 'ಗಂಗಾ ಯಮುನಾ', 'ಓ ಮಲ್ಲಿಗೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ನಿರ್ಮಾಪಕರಾಗಿ 'ನಂಬರ್ ಒನ್' ಚಿತ್ರವನ್ನು ನಿರ್ಮಿಸಿದ್ದಾರೆ. ಚಿತ್ರ ತನ್ನ ವಿನೂತನ ನಿರೂಪಣೆಯಿಂದ ಮೆಚ್ಚುಗೆ ಪಡೆಯಿತು. ಸುಮಾರು ೭೫ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕೋಕಿಲ ಎನ್ನುವ ಹೆಸರಿನಿಂದ ಹಲವು ಕ್ಯಾಸೆಟ್‌ಗಳನ್ನು



ಬಿಡುಗಡೆ ಮಾಡಿದ್ದ ಇವರು ಉಪೇಂದ್ರ ಅವರ ಸಲಹೆಯ ಮೇರೆಗೆ ಸಾಧು ಕೋಕಿಲಾ ಎಂದು ಬದಲಾದರು.

### ಸಾಯಿಕುಮಾರ್

ಸಮಾಜ ಘಾತುಕ ಶಕ್ತಿಗಳ ಮೇಲೆ ಯಮಧೈರ್ಯದಿಂದ ಕತ್ತಿ ಕಟ್ಟಿ ನಿಂತು ವೈಯಕ್ತಿಕವಾಗಿ ಅಪಾರವಾದ ತೊಂದರೆಗಳಿಗೆ, ಅಘಾತಗಳಿಗೆ ಗುರಿಯಾದರೂ ಮಿಸುಕದೆ ಹೋರಾಡುವ ಪಾತ್ರಗಳಲ್ಲಿ 'ಟೈಪ್' ಆಗಿರುವ ಸಾಯಿಕುಮಾರ್ ಕನ್ನಡದಲ್ಲಿ ಹತ್ತಾರು ಚಿತ್ರಗಳಲ್ಲಿ ಅಭಿನಯಿಸಿ ತಮ್ಮದೇ ಆದ ಅಭಿಮಾನಿಗಳನ್ನು ಗಳಿಸಿಕೊಂಡರು. ೧೯೬೧ರಲ್ಲಿ ಮದ್ರಾಸಿನಲ್ಲಿ ಜನಿಸಿದರು. ಎಂ.ಎ.ಪದವೀಧರ ಸಾಯಿಕುಮಾರ್ ತೆಲುಗು 'ದೇವುಡು ಚೇಸಿನ ಪೆಳ್ಳಿ' ಮುಖಾಂತರ ಬಾಲನಟರಾಗಿ ಚಿತ್ರರಂಗವನ್ನು



ಪ್ರವೇಶಿಸಿದರು. ತೆಲುಗು ಚಿತ್ರ 'ಕಲಿಕಾಲಂ' ಇವರು ನಾಯಕರಾಗಿ ಅಭಿನಯಿಸಿದ ಮೊದಲ ಚಿತ್ರ. 'ಕುಂಕುಮ ಭಾಗ್ಯ'. 'ಪೊಲೀಸ್ ಸ್ಟೋರಿ', ಅಗ್ನಿ.ಐ.ಪಿ.ಎಸ್', 'ಆಯುಧ', 'ಸೆಂಟ್ರಲ್ ಜೈಲ್', 'ಪೊಲೀಸ್ ಬೇಟೆ', 'ಧೈರ್ಯ', 'ಅಂಡರ್ ವರ್ಲ್ಡ್' ಇಂತಹ ಒಂದೇ ಜಾಡಿನ ಅನೇಕ ಕನ್ನಡ ಚಿತ್ರಗಳಲ್ಲಿ ಸಾಯಿಕುಮಾರ್ ನಾಯಕರು. ಎಲ್ಲ ಚಿತ್ರಗಳಲ್ಲಿಯೂ ತಮ್ಮ ಎತ್ತರದ ಧ್ವನಿಯ ಭಾಷಣಗಳಿಂದ ಒಂದು ವರ್ಗದ ಪ್ರೇಕ್ಷಕರಿಗೆ ವಿಶೇಷವಾಗಿ ಪ್ರಿಯವಾದರು. ಮೂಲತಃ ತೆಲುಗಿನ ಕಂಠದಾನ ಕಲಾವಿದರಾಗಿದ್ದರಿಂದ ಸಂಭಾಷಣೆ ಹೇಳುವಾಗಿನ ಟೈಮಿಂಗ್‌ನಿಂದಾಗಿ ಪ್ರೇಕ್ಷಕನಿಗೆ ಭಾವಸ್ಪಂದನವಾಗುತ್ತಿತ್ತು. ಅದೇ ಇವರ ವೈಶಿಷ್ಟ್ಯ.

### ಸಾಯಿಪ್ರಕಾಶ್

೧೯೯೧-೨೦೦೦ದ ದಶಕದಲ್ಲಿ ಒಂದರ ಹಿಂದೊಂದರಂತೆ ವರ್ಷಕ್ಕೆ ಹತ್ತಾರು ಚಿತ್ರಗಳನ್ನು ನಿರ್ದೇಶಿಸಿ ಕನ್ನಡ ಚಿತ್ರರಂಗವನ್ನು ವಿಸ್ಮಯಗೊಳಿಸಿದ ಸಾಯಿಪ್ರಕಾಶ್ ಮೂಲತಃ ಆಂಧ್ರದವರು. ಗುಂಟೂರಿನ ಹಿಂದೂ ಕಾಲೇಜಿನಿಂದ ವಿಜ್ಞಾನ ಪದವಿ ಪಡೆದ ಅವರು ತಮ್ಮ ವೃತ್ತಿಗಾಗಿ ಆರಿಸಿಕೊಂಡಿದ್ದು ಚಲನಚಿತ್ರರಂಗವನ್ನು. ಈಗ ಇವರಿಗೆ ಈ ರಂಗದಲ್ಲಿ ೨೫ ವರ್ಷಗಳ ಸುದೀರ್ಘ ಅನುಭವವಿದೆ. ಸುಮಾರು ೪೦ ಚಿತ್ರಗಳನ್ನು ಸ್ವತಃ ನಿರ್ದೇಶಿಸಿ ಅಲ್ಪ ಕಾಲದಲ್ಲಿಯೇ ಚಿತ್ರಗಳನ್ನು ಮುಗಿಸಿಕೊಡುವ ವಿಶೇಷ ಪರಿಣತಿಯಿರುವ ನಿರ್ದೇಶಕರೆಂದು ಹೆಸರು ಗಳಿಸಿದ್ದಾರೆ. ಸ್ವಂತವಾಗಿ ಚಿತ್ರಗಳನ್ನು



ನಿರ್ಮಿಸಿ, ನಿರ್ದೇಶಿಸಿದ್ದಾರೆ. 'ಭಗವಾನ್ ಶ್ರೀ ಸಾಯಿಬಾಬ' ಚಿತ್ರ ತಯಾರಿಸಿ ಇವರೇ ಆ

ಪಾತ್ರದಲ್ಲಿ ಅಭಿನಯಿಸಿದರು. ಸಾಯಿಪ್ರಕಾಶ್ ತೆಲುಗಿಗಿಂತ ಕನ್ನಡ ಚಿತ್ರರಂಗದಲ್ಲಿಯೇ ಹೆಚ್ಚು ಕೆಲಸ ಮಾಡಿದರು. ಹಾಸ್ಯಪ್ರಧಾನ ಚಿತ್ರಗಳು, ಸಾಹಸಪ್ರಧಾನ ಚಿತ್ರಗಳು, ಮೆಲೋಡ್ರಾಮಗಳು ಎಲ್ಲವು ಅವರಿಗೆ ಪ್ರಿಯ. 'ಗೋಲ್‌ಮಾಲ್ ರಾಧಾಕೃಷ್ಣ', 'ಪೊಲೀಸನ ಹೆಂಡ್ತಿ', 'ಕಿತ್ತೂರಿನ ಹುಲಿ', 'ಕೊಲ್ಲೂರು ಕಾಳ', 'ನಾಗಪೂಜೆ' ಇತ್ಯಾದಿ ಚಿತ್ರಗಳು ಭಾರಿ ಜನಪ್ರಿಯತೆ ಗಳಿಸಿದವು. ಇವರು ನಿರ್ದೇಶಿಸಿದ 'ಲಯನ್ ಜಗಪತಿರಾವ್' ನಾಯಕ ನಟ ವಿಷ್ಣುವರ್ಧನ್‌ರಿಗೆ ರಾಜ್ಯ ಸರ್ಕಾರದಿಂದ ಅತ್ಯುತ್ತಮ ನಟ ಪ್ರಶಸ್ತಿಯನ್ನು ಗಳಿಸಿಕೊಟ್ಟಿತು. ಇವರೇ ನಿರ್ದೇಶಿಸಿದ 'ಆತಂಕ' ಚಿತ್ರಕ್ಕೆ ೧೯೯೨-೯೩ನೇ ಸಾಲಿನ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿ ಲಭ್ಯವಾಯಿತು. ಗ್ರಾಫಿಕ್ ಕಲೆ ಬಳಸಿ ಚಮತ್ಕಾರಿಕ ಚಿತ್ರಗಳನ್ನು ಸಿದ್ಧಪಡಿಸಿದರು.

### ಸಾಲಿ.ಎಫ್.ಡಿ

ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ಉತ್ತರ ಕರ್ನಾಟಕದಲ್ಲಿ ಅನೇಕ



ಶಿಕ್ಷಣ ಸಂಸ್ಥೆಗಳನ್ನು ನಡೆಸಿ ಹೆಸರಾದ ಫಕೀರಪ್ಪ ದ್ಯಾಮಪ್ಪ ಸಾಲಿಯವರನ್ನು ಚಲನಚಿತ್ರ ಮಾಧ್ಯಮ ಕೂಡ ಆಕರ್ಷಿಸಿತು. ಚಲನಚಿತ್ರಗಳಿಗೆ ಚಿತ್ರಕಥೆಗಳನ್ನು ಬರೆಯುವುದು ಅವರ ಹವ್ಯಾಸ. 'ಶ್ರೀ ಮೈಲಾರಲಿಂಗ' ಚಿತ್ರಕ್ಕೆ ಕಥೆಯನ್ನು ಬರೆದು, ಚಿತ್ರೋದ್ಯಮವನ್ನು ಪ್ರವೇಶಿಸಿದರು. ಪಳುಕೋಟಿ ಫಿಲಂ ಕಾರ್ಪೊರೇಷನ್ ಲಾಂಛನದಲ್ಲಿ ತಯಾರಾದ ಈ ಚಿತ್ರದ ನಿರ್ಮಾಪಕರೂ ಇವರೇ. ಇವರ ಎರಡನೆಯ ಚಿತ್ರ 'ಸಂಗ್ಯಾಬಾಳ್ಯಾ'. ಅದು ಕನ್ನಡದ ಅತ್ಯಂತ ಜನಪ್ರಿಯ ನಾಟಕವೊಂದನ್ನು ತೆರೆಗೆ ತಂದಿದೇ ಅಲ್ಲದೆ ನಟ ಸುಂದರಕೃಷ್ಣ ಅರಸ್‌ರ ನಿರ್ದೇಶನದ ಉತ್ತಮ ಚಿತ್ರವಾಗಿ ಮೂಡಿಬಂತು. ೧೯೯೨-೯೩ರ ಭಾರತೀಯ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಭಾರತೀಯ ಪನೋರಮಾ ವಿಭಾಗಕ್ಕೆ ಈ ಚಿತ್ರ ಆಯ್ಕೆಯಾಯಿತು. ದೇವದಾಸಿಯರ ಬದುಕನ್ನು ಆಧರಿಸಿ, ಮಾನವೀಯ ದೃಷ್ಟಿಯಿಂದ ಅವರ ಸಮಸ್ಯೆಗಳನ್ನು ವಿಶ್ಲೇಷಿಸುವ 'ಪತಿತ ಪಾವನಿ' ಸಾಲಿಯವರ ಮೂರನೆಯ ಕನ್ನಡ ಚಿತ್ರ. ಮರಾಠಿಯಲ್ಲಿಯೂ ತಯಾರಾದ ಈ ಚಿತ್ರ ಮಹಾರಾಷ್ಟ್ರ ಸರ್ಕಾರದ ಅತ್ಯುತ್ತಮ ಚಿತ್ರಪ್ರಶಸ್ತಿಯನ್ನು ಗಳಿಸಿತು. ಕನ್ನಡದ 'ಪತಿತ ಪಾವನಿ' ಕರ್ನಾಟಕ ರಾಜ್ಯ ಸರ್ಕಾರದಿಂದ ೧೯೯೧-೯೨ನೇ ಸಾಲಿನ ತೃತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಯನ್ನು ಗಳಿಸಿತು. 'ಪತಿತ ಪಾವನಿ' ಹಿಂದಿ ಚಿತ್ರರಂಗದಲ್ಲಿ ಖ್ಯಾತಿ ಪಡೆದಿರುವ ಕನ್ನಡತಿ ಅರುಣಾ ಪಾಟೀಲ್ ನಿರ್ದೇಶಿಸಿದ ಚಿತ್ರ. ಸಾಲಿಯವರು ಬೆಂಗಳೂರಿನಲ್ಲಿ ಲಕ್ಷ್ಮಿ ಎಡಿಟಿಂಗ್ ರೂಮ್ - ಸಂಕಲನ ಕೇಂದ್ರವನ್ನೂ ಬಹಳಷ್ಟು ವರ್ಷ ನಡೆಸಿದರು.

### ಸಾಹಲ್

ಖ್ಯಾತ ಸಾಹಸ ನಿರ್ದೇಶಕರು. ೧೯೭೦ರಲ್ಲಿ



ಚಿತ್ರರಂಗಕ್ಕೆ ಪ್ರವೇಶ. ಸಾಹಸ ದೃಶ್ಯಗಳಲ್ಲಿ ಅತ್ಯಂತ ಜಾಣ್ಮೆಯಿಂದ ಕಾರ್ಯನಿರ್ವಹಿಸಿ ಕಲವೊಂದು ವೇಳೆ ರಿಹರ್ಸಲ್ ಇಲ್ಲದಯೇ ಸಾಹಸ ದೃಶ್ಯಗಳನ್ನು ಸಂಯೋಜಿಸಿದ್ದುಂಟು. 'ಸಿಂಗಾಪುರ್‌ನಲ್ಲಿ ರಾಜಾಕುಳ್ಳ', 'ಚಾಣಕ್ಯ', 'ಕಾಡಿನರಾಜ', 'ಅಂಜದ ಗಂಡು', 'ಹಾಂಕಾಂಗ್‌ನಲ್ಲಿ ಏಜೆಂಟ್ ಅಮರ್', 'ಯುದ್ಧಕಾಂಡ', 'ಸಿಬಿಐ ಶಂಕರ್', 'ಎಸ್.ಪಿ.ಸಾಂಗ್ಲಿಯಾನ', 'ಅಭಿಮನ್ಯು', 'ರಾಣಿ ಮಹಾರಾಣಿ', 'ಪ್ರತಾಪ್' ಚಿತ್ರಗಳು ಇವರು ಸಾಹಸ ಸಂಯೋಜಿಸಿದ ಚಿತ್ರಗಳು. ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳಿಗೆ ಸಾಹಸ ನಿರ್ದೇಶನ ಮಾಡಿರುತ್ತಾರೆ.

### ಸ್ವಾಮಿ ಎಂ.ಎಸ್

ಕನ್ನಡ ಚಿತ್ರರಂಗದ ಖ್ಯಾತ ಸಂಕಲನಕಾರ. ಮೈಸೂರು ಜಿಲ್ಲೆಯ ಚಾಮರಾಜನಗರದವರು. ಬಿ.ಎಸ್‌ಸಿ.,



ಪದವೀಧರ. ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಅಭಿನಯದ ತರಬೇತಿ. ಗುಬ್ಬಿ ಕಂಪನಿಯಲ್ಲಿ ಹಲವು ವರ್ಷಗಳಕಾಲ ತರಬೇತಿ ಪಡೆದವರು. 'ಪಲ್ಲವಿ ಅನುಪಲ್ಲವಿ'. 'ಫಣಿಯಮ್ಮ', 'ಅನ್ವೇಷಣೆ', 'ಮಾನವ ದಾನವ' ಚಿತ್ರಗಳಲ್ಲಿ ಸಹಾಯಕ ಸಂಕಲನಕಾರರಾಗಿ ಅನುಭವ. ನಂತರ ೧೯೮೭ರಿಂದ ಸ್ವತಂತ್ರ ಸಂಕಲನಕಾರರಾಗಿ ಕಾರ್ಯ ನಿರ್ವಹಿಸಿದರು. 'ಜೀವನ ಸಂಗ್ರಾಮ', 'ತಬರನ ಕಥೆ' ಮೊದಲಾದ ಚಿತ್ರಗಳ ಸಂಕಲನ ಕಾರ್ಯ. ೧೯೮೬-೮೭ನೇ ಸಾಲಿನಲ್ಲಿ 'ತಬರನ ಕಥೆ' ಚಿತ್ರಕ್ಕಾಗಿ ರಾಜ್ಯ ಸರ್ಕಾರದ ಅತ್ಯುತ್ತಮ ಸಂಕಲನಕಾರ ಪ್ರಶಸ್ತಿ ಪಡೆದಿದ್ದಾರೆ.

### ಸ್ವಾಮಿ .ಕೆ.ಎಸ್.ಎಲ್ (ರವೀ)

ಮಂಡ್ಯ ಜಿಲ್ಲೆಯ ಕಿಕ್ಕೇರಿ ಹಿರಿಯರ ನೆಲೆಯಾದರೂ ಜನಿಸಿದ್ದು ಮೈಸೂರು (ಫೆಬ್ರವರಿ ೨೧, ೧೯೩೫). ಪೂರ್ಣ ಹೆಸರು ಕಿಕ್ಕೇರಿ ಶಾಮಣ್ಣ ಲಕ್ಷ್ಮೀನರಸಿಂಹಸ್ವಾಮಿ. ಮೈಸೂರಿನಲ್ಲಿಯೇ ವ್ಯಾಸಂಗ. ವಿಜ್ಞಾನ ಪದವೀಧರರಾಗುವ ಮೊದಲೇ ಚಿತ್ರರಂಗದತ್ತ ಆಕರ್ಷಣೆ. 'ರತ್ನ ಮಂಜರಿ'ಯಲ್ಲಿ ಚಿಕ್ಕ ಪಾತ್ರ ಮಾಡುವ ಮೂಲಕ ಚಿತ್ರರಂಗ ಪ್ರವೇಶ. ಜಿ.ವಿ.ಅಯ್ಯರ್ ತಮ್ಮ 'ತಾಯಿ ಕರುಳು' ಚಿತ್ರಕ್ಕೆ ಸಹಾಯಕ ನಿರ್ದೇಶಕರನ್ನಾಗಿ ನೇಮಿಸಿಕೊಳ್ಳುವ ಮೂಲಕ ಸ್ವಾಮಿಯವರಿಗೆ ಚಿತ್ರರಂಗದಲ್ಲಿ ಅವಕಾಶ ಮಾಡಿದರು. ಕೆಲವು ಚಿತ್ರಗಳ ನಂತರ ಕಣಗಾಲ್ ಪ್ರಭಾಕರಶಾಸ್ತ್ರಿಗಳ ಜೊತೆ ಕೆಲಸ ಮಾಡಿದರು. ನಟ ಉದಯಕುಮಾರ್ ಇವರಿಗೆ 'ರವಿ' ಎಂಬ ನಾಮಕರಣ ಮಾಡಿದರು. 'ತೂಗುದೀಪ' (೧೯೬೬)



ಇವರು ನಿರ್ದೇಶಿಸಿದ ಮೊದಲ ಚಿತ್ರ. ಈ ಚಿತ್ರದಲ್ಲಿ ಇವರ ಅಭಿನಯವೂ ಇದೆ. ನಂತರ 'ಲಗ್ನ ಪತ್ರಿಕೆ' ಮುಂತಾದ ನಲವತ್ತಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. 'ಶುಭಮಂಗಳ' ಸೇರಿದಂತೆ ಒಂಬತ್ತು ಚಿತ್ರಗಳನ್ನು ನಿರ್ಮಿಸಿದ್ದಾರೆ. ಇವರ ಪತ್ನಿ ಬಿ.ವಿ.ರಾಧಾ ನಾಲ್ಕು ಚಿತ್ರಗಳನ್ನು ನಿರ್ಮಿಸಿದ್ದಾರೆ. 'ಜಂಬೂಸವಾರಿ' ಕೇಂದ್ರ ಸರ್ಕಾರದಿಂದ ಅತ್ಯುತ್ತಮ ಮಕ್ಕಳ ಚಿತ್ರ ಪ್ರಶಸ್ತಿ ಪಡೆಯಿತಲ್ಲದೆ, ಫ್ರಾಂಕ್‌ಫರ್ಟ್, ಇರಾನ್, ಚಿಕಾಗೋ, ಇಟಲಿ ಚಿತ್ರೋತ್ಸವಗಳಲ್ಲಿ ಪ್ರದರ್ಶನಗೊಂಡಿತು. ಜಿ.ವಿ.ಅಯ್ಯರ್ ನಿರ್ದೇಶಿಸಿ ಅಂತರರಾಷ್ಟ್ರೀಯ ಮನ್ನಣೆ ಗಳಿಸಿದ 'ಮಧ್ವಾಚಾರ್ಯ', 'ರಾಮಾನುಜಾಚಾರ್ಯ', 'ಭಗವದ್ಗೀತೆ', 'ವಿವೇಕಾನಂದ' ಚಿತ್ರಗಳಿಗೆ ಜೊತೆಜೊತೆಯಾಗಿ ದುಡಿದಿದ್ದಾರೆ. 'ಮಸಣದ ಹೂವು' ಚಿತ್ರ ಅಪೂರ್ಣವಾಗಿರುವಾಗಲೇ ಪುಟ್ಟಣ್ಣ ಕಣಗಾಲ್ ನಿಧನರಾದಾಗ ಇವರೇ ಆ ಚಿತ್ರವನ್ನು ಪೂರ್ಣಗೊಳಿಸಿದರು. ಕೆಲವು ಚಿತ್ರಗಳನ್ನು ರವೀ ಎಂಬ ಹೆಸರಿನಿಂದ ನಿರ್ದೇಶಿಸಿದರು. 'ಲಲಿತಾರವೀ' ಎಂತಲೂ ನಿರ್ದೇಶಿಸಿದರು. 'ಆರು ಮೂರು ಒಂಬತ್ತು', 'ಭಲೇ ಅದೃಷ್ಟವೋ ಅದೃಷ್ಟ', 'ಬಾಳು ಬೆಳಗಿತು', 'ಭಾಗ್ಯಜ್ಯೋತಿ', 'ಮಕ್ಕಳ ಭಾಗ್ಯ', 'ಮುಗ್ಧ ಮಾನವ', 'ಮಾಗಿಯ ಕನಸು', 'ಮಲಯ ಮಾರುತ', 'ಮಿಥಿಲೆಯ ಸೀತೆಯರು', 'ಹರಕೆಯ ಕುರಿ' ಮುಂತಾದವು ಇವರ ನಿರ್ದೇಶನದ ಪ್ರಮುಖ ಚಿತ್ರಗಳು. ಹಲವು ಚಿತ್ರಗೀತೆಗಳನ್ನು ರಚಿಸಿದ್ದಾರಲ್ಲದೆ, ಸ್ವತ. ಹಾಡಿದ್ದಾರೆ. ರಾಜ್ಯ ಪ್ರಶಸ್ತಿ ಸಲಹಾ ಸಮಿತಿ, ಪುನರಾವೃತ ಚಲನಚಿತ್ರ ಸಮಿತಿ, ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ಸಲಹಾ ಸಮಿತಿ, ರಾಷ್ಟ್ರ ಪ್ರಶಸ್ತಿ ಆಯ್ಕೆ ಸಮಿತಿ, ಪನೋರಮಾ ಆಯ್ಕೆ ಸಮಿತಿಗಳಲ್ಲಿ ಕೆಲಸ ಮಾಡಿದ್ದಾರೆ. ಚಲನಚಿತ್ರ ವಾಣಿಜ್ಯ ಮಂಡಳಿ, ಚಲನಚಿತ್ರ ನಿರ್ದೇಶಕರ ಸಂಘ, ಚಲನಚಿತ್ರ ನಿರ್ಮಾಪಕರ ಸಂಘಗಳಲ್ಲಿ ಸಕ್ರಿಯವಾಗಿ ಕೆಲಸ ಮಾಡಿದ್ದಾರೆ. ನಿರ್ದೇಶಕನ ಕ್ಷೇತ್ರಕ್ಕೆ ಇವರು ಸಲ್ಲಿಸಿದ ಸಮಗ್ರ ಸೇವೆಯನ್ನು ಗುರುತಿಸಿ ೧೯೯೪-೯೫ನೇ ಸಾಲಿನಲ್ಲಿ ಪ್ರತಿಷ್ಠಿತ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ನೀಡಿ ರಾಜ್ಯ ಸರ್ಕಾರ ಗೌರವಿಸಿದೆ.

### ಸ್ವಾಮಿ.ವೈ.ಆರ್

ಭಕ್ತಿ ಪ್ರಧಾನ, ಸಾಮಾಜಿಕ ಈ ಎರಡೂ ಕ್ಷೇತ್ರಗಳಲ್ಲಿ ಅನೇಕ ಯಶಸ್ವಿ ಚಿತ್ರಗಳನ್ನು ನಿರ್ದೇಶಿಸಿದ ಖ್ಯಾತನಾಮರು ವೈ.ಆರ್.ಸ್ವಾಮಿ. ಕರ್ನಾಟಕದ ಚಿತ್ರದುರ್ಗ ಇವರ ಸ್ವಂತ ಸ್ಥಳವಾದರೂ ಜನಿಸಿದ್ದು ಹೈದರಾಬಾದ್‌ನಲ್ಲಿ. ತೆಲುಗಿನಲ್ಲಿ ಮೊಟ್ಟಮೊದಲು ಮಾತನಾಡಿದ ಚಿತ್ರದ ನಿರ್ದೇಶಕ ಎಚ್.ಎಂ.ರೆಡ್ಡಿಯವರ ಸಾಕುಪುತ್ರ. ಮೂಕಿ ಚಿತ್ರಗಳ ಕಾಲದಲ್ಲೇ ತಮ್ಮ ತಂದೆ ನಿರ್ದೇಶಿಸಿದ 'ಭಕ್ತ ಪ್ರಹ್ಲಾದ' ಚಿತ್ರದಲ್ಲಿ ಪ್ರಹ್ಲಾದನ ಪಾತ್ರ ದೊರೆತು ಚಿತ್ರರಂಗಕ್ಕೆ ಹೆಜ್ಜೆ ಇರಿಸಿದರು. ಎಂ.ಎ. ಮಾಡಿಕೊಂಡಿದ್ದರೂ ತಮ್ಮ ತಂದೆಯವರ ಸಹಾಯಕರಾಗಿ ಚಿತ್ರ ಕ್ಷೇತ್ರದಲ್ಲಿ ದುಡಿದು ಅಪಾರ ಅನುಭವ ಹೊಂದಿದರು. ಹಲವು ತೆಲುಗು, ತಮಿಳು ಚಿತ್ರಗಳನ್ನು ನಿರ್ದೇಶಿಸಿದ ನಂತರ 'ರೇಣುಕಾ ಮಹಾತ್ಮೆ' (೧೯೬೦)



ಕನ್ನಡ ಚಿತ್ರವನ್ನು ಮೊದಲ ಬಾರಿಗೆ ನಿರ್ದೇಶಿಸಿದರು. ನಂತರದ ಚಿತ್ರ ಕನ್ನಡ ಚಿತ್ರರಂಗದ ಮೈಲಿಗಲ್ಲು 'ಭಕ್ತ ಕನಕದಾಸ'. ಹೆಚ್ಚು ತಂತ್ರಜ್ಞಾನವಿರದಿದ್ದ ಆ ಕಾಲದಲ್ಲಿ ಈ ಚಿತ್ರದ ಟ್ರಿಕ್ ಷಾಟ್‌ಗಳು ವಿಶೇಷ ಗಮನ ಸೆಳೆದವು. ನಂತರ ರಾಜಕುಮಾರ್ ಅಭಿನಯದ ೧೫ ಚಿತ್ರಗಳನ್ನು ನಿರ್ದೇಶಿಸಿದರು. ೩೪ ಚಿತ್ರಗಳ ನಿರ್ದೇಶಕ ಸ್ವಾಮಿಯವರು 'ಸಿಪಾಯಿ ರಾಮು' ಚಿತ್ರವನ್ನು ಚಂಬಲ್ ಕಣಿವೆಯಲ್ಲಿ ಸಾಹಸದಿಂದ ಚಿತ್ರಿಸಿದರು. ಈ ಚಿತ್ರ ರಾಜ್ಯ ಸರ್ಕಾರದ ೧೯೭೧-೭೨ರ ತೃತೀಯ

ಅತ್ಯುತ್ತಮ ಚಿತ್ರ ಪ್ರಶಸ್ತಿಗೂ ಭಾಜನವಾಯಿತು. ಇವರ ಇತರ ಪ್ರಮುಖ ಚಿತ್ರಗಳು -'ಸ್ವರ್ಣಗೌರಿ', 'ಮುರಿಯದ ಮನೆ', 'ಕಠಾರಿವೀರ', 'ಭಲೇ ರಾಜ', 'ಭಲೇ ಜೋಡಿ', 'ಭಲೇ ಹುಚ್ಚ', 'ಸ್ವಯಂವರ', 'ಬಿಡುಗಡೆ' ಮತ್ತು 'ದೇವರ ಕಣ್ಣು'. ಇವರು ಚಿತ್ರರಂಗಕ್ಕೆ ನೀಡಿದ ಸಮಗ್ರ ಸೇವೆಯನ್ನು ಗಮನಿಸಿ ಸರ್ಕಾರ ೧೯೯೦-೯೧ನೆಯ ಸಾಲಿನಲ್ಲಿ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ನೀಡಿ ಗೌರವಿಸಿತು.

### ಸಿಂಗ್ ಠಾಕೂರ್ .ಟಿ.ವಿ

ಇವರ ಮೊದಲ ಹೆಸರು ವಿಠಲ್‌ಸಿಂಗ್. ಶಂಕರ್‌ಸಿಂಗ್ ಅವರ ಬಂಧು, ಒಡನಾಡಿ. ಮಹಾತ್ಮ ಪಿಕ್ಚರ್ಸ್ ಪಾಲುದಾರರಲ್ಲಿ ಕೆಲವರು ಮದರಾಸಿಗೆ ವಲಸೆ ಹೋದರು. ಆ ಸಮಯದಲ್ಲಿ ಜಿ.ಎಸ್.ವಿಶ್ವನಾಥ ಶೆಟ್ಟರು ಮದರಾಸಿನಲ್ಲಿ ವಿಶ್ವಕಲಾ ಚಿತ್ರ ಸಂಸ್ಥೆಯನ್ನು ಸ್ಥಾಪಿಸಿದರು. ಆ ಸಂಸೆಗೆ ಪಾಲುದಾರರಾದ ವಿಠಲ್ ಸಿಂಗ್‌ರವರು ಸಿಂಗ್ ಠಾಕೂರ್ ಎಂದು ಹೆಸರನ್ನು ಬದಲಾಯಿಸಿಕೊಂಡು.

ಸಂಸ್ಥೆ ನಿರ್ಮಿಸಿದ ಚಿತ್ರಗಳಿಗ ನಿರ್ದೇಶಕರಾದರು. ಛಾಯಾಗ್ರಹಣದಲ್ಲಿ ಇವರು ಪಡೆದಿದ ಅನುಭವ ನಿರ್ದೇಶನದಲ್ಲಿ ಸಹಾಯವಾಯಿತು. ಇವರ ನಿರ್ದೇಶನದ ಪ್ರಥಮ ಚಿತ್ರ 'ಸೋದರಿ' (೧೯೫೫). ಕೆಲವು ಚಿತ್ರಗಳ ನಿರ್ದೇಶನದ ನಂತರ ಎ.ಸಿ.ನರಸಿಂಹಮೂರ್ತಿಯವರು ತಯಾರಿಸಿದ ಕೃಷ್ಣಮೂರ್ತಿ ಪುರಾಣಿಕರ 'ಧರ್ಮದೇವತೆ' ಕಾದಂಬರಿ ಆಧಾರಿತ 'ಕರುಣೆಯೇ ಕುಟುಂಬದ ಕಣ್ಣು' ಚಿತ್ರವನ್ನು ಸಿಂಗ್ ಠಾಕೂರ್ ನಿರ್ದೇಶಿಸಿದರು. ಇದು ಕನ್ನಡದ ಪ್ರಥಮ ಕಾದಂಬರಿ ಆಧಾರಿತ ಚಿತ್ರವೆಂದು ಇತಿಹಾಸದಲ್ಲಿ ದಾಖಲಾಯಿತು. ಜೊತೆಗೆ ಸಿಂಗ್ ಠಾಕೂರ್‌ರ ಚಿತ್ರರಂಗದ ಬದುಕಿಗೊಂದು ಹೊಸ ತಿರುವನ್ನೂ ತಂದುಕೊಟ್ಟಿತು. ಇವರ ಮುಂದಿನ ಚಿತ್ರಗಳು ಸದಭಿರುಚಿಯಿಂದ ಕೂಡಿದ್ದು ಕನ್ನಡ ಚಿತ್ರರಂಗಕ್ಕೆ ಹೆಸರು ತಂದವು. ಐತಿಹಾಸಿಕ ಇವರ ಎಲ್ಲ ಚಿತ್ರಗಳಿಗೂ ಸಹನಿರ್ದೇಶನ, ಸಾಹಿತ್ಯ ನಿರ್ವಹಿಸುತ್ತಿದ್ದವರು ಜಿ.ವಿ.ಅಯ್ಯರ್. ಇವರ ಇತರ ಮುಖ್ಯ ಚಿತ್ರಗಳು 'ಹರಿಭಕ್ತ', 'ಓಹಿಲೇಶ್ವರ', 'ಜಗಜ್ಯೋತಿ ಬಸವೇಶ್ವರ', 'ಚಂದವಳ್ಳಿಯ ತೋಟ', 'ಮಂತ್ರಾಲಯ ಮಹಾತ್ಮ' ಮತ್ತು 'ಹೇಮರೆಡ್ಡಿ ಮಲ್ಲಮ್ಮ', 'ಭಾರತದ ರತ್ನ', 'ಕೈವಾರ ಮಹಾತ್ಮೆ', 'ಕುಲವಧು', 'ಕಲಾವತಿ', 'ಹೂ ಬಿಸಿಲು', 'ಕವಲೆರಡು ಕುಲವೊಂದು', 'ಕಣ್ತೆರದು ನೋಡು'.

### ಸಿಂಹ.ಎಚ್.ಎಲ್.ಎನ್ (೧೯೦೪-೭೨)

ಕನ್ನಡದ ಮೊಟ್ಟ ಮೊದಲ ಸಾಮಾಜಿಕ ಚಲನಚಿತ್ರ 'ಸಂಸಾರನೌಕ'ದ ನಿರ್ದೇಶಕ. ಪೂರ್ಣ ಹೆಸರು ಹೆಚ್.ಲಕ್ಷ್ಮೀನರಸಿಂಹ.

ಕನ್ನಡ ಚಿತ್ರರಂಗದ ಬಹುಮುಖ ಪ್ರತಿಭೆ. ಮಂಡ್ಯ ಜಿಲ್ಲೆಯ ಮಳವಳ್ಳಿಯಲ್ಲಿ ಜನನ (ಜುಲೈ ೨೯, ೧೯೦೪). ಇವರ ಸ್ವಂತ ಸ್ಥಳ ನಂಜನಗೂಡು. ತಂದೆ ಎಚ್.ನರಸಿಂಹಯ್ಯ ಕಂದಾಯ ಇಲಾಖೆ ಅಧಿಕಾರಿ. ಮೈಸೂರಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ತಾವೇ ರಚಿಸಿದ 'ಡೆಸ್ಟಿನಿ ರೂಲ್ಸ್ ಹ್ಯುಮ್ಯಾನಿಟಿ' ಎಂಬ ನಾಟಕದಲ್ಲಿ ತಾವೇ ನಾಯಕ ನಟನಾಗಿ ಅಭಿನಯಿಸಿ ರಂಗ ಪ್ರವೇಶ ಮಾಡಿದರು. ಭಾರತ ಜನಮನೋಲ್ಲಾಸಿನಿ ನಾಟಕ ಸಂಸ್ಥೆಯ ಮೂಲಕ ರಂಗಭೂಮಿ ಪ್ರವೇಶಿಸಿ ಗುಬ್ಬಿ ಕಂಪನಿ, ಮಹಮದ್ ಪೀರ್‌ರವರ ಚಂದ್ರಕಲಾ ನಾಟಕ ಮಂಡಲಿ ಸೇರಿದರು. ಪೀರ್ ಕಂಪನಿಗಾಗಿ 'ಸಂಸಾರನೌಕ' ಸಾಮಾಜಿಕ ನಾಟಕ ಬರೆದರು. ಅದೇ ಕಂಪನಿಯ 'ಷಹಜಹಾನ್' ನಾಟಕದಲ್ಲಿ ಪ್ರಮುಖ ಪಾತ್ರ ಮಾಡಿದರು. ತಾವೇ 'ಸಿಂಹಾಸ್ ಸೆಲೆಕ್ಟ್ ಆರ್ಟಿಸ್ಟ್ಸ್' ಸಂಸೆ ಹುಟ್ಟುಹಾಕಿದರು. ಗುಬ್ಬಿ ವೀರಣ್ಣನವರು ತೆರೆಗೆ ತಂದ 'ಹಿಸ್ ಲವ್ ಅಫೇರ್' ಮೂಕಿಚಿತ್ರದಲ್ಲಿ ಸಿಂಹ ಅಭಿನಯಿಸಿದರಲ್ಲದೆ ಸಹ ನಿರ್ದೇಶಕರಾಗಿ ಕೆಲಸ ಮಾಡಿದರು. ಕನ್ನಡದ ಮೊದಲ ಸಾಮಾಜಿಕ ಚಲನಚಿತ್ರ 'ಸಂಸಾರನೌಕ' (೧೯೩೬) ಇವರು ನಿರ್ದೇಶಿಸಿದ ಮೊದಲ ಚಿತ್ರ. 'ಬೇಡರ ಕಣ್ಣಪ್ಪ' ನಿರ್ದೇಶಿಸಿದ ಇವರು ಈ ಚಿತ್ರದ ಮೂಲಕ ಮುತ್ತುರಾಜು ಅವರನ್ನು ರಾಜಕುಮಾರ್ ಆಗಿ ಚಿತ್ರರಂಗಕ್ಕೆ ಪರಿಚಯಿಸಿದರು. 'ಅಬ್ಬಾ ಆ ಹುಡುಗಿ' ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು. ಇವರು ನಿರ್ದೇಶಿಸಿದ ಕೊನೆಯ ಚಿತ್ರ ಪಂಢರಿಬಾಯಿಯವರು ನಿರ್ಮಿಸಿದ 'ತೇಜಸ್ವಿನಿ'. ಹಲವಾರು ಚಿತ್ರಗೀತೆಗಳನ್ನು ರಚಿಸಿರುವ ಇವರು ನಿರ್ದೇಶಿಸಿರುವ ಚಿತ್ರಗಳ ಸಂಖ್ಯೆ ಕಡಿಮೆಯಾದರೂ ಚಿತ್ರರಂಗಕ್ಕೆ ಇವರು ನೀಡಿದ ಕೊಡುಗೆ ಅಪಾರ. ೬೮ನೆಯ ವಯಸ್ಸಿನಲ್ಲಿ (ಜುಲೈ ೩, ೧೯೭೨ರಂದು) ನಿಧನರಾದರು.

### ಸಿಂಹ.ಸಿ.ಆರ್

ಚಲನಚಿತ್ರ ನಟ-ನಿರ್ದೇಶಕ. ಬೆಂಗಳೂರು ಹುಟ್ಟೂರು (ಜನನ : ಜೂನ್ ೧೬, ೧೯೪೨). ತಾತ ರಚಿಸಿದ 'ವಿಶ್ವ ವ್ಯವಸೆ' ನಾಟಕವನ್ನು ಬಾಲಕನಾಗಿದ್ದಾಗಲೇ ಗೆಳೆಯರ ಗುಂಪು ಕಟ್ಟಿ ಪ್ರಯೋಗ ಮಾಡಿದರು. ಹವ್ಯಾಸಿ ತಂಡಗಳಲ್ಲಿ ಅಭಿನಯಿಸುತ್ತಿದ್ದ ಇವರಿಗೆ 'ತುಘಲಕ್' ನಾಟಕ ಹೆಸರು ತಂದುಕೊಟ್ಟಿತು. ನಟರಂಗ (೧೯೭೨) ಸ್ಥಾಪಿಸಿದರು. ನ್ಯಾಷನಲ್ ಕಾಲೇಜ್‌ನಲ್ಲಿ ಪದವಿ ಮುಗಿಸಿ, ಎಂಜಿನಿಯರಿಂಗ್ ಪೂರ್ಣಗೊಳಿಸದೇ ವಾರ್ತಾ ಇಲಾಖೆಯಲ್ಲಿ ಕಲಾವಿದರಾಗಿ ಸೇವೆ ಸಲ್ಲಿಸಿದರು. 'ಸಂಸ್ಕಾರ' (೧೯೭೦) ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಸಿಂಹಾಸನ', 'ಕಾಕನಕೋಟೆ', 'ಬರ', 'ಚಿತೆಗೂ ಚಿಂತೆ' ಮುಂತಾದ ಕಲಾತ್ಮಕ ಚಿತ್ರಗಳಲ್ಲಿ ಅಭಿನಯಿಸಿದರು. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರ 'ಕಾಕನಕೋಟೆ' (೧೯೭೭) ನಾಟಕವನ್ನು ಚಲನಚಿತ್ರವಾಗಿ ಸಿದ್ಧಗೊಳಿಸಿ ನಿರ್ದೇಶಿಸಿದರು. ನಂತರ 'ಶಿಕಾರಿ', 'ಸಿಂಹಾಸನ', 'ಅಶ್ವಮೇಧ', 'ಆಂಗ್ಲಿ ಅಪ್ಸರೆ' ಚಿತ್ರಗಳನ್ನು ನಿರ್ದೇಶಿಸಿದರು. ಹಲವಾರು ಜನಪ್ರಿಯ ಚಿತ್ರಗಳಲ್ಲಿ ಅಭಿನಯಿಸಿದರು. 'ನೀ ಬರೆದ ಕಾದಂಬರಿ', 'ನೀ ತಂದ ಕಾಣಿಕೆ', 'ಇಂದಿನ ರಾಮಾಯಣ',

'ರಾಮಾಪುರದ ರಾವಣ', 'ಹೊಸ ನೀರು', 'ಸಂಕ್ರಾಂತಿ', 'ಬಾಳೊಂದು ಭಾವಗೀತೆ' ಮೊದಲಾದವು ಇವರ ಅಭಿನಯದ ಜನಪ್ರಿಯ ವಾಣಿಜ್ಯ ಚಿತ್ರಗಳು. ಇವರ ಅಭಿನಯದ ಚಿತ್ರಗಳ ಸಂಖ್ಯೆ ಸುಮಾರು ೧೨೦. ನಟ ಶ್ರೀನಾಥ್ ಇವರ ತಮ್ಮ. ಇವರ ಚಿತ್ರಗಳು ಹಲವಾರು ಪ್ರಶಸ್ತಿಗಳಿಗೆ ಭಾಜನವಾಗಿವೆ. ಇವರು ನಿರ್ದೇಶಿಸಿದ 'ಕಾಕನ ಕೋಟೆ' ಚಿತ್ರ ೧೯೭೬-೭೭ನೇ ಸಾಲಿನ ಮೂರನೇ ಅತ್ಯುತ್ತಮ ಚಿತ್ರ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದೆ.

### ಸಿತಾರಾ

ಕೇರಳದಿಂದ ಕನ್ನಡಕ್ಕೆ ವಲಸೆ ಬಂದ ನಾಯಕಿ. ಮಲೆಯಾಳಂ, ತಮಿಳು, ತೆಲುಗು

ಚಿತ್ರಗಳಲ್ಲಿ ಅಭಿನಯಕ್ಕೆ ಹೆಸರಾದ ಕಲಾವಿದೆ. ಎ.ರಾಜೇಂದ್ರಬಾಬು ನಿರ್ದೇಶನದ 'ಹಾಲುಂಡ ತವರು' ಚಿತ್ರದಿಂದ ೧೯೯೪ರಲ್ಲಿ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಚಿತ್ರದ ಅಭೂತಪೂರ್ವ ಯಶಸ್ಸು ಇವರಿಗೆ ಸಾಲು ಸಾಲು ಚಿತ್ರಗಳನ್ನು ನೀಡಿತು. 'ದೀರ್ಘ ಸುಮಂಗಲಿ', 'ಕರುಳಿನ ಕುಡಿ', 'ಭವಾನಿ', 'ಹೆತ್ತವಳ ಕೂಗು', 'ಬೇಟೆ', 'ಗಣೇಶನ ಗಲಾಟೆ', 'ಗಣೇಶ ಐ ಲವ್ ಯೂ', 'ಶಿವಲೀಲೆ', 'ಬಂಗಾರದ ಕಳಸ', 'ಸ್ತ್ರೀ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿ ಭಾವಪ್ರಧಾನ ಪಾತ್ರಗಳಿಗೆ ಹೆಸರುವಾಸಿಯಾದರು.

### ಸಿದ್ಧಲಿಂಗಯ್ಯ

ಕನ್ನಡ ಚಲನಚಿತ್ರರಂಗದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವ ಕೆಲವೇ ಹೆಸರುಗಳಲ್ಲಿ ನಿರ್ದೇಶಕ ಸಿದ್ದಲಿಂಗಯ್ಯನವರದೂ ಒಂದು. ಇವರು ಹುಟ್ಟಿದ್ದು ಡಿಸೆಂಬರ್ ೧೫, ೧೯೩೬ರಂದು ತುಮಕೂರು ಜಿಲ್ಲೆಯ ಕರೂರು ಎಂಬ ಹಳ್ಳಿಯ ರೈತ ಕುಟುಂಬದಲ್ಲಿ. ಇವರ ತಾತ ಮತ್ತು ಸೋದರ ಮಾವ ಆ ದಿನಗಳಲ್ಲಿ ಖ್ಯಾತ ರಂಗಭೂಮಿ ನಟರಾಗಿದ್ದರು. ಹಾಗಾಗಿ ಸಿದ್ದಲಿಂಗಯ್ಯನವರಿಗೆ ಚಿಕ್ಕಂದಿನಿಂದಲೇ ನಟನಾಗುವ ಬಯಕೆ ಹುಟ್ಟಿತು. ಪ್ರಾಥಮಿಕ ವಿದ್ಯಾಭ್ಯಾಸದ ನಂತರ ಮನೆಯವರಿಂದಲೇ ಮುಂದಿನ ಓದಿಗೆ ಅಡ್ಡಿ ಬಂತು. ಮನಸ್ಸಿನೊಳಗೆ ಹುದುಗಿದ್ದ ನಟನಾಗುವ ಬಯಕೆಯಿಂದ ಇವರು ಮನೆ ಬಿಟ್ಟು ಮೈಸೂರಿಗೆ ಹೋದರು. ೧೯೫೨-೫೩ ನವಜ್ಯೋತಿ ಸ್ಟುಡಿಯೋದಲ್ಲಿ ಇವರಿಗ ಮೊದಲು ಸಿಕ್ಕಿದ ಕೆಲಸ 'ಫ್ಲೋರ್ ಬಾಯ್' ಆಗಿ. ನಂತರ ಪ್ರೀಮಿಯರ್ ಸ್ಟುಡಿಯೋದಲ್ಲಿ 'ಲೈಟ್ ಬಾಯ್' ಆಗಿ ಬಡ್ತಿ. ಕೊನೆಗೆ ನಿರ್ಮಾಪಕ-ನಿರ್ದೇಶಕ ಶಂಕರ್‌ಸಿಂಗ್ ಬಳಿ ಸಹಾಯಕ ನಿರ್ದೇಶಕರಾಗಿ ದುಡಿದರು.

ಸಿದ್ದಲಿಂಗಯ್ಯನವರಿಗೆ ಬೇರೆ ಭಾಷೆಗಳನ್ನು ಕಲಿಯುವುದರಲ್ಲಿ ಹೆಚ್ಚು ಆಸಕ್ತಿ. ತೆಲುಗು, ತಮಿಳು ಭಾಷೆಗಳನ್ನು ಓದುವುದನ್ನು, ಬರೆಯುವುದನ್ನು ಕಲಿತರು. ನಂತರ ಮದರಾಸಿಗೆ ಹೋಗಿ ಬಿ.ವಿಠಲಾಚಾರ್ಯರ ಬಳಿ ತೆಲುಗು, ಕನ್ನಡ ಚಿತ್ರಗಳಿಗೆ ಸಹಾಯಕ ನಿರ್ದೇಶಕರಾಗಿ ದುಡಿದರು. ನಟನಾಗುವ ಆಸೆ ಬಿಟ್ಟು, ನಿರ್ದೇಶಕನಾಗಲು ನಿರ್ಧರಿಸಿ ಚಿತ್ರರಂಗದ ವಿವಿಧ ವಿಭಾಗಗಳ ನಿಕಟ ಪರಿಚಯ ಮಾಡಿಕೊಂಡರು. ವಿಠಲಾಚಾರ್ಯರ ಗರಡಿಯಿಂದ ಈ ಅಧ್ಯಯನಕ್ಕೆ ಅನುಕೂಲವಾಯಿತು. ೧೯೬೯ರಲ್ಲಿ ದ್ವಾರಕೀಶ್ ನಿರ್ಮಿಸಿದ 'ಮೇಯರ್ ಮುತ್ತಣ್ಣ' ಇವರ ಪ್ರಥಮ ನಿರ್ದೇಶನದ ಚಿತ್ರ. ಚಿತ್ರ ಗಳಿಸಿದ ದೊಡ್ಡ ಯಶಸ್ಸು ಸಿದ್ದಲಿಂಗಯ್ಯನವರ ಭವಿಷ್ಯಕ್ಕೆ ಭದ್ರವಾದ ಅಡಿಪಾಯ ಹಾಕಿತು. ೧೯೭೨ರಲ್ಲಿ ಸಿದ್ದಲಿಂಗಯ್ಯನವರು ಕನ್ನಡ ಚಿತ್ರರಂಗದ ಮೈಲಿಗಲ್ಲುಗಳಲ್ಲಿ ಒಂದಾದ

'ಬಂಗಾರದ ಮನುಷ್ಯ' ನಿರ್ದೇಶಿಸಿ ತಮ್ಮ ಅಸಾಮಾನ್ಯ ಪ್ರತಿಭೆ ತೋರಿದರು. ಆ ಚಿತ್ರ ಬೆಂಗಳೂರಿನಲ್ಲಿ ಸತತವಾಗಿ ಎರಡು ವರ್ಷ ಕಾಲ ಪ್ರದರ್ಶಿತವಾಗಿ ಹೊಸ ದಾಖಲೆ ಮಾಡಿತು. 'ಬೂತಯ್ಯನ ಮಗ ಅಯ್ಯು' ಮತ್ತೊಂದು ಶ್ರೇಷ್ಠ ಚಿತ್ರ. ಈ ಚಿತ್ರದ ಪ್ರವಾಹದ ದೃಶ್ಯಗಳನ್ನು ಸೆರೆ ಹಿಡಿಯುವುದರಲ್ಲಿ ಅವರು ತೋರಿದ ತಾಂತ್ರಿಕ ಕೌಶಲ್ಯ ಇಂದಿಗೂ ಮನೆಮಾತಾಗಿದೆ. ಸಿದ್ದಲಿಂಗಯ್ಯನವರು ಅನೇಕ ಪ್ರತಿಭೆಗಳನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದ್ದಾರೆ. ಇದುವರೆಗೆ ೨೩ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವು 'ನಮ್ಮ ಸಂಸಾರ', 'ತಾಯಿ ದೇವರು', 'ನ್ಯಾಯವೇ ದೇವರು', 'ದೂರದ ಬೆಟ್ಟ', 'ಹೇಮಾವತಿ', 'ಬಿಳಿಗಿರಿಯ ಬನದಲ್ಲಿ', 'ಪ್ರೇಮಪರ್ವ' ಮತ್ತು 'ಬಾ ನನ್ನ ಪ್ರೀತಿಸು'. ಸಿದ್ದಲಿಂಗಯ್ಯ ಮಿತ್ರರೊಡನೆ ಸೇರಿ ೧೯೭೪ರಲ್ಲಿ 'ಬೂತಯ್ಯನ ಮಗ ಅಯ್ಯು' ಚಿತ್ರವನ್ನು ನಿರ್ಮಿಸಿದರು. ತಮ್ಮ ಮಗ ಮುರಳಿಯನ್ನು ನಾಯಕನನ್ನಾಗಿ ಮಾಡಿದರು. 'ಪ್ರೇಮಪರ್ವ', 'ಪ್ರೇಮಗಂಗೆ', 'ಅಜೇಯ', 'ಸಂಭವಾಮಿ ಯುಗೇ ಯುಗೇ' 'ಬಾರೆ ನನ್ನ ಮುದ್ದಿನ ರಾಣಿ', 'ಬಾ ನನ್ನ ಪ್ರೀತಿಸು', 'ಭೂತಾಯಿ ಮಕ್ಕಳು', 'ಪ್ರೇಮ ಪ್ರೇಮ ಪ್ರೇಮ' ಚಿತ್ರಗಳನ್ನು ನಿರ್ಮಿಸಿದರು. ಇವರ ನಿರ್ದೇಶನದ 'ಬಂಗಾರದ ಮನುಷ್ಯ' (೧೯೭೧-೭೨) ದ್ವಿತೀಯ ಅತ್ಯುತ್ತಮ ಚಿತ್ರ ರಾಜ್ಯ ಪ್ರಶಸ್ತಿ ಪಡೆದರೆ, 'ಬೂತಯ್ಯನ ಮಗ ಅಯ್ಯು' (೧೯೭೩-೭೪) ಪ್ರಥಮ ಅತ್ಯುತ್ತಮ ಚಿತ್ರ ರಾಜ್ಯ ಪ್ರಶಸ್ತಿ ಪಡೆಯಿತು. ತಮ್ಮ ಪ್ರತಿ ಚಿತ್ರದ ಅಂತ್ಯದಲ್ಲಿಯೂ ಸಿದ್ದಲಿಂಗಯ್ಯನವರು ಪ್ರೇಕ್ಷಕರಿಗೆ ಯಾವುದಾದರೊಂದು ಸಂದೇಶವನ್ನು ನೀಡಲು ಪ್ರಯತ್ನಿಸುವುದು ವಾಡಿಕೆ. ಹೊಸ ಕಲಾವಿದರನ್ನು ಚಿತ್ರರಂಗಕ್ಕೆ ಕೊಟ್ಟವರು. ಕನ್ನಡ ಚಿತ್ರರಂಗಕ್ಕೆ ಇವರು ಸಲ್ಲಿಸಿರುವ ಸೇವೆಗಾಗಿ ಸಿದ್ದಲಿಂಗಯ್ಯನವರಿಗೆ ರಾಜ್ಯ ಸರ್ಕಾರ (೧೯೯೩-೯೪)ರಲ್ಲಿ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

### ಸೀತಾರಾಂ 'ಉಪಾಸನೆ'

ಶಾಲಾ ದಿನಗಳಲ್ಲೇ ಅಭಿನಯಿಸುತ್ತಿದ್ದ



ಇವರು ರವಿ ಕಲಾವಿದರು ಮುಂತಾದ ಹವ್ಯಾಸಿ ನಾಟಕ ಸಂಘಗಳಲ್ಲಿ ಅಭಿನಯಿಸುವ ಮೂಲಕ ರಂಗಭೂಮಿ ಪ್ರವೇಶಿಸಿದರು. ವ್ಯಾಸಂಗ ಮುಗಿಸಿ ಬಿ.ಇ.ಎಲ್. ಕಾರ್ಖಾನೆಯಲ್ಲಿ ಇಂಜಿನಿಯರ್ ಆಗಿ ವೃತ್ತಿ ಆರಂಭಿಸಿದರು. 'ಪ್ರಜಾವಾಣಿ' ಸಂಪಾದಕರಾದ ವೈ.ಎನ್.ಕೆ ಅವರ ಒತ್ತಾಸೆಯಿಂದಾಗಿ 'ಪಂಚವೃಕ್ಷ' (೧೯೬೯) ಚಿತ್ರದಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗಕ್ಕೆ ಬಂದರು. ಪುಟ್ಟಣ್ಣ ಕಣಗಾಲರು 'ಉಪಾಸನೆ' ಚಿತ್ರದಲ್ಲಿ ಸಂಗೀತ ಗುರುಗಳ ಪ್ರಮುಖ ಪಾತ್ರ ನೀಡಿದರು. ಆ ಚಿತ್ರದ ನಂತರ ಇವರ ಹೆಸರಿನೊಡನೆ 'ಉಪಾಸನೆ' ಸೇರಿಕೊಂಡಿತು. ಅನಂತರ ಇವರು ಹಲವಾರು ಚಿತ್ರಗಳಲ್ಲಿ ಪೋಷಕ ಪಾತ್ರಗಳಲ್ಲಿ ಅಭಿನಯಿಸಿದರು. 'ಶುಭಮಂಗಳ', 'ಬಿಳೀ ಹೆಂಡ್ತಿ', 'ಧರ್ಮಸೆರೆ', 'ನ್ಯಾಯ ಗೆದ್ದಿತು' ಮುಂತಾದವು ಇವರ ಅಭಿನಯದ ಚಿತ್ರಗಳು. ಸುಮಾರು ೧೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ವೈವಿಧ್ಯಮಯವಾಗಿ ಅಭಿನಯಿಸಿದ ಸೀತಾರಾಂರವರು 'ಉಪಾಸನೆ' ಸೀತಾರಾಂ ಎಂದೇ ಪ್ರಸಿದ್ಧರಾಗಿ ೧೯೮೮ರಲ್ಲಿ ನಿಧನರಾದರು.

### ಸೀತಾರಾಂ.ಕೆ.ಆರ್

ಕನ್ನಡ ಚಿತ್ರರಂಗದ ಹೆಸರಾಂತ ಶಬ್ದಗ್ರಾಹಕ. ಬೆಂಗಳೂರು ಜಿಲ್ಲೆಯಲ್ಲಿ ಜನಿಸಿದ ಇವರು ನಾಲ್ಕೂವರೆ ದಶಕಗಳಿಗೂ ಮೀರಿ ಕನ್ನಡ ಚಿತ್ರರಂಗದಲ್ಲಿಯೇ ದುಡಿದ ಏಕೈಕ ಶಬ್ದಗ್ರಾಹಕ. ತಮ್ಮ ಎಳೆತನದಲ್ಲಿಯೇ ಚಿತ್ರರಂಗ ಪ್ರವೇಶ ಮಾಡಿದ ಇವರು ಮೈಸೂರಿನ ನವಜ್ಯೋತಿ ಸ್ಟುಡಿಯೋದಲ್ಲಿ ರಿಕಾರ್ಡಿಂಗ್ ಸಹಾಯಕರಾಗಿ ಸೇರಿ ನಾಲ್ಕಾರು ವರ್ಷಗಳ ಬಳಿಕ 'ಶ್ರೀರಾಮಪೂಜಾ', 'ಗಂಧರ್ವಕನ್ಯೆ', 'ಆಷಾಢ ಭೂತಿ' ಮೊದಲಾದ ಚಿತ್ರಗಳಿಗೆ



ಹಾಡುಗಳ ಧ್ವನಿಮುದ್ರಣ ನಿರ್ವಹಿಸಿ ಯಶಸ್ವಿ ಶಬ್ದಗ್ರಾಹಕರೆನಿಸಿದರು. ೧೯೫೫ರಲ್ಲಿ ನವಜ್ಯೋತಿ ಸ್ಟುಡಿಯೋ ಮುಚ್ಚಿದ ನಂತರ ಮೈಸೂರಿನ ಪ್ರೀಮಿಯರ್ ಸ್ಟುಡಿಯೋದಲ್ಲಿ ಶಬ್ದಗ್ರಾಹಕರಾಗಿ ಕೆಲಸಕ್ಕೆ ಸೇರಿದರು. ಕರ್ನಾಟಕ ರಾಜ್ಯಸರ್ಕಾರ ತನ್ನ ರಾಜ್ಯದಲ್ಲಿ ತಯಾರಾದ ಚಿತ್ರಗಳಿಗೆ ಸಹಾಯಧನ ಕೊಡಲು ಮುಂದಾದಾಗ ಸೀತಾರಾಂರವರಿಗೆ ಕೈತುಂಬಾ ಅವಕಾಶಗಳು ಸಿಗಲಾರಂಭಿಸಿದವು. ಈ ಅವಧಿಯಲ್ಲಿ ಇವರು ಹಲವಾರು ಹೆಸರಾಂತ ನಿರ್ದೇಶಕರೊಡನೆ ಕೆಲಸ ಮಾಡಿದರು. ತಾಂತ್ರಿಕ ನಿಪುಣತೆಗೆ ಹೆಸರಾದ ನಿರ್ದೇಶಕ ಪುಟ್ಟಣ್ಣ ಕಣಗಾಲ್ ಹಾಗೂ ಸೀತಾರಾಂರವರದು ಒಂದು ರೀತಿಯ ಬಿಡಿಸಲಾರದ ನಂಟೆಂದರೂ ತಪ್ಪಲ್ಲ. ಈ ವರೆಗೂ ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳಿಗೆ ಶಬ್ದಗ್ರಾಹಕರಾಗಿ ದುಡಿದಿರುವ ಇವರಿಗೆ ನಂಜರಾಜೇ ಅರಸ್ ನಿರ್ದೇಶನದ 'ಸಂಕಲ್ಪ' ಚಿತ್ರಕ್ಕಾಗಿ ೧೯೭೩-೭೪ನೇ ಸಾಲಿನ ಹಾಗೂ 'ಕೆರಳಿದ ಸಿಂಹ' ಚಿತ್ರದ ಶಬ್ದಗ್ರಹಣಕ್ಕಾಗಿ ೧೯೮೧-೮೨ನೇ ಸಾಲಿನ ರಾಜ್ಯ ಸರ್ಕಾರದ ಪ್ರಶಸ್ತಿಗಳು ಲಭಿಸಿವೆ. ಸೀತಾರಾಂ ಶಬ್ದಗ್ರಾಹಕರಾಗಿ ದುಡಿದ ಕೆಲವು ಯಶಸ್ವಿ ಚಿತ್ರಗಳು 'ಒಂದೇ ಬಳ್ಳಿಯ ಹೂಗಳು', 'ಗಜ್ಜೆಪೂಜೆ', 'ಶರಪಂಜರ', 'ಶುಭಮಂಗಳ', 'ಉಪಾಸನೆ' ಇತ್ಯಾದಿ.

### ಸೀತಾರಾಂ.ಜಿ.ಎಸ್.ವಿ

ದಕ್ಷಿಣ ಭಾರತ ಚಿತ್ರರಂಗದ ಯುವ ಛಾಯಾಗ್ರಾಹಕ. ೩-೪-೧೯೬೨ರಂದು ಆಂಧ್ರಪ್ರದೇಶದಲ್ಲಿ ಜನಿಸಿದರು. ಬಿ.ಎ.ಪದವಿ. ೧೯೮೨ರಲ್ಲಿ ಎಸ್.ರಾಮನಾಥನ್ ನಿರ್ದೇಶನದ



'ಮಹಾನ್' ಚಿತ್ರಕ್ಕೆ ಕ್ಯಾಮರಾ ಅಸಿಸ್ಟೆಂಟ್ ಆಗಿ ಪ್ರವೇಶ. ನಂತರ ಸಹ ಛಾಯಾಗ್ರಾಹಕರಾಗಿ ಹಲವಾರು ಚಿತ್ರಗಳಲ್ಲಿ ದುಡಿತ. ಕನ್ನಡದಲ್ಲಿ ಸ್ವತಂತ್ರ ಛಾಯಾಗ್ರಾಹಕನಾಗಿ 'ಗೋಪಿಕೃಷ್ಣ' ಚಿತ್ರದ ಮೂಲಕ ಪರಿಚಯ. ನಂತರ 'ಅಣ್ಣಯ್ಯ', 'ಮನೆದೇವ್ರು', 'ರಸಿಕ', 'ಚಿನ್ನ', 'ಪುಟ್ನಂಜ', 'ಚೆಲುವ', 'ಮೊಮ್ಮಗ', 'ಕಲಾವಿದ', 'ರವಿಮಾಮ', 'ಓ ಪ್ರೇಮವೇ', 'ಓ ನನ್ನ ನಲ್ಲೆ' ಮೊದಲಾದ ಚಿತ್ರಗಳಲ್ಲಿ ಛಾಯಾಗ್ರಾಹಕನಾಗಿ ಸೇವೆ. ಅದ್ದೂರಿ ಚಿತ್ರಗಳಿಗೆ, ಪ್ರಯೋಗಗಳಿಗೆ ಹೆಸರಾದ ರವಿಚಂದ್ರನ್ ಅವರ ಚಿತ್ರಗಳಿಗೆಲ್ಲಾ ಸೀತಾರಾಂ ಅವರದ್ದೇ ಛಾಯಾಗ್ರಹಣ ಇರುತ್ತದೆ.

### ಸೀತಾರಾಮ್.ಟಿ.ಎನ್

ಕನ್ನಡ ಕಿರುತೆರೆಯಲ್ಲಿ ಟಿ.ಎನ್.ಸೀತಾರಾಂ ದೊಡ್ಡ ಹೆಸರು. ಚಿತ್ರರಂಗದ ನಂಟು ಕೂಡ ಸಾಕಷ್ಟಿದೆ. ಪಿ.ಲಂಕೇಶ್ ನಿರ್ದೇಶಿಸಿದ 'ಪಲ್ಲವಿ' ಚಿತ್ರದ ನಾಯಕನಟರು. ಪುಟ್ಟಣ್ಣ ಕಣಗಾಲರ 'ಧರಣಿ ಮಂಡಲ ಮಧ್ಯದೊಳಗೆ' ಸೇರಿದಂತೆ ಇನ್ನು ಕೆಲವು ಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. ಈಚೆಗೆ ಎಸ್.ಎಲ್. ಭೈರಪ್ಪನವರ ಕಾದಂಬರಿ 'ಮತದಾನ'ವನ್ನು ಚಿತ್ರರೂಪದಲ್ಲಿ ತಂದು ಈ ಚಿತ್ರಕ್ಕೆ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂಬ ರಾಷ್ಟ್ರಪ್ರಶಸ್ತಿಯನ್ನು ತಂದುಕೊಟ್ಟರು. ಈ ಪ್ರತಿಭಾವಂತ ನಟ, ನಿರ್ದೇಶಕ, ಸಾಹಿತಿ 'ಮಾನಸ ಸರೋವರ', 'ಬ್ಯಾಂಕರ್ ಮಾರ್ಗಯ್ಯ', 'ಪಂಚಮವೇದ' ಚಿತ್ರಗಳಿಗೆ ಸಂಭಾಷಣೆಗಳನ್ನು ಬರೆದಿದ್ದಾರೆ. 'ಪಂಚಮವೇದ' ಅವರಿಗೆ ಅತ್ಯುತ್ತಮ ಸಂಭಾಷಣೆಗಾಗಿ ೧೯೮೯ ೯೦ರ ಸಾಲಿನ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ತಂದುಕೊಟ್ಟಿತು. ರಾಜಕೀಯದಲ್ಲಿಯೂ ಕೆಲವುಕಾಲ ಸಕ್ರಿಯವಾಗಿ ತೊಡಗಿಕೊಂಡ



ಸೀತಾರಾಂ ಗೌರಿಬಿದನೂರು ಕ್ಷೇತ್ರದಿಂದ ವಿಧಾನಸಭೆ ಚುನಾವಣೆಯಲ್ಲಿ ಸ್ಪರ್ಧಿಸಿದರು. ಚುರುಕು ಸಂಭಾಷಣೆಗೆ ಹೆಸರಾದವರು ಸೀತಾರಾಂ.

### ಸೀತಾರಾಮ್ ಕಾರಂತ

೧೯೯೯ರಲ್ಲಿ 'ಚಂದ್ರಮುಖಿ ಪ್ರಾಣಸಖಿ' ಚಿತ್ರ ನಿರ್ದೇಶಿಸಿ, ವಿಭಿನ್ನ ನಿರ್ದೇಶಕರಾಗಿ ಗಮನ ಸೆಳೆದವರು ಸೀತಾರಾಮ್ ಕಾರಂತ. ೧೯೯೧ರಲ್ಲಿ ನಿರ್ದೇಶಕ ಫಣಿ ರಾಮಚಂದ್ರ ಅವರೊಂದಿಗೆ 'ಹೂವೊಂದು ಬೇಕು ಬಳ್ಳಿಗೆ'ಯ ಸಹಾಯಕ ನಿರ್ದೇಶಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ಫಣಿಯವರ ನಾಲ್ಕೈದು ಚಿತ್ರಗಳಲ್ಲಿ ಕೆಲಸ ಮಾಡಿದರು. ಅನಂತರ ಸುನಿಲ್‌ಕುಮಾರ್‌ದೇಸಾಯಿಯವರ 'ನಮ್ಮೂರ ಮಂದಾರ ಹೂವೆ', 'ಪ್ರೇಮ ರಾಗ ಹಾಡು ಗೆಳತಿ' ಮತ್ತು 'ಪ್ರತ್ಯರ್ಥ' ಚಿತ್ರಗಳಿಗೆ ಸಹನಿರ್ದೇಶಕರಾದರು. ಎಸ್.ನಾರಾಯಣ್‌ರೊಂದಿಗೆ 'ಭಾಮ



ಸತ್ಯಭಾಮ' ಚಿತ್ರಕ್ಕೂ ಸಹ ನಿರ್ದೇಶಕರಾಗಿದ್ದ ಕಾರಂತರು ಗಂಭೀರವಾದ ಚಿತ್ರಗಳ ಜಾಡನ್ನೇ ಮುಂದುವರಿಸಿಕೊಂಡು ಬರುವ ನಿರ್ಧಾರ ಮಾಡಿ 'ಚಂದ್ರಮುಖಿ ಪ್ರಾಣಸಖಿ'ಯಲ್ಲಿ ಸಿಕ್ಕಿದ ಅವಕಾಶವನ್ನು ಕ್ರಿಯಾಶೀಲವಾಗಿ ಉಪಯೋಗಿಸಿಕೊಂಡರು. ಅವರ ಮುಂದಿನ ಚಿತ್ರ 'ಶ್ರೀ ರಸ್ತು ಶುಭಮಸ್ತು' ಆರ್ಥಿಕವಾಗಿ ಯಶಸ್ವಿಯಾಗದಿದ್ದರೂ ಕಾರಂತರು ನಿರ್ದೇಶಕರಾಗಿ ನೆಲೆಯೂರುವಂತೆ ಮಾಡಿತು. ಕಿರುತೆರೆ ಧಾರಾವಾಹಿಯ ನಿರ್ದೇಶನದಲ್ಲಿಯೂ ತೊಡಗಿದ್ದಾರೆ.

### ಸೀತಾರಾಮಶಾಸ್ತ್ರಿ.ಕು.ರ.

ಕನ್ನಡ ಚಲನಚಿತ್ರ ಸಾಹಿತಿಗಳಲ್ಲಿ ಪ್ರಮುಖರು. ಕು.ರ.ಸೀ ಎಂದೇ ಖ್ಯಾತರು. ಕು.ರ.ಸೀ.ಯವರು ಮೊದಲು ಹರಿಕಥಾ ವಿದ್ವಾಂಸರು. ಪೌರಾಣಿಕ ಕಥೆಗಳನ್ನು ಸಂಗೀತಮಯವಾಗಿ, ಆಕರ್ಷಕವಾಗಿ ಹೇಳುತ್ತಿದ್ದರು. ಅವರು ಬೆಳೆದಿದ್ದೇ ಆಧ್ಯಾತ್ಮಿಕ ವಾತಾವರಣದಲ್ಲಿ. ಚಿಕ್ಕಂದಿನಿಂದಲೂ ನಾಟಕಾಭಿನಯದಲ್ಲಿ



ಆಸಕ್ತಿ. ಗುಬ್ಬಿ ವೀರಣ್ಣನವರ ಕಂಪನಿಯಲ್ಲಿ ತರಬೇತಿ ಪಡೆದವರು. ವೀರಣ್ಣನವರು ತಯಾರಿಸಿದ 'ಹೇಮರೆಡ್ಡಿ ಮಲ್ಲಮ್ಮ' ಚಿತ್ರದಲ್ಲಿ ಮಲ್ಲಮ್ಮನ ಮೈದುನ ವೇಮನನ ಪಾತ್ರವನ್ನು ನಿರ್ವಹಿಸಿ ಮೆಚ್ಚುಗೆ ಗಳಿಸಿದರು. ಆ ಚಿತ್ರದ ನಿರ್ದೇಶಕರಿಗೆ ಸಹಾಯಕರಾಗಿ ಕೆಲಸ ಮಾಡಿ ಅನುಭವ ಹೊಂದಿದರು. ಮುಂದೆ ಹೊನ್ನಪ್ಪ ಭಾಗವತರು ತಯಾರಿಸಿದ 'ಭಕ್ತ ಕುಂಬಾರ' ಚಿತ್ರದ ದಿಗ್ದರ್ಶಕ ಇರಾನಿಯವರಿಗೆ ಸಹಾಯಕರಾಗಿ ಕೆಲಸ ಮಾಡಿದರು. ಅದರ ಜೊತೆಗೆ ಸಂಭಾಷಣೆಗಳನ್ನು ಬರೆಯುವ ಹೊಣೆಯನ್ನೂ ಹೊತ್ತರು. ಚಿತ್ರರಂಗದ ನಾನಾ ವಿಭಾಗದಲ್ಲಿ ತರಬೇತಿ ಪಡೆಯಬೇಕೆಂಬ ಆಸೆ ಹೆಚ್ಚಿತು. ಆಗಿನ ಕಾಲದಲ್ಲಿ ಭಾರತದಲ್ಲಿ ಅಂತಹ ಶಿಕ್ಷಣ ಸಂಸ್ಥೆಗಳಾವುವೂ ಇರಲಿಲ್ಲವಾದ್ದರಿಂದ ಸಿಂಗಪೂರಿನ ಷಾ ಸಹೋದರರ ಸ್ಟುಡಿಯೋದಲ್ಲಿ ತರಬೇತಿ ಪಡೆದರು. ಅಲ್ಲಿಯೇ ಒಂದು ಚಿತ್ರವನ್ನು ನಿರ್ದೇಶಿಸಿ ಅನುಭವವನ್ನು ಸಂಪಾದಿಸಿಕೊಂಡರು. ಕನ್ನಡ ಚಿತ್ರರಂಗದ ಮೇಲಿನ ಮಮತೆಯಿಂದ ಮತ್ತೆ ಬೆಂಗಳೂರಿಗೆ ವಾಪಸಾದರು. ಹೊನ್ನಪ್ಪ ಭಾಗವತರು ತಮ್ಮ 'ಮಹಾಕವಿ ಕಾಳಿದಾಸ' ಚಿತ್ರದ ಸಂಪೂರ್ಣ ಹೊಣೆಯನ್ನು ಶಾಸ್ತ್ರಿಗಳಿಗೇ ಬಿಟ್ಟುಕೊಟ್ಟರು. ಸಂಭಾಷಣೆ, ಗೀತರಚನೆ, ನಿರ್ದೇಶನ ಎಲ್ಲವೂ ಕು.ರ.ಸೀ. ಇವರದ್ದೇ. ಶಾಸ್ತ್ರಿಗಳ ಸಿಂಗಪುರದ ಅನುಭವ ಇವರಿಗೆ ತುಂಬಾ ನೆರವಾಯಿತು. ಚಿತ್ರ ರಾಷ್ಟ್ರಪ್ರಶಸ್ತಿ ಗಳಿಸಿತು. ಕು.ರ.ಸೀ. ೫೦ಕ್ಕೂ ಹೆಚ್ಚು ಚಿತ್ರಗೀತೆಗಳನ್ನು ಬರೆದು ಹಲವು ಚಿತ್ರಗಳನ್ನು ನಿರ್ದೇಶಿಸಿದರು. 'ಸದಾರಮೆ', 'ಅಣ್ಣ ತಂಗಿ', 'ಮನಮೆಚ್ಚಿದ ಮಡದಿ', 'ಚಿರಂಜೀವಿ'... 'ಚಿರತ ಜೀವ', 'ಕಲ್ಪವೃಕ್ಷ' ಮುಂತಾದವು ಇವರು ನಿರ್ದೇಶಿಸಿದ ಚಿತ್ರಗಳು. ಸಂಭಾಷಣೆ, ಗೀತರಚನೆಯಲ್ಲಿ ಕು.ರ.ಸೀ. ಇವರದು ಅನನ್ಯ ಸಾಧನೆ. ಕನ್ನಡ ಚಿತ್ರರಂಗಕ್ಕೆ ಕು.ರ.ಸೀ.ಯವರ ಕೊಡುಗೆ ಸಂಖ್ಯಾದೃಷ್ಟಿಯಿಂದ ಕಡಿಮೆ. ಅದರೆ ಗುಣಮಟ್ಟದಲ್ಲಿ ಮಹತ್ವಪೂರ್ಣ.

## ಸುಂದರ್.ಎಂ.ಡಿ

ಜನಪ್ರಿಯ ಕಥಾಲೇಖಕ ಹಾಗೂ ಚಿತ್ರನಾಟಕಕಾರ ಎಂ.ಡಿ.ಸುಂದರ್ ಮೂಲತಃ ತೆಲುಗಿನವರಾದರೂ ಕನ್ನಡ ಚಿತ್ರನಾಟಕಕ್ಕೆ ಮೆರುಕಟ್ಟೆಯನ್ನು ತಂದುಕೊಟ್ಟ ಕೀರ್ತಿ ಇವರಿಗೆ ಸಲ್ಲುತ್ತದೆ. ಛಾಯಾಗ್ರಾಹಕ ಪಿ.ಎಸ್.ಪ್ರಕಾಶ್ ಅವರಿಂದ ನಿರ್ದೇಶಕ ರವೀ ಅವರ ಪರಿಚಯವಾಗಿ 'ಸಿ.ಐ.ಡಿ.ರಾಜಣ್ಣ' ಚಿತ್ರಕ್ಕೆ ಕಥೆ ಬರೆದರು. ನಂತರ 'ಕೌಬಾಯ್‌ಕುಳ್ಳ', 'ಗಂಧದ ಗುಡಿ' ಚಿತ್ರಗಳಿಗೆ ಚಿತ್ರಕಥೆ ಬರೆದರು. 'ಗಂಧದ ಗುಡಿ' ಚಿತ್ರದ ನಂತರ ಇವರ ಸ್ಥಾನ ಕನ್ನಡದಲ್ಲಿ ಶಾಶ್ವತವೆನಿಸಿತು. ೨೦೦ಕ್ಕೂ ಹೆಚ್ಚಿನ ಚಿತ್ರಗಳಿಗೆ ಕಥೆ, ಚಿತ್ರಕಥೆ ರಚಿಸಿರುವ ಎಂ.ಡಿ.ಸುಂದರ್ ರಚಿಸಿದ ಕಥೆಗಳನ್ನು ಆಧರಿಸಿದ 'ಶಂಕರ್‌ಗುರು', 'ನಾ ನಿನ್ನ ಬಿಡಲಾರೆ', 'ಸೀತಾರಾಮು', 'ಸಹೋದರರ



ಸವಾಲ್', 'ಕಳ್ಳ-ಕುಳ್ಳ', 'ಆಟೋರಾಜ', 'ಕೆರಳಿದ ಸಿಂಹ' ಮೊದಲಾದವು ಯಶಸ್ವಿ ಚಿತ್ರಗಳು.

## ಸುಂದರ್ ಮೂಗೂರು

ಟಿ.ನರಸೀಪುರದ ಮೂಗೂರಿನಲ್ಲಿ ಜನಿಸಿದ ಸುಂದರ್ ಜನಪ್ರಿಯ ನೃತ್ಯ ನಿರ್ದೇಶಕರು. ಬಾಲ್ಯದಿಂದಲೇ ನೃತ್ಯದಲ್ಲಿ ಆಸಕ್ತರಾದ ಸುಂದರ್ ಚಿತ್ರರಂಗವನ್ನು ೬೦ರ ದಶಕದ ಆರಂಭದಲ್ಲಿ ಪ್ರವೇಶಿಸಿದರು. ತಮ್ಮದೇ ಆದ ರೀತಿಯಲ್ಲಿ ನೃತ್ಯ ಪ್ರಕಾರವನ್ನು ಅಳವಡಿಸಿದ



ಸುಂದರ್ 'ಹಾವಿನ ಹೆಡೆ' ಚಿತ್ರದ 'ಬಿಸಿ ಬಿಸಿ ಕಜ್ಜಾಯ...' ಹಾಡಿಗೆ ನೃತ್ಯ ಸಂಯೋಜನೆ ಮಾಡಿ ರಾಜಕುಮಾರ್ ಅವರಿಗೆ ವಿಶೇಷವೆನಿಸುವಂಥ ನಡಗಳನ್ನು ಭರತನಾಟ್ಯ ಭಂಗಿಗಳನ್ನು ಸೇರಿಸಿ ಸಂಯೋಜಿಸಿದರು. ಇಲ್ಲಿ ಸಾಹಸ-ನೃತ್ಯಗಳ ಸಹಯೋಗವೇ ವಿಶೇಷ ಸಿದ್ಧಿ. 'ಬೂದಿ ಮುಚ್ಚಿದ ಕೆಂಡ', 'ಪರಾಜಿತ', 'ರಾಗತಾಳ', 'ಸುವರ್ಣ ಸೇತುವೆ', 'ಗಾಯಿತ್ರಿ ಮದುವೆ', 'ಅವಳ ಅಂತರಂಗ', 'ಆಸೆಯ ಬಲೆ' ಮೊದಲಾದ ಚಿತ್ರಗಳಲ್ಲಿ ವಿಶೇಷ ಎನಿಸುವಂಥ ನೃತ್ಯಗಳನ್ನು ಅಳವಡಿಸಿದರು. ತಮಿಳು ಚಿತ್ರರಂಗದ ಖ್ಯಾತ ನೃತ್ಯಪಟು, ನಾಯಕ ನಟ ಪ್ರಭುದೇವ ಇವರ ಪುತ್ರ.

## ಸುಂದರಕೃಷ್ಣ ಅರಸ್ (೧೯೪೧-೯೩)

ಪ್ರತಿಭಾವಂತ ನಟ. ಮೈಸೂರು ಬಳಿಯ ಉತ್ತವಳ್ಳಿಯಲ್ಲಿ ಜನನ. ಹುಣಸೂರು,ಮೈಸೂರಿನಲ್ಲಿ ವಿದ್ಯಾಭ್ಯಾಸ. ಶಾಲಾ ನಾಟಕಗಳಲ್ಲಿ ಪಾತ್ರ ಮಾಡಿದರು. ಮೈಸೂರಿನಲ್ಲಿ 'ತುಘಲಕ್' ನಾಟಕ ನಿರ್ದೇಶಿಸಿದರು. ಕೆಲವು ನಾಟಕ ಕಂಪೆನಿಗಳಲ್ಲಿ ವೃತ್ತಿ ಕಲಾವಿದರಾಗಿ ಕೆಲಸ ಮಾಡಿದರು. ಒಮ್ಮೆ ನಾಟಕ ವೀಕ್ಷಿಸಿದ ಚದುರಂಗ ಅವರು ತಮ್ಮ 'ಸರ್ವಮಂಗಳ' ಚಿತ್ರಕ್ಕೆ ಸಹಾಯಕ ನಿರ್ದೇಶಕರಾಗಿ ನೇಮಿಸಿಕೊಂಡರು. ನಂತರ ಪುಟ್ಟಣ್ಣ ಕಣಗಾಲರು ಇವರಲ್ಲಿದ್ದ ಪ್ರತಿಭೆಯನ್ನು ಗುರುತಿಸಿ ಸಹಾಯಕ ನಿರ್ದೇಶಕರಾಗಿ ಕೆಲಸ ಮಾಡಲು ಅವಕಾಶ ನೀಡಿದರು. ಇವರ ಸಿರಿಕಂಠವನ್ನು ಕೇಳಿದ ಗಿರೀಶ್ ಕಾರ್ನಾಡರು ತಮ್ಮ 'ಕಾಡು' ಚಿತ್ರದಲ್ಲಿ ಅಮರೀಶ್‌ಪುರಿ ಅವರಿಗೆ ಕಂಠದಾನ ಮಾಡಲು ಆಹ್ವಾನಿಸಿದರು. ಮುಂದೆ ಇವರು ಹಲವಾರು ಕಲಾವಿದರಿಗೆ ಕಂಠದಾನ ಕಲಾವಿದರಾದರು. 'ಒಂದಾನೊಂದು ಕಾಲದಲ್ಲಿ' ಚಿತ್ರದ 'ಪೆರ್ಮಾಡಿ' ಪಾತ್ರ ಅಭಿನಯ ಕ್ಷೇತ್ರದ ಬಾಗಿಲು ತೆರೆಯಿತು. ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅರಸು ಅವರು ಅಭಿನಯಿಸಿದರು. ರಾಜೇಂದ್ರಸಿಂಗ್‌ಬಾಬು ಇವರಿಗೆ ಖಳನಟನ



ಹೊಸ ಇಮೇಜ್ ಕೊಟ್ಟರು. ಪೋಷಕ ಪಾತ್ರದ ಮಿತಿ ದಾಟಿ ಪ್ರತಿನಾಯಕರಾದರು ಸುಂದರ ಕೃಷ್ಣ ಅರಸ್. 'ಹೊನ್ನಿಯ ಮದುವೆ' ಚಿತ್ರ ನಿರ್ದೇಶಿಸಿದರಾದರೂ ಅದು ತೆರೆಕಾಣಲಿಲ್ಲ. 'ಚಕ್ರ', 'ಸಂಗ್ಯಾಬಾಳ್ಯ', 'ಸೂಪರ್‌ನೋವಾ 459', 'ಸಂಗಮಸಾಕ್ಷಿ' (ತುಳು) ಚಿತ್ರಗಳನ್ನು ಸಹ ಇವರು ನಿರ್ದೇಶಿಸಿದರು. 'ಸಂಗ್ಯಾಬಾಳ್ಯ' ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಪನೋರಮಾ ವಿಭಾಗಕ್ಕೆ (೧೯೯೩) ಆಯ್ಕೆಯಾಯಿತು. 'ಒಂದಾನೊಂದು ಕಾಲದಲ್ಲಿ' ಚಿತ್ರದ ಅಭಿನಯಕ್ಕಾಗಿ ರಾಜ್ಯ ಸರ್ಕಾರದ ಅತ್ಯುತ್ತಮ ಪೋಷಕನಟ (೧೯೭೮-೭೯) ಪ್ರಶಸ್ತಿ ಪಡೆದುಕೊಂಡರು. ಸಂಕಲನಕಾರ ಸುರೇಶ್ ಅರಸ್ ಇವರ ಸಹೋದರ. ಅನಾರೋಗ್ಯದಿಂದ ತಮ್ಮ ೫೨ನೇ ವಯಸ್ಸಿನಲ್ಲಿ (೧೦ ನವಂಬರ್ ೧೯೯೩) ನಿಧನರಾದರು.

## ಸುಂದರನಾಥ ಸುವರ್ಣ

ನಿರ್ದೇಶಕರ ಕಲ್ಪನೆಗೆ ಜೀವ ತುಂಬುವ ಪ್ರಯತ್ನ ಮಾಡುವ ಛಾಯಾಗ್ರಾಹಕರಲ್ಲಿ ಒಬ್ಬರು ಸುಂದರನಾಥ ಸುವರ್ಣ. ಮಂಗಳೂರಿನ ಹುಡುಗ. ತಂದೆಯೊಂದಿಗೆ ಟೈಲ್ಸ್ ಫ್ಯಾಕ್ಟರಿಯೊಂದರಲ್ಲಿ ಕೆಲಸದಲ್ಲಿ ಇದ್ದರು. ಅಲ್ಲಿಯೇ ಮಾಲೀಕರ ಕ್ಯಾಮೆರಾದಲ್ಲಿ ಅದರ ಬಳಕೆಯನ್ನು ಕಲಿತರು. ಯಾವುದೇ ಶಿಕ್ಷಣವಿಲ್ಲದೇ ಸ್ವಪರಿಶ್ರಮದಿಂದ ಸ್ಟಿಲ್ ಫೋಟೋಗ್ರಾಫರ್ ಆಗಿ ಚಿತ್ರರಂಗ ಪ್ರವೇಶಿಸಿದರು.



ಚಂದ್ರಶೇಖರ ಕಂಬಾರ ಮೊದಲಾದ ಬುದ್ಧಿಜೀವಿಗಳ ಒಡನಾಟ ಇವರಲ್ಲಿ ಹೊಸ ಆಲೋಚನೆಗಳನ್ನು ಪ್ರೇರಿಸಿತು. 'ಅಪರೂಪದ ಅತಿಥಿಗಳು' ಚಿತ್ರದಿಂದ ಸ್ವತಂತ್ರ ಛಾಯಾಗ್ರಾಹಕರಾದರು. ನಂತರ 'ಆರಂಭ' ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸುವ ಮೂಲಕ ನಿರ್ದೇಶಕರೂ ಆದರು. ನಿರ್ದೇಶಕರಾಗಿ 'ಅಗ್ನಿಪರ್ವ', 'ನೀ ನನ್ನ ದೈವ', 'ಟೈಗರ್ ಗಂಗು', 'ಕಿಲಾಡಿ ತಾತ' ಚಿತ್ರಗಳನ್ನು ನಿರ್ದೇಶಿಸಿದ್ದಾರೆ. 'ಹಳ್ಳಿಯಾದರೇನು ಶಿವ' ಚಿತ್ರವನ್ನು ನಿರ್ಮಿಸಿದರು. 'ರಾಜಕೀಯ', 'ನಮ್ಮೂರ ಮಂದಾರ ಹೂವೆ' ಮೊದಲಾದವು ಇವರಿಗೆ ಹೆಸರು ತಂದ ಚಿತ್ರಗಳು.

## ಸುಂದರರಾಜ್

ಸುಂದರರಾಜ್ ಮೂಲತಃ ರಂಗಭೂಮಿ ಕಲಾವಿದರು. ಅನೇಕ ಹವ್ಯಾಸಿ ತಂಡಗಳಲ್ಲಿ ನಟನಾಗಿ, ರಂಗಕರ್ಮಿಯಾಗಿ ದುಡಿದರು. ಬಿ.ವಿ.ಕಾರಂತರ ಗರಡಿಯಲ್ಲಿ ಪಳಗಿದರು. ಅವರ ಪ್ರಥಮ ಚಿತ್ರ 'ಕಾಡು'. ನಂತರ ತೆರೆಗೆ ಬಂದ ಹಲವಾರು ಚಿತ್ರಗಳಲ್ಲಿ ಉತ್ತಮ ಅಭಿನಯ ನೀಡಿ ಪೋಷಕ ನಟರಾಗಿ



ಖ್ಯಾತಿಗಳಿಸಿದ್ದಾರೆ. ಜೊತೆಗೆ ಖಾಸಗಿ ಉದ್ಯಮಗಳನ್ನು ನಡೆಸುತ್ತಿದ್ದಾರೆ. ಇವರು ಅಭಿನಯಿಸಿದ ಪ್ರಮುಖ ಚಿತ್ರಗಳು 'ಚೋಮನ ದುಡಿ', 'ತಬ್ಬಲಿಯು ನೀನಾದೆ ಮಗನೆ', 'ಒಂದಾನೊಂದು ಕಾಲದಲ್ಲಿ', 'ಗೀಜಗನ ಗೂಡು', 'ಅನ್ವೇಷಣೆ', 'ಚಂದನದ ಗೊಂಬೆ', 'ಮರ್ಯಾದೆ ಮಹಲ್' ಇತ್ಯಾದಿ. ಸುಂದರರಾಜ್ ಮೊದಲು ಕಲಾತ್ಮಕ ಚಿತ್ರಗಳಲ್ಲಿ ಹೆಚ್ಚು ಅಭಿನಯಸಿದರು. ಕಾರಂತ, ಕಾರ್ನಾಡರ ಚಿತ್ರಗಳಿಗೆ ಹಿನ್ನೆಲೆಯಲ್ಲಿ ನಾಗಾಭರಣರೊಂದಿಗೆ ಕಾರ್ಯ ನಿರ್ವಹಿಸಿದರು. ಅನೇಕ ಜನಪ್ರಿಯ ಚಿತ್ರಗಳಲ್ಲೂ ನಟಿಸಿದರು. ಕನ್ನಡ ಚಲನಚಿತ್ರ ಕಲಾವಿದರ ಸಂಘದ ಕಾರ್ಯದರ್ಶಿಯಾಗಿ ಸಾಕಷ್ಟು ಕೆಲಸ ಮಾಡಿದರು. ಜನಪ್ರಿಯ ಕಲಾವಿದೆ ಪ್ರಮಿಳಾ ಜೋಷಾಯ್ ಇವರ ಪತ್ನಿ. ರಂಗಭೂಮಿಯ ಒಲವು ಮಾಸಿಲ್ಲ. ಕಿರುತೆರೆಯಲ್ಲೂ ಜನಪ್ರಿಯರು.

### ಸುಂದರಶ್ರೀ

ರಂಗಭೂಮಿಯ ಹಿನ್ನೆಲೆಯುಳ್ಳ ಸುಂದರಶ್ರೀ ರಾಷ್ಟ್ರೀಯ ನಾಟಕ ಶಾಲೆಯ ಪದವೀಧರೆ. ಗುಬ್ಬಿ ವೀರಣ್ಣನವರ ಮೊಮ್ಮಗಳು. ಆಕೆ ಚಿತ್ರರಂಗಕ್ಕೆ ೧೯೭೭ರಲ್ಲಿ ನಿರ್ದೇಶಕ ವಿ.ಆರ್.ಕೆ.ಪ್ರಸಾದ್‌ರವರ 'ಋಷ್ಯಶೃಂಗ'



ಚಿತ್ರದ ಮೂಲಕ ನಾಯಕಿಯಾಗಿ ಪ್ರವೇಶಿಸಿದರು. ನಂತರ 'ಕಾಡುಕುದುರೆ', 'ಅರಿವು' ಮೊದಲಾದ ಪ್ರಶಸ್ತಿ ಪುರಸ್ಕೃತ ಚಿತ್ರಗಳಲ್ಲಿ ಅಭಿನಯಿಸಿದರು. ವೃತ್ತಿ ನಿರತ ರಂಗಭೂಮಿ ಹಾಗೂ ಹವ್ಯಾಸಿ ರಂಗಭೂಮಿ ಎರಡರಲ್ಲೂ ಸಕ್ರಿಯವಾಗಿರುವ ಸುಂದರಶ್ರೀ ಇತ್ತೀಚಿನ ದಿನಗಳಲ್ಲಿ ಕಂಠದಾನ ಕಲಾವಿದೆಯಾಗಿ, ನಿರೂಪಕಿಯಾಗಿ ಕಾರ್ಯ ನಿರ್ವಹಿಸಿದರು. ಕಿರುತೆರೆಯಲ್ಲಿ ಜನಪ್ರಿಯರಾಗಿದ್ದಾರೆ. ರಂಗಕರ್ಮಿ, ನಿರ್ದೇಶಕ, ಚಲನಚಿತ್ರ ಸಾಹಿತಿ, ಕಿರುತೆರೆಯಲ್ಲೂ ಖ್ಯಾತರಾಗಿರುವ, ರಾಷ್ಟ್ರೀಯ ನಾಟಕ ಶಾಲೆಯಲ್ಲಿ ತನ್ನ ಸಹಪಾಠಿಯಾಗಿದ್ದ ಸುರೇಂದ್ರನಾಥ್‌ರನ್ನು ವಿವಾಹವಾಗಿದ್ದಾರೆ.

### ಸುದರ್ಶನ್.ಆರ್

ಅಪ್ಪಟ ಶಾಸ್ತ್ರೀಯ ಧಾಟಿಯ ಮಧುರ ಸಂಗೀತದ ರಸದೌತಣವನ್ನು ಕನ್ನಡ ಚಿತ್ರಗಳಲ್ಲಿ ಉಣಬಡಿಸಿದವರಲ್ಲಿ ಆರ್.ಸುದರ್ಶನಂ ಕೂಡ ಒಬ್ಬರು. ಸಂಗೀತವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿದ ಇವರು ಹಿಂದೆ ಗುಬ್ಬಿ ಕಂಪೆನಿಯಲ್ಲಿ ಹಾರ್ಮೋನಿಯಂ ನುಡಿಸುತ್ತಿದ್ದರು. ರಂಗಭೂಮಿಯಿಂದ ಚಿತ್ರರಂಗದಲ್ಲಿ ದುಡಿಯುವ ಹಂಬಲ ಹೊತ್ತು ಮದರಾಸಿಗೆ



ತೆರಳಿ, ೧೯೫೦ರಿಂದ ಇಪ್ಪತ್ತು ವರ್ಷಗಳಷ್ಟು ಧೀರ್ಘ ಕಾಲ ಎ.ವಿ.ಎಂ.ಸ್ಟುಡಿಯೋ ತಯಾರಿಸಿದ ಚಿತ್ರಗಳಲ್ಲಿ ದುಡಿದರು. ಕ್ಯಾಬರೆ ಮತ್ತಿತರ ಅದೇ ಧಾಟಿಯ ಸಂಗೀತವೆಂದರೆ ಇವರು ದೂರ. ಇವರು ಸಂಗೀತ ಸಂಯೋಜನೆ ಮಾಡಿದ ಚಿತ್ರಗಳಲ್ಲಿ ತೆಲುಗು, ತಮಿಳು ಚಿತ್ರಗಳೇ ಹೆಚ್ಚು. ಕನ್ನಡದ ಆರಂಭದ ಚಿತ್ರಗಳಾದ 'ಹರಿಶ್ಚಂದ್ರ', 'ಬೇಡರ ಕಣ್ಣಪ್ಪ', 'ಆದರ್ಶಸತಿ', 'ಭೂಕೈಲಾಸ', 'ಸದಾರಮೆ', 'ಗುಣಸಾಗರಿ' ಮಾತ್ರವಲ್ಲದೆ, 'ಮಿಸ್ ಲೀಲಾವತಿ', 'ಶ್ರೀ ಕೃಷ್ಣ ರುಕ್ಮಿಣಿ ಸತ್ಯಭಾಮ', 'ಮೂರೂವರೆ ವಜ್ರಗಳು' ಹಾಗೂ 'ಭಾರತದ ರತ್ನ' ಮುಂತಾದ ಚಿತ್ರಗಳಿಗೆ ಇವರು ನೀಡಿರುವ ಸಂಗೀತ ಇಂದಿಗೂ ಜನಪ್ರಿಯ. ಇವರ ಸಹೋದರ ಆರ್.ಗೋವರ್ಧನಂ ಅವರೂ ಅಣ್ಣನಿಗೆ ಜೊತೆಯಾಗಿ ಸಂಗೀತ ಸಂಯೋಜನೆ ಮಾಡಿದ್ದಾರೆ. ಅಲ್ಲದೆ ತಾವೇ ಸ್ವತಂತ್ರವಾಗಿಯೂ ಹಲವು ಕನ್ನಡ ಹಾಗೂ ಇತರ ಭಾಷೆಯ ಚಿತ್ರಗಳಿಗೆ ಸಂಗೀತ ನಿರ್ದೇಶಿಸಿದ್ದಾರೆ.

### ಸುದರ್ಶನ್.ಆರ್.ಎನ್

೧೯೬೧ರಲ್ಲಿ 'ವಿಜಯನಗರದ ವೀರಪುತ್ರ' ಚಿತ್ರದ ಮೂಲಕ ನಾಯಕನಟನಾಗಿ ಕನ್ನಡ ಚಿತ್ರರಂಗಕ್ಕೆ ಕಾಲಿಟ್ಟ ಆರ್.ಎನ್.ಸುದರ್ಶನ್ ಕನ್ನಡ ಚಿತ್ರರಂಗದ ಪ್ರತಿಭಾವಂತ ಹಾಗೂ ಸುಶಿಕ್ಷಿತ ಕಲಾವಿದ. ತಂದೆ ಕನ್ನಡ ರಂಗಭೂಮಿ-ಚಿತ್ರರಂಗದ ಭೀಷ್ಮ ಆರ್.ನಾಗೇಂದ್ರರಾಯರು. 'ತಂದೆ ಮಕ್ಕಳು', 'ಲಕ್ಷ್ಮೀ ಸರಸ್ವತಿ', 'ಕಾಡಿನ ರಹಸ್ಯ', 'ನಾಡಿನ ಭಾಗ್ಯ', 'ಮಂಗಳ ಮಹೂರ್ತ', 'ಆನಂದ ಭಾಗ್ಯ', 'ಪತಿಯೇ ದೈವ' ಇವರು ಅಭಿನಯಿಸಿದ ಮುಖ್ಯ ಚಿತ್ರಗಳು. ಸುದರ್ಶನ್ ಅವರೇ ಸ್ವಂತವಾಗಿ 'ನಗುವ ಹೂವು' ಚಿತ್ರವನ್ನು ತಯಾರಿಸಿದರು. ಸುದರ್ಶನ್ ಮತ್ತು ಇವರ ಮಡದಿ ಶೈಲಶ್ರೀ



ಚಿತ್ರದ ಮುಖ್ಯ ಪಾತ್ರಧಾರಿಗಳು. ಚಿತ್ರಕ್ಕೆ ೧೯೭೧ರ ರಾಷ್ಟ್ರ ಪ್ರಶಸ್ತಿ (ನಿರ್ದೇಶನ : ಆರ್.ಎನ್.ಕೆ.ಪ್ರಸಾದ್) ದೊರೆಯಿತು. ಸ್ವಲ್ಪ ಸಮಯ ತಮಿಳು, ತೆಲುಗು ಚಿತ್ರಗಳಲ್ಲಿ ಒಳ್ಳೆಯ ಅವಕಾಶಗಳೇ ಬಂದವು. ಆದರೆ ಅವೆಲ್ಲ ಖಳ ಅಥವಾ ಪೋಷಕ ಪಾತ್ರಗಳು. ಮುಂದೆ ಪೋಷಕ ಪಾತ್ರಗಳೇ ಅವರ ಪಾಲಿಗೆ ಬಂದವು. 'ಹೃದಯ ಪಲ್ಲವಿ', 'ಗುರು ಜಗದ್ಗುರು', 'ಪ್ರಚಂಡ ಕುಳ್ಳ', 'ಸಿಂಹಾದ್ರಿ' ಮುಂತಾದವು ಇವರು ಪೋಷಕ ನಟರಾಗಿ ಅಭಿನಯಿಸಿದ ಚಿತ್ರಗಳು. ಇಂದಿಗೂ ಅಲ್ಲೊಂದು ಇಲ್ಲೊಂದು ಚಿತ್ರಗಳಲ್ಲಿ ಕಾಣಿಸಿಕೊಳ್ಳುವ ಸುದರ್ಶನ್ ಕಿರುತೆರೆ ಧಾರಾವಾಹಿಗಳಲ್ಲೂ ಅಭಿನಯಿಸುತ್ತಾರೆ. ಒಳ್ಳೆಯ ಗಾಯಕರೂ ಆಗಿರುವ ಸುದರ್ಶನ್ ಒಂದೆರಡು ಚಿತ್ರಗಳಿಗೆ ಹಾಡಿದಾರೆ.

### ಸುದರ್ಶನ್‌ಕುಮಾರ್

ಕಂಠದಾನ ಕಲಾವಿದರಾದ ಸುದರ್ಶನ ಕುಮಾರ್ ಮೈಸೂರಿನಲ್ಲಿ ಜನಿಸಿದರು. (೧೫-೦೬ ೧೯೬೪) ಬಿ.ಕಾಂ.ಪದವೀಧರರಾದ ಇವರು ಬಿ.ರಾಮಮೂರ್ತಿ ನಿರ್ದೇಶನದ 'ಮರಣ ಮೃದಂಗ' ಚಿತ್ರದ ಮೂಲಕ ಕಂಠದಾನ ಕಲಾವಿದರಾಗಿ ಪರಿಚಿತರಾದರು (೧೯೯೨). ೫೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಕಂಠದಾನ ಕಲಾವಿದರಾಗಿ ದುಡಿದಿರುವ ಇವರು 'ಶ್!', 'ಹೂವು ಹಣ್ಣು', 'ಸ್ಪರ್ಶ', 'ಬೆಳದಿಂಗಳ ಬಾಲೆ', 'ಮಿಂಚು' ಮೊದಲಾದ ಚಿತ್ರಗಳಲ್ಲಿ ಕೆಲಸಮಾಡಿದ್ದಾರೆ. ೧೯೯೬ರಲ್ಲಿ 'ಓಂ' ಚಿತ್ರದಲ್ಲಿನ ಕಂಠದಾನಕ್ಕಾಗಿ ಆರ್ಯಭಟ ಪ್ರಶಸ್ತಿ ಪಡೆದಿದಾರೆ.

### ಸುದೀಪ್ ಸಂಜೀವ್

ಕನ್ನಡದ ಭರವಸೆಯ ನಾಯಕ ನಟ. ಸರೋವರ್ ಹೋಟೇಲ್ ಮಾಲೀಕ



ಸಂಜೀವ್ ಅವರ ಪುತ್ರರಾದ ಸುದೀಪ್ ನಾಯಕನಾಗಿ ಅಬ್ಬಯ್ಯನಾಯ್ಡು ಅವರ ಕೊನೆಯ ಚಿತ್ರ 'ತಾಯವ್ವ'(೧೯೯೭) ಮೂಲಕ ತೆರೆಗೆ ಬಂದರು. ಆನಂತರ ಸುನೀಲ್‌ಕುಮಾರ್‌ದೇಸಾಯಿ ನಿರ್ದೇಶನದ 'ಪ್ರತ್ಯರ್ಥ' ಚಿತ್ರದ ಒಂದು ಸಣ್ಣ ಆದರೆ ಪರಿಣಾಮಕಾರಿಯಾದ ಪಾತ್ರದಲ್ಲಿ ಗಮನ ಸೆಳೆದ ಸುದೀಪ್ ತಮ್ಮದೇ ನಿರ್ಮಾಣದ 'ಸ್ಪರ್ಶ' ಚಿತ್ರದ ಮೂಲಕ ಯಶಸ್ವಿ ಮರು ಪ್ರವೇಶ ಮಾಡಿದರು. 'ಹುಚ್ಚ' ಚಿತ್ರದಲ್ಲಿ ನಾಯಕ ನಟರಾದರು.

### ಸುಧಾ ನರಸಿಂಹರಾಜು

ಕನ್ನಡ ಚಿತ್ರರಂಗದ ಪೋಷಕ ನಟಿಯಾಗಿ ಖ್ಯಾತರಾದವರು ಸುಧಾ ನರಸಿಂಹರಾಜು.



ಬಿ.ಕಾಂ. ಪಧವೀಧರರು. ಕೆ. ವಿ. ಜಯರಾಂ ನಿರ್ದೇಶನದ 'ಅರುಣರಾಗ' ಚಿತ್ರದ ಒಂದು ಪುಟ್ಟ ಪಾತ್ರದ ಮೂಲಕ ಚಿತ್ರರಂಗಕ್ಕೆ ಬಂದರು. 'ಶುಭಮಿಲನ' 'ಅಸ್ಫೋಟ', 'ಸಂಯುಕ್ತ', 'ರಥಸಪ್ತಮಿ', 'ಪೋಲೀಸ್‌ನ ಹೆಂಡತಿ', 'ಅರಿಶಿಣ ಕುಂಕುಮ', 'ಕ್ರಮ', 'ಮನಮೆಚ್ಚಿದ ಸೊಸೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕನ್ನಡ ಚಿತ್ರರಂಗದ ಖ್ಯಾತ ಹಾಸ್ಯ ಕಲಾವಿದರಾದ 'ಹಾಸ್ಯ ಚಕ್ರವರ್ತಿ' ನರಸಿಂಹರಾಜು ಅವರ ಪುತ್ರಿ. ತಮ್ಮ ತಂದೆಯ ಹೆಸರಿನಲ್ಲಿ ಪ್ರಶಸ್ತಿಯೊಂದನ್ನು ಸ್ಥಾಪಿಸಿ ಪ್ರತೀ ವರ್ಷ ನಾಟಕೋತ್ಸವಗಳನ್ನು ಏರ್ಪಡಿಸಿ ಪ್ರಶಸ್ತಿ ನೀಡುತ್ತಾ ಬಂದಿದ್ದಾರೆ. ದೂರದರ್ಶನಕ್ಕಾಗಿ ನರಸಿಂಹರಾಜು ಅವರ ಜೀವನವನ್ನು ಆಧರಿಸಿ ಧಾರಾವಾಹಿಯೊಂದನ್ನು ನಿರ್ಮಿಸಿ. ನಿರ್ದೇಶಿಸಿದ್ದಾರೆ. ದೂರದರ್ಶನದಲ್ಲಿ ಹಲವು ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ.

### ಸುಧಾರಾಣಿ

ಬಾಲ ಕಲಾವಿದೆಯಾಗಿ ಕಾಣಿಸಿಕೊಂಡಿದ್ದ ಸುಧಾರಾಣಿ ೧೯೮೬ರಲ್ಲಿ ಕನ್ನಡ ಚಿತ್ರರಂಗದ ಅತ್ಯಂತ ಯಶಸ್ವಿ ಚಿತ್ರಗಳಲ್ಲೊಂದಾದ 'ಆನಂದ್' ಚಿತ್ರದ ಮೂಲಕ ನಾಯಕಿಯಾದರು. ಸುಧಾರಾಣಿ ಭಾವಪೂರ್ಣ ಪಾತ್ರಗಳಲ್ಲಿ ತಾವು ತೋರಿದ ಅಭಿನಯ ಸಾಮರ್ಥ್ಯದಿಂದಾಗಿ ಕಲ್ಪನಾ, ಜಯಂತಿ, ಭಾರತಿ ಮುಂತಾದ ಹಿರಿಯ ನಟಿಯರು ತೆರವು ಮಾಡಿಕೊಟ್ಟ ಸ್ಥಾನವನ್ನು ತುಂಬಿದರು. ಗಂಭೀರ ಹಾಗೂ ಲಘು ಪಾತ್ರಗಳೆರಡರಲ್ಲೂ ಲವಲವಿಕೆಯಿಂದ ಅಭಿನಯಿಸಿ ಎಲ್ಲ ವರ್ಗಗಳ ಪ್ರೇಕ್ಷಕರಿಗೂ ಪ್ರಿಯವೆನಿಸಿಕೊಂಡರು. ಜನರಂಜನೆಗೆಂದೇ ತಯಾರಾದ ಚಿತ್ರಗಳಾದರೂ ಸುಧಾರಾಣಿ ತಮ್ಮ ಶೈಲಿಯಲ್ಲಿ ಒಪ್ಪಂದ



ಮಾಡಿಕೊಳ್ಳಲಿಲ್ಲ. 'ಪಂಚಮವೇದ', 'ಅರಗಿಣಿ', 'ಮೈಸೂರ ಮಲ್ಲಿಗೆ', 'ಮುಂಜಾನೆಯ ಮಂಜು', 'ಶ್ರೀಗಂಧ', 'ಮಣ್ಣಿನ ದೋಣಿ', 'ಸ್ವಾತಿ', 'ಸ್ಪರ್ಶ' ಮುಂತಾದ ಚಿತ್ರಗಳಲ್ಲಿ ಈಕೆ ನೀಡಿದ ಪ್ರಬುದ್ಧ ಅಭಿನಯ ಈಕೆಯ ಪ್ರತಿಭೆಯ ಇನ್ನೊಂದು ಮಗ್ಗುಲನ್ನು ತೋರಿಸಿತು. ಸಂಕೀರ್ಣ ಪಾತ್ರಗಳ ಆಳವನ್ನು ಅರಿತು ಅಭಿನಯಿಸುವ ಈಕೆಯ ಸಾಮರ್ಥ್ಯ ಆಕೆಯನ್ನು ಕನ್ನಡ ಚಿತ್ರರಂಗದ ಪ್ರಥಮ ಶ್ರೇಣಿಯ ತಾರೆಯರ ಸಾಲಿಗೆ ಸೇರಿಸಿತು. 'ಪಂಚಮವೇದ' ಚಿತ್ರದಲ್ಲಿನ ಅಭಿನಯಕ್ಕಾಗಿ ೧೯೮೯-೯೦, 'ಮೈಸೂರ ಮಲ್ಲಿಗೆ' ಚಿತ್ರದಲ್ಲಿನ ಅಭಿನಯಕ್ಕಾಗಿ ೧೯೯೧-೯೨ರಲ್ಲಿ ಶ್ರೇಷ್ಠ ನಟಿ ರಾಜ್ಯಪ್ರಶಸ್ತಿಯನ್ನು ಪಡೆದಿದಾರೆ. ವಿದೇಶದಲ್ಲಿದ್ದ ಕಾರಣ ಕೆಲಕಾಲ ಮೌನವಾಗಿದ್ದ ಸುಧಾರಾಣಿ ಮರಳಿ ಬಂದು

'ನಾನೇನೂ ಮಾಡ್ಲಿಲ್ಲ', 'ಸ್ಪರ್ಶ', 'ಚಂದನ ಚಿಗುರು' ಚಿತ್ರಗಳಲ್ಲಿ ಅಭಿನಯಿಸಿದರು.

### ಸುಧೀಂದ್ರ.ಡಿ.ವಿ

ಕನ್ನಡ ಚಿತ್ರರಂಗದಲ್ಲಿ ಪಿಆರ್‌ಓ ಎನ್ನುವ ವಿಶೇಷ ನಾಮಪಟ್ಟಿಯೊಂದಿಗೆ ಕನ್ನಡ ಚಿತ್ರ ಪ್ರಚಾರಕ್ಕೆ ಇಳಿದ ಮೊದಲಿಗರು ಡಿ.ವಿ.ಸುಧೀಂದ್ರ. ಚಲನಚಿತ್ರ ನಿರ್ಮಾಣದ ಆರಂಭದ ಹಂತದಿಂದ ಹಿಡಿದು ಬಿಡುಗಡೆಯಾಗಿ ಯಶಸ್ವಿಯಾಗುವವರೆಗೂ ಒಂದು ಅವಿಭಾಜ್ಯ ಅಂಗವಾಗಿ ಕಾರ್ಯ ನಿರ್ವಹಿಸುವ ಜವಾಬ್ದಾರಿಯುತ ವಿಭಾಗ ಈ ಪತ್ರಿಕಾ ಪ್ರಚಾರ. ಈ ಸಂಪರ್ಕ ಸೇತುವಾಗಿ



ಸುಮಾರು ನಾಲ್ಕು ದಶಕಗಳಿಗೂ ಮೀರಿ ಸೇವೆ ಸಲ್ಲಿಸಿರುವವರು ಡಿ.ವಿ.ಸುಧೀಂದ್ರ. ೧೯೭೦ರಲ್ಲಿ ಭುವನೇಶ್ವರಿ ಆರ್ಟ್ ಪ್ರೊಡಕ್ಷನ್ಸ್ ಅವರ 'ಸೊಸೆ ತಂದ ಸೌಭಾಗ್ಯ' ಶ್ರೀಮಂತ ನಿರ್ಮಾಣ ಎಂಬ ಹೆಗ್ಗಳಿಕೆ ಇತ್ತು. ಅದಕ್ಕೆ ಸೂಕ್ತ ಪ್ರಚಾರ ಬೇಕೆಂದು ಅಂಕಲಗಿ ಮಿತ್ರರು ಸುಧೀಂದ್ರ ಅವರನ್ನು ನೇಮಿಸಿದರು. ಅಂದಿನಿಂದ ಸುಮಾರು ೭೫೦ಕ್ಕೂ ಹೆಚ್ಚು ಚಿತ್ರಗಳ ಪ್ರಚಾರಕರ್ತರಾಗಿ ಸೇವೆ ಸಲ್ಲಿಸಿ ಇಡೀ ಚಿತ್ರರಂಗಕ್ಕೆ ಬೇಕಾದ ವ್ಯಕ್ತಿ ಎನಿಸಿದ್ದಾರೆ. ಪ್ರಾರಂಭದಲ್ಲಿ ಇವರೊಂದಿಗೆ ರಾಮಮೂರ್ತಿ ಎಂಬುವವರು ಇದ್ದರು. ಇವರಿಬ್ಬರ ಜೋಡಿ ಒಟ್ಟಿಗೆ ಸುಮಾರು ೪೦೦ಕ್ಕೂ ಹೆಚ್ಚು ಚಿತ್ರಗಳಿಗೆ ಪ್ರಚಾರ ಕಾರ್ಯ ನಿರ್ವಹಿಸಿತು. ಇವರೊಂದಿಗೆ ಸಹಾಯಕರಾಗಿದ್ದ ಹಲವರು ಸ್ವತಂತ್ರವಾಗಿ ಪ್ರಚಾರಕರ್ತರಾಗಿ ಕೆಲಸ ಮಾಡತೊಡಗಿದರು. ಸುಧೀಂದ್ರ ಅವರ ಸಂಬಂಧಿ ವೆಂಕಟೇಶ್ ಪ್ರಸ್ತುತ ಸಹಾಯಕರಾಗಿದ್ದಾರೆ. 'ಒಲವಿನ ಉಡುಗೊರೆ', 'ಗುಂಡನ ಮದುವೆ', 'ನಗು ನಗುತಾ ನಲಿ' ಮೊದಲಾದ ಚಿತ್ರಗಳನ್ನು ಮಿತ್ರರೊಂದಿಗೆ ನಿರ್ಮಿಸಿದರು. ಲಹರಿ ಸಂಸ್ಥೆಗೆ ಚಿತ್ರನಿರ್ಮಿಸಿ ಕೊಟ್ಟರು. ಸುಧೀಂದ್ರ ಅವರಿಗೆ ಹಲವು ಸಂಸ್ಥೆಗಳ ಬಿರುದು, ಪ್ರಶಸ್ತಿ ನೀಡಿ ಗೌರವಿಸಿದೆ. 'ಸೊಸೆ ತಂದ ಸೌಭಾಗ್ಯ', 'ಸಿಂಗಾಪೂರ್‌ನಲ್ಲಿ ರಾಜಾಕುಳ್ಳ', 'ಸೀತಾರಾಮು', 'ಭಕ್ತ ಸಿರಿಯಾಳ', 'ಅಂತ', 'ಪ್ರೇಮ ಪರ್ವ', 'ಪ್ರೇಮ ಲೋಕ', 'ರಣಧೀರ', 'ಪುಟ್ನಂಜ', 'ನಮ್ಮೂರ ಮಂದಾರ ಹೂವೇ', 'ಅಮೆರಿಕಾ ಅಮೆರಿಕಾ', 'ಅಮೃತ ವರ್ಷಿಣಿ', 'ಹಬ್ಬ', 'ಯಜಮಾನ', 'ಉಪೇಂದ್ರ', 'ಸ್ಪರ್ಶ' ಮುಂತಾದ ಜನಪ್ರಿಯ ಚಿತ್ರಗಳಿಗೆ ಪ್ರಚಾರಕರ್ತರಾಗಿ ದುಡಿದಿದ್ದಾರೆ.

### ಸುಧೀರ್

ಕನ್ನಡ ಚಿತ್ರರಂಗದ ಖ್ಯಾತ ಖಳ ನಟ.



ರಂಗಭೂಮಿಯ ಹಿನ್ನೆಲೆಯಿದ್ದ ಸುಧೀರ್ ೧೯೭೪ರಲ್ಲಿ ಕೆ.ಎಂ.ಶಂಕರಪ್ಪ ನಿರ್ದೇಶಿಸಿದ 'ಮಾಡಿ ಮಡಿದವರು' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ಅಜಾನುಬಾಹು ಸುಧೀರ್ ಖಳನಟನಾಗಿಯೂ ಹಾಸ್ಯ ನಟನಾಗಿಯೂ ಅಭಿನಯಿಸಿದರು. 'ಗಜೇಂದ್ರ', 'ರಾಮಲಕ್ಷ್ಮಣ', 'ಕೆರಳಿದ ಸಿಂಹ' ಮೊದಲಾದ ಚಿತ್ರಗಳಲ್ಲಿ ಖಳನಾಗಿ, 'ಅವನೇ ನನ್ನ ಗಂಡ', 'ಹೆಣ್ಣುಹುಲಿ', 'ಒಲವಿನ ಆಸರೆ', 'ಒಡೆದ ಹಾಲು' ಮೊದಲಾದ ಚಿತ್ರಗಳಲ್ಲಿ ಹಾಸ್ಯ ಪಾತ್ರಗಳಲ್ಲಿ ಕಾಣಿಸಿಕೊಂಡು 'ಮುತ್ತೈದೆ ಭಾಗ್ಯ', 'ಸಂಸಾರನೌಕೆ' ಚಿತ್ರಗಳಲ್ಲಿ ಭಾವನಾತ್ಮಕ ಪಾತ್ರಗಳಲ್ಲಿ ಅಭಿನಯಿಸಿದರು. ಸುಧೀರ್ ಕೆಲಕಾಲದ ಅಸ್ವಸ್ಥತೆಯಿಂದ ೨೦೦೧ರಲ್ಲಿ ನಿಧನರಾದರು. ಸರಿ ಸುಮಾರು ೧೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದರು.

### ಸುನಿಲ್

ಮಂಗಳೂರಿನಲ್ಲಿ ಜನಿಸಿದ ಸುನಿಲ್ ಆರೂರು ಪಟ್ಟಾಭಿ ನಿರ್ದೇಶಿಸಿದ 'ನಾದ ಸುರಭಿ' ಚಿತ್ರದಿಂದ ಚಿತ್ರರಂಗ ಪ್ರವೇಶಿಸಿದರು. ಚಿತ್ರ ತೆರೆಕಾಣಲು ಬಹಳ ದಿನಗಳು ಹಿಡಿದವು. ದ್ವಾರಕೀಶ್



ನಿರ್ದೇಶನದ 'ಶೃತಿ' ಚಿತ್ರ ಸುನಿಲ್‌ಗೆ ಬ್ರೇಕ್ ಕೊಟ್ಟ ಚಿತ್ರ. ಇದರ ನಂತರ ಹತ್ತು ಹಲವು ಚಿತ್ರಗಳಲ್ಲಿ ಅಭಿನಯ. ವಿಶೇಷವಾಗಿ ತಾರೆ ಮಾಲಾಶ್ರೀ ಅವರೊಂದಿಗೆ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ ಸುನಿಲ್ ಯಕ್ಷಗಾನದಲ್ಲಿಯೂ ವಿಶೇಷ ಪರಿಶ್ರಮ ಹೊಂದಿದವರಾಗಿದ್ದರು. 'ಬೆಳ್ಳಿ ಕಾಲುಂಗುರ', 'ಮಾಂಗಲ್ಯ', 'ನಗು ನಗುತಾ ನಲಿ', 'ಸಿಡಿದೆದ್ದ ಶಿವ', 'ಸಿಂಧೂರ ತಿಲಕ', 'ತವರುಮನೆ ಉಡುಗೊರೆ', 'ಕಲಿಯುಗ ಸೀತೆ', 'ಮಾಲಾಶ್ರೀ ಮಾಮಾಶ್ರೀ', 'ಮನ ಮೆಚ್ಚಿದ ಸೊಸೆ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ತೆಲುಗು ಚಿತ್ರರಂಗದಲ್ಲಿ ತಮ್ಮ ಅದೃಷ್ಟ ಪರೀಕ್ಷೆ ನಡೆಸಿದ ಸುನಿಲ್ ಅವಕಾಶಗಳಿರುವಾಗಲೇ ರಸ್ತೆ ಅಪಘಾತವೊಂದರಲ್ಲಿ ದುರ್ಮರಣಕ್ಕೀಡಾದುದು ಕನ್ನಡ ಚಿತ್ರರಂಗದ ದುರಂತಗಳಲ್ಲೊಂದು.

### ಸುನಿಲ್‌ಕುಮಾರ್ ದೇಸಾಯಿ

ಕನ್ನಡದ ಪ್ರತಿಭಾವಂತ ನಿರ್ದೇಶಕರಲ್ಲಿ ಒಬ್ಬರಾಗಿರುವ ಸುನಿಲ್‌ಕುಮಾರ್ ದೇಸಾಯಿ ಮೂಲತಃ ಬಿಜಾಪುರದವರು. ವಿದ್ಯಾಭ್ಯಾಸವನ್ನು ಮೊಟುಕುಗೊಳಿಸಿ ಚಲನಚಿತ್ರರಂಗಕ್ಕೆ ಕಾಲಿಟ್ಟರು. ಇವರು ತಯಾರಿಸಿರುವ ಚಿತ್ರಗಳ ಹೆಸರುಗಳು ವೈವಿಧ್ಯಮಯ. ದೇಸಾಯಿ ನಿರ್ದೇಶಿಸಿರುವ 'ತರ್ಕ', 'ಉತ್ಕರ್ಷ', 'ಸಂಘರ್ಷ', 'ನಿಷ್ಕರ್ಷ' ಚಿತ್ರಗಳು ಯಶಸ್ವಿಯಾಗಿ ಕನ್ನಡ ಚಿತ್ರ ರಸಿಕರ ಮನಸ್ಸನ್ನು ಸೆಳೆದಿವೆ. ಯಂಡಮೂರಿ ವೀರೇಂದ್ರನಾಥ್ ಕಾದಂಬರಿ ಆಧಾರಿತ 'ಬೆಳದಿಂಗಳ ಬಾಲೆ' ಚಿತ್ರ ದೇಸಾಯಿಯವರ ವಿಶಿಷ್ಟ ನಿರ್ದೇಶನದ ಚಿತ್ರಗಳಲ್ಲಿ ಒಂದು. ಇವರು ೧೯೯೬ರಲ್ಲಿ ನಿರ್ದೇಶಿಸಿದ 'ನಮ್ಮೂರ ಮಂದಾರ ಹೂವೆ' ಚಿತ್ರ



ಜನಪ್ರಿಯವಾಯಿತು. ಸಾಕಷ್ಟು ಆಲೋಚನೆಗೂ ಹಚ್ಚುವಂಥ ವಿಷಯವನ್ನು ಹೇಳಿತ್ತು. ದೇಸಾಯಿಯವರ ಇತ್ತೀಚಿನ ಚಿತ್ರ 'ಸ್ಪರ್ಶ' ಹೊಸಕಲಾವಿದರನ್ನು ಪರಿಚಯಿಸಿದ, ಕುತೂಹಲ ಮೂಡಿಸಿದ ಚಿತ್ರವಾಗಿ ಕನ್ನಡಿಗರ ಮನಸ್ಸನ್ನು ಸೆಳೆಯಿತು. ಪರಿಣಾಮಕಾರಿಯಾದ ಚಿತ್ರವೆಂದು ದೇಸಾಯಿ ಅವರಿಗೆ ಹೆಸರು ತಂದು ಕೊಟ್ಟಿತು. ಕನ್ನಡ ಚಿತ್ರಗಳಲ್ಲಿ ಪ್ರಯೋಗ ಮಾಡುತ್ತಲೇ ಎಲ್ಲ ವರ್ಗದ ಜನರನ್ನು ಸೆಳೆದುಕೊಂಡ ಅಪರೂಪದ ತಂತ್ರಜ್ಞ ಸುನಿಲ್‌ಕುಮಾರ್‌ದೇಸಾಯಿ.
'ತರ್ಕ' ಚಿತ್ರದ ಚಿತ್ರನಾಟಕಕ್ಕಾಗಿ ಸುನಿಲ್ ಕುಮಾರ್ ದೇಸಾಯಿ, ಧ್ವನಿಗ್ರಹಣಕ್ಕಾಗಿ ಕೆ.ಎಸ್.ಕೃಷ್ಣಮೂರ್ತಿ ೧೯೮೮-೮೯ನೇ ಸಾಲಿನ, 'ಉತ್ಕರ್ಷ ಚಿತ್ರದ ಸಂಕಲನಕ್ಕಾಗಿ ಆರ್.ಜನಾರ್ಧನ್ ೧೯೯೦-೯೧ನೇ ಸಾಲಿನ, 'ನಿಷ್ಕರ್ಷ' ಚಿತ್ರದ ಚಿತ್ರನಾಟಕಕ್ಕಾಗಿ ಸುನಿಲ್ ಕುಮಾರ್ ದೇಸಾಯಿ, ಧ್ವನಿಗ್ರಹಣಕ್ಕಾಗಿ ಆರ್.ಕಣ್ಣನ್ ೧೯೯೩-೯೪ನೇ ಸಾಲಿನ, 'ಬೆಳದಿಂಗಳ ಬಾಲೆ' ಚಿತ್ರದ ಸಂಭಾಷಣೆಗಾಗಿ ಸುನಿಲ್ ಕುಮಾರ್ ದೇಸಾಯಿ ೧೯೯೫-೯೬ನೇ ಸಾಲಿನ ಹಾಗೂ 'ನಮ್ಮೂರ ಮಂದಾರ ಹೂವೆ' ಚಿತ್ರದ ಅತ್ಯುತ್ತಮ ಬಾಲನಟನಾಗಿ ಮಾ।ವಿನಾಯಕ ಜೋಷಿ ೧೯೯೬-೯೭ನೇ ಸಾಲಿನ ರಾಜ್ಯ ಸರ್ಕಾರದ ಪ್ರಶಸ್ತಿಗಳನ್ನು ಪಡೆದುದಲ್ಲದೆ, 'ನಿಷ್ಕರ್ಷ' ೧೯೯೩-೯೪ನೇ ಸಾಲಿನ ಪ್ರಥಮ ಅತ್ಯುತ್ತಮ ಚಿತ್ರವಾಗಿ ಮತ್ತು 'ಬೆಳದಿಂಗಳ ಬಾಲೆ' ೧೯೯೫-೯೬ನೇ ಸಾಲಿನ ತೃತೀಯ ಅತ್ಯುತ್ತಮ ಚಿತ್ರವಾಗಿ ರಾಜ್ಯ ಸರ್ಕಾರದ ಪ್ರಶಸ್ತಿಗಳಿಗೆ ಪಾತ್ರವಾದವು.

### ಸುಬ್ಬಣ್ಣ.ಎಂ.ಎಸ್

ಹಿರಿಯ ನಟ, ವರ್ಣಾಲಂಕಾರ ಕಲಾವಿದ. ಹಲವಾರು ಚಿತ್ರಗಳಲ್ಲಿ ಅಭಿನಯಿಸುವ ಮೂಲಕ ನಟರಾಗಿಯೂ,



ಜನಪ್ರಿಯರಾದರು. 'ಕೃಷ್ಣಲೀಲಾ' (೧೯೪೭) ಇವರು ಅಭಿನಯಿಸಿದ ಮೊದಲ ಚಿತ್ರ. 'ದಲ್ಲಾಳಿ' (೧೯೫೩) ಚಿತ್ರದಲ್ಲಿ ಮುಖ್ಯ ಪಾತ್ರವಹಿಸಿದ್ದರು. ಹಲವಾರು ಚಿತ್ರಗಳಲ್ಲಿ ಹಾಸ್ಯಪಾತ್ರಗಳನ್ನು ಸಹ ಮಾಡಿದರು. 'ಸತ್ಯ ಹರಿಶ್ಚಂದ್ರ' ಚಿತ್ರದಲ್ಲಿ ಕಾಲಕೌಶಿಕನ ಪಾತ್ರ ಮಾಡುವ ಮೂಲಕ ಜನಮನಗಳಲ್ಲಿ ಉಳಿದರು. ಅತ್ಯುತ್ತಮ ಮೇಕಪ್ ಕಲಾವಿದರಾಗಿದ್ದ ಎಂ.ಎಸ್.ಸುಬ್ಬಣ್ಣನವರು ಬಹಳಷ್ಟು ಚಿತ್ರಗಳಲ್ಲಿ ಪ್ರಸಾಧನ ಕಲೆಗಾರರಾಗಿ ಕೆಲಸ ಮಾಡಿದರು. ಚಲನಚಿತ್ರ ನಿರ್ದೇಶಕರಾದ ಎಂ.ಎಸ್.ರಾಜಶೇಖರ್ ಮತ್ತು ಮೇಕಪ್ ಪಟು ಎಂ.ಎಸ್.ಕೇಶವ ಇವರ ಪುತ್ರರು. ಚಿತ್ರೋದ್ಯಮದ ಪ್ರಾರಂಭದ ದಿನಗಳಲ್ಲಿ ಸುಬ್ಬಣ್ಣ ಒಬ್ಬರೇ ಮೇಕಪ್, ಅಲಂಕರಣ, ಅಭಿನಯದಲ್ಲೂ ಸಹಕರಿಸಿದ ಕಲಾವಿದರು.

### ಸುಬ್ಬಯ್ಯನಾಯ್ಡು.ಎಂ.ವಿ

(೧೯೦೯-೧೯೬೨)
ಕನ್ನಡದ ಮೊದಲ ವಾಕ್ಚಿತ್ರ 'ಸತಿ ಸುಲೋಚನಾ'ದ ನಾಯಕ ನಟ. ಮೈಸೂರು ಜಿಲ್ಲೆಯ ಮಾದಲಾಪುರ ಹುಟ್ಟೂರು.



ಬಾಲ್ಯದಲ್ಲಿ ಬಡತನದ ಬೇಗೆಯಿಂದ ಬೆಂದು ಶಾಕುಂತಲ ನಾಟಕ ಕಂಪೆನಿಯಲ್ಲಿ ಚಿಕ್ಕ ಪುಟ್ಟ ಪಾತ್ರಗಳನ್ನು ಮಾಡುವ ಮೂಲಕ ರಂಗಭೂಮಿ ಪ್ರವೇಶಿಸಿದರು. ಆರ್.ನಾಗೇಂದ್ರರಾಯರೊಂದಿಗೆ ಶ್ರೀ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿ (೧೯೩೨) ಕಟ್ಟಿದರು. ಗುಬ್ಬಿ ವೀರಣ್ಣನವರು ನಿರ್ಮಿಸಿದ 'ಹಿಸ್ ಲವ್ ಅಫೇರ್' (೧೯೩೧) ಮೂಕಿಚಿತ್ರ ಇವರ ಮೊದಲ ಚಿತ್ರ. 'ವಸಂತಸೇನಾ', 'ಸತ್ಯ ಹರಿಶ್ಚಂದ್ರ',

'ಮಹಾತ್ಮಾ ಕಬೀರ್' ಮುಖ್ಯ ಚಿತ್ರಗಳು. 'ಭಕ್ತ ಪ್ರಹ್ಲಾದ' ಸ್ವಂತ ನಿರ್ಮಾಣದ ಚಿತ್ರ. (ಚಿತ್ರ ನಟ ಲೋಕೇಶ್ ಇವರ ಪುತ್ರ) ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು. ೧೯೭೨ರ ಜುಲೈ ೨೧ರಂದು ನಿಧನರಾದರು.

## ಸುಬ್ಬರಾಜು.ಎ.ಎನ್ (ರಜಸ್ಸು)

ವ್ಯಾಪಾರಸ್ಥ ಕುಟುಂಬದ ಹಿನ್ನೆಲೆಯಿದ್ದ ಸುಬ್ಬರಾಜು ವೃತ್ತಿಯಲ್ಲಿ ಆಡಿಟರ್. ಸಹೋದರರಾದ ಎ.ಎನ್.ಜಗದೀಶ್ ಹಾಗೂ ಎ.ಎನ್.ರಮೇಶ್ ಅವರೊಂದಿಗೆ ರಜಸ್ಸು ಕಂಬೈನ್ಸ್ ಸ್ಥಾಪಿಸಿದರು (೧೯೭೮). ಯಶಸ್ವಿ ವಿತರಕರಾಗಿ, ಬಹಳಷ್ಟು ಕನ್ನಡ ಚಿತ್ರಗಳಿಗೆ ಬಂಡವಾಳ ಒದಗಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದರು. ಈ ಸಂಸ್ಥೆಯಿಂದ ಬಿಡುಗಡೆಯಾದ ಮೊದಲ ಚಿತ್ರ 'ಬೆಂಕಿಯ ಬಲೆ' (೧೯೮೩). ನಂತರ 'ಮುತ್ತೈದೆ ಭಾಗ್ಯ'. ಇವರು ವಿತರಿಸಿ ಎಲ್ಲಾ ರೀತಿಯಲ್ಲಿ ಸಹಕರಿಸಿದ ಅಪೂರ್ವ ಪೆಟ್ಟದ ಚಿತ್ರ 'ಮುತ್ತಿನ ಹಾರ'. ಇವರ ಸಹೋದರ ಜಗದೀಶ್ ಕನ್ನಡ



ಚಿತ್ರಗಳನ್ನು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಕೊಂಡೊಯ್ಯಲು ಸಾಕಷ್ಟು ಶ್ರಮಿಸಿದರು. ಅನೇಕ ಕನ್ನಡ ಚಿತ್ರಗಳನ್ನು ವಿದೇಶದಲ್ಲಿ ಪ್ರದರ್ಶಿಸಲು ಕಾರಣಕರ್ತರೂ ಆದರು.

## ಸುಬ್ಬರಾವ್ ಹೆಚ್.ವಿ.

ಹಿರಿಯ ಚಿತ್ರಸಾಹಿತಿಗಳಾದ ಹೆಚ್.ವಿ. ಸುಬ್ಬರಾವ್ ಚಲನಚಿತ್ರರಂಗದಲ್ಲಿ ಕಥಾ ಲೇಖಕರಾಗಿ, ಚಿತ್ರಕಥಾ ಲೇಖಕರಾಗಿ, ಸಂಭಾಷಣ ಕರ್ತೃವಾಗಿ ಮೂರು



ದಶಕಗಳಿಗೂ ಹೆಚ್ಚುಕಾಲ ಸೇವೆ ಸಲ್ಲಿಸಿದ್ದಾರೆ. ೧೯೭೫ರಲ್ಲಿ ತೆರೆಕಂಡ 'ಬಿಳೀ ಹೆಂಡ್ತಿ' ಚಿತ್ರದ ಸಂಭಾಷಣೆ ಬರೆಯುವುದರೊಂದಿಗೆ ಬೆಳಕಿಗೆ ಬಂದರು. 'ನಾಗರ ಹೊಳೆ', 'ಅಂತ', 'ಮಾಗಿಯ ಕನಸು', 'ಬಂಗಾರದ ಜಿಂಕೆ', 'ಪುಟಾಣಿ ಏಜೆಂಟ್ 123' 'ಬಹುಮಾನ' 'ಗಂಡು' ಚಿತ್ರಗಳಿಗೆ ಚಿತ್ರಕಥೆ. ಸಂಭಾಷಣೆಗಳನ್ನು ಬರೆದವರು ಸಂಭಾಷಣೆ, ಚಿತ್ರಕಥೆ ಬರೆಯುವುದರೊಂದಿಗೆ ಇವರು ನಿರ್ಮಿಸಿದ 'ಆಡಿ ಬಾ ಅರಗಿಳಿಯೇ' ಚಿತ್ರ ಲೇಖಕಿ ಪ್ರೇಮಾಭಟ್ ಅವರ ಕಾದಂಬರಿಯನ್ನು ಆಧರಿಸಿದ್ದು.

## ಸುಬ್ರಹ್ಮಣ್ಯಂ.ಕೆ

ದಕ್ಷಿಣ ಭಾರತ ಚಿತ್ರರಂಗದಲ್ಲಿ ಕೆ.ಸುಬ್ರಹ್ಮಣ್ಯಂ ಪ್ರಮುಖರು. ತಮಿಳು ಚಿತ್ರರಂಗದಲ್ಲಿ ಖ್ಯಾತಿ ಪಡೆದಿದ್ದರೂ ಅವರಿಗೆ ಕನ್ನಡದ ನಂಟು ಕೂಡ ಹೆಚ್ಚಾಗಿಯೇ ಇತ್ತು. ಕನ್ನಡದಲ್ಲಿ ನಾಲ್ಕು ಚಿತ್ರಗಳನ್ನು



ನಿರ್ದೇಶಿಸಿದ್ದಾರೆ. 'ಭಕ್ತ ಪ್ರಹ್ಲಾದ' (೧೯೪೨), 'ಕೃಷ್ಣ ಸುಧಾಮ' (೧೯೪೩), 'ಸ್ತ್ರೀರತ್ನ' (೧೯೫೫), 'ಕಚದೇವಯಾನಿ' (೧೯೫೬). ೧೯೫೫ರಲ್ಲಿ 'ಸ್ತ್ರೀರತ್ನ' ಚಿತ್ರವನ್ನು ಭಾಗಶಃ ವರ್ಣದಲ್ಲಿ ತೆಗೆದ ಕೀರ್ತಿ ಇವರದು. ಮೈಸೂರಿನ ಪ್ರೀಮಿಯರ್ ಸ್ಟುಡಿಯೋದವರ ಪ್ರಥಮ ತಯಾರಿಕೆಯಾದ ಈ ಚಿತ್ರಕ್ಕೆ ಖ್ಯಾತ ಕನ್ನಡ ಸಾಹಿತಿ ಅ.ನ.ಕೃಷ್ಣರಾಯರು ಸಂಭಾಷಣೆಗಳನ್ನು ಬರೆದರು. ಕೆ.ಸುಬ್ರಹ್ಮಣ್ಯಂ ದಕ್ಷಿಣ ಭಾರತ ಚಲನಚಿತ್ರ ವಾಣಿಜ್ಯ ಮಂಡಳಿಯ ಸಂಸ್ಥಾಪಕರಲ್ಲಿ ಒಬ್ಬರು.

## ಸುಮನ್ ನಗರ್‌ಕರ್

ಕಿರುತೆರೆಯಿಂದ ಬೆಳ್ಳಿತೆರೆಗೆ ಪರಿಚಿತರಾದ ಕಲಾವಿದೆ. ಹುಟ್ಟಿದ್ದು, ಬೆಳೆದಿದ್ದು, ಓದಿದ್ದು ಎಲ್ಲಾ ಬೆಂಗಳೂರಿನಲ್ಲಿ. ನ್ಯಾಷನಲ್ ಪ್ರೌಢಶಾಲೆ, ನ್ಯಾಷನಲ್ ಕಾಲೇಜ್‌ಗಳಲ್ಲಿ ಶಿಕ್ಷಣ. ಬಿ.ಎಸ್‌ಸಿ., ಪದವೀಧರೆ. ಶಾಲಾ ದಿನಗಳಿಂದಲೇ ಹಾಡು-ನಾಟಕ ಹೀಗೆ ಕಲೆಗೆ ಪೂರಕವಾದ ವಿಷಯಗಳಲ್ಲಿ ಆಸಕ್ತಿ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ಪರಿಶ್ರಮವಿರುವ ಸುಮನ್ ನಗರ್‌ಕರ್ ಕಿರುತೆರೆಯಲ್ಲಿ ಟಿ.ಎನ್.ಸೀತಾರಾಂ ನಿರ್ದೇಶನದ 'ಕಥಾಸಂಕಲನ'ದಲ್ಲಿನಾಯಕಿಯಾಗಿ ಅಭಿನಯಿಸಿದರು. ನಂತರ ಇನ್ನೂ ಹಲವಾರು ಧಾರಾವಾಹಿಗಳಲ್ಲಿ ಜನಪ್ರಿಯರಾದರು. ಸುನಿಲ್



ಕುಮಾರ್‌ದೇಸಾಯಿ ನಿರ್ದೇಶನದ 'ನಿಷ್ಕರ್ಷ' ಚಿತ್ರದಿಂದ ೧೯೯೩ರಲ್ಲಿ ಚಿತ್ರರಂಗ ಪ್ರವೇಶಿಸಿದ ಸುಮನ್‌ನಗರ್‌ಕರ್ 'ಬೆಳದಿಂಗಳ ಬಾಲೆ', 'ನಿಶ್ಶಬ್ದಾರ್ಥ', 'ಪ್ರೀತ್ಸು ತಪ್ಪೇನಿಲ್ಲ', 'ನಮ್ಮೂರ ಮಂದಾರ ಹೂವೆ', 'ಮುಂಗಾರಿನ ಮಿಂಚು' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ನಾಗತಿಹಳ್ಳಿ ನಿರ್ದೇಶನದ 'ಹೂಮಳೆ' ಚಿತ್ರದಲ್ಲಿ ಪೂರ್ಣಪ್ರಮಾಣದ ನಾಯಕಿಯಾಗಿ ಅಭಿನಯಿಸಿದರು. ಸುಮನ್ ಉತ್ತಮ ಗಾಯಕಿ. ವಾದ್ಯವೃಂದಗಳಲ್ಲಿ ಹಾಡುವುದೂ ಉಂಟು.

## ಸುಮನ್ ರಂಗನಾಥ್

ಮಾಡೆಲಿಂಗ್‌ನಿಂದ ಬಣ್ಣದ ಬದುಕಿಗೆ ಬಂದ ಕಲಾವಿದೆ. ಆಕಸ್ಮಿಕವಾಗಿ ಚಿತ್ರರಂಗ ಪ್ರವೇಶಿಸಿದರು. ಸುಮನ್‌ರಂಗನಾಥ್ 'ಬಾಳ ಹೊಂಬಾಳೆ' ಚಿತ್ರದಿಂದ ಕನ್ನಡ ಪ್ರೇಕ್ಷಕರಿಗೆ ಪರಿಚಯವಾದರು. 'ಸಿ.ಬಿ.ಐ.ಶಂಕರ್', 'ಡಾಕ್ಟರ್ ಕೃಷ್ಣ', 'ನಮ್ಮೂರ ಹಮ್ಮೀರ', 'ಕಂಪುಸೂರ್ಯ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ ನಂತರ ಅವಕಾಶ ಅರಸುತ್ತ



ತಮಿಳು, ತೆಲುಗು ನಂತರ ಹಿಂದಿ ಚಿತ್ರರಂಗ ಪ್ರವೇಶಿಸಿದರು.

## ಸುಮಲತಾ

ತೆಲುಗು, ತಮಿಳು ಚಿತ್ರರಂಗದ ನಟಿ ಸುಮಲತಾ. ೧೯೮೦ರಲ್ಲಿ ರಾಜಕುಮಾರ್‌ರವರ 'ರವಿಚಂದ್ರ' ಚಿತ್ರದ ನಾಯಕಿಯಾಗಿ ಕನ್ನಡ ಚಿತ್ರರಂಗ ಪ್ರವೇಶಿಸಿದರು. ನಂತರ ಅಂಬರೀಷ್



ನಾಯಕರಾಗಿದ್ದ 'ಆಹುತಿ', ವಿಷ್ಣುವರ್ಧನ್ ನಾಯಕರಾಗಿದ್ದ 'ಕರ್ಣ' ಚಿತ್ರಗಳಲ್ಲಿ ಅಭಿನಯಿಸಿದರು. ಅಬ್ಬಾಯಿನಾಯ್ಡು ಅವರ 'ತಾಯಿಕನಸು', 'ತಾಯಿಯ ಹೊಣೆ', 'ತವರುಮನೆ' ಚಿತ್ರಗಳಲ್ಲಿ ಅಭಿನಯಿಸಿದ ನಂತರ ಅಂಬರೀಷ್-ಸುಮಲತಾ ಕನ್ನಡ ಚಿತ್ರರಂಗದ ಕೆಲವು ಯಶಸ್ವಿ ತಾರಾ ಜೋಡಿಗಳಲ್ಲಿ ಒಂದೆನಿಸಿತು. 'ನ್ಯೂಡೆಲ್ಲಿ', 'ಹಾಂಕಾಂಗ್‌ನಲ್ಲಿ ಏಜೆಂಟ್ ಅಮರ್' 'ಅವತಾರ ಪುರುಷ' ಚಿತ್ರಗಳ ನಂತರ ಈ ತಾರಾಜೋಡಿ ನಿಜಜೀವನದಲ್ಲೂ ಜೋಡಿಯಾಯಿತು. 'ಕಥಾನಾಯಕ', 'ಸತ್ಯಜ್ಯೋತಿ', 'ಒಲವಿನ ಕಾಣಿಕೆ', 'ಹುಲಿಹೆಬ್ಬುಲಿ', 'ಕಲಿಯುಗ ಭೀಮ', 'ಮಹೇಶ್ವರ' ಮೊದಲಾದವು ಸುಮಲತಾ ಅಭಿನಯದ ಪ್ರಮುಖ ಚಿತ್ರಗಳು.

## ಸುಮಿತ್ರಾ

ಹಿರಿಯ ತಾರೆ ಪಂಢರಿಬಾಯಿ ಅವರ ಸ್ವಂತ ನಿರ್ಮಾಣದ 'ಮುಗಿಯದ ಕಥೆ' ಚಿತ್ರದ



ಮೂಲಕ ನಾಯಕಿಯಾಗಿ ಕನ್ನಡ ಚಿತ್ರರಂಗ ಪ್ರವೇಶಿಸಿದ ಸುಮಿತ್ರಾ ಹುಟ್ಟಿದ್ದು ತಿರುಚ್ಚೂರಿನಲ್ಲಿ. ಓದು ಆಂಧ್ರ ಪ್ರದೇಶದಲ್ಲಿ. ಸಿನಿಮಾ ಸೇರಬೇಕೆಂಬ ಮಹದಾಸೆಯಿಂದ ಮದ್ರಾಸಿಗೆ ಬಂದರು. ಖ್ಯಾತ ನೃತ್ಯಪಟು ವೇಣುಗೋಪಾಲ್ ಬಳಿ ನಾಟ್ಯವನ್ನು ಕಲಿಯಲಾರಂಭಿಸಿದರು. 'ನೃತ್ಯಶಾಲಾ' ಎಂಬ ಮಲೆಯಾಳಿ ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ಈಕೆ 'ರವಿ ಮೂಡಿ ಬಂದ', 'ಮಕ್ಕಳ ಸೈನ್ಯ', 'ಸತ್ಯಂ ಶಿವಂ ಸುಂದರಂ' ಮೊದಲಾದ ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯಿಸಿದರು. ನಂತರ ನಿರ್ದೇಶಕ ಡಿ.ರಾಜೇಂದ್ರಬಾಬು ಅವರನ್ನು ವಿವಾಹವಾದರು. ಶ್ರೀಮಂತ ಕುಟುಂಬದ ಹಿನ್ನೆಲೆಯಲ್ಲಿ ಬರುವಂಥ ಪೋಷಕ ಪಾತ್ರಗಳಾದಾಗ ಈಕೆಗೇ ಆದ್ಯತೆ. 'ಅಸಂಭವ', 'ರಾಮಾಚಾರಿ', 'ಕರ್ಣ' ಮತ್ತಿತರ ಚಿತ್ರಗಳಲ್ಲಿ ಅತ್ತಿಗೆ, ತಾಯಿ ಮೊದಲಾದ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ಇಂದಿಗೂ ತಮಿಳು, ತೆಲುಗು ಚಿತ್ರರಂಗದಲ್ಲಿ ಅವಕಾಶಗಳಿವೆ. ತಮಿಳು ಚಿತ್ರಗಳಲ್ಲಿ ಪಾತ್ರವಹಿಸಿ ಉತ್ತಮ ಅಭಿನೇತ್ರಿಯೆಂದು ಗುರುತಿಸಲ್ಪಟ್ಟಿದ್ದಾರೆ.

## ಸುಮಿತ್ರ.ಬಿ.ಕೆ

ಚಲನಚಿತ್ರಗಳಲ್ಲಿ ಹಿನ್ನೆಲೆ ಗಾಯಕಿಯಾಗಿ ಸಾಕಷ್ಟು ಹೆಸರುವಾಸಿ. ಪಟೇಲ್ ಕೃಷ್ಣಯ್ಯ ಹಾಗೂ ಗಂಗಮ್ಮ ದಂಪತಿಗಳ ಮಗಳು. ಮಲೆನಾಡಿನ ಬಿಳಲುಕೊಪ್ಪ ಗ್ರಾಮದಲ್ಲಿ



ಜನನ. ಚಿಕ್ಕಂದಿನಿಂದಲೇ ಗಾಯನ ಕಲೆಯಲ್ಲಿ ಆಸಕ್ತಿ. ಬಿ.ಎಸ್‌ಸಿ ಪದವೀಧರ. ವಿದ್ವಾನ್ ಮಂಜಪ್ಪ ಜೋಯಿಸರಿಂದ ಶಾಸ್ತ್ರೀಯ ಗಾಯನ ಹಾಗೂ ಎಂ.ಪ್ರಭಾಕರ್ ಅವರಲ್ಲಿ ಸಂಗೀತಾಭ್ಯಾಸ ಮಾಡಿದ್ದಾರೆ. ಜಿ.ಕೆ.ವೆಂಕಟೇಶ್ ತಮ್ಮ ಸಂಗೀತ ನಿರ್ದೇಶನದ 'ಕವಲೆರಡು ಕುಲವೊಂದು' ಚಿತ್ರದಲ್ಲಿ 'ಕಣ್ಣೇ ನಿನ್ನಯ ಕೋಪವಿದೇನೋ...' ಎಂಬ ಹಾಡಿಗೆ ಸಿರಿಕಂಠ ನೀಡಿದ್ದು ಚಿತ್ರರಂಗ ಪ್ರವೇಶಕ್ಕೆ ಕಾರಣವಾಯಿತು. ನಂತರ 'ಬೆಳ್ಳಿ ಮೋಡ', 'ಅನುರಾಧಾ', 'ಸತಿ ಸುಕನ್ಯ', 'ಉಪಾಸನೆ', 'ಕಲ್ಯಾಣಿ' ಹೀಗೆ ಸುಮಾರು ೨೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ಗಾಯಕಿಯಾಗಿ ಅವಕಾಶ. 'ಕಲ್ಯಾಣಿ' ಚಿತ್ರದ 'ವೀಣಾ ನಿನಗೇಕೋ ಈ ಕಂಪನ...' ಹಾಡು ಚಿತ್ರಪ್ರೇಮಿಗಳ ಪ್ರಶಸ್ತಿ ತಂದಿತ್ತಿತು. ಸುಮಿತ್ರಾ 'ಉಪಾಸನೆ' ಚಿತ್ರಕ್ಕಾಗಿ ಹಾಡಿದ 'ಸಂಪಿಗೆ ಮರದ ಹಸಿರೆಲೆ ನಡುವೆ ಕೋಗಿಲೆ ಹಾಡಿತ್ತು...', 'ಸತಿಸುಕನ್ಯ'ದ 'ಮಧುರ ಮಧುರವೀ ಮಂಜುಳ ಗಾನ...' ಹಾಡುಗಳಿಂದ ಭಾರೀ ಜನಪ್ರಿಯತೆ ಗಳಿಸಿದರು. ಇವರಿಗೆ 'ಕನ್ನಡದ ಕೋಗಿಲೆ' ಎಂಬ ಬಿರುದು ಲಭಿಸಿದೆ. ಜನಪದ ಗೀತೆಗಳನ್ನು ಸೊಗಸಾಗಿ ಹಾಡುತ್ತಾರೆ. ಸುಗಮ ಸಂಗೀತದಲ್ಲಿ ಹೆಸರಾಗಿದ್ದಾರೆ. ಅನೇಕ ಧ್ವನಿ ಸುರಳಿಗಳಲ್ಲಿ ಹಾಡಿದ್ದಾರೆ. ಇವರ ಮಗ-ಮಗಳು ಕೂಡ ಒಳ್ಳೆಯ ಹಾಡುಗಾರರು. ಅಳಿಯ ರಾಜೇಶ್ ಕೃಷ್ಣನ್ ಪ್ರಸಿದ್ಧ ಚಲನಚಿತ್ರ ಗಾಯಕ.

### ಸುರೇಖಾ

ಬೆಂಗಳೂರಿನ ಮಹಿಳಾ ಸೇವಾ ಸಮಾಜದ ಪ್ರೌಢಶಾಲೆಯ ವಿದ್ಯಾರ್ಥಿನಿಯಾಗಿದ್ದರು. ಗೆಳತಿಯರ ಒತ್ತಾಯದ ಮೇರೆಗೆ ನಾಯಕಿಯರು ಬೇಕೆಂಬ ಪ್ರಕಟಣೆ ನೋಡಿ



ಅರ್ಜಿ ಸಲ್ಲಿಸಿ 'ಪ್ರವಾಸಿ ಮಂದಿರ' ಚಿತ್ರದ ನಾಯಕಿಯಾಗಿ ಆಯ್ಕೆಯಾದರು (೧೯೬೮). ಭರತನಾಟ್ಯ, ಕೂಚುಪುಡಿ ನೃತ್ಯ ಶೈಲಿಯಲ್ಲಿ ಶಾಸ್ತ್ರ ಬದ್ಧವಾದ ಪರಿಶ್ರಮವಿದ್ದ ಸುರೇಖಾ 'ಆಪರೇಷನ್ ಜಾಕ್‌ಪಾಟ್‌ನಲ್ಲಿ ಸಿಐಡಿ ೯೯೯', 'ತಾಯಿ ದೇವರು', 'ಸಾಕ್ಷಾತ್ಕಾರ', 'ನಾಡಿನ ಭಾಗ್ಯ', 'ಕೆಸರಿನ ಕಮಲ', 'ಜಾಗೃತಿ', 'ಕಾವೇರಿ', 'ತ್ರಿಮೂರ್ತಿ' ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ನಂತರದ ದಿನಗಳಲ್ಲಿ ಹೆಚ್ಚಾಗಿ ನೃತ್ಯಕ್ಕೇ ಅವಕಾಶವಿದ್ದ ಪಾತ್ರಗಳಲ್ಲಿಯೇ ಕಾಣಿಸಿಕೊಂಡರು. ಸೆನ್ಸಾರ್ ಬೋರ್ಡ್ ಸದಸ್ಯೆಯಾಗಿ ಸೇವೆ ಸಲ್ಲಿಸಿದರು.

### ಸುರೇಶ್ ಅರಸ್

ನಟ, ನಿರ್ದೇಶಕ ಸುಂದರಕೃಷ್ಣ ಅರಸ್ ಅವರ ಕಿರಿಯ ಸೋದರರಾದ ಸುರೇಶ್ ಅರಸ್ ಸುಮಾರು ೧೦೦ಕ್ಕೂ ಹೆಚ್ಚು ಕನ್ನಡ ಚಿತ್ರಗಳಿಗೆ ಸಂಕಲನಕಾರರಾಗಿ ದುಡಿದಿರುವ ಪ್ರತಿಭಾವಂತ. ಪ್ರಾರಂಭದಲ್ಲಿ ಸುರೇಶ್ ಅರಸ್ ಹೆಚ್ಚಾಗಿ ಕಲಾತ್ಮಕ ಚಿತ್ರಗಳಿಗೇ ಸಂಕಲನ ಒದಗಿಸಿದ್ದಾರೆ. ಸಂಕಲನಕಾರರಾಗಿ ತುಳು ಚಿತ್ರ 'ಸಂಗಮ ಸಾಕ್ಷಿ'ಯ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಬ್ಯಾಂಕರ್ ಮಾರ್ಗಯ್ಯ', 'ಆಸ್ಫೋಟ', 'ಮೂರು ದಾರಿಗಳು', 'ಬೆಂಕಿ', 'ಸಂತ ಶಿಶುನಾಳ ಷರೀಫ', 'ರಾಮಾನುಜಾಚಾರ್ಯ', 'ಬೆಳ್ಳಿ ಬೆಳಕು', 'ನಕ್ಕಳಾ ರಾಜಕುಮಾರಿ', 'ಹೆಂಡ್ತಿಗ್ಹೇಳ್ಬೇಡಿ', 'ಇದು ಸಾಧ್ಯ', 'ಮಿಥಿಲೆಯ ಸೀತೆಯರು', 'ಜಂಬೂ ಸವಾರಿ', 'ಪಂಚಮ ವೇದ' ಮೊದಲಾದ ಪ್ರಶಸ್ತಿ ವಿಜೇತ ಚಿತ್ರಗಳಿಗೆ ಸಂಕಲನ



ಮಾಡಿದ್ದಾರೆ. ಟಿ.ಎಸ್.ನರಸಿಂಹನ್ ಅವರ 'ಜ್ಯೋತಿ ಸಂಕಲನ ಕೇಂದ್ರ'ದ ಮುಖ್ಯಸ್ಥರಾಗಿ ಹಲವು ಕನ್ನಡ ಚಿತ್ರಗಳ ಸಂಕಲನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು. ಮಣಿರತ್ನಂ ನಿರ್ದೇಶನದ 'ನಾಯಗನ್' ನಂತರ ಅವರ ಬಹುತೇಕ ಚಿತ್ರಗಳಲ್ಲಿ ಸಂಕಲನ ಕಾರ್ಯ ನಿರ್ವಹಿಸಿ ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿ ಪಡೆದಿದ್ದಾರೆ. ಮದರಾಸಿನಲ್ಲಿ ಅತ್ಯಾಧುನಿಕ 'ಅಬಿಡ್' ಸಂಕಲನ ಕೇಂದ್ರ ಸ್ಥಾಪಿಸಿದ್ದಾರೆ. ಕರ್ನಾಟಕ ರಾಜ್ಯ ಸರ್ಕಾರದ ಅತ್ಯುತ್ತಮ ಸಂಕಲನಕಾರ ಪ್ರಶಸ್ತಿಯನ್ನು ೧೯೮೯-೯೦ನೇ ಸಾಲಿನಲ್ಲಿ 'ಪಂಚಮ ವೇದ' ಚಿತ್ರಕ್ಕಾಗಿ, ೧೯೯೧-೯೨ನೇ ಸಾಲಿನಲ್ಲಿ 'ಮೈಸೂರ ಮಲ್ಲಿಗೆ' ಚಿತ್ರಕ್ಕಾಗಿ ಸುರೇಶ್ ಅರಸ್ ಪಡೆದಿದ್ದಾರೆ.

### ಸುರೇಶ.ಬಿ

ಚಿತ್ರಕಥಾ ಲೇಖಕ, ಸಂಭಾಷಣಾ ಕರ್ತೃ ಬಿ.ಸುರೇಶ್ ೧೯೬೨ರಲ್ಲಿ ದಾವಣಗೆರೆಯಲ್ಲಿ ಜನಿಸಿದರು. ನಂತರದ ವಿದ್ಯಾಭ್ಯಾಸವೆಲ್ಲ ಬೆಂಗಳೂರಿನಲ್ಲಿ. ಎಸ್.ಜೆ.ಪಿ.ಕಾಲೇಜಿನಲ್ಲಿ ಸೆರಾಮಿಕ್ ಟೆಕ್ನಾಲಜಿಯಲ್ಲಿ ಪದವಿ ಪಡೆದರು. ಕಿರಿಯ ವಯಸ್ಸಿನಲ್ಲೇ ಗಿರೀಶ್ ಕಾಸರವಳ್ಳಿಯವರ 'ಘಟಶ್ರಾದ' ಚಿತ್ರ, ಚಂದ್ರಶೇಖರ ಕಂಬಾರರ 'ಸಾಕು ಮಾಡು ಶಿವನೆ' ಸಾಕ್ಷ್ಯಚಿತ್ರದಲ್ಲಿ ಅಭಿನಯಿಸಿದರು. ಬಾಲ್ಯದಿಂದಲೂ ರಂಗಭೂಮಿಯ ಕಡೆಗೆ ಹೆಚ್ಚು ಆಸಕ್ತರಾಗಿದ್ದ ಇವರು ಬೆಂಗಳೂರಿನ ಅಭಿನಯ ತರಂಗದ ಭಾನುವಾರದ ರಂಗಶಾಲೆಯಲ್ಲಿ ಶಿಬಿರಾರ್ಥಿಯಾಗಿ ಸೇರಿ ನಂತರ ಅದೇ ಶಾಲೆಯಲ್ಲಿ ಬೋಧಕರಾಗಿ ಕಾರ್ಯ ನಿರ್ವಹಿಸಿದರು. ರಂಗ ನಿರ್ದೇಶಕ, ನಾಟಕಕಾರ, ನಟರು. ನಿರ್ದೇಶಕ ಕೆ.ಎಸ್.ಎಲ್.ಸ್ವಾಮಿ ಅವರ 'ಮಿಥಿಲೆಯ ಸೀತೆಯರು' ಚಿತ್ರಕ್ಕೆ ಸಂಭಾಷಣೆ



ಬರೆಯುವುದರೊಂದಿಗೆ ೧೯೮೭ರಲ್ಲಿ ಚಿತ್ರ ಸಾಹಿತಿ, ಸಹ ನಿರ್ದೇಶಕನಾಗಿ ಚಿತ್ರರಂಗ ಪ್ರವೇಶಿಸಿದರು. ನಂತರ 'ಹರಕೆಯ ಕುರಿ', 'ಜಂಬೂ ಸವಾರಿ', 'ಜೀವನ ಸಂಘರ್ಷ' ಮೊದಲಾದ ಚಿತ್ರಗಳಿಗೆ ಚಿತ್ರಕತೆ ಹಾಗೂ ಸಂಭಾಷಣೆಗಳನ್ನು ಬರೆದ ಇವರು ಅದೇ ಚಿತ್ರಗಳ ಸಹಾಯಕ ನಿರ್ದೇಶಕರೂ ಆಗಿ ಕಾರ್ಯನಿರ್ವಹಿಸಿದರು. ಚುರುಕು ಸಂಭಾಷಣಾಗ ಹೆಸರಾದ ಬಿ.ಸುರೇಶ್ ರವಿಚಂದ್ರನ್ ಅವರ 'ಜಾಣ', 'ಪುಟ್ನಂಜ', 'ರಸಿಕ', 'ಸಿಪಾಯಿ', 'ಕಲಾವಿದ' ಮುಂತಾದ ಚಿತ್ರಗಳಿಗೆ ಸಾಹಿತ್ಯ ಒದಗಿಸಿದ್ದಾರೆ. ರಂಗಭೂಮಿ ಹಾಗೂ ಸಿನಿಮಾರಂಗ ಎರಡರಲ್ಲೂ ಸೈ ಎನಿಸಿಕೊಂಡ ಇವರು ಜನಪ್ರಿಯ ದೂರದರ್ಶನ ಧಾರಾವಾಹಿಗಳನ್ನು ನಿರ್ದೇಶಿಸಿದ್ದಾರೆ.

### ಸುರೇಶ್ ಹೆಬ್ಳೀಕರ್

ಪ್ರತಿಭಾವಂತ ನಟ-ನಿರ್ದೇಶಕರಾದ ಇವರು ಪರಿಸರವಾದಿಯೂ ಹೌದು. ೧೯೪೮ರಲ್ಲಿ ಧಾರವಾಡದಲ್ಲಿ ಜನಿಸಿದರು. ಸ್ನಾತಕೋತ್ತರ ಪದವೀಧರರಾದ ಹೆಬ್ಳೀಕರ್ ಕಿರುಚಿತ್ರಗಳನ್ನು ತೆಗೆಯುವ ಮೂಲಕ ನಿರ್ದೇಶನ ಕ್ಷೇತ್ರಕ್ಕೆ ಬಂದರು. ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿ



ತೊಡಗಿಕೊಂಡು ಹಲವಾರು ನಾಟಕಗಳಲ್ಲಿ ಅಭಿನಯಿಸಿದರು. 'ಅಪರಿಚಿತ'(೧೯೭೮) ದಿಂದ ಚಲನಚಿತ್ರಗಳಲ್ಲಿ ಅಭಿನಯಿಸಲಾರಂಭಿಸಿದರು. ಸುಮಾರು ಇಪ್ಪತ್ತು ಚಿತ್ರಗಳಲ್ಲಿ ನಟಿಸಿದ್ದಾರೆ. ನಂತರ 'ಅಂತರಾಳ'(೧೯೮೪) ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದರು. ಇವರ ನಿರ್ದೇಶನದ 'ಕಾಡಿನ ಬೆಂಕಿ' ಹಲವು ಪ್ರಶಸ್ತಿಗಳಿಗೆ ಪಾತ್ರವಾಯಿತು. ತಮ್ಮ ಹಲವು ಚಿತ್ರಗಳಲ್ಲಿ ಹಾಡುಗಳನ್ನು ಹಾಡಿದ್ದಾರೆ. ಡಬ್ಬಿಂಗ್ ಕೂಡ ಮಾಡಿದ್ದಾರೆ. ಇಂಧನ ಬಳಕೆ ಹಾಗೂ ಪರಿಸರ ಸಂರಕ್ಷಣೆ ಕುರಿತು ಸಾಕ್ಷ್ಯಚಿತ್ರಗಳನ್ನು ತಯಾರಿಸಿರುವ ಇವರು ಅಣುಸ್ಥಾವರಗಳ ಅಪಾಯಗಳು ಮುಂತಾದ ಸಾಮಾಜಿಕ ಸಮಸ್ಯೆಗಳ ವಿರುದ್ಧ ಚಳವಳಿಗಳನ್ನು ನಡೆಸಿದ್ದಾರೆ. ಪರಿಸರವಾದಿಯಾಗಿ ರಾಜ್ಯದಾದ್ಯಂತ ಜನಪ್ರಿಯರಾಗಿದ್ದಾರೆ. ಮನೋವಿಶ್ಲೇಷಣಾತ್ಮಕ ಕಥಾವಸ್ತುಗಳನ್ನು ಹೊಂದಿದ ಕೆಲವು ಚಿತ್ರಗಳನ್ನು ನಿರ್ದೇಶಿಸಿದ ಸುರೇಶ್ ಹೆಬ್ಳೀಕರ್‌ರವರ 'ಪ್ರಥಮ ಉಷಾಕಿರಣ' ತೃತೀಯ ಅತ್ಯುತ್ತಮ ಚಿತ್ರವಾಗಿ ೧೯೮೯-೯೦ರ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದುಕೊಂಡ ಚಿತ್ರ. ಉತ್ತಮ ಅವಕಾಶಗಳು ದೊರೆತಾಗ ಬೇರೆ ನಿರ್ಮಾಪಕರ ಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. 'ಕಂಕಣ', 'ಅಮರ ಮಧುರ ಪ್ರೇಮ', 'ಹಾವು ಏಣಿ ಆಟ', 'ಆಗಂತುಕ', 'ಬಣ್ಣದ ಗೆಜ್ಜೆ', 'ಗೋಲಿಬಾರ್', 'ಗಪ್ ಚಿಪ್', 'ಶ್!' ಮೊದಲಾದವು ಇವರ ಅಭಿನಯದ ಕೆಲವು ಜನಪ್ರಿಯ ಚಿತ್ರಗಳು. ರಾಜಕಾರಣದಲ್ಲಿ ಆಸಕ್ತರು. ಸುರೇಶ್ ಹೆಬ್ಳೀಕರ್ ತಾರೆ ಜಯಮಾಲ ನಿರ್ಮಿಸಿದ ರಾಜ್ಯ, ರಾಷ್ಟ್ರ ಪ್ರಶಸ್ತಿ ವಿಜೇತ 'ತಾಯಿಸಾಹೇಬ' ಚಿತ್ರದಲ್ಲಿ ಅಭಿನಯಿಸಿದ್ದಾರೆ.

### ಸುಶೀಲ.ಪಿ



ದಕ್ಷಿಣ ಭಾರತೀಯ ಚಿತ್ರರಂಗದ ಅಪೂರ್ವ ಗಾಯಕಿಯರಲ್ಲೊಬ್ಬರು. ಹುಟ್ಟೂರು ವಿಜಯನಗರ. ದ್ವಾರಂ ವೆಂಕಟಸ್ವಾಮಿ ನಾಯಿಡುರವರ ಬಳಿ ಶಾಸ್ತ್ರೀಯ ಸಂಗೀತ ಅಭ್ಯಾಸ ಮಾಡಿದ ಸುಶೀಲಾ 'ಕನ್ನತಲ್ಲಿ' ಎಂಬ ತೆಲುಗು ಚಿತ್ರದ ಹಿನ್ನೆಲೆ ಗಾಯಕಿಯಾಗಿ ಚಿತ್ರರಂಗ ಪ್ರವೇಶಿಸಿವರು. ಈಕೆ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಚಿತ್ರಗಳಲ್ಲಿ ಸಾವಿರಾರು ಗೀತೆಗಳನ್ನು ಹಾಡಿದ್ದಾರೆ. ಸೊಗಸಾದ ಶಾರೀರ, ಪಾತ್ರಗಳ ಕಂಠಕ್ಕೆ ಹೊಂದುವಂತೆ ಶ್ರುತಿ ಮಾಡಿಕೊಂಡು ಹಾಡುವುದು ಈಕೆಯ ಸಿದ್ಧಿ. 'ದಕ್ಷಿಣ ಭಾರತದ ಲತಾ ಮಂಗೇಶ್ಕರ್' ಎಂಬ ಖ್ಯಾತಿಯನ್ನು ಪಡೆದಿರುವ ಪಿ.ಸುಶೀಲಾ ಹಲವಾರು ಬಾರಿ ದಕ್ಷಿಣ ಭಾರತದ ಭಾಷೆಗಳಲ್ಲಿ ಉತ್ತಮ ಹಿನ್ನೆಲೆ ಗಾಯಕಿಯಾಗಿ, ಅಖಿಲ ಭಾರತ ಮಟ್ಟದಲ್ಲಿ ಎರಡು ಬಾರಿ ಉತ್ತಮ ಗಾಯಕಿಯಾಗಿ ರಾಷ್ಟ್ರೀಯ ಬಹುಮಾನ ಪಡೆದಿದ್ದಾರೆ. ಕನ್ನಡದಲ್ಲಿ ಮೆಲುಕು ಹಾಕುವಂಥ ಹಲವಾರು ಹಾಡುಗಳನ್ನು ಹಾಡಿದ್ದಾರೆ. 'ಎಡಕಲ್ಲು ಗುಡ್ಡದ ಮೇಲೆ' ಚಿತ್ರದ 'ವಿರಹಾ ನೂರು ನೂರು ತರಹ...' ಗೀತೆ ಬಹಳ ಜನಪ್ರಿಯತೆಯನ್ನು ಪಡೆಯಿತು. 'ತುಳಸಿ',

'ಶರಪಂಜರ', 'ಬೆಳ್ಳಿಮೋಡ', 'ಧರ್ಮ ದಾರಿ ತಪ್ಪಿತು', 'ಬದುಕು ಬಂಗಾರವಾಯಿತು', 'ಪರೋಪಕಾರಿ', 'ಕುಲಗೌರವ' ಮೊದಲಾದ ಯಶಸ್ವಿ ಚಿತ್ರಗಳಲ್ಲಿ ಹಾಡಿದ್ದಾರೆ.

### ಸುಹಾಸಿನಿ

ದಕ್ಷಿಣ ಭಾರತೀಯ ಚಿತ್ರರಂಗದ ಪ್ರತಿಭೆ ಸುಹಾಸಿನಿ. ತಂದೆ ಕಲಾವಿದ ಚಾರುಹಾಸನ್.



ಚಿಕ್ಕಪ್ಪ ಭಾರತೀಯ ಚಿತ್ರರಂಗದ ಖ್ಯಾತ ಕಲಾವಿದ ಕಮಲಹಾಸನ್. ವಿದ್ಯಾಭ್ಯಾಸದ ನಂತರ ಛಾಯಾಗ್ರಹಣದಲ್ಲಿ ಡಿಪ್ಲೊಮಾ ಪದವಿ ಪಡೆದ ಸುಹಾಸಿನಿ ಬೆಳ್ಳಿ ತೆರೆಗೆ ಬಂದಿದ್ದು ಕೇವಲ ಆಕಸ್ಮಿಕ. 'ನೆಂಜತ್ತೈ ಕಿಳ್ಳಾದೆ' ಚಿತ್ರದಲ್ಲಿ ಅಭಿನಯಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ಬಾಲಚಂದರ್ ಇವರನ್ನು ಕನ್ನಡ ಚಿತ್ರರಂಗಕ್ಕೆ ಕರೆತಂದರು. ತಮ್ಮ ಸಹಜಾಭಿನಯ, ವಿಶಿಷ್ಟವಾದ ನಗುವಿನಿಂದ ಅಪಾರವಾದ ಪ್ರೇಕ್ಷಕ ವರ್ಗವನ್ನು ಸೃಷ್ಟಿಸಿಕೊಂಡರು. 'ಬೆಂಕಿಯಲ್ಲಿ ಅರಳಿದ ಹೂವು' ಚಿತ್ರದ ಪರಿಣಾಮಕಾರಿ ಪಾತ್ರದಿಂದ ಕನ್ನಡ ಚಿತ್ರರಂಗ ಪ್ರವೇಶಿಸಿದರು. ನಂತರ 'ಉಷಾ', 'ಹೊಸನೀರು', 'ಬಂಧನ', 'ಮುತ್ತಿನ ಹಾರ', 'ಸುಪ್ರಭಾತ', 'ಅಮೃತ ವರ್ಷಿಣಿ', 'ಹೆಂಡ್ತಿಗ್ಹೇಳ್ಬೇಡಿ', 'ಯಾರಿಗೆ ಸಾಲುತ್ತೆ ಸಂಬಳ', 'ಹಿಮಪಾತ' ಚಿತ್ರಗಳಲ್ಲಿ ಅಭಿನಯಿಸಿದರು. ತಾವು ಅಭಿನಯಿಸಿದ ಪಾತ್ರಗಳಿಗೆ ತಾವೇ ಕಂಠದಾನ ನೀಡುವ ಸುಹಾಸಿನಿ ನಿರ್ದೇಶಕಿಯೂ ಹೌದು. ಖ್ಯಾತ ನಿರ್ದೇಶಕ ಮಣಿರತ್ನಂ ಅವರನ್ನು ವಿವಾಹವಾದರು. 'ಸಿಂಧುಬೈರವಿ' ತಮಿಳು ಚಿತ್ರದ ನಟನೆಗೆ ರಾಷ್ಟ್ರ ಪ್ರಶಸ್ತಿ ಪಡೆದಿದ್ದಾರೆ.

### ಸೂರಪ್ಪ.ಬಿ.ಎನ್ (೧೯೨೨)

ಹಿರಿಯ ಪ್ರದರ್ಶಕ ಹಾಗೂ ವಿತರಕರಾದ ಸೂರಪ್ಪ ಬೆಂಗಳೂರಿನವರು. ಐದನೇ ತರಗತಿವರೆಗೆ ಶಿಕ್ಷಣ. ಆಫೀಸ್ ಬಾಯ್ ಆಗಿ ವಿತರಣ ಸಂಸ್ಥೆಯೊಂದನ್ನು ಸೇರಿ ನಂತರ ಹತ್ತು ವರ್ಷಗಳ ಅನುಭವದೊಂದಿಗೆ ೧೯೫೨ರಲ್ಲಿ



ಬೆಂಗಳೂರಿನ ಗಾಂಧಿನಗರದಲ್ಲಿ ಬೃಂದಾವನ್ ಫಿಲಮ್ಸ್‌ನ ಸ್ಥಾಪನೆ ಮಾಡಿದರು. ಇವರು ವಿತರಿಸಿದ ಮೊದಲ ಚಿತ್ರ 'ಶ್ರೀ ರಾಮಾಂಜನೇಯ ಯುದ್ಧ'. ನಂತರ 'ಒಂದೇ ಬಳ್ಳಿಯ ಹೂಗಳು', 'ಉತ್ತರ ದಕ್ಷಿಣ', 'ಕಾಣದ ಕೈ', 'ಒಂದೇ ಕುಲ ಒಂದೇ ದೈವ', 'ಚದುರಂಗ', 'ಬಂಗಾರದ ಕಳ್ಳ' ಹೀಗೆ ಹಲವು ಚಿತ್ರಗಳನ್ನು ವಿತರಿಸಿದರು. ಕನ್ನಡ ಚಿತ್ರರಂಗಕ್ಕೆ ಸುದೀರ್ಘ ಸೇವೆ ಸಲ್ಲಿಸುತ್ತ ಬಂದಿರುವ ಕೆಲವೇ ವಿತರಣಾ ಸಂಸ್ಥೆಗಳಲ್ಲಿ ಸೂರಪ್ಪ ಅವರ 'ಬೃಂದಾವನ್ ಫಿಲಮ್ಸ್' ಕೂಡ ಒಂದು.

### ಸೋಮಶೇಖರ್

ಶಬ್ದ ವಿನ್ಯಾಸಕಾರ ಹಾಗೂ ಶಬ್ದಗ್ರಾಹಕರು ಆದ ಸೋಮಶೇಖರ್ ಎಸ್. ಜೆ. ಪಾಲಿಟೆಕ್ನಿಕ್‌ನಲ್ಲಿ ಡಿಪ್ಲೊಮಾ ಪದವಿ ಪಡೆದವರು. ಹಲವಾರು ಕಂಪನಿಗಳಿಗೆ ಶಬ್ದ ವಿನ್ಯಾಸಕಾರರಾಗಿ ಸೇವೆ ಸಲ್ಲಿಸಿದ್ದಾರೆ. ಸಂಕೇತ್ ಸ್ಟುಡಿಯೋ ಆರಂಭವಾದಾಗ



ಅದರ ಶಬ್ದ ವಿನ್ಯಾಸವನ್ನು ಮಾಡಿದವರು ಇವರೆ. ಪ್ರಸಾದ್ ಸ್ಟುಡಿಯೋದ ಶಬ್ದ ವಿನ್ಯಾಸಕಾರರು ಆಗಿದ್ದಾರೆ. ಪ್ರಸಾದ್ ಸ್ಟುಡಿಯೋದ ಡಿಜಿ ಆಡಿಯೋದ ವಿನ್ಯಾಸವನ್ನು ಮಾಡಿದವರು. ಬೆಂಗಳೂರಿನ ಹಲವಾರು ಸ್ಟುಡಿಯೋಗಳ, ಡಬ್ಬಿಂಗ್ ಸೆಂಟರ್‌ಗಳ ಶಬ್ದ ವಿನ್ಯಾಸಗಾರರು ಇವರು ಕೇಳಿದಂತಹ ಬ್ಲಿಂಪ್ ಇರುವ ಕ್ಯಾಮರಾ ದೊರೆಯದ ಕಾರಣ ಆ ಚಿತ್ರಕ್ಕೆ ಇವರ ಸೇವೆ ಸಾಧ್ಯವಾಗಲಿಲ್ಲ. 'ಸಂಕ್ರಾಂತಿ', 'ನೆನಪಿನ ದೋಣಿ' ಎರಡು ಪ್ರಶಸ್ತಿ ವಿಜೇತ ಚಿತ್ರಗಳ ಶಬ್ದಗ್ರಹಣ ಕಾರ್ಯದಲ್ಲಿ ಸೇವೆ ಸಲ್ಲಿಸಿದ್ದಾರೆ. ಶಬ್ದ ಪ್ರಸಾರದ ನಿಯಂತ್ರಣದಲ್ಲಿ ಇವರು ನಿಪುಣರು.

### ಸೋಮಶೇಖರ್.ವಿ

೭೦ರ ದಶಕದಲ್ಲಿ ಯಶಸ್ವೀ ಚಿತ್ರ ನಿರ್ದೇಶಕರೆಂದು ಹೆಸರು ಮಾಡಿದ ವಿ.ಸೋಮಶೇಖರ್ ಇದುವರೆಗೆ ೩೭ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಇವುಗಳಲ್ಲಿ ಹೆಚ್ಚಿನವು ಬಾಕ್ಸ್‌ಆಫೀಸ್‌ನಲ್ಲಿ ಯಶಸ್ವಿಯಾದ ಚಿತ್ರಗಳು. ಮತ್ತೊಬ್ಬ ಪ್ರತಿಭಾವಂತ ನಿರ್ದೇಶಕ ವಿಜಯಾರೆಡ್ಡಿ (ವಿಜಯ್) ಅವರ ಜತೆಗೂಡಿ ಹಲವು ಚಿತ್ರಗಳನ್ನು ತಯಾರಿಸಿ ನಿರ್ಮಾಪಕರಾಗಿಯೂ ಹೆಸರು ಮಾಡಿದ್ದಾರೆ. ಹಿರಿಯ ನಿರ್ದೇಶಕರಾದ ವೈ.ಆರ್.ಸ್ವಾಮಿ, ಆರ್.ರಾಮಮೂರ್ತಿ, ರವೀ ಮುಂತಾದವರೊಂದಿಗೆ ಸಹಾಯಕ ನಿರ್ದೇಶಕರಾಗಿ ಅನುಭವ ಗಳಿಸಿದ ಸೋಮಶೇಖರ್ ಅವರು ಸ್ವತಂತ್ರ ನಿರ್ದೇಶಕರಾದದ್ದು ೧೯೭೪ರಲ್ಲಿ ತಯಾರಾದ ರಾಜಕುಮಾರ್ ಅಭಿನಯದ 'ಬಂಗಾರದ ಪಂಜರ' ಚಿತ್ರದ ಮೂಲಕ. ಆದರೆ ೧೯೭೭ ಮತ್ತು ೭೮ರಲ್ಲಿ ಇವರು ನಿರ್ದೇಶಿಸಿದ ರಾಜಕುಮಾರ್ ಅಭಿನಯದ 'ಪ್ರೇಮದ ಕಾಣಿಕೆ' ಮತ್ತು 'ಶಂಕರ್‌ಗುರು' ಚಿತ್ರಗಳ ಮೂಲಕ ಭಾರಿ ಹೆಸರು



ಮಾಡಿದರು. ರಾಜಕುಮಾರ್‌ರವರು ಮೂರು ಪಾತ್ರಗಳಲ್ಲಿ ಪ್ರಥಮ ಬಾರಿಗೆ ಅಭಿನಯಿಸಿದ 'ಶಂಕರ್‌ಗುರು' ಬಾಕ್ಸಾಫೀಸ್‌ನಲ್ಲಿ ಅದ್ಭುತ ಯಶಸ್ಸು ಗಳಿಸಿ ಹಿಂದಿನ ದಾಖಲೆಗಳನ್ನೆಲ್ಲ ಮುರಿಯಿತು. ಸೋಮಶೇಖರ್ ರಾಜಕುಮಾರ್ ಅಭಿನಯದ ಏಳು ಚಿತ್ರಗಳನ್ನು, ಅಂಬರೀಷ್ ಅಭಿನಯದ ೧೩ ಚಿತ್ರಗಳನ್ನು, ಶಂಕರ್‌ನಾಗ್ ಅಭಿನಯದ ನಾಲ್ಕು ಚಿತ್ರಗಳನ್ನು ಮತ್ತು ವಿಷ್ಣುವರ್ಧನ್ ಅಭಿನಯದ ಮೂರು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪ್ರಭಾಕರ್ ಮತ್ತು ಶಶಿಕುಮಾರ್ ಅಭಿನಯದ 'ಕೆಂಪಯ್ಯ ಐ.ಪಿ.ಎಸ್' ಚಿತ್ರದ ನಿರ್ದೇಶಕರು. 'ತಾಯಿಗೆ ತಕ್ಕ ಮಗ', 'ಸೀತಾರಾಮು', 'ಕಾಳಿಂಗ', 'ಆರದ ಗಾಯ', 'ಹಾವಿನ ಹೆಡೆ', 'ಚಕ್ರವ್ಯೂಹ', 'ಪರಶುರಾಮ', 'ಚಾಣಕ್ಯ', 'ಮೃಗಾಲಯ' ಮತ್ತು ದೇವರಾಜ್ ಅಭಿನಯದ 'ಎಸ್.ಪಿ.ಭಾರ್ಗವಿ' ಇವರು ನಿರ್ದೇಶಿಸಿದ ಕೆಲವು ಮುಖ್ಯ ಚಿತ್ರಗಳು. ಸೋಮಶೇಖರ್‌ರವರಿಗೆ ೧೯೯೯-೨೦೦೦ನೇ ಸಾಲಿನ ರಾಜ್ಯ ಸರ್ಕಾರದ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ಸಂದಿದೆ.

### ಸೋಮಶೇಖರ ರಾವ್.ಹೆಚ್.ಜಿ

ಬ್ಯಾಂಕ್ ಅಧಿಕಾರಿಯಾಗಿದ್ದ ಎಚ್.ಜಿ.ಸೋಮಶೇಖರರಾಯರಿಗೆ ಸಾಹಿತ್ಯ, ರಂಗಭೂಮಿ, ಚಲನಚಿತ್ರ ಮತ್ತು ಕಿರುತೆರೆ ಕ್ಷೇತ್ರಗಳಲ್ಲಿ ಆಸಕ್ತಿ. ಅನೇಕ ಪಾಶ್ಚಿಮಾತ್ಯ ಮತ್ತು ಭಾರತೀಯ ನಾಟಕಕರ್ತೃಗಳ ಕೃತಿಗಳನ್ನು ರಂಗಭೂಮಿಯ ಮೇಲೆ



ಜೀವಂತಗೊಳಿಸಿದವರು. ಇವರು ಚಿತ್ರರಂಗವನ್ನು ಪ್ರವೇಶಿಸಿದ್ದು ೧೯೮೧ರಲ್ಲಿ, ಟಿ.ಎಸ್.ರಂಗಾರವರ ನಿರ್ದೇಶನದ 'ಸಾವಿತ್ರಿ' ಮೂಲಕ. ಖ್ಯಾತ ನಟ ಅನಿಲ್ ಠಕ್ಕರ್‌ರವರ ಪ್ರತಿದ್ವಂದಿಯಾಗಿ ಇವರು ನೀಡಿದ ಅಭಿನಯ ಗಂಭೀರ ಪ್ರೇಕ್ಷಕರ ಮೆಚ್ಚುಗೆ ಗಳಿಸಿತು. ನಂತರ ರಾಯರು ಅನೇಕ ಚಿತ್ರಗಳಲ್ಲಿ ಭಾವಪ್ರಧಾನ ಮತ್ತು ಹಾಸ್ಯಪ್ರಧಾನ ಪಾತ್ರಗಳನ್ನು ನಿರ್ವಹಿಸಿದರು. ರವೀ ನಿರ್ದೇಶನದ 'ಮಿಥಿಲೆಯ ಸೀತೆಯರು' ಇವರ ಅಭಿನಯ ಸಾಮರ್ಥ್ಯವನ್ನು ಸರಿಯಾಗಿ ಗುರುತಿಸುವಂತೆ ಮಾಡಿತು. ರವೀಯವರೇ ನಿರ್ದೇಶಿಸಿದ ಇನ್ನೊಂದು ಚಿತ್ರ 'ಹರಕೆಯ ಕುರಿ'ಯಲ್ಲಿ ಸೋಮಶೇಖರ ರಾಯರು ನೀಡಿದ ಸೊಗಸಾದ ಅಭಿನಯಕ್ಕಾಗಿ ೧೯೯೨-೯೩ನೇ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ಲಭಿಸಿತು. ಕೆನರಾ ಬ್ಯಾಂಕ್‌ನಲ್ಲಿ ಉನ್ನತ ಅಧಿಕಾರಿಯಾಗಿದ್ದು ನಿವೃತ್ತಿ ಹೊಂದಿದ ರಾಯರಿಗೆ ಕನ್ನಡ ರಂಗಭೂಮಿಗೆ ತಮ್ಮ ಸೇವೆಯನ್ನು ಸಲ್ಲಿಸುವುದೇ ನಿಜವಾದ ಕಾಯಕವಾಯಿತು. ಸೋಮಶೇಖರರಾಯರ ಬದುಕಿನ ಅನುಭವ ಕಥನವು ಪ್ರಕಟವಾಗಿದೆ. ಕಿರುತೆರೆ, ಚಲನಚಿತ್ರಗಳಿಗಿಂತ ಮಿಗಿಲಾಗಿ ರಂಗ ಕೈಂಕರ್ಯವನ್ನು ಪ್ರೀತಿಸುತ್ತಾರೆ.

### ಸೋಮಸುಂದರ್ ಬಿ. ಎಸ್.

ವೃತ್ತಿಯಿಂದ ವಕೀಲರಾದ ಬಿ. ಎಸ್. ಸೋಮಸುಂದರ್ ನಿರ್ಮಾಪಕ ಟಿ.ಎಸ್. ನರಸಿಂಹನ್ ಅವರ ಸಹಯೋಗದಲ್ಲಿ ಚಲನಚಿತ್ರರಂಗಕ್ಕೆ ಪ್ರವೇಶ ಪಡೆದವರು. ನಿರ್ಮಾಪಕರಾಗಿ ಟಿ. ಎಸ್. ನರಸಿಂಹನ್ ಅವರ ಜೊತೆಗೆ ಹಲವು ಚಿತ್ರಗಳಲ್ಲಿ ನಿರ್ಮಾಪಕರಾಗಿ ಕಾರ್ಯನಿರ್ವಹಿಸಿದರು. ೧೯೬೯ರಲ್ಲಿ ತೆರೆಕಂಡ 'ದಂಗೆಯೆದ್ದ



ಮಕ್ಕಳು' ಚಿತ್ರದ ಕಥೆಯನ್ನು ರಚಿಸಿ, ನಿರ್ಮಿಸಿದರು. ನಂತರ 'ಬಂಗಾರದ ಜಿಂಕೆ', 'ಬ್ಯಾಂಕರ್ ಮಾರ್ಗಯ್ಯ' ಚಿತ್ರಗಳನ್ನು ಟಿ.ಎಸ್. ನರಸಿಂಹನ್ ಅವರ ಸಹಯೋಗದಲ್ಲಿ ನಿರ್ಮಿಸಿದರು. 'ದಂಗೆಯೆದ್ದ ಮಕ್ಕಳು' ಚಿತ್ರ ೧೯೬೯ರ ರಾಷ್ಟ್ರ ಪ್ರಶಸ್ತಿಯನ್ನು ಪಡೆಯಿತಲ್ಲದೆ ಅನೇಕ ಅಂತರರಾಷ್ಟ್ರೀಯ ಚಿತ್ರೋತ್ಸವದಲ್ಲಿ ಪ್ರದರ್ಶಿತವಾಯಿತು.

### ಸೋಹನ್ ಲಾಲ್

ನೃತ್ಯ ನಿರ್ದೇಶಕ ಸೋಹನ್‌ಲಾಲ್ ಜಯಪುರದವರು. ಇವರ ಪೂರ್ವಜರೆಲ್ಲಾ ಜಯಪುರ ಸಂಪ್ರದಾಯದ ಕಥಕ್ ನೃತ್ಯದಲ್ಲಿ

ಪರಿಣಿತರು. ತಂದೆ ಭವರಿಲಾಲ್ ಪ್ರಖ್ಯಾತ ತಬಲಾ ವಾದಕರು, ಬೆಂಗಳೂರಿನಲ್ಲಿ ನೆಲೆಸಿದ್ದರು. ಬ್ರಿಟನ್, ಪ್ಯಾರಿಸ್, ಅಮೆರಿಕಾದಲ್ಲಿ ಪ್ರವಾಸ ಮಾಡಿದ ರಾಮಗೋಪಾಲ್ ಅವರ ನೃತ್ಯ ತಂಡದಲ್ಲಿದ್ದವರಲ್ಲಿ ಸೋಹನ್ ಲಾಲ್ ಪ್ರಮುಖರು. ವಿದೇಶ ಪ್ರವಾಸದಿಂದ ಹಿಂದಿರುಗಿದ ಮೇಲೆ ಹಲವು ಮಿತ್ರರ ಒತ್ತಾಸೆಯಿಂದಾಗಿ ಸೋಹನ್‌ಲಾಲ್ 'ಚಿತ್ರಕಲಾ ಶಾಲೆ' ಎಂಬ ನೃತ್ಯ ಶಾಲೆಯನ್ನು ಮಲ್ಲೇಶ್ವರದಲ್ಲಿ ಆರಂಭಿಸಿದರು. ಅನಂತರ ಅದು 'ವಿಶ್ವಕಲಾಸ್ಥಾನ'ವಾಯಿತು. ಇವರಿಗೆ ಚಿತ್ರೋದ್ಯಮದ ನಂಟು ಬೆಳೆದದ್ದು ಗುಬ್ಬಿ ವೀರಣ್ಣನವರ 'ಜೀವನ ನಾಟಕ' (೧೯೪೨) ಚಿತ್ರದಿಂದ. ಆ ಚಿತ್ರದಲ್ಲಿ ನೃತ್ಯತಾರೆ ಇಂದ್ರಾಣಿಯವರ ಜೊತೆಯಲ್ಲಿ ಅಭಿನಯಿಸಿದ 'ಶಿವತಾಂಡವ' ಜನರ ಮೆಚ್ಚುಗೆಗೆ ಪಾತ್ರವಾಯಿತು. ಮುಂದೆ 'ವಿಶ್ವಕಲಾಸ್ಥಾನ್' ಲಾಂಛನದಲ್ಲಿ ಇವರೇ



ನಿರ್ಮಿಸಿದ ಚಿತ್ರ 'ಕಲಾವಿದ' (೧೯೪೯). ಮೈಸೂರಿನಲ್ಲಿ ತಯಾರಾದ ಮಹಾತ್ಮಾ ಪಿಕ್ಚರ್ಸ್‌ರವರ 'ಕೃಷ್ಣಲೀಲಾ', 'ನಾಗಕನ್ಯೆ' ಮೊದಲಾದ ಚಿತ್ರಗಳಿಗೆ ನೃತ್ಯ ನಿರ್ದೇಶನ ಮಾಡಿದ್ದರು. ಪಂತುಲು ಅವರ 'ರತ್ನಗಿರಿ ರಹಸ್ಯ', 'ಮೊದಲ ತೇದಿ' ಚಿತ್ರಗಳಲ್ಲದೆ ಮದರಾಸು ಹಾಗೂ ಮುಂಬೈನ ತೆಲುಗು, ತಮಿಳು, ಹಿಂದಿಯ ಅನೇಕ ಚಿತ್ರಗಳಿಗೆ ಸೋಹನ್‌ಲಾಲ್ ನೃತ್ಯ ನಿರ್ದೇಶಕರಾಗಿದ್ದರು. 'ಕಟ್ ಪುತ್ಲಿ', 'ದೇವದಾಸ್', 'ಕಾಜಲ್', 'ಸತ್ಯಂ ಶಿವಂ ಸುಂದರಂ' ಇವು ಇವರ ನಿರ್ದೇಶನದ ಕೆಲವು ಚಿತ್ರಗಳು. ಕರ್ನಾಟಕದಲ್ಲಿ ಇವರ ಮುಖ್ಯ ಶಿಷ್ಯರೆಂದರೆ ಪತ್ರಕರ್ತ ಎಸ್.ಎನ್.ಚಂದ್ರಶೇಖರ್ ಮತ್ತು ನೃತ್ಯಾಂಗನೆ ಮಾಯಾರಾವ್ ಅವರುಗಳು. ನೃತ್ಯ ನಿರ್ದೇಶಕರಾದ ಹೀರಾಲಾಲ್ ಮತ್ತು ಚುನ್ನೀ ಲಾಲ್ ಅವರುಗಳು ಸೋಹನ್‌ಲಾಲ್ ಇವರ ಸೋದರರು.

## ಸೌಂದರ್ಯ

ಹಿರಿಯ ಚಿತ್ರಸಾಹಿತಿ, ಉದ್ಯಮಿ ಕೆ.ಎಸ್.ಸತ್ಯನಾರಾಯಣರ ಪುತ್ರಿ. ಸೌಂದರ್ಯ ಹುಟ್ಟಿದ್ದು ಬೆಂಗಳೂರಿನಲ್ಲಿ. ಈಕೆ ಚಿತ್ರರಂಗ ಪ್ರವೇಶಿಸಿದ್ದು 'ಗಂಧರ್ವ' ಚಿತ್ರದಿಂದ. ನಂತರ 'ನನ್ನ ತಂಗಿ' ಚಿತ್ರದಲ್ಲಿ ದೇವರಾಜ್ ತಂಗಿಯಾಗಿ ಅಭಿನಯ. ಆರ್ಯ ನಿರ್ದೇಶನದ 'ವಿಜಯಕ್ರಾಂತಿ'ಯಲ್ಲಿ ಉಪನಾಯಕಿಯಾಗಿ ಅಭಿನಯಿಸಿದರು. ಅನಂತ್‌ನಾಗ್ ನಾಯಕಿಯಾಗಿ 'ತೂಗುವೆ ಕೃಷ್ಣನಾ' ಚಿತ್ರದಲ್ಲಿ ಉತ್ತಮವಾಗಿ



ಅಭಿನಯಿಸಿದ ಸೌಂದರ್ಯ ನಂತರ ಸಿದ್ಧಲಿಂಗಯ್ಯ ನಿರ್ದೇಶಿಸಿದ 'ಬಾ ನನ್ನ ಪ್ರೀತಿಸು' ಚಿತ್ರದಲ್ಲಿ ಶಶಿಕುಮಾರ್ ರಿಗೆ ನಾಯಕಿಯಾಗಿ ಅಭಿನಯಿಸಿದರು. ಅವಕಾಶಗಳು ವಿರಳವಾದಾಗ ತೆಲುಗು ಚಿತ್ರರಂಗಕ್ಕೆ ವಲಸೆ ಹೋಗಿ ಅಲ್ಲಿ ಸೂಪರ್‌ಸ್ಟಾರ್ ಆದರು. ಈ ಮಧ್ಯೆ ಆಗೊಮ್ಮೆ ಈಗೊಮ್ಮೆ ಕನ್ನಡದಲ್ಲಿ ನಾಯಕಿಯಾಗಿ ಅಭಿನಯಿಸಿದರು. 'ನಾನು ನನ್ನ ಹೆಂಡ್ತೀರು', 'ಸಿಪಾಯಿ', 'ದೋಣಿಸಾಗಲಿ', 'ಆರ್ಯಭಟ', 'ನಾಗದೇವತೆ' ಮುಂತಾದ ಚಿತ್ರಗಳು ಸೌಂದರ್ಯ ಅಭಿನಯದ ಇತರ ಚಿತ್ರಗಳು. 'ದೋಣಿಸಾಗಲಿ' ಚಿತ್ರದ ಪರಿಣಾಮಕಾರಿ ಅಭಿನಯಕ್ಕಾಗಿ ೧೯೯೮-೯೯ನೇ ಸಾಲಿನ ರಾಜ್ಯ ಸರ್ಕಾರದ ಶ್ರೇಷ್ಠ ನಟಿ ಪ್ರಶಸ್ತಿ ಪಡೆದಿದ್ದಾರೆ.

## ಹಂಸಲೇಖ

ಕನ್ನಡದ ಖ್ಯಾತ ಸಂಗೀತ ಸಂಯೋಜಕ ಹಾಗೂ ಗೀತ ರಚನೆಕಾರ ಹಂಸಲೇಖ. ಬೆಂಗಳೂರಿನಲ್ಲಿ ೧೯೫೧ರಲ್ಲಿ ಜನಿಸಿದರು. ಮೂಲ ನಾಮಧೇಯ ಗೋವಿಂದರಾಜು ಗಂಗರಾಜು. ಮೊದಲು ತಮ್ಮ ತಂದೆಯ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಕೆಲಸ ಮಾಡುತ್ತಿದ್ದರು. ನಂತರ ತಮ್ಮ ಅಣ್ಣ ಬಾಲಕೃಷ್ಣ ಅವರ ವಾದ್ಯಗೋಷ್ಠಿಯನ್ನು ಸೇರಿದರು. ೧೯೭೩ರಲ್ಲಿ 'ತ್ರಿವೇಣಿ' ಚಿತ್ರಕ್ಕೆ ಗೀತೆ ಬರೆಯುವುದರೊಂದಿಗೆ ಗೀತ ರಚನಕಾರರಾಗಿ ಚಿತ್ರರಂಗ ಪ್ರವೇಶಿಸಿದರು. ೧೯೭೪ರಲ್ಲಿ ತಮ್ಮದೇ ಆದ ವಿವೇಕರಂಗ ಎಂಬ ನಾಟಕ ತಂಡವನ್ನು ಕಟ್ಟಿ ಹಲವು ಪ್ರಯೋಗಗಳನ್ನು ಮಾಡಿದರು. ೧೯೮೪ರಲ್ಲಿ 'ರಾಮಚಂದ್ರ' ಎಂಬ ಚಿತ್ರಕ್ಕಾಗಿ ತಾವೇ ಹಾಡುಗಳನ್ನು ಬರೆದು, ಸಂಗೀತ ಸಂಯೋಜಿಸಿ, ನಿರ್ದೇಶಿಸಿದರು. ಚಿತ್ರ ಬಿಡುಗಡೆಯಾಗಲಿಲ್ಲ. ೧೯೮೩ರಲ್ಲಿ 'ನಾನು ನನ್ನ ಹೆಂಡ್ತಿ' ಚಿತ್ರದ ಸಂಭಾಷಣೆ, ಸಾಹಿತ್ಯ ರಚಿಸುವುದರೊಂದಿಗೆ ಪುನರ್‌ಪ್ರವೇಶ ಮಾಡಿದರು. ಹಂಸಲೇಖ ಸ್ಟಾರ್ ಸಂಗೀತ ನಿರ್ದೇಶಕರೆನಿಸಿದ್ದು ರವಿಚಂದ್ರನ್ ನಿರ್ದೇಶನದ 'ಪ್ರೇಮಲೋಕ' ಚಿತ್ರಕ್ಕೆ ರಾಕ್ ಸಂಗೀತ ಮಾದರಿಯನ್ನು ಅಳವಡಿಸಿ ದೃಶ್ಯಗಳನ್ನೇ ಹಾಡನ್ನಾಗಿ ಪರಿವರ್ತಿಸಿದಾಗ. ೮೦ರ ದಶಕದ ಅತ್ಯಂತ ಯಶಸ್ವಿ ಚಿತ್ರಗಳಲ್ಲೊಂದಾದ 'ಪ್ರೇಮಲೋಕ' ಹಂಸಲೇಖ ಅವರಿಗೆ ಅವಕಾಶಗಳ ಮಹಾಪೂರವನ್ನೇ ಹರಿಸಿತು. ಸಂಗೀತ ಲೋಕದಲ್ಲಿ ಸೃಷ್ಟಿಸಿದ ದಾಖಲೆಗಳು ಹಲವು. ಕ್ಯಾಸೆಟ್ ಪ್ರಪಂಚದಲ್ಲಿ ಹೊಸ ಪರಂಪರೆಯನ್ನು ಹುಟ್ಟು ಹಾಕಿದರು. ರವಿಚಂದ್ರನ್ ನಾಯಕರಾಗಿದ್ದ ಹಲವು ಯಶಸ್ವಿ ಚಿತ್ರಗಳ ಸಂಗೀತ ನಿರ್ದೇಶನ ಮಾಡಿದ್ದಾರೆ. 'ರಣಧೀರ', 'ಅಂಜದ ಗಂಡು', 'ರಾಮಾಚಾರಿ', 'ಹಳ್ಳಿ ಮೇಷ್ಟ್ರು', 'ಯಾರೆ ನೀನು ಚೆಲುವೆ', 'ಪುಟ್ನಂಜ' ಮೊದಲಾದವು ಹೆಸರಿಸಬಹುದಾದ ಚಿತ್ರಗಳು. ಇದಲ್ಲದೆ 'ಗೆಜ್ಜೆನಾದ', 'ಮುತ್ತಿನ ಹಾರ', 'ಹೃದಯ ಹಾಡಿತು', 'ಚೈತ್ರದ ಪ್ರೇಮಾಂಜಲಿ', 'ಬಾನಲ್ಲೆ ಮಧುಚಂದ್ರಕೆ', 'ಸಂಗೀತ ಸಾಗರ ಗಾನಯೋಗಿ ಪಂಚಾಕ್ಷರ ಗವಾಯಿ', 'ಟುವ್ವಿ ಟುವ್ವಿ ಟುವ್ವಿ' ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ೧೯೯೪-೯೫ನೇ ಸಾಲಿನಲ್ಲಿ 'ಹಾಲುಂಡ ತವರು' ಚಿತ್ರದಲ್ಲಿನ ಸಂಗೀತ ನಿರ್ದೇಶನ ಹಾಗೂ ಅದೇ ಚಿತ್ರದ 'ಎಲೇ ಹೊಂಬಿಸಲೆ ...' ಗೀತ ರಚನೆಗಾಗಿ, ೧೯೯೫-೯೬ನೇ ಸಾಲಿನಲ್ಲಿ 'ಸಂಗೀತ ಸಾಗರ ಗಾನಯೋಗಿ ಪಂಚಾಕ್ಷರ ಗವಾಯಿ' ಚಿತ್ರದ ಸಂಗೀತ ನಿರ್ದೇಶನಕ್ಕೆ ಹಾಗೂ



೧೯೯೮-೯೯ನೇ ಸಾಲಿನಲ್ಲಿ 'ಟುವ್ವಿ ಟುವ್ವಿ ಟುವ್ವಿ' ಚಿತ್ರದ ಸಂಗೀತ ನಿರ್ದೇಶನಕ್ಕಾಗಿ ಮೂರು ಬಾರಿ ರಾಜ್ಯ ಸರ್ಕಾರದ ಅತ್ಯುತ್ತಮ ಸಂಗೀತ ನಿರ್ದೇಶಕ ರಾಜ್ಯ ಪ್ರಶಸ್ತಿ ಗಳಿಸಿದ್ದಾರೆ. 'ಸಂಗೀತ ಸಾಗರ ಗಾನಯೋಗಿ ಪಂಚಾಕ್ಷರ ಗವಾಯಿ' ಚಿತ್ರದ ಸಂಗೀತ ನಿರ್ದೇಶನಕ್ಕಾಗಿ ೧೯೯೫-೯೬ನೇ ಸಾಲಿಗೆ ರಾಷ್ಟ್ರ ಪ್ರಶಸ್ತಿಯನ್ನೂ ಪಡೆದರು. ಇವರ ಪತ್ನಿ ಲತಾ ಹಂಸಲೇಖ ಕೂಡ ಸಂಗೀತದಲ್ಲಿ ಆಸಕ್ತರು. 'ಅರುಣೋದಯ' ಚಿತ್ರದಲ್ಲಿನ ಗಾಯನಕ್ಕಾಗಿ ಈಕೆಗೆ ೧೯೯೯ ೨೦೦೦ನೇ ಸಾಲಿನ ರಾಜ್ಯ ಪ್ರಶಸ್ತಿ ದೊರೆತಿದೆ. ರಂಗ ಸಂಘಟನೆ, ಸಂಗೀತಗಾರರು-ವಾದ್ಯಗಾರರ ಸಂಘಟನೆ ಹೀಗೆ ಹತ್ತಾರು ಚಟುವಟಿಕೆಯಲ್ಲಿ ನಿರತರು. ಹೊಸ ಗಾಯಕರು, ಕಂಡಕ್ಟರ್ಸ್, ಗೀತರಚನಕಾರರನೇಕರನ್ನು ಪ್ರೋತ್ಸಾಹಿಸಿ ಬೆಳಕಿಗೆ ತಂದಿದ್ದಾರೆ. ಅವರದೇ ಆದ ರಿಕಾರ್ಡಿಂಗ್ ಸ್ಟುಡಿಯೋ ಕೂಡ ಸಿದ್ಧ ಮಾಡಿದ್ದಾರೆ.

## ಹನುಮಂತಾಚಾರ್.ಬಿ

೫೦ ರ ದಶಕದಲ್ಲಿ ಚಿತ್ರರಂಗದಲ್ಲಿ ಹಾಸ್ಯನಟರಾಗಿ ಖ್ಯಾತರಾದವರು ಬಿ. ಹನುಮಂತಾಚಾರ್. ಬಳ್ಳಾರಿ ಇವರ ಹುಟ್ಟೂರು. ಬಾಲ್ಯದಿಂದಲೇ ರಂಗಭೂಮಿಯ ಕಡೆಗೆ ಆಕರ್ಷಿತರಾದವರು. ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯಲ್ಲಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಸ್ವಭಾವತಃ ಹಾಸ್ಯ ಪ್ರವೃತ್ತಿಯವರು. ಇವರ ಉತ್ತರ ಕನ್ನಡ ಭಾಷಾ ಶೈಲಿ, ಇವರ ರಂಗಭೂಮಿಯ ಖ್ಯಾತಿ ಚಿತ್ರರಂಗಕ್ಕೆ ಎಳೆ ತಂದಿತು. 'ಗುಣಸಾಗರಿ' ಚಿತ್ರದಿಂದ



ಖ್ಯಾತರಾದರು. ಇವರು ಮಾತನಾಡುವ ವೈಖರಿ ಹಾಸ್ಯವಾಗಿ ಮೂಡಿಬಂದು ಅದೇ ಹಲವು ಚಿತ್ರಗಳಲ್ಲಿ ಪ್ರತ್ಯೇಕ ಪಾತ್ರ ನಿರ್ಮಾಣವಾಗುವ ಹಂತವನ್ನು ತಲುಪಿತು. ಹಲವು ಚಿತ್ರಗಳಲ್ಲಿ ಪ್ರೇಕ್ಷಕರಿಗೆ ಮುದ ನೀಡುವ ಪಾತ್ರಗಳಲ್ಲಿ ಅಭಿನಯಿಸಿದರು. 'ದೇವ ಕನ್ನಿಕಾ', 'ದೈವ ಸಂಕಲ್ಪ', 'ಭಕ್ತ ವಿಜಯ', 'ಸಂತ ಸಖು', 'ಕಿತ್ತೂರು ಚೆನ್ನಮ್ಮ', 'ರಾಜಾ ಸತ್ಯವ್ರತ', 'ಶ್ರೀ ಶೈಲ ಮಹಾತ್ಮೆ', 'ಮಕ್ಕಳ ರಾಜ್ಯ', 'ಪ್ರೇಮಾನುಬಂಧ', 'ಸ್ವಪ್ನ', 'ಮನಸ್ಸಿನಂತೆ ಮಾಂಗಲ್ಯ', 'ಮಹಾ ಪ್ರಚಂಡರು' ಹೀಗೆ ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದರು. ಒಳ್ಳೆಯ ಹಾರ್ಮೋನಿಯಂ ವಾದಕರು. ಯೂನಿವಾಕ್ಸ್ ಎಂಬ ವಿಶೇಷ ವಾದ್ಯವನ್ನು ನುಡಿಸಬಲ್ಲ ನಿಪುಣರಾಗಿದ್ದವರು.

## ಹರಿಣಿ

ಎನ್.ಲಕ್ಷ್ಮೀನಾರಾಯಣ್ ನಿರ್ದೇಶಿಸಿ, ವಾದಿರಾಜ್-ಜವಾಹರ್ ನಿರ್ಮಿಸಿದ 'ನಾಂದಿ' ಚಿತ್ರದಲ್ಲಿ ಕಿವುಡು-ಮೂಗ ಹೆಣ್ಣಾಗಿ ಅತ್ಯಂತ ಹೃದಯಂಗಮವಾಗಿ ಅಭಿನಯಿಸಿದ ತಾರೆ ಹರಿಣಿ ಕನ್ನಡ ಚಿತ್ರರಂಗದ ಸದಭಿರುಚಿಯ ಅಭಿನೇತ್ರಿಯರಲ್ಲೊಬ್ಬರು. 'ಕನ್ಯಾದಾನ' ಚಿತ್ರದ ಕಪ್ಪು ಹೆಣ್ಣಾಗಿ ಅವರ ಅಭಿನಯ ಹೃದಯಸ್ಪರ್ಶಿ. ತಂದೆ ಮತ್ತು ಸೋದರರೊಂದಿಗೆ ತಮಿಳುನಾಡಿನ ಮಧುರೆಯಲ್ಲಿ ವಾಸವಾಗಿದ್ದಾಗ ಎದುರು ಮನೆಯ ಶ್ರೀಮಂತರೊಬ್ಬರು ತಯಾರಿಸುತ್ತಿದ್ದ 'ಹರಿದಾಸ್' ತಮಿಳು ಚಿತ್ರದಲ್ಲಿ ಪುಟ್ಟ ಕೃಷ್ಣನ ಪಾತ್ರದಲ್ಲಿ ಅಭಿನಯಿಸಿದ. ಹರಿಣಿ 'ಕನ್ನಿಕಾ'



ಮುಂತಾದ ಹಲವು ತಮಿಳು ಚಿತ್ರಗಳಲ್ಲಿ ಅಭಿನಯಿಸಿದರು. ೧೯೫೧ರಲ್ಲಿ ಮಹಾತ್ಮ ಪಿಕ್ಚರ್ಸ್ ಅವರ 'ಜಗನ್ಮೋಹಿನಿ' ಚಿತ್ರದಲ್ಲಿ ಮೋಹಿನಿಯ ಪಾತ್ರದಿಂದ ಹದಿಹರೆಯದವರ ಹೃದಯದಲ್ಲಿ ಕಿಚ್ಚೆಬ್ಬಿಸಿದ ಹರಿಣಿ ಮುಂದೆ 'ಮಂಗಳಗೌರಿ', 'ದಲ್ಲಾಳಿ', 'ಸೌಭಾಗ್ಯ ಲಕ್ಷ್ಮಿ', 'ವಿಚಿತ್ರ ಪ್ರಪಂಚ', 'ಆಶಾಸುಂದರಿ', 'ವಿಧಿವಿಲಾಸ' ಮುಂತಾದ

೧೫ಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರು. ತಮ್ಮ ಸಹೋದರರಾದ ವಾದಿರಾಜ್ ಜವಾಹರ್‌ರವರೇ ನಿರ್ಮಿಸಿ, ಎಂ.ಆರ್.ವಿಠಲ್ ನಿರ್ದೇಶಿಸಿದ 'ನಂದಾದೀಪ'ದಲ್ಲಿ ರಾಜಕುಮಾರ್‌ರೊಂದಿಗೆ ನಾಯಕಿಯಾಗಿ ಈಕೆಯ ಅಭಿನಯ ಅವಿಸ್ಮರಣೀಯ. ಬಾಹ್ಯಾಕಾಶ ಇಲಾಖೆಯ ವಿಜ್ಞಾನಿ ಪ್ರೊ.ರಾವ್ ಅವರೊಂದಿಗೆ ವಿವಾಹವಾದ ಬಳಿಕ ಹರಿಣಿ ಚಿತ್ರರಂಗದಿಂದ ನಿವೃತ್ತರಾಗಿ ಸಂತೃಪ್ತ ಕುಟುಂಬ ಜೀವನ ನಿರ್ವಹಿಸುತ್ತಿದ್ದಾರೆ.

## ಹರಿದಾಸ್.ಬಿ.ಎನ್

ಖ್ಯಾತ ಚಿತ್ರನಿರ್ದೇಶಕ, ನಿರ್ಮಾಪಕ ಬಿ.ಎಸ್.ರಂಗಾ ಅವರ ಸಂಬಂಧಿಯಾದ ಬಿ.ಎನ್.ಹರಿದಾಸ್, ಬಿ.ಎಸ್.ರಂಗಾ ಅವರ ಬಹುತೇಕ ಚಿತ್ರಗಳಲ್ಲಿ ಅವರ ಸಹಾಯಕರಾಗಿ ಛಾಯಾಗ್ರಹಣ ಹಾಗೂ ನಿರ್ದೇಶನ ಎರಡೂ ವಿಭಾಗಗಳಲ್ಲಿ ದುಡಿದವರು. ಹರಿದಾಸ್ ೧೯೬೫ರಲ್ಲಿ



ಬಿ.ಎಸ್.ರಂಗಾ ನಿರ್ದೇಶನದ 'ಚಂದ್ರಹಾಸ' ಚಿತ್ರದಿಂದ ಸ್ವತಂತ್ರ ಛಾಯಾಗ್ರಾಹಕರಾದರು. ನಂತರ ೧೯೬೮ರಲ್ಲಿ ವಿಕ್ರಂ ಪ್ರೊಡಕ್ಷನ್ಸ್ ಅವರ 'ಒಡಹುಟ್ಟಿದವರು' ಚಿತ್ರವನ್ನು ನಿರ್ದೇಶಿಸುವ ಮೂಲಕ ನಿರ್ದೇಶಕರೂ ಆದರು. ಛಾಯಾಗ್ರಾಹಕರಾಗಿ 'ಮಣ್ಣಿನ ಮಗಳು', 'ಬಿಳೀಹೆಂಡ್ತಿ', 'ಕಥಾಸಂಗಮ', 'ಫಲಿತಾಂಶ' ಮುಂತಾದ ಚಿತ್ರಗಳಿಗೆ ದುಡಿದಿದ್ದಾರೆ. ಕಿರುತೆರೆಯಲ್ಲಿಯೂ ಛಾಯಾಗ್ರಹಣ ಹಾಗೂ ನಿರ್ದೇಶನಗಳ ಜವಾಬ್ದಾರಿ ಹೊತ್ತವರು.

## ಹಿರಣ್ಣಯ್ಯ (ಮಾಸ್ಟರ್)

ಕನ್ನಡದ ಖ್ಯಾತ ರಂಗಭೂಮಿ ನಟ. ವೃತ್ತಿ ರಂಗಭೂಮಿಯಲ್ಲಿ ಸಾಮಾಜಿಕ



ನಾಟಕಗಳಿಗೆ ಹೊಸ ಆಯಾಮವನ್ನು ತಂದುಕೊಟ್ಟ ಬಹುಮುಖ ಪ್ರತಿಭೆಯ ಕೆ.ಹಿರಣ್ಣಯ್ಯನವರ ಪುತ್ರ. ಜನಿಸಿದ್ದು ಫೆಬ್ರವರಿ ೧೫, ೧೯೩೪ರಂದು. ಇವರ ಸಂಭಾಷಣೆಗಳಿಗೆ ಕತ್ತಿಯ ಅಲುಗಿನ ಹರಿತವಿದೆ, ಪ್ರಚಂಡವೆನಿಸುವ ಸಮಯಸ್ಫೂರ್ತಿಯಿದೆ. ಸಮಾಜದ ಓರೆಕೋರೆಗಳನ್ನು ನಿರ್ದಾಕ್ಷಿಣ್ಯವಾಗಿ ಹೊರಹಾಕುವ ವಿಶೇಷ ಸಾಮರ್ಥ್ಯವಿದೆ. ತಂದೆ ಹಿರಣ್ಣಯ್ಯನವರು ನಿಧನರಾದಾಗ ಕಾಲೇಜು ವ್ಯಾಸಂಗ ನಿಲ್ಲಿಸಿ ಮಾಸ್ಟರ್ ಹಿರಣ್ಣಯ್ಯ ನಾಟಕದ ಕಂಪನಿಯ ಚುಕ್ಕಾಣಿ ಹಿಡಿದರು. ತಂದೆ ಹಿರಣ್ಣಯ್ಯನವರು ನಿರ್ಮಿಸಿದ 'ವಾಣಿ' ಚಿತ್ರದಲ್ಲಿ ಬಾಲನಟರು ಪಂತುಲು ಅವರ ಪದ್ಮಿನಿ ಸಂಸ್ಥೆಯಲ್ಲಿ ಸಹ ನಿರ್ದೇಶಕರಾಗಿ ಅನುಭವ. ತಂದೆಯವರ ಖ್ಯಾತ ನಾಟಕ 'ದೇವದಾಸಿ' ೧೯೭೮ರಲ್ಲಿ ತೆರೆಗೆ ಬಂದಾಗ ಅದರ ಸಾಹಿತ್ಯವನ್ನು ತಾವೇ ರಚಿಸಿ ಚಿತ್ರದಲ್ಲಿ ಪ್ರಮುಖ ಪಾತ್ರವನ್ನೂ ನಿರ್ವಹಿಸಿದರು. 'ಆನಂದ ಸಾಗರ', 'ಋಣಮುಕ್ತಳು' ಚಿತ್ರಗಳಲ್ಲಿ ಅಭಿನಯಿಸಿದರು. 'ಸಂಪ್ರದಾಯ' ಚಿತ್ರವನ್ನು ತಾವೇ ನಿರ್ದೇಶಿಸಿದರು. ದೇಶ-ವಿದೇಶದಲ್ಲಿ ಸುತ್ತಿ ಕನ್ನಡ ರಂಗಭೂಮಿಯ ಚಟುವಟಿಕೆಗಳನ್ನು ಅಲ್ಲಿಗೂ ವಿಸ್ತರಿಸಿದ ಸಾಹಸಿ. ಡಾ||ಗುಬ್ಬಿ ವೀರಣ್ಣ ಪ್ರಶಸ್ತಿ, ಶಂಕರೇಗೌಡ ಪ್ರಶಸ್ತಿ, ರಾಜ್ಯ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಇವರಿಗೆ ಡಾ|| ಗುಬ್ಬಿವೀರಣ್ಣ ಪ್ರಶಸ್ತಿ, ಶಂಕರೇಗೌಡ ಪ್ರಶಸ್ತಿಗಳು ಕೂಡಾ ಸಂದಿವೆ.

## ಹೇಮಾ ಚೌಧುರಿ

ಕನ್ನಡ ಚಿತ್ರರಂಗಕ್ಕೆ ೭೦ರ ದಶಕದಲ್ಲಿ ಪ್ರವೇಶಿಸಿದ ಕಲಾವಿದೆ. ಭರತನಾಟ್ಯ ಹಾಗೂ ಕೂಚುಪುಡಿ ನೃತ್ಯಗಳಲ್ಲಿ ಪರಿಶ್ರಮವಿದ್ದ ಹೇಮಾ ಮದ್ರಾಸ್ ಫಿಲಂ ಇನ್ಸ್‌ಟಿಟ್ಯೂಟ್‌ನಿಂದ ತರಬೇತಿ ಪಡೆದ ನಟಿ.



ನಟರಾದ ಅಶೋಕ್, ರಜನೀಕಾಂತ್ ಈಕೆಯ ಸಹಪಾಠಿಗಳು. ೧೯೭೬ ರಲ್ಲಿ 'ವಿಜಯವಾಣಿ' ಚಿತ್ರದಿಂದ ಚಿತ್ರರಂಗ ಪ್ರವೇಶ. 'ಶುಭಾಶಯ', 'ವಂಶಜ್ಯೋತಿ', 'ದೇವರ ದುಡ್ಡು', 'ಅನುಬಂಧ' ಮೊದಲಾದ ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯ. ನಂತರದ ದಿನಗಳಲ್ಲಿ ಪೋಷಕ ನಟಿಯಾಗಿ ಖಳನಟಿಯಾಗಿ ಮುಂದುವರಿಕೆ. 'ಸಂತ ಶಿಶುನಾಳ ಷರೀಫ' 'ತವರುಮನೆ ಉಡುಗೊರೆ' 'ಗಾಳಿಮಾತು' ಮೊದಲಾದವುಗಳು ಇವರ ಕೆಲವು ಯಶಸ್ವಿ ಚಿತ್ರಗಳು. ವಿವಾಹವಾಗಿ ವಿದೇಶಕ್ಕೆ ತೆರಳಿದರು. ಪುನಃ ಚಿತ್ರರಂಗದಲ್ಲಿ ಸಕ್ರಿಯರಾಗಿದ್ದಾರೆ. ರಾಷ್ಟ್ರ, ರಾಜ್ಯ ಮಟ್ಟದ ಅನೇಕ ಸಮಿತಿಗಳಲ್ಲಿ, ಸೆನ್ಸಾರ್ ಮಂಡಳಿಯಲ್ಲಿ ಸದಸ್ಯರಾಗಿದ್ದರು. ರಾಜಕಾರಣದಲ್ಲೂ ಸಕ್ರಿಯ ಭಾಗವಹಿಸುವಿಕೆ ಉಂಟು.

## ಹೇಮಾ ಪಂಚಮುಖಿ

'ದೊರೆ' ಮತ್ತು 'ಬಂಗಾರದ



ಮನೆ'ಯಂತಹ ಚಿತ್ರಗಳಲ್ಲಿ ನಾಯಕಿಯಾಗಿ ಅಭಿನಯಿಸಿದ್ದರೂ ತಮ್ಮ ಅಸ್ತಿತ್ವ 'ಅಮೆರಿಕಾ ಅಮೆರಿಕಾ' ಚಿತ್ರದಲ್ಲಿ ತೆರೆದಿಡಲು ಇವರಿಗೆ ಸಾಧ್ಯವಾಯಿತು. ಹೇಮಾ ಪಂಚಮುಖಿ ಇದಕ್ಕೂ ಮೊದಲೇ ಒಂಬತ್ತು ಚಿತ್ರಗಳಲ್ಲಿ ಬಾಲನಟಿಯಾಗಿ ಅಭಿನಯಿಸಿದ್ದರು. 'ಭಕ್ತ ಜ್ಞಾನದೇವ' 'ಎರಡು ರೇಖೆಗಳು' 'ಸುವರ್ಣ ಸೇತುವೆ' ಅವುಗಳಲ್ಲಿ ಮುಖ್ಯವಾದವು. 'ಅಮೆರಿಕಾ ಅಮೆರಿಕಾ' ನಂತರ ಈಕೆ 'ಸಂಭ್ರಮ' ಮತ್ತು 'ರವಿಮಾಮ' ಚಿತ್ರಗಳ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದರು. ಈಕೆಯ ವಿವಾಹ ಸ್ವಲ್ಪ ಕಾಲ ಆಕೆಯ ವೃತ್ತಿ ಜೀವನಕ್ಕೆ ಅಡ್ಡಿ ಬಂತು. ಅವರ ಹೇಮ ದೆಹಲಿ ಮತ್ತು ಬೆಂಗಳೂರುಗಳ ನಡುವೆ ಓಡಾಡಿಕೊಂಡು ಮತ್ತೆ ತಮ್ಮ ಅಭಿನಯ ವೃತ್ತಿಯನ್ನು ಮುಂದುವರಿಸಿದ್ದಾರೆ. ವಿಶೇಷವಾಗಿ ಕಿರುತೆರೆಯ ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ. ಭರತನಾಟ್ಯ ಪಟುವೂ ಆದ ಹೇಮ ಹತ್ತಾರು ಕಲಾವಿದರನ್ನು ಹುಟ್ಟುಹಾಕಿರುವ ಖ್ಯಾತ ಪ್ರಭಾತ್ ಕಲಾವಿದರು ಕುಟುಂಬಕ್ಕೆ ಸೇರಿದವರು. ಈಕೆಗೆ ೧೯೯೨ರಲ್ಲಿಯೇ ರಾಜ್ಯಸರ್ಕಾರದಿಂದ ಭರತನಾಟ್ಯದಲ್ಲಿ ಹೆಚ್ಚಿನ ಅಭ್ಯಾಸ ಮಾಡಲು ಸ್ಕಾಲರ್ ಶಿಪ್‌ಸಿಕ್ಕಿತು. ಭಾರತನಾಟ್ಯ ಕಲಿಸಿದ ಗುರುಗಳು ಪ್ರೊ.ಯು.ಎಸ್.ಕೃಷ್ಣರಾವ್ ಮತ್ತು ಚಂದ್ರಭಾಗಾ ದೇವಿ.

## ಹೊನ್ನಪ್ಪಭಾಗವತರ್(೧೯೧೫-೯೨)

ಕನ್ನಡ ಚಿತ್ರರಂಗದ ಮೂಲಪುರುಷರಲ್ಲಿ ಒಬ್ಬರು ಸಿ. ಹೊನ್ನಪ್ಪ ಭಾಗವತರು. ಚಿತ್ರರಂಗದಲ್ಲಿ ಅಭಿನಯಕ್ಕಿಂತ ಸಂಗೀತಕ್ಕೆ ಹೆಚ್ಚು ಪ್ರಾಧಾನ್ಯ ಇದ್ದ ಕಾಲದಲ್ಲಿ ಬೆಳಗಿದವರು. ಭಾಗವತರು ಜನಿಸಿದ್ದು ೧೯೧೫ರ ಜನವರಿ ೧೪ರಂದು, ನೆಲಮಂಗಲದ ಚೌಡಸಂದ್ರದಲ್ಲಿ. ಮನೆತನದ ವೃತ್ತಿ ನೇಯ್ಗೆ. ಹುಡುಗನಾಗಿದ್ದಾಗಿನಿಂದಲೂ ಸಂಗೀತದ ಕಡೆ ಹೆಚ್ಚು ಒಲವು. ಮೊದ ಮೊದಲು ಭಜನೆ-ಸಂಗೀತದತ್ತ ಹೆಚ್ಚು ಆಕರ್ಷಿತರಾದರು. ೧೯ನೆಯ ವಯಸ್ಸಿನಲ್ಲಿಯೇ ಶಾಸ್ತ್ರೋಕ್ತವಾಗಿ ಸಂಗೀತ ಕಲಿಯಲು ಪ್ರಾರಂಭಿಸಿ ಎರಡು-ಮೂರು ವರ್ಷಗಳಲ್ಲಿ ಕಛೇರಿ ಮಾಡುವಷ್ಟು ಪ್ರೌಢರಾದರು. ೧೯೩೭ರಲ್ಲಿ ಸೇಲಂನಲ್ಲಿ ನೀಡಿದ ಸಂಗೀತ ಕಛೇರಿಯಲ್ಲಿ ಖ್ಯಾತ ತಮಿಳು ನಟ ಎಂ.ಕೆ.ತ್ಯಾಗರಾಜ ಭಾಗವತರ್ ಅವರಿಂದ ಪ್ರಶಂಸೆ ಪಡೆದು ತಮಿಳು ಚಿತ್ರದಲ್ಲಿ ಅಭಿನಯಿಸಲು ಅವಕಾಶ ಗಿಟ್ಟಿಸಿಕೊಂಡರು. ಮೊದಲ ತಮಿಳು ಚಿತ್ರ 'ಅಂಬಿಕಾಪತಿ'ಯಲ್ಲಿ ನಟಿಸಿ ಪ್ರೇಕ್ಷಕರ ಪ್ರಶಂಸೆಗೆ ಪಾತ್ರರಾದರು. ಆಗಿನ ಕಾಲದಲ್ಲಿ ಚಲನಚಿತ್ರ ನಟರಿಗೆ ರೂಪಿನ ಜೊತೆಗೆ ಹಾಡುಗಾರಿಕೆಯೂ ಅಗತ್ಯವಾಗಿತ್ತು. ಸಂಗೀತ ಚೆನ್ನಾಗಿ ಬಲ್ಲವರಿಗೆ ನಾಯಕನ ಪಾತ್ರ ದೊರಕುತ್ತಿತ್ತು. ಮುಂದೆ 'ವಾಲ್ಮೀಕಿ', 'ಸತಿ ಸುಕನ್ಯ' ಮತ್ತು 'ದೇವಕನ್ಯೆ' ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರು. ಗುಬ್ಬಿ ವೀರಣ್ಣನವರು ನಿರ್ಮಿಸಿದ 'ಸುಭದ್ರಾ' ಚಿತ್ರದಲ್ಲಿ ಅರ್ಜುನನ ಪಾತ್ರದಲ್ಲಿ ಅಭಿನಯಿಸಿ ಅಪಾರ ಜನಪ್ರಿಯತೆ ಗಳಿಸಿಕೊಂಡರು. ಆ ಸ್ಫೂರ್ತಿಯಿಂದ ಲಲಿತಾಕಲಾ ಫಿಲಂಸ್ ಎಂಬ ಸ್ವಂತ ಸಂಸ್ಥೆ ಸ್ಥಾಪಿಸಿದರು. 'ಭಕ್ತ ಕುಂಬಾರ' ಇವರು ನಿರ್ಮಿಸಿ, ಅಭಿನಯಿಸಿದ ಚಿತ್ರ. 'ಮಹಾಕವಿ



ಕಾಳಿದಾಸ' ಚಿತ್ರವನ್ನು ಕು.ರ.ಸೀ.ಯವರ ನಿರ್ದೇಶನದಲ್ಲಿ ನಿರ್ಮಿಸಿದರು. ಆ ಚಿತ್ರಕ್ಕೆ ೧೯೫೫ರ ರಾಷ್ಟ್ರೀಯ ಅರ್ಹತಾಪತ್ರ ಲಭಿಸಿತು. ಆ ಚಿತ್ರದಲ್ಲಿ ಪ್ರಥಮ ಬಾರಿಗೆ ನಾಯಕಿಯಾಗಿ ಪರಿಚಯವಾದ ಬಿ.ಸರೋಜಾದೇವಿಯವರು ಮುಂದೆ ದಕ್ಷಿಣ ಭಾರತದ ಖ್ಯಾತ ತಾರೆಯರಲ್ಲೊಬ್ಬರಾದರು. ಹೊನ್ನಪ್ಪ ಭಾಗವತರಿಗೆ ಸಂದ ಪುರಸ್ಕಾರಗಳು ಹಲವು. ಕೇಂದ್ರ ಸಂಗೀತ ನಾಟಕ ಫೆಲೋಷಿಪ್ ಪಡೆದ ಮೊದಲ ಕನ್ನಡಿಗ. ಚಿತ್ರ ಸಂಗೀತದ ಬಗ್ಗೆ ಸದಾ ಆಲೋಚನೆ, ಜನಪದ ಸಂಗೀತದ ಬಗ್ಗೆ ಸಂಶೋಧನೆ ಭಾಗವತರ್ ವ್ಯಕ್ತಿತ್ವದ ವೈಶಿಷ್ಟ್ಯಗಳು. ೬೦ ವರ್ಷಗಳ ಕಾಲ ಕಲಾಸೇವೆಯಲ್ಲಿ ನಿರತರಾಗಿದ್ದ ಹೊನ್ನಪ್ಪ ಭಾಗವತರು ೧೯೯೨ರಲ್ಲಿ ತಮ್ಮ ೭೭ನೆಯ ವಯಸ್ಸಿನಲ್ಲಿ ನಿಧನರಾದರು. 'ಸದಾನಂದ' ಇವರ ನಿರ್ಮಾಣದ ಕೊನೆಯ ಚಿತ್ರ.

## ಹೊನ್ನಪ್ಪ.ಹೆಚ್.ಆರ್

೧೯೩೫ರಲ್ಲಿ ಸಂಚಾರಿ ಚಿತ್ರಮಂದಿರ ಪ್ರಾರಂಭ ಮಾಡಿದರು. ಸಿನಿಮಾ ವೃತ್ತಿಯಲ್ಲಿ



ಇದ್ದುಕೊಂಡೇ ಬಿ.ಎ., ಬಿ.ಎಡ್ ಪದವಿ ಪಡೆದರು. ಮೈಸೂರಿನಲ್ಲಿ ಚಲನಚಿತ್ರ ಹಂಚಿಕಾ ಸಂಸ್ಥೆಯನ್ನು ಪ್ರಾರಂಭಿಸಿದರು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ೧೯೮೯ರಿಂದ ಕಾರ್ಯ ನಿರ್ವಹಿಸುತ್ತ ಬಂದಿದ್ದಾರೆ.




# ಸಂಪರ್ಕ ಸೇತು

'ಪ್ರವೇಶ' ಲೇಖನದಿಂದ 'ಗುರಿ ಒಂದು, ದಾರಿ ಹಲವು' (೧೯೯೧-೨೦೦೦) ದ ವರೆಗಿನ 'ಕನ್ನಡ ಚಲನಚಿತ್ರ ಇತಿಹಾಸ'ದ ಪುಟಗಳ ಎಂದರೆ ಪುಟ ೧ ರಿಂದ ಪುಟ ೪೯೭ರ ವರೆಗೆ ಮಾತ್ರ **ಪದಸೂಚಿ**ಯನ್ನು ಕೊಡಲಾಗಿದೆ. **'ಪ್ರತಿಭಾ ಸಂಪದ'** ದ ಪುಟಗಳಲ್ಲಿ ಕಿರು ಪರಿಚಯ ಇರುವ ವ್ಯಕ್ತಿಗಳ ಹೆಸರನ್ನು ದಪ್ಪ ಅಕ್ಷರಗಳಲ್ಲಿ ಕೊಡಲಾಗಿದೆ. (Bold Letters) ಚಲನಚಿತ್ರಗಳ ಉಲ್ಲೇಖವನ್ನು ಉದ್ಧರಣ ಚಿನ್ಹೆಗಳಲ್ಲಿ (Single Quotes) ಕೊಡಲಾಗಿದೆ. ಪದಸೂಚಿಯಲ್ಲಿ ಒಟ್ಟು ಐದು ಸಾವಿರದ ಮೂರುನೂರ ಹದಿನೈದು (5315) ಪದಗಳಿವೆ.

## ಅ

## ಊ



## ಋ



## ಎ



## ಏ



## ಐ



## ಒ



## ಓ

## ಖ



## ಗ

## ಫ



## ಚ

## ಛ



## ಜ

## ಝ



## ಟ



## ಡ



## ಢ



## ತ



## ಥ



## ದ

## ಧ



## ನ

## ಪ

## ಫ



## ಬ

## ಭ

## ಮ

## ಯ

## ರ

## ಲ

## ವ

## ಶ

## ಹ



ಹೊರಾಂಗಣ ಚಿತ್ರೀಕರಣದ ವೇಳೆ ಚಿತ್ರ ತಂಡದೊಂದಿಗೆ ಪತ್ರಕರ್ತ [illegible]

